ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ ನಿಘಂಟು

ಆರನೆಯ ಸಂಪುಟ

"ಶಬ್ದಪಾರಮಾರ್ಗಮಶಕ್ಯಂ"

–ಕೇಶಿರಾಜ



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು–೧೮

೧೯೯೦

KANNADA NIGHANTU - VOL-VI
Second Edition : 2010
Published by : Kannada Sahitya Parishat
Pampa Mahakavi Road, Chamarajapet, Bangalore - 560 018
Pages : VIII+5473 to 6480 Price : Rs. 350=00

ಮೊದಲನೆಯ ಮುದ್ರಣ - ೧೯೯೦
ಎರಡನೆಯ ಮುದ್ರಣ - ೨೦೧೦
ಪ್ರತಿಗಳು : ೨೦೦೦
ಬೆಲೆ : ಮುನ್ನೂರು ಐವತ್ತು ರೂಪಾಯಿಗಳು




ಮುದ್ರಣ: ರಾಜಾ ಪ್ರಿಂಟರ್ಸ್
ನಂ.೫೯, ೪ನೆ ಕ್ರಾಸ್, ಲಾಲ್‌ಬಾಗ್ ರಸ್ತೆ
ಕೆ.ಎಸ್. ಗಾರ್ಡನ್, ಗಂಗಾಧರಪ್ಪ ಬ್ಲಾಕ್
ಬೆಂಗಳೂರು- ೫೬೦ ೦೨೭.

# ಕನ್ನಡ ನಿಘಂಟು ಸಂಪಾದಕ ಸಮಿತಿ

(೧೯೯೦ನೆಯ ಡಿಸೆಂಬರ್ ತಿಂಗಳಿನಲ್ಲಿ ಇದ್ದಂತೆ)

**ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು**

ಪ್ರೊ. ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ

**ಸದಸ್ಯರು**

ಡಾ. ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.
ಡಾ. ಜಿ. ಎಸ್. ಗಾಯಿ, ಎಂ.ಎ., ಪಿಎಚ್.ಡಿ.
ಡಾ. ಹಾ. ಮಾ. ನಾಯಕ, ಎಂ.ಎ., ಪಿಎಚ್.ಡಿ.
ಡಾ. ಜಿ.ಎಸ್. ಶಿವರುದ್ರಪ್ಪ, ಎಂ.ಎ., ಪಿಎಚ್.ಡಿ
ಡಾ. ಎಂ. ಚಿದಾನಂದಮೂರ್ತಿ, ಎಂ.ಎ., ಪಿಎಚ್.ಡಿ.
ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ, ಎಂ.ಎ., ಪಿಎಚ್.ಡಿ.
ಡಾ. ಕೆ.ವಿ. ರಮೇಶ್, ಎಂ.ಎ., ಪಿಎಚ್.ಡಿ.
ಡಾ. ಕೆ. ಕೃಷ್ಣಮೂರ್ತಿ, ಎಂ.ಎ., ಪಿಎಚ್.ಡಿ.
ಶ್ರೀ ಎನ್. ಬಸವಾರಾಧ್ಯ, ಎಂ.ಎ.,

**ಕರ್ನಾಟಕ ಸರ್ಕಾರದ ಪ್ರತಿನಿಧಿಗಳು**

ಡಾ. ಸಿದ್ಧಯ್ಯ ಪುರಾಣಿಕ, ಬಿ.ಎ., ಎಲ್ಎಲ್.ಬಿ.

**ಪರಿಷತ್ತಿನ ಅಧ್ಯಕ್ಷರು**

ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ

**ಪರಿಷತ್ತಿನ ಗೌರವ ಕಾರ್ಯದರ್ಶಿಗಳು**

ಶ್ರೀ ಗೊ.ರು. ಚನ್ನಬಸಪ್ಪ
ಶ್ರೀ ಟಿ. ರಾಮಯ್ಯ

**ಪರಿಷತ್ತಿನ ಗೌರವ ಕೋಶಾಧಿಕಾರಿಗಳು**

ಶ್ರೀ. ಎಸ್.ವಿ. ಶ್ರೀನಿವಾಸರಾವ್

# ನಿಘಂಟು ಕಛೇರಿಯ ಸಿಬ್ಬಂದಿ

ಪ್ರಧಾನ ಸಂಪಾದಕರು

**ಪ್ರೊ. ಜಿ. ವೆಂಕಟಸುಬ್ಬಯ್ಯ** ಎಂ.ಎ., ಬಿ.ಟಿ.

**ಸಹಾಯಕ ಸಂಪಾದಕರು**

ಶ್ರೀಮತಿ ಮಂಜುಳಾರಾವ್, ಎಂ.ಎ.
ಶ್ರೀಮತಿ ಎಂ. ಎನ್. ಜಾನಕಮ್ಮ, ಎಂ.ಎ.
ಶ್ರೀಮತಿ ಉಮಾದೇವಿ, ಎಂ.ಎ
ಶ್ರೀಮತಿ ವಿಜಯಲಕ್ಷ್ಮಿ, ಎಂ.ಎ
ಶ್ರೀಮತಿ ಎಂ.ಎಸ್. ಸುಜಯ, ಎಂ.ಎ
ಶ್ರೀ ಬಿ. ಆರ್. ಬಸವರಾಜ, ಎಂ.ಎ.

**ಒಪ್ಪೊತ್ತಿನ ಸಹಾಯಕರು**

ಶ್ರೀ ಕೆ. ಆರ್. ಶೇಷಗಿರಿ, ಎಂ.ಎ.
ಶ್ರೀ ಎ. ಎನ್. ಭಟ್, ಎಂ.ಎ.

**ಕಚೇರಿಯ ಸಿಬ್ಬಂದಿವರ್ಗ**

ಬೆರಳಚ್ಚುಗಾರ್ತಿಯರು : ಶ್ರೀಮತಿ ಎ. ನೇತ್ರಾವತಿಬಾಯಿ, ಶ್ರೀಮತಿ ಸಿ. ಎನ್. ವಿಜಯಲಕ್ಷ್ಮಿ

ಸಹಾಯಕರು : ಶ್ರೀ ರಾಘವೇಂದ್ರ ಪ್ರಸಾದ್. ಶ್ರೀ ಆರ್. ಶಂಕರಪ್ಪ, ಶ್ರೀ ರೇವಯ್ಯ,

# ಅಧ್ಯಕ್ಷರ ನುಡಿ

'ನಿಘಂಟು ಎಂದರೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹನ್ನಿಘಂಟು' ಎಂದೇ ಖ್ಯಾತವಾಗಿರುವ ಈ ಮಹಾನಿಘಂಟಿನ ಎಂಟು ಸಂಪುಟಗಳನ್ನು ಅದು ಪ್ರಕಟವಾದ ೧೫ ವರ್ಷಗಳ ನಂತರ ಮತ್ತಷ್ಟು ಸುಂದರವಾಗಿ ಮರುಮುದ್ರಣಗೊಳಿಸಿ ಕನ್ನಡ ಕುಲಕೋಟಿಗೆ ಅರ್ಪಿಸಲು ನನಗೆ ಸಂತೋಷವೆನಿಸುತ್ತದೆ. ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಪಡೆದುಕೊಂಡಿರುವುದು ಅದರ ಸಂಪನ್ನತೆ ಮತ್ತು ಅರ್ಹತೆಗಳಿಂದಾಗಿಯೇ ಎಂಬುದನ್ನು ಲೋಕದೆದುರು ಬಿಚ್ಚಿತೋರಿಸುವ ಸಾಧನಗಳಲ್ಲಿ ಮುಖ್ಯವಾದದ್ದು ಈ ಬೃಹತ್ ನಿಘಂಟು. ಕನ್ನಡದ ಸಮಸ್ತ ಜ್ಞಾನವನ್ನೂ ತನ್ನೊಳಗೆ ಐಕ್ಯಗೊಳಿಸಿಕೊಂಡಿರುವ ಈ ನಿಘಂಟಿನ ವಿವಿಧ ಸಂಪುಟಗಳಲ್ಲಿ ಶಬ್ದವೊಂದರ ಅರ್ಥ, ವಿವರಣೆ, ಉದಾಹರಣೆ ಒಮ್ಮೊಮ್ಮೆ ಅರ್ಧಪುಟವನ್ನು ದಾಟಿ ಒಂದು ಪುಟವನ್ನು ಆವರಿಸಿಕೊಂಡಿರುವುದುಂಟು.

ಕ್ರಿ.ಶ.೪೫೦ರ ಹಲ್ಮಿಡಿಶಾಸನದಿಂದ ಪ್ರಾರಂಭವಾಗಿ ಈ ಸಂಪುಟ ಯೋಜನೆ ಅನುಷ್ಠಾನಗೊಂಡ ೧೯೬೫ರವರೆಗೆ ಕನ್ನಡದಲ್ಲಿ ಪ್ರಕಟವಾದ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳಿಂದಲೂ ಉಲ್ಲೇಖಗಳನ್ನು ನೀಡಲಾಗಿರುವುದು, ಕೆಲವೊಮ್ಮೆ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗುವ ಸಂದರ್ಭಗಳನ್ನು ಜೊತೆಗಿರಿಸಿ ಕೊಟ್ಟಿರುವುದು, ಪ್ರತಿಯೊಂದು ಶಬ್ದವನ್ನೂ ನಾಮಪದ ಅಥವಾ ಕ್ರಿಯಾಪದವೆಂದು ಖಚಿತವಾಗಿ ವಿಂಗಡಿಸಿಕೊಂಡಿರುವುದು, ಅರ್ಥ ಸ್ಪಷ್ಟೀಕರಣಕ್ಕೆಂದು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯ ಅಥವಾ ವಾಕ್ಯತುಂಡುಗಳೇ ಮೂಲಕಾವ್ಯವನ್ನು ಓದಬೇಕೆನ್ನುವ ಆಸಕ್ತಿಯನ್ನು ಹುಟ್ಟಿಸುವುದು – ಈ ಎಲ್ಲ ಅಂಶಗಳು ಇದರ ಅಪೂರ್ವತೆಯನ್ನು ಎತ್ತಿ ಹಿಡಿಯುವ ಸಾಕ್ಷಿಕಲ್ಲುಗಳಾಗಿವೆ. ನಿಘಂಟು ಎನ್ನುವುದೇ ತುಂಬ ವೈಜ್ಞಾನಿಕವಾದ, ಒಂದು ಭಾಷೆಯ ಸೃಜನ ಸಾಹಿತ್ಯದಷ್ಟೇ ಪ್ರಮುಖವಾದ, ಭಾಷೆಯಲ್ಲಿರುವ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸಬೇಕೆಂದು ತಿಳಿಸಿಕೊಡುವ ರಚನೆಯಾಗಿರುವುದರಿಂದ ಜ್ಞಾನೇಂದ್ರಿಯಗಳೆಲ್ಲದರ ಎಚ್ಚರದ ದುಡಿಮೆಯನ್ನು ಬಯಸುತ್ತದೆ. ಕನ್ನಡದ ಅಭಿಮಾನವನ್ನು ಮೈತುಂಬಿಕೊಂಡ ಘನ ವಿದ್ವಾಂಸರ ಸತತ ಪರಿಶ್ರಮದಿಂದ ಈ ಯೋಜನೆ ಶಿಸ್ತುಬದ್ಧವಾಗಿ ಯಶಕಂಡಿದೆ. ಮೊದಲ ಮುದ್ರಣದ ೧೦,೦೦೦ ಪ್ರತಿಗಳು ಕೆಲವೇ ವರ್ಷಗಳಲ್ಲಿ ಕನ್ನಡಿಗರ ಮನೆಯ ಕಪಾಟುಗಳನ್ನು, ಗ್ರಂಥಭಂಡಾರಗಳನ್ನು, ಶಾಲೆಕಾಲೇಜುಗಳನ್ನು ಅಲಂಕರಿಸಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತು ಧನ್ಯತಾಭಾವವನ್ನು ತಳೆಯುವಂತಾಯಿತು. ಆದರೆ ನಿಘಂಟುವಿನ ಉಪಯುಕ್ತತೆಯನ್ನು ತಡವಾಗಿ ಅರ್ಥಮಾಡಿಕೊಂಡವರು ಅಂದಿನಿಂದ ಇಂದಿನವರೆಗೆ ಸಾಹಿತ್ಯ ಪರಿಷತ್ತಿಗೆ ದೂರವಾಣಿ ಕರೆ ಮಾಡಿ, ಮಾರಾಟ ವಿಭಾಗದಲ್ಲಿ ವಿಚಾರಿಸಿ, ಪುಸ್ತಕ ಮಳಿಗೆಗಳಲ್ಲಿ ಹುಡುಕಾಡಿ ಸಿಗದೆ ನಿರಾಶರಾಗಿದ್ದಾರೆ. ಮರುಪ್ರಕಟಿಸುವಂತೆ ಒತ್ತಾಯ ಮಾಡಿದ್ದಾರೆ.

ಎಂಟು ಸಂಪುಟಗಳಲ್ಲಿ, ಒಂಬತ್ತು ಸಾವಿರಕ್ಕಿಂತಲೂ ಅಧಿಕ ಪುಟಗಳ ವಿಸ್ತಾರದಲ್ಲಿ ಹರಡಿಕೊಂಡಿರುವ, ಎಲ್ಲರ ಮನೆಯನ್ನೂ ಬೆಳಗಬೇಕಾಗಿರುವ ಈ ನಿಘಂಟನ್ನು ಮುದ್ರಿಸುವುದಾಗಲೀ, ಮುದ್ರಿತ ಪ್ರತಿಗಳನ್ನು ಒಂದೆಡೆ ಜೋಡಿಸಿಡುವುದಾಗಲೀ, ಮಾರಾಟದ ವ್ಯವಸ್ಥೆ ಮಾಡುವುದಾಗಲೀ, ಹೆಚ್ಚಿನ ಪ್ರಮಾಣದಲ್ಲಿ ಒಂದು

ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದಾಗಲೀ ಅಷ್ಟೊಂದು ಸುಲಭವಾದ ಕೆಲಸವಲ್ಲ. ಈ ಅಸಾಧ್ಯವನ್ನು ಸಾಧ್ಯವಾಗಿಸುವ ಧೈರ್ಯೋತ್ಸಾಹಗಳು ಪರಿಷತ್ತಿನೊಡಲಲ್ಲಿ ಚಿಮ್ಮುವುದಕ್ಕೆ ಕರ್ನಾಟಕ ರಾಜ್ಯ ಸರ್ಕಾರ ಕಾರಣವಾಯಿತೆಂದರೆ ಅದನ್ನು ಯಾರೂ ಅತಿಶಯೋಕ್ತಿಯೆಂದು ಭಾವಿಸಬೇಕಾಗಿಲ್ಲ. ಕರ್ನಾಟಕ ರಾಜ್ಯ ಸರ್ಕಾರ ಕನ್ನಡ ಸಾಹಿತ್ಯ ಪರಿಷತ್ತಿನ ಮಾತುಗಳನ್ನು ಪ್ರೀತಿಯಿಂದ ಆಲಿಸುತ್ತಿರುವುದು, ಕನ್ನಡ ಸಾಹಿತ್ಯ ಪರಿಷತ್ತನ್ನು ಕನ್ನಡದ ಸಾರ್ವಭೌಮ ಪ್ರತಿನಿಧಿಯೆಂದೇ ಭಾವಿಸುತ್ತಿರುವುದು ಕನ್ನಡದ ಭಾಗ್ಯವೆಂದೇ ಹೇಳಬೇಕು. ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಲವು ಒತ್ತಡಗಳ ನಡುವೆಯೂ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರೀತಿಯಿಂದ ಭಾಗವಹಿಸುತ್ತಿರುವುದು, ಸಮಾರಂಭಗಳಲ್ಲಿ ಕೊಟ್ಟ ಆಶ್ವಾಸನೆಗಳನ್ನು ಅತಿಶೀಘ್ರವಾಗಿ ಅನುಷ್ಠಾನಗೊಳಿಸುತ್ತಿರುವುದು, ಪರಿಷತ್ತಿನ ಎಲ್ಲಾ ಯೋಜನೆಗಳಿಗೂ ಹಸಿರು ನಿಶಾನೆ ತೋರುತ್ತಿರುವುದು, ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು ಮುಖ್ಯಮಂತ್ರಿ – ಕನ್ನಡ ಸಂಸ್ಕೃತಿ ಮಂತ್ರಿಗಳ ಕಚೇರಿಯ ಹೊರಗೆ ಕಡತಗಳೊಂದಿಗೆ ಗಂಟೆಗಟ್ಟಲೆ ಕಾಯುತ್ತಿದ್ದುದನ್ನು ತಪ್ಪಿಸಿರುವುದು, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಿಂದ ತಾಲ್ಲೂಕು ಸಮ್ಮೇಳನಗಳವರೆಗೆ ಎಲ್ಲವೂ ಅದ್ದೂರಿಯಾಗಿ ನಡೆಯಲು ಬೇಕಾದಷ್ಟು ಪ್ರಮಾಣದಲ್ಲಿ ಹಣ ಬಿಡುಗಡೆ ಮಾಡುತ್ತಿರುವುದು – ಇಂಥವನ್ನೆಲ್ಲಾ ಕಂಡಾಗ ಪರಿಷತ್ತಿನ ಅಧ್ಯಕ್ಷನಾಗಿ ನನಗೆ ಮನಸ್ಸು ತುಂಬಿ ಬರುತ್ತದೆ. ಆರುಕೋಟಿ ಕನ್ನಡಿಗರ ಪರವಾಗಿ ಅವರಿಗೆ ಕೃತಜ್ಞತಾ ಕುಸುಮಗಳನ್ನು ಅರ್ಪಿಸಬೇಕೆನ್ನಿಸುತ್ತದೆ. 'ಕನ್ನಡದ ಮುಖ್ಯಮಂತ್ರಿ' 'ಕನ್ನಡಿಗರ ಮುಖ್ಯಮಂತ್ರಿ' ಎಂದು ಅಭಿಮಾನದಿಂದ ನುಡಿಯಬೇಕೆನ್ನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳ ಕನ್ನಡದ ಮೇಲಿನ, ಕನ್ನಡ ಸಾಹಿತ್ಯ ಪರಿಷತ್ತಿನ ಬಗೆಗಿನ ಈ ಅಖಂಡ ಪ್ರೀತಿ ಹೀಗೇ ಮುಂದುವರಿಯಲೆಂದು ಆಶಿಸುತ್ತೇನೆ.

ಕರ್ನಾಟಕ ಸರ್ಕಾರ ನಿಘಂಟು ಯೋಜನೆಯ ಮಹತ್ವವನ್ನು ಮನಗಂಡು ಒಂದು ಕೋಟಿ ರೂಪಾಯಿಗಳನ್ನು ಸಾಹಿತ್ಯ ಪರಿಷತ್ತಿಗೆ ಉದಾರವಾಗಿ ನೀಡಿದೆ. ಸರ್ಕಾರ ಹಣ ನೀಡಿರುವುದು ಪರಿಷತ್ತಿಗಾದರೂ ಇದು ಜನತೆಯ ಹಣ ಮತ್ತು ಇದರ ಅಂತಿಮ ಫಲಾನುಭವಿಗಳೂ ಜನತೆಯೇ. ಈ ಎಚ್ಚರವನ್ನಿರಿಸಿಕೊಂಡೇ ಸಾಹಿತ್ಯ ಪರಿಷತ್ತು ಬಹುಬೇಡಿಕೆಯ ಬೃಹನ್ನಿಘಂಟಿನ ಎಂಟು ಸಂಪುಟಗಳನ್ನು ಪುನರ್ಮುದ್ರಣಗೊಳಿಸುತ್ತಿದೆ. ಸರ್ಕಾರದ ಉದಾರ ಆರ್ಥಿಕ ನೆರವಿನ ಪರಿಣಾಮವಾಗಿ ನಿಘಂಟಿನ ಬೆಲೆಯನ್ನು ಸಾಮಾನ್ಯರೂ ಕೊಳ್ಳಲು ಮನಸ್ಸು ಮಾಡುವಂತೆ ಕಡಿಮೆಗೊಳಿಸಲಾಗಿದೆ. ಭಾಷೆ ಮತ್ತು ಸಾಹಿತ್ಯಾಭಿಮಾನದ ಸಂಕೇತವೆಂಬಂತೆ ಈ ಯೋಜನೆಯ ಯಶಸ್ಸಿನಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ರಾಜ್ಯ ಸರ್ಕಾರವನ್ನು ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್ ಮತ್ತು ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರುಗಳನ್ನು ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ. ನಿಘಂಟು ಯೋಜನೆ ಪ್ರಾರಂಭವಾದಾಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣರಿಂದ ಮೊದಲಗೊಂಡು ಮುಕ್ತಾಯವಾದಾಗ ಅಧ್ಯಕ್ಷರಾಗಿದ್ದ ಡಾ. ಸಾ.ಶಿ. ಮರುಳಯ್ಯನವರವರೆಗೆ ಇದನ್ನು ಆಸಕ್ತಿಯಿಂದ ಮುನ್ನಡೆಸಿಕೊಂಡು ಬಂದ ಎಲ್ಲ ಅಧ್ಯಕ್ಷರುಗಳಿಗೂ ನಿಘಂಟು ಸಮಿತಿಯ ಅಧ್ಯಕ್ಷರು, ಸದಸ್ಯರುಗಳು, ಸಂಪಾದಕರು, ಸಿಬ್ಬಂದಿ ವರ್ಗದವರಿಗೂ ಅಂದವಾಗಿ ಮುದ್ರಿಸಿಕೊಟ್ಟ ರಾಜಾ ಪ್ರಿಂಟರ್ಸ್‌ನವರಿಗೂ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಕನ್ನಡ ಸಾಹಿತ್ಯ ಪರಿಷತ್ತು ತುಂಬಾ ಆಭಾರಿಯಾಗಿದೆ. ಮರುಮುದ್ರಣದ ಈ ನಿಘಂಟಿನ ಸಂಪುಟಗಳನ್ನು ಕನ್ನಡ ಜನತೆ ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
೫-೬-೨೦೧೦

ಡಾ. ನಲ್ಲೂರು ಪ್ರಸಾದ್ ಆರ್.ಕೆ.
ಅಧ್ಯಕ್ಷರು

# ಸಂಪಾದಕರ ಅರಿಕೆ

ಕನ್ನಡ-ಕನ್ನಡ ನಿಘಂಟಿನ ೬ನೆಯ ಸಂಪುಟವು ಪ್ರಕಟವಾಗುತ್ತಿರುವುದು ನನಗೆ ಸಂತೋಷದ ವಿಷಯ. ಈ ಸಂಪುಟದ ಮುದ್ರಣಪ್ರತಿಯು ಸಿದ್ಧವಾಗಿ ಆರು ವರ್ಷಗಳಾದುವು. ಆದರೂ ಮುದ್ರಣಕ್ಕೆ ಅನೇಕ ಅಡ್ಡಿಗಳುಂಟಾಗಿ ಐದನೆಯ ಸಂಪುಟ ಪ್ರಕಟವಾಗುವುದೇ ೧೯೮೭ರ ಅಂತ್ಯದ ವರೆಗೆ ತಡವಾಯಿತು. ಈಗ ೧೯೯೦ರ ಕೊನೆಯ ಭಾಗದಲ್ಲಿ ಈ ಆರನೆಯ ಸಂಪುಟ ಪ್ರಕಟವಾಗುತ್ತಿದೆ.

ಕನ್ನಡ ನಿಘಂಟಿನ ಈ ಮಹಾಕಾರ್ಯವನ್ನು ಸಾಧಿಸಲು ಕರ್ನಾಟಕ ಸರ್ಕಾರ ನೀಡುತ್ತಿರುವ ಧನಸಹಾಯವನ್ನು ಕುರಿತು ಭಾರತದ ಎಲ್ಲ ಭಾಷೆಗಳ ವಿದ್ವಾಂಸರೂ ನಿಘಂಟುಕಾರರೂ ಮುಕ್ತಕಂಠದಿಂದ ಹೊಗಳುತ್ತಾರೆ. ಶತಮಾನಕ್ಕೊಮ್ಮೆ ಕೈಗೊಳ್ಳಬಹುದಾದ ಇಂಥ ವಿದ್ವತ್ಕಾರ್ಯಗಳ ಬಗ್ಗೆ ನಮ್ಮ ಸರ್ಕಾರದ ನಿಲುಮೆ ಎಲ್ಲರ ಗೌರವಕ್ಕೆ ಪಾತ್ರವಾಗಿದೆ. ಕನ್ನಡಿಗರೆಲ್ಲರೂ ನಮ್ಮ ಸರ್ಕಾರಕ್ಕೆ ತಮ್ಮ ಪ್ರೀತಿವಿಶ್ವಾಸಗಳನ್ನು ನೀಡಿ ಕೃತಜ್ಞತೆಗಳನ್ನು ಸಲ್ಲಿಸುತ್ತಾರೆ.

ಈ ಸಂಪುಟವನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ನಮ್ಮ ನಿಘಂಟು ಸಂಪಾದಕ ಸಮಿತಿಯ ಸದಸ್ಯರೆಲ್ಲರೂ ನೀಡಿದ ಸಂಪೂರ್ಣ ಸಹಕಾರಕ್ಕೆ ನಾನು ಕೃತಜ್ಞನಾಗಿದ್ದೇನೆ. ನಿಘಂಟುಕಾರ್ಯ ಕ್ಲಿಷ್ಟವಾದ ವಿದ್ವತ್ಕಾರ್ಯ. ಇದಕ್ಕೆ ಬಹುಶ್ರುತತ್ವವೂ, ಒಬ್ಬ ವ್ಯಕ್ತಿಗೆ ಸಾಧ್ಯವಾಗದ ಅಗಾಧ ವಿದ್ವತ್ತೂ ಅಗತ್ಯವಾಗುತ್ತದೆ. ಆದುದರಿಂದ ಸಂಪಾದಕ ಸಮಿತಿಯ ಸದಸ್ಯರು ಬೇರೆ ಬೇರೆ ಕ್ಷೇತ್ರಗಳಲ್ಲಿ ಆಳವಾದ ಪರಿಜ್ಞಾನವುಳ್ಳವರಾಗಿ ಸಂಪಾದಕನಿಗೆ ಎದುರಾಗುವ ಅನೇಕ ಸಮಸ್ಯೆಗಳನ್ನು ತಮ್ಮ ತಿಳಿವಳಿಕೆಯ ಬೆಳಕಿನಲ್ಲಿ ಪರಿಹರಿಸಿ ಅವನ ಕಾರ್ಯವನ್ನು ಸುಲಭಗೊಳಿಸಿದ್ದಾರೆ. ಅವರ ವಿಶ್ವಾಸಕ್ಕೆ ನನ್ನ ಗೌರವವನ್ನು ಇಲ್ಲಿ ದಾಖಲಿಸುತ್ತಿದ್ದೇನೆ.

ನಿಘಂಟುಕಾರ್ಯದ ವ್ಯಾಪ್ತಿ ವಿಶ್ವವಿಶಾಲವಾದುದು. ಹೊಸ ಶಬ್ದಗಳ ಸೃಷ್ಟಿ ಆಗುತ್ತಲೇ ಇರುತ್ತದೆ. ಅದನ್ನು ಬೆನ್ನುಹತ್ತುವ ಕಾರ್ಯ ಮುಂದುವರಿದಿದ್ದರೂ ಎಷ್ಟೋ ವೇಳೆ ಈ ನಿಘಂಟು ಮುದ್ರಣವಾಗುವ ವೇಳೆಗೆ ಅವು ನಮ್ಮ ಕೈಸೇರಿರುವುದಿಲ್ಲ. ಇಂಥ ಶಬ್ದಗಳನ್ನೆಲ್ಲ ಪಟ್ಟಿ ಮಾಡಲಾಗುತ್ತಿದೆ. ಕೊನೆಯ ಸಂಪುಟದ ಅನುಬಂಧದಲ್ಲಿ ಅವುಗಳನ್ನು ಸೇರಿಸಬೇಕಾಗುತ್ತದೆ.

ಈಗ ಪರಿಷತ್ತಿನ ಅಧ್ಯಕ್ಷರಾಗಿರುವ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು ನಿಘಂಟಿನ ಸಿಬ್ಬಂದಿಯ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿಯೂ ಈ ಸಂಪುಟವು ಬೇಗ ಮುದ್ರಣವಾಗುವುದರಲ್ಲಿಯೂ ಆಸಕ್ತಿಯನ್ನು ತಳೆದು ಸಹಾಯಮಾಡಿದ್ದಾರೆ. ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಇ. ಕೃಷ್ಣನಾರಾಯಣ ಅವರು ಪರಿಷತ್ತಿನ ೬೦ನೇ ಸಮ್ಮೇಳನದ ವೇಳೆಗೆ ಈ ಸಂಪುಟವನ್ನು ಪ್ರಕಟಪಡಿಸಲು ಎಲ್ಲ ಏರ್ಪಾಟುಗಳನ್ನೂ ಮಾಡಿ ನಮ್ಮನ್ನು ಋಣಿಗಳನ್ನಾಗಿ ಮಾಡಿದ್ದಾರೆ.

ನಿಘಂಟಿನ ಕರಡನ್ನು ತಿದ್ದುವುದು ಬಹು ಎಚ್ಚರಿಕೆಯಿಂದ ಮಾಡಬೇಕಾದ ಕಾರ್ಯ. ಇದಕ್ಕೆ ಕನ್ನಡಭಾಷಾಸಾಹಿತ್ಯಗಳ ಮತ್ತು ಮುದ್ರಣ ತಂತ್ರದ ಆಳವಾದ ಪರಿಜ್ಞಾನವಿರಬೇಕು. ಇಂಥ ಕ್ಲಿಷ್ಟಕಾರ್ಯವನ್ನು ಈ ನಿಘಂಟಿನ ಮುದ್ರಣಕಾರ್ಯ ಪ್ರಾರಂಭವಾದಾಗಿನಿಂದ ಸಮರ್ಥವಾಗಿ ನಿರ್ವಹಿಸಿದವರು ಶ್ರೀಮತಿಯರಾದ ಮಂಜುಳಾರಾವ್, ಉಮಾದೇವಿ, ವಿಜಯಲಕ್ಷ್ಮಿ, ಎಂ. ಎಸ್. ಸಂಜಯ. ಕೊನೆಕೊನೆಗೆ ಕರಡಿನ ಸಂಖೆ ಹೆಚ್ಚಾದಾಗ ಇವರ ಜತೆಗೆ ಶ್ರೀಮತಿ ಎಂ. ಎನ್. ಜಾನಕಮ್ಮ ಮತ್ತು ಶ್ರೀ ಬಿ. ಆರ್. ಬಸವರಾಜ ಅವರೂ ಸಹಾಯಮಾಡಿದ್ದಾರೆ. ಇವರಲ್ಲದೆ ನಿಘಂಟು ಕಚೇರಿಯ ಬೆರಳಚ್ಚುಗಾರ್ತಿಯರೂ ಸಹಾಯಕ ವರ್ಗದವರೂ ಬಿಡುವಿಲ್ಲದೆ ದುಡಿದಿದ್ದಾರೆ. ಇವರಿಗೆಲ್ಲ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಇನ್ನುಮುಂದೆ ಈ ನಿಘಂಟಿನ ೭ ಮತ್ತು ೮ನೆಯ ಸಂಪುಟಗಳು ಪ್ರಕಟವಾಗಬೇಕು. ಈಗಾಗಲೇ ಈ ಎರಡು ಸಂಪುಟಗಳ ಬಹುಭಾಗದ ಪರಿಶೀಲನಾಕಾರ್ಯ ಪೂರೈಸಿದೆ. ಇನ್ನು ಮೂರು ತಿಂಗಳುಗಳಲ್ಲಿ ಏಳನೆಯ ಸಂಪುಟವನ್ನು ಮುದ್ರಣಕ್ಕೆ ಸಿದ್ಧಮಾಡಲಾಗುತ್ತದೆ. ಅದರ ಮುದ್ರಣವು ಪೂರೈಸುವ ವೇಳೆಗೆ ಎಂಟನೆಯ ಸಂಪುಟದ ಮಿಕ್ಕ ಭಾಗಗಳನ್ನು ಅಂದರೆ 'ವ' ಕಾರ 'ಸ' ಕಾರ 'ಹ' ಕಾರಗಳ ಸಭಾಪ್ರತಿಯನ್ನು ಸಂಪಾದಕಸಮಿತಿಯ ಮುಂದೆ ತರಲು ಸಾಧ್ಯವಾಗುತ್ತದೆ. ಈಗಾಗಲೇ 'ವ' ಕಾರದ ಪರಿಶೀಲನೆಗೆ ಸಭಾಪ್ರತಿಯನ್ನು ಸಿದ್ಧಮಾಡಿ ಆಗಿದೆ. ಸಂಪಾದಕ ಸಮಿತಿಯ ಮುಂದಿನ ಸಭೆಯಲ್ಲಿ 'ವ' ಕಾರದ ಪರಿಶೀಲನೆ ಪ್ರಾರಂಭವಾಗುತ್ತದೆ.

ಈ ಆರನೆಯ ಸಂಪುಟದಲ್ಲಿ ನಮ್ಮ ಅವಜ್ಞತೆಯಿಂದ ಆಗಿರಬಹುದಾದ ಪ್ರಮಾದಗಳಿದ್ದರೆ ಅವುಗಳನ್ನು ವಿದ್ವಾಂಸರು ತೋರಿಸಿ ಕೊಡಬೇಕೆಂದೂ ಅಂಥವರ ಹೆಸರುಗಳನ್ನು ಉಲ್ಲೇಖಿಸಿ ಮುಂದೆ ಅವುಗಳನ್ನು ತಿದ್ದಿಕೊಳ್ಳಲಾಗುವುದೆಂದೂ ಈ ಮೂಲಕ ತಿಳಿಸಲು ನಾನು ಅಪೇಕ್ಷಿಸುತ್ತೇನೆ.

ಕನ್ನಡದ ಈ ಬೃಹತ್ ನಿಘಂಟು ಅನೇಕ ಬಗೆಯ ಇತರ ನಿಘಂಟುಗಳ ಪ್ರಕಟನೆಗೆ ಸಹಾಯಕವಾಗಲೆಂದೂ, ಈ ನಿಘಂಟಿನ ಪ್ರಯೋಜನ ಹೆಚ್ಚಲೆಂದೂ ನಾನು ಆಶಿಸುತ್ತೇನೆ.

ಬೆಂಗಳೂರು.
೨೮-೧೨-೧೯೯೦

ಜಿ. ವೆಂಕಟಸುಬ್ಬಯ್ಯ
ಪ್ರಧಾನ ಸಂಪಾದಕ

# ಅಧ್ಯಕ್ಷರ ಕೃತಜ್ಞತೆಗಳು

ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಕನ್ನಡ-ಕನ್ನಡ ನಿಘಂಟುವಿನ ಪ್ರಥಮ ಸಂಪುಟ ಬಿಡುಗಡೆಗೊಂಡಿತು. ಸಂಪಾದಕ ಮಂಡಲಿಯ ತೀರ್ಮಾನದಂತೆ ಎರಡು ವರ್ಷಕ್ಕೊಂದು ಸಂಪುಟ ಹೊರಬೀಳಬೇಕಾದರೂ ಎರಡನೆಯ ಸಂಪುಟ ಹೊರಬಿದ್ದುದು ೧೯೭೬ರಲ್ಲಿ. ಹಾಗೆಯೇ ೩ನೇ ಸಂಪುಟ ೧೯೭೭ರಲ್ಲಿ, ೪ನೇ ಸಂಪುಟ ೧೯೭೯ರಲ್ಲಿ ಪ್ರಕಟವಾದವು. ೫ನೇ ಸಂಪುಟ ೧೯೮೭–೮೮ರ ವರೆಗೆ ಪ್ರಕಟಣೆಗೆ ಕಾಯಬೇಕಾಯಿತು. ೬ನೇ ಸಂಪುಟ ಕನ್ನಡ ಸಾಹಿತ್ಯ ಪರಿಷತ್ತಿನ ಅಮೃತ ಮಹೋತ್ಸವದ ಸಂದರ್ಭದಲ್ಲಿ ಪ್ರಕಟವಾಗುತ್ತಿರುವುದು ನೆಮ್ಮದಿಯ ಸಂಗತಿ. ಅದಕ್ಕೂ ಹೆಚ್ಚಾಗಿ ಇದರ ಬಿಡುಗಡೆ ಕನ್ನಡ ಸಾಹಿತ್ಯ ಪರಿಷತ್ತಿನ ೬೦ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ವಜ್ರಾಧಿವೇಶನ ಸಂದರ್ಭದಲ್ಲಿ ಆಗುತ್ತಿರುವುದು ನಮಗೆಲ್ಲಾ ಅತ್ಯಂತ ಹರ್ಷದ ವಿಷಯವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟುವಿನ ಮೊದಲ ಎರಡು ಸಂಪುಟಗಳನ್ನು ಸಾಹಿತ್ಯ ಪರಿಷತ್ತಿನ ಬಿ. ಎಂ. ಶ್ರೀ. ಅಚ್ಚುಕೂಟದಲ್ಲೇ ಮುದ್ರಿಸಲಾಯಿತು. ಮೂರು ಮತ್ತು ನಾಲ್ಕನೆಯ ಸಂಪುಟಗಳನ್ನು ಬೆಂಗಳೂರು ನಗರದಲ್ಲಿರುವ ಸರ್ಕಾರಿ ಮುದ್ರಣಾಲಯವು ಮುದ್ರಿಸಿಕೊಟ್ಟಿತು. ಐದನೆಯ ಸಂಪುಟ ಭಗವಾನ್ ಇಂಡಸ್ಟ್ರೀಸ್ ಅವರಲ್ಲಿ ಮುದ್ರಿತವಾಯಿತು. ಆರನೆಯ ಸಂಪುಟದ ಮುದ್ರಣದ ಜವಾಬ್ದಾರಿಯನ್ನು ಮತ್ತೆ ಕರ್ನಾಟಕ ಸರ್ಕಾರದ ಮುದ್ರಣಾಲಯ ವಹಿಸಿಕೊಂಡಿದೆ.

ಬಹುಶಃ ಮುದ್ರಣಾಲಯಗಳ ಬದಲಾವಣೆಗಳು ಕಾರಣದಿಂದಾಗಿಯೇ ಈ ಸಂಪುಟಗಳು ಹೊರಬರಲು ಸ್ವಲ್ಪ ವಿಳಂಬವಾಯಿತು ಅನ್ನಿಸುತ್ತದೆ. ಆದರೆ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಇ. ಕೃಷ್ಣನಾರಾಯಣ ಅವರ ವಿಶೇಷವಾದ ಕಾಳಜಿಯಿಂದಾಗಿ ಈ ಸಂಪುಟ ಮುದ್ರಣಗೊಂಡು ಹೊರಬರಲು ಸಾಧ್ಯವಾಯಿತು. ಈ ಮುದ್ರಣಕಾರ್ಯವನ್ನು ಆಗುಮಾಡಿಕೊಟ್ಟಿರುವ ಶ್ರೀ ಇ. ಕೃಷ್ಣನಾರಾಯಣ ಮತ್ತು ಅವರ ಸಹಾಯಕ ಸಿಬ್ಬಂದಿವರ್ಗದವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಈ ನಿಘಂಟುವಿನ ಮುದ್ರಣದ ಹಂತದಲ್ಲಿ ನಿಘಂಟು ಸಂಪಾದಕ ಸಮಿತಿಯ ಸದಸ್ಯರು ಮತ್ತು ಸಿಬ್ಬಂದಿಯವರು ವಿಶೇಷವಾದ ಶ್ರಮ ಮತ್ತು ಆಸಕ್ತಿಗಳನ್ನು ತೋರಿದ್ದಾರೆ. ಕರಡಚ್ಚನ್ನು ತಿದ್ದುವ ಕಾರ್ಯದಲ್ಲಂತೂ ನಿಘಂಟು ಸಿಬ್ಬಂದಿಯವರು ವಹಿಸಿದ ಪಾತ್ರ ಮುಖ್ಯವಾದುದು. ಅವರಿಗೆ ಪರಿಷತ್ತಿನ ಕೃತಜ್ಞತೆಗಳು.

ನಿಘಂಟುವಿನ ಪ್ರಧಾನ ಸಂಪಾದಕರೂ ಮತ್ತು ಸಂಪಾದಕ ಮಂಡಲಿಯ ಅಧ್ಯಕ್ಷರೂ ಆದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಅಪಾರ ಶ್ರಮ ವಹಿಸಿದ್ದಾರೆ. ಅವರಿಗೂ ಸಂಪಾದಕ ಸಮಿತಿಯ ಸದಸ್ಯರೆಲ್ಲರಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳು.

ಈ ಕನ್ನಡ-ಕನ್ನಡ ನಿಘಂಟುವಿನ ಯೋಜನೆ ಪೂರ್ಣವಾಗಿ ಕರ್ನಾಟಕ ಸರ್ಕಾರದ ಯೋಜನೆಯಾಗಿದ್ದು, ಇದರ ಜವಾಬ್ದಾರಿಯನ್ನು ಕನ್ನಡ ಸಾಹಿತ್ಯ ಪರಿಷತ್ತು ಸುಸೂತ್ರವಾಗಿ ನಿರ್ವಹಿಸಲು ಸರ್ಕಾರ ನೆರವಾಗುತ್ತಿರುವುದಕ್ಕಾಗಿ ಪರಿಷತ್ತಿನ ಕೃತಜ್ಞತೆಗಳನ್ನು ತಿಳಿಸುತ್ತೇನೆ.

ಈ ಬೃಹತ್ ನಿಘಂಟು ಮೊದಲು ನಾಲ್ಕು ಸಂಪುಟಗಳಲ್ಲಿ ಮುಗಿಯುತ್ತದೆ ಎಂಬ ಯೋಜನೆಯಿಂದ ಕೂಡಿದ್ದರೂ ಈಗ ಎಂಟನೆಯ ಸಂಪುಟದವರೆಗೂ ವಿಸ್ತರಣೆಗೊಳ್ಳುತ್ತಿದೆ. ಇದಕ್ಕೆ ಕಾರಣ ನಿಘಂಟು ಸಮಿತಿ ಸಂಗ್ರಹಿಸಿ ವ್ಯವಸ್ಥೆಗೊಳಿಸಿರುವ ಅಪಾರವಾದ ಶಬ್ದಸಂಪತ್ತು.

ನಿಘಂಟುವಿನ ೫ನೆಯ ಸಂಪುಟವು ೧೯೮೭–೮೮ರಲ್ಲಿ ಪ್ರಕಟವಾಗುವಾಗ ನಿಘಂಟು ಸಂಪಾದಕ ಮಂಡಲಿ ಸದಸ್ಯರುಗಳ ಪಟ್ಟಿಯಲ್ಲಿ ಪರಿಷತ್ತಿನ ಆಡಳಿತಗಾರರ ಮತ್ತು ಸಹಾಯಕ ನಿರ್ದೇಶಕರ ಹೆಸರುಗಳ ಜೊತೆಗೆ ಅವರಿಗಿಂತ ಹಿಂದೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಹೆಚ್. ಬಿ. ಜ್ವಾಲನಯ್ಯ ಮತ್ತು ಗೌರವ ಕಾರ್ಯದರ್ಶಿಗಳಾದ ಶ್ರೀ ಜಿ. ವಿ. ಶಿವಸ್ವಾಮಿ ಮತ್ತು ಶ್ರೀ ಚಂದ್ರಕಾಂತ ಪಡೇಸೂರ ಹಾಗೂ ಕೋಶಾಧಿಕಾರಿಗಳಾದ ಶ್ರೀ ಎಂ. ಪಿ. ದೇವರಾಜ್ ಅವರ ಹೆಸರುಗಳು ಸೇರಬೇಕಾಗಿತ್ತು ಎಂಬುದನ್ನು ಇಲ್ಲಿ ನಮ್ರವಾಗಿ ಸೂಚಿಸಬಯಸುತ್ತೇನೆ.

ಇನ್ನು ಕೆಲವೇ ದಿನಗಳಲ್ಲಿ ೭ನೇ ಸಂಪುಟದ ಮುದ್ರಣಕ್ಕೆ ಪ್ರತಿಗಳು ಸಿದ್ಧಗೊಳ್ಳಲು ಸಾಧ್ಯವಾಗುತ್ತದೆ. ವಾಸ್ತವವಾಗಿ ಈ ನಿಘಂಟನ್ನು ರೂಪಿಸಲು ಪ್ರಾತಃಸ್ಮರಣೀಯರಾದ ಅನೇಕ ವಿದ್ವಾಂಸರುಗಳು ಅಪಾರವಾದ ಶ್ರಮವನ್ನು ವಹಿಸಿದ್ದಾರೆ. ಅವರೆಲ್ಲರ ಶ್ರಮ ಮತ್ತು ತಪಸ್ಸುಗಳ ಫಲವಾಗಿ ಈ ನಿಘಂಟಿನ ಯೋಜನೆ ೧೯೯೨ರ ಆರಂಭಕ್ಕೆ ಮುಗಿಯುವ ಭರವಸೆ ನಮಗಿದೆ ಎಂದು ತಿಳಿಸಲು ಸಂತೋಷವಾಗುತ್ತದೆ.

ಈ ನಿಘಂಟುವಿನ ೬ನೇ ಸಂಪುಟವನ್ನು ಕನ್ನಡಿಗರ ಕೈಯಲ್ಲಿರಿಸಲು ನಿಜವಾಗಿಯೂ ಹೆಮ್ಮೆಯಾಗುತ್ತದೆ. ಇದಕ್ಕೆ ಸಂಬಂಧಿಸಿದ ಎಲ್ಲರಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳು.

ಬೆಂಗಳೂರು
೨೮–೧೨–೧೯೯೦

ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ
ಅಧ್ಯಕ್ಷರು

**ಪಾಉಗ್ಗಮಣ** (ನಾ). [ಜೈನ] ಉಪವಾಸದಿಂದ ಮರಣ ಹೊಂದುವಿಕೆ; ಪ್ರಾಯೋಪಗಮನ : ಬಲದೇವಾಚಾರ್ಯ್ಯರ ಪಾಉಗ್ಗಮಣ (ಎಕ. II. ೮೨; ಸು. ೭೬೦). [<ಸಂ. ಪ್ರಾಯೋಪಗಮನ]

**ಪಾಂಕ್ತ** (ಗು). ೧. ಕ್ರಮಬದ್ಧವಾದ ; ಸಮಗ್ರವಾದ. (ನಾ). ೨. ಕ್ರಮಬದ್ಧವಾದುದು ; ಸಮಗ್ರವಾದುದು : ಹೊಸತಾರ್ಗದ ಗ್ರಂಥಕರ್ತನು . . . ಜನಾಂಗಗಳ ಚರಿತ್ರೆಗಳನ್ನೂ ಮನುಷ್ಯಜಾತಿಯ ಪಾಂಕ್ತವಾದ ಅಭ್ಯುದಯವನ್ನೂ ವಿವರಿಸುವನು (ಇತಿ. ೯೯) ; ಎಲ್ಲಾನೂ ಪಾಂಕ್ತ ಆಗಿ ಆಗಬೇಕು. ಬಾಚಾ ಏನೂ ತಪ್ಪೂ ಹಾಗಿಲ್ಲ (ದೀಶಾ. ೨೮) : ಇಂಥ ಪೂರ್ವಸಂಬಂಧಕಲ್ಪನೆಯಿಂದ ಕವಿಯ ಬಹುಶ್ರುತತ್ವ ಪಾಂಕ್ತವಾಗಿ ಪ್ರಕಾಶವಾಗುತ್ತದೆ (ಪಂಶಾಂಕ. ೦೬೦). [ಸಂ.]

**ಪಾಂಕ್ತೇಯ** (ಗು). ೧. (ಭೋಜನಕ್ಕೆ) ಜೊತೆಗೆ ಕುಳಿತುಕೊಳ್ಳಲು ಯೋಗ್ಯವಾದ. (ನಾ). ೨. ಜೊತೆಯಲ್ಲಿರಲು ಯೋಗ್ಯವಾದುದು ; ಸಹವಾಸಯೋಗ್ಯವಾದುದು : ಧಂದಸ್ಸೇ ಸಾಧುಕಾವ್ಯಭಾಷೆಯ ಏಕಮಾತ್ರ ಪಾಂಕ್ತೇಯವೆಂದು ಗಣ್ಯವಾಗಿತ್ತು (ಸಪಾಂರ. II. ೩೦೯). [ಸಂ.]

**ಪಾಂಗ** ' ಪಂಗ$_1$ ' ನೋ.

**ಪಾಂಗತ**, ಪಾಂಗಿತ (ನಾ). ಕ್ರಮಬದ್ಧವಾದುದು: ತೊಟ್ಟಿಲಲ್ಲಿರುವುದು; ಅಂಟಿಗಾಲಿಕ್ಕುವುದು . . . ಎಲ್ಲಾ ಅಟ್ಟದ ಮೆಟ್ಟಲಿನಂತೆ ಪಾಂಗತವಾಗಿದ (ಪಾತಿಗೇ. ೦೬೯). **ಪಾಂಗಿತ** : ಅಯುವು ತೀರಿಯಿಲ್ಲಮತರಿಸಿದಿರಿ ಪಾಂಗಿತ ದೊಳ್ ನಿಪ ಪಾಂಡುರಾಜನಿಗೆ (ಜಪಶಾ. ೯೩-೨೩). [<ಸಂ. ಪಾಂಕ್ತ. / ಮರಾ. ಪಂಗತ್]

**ಪಾಂಗಱ** (ಕ್ರಿ). ಕ್ರಮವನ್ನು ತಿಳಿ ; ಹದವನ್ನು ಅರಿತುಕೊಳ್ಳು : " ಪಾಂಗಱ (ಪಾಂಗು+ಅಱ)—ಪ್ರಕಾರಗಮನೇ (ರೀತಿಯನ್ನು ತಿಳಿ) " (ಶಮಣ): ಅಲಸದ ಪಿಂಗ ಪಡೆಯದೆ ಪಾಂಗಱದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇಳ್ವುದು (ಕಶಾ. ೦-೯೯) ; ಕಮ್ಮಿತ್ತಾಗೆ ಪಾಂಗಱ ದಮ್ಮತೋಪವಾನವಿದು ತಾನೆನೆ ವಿಪಾಟ್ಟದು ಕ್ಷೀರದುಂಡೆಯಂ (ಲೋಕೋಕ. ೬-೦೦) ; ಅಱಯಲಾಗದು ನೆಟ್ಟನೆಂದು ಬಿಸುಟ್ಟುದಂ ನಯಮಲ್ತು ಪಾಂಗಱವ ವಿಪ್ರವರರ್ಕಳಿಂ ಚರಿಂ ವಿಚಾರವರ್ಕಳಿಂ ಪೆಜರುಮನ್ನರಿನಿನ್ನುಮಾರಯಿಸಿಂ ವಿದಗ್ಧರಿನೊಯ್ಯನೆತ್ತಱಯಲ್ಕುಮೊ (ಕಾವ್ಯಾ. ೯೩). [ಪಾಂಗು$_1$ + ಅಱ]

**ಪಾಂಗೞ** (ಕ್ರಿ). ಕ್ರಮತಪ್ಪು; ರೀತಿಗೆಡು : ಗಱಯಿಸಿದರ್ಥಂ ಸರಿ ಪಾಂಗೞಯದೆಯುಂ ಶಬ್ದವೊಂದದಿರ್ದೊಡೆ ಮುತ್ತುಂ ಮಬಸಂ ಕೋದಂ ತಿರ್ಕಾಗ (ಕಶಾ. ೨-೩) ; ಘಟಿಲನ ನಡೆಯೇಂದು ಜಡಿದು ಸಾರಥಿಯಂ ಪಾಂಗೞದು ನಿಲಲೀಯದಲ್ಲಿಂದೆಟೆದುಪ್ಪುಂತಂಯ್ದುಳಾತ್ಮಪರನಂ ನರನಂ (ಕಾವ್ಯಾ. ೨೬). [ಪಾಂಗು$_1$ + ಅೞ$_1$]

**ಪಾಂಗಿತ** ' ಪಾಂಗತ ' ನೋ.

**ಪಾಂಗು$_1$** (ನಾ). ೧. ಆಕಾರ; ಆಕೃತಿ ; ರೂಪು : "ಪಱಜು ಪಾಂಗಾಕಾರಂ" (ಕಲ್ಯಶುಂ. ೬೨). ೨. ಬಗೆ ; ಪ್ರಕಾರ ; ರೀತಿ : "ಪಾಂಗುಂ ಪ್ರಕಾರಾಹ್ವಯಂ" (ಕರ್ಣಾ. ೬೯) ; ಇರುಳುಂ ಪಗಲುಂ . ಪಲವುದಿವಸ ಮೊಂದೆ ಪಾಂಗಿನೊಳ್ ಪ್ರಲಾಪಿಸಿ (ವಕ್ಕಾಶಾ. ೦೦೫-೧೦); ಈ ಮಾಂಗಳನಾವ. ಪಾಂಗಿನೊಳ್ ನಾಂ ತಿಳಿವೆಂ (ಪಂಚತಂ. ೯೩-೯) ; ಲೋಕದೊಳಿನ್ನೀ ಪಾಂಗಿಂ ತಪದೊಳಿಸಗಿವನ್ನರುಮೊಳರೇ (ಧರ್ಮಾಮೃ. ೨-೨೦೬) ; ಹೆಂಗಳ ರೂಪು ಗಂಡರಿಗೆ ಗಂಡರ ರೂಪು ಹೆಂಗಳ ಸೋಲಿಪುದೆಂಬ ಪಾಂಗಲ್ಲವವನ ಚೆಲ್ವಿಕೆ (ಶರತ. ೧-೩೦). ೩. ಸರಿ; ಸಾಟಿ : " ಪಾಂಗೆಂದು ಗೆತ್ತುಂದು ಸದೃಶಭಾವಂ" (ಕಶಾ. ೫೯-೨೯೯) ; ಒಂಬತ್ತುಂ ಪನ್ನದ ನುಣ್ಣದಿರ ನೆಗೆದು ನೀಳ್ದೊಂದೊಂದಱೊಳ್ ಕೂಡಿ ಮಯ್ವೆತ್ತಿರ್ದಿಂದಿರವಿಲ್ಲ ಪಾಂಗನೆನಸುಂ ಬಾಂಬಟ್ಟೆಯೊಳ್ ಬಿಳ್ ಕಣ್ಗೆತ್ತಂ ಸೋಲಮನೀವ ರನ್ನಪಸರಂ ಚೆಲ್ವಾದುದು (ಕಲ್ಯಾ. ೩೩): ಸೊಗಯಿಸುತಿರ್ದರದು ಪೂಮಡಿಗವೆಣ್ಗಳು ಭಾವಕರ ಬಗೆಗೆ ಸಾರ್ಚ ಹಾಪಡಿಗವೆಣ್ಗಳ ಪಾಂಗನು (ಶಾಂರಕ. ೦೨-೩೦) ; ಸತ್ಯವಾಕ್ಯಂಗಳಂ ನುಡಿವಲ್ಲಿ ಸದ್ಭಾವ ನಿತ್ಯಹರ್ಷಾಂಗಿಯವ್ವುದಜಾಂದರುಃಧತಿಯ ಪಾಂಗು (ಶಾಂತಿ. ೨-೦೭). ೪. ಎಡೆ ; ಅನುವು; ಆಸ್ಪದ: ಬೆಡಂಗಿಗೆ ಪಾಂಗಾದ ದೇಸಿಗಂ . . . ಸೌಂದರ್ಯಕ್ಕೆ ನೆಲೆಯಾದಂದ್ವಂ ಬೆಕ್ಕಸಂಬಟ್ಟು (ಕಾಂತಿ. ೩-೩೩೩) ; ಸಂಗತಮನೆರಚಿಯುಂ ಜಸವುಂಗಃ ನಡಿಗೆಜಗುವೆಡೆಯೊಳಿನಿಸಿ ಸಜಾಮಲ್ ಪಾಂಗಾದುದು ಸುರಗಿರಿಕೂಟಂಗಳುಪುಂ ಪ್ರಣಪಸಂತಂಟಂ ಗಳುಮಂ (ಅತಪು. ೩-೩). ೫. ಅಂದ ; ಸೊಗಸು ; ಚೆಲುವು : ಬರ್ಜ ಪಾಂಗುವಾರ್ಗಿರೆ ಚೆಲ್ವನಾಯ್ಯರಬೊಜಂಗರ ಲೀಲೆ ಸುರೇಂದ್ರಲೀಲೆಯಂ (ಶಂಕರಾ. ೯-೬೭); ದರಹಾಸಂ ಭ್ರೂವಿಳಾಸಂ ನೆಗಟೆ ನಡುಗೆ ಪುಷ್ಯಂ ಸ್ವನಾ ಭೋಗಬಾಧ್ಯಂ ಸ್ಫುರಿತಾಂಗಂ ಬೀಜೆ ಪಾಂಗಂ ನೆರೆದುಮುರುನಿತಂಬಂ ಪುರಸ್ತ್ರೀಕದಂಬಂ (ಜಗಶಿ. ೦೬-೬೮) ; ಪಾಂಗು ಬೆಡಂಗು ಭಂಗಿ ಸಂಗಳಿಕೆ ಸುಕಂಠ ಪಾಡಿ ಪುದಿದರ್ ಮುದದಿಂ ನರನಾಥಚಿತ್ತದೊಳ್ (ಕುಸುಮಾ. ೦-೩೭). ೬. ಕ್ರಮವಾದುದು ; ಅನುಕೂಲವಾದುದು ; ಯೋಗ್ಯವಾದುದು : ವಿಜಯಾರ್ಧಾದ್ರಿಯನೆಯ್ದಿ ತತ್ಕಟಕದೊಳ್ ಬೀಡಿಂಗೆ ಪಾಂಗಾಗೆ ತದ್ದ್ವಿಜಯಶ್ರೀಕಟಕೋಪಮಂ ಕಟಕಮಂ ಮುಟ್ಟಾಗೆ ಬಿಟ್ಟಿರ್ಪಿನಂ ವಿಜಯಾರ್ಧೇಂದ್ರಕುಮಾರನಾ ನಗದಧೀಶಂ ಬಂದು ಕಂಡಂ (ಕಾಂತಿ. ೦೦-೩೯). ' ಪಾಂಗೞ ', ' ಪಾಂಗುವೆಱು ' ಪರಾ. ೭. ಸಂಬಂಧ; ಹೊಂದಾಣಿಕೆ : ಬೂದಿ ಜಡೆ ಲಕ್ಕನಾಂ ತಪಕೇಂದುಪೆರಡಿಕ್ಕೊಳ ಶರಾಸನಂ ಕವಚಮಿವೆಂತಾದುವೊ ಮುತ್ತುಂ ಮೆಬಸಂ ಕೋದಂತಾಟೆ ನಿನ್ನ ತಪದ ಪಾಂಗೆಂತು ಗಡಾ (ಶಂಕರಾ. ೬-೮೨); ಕಟಿವೂವಾಗಲೊಡಂ ಪುಟ್ಟಿಟ ದೊರ್ವೆಯೆ ಪಾಱ ಪೋಪ ಕಂಟಿನ ತೇಜದಿಂ ಕಟಕಾಟವಾದೊಡಲಿಂ ಪಾಂಗುಟಯದೆ ಪಜಪಟ್ಟು ಪೋದುದಸು ಮುನಿಪತಿಯಾ (ಶರಣಾ. ೦೦-೫೯). [ದೇ. ॥ ತಮಿ. ಪಾಙ್ಕು ; ಮಲ. ಪಾಙ್ಙು, ಪಾಙ್ಙ್]

**ಪಾಂಗು$_2$** ' ಪಾಗು$_1$ ' ನೋ.

**ಪಾಂಗುವಡೆ** (ಕ್ರಿ). ಅಂದವನ್ನು ಪಡೆ ; ಚೆಲುವಾಗು : ಮುತ್ತಿನ ಸೂಸಕತ ಸೇರಿಸಿದಳೊರ್ವ ಲಲಿತಾಂಗಿ ಪಾಂಗುವಡೆಯೆ (ಶಾಂರಕ. ೦೩-೩೭). [ಪಾಂಗು$_1$ + ಪಡೆ$_1$]

**ಪಾಂಗುವೆಱು** (ಕ್ರಿ). ಕ್ರಮಬದ್ಧವಾಗು : ಅಸವ್ಯಶಮೊನೆ ಮುನ್ನಂ ಶಬ್ದ ಶಾಸ್ತ್ರಾದಿ ವಿದ್ಯಾವಿಸರಮನುಚಿತಾಳಾಪಂಗಳಿಂ ಪಾಂಗವೆತ್ತೋದಿಸಿದಂ (ಸುಕುಮಾ. ೬-೯೭). [ಪಾಂಗು$_1$ + ಪೆಱು$_1$]

**ಪಾಂಚಜನ್ಯ** (ನಾ). ೧. ಕೃಷ್ಣನ ಶಂಖ ; P 'ಪಂಚಜನ' ಎಂಬ ರಾಕ್ಷಸನ ಮೂಳೆಗಳಿಂದ ಮಾಡಿದ ಶಂಖ : "ನಾರಾಯಣನ . . . ಶಂಖಮಂ ಪಾಂಚಜನ್ಯವೆಂಬುದು" (ಕಪಾಯು. ೭೭-೨೭); ಇಕ್ಕಿ ಪಂಚಜನನಂ ತತ್ಪಂಚಜನಾಸ್ಥಿ ಜನಿತಮಂ ಪಾಂಚಜನ್ಯಶಂಖಮನುಪೇಂದ್ರನೀಟಿಕ್ಕಿ ಯೊಲವಿಂ (ಜಗಶಿ. ೬-೨೩) ; ಮುರವಿಜಯ ನಿಜಪಾಂಚಜನ್ಯಪಸಿರವ ಫಲುಗಣ ದೇವದತ್ತಸ್ಫುರಿತರವವನು ರಚಿಸಿದನು (ಕುಮಾರವ್ಯಾ. ೩-೨). ೨. ಕಶ್ಯಪ, ವಸಿಷ್ಠ, ಪ್ರಾಣ, ಅಂಗೀರಸ ಮತ್ತು ಚ್ಯವನ ಎಂಬ ಐದುಜನ ಋಷಿಗಳು ಮತ್ತು ಅವರಿಂದ ಪ್ರವೃತ್ತವಾದ ಐದು ಕುಲಗಳು. ೩. ಬೆಂಕಿ ; ಅಗ್ನಿ. ೪. ಚಂದ್ರ. ೫. ಮರ ; ವೃಕ್ಷ : "ಅನಲ ಹಿಮಾಂಶು ಶಂಖ ಕುಲಘೋದಗಳಿಂತಿವು ಪಾಂಚಜನ್ಯಪೆಂದೆನಿಕುಂ" (ಪಾಪಾ. ೬೬). ೬. ಒಂದು ಬಗೆಯ ಹುಲ್ಲು ; ಜಂಬುಹುಲ್ಲು. ೭. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಪಂಚವ್ರತ ಇಂದ್ರಿಯ . . . ಹರವಕ್ತ್ರ ಪಾಂಚಜನ್ಯ

ಶುಕ್ಲ—ಇಂತಿನಿತುಂ ಶಿಕ್ಕೆ ಹೆಸರು (ಕೃವಹಾ. ೧೦-೩೩). "ಅಗ್ನಿ ಕುಜಂ ದ್ವಿಜರಾಜಂ ಶಂಖಂ ತಾಂ ನಿಜವೈದಬಿ ಲಿಖ್ಬಿ ಪಾಂಚಜನ್ಯಮೆನಿಕ್ಕುಂ" (ಪಾಹಾಶಂ. ೯೮). [ಸಂ.]

**ಪಾಂಚಭೌತಿಕ** (ಗು). ೧. ಪಂಚಭೂತಗಳಿಂದಾದ ; ಪ್ರಾಕೃತಿಕವಾದ ; ಜಡಪ್ರಕೃತಿಯ : ವ್ಯಕ್ತಿಸ್ಥಿತಿಗೆ ಹೇತುಭೂತವಾದ ಪಾಂಚಭೌತಿಕ ಶರೀರತ್ಯಾಗವೇ ಸಾವು (ಶಾರಶ. ೧೦೪). (ನಾ). ೨. ಪಂಚಭೂತಗಳಿಂದಾದುದು ; ಪ್ರಾಕೃತಿಕವಾದುದು : ದಶಾವತಾರರೂಪಗಳು ಅಜ್ಞರ ದೃಷ್ಟಿಗೆ ಪಾಂಚಭೌತಿಕವಾಗಿ ತೋರುತ್ತಿದ್ದರೂ ಪ್ರಾಜ್ಞರ ದೃಷ್ಟಿಗೆ ಜ್ಞಾನಾನಂದಮಯವಾಗಿಯೇ ತೋರುವುವು (ಹಿಂದಸಾ. ೨೮೩). [ಸಂ.]

**ಪಾಂಚರಾತ** (ನಾ). ೧. ವೈಷ್ಣವಾಗಮಗಳಲ್ಲಿ ಒಂದು ; P ವಾಸಿಷ್ಠ, ನಾರದೀಯ, ಕಾಪಿಲ, ಗೌತಮೀಯ, ಸನತ್ಕುಮಾರೀಯ ಎಂಬ ಐದು ವಿಧ ಜ್ಞಾನಗಳನ್ನು ಉಪದೇಶಿಸುವ ಒಂದು ತತ್ವಶಾಸ್ತ್ರ: ಪಾಂಚರಾತ್ರ ಮೊದಲಾದ ಕೆಲವು ಆಗಮಗಳು ವೇದಾಂತವಿರುದ್ಧವಲ್ಲ ವೆಂದು ಕೆಲವರಿಂದ ಪರಿಗ್ರಹಿಸಲ್ಪಟ್ಟಿರುವುವು (ಹಿಂದಸಾ. ೯೪) : ಶ್ರೀಪಾಂಚ ರಾತ್ರಾಗಮವು ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ, ಇಂದ್ರರೆಂಬ ಐದು ದೇವತೆಗಳಿಗೆ ಐದು ರಾತ್ರಿಗಳಲ್ಲಿ ಭಗವನ್ಮುಖದಿಂದ ಉಪದಿಷ್ಟವಾಗಿ ಅನ್ವರ್ಥ ವಾಗಿದೆ (ಶಾರಶ. ೭೭). 'ಪಂಚರಾತ್ರ' ಪರಾ. ೨. ಪಾಂಚರಾತ್ರಾ ಗಮವನ್ನು ಅನುಸರಿಸುವ ವೈಷ್ಣವಪಂಗಡ ಮತ್ತು ಅದರ ಸಂಪ್ರದಾಯ. [ಸಂ.]

**ಪಾಂಚರಾತ್ರಿಕ** (ನಾ). ವೈಷ್ಣವ ಪಂಗಡದವನು ; ಪಾಂಚರಾತ್ರ ಸಂಪ್ರದಾಯದ ಅನುಯಾಯಿ : ಪಾಷಂಡಿಗಳು ಮಹಾಕ್ರೂರರಹ ಪಾಂಚರಾತ್ರಿಕರಾಗಿರೇಯೆಂದು ಗೌತಮಂ ಶಾಪವಿತ್ತಂ (ಶೀಕೃಪು. ೪-೩-೩೫). [ಸಂ.]

**ಪಾಂಚವಾರ್ಷಿಕ** (ಗು). ೧. ಐದು ವರ್ಷ ವಯಸ್ಸಾದ. ೨. ಐದು ವರ್ಷಗಳ ಅವಧಿಗೆ ಸಂಬಂಧಿಸಿದ : 'ಪಾಂಚವಾರ್ಷಿಕಯೋಜನೆ' ಪರಾ. [ಸಂ.]

**ಪಾಂಚವಾರ್ಷಿಕಯೋಜನೆ** (ನಾ). ವ್ಯವಸ್ಥಿತವಾಗಿ ಮಾಡಬೇಕಾದ ಕಾರ್ಯಗಳ ರೂಪರೇಷೆಯ ವಿಧಾನಗಳನ್ನು ಐದು ವರ್ಷ ಗಳಿಗೊಮ್ಮೆ ಮುಂಚಿತವಾಗಿ ರೂಪಿಸಿಕೊಳ್ಳುವುದು : ಭಾರತದ ಮೊದಲನೆಯ ಪಾಂಚವಾರ್ಷಿಕಯೋಜನೆಯಲ್ಲಿ ಕೃಷಿಗೆ ಪ್ರಾಧಾನ್ಯವಿತ್ತು (ಠೂ೩). 'ಪಂಚವಾರ್ಷಿಕಯೋಜನೆ' ಪರಾ.

[ಪಾಂಚವಾರ್ಷಿಕ+ಯೋಜನೆ]

**ಪಾಂಚಾಲ**. ಪಾಂಚಾಳ (ಗು). ೧. ಪಾಂಚಾಲದೇಶಕ್ಕೆ ಸಂಬಂಧಿ ಸಿದ : ಮುತ್ತಿಗೆ ತೆಗೆಸಿದರು ಪಾಂಚಾಲನಾಯಕರು (ಕುವ್ಯಾಕ. ೧೫-೪೪). (ನಾ). ೨. ಒಂದು ದೇಶದ ಹೆಸರು : ಲಾಳ ಮಾಳವ . . . ಪಾಂಚಾಲಮತ್ಸ್ಯಕುರಂಗವಂಗಕಳಿಂಗಬಂಗಾಳ (ಬಸಪು. ೬-೧೮). ೩. ಪಾಂಚಾಲದೇಶದ ಅರಸು : ಮರುಳೆ ಪಾಂಚಾಲನ ಕುಮಾರಿಯ ಮರಕಟಾಕ್ಷದ ಬೀಸುವಲೆಯಲಿ . . . ಧರಣಿಪಾಲಮೃಗಂಗಳನು ಸಲೆ ಬಲಿಸಿ ಸದೆದನು (ಕುವ್ಯಾಕ. ೦೪-೧೮) ; ಬಂಗಾಳ ಬಾಹ್ಲೀಕ ಘೋಟ ಪರಪಾಂಚಾಲ . . . ಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೦-೭-೧೮). ೪. ಉಪ್ಪಾರ : ಕಲ್ಲಾನೆ ಕುಟುಕೋರು ಚೀಣೂರು ಪಾಂಚಾಲಪ್ರಿ ಚಿನ್ನಾದಾ ಉಳಿಯಾ ಮಾಸಕೊಂಡು ರಂಗಯ್ಯ ಕಲ್ಲಾವಮಾಳಿಗೆ ಕಡದಾರೋ (ಹುಟ್ಟಿಹ. ೩೦). ೫. ಮರಗೆಲಸ ಮಾಡುವವನು ; ಬಡಗಿ : ಪಾಂಚಾಲರಿಗೆ ಆಚಾರಿ ಎಂದೂ . . . ಹಳ್ಳಿಪ್ಪೇರಲ್ಲಿ ಪೂಜಾರಿ ಎಂದೂ . . . ಕೌಟುಂಬಿಕ ಹೆಸರುಗಳಿವೆ (ತುಳುವಾ. ೦೮೪). ೬. = ಪಾಂಚಾಲಿ ೪ : ದ್ವಿತ್ರಿಪದರಚಿತವೃತ್ತಿ ವಿಚಿತ್ರೌಪಮ್ಯಾದ್ಯಲಂಕ್ರಿಯಾಸಮೇತಂ ಶ್ರೋತ್ರಸುಖಲಲಿತಪ್ಪದುಪದ ಪಾತ್ರಂ ಪಾಂಚಾಲರೀತಿಯೆನೆ ಪೆಸರ್ವಡೆಗುಂ (ಕಾವ್ಯಾವ. ೭೮೪).

**ಪಾಂಚಾಳ** : ೧. ಪಾಂಚಾಳೋತ್ತಮಮಾಹೇಂದ್ರನಗರದಿಂದಂ ಬಂದಂ (ವೀಖಪು. ೯-೩೮). ೨. ಪಾಂಚಾಳ ಗಂಗಾತಟಾಂತರ ಕೌಶಾಂಬಿ . . . ಮತ್ಸ್ಯ ದೇಶಕ್ಕೆ ತಸ್ಕರರೋಗಾದಿ ಭಯಂಗಳಂ ಜನಿಯಿಕುಂ (ಅಟ್ಟಮ ೧೩-೭೦). ೭. ಪಂಚಕಾರುಕರು ; P ಉಪ್ಪಾರ, ಕಮ್ಮಾರ, ಬಡಗಿ, ಕಂಚುಗಾರ ಮತ್ತು ಸೊನ್ನಾರರೆಂಬ ಐದು ಶಾಖೆಗಳಿಗೆ ಪಾಂಚಾಳರೆಂಬ ಹೆಸರು ಇರುವುದು ; ಬಡಗಿ, ನೇತಾರ, ಕೆಲಸಿಗ, ಅಗಸ ಮತ್ತು ಸಮಗಾರ ಎಂಬ ಐದು ವರ್ಗಗಳಿಗೂ ಇದೇ ಹೆಸರುಂಟು : ಹೆಸರಿಸಿದ ಪಾಂಚಾಳ ಚಿಪ್ಪಿಗ ಕುಶಲಕಾರ್ಯದ ಶಿಲ್ಪಿಕ . . . ಮುಚ್ಚಿಗರೆಸೆವ ವೀಥಿಗಳೊಳಗೆ ಬರುತಿರ್ದನು ದಶಗ್ರೀವ (ತೊರಾರಾ. ೨-೩೦). [ಸಂ.]

**ಪಾಂಚಾಲಿ** (ನಾ). ೧. ಪಾಂಚಾಲದೇಶದ ಹೆಂಗಸು. ೨. ಪಾಂಚಾಲ ದೇಶದ ರಾಜಪುತ್ರಿ ; ದ್ರೌಪದಿ : ಪಾಂಚಾಲಿಯುಂ ಗಂಧದಾಯಕಿ ಯಾಗಿರ್ಪಿನಮಂದು ಮಾತ್ಸ್ಯಗೃಹದಿಂದೀ ನಿಗ್ರಹಂ ಪೊಲ್ಲದೇ (ಗದಾಯು. ೩-೩೪) : ಪಾಂಚಾಲಿಯ ಮನೋರಥಶಾಲೆಯಲಿ ಸಾರಿದರಲ್ತೆ ಸಭೆಯಲಿ ಮಹೀಸುರರ (ಕುವ್ಯಾಕ. ೧೫-೧) ; ಪಾಂಚಾಲಿ . . . ಸಲಹೆಂದು ಹರಿಚರಣಕೆಜಗಿದಳು (ಕೃಖಭಾ. ೨-೩೦). ೩. ಗೊಂಬೆ ; ಪುತ್ಥಳಿ. ೪. [ ಕಾವ್ಯಮೀ ] ಕಾವ್ಯದ ರೀತಿಗಳಲ್ಲಿ ಒಂದು : ಗೌಡಿ ವೈದರ್ಭಿ ಪಾಂಚಾಲಿಯೆಂಬ ರೀತಿತ್ರಯಂಗೂಡಿ (ಎವೀಕ. ೨೭೭) ; ವಾಮನನು . . . ಓಜಸ್ಸು ಮತ್ತು ಕಾಂತಿಗಳುಳ್ಳದ್ದು ಗೌಡಿಯೆಂದೂ ಮಾಧುರ್ಯ ಸೌಕು ಮಾರ್ಯಗಳುಳ್ಳದ್ದು ಪಾಂಚಾಲಿಯೆಂದೂ ಹೇಳುತ್ತಾನೆ (ಭಾಶಿಡ. ೩೩೩). ೫. [ ನಾಟ್ಯ ] ನಾಲ್ಕು ಬಗೆಯ ವೃತ್ತಿಗಳಲ್ಲಿ ಒಂದು : ಮನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರಮಾಗಧಿಯು ಮೆಂಬ ನಾಲ್ಕುಂ ವೃತ್ತಿಯುಮಂ . . . ಪಾತ್ರಸಂಕ್ರಮಣದೊಳ್ ನೆಟಿಯೆ ತೋಱಿ (ಅಶಪು. ೩-೨೬ ವ). [ಸಂ. ಪಾಂಚಾಲೀ]

**ಪಾಂಚಾಲಿಕೆ**, ಪಾಂಚಾಳಿಕೆ (ನಾ). ೧. ಗೊಂಬೆ ; ಪುತ್ಥಳಿ : ಚಿಂತಾಮಣಿಯನು ರತ್ನಪಾಂಚಾಲಿಕೆಸಂತಾನಮನು ದಿವ್ಯಭೂಮಿ ಎಂತು ಪಡೆವುದಂತೆ ಜೈನಕುಮಾರನಾ ಕಾಂತೆ ಪೆತ್ತಳು ಭೂಮಿ ನಲಿಯೆ (ವರ್ಧಕ. ೧೩-೮೧). ೨. ದ್ರೌಪದಿ. ೧, ೨ : ಆ ಮಂಟಪಂ . . . ಪಾಂಚಾಲಿಕೋದಂಚಿತಮಾಗಿಯುಂ ಕಲಶಜಾತಸಮನ್ವಿತಮುಂ . . . ಎನಿಸಿರ್ಪುದು (ರಾಜಶೇ. ೮-೮ ವ). ೩. = ಪಾಂಚಾಲಿ ೪ : "ಪಾಂಚಾಲಿಕಾ" ಬಂಗಾಲದ ಒಂದು ಕಾವ್ಯಪ್ರಕಾರ (ಇಕೃಕ. ೧೬೩ ಅಡಿಟಿ).

**ಪಾಂಚಾಳಿಕೆ** : ೧. "ಚೇಲ ಶಿಲಾದಿಕೃತಂ ಪಾಂಚಾಳಿಕೆ ತಾನಕ್ಕುಮೆಸೆವ ಪುತ್ರಿಕೆ" (ವಸ್ತುಕೋ. ೫೧-೩೮) ; ಸೂರ್ಯನೋ ಕಲಶಮೋ ದಿಗ್ಭಿತ್ತಿಯೋ ಭಿತ್ತಿಯೋ ದೊರೆವೆತ್ತಾ ದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಳದೋ ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ (ಎಕ. XI. ದಾವಡ. ೨೫-೭೪; 1224). ೩. ಕಾರುಣ್ಯಂ ಹಾಸ್ಯಂ ಶೃಂಗಾರಮಿವಿನಿತಱೊಳಮಕ್ಕೆ ವೈದರ್ಭಿ ಮನೋಹಾರಿ ಪ್ರಳಯಾದ್ಭುತರಸ ವೀರರಸಂಗಳ್ಗೆ ಪೇಱ್ಗೆ ಪಾಂಚಾಳಿಕೆಯಂ (ಕಾವ್ಯಾವ. ೭೮೮). [ಸಂ. ಪಾಂಚಾಲಿಕಾ]

**ಪಾಂಚಾಲೆ** (ನಾ). ದ್ರೌಪದಿ : ಪಾಂಚಾಲೆ ಪೊಕ್ಕಳು ಭದ್ರಮಂಟಪ ಶಾಲೆಯನು ಮರಳಿದುದು ಮನ್ಮಥನೊಡ್ಡು ಸತಿಯೊಡನೆ (ಕುವ್ಯಾಕ. ೧೪-೧) : ದೇವ ನೀನಂದು ಗಾಂಡೀವಮಂ ತನಗಿತ್ತೆ ಭಾವಿಸಲ್ ಪಾಂಚಾಲೆ ನಿನ್ನೊಳುದ್ಭವಿಸಿದಳ್ ನಾವು ಲೋಗರೆ ನಿನಗೆ (ಜೈಮಿಭಾ. ೮-೪೩).

[ಸಂ. ಪಾಂಚಾಲಾ]

**ಪಾಂಚಾಳ** 'ಪಾಂಚಾಲ' ನೋ.

**ಪಾಂಚಾಳಿಕೆ** 'ಪಾಂಚಾಲಿಕೆ' ನೋ.

**ಪಾಂಡ** (ನಾ). (ಕರಾ) ಒಂದು ಬಗೆಯ ಹಾರಾಡುವ ಅಳಿಲು : "ಪಾಂಜ ಎಂದರೆ ಪಾರಂಬೆಕ್ಕು." . . . ಒಂದು ಜಾತಿಯ ಹಾರಾಡುವ ಅಳಿಲು. ನೀವು ಕಾಡಲ್ಲಿ ಕೆಂಚಳಿಲನ್ನು ನೋಡಿಲ್ಲವೆ? ಇದೂ ಅದೇ ಜಾತಿಯದು (ಕಟ್ಮೆ. ೩೫).
[←ತುಳು. ಪಾಂಚಿ=ಒಂದು ಬಗೆಯ ಕಾಡುಬೆಕ್ಕು]

**ಪಾಂಜರಪೋಳ, ಪಿಂಜರಾಪೋಲು** (ನಾ). ೧. ವಯಸ್ಸಾಗಿ ನಿಃಶಕ್ತವಾದ ಅಥವಾ ಅಂಗಹೀನವಾದ ದನಗಳನ್ನು ಮುಖ್ಯತಃ ನೋಡಿಕೊಳ್ಳುವ ಸ್ಥಳ; ಧರ್ಮಾರ್ಥಗೋಶಾಲೆ : ಇತ್ತರನ್ನು ಬಲಾತ್ಕಾರವಾಗಿ ಎತ್ತಿಕೊಂಡು ಹೋಗಿ ಯಾವುದಾದರೊಂದು ಪಾಂಜರ ಪೋಳ(ಧರ್ಮಾರ್ಥ ದನದ ಹಕ್ಕಿ)ದಲ್ಲಿ ಬಿಟ್ಟು ಬರಬೇಕೆಂಬ ರೊಚ್ಚು ಒಮ್ಮೊಮ್ಮೆ ಉಕ್ಕಿ ಬರುತ್ತದೆ (ಕೇಕಕ್ಕ. ೦೦೦); ನೂರಾರು ದನಗಳಿರುವ ಪಾಂಜರಪೋಳಗಳಲ್ಲಿಯೂ ಡೇರಿಫಾರ್ಮುಗಳಲ್ಲಿಯೂ ಹಿನೆಯ ಳನೆಯ ಯಂತ್ರ ಇಟ್ಟರೆ ಅನುಕೂಲವಾಗುವುದು (ಗೋಗ್ರಾಸ. ೩೯). ಪಿಂಜರಾಪೋಲು : ೨. (ಅಲಂ) ಮುದುಕರು ಮಾತ್ರ ಅಧಿಕಾರದಲ್ಲಿರುವ ವ್ಯವಸ್ಥೆ : ಆ ಕಚೇರಿ ಒಂದು ಪಿಂಜರಾಪೋಲು. ಬರೀ ಮುದುಕರೇ ತುಂಬಿದ್ದಾರೆ (ಜೂ).
[←ಹಿಂ. ಪಿಂಜರಾಪೋಲ್; ಮರಾ. ಪಾಂಜರಪೋಳ, ಪಾಂಜರಾಪೋಳ, ಪಿಂಜರಾಪೋಳ; ಗುಜ. ಪಿಂಜರಾಪೋಳ, ಪಿಂಜರಾಪೋಲು]

**ಪಾಂಟ** (ನಾ). ಮಂತ್ರಪೂತವಾದ ದ್ರವ (?) : ಚನ್ನಬಸವಗೆ ಬಸವ ಪಾಂಟದಿಂ ಗುರುವಾಗಿ ಸುಜ್ಞಾನಬೋಧೆಯಂ ಉಂಟುಮಾಡೆನಲ- (ಶೃಕುಪು. ೭-೩೩); ಎಂಟುದೀರರನೆಂಟುಪುಷ್ಪದ ಮೇಲಿಟ್ಟು ಪಾಂಟದಿಂ₂ ಕೈಲಾಸಕೊಯ್ದು ಪರಶಿವನಿಪಂ (ಶೃಕುಪು. ೭-೦೪೮). [<ಸಂ. ಫಾಂಟ]

**ಪಾಂಟತ್ವ** (ನಾ). ಮಂತ್ರಪೂತವಾದ ದ್ರವದ ಗುಣ (?) : ಪಾಂಟತ್ವದಿಂದೆ ಪರಿಪರಿಯ ಶಾಖಾದಿಗಳ ನಾಂಟಿ . . . ರಾಜಿಸುವರಲ್ಲಿಪ್ಪ ಜನಪದಗಳು (ಶೃಕುಪು. ೩-೨೦) : ಸ್ವರ್ಗದೊಳಗೆ ದೇವೇಂದ್ರನು ಪಾಂಟತ್ವದಿಂದೆ ನಮುಚಿಯ ಕೊಂದು ಶ್ರೇಷ್ಠನಾಗಿರಲು (ಶೃಕುಪು. ೩-೭೪).
[ಪಾಂಟ + -ತ್ವ]

**ಪಾಂಟವುತ ?** (ನಾ). (?) : ಮತ್ತರು ಡಂಗೆಗೊಂಡು ಬಡಿಯಲ್ ಚಲದಿಂದನಸುಂ ದುರಾಗ್ರಹಂ ಚಿತ್ರದೊಳಾಗೆ ನಿನ್ನ ಬಟಿಯಂ ಬರಲೀ ಪುಳಿಸೇಂ ಟವಾಳದಿಂ ಸುತ್ತುವರ್ಗಲ್ಲದೊಲ್ಲೆ ಬಿಡು ನೀನೆನಗಿಲ್ಲಪ ಪೂಜಾ ತೋಟ ವೇಟುತ್ತಿರಲಾಸೆಯಂ ಬಿಸುಟು ನೀಂ ಳಳಿ ಪಾಂಟವುತಕ್ಕೆ [ಪಾಕಾಂ. ಳಳಿ ಪಾಂಡಿವುತಕ್ಕೆ, ಕಟ ಪಾಂಟವುತಕ್ಕೆ] ಸ್ಮರಿಸೆಂ (ಕಾವ್ಯಾಶ. ೯೩೦)
[?]

**ಪಾಂಡಪ್ಪ** (ನಾ). ಒಬ್ಬಾತನ ಹೆಸರು : ಕಪ್ಪಿಲಿಗೆ ಪಡೆವೋದಲ್ಲಿ ಕೊಮಾಲರಾ ಮಗನಪ್ಪಣ್ಣಪ್ಪನ್ ಕಾಳೆಗದುಳ್ಸತ್ತಲ್ಲಿ (ಎಕ. X. ಕುಳಪಾ. ೨೫೩-೮; ೯೮೦). [ಪಾಂಡು₁ + ಅಪ್ಪ₁]

**ಪಾಂಡರ** (ಗು). ೧. ಬಿಳಿಯ ಛಾಯೆಯ; ಬಿಳಿಬಣ್ಣದ : ಋತು ವರ್ಣಕ್ರಮದಿಂದವೊಂದಿದ ದಿನಂ ನೀಲಾಭದಿಂ ಸ್ನಿಗ್ಧಮಚ್ಛಕರಂ ಪಾಂಡರಮಾಗಿ ಬೆಳ್ಸೆಯೆ ಮೇಣ್ ಬೆಳ್ಪಾಗೆ ವೈಡೂರ್ಯದಾಕೃತಿಯಿಂ ತತ್ಪ್ರತಿ ಸೂರ್ಯನಲ್ಲಿ ಶುಭದಂ (ಲೋಕೋಪಕ. ೪-೩೬). ೨. ಬಣ್ಣಗುಂದಿದ; ಪೇಲವವಾದ. (ನಾ). ೩. ಬಿಳುಪಾದುದು; ಬಿಳಿದು : "ಗೌರಃ . . . ಅವದಾತಃ. ಪಾಂಡರಃ—ಈ ೧೨ ಬಿಳಿದು" (ಕಜಾಪು. ೦೨೦-೯೭). ೪. ಬಿಳಿಬಟ್ಟೆಯನ್ನು ಧರಿಸಿದ ಭಿಕ್ಷು. ೫. ಕಾವಿಕಲ್ಲು; ಗೈರಿಕಧಾತು.
[ಸಂ.]

**ಪಾಂಡರಂಗಪಲ್ಲಿ** (ನಾ). ಒಂದು ಊರಿನ ಹೆಸರು : ಪಾಹಾವೇಪಗಿರೇಃ ಪೂರ್ವತ ಅನೇಪಂ ಬಾಲಕನ್ನಕ ದುದ್ದಪಲ್ಲಿ ಸಹಿತಾ ಪಾಣ್ಣರಪ್ಪಪಲ್ಲೀ ಪ್ರತಿಪ(ಪಾ)ದಿತೇ . . . ಆಜ್ಞಾಪಯತೀತಿ (ತೃಕಂ. ೦೫೯, ೦೦೭-೦೯; ಸು. ೬೭೬). [ಪಾಂಡರಂಗ₀ + ಪಲ್ಲಿ₂]

**ಪಾಂಡವ** (ನಾ). ೧. ಪಾಂಡುರಾಜನ ಮಗ; ▶ ಧರ್ಮರಾಯ, ಭೀಮ, ಅರ್ಜುನ, ನಕುಲ ಹಾಗೂ ಸಹದೇವ ಈ ಐವರಿಗೂ ಅಥವಾ ಈ ಐವರಲ್ಲಿ ಯಾರಿಗಾದರೂ ಈ ಹೆಸರು ಅನ್ವಯವಾಗುವುದು : "ಪಾಂಡವಂ ಧರ್ಮಜಂ ಯುಧಿಷ್ಠಿರನು ಧರ್ಮಪುತ್ರ ನೆಂಟೆನಿತು" (ಕುಂಗಿಶಾ. ೭೮-೩); ಅನೆಂಬುವನಿಂಬುಕಯ್ಯುಪ್ಪೂದೆ ಪಾಂಡವರ ನೊಡಂಬಡಿಸಿ ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆನೀತು ಮಾಟ್ಪೆಂ (ಗದಾಯು. ೩-೪೪ ವ); ಪಾಂಡವರಾಜಿಯೊಳೆನ್ನಿಂ ೭೦ಡಾಂಗ ಪರೊಳರ (ಪೇಟಾಪು. ೦೨-೦೪೪); ನೀವು ಸುಖದಲಿ ಪಾಂಡವರನು ಜೀವಿಸುವುದೆಮಗಿಲ್ಲದ ಯದುಭೂಪಾವಳಿಯ ಕೃಪೆ ಮಾಡವೇಕು (ಕುದ್ಯಾಶಾ. ೦-೩೩). ೨. ಬಿಳಿಯ ಹಕ್ಕಿ; ಬೆಳ್ಳಕ್ಕಿ. ೩. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಶರ ಬಾಣ ವಿಷಯ ಪಾಂಡವ ಪುರವೈರಿವುುಖಂಗಳ್ಗೆಡೆ ನಾಮಂ (ವ್ಯವಶಾ. ೯-೦೯).

**ಪಾಂಡವರ ಪೂಜೆ** = ದೀಪಾವಳಿಯಲ್ಲಿ ಪಾಂಡವರ ಗುರುತಾಗಿ ಸಗಣಿ ಬೆನಕಗಳನ್ನು ಇಟ್ಟು ಮಾಡುವ ಪೂಜೆ; ▶ "ಪಾಂಡವರು ಅಜ್ಞಾತ ವಾಸವನ್ನು ಮುಗಿಸಿ ಕೌರವರ ಕಣ್ಣಿಗೆ ಕಂಡುದು ಬಲಿಪ್ರತಿಪದೆಯ ದಿವಸವೇ. ಪಾಂಡವರು ಪುಣ್ಯಪುರುಷರು. ಅವರ ಕುರುಹುಗಳನ್ನೂ ಮಾಡಿ ಈ ದಿವಸ ಪೂಜಿಸುವುದುಂಟು" (ಜಾತಕ್ಕಾ. ೦೪೮) : ಪಾಂಡವರ ಪೂಜೆಯನ್ನು ದೀಪಾವಳಿಯಲ್ಲಿ ಮಾಡುತ್ತಾರೆ (ಜೂ).

**ಪಾಂಡವರ ಹಬ್ಬ** = ದೀಪಾವಳಿಯಲ್ಲಿ ಪಾಂಡವರ ಪ್ರತಿಮೆಗಳನ್ನು ಪೂಜಿಸಿ ಮಾಡುವ ಹಬ್ಬ : ಪರವ್ವ ಪ್ರತಿವರುಷವೂ 'ಪಾಂಡವರ ಹಬ್ಬ'ಕ್ಕೆ ತನ್ನ ಮಗಳನ್ನು ಕರೆಯಿಸಿಯೇ ಕರೆಯಿಸುತ್ತಾಳೆ (ಗಂಗಾಗೌ. ೬೪).
[ಸಂ.]

**ಪಾಂಡವರ ಮದ್ದು** (ನಾ). ಬಿಳಿನೈದಿಲೆಯ ಗಡ್ಡೆ : "ಪ್ರಪೌಂಡರೀಕಂ, ಪೌಂಡರ್ಯಂ—೨ ಪುಂಡರೀಕವೆಂಬುವ ಗ್ರಂಥಿಕದ್ರವ್ಯದ ಹೆಸರುಗಳು. ಪೆಂಡಾರಗಡ್ಡೆ, ಪಾಂಡವರ ಮದ್ದು, ಇದು ಬಿಳೀನೈದಿಲೆಗಡ್ಡೆ" (ಸಿದ್ಧಾಂತ. ೦೪೦). [<ಪಾಂಡವ₁ + ಮದ್ದು (<ಮರ್ದು)]

**ಪಾಂಡವರ ಹರಿವೆ** (ನಾ). ಒಂದು ಬಗೆಯ ಹರಿವೆಸೊಪ್ಪು : ಸುನಿಷಣ್ಣವು (ಪಾಂಡವರ ಹರಿವೆ) ಅಗ್ನಿವರ್ಧಕ (ಅಷ್ಟಾಂಗ. ೦೩೩-೭೦ ಅರ್ಥ); ಕುಟಂಜರ (ಪಾಂಡವರ ಹರಿವೆ) . . . ಜೇಷ್ಠಮಧು ಇವೆಲ್ಲ ಮಧುರ (ಅಷ್ಟಾಂಗ. ೦೩೬-೯೩ ಅರ್ಥ). [<ಪಾಂಡವ₁ + ಹರಿವೆ₂ (<ಪಜುಹೆ)]

**ಪಾಂಡವರಾಜಾನ್ನ** (ನಾ). ಒಂದು ಬಗೆಯ ಧಾನ್ಯ : "ಮುನಿಧಾನ್ಯ— ಪಾಂಡವರಾಜಾನ್ನ" (೬೫೦. ೦೨೩). [ಪಾಂಡವ₁ + ರಾಜಾನ್ನ]

**ಪಾಂಡಿ₁** (ನಾ). ೧. ಹೆಣ್ಣುಮಕ್ಕಳು ಆಡುವ ಒಂದು ಬಗೆಯ ಆಟ; ನೆಲದ ಮೇಲೆ ಪಕ್ಕಪಕ್ಕದಲ್ಲಿ ನಾಲ್ಕು ನಾಲ್ಕರಂತೆ ಎಂಟು ಚಚ್ಚೌಕವಾದ ಮನೆಗಳನ್ನು ಬರೆದು. ಕಲ್ಲಿನ ಬಿಲ್ಲೆಯೊಂದನ್ನು ಕುಂಟುತ್ತಾ ಮನೆಯಿಂದ ಮನೆಗೆ ತಳ್ಳಿಕೊಂಡು ಹೋಗುವ ಆಟ; ಕುಂಟಾಟ : ಪಾಂಡಿ ಆಡೋಣ ಬರ್ತೀಯಾ ? (ಜೂ). ೨. ಕುಂಟಾಟವನ್ನು ಆಡಲು ಬಳಸುವ ಚಪ್ಪಟೆಯಾದ ಕಲ್ಲು; ಬಚ್ಚ : ನನ್ನ ಪಾಂಡೀನ ಎಷ್ಟು ಸಲ ಹಾಕಿದರೂ ಇನ್ನೂ ಒಂದೂ ಹಣ್ಣಾಗಲಿಲ್ಲ (ಜೂ). ೩. ಕುಂಟಾಟದಲ್ಲಿ ಗೆದ್ದ ನಂತರ ಹಣ್ಣಾದ ಮನೆಯನ್ನು ಸೂಚಿಸಲು ಹೇಳುವ ಮಾತು : ನಾನೇ ಗೆದ್ದೆ. ನನ್ನದು ಐದು ಪಾಂಡಿ ಆಯಿತು (ಜೂ). [←ತಮಿ. ಪಾಣ್ಣಿ]

**ಪಾಂಡಿ₂** (ನಾ). ಒಂದು ಬಗೆಯ ದೋಣಿ,—ನಾವೆ: ಅವರ ಖಟಾಟೋಪವೇನಿದ್ದರೂ, ಅದು ಕಡಲಿಗಿಳಿದಾಗ, ಮಾರಿಬಲೆ ಎಳೆಯುವಾಗ, ಪಾಂಡಿಯಲ್ಲಿ

ಕುಳಿತು ಹುಟ್ಟುಹಾಕುವಾಗ_ಆಗಲೇ ಕಾಣಬೇಕು (ಕಾರುಂಡ. ೩೨) : ವರ್ತಕಾಲರಲ್ಲಿ ಹಲವರು ಪಾಂಡಿಗಳಲ್ಲಿ ಪರದೇಶದ ವ್ಯಾಪಾರ ಮಾಡಿ ಪಾಂಡಿ ಎಂಬ ಹೆಸರನ್ನು ಗಳಿಸಿಕೊಂಡಿದ್ದರು (ಕುಳುಣ. ೫೯). [←ಮಲ. ಪಾಣ್ಡಿ]

**ಪಾಂಡಿ₃** (ನಾ). ಒಂದು ಬಗೆಯ ಹುಲ್ಲು (?) : ಪುಣಿಸೂರ್ಪೊಳಲ ನೆಲ್ಲು ಪಾಣ್ಣಿಯುಪಳಿಪದು (ಪ್ರೂಆಂ. ೧೯೩೦, ೩೩-೮, ೮೦೦). [?. / ತಮಿ. ಪಾಣ್ಪು. / ಸಂ. ಪಾಂಡು]

**ಪಾಂಡಿತ್ಯ** (ನಾ). ಅರಿವು ; ಜ್ಞಾನ : ದಶದಿಶೆಗಳೊಳೆಲ್ಲಂ ನಿನ್ನ ಪಾಂಡಿತ್ಯದ ಯಶವಮಂ ಪಸರಿಸಿ . . . ತಾಯ್ನೊಂದೆಗಂ ಸಂತೋಷಂ ಮಾಡಿಯಾಪರಂ ಬಿಡಿಸಿಯೊಡಂಬಡಿಸಿ ಬಂದೊಡೆ ತಪವಮಂ ಕುಡಲಕ್ಕುಂ (ಶಬ್ದಾ. ೮೯-೧೫): ಈ ಸರಸಪಾಂಡಿತ್ಯವೀ ನಿರಹಂಕಾರಣಭಕ್ತಿ . . . ಈ ಘನತೆ ಅರಿಗುಂಟು (ಅಸಪು. ೨-೩೦) ; ಈಗಿನ ಕಾಲದಲ್ಲಿ ಪಾಂಡಿತ್ಯವಿಲ್ಲದವರೆಷ್ಟೋ ಪಂಡಿ ಪಂಡಿತೋತ್ತಮರೆಂದು ಬರುವಾಂಕಿತರಾಗಿದ್ದಾರೆ (ಸುಯುಕ. ೩೮). [ಸಂ.]

**ಪಾಂಡಿಮ** (ಗು). ೧. ಬಿಳುಪಾದ ; ಬೆಳ್ಳಗಾದ : ಚಂದನಾಪಾಂಡಿಮ ಗಾತ್ರಂ ಗ್ರೀಷ್ಮಸಾಯಂಸಮಯದೊಳೆಸೆದತ್ತಂದು ಬಾಲಾಕಲಾಪಂ (ಶಂಕ್ರಪು. ೯-೮೯). (ನಾ). ೨. ಬಿಳಿಯ ಬಣ್ಣ ; ಧವಳತೆ : ನತ್ಪಾಂಡಿಮ ಭಾಸ್ವತ್ಸುರ ಶಶಿ ದಿನಕೃತ್ಪವಮಾನ ಸುಹೃತ್ಪರಪಸು ವಿಕಿರ ತೃಟುನಯನ (ಚಾಕೃಚೀ. ೭-೨೬). [ಸಂ. ಪಾಂಡಿಮನ್]

**ಪಾಂಡಿಯ** (ನಾ). ಪಾಂಡ್ಯದೇಶದ ರಾಜನ ಹೆಸರು : ವಲ್ಲಿವರಸ ದೇವಯ ಮಾಡಲ ಗೋವನ್ ಬರುವ್ಪಾನಟ್ಟದ × × × ಅಗಳು ಪಾಣ್ಡಿಯನ ಮೇಗೆ ಎಟ್ಟು ಪಜೆಯಜೂಜಿಜಿದೊ (ಎಕ. ೫. ಶ್ರೀಚಪ. ೩೦-೯ ; ಸು. ೮೦೦?). [←ತಮಿ. ಪಾಣ್ಡಿಯನ್./ ಸಂ. ಪಾಂಡ್ಯ]

**ಪಾಂಡಿಸೆಟ್ಟಿ** (ನಾ). ಒಬ್ಬಾತನ ಹೆಸರು : ಪಾಂಡಿಸೆಟ್ಟಿ ನಾಲ್ಸಾಸಿರಂ (ಎಇ. XIV. ೯೦-೨೩ ; 725). [<ಪಾಂಡ್ಯ + ಸೆಟ್ಟಿ]

**ಪಾಂಡು₁** (ಗು). ೧. ಹಳದಿ ಛಾಯೆಯುಳ್ಳ ಬಿಳಿಯ ಬಣ್ಣದ : ರಾಜಿಸುತಿರ್ದಪಂದರುಣವಂಶಜ ಪಾಂಡುಪಯೋಜನೀಲನೀರೇಜ ಕದಂಬಕಂಗಳ . . . ವರ್ಣಸಂಕರತೆಯಿಂದೆ ಕೊಳಂಗಳ್ (ಜಗಂ. ೪-೬೩). (ನಾ). ೨. ಬಿಳಿಯ ಬಣ್ಣ ; ಧವಳತೆ : "ಗೌರಃ, ಶ್ವೇತಃ . . . ಪಾಂಡುಃ, ಅವದಾತಃ, ಪಾಂಡರಃ __ಈ ೧೨ ಬಿಳಿದು" (ಶಠಾಮು. ೦೨೦-೪೩). ೩. ಒಂದು ಬಗೆಯ ರೋಗ ; ಕಾಮಾಲೆ ; ಅರಿಸಿನ ಮುಂಡಿಗೆ ರೋಗ : ತಪಸದ ಎಲೆ, ಆನೆನೆಗ್ಗಿಲು . . . ನೀರಲ್ಲಿ ಕಲಸಿ ಪ್ರಯೋಗಿಸಲು ಪಾಂಡು, ವ್ಯೆ ಬೆಳ್ಳಪ್ಪುದಂ, ಗುದದೊಳ್ಪುಟ್ಟಿದ ವ್ಯಾಧಿಗಳ ಕೆಡಿಸುಗುಂ (ವಶ್ಯಕ. ೨೦). ೪. ಒಬ್ಬ ರಾಜ ; ಪಾಂಡವರ ತಂದೆ : ಎನಗಂ ಪಾಂಡುಗಮಿಲ್ಲ ಭೇದಮೆಳೆಯಂ ಪಚ್ಚಾಳ್ವಂ (ಕಂಕಶಾ. ೦೩-೯) : ಈತನೇ ಧೃತರಾಷ್ಟ್ರನೆರಡನೆಯಾತ ಪಾಂಡು (ಕುಬ್ಚಾಕ. ೩-೦೦). [ಸಂ.]

**ಪಾಂಡು₂**, ಪಾಡ್ (ನಾ). ಭೂಮಿಯನ್ನು ಅಳೆಯುವ ಒಂದು ಪ್ರಮಾಣ ; ಒಂದು ಬಿಘೆಯ ಇಪ್ಪತ್ತನೆಯ ಭಾಗ : ೨೦ ಕಾಠಿಗೆ ೧ ಪಾಂಡು, ೨೦ ಪಾಂಡಿಗೆ ೧ ಬಿಘೆ, ೧೨೦ ಬಿಘೆಗೆ ೧ ಚಾಹೂರು (ಳಶಾಗಿ. ೨೯೦). **ಪಾಡ್** : ೨೦ ಪಾಡ್–ಬಿಘೆ ೧ (ಶೂಮಿಆ. ೬೬). [←ಮರಾ. ಪಾಂಡ್]

**ಪಾಂಡುಕ** (ನಾ). ೧. ಹಳದಿಛಾಯೆಯ ಬಿಳಿಬಣ್ಣ. ೨. ಕಾಮಾಲೆ ರೋಗ ; ಅರಿಸಿನಮುಂಡಿಗೆರೋಗ. ೩. ಪಾಂಡುರಾಜ. ೪. ಒಂದು ಬಗೆಯ ಪಡವಲ ; ಕಹಿಪಡವಲ ; "ಆ.ಪಾಂಡುಕಂ ಕಹಿಪಡಲವಕ್ಕು" (ಶುಂಗಶಾ. ೪೪-೪೪). ೫. [ಜೈನ] ಸುಮೇರು ಪರ್ವತದ ಮೇಲಿರುವ ಭದ್ರಪಾಲ, ನಂದನ, ಸೌಮನಸ ಮತ್ತು ಪಾಂಡುಕವೆಂಬ ನಾಲ್ಕು ವನಗಳಲ್ಲಿ ಕೊನೆಯದು ; P ಇದರಲ್ಲಿ ಜನ್ಮಾಭಿಷೇಕಕಲ್ಯಾಣಕ್ಕಾಗಿ ಮೀಸಲಾಗಿರುವ ನಾಲ್ಕು ಶಿಲಾಪೀಠಗಳಿವೆ : ವಿನುತೋದ್ಯತ್ಫಲ ಭದ್ರಶಾಲೆಯೆಸೆದಿರ್ಪ ಭದ್ರ ಶಾಲಂ ಸುನಂದನವಾಗಿರ್ದುದು ದಿವ್ಯನಂದನವಿದಿಂತೊಪ್ಪಿರ್ದುದೀ ಸಾರ ಸೌಮನಸಂ ವಿಕಾಸಿಕುಸುಮಶ್ರೀಪಾಂಡುಕಂ ಪಾಂಡುಕಂ ಮನಃಕಂಬಾ ಯ್ತಾದೆ ನೋಡ ತ್ರನ್ನಿ ಗಿರಿಗೀ ನಾಲ್ಕುಂ ಬನಂ ಜನ್ಮನಂ (ಭಕ್ತಪು. ೦೦-೩೬). 'ಪಾಂಡುಕವನ' ಪರ್ಯಾ. ೬. ಪಾಂಡುಕವನದಲ್ಲಿರುವ ಅರ್ಧ ಚಂದ್ರಾಕೃತಿಯ ನಾಲ್ಕು ಪೀಠಶಿಲೆಗಳಲ್ಲಿ ಮೊದಲನೆಯದು ; P ಈ ನಾಲ್ಕೂ ಶಿಲೆಗಳು ನೂರುಯೋಜನ ಉದ್ದವಾಗಿಯೂ ಐವತ್ತುಯೋಜನ ಅಗಲವಾಗಿಯೂ ಎಂಟುಯೋಜನ ಎತ್ತರ ವಾಗಿಯೂ ಇದ್ದು ಪ್ರತಿಯೊಂದು ಶಿಲೆಯ ಮೇಲೆ ನಡುವೆ ತೀರ್ಥಂಕರನಿಗಾಗಿ ಒಂದು, ದಕ್ಷಿಣಕ್ಕೆ ಸೌಧರ್ಮೇಂದ್ರನಿಗಾಗಿ ಒಂದು ಹಾಗೂ ಉತ್ತರಕ್ಕೆ ಈಶಾನೇಂದ್ರನಿಗಾಗಿ ಒಂದು – ಹೀಗೆ ಮೂರು ಪೂರ್ವಾಭಿಮುಖವಾದ ಸಿಂಹಾಸನಗಳಿವೆ ಎಂಬ ನಂಬಿಕೆ ಇದೆ : ಕ್ಷೀರೋದವಾರಿಧಿಘಾಸಿಪೂರದ ಚೆಲ್ವಿಂಗೆ ಸೆಣಸುವಂತಘನವನೀಹಾರದ ಪೂರದ ಬೆಳ್ಪನೆ ಬಾರಿಸ್ಪಿ ಪಾಂಡುಕಶಿಲಾತಲಂ ಸೊಗಯಿಸುಗುಂ (ಅಂಪು. ೭-೭೪) ; ಬಳಸಿ ವಿದಿಕ್ಚತುಷ್ಟಯಮನುತ್ತರ ಪೂರ್ವದಿನರ್ಧವೃತ್ತಮಂ ಪೋಳೆವುವ ಪಾಂಡುರಪ್ರಭೆಯ ಪಾಂಡುಕಮುಂ ಕವಿಲಾದ ರತ್ನಕಂಬಳಮುಮನಿಪ್ಪ ಜೈನಸವನೋತ್ಸವಪೀಠಶಿಲಾಚತುಷ್ಟಯಂ (ಮಲ್ಲಪು. ೧೨-೯೦). ೭. ನವನಿಧಿಗಳಲ್ಲಿ ಒಂದು; ಹದಿನೆಂಟು ಪ್ರಕಾರದ ಧಾನ್ಯಗಳನ್ನು ಒದಗಿಸುವ ಸಾಮರ್ಥ್ಯವುಳ್ಳ ನಿಧಿ : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆಂಪು. ೧೩-೩ ವ); ಧಾನ್ಯಂಗಳು ಹದಿನೆಂಟುಪ್ರಕಾರವ ತಾನೀವ ಪಾಂಡುಕ ನಿಧಿಯು (ಧ್ಯಾರಚ. ೧೦-೪೨೮). [ಸಂ.]

**ಪಾಂಡುಕಂಬಲ**, ಪಾಂಡುಕಂಬಳ (ನಾ). ೧. ಬಿಳಿಯ ಕಂಬಳಿ : **ಪಾಂಡುಕಂಬಳ** : ೧. ತಗುಳ್ದಿಕಿಲಾಕ್ರಮಿಸಿ ಲೋಕಮನಯ್ದೆ ಸರೋಜ ಸಂಭವಂ ಪೊದಿಸಿದ ಪಾಂಡುಕಂಬಳಮಿದೆಂಬವೊಲಾದುದು ಮಂಜಿನು ರ್ಚರಂ (ಭುಕ್ತಪು. ೬-೩೮). ೨. [ಜೈನ] ಪಾಂಡುಕವನದಲ್ಲಿರುವ ನಾಲ್ಕು ಪೀಠಶಿಲೆಗಳಲ್ಲಿ ಒಂದು : ಪಾಂಡುಕ ಪಾಂಡುಕಂಬಳ ರಕ್ತಕಂಬಳಾತಿರಕ್ತಕಂಬಳ ವಿಶಾಲರತ್ನಶಿಲಾತಳಪ್ರತಿಷ್ಠಿತ ಭಗವಜ್ಜ ನ್ಮಾಭಿಷೇಕಸಿಂಹಾಸನಾಲಂಕೃತಮುಮಾಗಿ (ಆಂಪು. ೧-೪೯ ವ) : ವಿಳಸ ತ್ಪಾಂಡುಕ ಪಾಂಡುಕಂಬಳ ಶಿಲಾಪಟ್ಟಂ ಶಿಲಾಪಟ್ಟಕಂಬಳ ಸತ್ಕಾಂತ್ಯತಿರತ್ನ ಸಂಚಳ ಶಿಲಾಪಟ್ಟಂಗಳಂ ನಾಲ್ಕು ಕೋಣ್ಗಳೊಳೊಪ್ಪಿರ್ಪುವು . . . ಜಿನಪ್ರಜಕ್ಕೆ ಸವನಸ್ಥಾನಂಗಳೀ ಶೈಲದೊಳ್ (ಭುಕ್ತಪು. ೦೦-೫೮). P ಪಾಂಡುಕ, ಪಾಂಡುಕಂಬಳ, ರಕ್ತಕಂಬಳ, ಅತಿರಕ್ತಕಂಬಳ ಎಂಬ ಈ ನಾಲ್ಕು ಪೀಠಶಿಲೆಗಳು ಅನುಕ್ರಮವಾಗಿ ಭರತ ಕ್ಷೇತ್ರ, ಪಶ್ಚಿಮವಿದೇಹ, ಐರಾವತ ಹಾಗೂ ಪೂರ್ವವಿದೇಹದ ತೀರ್ಥಂಕರರ ಜನ್ಮಾಭಿಷೇಕಕ್ಕೆ ನಿಯಮಿತವಾಗಿವೆ ಎಂಬ ನಂಬಿಕೆ ಇದೆ. [ಸಂ.]

**ಪಾಂಡುಕಂಬಲಿ**, ಪಾಂಡುಕಂಬಳಿ (ನಾ). ಬಿಳಿಯ ಕಂಬಳಿಯನ್ನು ಹೊದಿಸಿದ ರಥ. **ಪಾಂಡುಕಂಬಳಿ** : "ಪಾಂಡುಕಂಬಳೀ . . . ಬಿಳಿ ಕಂಬಳಿ, ಫ್ಲಾನಲ್ ಮುಂತಾದವುಗಳಿಂದ ಹೊದಿಸಲ್ಪಟ್ಟ ರಥದ ಹೆಸರು" (ಟಿಡ್ಸ್ಕಾಂಕ. ೨೩೩). [ಸಂ. ಪಾಂಡುಕಂಬಲಿನ್]

**ಪಾಂಡುಕಂಬಳ** 'ಪಾಂಡುಕಂಬಲ' ನೋ.

**ಪಾಂಡುಕಂಬಳಿ** 'ಪಾಂಡುಕಂಬಲಿ' ನೋ.

**ಪಾಂಡುಕವನ** (ನಾ). – ಪಾಂಡುಕ ೫ : ಭದ್ರಶಾಲನಂದನ ಸೌಮನಸ ಪಾಂಡುಕವನವಿರಾಜಿತಮುಂ (ಆದಿಪು. ೧-೫೯ ಪ); ಪಾಂಡುಕವನಕ್ಕುರ್ದತ್ತು ಸುರೇಂದ್ರನಾರಣಂ (ಜಿನಸೃತಿ. ೦೨-೦೦೯). [ಪಾಂಡುಕ+ವನ]

**ಪಾಂಡುಕಾಮಾಲೆ** (ನಾ). ಕಾಮಾಲೆ ; ಅರಿಸಿನವಮುಂಡಿಗೆ ರೋಗ : ವಜ್ರಗಿರಿ ...ೀರ ಆಳಿಕ ಮಜ್ಜಿಗೆಯಲ್ಲಿ ಕೊಳ್ಳಲು ಪಾಂಡುಕಾಮಾಲೆ ಮಾಣ್ಗು ...ಿ. ೨೬೦). [ಪಾಂಡು$_1$+ಕಾಮಾಲೆ]

**ಪಾಂಡುಗಾತ್ರ** (ನಾ) ಬಿಳಿಬಣ್ಣದ ಮೈಯುಳ್ಳವನು ; ನಾರದ : ಪಾಂಡುಗಾತ್ರಂ ತಳರ್ದನಘಲತಾಮಾತ್ರನಾ ಬ್ರಹ್ಮಪುತ್ರಂ (ಜಗಂ. ೨-೯೯). [ಪಾಂಡು$_1$+ಗಾತ್ರ]

**ಪಾಂಡುಚ್ಛತ್ರ** (ನಾ). ಬಿಳಿಯ ಕೊಡೆ ; ಶ್ವೇತಚ್ಛತ್ರ : ಜಾತಿಮಾಜಿ ಸಮಾಜಂ ಮದವದ್ಗಜೇಂದ್ರಘಟಿ ಪಾಂಡುಚ್ಛತ್ರಮಂಡಂ ನಿಗುಂದಿಸೆ ಪುತ್ರಂಗಿದಿರ್ವಂದರಂದರಸಿಯುಂ ಭೂಪಾಲನುಂ (ಜಿನಸೃತಿ. ೬-೫೯) [ಪಾಂಡು$_1$+ಛತ್ರ]

**ಪಾಂಡುದೇಹ** (ನಾ). ಬಿಳಿಯ ಮೈ ; ಧವಳಶರೀರ : ಮಹಾಪಾಂಡು ದೇಹಮುಮುಜ್ಜೃಂಭಿಪೇಜಾಕೆಯುಂ ಬಗೆಗೊಳಲ್ . . . ಅಬ್ಜಭವಹಂಸು ಪಾಜಿಶಥಾಧ್ವದೊಳ್ (ಜಗಂ. ೧-೯೦). [ಪಾಂಡು$_1$+ದೇಹ]

**ಪಾಂಡುಪಕ್ಷ** (ನಾ). ಪಾಂಡವರ ಪಕ್ಷಪಾತಿ : ಪಕ್ಷಿವಾಹನ ಪೂರ್ಣ ಲಕ್ಷಣ ಸರ್ವೇಶ ಮೋಕ್ಷದಾಯಕ ಪಾಂಡುಪಕ್ಷ (ಶಿಶುಕ್ಕ. ೬೬-೦). [ಪಾಂಡು$_1$+ಪಕ್ಷ]

**ಪಾಂಡುಪಲ್ಲಿ** (ನಾ). ಒಂದು ಬಗೆಯ ಮರ ; ಬಿಳಿಯ ಕಡವ : “ಧೂಸರಾ—ಪಾಂಡುಪಲ್ಲಿ” (ಚಿತ್ರಂ. ೮೨). [ಸಂ. ಪಾಂಡುಪಲ್ಲೀ]

**ಪಾಂಡುಪಿಂಡ** (ನಾ). ಕುದುರೆಯ ತಿಗದ ಕೆಳಗಿನ ಭಾಗ : ಊರುವಿನ ಕಣ್ಣಡೆದೆ ತಾನಾರಯ್ ನೀಂ ಪಾಂಡುಪಿಂಡಮೆಂಬಭಿಧಾನಂ (ಅಶ್ವಶಾ. ೯-೫೯). [ಪಾಂಡು$_1$+ಪಿಂಡ]

**ಪಾಂಡುಭೂಮಿ** (ನಾ). ಬಿಳಿಯ ಮಣ್ಣುಳ್ಳ ಭೂಮಿ ; ಮೊಗೆಮಣ್ಣಿನ ನೆಲ: “ಪಾಂಡುಭೂ(ಎ)ಮಿಃ, ಉದಗ್ಭೂ(ಮ)ಮಿಃ —೨ ಈ ಮೊಗೆಯ ಭೂಮಿ” (ಕರಾಟು. ೫೬-೩). [ಪಾಂಡು$_1$+ಭೂಮಿ]

**ಪಾಂಡುರ** (ಗು). ೧. ಬಿಳಿಯ ; ಬಿಳುಪಾದ : ಘನತರುಶಾಖಾಗ್ರಾನಾಗ್ರನಿಭೃತಪಾಂಡುರಕಪೋತಪಂಕ್ತಿ ಪ್ರಕರಂ ನೆನೆಯಿಪುದು ಶೂನ್ಯ ಮಾಗಿಯುಮನೇಕ...ಮುನಿಪಾಗ್ನಿಹೋತ್ರಧೂಮಾವನಿಯಂ (ಕಾದಂಬ. ೦೦೯); ರಂಭಿಸಿತ್ತು ರಘುರಾಮನ ಪಾಂಡುರದೇಹಮಂಡಲಂ (ಶಬರಶಂ. ೬-೧೩೨). (ನಾ). ೨. ಬಿಳುಪು ; ಬಿಳಿಯ ಬಣ್ಣವುಳ್ಳುದು : “ಗೌರಃ . . . ಪಾಂಡುರಃ, ಪಾಂಡುಃ, ಅವದಾತಃ, ಪಾಂಡರ : —ಈ ೧೨ ಬಿಳಿದು” (ಕರಾಟು. ೦೨೦-೯೬) ; ಅಂಬಾಲೆ ಮದ್ರೂಪಮುಂ ಕಂಡು ಮೊಗಮಂ ಪಾಂಡುರಂ ಪಾಡಿದಳಪ್ಪುದಜೆಂದಾಕೆಗೆ ಮಗಂ ಪಾಂಡುರೋಗ ಸಂಗತನುಂ ಅತ್ಯಂತಪ್ರತಾಪನುಮಾಗಿ ಪಾಂಡುರಾಜನೆಂಬ ಮಗ ನಕ್ಕುಂ (ಜೈ. ಭಾ. ೦-೮೩ ವ). ೩. ತೊನ್ನು ; ಶ್ವೇತಕುಷ್ಠ : “ಪಾಂಡುಃ , ಪಾಂಡುರಃ —ಈ ೨ ಬಿಳಿಯ ಬಣ್ಣವುಂ, ರೋಗವುಂ, ರಾಜನುಂ” (ನಾಚಿಕ್ಕ. ೦೦೦). [ಸಂ.]

**ಪಾಂಡುರಂಗ$_1$** (ನಾ). ೧. ಬಿಳಿಯ ಬಣ್ಣದ ದೇಹವುಳ್ಳವನು. ೨. ಶಿವ ; ಈಶ್ವರ : ಪಾಂಡುರಂಗನ ಭಕ್ತರೀ ಭೂಮಂಡಲದೊಳಗೆ ಸುಳಿವ ಜಂಗಮಮಂಡಳಿಗಳಂ ಕರಸಿದರು ಪಡಿಹಾರಿಂ ಕಳುಹಿ (ಅಸಪು. ೯-೩) ; ಕಂಗಳು ಮೂರಿರ್ದಾಗಸಗಂಗೆಯನು ಧರಿಸಿ ತಿಂಗಳ ಸೂಡಿಯುಂ ಪಾಂಡುರಂಗ ತಾನಲ್ಲವದು ನಾರಂಗದ ಫಲ ಪಾಲ್ ಇಷ್ಟ ಲಿಂಗಾಭಿಷೇಕಂ (ಮೈರಾಶ. ೩೦೯-೩೦). [ಪಾಂಡುರ + ಅಂಗ$_2$]

**ಪಾಂಡುರಂಗ$_2$** (ನಾ). ಪಂಢರಾಪುರದಲ್ಲಿ ನೆಲೆಸಿರುವ ವಿಷ್ಣುವಿನ ಅವತಾರ ; ವಿಠ್ಠಲ : ನಾ ನಿನ್ನ ಮನೆಕೆ ಬಾರನೆ ಜಯ ಪಾಂಡುರಂಗ (ಪುರಂದ. ೩-೦೨೬ ಪಲ್ಲವಿ) ; ನಾಮದೇವ ಪಾಂಡುರಂಗನ ಭಕ್ತ (ಶಾಸದ. ೨೯೩). [<ಪಂಢರ$_2$ (ಪ್ರ—ಮರಾ. ಪಂಢರ)+ರಂಗ]

**ಪಾಂಡುರಂಗವಿಟ್ಠಲ** (ನಾ). = ಪಾಂಡುರಂಗ$_2$ : ಅನಂತಕೋಟಿ ಬ್ರಹ್ಮಾಂಡನಾಯಕ . . . ಪಾಂಡುರಂಗವಿಟ್ಠಲ (ಪುರಂದ. ೪-೩೬ ನಿಧ). [ಪಾಂಡುರಂಗ$_2$+ವಿಟ್ಠಲ]

**ಪಾಂಡುರಕುಷ್ಠ** (ನಾ). ತೊನ್ನುರೋಗ : “ಪಾಂಡುರಕುಷ್ಠಂ ಶ್ವಿತ್ರಂ” (ಅಕ್ಷುಚೂಶ. ೭೩-೩೬). [ಪಾಂಡುರ + ಕುಷ್ಠ]

**ಪಾಂಡುರತೆ** (ನಾ). ಬಿಳಿದಾಗಿರುವಿಕೆ ; ಧವಳತೆ ; ಬಿಳುಪು : ದುಗ್ಧಾರ್ಣವಫೇನಪಾಂಡುರತೆಯಂ ಕೆಯ್ಕೊಂಡು ಬೆಳ್ದಿಂಗಳೆಂತಿರೆ ಕೋಟೀಶ್ವರಸತ್ಪುತ್ರೀಯುಪಸನಂ ರಾಜೇಂದ್ರಚೂಡಾಭೃಂಕನಾ (ಜಗಂಭೂ. ೨೮). [ಸಂ. ಪಾಂಡುರತಾ]

**ಪಾಂಡುರಿತ** (ಗು). ೧. ಬೆಳ್ಳಗಾದ ; ಬಿಳಿಬಣ್ಣವನ್ನು ಹೊಂದಿದ : ಧವಳಕಲವಾಕ್ಷತ ಕ್ಷೀರಗೌರಪಾಂಡುರಿತಶರ್ಕರೀತನಕರಂಡಕಂಗಳಿಂ . . . ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು (ಸಂಕಹಮಾ. ೦೨-೨ ವ) (ನಾ). ೨. ಬೆಳ್ಳಗಾದುದು : ಸುರಸ್ತ್ರೀಯರಪಾಂಗಾಕ್ಷಿಪ್ರಭಾಸಂಚಯ ದಿನುದಿತ ದೇಹಾಂಶುಸಂದೋಹದಿಂ ಮೇದುರ ಧಮ್ಮಿಲ್ಲಮುಕ್ತಿಸ್ರೋತನಾದಿ ನಧರಮಯೂಖಾವಳಿಯಿಂದೆತ್ತಲುಂ ಪಾಂಡುರಿತಂ ಪೈಸಂಗಿತಂ ಕರ್ಬುರಿತ ಮರುಣಿತಂ ವ್ಯೋಮಮಾರ್ಗಂ (ಜಿನಸೃತಿ. ೦೨-೬೮). [ಸಂ.]

**ಪಾಂಡುರೋಗ** (ನಾ). = ಪಾಂಡು$_1$ ೩ : ತ್ರಿಕಟುಕ, ಚಿತ್ರಮೂಲ, ಕದ್ಬಣಾಚಿಟ್ಟ ಇವಂ ಚೂರ್ಣಂ ಮಾಡಿ ಅಳೆದಲ್ಲಿ ಕುಡಿಯೆ ಪಾಂಡು ರೋಗ ಕೆಡುಗುಂ (ಅಶ್ವವೈ. ೦೬೨) ; ಪಾಂಡುರೋಗಕ್ಕೆ . . . ಅಭ್ರಕವು ಬಹಳ ಉಪಯುಕ್ತವಾಗುವುದು (ಶಿಶಂ. ೦೩). [ಪಾಂಡು$_1$+ರೋಗ]

**ಪಾಂಡುರೋಗಿ** (ನಾ). ಕಾಮಾಲೆರೋಗದಿಂದ ನರಳುವವನು : ಪರ್ವಾಯಹ ಪಾಂಡುರೋಗಿಯೆ ಮುನ್ನ ದೇವಗುರುಭಕ್ತರೆರ್ಥಾಪಹಾರೀ (ಜಿನಸೃತಿ. ೯-೨೨-೩೩) ; ಅಂಜುತರಂಕುಶ್ತ ಸುರತಂಗೆಮ್ಮಲವರುವರದಿ ನೆರೆ ಪಾಂಡುರೋಗಿ ಪುಟ್ಟುವನು (ಪವಮೋ. ೦೯-೯೯). [ಸಂ. ಪಾಂಡುರೋಗಿನ್]

**ಪಾಂಡುವಾತ** (ನಾ). ಒಂದು ಬಗೆಯ ವಾತರೋಗ (?) : ಒಂದು ಕರ್ನಾಟಕಂ ಕೊಂಡೊಡೆ ಪಾಂಡಾಗ್ನಿ, ಶೂಲೆ, ಪಾಂಡುವಾತ, ಮೇಹ, ವಾತಶೂಲೆ ಇಷ್ಟು ಮಾಣುವುವ (ಅಶ್ವವೈ. ೯೩). [ಪಾಂಡು$_1$+ವಾತ]

**ಪಾಂಡುಸಂಧಿ** (ನಾ). = ಪಾಂಡುಪಿಂಡ : ತ್ರಿಕದೆರಡುಂ ಕೆಲಕ್ಕಂ ರೋಹಿಣಿಸಂಧಿಯೆಂಬ ಪಸರಕ್ಕಂ ಅಲ್ಲಿಂ ಕೆಳಗೆ ಪಾಂಡುಸಂಧಿಯೆಂಬ ಪಸರಕ್ಕಂ (ಅಶ್ವಶಾ. ೯೯-೯) ; ತಿಕ(ಗ)ದಿರ್ಕೆಲ ರೋಹಿಣಿಯೆನಿಸುಗು ವುದುವದಱ ಕೆಳಗೆ ಪಾಂಡುಸಂಧಿಯೆ (ಅಶ್ವಶಾ. ೯-೯೩); ಈ ಇಲ್ಲಿ ಥಂಡೀ ದೋಷವಿರುವುದರಿಂದ ಪಾತ ಕೆಟ್ಟರಬಹುದು. [ಪಾಂಡು +ಸಂಧಿ]

**ಪಾಂಡ್ಯ** (ನಾ). ೧. ಭಾರತದ ದಕ್ಷಿಣಭಾಗದ ಒಂದು ದೇಶ ; ಮಧುರೆಯನ್ನು ರಾಜಧಾನಿಯಾಗಿ ಹೊಂದಿದ್ದ ದೇಶ : ಚೇರ ಪಾಂಡ್ಯ ಕಳಿಂಗ ಖಸಾನ್ಧ್ರಯಾದವಮಹೀಭುಜಮೌಳಿಮಣಿಪ್ರಜ ಪ್ರಭಾಲಿಂಗಿತಪಾದಪೀಠಂ (ಶಾಇ. XX. ೯೬-೩ ; 1072) ; ಚೋಳಚೇರ ಪಾಂಡ್ಯಕಳಿಂಗಾದಿ ವಿಷಯಂಗಳಂ ಸಾಧಿಸಿ ಕಪ್ಪಂಗೊಂಡು (ರಘುಕಥ. ೦೦-೬೦). ೨. ಪಾಂಡ್ಯದೇಶದ ರಾಜ : “ಪಾಂಡ್ಯಃ = ಪಾಂಡ್ಯ ರಾಜನುಂ” (ನಾಚಿಕ್ಕ. ೦೦೦); ಪಲಯಾಚಿಯ್ ಪಾಂಡ್ಯನ ಬನ್ದು ಪಾಡಿಬಿಡೋಲ್ ವಣ್ಣಾಚಿ (ಎಕ. XI. ಚಿತ್ರದು. ೭೬-೩೭; 937); ಎಲೆ ಚೊರಕ್ಷತಿ ಪಾಳ ಸನ್ನವಟ್ಟಿಯಂ ನೀಂ ನಿವಿಕೊಳ್ ನಿನ್ನನುಂ ಗೊರೆಮಾಣ್ಬಿತ್ತರು

ಪಾಣ್ಡ್ಯ ಪಲ್ಲವ ಭಯಂಗೊಳ್ಳೋಡದಿರ್ (ಎಕ. II. ೫೯–೧೧೩; 974). [ಸಂ.]

**ಪಾಂಡ್ಯಗದ್ಯಾಣ** (ನಾ). ಒಂದು ಬಗೆಯ ಚಿನ್ನದ ನಾಣ್ಯ; ಪಾಂಡ್ಯ ಕುಲದವರಾದ ಅಳುವರ ನಾಣ್ಯ: ಬಿದಿರಗದ್ದೆಯ ಮೇಲಿಕ್ಕಿದ ಪಾಣ್ಡ್ಯಗದ್ಯಾಣಂ ಮುವತ್ತುಮನಾ ಪೊನ್ನ ವೃದ್ಧಿಯುಮಂ ಅಗ್ರಿಕೆನ್ದು ಶಾಸನವಾಗೆ ಮಾಡಿಸಿದ ಧರ್ಮ (ಕೌಇ. VII. ೪೮೧–೧೭. 1140). [ಪಾಂಡ್ಯ+ಗದ್ಯಾಣ]

**ಪಾಂಡ್ಯಗಾವುಂಡ** (ನಾ). ಒಬ್ಬಾತನ ಹೆಸರು: ಪಾಣ್ಡ್ಯಗಾವುಣ್ಡಂ ತಮ್ಮ ಕೆಱೆಯೊಳ್ ಮಾಧವಯ್ಯಙ್ಗೆ ಇಕಣ್ಡುಗ ಮಣ್ಣ ಪೆನ್ನಸ ಬಿಟ್ಟ (ಎಕ. XV. ಹೊಳ. ೬೮–೫; 974). [ಪಾಂಡ್ಯ+ಗಾವುಂಡ(<ಗಾಮುಂಡ)]

**ಪಾಂಡ್ಯವಿಲ್ಲರಸ** (ನಾ). ಒಬ್ಬಾತನ ಹೆಸರು: ಪಾಣ್ಡ್ಯವಿಲ್ಲರಸರಾ ಮಗನ್ ದೇವು (ಎಇ. II. ೧೯–೧; ಸು. 800). [ಪಾಂಡ್ಯ+ವಿಲ್ಲರಸ₀]

**ಪಾಂತ** (ನಾ). ಪಕಾರದಿಂದ ಕೊನೆಗೊಳ್ಳುವ ಶಬ್ದ: ಪಾಂತಕ್ಕೆ—ಅಪ್ಪು, ಆಲಿಂಗನೇ, ಉದಕೇ ಚ (ಕಹುರಾ); ಪಾಂತವರ್ಗಃ — ಪಕಾರವೇ ಅಂತವರ್ಣವಾಗುಳ್ಳ ನಾನಾರ್ಥ ಪದಸಮೂಹವು (ಸಿದ್ಧಾಂತಿ. ೪೦೫). [ಪ₁+ಅಂತ₂]

**ಪಾಂತಿಪುರ** (ನಾ). ಒಂದು ಊರಿನ ಹೆಸರು; P ಧಾರವಾಡ ಜಿಲ್ಲೆಯ ಈಗಿನ ಹಾನಗಲ್ಲು: ಸ್ವಾಮಿಶರ್ಮ್ಮಣೇ ಪಾನ್ತಿಪುರ ವಿಷಯೇ ಕಿಱುಕುಪ್ಪಟೂರಗ್ರಾಮ[ಮ್] . . . ಸೋದಕಂ ಸದಕ್ಷಿಣಂ . . . . ದತ್ತವಾನ್ (ಕಇ. II. ೦-೦೦; ಸು. 600); ಬನವಾಸಿಪುರವರೇಶ್ವರಂ ಪಾಂತಿಪುರಾಧಿಪಂ ಶ್ರೀಮನ್ಮಯೂರವರ್ಮ್ಮದೇವಂ (ಕೌಇ. XX. ೨೯-೬೬ 1034). [ಪಾಂತಿ₀+ಪುರ₁]

**ಪಾಂಥ** (ನಾ). ದಾರಿಹೋಕ; ಪ್ರಯಾಣಿಕ: "ಪಯಣಂಬೋಪಾತಂ ಮಾರ್ಗಯಾಯಿ ತಾಂ ಪಥಿಕನಧ್ವನೀನಂ ಪಾಂಥಂ" (ಶಬ್ದಕೋ. ೪೫-೨); ಎನಸುಂ ಕೈವಾರದಿಂದಿಲ್ಲದ ಗುಣಗಣಮಂ ರಾಗದಿಂ ಕೆಮ್ಮನೀ ಪಾಂಥ ನೊಳಧ್ಯಾರೋಪಣಾಂಗೆಯ್ದನಗನವರತಂ ಬಣ್ಣಿಸುತ್ತಿರ್ದರ್ (ಕಾದಂಬ. ೨೬); ಯುಪತಿಯರಾದರ್ ಚಪ್ಪರಿಸೆ ಕೋಗಿಲೆಯಾಂಚರಮೊಂದು ಬೆರ್ಚಿ ಪಾಱವು ಗಿಳಿವಿಂಡು ಪಾಂಥರೆರ್ದೆ ಪತ್ತನೆ ಪಾಱುವುವಾ ಪ್ರದೇಶದೊಳ್ (ಅನಂಪು. ೦-೬೨). [ಸಂ.]

**ಪಾಂಥಶಾಲೆ** (ನಾ). ಪ್ರಯಾಣಿಕರು ತಂಗುವುದಕ್ಕಾಗಿ ನಿರ್ಮಿಸಿದ ವಿಶ್ರಾಂತಿಗೃಹ; ಛತ್ರ: ಪಾಂಥಶಾಲೆಗಳು ಮತ್ತು ಪಾಂಥಶಾಲಾ ಪಾಲಕರು (ಹಾರಾಪ.೨೯೦). [ಪಾಂಥ+ಶಾಲೆ₃]

**ಪಾಂಥಸ್ತ** (ನಾ). =ಪಾಂಥ: ಅಂದು ಗುಡಿಯಲ್ಲಿ ಅತಿಥಿ-ಅಭ್ಯಾಗತ-ಪಾಂಥಸ್ತರಿದ್ದರೆ, ಕಾಕಾ, ಅವರಿಗೆ ಗುಡಿಯಲ್ಲಿಯೇ ಪ್ರಸಾದವಾಗಬೇಕೆಂದು ವಿನಮ್ರವಾಗಿ ಬಿನ್ನವಿಸುತ್ತಾರೆ (ಹೀಶಹ. II. ೬೯). [<ಪಾಂಥಸ್ಥ]

**ಪಾಂಥಸ್ಥ** (ನಾ). =ಪಾಂಥ: ಮಧ್ಯಾಹ್ನದ ಬಿಸಿಲಿನಲ್ಲಂತೂ ಸುತ್ತು ಮುತ್ತಲಿನ ಗ್ರಾಮಗಳು ಸದ್ದಿಕ್ಕೆ ಸುಡುತ್ತವೆಂದು ಪಾಂಥಸ್ಥನು ಭ್ರಮೆಗೊಳ್ಳುತ್ತಾನೆ (ಕಭಾಗ. ೬); ತಾನೊಬ್ಬ ಮಾನವ, ಜನನ-ಮರಣಗಳ ನಡುವಿನ ದಾರಿಯನ್ನು ತುಳಿಯುವ ಪಾಂಥಸ್ಥ. ತನ್ನ ಮನಸ್ಸಿಗೆ ಶಾಂತಿಯಿಲ್ಲವೇಕೆ? (ಸಮಾಕೀ. ೩೦೦). [ಸಂ.]

**ಪಾಂಪು** 'ಪಾಪು' ನೋ.

**ಪಾಂಬ** 'ಪಾಣ್ಬ' ನೋ.

**ಪಾಂಬಬ್ಬೆ** (ನಾ). ಒಬ್ಬಾಕೆಯ ಹೆಸರು: ಪಡಿಯಬಿ ದೊರಪಯ್ಯನ ಪಿರಿಯರಸಿ ಪಾಂಬಬ್ಬೆ ತಲೆಪಱಿದು ಮೂವತ್ತುವರಿಸಂ ತಪಂಗೆಯ್ದಯ್ದಂ ನೋನ್ತುಚೃಮಾರಾಣಮೇಱಿದರ್ (ಎಕ. VI. ಕಡೂರು. ೦-೦೫; 971). [ಪಾಂಬ₀+ಅಬ್ಬೆ₁]

**ಪಾಂಬುಳಕಂಟಿ** (ನಾ). ಒಂದು ಸ್ಥಳದ ಹೆಸರು: ತೆಂಙ್ಕಣದೆಸೆ ಗುಡ್ಡೆಗಲ್ಲು ತುಮ್ಬಕುಣ್ಪೆ ರೇವುಕುಣ್ಪೆ ಪಾವುಬ್ಬುಳಕುಣ್ಪೆ (ಎಕ. XII ತಿಪ. ೪೮-೫೩; 878). [ಪಾಂಬುಳ₀+ಕಂಟಿ₂]

**ಪಾಂಬೆ** 'ಪಾಣ್ಬೆ' ನೋ.

**ಪಾಂಶು** (ನಾ). (ಮಣ್ಣಿನ) ಧೂಳು; ಹುಡಿ; ರಜ: ತೋಯ . . . ಕ್ಷೀರಘೃತಂಗಳೊಳ್ ಸ್ನೇಹಗುಣಂ ಪ್ರಕರ್ಷಾಪ್ರಕರ್ಷದಿಂ ವರ್ತಿಸುಗುಂ ಪಾಂಶುಕಣಕಾಶರ್ಕರಾದಿಗಳಲ್ಲಿ ರೂಕ್ಷಗುಣಂ ವರ್ತಿಸುಗುಂ (ಕಲ್ಯಕ್ರಿ. ೨೯೬). [ಸಂ.]

**ಪಾಂಶುಕೇಳಿ** (ನಾ). ಧೂಳಿನಲ್ಲಿ ಆಟವಾಡುವಿಕೆ; ಧೂಳಾಟ: ತ್ವರಿತಗತಿಪ್ರಯುಕ್ತತುರಗೋತ್ಕರಸತುಬ್ಬುರಘಟ್ಟನೋತ್ಥಿತೋದ್ಧುರರಜಮಾರ್ಕಮಂಡಲಮನಾವರಿಸುತ್ತಿರೆ . . . ನಿರ್ಜರಕರಿ ಪಾಂಶುಕೇಳಿಯ ನೊಡರ್ಚುಗುಮಲ್ಲಿ ಜಯಪ್ರಯಾಣದೊಳ್ (ಜಾಕೀ. ೩-೩). [ಪಾಂಶು+ಕೇಳಿ₃ (= ಕೇಲಿ)]

**ಪಾಂಶುಲೆ** (ನಾ). ೧. ಮುಟ್ಟಾದವಳು; ಋತುಮತಿ. ೨. ಜಾರೆ; ವ್ಯಭಿಚಾರಿಣಿ: "ಪಾಂಶುಲಾ = ಜಾರೆ" (ಶಾಕಶ. ೨೩೯). [ಸಂ. ಪಾಂಶುಲಾ]

**ಪಾಂಶೆ** 'ಪಾವಸೆ' ನೋ.

**ಪಾಂಸು** (ನಾ). ೧. = ಪಾಂಶು: "ಪಾಂಸುಃ, ಕ್ಷೋದಃ, ರೇಣುಃ, ಚೂರ್ಣಂ, ಧೂಳೀ, ರಜಃ—ಈ ೬ ಧೂಳಿ" (ಹಲಾಯು. ೬೩-೨೫೯); ವಿವಿಧ ವೈಪಥಪಾಂಸುಗಳಿಂದೆ ನಾಡೆ ಸೀಱಿದ ಶಲೆಯುಂ ಕರಂ ಮಲಿನವಾದ ಪಟಚ್ಚರಮುಂ ನೆಗಟ್ಟಲಂದಿದಿರೊಳೆ ಲೇಖವಾಹನಿವಹಂ ಬರೆ ಕಂಡನಿಳಾಧಿನಾಯಕಂ (ಕಾದಂಬ. ೬೩); ಅರಿಚರಣಪಾಂಸು ಪತ್ತಿರೆ ಶರೀರಮಂ ತೊಡೆದು ಕಳೆದೆ ಪಸ್ತಾಂಚಲದಿಂ ಗುರುನಂದನ ನೀನೆನ್ನೀ ಪರಿಭವಪಾಂಸುವನದೆಂತು ಪೇಱ್ ಕಳೆದಪೆಯೋ (ಗದಾಯು. ೯-೨೬); ಕುಸುಮತರುಗಳ್ ಮರುದಾಹತಿಯಿಂ ಪರಾಗಪಾಂಸುಪ್ರಸರಂಬೆರಸಲರ ಸುರಿವವು (ಜಗಂ. ೯-೬೦). ೨. ಹೂವಿನ ಧೂಳಿ; ಪರಾಗ: 'ಪಾಂಸುಕೇಳಿ' ಪರಾ. ೩. ಒಂದು ಬಗೆಯ ಗಿಡ; ಪರ್ಪಟಕ: "ಪಾಂಸು ಪರ್ಪಟಕಮಕ್ಕು" (ಮಂಗರಾ. ೪೨–೩೮). [ಸಂ.]

**ಪಾಂಸುಕೇಳಿ** (ನಾ). ೧. =ಪಾಂಶುಕೇಳಿ: ಆತನ ಲಲಿತೋತ್ತಾನಶಯಿತ ದರಹಸಿತತರಂಗಿತಗತಿಸ್ಖಲಿತಮುಗ್ಧಜಲ್ಪಿತಾದಿ ಬಾಲ್ಯವಿಲಾಸಂಗಳಿಂದಂ ಕರಿಕರೋದ್ಧೂತಧೂಳೀವಿಲಾಸ ಪಾಂಸುಕೇಳಿಯಿಂದಂ . . . ಆನಂದಿತ ಹೃದಯನಾಗಿ (ಅದಿಪು. ೩-೫೦ ವ); ಆಡುವ ಪಾಂಸುಕೇಳಿಯೊಳೆ ಸಲ್ಲ ತೊದಳ್ನುಡಿಯುಂ . . . ನಾಡೆಯುಂ ರೂಡಿಸೆ (ಜಕಂ. ೬-೭೦). ೨. ಹೂವಿನ ಪರಾಗದಲ್ಲಿ ಆಡುವಿಕೆ: ಪರಾಗಪುಂಜದೊಳ್ ಪಱಿಪಡಿಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸುಕೇಳಿಯಂ (ಶಂಕ್ರಪು. ೬-೬೦). [ಪಾಂಸು+ಕೇಳಿ₃ (= ಕೇಲಿ)]

**ಪಾಂಸುಲೆ**, ಪಾಂಸುಳೆ (ನಾ). ೧. ಮುಟ್ಟಾದವಳು; ಋತುಮತಿ. ೨. ಜಾರೆ; ಹಾದರಗಿತ್ತಿ; ವ್ಯಭಿಚಾರಿಣಿ: "ಸ್ವೈರಿಣಿ . . . ಅಭಿಸಾರಿ ಪಾಂಸುಲೆ[ಪಾಠಾಂ. ಸಾಂಬಂಧಕಿ] ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮಂಗರಾ. ೯೦-೯); ಒರ್ವಳ್ ಪಾಂಸುಲೆ ಈ ನೆಪದೆ ಪಾಣ್ಬನ ನೆರವೆನೆಂದು ಬಂದುದಂ ಭೂನಾತನ ನೋಳ್ಪ ಸತಿಯರ ಗೋಷ್ಠಿಯಿಂ ಪಱಿಪಳು (ಕರ್ಣಾ. ೬-೬೯). ೩. ಭೂಮಿ.

**ಪಾಂಸುಳೆ**: ೨. "ಪಾಂಸುಳಾ, ಬಂಧಕೀ, ಸ್ವೈರಿಣೀ, ಅಸತೀ, ಪುಂಶ್ಚಲೀ, ಇತ್ವರೀ, ಧರ್ಷಣೀ, ಕುಲಟಾ, ಅವಿನೀತಾ, ಅಭಿಸಾರಿಕಾ — ಈ ೧೦ ಹಾದರಿಗಿತ್ತಿ" (ಹಲಾಯು. ೬೦-೩೯೨) ಬಳಸಿದುದರ್ಕವಾಜಿಖುರಘಟ್ಟಿತಮಾದವರಾದ್ರಿಯಿಂದಮುಚ್ಚಳಿಸಿದ ಧಾತು

ರೇಣುವೆನೆ ಚಕ್ರಿಯುಗಂಗಳಗಲ್ಕೆಗಿಟ್ಟು ಪಾಂಸುಳೆಯರ ರಾಗದೇಟ್ಗೆ . . . ಸಂಜೆಯು ಕೆಂಪು ಲೋಕವುಂ (ಸಂಕ್ರಪು. ೬-೪). [ ಸಂ. ಪಾಂಸುಲಾ ]

**ಪಾಂಸುಳ** (ಗು). ೧. ಧೂಳು ಮುಸುಕಿದ ; ಧೂಳಿನಿಂದ ತುಂಬಿದ. (ನಾ). ೨. ಧೂಳು ತುಂಬಿದುದು : ಸಮೀರನುದಾರಕದಂಬಕೇಸರೀ ಪ್ರಸರರಜಸ್ಸ್ವರಪ್ರಕಟಪಾಂಸು[ಪಾಠಾಂ. ಪಾತು]ಳಮಾದುದು ಮೇಘಕಾಲ ದೊಳ್ (ಸಂಕಥಾ. ೭-೨೨). [ ಸಂ. ಪಾಂಸುಲ ]

**ಪಾಂಸುಳೆ** ‘ ಪಾಂಸಲೆ ’ ನೋ.

**ಪಾಂಸೆ** ‘ ಪಾವಸೆ ’ ನೋ.

**ಪಾಕ$_1$** (ಗು). ೧. ಶೀರ ಎಳೆಯ : ಪಾಕಕುಶಕಾಶವಿಶದಂ . . . ಕೃಷ್ಣಲಾವುರೀಬಿಂಬಾಕೀರ್ಣಂ ತನ್ನದೀತಟಂ ಕಡುರಯ್ಯಂ (ಲೀಲಾಶ. ೩-೮೦). ೨. ಸರಳಸ್ವಭಾವದ ; ನಿಷ್ಕಪಟವಾದ. (ನಾ). ೩. ಬೇಯಿಸುವುದು ; ಪಕ್ವಗೊಳಿಸುವುದು : ಆ ಭೋಜ್ಯವಸ್ತುವಂ ಹಸನಾಗಿ ಪಾಕವಂ ಮಾಳ್ಪ ವಿವರದ ಶಾಸ್ತ್ರವಂ ಮನುಗೊಂಡು ಪೇಳ್ವೆಂ (ಸೂಪಶಾ. ೧-೩). ‘ ನಳಪಾಕ ’, ‘ ಪಾಕಶಾಸ್ತ್ರ ’ ಪರಾ. ೪. ಬೇಯಿಸಿ ಸಿದ್ಧಪಡಿಸಿದ ಅನ್ನ ಮೊದಲಾದುವು ; ಅಡುಗೆ : ಭವಿ ಮಾಡಿದ ಪಾಕವ ತಂದು ಲಿಂಗಕರ್ಪಿಸುವ ಕಷ್ಟರ ಕಂಡು ನಾಚಿತ್ತೆನ್ನ ಮನವು (ಬಸವ. ೬೨೫), ಪರಿಪರಿಯ ಬಹುಭಕ್ಷ್ಯಪಾಕದ ಪರಿಮಳದ ಶಾಕಾದಿಗಳವೊಗ್ಗರಣೆಗಳ ಸೌರಭಕೆ ತಿಳಿದುದು ನಿದ್ರೆ ಮವನಜನ (ಕುಮಾ೯. ೦೦-೨೨). ೫. ಪರಿಪಕ್ವತೆ; ಹಣ್ಣಾಗುವಿಕೆ; ಪರಿಪೂರ್ಣತೆ. ೬. ಬೆಲ್ಲ ಅಥವಾ ಸಕ್ಕರೆಯನ್ನು ಕುದಿಸಿ ತಯಾರಿಸಿದ ಮಂದವಾದ ದ್ರವ : ಸಕ್ಕರೆಗೆ ನೀರು ಸೇರಿಸಿ ಕುದಿಸಿ ಪಾಕ ನೂಲಿನಂತೆ ಎಳೆಯುಲು ಬರುವವರೆಗೆ ಕಾಯಿಸಬೇಕು (ಅಡುಗೆ. ೦೧೧). ‘ಎಳೆಪಾಕ$_1$’ ಪರಾ. ೭. ಮೂಲಿಕೆಗಳನ್ನು ಬಟ್ಟಿಯಿಳಿಸಿ ತೆಗೆದ ಸಾರ ; ಕಷಾಯ : ಅಡುಸೋಗೆಬೇರು, ಕಹಿಪಡವಲ . . . ಚೂರ್ಣಮಾಡಿ ಬಳ್ಳ ಹಸುವಿನ ಬೆಣ್ಣೆಯಲ್ಲಿ ಪಾಕವ ಮಾಡಿ ಹದದಲ್ಲಿಳುಹಿ ತೆಗೆದುಕೊಳ್ಳೆ ಹಳೆಯ ಜ್ವರ ಮಾಣ್ಗುಂ (ಸಕೃ. ೦೨೬). ೮. ಕಾರ್ಯದ ಕೊನೆಯಲ್ಲಿ ದೊರೆಯುವ ಫಲ ; ಪರಿಣಾಮ ; ಸಿದ್ಧಿ : ಪಾಕದೊಳತಿವಿಷಮುಂ ಕಿಂಪಾಕಫಲಪ್ರತಿಮಮುಖಲವಿಷಯಸುಖಂ (ಆದಿಪು. ೪-೬೪). ೯. ಪಚನವಾಗುವಿಕೆ ; ಜೀರ್ಣವಾಗುವಿಕೆ. ೧೦. ಮಗು ; ಕೂಸು : "ಬಾಲಃ. ಪಾಕಃ . . . ಶಿಶುಃ, ಶಾಬಃ, ಡಿಂಬಃ — ಈ ೯ ಮಗುವು" (ಕಣಾಟು. ೬೩-೩೯೪). ೧೧. ಇಂದ್ರನಿಂದ ಹತನಾದ ಒಬ್ಬ ರಾಕ್ಷಸ : "ಪಾಕಃ = ರಕ್ಕಸಂ" (ಶಾಕಕ್ಕ. ೦೩೮). ‘ಪಾಕಶಾಸನ’ ಪರಾ. ೧೦, ೧೧ : ಕುಳಭೂಭೃತ್ಪರಿಪಂಥಿಪಾಪಕಮುಖಂ ಪಾಕಃ ಪಹಂ . . . ಸತತಂ ಸಂಕ್ರಂದನಂ (ಶಾಕಕೀ. ೩-೪). ೧೨. ಮನೆಯಲ್ಲಿ ಪೂಡೆಗೊಳ್ಳುವ ಅಗ್ನಿ ; ಗೃಹ್ಯಾಗ್ನಿ. ೧೩. ಚರು ; ಹವಿಸ್ಸು : "ಹವ್ಯಂ, ಪಾಕಃ, ಚರುಃ, ಸಾನ್ನಾಯ್ಯಂ, ಹವಿಃ — ಈ ೫ ಚರು" (ಕಣಾಟು. ೬೯-೨೬೨). ೧೪. ತೇಜಸ್ಸಿನ ಸಂಯೋಗ : ಪೃಥಿವಿಯಲ್ಲಿ ರೂಪ, ರಸ, ಗಂಧ, ಸ್ಪರ್ಶ ಇವು ಪಾಕದಿಂದ ಬದಲಾವಣೆ ಹೊಂದುವುವು. ಪಾಕವೆಂದರೆ ತೇಜಸ್ಸಿನ ಸಂಯೋಗ (ಶಾಕಶ್ಮ. ೨೪೬). ೧೫. [ಕಾವ್ಯಮೀ] ಅರ್ಥಗಾಂಭೀರ್ಯ ; P "ಅರ್ಥಗಭೀರತೆಗೆ ಪಾಕವೆಂದು ಹೆಸರು. ಕೆಲವು ಕಾವ್ಯಗಳಲ್ಲಿ ಅರ್ಥವೂ ಅದರ ಸ್ವಾರಸ್ಯವೂ ಸಂಲಭವಾಗಿದ್ದು ಕ್ಲೇಶವಿಲ್ಲದೆ ತಿಳಿಯುವುದಂ ; ಮತ್ತೆ ಕೆಲವುಗಳಲ್ಲಿ ಅರ್ಥವು ಗೂಢವಾಗಿದ್ದು ಅದು ತಿಳಿಯ ಬೇಕಾದರೆ ಬುದ್ಧಿಕ್ಲೇಶವಾಗುವುದು" (ಕೃಡಿ. ೨೨೫.) : ಗುಣಗಣ ಮಣಿಯರವೆನಿಸೆ ವೃತ್ತಿ ಚಿತ್ರರಂಬಡೆಯೆ ಪಾಕಂ ಲೋಕೋತ್ತರಮೆನಿಸೆ ಶಯ್ಯೆ ರಯ್ಯಮಾಗೆ ಬಂಧಮಾಗುಂದಲವಡೆಯ . . . ಗದ್ಯಪದ್ಯ ಚಂಪು ಪ್ರಮುಖಪ್ರಬಂಧಂಗಳಂ ಪೇಳ್ದು (ರಾಜಶೇ. ೩-೦೯ ಪ). ‘ದ್ರಾಕ್ಷಾಪಾಕ’. ‘ನಾರಿಕೇಳಪಾಕ’ ಪರಾ. ೧೬. [ಜ್ಯೋತಿ] ಗ್ರಹಗತಿ : ದಶೆ : ‘ಪಾಕನಾಥ’ ಪರಾ. [ ಸಂ. ]

**ಪಾಕ$_2$**, ಪಾಕು$_2$ (ನಾ). ಸ್ವಚ್ಛವಾದುದು ; ಸಾಫು ; ಚೊಕ್ಕಟ : ಎಲೆ ತುಂಬಾ ಬಡಿಸಿಕೊಂಡು ಪಾಕವಾಗಿ ಒಂದಗುಳನ್ನೂ ಬಿಡದೆ ಚೆನ್ನಾಗಿ ಕುಮ್ಮರಿಸುತ್ತಾಳೆ ಹೊಟ್ಟೆಯೊಳಕ್ಕೆ (ಪೂಮಚಾ. ೧೦೭). ಪಾಕು$_2$ : ಬೀದಿಗಳೆಲ್ಲ ಆ ದಿನ ಚೊಕ್ಕಟವಾಗಿದ್ದುವು. ಸುಬೇದಾರರು ಜಮಾಬಂದಿಗೆ ಬರುತ್ತಾರೆಂದು ಶೇಕದಾರರು ಖುದ್ದಾಗಿ ನಿಂತು ಪಾಕು ಮಾಡಿಸಿದ್ದರು (ಸಾಕ್ಷಿ. ೫೬).

**ಪಾಕು ಮಾಡು** = ಹಸನುಗೊಳಿಸು; ಸ್ವಚ್ಛಮಾಡು: ಅಡವಿಯಲ್ಲಿನ ರಸ್ತೆಗಳ ಅಕ್ಕಪಕ್ಕಗಳಲ್ಲೂ ಪಾಕುಮಾಡಿ ಅಲ್ಲಿ ಸಸ್ಯಗಳು ಇರದಂತೆ ನಿರ್ಮೂಲಿಸುತ್ತಾರೆ (ಕಪಿಶೋ. I,೪೪೯) ; ಬಂಜರುಭೂಮಿಯನ್ನು ಪಾಕು ಮಾಡಿ ಉಳುಮೆಗೆ ಅರ್ಹಮಾಡುವುದು (ಅಂಕಸಂ. ೨೪೪).

[ ←ಪಾರ. ಹಿಂ. ಪಾಕ್ ]

**ಪಾಕಂಗೈ** (ಕ್ರಿ). ಅಡುಗೆ ಮಾಡು: ಸಲಿಮಿಂದೊದವಿಸಿದಳಖಿಲಸದ್ದ್ರವ್ಯಮುಂ ಬಳಿಕ ಚಂಡಿ ಪಾಕಂಗೈದಳು (ಕೃಪಲಾ. ೧೦-೨೯).

[ ಪಾಕ$_1$ + ಕೈ$_1$ (< ಕೆಯ್$_1$) ]

**ಪಾಕಂಪೊಪ್ಪು** (ನಾ). (ಹೊಸ) ಬೆಲ್ಲದ ಪಾಕಕ್ಕೆ ಹುರಿದ ಕಡಲೆಕಾಯಿ ಬೀಜ, ಕಡಲೆ, ಗಸಗಸೆ, ಎಳ್ಳು ಮುಂತಾದುವನ್ನು ಹಾಕಿ ತಯಾರಿಸುವ ಒಂದು ಬಗೆಯ ಸಿಹಿತಿಂಡಿ : ಪಾಠಪ್ರವಚನ ರುಚಿಸದೆ ಹೋದರೆ ಪಾಕಂಪೊಪ್ಪನು ಮೆಲ್ಲುವೆವು (ಕಿರಾಂ. ೧೬-೨೦).

[ ಪಾಕ$_1$ + ಪೊಪ್ಪು (< ಪರುಪು) ]

**ಪಾಕಂಬೋಗು** (ಕ್ರಿ). ( ? ) : ನೆಲಪಾಳು ಪಾಕಂಬೋಪಲ್ಲಿ ಮೂಪರಲೋರ್ವರ್ ಸತ್ತಡಲ್ಲದೆ ಭೂಮಿ ನಿಲ್ಲದು (ಶಾಇ. IX-1, ೨೩-೧೮ ; 1069). [ ? ]

**ಪಾಕಗೂಳು** (ನಾ). ಕುದಿದು ಮಂದವಾದ ಕಬ್ಬಿನ ರಸ : ಸುಂದಸಂದನು ಕಡಿವು ಕಬ್ಬನು ತಂದು ಗಾಣವಲಿಕ್ಕಿ ಅರೆದತೆ ಬೆಂದು ಪಾಕಗೂಳ [ಪಾಠಾಂ. ಪಾಕಾಗುಳ್ಳ] ಸಕ್ಕರೆಯಾಗಿ ನೊಂದೆನೆಂದು ಸಿಹಿಯ ಬಿಟ್ಟಿತ್ತೆ (ಮುಹಾದೇ. ಬ. ೨೬-೩೬). [ ಪಾಕ$_1$ + ಕೂಳು$_2$ (< ಕೂಟು$_1$) ]

**ಪಾಕಗೊಳ್** (ಕ್ರಿ). ಚೆನ್ನಾಗಿ ಬೇಯು ; ಪಕ್ವವಾಗು : ರಸಮಾದಿಗಳ್ ಪಾಕಗೊಂಡಿರಲು ಪಳಿದೇಯುಮಕ್ಕು ಬೇಯದ ರಸಂ ಮಾನಂಗಳೇಂದನಿಕ್ಕುಂ (ಮುಂಗಾ. ೬೪-೪). [ ಪಾಕ$_1$ + ಕೊಳ್$_1$ ]

**ಪಾಕಗೊಳಿಸು** (ಕ್ರಿ). ಹದಗೊಳಿಸು : ಈ ಉಷ್ಣತೆಗೆ ಅನುಗುಣವಾಗಿ ಹಸಿರನ್ನು ಪಾಕಗೊಳಿಸಲು ಹಾಗೂ ಅವನ್ನು ಕೆಡದಂತೆ ಇರಿಸಲು ಬರುತ್ತದೆ (ಗೃಹಗ್ರಾಸ. ೯೪). [ ಪಾಕ$_1$ + ಕೊಳು (< ಕೊಳ್$_1$) + –ಇಸು$_3$ ]

**ಪಾಕಡ** ‘ ಫಾಕಡ ’ ನೋ.

**ಪಾಕಡಾ** ‘ ಫಾಕಡ ’ ನೋ.

**ಪಾಕದಂಡ** (ನಾ). (?) : ಚೋರ ಪಾಕದಣ್ಡ ದಶಾಪರಾಧಂಗಳಪ್ಪವೆಲ್ಲಂ ಪೂರ್ವಾಚಾರಂ (ಎಇ. XIV, ೧೯೧-೧೯ ; 725). [ ? ]

**ಪಾಕನಾಥ** (ನಾ). [ಜ್ಯೋತಿ] ಮನುಷ್ಯನ ಜೀವನದ ಮೇಲೆ ಶುಭಾಶುಭ ಫಲಗಳನ್ನು ಬೀರುವ ಗ್ರಹ : ತ್ರಿದಶಷಡಾಯರಾಶಿಗಳೊಳಕ್ಕೆ ವಿಲಗ್ನದೊಳಕ್ಕೆ ಮೇಣ್ ಸುಹೃತ್ಸದನದೊಳಕ್ಕೆ ಸದ್ಗ್ರಹವರ್ಗದೊಳಕ್ಕಿರೆ ಪಾಕ[ಪಾಠಾಂ. ಚಾಪ]ನಾಥನಲ್ಲದೊಡೆ ದಶಾಧಿನಾಥನ ಸುಹೃದ್ಭವನೋಪಚಯತ್ರಿಕೋಣಗೇಹದೊಳಿರೆ ಚಂದ್ರನಿರ್ದೊಡೆ ಶುಭಂ ನಿರೆ ಬೇಚಿಡೆಯೊಳ್ ಶುಭೇತರರ್ (ಶಾಕಪ್ರ. ೪-೧೩).

[ ಪಾಕ$_1$ + ನಾಥ ]

**ಪಾಕನೇಮಿ** (ನಾ). ಬೇಯಿಸಿದುದನ್ನು ಸೇವಿಸುವುದಿಲ್ಲವೆಂಬ ನಿಯಮವುಳ್ಳವನು : ಸರ್ವಸಂಗಪರಿತ್ಯಾಗಿ ಎಂದೊಡೆ ಭೋಗಕ್ಕೆ ಮುಖಾಗಿಸುವೆ ಪಾಕನೇಮಿ ಎಂದೊಡೆ ಷಡ್ರಸಕ್ಕೆ [ಪಾಠಾಂ. ಷಡುರಸಂನ್ನಕ್ಕೆ] ಆಶಿಸುವೆ (ಸವಾಶ. ೧೨-೯೯). [ಪಾಕ$_1$ + ನೇಮಿ$_1$]

**ಪಾಕಯಜ್ಞ** (ನಾ). ೧. ಮನೆಯಲ್ಲಿ ನಡೆಸುವ ಹೋಮಾದಿ ಕಾರ್ಯ ; ವೈಶ್ವದೇವಹೋಮ, ಬಲಿಕರ್ಮ, ನಿತ್ಯಶ್ರಾದ್ಧ ಮತ್ತು ಅತಿಥಿ ಭೋಜನ ಎಂಬ ನಾಲ್ಕು ಪಾಕಯಜ್ಞಗಳು ; P "ಹುತ, ಅಹುತ, ಪ್ರಹುತ, ಪ್ರಾಶಿತ, ಬಲಿದಾನ (ಮಹಾಭಾ. ಅಶ್ವಮೇಧಿಕ. ವೈಪ ೩೭೭)" (ಶ್ರೀವತ್ಸ. ೨೫೪). ೨. ಅಡುಗೆ . [ಪಾಕ$_1$ + ಯಜ್ಞ]

**ಪಾಕರ** ' ಪಕ್ಕರೆ$_1$ ' ನೋ.

**ಪಾಕರಿಪು** (ನಾ). ಪಾಕನೆಂಬ ದೈತ್ಯನ ವೈರಿ ; ಇಂದ್ರ : ಪಾಕರಿಪುತನಯನಂಗಮನಾ ಕಪಟಕಿರಾತನೋವಿ ಮೆಲ್ಲನೆ ತಿವಿದಂ (ಶಶಿಕಂ. ೪-೮೨). [ಪಾಕ$_1$ + ರಿಪು]

**ಪಾಕಲ್** ' ಪಾಗಾರ ' ನೋ.

**ಪಾಕಲ$_1$** ' ಪಾಗಾರ ' ನೋ.

**ಪಾಕಲ$_2$, ಪಾಕಳ** (ನಾ). ೧. ಆನೆಗೆ ಬರುವ ಜ್ವರ. ೨. ಒಂದು ಬಗೆಯ ಗಿಡ ; ಚಂಗಲಕೋಷ್ಠ : "ವ್ಯಾಧಿಃ, ಕುಷ್ಠಂ. ಪಾರಿಭಾವ್ಯಂ, ವಾಪ್ಯಂ, ಪಾಕಲಂ, ಉತ್ಪಲಂ— ೬ ಚಂಗಲಕೋಷ್ಠ" (ಸಿದ್ಧಾಂತಿ. ೧೪೧). **ಪಾಕಳ** : ೧. 'ಕೂಟಪಾಕಳ' ಪರಾ. [ಸಂ.]

**ಪಾಕಲು** ' ಪಾಗಾರ ' ನೋ.

**ಪಾಕವ್ಯ** (ನಾ). ಅಡುಗೆ : ಇವನಖಾತ ಬಳಿಕಿಲ್ಲವಜ್ಞಾತದ ಗಸಣಿ ನೋಡುವರೆ ಅಪ್ಪುತವ ಮುದದಲೀಂಟಿದವಂಗೆ ಪಾಕವ್ಯದಲಿ ತೊಡಕಿಲ್ಲ (ಶಿಭಾಗ. ೧೧-೩೫-೨೩). [<ಸಂ. ಪಕ್ವವ್ಯ ?]

**ಪಾಕಶಾಲೆ** (ನಾ). ಅಡುಗೆಮನೆ: "ರಸವತೀ, ಪಾಕಸ್ಥಾನಂ, ಮಹಾನಸಂ— ೩ ಅಡಿಗೆಯ ಸಾಲೆ, ಅಡಿಗೆಮನೆ, ಪಾಕಶಾಲೆ" (ಸಿದ್ಧಾಂತಿ. ૩೮೨). [ಪಾಕ$_1$ + ಶಾಲೆ$_3$]

**ಪಾಕಶಾಸನ** (ನಾ). ಪಾಕನೆಂಬ ದೈತ್ಯನನ್ನು ದಂಡಿಸಿದವನು ; ಇಂದ್ರ : "ಇಂದ್ರಃ . . . ಪಾಕಶಾಸನಃ, ದಿವಸ್ಪತಿಃ, ಬಿಡೌಜಾಃ, ಮರುತ್ವಾನ್, ಮೇಘವಾಹನಃ — ಈ ೩೯ ದೇವೇಂದ್ರನ ಪೆಸರ್" (ಹಲಾಯು. ೧೦-೫೪); ಅನಿಮೇಷಾವಳಿ ಪಾಳೆಗಟ್ಟಿ ತರದಿಂ ದುಗ್ಧಾಬ್ಧಿಯಂ ಮುಟ್ಟಿ ಕಾಂಚನರೂಪ್ಯಂಗಳ ಕುಂಭದಿಂ ಮೊಗೆದು ಜೈಜೈಯೆಂಬಿನಂ ಪಾಕಶಾಸನಹಸ್ತಾಗ್ರದೊಳಿತ್ತು ತಂದು ಕುಡೆ ಕೊಂಡಿಂದ್ರಂ ಜಿನೇಂದ್ರಂಗೆ ಮಜ್ಜನಮಂ ಕುಂದದೆ ಮಾಳ್ಪಂ (ಸುಕುಮಾ. ೧-೬೬) ; ಪಾಕಶಾಸನನೈದಿ ವೃತ್ರನ ಘಾತುಗೆಡಿಸಿ ವಧೀಚಿಮುಸ್ಥಿಯಲೌಕಿ ಹೊಯ್ಯಲು ದಾನವನ ತನು ನೀರೊಳಡಗೆಡೆಯ (ಕುವ್ಯಾಶಾ. ೪-೧೦೬). [ಸಂ.]

**ಪಾಕಶಾಸನಿ** (ನಾ). ೧. ಇಂದ್ರನ ಮಗ. ೨. ಜಯಂತ : "ಇಂದ್ರಃ . . . ಋಭುಕ್ಷಾ — ೩೫ ದೇವೇಂದ್ರನ ಹೆಸರುಗಳು . . . ಜಯಂತಃ, ಪಾಕಶಾಸನಿಃ — ೨ ಆತನ ಕುಮಾರನ ಹೆಸರುಗಳು" (ಸಿದ್ಧಾಂತಿ. ೧೧). ೩. ವಾಲಿ. ೪. ಅರ್ಜುನ. [ ಸಂ. ]

**ಪಾಕಶಾಸ್ತ್ರ** (ನಾ). ಅಡುಗೆಯ ವಿಧಾನವನ್ನು ತಿಳಿಸುವ ಶಾಸ್ತ್ರ ; ಸೂಪಶಾಸ್ತ್ರ : ಒಗ್ಗಾಲಿ ರಾಮಪಂಡಿತ ಮತ್ತು ನಂಜಭಟ್ಟರು . . . ತಮ್ಮ ವರುಷದ ಸಂಪಾದನೆಯನ್ನು ಪಾಕಶಾಸ್ತ್ರದ ಪಾಂಡಿತ್ಯದಿಂದ ಗಿಟ್ಟಿಸಿಕೊಂಡು ಬರುತ್ತಿದ್ದರು (ಕಂಬಹು. ೦೦). [ ಪಾಕ$_1$ + ಶಾಸ್ತ್ರ ]

**ಪಾಕಶೇಷ** (ನಾ). ಅಡುಗೆಯನ್ನು ಬಳಸಿದ ನಂತರ ಉಳಿದುದು : ಕಿಂಚಿತ್ಪಾಕಶೇಷವ ಕೊಂಡು ಬಂದೊಡೆ ಕೃಷ್ಣನದ ಕೈಗೊಂಡು ಸವಿದನು (ಕುವ್ಯಾಅ. ೧೩-೪೦). [ಪಾಕ$_1$ + ಶೇಷ]

**ಪಾಕಸ್ಥಾನ** (ನಾ) . = ಪಾಕಶಾಲೆ : " ಪಾಕಸ್ಥಾನಂ, ರಸವತೀ, ಮಹಾನಸಂ —ಈ ೩ ಬಾಣಸಿನ ಮನೆ" (ಹಲಾಯು. ೪೯ ೧೪೦). [ಪಾಕ$_1$ + ಸ್ಥಾನ]

**ಪಾಕಳ** ' ಪಾಕಲು$_2$ ' ನೋ.

**ಪಾಕಾರಿ** (ನಾ) . = ಪಾಕರಿಪು : ಪೆಜಸಾರ್ ಕೋಣಪ ನೂಂಕದಿರ್ ಪವನ . . . ಪಾಕಾರಿ ಬಂದೆಜಿಗೈ (ಶಬಶಂ. ೧-೮೩). [ಸಂ.]

**ಪಾಕಿ** (ನಾ). ೧. ಋಣ : ಪರಹೊನ್ನುಗಳ ನೋಡಿ ಪಾಕಿಗಳನೀಡಾಡಿ ಅರಿತೊಂದು ಕಡೆಗೆ ಕರೆವೇ ಎಲೆ ಮರುಳೆ ಹರುಷದಿಂದವಳ ನೆರೆವೇ (ಪಾದಿಕೃ. ೩೮) ; ಜೋಕೆಯಿಂ ಮುಗುತಿಯನೊಯ್ದು ಆಕೆ ಗಂಡನ ಕಣ್ಣಿಗೇ ತಾನ್ನಾಕಿದನು ಪಾಕಿ ಕೊಡುಯೆನುತ (ಕಶಿಂ. ೨೩೫). ೨. ಚಿಕ್ಕ ಬೆಲೆಯ ನಾಣ್ಯ : ಪಾಕಿಗೆ ಚಿಂತಿಸಿ ಪಣವ ನೀಗಿದರೆಂಬ ಪಾಕಿಗೆ ಬಹರೆ (ಕಕಶ. ೬೦-೯೩) ; ಪಾಕಿಗೆ ಒಮ್ಮಣವಾದರೂ ಪಾಪಿಯ ಬರ ತಪ್ಪಲಿಲ್ಲ (ಗಾದೆ). [<ಪಾಗ$_1$]

**ಪಾಕಿಗ** (ನಾ). ಅಡುಗೆ ಮಾಡುವವನು ; ಬಾಣಸಿಗ : ಪಾಕುಳಿಗಂ, ಪಾಕಿಗಂ, ಪಾಕಕರ್ತೃ, ಅಡುಗುಳಿಗಂ, ಅಡುಗಿಗಂ ಸ ಏವ (ಕಶಾಶು. ೪೦೦ ವ್ಯಾಖ್ಯಾ). [ಪಾಕ$_1$ + — ಇಗ]

**ಪಾಕಿಸು** (ಕ್ರಿ). ಬೇಯಿಸು : ಅಡು : ಹೃದಯುದಲಿ ನೆಲಸಿಹ ಭರದ ಕೋಪವೆ ಬೀಜವದರಲಿ ನೆರೆದ ಬಲುಬೆಳೆ ಫಲವ ಮುಸಲದಿ ಥಳಿಸಿ ಪಾಕಿಸುತ ಧುರದ ಹಬ್ಬದಿ ಭೂತಕೋಟಿಗೆ ಚಿರದಲಾತಣವಿಕ್ಕಿಸುವೆ (ಕೋಗಯು. ೨೩-೬೧) : ತನಿವಾಲ ಶರ್ಕರೆಯ ನಾಡೆ ಪಚನಿಸುತ . . . ವಿಲಕ್ಕಿಯಂ ಕೊನರಿಸುತ ಪಾಕಿಸುತ್ತ (೦ಂಗಪು. ೬-೩). [ಪಾಕ$_1$ + — ಇಸು$_3$]

**ಪಾಕೀಜಾ, ಪಾಕೀಜು** (ನಾ). ಸ್ವಚ್ಛತೆ ; ನೈರ್ಮಲ್ಯ ; ಶುದ್ಧಿ : ಪೂರ್ವದಲ್ಲಿ ಅಂಚೆಇಲಾಖೆಯ ಗ್ರಾಮಗಳ ಪಾಕೀಜಾ ಮತ್ತು ಬಂದೋಬಸ್ತು ಮೊದಲಾದ ಇಲಾಖೆಗಳೂ ಬೇರೆ ಇರಲಿಲ್ಲ (ಹಾಳಗಾ. ೫೫). **ಪಾಕೀಜು** : ಜಮಾನು ಪಾಕೀಜು ಮಾಡಿಸಿದ್ದು ಯಾರಪ್ಪನ ಮನೆ ಗಂಟು? (ಕಂದಕೋ. ೧೪೦); ಅಲ್ಲಿ ನೀರು ದೀಪಗಳ ಸೌಕರ್ಯವಾಗಲಿ ಪಾಕೀಜು ವ್ಯವಸ್ಥೆಯಾಗಲಿ ಇರಲಿಲ್ಲ (ದಾದಾಸ. ೧೫೦). [←ಪಾರ. ಪಾಕೀಜಹ್ ; ಹಿಂ. ಪಾಕೀಜಾ]

**ಪಾಕೀಜು** ' ಪಾಕೀಜಾ ' ನೋ.

**ಪಾಕೀಟು, ಪಾಕೆಟ್ಟು** (ನಾ). ೧. ಲಕೋಟೆ : ಅವಳ ಪತ್ರವನ್ನು ತನ್ನ ಟ್ರಂಕಿನ ತೀರ ಬುಡದ ಇನ್ನೊಂದು ಪಾಕೀಟಿನಲ್ಲಿ ಬಚ್ಚಿಟ್ಟು . . . ಬೀಗ ಹಾಕಿದನು (ಅಪ್ನ. ೧೪೭); ಮೆಹಬೂಬ . . . ಒಂದು ಕಾಗದದ ಪಾಕೀಟನ್ನು ಹೊರಗೆ ತೆಗೆದು . . . ಅದರಲ್ಲಿ ಆ ಹತ್ತುರ ನೋಟುಗಳ ಸುರುಳಿಯನ್ನು ಸೇರಿಸಿ ರಾಘಪ್ಪನ ಬರವನ್ನು ಎದುರು ಕಾಯುತ್ತ ಕುಳಿತುಕೊಂಡಳು (ಗಂಪಿಣಿಯ. ೧೯೨). ೨. ಜೇಬು ; ಕಿಸೆ : ಅಂಗಿಯ ಪಾಕೀಟಿನಲ್ಲಿ ಚಿಲ್ಲರೆಯಿರಲಿಲ್ಲ (ರೂಢಿ). **ಪಾಕೆಟ್ಟು** : ೩. ಹಣವಿಡುವುದಕ್ಕಾಗಿ ಮಾಡಿದ ಚರ್ಮದ ಪೇಡಿಕೆ ಚೀಲ : ಬಸ್ಸಿನಲ್ಲಿ ನನ್ನ ಹಣದ ಪಾಕೆಟ್ಟನ್ನು ಯಾರೋ ಹಾರಿಸಿದರು (ರೂಢಿ). [←ಇಂ. Pocket]

**ಪಾಕು$_1$** ' ಪಾಗು$_1$ ' ನೋ.

**ಪಾಕು$_2$** ' ಪಾಕ$_2$ ' ನೋ.

**ಪಾಕು$_3$** ' ಪಾಯು$_2$ ' ನೋ.

**ಪಾಕುಳ** (ನಾ). ಅಮೇಧ್ಯ ; ಮಲ : ಭವಪಾಶದ ಪಾಕುಳದಲ್ಲಿ ಬಿದ್ದು ನಿಶ್ಚಟಭಕ್ತನೆಂದಡೆ ಒಪ್ಪುವನೆ ಐಘಟಪುರದ ರಾಮೇಶ್ವರಲಿಂಗ (ಮಹದೇಂ.೪. ೫೩-೨೨) : ಪಾಕುಳದೊಳಗಣ ಕ್ರಿಮಿಯಂತೆ ಪೊವಕುಳಿಗೊಂಬಂದು ನೀನಾವ ಕುಲ ಹೇಳಿರೇ (ಸರ್ವಶ. ೧೬೫-೮೨೯) ; ಸಲೆ ಕಾಯ್ದಾರ್ಕಿನ ದಾರೆಯಂ ಬಿಡು ನವದ್ವಾರಂಗಳೊಳ್ . . . ಬಾಲವೃದ್ಧವಂ ಕೀವಾಗಿ

**ಹಾಡಿ ಹರಸು** = ಹೊಗಳಿ ಆಶೀರ್ವದಿಸು.—ಹರಸು : ಮದನ ಹರನರಸಿ ಬಿಜಯಂಗೈದು . . . ಸಿದ್ಧರಾಮಯ್ಯನೆಂದು ಹೆಸರಿಟ್ಟಾಡಿ ಹಾಡಿ ಹರಸಿದಳು (ಸಿದ್ಧರಾ. ೨-೬) ; ಅಂದು ಸುಜನಸ್ತೋಮ ಪಾಂಡುವ ನಂದನರ ನೆಱೆ ಹಾಡಿ ಹರಸುತಲಿ (ಸಂಕಥ. ೧೫ ೧೦೫) ; ಜನತೆ . . . ಶಿಶುವಿಗೆ 'ಶ್ರೀನಿವಾಸ'ನೆಂದು ಹೆಸರಿಟ್ಟು ಹಾಡಿ ಹರಸಿತು (ಹೇಮುಕೂ. ೭). [ದೇ.॥ ತಮಿ. ಮಲ. ಪಾಟು ; ತೆಲು. ಪಾಡು ; ಕೋಲಾ. ಪಡ್ ; ನಾಯ್ಕಿ. ಗಡಬ. ಪಾರ್ ; ಪರ್ಜಿ. ಪಾರ್ತ್ ; ಗೊಂಡಿ. ಪಾರಾನಾ ; ಕುವಿ. ಪಾಚ್‌ಲೀ ; ಕುರುಖ್. ಪಾರ್ನಾ ; ಮಲ್ತೊ. ಪರೆ]

**ಪಾಡು₃**, ಹಾಡು₂ (ನಾ). ೧. ಗೀತ : "ಗೀತಮೆನೆ ಗಾನಮೆನೆ ಪಾಡೆ ನಿಕ್ಕಂ" (ಶಬ್ದಮಣಿ. ೨೩-೨) ; ಛಂದಮನಱಿಯದನೋದುಂ ಮುಂದಿರ್ದಾ ತಾಳದೆಳವನಱಿಯದ ಪಾಡುಂ ಬಂದುದ ಕೆಡೆವನ ನುಡಿಯುಂ ಒಂದರ್ಕಂ ಬಾರ್ತೆಯಿಲ್ಲ (ಛಂದೋಂಬು. ೧-೪೯ ಅಡಿ) ; ಪಾಡಿನೋಜೆಯುಂ ಗಡಣಿಸು ತುಂಬಿ (ಅಭಿಶಾ. ೧೨೭) ; ಅಂತದು ಪಾಡಿನ ಜೋಡಿನ ದಾಟಿಯ್ಯೆಸೆ (ರಾಮಾಶ್ವ. ೮೮-೧೨). ೨. [ಕಾವ್ಯಮಿ] ಒಂದು ಬಗೆಯ ಕಾವ್ಯಪ್ರಬಂಧ ; ೫ ಹದಿನೈದು ಅಥವಾ ಇಪ್ಪತ್ತೈದು ಭಾಗಗಳು ಪ್ರಬಂಧದ ಅಂಗವಾಗಿ ಹೊಂದಿಕೊಂಡಿರುವುದು: ಪದಿನಯ್ದುಮಿರ್ಪತಯ್ದುಂ ಪದಂ ಯಥಾಸಂಭವಂ ಪ್ರಬಂಧದ ಮೆಯ್ಯೊಳ್ ಪುದಿದೊದವಿ ನೆಗಳ್ದೊಡಂತದು ಸದಲಂಕಾರಂ ರಸಾಸ್ಪದಂ ಪಾಡಕ್ಕುಂ (ಕಾವ್ಯಾವ. ೯೫೩). 'ಪಾಡುಗಬ್ಬ' ಪರಾ. **ಹಾಡು₂** : ೧. "ಗೀತಂ, ಗಾನಂ . . . ಈ ೨ ಹಾಡಿನ ಪೆಸರ್" (ಕರ್ಣಾಟಶು. ೧೬-೯೩) ; ಕೊಂಡಾಡಲು ಜಿಹ್ವೆ ಪವಿತ್ರ ಹಾಡ ಕೇಳಲು ಕರ್ಣದೊಳಿರ್ದ ಪಾತಕ ಪೋಡುವುದಿಳೆಯ ಜೀವರಿಗೆ (ಪೋಶಕ. ೪೧-೧೬) ; ಹೊಸಬಾಳಿನ ಬೆಡಗು ಸಾಕು — ಬೆಳಕು ಬೇಕು ಹಾಡಿಗೆ (ಅರಳು. ೩೩೦-೧೧). [<ಪಾಡು₁]

**ಪಾಡು₄**, ಪಾಟು₁, ಹಾಡು₃ (ನಾ). ೧. ರೀತಿ ; ಬಗೆ : "ಪಾಡೆನೆ ರೀತಿಯಕ್ಕು" (ಕರ್ಣ. ೧೨೬) ; ಸ್ಥಳವೆ ಜಲರೂಪದಲಿ ಜಲವೇ ಸ್ಥಳದ ಪಾಡಿನಲ್ಲಿದ್ದುದದು (ಕುಮಾವ್ಯಾಸ. ೧೨-೩೬) ; ಅಳಿಯಂದಿರ ಪಾಡಲ್ಲಾ ಒಂದೇ (ಜಾತಿ. ೨). ೨. ಸ್ಥಿತಿ ; ಅವಸ್ಥೆ ; ಗತಿ : ಸುತರೊಳಗೆ ಸಿತಗರ ಸೀಳುವೆನು ಮಾನವರ ಪಾಡೇನು (ಕುಮಾರವ್ಯಾ. ೧೬-೩೨) ; ನನ್ನ ಮನಸ್ಸಿನ ಪಾಡು ವಿಪರೀತವಾಗಿತ್ತು (ಅಂಕೂ. ೧೧). ೩. ತನಗೆ ಮಾತ್ರ ಸಂಬಂಧಪಟ್ಟಿರುವ ಸ್ಥಿತಿ : ಅವರಿಗೆ ಕೊಟ್ಟು ಬಿಟ್ಟರೆ ತಮ್ಮ ಪಾಡಿಗೆ ಹೊರಟು ಹೋಗುತ್ತಾರೆ (ಕ್ಷಣಕ. ೪೬); ಆ ಹುಡುಗ ಬೇರೆಯವರ ತಂಟೆಗೆ ಬಾರದೆ ತನ್ನ ಪಾಡಿಗೆ ಓದಿಕೊಂಡಿದ್ದಾನೆ (ರೂಢಿ). ೪. ಕ್ಷೇಮ ; ಸುರಕ್ಷಿತತೆ ; ಸುಸ್ಥಿತಿ : ಪಾಡು ತಪ್ಪಿದ ಬಳಿಕ ವಿನಯವ ಮಾಡಿ ಮೆಱೆವುದು (ಕುಮಾರವ್ಯಾ. ೧-೯) ; ಸರಿವುದೇ ಪಾಡನುತ . . . ಸಂವರಿಸಿಕೊಳುತಡರಿದನು ತನ್ನಯ ತೇರ ತವಕದಲಿ (ಕೃಷ್ಣರಾ. ೩-೨೩-೨೯). ೫. ಕಷ್ಟ ; ತೊಂದರೆ ; ದುಸ್ಥಿತಿ : ಗರುಡಿಗಳಿಹ ಪದಜಗಳಿಗೆ ಬಿರುದಿನ ಬಂಟರ್ಗೆ ಬಿಡದೆ ಪಾಡುಗಳನು ಬರಿಸುವಭ್ಯಾಸಿಗಳಿಹರು (ಕುಮಾಸಾ. ೪-೭೬) ; ಒಡಲ ದಂಡಿಸಲಾಯಸವಿಲ್ಲ ಪಣವ ವೆಚ್ಚಿಸುವ ಪಾಡಿಲ್ಲ ಗುಣವಂತೆಯರಸಗುವ ಪತಿಶುಶ್ರೂಷೆಗಿಹ ಯಹ ತಪವಿನ್ನೊಳವೆ (ಹರಿಶ. ೨-೨೨) ; ನಾವು ಅನುಭವಿಸ್ತಿರೋ ಪಾಡು ಅರ್ಥವಾಗಿದೆಯೆಂತ ತೋರುತ್ತೆ (ಕಾಗದ. ೧೨೧). ೬. ಪಂತ ; ಪ್ರತಿಜ್ಞೆ : "ಪಾಡೆನೆ ಪಂಥಂ" (ಶಬ್ದ. ೫) ; ತನಗೆ ಮಾತಿನ ಪಾಡು ಬದ್ದುದು ವಿತಥವರ್ಣನೆಯನಾಡಲಾಱೆನು (ಸಂಕಥ. ಶಂ. ೩೦೭-೨೦). ೭. ಪೆಂಪು ; ಮಹಿಮೆ : ಪಾಡುಳ್ಳ ಪರಮಸದ್ಭಕ್ತಯೋಳೇಳು (ಪಡಮೋ. ೩೩-೩೦). ೮. ಸಮಾನ ; ಸಾಟಿ : "ಪಾಡೆನೆ ಸದೃಶಮುಮಕ್ಕುಂ" (ಶಬ್ದ. ೩೯) ; ವಿರಿಂಚನ ಪಾಡು ಶಕ್ರನ ಸರಿಸದವರಿಗೆ ಭಂಗವೀ ವಿಧಿ (ಕುಮಾವ್ಯಾಸ. ೧೬-೬೯) ; ಆ ಹರಿಹರಬ್ರಹ್ಮಮಾರೇಂದ್ರರು ಪಾಡೆ ನಿನಗೆ (ಕೊರಟಾ. ೧-೫-೯) ; ಗಾಡಿಯೊಳಿಂದ್ರನ ನಗುವ ಚಕ್ರಿಗೆ ಶಚಿ ಪಾಡಲ್ಲವೆಂಬೆನ್ನ ಮಗಳು ಜೋಡಿಸಲೊಲ್ಲೆಯ (ಶಶಿಶ. ೩೭-೩೩) ; ಈ ವೀರರೊಳಗೆ ಒಬ್ಬನೂ ನನಗೆ ಪಾಡಲ್ಲ (ಬರುಕಿ. ೧೪೧). ೯. ಸರಿಯಾದುದು ; ಯೋಗ್ಯವಾದುದು ; ಉಚಿತವಾದುದು : ಒಡಗೆಯ್ಯನ ಶಲಾಕಿಯೊಳ ವರಿರುವನ್ನ ಪಾಡೆಂಬುದೆನಗೆ ಕಾಣಿಸಿತು (ಪೋಶಕ. ೩೭-೩೩) ; ಇನ್ನಿಲ್ಲಿ ಕವಿಯ ವಂಶದ ಹೊಲಬನ್ನು ಒಂದಿಷ್ಟಾದರೂ ಹೇಳದೆ ಹರಿವುದು ಪಾಡಲ್ಲ (ಪಾರ್ಶೋಜ. ೬೩) ; ಜಗತ್ತು ಪಾಡಾದರ ನಾವೂ ಪಾಡು (ಹೊಸಂಸಾ. ೬). ೧೦. ಹಣ್ಣಾಗೆ ಬರುತ್ತಿರುವ ಕಾಯಿ ; ಪಕ್ವವಾಗುತ್ತಿರುವ ಕಾಯಿ ; ದೋರೆಗಾಯಿ : ಉಚ್ಚತರಶಾಖಾಗ್ರಮಂ ಪತ್ತಿ ಪಾಡುಗಳನಾಯ್ದುತಿಹ ಪುಡುಗರುಗಳಂ ಅಚ್ಚಿಗೆಸೀಕ್ಷಿಸುತ್ತಂ (ಮಹಾಚಂ. ೫-೬) ; ಇಂದಿನದು ತುಸು ಪಾಡು ನಾಳೆ ಹಣ್ಣಾದಾಗ ಬಂದೀತು ಹಾಡು (ಅರಳು. ೩೫೨-೧೮). **ಪಾಟು₁** : ೧. ಉಂಟು ನೀನುಲಿವಾಕು ಯಮ ಕೈಭಂಟಕೆಯ ನೀನರಿಯೆ ಪೂರ್ವನು ಜಂಟಿಸಿದರನುಭವಗಳಲ್ಲದೆ ಬಿದ್ದ ಪಾಟುಗಳಾ ತುಂಟ ಬಲ್ಲನೆ (ಕಾಂತಾಪ. ೯೯೫-೪೭). 'ಪಾಟುಗೆಡು' ಪರಾ. ೨. 'ಪರಿಪಾಟು₁' ಪರಾ. ೫. ವಾಗ್ಬ್ರಹ್ಮಗಳೆಲ್ಲರು ಪಡುವ ಪಾಟ ನೋಡಿ ನಮ್ಮ ಭಕ್ತರು . . ಅನಿಷ್ಟವ ಪರಿಹರಿಸಿದರು (ವಚನ. II. ೨೫೫-೧) ; ವಡದ ಪಾಟುಗಳಿಂದ ಪಡೆವುದವನ ಕೈವಿಡಿದ ಪೂಚಂಡ ಪೆರ್ಮೆಯೊಳ್ ಮುಡಿಗೆ ಕಣ್ಣಾಗಿಗೊತ್ತಿ ಮುಂಡಾಟಿ ಮನೆಗುಯ್ದು ಪೊಡಮಟ್ಟು ನಲಿದು ಪೂಜಿಪುದು (ಜಕೆಂ. ೬-೦೫೭). ೧೧. (ಸಮುದ್ರದಲ್ಲಿ) ತೆರೆಗಳ ಇಳಿತ : (ಕ). **ಹಾಡು₃** : ೨. ಬಾಹೆಮ್ಮೆಗೆ ಹೋದರೆ ಈ ಹಾಡು ಆಗುವುದು (ಮುಂಬಯಿ. ೨-೦೯). ೫. ಆರ್ಯಾವರ್ತದ ಜನರಿಗಾದ ಹಾಡೇ ನಮಗೂ ಉಂಟಾಗುವುದರಲ್ಲಿ ಸಂದೇಹವಿಲ್ಲ (ಕೆಸಿಂಹ. ೨೩).

**ಪಾಡ ಚಾಕರಿ** = ಕಷ್ಟದ ಕೆಲಸ: ಆ ಪಾಟಿ ಪಾಡ ಚಾಕರಿ ಅವನಂಥ ಭೋಳೆ ಯಲ್ಲದೆ ಇನ್ನಾರು ಮಾಡಬೇಕು ? (ಹೊಸತ್ತಿ. ೨೯). **ಪಾಡಾಗಿ** = ಚೆನ್ನಾಗಿ ; ಸರಿಯಾಗಿ : ಎರಡುದಿನದಿಂದ ಮಯ್ಯಾಗೆ ಯಾಕೋ ಪಾಡಾಗಿಲ್ಲ (ಕೆಳಮ. ೧೯) : ಈ ಗಿಳಿ ಪಾಡಾಗಿ ನೋಡಿಕೋರಿ (ಕರಿಹಾ. ೮). **ಪಾಡಾಗು₁**, **ಹಾಡಾಗು** = ೧. ಚೆನ್ನಾಗು ; ಸರಿಯಾಗು : ಇನ್ನೂ ಎಂಟು ದಿನ ಬಿಟ್ಟು ಮನೆಗೆ ಬಂದಿದ್ದರೆ ಪಾಡಾಗುತ್ತಿತ್ತು (ಸುಚಕಂ. ೩೦). ೨. ಹಣ್ಣಿನ ಹದಕ್ಕೆ ಬರು ; ದೋರೆಯಾಗು : ಕಾಯಿಗಳು ಪಾಡಾಗಿ ಬೀಳಹತ್ತಿದ ಬಳಿಕ ಅವುಗಳನ್ನು ಇಳಿಸಿ ಎಂಟು ಹತ್ತು ದಿನ ಒತ್ತಿಗೆ ಹಾಕುತ್ತಾರೆ (ಮುಂಬಯಿ. ೨-೬೨) ; ಅರಳಿದ ಕೆಲವು ಹೂಗಳೂ ಪಾಡಾದ ಕಾಯಿಗಳೂ ಕೆಳಗೆ ಬಿದ್ದಿದ್ದವು (ಕೆಸಿಂಹ. ೬೬). ೩. ಅವಕಾಶವಾಗು ; ಇಂಬಾಗು : ಗಾಡಿಗೆ ಪಾಡಾದ ಪಸದನಕ್ಕಂ ತೇಜಕ್ಕೋಜಾದ ಕಾಂತಿಗಂ ಬೆಡಂಗಿಂಗೆ ಪಾಂಗಾದ ದೇಸಿಗಂ ಮಾಸರಿಕೆಗೆಕ್ಕಲಾವಣಮಾದ ಸೌಷ್ಠವಕ್ಕಂ . . . ಸೌಂದರ್ಯಕ್ಕೆ ನೆಲೆಯಾದಂದಕ್ಕಂ ಬೆಕ್ಕಸಂಬಟ್ಟು (ಶಾಂತಿಪು. ೩-೩೩ ವ) ; ಗುರು ನದೀಸುತರಿದ್ದರೀ ಪರಿ ಪರಿಭವಕೆ ಪಾಡಹುದೆ (ಕುಮಾವ್ಯಾಭಿ. ೨೦-೪). ೪. ಸ್ಥಿತಿಯನಾಗು ; ಅವಸ್ಥೆಗೆ ಬರು : ತಾವು . . . ಸಂಶಯಪಟ್ಟದ್ದರಿಂದ ನನ್ನದು ಈ ಹಾಡಾಯಿತು (ಹ್ಯಾಕೆಮ. ೯) ; ಪಾರ್ಶೋಜೀವಿನ ಸಾಲೆಯ ದಿನಗಳಲ್ಲೂ ಇದೇ ಹಾಡಾಯಿತು (ರಕ್ತಕ. ೩). **ಪಾಡಿಗೆ ಬರು** = ಹಣ್ಣಾಗುವ ಸ್ಥಿತಿಯನ್ನು ಮುಟ್ಟು : ಆ ಕಾಯಿಗಳು ಪಾಡಿಗೆ ಬಂದು ಕೆಲ ಕೆಲವು ಹಣ್ಣು ಪರಿದು ಸೊಂಪಾಗಿ ತೋರುತ್ತಿದ್ದವು (ಮುಂಬಯಿ. ೩-೩೭). **ಪಾಡುಮಾಡು** = ಸರಿಗೊಳಿಸು ; ತಿದ್ದು ; ತೀಡು : ಜೋಡುಸವಗ ತೌಳಿ ಕತ್ತಿ ಖಡೆಯ ಲೌಡಿ ಪೇಡೆಯ ಚೂಡಾಯತಗಳ ಪಾಡು ಮಾಡುವ ಸಂಭ್ರಮವಂದೆರಡುಂ ಬೀಡಿನೊಳಗೆ ಮಸಗಿದುದು (ಕುಮಾಸಾ. ೦೯-೭೭) ; ತೀಡಿದು ತೀಡಿದು ಮೇಲೆ ಮೇಲೆ ನೋಡಲು ಕಾಣಲಳವಲ್ಲದಿರ್ಪ ನಡುವನು

ಇಳಿವ ನೆಱೆಯ ಪಾಡು ಮಾಡುವ ನೆವದಿಂದ ಪೊಳೆಯಿಸಿ ತೋಱಿಸು ತಿಹರು (ಶಬ್ದಸಾಂ. ೨೫-೬೦).

[<ಪಡು$_1$./ತಮಿ. ಮಲ. ತೆಲು. ಪಾಟು; ತುಳು. ಪಾಡು]

**ಪಾಡುಂಗಾಱ**, ಪಾಡುಕಾಱ, ಪಾಡುಗಾರ, ಪಾಡುಗಾಱ, ಹಾಡುಕಾರ, ಹಾಡುಕಾಱ, ಹಾಡುಗಾರ (ನಾ). ೧. ಹಾಡುವವನು; ಗಾಯಕ; ಸಂಗೀತಗಾರ: ಪಾಡುಂಗಾಱಂ, ಜೂದುಂಗಾಱಂ (ಶಬ್ದಮ. ೧೪೬ ಶಾಧ); ಪಾಡುಂಗಾಱಂ, ಅಲಸುಂಗಾಱಂ (ಕಮರ. ೨೦೦ ಪ್ರಯೋ); ಕರಣಿಕರೊಳ್ಪಾಡುಂಗಾಱರ ಗಣಿಕೆಯರೆಸೆವ ಮಾಲೆಗಾಱರ ... ಆಲಯಂಗಳೆಸೆಗುಂ ಪುರದೊಳ್ (ಅಷ್ಟಕ. ೫-೬-೩೦). **ಪಾಡುಕಾಱ**: ೨. ಸ್ತುತಿಪಾಠಕ; ಹೊಗಳುವವನು; ವಂದಿ: ಸೊಗಸ ಹುಟ್ಟಿಸಿ ಸುಱಿವ ರಸವಾದಿಗಳನವರ ಏಡಾಯಿಗಳ ನಂಬುಗೆಯ ಕೇವಣ ಪಾಡುಕಾಱರ ಕರ್ಣ ನೋಡು (ಕುಮಾವ್ಯಾ. ೦೬-೨೫). **ಪಾಡುಗಾರ**: ೧. ಹುಱುಪಾಡುಗಾರ ತುಟಿ ಮುಚ್ಚಿದನು (ಸರೀಗ. ೬೩-೩). **ಪಾಡುಗಾಱ**: ೧. ವ್ಯಾಧನರೆಮಯ್ಯನಂಬಿಕೆಗೀಯೆ ತವಗಿಪ್ಪೆಡೆಗಾಣದೆ ಎಡಗಿವಿಯು ತೊಡವಿನೆಕ್ಕಲಗಾಣನಿಳೆಗಿಳಿದನೋಯೆಂಬ ಪಡಿಯಾದನಾ ಪಾಡುಗಾಱ (ಶ್ರೀಕಾಂ. ೩-೦೫). **ಹಾಡುಕಾರ**: ೧. "ಗಾಯಕ—ಹಾಡುಕಾರ" (ಗಂಗಾಮ. ೦೦೪). **ಹಾಡುಕಾಱ**: ೧. ಭಪ್ಪನದೇಶದ ಹಾಡುಕಾಱರ್ಗೊಡೆ (ಶಾಸನ. ೦೯೪೪, ಸೊರಬ. ೬೩-೨೦, 1450). **ಹಾಡುಗಾರ**: ೧. ಹಾಡು, ಹಾಡಿಕೆ ಮತ್ತು ಹಾಡುಗಾರ ಇದೊಂದು ತ್ರಿವೇಣೀಸಂಗಮವು (ಹಾಹಸಂ. ೧೭). [ಪಾಡು$_3$ + —ಕಾಱ]

**ಪಾಡುಂಗಾಱಿಕೆ**, ಪಾಡುಗಾಱಿಕೆ, ಹಾಡುಗಾರಿಕೆ (ನಾ). ಹಾಡುವಿಕೆ; ಗಾಯನ; ಗಾನ: ನೀಂ ಪಾಡುಂಗಾಱಿಕೆಯೊಳ್ ಬಲ್ಲಿದನೆನಿಪ ಜಸಮಂ ಕೇಳ್ದಿಲ್ಲಿಗೆಯ್ತಂದೆಂ (ಅಭ್ಯುಕ. ೦೭-೮). **ಪಾಡುಗಾಱಿಕೆ**: ಪಾಡುವ ಪ್ರಾತಃಕಾಲದ ರಾಗವ ಪಾಡುಗಾಱಿಕೆಯೊಳಾಲಿಸುತ (ಶಬಶ. ೨೫-೮). **ಹಾಡುಗಾರಿಕೆ**: "ಗೀತಂ, ಗಾನಂ—೨ ಹಾಡುಗಾರಿಕೆ ಹೆಸರುಗಳು" (ಶಿಘ್ಲಂಶಿ. ೫೭); ಅವರ ಹಾಡುಗಾರಿಕೆ ಯಾವುದೇ ಪ್ರಯಾಸವನ್ನು ಕಾಣದಂತಿತ್ತು (ಸಂಗೀತ. ೫೪). [ಪಾಡುಂಗಾಱ + —ಇಕೆ]

**ಪಾಡುಕಾಯಿ** 'ಪಾಡುಗಾಯಿ' ನೋ.

**ಪಾಡುಕಾಱ** 'ಪಾಡುಂಗಾಱ' ನೋ.

**ಪಾಡುಕುಳಿ** (ನಾ). ಹಾಡುವುದೇ ಗೀಳಾಗಿರುವವನು; ಹಾಡುವುದರಲ್ಲಿ ಆಸಕ್ತಿಯುಳ್ಳವನು: ಪಾಡುಕುಳಿ, ಮಱುಕುಳಿ (ಕಮರ. ೨೦೩ ಪ್ರಯೋ). [ಪಾಡು$_1$ + —ಕುಳಿ$_3$]

**ಪಾಡುಗ**, ಹಾಡುಗ (ನಾ). ೧. = ಪಾಡುಂಗಾಱ ೧: ಪಾಡುಗಂ, ಜೂದುಗಂ (ಶಬ್ದಮ. ೩೮೪ ಪ್ರಯೋ). **ಹಾಡುಗ**: ೧. "ಗಾಯಕಃ, ಗಾಯನಃ—ಈ ೨ ಹಾಡುಗಂ" (ಅಭಿಧ. ೬೪). ೨. = ಪಾಡುಂಗಾಱ ೨: ದಿವಿಜರ ರಾಯ ... ಶಿವಾದಿಗಳ ಸಾಹಸಕೆ ಮೂವಡಿಯು ರಾಯಭಟರಿಂದ ನೇವಿಸಾ ಸುರರಾಯನೂರಿನ ಹಾಡುಗರ ಹುಲುನಾಯಕರಿಗಿನಿತೇಕೆ ಖತಿ ಬೆಸಸೆಂದನಾ ಕರ್ಣ (ಕುಮಾವ್ಯಾ. ೦೯-೨). [ಪಾಡು$_1$ + —ಗ$_3$]

**ಪಾಡುಗಬ್ಬ**, ಹಾಡುಗಬ್ಬ (ನಾ). [ಕಾವ್ಯವಿ] ಹಾಡುವುದಕ್ಕೆ ಅನುಕೂಲವಾದ ಕಾವ್ಯ; ಈ ದೇಶೀಯಛಂದಸ್ಸಿನ ಷಟ್ಪದಿ, ಸಾಂಗತ್ಯ ಮತ್ತು ತ್ರಿಪದಿಗಳಲ್ಲಿ ರಚಿತವಾದ ಕಾವ್ಯ: ಪಾಡುಗಳಿಂದು ತಱಿಸಲೆ ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂಡಾಡುವರ್ (ಕಾವ್ಯಾವ. ೯೫೪); ನಾಡೊಳಗುಳ್ಳ ಜಾಣರು ಜಾಣೆಯರೊಡನಾಡುವ ಸವಿಮಾತುಗಳ ಪಾಡುಗಬ್ಬವ ಪರುಠವಿಸಿದ ಬಗೆಯ ನೀ ನೋಡು ಮಾನಿನಿ ಮುಂದೆ ಮುಂದೆ (ಕೋಹಕ. ೦-೩೫). **ಹಾಡುಗಬ್ಬ**: ಕಬ್ಬಿಗರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರವರಡು ಕಬ್ಬಿನಂತಿರಬೇಕು ಬದಿರಂತೆ ರಚಿಸಲ್ಕೇಕಬ್ಬೆ (ಶಬಶ. ೧-೬); ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿಬಂಡಿ (ಕಂಮು. ೩೩-೮). [ಪಾಡು$_1$ + ಕಬ್ಬ$_1$]

**ಪಾಡುಗವಿತೆ** (ನಾ). = ಪಾಡುಗಬ್ಬ: ಱಟಕಾಳಕ್ಷಳ ಏತ್ವರೇಫೋಜ್ಝಳ ಱಕಾರ ಪ್ರಾಸಭೇದಂಗಳ ಸ್ವರವ್ಯಂಜನ ವಿಭಕ್ತಿ ಸಮಾಸ ಶಿಥಿಲಗಳಾ ಪಳಿಯನೇನುಂ ಪಾಡುಗವಿತೆಗಳೊಳು ವಿಚಾರಿಸ ಸಲ್ಲ (ಶಾಶ್ವತಾ. ೧-೪೫). [ಪಾಡು$_1$ + ಕವಿತೆ]

**ಪಾಡುಗಾ** (ಕ್ರಿ). (ಪರಸ್ಪರರ) ಕ್ಷೇಮವನ್ನು ಉಳಿಸು, —ರಕ್ಷಿಸು: ಇಂತು ಪಾಡುಗಾದೊಡನೊಡನಿರ್ವರುಂ ಮೆಱೆಯಲೆಂದೆ ಶರಾಸನವಿದ್ಯೆಯಿಂ ಪಡಲ್ವಡಿಸಿದರೆತ್ತವಿತ್ತಮಿದಿರೊಳ್ ಮಾಱಿದೊಡ್ಡಿದ ಚಾತುರಂಗಮಂ (ಹಂಶಹ. ೧೧-೧೪). [ಪಾಡು$_3$ + ಕಾ$_1$]

**ಪಾಡುಗಾಯಿ**, ಪಾಡುಕಾಯಿ, ಹಾಡುಗಾಯಿ (ನಾ). ಹುಳಿಯನ್ನು ಕಳೆದುಕೊಂಡು ಹಣ್ಣಿನ ಅವಸ್ಥೆಗೆ ತಿರುಗುತ್ತಿರುವ ಕಾಯಿ; ದೋರೆಗಾಯಿ: ನಾಲ್ಕಾರು ಪಾಡುಗಾಯಿಗಳ ಗೊಂಚಲು ತುದಿಯಲ್ಲಿ ಬಾಗಿ ನಿಂತು ... ಎದುರಿಗೇ ಇರಬೇಕೆ? (ದೇಶಕ್ಕ. ೦೩೯). **ಪಾಡುಕಾಯಿ**: ತಚ್ಛೂತಶಾಖಾಗ್ರದೊಳ್ ಜೊಂಪದಿಂ ತೂಗುತಿಹ ಪಾಡುಕಾಯಿಗಳಿರಲ್ ಕಂಡು (ಸುಚಾತಿ. ೫-೫). **ಹಾಡುಗಾಯಿ**: ಹುಣಿಸೆ ಇನ್ನೂ ಹಾಡುಗಾಯಿ (ಜಾತಿ). [ಪಾಡು$_3$ + ಕಾಯಿ$_4$ (<ಕಾಯ್$_4$)]

**ಪಾಡುಗಾರ** 'ಪಾಡುಂಗಾಱ' ನೋ.

**ಪಾಡುಗಾಱ** 'ಪಾಡುಂಗಾಱ' ನೋ.

**ಪಾಡುಗಾಱಿಕೆ** 'ಪಾಡುಂಗಾಱಿಕೆ' ನೋ.

**ಪಾಡುಗೆಡಿಸು** (ಕ್ರಿ). ನೆಲೆಗೆಡುವಂತೆ ಮಾಡು; ದುಸ್ಥಿತಿಗೆ ಒಳಪಡಿಸು: ಪವನಜಾದ್ಯರ ಪಾಡುಗೆಡಿಸಿದನಸ್ತ್ರಸಾರದಲಿ (ಕೊರಶಾ. ೬-೩೫-೩೩); ಮೋಡಿಯ ಹರಿಗೆಯ ಭಟರು ನೇಜೆಯಗಳ ನೀಡುತಿರುವ ಮುಲ್ಲಾಕರ ಪಾಡುಗೆಡಿಸಿ ಹೊಯ್ದುಡಿಯಟ್ಟಿ ದೆಸೆದೆಸೆಗೋಡಿಸಿದುದನೇವೇಳ್ವೆ (ಕಂಶಂ. ೦೫-೪೧). [ಪಾಡು$_3$ + ಕೆಡಿಸು$_1$]

**ಪಾಡುಗೆಯ್**, ಪಾಡುಗೈ (ಕ್ರಿ). ಸಂಪಾದಿಸು; ಹದಗೊಳಿಸು; ಸಿದ್ಧಪಡಿಸು: ಒಯ್ಯನೆ ಗದೆಯನಣಂ ಪಾಡುಗೆಯ್ದುದಿರ್ದ ಘೋರೆಂದೆಱವುಗ್ರಾರಾತಿಯೂರುದ್ವಯಮನಿಡೆ ... ಕೆಡೆದನ್ನೆಲಾಭಾಗದೊಳ್ ಧಾರ್ತರಾಷ್ಟ್ರಂ (ಹಂಶಹ. ೦೩-೯೭). **ಪಾಡುಗೈ**: ನಾವೀ ನಿಜಾಯುಧಗೂಡಿ ... ಸಂಗರವ ಪಾಡುಗೈವುದೆ ಪಂಥ (ಕೊರಶಾ. ೫-೯-೧). [ಪಾಡು$_3$ + ಕೆಯ್$_1$]

**ಪಾಡುಗೈ** 'ಪಾಡುಗೆಯ್' ನೋ.

**ಪಾಡುಗೊಳ್** (ಕ್ರಿ). ಲೆಕ್ಕಿಸು; ಗಮನಿಸು; ಎಣಿಸು: ಕರಿಗಳ ಪಾಡುಗೊಳ್ಳದ ಬಳಿದಿನಾಗಲು ನೋಡಿ ತಕ್ಷಣ ತನ್ನ ಮಗಳನು ಭೀಮಸೇನಂಗೆ ಪರವಿವಾಹವ ಮಾಡಿ ನುಡಿದನು (ಸಂಶಕ. ೦೭-೨೪). [ಪಾಡು$_3$ + ಕೊಳ್$_1$]

**ಪಾಡುದಪ್ಪು** (ಕ್ರಿ). ನೆಲೆಗೆಡು; ಹದಗೆಡು; ಕೆಟ್ಟು ಹೋಗು: ಗೋಡೆಗಟ್ಟಾಗಿ ಬಳಸಿಕೊಂಡ ವೀರರ ನೋಡಿ ನಾಗೇಂದ್ರ ವ್ಯೆಬಿದಱೆ ಪಾಡುದಪ್ಪಿತು ತನ್ನ ಕಾರ್ಯವೆಂದವರ ಬಿಟ್ಟೋಡಿದನಿರದೆ ತನ್ನೂರ್ಗೆ (ಶಬಶ. ೫೭-೪೪). [ಪಾಡು$_3$ + ತಪ್ಪು$_1$]

**ಪಾಡುಪಂತ**, ಪಾಡುಪಂಥ (ನಾ). ಹೆಸರಾಂತ ಶಪಥ; ಜನಜನಿತವಾದ ಪ್ರತಿಜ್ಞೆ: ಈ ಪಾಡುಪಂತದ ಮಾತನಾಡುವ ಶರುಬಾಪಾಗಮಜ್ಞನೀನಹುದು (ತೋಹಕ. ೧೨-೫೭); ಎಂತಾನುಮಾ ಪಾಡುಪಂತಮಂ ಮಗುಳ್ಚುವೆಟ್ಟಂ (ಅಶಹ. ೧೨-೮). **ಪಾಡುಪಂಥ**: ಕುಂದು ಹೆಚ್ಚಿನ ಪಾಡುಪಂಥವ ಕಂದುಕಸರಿನ ಕಲಿಮನದ ಕಡುಹಿಂದ ಕಯ್ದುಡುಕಿದರು ಕಲಿಗಳಾಜಿಯಲಿ (ಕೊರಶಾ. ೪-೩-೬); ಬಡವ ಬಲ್ಲಿದರ ಕೂಡ ಪಾಡುಪಂಥದ ಮಾತು ತರವೆ (ಪ್ರಶಹ. ೦-೪೪). [ಪಾಡು$_1$ + ಪಂತ$_1$]

**ಪಾಡುಪಂಥ** 'ಪಾಡುಪಂತ' ನೋ.

**ಪಾಡುಪಡಿಸು** 'ಪಾಡುವಡಿಸು' ನೋ.

**ಪಾಡುಪಡು,** ಪಾಟುಪಡು, ಪಾಟುಬಡು (ಕ್ರಿ). ಕಷ್ಟಪಡು; ತೊಂದರೆಯನ್ನು ಅನುಭವಿಸು : ಕಾಡಿನಲ್ಲಿದ್ದುಕೊಂಡು ಪಾಡು ಪಟ್ಟು ತಪಸ್ಸು ಮಾಡುವುದು ಆತ್ಮಜ್ಞಾನಕ್ಕಾಗಿ (ಪಕಥಾ. ೧೬೧); ಅದಕ್ಕೋಸ್ಕರವೇ ಅಲ್ಲವೇ ನಾನೂ ನಿನ್ನ ತಂದೆಯೂ ಇಷ್ಟೊಂದು ಪಾಡು ಪಡುತ್ತಿರುವುದು (ಮಹಾಗ. ೯೭): ಹೀನಾಯವಾದ ನರಜನ್ಮಕ್ಕೆ ಹೇಗೆ ತಾನೆ ಹೋಗಿ ಪಾಡುಪಡಲಿ (ಕುಮಾರಾ. ೩೪). **ಪಾಟುಪಡು :** ಪಾಟುಪಡದಲೆ ಜಗದಿ ಜೀವರ ಘೋಟಕಾಸ್ಯನು ಸೃಜಿಸಿ ಯೋಗ್ಯತೆ ದಾಟಗೊಡದಲೆ ಸಲಹುತಿಪ್ಪನು ಸರ್ವಕಾಲದಲಿ (ಹರಿದಾ. ೧೯೭). **ಪಾಟುಬಡು:** ಒಬ್ಬನೊ ಇಹದಲ್ಲಿ ಬಂದು ಎಲ್ಲ ಪಾಟುಬಡುವದು (ಸೋಮೇಶ್ವರ. ೫೦-೫). [ ಪಾಡು$_{3}$ + ಪಡು$_{1}$ ]

**ಪಾಡುಬೀಟು** (ಕ್ರಿ). ಕಷ್ಟ ಪಡು : ಪಾಡುಬಿದ್ದುಟಾವಾರಂಬದ ಧಾನ್ಯ ಶತ್ರುಜಯ ಪುತ್ರೋತ್ಪತ್ತಿ . . . ಬೇಹಾರವಿಂತೆಲ್ಲ ಮುಂ ಪಲಕಷ್ಟಂ ಕಡೆಗೊಳ್ಳಿತ್ತೈ (ಸೋಮಕುಕ. ೯೬). [ ಪಾಡು$_{3}$ + ಬೀಟು$_{1}$ ]

**ಪಾಡುಮೈಮೆ** (ನಾ). ಹಾಡಿನ ಮಹಿಮೆ ; ಹಾಡುಗಾರಿಕೆಯ ಮಹಿಮೆ : ನಾಡುಂ ಸದ್ಮಯಿಂ ಪಾಡೆ ಪಾಡುಮೈಮೆಗೆ ಪಾಸಟಿ ಯಿಲ್ಲಂ (ಅರ್ಜುನ. ೨೨-೧೧). [ಪಾಡು$_{3}$ + ಮೈಮೆ ( <ಮೆಯ್ಮೆ) ]

**ಪಾಡುವಡಿಸು,** ಪಾಟುಬಡಿಸು, ಪಾಡುಪಡಿಸು (ಕ್ರಿ). ತೊಂದರೆಗೊಳಗುಮಾಡು ; ಕಷ್ಟಪಡಿಸು ; ಪೀಡಿಸು : ಪಾಡುವಡಿಪರೆಂದು ಪರಿಹರಿಸದೆ ಚುನ್ನವಾಡದೆ ಮನೆವಾಳ್ತೆಯನು ಮಾಡುವುದವರ ಸಮ್ಮತದಿಂದ (ಹರಿ. ೪-೦೩). **ಪಾಟುಬಡಿಸು:** ಪಾಟುಬಡಿಸದಿರು ಸಿರಿಲಕುಮಿನಲ್ಲ (ಐರಾಕ್ಕ. ೮೬-೪) : ನೀಟಾದ ಭೋಜನವ ಬಯಸುವನು ಯಮರಾಯ ಪಾಟುಬಡಿಸುವ ಭಂಗ ಕೇಳಿ ಎಚ್ಚರಿಯವಲೆ (ಐರಾಕ್ಕ. ೧೦೯-೧). **ಪಾಡುಪಡಿಸು :** ನಾವು ದೇವತೆಗಳ ಪಾಡು ಪಡಿಸಿದೆವು (ಶ್ರೀಗಂ. ೦೦೦-೦೭) : ಒಂದು ವೇಳೆ ಮಕ್ಕಳಾದರೂ ಈಗ ನೀನು ನನ್ನನ್ನು ಪಾಡುಪಡಿಸುವಂತೆ ಅವರೂ ನಿನ್ನನ್ನು ಪಾಡು ಪಡಿಸಲಿ (೪೦೪. ೩೨). [ಪಾಡು$_{3}$ + ಪಡು$_{1}$ + –ಇಸು$_{3}$ ]

**ಪಾಡುವೇಳು** (ಕ್ರಿ). ಕ್ರಮವನ್ನು ತಿಳಿಸು ; ವಿಧಾನವನ್ನು ಹೇಳಿ ಕೊಡು : ಅವನು ಚೆಂಡಾಟವ ಚೆಂಡಾಟವನಾಡುವ ನೃಪತನಯರಿಗೆ ಪಾಡುವೇಳುತ ನಿಂದಿಹನು (ಕುಮಾರಾ. ೩೦-೪೮).

[ಪಾಡು$_{3}$ + ಪೇಳು ( <ಪೇಟು ) ]

**ಪಾಡೆ** (ನಾ). ದೋಣಿ ; ನಾವೆ : ಸಂಸಾರಾಂಬುಧಿಯಲ್ಲಿ ಶರೀರವೆಂಬೊ ಪಾಡೆಯಲ್ಲಿ ಕಂಸಾರಿ ವ್ಯವಹಾರ ಕಡುಲೋಭ ಜೀವಶಟ್ಟಿ ಕಾಲವೆಂಬೊ ಕಳ್ಳಪಾಡೆ ಕಲಹಂಸಾವುಂಡಿರುವ ಕ್ರೂರವೆಂಬೊ ಕಳ್ಳಬಂಟ ಕಿಡಿಗೇಡಿ ನೋಡುತಿಹ ಬಾರಯ್ಯ ಈಗ (ಕ್ರಿಸಂದ. ೩-೦೫-೦). 'ಪಾಂಡಿ' ಪರಾ.

[ ದೇ. ‖ ಮಲ. ಪಾಣ್ಡ ; ತೆಲು. ಪಾದಿ ]

**ಪಾದ್ದನ,** ಪಾಡ್ದನೆ, ಪಾರ್ದನ (ನಾ). (ಕರಾ) ಭೂತಗಳ ಹಾಗೂ ತುಳುನಾಡಿನ ವೀರರ ಹಳೆಯ ಕಥೆಗಳನ್ನು ಹೇಳುವ ಹಾಡು ; ಭೂತಾರಾಧನೆಯ ಹಾಡು : ತುಳುಭಾಷೆಯ ಕತೆಗಳಲ್ಲಿ ಪಾಡ್ದನಗಳು ಎಂಬೊಂದು ವರ್ಗವಿದೆ; ಅದು ದೈವಗಳ ಪುರಾಣಗಳ ವರ್ಗ (ಸುವರ್ಣ. ೧೨೦); ಈ ಪಾಡ್ದನಗಳು ಮಾನವಶಾಸ್ತ್ರದ ಅಭ್ಯಾಸಿಗಳಿಗೆ ಧಾರಾಳವಾಗಿ ವಸ್ತುಗಳನ್ನು ಒದಗಿಸಬಲ್ಲುವು (ಜಾನಪದ. ೧೭). **ಪಾಡ್ದನೆ :** ತುಳುನಾಡಿನ ನಿದರ್ಶನವನ್ನು ಹೇಳುವಲ್ಲಿ ಇಲ್ಲಿನ ದೈವಗಳ ಪಾಡ್ದನೆ ಕೆಲವು ಜನರ ವೃತ್ತಿಯಾಗಿದೆ (ಜಾನಪ. ೦೦) : ತುಳು ಪಾಡ್ದನೆಗಳ ಸೊಲ್ಲನ್ನು ಹಾಡುತ್ತ . . . ಅವರು ನಡೆಯುತ್ತಿದ್ದರು (ಐಗುಂ. ೯೩). **ಪಾರ್ದನೆ :** ಕಳ್ಳು ಕುಡಿದು ಮಧ್ಯರಾತ್ರಿ ಕಳೆದ ಮೇಲೆ ಪಾರ್ದನ ಹೇಳುತ್ತಾ ಎಲ್ಲರನ್ನು ನಿದ್ರೆಯಿಂದೆಬ್ಬಿಸುತ್ತಾ ಮನೆ ಸೇರುವುದು ಆತನ ನಿತ್ಯದ ವಿಧಿಯೇ ಆಗಿತ್ತು (ಕಂಬಪ. ೪೨).

[ ←ತುಳು. ಪಾಡ್ದನ, ಪಾಡ್ದನೊ, ಪಾರ್ದನ ]

**ಪಾಡ್ದನೆ** 'ಪಾಡ್ದನ' ನೋ.

**ಪಾಡ್ಯ** 'ಪಾಡಿವ' ನೋ.

**ಪಾಡ್ಯಮಿ** (ನಾ). ಚಾಂದ್ರಮಾನಪಕ್ಷದ ಮೊದಲನೆಯ ತಿಥಿ ; ಪಾಡ್ಯ; ಪ್ರತಿಪದೆ : 'ಬಲಿಪಾಡ್ಯಮಿ' ಪರಾ. ☞ ಪಂಚಮಿ, ಸಪ್ತಮಿ, ಅಷ್ಟಮಿ, ನವಮಿ, ದಶಮಿ ಇತ್ಯಾದಿ ಶಬ್ದರೂಪಗಳ ಹೋಲಿಕೆಯ ಮೇಲೆ 'ಪಾಡ್ಯ' ಶಬ್ದಕ್ಕೆ 'ಮಿ' ಎನ್ನುವುದು ಸೇರಿ ಇದು ರೂಪಿತವಾಗಿರಬಹುದು. [ <ಪಾಡ್ಯ./ತೆಲು. ಪಾಡ್ಯಮಿ ]

**ಪಾಡ್ಯಾಹ್ನ** (ನಾ). (ಕರಾ) ಪಾಡ್ಯದ ದಿನ ಮದುವಣಿಗರಿಗೆ ಏರ್ಪಡಿಸುವ ಉತ್ಸವ : ಐತಾಳರು ತಮ್ಮ ಮನೆಯ 'ಪಾಡ್ಯಾಹ್ನ'ಕ್ಕೆ ಅವರನ್ನು ಬರಹೇಳಿದ ಬಳಿಕ, ಉಪಾಯವಿಲ್ಲದೆ ಮಾರಳಿದರು (ಮರಳಿ. ೨೩೪). [ ಪಾಡ್ಯ ( <ಪಾಡಿವ) + ಅಹ್ನ ]

**ಪಾಣ** (ನಾ). ೧. ನರ್ತನ ಮಂತ್ರ ಗಾಯನಗಳನ್ನು ವೃತ್ತಿಯಾಗಿ ಉಳ್ಳವನು ; ನಟ : ಇವರು ಹಿರಿಯರುಗಳೀ ಯಾಗ ನಟ್ಟುವಿಗ ಪಾಣರು (ಐಶ. ೬೦೩) ; ಗಾಣರ ಪಾಣರ ವೈತಾಳಿಕರ ವಂದಿ ಮಾಗಧರ ಸಂಗಣಿಯೊಳ್ ಸಂದಣಿಸಿ (ಮಹಾವೀ. ೦೨-೯ ವ); ನಟ್ಟುವ ಪಾಣ ಗಣೆಯಾಟ ವೀಣೆಯಾಟ . . . ಮೊದಲಾದ ಅಱುವತ್ತನಾಲ್ಕು ವಿದ್ಯೆಗಳ ಸಾಧಿಸಿದ ಡೊಂಬನೆನು ಕಿಱಿಯನೇ (ಗಣಿತಾ. ೧೨೦-೨). ೨. ಕುಣಿದು ಪೂಜೆ ಸಲ್ಲಿಸುವ ಪೂಜಾರಿ : ನಮ್ಮ ಊರಿನ ದೈವಾರಾಧನೆಗಳಲ್ಲಿ "ಪಾಣರು" ದೆವ್ವದ ವೇಷ ತೊಟ್ಟು, ಕೋಲವೆಂಬ ಉತ್ಸವಗಳಲ್ಲಿ ಕುಣಿಯುತ್ತಾರೆ (ಹುಟುಬಿ. ೨೬). ೩. (ಕರಾ) ಓಲೆಗರಿಯಿಂದ ಕೊಡೆ ತಯಾರಿಸುವವನು. [ ದೇ. ‖ ತಮಿ. ಮಲ. ಪಾಣ ]

**ಪಾಣವಿಕ** (ನಾ). ಪಣವವೆಂಬ ವಾದ್ಯವನ್ನು ಬಾರಿಸುವವನು : ವೈಣಿಕ ಪಾಣವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತಕಾದಿ ಕುತಪಪ್ರತತಿಯುಮಂ . . . ಸಮಕಟ್ಟಿ (ಕಂರ್ಣಸ್ಥ. ೩-೮೫ ವ). [ಸಂ.]

**ಪಾಣಿ**$_{1}$ 'ಪಾಣೀಯ' ನೋ.

**ಪಾಣಿ**$_{2}$ (ನಾ). ೧. ಕೈ ; ಹಸ್ತ : " ಪಾಣಿ ಹಸ್ತಂ ಪಂಚಶಾಖೆ ಕರಮೆನಲು ಕೈ " (ಮಂಗರಾ. ೯೩-೮) ; ನೇತ್ರ ನಾಸಿಕ ಪಾದ ಪಾಣಿ ಶ್ರೋತ್ರವೆಂಬಿವು ತಮ್ಮೊಳೊಂದೇ ಸೂತ್ರದಲಿ ಸಂಸ್ಪೃಷ್ಟವಾಗಿ ಸಮಾನ ಬುದ್ಧಿಯಲಿ ಗಾತ್ರವಿದಿರಿಹವೋಲು (ಕುಮಾರಾ. ೪-೭) ; ಪಾಣಿ ಚಿಗುರಿನ ಹಾಗೆ ಪಾಣಿ ಜೇನಿನ ಹಾಗೆ ಮನವೇಕೆ ಕಲ್ಲಿನ ಹಾಗೆ (ಇಂಕಾಶ. ೮೩-೨). ೨. ಬೆರಳನ್ನು ಚಾಚಿದ ಅಂಗೈ : " ನೀಡಿದ ಬೆರಳ ತಳಂ ಪಾಣಿಯೆಂಬುದು " (ಕರ್ಣಾಟು. ೮೪-೩೪); " ಅಂಗುಲಿ ಮಾಡಿದ ಕಡಿತೆಯಾ ಪ್ರಸೃತಿಯೆನಿಕ್ಕು ನೀಡಿದ ಬೆರಳ್ ಪಾಣಿಯಕ್ಕುಂ" (ಮಂಗರಾ. ೯೩-೪).

[ಸಂ.]

**ಪಾಣಿ**$_{3}$ 'ಪಹಣಿ' ನೋ.

**ಪಾಣಿಗೆ** (ನಾ). ಆನೆಗೆ ತೊಡಿಸುವ ಒಂದು ಬಗೆಯ ಅಲಂಕಾರ (?): ಪಾಣಿಕದ ಮೊಗರಂಬ ಚಿಪ್ಪಿನ ಪಾಣಿಗೆಯ ಕಿರಿತೊರಡೆ ಮುರುಜಿಯ ಸೇಣಿನುರುಸಂಕಲೆಯ ಸೂಸಿಗೆ ಕೊಂಬನಣಚುಗಳ ಡಾಣೆದೊತ್ತಳ ನೊತ್ತಿನೊತ್ತುಗೆ ಕಾಣಿಪಗ್ಗರಣೆಗಳ ಚೌದಂತಾನೆ ಹೊಕ್ಕುವು ರಕ್ಕಸ ವ್ರಜ ಮಟ್ಟಿ ಘಟ್ಟಿಸುತ (ಅಂರಾಶ. ೧೪-೧೧). [?]

**ಪಾಣಿಗ್ರಹಣ** (ನಾ). ೧. ಕೈಹಿಡಿಯುವುದು ; ಮದುವೆ : " ಉಪಯಾಮಃ, ಪರಿಣಯನಂ, ಪಾಣಿಗ್ರಹಣಂ, ವಿವಾಹಃ, ಉದ್ವಾಹಃ –

ಈ ೫ ಮದುವೆ " (ಹರಾಯು. ೮೧-೩೪೧); ಅಹಹ ವೈರಿಗೆ ಧರೆಗೆ ಪಾಣಿಗ್ರಹಣವಾಯಿತೆ (ಶಂಭು.ಶ. ೩-೨೬) ; ಧರ್ಮದಾಸನಿಗೆ . . . ಕೆಲವು ದಿವಸದಲ್ಲಿಯೇ ದ್ವಿತೀಯ ಪಾಣಿಗ್ರಹಣವಾಯಿತು (ಅದೃಷ್ಟ. ೬೬). ೨. (ಅಲಂ) ಕೈಸೆರೆ ಹಿಡಿಯುವಿಕೆ : ಪಟುಭಟರು ಅಪ್ಪಣೆ ಪ್ರಕಾರ ಪ್ರಾಣಯುಕ್ತವಾಗಿ ಪಾಣಿಗ್ರಹಣವೆಸಗಿದ ಆನೆ ೧೮೧ (ಎಕ. XII. ಕೊರಟಗೆ. ೨೫-೨೪ ; 1624). [ಸಂ.]

**ಪಾಣಿಗ್ರಹಣಂಕೆಯ್** 'ಪಾಣಿಗ್ರಹಣಂಗೆಯ್' ನೋ.

**ಪಾಣಿಗ್ರಹಣಂಗೆಯ್**, ಪಾಣಿಗ್ರಹಣಂಕೆಯ್ (ಕ್ರಿ). ೧. ಮದುವೆ ಮಾಡಿಕೊಡು : ಬಂಧುಗಳ್ ವಿವಾಹವಿಧಿಯನೊಡರ್ಚಿ . . . ಪಾಲ್ಕುರಮಂ ತಂದು ಪಾಣಿಗ್ರಹಣಂಗೆಯ್ಯೆ (ಶಾಂತಿಪು. ೯೨೮). **ಪಾಣಿಗ್ರಹಣಂಕೆಯ್** : ೨. (ಅಲಂ) ನೀರನ್ನು ಧಾರೆಯೆರೆದು ಕೊಡು ; ದಾನ ಮಾಡು : ಭೂತಶರ್ಮ್ಮಗ್ಗೆ ಶಾಲಿಗ್ರಾಮ ಸರ್ವಪರಿಹಾರ ಸಂಗ್ರಹದಿನ್ತು ಪಾಣಿಗ್ರಹಣಂಕೆಯ್ದು ಕೊಟ್ಟರ್ (ಶ್ರವಣ. ೦೯೪೦. ೦-೩೨ ; 788 ?). [ ಪಾಣಿಗ್ರಹಣ + ಕೆಯ್$_2$ ]

**ಪಾಣಿಗ್ರಹಣಂಗೆಯಿಸು**, ಪಾಣಿಗ್ರಹಣಂಗೆಯ್ಸು (ಕ್ರಿ). ಕೈ ಹಿಡಿಸು; ಮದುವೆ ಮಾಡಿಸು : ಅಂತು ಕೈನೀರೆರೆದು ಪಾಣಿಗ್ರಹಣಂಗೆಯಿಸಿದಾಗಳ್ [ಪಾಠಾಂ. ಗೆಯ್ವಾಗಳ್] (ಆದಿಪು. ೪-೪೮ ವ). **ಪಾಣಿಗ್ರಹಣಂಗೆಯ್ಸು** : ಗುಣಾರ್ಣವನನಾ ದ್ರುಪದಜೆಯನೊಡನೆ ಕುಳ್ಳಿರಿಸಿ . . . ಹುತವಹಸಮಕ್ಷದೊಳ್ ಕೆಯ್ನೀರೆರೆದು ಪಾಣಿಗ್ರಹಣಂಗೆಯ್ಸು (ಪಂಪಭಾ. ೩-೭೪ ವ). [ಪಾಣಿಗ್ರಹಣಂಗೆಯ್ + — ಇಸು$_3$]

**ಪಾಣಿಗ್ರಹಣಂಗೆಯ್ಸು** 'ಪಾಣಿಗ್ರಹಣಂಗೆಯಿಸು' ನೋ.

**ಪಾಣಿಘ** (ನಾ). ೧. ಹರೆ, ಮೃದಂಗ, ಢಕ್ಕೆ ಮೊದಲಾದ ವಾದ್ಯಗಳನ್ನು ಬಾರಿಸುವವನು,- ನುಡಿಸುವವನು. ೨. ಕೈತಾಳ ಹಾಕುವವನು; "ಹಾಡುವಾಗ ಕೈಮೇಲೆ ತಾಳವ ಹಿಡಿಯುವವನು" (ಗಂಗಾಷು. ೨೦೩): "ಪಾಣಿವಾದಃ, ಪಾಣಿಘಃ—೨ ಕೈತಾಳ ಹೊಡೆಯುವವನ ಹೆಸರು" (ಅಭ್ಯಾಂಕ. ೩೦೦). [ಸಂ.]

**ಪಾಣಿಚಳನ** (ನಾ). (ನೃತ್ಯದಲ್ಲಿ) ಕೈಗಳ ಚಲನೆ, — ವಿನ್ಯಾಸ : ಮೃದುಪಾದನ್ಯಾಸವಿಂಬಾಗೆ ಕಂಕಣರಾವಂ ಸೊಗಸಾಗೆ ಪಾಣಿಚಳನಂ ಚೆಲ್ವಾಗೆ . . . ನೀಳ್ದ ಮೆಟ್ಟಿದಳ್ ಲೀಲಾಲಸಲಾಸ್ಯಮಂ (ಅಜಿತ. ೦೨-೬೨). [ಪಾಣಿ$_2$ + ಚಳನ ( = ಚಲನ) ]

**ಪಾಣಿಜ** (ನಾ). ಕೈಬೆರಳಿನ ಉಗುರು : "ಕಾಮಾಂಕುಶಾಃ, ಕರರುಹಾಃ, (ಪುನರ್ನವಾಃ), ಪಾಣಿಜಾಃ, ನಖಾಃ, ನಖರಾಃ — ಈ (೬) ಉಗುರ್ " (ಕರ್ಣಾಟ. ೪೪-೩೩೬) ; "ಪಾಣಿಜಂ ಕಾಮಾಂಕುಶಂ ನಖಮನಲ್ಕುಗುರು " (ಚುಂಗಲ. ೯೩-೮). [ಸಂ.]

**ಪಾಣಿತಲ**, ಪಾಣಿತಳ (ನಾ). ಅಂಗೈತಳ; ಕರತಳ : " ಪಾಣಿತಲ [ ಪಾಠಾಂ. ಳ ] ಮೆಂದೊಡಂಗೈ" ( ಚುಂಗಲ. ೯೩-೮ ). **ಪಾಣಿತಳ** : ದೇಸೆ ವಿಳಾಸಮಂ ಪಡೆಯೆ ಗೊಂದಳವಕ್ಕಣಮಾಗಲು ನೃಪಾವಾಸದೊಳಾಡಿ ದತ್ತಸಿಯೆ ಪಾಣಿತಳಂ ಪಡೆವಂತೆ ಕುಂಕುಮಸ್ಥಾಸಕಮಂ (ಮಲ್ಲಿಪು. ೬-೦೦); ಪಾಣಿತಳಪ್ರಭೆ ಪಸರಿಸೆ ಶೋಣಿತಚಮರೀಜಮೆನಿಸಿದುವು ಸಿತಚಮರಶ್ರೇಣಿಗಳ್ (ಪುಷ್ಪ. ೬-೨೮). [ಪಾಣಿ$_2$ + ತಲ]

**ಪಾಣಿತಳ** 'ಪಾಣಿತಲ' ನೋ.

**ಪಾಣಿತ್ರಯ** (ನಾ). [ಸಂಗೀತ] ವಾದ್ಯವಾದನಕ್ರಮದಲ್ಲಿಯ ಸಮಪಾಣಿ, ಅಧಃಪಾಣಿ ಮತ್ತು ಉಪರಿಪಾಣಿಯೆಂಬ ಮೂರು ಬಗೆಯ ಹಸ್ತವಿನ್ಯಾಸ : ವಾದಕನುಪವಾದನಿನೆಸೆವ ಹೃದ್ಯವಾದ್ಯವಿಶೇಷಂಗಳೊಳ್ ನೆಗಟ್ದ ಸಮಪಾಣಿಯುಮಧಃಪಾಣಿಯುಮುಪರಿಪಾಣಿಯುಮೆಂಬ ಪಾಣಿತ್ರಯದೊಳಂ . . . ನೆಱೆದು (ಅಜಿತ. ೩-೩೨ ವ). [ಸಂ.]

**ಪಾಣಿದ** (ನಾ). (?) : ಇವಕ್ಕೆ ಸಾಕ್ಷಿ ಮಾಕಣೂರರು ಅಯಿರರು ಕೀಱುವರು ಅಣಿಗರು ಕಟ್ರಿಯರು ಚಂಗರಸನು ತಳೆಪರಿಯೂ ಕೆಮ್ಮಾಳದೋರ್ ಕವುಳನ್ದೆಯಾತುಂ ಕಣ್ಣ್ಬಿಕುಳ್ಳಿಯುಂ ಪಾಣಿದರುಂ ಅಕ್ಕಶಾಲೆಯಗಾ ಪುಲಿಯಣ್ಣಂಗಳು ಎರೆಕಾಡನಳೆದೊರ್ (ಕೆಇಅ. IX-1, ೪೬-೦೫ ; ಸು. ೭ನೆಯ ಶತ). [ ? ]

**ಪಾಣಿದಂಡ** (ನಾ). ದೋಣಿಯನ್ನು ನಡೆಸುವ ಹುಟ್ಟು : "ಅರಿತ್ರಮೆನೆ ನೀರ ಹಜ್ಜೆಗೋಲಕ್ಕುಮಂ ತೆಗೆವ ಗಟ್ಟ ಹುಟ್ಟು ಪಾಣಿದಂಡಾಖ್ಯಮಕ್ಕುಂ" (ಚುಂಗಲ. ೧೨೩-೧೩). [ ಪಾಣಿ$_2$ + ದಂಡ]

**ಪಾಣಿಪಂಚೆ** (ನಾ). ಸ್ನಾನಕ್ಕಾಗಿ ಉಪಯೋಗಿಸುವ ಜಾಳುಜಾಳಾದ ಪಂಚೆ ; ನೀರುಪಂಚೆ (ಉಕ) : ಇನ್ನು ನಾನು ಅರ್ಧಪಟ್ಟು ಬನೀನು ಪಾಣಿಪಂಚೇಲಿ ಕಾಲಾ ಕಳೆಯಬೇಕು (ಕೃಕ್ರಿ. ೧೦೨); ಉಳಿವನರ ಬಟ್ಟೆ ಕೊಳೆಯಿಂದ ರಟ್ಟಾಗಿದ್ದರೆ ಅವನದು ಬೆಳ್ಳಗಿರದಿದ್ದರೂ ಹಳ್ಳಿಯ ಹಾರುವರ ಪಾಣಿಪಂಚೆಯಷ್ಟರ ಮಟ್ಟಿಗಾದರೂ ಶುಚಿಯಾಗಿರುತ್ತಿತ್ತು (ಮರಿಮ. ೩೪). [ಪಾಣಿ$_1$ (< ಪಾಣೀಯ) + ಪಂಚೆ]

**ಪಾಣಿಪತ್ತು** 'ಪಾನಿಪತ್ತು' ನೋ.

**ಪಾಣಿಪಾಡು** (ನಾ). ತೋಟ ; ಉದ್ಯಾನ : ಇಲ್ಲ ಮರಾಳವಿಲ್ಲದ ಕೊಳಂ ಕೊಳನಿಲ್ಲದ ಪಾಣಿಪಾಡು ಪಾಡಿಲ್ಲದ ತುಂಬಿ ತುಂಬಿಗಳ ಗೊಂದಣವಿಲ್ಲದ ಪೂ (ಕವಿಂಪು. ೩-೯).
[ಪಾಣಿ$_0$ ( P ← ತಮಿ. ಪಾಣಿ = ಊರಿನ ಸುತ್ತಲಿನ ತೋಪು) + ಪಾಡು$_3$]

**ಪಾಣಿಪಾತ್ರ** (ನಾ). ೧. ಪಾತ್ರೆಯಂತೆ ಒಡ್ಡಿದ ಕೈ ; ಬೊಗಸೆ : ಶ್ರೇಯಾಂಸಂ . . . ಕನಕಕಳಶದೊಳ್ ತೀವಿದಮೃತರಸಸಮಾನಧವಳೇಕ್ಷುರಸಧಾರೆ ಪುಣ್ಯಧಾರೆಯಂತೆ ಸೊಗಯಿಸುವಿನಂ ಸಮುತ್ಪಾಟಿತವಿಶಾಲಪಾಣಿಪಾತ್ರದೊಳೆಱೆವುದುಂ (ಆದಿಪು. ೧೦-೦ ವ); ಕಬ್ಬಿನ ರಸಮಂ ಪಾಣಿಪಾತ್ರದೊಳೆಱೆವುದುಂ (ಶಾಂತಿಪು. ೩೯); ಮುನೀಂದ್ರನ ಮೃದುಕಿಸಲಯಸಮಪಾಣಿಪಾತ್ರದೊಳ್ ಶುದ್ಧಮನಂ ವಸುಧೇಶನಿಕ್ಕಿದಂ ಪಾಯಸಮಂ (ಪುಷ್ಪ. ೧೪-೦೦). ೨ [ಜೈನ] ಪನ್ನೊಂದು ಬಗೆಯ ಶ್ರಾವಕರಲ್ಲಿ ಒಬ್ಬ ; ಬೊಗಸೆಯಲ್ಲೆ ಊಟ ಮಾಡುವವನು : ವೈದಿಕಗ್ರಂಥಗಳಿಂದ ದಿಗಂಬರರು, ಶ್ರಮಣರು, ಪಾಣಿಪಾತ್ರರು, ಮಹರ್ಷಿಗಳು, ವಾತರಶನರು ಇರುತ್ತಿದ್ದರೆಂದು ತಿಳಿದು ಬರುವುದರಿಂದ ಈ ಸಂಪ್ರದಾಯವು ಅನಾದಿಕಾಲದ್ದು ಎಂದು ತಿಳಿಯಬಹುದು (ಹಿಂದಶಾ. ೬೨). [ಪಾಣಿ$_2$ + ಪಾತ್ರ]

**ಪಾಣಿಪಾತ್ರೆ** (ನಾ). = ಪಾಣಿಪೀಠ : [ಲಿಂಗವ] ಪಾಣಿಪಾತ್ರೆಯೊಂದು ಅಂಗೈಯಲಿಕ್ಕಿದ ಗುರುವೆ (ಶಿವಗೀ. ೬೩-೩೩೩).
[ಪಾಣಿ$_1$ (< ಪಾಣೀಯ) + ಪಾತ್ರೆ]

**ಪಾಣಿಪೀಠ** (ನಾ). ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ ಲಿಂಗದ ಸುತ್ತಲೂ ತಗ್ಗಾಗಿರುವ ಪೀಠ: 'ಪಾಣಿಪೀಠಲಿಂಗ' ಪರಾ. [ಪಾಣಿ$_1$ (< ಪಾಣೀಯ) + ಪೀಠ]

**ಪಾಣಿಪೀಠಲಿಂಗ** (ನಾ). ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ ಸುತ್ತಲೂ ತಗ್ಗಾಗಿರುವ ಪೀಠವುಳ್ಳ ಲಿಂಗ: ಗರ್ಭಗುಡಿಯಲ್ಲಿ ಬಳಪದ ಕಲ್ಲಿನ ಪಾಣಿಪೀಠಲಿಂಗ ಮೂರು ಅಡಿ ಎತ್ತರವಿದೆ (ಹೊಯ್ಸವಾ. ೧೨೨). [ಪಾಣಿಪೀಠ + ಲಿಂಗ]

**ಪಾಣಿಪೀಡನ** (ನಾ). ೧. ಕೈಯನ್ನು ಹಿಸುಕುವುದು. ೨. ಪಾಣಿಗ್ರಹಣ; ಮದುವೆ : " ಉಪಯಾಮ ವಿವಾಹೋದ್ವಾಹ ಪರಿಣಯಂ ಪಾಣಿಪೀಡನಕ್ಕಾಖ್ಯೆ" (ಶಬ್ದಮಣೀ. ೫೩-೦೦). [ಪಾಣಿ$_2$ + ಪೀಡನ]

**ಪಾಣಿಪುಟ** (ನಾ). ಬೊಗಸೆ : ಮೌನಿಯುಂ ಮೌನಿಸಮಾನನುಂ ಮೇಣ್ ಯೋಗ್ಯಚರ್ಯಾಕಾಲದೊಳ್ ಒರ್ಮೆಯುಂ ತನುವಂ ತೋರ್ಪನುಂ

ಪಾಣಿಪುಟವಪಾತ್ರಪಾತ್ರನುಂ . . . ಇಂತಪ್ಪ ಮುನಿಗೆ ಸಿಕ್ಕುಮಂ ಅಲಾಭ ಪರೀಷಹಜಯಮುಮಕ್ಕುಂ (ಶಕ್ತ್ಯ. ೩೩೬). [ಪಾಣಿ$_{2}$ + ಪುಟ$_{1}$]

**ಪಾಣಿಬಟ್ಟಲು** 'ಪಾಣಿವಟ್ಟ' ನೋ.

**ಪಾಣಿಮುಕ್ತ** (ನಾ). ಕೈಯಿಂದ ಎಸೆಯಬಹುದಾದ ಶಕ್ತಿ ಮೊದಲಾದ ಆಯುಧ : "ಬಿಟ್ಟೀಜು ಮೊದಲಾದುದು ಕೆಯ್ಯಿಂ ಬಿಡಲ್ಪಡುವುದು ಪಾಣಿ (ಕರ) ಮುಕ್ತವೆಂಬುದು" (ಶಬ್ದಾನು. ೬೬-೩೦೯) : ಅಗ್ನಿಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಅವುಗಳಲ್ಲಿ ಮೊದಲನೆಯದನ್ನು (೧) ಯಂತ್ರಮುಕ್ತ, (೨) ಪಾಣಿಮುಕ್ತ, (೩) ಮಂತ್ರಮುಕ್ತ, (೪) ಮುಕ್ತಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆವದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ (ಕರ್ನಾ. ೨೮೨). 'ಪಾಣಿಮುಕ್ತಗತಿ' ಪರಾ.

[ಪಾಣಿ$_{2}$ + ಮುಕ್ತ]

**ಪಾಣಿಮುಕ್ತಗತಿ** (ನಾ). ಸಂಸಾರಿಜೀವಕ್ಕೆ ಇರುವ ನಾಲ್ಕು ಗತಿಗಳಲ್ಲಿ ಒಂದು ; ಒಂದು ದೇಹವನ್ನು ತೊರೆದು ಇನ್ನೊಂದನ್ನು ಪಡೆಯುವುದಕ್ಕಾಗಿ ಜೀವವು ಕೈಕೊಳ್ಳುವ ಗಮನಶಕ್ತಿ, ವಿಗ್ರಹಗತಿಯೆಂದೂ ಹೆಸರಿದ್ದು, ಅದು ಇಷುಗತಿ, ಪಾಣಿಮುಕ್ತಗತಿ, ಲಾಂಗಲಗತಿ ಹಾಗೂ ಗೋಮೂತ್ರಗತಿ ಎಂದು ನಾಲ್ಕು ವಿಧವಾಗಿದೆ : ನಿರ್ಮುಕ್ತಬಾಣದಂತೆ ಋಜುವಪ್ಪ ಇಷುಗತಿಯುಂ ಇಟ್ಟ ಗುಂಡಿನವೋಲ್ ಏಕಚಕ್ರಮನುಳ್ಳ ಪಾಣಿಮುಕ್ತಗತಿಯುಂ . . . ಗೋಮೂತ್ರಗತಿಯುಂ ಎಂದು ಗತಿ ನಾಲ್ಕುತೆಱಂ (ಶಕ್ತ್ಯ.೧೧೧); ಒಂದೇ ಸಮಯದೊಳೆಚ್ಚಂಬಿನಂತೆ ಸಯ್ಪ್ರೋಪಿಷುಗತಿಯುಮೆರಡುಸಮಯದೊಳಿಟ್ಟ ಗುಂಡಿನಂತೆ ಒಂದೇ ಕೊಂಕಿನಿಂ ಪೋಪ ಪಾಣಿಮುಕ್ತಗತಿಯುಂ ಮೂಱುಸಮಯದೊಳು ನೇಗಿಲಂತೆರಡು ಕೊಂಕಿನಿಂ ಪೋಪ ಲಾಂಗಲಗತಿಯುಂ ನಾಲ್ಕುಸಮಯದೊಳ್ ಗೋಮೂತ್ರದಂತೆ ಮೂಱು ಕೊಂಕಿನಿಂ ಪೋಪ ಗೋಮೂತ್ರಗತಿಯುಂ (ಶಬರ. ೫೯೪).

[ಪಾಣಿಮುಕ್ತ + ಗತಿ]

**ಪಾಣಿಮೂಲ** (ನಾ). ಮಣಿಕಟ್ಟು ; ಮುಂಗೈ ಹರಡು; ಪ್ರಕೋಷ್ಠ: "ಪಾಣಿಮೂಲಮೆನೆ ಮಣಿಕಟ್ಟು" (ಚುಂಗಾ. ೯೩-೮).

[ಪಾಣಿ$_{2}$ + ಮೂಲ$_{2}$]

**ಪಾಣಿಯ** 'ಪಾಣೀಯ' ನೋ.

**ಪಾಣಿಯದರ** 'ಪಾಣೀಯದಾರ' ನೋ.

**ಪಾಣಿಯದಾರ** 'ಪಾಣೀಯದಾರ' ನೋ.

**ಪಾಣಿಯಬಾರ** 'ಪಾಣೀಯದಾರ' ನೋ.

**ಪಾಣಿಯವಣ್ಣ** (ನಾ). ಒಂದು ಬಗೆಯ ವಸ್ತ್ರವಿಶೇಷ : ಉಟ್ಟ ಪಟ್ಟೆನೆಗೆಯುಂ ಪೊದೆದ ಪಾಣಿಯವಣ್ಣಮುಮೆಸೆಯ (ಶುಭ್ಶೃ. ೬-೧೫೭). 'ಪಾಣಿಯವಾಸ' ಪರಾ. [ಪಾಣಿಯ ? + ಬಣ್ಣ]

**ಪಾಣಿಯವಾಸ** (ನಾ). ಒಂದು ಬಗೆಯ ವಸ್ತ್ರವಿಶೇಷ : ಈ ವನವೀಥಿಯೊಳ್ ಬೆಳೆದ ಬಾಳದ ಬೇರ್ಗಳ . . . ಕೇದಗೆಯಿಂಪುವೆತ್ತ ಕಂಪಾವಗಮಿಲ್ಲಿ ಪಲ್ಲವಿಸೆ ಪಾಣಿಯವಾಸಮನಿಕ್ಕಿದಂತೆ ಸೌಖ್ಯಾವಹಮೆಂದೊಡೀ ನದಿಯನೀಕ್ಷಿಸೆ ಪಾಂಥನ ತೃಷ್ಣೆ ಪೋಗದೇ (ಶಾಕ್ಶೃ. ೯-೫). 'ಪಾಣಿಯವಣ್ಣ' ಪರಾ. [ಪಾಣಿಯ ? + ವಾಸ$_{2}$]

**ಪಾಣಿಲಾಘವ** (ನಾ). ೧. ಕೈಚಳಕ ; ಹಸ್ತಚಾತುರ್ಯ : ಕೇಣಮಿಲ್ಲದೆ ಬಾರಿ ಚಳಕ ಬಾಳೆಯ ಬದುಮ್ ಪಾಣಿಲಾಘವ ಪಂಥಮಾಡುಗಳನೞಿದು ಬನ್ನಾಣದಿಂ ಗಾಯಗಾಣಸಿದರತಿಬಲರಲ್ಲಿ ನಾನಾಪ್ರಹಾರದಿಂದೆ (ಕೈಪಿಶಾ. ೨೨-೬). ೨. ಕೈನೆರವು ; ಹಸ್ತಾವಲಂಬನ : ಭೂಜಾತೆಯಂ . . . ವ್ಯವಹಸನ್ನಂಟಮಾನಿಕಟಕ್ಕೆ ಕರೆದೊಯ್ಯಲವಸರದಲೊರ್ವ ಸದ್ಮುಕುತಿಯಿಂ ಪಾಣಿಲಾಘವಮೀಯೆ ರಾಜಿಸಿತು ಮೇರಕೇತನಸಟ್ಟಿ ದೇವತೆಗೆ ನವಕಿಸಲಯೋಪಾಯನಂಗೈದೊಲು (ಪಂಕಾಶಾ. ೧-೩೨-೧೬). [ಪಾಣಿ$_{2}$ + ಲಾಘವ]

**ಪಾಣಿವಟ** 'ಪಾಣಿವಟ್ಟ' ನೋ.

**ಪಾಣಿವಟ್ಟ**, ಪಾಣಿಬಟ್ಟಲು, ಪಾಣಿವಟ, ಪಾಣಿವಟ್ಟಲು, ಪಾಣಿವಟ್ಟು, ಪಾನಿವಟ್ಟಲು (ನಾ). = ಪಾಣಿಪೀಠ : ದೇವರದಾಸ ನಾಥಪರ್ವನೀದೇಗುಲಮಂ ಕನ್ನಪೀಠ ಪಾಣಿವಟ್ಟಸಹಿತಂ ಕಲ್ಲೋಳ್ ಮಾಡಿಸಿದಂ (ಎಕ. XI. ಜಗಳೂ. ೨೯-೧೦; ೦೨೦) ; ಲಿಂಗಗಳು ಪಾಣಿವಟ್ಟಗಳು ಸಿಕ್ಕಿರುವುದರಿಂದ . . . ಶೈವಮತವನ್ನು ಅತ್ಯಂತಪ್ರಾಚೀನವೆಂದು ಹೇಳಲಾಗಿದೆ (ಶಾರದ. ೧೬). **ಪಾಣಿಬಟ್ಟಲು** : ಈ ದೇವಸ್ಥಾನದಲ್ಲಿರುವ ಲಿಂಗಕ್ಕೆ ಬಳಪದ ಕಲ್ಲಿನ ಪಾಣಿಬಟ್ಟಲಿದೆ (ಅದೇ). **ಪಾಣಿವಟ** : ಕೊಡಂದೇರ ಮೋದೈಯ ದೇವರ ಪಾಣಿವಟ ತೆರೆಕಲಮೆಟುಕಲಾ ಸಹ ಸಾಯ ಮಾಡಿದು (ಎಕ. IX. ಕೊಡಗು. ೨೯-೨೩; 1867). **ಪಾಣಿವಟ್ಟಲು** : ಪ್ರತಿಅಂಗಣದ ನಡುವೆ ಅಮೃತಶಿಲೆಯ ಪಾಣಿವಟ್ಟಲುಳ್ಳ ಸ್ಫಟಿಕದ ಲಿಂಗ (ಮುಸುಗ. ೦೩೦). **ಪಾಣಿವಟ್ಟು** : ಈ ಲಿಂಗಗಳು ಬಾಣ ಪಾಣಿವಟ್ಟುಗಳಿಂದ ಕೂಡಿದ ಆಕೃತಿಯಲ್ಲಿಲ್ಲ (ಶಾರದ. ೨೦೩). **ಪಾನಿವಟ್ಟಲು** : ಆ ದೇವಸ್ಥಾನದಲ್ಲಿರುವ ಕಪ್ಪುಶಿಲೆಯ ಲಿಂಗ, ಪಾನಿವಟ್ಟಲುಗಳು ತುಂಬಾ ಚೆನ್ನಾಗಿವೆ (ಅದೇ).

[ಪಾಣಿ$_{1}$ ( < ಪಾಣೀಯ) + ವಟ್ಟ$_{3}$ / ತಮಿ. ತೆಲು. ಪಾನವಟ್ಟ]

**ಪಾಣಿವಟ್ಟಲು** 'ಪಾಣಿವಟ್ಟ' ನೋ.

**ಪಾಣಿವಟ್ಟು** 'ಪಾಣಿವಟ್ಟ' ನೋ.

**ಪಾಣಿವಾದ** (ನಾ). ೧. ಹರೆ, ಮೃದಂಗ ಮೊದಲಾದ ವಾದ್ಯಗಳನ್ನು (ಕೈಗಳಿಂದ) ಬಾರಿಸುವವನು. ೨. ಕೈತಾಳ ಹಾಕುವವನು : "ಪಾಣಿವಾದಃ. ಪಾಣಿಘಃ — ೨ ಕೈತಾಳ ಹೊಡೆಯುವವನ ಹೆಸರು" (ಶಿರ್ಯಾಂತಿ. ೩೦೦). [ಸಂ.]

**ಪಾಣಿಶಾಖೆ** (ನಾ). ಕೈಬೆರಳು : "ಪಾಣಿಶಾಖೆಗಳಂಗುಲಿಗಳೆನಲು ಬೆರಲುಗಳು" (ಚುಂಗಾ. ೯೩-೮). [ಸಂ. ಪಾಣಿಶಾಖಾ]

**ಪಾಣೀಯ**, ಪಾಣಿ$_{1}$, ಪಾಣಿಯ (ನಾ). ನೀರು; ಜಲ: 'ಪಾಣೀಯದಾರ' ಪರಾ. **ಪಾಣಿ$_{1}$** : ಭೂನಾಥ ನೋಡಲು ಪಾಣಿಯೊಳ್ಪುಸಡಲು ತಾನೆಸೆಯಲು ಮುನ್ನಿನಂತೆ (ಶರಣ. ೮-೩೦); ಬಾ ಪಾಣಿ ಯವಸ್ಥಾನೂ ಆಗಬೇಕೇನರಿ ಮತ್ತ (ಕಕಾಶಾ. I. ೨೬೪). 'ಕತ್ತರಿಪಾಣಿ' ಪರಾ. **ಪಾಣಿಯ** : "ಪಾಣಿಯ (ಪಾಣಿ) — ಪಾನೀಯ" (ಕರ್ನಕೋ. ೨೬).

[ < ಸಂ. ಪಾನೀಯ. / ಪ್ರಾ. ಪಾಣಿಅ]

**ಪಾಣೀಯದರ** 'ಪಾಣೀಯದಾರ' ನೋ.

**ಪಾಣೀಯದಾರ**, ಪಾಣಿಯದರ, ಪಾಣಿಯದಾರ, ಪಾಣಿಯಬಾರ, ಪಾಣೀಯದರ, ಪಾಣೀಯಬಾರ (ನಾ). ನೀರು ಹರಿದುಹೋಗುವ ಮಾರ್ಗ ; ಚರಂಡಿ ; ಜಲಮಾರ್ಗ : "ಪಾಣೀಯದಾರ (—ದರ, ಬಾರ) — ಪಾನೀಯದ್ವಾರ = ಜಲಮಾರ್ಗ" (ಕರ್ನಕೋ. ೨೬); ಪಾಣೀಯದರಂ, ಪಾಣೀಯದಾರಂ, ಪಾಣೀಯಬಾರಂ (ಶಬ್ದಾನು. ೩೭೪ ವೃತ್ತಿ). **ಪಾಣಿಯದರ** : "ಪಾಣಿಯದರಂ, ಪಾಣಿಯದಾರಂ, ಪಾಣಿಯಬಾರಂ—ಈ ೩ ಪಾನೀಯದ್ವಾರಕ್ಕೆ ಪೆಸರ್" (ಶಬ್ದಾ. ೫೯-೩೦೦). **ಪಾಣಿಯದಾರ** : ಮೇಲಿನ 'ಶಶಸಾ' ಪ್ರಯೋಗವನ್ನು ನೋಡಿ. **ಪಾಣಿಯಬಾರ** : ಬಿಟ್ಟಣಸುತ್ತವಿರ್ಪ್ಪರಿನ್ರ(ನ್ರ)ಪಾಳರ ಹಿಂಡ ನಿಜಾಸಿ ದಂಡ್ಡಾದಿಂ ಕಂಟಿಯ ಬಾರದೊಳ್ ಸುಳಿಸಿ ಪಾಣಿಯಬಾರದ ನೀರನೂಡಿ ನೀಕ್ಕ(ರ)ಂಟಕವಾಗೆ ಮಾಡಿ ಪಡೆದಂ ಸಲೆ ದಂಡಿನ ಗೋವನೆಂಬುದಂ ಬಂಟರ ಬಲ್ಲಹಂ ನೆಗೆದ ಬಲ್ಲಹರೋಳ್ ಕಲಿ ಬರ್ಮ್ಮಭೂಭುಜಂ (ಇಇ. XII. ೯೬-೦೯; 1188 ; ಶಾಕಸಂ. ೦೬೯-೦೦೩೨ ನೋ) ; **ಪಾಣೀಯ**

ದ್ವಾರ—ಪಾಣೆಯಬಾರ (ಕಹುರ. ೨೯೬ ಕ್ರಿಯೋ). **ಪಾಣೇಯದರ:** ಮೇಲಿನ 'ಪಾಣೇಯದಾರ' ಉಲ್ಲೇಖದಲ್ಲಿರುವ 'ಶಬ್ದಾನು' ಪ್ರಯೋಗವನ್ನು ನೋಡಿ. **ಪಾಣೇಯಬಾರ:** ಮೇಲಿನ 'ಪಾಣೇಯದಾರ' ಉಲ್ಲೇಖದಲ್ಲಿರುವ 'ಶಬ್ದಾನಂ' ಪ್ರಯೋಗವನ್ನು ನೋಡಿ. [ <ಸಂ. ಪಾನೀಯದ್ವಾರ]

**ಪಾಣೇಯಬಾರ** 'ಪಾಣೇಯದಾರ' ನೋ.

**ಪಾಣ್ನಾಟ** (ನಾ). ಒಂದು ಪ್ರದೇಶದ ಹೆಸರು: ಶ್ರೀಮತ್ಕೊಙ್ಗಣಿ ವೃದ್ಧರಾಜೇನ ದುರ್ವ್ವಿನೀತ ನಾಮತೇಯೇನ ಸಮಸ್ತಪಾಣ್ನಾಟ ಪುನ್ನಾಟಾಧಿಪತೀನಾ . . . ತೈತ್ರಿಯ ಚರಣ ಭೂತಶರ್ಮ್ಮಗ್ಗೆ ಶಾಲಿಗ್ಗಾಮೆ ಸರ್ವಪರಿಯಾರ ಪರಿಗ್ರಹದಿನ್ನು ಪಾಣಿಗ್ರಹಣಂ ಕೆಯ್ದು ಕೊಟ್ಟಾರ್ (ಕ್ಷುಶಿ. ೧೪೪೧. ೦-೨೫; 788). [ ? ]

**ಪಾಣ್ಬ**, ಪಾಂಬ (ನಾ). ಜಾರ; ಹಾದರಿಗ; ವ್ಯಭಿಚಾರಿ: "ಜೊಡಂ ಪರಳಿಗನು ಪಾಣ್ಬ ಸಿತಗಂ ಜಾರಂ" (ಅಂಶಂ. ೦೬೦); ನಾಣಿಲಿ ಪಾಣ್ಬಂ ಪಂದೆ ಲೋಭಂ ಖಳಂ . . . ಎಂಬೀ ನಾಮನಾಮಾವಳಿಗೆ ನಿಳಯನಕ್ಕಂ ವ್ರತಪ್ರಾತಹೀನಂ (ಶಶ್ಚಾಂ. ೦೦-೩೦); ಅನಲ್ಲಿಗೆ ಪರ್ವನಂ[ದಾ ಪಾಣ್ಬ]ನಂ ನಂಬೆ ನುಡಿದಾ ಪೊಲ್ಲಿಂಗೆನ್ನಲ್ಲಿಗೆ ಪರಿಸು (ಶಂಶಶಾ. ೬-೭೨೫); ಪಾಣ್ಬನೆಬಿದೊಯ್ದು ನಿನ್ನ ಕುಟುಂಬಿನಿಯಂ ಕಾದೆಯಿಲ್ಲ ರಾಮಾಕೃತಿಯಿಂ (ಚಗಿ೦. ೦೭-೯೦). **ಪಾಂಬ:** ಪಾಂಬನಂ ದ[ನುಜನನು]ಗ್ರಖಡ್ಗಮುಖದಿಂದಿಜುದೊತ್ತಿದ ದುರ್ಗಿ . . . ಪರಿರಕ್ಷಿಸುತಿರ್ಕೆ (ಶಂಶಶಂ. ೨-೨೦); ಪರಲಲನೆಗಳಿಪಿ ಬಿಡೆ ಚಪ್ಪರಿಸುತ್ತಂ ಬಂದ ಪಸವ[ಶಾಶಂ. ದ]ನಂ ಪಾಂಬನ ನೃತ್ಯರಿಯಾಗೆ ಕಾದುತಂ ಬೆರಸಂದಿರದೆತ್ತಿಸುಮೊಜೆಯೊಳ್ ಪಂದಲೆಯಂ (ಶರಚಂಶ. ೯-೨೦).

**ಪಾಣ್ಬರಂಕುಸ**, ಪಾಂಬರಾಂಕುಶ=ಒಂದು ಬಿರುದು: ಸಂಸಾರ ಸಾರೋದಯಂ ಮಜುಮಕ್ಕಲ್ಲಟಂ ನೋಡುತ್ತೆ ಗೆಲ್ಲಂ ಪಾಣ್ಬರಂಕುಸಂ ಅಮ್ಮನ ಗಂಧವಾರಣಂ (ಶಂಶಶಾ. ೧-೪೮ ಶ); ಚಾಳುಕ್ಯಪಂಶೋದ್ಭವಂ ಪಾಂಬರಾಂಕುಶನಪ್ಪನ ಗನ್ಧವಾರಣಂ (ಕ೨೬. ೨೪-೦೩-೭೯; ?).

**ಪಾಣ್ಬತನ** (ನಾ). ಹಾದರ; ಜಾರತನ; ವ್ಯಭಿಚಾರ: "ಜಾಡ—ವ್ಯಭಿಚಾರೇ. ಪಾಣ್ಬತನದೊಳ್" (ಶಾಶಕ್ಕ. ೨೩೬); ಅಗಳೇ ಜಸಂ ಕೆಯ್ದುದವನಿಕ್ಕೆ ವೀರಶ್ರೀಗಾಣ್ಮನಯ್ ಪಾಣ್ಬತನಕ್ಕಳಪ್ಪುದ್ ಪೋಗೇಕೆ ನೀಂ ಮೆಯ್ಗರೆದಿರ್ಪಯಿಂದಾ ಭೋಗೀಶ್ವರಂಗಂದು ಪಿನಮ್ರನಾದಂ (ಶಾಕ್ಷ್ಯಕ. ೦೭೩). [ ಪಾಣ್ಬ + —ತನ ]

**ಪಾಣ್ಬು** (ನಾ). =ಪಾಣ್ಬತನ: "ವಿಠಾ—ವ್ಯಭಿಚಾರೇ. ಪಾಣ್ಬಿನೊಳ್" (ಶಾಶಕ್ಕ. ೨೨); "ಹಾದರಂ—ಪಾಣ್ಬು" (ಶಾಶಕ್ಕ. ೮೩). [ಪಾಣ್ಬ + —ಉ]

**ಪಾಣ್ಬೆ**, ಪಾಂಬೆ (ನಾ). ಜಾರೆ; ಹಾದರಗಿತ್ತಿ; ವ್ಯಭಿಚಾರಿಣಿ: "ಪುಂಶ್ಚಲಿ ಕುಲಟೆಯಸತಿ ಕುಲಪಾಂಸುಳೆ ಬಂಧಕಿ ಜಾರೆ ಪಾಣ್ಬೆಯಿತ್ವರಿಕೆ ಯುವಳ್" (ಚಾನ್ಯಕೋ. ೨೨-೪); ಪಾಣ್ಬರಂಕುಸನಾ ಪಾಣ್ಬೆಯರ ಗೆಯ್ದು ಗೆಯ್ಯಂಗಳುಮಂ . . . ಕಂಡು ಚೋದ್ಯಂಬಟ್ಟು (ಶಂಶಶಾ. ೪-೫೩ ಶ); ನಾರಾಯಣಭಟ್ಟಂ . . . ಆ ಪಾಣ್ಬೆಯ ಡಂಭತನಕ್ಕೆ ಬೆಜಾಗಿ (ಶಂಶಶಂ. ೨೩೪-೦೦); ಜಡನಂತವಿಚಾರಿಯಾಗದೆ ಪಾಣ್ಬೆಯಂತೆ ಮತ್ತೊಂದು ಮನಮಾಗದೆ ನಪುಂಸಕನಂತೆರಡಕ್ಕಾಸೆಗೆಯ್ಯದೆ (ಶರ್ಮಶ್ಕ. ೧-೦೫೩). **ಪಾಂಬೆ:** ಶಿಖಿ ತನಗವಿಂಬಾದಾಗಳಾ ಪಾಂಬೆ[ಶಾಶಂ. ಪಾಣ್ಬೆ]ಯೆಂದು ದನೆಂಗುಂ ಸುಟ್ಟುಯುತ್ತ ಪೊತ್ತುಗಳೆಗುಂ ಜಾರಂ ಮಹಾಕ್ಲೇಶದಿಂ (ಕಹುತ. ೩-೫೩); ಎಲಮಲವೋ ನೀನಗಲ್ದೊಡೆ ನಿಲಲಾಜಿದ ಪಾಂಬೆ ಬಂದಳೀಯಿರ್ದಳೆ ಬಾ (ಶರ್ಚಕ್ಕು. ೦೦-೨೨). [ ಪಾಣ್ಬ + —ಎ ]

**ಪಾತ** (ನಾ). ೧. ಹಾರುವುದು; ಹಾರಾಟ. ೨. ಬೀಳುವುದು; ಪತನ: 'ಗರ್ಭಪಾತ' ಪರಾ. ೩. (ಬಾಣವನ್ನು) ಬಿಡುವುದು: ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದುಂ ನೀಸಿನೊಳಂಶೀತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ (ಶಂಶಶಾ. ೧೨-೦೬೫). ೪. ಪೆಟ್ಟು; ಹೊಡೆತ: ಅಯ್ಯೊ ಏನೀ ಘಾತ! ಮಾರಣ ಮರ್ಮಘಾತ! ಅರಳೆಗಶನಿಯ ಪಾತ! (ಕಗ್ರಂಶಕ್ರ. ೩೨-೨೦). ೫. ಆಕ್ರಮಣ; ಧಾಳಿ. ೬. (ಮಲ್ಲಯುದ್ಧದ) ಪಟ್ಟು; ವರಸೆ: ಕಳಂಬೊಕ್ಕು ನಿಜೇನುಂಗೆಯ್ದು ಸವಿಹತಿ ದಶನಹತಿ ಪಾದಪಾತಂ ಮುಷ್ಟಿಪಾತಮೆಂಬ ದೋಷಂಗಳಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ಪಲತೆಜದ ಪಾತಂಗಳೊಳಂ ನೆರೆದು (ಶಂಶ್ರಪ್ರಶು. ೩ ೭೭ ವ); ಅಧಟಿಂದಂ ಮೂಜುಂ ಲಗ್ಗದ ನಾಲ್ಕುಸ್ಥಾನಮೆಂಬುದ್ದು ದೊಕ್ಕರದ ಮಹೋಗ್ರದ ಮೂಟತೆರಡು ಬಿನ್ನಣದೊದವಂ ಪಲವು ತೆಜದ ಪಾತವ ಮೆಜೆದರ್ (ಶ್ರಶೃಶ. ೨೬-೧೭). ೭. ಹಾಳು; ನಾಶ: 'ಗ್ರಂಥಪಾತ' ಪರಾ. ೮. ತಪ್ಪು; ದೋಷ. ೯. (ನೆಲಮಟ್ಟದ) ಇಳಿತ; ತಗ್ಗು: ನಾಲೆಗಳು ವಿವಿಧವಾದ ಉಬ್ಬುತಗ್ಗಿನ ಭೂಮಿಯಲ್ಲಿ ನೂರಾರು ಮೈಲಿಗಳ ದೂರ ಹೋಗುವಾಗ ಅನೇಕ ಕಲ್ಲುಗಾರೆಯ ಕಟ್ಟಡಗಳು ಬೇಕಾಗುತ್ತವೆ. ಅವನ್ನು ಈ ರೀತಿ ವಿಂಗಡಿಸಬಹುದು. A. ಪಾತಗಳು (Drops) ಕಡಿದಾದ ಇಳಿಲುಗಳು (Rapids) . . . ಪಾತವು ನಾಲೆಯ ತಳದಲ್ಲಿ ಒಂದು ಮೆಟ್ಟಿಲಿನ ಹಾಗೆ (ಶಿಸ್ತಶಾ. ೩೭೬). ೧೦. (ನೋಟವನ್ನು) ಹರಿಸುವಿಕೆ; ಹೊರಳಿಸುವಿಕೆ: ಜಳಧರ ಸಮಯನಿಶಾಸಂಚಲಿತವಿದ್ಯುತ್ಕ್ರಿಂಗಳಾಕ್ಷಿಪಾತಂಗಳಿಂ ದೆಸೆಗಳಂ ನುಂಗುವಂತೆ ಮುಳಿದು ನೋಡಿ (ಶಂಶಶಾ. ೦೩-೭೩ ಶ). 'ದೃಷ್ಟಿಪಾತ' ಪರಾ. ೧೧. [ನಾಟ್ಯ] ನರ್ತನಕಾಲದಲ್ಲಿ ಕಣ್ಣಿನ ಆಲಿಗಳನ್ನು ಚಲಿಸುವ ಒಂದು ವಿಧಾನ: ಶ"ಕೆಳಗಡೆ ನೋಡುಂವುದು" (ಶಾಸ್ಕರಂ. ೨೬೪ ಗದ್ಯಾಕುಚಾರ): ಭ್ರಮಣ, ವಲನ, ಪಾತ . . . ಪ್ರಾಕೃತ — ಈ ಒಂಬತ್ತು [ಸ್ವನಿಷ್ಠ] ಆಲಿಯ ಭೇದಂಗಳ್ (ಶಾಸ್ಕರಂ. ೩-೫೪ ಶ); ಕೆಳಗಂ ನೋಡಲ್ ಪಾತಂ (ಶಾಸ್ಕರಂ. ೩-೫೬). [ ಸಂ. ]

**ಪಾತ್ತೆ** (ನಾ). ಒಂದು ಬಗೆಯ ಸಸ್ಯ: ನೀಮುಂಟಾ. ಪರೇರಾಬೇರು. ಪದ್ಮಲಿ. ಪಾತ. ಕಾಡುಬಳ್ಳಿ (ಕ್ಷುಶಿ. ೨೦-೩೯೪). [ ? ]

**ಪಾತಂಗ** 'ಪತಂಗ' ನೋ.

**ಪಾತಂಜಲ** (ನಾ). ೧. ಪತಂಜಲಿಮಹರ್ಷಿಯಿಂದ ರಚಿತವಾದ ಯೋಗಶಾಸ್ತ್ರ; ಷಡ್ದರ್ಶನಗಳಲ್ಲಿ ಒಂದು: ಪಾತಂಜಲ ಮಹಾಧ್ಯಾಷ್ಟಾಂಗಯೋಗಸಾಧನದಿಂ ಮನೋನಿಶ್ಚಲತೆಯಂ ನಿಶ್ಚಲಪರಿಪಕ್ವಾಂತಃಕರಣಂಗೆ ಮೋಕ್ಷಸಿದ್ಧಿಯಂ ಬೋಧಿಸಿ ಸಾಧಿಸುವುದು (ಶಶೀಳ. ೦೦). ೨. ಪಾಣಿನಿಯ ಅಷ್ಟಾಧ್ಯಾಯಿಸೂತ್ರಗಳಿಗೆ ಪತಂಜಲಿಯು ಬರೆದ ವ್ಯಾಖ್ಯಾನ: ಮಹಾಭಾಷ್ಯ. [ ಸಂ. ]

**ಪಾತಕ** (ಗು). ೧. ಪಾಪ ಮಾಡಿದ; ಪಾತಕಿಯಾದ: ರಾತ್ರಿಯ ಲೊತ್ತೆಯ ಕೊಂಬ ಪಾತಕಸೂಳೆಯಂತೆ ಬಜಿಯ ಮಾತಿಂಗೊಲಿವನೆ ನಮ್ಮ ಕೂಡಲಸಂಗಮದೇವ (ಬಶಶ. ೪೬೪). (ನಾ). ೨. ಬೀಳುವಂತೆ ಮಾಡುವುದು; ಬೀಳಿಸುವುದು. ೩. ಕೆಟ್ಟ ಕೆಲಸ; ಪಾಪ; ದೋಷ: "ವೃಜಿನಂ, ದುರಿತಂ . . . ಪಾತಕಂ—ಈ ೧೪ ಪಾಪಂ" (ಕರಾಡು. ೦೦೩-೬); ಅಪವಿತ್ರನುಡಿಯ ನುಡಿವ ಸೂತಕವೇ ಪಾತಕ (ಬಶಶ. ೭೬೪); ನಿನ್ನೊಡನೆ ನಗುತಿಪ್ಪ ಪಾತಕವೆನ್ನೊಳೆಂದಿಗೆ ಪರಿಹರಿಸುವುದು ನಿನ್ನುಮಂ ಕೋಪಿಸುವ ಪಾಪಂ ಹಜುವುದೆನಗೆಂದೊ (ಬಶಶ. ೪೩-೮); ನಟ್ಟ ದೃಷ್ಟಿಯ ತೆಗೆಯಲಾಜದೆ ಸೋತು ಕೀಚಕ ಪಾತಕವ ನೆನೆದ (ಕುಭ್ಕಾಶಿ. ೨-೯). ೪. ಪಾಪ ಮಾಡಿದ ವ್ಯಕ್ತಿ; ಪಾಪಿ; ಪಾತಕಿ: ದಶಸ್ಥಾನಕದೊಳ್ ರವಿಸುತನಿರೆ ಶೂಲದೊಳಿಕ್ಕುವರಾ ಲಗ್ನ ಪ್ರಸೂತನಂ ಪಾತಕನಂ (ಶಾಶಶ. ೨೩-೭); ಮಾತಿನಲಿ ಒಲಿಸಿ ಮಹತ್ತ್ವಪ್ಪ

ಲಿಂಗವ ಕಂಡಹೆನೆಂಬ ಪಾತಕರ ಮೆಚ್ಚ ನಮ್ಮ ಕೂಡಲಸಂಗಮದೇವ (ಬಸವ. ೬೯೭); ಮಾರಿಯಲಾಗದು ಕೊಂಡ ಹಚ್ಚಗಳ ಹೊರಳಿವೆಣನನು ಮೆಟ್ಟಿ ಮುಂಂವಣಿಗುರವಣಿಸುವುದು ತಪ್ಪಿದವರಿಗೆ ನರಕವೀ ಪಾತಕರ ಗತಿ ನಮಗೆಂಮ ಸಾಕ್ಷಿವರು (ಕುಮ್ಮರಾ. ೨-೭). [ ಸಂ. ]

**ಪಾತಕಿ** (ನಾ). ಪಾಪವನ್ನು ಮಾಡಿದ ವ್ಯಕ್ತಿ ; ಪಾಪಿಷ್ಠ : ಪಾತಕಿಯೊಳ್ ಲಕ್ಷ್ಮಿಯೊಳಕಿಕಾತರಕಾಪುರುಷಗಣನೆಯೊಳ್ ನೆರೆ ಯಿಲ್ಮಿಂತೀತನೆ ಒಗಗಾಂ ಪುರಾತನಜಾತರ ಒಗೆವುದನೆ ಬಗೆವೆನಟಿಪಂ ಬಗೆಯೆಂ (ಆದಿಪು. ೧೪-೧೨೩); ಮಲಹರಂಗಣ್ಣಿಸಿದ ಪಾಲಂ ನಲಿವು ನಿಚ್ಚಂ ಕುಡಿದ ಪಾತಕಿ ತಲೆಯನಟ್ಟಿಯೊಳೆತ್ತಿ ಬಿಸುಡದೆ ಪೂಣ್ಟನೇ ನಿನ್ನ (ಬಸಪು. ೧೪-೩೦); ತಾಯ ತುಱುಬಿಗೆ ಹಾಯ್ದ ಪಾತಕಿನಾಯ ಕೊಂಡಾಡುವರೆ (ಕುಮ್ಮರಾ. ೫-೪೮). [ ಸಂ. ಪಾತಕಿನ್ ]

**ಪಾತಗಿತ್ತಿ** (ನಾ). ಪಾಪ ಮಾಡಿದವಳು ; ನೀಚಹೆಂಗಸು : ಭೂತಳ ದೊಳು ಪಸರಿಸಿತಪಕೀರಿತಿ ಪಾತಗಿತ್ತಿಯ ದೆಸೆಯಿಂದ (ಅಂಜಶ. ೯-೦೦೬); ಮದನೋದ್ರೇಕಮಾನಸೆಯಾಗುತಾ ದುಷ್ಟೆ ಸುವತಿ ಮತ್ತಾ ಪಾತಗಿತ್ತಿ (ತ್ರಿಶಂಜ. ೨-೩೩); ಹೆತ್ತ ಮಗನ ಹೇಸದೆ ಕೊಂದ ಪಾತಗಿತ್ತಿ (ತ್ರಿಶಂಜ. ೨-೬೩).

[ ☞ ಇದು 'ಪಾತಕಗಿತ್ತಿ' ಎಂಬುದರ ಅಪಲಿಖಿತವಿರಬಹುದು]

**ಪಾತನ** (ನಾ). ೧. ಕೆಳಗೆ ಬೀಳುವಂತೆ ಮಾಡುವುದು ; ಬೀಳಿಸುವುದು : ಪಾತನ . . . ಚೂರ್ಣನ ವಿಮುಖೀಕರಣ ದುರ್ಭೋಗ್ಯ ನಾನಾವಿಧಾ ಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ಏಕೇಶ. ೧೮೧); ನಿನ್ನ ಮಹಾಪೂರವಿಳಿವುದು ತಟನಿಯ ಜಲಧರಸಮಯವು ಕಳೆಯೆ ತಟತರುಪಾತನ ಪಾತಕವೊಂದೆಯೆ ಬಹುಕಾಲ ಉಳಿವುದು ತಿಳಿಯೆ (ತಂಜಾಶ. ೯೭-೭೩). ೨. ತಗ್ಗುವಂತೆ ಮಾಡುವುದು ; ತಗ್ಗಿಸುವುದು. [ ಸಂ. ]

**ಪಾತರ, ಪಾತುರ** (ನಾ). ೧. ಪಾತ್ರೆ : ಈ ನನ್ನ ಲಟ್ಟುಗಡಸಿನ ಮೆಯ್ಯೆಂಬ ಹೊನಹಿನ ಪಾತರದಲ್ಲಿ ಎಸರಿಟ್ಟಿರುವ ರೂಪಸೌನ್ದರ್ಯಯಾವ್ವನ ಶೃಂಗಾರ ಕಲೆಗಳೆಂಬ ಪಂಚಾಸವಗಳನ್ನು . . . ಸವಿನೋಡಿಯೇಬಿಡಬೇಕೆಂಬ ಮದನಾಗ್ರಹದ ಚಪಲಚ್ಚಲವು ನಿಮಗೆ! (ಮುಂತ್ರಿಕ. ೨೯-೦೭). ೨. ಕುಣಿತ ; ನರ್ತನ ; ನಾಟ್ಯ : ಕೊಳು ಕುತ್ತುವೆ ಕುತ್ತ ಕೂಳು ಮೇಳವೆ ಮೇಳ ಕೂಳೊಂದು ಗಳಿಗೆ ತಡೆದಿಹರೆ ಪಾತ್ರರದ ಮೇಳ ಮುಜಿದಂತೆ (ಸರ್ವಜ್ಞ. ೨೦೦೨); ಗುಡಿಯ ಮುಂದಿನ ಪಟಾಂಗಣದಲ್ಲಿ ಒಂದೆಡೆ ಗುಗ್ಗುಳವು ಹೊತ್ತಿ, ಮತ್ತೊಂದೆಡೆ ಪಾತರದ ಮೇಳವು ಕುಣಿಯಬೇಕು (ಕವ್ಯಜಾ. ೯). **ಪಾತುರ** : ೩. ಅರ್ಹನಾದವನು ; ಯೋಗ್ಯ : ಹಯವದನರಾಯನ ಪ್ರಿಯಕೆ ಪಾತುರನಾಗಿ (ವ್ಯಕುಂತ. ೪-೯೫). ೪. ಅಭಿನಯ ಮಾಡುವವನು ; ನಟ : (೬).

**ಪಾತರದವರು**=ನಾಟ್ಯ ಮಾಡುವ ವೃತ್ತಿಯವರು ; ☞ ಕೆಲವರು ದೇವದಾಸಿಯರಲ್ಲಿ ಈ ವೃತ್ತಿಯನ್ನು ಅನುಸರಿಸುವವರು ಇರುವರೆಂದು ತಿಳಿದು ಬರುತ್ತದೆ : ವಿಜಾಪುರಜಿಲ್ಲೆಯಲ್ಲಿ ಪಾತರದವರು ಬಸುರಾದರೆ, ಅವರು ಗೊರವರ ಕೈಯಿಂದ ಹಲ್ಲುಪುಡಿ ಹಚ್ಚಿಸಿಕೊಳ್ಳಲಿಕ್ಕೆ ಬೇಕು (ಕಶಾಗ. ೧೧೮); ಗಂಗಾಸಾನಿ ಅಚ ಪಾತರದವರ ಮನೆತನದಾಕೆ. ಆ ಊರಿಗೆ ಇವರದೊಂದೇ ಮನೆ . . . ಸೋಮವಾರಕ್ಕೊಮ್ಮೆ ಅಷ್ಟಾವಧಾನದ ಕಾಲದಲ್ಲಿ ಆ ಮನೆತನದವ ರೊಬ್ಬರು ದೇವರ ಮುಂದೆ ನೃತ್ಯಮಾಡುತ್ತಿದ್ದರು (ಗಂಗಾಸಾ. ೧೦).

[ <ಸಂ. ಪಾತ್ರ ]

**ಪಾತರಗಿತ್ತಿ** (ನಾ). ೧. ನರ್ತಕಿ ; ನಟಿ : (೬). ೨. (ಆಲಂ) ಬಣ್ಣ ಬಣ್ಣದ ಪಕ್ಕಗಳಿಂದ ಕೂಡಿದ ಚಿಟ್ಟೆ ; ಪತಂಗ : ಪಾತರಗಿತ್ತಿಯೆಂಬ ಹುಳವು ಗಿಡಗಿಡಾ ಹಾರಾಡುವುದನ್ನು ನಾವು ನೋಡುತ್ತೇವೆ (ಮುಂಬಯಿ. ೫-೧೧೨); ಪಾತರಗಿತ್ತೀ ಪಕ್ಕ ನೋಡಿದೇನ ಅಕ್ಕ (ಗರಿ. ೯೫-೧); ಬಣ್ಣ ಬಣ್ಣದ ಹಕ್ಕಿ ಪಾತ್ತೆ ಪಾತರಗಿತ್ತಿ ನನ್ನ ಗೆಳೆತನವಿತ್ತು ಬನದ ತುಂಬ (ಕಕಪು. ೬-೧೪೭). ೩. (ಚಿಟ್ಟೆಯಂತೆ) ಮೆರೆಯುವವಳು : ಪಟ್ಟಣಗಳಲ್ಲಿ, ಪಾತರಗಿತ್ತಿಗಳ ಮಧ್ಯದಲ್ಲಿ, ಕಾಲೇಜಿನ ವಾತಾವರಣದಲ್ಲಿ ಬೆಳೆದ ಹೇಮಾ ಹಾಗೂ ಅವಳ ಅನುರಾಗಕ್ಕಾಗಿ ಹವಣಿಸಿದ ವಿಶ್ವನಾಥರನ್ನು . . . ನಾಯಕಿ—ನಾಯಕರೆನ್ನಬಹುದು (ಸಾಕಮಾ. ೧೬೧). ೪. ವೇಶ್ಯೆ ; ಗಣಿಕೆ. [ ಪಾತರ + —ಗಿತ್ತಿ ]

**ಪಾತಶಹ, ಪಾಚ್ಛಾ, ಪಾಚ್ಛಾಯಿ, ಪಾಧಾ, ಪಾತಷಹ, ಪಾತಷಾಹ, ಪಾತುಶಾಹ, ಪಾತ್ಸಾಹ, ಪಾತ್ಸ್ಯಾವು, ಪಾದಶಾ, ಪಾದಶಾಹ, ಪಾದಷಹ, ಪಾದಷಹಾ, ಪಾದಷಾಹ, ಪಾದುಶಾಹ, ಪಾದುಷಹ, ಪಾದುಷಾ, ಪಾಷ, ಬಾದಶಹ, ಬಾದಶಾಹ, ಬಾದಷಹ, ಬಾದುಶ** (ನಾ). ೧. ಮುಸಲ್ಮಾನರ ದೊರೆ ; ಸುಲ್ತಾನ: ಪೂರ್ವಕಾಲದಲ್ಲಿ . . . ಒಬ್ಬ ಬಹು ಪರಾಕ್ರಮಶಾಲಿಯಾದ ಪಾತಶಹನು ಇದ್ದನು (ಕಗಕ್ಕ. ೦೩). **ಪಾಚ್ಛಾ** : ೧. ನಮಗೆ ಅರಸುಗಳಿಗೆ ಪಾಚ್ಛಾಗಳಿಗೆ ಪುಣ್ಯ ಲಭ್ಯ (ಮ್ಯಆ. ೧೯೨೬, ೬೩-೩೨; 1632). ೨. ಹಿರಿಯ ಕುಳ ; ಶ್ರೀಮಂತ : ಹೊನ್ನ ತೆತ್ತಲ್ಲದೆ ಹೊಲ ಮಾಡಬಾರದು . . . ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೆಂತೆಂದೊಡೆ ಇಷ್ಟುಳ್ಳಾತನೆ ಪಾಚ್ಛಾರೈತ ಇಲ್ಲದಾತ ದುಬ್ಬುಳುಕ (ಕಕಸಂ. ೬೦ – ೬೦). **ಪಾಚ್ಛಾಯಿ** : ೧. ಅರಸುಗಳಿಗೆ ಪಾಚ್ಛಾಯಿಗಳಿಗೆ ಪುಣ್ಯ ಲಭ್ಯವೆಂದು ನೋಡಿ ದಾನಪಾಲನೆ ಮಾಡುತ್ತಾ ಇರಬೇಕು (ಮ್ಯಆ. ೦೯೨೮. ೬೪-೨೩; 1638). **ಪಾಧಾ** : ೧. ಮೊಗಲ ಪಾಧಾಸಾಹೇಬರ ಆಳಿಕೆಯಲ್ಲಿ . . . ಕೊಡಗಿ ಹಾಕಿಕೊಟ್ಟ ಊರ ಮುಂದಣ ಗದ್ದೆಯಲಿ ಬೀಜಾವರಿ (ಎಕ. XI. ಹೊಳಲ್ಕೆ. ೦೨೬-೫ ; 1692?) ; ಟೀಪೂಸುಲತಾನ ಪಾಧಾರವರ ಧರ್ಮ (ಎಕ. XIV, ಶ್ರೀರಂಗ. ೦೬೫-೦; ?). **ಪಾತಷಹ** : ೧. ಈಗ ಟ್ಯಾನಿಸದ ಪಾತಷಹನಾಗಿದ್ದೇನೆ (ಮುಂಬಯಿ. ೫-೮೩೯). **ಪಾತಷಾಹ** : (೬). **ಪಾತುಶಾಹ** : ೧. ಪಾತುಶಾಹ ಮಹಾಸೇನಾತ್ರಸ್ತ ದಕ್ಷಿಣ ಭೂಭುಜಾಂ ಅಭಯಾಸ್ಯ ವಿಧಾತ (ಎಕ. VII, ಶಿಕಾ. ೩-೨೬; 1661); ನೆಲವಾರ್ತೆಯಂ ಕೇಳಿ ಪಾತುಶಾಹಂ ಬಂದು ತಲೆದೂಗಿ ಸತ್ಯನೀತಿ ಪೊದ್ದಾನಹುದೆಂದು ಸಲೆ ಸಲಾಮಂ ಮಾಡಿ ಹೋದನು (ಗುರುಜಾ. ೦೯-೨೯). **ಪಾತ್ಸಾಹ**: ೧. ಅನಿತರೊಳ್ಪಾತ್ಸಾಹನೈತಂದು ರಾಯರಂ ಮುರಿದವನಿಯಂ ಸೆಳೆಯಲು (ಜೀಳಕು. ೦-೧೨೬). **ಪಾತ್ಸ್ಯಾವು** : ೧. ಮುಂಕೊಂಡು ಪಾತ್ಸ್ಯಾವು ರಣಧೂಳಿಖಾನನ ಬೆಂಕದೆ ಬೀಳ್ಕೊಟ್ಟನಾಗ (ಕಂಕಶ. ೦೭-೯). **ಪಾದಶಾ** : ೧. ಟಿಪುಸುಲತ್ತಾನ ಪಾದಶಾರ ಧರ್ಮ (ಮ್ಯಆ. ೦೯೯೬, ೩೪-೦; ಸು. 1795). **ಪಾದಶಾಹ** : ೧. ದಿಳ್ಳಿಯ ಪಾದಶಾಹನತಿಭಕ್ತಿಯಿಂ ಭಂಡಾರದಿಂ ದಿವ್ಯಕನಕಾದಿ ವಸ್ತುಗಳ ತಂಡಮಂ ತರಿಸಿತ್ತು (ಆನಾ೯೬. ೨೭-೨೮). **ಪಾದಷಹ** : (೬). **ಪಾದಷಹಾ** : ೧. ಆ ಕಾಲದಲ್ಲಿ ಡಿಲ್ಲಿ ಪಾದಷಹಾ ಎಂಬ ಅಶ್ವಪತಿಯು . . . ಲೆಖ್ಖವಿಲ್ಲದ ಕುದುರೆ ಫೌಜು ಉಳ್ಳವನಾಗಿದ್ದನು (ಕಹಾಖಂ. IV, ೩೨). **ಪಾದಷಾಹ** : ೧. ಬಲ್ಲಾಳ ರಾಯಸ್ವಾಮಿಯವರಿಗೆ ಡಿಲ್ಲಿಯ ಪಾದಷಾಹರು ಒಪ್ಪಿಸಿದ್ದ ಗ್ರಾಮ ಭೂಮಿಗಳಂ ತಾವು ಅನುಭವಿಸಿಕೊಂಡು (ಮಹಾಖಂ. I, ೯೨) **ಪಾದುಶಾಹ** : ೧. ವಿಜಯಾಪುರದ ಸುರಿತಾಣ ಮಹಮ್ಮದಪಾದುಶಾಹ ನೆಡೆಗೆ ನಡೆದವನಡಿವಿಡಿದು (ಜಕಮ. ೫೭-೬). **ಪಾದುಷಹ** : ೧. ಪ್ರಭು ಗಳೆ! ನೀವು ದೊಡ್ಡ ಪಾದುಷಹರು! (ಬಿಕ್ಕರು ೯). **ಪಾದುಷಾ**: ೧. ರಾಜರಿಗೆ ಪಾದುಷಾಗಳಿಗೆ ಅರಸುಗಳಿಗೆ ನಮಗೆ ಸಹ ಪುಣ್ಯ ಲಭ್ಯ ವೃದ್ಧಿಯಾಗಿ (ಮ್ಯಆ. ೦೯೨೮, ೬೫-೩೦ ; 1609). **ಪಾಷ** : ೧. ಅಲ್ಲದೇವಿಯಾ

ದೇಶದ ಮಹಮ್ಮದಾಲಿ ಎಂಬ ಸೈನಿಕನೊಬ್ಬನು . . . ಪಾಷ ಅಥವಾ ಚಕ್ರವರ್ತಿ ಪ್ರಸಿದ್ಧಿ ಎಂದು ಕರಸಿಕೊಂಡನು (ಇಶ್ಚಾಂಸಂ. ೫೭). **ಬಾದಶಹ**: ೧. ದಿಲ್ಲಿಯ ಬಾದಶಹನ ಹಸ್ತನಾದ ಒಬ್ಬ ಸರದಾರನು . . . ಅವನನ್ನು ದೇವರಾಜನಿಗೆ ಅಪ್ಪೇ ಹಣಕ್ಕೆ ಮಾರಿದನು (ಮುಂಬಯಿ. ೪-೮೫); ಈಗಿನ ಹುಡುಗರಿಗೆ ಸ್ವಾಮಿಗಳಿಗಿಂತ ಮೊಗಲ ಬಾದಶಹರು ಎಂದು ಪಟ್ಟಿಕ್ಕ ಬಂದವರೊಂದೇ ಹೆಚ್ಚು ಗೊತ್ತಿರತದ (ಅಕ್ಕಪ. ೭): 'ಬಾದಶಹ ಬಿರುದನ್ನು ಕಳೆದುಕೊಂಡ ಬಹದ್ದೂರಶಹನು . . . ಆಲ್ಲಿಂದ ರಾಜರಿಗೆ ಬರೆದ ಪತ್ರಗಳು (ಕೃಶಂಕ. iii, ಲೇಖನಗಳ ಶಿರುಳು). **ಬಾದಶಾಹ**: ೧. ಟಿಪ್ಪುಸುಲತಾನ ಬಾದಶಾಹ ಶಾಹವನವರು (ಕೊಂಕಶಾ. ೧೯೩೪, ರಾಜಕಪತ್ನಾರ್. ೮೩-೦ ; ೧). **ಬಾದಷಹ**: ೧. ಆ ವಿಗ್ರಹವು ದೆಹಲಿಯ ಬಾದಷಹನ ಮಗಳ ಬಳಿ ಇದ್ದಿತೆಂದೂ . . . ಏಶಿಹ್ಯವಿದೆ (ಕಶಾಂ. ೧೬೮); ತಲೆದಿಂಬಿಗೆ ಕೈಗಳ ರಡಸ್ಸೂ ಊರಿ ಬೆನ್ನು ಕೊಟ್ಟು ಕುಳಿತಿದ್ದರು — ಹುಕ್ಕಾ ಎಳೆಯುತ್ತ ಮಲಗುತ್ತಿದ್ದ ಜಹಾಂಗೀರ ಬಾದಷಹನಂತೆ (ಮುಂಗಮ. ೫). **ಬಾದುಶ**: ೧. ಅರರೆ ಬಾದುಶ ಬಿದ್ದನೆಂದು ಮೊಗಲರೆಲ್ಲ ಮೊರದೆದ್ದು ಸುತ್ತಿ ಮುತ್ತಿದರು (ಸೌಂದಕಾ. ೭-೧೧೪).

[ ← ಪಾರ. ಪಾದ್‌ಶಾ, ಪಾದ್‌ಶಾಹ್, ಬಾದ್‌ಶಾಹ್ ; ಹಿಂ. ಪಾಚ್ಛಾ, ಪಾತಶಾಹ್, ಪಾತಸಾ, ಪಾತಸಾಹ್, ಬಾದಶಾ, ಪಾದಶಾಹ್, ಬಾದಶಾಹ್ ; ಮರಾ. ಪಾಚ್ಛಾ, ಪಾಛಾ, ಪಾತಶಹಾ, ಪಾತಶಾಹ್, ಪಾದಶಹಾ, ಬಾಚ್ಛಾ, ಬಾದಶಹಾ ]

**ಪಾತಷಹ** 'ಪಾತಶಹ' ನೋ.

**ಪಾತಷಾಹ** 'ಪಾತಶಹ' ನೋ.

**ಪಾತಷಾಹಿ**, ಪಾದಶಾಯಿ, ಬಾದಷಾಹಿ (ಗು). ೧. ಬಾದಷಹನಿಗೆ ಸಂಬಂಧಿಸಿದ ; ಸುಲ್ತಾನನಿಗೆ ಸೇರಿದ : (*). ೨. ಶ್ರೇಷ್ಠವಾದ ; ರಾಜಯೋಗ್ಯವಾದ : (*). (ನಾ). ೩. ದೊರೆತನ ; ಪ್ರಭುತ್ವ : (*). **ಪಾದಶಾಯಿ**: ೧. ಗವರ್ನರ್‌ಸಾಹೇಬರವರು ಮುಂಬಾಯಿಯಿಂದಾ ಪಾದಶಾಯಿ ರಿಜವಿಟ್ಟು ಬಂದು . . . ಪೇಶ್ವೆಯವರ ಬಳಿಗೆ ಕಳುಹಿಸಿದಲ್ಲಿ (ರಾಜೇಂದ್ರ. ೧೬೪). **ಬಾದಷಾಹಿ**: ೧. ಯವರ ಚಿಕ್ಕ ತಮ್ಮ ಅಲ್ಲಿಸಾಬರು ದೊಡ್ಡಬಳ್ಳಾಪುರದಲ್ಲಿ ಬಾದಷಾಹಿ ಸನ್ನದಿನ ಕಿಲ್ಲೆದಾರ ಬಳಿಯಲ್ಲಿ ನೌಕರಿ ನಿಂತರು (ಹೈದರ. ೨೨); ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ಶಿವರಾಯಿ ಹೊನ್ನು ಬಾದಷಾಹಿ ಹೊನ್ನು (ಇಕ್ಕೇರಿ. ೧೧೪).

[ ← ಪಾರ. ಪಾದ್‌ಶಾಹೀ, ಬಾದ್‌ಶಾಹೀ ; ಹಿಂ. ಪಾತಶಾಹೀ, ಪಾದಶಾಹೀ, ಬಾದಶಾಹೀ ; ಮರಾ. ಬಾದಶಾಹೀ, ಬಾಚ್ಛಾಈ ]

**ಪಾತಳಿ** (ನಾ). ೧. ಸಮತಟ್ಟಾದ ಮೇಲ್ಭಾಗ, — ಮೇಲ್ಮೈ : ಹಗ್ಗ ಅಲುಗಾಡಿದ್ದರಿಂದ ನೀರ ಪಾತಳಿಯ ಮೇಲೆ ಸಣ್ಣ ತೆರೆ ಎದ್ದಿತು (ಮೂರುದಾ. ೧೧೪); ಪ್ರತಿ ಕೊರೆಕಂಬಿಯೂ ಪಾತಳಿಯಿಂದ (Surface) ಒಳಭಾಗದ ಒಂದು ಸಣ್ಣ ಚೀಲದಲ್ಲಿದ್ದು ಒಳಸ್ಥಾನವನ್ನು ಪಡೆದಿದೆ (ಜೀವಿಶ. ೮೪) : ಸಬ್‌ಮರೀನು ಇನ್ನೂ ನೀರಿನ ಪಾತಳಿಯ ಮೇಲೆಯೇ ನಡೆದಿತ್ತು (ಕಪಾ. ೫೨). ೨. ಮಟ್ಟ ; ಹಂತ : ಧಾರವಾಡವು ಸಮುದ್ರ ಪಾತಳಿಯಿಂದ ೨೫೫೦ ಫೂಟು ಎತ್ತರದ ಬೋಲೆ ಇದೆ (ಜೀವಿಶ. ೨೩); ಬರಿಯ ತರ್ಕದ ಪಾತಳಿಯಲ್ಲಿ ಶೋಭಿಸಬಹುದಾದ ಈ ಶಬ್ದಗಳಿಗೆ ವ್ಯವಹಾರಲೋಕದಲ್ಲಿ ಸ್ಥಾನವಿದೆಯೆ ? (ಮೂರುದಾ. ೧೩೫).

[ ← ಮರಾ. ಪಾತಳೀ ]

**ಪಾತಳು** 'ಪತ್ತಲ' ನೋ.

**ಪಾತಾಲ, ಪಾತಾಳ** (ನಾ). ೧. ಭೂಮಿಯ ಕೆಳಗಿನ ಏಳು ಲೋಕಗಳಲ್ಲಿ ಒಂದು ; ನಾಗಲೋಕ : "ಅತಲಃ . . . . ತಳಾತಲಃ, ಪಾತಾಲಃ — ಈ ೭ ಅಧೋಲೋಕಂ" (ಶಾಕಶ. ೨೬೦); ಸ್ವರ್ಗ ಮರ್ತ್ಯ ಪಾತಾಲ [ಪಾತಾಂ. ೪] ದೊಳಗುಳ್ಳಖಿಳಜಲ್ಪವ್ರವರ್ತನೆಯನಭಿಧಾನವಾಗಿ ಪೇಟ್ವೆಂ (ಮುಂಗಣ. ೨-೩). ೨. ಸಮುದ್ರದ ಒಳಗಿನ ಬೆಂಕಿ ವಡಬಾಗ್ನಿ. **ಪಾತಾಳ**: ೧. "ಬಡಬಾಮುಖಂ . . . ನಾಗಲೋಕಂ, ರಸಾತಳಂ — ಈ ೬ ಪಾತಾಳಂ" (ಶಬಮ. ೧೧೩-೧); ಪಾತಾಳದಿಂದತ್ತ ಗಾತ ಬಲ್ಲನಿಲ್ಲ ಗಗನದಿಂದ ಮೇಲೆ ಅನುಭಾವ ತಾನಿಲ್ಲ (ಅಪಶ. ೧೫-೫೮) : ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೆ ದೇವ (ಬಸವ. ೫೨೪) ; ಪಾತಾಳಂ ನಿಜಮೂಲವ್ಯಾಪ್ತವ ಸೀಮಂ ವಿಯುತ್ತಳಂ ಶಾಖಾಸಂಘಾತದ ಸೀಮವೆಲ್ಲ ಚೂತಮಹೀಜಾತಮನ್ನತಿಯ ನೇವ್ವೊಗಟ್ಟೆಂ (ಕುಸುಮಾ. ೦-೦೦೦). ೨. "ಪಾತಾಳಂ ವಡಬಾಗ್ನಿ ರಸಾತಳಮೆಂಬೆರಡುಮಾಖ್ಯೆಗೆ" (ವಸ್ತುಕೋ. ೧೨೦-೨೬). ೩. (ಆಲಂ) ಬಹಳ ಆಳವಾದ ಸ್ಥಳ : ಜೂನ್ ತಿಂಗಳಲ್ಲಿ ಎಲ್ಲ ಬಾವಿಗಳ ನೀರೂ ಪಾತಾಳ ಕಂಡವು (ಸೋಹಾಕ್ರ. ೧೨೫) ; ಬೇಸಿಗೆಯಲ್ಲಿ ಅವರ ಬಾವಿಯಲ್ಲಿ ನೀರು ಪಾತಾಳದಲ್ಲಿರುತ್ತದೆ (ಅದೇ). 'ಪಾತಾಳಖಾತ' ಪರಾ. ೪. [ ಜ್ಯೋತಿ ] ಲಗ್ನದಿಂದ ನಾಲ್ಕನೆಯ ಸ್ಥಾನ,—ರಾಶಿ : ವ್ಯವಹರಿಪ ಸಂಜ್ಞೆ ಚತುರಸ್ರವದೆಂದವಪ್ಪುದು ಚತುರ್ಥಗೃಹಕೆ ಚತುರ್ಥಕ್ಕೆ ಬಲಂ ಮತ್ತಂ ಪಾತಾಳ ವೇಶ್ಮ ಸುಖ ಹಿಬುಕ ಬಂಧುವೆಂದೈದು ಪೆಸರ್ (ಜಾತಕ. ೧-೩೪); ಶೀ ತ ಮ ಯು ಖ ಪ ತ್ಯ ನಿ ೦ ದ ಂ ತ ನು ಧ ನ ದಶಧರ್ಮಾಯ ಪಾತಾಳ ಷಟ್‌ಪಂಚಮದೊಳ್ ಧಾತ್ರೀಜನಿಂ ಕೇಂದ್ರ ನಿಧನ ನವಮಾಯಂಗಳೊಳ್ ಪೂಜ್ಯನಕ್ಕುಂ (ಜಾತಕ. ೧೦-೧೦). ೫. [ ಗಣಿತ ] ಏಳು ಎಂಬ ಸಂಖ್ಯೆಯ ಸಂಕೇತ : ಸಪ್ತ, ಭಯ, ಅದ್ರಿ, ಗಿರಿ, ಮುನಿ, ಪಾತಾಳ . . . ದ್ವೀಪ, ಅಶ್ವ ಇಂತಿನಿತುಂ ೭ಕ್ಕೆ ಹೆಸರು (ಕೃವಹಾ. ೧೦-೨೭).

**ಪಾತಾಳಹೋಮ** = (ಆಲಂ) ರಹಸ್ಯಕಾರ್ಯಾಚರಣೆ : ಲಕ್ಷ್ಮಿಯ ಒಡವೆಗಳನ್ನೆಲ್ಲಾ ತಂದಿರುವೆ . . . ಅವಕ್ಕೆ ಇಷ್ಟು ಪಾತಾಳಹೋಮವೇ? (ಲಕ್ಷ್ಮೀಶ್ರ. ೫೯). [ ಸಂ. ]

**ಪಾತಾಲಗಂಗೆ**, ಪಾತಾಳಗಂಗೆ (ನಾ). ಶ್ರೀಶೈಲದ ಬೆಟ್ಟದ ಬುಡದಲ್ಲಿ, ಆಳದಲ್ಲಿ ಪ್ರವಹಿಸುವ ನದಿ : ಮೇಲನೀಜದ ಮನುಜರಂ ಪಾತಾಲ[ಪಾತಾಂ. ೪]ಗಂಗೆಯೊಳಾಡಿಸುತ್ತನುಕೂಲವಾಗಿಹ ತುಂಗಗಂಗಾ ವೃಕ್ಷಪಂಕ್ತಿಗಳ (ಬಸಪು. ೧೯-೫೫). **ಪಾತಾಳಗಂಗೆ**: ಶ್ರೀಶೈಲ ಕಂಧರದೊಳಾವಗಂ ಸುರಗಂಗೆ ಪಾತಾಳಗಂಗೆ ಸಂಗತಿಯೆಂಬ ಪರಮ ನದಿಗಳ ಸಂಗಮದೆ ಶೋಭಿಪಾ ವಾಹನಾಖ್ಯ ತೀರ್ಥಕ್ಕೆ ಮುದದಿಂ ನರಸೀಂಪಜಿಲದಿಂದೆ ಬಂದು (ಅರಾತ. ೩-೧೩-೩೯). [ ಪಾತಾಲ+ಗಂಗೆ₂ ]

**ಪಾತಾಲಗಡ** 'ಪಾತಾಲಗರಡಿ' ನೋ.

**ಪಾತಾಲಗರಡಿ**, ಪಾತಾಲಗಡ, ಪಾತಾಳಗಡ, ಪಾತಾಳಗಡೆ, ಪಾತಾಳಗರಡಿ, ಪಾತಾಳಗರುಡ₁, ಪಾತಾಳಗರುಡಿ (ನಾ). ೧. ಬಾವಿ ಮೊದಲಾದ ಜಲಾಶಯಗಳಲ್ಲಿ ಬಿದ್ದ ವಸ್ತುವನ್ನು ಮೇಲಕ್ಕೆ ತೆಗೆಯಲು ಬಳಸುವ, ಕೊಂಡಿಗಳುಳ್ಳ ಒಂದು ಬಗೆಯ ಕಬ್ಬಿಣದ ಸಾಧನ: ಪಾತಾಲಗರಡಿ=ನೀರಲ್ಲಿ ಮುಳುಗಿದ ಸಾಮಾನುಗಳನ್ನು ಎತ್ತುವ ಉಕ್ಕಿನ ಸರಪಳಿ" (ಜಾನಕೋ. ೧೫). **ಪಾತಾಲಗಡ** : ೧. "ಪಾತಾಂಗಡ= ನೀರಲ್ಲಿ ಮುಳುಗಿದ ಸಾಮಾನುಗಳನ್ನು ಎತ್ತುವ ಉಕ್ಕಿನ ಸರಳು"(ಜಾನಕೋ. ೧೫). **ಪಾತಾಳಗಡ**: ೧. ಆ ಸರಪಳಿಯ ತುದಿಗೆ ಕಬ್ಬಿಣದೊಂದು ಪಾತಾಳ ಗಡ ಹಚ್ಚಿರುತ್ತದೆ (ಮುಂಬಯಿ. ೩-೧೧೬); ಎಷ್ಟೋ ಸಲ ಆತ್ಮ ಹತ್ಯೆಯ ವಿಚಾರವು ಬಾವಿಯಲ್ಲಿಯ ಪಾತಾಳಗಡದಂತೆ ತಲೆಯಲ್ಲಿ ಅಸ್ಪಷ್ಟವಾಗಿ ಸುಳಿದಾಡುತ್ತಿತ್ತು (ಮುಕ್ತಿ. ೩೭). **ಪಾತಾಳಗಡ**: ೧. ಕೆಲಸ ಯಾರದೇ ಪ್ರೇರಣೆಯಿಂದವರು ನಿರ್ವಹಿಸಿರಲಿ . . . ಅನರ ಇತಿ ವಿಚಿ

ಯನ್ನು 'ಪಾತಾಳಗಡೆ' ಹಾಕಿ ಮಾಡಿಸುತ್ತಾರೆ (ಕಾ.ಕೋ. ೯).
**ಪಾತಾಳಗರಡಿ :** ೧. ಮುಂಬಯಿಯ ಶಹರದಲ್ಲಿ ಆಗುವ ಜೀವನದ ವಿವರವು ನಮಗೆ ಕಂಡು ಬಂದ ಮಟ್ಟಿಗೆ ಕೆಳಗೆ ಬರೆಯಲ್ಪಟ್ಟಿದೆ. ೧. ಆಡಕೊತ್ತಗಳು . . . ೨೩. ಪಾತಾಳಗರಡಿ (ನೀರಿನಲ್ಲಿ ಹಾಕಿ ಎಳೆಗಿನ ಸಾಮಾನ ತೆಗೆಯುವದು) (ಮುಂಬಯಿ. ೧೦೦); ಆಕೆ ಬಯಸಿದ ವಸ್ತು, ಹಣ್ಣು ಹಂಪಲು, ಮಾಂಸ ಯಾವುದನ್ನೆಲ್ಲ ಆತ ಆಕೆಗೆ ಒದಗಿಸಿದ್ದಾನೆ. ಪಾತಾಳಗರಡಿ ಹಾಕಿಯಾದರೂ ತಂದುಕೊಟ್ಟಿದ್ದಾನೆ (ಕಹು. ೧೬೯). ೨. (ಆಲಂ) ರಹಸ್ಯವನ್ನು ಹೊರಗೆ ತೆಗೆಯುವ ವ್ಯಕ್ತಿ: ಆಚ್ಯುತಪ್ಪನವರು ಹೆಂಡತಿಯ ಮಾತಿಗೆ ತಲೆದೂಗಿ, "ನೀನು ಪಾತಾಳಗರಡಿ ಕಣೇ ರಮಾ" . . . ಎಂದರು (ಗೃತರ. ೧೧೯). **ಪಾತಾಳಗರುಡ₁ :** ೨. ನಾಗಯ್ಯನೆಟ್ಟರೊ! ಪಾತಾಳಗರುಡ ಅವರು (ಜಹಸ. ೬೩).
**ಪಾತಾಳಗರುಡಿ :** ೧. ಪಾತಾಳಗರುಡಿಯ ಕೊಂಡಿಗೆ ಸಿಕ್ಕಿಕೊಂಡ ವಸ್ತು ನಡುವೆಯೇ ತಪ್ಪಿಸಿಕೊಂಡಿತ್ತು (ಮೂಕುರಾ. ೦೦೯).
[ ←ತಮಿ. ಪಾತಾಳಕ್ಕರಣ್ಟಿ ]

**ಪಾತಾಲನಿಲಯ** (ನಾ). ಪಾತಾಳದಲ್ಲಿ ನೆಲಸಿರುವವನು ; ದೈತ್ಯ : "ಅಸುರಃ, ದಾನವಃ . . . ಪಾತಾಲನಿಲಯಃ (ಸ್ತ್ರೀತಾ) — ಈ ೮ ಅಸುರರ ಪೆಸರ್" (ಕಶಮು. ೩-೩). [ ಪಾತಾಲ+ನಿಲಯ ]

**ಪಾತಾಲಲೋಕ, ಪಾತಾಳಲೋಕ** (ನಾ). ಭೂಮಿಯ ಕೆಳಗಿನ ಏಳು ಲೋಕಗಳಲ್ಲಿ ಒಂದು; ನಾಗಲೋಕ; ಪಾತಾಳ: "ಪಾತಾಳಮೆನಲು . . . ರಸಾತಲಮೆನಲ್ಕಧೋಭುವನಮೆಂದೆನಲು ಪಾತಾಲ[ಶಾಂ. ಳ]ಲೋಕಕ್ಕೆ ನಾಮಂ" (ಮುಂಗರಾ. ೧೧೬-೦). **ಪಾತಾಳಲೋಕ :** ಪಾತಾಳಲೋಕ ವಿಜಯಂ ಮಾತಂಗಕನಿಷ್ಟಸಿದ್ಧಿಯಾಯೆರಡುಂ ಮಾತ್ರೀತಿಸಕಲಾವನೀವಿಖ್ಯಾತಿ ಯೆನುತ್ತವನಿಪಾಲತನಯಂ ನಲಿದಂ (ಚಕಳು. ೩-೩೨); ವಿರಮ ಜಂಗಮದಲ್ಲಿ ಹದಿನಾಲ್ಕುಲೋಕಂಗಳದಗಿರ್ಪವು ನೋಡಾ ಅದೆಂತೆಂದೊಡೆ ಪಾದತಳದಲ್ಲಿ ಅತಳಲೋಕ . . . ಕಟಿಯಲ್ಲಿ ಪಾತಾಳಲೋಕ (ಅಂಕೀ. ೦೯೨-೦೩೪). [ ಪಾತಾಲ+ಲೋಕ ]

**ಪಾತಾಳ** 'ಪಾತಾಲ' ನೋ.

**ಪಾತಾಳಖಾತ** (ನಾ). ಬಹಳ ಆಳವಾದ ಕಂದಕ : ಉರುಳಿದೆನೊ ಪಾತಾಳಖಾತಕೆ ಎಂದು ಎದೆಯೊಳಗಾಗಿರೆ . . . ಯಾವ ಕೈಯೋ ಕಾಯುತಿದೆ ಈ ಮರುಳುಮಾನವನು ಪಾಲಿಸಿ (ಹಾಕುಕಾ. ೫೨-೨೦); ಅನಂತ್ಯದೊಂದು ನೀಲಜಲಧಿಯಲ್ಲಿ ಹೊರಟಿಹುದು ನನ್ನ ನಾವೆ . . . ಮಸುಕು ಮಸುಕು ಹಿಂದೆಲ್ಲ ಮುಂದೆ ಪಾತಾಳಖಾತಸಿಂಧು(ಕೃಕ್ಕಾಂ.೦೨-೩).
[ ಪಾತಾಳ (=ಪಾತಾಲ)+ಖಾತ₁ ]

**ಪಾತಾಳಗಂಗೆ** 'ಪಾತಾಲಗಂಗೆ' ನೋ.

**ಪಾತಾಳಗಂಧಿ** (ನಾ). ಹಾವಿನ ವಿಷವನ್ನು ಪರಿಹರಿಸುವ ಒಂದು ಬಗೆಯ ಮೂಲಿಕೆ : ಸೂತ್ರನಾಭಿ, ಸರ್ಪಗಂಧಿ, ಪಾತಾಳಗಂಧಿ, ಶಿವನಾಭಿಬಳ್ಳಿ (ಮೈಕಿಗ. ೬೬-೧೩೪೦).
[ ಪಾತಾಳ (=ಪಾತಾಲ)+ಗಂಧಿ ]

**ಪಾತಾಳಗಡ** 'ಪಾತಾಲಗರಡಿ' ನೋ.

**ಪಾತಾಳಗಡೆ** 'ಪಾತಾಲಗರಡಿ' ನೋ.

**ಪಾತಾಳಗರಡಿ** 'ಪಾತಾಲಗರಡಿ' ನೋ.

**ಪಾತಾಳಗರುಡ₁** 'ಪಾತಾಲಗರಡಿ' ನೋ.

**ಪಾತಾಳಗರುಡ₂** (ನಾ). ಹಾವಿನ ವಿಷವನ್ನು ಪರಿಹರಿಸುವ ಒಂದು ಬಗೆಯ ಮೂಲಿಕೆ ; ಸರ್ಪಾಕ್ಷಿ: ಪಾತಾಳಗರುಡನ ಬೇರು ಆದಿತ್ಯವಾರ ಮೋನದಿಂದ ತಂದು . . . ಮುಟ್ಟಿಸೆ ಸ್ತ್ರೀವಶ್ಯ (ಚಿತ್ರಿ.ರ. ೨೦೭); ಪಾತಾಳಗರುಡಸರ್ಪಮೂಲವಂ ಚೂರ್ಣಂ ಮಾಡಿ ಹಸುವಿನ ತುಪ್ಪದಲ್ಲಿ ಕಲಸಿ ಮೆಲ್ಲಲು ಬಹುಮೂತ್ರಂ ನಿಲ್ಲುವುದು (ಸಲಕ್ಕ. ೩೩೩). 'ಗರುಡಪಾತಾಳ' ಪರಾ. [ <ಸಂ. ಪಾತಾಲಗರುಡೀ ]

**ಪಾತಾಳಗರುಡಿ** 'ಪಾತಾಲಗರಡಿ' ನೋ.

**ಪಾತಾಳತಳ** (ನಾ). ಪಾತಾಳಪ್ರದೇಶ : ಪಾತಾಳತಳಮನೆಯ್ದಿದ ಪಾತಾಳ ಸುರಪುರಮನೆಯ್ದಿದಟ್ಟಳೆ ಪೆಂಪು ದ್ಯೋತಿಸೆ ಪುರವಿರ್ಪುದು ಭೋಗಾ ಶಯದ ಭೋಗವತಿಯನಮರಾವತಿಯಂ (ಅಶಚ. ೨-೦೬); ವಿಲಾಸ ಮಹೋಕ್ಷವಾಹನ ಮಹೋಕ್ಷಪಾತಕರಲಘು ಪಾತಾಳತಳವಾಸಿ ರಕ್ತಾಕ್ಷರಂ ಲಲಿತ ತ್ರಿಯಕ್ಷಂ ಸಹಸ್ರೋದರಂ ದೀರ್ಘಲೋಚನಂ ಹ್ರಸ್ವಕಂಠಂ (ಅಚಶ. ೯-೯-೩೩).
[ ಪಾತಾಳ (=ಪಾತಾಲ)+ತಳ (=ತಲ) ]

**ಪಾತಾಳನಿವಾಸಿ** (ನಾ). ಪಾತಾಳದಲ್ಲಿ ನೆಲಸಿರುವವನು ; ರಕ್ಕಸ ದೈತ್ಯ : "ದನುಜರ್ ದೈತೇಯರ್ . . . ಪಾತಾಳನಿವಾಸಿಗಳ್ ಸುರದ್ವಿಷರೆನೆ ದೈತ್ಯರ್" (ಕಶ್ಮುಕೋ. ೬-೩೨).
[ ಪಾತಾಳ (=ಪಾತಾಲ)+ನಿವಾಸಿ ]

**ಪಾತಾಳಬಾಣ** (ನಾ). (ನೆಲವನ್ನು ಭೇದಿಸಿ) ಪಾತಾಳದ ವರೆಗೆ ಹೋಗಿಂಪ ಒಂದು ಬಗೆಯ ಬಾಣ : ಆಕಾಶಗಾಮಿನಿ ಸೂರಬಾಣ ನೊಪ್ಪರಿ ಪಾತಾಳಬಾಣ ವಡಬಾಬಾಣ ಮಾಯಾಮಿ ಪೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿಸಾಧನವಿಶೇಷಂಗಳಿಂದಲಾಂ (ಚಕೀಳ. ೫೬೩).
[ ಪಾತಾಳ (=ಪಾತಾಲ)+ಬಾಣ₂ ]

**ಪಾತಾಳಮರ** (ನಾ). ಒಂದು ಬಗೆಯ ಮರ : ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನ ಮರ, ಭಾತಾಳ (ಮೈಕಿಗ. ೬೨-೦೯೬೩). [ ಪಾತಾಳ₂+ಮರ₁ ]

**ಪಾತಾಳಯಂತ್ರ** (ನಾ). ಔಷಧಿಗಳನ್ನು ಭಟ್ಟಿ-ಇಳಿಸಲು ಬಳಸುವ, ಭೂಮಿಯಲ್ಲಿ ಹುಗಿದಿಡುವ ಒಂದು ಬಗೆಯ ಯಂತ್ರ : ಜೇಪಾಳದ ಬೀಜವಂ ಕಹಿಸೋರೆಯ ಬೀಜ ಸಹ ಪಾತಾಳಯಂತ್ರದಿಂ ತೈಲವ ತೆಗೆದು . . . ಲೇಪವ ಮಾಡೆ ಅವಮೃತ್ಯು ವಿರೇಚನವಕ್ಕುಂ (ಸಲಕ್ಕ. ೩೦೩).
[ ಪಾತಾಳ (=ಪಾತಾಲ)+ಯಂತ್ರ ]

**ಪಾತಾಳಯಂತ್ರಿ** (ನಾ). ಗುಪ್ತಕಾರಸ್ಥಾನ ಮಾಡುವ ವ್ಯಕ್ತಿ : ಇನು ಇಂಥಾ ಪಾತಾಳಯಂತ್ರಿ ಎಂಬುವು ನಮಗೆ ತಿಳಿದಿರಲಿಲ್ಲ (ಚಿತ್ರಾ.ಚ. ೫೫); ಪಾತಾಳಯಂತ್ರಿಗಳಾದ ಪೋಲೀಸರು ಧೂರ್ತ ಪಶ್ಚಿಮಾಗಳನ್ನೊಂದು ಮಾಡುವಂತಹ ಪಾತಾಳಯಂತ್ರಿಗಳಿರುವರೆಂಬುದನ್ನು . . . ಕೇಳಿ ಅರಿತಿದ್ದರು (ಸ್ತ್ರೀಂಬ. ೦೦೯). [ ←ಮರಾ. ಪಾತಾಲಯಂತ್ರೀ ]

**ಪಾತಾಳಲೋಕ** 'ಪಾತಾಲಲೋಕ' ನೋ.

**ಪಾತಾಳಸುಳಿ** (ನಾ). ದನದ ಹೊಟ್ಟೆಯ ಕೆಳಭಾಗದಲ್ಲಿರುವ ಒಂದು ಬಗೆಯ ಕೆಟ್ಟ ಸುಳಿ: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿಸುಳಿ . . . ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೇ ಸುಳಿ ಇರೋದು ತತ್ವಾಲಾ (ಹುಲ್ಲಿಕ. ೦೬೩).
[ ಪಾತಾಳ (=ಪಾತಾಲ)+ಸುಳಿ₂ (<ಸುಳ್ಳಿ₃) ]

**ಪಾತಾಳಾಂಕಣ** (ನಾ). ನೆಲಮನೆಯ ಅಂಗಳ ; ಭೂಮಿಯ ಮಟ್ಟದಿಂದ ಕೆಳಗಿನ ಅಂಗಳ : ಪಾಳೆಯಗಾರರ ಕಾಲದಲ್ಲಿ ನೆಲವತ್ತು ಸ್ತಂಭಗಳ ಪಾತಾಳಾಂಕಣ ರಚಿತವಾಯಿತು (ಹೊಮ್ಮಕಾ. ೯೩) ; ಇನು ದನ ಕಾಯುವುದನಕ್ಕಾ ನಾಲಾಹಿಕ್ ಎನ್ನಿಸಿಕೊಂಡು ಮತ್ತೆ ಬಸವಣ್ಣದೇವರ ಗುಡಿಯ ಪಾತಾಳಾಂಕಣವನ್ನು ಹಿಡಿದಿದ್ದ (ಕಳುಕು. ೦).
[ ಪಾತಾಳ (=ಪಾತಾಲ)+ಅಂಕಣ ]

**ಪಾತಾಳಿ** (ನಾ). ಪಾತಾಳಲೋಕದ ಒಡೆಯ ; ವಾಸುಕಿ : ದಿವನನೇ ಶರನಿಕರದಲಿ ಪವಮಾನಜನೊ ಪಾತಾಳಿಯೋ[ ಶಾಂ. ಪವಮಾನತನುಜ

ಮೊ ಪಾವಕನೊ]ಕಲಿ ವೈನತೇಯನೊ ಕರ್ಣನೋ ನಾವರಿಯೆವು (ಶಾಭ್ಯಾಕ. ೧೨-೨೫). [ಸಂ. ಪಾತಾಲಿನ್]

**ಪಾತಿ₁**, ಪಾತೆ₁ (ನಾ). ೧. ಮರ, ಗಿಡಗಳ ಬುಡದಲ್ಲಿ ನೀರು ನಿಲ್ಲಲು ಮಾಡಿರುವ ಕಟ್ಟೆ ; ಆಲವಾಲ : ಶರತ್ಕಾಲವಲ್ಲಿ ಮಳೆಯಿಲ್ಲದೆ ಸ್ವಲ್ಪ ಬಾಡುವ ಸಮಯದಲ್ಲಿ ತರುಗಳ ಪಾತಿಯಲ್ಲಿ ತುಂಬಿದ ಜಲವು ಯಿಂಗಿ ಚನ್ನಾಗಿ ನೀರು ನಿಲ್ಲುವ ಪರಿಯಂತವು ಜಲವ ಕಟಬೇಕು (ಶಾಗಂರ. ೪೨೭-೯); ಜನ . . . ಸಸಿಗಳಿಗೆ ಹತ್ತಿರುವ ಹುಳುಗಳನ್ನು ಬಿಡಿಸುವುದು, ಅವುಗಳ ಪಾತಿ ಸರಿಮಾಡಿ ಗೊಬ್ಬರ ಹಾಕುವುದು— ಇತ್ಯಾದಿ ಕೆಲಸಗಳಲ್ಲಿ ತೊಡಗಿದ್ದರು (ಬದ್ಯಾಕ. ೧). ೨. ಬೀಜ ಬಿತ್ತಲು ಮಾಡಿರುವ ಮಡಿ : ಓತು ಮಾಡುವ ಲಿಂಗವಂತರ ಭಾತಿಗಳು ಶಿವಭಕ್ತಿ ಬೀಜಕೆ ಪಾತಿಗಳು ಪರಮಾರ್ಥನಿಜಯೋಗಪ್ರಸೂತಿಗಳು (ಬಸವು. ೫೭-೯೭); ಇಂತಹ ಎರಡು ಬೀಜಗಳನ್ನು ಒಂದೇ ಹೊಲದ ಎರಡು ಪಾತಿಗಳಲ್ಲಿ ನೆಟ್ಟರೆ ಕೆಲವು ಕಾಲದ ನಂತರ ಒಂದು ಅರಳಿಮರವಾಗಿಯೂ ಮತ್ತೊಂದು ಆಲದ ಮರವಾಗಿಯೂ ಪ್ರಕಟವಾಗುತ್ತವೆ (ಜೀವಾಶ್ಯ. ೦೬೪); ಸೊಪ್ಪಿನ ಬೀಜ ಬಿತ್ತುವುದಾದರೆ ಪಾತಿ ಮಾಡಬೇಕು (ಕಠಕ. ೬೭). **ಪಾತೆ₁** : ೧. ಯಾತದ ತುದಿಯಲ್ಲಿ ಕಟ್ಟಿದ ಮಡಕೆಯಂತೆ ಅದ ನೀತಿವಂತರು ಮೆಟ್ಟುವಡೆ ಪಾತಾಳದ ಉದಕವ ತಂದು ಪಾತೆಗೆ ಹರಹಿದ ತೆರನಂತೆ (ವೋಇಮೂ. ೦೦೪-೪೦೫); ಜಲಮನದಾವರೀಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುಮಂ (ಶಾಕುಂತ. ೫೩-೮೭); ಸೀತೆ . . . ಹತ್ತಿಗಿಡದ ಪಾತೆಯೊಳಕ್ಕೆ ಧೊಪ್ಪನೆ ಬಿದ್ದಳು (ಅವಶಂ. ೨೦೭). ೨. ಅದೇ ಸಂಸಾರಪಾತೆಯಲ್ಲಿ ಪುಟ್ಟದಾದ ಒಂದು ಗುಲಾಬಿಯು ಉದ್ಭವವಾಗಿ (ಬನಾಂ. ೮).
[ದೇ.॥ ತಮಿ. ಮಲ. ಪಾತ್ತಿ ; ತುಳು. ಪಾತಿ ; ತೆಲು. ಪಾದಿ. ಪಾದು]

**ಪಾತಿ₂** (ನಾ). ಒಬ್ಬರು ಕುಳಿತುಕೊಳ್ಳುವಂತಹ ದೋಣಿ : ಚಿಕ್ಕ ದೋಣಿ : ಶಾನುಭೋಗರು ದೋಣಿಯವನೊಬ್ಬನನ್ನು ಕರೆದು 'ಬೆಳ್ಳ, ಕೋಡಿಗೆ ಪಾತಿಯನ್ನು ಹಿಡಿ ನೋಡುವ' ಎಂದರು (ಮರಳು. ೪೭೬) : ದೋಣಿ ಪಾತಿ ಹರಿಗೋಲು ಅಲ್ಲು ಇಲ್ಲು ಎಲ್ಲೆಲ್ಲೂ ಕಾಣಲಿಲ್ಲ ಈತನು (ವರಬಂ. ೬೮-೯); ಎಂತಹ ಸೆಳೆತಕ್ಕೂ ತಮ್ಮ ಪುಟ್ಟ ದೋಣಿ, ಪಾತಿಗಳನ್ನು ಒಯ್ಯಬಲ್ಲರು (ದಾಂಪ್ರ. I. ೩೬೩). 'ಪಾತಿಗ' ನೋ.
[ದೇ.॥ ತಮಿ. ಪಾತ್ತೈ ; ತುಳು. ಪಾತಿ]

**ಪಾತಿಗ** (ನಾ). ದೋಣಿಯನ್ನು ನಡೆಸುವವನು : ಮುನ್ನ ಹುಟ್ಟುನರಿಯದನಳವೆ ನನ್ನ ಹುಟ್ಟುಸಿಕ್ಕಲು, ಪಾತಿಗ ? (ಗಳಿಲು. ೫೫-೨೪).
[ಪಾತಿ₂+–ಗ₂]

**ಪಾತಿತ** (ಗು). ಬೀಳುವಂತೆ ಮಾಡಿದ ; ಬೀಳಿಸಿದ ; ಕೆಡವಿದ : ಪಾತಿತದ್ವಿಷಪತಾಕಂ ಕಾಂ[ದಿ]ಶೀಕಂ ಭಯಾಕುಳಿತಾನೀಕನಪಾಸ್ತವಿಕ್ರಮಂ ಗುಣೋದ್ರೇಕಂ (ಶಾಇ. XX. ೨೧-೨೬; 1010); ಅತನನುಜಂ ಜಗದ್ವಿಖ್ಯಾತಂ ಶ್ರೀ[ಬಾ]ಚಿರಾಜವರ್ಣಾಧೀಶಂ ಪಾತಿತಸಮಸ್ತವೀರಾರಾತಿ ಬಲಂ (ಶಾಇ. ೪-೨-೧೦೨; 1058). [ಸಂ.]

**ಪಾತಿತ್ಯ** (ನಾ). ಅಧಃಪತನ : ದುರ್ಗತಿ : ಕುಂಟಣಿವಿದ್ಯೆಯಲ್ಲಿ ಪಾರಂಗತಳಾದ ಆ ಹೆಣ್ಣು ತನ್ನ ಸಖಿಯನ್ನು ತಿಮ್ಮಪ ಜವಲು . . . ಪಾತಿತ್ಯದ ರಸಾತಳಕ್ಕೆ ನೂಕುತ್ತಾಳೆ (ಕಾಜಾಂತ. ೬೫). [ಸಂ.]

**ಪಾತಿವ್ರತೆ** (ನಾ). ಗಂಡನ ಸೇವೆಯೇ ವ್ರತವಾಗಿ ಉಳ್ಳವಳು : ಹದಿಬದೆ : ಪತಿವ್ರತೆ : ಭುವನದೊಳು ನಾವಹಗೆ ಪರಮೋತ್ಸವದ ಪಾತಿವ್ರತೆಯರಾಗಿಯು ಶಿವಚರಣ ಸದುಭಕ್ತಿಯುಕ್ತಿಯೊಳಾಚರಿಸುತಿಹೆವು (ಬಸವು. ೨೫-೩೭). [ಸಂ. ಪಾತಿವ್ರತಾ]

**ಪಾತಿವ್ರತ್ಯ** (ನಾ). ಪತಿವ್ರತೆಯಾಗಿರುವಿಕೆ : ಪತಿವ್ರತಾಧರ್ಮ: ಅಹಹ ಪಾತಿವ್ರತ್ಯವತಿಸನ್ನಿಹಿತವಲ್ಲಾ ನಿನಗೆ ಹಲಬರ ಮಾಹಿಳೆ ಸತಿಯೆನಿಸುವರೆ (ಶಬ್ದಾಕ. ೨೨-೨೦); ತರುಣಿಯರುಗಳಲಾ ಅರುಂಧತಿ ಪರಸರಸ್ವತಿಯನಿಬರೀಕೆಯ ಸರಿಗೆ ಮೋಲಿಸಬಹುವೆ ಪಾತಿವ್ರತ್ಯಶೀಲದಲಿ (ಕೌಶಿರಾ. ೪೩-೫೦); ಪರಮಪಾತಿವ್ರತ್ಯ ರೂಪವು ನಾರಿಗೆ ಸ್ವರ ದಿಂಪು ರೂಪು ಕೋಗಿಲೆಗೆ (ಶಾಕಾಶ. ೧೫೫-೬೪). [ಸಂ.]

**ಪಾತೀದಾರ** (ನಾ). ಪಾಲುಗಾರ : ಭಾಗಸ್ಥ : ಹಿಸ್ಸೆದಾರ : ತಾನೇ ರಾಚಪ್ಪನನ್ನು ನಾಕಾಣೆಯ ಪಾತೀದಾರನನ್ನಾಗಿ ಮಾಡಿಕೊಂಡು ಕಂತ್ರಾಟದ ವ್ಯವಹಾರದಲ್ಲಿ ತೊಡಗಿಸಬೇಕೆಂದು ಯೋಚನೆ ಹಾಕಿದಾಗ, ತಾನೇ ಅವನ ಮನೆ ತನಕ ನಾಕೆಂಟು ಸಾರೆ ಎಡತಾಕಬೇಕಾಯಿತು (ವೀಶಹ.II. ೩೦೬).
[←ಮರಾ. ಪಾತೀದಾರ್]

**ಪಾತುರ** 'ಪಾತರ' ನೋ.

**ಪಾತುರೆ** (ನಾ). (ಕೊಡವಜನರು ಹುತ್ತರಿಹಬ್ಬದ ಕೋಲಾಟದಲ್ಲಿ ಬಳಸುವ) ಒಂದು ಬಗೆಯ ನಾಗಬೆತ್ತದ ಕೋಲು : ಆತನ ಸಂಗಡ ಪರಿಯಾಕಳಿ ಆಡುವುದೆಂದರೆ ಪಾತುರೆ ಹೊಡೆತಗಳಿಂದ ತೊಡೆ ಮತ್ತು ಕಾಲುಗಳನ್ನು ಹುಣ್ಣು ಮಾಡಿಕೊಳ್ಳುವುದೆಂದು ಅವರೆಲ್ಲರೂ ಬಲ್ಲರು (ಹುಆಹಾ. ೧೨೬). [←ಕೊಡ. ಪಾತೂರೆ]

**ಪಾತುರೆಕೋಲು** (ನಾ). =ಪಾತುರೆ : ಕುಳಿತಿದ್ದವ ಎದ್ದು ನಿಂತು ಎಡಗೈಯಲ್ಲಿ ಪರ್ಯವನ್ನು ಹಿಡಿದು, ಬಲಗೈಯಲ್ಲಿ ಪಾತುರೆಕೋಲನ್ನು ಎತ್ತಿ ಕುಣಿಯಲಾರಂಭಿಸಿದ (ಹುಆಹಾ. ೧೨೬); ಚಿಮ್ಮ, ಪಾತುರೆಕೋಲ ಹೊಯ್ಲಿಗೆ ಕುಣಿವ ಪದ ಹೊರಹೊಮ್ಮಲಿ (ಕಹವು. ೬-೧೫೨).
[ಪಾತುರೆ+ಕೋಲು₁ (<ಕೋಲ್₁). /ಕೊಡ. ಪಾತೂರೆಕೋಲ್]

**ಪಾತುಶಾಹ** 'ಪಾತಶಹ' ನೋ.

**ಪಾತೆ₁** 'ಪಾತಿ₁' ನೋ.

**ಪಾತೆ₂**, ಹಾತೆ (ನಾ). ೧. "ಪಾತರಗಿತ್ತಿ, ಚಿಟ್ಟೆ" (ಗಳಿಬಂ. ಟಿಪ್ಪಣಿ): ನಡುಬೈತ್ರದಿ ಮಸಗೆ ಗ್ರೀಷ್ಮ, ಬೇಯದೆ ಮನಸು ? ಮಗಚಿದೆ ಮೃಗ ಜಲದೊಳೂಷ್ಮಕತಟುದ ಕನಸು ? ಪಾತೆಯೊಲರ ಪಾಕಿಯಲ್ಲಿ, ತರಗೆಲೆಗಳ ಬಟ್ಟೆಯೊಲ್ಲದೇವುದೊ ನೆನಸು ? (ಗಳಿಬಂ. ೧೦೬.೧೯). **ಹಾತೆ** : ೧. ಎಡಿತೆ ಹಾತೆ ಹಾವುಗಳೆಲ್ಲ ಈ ಬೆಂಕಿಗೆ ಬದುಕಲುಂಟಾ ? (ವೀಳಗ. ೫೦); ಗಿಡಗಳ ಸಂತಾನಕ್ರಮದಲ್ಲಿ, ಪರಾಗವಿನಿಮಯವು ಮುಖ್ಯವಾದ ಒಂದು ರೀತಿ. ಈ ಕೆಲಸವು ಹಾತೆ, ಹುಳು, ಹುಪ್ಪಟೆ ಮೊದಲಾದ ಕ್ರಿಮಿಕೀಟಗಳಿಂದ ಸಾಗುವದು (ಶಾಆಪ್ರ. II. ೬೮೦). ೨. ಜಿರಲೆ ಮುಂತಾದ ಕೀಟ : ಎಲುವ ಕಡಿವ ಶ್ವಾನ (ಸ್ವಾನ)ನಂತೆ ಹಾತೆಯ (ಹತ್ತಿಯ ಹುಳುವ) ತಿಂಬ ಹಲ್ಲಿಯಂತೆ . . . ಭೋಗಕ್ಕೆ ಮುಟ್ಟಿ ಹುಚ್ಚಾದಿರಲ್ಲಾ (ಸಿದ್ಧಶ. ೦೩೫-೪೦೦); ಮೂತಿನ ಮಾಳೆಯೂ ತೂತಾದ ಮಡಿಕೆಯೂ ಹಾತೆಯು ಹುಲ್ಲುಸರವೆಯು ಇವು ನಾಲ್ಕು ವಿತಕ್ಕು ಬೇಡ (ಕರ್ಣಾಟ. ೧೪೪೬). ೩. ಪತಂಗ : ದೀಪದ ಹುಳು : 'ಹಾತೆಹುಳು' ನೋ.
[ದೇ.॥ ತುಳು. ಪಾತೆ, ಪಾಂತೆ ; ಕೊಡ. ಪಾತೆ]

**ಪಾತೇಲಿ** (ನಾ). ಅಗಲವಾದ ಬಾಯುಳ್ಳ ಪಾತ್ರೆ: ಬೋಗುಣಿ; ಡಬರಿ : ದೊಡ್ಡ ದೊಡ್ಡ ಹಂಡೆಗಳು, ಕೊಳಗಗಳು, ಪಾತೇಲಿಗಳು ಅನುವದಲ್ಲದೆ ನಿತ್ಯದ ಕೆಲಸಕ್ಕೆ ಬೇಕಾಗುವ . . . ಪಾತ್ರೆಗಳು ಹೇರಳವಾಗಿ ಹುಟ್ಟುತ್ತವೆ (ಕರಾಗ. ೪೬೦) : ಒಲೆಯ ಮೇಲೆ ಒಂದು ದೊಡ್ಡ ಪಾತೇಲಿಯಲ್ಲಿ ಗುಳಂಬ ಬೇಯುತ್ತಿತ್ತು (ಸ್ವಸಿತ. ೨೫೨).
[←ಮರಾ. ಪಾತೇಲಿ, ಪಾತೇಲೆ]

**ಪಾತ್ರ** (ನಾ). ೧. ದುಂಡಗಿರುವ ಸಣ್ಣ ಪಾತ್ರೆ : ಕುಡಿಯುವ ಬಟ್ಟಲು. ೨. ತಟ್ಟೆ, ಹರಿವಾಣ, ಮಡಕೆ, ಮುಂತಾದ ಪಾತ್ರೆ : ಭಾಂಡ : " ಪಾತ್ರಂ ಭಾಂಡಂ ಸ್ಥಾಲಿಯುಮಮತ್ರಂ ಭಾಜನಮೆನಿಕ್ಕುಂ " (ಅಭ್ಯಕೋ. ೪೯-೨೬) : " ಅಮತ್ರಂ, ಭಾಜನಂ, ಪಾತ್ರಂ, ಸ್ಥಾಲಂ

—ಈ ೪ ತಳಿಗೆ" (ಹರಿಹರು. ೩೯ ೦೬೩) ; ಪಾತ್ರವಿದ್ದಷ್ಟೆ ನೀರು ಸಿಕ್ಕೀತು (ಗಾದೆ). ೩. ಪೂಜೆ, ಯಜ್ಞಯಾಗಾದಿಗಳಲ್ಲಿ ಬಳಸುವ ಪಾತ್ರೆ : "ಪೂಜೋಪಹಾರಮವೆ ಬಲಿ ಭಾಜನಮುಪಯೋಗ್ಯಮಪ್ಪುದುಂ ತಾಂ ಪಾತ್ರಂ" (ಪಮ್ಪಾ.ಶೋ. ೦೨೨-೨೪). ೪. ಎರಡು ದಡಗಳ ನಡುವಿನ ನೀರು ಪರಿಯುವ ಪ್ರದೇಶ ; ನದಿ, ಹೊಳೆ ಮೊದಲಾದವುಗಳ ಒಡಲು : "ಎರಡು ತಡಿಯು ನಡು ಪಾತ್ರವೆಂಬುದು" (ಹರಿಹರು. ೦೦೦ - ೯೩) ; ಕಾವೇರಿಯು ಶಿವನ ಜಡೆಯಿಂದಿಳಿದ ಗಂಗೆಯು ಹಾಗೆ ಮೈತುಂಬಿ ಹರಿಯುತ್ತಿದ್ದಾಳೆ. ಪಾತ್ರ ತುಂಬಿ ದಡಗಳನ್ನು ಅಲೆಗಳು ಅಪ್ಪಳಿಸುತ್ತಿವೆ (೩೩೮೫. ೦೨೮). ೫. ನೇಗಿಲಿನಿಂದ ಉತ್ತ ಸಾಲು, —ಗೆರೆ : "ಪಾತ್ರಂ ಸೀತಾಗ್ರಮುಂ" (ಪಮ್ಪಾ.ಶೋ. ೦೩೯-೦೦೮). ೬. ದೋಣಿ ; ನಾವೆ : ಭವಾಂಭೋಧಿಯ ತಡಿಯನೆಯ್ದಿಸಮ್ಮಂ ನಯನಿಕ್ಷೇಪಪ್ರಮಾಣಪಾತ್ರದಿನರುಹಾ (ಶಂಶಾಶು. ೬-೯೦). ೭. ಯೋಗ್ಯತೆ ; ಅರ್ಹತೆ : ಸ್ನೇಹವನೆಣಿಸನು ಗಣಿಸನು ಪಾತ್ರವನಂತೆ ದಶಾಂತರಗಳನು . . . ಉತ್ತಮನು (೨೦೩೩೩. ೬೦-೩೮). ೮. ಯೋಗ್ಯತೆಯನ್ನು ಹೊಂದಿರುವಂತಹುದು ; ಯೋಗ್ಯವಾದುದು: ಈ ನೆಲ ಗೌರವ ಹಾಗೂ ಕೀರ್ತಿಗಳಿಗೆ ಪಾತ್ರವಾಗಿತ್ತೆಂದು ಅರ್ಥ (ಪ್ರಾ.೬೬. ೬೩). ೯. ಯೋಗ್ಯನಾದವನು ; ಅರ್ಹನಾದವನು : ಪಾತ್ರ ಅಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು (೩೫೫. ೬೦೯); ಅವರಿರವು ಸ್ವರ್ಗನಿರ್ಗದ ಪದವಿಗಳ ಪಟ್ಟಣೆ . . . ಎಂಬ ಕೀರ್ತಿಗೆ ತಾವೆ ಪಾತ್ರರಾಗಿರುತಿರಲು (೩೦೮. ೧೬. ೯-೦೩). ೧೦. ದಾನ ಮೊದಲಾದವುಗಳನ್ನು ಪಡೆಯಲು ಯೋಗ್ಯನಾಗಿರುವವನು—ಅರ್ಹನಾಗಿರುವವನು : ಪಾತ್ರಮುತ್ತಮಮಧ್ಯಮಜಘನ್ಯಭೇದದಿಂ ತ್ರಿವಿಧಮಕ್ಕು (೫೦೩. ೦೦-೯ ಪ) ; ಉತ್ತಮಪಾತ್ರಂ ಸಕಲನಿವೃತ್ತಂ ವಿರತಾವಿರತನೆ ಮಧ್ಯಮಪಾತ್ರಂ ಮತ್ತಮಸಂಯುತ ಸಮ್ಯಗ್ದೃತ್ತಮನಂ ತಾಂ ಜಘನ್ಯಪಾತ್ರಮನಿಕ್ಕುಂ (೫೦೯೩. ೩-೩೨); ದಾನಕ್ಕರುಹರಿವರಲ್ಲೆಂದು ನೋಡದೆ ಮೂಢಪಥಾರ್ಗದಲಿ ಕರೆದಪಾತ್ರಂಗಿತ್ತು ಪಾತ್ರನ ಪರಿಹರಿಸಲೀ ಎರಡಜಂ ಸಂಹರಣವೈದುವುದಾರ್ಜಿಸಿದ ಧನವು (೫೩ಪ್ರಾ.೫. ೩-೨೩) ; ಧನಿಕಂ ಕಳ್ಳೊಡವೆಗೆ ಕಳ್ಳನ ಪಾತ್ರನ ಗೈದ ತೆರದೆ (೫೩೦೦೦. ೬೮-೦೨೦). ೧೧. ಸಾಹಿತ್ಯಕೃತಿಗಳಲ್ಲಿ ಸೃಷ್ಟಿಯಾಗುವ ವ್ಯಕ್ತಿ, ವಸ್ತು, ಸನ್ನಿವೇಶ ಮೊದಲಾದವು : ಅವನು ನಿರ್ಮಿಸಿದ ಪ್ರತಿಯೊಂದು ಪಾತ್ರಕ್ಕೂ ತನ್ನದೇ ಆದ ವೈಶಿಷ್ಟ್ಯವಿದೆ (೫೫೦೫. ೬೯); ವ್ಯಕ್ತಿಯೊಬ್ಬನ ನೈತಿಕದೃಷ್ಟಿಯನ್ನು ಪ್ರಕಟಿಸುವುದೇ ಪಾತ್ರ (೫೦೦. ೩೨ ೬೮೩೮) ; ಶಾಕುಂತಲ . . . ರಾಧ ಮೊದಲಾಗಿ ನಾಯಕಿಯರ ಪಾತ್ರವಲ್ಲ ಇವಳ ಪಾಲಾಗಿದ್ದುವು (೫೦೫೫. ೦೮). ೧೨. ಮಂತ್ರಿ; ಸಚಿವ : ಶ್ರೀನಾಥರಾಜನ ಲಕ್ಷ್ಮೀಪತಿರಾಯ ಪಶ್ಚಿಮಬಾಲಚಂದ್ರಮಹಾಪಾತ್ರಯಿವರು ಮೊದಲಾದ ಪಾತ್ರಸಾಮಂತರನೂ ಮಂನೆಯರನೂ ಜೀವಗ್ರಾಹವಾಗಿ ಹಿಡಿದುಕೊಂಡು (೫೫೨೨. IX-ii, ೫೦೦ ೦೨; 1515) ; ವಿದ್ಯಾಧರನೆಂದೆಂಬ ಪಾತ್ರ [ತ್ರ] ಕೈಮುಗಿದು ನಿಂದು ನುಡಿದನು ರಾವುತಪಾಯಿಕೆಯ ಹಿಡೊಂದಿದ ಬಲು ಪಂಥಗಳನು (೫೫೫೦. ೦೬-೬) ; ಉಳಿದ ಪಾತ್ರ [ತ್ರ] ಗಳು ಅಂದು ಬಿನ್ನವಿಸಿದರಾ ಗಜಪತಿಗಿಂತೆಂದು ರಾವುತಿಕೆಯರವನು (೫೫೫೦. ೦೬-೦೦). ೧೩. ಅಭಿನಯಿಸುವವನು ; ನಟ : ಅಂತು ಭಾರದ್ವಾಜನಾಗಿಸುವಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ಯುತ್ತಿರೆ (೫೦೫೫. ೨-೩೯ ಪ); ಮಂಗಳರವಂಗಳಂ ಮಾಣಬೇಡುಲಿವ ವಾದ್ಯಂಗಳಂ ನಿಲಿಸಬೇಡೊಲ್ಪಿಸೆ ತಿರ್ಪ ಪಾತ್ರಂಗಳಂ ತಡೆಯಬೇಡ (೫೫೫೫. ೬-೩೫) ; ಪಾತ್ರವಾದಕಂ ಬಾಜಿಸಿದಂ (೫೫೦. ೨೯೯ ಕ್ರಯೋ) ; ಪಾತ್ರನ ಪಾತನು ಗೀತದ ನುಡಿಯನು ಕಟ್ಟಿ ಕೊಟ್ಟರು ನಮ್ಮ ತಂದೆ (೨೦೫೩೫. ೧೦-೯೩). ೧೪. [ನಾಟ್ಯ] ನೃತ್ಯ ; ಕುಣಿತ : ಪಾತ್ರದ ಭೋಗದವರೊಳು ಮಧುಕನಾಥಗೆ ಹೋಗಿ ಮಾಯಾಂಗನೆಯು ಲಾಸ್ಯದ ಕೇಳಿಯಾಳಿಗಸಿ ಜೋಗವಿಸುತಿರುತಿರ್ದ . . . ಅಲ್ಲಮಪ್ರಭು ಲಿಂಗಲೀಲೆಯಲಿ (೫೫೦೦. ೫-೬೨) ; ಸ್ವಾನುಭವದ ಸುಖದಿಂದಧಿಕವೆ ಪಾತ್ರ ಗಾನ ಮೊದಲಾದ ಸುಖಗಳು (೫೦೫. ೦೩-೦೬೦) ; ಬನವಾಸಿಯೆಂಬ ಪಟ್ಟಣದ ನಾಗ ಶರಾಜನಲ್ಲಿ ಮದ್ದಳೆಕಾಣನಲ್ಲಮನೆಂಬವನು ಕಾಮಲತೆಯೆಂಬ ಪಾತ್ರದ ಸ್ತ್ರೀಗೆ ಮೆಚ್ಚಿರಲು (೫೫೫೦. I, ೫೮). ೧೫. ಕುಣಿಯುವವಳು ; ನರ್ತಕಿ : ನೇತ್ರೋನ್ಮೀಲನವಿಶಾಲನಪಾತ್ರದೆ ನವಸುರವಿಭೇದಮಪಾತ್ರಗಳಲ್ಲದೊಡಾ ಪಾತ್ರಂಗಳಚಲಾಗೆನೆ ಸುತ್ರಾಮನ ಸೂತ್ರಧಾರನಾಗಾಡಿಸಿದಂ (೫೫೫. ೫-೯೩). ೧೬. ದೇವಸ್ಥಾನಗಳಲ್ಲಿ ನರ್ತಿಸುವ ದೇವದಾಸಿ : ಸೂಳೆಗಳಗಂ ಮಂಟಗಂಗಂ ಪಣಿಕೆಗಳಿಗ್ಗಂ ಪಾತ್ರಕ್ಕಂ ದೇಸಿಗ ಭಾತ್ರ ಭೋಗನಕ್ಕಮೆಂದು ಸಮಕಟ್ಟಿ . . . ಕುಡೆ (೫೫೨೨. XI-i, ೫೦-೦೩; 1018); ಪಂಸಿಗಂಗೆ ಮತ್ತರ್ ೧೨ ಪಾಡುವರಿರ್ಬ್ಬಗ್ಗಂ ಮತ್ತರ್ ೩೮ ಪಾತ್ರವೆದರ್ಕ್ಕಂ ಮತ್ತರ್ ೪[೮] ಭೋಗದ ಸೂಳೆಯರ್ ೪ (೫೫೨೨. XI-i, ೦೦೩-೩; ೫. 1070) ; ಪಾತ್ರ ನಾಲ್ವರ್ಗ್ಗಂ ಎರೆಯ ಮತ್ತ ೩೨ ಬೆಗೆ ಮತ್ತ ೩೦ . . . ಸೂಳೆಸಲಂಗೆರೆ ಮತ್ತರು ೪ (೫೫೨೨. XX, ೩೦೦-೯; ೫. 12ನೆಯ ೫೫). ೧೭. (ಕಾರ್ಯದಲ್ಲಿ) ಭಾಗವಹಿಸುವಿಕೆ,—ಭಾಗಿಯಾಗಿರುವಿಕೆ ; ಸಕ್ರಿಯವಾಗಿರುವಿಕೆ : ಈಚೆಗೆ ನಡೆದ ಮಂತ್ರಾಲೋಚನೆಗಳಲ್ಲೆಲ್ಲಾ ಬ್ಲಾಂಡಿಂಗ್ಸನ ಹೆಂಡತಿಯದೇ ಮುಖ್ಯಪಾತ್ರ (೫೦೫೫. ೩೦) ; ಮಾಸವಣಿತಿಹಾಸದಲ್ಲಿ, ನದಿಗಳ ಪಾತ್ರ ಬಹಳ ಪ್ರಧಾನವಾದುದು (೫೫೦. ೦೮).

**ಪಾತ್ರಜಗದಳೆ** = ಒಂದು ಬಿರುದು : ಪಡೆವಳೆ ರಾಮರೊಳಲವ್ವ ಕುಡೆ ಬಾಚಲದೇವಿ ಪಾತ್ರಜಗದಳೆವೆಸರಂ (೫೯. VII, ೫೫೫೦. ೯೬-೨೩; 1113). **ಪಾತ್ರಪಾವುಳ** = ದೇವಾಲಯದ ನರ್ತಕಿ ಮೊದಲಾದ ಪರಿಚಾರಕವರ್ಗ : ಶ್ರೀಸ್ವಯಂಭುಸೋಮೇಶ್ವರದೇವರ್ಗ್ಗೆ ಸೂಳೆಗೇರಿಯಂ ಮಾಡಿಸಿ ಅಲ್ಲಿಯ ಪಾತ್ರಪಾವುಳಕ್ಕಂ ಬಂದ ಸೂಳೆಯರು ಪು[ಗ]ಳೆಗೆ . . . ಸರ್ವ್ವಬಾಧಾಪರಿಹಾರಂ ಸರ್ವ್ವನಮಸ್ಯವಾಗಿ ಪಡೆದು ಬಿಟ್ಟ ಭೂಮಿಯ ಪ್ರಮಾಣಾ (೫೫೨೨. XX, ೬೯-೩೦; 1112); ಕೋಟೆಯ ಕೆಯ್ಯ ಸ್ಥಳದೊಳಗೆ ಪಾತ್ರಪಾವುಳಕ್ಕೆ ಬಿಟ್ಟ ಮತ್ತರು ಇಂನೂರಿ ಇಪ್ಪತ್ತು (೫೨. II, ೦೬-೯೩; 1122) ; ಶ್ರೀವಿಷ್ಣುದೇವರ ರಂಗಭೋಗದ ಪಾತ್ರಪಾವುಳಕ್ಕಂ . . . ವಿಷ್ಣುಭಟ್ಟೋಪಾಧ್ಯಾಯರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಮತ್ತರು ೪೦ (೫೫೨೨. VIII, ೩೬೦-೯; 1125).

[ಸಂ.]

**ಪಾತ್ರಂಬಡೆ** (ಕ್ರಿ). ಯೋಗ್ಯತೆಯನ್ನು ಪಡೆ : ಅರ್ಹತೆಯನ್ನು ಹೊಂದು : ಪುತ್ರಂಬಡೆದೆನೆ ಪರಮಪವಿತ್ರೀಕೃತಭವಸಮುದ್ರತಕ್ಕಾನೀಗಳ್ ಪಾತ್ರಂಬಡೆದೆಂ . . . ಎರಡುಂ ಭವಕ್ಕವೊಳ್ಳಂ ಪಡೆದೆಂ (೫೫೫೫. ೦೦-೨೯). [ಪಾತ್ರ + ಪಡೆ]

**ಪಾತ್ರಂಸೂಳೆ** (ನಾ). ನರ್ತಿಸುವ ವೃತ್ತಿಯನ್ನು ಅವಲಂಬಿಸಿರುವ ವೇಶ್ಯೆ,—ಗಣಿಕಾಸ್ತ್ರೀ ; ದೇವದಾಸಿ : ಚಾಮರ ಹಾಕುವ ವೃತ್ತಿಯನ್ನು, ನರ್ತಿಸುವ ವೃತ್ತಿಯನ್ನು ('ಪಾತ್ರಂಸೂಳೆ') ನೋಡಿದರೆ . . . ಅವರ ವೃತ್ತಿಗಳನ್ನು, ಸ್ಥಾನಗಳನ್ನು ಹೆಸರಿಸಿರುವಂತೆ ಕಾಣುತ್ತವೆ . . . ಸೂಳೆಗೂ 'ಪಾತ್ರಂಸೂಳೆ'ಗೂ ವ್ಯತ್ಯಾಸವನ್ನು ಊಹಿಸಬಹುದು. ಎರಡನೆಯವಳು ನೃತ್ಯಾದಿ ಅಭಿನಯಗಳನ್ನು ಮಾಡುವವಳು (೫೫೦೫. ೧೮೯). [ಪಾತ್ರ + ಸೂಳೆ]

**ಪಾತ್ರಚಾರಿ** (ನಾ). ಪಾತ್ರವನ್ನು ಅಭಿನಯ ಮಾಡುವವನು : ನಟ : ಸೂತ್ರಧಾರಿಣಿ ನೀನು : ಪಾತ್ರಚಾರಿಯು ನಾನು : ಯಾವ ಪಾತ್ರ ವನಿತ್ತರೇನು ನೀನೆನಗೆ (ಅಗ್ನಿಹಂ. ೧೯-೧). [ಸಂ. ಪಾತ್ರಚಾರಿನ್]

**ಪಾತ್ರಚಿತ್ರಣ** (ನಾ). =ಪಾತ್ರನಿರ್ಮಾಣ : ಕಾಳಿದಾಸನ ಶಕುಂತಲೆಯ ಪಾತ್ರಚಿತ್ರಣ ತುಂಬ ಸೊಗಸಾಗಿದೆ (ರೂಢಿ). [ಪಾತ್ರ+ಚಿತ್ರಣ]

**ಪಾತ್ರತೆ** (ನಾ). ಯೋಗ್ಯತೆ; ಅರ್ಹತೆ : ಆಳಸಿಂಗರಾರ್ಯರ ಶಿಷ್ಯ ಯಾಗುವ ಪಾತ್ರತೆಯನ್ನು ಪಡೆದುದಕ್ಕೆ ಹೊನ್ನಮ್ಮನಿಗೆ ಸಂತೋಷ! (ಕರ್ನಾಟ. ೧೯೭) ; ವಿದ್ಯೆಯಿಂದ ಬರಬೇಕಾದ ವಿನಯವನ್ನು ನೀನು ಪಡೆದಿದ್ದೀಯೆ. ಅದೇ ನಿನಗಿಂದು ಈ ಪಾತ್ರತೆಯನ್ನು ಕೊಟ್ಟದ್ದು (ಹೊಸಕ್ಕಿ. ೩೮) . [ಸಂ. ಪಾತ್ರತಾ]

**ಪಾತ್ರತ್ರಿತಯ** (ನಾ). (ದಾನ ತೆಗೆದುಕೊಳ್ಳುವವರಲ್ಲಿ) ಉತ್ತಮ, ಮಧ್ಯಮ ಮತ್ತು ಅಧಮರೆಂಬ ಮೂರು ವಿಧದ ವ್ಯಕ್ತಿಗಳು: ಆ ಭೋಗಭೂಮಿಯೊಳ್ ಪಾತ್ರತ್ರಿತಯದಾನಫಲಂಗಳಿಂದೆ:ಕದ್ವಿತ್ರಿ ಪಲ್ಯೋಪಮಾಯುಷ್ಯರುಂ . . . ಆರ್ಯಾಭಿಧಾನರುಮಾಗಿ ದಂಪತಿ ಸ್ವರೂಪದಿಂ ಪುಟ್ಟಿ (ತಂದ್ರಕ್ರಿ. ೩-೭೭ ವ). [ಪಾತ್ರ+ತ್ರಿತಯ]

**ಪಾತ್ರತ್ವ** (ನಾ). ಅರ್ಹತೆಯನ್ನು ಹೊಂದಿರುವಿಕೆ : ಅತಿಬಾಲ ವಿದ್ಯಾಕುಲಾವಧಿವರ್ಣೋತ್ತಮತ್ವ ಪಾತ್ರತ್ವ ಸೃಷ್ಟ್ಯಧಿಕಾರ ವ್ಯವಹಾರೇ ಶಿತ್ವಾವಧ್ಯತ್ವಾದಂಡ್ಯತ್ವ ಮಾನಾರ್ಹತ್ವ ಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಜಂಪಿ (ಆದಿಪು. ೧೫-೦೭ ವ): ಅತಿಬಾಲ ವಿದ್ಯಾಕುಳಾವಧಿ ವರ್ಣೋತ್ತಮತ್ವಂ ಪಾತ್ರತ್ವ . . . ಪ್ರಜಾ ಸಂಬಂಧಾಂತರವೆಂಬಿಪ್ಪತ್ತುಮಧಿಕಾರಂಗಳುಮನಜಾಪೆ (ಚಾವುಂಪು. ೨೦೩). [ಸಂ.]

**ಪಾತ್ರದ** (ನಾ). ತಕ್ಕಡಿ; ತ್ರಾಸು : "ಪಾತ್ರದಂ ತ್ರಾಸು ಸಮದಂಡಿ ತೂಗುವ ಕೋಲು" (ಮಂಗರಾ. ೧೦೫-೧೪). [ಸಂ.]

**ಪಾತ್ರದತ್ತಿ** (ನಾ). [ಜೈನ] ಮಹಾತಪೋಧನರಾದ ಮುನಿಗಳಿಗೆ ಶುದ್ಧವಾದ ಆಹಾರಾದಿಗಳನ್ನು ಮತ್ತು ಸಂಯಮೋಪಕರಣ ಗಳನ್ನು ವಿಧಿಪೂರ್ವಕವಾಗಿ ನೀಡುವುದು : ಪರಮತಪಶ್ಚರಣನಿರತ ಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿ ವಿತರಣ ರೂಪಪಾತ್ರದತ್ತಿಯುಂ . . . ಬೆರಸು (ಆದಿಪು. ೧೫-೦೭ ವ) ; ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ಪ್ರತಿಗ್ರಹಾರ್ಚನಾ ವಿಧಿ ಪೂರ್ವಕಂ ನಿರವದ್ಯಾಹಾರಸಂಯಮೋಪಕರಣಂಗಳಂ ಕುಡುವುದು (ಚಾವುಂಪು. ೨೦೦): ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ನಿರವದ್ಯಾಹಾರ ಮುಮಂ ಸಂಯಮೋಪಕರಣಮುಮಂ ಕುಡುವುದು (ಆದಿಪು. ೧೬-೧ ವ). [ಪಾತ್ರ+ದತ್ತಿ]

**ಪಾತ್ರದಾನ** (ನಾ). =ಪಾತ್ರದತ್ತಿ : ಪಾತ್ರದಾನವಿಧಾನಮ ವಿನೋದ ಮಾಗಿಯುಮಿಂತು ನಿತ್ಯೋತ್ಸವಂಗಳೊಳೆ ಕೆಲವು ಕಾಲಂ ಸಲೆ (ಆದಿಪು. ೪-೩೩ ವ) ; ಕ್ರಮದೆ ಪರಸ್ಪರದೇಶಂ ಸಮತ್ಸರತ್ವಂ ಸಚಿತ್ತನಿಕ್ಷೇಪ ಪಿಧಾನಮತಿಕ್ರಮ ಕಾಲಮತಿಕ್ರಮಮುಮಕ್ಕುಂ ಪಾತ್ರದಾನಮಂ ಕುಡುವೆಡೆ ಯೊಳ್ (ಸುಕುಮಾ. ೬-೨೨). [ಪಾತ್ರ+ದಾನ]

**ಪಾತ್ರದಾನಿ** (ನಾ). ಪಾತ್ರದತ್ತಿಯನು ಕೊಡುವವನು : ಮಾಯಾ ಚಾರಪರಿಣತರುಮಪ್ಪ ಪಾತ್ರದಾನಿಗಳುಂ ತಿರ್ಯಗ್ಜಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ . . . ರಮಿಯಿಸುವುವು (ಆದಿಪು. ೩-೪೧ ವ). [ಸಂ. ಪಾತ್ರದಾನಿನ್]

**ಪಾತ್ರಧರ** (ನಾ). ಊಟದ ತಟ್ಟೆ ಮುಂತಾದುವನ್ನು ಇಡುವ ಪೀಠ, — ಮಣೆ : ಅಡ್ಡಣಿಗೆ : "ಪಾತ್ರದೆಯೆನೆ ತಟ್ಟೆ ಪಾತ್ರಧರ ಮಡ್ಡಣಿಗೆ [ಪಾಠಾಂ. ಪಾತ್ರಪದಡ್ಡಣಿಗೆ]" (ಮಂಗರಾ. ೬೩-೨೫). [ಸಂ.]

**ಪಾತ್ರಧಾರಿ** (ನಾ). ಪಾತ್ರ ವಹಿಸುವ ವ್ಯಕ್ತಿ ; ನಟ : ಭಾಗವತ ಹಿಮ್ಮೇಳದೊಡನೆ ಕುಳಿತು ಪ್ರಸಂಗವನ್ನು ಹಾಡುತ್ತಿದ್ದರೆ ಪಾತ್ರಧಾರಿಗಳು ಮಾತುಗಳಿಂದ ಅರ್ಥಪ್ರತಿಪಾದನೆ ಮಾಡುತ್ತಾರೆ (ಯಕ್ಷಗ. ೦೬) ; ನೀನೂ ಅದರಾಗ ಪಾತ್ರಧಾರೀ ಆಗೀದಿ (ರಣಹ. II. ೩). [ಸಂ. ಪಾತ್ರಧಾರಿನ್]

**ಪಾತ್ರನಿರ್ಮಾಣ** (ನಾ). ಸಾಹಿತ್ಯಕೃತಿಗಳಲ್ಲಿ ಸೃಷ್ಟಿಸುವ ವ್ಯಕ್ತಿ ಚಿತ್ರಣ : ದುಷ್ಯಂತನ ಪಾತ್ರನಿರ್ಮಾಣಕ್ಕಿಂತಲೂ ಶಕುಂತಲೆಯ ಪಾತ್ರ ನಿರ್ಮಿತಿಯಲ್ಲಿ ಕವಿ ಹೆಚ್ಚು ಗಮನ ಕೊಟ್ಟಿದ್ದಾನೆಂಬು ಹೇಳಿದರೆ ಅದು ಕಾಳಿದಾಸನ ಪ್ರತಿಷ್ಠೆಗೆ ಧಕ್ಕೆ (ಕರ್ಣಾಸಾ. ೭೪). [ಪಾತ್ರ+ನಿರ್ಮಾಣ]

**ಪಾತ್ರನಿರ್ಮಿತಿ** (ನಾ). = ಪಾತ್ರನಿರ್ಮಾಣ : ಸಂಸ್ಕೃತ ನಾಟಕಕಾರರು ಪಾತ್ರನಿರ್ಮಿತಿಯಲ್ಲಿ ನಿಷ್ಣಾತರಲ್ಲ ಎಂಬ ಒಂದು ಅಭಿಪ್ರಾಯವುಂಟು (ಕರ್ಣಾಸಾ. ೭೩). [ಪಾತ್ರ+ನಿರ್ಮಿತಿ]

**ಪಾತ್ರಪಾವುಳ** 'ಪಾತ್ರ' ಪರಾ.

**ಪಾತ್ರವಹಿಸು** (ಕ್ರಿ). ೧. ಪಾಲುಗೊಳ್ಳು ; ಭಾಗವಹಿಸು : ಹಲವಾರು ಉಪಾಧ್ಯಾಯರು ಪಾತ್ರವಹಿಸಿ ಅಂಕ ಅಂಶಗಳನ್ನೂ ಅಭಿ ಪ್ರಾಯಗಳನ್ನೂ ಸೂಚಿಸಿರುತ್ತಾರೆ (ಶಿಕ್ಷಣ. ೩೬೯). ೨. ನಾಟಕ ಮುಂತಾದುವುಗಳಲ್ಲಿ ವೇಷ ಹಾಕು,-ನಟಿಸು : ನೀನೇ ಪಾತ್ರ ವಹಿಸಿ ನೀನೇ ತಗೋಬೇಕು ಬಹುಮಾನ (ರಂಗಪ್ಪಾ. ೯೩). [ಪಾತ್ರ+ವಹಿಸು]

**ಪಾತ್ರವಾಡು** (ಕ್ರಿ). ನರ್ತನ ಮಾಡು; ನರ್ತಿಸು : ಕಾಮಿನಿಯೊ ತಾ ಭರತಸಂಭವ ಭೂಮಿಯೋ ಪೇಳೆನಲು ಮೆಚ್ಚಿದಾ ಶ್ಯಾಮೆ ಮಾಯಾ ದೇವಿ ಮೋಹಿಸಿ ಪಾತ್ರವಾಡಿದಳು (ಪ್ರಭುಲಿಂ. ೪-೩೭) ; ಪಾತ್ರ ವಾಡಿದ ಸತಿಯರಿಗೆ ತಂಪಹಂತೆ ಧಾತ್ರೀಶಗಿಂಪಾಗುವಂತೆ . . . ಪವಿತ್ರಾತ್ಮಕಲೆಯ ಪಾಡಿದರು (ಶಠಸ. ೧೩-೧೦೪) ; ನಟನ ತಾಂಡವ ನೃತ್ಯದುತ್ಕಟ ಶಿರುವು ನೇಟು ಗುಂಡಾಳವ ನಟಿಸಿ ಪಾತ್ರವಾಡಿದನು (ಭೈರಸೂ. I. ೨೫೬). [ಪಾತ್ರ+ಆಡು₁]

**ಪಾತ್ರವಿಕೀರ್ಣ** (ನಾ). ೧. ನದಿ, ತೊರೆ ಮುಂತಾದುವು ಹರಿ ಯುವ ಸ್ಥಳ,-ಪಾತಳಿ. ೨. ನಟಿಸುವವರಿಂದ ಆವೃತವಾದುದು. ೧, ೨ : ಪಾತ್ರವಿಕೀರ್ಣಮಾತ್ತತಸುತಾಳಧರಂ ವಿವಿಧಾಪನದ್ಧವಾ ಸೂತ್ರಿತ ವಂಶಕಾರನಿಕರಂ ಕಳಕಂಠಸಮೂಹಸಂಶ್ರಿತಂ ಚಿತ್ರಿತರೂಪಶೋಭೆಗೆಡೆ ಯಾದುದು ಭಾವಿಸಿ ನೋಡೆ ನಾಡೆ ತೂರ್ಯತ್ರಯಸಂಪ್ರದಾಯಮೆನೆ ಕಾನನಮಾವೃತದಿಕ್ಕುಳಾನನಂ (ತಂದ್ರಕ್ರಿ. ೩-೩೩). [ಪಾತ್ರ+ವಿಕೀರ್ಣ]

**ಪಾತ್ರವೇಶ್** (ನಾ). ನರ್ತಕಿ : ಪರಿವರಿ ಪಾತ್ರವೇಶಗಳು ಸಿಂಗರಿಸಿಯೆ ಹರುಷದೊಳಗೆ ನಡೆತಂದು ಕರದಭಿನಯ ಕಟ್ಟಳೆ ಕಳಾಸಿಕೆಯಿಂದ ಸಿರಿ ಯರಸನನೋಲಗಿಪರು (ಕಂಸಪ. ೬-೧೦೭). [ಪಾತ್ರ+ವೇಶ್]

**ಪಾತ್ರಸಂಕ್ರಮಣ** (ನಾ). ಪಾತ್ರಗಳ ಜೋಡಣೆ : ದರರೂಪಲಕ್ಷಣ ಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱಿ ಭರತದ ಸಾರ ಸರ್ವಸ್ವಮುಮಂ ನಾಟ್ಯಧರ್ಮದೊಳ್ ಸೌಧರ್ಮಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್ (ಆದಿಪು. ೫-೩೮ ವ). [ಪಾತ್ರ+ಸಂಕ್ರಮಣ]

**ಪಾತ್ರಸೃಷ್ಟಿ** (ನಾ). =ಪಾತ್ರನಿರ್ಮಾಣ : ಪಾತ್ರಾಸೃಷ್ಟಿಯು ಕವಿಯ ಪ್ರತಿಭೆಗೆ ಒರಗಲ್ಲಾಗಿರುತ್ತದೆ (ರೂಢಿ). [ಪಾತ್ರ+ಸೃಷ್ಟಿ]

**ಪಾತ್ರಾಭಿಗರ** 'ಪಾತ್ರಾಭಿಗಾರ' ನೋ. ಪಾತ್ರ

**ಪಾತ್ರಾಭಿಗಾರ, ಪಾತ್ರಾಭಿಗರ** (ನಾ). ಊಟಕ್ಕೆ ಮುಂಚೆ (ಶುದ್ಧಿಗಾಗಿ) ಎಲೆಗಳಿಗೆ ಮತ್ತು ಎಲ್ಲ ಅಡಿಗೆಪಾತ್ರೆಗಳಿಗೆ ತುಪ್ಪವನ್ನು ಪ್ರೋಕ್ಷಿಸುವುದು : ಘೃತಸಮುದ್ರದ ಸಡಗರವು ಪಾತ್ರಾಭಿಗಾರವ್ಯಯಕೆ ತೀರುವುದೆ (ತಿಮ್ಮಕ. ೩-೭೦): ಪಾತ್ರಾಭಿಗಾರವಂ ಮಾಡಿಸಿ ಪದಾರ್ಥಂ ಗಳು ಬಡಿಸಂದು (ಕುವಲಯಾ. ೧೦೩). **ಪಾತ್ರಾಭಿಗರ :** ಪರಮ

ಸೌಖ್ಯವನಾಂತು ಶಿಗುಳರು ಪಾತ್ರಭಿಗರ ಪರಮಪಾನ್ನ . . . ತೊಪ್ಪೆ ಪಳಿದ್ಯವ ತರತರದಲಿ ಬಡಿಸಿದರು (ಕೋಶಕ. ೩-೩೦).

[ಪಾತ್ರ + ಅಭಿಗಾರ]

**ಪಾತ್ರಿ** (ನಾ). ೧. ಪಾತ್ರ ವಹಿಸುವವನು : ಈ ಭೂತಾರಾಧನೆಯಲ್ಲಿ ಹಂದಿಯ ಮುಖವಾಡವನ್ನು ಅದರ ಪಾತ್ರಿಯು ಧರಿಸಿ ಕುಣಿಯುವುದು ವಾಡಿಕೆಯಾಗಿದೆ (ಜಾಶಗೀ. ೬೧) ; ಅವರಿಗೆ ಇದಿರಾಗಿ ನಾನನ 'ಪಾತ್ರಿ'ಯು (ಪಾತ್ರ ವಹಿಸುವಾತ) ಕೀಳಿಂಗಸರ್ಪದಂತೆ ಕುಣಿಯುತ್ತ ತಿರುಗುತ್ತಾನೆ (ಹುಹುಂ. ೨೩). ೨. (ಕರಾ) (ದೆವ್ವ, ದೇವರು ಮುಂತಾದ) ಅಲೌಕಿಕಶಕ್ತಿಗಳ ಆರಾಧಕ ; ಅಲೌಕಿಕಶಕ್ತಿಗಳು ಮೈ ಮೇಲೆ ಬರುವ ವ್ಯಕ್ತಿ : ಕೋಲ ಮಾಡಿಸಲು ಉಂಟಾದ ಮುಖ್ಯ ಅಡಚಣೆ ಎಂದರೆ, ದೈವದ ಪಾತ್ರಿ ಬಿರುಮಣ್ಣ ಸತ್ತದ್ದು (ಕುಶಿಕೊ. ೩೫೯) ; ಕಂಡ್ಲೂರಿನ ಪಂಜುರ್ಲಿದೆವ್ವದ ಪಾತ್ರಿಯನ್ನು ಕರೆಯಿಸಿ, ಬೊಬ್ಬರ್ಯನನ್ನು ಬಂಧಿಸಿ . . . ಗೋಳಿಮರದಲ್ಲಿ ಸ್ಥಾನ ಕಲ್ಪಿಸಿಕೊಟ್ಟರು (ರೇಪಹಂ. ೫೭). [ಸಂ. ಪಾತ್ರಿನ್]

**ಪಾತ್ರೀಕರಿಸು** (ಕ್ರಿ). ಅರ್ಹನನ್ನಾಗಿ ಮಾಡು ; ಯೋಗ್ಯನನ್ನಾಗಿ ಮಾಡು : ಧನಿಕಂ ಕಳ್ದೊಡವಗೆ ಕಳ್ಳನ ಪಾತ್ರನ ಗೈದ ತೆರದೆ ನೀಂ ಪುಟ್ಟಿದ ನಂದನೆಯಂ ಬಹುಮಾನಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯ ವಿಧಾನ್ಯಂ (ಜಾಕುಂಶ. ೬೮-೧೨೦).

[ಪಾತ್ರೀಕರಣ೦ + — ಇಸು೨]

**ಪಾತ್ರೀಭೂತ** (ಗು). ೧. ಅರ್ಹತೆಯನ್ನು ಹೊಂದಿದ ; ಯೋಗ್ಯತೆಯನ್ನು ಪಡೆದ : ಪಾತ್ರೀಭೂತ ವಿನೇಯಸಂತತಿಗೆ ಸಮ್ಯಗ್ದರ್ಶನಜ್ಞಾನಚಾರಿತ್ರಂಗಳ್ ನಿಜಮಪ್ಪನಂತಸುಖಮಂ ರಾಗಾದಿಗಳ್ ಜನ್ಮವ್ಯತ್ಯಾ ತ್ರಾಸಂಗಳನೀವುವು (ಜುಣಾಶಾ. ೧-೪). (ನಾ). ೨. ಅರ್ಹತೆಯನ್ನು ಪಡೆದವನು ; ಯೋಗ್ಯ : ಶ್ರೋತ್ರೀಯರುಂ ಕ್ಷತ್ರಿಯರುಂ ಪಙ್ತಿಗುಟ್ಟಿ ಪಶುಯಾಗಂಗಯ್ದ್ದು ಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಮಾಗಿ ಪರಲೋಕದೊಳ್ ಪಾಕಶಾಸನ ಸಮಾನಭೋಗಿಗಳಪ್ಪರ್ (ಶಂಶಹಂ. ೬೩-೪). [ಸಂ.]

**ಪಾತ್ರೆ** (ನಾ). ೧. ಕೊಳಗ, ತಪ್ಪಲೆ, ತಟ್ಟೆ, ಹರಿವಾಣ ಮುಂತಾದ ಸಾಧನ; ಭಾಜನ : " ಪಾತ್ರಯನೆ ತಟ್ಟೆ . . . ಪಾತ್ರೆಯನೆ ಪಡಿಗಮನಿಸಿಕ್ಕ" (ಮುಂಗಶಾ. ೬೩-೨೫); ಕೆಡದಂತೆ ಬಯ್ಚಿಟ್ಟು ಕುಡುವುದೀ ಪಾತ್ರೆಯಂ (ತಿರುಶಿ. ರೀ. ೧೧೦-೧೬); ವಿರಾಜಿಪ್ಪ ಮನೋಜ್ಞ ಪಾಯಸದ ಪಾತ್ರೆಗಳಿಂ . . . ಪಾಲ್ಗೊಸರಿಪ್ಪ ಕಟಾಹಕೋಟಿಯಿಂದೊಪ್ಪಿದುದಂದ ನೂನವಿಭವಂಬಡೆದಾ ಪರಯಜ್ಞಮಂಟಪಂ (ಉದ್ಭಟಿ. ೪-೪೦) ; ಈ ಹಾಲನ್ನು ಮೊಂಡ ಚೂರಿಗಳಿಂದ ಪಾತ್ರೆಗಳಲ್ಲಿ ಸವರಿಕೊಳ್ಳುತ್ತಾರೆ (ಮುಂಜಾಬು. ೪-೪೦). ೨. ನದಿ, ಹೊಳೆ ಮುಂತಾದುವುಗಳ ಒಡಲು.— ಎರಡು ದಡಗಳ ನಡುವಿನ ಪ್ರದೇಶ : ಹೊಳೆ ತುಂಬಿದಾಗ ಅದರ ಪಾತ್ರೆಯು ಅಗಲು ಶಿಲಂ ಫೂಟು ಇರುತ್ತದೆ (ಕಚಾಗ. ೦೯); ಮೇಲಣ ಪರ್ವತಗಳ ನೀರು ಆ ಕೊರಕಲಿನ ಬಂಡೆಗಳ ಮೇಲಿಂದ ಉರುಳಾಡುತ್ತ ಹರಿದು ಬರುವಂತೆ ಕಂಡಿತು. ಇನ್ನು ಅದರ ಪಾತ್ರೆಯನ್ನು ತುಳಿದೇ ಬೆಟ್ಟವನ್ನು ಏರಬೇಕು (ಸ್ವಕೃಹಿ. ೦೫೩).

**ಪಾತ್ರೆಪಡಗ, ಪಾತ್ರೆಪಗಡ, ಪಾತ್ರೆಪಡಗು, ಪಾತ್ರೆಪಡದೆ** = ಕೊಳಗ, ತಪ್ಪಲೆ ಮುಂತಾದ ಪಾತ್ರೆ,–ಸಾಮಾನು : ಮನೆಯ ಪಾತ್ರೆ ಪಡಗಗಳೆಲ್ಲವೂ ದೇವಸ್ಥಾನಕ್ಕೆ ಸೇರಿದುವು (ಪಾಶಪ್ಪ. ೪೮೭); ಕಾಳು ಕಡಿ ತೀರಿದ ಮೇಲೆ ಮನೆಯಲ್ಲಿ ಹೆಂಗಸರು ಮತ್ತು ಹಿರಿಯರಿಗೆ ಕಾಣದಂತೆ ಪಾತ್ರೆ ಪಡಗಗಳನ್ನು ಕೊಟ್ಟು ದೋಸೆ, ಖಾರ ತಿಂದದ್ದೂ ಉಂಟು (ಎಂರೀ. ೩); ದನಕರುಗಳು ಹೋದುವು, ದೊಡ್ಡ ಪ್ರಮಾಣದ ಪಾತ್ರೆ ಪಗಡಗಳೂ ಹರಾಜಾಗಿ ಹೋದುವು (ಕುಸಕೊ. ೯); ಇದ್ದ ಅಲ್ಪಸ್ವಲ್ಪ ಪಾತ್ರೆ ಪಡಗುಗಳು ಸೇಟನಂಗಡಿಯ ಹಾದಿ ಹಿಡಿಯಲೂ ಹೆಚ್ಚು ಕಾಲ ಬೇಕಾಗಿರಲಿಲ್ಲ (ಶಾಗಿಶ. ೨೬); ನಾಳೆ ಉಪವಾಸವಿದ್ದರೂ ಸರಿ, ಅವನ ಪಾತ್ರೆ ಪಡದೆಗಳಲ್ಲಿ ನಾನೇನೂ ಮಾಡಲಿಕ್ಕಿಲ್ಲ (ಶಿ. ೯೨).

**ಪಾತ್ರೆಪರಟೆ, ಪಾತ್ರೆಪರಡಿ, ಪಾತ್ರೆಪರಾಟು** = ಪಾತ್ರೆಪಡಗ : ಹರೇ ಕೃಷ್ಣನ ಪಾತ್ರೆಪರಟೆ . . . ವಶಪಡಿಸಿಕೊಂಡನು (ಶಂಕಿಹು. ೧೧೭); ಅವರು ದಿನಾಲು ಅಡುಗೆಗಾಗಿ ಕಾಳು ಕಡಿಗಳನ್ನು ಹಸನು ಮಾಡಿಕೊಡಬೇಕಾಗುತ್ತಿತ್ತು. ಪಾತ್ರೆ-ಪರಡಿಗಳನ್ನು ತಿಕ್ಕಿ ಕೊಡಬೇಕಾಗುತ್ತಿತ್ತು (ಮತ್ನಕು. ೦೭೩); ನಾಲ್ಕು ದಿನ ಬಿಟ್ಟು ಹೋದರೆ ಇಲ್ಲಿನ ಪಾತ್ರೆ ಪರಡಿ ಉಳಿದೀತೆ ? (ಹುಗಿಯು. ೦೯೧); ಪಾತ್ರೆ ಪರಾಟುಗಳು ಹೋಗಲಿ . . . ಈ ಕಣಜದ ಕಾಳನ್ನಾದರೂ ಬಿಟ್ಟುಬಿಡಿ ಸ್ವಾಮಿ (ಕೇಮುಕೊ. ೬೨).

**ಪಾತ್ರೆಪಳಿಗೆ** = ಪಾತ್ರೆ ಪಡಗ : ಒಗೆಯುವುದನ್ನು ಪೂರೈಸಿದ ಬಳಿಕ ಕೂಡ ನಲ್ಲಿ ಇದ್ದುದಾದರೆ, ಪಾತ್ರೆ-ಪಳಿಗೆಗಳನ್ನು ತೆಗೆದುಕೊಂಡು ಬಂದು ಬೆಳಗುವವಳು (ಕೃತಿಕಂ. ೨೭).

**ಪಾತ್ರೆಪೇಣಿ** = ಪಾತ್ರೆ ಪಡಗ : ವಿಪರೀತ ಪಾತ್ರೆ ಪೇಣಿ ಕುರ್ಚಿ ಮೇಜುಗಳನ್ನು ಅಡುಕಿಕೊಂಡು ಮನೆಯಲ್ಲಿ ಓಡಾಡುವುದಕ್ಕೆ ಜಾಗ ಸಾಲದಂತೆ ಮಾಡುವುದು ಜಾಣತನವಲ್ಲ (ಗೃಶಂ. ೧೬೭). [ ಸಂ. ಪಾತ್ರ ]

**ಪಾತ್ಶಾಹ** 'ಪಾತಶಹ' ನೋ.

**ಪಾತ್ಶ್ಯಾವು** 'ಪಾತಶಹ' ನೋ.

**ಪಾಥ** (ನಾ). ೧. ನೀರಂ ; ಉದಕ : ''ಸಲಿಲಂ ಜೀವನಮಂಬು ತೋಯಮುದಕಂ ಪಾಥಂ . . . ಪಾನೀಯಮೆಂದಿಂತನಾಕುಳದಿಂದಂ ತಚ್ಛಸಲ್ಗೆ ನೀರ್ಗೆ ಪೆಸರಂ ಪರ್ಯಾಯದಿಂ ವಾಗ್ಮಿದರ್'' (ಶಬ್ದಕೋ. ೨೨-೧); ಬಂದೇಚಿದಂ ಧೀರಂ ಶೌರಿ ವರಥಮಂ . . . ಶಸ್ತ್ರತೂಣೀರವ್ರಾತಸನಾಥಮಂ ಧ್ವಜತಿಷ್ಠಾಪ್ರಸ್ಫುರದೀ ಪಾಥಮಂ (ಜಗಾ. ೧೫-೬೦). ೨. ಅಗ್ನಿ. ೩. ಸೂರ್ಯ. [ ಸಂ. ]

**ಪಾಥೆ** (ನಾ). ಒಂದು ಬಗೆಯ ಔಷಧದ್ರವ್ಯ ; ಅತಿಬಜೆ : ಲವಣಪಂಚಕಮಿಂಗು ಪಿಪ್ಪಲಿ ಶುಂಠಿ ತುಂಬುರುಧಾನ್ಯಕಂ ಶಿವೆ ದುರಾಲಭೆ ಪಾಥೆ ಚಿತ್ರಕಮೋಪವಮೆಂಬಿವನೆಲ್ಲಮಂ ಸವನೆ ಕೊಂಡು ಸುರಾನ್ವಿತಂ ಕುಡೆ (ಶೋಕೋಶ. ೯-೩೨೯). [ ? ]

**ಪಾಥೇಯ** (ನಾ). ಪ್ರಯಾಣಕಾಲದಲ್ಲಿ ದಾರಿಯ ಊಟಕ್ಕಾಗಿ ಸಿದ್ಧಮಾಡಿ ತೆಗೆದುಕೊಂಡು ಹೋಗುವ ಆಹಾರವಸ್ತು ; ಬುತ್ತಿ : "ಪಾಥೇಯಂ, ಸಂಬಳಂ—ಈ ೨ ಸಂಬಳಂ" (ಕರಾಹು. ೩೯-೨೦೩); ಮೋಕ್ಷಪುರಪ್ರಸ್ಥಿತ ಭವ್ಯಪಥಿಕಪಾಥೇಯಮಪ್ಪ ಸಮ್ಯಕ್ತ್ವಮುಮಂ (ಅಶಪ್ರ. ೧೨-೦ ವ) ; ರಾಘವಂ ಜಾನಕೀಸ್ಮೇರಮುಖಾಬ್ಜಾಲೋಕನಂ ಲೋಚನಸುಖಮುಖಪಾಥೇಯಮಾಗೆಯ್ದೆವಂದಂ (ಶಂಶಾಮಾ. ೬-೨೯); ಪಾಥೇಯಮಂ ಭೋಜನಂಗೈದು ವಿಶ್ರಮಿಸಾಗಿ ತಳಿತ ಮಾಮರನ ನೆಳಲಂ ಸಾರ್ದನು (ಕೃಜಚಾ. ೨೯-೪೦). [ ಸಂ. ]

**ಪಾಥೇಯಧನ** (ನಾ). ಪ್ರವಾಸಕ್ಕೆ ಬೇಕಾಗುವ ಹಣ ; ದಾರಿವೆಚ್ಚ : ಬೋಧಿದರ್ಶನಚಾರಿತ್ರಮೆ ಮೋಕ್ಷಮಾರ್ಗಪಾಥೇಯಧನಂ (ಅಸಂಪ್ರ. ೩-೬೩). [ ಪಾಥೇಯ + ಧನ ]

**ಪಾಥೋಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : "ಪಾಥೋಜಂ-ತಾವರೆ" (೬ಶಂ. ೯೬); ತತ್ರಪಸ್ವಿಯ ಪಾದಪಾಥೋಜಯುಗಲಮಂ ಚಿತ್ರದೊಳ್ಸ್ಮರಿಸುತ್ತ (ರುಶಪ್ರ. ೩೩-೩೭). [ ಸಂ. ]

**ಪಾಥೋದ** (ನಾ). ೧. ನೀರನ್ನು ಕೊಡುವಂತಹುದು ; ಮೋಡ. ೨. ಕೊನ್ನಾರಿಗಡ್ಡೆ : "ಪಾಥೋದಃ—ಭದ್ರಮುಸ್ತೆ" (೬ಶಂ. ೯೬).

[ ಸಂ. ]

**ಪಾಥೋದಂತಿ** (ನಾ). ನೀರಾನೆ : ಎನಸುಂ ಚೆಣ್ಗಿಯ್ದು ಚೆಲ್ವಂ ಪಡೆವುದು ವಿಚಳತ್ಕೂರ್ಮ ಪಾಠೀನಸಂಘಟ್ಟನಪಾಥೋದಂತಿದಂತಾಹತಮಕರಕರ ಕ್ಷೋಭಸಂಜಾತಕಲ್ಲೋಲ . . . ಅಂಭೋನಿಧಾನಂ (ಎಕ. XV. ೩೯-೩ ; 1180). [ಸಂ. ಪಾಥೋದಂತಿನ್]

**ಪಾಥೋದರ** (ನಾ). ಮೋಡ ; ಮೇಘ. [ಸಂ.]

**ಪಾಥೋಧಿ** (ನಾ). ಸಮುದ್ರ : ಹರ್ಷೋಣ್ಮಾದಕದ್ದುದು ಕಟಿಧ್ವಜಿನಿ, ಘೇ ಘೇ ಜಯಧ್ವನಿಗೈವ ರಾಕ್ಷಸಧ್ವಜಿನಿಯಂ ಕೂಡಿ, ಪಯೋಧಿಯುವ್ವೊರ್ ಪಾಥೋಧಿಯೋಳ್! (ಕೃ.ರಾಮಾ. ೬೬೪ ೩೬೯). [ಸಂ.]

**ಪಾಥೋನಿಧಿ** (ನಾ). = ಪಾಥೋಧಿ : ಅನತರಾಗಿ ಜೀವಿಸದೆ ದುಷ್ಯನ್ನವರ್ ಕೆಲರೋಡಿ ಪೋಗೆ ಪಾಥೋನಿಧಿಯಲ್ಲಿ ಪೊಕ್ಕೊಡವರಂ ತವಿಸಲ್ ಬಟಲಸಂದು (ಕೃಷ್ಣ. ೩-೩೩). [ಸಂ.]

**ಪಾಥೋರುಹ** (ನಾ). = ಪಾಥೋಜ : "ಪಾಥೋರುಹಂ-ತಾವರೆ" (ಟಕಾ. ೯೩). 'ಪಾಥೋರುಹಾಕ್ಷ' ಪರಾ. [ಸಂ.]

**ಪಾಥೋರುಹಾಕ್ಷ** (ನಾ). ಕಮಲದಂತಹ ಕಣ್ಣುಗಳನ್ನುಳ್ಳವನು ; ಕೃಷ್ಣ : ಪಾಥೋರುಹಾಕ್ಷನಂ ದಾರುಕಂ ನಿಟ್ಟಿಸಿ ವರೂಥಮಂ ತಿರುಗಿಸಿದನು (ಕೃ.ಬಾಹ. ೬-೫೬). [ಸಂ. (ಪಾಥೋರುಹ+ಅಕ್ಷಿ+ -)]

**ಪಾದ** (ನಾ). ೧. ಕಾಲು ; ಚರಣ : "ಅಂಘ್ರಿಃ, ಚರಣಃ, ಪಾದಃ —ಈ ೩ ಕಾಲ್'' (ಹಲಾಯು. ೯೪-೩೩೭); ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸಯ್ಯಾ (ಬಸವ. ೨೬೪); ಸಾಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ ವರದಾನೋನ್ನತಭದ್ರಲಕ್ಷಣಪದಂ . . . ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ (ಜಗಂ. ೦-೩); ಹರಿ ಪದ್ಮಾನಂದಿ ಪೀತಾಂಬರರೋಲ್ಲಸಿತಂ ಚಕ್ರಸಹಾಯ ನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಕೃಷ್ಣ. ೬-೨೩). ೨. ಕದಿರು ; ಕಿರಣ ; ರಶ್ಮಿ : "ಉಸ್ರಃ, ಧಾಮ . . . ಪಾದಃ, ವಿರೋಚಃ, ಗೌಃ—ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬-೯೯). ೧, ೨ : ಜನಿಚಿತ್ತಾಹ್ಲಾದಪಾದಂ . . . ಉದ್ಯನ್ಮಂಡಲಾಗ್ರಂ ಸಲೆ ಘನಪವರ್ನೀಶೋಭೆಯಂ ಪೆರ್ಚಿಸುತ್ತಿರ್ಪಿನಮೊಳ್ಪಂ ಪೆತ್ತುತ್ತಿದಾಂ ಬೆಳಗುಗೆ ಜಗಮಂ ಗೋಪನಾರ್ತಂಡದೇವಂ (ಜಗಂ. ೦-೪) ; ಭೂಭೃದ್ವರರಾ ತರೆಯುಲಿ ಮೆರೆಯುತ್ತ ಮೇಣವುವರ ಶಿರಭಾಗದಲಿ ಆ ಎರಡೂ ದಿನಪನ ಪಾದಗಳು ಸೌಖ್ಯವ ತರಲೆವುಗನವರತ (ಕೃಷ್ಣಾಕೋ. ೯೭). ೩. ಪರ್ವತಗಳ ಬುಡ : "ದರಿ ಕಂದರಂ . . . ಗಿರಿಪರ್ಯಂತಂ ಪಾದಂ" (ಚುನ್ನಕೋ. ೨೮-೩). ೪. ಸಣ್ಣಗುಡ್ಡ : "ಪಾದಾಃ, ಪ್ರತ್ಯಂತ ಪರ್ವತಾಃ-ಈ ೨ ಕೆಲದ ಕಿಱುಬೆಟ್ಟುಗಳ್" (ಹಲಾಯು. ೨೮-೦೩) ; "ಕಿಱುಗಿರಿ ಪಾದಮಕ್ಕು'' (ಶಬ್ದಗಾ. ೩೦-೨). ೫. (ಮರದ) ಬೇರು ; ಮೂಲ : "ಪಾದಂ, ಮೂಲಂ-ಈ ೨ ಮರದ ಬೇರ್" (ಹಲಾಯು. ೩೦-೨೯) ; "ಪಾದವೆನೆ ಮೂಲವೆನೆ ಪಸರಿಸಿದ ಬೇರಕ್ಕುಂ" (ಶಬ್ದಗಾ. ೩೦-೨). ೬. ಗುರುಹಿರಿಯರಾದವರನ್ನು ಗೌರವಾರ್ಥವಾಗಿ ಸಂಬೋಧಿಸುವ ಒಂದು ನುಡಿ : ಪಾದ ಪರುಷ ಚಿತ್ತವಿಪುದು (ಜಕಾ. ೪-೨೪); ಹಿಂದೆ ನಾಲ್ಕೈವರ್ಗಳ್ ಕೆಳಗೊಂದು ಸಲ ನಾಸಿಲ್ಲಿಗೆ ಬಂದು, ಗೈದಾಟಕ್ಕೆ ಪಾದದ ತಂದೆ ತಂಗಿ ಸುನಂದೆಯು . . . ಹಿಂದೆ ಬಂದಳು ಪಾಪಿಯಾ (ಶಂಪು. ४೦-೩೦). ೭. ಗುರುಹಿರಿಯರ ಹೆಸರುಗಳ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ ಶಬ್ದ : "ಪಾದಃ, ದೇವಃ, ಭಟ್ಟಾರಕಃ —ಈ ಮೂಱುಂ ಪೆಸರ ಕಡೆಯೊಳ್ ಪೂಜ್ಯಾ(ಚ)ನಂ" (ಹಲಾಯು. ೨೮-೦೩೪). ೮. ಭಾಗ ; ಅಂಶ. ೯. ನಾಲ್ಕನೆಯ ಒಂದು ಭಾಗ,-ಅಂಶ ; ಕಾಲುಭಾಗ : "ಪಾದಂ ತುರ್ಯಾಂಶಂ" (ಚುನ್ನಕೋ. ೦೨೦-೨೨). ೧೦. ಹನ್ನೆರಡಂಗುಲಗಳ ಅಳತೆ : ಒಂದು ಅಡಿ. ೧೧. [ಛಂದ] ಪದ್ಯದ ಒಂದು ಸಾಲು : ಪಾದದೊಳೆರಡನೆಯಕ್ಕರಮಾದರದಿಂದಾದುದಾವುದದನ ಱಿದನಿತಂ ಪಾದದೊಳಿಡುವುದದಕ್ಕಂ ಭೇದೋಕ್ತಿಕ್ರಮವಿಚಾರಿತೋರು ಪ್ರಾಸಂ (ಛಂದೋ. ೨-೩೨); ಒಂದಿದ ಋತುಮತ್ಪದಿಗಳೊಳೊಂದೇ ತೆಱನೆರಡು ಪಾದಮುಂ ಮೇಣ್ ಮುಂದರ್ಕೊಂದರೆ ಬರ್ಕುಂ (ಛಂದೋಂಬು. ೩-೨೬೯ ೧೩೬); ಪದ್ಯವು ಪಾದದಿಂದ ಕೂಡಿರುವುದು. ಪದ್ಯದ ಪಾದವು ಗಣ ಮತ್ತು ಪ್ರಾಸಗಳ ನಿಯಮವುಳ್ಳ ಶಬ್ದಸಂಘಟನೆಯಾಗಿರುವುದು (ಕೃಬಿಾ. ೬೯). ೧೨. [ಜ್ಯೋತಿ] ಒಂದು ನಕ್ಷತ್ರದ ಕಾಲಮಾನದ ನಾಲ್ಕನೆಯ ಒಂದು ಭಾಗ ; ರಾಶಿಯ ಒಂಬತ್ತನೆಯ ಒಂದು ಭಾಗ : ಒಂದು ನಕ್ಷತ್ರಕೆ ನಾಲ್ಕು ಪಾದ, ಒಂಭತ್ತು ಪಾದಕ್ಕೆ ಒಂದು ರಾಶಿ (ಜಾತ್ಕಕ. ६೪-६); "ಪದಪೂರಣೆ ಕಾಲು ತೇಜ ಮೂಱರ್ದಾಕ್ಕುಂ" (ಶಾಶಕಾ. ೦೫೩); "ಅಂಘ್ರಿ ಪದಪೂರು ತೇಜ ಪಾದಾಹ್ವಯಂ" (ಶಾಶಕಾ. ೦೬೦).

ಪಾದ ಬೆಳಸು, ಪಾದ ಬೆಳಸು = (ಗೌರವಾರ್ಥದಲ್ಲಿ ಅಥವಾ ವ್ಯಂಗ್ಯವಾಗಿ) ಬರು ; ಆಗಮಿಸು; ದಯಮಾಡಿಸು : ನಾಮಕರಣದ ದಿನ ಸ್ವತಃ ಅವರೇ ಪಾದ ಬೆಳಸಿ ಬಂದು ನೋಡಿ ಹೋದರು (ಬಿಪ್ರಿಣ. ೦೩) ; ತಾಯಿ ತಕ್ಕ ಮಟ್ಟಿಗೆ ಸಂತೃಪ್ತಳಾಗಿ ದಿವಾನಖಾನೆಯ ಕಡೆಗೆ ಪಾದ ಬೆಳಸಿದಳು (ಘೃಸರು. ೫೭೭). [ಸಂ.]

**ಪಾದಕಟಕ** (ನಾ). ಕಾಲಿಗೆ ಹಾಕಿಕೊಳ್ಳುವ ಕಡಗ, -ಬಳೆ : "ಸಿಂಜಿನೀ, ಪಾದಕಟಕಃ—ಈ ೨ ಕಾಲ ಕಡಗಂ" (ಹಲಾಯು. ೯೨-೪೦೬): "ಪಾದಾಂಗದಂ . . . ಪಾದಕಟಕಃ—ಅಂದಿಗೆ, ಕಾಲುಸರಪಣಿ, ಪಾಗಡ, ಕಾಲುಕಡಗ, ಕಾಲುತೊಡಿಗೆ" (ಸಿದ್ಧಾಂತ. ೨೦೦). [ಪಾದ+ಕಟಕ₁]

**ಪಾದಕಡಗ** (ನಾ). = ಪಾದಕಟಕ : ಅಭಿಮನ್ಯುವನ್ನು ರಮಣೀಯವಾದ ಪೀತಾಂಬರಗಳಿಂದಲೂ . . . ಪಾದಕಡಗಗಳಿಂದಲೂ ಅಲಂಕರಿಸಿ (ಕೃಷಾಂ. ೦೨೪). [ಪಾದ+ಕಡಗ₁]

**ಪಾದಕೃಚ್ಛ್ರ** (ನಾ). ಪ್ರಾಯಶ್ಚಿತ್ತರೂಪವಾಗಿ ನಾಲ್ಕು ದಿನಗಳು ಮಾಡುವ ಒಂದು ವ್ರತ : ೧ ಮೊದಲ ದಿನ ಒಪ್ಪತ್ತು ಹಗಲು ಊಟ, ಎರಡನೆಯ ದಿನ ಒಪ್ಪತ್ತು ರಾತ್ರಿ ಊಟ, ಮೂರನೆಯ ದಿನ ಅಯಾಚಿತ ಅನ್ನ (ಬೇಡದ ಆಹಾರ), ನಾಲ್ಕನೆಯ ದಿನ ಪೂರ್ಣ ಉಪವಾಸ-ಹೀಗೆ ವ್ರತ ಮಾಡುವಿಕೆ. ಇದರ ಇನ್ನೊಂದು ಪ್ರಕಾರ-ಮೊದಲ ದಿನ ರಾತ್ರಿ ಊಟ, ಎರಡನೆಯ ದಿನ ಉಪವಾಸ, ಮೂರನೆಯ ದಿನ ಊಟ, ನಾಲ್ಕನೆಯ ದಿನ ಉಪವಾಸ : ದೋಷಪರಿಹಾರಾರ್ಥವಾಗಿ ಶರೀರಬಾಧಾತ್ಮಕತ್ವದಿಂ ಮಹತ್ಕೃಚ್ಛ್ರಸಾಧ್ಯಂಗಳಾದ ಪಾದಕೃಚ್ಛ್ರ ಮುಂತಾದವುಗಳ ಪಕ್ಷಮಾಸಾದಿಕಾಂಗಳಲಿ ಅನ್ನಮಂ ಪೇರ್ಚಿಸಿ ತಗ್ಗಿಸಿಕೊಂಬುದು (ಶಿಪೀಠ. ೦೩೯) : ಒಂದು ಉಪವಾಸಮಂ ಮಾಡಿ ಮರುದಿನ ಪಾರಣೆಯೇಕಭುಕ್ತ ಮೊದಲಾದ ನಾಲ್ಕುದಿನದ ವ್ರತವೂ ಪಾದಕೃಚ್ಛ್ರವೆನಿಸೂದು (ಕಾಶೀಖಂ. ೯೯೨-೩). [ಸಂ.]

**ಪಾದಗಟ್ಟಿ** (ನಾ). ೧. ಕೇರನ್ನು ಕಟ್ಟಿ ಹೊರಡಿಸುವ ಸ್ಥಳ : ಕಳಸದಾರತಿ ಹಿಡಿದ ಐದೆಯರ ಗುಂಪು ಕೇರಿಗೂ ಪಾದಗಟ್ಟೆಗೂ ಆರತಿಯನ್ನು ಬೆಳಗಿತು (ಜಪೀ. ೦೯೩); ಅವನಿಗೆ ಊರಿನ ಮುಂದಿನ ಪಾದಗಟ್ಟೆಯ ಬಸವನೂ ಬೇಕು ; ಊರ ಹೊರಗಿನ ಗರುಡಗಂಬದೆದುರಿನ ಹನುಮನೂ ಬೇಕು (ಕಬ್ಬಣ. ೦). ೨. ಕೆಳಗಿನ ಭಾಗ ; ಅಡಿಭಾಗ : ಪಾದಚಾರಿಯಾಗಿಯೇ ಅನಂತ 'ಚಾರುವಿಹಾರ' ನೋಡಲು ನಡೆದ . . . ಪಾದಗಟ್ಟೆ ಮುಟ್ಟಿ, ಮೇಲೆ ಕೆಳಗೆ ನೋಡಿ ಮತೆಗೆ ಹಿಂತಿರುಗಿದ (ಜಲಾಶ. ೫೭). [ಪಾದ+ಕಟ್ಟೆ₁]

**ಪಾದಗಾಣಿಕೆ** 'ಪಾದಗಾಣ್ಕೆ' ನೋ.

**ಪಾದಗಾಣ್ಕೆ, ಪಾದಗಾಣಿಕೆ** (ನಾ). ಪೂಜ್ಯರಾದ ಗುರು ಹಿರಿಯರಿಗೆ ಒಪ್ಪಿಸುವ ಕಾಣಿಕೆ : ವಿಕ್ರಮನಾಯಕಂ ಮತ್ತೆ ಕಿಲಂಬರ್ ಧೀರ ಕಿರಾತರುಂ ಬಂದು ವಂದಿಸಿ ಪಾದಗಾಣ್ಕೆ ಮಾಡಿದರ್ (ಹಮ್ಮೀ. ೯-೩೨ ವ). **ಪಾದಗಾಣಿಕೆ** : ಗುರುಗಳಿಗೆ ಪಾದಗಾಣಿಕೆ ಅರ್ಪಿಸಬೇಕು (ಜಾ). [ ಪಾದ+ಕಾಣ್ಕೆ ]

**ಪಾದಘಾತ** (ನಾ). ೧. ಹೆಜ್ಜೆಯ ಹೊಡೆತ, — ಪೆಟ್ಟು. ೨. ಹೆಜ್ಜೆಯಿಂದುಂಟಾಗುವ ಶಬ್ದ ; ಹೆಜ್ಜೆಸದ್ದು : ತಾಯಿಯ ಪಾದಘಾತ ಮಂದವಾಗಲು ತನ್ನ ವಿಚಾರವನ್ನು ಮುಂದುವರಿಸುವನು (ಅಹುಂಕ. ೦). [ ಪಾದ+ಘಾತ ]

**ಪಾದಚಾರಿ** (ನಾ). ೧. ಕಾಲುನಡಗೆಯಲ್ಲಿ ಸಾಗುವಂತಹುದು : ಬರುವಾಗ ದುರದೃಷ್ಟ ಬೇಗನೆ ಬರುವುದು ಧಾವಿಸಿ ಕುದುರೆಯನೇರಿ ಬೀಳ್ಕೊಂಡು ಹೋಗುವಾಗ ಮೆಲ್ಲನೆ ಹೋಹುದು ಹೋಹುದು ಅದು ಪಾದಚಾರಿ (ಇಂಚಾಆ. ೦೩೨-೮೩). ೨. ಕಾಲುನಡಿಗೆಯಲ್ಲಿ ಸಾಗುವ ವ್ಯಕ್ತಿ : ಪ್ರಭುಗಳೂ ಇವರ ಸಂಗಡ ಸೇರಿ, ಪಾದಚಾರಿಗಳಾಗಿ ಬೆಟ್ಟಗುಡ್ಡಗಳನ್ನು ಹತ್ತಿ ಇಳಿದು . . . ವನಭೋಜನ ಮಾಡಿದುದುಂಟು (ಶಾಂತಲಾ. ೦೨೨); ರಥದಿಂದ ಇಳಿದು, ಪಾದಚಾರಿಯಾಗಿ ಗುರುವಿನ ಬಳಿಗೆ ಸಾರಿ, ವಂದನೆ ಮಾಡಿ, ಒಂದು ಕಡೆ ನಿಂತಳು (ಹಸ್ತಕು. ೦೯). ೩. ಕಾಲುನಡೆಯ ಸೈನಿಕ ; ಪದಾತಿ ; ಕಾಲಾಳು : "ಪದಾತಿಃ . . . ಪದಿಕಃ, ಪಾದಚಾರೀ — ಈ ೮ ಕಾಲಾಳ್" (ಹಲಾಯು. ೩೯-೨೯೩). [ ಸಂ. ಪಾದಚಾರಿನ್ ]

**ಪಾದಚ್ಛಾಯೆ** (ನಾ). ಕಾಲಿನ ಪಡಿಯಚ್ಚು ; ಹೆಜ್ಜೆಯ ಪಡಿಯಚ್ಚು : ಪಾದಚ್ಛಾಯೆಯುಮನಿಟ್ಟು ಜೋಯಿಸದಭಿಪ್ರಾಯಂಗಳಿಂ . . . ಪೇಟ್ಟು ಜೋಯಿಸಮುದಾರ್ಗಂ ಮರ್ತ್ಯರೊಳ್ ದುರ್ಲಭಂ (ಸುಕುಮಾ. ೩-೨೦). [ ಸಂ. ಪಾದಚ್ಛಾಯಾ ]

**ಪಾದಜ** (ನಾ). ಭಗವಂತನ ಪಾದಗಳಿಂದ ಜನಿಸಿದವನು ; ಶೂದ್ರ : ಸಂಪದದೊಳನೂನರಕ್ಕೆ ಪರದರ್ ಸಲೆ ಧಾರ್ಮಿಕರಕ್ಕೆ ಪಾದಜ[ಶಾಸಂ. ಶೂದ್ರ]ರ್ (ಹಂಪಿಶಾ. ೩೦೨-೮); ನಿಜ ಕೃಷಿವ್ಯವಸಾಯದಲಿ ತದ್ದ್ವಿಜಾಲದ ಶಿಶ್ರೂಷೆಯಲಿ ಪಾದಜರು ಕೃತ್ಯರು (ಕುಮಾ೯. ೦೯-೪೩). [ ಸಂ. ]

**ಪಾದತಲ, ಪಾದತಳ** (ನಾ). ಹೆಜ್ಜೆಯ ಕೆಳಭಾಗ ; ಅಂಗಾಲು : ಮುಖ ಚಂದ್ರಕಾಂತವು ಕುಂತಲ ನೀಲವು ಪದ್ಮರಾಗವು ಪಾದತಲವು (ಇಂಚಾ. ೯೯-೩೩). **ಪಾದತಳ** : "ಪಾದತಳಮಾದಡಿಯೆನೆ" (ಚ್ಯುತೋ. ೩೯-೨) ; ಸಿರದಲುದಯ ತತ್ತೀಸಕೋಟಿ ದೇವತೆಗಳು ಪಾದತಳದಲ್ಲಿ ಭೂಮಿ ಜನನವು (ಚಾಪ. ೩೪೬). [ ಪಾದ+ತಲ ]

**ಪಾದತಳ** 'ಪಾದತಲ' ನೋ.

**ಪಾದತಿಱುಗೆ** (ನಾ). ಪಾದಪೂಜೆಯ ಸಮಯದಲ್ಲಿ ಕೊಡುವ ಕಾಣಿಕೆ : ಹೊರಣಾ ದಂಡದೋಷದಿಂ ಪಾದತಿಱುಗೆಯಂ ಕೊಂಬು ದಿಲ್ಲೆಂದು [ಒ]ಂದು ಹೊನ ಪಾದಪೂಜೆಯಂ ಕೊಂಡು (ಎಕ. ೪, ೩೦-೩, ೧೩೩೧). [ ಪಾದ+ತಿಱುಗೆ ]

**ಪಾದತ್ರಾಣ** (ನಾ). ೧. ಕಾಲಿನ ಶಕ್ತಿ, — ಬಲ : ಧಾರವಾಡದ ಜೀವಕ್ಕೆ ಪಾದತ್ರಾಣ ಬಹಳ ಬೇಕು (ಜೀವಕ್ಕ. ೦೯೦). ೨. ರಕ್ಷಣಾರ್ಥವಾಗಿ ಪಾದಗಳಿಗೆ ತೊಡುವ ಸಾಧನ ; ಮೆಟ್ಟು ; ಪಾದರಕ್ಷೆ : " ಪಾದತ್ರಾಣಮುಪಾನತ್ [ಪಾದುಕೆ] ತಾನೀತದನುಪದೀ[ನಾ]ನಾಮಂ " (ಚ್ಯುತೋ. ೯೯-೨೯). [ ಪಾದ+ತ್ರಾಣ ]

**ಪಾದದಾಹ** (ನಾ). ಒಂದು ವಿಧವಾದ ವಾತರೋಗ ; ಪಿತ್ತರಕ್ತದಿಂದ ಕೂಡಿದ ವಾತಸಂಚಾರದಿಂದ ಉಂಟಾಗುವ ಉರಿವಾಯು : ಮುಡಿವಾಳ, ಲಾವಂಚ . . . ಪ್ರಾತಃಕಾಲದಲ್ಲಿ ದುಡ್ಡು ೧ ತೂಕ ಚೂರ್ಣವಂ ಜೇನುತುಪ್ಪದಿಂ ಕಲಸಿ ಸೇವಿಸೆ ಕ್ಷಯ, ರಕ್ತಪಿತ್ತ, ಪಾದದಾಹ, ಪ್ರಮೇಹ . . . ರಕ್ತಾರ್ಶರೋಗ ಸಹ ಕೆಡುಗುಂ (ವೈದ್ಯ. ೨೯೯). [ ಸಂ. ]

**ಪಾದಧೂಳಿ** (ನಾ). ಪಾದಕ್ಕೆ ಹತ್ತಿರುವ ಧೂಳು : ಅಂತರಂಗ ದೊಳಾಣ್ಮನ ಪಾದವ ಭಜಿಪ ಭಾವೆಯರ ಪಾದಧೂಳಿಗಳಿಂದ ಪಾವನವಹುದೀ ಮೇದಿನಿಯೆನೆ ಮಿಕ್ಕುದೇನು (ಹರಿ. ೨-೩); ನಮ್ಮ ತಾಯಿಯ ಪಾದಧೂಳಿಯು ನಮ್ಮ ಪ್ರಾಣದ ನಿಲುಗಡೆ (ಕಂಚು. ೯೩-೨೩); ಶಿವಶರಣ — ಸಾಧು — ಸತ್ಪುರುಷರ ಪಾದಧೂಳಿಯಿಂದ ಕನ್ನಡನಾಡು ಪಾವನವಾಗಿದೆ (ಕನ್ನಶಾ. ೦೩). [ ಪಾದ+ಧೂಳಿ (—ಧೂಲಿ) ]

**ಪಾದನ್ಯಾಸ** (ನಾ). ಹೆಜ್ಜೆಯಿಡುವಿಕೆ : ಪಾದನ್ಯಾಸವಿಳಾಸಮಾರ್ಗರೆಯು ವಿಥ್ಯಾಧ್ಯಾಂತಮಂ ತಳ್ದು . . . ಬಾವರಿಗೆ ವಂದಂ ಪಾರ್ಶ್ವ ಯೋಗೀಶ್ವರಂ (ಪಾರ್ಶ್ವ. ೦೩-೮೩). [ ಪಾದ+ನ್ಯಾಸ ]

**ಪಾದಪ** (ನಾ). ಬೇರಿನಿಂದ ನೀರು ಕುಡಿಯುವುದು ; ಮರ, ಗಿಡ ಮುಂತಾದುವು : "ತರು ಶಾಖಿ ಪಾದಪಂ . . . ಶಿಖಿ ವೃಕ್ಷಂ" (ಚ್ಯುತೋ. ೩೦-೦); ಪಾದಪಂಗಳ ಪುಷ್ಪಸ್ತಬಕಂಗಳಂ ಮುಚ್ಚುತಂ (ಶಾರಂಭ. ೩೩೦); ಕಡಿದರರಿಭಟಪಾದಪವನಡಗೆಡಹಿದರು ಗಜಗಿರಿಗಳನು (ಕುಮಾ೯. ೩-೯). [ ಸಂ. ]

**ಪಾದಪಟ್ಟ** (ನಾ). ಗೌರವಸೂಚಕಚಿಹ್ನೆಯಾಗಿ ಕಾಲಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕಾಲ ತೊಡರು : (೧). [ ಸಂ. ]

**ಪಾದಪಲ್ಲಟ** (ನಾ). (ಪದ್ಯದ) ಸಾಲುಗಳ ಅದಲು ಬದಲು : ಈ ಮೇಲಿನ ಪದ್ಯಗಳಲ್ಲಿ ಅಕ್ಷರಪಲ್ಲಟ, ಪದಪಲ್ಲಟ, ಪಾದಪಲ್ಲಟ ಮತ್ತು ಪ್ರಾಸಪಲ್ಲಟಗಳೂ ಕಂಡುಬರುವುದನ್ನು ಗಮನಿಸಬಹುದು (ಕುಮಾರಂ. ೯೩). [ ಪಾದ+ಪಲ್ಲಟ ]

**ಪಾದಪಾತ** (ನಾ). ಮಲ್ಲಯುದ್ಧದಲ್ಲಿಯ ದೋಷಗಳಲ್ಲಿ ಒಂದು ; ಕಾಲಿನಿಂದ ಒದೆಯುವುದು : ಕಳಂದೊಕ್ಕ ನಿಜಸುಗೆಯಾದ್ದ ನಖಹತಿ ದಶನಹತಿ ಪಾದಪಾತಂ ಮುಷ್ಟಿಪಾತವೆಂಬ ದೋಷಂಗಳ್ ಪೂರ್ವದ ನಾಲ್ಕುಂ ಸ್ಥಾನದೊಳಂ . . . ಪಲತೆಱದ ಪಾತಂಗಳೊಳಂ ನೆರೆದು (ಸಂಕ್ರಪ. ೩-೩೩ ವ). [ ಪಾದ+ಪಾತ ]

**ಪಾದಪಾಶ** (ನಾ). ೧. ದನ, ಕರು ಮುಂತಾದ ಪ್ರಾಣಿಗಳ ಕಾಲಿಗೆ ಕಟ್ಟುವ ಹಗ್ಗ : ಪಾದಪಾಶ—ಪಾದಪಾಸ (ಜಾರ. ೨೯೨ ಕೃಷೋ). ೨. [ ಛಂದ ] ಮಧ್ಯಲಘುವುಳ್ಳ ಗಣ ; ಅಗ್ನಿಗಣ ; ರಗಣ : ಇದಱಂ [ ತೆಯಪ್ಪ ] ನಿಯಮಂಗಳಾದಯಿಸ ತೃತೀಯ [ ಪಾದದೊಳ್ ] ಪಾದಪಾಶ [ ಸುರಪಾರ್ಕಹರಂ ] ಮದವದ್ಗಜೇಂದ್ರಗತಿ ನಾಗವರ್ಮಾ (ಛಂದೋಂಬು. ೩-೨೦೩). [ ಸಂ. ]

**ಪಾದಪಾಶನ** (ನಾ). ೧. ಮರ, ಗಿಡ ಅಥವಾ ಸೌದೆಯೇ ಆಹಾರ ವಾದುದು ; ಬೆಂಕಿ ; ಅಗ್ನಿ. ೨. [ ಛಂದ ] ಮಧ್ಯಲಘುವುಳ್ಳ ಗಣ ; ಅಗ್ನಿಗಣ : ನಯಾಗ ಮಿರೆ ಪಾದಪಾಶನನಿದಿರೆ ಬಂದು ಕೋಕನದವದನೆ ನಾಶಿಯಂ ವಿನಾಶಮಿದುವೆ ನಾಮದಿಂ (ಛಂದೋಂಬು. ೨-೦೭). [ ಪಾದಪ+ಅಶನ ]

**ಪಾದಪೀಠ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ ; ಕಾಲುಮಣೆ : ವಜ್ರಾ ಪೂಜಮಾಡುವ ತೆಱನೆರ್ದೆಯೊಚ್ಚತಮನನುವದಿಸಿ ಪೂಳಿವ ಪಾಕಟುವ ಕಿಕ್ಕೆಱಗಿಱಿದ ಪೊನ್ನ ಪೂಂಗಳ ತಾಱಗಳ್ ಪೊಳಲಿಸಿ ಪಾದಪೀಠದ

ಮೊದಲೊಳ್ (ಶಾಂತಿ. ೦೦-೪೦); ಯಾದವವಂಶೋದ್ಭವನ್ಯೋವಣಿಬ್ರಜ ಪ್ರಥಾಲಿಂಗಿತಪಾದಪೀಠಂ (ಶಾಇ. ೫೫. ೯೬-೬; 1078); ವಿನಯಂ ಗುಂದದೆ ಪಾದಪೀಠತಳದೊಳ್ ಕುಳ್ಳಿರ್ದ ಲೋಕೈಕಮಿತ್ರನ ನೊತ್ತಂಬದಿನೆತ್ತಿ (ಕ್ರಿಕೃ. ೯-೬೬). [ ಪಾದ+ಪೀಠ ]

**ಪಾದಪೂಜೆ** (ನಾ). ೧. ಗುರುಹಿರಿಯರ ಪಾದಗಳನ್ನು ಪೂಜಿಸುವುದು : ಅಂತು ಮಹಾಜನರ ಪಾದಪೂಜೆಯುಂ ಕೊಟ್ಟು (ಕೊಪ್ಪ. ೬-೩೬; 1079); ಮೇಗಣ ಅರಿವಮತ್ತರು ಗದ್ದೆಯ ನೀರ್ಮ್ಮಾರಿಗಂ ಕ್ರಯಾವಂ ಕೊಟ್ಟು ಊರಿಂಗೆ ಪಾದಪೂಜೆಯು ಕೊಟ್ಟು ಮಾನ್ಯವಾಗಿ ಆ ದೇವರಿಗೆ ಬಿಟ್ಟರು (ಶಾಇ. ೫೫. ೬೭-೩೦; 1132). ೨. ಮಠಾಧಿಪತಿಗಳಿಗೆ ಪಂಥದ ಮೂಲಪುರುಷರ ಪಾದುಕೆಗಳಿಗೆ ಮಾಡುವ ಪೂಜೆ : ಇಂದು ಅವರ ಮನೆಯಲ್ಲಿ ಶೃಂಗೇರಿಮಠದ ಸ್ವಾಮಿಗಳನ್ನು ಕರೆಸಿ ಪಾದಪೂಜೆ ನಡೆಸಿದರು (ಕೊಂ). ೩. (ಅಲಂ) ಒದೆಯುವುದು; ಥಳಿಸುವುದು : ಸತ್ತರ್ಗೆ ಪಾದಪೂಜೆಯನೆಸಪ ಪಯುಗಾಳ್ (ಅಚ್ಚ. ೧೦-೧೦೭); ಮೂರನ್ನು ನಾಲ್ಕು ಜನ ಕಳ್ಳರಿಗೆ ಅವರು 'ಪಾದಪೂಜೆ'ಯನ್ನು ಮಾಡಿದರು (ಎಚ. ೬೨೦). [ ಪಾದ+ಪೂಜೆ ]

**ಪಾದಪೂರಕ** (ನಾ). ಪದ್ಯದ ಸಾಲನ್ನು ಪೂರ್ಣಗೊಳಿಸಲು ಪದ ಅಥವಾ ಅಕ್ಷರವನ್ನು ಸೇರಿಸುವುದು; ಸಾಲನ್ನು ಭರ್ತಿಮಾಡುವುದು : ತನ್ನ ಆಶ್ರಯದಾತನಿಗೆ ಆದರವನ್ನು ತೋರಿಸಲೂ . . . ಪಾದಪೂರಕವಾಗಿಯು. ನೃಪತುಂಗನ ಹೆಸರನ್ನು ಗ್ರಂಥಕಾರನು ಬಳಸಿರುವನೆಂಬುದು ಸ್ಪಷ್ಟವಾಗಿದೆ (ಕಪಾ. ೩೬). [ ಪಾದ+ಪೂರಕ ]

**ಪಾದಪೂರಣ** (ನಾ). ಪದ್ಯದ ಪಾದಗಳನ್ನು ಪೂರ್ಣಗೊಳಿಸುವುದು : " ನೆಱೆ ಸಲೆ ತವೆ ಮಿಗೆಯೆಂಬುವು ಪಾದಪೂರಣಾರ್ಥಂ" (ಶಮ. ೩೯); ಹಕಾರಾತ್ಪ್ರಾಗಿ ಪಾದಪೂರಣಕಾರ್ಯದಲ್ಲಿ ಅವುಗಳಿಗೆ ಸವಮ್ನು ಹೋಗುತ್ತದೆ ; ಅವುಗಳಿಂದ ಮಾತ್ರಾರಕ್ಷಣವಾಗುವುದು ಮಾತ್ರ (ಕಂಟ. II. ೫೦೦). [ ಪಾರದ+ಪೂಣ ]

**ಪಾದಪೆಂಡೆಯ** (ನಾ). ದಿರುಂದಿನ ಚಿಹ್ನೆಯಾಗಿ ಕಾಲಲ್ಲಿ ಧರಿಸುವ ಒಂದು ಬಗೆಯ ಕಡಗ : ಪಾದಪೆಂಡೆಯಪಡೆದೆಸವ ಪೆಂಪು (ಚಾಚ.೬೩). [ ಪಾದ + ಪೆಂಡೆಯ ]

**ಪಾದಪ್ರಕ್ಷಾಲನ**, ಪಾದಪ್ರಕ್ಷಾಳನ (ನಾ). ಕಾಲುಗಳನ್ನು ತೊಳೆಯುವುದು : ತನ್ನ ನಿಯೋಗಲುಪಾದಪ್ರಕ್ಷಾಲ [ ಜಾಪಂ. ೪ ] ನೋದಕದೊಳ್ಪರಳ್ದು (ಅಂಭ. ೬-೨ ವ); ಪಾದಪ್ರಕ್ಷಾಲನಮುಂ ಸಾದರದಿಂ ಮಾಡಿ ಸಾರ್ತರಲ್ (ಪುಚಕೀ. ೦೦-೩೦). ಪಾದಪ್ರಕ್ಷಾಳನ : ಶ್ರೀಕೃಷ್ಣನು ಯಜ್ಞರಕ್ಷಣೆಯ ಭಾರವನ್ನೂ ಬ್ರಾಹ್ಮಣರ ಪಾದಪ್ರಕ್ಷಾಳನಾದಿ ಕೈಂಕರ್ಯವನ್ನೂ ವಹಿಸಿದನು (ಅಕೃಕ. ೦೦೦). [ ಪಾದ+ಪ್ರಕ್ಷಾಲನ ]

**ಪಾದಪ್ರಕ್ಷಾಳನ** 'ಪಾದಪ್ರಕ್ಷಾಲನ' ನೋ.

**ಪಾದಪ್ರಣತ** (ನಾ). ಪಾದಗಳಿಗೆ ನಮಸ್ಕರಿಸಿದವನು, –ಬಾಗಿದವನು : ದ್ವಾರಪಾಲಕರರಸುಂಗವರ ಬರವನಱಿಪಿ ಬಂದು ಕಾಣಿಸೆ ಲೋಕಾಂತಿಕದೇವರವಿಶೇಷ್ಯಕೂದಪ್ರಣತರಾಗಿ (ಶಾಂತಿ. ೦೦-೯೭ ವ). [ ಪಾದ+ಪ್ರಣತ ]

**ಪಾದಪ್ರಣಾಮ** (ನಾ). ಕಾಲಿಗೆ ನಮಸ್ಕಾರ ಮಾಡುವುದು: ಕಾದಂಬರಿಯು ಮಯ್ಯು ವಲವುಗೂಡಿ ಚಂದ್ರಾಪೀಡನಿಗೆ ಪಾದಪ್ರಣಾಮವ ಮಾಡಿ . . . ಕುಳಿತುಕೊಂಡಳು (ಕಕಾ. ೫೩). [ ಪಾದ + ಪ್ರಣಾಮ ]

**ಪಾದಬಂಧ** (ನಾ). (ಆನೆ ಮೊದಲಾದವುಗಳ) ಕಾಲಿಗೆ ಕಟ್ಟುವ ಸರಪಣಿ; ಸಂಕೋಲೆ : "ನಿಗಳಃ, ಪಾದಬಂಧಃ, ಹಿಂಜೀರಃ, ಶೃಂಖಲಾ, ಅಂದುಕಃ — ಈ ೫ ಆನೆಯ ಕಾಲ್ಗಟ್ಟು" (ಕರಾಟು. ೩೬.೬೦); " ಹಿಂಜೀರ ಮಂದುಕಂ ಶೃಂಖಲಾ ಪಾದಬಂಧಂ ನಿಗಳಮೆಂಬಲು ಸಂಕಲೆಯೆನಿಪ್ಪುಂ" (ಶುಂಗಾ. ೯೬-೨). [ ಪಾದ+ಬಂಧ ]

**ಪಾದಮಾರ್ಗ** (ನಾ). ೧. ಕಾಲುನಡಗೆಯ ದಾರಿ; ಕಾಲುದಾರಿ. ೨. ಕಾಲುನಡಗೆ : ಅವಧಿಜ್ಞಾನಿಗಳ್ ಪವನಮಾರ್ಗದಿಂದಿಬ್ಬರುಂ ಕೆಲರು ಪಾದಮಾರ್ಗದೊಳ್ ಕಿಱಿದುತ್ತರದೊಳ್ ಅವನತಿಪುರಸ್ಸರಮಿದಿರ್ಗೊಂಡು (ಆದಿಪು. ೭-೩೩ ವ); ಪಾದಮಾರ್ಗದಿಂ ಪೋಗಿ ಸೌಧರ್ಮಕಲ್ಪದೊಳಗಣ್ ಕೃತಕಚೈತ್ಯಾಲಯಂಗಳಂ ಕಲ್ಪಪಾದಪಪ್ರತಿಪಾದಿತ ವಿವಿಧಾರ್ಚನಂ ಗೆಯ್ದರ್ಚಿಸಿ (ಅಂಕೃತಿ. ೯-೬೮ ವ). [ಪಾದ + ಮಾರ್ಗ]

**ಪಾದಮೂಲ**, ಪಾದಮೂಳ (ನಾ). ೧. ಕಾಲಿನ ಕೆಳಭಾಗ ; ಅಂಗಾಲು. ೨. ದೇವಸ್ಥಾನದ ಸೇವೆಯಲ್ಲಿ ಕಾಯಮ್ಮಾಗಿ ನಿರತರಾದ ಪರಿಚಾರಕ ವರ್ಗ: ಶ್ರೀಮದ್ದಿವ್ಯಕಕ್ಷಿಪಣ್ಣತಥಹಾರರ ಮಯ್ಯಗಾವುಣ್ಣಾವಂ ಪಾದಮೂಲಮುಂ ಪನ್ನಕದಣಿಪೂಜ್ಯಕ್ಕಳುಮಿಟ್ಟು (ಎಇ. ೫ (೧). ಕ್ಕಾ. ೩೬-೩, ೧೩೫ ೫೫). ೩. (ಅಲಂ) ಕಾಲಿನ ಬಳಿ,—ಸಮೀಪ : ಆತನ ಪಾದಮೂಲದಲ್ಲಿ ಅಧಿಂದಮನ ಅಸಮಸಾಹಸಿಯಾದ ವೀರವಿಕ್ರಮನೆಂಬ ನಾಯಿಯೊಂದು ಕುಳಿತುಕೊಂಡು ದೇವೇಂದ್ರನ ಮುಖವನ್ನೇ ನೋಡುತ್ತಿದ್ದಿತು (ಶಿಹಾಕ. ೮) ; ಒಂದು ಬಾಣವು ಎಲ್ಲಿಂದಲೋ ಬಂದು ಅವರ ಪಾದಮೂಲದಲ್ಲಿ ಬಿತ್ತು (ಶುಹಾಕ. ೯೯). ಪಾದಮೂಳ : ೨. ಶ್ರೀರಾಮೇಶ್ವರದೇವರ್ಗ್ಗೆ ಅಂಗಭೋಗಕ್ಕಂ ರಂಗಭೋಗಕ್ಕಂ ಗನ್ಧಧೂಪದೀಪನಿವೇದ್ಯಕ್ಕೆ ದೇಗುಲದ ಖಂಡಸ್ಫುಟಿತಕಲ್ಲಿಯ ತಪೋಧನರ ಗ್ರಾಸಕ್ಕ [೦] ಪಾದಮೂಳಪರಿಗ್ರಹಕ್ಕಂ . . . ಕೊಟ್ಟರು (ಕಶಿಂ. ೬೦-೯೦-೯೦ 1121); ಅಲ್ಲಿಯ ಬ್ರಾಹ್ಮಣರ ತಪೋಧನರ ದೇವಬ್ರಹ್ಮಪುರಿ ನಾಗಿಯಣ್ಣಭಟ್ಟನ ಗ್ರಾಸಕ್ಕಂ ಪಾದಮೂಳ ಪರಿಗ್ರಹಕ್ಕಂ . . . ಬಿಟ್ಟರು (ಕಶಿಂ. ೫೦-೩೩-೩೬; 1141). [ ಪಾದ+ಮೂಲ ]

**ಪಾದಮೂಲಿ** (ನಾ). =ಪಾದಮೂಲ ೨ : ಆ ಊರ ೨೪ ಪ್ರಜೆಜನನುಗಳು ಯಮ್ಮಾಳದೇವರ ಪಾದಮೂಲಿಗಳು ಯಿವರೆಲ್ಲರ ಸನುಮತದಿಂದ . . . ಕೊಂಡ ಕ್ಷೇತ್ರದ ವಿವರ (ಶಾಇ. ೧೫-೧೧ ; ೯೫೩-೯ : 1402) ; ತುಳುವರ ಶಾಸನಗಳಲ್ಲಿ ಬರುವ ಅಧಿಕಾರಿಗಳು ಯಾ ಅಧಿಕಾರವರ್ಗಗಳು . . . ಒಕ್ಕಲರು (ಒಕ್ಕಲ ಮಕ್ಕಳು), ಮೂಲಿಗರು, ಪಾದಮೂಲಿಗಳು ( ತುಳುಶಾ. ೩೩೦ ). [ ಸಂ. ಪಾದಮೂಲಿನ್ ]

**ಪಾದಮೂಳ** 'ಪಾದಮೂಲ' ನೋ.

**ಪಾದರ**₁ 'ಪಾರದಾರ' ನೋ.

**ಪಾದರ**₂ (ನಾ). ಒಂದು ಬಗೆಯ ಸಸ್ಯ : "ಮಟೋರಃ —ಹೆಲಸು. ಪಾದರ, ಪಾರಿವಾ(ಣ)ಳ, ಕಕ್ಕೆ, ಅರಸೆಕ್ಕೆ, ಮುತ್ತುಗ, ಮಂದಾರ" ( ಟಿಕಾ. ೦೦೮ ). [ ? ]

**ಪಾದರಕ್ಕೆ** (ನಾ). =ಪಾದರಕ್ಷೆ : ಪರಪದಂ ತದ್ಭವವಪ್ಪಾದ ಸಮಾಸಕ್ಕೆ . . . ಪಾದರಕ್ಷಾ—ಪಾದರಕ್ಕೆ (ಶಬ್ದ. ೨೬೬ ವೃತ್ತಿ); ಪಾದರಕ್ಕೆ, ಪರಡೊಮ್ಮಂ, ದಾನಸಾಲೆ ( ಶಬ್ದ. ೨೬೬ ವೃತ್ತಿ). [ <ಸಂ. ಪಾದರಕ್ಷಾ ]

**ಪಾದರಕ್ಷಣ** (ನಾ). =ಪಾದರಕ್ಷೆ : "ಉಪಾನತ್, ಪಾದರಕ್ಷಣಂ—ಈ ೨ ಪಾದರಕ್ಷೆ" ( ಕರಾಟು. ೩೨-೦೩೬ ). [ ಪಾದ+ರಕ್ಷಣ ]

**ಪಾದರಕ್ಷೆ** (ನಾ). ರಕ್ಷಣಾರ್ಥವಾಗಿ ಪಾದಗಳಿಗೆ ತೊಡುವ ಸಾಧನ ಮೆಟ್ಟು ; ಪಾದತ್ರಾಣ : "ಉಪಾನತ್, ಪಾದರಕ್ಷಣಂ — ಈ ೨ ಪಾದರಕ್ಷೆ" ( ಕರಾಟು. ೩೮-೦೩೬ ) : ಆವನಾದರೇನು ಶ್ರೀಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ ದೀಕ್ಷುಡಿಗೆಯ ಹೊದೆವೆ ಪಾದರಕ್ಷೆಯ ಕಾಯ್ದು ಬದುಕುವೆ ( ಬಸವ. ೯೬೩ ) ; ದೇವತಾದರ್ಶನಕ್ಕೆ . . . ಪಾದರಕ್ಷೆಗಳನ್ನು ಮೆಟ್ಟಿ ಹೋಗಬಾರದು ( ಶಾಂತಿಶಾ. ೯ ). [ ಸಂ. ಪಾದರಕ್ಷಾ ]

**ಪಾದರಗಿತ್ತಿ**, ಹಾದರಗಿತ್ತಿ (ನಾ). ವ್ಯಭಿಚಾರ ಮಾಡುವವಳು ; ಜಾರೆ : ಪರಿಜನಂಗಳ ಮೆಚ್ಚಿಸುವಾಗ ಪಾದರಗಿತ್ತಿಯೇ ಶರಣ ಸರ್ವರ ಮೆಚ್ಚಿಸುವಾಗ ಸಂತೆಯ ಸೂಳೆಯೇ ಶರಣ (ಸಿದ್ಧೇವ. ೧೧೩-೩೨೬). **ಹಾದರಗಿತ್ತಿ :** ಈ ಮಹಾಮಹಿಮರಿಗೆ ಜಗದ ಜಪ್ಪಿಗೆಯ ಹಾದರಗಿತ್ತಿಯ ಹದಿನೆಂಟುಜಾತಿಯ ಮನೆಯಲ್ಲಿ ತೊತ್ತಾಗಿ ಹುಟ್ಟಿದ ಶಿವದ್ರೋಹಿಯ ಲಿಂಗವಂತರ ಮನೆಯ ಹೊಗಿಸುವರೆ (ಚೆನ್ನಸಂ. ೨೩೯-೧೦); ಗೋಣಾಗೊಯ್ಯೆಯರು. . . ಹಾದರ ಗಿತ್ತಿಯರು ಬ್ರಹ್ಮಕ್ಷತ್ರಿಯರನವರತಮುಂ ಹೊನ್ನುಬಾಕಿಯರು (ಬಸವ. ೯೦-೩೩); ಗುಡನಲ್ಲಿ ವಿಕಾರನಾದ ನೀಚವ್ಯಾಪಾರವಂ ಮಾಡುವಳು. ಹಾದರಗಿತ್ತಿಯಂತೆ ಒಯ್ಯಾರದಿಂ ನಟಿಪಳು (ಗಾಮಚಾ. ೨೦೯); ಹಾದರಗಿತ್ತಿ ಕಾಲು ಹಸವಣೆ ಮೇಲೂ ನಿಲ್ಲುವುದಿಲ್ಲ (ಗಾದೆ).

[ ಪಾದರ$_1$ (<ಪಾರದಾರ)+ –ಗಿತ್ತಿ ]

**ಪಾದರಜ** (ನಾ). ೧. ಕಾಲುನಡಗೆಯಿಂದೆದ್ದ ಧೂಳು ; ಕಾಲುಧೂಳಿ : ಭಯವಶವಿಮುಕ್ತಭೂಷಣಚಯ ಕೇರಳಕಾಮಿನೀಮುಖಶ್ರೀನ್ಯಪಸೇನೆಯ ಪಾದರಜದಿನಂದೇನಯುತ್ತಕುಂಕುಮವಿಳಸವಂ ತಾಳ್ದಿದುದೋ ( (ಶಾಂತಿಪು. ೧೦-೧೩). ೨. ಹೆಜ್ಜೆಗಳಿಗೆ ಅಂಟಿರುವ ಧೂಳು ; ಪಾದಧೂಳಿ : ಕಮಲಭವಾದ್ಯರುಂ ಪಡೆವರೇ ಹರಿಪಾದರಜೋಲವಪ್ರಸಾದವಂ (ಜಗ. ೩-೯೨); ಕಾಲಿಗೆ ಬಿದ್ದು ನಮಸ್ಕರಿಸಿ, ಪಾದರಜವನ್ನು ನನ್ನ ತಲೆಯ ಮೇಲೆ ಸಿಂಪಿಸಿ . . . ಓಡಿ ಹೋದೆನು (ಶುಷ. ೫). [ ಪಾದ+ರಜ$_1$ ]

**ಪಾದರಸ** (ನಾ). ೧. ಒಂದು ಬಗೆಯ ದ್ರವರೂಪದ ಲೋಹ ; ಪಾರಜ : "ರಸ ಪಾರದ ಸೂತಕ ಚಪಲ[ಸಂ]ಜ್ಞಿತಂ ಗಿರಿಶವೀರ್ಯಮದು ಪಾದರಸಂ" (ಚನ್ನ್ರಕೋ. ೯೯-೦೩); ವೈಕ್ರಿಯಕಶರೀರಂಗಳ್ ಪಾದರಸದ ಮಾರ್ಗದಿಂ ಪತ್ತ್ರುತ್ತ್ರುವಿರ್ಕುಂ (ಸುಕುಮಾ. ೧೦-೯೬೭); ಚೈರಿಸಿ ನಿಲುಕಿದರು ಫಣಿಯಂತೆ ಪಮುವ್ಯೆಲುಳಿಯಲೊಲೆದರು ಪಾದರಸದಂದದಲಿ ಪಟುಭಟರು ((ಕುಮಾ.ಗ. ೬-೨) ; ಪಾದರಸ ಕರತಳದಲಿರುತದನಂಟದಂದದಿ ತಿಳಿವಿಗರು ಸಂಸ್ಕೃತಿಯಲಿರೆ ನಿರ್ಲೇಪರೆಂದೆನಿಸು (ಗಗಚಾ. ೦೩-೨೩); ಇಲಿ ಪಾದರಸ ಕುಡಿದ ಹಾಗೆ (ಗಾದೆ). ೨. (ಅಲಂ) ಚುರುಕಾದ ವ್ಯಕ್ತಿ: ಉರಿಯ ಬಂದಿಯ ಹಿಡಿದು ಹೆಚ್ಚುವ ದೊರೆಯಲೇ ದಿಟ ಪಾದರಸವೆಲೆ ಯರಸ ನಿನ್ನ ಕುಮಾರನು (ಕುಮ್ಮಾರವ್ಯಾ. ೯-೯೦).

[ <ಪಾರದ+ರಸ./ತವಿ. ಪ್ರಾತ್ತರಚ ; ತುಳು. ತೆಲು. ಪಾದರಸ ]

**ಪಾದರಿ$_1$** (ನಾ). ಜಾರೆ ; ವ್ಯಭಿಚಾರಿಣಿ ; ಹಾದರಗಿತ್ತಿ : ಪೋದಿರುಳಿನ ಕಿತ್ತಡವಂ ಮೂಡಲೆಯಾಗಿಂತು ನುಡಿದೊಡಜಿದುದನಜಿದಾ ಪಾದರಿ ಬೇಸತ್ತಪೊರಿರೆ ಪೋದು ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ (ಹುಟಕೋಕ. ೨-೬೦); ಚಪಲೆ ಚಂಚಲೆ . . . ಪರವಶೆ ಪಾದರಿ ವಿಫಲೆ ವಿಹ್ವಲೆ . . . ತಾಮಸಿಯೆನಿಪ ವನಿತೆಯರ ನಿಜಕೆ ನಿಲಿಸಿ ನಿಶ್ಚೈಸಿದೊಡೆ ಬಳಿಕ ಬಳಲಿಕೆ ಬಾರದೆ (ಕೃಷಚಾ. ೩-೬೦) ; ಅತಿಪಾತಂ ಮಧುಪಾನವ್ಯಸನ ದೊಳ್, ಮಧುಪಾನವ್ಯಸನಪಾಜಿಡಿಯೊಳ್, ಆಜಿಡಿ ಪಾದರಿಯೊಳ್, ಪಾದರಿ ಬನದೊಳಲ್ಲದಿಲ್ಲಂ (ರಾಜಕೂಕ್ಕ. ೬-೨).

[ ಪಾದರ$_1$ (<ಪಾರದಾರ)+ –ಇ$_2$ ]

**ಪಾದರಿ$_2$**, ಹಾದರಿ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ; ಪಾಟಲಿ : "ಪಾದರಿ ಪಾಟಳಾಖ್ಯಂ" (ಚನ್ನ್ರಕೋ.೩೩-೦); ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳ್ (ಅಂಜಿಪು. ೦೦-೮೫); ಅತಿಪಾತಂ ಮಧುಪಾನವ್ಯಸನದೊಳ್, ಮಧುಪಾನವ್ಯಸನಪಾಜಿಡಿಯೊಳ್, ಆಜಿಡಿ ಪಾದರಿಯೊಳ್, ಪಾದರಿ ಬನದೊಳಲ್ಲದಿಲ್ಲಂ (ರಾಜಕೂಕ್ಕ. ೬-೨). **ಹಾದರಿ :** "ಹಾದರಿ—ಪಾಟಲಾ—ಪಾದರಿ" (ಕರ್ಣಕೋ. ೯೯); ಕೇದಗೆ ಸಂಪಗೆ ನಾಗರ ಹಾದರಿಯದಿರ್ಗುಂತೆ ಸುರಗಿ ವಕುಳ ಲವಂಗಂ ಜಾದಿ ಮೊದಲಾದನೇಕ ಪೂದೋಂಟಂ ಸುರಭಿಪರಿಮಳಾಮೋದಂಗಳ್ (ಎಕ. VIII. ಶಾಗಿ.೦೦೯-೩೦, 1042); ಅಶೋಕೆಯನೊದೆದು ಪಲ್ಲವಿಸಂಬ ಹಾದ[ಕಾ. ಪಾದಿ] ರಿಯ ನೆಳಲ್ಗೆ ಹರಿಣಂಗಳಂ ಹೊಡೆಯಂಬ ಕೆಲಸದ ನೆವದಿಂ ರತಿವಂಗಳ್ . . . ಕಳುಪಿ (ಶಂಜ. ೦೯-೩೯); ಹಾಲೆ ಹಾದರಿ ಬನ್ನಿ ಮೊದಲಾದ ತರುಗಳ ಕಾಲದಿಂದೆಸೆದುದಾ ವಿಪಿನ (ಶಾಕು. ೦೩-೩೯).

[ <ಸಂ. ಪಾಟಲಿ./ತವಿ. ಮಲ. ಪಾತಿರಿ ; ತುಳು. ಪಾದರಿ ; ತೆಲು. ಪಾದಿರಿ, ಪಾದಿಲಿ ]

**ಪಾದರಿ$_3$** 'ಪಾದ್ರಿ' ನೋ.

**ಪಾದರಿಗ**, ಪಾರದರಿಗ, ಹಾದರಿಗ (ನಾ). ಹಾದರ ಮಾಡುವವನು ; ವ್ಯಭಿಚಾರಿ ; ವಿಟ : ಮಿನ್ನಗಳಂತೆ ಗಾಳದೊಳ್ ತೊಡರ್ದಿರ್ದ ಪಾದರಿಗರಿಂ (ಶಾಕ್ಯಚಾ. ೩೬೯ ಕೂಪ್ಪ೯); ವೃತ್ತಿಯಂ ರಕ್ಷಿಸುವ ಸ್ವಾಮಿ ಚೋರ ಜಾರ ಪಾದರಿಗರ್ಕಳಂ ಕೊಲ್ಲದಿರ್ಕುಮೆ (ಚಕ್ರಾಶಾ. ೬೦-೯); ಪಾದರಿಗೆಯ ಮೂಗನರಿದು ಪಾದರಿಗನಂ ಕೊಲ್ವರು (ಕೌತಿ. IX-1, ೬೬-೩೩; ೨೨೨); ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಕಂಜಪು. ೬೩-೩). **ಪಾರದರಿಗ :** ಕ್ಷವಾಕರನಿನಾತ್ಮಜಾಂಶಗತನಾಗೆ ನೋಡಲ್ ದಿನಾಧಿಪಪ್ರಭೃತಿ ಷಡ್ಗ್ರಹಂಗಳವನಲ್ಪವುತ್ರಂ ಸುಖಿತ್ಮವೇತಧನಭಾಗಿ . . . ಪಾರದರಿಗಂ ಮಹಾ ಕೃಪಣನಕ್ಕುಮಾ ಲಗ್ನಜಂ (ಜಾತಿಕ. ೨೦-೨೨). **ಹಾದರಿಗ :** "ಜಾರ:, ಉಪಪತಿ: — ಈ ೨ ಹಾದರಿಗಂ" (ಕಣಾಯು. ೬೬-೨೨೯) ; ಕಳ್ಳ ಹಾದರಿಗರ ಸಂವಾದನೆ ಹೊಳ್ಳ ಕಟ್ಟಿ ಕೈ ಹೊಟ್ಟಾದಂತೆ ಕಾಣಾ (ರೇಣುಕ. ೨೨-೩೯); ಕಡುಹುಗಳ್ಳನು ಹಾದರಿಗನುಂ ಗಡಣೆಗಿವರೆನೆ ಶಂದ್ರಿಕಂ ಕಾಲಗಡಿಕನಹ ಕೀಚಕನು ನೆಟ್ ಕೆಡಿವಡೆದರು (ಬಸವ. ೦೦-೫೦); ಹೋದನತ್ತಲು ಸತಿಯ ಕೊಂಡಾ ಹಾದಂಗನು (ಕೌಶಾ. ೬-೯೩).

[ ಪಾದರ$_1$ (<ಪಾರದಾರ)+ –ಇಗ ]

**ಪಾದರಿಗೆ** (ನಾ). =ಪಾದರಿ$_1$ : ಪಾದರಿಗೆಯ ಮೂಗನರಿದು ಪಾದರಿಗನಂ ಕೊಲ್ವರು (ಕೌತಿ. IX-1, ೬೬-೩೩; ೨೨೨); ಪಾದರಿಗೆಯ ದೂದವಿಯಂತೆ ಪೆಱರಂ ಸಂಕೇತಂಗೞಿಸದೆ (ಧರ್ಮಾಮೃ. ೫-೯೯); ನಿಗ್ರಹಕ್ಕೆ ಪಾದರಿಗೆಯ ನೋಡಿ ನಿಗ್ರಹಮನೆಯ್ದುವರುಗ್ರದುರಂತದುಃಖಮಂ (ಶಬರ. ೩೦೦). [ ಪಾದರಿಗ+ –ಎ$_2$ ]

**ಪಾದರಿಸು** (ಕ್ರಿ). ಹಾದರ ಮಾಡು ; ವ್ಯಭಿಚಾರ ಮಾಡು : ಜಲಜಶರತಾಪವಂ ನಿಲಿಸಲಾಱದೆ ಬಾಧೆಗಳು ತಿಳಿಯದಂತೆ ಪಾದರಿಸು ತಡಕದೋಡಿತಲು (ರಾಜಶ. ೦೦-೩೯); ದನುಜೇಂದ್ರನಾತ್ಮಸುತೆ ಶರ್ಮಿಶೆಯು ಪಾದರಿವುದನುಮತವೆ (ಶಶಿಶೋ. ೨೬-೯).

[ ಪಾದರ$_1$ (<ಪಾರದಾರ)+ –ಇಸು$_1$ ]

**ಪಾದಲೇಪೌಷಧಿ** (ನಾ). ಕಾಲಿಗೆ ಹಚ್ಚಿಕೊಳ್ಳುವ ಒಂದು ಬಗೆಯ ಅಂಜನ : ಪಾದಲೇಪೌಷಧಿಪ್ರಭಾವದಿಂ ವಿಂಶತಿಸಹಸ್ರಸೋಪಾನಂಗಳ ನಸಂಗದಿಂದಮೇಱಿ ಗಂಧಕುಟಿಯಂ ಪೊಕ್ಕು (ಶಂಪ್ರಪು. ೬-೩ ೩); ಅಲ್ಲಿ ಸರ್ವರೂ ಪಾದಲೇಪೌಷಧಿಸಾಮರ್ಥ್ಯದಿಂ ಆ ಸೋಪಾನಗಳನ್ನಾರೋಹಿಸಿದರು (ಪುಲಿಕ. ೦೨೯). [ ಸಂ. ]

**ಪಾದವಟ್ಟ** (ನಾ). ಕಾಲಿನ ಒಂದು ಬಗೆಯ ಆಭರಣ : ಕಾಲಂದುಗೆ : ಪೆಂಡೆಯ ಪಾದವಟ್ಟಗಳೊಪ್ಪಿದುವು ಚಂದ್ರಮಂಡಲಮುಖಿಯಡಿಗಳೊಳು (ಚಿಕ. ೯೦-೬೦). 'ಪಾಯವಟ್ಟ' ಪರಾ. [ <ಪಾದಪಟ್ಟ ]

**ಪಾದವಟ್ಟಿಗೆ** (ನಾ). ಮೆಟ್ಟಿಲು ; ಸೋಪಾನ : ಪಾಸಿದ ತನ್ನಾದಿರಜಿಯ ಪಾದವಟ್ಟಿಗೆಗೊಳಗೇರಿಯ ನಿಡುಮಾರಂಗಳಜಿಂಬಿನ ಕಟ್ಟಲೆಯನೊಳ ಕೊಂಡು. . . ಕಿಱುಗಾಳಿಯಲೆಪದಿಂ ಕಲ್ಪರಿಪ ತೆರೆಯನೊಂದು ಕೊಳಂ ಪಗಲ್ನೆನ್ನಾ ಕ್ರೀಡಿಯಂಬಂತಿರೆ ಸೊಗಯಿಸಿದತ್ತು (ರಾಜಕೂಕ್ಕ. ೩೬-೦೯).

[<ಸಂ. ಪಾದಪಟ್ಟಿಕಾ ]

**ಪಾದವಲ್ಮೀಕ** (ನಾ). ಆನೆಯ ಕಾಲಿನಂತೆ ಕಾಲು ದಪ್ಪವಾಗಿ ಊದಿಕೊಳ್ಳುವ ಒಂದು ಬಗೆಯ ರೋಗ; ಆನೆಕಾಲುರೋಗ: "ಶ್ಲೀಪದಂ, ಪಾದವಲ್ಮೀಕಂ ... ಈ ೨ ಒಟ್ಟಿರೆಗಾಲ್" (ಶಬ್ದಮ. ೯೯-೯೩೦). [ಪಾದ+ವಲ್ಮೀಕ]

**ಪಾದವಾಸ** (ನಾ). =ಪಾದಪಾಶ ೧: ಪರಪದದ ಮೊದಲೊಳ್ ಪಕಾರ ಬಕಾರ ಮಕಾರಂಗಳಿರೆ ವತ್ವಮಕ್ಕುಂ . . . ಪಾದಪಾಶ—ಪಾದವಾಸ, ಯೋಗಪಾದುಕಾ — ಜೋಗವಾವುಗೆ (ಶಬ್ದ. ೨೧೨ ವೃತ್ತಿ). [<ಸಂ. ಪಾದಪಾಶ]

**ಪಾದವಿನ್ಯಾಸ** (ನಾ). ೧. ನಡೆಯುವಾಗ ಕಾಲನ್ನು ಇಡುವುದು. ೨. ಪದ್ಯದ ಪಾದಗಳನ್ನು ಜೋಡಿಸುವುದು. ೩. ಕಿರಣಗಳನ್ನು ಹರಡುವುದು, - ಪಸರಿಸುವುದು. ೨, ೩: ಅತಿಶಯಪದಾರ್ಥನಿಕರಪ್ರತೀತಿಯಂ ಪಡೆವ ಪಾದವಿನ್ಯಾಸಂ ಭೂನುತವಾಗದಲ್ತೆ ನಿರ್ದೋಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ (ಚಂದ್ರಪ್ರ. ೦-೯೬). [ಪಾದ+ವಿನ್ಯಾಸ]

**ಪಾದವಿಷ್ಟರ** (ನಾ). ಕಾಲಿಡುವುದಕ್ಕಾಗಿ ಮಾಡಿದ ಪೀಠ; ಕಾಲಿಡುವಣೆ; ಪಾದಪೀಠ: ಕ್ಷಮರಾಪ್ಪರ್ ನಯಕೋವಿದರ್ ಸಕಳಶಾಸ್ತ್ರಾರ್ಥರ್ . . . ಕುಲೀನರ್ ನೃಪೇಂದ್ರಮೃಗೇಂದ್ರಾಸನಪಾದವಿಷ್ಟರದೋರ್ದರ್ (ಆದಿಪು. ೨-೨೩). [ಪಾದ+ವಿಷ್ಟರ]

**ಪಾದಶಾ** 'ಪಾತಶಹ' ನೋ.

**ಪಾದಶಾಖೆ** (ನಾ). ಕಾಲಿನ ಬೆರಳು. [ಸಂ. ಪಾದಶಾಖಾ]

**ಪಾದಶಾಯಿ** 'ಪಾತಷಾಹಿ' ನೋ.

**ಪಾದಶಾಹ** 'ಪಾತಶಹ' ನೋ.

**ಪಾದಶಿಲೆ** (ನಾ). ಕಂಬದ ತಳಕ್ಕೆ ಆಧಾರವಾಗಿ ಕೊಡುವ ಕಲ್ಲು; ಕಂಬದ ಅಡಿಗಲ್ಲು: ಎನ್ನ ಪಾದವೇ ಪಾದಶಿಲೆಯಾಗಿ ಎನ್ನ ಕಾಲೇ ಕಡಹದ ಕಂಬಗಳಾಗಿ (ಶಶಿಕ. ೦೮೦-೬೬೦). [ಪಾದ+ಶಿಲೆ]

**ಪಾದಶೂಲೆ** (ನಾ). ಕಾಲಿನಲ್ಲಿ ಉಂಟಾಗುವ ನೋವು: ಮಾಜಿಮಾನ ಪಾಷ್ನಿಗೆ ಒಂದು ಹಿಡಿ ಲೊಕ್ಕಿಯ ಸೊಪ್ಪಿನೊಳಗೆ ಹೊಯ್ದು . . . ಸೇವಿಸಿ ಮರ್ದನಂ ಮಾಡೆ ಪಂಗಾಗ್ಗಿ. ವಾತಶೂಲೆ. ಪಾದಶೂಲೆ. ಸರ್ವಾರ್ಗ(ಗ)ಶೂಲೆ. ಮುಡುಬುಶೂಲೆ. ಹೋಗುಸ್ಸಂ (ಅಶ್ವ. ೬೩). [ಪಾದ+ಶೂಲೆ₁]

**ಪಾದಶೃಂಖಲೆ** (ನಾ). ಕಾಲನ್ನು ಕಟ್ಟಲು ಉಪಯೋಗಿಸುವ ಸರಪಣಿ: ಪರಪದಂ ತತ್ಪುರುಷವಾದ ಸಮಾಸಕ್ಕೆ... ಉತ್ತರದೇಶ—ಉತ್ತರದೇಸ . . . ಪಾದಶೃಂಖಲಾ— ಪಾದಸಂಕಲೆ (ಶಬ್ದ. ೨೮೯ ವೃತ್ತಿ). [ಪಾದ+ಶೃಂಖಲೆ]

**ಪಾದಷಹ** 'ಪಾತಶಹ' ನೋ.

**ಪಾದಷಹಾ** 'ಪಾತಶಹ' ನೋ.

**ಪಾದಷಾಹ** 'ಪಾತಶಹ' ನೋ.

**ಪಾದಸಂಕಲೆ** (ನಾ). = ಪಾದಶೃಂಖಲೆ: ಪರಪದಂ ತತ್ಪುರುಷವಾದ ಸಮಾಸಕ್ಕೆ — ಉತ್ತರದೇಶ — ಉತ್ತರದೇಸ . . . ಪಾದಶೃಂಖಲಾ — ಪಾದಸಂಕಲೆ (ಶಬ್ದ. ೨೮೯ ವೃತ್ತಿ); ದಾನಸಾಲೆ. ಬಾಹುಬಲೆ. ಪಾದಸಂಕಲೆ (ಕರ್ನಾ. ೩೯೬ ವೃತ್ತಿ). [ಪಾದ+ಸಂಕಲೆ]

**ಪಾದಸರ** (ನಾ). ಕಾಲಿಗೆ ಧರಿಸುವ ಒಂದು ಬಗೆಯ ಸರಪಣಿಯಾಕಾರದ ಆಭರಣ; ಕಾಲುಸರ: ನಗನ್ಯೋಹನಾಕಾರದಿಂ . . . ಪಾದಸರ ಕಾಲುಂಗುರಗಳಿಂ ಬಂಧುರವಾದ ಪಾದದ್ವಂದ್ವವಿನ್ಯಾಸದಿಂ (ಸೌಗಂಧಿ. ೩೯-೦೦); ಹೆಜ್ಜೆಯ ಕಿಣಿತಕ್ಕೆ ತಕ್ಕಂತೆ ಈ ಪಾದಸರಗಳ ಕಿರುಗೆಜ್ಜೆಯ ನಾದ ಅನುರಣಿಸುವಂತಿದೆ (ಸೊಳಂ. ೯೬). [ಪಾದ+ಸರ₂]

**ಪಾದಸಾಲೆ** (ನಾ). ಕಾಲಿನ ಆಭರಣ: ಬಿಜ್ಜಣಿಯು ಕಾಳಂಜಿಯಿಂದವಹ ಪಾದಸಾಲೆಯು ಮುಖ್ಯವಪ್ಪಕರಣಾವೃಂದವಂ ನೆರಪಿ . . . ಶೃಂಗರಿಸುತಿರಲು (ಶಶಿಕೋ. ೨೬-೬೬). [ಪಾದ+ಸಾಲೆ₁/ತಮಿ. ಪಾತ್ತಚಾಲ]

**ಪಾದಾಂಗುಳೀಯಕ** (ನಾ). ಕಾಲಿನ ಬೆರಳಿಗೆ ಇಟ್ಟುಕೊಳ್ಳುವ ಉಂಗುರ; ಕಾಲುಂಗುರ; ಕಾಲುಸುತ್ತು: ಪಾದಾಂಗುಳೀಯಕಗಳು—ಸ್ತ್ರೀಯರುಗಳು ಕಾಲುಬೆರಳುಗಳಲ್ಲಿ ಉಂಗುರಗಳು, ಪಿಲ್ಲಿ . . . ಧರಿಸಿದಲ್ಲಿ ಹೆಚ್ಚಾದ ಮಂಗಳವೂ, ಸರ್ವದುಷ್ಟಗ್ರಹೋಚ್ಚಾಟನವೂ ಸದಾ ಆನಂದವೂ ಆಗುವುವು (ಸಕಪ್ಪ. ೯೦). [ಸಂ. ಪಾದಾಂಗುಲೀಯಕ]

**ಪಾದಾಂಬು** (ನಾ). ಪಾದದಲ್ಲಿ ಹುಟ್ಟಿದ ನೀರು: ನೈಜದಿಂದಜನಕರಪಾತ್ರದಗ್ರೋದಕಂ ವೈಜಯಂತೀಧರನ ಪಾದಾಂಬು . . . ತಾನಂತು ಗುಜ್ಜನಿತಿಪಾದಂಗಳ ಮೈಜೋಡನಾಗಿದು ಬಿಸುಡುವ ಗಂಗೆ ಬೆದಱದಳ್ (ಕೈಬಿಡಿ. ೯-೨೬). [ಪಾದ+ಅಂಬು₁]

**ಪಾದಾಕ್ಷ** (ನಾ). ಪಾದದಲ್ಲಿ ಕಣ್ಣುಳ್ಳವನು; ಶಿವ; ◆ ವಿಷ್ಣುವು ಕ್ಷುಪನೆಂಬ ರಾಜನ ನಿಮಿತ್ತವಾಗಿ ದಧೀಚಿಮುನಿಯನ್ನು ಚಕ್ರಾಯುಧದಿಂದ ಹೊಡೆದಾಗ ಅದು ಮುರಿದು ಹೋಗಲು, ಶಿವನನ್ನು ಮೆಚ್ಚಿಸಿ ಪುನಃ ಚಕ್ರವನ್ನು ಪಡೆಯುವೆನೆಂದು ವಿಷ್ಣುವು ಸಹಸ್ರಕಮಲಗಳಿಂದ ಅರ್ಚಿಸತೊಡಗಿದನು. ಆಗ ಒಂದು ಕಮಲವು ಸಾಲದಾಗಲು ಭಕ್ತಿಭರದಲ್ಲಿ ತನ್ನ ಕಣ್ಣನ್ನೇ ಕಿತ್ತು ಶಿವನ ಪಾದಗಳಿಗೆ ಅರ್ಪಿಸಿ, ಸಂತುಷ್ಟನಾದ ಶಿವನಿಂದ ತನ್ನ ಕಣ್ಣು, ಚಕ್ರ ಎರಡನ್ನೂ ಮರಳಿ ಪಡೆದನು. ಇದರಿಂದ ಶಿವನು 'ಪಾದಾಕ್ಷ'ನಾದನೆಂದು ಶೈವಪುರಾಣಗಳಲ್ಲಿ ಹೇಳಿದೆ: ಭಾಳಾಕ್ಷ ಪಾದಾಕ್ಷನಂ . . . ಶಿವನಂ ಸೋಮಾಭರಾಮಾಂಗನಂ ಹೃದಬ್ಜದೊಳ್ ಪದೋಟ್ಟು ನಾಡೆ ನೆನೆದು (ಚನ್ನಾಪು. ೨-೬). 'ಕಣ್ಣಡಿಗ' ಪರಾ. [ಸಂ. (ಪಾದ+ಅಕ್ಷಿ+—)]

**ಪಾದಾಗ್ರ** (ನಾ). ಕಾಲಿನ ತುದಿ; ತುದಿಗಾಲು: "ಪಾದಾಗ್ರಂ. ಪ್ರಪದಂ — ಈ ೨ ತುದಿಕಾಲ್" (ಶಬ್ದಮ. ೬೬-೩೬೩); ತೆಂಪರೆ ಪಾದಾಗ್ರದೆ ನೂಂಕಿದಂ ಮುಳಿದವಂ ಪಾರಾಸಿರ್ವೊಳ್ ಬೇಲ್ಪುನೇ (ರಾಜಶೇ. ೯-೨೨). [ಪಾದ+ಅಗ್ರ₁]

**ಪಾದಾಘಾತ** (ನಾ). ಕಾಲಿನ ಹೊಡೆತ; ಒದೆತ: ಅನುರಿತು ಪಾದಾಘಾತದಿಂದ ಧರೆ (ಜಗ. ೬೯೦); ಅಶೋಕಪಾದಗಳು . . . ಧಾರಿಣಿಯುವತೀ ಮಾಲವಿಕೀಯುವತೀ ಪಾದಘಾತದೋಹದ ಮಾಡಿಸಿಕೊಂಡಂತೆ ಮೈದುಂಬಿ ಹೂ ತಳೆದಿತ್ತು (ಪಕಶಿ. ೦೬೦). [ಪಾದ+ಆಘಾತ]

**ಪಾದಾತ** (ನಾ). ೧. ಕಾಲುನಡೆಯ ಸೈನಿಕ; ಕಾಲಾಳು: "ಪದಾತಿ, ಪತ್ತಿ, ಪಾದಾತಃ . . . ಪಾದಚಾರೀ — ಈ ೮ ಕಾಲಾಳ್" (ಶಬ್ದಮ. ೬೯-೨೯೬); "ಯಾತಂ ಪದಾತಿಃ . . . ಪಾದಾತಂ ಪದಾಜಿಯುಂ ಪದಿಕನೆನೆ ಕಾಲಾಳ್" (ಶಬ್ದಮ. ೬೩-೨೬). ೨. ಕಾಲಾಳುಗಳ ಸೈನ್ಯ; ಪಡೆ: ಪದಾತಿ ಸೈನ್ಯ: ನಡೆದುದು ಪಾದಾತಂ ಚತುರಶೀತಿಕೋಟಿ ಪ್ರಮಿತಂ (ಆದಿಪು. ೦೦-೬೩); ಆ ಪಾದಾತಂ ಲಕ್ಷಾಲಕ್ಷಮಂ ಪ[ರಿ]ವೀಕ್ಷಿಸಲರಿದುಂಟಿದರಿದಿರ್ ಕಾದುವವರೊಳರೇ (ಶಾಂತಿಪು. ೦೦-೦೦೬). [ಸಂ.]

**ಪಾದಾತಿ** (ನಾ). ಕಾಲಾಳು; ಪದಾತಿ. [ಸಂ.]

**ಪಾದಾತಿಕ** (ನಾ). ೧. =ಪಾದಾತ ೧: "ಪದಾತಿಃ. ಪತ್ತಿಃ. ಪಾದಾತಃ. ಪಾದಾತಿಕಃ . . . ಪಾದಚಾರೀ — ಈ ೮ ಕಾಲಾಳ್" (ಶಬ್ದಮ. ೬೯-೨೯೬). ೨. =ಪಾದಾತ್ರ: "ಪದಿಕಂ ಪತ್ತಿ ಪದಾತಂ ಪದಾತಿ ಪಾದಾತಿಕಂ ಪಾದಾಜಿಗೆ ನಾಮಂ" (ಪಕ್ಷ್ಯೋ. ೬೩-೦೦). [ಸಂ.]

**ಪಾದಾದಿಯಮಕ** (ನಾ). [ಕಾವ್ಯಮೀ] ಶಬ್ದಾಲಂಕಾರಗಳಲ್ಲಿ ಒಂದು: ಪದ್ಯದ ಸಾಲುಗಳ ಮೊದಲಲ್ಲಿ ನಿಯತವಾಗಿ ಬರುವ ಯಮಕ:

ಪಾದಾದಿಯಮಳಕ್ಕೆ — ಉಪದಾತ್ತನುತೋನ್ನತವಮಂ ದ್ವಿಪಮದಪಂ ಪೂರ್ಣಗಿರಿಸರಿತ್ಸಂತತಿಯಂ ಉಪದಾತ್ತನುತೋನ್ನತವಮಂ ತಪನಕರೋತ್ತಪನತಪ್ತತಪನೋಪಲಮಮಂ (ಕಾವ್ಯಾವ. ೩೩೯). [ಸಂ.]

**ಪಾದಾಪವಿದ್ಧ** (ನಾ). [ನಾಟ್ಯ]ನೃತ್ಯದ ಒಂದು ಭಂಗಿ ; ನೂರೆಂಟು ಕರಣಗಳಲ್ಲಿ ಒಂದು ; " ಕಟಕಾಮುಖ ಹಸ್ತಗಳೆರಡನ್ನು ಒಂದಕ್ಕೊಂದು ಹಿಮ್ಮುಖವಾಗಿರುವಂತೆ ನಾಭಿಯ ಹತ್ತಿರ ಹಿಡಿದು ಸೂಚೀಪಾದದಿಂದ ಅಪಕ್ರಾಂತಚಾರಿಯನ್ನು ಮಾಡುವುದು" (ಲಾಸ್ಯರಂ. ೨೬೪ ಗದ್ಯಾನುವಾದ) ; ತಲಪುಷ್ಪಪುಟ, ಲೀನ . . . ದಂಡಪಕ್ಷ, ಪಾದಾಪವಿದ್ಧ . . . ಗಂಗಾವತರಣ — ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೯೨ ಪ). [ಪಾದ + ಅಪವಿದ್ಧ]

**ಪಾದಾಪವಿದ್ಧಕ** (ನಾ). = ಪಾದಾಪವಿದ್ಧ : ಸಲೆ ವಲಿತ ದಂಡಪಕ್ಷಂ ಸುಲಲಿತ ಪಾದಾಪವಿದ್ಧಕಂ . . . ಭುಜಗತ್ರಸ್ತರೇಚಿತಾಖ್ಯಮಿವಿಂತುಂ (ಲಾಸ್ಯರಂ. ೪-೩೦). [ಸಂ.]

**ಪಾದಾಭಿಘಾತ** (ನಾ). = ಪಾದಾಘಾತ : ಪಾದಾಭಿಘಾತವಿಚಲನ್ಮೇದಿನ್ಯುತ್ಥಿತ ವಿಶಾಲಧೂಳಿಪಟಲಾಚ್ಛಾದಿತಗಗನಂ ನಡೆದುದು ಪಾದಾತಂ ಚತುರಶೀತಿ ಕೋಟಿಪ್ರಮಿತಂ (ಅಜಿತ. ೧೦-೩೩). [ಪಾದ + ಅಭಿಘಾತ]

**ಪಾದಾಭಿಷೇಚನ** (ನಾ). ಪಾದಗಳಿಗೆ ಅಭಿಷೇಕ ಮಾಡುವುದು : ಪೌರವರ್ಮಾಡಿದ ನಲಿನೀಪತ್ರಪುಟಪ್ರಸಾದಿತಸಾರಜಲಪಾದಾಭಿಷೇಚನದೊಳಮಭಿಷೇಕವಿಧಿಯಂ ನಿರ್ವರ್ತಿಸಿ (ಅಜಿತ. ೬-೩೯ ವ). [ಪಾದ + ಅಭಿಷೇಚನ]

**ಪಾದಾಭ್ಯಂಗನ** (ನಾ). ಎಣ್ಣೆ ಮುಂತಾದ ಲೇಪನದ್ರವ್ಯಗಳನ್ನು ಪಾದಗಳಿಗೆ ಹಚ್ಚಿ ತೊಳೆಯುವುದು : ಪಾದಾಭ್ಯಂಗನದಿಂದ ನೇತ್ರರೋಗವೂ . . . ಶಿರೋಭ್ಯಂಜನದಿಂದ ಸರ್ವರೋಗವೂ ಹರವಾಗುವುದು (ಸಕಲವ್ಯ. ೩೦). [ಪಾದ + ಅಭ್ಯಂಗನ]

**ಪಾದಾರ್ಚನೆ** (ನಾ). ಪಾದಗಳನ್ನು ಪೂಜಿಸುವುದು, — ಅರ್ಚಿಸುವುದು; ಪಾದಪೂಜೆ : ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ . . . ಕರೆದು ಕುಳ್ಳಿರಿಸಿ ಪಾದಾರ್ಚನೆಯಂ ಮಾಡಿ ಪಾದೋದಕವಂ ಕೊಂಡು (ಬಸವ. ೬೬೪); ಪಾದಾರ್ಚನೆಯ ಮಾಡುವೆನಯ್ಯಾ ಪಾದೋದಕದ ಹಂಗಿಗೆ (ಬಸವ. ೬೬೭). [ಪಾದ + ಅರ್ಚನೆ]

**ಪಾದಾರ್ಧ** (ನಾ). ಪದ್ಯದ ಸಾಲಿನ ಅರ್ಧಭಾಗ ಯಮಕಂ (ಪ)ದಪಾದಾರ್ಧ ಸಮಶ್ಲೋ(ಕಾದಿ)ಗೋಚರಂ (ಕಾವ್ಯಾ. ೨-೦೨೯). [ಪಾದ + ಅರ್ಧ]

**ಪಾದಾವರ್ತ** (ನಾ). ೧. ಬಾವಿಯಿಂದ ನೀರನ್ನು ಮೇಲಕ್ಕೆತ್ತಲು ಉಪಯೋಗಿಸುವ (ಕಾಲಿನಿಂದ ತಿರುಗಿಸಬಹುದಾದ) ಒಂದು ಬಗೆಯ ರಾಟೆ, — ಯಂತ್ರ : " ಉದ್ಘಾಟಕಂ, ಘಟೀಯಂತ್ರಂ, ಪಾದಾವರ್ತಃ, ಅರಘಟ್ಟಕಃ — ಈ ೪ ರಾಟಣಂ " (ಹಲಾಯು. ೦೦೩-೩೩). ೨. ಕ್ಷೇತ್ರದ ಒಂದು ಅಳತೆ; ಒಂದು ಚದರಡಿ : ಪಾದಾವರ್ತಶತತ್ರಯಂ (ಎಕ. III. ೩೨೦-೦೩ ; ೬೭೬). [ಸಂ.]

**ಪಾದಾಶ್ರಿತ** (ನಾ). ಪಾದಗಳಲ್ಲಿ ಆಶ್ರಯವನ್ನು ಪಡೆದವನು ; ಶರಣಾದವನು: ಹರಿಪಾದಾಶ್ರಿತರಾಗಿಮಿಲ್ಲದೊಡೆ ಪಗೆಗೊಳ್ಳಂ (ಜಗ೦. ೬-೦೦೨). [ಪಾದ + ಆಶ್ರಿತ]

**ಪಾದಾಶ್ರಿತೆ** (ನಾ). ಪಾದಗಳಲ್ಲಿ ಆಶ್ರಯವನ್ನು ಹೊಂದಿರುವವಳು ; ಶರಣಾಗತೆ : ನಾವೀಗ ಜಗದಂಬೆಯ ಪಾದಾಶ್ರಿತೆಯರಾಗಿದ್ದೇವೆ (ಕಶಾಳಂ. ೩೩). [ಪಾದಾಶ್ರಿತ + -ಎ]

**ಪಾದಾಸ್ತ್ರ** (ನಾ). ಕಾಲುಗಳನ್ನೇ ಆಯುಧವಾಗಿ ಉಳ್ಳುದು ; ಕೋಳಿ : ಪಾರಿವ ಶಿಖಿ ಗಂಡಭೇರುಂಡ ಕೆಂಗಣ್ಣಾ ಕೀರಂಚೆ ಕೊಂಚೆ ಪಾದಾಸ್ತ್ರ . . . ಖಂಜರೀಟ ಖಗದ ಸಂಚಾರ . . . ಆ ನಗದಿ ರಂಜಿಸುವವಪಾರ (ಕೃಶವೇ. ೦-೩೩). [ಪಾದ + ಅಸ್ತ್ರ]

**ಪಾದಾಹತಿ** (ನಾ). = ಪಾದಾಘಾತ : ಆಸ್ಥಾನದಲ್ಲಿರ್ದ ದುರ್ಧರವಿದ್ಯಾಧರವೀರರಂ ಜವನ ಬಾಯೊಳ್ ತೂಂಕಿದಂ ತನ್ನ ನಿಷ್ಠುರಪಾದಾಹತಿಯಿಂ ಪ್ರಭಂಜನಸುತಂ ಹಸ್ತಪ್ರಹಾರಂಗಳಿಂ (ಪಂಪಾಭಾ. ೦೦-೦೯೨). [ಪಾದ + ಆಹತಿ]

**ಪಾದಿ**$_1$, ಹಾದಿ (ನಾ). ೧. ಬಟ್ಟೆ ; ದಾರಿ ; ಮಾರ್ಗ : ಅಕ್ಕಿ ಬತ್ತ ಹೇಱಿಂಗೆ ಮಾನ ೨ ಎಣ್ಣೆ ಕೊಡಕ್ಕೆ × ಳಸಿಗೆ ೨ ಪಟ್ಟಣಸಾಮಿ ಗೊಯ್ದುಸೆಟ್ಟಿದೇವರ್ಗೆ ಯೆತ್ತದೋಪಾದಿಯೆಲೆಯೆತ್ತಿ ಕೊಂಬನ್ತು ಊರು ಗಡಪೂರಗಂಗರ × × × ಬಾಚಗಳಾಡ ಬಮ್ಮಿಸೆಟ್ಟಿ ಕನುಲ್ವರುಂ ಗೊಯ್ದಸೆಟ್ಟಿಯ ಪಾದಿಯ ಸಂತೆಯು ಯೆತ್ತಿಕೊಂಬರು (ಎಕ. VII. ಶಿಕಮೊ. ೬೬-೩೩; 1203) ; ಇದುವೆ ಕಡವೆಯ ನೊರೆಯು ಭಲ್ಲುಕಂ ಕೆದರ್ದೆಡೆಯುಯಿದು ಗಜಂಪೋದ ಪಾದಿ (ರಾಘವ. ೦೩-೩೮). ಹಾದಿ : ೧. ಇದು ಸತ್ಪಥಕ್ಕೆ ಎಯ್ದುವ ಹಾದಿ (ಅರೀಕ್ಷ್ಯ. ೪. ೪೨೯-೨೦), ಅಸುರರು ಹಾದಿಯನು ಸವಱದರು ಯಮಪುರದತ್ತ ಪಯಣಕ್ಕೆ (ಕೌಶಿಕಾ. ೨೦-೦೩), ವಿದುರನ ಗೃಹದಿ ಮೋದದಿ ಒಕ್ಕುಡುತೆಯು ಪಾಲನೆ ಕೊಂಡು ಹಾದಿಲಿ ಹರಿಸಿದ್ದು ಎಲ್ಲಿ ಕಲಿತೆಯ್ಯ (ಕೃಕಂಠ. ೦-೯೩-೬), ಆದಿದೈವವನು ತಾ ಭೇದಿಸಲಿಕಱಿಯದಲೆ ಹಾದಿಯಲ್ಲಿಗೆಡೆವಾಡಿ ನವಿಸುವ ವಾದಿಗರ ನೋಡು (ಸರ್ವಜ್ಞ. ೦೯೬). ೨. ಪಂಕ್ತಿ ; ಸಾಲು ; ಓಳಿ : ಕಯ್ಯೋಳರ ಹಾದಿಗಳೊಂದೆಸೆಯೊಳು ಬಯ್ಕಯ ಸತಿಯರ ಸಾಲೊಂದೆಸೆಯೊಳು (ತಿರುಪಾ. ರೇ. ೨೨೨-೦೯). ೩. ರೀತಿ ; ಬಗೆ ; ಕ್ರಮ : ಮೊದಲು ಕವಿ ಕಾವ್ಯದೊಳ್ ಪೊಗಳಬೇಕೆಂಬ ಹಾದಿಯಿಂ ಪೊಗಳ್ದಡೀಶ್ವರನಾಣೆ ಶಿವಸಿದ್ಧರಾದಿತ್ಯ ಸಿದ್ಧರಾಮನ ಚರಿತ್ರವನೆಯ್ದೆ ಪೊಗಳಲಾನೆನಿತಱವನು (ಸಿದ್ಧರಾ. ೦-೩) ; ಕಮಲೋದರನು ಕಾಮಿನಿಯನೆದೆಯೊಳಗಾದರಿಸಿದನು ಕಮಲಭವ ಜಗವಱಿಯೆ ನಂಚನೆಯ ಐದೆಯನು ನೆಱೆ ಮಾಡಿಯುರವೆಣ್ಣಾದನೀಶ್ವರನಿಂದ್ರಗಿಂದ್ರರ ಹಾದಿಯದು (ಕೂಡಲಾ. ೦-೩-೩೩) ; ಮುಂದಿನ ಪೀಳಿಗೆಗೆ ಅನುಕೂಲವಾಗುವಂತಹ ಮತ್ತು ಉಪಯೋಗವಾಗುವಂತಹ ಹಲವಾರು ಮಹತ್ವದ ವಿಷಯಗಳ ಬಗ್ಗೆ ಹಾದಿ ಹಾಕಿಕೊಡುವುದೂ . . . ಅಷ್ಟೇ ಮಹತ್ವದ್ದು (ಸಸ್ಯಶ. ೬೦).
**ಹಾದಿಗುಂಟ** = ದಾರಿಯ ಉದ್ದಕ್ಕೂ : ಹಳ್ಳವಾಗಿ ಬಂದ ಹಾಲು ಹಾದಿಗುಂಟ ಹರಿವುದಿನ್ನೂ (ಹಾಡುಹಾ. ೩೨-೩). **ಹಾದಿಗೆ ಬರು** = ದಾರಿಗೆ ಬರು ; ಸರಿಯಾದ ಕ್ರಮಕ್ಕೆ ಬರು ; ಸರಿಯಾಗು . ರಾಮನು ಒಬ್ಬ ಸ್ತ್ರೀಯನ್ನೇ ಉದ್ಧರಿಸಿದನು . . . ಆದರೆ ನಾಮದಿಂದ ಕೋಟ್ಯವಧಿಜನರ ವಿಪರೀತಬುದ್ಧಿಯು ಹಾದಿಗೆ ಬಂದಿರುವದು (ಕುಳಕಿ. ೩) ; ಅಂತೂ ಹಾದಿಗೆ ಬಂದಿದ್ದಾನೆ (ಕಣ್ಣುಹು. ೩೦). **ಹಾದಿಗೆ ಹಚ್ಚು** = ದಾರಿಯನ್ನು ಕಾಣಿಸು ; ಸರಿಯಾದ ಮಾರ್ಗದಲ್ಲಿ ನಡೆಸು : ನನ್ನನ್ನು . . . ಈ ಹಳ್ಳದಿಂದ ಎತ್ತಿ ಹಾದಿಗೆ ಹಚ್ಚು ದೇವಾ (ಹಳ್ಳಹಾ. ೬೯). **ಹಾದಿಗೆ ಹತ್ತು** = ಹಾದಿಗೆ ಬರು : ಅಪ್ಪ . . . ಹಾಗೆ ನಡೆಸಿಕೊಂಡದ್ದರಿಂದಲೇ ಹುಡುಗ ಹಾದಿಗೆ ಹತ್ತಿದ (ಪೂಸ್ತ್ರಿ. ೦೩೬). **ಹಾದಿ ಬೀದಿ ರಂಪ** = ಬೀದಿಯಲ್ಲಿ ನಡೆಯುವ ಜಗಳ ; ಬೀದಿಜಗಳ : ಅಲ್ಲಿಗೇನು ಹೋಗಿ ನೀವು ಹಾದಿ ಬೀದಿ ರಂಪ ಎಬ್ಬಿಸಬೇಡಿ (ಗಂಗಾಪ. ೯೬).
[ದೇ. ॥ ತಮಿ. ಪಾತ್ತೈ ; ಮಲ. ಪಾಥ ; ತುಳು. ಹಾದಿ. / ಸಂ. ಪಥ]

**ಪಾದಿ**$_2$ (ನಾ). ಕಾಲಾಳು ; ಪದಾತಿ : ಥಳಥಳಿಸುವ ರಥಯೂಥಪಾದಿಗಳಿಂದ ಥಳಪಳನೆಸೆವ ಕೈದುಗಳ ಥಳಥಳಿಕೆಯೊಳು ಮೇಲಿಕ್ಕಿದ ಮಾಗಧನ ಥಳಕನೆ ಗೆಲಿದನೆ ಜಯಾಕು (ಕಶಹಾಂ. ೭೦-೩೯). [ಸಂ. ಪಾದಿನ್]

**ಪಾದಿಕ** (ನಾ). = ಪಾದಿ$_2$ : "ಪದಾತಿಃ, ಪತ್ತಿಃ, ಪಾದಾತಃ, ಪಾದಾತಿಕಃ, ಪದಾ(ಜಿ)ಜಯಃ, ಪಾದಿಕಃ, ಪದಿಕಃ, ಪಾದಚಾರೀ — ಈ ೮ ಕಾಲಾಳ್" (ಹಲಾಯು. ೩೪-೨೯೩). [ಸಂ.]

**ಪಾದಿಲೋಣ** 'ಪಾದಲೋಣ' ನೋ.

**ಪಾದುಕ** (ನಾ). ಪಾವುಗೆ; ಪಾದುಕೆ : "ಪಾದುಕಮುಪಾನುಪದೀನಮೆನೆ ಹಾವುಗೆಯು" (ಶಬ್ದಮ. ೬೧-೦೫). [ಸಂ.]

**ಪಾದುಕಾಕಾರ** (ನಾ). ಹಾವುಗೆಯನ್ನು ತಯಾರಿಸುವವನು; ಚಮ್ಮಾರ : "ಚರ್ಮಕೃತ್, ಪಾದುಕಾಕಾರಃ — ೨ ಸಮ್ಮಗಾಱಂ" (ಹಲಾಯು. ೪೬ ೪೪೨). [ಸಂ.]

**ಪಾದುಕಾಸಿದ್ಧಿ** (ನಾ). ಐದು ಬಗೆಯ ಸಿದ್ಧಿಗಳಲ್ಲಿ ಒಂದು; ಮಂತ್ರ ಶಕ್ತಿಯುಳ್ಳ ಪಾದುಕೆಗಳನ್ನು ಧರಿಸಿ ಇಚ್ಛೆ ಬಂದಲ್ಲಿ ಸಂಚರಿಸಬಹುದಾದ ಸಿದ್ಧಿ : ಪಾದುಕಾಸಿದ್ಧಿ ಅಂಜನಾಸಿದ್ಧಿ ಘಟಿಕಾಸಿದ್ಧಿ ಮೂಲಿಕಾಸಿದ್ಧಿ ರಸರಸಾಯನಾದಿ ಸಿದ್ಧಿಗಳಂ ಸಾಧಿಸುತ್ತಿರ್ಕುಂ (ಶಿವೇಶ. ೦೦). [ಸಂ.]

**ಪಾದುಕೆ** (ನಾ). ೧. (ಮರ, ಲೋಹ ಮುಂತಾದುವುಗಳಿಂದ ಮಾಡಿದ) ಪಾದರಕ್ಷೆ; ಹಾವುಗೆ : "ಪಾದುಕಾ, ಅನುಪದೀನಾ — ಈ ೨ ಹಾವುಗೆ" (ಹಲಾಯು. ೩೨-೦೫೬); ಚರ್ಮದ ಪಾದುಕೆಗಳನ್ನು ಹಾಕಿಕೊಳ್ಳುವುದರಿಂದ . . . ಮಹಾಹಿತಕರವಾಗಿರುವುದು (ಸಕಪ್ರ. ೩೩); ರಾಮನ ಪಾದುಕೆಯನ್ನು ತಂದಿಟ್ಟುಕೊಂಡು ರಾಮನ ಪ್ರತಿನಿಧಿಯಾಗಿ . . . ರಾಜ್ಯವನ್ನು ನೋಡಿಕೊಳ್ಳುತ್ತೇನೆ (ವಾರಾಕ್ಯ. ೨೯); ಪೂಜ್ಯಪಾದುಕೆಗಳಂ ಪೂಜ್ಯಪಾದಂಗೆತ್ತು ಸಿಂಹಾಸನದೊಳಿಟ್ಟು ಪೂಜಿಸುವೆನಾಂ (ಶ್ರೀರಾಮಾ. ೦೬೩-೫೬೬). ೨. ಕಲ್ಲು ಅಥವಾ ಮರದ ಮೇಲೆ ಮಾಡಿರುವ, ದೇವರು ಅಥವಾ ಗುರುಗಳ ಪೂಜಾರ್ಹವಾದ ಪಾದದ ಗುರುತು, —ಮುದ್ರೆ. [ಸಂ. ಪಾದುಕಾ]

**ಪಾದುಕೆಗೆಯ್**, ಪಾದುಕೆಗೈ (ಕ್ರಿ). ಪಾದರಕ್ಷೆಯಾಗಿ ಮಾಡು; ಹಾವುಗೆಯನ್ನಾಗಿ ಮಾಡು : ಗಣ್ಯ ಪುಣ್ಯರ ಚರಣಕೆನ್ನದೆಯನೊಸೆದು ಪಾದುಕೆಗೆಯ್ವೆನು (ರಾಶಿಶ. ೦-೦೩). **ಪಾದುಕೆಗೈ** : ನಿರ್ಮಲಾತ್ಮಕ ಪರಮಶಿವಶರಣರಡಿಗೆಯನ್ನೆರ್ದೆಯ ಪಾದುಕೆಗೈವೆನು (ವವಮೋ. ೦-೦೪). [ಪಾದುಕೆ+ಕೆಯ್$_1$]

**ಪಾದುಕೆಗೈ** 'ಪಾದುಕೆಗೆಯ್' ನೋ.

**ಪಾದುಶಾಹ** 'ಪಾತಶಹ' ನೋ.

**ಪಾದುಷಹ** 'ಪಾತಶಹ' ನೋ.

**ಪಾದುಷಾ** 'ಪಾತಶಹ' ನೋ.

**ಪಾದೂಯುಗ್ಮ** (ನಾ). (ಹೆಜ್ಜೆಗಳ ಗುರುತುಳ್ಳ) ಹಾವುಗೆಗಳ ಜೊತೆ : ಶಿವನಾಮಾಂಕಿತಮಂ ರತ್ನವಿರಚಿತಮನುತ್ತಮಾಂಗದೊಳ್ ಪಾದೂಯುಗ್ಮವನೆಸೆಯೆ ತಳೆದು (ಶಾರಂಕೃ. ೬೬೦). [ಸಂ.]

**ಪಾದೆಲೋಣ**, ಪಾದಿಲೋಣ (ನಾ). ಒಂದು ಬಗೆಯ ಕಪ್ಪುಬಣ್ಣದ ಉಪ್ಪು; ಬಿಡುಲವಣ : ಸೂತಿಕಾಚವಾಳಾಮಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು. ೧. ಅಕ್ಕಲಖಾಂ . . . ೧೨೬. ಪಾದೆಲೋಣ (ಮುಂಬವ್ಯ. ೦೨೬). **ಪಾದಿಲೋಣ** : ಆ ಜಿನಸಗಳು . . . ಈ ಪ್ರಕಾರ- ಅಕ್ರೋಡ, ಅಕ್ಕಲಖಾರ . . . ಪಚ್ಚಕರ್ಪೂರ, ಪಾದಿಲೋಣ, ಪಿಸ್ತ, ಹಿಪ್ಪಲಿ (ಮುಂಬವ್ಯ. ೨೦೪). [←ಮರಾ. ಪಾದೇಲೋಣ]

**ಪಾದೋದಕ** (ನಾ). ೧. ಕಾಲುಗಳನ್ನು ತೊಳೆಯಲು ಕೊಡುವ ನೀರು : ಅತಿಥಿಗಳಿಗೆ ಪಾದೋದಕವನ್ನೀಯುವುದು ಆದರ ಸತ್ಕಾರದ ಪದ್ಧತಿ (ಶ್ರೀಶಂಕ. ೯೩). ೨. [ವೀಶೈ] ಗುರುಹಿರಿಯರ ಕಾಲುಗಳನ್ನು ತೊಳೆದ ನೀರು; ಪಾದತೀರ್ಥ : ಒಳಗೆ ತೊಳೆಯಲರಿಯದೆ ಹೊಱಗ ತೊಳೆದು ಕುಡಿವುತ್ತಿದ್ದರಯ್ಯ ಪಾದೋದಕಪ್ರಸಾದವನಱಿಯದೆ ಬಂದ ಬಟ್ಟೆಯಲ್ಲಿ ಮುಳುಗುತ್ತೈದಾರೆ (ಅಪಕಂ. ೩೬-೦೬೦); ಗಂಡ ಕೊಂಬುದು ಪಾದೋದಕಪ್ರಸಾದ ಹೆಂಡತಿ ಕೊಂಬುದು ಸುರೆ ಮಾಂಸ (ಬಸಶ. ೦೦೪); ಶ್ರೀಪಾದಮಂ ತೊಳೆದು ಪಾದೋದಕಮಂ ತಳೆದು . . . ಕೃತಾರ್ಥಮನನಾಗುತ್ತಿರಲ್ (ಶಂಂಶ. ೬-೪೦). ೩ ಪಾದೋದಕದಲ್ಲಿ ಹತ್ತು ಬಗೆಗಳನ್ನು ಹೇಳುತ್ತಾರೆ : "ದಶವಿಧಪಾದೋದಕ : ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ" (ಶಸ್ಯಕ. ೪ ೬೩೦ ಪಾಂಡಾಹಿಶಶ್ಯಕೋಶ). [ಪಾದ+ಉದಕ$_2$]

**ಪಾದೋದಕಿ** (ನಾ). ಪಾದೋದಕವನ್ನು ಸ್ವೀಕರಿಸುವವನು, —ಸೇವಿಸುವವನು : ಹುಪಟತಲ್ಲದೆ ಪ್ರಸಾದಿಯಲ್ಲ ತೃಷೆಯಡತಲ್ಲದೆ ಪಾದೋದಕಿಯಲ್ಲ (ಅಪಕಂ. ೧೨೪-೫೬೩). [ಸಂ. ಪಾದೋದಕಿನ್]

**ಪಾದ್ಯ** (ಗು). ೧. ಕಾಲಿಗೆ ಸಂಬಂಧಿಸಿದ. (ನಾ). ೨. ಕಾಲುಗಳನ್ನು ತೊಳೆಯುವ ನೀರು : ಮುನಿಜನಪೂಜಾನ್ನದಾನಾದಿಕರಣಜನಗೃಹಜನ ಸತತೋಪನೀಯಮಾನಪಾದ್ಯಗಂಧಾಕ್ಷತಕುಸುಮಚರುಧೂಪದೀಪಫಲಾದ್ಯರ್ಚನಾತ್ಮಕಪುಷ್ಪ ನಿತ್ಯಮಹಿಮಾಂ (ಆದಿಪು. ೧೩-೧೩೪); ರಾಘವಂಗಾನತರಾಗಿ ಮೌಳಿಮಣಿದೀಪ್ತಿಜಲಂಗಳಿನೀಯೆ ಪಾದ್ಯಮಂ (ಕುರಾಮಾ. ೧೬-೨೦); ಅಕ್ಕನ ಕೇಸಡಿದಳಿರ್ಗೆ ಜಯಶ್ರೀಯೆ ಪಾದ್ಯಮಂ ಪ್ರಕಟಿಸಿದಳ್ (ಅಶಂಪು. ೨-೫೧). ೩. ಕಾಲುಗಳನ್ನು ತೊಳೆಯುವುದು; ಪಾದಕ್ಷಾಲನ : ಜನಪತಿಗಂದು ಪಾದ್ಯಮನದೇಂ ಮೊಟ್ಟಂತೆ ಮೆಲ್ಲನೆ . . . ಸುಟಿರತ್ತು ಸದ್ಮಸರಸೀಶರಶೀಕರ ಮಂದಮಾರುತಂ (ಮಲ್ಲಿಪು. ೭-೪೮); ಪಾದದೊಳೆದ್ದು . . . ಪುಣ್ಯಸಂಪದದ ಸಂಧ್ಯಾವಂದನಂ ಮಾಡಿ ಏಹಿಕಾರ್ಘ್ಯಪಾದ್ಯಮಂ ನಿರ್ವರ್ತಿಸಿ (ಶಶಕಾ. ೪-೫೯); ಮುನಿಯನಿದಿರ್ಗೊಂಡು ಪೊಡಮಟ್ಟು ಭದ್ರಾಸನದೊಳ್ಳಿರಿಸಿ ಅರ್ಘ್ಯಪಾದ್ಯಂಗಳಿಂ ಪೂಜಿಸಿ (ರಾಮಾಶ್ವ. ೦೦-೮); ಪಾದ್ಯಕ್ಕೆ ನೀರು ಇಲ್ಲ, ಊಟಕ್ಕೆ ಮಜ್ಜಿಗೆಯೆಲ್ಲಿ? (ಗಾದೆ). [ಸಂ.]

**ಪಾದ್ಯದ್ರವ್ಯ** (ನಾ). ಕಾಲುಗಳನ್ನು ತೊಳೆಯುವ ನೀರಿನ ಜೊತೆಗೆ ಉಪಯೋಗಿಸುವ ವಸ್ತು; ಪೂಜಾಸಾಮಗ್ರಿ : ಬಿಳಿಯ ಸಾಸುವೆ ಕುಸುಮ ದೂರ್ವೆ ಕೋಷ್ಠ ಲಾಮಂಚ ಕರ್ಪೂರಮೆಂಬಾಱು ಪಾದ್ಯದ್ರವ್ಯಂಗಳಂ . . . ಸಂಪಾದಿಸಿ (ಶಿವೇಶ. ೯೪). [ಪಾದ್ಯ+ದ್ರವ್ಯ]

**ಪಾದ್ಯಪಾತ್ರ** (ನಾ). ಪಾದ್ಯದ್ರವ್ಯಗಳೊಂದಿಗೆ ಬೆರೆಸಿದ ನೀರಿರುವ ಪಾತ್ರೆ, —ಬಟ್ಟಲು : ವಿವಿಧಾಷ್ಟಗಂಧ ಕರ್ಪೂರ ಲಾಮಂಚ ಸಾಸವೆ ಕೋಷ್ಠ ದೂರ್ವೆಯೆಂಬಾಱು ನೀರೊಳು ಬೆರಸಿ ಶಿವನ ಪಾದಕ್ಕೆಂದು ಸಂಕಲ್ಪಿಸುತ್ತೊಲಿದು ಪಾದ್ಯಪಾತ್ರೆಯೊಳಿಟ್ಟವುದು (ಗುರುಚಾ. ೩ ೫೯). [ಪಾದ್ಯ+ಪಾತ್ರ]

**ಪಾದ್ಯವಿಧಿ** (ನಾ). ಕಾಲುಗಳನ್ನು ತೊಳೆಯುವ ಕ್ರಿಯೆ; ಪಾದಕ್ಷಾಲನ : ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುಪಗ್ರಜಂ (ಆದಿಪು. ೧೪-೧೩೩). [ಪಾದ್ಯ+ವಿಧಿ]

**ಪಾದ್ರಿ**, ಪಾದರ್ರಿ (ನಾ). ಕ್ರೈಸ್ತರ ಧರ್ಮಗುರು; ಚರ್ಚಿನ ಒಬ್ಬ ಕಾರ್ಯಕರ್ತ : ಡುಬಾಯಿ ಪಾದ್ರಿ ತನ್ನ ಮಿತ್ರರಿಗೆ ಬರೆದ ಕೆಲವು ಪತ್ರಗಳು ಫ್ರಾನ್ಸ್‌ದೇಶದಲ್ಲಿ ನೊಶಟೋನ್ ವಿಶ್ವವಿದ್ಯಾಲಯದ ಪುಸ್ತಕ ಭಂಡಾರದಲ್ಲಿವೆಯಂತೆ (ಸಪ್ಯ. II;೬ ೨೬); ಪಾದ್ರಿ . . . ನಮ್ಮನ್ನು ಭೆಟ್ಟಿಯಾಗಿ ಸಂಜೆ ತಮ್ಮನ್ನು ಕಾಣಲು ಹೇಳಿದ್ದರು (ಅಮೋಲಿ. ೦೮). **ಪಾದರ್ರಿ** : ಆಂಗ್ಲರ ಆಳ್ವಿಕೆ ಆರಂಭದಿಂದ ಕೊಂಚಕಾಲ ಕ್ರಿಶ್ಚಿಯನ್ ಪಾದರಿಗಳಿಗೆ ಭರತಖಂಡದ ಪ್ರವೇಶಕ್ಕೆ ಅನುಮತಿ ಇರಲಿಲ್ಲ (ಮುಕ್ಯಾಕ. ೧೦೪ ೬೮೦೪). [← ಸ್ಪ್ಯಾನಿಷ್, ಪೋರ್ಚು. Padre]

**ಪಾನ್‌ದಾನು**, ಪಾನದಾನು (ನಾ). ೧. (ಉಕ) ಎಲೆಯಡಿಕೆ ತಾಂಬೂಲ; ವೀಳೆಯ : ಆ ಸಾಹೇಬರು . . . ಹರ್ಷಿತರಾಗಿ ಹೂವಿನ ಹಾರ ಪಾನ್‌ದಾನುಗಳನ್ನು ಸ್ವೀಕರಿಸಿ ಮಹಾಸ್ವಾಮಿಯವರಿಂದ ಅಪ್ಪಣೆ ತೆಗೆದುಕೊಂಡರು (ಮಹಾಜ. 'II, ೦೨೦). **ಪಾನದಾನು** : ೨. ತಾಂಬೂಲವನ್ನು ಇಡುವ ಡಬ್ಬಿ, —ಸಂಪುಟ : ಪಂಚಾರತಿಯ

ಕೈಲಿದ್ದ ಪಾನದಾನು ನೆಲದ ಮೇಲೆ ಬಿದ್ದು ರಝನೆರಝನ ಶಬ್ದವಾಯಿತು (ರೇಶೀಕ್. ೭೩). [←ಹಿಂ. ಮರಾ. ಪಾನ್‌ದಾನ್]

**ಪಾನ್‌ಪಟ್ಟಿ**, ಪಾನಪಟ್ಟಿ (ನಾ). ೧.=ಪಾನ್‌ದಾನು ೧: ಪಟ್ಟದ ಆನೆ, ಪಟ್ಟದ ಕುದುರೆಗಳು ಕೆರೆಯ ಬಳಿಗೆ ಹೋಗಿ ಪೂಜೆ ಆಗಿ ಬಂದ ಮೇಲೆ ಎಲ್ಲರಿಗೂ ಹೂವಿನ ಹಾರ ಪಾನ್‌ಪಟ್ಟಿ ಮರ್ಯಾದೆ ಆಯಿತು (ಮಹಾಪು. II, ೧೮೪). **ಪಾನಪಟ್ಟಿ**: ೨. ಸಂಣ್ಣ, ಅಡಿಕೆಯನ್ನು ಹಾಕಿ ಸಿದ್ಧಪಡಿಸಿದ ವೀಳ್ಯ; ಬೀಡ: ಅವರು . . . ಭಜಿ, ಚಹ, ಪಾನಪಟ್ಟಿ ಇಷ್ಟರಿಂದಲೇ ಎದ್ದುಬಿಟ್ಟರು (ಹುಚ್ಚು.ಹ. ೧೦೯).

[←ಮರಾ. ಪಾನ್‌ಪಟ್ಟೀ]

**ಪಾನ್‌ಸುಪಾರಿ**, ಪಾನಸುಪಾರಿ, ಪಾನುಸುಪಾರಿ (ನಾ).=ಪಾನ್‌ದಾನು ೧: ಅಕ್ಷತೆಗೆ ಬಂದ ಅತಿಥಿಗಳಿಗೆಲ್ಲಾ ಸಾರಿಗೆ ಮೇಲೆ ಸಾರಿಗೆಯಂತೆ ಚಹಾ, ಪಾನ್‌ಸುಪಾರಿ ಮುಗಿಯುವವರೆಗೂ ತಾಸೆರಡು ತಾಸಾಯಿತು (ಪ್ರ.ಕಿ. ೧೩). **ಪಾನಸುಪಾರಿ**: ಪಾನಸುಪಾರಿ, ಅತ್ತರದಾಣಿ, ಗುಲಾಬದಾಣಿ, ಹೂಗುಚ್ಛ ಇವುಗಳನ್ನು ಕೊಡುವ ಕಾರ್ಯಕ್ರಮ ನಡೆಯಿತು (ಅಶ್ವ. ೨೯೭); ಪಾನ-ಸುಪಾರಿಯ ಭರ್ಜರೀ ತಯಾರಿ ನಡೆಯಿತು (ಬೀಕಹ. II. ೩೩೪). **ಪಾನುಸುಪಾರಿ**: ಪಾನುಸುಪಾರಿಯು ಕೆಲಸ ಮುಗಿದ ಮೇಲೆ ಸಿದರಾಮಪ್ಪನೂ ಅಲ್ಲಿಗೆ ಬಂದನು (ಅಶ್ವ. ೨೯೮).

[←ಹಿಂ. ಮರಾ. ಪಾನ್‌ಸುಪಾರೀ]

**ಪಾನ**$_1$ (ನಾ). (ಕುದುರೆಯ) ಅಪಾನ; ಗುದಪ್ರದೇಶ: ಬಾಲದ ದಂಡಿಗೆ ಬಾಲದ ದಂಡೆಂಬ ಪೆಸರನನುಕರಿಸಿರ್ಕುಂ ಬಾಲದ ಮುಟಿಯೊಳಗಿರ್ಪುದ ಲೀಲೆಯಿನಜು ಪಾನವೆಂಬ ಪೆಸರದಕೆಂದುಂ (ಅಶ್ವಶಾ. ೯-೪೭).

[<ಸಂ. ಅಪಾನ]

**ಪಾನ**$_2$ (ನಾ). ೧. ಕುಡಿಯುವಿಕೆ; ಕುಡಿತ: ಜ್ಞಾನ ತಪ್ಪಿಸುವ ಪಾನಗಳನ್ನು ಮಾಡಬಾರದು (ಶೀಶಿಕಾ. II. ೬). ೨. ಪಾನೀಯ; ಪೇಯ: ಬಹುವಿಧವಾದ ರಸವನೆ ಕೂಡಿಸಿ ಪಾನಪ್ರಭೇದವನ್ನು ಅನುವಾಗಿ ಮಾಡಿ ತಂದು ವಸ್ತ್ರಕ್ಕೆ ಹಚ್ಚಿ ದೀಪವನೆ ಮುಟ್ಟಿಸಿದರವು ವಸನ ಸುಡದು (ಬಿರಾಕ್ಷ. ೬೪-೩). ೩. ಕುಡಿಸದ ಪದಾರ್ಥ: "ಬೇಯದ ರಸಃ ಪಾನಂಗಳೆಂದೆನಿಕ್ಕುಂ" (ಮುಗೆಶಾ. ೩೪-೪). ೪. ಕಷಾಯ: ಮರಿಚಾವ್ಯುತರುಚಿ ಚಾತುರ್ಜಾತಕಯುತಮಾಗೆ ಸುಧೋಪಮಾನಮಕ್ಕುಂ ಪಾನಂ (ಲೋಕೋಪ. ೮-೩೭). ೫. ಕುಡಿಯುವ ಬಟ್ಟಲು; ಚಷಕ. ೬. ನೀರಿನ ಕಾಲುವೆ; ನಾಲೆ. [ಸಂ.]

**ಪಾನಂದಿಪಡಿ** (ನಾ). ಒಂದು ಸ್ಥಳದ ಹೆಸರು: ಅನ್ತ ಬನ್ದು ಪಟ್ಟಗಲ್ಲ ನೈರಿತ್ಯನ್ಸ್ಪಿ ಪಾನನ್ದಿಪಡಿಯ (ಎಕ. IV (B). ಕಾಕುರು. ೩೩೪-೮೩; 904).

[?]

**ಪಾನಕ** (ನಾ). ಬೆಲ್ಲ ಅಥವಾ ಸಕ್ಕರೆಯೊಂದಿಗೆ, ನಿಂಬೆ ಮುಂತಾದ ರಸ, ನೀರಂ – ಇವುಗಳನ್ನು ಸೇರಿಸಿ ತಯಾರಿಸಿದ ಪಾನೀಯ: ಪರಬತ್ತು: ಪಾನಕವು ಶ್ರಮ ಹಸಿವೆ ನೀರಡಿಕೆ ದಣಿವುಗಳನ್ನು ನಾಶ ಮಾಡುವುದು (ಅಷ್ಟಾಂಗ. ೦೨೨-೩೪ ೮೬೯); ಬೆಳಗ್ಗೆ ಊಟವಿಲ್ಲದೆ ಬರಿಯ ಹುಣಿಸೆಹಣ್ಣನ್ನು ಕಿವುಚಿ ಬೆಲ್ಲವಲ್ಲಿ "ಪಾನಕ" ಕುಡಿದಿದ್ದರು (ಅಂಹೂ. ೧೮); ವಿಧವಿಧವಾದ ಪಾನಕಗಳಿಗೆ ಮಂಜಿನ ಗಡ್ಡೆಗಳನ್ನು ಸೇರಿಸಿ ಕುಡಿಯುವುದು (ಕಾವ್ಯಾ೦. ೦೨೯).

**ಪಾನಕ ಪಣ್ಯಾರ**=ಪರಬತ್ತು ಮತ್ತು ಪ್ರಸಾದರೂಪವಾದ ತಿಂಡಿ: ರಾಮನವಮಿಯಂದು ಮನೆಗೆ ಬಂದವರಿಗೆ ಪಾನಕ ಪಣ್ಯಾರ ಕೊಡುವುದು ಕೆಲವರ ಸಂಪ್ರದಾಯ (ರೂಢಿ). [ಸಂ.]

**ಪಾನಕಪೂಜೆ** (ನಾ). (ನರಸಿಂಹಜಯಂತಿ, ರಾಮನವಮಿ ಮುಂತಾದ ಹಬ್ಬಗಳಂದು) ಪೂಜೆ ಮಾಡಿ ಪ್ರಸಾದರೂಪವಾಗಿ ಭಕ್ತಾದಿಗಳಿಗೆ ಇತರ ಖಾದ್ಯಗಳೊಡನೆ ಪಾನಕ, ಮಜ್ಜಿಗೆ ಮುಂತಾದುವನ್ನು ಹಂಚುವುದು: ನನ್ನ ಕಾಲದಲ್ಲಿ ಶ್ರೀರಾಮನವಮಿ ನಡೆಯುವುದು. ಎಲ್ಲೆಲ್ಲೂ ಅರವಟ್ಟಿಗೆಗಳನ್ನಿಡಿಸುತ್ತೇನೆ. ಪಾನಕಪೂಜೆಗಳನ್ನು ಮಾಡಿಸುತ್ತೇನೆ (ಕಂಠಕ. ೨೨); ಅವರು ರಾಮನವಮಿ ಪ್ರಯುಕ್ತ ಪಾನಕ ಪೂಜೆಗೆ ಕರೆದಿದ್ದಾರೆ (ರೂಢಿ). [ಪಾನಕ+ಪೂಜೆ]

**ಪಾನಕೇಳಿ** (ನಾ). ಮದ್ಯ ಮುಂತಾದುವನ್ನು ಕುಡಿಯುವ ಲೀಲೆ, – ವಿನೋದ: ಎಲೆ, ತಡವೇಕೆ ಪಾನಕೇಳಿ ಮೊದಲಾಗಲೀಗ, ಅಂಗಡಿಯ ಕದವ ಈ ಕ್ಷಣಕೆ ತೆರೆಯ ಹೇಳಿ (ಅರಳು. ೧೮೭-೯).

[ಪಾನ$_2$+ಕೇಳಿ (=ಕೇಲಿ)]

**ಪಾನಕ್ರೀಡನ** (ನಾ).=ಪಾನಕೇಳಿ: ದುಶ್ಶಾಸನನ ನೆತ್ತರದಿ ಪಾನ ಕ್ರೀಡನಾಸೌಭಾಗ್ಯಸೌಪದಕೆ ಸರಿಯದಾವುದು (ಕುಶಾ.ಕ. ೨೨-೪೩).

[ಪಾನ$_2$+ಕ್ರೀಡನ]

**ಪಾನಕ್ರೀಡೆ** (ನಾ).=ಪಾನಕೇಳಿ: ಕಾಮತ್ರಿಲೋಕೀಜಯಾಕರಕಾಹಳ ಲತಾಳಿಯೊ ಬಗೆವೊಡೆಂಬಂತಿವರ್ಣದಿಂದ್ಯಂಕ ಕರ್ಬುರಕಾಯಂ ಶಬರೀಜಯಂ ನೆರೆದು ಪಾನಕ್ರೀಡೆಯೊಳ್ ನಾಡೆಯುಂ (ಚಂದ್ರ.ಕ. ೫-೫೭).

[ಪಾನ$_2$+ಕ್ರೀಡೆ]

**ಪಾನಗೋಷ್ಠಿ** (ನಾ). ೧. ಕೆಲವು ಜನ ಸೇರಿ ಒಟ್ಟಿಗೆ ಮದ್ಯಪಾನ ಮಾಡುವುದಂ, – ಕುಡಿಯುವುದು: "ಆಪಾನಂ, ಪಾನಗೋಷ್ಠಿ – ಈ ೨ ಕಳ್ಗುಡಿವುದು" (ಶಬ್ದಮ. ೫೪-೧೭೩). ೨. ಮದ್ಯಪಾನ ಮಾಡುವವರ ಗುಂಪು; ಕುಡಿಯುವವರ ಕೂಟ: (೩). ೩. ಮದ್ಯಪಾನ ಮಾಡುವ ಸ್ಥಳ; ಹೆಂಡದಂಗಡಿ: (೩). [ಪಾನ$_2$+ಗೋಷ್ಠಿ]

**ಪಾನಗೋಷ್ಠಿಕೆ** (ನಾ). ೧.=ಪಾನಗೋಷ್ಠಿ ೨: "ಪಾನಗೋಷ್ಠಿಕೆ–ಸರಾಬು ಕುಡಿಯುವುದಕ್ಕಾಗಿ ಕೂಡಿದ ಮಂದಿ" (ಗಂಗಾಕು. ೨೦೩). ೨.=ಪಾನಗೋಷ್ಠಿ ೩: "ಆಪಾನಂ, ಪಾನಗೋಷ್ಠಿಕಾ – ೨ ಅನೇಕ ಮಂದಿ ಕೂಡಿ ಮದ್ಯಪಾನ ಮಾಡುವ ಸ್ಥಳದ ಹೆಸರುಗಳು" (ಸಿದ್ಧಾಂತಿ. ೩೧೯).

[ಪಾನ$_2$+ಗೋಷ್ಠಿಕೆ]

**ಪಾನದಾನು** 'ಪಾನ್‌ದಾನು' ನೋ.

**ಪಾನನಿರೋಧ** (ನಾ). ಮಾದಕಪಾನೀಯಗಳ ತಯಾರಿಕೆ ಮತ್ತು ಮಾರಾಟದ ಮೇಲೆ ಹಾಕುವ ನಿಷೇಧ,–ನಿರ್ಬಂಧ: ಪಾನನಿರೋಧ ಬಂದ ಮೇಲೆ ಕುಡಿಯುವವರು ಹೆಚ್ಚಾಗಿದ್ದಾರೆ (ಪತ್ರಿಕೆ. ೩೦೩).

[ಪಾನ$_2$+ನಿರೋಧ]

**ಪಾನಪಟ್ಟಿ** 'ಪಾನ್‌ಪಟ್ಟಿ' ನೋ.

**ಪಾನಪಭಟಾರ** (ನಾ). ಒಬ್ಬಾತನ ಹೆಸರು: ಶ್ರೀನೆಡುಬೊಳೆಯ ಪಾನಪಭಟಾರರ್ನ್ನೆನ್ತು ಮುಡಿಪ್ಪಿದಾರ್ (ಎಕ. II, ೪–೦; ಸು. 700).

[ಪಾನಪ$_?$ + ಭಟಾರ]

**ಪಾನಪಾತ್ರ** (ನಾ). (ವಿಶೇಷವಾಗಿ ಮದ್ಯವನ್ನು) ಕುಡಿಯುವ ಪಾತ್ರೆ: "ಚಷಕಃ, ಪಾನಪಾತ್ರಂ, ಸರಕಃ, ಅನುತರ್ಷಣಂ__೪ ಹೆಂಡ ಕುಡಿಯುವ ಬಟ್ಟಲ ಹೆಸರು" (ಸಿದ್ಧಾಂತಿ. ೩೧೯). [ಪಾನ$_2$+ಪಾತ್ರ]

**ಪಾನಪಾತ್ರೆ** (ನಾ).=ಪಾನಪಾತ್ರ: ಈ ಸಾಂಗತ್ಯದ ಪುಟ್ಟಪುಟ್ಟ ಪಾನ ಪಾತ್ರೆಗಳಲ್ಲಿ ಸಂಸ್ಕೃತದ ಸುಭಾಷಿತಗಳನ್ನೂ ಮುಕ್ತಕಗಳನ್ನೂ ಕನ್ನಡಿಸಿ ಕೊಟ್ಟಿದ್ದೇನೆ (ಇಂಹಾಕ. IV, ೮೦೪). [ಪಾನ$_2$+ಪಾತ್ರೆ]

**ಪಾನಭಾಜನ** (ನಾ).=ಪಾನಪಾತ್ರ: "ಕಂಸಃ, ಪಾನಭಾಜನಂ — ೨ ಬಟ್ಟಲು" (ಸಿದ್ಧಾಂತಿ. ೨೮೩). [ಪಾನ$_2$+ಭಾಜನ]

**ಪಾನಭೂಮಿ** (ನಾ). ಮದ್ಯಪಾನ ಮಾಡುವ ಸ್ಥಳ: ಪಾನಭೂಮಿ ಯೊಳೇನು ಯಜ್ಞಕುಂಡದೊಳೇನು ಪ್ರಜ್ವಲಿಸುವನು ಕೃಶಾನು (ಗಾಥಾಸ. ೫೬-೭೭). [ಪಾನ$_2$+ಭೂಮಿ]

**ಪಾನವಾಟ** (ನಾ). ಮದ್ಯಪಾನ ಮಾಡುವ ಸ್ಥಳ ; ಪಡಖಾನೆ; ಹೆಂಡದಂಗಡಿ : ಈ ವೇಳೆಗೆ ಪಾನವಾಟವು ಹೊನ್ನಾವಗಳು ವ್ಹಾಲಿ ಮತ್ತಷ್ಟು ಬಿಯರ್ ತಂದಳು (ಸತ್ಯ.ಶ. VIII, ೧೦೨). [ಸಂ. ಪಾನವಾಟೀ]

**ಪಾನವ್ಯಸನ** (ನಾ). ಮದ್ಯಪಾನ ಮಾಡುವ ಗೀಳು ; ಕುಡಿಯುವ ಚಟ : ಹೃದಿಗಳಲ್ಲಿ ಮನೆಮಾಡಿಕೊಂಡಿದ್ದ ದುಷ್ಟಪ್ರವೃತ್ತಿಗಳು ಪಾನವ್ಯಸನ, ದ್ಯೂತಕ್ರೀಡೆ, ಕ್ರೂರಹಿಂಸೆ, ನರಮಾಂಸಭಕ್ಷಣ ಮೊದಲಾದ ಘೋರಾಪರಾಧಗಳು . . . ನೆಕ್ಕದೋವನಿಗೆ ಮನಮಂಕಿಯಾಗಿತ್ತು (ಪ್ರಕು. ೫೫೪). [ಪಾನ$_{2}$+ವ್ಯಸನ]

**ಪಾನಸುಪಾರಿ** 'ಪಾನ್‌ಸುಪಾರಿ' ನೋ.

**ಪಾನಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಮಧುರವಾದ ಪೇಯಗಳನ್ನು ಒದಗಿಸುವುದೆಂದು ನಂಬಲಾದ ಕಲ್ಪವೃಕ್ಷ : ಪಾನಾಂಗ : ಈ ಜಾತಿಯ ಕಲ್ಪವೃಕ್ಷದಿಂದ . . . ನೀರು ಮತ್ತು ಪೇಯಪದಾರ್ಥಗಳು ದೊರೆಯುತ್ತವೆ (ಜ್ಞಾಕಶ. ೨೬೨). [ಸಂ.]

**ಪಾನಾಂಬು** (ನಾ). ಕುಡಿಯುವ ನೀರು : ಬೀಸಣಿಗೆ ತೆರೆಗಿಂಡಿ ತಂಬುಗೆ ವಾಸಿಸುವ ಪಾನಾಂಬುವೊಪ್ಪೆ (ಬಸವ. ೧೨-೯). [ಪಾನ$_{2}$+ಅಂಬು$_{3}$]

**ಪಾನಿ**$_{1}$ (ನಾ). ಕುಡಿಯುವವನು : ವಿಲೋಕಪ್ರಪಂಚವಿರಹಿತಾರಾಧ್ಯರಮಲ ಸದ್ಗೀತಪೀಯೂಷಪಾನಿ (ಅಕಳಂ. ೧-೫೧). [ಸಂ. ಪಾನಿನ್]

**ಪಾನಿ**$_{2}$ (ನಾ). ೧. ವಸ್ತ್ರ ; ಬಟ್ಟೆ : 'ಇರ್ಪಾನಿ' ಪರಾ. ೨. (?) : ಅರಟ್ಟಿಗಳರಸರ್ ಚೊತ್ತಮ್ಮನ್ ಎಡೆತ್ತೊಟಿನಾಡುಸಾಸಿರವುಮಾಳುತ್ತಿರು ವಿಟ್ಟರು ಒನ್ದಡಿ ಪಾನಿಯುಮೇಟುಂ ಒನ್ಪತ್ತು ದಿವಸಂ ಪಟ್ಟಿಂಟರ್ (ಎಕ. III, ಮೈಸೂರು. ೫೫-೮: ಕ್ರಿ. 740). [?]

**ಪಾನಿಗಟ್ಟು** (ಕ್ರಿ). [ಜೈನ] ಚರಿಗೆಗೆ ಬಂದ ಜೈನಸನ್ಯಾಸಿಗಳನ್ನು ಭಿಕ್ಷೆಗೆ ನಿಲ್ಲಿಸಿಕೊಳ್ಳು : ಭಟ್ಟಾರರೊಡವಂದ ಬ್ರಹ್ಮಚಾರಿ ತಪಂಬಟ್ಟು ಕೆಳ್ವುದುಂ ಕೇಳ್ದೊಡದು ಮಾಣ್ದಮ್ಮ ಮನೆಯೊಳೊಂದು ತಪಂಬಟ್ಟುನಿಂ ದಾಳ್ ತಮ್ಮ ಮನೆಯೊಳ್ ಪಾನಿ[ಪಾಠಾಂ. ನೆ]ಗಟ್ಟುವಮ ದು ಬಗೆದಿರ್ದು (ವಡ್ಡಾರಾ. ೭೯-೦೨) ; ಎಮ್ಮಲ್ಲಿಗೆ ನೀಮುಂ ಕಿತ್ತಯ್ಯಂಗಳನೊಡಗೊಂಡು ಬಂದು ಪಕ್ಕದಿರ್ದು ಪಾನಿ[ಪಾಠಾಂ. ನೆ]ಗಟ್ಟಿ ಮಾರ್ಗಮಂ ತೋಱೆ ಮಗುೞೆ ಬಿಜಯಂಗೆಯ್ಯಿಂ (ವಡ್ಡಾರಾ. ೫೧-೧). ☞ ಇಲ್ಲಿ 'ಪಾನಿಗಟ್ಟು' ಎಂಬ ಕೃದಂತಪದವು ಶ್ರಾವಕ, ಶ್ರಮಣ ಈ ಇಬ್ಬರಿಗೂ ಅನ್ವಯವಾಗು ವಂತೆ ಪ್ರಯೋಗವಾಗಿದೆ. ಆದುದರಿಂದ ಅರ್ಥಕ್ಲೇಶವಿದೆ. ಶ್ರಮಣ ರನ್ನು ಭಿಕ್ಷೆಗಾಗಿ ಆಹ್ವಾನಿಸಿ ಕಾಲು ತೊಳೆಯುವ ಸಮಯದಲ್ಲಿ ಅವರ ತಲೆಯ ಮೇಲುಭಾಗದಲ್ಲಿ ಚೌಕಾಕಾರದ ಶುಭ್ರವಸ್ತ್ರವನ್ನು ಕಟ್ಟುವ ಪದ್ಧತಿಯಿದೆಯಂತೆ. ಆದುದರಿಂದ ಇಲ್ಲಿ 'ಪಾನಿ' ಎನ್ನು ವುದು ಯಾವ ಶಬ್ದದಿಂದ ಉತ್ಪನ್ನವಾಗಿದೆ ಎಂಬುದು ಚರ್ಚೆಗೆ ಆಸ್ಪದವನ್ನುಂಟುಮಾಡುತ್ತದೆ. 'ಇರ್ಪಾನಿ' ನೋ.

[ಪಾನಿ$_{2}$ + ಕಟ್ಟು$_{1}$]

**ಪಾನಿಪತ್ತು**, ಪಾಣಿಪತ್ತು (ನಾ). ೧. ದಿಲ್ಲಿ ಮತ್ತು ಅಂಬಾಲಗಳ ನಡುವೆ ಇರುವ ಐತಿಹಾಸಿಕ ಪ್ರಸಿದ್ಧಿಯುಳ್ಳ ಒಂದು ಯುದ್ಧ ಭೂಮಿ. ೨. (ಆಲಂ) ಯುದ್ಧದಲ್ಲಿ ಉಂಟಾಗುವ ರಕ್ತಪಾತ : ಒಕ್ಕುಡಿತೆ ಅರೆಮುಕ್ಕು ಎನುತೆನುತೆ ಹಲಕೆಲವು ಪಾನಿಪತ್ತುಗಳನ್ನು ಮುಕ್ಕುಳಿಸುವೆ (ಪಾರಿಜಾ. ೯೦-೦೨). ಪಾಣಿಪತ್ತು: ೩. ಮಹಾಯುದ್ಧ : ಪ್ರಪಂಚದ ಪಾಣಿಪತ್ತಿನಲ್ಲಿ ಇವೆರಡೇ ವರ್ಗಗಳು ಒಂದಕ್ಕೊಂದು ಇದಿರಾಗಿ ಪಡೆಗಟ್ಟಿ ನಿಲ್ಲುವವು (ಮಹಾರ. ೧೧೦). [←ಹಿಂ. ಪಾನೀಪತ್]

**ಪಾನಿಯಾಲಯ** (ನಾ). ಸಮುದ್ರ (?) : ಕೀರ್ತಿಮಾಡುವುದ ಕೆಳೆತ ವಿಭೀಷಣಂ ಪಾನಿಯಾಲಯುವ ಕಳೆದುತ್ತರದ ತಟದೊಳು ದಿನೆ ಸಸಂದಣ ನಿರ್ದೋಷದಲ್ಲಿಗೈತಂದು (ತೊರವೆ. ೬-೫-೪). [<ಪಾನೀಯ+ಆಲಯ]

**ಪಾನಿವಟ್ಟಲು** 'ಪಾಣಿವಟ್ಟು' ನೋ.

**ಪಾನಿಸು** (ಕ್ರಿ). ಕುಡಿ; ಪಾನಮಾಡು : ಶೂನಕಮಾಂಸವ ಭಕ್ಷಿಸುರಯ ಪಾನಿಸುವವರ ಪಾಪಕೆ ಹೋಹರು (ಎಕ. XII. ಕುಣಿಗ. ೪೫-೦೬ : 1646) ಗಂಗೆಯಿಂದೆಸಗಿದಾ ಮದಿರೆಯಂ ಪಾನಿಪರೆ ? (ಹಕ್ಕಿ. ೧೨-೭೫).

[ಪಾನ$_{2}$+-ಇಸು$_{3}$]

**ಪಾನೀಯ** (ಗು). ೧. ಕುಡಿಯಬಹುದಾದ ; ಕುಡಿಯಲು ಯೋಗ್ಯ ವಾದ. (ನಾ). ೨. ಕುಡಿಯಲು ಯೋಗ್ಯವಾದ ಪಾನಕ, ಸೋಮರಸ, ಹಣ್ಣಿನ ರಸ,ಮದ್ಯಮುಂತಾದ ದ್ರವಪದಾರ್ಥ : ಸಹಕಾರಪಕ್ವರಸಸಾರಾಸಾರಪಾನೀಯದಿಂ ಸವಿಶೇಷಂ ಬೆಳೆದೊಪ್ಪಿ ತೋರ್ಪ ಕಳಮಂ ಕಾನೆಲ್ಲಿಯುಂ (ಸುಕುಮಾ. ೦-೭೪). ೩. ನೀರು ; ಜಲ: "ಅಪಃ(ಪ್), ತೋಯಂ . . . ಪಾನೀಯಂ . . . ಜೀವನೀಯಂ—ಈ ೨೬ ನೀರ್" (ಶಬ್ದಮ. ೧೧೬-೨೬); ಇತ್ತ ಶಿಷ್ಯಂ ಮುದದೊಳು ಪರಿಶುದ್ಧ ಪಾನೀಯದಿಂ ಸ್ನಾನವಂ ಮಾಡಿ (ಚೆನ್ನ. ೬-೪೦). [ಸಂ.]

**ಪಾನೀಯಖೇಯ** (ನಾ). (ಊರಿನ ಸುತ್ತಲೂ ತೋಡಿರುವ) ಕಂದಕ ; ಅಗಳು : ಮೂಡಣಸುವಳಸಿ ಸುತ್ತಿರ್ದುದಂಭೋಧಿಯೆಂಬಂತೆ ಗಭೀರಾ ರಾವದಿಂ ಪಲ್ಮೊರೆವವೊರೆಸಿಗಂ ಸುತ್ತಿ ಪಾನೀಯಖೇಯಂ (ಸುಕುಮಾ. ೯-೫೬). [ಪಾನೀಯ+ಖೇಯ]

**ಪಾನೀಯಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ : 'ಪಾನೀಯ ಜಾಸನ' ಪರಾ. [ಸಂ.]

**ಪಾನೀಯಜಾಸನ** (ನಾ). ತಾವರೆಯನ್ನು ಪೀಠವಾಗಿ ಉಳ್ಳವನು ; ಬ್ರಹ್ಮ: ಅಂಭೋಜಾಯತಾಕ್ಷನ ನಾಭಿಯಲಿ ಪಾನೀಯಜಾಸನನುದಿಸಿದನು (ಕೊರಗ. ೯-೨-೦೩). [ಪಾನೀಯಜ+ಆಸನ]

**ಪಾನೀಯಧಾರಕ** (ನಾ). ಮದ್ಯ ಮುಂತಾದ ಪಾನೀಯಂಗಳನ್ನು ಸದಾ ಹಿಡಿದು ಸಿದ್ಧವಾಗಿ ನಿಂತಿರುವ ಸೇವಕ : ತಾ ಭೋಗಿಸದೆ ಬಳಸದೆ ರಾಜನನೋಲಗಿಸುವವನೆ ಪಾನೀಯಧಾರಕನು (ಶಬ್ದಾ.ಶಾ. ೩-೯೩).

[ಪಾನೀಯ+ಧಾರಕ]

**ಪಾನೀಯಮಂಡಪ** (ನಾ). (ನೀರು, ಪಾನಕ, ಮಜ್ಜಿಗೆ ಮುಂತಾದ) ಪೇಯಗಳನ್ನು ದಾರಿಹೋಕರಿಗೆ ನೀಡಲು ದಾರಿಯ ಪಕ್ಕಗಳಲ್ಲಿ ಕಟ್ಟಿರುವ ಮಂಟಪ ; ಅರವಟ್ಟಿಗೆ : ಪಾನೀಯಮಂಡಪಂಗಳೊಳ್ ಕಲಶಮನೆತ್ತಿ ನೀರೆಱೆವ ಕಾಂತೆಯ . . . ನೋಡಿ (ತುರಂಗ. ೧-೯೬).

[ಪಾನೀಯ+ಮಂಡಪ]

**ಪಾನೀಯಶಾಲಿಕೆ** (ನಾ).=ಪಾನೀಯಮಂಡಪ : "ಪ್ರಪಾ. ಪಾನೀಯ ಶಾಲಿಕಾ—೨ . . . ಅರವಟಿಕೆ" (ಸಿದ್ಧಾಂತ. ೦೦೦).

[ಸಂ. ಪಾನೀಯಶಾಲಿಕಾ]

**ಪಾನೀಯಶಾಲೆ** (ನಾ).=ಪಾನೀಯಮಂಡಪ ; "ಪ್ರಪಾ. ಪಾನೀಯ ಶಾಲಾ — ಈ ೨ ಅಜವಟ್ಟಿಗೆ" (ಶಬ್ದಮ. ೩೦ (೪೨) ; ಅನಂಗಶೃಂಗಾರ ಲೀಲೆಗಳೆನಿಪ್ಪ ಪಾನೀಯಶಾಲೆಗಳುಂ (ಕೃಷ್ಣ. ೯-೨೨ ವ) ; ಆ ಪಾನೀಯ ಶಾಲೆಯೊಳು ನಿಂದು ನೀರೆಱೆವ ನಾರಿಯರ ಲಾವಣ್ಯದ ಸುಂದರ ಶೋಭನದಿಂದ ಮುಂದರಿಯುತ ಪಥಿಕರು ಜಲಪಾನ ಸುಕೆಂದೆನ್ನರಾ ಬಟ್ಟೆಗಳೊಳು (ಶರ್ಕಶ. ೧-೩೪). [ಪಾನೀಯ+ಶಾಲೆ$_{3}$]

**ಪಾನೀಯಸಂಚರ** (ನಾ). ನೀರಿನಲ್ಲಿ ಸಂಚರಿಸುವಂತಹುದು ; ಮೀನು : "ಮೀನಂ ಝಷಂ . . . ಪಾನೀಯಸಂಚರಂ ಶಲಿ ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಶುಂಗರಾ. ೧೨೧-೬). [ಪಾನೀಯ+ಸಂಚರ]

**ಪಾನು** (ನಾ). ೧. ಎಲೆ ; ಪತ್ರ : (*). ೨ ಪುಸ್ತಕದ ಅಥವಾ ಪತ್ರಿಕೆಯ ಹಾಳೆ : ಬಳವಂತನು ಅವಸರದಿಂದ ಪಾನು ತಿರುವುತ್ತ ಹೋದ್ದರಿಂದ ಆ ಚಿತ್ರಗಳು ಗೋದುವರಿಗೆ ನೆಟ್ಟಗೆ ಕಾಣಸಲಿಲ್ಲ

ವೈರಿಯಾಕ್ಕಿದನು (ಶಬ್ದಾ.ಶ. ೬-೨೦). ೭. ಖಡುಗ ಕೊಂತವ ನಢಕೆ ಹಾಯಿಕಿ ಹಿಡಿವ ಸುಭಟರ ಭುಜದ ಹೊಯ್ಲಿನ ಕಡುಮಸದ ರಣದವಣಿಗರ ಸೌರಂಭ ರಂಜಿಸಿತು (ಶಬ್ದಾ.ದ್ರೋ. ೮.೨೬); ಇಡುವ ಡೆಂಕಣಿ ಹಾಯಿಕುವ ಗುಂಡು ಮೇಲುಜ್ ಕೆಡಹುವ ತೊಲೆ ಪಕ್ಕಿದವರ ಬಡಿವ ಬಲ್ಲುಗದಿಗೆ (ಶುಕಾಂ. ೬೬-೩೩); ತಂದು ನಾ ಬಡಕುಮಾರಕನನು ಕಡಲೊಳ ಗಂಡೆ ಹಾಯಿಕಿ ಮರ್ದಿಸಿದೆ (ಕೋಹಿಕ. ೦೨-೩). ೧೬. ಈ ದುರಾಗ್ರಹ ನಿಲಲಿ ಹಾಯಿಕು ಕೈದುವನು (ಶಬ್ದಾ.ದ್ರೋ. ೦೫-೩೮). ೨೧. ಬೀಸು: ಸಿಲುಕಿದನು ಘಟ ಸ್ವಾಮಿದ್ರೋಹಿಗೆ ಬಲೆಯ ಹಾಯಿಕೊ ಗಂಡು ಮೀನಗ್ಗಳೆಯು ಗಾನವ ಕೊಳ್ಳದೆನುತ್ತೊಕಿದರು ಬಳಿಸಿನಲಿ (ಶಬ್ದಾ.ಶ. ೦೯-೧೯). ೨೨. ಕೆಡೆಯಿಸು; ಬೀಳಿಸು: ಬಲುಕಣ್ಣಗಳಿಪದಿರನು ಕರಿ ಮುಂಕೊಳಿಸಿ ಕೆಡಹಿತು ಜುವನಕೌಸಲಬಲವ ಕೈಕೆಯುವುಗಧಭೂಪರ ಕೊಡಹಿ ಹಾಯಿಕಿತು (ಶಬ್ದಾ.ದ್ರೋ. ೬-೨೯). **ಹಾಯಿಕ್ಕು**: ೨೧. ಮುನಿ ಹಾಯಿಕ್ಕಿದನಲಾ ಬಲೆಯನಕಟಾ ಸಿಕ್ಕಿದಿರಲಾ ಸ್ವಾಮಿದ್ರೋಹರು (ಶಬ್ದಾ. ೨-೦೯). **ಹಾಯ್ಯು**: ೨. ಹೃದಯವಲ್ಲಭ ಲನ್ನಡಿಯ ಮಧ್ಯದಲಿ ಉದ್ದಿನ ಬೀಜವನು ಹಾಯ್ಯುವಡೆ ಬೀಳಲ್ವುದೆನುತು ತಳುವಿಂತನಿತು ಮಾತ್ರದಲಿ . . . ಶಿವನಂ ಕೀರ್ತಿಸಾ (ಬಸವ. ೪೨-೪೫): ಗಗನದಲಿ ರಥ ಯೋಜನಾಂತಕೆ ಜಿಗಿದು ಧರೆಗೆಯ ಮೇಲೆ ಬೀಳಲು ನಗುತ ಕರಣವ ಹಾಯ್ಯು ಮುಂಡಿಯೊಳಿರ್ದನಾ ದ್ರೋಣ (ಶಬ್ದಾ.ದ್ರೋ. ೦೬-೦೯). ೩. ಒಮ್ಮಾರು ಕೇಶಪಾಶವ ಮಾಡಿ ತ್ರಿಭಾಗೆಯು ಘಮ್ಮನೆ ನಿಡುಜಡೆವೆಣೆದು ಕಮ್ಮಲರ್ಗಳ ಸೂಡಿ ಸಿರಿಮುಡಿಯಲಿ ವೀರಚಿಮ್ಮುರಿಯನು ಹಾಯ್ಯಿದನು (ಕೋಹಿಕ. ೩೩-೩೯): ತಲೆ ಗಳ ಕೋದು ಕೊರಳೊಳಗೆ ಹಾಯ್ಯಿ . . . ಪೆರ್ಮರಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ ಚರಣಕೆಜಗಿದುದೋಂಗು ಪುಲ್ಕುರುಳ್ (ಬಸವ. ೯೦-೨೬). ೪. ವೈಶ್ಯಕುಲಸಂಭವರು ಹಾಯ್ಯನರಲ್ಲಿ [ ಪಾಠಾಂ. ಹೊಯಿಸಿದರು ] ಗೂಡಾರವನು (ಶಕಕ. ೩-೯೯). ೭. ಸದಮಲ ಭರಿಕೈಯೊಳಗೆ ಈರೇಳುಭುವನವನು ಒದಜ್ ಹಾಯ್ಯಿ ತಾನೆ ನಿಂದುದಲಾ (ಶಕ್ತಿಕ. ೪. ೩೯೬-೦೩೬); ಪಾಕವಲ್ಲವಸಕ್ಕಟ ವೃಥಾಪಾಲವ ಮಾಡಿದನಿವ ನಮಗೇಕೆನುತ್ತವೆ ತನಯನಂ ಕೊಂದೆಳೆದು ಹಾಯ್ಯಿದಳು (ಬಸವ. ೨೯-೩೮); ಕಲಿಭೀಮಂ . . . ಶರ ಧನುವ ಹಾಯ್ಯಿದನ್ ಧೊಪ್ಪನೆ ಧರೆಗೆ ಧುಮ್ಮಿಕ್ಕಿದನು (ಶಬ್ದಾ.ಶ. ೦೨-೨೬); ಹೆಗ್ಗರಿಯೊಂದ ಕಿತ್ತಿತ್ತಿ . . . ತಂದನು ಗಂಡುಗಲಿ ಹಾಯ್ಯಿದರೆ ಮುಳುಗಿತು ತಳದ ಪರಿಯಂತ (ಶೇಕಾ. ೦೬-೭); ಕರ್ಪೂರಾಂಗವಾಗಿರ್ದ ಪಿಂಡಮಂ ತೆಗೆದು ಮಡುವಿನೊಳ್ ಹಾಯ್ಯೆಂದೊಡುದ್ದಂಡದಿಂದೆತ್ತಿ ಬೀದಿಗೆ ಬಿಸುಡಲ್ (ಕೈಲಾಶ. ೦೨-೩೦). ೨೧. ಹತ್ತಿ ತದ್ಗಿರಿಶಿಖರವನು ಮಾರವೊತ್ತಿನಲಿ ಬಲೆಗಳನು ಹಾಯ್ಯಿದರೊತ್ತಿ ಸೋಹಿದರು (ಕಳಕ. ೨-೦೩). ೨೨. ಭುಜಗ ಸಮೂಹವ ಖಗರಾಜ ಹೊಕ್ಕಂತೆ ಕುಜನರ ಕುಟ್ಟಿ ಹಾಯ್ಯನನು (ಕೋಹಿಕ. ೩೩.೨೦). ೨೩. ತೊಡಿಸು: ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು ಕಿವಿಯಲಿ ಕಿಂಬಗಳ ಸರಿಸಿ ಜಡಿವ ಗುಳವನು ಹಾಯ್ಯಿ ಬೀಸಿದರೊಡನೊಡನೆ ಹಕ್ಕರಿಕೆ ಜೋಡುಗಳ ಗಾಲಿಯ ಜಿಗಿದು (ಶಬ್ದಾ.ದ್ರೋ. ೬-೯೬): ನೃಪ ನಿವಹದಲಿ ನೀ ಹಾಯ್ಯು ಮಾನವಿದ್ದವನ ಕೊರಳಿಗೆನುತ್ತ ಕೊಟ್ಟನು ಪುಷ್ಪ ಮಾಲಿಕೆಯ (ಕಳಕ. ೬-೩೭); ಅಂಗಜಾಹುತ್ತವನ ಹಾಯ್ಯಿದೆಗಳ್ . . . ಅಳುತಿರೆ ಚಿಕ್ಕಲಿಂಗಣ್ಣನಾ ಲಿಂಗವಂ ಕಂಡು ತಂದವನ ಕೊರಲಿಂಗೆ ಹಾಯ್ಯಿ ಜೊತೆನೆ ಲಿಂಗಣ್ಣನನು ಬರಲ್ (ಬಸವ. ೬-೩೦). ೨೪. ಕೊಡು: ಕುಡಿತೆಯಿಂದಡಜ್ಯೊಳರ್ಘ್ಯಜಲವನು ಹಿಡಿದು ಹಾಯ್ಯುವ ಸಮಯದಲಿ ತಲೆ ನಡುವೆ ಬಿದ್ದುದು ಅರ್ಘ್ಯಜಲ ಸವರಣ್ಯಮುಯುವಾಗೆ (ಶಬ್ದಾ.ದ್ರೋ. ೨೯-೯೩); ಕುಚದ ವೃತ್ತತೆಯ ಕೊಟ್ಟಳು ಕೋಕಪಕ್ಷಿಗೆ ಲಚ್ಚದ ಭಾರವ ಕೊಟ್ಟು ನವಿಲ್ಗೆ ವಚನ ಸುಸ್ವರ ತನಗೇಕೆಂದು ಶುಕಪಿಕನಿಚಯಕ್ಕೆ ಹಂಚಿ ಹಾಯ್ಯಿದಳು (ಕೋಹಿಕ. ೯-೩೦). ೨೫. ಗುರಿಪಡಿಸು; ಒಳಗಾಗಿಸು: ಕಾಮನ ಸೂನು ಬಾಣನ ಮಗಳಿಗೆ ಹೊಗಲವರ್ ಕಂಡು ವಿಗಡನ ಹಿಡಿದು ಸಂಕಲೆಗೆ ಹಾಯ್ಯಿನರು (ಕೋಹಿಕ. ೩೬-೩೦). ೨೬. ಉಂಟುಮಾಡು: ತಿವೃತೇಜವ ಹಾಯ್ಯಿ ಜನಿಯಿಸಿತಾ ವಿಧಾತೃವಿಹಿತವ ತಾಳ್ದುಜ್ಯಿಯಾ ವಸುಂಧರೆಯೊಳಗೆ ಬಡಬಾನಳವು ಮುಸ್ಸಹವು (ಸಂಚಿಕ. ೨೩-೬೨). ೨೭. ಹೊಂದಿಸು; ಜೋಡಿಸು; ಅಳವಡಿಸು: ಕಂಠದುರ ವಣೆಸಿ ಬಂದು ದೀರ್ಘಕರಾಗ್ರದಿಂ ಒಡಿದು ಭರದೊಳುದ್ದಕೆ ಹಾಯ್ಯಿ ಕೊಂಬುಗಳೆರಡ ನೆಗ್ಗಲು (ಬಸವ. ೨೨-೦೨); ನವಹ ಮುಮುಂದದ ಹಳವಿಗೆಯ ತುದಿವಲಗೆಯುಲಿ ಹಾಯ್ಯಿದರು ಪನ್ನಗನ (ಶಬ್ದಾ.ದ್ರೋ. ೦೦-೯೦); ಸೂಸಿದರ್ ಕಂಡಮಂ ಬಲ್ಲವರ್ ಕೇಳ್ಲಳಂ ಬೀಸಿದರ್ . . . ಬೀರ್ವಗ್ಗ ಮಂ ಹಾಯ್ಯಿ ಸೇದಿದರ್ ಮುರುಳ್ಗಳ್ಗೇ ತೂಂತರು (ಬಸವ. ೪೨-೫೬). ೨೮. ಪಕ್ಕಕ್ಕೆ ತಳ್ಳು; ಸರಿಸು: ಹಿಡಿವ ಬಡುವೂಬ್ಬುಳಿಗೆ ತಹ ಬಲುನೆಡಕೆ ಹಾಯ್ಯುವ ಸುಪ್ರತೀಗಜ (ಶಬ್ದಾ.ದ್ರೋ. ೩-೦೦). ೨೯. ಇರಿ; ತಿವಿ; ಗುಮ್ಮು: ಹಾವಿನಂತಿರೆ ನಿಲುಕಿದರು ಸೂಕರನವೊಲು ಕೋಡೆತ್ತಿ ಹಾಯ್ಯಿದರು (ಶಬ್ದಾ.ಆ. ೯-೪೫). ೩೦. ಬಿಡು: ರಕ್ಕಸಿಯು ಜೀವವನೊದೆದು ಹಾಯ್ಯು (ಕೊರಾ. ೦-೦೦-೮).

**ಹಾಕಿಕೊಳ್ಳು** = ೧. ಧರಿಸು; ತೊಡು: ಹಬ್ಬದ ದಿನ ಹೊಸಬಟ್ಟೆ ಹಾಕಿಕೊಳ್ಳುವುದರಲ್ಲಿ ಮಕ್ಕಳಿಗೆ ತುಂಬಾ ಉತ್ಸಾಹ (ಜೂ). ೨. ಹೊಂದು; ವಶಪಡಿಸಿಕೊಳ್ಳು: ಅಣ್ಣನ ಹೆಂಡಿರ ತಮ್ಮ ಹಾಕಿಕೊಂಡು ಕೊಡದಿರಲಾಗಿ ಇದು ಅನ್ಯಾಯವೆಂದು ಅವನ ತಿಜಯ ತಮ್ಮ ತಾ ತೆಕ್ಕೊಂಡ (ಶಾಸನ. ೪. ೧೪೯-೮೮). **ಹಾಕಿಡು** = ಇರಿಸು; ಇಡು: ನಾಗೊಂದಿಗೆ ಅಥವಾ ಹಲಿಗೆಗಳಲ್ಲಿ ಸಾಮಾನುಗಳನ್ನು ಹಾಕಿಡುವ ಪಾತ್ರೆಗಳನ್ನು ವ್ಯವಸ್ಥಿತವಾಗಿ ಇರಿಸಬೇಕು (ಅಡುಗೆ ೬೨). **ಹಾಕಿಯಾಡು, ಹಾಕ್ಯಾಡು** = ಹೊಡೆದಾಡು: ಅವನು ಹಾಗೆ ಹೇಳದರೆ, ನೀನು ತಕರಾರು ಮಾಡಬೇಕಾಗಿತ್ತು. ಮಹಾರಾಜ! ನಾನು ಹಾಕಿಯಾಡಿದೆನು. ಆದರೂ ಅವನು ಕೇಳಲಿಲ್ಲ (ಅಂಬಲ. ೦೬೬); ಗೋಕುಲದೊಳು ಪುಟ್ಟಿ ಆಕಾರವಡಗಿಸಿ ಹೋಕತನದಲ್ಲಿ ಹಾಕ್ಯಾಡುತ ಗೊಲ್ಲರ ಕೂಡಲಿ ಬೆಳೆದು (ಕೋಹಿಸಂ. ೨೦-೨); ಇವು ತಮ್ಮ ಹುಡುಗರದೆ ಅಂತ ರಂಗಣ್ಣರಾಯರು, ಅಲ್ಲ, ತಮ್ಮ ಹುಡುಗರವು ಅಂತ ಯಂಕಣ್ಣರಾಯರು ಹಾಕ್ಯಾಡಿದರು (ಕೃಪಾಕ. ೯೩). **ಹಾಕ್ಯಾಟ** = ಬಡಿದಾಟ; ಗುದ್ದಾಟ: ಯಾರ ಸಂಗಾಟಾದ್ರೂ ಹಾಕ್ಯಾಟ ಗೀಕ್ಯಾಟ ಆಗೇತೇನು? (ಕೃಪಾಕೃ. ೯); ಮನ್ಯಾಗ ಏನಾರೇ ಹಾಕ್ಯಾಟ ಗೀಕ್ಯಾಟ ಆಗೇತೇನ್ರಿ? (ಕಂಜಹು. ೨೬).

[ ಪಾಯ ⁶₁ + ‑ ಕು₁ ]

**ಹಾಯ್ಯು₂**, ಪಾಕ್ಕು, ಪಾಯಿಕು, ಪಾಯಿಕು (ನಾ). ಒಳ್ಳೆಯದು, ಭಲೆ ಎಂಬರ್ಥದ ಕೊಂಡಾಟದ ಒಂದು ನುಡಿ: "ಆರರೆ ಧಾರಾ ಭಾವು ಭಳಿರೇ ಧಿರುರೇ ಮಾರ್ಕು ಪೂತುರೆ ಪಾಯ್ಯು [ಪಾಠಾಂ. ಪಾಕು, ಪಾಯಿಕು] ಚಾಗು ಸಲೆ ಸುಂಪೂರಮೆನೆ ಕೊಂಡಾಟದ ನುಡಿ" (ಚಾಲ. ೯೬); ಅನಿಮಿಷಾವಳಿ ಪೂತು ಪಾಯ್ಯನೆ ಹೊಗಳಿದರು ಭಟರು (ಶಬ್ದಾ.ದ್ರೋ. ೬-೫೬); ಆಯತದು ಸಮರದಲಿ ಗುರು ಗಾಂಗೇಯ ಕರ್ಣ ದ್ರೋಣರ ತಜುವಿಯ ಲೆಕ್ಕಕೆ ಸಂದನ್ನೆ ಮಾರ್ಕು ಪೂತು ಪಾಯ್ಯೆನುತ (ಶಬ್ದಾ.ಶ. ೨೨-೪೫). **ಪಾಕ್ಕು**: ಮೇಲಿನ 'ಭಾರನಿ' ಪ್ರಯೋಗದ ಪಾಠಾಂತರವನ್ನು ನೋಡಿ. **ಪಾಯಿಕು**: ಸರಿಸ ಸಬಳಿಗೆ ಪೂತು ಪಾಯರೆಯೆಂಬ ಕಳಕಳಕ . . . ಪಾಸಗಿದುದೊಂದು ಕಡೆಯಲಿ (ಶಬ್ದಾ.ಶ. ೬-೭); ಪೂತು ಪಾಯಿಕು ಮಾರ್ಕು ಭಾವು ಭಲರೆಯೆಂದು ಸೂತರಸುತರು ಕೊಂಡಾಡೆ (ಶುಕಾಂ. ೦೮-೯೨). **ಪಾಯಿಕು**: ಪೂತು ಪಾಯಿಕು ತತ್ತ ಹೊಕ್ಕಿನೊಳತಾಕೊಂಬವ

ಕವ್ವೆ ನೋಣಕ್ಕೆ ಹಾರುವಂತೆ ಅವ್ಯಾಯನ ಬಿಡದು(ಕುಮಾರೇ. ಬ. ೩೬-೦೩೬); ಮಾವಣ್ಣಗಳಂ ಪೀರ್ವ ಕೀರವಿಟ್ಟಿಯ ಪಣ್ಗೆ ಚಿತ್ತಂ ಹಾರಿದವುದೇ (ಜಕೃ. ೦೦-೦೦); ಧಾರುಣಿಯ ಲಂಪಟರು ಕದನವ ಹಾರಿ ಬಂದರು ಗಡ (ಕುಮ್ಯಾ.ರಾ. ೦-೪); ಹಾರಿದ ಸಖಿಯರ ಪೊರೆವಿರಿ ನೀವೊಂದ ಹಾರವಿಲ್ಲದ ಬಲ್ಲೆನೆನ್ನ ಹಾರವಂತೊಪ್ಪದಿ ಬೇಳಿರಂದೊಂದೋದು ಹಾರವ ಹರಸಿಯುಕ್ಕಿದಳು (ಚಿತ. ೩೩-೬೦). ೪. ಹಾರಲತಿಶಯತೃಷ್ಣೆ ನಾಶಕೆ ಕಾರಣವರೇ ವಾಸ (ಕುಮ್ಯಾಸ. ೦೩-೩೩); ಅಧರ ಉರುಟತಿ ವದನವಂದಿರ ಸದರ ರೋಮವಾವೃ ಪಿರಿದು ನುಡಿಗಳು ತೊದಳು ಲಜ್ಜೆಯು ಹೀನದ್ವಿಗುಣ ಹಾರಿ ನೋಡೆಂದ (೪೪ತ್ಯ.೪. ೩-೨೦). [ದೇಶ. ತಮಿ. ಮಲ. ಪಾರ್]

**ಪಾರ್೨** ‘ಪಾಱು೨’ ನೋ.

**ಪಾರ್೩** ‘ಪಾಱು೩’ ನೋ.

**ಪಾರ೨** (ನಾ). ೧. ನದಿ, ಸಮುದ್ರ ಮುಂತಾದುವುಗಳ ದಡ,–ತೀರ: "ಪಾರವೆಂಬುದು ತಡಿ". (ಹಲಾಯು. ೦೦೦-೯೩); ಕಾಣದಂಬುಧಿಯ ತೋಳ್ ನೀಡಿ ಸನ್ನೆಗೈದೀಸಿ ಪರಿದಂತಾಯ್ತು ರಾಮಂಗೆ, ತನ್ನಾತ್ಮದತಿ ದೂರದಾ ಪಾರದಿಂ (ಶ್ರೀರಾಮಾ. ೦೪೭-೪೧೧); ಪಾರವಿರ್ಪ ಜಲರೂಪ ಸಿಂಧುವಂ ಪೀರಿದಾತನ ಮಹತ್ತ್ವಮೇನೊ ಪೇಳ್ (ಸೀಗಟ್ಟು. ೬೯). ೨. ಎಲ್ಲೆ; ಗಡಿ; ಮೇರೆ; ಸೀಮೆ: ಅಮಿತಮತಿಗುಣನಿತಿ ವಿಕ್ರಮಗುಣದಿಂ ಶಾಸ್ತ್ರಪಾ[ಪಾಠಾಂ.ಶಸ್ತ್ರ ಪಾ]ರಮುಂ ರಿಪುಬಳ[ಪಾ] [ಪಾಠಾಂ. ಪಾ. ಹಾ]ರಮುಮೊಡನೆ ಸಂದುವೆನಿಸಿದನಮೋಘಬಲಶಾಲಿ ಮನುಜಮಾರ್ತಾಂಡನೃಪಂ (ಶಂಕರಾ. ೦-೯೩); ಸ್ವಾರಸ್ಯವಮಿತ ಪಾರಿಗವಿರದು ಜೀವನದಿ ಪಾರದರ್ಶಿಯು ನೆನೆದು ನಡೆಯಲದು ಸಫಲ (ಮುಂಕುಳ. ೬-೬೬); ಅವರ ಸಂತೋಷಕ್ಕೆ ಪಾರವೇ ಇಲ್ಲ (ಕಿತ್ತೂರ. ೦೦೩). ೩. [ಸಾಂಖ್ಯ] ಒಂಬತ್ತು ಬಗೆಯ ತುಷ್ಟಿಗಳಲ್ಲಿ ಐದನೆಯದು: ಪಾರ ಎಂದರೆ ದ್ರವ್ಯಾರ್ಜನೆ. ಐದನೆಯದು (ಹಿಂದೂಸ. ೩೩). [ಸಂ.]

**ಪಾರಂ** (ಅ). ಚೆನ್ನಾಗಿ; ಅತಿಶಯವಾಗಿ: ಆರೂಢವ್ಯಸನಕ್ಕೆಪ್ರೋಷ ಯುವರಾಜಾಗ್ರಾಸನಕಧ್ಯಾನದಿಂ . . . ವಾರಸ್ತ್ರೀಗವಾಸೋತ್ಥವಸ್ತುರಚನಾ ಲಂಕಾರರ್ಶಂಕಾರದಿಂ ಪಾರಂ ಪಟ್ಟಪದಂ ಜನಶ್ರುತಿಪಥಕ್ಕಾಗಿರ್ಪುದಾಹ್ಲಾದನಂ (ಮುಕುಂ.ಸೇ. ೦-೬೬). ‘ಪಾರಂತಗುಳ್’ ಪರಾ. [<ಪಾರ೨]

**ಪಾರಂಗತ** (ಗು). ೧. ಸಂಪೂರ್ಣವಾಗಿ ತಿಳಿದ; ಸಮಗ್ರವಾಗಿ ಅರಿತ: ಸುಪ್ರಸಿದ್ಧವೈದ್ಯನಾದ ಪಾರಂಗತ ಕಾನ್ನೀವಾನೂ ಕೂಡ ಕಾಕನ ಸಂಶೋಧನೆಯಿಂದ ಬೆರಗಾಗಿ ಹೋದನು (೬೬೩೫. ೬೪). (ನಾ). ೨. ಚೆನ್ನಾಗಿ ತಿಳಿದವನು; ನಿಷ್ಣಾತ: ಪಾರಂಗತಗಂತರಾಳ ದೂರ ಗಳೇನು? ಸ್ವೈರಪಥವಾತ್ತನರು (ಮುಂಕುಳ. ೬೬೪); ಆಂಡಯ್ಯನು . . . ತನ್ನ ಕಾಲಪರಂಪರೆಗನುಗುಣವಾಗಿ ವಿದ್ಯೆಯಲ್ಲಿ ಪಾರಂಗತನಾದನು (ಜಾಚಿಸ. ೦೦೩). [ಸಂ.]

**ಪಾರಂಗಮತೆ** (ನಾ). ಪೂರ್ಣಪಾಂಡಿತ್ಯ; ಸಂಪೂರ್ಣಜ್ಞಾನ: ಪ್ರಸೇನಜಿತನ ತಂದೆಯು, ಮಗನು ಕಲಿತು ಬಂದ ವಿದ್ಯೆಯ ಪಾರಂಗಮತೆಯನ್ನು ಕಂಡು ಸಂತುಷ್ಟನಾಗಿ, ಅವನಿಗೆ ರಾಜ್ಯದಲ್ಲಿ ಅಭಿಷೇಕ ಮಾಡಿದನು (ಜಕ್ಕುಕು. ೦೩೪). [ಸಂ. ಪಾರಂಗಮತಾ]

**ಪಾರಂತಗುಳ್** (ಕ್ರಿ). ಎಲ್ಲವನ್ನೂ ಚೆನ್ನಾಗಿ ತಿಳಿ; ಪಾರಂಗತನಾಗು: ಕಾವ್ಯತತ್ತ್ವದೊಳ್ ಪಾರಂತಗುಳ್ವೆಸ್ಕೃತಂಗುಡುವೊಲ್ದಂತೊಡಗೂಡುವ . . . ಬರ್ಪಮಂಗಳಸೆಯುಂ ಸೊಲ್ವರ್ ಮಹೋತ್ಸಾಹದಿಂ (ಮುಕ್ಕಾ೦. ೦೬-೭). [ಪಾರಂ + ತಗುಳ್೧]

**ಪಾರಂಪರೆ** (ನಾ). ೧. ಕುಲ; ವಂಶ; ಪರಂಪರೆ: ಹುಟ್ಟಿ ಹೊದ್ದದಂತೆ ನಡೆವ ಲಿಂಗಿಗಳಾರಯ್ಯ, ಹೇಳವರ ಪಾರಂಪರೆಗೆ ಸಲೆ ಸಂದ ರಾಜಗುರು ನೀನಜಿಯದವರಿಲ್ಲ (ಹಕಳಾ. ೨-೬); ಅವನಿಗೆ ಇಕ್ಷ್ವಾಕು ಮೊದಲಾದ ಪಾರಂಪರೆ[ಪಾಠಾಂ. ಪರಂಪರಿ, ಪರಂಪರೆ]ಯಿಂದ . . . ಸಲ ಕ್ಷತ್ರಿಯವರ್ಗ ಹಾಗೂ ಸಮಸ್ತ ಸ್ತ್ರೀವರ್ಗ ಜನಿಸಿತ್ತು (ಕೃಕೆಸೂ. ೧. ೦೩). ೨. ಸಂಪ್ರದಾಯ: ದಶರಥಧರಣಿಪತಿ ರವಿಕುಲದ ಪಾರಂಪರೆಯ ಪರಮಾಪ್ತ ಪ್ರಧಾನರ ಕರೆಸಿ (ತೊರರಾ. ೦.೩-೦). [<ಪ್ರಾ. ಪಾರಂಪರ. / ಸಂ. ಪಾರಂಪರ್ಯ]

**ಪಾರಂಪರ್ಯ** (ನಾ). ಪರಂಪರೆಯಿಂದ ಬಂದಿರುವುದು; ಸಂಪ್ರದಾಯ; ಆಚಾರ: "ಆಮ್ನಾಯಃ, ಸಂಪ್ರದಾಯಃ, ಪಾರಂಪರ್ಯಃ, ಗುರುಕ್ರಮಃ— ಈ ೪ ಎಡೆವಾಚಕದ ಗುರೂಪದೇಶಂ" (ಸೂಹಯು. ೬೭-೨೯೯); ಅರ್ಧಗವ್ವಡದ ತೀರ್ಥಪಾರಂಪರ್ಯದಿಂದಂ ಸುರಥಮಿಂಬುದು ನಾಡಲ್ಲಿ ಪಳಭಿಯೆಂಬುದು ಪೊಬಲದನಾಳ್ವೋಂ ವಜ್ರಪಾಳಂ (ವತ್ಸಾರಾ. ೯೩-೩); ಅನೇಕ ಶತಮಾನಗಳಿಂದ ಪಾರಂಪರ್ಯವಾಗಿ ನಡೆದು ಬಂದಿರುವ ದೈನ್ಯಭಾವವಿನ್ನೂ ತೊಲಗಿಲ್ಲ (ಅರ್ಥೇಶ. ೯೩). [ಸಂ.]

**ಪಾರಂಪರ್ಯೆ** (ನಾ). = ಪಾರಂಪರ್ಯ: "ಮುಂತೆ ಪಾರಂಪರ್ಯ[ಪಾಠಾಂ. ಪರಿಯ]ಸಂಪ್ರದಾಯಮೆನಲ್ ನಿರಂತರಂ ಗುರೂಪದೇಶಮೆನಿಕ್ಕು" (ಮುಂಗರಾ. ೬೩-೩). [ಸಂ. ಪಾರಂಪರ್ಯ]

**ಪಾರಂಬಿ**, ಪಾರಂಬೆ (ನಾ). ಮರದ ಬೀಳಲು: ಕರುಳಿಗೊಂದು ಹೊಸ ಕರುಳ ಪಾರಂಬಿ ಇಳಿಬಿಟ್ಟು ನೆಲದ ನಿನ್ನದೆ ಮಾಡಿಕೊಂಬಿ (ತಪ್ತಕೃ. ೬-೬). **ಪಾರಂಬೆ**: ಬಲಿತ ಬಟ್ಟತರುಶಾಖೆಯಿಂ ನೆಲಕಿಳಿದ ಪಾರಂಬೆಗಳ ಪೋಲುವ ಬೆಳೆದ ಶ್ಮಶ್ರುಗಳೊಳ್ಳ ಸಚಿವರನತಿಗಳನು ಕೊಂಡು (ರಶಿಖಂ. ೦೪೯-೭೦). [← ಮರಾ. ಪಾರಂಬೀ, ಪಾರಂಬಾ]

**ಪಾರಂಬೆ** ‘ಪಾರಂಬಿ’ ನೋ.

**ಪಾರಕ೧** (ಗು). ೧. ಆಚೆಗೆ ಒಯ್ಯುವ; ದಾಟಿಸುವ: ಪಾರುಮಾಡುವ. (ನಾ). ೨. ಆಚೆಗೆ ಒಯ್ಯುವವನು; ದಾಟಿಸುವವನು: ದ್ವಾರ ದ್ವಾರಂಗಳೊಳಗಲಡಿಹ ಪಾರಕರ ಬಗೆಗೊಳ್ವದಂತರ್ದ್ವಾರದಾ ಸಾವಾಸಿಗಳ ವಿಸಾಜಾತ್ರ ನಡೆತರಲು (ಪತೃ. ೬೦-೨೪); ಕಟ್ಟಿದ ಪಾಟ್ಟು ಪಟ್ಟೆಯ ಕಾಸೆಯ ಥಟ್ಟಿ ಕಟ್ಟಾಯತನ ಪಿಂದಿವಾಳ ನೆಟ್ಟನೆ ವಾಜಿಯ ಪಾರ[ಪಾಠಾಂ. ರು] ಕರು ಕಣ್ಗೆಸೆದರು ಪಟ್ಟವಾನೆಗಳಂತಲ್ಲಿ (ಕುರಾಸಾ. ೨೭-೪೦). [ಸಂ.]

**ಪಾರಕ೨**. ಪಾರಗ೨ (ನಾ). ೧. ಹರಿಗೆಯನ್ನು ಹಿಡಿದ ಯೋಧ; ಗುರಾಣಿಯನ್ನು ಹಿಡಿದಿರುವ ಸೈನಿಕ (?): ಬಿಜರೆ ಗಜದಾಡೆಗಳ ಕೈಗಳ ಹಜಾಯ ಹೊಯ್ದರು ಪಾರಕರು ಮುಕ್ಕಾಜುಕದರೆ ಸಬಳಿಗರು ಕೋದೆ ತ್ರಿಗದಲು ಕರಿಘಟೆಯ (ಕುಮ್ಯಾ೬. ೨-೦೬); ಸೀಳ ಬಡಿದನು ಸವಾರಥರ ಪಾಯಿಕಾಳ ರಾವುತದನು ಮಹಾರಥಜಾಲವನು ಜೋಧರನು ಧಾರಿಯ ಪಾರಕವ್ರಜವ (ಕುಮ್ಯಾಗ. ೯-೩೬). **ಪಾರಗ೨**: ೨. ಒಂದು ಬಗೆಯ ಆಯುಧ; ಹರಿಗೆ; ಡಾಲು: ವೀರನಹಡಿವಿರಾಗೆನುತ ಬಹುಭಾರಣದ ಚಮ್ಮಟಿದ ಖಡುಗವ ಪಾರಗದ ಪರಿಣತರು ಹೆಣಗಿದರು (ಕುಮ್ಯಾಕ್ರೋ. ೦೯-೩); ಚಾರಣದ ಚಮ್ಮಟದ ಖಡುಗದ ಪಾರಗದ ಬಿಚ್ಚಟದ ಬಾಳೆಯ ಪ್ಯಾರದೊಡ್ಡಿನ ಹೊಯ್ಲು ಹೋರಟೆಗಳ ಸುರೆಬೆಗಳ ಸುರತರಶ್ರಮ ಕೊಣೆಗಿದರು (ಕುಮ್ಯಾಕ. ೦೯-೩೩). [<ಪ್ರಾ. ಫಾರಕ್ಕ ?./ಸಂ. ಸ್ಫಾರಕ ?]

**ಪಾರಕಾವಣೆ** ‘ಪಾರಖಾವಣೆ’ ನೋ.

**ಪಾರಕು**, ಪಾರಕ್ಕು, ಹಾರಕ, ಹಾರಕು, ಹಾರಕ್ಕಿ, ಹಾರಕ್ಕು (ನಾ). ಒಂದು ಬಗೆಯ ಧಾನ್ಯ: ಪ್ರಥಮದಿವಸದೊಳೆ ಪಾರಕನ ಕೂಳುಮಂ ಪರೆಯುಮಣ್ಣೆಯುಮಂ ಪಾಡಿನಳೆಯುಮಂ ಬಡ್ಡಿಸಿಯೊಡವನಮೃತಮ ನಾಣ್ನಾಂತುಂಡು (ವಡ್ಡಾರಾ. ೬೯-೨೬); ಪಾಂತ್ರಿಯ ಮೊ ಳು ಪೊಯ್ದ ಪಾರಕನಂತೆ ತನ್ನ ಕಾಲದ ತಪಸಂತರದೊಳು ವರ್ಷಸಮೋಹಗಳೆಯಾತ್ರಯ ದೊಳಾವುದಾನುಮೊಂದುಮುಕ್ಕೆ ಬಿಕ್ಕಂ (ಹಂಪ. ೬೦೦ ೦೨); ಬರಗಳ್ಳು

ಕೋರರ ಪಾರಕಂವೆರಸಗಸಿ ಕಂಸಂಬೆ ಕಬಿವ ನೆರ್ ಸಾವೆಗಳುಂ ತಾರಗಳ್ಸಹಿತಂ (ಅಜಿತಾ. ೬-೩೯). **ಪಾರಕ್ಕು :** ಆದರದೆ ಜ್ಯೇಷ್ಠದಪರದ ಬೂದಿಯ ಮೃಗಶಿರದೆ(ರಾದಿ) ಕೊಂಡ ಮೂಟೆಯಿಂ ಬೆಳೆಗುಂ ಪೋದಿನಿ ಪೂಜಗಣ(ಪರ) ನಾಲ್ಕುಜೋಳದೊಡೆ ಪಾರಕ್ಕು ಬರ(ಬ)ಗು ಬೆಳೆಗುಂ ಸ್ವಲ್ಪಂ (ಜಗ್ಗಿಪು. ೬-೦೬೬); ಉಪ್ಪಿಲ್ಲದ ಪಾರಕ್ಕಿನ ಸಪ್ಪಾನೋ ಗರದೊಳಾಸ್ಪಾವೇಜಿದ ಕಟೆಯಂ ತಪ್ಪದೆ ಬಲಿಸ್ಕೆ (ಪುರಾಸ್ಥ. ೩-೯೬).

**ಪಾರಕ :** "ಕೋದ್ರವಾಃ ಪಾರಕಾಃಗಳು" (೬೬೩ಶಾ. ೦೬-೬೦); ಪಾರಕವಕ್ಕಿ ಅಜನ ಹೆಸರು ಗುಗ್ಗರಿ ಹುಗ್ಗಿ ಪಾಯಸ. . . ನಿವಾಳಿಸಿ (ಶಾಂತ. ೦೨೬-೬); ಸಜೆ ನವಣೆ ನೆಲು ಪಾರಕ × × × ಧಾನ್ಯ ಕುಳಪಾಲ ಭತ ಖ ೧ (ಶಿಶಾ. IX-11, ೩೩೪-೨೯; 1633); ಹಾರುವರ ಹೊಲಕ್ಕೆ ಪಾರಕ, ದೇವರ ಹೊಲಕ್ಕೆ ಹುಚ್ಚೆಳ್ಳು (ಗರುಂಂ. ೯೩). **ಪಾರಕು :** "ಉನ್ಮಾಳಃ, ಕೋದ್ರವಃ, ಕೋರದೂಷಕಃ—ಈ ೩ ಪಾರಕ್" (ಹಲಾಯು. ೯೩-೯೨೬).

**ಪಾರಕ್ಕಿ :** ಕ್ಷೀರಸಿತಪಾನದಿಂ ಧುತ್ತೂರದ ಕೂಷ್ಮಾಂಡರಸದೊಳಂ ಬೆಲ್ಲ ದೊಳಂ ಪಾರಕ್ಕಿನ(ಯ) ಸೊರ್ಕಟಿಗುಂ (ಲೋಕೋಪ. ೦೦-೯೨).

**ಪಾರಕ್ಕು :** ಪಾರಿಜಂ ಕುಂಬಳದೆಲೆಯುಂಮುನರೆದ ರಸಂ ಸಿಂಧುಜಾತವುಂ ಕೂಡಿ ಬಟ್ಟಿಕ್ಕರದೀಂಟಲ್ ಪಾರಕ್ಕಿನ ಪಿರಿದನಿಪ ವಿಷಾಪಹರಣಮಕ್ಕು ಮಮೋಘಂ (ಲೋಕ. ೨-೦೫೯).

[ದೇ. ॥ ತೆಲು. ಆರಿಕ. ಆರಿಕೆ. ಆರುಕ. ಆರುಗ]

**ಪಾರಕ್ಕು** 'ಪಾರಕಂ' ನೋ.

**ಪಾರಖು** (ನಾ). (ಮುತ್ತು, ರತ್ನ ಮುಂತಾದುವುಗಳ) ದರ್ಜೆ ; ಕಿಮ್ಮತ್ತು ; ಯೋಗ್ಯತೆ : ಪಾರಖ ನಮೂನೆ—ತೂಕದ ಸಮಯ ಗಿರಾಯಿಕರು ಆರಿಸಿ ತೆಗೆದುಕೊಂಡರೆ, ಈ ಖರ್ಚಿನ ರಕಮು ಬೀಳುವದಿಲ್ಲ (ಮುಂಬ. ೦೬). [←ಮರಾ. ಪಾರಖ್]

**ಪಾರಖಾವಣೆ** 'ಪಾರಖಾವಣೆ' ನೋ.

**ಪಾರಖಾವಣೆ,** ಪಾರಕಾವಣೆ, ಪಾರಖಾವಣೆ, ಪಾರ್ಖಿವಣೆ (ನಾ). ೧. (ನಾಣ್ಯ, ಮುತ್ತು, ರತ್ನ ಮೊದಲಾದುವುಗಳನ್ನು) ಪರೀಕ್ಷಿಸಿ ನೋಡುವುದು ; ಪರೀಕ್ಷೆ ; ತಪಾಸಣೆ : (೪). ೨. ಸಲ್ಲಿಸುವುದು ; ಜಮಾ ಮಾಡುವುದು ; ಪಾವತಿ ಮಾಡುವುದು : ಅದು ವರ್ತಕ ಧರ್ಮವಲ್ಲ. ಹಾಗಿದ್ದರೆ ಜಾಗ್ರತೆಯಾಗಿ ಪಾರಖಾವಣೆಗೆ ಹಣ ತರಿಸು (ಅಂಗಾಲಿ. ೦೦); ಗ್ರಾಮದ ಕಂದಾಯವು ವಸೂಲಾದ ಕೂಡಲೇ ಪಟೇಲನ ಅಪ್ಪಣೆ ಪ್ರಕಾರ ಆ ಹಣವನ್ನು ತಾಲ್ಲೂಕು ಖಜಾನೆಗೆ ಪಾರ ಖಾವಣೆ ಮಾಡುವುದಕ್ಕಾಗಿ ತೆಗೆದುಕೊಂಡು ಹೋಗುವ ಕೆಲಸವು ಇವನದಾಗಿರುತ್ತದೆ (ಗ್ರಾಮ. ೪). **ಪಾರಕಾವಣೆ :** ೧. ಲಿಂಗ ರಾಜ ಅನ್ಯಾಯ ಮಾಡಿದರು. ಆದರ ಲೆಕ್ಕ ದೇವರಮಾರು ಪಾರಕಾವಣೆ ಆಗುತ್ತ (೬೪೦೬. ೦೬೪). **ಪಾರಖಾವಣೆ :** ೨. ಆ ಮೇರೆಗೆ ಐವಜು ಪಾರಖಾವಣೆ ಮಾಡಿಕೊಂಡು ಕಳಿಹಿಸುಣವನ್ನು ವಾಪಸ್ ಕೊಟ್ಟು ಬಾಕಿ ಐವಜಿಗೆ ಆಗಿಂದಾಗ್ಯೆ . . . ರಶೀದಿ ಕೊಡಬೇಕು (ಮಹಾಸಂ. II, ೬೬). **ಪಾರ್ಖಿವಣೆ :** ೨. (ಮೈಗೆಜೆ. IV, ೬೬೨). 'ಪಾರಖಾಣೆಯ' ಪರಾ.

[←ಮರಾ. ಪಾರಖಾವಣ್]

**ಪಾರಖೀ** (ನಾ). (ಮುತ್ತು, ರತ್ನ, ನಾಣ್ಯ ಮೊದಲಾದುವುಗಳನ್ನು) ಪರೀಕ್ಷಿಸುವವನು : ಪರೀಕ್ಷಕ : ಅವು ಸರ್ರಾಫರ ದಂಧೆಯಲ್ಲಿ ಕಳೆದ ೪೦ ವರುಷದ ಅನುಭವ. ಬಂಗಾರದ, ಮುತ್ತುರತ್ನದ ಪಾರಖೀ ನಾವು (ಗೀತಾಗ. ೯೨). [←ಹಿಂ. ಮರಾ. ಪಾರಖೀ]

**ಪಾರಗ₁** (ನಾ). ೧. ತೀರವನ್ನು ಮುಟ್ಟಿದವನು ; ದಡವನ್ನು ಕಂಡವನು : ಅನುಪಮಗುಣರನುಪಮತಪರನುಪಮಸಿದ್ಧಾಂತವಾರ್ಧಿ ಪಾರಗರೆಂದೀ ವನಧಿಪರೀವೃತಸಕಳಾವನಿ ಪೊಗಟ್ಟುದು ಸಕಳಚಂದ್ರ ಸೈದ್ಧಾಂತಿಗಳಂ (ಶಾಸಂಪು. ೦-೨೯) ; ಸ್ವಸ್ತಿ ಸಮಸ್ತಶಾಸ್ತ್ರಾಮೃತ ಪಾರಾವಾರಪಾರಗರುಂ ತಮಾಕೃತಪ್ರೀನುಮ್ಮಾ ಸನ್ನಿಹಿತರುಂ (ಕಶಾ. ೯೮-೩-೯; 1124); ಸಂಗೀತಾಂಬುಧಿಪಾರಗರ್ ಪಲರುಮಿಪಾ ತಾನಂಗಳಂ ಬಲ್ಲರೇ (ಅಕ್ಕ ೩. ೯೨-೦೩). ೨. ಸಂಪೂರ್ಣವಾಗಿ ತಿಳಿದವನು ; ನಿಪುಣ ; ಪಂಡಿತ: 'ಚತುರ್ವೇದಪಾರಗ', 'ಶ್ರುತಪಾರಗ' ಪರಾ. [ಸಂ.]

**ಪಾರಗ₂** 'ಪಾರಕ್ಕ' ನೋ.

**ಪಾರಗತ್ವ** (ನಾ). ನೈಪುಣ್ಯ : ಅಪರುಪದೇಶಕೌಶಲಮುಮಂ ಪರಮಾಗಮ ಪಾರಗತ್ವಮುಂ . . . ಭವ್ಯಜನಕಂ ಪರಿಕೀರ್ತಿಸುತಿರ್ದುದ (ಮಹಾಪು. ೩-೦೯).

[ಸಂ.]

**ಪಾರಗಾಣಿಸು** (ಕ್ರಿ). ಒಂದು ಕಡೆಯಿಂದ ಮತ್ತೊಂದು ಕಡೆಗೆ ದಾಟಿಸು; ಪಾರುಮಾಡು : ಯಾರೂ ಕಾಯುವರಿಲ್ಲ ಸೇರಿದೆ ನಿನಗಯ್ಯಾ ಧೀರ ವೇಣುಗೋಪಾಲ ಪಾರಗಾಣಿಸೊ ಸ್ವಾಮಿ (ಕಶಂ. ೩೩೪); ಸಂತನ್ನಗಳ ಪಾರುವ ದಾಂಟಿಸಿ ಪಾರಗಾಣಿಸುವ ಒಂಟಿ ಇವನೆಂದಾ ಪಿಲಾತನಕಟರಿ ವನೇಂ (ಗೂಡ್ಮೊ. ೨-೯೬). [ಪಾರಗಾಣು + — ಇಸು]

**ಪಾರಗಾಣು** (ಕ್ರಿ). ದಡವನ್ನು ಸೇರು ; ಪಾರಾಗು : ಕಡಲ ಕಡೆದರು ಸುರಾಸುರರು ನಿಜಬಲದಿಂದ ಕುಡಿವನದನು ತವಸ್ಸಿನಿಂದ ಕುಂಭಜನು ಕಡವೆಜನ ಪಾರಗಾಂಬರೆ ಗಾಸಿಯನು ಪಡದೆ ? (ಮುಂಕುಳ. ೨೫೯); ಈ ಸಲದ ಕೆಲಸದಲ್ಲಿ ನಾವು ಪಾರಗಾಣುತ್ತೇವೆಂಬ ಭರವಸೆಯೇ ನನಗಿಲ್ಲ (ಬಿಜಾಪ. ೦೫). [ಪಾರ್₂ + ಕಾಣು (<ಕಾಣ್)]

**ಪಾರಗಾವ** (ನಾ). ಒಂದು ಊರಿನ ಹೆಸರು : ದಕ್ಷಿಣತಃ ಪಾರಗಾವಾ ವ್ಯಾ(ಬ್ರಾ)ಹ್ಮಣ ಗ್ರಾಮಃ ಪಶ್ಚಿಮತಃ ವಿಲ್ವ ? ವಾಡೇಗ್ರಾಮಃ (ಇಂ. XI. ೦೦೩-೩೯; 753). [? + ಗಾವ (<ಗಾಮ)]

**ಪಾರಗೆಯ್** (ಕ್ರಿ). ಹಿಂಜರಿ ; ಹಿಂದೆಗೆ : ಅಕ್ಕೋಳಿಸಿತೆಂದುಂ, ಮೆಯ್ದು ಗೆದುದೆಂದುಂ . . . ನಾಣ್ಚಿತೆಂದುಂ, ಪಾರಗೆಯ್ಯೆಂದುಂ—ಈ ೧೩ ಅಪ ಸರಣಕ್ಕೆ ಪೆಸರ್ (ಶಶಾಂ. ೬೨-೬೪೯). [ಪಾರ್₂ + ಕೆಯ್₁]

**ಪಾರಜ** (ನಾ). ದ್ರವರೂಪದ ಒಂದು ಬಗೆಯ ಲೋಹ : ಪಾದರಸ : ರಸದೊಳು ಪಾರಜದೊಳು . . . ಷಡುರಸದೊಳಾ ರಸಾಖ್ಯಂ (ಮುಂಗಾ. ೦೯೩-೩೩) ; ಭಯ ಮತ್ತು ಧೈರ್ಯವು ಬೆಂಕಿ ಮತ್ತು ಬರ್ಫಕ್ಕೆ ತಗುಲಿದ ಪಾರಜದಂತೆ ಕೆಳಗೆ ಮೇಲೆ ಒಮ್ಮೆಲೆ ಸರಿದಾದ ಹತ್ತಿದುವು (ಜಹಂ೩. ೯೯); ಕನ್ನಡಿಯ ಒಂದು ಮೈಗೆ ಪಾರಜ ಹಾಕಿ . . . ನೋಡುವ ಕನ್ನಡಿಯನ್ನು ಮಾಡುತ್ತಾರೆ (ಮುಂಬಜು. ೯-೨೨೨). 'ಪಾದರಸ' ಪರಾ. [<ಸಂ. ಪಾರದ]

**ಪಾರಟ** 'ಪರಡ್ಡ₄' ನೋ.

**ಪಾರಡೆ** 'ಪರಡ್ಡ₄' ನೋ.

**ಪಾರಣಕ್ಷಮ** (ನಾ). ಬೇರೆಯವರ ಉಪವಾಸವನ್ನು ಕೊನೆಗೊಳಿಸು ವುದರಲ್ಲಿ ಸಮರ್ಥನಾದವನು : ಚಾರುಚಕೋರವಿದೂರಪಾರಣಕ್ಷಮ ನವಪಲ್ಲವಂ ಬೆಳಗಿದಂ ಪುರವೊಂದೆನೆ ಲೋಕಮೆಲ್ಲಮಂ (ಜಂದ್ರಪ್ರ. ೬-೩೩).

[ಸಂ.]

**ಪಾರಣಾವಾಸರ** (ನಾ). ಪಾರಣೆ ಮಾಡುವ ದಿವಸ : ಪಾರಣಾವಾಸರಾಳಿ ಗಳಿಂತಿರ್ಪ ಜನಪ್ಪ ಪುಣ್ಯದಿನಮಂ ಸಮ್ಮಿಶ್ರಮಂ ಮಾಡಿ (ಶಾಸಂಪು. ೯-೦೩).

[ಸಂ.]

**ಪಾರಣಾವಿಧಿ** (ನಾ). ಪಾರಣೆಯನ್ನು ಮಾಡುವ ರೀತಿ,—ಕ್ರಮ : [ಪ್ರವ]ಜ್ಯಾಶ್ರಮಗುರೂರ್ವರಾಸ್ಯತಿಲಕಂ ಯಾವಿನೀಯಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿಯೊಳವ್ಯತಾಹಾರ ಮನಾರೋಗಿಸಿ (ಚಾಂತಿಪು. ೬-೯೯ ವ) ; ಮಂಡೋದರಿಯುಂ ತಾನುಂ ಪಾರಣಾವಿಧಿಯಂ ಮಾಡಿಸಿ ರಾಮನಲ್ಲಿಗೆ ವಂದು (ಶಾಸ್ತ್ರಪ್ರ. ೩೦೦). [ಸಂ.]

**ಪಾರಣೆ$_1$** (ನಾ). ೧. ವ್ರತೋಪವಾಸದ ಮಾರನೆಯ ದಿನ ಮಾಡುವ ಊಟ: ಪಕ್ಷೋಪವಾಸದ ಪಾರಣೆಗೆಂದು ಪೋಟಲೆ ಚರಿಗೆವುಗುತಂದೊಡೆ (ಧರ್ಮಾ. ೬೬-೨೬) ; ಪಾರಣೆಯ ದಿನಂಗಳೊಳಪಧಾರಿಸಿ ಜಠರಾಗ್ನಿ ನಂದದಂದದಿನರ್ಧಾಹಾರಮನಾರೋಗಿಸುವಾಚಾರದಿನಳಪಟ್ಟುದಪರೊ ಳವ ಪೋದರ್ಯ್ಯಂ (ಸುಕುಮಾ. ೪-೩); ಘತ ತೊಲಗು ಕೌರವಕೃತಾಂತನ ವಶಗೆ ಪಾರಣೆಯಾಗಳೀಗಳೆ ನಡೆಸುವನು ನಾಳಕ್ಕೆ ನೆಬಿಂದ ಮಹಾ ರಥಾವಳಿಯ (ಕುಮಾರವ್ಯಾ. ಶ. ೨೯೯) ; ಪಾರಣೆಯಾದರೂ ಪಾರಾಯಣ ಹೀರಲಿಲ್ಲ (ಗಾದೆ). ೨. ತೃಪ್ತಿ : ಸಂತೋಷ : ಅಲ್ಲವೋ ಬರಿಯ ವಾಸನೆ ಅಲ್ಲ ಬರಿ ಕಣ್ಣ ಪಾರಣೆ (ಹಾಸಿಗ. ೦೬-೦೬).

**ಪಾರಣೆ ಪರ್ವ**=ಪಾರಣೆ ಮಾಡುವ ಹಬ್ಬ : ಬರಿಸುವುದೊಂದೂ ಕೋಳಿಪರ್ಣನುಪಚಾರವೆರಸಿ ಪಾರಣೆ ಪರ್ವಗಳಿಗೆ ನೆರೆಯೂರೊಳು ಬಾಳುವ ನಿಜತನುಜೆಯ ಕರೆಯಿಸುವುದು ಕಾಲವಚಿತು (ಹರಿಶ. ೩-೨೯). **ಪಾರಣೆ ಮಾಡು**=ಉಪವಾಸ ಮುಗಿದ ನಂತರ ಊಟ ಮಾಡು : ಬಸವಂತಿ ತನ್ನ ಆರೋಗಣೆಯನ್ನು ಬಡಿಸಿಕೊಂಡು ಉಪವಾಸದ ಪಾರಣೆ ಮಾಡಿ ದಳು (ಶಿವಶ. II, ೦೪೭). [ಸಂ. ಪಾರಣ]

**ಪಾರಣೆ$_2$** (ನಾ). ಒಂದು ಗ್ರಂಥದ ಪೂರ್ಣವಾದ ವಾಚನ (?) : ಕವಿಳಾಸಪುರದೊಳಗೆ ಸ್ವಯಂಭುಮಲ್ಲಿಕಾರ್ಜುನ ಸಂಗಮೇಸ್ವರ ನಾಗೇಸ್ವರ ಯೀ ಪಂಚಲಿಂಗಕಂ ಅಂಗಭೋಗ ರಂಗಭೋಗ ಜೀರ್ಣೋದ್ಧಾರಕ್ಕಂ ಪಾರಣೆಯ ಜಂಗಮಾರಾಧನೆಗಂ . . . ಸಲುವಂತೆ (ಎಕ. XXI. ೦೪-೬೦; 1200). [<ಸಂ. ಪಾರಾಯಣ ?]

**ಪಾರಣೆ$_3$, ಹಾರಣೆ, ಹಾರಣೆ** (ನಾ). ಒಂದು ಬಗೆಯ ತೆರಿಗೆ : ಕೆಯ್ಗಂ ಮಹೆಗಂ ತೊ ಣ್ಣಿಕ್ಕೆಮರುಮಣಂ ಗದ್ಯಾಣಂ ಮಾಳಿಜು ಪಣಿವಾಜು ಪರಿವುಂ ಪಾರಣೆಯುಂ ಮೊದಲಾಗಿ ಕಿರುಕುಳಬಾಧೆಯೊನ್ದುಮಿಲ್ಲದನ್ತಾಗಿ ಗಾವುಣ್ಡುಗಳ್ ಪ್ರತಿಪಾಳಿಸುವರ್ (ಸೌಇಇ. XI-1. ೬೮-೩೬; 1046) ; ಪರಿವು, ಪಾರಣೆ—ಇವೆರಡೂ 'ಕಿಚುಕುಳ'ಗಳು, ಎಂದರೆ ಸಣ್ಣ ತೆರಿಗೆಗಳು (ಕಶಾಅ. ೪೦೦). **ಹಾರಣೆ** : ಆ ಪೆರುಮಾಳೆಪುರದ ಮಹಾ ಜನಂಗಳು ಷಡಿಕೆ ಹಾರಣೆಯೆಂದೆನ್ನದೆ ಸರ್ವ್ವಬಾಧಪರಿಹಾರ ಸರ್ವ್ವ ಮಾನ್ಯವಾಗಿ . . . ನಡಸಿ ಕೊಡುವರು (ಎಕ. XI, ಚಿತ್ರದು. ೦೨-೪೩; 1286). **ಹಾರಣೆ** : ಹುನ್ನಿವಡಿ ಪರಿವುಂ ಹಾರಣೆ ಮೊದಲಾಗೆ (ಕೊಲ್ಹಾ. ೦೯೩೩, ಕುಕ್ಕನೂರ್. ೯-೨೨; 965). [?]

**ಪಾರಣೆಗೆಯ್** (ಕ್ರಿ). ಉಪವಾಸದ ನಂತರ ಊಟವನ್ನು ಮಾಡು : ಆಚರೀಪುಪವೊಲು ದ್ವಾದಶಿ ದ್ವಿಜಾಳಿಕರೆಂಬಕ್ಕೆಯಾನ್ನದಾನಗಳ ಸಂಭ್ರಮ ದಲಿ ಮಾಡಿ ಪಾರಣೆಗೆಯ್ದನಾ ಕುಂಭಿನೀಪತಿ ಭಕ್ತಿಯಲಿ (ಜೈಭಾ. ೪-೯). [ಪಾರಣೆ$_1$ + ಕೆಯ್$_1$]

**ಪಾರತಂತ್ರತೆ** (ನಾ). ಇನ್ನೊಬ್ಬರ ಅಧೀನವಾಗುವಿಕೆ ; ಬೇರೆಯವರ ವಶವಾಗುವಿಕೆ : ಪುತ್ರದೋಹಳಕಾರಣಮಂ ಧಾರಿಣೀಪತಿಗೆ ಸುಪಸ್ತರಂ ಬಿನ್ನವಿಸೆ ಕೇಳ್ದರಸನುಂ ತತ್ಕ್ಷಣೋಪಗತಜನಿತವಾರಾಭಚಿಂತಾಪಾರ ತಂತ್ರತೆಯ ವಿಷ್ಣನಮನನುಂ ದೀನಾನನನುಮಾಗಿ (ಚಂದ್ರಪ್ರ. ೩-೬೨ ಕ). [<ಪರತಂತ್ರ]

**ಪಾರತಂತ್ರ್ಯ** (ನಾ). ಅನ್ಯರಿಗೆ ಅಧೀನವಾಗಿರುವುದು ; ಪರಾಧೀನತೆ : ಪ್ರಕೃತಿಯೊಳಗಾಡುವ ಹಾಡಿನ ತೆರದಿ ಸ್ವತಂತ್ರ ನೀನೀ ಪಾರತಂತ್ರ್ಯದಿ (ಹಣತೆ. ೪-೯೪) ; ಧರ್ಮಪರಂಪರೆಯ ನಾಡು ಪಾರತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು (ಅಹ್ಮಕ. ೨). [ಸಂ.]

**ಪಾರತೆ** (ನಾ). ವೀಕ್ಷಣೆ ; ನಿರೀಕ್ಷಣೆ : ಹರವಿಚಾರತೆಗಳೊ ನಿರುತ ಪಾರತೆ ಗಳೋ ನಿಷ್ಠೆ ತೋರತೆಗಳೊ ತಮವಿದೂರತೆಗಳೋ (ಕಪಿಂ. ೩-೭೪). [<ಪಾರ್$_1$ + -ತೆ$_2$]

**ಪಾರತ್ರಯ** (ನಾ). ಪರಲೋಕ : ಹೆಂಡ್ತಿ ಮಕ್ಕಳಿಗಾಗಿ ಎನ್ನ ಹಿತವನೆ ಮರೆದು ಕಂಡಕಂಡವರ ಕಾಡಿ ಬೇಡಿ ಉಂಡುಟ್ಟು ಸುಖಪಟ್ಟು ಪಾರತ್ರಯವ ಮರೆದು ಕೊಂಡೆಯಲಿ ನಿಪುಣನಾಗಿ ತೂಗಿ (ಶಿವಾಕ್ಕ. ೩೪-೬). [<ಸಂ. ಪಾರತ್ರ್ಯ]

**ಪಾರತ್ರಿಕ** (ಗು). ೧. ಪರಲೋಕಕ್ಕೆ ಸಂಬಂಧಪಟ್ಟ ; ಪಾರಲೌಕಿಕ ವಾದ : ಐಹಿಕದ ನಾನಾಭೋಗಮಂ ಮತ್ತಮುನ್ನತಪಾರತ್ರಿಕಸೌಖ್ಯದೇಳ್ಗೆ ಯನನೂನಂ ಮಾಳ್ಪ . . . ಕವಿ ನಿಂ ಬೇಗಂ ಪೊಗಳ್ (ತ್ರಿಷಷ್ಟಿ. ೦-೨೮); ಪಾರತ್ರಿಕಾನಂದಮಂ ಗಳಿಪ ನಾಯಕನಾಗೆ ಮತ್ಯ್ರತಿಯದೇಂ ಸ್ವಪಾಂ ತುದೋ ಲೋಕದೊಳ್ (ಪ್ರಸೂ. ೦-೨೨). (ನಾ). ೨. ಪರಲೋಕ : ಖರರುಜಾಕ್ರಂದನನೊಂದಿದಂಮುದಯದೊಳ್ ರೋಗಾನ್ವಿತಂ ಬಾಲ್ಯಕಾಲ ರುಜಾರ್ತಂ ಮಲಿನಂ ಸಕಾಮನಲಸು ಪಾರತ್ರಿಕವ್ಯಾಪ್ತಿ[ಪಾಠಾಂ. ಪಾತತ್ರಿಕದ್ಯಾಪ್ತಿ. ಪಾತತ್ರಿಕವ್ಯಾಪ್ತಿ]ತತ್ಪರನಕ್ಯಂ (ಜಾತಕ. ೦೩-೦೪). ೩. ಪರಲೋಕಕ್ಕೆ ಸಂಬಂಧಿಸಿದುದು ; ಪಾರಲೌಕಿಕವಾದುದು : ಬಟಾಕ್ಷೈಂದ್ರವೈಹಿಕಪಾರತ್ರಿಕಭೋಗಮಂ ಕುಡುವಿನಂ ಮಾಣಿಕ್ಯಭಟ್ಟಾರ ಕಾಂತಿಕಮಂ ಸಾರೆ ವಿನೇಯರಾಜಿಗೆ ಜಯಂ ಭವ್ಯಂ ಶುಭಂ ಮಂಗಳಂ (ಅರಿಷ್ಟ. ೦೬-೯) ; ಸಾಂಸಾರಿಕ — ಪಾರತ್ರಿಕಗಳೆಂಬ ಇತ್ತರದ ಪುರು ಷಾರ್ಥಗಳೂ ನಿಕಟಸಂಬಂಧದಿಂದ ಒತಗೂಡಿ ಚತುರ್ವರ್ಗವೆನ್ನಿಸುವುದು (ಪಾಠಕೋಶ. ೩೭೪). [ಸಂ.]

**ಪಾರದ** (ನಾ). ೧. ದ್ರವರೂಪದ ಒಂದು ಬಗೆಯ ಲೋಹ ; ಪಾದರಸ ; ಪಾರಜ: "ರಸ ಪಾರದ ಸೂತಕ ಚಪಲ[ಸಂ]ಚ್ಛಿತ್ರಂ ಗಿರಿಶ ವೀರ್ಯಮದು ಪಾದರಸಂ" (ಅಭಿಕೋ. ೯೪-೦೩) ; ಮಾಸರಮೆನೆ ಪಾರದದಿಂ ಪೂಸಿದ ಪೋಲ್ ಪೊಸ ಮುಕುರಮಂ ಹಿಮಾಲಿಪ್ತಂ ನೇಸಱ ಬಿಂಬಂ ತಿಂಗಳ ಕೂಸಿನ ಪೋಲ್ ಕೋಡುತಿರ್ದುದಂದಿನ ದಿನದೊಳ್ (ಶಬ್ದಮ. ೯-೩); ಪಾರದಂ ಸಿದ್ಧರಸಮಾದೊಂದು ಸಂತಸಂ ಬಾಲ ನಿರವಂ ಕಂಡೊಡಪ್ಪುದುಂ (ಲೀಲಾವ. ೬೬-೦೭). ೨. ಲೋಹವನ್ನು ಚಿನ್ನವನ್ನಾಗಿ ಮಾಡುವ ರಸ ; ಸಿದ್ಧರಸ : ಪಾರದಂ ಪಾರದೆ ಬಂದ ತೋರ್ಕೆ ಸುಮನೋಮಣಿಸನ್ನಿಣಿಹಾರದಲ್ಲಿ ಬಂದೋರನಾಮಾಗಿ ನಿನ್ನ ಪರಿವನ್ದಿಜನಕ್ಕೆನಿಪೊನ್ದು ದಾನಗಂಭೀರತೆಯಾದುದೇಂ ಪೊಗಳ್ವೆಂ (ಎಕ. III, ಸೊರಬ. ೨೬೦-೨೭; 1408). [ಸಂ.]

**ಪಾರದಂದೊಡೆ** (ಕ್ರಿ). ಪಾದರಸವನ್ನು ಹಚ್ಚು,—ಲೇಪಿಸು : ಕಡೆವರೊ ಶಂಖದಿಂ . . . ರುಚಿರೋದ್ಯತಾಂಗಮಂ ಬಿಡದಮ್ಯತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂದೊಡೆದರೊ ವೇಟನಿತ್ ಕರಮ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ಕಾದಂಬ. ೬೬೬). [ಪಾರದ + ತೊಡು$_1$]

**ಪಾರದರ** 'ಪಾರದಾರ' ನೋ.

**ಪಾರದರಿಗ** 'ಪಾದರಿಗ' ನೋ.

**ಪಾರದರಿಗೆ** (ನಾ). ಹಾದರ ; ವ್ಯಭಿಚಾರ : ಹರವರಕ್ಕನಂಗದೊಳಾ ರ ದರಿಗೆಯ ಪಚ್ಚವಂ ಕೊಣ್ಡು ಪಾದರಿಗೆಯ ಮಾಗನರಿವ ಪಾದರಿಗನಂ ಕೊಲ್ವರು (ಸೌಇಇ. IX-1, ೬೬-೩೨; 992). [ಪಾರದರ (<ಪಾರದಾರ) + -ಇಗೆ$_8$]

**ಪಾರದರ್ಶಕ** (ಗು). ೧. ತನ್ನ ಮೂಲಕ ನೋಡಿದರೆ ಆಚೆಯ ಕಡೆ ಇರುವ ವಸ್ತು ಸ್ಪಷ್ಟವಾಗಿ ಕಾಣಲಾಗುವಂತೆ ಬೆಳಕನ್ನು ತನ್ನ ಮೂಲಕ ಶುದ್ಧವಾಗಿ ಹಾಯಗೊಡುವ : ಗಾಜು ಪಾರದರ್ಶಕ ಪದಾರ್ಥವು (ಶುಂಬಯು. ೪-೨೨೦): ಬೆಳಕು ಕೆಲವು ವಸ್ತುಗಳ ಮೂಲಕ ಹೆಚ್ಚು ನಷ್ಟ ಹೊಂದದೆ ಹೊರಕ್ಕೆ ಬರುವುದು. ಇಂತಹ ವಸ್ತುಗಳನ್ನು ಪಾರದರ್ಶಕವಸ್ತುಗಳೆಂದು ಹೇಳುತ್ತೇವೆ (ಭೌತಶಾ. ೦೩೩). (ನಾ). ೨.

ತನ್ನ ಮೂಲಕ ಆಚೆಯ ಪಕ್ಕವನ್ನು ಕಾಣಿಸುವಂತೆ ಬೆಳಕನ್ನು ಸಾಗಿಸುವಂತಹುದು: ಈ ಬರ್ಫವು ಹೆಚ್ಚು ಕಡಿಮೆ ಪಾರದರ್ಶಕ ವಾಗಿರುತ್ತದೆ (ತಂಬಂಬಣ. ೬–೦೧೦). 'ಅಪಾರದರ್ಶಕ' ಪರಾ. [ಸಂ.]

**ಪಾರದರ್ಶಕತೆ** (ನಾ). ಪಾರದರ್ಶಕ ಗುಣ: ಶಾಸ್ತ್ರಗಳ ಸಂಕ್ಷಿಪ್ತಸ್ಥಿತಿ ಇದಕ್ಕೆ ಎಷ್ಟರ ಮಟ್ಟಿಗೆ ಕಾರಣವೋ ಸಂಸ್ಕೃತಭಾಷೆಯ ಪಾರದರ್ಶಕತೆಯೂ ಅಷ್ಟರ ಮಟ್ಟಿಗೇ ಕಾರಣವಾಗಿರಬಹುದು (ಸಪಾರೋ. ೦೩೫); ಗುಟ್ಟುಗುಟ್ಟಿನ ಗಂಟು ವ್ಯಕ್ತಿವ್ಯಕ್ತಿಗಳಿಲ್ಲ; ಈ ಗುಡಿಯುಂಟಾದರ ನಂಟು ಈ ಮಹಾಗುಟ್ಟಿನೆಡೆ ಒಬ್ಬೊಬ್ಬನೂ ಪಡೆವ ಪಾರದರ್ಶಕತೆಯನು ಅರಿವ ರಾರುಂಟು? (ಪುರಿರೇ. ೫೮–೦೦). [ಸಂ. ಪಾರದರ್ಶಕತಾ]

**ಪಾರದರ್ಶಿ** (ನಾ). ಯಾವುದೇ ವಿಷಯವನ್ನಾಗಲಿ ಪೂರ್ಣವಾಗಿ ತಿಳಿದು ಕೊಂಡವನು; ಪಾರಂಗತ; ನಿಷ್ಣಾತ: ಆ ದ್ವಾರಕೆಯಲದನಜಾತು ವೃದ್ಧವಟೋವಿಶೇಷವಲಿ ಶೌರಿ ಕರೆಸಿದನಾತ್ಮವಿದ್ಯಾಪಾರದರ್ಶಿಯನೊಲಿದು ಮನದಲಿ ಸೀರಧರಸಹಿತಾತನೊಡನಿಂತೆಂದನುಚಿತದಲಿ (ಶಿಭಾಗ.೧೦–೬೬–೯೬); ಅರ್ಜುನನು ಧನುರ್ಧರನೆನಿಸಿಕೊಂಡಂತೆಯೇ ಖಡ್ಗಪ್ರಯೋಗದಲ್ಲಿಯೂ ರಥಯುದ್ಧದಲ್ಲಿಯೂ ಕೂಡ ಪಾರದರ್ಶಿಯೆನಿಸಿಕೊಂಡನು (ಶೀಕೃಕ. ೫೯). [ಸಂ. ಪಾರದರ್ಶಿನ್]

**ಪಾರದಾರ**, ಪಾದರ್‍ವ, ಪಾರದರ, ಪಾರದ್ವಾರ, ಹಾದರ (ನಾ). ೧. ಮತ್ತೊಬ್ಬನ ಹೆಂಡತಿಯೊಡನೆ ಹೊಂದಿರುವ ಅನೈತಿಕಸಂಬಂಧ; ಪರಸ್ತ್ರೀಗಮನ,— ಸಂಸರ್ಗ: ಅದು ಕಾರಣದಿಂದಂ ಮಹಾದುಃಖಕ ಪಾರದಾರಮೆ ಮೊದಲೆಂದು ಬೆರ್ಚಿ ಪರಸ್ತ್ರೀಯರಂ ತಾಯಂ ಕಾಣ್ಬಂತೆ ಕಾಣ್ಬುದು (ರಶಾರತ್ನ. ೬–೦೯೩). ೨. ಪರಪುರುಷನೊಡನೆ ಇಟ್ಟು ಕೊಳ್ಳುವ ಅನೈತಿಕ ಸಂಬಂಧ: ಪರಪುರುಷಗಮನ: ಸತಿ ತಪ್ಪಿ ಪಾರದಾರವ ಮಾಡಿದಲ್ಲಿ ಒಳಗಿಟ್ಟುಕೊಂಡು ಸಂದು ಸಂಶಯವಿಲ್ಲದೆ ಗುರು ಲಿಂಗಜಂಗಮಕ್ಕೆ ಉದಾಸೀನವ ಮಾಡಿದತೆ ತಪ್ಪನೊಪ್ಪಬಹುದೆ (ಸೋಳೆಪಾ. ೫೯– ೨೨೯). ೩. ವ್ಯಭಿಚಾರ; ಜಾರತನ: ಪಾರದಾರ ಮಾಡಿದೊಡೆ (ಕೃಅಂ. ೦೯೩೬. ೨೫–೩೬; 872): ಪಾರದಾರ ಮಾಡಿದೊಡೆ ಇಪ್ಪೊಜ ಇರ್ಪತ್ತನಾಲ್ಕು ದ್ರಮ್ಮ ಆ x x ವಿಣಕ್ಕೆಡೆ ಇಪ್ಪತ್ತ ನಾಲ್ಕು [ದ್ರ]ಮ್ಮ (ಕೆಇಅ. ೬೩–೦೯–೩೬; 932). **ಪಾದರ್‍ವ**: ೩. ಪಸೆಯೊಳ್ಸುವರ್ಣಂವ ರೊಳಗ್ನಿಸಾಕ್ಷಿಯೊಳ್ಕೊಂಡ ಪಾಂಡುಪತಿಯರೆ ಮೋಹಾವಸರ್ಭಾದರದಿಂ ಜನಿಯಿಸಿದರ್ (ಗದಾಯು. ೩–೩೬); ಪಾದರಂ ಲೇಸು ಸಾವುದರಿದು (ರಶಾರತ್ನ. ೮–೬೮); ಪೆಸರನಡಗಿಸಿ ಒಳವು ಪಾದರಂಗಳ ಹಿಂಸೆಯನುಸುವ ತೊಲಗಿಸಿ ಧರಾತಳಪಾತಿಕ್ಷಯೊಳಿ ಪಾಲಿಸುವ ರಾಜಂಗಿಹಪರಂಗಳೊಳ ಗನುಮಾನವಿಲ್ಲ (ಕಂಅ. ೯–೧೬). **ಪಾರದರ**: ೧. ಸ್ವಪತನನುಂ . . . ಪಾರದರದೊಳ್ ಪುಟ್ಟಿದನರಸುಗಮರಸಿಗಂ ಪುಟ್ಟಿದನೇ (ಶಂಶಿಪಾ. ೦೨–೦೩೩); ಇನಿತೊಂದು ಪರಾಭವಪದಮನೆಯ್ದುವರ್ ಪಾರದರದೊಳೇದಾಂ ಪರದಾರನಿವೃತ್ತಿಗೆಯ್ದೆಂ (ಶುಕಸಪ್ತ. ೬–೩೯). ೩. ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ತುಂಗಳಪ್ಪಸ್ವರಾರ್ (ಶುಸಪ್ತ. ೬–೮೦); ಶೋಭವಿರ್ಪಶಿಶಯತೋಷವಿರ್ಪ ಮತವಿರ್ಪೆಡೆ ಯೊಳ್ . . . ಪಾರದರವಿರ್ಪ ಪರಿಗ್ರಹಕಾಂಕ್ಷೆಯಿರ್ಪ ಕುತ್ಸಿತಮತ ವಿರ್ಪುವಲ್ಲಿ (ಅರಣೀ. ೨–೩೮). **ಪಾರದ್ವಾರ**: ೩. ಹೋಗಬಿಟ್ಟು ಮಾರಳ ಹಿಂದೆ ನೋಡಿ ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ ಅದೆ ಪಾರದ್ವಾರ ನಾಯಕನರಕ ತಪ್ಪದು (ಬಸವ. ೬೩೫); ಸಾವಿರ ನೋಂಪಿಯ ನೋಂತು ಪಾರದ್ವಾರ ಮಾಡಿದಂತಾಯಿತ್ತು ಅವನ ವ್ರತ (ಸರ್ವಪ. ೦೬೯–೯೬೭) **ಹಾದರ**: ೧. ಶಿವನರವಣ್ಣನಂ ಹರಿಯ ಹಾ[ದಾಕಾಂ. ಪಾ]ದರವಬ್ಬ ಜನೊಬ್ಬ ಬಿಚ್ಚಿ ಹೇಳುವ ನನನಿಲ್ಲ ಬಲ್ಲಹನ ಶೌರ್ಯವೆ (ಅರ್ಜುಪು. ೦–೯೦); ಕೊಳಲ ರಾಗದ ರಹಿಯೊ ಪಲ್ಲಿಯ ಕಲಸುಗೂಳೋ ಹಳ್ಳಿಕಾತಿಯರೊಳಗುಡಿಯ ಹಾದರವೊ . . . ಜಯುಸಿರಿಯ ಕಾಹಿನೊಳಾರು ನೀನು (ಕುವ್ಯಾಸ. ೨–೬೮). ೩. ಸಾಸಿರನೋಂಪಿಯೊಂದೆ ಹಾ[ದಾಕಾಂ. ಪಾ]ದರದೊಳೆ ಕೆಟ್ಟು ಪೋಕುಂ (ಸಮುಕ. ೩–೬೩); ಅನ್ಯದೈವವೆಂಬುದು ಹಾದರ (ಬಸವ. ೩೦೩); ಕಳವು ಹಾದರವೆರಡಱಿಂ ತಾನಳಿದವಂ ಗತಕೀರ್ತಿನರಕನೋಳಿವನಲ್ಲದೆ ಸಗ್ಗ ಸುಖವಿಲ್ಲ (ಕೌಶಿರಾ. ೩೬–೦೩); ಹಾದರಕ್ಕೆ ಹುಟ್ಟಿದ ಮಕ್ಕಳು ಚೆನ್ನ, ಹಲವು ಸೊಪ್ಪಿನ ಮೇಲೋಗರ ಚೆನ್ನ (ಗಾದೆ).

ಪಾದರವಾಡು, ಹಾದರವಾಡು = ವ್ಯಭಿಚಾರ ಮಾಡು: ಪುರದೊಳ್ . . . ಬೀತಾಸುರನಂ ಕೊಂದಂ ಕಪಾಲದೊಳ್ತಿರಿದುಂಡಂ ಸುರಮುನಿ ಪತ್ನಿಯರೊಳ್ಪಾದರವಾಡಿದನು (ಸಮುಕ. ಅನುಬಂಧ I, ೩೬೨); ಗೊಲ್ಲರಲ್ಲಿಗೆ ಬೆಣ್ಣೆಯುಂ ಕಳುಲ್ಲಿಗೆಯ್ದು ಮುರಾರಿ ಗೋಪಿಯರಲ್ಲಿ ಹಾದರವಾಡಿ (ಬಸವು. ೫೯–೯೦); ಏಡಿ ಹಾದರವಾಡೆ ಗೋಡೆಯಾರಗಪ್ಪೆಯ ಕೂಡಿ (ಶರಾಶ. ೦೦–೯). [<ಸಂ. ಪಾರದಾರ್ಯ / ತುಳು. ಹಾದರೊ; ಕೊಡ. ಪಾದರ]

**ಪಾರದಾರಿಕ** (ನಾ). ೧. ವ್ಯಭಿಚಾರ; ಹಾದರ: ಸಾಧಾರಣವೋಂಬಧಿ ಕರಣಮುಂ ಚಾರಾಯಣಂ ಸಾಂಪ್ರಯೋಗಿಕಮುಂ ಸ್ವರ್ಣನಾಭಂ . . . ಪಾರದಾರಿಕಮುಂ ಗಾಣಿಕಾಪುತ್ರಂ . . . ಪೇಳ್ದಂ (ಪುರಶಿ. ೦–೫೮೩). ೨. ವ್ಯಭಿಚಾರ ಮಾಡುವವನು; ಹಾದರಿಗ. [ಸಂ.]

**ಪಾರದಾರ್ಯ** (ನಾ). ಹಾದರ; ವ್ಯಭಿಚಾರ: ಚೋರವಿದ್ಯವು ಸಹಜ ನಿನಗಾ ಪಾರದಾರ್ಯವು ನಿಯತ ದಿಟದಿಟ ಹಾರುವಂಗವು ಹಸನು (ಕೌಶಿರಾ. ೩೬–೯೩). [ಸಂ.]

**ಪಾರಧಿ**, ಪಾರುಧಿ, ಹಾರುದಿ (ನಾ). ಬೇಟೆ; ಮೃಗಯೆ; ಶಿಕಾರಿ: ಜನಮಾಸಿಪುರವರಾಧೀಶ್ವರಂ . . . ಅಧಿನವಪಾರ್ಥಂ ಸುಭಟರ ಶಿತ್ತಂ [ನಿಂ]ದಿರಿಪಾತಂ ಪಾರದಿಪರಸುರಾಮನುಭಯಮೇಸಿವಲ್ಲಭಂ (ಶಾಇಇ. XX, ೦೦೦–೦೦, 1129); ಧಾರಿಣಿಸು ಜನದ ಹುಯ್ಯಲ ನಿಲಿಸ ಬೇಕೆಂದು ಪಾರದಿಗೆ ಪೊಱಮಟ್ಟು ಮೃಗವಕ್ಷೀಯಲವ ಸಂಹಾರಿಸುತ ಹೇಮ ಕೂಟದಿ ಗುರುವಿರೂಪಾಕ್ಷನಂ ಕಂಡನವನೀಶನು (ಹಕಾಕಾ. ೫ ಸೊಕಕ); ವರಪುರೇಶ್ವರ ತನ್ನ ಸೇನೆಯ ನೆರಹಿ ಪಾರದಿ[ದಿ]ಯಾಡುತಲ್ಲಿಗೆ ಸರಿದು ಬಂದನು ಜಾಮದಗ್ನಿಯ ವರತಪೋವನಕೆ (ಸಂಶಕ. ೨೬–೦೨). **ಪಾರುಧಿ**: ಮಱುದಿವಸ ಪಾರುಧಿಯನಾಡಿಯೆ ಪರಮಹಾಪಾಳೆಯವ ಹೊಕ್ಕರು (ಸಂಶಕ. ೫೦. ೩೨೯); ನೆಱೆಯ ಕಾಲದ ವೃಷ್ಟಿ ಸುರಿಯಲು ಪರಿಹಸಿ ಪಾರುಧಿಯ ಭೂಪತಿ ಮರಳುತಲೆ ಪಾಳೆಗುಂಜ ಹೊಕ್ಕನು ನೈತ್ಯ ನಂಪನೆಯ ನಿರುತವುಂದಿರದೊಳಗೆ (ಸಂಶಕ. ೫೦. ೩೨೯). **ಹಾರುದಿ**: ಅವಿಳಜಗವಳಲುರಿಯ ನಂದಿಸುವ ಹಾರು[ದಾಕಾಂ. ಪಾರ]ದಿಯೆ ಸಂಸಾರವಾರುಧಿಯನುತ್ತರಿಪ ಗುರುವಾದವ ತಂದು ತೋಱುತ್ತಲಾ (ಹಕಾಕಾ. ೩–೬೯). [<ಪ್ರಾ. ಪಾರದ್ಧಿ/ಸಂ. ಪಾಪರ್ದ್ಧಿ]

**ಪಾರದೃಶ್ಯ** (ನಾ). ದೂರದ ದೃಶ್ಯ,–ನೋಟ: ಪಾರದೃಶ್ಯವನ್ನು ಕಳುಹು ವವರು, ಎಮರಿನ ನೋಟವು ಒಂದು ಕೆಮೆರಾದಲ್ಲಿನಂತ ಈ ಗೋಲಕದ ಒಳಗಿರುವ ಲೋಹದ ಹಾಳೆಯ ಮೇಲೆ ಬೀಳುವಂತೆ ಮಾಡುತ್ತಾರೆ (ವಾಂಕ್ರ. III, ೦೬೩೩). [ಪಾರ್ಶ್ವ + ದೃಶ್ಯ]

**ಪಾರದೃಶ್ವ** (ನಾ). ಪೂರ್ಣವಾಗಿ ತಿಳಿದುಕೊಂಡವನು; ಪಾರಂಗತ; ನಿಷ್ಣಾತ: ಆ ನೃಪಾಲಮೌಳಿಮಾಣಿಕ್ಯಂ ಪದವಾಕ್ಯಪ್ರಮೇಯನ್ಯಾಯ ರಾಜನೀತಿಭರತಸುರತಾದಿ ಸಮಸ್ತಶಾಸ್ತ್ರಪಾರಾವಾರಪಾರದೃಶ್ವನುಂ . . . ಇಕ್ಷ್ವಾಕುವಂಶಕುಲೇಶಯಾಕರಭೂಲೋಕದಿವಾಕರನುಮೆಂಬ ನೆಗಟ್ತೆಗಂ ಪೊಗಟ್ತೆಗತ್ತಳಗವಾದಂ (ಅಸಂಪು. ೨.೦೦ ವ). [ಸಂ. ಪಾರದೃಶ್ವನ್]

**ಪಾರದೇಶಿಕ** (ಗು). ಪರದೇಶಕ್ಕೆ ಸಂಬಂಧಿಸಿದ: 'ನವೀನಸಂಸ್ಕೃತಿಯಪರಿಗೆ ಅವರೋಧಿ ಅರಿತಿರುವ ಪಾರದೇಶಿಕಪಂಥದ ರೀತಿಯಲ್ಲಿ ಧರ್ಮವೆಂದರೆ ಮತವು . . . ಭಕ್ತಿಯು ಎಂದೇ ಭಾವನೆಯು (ಅರ್ಥುರಕ. ೩). [ಸಂ.]

**ಪಾರದ್ವಾರ** ‘ಪಾರದಾರ’ ನೋ.

**ಪಾರದ್ವಾರಿ** (ನಾ). ಹಾದರಿಗ ; ಜಾರ : ಕ್ರೂರಕರ್ಮಿಗೆ ಶಠಗೆ ಪಾರದ್ವಾರಿಗೆ . . . ಇಹಪರವಿಲ್ಲ (ಜಿಮಂಕ. ೩-೬೦).

[ ಪಾರದ್ವಾರ (<ಪಾರದಾರ) + –ಇ ]

**ಪಾರಪತೆಗಾರ** ‘ಪಾರುಪತ್ಯಗಾರ’ ನೋ.

**ಪಾರಪತ್ತೆಗಾರ** ‘ಪಾರುಪತ್ಯಗಾರ’ ನೋ.

**ಪಾರಪತ್ಯ** ‘ಪಾರುಪತ್ಯ’ ನೋ.

**ಪಾರಪತ್ಯಗಾರ** ‘ಪಾರುಪತ್ಯಗಾರ’ ನೋ.

**ಪಾರಪತ್ರ** (ನಾ). ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣ ಮಾಡಲು ಪಡೆಯುವ ಅಪ್ಪಣೆಚೀಟಿ, ಅಧಿಕಾರಪತ್ರ ; ರಹದ್ದಾರಿ: ಭಾರತದೊಳಕ್ಕೆ ಪ್ರವೇಶ ಮತ್ತು ಅಲ್ಲಿಂದ ಉತ್ಪ್ರವಾಸನ ಮತ್ತು ನಿರ್ವಾಸನ ; ಪಾರಪತ್ರಗಳು ಮತ್ತು ದೃಷ್ಟಾಂಕಗಳು (ಭಾರಾಸ. ೨೬೯).

[ ಪಾರ್ + ಪತ್ರ ]

**ಪಾರಮಾರ್ಥ** (ನಾ). ೧. ಮಹೋನ್ನತವಾದ ಸತ್ಯ. ೨. ಒಳ್ಳೆಯದು; ಉತ್ತಮವಾದುದು : ನೀರ ದೊಬ್ಬುಳಿಕೆಯ ದೋರ್ನೊಳೆ ಕಟ್ಟಿಯಾರ್ಕೆಗೆಯ್ದ ಮರುಳನಂತೆ ಶಾರೀರಸೌಖ್ಯದ ನಿಜವೆಂದು ತಿಳಿವುದು ಪಾರಮಾರ್ಥವೆ ಬಲ್ಲವರಿಗೆ (ತ್ರಿಶಂ. ೯-೨೭). ೩. ಪರಮಾರ್ಥಕ್ಕೆ ಸಂಬಂಧಿಸಿದುದು ; ಮೋಕ್ಷ : ವಿಭ್ರಾಂತಿಯು ಪೊಂದಿ ದೂಷಿತಮಾದಾಗಿ ನಿರಂತರಪಾರಮಾರ್ಥಸಚ್ಚಿಂತನೆಯುಂ ತೊಲಂಗಿ (ಅಮೃ. ೩೩).

[ < ಪರಮಾರ್ಥ ]

**ಪಾರಮಾರ್ಥಿಕ** (ಗುಂ). ೧. ಪರಮಾರ್ಥಕ್ಕೆ ಸಂಬಂಧಿಸಿದ ; ಮೋಕ್ಷಮಾರ್ಗಕ್ಕೆ ಸಂಬಂಧಿಸಿದ : ಮುಕುಳಿತಕರೋಪೇತಂ ದೂತಂ ಪ್ರಜಾಪತಿ ಪಾರಮಾರ್ಥಿಕವಚನಸದ್ಭಾವಂ (ಶಾಂತಿಪು. ೩-೪೭); ನಿಮ್ಮ ನಿಮ್ಮ ಕರ್ಮಗಳನ್ನು ಅನಾಸಕ್ತವಾಗಿ, ನಿಮ್ಮ ನಿಮ್ಮ ಯೋಗ್ಯತೆಗನುಗುಣವಾಗಿ ಮಾಡುತ್ತ ಹೋಗಿರಿ. ಅದರಲ್ಲಿಯೇ ನಿಮ್ಮ ಐಹಿಕ, ಪಾರಮಾರ್ಥಿಕ ಸುಖವಿದೆ (ರಘುಗಾ. ೦೪೭). ೨. ತತ್ತ್ವವಿಚಾರದಲ್ಲಿ ಮನಸ್ಸನ್ನು ತೊಡಗಿಸಿದ. ೩. ಶ್ರೇಷ್ಠವಾದ ; ಮುಖ್ಯವಾದ. (ನಾ). ೪. ಪರಮಾರ್ಥಕ್ಕೆ ಸಂಬಂಧಿಸಿದುದು ; ಮೋಕ್ಷಮಾರ್ಗಕ್ಕೆ ಸಂಬಂಧಿಸಿದುದು : ಪಾರಮಾರ್ಥಿಕ ವ್ಯಾವಹಾರಿಕ ಪ್ರಾತಿಭಾಸಿಕ ತುಚ್ಛವೆಂದು ಪದಾರ್ಥಗಳು ನಾಲ್ಕಾಗಿ ತಿಳಿಯಲಕ್ಕುಂ (ಪಿಶೀಳ. ೨೦) ; ಮಾನವನ ಜೀವನಸಂಗ್ರಾಮವು ಹೇಗೆ ದ್ವಿಮುಖವೊ ಹಾಗೆಯೇ ಮಾನವನ ಅನ್ವೇಷಣೆಗೆ ವಿಷಯವಾದ ವಿಶ್ವವೂ ದ್ವಿಮುಖ—ಪಾರಮಾರ್ಥಿಕ ; ವ್ಯಾವಹಾರಿಕ; ನಿತ್ಯ : ಅನಿತ್ಯ (ಮುನ್ನಾ. ೩ ಶಿಲೆ೪); ನಾನು ಎರಡು ಕೃತಿಗಳನ್ನು ರಚಿಸಿರುವೆನು. ಒಂದು ಲೌಕಿಕ, ಇನ್ನೊಂದು ಪಾರಮಾರ್ಥಿಕ (ಜಾಕಂ. ೬). ೫. ಪರಮಾರ್ಥವನ್ನು ಕುರಿತ ಚಿಂತನೆ : ತತ್ತ್ವವಿಚಾರ : ಇವರು ನಿಶ್ಚಿಂತರಾಗಿ ವೃದ್ಧರಾಜಮಾತೆಯೊಡನೆ ತಮ್ಮ ಉಳಿದ ಆಯುಷ್ಯವನ್ನು ಪಾರಮಾರ್ಥಿಕದಲ್ಲಿ ಕಳೆಯುತ್ತಿದ್ದರು (ಕಶಿ. ೨೯). ೬. ಅತಿಶ್ರೇಷ್ಠವಾದ ಸತ್ಯ : ಅದ್ವೈತವೇದಾಂತದಲ್ಲಿ ಪರಮಾತ್ಮನನ್ನು ವಿನಾಯಿಸಿ ಬೇರೆ ಯಾವ ವಸ್ತುವೂ ಪಾರಮಾರ್ಥಿಕವಾಗಿ ಇರುವುದಿಲ್ಲ (ಕಸ್ತೂ. ೦೦). ೭. ವಿಚಾರಮಾಡತಕ್ಕವನು ; ಬಲ್ಲವನು ; ಪ್ರಾಜ್ಞ : ಪಾರಮಾರ್ಥಿಕನೆಂದೊಡೆ ಪ್ರಾಜ್ಞನೆಂಬುದರ್ಥಂ (ಸುಕೋಶ. ೬-೦೭ ಟೀಕು) ; ಒಂದೆ ಜಾಗ್ರದಿ ವ್ಯಾವಹಾರಿಕನೆಂದು ಸ್ವಪ್ನದಿ ಪ್ರಾತಿಭಾಸಿಕನೆಂದು ಸುಪ್ತಿಲಿ ಪಾರಮಾರ್ಥಿಕನೆಂದು ಪೆಸರದಕೆ (ಅನು.ಕ. ೯-೨೯); ಸುಷುಪ್ತ್ಯವಸ್ಥೆಯಲ್ಲಿಯೂ ವ್ಯಷ್ಟಿಕಾರಣಶರೀರದಲ್ಲಿಯೂ ಅಭಿಮಾನವ ಮಾಡಿದ ಜೀವನಿಗೆ ಪ್ರಾಜ್ಞನೆನುತಲೂ ಪಾರಮಾರ್ಥಿಕನೆನುತಲೂ . . . ಹೆಸರು (ಶೀನಾರ. ೬).

[ಸಂ.]

**ಪಾರಮೇಶ್ವರಾಗಮ** (ನಾ). ಆಗಮಗಳಲ್ಲಿ ಒಂದು ಬಗೆ : ಆ ಸಿದ್ಧಾಂತಭೇದಂಗಳಾವಾವವೆಂದೊಡೆ ಕಾಮಿಕಾಗಮ ಯೋಗಜಾಗಮ . . . ಪಾರಮೇಶ್ವರಾಗಮ ಕಿರಣಾಗಮ ವಾತುಲಾಗಮವೆಂಬಿಪ್ಪತ್ತೆಂಟು ದಿವ್ಯಾಗಮಂಗಳಕ್ಕುಂ (ಪಿಶೀಳ. ೬೫). [ಸಂ.]

**ಪಾರಮೇಷ್ಠ್ಯ** (ನಾ). ಬ್ರಹ್ಮಪದವಿ ; ಬ್ರಹ್ಮತ್ವ : ಪಾರಮೇಷ್ಠ್ಯದ ಪರಮವಿಭವದ ಸಾರಥವನವದಾರ್ಗ್ರು (ಜೈಭಾಗ. ೦೦-೯-೨೦); ಪಾರಮೇಷ್ಠ್ಯದ ತನ್ನ ನಿಜಪರಸಾರಸುಖವಜ್ಞಾನ ಮೂಢಶರೀರಿಗಳಿಗಳವಡದೆನುತ ಮನದೊಳಗೆ ಕರುಣಿಸಿದ (ಜೈಭಾಗ. ೦೦-೨೯-೩೯). [ಸಂ.]

**ಪಾರಮೈಶ್ವರ್ಯ** (ನಾ). ೧. ಅತಿಶಯವಾದ ಸಿರಿ ; ಉತ್ಕೃಷ್ಟವಾದ ಸಂಪತ್ತು. ೨. ಚಕ್ರವರ್ತಿತ್ವ ; ಸಾರ್ವಭೌಮತ್ವ : ಉತ್ತರಾಪಥದ ರಾಜರನ್ನು ಗೆದ್ದು ಅವರಿಂದ ಪಾಳಿಧ್ವಜಾದಿ ಪಾರಮೈಶ್ವರ್ಯಸೂಚಕ ಚಿಹ್ನಗಳನ್ನು ತೆಗೆದುಕೊಂಡನೆಂದು ಬರೆದಿದೆ (ಕರ್ನಾರಾ. ೯೨). [ಸಂ.]

**ಪಾರಮ್ಯ** (ನಾ). ೧. ಪರಾಕಾಷ್ಠೆ ; ತುತ್ತತುದಿ : ‘ಬಾಳಗಂಗಾಧರ ಟಿಳಕ’ ಎಂಬ ಹೆಸರು ಕಿವಿಗೆ ಬಿದ್ದೊಡನೆ . . . ಅಪ್ರತಿಮಪ್ರೋತ್ಸಾಹ, ಪ್ರಸ್ಫುಟಿತ ಗಾಂಭೀರ್ಯ, ಪರಿಣತಿಯ ಪಾರಮ್ಯ—ಇವೆಲ್ಲವೂ ಮನಃಪಟಲದೆದುರು ಸುಳಿದುಹೋಗುತ್ತವೆ (ರಘುಗಾ. ೦೨೯). ೨. ಪ್ರಾಧಾನ್ಯ : ಜೀವ ಮಾನುಷ್ಯದೊಳು ಪದೆವವಿತಭಾವಗಳ ಪಾರಮ್ಯವಿಲ್ಲೆಂಬ ಭೂಮಾನುಭೂತಿ (ಮರಿಕೇ. ೩೯-೬); ಈ ಗ್ರಂಥಗಳಲ್ಲಿ ದೇಶಭಾಷೆಗೆ ಕೊಟ್ಟಿರುವ ಪ್ರಾಶಸ್ತ್ಯ, ಜಾತಿಕುಲಗೋತ್ರಗಳನ್ನು ಬದಿಗೊತ್ತಿ ಭಕ್ತಿಗೆ ಕೊಟ್ಟ ಪಾರಮ್ಯ, ಅತಿಶಯ ಬೆಲೆಯುಳ್ಳದ್ದೆಂದು ಇಂದಿನವರೆಗೆ ತೋಚದೇ ಇರದು (ಕಾರಿಣ. ೩೯೮). ೩. ಶ್ರೇಷ್ಠತೆ : ಸತ್ಯ, ಅಹಿಂಸೆ ಮತ್ತು ಗುರಿಯನ್ನು ಸಾಧಿಸುವ ಸಾಧುಮಾರ್ಗ—ಇವು ಮೂರೂ ಪರಸ್ಪರ ಸಂಬಂಧವುಳ್ಳವುಗಳಾಗಿವೆ; ಮತ್ತು ನೀತಿನಿಯಮಗಳ ಹಿರಿಮೆಯೂ ಪಾರಮ್ಯವೂ ಅವಕ್ಕೆ ಮೂಲಾವಲಂಬನ (ತ್ರಿಜ್ಯಾ. ೦೪೯). [ಸಂ.]

**ಪಾರಯಿಸು**, ಪಾರಯಿಸು, ಪಾರೈಸಂ, ಹಾರಯಿಸು, ಹಾರಯಿಸು, ಹಾರವಿಸು, ಹಾರೈಸಂ (ಕ್ರಿ). ೧. ಬಯಸು : ಅಪೇಕ್ಷಿಸು : ಪೇರಾನಗೋಪಕಂಠವನದೊಳ್ ವನಕೇಳಿವಿಳಾಸಮಂ ಸ್ವಯಂಭೂರಮಣಾಂಬುರಾಶಿವಿಲಸತ್ತಟದೊಳ್ ಜಲಕೇಳಿಲೀಲೆಯಂ ಪಾರಯಿಸಿರ್ದುದಂ ನೆನೆವೊ ನೀಂ (ಆದಿಪು ೩-೬೩) ; ಪರಿವರ್ತಿತ ಕಟಾಕ್ಷಕಿರಣಾಕ್ಷತಂಗಳಿಂ ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮಂ ನಿಜಕುಲಕ್ಕಿರುವೆ ಚೂಡಾರತ್ನಮೆಂದು ನೋಡಿ ಪಾರಯಿಸಿ[ಪಾಠಾಂ. ಯ್ಸಿ] ಪಲವಂ ನಲ್ವರಕೆಯಂ ಪರಸಿ (ಆಗಪು. ೩-೯೭ ವ). **ಪಾರಯ್ಸು** : ೧. ಅವರ್ಗೆ ಪಾರಯ್ಸಿ ಸೌಭಾಗ್ಯಶಾಲಿ ವಿಟನಿತೆಂದು (ಶಾಂತಿಪು. ೮-೬೩ ವ); ಸಯ್ಪಿಂ ತೊದಳೊಳ್ಪುದಟ್ಟು ನುಡಿಯಂ ಪಾರಯ್ಸಿ[ಪಾಠಾಂ. ರೈಸಿ] ಕೇಳಲ್ಕೆ ನೋನೆನೊ (ಸುಕುಮಾ. ೯-೦೦೩). **ಪಾರೈಸು** : ೧. ಆ ರಾಜಸುತಂ ಪಸಿದುಂ ನೀರಡಸಿದನೆನಗಿವಲ್ಲದಲ್ಲಲ್ಲನ್ನಂ ಪಾರೈಸಂ ಪಲವಂ (ಆದಿಪು. ೩-೬೬) ; ಆ ರಮಣೀರಮಣರ ಶೃಂಗಾರರಸಾಪೂರ್ವತರ ತರಂಗಿಣಿಯೊಳದೇಂ ಪಾರೈಸಿ ತೊಳಲ್ದುವೊ ರಸಪೂರದ ಪಿಡಾಂಗಳನೆ ಪೋಲ್ತು ನೋಟ್ಪರ ಕಣ್ಗಳ್ (ಚಂದ್ರಪ್ರ. ೬-೬೭) : ಅಮೃತಮನಿಪ್ಪತ್ತಪ್ಪಿತವೊಂದಲ್ಲದಬ್ಬವಿಕಾಸಂ ನೆರೆಗೊಂಡು ಕೋಕವಿಭಾನಂ ಪಾರೈಸಿರಲ್ ಮಬ್ಬು ಪಿಂಗುವುದೇ (ಕಳಸಂ. ೩೯೭). **ಹಾರಯಿಸು** : ೧. ಧಾರಿಣೀಪತಿ ಧರ್ಮಸುತ ತಾ ಹಾರಯಿಸಿಯಹುದೆಂದು ಕಾಂತೆನಾರಿ ತಾ ಪತಿಕರಿಸೆ ಪಾರ್ಥನು ಚಲುವಮತವೆಂದ (ಸಂಕಷ. ೨೩-೮೬) ಎನ್ನ ಪ್ರಾಣ ನಿಮ್ಮ ಪ್ರಸಾದವನೆ ಹಾರಯಿಸುತಿರ್ಪುದಯ್ಯಾ (ಅಪಂಕೇ. ೦೮೨-೬೬); ಆರೋಗ್ಯಭಾಗ್ಯವನು ಮನಕೆ ತನಗೆಂತಂತೆ ಹಾರಯಿಸುವೊಡೆ ಹಲವು ಸರಳನೀತಿಗಳ ಧಾರಯಿಸು ನೆನಸಿನಲಿ ನುಡಿಯಲ್ಲಿ ನಡತೆಯಲಿ ಪಾರಾಗು ಸುಳಿಯಿಂದ (ಮುಂಕುಳ. ೬೦೩). ೨. ಒಳ್ಳೆಯದನ್ನು ಬಯಸು ; **ಶುಭ**

ಶಿಕದವಳಿಸಿಯಾಳಿ (ಜಶಶ. ೬-೨೦). ೩. ಪರ್ಷಿಯಾದೇಶದ ಕುದುರೆ.

**ಪಾರ್ಶಿಕ :** ೨. ಕಾಳಗವ, ರಾತ್ರಿ ನಿಸಗಿಲ್ಲಿಂದು ಪಾರ್ಶಿಕಂಗಿತ್ತುದಾ ದೃವಂ (ಶಾರು. ೬-೦೩೨). [<ಸಂ. ಪಾರಸೀಕ]

**ಪಾರಶೀಕ** (ನಾ). ಪರ್ಷಿಯಾದೇಶದ ಜನ : ಪಾರಶೀ[ಕಾಂ. ಸೀ]ಕ ಕಿರಾತ ಬರ್ಬರ ಪಾರಿಯಾತ್ರರ ಮುಂಚಿದು ಸರ್ವವಿಹಾರವನು ಮಾಡಿದನು ಮ್ಲೇಚ್ಛ ಸಹಸ್ರಕೋಟಿಗಳ (ಕುವ್ಯಾಸ. ೬-೨೮). [ಸಂ.]

**ಪಾರಸ** (ನಾ). ೧. ಪಾರಶಿಕ ೧ : ಬರ್ಬ್ಬರಂ×[ಪಾರಸ]ದ್ವೈಕವಾದ ಲಂಬ ಕರ್ಣ್ನಸ್ತ್ರೀರಾಜ್ಯ ಘೋಳಾಪಾ×ಮೆಂಬ ನಾನಾದೇಶದೇಶಾಂತರ×××ಗಳ (ಶಾಇಇ. XX. ೦೦೨-೪೦; ೧೧೪೬ ?) ; ಪೂರ್ವಕಾಲದಲ್ಲಿ ಪಾರಸದೇಶವನ್ನು ಆಳಿದಂಥ ವಿಖ್ಯಾತರಾದ ಮುಸಲ್ಮಾನ ಅರಸರಲ್ಲಿ ಒಬ್ಬ ಬಹುಪರಾಕ್ರಮಶಾಲಿ ಯಾದ ಪಾತ್ಶಹನು ಇದ್ದನು (ಕಗದ್ಯ. ೧೧, ೦೬). [ಸಂ.]

**ಪಾರಸವ** (ನಾ). = ಪಾರಶವ ೧ : "ಶಸ್ತ್ರಂ, ತೀಕ್ಷ್ಣಂ, ಅಯಃ, ಪಾರಸವಃ —ಈ ೪ ಉಕ್ಕು" (ಕಣಾಡು. ೨೮-೦೬). [ಸಂ.]

**ಪಾರಸಿ** (ಗು). ೧. ಪರ್ಷಿಯಾದೇಶಕ್ಕೆ ಸಂಬಂಧಿಸಿದ. (ನಾ). ೨. ಪರ್ಷಿಯಾದೇಶದ ಭಾಷೆ : ಓರೆದು ನೋಡೀ ಲಿಪಿಯು ಓದಲ ಬಲ್ಲವರು ಆರೆ ಪಾರಸಿಯಲ್ಲ ಅರಬ್ಬಿಯಲ್ಲ (ಕರಿಲ. ೦೫೯-೬). [ಸಂ. ಪಾರಸೀ]

**ಪಾರಸಿಕ** (ನಾ). ೧. = ಪಾರಶಿಕ ೧ : ಪಾರಸಿಕದೇಶದಲಿ ಪುಟ್ಟಿರ ವನಾಯುಜಂ (ಹಂಗರಾ. ೯೬-೨೦); ವಿಪ್ರವನು ಯಾರೋಲೆಬಿಗೋಂದಿಸಿದ ಸೇತು, ಪಾರಸಿಕವೀರರಿಗೆ ಹಾ ರಾಹು ಕೇತು ! (ಪಾಲಿಸಿ. ೬-೦೫೬). ೨. ಪರ್ಷಿಯಾದೇಶದ ಜನ : ಪಾರಸಿಕರಸಾಧ್ಯಬಲಂ ಪ್ಪಿದ ಹಲ ಸರಿಯ ಪೋಗೆ (ಪಾಲಿಸಿ. ೦-೦). ೩. ಪರ್ಷಿಯಾದೇಶದ ಕುದುರೆ. [ಸಂ.]

**ಪಾರಸಿಗ** (ನಾ). ಪರ್ಷಿಯಾದೇಶಕ್ಕೆ ಸೇರಿದವನು ; ಪಾರಸಿಕ : ರುದ್ರದತ್ತಂ ಪಾರಸಿಗನುಪದೇಶವಂ ದೇಹಿಯುಂ ಕೇಳ್ದನಪ್ಪುದಱಿಂ ತನ್ನ ಕಯ್ಯ ಕತ್ತಿಗೆಯಿಂದೇಱಡ ಪೋರಿಗಳಂ ತಲೆಯಸರಿದು (ಬಂಶಾ. ೯-೩೩ ಪ). [ಪಾರಸ+-ಇಗ]

**ಪಾರಸೀಕ** (ನಾ). ೧. = ಪಾರಶಿಕ ೧ : ಪಾರಸೀಕದೇಶದಲ್ಲಿ ಹುಟ್ಟಿದುವು ವನಾಯುಜಂಗಳೆಂಬುದು (ಕಣಾಡು. ೬೨-೨೩೩): ಬರ್ಬರ ಪಾರಸೀಕ ಪಾರಿಯಾತ್ರ ಹವಿಷ್ಕಾರ ದೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲರಿಂ ಭಯಾನಕರಸಮುಂ . . . ನೆಗಟುತ್ತುವಿರೆಯರೆ (ಜಗ. ೨-೪೯ ಪ). ೨. = ಪಾರಸಿಗ : ತುರುಕ ಟರ್ಬರ ಪಾರಸೀಕರ ತುರಗವೈಸಾವಿರ ಸಹಿತ ದೋಹರಿಸಿ ನಿಂದನು ಶಕುನಿ ಥಟ್ಟಿನ ಬಲದ ಬಾಹೆಯಲಿ (ಕುವ್ಯಾಗ. ೦-೯). ೩. ಪರ್ಷಿಯಾದೇಶದ ಭಾಷೆ ; ಪಾರಸಿ : ಈ ಶಾಸನ ಗಳು ಬಾಣಮುಖಾಕ್ಷರದಿಂದ ಕೆತ್ತಲ್ಪಟ್ಟಿರುವುವು. ಇವುಗಳು ಪಾರಸೀಕ, ಸೂಸಾನ್ ಮತ್ತು ಶೇವಿಯಾ ಎಂಬ ಮೂರು ಭಾಷೆಗಳಲ್ಲಿವೆ (ಕಶಾಶ. ೨-೩). ೪. ಪರ್ಷಿಯಾದೇಶದ ಕುದುರೆ : "ವಾನಾಯುಜ ವಾಜಿಕುಳಂ ಪಾರಸೀಕವೆಂದಱಿಗವಱಿಲ್" (ಚನ್ನಕೋ. ೬೬-೨೬). [ಸಂ.]

**ಪಾರಳತೆ** (ನಾ). (ಭೂಮಿಯ) ಒಂದು ತುದಿಯಿಂದ ಮತ್ತೊಂದು ತುದಿಯವರೆಗಿನ ಅಳತೆ ; ವ್ಯಾಸದ ಅಳತೆ : ಭೂಗೋಳದ ವ್ಯಾಸವು ಅಥವಾ ಭೂಗರ್ಭದ ಪಾರಳತೆಯು ೭೯೧೨ ಮೈಲುಗಳುಳ್ಳದ್ದಾಗಿದೆ (ಭೂಗೋಳ. ೩). [ ಪಾರ್ + ಅಳತೆ ]

**ಪಾರಾ** ' ಪಹರೆ ' ನೋ.

**ಪಾರಾಚೌಕಿ** (ನಾ). ಪಹರೆಯವರು ಕಾವಲು ಇರುವ ಚಾವಡಿ,—ಠಾಣೆ : ಅವರು ಹಗಲು ಟೀಪುಸುಲ್ತಾನರ ಸರಹದ್ದಿನಲ್ಲು ಇದ್ದುಕೊಂಡು, ರಾತ್ರಿ ಕಾಲದಲ್ಲಿ ಪಾರಾಚೌಕಿ ತಪ್ಪಿಸಿ, ಕಳ್ಳಮಾರ್ಗವಾಗಿ ಕೊಡಗಿನ ಸೀಮೆ ಸರಹದ್ದಿನ ಒಳಗೆ ಬರುವುದು (ರಾಜೇಂದ್ರ. ೦೦೩). [ಪಾರಾ (<ಪಹರೆ) + ಚೌಕಿ]

**ಪಾರಾಟ** ' ಪಾಱಾಟ ' ನೋ.

**ಪಾರಾಪತ** (ನಾ). ಪಾರಿವಾಳ ; ಕಪೋತ : ಮಯೂರರಾಜಹಾರಾಪತಪ್ರಕರ ಕುಕ್ಕುಟ ಧಟಿಕತ್ಮಯಾಪ ತಿತ್ತಿರಿ ಕಪಿಂಜಳಾದಿ ವಿವಿಧವಿಹಂಗವರಿಕೋಧಿತೋಪಾಂತದೊಳ್ (ಕರ್ಣಾಟ. ೩-೬೨ ಪ) ; ಪ್ರಮತ್ತ ಪರಭೃತ್ತವಾಯೂರ ಕೀರಪಾರಾಪತಂಗಳುಲಿಪಮುಂ . . . ಸೊಗಯಿಸುತ್ತುಮಿರಲ್ (ಕುಶಾಕೀ. ೬ ೬೨ ಪ). [ ಸಂ. ]

**ಪಾರಾಯಣ** (ನಾ). ೧. ದಾಟುವುದು ; ಕಡೆಹಾಯುವುದು. ೨. ಗ್ರಂಥಾದಿಗಳನ್ನು ಮೊದಲಿನಿಂದ ಕಡೆಯವರೆಗೆ ಓದುವುದು : ಗ್ರಂಥಾದಿಗಳ ಆಮೂಲಾಗ್ರವಾದ ಪಠನ : "ಪಾಕಲ್ಯಮಾಚಿನಂ, ಪಾರಾಯಣಂ—ಈ ೨ ಕಡೆ ಮುಟ್ಟಲೋದುವುದು" (ಕಣಾಡು. ೬೬-೨೯೬); ವೇದಪಾರಾಯಣದ ಫಲ ಗಂಗಾದಿ ತೀರ್ಥಸ್ನಾನಫಲ . . . ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಗ. ೦೩-೨೦) ; ತಿರುಪರಾತ್ಪರವಾಸುದೇವನ ತಿರುಪಡಿಗಳನು ನುತಿಸಿ ಪೂಜಿಸಿ ತಿರುಪ್ರಬಂಧಾದಿಗಳ ಪಾರಾಯಣದ ಪವಾಡುತಲಿ (ರಗಾ. ೦೯-೯೯); ಪಾರಾಯಣ, ಜಪಗಳು ಪೂಜೆಯಲ್ಲಿ ಆವಶ್ಯಕಗಳಾಗಿರುತ್ತವೆ (ಶಾರದ. ೨೨೮). ೩. ಗ್ರಂಥಾದಿಗಳನ್ನು ಮೊದಲಿನಿಂದ ಕಡೆಯವರೆಗೆ ಓದಿದವನು : ಪಂಡಿತ ; ಪಾರಗ : "ಅನಂತಪಾರಾಯಣಂ ಮಿಗೆ ಓದಿದವನಕ್ಕುಂ" (ಹುಂಗರಾ. ೬೩-೩) ; ಸಿದ್ಧಾನ್ತವಾಯುಪಾರಾಯಣ ನಿಂತು ಸಂತತಿಗಡರ್ಪನೊರ್ದನುತ್ತರೋತ್ತರಂ (ಶಾಂತಿಪು. ೯-೦೦೩).

**ಪಾರಾಯಣ ಮಾಡು** = ೧. ಗ್ರಂಥಾದಿಗಳನ್ನು ಮೊದಲಿನಿಂದ ಕೊನೆಯವರೆಗೆ ಓದು : ಪಾರಾಯಣ ಮಾಡಿದ ಬ್ರಾಹ್ಮಣಭೋಜನಕ್ಕಂ ದಕ್ಷಿಣೆಗಂ ಬಿಟ್ಟರು (ಶಾಇಇ. XI-i. ೦೦೬-೯ ; ೧೦೭೮) ; ಶ್ರೋತ್ರಿಯರು . . . ದಿನವೂ ರಾಮಾಯಣವನ್ನು ಪಾರಾಯಣ ಮಾಡುತ್ತಿದ್ದರು (ಕಂಚ್ಚ. ೦೯೬). ೨. ಒಂದೇ ವಿಚಾರವನ್ನು ಹಲವು ಸಲ ವಿವರಿಸಿ ಹೇಳು : ಮತ್ತೆ ಮತ್ತೆ ಅದೇ ವಿಷಯವನ್ನು ಪಾರಾಯಣ ಮಾಡಬೇಡ (ಕಿಖ). [ ಸಂ. ]

**ಪಾರಾವತ**$_1$ (ನಾ). ಪಾರಿವಾಳ ; ಕಪೋತ : "ಪಾರಾಪತಮುಮ್ ಕಪೋತಮ್" (ಚನ್ನಕೋ. ೯೨-೦೯) ; ರಾಜಹಂಸ ಪಾರಾವತಮಿಥುನಂಗಳುತ್ತುಂಗ ಪಾರ್ಶ್ವ ಶಾ ದ ಶಿ ಖ ರಮಣಿಗವಾಕ್ಷಾಂತರಾಳವಿವಿಧಗೃಹಾಂತರಗತಂಗಳಾದುವು (ಕಂಶರಾ. ೯-೯೯ ಪ) ; ಪಾರಾವತಂ ವಾನರನೆತ್ತಾಡಂಚೆ ಸಿಂಹಂ . . . ಕಾಜಿಗ್ಯೋಟಾಳೆಂಬಿ ತಿರಿಕವ್ರಾತಂಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೆಂಚಲಾಱಿಂ (ರಹಸ್ಯ. ೦೩-೦೫೬); ಶುಕ ನೀಲಕಂಠ ಪಾರಾವತ ಮಧುಕರನಿಕರದಿಂದದು ಸೊಗಯಿಸುವುದು (ಕುಶಾಕಾಲ. ೯-೩೦). [ಸಂ.]

**ಪಾರಾವತ**$_2$ (ನಾ). ಒಂದು ಬಗೆಯ ಮರ ; ಹಾಲಿವಾಣ : ಪಾರಾವತ ವೆಂಬ ಮರಂಗಳಂ ಪಶ್ಚಿಮದಲ್ಲಿ ನೆಳ್ಳಿಮರಂಗಳಂ ಉತ್ತರದಲ್ಲಿ . . . ಹಾಕ ಬೇಕು (ಶಾಗಂಧ. ೯೩೬-೦೯). [ ? ]

**ಪಾರಾವಾರ** (ನಾ). ೧. ನದಿ, ಸಮುದ್ರ ಮೊದಲಾದುವುಗಳ ಎರಡು ದಡಗಳು,— ತೀರಗಳು. ೨. ಸಮುದ್ರ ; ಕಡಲು : "ರತ್ನಾಕರಃ . . . ಪಾರಾವಾರಃ, ತೋಯಧಿಃ, ಅರ್ಣವಃ, ಜಲರಾಶಿಃ, ಸಾಗರಃ, ಸಮುದ್ರಃ—ಈ ೧೨ ಸಮುದ್ರಂ" (ಕಣಾಡು. ೦೦೬-೪೦) ; ಶ್ರೀ ರಮಣಿಯಂ ದ್ವಿಷದ್ಬಳಪಾರಾವಾರದೊಳಗದಗ್ರಭುಜಮಿಸಯಮಹಾಮೇರು [ವಿ]ನೆ ಕಡೆದು ಪಡೆದಳವಾರುಮಂಬಿಱಿಸಿದುಮುದಾತ್ತನಾರಾಯಣಾ (ಕಂಶರಾ. ೯-೦); ಸದಸದಾದಿಪಸುಸ್ವರೂಪನಿರೂಪಣಪ್ರವೀಣಸಿದ್ಧಾನ್ತಾದಿ ಸಮಸ್ತಶಾ[ಸ್ತ್ರಾ]ಮೃತಪಾರಾವಾರಪಾರಗರ್ಪಂ (ಶಾಇಇ. XX, ೯೬-೨೩; ೧೦೭೭) ; ಕಾಯ್ದು ಚುಯ್ಯೆಂಬುಮೇಱಿಂ ಕುಲಪಾರಾವಾರದಿವಿ ಬೇಸಗೆಯ ದಿಸಿಲೊಳ್ (ಜಗ. ೦೩-೬೦). ೩. ಎಲ್ಲೆ ; ಮೇರೆ : ಅಮ್ಮೆಯ್ಯನ

ಸಂಕೋಚಕ್ಕೆ ಪಾರಾವಾರವೇ ಇಗಲಿಲ್ಲ (ಚಂಗಾಳ್. ೩೨೬) ; ನಾನು . . . ನನ್ನ ಪಾರಾವಾರವಿಲ್ಲದ ಅಂಧಜಗತ್ತಿನ ಪರಮೇಶ್ವರನನ್ನು ಕರೆಯು ತ್ತಿದ್ದೆನು (ಗಣ್ಯ. ೨೦೬). ೪. [ಜೈನ] ಒಂದು ದೀರ್ಘವಾದ ಅವಧಿ,- ಕಾಲ; "ಪಲ್ಯತಕ್ಕಿಂತ ಬಹು ಮಹತ್ತಾದ ಕಾಲ" (ಕೃಶಕೋ. ೦೬೬): ಏಕಪಾರಾವಾರೋಪಮಾಯುಷ್ಯನುಂ ಪರ್ವಸಹಸ್ರಸಂಕಲ್ಪಕಲ್ಪಿತಾವ್ಯಾತಾ ಹಾರನುಂ . . . ಆಗಿ (ಎಂಕೃ. ೨-೬೧ ೩). [ಸಂ.]

**ಪಾರಾವಾರಗ** (ನಾ). ಎಲ್ಲವನ್ನೂ ಸಂಪೂರ್ಣವಾಗಿ ತಿಳಿದವನು ; ಪಂಡಿತ ; ನಿಷ್ಣಾತ : ಕುಮಾರಬ್ರಹ್ಮಚಾರಿಯಾಗಿ ಭದ್ರಬಾಹು ತಪಂ ಬಟ್ಟು ಕೆಲವುದಿವಸದಿಂದೊಳಗೆ ದ್ವಾದಶಾಂಗಚತುರ್ದಶಪೂರ್ವ ಮಪ್ಪಾಗಮು ಮೆಲ್ಲಮಂ ಗ್ರಂಥಾರ್ಥಸ್ವರೂಪದಿಂ ಕಲ್ತು ಸಕಲಶಾಸ್ತ್ರಪಾರಾವಾರಗನಾಗಿ (ವಡ್ಡಾ. ೬೧-೨೧). [ಸಂ.]

**ಪಾರಾಶರ** (ಗು). ೧. ಪರಾಶರಮುನಿಗೆ ಸಂಬಂಧಿಸಿದ. (ನಾ). ೨. ಪರಾಶರಮುನಿಯ ಮಗ ; ವೇದವ್ಯಾಸ : "ಪಾ[ಶಾಶ್ರ. ಪ]ರಾಶರಂ ವ್ಯಾಸನಕ್ಕುಂ" (ಕುಂಗೆರ. ೬೬-೦೦) ; ಇದಂ ಮುನಿಪಾರಾಶರನೊಲ್ದು ಪೇಟ್ಟ (ಪಂಚರ. ೯-೩). ೩. ಪರಾಶರಸಂಪ್ರದಾಯದ ಸೂತ್ರಗಳು,- ನಿಯಮಗಳು. [ಸಂ.]

**ಪಾರಾಶರಿ** (ನಾ). ಪರಾಶರಸಂಪ್ರದಾಯದ ಸಂನ್ಯಾಸಿ,—ಭಿಕ್ಷು : "ಭಿಕ್ಷುಃ, ಪರಿವ್ರಾಟ್, ಕರ್ಮಂದೀ, ಪಾರಾಶರೀ, ಮಸ್ಕರೀ—ಸನ್ಯಾಸಿಯ ಹೆಸರುಗಳು" (ಸಿದ್ಧ್ಯಂತ. ೩೨೮). [ಸಂ. ಪಾರಾಶರಿನ್]

**ಪಾರಿ₁** 'ಪಾಟಿ' ನೋ.

**ಪಾರಿ₂** (ನಾ). ಗಾಡಿಯ ತೊಟ್ಟಿಲಿಗೆ ಆಸರೆಯಾಗಿರುವ ಎರಡೂ ಪಕ್ಕಗಳ ಮರದ ಪಟ್ಟಿ : ಬಂಡಿಯ ಡಾಡು ತುಂಬಾ ಏರುಪೇರಾಗಿದೆ. ಇಗೋ ಪಾರಿ ಹಿಡಿಯುತ್ತೇನೆ. ನಿಧಾನವಾಗಿ ಬಿಡು (ಲೂ). [ದೇ.॥ ತಮಿ. ಪಾರ್]

**ಪಾರಿ₃, ಬಾರಿ₁** (ನಾ). ಒಂದು ಬಗೆಯ ಸಸ್ಯ : ಹಿಂಗು ಗಿಳಂಗ ಪಚ್ಚೆ ಕಟುಕತ್ರಯ ಸೈಂಧವಮುಂ ಫಲತ್ರಯಂ ಸಂಗತಪಾಪ್ಪ ಪಾರಿ [ಶಾಕು. ೮, ಲ]ಯಿಜವೋದ ಪುರಂದರಮೇಚಕಂ . . . ಕೋಳರ್ ಶೃಂಗಿ ಮಹೋರಗಾದಿ ವಿಷಸಂತತಿಯಂ ಕಳೆಗುಂ (ಕಪುರ. ೩-೬೨). **ಹಾರಿ₁** : "ಬಹುಪ್ರಜಾ—ಮೊದೆ, ಇಲಿ, ತಕ್ಕೋಲ, ಹಾರಿ" (ಚಂಧಿ. ೦೦೬). [ದೇ.॥ ತಮಿ. ಪಾರಿ]

**ಪಾರಿ₄, ಹಾರಿ₂** (ನಾ). ಸಾಲು ; ಪಂಕ್ತಿ ; ಶ್ರೇಣಿ : "ಪಾರಿಯೆನಲಾದ ಪುದು ಚಾರಿಗಂ ಶ್ರೇಣಿಗಂ" (ಅಜ. ೬೧). 'ಪಾರಿಪಂಜು' ಪರಾ. **ಹಾರಿ₂** : ಕಾದಬ್ಬೆಯ್ಪೋರಿಯ ಹಾರಿಯೀಂತೆಯುಂ ಪಂದಿಯ ಗೊಂದಳ ದಂಶಿದು (ಧೃತ್ಯ. ೩-೦೬ ೩) ; ಸುರಿವ ಘಟಾಳಿ ಶೀಲವ ಘಟಾಳಿ ಮರಳ್ವ ಘಟಾಳಿ ಹಾರಿಯೊಳ್ಪರಿವ ಘಟಾಳಿ ಸಾಗರದ ಮೇರುವಿನಂತರದೊಳ್ ನಿರಂತರಂ ತಿರುಗೆ (ಅಜಿತ. ೩-೬೩). [< ಸಂ. ಪಾಲಿ]

**ಪಾರಿ₅** (ನಾ). ೧. ಕುಡಿಯುವ ಬಟ್ಟಲು ; ಪಾನಪಾತ್ರ ; ಲೋಟ. ೨. ಪುಡಿ ; ಹುಡಿ : ಅತಿಸುರಭಿಸಹಕಾರಕಸ್ತೂರಿಕರ್ಪೂರಪಾರಿ [ಶಾಕು. ೧ಲಿ]ಸಮ್ಮಿಶ್ರತಾಂಬೂಲರಾಗರಕ್ತಾಧರಪ್ರವಾಲಪ್ರಭಾಪ್ರಕಟಿತ ಪೂರ್ವಸಂಧ್ಯಾರಾಗನುಂ (ಅಂಕೃ. ೩-೯೦ ೩). [ಸಂ. ಪಾರೀ]

**ಪಾರಿ₆** 'ಪಸರಿ' ನೋ.

**ಪಾರಿಕತ್ತು** 'ಘಾರೀಕತ್ತು' ನೋ.

**ಪಾರಿಕಾಂಕ್ಷಿ** (ನಾ). ಮುನಿ ; ಋಷಿ : "ತಪಸ್ವೀ, ತಾಪಸಃ, ಪಾರಿ ಕಾಂಕ್ಷೀ—ಋಷಿ ತಪಸುಳ್ಳವನ ಹೆಸರುಗಳು" (ಸಿದ್ಧ್ಯಂತ. ೩೨೮) : ಆ ಕೌರವನ ನಗರಿಗೆ ಪಾರಿಕಾಂಕ್ಷಿಪ್ರವರನೊಬ್ಬನು ಬಂದು ಹೊಕ್ಕನು ರಾಜ ಮಂದಿರವ (ಕುಮ್ಯಾ. ೦ ೦೧): ಪೂಜಾಯೋಗ್ಯವಸ್ತುಗಳ ಕೈಕೊಂಡು ಪರಮಶ್ರದ್ಧಾನ್ವಿತದಿ ನರದೇವನೈತಂದನಾ ಪಾರಿಕಾಂಕ್ಷಿಯೆಡೆಗೆ (ಎಂಕಾಶಾ. ೦-೦೬-೯೩). [ಸಂ. ಪಾರಿಕಾಂಕ್ಷಿನ್]

**ಪಾರಿಕಾಯ** 'ಪಾರಿಖಾಯ' ನೋ.

**ಪಾರಿಕೆ** (ನಾ). ದರ್ಶನ ; ಕಾಣ್ಕೆ : ಪಾರ್ವರ ಪಾರಿಕೆ ತ್ರಿನೇತ್ರಶಿಖಿಯೊಲು ಉತ್ತರೋತ್ತರವು ಮೇಲುಮುಖ (ಸಾರ್ವಶಾ. ೦೦೩ -೮). [ಪಾರು₁ (<ಪಾರ್₁)+—ಇಕೆ]

**ಪಾರಿಖತ್ತು** 'ಘಾರೀಕತ್ತು' ನೋ.

**ಪಾರಿಖಾಯ, ಪಾರಿಕಾಯ, ಹಾರಿಕಾಯ, ಹಾರಿಕಾಯಿ** (ನಾ). ಒಂದು ಬಗೆಯ ತೆರಿಗೆ,—ಸುಂಕ : ಇದನುಪೇಕ್ಷಿಸಿದಾತಂ ಕಟಿಯನೊಡೆದ ಪಾತಕನಕ್ಕುಂ ಪಾರಿಖಾಯಂ ಮೊದಲಾಗೆಲ್ಲಮೂರ್ಗ್ಗೇ × × ನಿವೇಶನಂ ಕೊಟ್ಟ (ಎಶ.XX, ೬೮-೯೨; 1015); ತಿಪ್ಪೆಸುಂಕ ಪನಿದೆಜಿ ಪಾರಿಖಾಯ ಹೊಲೆಗೊಟಿ ಮಜಿವ ಈುತಿನಿತುಮ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಶಾಶ. XX. ೦೫೮-೯೩ ; 1176). **ಪಾರಿಕಾಯ** : ಶ್ರೀಮಜ್ಜಗ ದೇವ ನಾರಾಯಣದೇವರಿಂಗಾಳ ಹೊಳಲು ಹುಸೆರದಜ ಬಳಿಯ ಒರಿಯ ಪೆಂಬಿಜುತಿಯ ಪಟ್ಟಂ ಪಾರಿಕಾಯಮುಮಂ ಈುಮವಿದೆಜಿಯುಮ[o] ದೇವರಂಗಭೋಗಕ್ಕೆ ಧಾರಾಪೂರ್ವ್ವಕಂ ಮಾಡಿ ಕೊಟ್ಟರ್ (ಕಶಾ. ೩೬-೯೯-೦೯; 1107). **ಹಾರಿಕಾಯ** : ಕೇವನ ಕೇತಿಯಣನಾಯಕ ಸತ್ರಕ್ಕೆ ಬಿಟ್ಟ ಧ[ರ್ಮ್ಮ]ಹಾರಿಕಾಯ ತಿಪ್ಪೆಸುಂಕ ಗಾಣದಲಿ ಕಾಶ್ಮೀರಭೂಮಿ ಮತ್ತ ಇದಿನಿಸುವ ನಿರ್ವ್ವಾಣದೇವರ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಧರ್ಮ್ಮ (ಶಾಶ. IX-1, ೨೩೫-೦೩ ; 1141) ; ಹಿರಿಯ ಕಟಿಯ ತುಂಬಿನ ಹರಿಯ ಎರಡು [ಧ]ರಣ ಕೋಟ ಪುರೊಳಗೆ ಹಾರಿಕಾಯ ಹೊಂಗೆ ವೀಸದ ಆಯ ಗಾಣಂಗಳಲ್ಲಿ ಸೊಲ್ಲ[ಗೆ] ಎಣ್ಣೆ ಒಂದು ಗಾಣ . . . ಸರ್ವ್ವನಮಸ್ಯವಾಗಿ ಕೊಟ್ಟ ವೃತಿ (ಕಶ. IV. ೨-೦೮ ; 1241) ; ಮಗ್ಗ ಮುದ್ರೆ ಕ್ರಯ ಕಡ್ಡಾಯ ಹಾರಿಕಾಯ ಬಾಳಿಕ . . . ನೀಲು ಆಗುಪಮಾಡಿಕೊಂಡು . . . ಭೋಗಿಸಿ ಬಹುದು (ಶಾಶ. IX-11, ೪೪೦-೨೫ ; 1419). **ಹಾರಿಕಾಯಿ** : ಅನುವು ಹಾರಿಕಾಯಿ ಮೊದಲಾದ ಏನುಂಟಾದನು ಸರ್ವಮಾನ್ಯವಾಗಿ . . . ಸಮರ್ಪಿಸಿದೆವು (ಶಾಶ. IX-11, ೪೯೦-೦೭ ; 1513). [ ? ]

**ಪಾರಿಜಾತ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ೧ ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ವೆಂಬ ಐದು ದೇವತರುಗಳು ಇಂದ್ರನ ನಂದನವನದಿಂದ ಬಂದು ವೆಂದು ನಂಬಲಾಗಿದೆ : ಕನಕಧ್ವಜನೆಂಬ ದೇವಂ . . . ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ ದೇವ ಕನ್ಯ ದೇವಿಯರ್ಕಳ್ ಸಹಿತಂ ಕ್ಷಪಣಕನ ವಿಮಾನದ ಮುಂದೆ ಇಂತೆಂದು ಪೇಟ್ದಾಡಿದಂ (ವಡ್ಡಾ. ೮೯-೮) ; ದೇವಕನ್ಯೇಗಳಿರ್ಗಿಸಿ ಹೋದರಲಿ ದೇಪ ದೇವಲೋಕದ ಪಾರಿಜಾತದಲಿ ದೇವ (ಕಂಚಿತ. ೯-೩೮) ; ಮಂದಾರ ಪಾರಿಜಾತ ಸಂತಾನ ಕಲ್ಪ ಹರಿಚಂದನಗಳೆಂಬ ಪೆಸರಿಂ ಪ್ರಸಿದ್ಧ ಮಾದ ಕಲ್ಪವೃಕ್ಷಪಂಚಕಮಿಪ್ಪುದು (ಪಶೀಕ. ೨೦೦). [ಸಂ.]

**ಪಾರಿಜಾತಕ** (ನಾ). = ಪಾರಿಜಾತ : "ಮಂದಾರಃ, ಪಾರಿಜಾತಕಃ, ಹರಿ ಚಂದನಃ, ಕಲ್ಪವೃಕ್ಷಃ, ಸಂತಾನಃ—ಈ ೫ ದೇವರ ಮರಂಗಳ್" (ಕರಾಮು. ೨೨-೦೩೫) ; ನಂದನವನಸಂಭವಹರಿಚಂದನ ಸಂತಾನ ಪಾರಿಜಾತಕ ನಿಲಸನ್ಮಂದಾರನಮೇರುದ್ರುಮಸಂದೋಹದ ಕುಸುಮಕೋಟಿಯಂ ವಾಸಿತಮಂ . . . ಮದಾಳಿಗಳ್ ಮುಸುಜೆ (ಧೃತ್ಯ. ೦೧-೯೯) ; ಅಲ್ಲಿ ಸಂಪಿಗೆಯತ್ತು ಪಾರಿಜಾತಕವಿತ್ತು ಮಾವು ಮಲ್ಲಿಗೆಯತ್ತು ಮನೆಯಿದಿರು (ಕೊಲಂಗ. ೧೭-೨೯೩). [ಸಂ.]

**ಪಾರಿಣಾಮಿಕ** (ಗು). ೧. ಪರಿಣಾಮಕ್ಕೆ ಸಂಬಂಧಿಸಿದ. (ನಾ). ೨. [ಜೈನ] ಜೀವತ್ವ, ಭವ್ಯತ್ವ, ಅಭವ್ಯತ್ವ ಮೊದಲಾದ ಕರ್ಮಗಳು

ಉದಯ, ಉಪಶಮ ಮೊದಲಾದುವುಗಳಿಂದ ಉತ್ಪನ್ನವಾಗದೆ ಇರುವುದು : ಭಾವೋಪಲಕ್ಷಕಂ ಜೀವನೆಂಬುದು ಅವಾವುವೆಂದೊಡೆ ಔದಯಿಕಭಾವಂ . . . ಕ್ಷಾಯೋಪಶಮಿಕಭಾವಂ ಪಾರಿಣಾಮಿಕಭಾವಮೆಂದಿಂತು ಭಾವವಯುಪ್ತತೆಜನಕ್ಕುಂ (ಸುಕುಚ. ೮-೪ ಕ) ; ಸಾಸಾದನ ಸಮ್ಯಗ್ದೃಷ್ಟಿಗೆ ಪಾರಿಣಾಮಿಕಭಾವಂ . . . ಅಕ್ಕುಂ (ತತ್ತ್ವಸೂ. ೪೦). [ಸಂ.]

**ಪಾರಿತಥ್ಯೆ** (ನಾ). ಹೆಂಗಸರು ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ : "ಪಾರಿತಥ್ಯೆ = ಮುಡಿಯ ಮೇಗಣ ಮುತ್ತಿನ ಸಂಡು, ಮುತ್ತಿನ ದಂಡೆಯೆಂದೂ ಎಂಬರು" (ಶಾಶಗು. ೬). [ಸಂ. ಪಾರಿತಥ್ಯಾ]

**ಪಾರಿತೋಷ** (ನಾ). ಬಹುಮಾನ : ಶಾಲಾವಾರ್ಷಿಕೋತ್ಸವದಲ್ಲಿ ಆ ಹುಡುಗನಿಗೆ ಅನೇಕ ಪಾರಿತೋಷಗಳು ಬಂದುವು (ಬೂಕ). [ಸಂ.]

**ಪಾರಿತೋಷಕ** (ನಾ). = ಪಾರಿತೋಷ : ಶ್ರೀಮನ್ನರ ಪಾರಿತೋಷಕದಿಂದ ನಾನೂ ಧನ್ಯೆಯಾದೆನಲ್ಲ! (ಕಲ್ಯಾ.೦೩-೦೭); ಇಂದಿಗೆ ಸುಮಾರು ಸಲವತ್ತೇಳು ವರುಷಗಳ ಹಿಂದೆ ರವೀಂದ್ರನಾಥಠಾಕೂರ ಅವರಿಗೆ ಒಂದು ಪಾರಿತೋಷಕವು ಸಿಕ್ಕಿತು. ಅದು ನೋಬೆಲ್ ಪಾರಿತೋಷಕ (ಕಕಕ. ೩-೧೩೦). [< ಸಂ. ಪಾರಿತೋಷಿಕ]

**ಪಾರಿತೋಷಿಕ** (ನಾ). = ಪಾರಿತೋಷ : ಬಳಿದ ಮುನಿನಾಥವಾರ್ತೆ ವಿಳಸತ್ಕಲ್ಪಲತೆ ಫಲಿತವಾದತ್ತನೆ ಭೂತಳಪಾಲಂ ವನಪಾಲಂಗಳತಿಗೆ ಮಿಗಿಲೆನಿಪ ಪಾರಿತೋಷಿ[ಕಾಂ.ಷ]ಕಮಿತ್ತಂ (ಚಂದ್ರಪ್ರ. ३-೧೦೦) ; ಅವರ ಆ ಕರಕೌಶಲಕೆ ಬೆರಗಾದರು . . . ಪಾರಿತೋಷಿಕಗಳನೇಕವನಿತ್ತರು ಮೆಚ್ಚಿದ ಸರಕಾರದವರು (ಅಂಜಾಕ. ೦೦-೩೬). [ಸಂ.]

**ಪಾರಿಪಂಜು** (ನಾ). ಕಾಲುದೀವಟಿಗೆ : ಸುತ್ತ ಕೋವರದ ಕಾವಲು ಪಾರಿಪಂಜಿನ ಮೊತ್ತವನೇನ ಬಣ್ಣಿಸುವೆ (ಅಮುಕಾಂ. ३-೩೩). [ಪಾರ್ + ಪಂಜು]

**ಪಾರಿಪಂಥಿಕ** (ನಾ). ದಾರಿಹೋಕರನ್ನು ಸುಲಿಯುವವನು ; ಕಳ್ಳ : "ಏಕಾಗಾರಿಕಃ, ತಸ್ಕರಃ, ದಸ್ಯುಃ . . . ಪಾರಿಪಂಥಿಕಃ,ಸ್ತೇನಃ — ಈ ೧೦ ಕಳ್ಳಂ" (ಹಲಾಯು. ೩೬೦-೩೩) ; ಅರಸುಗಳ ವನಿತೆಯಾರ್ಕಳ ವಂಕರಪರಿಪೂರ್ಣಭೋಜನಂಗಳ ದುರಿತಾಚರಣರತಪಾರಿಪಂಥಿಕ ನರತಂ. ಕಥಾಶ್ರವಣಮಹಿತಮೆಂಬರ್ ಶ್ರವಣರ್ (ಲಾಸಾಗ. ३३-೦೯೯). [ಸಂ]

**ಪಾರಿಪಕ್ಷ** (ನಾ). ಕುದುರೆಯ ಬಾಯಲ್ಲಿರುವ ಕಡೆಯ ನಾಲ್ಕು ದವಡೆ ಹಲ್ಲುಗಳು : "ಎರಡು ಸಡುದಂತಗಳು ಸಂದಂಶಮಕ್ಕೊತ್ತಿನೆರಡು" ಪಲ್ಗಳು ಮಧ್ಯಮಂಗಳಕ್ಕವಜ್ಓತ್ತಿನೆರಡು ದ್ವಿಡಂ ಪಾರಿಪಕ್ಷಂಗಳ್ (ಹುಂಗಾ. ೩೩-३೦); ಕಡೆಯ ಪಲ್ಗಳ್ ನಾಲ್ಕಕ್ಕಂ ಪಾರಿಪಕ್ಷ(ಕ್ಷ)ಮೆಂಬುದು (ಅಶ್ವಶಾ. ೬೩-೯). [ಸಂ.]

**ಪಾರಿಪತ್ಯ** 'ಪಾರುಪತ್ಯ' ನೋ.

**ಪಾರಿಪಾಟ್ಯ** (ನಾ). ರೀತಿ ; ಓರಣ ; ಕ್ರಮ : ವೇಣಿಯ ರಚನೆಯಲ್ಲಿ ಚಾತುರ್ಯದ ಪಾರಿಪಾಟ್ಯವು ಕಾಣುತ್ತಿದ್ದಿತು (ಕಶಾಕಂ. ೯೪). [ಸಂ.]

**ಪಾರಿಪಾರ್ಶ್ವಕ** (ನಾ). ೧. ಆಳು ; ಸೇವಕ ; ಪರಿಚಾರಕ. ೨. ನಾಟಕದಲ್ಲಿ ಸೂತ್ರಧಾರನ ಸಹಾಯಕ ; ನಾಂದಿಯನ್ನು ಹೇಳುವವನು : "ಸಾಮಾನ್ಯಾಭಿನಯ" ಪ್ರಕರಣ ಸಂಬಂಧದಲ್ಲಿಯೇ ನಾಯಕ ನಾಯಿಕೆಯರ ಭೇದ, ಅವರ ಶೀಲಸ್ವರೂಪಗಳು, ಪರಿವಾರ, ಸೂತ್ರಧಾರ, ಪಾರಿಪಾರ್ಶ್ವಕ ಮುಂತಾದವರ ಗುಣಗಳು . . . ಇವೆಲ್ಲಾ ನಿರೂಪಿಸಲ್ಪಟ್ಟಿವೆ (ಸಂಪಾಟಿ. ೦३). [ಸಂ.]

**ಪಾರಿಪಾರ್ಶ್ವಿಕ** (ನಾ). = ಪಾರಿಪಾರ್ಶ್ವಕ. [ಸಂ.]

**ಪಾರಿಪ್ಲವ** (ಗು). ೧. ಅಲುಗುವ ; ಹೊಯ್ದಾಡುವ ; ಚಂಚಲವಾದ : ವಸ್ತುಹೀನವಾಭಿಧಾನಮುಂಟಕ್ಕುಮಪ್ಪೊಡೆ ಶಬ್ದಾರ್ಥಸಂಬಂಧಂ ಪಾರಿಪ್ಲವಪರಿಪ್ಲವಮಕ್ಕುಂ (ಶಾಂತಿಪು. ೬-೦೩೯ ವ) ; ಪಯಃಪ್ಲವದೊಳಗೆ ಮುಟ್ಟಿ ಪಾರಿಪ್ಲವನೇತ್ರೆಯರಮರಕಾಂತೆಯರ್ ಸೊಗಯಿಸಿದರ್ (ಅಜಿತ. ೯-೬೦). ೨. ತೇಲುವ. (ನಾ). ३. ಹೊಯ್ದಾಟ ; ಅಸ್ಥಿರತೆ ; ಚಾಂಚಲ್ಯ : "ಲೋಲಂ, ಚಪಲಂ . . . ಪಾರಿಪ್ಲವಂ, ಚಲಾಚಲಂ, ಸಂಚಲಂ — ಈ ೧೦ ಸಂಚಲಂ" (ಹಲಾಯು. ೦೦೩-೦೦) ; ಅವಬೋಧಂ ವಿಷಯಪರಿಪ್ಲವಂ (ಮನೋವೇಚಸರಾಯನಿಯಮಂ ಪಾರಿಪ್ಲವ)ವಿನಿಸಿಲ್ಲದೆ ಮಾಣಲುಂ ಭುವನಮನೆಲ್ಲಮೆಂಬ ಸಮತೆ ಸಮನಿಸದಪುದೇ (ಶಾಂತಿಪು. ೯ ೦೦೯). ೪. ವ್ಯಾಕುಲತೆ ; ಹರಡುವಿಕೆ ; ವಿಸ್ಪುರಣೆ : ವರ್ಣಕ್ಕಿಂತಲೂ ನಯನಗಳಿಂತಲೂ ಸೌಂದರ್ಯದಾ ಪಾರಿಪ್ಲವವು ಅತ್ಯಂತ ಮಾಗ್ಗಿರವಾಗಿದ್ದಿತು (ಕಶಾಕಂ. ೯೩). ೫. ದೋಣಿ. ೬. ಒಂದು ದೇಶದ ಹೆಸರು : ಹಯಮುತ್ತುಗಾಳುಮುಖವಾಗಿ ಪಾರಿಪ್ಲವಧರೆಯೊಳ್ಪೊದಿ ಪೆಣ್ಣುದುರೆಯಾಗಿ ಪುಲಿಯಾಗಿ . . . ಮುನ್ನಿನಂತೆ ನಿಯಮಿತಮಾಶ್ವವಾದತ್ತು (ಕೃಷ್ಣಚ. ೦೫-೩). [ಸಂ.]

**ಪಾರಿಬರುಹ** (ನಾ). (ಮದುವೆ ಮುಂತಾದ ಶುಭಸಮಾರಂಭಗಳಲ್ಲಿ ಕೊಡುವ) ಬಳುವಳಿ ; ಉಡುಗೊರೆ : ಪಾರಿಬರುಹಂಗಳನು ಕೊಂಡು ಮುರಾರಿ ಪಾರ್ಥ ಸುಭದ್ರೆಯರು ಸಹಿತೇಟಿ ರಥವನು . . . ಬಿಜಯಂಗೈದನಿಂದ್ರಪ್ರಸ್ಥಪುರವರಕೆ (ಗಭಾಗ. ೦೦-೬३-೩೬). [<ಸಂ. ಪಾರಿಬರ್ಹ]

**ಪಾರಿಬ್ರಾಜಕ** (ನಾ). ವಿರಕ್ತ ; ಸಂನ್ಯಾಸ : ಪಾರಿಬ್ರಾಜಮೆಂದಭಿಷ್ಟುತಗೆಯಲ್ ನಿನ್ನೋಲ್ಗಿಂ ಪಾಸದೇ (ಸುಕುಚ. ೯-೩೦). [ <ಪಾರಿವ್ರಾಜಕ ]

**ಪಾರಿಭದ್ರ** (ನಾ). ೧. ಒಂದು ಬಗೆಯ ಮರ; ಹಾಲಿವಾಣದ ಮರ: "ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಕಃ—೪ ಹಾಲಿವಾಣದ ಮರದ ಹೆಸರುಗಳು" (ಸಿದ್ಧಾಂತ. ೦೦೬). ೨. ಬೇವಿನ ಮರ. ३. ದೇವದಾರುವೃಕ್ಷ. ೪. ಚಂಗಲಕೋಷ್ಠ. [ಸಂ.]

**ಪಾರಿಭದ್ರಕ** (ನಾ.) = ಪಾರಿಭದ್ರ ೧: "ಮಂದಾರಃ, ಪಾರಿಭದ್ರ (ಜಾತ)ಕಃ — ಈ ೨ ಹಾರಿವಾಳಂ" (ಹಲಾಯು. ೩೩-೪೬). ೨. ದೇವದಾರುವೃಕ್ಷ : "ಶಕ್ರಪಾದಪಃ, ಪಾರಿಭದ್ರಕಃ, ಭದ್ರದಾರು, ದ್ರುಕಿಲಿಮಃ, ಪೀತದಾರು, ದಾರು, ಪೂತಿಕಾಷ್ಠಂ—೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತ. ೦३೪). [ಸಂ.]

**ಪಾರಿಭಾವ್ಯ** (ನಾ). ಒಂದು ಬಗೆಯ ಮೂಲಿಕೆ : "ವ್ಯಾಧಿ." ಕುಷ್ಠಂ, ಪಾರಿಭಾವ್ಯಂ. . . ಉತ್ಪಲಂ — ೬ ಚಂಗಲಕೋಷ್ಠ" (ಸಿದ್ಧಾಂತ. ೦೯೧). [ಸಂ.]

**ಪಾರಿಭಾಷಿಕ** (ಗು). ೧. ಯಾವುದಾದರೊಂದು ಕಲೆ, ವಿಜ್ಞಾನ,ಕೈಗಾರಿಕೆ ಮೊದಲಾದುವಕ್ಕೆ ವಿಶಿಷ್ಟವಾದ ಅರ್ಥದಲ್ಲಿ ಬಳಕೆಗೆ ಬಂದಿರುವ; ತಾಂತ್ರಿಕವಾದ ಅರ್ಥವುಳ್ಳ. (ನಾ). ೨. ತಾಂತ್ರಿಕವಾದ ಅರ್ಥವುಳ್ಳದ್ದು : ಅನುಭಾವ ಎಂಬ ಪದವನ್ನು ಪಾರಿಭಾಷಿಕವಾಗಿ, ಬಹುಮಟ್ಟಿಗೆ "mysticism" ಎಂಬರ್ಥದಲ್ಲಿ, ಕನ್ನಡದಲ್ಲಿ ವೀರಶೈವರಲ್ಲದೆ ಇನ್ನಾರೂ ಉಪಯೋಗಿಸಿಲ್ಲ (ಶೂನ್ಯಸಂ. ೦೬೦); ವಾಕ್ಯಗಳ ಅಂತಸ್ಸಿಗೆ ಹಿಡಿಯದ ಜಟಿಲವೂ ಪಾರಿಭಾಷಿಕವೂ ಆದ ಅಂಶಗಳನ್ನು ಕಡಿದು ಹಾಡುವುದುಂಟು (ಶಿಪ್ತದ. ೦೩೦). [ಸಂ.]

**ಪಾರಿಭೋಗಿಕ** (ನಾ). ಬುದ್ಧನು ಉಪಯೋಗಿಸಿದ ವಸ್ತುಗಳು : ಬುದ್ಧನು ಉಪಯೋಗಿಸಿದ ಪದಾರ್ಥಗಳು (ಪಾರಿಭೋಗಿಕ) : ಇವರಲ್ಲಿ ಭಿಕ್ಷಾಪಾತ್ರೆ, ಕಮಂಡಲು ಮತ್ತು ಆಸನಗಳು ಮುಖ್ಯ ಉದಾಹರಣೆಗಳು (ಶಾಕೃತ. ೯೯३). [ಸಂ.]

**ಪಾರಿಯ** 'ಪಾರಿವ' ನೋ.

**ಪಾರಿಯಪಟ್ಟಿ** 'ಪಾರಿಯಾಪಟ್ಟಿ' ನೋ.

**ಪಾರಿಯರ** 'ಪಾರಿಯಾರ' ನೋ.

**ಪಾರಿಯವಟ್ಟೆ**, ಪಾರಿಯಪಟ್ಟೆ, ಪಾರಿವಟ್ಟೆ (ನಾ). ಒಂದು ಬಗೆಯ ಬಣ್ಣದ ಬಟ್ಟೆ : ಪಸಿರ್ಪಟ್ಟೆ ಪಾರಿಯವ[ ಪಾಠಾಂ. ಪ ]ಟ್ಟೆ ಕೆಂಬಟ್ಟೆ ಕ್ಕಗೆಸೆವ ಹಳದಿಯ ಪಟ್ಟೆಗಳ ಪೊಸಗುಡಿಗಳ ಸಾಲು ಹೊಪ್ಪುವು ಗಗನಾ ವಿಸರದಾ ಪಾಳೆಪುದೊಳಗೆ (ಚಂದ್ರಾಂ. ೧೨-೬೨). **ಪಾರಿಯಪಟ್ಟೆ** : ಉಟ್ಟ ದುಕೂಲಮೆಂಬುದದು ಪಾರಿಯಪಟ್ಟೆಪೊಲಾಗೆ (ಜೀರಾ. ೬-೩೦) ; ಕಂಗಾಣಿಸದೆ ಪಾರಿಯಪಟ್ಟ[ ಟ್ಟೆ ] ಕರ್ವಣ್ಣ ಗೊಂಗಡಿ ಮುಸುಕಿಟ್ಟುಕೊಂಡು . . . ದುಸ್ಸಂಗದಂಪತಿಗಳೊಪ್ಪಿದರು (ಪೋಂಶತ. ೦೬-೨೩). **ಪಾರಿವಟ್ಟೆ** : ಭೂದೇವಿಯರ್ ಕುಜಾವಳಿಯೆಂಬ ಮಕ್ಕಳಿಗೆ ಸಾದರದಿ ಪಾರಿವಟ್ಟೆಯ ಪಾಸಿ ನಿಲಿಸಿದೊಲ್ (ಚೆಕೋತ್ಪ. ೦೦-೨೩).

[ ಪಾರಿಯ ( <ಪಾರಿವ₂ ) + ಪಟ್ಟೆ₂ ]

**ಪಾರಿಯಾತ್ರ** (ನಾ). ೧. ಏಳುಕುಲಪರ್ವತಗಳಲ್ಲಿ ಒಂದು ; ಇದು ವಿಂಧ್ಯಪರ್ವತದ ಪಶ್ಚಿಮಭಾಗದಿಂದ ನರ್ಮದೆಯ ಉತ್ಪತ್ತಿಸ್ಥಾನದ ವರೆಗೂ ಹಬ್ಬಿ ಅರಾವಳಿಬೆಟ್ಟಗಳಲ್ಲಿ ಸೇರಿಕೊಂಡಿದೆ. ೨. ಒಂದು ದೇಶದ ಹೆಸರು : ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆ (ಶಗಂ. ೨-೩೯ ಪ); ಪಾರಿಯಾತ್ರ ಮಿಥಿಲಾ ಪಾಂಚಾಳ . . . ಮತ್ಸ್ಯದೇಶಕ್ಕೆ ತಸ್ಕರ ರೋಗಾದಿ ಭಯಂಗಳಂ ಜನಿಯಿಕುಂ ಪಂಕೇಜಮಿತ್ರಾತ್ಮಜಂ (ಅಭ್ಯಮು. ೦೨-೬೦); ಪುಷ್ಕರ ಪಾರಿಯಾತ್ರ ಕರೂಷ ಕಾಂಭೋಜ . . . ಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ಕೊರಾಂ. ೦-೬-೦೬). ೩. ಪಾರಿಯಾತ್ರದೇಶದಲ್ಲಿ ಹುಟ್ಟಿದುದು : ಮನುತಗಮನದ ಪಾರಿಯಾತ್ರನ ತುರಗ ಕೂಡಿದ ಹೇಮನಿರ್ಮಿತ ಹಿರಿಯ ಟೆಕ್ಕೆಯದ . . . ತಳಿತ ಶಸ್ತ್ರದಿ ಭರದಿ ತುಂಬಿದ ಕೋಟಿರಥಗಳು ರಣಕೆ ಹೊಯಿದವಲು (ಕೌರವ. ೨೦-೬). [ ಸಂ. ]

**ಪಾರಿಯಾತ್ರಕ** (ನಾ). ೧. = ಪಾರಿಯಾತ್ರ ೧: " ಹಿಮವಾನ್, ನಿಷಧಃ, ವಿಂಧ್ಯಃ, ಮಾಲ್ಯವಾನ್, ಪಾರಿಯಾತ್ರಕಃ, ಗಂಧಮಾದನಂ... ಹೇಮ ಕೂಟಾದಯಃ " (ಸಿದ್ಧಾಂತ. ೦೦೬). ೨. = ಪಾರಿಯಾತ್ರ ೨ : ಪಾರಿಯಾತ್ರಕ ಕೇರಳಮುಖಾಪಾರದೇಶಂಗಳೊಳೆಸೆವ ಜಂಗಮವು ಭಕ್ತಾಳಿ ಎಡೆಯೆಡೆಯೊಳೀ ಗಡಣೆಯಿಂದೆಡೆವಿಡದೆ ನಡೆವುತ್ತಿರಲು (ಚಾತು. ೬-೦೯); ಪಾರಿಯಾತ್ರಕದೇಶದಲ್ಲಿಪ್ಪ ಮಲ್ಲಿಕಾಪುರದಲ್ಲಿ ಪಾರಿಯಾತ್ರಕನೆಂಬ ರಾಜ ನಿಪ್ಪನು (ಕೃಕಪೂ. I, ೩೬೦). [ ಸಂ. ]

**ಪಾರಿಯಾತ್ರಿಕ** (ನಾ). ಪ್ರಯಾಣಕ್ಕೆ ಯೋಗ್ಯವಾದ ರಥ : "ಅಧ್ವಸ್ಥಃ, ಪಾರಿಯಾತ್ರಿಕಃ, ಕರ್ಣೀರಥಃ — ಈ ೩ ಪಯಣದ ರಥಂ " (ಹಲಾಯು. ೩೩-೨೯೦). [ ಸಂ. ]

**ಪಾರಿಯಾತ್ರೆ** (ನಾ). = ಪಾರಿಯಾತ್ರ ೧: ಸ್ವಸ್ತಿ ಅನೇಕಸುಧಾರಸ × ತ್ರವೀಚಿಚ್ಛಾಯಲವಣಾಬ್ಧಿ ಪಳಿಯವಳಯುತವೇಳಾವನಗಂಗಾತೀರಪಾರಿಯಾತ್ರೆ ತನುಮಧ್ಯದೇಶಾಧೀಶ್ವರ ಮಾಹಿಷ್ಮತೀಪುರವರಾಧೀಶ್ವರನ ಹಿಹಯ ವಂಶೋದ್ಭವಂ (ಕಇಶ. ೦೨-೪-೬೪; 1148). [ ಸಂ. ಪಾರಿಯಾತ್ರ ]

**ಪಾರಿಯಾನಿಕ** (ನಾ). = ಪಾರಿಯಾತ್ರಿಕ. [ ಸಂ. ]

**ಪಾರಿರಕ್ಷಕ** (ನಾ). ಸಂನ್ಯಾಸಿ ; ಭಿಕ್ಷು: " ಪರಾಶರೀ . . ಪಾರಿರಕ್ಷಕಃ, ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ — ಈ ೯ ತಪಸ್ವೀ " (ಹಲಾಯು. ೬೬-೨೩೩). [ ಸಂ. ]

**ಪಾರಿರ್ಯಾರ**, ಪಾರಿಯರ (ನಾ). ಪರಿಹಾರ : ಮನ್ನೆಗಾಮುಣ್ಣು ಪ್ರಪೆ ಕರಣ ಚೈತ್ರನಿತ್ಯರು ಮುವತ್ತಎರಡು ಸರ್ವ್ವಪಾದ ಪಾರಿರ್ಯ್ಯಾರ (ಸೌಇಇ. IX-1, ೩೨-೩; ?). **ಪಾರಿಯರ** : ಇ ಪಾರಿಯರಮನಟ್ಟೊಪ್ಪೊನ್ನಂದನ ನ್ತಾಯ ತಪ್ಪಿಗೆಯುಮಾನ್ಕೆಡಿಸೋನಕ್ಕು ತಾನ್ (ಸೌಇಇ. IX-1, ೩೨-೬ ;?). [ <ಸಂ. ಪರಿಹಾರ ]

**ಪಾರಿವ₁** (ನಾ). ಒಂದು ಬಗೆಯ ಪಕ್ಷಿ ; ಕಪೋತ ; ಪಾರಿವಾಳ : "ದೃಶದಾತನಂ ಪಾರಿವಮೆನಿಕ್ಕು" (ಶುಂಗಾರ. ೩೨-೮); ದಿವ್ಯಮ[ಖ]ಪಾಂ ಕೆಯ್ಕೊಂಡು ಸಗ್ಗಕ್ಕೆ ಪಾಱದುವಾ ಪಾರಿವ ಜಕ್ಕವಕ್ಕಿಗಳ್ (ಶಂಪಾ. ೬-೩೦); ಕಾಮಿನೀಮಣಿತಮೀಬೆಂದು ಪಾರಿವದ ಮೆಲ್ಲುಲಿಯಂ . . . ತಣಿಯದೆ ಕೇಳ್ದರ್ (ಉದ್ಭಟ. ೦-೯೨); ಕಾಬುಜಾಲೆ ಲಾವುಗೆ ಗೌಜು ಪಾರಿವ . . . ಗಿಂಚಲು ಗರಿಗ ಮೊದಲಾದಖಳಿಖಗಕುಲ ಬಿದ್ದುದುರಿಯೊಳಗೆ (ಶುಷ್ಣ್ಮ. ೨೦-೩೩). [ <ಪ್ರಾ. ಪಾರಾವಯ, ಪಾರೇವಯ./ಸಂ. ಪಾರಾವತ./ತೆಲು. ಪಾರುವ, ಪಾರುವಾ, ಪಾವುರಾ ]

**ಪಾರಿವ₂**. 'ಪಾರಿಯ' (ನಾ). ೧. ಒಂದು ಬಗೆಯ ಬಣ್ಣ : ಪವಣ್ಣಾಡೆದ ಸುವರ್ಣಪಾರಿವದ ಕುಪ್ಪಸವೊಪ್ಪೆ ಬೆಡಂಗನಾಳ್ದು ಕಣ್ಗೆಡಜಿದೆ ಪೆಂಡವಾಸದ ವಿಳಾಸದ ಸೂಳೆಯರೊಪ್ಪಿ ತೋಱದರ್ (ಶಂಪಾ. ೯-೦೦೪); "ಪಾರಿವಾಳದ ಬಣ್ಣ " (ಶಂಪಾ. ೩೯೦) ; ಬೀಸುಬಡಿಗೆಯ ಧನುಶರಕ ಪಾರಿವ[ಪಾಠಾಂ. ಭಾಸುರ]ದ ಕುಪ್ಪಸದ ಕೇಶದಲಿ ತಳಿರುಗಳ ಕಟ್ಟಿ ವಿಲಾಸದಲಿ ಹರಿತಹ ಕಿರಾತರು ಘಾಸಿಯಾದರು (ಶುಷ್ಣ್ಮ. ೬೦೩. ೯-೦೦). **ಪಾರಿಯ** : ೨. ಒಂದು ಬಗೆಯ ಬಣ್ಣದ ಬಟ್ಟೆ : ದೈತ್ಯಮರ್ದನನ ದಾಸವಾರಿಯ ರಕ್ಕಸಜೂಜಿನ ಪಟ್ಟೆಯ ಪರಿಗೆಯ ಪಸರದ ಪಾರಿಯ ದೊಯ್ಯಾರದ ಕೆಂಪಟ್ಟೆನ ಪಂತಿಯ . . . ತಟ್ಟನೊಟ್ಟಜೆಯ ೯ಟ್ಟುಬ್ಬಟೆಯ ಬಿರುದಿನ ಹರಿಗೆಕಾಜದ ಪರಿವೀಥಿಯೊಳು (೧೦೯೬.೬-೩೩ ಪ); ತವೆ ಪಾರಿಯದಿ ನಿಂವ್ರಗೋಪದಿಂ ಶಿವನಂತ ತೊಪಲೆರದನಣಕಿಸುತೆ ಪೊಂಬಟ್ಟೆಯಿಂದೆ ಮಾಧವನ ಮಳ್ಗಿಸುತೆ . . . ಒಪ್ಪಿವರಲ್ಲಿ ದೂಸಿಗರ್ (ಕನ್ನಕಾ. ೯-೬೬); ಬಟ್ಟಮುತ್ತುಗಳು ಕೇವಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣವ ತೊಟ್ಟು (ಸೋಂಶತ. ೦೨-೯೩). [ <ಪ್ರಾ. ಪಾರಸು./ತಮಿ. ಮಲ. ಪಾರಿ]

**ಪಾರಿವಂಕ** (ನಾ). = ಪಾರಿವ₁ . ಗೊರವ ಗೌಜನು ಕಾಡೆ ಗಿಡಗ ಸಬಲ ಮಂಡೆ ಹರಟಿ ಕೆಂಬೋತು ಪಾರಿವಂಕ . . . ಪರಿಯಮನಿನ್ನೇನ ಪೇಳುವೆನು (ಮೂರಾಂ. ೦-೬೨). [ <ಪಾರಿವ₁ ]

**ಪಾರಿವಗೂಗು** (ನಾ). ೧. ಪಾರಿವಾಳದ ಧ್ವನಿ. ೨. (ಅಲಂ) ಸಂಭೋಗ ಕಾಲದಲ್ಲಿ ಕೊರಳಿನಿಂದ ಹೊರಡುವ ಧ್ವನಿ ; ಮಣಿತ ; ರತಿ ಕೂಜಿತ : ನೇತ್ರೋಳಂ ಪಿಡಿದೀಟ್ಟು ಬಿಗಿಹೊಡೆಯ ಮೇಲಿಟ್ಟೆನ್ನ ಮೆಯ್ಮೇಲ್ಮೆಗೊಳ್ಗಳಪ್ಪಂತಿರೆ ತಳ್ಕೆಗೆಯ್ದು . . . ಅಗ್ಗಳದೊಳ್ಪಾರಿವ ಗೂಗಿನಿಂ ತಣಿಪಂ (ಹಕಾ. ೬-೨೩೩). [ ಪಾರಿವ₁+ಗೂಗು₂ ]

**ಪಾರಿವಟ್ಟೆ** 'ಪಾರಿಯವಟ್ಟೆ ' ನೋ.

**ಪಾರಿವಾಣ₁** 'ಪಾರಿವಾಳ₁ ' ನೋ.

**ಪಾರಿವಾಣ₂** 'ಪಾರಿವಾಳ₂ ' ನೋ.

**ಪಾರಿವಾಳ₁**, ಪಾರಿವಾಣ₁, ಪಾರಂವಾಣ₁, ಪಾಲ್ವಣ, ಹಾರವಾಣ₁, ಹಾಲುವಾಣ₁ (ನಾ). = ಪಾರಿವ₁ : " ಪಾರಾವತಃ, ಕಲರವಃ, ಕಪೋತಃ — ಈ ೩ ಪಾರಿವಾಳ " (ಪಾತಾಕಾ. ೦೦೯) ; ಅಂಬಾಲಿಕೆ ನಿನ್ನಯ ಕಿವಿಯಿಂ ಬಿದ್ದಪುದೆಂದು ಜಗುಬ್ಬ ಚೆನ್ನೆಯ್ದಿಲ ಪೂಸಂ ಭರದೆ ತೆಗೆದು ಬೀಸಿದೆನುಬರದೊಳ್ ಪಾರಿವಾಳಮಂ ಬೆದಱಪವೋಲ್ (ಪಕಾ. ೬-೨೩೬) ; ಶುಕಪಿಕಪಾರಿವಾಳದ ಹುಮ್ಮುಲುಬ್ಬಿತು ಸುಕರವಾದ್ಯೆಂದುಸುರುವೆನು (ಧರಕ. ೦೨-೯೯) : ಅವನು ನಿರ್ಮಲಳು ಕೊಟ್ಟಿದ್ದ ಪಾರಿವಾಳದ ಕಾಲಿಗೆ ಒಂದು ಪತ್ರವನ್ನು ಕಟ್ಟಿ ಹಾರಿಬಿಟ್ಟನು (ಅಂಕಮು. ೨೨೪). **ಪಾರಿವಾಣ₁** : " ಪಾರಾವತಃ, ಕಲರವಃ ಕಪೋತಃ . . . ಪಾರಿವಾಣದ ಹಕ್ಕಿ " (ಸಿದ್ಧಾಂತ. ೦೩೩); ಶ್ಲೇಷ್ಮಾಧಿಕವಾದ ನಾಡಿಯು ಪಾರಿವಾಣದ ಹಾಗೆ ವೇಗ ಮಂದವಾಗಿ ಶೀತವಾಗಿ ಆಡುತ್ತಿಹುದು (ಸಕಪ್ಕ. ೦೩); ಪಾರಿವಾಣ ಬಿಡೋಕೆ ಹೋಗಿದ್ದೆಯ? (ಚರ್ಮಶ್ರೀ. ೩೦೦). **ಪಾರುವಾಣ₁** : (೯). **ಪಾಲ್ವಣ** : ಕಾಡ ಗೌಜಲು ಕರಿಯ ಲಾವುಗೆ . . . ಪರಿತ ಪಾಲ್ವಣ ಸ್ವೇತಸೋರೆಯು

ಪರಿತ ಗೀಜಗ ಮೆರೆದವು (ಗೋಕಾಡು. ೨೪). **ಹಾರವಾಣ₁** : (೬), **ಹಾಲುವಾಣ₁** : '' ಪಾರಾವತಃ, ಕಲರವಃ, ಕಪೋತಃ — ೩ ಹಾಲುವಾಣದ ಹಕ್ಕೀ ಹೆಸರುಗಳು '' (ಸಿದ್ಧಾಂ. ೦೩೭). [<ಸಂ. ಪಾರಾವತ]

**ಪಾರಿವಾಳ₂**, ಪಾರಿವಾಣ₂, ಪಾರುವಾಣ₂, ಹರಿವಾಣ₂, ಹರಿವಾಳ₁, ಹಾರವಾಣ₂, ಹಾರಿಯಾಳ, ಹಾರಿವಾಣ, ಹಾರಿವಾಳ, ಹಾರುವಾಣ, ಹಾಲಿವಾಣ, ಹಾಲುವಾಣ₂ (ನಾ). ಒಂದು ಬಗೆಯ ಮರ; ಪಾರಿಭದ್ರ: '' ಪಾರಿಭದ್ರಃ, ನಿಂಬತರುಃ, ಮಂದಾರಃ, ಪಾರಿಜಾತಃ — ಈ ೪ ಪಾರಿವಾಳದ ಮರ '' (ಶಾಶಾ. ೦೦೬); ಪಾರಿವಾಳದಾ ತದಕಿನ...ಇಪ್ಪೆಯ ಮರಂಗಳ ಕೊಂಬುಗಳಂಬರಂಬರಂ ಪುದಿದು ಪೊದಬ್ದು ಸುರ್ಬಿದರೆ ಪರ್ಬಿರೆ (ಅಜಿತ. ೬-೨೨); ಅವರಿಕೆಸೊಪ್ಪು, ಕರಿಹತ್ತಿ ಸೊಪ್ಪು, ಪಾರಿವಾಳದ ಸೊಪ್ಪು . . . ರಸವ ಹಿಂಡಿ ಬೆರಣಿ ಬೂದಿಯು ಕಲಸಿ ನೆತ್ತಿಬಾಯಿಗೆ ಒತ್ತಿದಾಕ್ಷಣವೇ ರಕ್ತವಾಂತಿ ನಿಲ್ಲುವುದು (ಕಸ್ತ್ರ. ೦೬೬). **ಪಾರಿವಾಣ₂**: '' ನಿಂಬತರುಃ — ಬೇವು, ಪಾರಿವಾ(ಳ)ಣ '' (೬ಕಂ. ೫೬); ಆ ತೈಲದಿಂ ಕೈಯುಂ ಪೂಸಿ ಪಾರಿವಾಣದ ಕಾಯಂ ಒತ್ತಲು ಒಡೆಯುವುದು (ಅಶ್ವ.ಶಾ. ೩೩); ಪಾರಿವಾಣದ ಸೊಪ್ಪಿನ ರಸ, ಒಂದೆ ಲಗನ ರಸ . . . ಇವಿಷ್ಟನೂ ಪ್ರತ್ಯೇಕ ಒಂದು ಹಲವ ಹನಿಸಿ ಮರ್ದಿಸಿ . . . ಕೊಡಿಸುವುದು (ವೃಕ್ಷಶಾ. I. ೬೪). **ಪಾರುವಾಣ₂** : "ಪಾರುವಾಣ (ಹಾಲಿವಾಣ) — ಪಾರಿಭದ್ರ = ವೃಕ್ಷವಿಶೇಷ" (ತದ್ಭವಾ. ೨೩). **ಹರಿವಾಣ₂** : ಹರಿವಾಣ : — ಈ ಬಿತ್ತ ಮೂಜಿನ್ನು ನೀರಲ್ಲಿ ಅರೆದು ಕುಡಿಯ ಮೂಜುಜುದಿನದಲ್ಲಿ ಋತುವಾಗುವಳು (ಅಶ್ವ.ಶಾ. ೭). **ಹರಿವಾಳ₁** : ಈ ನಮ್ಮ ಊರ ಮುಂದಿನ ಹರಿವಾಳದ ಮರಗಳು (ಮುಂಬಯು. ೬-೨೬೮). **ಹಾರವಾಣ₂** : (೬). **ಹಾರಿಯಾಳ** : '' ಹಾರಿಯಾಳದ ಮರ = ಪಾರಿಜಾತಕ, ಪಾರಿಭದ್ರ, ಮಂದಾರ, ನಿಂಬತರು " (ಚತಶಾ. ೬). **ಹಾರಿವಾಣ** : " ಪಸಿರಃ — ಉತ್ತರಣಿ, ಚೆನ್ನಿಗ್ಗಿಲು, ಗಜಹಿಪ್ಪಲಿ, ಹಾರಿವಾಣದ ಮರ " (೬ಕಂ. ೦೯೬): ಅದರಿಯ ಮೂಳವುಂಪುಂ ತುಪ್ಪವುಂಪುಂ ಮೇಣ್ ಹಾರಿವಾಳ(ಣ)ದೆಲೆಯುಂ ತಿಳತ್ತೈಳವುಮಂ ಮೇಣದು ವಾಜ್ಯವುಮನೆಜೆಯೆ×××ಪೋಕುಂ ಕ್ರಿಮಿಗಳ್ (ಗೋಕೋಶ. ೯-೨೩೦). **ಹಾರಿವಾಳ** : ಅರುಟಾಳಂ ಹಾರಿವಾಳಂ ತುಡು ತಡಸೊಡವಂ ಲೊಕ್ಕಿ ಗೊಟ್ಟಿಕ್ಕಿ . . . ತಜಿಮುದಿಂಮೊಪ್ಪುತಿರ್ದತ್ತರಣ್ಯಂ (ಗಂಗ. ೦-೬೨); ಕುರುಟಿಗೆ ಹಾರಿವಾಳ[ಶಾಶಾಂ. ಣ]ದ ರಸಂಗಳೊಳಾಲದ ಪಾಲನಿಃಬಿನಿಂ ಬೆರಸಿಡು (ಜಮತ. ೦೩-೩೬); ಹಾರಿವಾಳ (ಪಾಂಗಿರಾ)_ಮಾಧ್ಯಮ ಅಕ್ಷಾರದ ವೃಕ್ಷವು. ಕಟ್ಟಿಗೆ ಕೊರೆದು ಹಲಿಗೆಗಳನ್ನು ಮಾಡುವರು (ಕಶಗ.೩೦). **ಹಾರುವಾಣ** : (೬). **ಹಾಲಿವಾಣ** : ಹಾವಿನ ಹೆರೆ, ಹಾಲಿವಾಣದ ಎಲೆ, ಜೀಯ ಸಾಸುವೆಯುಂ ಸಮಂಗೊಂಡು ಶಿಶುವಿಂಗೆ ಧೂಪವಿಕ್ಕುವುದು (ಶಾಂತ. ೦೨೩-೬); ಸುರದುಂಬಿಯೆಕ್ಕೆಯೆಲೆ ನಾಗರಮುಂ ಬಜೆಯುಳ್ಳಿ ಹಾಲಿವಾಣದ ಕೊನರುಂ ಪುರಿಚಬೆರಸರೆ ನಸ್ಯಂ ಪರವಿದುವೆ ನೃಪಪುತ್ರದಿಂ ವಿಷಘ್ನವೆನಿಕ್ಕುಂ (ಜಮತ. ೬-೩೬); ಹಾಲಿವಾಣದ ಮರದಲ್ಲಿ . . . ಕಾಜಾಣವೊಂದು ಆಲಾಪನೆಗೆ ತೊಡಗಿತು (ಮರಿಮ. ೯೦). **ಹಾಲುವಾಣ₂** : ವೀಳೆಯದೆಲೆ ಹಂಬು ಹಬ್ಬುವುದಕ್ಕೆ ಅನುಕೂಲವಾದ ಗಿಡಗಳನ್ನು ಪಕ್ಕದಲ್ಲಿ ಬೆಳೆಸಬೇಕು. ಇವು ಸಾಮಾನ್ಯವಾಗಿ ಅಗಸೆ ಮತ್ತು ಹಾಲುವಾಣ (ವೃಷು. ೩೩). [ <ಸಂ. ಪಾರಿಭದ್ರ ]

**ಪಾರಿವೂಳಿಗ** (ನಾ). ಕಾವಲು ಕಾಯುವ ಕೆಲಸ ; ಪಹರೆ ಊಳಿಗ : ಶಿವ್ಮದಾಸನ ಮಗ ಲೋವಿದಾಸಗೆ ಶ್ರೀ ಸ್ವಾಮಿಯವರ ಪಾರಿವೂಳಿಗ ಶಂಖು ಜಾಗಟೆ ಗುಡಿಕಾಪಲು ಅಮೃತ ಮುದ್ರೆ ಸಹ ಅಪ್ಪಣೆ ಪಾಲಿಸಿ ಧರ್ಮ ಕೊಟ . . . ಪೊಲ ೮ (ಪ್ರಾಕಾ. ೮೦೭೯. ೬-೦೩ : 1073).
[ ಪಾರಿ₂ (<ಪಹರಿ)+ಊಳಿಗ (<ಊಳಿಗ) ]

**ಪಾರಿವೇಂಟೆ**, ಪಾರುವೇಟೆ (ನಾ). ೧. ದೇವಸ್ಥಾನದಲ್ಲಿ ನಡೆಯುವ ಒಂದು ಉತ್ಸವ ವಿಶೇಷ: ಮಕರಸಂಕ್ರಮಣದ ಮರುದಿನ ಪಾರಿವೇಂಟೆಯಾಗಿ ಗಿರಿಪ್ರದಕ್ಷಿಣ ಮಾಡುವಾಗ . . . ಅವಧರಿಸುವ ಮಹಾನೈವೇದ್ಯದ ಹರಿವಾಣ ೨೦ (ಶಾಶಾ. IX — II, ೩೩೦-೬ . ೧೩೩೩). **ಹಾರುವೇಟೆ** : ೨. ಬೇಟೆ ; ಶಿಕಾರಿ : ಕೋಟೆಯ ಮುಂದಿನ ಪಾರುವೇಟೆಯು ಬಯಲಲ್ಲಿ ಬೋನನ್ನು ಇಳಿಸಿದಾಗ, ಸುತ್ತ ನೆರೆದಿದ್ದ ಜನರನ್ನು ಕಂಡು. . . ಹುಲಿರಾಯನಿಗೆ ದಿಗ್ಭ್ರಮೆಯಾಯಿತು (ಹುಲಿರಾ. ೪).
[ದೇ.॥ ತಮಿ. ಪಾರಿವೆಟ್ಟೈ; ತೆಲು. ಪಾರುವೇಟ, ಪಾಱುವೇಂಟ]

**ಪಾರಿವ್ರಾಜ** (ನಾ). = ಪಾರಿವ್ರಾಜಕ ೨: ''ಭಿಕ್ಷು ಕರ್ಮಂದಿಯುಮಂ ಪೀನಂ ಪಾರಿವ್ರಾಜಂ ತಾನಕ್ಕುಂ '' (ಜ್ಯ. ೩೩-೪೪). [ಸಂ.]

**ಪಾರಿವ್ರಾಜಕ** (ನಾ). ೧. ವಿರಕ್ತಿ ; ಸಂನ್ಯಾಸ: ಪಾರಿವ್ರಾಜಕ (ಪಾರಿವ್ರಾಜ್ಯ)ಮೆಂಬುದು ಗೃಹಸ್ಥಧರ್ಮಮಂ ಪ್ರತಿಪಾಳಿಸಿ ವಿರಕ್ತಚಿತ್ತಂ ದೀಕ್ಷೋದ್ಯುಕ್ತನಾಗಿ . . . ನಿರ್ಗ್ರಂಥಾಚಾರ್ಯರ ಪಕ್ಕದ . . . ದೀಕ್ಷೆಗೊಳ್ಳುದು (ಕಾವೃಂತ್ತ. ೨೨೦). ೨. ಒಂದೆಡೆ ನಿಲ್ಲದೆ ಬೇರೆ ಬೇರೆ ಕಡೆಗಳಲ್ಲಿ ಸುಳಿದಾಡುವ ತಪಸ್ವಿ : '' ಪರಾಶರೀ, ಬ್ರತೀ, ಭಿಕ್ಷುಃ . . . ಪಾರಿವ್ರಾಜಕಃ, ತಪಸ್ವೀ, ಕರ್ಮಂದೀ, ತಾಪಸಃ — ಈ ೯ ತಪಸ್ವಿ'' (ಹಲಾಯು. ೬೬-೨೩೩). [ಸಂ.]

**ಪಾರಿವ್ರಾಜ್ಯ** (ನಾ). [ಜೈನ] ಶ್ರಾವಕನು ನಿರ್ವಾಣದೀಕ್ಷೆಯನ್ನು ತೆಗೆದುಕೊಳ್ಳುವುದು : ಸಜ್ಜಾತಿ ಸದ್ಗೃಹಿತ್ವಪಾರಿವ್ರಾಜ್ಯ ಸುರೇಂದ್ರತ್ವ ಸಾಮ್ರಾಜ್ಯಪರಮಾರ್ಹಂತ್ಯಪರಿನಿರ್ವಾಣಮೆಂದೇಟುಂ ಪರಮಸ್ಥಾನನಾಮ ಕರ್ತ್ರನ್ವಯಕ್ರಿಯೆಗಳಂ (ಆದಿ. ೦೫-೦೬ ೫) ; ತಪದೊಳ್ ನೆಗಟ್ದಾದೆ ದಿನ್ನವಿಜಯಪರಮನಿರ್ವಾಣಸುಖಭಾಜನರಪ್ಪರಿದು ಪಾರಿವ್ರಾಜ್ಯಕ್ರಿಯೆ (ಕಾವೃಂತ್ತ. ೨೨೦). [ಸಂ.]

**ಪಾರಿಶುದ್ಧತೆ** (ನಾ). ಅತ್ಯಂತ ಶುದ್ಧವಾಗಿರುವುದು; ಪರಿಶುದ್ಧತೆ : ನಡೆ ನುಡಿ ಎರಡರಲ್ಲೂ ಪಾರಿಶುದ್ಧತೆ ಈ ಸೌಂದರ್ಯದ ಲಕ್ಷಣ (ಶಂಕ. ೩೩); ನಮ್ಮ ಮಕ್ಕಳು . . . ಅಂತರಂಗದ ಪಾರಿಶುದ್ಧತೆಗೂ ನೆರವಾಗತಕ್ಕ ಶಿಕ್ಷಣವನ್ನೂ ಪಡೆಯಬೇಕು (ಶಿಕ್ಷಣ. ೬೨೪).
[ಸಂ. ಪಾರಿಶುದ್ಧ್ಯ]

**ಪಾರಿಶೇಷಕ** (ನಾ). ಉಳಿದ ಅಂಶ; ಪರಿಶೇಷ : ಮಹೀಧರಾಂತರದ ನಿಶ್ಚಯಿಸಿ ಭಾರತಪಾರಿಶೇಷಕದ ಅಂತಕಾಂತಕ . . . ಹೋಕ್ಕನು ದೋರಕಾಪುರಿಯ (ಕುಮಾ.ಭಾ. ೨-೪೩). [ಸಂ.]

**ಪಾರಿಶೇಷನ್ಯಾಯ** (ನಾ). ಒಂದು ಬಗೆಯ ನ್ಯಾಯ; ೫ ನಾಲ್ಕಾರು ವ್ಯಕ್ತಿಗಳಲ್ಲಿ ಒಬ್ಬ ವ್ಯಕ್ತಿಯನ್ನು ಅಥವಾ ನಾಲ್ಕಾರು ವಸ್ತುಗಳಲ್ಲಿ ಒಂದು ವಸ್ತುವನ್ನು ಗುರುತಿಸಬೇಕಾದಾಗ ಜೊತೆಗಿರುವ ಇತರ ವ್ಯಕ್ತಿ ಅಥವಾ ವಸ್ತುಗಳನ್ನು ಅಲ್ಲಗಳೆದು ಕೊನೆಗೆ ಉಳಿಯುವ ನಿರ್ದಿಷ್ಟ ವ್ಯಕ್ತಿ ಅಥವಾ ವಸ್ತುವನ್ನು ಒಪ್ಪಿಕೊಳ್ಳುವಿಕೆ: ಪಾರಿಶೇಷನ್ಯಾಯದಿಂ ಪರಮೇಶ್ವರನೇ ಜಗತ್ಕರ್ತೃವೆಂದು ನಿಶ್ಚಿತವಕ್ಕುಂ (ವಿವೇ. ೨). [ಸಂ.]

**ಪಾರಿಷದ** (ಗು). ೧. ಪರಿಷತ್ತಿಗೆ ಸಂಬಂಧಿಸಿದ ; ಸಭೆಗೆ ಸಂಬಂಧಿಸಿದ. (ನಾ). ೨. ಸಭಾಸದ ; ಸಭಿಕ : ಹೊಸಹೊಸ ಕವಿಗಳು ತಮ್ಮ ಹೊಸ ಹೊಸ ಕೃತಿಗಳಿಂದ ಪಾರಿಷದರಿಗೆ ಪರಿಚಿತರಾದರು (ಆಚಾರ್ಯ. ೩೩); ತಮ್ಮಂತಹ ದೊಡ್ಡವರು, ರಸಿಕ ಪಾರಿಷದರು ಮಾಡುವ ಪ್ರಯತ್ನದಿಂದ ರಸಿಜೀವನವು ಪುನರುದ್ಧಾರವಾಗಬೇಕಾಗಿದೆ (ಶಾಹೀ. ೬೪). ೩. ರಾಜ, ದೇವತೆ ಮೊದಲಾದವರ ಸೇವಕವರ್ಗ. ೪. [ಜೈನ] ಇಂದ್ರನ ಸಭೆಯಲ್ಲಿ ಸದಸ್ಯರಾಗಿರುವ ದೇವತಾವರ್ಗ: ಸಾಮಾನಿಕತ್ರಯ ಸ್ತ್ರಿಂಶತ್ಪಾರಿಷದಾತ್ಮರಕ್ಷಲೋಕಪಾಲಾಭಿಯೋಗ್ಯಕಿಲ್ಬಿಷರೊಡನೆ ಗಜ

ತುರಗ ರಥ ವೃಷಭಗಂಧರ್ವನರ್ತಕೀಪದಾತ್ಯನೀಕಂಬೆರಸು ಬಂದು ಮುಂದೆ ನಿಲ್ವುದುಂ (ಆದಿಪು. ೬-೯೨ ವ) ; ಅನೇಕ ಪ್ರಕಾರಪಾರಿಷದ ಪ್ರಕೀರ್ಣಕಾಭಿಯೋಗ್ಯ ಕಿಲ್ಬಿಷಿಕರುಮಂತರ್ಮುಧ್ಯಬಾಹ್ಯಸ್ಥಿತಗಳಪ್ಪ ಮೂಱುಂಪರಿಷದುಮುಮಾತ್ಮೀಯಮಪರಮೈಶ್ವರ್ಯಂ ಪ್ರಕಾಶಕಮಾಗೆ (ಆದಿಪು. ೦೦-೬೦ ವ). ೫. [ವೀಶೈ] ಚಂಡೀಶ್ವರ ಮುಂತಾದ ಶಿವ ಗಣ ; ಪ್ರಮಥಗಣ : ಕಲ್ಯಾಣದ ಮುದುರಪಾರಿಷದಗಣಸಂಕುಲಕೆ (ಬಸವ. ೦೬(೦೪) [ಸಂ.]

**ಪಾರಿಪ್ಲವ** (ನಾ). ಗದಾಯುದ್ಧದಲ್ಲಿ ಒಂದು ವರಸೆ(?) : ಬಹರಿ ಮತ್ತೊಲ್ಲಿ(?)ಪ್ರತಿ ವಿಲಂಘನ . . . ಸಂಪ್ಲವನ ಪಾರಿಪ್ಲವ ಗದಾಪರಿರಂಭ ವಿಕ್ಷೇಪ . . . ಲಘುವಿನ್ಯಸ್ತವೆಂಬೀ ವಿವರದಲಿ ಕಾದಿದರು (ಕುವ್ಯಾ.ಗ. ೬-೨೫). [?]

**ಪಾರಿಸಿ, ಪಾರ್ಸಿ** (ನಾ). ೧. ಪರ್ಷಿಯಾದೇಶ ; ಇರಾಣ : ಪಶ್ಚಿಮದಲ್ಲಿ ಸುಮಾರು ಒಂದು ಲಕ್ಷ ಪಾರಿಸೀಜನರೂ . . . ವಾಸವಾಗಿದ್ದಾರೆ (ಕೂರ್ಗ್. ೬೦). 'ಪಾರಿಸಿಲಿಪಿ' ಪರಾ. **ಪಾರ್ಸಿ** : ೨. ಪರ್ಷಿಯಾ ದೇಶದ ಜನ : ಹಿಂದೂದೇಶದವರಲ್ಲದ ಆಸ್ಯಾಖಂಡದ ವಂಶೀಯರು ... ಚೀನೀಯರು, ಮೊಗಲರು, ಪಾರ್ಸಿ ಪಠಾಣರು (ಕುಟುಜಾ. ೦೬೪). [<ಸಂ. ಪಾರಸೀ]

**ಪಾರಿಸಿಲಿಪಿ** (ನಾ). ಪರ್ಷಿಯಾದೇಶದ ಭಾಷೆಯ ಲಿಪಿ : ದ್ರಾವಿಳ ಲಿಪಿಯುಂ ಪಾರಿಸಿ[ಕಾಕಾ. ರಸ, ರಿಸ]ಲಿಪಿಯುಂ ಲಾಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ ಬಿಜ್ಜಳಮಹೀಪತಿಯಾಗ ತಾ ಹಿಡಿದಿರ್ದ ಲೇಖೆಯನು ಅವರ ಕೈಯೊಳು ಕೊಟ್ಟು (ಬಸಪು. ೩-೩೩). [ಪಾರಿಸಿ+ಲಿಪಿ]

**ಪಾರಿಸು** (ಕ್ರಿ). ಉಪವಾಸ ಮುಗಿಸಿದ ನಂತರ ಆಹಾರವನ್ನು ಸೇವಿಸು ; ಪಾರಣೆ ಮಾಡು : ಎನ್ನ ಮಾಹಾಮಹಿಮೆಯೊಳೆಂತುಕ್ಕ ನೆಂದು ಪಾರಿಸದೆ ಮತ್ತಮುಪೋಷವಾಸಂಗೆಯ್ದು (ಪಶ್ವ್ರಾಶಿ. ೦೦೭-೦೩); ಅಪರಾಜಿತಂ ವಿಮಳವಾಹನ ಜಿನಪತಿಯಂ[ಅರ್ಹದ್ದಾಸನಂ] ಕಂಡಲ್ಲದುಣ್ಣೆನೆಂದೆಂಟುದಿವಸಮುಪವಾಸಂಗೆಯ್ದು ಪಾರಿಸಲೊಲ್ಲದಿರೆ ಸುರರಾಜನಜ್ಞೆಯಿಂದು . . . ವಿಮಳವಾಹನನ [ಅರ್ಹದ್ದಾಸನ] ಪ್ರತಿ ಬಿಂಬಮಂ ತೋಱಿಸೆ ಕೃತಾರ್ಥನಾಗಿ ನಮಸ್ಕಾರಂಗೆಯ್ದು ಪಾರಿಸೆ (ಕಾವ್ಯಾವ. ೩೨೩); ಮುನಿಪಂ ಮಾಸೋಪವಾಸಾಂತರದೊಳನುನಯಂ ಪಾರಿಸಲ್ಕೆಂದು ಪೊಕ್ಕಂ ಮ್ಯಾನೆ ಚರ್ಯಾಮಾರ್ಗದಿಂದಂ ಬರೆ(ಬಾಹು. ೩-೩೪). [ಪಾರಣೆ₁+ — ಇಸು₁]

**ಪಾರಿಸೋಜ** (ನಾ). ಒಬ್ಬಾತನ ಹೆಸರು : ಹಿಟ್ಟಿನ ಅಗ್ಗಸಾಲೆ ಪಾರಿ ಸೋಜಂಗೆ ಮತ್ತರು ೪ (ಕೂರ್ಗ್ಶಾ. ೩೩-೩೩ ; ೧೦೩೦). [ಪಾರಿಸ₁ +ಒಜ₁ (<ಒವಜಾ)]

**ಪಾರಿಹಾರಿಕ** (ನಾ). ಮಾಲೆಯನ್ನು ಕಟ್ಟುವವನು ; ಮಾಲೆಗಾರ : "ಮಾಲಾಕಾರಃ, ಮಾಲಿಕಃ, ಪಾರಿಹಾರಿಕಃ—ಈ ೩ ಮಾಲೆಗಾಱಂ" (ಹಲಾಯು. ೬೬-೯೩೮). [ಸಂ.]

**ಪಾರಿಹಾರ್ಯ** (ನಾ). ಬಳೆ ; ಕಂಕಣ ; ಕಡಗ : "ಆವಾಪಃ, ಪಾರಿ ಹಾರ್ಯಃ, ಕಟಕಃ, ವಳಯಃ—ಈ ೪ ಕಂಕಣಂ" (ಹಲಾಯು. ೯೦-೯೦೩) ; ಮೇಖಳೆಯ ಪಾರಿಹಾರ್ಯದ ಮಣಿನೂಪುರದ ಮಧುರಸ್ವನಂ ಮುಪ್ಪುರಿ ಗೂಡಿದ ಮದನಪಾಶಮೆನೆ ನಡೆತಂದಳ್ (ಶಂಕರಾಪು. ೩-೬೪) ; ಮಣಿಕಾಂಚೀ ಮಣಿಪಾರಿಹಾರ್ಯಮಣಿಮಂಜೀರಸ್ವನಂ ಪೊಣ್ಮಲ್ . . . ಗಣಿಕಾಶ್ರೇಣಿ ಯುಮೇಱಿ ನಿಂದುದು ತವಂಗಶ್ರೇಣಿಯಂ ಲೀಲೆಯಿಂ (ಜಗಂ. ೬-೪೪). [ಸಂ.]

**ಪಾರೀಕತ್ತು** 'ಫಾರೀಕತ್ತು' ನೋ.

**ಪಾರೀಖತ್ತು** 'ಫಾರೀಕತ್ತು' ನೋ.

**ಪಾರೀಣ** (ನಾ). ೧. ದಾಟುವುದು. ೨. ಎಲ್ಲಾ ವಿಷಯಗಳಲ್ಲಿ ಸಂಪೂರ್ಣಪರಿಚಯವನ್ನು ಪಡೆದಿರುವುದು ; ಪಾಂಡಿತ್ಯ. ೩. ಎಲ್ಲಾ ವಿಷಯಗಳಲ್ಲಿ ಸಂಪೂರ್ಣಪಾಂಡಿತ್ಯವನ್ನು ಪಡೆದಿರು ವವನು ; ಪಂಡಿತ ; ನಿಷ್ಣಾತ : ದ್ಯಾನಶಗಣಸರಸ್ವರೋಜವಿವಳನ ಶೋಭಾಪ್ರಭಾವಪ್ರಸವಪಾರೀಣದಿವ್ಯವಚನಮರೀಚಿವಗಾಲಿರೊ ಚರ್ನಿಚಯ ಕ್ರಿಜಗತ್ಪೂಜಾಮಣಿಯುಂ . . . ಪೊಸೆವಟ್ಟು (೬೦೩೩. ೯.೩೯ ವ); ನಿಜ ಗುರುಭಜನಪಾರೀ[ಪಾ.ಶಾ. ರಿ]ಣನ . . . ನೋಡಿ (ಬಸವ. ೩೯-೩೩). [ಸಂ.]

**ಪಾರು₁** 'ಪಾರ್₁' ನೋ.

**ಪಾರು₂** 'ಪಾಱು₁' ನೋ.

**ಪಾರು₃** (ಕ್ರಿ). ೧. ಬೆಳೆ ; ವೃದ್ಧಿಯಾಗು : (ಕ). ೨. ಉಂಟಾಗು ; ಸಂಭವಿಸು : (ಕ). [ದೇ. ॥ ತಮಿ. ಪಾರಿ ; ತೆಲು. ಪಾಱು]

**ಪಾರು₄** 'ಪಾಱು₂' ನೋ.

**ಪಾರು₅, ಹಾರು₃** (ನಾ). ೧. ಆಚೆಯ ದಡ ; ಪಾರ : "ಪಾರು—ಪಾರ=ಆಚೆವಡ" (ಶಬ್ದಕೋ. ೨೬); ಸಿರಿಯ ಪೊಸ ತವರೂರು ಪವಳದನ್ನದ ಪಾರು ಸುರರ್ಕೈಸಿರಿಯ ನಾಡು . . . ಕಾಸೆಸುತ್ತಿಂಗಡಲ್ ಕಂಗೊಂಡುದು (ಕನಕ. III, ೨೦೩ ಕೃಷ್ಣಾವತಾರಂಜ). ೨. ಕೊನೆ ; ಅಂಚು : (ಕ). ೩. ಮನೆಯ ಮಾಡಿನ ಇಳಿಜಾರು ; ಸೂರಿನ ಇಳಿಜಾರು ಭಾಗ : (ಕ). ೪. ನೊಗದ ಎರಡು ಪಕ್ಕ, —ಕಡೆ ; 'ಪಾರುವಿಳಿ' ಪರಾ. ೫. ಅಪಾಯದಿಂದ ತಪ್ಪುವಿಕೆ ; ಬಚಾವು : ಮೃಗಗಳಂ ನೋಡಾರ್ಯ ! ಬಲಿಗೆ ಬಲಿಯಾಗಿ, ಪಾರು ಬರಲ್ಲದಿರೆ, ರೋಸಿ, ಹಿಂದಿರುಗಿ, ಕುರುಡುಧೈರ್ಯದ ನೆಮ್ಮಿ, ಬೇಟೆಯನಸೆವ ರಿಸವೆ? (ಕಕಾರ. ೬೦-೬). **ಹಾರು₃** : ೬. ಈ ಗುಬ್ಬಚ್ಚಿಗಳಿಗೆ ಮನೆಯ ಹಾರಿನ ಸಂದಿಗಳಲ್ಲಿ ಗೂಡು ಕಟ್ಟುವ ಅಭ್ಯಾಸವಿಲ್ಲದಿದ್ದರೆ ಚೆನ್ನಾಗಿರುತ್ತಿತ್ತು (ಈಚಕ. ೩೦).

ಪಾರಾಗು=ಬಿಡುಗಡೆ ಹೊಂದು ; ಬಚಾವಾಗು : ಇವನ ಕೈಯಿಂದ ಪಾರಾಗಲು ಗಾಂಧೀಜಿ ಮಾಡಿಕೊಂಡ ಯೋಜನೆ ನನ್ನ ತಲೆಯನ್ನು ತುಂಬಿತು (ರೇಕಪ. ೩೦) ; ಆತ್ಮಸತ್ತ್ವವಿದ್ದ ಒಂದೇ ಒಂದು ಜೀವವೆಂದರೆ ಸತ್ತು ಪಾರಾಗಿ ಹೋದ ತವ್ಮನ ಹೆಂಡತಿ (ಹೊಸಕ್ತ. ೨೯೪). ಪಾರು ಮಾಡು = ಕಾಪಾಡು : ರಕ್ಷಿಸು : ನಿನು ನನ್ನನ್ನು ಪಾರು ಮಾಡಬೇಕು ರಂಗಣ್ಣ (ರಂಗರೋ. ೨೩) ; ಜಗಜಿನಲ್ಲಿ ಮರಾತ್ಮರಿಂದ ಕಷ್ಟಕ್ಕೆ ಸಿಕ್ಕಿದಾಗ ನಮ್ಮನ್ನು ಪಾರು ಮಾಡಿದವಳು ಅವಳು (ವಕಭಾ. ೦೬೩). [<ಸಂ. ಪಾರ]

**ಪಾರುಂಬಳೆ** 'ಪಾಱುಂಬಳೆ' ನೋ.

**ಪಾರುಖಾಣ** 'ಪಾರುಖಾಣೆಯ' ನೋ.

**ಪಾರುಖಾಣಯ** 'ಪಾರುಖಾಣೆಯ' ನೋ.

**ಪಾರುಖಾಣೆ** 'ಪಾರುಖಾಣೆಯ' ನೋ.

**ಪಾರುಖಾಣೆಯ**, ಪಾರುಖಾಣ, ಪಾರುಖಾಣಯ, ಪಾರುಖಾಣೆ (ನಾ). ೧. ಬಹುಮಾನ ; ಉಡುಗೊರೆ : "ಎಸೆದುಂ ಕೊಡುವುಚಿತ ಪಾರುಖಾಣೆಯುಮಕ್ಕುಂ" (ಕಲಿಕ. ೨೩೩) ; ಪಾರುಖಾಣೆಯವಿತ್ತನಾ ಜಂಭಾರಿಯೂರ್ವಶಿ ರಂಭೆ ಮೇನಕೆ ಗೌರಿ ಮೊದಲಾದಖಿಳಪಾತ್ರಕೆ (ಕುವ್ಯಾ.ಅ. ೭-೯೩). ೨. ಕರಣಿಕರು ಇಡುವ ಲೆಕ್ಕಾಚಾರ : ತೀರ ದಿಬ್ಬರ ಸತ್ವಪಟನಿಯ ಸಾರದಿಬ್ಬರ ಬಲುಹುಗಾಣಿಸಿ ಪಾರುಖಾಣೆ ಯುಪದಟರಿಬ್ಬರ ಭುಜಬಲಾಟೋಪ ಸಾರತೀಯದು (ಕುವ್ಯಾಸ. ೨-೦೦೬).

**ಪಾರುಖಾಣ** : (ಕ). **ಪಾರುಖಾಣಯ** : ೧. "ಪಾರುಖಾಣಯ

ವೆಂದು ಉಚಿತವಚಿತು ಕುಡುವ ವಸ್ತು" (ಕಆಕಾ. ೬೩-೬೬೪)

**ಪಾರುಖಾಣೆ**: ೧. ತುಂಬುರ ರಂಭೆ ಭೃಂಗಿಯುಂ ಪರಿಕಿಸಿ ಪಸಾಯುವಂ ಪಾರುಖಾಣೆಯು ಕೊಡಲು ನೆರೆದಿರ್ದ ಹರನ ಸಭೆ ಸುಖದ ಸೊಗಸಿನ ಜೊಂಪು್ಮಿಡಿದು ಮೆಚ್ಚಿದಿರಲು (ಸಿದ್ಧಕಾ. ೦-೨೩); ಶ್ರೀರಿ ಪಡೆಯಿತು ಕಡಿತ ಗಿರಿಗಳ ಹೋರಟೆಗೆ ಹೊಗದೇಕು ಸೇನೆಗೆ ಪಾರುಖಾಣೆಯು ಕೊಟ್ಟವಾಗಳ (ಕುಮಾರಾ. ೮-೩೩). ೨. ಧಾರುಣೀಪತಿ ಕೇಳು ನಿನ್ನ ಕುಮಾರರಲಿ ತೊಂಬತ್ತಯೆಂಟರ ಪಾರುಖಾಣೆಯ ಲೆಕ್ಕ ಸಂದುದು ನಿಮ್ಮ ಚಿತ್ತದಲಿ (ಕುಮಾರ. ೦೪-೨೬). ೩. ನಾಶ; ಕೊನೆ; ಮಂಗಿಲ್ವಿಯಂ: ಕಂಡುದು ಪಾರುಖಾಣೆಯನಸುರನಸು ಬಲು ಭಾರಿಯೊಡಲೊರ್ಗುರ್ಡಿಸಿ ಕೆಡೆದುದು ಬಿದ ಗಿರಿಯಂತೆ (ಕುಮಾರರಾ. ೦೬-೩೪). ೪. ವಿರಹತಾಪ (?): "ಕರಣಕರ ಲೆಕ್ಕ ಸಖ್ಯೆಯೊಳಿರ್ದ ಪಿಟುಧಾರಿಗೀಯುಪರ್ಶಂಗಳೊಳಂ ವಾರಣದೊಳು ಮದನತಾಪದಿ ಪರಿವರ್ತಿಸಿ ಪಾರುಖಾಣೆಯಿಂದಲಾಗೆ" (ಭಾರತ. ೬೮). 'ಪಾರುಖಾವಣೆ' ಪರಾ. [?. / ಮರಾ. ಪಾರುಖಣೇ=ನಾಶವಾಗು, ನಷ್ಟವಾಗು]

**ಪಾರುಗಟ್ಟಿಗೆ, ಹಾರಕಟ್ಟಿಗೆ, ಹಾರಗಟ್ಟಿಗೆ, ಹಾರುಗಟ್ಟಿಗೆ, ಹಾರೆಗಟ್ಟಿಗೆ** (ನಾ). ಚೂಪಾದ ಆಯುಧವನ್ನು ತುದಿಗೆ ಅಳವಡಿಸಿದ ಕೋಲು; ಅಂಕುಶ: ಪಾರುಗಟ್ಟಿಗೆಯುವನುರ್ಬಿನೊಳಿಜಗುವ ಸೊರ್ಕಾನೆಯು ನಿನ್ನಪಕ್ಕೆ ಎರ್ದೆಯೊಡ್ಡಿ ಸೋಂಕದ ಮುನ್ನಮೆ ಒರ್ಮೆಯ್ಯೊಳೊಲೆದು ತಪ್ಪಿಸಿ ಎಡೆಗೆಡವುವಂತೆ ಕಡಪಿ (ಶಾಂತಿಪು. ೦೬೩-೦). **ಹಾರಕಟ್ಟಿಗೆ**: ಕೊರಳ ಜೊತ್ತಿಗೆ ಹಾರಕಟ್ಟಿಗೆ ಸುರಳಿತದ ಮೊಗರಂಬ ಸಾವಿರ ಕರಿಗಳೆಡಬಲಕೊಲವುತ್ತಿದಿರುಪಥಿ ಪೀವಿಯಲಿ (ಸಂಕಚ. ೨೦-೯೦). **ಹಾರಗಟ್ಟಿಗೆ**: ನೀಲದ ಹಾರಗಟ್ಟಿಗೆಯೆಸುರ್ದಿರ್ದುದು ಚಾಲೆಯ ಚಾಪೆ (ತ್ರಿಕುಚ. ೨೦-೯೯). **ಹಾರುಗಟ್ಟಿಗೆ**. **ಹಾರೆಗಟ್ಟಿಗೆ**: "ಒತ್ತುವ ಹಾರೆಗಟ್ಟಿಗೆ ಅಯೋಮಯಮು" (ಕುಂಗರಾ. ೯೬-೬); ಹಾಕಿದ ಬಿಚಿಕೆ ಸೂನಂಗಿ ಕೈಗತ್ತಿ ನೂಕುವ ಹಾರಗಟ್ಟಿಗೆಯು (ಅಕುಮಾರ. ೨-೮೩).

**ಹಾರುಗಟ್ಟಿಗೆವಿದ್ಯೆ**=ಅಂಕುಶವನ್ನು ಬಳಸುವ ವಿದ್ಯೆ: ಆನೆಯೊಂದಿಗೆ ಕಾದುವ ಹಾರುಗಟ್ಟಿಗೆವಿದ್ಯೆ ... ನಾನಾಸಂಜ್ಞೆಗಳನು ಅರಿತು (ಶಕಶಾ. ೮). 'ಅರೆಗಟ್ಟಿಗೆ' ಪರಾ. [<ಪಾರ್$_1$+ಕಟ್ಟಿಗೆ$_1$]

**ಪಾರುಗಡೆ** (ನಾ). ಬಿಡುಗಡೆ; ಪಾರಾಗುವುದು: ತಂದೆಯು ಪ್ರೇತವಾಗಿ ಎಲ್ಲೊ ವೈತರಣಿ ದಾಟಲಾರದೆ ಅಲೆಯುತ್ತಿರಬೇಕು. ಈ ಪಿಂಡ ಸಲಿಸಿದ ಮೇಲೆಯೂ ಅವರ ಪಾರುಗಡೆಯಾಗುತ್ತದೋ ಇಲ್ಲವೋ (ಕುಮಗಿಡು. ೯೬). [ಪಾರು$_1$+ಕಡೆ$_1$]

**ಪಾರುಗಾಣಿಸು** (ಕ್ರಿ). ೧. ದಡವನ್ನು ಸೇರಿಸು; ದಡ ಮುಟ್ಟಿಸು; ದುಃಖಸಾಗರದಲ್ಲಿ ತೇಲುತ್ತಿರುವ ನಮ್ಮ ಜೀವನನೌಕೆಯನ್ನು ಪಾರುಗಾಣಿಸಮ್ಮಾ (ಕಾಶಂಡ. ೯). ೨. ರಕ್ಷಿಸು: ನೀವೇ ನನ್ನ ಮಾನವನ್ನು ಕಾಪಾಡಿ ಪಾರುಗಾಣಿಸಬೇಕು (ಚಾಳಕೊ. ೨೩). ೩. ಕೊನೆಮುಟ್ಟಿಸು; ಮುಗಿಸು: ನಿನ್ನ ಕಾರ್ಯವನ್ನು ನೀನೇ ಪಾರುಗಾಣಿಸು ತಾಯಿ! (ಕುಂಹಿಂ. ೦೬೦). ೪. ಪರಿಹರಿಸು; ಹೋಗಲಾಡಿಸು: ಶನಿಮಹಾರಾಯನು ಹೆಗಲೇರಿದರೆ ಅದರ ಪರಿಣಾಮವನ್ನು ಪಾರುಗಾಣಿಸುವುದಕ್ಕೆ ತ್ರಿಮೂರ್ತಿಗಳಿಗೂ ಅಸಾಧ್ಯ (ಕಂಗಾಳ್. ೦೩೩).

[ಪಾರುಗಾಣು+-ಇಸು$_1$]

**ಪಾರುಗಾಣು** (ಕ್ರಿ). ೧. ಪಾರಾಗು; ಬಚಾವಾಗು: ಟಿಳಕರು ನನ್ನ ನಾಡಿ ಹಿಡಿದು ಕುಳಿತಿದ್ದರು. ಬೆಳಗ್ಗೆ ನಾನು ಪಾರುಗಂಡೆ (ಸ್ವ. ಕಾಜ. ೦೦೬). ೨. ಕೊನೆಮುಟ್ಟು: ನೀವು ಮಾಡಿದ ಲಗ್ನ ನಗನಗುತ ಪಾರುಗಂಡಿದ್ದರೆ ಅವನಿಗೆ ಎಷ್ಟೋ ಆನಂದವೆನಿಸಬಹುದಿತ್ತು (ಮಕಕ. ೬೨). [ಪಾರು$_1$+ಕಾಣು (<ಕಾಣ್)]

**ಪಾರುಗೆಯ್ತು** 'ಪಾಱುಗೆಯ್ತು' ನೋ.

**ಪಾರುಧಿ** 'ಪಾರದಿ' ನೋ.

**ಪಾರುಪತ** 'ಪಾರುಪತ್ಯ' ನೋ.

**ಪಾರುಪತಿಗಾರ** 'ಪಾರಂಪತ್ಯಗಾಱ' ನೋ.

**ಪಾರುಪತ್ತೆ** 'ಪಾರಂಪತ' ನೋ.

**ಪಾರುಪತ್ತೆಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ಯ, ಪಾರಪತ್ಯ, ಪಾರಿಪತ್ಯ, ಪಾರಂಪತ, ಪಾರುಪತ್ತೆ, ಪಾರ್ಪತ್ಯ** (ನಾ). ೧. ಮೇಲ್ವಿಚಾರಣೆ; ಉಸ್ತುವಾರಿ; ಯಾಜಮಾನ್ಯ: ಇಳೆಯೊಣ್ಣಂ ತನಗಲ್ತೆ ವೆಗ್ಗಳನೆನುತ್ತಂ ಪಾರುಪತ್ಯಂಗಳು ಬಳಗೀಯಲ್ (ಸೋಮೇಶ. ೬೪); ಛತ್ರದ ಯಲ್ಲಾ ಪಾರುಪತ್ಯವನೂ ಮಾಡಿಕೊಂಡಿಹ ಸಂಕರಪುಟ್ಟರಿಗೆ ೪೦ ಸಲಗೆ ಧತ್ತ (ಎಕ. VIII, ತೀರ್ಥಹ. ೨-೮೪; ೧೬೭೬); ಹಿಂದಕ್ಕೆ ಬೇಲೂರ ಚೆನ್ನಕೇಶವನ ಗುಡಿಯಲ್ಲಿ ಸೂರಯ್ಯನೆಂಬ ಒಬ್ಬ ಬ್ರಾಹ್ಮಣನು ಪಾರುಪತ್ಯವನ್ನು ಮಾಡಿಕೊಂಡಿದ್ದನು (ಕಿರಿಶಾ. II. ೨೪); ನೀರು ಹೊರುವ ಬಡ್ಡಿಗೆ ಊರ ಪಾರುಪತ್ಯವೇಕೆ? (ಗಾದೆ). ೨. ಆಳಿಕೆ; ಅಧಿಕಾರ: ಮನೆಯಲ್ಲೆಲ್ಲಾ ನಿನ್ನದೇ ಪಾರುಪತ್ಯವಾಗಿದೆಯಲ್ಲ (ಕಾಕೆಶು. ೦೦೩); ಅವನು ನಮ್ಮ ಕಡೆಗೆ ತಿರುಗಿಬಿಟ್ಟರೆ ಅವಳದೇನು ಪಾರುಪತ್ಯ ನಡೆಯುತ್ತದೆ? (ಕುಹಾಗ. ೦೬೯): ಬೇಳಿಗೆ ಪಾರುಪತ್ಯ ಕೊಟ್ಟರೆ ಜಾವ ಕೊಯ್ದಂದು ಸರ್ತಿ ಮುಟ್ಟಿಸಿತು (ಗಾದೆ). ೩. (ಅಲಂ) ದೊಡ್ಡಸ್ತಿಕೆ; ಪ್ರತಿಷ್ಠೆ: ಅವಳು ಮಾಡುವ ಪಾರುಪತ್ಯಕ್ಕೆ ಕೊನೆಯೇ ಇಲ್ಲ (ಕಂಠ). **ಪಾರಪತ್ಯ**: ೧. ಮಾದಿದೇವು ಗುರುಧಾರವನು ಮುರಗೇಡಿಯಲಿ ರಣಪಾರಪತ್ಯವ ಮಾಡುವಾತನು ಕೃಷ್ಣನು (ಕುಮಾರ. ೦-೬೦); ಯಿಾ ಛತ್ರದ ಪಾರಪತ್ಯ ×× ಬಿಟ್ಟದು ಕಾಲಿಯ ಬೀಜವರಿ ಖ ೨ ॥ (ಎಕ. VIII. ತೀರ್ಥಹ. ೦೬೪-೦೦; ೧೬೬೦); ಏನೂ ಚಿಂತೆಯಿಲ್ಲ. ಹಿಂದುಗಡೆ ಅವನ ಪಾರಪತ್ಯವನ್ನು ಮಾಡಲಿಕ್ಕೆ ಬಂದೀತು (ಕುಂಬಳ. ೦೨೩). ೨. ಇಷ್ಟಲ್ಲೂ ಅವಳ ಪಾರಪತ್ಯವೆಲ್ಲಾ ಎರಡೇ ತಿಂಗಳು (ಶಂಕರ. ೨೬). **ಪಾರಿಪತ್ಯ**: ೧. ಚೆಂನಪ್ಪಅಯ್ಯನವರು ಪಾರಿಪತ್ಯವ ಮಾಡಿ ನಡಸಿಕೊಂಡಿಹರು (ಕೌಶಂ. ೦೯೩೨. ಉಡುಪಿ. ೩೦೩-೪೦; ೧೩೯೭): ಅವಳ ಪತಿಯುಂ ಗ್ರಾಮಮಂ ನಾಡ ಪಾರಿಪತ್ಯವನೆಸಗುವಾತನುಂ (ಶಿಕ್ಕೆ.ಶ. ೭-೨-೩೩). **ಪಾರುಪತ**: ೪. ಮೇಲ್ವಿಚಾರಕ; ಪಾರುಪತ್ಯಗಾರ: ಅಚಾರ್ಯರಿಗೆ ಗ ೬ ಪಾರುಪತರ ಸತ್ಯಕ್ಕೆ ಗ ೬೨ ... ಶ್ರೀ ವಿಶ್ವೇಶ್ವರದೇವರ ಅಮೃತಪಡಿ ಮೊದಲಾದ ಎಲ್ಲಾ ಧರ್ಮಕ್ಕಂ ... ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. XV. ಕೇಶಾಬ. ೨೯೮-೬೬; ೧೨೭೯). **ಪಾರುಪತ್ತೆ**: ೧. ಮಗನೆ ರಾಜ್ಯದ ಪಾರುಪತ್ತೆಗೆ ದಾರೂ ಇಲ್ಲ (ಹಾಕ್ರಪಿ. ೬೬-೦). **ಪಾರ್ಪತ್ಯ**: ೧. ಕಳಚಿದಂ ಮಣಿಮಯದ ಮಕುಟಮಂ ದಂತಂಗಳಂ ಮುರಿದುರುಳೊದ್ದು ನಿಲಿಸಿದಂ ಪಗೆ ಪಾರ್ವರ್ತತ್ಯಮಂ (ಕುಹಂಗ. ೬೮-೩೨).

[ದೇ. ॥ ತಮಿ. ಪಾರುಪತ್ತಿಯ, ಪಾರಪತ್ತಿಯ; ತುಲ. ಪಾರ್ಪತ್ಯ; ತುಳು. ಪಾರುಪತ್ಯ, ಪಾರುಪತ್ಯೊ; ತೆಲು. ಪಾರುಪತ್ತೆ, ಪಾರ್ಪತ್ತೆ]

**ಪಾರುಪತ್ಯಗಾತಿ** (ನಾ). ಮೇಲ್ವಿಚಾರಣೆ ನಡೆಸುವವಳು; ಉಸ್ತುವಾರಿ ಮಾಡುವವಳು: ಅನ್ನಪೂರ್ಣೇಶ್ವರೀದೇವಿ ... ಯಾಜಮಾನಿಯು ಮಗನ ಬಳಿ ಪಾರುಪತ್ಯಗಾತಿಯಾಗಿರುವಳು (ಕಾಚರು. ೦೩).

[ಪಾರುಪತ್ಯ+-ಗಾತಿ$_1$]

**ಪಾರುಪತ್ಯಗಾರ** 'ಪಾರುಪತ್ಯಗಾಱ' ನೋ.

**ಪಾರುಪತ್ಯಗಾರಿಕೆ** (ನಾ). ಆಳ್ವಿಕೆ; ಪ್ರಭುತ್ವ: ಹಿಂದಿಯ ಪಾರುಪತ್ಯಗಾರಿಕೆಗಿರುವ ಹಕ್ಕನ್ನು ಪ್ರಶ್ನಿಸಿ ಹಲವಾರು ಪ್ರಾಂತ್ಯಗಳು ಪ್ರತಿಭಟಿಸಿದುವು (ಶ್ರೀಸ. ೬೬೦). [ಪಾರುಪತ್ಯಗಾರ (<ಪಾರುಪತ್ಯಗಾಱ)+-ಇಕೆ]

**ಪಾರುಪತ್ಯಗಾಱ**, ಪಾರವತೆಗಾರ, ಪಾರಪತ್ರೆಗಾಱ, ಪಾರವತ್ಯಗಾರ, ಪಾರುಪತಿಗಾರ, ಪಾರುಪತ್ರೆಗಾರ, ಪಾರುಪತ್ಯಗಾರ, ಪಾರ್ರುಪತ್ಯೆಕಾಱ, ಪಾರ್ಪತ್ರೆಗಾರ, ಪಾರ್ಪತ್ಯಗಾರ (ನಾ). ಮೇಲ್ವಿಚಾರಣೆ ನಡೆಸುವವನು; ಉಸ್ತುವಾರಿ ಮಾಡುವವನು: ಆವಾವ ಪಾರುಪತ್ಯಗಾಱ ಬಂದ ಅವ ಯಿದ ಅಳುಹಿದರೆ ಯಾ ಶ್ಲೋಕಾರ್ಥದ ಪಾಪಕ್ಕೆ ಹೋಹರೂ (ಎಕ. III (R), ಗುಂಡ್ಲುಪೇ. ೧೩೫-೩೬ ; 1402) ; ನಮ್ಮ ಬೂದಿಹಾಳಸೀಮೆಯ ಪಾರುಪತ್ಯಗಾಱ ಯುವರಾಜನ ತಿಮ್ಮಪಯನ ಳಿಹಿಸಿದ ಶಾಸನದ ಕೊಡಗಿಯ ಕಲ್ಲನು × × × ನೆಟ್ಟಿಸಿ ಕೊಟ್ಟೆವು (ಎಕ. VI, ಕಡೂರು. ೦೨೬-೦೦ : 1532). **ಪಾರಪತೆಗಾರ**: ರಾಜಶ್ರೀದೊರೆಗಳು ತಮ್ಮ ಹುಜೂರು ಸಾಮದೀರು ಪಾರಪತೆಗಾರ ಕಪಟಿ ಗವುಡ ಗ್ರಾಮಾನುಗ್ರಾಮಗಳ ಗವುಡರು (ಎಕ. XI, ಹೊಳಲ್ಕೆ. ೨೫-೬೦ ; 1665). **ಪಾರಪತ್ರೆಗಾಱ**: ಪಾರಪತ್ರೆಗಾಱ ಸಹ ವರುಸ ೧೪ ಮಾಱಗಳ್ಗೆಯು ವರ್ದನೆಯಾ × × ತಿಂಗಳು ೧೪ಕ್ಕೆ . . . ಆಚಂದ್ರಾರ್ಕವಾಗಿ ನಡಲುದು (ಎಕ. VI (R), ಶೃಂಗೇರಿ. ೦೬೨-೨೮ ; 1526). **ಪಾರವತ್ಯಗಾರ**: ಮಹಾಪಾತ್ರರು ಎಂಬ ಹೆಸರುಳ್ಳ ಅಧಿಕಾರಿಗಳು . . . ಪಾರಪತ್ಯಗಾರರ, ಲೆಕ್ಕಪತ್ರಗಳ ಸಂರಕ್ಷಕರ ಮತ್ತು ನಾಣ್ಯಸುವರ್ಣಪರಿಕರ ಕೆಲಸಗಳನ್ನೂ ಸಹ ನೋಡಿಕೊಳ್ಳುತ್ತಿದ್ದರು (ಕುಕುರು. ೬೫). **ಪಾರುಪತಿಗಾರ**: (೮). **ಪಾರುಪತ್ರೆಗಾರ**: ಮಹಾರಾಜಶ್ರೀಯವರ ಅಪ್ಪಣೆ ಪ್ರಕಾರಕ್ಕೆ ಜಗಣಿಸ್ಥಳದ ಅಧಿಕಾರ್‍ರು ಪಾರುಪತ್ರೆಗಾರ್‍ರು ಶಾನುಭಾಗರು ಗವುಡ ಜಗಣಿ ಪಂಚಾನನದವರು ಸಹ ಮಾನ್ಯದ ಭೂಮಿ × × × (ಎಕ. IX, ಆನೇಕ. ೯೦-೩; 1765); ಹೋಳೆಯ ದಡದಲ್ಲಿ ಇರುವುದು ನರಸಿಂಹಸ್ವಾಮಿಯ ದೇವಸ್ಥಾನ. ಇದರ ಪಾರುಪತ್ರೆಗಾರರು ಒಳ್ಳೆ ವಯಸ್ಸಾದವರು (ಗಮಕಾ. ೦೬೫). **ಪಾರುಪತ್ಯಗಾರ**: ತರೀಕಾಂಬೆಯ ಚಾವಡಿಗೆ ಚಿಕ್ಕ ಪಾರುಪತ್ಯಗಾರರು ಈ ಲೆಕ್ಕದಲ್ಲಿ ಉಳಿವಾಸಿಯಕ್ಕೆ ಕೊಟ್ಟು ಆಳ್ವಾರದೇವರ ರಥೋತ್ಸವನು ಆಚಂದ್ರಾರ್ಕಸ್ಥಾಯಿಯಾಗಿ ನಡಿಸಿ ಬಹಿರಿ ಎಂದು ಬಿಡಿಸಿ ಕೊಟ್ಟ ಧರ್ಮಶಿಲಾಶಾಸನ (ಎಕ. XIV, ಗುಂಡ್ಲುಪೇ. ೮-೦೩; 1520) : ಪಾರುಪತ್ಯಗಾರನಾಗಲಿ ... ಸುಂಕದ ಮಣೇಗಾರನಾಗಲಿ ಆರು ಇದಕ್ಕೆ ವಿಗಡ ಆಚರಿಸಿದರು ಅವರು ತಂದೆ ತಾಯಗಳ ವಾರಣಾಸಿಯಲಿ ಕೊಂದ ಪಾಪಕೆ ಹೋಹರು (ಎಕ. IX, ದೊಡ್ಡಬ. ೩-೨೦ ; 1590) ; ನೀನು ಅಡಿಗೆಮನೆಯ ಪಾರುಪತ್ಯಗಾರರಿಗೆ ಅಧ್ಯಕ್ಷನಾಗಿ . . . ಸುಖವಾಗಿ ಇರು (ಕೃಷಾ. ೦೬) : ಅವರು ದೇವಸ್ಥಾನದ ಪಾರುಪತ್ಯಗಾರರಾಗಿದ್ದರು (ಬಿಕಶಾ. ೦೦೪). **ಪಾರುಪತ್ಯೆಕಾಱ**: ಕಾಳಮಲ್ಲಿಕಾರ್ಜುನ ದೇವರು ಪಾರುಪತ್ಯಕಾಱ ಕೆಂಪನ ಲಿಂಗಣೊಡೆಯರು ದೇವರು ಕೂಡಿ ಕಟ್ಟಿದ ಭಾವಿಯ ಜೀರ್ಣೋದ್ಧಾರವನು ಮಾಡಿದರೂ (ಎಕ. IV (R), ಕಾಡುಗಾ. ೩೬೨-೯ ; 1540). **ಪಾರ್ಪತ್ರೆಗಾರ**: ನಾನೂ ಅಯ್ಯೋರೂ ಮತ್ತು ಪಾರ್ಪತ್ರೇಗಾರ್‍ರೂ ಮೂವರೂ ದೀವಟಿಗೆ ಹಿಡ್ಕೊಂಡು ಗುಡಿ ಮೂರು ಸುತ್ತ ಬಳಸಿ ನೋಡಿ (ಆಅದು. ೩೬). **ಪಾರ್ಪತ್ಯಗಾರ**: (ಶ್ರುಗಿಕೆ. IV, ೬೬೨).

[ ಪಾರುಪತ್ಯ + – ಕಾಱ ]

**ಪಾರುಪತ್ಯೆಕಾಱ** ' ಪಾರುಪತ್ಯಗಾಱ ' ನೋ.

**ಪಾರುಪ** ' ಪರ್ವ ' ನೋ.

**ಪಾರುಪಾಣ್ಯ**$_1$ ' ಪಾರಿಮಾಳ್ಯ$_1$ ' ನೋ.

**ಪಾರುಪಾಣ್ಯ**$_2$ ' ಪಾರಿವಾಳ್ಯ$_2$ ' ನೋ.

**ಪಾರುವಿಳಿ** (ನಾ). ನೊಗದ ಆ ಕಡೆ, ಈ ಕಡೆಗಳಲ್ಲಿರುವ ಹಗ್ಗ : ಪಾರುವಿಳಿಯ ಹಗಲೊಳು ಹೂಡಿ ನೊಗನನು ಸಾರಥಿಗಳನು ಸತ್ಕರಿಸಿ . . . ಪೂಜಿಮುಟ್ಟಿರಂದಾ ರಥೀಗು ರಥವೇಜು (ಶ್ರೀಚಾ. ೦೬-೬೦).

[ ಪಾರ್ರು + ವಿಳಿ ]

**ಪಾರುವೀಳೆಯ** (ನಾ). (ದೇವರು, ಅರಸರು ಹಾಗೂ ಅಧಿಕಾರಿಗಳ) ದರ್ಶನವನ್ನು ಮಾಡಿದವರಿಗೆ ಕೊಡುವ ಗೌರವತಾಂಬೂಲ ; ಬೆಳ್ಳಿಬಟ್ಟಲಂತಸೆವ ಸ್ವಪ್ನದ ಪಾರುವೀಳೆಯ[ಕಾಶಾಂ. ಳ್ಕ]ಗಳನು ಬಾದುರಗೆ ಡಿಳ್ಳೀಶ್ವರನೀಯೆ ಮಲ್ಲುಃಖಾನರು ತಳ್ಳಂ ಗೊಂಡರೆದೆಯೊಳು (ಕಂಠೀರಾ. ೦೬-೯೬). [ ಪಾರು$_1$ (<ಪಾರ್$_1$) + ವೀಳೆಯ ]

**ಪಾರುವೇಟೆ** ' ಪಾರಿವೇಂಟೆ ' ನೋ.

**ಪಾರುಶದ** (ನಾ). ರಾಜ, ದೇವತೆ ಮುಂತಾದವರ ಸೇವಕವರ್ಗ,– ಪರಿವಾರ : ನಾರದಾದಿ ಮುನೀಶ್ವರರ ಪರಿವಾರವೊಂದೆಸೆಗೊಂದೆಸೆಗೆ ನಿಜಪಾರುಶದ ಪರಿವಾರವಾ ಸುರವರರ ಪರಿವಾರ . . . ಪರಿವರಿಸಿರಲು (ಶಿಭಾಗ. ೬-೯-೩೨). [ <ಸಂ. ಪಾರಿಷದ ]

**ಪಾರುಷ್ಯ** (ನಾ). ೧. ಒರಟುತನ ; ಕಾಠಿಣ್ಯ. ೨. ನಿಷ್ಠುರತ್ವ : ಪಾರುಷ್ಯ ಎಂದರೆ ನಿಷ್ಠುರತ್ವ (ಛಾಶತ್ತ್ವ. ೦೫೦). ೩. ಕಠಿಣವಾದ ಮಾತು ; ಬಿರುಸುನುಡಿ : "ಪಾರುಷ್ಯ, ಅಶಿವಾದಃ – ೨ ಅಪ್ರಿಯವಾಗಿ ನುಡಿಯುವಿಕೆ" (ಸಿದ್ಧಾಂತಿ. ೩೬). ೪.ಬೃಹಸ್ಪತಿ. [ಸಂ.]

**ಪಾರೆ**$_1$, ಅರೆ$_1$, ಹಾರೆ (ನಾ). ನೆಲವನ್ನು ಅಗೆಯುವುದು, ಕುಟ್ಟುವುದು ಮುಂತಾದ ಕೆಲಸಗಳಿಗೆ ಉಪಯೋಗಿಸುವ ಕಬ್ಬಿಣದ ಒಂದು ಉಪಕರಣ ; ಗಡಾರಿ : ಕಡುಗಾಯ್ದ ಪಾರೆಯಿಂತುಂ ಸುಡಲರಿಯದು ಸತ್ಯಮುಳ್ಳನಂ ಪುಸಿವವನಂ ಸುಡುವುದು (ಧರ್ಮಾಮೃ. ೬-೦೫೦) ; ಆ ತನ್ನ ಶುಚಿತನಕ್ಕೆ ದಿವ್ಯಮಂ ಪಿಡಿವೆನೆಂದು ಪಾರೆಯಂ[ಕಾಶಾಂ. ಪಾಳವಂ] ಕಾಸುವ ಸಮಯದೊಳ್ (ಕುಮುದೇಸ್ತ್ರ. ೩-೬೮ ವ) ; ದೋಣಿಕ್ಕೆ ಡೆಗ್ಗೆವರ ಪಾರೆ ನೆಲಗುಮ್ಮ ಡೋಂಣಿ ಸಬಳ ಶರಗಳ ಸಂಕುಳವೆಯ್ದುತು ಕೊಲ್ಲಾರದೊಳಾ ಬಿಂಕಕಾರ್ತಿಯ ದಂಡಿನೊಳಗೆ (ಕುಮಾರಾಮ. ೯೦-೫೦). **ಅರೆ**$_1$ : ಚರಿತದಿಂದೊಂದುದ್ದವಾ[ಕಾಶಾಂ. ಬಾ]ರೆಯಂ ಪಿಡಿತಂದು ಪರಮವೈರಾಗ್ಯಯುಕ್ತಂ ಹರುಷದಿಂ ಬಂದು (ಪಾಂಗಿರ. ರೇ. ೨೬೯-೫). **ಹಾರೆ** : "ಹಾರೆ ಭೇದಿಯತ್ತುಂ" (ಶಂಕರಾ. ೦೦೯–೨); ಕೂರ್ಪುವತ್ತ ಧಾರೆ ಕೋರ ಹಾರೆಗಾಸಿ ಗುದದೊಳಿಟ್ಟು . . . ಸುಡುವರು (ಶಶಾಂಕ. ೬-೦೯೩); ಹಾರೆಯಾಕಾರದ ಚಂಡವೇಗೆಯ ರಾಯ ವೀರಭುಜದಿ ತೂಗಿ ನೋಡಿ ಪಾರುಪಾಣಿಯ ತೆಂಕಮುಖ ಮಾಡಿ ತೆಂಕಮುಖಾರವಿಂದಾಯತನಾದ (ಜಕ. ೨೯-೬೬); ಚಪ್ಪಡಿಕಲ್ಲನ್ನು . . . ಹಾರೆಯಿಂದ ಮೀಟಿ ಒಳಗೆ ಹೋಗಿ ನೋಡಲು ಒಂದು ಅಂಕಣದ ಚಿಕ್ಕ ಮನೆಯಾಗಿತ್ತು (ಜುಬ್ಬಜ. ೬೪).

[ದೇ.॥ ತಮಿ. ಪಾರೈ ; ಮಲ. ಕುವಿ. ಪಾರ ; ತುಳು. ಪಾರೆಂಗಿ ; ತೆಲು. ಪಾರ, ಪಾಱ; ಕೋತ, ತೊದ. ಪಾರ್]

**ಪಾರೆ**$_2$ (ನಾ). ಬಂಡೆ : ಆ ಪಾರೆಯನ್ನು ಹಳ್ಳದಲ್ಲಿ ತಳ್ಳುವುದಕ್ಕೆ ಅದರ ಕೆಳಗೆ ಡೊಗರು ತೋಡುತ್ತಾನೆ (ಕಥಾಮು. IV, ೮); ಪಾರೆಯನ್ನು ಹತ್ತಿ ಅದರ ಮೇಲೆ ಹೋಗಿ ನಿಂತರೆ, ಎಷ್ಟು ಚನ್ನಾಗಿ ಕಾಣುತ್ತದೊ ಸುತ್ತಲೆಲ್ಲ (ಕುಶೀಲ. ೨೪). [ದೇ.॥ ತಮಿ. ಪಾಱೈ, ಪಾರ್; ಮಲ. ಪಾಱ; ತುಳು. ಪಾಡೆ; ಕೊಡ. ಪಾರೆ ; ಪರ್ಜಿ. ಪಾರ]

**ಪಾರೆ**$_3$ 'ಪಹರೆ' ನೋ.

**ಪಾರೆ**$_4$ (ನಾ). ಶರೀರದ ಒಂದು ಭಾಗ ; ಅವಯವ : ವೆತ್ತರಂ ಕುಡಿದು ಸೀನೆನದೊರ್ಪಡಿಖಂಡಮಂ ಪತ್ತೆ ತೆಗೆದು ಫಣದೊಟ್ಟಿದ ಪಾರೆಯುಮಿಾರೆಯುಂ ತುತ್ತಿ ನುಂಗಿ (ಕಾವ್ಯಾವ. ೬೫೫).

[?. / ತುಳು. ಪಾರೆ=ಭುಜ]

**ಪಾರೆಯಂಬು** (ನಾ). ಹಾರೆಯಾಕಾರದ ಬಾಣ : ಒರೊಂದೆ ಪಾರೆಯಂಬಿನೊಳೊರೊಂದೆ ಗಜೇಂದ್ರಮುರುಳೆ (ಶಂಕರಾ. ೦೦–೬೦); ವಿಜಯನು ಅವರ ಮೇಲೆ ಕೆಂಗರಿಗಳ ಪಾರೆಯಂಬುಗಳನ್ನು ಎರೆದು . . . ಸುಶರ್ಮನ ತಲೆಯನ್ನು ಹಾರಿಸಿದನು (ಕಾಮುಕ. ೩೬). [ಪಾರೆ$_1$ + ಅಂಬು]

**ಪಾರಿವಾಯ್** (ನಾ). ಹಾರೆಯ ತುದಿ, — ಮೊನೆ: ಪಂದಿಯ ಪಿಂದನೆಯ್ದು ಪಿಡಿದಿಟ್ಟಿಯ ನೆಟ್ಟಿಱ ಪುಲ್ಲೆಯಂ ತೆಱಿಂದಂದೆಸು ಪಾರಿವಾಯ ಸರಲಿಂ (ಸುಕುಮಾ. ೨-೦೬). [ಪಾರ್, + ಬಾಯ್]

**ಪಾರೈಸು** 'ಪಾರಯಿಸು' ನೋ.

**ಪಾರೋಕ್ಷ** (ನಾ). ಕಣ್ಣಿಗೆ ಕಾಣದಿರುವುದು; ರಹಸ್ಯವಾದುದು: ಪಾರೋಕ್ಷವೆಂಬುದು ತಿಳಿವುದದು ಅಪರೋಕ್ಷವೆಂಬುದು ನೆಲೆಗೆ ಕಂಡದು ಬಳಿಕ ಪಾರೋಕ್ಷವದು ಅದು ಪಾರೆಯು (ಶ್ಯಾಕಸಂ. ೩-೩೧). [ಸಂ.]

**ಪಾರೋಡು** 'ಪಾಱಿಓಡು' ನೋ.

**ಪಾರ್ಶ್ವ$_1$** (ನಾ). ಭುಜಾಗ್ರ; ಅಂಸ; ಹೆಗಲು: ಸೂಸಿದ ಖಂಡ ಮುರುಳ್ದ ತಲೆ ಪಱಿದು ಕರಂ ಪಸರಿಸಿದ ಪಾರ್ಶ್ವ ಕರುಳೊಕ್ಕನುಮಿಟ್ಟ ದೆಣಂ ದಲೆತ್ತುವಾ ರಣರಂಗಂ (ಕೇಚಿತ್ರ. ೦೦-೦೫೯); ಬಾಣಘಾತದಿಂ ಪಾಱುವ ಪಾರ್ಶ್ವಗಳ್ ಪರಿದ ಪಣ್ದಲೆಗಳ್ . . . ಪಾಜಿ ಪಾರಣ ಪರೂಥಮುಸಂಚಿಸಿದತ್ತು ಸುತ್ತಲುಂ (ಸುಕುಮಾ. ೬-೦೦೯); ಅಲ್ಲಿ ಕಕುದ ಸಂಬಂಧಿಯಪ್ಪ ಪಾರ್ಶ್ವಗಳ್ಗೆ ಯಸಿಯ(ಅಂಸಮೆ)ಂಬ ಪೆಸರಕ್ಕುಂ (ಅಶ್ವಶಾ. ೩೬-೦೬). [<ಸಂ. ಪಾರ್ಶ್ವ]

**ಪಾರ್ಕು$_2$** (ನಾ). ವಿಹಾರಪ್ರದೇಶ; ಉದ್ಯಾನ: ಅವರು . . . ಭೇಟಿ ಕೊಡದ ಪಾರ್ಕುಗಳಿರಲಿಲ್ಲ (ಸೋಕುಗ. ೬೫). [←ಇಂ. Park]

**ಪಾರ್ಕೆ** (ನಾ). ಹಾರುವಿಕೆ; ನೆಗೆತ: ಲಂಘನಂ=ಒಣಗುಂ, ಪಾರ್ಕೆಯುಂ (ಶಾಶಳ. ೦೦); ಜಳಪರಿಪೀತವಾರಿದವುನಾನೆಗಳಿಂದು ತುದುಂಕು ಪಾನೆಗಳ್ಗಳಚಳನಂಗಳಿಂದೊಗೆದ ಪ್ಲಾಕಣಮಂ ಸೊದೆಗೆತ್ತು ನುಂಗುವಾ ಜಳಚರದಾ ಪರಿಸ್ಫುರಣಮುಂ ಬಿಗಿ ಮುತ್ತಿನ ಪಾರ್ಕೆಯಿಂದು ಕೈದಳಿ ಪಪುರೀಜನಂಗಳ ಬೆಡಂಗಿನೊಳೊಪ್ಪಿತು ಸಿಂಧುಬಂಧುರಂ (ಚಂದ್ರಕು. ೦-೬೨). [ಪಾರ್$_2$ (<ಪಾಱು$_1$) + — ಕೆ]

**ಪಾರ್ಖುವಣೆ** 'ಪಾರಖಾವಣೆ' ನೋ.

**ಪಾರ್ಗುಂಪೈ** 'ಪಾಱುಂಗುಂಪೆ' ನೋ.

**ಪಾರ್ಟಿ** (ನಾ). ೧. ಪಂಗಡ; ಪಕ್ಷ: ತಾನು ಕ್ರಾಂತಿಕಾರಿ ಪಾರ್ಟಿಗೆ ಸೇರಿದ್ದೇನೆ ಎಂದು ನಿನ್ನೆ ತಾನೇ ಆತ ಹೇಳಿದ (ಅಶ್ವತ್ಥ. ೬೬); ನಮ್ಮ ಹಳ್ಳಿಯಲ್ಲಿ ಹಿಂದೆ ಪಾರ್ಟಿಯಾಗಿ ಆದರ ಕಷ್ಟ ನಿಷ್ಠೂರಗಳನ್ನು ಅನುಭವಿಸಿ ಇತ್ತೀಚೆಗೆ ಒಂದೇ ಗುಂಪಾಗಿದ್ದರು (ಹುಚ್ಚಿಕ. ೬೦). ೨. ಸಂತೋಷಕೂಟ: ಗೆಳೆಯರ ಒತ್ತಾಯಕ್ಕೆ ಅನಂತ ಊರು ಮುಂದಿನ ಗುಡ್ಡದ ಮೇಲೆ ಪಾರ್ಟೀ ಕೊಟ್ಟನು (ಜೀವಾಕ.೨). [←ಇಂ. Party]

**ಪಾರ್ಟು** (ನಾ). ೧. ವಿಭಾಗ; ಖಂಡ; ಭಾಗ: ಈ ಪುಸ್ತಕವನ್ನು ಮೂರು ಪಾರ್ಟುಗಳನ್ನಾಗಿ ಮಾಡಿ ಪ್ರಕಟಿಸಲಾಯಿತು (ಜೂ). ೨. ನಾಟಕ, ಸಿನಿಮಾಗಳಲ್ಲಿ ನಟನಟಿಯರಿಗೆ ವಹಿಸುವ ಪಾತ್ರ: ಅವಳು ಮರಾಠಿ ನಾಟಕದಲ್ಲಿ ಬಹಳ ಚೆನ್ನಾಗಿ ಪಾರ್ಟು ಮಾಡುತ್ತಾಳೆ! (ಸ್ವಕೃತಿ. ೨೫೮); ರಾಧಾ ನಾಟಕದಾಗ ಕೃಷ್ಣನ ಪಾರ್ಟ ಇದ್ದಾಂಗ ಕಾಣ್ತದ ನಿಂದು? (ಅಮ್ಮಟ. ೦೬). [←ಇಂ. Part]

**ಪಾರ್ಥ** (ನಾ). ೧. ದೊರೆ; ರಾಜ. ೨. ಪೃಥೆಯ ಮಗ; ಅರ್ಜುನ: ಇದು ಚಕ್ರವ್ಯೂಹಮಿ ವ್ಯೂಹಮನೊಡೆವದಟಂ ಪಾರ್ಥಂ (ಕುಂಹೊ. ೦೦-೯೬): ಉರಗೇಂದ್ರಲೋಕಮಂ ಪೊಕ್ಕುರಗರೋಳಿಱಮುರಗಪತಿಯ ನಿಜಸುತೆಯೊಡನಾದರದಿಂ ಜಯಲಕ್ಷ್ಮಿಯೊಳೊಡವೆರೆದಂ ಕೀರ್ತಿಯೊಳಮೊಂದೆ ಪಸೆಯೊಳೆ ಪಾರ್ಥಂ (ಗದಾಯು. ೨-೯೨); ಸಂಹರಿಸು ಮುತ್ಪರಿಭವವನೆಂಮುರುತರವ ಭಕ್ತಿಯಲಂದು ಸೈಗೆಡೆದಿರ್ದನಾ ಪಾರ್ಥ (ಕುಮ್ಯಾಭಾ. ೬-೯೬). ೩. ಒಂದು ನಕ್ಷತ್ರದ ಹೆಸರು: ಪಾರ್ಥನನ್ನು ಗುರುತಿಸಲು ಸಮತ್ರಿಕೋನಾಕಾರದ ಮೂರುನಕ್ಷತ್ರಗಳು ಸಹಾಯಕವಾಗುತ್ತವೆ (ಚಕ್ಷಕ್ಷ. ೨೯). [ಸಂ.]

**ಪಾರ್ಥಕುಮಾರ** (ನಾ). ಅರ್ಜುನನ ಮಗ; ಅಭಿಮನ್ಯು: ಶಿವಶಿವ ನುಡಿಪ ೬ವಿ ಯಾರಿನ್ನು ಪಾರ್ಥಕುಮಾರನಾಹವದ (ಕುಮ್ಯಾದ್ರೋ. ೬-೬). [ಪಾರ್ಥ + ಕುಮಾರ]

**ಪಾರ್ಥಜ** (ನಾ). ೧. ಅರ್ಜುನನ ಮಗ. ೨. ಅಭಿಮನ್ಯು. ೩. ಬಭ್ರುವಾಹನ: ಪಾರ್ಥಜನ ಶರವರ್ಷದೊಳ್ಮೆಯಿಂದುಂಬಿಲ್ಲ ಪಾಂಡವನ ಪರಿವಾರದೊಳ್ (ಕೈಜೈಮಾ. ೨೨-೩೮): ಚಿತ್ರಾಂಗದೆಯು ೬ಲೀಬರುವಿರ್ದ ಶಿಬಿರೆಯೆಡೆ ಪಾರ್ಥ ಪಾರ್ಥಜವಿರ್ಪರಿಂ ಕಾಣ್ಬುತಗೆಬೀಂದೆ ಸಾರ್ದರ್ (ಕಶ್ಯಾಗ. ೯೯-೨೪೪೬). [ಸಂ.]

**ಪಾರ್ಥಿ** (ನಾ). ೧. ಅರ್ಜುನನ ಮಗ. ೨. ಅಭಿಮನ್ಯು: ಹರನ ಸಮಸಪ್ತಾಲಿ ಪಾರ್ಥಿಯು ಸರಳ ಕಿಡಿಯುಲಿ ಪಲ್ಲಟಿಸಿ ಸಂಗರದೊಳಗೆ ಸ್ವೈವರಿದು ಸದೆದನು ಸಾಲಸೈನಿಕರ (ಕುಮ್ಯಾದ್ರೋ. ೬-೨). ೩. ಬಭ್ರುವಾಹನ: ಎನ್ನ ವಿಕ್ರಮವನೀಗ ನೋಡೆನುತೆದ್ದು ಕರೆಸಿದಂ ಪಾರ್ಥಿ ನಿಜಸೈನಿಕವನು (ಕೈಜೈಮಾ. ೨೯-೨೮). ೪. ಮೈತ್ರಿಯ ಮರ. [ಸಂ.]

**ಪಾರ್ಥಿವ** (ಗು). ೧. ಪೃಥ್ವೀ ಸಂಬಂಧವಾದ; ಭೌತಿಕವಾದ: ಭೂಮಿಗೆ ಸಂಬಂಧಿಸಿದ: ಈ ಅನಂತ-ಕೋಟಿ-ಬ್ರಹ್ಮಾಂಡದ ಅನಂತ ಅಸ್ತಿತ್ವದ ಹಿನ್ನೆಲೆಯಲ್ಲಿ ವಿಮರ್ಶಿಸಿದಾಗ ಹೊಳೆದೀತು ನಮ್ಮೀ ಕ್ಷಣಭಂಗುರವಾದ ಪಾರ್ಥಿವ ಜೀವನವನ್ನು ನೋಡುವ ದೃಷ್ಟಿ (ಮಾನವಜಾ. ೨೦೬). ೨. ಭೂಮಿಯನ್ನು ಆಳುವ; ಅರಸುವಂಶದ: ಪಾರ್ಥಿವ ಚೂಡಾರತ್ನಂ ತೀರ್ಥಂಕರೇಂದ್ರಪದಪೂಜಕಳಂ ಪ್ರಾಪ್ತಾನೇಕಾರ್ಥಂ ಪರಿಪಾಳಿತಬುಧಸಾರ್ಥಂ ಸಿದ್ಧಾರ್ಥನೆಸೆದೊಳತ್ತೆ ಕೃತಾರ್ಥಂ (ವರ್ಧಕ. ೦೬-೩೯). ೩. ಇಹಲೋಕಕ್ಕೆ ಸಂಬಂಧಿಸಿದ; ಐಹಿಕವಾದ: ಪಾರ್ಥಿವ ಪರಿಮಿತಿಯಲ್ಲಿ ಮುಂದುಡಿ ಹೋಗದಂತೆ. . . ಅನಂತತೆಯು ಬಿದಾಸಂದವ ಆಸೆ ಪುಟ್ಟಿಸಿದ್ದು ಈ ಸ್ವಪ್ನಲೋಲತೆ (ದೀಕ್ಷ. ೨). (ನಾ). ೪. ಪೃಥ್ವಿಗೆ ಸಂಬಂಧಿಸಿದುದು; ಭೌತಿಕವಾದುದು: ನಾಟಕವು ನಾಟಕಕಾರನ ಸಂತಾನವು. ಅವನ ಭಿನ್ನತೆಯು ಪಾರ್ಥಿವವಾಗಿದೆ (ಕೃತಿಂದ ೯೦). ೫. ಭೂಮಿಯನ್ನು ಆಳುವವನು; ರಾಜ: "ರಾಜಾ, ರಾಜನ್ಯ: . . . ಪಾರ್ಥಿವ:, ನರದೇವ:, ಲೋಕಪಾಲ: — ಈ ೧೨ ಅರಸು" (ಹಲಾಯು. ೬೯-೨೬೬); ಅವಲೋಕಿಪುದುಂ ನವವನಜ ವಲ್ಲಿಗೆಜಿಗುಪ ರುಷಮೃಯುಂಗಳಿವೆನೆ ಪಾರ್ಥಿವನ ನಯನಂಗಳೆಜಿಗಿದು ನವಮುವದಿಂ ನಿಂದ ಗಾಯಿಕಾಮುವತಿಯರೊಳ್ (ಕಾಂತಿಪ್ರ. ೬-೩೬); ಇಱುಯದೆ ಬೇಡಿದೊಡೀಯದೆ ಬಱದೆ ಕುಲೀನತೆಗೆ ಬೆಸದ ಪಾರ್ಥಿವ ಶಬ್ದಕ್ಕೆಱಿಪಟ್ಟನಿಸಿ ಧರಿತ್ರಿಗೆ ಪೊಱೆಯೆನಿಪಂ ರಾಜನಾಮಧಾರಕನಲ್ತೇ (ಕಂಚಾರ. ೯-೯೦). ೬. ಶಿವ; ಈಶ್ವರ. ೭. ಮಣ್ಣಿನಲ್ಲಿ ಹುಟ್ಟಿದುದು; ಮರ, ಗಿಡ ಮೊದಲಾದುವು. ೮. ಆಕಾಶ: "ಶಿತಿಕಂಠ ಭೂಪ ಸಭ ಮಾರಮಿತಿ ನಾಲ್ಕುಂ ಪಾರ್ಥಿವಾಖ್ಯೆಮೆನಿಸಿಂ ಜಗದೊಳ್" (ನಾಮಾಕಂ. ೬೩). ೯. ಅರುವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆಯ ಸಂವತ್ಸರದ ಹೆಸರು: ಆ ಪರಾಭವ ಪ್ಲವ ವಿಭವ . . . ಪಾರ್ಥಿವ . . . ಅಕ್ಷಯವೆಂಬಱವತ್ತು ತೆಱನಾಗಿಹುವು (ಚತೀ. ೩೨೦). ೧೦. ಮಣ್ಣಿನ ಪಾತ್ರೆ; ಗಡಿಗೆ. ೧೧. ದೇಹ; ಒಡಲು. [ಸಂ.]

**ಪಾರ್ಥಿವಕುಲ** (ನಾ). ರಾಜಮನೆತನ; ಅರಸುವಂಶ: ಶಾಂರ್ಥಾಭಿಪಿಕ್ತ ಪಾರ್ಥಿವಕುಲಪ್ರಸೂತರುಂ ವಿನಯೋಪಪನ್ನರುಂ ಕೋವಿದರುಂ . . . ಪೂಜಿಗೆ ತುರಗಾರೂಢರ್ ಪ್ರಣಾಮಲಾಲಸರಾಗಿ ಬಾಗಿಲೊಳ್ ಪಾರ್ಥಿವರ್ (ಕಾದಂಪೂ. ೯೩೦); ಸರ್ವಂಸಂಜಾತ ಪಾರ್ಥಿವಕುಲ ಪವಿತ್ರವಂಶಸಂಭವಶ್ರೇಷ್ಠ! (ಕಶ್ಯಾಗ. ೬೬-೯೯೦). [ಪಾರ್ಥಿವ + ಕುಲ]

**ಪಾರ್ಥಿವಗುಣ** (ಗು). ೧. ಪೃಥ್ವಿಯ ಸಂಬಂಧವುಳ್ಳ; ಭೂಗುಣವುಳ್ಳ. ೨. ರಾಜಯೋಗ್ಯವಾದ ಗುಣದಿಂದ ಕೂಡಿದ ಕ್ಷತ್ರಿಯ ಗುಣದಿಂದ ಕೂಡಿದ: ಪ್ರಿಯಂಗಿಂದೋಂದೆಡೆಯಿರವಂ ಬಯಸಿದ ಶೌರ್ಯಾದಿಸಕಲಪಾರ್ಥಿವಗುಣಸಂಚಯಮದರ್ಥಿಸದಿಂದಾಶ್ರಯರೂಪಸನಾ ವಹೀಸನು ಬಿದಿ ಪಡೆವಂ (ಕುರ್ತ್ರ‍ತಿ. ೩–೨೪). (ನಾ). ೩. ಪೃಥ್ವಿಯ ಸಂಬಂಧವುಳ್ಳುದು; ಭೂಗುಣದಿಂದ ಕೂಡಿದುದು. ೪. ರಾಜಯೋಗ್ಯಗುಣದಿಂದ ಕೂಡಿದವನು; ಕ್ಷತ್ರಿಯಗುಣದಿಂದ ಕೂಡಿದವನು. ೩. ೪: ಪಾರ್ಥಿವಗುಣಾಯುಃತಪಾಗಿಯುಮರ್ಥಿತ ಫಲದಾಯಿಯಾಗಿಯುಂ ನಿನ್ನೊಳ್ ತಾಂ ಪ್ರಥಿತೆಯುಂ ಪಡೆಗುಂ ಪರಪಾರ್ಥಪತೀತನತೆಯಿಂದ ಕಲ್ಪಕುಜಾತಂ (ಶಂಠಾ. ೩–೪೪).

[ಪಾರ್ಥಿವ + ಗುಣ]

**ಪಾರ್ಥಿವತ್ವ** (ನಾ). ಮಣ್ಣಿನ ಗುಣದಿಂದ ಕೂಡಿದುದು: ಅರಸು ಗುಣಕ್ಕಾಗರವಾದರಸನೆ ಪಾರ್ಥಿವನದೊಂದುಮಿಲ್ಲದೆ ಬೆಸದಿರ್ಪರರಸನಂ ವ್ಯಕ್ತಿಂತಸ್ವರೂಪದಿಂ ಪಾರ್ಥಿವತ್ವಮಂ ಪ್ರಕಟಿಸುಗುಂ (ಕಾವ್ಯಂಶ್ರ. ೩೦೦).

[ಸಂ.]

**ಪಾರ್ಥಿವಪುತ್ರ** (ನಾ). ೧. ರಾಜಪುತ್ರ; ಕ್ಷತ್ರಿಯ ಕುಮಾರ: ಕುಂವರಿಯ ಕವಚದೊಳ್ ಬರ್ಪ ಪಾರ್ಥಿವಪುತ್ರಸಾರ್ಥಮುಂ (ಕಂವ್ರತಿ. ೭–೬೦ ವ). ೨. ಸೂರ್ಯ.

[ಪಾರ್ಥಿವ + ಪುತ್ರ]

**ಪಾರ್ಥಿವಶರೀರ** (ನಾ). ೧. ಜಡಶರೀರ; ಭೌತಿಕವಾದ ದೇಹ: ಸತ್ವಸಾಪ್ರೀತಿನಂ ಧನ್ಯನೆನಿಸಿಲ್ಲಿಗ್ಯವ್ಯಾಕ್ಷೆಳಿಸಿ ಸಂಪಿಸಿ ಆ ಜರಾಜರ್ಜರಿ ಪಾರ್ಥಿವಶರೀರಮಂ ಅನಾಯಾಸಂ ಘಾಟಿಸಿದರೇನಂತೆ! (ಅಮಶಂ. ೦೬ ೯): ಅವರ ಆತ್ಮವು ಪಾರ್ಥಿವಶರೀರದ ಬಂಧನವನ್ನು ತೊರೆದು ಹೋಟು . . . ಹೋಗಿರಬೇಕು (ಸಂಗೀತ. ೨೪). ೨. ಶವ; ಹೆಣ: ಶ್ರೀಶಂಕರ . . . ಪಾರ್ಥಿವಶರೀರವನ್ನು ಎಲ್ಲ ಸಮಾಜದವರು ತೇರು ಕಟ್ಟಿ . . . ಶಂಕರ ತಂದೆಯ ಸಮಾಧಿಯ ಜೊತೆಗೆ ಅಂತ್ಯವಿಧಿಯನ್ನು ಒಳ್ಳೆ ವಿಜೃಂಭಣೆಯಿಂದ ಮುಗಿಸಿದರು (ಕಂಇಶ. ೭೯ ಶಂಕರಾತ್ಮಕನಚರು).

[ಪಾರ್ಥಿವ + ಶರೀರ]

**ಪಾರ್ಥಿವಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಹತ್ತೊಂಬತ್ತನೆ ಯದು: ಕಳಚುರಿಚಕ್ರವರ್ತಿ ಭುಜಬಳಮಲ್ಲದೇವ ವರ್ಷದ ಹತ್ತನೆಯ ಪಾರ್ಥಿವಸಂವತ್ಸರದ ಶ್ರಾವಣ ಬಹುಳ ದ್ವಾದಶಿ ಬೃ[ಬ್ರ]ಹಸ್ಪತಿ ವಾರದಂದಿನ ವ್ಯತಿಪಾತ ಪರ್ಬ್ಬ ನಿಮಿತ್ತದಿಂ (ಕಅಶ್ಮಾ ೫೨.೦೨–೦೪: 1165); ದಂಡನಾಯಕರುಂ ಸಮಸ್ತಕರಣಂಗಳುಂ ಪಾರ್ತ್ಥಿವಸಂವತ್ಸರದಾಷಾಢ ಬಹುಳನವಮಿ ಮಂದವಾರ ದಕ್ಷಿಣಾಯನಸಂಕ್ರಾಂತಿಯಲು . . . ಧಾರಾಪೂರ್ಬ್ಬಕಂ ಕೊಟ್ಟರು (ಕಅಶ್ಮಾ೫೩. ೦೪–೩೯: 1166).

[ಪ್ರಾರ್ಥಿವ + ಸಂವತ್ಸರ]

**ಪಾರ್ಥೇನಿಯಂ** (ನಾ). (ಬೆಳೆಗಳಿಗೆ ಕಳೆಯಾಗಿರುವ) ಒಂದು ಕೀಳು ಬಗೆಯ ಸಸ್ಯ: ಈಚೀಚೆಗೆ ಕಂಡ ಕಡೆಯಲ್ಲೆಲ್ಲಾ ಪಾರ್ಥೇನಿಯಂ ಬೆಳೆ ಹೆಚ್ಚುವೆ (ಪ್ರಜಾ). [←ಇಂ. Parthaneum]

**ಪಾರ್ದನ** 'ಪಾಡ್ದನ' ನೋ.

**ಪಾರ್ಪತ್ತೆಗಾರ** 'ಪಾರುಪತ್ಯಗಾರ' ನೋ.

**ಪಾರ್ಪತ್ಯ** 'ಪಾರುಪತ್ಯ' ನೋ.

**ಪಾರ್ಪತ್ಯಗಾರ** 'ಪಾರುಪತ್ಯಗಾರ' ನೋ.

**ಪಾರ್ಪಾಲಿ** (ನಾ). ಒಂದು ಬಗೆಯ ಸಸ್ಯ: ಪಾರ್ಪಾಲಿ. ಕೊಡಚಿ. ಗುಲ್ಚಿ (ವೈಶಿ. ೭೯–೧೭೭೩). [?]

**ಪಾರ್ಶ್ವ** (ನಾ). ನೋಟ; ದರ್ಶನ: ಏನ್ ನೋಸ್ತ ನೋಸ್ವಿಯೋ, ಏನ್ ಪಾಸ್ತ ಪಾಸ್ವಿ (ಕೂಂಗೀಪ. ೩೯–೦೦). [ಪಾರ್$_1$ + − ವು$_8$]

**ಪಾರ್ಬ** 'ಪಾರ್ವ' ನೋ.

**ಪಾರ್ಬಣ** (ನಾ). ಪರ್ವಕಾಲದಲ್ಲಿ ಪಿತೃಗಳಿಗೆ ತರ್ಪಣ ನೀಡುವ ಕ್ರಿಯೆ,—ವಿಧಿ; ಅಮಾವಾಸ್ಯೆಯ ದಿನ ಮಾಡುವ ಶ್ರಾದ್ಧ: ಪರ್ವಶ್ರಾದ್ಧ: ಕಳುಹಿ ಪಾರ್ಬಣಯೋಗ್ಯ ಮಾಂಸಂಗಳನು ರಾಜಾಲಯಕೆ ವನದಲಿ ಸುಳಿದು ಮೃಗಯಾವ್ಯಸನದಲಿ ವರನೃತ್ಯಗೀತದಲಿ ಬಳಲಿ ಬಸವಳಿವುತ್ತ ಹೋದನು ಫಲುಗುಣಾನು (ಕಅಗ. ೦೦–೬೮–೨೩).

[<ಸಂ. ಪಾರ್ವಣ]

**ಪಾರ್ಬಿಕೆ** 'ಪಾರ್ವಿಕೆ' ನೋ.

**ಪಾರ್ಲಿಮೆಂಟು** (ನಾ). ರಾಷ್ಟ್ರದ ಕೇಂದ್ರಸರ್ಕಾರಕ್ಕೆ ಸಂಬಂಧಿಸಿದ ಪ್ರಮುಖಪಟ್ಟಣಗಳ ಪ್ರಜಾಪ್ರತಿನಿಧಿಗಳನ್ನೊಳಗೊಂಡ ಪ್ರಧಾನ ಸಭೆ; ಲೋಕಸಭೆ; ಕೇಂದ್ರಸಂಸತ್ತಿನ ಉಭಯಸಭೆಗಳಲ್ಲಿ ಒಂದು: ಬ್ರಿಟಿಷ್ ಪಾರ್ಲಿಮೆಂಟಿನ ಉದ್ದೇಶ ನಮ್ಮನ್ನು ಹಿಂದಿನ ಅಂಧಕಾರದಲ್ಲೇ ತೊಳಲಿಸಬೇಕೆಂದು ಇರಲಿಕ್ಕಿಲ್ಲ (ಶಾಕಿರ. ೪೨೬).

[←ಇಂ. Parliament]

**ಪಾರ್ವ, ಪಾರುವ, ಪಾರ್ಬ, ಹಾರವ$_1$, ಹಾರುವ$_1$, ಹಾರ್ವ** (ನಾ). ವೇದ ಮೊದಲಾದ ಧರ್ಮಗ್ರಂಥಗಳನ್ನು ಓದಿ ತಿಳಿದಿರುವವನು; ಬ್ರಹ್ಮಜ್ಞಾನಿ; ಬ್ರಾಹ್ಮಣ: "ಪಾರ್ವರೆನಲ್ ದ್ವಿಜರ್ಗಳ್" (ಶಬ್ದಾರ. ೫೬); ಆ ಧರ್ಮ್ಮಕ್ಕೆ ಬಕ್ಕ ಬಪ್ಪೊಂ ಬಾರಣಾಸಿಯುಂಳ್ ಸಾಸಿರ್ವ[ರ್] ಪಾರ್ವ್ವರುಂ ಸಾಸಿರಂ ಕವಿಲೆಯುಂ ಕೊಂದ ಪಾತಕನಕ್ಕೆ (ಪೈಅಾ. ೦೯೩೩, ೩೩–೩೭: ಸು. ೭೭೦); ಪದಿನೆಂಟುಂಧರ್ಮಶಾಸ್ತ್ರಂಗಳುಮಂ ಬಲ್ಲೊಂ ಸೋಮಶರ್ಮನೆಂಬೊಂ ಪಾರ್ವಂ (ವಡ್ಡಾರಾ. ೬೩–೦೫); ಪರಮಗ್ರಾ ಪಾರ್ವ[ಪಾಠಾಂ. ರ್ಬ]ರ್ಗ್ಗನಿವರಸರ್ಗ್ಗ ಕುಡಿಯರಪ್ಪ ನಾಲ್ವರ್ಗ್ಗಗಳ್ ಸ್ವರಗೋಪಾಧ್ಯಾಯರ್ಕ್ಕ ಪರಿಪಾಲಿಕ್ಷೇತ್ರಸರ್ಪಣಂಗಳ್ಕಿರಿಯೋಗಳ್ (ಶಂಠಾ. ೦ ೬೪); ಪಾರ್ವನೆಂದೆನ್ನೊಳ್ ಪುಸಿದು ಮಿರ್ದ್ದುಂ ಕೈಕೊಂಡುದರ್ಕೆ ಪಡಂ ಪೆಜಿಕ್ಕಿಲ್ಲ (ಶಾಕಶಾ. ೦–೦೦೫೫); ಪರಿದಿಬ್ಬಂದಂತಕನೊಳ್ ಪಾರ್ವರ ಪಿಳ್ಳೆಯ ಪೋದ ಜೀವಮುಂ ತಂದುಂ (ಗದಾಯು. ೨–೩೫). **ಪಾರುವ**: ಪುರದೊಳಗಣ ಪಾರುವರೆಲ್ಲರುಮುಂ ಮಾತ್ರನ್ನಸಮುದಿಗಳುಮಂ ಎಳ್ಳರ್ ಭರದಿಂದಮಂ ಕಂಡು ಸುವರಮೋಕ್ಷಂ ಸಿಕ್ಕಿದ್ದ ಕೊಲೆ ತಗುಳರ ಕೈಯೊಳ್ (ರಮಾಕ್ಕ. ೯–೬೩); ಕಾದಿ ಉಲು ಮರ ತೊಗಡಿಗಳ ಪುಡುಕಿ ತತ್ವಸಂಬೋಧೆಯಿಲ್ಲದೆ ಕೃಪಣ ಶಿಶ್ನೋದರಂಗಳಂ ಸಾಧನಂಗೈವ ಪಾರುವರೆಸೆಪುಸ ಕಲಿಯೊಳು (ಪಂಕಾರಾ. ೩–೨೨–೨೩); ಆ ಪಾರುವಂ ಗುರಿಗಟ್ಟಿ ಸೂಸಿದ ಪುಣುಂಬುಗಳ್ಪಾಮುಂಗೆ ಕಪಿಗಳಂತೆ ಪೇರೊಲವನಾಂತು (ಶಃಕರಾ. ೦೯–೩೫). **ಪಾರ್ಬ**: ಧಮ್ಮ ಸಬ್ಬುಗದಿಂದ ಕಡೆಹೋದೆವು ಕೊಂದು ಪಾರ್ಬನನೆಳೆದು ಹಾದ್ಮಲು (ಬಸಶ್ರ. ೩೩–೪೦). **ಹಾರವ$_1$**: ಕೌರವರ ಪತ್ತಿರ ಬಾರಿದ್ದಾರೆ? ಕೆಲವರು ಪಂಚಾಂಗದ ಹಾರವರು; ಉಳಿದವರು ಮುಂಡಕರು (ಸಿಶಂ೩೦. III. ೩೦); ಅಭ್ಯಾಸವಿಲ್ಲದ ಪಾರವ ಅಗ್ನಿಕಾರ್ಯ ಮಾಡಿದರೆ ಗಡ್ಡ ಮೀಸೆ ಹೊತ್ತಿತು (ಗಾದೆ). **ಹಾರುವ$_1$**: ಅನಾಗತಕೋಟಿ ಕಾಲಂಪರ್ಯಂತಕಮಂ ದ್ವಿಜರ್ಗೆಗೊಟ್ಟುದಜಿಂವಮುವಗ್ರಹಾರವಾ ಹಾರುವ ರಿಂದ ಮಾಡಿ × × ದೆ (ಎಕ. VIII, ಸಾಗರ. ೦೦೯–೩೪: 1079); ಹಾಸನಿಕ್ಕಿ ಸಾಲಿಗನಾದ ವೇದಪಾರನೋದಿ ಹಾರುವನಾದ (ಬಸವ. ೫೪೦); ತಿಂದ ಹಾರುವರೊಡನೆ ಭೂಮಿಮೈತ್ರರಿಗೆತ್ತಣ ಮೈತ್ರಿ (ಸಂಶಶಂ. ೦೬–೮೨); ಹಾರುವನು ಉಪಕಾರಿ ಹಾರುವನು ಅಪಕಾರಿ ಹಾರುವನು ತೋರ್ವ ಬಹುನಾರಿ ಮುಂದಿರೆ ಹಾರುವನೆ ಮಾರಿ (ಸರ್ವಜ್ಞ. ೦೦೦೪). **ಹಾರ್ವ**: ಸೀನು ಔಷಧಿಯನ್ನು ಕೊಟ್ಟು ಗುಣ ಮಾಡೆನುತ ಹೀನ ಹಾರ್ವಗೆ ಮೇಳಿ ಒಪ್ಪಿಸುತ ಪೋದ (ಶರೀರಿ. ೪೦೦–೭); ಆ ಹಾರ್ವನು ಪಾಪ ಹಸಾ ಕೊಟ್ಟವನು (ಹೂಬಿಸ. ೭೨).

ಹಾರ್ವರ ಬಲ್ಲಹ, ಹಾರ್ವರ ಬಲ್ಲಹ–ಬ್ರಾಹ್ಮಣರ ಮುಖ್ಯಸ್ಥ : ಒಂದು ಬಿರುದು : ಉತ್ತರಾಯಣಸಂಕ್ರಾಂತಿಪರ್ವನಿಮಿತ್ತಂ ಮಹಾಪ್ರಭು ಹಾರ್ವರ ಬಲ್ಲಹಂ ಬಸವರಸ ಮುಖ್ಯಪ್ರಭುಗಳ ಸಂನಿಧಾನದಲು ಸರ್ವನಮಸ್ಯವಾಗಿ ಧಾರಾಪೂರ್ವಕ ಮಾಡಿ . . . ಬಿಟ್ಟ ವೃತ್ತರು ೧೨ (ಕ.ಶಾ.ಶಾ. ೦೮-೫೫ ; 1835); ಸುಮಾರ್ಗ್ಗಿಯುಂ ಮೇದಿನಿ ಮೆದಲಿಂದೆ ಬಣ್ಣಿಪುದು ಹಾರ್ವರ ಬ್ಯಾಹ ಮಲ್ಲಿದೇವನು (ಕೊಲ್ಲಾ.ಶಾ. ೦೮-೫೫: 1835). ೬ ಕೆಲವು ಸ್ಥಳನಾಮಗಳಲ್ಲಿರುವ 'ಹಾರೋ' ಎಂಬ ಪೂರ್ವಪದವು 'ಹಾರುವರಿಗೆ ಸಂಬಂಧಪಟ್ಟ' ಎಂಬ ಅರ್ಥವನ್ನು ಸೂಚಿಸುತ್ತದೆ. ಉದಾಹರಣೆ–ಹಾರೋಗದ್ದೆ = ಹಾರುವರ ಗದ್ದೆ, ಹಾರೋಹಳ್ಳಿ = ಹಾರುವರ ಹಳ್ಳಿ.

[ <ಪಾರ್$_1$. / ತಮಿ. ಪಾರ್, ಪಾರ್ಪ್ಪನನ್, ಪಾರ್ಪ್ಪಾನ್; ಮಲ. ಪಾರ್ಪ್ಪನ್; ಕೊಡ. ಪಾರುವ; ತೆಲು. ಪಾರುಂಡು, ಪಾರುವಾಂಡ್ಲು]

**ಹಾರ್ವಂತಿ, ಪಾರ್ವತಿ$_1$, ಪಾರ್ವಿತಿ, ಹಾರವಿತ್ರಿ, ಹಾರುವಿತಿ, ಹಾರುವಿತ್ರಿ** (ನಾ). ಬ್ರಾಹ್ಮಣ ಹೆಂಗಸು; ಬ್ರಾಹ್ಮಣನ ಹೆಂಡತಿ: ಸೋಮಶರ್ಮನೆಂಬೊಂ ಭಟ್ಟನಾತನ ಹಾರ್ವಂತಿ ತ್ರಿವೇದಿಯೆಂಬೊಳ್ (ಕನ್ನಾ.ಶಾ. ೦೨-೦೦); ಅಗಳ್ ಸಾಹಸಭೀಮಂ . . . ಪಾರ್ವಂತಿಯುಂ ಪಾರ್ವನುಂ ಪರಸಿ ಸೇಸೆಯನಿಕ್ಕಿ ೯೪೮ ಪೊಬಲಿ ಬಂದಿಯುಂಪಟ್ಟಿಕೊಂಡು ರಣ್ಯಪಾದಡೆಗೆಯ್ಯಂದು (ಪಂಪಭಾ. ೬-೫೬ ಪ); ಅಶೋಕದತ್ತನೆಂಬ ಹಾರ್ವನ ತಲೆಯಿಂ ಹಿಡಿದು ಕೊಲ್ಸುದುಂ ವಿನೋದಂ ತನ್ನ ಹಾರ್ವಂತಿಯು ದುಶ್ಚರಿತ್ರವನಜಂ ಪನವೃದಯನಾಕೆಯ ಬಟ್ಟೆಯನೆ ಬಂದುಬಿದಿರ್ದ್ದು (ವಡ್ಡಾರಾ. ೦೫-೪೯ ಪ). **ಪಾರ್ವತಿ$_1$** : ಕೇಳಿನ್ನ ಪುದಿಯು ಪಾರ್ವತಿಯೆನಿಪ್ಪವರು ಬಾಲರುಂಬವರೊಳಗೋರ್ವ ಹಾಳೊಡಲಿನ ಭೀಮಂ (ಕಬ್ಬಿಗಂ. ೨೬-೦೨೪); ಅರಸಿ, ಪಾರ್ವತಿ, ಒಕ್ಕಲಿತಿ, ಸೆಟ್ಟಿತಿ (ಕ.ಶಾ.ಕು. ೨೦೨ ಪ್ರಯೋ). **ಪಾರ್ವಿತಿ**: ಶುಕನಾಸ ಮಂತ್ರಿ ಸಂಭಾವಿತಮಪ್ಪ ಪಾರ್ವಿತಿ ಮನೋರಮೆಗಿತ್ತು ಭವತ್ಪ್ರಸಾದದಿಂದೀ ವರಲಗ್ನದೊಳ್ ತನಯನತ್ಯಧಿಕೋತ್ಸವವಾಗೆ ಪುಟ್ಟಿದಂ (ಕಾದಂಭ. ೪೨೩); ಭಾರದಿಲನೆಂಬ ಪುರೋಹಿತಂಗಪಾತನ ಪೆಂಡತಿ ಪೃಷ್ವತಿಯೆಂಬ ಪಾರ್ವಿತಿಗಂ ಪುಟ್ಟಿದ ಮಗಂ . . . ಪೆವ್ಸದಾದಂ (ಧರ್ಮಾಮೃ. ೬-೨೦೪); ಅತನ ಪಾರ್ವಿತಿ ಪಾರ್ವತಿಯುನ್ನಳಪ್ಪ ಚಿನ್ನದೊಂದುದಿನಂ ಪಸರನಂಗೊಂಡು ತನ್ನಡಿಯು ನೋಡುತ್ತಪ್ಪವಿರೆ (ಕಬ್ಬಿಗ. ೦೯-೬೪). **ಹಾರವಿತ್ರಿ** : ಅತ್ತಲೊರ್ವ ಮುಂದೆ ಹಾರ[ಶಾಕಂ. ರು] ವಿತ್ರಿ ಬಸುಜಾಗಿ ಅಡವಿಯಲ್ಲಿ ಹಣ್ಣು ಹೆತ್ತು ಬಿಟ್ಟು ಹೋಗಲು (ಭೈರವ. I, ೬೪). **ಹಾರುವಿತಿ** : ಪರನ ಪರಿ ಹೊಸತಾಯ್ತು ಹೊತ್ತನು ಹರನ ಹಗೆ ಹಾರುವಿಕೆಯನು ನಮ್ಮಲಿಸಿ ನೆಟ ಹಾರುವಿತಿಯೆಂದರು ವಗುತ ಚಪಲೆಯರು (ಶಬರ.ಅ. ೦೫-೬೬); ಗೋಡೆಯ ತೆಜಿಟ ನೋಳು ಬರೆದಕ್ಕರವ ನೋಡಿಕೊಂಡಿದಾರಬಾಡಿಯನೆ ಮುಂದೆ ಹಾರುವಿತಿಯೊಳು ಬಂದೆರ್ಬ ಕುಬಾಕನಿದ ಬರವನೆನೆ (ಪರೀಕ್ಷಿತ. ೭-೯-೯೯). **ಹಾರುವಿತ್ರಿ** : ಹಾರುವಿತ್ರಿ[ಶಾಕಂ. ವಗಿತಿ]ಯೊಳು ಸೊಬಗುಮನೋರಂತ ಜಾನುವರು ಪಾಡೆ ಗಾಪಲರಲ್ತೇ (ಕೃಷ್ಣಾಸ್ವ. ೬-೨೬).

[ಪಾರ್ವ + –ತಿ$_1$ (<–ಇತ್ತಿ)./ತಮಿ. ಪಾರ್ಪ್ಪಾತ್ತಿ]

**ಹಾರ್ವಗೊಲೆ** (ನಾ). ಬ್ರಾಹ್ಮಣಹತ್ಯೆ; ಬ್ರಹ್ಮಹತ್ಯೆ : ಅವನೆನ್ನು ಹಾಡೊಳ್ ದಾಟಟ್ಟು ತುಳಸಿಜೆಯೊಡನನ್ನಣಾಗರಂ ಪಿಡಿದು ಬಂದುಗೆಯ್ದು ಹಾರ್ವಗೊಲೆಗೆ ಪೇಸಿ ಬಿಟ್ಟು ಎನ್ನ ನಾಡೊಳ್ ತಲೆಯೂರಿಸವ ಬೂತನಕೆರೆಯಂ ಕೊಂಡು . . . ತಿರುಕಳಿ ಹಾರ್ವಗಿತ್ತಂ (ಕಾರವಂ. ೦೬-೯).

[ ಪಾರ್ವ + ಕೊಲೆ$_2$ ]

**ಹಾರ್ವಗೋಲು** (ನಾ). (ಬ್ರಾಹ್ಮಣಸಮುದಾಯವು ಸೇರಿ ನಿಷ್ಕರ್ಷಿಸಿದ) ಒಂದು ಅಳತೆಯ ಕೋಲು : ಮಹಾಪ್ರಭು ಹಾರ್ವರ ಬಲ್ಲಹಂ . . . ಹೆಂಟಿಗೆಸಟ್ಟಿಯುಂ ಮಾಡಲು ಬೆಂಜಿಲವಾಡದ ಬಟ್ಟೆಯಂ ಹತುಪಲು ಹಾರ್ವಗೋಲಲು ಬಿಟ್ಟ ವೃತ್ತರು ೧೨ (ಕ.ಶಾ. II, ೬೮-೮೬; 1835).

[ ಪಾರ್ವ + ಕೋಲು$_1$ (<ಕೋಲ್$_1$) ]

**ಪಾರ್ವಣ** (ಗು). ೧. ಅಮಾವಾಸ್ಯೆಗೆ ಸಂಬಂಧಪಟ್ಟ. ೨. ಹುಣ್ಣಿಮೆಗೆ ಸಂಬಂಧಿಸಿದ : ಪ್ರಣುತಸುಧಾಗರ್ಭಮ ಕಾರಣವಿನಾ ಕೋಪಾಳಿಯು ಮುಖಸುಧಾರುಚಿಗುಚ್ಚದಂತಣಗೊಂಡು ತೊಳಗುತ್ತಂ ಪಾರ್ವಣ ಶಶಿಬಿಂಬಕ್ಕೆ ಕೃತತಯೆತ್ತನಿಣಾಯ್ತೋ (ಅಜಿತ. ೦೯-೨೨) ; ಕನ್ನಡಿ ಪಾರ್ವಣ ಶಶಿಯನು . . . ನವಲತೆಯು ಸನ್ನುತವಾರಿಜತನ ಪತದಂತೆ ಸುವನ್ನೆ ಪಡೆದಳು ಪುತ್ರನನು (ಶಂಕ್ರ.ಶಾಂ. ೯-೫೬); ಕ್ಷಣರುಚಿ ರುಚಿರೇಕ್ಷಣೆ ಪಾರ್ವಣ ವಿಧುಮುಖಿ ಪಾಣ್ಬೆ ಪೂಗಳೆಂಬಲ್ಲದ ತಲ್ಲಣಿಸಿ ಪೆಡಂಮುಟ್ಟುತ್ತಂಗಣ ಕೈದುಕ ಸುಮುಖ ಬೈದಳ ಕಮಳಜನಂ (ರಾಜಶೇ. ೦೦-೨೫). (ನಾ). ೩. ಅಮಾವಾಸ್ಯೆಯಲ್ಲಿ ಪಿತೃಗಳಿಗೆ ಮಾಡುವ ಒಂದು ಶ್ರಾದ್ಧ ಕರ್ಮ. [ಸಂ.]

**ಪಾರ್ವಣಶ್ರಾದ್ಧ** (ನಾ). ಪರ್ವಕಾಲದಲ್ಲಿ ಮಾಡುವ ಶ್ರಾದ್ಧ : ಪುತ್ರ ಅನ್ನುವುದು ಕೆಳಗಿನ ಮೂರು ತಲೆಗಳನ್ನೂ ಒಳಗೊಳ್ಳುತ್ತದೆ. ಏಕೆಂದರೆ ಆ ಮೂವರೂ ಪಾರ್ವಣಶ್ರಾದ್ಧ ಮಾಡುವ ಅಧಿಕಾರಿಗಳು (ಮಂಕಕ್ಕ. ೨೫೦). [ ಪಾರ್ವಣ + ಶ್ರಾದ್ಧ ]

**ಪಾರ್ವತಿ$_1$** 'ಪಾರ್ವಂತಿ' ನೋ.

**ಪಾರ್ವತಿ$_2$** (ನಾ). ೧. ಪರ್ವತರಾಜನ ಮಗಳು ; ಗಿರಿಜೆ : "ರುದ್ರಾಣೀ . . . ಪಾರ್ವತೀ, ಗೌರೀ . . . ಗಿರಿಜಾ, ಮೇನಕಾತ್ಮಜಾ — ಈ ೨೧ ಗೌರೀದೇವಿಯ ಪೆಸರ್" (ಅಭಿಧಾ. ೯-೦೩) ; ನಾಗೇಂದ್ರ ಭೂಷಣವೆಂಬಿವೆ ಪಾರ್ವತಿಯ ಕಿಬ್ಬೊಟ್ಟೆಕಪಾದ್ರಿ ಕರುಣಾಯಿತ್ತು ಅಂತಹ ಪಾರ್ವತಿ ಘಾಟೆಂಬೆನೆ ಪರಮೇಶ್ವರನ ಅರ್ಧಾಂಗಿಯಾದಳು (ಅಶ. ೯೬೬): ಮಹಾತ್ರಿಪೋಟನೆ ಮಹಾನಿಧಿ ತನ್ನ ವಿವಾಹವರ್ಣನಾಸಂಗತಿಯಂದು ಮಾತೃತಿಗೆ ಪಾರ್ವತಿ ಪಾಳ್ಕೆ ಮಹೋತ್ಸವಂಗಳಂ (೧೮೪. ೦-೪). ೨. ಮಂತ್ರಗಳಲ್ಲಿ ಒಂದು : ಗಾಯತ್ರಿ ಪ್ರತ್ಯಂಗಿರಾ ದಕ್ಷಿಣಾಮೂರ್ತಿ . . . ಪಾರ್ವತಿ ಕಾಮಧೇನು ಕಲ್ಪವೃಕ್ಷ . . . ಮಹಾಮಂತ್ರಂಗಳಂ (ಶಿವಕ. ೬೦). ೩. ತದುಕಿನ ಗಿಡ ; ಆನೆಬೇಲ. ೪. ಗೊಲ್ಲರವಳು; ಗೋಪಿಕೆ. ೫. ದ್ರೌಪದಿಯ ಒಂದು ಹೆಸರು. ೬. ಸುಗಂಧದ ಮಣ್ಣು. [ಸಂ. ಪಾರ್ವತೀ]

**ಪಾರ್ವತಿತನಯ** (ನಾ). ೧. ಪಾರ್ವತಿಯ ಮಗ. ೨. ಕಾರ್ತಿಕೇಯ; ಷಣ್ಮುಖ. ೩.ಗಣಪತಿ; ಗಣನಾಥ: ಶರಣು ಪಾರ್ವತಿತನಯ ಮೂಷಿಕವಾಹನ ಶರಣು ಮೂಷಿಕವಾಹನ (ಪುರಂದ. ೦-೩ ಕಲ್ಯ). [ಪಾರ್ವತಿ$_2$ + ತನಯ]

**ಪಾರ್ವತಿಯೆರೆಯ** (ನಾ). ಗಿರಿಜೆಯ ಪತಿ ; ಈಶ್ವರ : ಪಾರ್ವತಿಯೆರೆಯನ ವರದಿಂ ಪುತ್ರಿ ಕರ್ವಿಲ್ಲಂ ಸರ್ವೋಚ್ಚನರೂಪಮನುವಿಯ ವಿಟರಲ್ಲದೆಯೊಳ್ಳಲಿಸಿದು (ಅಜಿತ. ೦-೬೩). [ಪಾರ್ವತಿ$_2$ + ಎರೆಯ]

**ಪಾರ್ವತೀಜಾನಿ** (ನಾ). = ಪಾರ್ವತಿಯೆರೆಯ : ಆ ನರನಾಥನು ಕುಸುಮಭೂಷಣವಂ ಪಡೆದಿತ್ತು ಪಾರ್ವತೀಜಾನಿಗೆ ತಾನುಮಾತ್ತ ರಮೆಯುಂ ಬಳಿಯಂ ತಳೆದಿರ್ದಿನಂ (ರಾಜಶೇ. ೦೦-೬೦).

[ಸಂ. (ಪಾರ್ವತೀ + ಜಾಯಾ + –)]

**ಪಾರ್ವತೀದಯಿತ** (ನಾ). = ಪಾರ್ವತಿಯೆರೆಯ : ಶ್ರೀಯುಂ ಮಹಾಲಕ್ಷ್ಮಿ . . . ದೀರ್ಘಾಯುಷ್ಯಮಂ ಪಾರ್ವತೀದಯಿತಂ ಮಾಣದೆ ಚೌಡಿಸಟ್ಟಿಗೆ ಕುಡುತ್ತಿರ್ಕ್ಕಗಳುಂ (ಕೊಲ್ಲಾ.ಶಾ. ೦೬–೩; 1166). [ಸಂ.]

**ಪಾರ್ವತೀವಲ್ಲಭ** (ನಾ). = ಪಾರ್ವತಿಯೆರೆಯ : ಪಾರ್ವತೀವಲ್ಲಭಚರಣಸರಸೀರುಹಭೃಂಗಂ ಮಹಾಮಹಿಮೋತ್ತುಂಗಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕೌಶಾ. XX, ೯೬–೫೨; 1078). [ಸಂ.]

**ಪಾರ್ವತೇಯ** (ನಾ). ಪರ್ವತಪ್ರದೇಶದಲ್ಲಿ ಜನಿಸಿದವನು; ಪರ್ವತವಾಸಿ: ಪುಷ್ಪಂದಭೂಪಲ್ಲಭನುಂ ಹಿಮವತ್ಕಟಿಬಿಡಿದು ಪೋದಪೊಗರೆ ಪಯಿನಾಂಬರೆ ಪಾರ್ವತೇಯೋಪಾದಪ್ರಧಾನಪುರಸ್ಸರನಾಗಿ (ಶಾಂತಿಪು. ೧೧-೬೬ ವ); ಈ ಜನಗಳ ಭೂಷಣಗಳು ಆಕಾರಗಳು ನೋಡಿದರೆ ಪಾರ್ವತೇಯರಂತೆ ಕಾಣುವರೆಂದು ನಿಶ್ಚೈಸಿ (ಕುಮಾರಸಂ. ೨೮). [ಸಂ.]

**ಪಾರ್ವರ** (ನಾ). (?) : ಸ್ವಸ್ತಿಶ್ರೀವಿಕ್ರಮಮಹಾರಾಜನ್ಪೃಥಿವಿರಾಜ್ಯಕೆಯ್ಯೆ ಪಬ್ಬು ರಕ್ಕಸನೂರುಕೊಳ್ವಲ್ಲಿ ಪಾರ್ವರೊಡೊಳ್ ಸತ್ತಾನ್ ಪೆರಾಣ್ಮೊ ಪನ್ (ಎಕ. X (೨). ಶ್ರೀಬಿಣ. ೦೦೬-೯; ಶ. ೭೦೦): ಪಾರ್ವರೊಡೊಳ್ ಸತ್ತಾನ್ (ಪ್ರಾಚೀ. ೦೯೦೭, ೦೦-೯; ಶಿಹಾ ೬೬). [?]

**ಪಾರ್ವಾಟ** (ನಾ). ಪೆರವಣಗೆ; ⓟ ವರ್ಷದಲ್ಲಿ ಯಾವುದಾದರೂ ಹಬ್ಬದಲ್ಲಿ ಒಂದು ಪ್ರಾಣಿಯನ್ನು ಬೇಟೆಯಾಡಿ ಅದನ್ನು ಕೊಲ್ಲುವುದಕ್ಕೆ ಮುಂಚೆ ಮೆರವಣಿಗೆ ಮಾಡುವುದೂ ಕೆಲವು ಹಬ್ಬಗಳಲ್ಲಿ ಮೊಲ, ನರಿ ಇತ್ಯಾದಿ ಪ್ರಾಣಿಗಳನ್ನು ಬೇಟೆಯಲ್ಲಿ ಹಿಡಿದು ಮೆರವಣಿಗೆ ಮಾಡಿ ಮತ್ತೆ ಕಾಡಿಗೆ ಬಿಡುವುದೂ ಉಂಟು: ವರ್ಷಕ್ಕೆ ಒಂದು ಸಲ ಇವರು ಒಂದು ಚಿರತೆಯನ್ನು ಹಿಡಿದು ಪಾರ್ವಾಟ ಮಾಡಿ ಮುಗಿಸುವುದು (ಕಪ್ರಿ. VI. ೦೦೯). [< ಪರ್ವ ? + ಆಟ]

**ಪಾರ್ವಿಕೆ, ಪಾರ್ಬಿಕೆ** (ನಾ). ಪಾಪ್ರಪ್ಪಣೆಕೆ; ಹಾರುವತನ: ಪಾರ್ವಿಕೆಯೊಳ್ ಇರ್ದ ಪಾರ್ವಂಗೆ ಕೂಳನ್ ಒಟ್ಟುರ್ (ಪ್ರಾಗ್ರಾಕ. ೩೯೬): ಕಡೆಗೆ ವಂದಿಸದಿದ್ದಪಾಪವೆ ಕಿಡುಗು ಪಾರ್ವಿ[ಪಾಠಾಂ. ರ್ಬಿ]ಕೆ ಮುಂದೆ ವಂದಿಸಿದಡೆ ಕಿಡುಗು ಪ್ರಾಡಭಕ್ತಿಯುಂತಾಗಿಂತಿರದಜ್ಞಂದ ಕಿಡುವನಿಳೆಯೊಳು ಪಾರ್ಬನು (ಬಸಪು. ೩-೬೯). ಪಾರ್ಬಿಕೆ: ಅಟಾಂದರಭವನ ಭಕ್ತತತಿಗಾವ ಕುಲ ವಂದಿಪನೆಣಿಸಿ ನೀ ಪಾರ್ಬಿಕೆಗೆ ಸಲಿಸುವೆಯುಂತಿನಿತು ಮಾರ್ಗಂಗಳೆಂದು (ಬಸಪು. ೩-೦೯) [ಪಾರ್ವ + – ಇಕೆ]

**ಪಾರ್ವಿತಿ** 'ಪಾರ್ವಂತಿ' ನೋ.

**ಪಾರ್ವಿಸು** (ಕ್ರಿ). ಹಾರಿಸು; ನುಗ್ಗಿಸು (?) : ತ (ಂ)ನ್ನ ವಾರುವಮಂ ಪಿ(ಂ)ನ್ನವಿತ್ತು ಮು(ಂ)ನ್ನ ಪಾರ್ವಿಸಿ ಮುರಾರಿಯೊಳು ದೊಪ್ಪುದುಪ್ಪು ಬೊಳು ಕಾದಿ ತಳ್ತಿಱಿದು ಗೆಲ್ದ (ಕೌಶಿ. IX-i. ೩೯೨-೨೦; 1148). [?]

**ಪಾರ್ವೆ** (ನಾ). = ಪಾರ್ವಂತಿ: ಪರೀಸದಾ ಪಾರ್ವೆ ನಡೆದು ಪರ ಪಾತ್ರ(ಥ)ರ್ಂ ಕೊನ್ದಕೆಸ್ರು ಮುಸ್ಸರಿಯುಂ ಕಾನೆರಡಿಲ್ಲದೆಂಬ ನಾಳ್‌ನುಡಿ ಪೊರೆದು (ಪ್ರಾಚೀ. ೦೯೨೭, ೩೯-೩; 118ಹು ೬೬). [ಪಾರ್ವ + – ಎ]

**ಪಾರ್ಶ್ವ** (ನಾ). ೧. ಪಕ್ಕ; ಮಗ್ಗುಲು; ಬದಿ: "ಕಲಂ ಪಾರ್ಶ್ವ ಸಂಚ್ಛೇದಂ" (ಅಭಿಕೋ. ೬೮-೬); ಮಣಿವಿಚಿತ್ರಪಾರ್ಶ್ವಂಗಳುಮಧಸ್ಸ್ಫುರೋ ಪರಿಪಾತ್ರಲಸಪಾನವಿಸ್ತಾರಂಗಳುಮಪ್ಪ ಹಿಮವನ್ಮಹಾಹಿಮವನ್ನಿಷಧನೀಲ ರುಗ್ಮಿಶಿಖರಿಗಳೆಂಬ ವರ್ಷಧರಪಹೀಧರಂಗಳಿಂದಂ . . . ಎಸೆದು (ಆದಿಪು. ೦-೯೬ವ): ಆ ಮಹಾನುಭಾವನಾ ಮಹಾಕಾಳದೊಳ್ ಸುಪ್ರಸುಕ ಪ್ರದೇಶಮುಮಂ ಕಂಡು . . . ವಿಕಾಗ್ರಚಿತ್ತರೊಳೇಕಪಾರ್ಶ್ವದೊಳ್ ಮೆಯ್ಯುಸಿಕ್ಕಿ (ಸುಕುಮಾ. ೦೨-೦೮ ವ); ಕೆಳಗೆ ಪಶ್ಚಿಮಪಾರ್ಶ್ವದಲ್ಲಿ ಒಂದ ರೊಳಕ್ಕೆ ಒಂದಕ್ಕೆ ಪ್ರವೇಶವಿರುವ ಎರಡು ಕೊಠಡಿಗಳು (ಶಾಲಿಹು. ೦೮). ೨. ಎದೆಯ ಕೆಳಗಿನ ಎರಡು ಮಗ್ಗುಲು; ಪಕ್ಕೆ: "ಪಾರ್ಶ್ವಂ—೧ ಪ್ರಯೋಂಧ:—ಕಂಕಳ ಕೆಳಗಡೇ ಪಕ್ಕದ ಪೆಸರಾಗಳು" (ಅಭಿಧ. ೦೯೨). ೩. ಸಮೀಪ; ಹತ್ತಿರ: "ಸಮೀಪಂ . . . ಪಾರ್ಶ್ವಂ, ಉಪಾಂತಂ, ಅಪದಾಂತರಂ—ಈ ೧೮ ಸಮೀಪಂ" (ಕರ್ಣಾಯು. ೦೦೩-೯); ಪುರುಜಿನ ಪಾರ್ಶ್ವದೊಳ್ ವೃಷಭಸೇನಗಣಾಗ್ರಣಿ ತಜ್ಜನೋಕ್ತಮಂ ಭರತನೃಪಂಗೆ . . . ಒಲವಿಂದೆ ಪೇಟ್ದುದಂ . . . ಪೇಟ್ವೆಂ (ಪಾರ್ಶ್ವಪು. ೦-೯೯). ೪. ವಂಚನೆಯ ಉಪಾಯ; ಕುತಂತ್ರ: 'ಪಾರ್ಶ್ವಕ' ಪರಾ. ೫. ಒಂದು ವಸ್ತುವಿನ ಮೇಲ್ಮೈ. ೬. ಧಾರೆ; ಅಂಚು; ನೇಮಿ. ೭. ಕನ್ನಡದಲ್ಲಿ ಪಾರ್ಶ್ವನಾಥಪುರಾಣವನ್ನು ಬರೆದ ಒಬ್ಬ ಕವಿಯ ಹೆಸರು: ಲಲಿತಪದಾರ್ಥಾಳಂಕೃತಿಗಳಿನೊಸರ್ವ ರಸಂಗಳಿಂದೆ ಬುಧ ರೊಳ್ಪುಳಕಾವಳಿಸಸ್ಯವೊಗೆಯೆ ಕವೀಂದ್ರಳತಿಳಕಂ ಶಾಸನವುನೊಲ್ದು ಪೇಟ್ದಂ ಪಾರ್ಶ್ವಂ (ಪಾರ್ಶ್ವಪು. ಆಶ್ವಾಸಾಂತ. II. xii). ೮. ಒಂದು ದೇಶದ ಹೆಸರು: ಗೌಳ ಪಾರ್ಶ್ವ ಕರೂಷ ಕೋಸಲ ಚೇದಿ . . . ಹಮ್ಮೀರಾದಿ ಸಕಲದೇಶಾಧೀಶಸಮುದಯಸ್ತೈಕತಸೇತುಮಹಾಸಿಂಧುಪ್ರವಾಹ ಮರಾಳ (ಜೂತಾಂ. ೩-೦ ವ). ೯. [ಜೈನ] ಇಪ್ಪತ್ತಮೂರನೆಯ ತೀರ್ಥಂಕರನ ಹೆಸರು; ಪಾರ್ಶ್ವನಾಥ: ವೃಷಭ . . . ಪಾರ್ಶ್ವ ವರ್ಧಮಾನ ರೆಂಬಿಪ್ಪತ್ತನಾಲ್ವರ್ ತೀರ್ಥಕರರ್ (ಪಾರ್ಶ್ವಪು. ೯೦೨); ದಿವಿಜನಾಥಂ ಜನ್ಮಾಭಿಷೇಕಕಲ್ಯಾಣಾನಂತರಂ ಪಾರ್ಶ್ವನೆಂಬುದು ತ್ರಿಲೋಕಪೂಜಿತ ಮಪ್ಪ ಧರ್ಮಂ ಅದಕಾಶ್ರಯಮಪ್ಪುದಱಿಂ ಪಾರ್ಶ್ವನೆಂದು ಪೆಸರ ನಿಟ್ಟು ಪೋಗೆ (ಪಾರ್ಶ್ವಪು. ಆಶ್ವಾಸಾಂತ. I. iii). [ಸಂ.]

**ಪಾರ್ಶ್ವಕ** (ನಾ). ೧. ಮೋಸದಿಂದ ಹಣವನ್ನು ಸಂಪಾದಿಸುವವನು. ೨. "(ಸೈನ್ಯದ ಪಕ್ಕವನ್ನು ರಕ್ಷಿಸುವ ಅಥವಾ ಅವನ್ನು ಅಪಾಯಕ್ಕೊಳ ಪಡಿಸುವ) ಸೈನಿಕರಕ್ಷಣೆಗಳು: ಪಾರ್ಶ್ವಕ" (Flank. ೩೦೯೬). [ಸಂ.]

**ಪಾರ್ಶ್ವಕೋಣಾಸನ** (ನಾ). [ಯೋಗ] ಒಂದು ಬಗೆಯ ಆಸನ: ಮುಖ್ಯವಾದ ಕೆಲವು ಆಸನಗಳು, ಅಷ್ಟವಿನ್ಯಾಸಗಳು ೧. ಉತ್ಥಾನಾಸನ . . . ೬೬. ಪಾರ್ಶ್ವಕೋಣಾಸನ (ಯೋಶಿತ. ೦೬೭). [ಸಂ.]

**ಪಾರ್ಶ್ವಕ್ರಾಂತ** (ನಾ). [ನಾಟ್ಯ] ಹದಿನಾರ ಬಗೆಯ ಮಾರ್ಗ ಆಕಾಶ ಚಾರಿಗಳಲ್ಲಿ ಒಂದು ⓟ "(i) ಕುಂಚಿತಚರಣವನ್ನು ಮೇಲಕ್ಕೆತ್ತಿ ನೆಲವನ್ನು ಹಿಮ್ಮಡಿಯಿಂದ ಗಟ್ಟಿಸುವುದು. [ಇದನ್ನೇ ಪಾರ್ಶ್ವ ದಂಡಚಾರಿಯೆಂದೂ ಕರೆಯುತ್ತಾರೆ] (ii) ಕುಂಚಿತಚರಣವನ್ನು ಮತ್ತೊಂದು ತೊಡೆಯವರೆಗೂ ಎತ್ತಿ ಉದ್ವೃಟ್ಟಿತ ಮಾಡಬೇಕು" (ಶಾಸ್ತ್ರರ. ೩೦೮ ಗದ್ಯಾನುವಾದ). ಒಂದು ಪದಂ ಕುಂಚಿತದಿಂದ[ದಂ] ಬಿಡೆದೆತ್ತಿ ತ[ನ್ನ] ಪಾರ್ಶ್ವದ ದೆಸೆಯಂ ಚಂದದೆ ಲಾಗಿಸಿ ಪಾದದಿಂದೊಂದಿಸೆ ಭೂತ್ರಳಮನಿಂತು ಪಾರ್ಶ್ವಕ್ರಾಂತಂ (ಶಾಸ್ತ್ರರ. ೬-೯೨); ಈ ಚಾರಿ ಪಾರ್ಶ್ವದಂಡಪಾದವೆಂದು ಲೋಕಪ್ರಸಿದ್ಧಂ; ಮತ್ತೊಂದು ತೊಡೆ ಪರಿಯಂತರ ಎತ್ತಿ ಉದ್ವೃಟ್ಟಿತಪಾದವಂ ಮಾಡಿದರೆ ಇದನ್ನೂ ಪಾರ್ಶ್ವ ಕ್ರಾಂತವೆಂಬರು (ಶಾಸ್ತ್ರರ. ೬-೯೨೩). [ಸಂ. ಪಾರ್ಶ್ವಕ್ರಾಂತಾ]

**ಪಾರ್ಶ್ವಗತ** (ನಾ). = ಪಾರ್ಶ್ವಾಗತ: ಋಜು ಋಜುಪರಾವೃತ್ತಿ ಅರ್ಧ ಋಜು ಅರ್ಧಋಜುಪರಾವೃತ್ತಿ ಸಾಚಿ ಸಾಚಿಪರಾವೃತ್ತಿ ದ್ವ್ಯರ್ಧಾಕ್ಷಂ ತಕ್ಕರಾವೃತ್ತಿ ಪಾರ್ಶ್ವಗತವೆಂಬ ನವಸ್ಥಾನಂಗಳೊಳು . . . ಅಳವಡೆ (ಚಂದ್ರಪ್ರ. ೦೩-೩೦). [ಸಂ.]

**ಪಾರ್ಶ್ವಚರ** (ನಾ). ೧. ಪಕ್ಕದಲ್ಲಿರುವವನು. ೨. ಸಮೀಪದಲ್ಲಿ ಸಂಚರಿಸುವವನು. ೩. ಸೇವಕ; ಆಳು: ಅಭಿನವರೂಪಹಾವನವ ಭಾವಸಮನ್ವಿತೆ ಪುಟ್ಟಿದಳ್ ಸ್ವಯಂಪ್ರಭೆ ಮಗಳಾಗಿ ಪಾರ್ಶ್ವಚರ ಭೂಚರ ಖೇಚರ ನೇತ್ರಪುತ್ರಿಕಾನಿಭ . . . ನಯನೋತ್ಪಲೇಂದುಕಿರಣ ಪ್ರಭೆಯುಪ್ಪುದು ತಪ್ಪದೊಪ್ಪುಗುಂ (ಶಾಂತಿಪು. ೩-೦೭). [ಪಾರ್ಶ್ವ + ಚರ]

**ಪಾರ್ಶ್ವಭೇದ** (ನಾ). [ನಾಟ್ಯ] ನರ್ತನದಲ್ಲಿ ಒಂದು ಬಗೆ; ⓟ "ವೃಶ್ಚಿಕಕುಟ್ಟಿತ, ಊರ್ಧ್ವಜಾನು, ಆಕ್ಷಿಪ್ತ, ಸ್ವಸ್ತಿಕ ಈ ನಾಲ್ಕು ಕರಣಗಳನ್ನೂ ಮಾಡಿ ಒಂದಾವರ್ತಿ ಸುತ್ತಿ ಉರೋಮಂಡಲ, ನಿತಂಬ, ಕರಿಹಸ್ತ, ಕಟೀಛಿನ್ನ ಈ ನಾಲ್ಕು ಕರಣಗಳನ್ನೂ ಕ್ರಮ ವಾಗಿ ಮಾಡುವುದು" (ಶಾಸ್ತ್ರರ. ೩೦೦ ಗದ್ಯಾನುವಾದ): ವಿಂಶುಪಚ್ಚುರಿತ ಪಾರ್ಶ್ವಭೇದ ಸರ್ಗತು ಕೂಡಿವೆತ್ತ ಮಹಾಕ್ರೀಡಂ ಪಸರಿಪ ವಿದ್ಯು ದ್ಭ್ರಾಂತಂ ಶಿವಮುಖ ವಿಷ್ಕಂಭಕಾಪಸೃತವೆಂಬಿನಿತುಂ (ಶಾಸ್ತ್ರರ. ೬-೯). [< ಸಂ. ಪಾರ್ಶ್ವಚ್ಛೇದ ?]

**ಪಾರ್ಶ್ವಜಾನು** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ᑭ "ಸಮಪಾದದಿಂದ ನಿಂತುಕೊಂಡು ಒಂದು ಕಾಲಿನಿಂದ ತೊಡೆಯ ಮುಂಭಾಗವನ್ನು ತಾಗಿಸಿ, ಒಂದು ಕೈಯನ್ನು ಮುಷ್ಟಿಹಸ್ತದಿಂದ ಎದೆಯ ಹತ್ತಿರದಲ್ಲೂ ಇನ್ನೊಂದು ಕೈಯನ್ನು ಅರ್ಧಚಂದ್ರಹಸ್ತದಿಂದ ಸೊಂಟದ ಹತ್ತಿರದಲ್ಲೂ ಹಿಡಿಯುವುದು. ಹೀಗೆ ಎರಡು ಪಾರ್ಶ್ವಗಳಲ್ಲೂ ಮಾಡುವುದು. ಯುದ್ಧ, ನಿಯುದ್ಧ [ಜಟ್ಟಿಕಾಳಗ] ಇವೇ ಮೊದಲಾದುವನ್ನು ಅಭಿನಯಿಸುವಾಗ" (ಶಾಸ್ತ್ರರ. ೩೦ ಗದ್ಯಾನುವಾದ). ತಲಪುಷ್ಪಪುಟ, ಲೀನ . . . ತಲಸಂಸ್ಫೋಟಿತ, ಪಾರ್ಶ್ವಜಾನು . . . ನಾಗಾಪಸರ್ಪಿತ, ಗಂಗಾವತರಣ—ಈ ನೂರೆಂಟು ಕರಣಂಗಳ್ (ಶಾಸ್ತ್ರರ. ೪-೯೨೮). [ಸಂ.]

**ಪಾರ್ಶ್ವದ್ವಯ** (ನಾ). [ನಾಟ್ಯ] ಹದಿಮೂರು ವಿಧವಾದ ಹಸ್ತಕ್ಷೇತ್ರಗಳಲ್ಲಿ ಒಂದು : ಪಾರ್ಶ್ವದ್ವಯ, ಪುರಸ್ತಾತ್, ಪಶ್ಚಾತ್ . . . ಕಟಿಶಿರ, ಊರುದ್ವಂದ್ವ—ಈ ಹದಿಮೂರು ಹಸ್ತಕ್ಷೇತ್ರಂಗಳ್ (ಶಾಸ್ತ್ರರ. ೪-೦೩೪). [ಸಂ.]

**ಪಾರ್ಶ್ವನಾಥ** (ನಾ). ೧. = ಪಾರ್ಶ್ವ ೭ : ಕವಿಕುಳತಿಳಕಪ್ರಣೀತ ಪಾರ್ಶ್ವನಾಥಪ್ರಣೀತಮಪ್ಪ ಪಾರ್ಶ್ವನಾಥಚರಿತಪುರಾಣದೊಳ್ ಕಥಾವತಾರವರ್ಣನಂ (ಪಾರ್ಶ್ವಚ. ೧-೦೩೫ ಗದ್ಯ). ೨. = ಪಾರ್ಶ್ವ ೯ : ಸಂಪೂರ್ಣಮಾಯ್ತು ಕವಿಪ್ರಸ್ತುತಪಾರ್ಶ್ವನಾಥಚರಿತಂ ಪಾರ್ಶ್ವೋದಿತಂ (ಪಾರ್ಶ್ವಚ. ೧೬ ೦೮೬). [ಸಂ.]

**ಪಾರ್ಶ್ವನಿಕುಟ್ಟಕ** (ನಾ). [ನಾಟ್ಯ] ನೂರೆಂಟುಕರಣಗಳಲ್ಲಿ ಒಂದು: ᑭ "ಪತಾಕಹಸ್ತಗಳೆರಡನ್ನು ಸ್ವಸ್ತಿಕದಂತೆ ಹಿಡಿದು, ಒಂದು ಕೈಯನ್ನು ಮೇಲ್ಮುಖವಾಗಿಯೂ ಇನ್ನೊಂದನ್ನು ಕೆಳಮುಖವಾಗಿಯೂ ಮಾಡಿ, ಮೇಲ್ಮುಖವಾಗಿರುವ ಕೈಯನ್ನು ಪಾರ್ಶ್ವದಲ್ಲಿ [ಪಕ್ಕದಲ್ಲಿ] ನಿಲ್ಲಿಸಿ, ಕೆಳಮುಖವಾಗಿರುವ ಕೈಯನ್ನು ಪಾರ್ಶ್ವಕ್ಕೆ [ಪಕ್ಕಕ್ಕೆ] ತರುವಾಗಲೇ ಆ ಪಾರ್ಶ್ವದ ಕಾಲನ್ನೂ ಅಂಗಾಲು ಮೇಲ್ಮುಖ ಮಾಡಿ ಪಕ್ಕದ ಹತ್ತಿರಕ್ಕೆ ತಂದು ಕೈಗೆ ಮುಟ್ಟಿಸುವುದಲ್ಲದೆ ಇನ್ನೊಂದು ಕೈಯನ್ನು ಮೇಲಕ್ಕೆ ಚಲಿಸುವುದು. ಹೀಗೆ ಎರಡು ಪಾರ್ಶ್ವಗಳಲ್ಲೂ ಪರ್ಯಾಯವಾಗಿ ಮಾಡುವುದು" (ಶಾಸ್ತ್ರರ. ೨೯೬ ಗದ್ಯಾನುವಾದ) : ತಲಪುಷ್ಪಪುಟ, ಲೀನ, ವಿವರ್ತಿತ . . . ಪಾರ್ಶ್ವನಿಕುಟ್ಟಕ, ಚಕ್ರಮಂಡಲ, ಉರೋಮಂಡಲ . . . ವೃಷಭಕ್ರೀಡಿತ, ನಾಗಾಪಸರ್ಪಿತ, ಗಂಗಾವತರಣ—ಈ ನೂರೆಂಟು ಕರಣಂಗಳ್ (ಶಾಸ್ತ್ರರ. ೪ ೯೨ ಕ). [ಪಾರ್ಶ್ವ+ನಿಕುಟ್ಟಕ]

**ಪಾರ್ಶ್ವಪಾದಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ . . . ೬೩. ಪಾರ್ಶ್ವಪಾದಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಶಾರದ. ೦೬೭). [ಸಂ.]

**ಪಾರ್ಶ್ವಭಾಗಿನಿ** (ನಾ). ಪಕ್ಕದಲ್ಲಿರುವವಳು; ಪತ್ನಿ : ನಿನ್ನನ್ನು ಸೆರೆಯಲ್ಲಿಟ್ಟು ತನ್ನ ಪಾರ್ಶ್ವಭಾಗಿನಿಯನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವ ಆ ಅಧಮ ಕೇಶವರಾಯನೇ ನನ್ನ ಪತಿ (ಅಂಬಿಕ. ೩೬).
[ಸಂ. ಪಾರ್ಶ್ವಭಾಗಿನೀ]

**ಪಾರ್ಶ್ವಮಂಡಲ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು : ಚತುರಸ್ರ, ಉದ್ವೃತ್ತ, ತಲಮುಖ . . . ಪಾರ್ಶ್ವಮಂಡಲ, ಉರೋಮಂಡಲ . . . ಅಲಪದ್ಮ, ಉಲ್ಬಣ, ವಲಿತ, ಲಲಿತ—ಈ ಮೂವತ್ತು ನೃತ್ತಹಸ್ತಂಗಳ್ (ಶಾಸ್ತ್ರರ. ೨-೪೪ ಕ) ; ಈ ಕೆಳಗೆ ಹೇಳುವ ಹಸ್ತಗಳು ನೃತ್ತಹಸ್ತಗಳು—೧. ಚತುರಸ್ರ, ೨. ಉದ್ವೃತ್ತ . . . ೨೨. ಪಾರ್ಶ್ವಮಂಡಲ (ಅಭಿಶ್ರೀ. ೪೯). [ಸಂ.]

**ಪಾರ್ಶ್ವವರ್ತಿ** (ನಾ). ಸಹಾಯಕ ; ಸೇವಕ. [ಸಂ. ಪಾರ್ಶ್ವವರ್ತಿನ್]

**ಪಾರ್ಶ್ವವಾಯು** (ನಾ). ದೇಹದ ಅರ್ಧಭಾಗದ ಚಲನೆಯನ್ನು ಉಡುಗಿಸುವ ವಾತರೋಗ; ಲಕ್ವ : ಮಾತು ನಿಲ್ಲಬಹುದು, ಪಾರ್ಶ್ವವಾಯು ಬರಬಹುದು (ಕಂಠೀ. ೩೦) ; ಪಮುಪಮಾಸ್ತಿತಾಗವು ಪಾರ್ಶ್ವವಾಯುವನ್ನು ಗುಣಪಡಿಸುವುದೆಂಬ ನಂಬಿಕೆಯಿದೆ (ಶಾರದ. ೫೪೪). 'ಅರ್ಧಾಂಗವಾಯು' ಪರಾ. [ಪಾರ್ಶ್ವ+ವಾಯು]

**ಪಾರ್ಶ್ವಶೂಲೆ** (ನಾ). ಪಕ್ಕೆಗಳಲ್ಲಿ ಉಂಟಾಗುವ ನೋವು; ಪಕ್ಕೆಶೂಲೆ : ಹೊಟ್ಟೆಶೂಲೆಗೆ, ಪಾರ್ಶ್ವಶೂಲೆಗೆ :—ಬಿಳಿತಾದ ಮೆಣಸು ಹೊನ್ನು ತೂಕವನ್ನು ವೀಳ್ಯದೆಲೆಗೆ ತೊಡೆದು ಆ ಎಲೆ ಮೆಲ್ಲಲು ಹರ (ವೈದ್ಯಶ. ೦೨೫) ; ಗರುಗ, ಬಿಳಿಸೊಂದೆ . . . ವಾಯುವಿಳಂಗ — ಇಷ್ಟನ್ನು ಚೂರ್ಣಿಸಿ, ಕಲ್ಕವ ಮಾಡಿ ಕವಡಿ, ತೈಲಪಕ್ವದಲ್ಲಿಳುಹಿ ಪಾನವ ಮಾಡಲು . . . ಪಾರ್ಶ್ವಶೂಲೆ, ಗ್ರಹಣಿ, ಅಗ್ನಿಮಾಂದ್ಯ, ಇವಿಷ್ಟು ಪರಿಹರಿಸಹುದು (ಸಕವೈ. ೨೨೬).
[ಪಾರ್ಶ್ವ+ಶೂಲೆ]

**ಪಾರ್ಶ್ವಸ್ಥ** (ನಾ). ೧. ವಿಟಪುರುಷರಲ್ಲಿ ಒಂದು ಬಗೆ ; ಹತ್ತಿರದ ಮನೆಯಲ್ಲಿ ವಾಸಿಸುವ ವಿಟ.—ಜಾರಸ್ತ್ರೀಯಿದ್ದ ಮನೆಯ ಬಿಟ್ಟು ಕೆಲದ ಮನೆಯೊಳಿರ್ಪನಂ ಪಾರ್ಶ್ವಸ್ಥನೆಂಬುದು (ಕಾಮಶಾ. ೨೩೩). ೨. ಸೂತ್ರಧಾರನ ಸಹಾಯಕ. [ಸಂ.]

**ಪಾರ್ಶ್ವಸ್ವಸ್ತಿಕ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು; ᑭ "ಒಂದು ಪಾರ್ಶ್ವದಲ್ಲಿ ದಿಕ್‌ಸ್ವಸ್ತಿಕವನ್ನೂ ಇನ್ನೊಂದು ಪಾರ್ಶ್ವದಲ್ಲಿ ಅರ್ಧನಿಕುಟ್ಟಕವನ್ನೂ ಪುನಃ ಪಾರ್ಶ್ವವ್ಯತ್ಯಾಸದಿಂದ ಅದೇ ಕರಣಗಳನ್ನು ಮಾಡಿ ಅಪವಿದ್ಧ, ಊರೂದ್ವೃತ್ತ, ಆಕ್ಷಿಪ್ತ, ನಿತಂಬ, ಕರಿಹಸ್ತ, ಕಟೀಛಿನ್ನ ಈ ಕರಣಗಳನ್ನು ಕ್ರಮವಾಗಿ ಮಾಡುವುದು" (ಶಾಸ್ತ್ರರ. ೩೦೬ ಗದ್ಯಾನುವಾದ) : ಸ್ಥಿರಹಸ್ತ, ಪರ್ಯಸ್ತ . . . ಪಾರ್ಶ್ವಸ್ವಸ್ತಿಕ, ಭ್ರಮರ . . . ಸ್ವಸ್ತಿಕರೇಚಿತ— ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಶಾಸ್ತ್ರರ. ೩-೭ ವ). [ಪಾರ್ಶ್ವ+ಸ್ವಸ್ತಿಕ]

**ಪಾರ್ಶ್ವಾಗತ** (ನಾ). [ಚಿತ್ರಶಾ] ಒಂದು ವಸ್ತುವಿನ ಪಕ್ಕದ ನೋಟ; ಋಜ್ವಾಗತ, ಅರ್ಧಋಜ್ವಾಗತ, ಪಾರ್ಶ್ವಾಗತ, ಸಾಚಿ ಮತ್ತು ದ್ವ್ಯರ್ಧಾಕ್ಷ ಎಂಬ ಪಂಚವಿಧ ಸ್ಥಾನಕಗಳಲ್ಲಿ ಒಂದು : ಋಜುಸಂಗಂ ಪಾರ್ಶ್ವಾಗತಂ . . . ತದ್ವಿದ್ವರಂ ಮೆಚ್ಚೆಸಂಗಂ ದ್ವ್ಯರ್ಧಾಕ್ಷಮೆಂಬಂತಿರೆ ಸೊಗಯಿಸುತಿರ್ಪಂಗನಾಭಂಗಿಯಂ ಚಿತ್ರಿಸಿ ಚಿತ್ರಕ್ಕಾಯ್ತು ಪ್ರಮದನನೆನೆ ಮಹಾದೇವಿ ಕಣ್ಗೊಪ್ಪೆ ತೋರ್ಪಳ್ (ಅಜಿತ. ೨-೪೩). 'ಪಾರ್ಶ್ವಗತ' ಪರಾ. [ಸಂ.]

**ಪಾರ್ಶ್ವೋತ್ತಾನಾಸನ** (ನಾ). [ಯೋಗ] ಒಂದು ಬಗೆಯ ಆಸನ: ಮುಖ್ಯವಾದ ಕೆಲವು ಆಸನಗಳು. ಅಷ್ಟವಿನ್ಯಾಸಗಳು ೧. ಉತ್ತಾನಾಸನ, ೨. ಚತುರಂಗದಂಡಾಸನ . . . ೬೬. ಪಾರ್ಶ್ವಕೋಣಾಸನ. ೬೭. ಪಾರ್ಶ್ವೋತ್ತಾನಾಸನ . . . ೭೯. ಭೈರವಾಸನ ಇತ್ಯಾದಿಗಳನೇಕವಿವೆ (ಶಾರದ. ೦೬೭). [ಸಂ.]

**ಪಾರ್ಷದ** (ನಾ). ೧. ಸಭೆಯಲ್ಲಿರುವವನು; ಸಭಾಸದ : ಸಕಲಧರೇಶಮುಖ್ಯರು ಪಾರ್ಷದೋತ್ತಮರು (ಶಿವಾಗ. ೦೦.೬೨.೨೬). ೨. ಪರಿಚಾರಕ : ಅವರನ್ನು ಜಯವಿಜಯರೆಂಬ ಪಾರ್ಷದರು ತಮ್ಮ ಕೈಯೊಳಗಿನ ವೇತ್ರಯಷ್ಟಿಯಿಂದ ಪ್ರತಿಬಂಧಿಸಿದರು (ಭಾಪುಕ. ೬೨೦). [ಸಂ.]

**ಪಾರ್ಷ್ಣಿ** (ನಾ). ೧. ಪಾದದ ಹಿಂಭಾಗ; ಹಿಮ್ಮಡಿ : ಗೂ[ಢ]ಗುಲ್ಫಪಾರ್ಷ್ಣಿಗಳನೊಳಕೊಂಡ ಮನುಜಮಾಂಧಾತನ ಪೊಜಲಡಿಗಳ್ ವಿರೋಧಿಭೂಪಾಳರಡಿಗೆಱಗುವ ಸಂತೋಷದೊಳುನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು (ಕಂಜಾ. ೨-೩೯ ವ) ; ವಿಷಮಬಾಣನೆಯುಂ ಪಾರ್ಷ್ಣಿಧಿಯೊಳ್ ಬೆಸಬೆತ್ತು ಕಾಲ್ಗೊಂಡು ಕೂರಂಬಸದಿಂದಂಗುಷ್ಠದಿಂ

ಪಾರ್ಷ್ಣಿಯಾನಳವಡಿಸುತ್ತುಂ . . . ಬಂಬಲ್ವರಿಯಿಸಿ (ಶಾಂತೀ. ೯-೯೩) ; ಪರಿವಾರ್ಶ್ವಿತ್ರಂ ಪತಿತಂ . . . ಅಂಗುಲಿ ಸಂಗತವಿನಾಯೆಂಟುಂ ಸಮಂತು ಪಾರ್ಷ್ಣಿಯ ಭೇದಂ (ಶಾಸ್ತ್ರಕೌ. ೩-೧೦೦). ೨. ಸೈನ್ಯದ ಹಿಂಭಾಗ. ೩. ಹಿಂಬದಿ ; ಹಿಂಭಾಗ : "ಪರಭಾಗಃ ಪಾರ್ಷ್ಣಿ ಮಡು" (ಶಬ್ದಕೋ. ೩೬-೨). ೪. ಹಿಂದಿನಿಂದ ಹಿಡಿಯುವುದು,—ಆಕ್ರಮಿಸುವುದು : "ಹಿಂದೆ ಹಿಡಿವಲ್ಲಿ ಮಡವಲ್ಲಿ ಪಾರ್ಷ್ಣಿಯೆಂದೆನಿಕುಂ" (ಶುಂಗಾ. ೧೯೨-೨೦). ೫. ಹಿಂದಿನಿಂದ ಹಿಡಿಯುವವನು,—ಆಕ್ರಮಿಸುವವನು ; ಪಾರ್ಷ್ಣಿ ಗ್ರಾಹಕ : "ಹಿಂದೆ ಸೆಳೆವನಲ್ಲಿಯುಂ, ಮಡದಲ್ಲಿಯುಂ — ಪಾರ್ಷ್ಣಿ ಯೆಂಬುದು" (ಅಭಿಯು. ೧೪೬-೩೬). ೬. ರಥದ ಅಚ್ಚಿನ ಮುಂಭಾಗ,— ತಂದಿ. ೭. ಒದೆತ ; ತುಳಿತ. ೮. ಜಯವನ್ನು ಹೊಂದುವ ಅಪೇಕ್ಷೆ. ೯. ತನಿಖೆ ; ವಿಚಾರಣೆ. ೧೦. ಸ್ವೇಚ್ಛಾಚಾರದಿಂದಿರುವವಳು; ಸ್ವೈರಿಣಿ. ೧೧. ಕುಂತಿಯ ಒಂದು ಹೆಸರು. [ಸಂ.]

**ಪಾರ್ಷ್ಣಿಗಮನ** (ನಾ). [ನಾಟ್ಯ] ಹಿಮ್ಮಡಿಗಳನ್ನೂರಿ ಹಿಂದಕ್ಕೆ ನಡೆಯುವುದು; ನೃತ್ಯದಲ್ಲಿ ಒಂದು ಭಂಗಿ : ಪಿಂತಣ್ಗೆ ಮಡಗಳಿಂದಂ ಸಂತತ ನಡೆಯಲ್ಕೆ ಪಾರ್ಷ್ಣಿಗಮನಮೆನಿಕ್ಕುಂ (ಶಾಸ್ತ್ರಕೌ. ೨-೧೦೦).

[ ಪಾರ್ಷ್ಣಿ + ಗಮನ ]

**ಪಾರ್ಷ್ಣಿಗ್ರಾಹಕ** (ನಾ). ಹಿಂಭಾಗದಲ್ಲಿದ್ದು ಮೇಲೆ ಬೀಳುವ ಶತ್ರು : ಅದಂ ಕಂಡು ತಪ್ಪಮಿಲ್ಲದೆ ಚಪ್ಪರಿಸುವ ಮಂಡಳೀಕರುಮಸಡಂಗದಿಟ ವಿಕರುಮಂ ಒತ್ತಿ ಬರ್ಪ ಪಾರ್ಷ್ಣಿಗ್ರಾಹಕರುಮನರಿದು (ಆದಿಪು. ೯-೮೨ ವ).

[ ಪಾರ್ಷ್ಣಿ+ಗ್ರಾಹಕ ]

**ಪಾರ್ಷ್ಣಿಪಾರ್ಶ್ವಗತ** (ನಾ). [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು; ☞ "ಒಂದು ಪಾದದ ಒಳಭಾಗದಲ್ಲಿ [ಕೀಲಿನಲ್ಲಿ] ಇನ್ನೊಂದು ಕಾಲಿನ ಹಿಮ್ಮಡಿಯನ್ನು ಅಡ್ಡವಾಗಿರಿಸುವುದು" (ಶಾಸ್ತ್ರಕೌ. ೩೩೦ ಗದ್ಯಾನುವಾದ) : ಪದದೊಳಪಾರ್ಶ್ವಮನಿತರದ ಪದಪಾರ್ಷ್ಣಿ[ಯುಮೊಂದೆ ಪಾರ್ಷ್ಣಿ]ಪಾರ್ಶ್ವಗತಾಖ್ಯಂ (ಶಾಸ್ತ್ರಕೌ. ೬-೯೦). [ಸಂ.]

**ಪಾರ್ಷ್ಣಿರೇಚಿತ** (ನಾ). [ನಾಟ್ಯ] ಮೂವತ್ತೈದು ದೇಶೀಯಭ್ರಮ ಚಾರಿಗಳಲ್ಲಿ ಒಂದು ; ☞ "ಪಾರ್ಷ್ಣಿಪಾರ್ಶ್ವಗಸ್ಥಾನಕದಲ್ಲಿ ಹಿಮ್ಮಡಿಯನ್ನು ರೇಚಿತ ಮಾಡುವುದು" (ಶಾಸ್ತ್ರಕೌ. ೩೨೨ ಗದ್ಯಾನುವಾದ) : ರಥಚಕ್ರ, ಪರಾವೃತ್ತತಲ, ನೂಪುರ . . . ವಿಶ್ಲಿಷ್ಟ, ಪಾರ್ಷ್ಣಿರೇಚಿತ, ಊರುತಾಡಿತ . . . ಅರ್ಧಸ್ಖಲಿತ, ಸಮಸ್ಖಲಿತ; ಈ ಮೂವತ್ತೈದು ದೇಶಿಯ ಸಂಬಂಧದ ಭ್ರಮಚಾರಿಗಳು (ಶಾಸ್ತ್ರಕೌ. ೬-೧೩ ವ).

[ ಪಾರ್ಷ್ಣಿ + ರೇಚಿತ ]

**ಪಾರ್ಷ್ಣಿವಿದ್ಧ** (ನಾ). [ನಾಟ್ಯ] ಇಪ್ಪತ್ತಮೂರು ದೇಶೀಯಸ್ಥಾನಕಗಳಲ್ಲಿ ಒಂದು ; ☞ "ಒಂದು ಕಾಲಿನ ಹಿಮ್ಮಡಿಯ ಮೇಲೆ ಇನ್ನೊಂದು ಕಾಲಿನ ಹೆಬ್ಬೆಟ್ಟನ್ನು ಇಡುವುದು" (ಶಾಸ್ತ್ರಕೌ. ೩೩೦ ಗದ್ಯಾನುವಾದ) : ಚತುರಸ್ರ, ಪಾರ್ಷ್ಣಿವಿದ್ಧ . . . ಚರಣಂ ಮಡದೊಳಗನ್ಯದ ಚರಣದ ಪೆರ್ಬೆಟ್ಟನಿರಿಸೆ ಪಾರ್ಷ್ಣಿಯ ವಿದ್ಧಂ (ಶಾಸ್ತ್ರಕೌ. ೬-೩೯).

[ಸಂ.]

**ಪಾರ್ಸಲ್** 'ಪಾರ್ಸಲ್ಲು' ನೋ.

**ಪಾರ್ಸಲ್ಲು, ಪಾರ್ಸಲ್, ಪಾರ್ಸೆಲ್** (ನಾ). (ಸಾಮಾನ್ಯವಾಗಿ ಟಪಾಲು ಮೂಲಕ ಕಳಿಸುವ) ಕಟ್ಟಿದ ವಸ್ತು; ಭಂಗಿ : ಬುಟ್ಟಿಗಟ್ಟಲೆ ಹಣ್ಣುಗಳನ್ನು ಪಾರ್ಸಲ್ಲು ಮಾಡಿ ಊರಿಗೆ ಕಳಿಸಿದರು (ರೂಢಿ). **ಪಾರ್ಸಲ್** : ನೀವು ನಮ್ಮಿಬ್ಬರಿಗೂ ಪಾರ್ಸಲ್ ಮಾಡಿ ಕಳಿಸಬೇಕು (ಸಮಾಜ. ೩೨೩). **ಪಾರ್ಸೆಲ್** : "ಪಾರ್ಸೆಲ್ . . . ಒಂದು ಕಟ್ಟಾಗಿ ಕಟ್ಟಿದ ಸಾಮಾನು; ಮೂಟೆ; ಭಂಗಿ" (Parcel· ಇಂಕೋ). [← ಇಂ. Parcel]

**ಪಾರ್ಸಿ** 'ಪಾರಸಿ' ನೋ.

**ಪಾರ್ಸಿಕ** 'ಪಾರಸಿಕ' ನೋ.

**ಪಾರ್ಸೆಲ್** 'ಪಾರ್ಸಲ್ಲು' ನೋ.

**ಪಾಲ್₁, ಪಾಲು₁, ಹಾಲು₁** (ನಾ). ೧. ಸಸ್ತನಿಗಳು ತಮ್ಮ ಸಂತಾನ ಪೋಷಣೆಗಾಗಿ ಅವುಗಳಿಗೆ ಕುಡಿಸುವ, ಸ್ತನಗ್ರಂಥಿಗಳಿಂದ ಉತ್ಪತ್ತಿಯಾಗುವ ಬಿಳಿಯ ಬಣ್ಣದ ದ್ರವ; ಕ್ಷೀರ : "ಕ್ಷೀರಂ ದುಗ್ಧಂ ಪಾಲ್" (ಶಬ್ದಕೋ. ೯೨-೧); ಕಿಟ್ಟೂನೇಶ್ವರದಾ ದೇವರು ಪರವರಿಯ ಭತ್ತವುಂ ಕವಿಲೆಯ ಪಾಲುಂ ಎಟ್ಟುಂ × × × (ಎಕ. VI. ಕೊಪ್ಪ. ೩೬-೪; ಶ. ೧೭೬೯); ಮಾರಿಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್ (ಸೂಕ್ತಿ. ೧-೩೮): ಬಡಿಗಂಡನಿಲ್ಲ ಪಾಲನೆ ಕಂಡುಂ (ಶಬ್ದಮ. ೬-೧೯). ೨. (ಕಳ್ಳಿ, ಎಕ್ಕ ಮುಂತಾದ) ಕೆಲವು ಸಸ್ಯಗಳು ಸ್ರವಿಸುವ ಬಿಳಿಯ ರಸ : ಒಳಮೊಂಡಿನ ಪಾಲ್ಗಳುಮಂ ಪೀರ್ದಿಂಗೊರಲ್ಗಳಾವ ನೀರ್ವಕ್ಕಿಗಳ ಸುಚಿಲ ಮಾಸಕದಿಂಚರಂಗಳುಮಂ . . . ನೆಗಟುತ್ತುಮಿರ್ಪ್ಪಂ (ಗಾ.ದಂಪ. ೩೨೬); ಪಾಲೆಂಬ ತೆಱದೆ ಪಶುವಿನ ಪಾಲಂ ಪೋಲುವುವೆ ನಾಯ ಕಳ್ಳಿಯ ಪಾಲ್ಗಳ್ (ಅಕ್ಷ. ೨-೩೬): ಪಾಲೆಂಬ ನಾಮಮಾವಿನ ಪಾಲಿಂಗಂ ನಾಯ ಪಟದ ಕಳ್ಳಿಯೊಳಾದಾ ಪಾಲಿಂಗಮಕ್ಕುಮಾದೊಡೆ ಪಾಲೊಳ್ಪುಂ ಸವಿಯುಂ ಮದಱಿೞೊಳೇಂ ಸಮನೀವುಮೋ (ರಮೋಶ್ಸು. ೧-೧೯೨). ೩. ತೆಂಗಿನ ಕಾಯಿ, ಕಬ್ಬು ಮುಂತಾದುವುಗಳ ರಸ : (ಶ). ೪. ಸಿಡುಬು ಮೊದಲಾದುವುಗಳಿಗೆ ಮದ್ದಿನಂತೆ ಉಪಯೋಗಿಸುವ ಲಸಿಕೆ : (ಶ). ೫. ಬಿಳಿಯ ಬಣ್ಣ; ಬಿಳುಪು: 'ಪಾಲ್ವತ್ತ' ಪರಾ. ೬. ಸಾಮಾನ್ಯವಾಗಿ ಬತ್ತ, ಗೋಧಿ ಇತ್ಯಾದಿ ಏಕದಳಧಾನ್ಯದ ಬಲಿಯದೆ ಇರುವ ಎಳೆಯ ಕಾಳಿನಲ್ಲಿರುವ, ಪಿಷ್ಟಾಂಶದಿಂದ ಕೂಡಿರುವ ಬಿಳಿಯ ರಸ: 'ಪಾಲ್ದುಂಬು', 'ಪಾಲ್ದೆನೆ' ಪರಾ. **ಪಾಲು₁**: ೧. ಕಱೆಯುತ್ತ ಸುರಧೇನು ಪಾಲನು (ಸಂಹಿತಾ. ೩-೬); ಚಿಲುಪಾಲು ತಂಡಾಲು ಕೆನೆವೆರಸಿದ ಪಾಲು ಸುಲಲಿತ ಬಟ್ಟವಾಲುಗಳ ಸಲೆ ಕಟ್ಟು ಮೊಸರುಗಳ್ ಗಟ್ಟಿಪಾಚ್ಚಿಗೆಗಳ ಲಲನೆಯರುಣಬಡಿಸಿದರು (ಶಬಶ. ೬-೯೦); ಗೊಲ್ಲ ಕರೆದಾ ಧ್ವನಿಯ ಕೇಳಿ ಎಲ್ಲ ಪಶುಗಳು ಬಂದವಾಗ ಚೆಲ್ಲಿ ಸೂಸಿ ಪಾಲ ಕರೆದು ಅಲ್ಲಿ ತುಂಬಿತು ಬಿಂದಿಗೆ (ಗೋಹಾಡು. ೯೦). **ಹಾಲು₁** : ೧. "ಆ ವೃಥಸ್ಯಂ ಪಯಂ ದುಗ್ಧಮಾ ಕ್ಷೀರಮೆನಲಾವುಗಳು ಕಱೆವ ಹಾಲಕ್ಕು" (ಚುಂಗಾ. ೩೯-೩); ಕಲ್ಲ ನಾಗರ ಕಂಡರೆ ಹಾಲನೆಱೆಯೆಂಬರು (ಜನಪ. ೧೯೯): ಹಾಲ ಸಾಗರ ಮನೆಯ ಸೆಜ್ಜೆಯ ಮೇಲೆ ಶೇಷನ ಹಾಸು (ಸಂಹಿತಾ. ೬-೧); ಹಾಳಿಗಲಸಿದರೆ ಕೊಡನ ಹಾಲವೊಲಿವುದೇ ಕ್ಷೀರಾಂಬುನಿಧಿ (ಕೂಶಿಕಾ. ೩-೬-೯೦). ೨. ಎಷ್ಟೆಲ್ಲ ಔಷಧ ಹಾಕಿಕೊಂಡವನಿಗೆ ಕಳ್ಳೀಹಾಲಿನ ಹೆದರಿಕೆಯೆ! (ಗಾದೆಸು. ೦೬); ಎಕ್ಕದ ಹಾಲು, ಕೋಲುಗಳ್ಳಿಹಾಲು ಮತ್ತು ಕಣಗಿಲುಹಾಲು ಈ ಮೂರು ಸಸ್ಯಕ್ಷೀರಗಳನ್ನು ಒಂದೊಂದು ತೊಟ್ಟು ಸೇರಿಸಿ ರೊಟ್ಟಿ ಹಾಕಿಸಿಕೊಂಡು ತಿನ್ನು (ಶಬ್ದಕು. ೦೩೩); ಈ ಗಿಡಗಳನ್ನು . . . ಮೈಸೂರ ನಾಡಿನಲ್ಲಿ ಬೆಳಸುತ್ತಾರೆ. ಇದರ ಹಾಲಿನಿಂದ ರಬ್ಬರನ್ನು ತಯಾರಿಸುತ್ತಾರೆ (ಸಸ್ಯಕಾ. ೦೩೩). ೩. ಮಾಘ ಫಾಲ್ಗುಣದಲ್ಲಿ ಗಾಣವನ್ನು ಹೂಡಿದರೆ ಅಷ್ಟರಲ್ಲಿ ಬಿಸಿಲು ಬಲಿತು ಕಬ್ಬಿನ ಹಾಲು ಸ್ವಲ್ಪ ಕಡಿಮೆ ಆಗುವದು (ಕೃಷಿಶ್ರ. ೦೬೩); ಕಬ್ಬಿನ ಗಣೆ ಡೊಂಕು, ಅದರ ಹಾಲದು ಡೊಂಕೆ ರಸಿಕಾ ಪೇಳೊ (ಗೀ. ೩೨-೧); ಗಾಣದ ಚಕ್ರಗಳಲ್ಲಿ ಕಬ್ಬು ಜಜ್ಜಿಹೋಗಿ ಅದರಿಂದ ಹಾಲು ಸುರಿಯುತ್ತಿತ್ತು (ಕಶತ. ೩-೮೨). 'ಕಾಯಿ ಹಾಲು' ಪರಾ. ೫. 'ಹಾಲುಗಲ್ಲು', 'ಹಾಲುಗಾರೆ' ಪರಾ. ೬. ಧೊರೆ ನನ್ನ ತಮ್ಮ ಬರುವಾಗ ಯಾಲಕ್ಕಿಗೊನಿ ಬಾಗಿ ಹಾಲ ಸುರಿದಾವ (ಜನಪ. ೩೬). ೭. ಸುಕುಮಾರತೆ; ಕೋಮಲತೆ; ಮೃದುತ್ವ: 'ಹಾಲುಗಲ್ಲ', 'ಹಾಲುಗೆನ್ನೆ' ಪರಾ.

**ಹಾವನೆ** (ನಾ). ಪವಿತ್ರಳಾದವಳು ; ಪರಿಶುದ್ಧಳಾದವಳು : ವರ ರೂಪವತಿ ತಾನೆಂದು ವರಮಾಪಾವನೆಯೆಂದು ಬಣ್ಣಿದೆ ಬೆಟ್ಟಿಯಾದನು ಸಿಸಿಸುವುದಾತ್ಮವಲ್ಲಭನ (ಹರಿಶ್ಚಂ. ೩-೩೦): ಬಲ್ಲಿಸಪಳಯೋನಿಜೆಯೆಂಬುದಂ ಪಾವನೆಯೆಂಬುದಂ ಪುಣ್ಯಶ್ಲೋಕೆಯೆಂಬುದಂ (ರಾಮಾಶ್ವ. ೫೫ ೫೬) : ಪಾವನೆಯರಾ ಕೃಷ್ಣೆಭೀಮೆಯರ ತಾಯ್ನಾಡು ಕಾವೇರಿಗೋದೆಯರಾ ಮೈದೊಳೆವ ನಲುನಾಡು (ಕನ್ನಡಿ. ೧೧೧. ೫೧). [ಸಂ. ಪಾವನಾ]

**ಹಾವನ್ನ** (ಗು). ೧. ಪವಿತ್ರವಾದ : ಬಿನ್ನವ ಲಾಲಿಸಯ್ಯಾ ಭಕುತವತ್ಸಲ ದೇವ ನಿನ್ನ ಸುರತರು ಪಾವನ್ನ ನೆಳಲು ಚೆನ್ನಾಗಿ ಸಂಬಿವವನೊ (ಕೋಟ್ಟೂರ. ೩-೧). (ನಾ). ೨. ಪುನೀತನಾದವನು: ದೇವಕೀಸುತಪೊಲಿದು ಕರತಂದು ಎನ್ನನು ಪಾವನ್ನ ಮಾಡಿದನು (ಹರಿಕ. ೪೫ ಅನುಬಂಧ).
[< ಸಂ. ಪಾವನ]

**ಹಾವಮಾನಿ** (ನಾ). ೧. =ಪಾವನಿ ೨: ರಾಜೀವಲೋಚನ ನಿನ್ನೊಳೀ ಸರನೊಳೀ ಧ್ವಜದ ಪಾವಮಾನಿಯೊಳುಟಿ ಕಾದಿ ಮದ್ಭುಜದ ಕಂಡೂತಿಯಂ ಕಳೆಯ ವೇಳ್ಪುದೀಗ (ಕೃಷ್ಣ. ೨೬-೫೩). ೨. =ಪಾವನಿ ೩: ನಿನ್ನ ಕೊಂದಡೆ ಪಾವಮಾನಿಗೆ ವಂಥ ತಪ್ಪುವುದೆನುತ ಖಾತಿಯಲಿ ತಾವಕನ ಸಾರಥಿಯ ರಥ ತುರಗಾವಳಿಯನಾಯುಧವ ಖಂಡಿಸೆ ಜೀವಗಳ್ವಿರ ದೇವ ಪಸರಿಸಿದನು ಪಲಾಯನವ (ಕುಮಾ. ೯-೬). [ಸಂ.]

**ಹಾವರಣೆ**, ಪವರಣೆ, ಹಾವರಣಿ, ಹಾವರಣೆ, ಹಾವುರಾಣಿ (ನಾ). ಸರೀಸೃಪ ವರ್ಗಕ್ಕೆ ಸೇರಿದ ಒಂದು ಪ್ರಾಣಿ : ಬೇಳೆಯ ಪತ್ರಂಗಳೊಳ್ ಬೇಳೆಯ ಗೆಡ್ಡೆಯನೆ ಕೂಡಿ ಪುರ್ದಿಸಿ ಕುಡಲೇಂ ಪೇಟಲ ದಿದೆಂಬ ಕೊಟಕನ ಬೇಟಿನ ಪಾವರಣೆ[ಪಾಠಾಂ. ವಿರಣೆ]ಯುಗ್ರವಿಷ ಮನದಟಿಗುಂ (ಜಸುದ. ೧೧-೬೪). **ಪವರಣೆ** : ಕೋಡು ಕೊಟಗೆಲ್ ತೊಗಲ್ . . . ಪಲ್ಲಿ ಪಾವು ಪವರಣೆ ನವಿಲಾವೋಡೆಂಬವು ಕಷ್ಟಂ ಮನೆ ಮಾಡುವ ನೆಲನನಗುಟಿ ಕಾಣ್ಬೊಡೆ (ರೂಟ್ಟಮತ. ೩-೧೫). ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಹಾವರಣಿ**: "ಉರಗಕರನೆನೆ ಹಾವರಣಿ [ಪಾಠಾಂ. ಹಾರವಣೆ]ಯಕ್ಕು" (ಮಂಗರಾ. ೯೯-೧೩) : ಸರೀಸೃಪಾಭಿಧಾನವಮಂ ತಾಳ್ದಿದ ಉಡು ಓತಿ ಹಲ್ಲಿ ಹಾವರಣಿಯೆಂಬೀ ಜೀವಂಗಳಿಗೆ ಪವಪೂರ್ವಾಂಗ ಪರಿಸಂಖ್ಯೋತ್ಕೃಷ್ಟಾಯುಷ್ಯಮಕ್ಕುಂ (ಕರಾಕ. ೨೪೮). **ಹಾವರಣೆ** : "ದ್ವಿರಸಃ—ಉಡು, ಸರ್ಪ, ಹಾವರಣೆ" (೬೩೦. ೬೬): ಗೊದ್ದ ನೆಗೆವ ಹಾವರಣೆ ಕೆಂಜೇಳು . . . ಬುಸ್ಸೆಂಬ ಪಾವುಗಳಾಗ ವಿಗಡದೆ ಪರಿದಾಡುತಿಹುವು (ಕಂಸವ. ೧೬-೪೧). **ಹಾವುರಾಣಿ** : "ಸರಟಃ, ಕೃಕಲಾಸಃ—೨ ತೊಂಡೇ ಹೆಸರು ; ಹೆಂಟೇಗೊದ್ದ, ಓತಿಕ್ಯಾತ, ತೊಣ್ಣೇಕೇತ, ಹಾವುರಾಣಿಗೂ ಇದೇ ಹೆಸರೆಂದು ಕೆಲವರನ್ನುವರು" (ಸಿದ್ಧಾಂತ. ೫೫): ಈಗ ಹೋಗಿ ಬದುಕಿದ ಹಾವನ್ನೋ ಹಾವುರಾಣಿಯನ್ನೋ ತೆಗೆದು ಕೊಂಡು ಬರುವುದು ಬೇಡ (ಕಸುಹೂ. ೯೦). [ಪಾವು+ಅರಣೆ]

**ಹಾವರಿ** (ನಾ). ಒಕ್ಕಲಗಿತ್ತಿ ; ಪಾವರಿ : "ಪಾವರಿವೊಕ್ಕಲಗಿತ್ತಿ" (ಕಜೂ ೦೯೬). [< ಸಂ. ಪಾಮರೀ]

**ಹಾವಲಿ** (ನಾ). ಕಾಲುರೂಪಾಯಿಯ ನಾಣ್ಯ ; ನಾಲ್ಕಾಣೆ : ಕಾಕಾಳರು ಆ ದಿನ ಪಾವಲಿ ಬಿಚಿ ತಿಂದವರು ಅದನ್ನು ಹೊಗಳದ್ದೆ ಹೋಗ ಲಿದ್ದು (ಕೇತಕಿ. ೬೫): ಮಾತೆಯು ವಿಶೇಷ ದಯಾಭಾವದಿಂದ ಏಳು ಪಾವಲಿ ತೆಗೆದು ಕೊಡುವಳು (ಕಮಲ. ೦೯).
[ ← ಹಿಂ. ಪಾವಲೀ ; ಮರಾ. ಪಾವಲಾ, ಪಾವಲೀ ]

**ಹಾವಸೆ**, ಪಾಂಶೆ, ಪಾಂಸೆ, ಪಾಚ್ಛಿ, ಪಾಚಿ, ಪಾಮಾಜ, ಪಾಸ್ಯಿ, ಪಾಸ್ಯೆ, ಹಾಂಸೆ, ಹಾಚಿ, ಹಾವಂಚಿ, ಹಾವಚಿ, ಹಾವಟಿ, ಹಾವಸಿ, ಹಾವಸೆ, ಹಾವುಸೆ (ನಾ). ೧. ನೀರಿನ ಮೇಲೆ ಅಥವಾ ತೇವವಾದ ಬಂಡೆಗಳ ಮೇಲೆ ಬೆಳೆಯುವ ಒಂದು ಬಗೆಯ ಹಸುರು ಸಸ್ಯ : ಶೈವಾಲ : "ಶೈವಾಲಃ ಜಲನೀಲಿ ಶೈವಲವುದು ನೀರೊಳಾದ ಪಾವಸೆಯೆನಿಕುಂ" (ಶಬ್ದಕೋ. ೨೫-೧೪): ಎಳೆದೆಸಿರ್ದ ಪಾವಸೆಯ ತಣ್ಣೆಲೆಯಿಂದಮೆ ನೆಯ್ದು ಸೀರೆ ಶೀತಳೆಯ ಬಾದರಂ ಪೊಸ ಮೃಣಾಳದ ತೋಳ್ವಳೆ . . . ಸಿರಿಕಂಡದ ... ಕಣ್ಬೊಳೆ ನೆಲಸಿರ್ದರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ (ಶಾಂತಿಪು. ೪೫೯): ಹರಿದ ಪಾರಿ ನೆಟ್ಟಿ ಪಾವಸೆ ಮುಸುಕುವುದೇ (ತೋರಣಸ. ೯೦-೩೩೬) : ಇದು ಪರಿದಿರ್ದ ಪಾವಸೆ ಮುಗಿಲ್ಮುಜಿಯೆಬಸಿವಿಂಬುಗೆಟ್ಟು ಕಂದಿದ ಪಟಿಗಂಬುಗನ್ನಡಿ ಪೊಲೇನಿಲಿದುದುದೊ ಚಂದ್ರಮಂಡಲಂ (ಚಂದ್ರಕ. ೯-೩). **ಪಾಂಶೆ** : ೧. ನಂದ ವಾರಿಯಲ್ಲಿ ಪಾವಸೆ ತನ್ನಿಂದ ಒದಗಿದಂತೆ ಚರಿಸೆ ಪಾಂಶೆ [ಪಾಠಾಂ. ಪಾಸಿ, ಹಾವಸೆ] ಹಬ್ಬಿದು ನಿರ್ಮಲವಾದಂತೆ (ಜ್ಞಾಸಾ. ೪. ೬೫-೧೧೧). **ಪಾಂಸೆ**: ೧. ತ್ರಿವಿಧದ ಸತ್ಯದ ಸರ್ವೇಂದ್ರಿಯ ಬೆಳೆದ ಪಾಂಸೆ [ಪಾಠಾಂ. ಪಾಸೆ]ಯ ಮಜೆಯಲ್ಲಿ ತಪ್ಪಿಹೋಯಿತ್ತು ಮತ್ತ್ಯ (ಸಕಪ. III, ೫೪-೧೧೧: ಸವಚ. ೬೦-೪೦೬ ಸೋ : ನಿರ್ಮಲೋದಕವಾ ಪಾಂಸೆ ಪರಮಾತ್ಮನಂ ಜೀವಭಾವಮಿವು ಮುಸುಕಿಕೊಂಡಿರ್ಪಂತೆ ಜಗದೊಳಖಿಳ ಅರಸುಗಳ ವೇಷ್ಟಿಸಿರ್ಪುದು ಕ್ಷಾತ್ರತಾವಾಸಂ (ಚಾಮ. ೬-೨). **ಪಾಚ್ಛಿ** : ೧. ಸರಸಿಜವೆಲ್ಲ ಬೇಯೆ ಕೆಸರುಂ ಜಲಮುಂ ತವೆ ಪಾಚಿ ಕರ್ಗೆ ಪಲ್ಗಿರಿವ ತೆರಂ ಸರಂ ಕರಮೆ ಬೀಡೆಗಳಾಗಿರೆ ಪಕ್ಷಿಸಂಘಮಾ ಸರವರದಿಂದೆ ಪೋದುವು (ಚಂದ್ರಕು. ೬-೧೧೭) : ಅವನು ತನ್ನ ಹಟ್ಟಿಗೆ ಹಾಸಿದ್ದಾಗೆಲ್ಲಿ ನೀರ ಪಾಚಿ ಹೊಚ್ಚಿ ಹೋಡವನು ಮೆಚ್ಚ ಮಾಡತಾವೊ ಉಂಡ ಉಣ್ಣಾಗಳಿಗೆ ಪಾಚಿ ಸರಿಸಿದಾಗ ಕಪ್ಪುನೀರು ಬರಿತಾವ ಒಳಗ ಒಳಗೆ (ಗಂಗಾಕ. ೮೭-೬): 'ಶೈವಲಿನಿ' ಎಂದರೆ ಪಾಚಿ ಕಟ್ಟಿದ ಹೊಳೆ (ಅಂತಮ. ೨೧೦). **ಪಾಚಿ** : ೧. ಒಂದು ಸಾಮಾನ್ಯ ಹುಲ್ಲು ಪಾಚಿಯ ವಿಚಾರವನ್ನು ಕೂಡ ಸೋಮೊಡಿ ಗಳಿಂದ ತಿಳಿಯಲು ಸಾಧ್ಯವಿಲ್ಲ (ಜೀವಾಶ್ಚ. ೭). **ಪಾಮಾಜ** : ೧. ಕಲ್ಲಿನ ಮೇಲೆ ಕಾಲಿರಿಸಿದರೆ ಪಾಮಾಜಯಿಂದ ಜಾರಿ ಆತ ನೀರನ್ನು ಸೇರ ಬಾರದು (ಮ್ಯಂಬಾ. ೨): ಅಮೇರಿಕಾ ದೇಶಕ್ಕೆ ಸಮೀಪದ ಶಾಂತಸಾಗರ ದಲ್ಲಿ ಒಂದು ಜಾತಿಯ ಸಮುದ್ರ ಪಾಮಾಜಯು ನೂರಾರು ಮೈಲುಗಳ ತನಕ ಬೆಳೆದು ಹಬ್ಬಿರುತ್ತದೆ (ಶಾಂಕ್ರ. II. ೬೬೫). **ಪಾಸ್ಯಿ** : ೧. ಮತ್ತೊಂದು ಕಡೆಗೆ ಮೆಲ್ಲ ಲ್ಲನೆ ತಿರುಗಿ ನೋಡಲು ಒಂದು ಕಡೆ ಗೋಡೆಯು ಸಿಕ್ಕಿತು. ಅದೆಲ್ಲಾ ಪಾಸಿ ಹಿಡಿದು ಹೋಗಿದ್ದಿತು (ರಾಜಾಮು. ೬೬). **ಪಾಸ್ಯೆ** : ೧. ಹುಟ್ಟುಗಿಲ್ಲದೆ ಒಂದು ಜಗೆ ಪಾಸೆಯನ್ನು ಜನರು ತಿಂದು ಜೀವಿಸುವರು. ಈ ಪಾಸೆಯು ಭೂಮಿಯ ಮೇಲೆ ಸಿಕ್ಕುವುದು (ಚಿಚಿತ. ೧೪೨). ೨. ಹಲ್ಲುಗಳಮೇಲಿನ ಕಿಟ್ಟ. **ಕೊಳೆ** : ನಲ್ಲಳಗಲ್ದ ಅಲುರ್ವಿರೆ ಮೆಲ್ಲದೆ ಬಾಯಲ್ಲಿ ಪಾಸೆದಳೆದು ರಥಾಂಗಂ ಪುಲ್ಲಶರನಸುಗೆ ಗಾಣದ ಪುಲ್ಲಂ ಕರ್ಚಿದವೊಲಾಗಳೆ ನೊಪ್ಪಿದುದೊ (ರಾಜಶೇ. ೧೧-೦೩) : ಪುಲ್ಲಶರನು ರುಚಿಯಂ ತಾಳಲಮ್ಮದೆ ಕಾಮನಲ್ಲಿ ಚಕ್ರಗಳು ಘೂರ್ತಳೆಕೊರಗಿ ಭೀತಿಯಿಂಪುಲ್ಲ ಕಚ್ಚಿದುವೊಯೆನೆ ಪಲ್ಲೊಳಂಟಿಹ ಪಾಸೆಯೆ ತೋರ್ಪ್ಯಕರ ಮೆನಿಪುದೊ (ಬಂಗಾರಾ. ೫-೨-೫೪). **ಹಾಂಸೆ** : ೧. ಕಲ್ಲ ಮೇಲಿನ ಹಾಂಸೆ [ಪಾಠಾಂ. ಹಾಸ] ಮಲ್ಲಿಗೆಯರಳ ತನಿಗಂಪು ಹೊಸ ಮೋಹ ನಿಲ್ಲವಿವು ನೋಡ (ಸರ್ವಜ್ಞ. ೦೫೨೬) ; ಈ ಹಸುರು ಹಾಂಸೆಯು ಎಲ್ಲಕ್ಕೂ ನೀಚಜಾತಿಯ ಉದ್ಭಿಜ ವಿರುತ್ತದೆಂಬುದೊಂದು ಮುಖ್ಯ ಮಾತು (ಮಾಂಂಶಾ. ೬ ೨೬೬). **ಹಾಚಿ** : ೧. "ಪಾಂಶಾ=ಹಾಚಿ" (ಶಾಲಕ್ಕ. ೨೫೯) ; "ಜಲನೀಲೀ ಶೈವಾಲಂ, ಶೈವಲಂ—೩ ಹಾಚಿ ಹೆಸರುಗಳು. ನೀರು ಮೇಲೆ ಮುಚ್ಚಿಕೊಳ್ಳುವ ಕೊಳೆಯು ಹಾಚಿ" (ಸಿದ್ಧಾಂತ. ೯೯). **ಹಾವಂಚಿ** : ೧. ಕಡುಹೀಲಿಯು ಝಲ್ಲರಿಗಳ ಗದಣವಾನಾ ನಡೆವ ಬಂದುರಿಗಳ ಕೆಲದೊಳ್ ಪಿಡಿಯಲ್ಕೆ ಸ್ವನ್ನವಾರ್ಧಿಯೊಳದಸಿದ ಹಾವಂಚಿಯಂತಿರದು ಕಣ್ಗೆಸಗುಂ (ಜಾರಪು. ೧೧—೯೪). **ಹಾವಚಿ** : ೧. ಮಂದೆ ಕೂದಲುಗಳೆಂಬ

ಹಾವಟಿಗಳೂ ಭುಜದಂಡಗಳೆಂಬ ಸರ್ಪಗಳೂ (ಶ್ರೀಶ. ೧೩೩). **ಹಾವಟಿ :** ೨. ಎಲ್ಲವ ಬಿಟ್ಟು ಹಲ್ಲ ಸುಲಿಯ ಬಂದೆ ಮುನ್ನಿನಲ್ಲಿಯ ಹಾವಟಿ [ಹಾಡು.ಸೆ] ಹಲ್ಲ ಬಿಡದು ನೋಡಾ (ಶಿವ. III, ೬೩-೦೪೦). **ಹಾವಸಿ :** ೧. ಹಳ್ಳ ಹಾವಸಿ ಹಾವು ಹುಲಿ ಕಾಡಾನೆ ಕೋಣಗಳು . . . ಹೆಮ್ಮರಂಗಳು ಪಲ್ಲವಿಸಿ ಜೀರೆಂಬ ಕಾನನದಲ್ಲಿಯಲಿಸುತ ಬರುತಲಿರ್ದಳು ಮಾಯೆಯಲ್ಲವಾನ (ಶ್ರೀಕುಂ. ೬-೯೩). **ಹಾವಸೆ :** ೧. "ಜಲನೀಲೀ, ಶೈವಾಲಂ, ಶೈವಲಂ— ಈ ೩ ಹಾವಸೆಯ ಪೆಸರು" (ವಾಕಶಾ. ೦೦೦) : ಕಂಬುಹೆಂಬೆನೆ ಕಲ್ಲಿನಲ್ಲಿ ಹತ್ತಿದ ಹಾವಸೆ (೮೦೩ವ. ೪. ೬೯೩-೩೩) : ಕಳಸದ ತಳಿರ್ : ನೀರ ಹಾವಸೆ (ಹುರ. ೦೩೩ ಶ್ರೀಯೋ) : ಬಲ್ಲವರು ಹಾವಸೆಯ ಕಲ್ಲ ತಾ ಮೆಟ್ಟುವರೆ (ಸರ್ವಜ್ಞ. ೬೯೦). ೨. ಸೊರೆವಾಯ ಹಾವಸೆವರಿದ ಪಲ್ಗಳ ಜೋಲ್ವುಟಿಯ ನಸುಮುಚ್ಚುರುಟುಗಿವಿಗಳ ಹಜ್ಜೆಗಡ್ಡದ . . . ಕುಜುಬನು (ಬಸವ. ೨೦-೦೦) : ಮಸುಳಿಸಿದ್ದ ದುಕೂಲ ರದನದೊಳೆಸೆವ ಹಾವಸೆ (ಕುಮಾರ. ೩-೩೩) : ಹಲ್ಲ ಹಾವಸೆಗಳಂ ಮಾಳಲಿಕ್ಕುತುದ್ದುದ್ದಿ ಮುಡಿಯ ಕಟ್ಟಿ . . . ಸಿಂಗಾರ ವಿದು ತವುಗೆಯ್ದು ರಚಿಸಿದರು ಮುನಿಗಳು (೬೬೭ಕು. ೩-೦೦-೯೩). ೩. ಹಸುರುಬಣ್ಣ : ಕಮಲಕೇಸರ ಸೀರೆ ತುಂಬಿಗಳ ಕುಸುರುಗಳು ಹಾವಸೆಯ ರವಿಕೆ ಗಿಳಿಬಣ್ಣ (ಕವ್ವಾ. ೩೬೬). **ಹಾವುಸೆ :** ೧. ಹಾವುಸೆಯು ಅರಿಯನ್ನು ಹಾವಿನಾ ಮರಿಯನ್ನು ಹಾಡುತ್ತ ಬರುವ ಕೊರವೀಯ ಕಂಡರೆ ಹಾದೀಯ ಬಿಟ್ಟು ಮರೆಯಾಗು (ಹ್ಯಾಶ. ೬೩).

[ದೇ.॥ ತವಿು. ಪಾಚ್ಚಿ, ಪಾಚಿ ; ಮಲ. ಪಾಶಿ, ಪಾಶರ್, ಪಾಯಲ್, ಪಾಯಿ, ಪಾಯಿಲ್ ; ತುಳು. ಪಾಚಿ, ಪಾಂಬುಚ್ಚಿ, ಪಾಪುಜಿ, ಪಾಪುಜು, ಪಾಪಜಿ, ಪಾಪಾಜು ; ಕೊಡ. ಪಾಪ್ಪಂಜಿ ; ತೆಲು. ಪಾಚಿ, ಪಾಸು, ಪ್ರಾ.ಪಚಿ]

**ಪಾವಸೆಗಲ್**, ಹಾವಸೆಗಲ್ಲು (ನಾ). ಪಾಚಿ ಮೆತ್ತಿಕೊಂಡ ಕಲ್ಲು ; ಹಾವಸೆ ಹಿಡಿದ ಕಲ್ಲು : ಪಾವಸೆಗಲ್ಲಂ ಮೆಟ್ಟಿದಂತೆ ಸನ್ಮಾರ್ಗಮಂ ವಿಚಾರ ಪರಿಯದೆ (ಧರ್ಮಾಮೃ. ೦೦-೦೦೯). **ಹಾವಸೆಗಲ್ಲು :** ಹಾವಸೆಗಲ್ಲ ಮೆಟ್ಟಿ ಪರಿದು ಗೊತ್ತು ಮುಟ್ಟಬಾರದಯ್ಯಾ ನುಡಿದಂತೆ ನಡೆಯಲು ಬಾರದಯ್ಯಾ (ಬಸವ. ೨೦೦) : ತನಗರಿಯದಂತೆಯೋ ಹಾವಸೆಗಲ್ಲಿನ ಮೇಲೆ ನಡೆದು ಅನಾಮತ್ತಾಗಿ ಅಂಗಾತನಾದ (ದೇಶಪ. II, ೩೯).

[ಪಾವಸೆ + ಕಲ್₃]

**ಪಾವಸೆಗಿಡು** (ಕ್ರಿ). ಪಾಚಿಯೆಂದು ಭ್ರಮಿಸು : ಬಳಗಜೀಯದ ಪಚ್ಚೆಯ ಸಿಲೆಗಳನಂಚೆಯ ಹಿಂಡು ಕಂಡು ಪಾವಸೆಗೆತ್ತಮ್ಮಳಿ ಕರ್ದುಕುತ್ತುಮೇಂ ತಳಮಳಗವ್ವುವೊ (ಶಾಂತಿಪು. ೨-೬೩) : ಸವಕರ್ಣಾಪೂರದೊಂದಲೆದ ಶಿರೀಷ ಮಂಜರಿಯನೀಕ್ಷಿಸಿ ಪಾವಸೆಗೆತ್ತು ತೃಷ್ಣೆಯಿಂ ಬಲವರುಕಿರ್ದುದಂಗನೆ ಯನನ್ನುಖಾಲವಾಲವುಂಡಳಂ (ಕಾದಂಬ. ೦೬೯).

[ಪಾವಸೆ + ಗಿಡು]

**ಹಾವಸೆಗೊಳ್** (ಕ್ರಿ). ಪಾಚಿಗಟ್ಟು : ಹಾವಸೆ ಹಿಡಿ : ಪೊದಟ್ಟ ಕಣ್ಬನಿಯ ಬಾಸಳ ತಣ್ಣಸದೊಳ್ ಪಗಲ್ಗು ಪಾವಸೆಗೊಳೆ ಕಾರ ತಂದಲೊಳಗೊಂದಲೆ ದಯಾಗಿರೆ ನಟ್ಟು ಸೊರ್ವ ಪಾಟ್ಟುಸದಿಯ ಪೆಣ್ಣ ಜೋಹದವೊಲೊಪ್ಪಿದ ಳೊರ್ವಳನಂಗರಾಗದಿಂ (ಶಾಂತಿಪು. ೬-೬೩) : ಪಸರಿಸಿದ ಬಯಸ್ಸುಡು ಪಾವಸೆ ಗೊಂಡಿರೆ ಗದಣದೇತುವೇವಿಂದಿಂ ನುಬ್ಬಸಲೆಯೆಂಗೆತ್ತಿಪ್ಪುರೆ (ಲೀಲಾವ. ೩-೯೬) : ಮೇಗೆ ನೆಗೆಪಿಸುವ ಪಾವಸೆಗೊಂಡ ಪೇರಾವೆಯಂ ತಾವರೆಯ ಕೊಪೆಯೆಲೆಗೆತ್ತಜೀಯದೆಜಿಗಿದೊಡದು ತೆಜಂಬೊಳೆಯ ಬೆಚ್ಚಿ ಬಿಚ್ಚುತು ಬಾಚಿ ಕಳವಳಪ ವಿಕಳಕುರವಕನಿಕರಂಗಳೊಳಂ (ತಂದ್ರಕು. ೩-೯೦ ವ).

[ಪಾವಸೆ + ಕೊಳ್₁]

**ಹಾವಸೆವಲ್**, ಹಾವಸೆಹಲ್ಲು (ನಾ). ಕೀಟುಗಟ್ಟಿದ ಹಲ್ಲು; ಕೊಳೆಗಟ್ಟಿದ ಹಲ್ಲು : ಮುರುಂಟಿದ ಕರ್ಣಮೂರ್ವಿ ಕೆಕ್ಕರಿಸಿದ ಕಣ್ಣುಜಂಟುದಲೆ ಪಾವಸೆ ವಲ್ಮಿಗೆ ಗಂಟುವುರ್ಬುಗಳ್ (ವೃಷಭ. ೦೦-೬೦). **ಹಾವಸೆಹಲ್ಲು :** ಮುಚಿದ ಹಾವಸೆಹಲ್ಲ ಹಜುವಾಯ ತುಟುಚಿಗಳು ಬತ್ತಲೆಯ ಬಾಳ್ಮನಂಗಳು ಸುತ್ತ ಮುತ್ತಿರಲು (ಶಿಖಾಸಿ. ದೀ. ೨೩೯-೨೩). [ಪಾವಸೆ + ವಲ್]

**ಹಾವಾಡೆ** 'ಪಾವುಡ್ನ' ನೋ.

**ಹಾವಾಣೆ** (ನಾ). ಕಾಲುಆಣೆ ಬೆಲೆಯ ತಾಮ್ರದ ಒಂದು ನಾಣ್ಯ ; ಮೂರು ಕಾಸಿನ ಬಿಲ್ಲೆ; ಕಾಲಾಣೆ: ಇಬ್ಬರಿಗೆ ಎರಡೆರಡಾಣೆಯಂತೆ ಲೆಕ್ಕ ಮಾಡಿ, ಹದಿನಾರು ಹಾವಾಣೆಗಳನ್ನು ಎಣಿಸಿಯೂ ಕೊಟ್ಟರು (ಸ್ವಕೃಪೊ. ೬೯); ಏನಿದ್ದರೂ ಹಾವಾಣೆ, ಆಣೆ ವ್ಯಾಪಾರ. ಅಷ್ಟರಲ್ಲೆ ತೃಪ್ತಿ ಅವರಿಗೆ (ದೇಶಪಂ. ೬೦). [ಹಾವು₂ + ಆಣೆ]

**ಹಾವಿ** (ಗು). ಹೆಜ್ಜೆಗೆ ಸಂಬಂಧಿಸಿದ : ಕಾಲಮಾನದ ಹಾಗೆ ತಾಲಮಾನವ ಪಲ್ಲಟಿಸುತ್ತ ಹೆಜ್ಜೆಯ ಹಾಕುವುಲು ಹಾವಿ ಪದ್ಧತಿಯಲ್ಲಿ ಪದ ಕೂಡಿ ಬರುವಾಗ ಯಾರಾರ ಗುರು—ಲಘು ಎಣಿಸುವರೆ ? (ನಟರಾಗ. ೨೩-೯೩೬). 'ಪಾವು₂' ಪರಾ. [← ಹಿಂ. ಪಾಂವ್]

**ಹಾವಿಟ್ಟಿಗೆ** (ನಾ). ಒಂದು ಊರಿನ ಹೆಸರು ; ಈ ಬಿಜಾಪುರಜಿಲ್ಲೆಯ ಇಂಡಿ ತಾಲ್ಲೂಕಿನಲ್ಲಿ ಇರುವ ಈಗಿನ ಸಾಲೋಟಗಿ ಎಂಬ ಊರು : ಪಾವಿಟ್ಟಿಗೆ ಇತಿ ಖ್ಯಾತನಾಮ ಗ್ರಾಮೇ (ಎಇ. IV, ೬೦-೦೯ ; ೯೪೫) ; ಈ ಊರಿನ ನಿಜವಾದ ಹೆಸರು 'ಪಾವಿಟ್ಟಿಗೆ'. ಅಲ್ಲಿಯ ಶಾಲೆಯಿಂದಾಗಿ ಅದರ ಹೆಸರು 'ಶಾಲಾಪಾವಿಟ್ಟಿಗೆ' ಯಾಗಿ, ಇದೇ ಮುಂದೆ 'ಸಾಲೊಟಗಿ' ಎಂದಾಯಿತು (ಕಶಾಅ. ೨೦೯ ಅಡಿಟಿ). [?]

**ಪಾವಿತ್ರ್ಯ** (ನಾ). ಶುದ್ಧತೆ ; ಪವಿತ್ರತೆ ; ಶುಚಿತ್ವ : ಸದ್ವಿರದ ತುಟಿ ಬೆರಳಸೊಳು ಸುಳಿವ ಮಾರುತದ ಪಾವಿತ್ರ್ಯದೊಸಗೆಯನು ತಳೆದು ಬಹ ನೆಲದ ನೆಸೆದೊಡನೆ ನೆರೆಗೊಳುವ ನೇತ್ರಾಂಬುತೀರ್ಥಗಳ . . . ಸಂಘಟಿಸಿ ತಪ್ಪಧಾಭಿಸ್ವವಾದೀಶ್ವರಪ್ರಕೃತಿರೂಪಂ (ಮಹಿರು. ೩೯-೯) : ವ್ಯಕ್ತಿಯ ಪಾವಿತ್ರ್ಯದಿಂದ ದೊಡ್ಡ ಹೆಸರು ಬಂದಿತ್ತು (ಕಂಪಹು. ೯೦). [ಸಂ.]

**ಪಾವು₁**, ಹಾವು (ನಾ). ೧. ನೆಲದ ಮೇಲೆ ಸರಿದುಕೊಂಡು ಹೋಗುವ ಪ್ರಾಣಿ ; ಸರೀಸೃಪವರ್ಗಕ್ಕೆ ಸೇರಿದ ಒಂದು ಜಂತು ; ಸರ್ಪ : ದಕ್ಷಿಣಭಾಗದಾ ಮಾದುರ ಉಯ್ಯಿನಿತಾವ × × ಶಾವದೆ ಪಾವು ಮುಟ್ಟಿ ದೊನ್ . . . ನೋಂತು ಭಕ್ತಿಯಿವುರ್ ಅಕ್ಷಯಮಣಕ್ಕೆ ರಮ್ಯಸುರಲೋಕ ಸುಕಕ್ಕೆ ಭಾಗಿ ಆ × × (ಎಇ. II, ೨೦-೦ ; ಕು. 700) ; ಈಶ್ವರನಂತೆ ಪಾವಂ ತೊಟ್ಟಿರ್ದ ಬೇತಾಳರಿಂ . . . ಅತಿಭಯಂಕರಾಕಾರವುಪ್ಪುದು (ಕಾವ್ಯಾ. ೩೩೯ ಊತ್ತ್ರ್ಯ) ; ತಗುಳ್ದು ಪಾಲನೆರೆವಿರ್ ಪಾವಿಂಗೆ ದಾಯಾದ್ಯರಂ ಪಿರಿಯ ವರ್ಮಾಡಿದಿರ್ (ಶುಕಶಾ. ೨-೬೯). ೨. ರಾಹು : ನೆರೆಯ ಬೆಳ್ದಿಂಗಳನು ಪಾವು ಗಿಡಿದಂತೆ . . . ಎತ್ತಣಿಂದೆರಗಿತೋ ಮೃತ್ಯು ! (ಹೊಂಗಳು. ೨೩-೯). **ಹಾವು :** ೧. ಗರುಡನಂತೆ ಹಾವಿನ ಹಟವಿಗೆಯನಾರಯ್ದು ನೋಡಿಯುಂ (ಗದಾಯು. ೬-೨೩ ವ) : ಹಾವಿನ ಬಾಯ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ (ಕುಹಾರು. ಬ. ೬೯-೦೩೩) ; ಬೇವು ಬೆಲ್ಲ ದೊಳಿಡಲೇನು ಫಲ ಹಾವಿಗೆ ಹಾಲೆರೆದೇನು ಫಲ (ಶ್ರೀಗಂತ. ೦-೬೦ ಪಲ್ಲವಿ) ; ಎಲೆ ಹಾವೆ ! ಹೊಟ್ಟೆ ಹೊಸೆಯುವ ಜಂತು ! ನಿನಗೆ ಕಿವಿಯಿಲ್ಲ ; ನಾಲಗೆ ಯೆರಡು ; ಹಲ್ಲೊಳಿದೆ ವಿಷವು (ಉದ್ಯಾಗ. ೩೨-೯). ೩. ಒಂದು ಬಗೆಯ ವಿಮಾನು ; ಹಾವುವಿಮಾನು : ಬಂಗಡೆ ಹಾವು . . . ಹಂದೆಗನಾನೆಮೊಗ ನೆಂಬ ಪರಿಪರಿಯ ವಿಮಾನ್ಗಳಂ ಗುದಿಗೆಯ್ದರು (ಕಹಕಾ. ೩-೯೩).

[ದೇ.॥ ತವಿು. ಪಾಮ್ಬು ; ಮಲ. ಪಾಮ್ಬು ; ತುಳು. ಹಾವು ; ಕೊಡ. ಪಾಂಬ್ ; ತೆಲು. ಪಾಮು ; ಕೋಲಾ. ನಾಯ್ಕೃ. ಪಾವ್ ; ಪರ್ಜಿ. ಬಾವ್ ; ಗಡಬ. ಬಾವ್, ಬಾಮು. / ಪ್ರಾ. ಪಾವ]

**ಪಾವು₂** (ನಾ). ೧. ನಾಲ್ಕನೆಯ ಒಂದು ಭಾಗ ; ಕಾಲುಭಾಗ ; ಚತುರ್ಥಾಂಶ : ಪಾವು ಗಿಂಚಿ ತೂಕ (ಕುಂಬಳ. ೬. ೯-೦೯೯).

'ಪಾವುಸೇರು' ಪರ್ಯಾ. ೨. ಕಾಲುಸೇರಿನ ಅಳತೆ ಮತ್ತು ಅದನ್ನು ಅಳೆಯುವ ಸಾಧನ : ಮುಂದೆ ಸವಾಸೇರು ಮೂವತ್ತೆರಡು ಚತುಃಷಷ್ಟ್ಯರ್ಧ ಸೇರರ್ಧಪಾವು ಸಂಧಿಸಿದ ಸೇರು ನಾಲ್ವತ್ತು ಗದ್ಯಾಣವಂ ಪಾವಿಕದು (ಚಾವುಂ. ೬೩-೬) : ತೊವೆಗೆ ಹೆಸರು ಜನ ೧ಕ್ಕೆ ಪಾವಿನಲ್ಲು ಕಾಲ ೧ಕ್ಕೆ ಮ ೪೦॥ ಗ ಗ ೪ ತುಪ್ಪ ದಿನ ೧ಕ್ಕೆ ಜನ ೧ಕ್ಕೆ ಪಾವು ಅರೆ (ಎಕ. VI, ಶೃಂಗೇ. ೦೦- ಕ್ರಿಶ ೬೬೨ : 1652) : ಪಡಿಯಲ್ಲೀ ಹಿಡಿತ ಓಡಿಯಾದವನು ಪಾವಲ್ಲಿ ಓಡಿಯೋ ಪಾಪವುಟೀ (ಹುಟ್ಟಿ. ೦೯೨). ೩. ಪಾದ : ಕಾಲು : 'ಪಾವುಗೊಜಡು' ಪರ್ಯಾ.

[< ಪ್ರಾ. ಪಾಅ. / ಹಿಂ. ಮರಾ. ಪಾವ್. ಸಂ. ಪಾದ]

**ಪಾವುಂಜೆ.** ಪಾವುಜ (ನಾ). ಒಂದು ಬಗೆಯ ವಾದ್ಯ : ಚಂಚಿಯ ಚಿನುಟಿಂಪೆ ಕುಕ್ಕುರು ತುಡುಮು ಪಾವುಂಚೆ[ಜೆ] ಕಿಂಕಿಣಿಗಳನೆತ್ತಿ ಜೆಂಡೆಯು ಕಳದಿಕ ತೋ ದಿಗಿದಿಮಿಕೆಂದು ರಂಜನೆ ವಿಗೆ ಕೇಳಿಸಿದರು (ಜಕ. ೦೩-೦೬) : ಕುಕ್ಕುರು ಡಮರುಗ ಪಾವುಂಜೆಯ ಜೇನು ಡಕ್ಕೆ ನಾಟ್ಯಾನಕ ಚಂಪು (ಬ್ರ.ಕತ. ೯೦-೦೦೩). **ಪಾವುಜ** : ತಾಳ ಮದ್ದಳೆ ಪಾವುಜ ಶ್ರುತಿ ಮುಖವೀಣೆ ಸಾಳಂಗ ಶುದ್ಧಗಾನಯುರ . . . ಮಾಸೆಗಳೊಪ್ಪಿರುವ (ಸೋಮಕ. ೩-೩೨). [ ?. / ಪ್ರಾ. ಪಾವಯ ]

**ಪಾವುಕೊರಡು** 'ಪಾವುಗೊಜಡು' ನೋ.

**ಪಾವುಗಿಲು** (ಕ್ರಿ). ಹಾವೆಂದು ಭ್ರಮಿಸು : ಹಾವೆಂದು ಎಣಿಸು : ಧೂಪಧೂಮಯಷ್ಟಿಗೆ ನವಿಲೊಸೆದೆಜಿಗುವುದು ಪಾವ[ಪಾಠಾಂ. ಪಿ.ವೆ]ಗೆತ್ತಾಪುರದೊಳ್ (ಅಜಿ. ೨-೦೯). [ಪಾವು$_1$+ಗಿಜು]

**ಪಾವುಗುಲಿ** (ನಾ). ಹಾವನ್ನು ಕೊಲ್ಲುವಂತಹುದು : ನವಿಲು. ಮುಂಗುಸಿ ಮುಂತಾದುವು : ಪಾವುಗುಲಿ ನಕುಲೋ ಮಯೂರೋ ವಾ(ಕನ್ನಾಸಾ. ೫೯೭ ವ್ಯಾಖ್ಯ). [ಪಾವು$_1$ + -ಕುಲಿ$_1$]

**ಪಾವುಗೆ.** ಹಾವಿಗೆ. ಹಾವುಗೆ$_1$ (ನಾ). (ಮರ. ಚರ್ಮ ಇತ್ಯಾದಿಗಳಿಂದ ಮಾಡಿದ) ಮೆಟ್ಟು : ಪಾದುಕೆ : ಪಾದರಕ್ಷೆ : P ಸಾಮಾನ್ಯವಾಗಿ ವಿರಕ್ತರು ಧರಿಸುವ ಪಾದುಕೆಗೆ ಈ ಹೆಸರನ್ನು ಹೇಳುತ್ತಾರೆ : ವಿಷಮೋಚಿಕೆಗಳೆಂಬ ಪಾವುಗೆಗಳುಮಭೇದ್ಯಮೆಂಬ ಕವಚಮುಂ . . . ಪದಿವೆ ಪ್ಪಾಸಿರ ಮ್ಲೇಚ್ಛರಾಜರುಮಾತ್ಮೀಯಸಾಮ್ರಾಜ್ಯಪರಿಚ್ಛೇದಮಾಗೆ (ಆದಿಪು. ೧೩-೩ ವ): ಅನಂಗಟಂಕೃತಿಸ್ವರಮೆನೆ ಪೊಣ್ಮೆ ಪಾವುಗೆಯ ಗೆಜ್ಜೆಯ ಮೆಲ್ಲುಲಿ ಬಂದಳೆಂದಳಂಕರಣಗೃಹಕ್ಕೆ . . . ದೇವಿ ಲೀಲೆಯಿಂ (ಅಂಗ್ರಿ.೩. ೦೨-೬) : ನೆತ್ತರ ತಳ್ತ ಬಲ್ಲೆಲೆಯ ಬಿಂದಿಗೆ ಪಾವುಗೆ ಪಂಚಮಸ್ತಸಂ ಚೆತ್ತದ ಕೋಲಿವೊಂದಿ ನಿರೆ ಸಾಧಕ ಚತ್ತರೆ ಬರ್ಪಳೊಪ್ಪಿದಳ್ (ಕಾವ್ಯಾ. ೫೩೩). **ಹಾವಿಗೆ** : ನಿನ್ನ ನಾಲಗೆಯು ನಿಮ್ಮಯ ಮನ್ನಣೆಯು ಮಹಾನುಭಾವಿಗಳ ಚರಣಕ್ಕಂ ಹೊನ್ನಹಾವಿಗೆಯು ಮಾತೆಲೆ ಪನ್ನಗಕಟಕಾ (ಶಿವಶಂ. ೩): ನಿನ್ನ ಮನ ಪ್ರಾಣಗಳು ಹೊನ್ನು ಹಾವಿಗೆಯಾಗಿ ನಿನ್ನ ಚರಣಕೆ ಯೋಗ್ಯಮೆಟ್ಟುಗಳಿ (ಹುಚಾರ. ೦೦-೫) : ಹಿತವಾಗಿ ಬಂದ ಭರತಗೆ ಹಾವಿಗೆ ಕೊಟ್ಟು ವ್ರತವ ಧರಿಸಿದ ಉನ್ನತಮಹಿಮಾ (೭೩ವ್ಯಾಸ. ೬-೫). **ಹಾವುಗೆ$_1$** : "ಪಾದುಕಾ. ಅನುಪದೀನಾ ..ಈ ೨ ಹಾವುಗೆ" (ಕರಾಹು. ೫೨ ೧೫೬) : ಹೊನ್ನ ಹಾವುಗೆಯ ಮೆಟ್ಟಿದವನ ಹಿಂದ ಮಂಟ್ಟಿದ ಕೆಂಜೆಡೆಯವನ . . . ಕೂಡಲಸಂಗಯ್ಯನೆಂಬವನ (ಬಸವ. ೫೮೩) : ಕೆಲದೊಳಕ್ಕಿದ ಹವಳದ ಹಾವುಗೆಯುಂ ಮೆಟ್ಟಿ ನಿಲುವುದುಂ (ಜಗದ್ಗು. ೧೨-೯೯ ವ) : ಹಾವುಗೆಯ ಜೀಗುರಿಯು . . . ಕನ್ನಡಿಯು ವಿವಿಧ ಸವಿವಿಳಾಸಿಯರ ಕರಂಬಕವೈದಿ ತೊಗ್ಗಿಸಲಿ (ಶುದ್ಧಾಂ. ೦೩-೯೩). [< ಪ್ರಾ. ಪಾಉಆ. ಸಂ. ಪಾದುಕಾ]

**ಪಾವುಗೊಜಡು.** ಪಾವುಕೊರಡು (ನಾ). ಮರದ ಪಾದುಕೆ: ಕಹಾವಿಗೆ : ತ್ರಿವಿಧಲಿಂಗಸ್ನಾನವ ಮಾಡಿ ಪಾವುಗೊಜಡ ಮೆಟ್ಟಿ ಪಾವಡವಾಗಲಿ ಚರ್ಮಾಸನವಾಗಲಿ ದರ್ಭೆ ಚಿತ್ರ ಮೊದಲಾದಾಸನದಲ್ಲಿ ಮೂರ್ತವ ಮಾಡಿ (ಚನ್ನಬ. ೯. ೮೩-೦೬೬). **ಪಾವುಕೊರಡು** : ಒಂದೇ ಮರದ ತುಂಡನ್ನು ಕೆತ್ತಿ ಮಾಡಿದ ಪಾದರಕ್ಷೆ : ಮರದ ಅರೆಜೋಡು ; ಪಾವುಕೊರಡು (ಶಿಪಿಇ. ೩೦೪೨). [ಪಾವು$_2$ + ಕೊಜಡು (< ಕೊಜಂಡು)]

**ಪಾವುಜ** 'ಪಾವುಂಜೆ' ನೋ.

**ಪಾವುಡ$_1$.** ಪವಡೆ, ಪವಾಡ$_2$, ಪಾಗುಡ$_1$. ಪಾವಡ$_1$. ಪಾವಡೆ. ಪಾವಾಡೆ, ಪಾವುಡೆ$_1$, ಪಾಹುಡ$_1$ (ನಾ). ೧. ಬಟ್ಟೆ ; ವಸ್ತ್ರ : ಕಾ ಗಾಂಧಾರಿ ವಲ್ಲಭನಿಳೆಯೊಳಾರುವ ಕಾಣನೆಂಬುದನಳುಕಿ ಕಂಡಳು ತನ್ನ ಕಣ್ಣಿಗೆಪಾವುಡವ ಕಟ್ಟಿ ನಳಿನಮುಖಿ ತನ್ನಾತ್ಮಧರ್ಮದ ಕಳೆಯ ಕೆಡಿಸದೆ ನಡೆವುತಿಪ್ಪಳು (ಸಂಕಥ. ೦೯-೨೯): ಪರಚಂದ್ರಿಕೆಯ ಪಾವುಡಕೆ ಶೋಭಿಸುವ ಪೊಂಬರಹದ ತುಳ್ರ ದೂಮಟದ ಸ್ಮರಬಾಣಗಣಿಯಂತೆ ನಿಜಾವಿಡಿದುಡಿಸಿದರ್ ದರಹಾಸ ಮುಖಿಗೆ ಸಂಭ್ರಮದೆ (ಸೋಮಕ. ೨೩-೦೩): ಪಾವುಡ ಕುಂಚ ಕಾಳಂಜೆ ಕನ್ನಡಿ ವೆಜ್ ಹೂವಿನ ಬೀಸಣಿಗೆಗಳ ಭಾವಕಿಯರು ಪಿಡಿದಾಕ್ಷಣ ಶ್ರೀರಂಗದೇವನ ನೋಲೈಸುತಿಹರು (ಕಂಕಾ. ೩-೦೦೫) : ಮಹಾರಾಜರು ಕುಳಿತುಕೊಳ್ಳುವ ಉಚ್ಚಾಸನದ ಪಾವಟಿಗೆಯಿಂದ ಮೊದಲು ಮಾಡಿ ಓಲಗಸಾಲೆಯ ಮುಂಬಾಗಿಲವರೆಗೂ ದಾರಿಯನ್ನು ಗುರುತಿಸುವಂತೆ ಹಾಕಿದ್ದ ಕೆಂಪು ಮಖಮಲ್ಲಿನ ಪಾವುಡ (ಚಾಣಯೋ. ೩೬). ೨. ತಲೆಗೆ ಸುತ್ತುವ ವಸ್ತ್ರ: ಪಟಗಾ : ರುಮಾಲು : ಪೇಟ : ತಿಳಿಗಾವಿಯಂಗಿಯಿಂ ಶಾಟ ಪಾವುಡಗಳಿಂ . . . ರಾಜಿಸಿ ಪೋಪ ಚೆಲುವ ಹರೆಯದ ಸತ್ಯಶೋಧಕನ ವೇಷಮಂ ನೆಲದೊಳೀಕ್ಷಿಪರ ಕಂಗಳ್ತಣಿಯವೇ (ಕುಮುದ. ೯-೨೦) : ಈ ಪಾವುಡ ಹರಿದುಬಿಟ್ಟಿದೆ. ಎಂದು ಪಾವುಡವನ್ನು ತೋರಿಸಿದನು (ಚಯುಂಕ.೮೫). **ಪವಡೆ** : ೧. ಇವನೆಲ್ಲಾ ಸಮಾನಂ ಕೊಂಡು ಪುಡಿಮಾಡಿ . . . ಕಂಚಿನ ಹರಿವಾಣದಲ್ಲಿ ಹಾಕಿ ತಾಮ್ರದ ಚೊಂಬಿನಿಂದ ಮರ್ದಿಸಿ ಆಮೇಲೆ ಸಣ್ಣ ಪವಡೆಗೆ ಹಾಕಿ (ಗೌಟುಶಂ. ೩೯-೬). **ಪವಾಡ$_2$** : ೧. ಜೋಡಿಸಿದ ಪಾಂಬೂನವದ ಪಂಪಾಡುಗಳ ಪಲ್ಲವದ ಫಳಿಯ ಪವಾಡಗಳ ಕೇತನ ನಿಕೇತನವೆಸೆದವಲ್ಲಲ್ಲಿ (ಕೂಡಲಾ. ೫-೨-೨೫). **ಪಾಗುಡ$_1$** : ೨. "ಮುಂಡಾಸ. ರುಮಾಲ. ಪಾಗು. ಪಾಗುಡ (ಪಾವುಡ). ಪಾಗೋಟಿ. ಪಗಡಿ" (ಕಂಮುಹು. ೯೦). **ಪಾವಡ$_1$** : ೧. ಶಿವನ ಗೃಹಣೆಯುಂ ಶೋಧಿಸುವುದಿಲ್ಲವೊ ಪಾವಡವ[ಪಾಠಾಂ. ಡೆಯ]ನಿಕ್ಕಿ (ಚಕ್ಷು. ೯೬-೧೫) : ಕುಂಭಪೊಡೆವಡೆ ಮೇಲುಮುಸುಕಿರ್ದ ಪಾವಡದಿ ಅಂಟು ಗಟ್ಟಿಯುಮಾಗಿ ನೆಲಕೆ ಜಾಳದೆ ಇರಲು ಕುಂಭಿನೀಶಗೆ ಪೇಳಲು (ತ್ರಿಶರಾ. ೦೦-೩೬): ಪೊಳೆವ ದುಗುಲದ ಪಾವಡವನೆಡಬಲದೆ ಪಿಡಿದರು (ಕಾವೇಪು. ೬೫-೧೧). ೨. ಬೋಳುಮುಂಡೆಯು ಬೊದಡೆ ಪುಸ್ತಕ ತೋಳ ನಲ್ಲಾಧಾರ ಕಾವಿಯ ಹೋಳು ಪಾವಡವತ್ತಮಾಡಿಯ ಅಧಿಕ ಮುಟ್ಟಲದ ಭಾಳಲೋಚನ ಬ್ರಹ್ಮರೆಂಬೊಲು . . . ಸುವಿರಕ್ತಮೂರ್ತಿಗಳೊದಗಿ ತಮ ಲಕ್ಷ (ಶರಣ. ೫೯೩-೩): ನೀರಲ್ಲಿ ನಿಂತಿರುವ ನೀಲಿಪಾವಡದಣ್ಣ ನೀರು ಕಟ್ಟಾವು ಬದಿಗಾಗೊ (ಜಕ್ಕಾ. ೯೯). ೩. ಹೆಂಗಸರ ಒಳ ವಸ್ತ್ರ; ಒಳಲಂಗ : (೯). ೪. (?) : ತಾನು ಜಂಗಮಾರ್ಚನೆಯ ಮಾಡುತ ಪೂಜಿಸಿಗೆ ಮೆಚ್ಚಿದೆಯೆನುತಲಿ ಅಸ್ಥಾನಕೆ ನಡೆವಾಗ ಪಾವಡವ ಪಾಡುತಲಿ (ನಂದೀ. ೪ ಸೂಚಕ). **ಪವಾಡೆ** : ೧. ಭಾಜನದ ಕಂತಕ್ಕೆ ಪಾವಡೆಯ ಬಣ್ಣಿಸಲಾಗಿ ವ್ರತಕ್ಕೆ ಬೀಜ ಮೊದಲಾದುವನ್ನು (ಸರ್ವ. ೧೮೮-೮೬೫): ಭಾವಿಪುದಪಟಿತ್ರದೊಳಂ ಪಾವಡೆ[ಪಾಠಾಂ. ಟ] ಯೊಳ್ ಕಟ್ಟಿ ಪೊಗೆಯೊಳಿಟ್ಟುವನಿಂಬಿಂ ಪಾವಡದಿರ್ದ ಪಿಡಿಯೆ ದುಯ್ಯಾಚ್ ದಾಪಿಂಗಂ ಪಾಟ್ಟಪ್ಪುದೊಂದು ಚೋದ್ಯಮಾ (ಚಕುರ. ೯-೫೩): ಮಡಿಕೆ ತುಂಬಿ ಪಾವಡೆಯ ಕಟ್ಟುವರಲ್ಲದೆ ಸರ್ವಾಂಗದ ಸದಾಚಾರದ ಪಾವಡದಲ್ಲಿ ಕಟ್ಟುವರನಾರನೂ ಕಾಣೆನಯ್ಯ (ಸಿದ್ಧೇಶ. ೦೦೦.೩೦೭): ಬಟ್ಟಗಳೆಸೆಗೆ ನೀರ್ವೊಯಿದು ಪಾವಡೆಯುಮಂ ಕಟ್ಟಿ . . . ಬೇಯಿಸಲು ನೀರ್ವಕ್ತಿಗೆಯು

ಪೆಸರನಾಂತು ಸುತುತರಮಾಗಿರ್ಪುದು (ಸೂಕಶಾ. ೦-೮೯). ೨. ಕರದೊಳಗಣ ಕಡುಗತ್ತಿ ಕಲ್ಬೆಯಸು ಹುಸಪದಿಂ ಪೊದ್ದು ಪಾವಡೆಯು ಸಿರದೊಳು ಕಟ್ಟಿದ ಹುಳಿಗಾಜಸು ಭವ್ಯನೆರಪಿಯ ನೋಡುತಿರ್ದ (ಹೇಮಂತ. ೨ ೦೩). ೩. ನಡೆಮಡಿ : ಹಡದಿ : ವಸುಂಧರಾಪಾಳಯುಪಾವನಸುಚರಿತ್ರಗೆ ಪಾವಡೆಯುಂ ಪಾಸಲುಂ . . . ಆತ್ಮೀಯಪರಿಜನಮುಂ ಪೆಸರ್ವೆಸರೊಳ್ ಕರೆದು ನಿರಪಿಸಿ ಬೆಸಸಿದಾಗಳ್ (ಪರ್ವಾಮ. ೧೧-೩೩ ವ): ಮಿಸುಸಿಯ ಹಡವ ಚಾಮರ ಕುಂಚ ಕಾಳಾಂಜಿ ಪೊಸಪಟ್ಟೆಯ ಪಾವಡೆಯ ಪಸವಟ್ಟುಳ್ಗಗ ಪವರ ಪೇಳಿದೊಳಾಗ ಪಸುಧೀಶ ಸಾರಿಗ್ಯದಿದಸು (ಕಂಪಶಿ. ೨೨ ೬೬). **ಪಾವಾಡೆ** : ೧. ಪೊಡೆಯು ಮಾಡಿ. ಪೊದ್ದೆಪಾವಾತ ಮೇಲೆ ತಟ್ಟಿ ಕಾದ ತುಪ್ಪವಲ್ಲಿ ಹಾಕಿ . . . ಕೆಂಪಾಯಿತೆಂದೆ ತೆಗೆದುಕೊಂಬುದು (ಶಾಸೂಶಾ. ೧೮). ೬. ಲಂಗ: ಪರಕಾರ: ಹಿಂದೆ ಸಿಲ್ಕು ಪಾವಾಡೆ ಸಿಲ್ಕು ಜಾಕೆಟ್ಟು ಮೊದಲಾದ ಥಳಕು ಪಳಕುಗಳಿಂದ ಹಾರಾಡುತ್ತಿದ್ದವಳು ಈಗ ಅದೆಷ್ಟು ಸ್ಥಿರಮೂರ್ತಿಯಾಗಿ ಶೋಭಿಸುತ್ತಿದ್ದಾಳೆ ! (ಬಿ. ೩೯). **ಪಾವುಡೆ** : ೧. ಚರ್ಮಾರಹಿಂದವ ಪಡಗಡೆ ತೊಳೆದು ಗಂಧ ಕಸ್ತೂರಿಯಿಂದ ತಿಗುರಿಕ್ಕಿ ಪಾವುಡೆಯಿಂದೊರಸಿದರು ಸೌಧ್ಯದಲಿ (ಮೋಹತ. ೨೬ ೩): ಕುಡಿಕೆಯಿಂದ ಪಾವಲಿ ತೆಗೆದು ಅರಸಿನದ ಪಾವುಡೆಯಲ್ಲಿ ಕಟ್ಟಿಟ್ಟಳು (ಪರ್ವಮಂ. ೧೨೬). ೬. "(ಹೆಂಗಸಿನ) ಲಂಗ, ಪಾವುಡೆ" (skirt. ಇಂಕಸ): ನಿರಿಗೆ ಹಿಡಿದ ಪಾವುಡೆಯನ್ನುಟ್ಟ . . . ಹೆಂಗಸರಿಬ್ಬರು ನೆಲವನ್ನುಜ್ಜಿ ತೊಳೆಯುತ್ತಿದ್ದು ಪಕ್ಕದ ಬಾಗಿಲಿಂದ ಹೊರಗೆ ಬಂದರು (ಭ್ರಸರು. ೬೯). **ಪಾಹುಡ₁**: ೧. ಪಂಚಪದಲ್ಲಿ ಇಡಬೇಕಾದ ಪಾಪಗಳ ಹೊಸ ಪಾಹುಡವನ್ನು ಕಟ್ಟಿ ನಿವ್ವಗೋಳಿಸುವುದು (ಶ್ರೀಯೋಜಃ. ೨೩).

[< ಪ್ರಾ. ಪಾಬುಡ./ಸಂ. ಪ್ರಾವೃತ]

**ಪಾವುಡ₂**. ಪಾಗುಡ₂. ಪಾವಡ₂. ಪಾಪುಡ₂. ಪಾಹುಡ₂ (ನಾ). ೧. ಉಡುಗೊರೆ ; ಉಪಾಯನ : ಗೌರವಸೂಚಕವಾಗಿ ಕೊಡುವ ಕಾಣಿಕೆ : "ಪಾವುಡಮುಂಪಾಹುಡಮುಂಪಗ್ರಾಪ್ಯಮುಂಪವಾ ಪ್ರಾಭೃತಕ ಮೆಂದೆನಿಕ್ಕುಂ" (ಶಬ್ದಮ. ೮೦-೮): ಬಂದುವು ಪಾವುಡಂ ನೃಪತಿ ಗೆಂಬುದುಂ (ಕಾವ್ಯಾ. ೦-೦೦೬): ಉತ್ತರಮಧುರಾಪುರಾಧಿನಾಯಕಗೆ ಸಂಬಾಹದೋಲೆಯುಂ ಪಾವುಡಮುಂ ಕೊಂಡು ಬಂದು (ಪರ್ವಾಮ. ೨-೯೯ ವ): ಈ ಮಹಿಯೊಳಾವನುಂ ಸಮವಲ್ಲದಂತಿಪ್ಪ ಅರಸುಗಳು ಪ್ರೈಯಿಂಕ್ಕಿ ಪಾವುಡವನಟ್ಟುವರ್ (ಶಾಶಿಪು. ೨೦೧-೮): ಒಳ್ಳೆ ಗಡ ಪಾವುಡವ ಮಾಸುಕ್ಕಿಯಲ್ಲಿಗಟ್ಟಿತು (ಕುಮ್ಮಾರ್ಯೋ. ೩-೩೩). **ಪಾಗುಡ₂** : ೧. "ಪ್ರಾಭೃತಂ, ಪ್ರದೇಶನಂ—ಈ ೨ ಪಾಗುಡದ ಪೆಸರು" (ಶಾಕಶಾ. ೦೩೩): ಪರಮಂಡಲಿಕರ್ ಪಲರ್ ಪಾಗುಡಂಗಳುಮೋಲೆಗಳುಂ ಪೆರ್ಗಡೆಗಳು ಮನನವರತಂ ಕೊಸುಗಳು ಬೇಡಿಯಟ್ಟುತ್ತಿರ್ಪರ್ (ಚಮ್ಮಾಶಾ. ೦೩೧-೬): ತನ್ನ ಬಂದ ಬರವನಜಾಯಿ ಬಿನ್ನಪಂಗೆಯ್ದು ತನ್ನ ತಂದ ಪಾಗುಡಮುಂ . . . ಅಮಾತ್ಯೋತ್ತಮನ ಕೆಯ್ಯೊಳ್ ಕುಡುವುದುಂ (ಶಾಂತಿಪು. ೨-೨೨ ವ): ನಿಮ್ಮ ತಂದೀ ಪಾಗುಡಮನಿಂತೆ ಕೊಂಡು ಪೋಗಿಂ (ಬಂಶು. ೯-೩೯ ವ). **ಪಾವಡ₂**: (೬). **ಪಾವುಡೆ₂** : ೧. ನೃಪಸಂಕುಳಕೆ ಲೇಖದ ಬರಸಿ ಪಾವುಡಗಳನೆಸಗಿ . . . ಹೋಳಿಗೈತಹುದೆಂದು ಸಾಜಿಸಲು (ಜಿಎಂತ. ೭-೨೦); ಓಲೆಕಾಜಿರ್ ಬಂದು ಮುನಿಗೆಜಿಗಿ ಪಾವುಡೆಯುಮಂ ಕಟ್ಟೀರ್ವೆಳಿ ಯುಮನೊಪ್ಪಿಸಿದರ್ (ರಾಮಾಕ. ೬೯-೨೬). **ಪಾಹುಡ₂** : ೨. [ಜೈನ] ಆಗಮಗ್ರಂಥದ ಭಾಗ,–ಪರಿಚ್ಛೇದ,–ಅಧ್ಯಾಯ : ಪ್ರತಿಯೊಂದು ಪೂರ್ವದಲ್ಲೂ ಅನೇಕ ಪ್ರಕರಣಗಳಿವೆ. ಈ ಪ್ರಕರಣಗಳಿಗೆ 'ವಸ್ತು' ಗಳೆಂದು ಹೆಸರು. ಈ ಪ್ರತಿಯೊಂದು ವಸ್ತುಗಳಲ್ಲೂ ಮತ್ತೆ ಇಪ್ಪತ್ತು ಇಪ್ಪತ್ತು ವಿಭಾಗಗಳಿವೆ. ಈ ವಿಭಾಗಗಳಿಗೆ 'ಪಾಹುಡ' ಗಳೆಂದು ಅನ್ನುವರು (ಕ್ಷಜಾ. ೦೩೬). [< ಪ್ರಾ. ಪಾಹುಡ. / ಸಂ. ಪ್ರಾಭೃತ./ತೆಲು. ಪಾವಡ]

**ಪಾವುಡ₃** 'ಪಾವುಳ' ನೋ.

**ಪಾವುಡ₄** 'ಪಾಪಡ₄' ನೋ.

**ಪಾವುಡ₅** (ನಾ). ಗೋಧಿಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ,–ಉಂಡೆ : ನೆಜಿ ಪಣ್ಣುಗೋದುಮೆಯ ಪಿಟ್ಟು . . . ಬಜಿ ಮೊಸರುಕೆನೆಯದಜೊಳು ಕಲಸುವುಂಡೆಯುಂತೆಜಿಯೆ ಪಾವುಡವಾಯ್ತು (ಸೂಶಶಾ. ೦-೩೩). [?]

**ಪಾವುಡಂಗಟುಪು** (ಕ್ರಿ). ಕಾಣಿಕೆಯನ್ನು ಕಳಿಸು; ಉಡುಗೊರೆ ಕಳಿಸು : ಸರಸಶೀತಳಪರಿಮಳಮುಂ ಪಾವುಗೇರ್ದಲ್ಲಿಗೆ ಪಾವುಡಂಗಟುಪುವ ಮಳಯಜ ತರುಗಳುಂ (ಅಜಿತಪು. ೬ ೬೦ ವ). [ಪಾವುಡ₂ + ಕಟುಪು (< ಕಟುಪು₁)]

**ಪಾವುಡೆ₁** 'ಪಾವುಡ₁' ನೋ.

**ಪಾವುಡೆ₂** 'ಪಾವುಡ₂' ನೋ.

**ಪಾವುಣ**. ಪಾವಣ₁. ಪೌಣ್ (ನಾ). ೧. ಮುಕ್ಕಾಲು ; ಮುಪ್ಪಾಗ: ಎಸಿ ಚೀಲ ಹಿಡಿದು ಸೂರದ ಪರಿಗೆ ಪರ ಚೀಲಕ್ಕೆ ಪಾವುಣ . . . ಆಣೆ (ಮುಂಬಾ. ೨೫೧). **ಪಾವಣ₁** : ೨. ಕಾಲಿನ ಕಡಮೆಯಾದುದು. ೨ ಸಮಾಸದಲ್ಲಿ ಪೂರ್ವಪದವಾಗಿದ್ದು. ಈ ಶಬ್ದ ಮುಂದಿನ ಪದವಾದ ಸಂಖ್ಯೆಗೆ ೧/೪ ರಷ್ಟು ಕಡಮೆಯೆಂಬರ್ಥವನ್ನು ಸೂಚಿಸುತ್ತದೆ : ಈ ಕಾರಣದಿಂದ ದರ ಒಂದು ಪಟ್ಟಿಯಲ್ಲಿ . . . ಪಾವಣೆ ಎರಡು ಆಣೆಯಂತೆ ಕೂಲಿ ಬರದು (ಮುಂಬಾ. ೨೬೯). **ಪೌಣೆ** : ೩. ಮುಕ್ಕಾಲಿನ ಪಗ್ಗಿ : ಕಾಲು, ಅರ್ಧ, ಪೌಣೆ, ಸವ್ವಾ, ದೀಡೆ, ಅಡೀಚಿಗಳನ್ನೂ ಕಂಠಪಾಠ ಮಾಡಿಸಿದ್ದರು (ಗಾಳಿ. ೧೭೬).

[← ಮರಾ. ಪಾಊಣ. ಪಾವೂಣ. ಪೌಣ : ಹಿಂ. ಪೌನ, ಪೌನೆ./ ಪ್ರಾ. ಪಾವೂಣ, ಪಾವುನ., ಸಂ. ಪಾದೋನ]

**ಪಾವುಣಿ** (ನಾ). ಹಾವುಗಳನ್ನು ತಿನ್ನುವಂಥದು : ನವಿಲು : ಪಾವುಣಿ— ಭುಜಂಗಭುಕ್ ಮಯೂರ ಇತಿ ಬಿಜಾಪತ್ (ಕಪ್ರಾಮ. ೫೪೬ ವ್ಯಾಖ್ಯಾ).

[ಪಾವು₁ + — ಉಣಿ]

**ಪಾವುಣೆ**, ಪಾವಣೆ₂ (ನಾ). ೧. ಅತಿಥಿ : ನಮ್ಮ ಮನೆಗೆ ದೊಡ್ಡ ಪಾವುಣೆ (ಅತಿಥಿ) ಬರುವವರಿದ್ದಾರೆ (ಚಾಕ್ರಿ. ೬೩). **ಪಾವಣೆ₂** : ೨. ಅಪ್ತ : ಸಂಬಂಧಿಕ : ಪಾವಣೇರ ಅಂತ ಹೂವಣ್ಣನ ಮಾರಿ ನೋಡೇ ಬಿಟ್ಟ. ಇಲ್ಲಾದರ ಚೂಪಡಿಗಿ ಹಾಕಂವ ಮೆಟ್ಟಿನ ಮೊರೀ ಸಂಗಡಾ (ಕಸಗ. ೩೯): ಪಾವಣೇರು (ಅಪ್ತರು)—ಮನ್ಯಾಗ ಪಾವಣೇರು ಬಯಿಂದಾರ (ಮನೆಯೊಳಗೆ ಅಪ್ತರು ಬಂದಿದ್ದಾರೆ) (ಸಾಪಾ. ೩೫೫). [← ಮರಾ. ಪಾಹುಣಾ./ಪ್ರಾ. ಪಹುಣ, ಪಾಹುಣಅ./ಪಾಲಿ. ಪಾಹುನ. ಸಂ. ಪ್ರಾಘುಣ]

**ಪಾವುದೊಡವು** (ನಾ). ಹಾವುಗಳ ಆಭರಣ : ಸ್ಫುರಿಸುವಾತ್ಮಕಳಾತತ ಬಿದಿ ಲೋಕಪವನಲಂಕರಿಸಿಕೊಂಡಿರ್ಪಾ ಮಹಾಮಹಿಮಂಗಿ ನಿರಂತರ ಪಾವುದೊಡವು ಗಡ ಸಾಕೆಂದು (ಕಂಬಶಾ. ೦೬-೯೩). [ಪಾವು₁ + ತೊಡವು]

**ಪಾವುವಿಮಾನ್**. ಹಾವುವಿಮಾನು (ನಾ). ಹಾವಿನಂತೆ ಉದ್ದವಾದ ದೇಹವಿರುವ ಒಂದು ಬಗೆಯ ವಿಮಾನು : ಪವಳವಾಯು ಪಾಸಿಮಾನ್ ಪಾವುವಿಮಾನ್ ಕಿಜುವಿಮಾನ್ . . . ಎನಿಪವೆಲ್ಲಂ ಬೀಳ್ಪುದಾ ತಾಣದೊಳ್ (ಶಾಶಿಲ. ೩-೦೦೩). **ಹಾವುವಿಮಾನು** : "ಹಾವಿನ ರೂಪದ ಮೀನು, ಹಾವುವಿಮಾನು" (ಜಂಬಿ. ೨೦೫೨): ನದಿಯ ನೀರಲ್ಲಿ ಒಂದು ಜಾತಿಯ ಹಾವುವಿಮಾನು (eel) ಇದೆ. ಇದು ೬-೭ ಅಡಿ ಉದ್ದವಾಗಿದ್ದು, ಅರಂಗುಲ ದಪ್ಪ ದಪ್ಪವಾಗಿ ಬೆಳೆಯುವುದು. ಇದರ ಮೈಯನ್ನು ನಾವು ಮುಟ್ಟಿದರೆ ಸಾಕು, ಪ್ರಾಣಾಪಾಯವಿದೆ (ಗಾಲಶ್ರ. ೧. ೬೦). [ಪಾವು₁ + ಮಿಮಾನ್₁]

**ಪಾವುಮೆಕ್ಕೆ**. ಹಾವೆಕ್ಕೆ. ಹಾವುಮಕ್ಕಿ. ಹಾವುಮೆಕ್ಕೆ. ಹಾವ್ಮೆಕ್ಕೆ (ನಾ). ಒಂದು ಬಗೆಯ ಮೆಕ್ಕೆಯ ಬಳ್ಳಿ ಮತ್ತು ಅದರ ಕಹಿಯಾಗಿ

ರುವ ಅವರ ಕಾಯಿ : ಇಂದ್ರವಾರುಣಿ : ೬ ಇದು ವಿಷಾಪ ಹಾರಿಯಾದುದು : ಪಾವುಮೆಕ್ಕೆಯ ಕಂಪಿನಂತೆ ತಿಪ್ಪೆಯ ನೀರಂತೆ ಬಡವನ ಮಾಯಿಮೆಯಂತೆ . . . ಪ್ರೊಜಗಕ್ಕೆ ರಂಜಿಸುವ ಬಹಿರಾಳಾಪದ ತೋಂಬಿಸೊಲ್ಲದೆ (ಕರ್ಣಾಮೃ. ೬-೯೯). ಹಾವೆಕ್ಕೆ: ಹಾವೆಕ್ಕೆಯ ಪಣ್ಗಳಶಿಕ್ಷೇಮದೊಳಿಟ್ಟು ಸುಂಟಿ ಹಿಪ್ಪಲಿ ಮೆಣಸೆಂಬೀ ಮೂಱಿಂ . . . ನಸ್ಯಂಗಯ್ವೊಂ (ಚಶಾ. ೯-೦೦೦): ೬ ಇದು ವ್ರಾಸಕಾಗಿ ಮಾಡಿಕೊಂಡಿರುವ ರೂಪ. ಹಾವುಮಕ್ಕೆ: ದೊಡ್ಡಹಾಲ್ಕೆಕ್ಕೆ. ಹಾವುಮಕ್ಕೆಕಾಯಿ. ಇಂದ್ರಾವರುಣಿ (ವೃತಿ. ೨೨-೯೦೦). ಹಾವುಮೆಕ್ಕೆ: “ವಿಶಾಲಾ. ಇಂದ್ರವಾರುಣೀ—ಈ ೨ ಹಾವುಮೆಕ್ಕೆ” (ಅಭಿ. ೦೦೨): ಪವನಜಾದು ಪುರಿದು ತಿಲತೈಲದೆ ನಿರಿ ಪೆಡಮುಕ್ಕೆಯೆಂಬಿವಂ ಮೇಣ್ ಗೋಮೂತ್ರದೆ ಪಾವುಮೆಕ್ಕೆ[ಪಾಠಾಂ. ಹಾವೆಕ್ಕೆ]ಯುಂ ಬ್ರಹ್ಮದಂಡೆಯುಂ ಮಸರಿನು ಪೂಸೆ ಪುಣ್ಗಳ್ ಕಿಡುಗುಂ (ಲೋಕೋಪ. ೯-೬೦): ಫಲವಾದರೇನು ಪಾವುಮೆಕ್ಕೆಯ ಕಾಯಿ (ಬಸವ. ೦೨೧): ಬೇವು ತಾ ಪರಿಪಕ್ವವಾದರೆ ಪಾವುಮೆಕ್ಕೆಗೆ ಸಾಕ್ಷಿ ಗಡ (ಕುಮಾ.ರಾ. ೧೬-೧೫): ಒಳಗೆ ಕಾರಿನ್ಯಾವು ಹೊರಗೆ ಸುಪಕ್ವವು ಪಾವುಮೆಕ್ಕೆಯ ಗಿಡದಂತೆ (ಇಂದ್ರಾಶ. ೧೯೮-೨೬). ಹಾವ್ಮೆಕ್ಕೆ : ಅದಱೊಳು ಪುಟ್ಟಿದನು ಕೊಲ್ಲಿಗಡಿಗ ಹಾವಿನ ಹುತ್ತದಲಿ ಹಾವ್ಮೆಕ್ಕೆ ಬೆಳೆದಂತೆ (ಕುಮಾರವ್ಯಾ. ೦೯-೦೬). [ಪಾವು₁ + ಮೆಕ್ಕೆ₁]

**ಪಾವುಪೆಡಗೆ** (ನಾ). ಹಾವಿನ ಬುಟ್ಟಿ : ಹಾವಿನ ಹೇಳಿಗೆ : (ಶಿ). [ಪಾವು₁ + ಪೆಡಗೆ (<ಪೆಟ್ಟಿಗೆ)]

**ಪಾವುಸೇರು** (ನಾ). ಕಾಲು ಸೇರು : ಸೇರಿನ ಕಾಲುಭಾಗ : ಪಾವು : ಆ ಕನಸಿನಲ್ಲಿ ಅವರ ಸನ್ನಿ ರುಗಳು ಕಾಣಿಸಿಕೊಂಡು ಅವರಿಗೆ ‘ಊಟಕ್ಕಾಗಿ ಪಾವುಸೇರು ಅಕ್ಕಿಯನ್ನು ಬೇಡಿದರಂತೆ’ (ಶರಶ. ೦೯೬). [ಪಾವು₂ + ಸೇರು₃]

**ಪಾವುಳ. ಪಾವುಲ್ಯ(ನಾ).** ದೇವಸ್ಥಾನದ ಪ್ರಾಕಾರದಲ್ಲಿಯೇ ವಾಸಿಸುವ ಕೆಳವರ್ಗದ ಸೇವಕರ ಗುಂಪು.—ವರ್ಗ : ದೇವರ ತ್ರಿಕಾಲಪೂಜೆಗಂ ತಪೋಧನರ ವಿದ್ಯಾರ್ಥಿಮಾಣಿಗಳಾಹಾರದಾನಕ್ಕಂ ಪಾವುಳಪರಿವಾರದ ಜೀವಿತಕ್ಕಂ ದೇಗುಲದ ಖಂಡಸ್ಫುಟಿತ ನವಕರ್ಮಕ್ಕಮೆಂದು ಕೊಟ್ಟ ಅಲ್ಲಿಯ ಘಳಿಯ ಪಾತ್ರರು ೫೦ (ಸಾಂದೇಶ್. ೩-೨೨ ಶ: 1047): ಜೀರ್ಣೋದ್ಧಾರ ನವಸುಧಾಕರ್ಮಕ್ಕಂ ಪಾವುಳವರ್ಗಕ್ಕಂ (ಎಕ. VIII, ೨೦-೨ನೆಯ ೪೮೮; 1077): ದೇವರಂಗಭೋಗಕ್ಕಂ ಪಾವುಳಕ್ಕಂ ಬಿಟ್ಟ ಪಿರಿಯ ಸೋಗೆಯ ತೋಂಟ (ಸೌಇಇ. IX-1, ೦೬೦-೬೯: 1082): ಬ್ರಹ್ಮಪುರಿಯ ಬ್ರಾಹ್ಮಣರಿಗೆ ಮಾತ್ರರು ಪ ೧೦ . . . ಪಾವುಳಕ್ಕೆ ಪಾತ್ರರು ಪ ೧೦ (ಸೌಇಇ. IX-1, ೨೯೦-೧೯: 1142). **ಪಾವುಲ್ಯ₃** : ಆಹಾರದಾನಕ್ಕಂ ಪಾವುಡಕ್ಕಂ . . . ಬಿಟ್ಟ ಕರಿಯ ನೆಲ (ಸೌಇಇ. IX-1. ೧೫೦-೨೯; 1081). [<ಪ್ರಾ. ಪಾವುಲ./ಸಂ. ಪಾಪಕುಲ]

**ಪಾವೊಡೆಯ** (ನಾ). ಹಾವುಗಳ ಒಡೆಯ : ಆದಿಶೇಷ : ವಾಸುಕಿ : ಭಾವಿಸೆ ಕಿಸೆ ಬಲ್ಮೆಂತಿರೆ ಪಾವೊಡೆಯನ ಮೆಯ್ಯ ಪಾಶ ಪವಡಿಸಿ ಸೊಗದಿಂ ದೇವತೆಗಳ ಮೇರೆಯಾರಿಪ ತಾವರೆ ಪಾಲ್ಕಡಲೊಂದು ಪರಮಾನ್ನಾನಂ (ಅಕ. ೫-೦೯೪): ಅನಂತನೆಂದುಂ . . . ಶೇಷನೆಂದು ನೆಗಳ್ತೆವೆತ್ತು ಚಕ್ರವರ್ತಿತ್ವಮುಂ ಕೆಯಿದ ಪಾವೊಡೆಯನೆಂಬ ಮೆಯ್ಯಾಸಗೆಯುಮಂ ಭಾವಿಸಿದ (ಚಕವ. ೮೬-೧೫). [ಪಾವು₁ + ಒಡೆಯ]

**ಪಾಶ** (ನಾ). ೧. (ಕಟ್ಟಲು ಉಪಯೋಗಿಸುವ) ಹಗ್ಗ ; ನೇಣು : “ಬಂಧಿತ್ರ ದಾವಪಾಶ್ಯುಯೂಂ” (ಸಾವಾರ. ೩೯) : ಸುಮಿಸು ವಿಷಾದದಿಂ ಜೀವನು ಬಂಧಿಸುವ ನಾಂ ಭಾವಶುಂ (ಚಕ್ರಾಂ. ೨೬-೬೨೮). ೨. ಕೊರಳಿಗೆ ಹಾಕಿ ಎಳೆಯುವ ನೇಣಿನ ಕುಣಿಕೆ ; ಹಾಗೆ ಎಳೆಯುವುದಕ್ಕೆ ನಿರ್ಮಿಸಿಕೊಂಡ ನೇಣಿನ ಸಾಧನ : ಒಂದು ಆಯುಧ : ಸುರವನಗ್ನಿ ಯಮ ನಿರುತಿ ವರುಣ ಮರುತ ಧನದನೀಶಾನ್ಯರೆಂಬವರ ಪವಿಶಕ್ತಿದಂಡ ವರಕೊಂತ ಪಾಶ ಧ್ವಜಂ ಖಡ್ಗಶೂಲಶಕ್ತಿವೆರಸು . . . ಸೆಳೆದು ಕಹನು ತತ್ತಡೆ ಹರಿಶ್ಚಂದ್ರನೃಪನು (ಹರಿ. ೦-೯೩) ; ಖಡ್ಗ . . . ಪಾಶ . . . ಎಂಬ ಬತ್ತೀಸಾಯುಧಗಳಿಂ (ಶಬ್ದ. ೨೬೨). ‘ಯಮಪಾಶ’ ಪರಾ. ೩. ಬಂಧನ ; ಸೆರೆ : ಸಾಕು ಇನ್ನಱದೆ ತ್ರಿವಿಧ ಪಾಶವ ಹಱದೆ (ಅವಿಚಿ. ೧೩೬-೬೨೦): ಪಾಶವಱತು ಗುರುವಾಗಬೇಕು ವೇಶವಱತು ಚರವಾಗಬೇಕು (ಶರಗೂ. ೦೧೫-೫೧): ಈ ಪಾಶದಿಂದ ಮುಕ್ತನಾಗುವ ದಾರಿಯಿಲ್ಲವೆ? (ಧರ್ಮಗಾ. ೨೬೨). ೪. ಬಲೆ ; ಜಾಲ : “ವಾಶಃ, ಬಂಧನಗ್ರಂಥಿಃ, ವಾಗುರಾ, ಮೃಗಜಾಳಿಕಾ-ಈ ೪ ಬಲೆಯಾರಂ” (ಹಲಾಯು. ೯೬-೯೯೩). ೫. ತಲೆಗೂದಲು ; ಮುಡಿ ; ತುರುಬು : “ಹಸ್ತಂ ಪಾಶಂ ಪಕ್ಷಂ ಕಸ್ತೃಕಚಪ್ರಚಯವಾಚಕಂ” (ಕಸ್ತುಕೋ. ೬೦-೦೯); “ಹಸ್ತಃ, ಪಕ್ಷಃ, ಪಾಶಃ—ಈ ೩ ಹಿಮ್ಮುಡಿ” (ಹಲಾಯು. ೮೬-೩೬೬): “ಹಸ್ತಕಂ ತುಱುಬು ಹಿಣಿಲು ಪಾಶಂ” (ಮಂಗರಾ. ೯೪-೬). ೬. ನಾಶಕ್ಕೆ ಸೆಳೆಯುವ ಆಕರ್ಷಣೆ : ಸಮುದ್ರತೀರದಲ್ಲಿ ಓಡಾಡುತ್ತಿದ್ದ ಅವನಿಗೆ ನೀರಿನ ಸೌಂದರ್ಯವು, ಈಜುವ ಆಸೆಯಿಂದ, ಪಾಶವಾಗಿ ಪರಿಣಮಿಸಿತು (ಬೂತ). ೭. ಲೆತ್ತದ ದಾಳ. ೮. (ಸಮಾಸಗಳ ಉತ್ತರಪದವಾದಾಗ) ಸೌಂದರ್ಯ, ಹೆಚ್ಚಳ, ತಿರಸ್ಕಾರ ಮೊದಲಾದುವನ್ನು ಸೂಚಿಸುವ ಶಬ್ದ : ‘ಕರ್ಣಪಾಶ’, ‘ಕೇಶಪಾಶ’ ಪರಾ. ೯. [ಶೈವ] ಶೈವಾಗಮದ ಪಶು, ಪಾಶ, ಪತಿಯೆಂಬ ಮೂರು ತತ್ತ್ವಗಳಲ್ಲಿ ಒಂದು ; ಸಂಸಾರಬಂಧನ : ಜೀವನೇ ಪಶುವು, ಅವನನ್ನು ಆವರಿಸಿರುವ ಸಂಸಾರಬಂಧನವೇ ಪಾಶ, ಜೀವನ ಸಂಸಾರಪಾಶವನ್ನು ಕಳೆದು ಉದ್ಧರಿಸುವವನೇ ಪತಿಯಾದ ಪರಮೇಶ್ವರ (ಶಾಕದ. ೬೩). ೧೦. ಷಟ್ಪದಾರ್ಥಗಳಲ್ಲಿ ಒಂದು : ಸಕಲಾಗಮಂಗಳಲ್ಲಿಯೂ ಪತಿ ಕುಂಡಲಿ ಮಾಯೆ ಪಶು ಪಾಶ ಕಾಂಕ್ಷೆಯೆಂಬ ಷಟ್ಪದಾರ್ಥಂಗಳುಂ ಅಕ್ಕುಂ (ಶಿವೇಕ. ೬೨). ೧೧. =ಪಾಶಯೋಗ : ಎಲೆ ಸಪ್ತಗ್ರಹಮೊಂದೆ ರಾಶಿಯೊಳ್ ಯೋಗಂ ಗೋಳನಾಮಂ . . . ಅಯ್ದು ಗೇಹದೊಳಿರಲ್ ಪಾಶಂ (ಜಾತ. ೦೩-೫). ೧೨. [ನಾಟ್ಯ] ಇಪ್ಪತ್ತುನಾಲ್ಕು ಬಗೆಯ ಸಂಯುತಹಸ್ತಗಳಲ್ಲಿ ಒಂದು : ೧. ಅಂಜಲಿ . . . ೧೫. ಪಾಶ . . . ೨೪. ಅವಹಿತ್ಥ (ಅಭಿವ್ಯ. ೪೮). [ಸಂ.]

**ಪಾಶಕ** (ನಾ). ೧. ಲೆತ್ತದ ದಾಳ : “ಅಕ್ಷಃ, ದೇವಕಃ, ಪಾಶಕಃ— ೩ ಪಾಚಿಕೆಗಳ ಹೆಸರುಗಳು, ಲೆತ್ತಗಳು” (ಸಿದ್ಧಾಂತಿ. ೩೨೦). ೨. ಲೆತ್ತದ ಆಟ ; ಪಗಡೆಯಾಟ : ‘ಪಾಶಕಶಾರಿ’ ಪರಾ. ೩. (ಸಮಾಸದಲ್ಲಿ ಉತ್ತರಪದವಾದಾಗ) ಬಲೆ ; ಜಾಲ. [ಸಂ.]

**ಪಾಶಕಶಾರಿ** (ನಾ). ಲೆತ್ತದಾಟದ ಕಾಯಿ ; ಪಗಡೆಕಾಯಿ : ಬಹು ನಾಯುಗಳಿರುವೀ ಗ್ರಾಮದೊಳು ಬಾಲೆ ಪಾಶಕಶಾರಿಯವೋಲೆ ಏನಗಾಗಿ ಮನೆಮನೆಗಳಲಿ ಸುಕುಮಾರಿ ತಿಂದಾವು ನಾಯುಗಳೆಗರಿ (ನಾಜಾ. ೩೫-೩೬). [ಪಾಶಕ + ಶಾರಿ]

**ಪಾಶಜ** (ನಾ). [ಜ್ಯೋತಿ] ಪಾಶಯೋಗದಲ್ಲಿ ಹುಟ್ಟಿದವನು : ಧನಸಂವರ್ಧನಶೀಲ ಭೃತ್ಯಸುಹೃದಾಢ್ಯಂ ಪಾಶಜಂ (ಜಾತ. ೦೩-೦೩). [ಸಂ.]

**ಪಾಶಪಾಣಿ** (ನಾ). ೧. ಪಾಶವನ್ನು ಆಯುಧವಾಗಿ ಹಿಡಿದಿರುವವನು : ವರುಣ : “ವರುಣಂ ಪಶ್ಚಿಮದಿಕ್ಪತಿ ಶರಧಿಪತಿ ಪಾಶಪಾಣಿ ಯಾದೋನಾಥಂ ವರುಣಾನೀರಮಣಂ [ವಾರಿರಾಶಿ]ನಿಳಯಂ ಪ್ರಚೇತಸಂ ಪೆಸರಿಂದಂ” (ಚುಸ್ತುಕೋ. ೬-೯೩). ೨. ಯಮ ; ಅಂತಕ : ನಿನ್ನುಮುಖನಿಸದೆ ಕುರುವಂಶಾನಿಮಿತ್ತರಿಪು ಪಾಶಪಾಣಿ ಸವಿ ನೋಡಿದನೇ (ಗದಾಯು. ೩-೬೯). [ಪಾಶ + ಪಾಣಿ₁]

**ಪಾಶಬಂಧ** (ನಾ). ನೇಣಿನಿಂದ ಕಟ್ಟುವುದು; ಹಗ್ಗದಿಂದ ಬಿಗಿಯುವುದು: ಅಂತಾ ಕೃತಾಂತಪಾಶಬಂಧಂಗಳಾದಂತೆಶ್ಚಲುಂ ತಳರದೆ ತೀವ್ರಪತತ್ರಿ ಧರವಮಂ ಪೇಚಿ (ಶಾಂತಿಪು. ೯-೧೬೪). [ಪಾಶ+ಬಂಧ]

**ಪಾಶಯೋಗ** (ನಾ). [ಜ್ಯೋತಿ] ಏಳುಗ್ರಹಗಳು ಐದುರಾಶಿಗಳಲ್ಲಿ ಹಂಚಿಕೊಂಡಿರುವ ಒಂದು ಯೋಗ; ಒಂದೇ ರಾಶಿಯಲ್ಲಿ ಇರುವ ಗ್ರಹಗಳ ಸಂಖ್ಯೆ ಬೇರೆಬೇರೆಯಾದಂತೆ ಆ ಸ್ಥಿತಿಗೆ ಬೇರೆಬೇರೆ ಹೆಸರುಗಳನ್ನು ಜ್ಯೋತಿಶ್ಶಾಸ್ತ್ರದಲ್ಲಿ ನಿರೂಪಿಸುತ್ತಾರೆ: ಪಾಶಯೋಗದಲ್ಲಿ ಹುಟ್ಟಿದವನು ಹಣವನ್ನು ಅಭಿವೃದ್ಧಿಪಡಿಸುವ ಸ್ವಭಾವವುಳ್ಳವನೂ, ಸೇವಕರು ಮತ್ತು ಸ್ನೇಹಿತರಿಂದ ಕೂಡಿರುವವನೂ ಆಗುತ್ತಾನೆ (ಜಾತಕ. ೧೪-೧೬ ಅಆ); ೫ ರಾಶಿಗಳಲ್ಲಿ ಗ್ರಹರಿರಲು ಪಾಶಯೋಗಂ (ಅದುಟೀ. ೨೯ ೩). [ಪಾಶ+ಯೋಗ]

**ಪಾಶವಾರ**, ಪಾಶವಾರು (ನಾ). ಒಂದು ಬಗೆಯ ತೆರಿಗೆ: ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು. (೧) ಮನೆದೆರಿಗೆ. (೨) ಹುಲ್ಲುಹಣ . . . (೧೬) ಪಾಶಾವಾರ. (೧೭) ಮದುವೆದೆರಿಗೆ. (೧೮) ಉಪ್ಪಿನ ಮೋಳೆ. (೧೯) ಕೌದಿಯ ತೆರಿಗೆ (ಕುಣಿಜ್ಞಂ. ೧, ೧೨೪) ಪಾಶವಾರು: ಇವು ಪೂರ್ವಕಾಲದ ತೆರಿಗೆಗಳು: ಮನೆತೆರಿಗೆ . . . ಪಾಶವಾರು. ಗುಳುವಿನ ಪೊಪ್ಪು. ಕೆರದ ಜಾಗಿನ ಹೊಸ್ತು (ಕಮ್ಮ.ಜಿ. ೨೪೩). [?]

**ಪಾಶವಾರು** 'ಪಾಶವಾರ' ನೋ.

**ಪಾಶವಿಕ** (ಗು). ೧. ಪಶುವಿಗೆ ಸಂಬಂಧಿಸಿದ. ೨. ಪಶುವಿನಂತಹ: ಕಾಡುತನದ: ಒರಟುತನವುಳ್ಳ: ಆ ಪ್ರಾಯದಲ್ಲಿ ಎಂಥ ಪಾಶವೀ ಆನಂದಗಳನ್ನು ಜಾಗ್ರತಗೊಳಿಸಿದ್ದಳಲ್ಲ ಆ ವೇಶ್ಯೆ (ಅಕ್ರಮ. ೬). [ಸಂ.]

**ಪಾಶವೀಪ್ರವೃತ್ತಿ** (ನಾ). ಪಶುವಿನಂತಹ ಒರಟುಸ್ವಭಾವ; ವಿವೇಕದ ಹಿಡಿತವಿಲ್ಲದ, ಪ್ರಾಣಿಸಹಜವಾದ ವೃತ್ತಿ: ಸಂದಿಗ್ಧಜೀವನದ ಹಿಂಸಾ ಕೃತ್ಯದ ಪಾಶವೀಪ್ರವೃತ್ತಿಯು ಅವಳ ತಂದೆ (ಭೂಕುಂ. ೧೫೦). [ಸಂ.]

**ಪಾಶವೀವೃತ್ತಿ** (ನಾ). ಪಶುಸಹಜವಾದ ಸ್ವಭಾವ,-ನಡವಳಿಕೆ: ನಿಯೋಗಿಯದು ಪಾಶವೀವೃತ್ತಿ: ಅದು ಶೀನೂನ ದೃಷ್ಟಿಯಲ್ಲಿ ಸುವಿಷ ಹಾದಿಯಲ್ಲ (ಸಮುಜ. ೬೬೩). [ಸಂ.]

**ಪಾಶಹರ** (ಗು). ಬಂಧನವನ್ನು ಪರಿಹರಿಸುವ; ಕಟ್ಟನ್ನು ಬಿಚ್ಚಿ ಮುಕ್ತಗೊಳಿಸುವ: ಮಾಲಿತಮೋಜ್ಞಶಿವರು ಲೋಕೇಶ್ವರಶಿವರು ಶ್ರೀಕಂಠಶಿವರುಂ ಪಾಶ [ಶಾಣಂ. ೨] ಹರಶಿವರು (ಬಸವು. ೩೬-೧೭). [ಸಂ.]

**ಪಾಶಹಸ್ತ** (ನಾ). ಪಶ್ಚಿಮದಿಕ್ಕಿನ ಅಧಿಪತಿ: ವರುಣ: ನಯನಾಭಿಜ್ಞ್ಯದಿಂದೆ ನೈದಿಲೆಸಟಿಂ ಶಕ್ರಂ ಮಾಸಿದ ಕಟ್ಟಿನ್ನದೆ ಮದುವಂ ಛಾಯೆಯುನೊಂದು. ನಿತ್ಯಗಲದಿರ್ಪಂ ಪಾಶಹಸ್ತಂ ಪಯೋಧಿಯುನಾಶ್ರೈಸಿಪಂ . . . ಆವರ್ತಿಸ ತಳ್ತು ನಾಲ್ದೆಸೆಯುಮಂ ಗ್ರೀಷ್ಮ ಪ್ರತಾಪೋದಯಂ (ಶಂರ್ರಕು. ೯-೭೭). 'ಪಾಶಪಾಣಿ[2]' ಪರಾ. [ಪಾಶ + ಹಸ್ತ]

**ಪಾಶಂಡಿ** 'ಪಾಸಂಡಿ' ನೋ.

**ಪಾಶಾಣ** 'ಪಾಸಾಣ' ನೋ.

**ಪಾಶಾಣೆ** (ನಾ). (ಅಲಂ) ಕಲ್ಲಿನಂತಹ ಮನಸ್ಸಿನವನು: ಕ್ರೂರ ವ್ಯಕ್ತಿ: ನೀವಿಷ್ಟು ಹೃದಯಹೀನರು, ಚಾಂಡಾಲರು, ಪಾಶಾಣೆಗಳೆಂದು ನನಗೆ ತಿಳಿದಿರಲಿಲ್ಲ (ಕಾವೇಂ. ೨೦೭). [ಪಾಶಾಣ (< ಪಾಸಾಣ) + -ಇ]

**ಪಾಶಿ**[1] (ನಾ). ೧. ವರುಣ; ಪಾಶಪಾಣಿ: "ಪ್ರಚೇತಸಂ ವಾರ್ಧಿಪತಿ ಪಾಶಿ ವೃತ್ತಗ್ಗಿ ಶಾರದಮಾಣನೆನೆ ವರುಣನಕ್ಕುಂ" (ಶುಂಗಂ. ೦೪ ೧೦); ಇಂದ್ರನಗ್ನಿ ಯಮನೈರುತಿ ಪಾಶಿಮರುತ್ತು ಬೇರದಮಂಜುಳ ಶಿತಿಕಂಠನೆಂಬುದಿದಿಕ್ಪತಿಗಳ್ ನಡೆದರ್ ಸಭಾಂತರಯೊಳ್ (ಶಾರಪು. ೧೬-೩೩೬); ಒಂದೆಸೆಯಿಂದ್ರನದೊಂದೆಸೆಯನಲನು . . . ಒಂದೆಸೆ ಪಾಶಿಯದೊಂದೆಸೆಯನಿಲನ ದೊಂದೆಸೆ ತ್ರ್ಯಂಬಕಸಖನು (ಕೈರವೇ. ೫-೨೮). ೨. ಯಮ. [ಸಂ. ಪಾಶಿನ್]

**ಪಾಶಿ**[2] 'ಫಾಸಿ' ನೋ.

**ಪಾಶಿಸಜಾ** (ನಾ). ಗಲ್ಲಿನ ಶಿಕ್ಷೆ: (ಕಿ). [ಪಾಶಿ[2] (< ಫಾಸಿ) + ಸಜಾ]

**ಪಾಶುಪತ** (ಗು). ೧. ಶಿವನಿಗೆ ಸಂಬಂಧಿಸಿದ: ಶೈವಾಚಾರಕ್ಕೆ ಸಂಬಂಧಿಸಿದ: ಸಮಂಚಿತಪಾಶುಪತಸುವ್ರತನಿರತನು ಪುಣ್ಯಚರಿತನು . . . ಕೊಂಡಾಡಿ (ಬಸಪು. ೪೬-೭೨); ಶ್ರೀಶಂ . . . ಪಾಶುಪತ ಸುವ್ರತದಿನೊರ್ಮ ಸಾತೀಶನಂ ಭಜಿಸುವನು (ಬಸಪು. ೫೯-೬೦). (ನಾ). ೨. ಶೈವಪಂಥಗಳಲ್ಲಿ ಒಂದು: ಶೈವಾದಿಂ ಪರ್ತಿಸುವಾ ಕಾಳಾಮುಖಾದ್ಯ ಕಾಪಾಳಿ ಪಾಶುಪತ ಶೈವರೊಳೋರ್ವ ಮಾಹಾವ್ರತಿಗೊರವಂ ರುದ್ರಪಾರ್ಗದಿಂ ನಡೆವರುಂಟಾದ ಮಾರ್ಕಂಡೆಯರ್ (ಸಮುಕ. ೧೯-೩೦); ಪಾಶುಪತಾದಿ ಶಾಸನಧಾರಕರು ಬಂದು . . . ತಪಂತವಾಗಿ ಲಿಂಗೈಕ್ಯರಾಗಲಾಗಿ (ಬಸಪು. ೫೮-೧೫); ಪಾಶುಪತ ಕಾಪಾಲಿಕ ಮಾಹಾವ್ರತಗಳೆಂಬವು ಅತಿಮಾರ್ಗಿಕ ಶಾಸ್ತ್ರತ್ರಯ ಮಾಗಿರ್ಪುದು ಅವಜೊಳ್ ಪಾಶುಪತವು ಪಾಶುಪತಕರ್ಮನಾಮಕ ಪಾಶದ್ವಯಾದಿಗಳಂ ನಿರ್ವಹಿಸುವುದು (ಬಿಟಿಕ. ೧೧); ಶೈವಾಗಮಗಳು ಒಂದೊಂದು ಬಾರಿ ಶೈವಪಂಥವನ್ನು . . . ಪಾಶುಪತ, ಕಾಪಾಲಿಕ ಮತ್ತು ಕಾಳಾಮುಖ ಎಂದೂ ವಿಂಗಡಿಸುತ್ತವೆ (ಶಕ್ತಿಲ. ೦೨೩). ೩. ಪಾಶುಪತ ಪಂಥವನ್ನು ಅನುಸರಿಸುವ ಶೈವ: ಅಲ್ಲಿ ಪಾಶುಪತರು ಧ್ಯಾನವಾಡು ತ್ತಿದ್ದರೆಂದೂ ಹೇಳಿದೆ (ಕಶಾಂ. ೧೨೬). ೪. ಒಂದು ಬಾಣದ ಹೆಸರು: ಶಿವನು ಅರ್ಜುನನಿಗೆ ಅನುಗ್ರಹಿಸಿದ ಒಂದು ಮಂತ್ರಾಸ್ತ್ರ: ತುಡು ಪಾಶುಪತವನೆ ನರನೆಡೆಮಾಡಗದೆ ತಾಪೆ ವಿಶಾಳ ನಡುಗಿದುದು (ಕಂಶಕಾ. ೧೧-೦೫೩); ಮೃಡನಮಾನರು ನೀವು ಪಕ್ಷಿಗೆ ತೂಪಬಲದೇತಕೆ ಪಾಶುಪತಮಂ (ಬಸಪು. ೨೨-೯೦); ಈತನೆಮ್ಮಯ ಪಾಶುಪತವಿಖ್ಯಾತ ಬಾಣವ ಬೇಡಿ ತಪವಲಿ ವೀತರಾಗದ್ವೇಷಿಯಾದನು (ಕುಮ್ಮಾರ. ೬-೨೬). ೫. ಒಂದು ಬಗೆಯ ಸಸ್ಯ; ಕೊಕ್ಕರೆಹೂವಿನ ಗಿಡ: "ಶಿವಮಲ್ಲಿ, ಪಾಶುಪತಃ, ಏಕಾಷ್ಠಿಲಃ, ಬೇಃ, ವಸುಃ—ಇ ಪುಷ್ಪದ ಹೆಸರು; ಕೊಕ್ಕರೇ ಹುವ್ವಿನ ಗಿಡ" (ನಿಘಂಟು. ೧೫೦). [ಸಂ.]

**ಪಾಶುಪತಾಸ್ತ್ರ** (ನಾ). =ಪಾಶುಪತ ೪: ಪೆಜೆತನುಮನೊಲ್ಲೆನೆನಗೆನಿಮ್ಮೊಡಿ ಪಾಶುಪತಾಸ್ತ್ರಮಂ ದಯೆಗೆಯ್ವುದು (ಕಂಶಕಾ. ೫-೩೫ ಆ); ಸಲಿಸು ಪಾಶುಪತಾಸ್ತ್ರವನು ವೆಗ್ಗಳದ ಬೊಮ್ಮಶಿರೋಸ್ತ್ರವನು ಕೈಗೊಳಿಸುವುದು ಕೃಪೆಯುಳ್ಳೊಡೆ (ಕುಮ್ಮಾರ. ೬-೪೭). [ಪಾಶುಪತ+ಅಸ್ತ್ರ]

**ಪಾಶುಪತಿ** (ನಾ). ೧. ಪಶುಪತಿ: ಶಿವ: ಈಶತತ್ತ್ವ ಬ್ರಹ್ಮಮಯ ಪಶು ಪಾಶುಪತಿಗೆ ಸಮಾನವೇ ತತ್ಕೇಶವಂ ಬ್ರಹ್ಮಾದಿ ಪಶುಗಳು (ಬಸಪು. ೫೯-೨೨); ನಿನಗೆ ಪತಿ ಪಾಶುಪತಿಯಿರೆ ತೊಟ್ಟನೆ ಪಶುಗಳಂ ಕೊಲುವ ಮೆಲುವ ಕುಮನದ ಪಶುಲ್ಮಿಗಳ ದುಃಖವರ್ಗಂಗಳೊಳಗಿರಲು ಮನಸಿಜಾಂತಕನೆಂತವನನುಸಿಕಿನೆ ಬಿಡುವನೆ (ಬಸಪು. ೬೦-೯೦). ೨. = ಪಾಶುಪತ ೩: ಶೈವ ಸ್ವಬೇಜಿಗಾದ ಪಾಶುಪತಿ ಪಥಪಡೆಯ ಕಾಳಾಮುಖಿ ಕಂಗಟ್ಟಿ (ತನ್ನತ. ೪. ೨೫೦-೫೯೩). [< ಸಂ. ಪಶುಪತಿ]

**ಪಾಶುಪಾಲ್ಯ** (ನಾ). ದನಕರುಗಳನ್ನು ಸಾಕುವಿಕೆ: ಪಶುಪಾಲನೆಯ ಉದ್ಯೋಗ: "ಪಾಶುಪಾಲ್ಯಂ—ಗೋಮಹಿಷ್ಯಾದಿಗಳನ್ನು ಪಾಲಿಸುವಿಕೆ" (ನಿಘಂಟು. ೨೭೩); ನಿಖಿಲಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮಮುಮಂ ವಣಿಗ್ಜನಕ್ಕೆ ಪಾಶುಪಾಲ್ಯ ಕೃಷಿ ವಣ್ಯಕರ್ಮಂಗಳುಮಂ . . . ಉಪದೇಶಂಗೆಯ್ದು (ಆದಿಪು. ೮-೬೪ ಆ); ಅರ್ಥಕಲ್ಪನೆಯ ಉದ್ಯೋಗಗಳು ಐದುವಿಧ: ೧) ಪಾಶುಪಾಲ್ಯ ಅಥವಾ ಗೋರಕ್ಷ . . . ೫) ಕುಸೀದ— ಲೇವಾದೇವಿ (ಶಾರದ. ೩೫೭). [ಸಂ.]

**ಪಾಸ್₁** ' ಪೋಸ ' ನೋ.

**ಪಾಸಂಗ** (ನಾ). ೧. ತಕ್ಕಡಿಯಲ್ಲಿ ಪೇರು ಕಟ್ಟುವ ಕಾಣಿ. ೨. ಕಿರ ಅಲ್ಪವಾದುದಂ,—ಕಡಮೆಯಾದುದಂ : ಒಂದು ಜೀವಕ್ಕೆ ಇನ್ನೊಂದು ಜೀವವು ಕೊಡಬಹುದಾದ ಆನಂದದ ಪಾಸಂಗಕ್ಕೆ ನಿರಾಳಕಲಾನಂದವೂ ಬಾರದು (ಸಾಹಿಸಂ. ೨೧) ; ನಮಗೆ ತಿಳಿದೆಲ್ಲ ಸಂಗತಿಗಳನ್ನು ಕೂಡಿ ಹಾಕಿದರೂ ತಿಳಿಯಬೇಕಾದುದರ ಪಾಸಂಗಕ್ಕೂ ಸರಿಹೋಗುವುದಿಲ್ಲ (ಹಿಶಾಖಂ. ೩೦).

**ಪಾಸಂಗಕ್ಕೆ ಹತ್ತು** = ಸರಿಸಮಾನವಾದ ಯೋಗ್ಯತೆಯನ್ನು ಪಡೆ ; ಸದೃಶವಾಗು : ಅದರ ತಲೆಯೊಳಗಿನ ಮಿದುಳು ನಮ್ಮ ಮಿದುಳಿನ ಪಾಸಂಗಕ್ಕೆ ಹತ್ತುವ ಹಾಗಿಲ್ಲ (ಮಾಂಬಾಯಿ. ೬-೩೦೦) ; ವಿಷ್ಣುವರ್ಧನನು ಪುಲಿಕೇಶಿಯ ಪಾಸಂಗಕ್ಕೆ ಹತ್ತುವಂತಹವನಿರಲಿಲ್ಲ (ಹಿಕಸಂ. ೯೦).

[← ಪಾರ. ಹಿಂ. ಮರಾ. ಪಾಸಂಗ್]

**ಪಾಸಂಗಿ** ' ಪಾಸಂಗೆ ' ನೋ.

**ಪಾಸಂಗೆ,** ಪಾಚಿಕೆ, ಪಾಸಂಗಿ, ಪಾಸಗೆ₁, ಪಾಸುಗೆ₂, ಹಾಸಂಗಿ, ಹಾಸಗಿ (ನಾ). ೧. ಜೂಜಿನ ದಾಳ ; ಲೆತ್ತ ; ಪಗಡೆಯ ದಾಳ ; ಅಕ್ಷ : ದುರ್ಯೋಧನನೊಕ್ಕಲಂ ಪುಡಿಯೊಳ್ ಪೊರಳ್ಚುವಂತೆ ಪಾಸಂಗೆಯುಂ ಪೊರಳ್ಚಿ . . . ದಾಯುಮನಾಡೆ (ಪಂಪಭಾ. ೬-೭೧ ವ). **ಪಾಚಿಕೆ :** ೧. "ಅಕ್ಷಃ, ದೇವಕಃ, ಪಾಶಕಃ—ಇ ಪಾಚಿಕೆಗಳ ಹೆಸರು, ಲೆತ್ತಗಳು" (ಸಿದ್ಧಾಂತಿ. ೩೨೦). **ಪಾಸಂಗಿ :** ೧. ಸಾರಿಯನಿಡುತ ತಪ್ಪಿದೆನೆಂದೊ ಪಾಸಂಗಿಗಳ ನಾನಿಂತೊಂದ ನೊಂದಂ ಪಿಡಿದು ತಪ್ಪಿಸಿ ಹಾಯಿಕಿದೆನೆಂದೊ (ಬಸವ. ೪೩-೦೩); ಅಂತು ಲಜ್ಜಾನತಾನನೆ ನೆತ್ತದಾಟವನುಳಿದು ನೆತ್ತವಲಗೆಯ ಮೇಲೆ ಪಾಸಂಗಿಗಳ ನೊಯ್ಯನಿರಿಸಿ (ವೃಶಾ. ೨೯-೩೨ ವ). **ಪಾಸಗೆ₁ :** ೧. "ದುಂದುಭಿ ಮೃದಂಗಮುಂ ಪಾಸಗೆಯುಂ" (ಪಟ್ಟಕೋ. ೦೨೨-೨೬) ; ಭಯಮಜಿಯದ ಕಲಿಯುಂ ಚಾಗಿಯುಮೆನಿಸದೆ ನಾಡೆ ಲೋಭಿಯುಂ ಪಂದೆಯುಮಾಗಿಯೆ ಬಾಳ್ವಂಗಲ್ಲದೆ ಸೂಳೆಯ ಕಣ್ ಪಾಸಗೆಯ ಕಣ್ಣುಮೇನುಜುಗುಗುಮೇ (ಪಂಪಭಾ. ೬-೩೩) ; ಅಂಗುಲೀನಖಚಯಕಾಂತಿಗಳನವಗಯ್ಸಿ ಸಲೆ ಪಾಸಗೆಯ ದೆಸೆದೆಸೆಗೆ ಪೊರಳ್ದಿದಂ ಪತ್ತೊರ್ವಂ (ಶಾಂತಿ. ೫-೦೦೫) ; ಅಡಲೊಸೆದು ಪುಡಿ ಸಾರಿಯನೋಸರಿಸಿ ಪಾಸಗೆಯನಿಕ್ಕಲ್ (ನೇಮಿ. ೦೦-೨೮ ವ). **ಪಾಸುಗೆ₂ :** ೧. ಒಯ್ಯನೆ ಪಾಸುಗೆಗಳನಂತಿರಿಸಿ . . . ನಗುವುಜ್ಜುಗವೇನ ದನುಸುರುಸುರೆಂದಾ ಸಜ್ಜನವಲಿವಣ ತನ್ನನಿಯನ ಸಿರಿವಜ್ಜಿಗಳಂ ಪಿಡಿದು (ಕಾವ್ಯಶೇ. ೬-೦೬). **ಹಾಸಂಗಿ :** ೧. "ಅಕ್ಷಃ, ದೇವನಃ, ಪಾಶಕಃ—ಈ ೩ ಹಾಸಂಗಿ" (ವಾಶಶಾ. ೩) ; ಹಾಸಂಗಿಯನಿಳಿಪುತೆ ಹೊರೆಯಿಳಿದಲ್ ಲೇಸಾಯ್ತಾಟವೆನುತ್ತುಂ ನುಡಿದಲ್ (ಕಾವ್ಯಶೆ. ಹ. ೦೫೬-೨೬) ; ಹಲಗೆಯ್ಯ ಕುರುಭೂಮಿ ಕೌರವಕುಲದ ತಲೆ ಸಾರಿಗಳು ನೆಜೆಯಲಿ ಗೆಲಲು ಬಂದೆನು ಕೊಳ್ಳು ಹಾಸಂಗಿಗಳನು (ಕುಮ್ಮಾರವ್ಯಾ. ೦೦-೯೯); ಕರಗಿ ಕಂದುತ ಮನವಳಿದು ಲೆತ್ತದ ಹಾಸಂಗಿಯನಂತಿರಿಸಿ . . . ಇಂತೆಂದವಳು (ಕೃಷ್ಣಚ. I. ೯೬) ೨. ಪಗಡೆಯಂ ಹಾಸು ; ಪಗಡೆಪಟ್ಟ : ಹರಹು ಹಾಸಂಗಿಗಳನಾಡುವವು (ಶಶಿಶ. ೯-೨೬) ; ಲೋಕೇಶನಾ ಪುರಲಕ್ಷ್ಮಿಯಾಡಲ್ಕೆಂದು ಹಾಸಿದ ಹಾಸಂಗಿ ಯಂತೆ ನಾಕಲೋಕವ ಜಱೆವುತ ಸೊಬಗಿನಿಂದಾನೇಕ ಚವ್ವೀದಿ ರಾಜಿಪುದು (ಕ್ಯಾತಿಕ. ೦-೦೨೬) ; ಒಂದೆಡೆಯಲ್ಲಿ ಹಾಸಂಗಿಯಂ ಪಾಸಿದಂದದಿಂದೆ . . . ಒಪ್ಪಿದುವು ಪೂಗಿಡುಗಳು (ಕೇಶರಾ. ೭-೦೨) ; ಹಾಸಂಗಿಯನ್ನು ಹಾಸಿದರು. ಸಾರಿಯ ಸಾಲನ್ನು ಜೋಡಿಸಿದರು (ರಾಜಕಥಾ. ೯೬) ; ಹಗಲಿರುಳ ಹಾಸಂಗಿ ಯೊಡ್ಡಿ ಮಾನವರಂ ಬಿಸುಗೆಯಾಗಿಸಿ ನಿಯತಿಯಾಡಿಸುವುದವರಂ (ಗೀಶಂ. ೦೨೨-೩೩). **ಹಾಸಗಿ :** ೧. ಇಳೆಯಾಧಿಪರ ಮನವನರಿದಾ ನೆತ್ತವಲಗೆಯ ಶಕುನಿ ತಂದಿರಿಸಿ ನಿಲಿಸಿ ಸಾರಿಯನು ಹಾಸಗಿಯನೀಯಲು ಕೈಗೆ ಚಲದಂಕ ರಂದಾಡಿದರು (ಕೇಮಿಶಂ. ೨೯-೨೬).

[< ಪ್ರಾ. ಪಾಸಗ./ಸಂ. ಪಾಶಕ./ಪಾಲಿ. ಪಾಸಕ]

**ಪಾಸಂಡಿ,** ಪಾಷಾಂಡಿ, ಪಾಷಾಂಡಿ (ನಾ). ೧. ವ್ರತಿ : ಸಂನ್ಯಾಸಿ : ಲೇಸೆನಿಸಿದ ಮೂಱುಮನಾಳ್ದಸೆಯೊಳಂ ಕಱೆಯಲುಱೆಗೆ ಸೀರ್ಗಮುದಿಚತಂ ಪಾಸಂಡಿಗೆ ಪಿತುಗಳ್ ಸಂತೋಷದೆ ಕಾಣಿರ್ಕುಮೆಂದವಸೊಳ್ಪಿಸ ಜಟ್ಟಂ (ಅಭಿಜ್ಞಾ ೬-೯೩). ೨. ಪಾಷಂಡಕ : ಪಾಷಂಡಿ ಪಾಸಂಡಿ (ಕಮರ. ೨೯೩ ಕೃಯೋ). **ಪಾಶಾಂಡಿ :** ೨. ಪಾಶಾಂಡಿಗೆ ಲೋಕವಿಲ್ಲ. ಪಾಷಾಣಕ್ಕೆ ರೋಗವಿಲ್ಲ (ಗಾದೆ). **ಪಾಷಾಂಡಿ :** ೨. ಪಾಷಂಡಿಗಳಪ್ಪ ಪಾಶವ ಹೊತ್ತು ತಿರುಗುವ ವೇಷಧಾರಿಗಳೆಲ್ಲರು ಜಂಗಮವಲ್ಲದೆ ಜ್ಞಾನ ಜಂಗಮವಲ್ಲ (ಸೋಣಿಣ. ೦೩೩-೩೮೬). [< ಪ್ರಾ. ಪಾಸಂಡಿ. / ಸಂ. ಪಾಷಂಡಿನ್]

**ಪಾಸಗೆ₁** ' ಪಾಸಂಗೆ ' ನೋ.

**ಪಾಸಗೆ₂** (ನಾ). ಪಲ್ಲಯಬದ್ಧದ ಒಂದು ಪಟ್ಟಿ—ಪಿಡಿತ : ಪಾಸಗೆ ವನ್ನಿಮುಟ್ಟಿ ಚಟ್ಟು ಸಿರಣವಟ್ಟ ಬಾಹುದಣೆ ಖಮ್ಮರಿ ಕತ್ತರಿ . . . ಎನಿಪ್ಪ ಜಟ್ಟಿಗನ ನಟ್ಟನ ಬಿನ್ನಣಮೊಪ್ಪ ಕಾದಿದರ್ (?) (ಚಂದ್ರಪ್ರ. ೫-೭೬) ; ಕಮ್ಮರಿ ಮುಹುಡಂ ಜವತ್ಸಪಡಿ ಪಾಸಗೆ ಕಕ್ಕವಡಮನ್ನು . . . ಎನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಶಂ. ೨೬-೦೬). [?]

**ಪಾಸಟಿ** (ನಾ). ಸರಿ ; ಸಾಟಿ ; ಸಮ : "ಸರಿ, ದೊರೆ, ಪಡಿ, ಗೆಡೆ, ಪಾಟಿ, ಪಾಸಟಿ . . . ಸಂಗಡಂ —ಈ ೧೮ ಸಮಾನಕ್ಕೆ ಪೆಸರ್" (ಕಬಾ. ೩೯-೨೯) ; ಪವನಸುತಂಗೆ ಪಾಸಟಿಗಳೊರ್ವರುಮಿಲ್ಲ (ಪಂಪಭಾ. ೦೨ ೦೨೦) ; ಬಾಯಿಬಡಿಕರು ಬಗುಳಿದರೆ ಹರಿಯಾಯತಿಕೆ ಪಾಸಟಿಯೆ (ಕುಮ್ಮಾ. ೯-೯೬); ರೂಪಿನಲಿ ನೀನೆತಿಜಲುವ ನಿನಗವಳು ಪಾಸಟಿ ಸತಿಗೆ ನೀನೇ ರಮಣನಲ್ಲದೆ ಕಾಣೆನಿತರರನು (ನಳಚ. ೨-೨೩).

**ಪಾಸಟಿಕೆ** (ನಾ). ಸಮಾನತೆ (?) : ಮೊದಲೊಳ್ ತಾಂ ಮಾನಸನಾಗಿ ದೇವರ್ಕಳಂ ಭಕ್ತಿಯಿಂದಂ ಪದೆದು ತನಗೀಳಿಕೊಂಡಂತೆ ವಪೆಯಿಂದೆತ್ತಿ ಕೊಂಡಂ ಕೀಳ್ದುದಿವರನಾ ಕೀಳಿಲಿಂ ಬಳಿಕ ರೂಢಿಸುತೆ ಪಾಸಟಿಕೆಯಂ ಪುದುವಿನಾ ಸಣ್ಪನೆಲ್ಲರುಮಂ ಕವಿ ಸತ್ಯಲೋಕದೊಳಾಳ್ವಂ (ಶಂಸಕ. ೦೨-೬೦).

[ಪಾಸಟ + -ಇಕೆ]

**ಪಾಸಟಿಗಾಣು** (ಕ್ರಿ). ಸದೃಶವಾದುದನ್ನು ಕಾಣು ; ಸಮಾನವಾದು ದನ್ನು ನೋಡು : ನರನಸಟನೆ ತೋರಿದ ಲಕ್ಷ್ಮೀನಲ್ಲ ನಾ ಪಾಸಟಿಗಾಣೆ ಅಪ್ರತಿಮಲ್ಲ (ಜಗರಾ. ೩೯೦). [ಪಾಸಟಿ + ಕಾಣು (<ಕಾಣ್)]

**ಪಾಸರೆ** ' ಪಾಸಱೆ³ ' ನೋ.

**ಪಾಸಲೆ** ' ಫಾಸಲೆ ' ನೋ.

**ಪಾಸಱೆ³,** ಪಾಸರೆ, ಹಾಸರ, ಹಾಸಱೆ³ (ನಾ). ಅಗಲವಾದ ಕಲ್ಲು ; ಹಾಸುಗಲ್ಲು ; ಹಾಸುಬಂಡೆ : ಪಾಸಱೆ ಸಿಂಪಜಲಧಿವಾಳಿನೀರುತಿ ಮಂಗಳ ಗೀತಿ ಭೂತಳರ್ ಪಾಸು (ಪಂಪಭಾ. ೬-೨೯) ; ಒಗೆವೆನೊ ಬೀಸಿ ಪಾಸಱೆ ಯೊಳ್ (ಪಂಪಭಾ. ೯-೦೬) ; ಪರಲೆಲ್ಲಂ ಮುತ್ತು ಮಾಣಿಕಂ ಪಾಸಱೆಗಳ್ ಪರುಸಂಗಳ್ (ಕಮರ. ೬೯ ಕೃಯೋ) ; ಬಜಸಿಡಿಲೆಱಗೆ ಪಾಸಱೆ ಬಿರಿವಂತೆ ಪೊಚ್ಚರಿಸಿ ಸೀಳಾಯ್ತು ಮತ್ತೊಡನೆ . . . ತೆಱೆದುದಾ ವಪ್ರಕವಾಟ (ಶಶಿ. ೨೯-೭೩). **ಪಾಸರೆ :** ಹೊಳೆಯೊಳು ನೀರೊಳಗಿರುವ ಪಾಸರೆಯೊಳು ಪಾರೆ ಯಾಗಿ ಮೊನಿರುವಂತೆ . . . ಹಾವಾಗಿ ನಾನಿಹೆನಲ್ಲ (ಶಂಕರ. ೨೪೦-೯೩) ; ಅಷ್ಟರಲ್ಲಿ ಶಿಷ್ಯವೃಂದವು ಆ ಪಾಸರೆಯನ್ನು ಸಮೀಪಿಸಿತ್ತು (ಪೇಪುಹ. ೬೬). **ಹಾಸರೆ :** ಆ ಹೆದ್ದಾರಿಯೇ ಮೇರೆಯಾಗಿ ನಡೆದು ಹಾಸರೆಯಲ್ಲಿ ನಿಂದು ಅಲ್ಲಿಂದ ಮೂಡ ಮುಂತಾಗಿ (ಎಕ. III, ಶ್ರೀರಂಗ. ೦೫೬-೬೮ ; 1453) ; ಸಮಾವದ ಹೆದ್ದಾರಿಯ ಒತ್ತಿರಿಣ ಕರಿಮು ಕಲ್ಲ ಹಾಸರೆ (ಎಕ. VII, ಶಿವಮೊ. ೨೬-೨೫೭ ; 1524); ನೆಲದ ಹಾಸರೆಯೊಳಂ ತಳೆದ ಮಣಿವಾಪುಗೆಯ ಕುರುಹ ಲೇಸಿನಿಂ ವಸುನೀರಿನಿಂದೆ ಚಿತ್ರಿಸಿದರೆಂಬಂತೆ ಸಲೆ ರಾಜಿಸುತಿರೆ (ಪವತೋ. ೨೯-೬೦) ; ಮಳೆ ಗಾಳಿಗಳ ನಿರಂತರ ಆಘಾತದಿಂದ ಹಾಸರೆಯಾದರೂ ಒಂದು ದಿನ ಬಿರಿಯುವುದು (ಹಾಹುತ್ತ. ೯೯). **ಹಾಸಱೆ³ :** ಬಡಗಣ

ಭಾಗದ ಹಾಸಱ್ (ಶಾಇ. IX-1, ೨೫೦-೬೩ ; 1148) ; ಹಾಱುವ ವೊರಡಿ ಗಳನೆದ್ದು ಪರಿದಿಡುವ ಹಾಸಱೆಗಳ . . . ಸಿದ್ಧರಾಮಂಗೆ ತೋಱುತ್ತ ನಡೆತಂದನಾ ದಿಗಂಬರವೀರನು (ಸಿದ್ಧರಾ. ೩-೨) ; ಸೂಸಕದ ಮುತ್ತಿನ್ನಗಳು ತಾರಾರಾಶಿಗಳ ಹಬ್ಬುಗೆಯು ಸಿಲವ ಹಾಸಱೆಗಳು ಮೋಲುತಿಪ್ಪವು ಗಗನ ಮಂಡಲದ (ಶಬ್ದಾ.ಶ. ೦೩-೪೦) ; ಕಾಳಕೂಟದ ಮಡುವಿನೊಳು ಮುಳುಗು ವೆನೊ ಹಾಸಱೆಯೊಳಗೆ ಬೀಳುವೆನೊ (ಶಶತ. ೩-೨೩). [ಹಾಸು₁+ಅಱೆ₄]

**ಹಾಸಱೆಗಲ್ಲು**, ಹಾಸರೆಗಲ್ಲು, ಹಾಸಱೆಗಲು, ಹಾಸಱೆಗಲ್ಲು (ನಾ). = ಹಾಸಱೆ : ಅದಱ ಸೀಮೆ . . . ಮೂಡಣ ಹಾಸಱೆಗಲ್ಲು ತೆಂಕ ಅಮ್ಮೋಜ ಹಾಸಿಗಟ್ಟು ಪಡುವ ಸಟ್ಟ ಕಲ್ಲು (ಎಕ. VII- ೩೫೨೦. ೦೨೦-೦೬ ; 1048) ; ಅರಿಯುಮನ್ನೆತಂದುದಪುರ್ದಿಯು ಹಾಸಱೆಗಲ್ಲ ಮೇಲೆ ಮಂಡಿಸಿದ (ಶಂಪಾ. ೯-೨೦೬). **ಹಾಸರೆಗಲ್ಲು** : ಕರಸಿದರು ಹುಡಿಗಲ್ಲು ನಿಡುಗಲ್ಲು ಏಡಿಗಲ್ಲು ಭರ ಹಾಸರೆಗಲ್ಲು ಬಿರಿಗಲ್ಲುಗಳನು (ಪಪಪೋ. ೩೨-೩೩). **ಹಾಸಱೆಗಲು** : ಕೆಱೆ ಯೇರಿಯು ಕೆಳಗಣೆರಡುಂ ಹಾಸಱೆಗಲುಗಳ ನಡುವಣ ಗರ್ದೆ[ಯು] ಮತ್ತೆ ರೆರಡುಂ (ಕಇಆ. ೬೨-೦೩-೬೩ ; 1117). **ಹಾಸಱೆಗಲ್ಲು** : ಆ ಗದ್ದೆಯಿಂ ಮೂಡಲು ನಟ್ಟ ಕಲ್ಲು ಅಲ್ಲಿಂ ತೆಂಕ ಹಾಸಱೆಗಲ್ಲು (ಎಕ. II. ೩೩೪-೨೬ ; 1282) ; ನಿಡಿಗಲ್ಲು ಸಿಸಿತ ಹಾಸಱೆಗಲ್ಲು ಚೌಕದ ಏಡಿಗಲ್ಲು ಬಟುಗಲ್ಲು ಬಿಳಿ ತುಡುಕಿದ ಪಪ್ಪುವರ್ಗಣದಿಂದೆ ಶ್ರೀಕೃಷ್ಣ ಹುಡಿಯೇಳಲೆಱ್ಬು ಹಾಱಿಸಿದ (ಪೊ.ಪಶ. ೯೦-೬೩). [ಹಾಸಱೆ + ಕಲ್ಲು (< ಕಲ್₃)]

**ಹಾಸಾಣ**. ಪಾಶಾಣ (ನಾ). ೧. ಕಲ್ಲು : ಶಿಲೆ : "ಪಾಸಾಣಂ ಶಿಲೆ" (ಕರ್ಣಾಟ. ೭೦) ; ಪಾಷಾಣ—ಪಾಸಾಣ (ಶಬ್ದ. ೨೩೪ ಪ್ರಕೃ.). ೨. ಅಶ್ಮರೀ ರೋಗದಿಂದ ಉಂಟಾಗುವ ಮೂತ್ರವಿಕಾರ : ಮೂತ್ರ ದೊಳಗಿನ ಕಲ್ಲು: ನಿರಂತರಂ ಹಾಱಿದು ಪೆರಂ ಕುಯಾಡಿಸ ಹಾಲೊಳರೆದು ಮಾಱದಿನಂ ಶರ್ಕರೆಯನು ಕುಡಿಯೆ ಹಾಸಾ(ಸ)ಣದ ರೋಗಮುಂ ಮೂತ್ರಕೃಚ್ಛ್ರಮುಂ ಪ್ರಶಮಿಸುಗುಂ (ಕಲ್ಯಾಣಕಾ. ೯-೦೩೩). **ಪಾಶಾಣ** : ೧. 'ಪಾಷಾಣ' ಪರಾ. [< ಪ್ರಾ. ಪಾಸಾಣ. 'ಸಂ. ಪಾಷಾಣ]

**ಹಾಸಾಲೆ** (ನಾ). ಬಾಯಿ ಅಗಲವಾಗಿರುವ ಪಾತ್ರೆ : ಬೆಂಬಿಗೆ ಹಾಸಾಲೆ ಅಪ್ಪಣೆಗಳನು ತಂದು ಪರಿವಾಣದೊಳಗಿರಿಸಿ (ಹಾವಿನಾ. ೩-೯೭) ; ಚಿನ್ನದ ಕೊಪ್ಪರಿಗೆ ಗಿಂಡಿ ಹಾಸಾಲೆ ತಟ್ಟೆ ಅನೇಕ ಬಟ್ಟಲುಗಳು (ಜಾವಪಂ. ೩೦೨) ; ಬಳಿಕ ಕೋಪನು ಲಿಂಗಮುಖದಿಂವಿಗ್ರಹನೆಯನಾಗ ಸೆಳೆದು ಹಾಸಾಲೆಯಲಿ ದ್ರವ್ಯಗಳಳವಡಿಸಿ ತಂದಿಟ್ಟನು (ಬಶಾ. ೨೨೬-೦೦).

[?. ತೆಲು. ಪಾಸನ. / ಸಂ. ಭಾಜನ ?]

**ಹಾಸಿ**₁ 'ಪಾವಸೆ' ನೋ.

**ಹಾಸಿ**₂ (ನಾ). =ಪಾಶಿ₁ ೧ : ಸಂಧುರೋಹಣ ಪಾಶಿಯುತೆ ರತ್ನಾಧಿಕರು ಮಾಧುರ್ಯಯುಕ್ತ ಹರಿಶ್ಚಂದ್ರ ಚೋಳರಂತೊಲುಂ ಸತ್ಕರಿಹರಾ ಪುರದೊಳು (ಪ್ರಶಾಕು. ೩-೩೨). [< ಸಂ. ಪಾಶಿನ್]

**ಹಾಸಿ**₃ 'ಫಾಸಿ' ನೋ.

**ಹಾಸಿ**₄ 'ಫಾಸೆ' ನೋ.

**ಹಾಸಿಕೆ**, ಹಾಸಿಕ್ಕೆ (ನಾ). ಹಾಸುಗೆ : ಶಯ್ಯೆ : ಬಟ್ಟೆವೋಪರ್ ಬಟ್ಟೆಗಲಾಡುವವಱುವ ಬಾಹುಂದರ ಹಾಸಿಕೆಗಳುಮಂ . . . ಒಳೆದ್ದು ಬತ್ತಿದ ಪಳ್ಳಂಗಳೊಳಮಂತರಾಗಿರ್ದುದರಾದ ಪೇರಡವಿಯೊಳಗೆ ಏರ್ಪಟಗಳ್ (ಕಾದಂಬ. ೨೩೬) ; ಅಂಗಸಂಭವನಳನ್ನೊಲಪ್ಪ ಕೆಂದಳಿರ ಹಾಸಿಕೆಯುಂ ವಿಷನಾಮವುಳ್ಳ ಶೀತಳಜಳಮುಂ . . . ಅಕ್ಕ ಕೇವಳ ಮೆಸಗಾಭಿಚಾರವಪ್ರಚಾರದಿಮದೇಂ ಶಿಶಿರೋಪಚಾರದೋ (ಶಗಪ. ೦೦-೪೪) ; ಕೌಶಿಕಂ . . . ಪವಡಿಸಿದ ತೃಣರಚಿತ ಹಾಸಿಕೆಯೊಳು (ಪಂಕಾರಾ. ೦-೦೨-೩೩). **ಹಾಸಿಕ್ಕೆ** : ಹಾಸಿಕೆ ಪೊರಸೇಕೆ ಲೇಸೇಕೆ ನಿಮ್ಮ ಭೃತ್ಯನಿಗೆ (ದೇವಶ. ೫೦-೩೨) ; ಆ ಶಿಖಂಡಿಯು ತೋಱ್ ಸರಳಸ ಹಾಸಿಕೆಯುಲೊಬ್ಬನನು ವಾತಿನ ಹಾಸಿಯಿಂದೊಬ್ಬನನು ಮುನ್ನಿನ ಕುಲವನೆಚ್ಚಱಿಸಿ ಫಾಸಿ ಮಾಡಿದ ನೊಬ್ಬನನು (ಶಬ್ದಾ.ಶ. ೦-೩೩) ; ಹಾಸಿಕ್ಕಿಲ್ಲದೆ ಹಾವಿನ ಮೇಲೆ ಒಱಗಿದವ (ಪ್ರಭುಲಿಂ. ೨-೦೦-೦).

ಹಾಸಿಕೆಪಥ್ಯ = (ವೈದ್ಯಕೀಯ ಕಾರಣಗಳಿಂದ) ಸಂಭೋಗವನ್ನು ವರ್ಜಿಸುವಿಕೆ : ಹಾಸಿಗೆಪಥ್ಯ : ಹಾಸಿಕೆಪಥ್ಯ ಇಪ್ಪತ್ತನಾಲ್ಕು ದಿವಸ (ಕಾವಯಶಾ. ೨೬೬). [ಹಾಸು₁ + — ಇಕೆ]

**ಹಾಸಿಕೆಗೆಯ್ಮೆ** (ನಾ). ರತಿಕ್ರೀಡೆ : ಸುರತ : ಎಳೆಯ ಹಾಸಿಕೆಗೆಯ್ಮೆಗಱಿ ಮೆಯ್ಮುಗ್ಗದಂತೆ ತಳರಿಸಿ ಪೆಣ್ಣನವನಾವ ಬಟಿಕವನೆಸಗುವ ಬಲ್ಮೆಗೆ ಬಟಸಂದೊಳಸರಿದೊಡಲನೊಪ್ಪಿಪುದು (ಕಕಾ. ೬-೫೦ ಪಾಂಗಕ್ಕ).

[ಹಾಸಿಕೆ+ಗೆಯ್ಮೆ (<ಕೈಮೆ₁)]

**ಹಾಸಿಗೆ** 'ಹಾಸಂಗೆ₁' ನೋ.

**ಹಾಸಿಸು** (ಕ್ರಿ). ಆವರಿಸು : ವ್ಯಾಪಿಸು (?) : ಒಲ್ಮೆಸಿಕೊಳುತ ನಿಜದೇಹ ಕಾಂತಿಯೊಳಸೆವುತಾಲಸಿತ ಪಟಕೇಶ್ವರರುದ್ರಸಿರ್ಪರೊಡನೇಳು ಪಾತಾಳಂ ಗಳಂ ಹಾಸಿಸುತ್ತ ಭೂಸ್ವಷ್ಟಾಂತವಾಗಿರುತಿಹ ಮೇಲುಂಗಡೆಯೊಂದು ಕೋಟಿಯುಂ ಯೋಜನಂ (ಶಶಾಕು. ೩-೦-೨೦). [ಹಾಸು₁? +— ಇಸು₃]

**ಹಾಸಿಱ್** (ಕ್ರಿ). ಹರಡಿಕೊಂಡಿರು ; ಪಸರಿಸು ; ವ್ಯಾಪಿಸು : ತಳಿತ ಕಾಗುವ ತೆರೆದುಱುಂಗಲಲೆಪದಿಂ ಸೂಸಿ ಹಾಸಿಱದು ಬಣ್ಣಾಪುರಂ ತೀವಿದಂತೆ ಚೆಡಂಗುವಡೆದ ಬಣ್ಣಾವಣ್ಣಗೆಯು ನೀರ್ಪೂಗಳ ರಜಂಗಳುಮನೊಳದೊಂಡಿನ ಹಾಲ್ಗಳುಮಂ ಪೀರ್ದು (ಕಾದಂಬ. ೩೨೬).

[ಹಾಸು₁+ಇಱು₁]

**ಹಾಸು**₁, ಹಾಸಂ₁ (ಕ್ರಿ). ೧. ಬಿಚ್ಚಿ ಹರಡು : ಅಗಲವಾಗಿ ಬಿಡಿಸು ; ಪಸರಿಸು: "ಹಾಸು—ಆಸ್ತರಣಕ್ರಿಯಾಯಾಂ, ತಲ್ಪೇ ಚ" (ಶಮಂಹ); ಅರಸರ್ ಏರ್ಪ ಬಚ್ಚೆಮೊಳಲ್ಲಾ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರವಟ್ಟು ಮಕೂಲ ಚೀನಾದಿ ದಿವ್ಯವಸ್ತ್ರಂಗಳಂ ಹಾಸಿ (ವಚ್ಚಾರಾ. ೨೬-೩) ; ಕುಳಿರ್ವ ತಿಳಿನೀರನುಡುಗದೆ ತಳಿ ತಳಿರಂ ಹಾಸು ಪಳಯಿಂ ಬೀಸು (ಅಂಕಿ. ೨-೦೪); ಬಲಿಯಂ ಹಾಸಿ ಬಲಿಹರಣಂಗೆಯ್ವಂತೆ ಕೂಱಂ ಸೂಸಿ ಪೋಪುದುಂ (ಶಂತಶಂ. ೨೬೬-೦೪) ; ಹಾಸಿದ ದಳಂಬುಮಱುಗುರ್ಗಳ ಕೇಸಡಿಗಳ ಚರಣ ಭೂಷಣಂಗಳ ರುಚಿಯುಂ ಬಾಸಣಿಸಿ ಚಿತ್ರಪಟಮುಂ ಹಾಸಿದವೊಲಿರೆ ವಧೂವರರ್ ನಡೆತಂದರ್ (ಅತುಕು. ೬-೩೪). ೨. ಒಡ್ಡು : ಎದುರಿಗೆ ಹಿಡಿ : ಮದುವೆಯಾಗಲವೇಚ್ಛೆಯೊಂದು [ಮೇಲುಂದು ಹಾಸಿ] ಬೇಡು ವುದುಂ (ಪಪರ್ಶಮ್ಮ. ೩-೨೬೭). ೩. ನೀಡು ; ಚಾಚು : ತನುಪಲ್ಲವತನು ತಾಪಂ ತನುವಂ ಸುಡೆ ನಿಲಿಸಲೆಂತುಮಾಱದೆ ತನುವಂ ತನುಮಧ್ಯೆಯ ದಲರ್ವಾಸಿನ ನನೆವಾಸಿನ ಮೇಲೆ ಹಾಸಿದರ್ ತನುತನುವಂ (ಮ್ಯಕ್ಕ. ೩-೩೩), ಕರಡಿ ಪಿಶೀಲಿಕಾವಳಿಗೆ ನಾಲಗೆ ಹಾಸುವವೋಲ್ ಬಾಯಮಂ ಭಯಂಕರ ರಸನಾಗ್ರಮುಂ ಧರೆಗೆ ಹಾಸಿದಂ (ಶಮಪ. ೦೩-೯೬); ಪೊನ್ನ ಬಣ್ಣದ ನವಕರ್ಣಿ ಕಾರ ಕುಸುಮಕ್ಕೆಱಗಿರ್ದ ಮಧುಪಾಳಿ ಕಂಪುಗಾಣದೆ ಕಱಿವತ್ತು ಪೆಣ್ಣು ಪೊಸ ರೂಪಿನ ಹಾವಿಗೆ ಹಾಸಿ ಪಿರ್ದ ಬಟ್ಟೊವಮಿಂದುವುಗಾಣದಬಲಿಂ ಪೆಱ ಪಿಂಗುವ ಕೇಳಸಂದದಿಂ (ಅಂಲಾಪ. ೯-೦೦೬); ಬಲ್ಲೊಲಗೆ ಹೇಸಿದರ್ ಸುರರ ಗಳ ದಿಕ್ಕಿಯೊಳ್ ಕೈಗಳಂ ಹಾಸಿದರ್ (ತಂಕು. ೯೨-೩೬). ೪. ಅಡ್ಡಲಾಗಿ ಚಾಚಿಕೊಂಡಿರು ; ಕೆಡೆ : ಬಿದ್ದಿರು : ನೆಲಸಂ ಮಾಱುದ್ದಿ ಕಯ್ಯಂ ಧರಾತಳದೊಳ್ ಹಾಸಿದ ತನ್ನ ತೀವ್ರಗದೆಯಂ ಕಂಡೆತ್ತಿಕೊಂಡು . . . ಮುಂದಿಟ್ಟಂ ಕಲಿಸತ್ತಿಗಂ (ಗದಾಯು. ೬-೩೭). **ಹಾಸು** : ೧. ಸಂಗಯ್ಯ ಒಲಿದಾನೊ ಒಲಿಯನೊ ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು (ಬಸವ. ೩೨೦); ಅಂದವರಿಗಿಲ್ಲರಸ ಹಾಸಿಕೊಂಡು ವಸ್ತ್ರಗಳಲ್ಲ ಹೊದೆಯಲಿಕೆ (ಶಂಕಶ. ೨೨-೩); ಹಾಸಿಗೆಯನು ತಂದು ಹಾಸುವೆನೆಂದರೆ ಶೇಷನ ಮೇಲೆ ನೀ ಪವಡಿರ್ಪೆ (ಭೂಮ. ೨-೩೬-೪); ಹಾಸಿಗೆ ಹಾಸಿಂದ ಮಲ್ಲಿಗೆ

ದುಡಿದುದರಿಂದ (ಗುಂ. ೬೬). ೨. ಆತನ ಪ್ರಸಾದಕ್ಕೆನ್ನ ಸೆಜಿಗ ಹಾಸಿ ಆರೋಗಿಸಿ ಸುಖಿಯಾದೆನು (ಸಿದ್ಧ.ವ.೪.೩೦೬-೦೨೬೬). ೫. ಹರಡಿಕೊಳ್ಳು: ಅರ್ಜುನಸಂಬಿಸಂಜುಬೆಗೆ ಹೊಸ ದಾವಣಿ ಹಾಸಿದವು ಸೂಸಿದವು ಬೊಂಡೆಗಳು (ಕುವ್ಯಾದ್ರೋ. ೦೦-೩).

**ಹಾಸಿ ದುಡಿ**= ಮೈ ಒಡ್ಡಿ ದುಡಿ: ಕಷ್ಟಪಟ್ಟು ಕೆಲಸ ಮಾಡು: ಹಾಸಿ ದುಡಿದರೆ ತನಗುಂಟು ತನ್ನ ಸ್ವಾಮಿಗುಂಟು (ಬಸವ. ೩೨೪). **ಹಾಸಿ ಹೊದೆ**= ಸಂಪೂರ್ಣವಾಗಿ ಒಂದರಲ್ಲಿಯೇ ಮಗ್ನವಾಗು, –ತನ್ಮಯವಾಗು: ಜನ್ಮಜನ್ಮಾಂತರಾರ್ಜಿತ ನಿಮ್ಮ ಪ್ರಸಾದವ ಹಾಸಿ ಹೊದೆದುಕೊಂಡಿಪ್ಪ (ವಚನಾರ. ೨. ೧೦೨-೨೩೩).

[ದೇ.॥ ತಮಿ. ಪಾಪು. ಪಾವು]

**ಹಾಸು₂**, ಹಾಸು₃ (ನಾ). ೧. ಹಾಸಿಗೆ; ಶಯ್ಯೆ: "ತಲ್ಪಂ, ತಳಿಮಂ— ಈ ೨ ಪಾ(ಹಾ)ಸು" (ಕರಾಭು ೩೦-೦೫೨); ಎರಡು ಘಟಿಗೆಯಿಂದೊಳಗೆ ಪಾಸಿನ ಪೊರೆಯೊಳ್ ಪಟ್ಟಿ . . . ಪುಹರ್ದಿಕದೇವರಾಗಿ (ವಡ್ಡಾರಾ. ೯೯-೩); ತಳಗರ್ಳ ಕಂಡವಟಂಗಳೆ ತಳಗರ್ಳ ಪಾಸುಗಳೆ ತಳಗರ್ಳೋವರಿಗಳೆ (ಅಂಕ್ರ. ೦೦-೩೩): ಚಂದ್ರಾಪೀಡಂ . . . ಅಡಕಲ್ಗೊಂಡೊಪ್ಪುವ ಕೌಳುಡೆಯುಂ ಸೊಗಯಿಸುವ ಪಾಸಿನೊಳ್ ಪಟ್ಟಿರ್ದಂ (ಕಾದಂಬ ೯೬); ಮಣೆಯೊಳ್ ಪಡುವುದರಿದೋ ಪಾಸಿನೊಳ್ ಪಡುವುದರಿದೋ (ಧರ್ಮಾಮೃ. ೬-೯೦). ೨. ಮಗ್ಗದಲ್ಲಿ ಉದ್ದಕ್ಕೆ ಹಾಕಿರುವ ಎಳೆಗಳ ಸಾಲು: ಪಟ್ಟಗಾಬಿನ ಪಾಸಂ ತವೆ ತೋಡುವಂತೆ ಕರುಳಂ ನೀಂ ತ್ರೋಡಿದೈ ದೈತ್ಯನಾ (ಕಾವ್ಯಾವ. ೩೫): ಆಸುರದೊಳಿಂದ್ರಜಾಲದ ಕೂಸುಗಳಂ ಕಂಸನೊಗೆದನಜಿಯೊಳ್ ನೆತ್ತರ್ ಸೂಸೆ ದೆಸೆದೆಸೆಗೆ ಕೆಂಪಿನ ಪಾಸಂ ಒಡಿದೊಗೆವ ಪಟ್ಟಗಾಬಿನ ಕೆಬಿದಿಂ (ಅರ್ಣವೇ. ೬-೩೦). 'ಪೊಕ್ಕು₂' ಪರಾ. **ಹಾಸು₃**: ೧. "ಶಯ್ಯೆ, ಶಯನೀಯ, ಶಯನ—ಹಾಸು" (ಪಾಂಡ. ೬): ಹಾಸಸಟ್ಟಿದು ಕಂಥೆಯುಂ ಪೊರಿಸುವ ಮೊದೆಯುಂ ಸುಟ್ಟುರಳಂ ಕುಜಾಕುಪ ತಾವ್ರವನೊಕ್ಕು ಸಗಾವುಂ ಕೊಳ್ವ . . . ವಿಗ್ರಸಂ ಪೋಲ್ವಂ (ಧರ್ಮಾಮೃ. ೩-೨೦): ಹಾಸಿನೊಳು ಪವಡಿಸುವಾತನೆಂತು ಕಲುನೆಲದೊಳೊಜಗುವೆ (ಹಕಾ. ೯-೩); ಹಾಲ ಸಾಗರ ಮನೆಯು ಸಜ್ಜೆಯು ಪೋಲೆ ಶೇಷನ ಹಾಸು (ಕಂಭಕ. ೬-೦). ೨. ಕಾಸಿ ಕಪ್ಪಾಜಿನಾದ ಬೀಸಿ ಪಾಡಿವಾಳನಾದ ಹಾಸನಿಕ್ಕಿ ಸಾಲಿಗನಾದ (ಬಸವ. ೩೯೦). ೩. ಪಗಡೆಆಟದಲ್ಲಿ ಹಾಸುವ, ಮನೆಗಳುಳ್ಳ ಪಟ; ಪಗಡೆಪಟ್ಟಿ: ಪಗಡೆಯ ಕಾಯಿ ಹಾಸನ್ನೆಲ್ಲ ಸುತ್ತಿ ಬಂದು ಹಣ್ಣಾಯಿತು! (ಬಿಂಕವು. ೨೯೯); ಆಟಕ್ಕೆ ಹಾಸು ಹಾಸಿದೆ ಬಾ ಆಡೋಣ (ವ್ಯಾಸಶಿ. ೦೨೦). ಕೆಲವು ಸಾಮಂತರು ಪಗಡೆಯಾಡಲು ಹಾಸನ್ನು ಬಿಚ್ಚುತ್ತಿದ್ದರು (ಕಾಶಿ. ೨೩೪). ೪. ಚಾಪೆ, ಜಮಖಾನೆ ಮುಂತಾದ ಹಾಸುವ ಸಾಧನ: 'ನೆಡುಹಾಸು' ಪರಾ.

**ಹಾಸುಪೊಕ್ಕು₁**, ಹಾಸುವೊಕ್ಕು₁, ಹಾಸುಹೊಕ್ಕು= ೧. ಮಗ್ಗದಲ್ಲಿರುವ ಉದ್ದ ಎಳೆ ಹಾಗೂ ಅಡ್ಡ ಎಳೆ. ೨. ಮಗ್ಗದ ನೇಯ್ಗೆಯಲ್ಲಿ ಎಳೆಗಳು ಒಂದರಲ್ಲೊಂದು ಹೆಣೆದುಕೊಂಡಿರುವಿಕೆ. ೩. ಬಿಗಿಯಾದ ಹೊಂದಿಕೆ: ಸರ್ವರಾ ಸರ್ವಕರ್ಮಗಳ ಹಾಸುಪೊಕ್ಕಿನ ಜಟಿಲಜಾಲವೆ ಕೃತಿಪಥದಲ್ಲಿ ನಡೆವೀ ಜಗನ್ನಾಟ್ಯವು! (ಶ್ರೀರಾಮಾ. ೩೨೦-೩೬೦): ಸೆಕೆಂಡು, ಮಿನಿಟು, ತಾಸುಗಳ ಹಾಸುಪೊಕ್ಕಿನಲಿ ಅಲ್ಲೊಂದು ಇಲ್ಲೊಂದು ಬಣ್ಣದ ನೂಲು (ಪಿವು. ೩೦-೨೪); ಭಾವದ ಒಂದೊಂದೂ ಸುಳಿವು ಎಳೆಎಳೆಯಾಗಿ ಬಿಡಿಸಿ ಬಂದು. ಹಾಸುಹೊಕ್ಕಾಗಿ ಹೆಣೆದು, ಹೊನ್ನ ಪೊರೆಯಾಗಿ ಕಣ್ಣನ್ನು, ಮನಸ್ಸನ್ನು ಮುತ್ತುತ್ತಿದ್ದಿತು (ನವಿ. ೫). ೪. ಸಮಗ್ರವಾದುದು: ಎನ್ನೊಳಿಂತಿಪ್ಪ ಪಾಸುವೊಕ್ಕು (ರಾಮಾಕ. ೦೦೬-೨೬): ಬೀಡು ಕಾಣಿಕೆಯಿತ್ತು ಕಂಡುದು ನಾಡೆ ಕಾಣಿಸಿದನು ಪುರೋಚನ ಕೂಡೆ ಸಂದನು ಹಾಸು ಹೊಕ್ಕಾಗವರ ಮಾನವಜೀವ (ಕುವ್ಯಾಆ. ೬-೮೪). ಹಾಸಿನ ಸುಲಿ— ಶಿರಟಿಕೊಂಡಿರುವ ಮಗ್ಗದ ನೂಲು: (೬). **ಹಾಸುಹೊಕ್ಕು**— (ಸಂಪೂರ್ಣವಾಗಿ) ಹೊಂದಿರುವಿಕೆ; ರೂಢಿಯಾಗಿರುವಿಕೆ. ಅಭ್ಯಾಸ: ಹುಡುಗತನದಿಂದಲೂ ಅದೇ ಹಾಸುಹೊಕ್ಕಾಗಿ ಹೋಗಿದೆ ನನಗೆ (ಮುಕೋಕಂ. ೯೯). [<ಪಾಸು₁]

**ಪಾಸು₃** 'ಪಾಸ್₁' ನೋ.

**ಪಾಸು₄**, ಪಾಸ್ (ನಾ). ೧. ತೇರ್ಗಡೆ; ಉತ್ತೀರ್ಣವಾಗುವಿಕೆ; ಸಫಲತೆ: ಅಷ್ಟೆಲ್ಲ ಓದಿಸಿ ಪಾಸಾಯಿತೆನುವಾಗ ಇಲ್ಲದೆ ಹೋದರು ತಂದೆ (ಬಂಗಾಕ. ೨೨-೯೬): ಗೋಪಾಲರಾಯ ಮೆಟ್ರಿಕ್ ಪಾಸಾದ ಅಧ್ಯಾಪಕ (ಮುಂಗಾರು. ೨೪). ೨. ಒಪ್ಪಿಗೆ; ಪಸಂದಾಗುವಿಕೆ; ಮೆಚ್ಚಾಗುವಿಕೆ: ಯಾವ ಕನ್ಯೆಯೂ ಅವನಿಗೆ ಪಾಸು ಎನಿಸಲಿಲ್ಲ; ಇನ್ನೂ 'ವರ'ನಾಗಿಯೆ ಉಳಿದಿದ್ದಾನೆ (ಕೂಶ). ೩. ಅಪ್ಪಣೆಚೀಟಿ; ಅನುಜ್ಞಾಪತ್ರ; ಪರವಾನೆ; ರಹದಾರಿ: ಸರ್ಕಾರಿನೌಕರನಾದುದರಿಂದ ಅವನಿಗೆ ಪ್ರವಾಸಕ್ಕೆ ಪಾಸು ಕೊಟ್ಟೇ ಕೊಡುತ್ತಾರೆ (ಕೂಶ). ೪. ನಾಟಕ, ಸಿನಿಮಾ ಮೊದಲಾದುವುಗಳಿಗೆ ವಿಶೇಷ ವ್ಯಕ್ತಿಗಳಿಗೆ ನೀಡುವ (ಶುಲ್ಕವಿಲ್ಲದ) ಪ್ರವೇಶಪತ್ರ: ಜೇಬಿನಿಂದ ಪಾಸುಗಳನ್ನು ತೆಗೆಯುತ್ತ . . . ಇವೇನು ಕಾಂಪ್ಲಿಮೆಂಟರಿ ಆಗೋದಿಲ್ಲ ಎನ್ನುತ್ತ ಪಾಸುಗಳನ್ನು ಕೊಡಬಂದ (ಕಂಗಿಣ. ೯೩). **ಪಾಸ್**: ೧. ನಾನಾದರೂ ಪಾಸ್ ಆದವರಲ್ಲಿ ಒಂಬತ್ತನೆಯವನು (ಕೋಮು. ೨೨೩).

**ಪಾಸಾಗು**= ತೇರ್ಗಡೆಯನ್ನು ಹೊಂದು; ಉತ್ತೀರ್ಣತೆಯನ್ನು ಪಡೆ: ಸಫಲವಾಗು: ಅವನು ಪರೀಕ್ಷೆಯಲ್ಲಿ ಪಾಸಾಗುವ ನಿರೀಕ್ಷೆ ಇಲ್ಲ (ಕೂಶ). **ಪಾಸು ಬೀಳು**= ಮನಸ್ಸಿಗೆ ಬರು: ಅಂಗಡಿಕಾರನು ತೋರಿಸಿದ ಯಾವ ಸೀರೆಯೂ ಅವಳಿಗೆ ಪಾಸು ಬೀಳಲಿಲ್ಲ (ಕೂಶ). **ಪಾಸು ಮಾಡು**= ೧. ಒಪ್ಪು; ಮೆಚ್ಚು: ವರ ಪಾಸು ಮಾಡುವ ಗುಂಗಿನಲ್ಲಿಯೇ ಇವನನ್ನು ತಮ್ಮ ಪಾಸಲಿಸ್ಟಿನೊಳಗೇರಿಸಿದರು (ಅಕಾ. ೦೦). ೨. ಮಂಜೂರು ಮಾಡು; ನಿರ್ಣಯಿಸು; ಠರಾಯಿಸು: ಕವಡ ಗಂಟಕರು ಕೂಡಿ ತಮಗೆ ಅನುಕೂಲವಾಗುವಂತೆ ಠರಾವು ಪಾಸು ಮಾಡಿಕೊಳ್ಳುವ ನಾಟಕವೂ ಅಲ್ಲ (ಅಕಾ. ೪). [←ಇಂ. Pass]

**ಪಾಸುಂದೊವಲ್** (ನಾ). ಹಾಸುವ ಚರ್ಮ; ಕೃಷ್ಣಾಜಿನ: ಆ ಜೋಗವಟ್ಟಿಗೆಯುಮಾ ಬೆಳ್ಳಡೆಯುಮಾ ಬೆಂಬೂದಿಯ ಪೂಸುಂ . . . ಮೇಣಾ ಪಾಸುಂದೊವಲುಮೆನ್ನೀ ಎಸುಗೆಯ ಕೂರಂಬಿನ ವನೆಗೊಂದು ಕುತ್ತಸಳ ಜಾಲಿಗೆ ಸೀಕರಿವೋಗದೇಂ ಮಾಣ್ಬುಂ (ಕಾವ್ಯಾ. ೩೩-೮೩).

[ಪಾಸು₁+ತೊವಲ್₂ (<ತೋಲ್₁)]

**ಪಾಸುಂಪೊಕ್ಕುಂ**, ಪಾಸುಪೊಕ್ಕು₂, ಪಾಸುಪೊಕ್ಕುಂ, ಹಾಸುಹೊಕ್ಕು₂ (ಅ). ಅಡ್ಡಕ್ಕೂ ಹಾಗೂ ಉದ್ದಕ್ಕೂ: ಓತಪ್ರೋತವಾಗಿ: ಅತ್ತಲೂ ಇತ್ತಲೂ; ಉದ್ದಗಲವಾಗಿ: ಆ ಸಭೆಯೊಳ್ ಹರಿಕರವಿನ್ಯಾಸಂಗಳ್ ನುಡಿಯನಡಕುವಂತಿರೆ ನುಡಿದಂ ಪಾಸುಂಪೊಕ್ಕುಂ ಪರೆದು ಸಭಾಸದನಂ ತೊಳಗಿ ಬೆಳಗೆ ದಂತಪ್ರಭೆಗಳ್ (ಕುಕಾ. ೯-೩೪); ಪಾಸುಂಪೊಕ್ಕುಂ ಬರಿದು ನಿಚಿತವಚನಕದಂಬಕಮೆರ್ದೆಗೊಳಿಸೆ ಸಭೆಯ ವಿಬುಧಾವಳಿಯಂ (ಶಾಂತಿಪು.೯-೦೨೮): ಅಂತಿದಿರಾಂ ಬಟೆಯುಂ ಪಾಸುಂಪೊಕ್ಕುಂ . . . ಪರಿದು (ಗದಾಯು. ೬-೨೯ ವ). **ಹಾಸುಪೊಕ್ಕು₂**: ತೊಳಲಿದಳ್ ತೊಳತೊಳಲಿ, ಬಗೆಯದೆ ಬಳಲ್ಕೆಯಂ ಚಮೊಗೊಂಡ ಪಾಂಗಿನಿಂ ಪಾಸುವೊಕ್ಕಾಗಿ ಬನ ಬೆಟ್ಟಗಳಲೆಲ್ಲಲ್ಲಿಯುಂ (ಅಪ್ರಾಂಗ. ೩೬-೦೯೨). **ಹಾಸುಪೊಕ್ಕುಂ** ಹಾಟುಂ ಬಟೆಯುಂ, ಪಾಸುಪೊಕ್ಕುಂ (ಕಬ್ಬಿಸು. ೬೩ ಶಾವ್ಯಾ). **ಹಾಸುಹೊಕ್ಕು₂**: ಎಡಹುತ್ತ ತಾಗುತ್ತಲೆಲುಗಳಂ ಮೆಟ್ಟಿ ತನ್ನಡಿಗಳಕುತ್ತನೆಣಿಯದೆ ಹಾಸುಹೊಕ್ಕು ಹರಿದಾಡಿದಂ ಭೂಪಾಲನು (ಹಕಾ. ೦೦-೮೨); ದಿಕ್ಕು ದಿಕ್ಕಿಗೆ ಕದಲಿಸುವನಶ್ವವ ಹಾಸುಹೊಕ್ಕಾಗಿ ತಂಡುತಂಡಾಗಿ ಸಕ್ಕಸ

ಸರಿತರೊಳೇಱ ತೋಱವನೆವೆಯುಕ್ಕುವಪ್ಪಱಿಯೊಳಿರಲ್ವಾರಿ (ಶಬ್ದ. ೩೦-೭೩). [ಪಾಸು$_2$+ಪೊಕ್ಕು$_2$]

**ಪಾಸುಂಬಲೆ**, ಪಾಸುವಲೆ, ಹಾಸುವಲೆ (ನಾ). ಒಂದು ಬಗೆಯ ಬಲೆ: ತಡಿಕೆವಲೆಯು ಬೀಸುಂಬಲೆಯು ಪಾಸುಂಬಲೆಯು ಕಣ್ಣಿವಲೆಯು ... ಬಲೆಗೊಱೆಪೊತ್ತು (ರಾಜಶೇ. ೪೬-೨೮). **ಪಾಸುವಲೆ**: ಬಡಿಕೋಲು ಜಾಯಿಲಂ ಪಾಸುವಲೆ ಬೀಸುವಲೆ... ಪಿಡಿದು ... ಆಱಿವಿಯೊಳು ಬೇಂಟೆ ಯಾಡುತ್ತಿರ್ದರು (ರಾಜಶ. ೦೭-೭೭). **ಹಾಸುವಲೆ**: ತಡಿಕೆವಲೆ ತಪ್ಪಲೆ ಹಾಸುವಲೆ ಬೀಸುವಲೆ ... ಮುಂತಾದವಲೆಯು ಮೊದಲಾಗಿ ಪೇಱವವೆ ನೆರೆದಾದು (ಹತಕಾ. ೩-೮); ಹಾಸುವಲೆಗಳಿಂದ ಹರಿದಲೆಯಿಂದ ... ಬೇಂಟೆಯ ಜನರಲ್ಲಿ ಫಾಸಿ ಮಾಡುವವರು ವ್ಯಾಗಗಳ (ರಾಜೇ. ೦೫-೬೩); ಹಾಸುವಲೆಯು ಹರಿವಲೆಯುಂಟು ... ವಾರಣದಿಂದ ಪಿಸಿದರು ವಿಪಿನದೊಳ್ ಚರರು (ಅನ್ನ. ೩-೨೮). [ಪಾಸು$_1$-ಬಲೆ$_1$]

**ಪಾಸುಗಲ್**, ಹಾಸುಕಲ್ಲು, ಹಾಸುಗಲ್ಲು (ನಾ). ೧. ಅಗಲವಾದ ಚಪ್ಪಟೆಕಲ್ಲು: ಹಾಸರೆಗಲ್ಲು: ಮಾಣಿಕ್ಯಮಯದೊಳೆಯಿಸಮರ್ಚಿದ ಪಚ್ಚೆಯ ಪಾಸುಗಲ್ಲ ಬಿನ್ನಾಣದಿಸಂಪ್ರಸೀಲಮಣಿವೇದಿಕೆಯಿಂ ... ಬಗೆಗೆ ಕೌತುಕವಾಯ್ತು ವಿವಾಹಮಂಟಪಂ (ಅನ್ನ. ೬-೯). **ಹಾಸುಕಲ್ಲು**: ೧. ಪಚ್ಚೆಯ ಹಾಸುಕಲ್ಲುಗಳಿಂ ಕುರುವಿಂದದ ಜಗತಿಗಳಿಂದ ಕಟ್ಟಿ ಚಿನ್ನದ ಗಾರೆಯಿಂ ಮಾಡಿ (ಶಿಗಂಂ. ೩೩೮-೩). **ಹಾಸುಗಲ್ಲು**: ೧. ಅಪ್ಪಾಜಿಯು ಎದ್ದು ... ಹಾಸುಗಲ್ಲಿನ ಮೇಲೆ ಕಾಲೊತ್ತಿಕೊಂಡರು (ಕಂಗಾಳ. ೯); ನಾಲ್ಕಾಳ ಆಗಲಗೆ ಐದ್ದು ಒಡೆದ ಹಾಸುಗಲ್ಲು ತಗಲಿ ಉಳಿಯುವುದೆಂದವರೇನು? (ರಾಂ. ೦೦ ಕಥಾಕಾ). ೨. ನೆಲಕ್ಕೆ ಹೊಂದಿಸಿರುವ ಕಲ್ಲು; ನೆಲಕ್ಕೆ ಹುಟ್ಟಿರುವ ಕಲ್ಲು: ಅವರ ಮನೆಯಲ್ಲಿ ಅಂಗಳಕ್ಕೆ ಹಾಸುಗಲ್ಲು ಹಾಕಿದ್ದಾರೆ (ಜೀ). ೩. ಕಲ್ಲಿನಿಂದ ಮಾಡಿದ ಆಸನ,-ಬೆಂಚು: ಉದ್ಯಾನವಲ್ಲಿ ಹಾಸುಗಲ್ಲುಗಳಿರುವುದರಿಂದ ಸಂಜೆ ಕುಳಿತುಕೊಳ್ಳಲು ಅನುಕೂಲವಾಗಿರುತ್ತದೆ (ಜೀ). [ಪಾಸು$_1$+ಕಲ್$_3$]

**ಪಾಸುಗೆ$_1$**, ಪಾಸಿಗೆ, ಹಾಸಿಗೆ, ಹಾಸುಗೆ (ನಾ). =ಪಾಸಿಕೆ: ಕಾಂಚನ ಮಂಚದ ಮೇಲೆ ಚೆಲ್ವುವೆತ್ತಂಚೆಯ ತುಪ್ಪುಳಿಂ ಸಮೆದ ಪಾಸುಗೆಗಳೇಱುಮನಿಕ್ಕಿ ... ಮಕೂಲಪರಿಷ್ಕೃತಂಗಳು ಪ್ರಾಂಚಿತಮಾಗಿ ಪಾಸಿದೊವೆ (ಶಾರಶ್ರ. ೬-೦೦೭); ಬಸವೇಶ ತನ್ನ ಮಂದಿರಕೆ ಪಾಸುಗೆ ಯಿಂದಲಿ ಬಿಜಯಮಾಡಿಸಿ ತಂದನು ಬೆಸೆವ ಶರಣರ್ಜನಸಹಿತ (ಬಸ್ವಾ. ೦-೯೦). **ಪಾಸಿಗೆ**: ಪಾಸಿಗೆ ನಾಂಬ ಪಾಂಬವಮಳ್ಯಂ ಕೂಟದೊಳ್ ಸಲ್ಲರಾ (ಶಂಕ್ರಕೃ. ೮-೬೮); ಬೀಸುವುದೊಮ್ಮೆ ಪಿಡಿದು ಬಿಟ್ಟಣಗೆಯ ಪಾಸುವುದೊಮ್ಮೆ ಪಾಸಿಗೆಯ (ಹರಿ. ೯-೦೪). **ಹಾಸಿಗೆ**: "ಶಯ್ಯಾ. ಶಯನೀಯಂ. ಶಯನಂ—ಈ ೩ ಹಾಸಿಗೆ" (ನಾಶಾ. ೦೨೩); ಹರಿಯ ಹಾಸಿಗೆಯಾದನಂತನ ಮಹಿಮೆ ಗೋಚರವೆ (ಸಂಶಪ. ೭-೨); ಹಾವು ಎನ್ನ ಹಾಸಿಗೆಯಂತೆ ಕದ್ದು ಬೆಣ್ಣೆಯ ನಾ ತಿಂದೆನಂತೆ (ಕೃಕಂ. ೨-೦೯-೩); ಹರಿಗೆ ಹಾಸಿಗೆಯಾಗಬೇಕೆಂದು ಪಾತಾಳಪುರದಿಂದಲುರಗೇಂದ್ರ ಬಂದ (ಕಂಶಶ. ೬-೦೦); ಬದಿಯ ಹಾಸಿಗೆಗಳಲ್ಲಿ ದೊಡ್ಡಮ್ಮ, ಸೋದರತ್ತೆ, ಗಿರಿಜ ನಿದ್ದೆ ಸೇರಿದ್ದರು (ಮೂಕಜ. ೩೦೦). **ಹಾಸುಗೆ**: "ಪ್ರವೇಣೀ. ಆಸ್ತರಣಂ – ಈ ೨ ಹಾಸುಗೆ" (ಹಲಾಯು. ೩೦-೦೩೩).

**ಹಾಸಿಗೆಪಥ್ಯ**=(ವೈದ್ಯಕೀಯ ಕಾರಣಗಳಿಂದ) ಸಂಭೋಗವನ್ನು ವರ್ಜಿಸುವಿಕೆ: ಹಾಸಿಗೆಪಥ್ಯ ಸಲವತ್ತು ದಿನ ಇದ್ದರೆ ವೀರ್ಯವೃದ್ಧಿ (ಕಾಮಶಾ. ೨೬೩). **ಹಾಸಿಗೆಯ ಊಳಿಗ**=ಹಾಸಿಗೆಯನ್ನು ಸಿದ್ಧಪಡಿಸುವ ಕೆಲಸ.—ಊಳಿಗ: ಅರಮನೆಯಲ್ಲಿ ಸಮುಚಿತದೊಳು ಚಿತ್ರಕಟ್ಟಳೆಯಲ್ಲಿ ನಡೆಯುವ ಊಳಿಗಗಳು...ಪಟ್ಟಿಪಾವುಡೆಯ ಊಳಿಗ, ಹಾಸಿಗೆಯ ಊಳಿಗ (ಮುಕಾಶಂ. ೧. ೯೩). **ಹಾಸಿಗೆಯಿದ್ದಷ್ಟು ಕಾಲು ಚಾಚು**—ಆದಾಯಕ್ಕೆ ತಕ್ಕಂತೆ ವೆಚ್ಚ ಮಾಡು: ಹಾಸಿಗೆಯಿದ್ದಷ್ಟು ಕಾಲು ಚಾಚಬೇಕಷ್ಟೆ (ಗ್ರಂಥಾಂ. ೦೦); ಪ್ರತಿಯೊಬ್ಬನೂ ತನ್ನ ಹಾಸಿಗೆಯಿದ್ದಷ್ಟು ಕಾಲು ಚಾಚಿ ಕೊಳ್ಳಬೇಕು (ಏಕಪ್ಪ. ೭). **ಹಾಸುಗೆ ಹಿಡಿ**=ರೋಗದ ಕಾರಣದಿಂದ ಮಲಗು; ಬಾಯಿಲೆ ಬೀಳು: ಶೀತದ ಜೊತೆಗೆ ಜ್ವರ, ತಲೆನೋವುಗಳು ಸೇರಿಕೊಂಡವು. ಆತ ಹಾಸುಗೆ ಹಿಡಿಯಬೇಕಾಯಿತು (ಕುಶಿಕಾ. ೦೨೦).

[ಪಾಸು$_1$+–ಗೆ. / ತುಳು. ಹಾಸಿಗೆ]

**ಪಾಸುಗೆ$_2$** 'ಪಾಸಂಗೆ' ನೋ.

**ಪಾಸುದಳಿರ್** (ನಾ). (ಹಾಸಿಗೆಯಂತೆ) ಹಾಸಿದ ಚಿಗುರೆಲೆ: ಪಾಸುದಳಿರ್ ಕರಿಂಕುವರಿದಂತಿರೆ ತೊಟ್ಟಲರ್ವಟ್ಟವಾಕ್ಷಣಂ ಕೇಸುರಿ ಕೊಂಡವೊಲ್ ಬಿಗೆ ಮುರುಟಿ ... ಕಾಸಿದ ಕಾಮವುತ್ರಿಕೆಪೊಲಿರ್ದಳವಳ್ ವಿರಹೋಗ್ರ ವಹ್ನಿಯಿಂ (ಶಾಂತೀಶ್ವ. ೩-೦೦೦). [ಪಾಸು$_1$+ತಳಿರ್$_2$]

**ಪಾಸುಪೊಕ್ಕು$_1$** 'ಪಾಸು$_2$' ಪರಾ.

**ಪಾಸುಪೊಕ್ಕು$_2$** 'ಪಾಸುಂಪೊಕ್ಕು$_1$' ನೋ.

**ಪಾಸುಪೊಕ್ಕುಂ** 'ಪಾಸುಂಪೊಕ್ಕು$_2$' ನೋ.

**ಪಾಸುಪೋರ್ಟು** 'ಪಾಸ್ಪೋರ್ಟು' ನೋ.

**ಪಾಸುಮಂಚ** 'ಪಾಸುವಂಚ' ನೋ.

**ಪಾಸುಮಣೆ**, ಹಾಸುಮಣೆ (ನಾ). ೧. ಅಗಲವಾದ ಮಣೆ.–ಪೀಠ: ಹಾಸುಮಂಚವರಳ್ಗಳುಯ್ಯಲುವಾಸುಮಣೆ[ಹಾಕಾಂ. ಗೆ]ತಲೆಗಿಂಬು ಮೇಲ್ಮಡಿವಾಸು ... ಒಪ್ಪೆ ವಿಲಾಸವಿಭ್ರಮದಂಗವಣೆಯ ವಿಲಾಸಿನೀವಾಸ (ರಶಕ್ಕ. ೦೨-೯). **ಹಾಸುಮಣೆ**: ೧. Fungiಗಳಿಗೆ ಮಾನವನ ದೇಹದಲ್ಲಿ ಹಾಸುಮಣೆ ಹಾಕಿದಂತಾಗಿದೆ (ಮನೋಲಂ. ೨೫೦). ೨. ಪಗಡೆಯಾಟದ ಹಲಗೆ: ಆ ಕಾಯಿಗಳೋ ... ಹಾಸುಮಣೆಯ ಮೇಲೆ ಮಾಯೆಯ ಕೆಂಡಗಳಂತೆ ಧುಮುಕುತ್ತವೆ (ನಾಕಡ. ೨೫). ೩. ನೇಯ್ಗೆಯ ಹಾಸು ಇರುವ ಮಣೆ: ಬೆಳದು ಬಂದ ಹತ್ತೀನೇ ಪಿಡಿದು; ಹತ್ತೀನೇ ಪಿಡಿ ವಳ್ಳಿ ಸಕ್ಕ ರಾಮಾರು ಪಿಡಿವೋ ವಿಳ್ಳಡೆ ಬಿಲ್ಲು ಜೋಳದ ಗಿಣಿಕೇಲ್ ಹುಂಜೀ ಪಿಡಿಮು: ಹಾಸುಮಣೆಯುಂಬಿಗೆ ಆಧಾರ, ಅರಕಾಸಿಗೆ ಒಂದು ಕವರನೆ ಹೂಡಿ (ನಾಕರ. ೦೯೦). [ಪಾಸು$_1$+ಮಣೆ]

**ಪಾಸುವಂಚ**, ಪಾಸುಮಂಚ, ಹಾಸುಮಂಚ (ನಾ). ಅಗಲವಾದ ಮಂಚ: ಸುಪ್ಪತ್ತಿಗೆಯ ಪಾಸುವಂಚದೊಳು ಸಲ್ಲಲಿತ ಸುವಾಗಂಧವಂ ಸೂಡಿ ತಾಂಬೂಲವಂ ಮೆಲಲಿತ್ತು (ಪುಕಾಂ. ೨೨-೩೬). **ಪಾಸುಮಂಚ**: ಕೊಟ್ಟಿಗೆ ಕೊಲ್ಹಾರ ಕೀಲಿರ ಮೊಚಿಯ ತಾಳ್ಗೊಟ್ಟಗಳ್ ಪಾಸುಮಂಚ ಗಳು ಪೆಟ್ಟಿಗೆ ಭಂಡಾರ ಬೊಕ್ಕಸ ಸಾಗಿ ಬಂದೊಟ್ಟುಗೂಡಿದುವು ಬೀಡಿ ನೊಳು (ಶತ. ೨೫-೯೯). **ಹಾಸುಮಂಚ**: ರತಿಗೇಹಂ ಪಾಸುಮಂಚಂ ... ವೀಣೆ ನೆತ್ತಂ ಸಹಚರಿಯುವಸಲ್ಗೆಗರ್ಗಕರೂವಾನ್ವಿತ ಜಾಣಾ ಲ್ಯಾಕ ಮಾಚ್ಚಿಂ ವಿಟಗಭವಾತವಂ ಕಾಮಸಾಮ್ರಾಜ್ಯದೊಳ್ಕಂ (ಕೂಕಿಸು. ೦೯-೨); ಗಿಳಿಗೆ ಹಾಸಿದಳು ಹಾಸುಮಂಚವ ಅಳಿಯನ ಪಂಜರ ದೊಳಗಿರಿಸಿ (ಕೃಂಕ. ೦-೦೦೦-೬). [ಪಾಸು$_1$+ಮಂಚ]

**ಪಾಸುವಲೆ** 'ಪಾಸುಂಬಲೆ' ನೋ.

**ಪಾಸುವೊಕ್ಕು** 'ಪಾಸು$_2$' ಪರಾ.

**ಪಾಸುಳಿ** (ಕ್ರಿ). ಹಗ್ಗವನ್ನು ಕಳಚು: ನಾಯ್ಗಳಂ ಪಾಸುಳಿದು ಬಿಡುವ ... ಬಲ್ಲರಲ್ಲಿಯ ತಂಡಮೊಸೆದುದು (ಶಕು. ೨-೦-೨೫).

[ಪಾಸು$_3$ (<ಪಾಸ$_1$)+ಉಳಿ$_1$ (<ಉಚ್$_1$)]

**ಪಾಸೆ$_1$** 'ಪಾವಸೆ' ನೋ.

**ಪಾಸೆ$_2$** 'ಫಾಸೆ' ನೋ.

**ಪಾಸೆವಿಳಿ** (ನಾ). ಹಾವಸೆಯ ಎಳೆ,–ನೂಲು: ಕುವಳಯಕುಟ್ಮಳಾ ವಳಿಯ ಪೆರ್ಗಳಿಯಂ ನೆಗದೇಱ ರಾಗಿಸುತ್ತೆ ... ಪಾಸೆವಿಳಿಯೊಳ್

**ಪಾೞ್ಗೆಡಪು.** ಪಾಳುಗೆಡವು. ಹಾಳುಗೆಡಹು (ಕ್ರಿ). ಹಾಳು ಮಾಡು : ಕೆಡಿಸು : ನಾಶಗೊಳಿಸು : ನಿನತದಾವ ಪಾತಕಂ ಸೆಳೆದು ನೇಡುಗಾಳಿ ಯನ್ ಪಾೞ್ಗೆಡಪಿದೆ ಕಿಡಿಸಿದೆ ದೇವಪಪಾಕೃತಿಯುಮನ್? (ಅಸ್ತ್ರಶ್ರ. ೩೦-೬೩). **ಪಾಳುಗೆಡವು :** ಪರ್ಷಯಸ್ನರು ಈ ಸುಂದರ ಮಂದಿರ ಗಳನ್ನು ಪಾಳುಗೆಡವಿದರು (ಕಂಕೊ. ೧, ೦೬೦). **ಹಾಳುಗೆಡಹು :** ಹಾಳುಗಳು ಹಾಳುಗೆಡಹುಹುವಾದ್ದರಿಂದ ಒಪ್ಪೆಯ ಹೆಚ್ಚು ಕಾಳುಗಳನ್ನು ಕೊಂಡು ಇಡುವುದು ಹಿತವಲ್ಲ (ಅನುಸ್. ೩೩). [ಪಾೞ್+ಕೆಡಪು]

**ಪಾೞ್ಗೆಱೆ** (ನಾ). ಹಾಳಾದ ಕೆರೆ ; ಪಾಳುಬಿದ್ದ ಕೆರೆ : ಕುಕವಿಯ ಕಾವ್ಯಮಂ ಸುಕವಿ ಕೇಳ್ದು . . . ಕವಿತಾಗುಣಮಂ ಬಿದಕಲ್ಕೆ ರತ್ನಶುಕ್ತಿಕೆಯ ನೊಜಲ್ದು ಪಾೞ್ಗೆಱೆಯೊಳೀಕ್ಷಿಸುವಂಗೆಣೆಯಾಗದಿರ್ಕುಮೇ (ಜಕಚ. ೦-೦೦). [ಪಾೞ್+ಕೆಱೆ]

**ಪಾೞ್ಗೋಡೆ.** ಹಾಳುಗೋಡೆ (ನಾ). ಹಾಳು ಬಿದ್ದ ಗೋಡೆ ; ಕಟ್ಟಡ ಬಿದ್ದು ಹೋಗಿ ಅವಶೇಷವಾಗಿ ನಿಂತ ಗೋಡೆ : ಅಂಗಡಿಯ ಸಂದಿಗಳೊಳುತ್ತುಂಗಾಲಯದ ಪಕ್ಕದಲಿ ಪಾೞ್ಗೋಡೆಗಳೊಳ್ ಪೊಂಗುತ್ತುಂ ನೆರೆದರ್ ಕುಟಿಲಾಂಗನೆಯರ್ ಜಾರಕಾಂತರಂ ನಲವಿಂದಂ (ಉದ್ಭ. ೦೦-೦೭೬). **ಹಾಳುಗೋಡೆ :** ಹಾವರಕ್ಕೆ ಹೋದರೆ ಕಳ್ಳದವ್ವ ಹಾಯಿತ್ತು ಹಾಳುಗೋಡೆಗೆ ಪೋದರೆ ಚೇಳೂರಿತ್ತು (ಬಸ. ೦೦೦): ಕತ್ತೆ ತಪ್ಪಿಸಿಕೊಂಡರೆ ಹಾಳುಗೋಡೆ (ಗಾದೆ). [ಪಾೞ್+ಗೋಡೆ]

**ಪಾೞ್ದಿನ** (ನಾ). ಹಾಳಾದ ದಿವಸ: ವ್ಯರ್ಥವಾದ ದಿವಸ : ಪಾೞ್ದಿನಂ ಜೀವಿಪವರ್ಪೊಲಜನಿಸಗೆಯದೊರ್ವನ ಬಾೞ್ದಿನದ ಬಟ್ಟೆಗಡಚುಗಲ್ಲು (ಕಂಜಿಳ್. ೦-೪-೮). [ಪಾೞ್+ದಿನ]

**ಪಾೞ್ದೇಗುಲ.** ಪಾಳ್ದೇಗುಲ. ಹಾಳುದೇಗುಲ (ನಾ). ಹಾಳು ಬಿದ್ದ ದೇವಸ್ಥಾನ: ಹಾಳಾದ ದೇವಾಲಯ : ಪಗಲಲ್ಲಿಂ ಪಾೞ್ದೇಗುಲ ದೇಳ್ಪವರಾವಿಸೆನ್ನ ತಾಂ ತೊಸ್ಸನಾಗಿ . . . ಇರುಳಪ್ಪಾಗಳ್ ದಿವ್ಯಮಪ್ಪ ತನ್ನ ಸ್ವಾಭಾವಿಕಮಪ್ಪ ಮುನ್ನಿನ ರೂಪಂ ಕೈಕೊಂಡು (ವಡ್ಡಾರಾ. ೦೨೨-೨೦). **ಪಾಳ್ದೇಗುಲ :** ಬಾಹಿರದ ಪಾಳ್ದೇಗುಲದೊಳಗೆ ಸಾವಿರ ಸೊಡರುಗಳನಿಕ್ಕಿ ಭಜಿಸುವ ನೇಮವಾತಂಗೆ (ಬಸಪು. ೩೦-೫೪). **ಹಾಳುದೇಗುಲ :** ಕಿಮುನ್ನಕ್ಕೆ ಹಾಳುದೇಗುಲವುಂಟು (ಪಿಹಾರು. ಬ. ೬೯-೦೯೯). [ಪಾೞ್+ದೇಗುಲ]

**ಪಾೞ್ನೆಲ.** ಪಾಳ್ನೆಲ. ಪಾಳುನೆಲ (ನಾ). ೧. ಕೇಡು ಮಾಡುವ ಭೂಮಿ : ಅಶುಭಕರವಾದ ಭೂಮಿ : ಈ ನೆಲನಿದು ಪಾೞ್ನೆಲನೆನಗೆ ದಿನಪಸುತನಂ ಕೊಲಿಸಿದ ನೆಲನೊಡನೆ ಮತ್ತೆ ಪುದುವಾೞ್ವೆನೇ (ಗದಾಯು. ೩-೧೬). **ಪಾಳ್ನೆಲ :** ೨. ಹಾಳುಬಿದ್ದ ಭೂಮಿ : ವಿಮಲ ಪುಣ್ಯಕ್ಷೇತ್ರಮುಮಂ ಕಾಡ ಪಾಳ್ನೆಲನುಮಂ . . . ನಿಜ್ಜೈಕದೃಷ್ಟಿಗೆ ಸಮಂ (ಶಬರ. ೦೨೪-೨೦). **ಪಾಳುನೆಲ :** ೩. ನಿಸ್ಸಾರವಾದ ನೆಲ; ಸತ್ವರಹಿತವಾದ ಭೂಮಿ : ಗೆಲವೇನಿಲ್ಲದ ಯುದ್ಧ ಪಾಳುನೆಲದೊಳ್ ಬೇಸಾಯ . . . ಫಲದ ಭ್ರಾಂತಿಯ ತೋರ್ಪುವೈ (ಕೊಲಾಟ. ೨೩). [ಪಾೞ್+ನೆಲ]

**ಪಾೞ್ಬಸದಿ** (ನಾ). ಹಾಳು ಬಿದ್ದ ಜಿನದೇವಾಲಯ,...ಬಸದಿ : ಪಾೞ್ಬಸದಿಯ ಪೆಣ್ಣ ಜೋಹವಪೊಲೊಪ್ಪಿದಳೊರ್ವಳನಂಗರಾಗದಿಂ (ಶಾಂತಿಪು. ೬-೦೮). [ಪಾೞ್+ಬಸದಿ]

**ಪಾೞ್ಬಾವಿ** 'ಪಾೞ್ಬಾವಿ' ನೋ.

**ಪಾೞ್ಮನ** (ನಾ). ಕೆಟ್ಟ ಮನಸ್ಸು: ದುರ್ಬುದ್ಧಿ : ಕೋಟಲೆಗೊಳಗಪ್ಪ ಪಾೞ್ಮನದ ಪಾಸನರಂ ಸುಡು ಸಂದ ಗೊಡ್ಡರಂ (ಶಂಕರ್ತಕ. ೬-೬೦). [ಪಾೞ್+ಮನ]

**ಪಾೞ್ಮನೆ.** ಪಾಳುಮನೆ. ಪಾಳ್ಮನೆ, ಹಾಳುಮನೆ, ಹಾಳ್ಮನೆ, ಹಾೞ್ಮನೆ (ನಾ). ಬಿದ್ದು ಹಾಳಾದ ಮನೆ : ಬಿದ್ದುಹೋದ ಮನೆ : ಪುಟಿತ ನಾಯಂ ಕಂಡಂತೆ ಕಂಡಕಂಡರೆಲ್ಲಮೆರ್ವಟ್ಟಿ ಪಾೞ್ಮನೆಯಂ ಪೊಕ್ಕು (ಶಾಂತಿಪು. ೩೩೦); ಕೆಮ್ಮನೆ ಪಾೞ್ಮನೆಯೊಳ್ ಗುಜುಗುಮ್ಮನೆ ಸುಟಿದಿರದೆ ಪೋಪಮಜಿತನ ಬಟ್ಟೆಯಂ (ಅಜಿತ. ೩-೧೨೩); ಕೆಮ್ಮು ತೊನೆದು ಮಾಣಾದರಸಾಳ್ಸದಿಂ ಪುಗುವಂತು ದೇವಗತಿ ಪಾೞ್ಮನೆಯೇ (ಧರ್ಮಾಮೃ. ೩-೦೬೨); ಆ ಲಕ್ಷ್ಮಿಯಾ ರೂಪುಮಾ ಹರಿಯಂ ಬೇವಿನ ಸುಗ್ಗಿ ಪಾೞ್ಮನೆಯ ಚಿತ್ರಂ ಕಾಡ ಚಂದ್ರಾತಪಂ (ಅನಂಪು. ೬-೫೬). **ಪಾಳುಮನೆ :** ಆಸೆಯಿಲ್ಲದ ಬದುಕು ಬದುಕೆ . . . ಪಾಳುಮನೆಯಲಿ ಬೆಳಕು ಬೆಳಕೆ? (ಕಲಾಂ. ೧೩-೦೩). **ಪಾಳ್ಮನೆ :** 'ಪಾಳ್ಮನೆಹಾಳ' ಪರಾ. **ಹಾಳುಮನೆ :** ಹಾಳುಮನೆಯು ಹೊಕ್ಕು ಒಡಲು ಉರಿಯುತಿದೆ (ಪುರಂದ. ೨-೮೪-೦); ಮೌನವಾಗಿ ಅವರು ನಡೆದು ಹೋಗಲು ಸ್ವಲ್ಪ ಸಮಯದಲ್ಲಿ ಒಂದು ಹಾಳುಮನೆಯು ತೋರಿತು (ಮಹಿಸ. ೭). **ಹಾಳ್ಮನೆ :** ತೋಟದಲ್ಲಿ ಒಂದು ಹಾಳ್ಮನೆಯಿದೆ (ಶಿಕ್ಕ). **ಹಾೞ್ಮನೆ :** 'ಹಾೞ್ಮನೆಹಾಟ' ಪರಾ. [ಪಾೞ್+ಮನೆ]

**ಪಾೞ್ಮನೆಪಾಟ,** ಪಾಳ್ಮನೆಹಾಳ, ಹಾೞ್ಮನೆಹಾಟ (ನಾ). ೧. ತುಡುಗು ನಾಯಿ : ಕಳ್ಳನಾಯಿ : "ಪಾೞ್ಮನೆಪಾಟು ತುತುಗುಣಿ" (ಚಕುಂ. ೬೫). **ಪಾಳ್ಮನೆಹಾಳ :** ೧. ತೋಳ್ವಲಮಂ ರಣಾಂಗಣದೊಳೆಲ್ಲರ್ಗಂದು ನಾಂ ತೋಱುವೆಂ ಬಡಿವೆಂ ಪಾಳ್ಮನೆಹಾಳನು ಬಡಿವೋಲ್ಪಿಕ್ಕಾದ ದೇವರ್ಕಳಂ (ಜಂಬೂ. ೦೦-೫೫). **ಹಾೞ್ಮನೆಹಾಟ:** ೧. "ಹಾೞ್ಮನೆಹಾಟಂ-ತುಡುಗುಣಿ ನಾಯ್" (ಕಮದ. ಕಾ. ೦). ೨. ನಾಯಿ ; ಶ್ವಾನ : "ಸೊಣಗ ಹಾೞ್ಮನೆ ಹಾಟ ಶ್ವಾನ ಕುಕ್ಕುರನೆಂಬಿವೆನಿಸೆ ನಾಯ್ವೆಸರು" (ಕರ್ಣಾಮಂ. ೩೨)

[ ಪಾೞ್ಮನೆ + ಪಾಟ್ + – ಅ ]

**ಪಾೞ್ಮಸಗು** (ಕ್ರಿ). ಹಾಳಾದಂತೆ ತೋರು ; ಹಾಳುಸುರಿ ; ಶೂನ್ಯವೆನಿಸು : ದೆಸೆ ಪಾೞ್ಮಸಗಿರ್ದಪುದಂಥನಾದನಾರ್ ಶರಣೆನಗೆ (ಕಾದಂಬ. ೯೦೨). [ ಪಾೞ್+ಮಸಗು ]

**ಪಾೞ್ವಕ್ಕೆ** (ನಾ). ಹಾಳುಬಿದ್ದ ಮನೆ : 'ಪಾೞ್ವಕ್ಕೆವಡು' ಪರಾ. [ಪಾೞ್+ಪಕ್ಕೆ₁(<ಪಟ್ಕೆ)]

**ಪಾೞ್ವಕ್ಕೆವಡು** (ಕ್ರಿ). ಹಾಳುಮನೆಯಲ್ಲಿ ವಾಸಿಸು : ಈ ಪಟಮಂ ಪ್ರಾಣಮನೆ ಕೈಯೆಡೆಗುಡುವಂತೆನ್ನ ಕೈಯೊಳ್ಕೊಟ್ಟು ಮದೀಯ ಪ್ರಾಣ ವಲ್ಲಭನಂ ... ಅಱಸೆಂದಟ್ಟಿದೊಡೆ ಬಂದಿದನಿಲ್ಲಿ ಪಸರಿಸಿ ಪಾೞ್ವ[ಟ್ಟ]ಕ್ಕೆ ಪಟ್ಟಿರ್ದೆಂ (ಅಂಕ್ಕ. ೪-೨೦ ಪ). [ಪಾೞ್ವಕ್ಕೆ+ಪಡು₁]

**ಪಾೞ್ವಸಿಱ್,** ಪಾಳ್ವಸಿಱ್ (ನಾ). ಬರಿಹೊಟ್ಟೆ ; ಹಾಳುಹೊಟ್ಟೆ : ಪಾೞ್ವಸಿಱೊಳ್ ಸಾಸವೆಯಂ ಕಾಡಿದರಂತೆ ಮಱಗಿ (ಧರ್ಮಾಮೃ. ೦೦-೦೯೨). **ಪಾಳ್ವಸಿಱ್ :** ಕೆಕ್ಕಳಗಣ್ ಕದಡಾದ ಕೆಂಗೂದಲ್ ಮೊಕ್ಕ ನೊಸಲ್ ನಿಡುಕುಂಗೋಣ್ ಬಿಡುಬಾಯಕ್ಕುಳಿಸಿದ ಪಾಳ್ವಸಿಱ್ (ಕಮಲಾ. ೭-೨೭). [ ಪಾೞ್+ಬಸಿಱ್ ]

**ಪಾೞ್ಬಾವಿ,** ಪಾಳುಬಾವಿ, ಪಾೞ್ಬಾವಿ, ಹಾಳುಬಾವಿ, ಹಾಳುಭಾವಿ (ನಾ). ಬಳಕೆಯಿಲ್ಲದೆ ಹಾಳು ಬಿದ್ದ ಬಾವಿ ; ನಿರುಪಯುಕ್ತವಾದ ಬಾವಿ: ತದ್ವಿಜಂ ಜಳಕುಟಪ್ರಹಾರದಿಂ ಕಾಲ್ಮುಱಿದು ಪುಟಿತು ಪಾೞ್ಬಾವಿ ಯೊಳ್ ಪೊಕ್ಕು ಸತ್ತು (ಶಾಂತಿಪು. ೩೩೦). **ಪಾಳುಬಾವಿ :** ಸಲೆ ಸೋಲಿತ್ತು ಪಾಳುಬಾವಿಯ ಜಲಮಂ ತೆಗೆಯಲ್ಕೆ ಮಕರಕೇತನನಿಂದೆಂಕುರಿ ಸಿಕ್ಕಿದ ನೀರದ ಬಟಲನನುಕರಿಸಿತ್ತು ಕಾಂತೆಯೋರ್ವಳ ನಯನಂ (ಧರ್ಮಾಮೃ. ೭-೨೦೬). **ಪಾೞ್ಬಾವಿ :** ಬೀಯದಂ ಭರದ ನೋಡು ತ್ತೊಂದು ಪಾೞ್ಬಾವಿಯೊಳ್ ಕೆಡೆವಾಗಳ್ ಮರವಟ್ಟು ಮೂರ್ಛೆ ವಡೆದಿರ್ದಂ (ಚಸರ. ೪-೨೩೭). **ಹಾಳುಬಾವಿ :** ಮುಬಾರಕನು ಕಾಣದೆ ಒಂದು ಹಾಳುಬಾವಿಯಲ್ಲಿ ಬಿದನು (ಜಂಬು. ೨೨೦); ಹಳಿಯೇರಿ ಇಳು

ಕಲು ಇಳಿದರೆ ತೀರಿತು, ಅಲ್ಲಿ ಹಾಳುಬಾವಿಯಿದೆ (ಹೊಸ್ತ. ೦೩೦).
**ಹಾಳುಭಾವಿ** : ಹುಟ್ಟುಕುರುಡ ಹಾಳುಭಾವೀಲಿ ಬಿದ್ದ (ಗಾದೆ).

[ ಪಾೞ್ + ಬಾವಿ ]

**–ಪಿ** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : ಕನ್ನಡದಲ್ಲಿ 'ಪಿ' ಪ್ರತ್ಯಯವೆಂದು ಹೇಳುವ ಶಬ್ದಗಳೆಂದರೆ ನೋಂಪಿ ಮತ್ತು ಕಲ್ಪಿ ಎಂಬುವು ಎರಡು ಮಾತ್ರ (ಸಂಶಾಕ. ೨೦೦). 'ಕಲ್ಪಿ'. 'ಕೇಳ್ಪಿ' ಪರಾ.

**ಪಿಂ** 'ಪಿನ್' ನೋ.

**ಪಿಂಕಣಿಸು** 'ಪೆಂಗಣಿಸು' ನೋ.

**ಪಿಂಕುಳಿ** 'ಪೆಂಕುಳಿ' ನೋ.

**ಪಿಂಗ** (ಗು). ೧. ಕಂದುಬಣ್ಣದಿಂದ ಕೂಡಿದ; ಕಂದುಬಣ್ಣದ : ಪಿಂಗ ಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ಮಕೂಲದ ಕೋವಣಂ ಕರವೊಡಂಬಡೆ ನೋಟಕರ್ಗಳನಾ ತಪಸ್ವಿ ಮರುಳ್ಚಿದಂ (ಹಂಪಾ. ೬-೮). (ನಾ). ೨. ಕಂದುಬಣ್ಣ : ಕಪಿಲವರ್ಣ : "ಪಿಂಗಃ ಪಿಶಂಗಃ — ಈ ೨ ಕಪಿಲವರ್ಣಂ" (ಕರಾಯು. ೦೨೦-೩೦). ೩. ಒಂದು ಬಗೆಯ ಪಕ್ಷಿ : ಕಾಡುಪಾರಿವಾಳ : "ಪಿಂಗಂ ಬೆಳುಪವೆಂನಿಸಿಕ್ಕು" (ಜುಂಗರಾ. ೩೨-೦೦).

[ ಸಂ. ]

**ಪಿಂಗಚಕ್ಷು** (ನಾ). ೧. ಏಡಿ; ನಳ್ಳಿ. ೨. ಕೆಂಗಣ್ಣುಳ್ಳವನು : ದುರ್ಯೋಧನ : ಕರ್ಣ ಭೀಷ್ಮಾದ್ಯುತಧ್ವಾನಕಠೋರಂ ಪಿಂಗಚಕ್ಷುರ್ಬಲ ಮನಮಮ ಪೋಲ್ವೊಪ್ಪುತಿರ್ದತ್ತರಣ್ಯಂ (ಕಿಶೆಂ. ೩-೨೯).

[ ಸಂ. ಪಿಂಗಚಕ್ಷುಸ್ ]

**ಪಿಂಗಟ** (ನಾ). = ಪಿಂಗ ೨. : ಕ್ರಮವಾಗಿ ಕಿತ್ತಳೆಬಣ್ಣ, ಅರಿಶಿಣ, ಹಸುರು ಪಿಂಗಟ, ನೀಲ . . . ಈ ಪ್ರಕಾರ ಬಣ್ಣಗಳ ಪಟ್ಟಿಗಳು ಕಾಣಿಸುವವು (ಜುಂಬಿತು. ೬-೯೯). [ ← ಮರಾ. ಪಿಂಗಟ ]

**ಪಿಂಗಡಲು** (ನಾ). ಪಶ್ಚಿಮದಿಕ್ಕಿಗೆ ಇರುವ ಸಮುದ್ರ : ಪಿನ್ನೀಸಲು ಪಿಂಗಡಲೊಳಗಗುಳವ ಪುನ್ನಂ . . . ಉತ್ತಮಾಂಗಮನಾಗಸದ ಅತ್ತ ಹಾಯುವ ತೆಜದಿಂದೆಚ್ಚನು (ಪೇಖಸಾ. ೨೬-೦೬೬) ; ಪ್ರಿಯಮಿತ್ರಂ ಪಿಂಗಡಲ ಮಡುವಿನೊಳ್ ಲಯಮಾದುದನಜೀದು ಸಮಿಸುವುದಿದು ನಯಮೋ (ಶಯಕಾ. ೦೩-೬೦). [ ಪಿಂ (< ಪಿನ್) + ಕಡಲು (< ಕಡಲ್₂) ]

**ಪಿಂಗಡೆ**, ಹಿಂಗಡ₁ (ನಾ). ೧. ಹಿಂಭಾಗ : ಹಿಂದುಗಡೆ : "ಪಿಂತಿಲ್ ಪೆಱಗು ಪೆಡಮೆನಲ್ ಪಿಂಗಡೆ" (ಕನ್ನಕೈ. ೯೩); ಪಿಂಗಡೆಯೊಳಗೆ ಜತನದಿರು ಮಾಚಿಭಟ್ಟ (ಅರಾಕ. ೦-೩-೦೩). ೨. ಪೂರ್ವಕಾಲ; ಹಿಂದಿನ ಕಾಲ : ಒಡೆಯ ಪೇಳ್ವನಗೇನು ದುಗುಡವೆಂದೆನಲು ಪಿಂಗಡೆಯ ಶುದ್ಧಿಯನುಸಿರಿದನು (ಪೋಕಶ. ೩೦-೦೬). ಹಿಂಗಡೆ₁ : ೧. "ಪೆಡಮಟ್ಟು, ಪೆಱಗು, ಪೆಱತು, ಪಿಂತಿಲ್ — ಈ ೪ ಹಿಂ[ಶಾಕಾಂ. ಪಿಂ]ಗಡೆಗೆ ಪೆಸರ್" (ಕಕಾ. ೬೩-೯೩೩); ಸಂಗಡಿಸಿ ನಲಿನಲಿದು ನಡೆವ ತುರಂಗ ಕಂಘಟೆಗಳ ಕಿಕ್ಕಿರ್ದ ಹಿಂಗಡೆಯ ಬಿಜ್ಜಳಮಹೀಶನ ಮುಂಗಡೆಯೊಳೊಪ್ಪಿ (ಬಸವ. ೩-೯೯) ; ಭೂಪರನ ಪಿಂಗಡೆಯ ಪರಮಸಂತೋಷದೆ ನಡೆದು ಬರುವ ಬಲುಸಿರಿಯ ಸಂಭ್ರಮಂ ಪೇನೆಂಬೆ (ಕಂಪಪ. ೨೩-೩) ; ಕಳ್ಳನು ಅವರನ್ನು ಮನೆಯ ಹಿಂಗಡೆಯಿಂದ್ದ . . . ಹಳ್ಳಕ್ಕೆ ಕರೆದೊಯ್ದು ಅಲ್ಲಿದ್ದ ಒಂದು ಕಲ್ಲನ್ನೆತ್ತಿದನು (ಮುಕಿಕ. ೦೦). 'ಮುಂಗಡೆ' ಪರಾ.

[ ಪಿಂ (< ಪಿನ್) + ಕಡೆ₃ ]

**ಪಿಂಗತೆ**, ಹಿಂಗತೆ (ನಾ). ಹಿಂದೆ ನಡೆದ ಕತೆ; ಹಿಂದಿನ ಕತೆ : ಇಂತು ಪಿಂಗತೆಗಳು ಪೇಳ್ದುದಜಾನೇನಾದುದು (ಅರಾಕ. ೦-೦೦-೨೦). **ಹಿಂಗತೆ** : ಇದು ಮೂಲದಲ್ಲಿ ಆರಂಭದಲ್ಲಿಯೇ ಬಂದಿದೆ. ನಾಗಚಂದ್ರನಲ್ಲಿ ಒಂದು ಸಂದರ್ಭದಲ್ಲಿ ಹಿಂಗತೆಯಾಗಿ ಹೇಳಲಾಗಿದೆ (ಕಾಶ. ೦೨೬).

[ ಪಿಂ (< ಪಿನ್) + ಕತೆ ]

**ಪಿಂಗದಾಲ್ಚಿನ್ನಿ** (ನಾ). ದಾಲ್ಚಿನ್ನಿಯಲ್ಲಿ ಒಂದು ಬಗೆ : ಮುಟ್ಟದಾಲ್ಚಿನ್ನಿ, ಪಿಂಗದಾಲ್ಚಿನ್ನಿ (ವೈಶಿಗ. ೨೦-೩೯೦). [ ಪಿಂಗ + ದಾಲ್ಚಿನ್ನಿ (< ದಾಲಚಿನ್ನಿ) ]

**ಪಿಂಗಲ**, ಪಿಂಗಳ₁ (ಗು). ೧. ಕಂದುಬಣ್ಣದಿಂದ ಕೂಡಿದ; ಕಂದುಬಣ್ಣದ : ಪಿಂಗಲ ಕಣ್ಣುಳ್ಳಾತನು ಧನಹೀನನು (ಹಾಕುಂ. ೬-೮); ಪಿಂಗಲ ಜಟಾಜೂಟಕೂಟಂ, ತ್ರಿಣೇತ್ರಂ (ತ್ರೀಣಾಕು. ೯೬-೩೩೮). (ನಾ). ೨. ಕಂದುಬಣ್ಣ. ೩. ಸೂರ್ಯನ ಸೇವಕರಲ್ಲಿ ಒಬ್ಬ : ತಳೆದು ಮುಚ್ಚಳವಂ ಪುರೋಗತ ಫಲಿತ ವೃಕ್ಷವ ಕಾಣಿಸುತ ವಿಧಿಯುಳಿದು ಮಾಠರ ಪಿಂಗಲರೊಳಿಷ್ಟತೆಯನಾಡುವನೆ (ಶಿಕೀಶ. ೦೦-೩೧). ೪. ಸಂಸ್ಕೃತ ಛಂದಶ್ಶಾಸ್ತ್ರಕಾರರಲ್ಲಿ ಪ್ರಸಿದ್ಧನಾದ ಒಬ್ಬನು : ಇಂದುಧರನುಮಗೆ ಪೇಟ್ದಾ ಛಂದಂ ಪಿಂಗಲ[ಶಾಕಾಂ. ಳ]ನಿನವನಿಯೊಳ್ ಪರಪಿದೊಡಾ ಛಂದೋಂಬುರಾಶಿಯೊಳ್ ಮೊಗೆತಂದದನಾತ್ಮೀಯಸತಿಗೆ ನಾಕಿಗನುಸಿರ್ದಂ (ಛಂದೋಂಬು. ೦.೩೦). ೫. ಒಂದು ಬಗೆಯ ಸಣ್ಣ ಜಾತಿಯ ಗೂಬೆ. ೬. ಅರುವತ್ತು ಸಂವತ್ಸರಗಳಲ್ಲಿ ಐವತ್ತೊಂದನೆಯದು. ೭. ಒಂದು ಬಗೆಯ ಹಾವು. ೮. [ಜೈನ] ನವನಿಧಿಗಳಲ್ಲಿ ಒಂದು; ಇದು ಮಕುಟ, ಹಾರ, ಕೇಯೂರ, ಕುಂಡಲ ಮುಂತಾದ ಭೂಷಣಗಳನ್ನು ಕೊಡುತ್ತದೆ : ಸ್ತ್ರೀಪುರುಷಯೋಗ್ಯಮಪ್ಪ ನಾನಾವಿಧಾಭರಣಂಗಳಂ ಕುಡುವ ಪಿಂಗಲನಿಧಿಯುಂ (ಶಾಸ್ತ್ರಬೀ. ೦೯-೪). **ಪಿಂಗಳ₁** : ೧. ನೀರಾಂಬುದ ಶ್ಯಾಮನುಂ ಕನಕಪಿಂಗಳಜಟಾಬಂಧಕಲಾಪನುಂ . . . ಮೃಗತ್ವಕ್ಪರಿಧಾನನಿ ಮಾಗಿ ವ್ಯಾಸಭಟ್ಟಾರಕಂ ಪುಟ್ಟುವುದುಂ (ಪಂಪಭಾ. ೦-೬೯ ಶ); ಸೋಮ ಸೋಮವಿಭೂಷ . . . ಗುಣಗಾತ್ರಗಾತ್ರ ಪಿಂಗಳಜಟಾಮಾರಾಮ (ಹಕಾ. ೦-೩) ; ಶೋಧಾಕರಂ ದುರಿತಧೀಕರಂ ಪಿಂಗಳಜಟಾಧಾರನೆಂ ರಾಜಹಾರಂ (ಉದ್ಭಟ. ೭-೦೩) ; ಇಹುದತುಳಪಿಂಗಳಜಟಾಪಟಲನಮಲಪದ ಪದ್ಮಸದ್ಭೃಂಗಕಂತಳದೇಶವು (ಹಾಶಿ. ೦-೩೦). ೬. ಪಿಂಗ್ಗಳ ಸಂವತ್ಸರದ ಭಾದ್ರಪದ [ ಮಾಸ ಬೃಹ ] ಸ್ಪತಿವಾರ ವ್ಯತಿಪಾತವದ್ಯಾಷ್ಟಮಿಯಲು (ಹಿಂದ್ವಾಶಾ. ೭-೯೯; 1137) ; ಸ್ವಸ್ತಿಶಕವರ್ಷಂ 1179ನೆಯ ಪಿಂಗಳ ಸಂವತ್ಸರದ ಚೈತ್ರಸು[ಶು]ದ್ಧ ೭ ಗುರುವಾರದಲು (ಹಿಂದ್ವಾಶಾ ೨೨-೬೩: 1257). ೮. ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೦೩-೩ ಶ); ಕಾಳ ಮಹಾಕಾಳ ಪಾಂಡುಕ ಪಿಂಗಳ ನೈಸರ್ಪ ಪದ್ಮ ಮಾಣವಕ ಶಂಖ ಸರ್ವರತ್ನ ನವನಿಧಿ ಪರಿಪೂರ್ಣಮುಂ (ಆದಿಪು. ೭-೨೦ ಶ); ಹಾರ ಹೀರಾವಳಿ ಮಕುಟ ಕುಂಡಲ ಕೇಯೂರಾದಿಯ ಭೂಷಣಗಳ ಮೇರೆಯಿಲ್ಲದೆ ಕೊಡುತಿಹ ಪಿಂಗಳನಿಧಿ ರಾರಾಜಿಸುತಿಹುದು (ಚಂದ್ರಸಾಂ. ೦೯-೯೬). ೯. ತಿಳಿಯಾದ ಕೆಂಪು ಬಣ್ಣ; ನಸುಗೆಂಪು : "ಹರಿಃ (ಕ್ರಮಂ). ಕದ್ರುಃ, ಕಡಾರಃ ಪಿಂಗಳಃ — ಈ ೪ ನಸುಗೆಂಪು" (ಕರಾಯು. ೦೨೦-೩೦). ೧೦. ಹಳದಿ ಬಣ್ಣ; ಹೊಂಬಣ್ಣ : ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತ ಚಂಚು ಪಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ . . . ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ (ಜಗ. ೪-೬೬).

[ ಸಂ. ]

**ಪಿಂಗಲಿ**, ಪಿಂಗಳಿ (ನಾ). ೧. ಒಂದು ಬಗೆಯ ಗೂಬೆ : "ಕಾಕಾರಿ ಕೌಶಿ ಕಾಖ್ಯಮುಲೂಕಂ ಪಿಂಗಲಿ ನಿಶಾಟನಂ ತಾಮಸಕ್ಕಂ" (ಶಬ್ದಕೋ. ೯೨-೦೩). ೨. ಶಕುನದ ಹಕ್ಕಿ; ಹಾಲಕ್ಕಿ : "ಶಕಾಂತಃ, ಭಾಸಃ — ಈ ೨ ಪಿಂಗಲಿ" (ಕರಾಯು. ೪೦-೮); ಪಿಂಗಲಿ . . . ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಬಂಸುವೊಡೆ ಸರಂಗಯ್ವೊಡೆ ತಡೆಯದಾ ಗೃಹಂ ಪಾಟಕ್ಕು (ಕೋಕೋಕ. ೪-೬೩): ಉಜ್ವಲ ಶಾಸ್ತ್ರಬದ್ಧ ಶುಭಸೂಚನೆಯ ಪೋಡು ಪಿಂಗಲಿಗಳುಚ್ ತೋಱು ನಡೆದಾ ನೃಪಂ ಪೊಱದೀಡೆ ದಟ್ಟನಾ ಕಾಲಿಂ

ದಳ್ಳಿ (ಚಂಕು. ೧೨-೯). **ಪಿಂಗಳೆ** : ೧. "ಕಾಕಾಲಿ ಪಿಂಗಳೆ ನಿಹಾಟನಂ ಕೌಶಿಕಮುಲೂಕಮೆನೆ ಗೂಗೆಯಕ್ಕುಂ" (ಚುಂಗಾ. ೩೦-೯).

[< ಸಂ. ಪಿಂಗಲಾ]

**ಪಿಂಗಲೆ**, ಪಿಂಗಳೆ (ನಾ). ೧. ಒಂದು ಬಗೆಯ ಗೂಬೆ. ೨. ದಕ್ಷಿಣ ದಿಕ್ಕಿನ ಹೆಣ್ಣಾನೆ; ಕುಮುದ ದಿಗ್ಗಜದ ಪತ್ನಿ. ೩. ಶರೀರದ ಒಂದು ನಾಡಿ. **ಪಿಂಗಳೆ** : ೨. "ದ್ವಿಪೆಗಳಭ್ರಮು ಕಪಿಲೆ ಪಿಂಗಳೆ ಸುಪ್ರತೀಕ ತಾಮ್ರಕರ್ಣಿ ಪುರದಂತಿಯದಂಜನಾಂಜನಾವತಿ ಸಿತದ್ವಿಪೆಯೆನಲು ಕ್ರಮದಿ" (ಚುಂಗಾ. ೦೬-೨೦) ; ಅಭ್ರಮು ಕಪಿಲೆ ಪಿಂಗಳೆ . . . ಅಂಜನಾ ವತಿಯರೆಂಬ ತಮ್ಮ ತಮ್ಮ ಸ್ತ್ರೀಗಜಗಳೊಡಗೂಡಿ ಕ್ರಮದಿಂ ಭೂಮಿಯಂ ಪರಿಸಿರ್ಪುವು (ಚಿಕ್ಕ. ೦೬೭). ೩. ಇಡಾ ಪಿಂಗಳಾ ಸುಷುಮ್ನಾನಾಳ ವಿಡಿದು ಅಜಪದಹನೆಂದರೆ ಕೂಡಲಸಂಗಮದೇವ ಮಾಗ ಕೊಯ್ಕದೆ ಮಾಣ್ಬನೆ (ಬಸವ. ೬೯೯): ಇಡೆ ಪಿಂಗಳೆಗಳೆನಿಪೆರಡು ನಾಡಿಯು ತುದಿ ಯೊಳಡುತ್ತಲಿರ್ದುವ್ (ಶೈವಕ. ೪-೨-೩); ನಟ್ಟನಿರಾತ ಸುಷುಮ್ನ ನಾಡಿಯ ಮುಟ್ಟ ಸವ್ಯದ ಭಾಗದೊಳು ತಾ ನಟ್ಟಿಹುದು ಈಡಾನಾಡಿ ದಕ್ಷಿಣದೊಳಗೆ ಪಿಂಗಳೆಯು (ಗಗನಾ. ೪-೦೪). ೪. ಒಂದು ಬಗೆಯ ಮೃಗ,—ಪ್ರಾಣಿ : ಪಿಂಗಳೆ ಗೋಣ ಭಲ್ಲ ಶಶ ಜಂಬುಕ ವಾನರ ಪುಂಡರೀಕ . . . ಮೃಗೇಂದ್ರಮುಖ್ಯಮೃಗಸಂಕುಲದುಂಬಗಾಡಿಯಿಂ ಕಂಗೆಸೆದತ್ತು ತುಂಗಬಹುಶೃಂಗವಿರಾಜಿತವಿಂಧ್ಯಭೂಧರಂ (ಅದ್ಭುತ. ೨-೪೩).

[ಸಂ. ಪಿಂಗಲಾ]

**ಪಿಂಗಳ**$_1$ 'ಪಿಂಗಲ' ನೋ.

**ಪಿಂಗಳ**$_2$ (ನಾ). ಶರೀರದ ಒಂದು ನಾಡಿ : ಈಡಾ ಪಿಂಗಳ ಸುಷುಮ್ನ ನಾಳ ಮಧ್ಯದ ಕಾಗ ಕಂಡು ಕೂಗಿದೆ (ಅಕಂ. ೦೩೨-೬೯೩); ನಾಸಿಕಾರಂಧ್ರದಿಂ ಇಡೆ ಪಿಂಗಳೆಂದೆರಡುನಾಡಿಗಳಿಂದೊಡಗೂಡಿದೆರಡುನಾಳಗಳಿಹವು (ಚಿವೇಕ. ೦೬೭); ಈಡ ಪಿಂಗಳ ಎರಡು ಜೋಡಿಸಿ ಸುಷುಮ್ನ ನೋಡಿ ಅರಿದೆ ನೆವಲು ಕೊಯ್ಯನು ಮಾಗು ಕೂಡಲಸಂಗಮದೇವಯ್ಯಾ (ಸಿದ್ಧ ಕ. ೩೪-೩). 'ಪಿಂಗಲೆ' ಪರಾ. [ಸಂ. ಪಿಂಗಲಾ]

**ಪಿಂಗಳದೃಶ** (ನಾ). ಈಶ್ವರನಿಗೆ ಸಮಾನನಾದವನು; ಕುಬೇರ : ಪಿಂಗಳದೃಶನ ವಿಧಿಗಳನು... ಕೊಂಡೊಯ್ದಸವನು (ಜೈಮಿ. ೧೦-೬೪-೩).

[ಸಂ. ಪಿಂಗಲದೃಶ್]

**ಪಿಂಗಳನಾಡಿ** (ನಾ). = ಪಿಂಗಳ$_2$ : ದಕ್ಷಿಣಭಾಗದ ಪಿಂಗಳನಾಡಿಯೆಂ ಸೂರ್ಯನಾಡಿಯೆಂದು ಗಂಗಾನದಿಯೆಂದು ಪೇಳಲ್ಪಡುವುದು (ಅಂಚೆ. ೨೦೯-೨೫); ಗಂಗಾನಾಡಿ, ಪಿಂಗಳನಾಡಿ, ಸೂರ್ಯನಾಡಿ ಈ ಮೂರು ಹೆಸರು ಬಲಮೂಗಿನ ಉಸಿರಿಗೆ ಒಪ್ಪುವಂಥವು (ಚಿತ್ರಾ. ೦೩೪).

[ಪಿಂಗಳ$_2$+ನಾಡಿ$_1$]

**ಪಿಂಗಳನೇತ್ರ** (ನಾ). ೧. ಕಂದುಬಣ್ಣದ ಕಣ್ಣು. ೨. "ಶಿವ" (ಚುಂ.ಕೋಶ): ಪಿಂಗಳನೇತ್ರನನಂತುಂ ಪಿಂಗದೆ ಪೂಜಿಸುತಮಿರ್ಪ ಮಾಹೇಶ್ವರಮಂ ಲಿಂಗಿಯುಮಂ ಶಿವಭಕ್ತನುಮಂ ಗಹನಂಗೆಯ್ಕರೆಮ್ಮ ಸಮಯಿಗಳೆನ್ನಂ (ಸಮುಕ. ೪-೬೦). [ಪಿಂಗಳ$_1$(= ಪಿಂಗಲ)+ನೇತ್ರ]

**ಪಿಂಗಳಾಕ್ಷ** (ನಾ). ೧. ಕೆಂಗಣ್ಣು ಉಳ್ಳುದು : ಅಡೆಯಂ ಕೋದೆತ್ತುತಂ ಮಾದಗ್ನಿಗೆ ಪಸುಗುತಂ . . . ಬಂದುದು ಮದವಿದಳತ್ಪಿಂಗಳಾಕ್ಷಂ ಮಹೋಕ್ಷಂ (ಅಂಜಕ. ೩-೩೩). ೨. ಶಿವ. [ಸಂ. ಪಿಂಗಲಾಕ್ಷ]

**ಪಿಂಗಳಿ** 'ಪಿಂಗಲಿ' ನೋ.

**ಪಿಂಗಳಿಕ** (ನಾ). ೧. ಒಂದು ಬಗೆಯ ಕೊಕ್ಕರೆ : ಕಳವಿಂಕ ಪಿಂಗಳಿಕ ತಾಮ್ರವರಳಿಗ (ಚುಮ್ಮಂಗ. ೧೦-೩). ೨. ಒಂದು ಬಗೆಯ ಗೂಬೆ.

[ಸಂ. ಪಿಂಗಲಿಕಾ]

**ಪಿಂಗಳಿಸು** 'ಪೆಂಗಣಿಸು' ನೋ.

**ಪಿಂಗಳೆ** 'ಪಿಂಗಲೆ' ನೋ.

**ಪಿಂಗಾಕ್ಷ** (ಗು). ೧. ಕೆಂಪು ಬಣ್ಣದ ಕಣ್ಣುಳ್ಳ. (ನಾ). ೨. ಕೆಂಪು ಬಣ್ಣದ ಕಣ್ಣುಳ್ಳ ಒಂದು ಬಗೆಯ ಹಕ್ಕಿ : "ಪಿಂಗಾಕ್ಷಮೆನೆ ಕಣಜಂ" (ಚುಂಗಾ. ೩೨-೯). ೩. ಹುಲಿ : "ಪಿಂಗಾಕ್ಷ—ಬೆಕ್ಕಿನ ಕಣ್ಣಿನ ಹಾಗೆ ಕಣ್ಣುಳ್ಳದ್ದು ; ಹುಲಿ" (ಗಂಗಾಮ. ೨೦೩). ೪. ಕೋತಿ. ೫. = ಪಿಂಗ ಚಕ್ಷು ೨ : ಪೊಕ್ಕುಡಿಮೆ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ ನುಚ್ಚುನೂರಾಗೊಡೆದಂ . . . ಮಕರಟಮಂ (ಕಂಕಣ. ೭-೦೩); ಪಿಂಗಾಕ್ಷ ನಶಿವಿಷಮುಪರುಷವೇಷಾವೇಶಧರನಾಗಿ (ಗದಾಯು. ೩-೫೪೪). ೬. ಶಿವ : ಪಿಂಗಾಕ್ಷಂ ನಿಜಕಿಂಕರಾಗ್ನಿಬಲತೇಜೋಭಂಗದಿಂ . . . ಕೋಪಾಟೋಪಮಂ ತಾಳ್ದಿದಂ (ಐಗೂ. ೦೬-೦೬). [ಸಂ.]

**ಪಿಂಗಾಣಿ** (ನಾ). ೧. ಒಂದು ಬಗೆಯ ಬಿಳಿಯ ಜೇಡಿಮಣ್ಣು ; ಚೀನಿ ಮಣ್ಣು(ಉಕ): ಚೀನರು ಪಿಂಗಾಣಿಯನ್ನು (Porcelain) ಸುಡಲು ಕಲ್ಲಿದ್ದಲನ್ನು ಉಪಯೋಗಿಸುತ್ತಿದ್ದರು (ಶಿಲ್ಪಶಾ. ೦೩೩); ಪಿಂಗಾಣಿಯ ಫಲಕಗಳ ಮೇಲೆ ಚಿತ್ರನೆಮಾಡಿ ವ್ಯವಹರಿಸುವುದು ಬಳಕೆಗೆ ಬಂದಿತು (ಮುದ್ರಣ. ೬). ೨. ಬಿಳಿಯ ಜೇಡಿಮಣ್ಣಿನಿಂದ ಮಾಡಿದ ಪಾತ್ರೆ ಮುಂತಾದ ವಸ್ತುಗಳು : ಗಂಗೋದಕ ಹೂಜೆ ಘನರತ್ನಕೀಲಿತ ಪಿಂಗಾಣಿ ಗಂಧಲರ್ದಟ್ಟೆ . . . ಹೊಳೆವ ಬಿಜ್ಜಣಿಗೆಯು ಹಂಗಳು ತಂದಿರಿಸಿದರು (ಮೋಹನ. ೦೬-೨೮): ಕೊಂಡು ಪಿಂಗಾಣಿಯನೆಸೆಯುತ್ತ ದೂರಕೆ ಮತ್ತೆ ಕೊಂಡುಕೊ ಮಿಕ್ಕ ಹಣಕೆ (೩ಂಕಾಕ. ೨೩೨-೪೬); ರೇಶಿಮೆ, ಪಿಂಗಾಣಿ, ಚಹಾ ಈ ಮೂರು ವಸ್ತುಗಳ ಹೊರತು ಚೀನರ ಹತ್ತಿರ ವ್ಯಾಪಾರದ ಒಡವೆ ಬೇರಾವುದೂ ಇದ್ದಿರಲಿಲ್ಲ (ಚೀಸಂ. ೦೦). [← ಪಾರ. ಪಿಂಗಾಲ್, ಪಿಂದಾನ್]

**ಪಿಂಗಾರ**, ಹಿಂಗಾರ (ನಾ). (ಕರಾ) ಅರ್ಧ ಬಿರಿದ ಅಡಕೆ ಹೂವಿನ ಕೋಶ ; ಹೊಂಬಾಳೆ : ಒಂದೆರಡು ಕಂಗುಗಳಲ್ಲಿ ಪಿಂಗಾರ ಒಡೆದು ಅಕ್ಕಿಯ ಕಣಗಳಂತೆ ಅದರ ಹುಸಿ ಹೂಗಳು ನೆಲಕ್ಕೆ ಬಿದ್ದಿದ್ದುವು (ಚೋಮ. ೦೩೩) ; ಅಲ್ಲಿನ ಗಡುಗಳು ಪಿಂಗಾರ, ಮೊಗಡ, ಕಾಯಡಕೆ, ಮಾಲೆ ಕಾಯಿ, ಪಣ್ಣಡಕೆ, ಗೋಟಡಕೆ, ಕರಿಗೋಟುಗಳನ್ನು ಉಳ್ಳವುಗಳಾಗಿದ್ದುವು (ಶಾಶಾಶಾ. ೨೩೬). **ಹಿಂಗಾರ** : ಅಡಕೆಯ ಹೂವಿನ ಹಿಂಗಾರದ ತೇರ್:— ಕಂಗಿನ ಹೂವಿನ ಬಂಗಾರದ ತೇರ್ . . . ಸುತ್ತುತ್ತಿರುವಾ ಮುತ್ತಿನ ತೇರ್ ಬಂತದೊ, ಬಂತದೊ, ಬಂತದೊ, ಪಾರ್ ! (ಅಗ್ನಿಹಂ. ೩೨-೨೩) ; ಕೈಯಲ್ಲಿ ಅಡಕೆಯ ಹಿಂಗಾರ ಹಿಡಿದು ಅವಳು ನಿಮಿತ್ತ ಹೇಳುತ್ತಿದ್ದಳು (ಕೃಕೃ. ೪೪) ; ಹಿಂಗಾರ ಇಲ್ಲದೆ ಶೃಂಗಾರ ಆಗದೋ ? (ಗಾದೆ).

[ದೇ.$_1$ ತುಳು. ಪಿಂಗರ, ಪಿಂಗರೆ, ಪಿಂಗಾರ]

**ಪಿಂಗಾಲ್**, ಹಿಂಗಾಲ್, ಹಿಂಗಾಲು (ನಾ). ೧. ಪಾದದ ಹಿಂಭಾಗ ; ಹಿಮ್ಮಡಿ : ಸೂತಿಕಾಸದನಮು ಪೊಕ್ಕು ದೇವಕಿಯ ಮುಂದೆ ಪಟ್ಟಿರ್ದ ಶಿಶುವಿನ ಪಿಂಗಾಲಂ ಪಿಡಿದುಕೊಂಡು ನಡೆತಂದು (ಐಗೂ. ೩-೦೨ ಕ). ೨. ನಾಲ್ಕುಕಾಲುಗಳುಳ್ಳ ಪ್ರಾಣಿಗಳ ಹಿಂಭಾಗದ ಕಾಲುಗಳು : ನಿಮಿರ್ದಂಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ ಚಲದ್ವಾಲ ದಂಡಂ . . . ಕೂಡೆ ತನ್ನೊಳ್ ಬಗೆದಳವಿಗೆ ಮುಂಕೊಂಡು ಧೀಂಕಿಟ್ಟು ಪಾಯುತ್ತುಮರುತ್ತೋಡುತ್ತೆ ಪೀಚುತ್ತಡಸಿ ಕೆಡಪಿತೊಂದೇಣನಂ ಚಿತ್ರಕಾಯಂ (ಗ್ರಂಥ. ೦-೯೩) ; ಬಿಲ್ಲಂಬನೊಂದಾಗಿ ಪಿಡಿದೋಡಿ ಮೊಲನ ಪಿಂಗಾಲ್ವಿಡಿದು ತಿರುಪಿಟ್ಟು . . . ಕೆಡಪಿದನೋರ್ವ ಬಲವಂತ ಬೇಡನಾಗಳು (ರಾಶಿಕ. ೦೬-೬೩) ; ಪಿಂಗಾಲ್ಗಳಂ ಕೀಳ್ತು ದಾಂಟುವ ಪೂಜಿಕಾಲೊಳ್ಗ ಮರಳಿ ಮೆಟ್ಟುವ . . . ಸುತ್ತೀಜುವ ಚಿತ್ರರಂಬಡೆದ ವಾಹಳಿತನದೊಳ್ (ರಾಜಶೇ. ೩-೦೦ ಕ). **ಹಿಂಗಾಲ್** : ೨. ಮುಂಗಾಲ ಮಡಿದು ಹಿಂಗಾಲ್ನೀಡಿ ರಥದ ತುರಂಗಮಾಳಿಗಳು ತೆಗೆದುವು (ಭರತ. ೨೪-೨೪). **ಹಿಂಗಾಲು**: ೧. ಮೇಲುವಾಯೂ ರೋಹಕರ ಹಿಂಗಾಲ ಹಿಡಿದೀಡಾಡಿ ರಿಪುಗದಹಾಲ

ಫಡಫಡೆಲವೊ ಭೀಮಸೇನನೆ ಮೃಡನ ವರ ಹಿಂಗುವುದೆ ಎಂಗೆ ತನ್ನೊಡೆಯ ಮುನಿವನ ಕರುಣ ಪಿರಿದುಂಟೆನುತಲಸುರಪತಿ . . . ಕಾದಿದನು ಹದಿನೆಂಟು ಸೋನಲಿ (ಕುಮಾ.ಭಾ. ೬೦೫. ೨–೧೬); ಬಯಲಿಗಳು ಬಸಿರುಗಳು ಹಡೆದದ್ದು ಹಿಂಗಿದ್ದು ಮಾಣವತ್ತ್ಯವಮೂರುಕೋಟಿ (ಗಿರಿ. ೩೦-೯). ೯. ವ್ಯಾತವಾಗು; ಸಾಯು; ಮಡಿ: ಹಿರಿಯ ಮಗನ ಕಾಲ ಮುರಿದು ನಡುವಳ ಮಗನ ಕಯ್ಯ ಮುರಿದು . . . ಅವರು ಹಿಂಗಿ ನಾ ಬದುಕಿದೆನೆಂದು ತ್ರಿವಿಧದ ಸಂದ ಬಿಟ್ಟು ಸದಾಶಿವಮೂರ್ತಿಲಿಂಗದಲ್ಲಿಗೆ ಸಂದಿತು ಚಿತ್ತ (ಅಕಾಶಾ. ೪. ೮೪೬-೧೩೬); ಅಡಸಿದಾಪತ್ತಿನಲಿ ಧೈರ್ಯವ ಹಿಡಿವುದೆ ಸುಪ್ರೌಢಿ ಸಾಕಿನ್ನೊಡಲು ಕರಗಿದೊಡೆ ಕಳಲುವನೆ ಹಿಂಗಿದಭಿಮಾನ್ಯ (ಕುಮಾ.ದ್ರೋ. ೬-೨೩); ಸತ್ತು ಹುಟ್ಟುವ ಹುಟ್ಟಿ ಹಿಂಗುವ ಸುತ್ತ ತೊಡಗಿನು ಮಾಣಿಸಲೆ ಪುರುಷೋತ್ತಮನೆ (ಹರಿ. ೬೦).

[ದೇ.೪ ತಮಿ. ಪಿನ್ನು : ತೆಲು. ಹಿಂಗು]

**ಪಿಂಗು₂** (ನಾ). ಹಿಮ್ಮೆಟ್ಟುವಿಕೆ ; ಹಿಂಜರಿಯುವಿಕೆ : ಸಿಂಗದ ಮುಳಿಸುಂ ಮೇಷದ ಪಿಂಗುಂ ಪಡುವಿದರ ವಿನಯಮುಂಕಿವು ಮಾಣಬುಂ ಭಂಗಮೆನಿಸಲ್ಕೆ ಪಡೆಯವು ಕಂಗೆಡಿಕೆಯುಂ ಭರದನಹಿತರದಟುಂ ಧುರದೊಳ್ (ಶಾಂತಿ. ೨೬೮.೩) ; ಸಿಂಗದ ಹಳಿಗುಂ ಮೇಷದ ಪಿಂಗುಂ ಕೋಪಿದರ ಭೀತಿಯೆಂಬೀ ಮೂರುಂ ಭಂಗಮೆನಿಸಲ್ಕೆ ಪಡೆಯವು ಕಂಗೆಡಿಸಿಯ ಕೊಲ್ಲದಿರವು (ಶಾಂತಿ. ೨೯೬). [< ಪಿಂಗು₁]

**ಪಿಂಗುಗೆ** (ನಾ). ತೊರೆಯುವಿಕೆ ; ತ್ಯಜಿಸುವಿಕೆ ; ವಿಸರ್ಜನೆ : ಅಂಗಾದಿದ್ವಿತಯಂಗಳ ಪಿಂಗುಗೆಯಂ ಮಾಡದಾತನಜ್ಞಾನಿ ಗಡ (ಜಗನ್ನಾ. ೦೬-೩೦). [ಪಿಂಗು₁ + -ಗೆ]

**ಪಿಂಗುಡಿ**, ಹಿಂಗುಡಿ (ನಾ). ಹಿಂದಿನ ಭಾಗ ; ಹಿಂಭಾಗ : ನಾರಾಚದಲಿ ಬಲನೆಡನ ಕೀಲಿಸಿ ಪಿಂಗುಡಿಯ ಮುಂಗುಡಿಯ ಕಟ್ಟಿದನಂದಿನಲಿ (ಕುಮಾ.ಭೀ. ೨೦-೨೬); ಹಾಯೆನುತ ಭಟರೊಬ್ಬಿಲಿದರು ಪಿಂಗುಡಿಗೆ ಬಿದ್ದುದು ಸಮರಸೌರಂಭ (ಲಕ್ಷ್ಮೀಗ. ೦೦-೩೬-೦೬). ಹಿಂಗುಡಿ : ಹರಿಯೊಡನೆಯಾಹವದ ಕೆಲಸಕೆ ತರಣನುತ ಹಿಂಗುಡಿಗೆ ಮಹಿಮನ ಮರಳಿಸಿದನೇನೆಂಬೆನಾಹವದಾರು ವಿಡಂಬನವ (ಲಕ್ಷ್ಮೀಗ. ೦೦-೬೦-೨೯). [ಪಿಂ (< ಪಿನ್) + ಕುಡಿ₂]

**ಪಿಂಗುರು** 'ಪ್ರೊಂಗುರು' ನೋ.

**ಪಿಂಗೂಳೆಯ** (ನಾ). ಹಿಂಭಾಗದಲ್ಲಿ ಇರುವ ಗುಂಪು : ಆರ್ತ ರೌದ್ರ ಧ್ಯಾನಮೆಂಬ ಮುಂಗೂಳೆಯದ ನಾಯಕವೆರಸು ದುರ್ಜನರ ಕೂಟಮೆಂಬ ಪಿಂಗೂಳೆಯದ ವೀರರ್ವೆರಸು . . . ನಿಲ್ಲದಲ್ಲಿಯುಂ ಬೆನ್ನಟ್ಟಿ (ಧರ್ಮಾಮೃ. ೦೦-೯೬). [ಪಿಂ (< ಪಿನ್) + ಗೂಳೆಯ]

**ಪಿಂಗೊಳಿಸು** (ಕ್ರಿ). ಹಿಂದಿರುಗುವಂತೆ ಮಾಡು; ಮರುಕಳಿಸು : ಅಂಗಜನ ಕೇಳಿಯಾಲಯನಿಕೇತನದಿ ದೀಪಂಗಳುರಿವುರಿವು ಭುಗಿಭುಗಿಲೆನುತ ಕತ್ತಲೆಯ ಪಿಂಗೊಳಿಸಿ ಕಾರುವೂರ್ಗಳ್ ಬಜ್ಜಲವು ತೋರುತಿಹುದು (ಶಬರ. ೩೦-೯). [ಪಿಂ (< ಪಿನ್) + ಕೊಳ್₁ + -ಇಸು₃]

**ಪಿಂಗೋಳ್** (ನಾ). ಹಿಂದುಗಡೆ ; ಹಿಂದಿನ ಭಾಗ ; ಹಿಂಭಾಗ : ಕೇಳದು ವಿಷಯಾಧೀಶ್ವರರಪ್ಪ ಕೃ[ಕ]ಯಾತಯ್ಯರುಮೆಂದಕ್ಷೋಹಿಣೀಬಲದೊಡನೆ ಸಿಡಿಲನುರುಳಿ ಮಾಡಿದಾತು ಪಿಂಗೋಳೊಳ್ ನಡೆಯ (ಶಾಂತಿಪು. ೯-೯೩ ೮). [ಪಿಂ (< ಪಿನ್) + ಕೋಳ್]

**ಪಿಂಛ** (ನಾ). = ಪಿಂಛ ೨ : ಪಿಂಛವ ಮಡಗಿ ಮಂಡೆಗೆ ವಿನುತಗುಣ ತನ್ನೊಳಗೆ ಸನ್ಯಾಸನವ ತಾಳಿಯು ಮುನಿಪನಂಘ್ರಿಯ ನೆನೆಯುತಿರ್ದು (ಅಚಿಪ. ೦೨-೬); ಮೈಮೇಲೆ ಚೆಲ್ಲಿದ್ದ ಕುರುಳನ್ನೆಲ್ಲ ಪಿಂಛದಿಂದ ಮೃದುವಾಗಿ ಜಾಡಿಸಿಕೊಂಡರು (ದಾಕಶಾ. ೦). [< ಸಂ. ಪಿಂಛ]

**ಪಿಂಚಣಿ** 'ಪೆನ್ಷನ್ನು' ನೋ.

**ಪಿಂಚಣಿದಾರ** 'ಪೆನ್ಷನ್‌ದಾರ' ನೋ.

**ಪಿಂಚನ್** 'ಪೆನ್ಷನ್ನು' ನೋ.

**ಪಿಂಚನಿ** 'ಪೆನ್ಷನ್ನು' ನೋ.

**ಪಿಂಚನೂರ್**, ಹಿಂಚನೂರು (ನಾ). ಒಂದು ಊರಿನ ಹೆಸರು : ಈ ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಈಗಿನ ಹೀಚನೂರು : ಪಿಯಗೆಲ್ಲರ್ ಮಿಬುಗೆರೆನಾಡು ಮೂನೂಱುಮಾಳೆ ಮೂಱು ಕೊಡೆ ಅಣ್ಣಿಯಾರ್ಪಿಞ್ಚನೂರಾ ಏಱುನಾಳ್ಕೆಱಿಮು ಬಿಟ್ಟಾರ್ (ಎಕ. XVI. ತುಮಕೂ. ೯೬-೯ ; ಕ್ರಿ. 750) ; ಪಿಞ್ಚನೂರುತಾಳ್ವನ್ನರ[ಸ]ರಾಳೆಱುದು ಸತ್ತನ್ (ಎಕ. XVI. ತುಮಕೂ. ೯೬-೩ ; ಕ್ರಿ. 750). ಹಿಂಚನೂರು : ಹಿಞ್ಚನೂರ ತೊಣ್ಣಗೌಡನ ಸುಪುತ್ರನೇಚಗೌಣ್ಡನಾತನ ಸುತ ಹೊನ್ನಗೌಣ್ಡನು ಹಿಞ್ಚನೂರ ಕಲಿದೇವರಿಗೆ . . . ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ (ಎಕ. XII, ತಿಪಟೂ. ೩೬-೩೩ ; ಕ್ರಿ. 1120). [? + ಊರ್]

**ಪಿಂಚನ್ನು** 'ಪೆನ್ಷನ್ನು' ನೋ.

**ಪಿಂಚು₁**, ಹಿಂಚು (ಕ್ರಿ). ೧. ಹಿಂದೆ ಉಳಿ ; ಹಿಂದೆ ಬೀಳು ; ಹಿಂದಾಗು : "ಪಿಂಚು–ಪಶ್ಚಾದರ್ಥೇ (ಹಿಂದುಳಿ)" (ಶಬ್ದಾ) ; ಇಂಚೆಯ ಪಸವಿನ ಬಱಿದ ಲಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕಯ್ಪಡಿವೊಲಾದುವಾ ನಾಡೂರ್ಗಳ್ (ಶಾಂತಿಪು. ೯-೩೦) ; ತೀರ್ಥಜಲಂಗಳ್ ಪಿಂಚಿದರ್ಗಿಲ್ಲೆಂಬ ತಿರೆ ಮುಂಚಿದರಲ್ಲಲ್ಲಿ ಮೆಗೆಯಲ್ಲಿ ವಿಚರ್ (ಅಸಂಪು. ೩ ೬೩) ; ಅನುಮಾನಿಸದ ಚಕ್ರದಿಂದಟ್ಟು ಕೊಲ್ಲೆಂಬುದಾ ಪಿಂಚಲುವಳ ತಲೆ ಮುಂಚಿ ಬೀಳ್ವಿನಮಿಡಲ್ . . . ಖ್ಯಾತಿಯ ದೇವನಂ ಪೊಯ್ದು ನಿಮಿಷದೊಳಗೆ (ಕಾಪು. ೨೦-೨೭) ; ಸೀತೆಗೆ ವೈಷ್ಣವಸರ ಮುತ್ತೈದೆಯರನೇಪೋಚ್ಚಿಂಗೆ ಕಾಣ್ಬೆನೋ ಎಂಬೊಂದು ತವಕದಿಂ ನಡೆ ಮುಂಚಿದುದು ಲಕ್ಷ್ಮಣಂಗೆ . . . ಎಂತು ದೇವಿಯಂ ತೊಱೆವೆನೊ ಎಂದೊಂದು ದುಗುಡದಿಂ ಪಿಂಚಿದುದು (ರಾಮಾಶ್ವ. ೩೩ ೩). ೨. ಮರಳು ; ಹಿಂದಿರುಗು : ಮುಂಚಿದ ಷಡ್ರುತು ಮತ್ತಂ ಪಿಂಚುವುದಸ್ತಕೆ ಪೋದಂ ಪಿಂಚುವನಾಗದಿರಂ ತಾಂ ಮತ್ತಂ ಮುಂಚಿದ ಪೊಚ್ಚದ ನೀರುಂ ಮೂನಪನಾ ಯೌವನಮುಂ ಪಿಂಚದು (ಶೌಕಂತ. ೯.೨೬). ೩. ಹಿಂದೆ ಸರಿ; ಹಿಮ್ಮೆಟ್ಟು : ರಣದಿಂದೆ ಪಿಂಚದತಿವೀರಕ್ಷತ್ರಿಯರ್ (ಅಪ್ಪು. ೦ ೨.೩೩). ೪. "ತಡವಾಗು ; ತಡಮಾಡು" (ಶ್ರಶಾ₃). ಹಿಂಚು₁ : ೧. ಏನೆಂದೆನೇನೆಂದನೇನಾದಿನಾಥನಂ ಅನಱಿಯನಾನಱಿಯೆನುತವಣಿಪ ಧೀರನು ಸಾಟಿ ಹಿಂಚಿತು ಮುಂಚಿತವನ ತಲೆ ಕಳನೊಳಗೆ (ಬಸಾಕ. ೮. ೦೦೬-೭); ಹೋಗೆಂಬ ನುಡಿ ಹಿಂಚೆ ಮುಂಚೆ ಜೀವಂ ನೆಗೆದು ತಾಗಿ ನಡುನೆತ್ತಿಯುಂ ಬಗಿದು ದಾದಣಾದಗೆದು ಮೇಗಡರ್ವ ಗಗನಕ್ಕೆ ದಂಡಾಯಮಾನದಂರಿಯಾಗಿ ನೆಗೆಯಲ್ಕೆ (ಸಿದ್ಧರಾ. ೯-೩೯) : ಮಾತು ಹಿಂಚಿತು ಮುಂಚೆ ಸಂಘಟಿಪ್ರಾತ ಹೊಕ್ಕುದು (ಕುಮಾ.ದ್ರೋ. ೩-೨೩). ೩. ಪಂಚಮಹಾಪಾತಕಿಯಂ ಸಂಗತದೊಳ್ ಹಿಂಚುವನು ಪುಟ್ಟಿಗೆಱಡದ ಸಂಚದೊಳಿಕ್ಕಾವ ಕಾಲಮೋಚದ ಕೆಱದಿ (ಕಶಾ. ೩-೦೬) ; ಧಲರೆ ಧಲರತಿಬಲರೆ ಹಿಂಚದಿರಿನ್ನು ಹೊಯ್ ಹೊಯ್ ಚೂಣಿಗರನೆನುತ ಬಲಜಲಧಿ ಮುಕ್ಕುಳಿಸಿ ಎಂಗೆ ಹಕ್ಕಳಿಸಿ ಕವಿದುದು (ಕುಮಾ.ಆ. ೪-೩) ; ಪೂರ್ವದ ಕಂಡ ಕರ್ಣನದರ್ಪಲ್ಲಿಗಸೆ ಮಡಿಯ ದುರುಳವುದೆಂದು ಬಗೆಗುಂದಿ ಹಿಂಚಲಿದೊ ಕಂಡ ಕಣ್ಣಿಗೆ ಪಾರ್ಥನದರ ಕಂಠದ ಮಣಿಯ ಕುರಿತೆಸೆಯೆ, ಕಣ್ಣಾಗಿದು ನೆಲಕೆ ಹೊರಳಿತು ಹಕ್ಕಿ! (ಹಕ್ಕಿ. ೯-೦೬). ೪. ಸಚಿವರ ಸತಿಯರ್ ನಾಲ್ವರ್ . . . ಪುತ್ರರನೆರೆದರಡು ತಿಂಗಳಿಂ ಹಿಂಚಿ ಪಡೆವರನುನಯುವೆಸೆಯಲ್ (ದಕಶು. ೨-೭) ; ಕೋಕಿಳನು ಪಂಚಸ್ವರದೆ ಕೂಗಲು ಹಿಂಚವೆ ಪಂಚಬಾಣನು ಬಂದೆಯ್ದುವನು (ಅಂಜನ. ೪-೦೪೩). ೫. ಬಿಡು; ಉಳಿ: ನೆಱೆ ಮಿಂಚುವ ಬೊಲ್ಲ ದೋರನನು ಪಂಚಬಾಣನ ಪೆಸರಿನ ಮೇಘವರ್ಣನ ಹಿಂಚದೆ ನಡಸಿ ತೋಱಿದರು (ಅಂಜನ. ೬-೩೩). 'ಮುಂಚು₁' ಪರಾ. [ಪಿಂ (< ಪಿನ್) + -ಚು₁]

**ಪಿಂಚು₂, ಹಿಂಚು₂** (ನಾ). ೧. ಹಿಂದಕ್ಕೆ ಇರುವಂತಹುದು; ಹಿಂದಿನದು: (ಕ). **ಹಿಂಚು₂ :** ೨. ತಡ ; ಸಾವಕಾಶ : ಏಟು ಮುಂಚು ಮಾತು ಹಿಂಚು, ಎಂದುಕೊಂಡು . . . ಇನ್ನೆ ಈ ಉಪಾಧ್ಯಾಯನ ಕೈಯಿಂದ ಯಾವಾಗಲಾದರೂ ಮಹಾದೇವನಿಗೆ ಒಂದೊಂದು ಪೆಟ್ಟು ಬೀಳುತಿತ್ತು (ಕೂಡುಗಾ. ೩೦) ; ಊಟಕ್ಕೆ ಮುಂಚು ದುಡಿಗೆ ಹಿಂಚು (ಗಾದೆ).

**ಪಿಂಚುಮುಂಚು, ಹಿಂಚುಮುಂಚು** = ಹಿಂದುಮುಂದು : ಕೂತರ್ ಜುಮ್ಮನಿರದೊಸರಿ ತೆನೆವಕ್ರಲೊವಗಿ ತರವೇಲಿರ್ಗಳೊಳ್ ಪಿಂಚು ಮುಂಚೆನಿಸದೆ ಸರಿಯೆನಿಸಿ ಕೂಡಿ (ಕಂಥ. ೧೦-೩೦) ; ಅವ ಬೀಜವ ಬಿತ್ತಿದರೂ ಹೊಳೆಯ ಮುಖ ಹಿಂಚುಮುಂಚುಂಟೆ? (ಹೊನ್ನಸಂ. ೩೨೯-೩೨) ; ಹಿಂಚುಮುಂಚೇನಕ್ಕ ನಿನಗೆನಗೊಂದಳದೇಂ ಚಮರಯೊ ಪಟ್ಟವರಸಿ (ಚಿಕ. ೭೨-೩೦): ಶಿವನಯಿಪ್ಪತ್ತೈದು ಲೀಲಾಕಥಾಕ್ರಮಂ ವಿವರಿಸಲು ಹಿಂಚು ಮುಂಚೆನ್ನದಿರಿ ಕೋವಿದರು (ಗುರುಬಾ. ೪. ೪೭) ; ಇವುಗಳ ಕಾಲ ಬಹುಶಃ . . . ಕ್ರಿ. ಶ. ೧೬-೨೧ನೆಯ ಶಕ ಅಥವಾ ಸ್ವಲ್ಪ ಹಿಂಚುಮುಂಚು ಇರಬಹು ದೆಂದು ತಿಳಿಯಬಹುದು (ದ್ರಾ.ಹಿ. ೩೩). **ಹಿಂಚಾಗು** = ಹಿಂದೆ ಉಳಿ ; ಹಿಂದಾಗು : ಈ ಸಂಚಿತವನಜಾಯದೆ ಮುಂಚೆ ತಾನುಂಬ ಅಶನಕ್ಕೆ ನೀಡಿ ತಾ ಹಿಂಚಾಗಿ ಕೊಂಬ ಪ್ರಸಾದಿಯ ನೋಡಾ (ಶೂನ್ಯಸಾ. ೩೦-೨೭೬) ; ಹಿಂಚಾದುದಾಹವದೊಳು ನಿನ್ನ ಪಾತೆಂದು ಪಂಚಾಸ್ಯ ನಗುತ ಕೋಲ್ಗಳಿಸಿ (ಷೋಡಶ. ೩೮ ೩೨). **ಹಿಂಚು ಮಾಡು** = ಹಿಂದೆ ಸರಿಯುವಂತೆ ಮಾಡು ; ಹಿಂದೆಗೆಸು ; ಹಿಮ್ಮೆಟ್ಟಿಸು : ಮಿಂಚುಗಳ ಸಂಚಯವ ಹಿಂಚು ಮಾಳ್ಪ ಮಳತರ ಚಂಚಲದೃಗಂಚಲದ . . . ಚಪಳೆಯಿರ್ದರ್ (ಶಾಂತೀ. ೦೭ ೩೫). **ಹಿಂಚುಮುಂಚಾಗು** = ಹಿಂದುಮುಂದಾಗು : ಉಂಚಯ . . . ಚಿಟ್ಟ ದಕಿಗಳಂ ಚದುರರು ತಂದಲ್ಲಿ ಹಿಂಚುಮುಂಚಾ[ಪಾಠಾಂ. ಚಿ]ಗೆ ಪಾಚಿಸು ತಿಹರು (ಕುಮಾರಾಂ. ೪-೯೭) : ನವಗ್ರಹಗಳೊಂದೊಂದು ಮೂಜು ನಕ್ಷತ್ರಂ ಗಳೊಡಗೂಡುತಾ ತಾಂ ಚಿಮತ್ಕೃತಿಯೊಳ್ವರ್ತೀಳನೊಳಕೊಂಡು ಹಿಂಚು ಮುಂಚಾಗಿಹವು (ಜೈಕೃತಿ. ೪-೬ ೩೦); ನೂರರೊಳರಪತ್ತು ದೈವದ ಯತ್ನವು ಪುರುಷಯತ್ನವು ನಲವತ್ತು ಇದು ಹಿಂಚುಮುಂಚಾದರವಾಗಾಗ ವಿಜಯವು ಕೇವಲ ಕನಸಿನ ಸೊತ್ತು (ಚಂದ್ರಜಿ. ೦೯೦-೧೪). [<ಪಿಂಚು₁]

**ಪಿಂಚು₃** 'ಪಿಂಚೆಯ' ನೋ.

**ಪಿಂಚೆಯ, ಪಿಂಚು₄, ಪಿಂಜೆ₁, ಪೆಂಚೆ, ಪೆಂಚೆಯ** (ನಾ). ೧. ನವಿಲು ಗರಿ : ಪಿಂ[ಪಾಠಾಂ. ಪೆಂ]ಚೆಯದ ದಂಡೆ ಸುತ್ತಿದ ಚಂಚತ್ಕಟಸೂತ್ರಮೊಪ್ಪೆ . . . ಬ್ರುಚಿತಿಯಾ ವಿಪ್ರರಾಜಪಥು ಕಂಡಾಗಳ್ (ಕಥಾಸ್ರ. ೦೨ ೩೨). **ಪಿಂಚು₄ :** ೨. ಅನ್ನದ ಗಂಜಿ : ಪಂಚಪಾಯಸ ಪಕ್ವಫಲ ಚತುಷ್ಕಂ ಒಡಲಳದಿಂ ಚೆಲ್ವ ಸವಿಗೊಡುವ ನವರಸಾಪಳಿಯುಮಳ ಪಿಂಚೊಗೆದು ರುಚಿ ಅಡುವ ರಾಜಾನ್ನ ತೊಗೆ ತುಪ್ಪಮಂ ಚದುರಿನಿಂದ ನೀಡಿ (ಐಂಗಿತಿ. ೦೬-೦೬). **ಪಿಂಜೆ₁ :** ೩. (ನವಿಲಿನ ಗರಿಯ) ಕುಂಚ ; ಪಿಂಛ : ಕನ್ನೆ ವರ್ವಳೀ ಲಳಿತಲತಾಂಗಿಯಂಗಜನ ಬಿಜ್ಜೆಯ ಪೀಲಿಯ ಪಿಂಜೆಯೆಂಬಿನಂ (ಚಿಕ. ೬-೦೭೦). **ಪೆಂಚೆ :** ೧. ಚಿನ್ನದಿ ಒಡಗ ಪೆಂಚೆಯ ಕುಂಚ . . . ಹೊಂಗುಟ್ಟುಬೆತ್ತಗಳ ಪಿಡಿದು ಸೇವಕಜನರು ಚಿಣ್ಣೆವೆಯಿಡದೆ ಹರಿಯ ನಿರೀಕ್ಷಿಸುತ ಬಂದು (ಅನಂತಾ. ೦-೩-೭೨). ೪. ನವಿಲು : ಅಂಚೆಗಳ್ಕೊಳರ್ವಕ್ಕ ಗಳ್ಕೊನ್ನವಕ್ಕಿಗಳ್ಪೆಂ[ಪಾಠಾಂ. ಪಿಂ] ಚೆಗಳ್ಗೆಗಳಣಕ್ಕಿಗಳ್ಪಜಮಗಳ್ಕೊಂಚೆ ಗಳ್ಕೋಗಿಲೆಗಳಲ್ಲಲ್ಲಿಗೊಪ್ಪಿದುವು ಸಜ್ಜೀವಭಾವದಿಂದೆ (ಕೈವಲ್ಯ. ೦೭-೨೫). **ಪೆಂಚೆಯ :** . ನಿಂಬಪಾಲಿಯ ಕಿಬುಮೀಲಿಯ ಪೆಂಚೆಯದ ಕೇಶಬಂಧ ದೊಳಂ . . . ಪಸದನಂಗೆಯ್ದು (ಜಿಹಾ. ೪-೯೦ ಕ).

[< ಸಂ. ಪಿಚ್ಛ, ಪಿಚ್ಛಾ]

**ಪಿಂಛ** (ನಾ). ೧. ಹಕ್ಕಿಗಳ ರೆಕ್ಕೆ,-ಗರಿ : "ತನೂರುಹಃ . . . ಛದಃ, ಪಿಂಛಂ, ವಾಜಃ, ಪಕ್ಷಃ—ಈ ೯ ಎಬ(೧)ಕೆ" (ಕಲಾಯು. ೪೦-೩೬) : "ತನೂರುಹಃ, ಪಿಂಛ . . . ವಾಜವೆನೆ ಪಕ್ಷಿಗಳ ಗರಿಯಾಕ್ಕು" (ಶಬ್ದಗಾ. ೩೦-೨). ೨. ನವಿಲುಗರಿ ; ಪೀಲಿ : 'ಪಿಂಛಾತಪತ್ರ' ಪಠಾ. ೩. ನವಿಲುಗರಿಯ ಕುಂಚ : ಪಿಂಛ ಕಮಂಡಲಾದಿ ವ್ರತ ಹರಣ ವಿಲೋಚಮುದೊಂಬಿವು ಮೊದಲಾದ ಸತ್ಕಲ್ಪಮಂ ಕಲ್ಪಿಸಿ ಪೇಟ್ವ ಶ್ವೇತಪಟಯಾಪನೀಯ ಕಾಷ್ಠ ದ್ರಾವಿಡ . . . ಇಂದ್ರನಪಯ ಸಮುಚ್ಚಯಮುಪ್ಪ ಸಂಶಯಮಿಥ್ಯಾತ್ವಮುಮಂ (ಕಾರ. ೩). [ಸಂ.]

**ಪಿಂಛಚ್ಛತ್ರ** (ನಾ). ನವಿಲುಗರಿಯಿಂದ ಮಾಡಿದ ಕೊಡೆ,-ಛತ್ರಿ : ಧ್ವಜೋತ್ಕರಸಂದೋಹಮುಮಂ ಬಿಸುಟ್ಟುಡಾಗಿ ಪಿಂಛಚ್ಛತ್ರಮುಮಂ . . . ಬಂದರ್ ಭಯಭ್ರಾಂತಿಯಿಂ (ಅಜಿತ. ೦೨-೩೬). [ಪಿಂಛ + ಛತ್ರ]

**ಪಿಂಛಧ್ವಜ** (ನಾ). ನವಿಲುಗರಿಯಿಂದ ಮಾಡಿದ ಧ್ವಜ,—ಬಾವುಟ : ಕುಂಡಲಾಲಪುರವರೆ ಶ್ವರಃ . . . ಭಗವದರ್ಹನ್ಮುಖಕ್ಕೆ ಪಿಂಛಧ್ವಜ ವಿಭೂಷಣಂ (ಎಕ. XVIII, ೩೦೦-೩ : 1156ರ ಕಶ). [ಪಿಂಛ + ಧ್ವಜ]

**ಪಿಂಛನು** 'ಪೆನ್ನನ್ನು' ನೋ.

**ಪಿಂಛಾತಪತ್ರ** (ನಾ). = ಪಿಂಛಚ್ಛತ್ರ : ಗಗನತಳದೊಳ್ ವಜ್ರಸಾರಮೇಚಕ ರಥಮನೇಜು ಛತ್ರಚಾಮರ ಪಿಂಛಾತಪತ್ರ ಪಾಳಿಧ್ವಜ ಪತಾಕಾದ್ಯನೇಕ ಮಹಾವಿಭೂತಿಯೊಳ್ ಕೂಡಿ (ವರ್ಧಮಾ. ೬೨-೬) ; ಇದಚಿಹೊಳ್ ಮಾಧರ್ ಭಟೇಂ ತನಗೆ ಗತ ಸಾಮಂತಿಯ್ಯು ಪಿಂಛಾತಪತ್ರಂ ಪುದಿದೆತ್ತಂ ತಣ್ಣೆ ಲಪ್ಪಾಡುವುದು ಗಡಂ (ಪಂಪಭಾ. ೦೩-೯೮) ; ಭ ವಿಸೆ ಪೋಲ್ಪುದು . . . ಜಲದೇವಿಯ ಪಿಂಛಾತಪತ್ರಮನೆ ಶತಪತ್ರಂ (ಗಿರಾಯು ೬-೪೦) ; ಬಂದುಳಿ ಳ್ಳುಂಬಿದ ಪುಡಿಗತ್ತುರಿಯಂ ಸುಳಿಗಾಳಿ ಪೂಸಿ ಮೇಲಕೃತ್ಯ ತರುಣಿಯ ಮುಖಲಕ್ಷ್ಮಿಗೆ ಪಿಡಿದುರುತರ ಪಿಂಛಾತಪತ್ರಮೆನೆ ಕಣ್ಣೆಸೆಗುಂ (ಶ್ರೀಕೃಷ್ಣ. ೩-೦೧೨). [ಪಿಂಛ + ಆತಪತ್ರ]

**ಪಿಂಜ** (ಗು). ೧. ದಿಗ್ಭ್ರಮೆಗೊಂಡ ; ಭ್ರಾಂತಿಗೊಂಡ ; ತಬ್ಬಿಬ್ಬಾದ. (ನಾ). ೨. ಮನಸ್ಸಿನ ಗೊಂದಲ ; ದಿಗ್ಭ್ರಮೆ. ೩. ಚಂದ್ರ. ೪. ಶಕ್ತಿ. ೫. ಒಂದು ಬಗೆಯ ಕರ್ಪೂರ. ೬. ಕೊಲ್ಲುವಿಕೆ. [ಸಂ.]

**ಪಿಂಜಡಿ** (ಕ್ರಿ). ಹಿಂದಕ್ಕೆ ತಗ್ಗು,—ಬಡಿ,—ಅಪ್ಪಳಿಸು : ವನಚಾಕ್ಷಿಯಳ ವದನಚಂದ್ರಮನ ರಾಹು ತಾಂ ಕಿನಿಸಿಂದೆ ಪಿಡಿದು ನಿಂದಿರ್ದಂತೆ ನಿಡಿದಾದ ವೆಣಲು ಪಿಂಜಡಿವುತಿರೆ (ನವಮೋ. ೧೫-೩೭). [ಪಿಂ (< ಪಿನ್) + ಜಡಿ₂]

**ಪಿಂಜಣಿಗ** (ನಾ). ಒಂದು ಬಗೆಯ ವೃತ್ತಿ ಮತ್ತು ಆ ವೃತ್ತಿಯನ್ನು ಕೈ ಗೊಂಡವನು : ಪಿಣ್ಣಣಿಗರು ಅಸಗರು ಸಹ × × × ನಾಡ ದಳವಾಳಿಕೆ . . . ಸಮರ್ಪಿಸಿಯಿರಲಾಗಿ (ಎಕ. XI, ಹೊಳಲ. ೧-೧೪ ; 1557).

**ಪಿಂಜಣಿಗಂಗುತ್ತಗೆ** = ಪಿಂಜಣಿಗ ವೃತ್ತಿಯವರ ಮೇಲೆ ಹಾಕುವ ತೆರಿಗೆ : ನಾಡ ತಳವಾರಿಕೆ ವರ್ತನೆ ಪಿಂಜಣಿಗಂಗುತ್ತಗೆ ಯಲೆಯ ಮಾಮಾ ಮಹರ್ನವಮಿ ಉಲುಪೆ . . . ಕಾಣಿಕೆ ಕಪ್ಪಗಳು ಸಹವಾಗಿ ಯೆಂಬ ಉಂಟಾದ ಯಾತಿಬಾಧೆಗಳನು ಬಿಟ್ಟು (ಕ್ಯಾಇ. IX—II, ೬೬೩-೧೮ ; 1580).

[ ? ]

**ಪಿಂಜರ** (ಗು). ೧. ಕಂದುಬಣ್ಣದಿಂದ ಕೂಡಿದ ; ಮಾಸಲುಕೆಂಪು ಬಣ್ಣದ : ಪಿಂಜರತನುಗಳ್ ಕೊಳದಿಂ ಕೊಳಕ್ಕೆಮಯ್ಯುಳಿತತಿಗಳ್ ಮಸ ಮೊಸದು . . . ಅನುಕರಿಸಿಪ್ಪಂ (ಪರಮಾ. ೧-೫೪) ; ಮುರಿದ ಜಡೆಗಳ ರಜಃಪಿಂಜರದ ಸಂತತಂ ಸುರನರೋರಗ ಶಿಖಂಡಿಮಾಗಾಶ್ರಯವಾದ ಪರಮಪುರುಷಾವಿರೂಪಾಕ್ಷ ಲಪದ್ರುಮಂ ಪೊರೆಯಲಾಸತ್ರಜನರನು (ಕಾಂಥ. ೫ ೦). ೨. ಹಳದಿ ಬಣ್ಣದಿಂದ ಕೂಡಿದ ; ಹೊಂಬಣ್ಣದ : ಅಮಳಯ ಕನಕಾಬ್ಜ ಪಿಂಜರಮಾಗಿಯುಂ ಗಾತ್ರದೊಳ್ ತೆಮೆಟ್ಟ ಕೊಳದಿಂ ಕೊಳಕ್ಕೆ ಅಗುತಿರ್ಪ . . . ಭ್ರಮರಸಂಕುಳು (ಸುಕುಮಾ. ೪-೩೦). (ನಾ). ೩. ಕೆಂಪು ಮಿಶ್ರಿತವಾದ ಹಸುರು ; ಹಳದಿ ಬಣ್ಣ : "ಕಾಂಬಸುರಸೆದಿರೆ ಪಿಂಜರವೆಂಬುದು" (ಮತ್ತು ಕೋ. ೦೦೯-೩೩). ೪. ಪಂಜರ ; ಬೋನು :

ಆ ಗಿಳಿಯು ಮೂಜುವವನೆಯು ಪಿಂಜರದಲ್ಲಿ ಕೂತು ಕುರುಷ್ಟ ಲಿಂಗ ಪೂಜಾಂ ಲಿಂಗ ಪೂಜಾಂ ಎಂಬುತ್ತಿದೆ (ಸಿದ್ಧ ಪ. ೪. ೬೩-೨೦೦) ; ಹೊನ್ನ ವರ್ಣಕವ ಸುಡಿ ಕಾಳಿ ತದಕಿನ ಪಿಂಜರದ ಮುನ್ನೆರಡು ಕಾಳಿ ನುಡಿದಾವ ಹಬ್ಬಾಗಿಲಕ (ಜೋಳಗಿ. ೧೯೯) ; ಆದಿಮಧ್ಯಾಂತವಿಲ್ಲದವನನ್ನು ಸಣ್ಣದಾದೀ ನಮ್ಮ ಮನಸ್ಸೆಂಬ ಪಿಂಜರದಲ್ಲಿ ಹೊಗಿಸಲಾರೆವು (ರೇಣು. ೩೯). ೫. ಒಂದು ಬಗೆಯ ಹಕ್ಕಿ : ಗಳಗಳಂಟಿಗೆ ಸಿಲುಕಿಪವು ಪಿಕ್ಕಳಿಗ ಪಿಂಜರ ಮಂಜರಿಗ ವಿಶಾಂಬುಲಿಗ ಲಾವುಗ ಸರಲಿ ಬುಬುಲಿಗೆಳೆಚ್ಚ ಮಿಂಟಿಯುಲಿ (ಕೂಡಿ. ೩-೩-೧೬). ೬. ಒಂದು ಬಗೆಯ ಕುದುರೆ. ೭. ಎಲುಬಿನ ಗೂಡು ; ಅಸ್ಥಿಪಂಜರ. ೮. ಬಂಗಾರ : ಚಿನ್ನ. ೯. ಹಳದಿಯ ಬಣ್ಣವಾಗಿ ಉಪಯೋಗಿಸುವ ಒಂದು ಬಗೆಯ ಖನಿಜ : ಹರಿದಾಳ. [ಸಂ.]

**ಪಿಂಜರಾಪೋಲು** 'ಪಾಂಜರಪೋಳ' ನೋ.

**ಪಿಂಜರಿ₁. ಹಿಂಜರಿ** (ಕ್ರಿ). ಹಿಂದಕ್ಕೆ ಸರಿ ; ಹಿಮ್ಮೆಟ್ಟು : ಒಡನೆಯೆ ಸುಧ್ವಜನಂ ಪಿಂಜರಿದರಿಯು ಕೈಮುಂ ಕಟ್ಟಿದಂ (ಶಾಕುಶ್. ೯೫-೨೬) ; ಪಿಂಜರಿದು ಸಾವಿನತ್ತಲೆ ಪೋಪ ಪಯಣಃ ? ತೆಗೆ. ತೆಗೆ. ಒಲ್ಲೆನ್ (ಅಶ್ವತ್ಥಾ. ೧೯-೧೦೦). **ಹಿಂಜರಿ** : ಮಾನಕೆ ಮಾನಿಷ್ಟರಂಜಿ ಹಿಂಜರಿವರೆ . . . ತನಗೆಂಬ ಅಂಜಿ ಹಿಂಜರಿದರು ಭಾವುರೆ ಎಂದುಬ್ಬಿ ಮೆರೆವನು ನೋಡಿ (ಇಂಶಾ. ೯೮-೩೯) ; ಅವಳ ಧೈರ್ಯವೇ ಧೈರ್ಯ, ಯಾವುದಕ್ಕೂ ಹಿಂಜರಿ ಯುತ್ತಲೇ ಇರಲಿಲ್ಲ (ಅಂಡೂ. ೩೬) ; ಚಣಚಣಕೆ ವೈರಿಯು ದಳೇ ಬಲ ಗುಂದುತಲಿದುಂಲಿದು ಹಿಂಜರಿಯುತೋಡುತಿದೆ ಲೆಕ್ಕಿಸದೆ ವೀರ ಪಾರ್ಥನ ವೀರವಾಣಿಯಂ (ಚತ್ರಾಂಗ. ೬೩. ೨೨೯೮).

[ ಪಿಂ (< ಪಿನ್) + ಜರಿ₁ (< ಸರಿ₁) ]

**ಪಿಂಜರಿ₂** (ನಾ). ಒಂದು ಬಗೆಯ ಸರ್ಪ : ಪಿಂಜರಿ ಕಂಧರಕೋಟ ಧನಂಜಯ ಪಾಂಡುರ ಆಶಾಲಿ ಪಿಂಡಾಂಶುಕ ಚಿತ್ರಾಂಜನ . . . ಮಣಿಂಜಯ ಸಪುದಂಗಳಾದಿಯಾವಹಿನಿವಹಂ (ವೃ. ಕಾ. ೩೦-೨೮).

[ ←ತೆಲು. ಪಿಂಜರ./ಸಂ. ಪಿಂಜರಕ ]

**ಪಿಂಜರಿ₃** (ನಾ). ೧. ಚಿನ್ನ ; ಬಂಗಾರ : ವಾಸವದಿಕ್ತಟಂ ಸಮೆದ ಮೂಷೆ . . . ಸಮೀರನೇರನೆಗನಾಗೆ ಸಿದಾಘದ ದೀಪವರ್ತಿಯೋಳ್ ಕಾಸೆ ತೆರಳ್ದ ಪಿಂಜರಿಯಪೋಲ್ ಕಿಸುಸಂಜೆ ತೆರಳ್ವಿನಂ (ಅಕಪು. ೬-೭೦). ೨. ಬೆಳ್ಳಿ ; ರಜತ : "ಪಿಂಜರಿಯೆಂದು ಬೆಳ್ಳಿ" (ಕಕಾ. ೩೦-೬೨) ; ಪಿಂಜರಿಯ ನಗಮೊ . . . ಸುಧೆಯಾ ರಂಜಿಪ ರಾಶಿಯೊ ತಾನೆನೆ ನಂಜುಂಡನ ಸದನವೊಂದು ಸಲೆ ಶೋಭಿಸುಗುಂ (ಹುಮ್ಮಾರ. ೬-೩೯) ; ಕಿಸುಪೊನ್ನ ಪಿಂಜರಿಯ ಚೆಂದವಗಲ್ದ ಕೋಂಟೆಯ ಮೂಪಳಿಸಿನಗಟ್ಟೆದೊಳಗೆ . . . ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಮಾಶ್ವ. ೩೯-೧೯). [<ಸಂ. ಪಿಂಜರ]

**ಪಿಂಜರಿ₄** (ನಾ). ಮೇಲ್ಕಟ್ಟು ; ವಿತಾನ : "ಪಿಂಜರೀ_ಮೇಲ್ಕಟ್ಟು" (ಕಾಶಕ್ಕ. ೨೬೦). [ಸಂ. ಪಿಂಜರೀ ?]

**ಪಿಂಜರಿತ** (ಗು). ೧. ಹೊಂಬಣ್ಣದಿಂದ ಕೂಡಿದ ; ಹಳದಿ ಮಿಶ್ರಿತ ಕೆಂಪುಬಣ್ಣದ : ಆಭರಣದ ಮಾಣಿಕಂಗಳ ಪೊದಟ್ದರುಣಾಂಶುಗಳಿಂದ ಮಂದು ಪಿಂಜರಿತಪಿಶಂಗಿತಾರುಣಿತದಿಙ್ಮುಖವಾದುದು ತನ್ಮಹೋತ್ಸವಂ (ಅರಿಪು. ೭-೧೧೪) ; ಸುರಭಿಮುಲಯರುಹಪಂಕಪಿಂಜರಿತ ರಜತಶುಕ್ತಿಗಳಿಂ (ಕಂಗಾಮಾ. ೧೨-೨ ವ) : ಕಿಂಜಲ್ಕಮಂಜರೀಪಿಂಜರಿತದಿಶಾವಲಯಂ (ಹಕಕಾ. ಶ. ೨೩೦). (ನಾ). ೨. ಹಳದಿಮಿಶ್ರಿತವಾದ ಕೆಂಪುಬಣ್ಣವುಳ್ಳದು; ಹೊಂಬಣ್ಣವುಳ್ಳದು : ವಿಯತ್ತಳಂ ಬಗೆದು ನೋಟ್ಪೊಡೆ ನಾಡೆ ಪತತ್ಪತತ್ರಿಜರ್ಝರಿತಮೆ ದಿಕ್ತಟಂ ರಿಪುನರಾಧಿಪರಕ್ತಧುಸೀಪ್ರವಾಹಪಿಂಜರಿ ತಮೆ ಬೀರಮಂ ಪೊಗಟ್ವನೇಪೊಗಟ್ವಂ ಕದನತ್ರಿಣೇತ್ರನಾ (ಶಂಶಕಾ. ೧೯-೪) ; ಮೇಣಲ್ಲಲ್ಲಿ ಮಂಜುಮೆಯ್ ರವಿಕಿರಣರಾಗದಿಂ ಕಿಂಜಲ್ಕಪಿಂಜರಿತಮಾಯ್ತು (ಶ್ರೀಚಾಕಾ. ೨೬೮-೮೦). [ಸಂ.]

**ಪಿಂಜರಿವಟ್ಟಿಲ್** (ನಾ). ಬೆಳ್ಳಿಯ ಬಟ್ಟಲು : ಪಿಂಜರಿವಟ್ಟಲೊಳ್ಮುಖಶೀಧುವನೀಂಟುತ ನೋಡಲಲ್ಲಿ ಮೇಣ್ಮಂಜುಮಯಂಪೊಂದು ದಿಂಬಿನೆ ಸುಧಾ ರುಚಿ ಸಿಲ್ಕಿದನೆಂದು ನೋಟ್ಪ ತತ್ಕಂಜದಳಾಕ್ಷಿಯಂ (ಶಾಕ್ವಟಿ. ೩-೩೮).

[ಪಿಂಜರಿ₃ + ಬಟ್ಟಲ್]

**ಪಿಂಜರಿವೆಟ್ಟು, ಪಿಂಜರಿವೆಟ್ಟು** (ನಾ). ಬೆಳ್ಳಿಯ ಬೆಟ್ಟ ; ರಜತಾದ್ರಿ : "ರಜತಾದ್ರಿಯಕುಂ ಪಿಂಜರಿವೆಟ್ಟವೆನಲು" (ಕಕಾ. ೬೬). **ಪಿಂಜರಿವೆಟ್ಟು** : "ಪಿಂಜರಿವೆಟ್ಟೆಂದು ಬೆಳ್ಳಿವೆಟ್ಟಂ" (ಕಕಾ. ೯೮-೯೩); ಪಿಂದುಂ ರೂಪಿಪ ಲಿಂಗದೊಂದು ಪರಿಜಂ ತಾಳ್ದೆಲ್ಲರಂ ರಕ್ಷಿಸಲ್ ನಂಜಂ ಪಿಂಜರಿವೆಟ್ಟವೇ ಮಹೀತದೇಂ ಕಂಗೊಳ್ವನೋ ಮೈಮೆಯಿಂ (ಕೃಷ್ಣಕೂಕು. ೩-೦೩).

[ ಪಿಂಜರಿ₃ + ಬೆಟ್ಟು ]

**ಪಿಂಜರಿವೆಟ್ಟು** 'ಪಿಂಜರಿವೆಟ್ಟು' ನೋ.

**ಪಿಂಜರಿಸು** (ಕ್ರಿ). ಹೊಂಬಣ್ಣದಿಂದ ಆವರಿಸು,-ವ್ಯಾಪಿಸು : ಜಂಬೂ ದ್ವೀಪದ ಮೇರುವಿನ ಸವುಕ್ಷದೊಳು ಸಂಜನಿಯಿಸಿದಾ ಜಂಬೂಫಲರಸ ಪಿಂಜರಿಸಿದುದೋ ಭುವನತಳವನೆನೆ ರಂಜಿಸಿದುದು ಕಳ್ತೆರ (ಜಹುಕಾ. ೦೩-೩೨). [ಪಿಂಜರ + - ಇಸು₁]

**ಪಿಂಜಲ, ಪಿಂಜಳ** (ಗು). ೧. ಅತಿಯಾಗಿ ದಿಗ್ಭ್ರಮೆಗೊಂಡ; ಕಂಗೆಟ್ಟ; ತಬ್ಬಿಬ್ಬಾದ. **ಪಿಂಜಳ** (ನಾ). ೨. ಧೂಳು ; ಹುಡಿ : ಅಂಜನ ಗಿರಿಯಂ ಚೂರ್ಣಿಸಿ ಪಿಂಜಳಮಪ್ಪಂತೆಯುದಂ ಮೆಯ್ಯುತ್ತದಪೋಲ್ ರಂಜಿಪ ಜಾಂಡಕರಂಡದೊಳಂಜನವಂ ತುಂಬಿ ಬೊಮ್ಮನಿರಿಸಿದನೋ . . . ಎಂಬಂತೆ ದಿಕ್ತಟದೋಳ್ ಕಳಾಭಿಳೆವಹಾಂಧಕಾರಮೆಸಗುಂ (ಶಬ್ದಾಕ. ೩-೦೩). [ಸಂ.]

**ಪಿಂಜಳ** 'ಪಿಂಜಲ' ನೋ.

**ಪಿಂಜಳಕ** (ನಾ). ಧೂಳು ; ಹುಡಿ : "ಧರಣೀಸವುತ್ಥಿತಂ ಪಾಂಸು ರೇಣುಚೂರ್ಣಾಭಿಧಾನಕಂ ಕ್ಷೋದಂ ಧೂಳಿ ರಜಂ ಪರಾಗಮೆಂದಿವು ತೆರಳ್ದು ಪುದಿದಿರ್ದುದಕ್ಕುಮದು ಪಿಂಜಳಕಂ" (ಕಸ್ತುಕೋ. ೯೦-೦೩).

[ಸಂ. ಪಿಂಜಲಕ]

**ಪಿಂಜಾರ, ಪಿಂಜಾರಿ** (ನಾ). ೧. ಹಿಂಜುವವನು ; ಹಿಕ್ಕುವವನು : "ಪಿಂಜಾರಃ = ಹಿಕ್ಕುವಂ" (ಕಾಶಕ್ಕ. ೨೬೦). ೨. ಅರಳೆಯನ್ನು ಬಿಡಿಸುವವನು,_ ಹಿಂಜುವವನು: "ಪಿಂಜಾರಃ _ಅರಳೆಯನೆಕ್ಕುವಂ" (ಕಾಶಕ್ಕ. ೨೬೩); ಕುಂಬಾಜ ಹೊಟ್ಟೆಯುಳಿ ಪಿಂಜಾರ ಹಾ ಹುಟ್ಟಿ ಕುಂಭಕುಂಭಿ ಗಳನಳಿಯುತ್ತ ಕುಂಭಿನಿಯೊಳಿಂಬುಗೊಂಡಾನು (ಸರ್ವಜ್ಞ. ೦೦೯೪); ಅವಹಾ ನಿದ್ದೆ ಹೋದಾಗ ತುರುಗಳು ಊರ ಪಿಂಜಾರನ ಹೊಲ ಹೊಕ್ಕು ಬೆಳೆ ತಿಂದುಬಿಡುವುವು (ಜಕ. ೬೦೬); ನಮ್ಮ ದೇಶದಲ್ಲಿ ವಸ್ತ್ರವನ್ನು ಹುಟ್ಟಿಸುವ ಕೆಲಸದಲ್ಲಿ ಪಿಂಜಾರ ... ನೇಕಾರ ಮುಂತಾದ ಕೈಕೆಲಸದವರು ಬೇರೆಬೇರೆ ಭಾಗಗಳನ್ನು ವಹಿಸಿಕೊಂಡು ಅಷ್ಟೇ ಮುಗಿಸುತ್ತಾ ಹೋಗುತ್ತಾರೆ (ಮುಂಬಯಿ. ೩-೨೩೩). ೩. ಸೇವಕ ; ಗುಲಾಮ ; ಆಳು : ಸಾವಿರ ಕುದುರೆಯ ಸರದಾರ್ರ ಮನೆಯ ಹೆಂಡತಿಗೆ ಪಿಂಜಾರ (ಸಂಜಾ. ೦೩೩). **ಪಿಂಜಾರಿ**: ೨. ಪಿಂಜಾರಿಯರು ಪಸಾರಿಯರು . . . ಮೊದಲಾದ ನಾನಾ ಜಾತಿ (ಕಾಗಿಂ. ೦೫-೯). ೩. ಪಲ್ಲಕ್ಕಿಯ ಮೇಲ್ಮುಸುಕು,_ ಆಚ್ಛಾದನೆ : "ಪಿಂಜಾರಿಃ = ದಂಡಿಕೋರ್ಧ್ವಾಚ್ಛಾದನಂ" (ಕಾಶಕ್ಕ. ೨೬೬).

[←ಹಿಂ. ಪಿಂಜಾರ; ಮರಾ. ಪಿಂಜಾರೀ]

**ಪಿಂಜಾರಿ** 'ಪಿಂಜಾರ' ನೋ.

**ಪಿಂಜಾರಿಕೆ** (ನಾ). ಅರಳೆಯನ್ನು ಹಿಂಜುವ ಕೆಲಸ ; ಹಾಸುಗೆ, ಗಾದಿ ಮೊದಲಾದುವುಗಳನ್ನು ಮಾಡುವ ಕೆಲಸ,-ಉದ್ಯೋಗ : ಸಂಯುಕ್ತ ಪ್ರಾಂತದ ಹೊರತಾಗಿ ಉಳಿದ ಕಡೆಯಲ್ಲೆಲ್ಲ ಬಹುಶಃ ಪಿಂಜಾರರು ಮುಸಲ್ಮಾನರೇ ಇರುವುದರಿಂದ ಈ ಪಿಂಜಾರಿಕೆಯ ಉದ್ಯೋಗವು

ಮುಸಲ್ಮಾನರ ಆಳಿಕೆಯಲ್ಲಿ ಉದಯವಾಯಿತೆಂಬುದು ಸ್ಪಷ್ಟವಾಗುವುದು (ಜಾಹೀ. ೨೫). [ಪಿಂಚಾರ + –ಇಕೆ]

**ಪಿಂಚಾವಳಿ** (ನಾ). ಒಂದು ಬಗೆಯ ವಸ್ತ್ರ: ಮಲಯಜ ಶ್ರೀಗಂಧ ಗಣೆಯುಂ ... ಚಂದ್ರಾತಪಂ ಭೂತಿಳಕವುಂ ಮಣಿವಟ್ಟು ಪಿಂಚಾವಳಿಯು ಸಂಧ್ಯಾರಾಗವುಂ ಕ್ರೀಡೊಡಕಾದಯರಾಗ (ಚಂಪು. ೧೦–೨೫). [? + ವಳಿ₄ (<ವಟ್ಟಿ₂)]

**ಪಿಂಜ**₁ 'ಪಿಂಜು₂' ನೋ.

**ಪಿಂಜೆ**₂, ಹಿಂಜಿ (ನಾ). ಅರಳೆಯ ಸುರುಳಿ; ಹಂಜಿ: (ಕ). ಪಿಂಜೆ: ಹತ್ತಿಯ ಹಿಂಜಿ (Sliver)ಯಲ್ಲಿ ಎಳೆಗಳೆಲ್ಲವು ಅಸ್ತವ್ಯಸ್ತವಾಗಿ ಇದ್ದರೆ ಉಪಯೋಗವಿಲ್ಲ (ಜಾಂಕ್ರ. I. ೪೦೭); ಹಾಸುಹೊಕ್ಕಿಗೆ ಪಕ್ವಾದ, ಗಂಜಿಗೆ ಹಿಂಜಿಯಾದ, ನನ್ನೀ ಕೈಲಾಳಿಯ ಮಗ್ಗಕ್ಕೆ ಪಂಜಾದ ಸನ್ಮೂರಿಸ ಹಿರಿಯ ರೆಲ್ಲರ ಕ್ಷೆವಾವಣೆ ಹಾಗೂ ಆಶೀರ್ವಾದ ಕೋರುತ್ತೇನೆ (ಪಪ್ಪೂರು. ೩೦೦೯. ೦೫). [<ಸಂ. ಪಿಂಜಾ]

**ಪಿಂಜು**₁, ಹಿಂಜು (ಕ್ರಿ). ೧. ಬೇರೆ ಬೇರೆ ಮಾಡು; ವಿಭಾಗಿಸು: "ಪಿಂಜು-ಪೃಥಕ್ಕರಣೇ" (ಕಧಾ). ಹೋಂಜಾಳಿಗೆಯನಿತ್ತು ರಂಗೇಶವಿರ ಗಾಗ ಪಿಂಜೆ ಮನ್ನಿಸಿದ ಮೇಳವನು ಸಿಂಜಿನ ಖುರಿಣಿಯರಿಗೆ ಪಂತ್ರೋಲಿದ ಪರಂಜಿಯಾಭರಣವನಿತ್ತು (ಅರಕ. ೦೫–೧೧೫). ೨. ಅರಳೆಯನ್ನು ಹೆಕ್ಕು,—ಬಿಡಿಸು,–ಚೊಕ್ಕಟ ಮಾಡು: "ವಸುಗೆಯೊಳ್ ಕಾರ್ಪಾಸ ವಿವರಣದೊಳಂ ಪಿಂಜು" (ಶಬ್ದಮಂ. ೮೫). ೩. ಬೇರೆ ಬೇರೆ ಯಾಗು; ಬಿಡಿಬಿಡಿಯಾಗು; ವಿರಳವಾಗು; ದೂರವಾಗು: ಮಂಜು ಮುಸುಂಕೆ ಕೊಂಕುಗೊಸರಿಂ ಮಸುಳಿಗ್ಗಿಂಡ ಬಿಸಪ್ರಸೂನವೋ ಪಿಂಜದೆ ಮೊಗ್ಗು ಪೂಸ್ಕೆ ಪೊಗೆಸುತ್ತಿದ ಪುತ್ತಳಿಯೋ . . . ಎನಲ್ (ಚಕೊ. ೩-೨೦). ಹಿಂಜು: ೧. ಮೋಡವ ಹಿಂಜಿ ಜನರಿಗೆ ಅಂಜಿ ರವಿ ಅಡಗಿದನೆಂದು (ಅರಳು. ೦೪೪–೦೫). ೨. ಹಿಂಜಿದರಳೆಯು ಹಿಂಡೊ? ಐರಾವತದ ದಂಡೊ? ಮಂಜೊ? . . . ಮಲೆಯ ಕಲೆಯಾ ಬಂಡೆಯಲ್ಲೇನ ನಾ ಕಂಡೆ? (ಅಕ್ಷ. ೯–೦೩); ತೆರೆತೆರೆ ಯಾಗಿ ಹಿಂಜದ ಅರಳೆಯಂತೆ ಮೋಡಗಳು ತೇಲಿ ತೇಲಿ ಹೋಗುತ್ತಲಿ ದ್ದುವು (ನಾಗು. ೦೩); ಶಾಂತಾಳು ಹಿಂಜಿದ ಹತ್ತಿಯಂತೆ . . . ಬಂಡೆಗಲ್ಲಿನೊಳಗಿಂದ ತಿಳಿನೀರು ಜುಳು–ಜುಳು ಹರಿದಂತೆ ನಕ್ಕದ್ದೂ ಕೂಡಿತು (ಆಕಾ. ೦೦೪); ಹಳೆಕತು–ಹೊಸತನು ಹಿಂಜಿ ಹೊಸೆದು ಹೊತ್ತಿಸಿ ಹಿಡಿದ ಶಾಂತಿ–ವಣತಿ (ಶಂಕು. ೩೦-೧೧); ಹಿಂಜಿದ ಹತ್ತಿಯ ಚೂರುಗಳ೦ ತಿರುವ ಮೋಡದ ಚುಕ್ಕೆಗಳು . . . ಕಾಣಿಸಿಕೊಳ್ಳುತ್ತವೆ (ಹುಹೂ. ೨೫೩). ೪. ತೆಳುವಾಗು; ಚೊಕ್ಕಟವಾಗು; ಶುದ್ಧವಾಗು: ಕಸರು ಕಳೆದ್ದ ತಮ ಹಿಂಜಿ ಬಂತು ರವಿಕಿರಣ ನೂಲುವಂತೆ (ಅರಳು. ೪೦೪–೮); ಹೊಗೆ ಮೋಡ ಹಿಂಜಿ ಚಿನ್ನರೆಯಾಗುವಂತೆ ನೆನಸಿದ ರೂಪ ಹುಡಿಯಾಗುತಿದೆ (ಕಾವ್ಯಾಂ. ೯-೦); ಮುತ್ತಿದ ಮೋಡ ಚದರಿ, ಹಿಂಜಿ ಹೋಗಿ ಸಾಂದ್ರ ಚಂದ್ರಿಕೆ ಚೆಲ್ಲಬಹು ನು (ಅಲಕ. II. ೨೦೯). ೫. ಒಟ್ಟಿಯ ಎಳೆ ಗಳು ದೂರವಾಗು; ಜಾಳಾಗು: ಮೊನ್ನೆ ತಾನೇ ತೆಗೆದುಕೊಂಡ ಸೀರೆ ಇಂಗೆ ಹಾಕಿದ ಕೂಡಲೆ ಹಿಂಜಿ ಹೋಯಿತು (ಆಡು). ೬. ವಿಸ್ತಾರ ಮಾಡು; ವಿಸ್ತರಿಸು: ಓಡುತ್ತಿರುವ ಕುದುರೆಯು ಒಂದು ಖಿಲಿಹವನ್ನು ಹಿಂಜಿ ಹತ್ತು ಘಂಟೆಯ ಕಾಲವನ್ನಾಗಿ ಮಾಡಬಲ್ಲೆನಾದರೆ (ಅಜಂತ. I. ೨೫೭). ೭. ಸೂಕ್ಷ್ಮವಾಗಿ ಪರಿಶೀಲಿಸು; ಕೂಲಂಕಷ ವಾಗಿ ವಿಚಾರ ಮಾಡು: ಈ ಪ್ರಶ್ನೆಯನ್ನು ಇನ್ನೂ ಅಷ್ಟು ಹಿಂಜಿ ತೋರಿಸೋಣ (ಜಾಹದ. VI. ಎರಡು ಮಾತುಗಳು); ತನ್ನ ಚಿಂತೆಗಳ ಒಳಪದರು ಗಳನ್ನು ಹಿಂಜುವುದರಲ್ಲಿ ಒಂದಾದಳು (ಚೂರುಚಾ. ೫೦); ಪಕ್ವ ಬುದ್ಧಿ ಗೇಬೋ ದೌರ್ಬಲ್ಯ ಬಂದು . . . ಸಣ್ಣಮಾತನ್ನೇ ಹಿಡಿದು ಹಿಂಜುತ್ತಿದೆ (ಕಕಂಕಾ. ೨೫); ಈ ಹಾಡನ್ನು ಹಿಂಜಿ ಅರ್ಥ ಮಾಡಿ ನೋಡಿದರೆ ಈ ತೊಡಕು ಬಗೆಹರಿದು ಹೋಗುವುದು (ಕಪ್ಪಜಾ. ೪೫). [ದೇ.॥ ಮಲ. ಪಿಞ್ಚು, ಪೀಞ್ಚು; ತೆಲು. ಪಿಂಜು]

**ಪಿಂಜು**₂, ಪಿಂಜೆ₁ (ನಾ). ಹೀಚುಗಾಯಿ: ಮಿಡಿ: (ಕ). ಪಿಂಜೆ₁: "ಪಿಂಜೆ ತೀರ = ಸಣ್ಣ ಕಾಯಿ" (ಜಾಶಕೋ. ೦೫). 'ಪೀಚು₁' ಪರಾ. [ದೇ.॥ ತಮಿ. ಪಿಞ್ಚು; ಮಲ. ಪಿಞ್ಚು; ತೆಲು. ಪಿಂದಿಯ, ಪಿಂದೆ]

**ಪಿಂಜೂಲ** (ನಾ). ದರ್ಭೆಗಳ ಕಟ್ಟು: ಮುತ್ತುಗದ ದೊನ್ನೆಗಳಲ್ಲಿ ನೀರು ತುಂಬಿಕೊಂಡು ದರ್ಭೆ ಪಿಂಜೂಲಗಳನ್ನು ಹಿಡಿದು ಮಂತ್ರಜಲವನ್ನು ಪ್ರೋಕ್ಷಿಸುತ್ತ ಬಂದರು (ಮಹಾಶ. ೯೪). [ಸಂ.]

**ಪಿಂಜೂಷ** (ನಾ). ಕಿವಿಯ ಮಲ; ಗುಗ್ಗೆ. [ಸಂ.]

**ಪಿಂಚೆ**₁ (ನಾ). ನೆರಿಗೆ ಹಾಕಿ ಕಟ್ಟಿದ ಕಚ್ಚೆ. 'ಪಂಚಕಚ್ಚೆ' ಪರಾ. ಪಿಂಚೇ ಹಾಕಿ ಧೋತ್ರವನ್ನುಡು=ಒಳ ಅಂಗಿಯ ಮೇಲೆ ಬರುವಂತೆ ಮಡಿಕೆಗಳನ್ನು ಒಳಸೇರಿಸು,—ಸಿಕ್ಕಿಸು: (ಕ್ಯಾಂಕಚ್). [← ತೆಲು. ಪಿಂಚೆ, ಪಿಂಚೆಯ]

**ಪಿಂಚೆ**₂ 'ಪಿಂಚೆಯ' ನೋ.

**ಪಿಂಜೆ**₃ (ನಾ). ೧. ಬಾಧೆ; ನೋವು. ೨. ಅರಿಸಿನದ ಪುಡಿ,—ಹುಡಿ. ೩. ಅರಿಸಿನದ ಬಣ್ಣ: ಮೆಯ್ಯ ಬಣ್ಣಮುಂ ಪುಣ್ಯಮುಮರಿಸಿನದ ಪಿಂಜೆ[ಪಾಠಾಂ. ಜೆ]ಯಂತೆ ಪಾಜು ಪೋಕುಂ (ಅರಸಿಶ. ೫-೪ ೩). ೪. ಅರಳೆ; ಹತ್ತಿ. ೫. ಬೆತ್ತ; ಸೆಳೆ. [ಸಂ. ಪಿಂಜಾ]

**ಪಿಂಜೆಬಂಗು** (ನಾ). ಹಿಂಭಾಗದ ಸೆರಗು: ಪೂಂಜೆಳೆ, ಪಿಂಜೆಬಂಗು (ಕಪ್ಪಾಕು. ೯೩ ಕ್ರಿಯೋ). 'ಮುಂಜೆಬಂಗು' ಪರಾ. [ಪಿಂ (< ಪಿನ್) + ಸೆಬಂಗು]

**ಪಿಂಡ** (ನಾ). ೧. ಮುದ್ದೆ; ಉಂಡೆ: ಕುಂಡಲಿಯು ಕಂಡಾತ ಹೆಂಡತಿಗೆ ಒಲಿಯುವನೆ ಕಂಡಿತದೊಳಪ್ಪ ಶಿವಯೋಗಿ ಮಾಂಸದ ಪಿಂಡಕೊಲಿಯುವನೆ (ಸರ್ವಜ್ಞ. ೫೦೩). ೨. ಗುಂಪು; ಸಮೂಹ: "ಪಿಂಡಂ ಸಲೆ ಸಂತೆ ನೆರವಿ ಜಾಳಿಗೆ ತೆಪ್ಪಲ್" (ಕಾವಿಕ. ೧೦೩); ಅದೇಂ ಕಣ್ಗೊಳಿಸಿ ದುದೊ ವಿನ[ಕ್ಷ]ತ್ರಕಳ್ಳತ್ರಪಿಂಡಂ[ಪಾಠಾಂ. ಸಿದ್ಧಂ] (ಶಂಕರಾ. ೦೩–೭೫); ರವಿಹಯಲಾಲಾಪಿಂಡಂ ದಿವಿಜನದೀಫೇನಮಾಲೆ . . . ಎಂಬಿನಮುಲ್ಲಸ್ಸಿಗೆ ಧವಳಾಂಬುದಪಟಲಮೆಸೆದುದು (ಅಗಿ. ೯-೩೧). ೩. ಆಹಾರ; ಊಟ: ರುಚಿಯುಲ್ಲದ ಪಿಂಡಂ ಕುದಿರೆಗೆ ಕ೦ ಪೊಲ್ಲದೆನಿಪ ಕವಳಮುನಿಪ್ಪಂ (ಅಕ್ಷರಾ. ೭-೮೦); ದಂಡ ತಪ್ಪಿಸುತ ಪಿಂಡ ಗಳಿಸಿ ಉಂಡಾಡಿಭಟ್ಟನಾಗಿ . . . ದಪ್ಪ ಅಕ್ಷರದ ಪದವಿ ಪಡೆದು ಇಹ ಮೇಲು ಸಾಲಿನಲ್ಲಿ (ಅರಳು. ೪೫೯–೩); ನಾವು ಹೀಗೆ ಮತ್ತೊಬ್ಬರು ಹಾಕಿದ ಪಿಂಡವನ್ನು ತಿಂದುಕೊಂಡು ಸದಾ ನರಕವನ್ನು ಅನುಭವಿಸದಂತೆ ಬೇಗ ಏನಾದರೂ ಏರ್ಪಾಡು ಮಾಡು (ಪಪ್ಪಾ. ೨೮). ೪. ಒಂದು ಸಲಕ್ಕೆ ನುಂಗುವಷ್ಟು ಆಹಾರ; ತುತ್ತು: ಕಬಳ: ಒಂದು ಅನ್ನದ ಪಿಂಡವನ್ನು ನನ್ನನ್ನು ಳಸಲು ನೀಡುವವರಿಲ್ಲದಾಗ ಅದೇ ಸುಖವಾದ ಸುಲಭ ಹಾದಿ ಎಂದು ಕೊಂಡಿದ್ದೆ (ತಿಪಕಾ. ೩೧೧). ೫. (ದೇವತೆಗಳಿಗೆ, ಪಿತೃಗಳಿಗೆ ಅರ್ಪಿಸ ಲಾಗುವ) ಅನ್ನದ ಮುದ್ದೆ; ನೈವೇದ್ಯ: ಕಾತ್ರಮುಂ ಕಿಡಿಸುವ ನಿಮಿತ್ತ ಚಂಡಿಕೆಗೆ ಪಿಂಡಮುನಿಟ್ಟುಂ . . . ರೌದ್ರದೇವತೆಗಳಂ ಕೊಂಡಾಡಿ ದುಃಖದಿಂದಾಳುತ್ತಂ ಮುಳುಗುತ್ತಂ ಇಪ್ಪರು (ಶಾಸ್ತ್ರಚೂ. ೯೭-೮); ಇವನಿಂದ ಸತ್ತ ಮ್ಯಾಲ ಅಷ್ಟು ಪಿಂಡಾ ಕಂಡೇವು ಅನ್ನೋ ಒಂದು ಭರವಸೆ ಹುಟ್ಟಿತದ (ಗಂಜೂರು. ೦೦೭). ೬. ಗರ್ಭದಲ್ಲಿರುವ ಭ್ರೂಣ: ಅಂಡಜವೆಂಬ ತತ್ತಿಯೊಡೆದು ಪಿಂ[ಪಾಠಾಂ. ಬಂ]ಡ ಪಲ್ಲಟವಾಗಿ ಗಂಡ ಗಂಡರನಾಳು ತೊಳಲಿ ಬಳಲುತ್ತೈದಾರೆ (ಅಪಕ. ೯-೦೩); ಕ್ಷಯರೋಗದ ರೋಗಾಣುಗಳು ತಾಯಿಯಿಂದ ಪಿಂಡಕ್ಕೆ

(ಶಿಂಡದಿಂದ) ಹೋಗುವುದಿಲ್ಲ (ಕಂಠೀ. ೮ ಐಶ್ವರ್ಯ); ಮನುಷ್ಯನೊಡನೆ ಮನುಷ್ಯ ಶಿಕ್ಷಾದಿ ತೀರ ಒಂದು ಪಿಂಡವನ್ನು ಸೃಷ್ಟಿಸಿದಿಲ್ಲ (ಪಿಂಡ. ೩.೬೮). ೭. ಶಿಶು ; ಹಸುಳೆ ; ಮಗು : ಜಗಕ ಚೋದ್ಯದ ತನುಜೆ ಜನಿಸಲು ಬಗೆದು ನಮ್ಮಯ ಹೆಸರನಿಡುವುದು ಅಗಣಿತದ ಗಂಡೊಂದು ಪಿಂಡವು ಜನಿಸುವುದು ಬಳಿಕ (ಜೈಮಿ. ೧-೨೫); ಅವ ನಿನ್ನ ಕೊಲ್ಲದೆ ವರಣ ಶಿಶುವೆಂದುದಾಸೀನ ಮಾಡ ಮಾಯ ಮಂತ್ರದ ಪಿಂಡವು (ಕಕಕೋ. ೧೧-೨೫). ೮. ದೇಹ ; ಶರೀರ : "ತನುಃ, ತನೂಃ . . . ಪಿಂಡಂ, ಕ್ಷೇತ್ರಂ, ಗಾತ್ರಃ, ಅಪಘನಃ, ಮೂರ್ತಿ:—ಈ ೧೭ ಶರೀರಂ" (ಕಣಾಡು. ೮-೩೩೬) ; ಆ ಗುಂಗುಟ ಛಾಯಲ್ಲಿ ಕತ್ತರಿವಾಣಿ ಕಾಲಿನಲ್ಲಿ ಕಂಡೆಹ ಅಂಡದಲ್ಲಿ ಕಾಳಕೂಟ ಪಿಂಡವೆಲ್ಲವೂ ಅಸಿಯ ಬಳಗ (ಅಕಾಯ. ೪. ೦೩೩.೦೦೮); ಪಿಂಡವೆಂದರೆ ಶರೀರವು (ಕೃಷ್ಣಾ. ೩೯೮ ಅಟಿ). ೯. (ಶರೀರದ) ಒಂದು ಭಾಗ ; ಅಂಗ : Brain (ಮೆದುಳು) ಎಂಬುದು ಶರೀರದ ಒಂದು ಪಿಂಡ (ಜನಾಶ್ಯ. ೦೦೮). ೧೦. ದಪ್ಪ ; ಗಾತ್ರ : ಗೋಡೆಯ ಯೆತ್ತರವು ೩೦ ರಿಂದ ೫೦ ಫೂಟಿನವರೆಗೆ ; ಪಿಂಡವು ಸರಾಸರೀ ಮಾನದಿಂದ ೨೦ ಫೂಟು ಇರುತ್ತದೆಂದು ಹೇಳಬಹುದು (ಕರ್ನಾ. ೩೫). ೧೧. ಗಟ್ಟಿಯಾದುದು. ೧೨. ಒಂದು ಬಗೆಯ ಸುವಾಸನಾ ದ್ರವ್ಯ ; ಸಾಂಬ್ರಾಣಿ. ೧೩. ಕಬ್ಬಿಣ.

ಪಿಂಡ ಒಗೆ=ಶರೀರವನ್ನು ಬಿಡು ; ಸಾಯು : ದೂರದ ಊರಿನಿಂದ ಮಗ ಬರುವ ಹೊತ್ತಿಗೆ ತೀರಾ ಸುಸ್ತಾಗಿದ್ದ ಅವರು ಪಿಂಡ ಒಗೆದು ನಡೆದಿದ್ದರು (ಒಂಡ). [ಸಂ.]

**ಪಿಂಡಂಗೆಯ್** (ಕ್ರಿ). ಮುದ್ದೆ ಮಾಡು; ಉಂಡೆಯಾಗಿ ಮಾಡು : ಆಕಾಶದೊಳ್ಚಂದ್ರನಂ ಮುನ್ನಂ ನಾಲ್ಮೊಗನೊಪ್ಪವಿಟ್ಟ ಬಗೆಯೋ . . ಚೆನ್ನಿಂ ಪೊಂದಿದ ಬೆಣ್ಣೆಯಂ ತೆಗೆದು ಪಿಂಡಂಗೆಯ್ದು ಮೇಲಿಟ್ಟನೋ (ಕಬ್ಬಿಗ. ೨-೩೮). [ ಪಿಂಡ + ಕೆಯ್[1] ]

**ಪಿಂಡಕ** (ನಾ). ಒಂದು ಬಗೆಯ ಸುಗಂಧವಸ್ತು ; ಲೋಬಾನ. [ಸಂ.]

**ಪಿಂಡಖರ್ಜೂರ** (ನಾ). ಒಂದು ಬಗೆಯ ಖರ್ಜೂರ; ಮೆದುವಾಗಿ ಇರುವ, ಉತ್ತಮದರ್ಜೆಯ ಖರ್ಜೂರ : ಪಿಂಡಖರ್ಜೂರದಲ್ಲಿ ಬೇಸರವಟ್ಟು ಹುಣಿಸೆಹಣ್ಣನ್ನು ತಿನ್ನಲು ಬಯಸಿದವನಂತೆ ರಾಣೀವಾಸದ ಉತ್ತಮಾಂಗನೆಯರನ್ನು ತಿರಸ್ಕರಿಸಿ ನೀನು ಮುನಿಪುತ್ರಿಯನ್ನು ಬಯಸುವವನಾದೆ ! (ಶಾಕುಂತ. ೨೯-೦೮). [ ಪಿಂಡ + ಖರ್ಜೂರ ]

**ಪಿಂಡಗಲ್** (ಕ್ರಿ). ಗುಂಪಿನಿಂದ ದೂರವಾಗು ; ಒಂಟಿಯಾಗು : ನೆಗಟೆ ಕಳನ್ನನಂ ಕಳದುದಿಂ ಕಳೆಮಕ್ಕೆ ವನಾಳಿಯಿಂ ವನಾಳಿಗೆ . . . ಪಿಂಡಗಲದೆ ಪಾಟಾತಿರ್ವುದಿರುಂಬಟಾಯುಂ ಶುಕಭೃಂಗಹಂಸಕೇಕಿಗಳ್ (ಶಬ್ದ. ೯-೮೭). [ ಪಿಂಡು[2] + ಅಗಲ್[1] ]

**ಪಿಂಡಗೊಳ್ಳು** (ಕ್ರಿ). ಒಟ್ಟಾಗಿ ಸೇರು ; ಒಂದಾಗು : 'ಶಾವ್ಯಾಕ್ಷಿ'ಯ ಮುನ್ನುಡಿಯಲ್ಲಿ ನಾನು ಹೇಳಿದ ಮಾತು ಇಂದೂ ಹೇಳಬಹುದು ; ಜಾತಿ ಅದೇ. ಆದರೆ ಒಗರು-ಪೊಗರು ಕಣ-ಕಣದಲ್ಲಿ ಪಿಂಡಗೊಂಡಿದೆ (ಕಂಕು. IV. ಹಾಬ್ಬು ಹೂಕು): ನಿರ್ದುಷ್ಟಸತ್ತ್ವವು ನವನೀತದಂತೆ ಪಿಂಡಗೊಂಡ ಮೂರ್ತಿಯಾಗಿ ರಾಜಾಜಿದ 'ತಾನೇ ಈಶ್ವರ' ನೆಂಬ ಅಹಂಭಾವಕ್ಕೆ ಮದ್ದಾಗುವವರೆಗೆ ಮಲೆನಾಡಿನ ಕತೆಯೇನು ? (ಕುಂಶಿಂ. ೬ ಮುನ್ನುಡಿ). [ ಪಿಂಡ + ಕೊಳ್ಳು[1] (< ಕೊಳ್[1]) ]

**ಪಿಂಡಚ್ಚನೆ** (ನಾ). (ಅರ್ಚನಾರೂಪವಾಗಿ ಮಾಡುವ) ಸಮೂಹ ನೃತ್ಯ ; ಮೇಳನರ್ತನ : ಪಂಡಿತವನೇಜಪನಪಮಾರ್ತಂಡದಂಗಾಲಂಬಿಹಾರ ಸುಮನೋಮಾಲಂ ಪೆಂಡಿರ ಕುಚಕೋಕಚಯಂ ಪಿಂಡಚ್ಚನೆಯಾಡುವಂತೆ ನರ್ತಿಸಿತಾಗಳ್ (ಅಜಿತ. ೭೨-೦೮). 'ಗೊಂದಳವೆಕ್ಕಣ' ಪರಾ. [ ಪಿಂಡು[2] + ಅಚ್ಚನೆ[1] (<ಅರ್ಚನೆ) ]

**ಪಿಂಡಚ್ಛೇದ** (ನಾ). ಪಿತೃಗಳಿಗೆ ಪಿಂಡಪ್ರದಾನ ಮಾಡುವುದಕ್ಕೆ ಯಾರೂ ಇಲ್ಲದಂತಾಗುವುದು.-ಪಿಂಡ ಹಾಕುವುದು ನಿಂತುಹೋಗುವಿಕೆ : ಮಗಳನೀವೆನಪ್ಪೊಡೆ ಕೊಡಗೂಸೆಂಬುದು ಪೆಜರೊಡವೆ ಮಗನನೀವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಮಕ್ಕುಮದಱಿಂದೆನ್ನನೆ ಕುಡಲ್ವೇಟ್ಟುಂ (ಪಂಪಭಾ. ೩-೨೫ ವ). [ ಪಿಂಡ + ಛೇದ ]

**ಪಿಂಡಜ** (ನಾ). ಭ್ರೂಣದಿಂದ ಹುಟ್ಟಿ ಬರುವ ಮನುಷ್ಯ, ಪಶು ಮೊದಲಾದುವು : ಆಕಾಶ ಒಂದಂಡಜ ಪೃಥ್ವಿ ಒಂದು ಪಿಂಡಜ ಎರಡರ ಮಧ್ಯದಲ್ಲಿ ಪಕ್ಷಿ ಮೃಗಗಳನಿಕ್ಕಿತ್ತ ಕಂಡೆ (ಅಶಪ. ೦೬೦-೬೬೮); ಅಂಡಜ ಇಪ್ಪತ್ತೊಂದು ಲಕ್ಷ ಪಿಂಡಜ ಇಪ್ಪತ್ತೊಂದು ಲಕ್ಷ . . . ಇಂತು ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳೊಳಗೆ (ಅಜಿತ. ೬-೭). [ಸಂ.]

**ಪಿಂಡಪಾತ** (ನಾ). ೧. ಪಿಂಡವನ್ನು ಕೊಡುವುದು. ೨. "ಭಿಕ್ಷಾಪಾತ್ರದಲ್ಲಿ ದೊರೆತ ಅನ್ನ" (ಕೃಷಾ. ಟಿಪ್ಪ. ೯೩) : ಅವ ಪಿಂಡವನ್ನೊಡವನೆ ಸುಗತ ನಿರುಪಧಿಶೇಷ ನಿರ್ವಾಣವಡೆದಪನೊ. ಅರಿಯಿರ್ಕೆ ಆ ಪಿಂಡಪಾತದ್ವಯಂ ಪಿಂಡಪಾತಾಂತರದಿನೆನಿತೊ ಆಯುಷ್ಯರಂ, ಯಶಸ್ಕರತರಂ . . . ಮಹಾಫಲತರಂ ! (ಕೃಷಾ. ೭೩-೨೫೮). [ಸಂ.]

**ಪಿಂಡಪಾದ**(ನಾ). ದಪ್ಪವಾದ ಕಾಲುಗಳನ್ನುಳ್ಳುದು: ಆನೆ. [ಸಂ.]

**ಪಿಂಡಪ್ರದಾನ** (ನಾ). ಶ್ರಾದ್ಧದಲ್ಲಿ ಪಿತೃಗಳಿಗೆ ಪಿಂಡವನ್ನು ಅರ್ಪಿಸುವುದು : "ನಿವಾಪಃ—೧ ಪಿತೃದಾನಂ—ಪಿತೃ ಪಿತೃತ್ವವನ್ನು ಹೊಂದಿದವರು, ತೃಪ್ತಿಪಡುವುದಕ್ಕೋಸ್ಕರ ಮಾಡಲ್ಪಡುವ ದಾನಂ, ತಿಲೋದಕ ಪಿಂಡಪ್ರದಾನಗಳ ಹೆಸರು" (ಸಿದ್ಧಾಂತ. ೨೨೩); ಮುನ ತಂಮಡಿಯಕ್ಕೆ ಮೋಚಲಮಹಾದೇವಿಯರು ಸ್ವರ್ಗಸ್ಥರಾದವರ ಪಿಂಡಪ್ರದಾನದಲು ನೀರ ದೇವಾಲ್ಯದಲು . . . ಧಾರ ಎರ [ದ] ೧೨ ಡು (ಕ್ರಾಶ. VII.೧೬೬-೮; ೧೩೦೭): ಈ ಸಖನ ಕಳೇವರಮಂ ದಹಿಸಿ ಅಸ್ಥಿಯುಂ ವಾರಣಾಸಿಯಲ್ಲಿ ಬಿಟ್ಟು ಗಯೆಯಲ್ಲಿ ಪಿಂಡಪ್ರದಾನಂ ಮಾಡಿ (ಕಕ್ಕಾ. ೬-೧೫೯ ವ). [ ಪಿಂಡ + ಪ್ರದಾನ ]

**ಪಿಂಡಮರ್ದನ** (ನಾ). ಮುದ್ದೆಯಾಗುವಂತೆ ಬಡಿಯುವುದು.-ಜಜ್ಜುವುದು; ನಜ್ಜುಗುಜ್ಜು ಮಾಡುವುದು : ನಿನ್ನುಮಂ ಸಖಿಗೆಂತ ಕೊಂಡು ಪಿಂಡಮರ್ದನಂ ಮಾಡದೆ ಬಿಡುವೆನೆ. ನೋಡೆಂದು ಪೊಂಗಿಚಿಯ ಕೂರಂಬುಗಳನಾರ್ದೆಚ್ಚಂ (ರಾಮಾಶ್ವ. ೧೫೬-೨೯). [ ಪಿಂಡ + ಮರ್ದನ

**ಪಿಂಡಮೂಲ** (ನಾ). ಕೆಂಪುಮೂಲಂಗಿ ; ಕ್ಯಾರಟ್ಟು : "ಪಿಂಡೀತಕಂ—ಪಿಂಡಮೂಲ" (ಚಿತ್ರ. ೯೭). [ಸಂ.]

**ಪಿಂಡರಂಗ** (ನಾ). ವಜ್ರದ ಹೊರಮೈ ಅಥವಾ ಹೊರಭಾಗದ ಕಾಂತಿ : ಲಾಲಿಸ್ಯೆ ಬಾಹಿರದಿ ಪ್ರಜ್ವಲಿಪ ಪ್ರಭೆಯಿರಲು ಲೀಲೆಯಿಂ ತಿಳಿಯದನಾ ಪಿಂಡರಂಗವದೆಂದು ಬಾಲಾರ್ಕನಿದಿರಿನೊಳು ಪಿಡಿಯೆ ರತ್ನದ ಮಧ್ಯೆ ಛಾಯೆ ತಾ ತೋರುತಿರಲದು ಛಾಯರಂಗವದೆಂದು (ರತ್ನಶಾ. ೧೧-೧೩). [ ಪಿಂಡ + ರಂಗ ]

**ಪಿಂಡರಿಕೆ** (ನಾ). ಮೊಳಕಾಲಿನ ಕೆಳಭಾಗ ; ಮೀನಖಂಡ : ಪ್ರತಿಹುಂಕಾರಕ್ಕೆ—ಪ್ರತಿಕ್ರಂದನದ ಸೆಳೆತಕ್ಕೆ ನಡುಗುವ ಕಾಲ ಪಿಂಡರಿಕೆಗಳು ಮೊದಲು ಅಧೀರವಾಗಿ ಬರುತ್ತ ನಿರ್ಧಾರವಾಗಿ ನಡೆಯುತ್ತಿದ್ದವು (ಚಿಕ್ಕ. ೩೯೩); ಪಿಂಡರಿಕೆಗಳಿಗೆ ಬಿದ್ದ ಬಾರಕೋಲ ಹೊಡೆತ ಕಾಲುಗಳನ್ನು ತ್ವರಿತವಾಗಿ ಓಡಿಸುತ್ತಿದ್ದವು (ಶಾಂ. ೩೯). [ ←ಹಿಂ. ಪಿಂಡರೀ, ಪಿಂಡಲೀ ; ಮರಾ. ಪಿಂಡರೀ, ಪಿಂಧ್ರೀ]

**ಪಿಂಡಲು**, ಪಿಂಡಿಲು, ಹಿಂಡಲು, ಹಿಂಡಿಲು (ನಾ). ೧. ಮೊತ್ತ; ರಾಶಿ : ತೊರೆದಾಗುವ ತೊರೆವೊಲೆಗಳಿಂದು ಕಟು ಪಿಂಗೆ ಹಾಲಧಾರೆಗಳೊಟ್ಟು ಸೊರೆಯ ಪಿಂಡಲು ಪೊಂಗೆ (ಅಜಿತ. ೯-೭೭ ಹಾಳ).

**ಪಿಂಡಿಲು**: ೨. ಪೊದರು; ಮೆಳೆ: ಸಿಡಿಲಿನ ಕುಡಿನಾಲಿಗೆಯೊಲು ಪಿಡಿರುವ

ಬಿಡುಗ ಬರಲು ಕೈಕೊಂಡು . . . ಪೊರೆದನಾ ಶಂಭುಕನಡಗಿರ್ದ ಬಿದಿರ ಪಿಂಡಿಲನು (ಶಂಕರ. ೦೩-೩೩). ಹಿಂಡಲು : ೨. ಬಿದಿರಿನ ಹಿಂಡಲಿನಲ್ಲಿ ಅಡಗಿಕೊಳಿತರೆ, ಯಾರಿಗೆ ತಿಳಿದೀತು ? ಹಿಂಡಲಲ್ಲಿ ಹುಲಿಯ ಹೆದರಿಕೆಗೆ ಗಂಟೆ ಸಹ ಬರಲಾರದು (ಕೃಕೃಹೊ. ೩೦) ; ಕೊಳದ ಮಾಮಿಗೆ ಕೇದಗೆಯ ಹಿಂಡಲು ಇಲ್ಲವೇನಮ್ಮ. ಆ ದಾರಿಯಲ್ಲಿ ನಡೆಯುತ್ತಾ ನೋಡಿ ಎಂದಳು (ಕದ್ರಕ. ೧೩); ಗಡಿಬೇಲಿಯ ಮುಂದುಗಡೆ ಹಿಂಡಲಿನಲ್ಲಿ ಕಣ್ಮರೆಯಾಗಿದ್ದ ಕಾಲುದಾರಿಯ ಸಮೋಪ ಮಣ್ಣಿನ ಬೂದುಬಣ್ಣದ ರೇಖೆ (ಮಲೆಮ. ೪೩). ಹಿಂಡಿಲು : ೧. ತನ್ನ ಮದುವೆಯ ಕಂಜಿಗೆ ಹಿಂಡಿಲನ್ನು ಕಡಿದು ನನ್ನ ಮೇಲೆ ತಳ್ಳುತ್ತಿದ್ದಾನಲ್ಲಾ ಎಂಬ ಸಿಡುಕೂ ಅವರ ಸಿಟ್ಟಿನ ನುಡಿಗಳಿಗೆ ಕಾರಣವಾಗಿತ್ತು (ಮಲೆಮ. ೩೯೩). ೨. ಬಿದಿರ ಹಿಂಡಿಲ ಮುಳ್ಳು ಗುಜುಬು ನಿಟ್ಟಿಣದೊಳಗ್ಗದ ಕಾಲಗತ್ತಲೆಯೊಳಂ ಪೋಗಬೇಕಲಾ . . . ವಾಟಿಗಳು (ಶೀಕೃಪು. ೪-೦೬-೦೬) ; ಬಿದಿರ ಹಿಂಡಿಲುಗಳಾವರಿಸಿ ಬೆಳೆದಿಹ ಬಿಂಡಿಲುಗಳೊತ್ತೊತ್ತಿಲುಬುಬಿರ ಹುಂಡ ತಂಡದ ಬಳ್ಳಿ ಗಿಡು ಮೆಳೆ ಮೆಟ್ಟಿದುದೊಗ್ಗಿನಲಿ (ಕೃಹ್ಯಾಕ. ೪-೦೦); ಬಿತ್ತದ ಹಿಂಡಿಲು, ವಾಟೆಯ ಹಿಂಡಿಲು, ಬಿದಿರ ಹಿಂಡಿಲು, ಗುರಿಗಿ ಹಳು ಎಲ್ಲ ಕಿಕ್ಕಿರಿದು-ಬೆಳೆದಿದ್ದು, ಯಾವಾಗಲೂ ಸರಲು ನೀರು ಹರಿಯುತ್ತಿದ್ದ ತಾಣ (ಮಲೆಮ. ೩೮). [ ಪಿಂಡು$_2$ + -ಅಲು (<-ಅಲ್$_2$) ]

**ಪಿಂಡಸ್ಥ** (ನಾ). [ಜೈನ] ಧ್ಯಾನದ ಪದಸ್ಥ, ಪಿಂಡಸ್ಥ, ರೂಪಸ್ಥ ಮತ್ತು ರೂಪಾತೀತಗಳೆಂಬ ನಾಲ್ಕುವಿಧಗಳಲ್ಲಿ ಒಂದು ; ಆತ್ಮ ಚಿಂತನೆಯಿಂದ ಸಂಸಾರಬಂಧನವನ್ನು ನಷ್ಟಗೊಳಿಸುವುದು : ಪದಸ್ಥಂ ಪಿಂಡಸ್ಥಂ ರೂಪಸ್ಥಂ ರೂಪಾತೀತಂ ಎಂದು ಧ್ಯಾನಂ ಚತುರ್ವಿಧ ಮಕ್ಕುಂ (ಚಾರಿ. ೩೭೩). [ ಸಂ. ]

**ಪಿಂಡಳಿಗೆ** (ನಾ). ಒಂದು ಬಗೆಯ ತೆರಿಗೆ.—ಸಂಂಕ : ಪ್ರತಿವರುಷವು ಪಿಂಡಳಿಗೆಯಾಗಿ ತಿಬುವ ಗ ೧೮ (ಶೊಂಕಶಾ. ೦೯೩೩. ಶಾಶಂ. ೪೨—೮; 1101). [ ? ]

**ಪಿಂಡಟ್** (ಕ್ರಿ). ಗುಂಪು ಚೆದರಿ ಹೋಗು.—ಚೆಲ್ಲಾಪಿಲ್ಲಿಯಾಗು ; ಹಿಂಡೊಡೆ : ದಿವಿಜಕುಜಂಗಳಾರವೆಗಳಾದುವು ಸಿದ್ಧರಸಂ ತಟಾಕಮಾದುವು ಸುರಧೇನು ಪಿಂಡಟಿಯುದೊಂದೆಡೆಯೊಳ್ ನೆರೆದಿರ್ದುವು (ಶಂಶಾಪು.೩-೧೧೯). [ ಪಿಂಡು$_2$ + ಅಟು$_1$ ]

**ಪಿಂಡಾಂಡ** (ನಾ). ದೇಹ: ಶರೀರ : ಪಿಂಡಾಂಡಮೆಸೆದುದು ಸ್ಥೂಲಕಾರಣ ಸೂಕ್ಷ್ಮ ತನುವಿನಲಿ (ಶಂಶಾ. ೯೭): ನಿಃಕಲ ಪರಶಿವನಿಗೆ ಮುನ್ನಿನಂತೆ ಜಗತ್ ಸೃಷ್ಟಿ ಮಾಡುವ ಲೀಲೆದೋರಲು ಆ ವೃಷಭೇಂದ್ರನಿಗೆ ನಿನ್ನ ಸದ್ಧರ್ಮ ದಿಂದ ಪಿಂಡಾಂಡಗಳ ನಿರ್ಮಿಸು ಎಂದು ಪೇಳಲು (ಕೃರಮೊ. 1. ೬೨): ಎಂದು ಅಷ್ಟತನುಗಳು ನಿರ್ಮಿತವಾಗಿ ಪಿಂಡಾಂಡವಾದುವು ಅಂದು ಇಂದು ಪರಿಯಂತರ ಬಂದೆನಯ್ಯ ಬಹುಜನ್ಮಂಗಳಲ್ಲಿ (ಅಬಂಶೀ. ೬-೩). [ಪಿಂಡ + ಅಂಡ$_2$]

**ಪಿಂಡಾಕ್ಷರ** (ನಾ). ಸಂಯುಕ್ತ ವ್ಯಂಜನಾಕ್ಷರ : ಊಳಿದ ಪಿಂಡಾಕ್ಷರಂಗಳು ಆಕರ್ಷಣಕವರ್ಗದೊಳಂ ಅಹುದು ಐಂಕಾರದಿಂದಂ ಸಾರಸ್ವತಸಿದ್ಧಿಯಕ್ಕುಂ (ತ್ರಿಶಿಷ್ಟ. ೦೦-೧೩). [ ಪಿಂಡ + ಅಕ್ಷರ ]

**ಪಿಂಡಾದಾನ** (ನಾ). ಆಹಾರವಸ್ತು, ಪಡಿ ಅಥವಾ ಕೂಲಿಯನ್ನು ಕೊಡುವುದು : ೫೦ ಗದ್ಯಾಣ ಪೊನಂ ಪಿಂಡಾದಾನದಿಂದಂ ಧರ್ಮ್ಮವತ್ತ ಳೆಯಿಂ ಶಿಬಿರವಂತಾಗಿ ಧಾರಾಪೂರ್ವಕಂ ಮಾಡಿ . . . ಕೊಟ್ಟರ್ (ಎಶಿ. XI-ii, ೦೫೪-೬೩: 1104); ಸರ್ವ್ವಬಾಧಾಪರಿಹಾರವಾಗಿ ಪಿಂಡಾದಾನವಾಗಿ ಕೊಟ್ಟರು (ಮೃಅಂ. ೦೯೩೭, ೪೦-೨೫ ; 1226): ನಿಯತಿ ಪಿಂಡಾದಾನ [ಕ್ರ]ಮದಿಂ ಸ್ಥಳಪ್ರತ್ತಿ ಕ್ಷೇತ್ರನಿಳಯಂಗಳಂ . . . ಸರ್ವ್ವಬಾಧೆ ಪರಿ ಹಾರವೆನಿಸಿ . . . [ವಿಳ]ಸಜ್ಜಳಧಾರಾಪೂರ್ವ್ವಕಂ ಪುನರ್ದ್ದತ್ತಿ ಮಾಡಿ (ಶಾಶಾ. XX. ೨೦೫-೩೪; 1247): ಕಟ್ಟುಗುತ್ತಗೆ ಪಿಂಡಾದಾನಮು ಚಟ್ಟಣಕ್ಕೆ ಒಡಂಬಟ್ಟು ಕೊಟ್ಟರು (ಎಶಿ. XIV, ಮಳ. ೦೯೨-೨೨ ; ಸು. 1281). [ಪಿಂಡ+ಆದಾನ]

**ಪಿಂಡಾನೆ**, ಹಿಂಡಾನೆ (ನಾ). ಹಿಂಡಿಗೆ ಸೇರಿದ ಆನೆ : ಕಾಡಿಯಲ್ಲಿದ್ ಬಂದು ಪಿಂಡಾನೆಗಳೊಂದುಗೂಡಿ ಶಿಕ್ಷೋಪಹಾರಣಂದೆರಸು . . . ವಿಪಿ ಗಜಂಗಳಂ ಪಣ್ಣಿ ಕೈಗೈದು ಪೂರ್ವಾಸುವಮನವಷ್ಟಂಭಿಸಿ ಸಂಭ್ರಮೋ ವಿಗೆ ನೆರಪಿದಾಗಳ್ (ಹಾಶಿ. ೬-೦೧ ಶ). ಹಿಂಡಾನೆ : ಗಜಘಟಾವೃತಿ ಮಾನದಲಿ ಕೋದಂಬುಗಳು ಹಿಂಡಾನೆಗಳನೇಳಂಟನೊದೆದೊಡಿದವು (ಕುಶ್ಯಾಕ. ೩-೦೫). [ಪಿಂಡು$_1$+ಆನೆ$_1$]

**ಪಿಂಡಾಯು** (ನಾ). [ಜ್ಯೋತಿ] ಸೂರ್ಯಾದಿ ಗ್ರಹಗಳ ಬಲಾಬಲಗಳ ಮೇರೆಗೆ ನಿರ್ಣಯಿಸಿ ಲೆಕ್ಕ ಹಾಕುವ ಆಯುಸ್ಸಿನ ಪ್ರಮಾಣ.—ಪರಿಮಿತಿ : ಇವೆ ನೀಚದೊಳರ್ಧಮನಪಹರಿಸುಗುಮೂ ನೀಚರಾಶಿಯಿಂದಂ ಪೂರ್ವಾಪರದೊಳನುಪಾತದಿಂ ಪರಿಹರಿಸುಗುಮುಳಿ ಗ್ರಹಾ[ಯು] ಪಿಂಡಾಯುವಿನೊಳ್ (ಜಾತಿ. ೯-೦೨). [ಪಿಂಡ+ಆಯು$_2$]

**ಪಿಂಡಾಯುಷ್ಯ** (ನಾ). = ಪಿಂಡಾಯು : ಧರಣೀಶಂ ಪದಿನೈದು ಘಮಳ ರುಚಿ ಪತ್ತೊಂಬತ್ತು ಶಾಶಾಂಕಿ ಪನ್ನೆರಡಿಪ್ಪತ್ತು ದಿನಾಧಿನಾಥಸುತಂ . . . ದೈತ್ಯಗುರುವಿಪ್ಪತ್ತೊಂದುಸಂವತ್ಸರಂ ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ ಧ್ರುವಂ(ಜಾತಿ. ೯-೦೦). [ಪಿಂಡ + ಆಯುಷ್ಯ]

**ಪಿಂಡಾರಿ**, ಪೆಂಡಾರಿ (ನಾ). ಹಾದಿ ತಪ್ಪೆಯುವಂಥ ಕಳ್ಳರ ಗುಂಪು.—ಪುಡುಗರ ಸಮೂಹ : ಇಂಡಿಯಾದೇಶದ ಅಭಿವೃದ್ಧಿಯನ್ನು ಸಾಧಿಸಲು ಪಿಂಡಾರಿಗಳನ್ನು ಬಿಡಬೇಕೆಂದು ನಿನ್ನ ಹಂಬಲೆಯೇನು? (ರಾರಾಕ. ೦೨೯). ಪೆಂಡಾರಿ : ಪೆಂಡಾರಿಯರು ಬರುವಾಗ ಹೆಂಡಿರ ಗೊಡವೆಯೇನು ? (ಗಾದೆ). [←ಹಿಂ. ಪಿಂಡಾರಾ, ಪಿಂಡಾರೀ; ಮರಾ. ಪೆಂಢಾರಾ, ಪೆಂಢಾರೀ./ ತಮಿ. ಪಿಣ್ಡಾರಿ, ಪೆಣ್ಡಾರಿ; ತೆಲು. ಪಿಂಡಾರಿ]

**ಪಿಂಡಾಲು** (ನಾ). ಒಂದು ಸಸ್ಯ ಬಗೆಯ ಮತ್ತು ಅದರ ಗೆಡ್ಡೆ : "ಕಂದಗ್ರಂಥಿ—ಪಿಂಡಾಲು" (ಬಸಂ. ೨೫); "ರೋಮಾಲುಃ—ಪಿಂಡಾಲು" (ಬಸಂ. ೦೯೦). [ಸಂ.]

**ಪಿಂಡಿ$_1$**, ಹಿಂಡಿ$_1$ (ನಾ). ೧. ಎಣ್ಣೆಯ ಕಾಳುಗಳಿಂದ ರಸ ತೆಗೆದ ಮೇಲೆ ಉಳಿಯುವ ಶೇಷ : ಬೂದಿಮಾದ ಪುಳ್ಳಿಯಂತೆ ಪಿಂಡಿಯಾದ ಎಳ್ಳಿನಂತೆ ಬಸಿಬಂ ಪೊಕ್ಕ ಕೂಟನಂತೆ (ಚಮಾಚು. ೯-೩೬): ಪಿಂಡಿಯಿಂದೆಮ್ಮೆಯ ಪಾಲ್ ಪೆರ್ಚುವಂತೆ ಮೊಲೆವಾಲಿಂ ಮಕ್ಕಳ್ ಪೆರ್ಚುವಂತೆ (ಚಮಾಚು. ೦೯-೦೦೯). ಹಿಂಡಿ$_1$ : ೧. "ತೈಲಕಂ ಪಿಂಡಿ" (ಮಂಗಶಾ.೦೨೦-೩); ಹಿಂಡಿಯಂ ಮಂಬಿ ಎಣ್ಣೆಯನುಗುವ ತಳ್ಳಿಗನುಮಂ (ಚಮಾಚು. ೬-೫೦), ಚಂಡಿತನವೆಂಬ ಹಿಂಡಿ ಇಡಬೇಕು ದಿಂಡತನವೆಂಬ ಪೆಂಡೆ ಮೇವು . . . ಪಾಂಡುರಂಗ ಗಂಡಿ ಒಳಗೆ ಹಿಂಡಿಕೋಬೇಕು (ಪುರಂದ. ೨-೩೫-೨); ಮಿಂಡೆಯ ಗಂಡ ಹಾದಂಡಿಗೆ ಹೋಗಿಹರೆ ಹಿಂಡಿಯು ಹೆಡಿಗೆಗೆ ಕೋಣನ ತಂದು ಕಣಗುಂಡಿ ಹೊಡೆದಂತೆ (ಸರ್ವ. ೦೯೬೩): ಹಿಂಡಿಯನ್ನೂ ಅಡಿನ ಹಾಲನ್ನೂ ಅಂಕೋಲೆ ಬೀಜಗಳೊಡನೆ ಅರೆದು (ಶಾಗಂಂ. ೪೩೮-೮); ಸಂತೆಗೆ ಹೋದಮ ಭೀಮಣ್ಣ ಹಿಂಡಿಯ ಕೊಂಡನು ಹತ್ತು ಮಣ (೪ಕಪ. ೩-೭೬). ೨. ನಂಚಿಕೊಳ್ಳಲು ಮಾಡುವ ಒಂದು ಬಗೆಯ ಖಾರವಾದ ವ್ಯಂಜನಪದಾರ್ಥ: "ಚಟ್ನಿ, ಖಾರ" (ಜಾಕೋ. ೫೭), ಒಳ್ಳೆತನಸಿದ ತೈಲ ಕುಂಭಕೋಟೆಗಳ ತಂದರು ಹಿಂಡಿ ಕಟಡಿಗಾಗಿ (ಸಿದ್ಧಚ. ೮-೫೦); ಹುಗ್ಗಿ ಕಚ್ಚಡಿಯುಚ್ಚಿಯಪ್ಪ ಸೇವಗೆ ಹಿಂಡಿ ಗುಗ್ಗರಿ . . . ದೋಸೆಯ ಸಟ್ಟುಗ್ಗೆಯಹುಳಿಯೊಪ್ಪುತಲ್ಲಿ (ಅಶಿ. ೨೦-೧೨೯): ಆ ಹುಡುಗಿ ಒಳಗಿನಿಂದ ರೊಟ್ಟಿ, ಬೇಳೆ, ಹಿಂಡಿ, ಎರಡು ಉಳ್ಳಾಗಡ್ಡಿ ತೆಗೆದುಕೊಂಡು ಬಂದಿತು (ಚಂದಿಕು. ೨೦). ೩. ಒಂದು ಬಗೆಯ ಸಿಹಿಯಾದ ಖಾದ್ಯ : ಕಳಕಳಿಸೆ ಮೊಲೆವಾಲವರ್ಧಿಸಿ ಅಪೂಪಮಾ

ಬಾಲಕನ ಕೈಯಲಿ ಮೆಲುವ ಹಿಂಡಿಯ ಕರಣೆಯಂ ಕೊಟ್ಟಂತು ತಾಯ್ಸನ್ನ ಮೊಲೆಯನುಣಿ ಮಜಿಬಿಟ್ಟು ಮಲ್ಲನೆ ತೊಲಗುವಂದದಿ (ಅಶ್ವ. ೨೯-೩೯).

ಹಿಂಡಿಯ ಕಚ್ಚರಿ = ಒಂದು ಬಗೆಯ ಸಿಹಿಯಾದ ಖಾದ್ಯ: ಅದಕ್ಕೆ ಬಾಗಿದ ಕೂಳು ಸೇವಗೆಯ ಪಾಯಸ ಪುಡಿಕೈಡಲೆಯ ಹುಗ್ಗಿ ಹಿಂಡಿಯ ಕಚ್ಚರಿ ಅಲಸಂದೆಯ ಗುಗ್ಗರಿ ಜೇನುತುಪ್ಪ . . . ಮಂತ್ರ ಸಮನ್ವಿತವಾಗಿ . . . ನಿವಾಳಿಸಿ (ಬಾಂಚ. ೦೨೯-೨); ಸೂಸಲುಂಡಿಗೆ ಹಿಂಡಿಯ ಕಚ್ಚರಿ ಜೇನತುಪ್ಪ ಬೆಲ್ಲ ಕಬ್ಬಿನ ಹಾಲು . . . ಇವಂ ಮಂತ್ರ ಸಮನ್ವಿತವಾಗಿ ಶಿಶುವಿಗೆ . . . ನಿವಾಳಿಸಿ (ಬಾಂಚ. ೦೩೦-೨೦).

[< ಪಿಂಡು₁. / ತಮಿ. ಮಲ. ಪಿಣ್ಣ; ತುಳು. ಪಿಂಡಿ, ಪುಂಡಿ, ಹಿಂಡಿ; ತೆಲು. ಪಿಂಡಿ]

**ಪಿಂಡಿ₂** 'ಪುಂಡಿ' ನೋ.

**ಪಿಂಡಿ₃** (ನಾ). ೧. ಮುದ್ದೆ; ಉಂಡೆ: ಮಂ(ಮುಂ)ಡುಗೆಯ ದಳಮಂ ತಂದರೆದು ತೊಳೆದು ಮಣ್ಣಿನ ಬಾಯೊಳ್ ನಿಲೆ ಪಿಂಡಿಯ ನಿಕ್ಕಲೊಡಂ ತೊಲಗೆ ವಿಷಂ ಸುಖದಿನಿರ್ವನಾ ದಷ್ಟನವಂ (ಖಚುಕ. ೧೬-೧೧೦). ೨. ಗುಂಪು; ಸಮೂಹ: ಗುತ್ತಿ ನೋಡುತ್ತಾನೆ, ಇಂಬಳಗಳ ಪಿಂಡಿ! (ಮರಳು. ೧೮). ೩. ಕಟ್ಟು; ಹೊರೆ: ಹುಲ್ಲ ಹೊರೆಯ ಮಾರುವ ಭಂಡಿಗಳಲಿ ಕಲ್ಲು ತರುವ ಸಾದೆಯ ಪಿಂಡಿಯ ಪುರದಲ್ಲಿಯೇ ತಿರುಗಿಪ (ಕನ್ನ.ಸ. IV. ೦೪-೫); ಅವನ ವಿಶಾಸೆಯ ಕೂದಲು . . . ಹುಲ್ಲಿನ ಪಿಂಡಿ ಇಟ್ಟಾಗ ನೇತಾಡುವ ಹುಲ್ಲಿನಂತೆ ಇದ್ದವು (ಋಷ್ಯಶೃ. ೧೪); ಕಮಲಪ್ಪನವರ ಯಜಮಾನರು ವೀಳೆಯದೆಲೆ ಸಾಹುಕಾರರು. ಪಿಂಡಿಗಳಲ್ಲಿ ಸೊಗಸಾಗಿರುವುದನ್ನು ಆರಿಸಿ ತಂದು ಹೆಂಡತಿಗೆ ಕೊಡುತ್ತಾರೆ (ಹಾಯಿ. ೩೦). [ಸಂ.]

**ಪಿಂಡಿಕ** (ನಾ). ಊತ; ಬಾವು: "ಕರ್ಪುವಲೆಯೆಂದೆನಲು ಕಾಮಾಲೆ ಪಿಂಡಿ [ಪಾಠಾಂ. ಪಾಂಡು]ಕಂ" (ಮಂಗರಾ. ೦೦೪-೪). [ಸಂ. ಪಿಂಡಿಕಾ]

**ಪಿಂಡಿಕಾಯಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ: ಪಿಂಡಿಕಾಯಿ. ರಾಮಗೋಟು (ಮೃಶಿಗ. ೫೩-೦೦೦೪).

[ಪಿಂಡಿ₂ (< ಪುಂಡಿ) + ಕಾಯಿ₄ (< ಕಾಯ್₄)]

**ಪಿಂಡಿಕೆ** (ನಾ). ೧. ಊತ: ಬಾವು. ೨. ಕಾಲಿನ ಮೀನಖಂಡ; ಕಣಕಾಲು: ಪ್ರೋದ್ವೃದ್ಧಪಿಂಡಿಕಾಃ . . . ಗಂಟುಕಟ್ಟಿದ ಮಣಕಾಲುಳ್ಳವರು (ವೃಶ್ವಸಾ. I. ೧೪). ೩. ಚಕ್ರದ ನಾಭಿ; ಗುಂಬ: "ನಾಭಿ ಪಿಂಡಿಕೆಯೆನಲು ಕೂಬುದುಂಬಕ್ಕು [ಪಾಠಾಂ. ಪಿಂಡಕ್ಕೆಯ್ನಲು ಕೂಪಲುಂಬಕ್ಕು]" (ಮಂಗರಾ. ೮೪-೨೪). ೪. ಪೀಠ; ಆಸನ. ೫. (ದೇವರ ಪ್ರತಿಮೆ, ಲಿಂಗ ಮೊದಲಾದುವುಗಳ) ಆಧಾರಪೀಠ; ಗದ್ದುಗೆ: ಇಷ್ಟಲಿಂಗವು ಅರ್ಥಾತ್ ಒಂದು ಭೌತಿಕ ಲಿಂಗವು. ಅದರ ಪೀಠ, ಪಿಂಡಿಕೆ ಹಾಗು ಗೋಮುಖಿಗಳು ಬಿಂದು-ನಾದ-ಕಲೆಗಳ ಪ್ರತಿನಿಧಿಗಳು (ಶರಶ. ೧೯೪); ತಿಬೇಟದಲ್ಲಿ ಹಿಮಾಲಯದಂಥ ಶೈಲಶ್ರೇಣಿಯೊಂದು ಹಬ್ಬಿದೆ . . . ಇದರ ಆಕಾರವು ಮಹಾದೇವರ ಪಿಂಡಿಕೆಯಂತಿದೆ (ಕೈಲಾಸ. ೩೨); ನಕ್ಷತ್ರಪ್ರಕಾರದ ತಲವಿನ್ಯಾಸದ ಮೇಲೆ ಚತುರಸ್ರಾಕಾರವಾಗಿ ಗರ್ಭಗುಡಿ ಇರುತ್ತದೆ. ಇದರ ಮಧ್ಯದಲ್ಲಿ ಪಿಂಡಿಕೆಯನ್ನಿಟ್ಟು . . . ಮೂಲಬೇರವನ್ನು ಸ್ಥಾಪಿಸಿರುವರು (ಹೊಯ್ಸಳಶಿ. ೧೯). [ಸಂ. ಪಿಂಡಿಕಾ]

**ಪಿಂಡಿಗೆ**, ಹಿಂಡಿಕೆ, ಹಿಂಡಿಗೆ (ನಾ). ೧. (ದೇವರ ಪ್ರತಿಮೆ, ಲಿಂಗ ಮೊದಲಾದುವುಗಳ) ಆಧಾರಪೀಠ; ಗದ್ದುಗೆ: ಜಲವೆ ಪದಶಿಲೆ ಪೃಥ್ವಿಯೆ ಪಿಂಡಿಗೆ ಆಕಾಶವೆ ಲಿಂಗ (ಅವಶಂ. ೧೫೫-೭೦೧); ದೇವ ಸಜ್ಜೆಯನು ಉಪ್ಪರಿಸಿಮೆಸೆ . . . ಬಸವ ಭಾವಂ ಬಲಿದು ಮುನ್ನವೇ ಸಜ್ಜೆಯೊಳು ಎಸೆವ ಲಿಂಗಂಗಳಾಗುತ್ತಮಿರೆ ಸಜ್ಜೆಯೊಳು ತೊಟ್ಟು ಪಿಂಡಿಗೆ [ಪಾಠಾಂ. ಪಿಡಿಕೆ] ಯಾಗೆ ಫಲಮೆ ಲಿಂಗಮದಾಗೆ (ಬಸವ. ೯-೫೭); ಕಕಾರಕ್ಕೆ ಗಣಾರಂ . . . ಪಿಂಡಿಕಾ-ಪಿಂಡಿಗೆ (ಚುರ. ೨೫೫ ವೃಹೋ). ೨. ಗುಂಪು; ರಾಶಿ; ಸಮೂಹ: "ಪಿಂಡಿಗೆ_ಪಿಂಡಿಕಾ=ಉರುಳೆ, ಗುಂಪು" (ಕರ್ಣಕೋ. . ೨೬); ಮೇರುವಿನೊಳಚ್ಚೊತ್ತಿದ ಹೊಸ ಪೊನ್ನ ಪಿಂಡಿಗೆಯೊಡನೆ . . . ನವರತ್ನವೃಷ್ಟಿಯಂ ಶಿವಂ ಕಣಿದನೆಂಬಂತೆ (ಜಾಜ. ೩೨-೨೦). ೩. ಕಟ್ಟು; ಪೆಂಡಿ: ಪಸಿಯರಿಸಿನದ ಹಿಡಿಯೆಲೆಯ ಪಿಂಡಿಗೆಯಿಂ ಕರ್ಪೂರಳದ ಕಟ್ಟುಗಳಿಂ ಸುಬ್ಬುಗೊಂಡ ಕರ್ಬಿನ ತಟ್ಟೆಗಳಿಂ . . . ತಿರುಳೆಲೆಯ ತೆರೆಸುತ್ತಿನೊಳಮೆಸೆವ ಪಸುರ್ವಂದರೊಳಗೆ (ರಾಜಶ. ೦೦-೫೫). ಹಿಂಡಿಕೆ: ೩. ತಲೆಯ ಮೇಲೆ ಹಂಡೆ, ಹೆಗಲ ಮೇಲೆ ಒಗೆದ ಬಟ್ಟೆಯ ಹಿಂಡಿಕೆ (ಸ್ವ.೩೫. ೪೨). ಹಿಂಡಿಗೆ: ೨. ಮಱುಗೊಂಡ ಕುತ್ತಮಡಿಗಳ ಪದುಳವಿರ್ಪ ತೋಟಿಯ ತೋಳ್ವಲನ ನರದ ಹಿಂಡಿಗೆಯ ಬಳ್ಪಿಂ ತೊಂದು ಬಳ್ಪಿಂ ಮೈವೆರ್ಚಿ . . . ಪೋಪೋಪ ಕುದುರೆಗೆ (ಹರಿಹರ.೦೩೪-೨೮)

ಹಿಂಡಿಗೆ ಬಿಗಿ = ಒಟ್ಟಾಗಿ ಸೇರಿಸಂ; ಒಂದಂಗೊಳಿಸು: ಹೊಂದಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರದೊಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಪಂಪಾ. ೫೫).

[< ಸಂ. ಪಿಂಡಿಕಾ]

**ಪಿಂಡಿತ** (ಗು). ೧. ಮುದ್ದೆಯಾಗಿ ಮಾಡಿದ; ಉಂಡೆಯಾಗಿ ಮಾಡಿದ. ೨. ಗುಂಪುಗೂಡಿದ; ಒಟ್ಟಾಗಿ ಸೇರಿದ. [ಸಂ.]

**ಪಿಂಡಿತಕ** (ನಾ). ಒಂದು ಬಗೆಯ ಸಸ್ಯ: ಪಿಂಡೀತಕ: ಪಿಂಡಿತಕ ಮಂಗಾರವಲ್ಲರಿ ಪುಂಡ್ರ ಬಿಲ್ವಾದ ವೀರನಾಳಿಯ ಖಂಡದರಾಶ್ವಕುಷ್ಠಬರ್ಜಾದ ವೃಕ್ಷ ಗಂಧಚಯ . . . ಎಸೆದುಮಾ ವನದಿ ? (ಕೋಗಿಮು. ೪-೪೦)

[< ಸಂ. ಪಿಂಡೀತಕ]

**ಪಿಂಡಿಲು** 'ಪಿಂಡಲು' ನೋ.

**ಪಿಂಡಿವಳ** 'ಬಿಂಡಿವಾಳ' ನೋ.

**ಪಿಂಡಿವಾಳ** 'ಬಿಂಡಿವಾಳ' ನೋ.

**ಪಿಂಡಿಶೂರ** (ನಾ). ಮನೆಯಲ್ಲಿ ಮಾತ್ರ ಶೌರ್ಯ ತೋರುವವನು; ಜಂಭ ಕೊಚ್ಚುವುದರಲ್ಲಿ ಶೂರನಾದವನು: "ಚೀಟಿ ಗೃಹದೊಳು ಗರ್ಜಿಪಂ ಪಿಂಡಿಶೂರನಕ್ಕು" (ಮಂಗರಾ. ೩೦-೦೫). [< ಸಂ. ಪಿಂಡೀಶೂರ]

**ಪಿಂಡಿಸು** (ಕ್ರಿ). ಕುಗ್ಗಿಸು; ದುರ್ಬಲಗೊಳಿಸು: ಜರೆ ನಿಜಶಕ್ತಿಯಿಂ ಪಿಟಾದು ಪಿಂಡಿಸದನ್ನೆಗಂ . . . ನೆನೆವುದಿಂದ್ರನರೇಂದ್ರಫಣೀಂದ್ರವಂದ್ಯನಂ (ಸಮುಶ. ೦-೧೦೫). [ಪಿಂಡು₁ + -ಇಸು₁]

**ಪಿಂಡಿಸೊಪ್ಪು**, ಪಿಂಡೀಸೊಪ್ಪು, ಹಿಂಡಿಸೊಪ್ಪು (ನಾ). ಒಂದು ಬಗೆಯ ಸೊಪ್ಪು: (೬). **ಪಿಂಡೀಸೊಪ್ಪು**: ಮಣೆತುತ್ತೀಗಿಡ, ಪಿಂಡೀಸೊಪ್ಪು (ಮೃಶಿಗ. ೯೬-೬೨). **ಹಿಂಡಿಸೊಪ್ಪು**: ನೆಗ್ಗಿಲ ಬೇರು, ಹಿಂಡಿಸೊಪ್ಪಿನ ಬೇರು ಸಹ ೧ ಪಡಿ ನೀರಲ್ಲಿ ಹಾಕಿ . . . ಶರ್ಕರೆಯನ್ನೂ ತೆಗೆದುಕೊಳ್ಳಲು ಮೂತ್ರಕಟ್ಟು ಬಿಡುವುದು (ಕಳವೈ. ೩೬೪).

[ಪಿಂಡಿ₂ (< ಪುಂಡಿ) + ಸೊಪ್ಪು₁₂]

**ಪಿಂಡೀತಕ** (ನಾ). ಒಂದು ಬಗೆಯ ಸಸ್ಯ: "ಬೋನಗಾರೇ-ಪಿಂಡೀತಕ. ಮರುಪಕ, ಶ್ವಸನ, ಕರಹಾಟಕ, ಶಲ್ಯ, ಮದನ" (ಪಾಂಡಿ. ೬); "ಪಿಂಡೀತಕಃ, ಮರುವಕಃ . . . ಮದನಃ_ಈ ೭ ಮಂಗಾರಗಿಡದ, ಬೋನಗಾರೆಯಿಂದ ಹೆಸರುಗಳು" (ಸಿದ್ಧಾಂತಿ. ೦೨೪). [ಸಂ.]

**ಪಿಂಡೀಶೂರ** (ನಾ). ೧. ಮನೆಯಲ್ಲಿ ಮಾತ್ರ, ಶೌರ್ಯ ತೋರುವವನು,-ಜಂಬ ಕೊಚ್ಚುವುದರಲ್ಲಿ ಶೂರನಾದವನು: "ಗೇಹೇನರ್ದೀ, ಗೃಹೇಶೂರಃ, ಪಿಂಡೀಶೂರಃ_ಈ ೩ ಗೃಹಗರ್ಜನೆಗೆಯ್ವವಂ" (ಕರ್ಣಾಮ. ೬೯-೨೦೨). ೨. ಊಟದ ವಿಷಯದಲ್ಲಿ ಮಾತ್ರ ಶೌರ್ಯವುಳ್ಳವನು. [ಸಂ.]

**ಪಿಂಡೀಸೊಪ್ಪು** 'ಪಿಂಡಿಸೊಪ್ಪು' ನೋ.

**ಹಿಂಡು₁**, ಹಿಂಡು₁ (ಕ್ರಿ). ೧. ರಸ ಒಸರುವಂತೆ ಗಟ್ಟಿಯಾಗಿ ಹಿಸುಕು,-ಅದುಮು; ನೀರು ಹೊರಬರುವಂತೆ ನುಲಿ: ಹಿಂಡುವ ನಿಂಬೆಯ ಪಣ್ ವಿಧುಮಂಡಲದೊಳಜೊನ್ನಮೆಚಿವ ನೀರ್ವೊನಲೆನಿಕುಂ (ಕಕಂ. ೬-೨೩); ತೆಂಗಾಯ ಬಲುಹಿಂದ ಭಿನ್ನಿಸಲೆನೀರ ಸೇವಿಸಬೇಕು ರಸದಾಳಿ ಕೆತ್ತಬೇಕು ಒಲಿದು ಹಿಂಡಲಿಬೇಕು ಮಾವಣ್ಣ ಬಾಳೆವಣ್ಣಲಿಯ ಬೇಕೊಡೆಯದೆ ಕೆತ್ತದೆ ಹಿಂಡದೇ ಸುಲಿಯದೇ ದ್ರಾಕ್ಷಫಲವನ್ನು ಸವಿದಂತಾಯ್ತು (ಶಶಕೋ. ೨೬-೩). ೨. ನುಲಿಚು; ತಿರುಚು: ವಿಭು ಸಾಯೆ ಪೊಯ್ದು ಕಿವಿಯಂ ಹಿಂಡಿ ದೂಡಲೊಡರ್ಚೆ ಬಂದನೇ (ಸಿಸುಚರಿ. ೨-೬೬). ೩. ಸಂಗಿ; ಪರೆ; ಹೊಯ್ಯು: ಕಲ್ಲೆಲ್ಲಿ ನಾರಿತ್ತುವರ್ ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷಮಂ ಹಿಂಡಲುವರ್ಗರಿಯೊಳ್ ಸಂದ ಕವಿಪ್ರವೇಕರೆ ಪಲಂ ಬಲ್ಲರ್ ಪೆರರ್ ಬಲ್ಲರೇ (ರೀಚಾಪ. ೧-೧೨); ಆ ಕಾಂತಾಕಟಾಕ್ಷಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಂಬೆತ್ತು ತಾಂ ಹಿಂಡಿದಳ್ (ಅಕ್ಷ್ಮಿ. ೬-೨೦); ಪರಿಪರಿಯ ಸಿಂಗಾರದಲಿ ನೋಳ್ಪರ ಬಗೆಯನಿರ್ಕುಳಗೊಳಿಪ ಕೀಳ್ವರ ಕಿವಿಗೆ ವಾಕ್ಸುಧೆಯ ಹಿಂಡುತ ಬಂದರರವನೆಗೆ (ಕಾಳ್ಗಿಕಾ. ೬೨-೧೮). ೪. (ಅಲಂ) ನಿರ್ಬಲಗೊಳಿಸು; ನಿಸ್ಸತ್ವಗೊಳಿಸು: ಈ ತೆಜದಿಂದು ನಿನ್ನಂ ಘಾಸಿಸಿ ಬಿಡದಲೆದು ಪಿಟಿದು ಹಿಂಡಿದ ದುಃಖವ್ರಾತವಿದು ಮಗಳೆ (ಅಂತ್ಯ. ೬-೪೮). **ಹಿಂಡು₁**: ೧. "ಹಿಂಡು-ನಿಷ್ಪೀಡನೇ, ಗೋಸಮೂಹೇ ಚ" (ಶಮಿ): ಮೆಳಲೊಳ್ ತೈಲಂಗಳಂ ಹಿಂಡಲಕ್ಕಡವೀಸಿಂಗವ ತಿದ್ದಲಕ್ಕು ಕಟಿುಯಲ್ ಬಕ್ಕುಗ್ರದ ವ್ಯಾಘ್ರಮಂ ಕಡುಮೂರ್ಖಂ ಹಿತ ಕೇಳ್ವನೇ (ಸೂಕ್ತಿಸು. ೯೯); ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ (೧೧೪. ೯-೬೨); ಹೊಸ ನಿಂಬೆಹಣ್ಣ ಹುಳಿಯಂ ಹಿಂಡಿಯರಿಸಿಸವ ಬೆರಸಿ . . . ಬೋನದೊಳಿಕ್ಕಿ ಬಣ್ಣಿಸಿಯದಂ ಕಲಸಿ ಬಿಳಿಯುಪ್ಪನಿಕ್ಕಲದು ಸಾಸುವೆಯ ಕಟ್ಟೋಗರ (ಸೂಶಶಾ. ೩-೨೦); ಸ್ಪಂಜಿನ ತೆರದೊಳು ದೊಡ್ಡವರಿರುವರು . . . ತಮ್ಮೊಳಗಿರುವುದನೀಯರು ಹಿಡಿದೊತ್ತಿ ಹಿಂಡಿದ ಹೊರತು (ಕಂಚಾಕ. ೦೯೯-೯೯). ೨. ಕೆಲವರು . . . ಅವನ ಜುಟ್ಟನ್ನೆಳೆಯುತ್ತಲೂ, ಮತ್ತೆ ಕೆಲವರು ಕಿವಿಯನ್ನು ಹಿಂಡುತ್ತಲೂ ಹಿಂಸೆ ಮಾಡುತ್ತಿದ್ದರು (ದಾಹಿ. ೨೦). ೩. ಬೆಂಡಿನಂದದ ಲಘುಕಿನ್ನರಿಯೊಳು ಸ್ವರಮಂಡಲದೊಳು ಶ್ರುತಿಗೂಡಿ ಗಂಡುಗೋಗಿಲೆಯಂತೆ ಹೆಣ್ದುಂಬಿ ಯಂತಾಗ ಹಿಂಡಿದರಾತ್ಮಸಾರವನು (ಹಕ. ೦೯-೧೬೭). ೪. ಪಾಂಡುತನಯರ ನಂದನರು ತಾವ್ವೈವರೀತನ ಹಿಂದುಳುಹಿ ಹಿಂಡಿದರು ಹೇರಾಳದ ಚತುರ್ಬಲವ (ಕುವ್ಯಾ. ೩-೦೬); ಕೊಳನ ಹೊಕ್ಕಿಭದಂತೆ . . ಬಲವನರಿಭಟ ಸುಳಿದು ತುಳಿದನು ಹಿಳಿದು ಹಿಂಡಿದನು (ಕೌರಿಕಾ. ೩೬-೦೭); ವಿರಕ್ತರ ಮನದ ಶಾಂತರಸದೊಟ್ಟಿಲೆಯನು ಹಿಂಡಿ ಕೆಡಿಸುವ . . . ಮುಂಡಿಕೆಯ ರೂಪುಯೌವನವಿಲಾಸವನು ಬಣ್ಣಿಪರಾರು (ಸಪ್ತಶಾ. ೬-೦೦) ೫. (ಹಾಲನ್ನು) ಕರೆ: ನಿತ್ಯವೂ ಸ್ವಲ್ಪ ಸ್ವಲ್ಪ ಹಿಂಡಿ ಕೊಂಡು ಕುಡಿಯುತ್ತಾರೆ (೦೦೪೮. ೦೩); ಹಾಲನ್ನು ಹಿಂಡುವ ಅಥವಾ ಸರಬರಾಯಿ ಮಾಡುವ ಹೊಲಸು ವಿಧಾನಗಳಿಂದಾಗಿ ಹಾಲಿನೊಡನೆ ರೋಗಾಣುಗಳು . . . ಹೆಚ್ಚಾಗಿರುತ್ತದೆ (ಆಹುಕಾ. ೮೫): ಹಿತ್ತಲಿನಲ್ಲಿ, ಹಿಂಡುವ ಹೊತ್ತು ವಿಿಾರಿ . . . ಆಕಳ ಕರು ಒಂದೇ ಸಮನೆ ಒದರ ಹತ್ತಿತ್ತು (ಗಂಗಾಸಾ. ೨೦). ೬. (ಹಾಲನ್ನು) ಕೊಡು: ಅದು ಹಾಲು ಹಿಂಡುತ್ತದೆ (ಮುಂಬಯಿ. ೪-೨೪); ಅವರಿಗೆ ಆಗ ಉಳಿದ ಉಡುಗರೆಗಳೆಂದರೆ . . . ಎರಡು ಹಿಂಡುವ ಆಕಳು (ಹಪ್ಪಿ. ೨೬). ೭. ಒತ್ತು; ನೋವು ಮಾಡು: ತುರುಕರ ದಿಂಡುಗುಂಡಿಗೆಯ ಹಿಂಡಿದ ನಿನ್ನಯ ಬಾಹುದಂಡವಂ ಪೊಗಳ್ವೆನೆ? (೧೧೪೦. ೩೨-೯); ಎಲ್ಲಿಂದಲೋ ಒಳಸೇರಿದ ಕಸವಿಸಿಯು ಅವನ ಹೃದಯವನ್ನು ಹಿಂಡತೊಡಗುವುದು (ಕಿತ್ತಿಹೂ. ೩೩): ತನ್ನ ಗೆಳೆಯರೆಲ್ಲರೂ ದಸ್ತಗಿರಿಯಾದ ಸುದ್ದಿ ಆಜಯನ ಹೃದಯವನ್ನು ಹಿಂಡುತ್ತಲಿತ್ತು (ಅಕ್ಷಾಶ. ೧೬೩). ೮. ಕಾಡು; ಪೀಡಿಸು; ಹಿಂಸಿಸು; ನುಗ್ಗುಮಾಡು: ಉಂಡೆವ್ವ ಸಮಚಿತ್ರದಲಿ ನೀವ್ ಕೊಂಡಿರ್ಪ ಘಾಯಂಗಳನೆಡೆಯಲಿ ಹಿಂಡುವಿರಲ್ಲೆ ನಾವು ಸಟಿಸೇ ಊರ ಹಾರುವರ (ಕುವ್ಯಾ. ೧೦-೩೩); ವ್ಯಸನಕ್ಕೆ ವೌಢ ನೋಳೆಜಗದಿರೆಂದು ರಕ್ಷಿಸಿಮುಂತೆ ಮಗಳ ಹಿಂಡಿದಳು (ಶೋಭಶ. ೦೮-೬೩). ೯. ಹೀರು: ಜೇನುಹುಳು . . . ನಾಲಗೆಯ ಮೇಲಿನ ಮಕರಂದ ಶೀರ್ಷಕಗಳಿಂದ ಹಿಂಡಿ ಜಪ್ಪಯ ಬಾಯಿತದಲ್ಲಿ ಒಂದು ಸಣ್ಣ ಕುಳಿಯೊಳಗೆ ಸಂಗ್ರಹಿಸುತ್ತದೆ (೫೮೯. ೯೦). ೧೦. ಇಲ್ಲವಾಗಿಸು; ಮುಗಿಸು; ನಾಶಪಡಿಸು; ಧ್ವಂಸ ಮಾಡು: ಕೊಂದು ತಾಸುರಲಿಂಗವಾದಸುಬಿಂದತೇಜೋಮಯನು ನಿಮಿಷಕೆ ಹಿಂಡಿದನು ಹದಿನಾಲ್ಕು ಲೋಕವನುರುಹಿ ಫೋಳಿಡಿಸೆ (ಕಂಕಶ. ೬-೩); ಇವನು ಗತ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ ಗಂಡ ಬಂಡಿಯ ಜವಳಿಗಾಲಲಿ ಮುಜಿದನೈ ಮಾವಾ ಸಮರ್ಥನಲೆ (ಕುವ್ಯಾಕ. ೧೧-೦೩).

ಹಿಂಡಿ ಹಿಟ್=೧. ಚೆನ್ನಾಗಿ ಹಿಂಡು. ೨. ಅತಿಯಾಗಿ ಹಿಂಸಿಸು: ಒಲ್ಲನೆಗೆಯಂ ಪಿಟಿವಂತೆ ಹಿಂಡಿ ಪಿಟಿುವ ಪಗೆಗೆ . . . ಈ ಪದದೊಳ್ ಕಡಿದೊಟ್ಟಿದಾಗಳ್ ಗೆಲಲಾಟಿ (ಕಂಕಶಾ. ೧೨-೨೦೬ ವ); ಶತಬಲಿಯೆಂಬಸುರ ಮಹೀಪತಿ ಸುರರಂ ಹಿಂಡಿ ಹಿಟಿ[ಪಾಠ. ಹಿಂಡಿ ಹಿಟಿ]ದು ತನ್ನಯ ಪದವಂ ಸುತ್ರನೆನಿಪ ಸಹಸ್ರಬಲಿಕ್ಕಿತಿಪತಿಗಿತ್ತೊಂದು ಗಿರಿಯೋರ್ವಂ ತಪದಿಂ (ರರ್ವಶ. ೪-೦೬). ಹಿಂಡಿ ಹಿಪ್ಪಲಿ ಮಾಡು = ಕುಗ್ಗುವಂತೆ ಮಾಡು: ಕುಗ್ಗಿಸು; ನಿಸ್ಸತ್ವಗೊಳಿಸು: ಅವನ ಹೃದಯವನ್ನು ಕಟುಕರು ಕರುಣೆಯಿಲ್ಲದೆ ಹಿಂಡಿ ಹಿಪ್ಪಲಿ ಮಾಡಿದಂತಾಗಿದ್ದಿತು (ಕಂರಕ್ಷ. ೮). ಹಿಂಡಿ ಹಿಪ್ಪೆ ಮಾಡು = ಹಿಂಡಿ ಹಿಪ್ಪಲಿ ಮಾಡು: ರಾಜನೂ ರಾಜಪ್ರತಿನಿಧಿಗಳೂ ಆದಾಗಾಗ . . . ಪ್ರಜೆಗಳನ್ನು ಹಿಂಡಿ ಹಿಪ್ಪೆ ಮಾಡಲು ಯತ್ನಿಸುವರೊ ಆಗ ರಾಜ್ಯಕ್ರಾಂತಿಯ ಕಾಲವು ಸಮೀಪಿಸಿತೆಂದು ತಿಳಿಯತಕ್ಕದ್ದೆ! (ಎಚಿಚಾ. ೨೩). [ ದೇ. ‖ ತುಳು. ಹಿಂಟು, ಪುಂಟು; ಕೊಡ. ಪುಂಡ್; ತೆಲು. ಹಿಂಡು; ಕೋಲಾ. ನಾಯ್ಕ. ಪಿಂಡ್ ]

**ಹಿಂಡು₂**, ಹಿಂಡು₂, ಹಿಂಡೆ (ನಾ). ೧. ಗುಂಪು; ಸಮೂಹ; ರಾಶಿ: "ಬಂಬಲ್ . . . ಪಿಂಡು[ಪಾಠಂ. ಡಿ] ತೆರಳ್ಕೆ . . . ಈ ೪೧ ಸಮೂಹಂ" (ಶಶಸಾ. ೩೬-೨೨೨); ಗೋವೃಂದಲದಂತಿರ್ದ ಕಡವಿನ ಕಾಡೆರ್ಮೆಯ ಪಿಂಡುಗಳಿಂದು . . . ಅತಿಭಯಂಕರಾಕಾರವಪ್ಪ ದ್ವೈತವನಕ್ಕೆ ಬಂದು (ಕಂಕಶಾ. ೬-೨೯ ವ); ಪಂಚಾಗ್ನಿತಾಪತಪ್ಪಮಾನಸರಪ್ಪ ತಪೋಧನಜನಕ್ಕೆ ತಪನತಾಪವಮಾನಾಗಲೀಯದೆ ತಳಿರ್ದಗಾಲಂ ಪೊತ್ತು ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ (ಕಂಕಶಂ. ೦೦೯-೧೦); ಜವದಿಂ ಪಾಪದ ಪಿಂಡಿನಂತಳಿಕುಳಂ ಬಿಟ್ಟೋಡೆ (ಆರ್ಶಿ. ೦-೯); ನೆಗೆದು ನಿಂದಂಬೆಯ ಪಿಂಡೆಂಬಂತಿರೆ ಬೆಳ್ಕುಗಿಲದಜುಂ ಬೀಳ್ವ ತುಷಾರಮದಬ ಗಜುವನಿಯೆನಿಕುಂ (ರಾಜಶ. ೬-೬). ೨. ಶ್ರಾದ್ಧದ ದಿನ ಗಳಲ್ಲಿ ಪಿತೃಗಳಿಗೆ ಅರ್ಪಿಸುವ ಅನ್ನದ ಮುದ್ದೆ: 'ಪಿಂಡುಗೊಟಿು' ಪರಾ. ಹಿಂಡು₂: ೧. ಸುತ್ತಲುಂ ಗಿಳಿಗಳ ಹಿಂಡುಗಳ್ ನೆರೆದು ಕೂಡಿಮು ಮಲ್ಲಿ ಸಹಸ್ರಮುಂ ನಿರಾಕುಳಮನುರಾಗದಿಂ . . . ಇರ್ಪುವು (ಕಾದಂಪೂ. ೧೨೬); ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವ ನಯ್ಯ (ಮಹಾದೇ. ೩. ೧೩೪-೩೦೩); ಕುಜುಯ ಹಿಂಡಿನ ತೋಳನೈ ನಿನ್ನಾನೆ (ಕುವ್ಯಾದ್ರೋ. ೩-೨೭); ಹಾಲುಬತ್ತಿಕೆ ಕವಿವರಗಿಳಿಗಳ ಹಿಂಡ ಮೇಲಕಿಪ್ಪ ಸುಮ ನಾರಿಯರ ಪೇಳಲಳವೆ (ಕಂಶಂ. ೫-೬೪); ಘಾತನಾದುವುದನ್ನೇ ಮರೆತು ಕಿಡಿಕಿಯ ಹೊರಗೆ ಒತ್ತಾಗಿ ಬೆಳೆದ ಬಾಳೆಯ ಹಿಂಡುಗಳಲ್ಲಿ ದೃಷ್ಟಿ ನೆಟ್ಟ ಕೂತ (ಶೂರಿಂಡಾ. ೦೧೪೮). ೪. (ದನದ) ಮಂದೆ; (ಗೋ)

ಸಮೂಹ : "ತುಱು ವಂದೆಯೊಳು ನಿಬ್ಬೀಡನದೊಳು ಹಿಂಡೆಂದೆನಿಸು" (ಕ್ಕಾಷು. ೯೭) : ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ ಬಳಿದಪ್ಪಿದ ಪಶು ತನ್ನ ಹಿಂಡನಱಸುವಂತೆ ಬಯಸುತಿರ್ದೆನಯ್ಯ ನಿಮ್ಮ ಶರಣರ ಬರವನು (ಬಸವ. ೩೬೩) : ಹಿಂಡ ಬಿಟ್ಟೆಂದು ಹಿಂದಿನಿಂ ಬಹುವಲ್ಲ ಕಂಡವರ ಹೊಲಕಿಳಿವ ತೊಂಡುದನವಲ್ಲ (ಗಾಂಭೀ. ೬೦-೭೫೨). ಹಿಂಡೆ : ೨. "ಹಿಂಡೆ — ಪಿಂಡ=ಪಿಂಡದ ಮುದ್ದೆ" (ಶಬ್ದಕೋ. ೪೪); ಬಯಕೆಗೆ ಪಶುವಂ ಕೊಲ್ವವರಯಸಕ್ಕಂಜುವರೆ ಕೊಂದು ಕೊಟ್ಟಾತಂ ಹಿಂಡೆಯು ಕೊಟ್ಟಿಗೆ ಹೇಸುವನೆ (ಸಪುತ. ೧೪-೧೨೫) ; ಅಳಿದ ಕಲ್ಲಿಗೆ ಹಟೆ ಹಿಂಡೆಯು ಕೊಳನಟ್ಟು ಉಂಬವರಿಲ್ಲದೆ ಅಳುತ್ತಿದ್ದಿತ್ತು (ಪುರುಗುಂ. ೪. ೨೪೯-೦೩) : ಎನ್ನ ಮಕ್ಕಳು ಕೊಂದು ಹಿಂಡೆಯು ಕೊಳನಂಬರು ಹೇಸುವವರಲ್ಲ (ಸಂಕಶ. ೩೦-೭೮).

ಹಿಂಡುಹಿಂಡು (ದ್ವಿರುಕ್ತಿ): ಇಂದು ಮಾಡಿಸುವೆಂ ಮಹೋತ್ಸವದಿಂದೆ ಸಾವಿರ ಹೊಂಗಳಿಗೆ ಬಲಿತಂದು ಕುಱಿಗಳ ಹಿಂಡುಹಿಂಡಿನ ಧಂದದಲಿ ನೆರಹಿ (ಬಸವ. ೨೮-೨೨) ; ಹಿಂಡುಹಿಂಡಿನರೇಣೆಯು ಮೇಲೇಱು ಮುಂಕೊಂಡುಱುಬುವ ರಿಪುಬಲವ ಖಂಡಿಸಿ ಸಿರಗಳ ಮರುಳ್ಗಳ ಕೊರಳಿಗೆ ದಂಡೆಯು ಹಾಕಿದರಾಗ (ಸಂಕಶ. ೦೪-೬೦) : ತಂಡುತಂಡು ದೊರೆಗಳು ಕೂಡಿ ಹಿಂಡುಹಿಂಡು ಸೈನ್ಯ ಕೂಡಿಸಿದರು (ಗ್ರಾಕ). ಪಿಂಡಾಗು=ಗುಂಪಾಗು; ಗುಂಪುಗೂಡು: ಕಟ್ಟಾನೆ ಬೀದಿಯೊಳಟ್ಟಿಕೊಂಡು ಪೋಗಿ ನಟ್ಟಾರಣ್ಯಮಂ ಪೊಗುವುದುಂ ಪರಿಜನಂಗಳೆಲ್ಲಂ ವಿಸ್ಮಯಂಬಟ್ಟು ಪಿಂಡಾ[ಪಿಂಡಾಂ. ದಾ]ಗಿಪ್ಪುದುಂ (ಕೃಷ್ಣಾಸ್ವ. ೨-೩೮ ವ). ಹಿಂಡಾನುಹಿಂಡು = ಭಾರಿ ಸಮೂಹ,– ಗುಂಪು : ಹಿಂಡಾನುಹಿಂಡು ಬೌದ್ಧಭಿಕ್ಷುಗಳಲ್ಲಿ ಮಹಾತ್ಮರಾದ ಭಿಕ್ಷುಗಳು ಎಲ್ಲಿ ಅಡಗಿರುವರೋ ಯಾರಿಗೆ ಗೊತ್ತು (ಶರ್ಮಿಕ. ೦೫೩).

[< ಸಂ. ಪಿಂಡ]

**ಪಿಂಡುಗಂಕಣ**, ಹಿಂಡುಗಂಕಣ (ನಾ). ೧. ಒಂದು ಬಗೆಯ ಬಳೆ,– ಕಂಕಣ : ಮಾಣಿಕದ ಮುತ್ತಿನ ಪಿಂಡುಗಂಕಣಮಂ ಕೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ಕೀವಿ ಭಿಕ್ಷಮಂ ಪಿಡಿಯೆಂದು ನೀಡಿದ ಕೈಯನಿತನ ಕಂಡು (ಮಲ್ಲಾರಿ. ೬೪-೭) ; ಬಾಣಸಿಗೆಯರ್ ಪಿಂಡುಗಂಕಣಂಗಳಂ ನೂಂಕಿ ನೂಲ ತೊಂಗಲನೆತ್ತಿ . . . ಮಕ್ಕಿಯೊಳುಣ್ಬ ಪರಿಜನ ಕೈಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೦೦-೨೪ ವ); ತನ್ನ ನಿದ್ರೆಯೊಡನೆ ಕಟ್ಟಿಲೆ ಮರೆಯುತ್ತುಂ ಕಣ್ಮಲರೊಡನ ಕಮಲದಳಮಲರೆ ತನ್ನ ಪಿಂಡುಗಂಕಣದೊಡನೆ ಕೊಳರ್ವಕ್ಕಿಗಳುಲಿಯೆ . . . ಸೆಜ್ಜೆಯಿನುಜ್ಜುಗದಿನೆರ್ದು ಶೃಂಗಾರಗೇಹದೊಳ್ ಶೃಂಗಾರಂಗೆಯ್ಯುತ್ತುಮಿರ್ದಳ್ (ಅರ್ಜುನೀ. ೨-೦೪ ವ); ನಲ್ಮೊಡವುಗೆಯೊಳ್ ಏಕಸರಂ ಶ್ರುತಕೀರ್ತಿಗೆ ದುಕ್ಕಂಡದ ಪಿಂಡುಗಂಕಣಂ ಮಾಳವಿಗಾ ಜಕ್ಕಸರಂ ನಿನ್ನರಸಿಗೆ (ರಾಜಾಕ್ಕ. ೪೮-೦೭). ೨. ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ: ಸಿರಿಸದ ಬಾಸಿಗಮಂ ಮಾಂಕರಿಸುವ ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರವಮಂ ಚಪ್ಪರಿಸುವಿವಂ ಚೆನ್ನೆ ಪೊನ್ನೆಯರಲಂ ಕೊಯ್ದಳ್ (ಅದಿಪು. ೦೦-೪೯ ಅಕ್ಷರ) ; ವಿನ್ಯಂತಃಪುರದ ಕಾಂತಾಜನದ ಕದಂಪಿನೊಳ್ ಮೃಗಮದಪತ್ರಲೇಖೆಯಂ ಬರೆಯಲುಂ ಬಾಹುಲತೆಯೊಳ್ ಪಿಂಡುಗಂಕಣಮನೇಱಿಸಲುಂ (ಸಂಹಾಷು. ೦೪-೨೦೦ ವ). ಹಿಂಡುಗಂಕಣ : ೧. "ಗುಬ್ಬಿಗಂಕಣ ಹಿಂಡುಗಂಕಣಮುಂ ಮೆಂದು ಮಣಿಗಂಕಣಂ ಹಸ್ತಗಂಕಣವು" (ಶಬ್ದ್ಮೃ. ೯೭).

[ಪಿಂಡು₂ + ಕಂಕಣ]

**ಪಿಂಡುಗಜ್ಜುರ** (ನಾ). = ಪಿಂಡುಖರ್ಜೂರ : ಬಿತ್ತರಂಬಡೆದ ಪನ್ನೀರೆಳನೀರ್ ಪಿಂಡುಗಜ್ಜುರ ದ್ರಾಕ್ಷಿ ರಸವಾಳೆ ದಾಳಿಂಬ ಪಲಸಮ್ಮಾವರನೇಱಿರ್ ಮೊದಲಾದ ಫಳಕುಳಂಗಳಿಂ (ಹಾಣ್ಯ. ೦-೩-೨೭ ವ).

[ಪಿಂಡು₂ + ಕಜ್ಜುರ (< ಖರ್ಜೂರ)]

**ಪಿಂಡುಗೂಡು**, ಹಿಂಡುಗೂಡು (ಕ್ರಿ). ಒಟ್ಟುಗೂಡು ; ಒಟ್ಟಾಗಿ ಸೇರು ; ಗುಂಪಾಗು : ನಿಜದಿಂದಂ ಪಿಂಡುಗೂಡಿರ್ದರೆ ತೃಣಗಣಮಂ ಮೇದು ಸತ್ಪಾನಮಂ ಪೀರ್ದಜಪೋತಂ ಲೀಲೆಯಿಂದಂ ನಲಿವಪೊರ್ (ಶರ್ಮಕ. ೦೦-೦೪). ಹಿಂಡುಗೂಡು : ಕಂಡಕಂಡವರ ಮನೆಯಲ್ಲಿ ಕೊಂಡಾಡಬೇಕೆಂದು ಹಿಂಡುಗೂಡಿ ಕೂಳನಿಕ್ಕುವ ಭಂಡರಿಗೆಲ್ಲಿಯದೋ ಭಕ್ತಿ (ಮೋಕ್ಷಷು. ೧೬-೩೯) : ಆಗಾಗ್ಗೆ ಹಿಂಡುಗೂಡುತ್ತಿದ್ದ ಮೋಡಗಳಲ್ಲಿ ಸೂರ್ಯ ಮರೆಯಾಗುತ್ತಿದ್ದನು (ಕೃಷರು. ೨೬೬). [ಪಿಂಡು₂ + ಕೂಡು₁]

**ಪಿಂಡುಗೂಟಿ**, ಹಿಂಡೆಕೂಳು, ಹಿಂಡೆಗೂಳು (ನಾ). ೧. ಮುದ್ದೆಯಾದ ಅನ್ನ : ಮಿಾಯದೆ ಮೆಯ್ಯೊಳ್ ಶ್ರೀಖಂಡವಮಂ ಪೂಸುವೆನೆಂಬ ಪಿಂಡುಗೂಟಿಳಗೆಗುಬಟನುಣ್ಬೆನೆಂಬ (ಶರ್ಮಕ್ತು. ೧೨-೨೪). ಹಿಂಡೆಕೂಳು : ೨. ಶ್ರಾದ್ಧದ ದಿನಗಳಲ್ಲಿ ಪಿತೃಗಳಿಗೆ ಇರಿಸಲಾಗುವ ಅನ್ನದ ಮುದ್ದೆ : "ಹಿಂಡೆಕೂಳು=ಪಿಂಡಾನ್ನ, ಶ್ರಾದ್ಧದ ಊಟ, ಹೀನವಾದ ಊಟ" (ಕಮಿಾಕಂ. ೬೪೪) ; ಹಿಂಡೆಕೂಳು ಮುಂಡೆಗೆ ಆದೀತೇ ? (ಗಾದೆ). ಹಿಂಡೆಗೂಳು : ೨. ಹಿಂಡೇಗೂಳಾ ಗುಂಡೀದಂಡೇಲುಂಡೂ ಕೈಯ್ಯಾ ತೋಡೀಸೂವೆಂ (ಕೃಷ್ಣಕೂಮ. ೨-೪೪). [ಪಿಂಡು₂ + ಕೂಟು₁]

**ಪಿಂಡುಗೊಳ್**, ಹಿಂಡುಗೊಳ್ (ಕ್ರಿ). ಒಟ್ಟುಗೂಡು ; ಗುಂಪಾಗು : ಮೇಳದ ಕೆಳದಿಯರ್ ಪಿಂಡುಗೊಂಡು ತದ್ಯೋಗ್ಯ . . . ಮಂಗಳೋಪಕರಣಂಗಳಂ ಪಿಡಿದಾ ಸ್ಯಂದನದ ಸುತ್ತಲುಂ ಮಂದ್ಯಸಿ ವಡೆಯೆ (ಹಾರಕ. ೦೦-೬೫ ವ) ; ಪಿಂಡುಗೊಂಡು ಜೊಂಡೇಳ್ದ ಕಾಳ್ಗಿದುಳ ಕೋಳ್ಗ ಸಬೂಂದರೆದೆಚಿದ ಕಣ್ಗಳಿಂ ... ಮಾಸಿ ಮಸರಿಸಿದಂತೆ ಬಳ್ಳ ಪರ್ವಿಣಂಗಳಿಂದತಿ ಭಯಾಮಹವಾದ ಬಟ್ಟೆಯಂ ನಿಟ್ಟಿಸುತ್ತಿರೆ (ಧಾಪಕಿ. ೫-೦೭೦ ವ). ಹಿಂಡುಗೊಳ್ : ಎನಿತು ಸುರರಾಗರೆನಿತಸುರರಾಗರು ನೆನೆಯ ಎನಿತು ದೇವರ ದೊಡ್ಡ ಹಿಂಡುಗೊಳ್ಳದು ನೆನೆಯೆ (ಕುಸ್ತರ. ೬೬. ೨೦೩-೦೪).

[ಪಿಂಡು₂ + ಕೊಳ್₁]

**ಪಿಂಡುಮಾತು**, ಹಿಂಡುಮಾತು (ನಾ). ಹೆಚ್ಚು ಮಾತು ; ಬಹುಳವಾದ ಮಾತು : ಕೊಂಡಾಡುವಾಗಾನು ಭಿಟ್ಟನಲ್ಲೊಳ್ಳಿತ ಕಂಡು ಸೋಲದ ಸುಖಿ ಯಾರು ಪಿಂಡುಮಾತಿನ ಜೋಲಿಯೇನು ನೀನೊಬ್ಬನೆ ಮುಂಡೆ ದೂಗಿಸಿದೆ ಮೂಜಗವ (ಶಶಿ. ೬೦-೭೮). ಹಿಂಡುಮಾತು : ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ . . . ತಂಡತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ ಹಿಂಡುಮಾತುಗಳೆಲ್ಲ ಹರಿಯ ನಾಮ (ಪಿಡಾಕ್ಕ. ೨೫-೦).

[ಪಿಂಡು₂ + ಮಾತು₁]

**ಪಿಂಡೋತ್ಪತ್ತಿ** (ನಾ). ಭ್ರೂಣದ ಉತ್ಪತ್ತಿ,– ಹುಟ್ಟು : ಪಿಂಡೋತ್ಪತ್ತಿ (ಪಿಶೀಕ. ೨೫೫). [ಪಿಂಡ + ಉತ್ಪತ್ತಿ]

**ಪಿಂತಟ್ಟು**, ಹಿಂದಟ್ಟು (ಕ್ರಿ). ೧. ಹಿಂದಕ್ಕೆ ಕಳುಹಿಸು ; ಹಿಂದೆ ಹೋಗುವಂತೆ ಮಾಡು : ಇದು ಸಿದ್ಧಂ ಬದ್ಧಮೆಂದು ಪೊಡ್ಡಿ ನುಡಿದು ಬಂದ ನಿಯೋಗಿಯಂ ಪಿಂತಟ್ಟಲೊಡಂ (ಧಾಜಾಕ್ಕ. ೦೯೩-೦೪). ಹಿಂದಟ್ಟು : ೧. ಚೆಟ್ಟ ಬರುತಿದೆ ಮುಂದೆ ಹೋಯತ್ ಹೋಯತ್ ವೆಟ್ಟು ಹಿಂದಟ್ಟಿದಲು ಪುಕಾವ ಹೊಟ್ಟುಗಳ ಹೊಯ್ಯುನುತ ರಣದೊಳಗಟ್ಟಿಯಾಡಿದರು (ಳೌರಾ. ೩೨-೨೨). ೨. ದಾಟಿ ಮುಂದೆ ಹೋಗು ; ಹಿಂದೆ ಹಾಕು : ಅಕ್ಕಪಕ್ಕದ ಮರಗಿಡಗಳನ್ನು ಹಿಂದಟ್ಟುತ್ತಾ ರೈಲು ಮುಂದಕ್ಕೋಡುತ್ತಿತ್ತು (ಲೋಕ). [ಪಿಂತೆ₂ + ಅಟ್ಟು₂]

**ಪಿಂತಡಿ**, ಪಿಂದಡಿ (ನಾ). ಹಿಂದಕ್ಕೆ ಇಡುವ ಹೆಜ್ಜೆ : 'ಪಿಂತಡಿಯಿಡು' ಪರಾ. ಪಿಂದಡಿ : 'ಪಿಂದಡಿಯಿಡು' ಪರಾ. [ಪಿಂತು + ಅಡಿ]

**ಪಿಂತಡಿಯಿಡು**, ಪಿಂದಡಿಯಿಡು (ಕ್ರಿ). ಹಿಂದೆ ಸರಿ ; ಹಿಮ್ಮೆಟ್ಟು : ನ[ವು]ಗಾಬಿರಂಗದೊಳು ಪರಿಧವವಾಗಿ ಮುಂಂಕಡಿಯ ಪಿಂತಡಿಯಿಟ್ಟುಡೆ ನಂಮ ಪೂರ್ವ್ವದಾ ಪುರುಷರು ನಾಕಮಾನಿಗಳಧೋಗತಿಗೆಯ್ದುವರು

ಹಿತ್ತಲಿಗೆ ಕರೆದುಕೊಂಡು ಹೋದಳು (ಗಂಗಾಜಾ. ೨೨) ; ನಮ್ಮದೇ ಆದ ಮನೆಯಿದೆ, ಹಿತ್ತಲಿದೆ, ತೋಟವಿದೆ (ಮೂರುದಾ. ೧೨೩) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿದ (ಗಾದೆ) ; ಹಿತ್ತಲ ಗಿಡ ಮದ್ದಲ್ಲ, ಮನೆಹೆಂಡತಿ ಮುದ್ದಲ್ಲ (ಗಾದೆ). ಹಿತ್ತಿಲ್ : ೧. ಬಡಗಣ ಕೊಪ್ಪಲ ಹಿತ್ತಿಲಲು ... ಹಿರಣ್ಯಪೂರ್ವ್ವಕವಾರಾಧಿಸಿ ಸರ್ವ್ವನಮಸ್ಯವಾಗಿರೆ ಪಡೆದು ಬಿಟ್ಟರ್ (ಶಾಇ. V, ೬೩೦-೪೩ ; 1162). ೨. "ಹಿತ್ತಿಲಲ್ಲಿಯುಂ ನಿಷ್ಕುಟವೆಂಬುದು" (ಶಬ್ದಾಯು. ೧೪೩-೩೦) ; ಪತ್ತಿದ ಗಂಡರ ಚಿತ್ತದ ಕಿಡಲೀಯದಿತ್ತುದೇ ಕೋಟಿ ಶನಗೆಂಬ ಸೂಳೆಯ ಹಿತ್ತಿಲಲ್ಲಿರದೆ ಸುರಭೂಜ (೬೬೮. ೨-೩೮). ಹಿತ್ತಿಲು : ೨. ನಿನಗೆ ಕರವೆತ್ತಿ ಪೊಡೆವಡುವ ಭಕ್ತ ಮನೆಯ ಹಿತ್ತಿಲ ಬೇಲಿಯಾಗಿಪ್ಪನ್ನ ರಾಮನಾಥಾ (ದೇರಾ. ೨೯-೯೯) ಹಿತ್ತಿಲೊಳ್ಸಂಜೀವನೌಷಧಿ ಬೆಳೆದು ರಂಜಿಸುತ್ತಿರಲು (ಶಾಂರಶ. ೦೫-೬೭) ; ಮನೆಯೊಳ್ ಸುರಧೇನು ಕಟ್ಟಿಯುತಿರ್ಪುದು...ದಿವಿಜಾನೋಕಹವೋಮದ ಕಡುವುದು ಬೇಡಿದುದಂ ಹಿತ್ತಿಲೊಳು (ಶಯಕ. ೦೨-೩೭) ; ಹಿತ್ತಲಲಿ ಮರ ಹಾರುವನು ಅಳಿಲಿನಂತೆ (ಕಂಕ. ೦೦-೯).

ಹಿತ್ತಿಲ ವನ, ಹಿತ್ತಿಲ ಬನ, ಹಿತ್ತಿಲ ವನ = ಮನೆಯ ಹಿಂಭಾಗದಲ್ಲಿರುವ ತೋಟ ; ಕೈದೋಟ : ಶ್ರೀವೀರಜಿನೇಂದ್ರಸಮವಸರಣಂ ಬಂದೀ ಆವಾಸದ ಹಿತ್ತಿಲ ವನದೋಳವರಿಯೊಳ್ ನೆಲಸಿತ್ತಖಿಲಸುರಗಣಸಹಿತಂ (ಕಚಾ. ೩೦ ಕೃಪೋ) ; ಕೃಷ್ಣನವನ ಕರೆಕೊಂಡು ಹಿತ್ತಿಲ ಬನಕಯ್ದೆ ಕೊಂಡಾಗಡೆವ ಗಿಳಿಯಿಲ್ಲದ ಆವಲಿ ಮಂಡಿಸಿದನು ರಾಯಕುವರ (ಹರಿಕ. ೩-೩) ; ಆ ತರಳಾಕ್ಷಿ ಹಿತ್ತಿ[ಪಾಠಾಂ. ತ್ರೈ]ಲ ವನಕವಳನಂದು ತುರದಿಂದೆಯ್ದುಸಿದಳು (ಕುಮಾರಾಂ. ೨೩-೬೦). ಹಿತ್ತಿಲ ಕಾಯಿ = ಮನೆಯ ಹಿಂಭಾಗವನ್ನು ಕಾಯುವವನು : ಎಂದಿನಂತೆ ಅವನಿಗೆ 'ಹಿತ್ತಲ ಕಾಯಿ' ಪದವಿ ಕಾದಿರುತ್ತಿತ್ತು (ರಾಜಾಶಿ. ೨೬). ಹಿತ್ತಲ ಬಾಗಿಲ್ = ಮನೆಯ ಹಿಂಭಾಗಕ್ಕೆ ಇರುವ ಬಾಗಿಲು; ಹಿತ್ತಲಿಗೆ ಇರುವ ಬಾಗಿಲು ; ಹಿಂಬಾಗಿಲು : ತನ್ನರಮನೆಯ ಹಿತ್ತ[ಪಾಠಾಂ. ತ್ರಿ]ಲ ಬಾಗಿಲಲಿ ಲಿಂಗಪ್ರಸಾದವನು ಜನನಿ ತಂದವನಿಯಲಿ ಸುರಿಯಲು (ಚಕ. ೬೦-೨೦). ಹಿತ್ತಲ ಮನೆ = ಮನೆಯ ಹಿಂಭಾಗದ ಅಂಗಳದಲ್ಲಿ ಕಟ್ಟಿರುವ ಮನೆ : ಸಿಲುಕಿತಲ್ಲಾ ನೀರೆನುತ ಕೋಮಳೆ ತವಕದಿಂ ತನ್ನ ಕೈಗೊಟ್ಟಲಲಾತಂ ಹಿತ್ತ[ಪಾಠಾಂ. ತ್ರಿ]ಲ ಮನೆಗೆಪೊಡಗೊಂಡು ಕಾನೆಯ್ದೆ (ಶಸಕ. ೯೨-೩೦) ; ಅಂಗಳದಿಂದ ಹಿತ್ತಲ ಮನೆಯವರೆಗೂ ಗಡಿಬಿಡಿ ಆರಂಭವಾಗಿಬಿಟ್ಟಿತ್ತು (ವೃಕಿ. ೯) ; ತಾಯಿಯೂ ಮಗಳೂ ಅಗ ಕರೆದ ಎರಡು ದೊಡ್ಡ ಮಡಿಕೆ ಹಾಲನ್ನು ಹೊತ್ತುಕೊಂಡು ಹಿತ್ತಲ ಮನೆಗೆ ಹೋಗುತ್ತಾರೆ (ಕುಶಿವಾ. ೨೬). ಹಿತ್ತಲು ಗುಡಿಸು = ನಿಂದಿಸು ; ದೂಷಿಸು : ನಿಮ್ಮ ನಿಮ್ಮ ಭಾವನ ಜಗಳದಲ್ಲಿ ನೀವು ನಮ್ಮ ತಂದೆ ತಾಯಿಯ ಹೆಸರು ಹಿಡಿದು ಹಿತ್ತಲು ಗುಡಿಸಬೇಡಿ (ಕಶರಾ. ೨೧೩). ಹಿತ್ತಲು ಮನೆಯ ಊಳಿಗ = ಹಿತ್ತಲ ಮನೆಯನ್ನು ಕಾಯುವ ಕೆಲಸ : ಅರಮನೆಯಲ್ಲಿ ಷಣ್ಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು . . . ರಜದ ಊಳಿಗ, ಹಿತ್ತಿಲು ಮನೆಯ ಊಳಿಗ (ಮಹಾಷಂ. I. ೯೩).

[ಹಿಂತು + -ಇಲ್ಸ. / ತುಳು. ಪಿತ್ತಿಲ್, ಬಿತ್ತಿಲ್]

**ಹಿಂತು**, ಹಿಂದು, ಹಿಂದ್ಮು (ನಾ). ೧. ಹಿಂಭಾಗ ; ಹಿಂಬದಿ : "ದೆಂಗಡೆಗೆ ಹಿಂತೆನಿಕ್ಕುಂ" (ಶಶಶ. ೬೩) ; ಕಟ್ಟಿನುರಿಯುಂ ಪೊಗೆಯುಂ ದುಷ್ಪ್ರಾಪ್ಯದ ಮುಂತುಂ ಹಿಂತುಂ ಬೆಟ್ಟಮನೇಱುವುದುಮಿಱುವುದುಂ (ಪಾರ್ಶ್ವ. ೯-೦೩೨) ; ತುಕಾರಕ್ಕೆ – ಮುಂದು, ಮುಂತು ; ಹಿಂದು, ಹಿಂತು (ಶಬ್ದ. ೦೫೦ ಕೃಪೋ). ೨. ಹಿಂಜರಿಯುವಿಕೆ: ವೀರದಿನೊಡ್ಡಿಪ್ಪ ವ ಸಾಮಂತ ಜಗದಾಳ ಮಲೆಯ ತೊತ್ತಳೆದುಳಿವ ಯತ್ತಿದ ಮೊನೆಗೆ ಮುನ್ನು ಕಡಿತಾಳಗಳ್ಗೆ ಹಿನ್ನು (ಎಕ. XII. ಶಿಕಟೂ. ೧೦೯-೨೪ ; 1130). ಹಿಂದು : ೧. ಎಡೆಗಲಱಿಯದೆ ಜನ್ಮಕಮ್ಮಗುಟ್ಟಿಂ ಬರಲಣಮಱಿಯದೆ ತಪ್ಪಂ ಪಿನ್ನಂ ತೆಱನಱಿಯದೆ . . . ಪೊಯ್ಸಿದನು (ಎಕ. II. ೦೪೩-೧೩೮ ; ೩೪೨) ಒಂದಱ ಹಿಂದೊಂದಡಸಿ ಗುತುಗುಡನೆ ಸುರಿವಾನಂದಜಲಬಿಂದುಗಳಿನಂ ಸಿರತಿಶಯಹರ್ಷಮಂ ಪ್ರಕಟಿಸುತ್ತಿರಲ್ (ಶಾಂತೀಪು. ೮೬೩) ; ಪಾರ್ಶ್ವ ಸರುವಂ ಕಟ್ಟಿಂಬ ಮುಟ್ಟಿಂಬ ಹಿಂ[ಪಾಠಾಂ. ಬ]ದಡಸಿಂಬೊತ್ತರಿಸಿಂಬ . . . ಪುಳಿಂದವೃಂದಸನದಂ ಪೊಣ್ಮೆತ್ತು ಕಾಂತಾರದೊಳ್ (೧೦೪. ೧-೬೨). ಹಿಂದು : ೧. ಜೆಡೆ ಗಂಗೆಯ ಸ್ಥಾನ ನೊಸಲು ಚಂದ್ರನ ಸ್ಥಾನ ಹಿಂದು ಸೂರ್ಯನ ಸ್ಥಾನ (ಬಶಿ. ೬೯೪) ; ಹಿಂದೆ ಬಿಟ್ಟಿರೆಂದು ಹಿಂದಿನಿಂ ಬಹುಮಲ್ಲ ಕಂತವರ ಪೊಳಕಿಳವ ತೊಂತುವನಮಲ್ಲ (೬೦೬೮. ೩೦-೦೩೨). ೨. ಕಡ್ಲಗೆ ಮುಂದು ಕಡಿವಾಣಕ್ಕೆ ಹಿಂದು (ಗಾದೆ). ೩. ಕೊನೆಯದು ; ಅಂತ್ಯ : ನೀರ ಕ್ಷೀರದಂತೆ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದಱಿಯೆನು (ಮಹಾದೇ. ೩. ೦೩-೧೦) ; ಮುಂದನಱಿಯದ ಗುರುವು ಹಿಂದನಱಿಯದ ಶಿಷ್ಯ (ಸರ್ವಜ್ಞ. ೯೯). ೪. ಹಿಂದೆ ನಡೆದುದು : ಹಿಂದ ನೆನೆಯಾ ಖೂಳ . . . ಎನುತ ಹೆಱಯಿಂದ ಕಡಿದಿಳುಹಿದನು ಪಾಂಚಾ ಲಾಧಿಪನ ಶಿರವ (ಕುಮಾವ್ಯಾ. ೦೬-೩೬).

ಹಿಂತಣ್, ಹಿಂದಣ್ = ಹಿಂಭಾಗ ; ಹಿಂಬದಿ :- ಅಕ್ಕುಳಿಸಿತೆಂದುಂ . . . ಹಿಂತಣ್ಗೆ ವಂದುದೆಂದುಂ . . . ಪಾರೆಗೆಯ್ಯೆಂದುಂ — ಈ ೧೩. ಅವಸರಣಕ್ಕೆ ಪೆಸರ್ (ಕಚಾ. ೬೨-೬೯೯); ಒಳಸೋರ್ದುದು . . . ಮೆಯ್ದೆಗೆದುದು ಘಟ್ಟೆಲೆನೆ ಹಿಂತಣ್ಗೆ ವಂದುದುಂ ಜಗುಟ್ದುದುಂ (೯೩೬೮. ೨೮೨); ಬೆಟಗಡರಿ ಮುಖದಿರುಹಿ ಹಿಂದಣಿನಿಱದ ಕರ್ಣನ ನೋಡಿ ಮುಖದಲಿ ಕಿಱುನಗೆಯ ಕೀವಣಿಸಿ (ಕುಮಾವ್ಯಾ. ೬-೩೩) : ಕರ್ಣ ಹಿಂದಣಿಲೆಚ್ಚು ಕೂರಂಬಿನೊಳ್ದುನುವ ಖಂಡಿಸಿದನು (ಕುರಂಗ. ೩೨-೩೦). ಹಿಂತಣ, ಹಿಂತಳ, ಹಿಂದಣ, ಹಿಂದಣ, ಹಿಂದಳ = ೧. ಹಿಂಭಾಗಕ್ಕೆ ಇರುವ ; ಹಿಂಬದಿಯ : ತನ್ನರಸಿ ಚಿಕ್ಕದೆೃಗೆ ಬಡಗನ್ನಿಕೆಱಿಯ ಬಡಗಣ ಬದಿಯ ಹಿನ್ನಣಕಟ್ಟಿ ಯವ್ಪಿಟ್ಟು (ಎಕ. VII. ಶಿಕಶೂ. ೯೬-೨೨ ; ಸು. ೧೧೬); ಇಕ್ಕೆಲದ ಮುಂದ್ದಣ ಪಿನ್ದಣವಮ್ಮ ಳಕ್ಕೆ ಭೀಷಣವಾತಿರೌದ್ರಮದುತ್ಕಟಮಗುಪ್ಪಿನ ತೇಜದಳುರ್ಕೆ ಥಲ್ಲನ (ಶಾಇ. XI-1, ೩೨-೯, 1007) ; ಹಿಂದಣೊಡ್ಡನು ರೂಹಿಡಿಸಿದವೀ ಕ್ಷೇಮಧೂರ್ತಿನೃಪಾಲನಾನೆಗಳು (ಕುಮ್ಯಾಕ. ೨-೦೨) ; ನೀದನ್ನೆ ಬಳಿಕೀತನಾ ಹೆಬ್ಬಂದಿಯಿದಿರಲಿ ಮಲ್ಲಮಲ್ಲನೆ ಹಿಂದಣಡಿಗಳಲಂಡುಗೊಂಡುದು ಶಂಭುಕಾಸುರನ (ಹಿಂದರಾ. ೩-೩-೨೦). ೨. ಹಿಂದಿನ ; ಮೊದಲಿನ : ಹಿಂತಣ ಭವದೊಳಾನೆಸಗಿದ ಪಾತಕಸಂತತಿಯೊರ್ಮೊದಲೊಳಗೆ ಭ್ರಾಂತಿ ಪಡೆದು ಕಡಲೆಂದೆಱಗುವೆ (ಅಂಕತ. ೦-೯) ; ಖಚರೇಶನ ಹಿಂತಣ ಪುಣ್ಯದ ಫಲದಿಂ . . . ವಿಮಲಚಾರಣರೆಯ್ತರಲು (ಶಾಂಕತ. ೨-೯೬) ; ಹಿಂತಣ ಕಾಲದಲ್ಲಿ ಭೂಮಿಯಂ ಪರಿಪಾಲನೆಗೆಯ್ದ ಭೂಪೋತ್ತಮರ ಮಹಾತ್ಮ್ಯಮಂ ಚೆನ್ನಾಗಿ ಕಿವಿಗೊಳಿಸು (ಶಾಠಕಾಂ. ೦೯೯) ; ನೂಂಕುವುದೊಮ್ಮೊಮ್ಮೆ ನರಕಕ್ಕೆ . . . ಒಮ್ಮೆ ಮಾನುಷಕೆ ಹಿಂತಳ ಪಾಪವಂಕದ ತೀವ್ರವದೆಂತೊ (ಹರಿಕ. ೩-೩೦); ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋಱದನೆನ್ನ ತಂದೆ (ಮಹಾದೇ. ಬ. ೨೯-೯೯) ; ಆ ಜಾಗ, ಹಿಂದಣ ವರ್ಷ ಕುಮಾರಿ ಬೆಳೆದ ತಾವಿನಿಂದ ಮೈಲು ದೂರದ ಇನ್ನೊಂದು ಬೆಟ್ಟದಲ್ಲಿದೆ (ಕರಾಕೂ. ೧೦). ೩. ಮೊದಲು ; ಪೂರ್ವ : ಅಲ್ಲಿಗೆ ಮತ್ತೊಂದು ಕಡೆಯಿಂದ ಇನ್ನೂ ಹಿಂದಣದಲ್ಲಿ ಬಂದವರು (ಯಜ್ಞಕ. ೨); ಹಿಂದಳ ಸುಖ ಮುಂದಳ ದುಃಖಂಗಳು ಮುಂದಳ ಸುಖ ಹಿಂದಳ ದುಃಖಂಗಳು ಇವ ತಾ ಸಂಧಿಸಿ ಅನುಭವಿಸಿದಲ್ಲಿ (ಶಾತೊಮ್ಮ. ೯. ೩೩೮-೨೦). ಹಿಂತಣಾ = ೧. ಹಿಂಭಾಗದಲ್ಲಿರುವವನು; ಹಿಂದಿನವನು : (೪). ೨. ಪೂರ್ವ ಕಾಲದವನು : ಅಕಾರಕ್ಕೆ . . . ಹಿಂತಣಂ, ಅತ್ತಣಂ, ಇತ್ತಣಂ (ಶಮದ. ೨೦೦ ಕೃಪೋ). ಹಿಂತಣರ್ = ಹಿಂದಿನವರು; ಪೂರ್ವ

ದವರು : ಪಿಂತಣರ ಕಬ್ಬಗಳ ಸೇವ್ಯಮಪ್ಪ ವಸ್ತ್ವಂ (ಸಂಸಹ. ೬-೦). ಪಿಂತಾಗು, ಹಿಂತಾಗು, ಹಿಂದಾಗು=೧. ಹಿಂದೆ ನಡೆದಿರು, — ಘಟಿಸಿರು : ಪಿಂತಾದ ದುಃಸ್ವಭಾವಸ್ಥಾಂತರ ಸಂತತಿಯನಾಗಮಾಘವಿಸುತ ಮಿರ್ವರ್ತಿರ್ದಳ್ ಚೈತನ್ಯಮನಂತರಾಗಳ್ ಹರಿಯಿಸುತ್ತು ಮೂರ್ಛಾವೇಗಂ (ಕಾದಂಕ. ೯೨೬). ೨. ಹಿಂದೆ ಉಳಿ : ಹಿಂದೆ ಬೀಳು : ಅದು ಪಿಂತಾಗಿರೆ ಮತ್ತಮೊಂದು ಶರಮೆಯ್ದುವ್ವ್ರತಂತದಂ ಪಿಂದುಗೆಯ್ದೊದ ಊತ್ತ್ಪಂ ಪೆಡತೊಂದು ಮಾರ್ಗಣಮಾಳಂಬಂ ಪಾಯ್ದುದು (ಪಂಪ. ೬-೯೦) ; ಲಿಂಗ ಮುಂತಾಗಿ ಮನ ಹಿಂತಾಗಿ ಅಂಗಭಾವವಳಿದು ಅರ್ಪಿಸಿಕೊಳಬಲ್ಲ ಪ್ರಸಾದಿಯು ಪರಮಪರಿಣಾಮವೆ ಪ್ರಸಾದ (ಅದಶ. ೨೪-೬೬); ಷಡುರಥರುರವಣಿಯು ಹಿಂದಾಯ್ತು ರಾಯರ ಗುರುವ ಕಂಡವರಿಲ್ಲೆನುತ ಕುರುರಾಯ ಚಿಂತಿಸಿದ (ಕುಮ್ಮಾವ್ಯ. ೬-೩೬). ಪಿಂದುಮುಂದು, ಹಿಂದುಮುಂದು=೧. ಹಿಂದಿನ ಭಾಗ ಮತ್ತು ಮುಂದಿನ ಭಾಗ : ಹಿಂದುಮುಂದು [ ಪಾಠಂ. ಪಿಂತುಮುಂತು ]ಮನೆಡ ಬಲನುಮಂ ಬೆರ್ಚಿದಂತೆ ನೋಟ್ಟುಮಪ್ಪೊಡಾ'ಗಳ್ ನಿಮಗೆ ತಪ್ಪಲ್ಪಗೆದು ಬಂದನೆಂದಖುಯಿಮೊಂದು ಪೇಟ್ಟುದುಂ (ಕಂಕಸಂ. ೦೩೨-೩); ಹಿಂದುಮುಂದ ಮಗಡಿಸಿದಾ ಮಾದ್ರೇಯ ರವಿಸುತರೊಡಲೊಳಂಬನು ಹೂಳಿದನು (ಕುಮ್ಮಾವ್ಯ. ೬-೦೬). ೨. ಅಗುಹೋಗು : ಶಿವಶಿವ ಪಿಂದುಮುಂದೆಣಿ ಸದೆ ಇನಿತುಬ್ಬುವರೆ (ಕಂಕಿ. ೯೭-೨೪); ಮನೆಗೆಲಸಮಂ ಮಾಣ್ದು ಮೇಣ್ ಮಾಳ್ಪಳವಳು ಕೊನೆಮೂಲ್ಗಳ್ಂತಾಗೆ ಹಿಂದುಮುಂದುಗಳಲ್ಲ ಕೊನೆದು ಪಾಡಿದ ನಿರತೆಯುಂ ಮಾಲಿಸುವಳು (ಕಾಂಜಿ. ೦೦೩-೨೩೩). ೩. ಹಿಂಭಾಗವು ಮುಂಭಾಗಕ್ಕೂ ಮುಂಭಾಗವು ಹಿಂಭಾಗಕ್ಕೂ ಬದಲಾದ ಸ್ಥಿತಿ : ಏರುಪೇರು ; ಹೆಚ್ಚು ಕಡಮೆ ; ವಿಪರೀತ : ಬಂದ ಶರಣರ ನಿಲವನರಿದು ಸಂದು ಸಂಶಯವಳಿದು ನಂಬದಿದ್ದರೆ ಹಿಂದು ಮುಂದಾಗಿ ಹೋಹನು ಕಾಣಾ. ನಮ್ಮ ಗೊಹೇಶ್ವರಲಿಂಗವು (ಅರಶಂ. ೨೦೬-೯೬೬); ಹಿಂದಕ ಮುಂದಕ ಮಾಡಿಕೊಳ್ಳು = ಪಾಂತಿ ಹಾಗೂ ಭೇದಿಯನ್ನು ಮಾಡಿಕೊಳ್ಳು : ಈ ಕಾಳಿನ ಹಿಟ್ಟಲೇ ಮಾಡಿದ ರೊಟ್ಟಿತಣಾಕು ತಿಂದು ಮಕ್ಕಳ್ಲಾ ಹಿಂದಕ ಮುಂದಕ ಮಾಡಿಕೊಂಡ ನೆಲಪಟ್ಟಿ ಬಿದ್ದಾವರಿ (ಗ್ರಾಕೂಮ. ೦೯೬). ಹಿಂದಲಿನವರು=ಹಿಂದಿನ ಕಾಲದವರು ; ಪೂರ್ವಕಾಲದವರು : ಹಿಂದಲಿನವರು ಮಾಡಿರುವ ಕವನಗಳು ಮುಗಿದು ಹೋದರೆ ತಾವೇ ಹೊಸಹೊಸದಾಗಿ ಅಲ್ಲೇ ಕವನಗಳನ್ನು ಗತ್ತಿಗೆ ಸರಿಯಾಗಿ ಹೆಣೆಯುತ್ತಿದ್ದರು (ಜುಬ್ಜಕ. ೨೨). ಹಿಂದಲು=೧. ಹಿಂಭಾಗ ; ಹಿಂಬದಿ : ತಂದೆ ಹೊಡೆಯುವರೆಂದು ಹೆದರಿ ಮನೆಯ ಹಿಂದಲೀದ ಒಳಗೆ ಬಂದು ರೂಮು ಸೇರಿದ್ದನು (ಕೂಕ). ೨. ಬಳಿಕ ; ತರುವಾಯ : ವೃದ್ಧನು ಆ ಸಮಾಚಾರವನ್ನು ಅವನ ಊರಿಂದ ಬಂದಿದ್ದ ಪ್ರಯಾಣಿಕರಿಂದ ಹಿಂದಲಿಂದ ತಿಳಿದುಕೊಂಡಿದ್ದನು (ಕಾಕಸಂ. ೨). ಹಿಂದಲೇಟು ಹೊಡೆ=ಹಿಂಜರಿ ; ಹಿಮ್ಮೆಟ್ಟು : ಮಂಜಯ್ಯನ ಕರೆಗೆಹಿಂದಲೇಟು ಹೊಡೆಯುವುದರಿಂದ ತನ್ನ ಹೇಡಿತನ ಸ್ಥಾಪಿತವಾಗುವುದೆಂದು ಹೆದರಿದ (ಜುತಂ. ೨೦೯). ಹಿಂದುಮುಂದುಗಾಣು=ದಿಕ್ಕುಕೋಚು ; ದಾರಿಗಾಣು: ಸಮುದ್ರಯಾನದಲ್ಲಿ ದಾರಿ ತಪ್ಪಿ ಹಿಂದುಮುಂದುಗಾ ಣದೆ ಪೇಚಾಡುವ ನಾವಿಕರಿಗೆ ಇದೇ ದೈವ (ಕನ್ನಡಿಗ. ೨೬) ; ಹಿಂದುಮುಂದು ನೋಡು, ಹಿಂದುಮುಂದೆ ನೋಡು=೧. "ಅನಿಶ್ಚಯದಿಂದಿರು : ಅರೆಮನಸ್ಸಾಗಿರು; ಶಂಕಿಸು ; ಹಿಂಜರಿ ; ಹಿಂದುಮುಂದು ನೋಡು" (Hesitate. ೩೦೯೮). ೨. ಎಚ್ಚರಿಕೆಯಿಂದಿರು : ಜಾಗರೂಕನಾಗಿರು : (೯). [<ಪಿನ್]

ಪಿಂತೆ$_1$ (ನಾ). ೧. ಹಿಂದುಗಡೆ : ಹಿಂಬದಿ : ಹಿಂಭಾಗ : "ಪೆಚಿತು ಪಿಂಗಡೆ ಪೆಡಂಮೆಟ್ಟಿಬಿಟ್ ಪೆಜಗುಂ ಪಿಂತೆ ಪಿಂತಿಲೆನೆ ಹಿಂದೆನಿಕುಂ" (ಶಬಿಶಂ. ೦೯೩). [ <ಪಿಂತು ]

ಪಿಂತೆ$_2$, ಪಿಂದೆ, ಹಿಂತೆ, ಹಿಂದೆ (ಅ). ೧. ಹಿಂಬದಿಯಲ್ಲಿ ; ಹಿಂಭಾಗದಲ್ಲಿ ; ಹಿಂದುಗಡೆಯಲ್ಲಿ : ಸಿಂಧುರದ ಹಾರದ ಮಾಣಿಕದ ಕಾಂತಿ ತಳ್ತು ಪಜ್ಜಳಿಸುವ ಕಂಠದಿಂ ತಳೆದು ಪಿಂತೆಸೆದಿರ್ದುದು ಗೊಡ್ಡೆ ಸಿಂಧುರದ (ಕಾದಂಕ. ೨೫೩); ಇವರ್ಗೆ ತಕ್ಕುದು ಮಾಟ್ಪೆನೆಂದಾಗಳ್ ಪೋಗಿ ಚಿಂತಾಸಿದ್ಧಿವಿನಾಯಕನ ಪಿಂತೆ ಕುಳ್ಳಿರ್ದುದಂ (ಲೀಲಾವ. ೫೬೩-೦೦); ಇಂತು ನೆರದುದು ಪಾತರಂಗಳು ಬಲಿದೆಕ್ಕ ಪಿಂತೆ ಪರಿಜೀತಕೆ ಸೂತಂ ಬರುತ ಭವನಕ್ಕೆ (ಜಿಚ. ಡಿ. ೬೩-೩). ೨. ಮೊದಲಲ್ಲಿ ; ಪೂರ್ವದಲ್ಲಿ ; ಮುಂಚೆ : ಪಿಂತೆ ಕೆಲಕಾಲದೊಳಗೊಂದುದಿವಸ ನಂದಿ ಭೃಂಗಿ . . . ಗಿರಿಜಾತೆಸಹಿತೀ ಕ್ರಮದೊಳು ಓಲಗಂಗೊಟ್ಟಿರ್ದ ಸಮಯದೊಳ್ (ಪಿಕೂ. ೬-೬); ರಾಘವಂ ಪಿಂತೆ ರಾವಣನು ಪಥಿಸಿ ವಾಜಿಮೇಧದೊಳ್ಪರ್ವರಂ ತಣಿಪಿದಂ (ಕೈಜಿಮಿ. ೨-೩೬); ಬಲಿಯು ದಾನವ ಗೈದ ಚರಿತೆಯನು ಪಿಂತೆ ಕಲಿಯಲಿಲ್ಲವೆ ನೀವು ? (ಅಂಕಿ. ೫೬-೯). ೩. ಪರೋಕ್ಷದಲ್ಲಿ : ಪಿಂತೊರ್ವರು ಚಾಣಸ್ಥಾನದ ಬಾಧ್ಯರಂತೆ ರಿಲ್ಲೆಂದಾಡುವರು ಮುಂತಣ ರಾಜಕಾರ್ಯಮನುಸಿರುವ ಧೂರ್ತರಂತೆ ಕೇಳೆಂದು ಕೈಮುಗಿದ (ಕೂಚಕ. ೩೬-೩೬). ಪಿಂದೆ : ೧. ಅಯ್ಯೊ ಚಂದ್ರನೆ ನಾಂ ಕಪಿಂಜಲಕ ನೀನೀ ಪುಂಡರೀಕಾರ್ಥದಿಂ ತಡೆದಿಂ ಪಿಂದೆ ಯದೇಕೆ ಬಂದೆ ಗಡ (ಕಾದಂಮ. ೬೦೯); ಪುಟಾಲ ತಣ್ಪಂ ಸಾರುತುಂ ಪಿಂದೆ ನಿಂದಳಿವೃಂದಂ ಬರೆ ಪಾರುತುಂ (ಕೃಕಕಿ. ೨-೩೯). ೨. ತಪ್ಪನೆಸಗಿದ ಪಿಂದೆ ಜಡಧುತನಾಗಿ (ಕ್ರೈಣಾಹ. ೩-೦೯); ಕಾಳೆಗಕ್ಕೆ ಬೆದರಿ ತನ್ನಡಿ ಶರಣ್ಕೊಕ್ಕರೊಳ್ ತಾಂ ಪಿಂದೆ ಕಂಡಂತೆ ಕಂಡುದಾಸೀನದಿಂ ವರ್ತಿಸೆ (ಜಿಕ್ಕಾಂಗ. ೬೩-೨೦೮೩). ೩. ಗುರುವಂ ಮುಂದೆ ಪೊಗಳ್ದುದು ಮಿತ್ರರೇ ಬಂಧುಗಳಂ ಪಿಂದೆ ಪೊಗಟ್ದುದು (ಕಂಕಸಂ. ೫೩-೦೬). ಹಿಂತೆ : ೧. " ಪಿಂತೆ-ಹಿಂತೆ [ ಪಾಠಂ. ದೆ ] " (ಕಚುದ. ೨೯೦ ೫೬೪). ೪. ಅನಂತರ ; ತರುವಾಯ ; ಆಮೇಲೆ : ಅಂತಪ್ಪನಂತಕೋಟಿಗಣಂಗಳೆಲ್ಲರುಂ ಮುಂತೆ ಸೃಷ್ಟಿಸಿದರು ಮನಂತರದೇವತೆಗಳಂ ಹಿಂತೆಯುಂ (ಜಿಕ್ಕಕಿ. ೮-೨೦-೬೬). ಹಿಂದೆ : ೧. ಮರ್ಮರುವನಟ್ತು ಮಾಡದ ಭಕ್ತಿ ಸೊಣಗನ ಹಿಂದೆ ಸೊಣಗ ಹುದಂತಾಯತ್ತಯ್ಯ (ಅದಶ. ೦೦-೦೯); ಯಾವಗಹುದಿದು ಹಿಂದೆ ಬಂದೆಸುವೀ ವಿಗಡತನ ನಿನಗೆ ಮೆಚಿವುದು ಕರ್ಣ (ಕುಮ್ಮಾವ್ಯ. ೬-೩೯): ದಕ್ಷಿಣಕೆ ನಡೆದುದು ವಾಜಿ ಚಂಪಕಾಪುರಕಂದು ಹಿಂದೆ ಬಹ ಪಡೆ ಸಹಿತ ಮಹಿಲದಿಂದೆ (ಕೈಜಿಮಿ. ೦೦-೩೩). ೨. ಇನ್ನು ಪಾನಕ್ಕೆ ಮಗನಂ ಹಡೆವುದೆತ್ತಲು . . . ಲೋಕಂ ನಗುವ ಮಾತನಾಡಿದಿರಿ ಹುಟ್ಟುವಡೆ ಹುಟ್ಟನೆ ಹಿಂದೆ ಹೇಳೆಂದಳು (ಸಿದ್ಧರಾ. ೦-೯೦); ಹಿಂದೆ ಪರಸತಿಗಾಗಿ ಹಿಡಿವಡೆದುಂದು ಭಂಗಿಸುವಲ್ಲಿ ದೃಗು ಜಲಬಿಂದುವೊಂದುಂ ಹೊಜಿವಡದು . . . ಇಂದದೇನು ನಿವಿತ್ತ ಸಲಿಲಂ ನಿನ್ನ ನಯನದಲಿ(ಜಿಕ್ಕಿ. ೦೯-೩೩): ಎಲವೊ ಕೌರವ ಹಿಂದೆ ಮಂಟಪ ಕಳವಿನಲಿ ಜೂಜಾಡಿ ರಾಜ್ಯವ ಗೆಲಿದ ಗರ್ವವನಾಗುಳು (ಕುಮ್ಮಾವ್ಯ. ೦೦-೯೯). ೩. ಹಿಂದೆ ಗಳಹುವನಿವನು ಬಾಯಿಗೆ ಬಂದ ಪರಿಯಲಿ (ಕುಮ್ಮಾಅ. ೦.೦೦); ಹಿಂದೆ ಬಯ್ಯಬಾರದು, ಮುಂದೆ ಹೊಗಳಬಾರದು (ಗಾದೆ). ೪. ಹೊಸ್ಸದೇವರು ಬೆಸಸಲು ಕಾದಿ ಸುರಲೋಕವಾಪ್ತನಾದ ಹಿಂನ್ಹಾದನ್ನ ಹವರಂ ಲೇಸಾಗಿ ನಡಹುವರು (ಕೃಅಂ. ೦೯೩೨, ೩೦-೯; ಹು. ೧೧೬೬): ಪಾರ್ಶ್ವ ಗ್ರಾಹ-ತಾನು ಹಗೆಯು ಮೇಲೆ ಎತ್ತಿ ಹೋಹಲ್ಲಿ ಹಿಂದೆ ರಾಜ್ಯವಂ ಉಪದ್ರವ ಮಾಡುವವನು (ಕಾತಂ. ೯) ; ಆ ಬಾಳೇಎಲೆಗಳ ನಡುವೆ ಗಿಡದೊಳಗಿಂದ ಒಂದರ ಹಿಂದೆ ಒಂದು ಹೊಸ ಸುಳಿ ಏಳುತ್ತವೆ (ಮುಂಚಿಯು.೨-೩೬).

ಹಿಂದೆ ಕಳುಹು = ಹಿಂದಕ್ಕೆ ಕಳುಹಿಸು : ವಾಪಸು ಕಳುಹಿಸು : ಬರೆದು ಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ ಎಂದುಸುರಿ ಮನತಂದು ನಿರುಮುನ ಕಂದನಹ ಕಡೆಕಂಡೆಯಾ ಒಂದವಳು

ಹಿದ ಹಿಂದೆ ಕಳುಹಿದ ಇಂದುನಾಥಾಧೀಶನು (ಕುಶ. ೨೦-೯೨). **ಹಿಂದೆ ಬೀಳು**=೧. ಹಿಂದೆ ಉಳಿ,—ಆಗು : ಜಗದ ಜೀವನರಥವು ಮುಂದಿರೆ ಹಿಂದೆ ಬೀಳದು ಭಾರತ (ಕಂಮು. ೩೨-೦೩). ೨. ಹಿಂಬಾಲಿಸು ; ಅನುಸರಿಸು : ಈ ನರಸ ಬಹಳ ದಿನದಿಂದಲೂ ಆಕೆಯ ಹಿಂದೆ ಬಿದ್ದಿರುವುದು ನನಗೆ ಗೊತ್ತಿದ್ದರೂ ವಿಷಯ ಹೀಗೆ ವಿಕೋಪಕ್ಕೆ ಹೋಗುತ್ತದೆ ಎಂದು ಭಾವಿಸಿರಲಿಲ್ಲ (ಈಶಪಂ. ೯೭). ೩. ಕೆಳಮಟ್ಟದಲ್ಲಿರು ; ಇರು : ಓದಿನಲ್ಲಿ ಈ ಹುಡುಗ ಬಹಳ ಹಿಂದೆ ಬಿದ್ದಿದ್ದಾನೆ (ಊ). **ಹಿಂದೆ ಮುಂದೆ**=೧. ಹಿಂಭಾಗಕ್ಕೆ ಮತ್ತು ಮುಂಭಾಗಕ್ಕೆ : ಹಿಂದೆ ಮುಂದೆ ಮರಳಿ ಮರಳಿ ಬೆಗಡೊಂದಿ ನಡೆವುತ ಗಾಳಿಯಂದು . . . ಪೌಳಿಯ ಎಡೆಗೆ ನಸುಸಾರ್ದು (ಚಿತ್ರ. ೨೬-೬೦). ೨. ಆಗುಹೋಗುಗಳನ್ನು ಕುರಿತು: ಈ ಜನ . . . ಅಧಿಕಾರಿಗಳಾಗದಿದ್ದ ಪಕ್ಷಕ್ಕೆ ಇಷ್ಟೊಂದು ದಗೆಯಲ್ಲಿ ದೊಡ್ಡ ಗುಂಪನ್ನು ಹೊರಗಟ್ಟುವುದಕ್ಕೆ ಮುಂಚೆ ಇಪ್ಪತ್ತು ಸಾರಿಯಾದರೂ ಹಿಂದೆ ಮುಂದೆ ಯೋಚಿಸುತ್ತಿದ್ದರು (ಕೃಸಚ. ೯೬೩). **ಹಿಂದೆಮುಂದೆ ನೋಡು**=ಹಿಂದೆಗೆ ; ಹಿಂಜರಿ ; ಅನುಮಾನಿಸು : ಅವರೂ ಉಳ್ಳವರಲ್ಲ. ಅದರಲ್ಲೂ ಹರೆಯದ ಅವಿವಾಹಿತ ಅಬಲೆಯೊಬ್ಬಳನ್ನು ಸಲಹಲು ಹಿಂದೆ ಮುಂದೆ ನೋಡಿದರು (ಕೂಟಿಕಾ. ೩೭) ; ನಮ್ಮನ್ನು ಆಜ್ಞಾಪಿಸಲು ಪ್ರಭುಗಳು ಹಿಂದೆ ಮುಂದೆ ನೋಡಬಾರದು (ಮಕೇಸಿ. ೦೫೦). **ಹಿಂದೆ ಹತ್ತು**=ಹಿಂದೆ ಬರು ; ಹಿಂಬಾಲಿಸು; ಬೆನ್ನಟ್ಟು : ಕುಚೀಯೂರವಣಿಸಿ . . . ಅಚ್ಯುತಭವನ ಭವನಮಂ ಪುಗಲುಜಿದ ಏಂಡನು ಹಿಂದೆ ಹತ್ತಲು ವಜಾಗುತ್ತಾಗಳು ತಿನ್ನರಯ್ಯಂ ಕರುಣದಲಿ ನೋಡಿ (ಚಿತ್ರ. ೨೮-೦೦) ; ಕರೂಷದ ಕೊಬ್ಬಿನವದಿರು ಹಿಂದೆ ಹತ್ತಿದರೆ ಮರಳಬಲ್ಲನೆ ಭೀಮನು (ಕುಮ್ಯಾ. ೬-೨) ; ತಂದೆಯನು ಕೊಂದವಗೆ ಮೋಹಿಸಿ ಹಿಂದೆ ಹತ್ತಿದಳೆಂದು ಹೆಣ್ಣು ಕೊಡೆಂದು ನಮ್ಮಯ ತಂಗಿಯಿಂದಟ್ಟುವುದುಚಿತವಹುದು (ಸಾಳ್ವಭಾ. ೩೦-೦೦). **ಹಿಂದೆ ಹಾಕು**=ಹಿಂದೆ ಉಳಿಯುವಂತೆ ಮಾಡು ; ದಾಟು ; ಕ್ರಮಿಸು: ಕಾಡುಮೇಡುಗಳನ್ನು ಹಿಂದೆ ಹಾಕಿ ತೋಡುಗಳನ್ನೂ ಪಾಲಗಳನ್ನೂ ದಾಟಿದರು (ಕಾಂಚಿ. ೦೩ ಕಥಾಸರಿ). **ಹಿಂದೆ ಹೋಗು**=೧. ಹಿಂದಕ್ಕೆ ಹೋಗು ; ಮರಳು : ಬೋಳನು ದಾರಿ ತಪ್ಪಿ ನಡೆದಿದ್ದನು . . . ಹಿಂದೆ ಹೋಗುವುದೇಕೆ ? ಈ ದಾರಿಯನ್ನೂ ಬಲ್ಲೆನಲ್ಲವೆ! ಎಂದು ಒಂದು ಪಾಲದೆಡೆಗೆ ಬಂದನು (ಕಾಂಚಿ. ೦೦ ಕಥಾಸರಿ). ೨. ಹಿಂಬಾಲಿಸು ; ಅನುಸರಿಸು : ಅಂದು ಪ್ರುಗಟ್ಟವನಿಸುರನಿರುಳೊಂದು ಪಶುವಿನ ಹಿಂದೆ ಹೋಗುತ (ಚಿತ್ರ. ೩೬-೩೨). **ಹಿಂದೇಟು ಹಾಕು**=ಹಿಂಜರಿ; ಅನುಮಾನಿಸು: ಅಷ್ಟೊಂದು ಬಂಡವಾಳವನ್ನು ತಾನೊಬ್ಬನೇ ಸುರಿದು ಸಾಹಸ ಮಾಡಲು ಸ್ವಲ್ಪ ಹಿಂದೇಟು ಹಾಕುತ್ತಿದ್ದನು (ಸಕಿಲ. ೬೬). **ಹಿಂದೇಟು ಹೊಡೆ**=ಹಿಂದೇಟು ಹಾಕು : ನಾನು ಕೊಂಚವಾದರೂ ಹಿಂದೇಟು ಹೊಡೆಯದೆ ಎಲ್ಲ ಕಾರ್ಯವನ್ನೂ ಮಾಡುತ್ತಿದ್ದೆ (ಅಂಜ. ೬೯). [ <ಪಿಂತೆ₁ ]

**ಪಿಂತೆಗೆ** ' ಪಿಂದೆಗೆ ' ನೋ.

**ಪಿಂತೊಲೆ** (ನಾ). ಒಲೆಯ ಹಿಂಭಾಗ : ಅಂಗಯ್ . . . ಮುಂಪೊರ್, ಪಿಂತೊಲೆ (ಕುಚ. ೦೩೩ ಕೃನೋ). [ ಪಿಂತು+ಒಲೆ₂ ]

**ಪಿಂದಡಿ** ' ಪಿಂತಡಿ ' ನೋ.

**ಪಿಂದಡಿಯಿಡು** ' ಪಿಂತಡಿಯಿಡು ' ನೋ.

**ಪಿಂದಯ್ದು**, **ಪಿಂದ್ಯೆದು** (ಕ್ರಿ). ಹಿಂದೆ ಹೋಗು ; ಹಿಂಬಾಲಿಸು: ಬಲ್ಪಸರ್‌_ಪಿಂದಯ್ದೆ ಪೋಪುದು (ಶಶಪಂ. ೯. I. ೧೩). **ಪಿಂದ್ಯೆದು** : ಊರುವೇಗದೊಳುದ್ಬಿ ಮುಂದ್ಯೆದಲಾ ಗಿರಿಯ ಸಾರವತ್ತಾದ ವೃಕ್ಷಗಳೆಲ್ಲಾ ಪಿಂದ್ಯೆದುತೋರಂತೆ ನಿಜಬಂಧುಗಳನು ಬೀಳ್ಕೊಡುವಂತೆ ಮೌಹೂರ್ತ ಮಮನಸರಿಸಲು (ಹೇಪಾಶಾ. ೩-೦-೨೦).

[ ಪಿಂದು (<ಪಿಂತು)+ಅಯ್ದು₂ (<ಎಯ್ದು) ]

**ಪಿಂದಲೆ**, **ಹಿಂತಲೆ**, **ಹಿಂದಲೆ** (ನಾ). ೧. ತಲೆಯ ಹಿಂಭಾಗ ; ಹೆಡತಲೆ : ರಾಹುವದನ ಶಶಿಬಿಂಬದ ಪಿಂದಲೆಯೊಳಿನೆ ತೋರಮುತ್ತಿನ ತಲೆದುಡುಗೆಯೆನಿಸೆದುದಲರ ಸೋರ್ಮುಡಿ ಸತಿಯಾ (ಕೃಕ್ಕಶ. ೬-೩೩) : ತಲೆಯ ಹಿಂದು. **ಪಿಂದಲೆ** (ಕಬ್ಬಾಸ. ೬೯೯ ಕೃಯೋ). **ಹಿಂತಲೆ** : ೧. ಯಶೋದೆಯ ಹಿಂತಲೆಗೆ ಬಲವಾದ ಏಟು ಬಿತ್ತು (ಸಾತ್ಯಕ್ಕಿ. ೨೬೩). **ಹಿಂದಲೆ** : ೧. ಹಿಂದಲೆಯನ್ನು ಸರಿಯಾಗಿ ಬಾಚಿಕೊಂಡಿಲ್ಲ (ಊ). ೨. ಹಿಂಭಾಗದಲ್ಲಿರುವಂತಹುದು : ಹಿಂಬದಿಯಲ್ಲಿರುವುದು : ಬಲಗಡೆಗಿದ್ದ ಹಿಂದಲೆ ಹಟ್ಟಿಯ ಬಾಗಿಲಿಂದ ಬಂಡಿಗಾರರ ಗುಟುರುಗೊರಕೆ ತೂರಿ ಬರುತ್ತಿತು (ಕೃಸಚ. ೩೯೯). ' ಮುಂದಲೆ ' ಪರಾ.

[ ಪಿಂ (<ಪಿನ್)+ತಲೆ₁ ]

**ಪಿಂದಳೆ** (ಕ್ರಿ). ಅನುಸರಿಸು ; ಹಿಂಬಾಲಿಸು : ತಂದೆಯ ಕೆಳೆಯನ ಕಂದಂ ಪಿಂದಳೆದೆಡೆವಿಡದೆ ದೂರೀಯಯಾಟಂ ಮೊದಲೆನ್ನಿಂದಮ ಎಟ್ಟಿಗೆ ವಂದಪ ನೆಂದಿಪನಂ ಪೆಂಪುವಡಿಕುಮಾಪ್ರತಿಮಾಂಕಂ (ಶಶಪಂ. ೩-೯೯).

[ ಪಿಂ (<ಪಿನ್)+ತಳೆ₁ ]

**ಪಿಂದಿಕ್ಕು** ' ಪಿಂತಿಕ್ಕು ' ನೋ.

**ಪಿಂದಿರಿಸು** ' ಪಿಂತಿರಿಸು ' ನೋ.

**ಪಿಂದಿರುಗು**, **ಪಿಂತಿರುಗು**, **ಹಿಂತಿರುಗು**, **ಹಿಂದಿರುಗು** (ಕ್ರಿ). ೧. ಹಿಂದಕ್ಕೆ ತಿರುಗು ; ಹಿಮ್ಮುಖವಾಗು : (ಕ). ೨. ಹಿಂದಕ್ಕೆ ತೆರಳು ; ವಾಪಸ್ಸಾಗು ; ಮರಳು : ಮಹೀಧ್ರ ಪಿಂದಿರುಗಿ ಪೋಗಿ ಸಲಹಿಕೊ ಶರೀರಮಂ (ಶಂಕಾರಾ. ೩-೩-೦೦). ೩. ಹಿಂದೆಗೆ ; ಹಿಂಜರಿ : " ಪೆಱತೆಗೆದುದಕೆ ಪಿಂದಿರುಗಿತೆಂದಕ್ಕಾ " (ಕನ್ನಕ. ೭೦). **ಪಿಂತಿರುಗು** : ೧. ಪಿಂತಿರುಗಿ ನೋಡಲೊ ವಿಶಾಲಾಕ್ಷ ಮೋಹರಸಮಂ ತುಳ್ಕಿ ನುಡಿಸೂ ಸವಿನುಡಿಜಾಣ (ಶಂತ. ೦೯-೬೭). ೨. ರೋಷದುಃಖದ್ವಂದ್ವದಲಿ ಬೆಂದು ಮಣಿಪುರಕೆ ಪಿಂತಿರುಗಿ ಬಂದಳತಿಭೀಷಣಮನಃಸ್ಥಿತಿಯಲಿ ! (ಚಿತ್ರಾಂಗ. ೬೯-೦೬೩). **ಹಿಂತಿರುಗು** : ೨. ಇನ್ನು ಮೇಲೆ ನನಗೂ ನನ್ನ ದೊಡ್ಡಿಗೂ ಗತಿ ಯಾರು! ಎಂದು ಅಳುತಾ ತನ್ನ ಊರಿಗೆ ಹಿಂತಿರುಗಿದನು (ಜನಪಂ. VII, ೬). **ಹಿಂದಿರುಗು** : ೧. ಗಣಪತಿ ಹಿಂದಿರುಗಿ ನೋಡಲಾಗಿ (ಮುಂಚಿದ. ೯-೬೯). ೨. ಅರ್ಜುನಂ ನೋಡುತಿರಲಾ ಭಾವೆ ಬಂದವೊಲೆ ಹಿಂದಿರುಗಿ ನಿಬಿಡಕಾಂತಾರದಲಿ ತರುಗುಲ್ಮವರ್ಗಗರ್ಭಂಬೊಕ್ಕು . . . ಮರೆಯಾದಳರದೆ (ಚಿತ್ರಾಂಗ. ೬೯-೯೦೯) ; ಜಯಸೇನನು ತಡಮಾಡದೆ ಬೇಕಾದಷ್ಟು ಹೊಂಗೂದಲನ್ನು ಖಡ್ಗದಿಂದ ಕತ್ತರಿಸಿ ತೆಗೆದುಕೊಂಡು ಹಿಂದಿರುಗಿದನು (ಕುಚಿ. ೯೬). [ ಪಿಂ (<ಪಿನ್)+ತಿರುಗು₁ ]

**ಪಿಂದು** ' ಪಿಂತು ' ನೋ.

**ಪಿಂದುಗಡೆ**, **ಹಿಂದುಗಡೆ**₁ (ನಾ). ಹಿಂಭಾಗದ ಸ್ಥಳ ; ಹಿಂದಿನ ಭಾಗ : ಪೆಜಗ=ಅತ್ತದ ಪಿಂದುಗಡೆಯಲ್ಲಿ, ಇತ್ತಂ=ಇಕಾರಂ ಹುಟ್ಟುವುದು (ಶಮದ. ೦೬೯ ಟೀ). **ಹಿಂದುಗಡೆ**₁ : ಪಿಂತೆ=ಹಿಂದುಗಡೆಯಲ್ಲಿ (ಶಮದ. ೯೨ ಟೀ) : ತರಕಾರಿ ಬೆಳೆಯಲು . . . ಸ್ಥಳ ಮನೆಯ ಹಿಂದುಗಡೆ ಆದರೆ ಒಳ್ಳೆಯದು (ಅಕುಶ. ೦೨೬) ; ನಿಮ್ಮನ್ನೆಲ್ಲಾ ನೋಡಿಕೊಂಡು ಹಿಂದುಗಡೆ ಬರುತ್ತೇನೆಂದು ಬೆಕ್ಕು ಹಿಂದೆ ಹೋಗುತಾ, ತಾನೇ ಹಿಂದೆ ನಿಂತ ಒಂದು ಇಲಿಯನ್ನು ಬಕ್ಕನೆ ಬಾಯಿಗೆ ಹಾಕಿಕೊಳ್ಳುತಾ ಬಂತು (ಜನಪಂ. IV, ೫೬).

[ ಪಿಂದು (<ಪಿಂತು)+ಕಡೆ₁ ]

**ಪಿಂದುಗಳೆ**, **ಹಿಂದುಗಳೆ** (ಕ್ರಿ). ೧. ಹಿಂಜರಿ; ಹಿಂದೆಗೆ; ಹಿಮ್ಮೆಟ್ಟು. ೨. ತಿರಸ್ಕರಿಸು; ಜರೆ ; ಹೀಯಾಳಿಸು : ಕಂದರ್ಪನಂ ಪಿಂದುಗಳೆವೆದಮಂ ತಳೆದು ನಿಂದ ರಾಜಪುತ್ರರಿಂದೆ (ರಾಜಶೇ. ೩-೦೯ ಪ). **ಹಿಂದುಗಳೆ**: ೧. ನೊಂದವರು ನಿಲಿ ಸ್ವಾಮಿಕಾರ್ಯಕೆ ಹಿಂದುಗಳೆದರು ಮರಳಿ (ಕುಮ್ಯಾ. ೬-೨೮) ; ಈಗಳಾನೆಂತು ರಣಕೆ ಹಿಂದುಗಳೆದಪೆನು (ಕೃಪಾಮಾ. ೨೩-೦೦).

೨. ಕೋಪಿದರು ಪೇಳಿಂದೆನಲವರ ನುಡಿಯನು ಹಿಂದುಗಳೆಯಲಮ್ಮದೀ ರಾಮನಾಥನ ಸಂದ ಕಥೆಯನು ಸುರಿದೆನು (ಕುರಾಕಾಂ. ೦-೩೩) : ಬುದ್ಧಿಯನು ಹೇಳಿದರೆ . . . ಹಿಂದುಗಳೆಯದಿರು ಮಗನೆ (ಹುಕಾಂ. ೦-೯೯): ಹಿಂದುಗಳೆಯದಿರೆನ್ನ ಮಾತನು (ಕೃಬಾ. ೨೬-೩೦). ೩. ಅತಿಕ್ರಮಿಸಂ ; ಮೀರು : ತರಣಿಯ ಕೇರ ತೇಜಿಯ ಹಿಂದುಗಳೆವ ಸಾಸಿರಘೋಟಕಾನ್ವಿತರಥವ ಭರವಸದಿಂದೇಜ್ ತೆರಳಿದ ಶೋಣಿತಪುರಪತಿ ವಾದ್ಯಘೋಷದಲಿ (ಕೋಶಕ. ೪೦-೩). ೪. ಮುಗಿದು ಹೋಗು : ತೀರು: ತನಗಿಂದು ಮೂವತ್ತಾಜುವತ್ಸರ ಹಿಂದುಗಳೆದವು (ಸಂಹಕ. ೩-೨೨). ೫. (ಸಮಯವನ್ನು) ದಾಟು ; ಕ್ರಮಿಸು : ಬಂದೊಂದುದಿನವನೊಂ ದೊಂದುವರುಷವಾಗಿ ಹಿಂದುಗಳೆದು ರಾಯ ತನ್ನ ಇಂದುಮುಖಿಯ ನೋಡುವ ಕಡುಕಾತುರದಿಂದ ದುರ್ಗಕೆ ತೆರಳಿದನು (ಕುರಾಕಾಂ. ೩೪-೩) ; ಹಿಂದುಗಳೆದಳು ಬಾಲ್ಯವನು ಪಿತೃಮಂದಿರದಲಿರಲು ಯವ್ವನ ಕಂದೆಜದುದು (ಶಿಕಾಗ. ೪-೩-೦೦). [ ಪಿಂದು (<ಪಿಂತು) + ಕಳೆ$_1$ ]

**ಪಿಂದುಗೆಯ್** (ಕ್ರಿ). ಹಿಂದೆ ಉಳಿಯುವಂತೆ ಮಾಡು ; ಹಿಂದೆ ಹಾಕು : ಬಳನಂ ರಾಜ್ಯೋಚಿತಸುಖದೊಳೆಲ್ಲಿಯುಂ ಪಿಂದುಗೆಯ್ಯಲಜಿಯದನೆಯ ದೇಂ ಗಳ ಪರಲೋಕದ ಸುಖಮಗ್ಗಳವೇಂ ಬಲುಪಿಂದೆ ಪಿಂದು ಗೆಯ್ವುದು ಗುಣಮೇ (ಹರಿವ. ೪-೬೩), ಅದು ಪಿಂತಾಗಿರೆ ಮತ್ತಮೊಂದು ಶರಮೆಯ್ದತ್ತುಂತದಂ ಪಿಂದುಗೆಯ್ದುದಜಾತ್ಮಂ ಪೆಜತೊಂದು ಮಾರ್ಗಣ ಮಳುಂಬಂ ಪಾಯ್ದುದು (ಕಜಂ. ೪-೪೦). [ಪಿಂದು (<ಪಿಂತು) + ಕೆಯ್$_1$]

**ಪಿಂದುಗೊಳ್**. ಹಿಂದುಗೊಳ್ (ಕ್ರಿ). ಹಿಂಬಾಲಿಸು ; ಅನುಸರಿಸು : ಎಯ್ದಿದತ್ತು ತತ್ತರುಣಿಯ ಪಿಂದುಗೊಂಡಖಿಳಬಂಧುಜನಂ ಪಿತೃಮಾತೃ ಸೋದರರ್ (ದಹಕ. ೯-೦೦) ; ಕಾಮರ್ಗಗಿಲ್ಗೆ ಕಬ್ಬುಬಿಲ್ಲಂ ಕೈವೀಸಿ ಕರೆದು ಕಳುಪಲೊಡನೆ ತಾನುಂ ಸಂಗಡಮಾಗಿ ಪೋಗಿ ಪೊತ್ತೆತ್ತುವ ಗಂಧವಹನ ಪಿಂದುಗೊಂಡು ಮಂಡಳಿಸಿ ಮಜ್ಮುಗಿಲಂತೆ ಪಾರ್ವ ಮದಮಧುಕರ ಪ್ರಕರದಿಂ (ರಾಶಕ. ೦-೦೩೩ ವ). **ಹಿಂದುಗೊಳ್** : ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸುಧೆಯೆ (ಬಸಕ. ೩-೩೨) : ಬಂದುದೀ ಮೃಗಪೋತ ಭೀತಿಯ ಮಂದಗತಿಯಲಿ ಮೃಗಸುನೇತ್ರಿಯ ಹಿಂದುಗೊಂಡು[ಪಾಠಾಂ. ಹಿಂದಣೊದ] (ಕೊಶಾ. ೩-೪-೨೯) ; ಒಡೆಯನ ಲಲಿತಮೂರ್ತಿಯುಸಗಲ ಲಾಜದೆ ಹಿಂದುಗೊಂಡಳುತ ಕೊಳಲಿ ಬರುತ (ಶಿಕಾಗ. ೩-೨-೩೦); ಗೀರ್ವಾಣ ಪತಿನಂದನಂ ಬಹಳದೇಶವನಪರ್ವತನದೀನದಂಗಳನುತ್ತರಿಸಿ ಕಾದುರೆಗಳ ಹಿಂದುಗೊಂಡು ಬರಲು (ಕೃಬಾ. ೨೯-೩).

[ ಪಿಂದು (<ಪಿಂತು) + ಕೊಳ್$_1$ ]

**ಪಿಂದುಳ್**, ಹಿಂದುಳಿ (ಕ್ರಿ). ಹಿಂದೆ ಉಳಿ,—ನಿಲ್ಲು ; ಹಿಂದಾಗು : ಮುಂದಾಗಿ ದಿನಪನುದಯಾನಂದದೊಳಸ್ತಮಯಸಮಯದೊಳ್ ಸಂಜೆ ಕರಂ ಪಿಂದುಳ್ದುದಂತೆ ಕೆಂಜೆಡೆವಂದಾದುದಯದೊಳ್ ಸಾರ್ವರೆಡೆ ಜ್ಯೋಳಗಲ್ವರ್ (ಕಾವ್ಯಾ. ೯೯೯ ಟಿಪ್ಪಣಿ) : ಬಗೆವರ ಬಗೆ ಪಿಂದುಳ್ಯೆ . . . ಮುಗಿಲ ಪೊಜ್ಯೆಯಿಂ ಸುರಿವ ಮುತ್ತುಗಳಂ ಕಾರ ಮಿಂಬನಿಯ ತಂದಲೆಂದು ಬಂದು ನುಂಗಲಂಗೈಸುವ ಚಾದಗೆಯ ಪಜ್ ಗಳುಮಂ (ಕಬ್ಬಿಗ. ೨೩೪). **ಹಿಂದುಳಿ** : ಸಕಲೇಂದ್ರಿಯಗಳುಬ್ಬಟೆ ಬಲಿದ ವಿವರುಪಚಾರದಲಿ ಹಿಂದುಳಿದುದುಗ್ರತಪಃಪ್ರಭಾವದ ಬೆಳಗು ನಿಮಿಷದಲಿ (ಕೊಶಾ. ೦-೩-೩೩) : ನಾವು ನಾಳೆ ಹಿಂದುಳಿಯಬಾರದು ಕದನಕನುವಾಗಿರಲಿ ಪಾಯದಳವೆಂದು ನುಡಿದಂ(ಕೃಬಾ. ೦೬-೩೦) : ಸಭೆಯೊಳು ಮೇಲಿದ್ದು ಕಣಿವನು ಬಹುಭಾಷಿ ಹಿಂದುಳಿವನು ಮಿತಭಾಷಿ (ಸಂಶಾಕ. ೨೦೩-೬೩).

**ಹಿಂದುಳಿದ ಹಂಗಡ–ಪ್ರಗತಿಗೆ** ಸಹಾಯಹೊಂದದಿರುವ ಗುಂಪು : ಮಿಡಲ್‌ಸ್ಕೂಲಿನಲ್ಲಿ ಸ್ಕಾಲರ್‌ಷಿಪ್ಪುಗಳ ಹಂಚಿಕೆ ಹಿಂದುಳಿದ ಪಂಗಡಗಳಿಗೆ ಇವೆಯಲ್ಲ (ಕಂಗಳ. ೦೦೪). **ಹಿಂದುಳಿದ ಪ್ರದೇಶ–ಪ್ರಗತಿ**ಯಾಗದಿರುವ ಪ್ರಾಂತ,—ಸ್ಥಳ ; ಕೆಳಮಟ್ಟದ ಅಥವಾ ಹೀನಸ್ಥಿತಿಯಲ್ಲಿರುವ ಪ್ರದೇಶ : ಹಿಂದುಳಿದ ಪ್ರದೇಶಗಳಲ್ಲಿ ಅಡುಗೆಮನೆಯ ಹೊಗೆಯು ಒಂದು ಜಾಗತಿಕ ಸಮಸ್ಯೆಯಾಗಿರುವುದರಿಂದ . . . "ರಾಜೂಚೂಲಾ" ಅನೇಕ ದೇಶಗಳಲ್ಲಿ ಜನಪ್ರಿಯವಾಗುತ್ತಿದೆ (ಅಹುಶ್.೨೨).

[ಪಿಂದೆ (<ಪಿಂತೆ$_1$) + ಉಳ್$_1$]

**ಪಿಂದೆ** 'ಪಿಂತೆ$_1$' ನೋ.

**ಪಿಂದೆಗೆ**, ಪಿಂತೆಗೆ, ಹಿಂದೆಗೆ (ಕ್ರಿ). ೧. ಹಿಂದಕ್ಕೆ ಸರಿ ; ಹಿಂಜರಿ ; ಹಿಮ್ಮೆಟ್ಟು : ಪೊಗುವ ಕೊಡಂಕುಮೆತ್ತುವ ಬದಿರ್ಚುವದಿರ್ಚುವ ಪಾಯ್ವ ಪೊಯ್ವ ಪಿಂದೆಗೆವ ಮರಲ್ವ ಮೇಲ್ವರಿವ . . . ಬಿನ್ನಣಮೊಪ್ಪೆ ಪಗಲ್ತು ಕಾದಿದರ್ (ಕಜಂ. ೪-೬೪) ; ರಾಯನ ನುಡಿಗಾನು ವಿನಯಗೂಡಿ ಪಿಂದೆಗೆ ದಿರೆ ಪಟ್ಟದರಸಿ . . . ಕಟ್ಟಾಣಿ ಪೆಣ್ಮಣಿಯೆ ಬಾರೆಂದು ಮಂದಕೆ ಬರಿಸಿದಳು (ಹರಿಶ. ೧-೨೬). **ಪಿಂತೆಗೆ** : ೧. ಯುಕ್ತಾಯುಕ್ತವಿವೇಕಕ್ಕೆ ಪಿಂತೆಗೆದು ಉನ್ಮತ್ತನಂತಚ್ಚಬೆಳ್ದಿಂಗಳೊಳೊಯ್ಯನೊಯ್ಯನೆ ಬರುತಿರ್ದ ನನಾಂ ದೂರದೊಳ್ ಕಂಡು (ಕಾದಂಬ. ೩೬೩) : ಅತಿಭೀತಿಯಿಂದನಾಗೆಟ್ಟು ಪಿಂತೆಗೆಯದೆ ಮಿತಿಮಿಜ್ ಮೇಲುವರಿಯದೆ . . . ಪತಿಸೇವೆಗೈದು ಬಾಳುವುದು (ಹರಿಶ. ೩-೩೦). ೨. ಹಿಂದಕ್ಕೆ ತೆಗೆದುಕೊಳ್ಳು : ಆ ಕ್ರೋಡನುರುತರಕ್ರೋಧವಿಹ್ವಲನಾಗಿ ಮುಂಗಾಲ್ಗಳಂ ಪಿಂತೆ[ಪಾಠಾಂ.ದೆ] ಗೆಯದಿದಿರ್ಕೈದಿ (ಮುಹಾಶ. ೭-೨೪). **ಹಿಂದೆಗೆ** : ೧. ಶ್ರೀಮಂತರಾದ ಪಾಂಡವರು . . . ಹಿಂದೆಗೆಯದೇ ಯುದ್ಧವನ್ನು ಮಾಡುವವರು (ಕೃಶಾಲೀ. ೦೦೪): ಚೋಳರಾಜಾಧಿರಾಜನು ಯುದ್ಧದಲ್ಲಿ ಗಾಯಗೊಂಡು ಹಿಂದೆಗೆದನು (ಶೋಳಂಶ. ೩೦): ಹಾದಿಯಲಿ ಹಳ್ಳವಿದೆ ಮುಳ್ಳಿಡಿದ ಕೊಳ್ಳವಿದೆ ಎಂದಳುಕಿ ಹಿಂದೆಗೆಯದಿರು (ಶಾಂಕಶ. ೪೬-೧೩) : ವಿಜಯ ದುರ್ದೈವದ ದಂಡು ಹಿಂದೆಗೆಯಿತು (ಶಂಕಾಕ. ೩೨-೪೬). [ಪಿಂ (<ಪಿನ್) + ತೆಗೆ$_1$]

**ಪಿಂದೆಸೆ**, ಹಿಂದೆಸೆ (ನಾ). ಹಿಂದಿನ ಭಾಗ; ಹಿಂಭಾಗ : ಮುಗ್ಗುರಿಸಿ ನಿಲ್ಲುತುಂ ಪಿಂದೆಸೆಗೆ ನೋಡುತುಂ . . . ಮುಂಬರಿದನೆಂತಾನುಮೆದೆಯ ಚಾಂಚಲ್ಯಮಂ ನಿಗ್ರಹಿಸಿ ವ್ಯಗ್ರಮನದಿಂ (ಶತ್ರುಂಗ. ೩೧-೦೩೮) ; ಮುಂದಕೆ ಪೋಪುದು ತನುವಿದು ಪಿಂದೆಸೆಗೋಡುವುದು ಬಳಕಗೈದದ ಮನವೇನೆಂದಪೆನೊ (ಶಾಕುಂತ. ೧೮-೩೪). **ಹಿಂದೆಸೆ** : ಪೂರ್ವ ಆದಿಯ ಇಷ್ಟದಲ್ಲಿ ಮಧ್ಯಭಾವ ಅತ್ತನಲ್ಲಿ ಉತ್ತರ ತಾತ್ಪರ್ಯದಲ್ಲಿ ಮೆಟ್ಟಿ ನೋಡಲಾಗಿ ಹಿಂದೆಸೆಯಲ್ಲಿ ಕಂಡೆ (ಕೋಳಕಶು. ೧೪೪-೩೬೬): ತತ್ ಸರಸಿಜಾನನೆ ಪಲ್ಲಭನ ಹಿಂದೆಸೆಯೊಳಿರುತಿರಲು (ಅಸತ್ತು. ೪೨-೩೬).

[ಪಿಂ (<ಪಿನ್) + ದೆಸೆ$_1$]

**ಪಿಂದೈದು** 'ಪಿಂದಯ್ದು' ನೋ.

**ಪಿಂದೊಡೆ**, ಹಿಂತೊಡೆ (ನಾ). ತೊಡೆಯ ಹಿಂಭಾಗ, – ಹಿಂಬದಿ : ಮೋದೆ ಸಿತಾಸಿಯಿಂ ಪಜ್ಯೆ ಕೈ ಕೆಲವಂದು ಮಹಾವರಾಹನಂತಾದುವು ಕೂಡೆ ಕಾಳ್ಕಿಜ್ಸೆ ಪಿಂದೊಡೆಗಳ್ ಕೆಲವೇಕದಂತನಂತಾದುವು (ಶಂಕ್ರಶು. ೧೦-೯೬). **ಹಿಂತೊಡೆ** : "ತೊಡೆಯ ಹಿಂಭಾಗ ; ಹಿಂತೊಡೆ : ಹಿಂತೊಡೆ ಮತ್ತು ಪಿರ್ರ" (Ham. ೩೦೪೨). [ಪಿಂ (<ಪಿನ್) + ತೊಡೆ$_1$]

**ಪಿಂಪಿಣಿ** (ನಾ). ಹಿಂಭಾಗದಲ್ಲಿರುವ ಜಡೆ : ಮುಗುದೆಯಮಿಂದುವದನೆ ಪಿಂಪಿಣಿಯಿಂದೊಗೆದಿಳಿದು ಮುತ್ತಿನ ಬಟ್ಟೊಪ್ಪಿತ್ತಗಲದೆ ಪಿಂತಣ ದೆಸೆಯಿಂ ತಾಳಿದ ರಾಹುವಿನ ನಾಲಿಗೆಯಂತೆ (ಜ್ಞಾಶಕಂ. ೬-೬೪).

[ಪಿಂ (<ಪಿನ್) + ಪಿಣ್$_1$. / ತೆಲು. ಪಿಂಪಿಣೀ = ನಾಲ್ಕು ಕಾಲಿನ ಜಡೆ]

**ಪಿಂಬಕ್ಕ** (ನಾ). ಓಂಬದಿ ; ಹಿಂಭಾಗ : ಪೊಂಚೆಸದ ಬೆಸುಗೆಯ ಪಿಂಬಕ್ಕ [ಪಾಠಾಂ. ಪೆಂಪಿಂ ಚಬುಕ]ದೊಳ್ ನಿಗುಂಬಿಸಿದ ಕರಿಯ ಬೀಳಿಯ ರ್ಷುಲ್ಲರಿಯ ಪುಲ್ಲಿಯ ಕದಳಿಕೆಯ ಕಡುಪಿನಿಂ (ಅಶಂಪು.೧೪-೬ ವ).

[ಪಿಂ (<ಪಿನ್) + ಪಕ್ಕ]

**ಪಿಂಬಗಲ್**, ಪಿಂಬಗಲು, ಹಿಂಬಗಲು (ನಾ). ಹಗಲಿನ ಕಡೆಯ ಭಾಗ ; ಸಂಜೆ : ಬಳೆದ ವಿಮೋಹದಿಂ . . . ಕರುಣಂ ಪಿರಿದಾಗಿ ಪಿಂಬಗಲ್ ಕಳೆ ವಿನವಿರ್ದನಾ ಪರಮಯೋಗಿಗಮಂತಟು ಮೋಹಮಾಗದೇ (ಸುಕುಸು. ೪-೬೩) ; ಜಾಂಬವನಂ ಪಿಂಬಗಲಾದಿತ್ಯನಂತೆ ತೇಜಂಗಿಡಿಸಿ (ರಹುಕು. ೭-೯೩) ; ಮುಂಬಗಲ್ ಪಿಂಬಗಲ್ ಸುಳಿಸುಳಿವ ತಂಬೆಲರ್ ಚೆಂಬೊನ ಕಂಬಿಡುವ ಬೆಟ್ಟಗಳ ಸಾಲು (ಜಾಬುರ. ೫೩-೦೨). **ಪಿಂಬಗಲು** : '' ಪಿಂಬಗಲಿನಲ್ ಸಾಯಾಹ್ನಾಭಿಧಾನವು '' (ಕಶಕ. ೬೫). **ಹಿಂಬಗಲು** : ಉದಯಾದಿ ಸಾಧನೆ ಹಿಂಬಗಲೋದು ನಕ್ಷದೊಳೋದಿದೋದಿನ ಚಿಂತೆ ವ್ಯದುವ್ಯದುವಾಗಿ ನಡೆವುದು (ಕಶಕ. ೨೭-೯೧) ; ನಾಳೆ ಹಿಂಬಗಲವರೆಗೆ ಹರಿಬಕ್ಕೆ ನನ್ನತ್ರ ಉಸಿರೆತ್ತುವುದಿಲ್ಲವೆಂದು ನೀವು ಪ್ರತಿಜ್ಞೆ ಮಾಡಿ ಕೊಟ್ಟರೆ ಮಾತ್ರ ಈಗ ನನ್ನ ಮರುನುಡಿಯುಂಟು (ಹುಂತ್ರಕ. ೩೫-೩). 'ಮುಂಬಗಲ್' ಪರಾ. [ಪಿಂ (<ಪಿನ್)+ಪಗಲ್]

**ಪಿಂಬಗಲು** 'ಪಿಂಬಗಲ್' ನೋ.

**ಪಿಂಬಡು**$_1$ (ಕ್ರಿ). ಹಿಂದೆ ಹೋಗು ; ಹಿಂಬಾಲಿಸಂ ; ಅನುಸರಿಸಂ : ತನ್ನಿಟ್ಟೆಯಿಂ ಮುಂತೆಮುಂತೆ ಪೋಪೋಪ ಕುದುರೆಗೆ ತಿಂಗಳೆಂಬಾಗಲೊಡಂ ಅಂಗವಂಗಾದಿ ದೇಶಂಗಳ್ ಕಂಗೆಟ್ಟು ಕಪ್ಪಂಗೊಟ್ಟು ಪಿಂಬಟ್ಟೋಲ ಯಿಸುತ್ತ ಬರುತವಿರ್ಪುದುಂ (ಲಕುಮ. ೧೩೪-೧).
[ಪಿಂ (<ಪಿನ್)+ಪಡು$_1$]

**ಪಿಂಬಡು**$_2$ (ನಾ). ಅನಂತರ ; ತರುವಾಯ ; ಎನ್ನ ಪಿಂಬಡಿನೊಳ್ [ನನ್ನ]ನಯ್ಯ ನಿಮಗಂ ಮಗನಲ್ಲನೆ ಧರ್ಮನಂದನಂ (ಪಂಪಭಾ. ೦೩-೫೮); ಕಾಸನರ ಧೀಮಂ . . . ತಳ್ಳಿಜಿದು ಸುರಲೋಕಕ್ಕೆ ಸಂನ್ನನಾತನ ಪಿಂಬಡಿ ನೋಳಾತನ ಮಗಂ ಕಚ್ಚವರ ಕರಮನ್ನ ಕಲ್ಲ ನಿಜಿದಮ್ಮಂಗಳ (ಎಕ. VIII (೩). ಸೊರಬ. ೫೭೩-೫ ; 981) : ಬರಲವರ್ ಪಿಂಬಡಿಂ ಮುನ್ನಮಾನೈದುವೆನ್ (ಕ್ರಿಣಸು. ೦೨೭-೨೯) [<ಪಿಂಬಡು$_1$]

**ಪಿಂಬರೆಯ** (ನಾ). ಕಳೆದು ಹೋದ ತಾರುಣ್ಯ ; ಹಿಂದಕ್ಕೆ ಸರಿದ ಯೌವನ,-ಪ್ರಾಯ ; ತರುವಲಿ ಬೇಡ ಪಿಂಬರೆಯದಂಗನೆಯಾದೊಡೆ ಬೇಡ ಜವ್ವನಂ ಗರಗರನಪ್ಪ ಸೊಂಪುತನವುಳ್ಳವಳಾದೊಡೆ ಬಂದು ಮುಂದೆ ಸಂಚರಿಸುಗೆ (ಸೂಕ್ತಿಸು. ೮-೪೦೭).
[ಪಿಂ (<ಪಿನ್)+ಪರೆಯ$_2$ (<ಪರಯ)]

**ಪಿಂಬವಣೆ** (ನಾ). ಹಿಂದೆ ಅನುಭವಿಸಿದ ಕಷ್ಟ,-ಬವಣೆ : ಶಂಬರ ಶರ ನಿಧಿಯೊಳು ತನ್ನ ಕೆಡಹಿದ ಪಿಂಬವಣೆಯನು ತೋರುವರೇ ಚೆಂಬಣ್ಣ ಗಂಧೋದಕದಲ್ಲಿ ಸ್ಮರ ತನ್ನ ಕುಂಭಕುಚೆಯನು ನೂಂಕಿದನು (ನೇಮಿಜಿ. ೦೪-೭೭). [ಪಿಂ (<ಪಿನ್)+ಬವಣೆ]

**ಪಿಂಬಳಿ**, ಹಿಂಬಳಿ$_1$, ಹಿಂಬಟಿ (ನಾ). ೧. ಹಿಂದಿನ ಸ್ಥಳ ; ಹಿಂಬದಿ ; ಹಿಂಭಾಗ : ಅರಲಂಬುಗಳಿನಾದಮಿಡಿದ ಬತ್ತಳಿಕೆ ಭುಜಶಿರದ ಪಿಂಬಳಿ ಯಲ್ಲಿ ಕಣ್ಗೊಳಿಸಲು . . . ಸುಮದ ರಾಜನ ಮೇಲೆ ದಾಳಿಟ್ಟನು (ಕೀಶಕಾ. ೭-೨೭). **ಹಿಂಬಳಿ**$_1$ : ೧. ಕಲು ಹಾಯು ಹಿಂಬಳಿಯನಲುವಂಕಿರಲುದು ಸೌಂದರಗಣಾಧೀಶ್ವರಂ ಬೆಂಬಿಡಿದು ಬಂದು (ಶಾಂತಪು. ೧೧-೦೨). **ಹಿಂಬಟಿ** : ೨. ಪರೋಕ್ಷ : ಪರೋಕ್ಷೇ=ಹಿಂಬಟಿಯೊಳ್ (ಪಿಕಿನಾ. ೫೦-೪). [ಪಿಂ (<ಪಿನ್)+ಬಳ್$_3$ (<ಬಳ್$_3$)]

**ಪಿಂಬಜಿಗೇಸ** (ನಾ). ಹಿಂಭಾಗದ ಹರುಕು ಹರಕಾದ ಕೂದಲು : ಓಜಿವರಲ್ ಬತ್ತಿದ ಕಾಲ್ ಪಿಂಬ[ಪಾಠಾಂ. ಸಿಂಪಿ]ಜಿಗೇಸಂ ನೆಕ್ಕ ಕದಪು ಪೊಕ್ಕಿರ್ದ ಬಸಿಜ್ ತೆಜಿದ ಮುಖಕುಹರವರ್ಬಿಸೆ ಪಿಜಿಶಿನಿಗಳ ಬಳಗ ಮೆಯ್ದು ತಂದುದು ಮುನಿಯಂ (ಅನ್ನಾಪ. ೪೫೦).
[ಪಿಂ (<ಪಿನ್)+ಪಜ್$_1$+ಕೇಸ$_2$]

▲**ಪಿಂಬಾಲಿಯು** 'ಹಿಂಬಾಲಿಸು' ನೋ.

**ಪಿಂಬೂಣಿಸು** (ಕ್ರಿ). ಹಿಂದಿನಿಂದ ಬಾಣ ಬಿಡು : ಎಣದ ಮುನಿನಾಥ ಕಾಣುತ ಬಂದು ಪಿಂ(ಪಿಂ)ಬೂಣಿಸಿ ನಿಂದ ಪೇಟಕನ ಕಾಣುತ (ಕ್ರಿಣಸು. ೩-೦೪೪). [ಪಿಂ (<ಪಿನ್)+ಪೂಣಿಸು]

**ಪಿಂಬೆದೆ**, ಹಿಂಬೆದೆ (ನಾ). ಬಿತ್ತನೆ ಮಾಡಬೇಕಾದ ತರುವಾಯದ ಕಾಲ ; ಬಿತ್ತನೆ ವೇಳೆ ಮೀರಿದ ಕಾಲ : ಪಿಂಬೆದೆ, ಪಿಂಬೊಟ್ಟು (ಕಮಕ. ೦೬೬ ಕೃಷೋ). **ಹಿಂಬೆದೆ** : ಹಿಂಬೆದೆಯೊಳಗೆ ಬಿತ್ತಿದ್ದರಿಂದ ಸರಿಯಾದ ಬೆಳೆಯಾಗಲಿಲ್ಲ (ಊತಿ). [ಪಿಂ (<ಪಿನ್)+ಬೆದೆ]

**ಪಿಂಬೊಟ್ಟು**, ಹಿಂಬೊತ್ತು (ನಾ). ೧. ಮುಳುಗುತ್ತಿರುವ ಸೂರ್ಯ ; ಸಂಜೆಯ ಸೂರ್ಯ : "ಪಿಂಬೊಟ್ಟಿಂದು ಪಡುನೇಸಟ್" (ಕಶಹಾ. ೫೭-೨೫೩) ; ಅಂಗಯತ್, ಅಂಗಾಲ್ . . . ಪಿಂದೆದೆ, ಪಿಂಬೊಟ್ಟು (ಕಮಕ. ೦೬೬ ಕೃಷೋ). ೨. ಹಿಂದಿನ ಕಾಲ ; ಪೂರ್ವ ಕಾಲ : ಕುರುರಾಯಂ ಬಹುವಿತ್ತಮಂ ಕುಡುವನಾ ಕರ್ಣಂಗೆ ಮತ್ತಾ ಸಹೋದರರ್ಗೆ ಪಾಂಡ ವರ್ಗೇನುಮಂ ಕುಡನದೇಂ ಪಿಂಬೊಟ್ಟಿನೊಳ್ಕರ್ಣನುರ್ವರದಾರಿದ್ರನೆನಲ್ಕೆ ಸಂದಂ (ಕಣ್ಣಕ. ೪೮). **ಹಿಂಬೊತ್ತು** : ೩. ಸಂಜೆ ; ಸಾಯಂಕಾಲ : ಉಪ್ಪರಿಗೆಯನೇಜ್ ಹಿಂಬೊತ್ತಿಗಾನಂದದಿಂದದ್ಭಿಯ ನೋಳ್ಪ . . . ಏಳರಂದೆದ್ದನಬಲೆಯರ್ವೆರಸಿ (ಕಶಕ. ೨೩-೫೫).
[ಪಿಂ(<ಪಿನ್)+ಪೊಟ್ಟು]

**ಪಿಕ್‌ನಿಕ್** 'ಪಿಕನಿಕ್ಕು' ನೋ.

**ಪಿಕ್‌ಪಾಕೆಟ್ಟು** (ನಾ). ಜೇಬಿನಲ್ಲಿರುವ ಹಣ ಅಥವಾ ಹಣದ ಪಾಕೆಟ್ಟನ್ನು ಅಪಹರಿಸುವಿಕೆ ; ಜೇಬುಗಳ್ಳತನ : ಬಸ್ಸಿನಲ್ಲಿ ಬರುತ್ತಿದ್ದಾಗ ಅಂಗಿಯ ಒಳಜೇಬನ್ನೇ ಕತ್ತರಿಸಿ ಪಿಕ್‌ಪಾಕೆಟ್ಟು ಮಾಡಿದ್ದರು (ಊತಿ).
[←ಇಂ. Pick Pocket]

**ಪಿಕ** (ನಾ). ಕೋಗಿಲೆ ; ಕಳಕಂಠ : '' ಅನ್ಯಭೃತಃ, ಪರಪುಷ್ಟ, ಕಳ ಕಂಠಃ, ಕೋಕಿಲಃ, ಪಿಕಃ—ಈ ೫ ಕೋಗಿಲೆ '' (ಕರಾಮು. ೧೦-೯೩) ; ತನಿಮಾಲನುಂಡು ಬಳೆವರಗಿಳಗಳಿಂಕಿನಿಂ ಕೊನರಂ ಕರ್ದುಂಕಿ ಕೂಗುವ ಪಿಕದ ಸೊರ್ಕಿನಿಂ (ಪಮಕ. ೭೬. ೨-೦೨) ; ಪಿಕ ಶುಕ ಕೋಕ ಸಾರಸ . . . ಕುರಗೀಪ್ಸಪ್ರಕರದಿಂದೆ ವಿರಾಜಿತಮಾಯ್ತು ವನಂ (ಶಬ್ದಾಕ. ೪-೬೩); ಶುಕ ಪಿಕ ವಿಹಂಗ ಗೀತಾಂಜಲಿಯನರ್ಪಿಸುತೆ . . . ಪ್ರಕೃತಿದೇವಿಯು ತಾನು ರತಿಯ ರೂಪದಿ ನಿನ್ನ ಪೂಜಿಸುವಳನುದಿನಂ ! (ಅಣ್ಣಂಗ. ೦೬-೧೧೦).
[ಸಂ.]

**ಪಿಕನಿಕ್ಕು**, ಪಿಕ್‌ನಿಕ್ (ನಾ). ವನಭೋಜನ ; ಬಯಲೂಟ : ಮಕ್ಕಳು ಸ್ಕೂಲಿನಿಂದ ಪಿಕನಿಕ್ಕಿಗೆ ಹೋಗಿದ್ದಾರೆ (ಊತಿ). **ಪಿಕ್‌ನಿಕ್** : ಬಹುದಿನಗಳ ಹಿಂದೆ ನಾವೆಲ್ಲ ಪಿಕ್‌ನಿಕ್ ಹೋಗಿದ್ದಾಗ . . . ಗೋವಿಂದ ತನ್ನ ಫೋಟೊ ತೆಗೆದಿದ್ದುದು ಅವಳ ಜ್ಞಾಪಕಕ್ಕೆ ಬಂತು (ಪಕಾ. ೪೨).
[←ಇಂ. Picnic]

**ಪಿಕನಿಸ್ವನೆ** (ನಾ). ಕೋಗಿಲೆಯಂಥ ಇಂಪಾದ ಸ್ವರವನ್ನುಳ್ಳವಳು : ಪಿಕನಿಸ್ವನೆ ವಧು ತಳ್ಳಿದದ ಕೆಲದೋರೆ . . . ನೃಪನೊಂದೆ ಕೋಂಟು ಕೆಯ್ಯಿಂದ ಚೊತಕಾಮವೊಲಿರ್ದಂ (ಪರ್ವಕ್ತಿ. ೭-೮೮). [ ಸಂ. ಪಿಕನಿಸ್ವನಾ ]

**ಪಿಕಲಾಟ** 'ಪೀಕಲಾಟ' ನೋ.

**ಪಿಕಲಾರಿ**, ಪಿಕಳಾರ, ಪಿಕಳಾರಿ (ನಾ). ಒಂದು ಬಗೆಯ ಹಕ್ಕಿ : (೩). **ಪಿಕಳಾರ** ; ಕಾಮಳ್ಳಿ ಕಾಜಾಣ ಪಿಕಳಾರ ಗಿಳಿ ಚೋರ ಕೋಗಿಲೆಗಳುಲಿಹಕ್ಕಿ ನಲಿಯುತಂ (ಅಣ್ಣಂಗ. ೪೨-೦೦೫೬) ; ಕೋಗಿಲೆ ಕಾಜಾಣ ಪಿಕಳಾರ ಕಾಮಳ್ಳಿಗಳ ದನಿಗಡಲಿನ ನಡುವೆ ದೀವಿಯಪೋಲಿಹುದೀ ಪವ್ವಾ ಹೊಸ ಹಳ್ಳಿ (ಪಂಪ್ರಶ. ೦೬೦-೪೦). **ಪಿಕಳಾರಿ** : ಇತರ ಕವನಗಳಲ್ಲಿ ಆಗಾಗ ಶೇಸೆ, ಕಾಜಾಣ, ಗಿಳಿ, ಕಾಮಳ್ಳಿ, ಪಿಕಳಾರಿ, ಕೋಗಿಲೆ, ಮಾಲೆಪಕ್ಕಿಗಳ ಉಲ್ಲೇಖ ಬರುತ್ತಿದೆ (ಪಾಕಪು. ೪೩). [ <ಪಿಕಳ ? ]

**ಪಿಕಳ, ಪಿಕ್ಕಳ** (ನಾ). ಒಂದು ಬಗೆಯ ಹಕ್ಕಿ : ಗರುಡಂ . . . ಪಿಕಳಂ ಬಕಂ ಶಿಖಿ ಶುಕಂ ಬಾನಾಡಿ ಪರ್ಬಕ್ಕಿ ಹೆಂಗುರು ಕಾಕಂ ಚಿಲುಕಗೂಲಿ ರತ್ನ ಖಗಮಿಕರ್ಗಂ ತದ್ವನಾಭೋಗದೊಳ್ (ರಾಜಶೇ. ೩-೩೯); " ಕಾಗೆ " (ರಾಜಶೇ. ೮೦೩), ಗರುಡಂ ಗೀಜಗನಂಚೆ ಸೋರೆ ಪಿಕಳಂ [ಪಾಠಾಂ. ಶಿಕಂ] ಕಾಕಂ ಬಕಂ . . . ಚಿಲುಕಗೂಲಿ ಚಾತಕಮಮಿಕರ್ಗಂ ತತ್ಪುರುವಾಪ್ರಾಂತದೊಳ್ (ಪುರಶಂ. ೪-೪೬). **ಪಿಕ್ಕಳ** : ಪಿಕ್ಕಳದ್ವಿತಯು ಲಾವುಗೆ ತೋರ ಗಿರುಡೆಯು ಕುಕ್ಕುಟ ತಗಜು ಕಿರೀಣಗಳ ಸೊಕ್ಕಿನಗಳ ಕಾದಿಸುತಿರ್ದ ದೊರೆಗಳ ಮಕ್ಕಳ ಕೂಡೆ ಬೀದಿಯಲಿ (ಕೋಹಕ. ೦೭-೬೨); ಶುಕ ಪಿಕ ಕೇಕಿ ಕಾರಂಡ ಕೆಂಬೂತ ಕಾಗೆ . . . ಕಾಡ್ಗೋಳಿ ಪಿಕ್ಕಳಂ ಕಬ್ಬಕ್ಕಿಗಳ್ ಮೊದಲಾದುವು (ಕವಿಕು. ೨-೦-೦೬). [←ತೆಲು. ಪಿಕಿಲಿ, ಪಿಕ್ಕಿಲಿ]

**ಪಿಕಳಾರ** ' ಪಿಕಲಾರಿ ' ನೋ.

**ಪಿಕಳಾರಿ** ' ಪಿಕಲಾರಿ ' ನೋ.

**ಪಿಕಾಸಿ, ಪಿಕ್ಕಾಸ್, ಪಿಕ್ಕಾಸು** (ನಾ). ಒಂದು ಕಡೆಯಲ್ಲಿ ಚೂಚೂಪಿನ, ಮತ್ತೊಂದು ಕಡೆಯಲ್ಲಿ ಕೆದಕುವ ಮೊನೆಗಳಿಂದ ಕೂಡಿದ, ನೆಲವನ್ನು ಅಗೆಯುವ ಒಂದು ಬಗೆಯ ಸಾಧನ : ಆ ಬಳಿಕ ಮಹಮ್ಮದನು ಪಿಕಾಸಿಯನ್ನು ಹಿಡಿದು ಕಲ್ಲನ್ನೊಡೆಯಲು ಪ್ರಯತ್ನಿಸಿದನು (ಕೃಗಂಬ. ೬೯); ಒಂದು ಪಿಕಾಸಿ, ಗುದ್ದಲಿ ತರಿಸಿರಿ ಎಂದನು (ಶಾಟೀಟು. ೨೯), ಹಾರೆ, ಗುದ್ದಲಿ, ಪಿಕಾಸಿ . . . ರೈತನ ಸಾಧನಗಳೂ ಹೌದು (ಕಶಶೂ. I. ೮೯೯). **ಪಿಕ್ಕಾಸ್** : ಅವರು ಹಾರೆ ಪಿಕ್ಕಾಸ್ ಹಿಡಿದು ಹೊರಟಾಗ ಬೀಜಗಳ ಗಂಟನ್ನಿಟ್ಟು ಬುಟ್ಟಿಯನ್ನು ಮೋಹನ ಹೊತ್ತು ತರುತ್ತಾನೆ (ಪಾಳಿಗ. ೬೮). **ಪಿಕ್ಕಾಸು** : ತೋಟದ ಮಣ್ಣನ್ನು ಆಳವಾಗಿ ಉಳುವ ನೇಗಿಲುಗಳಿಂದಾಗಲಿ, ಪಿಕ್ಕಾಸುಗಳಿಂದಾಗಲಿ . . . ಉತ್ತು ನೆಲದಲ್ಲಿ ಗೊಬ್ಬರವನ್ನು ಬೆರೆಯಿಸಬೇಕು (ಪಾಂಕ್ರ. I. ೨೯೬); ತೋಟದಲ್ಲಿ ಕೆಲಸ ಮಾಡುವ ಹಾರೆ ಪಿಕ್ಕಾಸು ಇತ್ಯಾದಿ ಸಾಮಗ್ರಿಗಳ ಕಳವು ಹೆಚ್ಚಾಗತೊಡಗಿತು (ರಕ್ತರೂ. ೮೯). [ ←ಇಂ. Pickaxe ]

**ಪಿಕಾಳಿ** (ನಾ). ಕೋಗಿಲೆಗಳ ಗುಂಪು,–ಸಮೂಹ : ಇದು ಬನಮಿದು ನೃಪಗೃಹವೆಂಬುದು . . . ಷಟ್ಪದ ಶುಕ ಪಿಕಾಳಿಗೆನೆ ನೃಪಸದನಂ ಸೊಗಯಿಪುದು (ಜಗಪಿ. ೨-೩೬); ತಮಾಳವನಂ ಜಳಬುದ್ಬುದಪ್ರಘೋಷಮನೊಳಕೊಂಡು ಕಟ್ಟಲಿಸೆ ಕಂಡು ಘನಾಗಮಮಾದುದೆಂದು ಸಂಭ್ರಮಿಸಿ ಪಿಕಾಳಿ ಮೂಗುವಡೆ (ಧನ್ಯಕು. ೬-೦೯). [ ಪಿಕ+ಆಳಿ₄ (=ಆಲಿ₄) ]

**ಪಿಕಿ** (ನಾ). ಜೋಗಿಗಳ ಹತ್ತಿರವಿರುವ ಒಂದು ಬಗೆಯ ಕೊಂಬಿನ ವಾದ್ಯ ( ? ) : ಕೊರಲ ಶಂಕಿನ ಸರವೆರಲೆಗೊಂಬಿನ ಪಿಕಿ [ಪಾಠಾಂ. ಕಿ] ಸೋರೆಯೋಡು ಕೆಲದಜಾಮಾಗಿ ಕರದ ತ್ರಿಶೂಲದ ಕಿಜುಜಡೆವೊತ್ತ ಜೋಗಿಗಳರಲೊಪ್ಪಿತು ರುದ್ರಭೂಮಿ (ಶ್ರೀಪಾಂ. ೬-೦೯). [ ? ]

**ಪಿಕೀರು** ' ಫಕೀರು ' ನೋ.

**ಪಿಕೆಟ್** (ನಾ). ಕಾವಲಿಗಿರುವ ಸಣ್ಣ ಸೈನ್ಯ : ಕಾವಲುದಳ : " ಕಾವಲುಪಡೆ, ಗಸ್ತುಪಡೆ ; ತಡೆಕಾವಲುಗಾರರು. ಪಿಕೆಟ್ " (Picket. ಶಬ್ದಕೋ. ೬೨).

**ಪಿಕೆಟ್ ಮಾಡು**=ಕಾವಲಿರುವಂತೆ ಮಾಡು : " ಕಾವಲುಹಾಕು. ಪಿಕೆಟ್ ಮಾಡು " (Picket. ಶಬ್ದಕೋ. ೬೨). [ ←ಇಂ. Picket ]

**ಪಿಕೆಟಿಂಗ್** (ನಾ). ಒಳಗೆ ಹೋಗದಂತೆ ಅಥವಾ ಹೊರಗೆ ಬರದಂತೆ ತಡೆಯುವುದು : ಅಂದಿನಿಂದಲೇ ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಪಿಕೆಟಿಂಗ್‌ಗಳು . . . ಆರಂಭವಾಗಬೇಕೆಂದು ಗಾಂಧೀಜಿ ತಿಳಿಸಿದರು (ಆತ್ಮಕ. ೦೩೬); ಮದ್ಯನಿಷೇಧದ ಪಿಕೆಟಿಂಗ್ ನಡೆಸುವಾಗಲೂ ಸಭೆ ಮೆರವಣಿಗೆಗಳನ್ನು ಮಾಡುವಾಗಲೂ ಆತಂಕಗಳನ್ನು ತಂದೊಡ್ಡತೊಡಗಿದರು (ಕುರುಕಾ. ೦೩೨). [ ←ಇಂ. Picketing ]

**ಪಿಕ್ಕ** ' ಪಿಕ್ಕಾ ' ನೋ.

**ಪಿಕ್ಕಮಾತು** (ನಾ). ಹುರುಳಿಲ್ಲದ ಮಾತು,–ನುಡಿ : ಹಿರಿಯರಾಗಲಿ ಕಿರಿಯರಾಗಲಿ ಯಜಮಾನನೊಡನೆ . . . ಪಿಕ್ಕಮಾತುಗಳನ್ನು ಸರ್ವಥಾ ಆಡಬಾರದು, ವಾದಿಸಬಾರದು (ಕುಟುಂಬ. ೩೯).

[ಪಿಕ್ಕ (<ಪಿಕ್ಕಾ) + ಮಾತು₁]

**ಪಿಕ್ಕಳ** ' ಪಿಕಳ ' ನೋ.

**ಪಿಕ್ಕಳಿ** (ನಾ). (?) : ಕಟ್ಟುಗಳ ಮಣಿ ಸಮ್ಮದಕ್ಕಡದ ಪೊಸತೀಲಿಯುಟ್ಟಿಗೆಯ ಪಿಕ್ಕಳಿಯ ಪೂಮುಡಿಯ ಜವ್ವನದ ದಿಟ್ಟವೇಡಿತಿಯರಾಣ್ಮರ ಪಿಂಡೆ ನಡೆದರಟ್ಟಟ್ಟಿ ಮಿಗಗಳ ಕಡಪುತ (ಸುರೇಶ. ೩೨-೨೪). [?]

**ಪಿಕ್ಕಾ, ಪಿಕ್ಕ** (ಗು). ೧. ಕಾಂತಿಹೀನವಾದ ; ದುರ್ಬಲವಾದ; ಅಶಕ್ತವಾದ : (೬). ೨. ಹುರುಳಿಲ್ಲದ ; ನಿಸ್ಸತ್ವವಾದ : (೬). ಪಿಕ್ಕ : ೨. ' ಪಿಕ್ಕಮಾತು ' ಪರಾ. [ ←ಮರಾ. ಫಿಕ್ಕಾ ]

**ಪಿಕ್ಕಾಸ್** ' ಪಿಕಾಸಿ ' ನೋ.

**ಪಿಕ್ಕಾಸು** ' ಪಿಕಾಸಿ ' ನೋ.

**ಪಿಕ್ಕು, ಪಿಕರ್ಗು, ಹಿಕ್ಕು₁, ಹೆಕ್ಕು₁** (ಕ್ರಿ). ೧. ಬೇರ್ಪಡಿಸು; ಪ್ರತ್ಯೇಕಿಸು; ಬಿಡಿಸು; ವಿಭಾಗ ಮಾಡು : "ಪಿಕ್ಕು—ವಿವರಣೇ (ಬಿಡಿಸು)" (ಧಾತು); ಪುದಿದೊದವಿದ ಜನ್ಮಾಂತರಸ್ನೇಹವೊಂದೇ ನುಡಿಯಲ್ ಪಿಕ್ಕಲ್ಕದೊಂದಲ್ತೆ [ಪಾಠಾಂ. ವೈಕಲ್ಪದಂತಲ್ತೆ]ನಲೆಡೆ ಪೆಱರ್ಗಿನ್ನಿಲ್ಲ (ಆದಿಪು. ೪-೨೬); ವಿದುಟಕೋಟೆಗ್ಗಿಸಜಿಯೊಳ್ಪೊಕ್ಕು ಕರುಳ ಮೆದೆಯಂ ಪಿಕ್ಕಿ ಮರಸಿ ಮೋದಿಯುಂ (ಗದಾಯು. ೬-೨೯ ವ); ಈಟ್ಯಂ ಪೆಟ್ಟಿಯ ಮೊತ್ತಮಂ ಕಳೆ ಕಸಂ ನೂಂಕುತ್ತೆಯೆಗ್ಗುತ್ತೆ ಮೇಣ್ ನೋಟ್ಪಾ ಬೀಜವನೆತ್ತಿ ಪಿಕ್ಕಿ ಕಳೆದುಂ ನೂಲ್ಕೂಳ್ಪ ಜಂತ್ರಗಳುಂ . . . ಮೈಸೂರಿನಲ್ಲೊಪ್ಪುಗುಂ (ಮೈಕೂಕು. ೬-೩೬). ೨. (ಕೂದಲನ್ನು) ಸಿಕ್ಕು ಬಿಡಿಸು; ಬಾಚು : ತಲೆಯನಿರುಳ್ಪಿಕ್ಕಿದೊಡೆತ್ತಲಾನುಮೊಂದಲ್ಲಿ ಭಾಗ್ಯಮುಳ್ಳಾ ರೋಮಂ ತಲೆಯಿಂದುದಿದೊಡೆ ಬಟೆಯುಂ ನಿಲಲರಿಯದು ಭಾಗ್ಯಮೆಂಬರಜಿವಿಲ್ಲದವರ್ (ಕಹುಜ. ಆಮುಂಶ. I. ೩೯೩–೯೩) ; ತದ್ರಮಣಿಯ ಕಚಮಂ ಪಿಕ್ಕಿದಳಮಳಿನನಖನಿಕರದಿಂ ವಧೂಮಣಿಯೊರ್ವಳ್ (ಅದ್ಭುರ.೬-೨೩) ; ಸೋಮಾರ್ಗಡಿಯನಾಗಳ್ ಪಿಕ್ಕಿ ಪೂದೊಡಂಬೆಯಂ ಮಾಡಿಯಿಸುವರಾರ್ (ಶಾಕುಂ. ೬೬-೨೨). ೩. ಕಿತ್ತು ಹೊರಕ್ಕೆ ತೆಗೆ ; ಕೀಳು ; ಸೆಳೆ : ಪೆಣದೆರೆಗೆ ಅಲೆತರ್ಪ ರಣಮರ್ಗ ಕರೆಯದೆಯ ಬರ್ಪತಿಥಿ . . . ವಿನತಂಗಪ್ರತ್ಯಂಗಗಳ ಪಿರಿಯ ಅವಶೇಷಂಗಳನೆ ಪಿಕ್ಕಿ ಪಱಿದಿಕ್ಕುವುದು (ಅದ್ಭುತ. ೩೪-೦೦೬); ಎಲ್ಲಮುಮಪ್ ಪೊಲೆಗಲಸಿಯಿರ್ದತ್ತು. . .ಮಗನ ಪೆಣದಿನ್ ಪದರ್ಗಳ್ ನಾಯ್ಗಳುಮಪ್ ಪಿಕ್ಕಿದರೆಯಿನ್ (ಅಂತಿಗೊ. ೯೩-೧೩೯). ೪. ತೆರೆದು ನೋಡು ; ಬಿಡಿಸಿ ನೋಡು ; ಬಗೆದು ನೋಡು : ಮುನ್ನೇಱಿದ ಕೋಡಂ ನೋಡಿ ಹಲ್ಲಂ ಕಿರಿದಗಿದುರವಂ ಪಿಕ್ಕಿ ಪೇನಿಂದೆ ತಿನ್ನುರ್ವಿದ ಮೆಯ್ಯಂ ಕಯ್ಯೊಳೆತ್ತಂ ತುಱುಸಿ . . . ಕುಳ್ಳಿರ್ದುದು ಕೋಡಂ (ಪುಣ್ಯಸು. ೬-೦೯೩). ೫. (ಭೇದವನ್ನು) ಎದ್ದು ಕಾಣುವಂತೆ ಮಾಡು ; ಎತ್ತಿ ತೋರಿಸು ; ಕೆದಕು : ಬೆದಕು : ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ (ಪಂಪಭಾ. ೨-೯೩) ; ಇಂದಿನವರಂದಿನವರ್ ಕೆಲರೆಂದು ಪಿಕ್ಕು [ಪಾಠಾಂ. ಕರ್ಗ]ವೀ ದಂದುಗದಿಂದಮೇ ಸಮಗನಿಂದ್ಯಕವೀಂದ್ರರ ಮಂದ್ಯರಾಮಗಂ (ಧರ್ಮಾಪ. ೧-೪೨). ೬. ದೂರವಾಗು ; ಪ್ರತ್ಯೇಕವಾಗು : ಅಸ್ತ್ರೌಘಪಾತನ ಮೆಯ್ಯಂ ಕಿಡಿ ಸೂಸೆ ತಾಗಿ ಸಿಡಿದುಂ ಪಿಮ್ಮೆಟ್ಟಿಯುಂ ಪಿಕ್ಕಿ ಪಿಂತನೆ ಬಂದು ಕಿಜುಮಾಯ್ಗ ಪೊರ್ದಿಯುಂ ಪಂಗುವರ್ಪದತ್ತು (ಜಗಪಿ. ೯-೩೮). ೭. ಸೂಸು (?) : ಆದಂ ಗೀತದ ಜಣ್ಣಂ ನಾದದೊಳಕ್ಕರಮುಮೆಯ್ದೆ ಶಬ್ದದೊಳೞಯಲ್ಕಾದಪುದೆನೆ ಬಾಜಿಸುವರ್ ವಾದಕರುಂ ಪಿಕ್ಕಿ ಗೀತಸಮಮುಮಾದಿಂದಂ (ಪಂಪ್ರಕು.

ಗಳಲ್ಲಿ ಪಿಚಕಾರಿ ಹೊಡೆಸಬೇಕು (ಗೃಶಿ. ೦೫೬); ಈ ಬಣ್ಣಗಳ ತೀರ್ಥವನ್ನು ನಿತ್ಯವೂ ನೆತ್ತಿಗೆ ಪಿಚಕಾರಿಯಿಂದ ಹೊಡೆಯಬೇಕು (ಆಶಿ. ೦೩). ೨. ಮಲಬದ್ಧತೆಯ ಪರಿಹಾರಕ್ಕಾಗಿ ಗುದಪ್ರದೇಶಕ್ಕೆ ನೀರು ಪ್ರವೇಶಿಸುವಂತೆ ಮಾಡುವ ಸಾಧನ: ಪಿಚಕಾರಿ ಹೊಡೆದು ಮಲ ವಿಸರ್ಜನೆ ಮಾಡಿಸಬೇಕು (ಗೃಶಿ. ೦೫೯). ೩. (ಅಲಂ) (ಬಾಯಿಯಿಂದ) ಚಿಮ್ಮಿಸಿದುದು: ಕುರ್ಚಿಯ ಹಿಮ್ಮಗ್ಗಲು ಇರುವ ಕಿಟಕಿಯಲ್ಲಿ ತಂಬುಲದ ಪಿಚಕಾರಿಯನ್ನು ಬಿಡುತ್ತಿದ್ದರು (ರಂಗಶೋ. ೧); ಪಾನವಟ್ಟೆಯ ಪಿಚಕಾರಿಯನ್ನು ಹೊಡೆದು, ಸಿಗರೇಟಿನ ಒಂದು ಝುರುಕಿಯನ್ನು ಎಳೆದು . . . ಕ್ಷೇದ (ಬಿಚಿಹ. II. ೨೦೩). [← ಹಿಂ. ಮರಾ. ಪಿಚಕಾರೀ/ತುಳು. ಪಿಚ್ಕಾರಿ, ಪಿಸ್ಕಾರಿ: ತೆಲು. ಪಿಚಿಕಾರು. ಪಿಚ್ಚಿಕಾರು]

**ಪಿಚಕ್ಕನೆ** (ಅ). ಪಿಚಕ್ ಎಂದು ಶಬ್ದವಾಗುವ ಹಾಗೆ: ಅಂಗಾತನಾಗಿ ಬಿದ್ದ. ಮೈ ಆಳದ ಗೊಜ್ಜೆಯಲ್ಲಿ ಬಿದ್ದಾಗ ಪಿಚಕ್ಕನೆ ಗೊಜ್ಜು ಚಿಮ್ಮಿ . . . ಅಲ್ಲಿಂದ ಎದ್ದು ಕಾಲೆತ್ತಿ ಎಳೆದು ದಾಟುವುದರಲ್ಲಿ ಹೋದ ಪ್ರಾಣ ಕೈಗೆ ಬಂತು (ಕಹಾ. II. ೦೫೬); ಬಾಯಲ್ಲಿಯ ತಂಬಾಕನ್ನು ಪಿಚಕ್ಕನೆ ಉಗುಳಿ . . . ಕುದುರೆಯ ವೇಗವನ್ನು ಹೆಚ್ಚಿಸಿದನು (ಬಂಗಾಕ. ೫೪). [ಪಿಚಕ್ + -ಅನ್ನೆ]

**ಪಿಚವ್ಯ** (ನಾ). ೧. ಹತ್ತಿಯ ಗಿಡ; ಅರಳೆಯ ಗಿಡ. ೨. ಹತ್ತಿ; ಅರಳೆ: "ಪಿಚವ್ಯಃ, ಬಾದರಃ, ಕಾರ್ಪಾಸೀ—ಈ ೩ ಹೆಸರು (ಹತ್ತಿ)" (ಕರಾಹು. ೪೯-೯೯). [ಸಂ.]

**ಪಿಚಾಡಿ**, ಪಿಚಂಡಿ$_2$, ಪೀಚಾಡಿ (ನಾ). ೧. ಹಿಂಭಾಗ; ಹಿಂಬದಿ: ಫಾಜಲ್‌ಖಾನನು ತನ್ನ ದಂಡು ತೆಗೆದುಕೊಂಡು ಅಗಾಡಿಗೆ ಆಗಿಕೊಂಡು ಪಿಚಾಡಿಗೆ ಜಾನ್ ಕಸ್ತೂರಿ ಆಗಿಕೊಂಡು ಮಧ್ಯಗುನನುಗು ಹಾಕಿಕೊಂಡು . . . ಹೋಗುತ್ತಾ ಇದ್ದಲ್ಲಿ (ರಾಕೇಂಚ್ರ. ೪೦). ೨. ಕುದುರೆಯ ಹಿಂದಿನ ಕಾಲು,—ಹಿಂಗಾಲು: (ಕ). ೩. ಕುದುರೆಯ ಹಿಂಗಾಲುಗಳನ್ನು ಕಟ್ಟುವ ಹಗ್ಗ: ಬೇಟೆಗೆ ಹೋಗಿ . . . ಕುದುರೆಯ ಮುಂಗಾಲು ಹಿಂಗಾಲುಗಳಿಗೆ ಕಟ್ಟುವ ಅಗಾಡಿ ಪಿಚಾಡಿ ಹಗ್ಗಗಳನ್ನು ತೆಗೆದುಕೊಂಡು ಬಂದರು (ಹಗಿಗ. ೩೧); ಸಾಳೋನರಸಿಂಗರಾಯನ ಪಾಸಾಕುದುರೆಯನ್ನು ಕಟ್ಟಿದ್ದ ಕಡೆಗೆ ಹೋಗಿ ಸ್ವಲ್ಪವೂ ಗದ್ದಲವಾಗದಂತೆ ಅದರ ಅಗಾಡಿಯನ್ನೂ ಪಿಚಾಡಿಯನ್ನೂ ಬಿಚ್ಚುತ್ತಾ ಇದ್ದನು (ಚಕ್ರಕಾ. ೦೦).

ಪಿಚಂಡಿ$_1$: (ಕ). ಪೀಚಾಡಿ: ೧. ವೇಟ್ಟ ಸೌಧಾಗ್ರುತರುತುದಿಗಳಂ ಪ.೨ ಹಯದೊಟ್ಟು ಪೀಚಾಡಿಯಾ ಗಾಡಿಯಂ ಕಿತ್ತು ಪೈರಕೀರಿದವು (ಚಕಮು. ೩-೯); ಬೇಗೆ ನಿರ್ವಿಸನ ರಕ್ಮಾಂಭ್ರಿಯೋಳ್ ವತ್ರಲಾಗಾಡಿ ಪೀಚಾಡಿ ಕಿತ್ತು (ಚಕಮು. ೦೨-೦೪).

ಪಿಚಂಡಿ ಬಿಗಿ = ಹಿಂದಿನಿಂದ ಕೈಗಳನ್ನು ಕಟ್ಟು; ಹಿಮ್ಮುಖವಾಗಿ ಕಟ್ಟು: "ಹೆಡೆಮುರಿ ಕಟ್ಟು" (ಪಾಕಶೋ. ೦೫).

[← ಹಿಂ. ಪಿಛಾಡೀ, ಪೀಛವಾಡೀ; ಮರಾ. ಪಿಛಾಡೀ]

**ಪಿಚಿ** (ನಾ). ಒಂದು ಅನುಕರಣ ಶಬ್ದ: (ಕ).

ಪಿಚಿಪಿಚಿ (ದ್ವಿರುಕ್ತಿ): ಮಾತುಮಾತಿಗೊಮ್ಮೆ ಪಿಚಿಪಿಚಿ ಉಗುಳುವ ಈ ಮಹಾಪುರುಷರ ಸಹವಾಸ ಬೇಡ (ಗಾಂಗು. ೩೨); ಮಳೆ ಬಂದು ನೆಲವೆಲ್ಲ ಪಿಚಿಪಿಚಿಯಾಗಿದೆ (ಊಶ).

**ಪಿಚಂಡ** (ನಾ). ಹೊಟ್ಟೆ; ಉದರ: "ಪಿಚಂಡಃ, ಕುಕ್ಷಿಃ, ಜಠರಂ, ಉದರಂ, ತುಂದಂ ೫ ಹೊಟ್ಟೆ, ಬೊಜ್ಜೆ" (ಸಿದ್ಧಾಂಶಿ. ೧೯೦). [ಸಂ.]

**ಪಿಚಂಡಿಲ** (ಗು). ಸ್ಥೂಲವಾದ ಹೊಟ್ಟೆಯನ್ನು ಉಳ್ಳ; ಡೊಳ್ಳು ಹೊಟ್ಟೆಯಿಂದ ಕೂಡಿದ. [ಸಂ.]

**ಪಿಚಿಕೆ**, ಪಿಚ್ಚಿಕೆ, ಹಿಚಿಕೆ (ನಾ). ಪಕ್ಷಿ ಅಥವಾ ಪ್ರಾಣಿಗಳ ಹಿಕ್ಕೆ,—ಮಲ: ಈ ಹಕ್ಕಿ . . . ತನ್ನ ಪಿಚಿಕೆ ಯಾರಿಗೂ ಸಿಕ್ಕದಿರಲೆಂದು ಅದನ್ನು ನೆಲದಲ್ಲಿ ಹೂಳುತ್ತದೆ (ಪ್ರಜಾ. I, ೨೦): ಅಕಸ್ಮಾತ್ ಮಾಂಸದ ಚೂರುಗಳನ್ನು ಹದ್ದುಗಳು ನುಂಗಿಬಿಟ್ಟರೆ . . . ಬೆಳಗಾದ ಮೇಲೆ ಅವುಗಳ ಪಿಚಿಕೆಯನ್ನು ಹುಡುಕಿ ವಜ್ರಗಳನ್ನು ಆಯ್ದುಕೊಳ್ಳುತ್ತಾರೆ (ಪ್ರಜಾ. II, ೪೯). ಪಿಚ್ಚಿಕೆ: (ಚಿಹಾಂ. ೩೬೩). ಹಿಚಿಕೆ: ಏರೆಯ ಗದ್ದೆಗೆ ಗೊಬ್ಬರವಾದೀತೆ ಗುಬ್ಬಿಯು ಸಾವಿರ ಹಿಚಿಕೆ (ಜಂಪಾಶ. ೦೧೬-೬೮); ಎಷ್ಟೋ ಸಾರಿ ಅದು ಎಲೆಯ ಮೇಲೆ ಹಕ್ಕಿಗಳ ಹಿಚಿಕೆಯಂತೆ ಬಿದ್ದಿರುವುದು (ಶಾಂಕ್ರ. II. ೦೨೨೬); ಅರ್ಧ ಬೇಂದ ಅನ್ನ . . . ಪ್ರಾಣಿಗಳ ಹಿಚಿಕೆ, ಜಿರಳೆ, ಒದಲಗೊಂದ ತುಂಬಿದ ಆಹಾರ (ಅಕ್ಕಾಶ. ೭). [< ಪಿಕ್ಕೆ]

**ಪಿಚಿಗಟ್ಟು** (ಕ್ರಿ). ಕೆಸರಿನಿಂದ ಗಲೀಜಾಗು,—ಕೊಳಕಾಗು: ಜೋರಾದ ಮಳೆ ಬಿದ್ದು ನೆಲವೆಲ್ಲ ಪಿಚಿಗಟ್ಟುತ್ತಿತ್ತು (ಊಶ). [ಪಿಚಿ + ಕಟ್ಟು]

**ಪಿಚು** (ನಾ). ೧. ಅರಳೆ; ಹತ್ತಿ: "ತೂಲಕಂ, ಪಿಚುಃ — ಈ ೨ ಅರಳೆ" (ಕರಾಹು. ೪೯-೯೯). ೨. ಹತ್ತಿಯ ಗಿಡ. ೩. ಎರಡು ತೊಲೆಗಳ ತೂಕ. [ಸಂ.]

**ಪಿಚುತೂಲ** (ನಾ). = ಪಿಚು ೧. [ಸಂ.]

**ಪಿಚುತೂಳಕ** (ನಾ). = ಪಿಚು ೧: "ಹತ್ತಿ ಕಾರ್ಪಾಸಂ ಪಿಚವ್ಯಮಾ ಬಾದರಂ ಅರಳೆ ಪಿಚುತೂಳಕಾಖ್ಯಂ" (ಕುಂಗಕಾ. ೩೬-೨೬). [ಸಂ. ಪಿಚುತೂಲಕ]

**ಪಿಚುಮಂದ** (ನಾ). ಬೇವಿನ ಮರ: "ಅರಿಷ್ಟಃ, ಪಿಚುಮಂದಃ — ಈ ೨ ಬೇವು" (ಕರಾಹು. ೩೬-೯೩); ಚಂಚುರ ಪಿಚುಮಂದದಪಲ್ಲವಸಮುಲ್ಲಸಿತಂ ಮುಸಲೋರುಸೀರಡಂಬರಯುತಮೇಂ ಮನಕ್ಕೊಲವನಿತ್ತುದೊ ಬಾಗಿಲರಿಪ್ಪಸದ್ಮದಾ (ಶಂಕ್ರಕೃ. ೩-೯೭): ಪರಿಪರಿ ರಸಾಲ ಪಿಚುಮಂದ . . ಮರಂಗ ಪಚ್ಚೆಯ ದವನ ಬಲ್ಮ ಬೆಳೆವಲ ನಿಂಬೆ ಹೀರಳೆಯು (ಕೋರಾ. ೦-೦೭); ಪಿಚುಮಂದದಪತ್ರದ ಪವಿತ್ರಮನೊಲಿದು ಬಿನ್ನವಿಲ್ಲದೆ ಪಿಡಿಸಿ (ಶಶಶೋ. ೦೫-೨೦). [ಸಂ.]

**ಪಿಚುಮರ್ದ** (ನಾ). = ಪಿಚುಮಂದ: "ಅರಿಷ್ಟಃ, ಸರ್ವತೋಭದ್ರಃ, ಹಿಂಗುನಿರ್ಯಾಸಃ, ಮಾಲಕಃ, ಪಿಚುಮರ್ದಃ, ನಿಂಬಃ — ೬ ಬೇವಿನ ಗಿಡದ ಹೆಸರುಗಳು" (ಸಿದ್ಧಾಂಶಿ. ೦೨೬). [ಸಂ.]

**ಪಿಚುಲ**, ಪಿಚುಳ (ನಾ). ೧. ಅರಳೆ; ಹತ್ತಿ. ೨. ಹುಣಿಸೆಮರ. ೩. ಒಂದು ಬಗೆಯ ಸಸ್ಯ; ನೀರುಕಣಿಗಿಲೆ. ೪. ಒಂದು ಬಗೆಯ ಸಸ್ಯ; ಕಕ್ಕೆಗಿಡ: "ಝಾವುಕಃ, ಪಿಚುಲಃ—ಈ ೨ ಪಿಚುಲಂ?" (ಕರಾಹು. ೩೨-೯೩); "ಪಿಚುಲಃ, ಝಾಬುಕಃ—೨ ಕಕ್ಕೇಗಿಡದ ಹೆಸರುಗಳು" (ಸಿದ್ಧಾಂಶಿ. ೦೨೦). ೫. ಒಂದು ಬಗೆಯ ಕಾಗೆ; ಸಂಬಾರ ಕಾಗೆ. ಪಿಚುಳ: ೩. "ತೊಜಿಗಣಿಗಿಲಾ ಲೋಮಾಕಂ ಪಿಚುಳಮುದು" (ಕುಂಗಕಾ. ೪೯-೧೦). [ಸಂ.]

**ಪಿಚುಸೋದ** (ನಾ). ಹತ್ತಿಯನ್ನು ಎಕ್ಕುವ ಕೋಲು; ಕುಡುಹು: "ಪಿಚುಸೋದಮೆನೆ ಕುಡುಹು" (ಕುಂಗಕಾ. ೬೦-೪೯). [ಪಿಚು + ಸೋದ]

**ಪಿಚುಳ** 'ಪಿಚುಲ' ನೋ.

**ಪಿಚ್ಚ$_1$** (ನಾ). ೧. ಬುದ್ಧಿಕೆಟ್ಟವನು; ಹುಚ್ಚ: ಎಲೆಲೆ ಪಿಚ್ಚ ಬ್ರಾಹ್ಮಣ ನಾನೆ ನಿನಗೆ ತೊತ್ತಿನ ಮಗ ನಾನೆ ನಾನೆಯೆನೆ (ಶಂಕರ. ೬-೦೫೨). ೨. ಶಿವ: ಪರಮನೇ ಪಿಚ್ಚನೇ ಪಹಿದಾಳ್ದ ಪಶುಪತಿಯೆ . . . ಎಂದು ನಾಂದೀ ಪದವ ಪಾಡಿದನು ನಂಬಿ ಶಂಭುವಿನಿದಿರೊಳು (ಶಾಂಕಕ. ೩-೨೬).

[ದೇ.೩ ತಮಿ. ಮಲ. ಪಿಚ್ಚನ್; ತೆಲು. ಪಿಚ್ಚ, ಪಿಚ್ಚಿ = ಉನ್ಮಾದ]

**ಪಿಚ್ಚ$_2$** 'ಪಿಸಿತ$_1$' ನೋ.

**ಪಿಚ್ಚಂಬಳ** (ನಾ). ೧. ಗೀಜು ತುಂಬಿದ ಕಣ್ಣು; ಪಿಸರುಗಣ್ಣು. ೨. ಪಿಸರುಗಣ್ಣಿನವನು; ಗೀಜುಗಣ್ಣನ್ನು ಹೊಂದಿರುವವನು: ನಂಬಿ ಕೋಪದೊಳು ಪಿಚ್ಚಂಬಳನ ಮೊಕದು ಪೇಳೆ (ಶ್ರೀಕಾ. ೦೫-೨೨).

[ಪಿಚ್ಚು + ಅಂಬಳ]

**ಪಿಚ್ಚಿಕಾಯಿ** (ನಾ). ಒಂದು ಬಗೆಯ ಮಾವು : ಮಾವಿನ ಜಾತಿಗಳು : ಗೋಳಿಕಾಯಿ, ಬಾದಾಮಿ, ರಸಪುರಿ, ಜೀರಿಗೆ, ಪಿಚ್ಚಿಕಾಯಿ, ಕರೀಕಾಯಿ (ಪಶ್ಚಿಕು. ೨೩೬). [ ಪಿಚ್ಚಿ ? + ಕಾಯಿ$_1$ (< ಕಾಯ್$_1$) ]

**ಪಿಚ್ಚಟ** (ಗು). ೧. (ಒತ್ತಿದುದರಿಂದ) ಚಪ್ಪಟೆಯಾದ ; ಅಗಲವಾದ. (ನಾ). ೨. (ಒತ್ತುವಿಕೆಯಿಂದ) ಚಪ್ಪಟೆಯಾದ ವಸ್ತು. ೩. ಕಣ್ಣಿನ ಒಂದು ಬಗೆಯ ರೋಗ. ೪. ತವರ. [ಸಂ.]

**ಪಿಚ್ಚವುಣಿಗ** (ನಾ). ೧. ಮಾಂಸವನ್ನು ತಿನ್ನುವವನು. ೨. ದೈತ್ಯ ; ರಾಕ್ಷಸ : " ಪಿಚ್ಚವುಣಿಗನೆಂದೊಡೆ ನಿರುತಿವೆಸರಕ್ಕು " (ಅಭಿ.ಕೌ. ೧೮).
[ ಪಿಚ್ಚ$_2$ (< ಪಿಶಿತ$_1$) + — ಉಣಿಗ ]

**ಪಿಚ್ಚಿ$_1$** (ನಾ). ಒಂದು ಅನುಕರಣ ಶಬ್ದ.
ಪಿಚ್ಚಿಯಾಗು = (ಕರಾ) ತೆಳ್ಳಗಾಗು ; ತೆಳುವಾಗು : ಏರು ಸ್ವಲ್ಪ ಹೆಚ್ಚಾಗಿದ್ದಿರಬೇಕು, ಬಿಟ್ಟಿಲ್ಲ ಪಿಚ್ಚಿಯಾಗಿದೆ. ರೊಟ್ಟಿ ತಟ್ಟಲು ಬಾರದು (ಜಾಅ).

**ಪಿಚ್ಚಿ$_2$** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: "ರಕ್ತಪುಷ್ಪೀ —ಪಿಚ್ಚಿ, ಉಷ್ಟ್ರಕರ್ಣಿ, ದಾಸಾಳ " (ಓಹಾ. ೧೫೯); ಜಡೆಗೆ ಪಿಚ್ಚಿಯ [ಪಾಠಾಂ. ಪೀಚಿಯ]ಲಜಾಯನೆಂದೊ ಪಿಡಿದ ದಂಡವನುಡಿದನೆಂದೊ ಮುಡಿದನೆಂದೊ ಮಾಸಲಾದ ಪ್ರಸೂನ ಪತ್ರಗಳ (ಜಿನೇಶ್ವ. ೩-೩೦).
[ ದೇ. ೩ ತಮಿ. ಪಿಚ್ಚಿ = ದೊಡ್ಡಗಾತ್ರದ ಮಲ್ಲಿಗೆ ]

**ಪಿಚ್ಚಿ$_3$** (ನಾ). ವೃಷಣ ; ತರಡು : ಅವನು ಬರಲಿ. ಪಿಚ್ಚಿಗಳು ಎಗರುಸ ತ್ತೀನಿ—ಸುಮ್ಮನೆ ಬಿದ್ದೀನಿ ಅಂತ ತಿಳಿದಿದ್ದೀರಾ ? (ಅಜ್ಞಾತ. ೦೯೩).
[ ದೇ. ೩.ತುಳು. ಪಿಚ್ಚಿ ; ತೆಲು. ಪಿಚ್ಚ ]

**ಪಿಚ್ಚಿ$_4$** (ನಾ). (ವೀಳೆಯದೆಲೆಯ) ಕಟ್ಟು : ತುಪ್ಪ ಏನು ಮಾಡೀತರ್ರೋ ಒಂದು ಪಿಚ್ಚಿ ಎಲೀದೆಲಿ ಒಗದರ . . . ಎಂದನು ರಾಮರಾಯ (ಜಾ.ಜಾನ. ೦೬೬). [ ? ]

**ಪಿಚ್ಚಿಕೆ** ‘ ಪಿಚಿಕೆ ’ ನೋ.

**ಪಿಚ್ಚಿಹೂ** (ನಾ). ಒಂದು ಬಗೆಯ ಹೂವು : " ರಾಭಕೀ, ರಾಜಕೀ—ಈ ಯೆರಡುಂ ಪಿಚ್ಚಿಹೂ " (ಓಹಾ. ೦೩೬). [ ಪಿಚ್ಚಿ$_2$ + ಹೂ$_1$ (< ಪೂ$_2$) ]

**ಪಿಚ್ಚು** (ನಾ). ಕಣ್ಣಿನ ಕೊಳೆ, — ಹೊಲಸು ; ಪಿಸರು : ಅಂಗವೆಲ್ಲವು ನೇತ್ರರೂಪರಿ ನಾರುತ್ತಿಹುದು ಕಂಗಳಲಿ ಪಿಚ್ಚು ಸುರಿವುತ ಸಗಿದ ವ್ಯಾಯ ಪಯಮಂಗಳೊಳು ಕೀವು ಸೋರುವ ಬೇನೆಯನ್ನು ತಾನಂಗೈಸಿಕೊಂಡಿರು ತಿರೆ (ಶ್ರೀಕೃಚ. ೩೬-೫೬); ಈ ನೀರು ಕಣ್ಣಿಗೆ ದೊರೆಯದಿದ್ದರೆ ಕ್ಷಣಮಾತ್ರ ದೊಳಗೆ ಪಿಚ್ಚಿನ ತರವು ಕಣ್ಣಿನ ಮೇಲೆ ಕೂತು ಅದು ಕೆಟ್ಟುಹೋಗಿರುತ್ತಿತ್ತು (ಕುಂಜಾಹ. ೯-೩೬); ಆ ಮುದುಕ ವಿಧವೆಯಾದ ರೇಣವ್ವನಂತೆ ಕಣ್ಣನಲ್ಲಿ ಪಿಚ್ಚು ಇಟ್ಟು ಬಾಯಲ್ಲಿ ಜೊಲ್ಲು ಸೋರಿಸುವುದಿಲ್ಲ (ಕೋಟಿಬಿಳಿ. ೨೩). ‘ ಪಿಳಚು ’ ಪರಾ.
[ ದೇ.೩ ತಮಿ. ಪೀಳೈ ; ತುಳು. ಪೇಂಚಿ = ಕೊಳೆ, ಹೊಲಸು : ಪ್ರಾಕೃತ. ಪಿಚ್ ]

**ಪಿಚ್ಚುಗಣ್ಣು** (ನಾ). ಪಿಸರಿನಿಂದ ಕೂಡಿದ ಕಣ್ಣು : ಗೀಜು ತುಂಬಿರುವ ಕಣ್ಣು : ಶಿಶುವಿನಾಳಧೀಶನ ಮುಂದೆ ಕೂಸರಿ ಕೊಸರಿ ಹೋಗದಿರು ಹಸನವಿಲ್ಲ ಹರೆಯುವ ಮಾರಿದ ಪಿಸುರು ಪಿಚ್ಚುಗಣ್ಣಿನ ಮುದಕೀ (ಕಲಿತ. ೩೩-೩). [ ಪಿಚ್ಚು + ಕಣ್ಣು (< ಕಣ್) ]

**ಪಿಚ್ಚಿ** (ನಾ). ೧. ಅಳತೆ ಅಥವಾ ತೂಕದಲ್ಲಿ ಕಡಮೆಯಿರುವುದು : (೪). ೨. ನಾಣ್ಯವು ತೂಕ, ಬಣ್ಣ ಇವುಗಳಲ್ಲಿ ಕಡಮೆ ತರಗತಿ ಯಾಗಿರುವುದರಿಂದ ಅದನ್ನು ಮುರಿಸಬೇಕಾದಾಗ, ಕೊಡಬೇಕಾದ ಶುಲ್ಕ,—ವಟ್ಟ : ವಾಣೀಶರವರು ಕೊಡುವ ಪೊಹರೀ ಪಿಚ್ಚಿಯಿಲ್ಲದೇ ನಡೆಯುತ್ತದೆ. ತಾವು ಕೊಡುವುದು ಪಿಚ್ಚಿ ಕೊಟ್ಟು ಮುರಿಸಿಕೊಳ್ಳಬೇಕಾ ಗಿರುವುದರಿಂದ ಒಂದೇ ಕಡೆಯಲ್ಲದೆ ಹತ್ತುಕಡೆ ತಿರುಗಿ ಮುರಿಸಿ ಪದಾರ್ಥ ಗಳನ್ನು ತರಬೇಕಾಗಿರುವುದು (ಪ್ರಾ.ಪ. ೦೬೩).
ಪಿಚ್ಚಿ ಸೇರು = ಕಡಮೆ ಅಳತೆಯ ಸೇರು : (೪).
[ ದೇ.೩ ತೆಲು. ಪಿಚ್ಚ, ಪಿಚ್ಚಿ ]

**ಪಿಚ್ಚೆನ್ನಿಸು** (ಕ್ರಿ). ಏನೂ ಇಲ್ಲದಂತೆ ಭಾಸವಾಗು ; ಖಾಲಿಯಾದಂತೆ ತೋರು,—ಕಾಣಿಸು : ಜೋಗದ ಜಲಪಾತವನ್ನು ಕೆಳದಲ್ಲಿ ನಿಂತು ಕೆಂಟೆಗಟ್ಟಳೆ ನೋಡಿದ ಕಣ್ಣುಗಳಿಗೆ ನಯಾಗರದ ನೋಟ ಪಿಚ್ಚೆನ್ನಿಸಿತು (ಕಂಟಿಯು. ೦೨೯). [ ಪಿಚ್$_1$ + ಎನ್ನಿಸು (< ಎನಿಸು$_1$) ]

**ಪಿಚ್ಚೆನ್ನು** (ಕ್ರಿ). = ಪಿಚ್ಚೆನ್ನಿಸು : ಅದನ್ನು ನೋಡಿ ದೈವಭಕ್ತನಾದ ಸಣ್ಣಪ್ಪನ ಮನಸ್ಸು ಪಿಚ್ಚೆಂದಿತು (ಕೃಷಿಕ. ೧೨೭).
[ ಪಿಚ್$_1$ + ಎನ್ನು (< ಎನ್$_1$) ]

**ಪಿಚ್ಛ** (ನಾ). ೧. (ಹಕ್ಕಿಗಳ) ರೆಕ್ಕೆ ; ಗರಿ. ೨. ನವಿಲಿನ ಪುಚ್ಛ, —ಬಾಲ. ೩. ಬಾಣದ ಗರಿ. [ ಸಂ. ]

**ಪಿಚ್ಛಂದ** (ನಾ). ಅರಸರ ಮನೆ ; ಅರಮನೆ. [ಸಂ.]

**ಪಿಚ್ಛಂದಕ** (ನಾ). = ಪಿಚ್ಛಂದ : ಈಶ್ವರಸದ್ಮನಾಂ ಪಿಚ್ಛಂದಕ ಪ್ರಭೇದಾಃ-ಭವಂತಿ—ಅರಸುಗಳ ಮನೆಗಳಲ್ಲಿಯೂ ದೇವಸ್ಥಾನ ಮುಂತಾದವುಗಳಲ್ಲಿ ಅಲಂಕಾರವಾಗಿಯೂ ಚಿತ್ರವಾಗಿಯೂ ರಚಿಸಲ್ಪಟ್ಟಿರುವ ಬಾಗಿಲು, ಲೋವೆ ಮುಂತಾದ ತರಹಾಗಳ ವಿಶೇಷಗಳ ಹೆಸರುಗಳು (ಶಬ್ದ.ಶಿ. ೦೦೮).
[ ಸಂ. ]

**ಪಿಚ್ಛಲ** (ಗು). ೧. ಜಾರುವ ; ಜಾರಿಕೆಯುಳ್ಳ. ೨. ಗಟ್ಟಿಯಾದ : ಗಡ್ಡೆಗಡ್ಡೆಯಾಗಿರುವ. (ನಾ). ೩. ಕೆಸರುನೀರು; ರಾಡಿ : ಬಗ್ಗಡ : "ಪಿಚ್ಛಲ[ ಪಾಠಾಂ. ಪ್ಪಿಲ ]ಮೆನಲ್ಪಸಜಲನೀರೆಂದೆನಿಕ್ಕುಂ"(ಕುಂಗರಾ. ೦೫೯-೦೩).
[ ಸಂ. ]

**ಪಿಚ್ಛಿಲ**(ಗು). ೧. = ಪಿಚ್ಛಲ ೧. (ನಾ). ೨. = ಪಿಚ್ಛಲ ೩. ಕೆಸರಿನಿಂದ ಕೂಡಿದ ಎಡೆ,—ಜಾಗ : "ಪಿಚ್ಛಿಲಂ, ವಿಜಲಕಂ—ಈ ೨ ಕೆಸಱುಳ್ಳೆಡೆ" (ಅಭಿಧಾ. ೦೦೬-೩೬). ೪. ಗಟ್ಟಿಯಾದ ಅಥವಾ ಗಡ್ಡೆಗಡ್ಡೆಯಾಗಿರುವ ಮೊಸರು : ಭೋಜ್ಯ ಭಕ್ಷ್ಯ ಪೇಯ ಲಲಿತ ಲೇಹ್ಯಂ ಚೋಷ್ಯ ಪಿಚ್ಛಿಲ ಷಡ್ರಸಗಳಂ ವಿಳಸವನುಗುಣದ ರುಚಿಯಂ ಮೇಲಿಯಾಱವವರ ಚರಣಾಂ ಬುಜಕ್ಕೆ ಶರಣು (೦೩ಶಾ. ೩೯-೨೮). [ ಸಂ. ]

**ಪಿಚ್ಛಿಲೆ** (ನಾ). ೧. ಒಂದು ಬಗೆಯ ಮರ: ಬೂರುಗದ ಮರ. ೨. ಅನ್ನದ ಗಂಜಿ. ೩. ಒಂದು ಬಗೆಯ ಮರ ; ಕರೀಮರ : (೪).
[ಸಂ. ಪಿಚ್ಛಿಲಾ]

**ಪಿಚ್ಛೆ** (ನಾ). ೧. ಅನ್ನದ ಗಂಜಿ. ೨. ಬೂರುಗದ ಮರದ ಅಂಟು ; ಎಲವದ ಮೇಣ : "ಪಿಚ್ಛಾ, ಶಾಲ್ಮಲೀವೇಷ್ಟಃ—೨ ಬೂರಗೆಯಂಟೆ ಹೆಸರು, ಎಲವದ ಮ್ಹಾಣ" (ಶಬ್ದ.ಶಿ. ೦೩೩). ೩. ಹಾವಿನ ವಿಷಪೂರಿತ ವಾದ ಜೊಲ್ಲು. [ಸಂ. ಪಿಚ್ಛಾ]

**ಪಿಜ** (ನಾ). ದೊಡ್ಡಗಾತ್ರದ ಹಲಸು : ಹೆಬ್ಬಲಸು : ಪಿಲ (ಹಲಸು), ಪಿಜ (ಹೆಬ್ಬಲಸು) . . . ಉರೇ (ಜಂಕೆ) ಇತ್ಯಾದಿಗಳನ್ನು ಸಂಕೇತ ವಾಗಿರಿಸಿಕೊಂಡವರೆಂಬ ಅರ್ಥದಿಂದಲೋ . . . ಬಂದ ಕುಲನಾಮಗಳು, ಪಿಲತ್ತಾಯ, ಪಿಜತ್ತಾಯ . . . ಇತ್ಯಾದಿ (ತುಳುನಾ. ೦೩೩).
[ —ತುಳು. ಪಿಜ, ಪೆಜ—ಕಾಡುಹಲಸು]

**ಪಿಜ್ಜ** ‘ಪಜ್ಜ’ ನೋ.

**ಪಿಟ$_1$** (ನಾ). ಒಂದು ಅನುಕರಣಶಬ್ದ : ‘ಪಿಟಗುಟ್ಟು’ ಪರಾ.
ಪಿಟಪಿಟ (ದ್ವಿರುಕ್ತಿ) : ಬಾಯಿ ಪಿಟಪಿಟ ಎನ್ನುತ್ತಿದೆ (ಜಾಅ).

**ಪಿಟ$_2$** (ನಾ). ೧. ಧಾನ್ಯಗಳನ್ನು ತುಂಬಲು ಉಪಯೋಗಿಸುವ ಬಿದಿರಿನ ಬುಟ್ಟಿ : ಗಳಗೆ. ೨. ಛಾವಣಿ ; ಮಾಡು. ೩. ಮನೆ : ಗೃಹ. [ಸಂ.]

**ಪಿಟಿಕ್** (ನಾ). ಒಂದು ಅನುಕರಣ ಶಬ್ದ : ಊರ್ವಿಗೆಳೆಯನ್ನು ಯಾರೂ ಪಿಟಿಕ್ ಎಂದು ಮಾತನಾಡಿಸಲಿಲ್ಲ (ಕೂಗು. ೯೯).

**ಪಿಟಕ₁** (ನಾ). ೧. ಬುಟ್ಟಿ ; ಪೆಟಾರಿ : ಮುಂತೈದುವಂ ಭೃತ್ಯನಂತೆ ಪಂಥಾನವಂ ಸಂತಸದಿ ತೋರುತ ಖಚಿತ್ತ ಪಿಟಕಂಗಳೇ ತಾಂ ತಳೆದು ಫಲಮೂಲಮೃಷ್ಟೋಪಹಾರಂಗಳನ್ನರ್ಪಿಸುತ್ತಲಡಿಗೆ (ಕಂಣಾ. ೨-೦೦-೪೬); ಮಿಥಿಯಲ್ಪ್ಪದಲ್ಲಿರ್ಪರುಂ ಕೆಳೆಳೆ, ಮಾಯದಳಿ ಕೌತುಕವಾಗಿ ಮುಟ್ಟಿ ನೋಡಿದಳವರ ಪಿಟಕನಂ (ಕೃಚಂಶ. ೨೬೦-೨೦೮); ಪಿಟಕವೆಂದರೆ, ಪೇಟಕಾ, ಪೆಟ್ಟಿಗೆ (ಒಂಕಶಾ. ೨೪); ರಜನಿಯೊಳ್ ಭದ್ರವಾಗಿಹ ಪಿಟಕದೊಳಗೆ (ಕಂಕಶ. ೦೬೬). ೨. ಗುಳ್ಳೆ ; ಬೊಕ್ಕೆ : "ಪಿಟಕಃ, ಸ್ಫೋಟಕಃ, ಗಂಡಃ-ಈ ೩ ಪು(ಹು) [ವುಗು] ಟು" (ಕಶಮು. ೯೯-೧೩೦); ಜ್ವರದಾಹ ಶ್ವಾಸಕಾಸ ವ್ರಣ ಪಿಟಕ ಶಿರೋರೋಗ ಸರ್ವಾಂಗಶೂಲಾದಿ ರುಜಾಸಂದೋಹ ಪಿಂಡಾಭರದಿವೊಳಕುತಂ (ಚಶಕ. ೦೦-೨೬). ೩. [ಬೌದ್ಧ]ಬೌದ್ಧ ಮತದ ಪವಿತ್ರ ಗ್ರಂಥ ; ಈ ಸೂತ್ರಪಿಟಕ, ವಿನಯಪಿಟಕ ಮತ್ತು ಅಭಿಧಮ್ಮಪಿಟಕಗಳೆಂಬುವು ಮೂರು ಪ್ರಸಿದ್ಧವಾದ ಪಿಟಕಗಳು : ಚೀನಾಭುಕ್ತಿಯಲ್ಲಿ ವಿನೀತಪ್ರಭಾ ಎಂಬ ಹೆಸರಾಂತ ಪಂಡಿತನಿದ್ದ. ಮೂರು ಪಿಟಕಗಳನ್ನೂ ಕರಗತ ಮಾಡಿಕೊಂಡಿದ್ದ (ಕೃಪಾಕ. I, ೨೦೬); ಪಿಟಕಗಳಿಗೂ ಅಟ್ಠಕತೆಗಳಿಗೂ ನಡುವೆ ಸೃಷ್ಟಿಯಾದ ಈ ಸಾಹಿತ್ಯದಲ್ಲಿ ಕೆಲವು ಗ್ರಂಥಗಳು ಉಳಿದಿವೆ (ಬುಕೃತ. ಒಂದಂ. ೬ ಕೃರೇಕ); ಪ್ರಾಚೀನಕಾಲದ ಬೌದ್ಧವನ್ನು ತಿಳಿಯಲು ನಮಗೆ ಪಿಟಕಗಳೆ ಆಧಾರ (ಕಂಚಶ. ೦೦೦). 'ತ್ರಿಪಿಟಕ' ಪರಾ. [ಸಂ.]

**ಪಿಟಕ₂** (ನಾ). ಒಂದು ಬಗೆಯ ಹಕ್ಕಿ ; ಗೀಜಗ : (೬). [?]

**ಪಿಟಕಾರ್ಬುದ** (ನಾ). ಒಂದು ಬಗೆಯ ವ್ರಣದಿಂದ ಕೂಡಿದ, ಗಂಟಲಿನ ಕ್ಯಾನ್ಸರ್ ರೋಗ : ಕಟವಾಯ ನಡುವಿನ ಪ್ರದೇಶದಲ್ಲಿ ಬಾವು ತೋರಿ . . . ಅನ್ನ ಪಾನಗಳ ಹೋಗಲೀಸದೇ ಕೊರಳ ಬಂಧಿಸಿ ಕೊಂಡು ಇಹುದು. ಈ ಪ್ರಕಾರದಲ್ಲಿದ್ದರೆ ಪಿಟಕಾರ್ಬುದ ಎನಿಸಿಕೊಂಬುದು (ಕೃಶ್ರಶಾ. II, ೦೦೩). [ಸಂ.]

**ಪಿಟಗುಟ್ಟು** (ಕ್ರಿ). ಪಿಟಪಿಟ ಎಂದು ಶಬ್ದ ಮಾಡು ; ಗುಣುಗುಟ್ಟು : ಧೈಸಿ . . . ಪಿಟಗುಟ್ಟುತ್ತಿದ್ದಳು (ಹುಚೂ. ೮೪). [ಪಿಟ್ಟಿ + ಕುಟ್ಟು₂]

**ಪಿಟಾರಿ**, ಪಿಠಾರಿ, ಪೆಟಾರಿ, ಪೆಟಾರಿಗೆ, ಪೆಟ್ಟಾರಿ, ಪೆಠಾರಿ (ನಾ). ೧. (ವಸ್ತುಗಳನ್ನು ತುಂಬಿಡಲು ಮಾಡಿದ ಲೋಹದ ಅಥವಾ ಮರದ) ಪೆಟ್ಟಿಗೆ,-ಸಂದೂಕ : ತನ್ನ ಬಳಿ ಅದನ್ನೆಲ್ಲ ಭದ್ರವಾಗಿ ಇಡಲು ಪಿಟಾರಿ ಇಲ್ಲ ಎಂಬ ನೆವ ಹೇಳಿ . . . ಅವಳ ಕೈಗೇ ಕೊಟ್ಟಿದ್ದಳು (ಹುಕಶು. ೨೦೬); ಪಡಸಾಲೆಯಲ್ಲಿ ಪಿಟಾರಿಯ ಬಾಗಿಲು ತೆಗೆದುಕೊಂಡು ಅದರ ಮುಂದೆ ಕುಳಿತಿದ್ದಳು (ಕದ್ಮಸ. ೦೬೭); 'ಉಲನ್' ಕೋಟುಗಳು ಆಗ ತಾನೆ ಪಿಟಾರಿಯಿಂದ ಹೊರಬಿದ್ದು ಕೋರುಹುಡುಗರನ್ನು ಅಲಂಕರಿಸಿದ್ದುವು (ಸುಹಂ. ೯೬); ಮೂರು ವರ್ಷ ಸಂದರೂ ಅವರ ಪಿಟಾರಿಯಲ್ಲಿ ಇನ್ನೂ ಹತ್ತು ರೂಪಾಯಿನ ನೋಟೇ ಬರುವುದಕ್ಕೆ ನಿರಾಕರಿಸಿತ್ತು (ರೀಕಶಂ. ೬೦). **ಪಿಠಾರಿ** : ೧. ಪಿಠಾರಿಯನ್ನು ತೆಗೆದು ಹುಡುಕಿ ಒಂದು ಜತೆ ಚಿನ್ನದ ಬುಗುಡಿಗಳನ್ನೂ ಸ್ವಲ್ಪ ಹುಡಿಚಿನ್ನವನ್ನೂ ತಂದು ಅವನ ಕೈಗೆ ಕೊಟ್ಟು (ಕಂಗಾಕ್ಕ. ೦೬೦). **ಪೆಟಾರಿ** : ೧. ಹಜಾರದ 'ಪೆಟಾರಿ'ಯ ಮೇಲೆ ರಗ್ಗು ಹಾಸಿ ಮಲಗಿ ಬಿಟ್ಟನು (ಹಾಂಕು. ೦೬೬); ಮನೆತನದ ವ್ಯವಹಾರಕ್ಕೆ ಸಂಬಂಧಿಸಿದ ಕಾಗದಪತ್ರಗಳನ್ನು ಕ್ರಮವಾಗಿ ಜೋಡಿಸಿ ಮರದ ಪೆಟಾರಿಯಲ್ಲಿಟ್ಟು (ಕಂಜ್ಯ. ೦೦೯). **ಪೆಟಾರಿಗೆ** : ೨. ಬಿದಿರಿನಿಂದ ಮಾಡಿದ ಪೆಟ್ಟಿಗೆ,-ಬುಟ್ಟಿ : ಶಿವಾಜಿಯು ಹಣ್ಣುಗಳ ಪೆಟಾರಿಗೆಯೊಳಗೆ ಕೂತು ಯುಕ್ತಿಯಿಂದ ಪಾರಾಗಿ ಬಂದನು (ಕಶಾಗ. ೬೩೩). **ಪೆಟ್ಟಾರಿ** : ೧. 'ಪೆಟ್ಟಾರಿ'ಯಿಂದ . . . ಪಟ್ಟೆಯ ವಸ್ತ್ರವನ್ನೂ ಶಾಲನ್ನೂ ತಂದು ತುಂಬಿದ ಸಭೆಯಲ್ಲಿ ಆ ವಿದ್ವಾಂಸನಿಗೆ ಹೊದಿಸಿದವರು ! (ಗಾಕಳ. ೨). **ಪೆಠಾರಿ** : ೧. ಅನರ್ಘ್ಯ ವಸ್ತ್ರಾಭರಣಗಳು ರಾಯರ ಪೆಠಾರಿಗಳನ್ನು ಸೇರಿದವು (ಕಕಂ. ೨೯೦); ಅವರು ಯಾವ ಪೆಠಾರಿ ತೆಗೆಸಿ ನೋಡಲಿ ಅದು ಕೆದರಿ ಗೊರಾಡಿರಬಾರದು (ಕೃಕ್ಕಚಂ. ೯೯); ಸೂರ್ಯೋದಯಕ್ಕೆ ಆತುರಗಾರತನದ ಕಂಬಳಿಯನ್ನು ಸುತ್ತಿ ನಿರೀಕ್ಷಣೆಯ ಪೆಠಾರಿಯಲ್ಲಿಟ್ಟು ಮುಚ್ಚಿಟ್ಟನು (ಕಗಕೂ. ೦೬೯); ಮನುಷ್ಯನ ಪರವಾದ ಅದೇ ಶ್ರದ್ಧೆಯನ್ನು ಸಾಂಪ್ರದಾಯಿಕ ಪೆಠಾರಿಗಳಲ್ಲಿ ಬೀಗ ಹಾಕಿದ್ದೇವೆ (೩೩೬ಕ. I, ೯).
[←ಹಿಂ. ಪಿಟಾರೀ, ಪಿಠಾರೀ ; ಮರಾ. ಪೆಟಾರೀ]

**ಪಿಟಿಕೆ** (ನಾ). (ಮುಖದ ಮೇಲೆ ಏಳುವ) ಗುಳ್ಳೆ; ಮೊಡವೆ : ಹಿರೇಮದ್ದು ಜಟಾಮಾಂಸಿ . . . ಹುಣಿಸೇಬೀಜದ ಸಿಪ್ಪೆ ಇವುಗಳ ಸಮಭಾಗ ಚೂರ್ಣ ಮಾಡಿ ಸೇವಿಸಲು . . . ಪಿಟಿಕೆ; ಮೇಹ ಮೊದಲಾದ ರೋಗಗಳು ಗುಣವಾಗಿ ಶುಕ್ರವೃದ್ಧಿಯಾಗುವುದು (ಕಕಕ್ಕ. ಕಂ. ೯೦೮); ಮುಖದ ತುಂಬ ಪಿಟಿಕೆಗಳಿದ್ದ ಉರುಟುತಲೆಯ ವ್ಯಕ್ತಿ (ಶಾಖ. ೬೨೦); ಮುಖದ ಮೇಲೆ ಹೇರಳವಾಗಿ ಮೂಡಿದ ತಾರುಣ್ಯಪಿಟಿಕೆಗಳು ಅವನ ಸೌಂದರ್ಯದಿಂದ ಹುಡುಗುತನವನ್ನು ಕಸಿದುಕೊಂಡುವು (ಅಹಕ. ೦೨೭).
[ < ಸಂ. ಪಿಟಕ ]

**ಪಿಟಿಪಿಟಿ** (ನಾ). ೧. ಒಂದು ಅನುಕರಣ ಶಬ್ದ. ೨. (ಆಲಂ) ದಢ್ಢ : ತಿಳಿಗೇಡಿ : ಇವನು ಶುದ್ಧ ಪಿಟಿಪಿಟಿ (ಒಂ೩).

**ಪಿಟೀಲು** (ನಾ). ಕಮಾನಿನಿಂದ ನುಡಿಸಲಾಗುವ ಒಂದು ಬಗೆಯ ತಂತಿವಾದ್ಯ : ಚಂದದಿಂ ಮುಖವೀಣೆ ಮೋರ್ಚಿಂಗ್ ಪಿಟೀಲುಗಳ ಪಿಂದೆ ನುಡಿ ಪಿಮ್ಮೇಳದವರೊಡನೆಯೊಲವಿಂ ನಿಂದು ಕುಣಿಯುತ್ತಿರುವ ದಾರಕಾಂತಾವೃಂದವಂ ನೋಡು (ಅಶಾಂ. ೨೯-೩೦); ಧನುರ್ವೀಣೆ ಅಥವಾ ಪಿಟೀಲಿನ ಪೂರ್ವಜನಾದರಿಯಾದ ರಾವಣಾಸ್ತ್ರವು ಇಂದಿನ ಪಾಶ್ಚಾತ್ಯ ಪಿಟೀಲು ರೂಪಿತವಾದುದರಲ್ಲಿ ಬಹುಪ್ರಭಾವವನ್ನು ಬೀರಿದೆ (ಶಾರದ. ೩೯೩); ಕರೀಮನ ಹತ್ತಿರ ಒಂದು ಪಿಟೀಲು ಇದೆ (ಕಣಂ. ೬೨).
[←ಇಂ. Fiddle]

**ಪಿಟೀಲುವಾದಕ** (ನಾ). ಪಿಟೀಲನ್ನು ನುಡಿಸುವವನು : ಹಲವಾರು ಬಾರಿ ಇವರ ಕಚೇರಿಗಳಿಗೆ ಸುಪ್ರಸಿದ್ಧ ಪಿಟೀಲುವಾದಕರಾದ ತಿರುಕ್ಕೋಡಿಕ್ಕಾವಲ್ ಕೃಷ್ಣಅಯ್ಯರ್ ಅವರೂ ಪಿಟೀಲು ನುಡಿಸುತ್ತಿದ್ದರು (ಕಂಗೀಕ. ೬೬).
[ ಪಿಟೀಲು+ವಾದಕ ]

**ಪಿಟೀಲುವಾದನ** (ನಾ). ಪಿಟೀಲನ್ನು ನುಡಿಸುವಿಕೆ ; ಪಿಟೀಲು ಕಚೇರಿ : ಕರೀಮನ ಪಿಟೀಲುವಾದನವೆಂದರೆ . . . ಒಂದು ಸಲವಲ್ಲ, ನೂರೆಂಟು ಸಲ ಆ ಪಿಟೀಲುವಾದನ ಕೇಳಬೇಕೆನ್ನುತ್ತಾರೆ (ಕಣಂ. ೬೨), ಪರಮೇಶ್ವರ ಭಾಗವತರು ವೀಣಾವಾದನ, ಪಿಟೀಲುವಾದನ ಮತ್ತು ಸ್ವರಬಾತ್‌ನ ವಾದನಗಳಲ್ಲಿ ಬಹಳ ಪರಿಶ್ರಮ ಪಡೆದಿದ್ದರು (ಕಂಗೀಕ. ೯೩).
[ಪಿಟೀಲು+ವಾದನ]

**ಪಿಟುಗುಟ್ಟು** (ಕ್ರಿ). ಪಿಟಿಪಿಟಿ ಎಂದು ಶಬ್ದ ಮಾಡು ; ಗುಣುಗುಟ್ಟು : ಅಪ್ಪಾಜಿಯು ಇನ್ನೂ ಕಣ್ಣು ಮುಚ್ಚಿಕೊಂಡೆ ಬಾಯಿನಲ್ಲಿ ಪಿಟುಗುಟ್ಟುತ್ತಾ ಪೂಜೆಯಲ್ಲಿ ಮಗ್ನರಾಗಿದ್ದರು (ಕಂಗಾಕ್ಕ. ೦೬೯).
[ ಪಿಟ್ಟು+ಕುಟ್ಟು₂ ]

**ಪಿಟ್ಟ₁** 'ಪಿಟ್ಟು' ನೋ.

**ಪಿಟ್ಟ₂** (ನಾ). ಒಬ್ಬಾತನ ಹೆಸರು : ಚಿತ್ರಭಾನುಸಂವತ್ಸರಮಧಿಕಾಷಾಢ ಬಹುಳದಶಮಿಆದಿವಾರದೊಳ್ ಗುರುಚರಣಮೂಲದೊಳ್ ಸುಭಪರಿಣಾಮದೆ ಪಿಟ್ಟನಿನ್ದ್ರಲೋಕಕ್ಕೊಗದವನ್ (ಎಕ. II, ೦೬೯-೭೨; ಕು. ೯೯೭). [ ? ]

**ಪಿಟ್ಟಗ** (ನಾ). ಒಬ್ಬಾತನ ಹೆಸರು : ಪಿಟ್ಟಗಂ ಸಲೆ ನೆಗರ್ದಂ (ಶುಮಂಕಾ. X. ೨೦೫-೬೨: ೦೩೩). 'ಪಿಟ್ಟುಗೆ' ಪರಾ. [ಪಿಟ್ಟ₂+-ಗ₁]

**ಪಿಟ್ಟಗೆಱೆ³** (ನಾ). ಒಂದು ಊರಿನ ಹೆಸರು : ಪಿಟ್ಟಗೆಱೆ ಪನ್ನೆರಡು ಗಾಮುಣ್ಡ ಪ್ರಚೆರ್ಸಕ್ಷಿ (ಎಕ. XI. ಚಿತ್ರದು. ೨೪-೦; ಸು. 500 ?).

[ಪಿಟ್ಟು₁₂ + ಕೆಱೆ³]

**ಪಿಟ್ಟಬೆ** (ನಾ). ಒಬ್ಬಾಕೆಯ ಹೆಸರು : ಅಪ್ಪಣಗಾವುಣ್ಡನುಂ ಪ್ಪೊಾತಿ ಪಿಟ್ಟಬೆಗಾವುಣ್ಡಿಯುಂ ಲಿಂಗಪ್ರತಿಷ್ಠೆಯುಂ ದೇಗುಲಮುಂ ಮಾಡಿ. ಸಾಸನಮುಂ ನಿಱಿಸಿದಂ (ಎಕ. VIII. ಸೊರಬ. ೯೭೦-೦೦; 1012).

[ಪಿಟ್ಟು₂ + ಅಬೆ (<ಅಬ್ಬೆ₁)]

**ಪಿಟ್ಟಯ್ಯ** (ನಾ). ಒಬ್ಬಾತನ ಹೆಸರು : ಊರೊಡೆಯ ಪಿಟ್ಟಯ್ಯಂ ಕಾಲ್ಗೞಿಯೆ . . . ಪನ್ನಿಮ್ಮತ್ತರ್ಕೆಯ್ಯಂ ಕೊಟ್ಟರ್ (ತಅ. XII. ೨೩೬-೦೦ ; 951). [ಪಿಟ್ಟು₂ + ಅಯ್ಯ₁₁]

**ಪಿಟ್ಟ** 'ಪಿಟ್ಟು' ನೋ.

**ಪಿಟ್ಟವ** (ನಾ). ಒಂದು ಬಗೆಯ ಬಣ್ಣ : ಅರ್ಜುನನ ಮಾವ ಚಿತ್ರರಥನು ಕೊಟ್ಟ ಪಿಟ್ಟವ ಬಣ್ಣದ ಕುದುರೆಗಳನು ಹತ್ತುಸಾವಿರವನು . . . ಧರ್ಮಪುತ್ರನು (ಕೃಚಂ. I. ೧೦೧). [ ? ]

**ಪಿಟ್ಟು, ಪಿಟ್ಟ₁, ಪಿಟ್ಟ, ಪಿಟ್ಟೆ₂, ಹಿಟು, ಹಿಟ್ಟು** (ನಾ). ೧. (ಧಾನ್ಯದ) ನಯವಾದ ಪುಡಿ ; ಪಿಷ್ಟ : "ಪಿಟ್ಟದು ಪಿಷ್ಟಂ ಚೂರ್ಣಿತಂ" (ಚಿತ್ರಕೋ. ೯೩-೨೦) : ದಿವ್ಯೌಷಧಿಗಳಿಂದಂ ಮಾಡಿದುಂಡೆಗಳಂ ಪಿಟ್ಟನೊಳ್[ಪಾಠಾಂ. ಪದಿನಾಱು] ಸಾಸಿರ್ವರರಸಿಯರ್ಕಳ ಮನೆಗಳೊಳ್ ಪ್ರಯೋಗಿಸಿ (ಚಂಪ್ರಾ. ೩೭೦-೨೪) : ಕರಿಹಸ್ತಚರ್ಮಮಂ ಮೇಣ್ ಕರಿದಂತವನರೆದು ಬಟ್ಟ ಗಡಲೆಯ ಪಿಟ್ಟಂ ಬೆರಸಿಕ್ಕುಗೆ (ಕೋಕೋಶ. ೬-೩೨) : ಪಿಟ್ಟಿನ ಕೋಟೆಯಾ ದೊಡ್ಡುದೆಂದನಿಕ್ಕುವೇಟ್ಟುದು (ಮುಕೋಶ. ೩-೨೦). ೨. ಜೀವಿಕೆ ; ವೃತ್ತಿ: ಸ್ಥಾನಂ ಮಾನ್ಯಂ ಪಿಟ್ಟಂ ಭೂನುತರಪ್ಪ ಮುಮತೊಕ್ಕಲುಂ ಬೇಮರಸು . . . ಮೂಲಿಗರುಂ ಪ್ರಭುಗಳೆಂಟು ಹಿಟ್ಟಂ ಮಾನ್ಯಂ (ಕೊಪ್ಪಾಶಾ. ೦೬-೬೯ : 1196). ೩. ಆಯಾ ವೃತ್ತಿಗೆ ಸಂಬಂಧಿಸಿದ ಮುಖ್ಯಸ್ಥ : ನಾಗರಸಂ ಪಗುಡಿಯತಳವು[೦]ತಾಯಗಳು ಅಱುವತೊಕ್ಕಲು ಎಂಟುಪಿಟ್ಟು ಕಾರಣಂಗಳು ಮುಖ್ಯವಾಗಿಯವರನುಮತದಿ . . . ಮಾಡಿಸಿದ ಬಸದಿ (ಕಾ. V. ೩೩-೨೨; 1176). **ಪಿಟ್ಟ₁** : ೪. (ಕಲಸಿದ) ಹಿಟ್ಟಿನ ಉಂಡೆ ; ಪಿಡಿಚೆ: ದೀವಂಗಳಂ ವಿರಚಿಸಿಯುನಂತಫಲಮಧಿಕಮಿವು ಪೊನ್ನಾರತಿಯಿನೆಂದು ಪಿಟ್ಟ[ಪಾಠಾಂ. ಷ್ಟ]ದಿಂದಂ ಸರಳ ನೀರಾಜನಂಗೆಯ್ದು ಪಾತ್ರೆಯೊಳಿರಿಸಿ (ಅಜಿತ. ೦-೦೦-೦೦). **ಪಿಟ್ಟ** : ೪. ಆ ಕಲ್ಕಕೆಂಡದ ಅಂಗರೋಗಿಗೆಯ . . . ಕೆಂಡದ ಮೇಲಿಯಿಟ್ಟು ಪಿಟ್ಟ ಸೀವ ಹಾಗೆ ಸುಡುವುದು (ಅಶ್ವಶಾ. ೦೩), ಸಕ್ಕರೆಯಸಿಕ್ಕಿ ಉಂಡೆಯ ಮಾಡಿ, ಕಣಿದ ಪಿಟ್ಟಯಲಿ ಮುಚ್ಚುವುದು (ಅಶ್ವಶಾ. ೨೭). **ಪಿಟ್ಟೆ₂** : ೪. ಪಿಟ್ಟೆಯಂ ತೆಗೆದು ತಱಿವಳಲು ರವೆಯಿದ ವಸ್ತ್ರ ಬಟ್ಟಮುತ್ತಿನ ಹರಳು ನುಚ್ಚುಕ್ಕಿಯಿಂದದಿಂ ಕಟ್ಟುಣಿಮುಪ್ಪ ತರುಣಿಯರು ಸೊಜ್ಜಿಗೆದೆಗೆದು ಕಜ್ಜಾಯಮುಂ ಮಾಳ್ಪುದು (ಸೂಶಾ. ೦-೯): ಹುಪ್ಪಳವ ಸವನಾಗಿ ಪೊತ್ತಿಯುಮ್ಮೆಯ್ಗೆ ಬೆಣ್ಣೆಯ ತೊಡೆದು ನಾಲ್ಕೈದಸಡು ಕಲಿಕ್ಕಿ ಅವಱಿರಡು ಮೆಯ್ಗೆ ಪಿಟ್ಟೆಯ ಬಟ್ಟಲು ಕವಿಸಿ ಹವಣಱಿದು ಹಂಚಿನೊಳು ಸುಟ್ಟು ಪಿಟ್ಟೆಯನು ತೆಗೆದು (ಸೂಶಾ. ೧-೦೨) : ಮೂಲವ್ಯಾಧಿಗೆ . . . ಅರಿಸಿನವಂ ಚೂರ್ಣವಂ ಮಾಡಿ ಕಳ್ಳಿಹಾಲಲ್ಲಿ ಕಲಸಿ ಪಿಟ್ಟೆಯಂ ಮಾಡಿ ಮೊಳೆಗೆ ಉಣ್ಣೆಯು ಕೊಡೆದು ಆ ಪಿಟ್ಟೆಯಾಂ ತೊಡೆಯಲು ಎಲ್ಲಾ ಮೊಳೆಗಳು ಕೆಡುಗು (ಚಿಕಿ. ೦೩೩): ನೇರಿಲ ಚಕ್ಕೆ. ದಾಳೆಯ ಹೂವನು ಸಹ ಕುಟ್ಟ ಬಟ್ಟು ಕಟ್ಟ ಮುದ್ದೆಯ ಮಾಡಿ ಪಿಟ್ಟೆಯ ಕಟ್ಟ ಬೇಯಿಸಿ ಜೇನುತುಪ್ಪವಂ ಕಲಸಿ ಸೇವಿಸೆ ಅತಿಸಾರು ಕೆಡುಗು (ಚಿಕಿ. ೩೨೩). **ಹಿಟು** : ೩. [ಮೂ]ಲಸ್ಥಾನ ದೇ[ವ]ಗ್ಗೆಯಂಗಭೋಗ ನಿವೆ ದ್ಯಕ್ಕ ಎ[೦]ಟುಹಿಟು (ತಅ. XV. ೩೦-೨೯; 1145): ಹನೆರದು ಹಿಟು ಸಹಿತ (ಕೋಲಾ. ೦೯೩೩. ಶಾಸಂ. ೦೯೩-೩೭; ?): ಗೋವಗಳುಡ ಹನೆರದು ಹಿಟು ಮಾಡಿದಟ್ಟು ಕೊಟ್ಟರು (ಎಕ. VII. ಶಿಕಾರಿ. ೯೯-೯; ?). **ಹಿಟ್ಟು** : ೧. ಪಿಷ್ಟ–ಹಿಟ್ಟು (ಶಬ್ದ. ೨೩೬ ಪ್ರವೃತ್ತಿ); ಬೇಳೆ ಗಕ್ಕಿಯ ಸಣ್ಣ ಹಿಟ್ಟ ಸೋದಿಸಿ ಹುರಿದು ಕೊಳಲು (ಸೂಪಶಾ. ೦.೨೯): ಹುಡಗೆ ಹೇಱಿನಲಕ್ಕಿ ಹುಡಿ ಹಿಟ್ಟುಗಳ ತಂಬಿ ಕೊಡಗು ವಾರಿಯ ಸಾರಿದರು(ಕಂಪ. ೦೦.೯೩): ಹಿಟ್ಟುಗಳನ್ನು ಮಿಶ್ರ ಮಾಡುವುದು. ತರಕಾರಿಗಳನ್ನು ತುಂಡು ಮಾಡುವುದು. . . ಈ ಕೇಂದ್ರದಲ್ಲಿಯೇ (ಅತಿಥಿ. ೧೯). ೨. ಎಂಟುಹಿಟ್ಟು ಪಂಚವಂತ ಉಂಟು ಧರೆಯ ಮೇಲೆ (ಅವತ. ೯೯-೩೯೩); ಶ್ರೀಸೋಮನಾಥ ದೇವರ ನನ್ದಾದೀವಿಗೆಗೆ ಮಾರೋಜ ತನ್ನ ಅಸ್ಸಾಲಿಕೆಯ ಹಿಟ್ಟಿನ ಭೂಮಿಯ ಒಳಗೆ ಬನ್ನೂರ ದಾರಿಯ ಮೂಡಣ ಕೆಯ್ಯ ದಕ್ಷಿಣೆಯಾಗಿ ಬಿಟ್ಟ (ಎಕ. VI. ಚಿಕ್ಕಮ. ೦೦೩-೦೨೩; ?). ೩. ಸೇನಗೌಡನಮಗ ಚಿಕ್ಕಗೌಡನು ತಮ್ಮ ಮಾವ ನೇಮಗೌಡನುಂ ಅಱುವತೊಕ್ಕಲು ಹನ್ನೆರಡು ಹಿಟ್ಟು ಸಹಿತ ಪೂಜಾರಿ ನಾಗಯ್ಯನ ಕರೆದು . . . ಕೊಟ್ಟರು (ತಅ. IX-II. ೩೩-೯; ಸು. 1093); ಮಸಣಗಾವುಂಡ ಅಜ್ಜಗಾವುಂಡ ಮುಖ್ಯವಾದ ಹನೆರಡು ಹಿಟ್ಟು ಸಹಿತ ಬಿಟ್ಟ ಧರ್ಮ (ಎಂ. XIX. ೦೯೩-೩೩ ; 1210). ೫. ಆಹಾರ ; ಊಟ : ನರಸಿಂಹಾದಿಗಳಲ್ಲಿ ಸಭಾರವ ಹೊತ್ತು ಬಾದ್ದದಾರೆ ಹಿಟ್ಟು ನಷ್ಟ ಮಾತ ಹಾಳು ಊರಿಗುಪಟಳ (ಅರಸಂ. ೬೯-೩೯೦); ಹೊಟ್ಟೆಗೆ ಹಿಟ್ಟು ಸಿಕ್ಕದ ಇಂಥಾ ದಿನಗಳಲ್ಲಿ ವರ್ಷಕ್ಕೊಂದು ಬಾಣಂತನವು ಬೇರೆ ! (ಕೃಪಶ. ೫); ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ ಹೂವು (ಗಾದೆ). ೬. (ರಾಗಿ, ಜೋಳ ಇತ್ಯಾದಿ ಧಾನ್ಯಗಳ) ಹಿಟ್ಟಿನಿಂದ ಮಾಡುವ ಒಂದು ಬಗೆಯ ಆಹಾರ ; ಮುದ್ದೆ : ಬಾಣಲಿ . . . ಹಿಟ್ಟು ತೊಳಸುವ ಬಾನೆ (ಚಿಕ್ಕಂಪ. ೨೬೩) ; ಆಗ ರೈತನು ಒಹಿನ ಸುತೋಷವಟ್ಟು 'ಹಿಟ್ಟೂ ತಿಂದು ಬಿಟ್ಟಂ ಕಿತ್ತಿಟ್ಟು, ಹಿಟ್ಟೂ ಬಿಟ್ಟೂ ಕಿಟ್ಟೂ' ಎಂದು ಹೇಳಿದನು (ಕಂಕಥ. ೦೩೩); ಮಾನೆಗೆ ಬಂದ ಮೇಲೆ ಹಿಟ್ಟುಂಡು ಕೆಲವರು ಯಕ್ಷಗಾನದ ಆಟ ಕಲಿಯುವ ಮನೆಗೆ ಹೋಗುತ್ತಿದ್ದರು (ಹುಚ್ಚಿಹ. ೬೯). ೭. ಒಂದು ಬಗೆಯ ತೆರಿಗೆ : ಪುರವನು ಕಟ್ಟಿಸಿ ದೇವರ ಹಿಟ್ಟು ಹುಗ್ಗೆ ತೆಱಿಗೆನು ಬಿಟ್ಟು (ಎಕ. VI. ಚಿಕ್ಕಮ. ೯೯-೦೯; 1649) ; ಬಿರಾಡ ಹಿಟ್ಟು ಹುಗ್ಗಿ ಬೀಜವರಿ ಇವೆಲ್ಲವನು . . . ಸರ್ವಮಾನ್ಯವಾಗಿ ಶಾಸನವನು ಪ್ರತಿಷ್ಠೆಯನು ಮಾಡಿದರು (ಎಕ. V. ಹಾಸನ. ೨-೨೯; 1663).

**ಪಿಟ್ಟುಂಪಿಟ್ಟು, ಪಿಟ್ಟುಪಿಟ್ಟು, ಹಿಟ್ಟುಹಿಟ್ಟು** (ದ್ವಿರುಕ್ತಿ) : ಕಿಟ್ಟೋಡಿ ಪಾಡಿಯೆಲ್ಲಂ ಪಿಟ್ಟುಂಪಿಟ್ಟಾಗಿ ಪೋದೊಡಂ . . . ಪೆಱದೆಗೆಯದೀಸನೊರ್ವನೆ ನಿಂದು (ಕಲ್ಯಾಣ. ೨೯೩) ; ಪೊಯ್ಯನೆ ಬಿಟ್ಟಂ ಪಿಟ್ಟುಪಿಟ್ಟಾಗಿರೆ ಸಮರದೊಳ್ ವೀರವೆರ್ಮಾಡಿದೇವ (ಎಕ. VII. ಶಿಕಾರಿ. ೪-೯೯ : 1122) ; ಬೆಟ್ಟಿಲ್ಲಿಯುಂ ಕುಟ್ಟಿದ ತೆಱಗೆ ಕರಂ ಪಿಟ್ಟುಪಿಟ್ಟಾಗಿ ಪಾಱಿಟ್ಟುದು . . . ಮಟಾಂತರಾಸೂನಸೇನಾಪ್ರತಾನಂ (ಶಾಂತೀಶ್ವ. ೧೨-೧೧): ಅವಳು ಹಾಕುವ ಒಂದು ಒನಕೆಯ ಏಟಿಗೇ ಕಾಳುಗಳು ಹಿಟ್ಟುಹಿಟ್ಟಾಗುತ್ತವೆ(ಜಾನಪ). **ಪಿಟ್ಟಾಗು** = ೧. ಪುಡಿಯಾಗು. ೨.(ಆಲಂ) ನಾಶವಾಗು : ಪಿಟ್ಟಾದ ಪೀಱಾದ ಸಿಂಧುರದಿಂ ತಟ್ಟಿಗೆದ ಮುಱಿದನ್ಯರಥದಿಂ ಕಣ್ಗೆ ಮನಕ್ಕಂ ಭಯಂಕರಮಾದಾಜಿಯೊಳ್ (ಕಂಪರಾ. ೯-೧೨೯). **ಪಿಟ್ಟುಪೀಱಾಗು** = ಹಾಳಾಗು ; ನಾಶವಾಗು : ಪಂಡಿತೆ ಬಿಟ್ಟಯ್ದೆ ಪುಗುವುದುಂ ದಾರಪಟ್ಟಿಗೆ ದಟ್ಟಿಸಿ ಕೊರಳಂ ಪಿಡಿದು ನೂಂಕೆ ಪಂಡಿತೆ ಬಿದ್ದು ಪೆಗಲ ಮೇಗಣ ರೂಪು ಪಿಟ್ಟುಪೀಱಾಗೆ (ಶೃಂಕ್ರಿ. ೩-೨೩೪). **ಪಿಟ್ಟಿ ಹಿಟ್ಟು** = ಒಟ್ಟಿನಿಂದ ಕಲಸಿದ ಮುದ್ದೆ : ಆದರಿಂದ ಬೇಗದ ಹಾಡುಗಳ ಹೊಡೆದಾಟ, ಪಿಟ್ಟಿಪಿಟ್ಟಿನ ಪೆಟ್ಟಾಟ. ಹುಪ್ಪಳದ ಹುಡಿಯಾಟಗಳೆಲ್ಲಾ ನಿಂತೇ ಹೋದವು (ಕಂಪ್ರಾಶಾ. ೩೯). **ಹಿಟ್ಟಿನ ಹಾದಿ** = ಜೀವನೋಪಾಯ : ಹಿಟ್ಟಿನ ಹಾದಿಯ ಹುಡುಕಿದ ದೇವರಿಯ ಹೆಣ್ಣಿನ

ಬರವಸ ನೋಡು (೨೦೫೨೮ ೨೦೦-೨೭). ಹಿಟ್ಟಿನಾರತಿ = (ಅಕ್ಕಿಯ) ಹಿಟ್ಟಿನಿಂದ ಮಾಡಿದ ಸೊಡಲುಗಳ ಆರತಿ : ರಂಗವಾಲೆ ಹಿಟ್ಟಿನಾರತಿಗೆ ಪೋಗಿನ ಸಾಲ್ಯಕ್ಕಂ ಗದ್ಯಾಣಂ ಹದಿನಾಱು (ಎಕ. III. ತಿರುಮ. ೯೭-೯೯ : 1270). ಪಿಟ್ಟುಬಿಟ್ಟು = ಊಟವನ್ನು ಹಾಕಿ ಅದರ ಬದಲಾಗಿ ಮಾಡಿಸಿಕೊಳ್ಳುವ ಕೆಲಸ: (ಕ್ರಿ). ಹಿಟ್ಟು ಹಿಡಿಬೂದಿಯಾಗು = ಹಾಳಾಗು : ಇವರಿಂದ ಭಾರತೀಯಸಂಸ್ಕೃತಿಗೆ ಬಲವಾದ ಪೆಟ್ಟು ಬಿದ್ದಿತ್ತಲ್ಲದೆ ಹೆಣ್ಣಿನ ಜೀವನವು ಹಿಟ್ಟು ಹಿಡಿ ಬೂದಿಯಾಯಿತು (ಅಭ್ಯು. ೧೪). ಹಿಟ್ಟೆತ್ತು = ೧. ಭಿಕ್ಷೆ ಎತ್ತು ; ತಿರುಪೆ ಬೇಡು. ೨. ಕಂಡವರ ಮನೆಯಲ್ಲಿ ಬಿಟ್ಟಿ ಊಟ ಮಾಡಿಕೊಂಡು ಇರು : ಅವರಿವರ ಮನೆ ಹಿಟ್ಟೆತ್ತಿಕೊಂಡು ಹಂಗಿನ ಕೂಳು ತಿಂದುಕೊಂಡು ವಿದ್ಯಾಭ್ಯಾಸ ಮಾಡದಿದ್ದರೂ ಆಗ್ತದೆ (ಕಂಗಾಳ್ಯ. ೬).

[< ಸಂ. ಪಿಷ್ಟ./ಪ್ರಾ. ಪಿಟ್ಠ]

ಪಿಟ್ಟುಕಾರ, ಹಿಟುಕಾಱ, ಹಿಟ್ಟುಕಾರ, ಹಿಟ್ಟುಕಾಱ (ನಾ). (ಎಂಟು ಅಥವಾ ಹನ್ನೆರಡು ಬಗೆಯ ಕಸಬುಗಳ) ಕಸಬುದಾರರ ಗುಂಪಿನ ಸದಸ್ಯ : ಅಂದಗೆರೆಯ ಕಲ್ಲಗೌಂಡನುಂ ನಿಡುಗುಂದಿಯ ಸಮಸ್ತಪ್ರಜೆ ಪಿ(ಹಿ?)ಟ್ಟುಕಾರರುಂ ಆನೆವಾಳ ಪ್ರಜೆ ಪಿ(ಹಿ?)ಟ್ಟುಕಾರರುಂ ಇನ್ನಿವರ ಸಮಕ್ಷದಲ್ಲಿ . . . ಬೊಮ್ಮಗೌಂಡನು ಪಡೆದನು (ಕಶಾಂ. ೧೫೩-೦೬ ; ಸು. 1030). ಹಿಟುಕಾಱ: ಶ್ರೀಮಂಣ್ಣಾಳ್ವಭು ಬಾಳೂರ ಕೇಸಪಗೌಡನು ಸಮಸ್ತ ಪ್ರಜೆಗಳು ಹನ್ನೆರಡು ಹಿಟುಕಾಱರ ಸಮಕ್ಷದಲಿ . . . ಕಾವಿ ಸುರಲೋಕ ಪ್ರಾಪ್ತನಾದ (ಕಕ. V. ೬೩-೪ ; 1209). ಹಿಟ್ಟುಕಾರ : ಹಾಗ ಎಂಟು ಹಿಟ್ಟುಕಾರ ನಾಡೊಕ್ಕಲಿಂಗೆ (ಇಎ. ೦೯೪೬. ಕೃಗಿಹಾಪಗಲ್. ೪೯೯-೯೩ ; 1060). ಹಿಟ್ಟುಕಾಱ : ಬಡಗಿತನಕ್ಕಾರು ನಿಂನ್ನವರು ಹಿಟ್ಟುಕಾಱ ಬಡಗಿ ಕಲ್ಲೋಜ ಬಿಟ್ಟ ಧರ್ಮಮಂ ... ಪ್ರತಿಪಾಲಿಸುವನು (ಶೌ೨೩. XV, ೬೯-೯; 1186) ; ಸೋದರ ಸೋವಗೌಡ ಹಿಟ್ಟುಕಾಱರಿಗೆ ಅಜಾವಣ ಮತ್ತರಿಂಗೆ ಹಂನೆರಡು ಹೊಂನ ಮಾರಿಯಾದ ಕೋಲು ಕೆಱೆಗಳ ದೇವರಿಗೆ . . . (ಮಾನ್ಯ)ವಾಗಿ ಕೊಟ್ಟರು (ಎ೩. XXIII. ೦೯೩-೬೦ ; 1265) : ಸಮಸ್ತ ಪ್ರಜೆ ಹಿಟ್ಟುಕಾಱರುಂ (೨೦. ೦೯೯೬. ಹಾಪಗಲ್. ೨೨೬-೦೯ ; ?).

[ಪಿಟ್ಟು + - ಕಾರ‍್ರ (< - ಕಾಱ)]

ಪಿಟ್ಟುಗ (ನಾ). ಒಬ್ಬಾತನ ಹೆಸರು : ನಿರ್ಜಿತವೈರಿಪ್ರಜನೆನಿಸಿ ಪಿಟ್ಟುಗಂ ಸತಿ ನೆಗಳ್ದಂ (ಶೌ೨೩. XX. ೦೬-೦೨; 980) ; ನೆಗಟ್ದ ಪಿಟ್ಟುಗಂ ಬೀಡಿನ ಸಾಚೀರನೊ ಪ್ರಚಣ್ಡಭುಜದಣ್ಡಂ ಮಾವನ ಗನ್ಧಹಸ್ತಿ ಕವಿಜನವಿನುತಂ ಮೊನೆ ಮುಟ್ಟಿ ಗಣ್ಡನಾಹವಸೌಣ್ಡ (ಎಕ. II. ೦೩೯-೬೩ ; ಸು. 982). 'ಪಿಟ್ಟಗ' ಪಠಾ. [ಪಿಟ್ಟು ? + - ಗ೩]

ಪಿಟ್ಟುಗುಟ್ಟು, ಹಿಟ್ಟುಂಗುಟ್ಟು, ಹಿಟ್ಟುಗುಟ್ಟು (ಕ್ರಿ). ೧. ಪುಡಿಯಾಗುವಂತೆ ಕುಟ್ಟು ; ಹಿಟ್ಟಾಗಿ ಮಾಡು : ನಂದಶ್ರೀಯುಮಂ ಕೊಂಡು ಪಿಟ್ಟುಗುಟ್ಟಿ[ಪಾಠಾಂ. ಪಿಟ್ಟಂ ಕುಟ್ಟಿ]ಅವುಗಳನಟ್ಟು (ಕ್ಷಾತ್ರ. ೩-೦೯ ೫). ಹಿಟ್ಟುಂಗುಟ್ಟು : ೧. ಹಿಟ್ಟುಂಗುಟ್ಟುತ್ತಿರ್ಪಂ ಬೆಟ್ಟಗಳಂ ಕಡಲ್ಗಳೆಳ ರೊಳ್ಳಲಸುತ್ತುಂ ಬೊಟ್ಟಿಟ್ಟುಕೊಳ್ವ ಮಗನಂ ನಿಟ್ಟಿಸಿ ಗಿರಿವರತನೂಜೆ ಒಗ್ಗತಿರ್ದಳ್ (ಚಿಂಚಿ. ೯-೯೬). ಹಿಟ್ಟುಗುಟ್ಟು : ೧. ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗುಟ್ಟಿ ಬೊಟ್ಟಿಡುವುದು (ಅವಿಚ. ೯-೩೬); ಅಹಿತಬಲದೊಳಗಾನೆಪರಿಪರಿದು ಹಿಟ್ಟುಗುಟ್ಟುತ . . . ಕರನ ಚೌಸದಲಟ್ಟಿಯಾಡಿಸಬಲ್ಲವನೆ ರಾವುತನು (ಶುಭಾ. ೦-೬೬) : ವಜ್ರದ ಕದವಾ ಹಿಟ್ಟುಗುಟ್ಟುವೆನೆಂಬ ನುಡಿ ಬೆವಱಿತ್ತು (ಜೆಕ. ೨೪-೬೩). ೨. (ಅಲಂ). ನಾಶಮಾಡು ; ಧ್ವಂಸಮಾಡು : ಅಷ್ಟಮದಂಗಳ ಹಿಟ್ಟುಗುಟ್ಟಿ ವಸ್ತುವ ಕಾಣಬೇಕೆಂಬುದು (ಮೋಕ್ಷಮಾ. ೦೦೦-೪೩೯).

[ಪಿಟ್ಟು + ಕುಟ್ಟು೧]

ಪಿಟ್ಟುಗೆಯ್ (ಕ್ರಿ). ಪುಡಿ ಮಾಡು ; ಹಿಟ್ಟು ಮಾಡು : ಸಿಡಿಲಿಂದೀ ಹಸ್ತದಿಂ ನೀನಡಸಿ ಪೊಡೆದು ಕಲ್ಲಂಬವಂ ಪಿಟ್ಟುಗೆಯ್ಯಾ ಕಡುಬಲ್ಪೇನೆತ್ತ ಪೋಯ್ತೋ? (ಶಾಂತೀಶ್ವ. ೩-೩೩). [ಪಿಟ್ಟು + ಕೆಯ್೧]

ಪಿಟ್ಟುಪಿಡುಗು (ನಾ). ಹೆಚ್ಚಿನ ಕೇಡು ; ದೊಡ್ಡ ತೊಂದರೆ. ಪಿಟ್ಟು ಪಿಡುಗಿನ ಸಾಯು = (ಸಿಡಿಲಿಗೆ ಸಿಕ್ಕ ಹಾಗೆ) ಇದ್ದಕ್ಕಿದ್ದಂತೆ ಸಾಯು ; ಅನಿರೀಕ್ಷಿತವಾಗಿ ಮರಣ ಹೊಂದು : (ಕ). ಪಿಟ್ಟು ಪಿಡುಗಾಗಿ ಸಾಯು=ಪಿಟ್ಟು ಪಿಡುಗಿನ ಸಾಯು : (ಕ).

[ ← ತೆಲು. ಪಿಟ್ಟಪಿಡುಗು ]

ಪಿಟ್ಟೆ೧ 'ಪೆಂಟೆ೧' ನೋ.

ಪಿಟ್ಟೆ೨ 'ಪಿಟ್ಟು' ನೋ.

ಪಿಟ್ಟೆನ್, ಪಿಟ್ಟೆನ್ನು (ಕ್ರಿ). ಏನನ್ನಾದರೂ ಹೇಳು ; ಸ್ವಲ್ಪವಾದರೂ ಮಾತನಾಡು : ನೃಪಸಭಾಮಧ್ಯದೊಳ್ ಪೆರ್ಚೆ ವಾಗ್ಗುಂಫದೊಳಾಗಳ್ ಪಿಟ್ಟೆನಲ್ಪಿಟ್ಟೆನಲೆಡೆಗುಡದಾಶ್ಚರ್ಯಮಂ ತಾಳ್ದಿ ನಿಂದು (ಶಬರ. ೨-೦೩) ಪಿಟ್ಟೆನ್ನು : ಆದರೂ ಅವಳು ಅವನಿಗೆ ಪಿಟ್ಟೆನ್ನಲಿಲ್ಲ (ಕುಮುಶಿ. ೦೯೩) ; ಗೋವರ್ಧನ ಪಿಟ್ಟೆನ್ನಲಿಲ್ಲ (ಮೂಗಿಸು. ೦೦೭); ಅವರು . . . ಪಿಟ್ಟೆನ್ನದೆ ಹೋದರು (ಮುಗಿಯು. ೨೩೩).

ಪಿಟ್ಟೆನ್ನಗೊಡು = ಏನಾದರೂ ಹೇಳಲು ಅವಕಾಶ ಕೊಡು ; ಮಾತನಾಡಗೊಡು: ಅವರಿಗೆ ಪಿಟ್ಟೆನ್ನಗೊಡುವುದಿಲ್ಲ ಅವಳು (ಕಕಕ. ೫).

[ಪಿಟ್೦ + ಎನ್೧]

ಪಿಟ್ಟೆನ್ನು 'ಪಿಟ್ಟೆನ್' ನೋ.

ಪಿಟ್ಲ೧ (ನಾ). (ಉಕ) (ಹಾಗಲಕಾಯಿಯ) ಮೇಲೋಗರ : ಹೆಚ್ಚು ಗಟ್ಟಲೆಯ ಅಡಿಗೆಯಲ್ಲಿ ಹಾಗಲಕಾಯಿಯ ಪಿಟ್ಲಯೂ ಸೇರಿತ್ತು (ಬೂಕ).

[← ತಮಿ. ಪಿರಲೇ = ಕಹಿನ ಮೇಲೋಗರ]

ಪಿಟ್ಲ೨ (ನಾ). (ಕರಾ) ಸಣ್ಣಕಾಯಿ : ಹೀಚು : ಈ ವರ್ಷ ಮರಕ್ಕೆ ತುಂಬ ಕಾಯಿಯಾಗಿತ್ತು, ಆದರೆ ಎಲ್ಲ ಪಿಟ್ಲ. ರೂಪಾಯಿಗೆ ಇಪ್ಪತ್ತೈದು ಕೊಟ್ಟರೂ ಖರ್ಚಾಗುವ ಹಾಗಿಲ್ಲ (ಬೂಕ). [?]

ಪಿಠರ (ನಾ). ೧. ಮಡಕೆ ; ಕುಂಭ : "ಉಖಾ, ಸ್ಥಾಲೀ, ಚರುಃ, ಕುಂಭೀ, ಪಿಠರಂ, ಕುಂಡಂ—ಈ ೬ ಮಡಕೆ" (ಅಭಿಧು. ೩೩-೦೩೯) ; "ಚರು ಕುಂಭ ಕುಂತಮುಖಿ ಪಿಠರ[ಪಾಠಾಂ. ಡಾರು]ಮಾ ಸ್ಥಾಲಿ ಭಾಂಡಂ ಮಡಕೆಯೆಂದೆನಿಕ್ಕುಂ" (ಮುಂಗಿಣ. ೬೨-೨೨). ೨. ಕಡೆಗೋಲು; ಮಂತು. ೩. ಒಂದು ಬಗೆಯ ಮೂಲಿಕೆ ; ಕೊಣ್ಣಾರಿಗಡ್ಡೆ ; ಭದ್ರಮುಸ್ತೆಯ ಬೇರು. [ಸಂ.]

ಪಿಠಾರಿ 'ಪಿಟಾರಿ' ನೋ.

ಪಿಡಿ೧, ಹಿಡಿ೧ (ಕ್ರಿ). ೧. (ಕೈಯಲ್ಲಿ) ಹಿಡಿದುಕೊಳ್ಳು ; ಗ್ರಹಿಸು ; ತಳೆ ; ಧರಿಸು : "ಪಿಡಿ—ಗ್ರಹಣೇ, ಕರಿಣ್ಯಾಂಚ (ಹೆಣ್ಣಾನೆ)" (ಶಬ್ದಾ) : ಆಜಿಯೊಳರ್ಚಿ ಕೈದುವಂ ಪಿಡಿವವರೆಲ್ಲಮಣ್ಣುವೊಡಮಾ ಯುಗದೊಳೆ ಕನಿಷ್ಠನುಪ್ಪದೋ (ಕಾವ್ಯಾ. ೯೨೩ ಟೀಕ್ಕು೪) ; ಮಱಂಗಳಂ ಪೊಟ್ಟಂತೆ ಕರಗಸಂಗಳಿಂದಮುದ್ದಂ ಪಿಡಿದು[ಪಾಠಾಂ. ಬರಿಯೊ]ಪೋಟ್ಟುದುಂ (ಚಂದ್ರಾ. ೯೬-೦) ; ಪಿರಿದು ನಟ್ಟಿನೊಳ್ ಪಿಡಿದು ದಂಡರತ್ನಮನಾಗಳ್ (ಆದಿಪು. ೦೪-೩೯): ಭಯದಿಂದೋಡುತ್ತಿರೆ ಕಾಡೊಳೊಂದು ಮಾರದ ಕೊಂಕು ಗೊಂಬಾತನ ತುಱುಂಬಂ ಪಿಡಿವು ತಡೆಯೆ (ಧರ್ಮಾಮೃ. ೨-೩೭). ೨. ತೆಗೆದುಕೊಳ್ಳು ; ಕೈಕೊಳ್ಳು ; ಸ್ವೀಕರಿಸು : ಭಿಕ್ಷಮ ಪಿಡಿಯೆಂದು ನೀಡಿದ ಕೈಯನಿತನೆ ಕಂಡು (ಚಂದ್ರಾ. ೯೯-೬); ಪುರೋಹಿತಂ ವಿವಿಧಾಗಮ ವಿದನಿಮಾವೆ ಭಾವಿಪುತ್ರಾವಾಪ್ತಿಶ್ರೀಗೆ ನಿಮಿತ್ತಂ ಪಿಡಿ ನೀಂ ಥಾಗ ದೊಳಿಂದೆನ್ನ ಕೆಯ್ಗೆ ಪರಸುತ್ತಿತ್ತಂ (ಕ್ಷತ್ರ. ೩-೦೦೪). ೩. ಸ್ವಾಧೀನಪಡಿಸಿಕೊಳ್ಳು : ವಶಪಡಿಸಿಕೊಳ್ಳು : ತನ್ನಿಚ್ಛೆಕಾರ್ತಿ ಗಡ ಬಡುಚಿನ್ನ

**ಪಿಡಿಕೊಳ್, ಹಿಡಕೊಳ್ಳು, ಹಿಡಿದು ಕೊಳ್ಳು** –೧. ಕೈಯಲ್ಲಿ ಹಿಡಿ : ದುಕೂಲಂಗಳುಮಂ ಕೊಟ್ಟು ಹಾರವಮಂ ಪಿಡಿದುಕೊಂಡಿಂತೆಂದರ್ (ಶಾಂತೀಶ. ೧೦೯) ; ಆ ವಿಭೂತಿಯಂ . . . ಎಡದ ಹಸ್ತದೊಳ್ಪಿಡಿದು ಕೊಂಡು ಬಲದ ಹಸ್ತದಿಂ ಮುಚ್ಚಿಕೊಂಡು (ಪ್ರಭು. ೧೩–೪೬): ನಿಮಿರ್ದ ಕರಾಗ್ರದಿಂ ಪಿಡಿದುಕೊಂಡಲರ್ಗೊಂಚಲಂ (ಶಬರ. ೮–೧೦೯) ; ಗೋವಳರು ಗುಡಿಗಟ್ಟಿ ಸಂತಸದಿಂವಿ ಬಂದಾ ಘಳಿಯ ಹೊಸವನು ತಾವರೆಯ ಪಿಡಿಕೊಂಡು ಬರೆ ಹರಿ ತಂದೆಗೊಪ್ಪಿಸಲು (ಕೃಷ್ಣ. ೨೨–೯೬) ; ಹುಲಿಯು ಮಾಸೆಯ ಹಿಡಿದುಕೊಂಡು ಒಲಿದಾಡ್ಯುಲಿಯಾಡುವಂತೆ ಕೂಡಲಸಂಗನ ಶರಣರೊಡನೆ ಮಾತಿದು ಸರಸವಾಡಿದರೆ ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ (ಬಸವ. ೬೬೦ ೮): ಗೋಪಾಲನೂ ಇವಳ ಜೊತೆಯಲ್ಲೇ ಬೆಳ್ಳಿಯ ಲೋಟವನ್ನು ಹಿಡಿದುಕೊಂಡು ಹೊರಟದ್ದನು. (ಶಾಕು. ೦೦೬). ೨. ಸೆರೆಹಿಡಿ ; ಬಂಧಿಸು : ಕೆಲರ್ ಕಂಡೊಡೆ ಕರಗುವೆಂದು ಕೆಲದ ಮಾರಂಗಳನೊತ್ತುಗೊಂಡು ಕೆಲಬರೆಮ್ಮನೆಬ್ಬಟ್ಟಿ ಪಿಡಿದುಕೊಳ್ಗುವೆಂದು ಮಗುಳ್ದು ನೋಡುತ್ತುಂ (ಆದಿಪು. ೯–೯೨ ೪): ಇವನ ಹಿಡಕೊಂಡು ಹೋಗಲೋ ಹೋಗಿ ಇವನರ್ವ್ವ ಮಾತ ಕೇಳದೆ ಪೋಪನಾದ (ಪ್ರಭು. ೩–೦೯ ೪೪೦). ೩. ಅಮರಿಕೊಳ್ಳು ; ಮೆಟ್ಟಿಕೊಳ್ಳು : ಸತ್ತವರು ಜಕಣಿಯಾಗಿ ಬಂದು ಬದುಕಿದ್ದವರನ್ನು ಹಿಡಿದುಕೊಳ್ಳುತ್ತದೆ ಎಂದು ಕೇಳಿದ್ದೆ (ಕದ್ರ. ೦೩೬).

**ಪಿಡಿದುಯ್** – ಸೆರೆಹಿಡಿದು ಕರೆದೊಯ್ಯು ; ಬಂಧಿಸಿಕೊಂಡು ಹೋಗು: ಪಿಡಿದುಯ್ವುದು ಗಂಧರ್ವರ ಪಡೆ ಗಡ ನಿಮ್ಮಣ್ಣನಂ (ಸಾಹಸ. ೬–೪೬).

**ಪಿಡಿದೆತ್ತು, ಹಿಡಿದೆತ್ತು** –೧. (ಕೈಯಲ್ಲಿ) ಹಿಡಿದು ಮೇಲಕ್ಕೆತ್ತು : ಶಾರ್ಙ್ಗವ ಪಿಡಿದೆತ್ತಿ ಶಿಂಜನಿಗೊಳಿಸಿ (ಜೋಹಟ. ೩೯–೨೧): ಪಿಡಿದೆತ್ತಿ ತಲೆಯ ಕೊರಲಂ ಕೀಡಿ ಕೈಗಿಂ (ಶಾಂತಿ. ೦೬೩–೩೬೬): ಹತ್ತಿದ ಮೆಯ್ಯುಳ ಸೂಡಿ ಕರವ ಹಿಡಿದೆತ್ತಿದಳಬುಜಾಯತಾಕ್ಷಿ (ಜೋಹಟ. ೯–೨೬) ಬಾಗಿ ನೆನಸ್ಮರಿಸುತ್ತಿದ್ದ ಪ್ರಿಯತಮೆಯನ್ನು ಹಿಡಿದೆತ್ತಿ (ಕದೀತ. ೦೬೮) ; ಮೆಲ್ಲಗಿವಳನು ಮುಟ್ಟು, ಮರಳಿ ಹಿಡಿದೆತ್ತು (ಅಂಗೀಕ. ೬೦–೬). ೨. ಎದ್ದು ಕಾಣುವಂತೆ ಮಾಡು; ಎತ್ತಿ ತೋರಿಸು : ನುಣ್ಣಗಮಿರ ಗಚ್ಚುದಾವರೆಯ ಮೆಯ್ಸಿರಿಯಂ ಪಿಡಿದೆತ್ತ (ಕಬ್ಬಿಗ. ೯೦).

**ಪಿಡಿದೆಟ್, ಪಿಡಿದೆಳೆ** – ಹಿಡಿದು ಜಗ್ಗು : ಕೃಷ್ಣೆಯ ಮುಂದಲೆಯಂ ಪಿಡಿದೆಟ್ಟಿಲ್ಲಿಯೆ ತಲೆವಿಡಿದರ್ ವಸ್ತ್ರ ಚೀರವಂ ಕೌರವರಂ (ಪಂಪಭಾ. ೬–೩೬) ; ಅವನನು ಕಂಡ ಸೀಪಣಿಯ ಪಂಚೇಂದ್ರಿಯ ಪಿಡಿದೆಳೆದು ಮುಂಚುತಲಿಪ್ಪ ಕೂಟಕೆ (ಶಂಕರ. ೯–೩೦) ; ಬಿಡಿಸಿ ಸೆರಗಂ ಸಿರಿಯಂ ಪಿಡಿದೆಳೆದು ಸಡೆಯುತ್ತುಮಿರ್ ತೋರ್ದೊರ್ಡಲ ಬಗಿಯಂ (ಶಾಂತಿ. ೧೩೯–೩೬೨).

**ಪಿಡಿದೊತ್ತು, ಹಿಡಿದೊತ್ತು** –೧. (ಕೈಯಲ್ಲಿ) ಹಿಡಿದುಕೊಂಡು ಒತ್ತು : ಪಿಡಿದೊ[ತ್ತಿ ದ]ತ್ತಿ ಪೂ ಡೆ ಯೆ ನೇಗಿಲ್ ನಡೆಮೊನೆಯೊಳ್ ನೆಗೆದಳಶವುಂ ಕೆಡು (ಶಾಸನ. ೦೬೯–೧೪). ೨. ಒತ್ತಾಯ ಮಾಡು ; ಬಲಾತ್ಕರಿಸು : ಸ್ವಂಜಿನ ತೆರದೊಳು ದೊತ್ತುವರಿರುವರು . . . ತಾವಾಗಿ ತಮ್ಮೊಳಗಿರುವುವನೀಯರು ಹಿಡಿದೊತ್ತಿ ಹಿಂಡದ ಹೊರತು (ಶಂಕರ. ೦೯೯–೯೯). ೩. ವಶಪಡಿಸಿಕೊಳ್ಳು : ಸ್ವಾಧೀನ ಮಾಡಿಕೊಳ್ಳು : ಗೂಪಯಸನೋಡಿಸಿ ಭಟ್ಟುಪ[ಸಕ್ಕ]ಮೆಟ್ಟಿ × × × ಪಂದೇಭಹೇಪು × × ಮು ಹಯುಮು ಹಿಡಿದೊತ್ತಿ ತಂದು (ಶಾಸ. XI–1, ೩೦–೮೩, 1006). ☞ ಈ ಧಾತು ಅನೇಕ ಪದಗಳೊಡನೆ ಸೇರಿ ಅನೇಕಾರ್ಥಗಳನ್ನು ಕೊಡುತ್ತದೆ. ಉದಾ. 'ಕಾಲ್ಪಿಡಿ', 'ಕೆಯ್ವಿಡಿ', 'ಗೀಳು ಹಿಡಿ' ಇತ್ಯಾದಿ.

[ದೇ. ॥ ತಮಿ. ಪಿಟಿ ; ಮಲ. ಪಿಡಿ; ಕೊಡ. ಪುಡಿ; ತೆಲು. ಪಿಡಿ; ತೊದ. ಇಡಿ ]

**ಪಿಡಿ₃, ಹಿಡಿ₃** (ನಾ). ೧. ಹಿಡಿಯುವಿಕೆ; ಗ್ರಹಿಸುವಿಕೆ : 'ಪಿಡಿವೆಟು' ಪರಾ. ೨. ಹಿಡಿದುಕೊಳ್ಳಲು ಅನುಕೂಲಿಸುವಂತೆ ಇರುವ ವಸ್ತುವಿನ ಭಾಗ ; ಕಾವು; ಹಿಡಿಕೆ; "ತ್ಸರು, ಮುಷ್ಟಿಃ–ಈ ೨ ಹಿ(ಪಿ)ಡಿ" (ಶಬ್ದಮ. ೩೮–೩೦೯): ಮುಖದರ್ಪಣಕ್ಕೆ ತಂದಿಕ್ಕಿದ ರನ್ನದ ಪಿಡಿ ಸಂದಯಮೇನೆನೆ ಸುದತಿಯ ಕಮನೀಯ ಬಿಂಬಾಂಧರಮೆಸಗು (ಪುಷ್ಪ. ೩–೩೩); ಅವಳ ಕೊರಲ್ ಜನವಾದಮೆಸೆವಿನಂ ಭಾಜನವಾದತ್ತು ಮಂಗಾಸ್ಯಮುಕುರದ ಪಿಡಿಯೊಳ್ (ಜಗ. ೧೦–೩೮); ಬೆಳ್ಳಿಯ ಪಿಡಿಯ ಕತ್ತಿಯ ತಂದು ಹೊಕ್ಕುಳ ಬಳ್ಳಿಯ ಕೊಯ್ದು ಗರ್ಭಕನ (ಜೋಹಟ. ೦೬–೨೧). ೩. ಮುಷ್ಟಿ; ಮುಟ್ಟಿಗೆ : ಉಡಲುಂ ತುಡಲುಂ ಕೊಟ್ಟುಂ ಪಿಡಿ ಕೀಳಿದ ಪೊನ್ನನಿತ್ತುಂ (ಜಟಕ. ೭–೩೧); ಪಿಡಿ ಪಣೆ ತೋಳ್ ತುದಿ ಪೊಳೆ ಮೊಳೆ ಮುಡಿಯೆನೆ ತೋಱಿತ್ತು ವಿರಹಿ ಕೌರವಬಲಮಂ ಬಡಿಪಲ್ಲಿ ಕಾಮಭೀಮಂ ಪಿಡಿದ ಗದಾದಂಡಮೆನಿಸಿ ಮಾಮರನಿದಿರೊಳ್ (ಪಂಪಭಾ. ೭–೩೬); ಮಡದಿಯ ಸೆಳೆನಡು . . . ಪಿಡಿಗೊಳಗಾಗಿರ್ಪುದು (ರಾಜಶೇ. ೩–೩೭); ಪೆರ್ಗವತೆ ಸೇರೆ ಪಿಡಿ ಶರಭಂಗಳೆನಿಪವರೊಳಭಿನಯಿಸಿ ತೋಱಸಲ್ಕುಂದುಪಾಣಿವನಜಮಂ ಸೃಷ್ಟಿಸಿದನೆಂಬ ಚೆಲ್ವಿನ ಕೋಮಲೆಯರಲ್ಲಿ ಕಣ್ಗೆಸೆದರು (ಕೃಷ್ಣರಾ. ೩–೨೦). ೪. ಮುಷ್ಟಿಯಲ್ಲಿ ಹಿಡಿಯಬಹುದಾದಷ್ಟು ಪ್ರಮಾಣ ; ಮುಷ್ಟಿಗ್ರಾಹ್ಯವಾಗುವಷ್ಟು ಪ್ರಮಾಣ: "ಪಿಡಿಯೆನಿಪ್ಪ ನುಡಿ ಮುಷ್ಟಿಗ್ರಾಹ್ಯದ ಪೆಸರು" (ಕಬ್ಬಿ. ೧೯); ಗಾಮುಣ್ಡರು ಪಾರ್ವರು ತಮ್ಮ ಕೆಱೆಯ ಮಣ್ಣೊಳೆಕ್ಕನ್ಗಗ ಮಣ್ಣುವಿಕ್ಕಿಡಿಭತ್ತಮು . . . ಚನ್ದ್ರಸೂರ್ಯಕಾಲವ್ವರಂ ಸಲ್ವನ್ತು ಕೊಟ್ಟರ್ (ಶಾಸ. IX–1, ೦೩–೮೩; ೯೩೩); ನಡುವೊಂದು ಪಿಡಿಯೆನಲು ಜವ್ವನದ ಸೊಕ್ಕಾನೆಯಡುಂಟುಜನ ಮೊಲೆಬೆಟ್ಟನೊಳು ತನ್ನ ತಲೆಯನಿಟ್ಟೊಡಸಳುಪ ಪುರುಷಸಿಂಹಂ (ರಾಜಶೇ. ೩–೨೨): ಪಿಡಿಯೆಂಬ ನುಡಿ ತಳೋದರಿಯರುರುಮಧ್ಯದೊಳ್ (ಶೃಂಗಾ. ೩–೧೧). 'ಒರ್ಪಿಡಿ' ಪರಾ. ೫. ಇಸ್ಪೀಟುಎಲೆಗಳ ಕಟ್ಟು : ಕೈಯಲ್ಲಿ ಹಿಡಿದ ಪಿಡಿಯಿಂದ ಜಾಕಿಯನ್ನು ತೆಗೆದು ಹಾಕುತ್ತಾ ಗೋವು ನುಡಿದ (ಶಾಂಭ. ೨); ಒಳಗಡೆ . . . ಒಂದು ಕಸೂತಿಯ ವಸ್ತ್ರ ನೂಲು ಸೂಜಿ ಇಸ್ಪೀಟುಪಿಡಿ ಇಡುತ್ತಿವೆ (ಕೃಪಾಕ. ೧೨), ಇಸ್ಪೀಟು ಆಟದಲ್ಲಿ ಅವನು ನಿಸ್ಸೀಮ. ಮನೆಯಿಂದ ಹಳೆಯ ಪಿಡಿಯೊಂದನ್ನು ಕೊಂಡು ಬಂದು, ಮರದ ನೆರಳಿಗೆ ಬಿಡಿಸಿ . . . ಎಲೆಗಳನ್ನು ಇಳಿಸುವಾಗ, ಅವನ ಉತ್ಸಾಹ ತುರೀಯಾವಸ್ಥೆಗೆ ಮುಟ್ಟುತ್ತದೆ (ಸ್ವಕೃಹೊ. ೩೮). ೬. ಬಂಧನ ; ಸೆರೆ; 'ಪಿಡಿವಡೆ' ಪರಾ. ೭. ಕಸಪೊರಕೆ : ಅಷ್ಟಮಷ್ಟ ಉಶ(ಮ) ಪಿಡಿ ಪಿಡೀಲ್ ರಾಶಿಯುಂ ಪುರಿಯೋಡು ಕೋಡುಕಾವಲಿ ಸಾಲಿಯು ಬೆಸಗೋಬರ್ ಪಿಡಿದಿರೆಯುಂ ಪುಸಿಪರ ಶೂಲು ಜಗಕ್ಕೆ ಮಱಿಯಿಲ್ಲೆಂದಂ (ಅಚ್ಚುಕು. ೯–೯೯). ೮. ಒಂದು ಬಗೆಯ ಆಯುಧ. ಕಠಾರಿ : ಹೊಳೆವ ಕಠಾರಿ ಕೈಗತ್ತಿ ತೋಮರ ಬಿಲ್ಲು ಬಲುದಡಿ ಪಿಡಿ ಚಕ್ರದಲಿ ಕಳಬಂಟ ಕಂಠವಿಚ್ಛೇದವಿನೋದದ ತಳಪಟರೂರ ಕಾದಿಹರು (ಜೋಹಟ. ೦೬–೦೦೩); ಕೊರಳ ಯಜ್ಞೋಪವೀತದ ಮುಡಿಹೂಗಳ ಪರಿಮಳಿಸುವ ಗಂಧದಿಂದ ಕರದೊಳು ಪಿಡಿಯನಾಂತರಸುಪುತ್ರಕರುಗಳು ಧುರಕನುವಾದರು (ಶಂಕರ. ೧೬–೯೨). ೯. ಸಣ್ಣದು ; ಚಿಕ್ಕದು : 'ಪಿಡಿಗಲ್', 'ಪಿಡಿಗುಂಡು' ಪರಾ.

**ಹಿಡಿ₃** : ೨. "ತ್ಸರುಃ,–ಖಡ್ಗಾದಿ ಮುಷ್ಟೌ ಕತ್ತಿ ಮೊದಲಾದವುಗಳ ಹಿಡಿಗೆ ಹೆಸರು, ಕತ್ತಿಯ ಪಿಡಿ, ಆಯುಧದ ಕೈಪಿಡಿ" (ಅಮರ. ೨೬೩): ಹಿಡಿಯಿಲ್ಲದ ಶಸ್ತ್ರ ಕೀಲಿಲ್ಲದ ಕತ್ತರಿ (ಸರ್ವಜ್ಞ. ೦೨೩–೬೪೦); ಕತ್ತಿ ತಪ್ಪಿದರೆ ಹಿಡಿ ತಪ್ಪುದಲ್ಲವೆ ದೇವ ? (ಹರಿಶ್ಚ. ೩೦–೦೨೦): ಪಾತ್ರೆಗಳ ಹಿಡಿ, ಸೊಂಡಿನಳಿಗೆ, ಸುದುಗೆರೆ ಇತ್ಯಾದಿಗಳ ಕಡೆಗೆ ವಿಶೇಷಗಮನ ಕೊಡಬೇಕು (ಅಡುಗೆ. ೯೩). ೩. ಹಿಡಿಯೊಳಗುವಷ್ಟವ ತುಂಬಿ ಆಸೆ

ಮಾಡುವವನ್ನ (ಕರ್ನಾಕ. ೩೬–೩೦೬); ಜಗವಿದೆಲ್ಲವು ನನ್ನ ಮಾಯೆ ಯೊಳೊಗೆದು ತೋಱಿಸಿ ಸುೞಿಸಿ ಸುೞಿವುದು ಹಿಡಿಯಲಡಗುವುದು (ಶಬ್ದಾರ್ಥ. ೩–೫೬); ಹಿಡಿಹಿಡಿಯೆಂದರೆ ಹಿಡಿಯಲಿ ಸಿಗುವನೆ ಬ್ರಹ್ಮಾಂಡವೇ ಆತ (ಕಂಕು. ೩೯–೬); ಹಿಡಿ ತುಂಬ ಹಣ ಕೊಟ್ಟರೂ ನುಡಿ ಚೆನ್ನಾಗಿರದೇಕು (ಗಾದೆ). ೬. 'ಹಿಡಿವಡೆ' ವರಾ. ೭. "ಹಿಡಿ–ಕಸಬರಿಗೆ" (ಜಾನಪ. ೩೬); ಮರದ ಹಸಿ ಆಡರುಗಳಿಂದ ಒಂದು ಗುಡಿಸುವ ಹಿಡಿ ಮಾಡಿ, ತರಗೆಲೆ ಗುಡಿಸಿದಳು (ಹುಚ್ಚು. ೨೬). ೯. 'ಹಿಡಿಗಲ್ಲು' ವರಾ. ೧೧. ಮಿಾಸಲು; ಮುಡಿಪು: ಹಿಡಿಯುಂಬ ನುಡಿ ವಿಾಸಲ್ಲುಂಟು ನಿಚ್ಚಲು ಪಡಿಯುಂಬ ಶಬ್ದ ಮಱೆಯೊಳು (ಪ್ರಾ. ಕ. ೪–೩೬). 'ಹಿಡಿಮಂದಿ' ವರಾ.

ಹಿಡಿಹಿಡಿ₂ (ದ್ವಿರುಕ್ತಿ): ಇನ್ನೂ ಯಾಕ ಬರಲಿಲ್ಲವ್ವಾ . . . ಹಿಡಿಹಿಡೀಲೆ ರೊಕ್ಕಾ ತಗದು ಹಿಡಿಹಿಡಿ ಅನ್ನಾಂವಾ ಖರೇ ಅಂತ ಕೈವಾಡಿದರ ಹಿಡದ ಬಿಡಾಂವಾ (ಕಣಗಿ. ೭೨–೫೬); ಕೆಲವು ನಿದರ್ಶನಗಳು ಬಿಡಿಬಿಡಿಯಾಗಿ-ಸಿಗುತ್ತವೆ; ಗ್ರಾಂಥರೂಪದಲ್ಲಿ ಹಿಡಿಹಿಡಿಯಾಗಿ ಏನು ಸಿಗುತ್ತಿಲ್ಲ (ಕ್ರಾಂತಿ. ೩೦).

[<ಒಡಿ₁./ತಮಿ. ಒಟಿ ; ಮಲ. ಒಡಿ ; ತುಳು. ಪುಡ, ಪುಡಿ, ಹಿಡಿ; ಕೊಡ. ಪುಡಿ ; ತೆಲು. ಒಡಿ]

**ಒಡಿ₂**, ಹಿಡಿ₂ (ನಾ). ೧. ಹೆಣ್ಣಾನೆ ; ಕರಿಣೆ : "ಒಡಿಯೆಂದು ಪೆಣ್ಣಾನೆ" (ಶಬ್ದಾ. ೩೦–೯೬); ಇಭೇರಕಾಂತು . . . ಎನ್ನ ಪೆಂಡತಿ ಮಲಯಾ ಪತಿಯುಪ್ಪ ಒಡಿ ಪುರುಡಿನಿಂದು ಚಂದನಮಲಯಮೆಂಬ ಪರ್ವತದ ಶಿಖರ ದಿಂದಂ ತನ್ನನಿಕ್ಕಿ ಸತ್ತಂತೆ ನಿನ್ನ ಪೆಂತತಿಯುಂ ಸತ್ತಳೆಂದು ಪೇೞ್ದು (ಶಬ್ದಾ. ೩೯–೦೦); ತಲೆಪರಿದೋಡೆಯು ಒಡಿಯನೇಱ್ ಪೆಂಡವಾಸ ದೋಳ್ಪೆಂಡಿರ್ ಪಳಸಿ ಬರೆ (ಸಂಕರ. ೩–೯೬ ಪ); ಪೊಡೆಯೆಂಬಿದು ಬೆಳಗೆ ಯೊಳ್ಪೊಡಿಯೆಂಬಿದು ಒಣೆಯೊಳ್ . . . ಅಲ್ಲದಿಲ್ಲಾ ನಾಡೊಳ್ (ವಾರ್ಧಿ). ೦–೯೩); ೨. ಯಾವುದೇ ಪ್ರಾಣಿಯ ಜಾತಿಯಲ್ಲಿ ಹೆಣ್ಣನ್ನು ಸೂಚಿ ಸಲು ಉಪಯೋಗಿಸುವ ಪದ; ಪ 'ಒಡಿ' ಎಂಬುದರ ಮೂಲಾರ್ಥ 'ಹೆಣ್ಣಾನೆ' ಎಂದಿದ್ದರೂ ಕ್ರಮೇಣ ಈ ಪದವನ್ನು ಇತರ ಪ್ರಾಣಿ ಗಳ ಹೆಣ್ಣುಗಳನ್ನು ಸೂಚಿಸುವಾಗ ಉಪಯೋಗಿಸಿರುವ ಉದಾ ಹರಣೆಗಳು ಅನೇಕವಾಗಿವೆ. ಮಲಯಾಳ, ತೆಲುಗುಭಾಷೆಗಳ ಲ್ಲಿಯೂ ಇದನ್ನು ಕಾಣಬಹುದು : 'ಒಡಿ' ಎಂಬುದು ಮೃಗಗಳೊ ಳಗಿನ ಸ್ತ್ರೀತ್ವಸೂಚಕವಾಗಿ ಪೂರ್ವಕಾಲದಲ್ಲಿ ರೂಢವಾಗಿದ್ದ ಹೆಸರೆಂದು ಭಾವಿಸಬಹುದು (ಶಾಸನ. ೩೦೭). 'ಒಡಿಗುದುರೆ' ವರಾ. ಒಡಿ₂ : ೨. 'ಹಿಡಿಗುದುರೆ', 'ಹಿಡಿಯಾನೆ' ವರಾ.

[ದೇ. ೩ ತಮಿ. ಒಟಿ ; ಮಲ. ತೆಲು. ಒಡಿ ]

**ಒಡಿಕಟ್ಟು** 'ಒಡಿಗಟ್ಟು' ನೋ.

**ಒಡಿಕಲ್** 'ಒಡಿಗಲ್' ನೋ.

**ಒಡಿಕಿಸು** 'ಒಡಿಕೆಯ್ಸು' ನೋ.

**ಒಡಿಕುತ್ತು₁** (ನಾ). ೧. ಹಿಡಿಯುಳ್ಳ ಒಂದು ಬಗೆಯ ಚುಚ್ಚುವ ಆಯುಧ: ಇದುವಿಟ್ಟಿಯ ಒಡಿಕುತ್ತಿನ ಕಿಕ್ಕಡೆಯ ಕೋಲ್ಗೆ ಪರ ಮಸುಲಂ ಪಾಯ್ದು (ಶಾಂತಿನಾ. ೧೨–೬೦). ೨. ಚುಚ್ಚುವಿಕೆ ; ತಿವಿತ : ಎಡಗಯ್ಯೊಳ್ ಮುಂದಲೆಯುಂ ಒಡಿದಿಱಿದು ಮಾರಲ್ಪಿಯೊತ್ತಿ ಸುರಿಗೆಯೊಳುರದುಂ ಒಡಿಕುತ್ತುಗುತ್ತಿ ನೆತ್ತರನುಡುಪಾನನೆ ಕುಡಿದು ತಣಿದು ಮಾರೋರ್ಥಿಗೆ ಸಂದಳ್ (ಲೀಲಾ. ೩–೯೦). [ಒಡಿ₁ + ಕುತ್ತು₁]

**ಒಡಿಕುತ್ತು₂** (ನಾ). (ಆನೆಗೆ ಸಂಬಂಧಿಸಿದಂತೆ) ಬೆದೆ (?): ದುರ್ವಾಜಿ ಗಳೊಳೆ ತೊಡರ್ದ ಸಿರ್ಕ ನೆಗಟ್ಟ ಒರಿಗಳೊಳ್ ಒಡಿಕುತ್ತು ಪರಭೂಪವಾಃ ಗಳೊಲ್ ಮುತ್ತು (ಲೀಲಾ. ೦–೦೯ ಕಗಳ).

[ ಒಡಿ₂ + ಒತ್ತು₂ (< ಕುತ್ತು) ]

**ಒಡಿಕೆ**, ಹಿಡಿಕೆ (ನಾ). ೧. ಹಿಡಿತ ; ಬಂಧನ ; ಸೆರೆ : 'ಒಡಿಕೆವೆಯು' ವರಾ. ಹಿಡಿಕೆ : ೨. ಹಿಡಿದುಕೊಳ್ಳುವ ಸಾಧನ ; ಕಾವು ; ಹಿಡಿ : ಹೋಳಿನ ಕೋಡುಗಳು ಚೂರೀ ಹಿಡಿಕೆಗೆ ಬರುತ್ತವೆ (ಸುಬ್ಬಣ್ಣ. ೩–೬೨); ಆ ವ್ಯಕ್ತಿ ವಿಸವುರನೆ ವಿಾಂಚುತ್ತಿದ್ದ ಹಿಡಿಕೆಯನ್ನುಳ್ಳ ಸಡಗೋಲನ್ನು . . . ಊರುತ್ತ ಹಳ್ಳಿಯ ಬೀದಿಯಲ್ಲಿ ನಡೆದು ಬರುತ್ತಿದ್ದನು (ಪ್ರಕಟ. ೫೬೬). ೩. ಹಿಡಿ ; ಮುಷ್ಟಿ : ಬದ್ದಯಾ ಮುಷ್ಟಾ—ಹಿಡಿಕೆಯಲ್ಲಿ ಹಿಡಿದು ಆಳೆವ ಮೊಬ (ಶಾಸನ. ೮೨೨); ಅದಕೆಯಷ್ಟು ಅಳ್ಳಾ ಹಿಡಿಕೆಯಷ್ಟು ಕಿಟ್ಟಲಣ್ಣ ಕಬಿದಾರ ಕಱಿತ್ಕಿ ರುಜಾಗಿ ಹಾಲ್ಣಾ (ಶಕಾ. ೨೨೦–೩). ೪. ಮುಷ್ಟಿಯಲ್ಲಿ ಹಿಡಿಯಬಹುದಾದಷ್ಟು ಪ್ರಮಾಣ ; ಒಂದು ಹಿಡಿಯಷ್ಟು ಪ್ರಮಾಣ : ಮಂಡಿದ ಕಿವಿ ಸಣ್ಣರೋಮಂ ಹಿಡಿಕೆಯ ನಡು . . . ಅಡಿ ಮುಂಚುವ ನಾಯ್ಗಳಿಂ ನೃಪಾಲಂ ಕಂಡಂ (ಶಕಾ. ೬೨).

[ ಒಡಿ₁ + — ಕೆ ]

**ಒಡಿಕೆಯ್**, ಹಿಡಿಗಯ್, ಹಿಡಿಗೆಯ್₂ (ನಾ). ೧. ಹಿಡಿ ; ಮುಷ್ಟಿ ; ಮುಟ್ಟಿಗೆ : ಒಡಿಕೆಯ್ ತೀವಿದ ಏರ್ಗಣೆ . . . ಬೆದಂಗನೆಯೊಳಕೊಳೆ ಧನುರ್ಧರರ್ ಪೆಣೆದೆಚ್ಚರ್ (ಶಾಂತಿನಾ. ೦೦–೬೦). ಹಿಡಿಗಯ್ : ೨. (ಅಲಂ) ಅಧೀನ; ವಶ: ಹಿಡಿಗ[ಪಾಠಾಂ. ಗೆ] ಯ್ವೊಳಿರ್ದಸುರರಿವು ಪಾರ್ಥನಂ ಕರೆದು . . . ನೇಮಿಸಲು (ಕೃಪಾ. ೫೫–೩೯). ಹಿಡಿಗೆಯ್₂: (೧).

[ಒಡಿ₂ + ಕೆಯ್₂]

**ಒಡಿಕೆಯ್ಸು**, ಒಡಿಕಿಸು, ಒಡಿಕೈಸು, ಹಿಡಿಕಿಸು, ಹಿಡಿಕೆಯ್ಸು, ಹಿಡಿಕೈಸು (ಕ್ರಿ). ೧. ಹಿಡಿದುಕೊಳ್ಳುವಂತೆ ಮಾಡು : (೧). ೨. ಕೈಯಲ್ಲಿ ಹಿಡಿದುಕೋಳ್ಳು, —ತೆಗೆದುಕೊಳ್ಳು : ಕಡುಕಂಪು ಒಡಿಕೆಯ್ಸುಬರ್ಕಮೆ ಬಟಲ್ದೈತಂದ ತಂಗಾಳಿಯುಂ ಒಡಿಯಲ್ ಬರ್ಕಮೆ (ಅರ್ಕಾಕೀ. ೦–೩೬). ೩. ಮುಷ್ಟಿಯನ್ನು ಗಟ್ಟಿಯಾಗಿ ಹಿಡಿ, —ಬಿಗಿಮಾಡು : ಒಡಿದಡಸಿ . . . ಒಡೆದೊಡೆದು ಗುದ್ದಿಗುದ್ದಿಯು ಕೊಲಲೆಂದಡಹುಡಿಸು ಮುಂತಿರ್ದಮ ಒಡಿಕೆಯ್ಸು[ಪಾಠಾಂ. ೯ಯಿಸಿ]ದ ಕೆಯ್ಸುಮೊದವ ಕಾಲುಂ ಹರಿಯಾ (ಅರ್ಕಾಕೀ. ೬–೫೬). ಒಡಿಕಿಸು : ೨. ಬಿಸದ ಸುಕಂತ್ರದಿಂದಂ ನಡೆದು ಶುದ್ಧಾತ್ಮನಪ್ಪನದನೊಲ್ಲದೆ ವಿಂದಡೆ ಶುದ್ಧನಲ್ಲ ಮಲವಂ ಒಡಿಕಿಸಿ ಪೊಱಗಯ್ಯನೊರಸಿ ಕಟ್ಟಿದ ತೆಱದಿಂ (ಸಮಯ. ಅಮುಂಚನ್ನ. I. ೩೬೬–೫). ೩. ಎರಡುಂಯ್ಯಂ ಒಡಿಕಿಸಿ ನಿಲ್ವುದುಂ ತಲೆಯುಂ ತೂಗುತ್ತೆ ನಿಲ್ವುದುಂ . . . ಇಂತಿವೆಲ್ಲವುಂ ಪರಿಹರಿಸಿ ಜಿನಪ್ರತಿಮೆಯಂತೆ ನಿಲ್ವುದು ತೃತೀಯುಸಾಮಾಯಿಕನೆಂಬ ಶ್ರಾವಕನ ಸ್ವರೂಪಂ (ಕಶಾರ. ೩೯೩); ಚರಣದಂದುಗೆಂಕಿಣಿಗಳಿಂ ಚರಣದೊಂದೆರಡಡಿಯುನಿಡುತುಂ ತರುಣಿ ಯರು ಬಾವಲ್ಕೆ ತೋಳಾಡುತ್ತ ಒಡಿಕಿಸುತೆ ಶಿರವೊಲೆಯುತ್ತಂ ನರ್ತಿಸುತಲಿ (ಕಂಕರ. ೦೬–೩೨). ೪. ಒತ್ತು; ಅದುಮು : ಅಡಿಯಂ ಬಲ್ಪಿಡಿದುಪೆ ನುಣ್ಪೊಡೆಯಂ ಒಡಿಕಿಸಿದುಪದರ್ದ ಕಾವನ ಕೋಳಂ ಬಿಡದಟ್ಟಿದುವು . . . ಪೊಳೆವ ತುಱುಗೆವೆಗಣ್ಗಳ್ (ಶಬ್ದಾನಾ. ೩೭೬). ಒಡಿಕೈಸು : ೨. ಕಡೆ ಮುಂಸುಱುವ ಮುಱಿದುಂಬಿಯ ಬಂಬಲಿಂ ಲತೆಗಳು ಒಡಿಯ ದಡ್ಡಿಯುಂ ಕವಿದುತೆಯುಂಪುದಾಗೆ ಒಡಿಕೈಸಲಪ್ಪ ಕಂಪು ತೀವಿದಂತಾಗಿ (ಕಾವ್ಯ. ೨೦೯); ಅಂತು ಪುಡಿಗತ್ತುರಿಯೆಂದು ಒಡಿಕೈಸಿ ಪೂಸಲುಂ ಪಾಸಿ ಮೊಟ್ಟೆಗಟ್ಟಲುಂ ವಿಾಹಿರಂಗವಿಾಂದುಗಂ ಗುದ್ದಲಿ ಗೊಂಡಗುಬ್ಬು ಪೂಜೆಗಾಗಲುಮಪ್ಪ ಕಾಳದ ಕಟ್ಟಲೆಯೊಳ್ (ಅರ್ಕಾಕೀ. ೩–೦೬ ಪ). ೪. ಮಣಿಮಯುಮಪ್ಪ ಪೀಠ ಬೆಟ್ಟತಿಂಬಂತಿರಗೆಲೆ ನೂಂಕಿ ಮಲ್ಲಿದುಪಪ್ಪ ತನ್ನ ನುಣ್ಪೊಡೆಗಳನರಸನ ಪಾದವಲ್ಲವಕ್ಕೆ ಸಾರ್ಚಿ ಪಾಣಿಪಲ್ಲವಂಗಳಿಂ ಒಡಿಕೈಸುತ್ತುಮಿರ್ಪುದುಂ (ಅರ್ಕಾಕೀ. ೦–೦೦೦ ಪ); ಲಕ್ಷ್ಮೀ ಲಲನೆಯ ತೆಱದಿಂ ಲೀಲೆಯಿಂ ತನ್ನ ಕಾಲಂ ಒಡಿಕೈಸುತ್ತಿರ್ದಳಂ ಕನ್ನೆಯನೆ ಕನಸಿನೊಳ್ ಕಂಡಂ (ಅರ್ಕಾಕೀ. ೫–೫೯). ಹಿಡಿಕಿಸು : ೪.

ಅರ್ಜುನನ ಯುವಾಳರ ಪದವನೆಚ್ಚಿಱದಂತೆ ಹಿಡಿಕಿಸುತ . . . ಘನಕಾನನದ ಮಧ್ಯದಲೀತನಿದ್ದನು (ಕುಮಾ.ಕ. ೯-೬); ಅರ್ಜುನ ನಕುಲ ಸಹದೇವ ರೆಚ್ಚರಾಗದ ತೆರದಿ ಹಿಡಿಕಿಸುತ್ತ (ಲಕ್ಷ್ಮೀಶಾ. ೪೯-೧೦). ೫. ಹಿಂದು; ಹಿಸಂಕು: ಕೊಡು ಬೆಸನನಹಿವಕಿಯು ತುಡುಗಾವೆ ತಡೆವೆರ್ನನ ಕಾಲನಪುವನು ಹಿಡಿಕೆ[ಪಾಠಾಂ. ಸದಿಲಿ]ಸುವೆ (ಕೊಡಿಹಾ. ೫೦. ೬೦೯).

**ಪಿಡಿಕೆಯ್ಸು**: ೨. ಅತುಳಿತಿವಸುಖಸುಧೆಯನಾತ್ಮಸ್ಥಿತಿಗೆ ಕೈಕೆಯಿಂದೆ ಹಿಡಿಕೆಯ್ಸು [ಪಾಠಾಂ. ಕೈಸು]ತವೆ ಸವಿಯಂ ನೋಳ್ಪವೊಲು ಹಸ್ತಂಗಳಂ ಪೀರ್ವ ವಿತತ ಲಿಂಗಧ್ಯಾನಿ (ಬಸವ. ೩-೩೫). ೩. ಹಿಡಿಕೆಯ್ಸಿದ ದೊಟಸಂ ರಕ್ಷಿಯೆಂಬುದು (ಹಣಹು. ೪೬-೩೬೨); ಪ(ಹಿ)ಡಿಕೆಯ್ಸಿದ ಕೆಯ್ಯ ಕುಡಿತೆಯುಂ ಮುಷ್ಟಿಯೆಂಬುದು (ಕಣಹು. ೪೮-೩೬೩). **ಹಿಡಿಕೈಸು**: ೧. ಮೇಲಿನ 'ಹಿಡಿಕೆಯ್ಸು' ಉಲ್ಲೇಖದ 'ಬಸವ' ಪ್ರಯೋಗದ ಪಾಠಾಂತರವನ್ನು ನೋಡಿ. [ಪಿಡಿ + ಕೆಯ್ಸು]

**ಪಿಡಿಕೆವೆಱು** (ಕ್ರಿ). ಹಿಡಿತಕ್ಕೆ ಒಳಗಾಗು; ಬಂದಿಯಾಗು: ಅತ್ಯಾಸಕ್ತಿಯುಂ ಮರವಚ್ಚರುತೆಯುಂ ಚಿತ್ರಿಸಿದರಂತೆಯುಂ ಮಾರ್ಬಿ ವೋದರಂತೆಯುಂ ಆರಾನುಂ ಪಿಡಿಕೆವೆತ್ತರಂತೆಯುಂ ಏಂದುಕದೆ ನೋಡುತಿರ್ದಂ (ಆದಿಪು. ೬೬೬). [ಪಿಡಿಕೆ + ಪೆಱು]

**ಪಿಡಿಕೈಸು** 'ಪಿಡಿಕೆಯ್ಸು' ನೋ.

**ಪಿಡಿಖಂಡ**, ಹಿಡಿಖಂಡ (ನಾ). ೧. ಸಣ್ಣ ಚೂರು,-ತುಂಡು: 'ಪಿಡಿಖಂಡಂಗೊಯ್' ಪರಾ. ೨. ಮಾಂಸದ ಸಣ್ಣ ಚೂರು,-ತುಣುಕು: 'ಪಿಡಿಖಂಡಂಗೊಳ್' ಪರಾ. **ಹಿಡಿಖಂಡ**: ೨. ಕೈ ಇಲ್ಲದ ಮೋಟ ಹಿಡಿಖಂಡವ ಕೊಯ್ದು ನಾಲಿಗೆ ಇಲ್ಲದ ಬಾಯಲ್ಲಿ ಮೆದ್ದ (ಕೋಲಶಾ. ೨೦೨-೬೬೦). [ಪಿಡಿ + ಖಂಡ]

**ಪಿಡಿಖಂಡಂಗೊಯ್**, ಹಿಡಿಖಂಡಂಗೊಯ್ಯು, ಹಿಡಿಖಂಡಗೊಯ್ಯು (ಕ್ರಿ). ಸಣ್ಣ ಸಣ್ಣ ಚೂರುಗಳಾಗಿ ಕತ್ತರಿಸು; ತುಂಡುತುಂಡಾಗಿ ಮಾಡು: ಬೇವ ಪೆಣಮುಂ ಬಾಯ್ಗೊಂಡದೊಳ್ ತಮ್ಮ ಜನುಮಂ ಪಿಡಿಖಂಡಂಗೊಯ್ದು ಬೀಟ್ಟ ಸಾಧಕರುಮಂ (ಅರಪೀ. ೩-೯೦ ಕ). ಹಿಡಿಖಂಡಂಗೊಯ್ಯು: ಇನ್ನೆನ್ನಂಗದ ಮೇಲೆ ಬರಲಿ ಹಿಡಿಖಂ[ಪಾಠಾಂ. ಗಂ]ಡಂಗೊಯ್ಯಲಿ . . . ಮತ್ತೆಯೂ ಲಿಂಗಾರಾಧನೆಯ ಮಾಡುವೆ (ಬಸವ. ೩೦೬). ಹಿಡಿಖಂಡಗೊಯ್ಯು: ವರಧನಳ್ಳುಪಿದವರ ಹಿಡಿಖಂ[ಪಾಠಾಂ. ಕಂ]ಡಗೊಯ್ಯನೆ (ಬಸವ. ೩೬೬); ಕಂಡು ಸೈರಿಸಿ ಬಿಡುವುದೇಟಾ ಭಂಡತನ ಬಲುವೀರರಿಗೆ ಹಿಡಿ[ಪಾಠಾಂ. ಕಡಿ]ಖಂಡಗೊಯ್ಯಲುಬೇಕು ಬಲ್ಲಡೆ ಶಾಸ್ತ್ರಸಿದ್ಧವಿದು (ಕೊಡಿಹಾ. ೩-೬-೩೮).

[ಪಿಡಿಖಂಡ + ಕೊಯ್]

**ಪಿಡಿಖಂಡಂಗೊಳ್** (ಕ್ರಿ). ೧. ಸಣ್ಣ ಸಣ್ಣ ಚೂರುಗಳಾಗಿ ಕತ್ತರಿಸು,-ತುಂಡರಿಸು: ಪಿಡಿಖಂಡಂಗೊಳೆ ಮನದೊಳ್ ಪೊಡರ್ವುಗಟ್ಟಿದು ಬೆಗಡುಗೊಂಡವಧಾನಕ್ಕೊಡರಿಸೆ ಭಾಗಮಿಂದಂದವರೊಡವುಟ್ಟಿರೆ ಪುಟ್ಟುಗುಂ ವಿಧುಂಗಜ್ಞಾನಂ (ಕಾಂತೆಪು. ೬-೯೦); ಅದರಿನ ಕದುವೆಸನಿಗ ತಿನ್ನಡಗಂ ನಿನ್ನಡಗನೆಂದು ಪೇಸೆಟ್ಟಿಸೆಗಂ ಪಿ[ಪಿ]ಡಿಖಂಡಂಗೊಂಡುಗಿಬಗಿದಿಡಿ[ದಿ] ಡಿದೆವಿಡದೆ ಟಿಜುಗೊಳ್ವರ್ ಬಾಯೊಳ್ (ಸುಕುಮಾ. ೧೧.೯೨). ೨. ಮಾಂಸದ ಸಣ್ಣಚೂರನ್ನು ತೆಗೆದುಕೊಳ್ಳು: ದೆವಸದೊಳೆಯ್ದೆ ಅರಸನಂ ಪಾವಿಸಿ ನುಂಪುತ್ತಿಟ್ಟುದಂ ಕಣ್ದು ಕೀಟ್ಟುಗೆಯ್ಯಾಗಲ್ಕ[ಡ] ದುವವುಂ ಕುಡುವೆನೆನ್ದು ಪಿಡಿಖಣ್ಡ[ಂ]ಗೊಣ್ದು ದೆಸೆಪಲಿಗೆಬಿಟ್ಟು (ಶಾಸನ. xi-1. ೦೦-೨೦ ; ೫೫೬). [ಪಿಡಿಖಂಡ + ಕೊಳ್]

**ಪಿಡಿಗಟ್ಟು**, ಪಿಡಿಕಟ್ಟು, ಹಿಡಿಕಟ್ಟು (ನಾ). ೧. ಹಿಡಿತ; ಸೆರೆ; ಬಂಧನ: ಪಾರ್ಥನವನಂ ನೋಡಿ ಪಿಡಿಗಟ್ಟಂಗೊಳಗಾಗವನಿವನ ವಧ್ಯನೆಂದು . . . ಲಿವುವುದುಂ (ಮಹಾಪು. ೧೦-೩೬ ವ). **ಪಿಡಿಕಟ್ಟು**: ೧. 'ಈ ಪ್ರಸೂನಂಗಳನೂನಸೌರಭಕ್ಕಂ ಸುಗುಮಾರತೆಗು ಸ್ಮರಿಸದೆ ನಿಚ್ಚಂ ಮಚ್ಚರಿಸುವುವೆಂದು ಪಿಡಿಕ[ಪಾಠಾಂ. ಗ]ಟ್ಟಂಗೊಳಗುಮಾಡಿದು ದೇಬುತೆ ಪುಷ್ಪಲಾವೀದಂಬು ಪುಷ್ಪವಪಾಲೆಗಳು ಪಿಡಿದಿರ್ದಪುದೆಂದು ತ್ರೈಕ್ಷಿಸುತ್ತುಂ (ಪಾರ್ಶ್ವಪು. ೦೦-೯೩ ವ); ಬಜನಿಲ್ಲಾಬಿಡಿಯಿಲ್ಲ ಕಳ್ಳರ ಭಯಂ ಮುನ್ನಿಲ್ಲ . . . ನಿರೋಧಮಿಲ್ಲ ಪಿಡಿಕಟ್ಟಿಲ್ಲುದ್ಯಸಂಪತ್ತಿಯುಂ ಮೆಟಿಪಾ ಪೂರ್ವವಿದೇಹದೊಳ್ (ಶಾಂತಿಪು. ೯.೬). **ಹಿಡಿಕಟ್ಟು**: ೨. ಕಟ್ಟುಪಾಡು; ಕಟ್ಟಳೆ; ವ್ಯವಸ್ಥೆ: ನಮ್ಮೂರಿನ ಹಿಡಿಟ್ಟು ಯಾವೂರಲ್ಲೂ ಇರಲಿಲ್ಲ (ಹುಚ್ಚುಹ. ೦೩೬); ಆರ್ಥಿಕ ಅನುಕೂಲತೆ ಗೋಸ್ಕರ ಮಾಡಿಕೊಂಡ ಆಡಳಿತದ ಹಿಡಿಕಟ್ಟು ಎನ್ನುವ ಸಂಕುಚಿತ ನೋಟದಿಂದ ನೋಡುವುದನ್ನು ಬಿಟ್ಟು ಸಮಗ್ರರೀತಿಯಲ್ಲಿ ನೋಡು (ಕರ್ಣಾಶ್ರೀ. ೬೯). [ಪಿಡಿ + ಕಟ್ಟು]

**ಪಿಡಿಗಲ್**, ಪಿಡಿಕಲ್, ಹಿಡಿಗಲ್ಲು (ನಾ). ೧. ಸಣ್ಣಕಲ್ಲು: ಕಾಲಿಂದ ನೆಲನ ಪೊಯ್ವಾಡೆ ಪಿಡಿಗಲ್ಗಳ ಪಾಲೆಯಾಡಿದ ತಜದಿಂದ ಮೇಲೆಸೆದಿಹ ವಂಬರದೊಳೆನಲದಱ ತರಾಳತನವನೇನನೆಂಬೆ (ಶುಕಾಹಾ. ೯-೯೯). **ಪಿಡಿಕಲ್**: ೨. ಕುಂಬಾರನು ಮಡಕೆಯನ್ನು ಮಾಡಲು ಉಪಯೋಗಿಸುವ ಕಲ್ಲು; ಮಣ್ಣು ತಟ್ಟುವ ಕಲ್ಲು: ಅಸಿ ಮಸಿ ಕುಶಿ(ಷಿ) ಪಿಡಿ ಪಿಡೀಲ್ ಕುಸಿಯುಂ ಪುರಿಯೋಡು ಕೋಡು ಕಾವಲಿ ನುಲಿಯುಂ ಬೆಸಗೊಂಬರ್ ಪಿಡಿದಿರೆಯುಂ ಪುಸಿವರ ಶೂಲು ಜಗಕ್ಕೆ ಮಟಿಯಿಲ್ಲೆಂಪಂ (ಅಜಿತಪು. ೦-೯೯). **ಹಿಡಿಗಲ್ಲು**: ೧. ಮುಂಡದ ಹಲಗೆ ಹೆಣದ ಎಲುವಿನ ಕತ್ತಿ . . . ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದವಾಗ (ಹರಿಶ್ಚಂ. ೩-೩೬); ಆರಿಸಿ ತೆಗೆದ ಹಿಡಿಗಲ್ಲುಗಳದೇ ಎರೆಗೊಂದು ರಾಸಿಯಾಯಿತು (ಕಲುಹು. ೬೫); ಆಕೆ ಹೊರಗೆ ಬಾದು ನಾಲ್ಕಾರು 'ಹಿಡಿಗಲ್ಲು'ಗಳನ್ನು ಎತ್ತಿಕೊಂಡಳು (ಬಸಿಹಾ. ೧೧೦).

[ಪಿಡಿ + ಕಲ್. / ತಮಿ. ಪಿಟಿಕಲ್]

**ಪಿಡಿಗುಂಡು** (ನಾ). = ಪಿಡಿಗಲ್ ೧: ಪಿಡಿಗುಂಡಿಟ್ಟು ಕವಣೆಯೊಗುತ ಸಖಿಯರ ನಿಡುತೋಳ್ಗಳೆಸೆದುವು (ಶ್ರೀಹಾಂ. ೦-೩೬); ಪಿಡಿಗುಂಡು ಬಡಿಗುಂಡು ಜಡಿದು ಪೊಯಿವ ಗುಂಡು ಒಡನೆತ್ತಿ ಹಾಕುವ ಗುಂಡು (ಆಹಂಕ. ೦೩-೯೬); ಕನಕಾದ್ರಿಯು ಪಿಡಿಗುಂಡ ಪಾಳ್ಗೆ . . . ಸೂರ್ಯಮಂಡಲವ ನೊಡೆವ ಘುಡುಘುಡಿವ ಸಿಡಿಲಂ ಸೀಳ್ವ ರುದ್ರಗಣಮೆಡಿಯಿಡೆ ಟಗ್ಗೆಸೆದುದು (ಸಿಂಹ. ೩-೩೯); ಪಿ[ಪಾಠಾಂ. ಸಿ]ಡಿಗುಂಡು ಬಡಿಕೋಲ್ಗಳುಜುಬೆಯಿಂದಿ ಉಬೆಯು . . . ಜಡಿದಾರ್ದು (ಕೈಪಿಶಾ. ೩೬-೯೬). [ಪಿಡಿ + ಗುಂಡು]

**ಪಿಡಿಗುದುರೆ**, ಹಿಡಿಗುದುರೆ (ನಾ). ಹೆಣ್ಣುಕುದುರೆ: ಪಿಡಿಗಳನೇಱಿ ಕೆಲಂಬರ್ . . . ಕೆಲರ್ಪಿಡಿಗುದುರೆಗಳೊಳ್ ಪೆಜಪರ್ಪುಡಿಯೊಳಡಿಯಿಟ್ಟು ತಳರ್ದರ್ (ಶಾಂತಿ. ೦೦-೦೩). **ಹಿಡಿಗುದುರೆ**: ಎಕ್ಕಟಿಗರೇಱಿ ಹಿಡಿಗುದುರೆಗಳನು ಎಣಿಕೆ ಮಾಡದೆ ಹಿಡಿವ ರಾಯರಾವುತರು . . . ಹೊತ್ತಱಿಯದೆಟ್ಟಿಡುವ ಮಹಾರಥಿಕರೆಸೆದರಲ್ಲಿ (ಕಮ್ಮನಾ. ೬-೯೯); ಹಿಡಿವರು ಹಿಡಿಗುದುರೆಯ [ಪಾಠಾಂ. ಬಲುಹಾನರ] ರಾವುತರನು ಕೆಡಹಿದರು (ಕುಶಾಹಾ. ೯೨-೬೬). [ಪಿಡಿ+ಕುದುರೆ]

**ಪಿಡಿಗುದ್ದು** (ನಾ). ಮುಷ್ಟಿಯನ್ನು ಬಿಗಿದು ಕೊಡುವ ಪೆಟ್ಟು,-ಹೊಡೆತ: ಈ ಬಸವ್ವನನ್ನು ಹಿಡಿಸಿ ಚೆನ್ನಾಗಿ ಪಿಡಿಗುದ್ದಿನ ಸೇವೆಯನ್ನು ಮಾಡಿಸಲೇಬೇಕೆಂದು ನಿಷ್ಕರ್ಷೆ ಮಾಡಿಕೊಂಡು (ಕುಸುಸಂ. ೬೬). [ಪಿಡಿ+ಗುದ್ದು(< ಗುರ್ದು). / ತೆಲು. ಪಿಡಿಗುದ್ದು, ಪಿಡಿಗ್ರುದ್ದು]

**ಪಿಡಿಗೋಲ್**, ಪಿಡಿಗೋಲು, ಹಿಡಿಕೋಲು, ಹಿಡಿಗೋಲು (ನಾ). ಒಡಿದುಕೊಳ್ಳುವ (ಸಣ್ಣ)-ಕೋಲು, ದೊಣ್ಣೆ: ದಟ್ಟಿಯೊಳ್ಸುತ್ತಿರ್ದ ನಾಗರ ಮರಿಯುಂಬ ಬೊಱಸಿಯುಂ ಕೊಂಡು ಪಿಡಿಗೋಲ್ಗೊಳಿಸಿ ಘಲ್ಲಿಸುತ್ತುಂ ಕುಶಮಾನಂಗಿದಿರ್ಚ ಸಿಲಲ್ (ಕಿಶಿ. ೩-೨೬). **ಪಿಡಿಗೋಲು**: ಶಾಂತಲಾದೇವಿ

. . . ವಕ್ರದ ದಂತದ ಪಡಿಗೋಲನ್ನು ಮೆಲ್ಲಗೆ ತೆಗೆದುಕೊಂಡು ಜೇಗಟೆಯ ಮೇಲೆ ಮೃದುವಾಗಿ ಬಡಿದಳು (ಸಪತ. ೨೦೦). ಹಿಡಿಕೋಲು : ನಾಣು: ಸೀಸೆದ ಮಾರಿ ಹಿಡಿಕೋಲು. ಏದು: ಒಂದು ಭಾರಿ ಧಕ್ಕಿ (ಕೊಂಕಾ. ೦೦೬). ಹಿಡಿಗೋಲು : ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ (ದೇವಾಪ. ೧೮–೯೬). [ಪಡಿ₁ + ಕೋಲ್₁]

**ಪಡಿಗೋಲು** 'ಪಡಿಗೋಲ್' ನೋ.

**ಪಡಿಚೆ** ' ಪಡಿತೆ ' ನೋ.

**ಪಡಿಚೆಂಡುವೊಯ್** (ಕ್ರಿ). ತಲೆಯನ್ನು ಹಿಡಿದುಕೊಂಡು ಕತ್ತರಿಸು : ದುರ್ಜನರಲ್ಲಿ ಉರವಣಿಸಿ ಬಂದಿರಪ್ಪಡೆ ತಲೆಯಂ ಪಡಿಚೆಣ್ಣುವೊಯ್ವ ನಜ್ಜುಗನನನುಜಂ (ಎಕ. VI, ೯ಕೂಡು. ೩೯–೯೭; 1191).

[ಪಡಿ₁+ಚೆಂಡು (<ಸೆಂಡು) + ಪೊಯ್₁]

**ಪಡಿತ**, ಹಿಡಿತ (ನಾ). ೧. ಹಿಡಿದುಕೊಳ್ಳುವಿಕೆ : 'ಕಾಲ್ವಿಡಿತ' ಪರಾ. ಹಿಡಿತ : ೨. ಅಂಕೆ ; ಹತೋಟಿ ; ಅಧೀನ : ಆತ್ಮನಾವೆತ ಯಲ್ಲಿದ್ದಿತ್ತು ಷಡುವರ್ಣದೊಳಗಲ್ಲ ನಡೆ ನುಡಿ ಚೈತನ್ಯವಲ್ಲ ಹಿಡಿತಕ್ಕೆ ಬರಲಿಲ್ಲ ಇನ್ನೆಂತಿಪ್ಪುದೋ (ಅಕಕ. ಮು. ೨೦೮–೩೩); ಸ್ಫುಟದಿ ಹಿಡಿಯ ಹಿಡಿತಕೆ ಸಿಕ್ಕದಿಹ ಹಸ್ತವುಟದೊಳಕ್ರಿತ್ತ ರಘುಲ್ಲಿಸುವ (ಕಕಕ. ೧೬–೩೩). ೩. ಕಟ್ಟುಪಾಡು ; ವ್ಯವಸ್ಥೆ ; ಒಟ್ಟಿನಲ್ಲಿ ನಮ್ಮೂರ ರೈತರು ಒಂದು ಹಿಡಿತದಿಂದ ಊರನ್ನು ಆಳುತ್ತಿದ್ದರು(ಹುಳ್ಳಿಕ. ೧೭). ೪. ಕುಸ್ತಿವರಸೆಯ ಒಂದು ಪಟ್ಟು : ಸುಗ್ರೀವನು ಅನೇಕ ಹಿಡಿತಗಳಿಂದ ತನ್ನ ಸಾಮರ್ಥ್ಯ ವನ್ನು ತೋರಿಸಿದರೂ ಕಡೆಗೆ ವಾಲಿಗೆ ಅಂಜಿ ಆತನು ಹಿಂದಕ್ಕೆ ಸರಿಯ ಹತ್ತಿದನು (ಕುಕಸೀ. ೨೫೦). [ಪಡಿ₁ + – ತ₂]

**ಪಡಿತರ್**, ಹಿಡಿತರ್, ಹಿಡಿತರು (ಕ್ರಿ). ೧. (ಕೈಯಲ್ಲಿ) ಹಿಡಿದು ಕೊಂಡು ಬರು : ಎಮ್ಮ ಭಕ್ತರು ಕೊಟ್ಟ ಪಾತ್ರೆಯಂ ಪಡಿತಂದು . . . ಬಯ್ಯುಟ್ಟು ಕೊಡಿಯೆಂದು (ತಿರುಕ. ೮೬. ೦೬–೩). ೨. ಸೆರೆ ಹಿಡಿದು ತರು ; ಬಲಾತ್ಕಾರದಿಂದ ಕರೆತರು : ಎನ್ನಣುಗದಮ್ಮನ ನಿಕ್ಕಿದನು ಪೊರಲ್ಗೆ ಕೊಂಡಂದಲ್ಪಿಯಟ್ಟಿ ಮುಟ್ಟಿ ಪಡಿತಂದು (ಹರಿಹರು. ೦–೦೯): ರುದ್ರಸಖುಮುಖ್ಯಸುರರಂ ಬಡಿದು ಪಡಿತಂದು (ಕಾವೃ. ೦–೯); ನರರಕ್ಕಸರನಿಜ್ಜೋಡಿಸಿ ಪಡಿತಂದ ವರವಧುಗಜದ ಶಾಲೆಗಳು ಮೆಚಿ ದಾವು (ಶಂಕರ. ೬–೨೦). ಹಿಡಿತರ್ : ೨. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ (ಬಸವಾರೇ. ೩. ೭೬–೦೭೪). ಹಿಡಿತರು : ೧. ಆ ಬಲಿಯ ಬಟ್ಟಲನಬಳಿ ಹಿಡಿತರಲು (ಜಕ್ಕಿ. ೦೯–೨೩). ೨. ನಾವು ಹಿಡಿತಂದುದು ಮೊದಲು ನೀರ್ಗುಡಿಯಲೊಲ್ಲವು (ಜಕ್ಕಿ. ೬೦–೨೪), ಪಾಂಡವವಿಭವ ಹಿಡಿತಹೆನೆಂದು ಕೌರವಸಭೆಗೆ ಭಾಷೆಯ ಕೊಟ್ಟು (ಲಾಕ್ಷಾಗೃಹ. ೩ ಕೂಕಕ). [ಪಡಿ₁+ತರ್]

**ಪಡಿತರಿಸು**, ಹಿಡಿತರಿಸು (ಕ್ರಿ). ಸೆರೆಹಿಡಿದುಕೊಂಡು ಬರುವಂತೆ ಮಾಡು ; ಸೆರೆ ಹಿಡಿಸು : ಕೊಟ್ಟಾರದ ಕರಣಂ(ನ)ಗಳಂ ಬಂಚಿಸಿ ಕಳ್ದು ದ್ರವ್ಯಮಂ ಸೂಳೆಗೆ ಕೊಟ್ಟೊಡರಸಂ ಪಡಿತರಿಸಿ ಹತಿಯಿಸೆ (ಚಾವುಂ. ೩೬); ಜಿನಮುನಿಗಳಂ ಪಡಿತರಿಸಿ ಕಬ್ಬುನದ ಶೂಲಂಗಳಲಿ ತೆಗೆಸಿದನು (ಬಸವು. ೩೦–೫೧). ಹಿಡಿತರಿಸು : ಒಡೆಯರು ವೀರಾಜಯ್ಯನನ್ನು ಶಿಕ್ಷಿಸಬೇಕೆಂದು ನಿಶ್ಚಯ ಮಾಡಿ ಅವನನ್ನು ಹಿಡಿತರಿಸಿ (ಒಕರ.೦೬).

[ಪಡಿತರ್ + – ಇಸು₃]

**ಪಡಿತೆ**, ಪಡಿಚೆ, ಹಿಡಿತೆ (ನಾ). ೧. ಹಿಡಿದುಕೊಳ್ಳುವಿಕೆ ; ವಶಪಡಿಸಿ ಕೊಳ್ಳುವಿಕೆ ; ಸ್ವಾಧೀನ ಮಾಡಿಕೊಳ್ಳುವಿಕೆ : (ಕಿ). ಪಡಿಚೆ : ೨. ಒಂದು ಹಿಡಿಯಷ್ಟು ಪ್ರಮಾಣದ ವಸ್ತು.—ಉಂಡೆ : ಕಾಡು ಮಾರದ ಸೊಪ್ಪು ನೆರಳ ಕಟ್ಟೆಯೊಡೆಯ ನೀರ ತಂದು ಮಾಡಿ ಮಾಣ್ಣ ಪಡಿಚೆಯಾಲಿ ಕೂಡಿ ನಿನ್ನ ಪೂಜಿಸೆ (ಜಕ್ಕ. II, ೩೦–೦): ಪಡಿಚೆಯನು ಮಾಡುತಲಿ ಶಿಶುಗಳ ಪಿಡಿದು ತೂಗುತ ಹತ್ತುಮೊಗಗಳ ಪಿಡಿತ ನೀನಾರೆಂದು ಕೇಳಿದಳವಳು ದಶಗಳನ (ಉತ್ತ್ಯ. ೩೩–೩೩). ಹಿಡಿತೆ : ೧. ಚಿಮ್ಮಟಿಗೆಯಲಿ ಮುಳ್ಳನುಪೂಕ್ತಿ ಅವುರಿಸಿದಡೆ ಪೊನೆಗಾವಿಂದ ವಸ್ತ್ರ ವನು ಮತ್ತೆ ಹಿಡಿದಂದದಲಿ ಪೊಳೆಗನೊತ್ತಿಯಕ್ಕಳಿದಿಂದ ಹಿಡಿದಂತೊತ್ತಿ ಬೆಳಗಲಿ ಚಿತ್ತು ಹಿಡಿವುದೆ ಹಿಡಿತೆ[ತೆ]ಕೇಳು (ಶ್ರೀಶಾಕಂ. ೦೮–೯೩); ಲಕ್ಷ್ಯದ ಹಿಡಿತೆ[ತ್ತೆ]ಯನರಿಯುವಳ ಲಕ್ಷ ನಿಂತ ನೀನ ಬ್ರಹ್ಮಾಗಿ ಹೊಳೆಯು (ಕದಾಕ. ೩೬–೩). ೩. ಹಿಡಿಕೆ ; ಕಾವು ; ಹಿಡಿ : ಹಿಡಿತೆಯ ಹಿಡಿದು ಇಡಿಯಬೇಕಲ್ಲದೆ ಮೊನೆಯ ಹಿಡಿದು ಇಡಿದವರುಂಟೇ (ಕೋಲಕಾ. ೬೨೭–೪೪೪). ೪. ಬಂಧನ ; ಹಿಡಿತ : ಇವನ ಕಾದಲೆ ಯೊಡನೆಯಿವಂ ಪರನ್ನರ ಹಿಡಿತೆಗೊಳಗಾದನು (ಪಾಕೋಕು. ೩೬–೭).

**ಪಡಿತೆಬಡಿತೆ**—ಸೆರೆ ಹಿಡಿಯುವಿಕೆ ಮತ್ತು ದಂಡಿಸುವಿಕೆ : ಜನ ನಾಥನೇ ನೊಂದನಾದರುಂ ಪಡಿತೆಬಡಿತೆಗಳಿಂದ ಜನವಸೀಕೃತಗೆಪ್ಪುದು (ಕಂಗಕಾ. ೬–೦೩–೬). ಹಿಡಿತೆಬಡಿತೆ—ಹಿಡಿಯುವಿಕೆ ಮತ್ತು ಬಿಡುವಿಕೆ : ಹಿಡಿತೆಬಡಿತೆ ಕೊಳಕೊಡೆಯು . . . ಜಡಿಮುಂಡಿ ಗಾಡಿವೋಡಿಗಳು ಕ್ಷತ್ರಿಯಗೆ ಸಂಗಡಿಸಿರದೇಕು (ಜಕಕ. ೩೯–೦೦೩); ಬಲ್ಲ ಸೊಲ್ಲಿನ ಹಿಡಿತೆ ಬಿಡಿತೆಗಳೆಲ್ಲ ತ್ರೈಜಗದೊಡೆಯ ತಾ ಬಲ್ಲ (ಗಗಕಾ. ೨–೭೪).

[ಪಡಿ₁ + – ತೆ₂]

**ಪಡಿನಡು** (ನಾ). ಹಿಡಿಯಲ್ಲಿ ಹಿಡಿಯಬಹುದಾದಷ್ಟು ತೆಳುವಾದ ಸೊಂಟ ; ತೆಳುನಡು : ಉಡುಮಧ್ಯದ ರೋಹಿಣಿಗೆ ಪಡಿಯೆನಿಸಿದ ಕೆಳದಿಯರ ನಡುವೆ ಪಡಿನಡುವಿನ ನೀಲಿಯ ಕಂಡು (ಜೀವಂಧರ. ೨–೬೩); ತರುಣಾಭ್ರಮಾರಸವಿಚಿತಿಯು ಬೆಡಂಗು ಪರಿದು ಗೆಲೆವಂದುದು ಪಡಿನಡುವಿನ ಕುವರಿಯ ಕುರುಳೋಳಿ (ಅನುಕಾ. ೩–೫೦); ಬಾಯ್ಮಡುವ ಪೆಣ್ಣಿನ ತಂದವಳು ಪಡಿನಡುವಿನ ಮಾಯಾಂಗನೆಗತ್ತು ಬೇಗಡಿಗೆಯ ಮಾತ ಹೇಳಿದಳು (ಕೋಜಕ. ೦೦–೩೬); ಕೊಬ್ಬಿದ ಪೊಜವಾಜು ಪಡಿನಡು ಕೊಂಕಿದ ಹುಬ್ಬಿನ ಪೆಣ್ಣು (ಜಕ. ೨–೯೮). [ಪಡಿ₁+ನಡು₁]

**ಪಡಿನಡೆ** (ನಾ). ಆನೆಯ ಗಂಭೀರವಾದ ನಡಿಗೆ.—ಮಂದಗಮನ : ಅಣಾಗಿ ಎನಸುಂ ನಾಣ್ಚಿ ಏರದೊಳ್ ಪೂಮಾಲೆಗೊಂಡು ಪಡಿನಡೆಯೊಳ್ ಸಹಚರಿಯರ್ವೆರಸು ಮೆಲ್ಲನವರಿರ್ವರ ಸನಿಯಮಂ ಸಾರ್ದು (ಅದ್ಯು.ಕ. ೦೦–೦೦). [ಪಡಿ₁+ನಡೆ₁]

**ಪಡಿಪಡು** 'ಪಡಿವಡು' ನೋ.

**ಪಡಿಪೀ** (ಕ್ರಿ). ಅಧೀನಪಡಿಸು ; ವಶಕ್ಕೆ ಕೊಡು : ಕಾದುವ ಕೂರ್ಪುದೋರ್ಪ ಬೆಸನಂ ರಘುಜಂ ಬೆಸವೇಟ್ಟನಿಲ್ಲ . . . ಆನೀ ದನು ಜಾತ್ಮಜಂಗೆ ಪಡಿಪಿತ್ತು ದಶಾನನನಳ್ಕೆ ಬಳ್ಕೆ ಲಂಕಾದಹನಕ್ಕೊಡರ್ಚಿರ್ಪೆಂ (ಕುಂಪಾಮು. ೦೦–೦೩೩); ಬಗೆಯದೆ ದಾನವಾಧಿಪನ ದೋರ್ಬಲಮಂ ಖರದಪ್ರವೀರರಂ ಬಗೆಯದೆ ನಟ್ಟ ತನ್ನಳವನಿಂದಗಿಗಾಂ ಪಡಿಪೀವೆ ನೆಂಬುದಂ ಬಗೆದು (ಕುಂಪಾಮು. ೦೦–೦೩೯). [ಪಡಿವು+ಈ₁]

**ಪಡಿಪು**, ಹಿಡಿಹು, ಹಿಡೀಹಂ (ನಾ). ೧. ಹಿಡಿದುಕೊಳ್ಳುವಿಕೆ ; ಹಿಡಿತ : ಪತಿಯಾಣತಿಗೆ ಪ್ರತಿನುಡಿಯಲಾರದೆ ಪತಿವ್ರತೆ ಮಹಾಸ್ಮೃದಿ ಸಡಿಲಿಸಿನಿಯನ ಮುಷ್ಟಿಯಂ, ಪಡಿಪನೋಸರಿಸಿ (ಶ್ರೀಕಾಮು. ೫೦೩–೩೩). ಹಿಡಿಹು : ೧. ತೊಡೆಯ ಹಿಡಿಹಿನ ವಾಜಿ ತೊಂಡಿಯನೊಗಡ ಲಂಘಿಪ ತೇಜಿ (ಕೃಷ್ಣಾ. ೦೩–೦೦). ೨. ಹಿಡಿ ; ಮುಷ್ಟಿ : ಕಂಗಳು ಹೊಳೆಯೆ ಮಿಂಚಿನಂತೆ ಹೆಕ್ಕಳಿಸಿದರು ಹಿಡಿ[ಹಾಂ.ಹು]ಹಿನಲಿ ಅಲರಿದಂಬುಜವೆಂದು ವದನಕ ನಿಲುಕಿ ತುಂಬಿಗಳೆಂದು ಕುರುಳಿಂಗಳಕಿ ಕೈಗಳ ತೆಜಿದರತಿ ಮುಗುದೆಯರು (ಲಾಕ್ಷಾ.ಕ. ೦೦–೩೫). ೩. ಹತೋಟಿ ; ಅಂಕೆ : ಬಲುಕಣೆಯ ಹಿಡಿ[ಹಾಂ.ಹು]ಹಿಂಗೆ ಲಾಗಿಸು

ತಿರ್ದಿದಾ ನಂತಿ (ಕುವ್ಯಾದ್ಯೋ. ೩-೩೭): ಆವಗು ಕೈಯಲ್ಲಿ ಓಡಿಯ ಹಿಡಿ ಹಿಗೆ ಸಿಕ್ಕಿದು (ಪಂಕ್ತಿ. ೬-೩-೩೯). ೪. ಸೆರೆ ; ಬಂಧನ : ಎಸುತ್ತ ಪಡೆದಿಟ್ಟಳಿಸಿ ಓಡಿಹಿಂಗೊಳಗುಮಾಡಿ ವಿಧಾತಿಯಲಿ ತಡೆಯೆ (ಕುವ್ಯಾದ್ಯೋ. ೨-೫). ಓಡುಹು : ೨. ಮೇಲಿನ ಉಲ್ಲೇಖದ 'ಕುವ್ಯಾಆ. ೧೧-೨೮' ರ ಪ್ರಯೋಗದ ಪಾಠಾಂತರವನ್ನು ನೋಡಿ. ೩. ಮೇಲಿನ ಉಲ್ಲೇಖದ 'ಕುವ್ಯಾದ್ಯೋ. ೩-೩೭' ರ ಪ್ರಯೋಗದ ಪಾಠಾಂತರವನ್ನು ನೋಡಿ. [ಓಡಿ₁ + - ವ್ಯ]

**ಓಡಿಪೆಜು** 'ಓಡಿವೆಜು' ನೋ.

**ಓಡಿಪೊನ್.** ಹಿಡಿಹೊನ್ನು (ನಾ). ಹಿಡಿ ತುಂಬುವಷ್ಟು ಚಿನ್ನದ ನಾಣ್ಯ : ನಿಲ್ಲಿಂದ ಪಡಿಯಜಿಗೆ ಓಡಿಪೊನ್ನ [ಪಾಠಾಂ. ಹೊಂಗ]ಳ ಚೆಲ್ಲುತ ಚತುರಥವಿವರು ನಿಲ್ಲದೆಯ್ಯಂದರು (ಶಬರಾಶಂ. ೦೬-೪೦). **ಓಡಿಹೊನ್ನು :** ಬಡವನಾದರು ಚಿಂತೆ ಬಲಿದನಾದರು ಚಿಂತೆ ಓಡಿಹೊನ್ನು ಕೈಯೊಳಾದರು ಚಿಂತೆಯು (ಕೃಹಂದ. ೦-೯೩-೩); ಪಾಳೆಯಪಾಳೆಯದೊಳಗೆ ಚೆಲ್ಲಿತು ಸೂಜಿ ವೀಳೆಯ ಓಡಿಹೊನ್ನು ವರಹ (ಮೋಹತ. ೦೬-೪೭); ದೀನದಲಿತರಿಗಂತೂ ಹಿಡಿಹೊನ್ನು, ಬೊಗಸೆಹೊನ್ನು ದೊರೆತುವು (ಹೇಹುಕು. ೬): ಕಡೆಗಣ್ಣ ಭಾವಕ್ಕೆ ಹಿಡಿಹೊನ್ನ ಕೊಟ್ಟೇನು (ಜಕ್ಕ. ೬೦). [ಓಡಿ₁ + ಪೊನ್]

**ಓಡಿಯಂಬು,** ಹಿಡಿಯಂಬು (ನಾ). ೧. ಹಿಡಿದಿರುವ ಬಾಣ : ಓಡಿಯಂದಿಲ್‌ದಲ್ . . . ವಧು ಮದನನ ಕೈಓಡಿಯಂತೆಸದೀಕ್ಷಿವರಂ ಓಡಿಯಂಬಿಂ ಕಾವುನಾದರ್ ಸಂದಿಸುವಿನೆಗಂ (ಜಗ೩. ೦೯-೩೩). ಹಿಡಿಯಂಬು : ೧. ಕತ್ತಿ ಬಳಹು . . . ಕತ್ತರಿ ಮಳಲು ಚಂಡವೇದಿಯು ಕಿತ್ತ ಹಿಡಿಯಂ ಬಿಡುವ ಕಲ್ಲುಂ ವತ್ತೆ ಮುಖಿ ವಾಯುದತಿಲಕವುಂ ಕರ್ಕಟಿಯು ರಜ್ಜು (ಚಕ್ರ-೪೦-೩). ೨. ಹಿಡಿ ತುಂಬುವಷ್ಟು ಬಾಣ: ಹಿಡಿಯಂಬಂ ಕಟ್ಟಿ ಬಾಂಬುಡದೊವಲೆಡೆಯೊಳ್ ಬಿಲ್ಲುವಂ ಕೌಂಕುಳಲ್ಲೀದಡಟ್ಟಿಯ್ದೊತ್ತಿ ಯಂಬಂ ತಿರುವುತೆ . . . ಎಡಬಲನಂ ನೋಡುತುಂ ಪೋದನೊರ್ವಂ ಕಡುಪೆಂದಂ ಬೇಂಟೆಯ ಕ್ರೀಡೆಗೆ ದರವಳಿಸತ್ಕಿಂಕಿರಾತಂ ಕಿರಾತಂ (ಚಾಂಶ್ರೀ. ೦೦-೦೦೩). [ಓಡಿ₁ + ಅಂಬು₁]

**ಓಡಿಯಚ್ಚುವಿಡಿ** (ಕ್ರಿ). ಹಿಡಿದುದನ್ನೇ ಬಲವಾಗಿ ಹಿಡಿ, —ದೃಢವಾಗಿ ನಂಬು : ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕಯೋಗಾ ಚಾರವಾದ್ಯವಿಕಮತವಿತಥಾಭಿದಾಯಿಗಳ್ ಜೀವಾಭಾವಮನೆ ಓಡಿಯಚ್ಚು ವಿಡಿದು (ಆದಿಪು. ೨-೭ ಪ); ಪುರಜನಂಗಳೆಲ್ಲಮೋರೊರ್ವರನೆ ಓಡಿಯಚ್ಚು ವಿಡಿದು ನುಡಿಯೆ (ಕುಕ್ಕಲ್ಲ. ೨-೩೬ ಪ); ಎಂದೊಡದನೆ ಓಡಿಯಚ್ಚುವಿಡಿ ದುಂಟುವಮಾಡಿ ದಂಡಂಗೊಂಡು ತೀಲದೊಳಂ ಕಂಡು ಯುವರಾಜಪ್ರಭೃತಿ ಗಳೆತ್ತ ಮೆಟ್ಟಿತ್ತ ಚಪ್ಪಟಿಯೆಂದು ನಗುತಂ ಪೋಗಿ (ಚಾಂಶ್ರೀ. ೬-೯೪ ಪ); ಪಾಪಹೇತುವಪ್ಪ ದುವರ್ಾರ್ಗವುಂ ಓಡಿಯಚ್ಚುವಿಡಿಯದೆ . . ಸುಖ ಹೇತುವಪ್ಪ ಸನ್ಮಾರ್ಗದೊಳ್ಳಿಗಟ್ಟುದು (ಧರ್ಮಾಮೃ. ೯-೩೬). [ಓಡಿ₁ + ಅಚ್ಚು₂ + ಓಡಿ₁]

**ಓಡಿಯಾನೆ,** ಹಿಡಿಯಾನೆ (ನಾ). ಹೆಣ್ಣಾನೆ ; ಪಿಡಿ ; ಕರಿಣಿ : ಓಡಿಯಾನೆಯಲ್ಲಿಯುಂ ಧೇನುಕಾ, ಗಣಿಕಾ ಎಂಬುದು (ಶಬ್ದಾನು. ೦೩೩-೦೩). ಇಕ್ಷುಚಾಪನ ಮದವಾರದೇವತೆಯರಂತೆಸೆದಿರ್ಪ ವಿಳಾಸಿನೀಜನಂ ತನತನ ಗಾಗಳೆಯ್ದೆ ಓಡಿಯಾನೆಗಳಂ ಪಗೆಪಿಂದವೇಜಿದರ್ (ಕುಸುಮಾ. ೩-೭೩). **ಹಿಡಿಯಾನೆ :** "ಹುನೀ, ವಶಾ — ಈ ೨ ಹಿಡಿಯಾನೆ" (ಶಬ್ದಾನು. ೩೯-೬೨). [ ಓಡಿ₁ + ಆನೆ₁ ]

**ಓಡಿಯಾಳ್,** ಓಡಿಯಾಳು, ಹಿಡಿಯಾಳು (ನಾ). ಬಂದಿ ; ಸೆರೆಯಾಳು: 'ಓಡಿಯಾಳ್ಗೈಸು' ಪರಾ. **ಓಡಿಯಾಳು :** ಓಡಿಯಾಳಾಗಿ ಪೋಪನು (ಅಜಿತ. ೦೯-೦೩೩): ಅಂಜಜ ಓಡಿಯಾಳಾಗಿ ಹಿಡಿದು ನಿವ್ವಾಡ[ಗೊಟ್ಟಪ] ಪಡುಗರ ವೆಸಗಿರುತಿರಲ್ (ಶ್ರೀಕೃಷ್ಣಾಂ. ೦೯-೦೩೩); ತರಣಿಯುಂ ಬೆನ್ನಟ್ಟಲೊಡನೆ ಓಡಿಯಾಳಾದ ಕಿರಣಂಗಳಂ ಸೆಜೆಯಿನಲ್ಲಿಟ್ಟುದೋ ತಮಂ (ಶಂಕ್ರ. ೯-೬). **ಹಿಡಿಯಾಳು :** ಚಂದ್ರಸೂರ್ಯರನದ್ವವಿಸಿ ಓಡಿಯಾಳ ಹಿಡಿದವು ಮುಗಿಲ ಚೂಣಿಗಳು (ಕುವ್ಯಾಆ. ೦೯-೦೬); ರಾವಣನ ಓಡಿಯಾಳ ಹಿಡಿವೆವು (ಕುಜಾಶಂ. ೦೯-೦೨೩); ಹಿಡಿಯಾಳಾಗಿ ಸಿಕ್ಕಿದ ಚಿಕ್ಕಪ್ಪನ ಕಡಿದರೆ ಕಳಹವಿಲ್ಲನುತ (ಮೋಹತ. ೩೬-೦೯). [ಓಡಿ₁ + ಆಳ್₁]

**ಓಡಿಯಾಳು** ಓಡಿಯಾಳ್' ನೋ.

**ಓಡಿಯಾಳ್ಗೈಸು** (ಕ್ರಿ). ಸೆರೆಯಾಳನ್ನಾಗಿ ಮಾಡು ; ಬಂಧಿಸು ; ಸೆರೆಹಿಡಿ : ಓಡಿಯಾಳ್ಗೈಸುವೆಂ ನೆರೆವ ನಿನ್ನ ತತ್ತಿಗರನೆನುತಾ ಖಳಂ ಕೋಲ್ಗಳೆಜಿದನು (ಶಂಕ್ರ. ೪೯-೨೦). [ ಓಡಿಯಾಳ್ + ಕೈಸು (< ಕೆಯ್ಯು) ]

**ಓಡಿಯಿಸು,** ಓಡಿಸು, ಹಿಡಿಸು (ಕ್ರಿ). ೧. ಹಿಡಿದುಕೊಳ್ಳುವಂತೆ ಮಾಡು ; ಹಿಡಿಯುವಂತೆ ಮಾಡು : ಓಡಿಯಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ಗಿನಂ ಓಡಿಯಿಪ್ಪೆಂ ಕರಚಕ್ರಮಂ (ಹಂಕಲ್ಲ. ೦೦-೨೩); ಪರಲೋಕಾಲೋಕನವುಂ ಪರಿಹರಿಸಿದವಲ್ತ ನೋಡಿ ಮಂದೀಗಳುದಾಹರಿಸುವ ತೆಜದಿಂ ಓಡಿಯುವರರಸುಗಳೆಜೆವಿಡದೆ ಮೇಘ ಡಂಬರತತಿಯಂ (ಕಾಂಸ್ತ. ೩೩೩); ಗಂಡಿಗಂ ತಾಪಸನವರನೊಡಗೊಂಡು ಬಾದತಿಪೂತದಲದಲಿ ದಂಡವುಂ ಓಡಿಯಿಸಿ ಮುಳಂಕಿಸಲು (ಚಕ್ರ. ೨೭-೬೩). ೨. ಬಳಿ ; ಲೇಪಿಸು ; ಸವರು : ನಾಗಂಪಮನರೆದು ಕರಮಿಂಬಾಗಿರೆ ಗಾಳಿಸಿ ಬಟ್ಟೆಕ್ಕೆ ನಸ್ಯಾಂಜನವುಂ ಬೇಗಂ ಮಾಡ್ಪುದು ನೀರೊಳಗಾಗಳೆ ಓಡಿಯಿಸುಗೆ ಮೂತ್ರಕೃಚ್ಛ್ರಾಪಹರಂ (ಅಕ್ಕಾ. ೦೦-೨೨). **ಓಡಿಸು :** ೧. ತನ್ನುಡೆಗಟ್ಟಿಯನು ಬಲುಹಾಗಿ ಓಡಿಸುತ್ತಾತನಂ ತಲೆವಾಗಿಸುತ್ತಿಂ (ಚಶ್ರ. ೨೩-೨೩); ಪೊಯ್ ತಿವಿ ಓಡಿಸು ಬಸುರ್ಗಳಂ ಬಗಿ ಕರುಳನುಗಿ . . . ಎನುತ್ತೆ ಕವಿದುದು ಸುರಪದಾತಿ ಮಸಗಿ (ಶಂಕ್ರ. ೪೯-೫). ೩. ಸೆರೆ ಹಿಡಿಯುವಂತೆ ಮಾಡು ; **ಸೆರೆಹಿಡಿಸು :** ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ಪುದುಂ ಪೆಜವೆಣ್ಣಂ ಓಡಿಸುವುದುಂ ಕನುನೊಳಪ್ಪುದಮಿಲ್ಲಂ (ಗದಾಯು. ೨-೩ ಪ). ೪. ಒಳಗೊಳ್ಳಲು ಸಮರ್ಥವಾಗು ; ಸಾಕಷ್ಟು ಅವಕಾಶವನ್ನು ಹೊಂದಿರು ; ಸಾಕಾಗು : ಕೆದೆದುದೊ ಮುಂದರಂ ಧರೆಗೆ ಬಿಟ್ಟುದೊ ಭಾನುರಥಂ ನಭಸ್ಥಲಂ ಓಡಿಸಿ[ಪಾಠಾಂ. ೧] ದುದೋ . . . ಎನಲ್ ನಭಮಂ ಪುದಿದತ್ತು ನೀವಿ ಜೇವೊಡೆಯ ಬಲಾಚ್ಯುತರ್ ತ್ರಿಭುವನೈಕಭಯಂಕೃತಚಾಪಟಂಕೃತಂ (ಶಂಶಾಶಾ. ೬-೯೩). **ಹಿಡಿಸು :** ೧. ಜಡವಿರಹಿತಂ ನಿಷ್ಪ್ರಪಂಚದ ಬೆಡಗಿನೊಳ್ಪಿನ ಮತಿಯ ಕೀಲಂ ಹಿ[ಪಾಠಾಂ. ಓ]ಡಿಸಿ ಲಿಂಗಪ್ರಾಣಮಥನ ಸವನಭವಪವನಜಾಹಿ (ಅಕ್ಕ. ೨೯-೩೩); ದಂಡಿಗೆ ಬೆತ್ತ ಹಿಡಿಯುವುವಕ್ಕೆ ಪಾಂಡೆ ಪಾಟಿ ನಾಚುತಿದ್ದೆ ಹೆಂಡತಿ ಸಂತತಿ ಸಾವಿರವಾಗಲು ದಂಡಿಗೆ ಬೆತ್ತ ಹಿಡಿಸಿದಳಯ್ಯ (ಕೃಹಂದ. ೦-೯೩-೦). ೪. ದೋಣಿಯಲ್ಲಿ ಅದು ಹಿಡಿಸುವುದಕ್ಕಿಂತಲೂ ಹೆಚ್ಚಾಗಿ ಜನ ತುಂಬಿದ್ದರು (ಶಂಗಾಳಿ ೯೯೯). ೫. ಒಳಹೊಗಲು ಸಮರ್ಥ ವಾಗು ; ಅಳವಡು ; ಹೊಂದಿಕೆಯಾಗು ; ಆ ಪಾತ್ರದೊಳಗೆ ನದಿಯ ಬೋರೆ ಹಿಡಿಸಲಿಲ್ಲ (ಹುಂಶಾಂ. ೩-೯೩): ಈ ಡಬ್ಬದಲ್ಲಿ ಹತ್ತು ಸೇರು ಅಕ್ಕಿ ಹಿಡಿಸುತ್ತದೆ (೬.೩೦). ೬. ಬೇಕಾಗು ; ಅವಶ್ಯವಾಗು ; ಅಗತ್ಯವಾಗು : ಈ ಕೆಲಸಕ್ಕೆ ನಾಲ್ಕುದಿನ ಓಡಿಸುತ್ತದೆ (೬.೩೦) ; ಈ ಭಕ್ಷ್ಯಕ್ಕೆ ಎರಡು ಸೇರು ಸಕ್ಕರೆ ಹಿಡಿಸುತ್ತದೆ (೬.೩೦). ೭. ಒಪ್ಪಿಗೆ ಯಾಗು ; ಮನಸ್ಸಿಗೆ ಬರು : ಅವರಿಗೆ ನಾನು ಹೇಳಿದ್ದು ಹಿಡಿಸಿತು (ಅಶುಂ. ೩ ಪತ್ರ).

**ಓಡಿಯಿಸಿಕೊಳ್, ಓಡಿಸಿಕೊಳ್, ಹಿಡಿಸಿಕೊಳ್ಳು** = ಓಡಿದುಕೊಳ್ಳುವಂತೆ **ಮಾಡು :** ಅನ್ನೆಗಂ ಭೀಮಸೇನನುಂ ದೋಣವೇಳಿಗೆಯುಂ ಸಟ್ಟುಗಮು

ಮನೊರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು ನಿಂದವಂ ಕಂಡು (ಕಂಕಾ. ೯-೩೩ ವ) ; ಮಂಡಲಿಕರ ಕೈಯ ಹಡಪ ಹಾವುಗೆ ಕುಂಚ ಗಿಂಡಿಯ ಪಿಡಿಸಿಕೊಂಬವನು . . . ನಡೆದನು ಗುಹುವಿಗೆ ಗಿಂಡಿಯ ಮೆಗವಪನಾಗಿ (ಪ್ರಭು. ೩-೯) ; ತತ್ಕಾಲಪ್ರೇಮಪನದ್ಯದೆ ವಿಭವಕ್ಕೆ ಮಾಡಿದವನ ಭಕ್ತಿ ಇರುಳು ಸತ್ತಿಗೆಯ ಹಿಡಿಸಿಕೊಂಡಂತೆ (ಬಸವ. ೨೨೬) ; ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ (ಗಾದೆ).
[ ಪಿಡಿ₁ + – ಇಸು₃ ]

**ಪಿಡಿವಗೆ** (ನಾ). ಕಡುವೈರಿ ; ಪ್ರಬಲವಿರೋಧಿ : ಪೂರ್ಕುಳ್ ಸುಳಿಯನಟ್ಟಿಹಾಸಂಗೆಯ್ಯೆ ಕಿಱುದೆಱೆಯ ಮುಱುಕಮಂ ತ್ರಿಪಳಿ ಸಂದೇಹವಾರ್ಧ್ಯಂ ನೆಟ್ಟನೊರ್ಟಿಡಿಯಂಬ ನುಡಿಗೆ ಪಿಡಿವಗೆಯಾಗೆ (ಕಬ್ಬಿಗ. ೩-೨೮).
[ ಪಿಡಿ₁ + ಪಗೆ₂ ]

**ಪಿಡಿವಡು, ಪಿಡಿಪಡು** (ಕ್ರಿ). ಸೆರೆಗೆ ಸಿಗು : ಬಂಧನಕ್ಕೊಳಗಾಗು : ಎಮ್ಮಂ ಪಿಡಿದೆಱೆವಂದಿನ ನಿಮ್ಮದಟುಗಳೀಗಳೆತ್ತವೋದುವೊ ಪಿಡಿವಟ್ಟಪ್ಪ ಬಟಲ್ಮಿರೆ ಕಂಡರೆ ನಿಮ್ಮಳವಂ ನಿಮಗಱಿಯಾಗಳೀಯೆಂಡುರಾಯ್ತೆ (ಕಂಕಥಾ. ೩-೩೯) ; ರಣತೋಳೞಿಳಾತಳಕೆ ಪಾಯ್ದು ರಥದಿಂದೂರೆಯಿಂ ಬಾಳಂ ಕಿಟ್ಟಿಯ್ದುವಿನಂ ಬಾಳಂ ಪಿಡಿವಡೆವ ಪಾಟ್ಕೆಯಿಂ ಪಿಡಿವಟ್ಟಂ [ಪಾಠಾಂ. ವೆತ್ತಂ ] (ಪಂಪ. ೧೧-೯೯). **ಪಿಡಿಪಡು** : ಒಟ್ಟದೆಗೆಟ್ಟು ಕಾರ್ಯವಶದಿಂ ಖಚರಂ ಪಿಡಿವಟ್ಟು ಪಲ್ಲಣಂಗಟ್ಟಿಸಿಕೊಂಡುಂ (ಕಂರಾಮ. ೪-೧೧೫); ತೊಡಕು ಕಿದ್ದುವುದೇಳಯೋಳಯೊಂದೆನಲಾದು ಪಿಡಿವಟ್ಟ[ಪಾಠಾಂ. ವೆತ್ತ] ತಲೆದೆ ಕಿರು ನೀಲಕಂಠರು ನೊಂದು (ಹರಿಶ. ೮೬. ೨೦-೦೪); ಕದನಕ್ಷೇತ್ರದೊಳಾಂತ ಶತ್ರು ಪಿಡಿವಟ್ಟಂ (ಕುಶ್ರು. ೩-೦೮). [ಪಿಡಿ₂ + ಪಡು₁]

**ಪಿಡಿವಡೆ, ಹಿಡಿವಡೆ, ಹಿಡಿಹಡೆ** (ಕ್ರಿ). ಬಂಧನವನ್ನು ಹೊಂದು ; ಸೆರೆಗೆ ಒಳಗಾಗು : ರಣಲೋಳನಿಳಾತಳಕೆ ಪಾಯ್ದು ರಥದಿಂದೊರೆಯಿಂ ಬಾಳಂ ಕಿಟ್ಟಿಯ್ದುವಿನಂ ಬಾಳಂ ಪಿಡಿವಡೆವ ಪಾಟ್ಕೆಯಿಂ ಪಿಡಿವಟ್ಟಂ (ಪಂಪ. ೧೧-೯೯) ; ಪಿಡಿವಡೆದ ಸುರರಿಂದಸುರರಿಂದೆ ನರರಿಂದೆ . . . ಆ ರಣಾಂಗಣವೆಸೆದುದು (ಚಂಪು. ೩೨-೦೬). **ಹಿಡಿವಡೆ** : ಬಟ್ಟ ಕಣ್ಣು ಬಿಗಿದ ಹುಟ್ಟು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆದ (ಬಸವ. ೬೦೪); ಹೀಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ (ಬಸವೇ. ೭. ೦೩೯-೩೦೩) ; ಬಟ್ಟೆಯೊಳು ಕಳ್ಳರಿಂ ಹಿಡಿವಡೆದನೋ (ಸಿದ್ಧರಾ. ೨-೯೩); ಭೂಪನಿಂ ಹಿಡಿವಡೆವಂದದಿಂ ಬೆದಱಿ ನಿಂದುದು ಹಂಸೆ ಸರೋಜಷಂಡದೊಳ್ (ಕಳಸಾ. ೯೯). **ಹಿಡಿಹಡೆ** : ಪಕ್ಷಿ ಹಿಡಿಹಡೆಯ ಬಪ್ಪ ಪಡೆಯಂತೆ ಕಱುಗಳು ಹಾದಿಯೆಡೆತಱೆದು ಶಮಗೆ ತಾನೇ ಬಪ್ಪುದಾ ಕಂಡು (ಸಿದ್ಧರಾ. ೨-೯೪). [ ಪಿಡಿ₁ + ಪಡೆ₁ ]

**ಪಿಡಿವಲೆ** (ನಾ). ಒಂದು ಬಗೆಯ ಬಲೆ : ಪಿಡಿವಲೆ ಸೆಳೆವಲೆ . . . ಬಡಿವಲೆ ಬಲುಂತಲೆಗಾಱರು ಕೂಗಿ ಬೊಬ್ಬಿಡುತಲೈದಿದರು (ಸೋಮಶ. ೦೯-೦೬).
[ ಪಿಡಿ₁ + ಬಲೆ₁ ]

**ಪಿಡಿವಿಡಿ** (ಕ್ರಿ). ಮುಷ್ಟಿಯನ್ನು ಬಿಗಿ ಹಿಡಿ : ಪಿಡಿವಿಡಿದು ಗುರ್ದಿದರವನ ಬೆನ್ನುರಿಯುವಂತೆ (ಶಾಂತೀಶ. ೦೬೩-೩೬೨) ; ತಡೆಯಂಸಲ್ ಕೇಳ್ವನೇಂ ದಡಿಗ ಪಿಡಿವಿಡಿದು (ಶಾಂತೀಶ. ೦೬೦-೩೬೦). [ಪಿಡಿ₂ + ಪಿಡಿ₁]

**ಪಿಡಿವೆಱು, ಪಿಡಿಪೆಱು** (ಕ್ರಿ). ೧. ಸೆರೆ ಸಿಗು ; ಬಂದಿಯಾಗು ; ವಶವಾಗು : ಪಿಡಿವೆತ್ತ ಕಳ್ಳನಂತೆ ಸಿಡಿಮಿಡಿಗೊಳ್ಳುತ್ತಿರ್ದು (ಕಂಕಥಾ. ೦೪-೨೦) ; ಪಿಡಿವೆತ್ತ ಕಳ್ಳನಂತೆ ತಲ್ಲಣಿಸಿ (ರಮಾಶ್ವ. ೦-೦೬೪). ೨. ಪಡೆ ; ಹೊಂದು : ಆಪತ್ರಂ ಪಿಡಿವೆತ್ತ ಕುಂಭಕರ್ಣಾದಿಗಳೊಳ್ ಮಾತ್ರೇನೊಡರಿಸುವರ್ (ಕಂರಾಮ. ೦೯-೭೬). **ಪಿಡಿಪೆಱು** : ೧. ಪಿಮ್ಮರಸನಂ ಕೊಂದವನಂ ನೀಸಱಿವೆಯಂಬಡೆ ಪೇಟಲ್ಲದಿರ್ದೊಡೆ ನಿನ್ನಂ ಕೊಲಿಸುವಪ್ಪೆ ನೆಂದೊಡೆ ಭಯದಿಂ ಪಿಡಿವೆತ್ತುಮಾತನಿಂತೆಂದು ಪೇಟ್ಟಂ (ವಡ್ಡಾರಾ. ೦೬೨-೦) ;

ಗುಣಹತ ಕರಯುಗ ಕುಳಿಮಕೇಣಂಗಳೆಸೆದೀತನೊಳ್ ರಿಪುಶ್ರೀ ಪಿಡಿವೆತ್ತ ನೆಯರಮಲರ ಪನಿತಶೋಣಸಾಂಜನಬಿಂದುವೆಂಬ ಬಗೆಯಂ ಪಡೆಗುಂ (ಕಾಂಚಿಪು. ೩-೦೩೯) ; ರಾಜ್ಯಕಾಲಂ ಸಲೆ ಬಾರದೋಳ್ಪಿ ಪಿಡಿವೆತ್ತ ಗಜಪ್ರಿತಿಕರವಂ ಕೇಳ್ದು (ಕಾವ್ಯಾಂಕು. ೦೦೨). [ಪಿಡಿ₂ + ಪೆಱು₁]

**ಪಿಡಿಸು** ' ಪಿಡಿಯಿಸು ' ನೋ.

**ಪಿಡಿಹ, ಹಿಡಿಹ** (ನಾ). ಹಿಡಿಯುವಿಕೆ ; ನಿಗ್ರಹ ; ಬಂಧನ : ' ಬಂದಿ ವಿಡಿಪ ' ಪರಾ. **ಹಿಡಿಹ** : " ನಿಗ್ರಹಂ ಪೀಡನಂ ಸ್ಪರ್ಶನಂ ಗ್ರಹಣ ಮೆನಲು ಹಿಡಿಹಂ " (ಶಬ್ದಮ. ೦೬೦-೦೬). [ಪಿಡಿ₁ + – ಹ₃(< – ಪ₃)]

**ಪಿಡಿಹಾರ, ಹಿಡಿಹಾರ** (ನಾ). ತುಂಬಿದ ಹಿಡಿ,—ಕೈ : ಭರ್ತಿಯಾದ ಮುಷ್ಟಿ : ಆರತಿಯನೆತ್ತಿದ ಮಹಾಸತೀಜನಕೆ ಪಿಡಿಹಾರದಿಂ ಪೊಂಗಳಂ ವಸ್ತ್ರಂಗಳಂ . . . ಮಹಾಭೂಷಣವ್ರತತಿಗಳನು ಅರಮ್ಮು ಕೊಡಿಸಿ (ಚಂಪು. ೩-೦೬). **ಹಿಡಿಹಾರ** : ನಲಿದು ಸಖೀಸಮೂಹಕೆ . . . ಎತ್ತಿ ಪೊನ್ನ ಬಟ್ಟಲೊಳೆಱೆದೀವ ಕುಂಕುಮದರಸಂ ಹಿಡಿಹಾರದಿನೀವ ಚೊಕ್ಕ ದಂಬುಲಮಸೆವನ್ನೆಗಂ ನೋಱಿದಳಂದು ವಿಲಾಸಿನಿ ತದ್ವಿಲಾಸವಂ (ಚಂದ್ರಪು. ೮-೯೬). [< ಪಿಡಿ₂]

**ಪಿಡುಕು** (ಕ್ರಿ). ಚಿಮ್ಮು ; ಮಿಡುಕು ; ಚೆಡಪಡಿಸು (?) : ಬಹ್ವೋದರಿ . . . ಬರೆ ಕಂಡು ಕಂದರ್ಪಂ ನೆಲಿಮಿಂಚು ಮಿಂಚಿತವಮಪ್ಪ ಗೊಲೆನೂಂಕಿದು ಮಿಂದು ಸ್ತವುಗೊಂಗುಗಳಮಮಪ್ಪ ಪೊಲುಮಿಡಿದುದು ಬಗೆಯಮಮಪ್ಪ ಬಲೆಯೊಳ್ ಕಣ್ಬಾಳೆ ತೊಡರೆ ಪಿಡುಕುವುದಮಮಪ್ಪ ಎಂದು ನಿರವಿಸಿ (ಅಕ. ೩-೦೬೪). ' ಪಿಡುಗು₁ ' ಪರಾ. [ ? ]

**ಪಿಡುಗು₁** (ಕ್ರಿ). ೧. ಸಿಡಿಲಿನ ಹಾಗೆ ಸಿಡಿ,—ಆಸ್ಫೋಟಗೊಳ್ಳು : ಅಂತು ನುಡಿದು ಕಾಯ್ಪುನೊಳ್ ಪಿಡುಗಿ ನಡನಡನಡುಗಿ . . . ಉಗುಟ್ಟ ನಸುರನುರಿವ ಪಟಗಳಂ (ಕಂಕಥಾ. ೬-೩೪ ವ). ೨. ಸೀಳು; ಬಿರಿ ; ಒಡೆ : ಉರ್ವರೆ ನಡುಗಿತ್ತಜಾಂಡಮೊಡೆದತ್ತು ನೆಲಂ ಪಿಡುಗಿತ್ತು ಸಪ್ತಸಾಗರ ಮುಡುಗಿತ್ತು (ಕಂಕಥಾ. ೦೨-೨೦೨) ; ಈ ಶಂಖಮನಿನ್ನುಂ ಪಿಡಿದೊಡೆ ಜಗಂ ಪಿಡುಗಿ ಕೆಡುಗು[ಪಾಠಾಂ. ಪಿಡಿಗಿ ಕೆಡುಗು, ಪಿಡಿಗಿಡುಗು] ಮೆಂದು . . . ಶಾರ್ಙ್ಗಿಶಂಖಮನಿಟ್ಟು ನಾಗಶಯ್ಯೆಯಿಂದಿೞಿದು ಪೋಪುದಂ ಕಂಡು (ಅರ್ಜುನಚ. ೬-೩೯ ವ).

**ಪಿಡುಗು₂** (ನಾ). ೧. ಸಿಡಿಲು : ಗುಡುಗು ಜನರೆದೆ ನಡುಗು ವ್ಯಾಗವತಿಯುಡುಗು ಬೀಳುವ ಪಿಡುಗು ಮಿಂಚಿನ ಕಡುಗು ಕತ್ತಿಯ ಬೆಡಗು ಮಳೆನೀರ್ ಕರಿಕರಾಯತದಿ (ಕೃಕರ್ಣಾ. ೨-೬೮); ಅವರೇ . . . ಬಂದರೆ ಶತ್ರುಗಳ ಪಾಲಿಗೆ ಪಿಡುಗು ಬಿದ್ದಂತೆಯೆ (ಶಾಂಕಥಾ. ೩೬). ೨. ಕೇಡು ; ತೊಂದರೆ; ಹಿಂಸೆ : ನಿನ್ನ ಸಂಪದೇ ಪಿಡುಗ ತಂದೊಡ್ಡುವನು ಪಾತಕರೊಡೆಯನು (ಪಂಪಾ. ೩೬-೨೫) ; ನಮ್ಮೂರೊಳಗ ಪ್ಲೇಗು ಅಂತ ಈ ಊರಿಗೆ ಬಂದರ . . . ಇಲ್ಲೇ ತಿರುಕರ ಪಿಡುಗು (ಬಿಡುಗು. ೦೫) ; ಅರ್ಚಕರು ಇದೇನೋ ಪಿಡುಗು ಬಂತೆಂದು ನಡುಗುತ್ತ (ಕರಿಕ. ೦೯೫). ೩. ಪ್ಲೇಗು, ಸಿಡುಬು, ಕಾಲರಾ ಮುಂತಾದ ಘೋರವಾದ ಸಾಂಕ್ರಾಮಿಕರೋಗ,—ಅಂಟು ಜಾಡ್ಯ : ನಾರಣಪ್ಪ ಪ್ಲೇಗನ್ನು ತಂದ. ಅದು ಕಾಳ್ಗಿಚ್ಚಿನಂತೆ ಹರಡುವ ಪಿಡುಗು (ಸಂಸ್ಕಾರ. ೧೦೯) ; ಈ ಬರದೊಡನೆ ಅನೇಕ ಪಿಡುಗುಗಳೂ ಪ್ರಾರಂಭವಾದವು (ಕಳು. ೦೦೦) : ಮೊನ್ನೆ ಮೊನ್ನೆ ನಮ್ಮಲ್ಲಿ ಟಾಯಿಫಾಯಿಡ್ ಪಿಡುಗಾಗಿ ಎಷ್ಟು ಜನ ವೃಥಾ ಸಾಯಲಿಲ್ಲ ? (ಅಕಹಾ. ೦).
[ದೇ. ॥ ತಮಿ. ಪಿಟುಕು ; ತೆಲು. ಪಿಡುಗು]

**ಪಿಡುಗುಬೇನೆ** (ನಾ). = ಪಿಡುಗು₂ ೩ : ಆತನ ತಂದೆ ಪಿಡುಗುಬೇನೆಯಿಂದ ಕಾಲವಾದರು (ಹಾಡುಹ. ೬೯). [ಪಿಡುಗು₂ + ಬೇನೆ]

**ಪಿಡ್ಡ** (ನಾ). (ಉಕ) ಧಾನ್ಯವನ್ನು ಕೂರಿಗೆಯಿಂದ ಬಿತ್ತುವಾಗ ಬೇರೆ ಎಡೆಗೆ ಬೀಳದಂತೆ ನಾಳದ ಬಾಯಿಯನ್ನು ಮುಚ್ಚುವ ಬೆಣೆ :

**ಪಿತೂರಿವ್ಯಾಪಾರ** (ನಾ). ಒಳಸಂಚಿನ ವ್ಯವಹಾರ : ಇದೆಲ್ಲ ಪಿತೂರಿ ವ್ಯಾಪಾರವಾಗಿಯದೆ (ಹ್ಮದಿ. ೬೮).
[ಪಿತೂರಿ (< ಫಿತೂರಿ) + ವ್ಯಾಪಾರ]

**ಪಿತೃ** (ನಾ). ೧. ತಂದೆ ; ಪಿತ : "ಜನಕನಾ ಪಿತೃ ವಪ್ಪ ತಾತನೆನೆ ತಂದೆ" (ಹಂಗನಾ. ೧೦-೯) ; ಪಿತೃಪುರಗಾಜಾತದು ಖಿವುನೀಗೆಳ್ ಮಜಿದು ಮನಂ ನೀಗುಗಿಯಲ್ ಮಜಾಗಿದವೃದು (ಕಾದಂಕ್ಯ. ೦೧೩) ; ಪಿತೃ ಪವನಂಜಯಂ ಖಚರವಲ್ಲಭನಂಜನೆ ಪೆತ್ತ ತಾಯ್ ಮಹಾಸತಿ ಹನು ಮಂತನೆಂ ಪೆಸರೊಳಾಂ (ಶಂರಾಶಬಾ. ೦೦-೯೩) ; ಪಿತೃ ಕೃತಕೃತ್ಯನಾಗೆ ಪಸವಂ ಜನಸಂತತಿ ನೀಗೆ ಶತ್ರುಸಂತತಿ ತಲೆವಾಗೆ . . . ತಳೆದಂ ಭುವನ ಪ್ರಭು ರಾಜ್ಯಲಕ್ಷ್ಮಿಯಂ (ಕುಶ್ಮತ್ರಿ. ೦೬-೨) ; ಪಿತೃಸಮೋಭ್ರಾತ ಎನಿಪ್ಪುದು ಶ್ರುತಿವಚನವು (ಕುವ್ಯಾಕ. ೦೬-೨೦). ೨. ಹಿಂದಿನವನು ; ಪೂರ್ವಜ : ಪಿತೃಗಳುಪಾರ್ಜಿಸಿಟ್ಟ ಸಿರಿ ಜನ್ಮನದೇಟ್ಗೆ ಪೆಜಂಗಿಲ್ಲೆನಿಪ್ಪತಿಶಯರೂಪು ಶಕ್ತಿಗಳಿವಲ್ಲವ ಹಾನಿಯು ಬಳ್ಳಿವಳ್ಳಿ (ಕಾದಂಕ್ಯ. ೩೬೪). ೩. ಸ್ವರ್ಗಸ್ಥನಾದ ಹಿರಿಯ : ಪಿತೃ ಪಿತಾಮಹ ಪ್ರಪಿತಾಮಹರೆಂಬ ಮೂರುವಿಧ ಪಿತೃಗಳಿಗೆ ಅಧಿಪತಿಗಳು ವಸುಗಣ, ರುದ್ರಗಣ, ಆದಿತ್ಯಗಣ ಎಂಬ ಮೂರು ಗಣಗಳು (ಹಾಂಕಿ. ೦೯-೦ ಕಾತ್ಯಯ) ; ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ ಪಿತೃಲೋಕದಲ್ಲಿರುವ ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗು ತ್ತಾರೆ (ಕಾರಕ. ೦೦೨) ; ಮುಕ್ತಿಯೋಗ್ಯರಲ್ಲಿ ದೇವ, ಮನುಷ್ಯ, ಪಿತೃ, ಚಕ್ರವರ್ತಿ, ಮನುಷ್ಯೋತ್ತಮ ಎಂದು ಐದು ವಿಧಗಳು (ಹಿಂಜಾ. ೨೫೬). ೪. [ಜ್ಯೋತಿ] ಮಘಾನಕ್ಷತ್ರದ ಅಧಿದೇವತೆ. ೫. ಮಘಾನಕ್ಷತ್ರ : ಪಿತೃ ಮೂಲಮುಂ ಪೂರ್ವ ವೈಷಸ್ವತಮಿನಿತುಮುವುಗ್ರಂ (ಲೋಕೋಪ. ೦-೯).
[ಸಂ.]

**ಪಿತೃಋಣ** (ನಾ). ದೇವಋಣ, ಋಷಿಋಣ, ಪಿತೃಋಣಗಳೆಂಬ ಋಣತ್ರಯಗಳಲ್ಲಿ ಒಂದು ; ಮನುಷ್ಯನು ಸಂತಾನವನ್ನು ಪಡೆದು ತನ್ನ ಪಿತೃಗಳಿಗೆ ಸಲ್ಲಿಸಬೇಕಾದ ಋಣ : ಪಿತೃಋಣ ಗುರುಋಣ ದೇವಋಣ ಇತ್ಯಾದಿ ಎಲ್ಲ ಋಣದ ಭಾರವನ್ನು ನಿಮ್ಮೊಬ್ಬರ ತಲೆಯ ಮೇಲೆ ಹೊರಿಸಬೇಕಾಗುತ್ತದೆ (ಪೂಕ್ಕ. ೨೬೨). 'ಋಣತ್ರಯ' ಪರಾ. [ಸಂ.]

**ಪಿತೃಕರ್ಮ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಪಿಂಡ ಮುಂತಾದು ವನ್ನು ಅರ್ಪಿಸುವಿಕೆ ; ಶ್ರಾದ್ಧ : ಪರಂಪರಾನುಗತವಾದ ಸತ್ಸಂತಾನ ದಿಂದಲೇ ಪಿತೃಕರ್ಮಗಳು ನಡೆಯಬೇಕು (ಕಾಕತ. ೦೦೨).
[ಸಂ. ಪಿತೃಕರ್ಮನ್]

**ಪಿತೃಕಾನನ** (ನಾ). ಸುಡುಗಾಡು ; ಶ್ಮಶಾನ : ಪಿತೃಕಾನನಗಳಲಿ ದೇವಾಲಯ ಗಳಲಿ ಜನಿಸಿದುದ್ಗಮಕಾಜಗಳು ಸಲ್ಲವು ವಿವಾಹಕ್ಕೆ (ಶಿಪ್ತು. ೬-೩೩).
[ಸಂ.]

**ಪಿತೃಕಾರ್ಯ** (ನಾ). = ಪಿತೃಕರ್ಮ : ಅಂಧನ್ಯಪಾಲ ವಿದುರಗೆ ತಿಳುಹಿದನು . . . ಕೊಳುಗುಳಕ ಪೋಪಪೆಯಲ್ಲಿ ಪ್ರೇತಪಂಕ್ತಿಗೆ ಪಿತೃಕಾರ್ಯಗಳ ಮಾಡುವುದೆಂದು ನಿಯಮಿಸಿನ (ಶಿಮ್ಮಿ. ೧-೯೦). [ಸಂ.]

**ಪಿತೃಗ್ರಹ** (ನಾ). ಸ್ವರ್ಗಸ್ಥರಾದ ಪಿತೃಗಳಿಂದ ಉಂಟಾಗುವುದೆಂದು ನಂಬಲಾದ ಪೀಡೆ : ಎಳ್ಳು, ಉದ್ದು, ಬೆಲ್ಲ ಇವುಗಳಲ್ಲಿ ಪ್ರೀತಿ, ಅಪರ ಕೃತ್ಯದ ವ್ಯಾಪಾರದಲ್ಲಿ ಪ್ರೀತಿ, ಶಾಂತನಾಗಿಹನು, ಪೂರ್ವಾಹ್ನದಲ್ಲಿ ಸುಮ್ಮ ನಿದ್ದು ಅಪರಾಹ್ನದಲ್ಲಿಯೇ ಸಂಚರಿಪ ಪಾಡಾದನ ಈ ಲಕ್ಷಣಗಳುಂಟಾಗಿ ಹುದು ಪಿತೃಗ್ರಹಪೀಡಿತನಾಪುದು (ಕೃತ್ಯಶಾ. 11. ೬೬). 'ದೇವಗ್ರಹ' ಪರಾ. [ಸಂ.]

**ಪಿತೃತರ್ಪಣ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಕೊಡುವ ತರ್ಪಣ,- ಎಳ್ಳು ನೀರು : "ನಿವಾಪಃ, ಪಿತೃತರ್ಪಣಂ—ಈ ೨ ನೀರ್ಗುಡ್ಡು ವುದು" (ಹಹಾಯು. ೨೦೩- ೦೬) ; ಬಸುರಿನ ಬಸಿಯು ರಕುತವನು ಎಜೆದು ಪಿತೃತರ್ಪಣವ ನೀಡುವೆ (ಕೌಕಾ. ೩೩-೨೦) ; ಸಸಿನೆ ಸಂಧ್ಯಾನ ಜಪ ಹೋಮಸ್ವಾಧ್ಯಾಯಮಂ ಪಿತೃತರ್ಪಣಮಂ ರೀತ್ಯಾ . . . ಸದಾಚಾರ ತಪ್ಪದೆ ಮಾಡುತಿಹರು ಸದ್ಧರ್ಮದೊಡನೆ (ಜಜಕೋ. ೨-೩೬).
[ಸಂ.]

**ಪಿತೃದಾನ** (ನಾ). ಸ್ವರ್ಗಸ್ಥರಾದ ಹಿರಿಯರಿಗೆ ಸಲ್ಲಿಸುವ ತಿಲೋದಕ, ಪಿಂಡಪ್ರದಾನ ಇತ್ಯಾದಿಗಳು : "ನಿವಾಪಃ—ಪಿತೃದಾನ—ಪಿತೃ ಪಿತೃತ್ವ ವನ್ನು ಹೊಂದಿದವರು, ತೃಪ್ತಿಪಡುವುದಕ್ಕೋಸ್ಕರ ಮಾಡಲ್ಪಡುವ ದಾನ, ತಿಲೋದಕ ಪಿಂಡಪ್ರದಾನಗಳ ಹೆಸರು" (ಶಿವ್ಯಾಂಕಿ. ೨೨೨). [ಸಂ.]

**ಪಿತೃದಿನ** (ನಾ). ಶ್ರಾದ್ಧದ ದಿನ ; ತದ್ದಿನ : ಇಂದು ಪಿತೃದಿನವೆಂದು ಸಂಕ್ರಮಣೆಂದು ಸೂರ್ಯಗ್ರಹಣ ಹಂದಿನವೆಂದು ಯಜ್ಞಾರಂಭದಿನ ವಿದ್ಯಂತಿ ಲೇಸೆಂದು . . . ತಂದು ಕೊಟ್ಟವ ನಿಮಗೆ ಸುಭಟರ ಮಾತದೇಕೆ (ಕುವ್ಯಾಕಿ. ೬-೦೬). [ಸಂ.]

**ಪಿತೃದ್ವಂದ್ವ** (ನಾ). ತಂದೆ ಮತ್ತು ತಾಯಿ ; ಮಾತಾಪಿತೃಗಳು : ನವಮಾಸಾವಶೇಷಾಯುಷ್ಯರಾಗಿ ನೆಲಸಿರ್ದ ಗರ್ಭಂ ತದವಸಾನದೊಳ್ ಪುಟ್ಟಲೊಡಂ ಪಿತೃದ್ವಂದ್ವಂ ಕೌತುಜೃಂಭಣವ್ಯಾಜದಿಂ ಪರಾಸುಗಳಕ್ಕು ಮೆಂದು ಪೇಟ್ (ಶಂಪ್ರತ್ಯ. ೩-೩೮ ಪ) : ಇದು ಸರ್ವೋರ್ವಿಗಮುತ್ತ ಪೂರ್ವಮೆನೆ. . . ಪೂಜಿಸಿದನೀದ್ರಂ ತತ್ಪಿತೃದ್ವಂದ್ವಮಂ (ಕುಶ್ಮತ್ರಿ. ೦೨-೦೬).
[ಸಂ.]

**ಪಿತೃಧನ** (ನಾ). ತಂದೆಯಿಂದ ಅಥವಾ ಪೂರ್ವಜರಿಂದ ಪಡೆಯುವ ಆಸ್ತಿ ; ಪಿತ್ರಾರ್ಜಿತ ಸ್ವತ್ತು : ಸುತಂ ಪಿತೃಧನಮದಪುತ್ರಂ ಮೂರ್ಖ ನೆಂದೊಡೇನಜಸುವುದೋ (ಕಾವ್ಯಾಶ. ೦೧೨). [ಸಂ.]

**ಪಿತೃಪಕ್ಷ** (ನಾ). ೧. ತಂದೆಯ ಕಡೆಯ ಬಂಧು : ಪಕ್ಷಮೆಂಬೀ ಲೋಕ ದೊಳ್ ಪಿತೃಪಕ್ಷ ಪೇಣಾ ಮಾತೃಪಕ್ಷ ವಿಪಕ್ಷ ತಂದೆಯ ದೆಸೆ ಸಪಕ್ಷವು ತಾಯ ದೆಸೆಯವರು (ಕುವ್ಯಾಕಿ. ೮-೦೬). ೨. ಭಾದ್ರಪದಮಾಸದ ಕೃಷ್ಣಪಕ್ಷ ; ಹಿರಿಯರಿಗೆ ತರ್ಪಣ ಕೊಡುವ ಕಾಲ : ಪಿತೃಪಕ್ಷ, ಮಹಾಲಯಅಮಾವಾಸ್ಯೆಗಳಲ್ಲಿ ನಾವು ಮಾಡುವ ಪಿತೃಪಕ್ಷ ಶ್ರಾದ್ಧಗಳ ಮೂಲದಲ್ಲಿ ಈ ಕೃತಜ್ಞತಾದರ್ಶನವೇ ಇದೆ ಎಂಬುದನ್ನು ಮರೆಯು ವಂತಿಲ್ಲ (ಕಾಕ್ಮಾ. ೦೩೯) : ಪಿತೃಪಕ್ಷ, ಯುಗಾದಿಹಬ್ಬಗಳಲ್ಲಿ ಅವನ್ನು ತಿಂದ ಮಾರನೆಯ ದಿನ ಮಾವಯ್ಯ ಕಾಲುವೇ ಏರೀ ಮೇಲೇ ಇರುತ್ತಿದ್ದ (ಕಪ್ಮೂರು. ೨೨೦). [ಸಂ.]

**ಪಿತೃಪತಿ** (ನಾ). ಪಿತೃಗಳ ಒಡೆಯ ; ಯಮ : "ಶಮನಃ, ಸಮವರ್ತೀ ಪ್ರೇತಪತಿಃ, ಪಿತೃಪತಿಃ . . . ಈ ೧೬ ಜವನ ಪೆಸರ್" (ಕಹಾಯು. ೦೬-೨೦) : ಸುತ ಸುರಪತಿಯುಂ ಸ್ವಾಹಾಪತಿಯುಂ ಪಿತೃಪತಿಯುಂ . . . ಪತ್ತಾಪತಿಯುಮೆನಿಸಿದಾಶಾಪತಿಗಳ್ (ಕುಶ್ಮತ್ರಿ. ೦೬-೮೦) : ಬಿದ್ದವರನೊಡೆ ತಳೆದು ಮೇಲುಬ್ಬಿದ್ದು ಕವಿವಿದಾಳುಕುದುರೆಯ ಬದ್ದಿನರಿ ಬೇಸಜಿಸಿದನು ಪಿತೃಪತಿಯ ಪರಿಜನವ (ಕುವ್ಯಾಕ. ೦೦-೩೬) : ಅದರಿದನು ಪಿತೃಪತಿ ಸಂಹಾರಥವ (ಶಶ್ಯಜ. ೬-೨೬). [ಸಂ.]

**ಪಿತೃಪದೇಶ** (ನಾ). ಯಮನ ದೇಶ ; ಯಮಲೋಕ : ಸಂದೇಹಿಗಳ್ಗೆ ಪಲ್ಗಿರಿಪಪರ ಶರಣರಂ ನಿಂದಿಸಿ ಪಿತೃಪದೇಶಕೊಕ್ಕಲಾದಪರ ಮಾಯಾಂಧ ಕಾರದೊಳು ಕಂಗಾಣದರ ಸಂಗವಿಜಾತಿನೊಳು ಸಿಕ್ಕದೊಲು (ಶಾಂ. ೦೬-೨೦).
[ಸಂ.]

**ಪಿತೃಪ್ರಸು** (ನಾ). ೧. ತಂದೆಯ ತಾಯಿ ; ಪಿತಾಮಹಿ ; ಅಜ್ಜಿ. ೨. ಸೂರ್ಯಾಸ್ತದ ಸಮಯ ; ಮುಸ್ಸಂಜೆ : "ಸಂಧ್ಯಾ, ಪಿತೃಪ್ರಸೂಃ— ೨ ಸಂಧ್ಯಾಕಾಲದ ಪೆಸರುಗಳು. ಅಂದರೆ ಸಂಜೆ" (ಶಿವ್ಯಾಂಕಿ. ೩೫).
[ಸಂ. ಪಿತೃಪ್ರಸೂ]

**ಪಿತೃಪ್ರಿಯ** (ನಾ). ಪಿತೃಗಳಿಗೆ ಪ್ರಿಯನಾದವನು; ಪಿತೃಪತಿ; ಯಮ: "ಪ್ರೇತಪತಿ ಸಮವರ್ತಿ . . . ಶಮನನಿನಜಾತಂ ಪಿತೃಪ್ರಿಯಂ ಹರಿ ದಂಡಪಾಣಿ ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೦೩-೦೦). [ಸಂ.]

**ಪಿತೃಭಕ್ತತೆ** (ನಾ). ತಂದೆಯಲ್ಲಿ ಇಟ್ಟಿರುವ ಭಕ್ತಿ,—ಪೂಜ್ಯಭಾವ: ಸಂದ ದಾನಚಿಂತಾಮಣಿ ತನ್ನದೊಂದು ಪಿತೃಭಕ್ತತೆಯಂ ಮೆರೆಯಲ್ ಪುರಾಣಚೂಡಾಮಣಿಯಂ ನಿರ್ಮಿಸಿದಳ್ (ಶಾಂತಿ. ಕಂ. ೦-೦).

[ಸಂ. ಪಿತೃಭಕ್ತತಾ]

**ಪಿತೃಭಕ್ತಿ** (ನಾ). = ಪಿತೃಭಕ್ತತೆ: ಉದಾತ್ತನೀ ಮಲ್ಲಪಯ್ಯನೊಳೊಪ್ಪುಗುಂ ಪಿತೃಭಕ್ತಿಯುಂ ವಿನಯೋಕ್ತಿಯುಂ (ಶಾಂತಿ. ೦-೯೦); ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ . . . ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗುತ್ತಾರೆ (ಶಾಕರ. ೦೦೨). [ಸಂ.]

**ಪಿತೃಭೂಮಿ** (ನಾ). ಸುಡುಗಾಡು; ಶ್ಮಶಾನ: ಆ ನಡುರಾತ್ರಿಯಲ್ಲಿ ರಾಜಮಾತೆಯ ಚಿತಾದರ್ಶನಕ್ಕೆಂದು ರಾಜಕುಲದ ಪಿತೃಭೂಮಿಗೆ ನಡೆದು ಹೋದನು (ಶಾಂಕಶಾ. ೦೬೯). [ಸಂ.]

**ಪಿತೃಮೇಧ** (ನಾ). ೧. = ಪಿತೃಯಜ್ಞ ೧: ಇಂದು ದೇವತೆಗಳನ್ನು ಪ್ರಾರ್ಥಿಸುವ ಪಿತೃಮೇಧ ಎಂಬ ಯಜ್ಞವು ಕಲ್ಯಾಣಕಾರಕವಾಗಿ ಆಗಲಿ (ಋಕ್ಸಾರ. ೩೨೮). ೨. = ಪಿತೃಯಜ್ಞ ೨: ವಿವಿಧಭಕ್ತಿಯಿಂತು ಪಿತೃಮೇಧವನು ವಿಹಿತವಿದೆನಲನುಷ್ಠಿಸಿಯಾವರು . . . ಅವರನದೀತಟಾಕಗಳೆಗೈದಿದರು (ತಿಮ್ಮ. ೦೦-೩೯). [ಸಂ.]

**ಪಿತೃಯಜ್ಞ** (ನಾ). ೧. ಗೃಹಸ್ಥನು ಮಾಡಬೇಕಾದ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ ಮತ್ತು ಬ್ರಹ್ಮಯಜ್ಞಗಳೆಂಬ ಪಂಚಮಹಾಯಜ್ಞಗಳಲ್ಲಿ ಒಂದು; ಸ್ವರ್ಗಸ್ಥರಾದ ಹಿರಿಯರಿಗೆ ನೀಡುವ ತರ್ಪಣ: ದೇವಯಜ್ಞ, ಪಿತೃಯಜ್ಞ . . . ಬ್ರಹ್ಮಯಜ್ಞಾದಿಗಳಂ ಮಾಳ್ಪಾತನಾಗಿ (ಶಿವೇಕ. ೦೩೯); ಬ್ರಹ್ಮಯಜ್ಞ, ಪಿತೃಯಜ್ಞ ... ಮನುಷ್ಯಯಜ್ಞ—ಈ ಐದು ಮಹಾಯಜ್ಞಗಳು ... ಪಿತೃತರ್ಪಣವು ಪಿತೃಯಜ್ಞವು (ಆರ್ಯಧರ. ೦೬೮); ಭೂತಯಜ್ಞ, ಮನುಷ್ಯಯಜ್ಞ, ಪಿತೃಯಜ್ಞ . . . ಎಂಬ ದೈನಂದಿನದ ಕರ್ತವ್ಯನಿರ್ವಹಣದಿಂದ ಗೃಹಸ್ಥನು ಲೋಕಸಂಗ್ರಹನಿರತನಾಗಿರಬೇಕು (ಋಕ್ಸಾರ. ೯೦ ಟೀಕೆ). ೨. ಸತ್ತವರಿಗೆ ಮಾಡುವ ಕರ್ಮ; ಅಪರಕರ್ಮ; ಅಂತ್ಯಕ್ರಿಯೆ: ವಿಧ್ಯುಕ್ತವಾಗಿ ಪಿತೃಯಜ್ಞ ನಡೆಯಿತು. ಹೀಗೆ ಅಗ್ನಿಸಂಸ್ಕಾರವಾದ ಮೇಲೆ ಎಲ್ಲರೂ ಗಂಗಾತೀರಕ್ಕೆ ಹೋಗಿ ತರ್ಪಣ ಕೊಟ್ಟರು (ಶಕಶಾ. ೩೩೯).

[ಸಂ.]

**ಪಿತೃಯಾಣ** (ನಾ.) = ಪಿತೃಯಾನ ೨: ಇಷ್ಟಾಪೂರ್ತಗಳನ್ನು ಮಾಡಿದವರ ಪಿತೃಯಾಣ (ಇದಕ್ಕೆ ಕೃಷ್ಣಮಾರ್ಗವೆಂದೂ ಧೂಮಮಾರ್ಗವೆಂದೂ ಹೆಸರು) (ಅಮೃತ. ೭-೨೨ ಟೀಕು): ಬ್ರಹ್ಮದೊಂದಿಗೆ ಐಕ್ಯವನ್ನು ಪಡೆದ ಜೀವಾತ್ಮನು ಪಿತೃಯಾಣಕ್ಕಿಂತ ಭಿನ್ನವಾದ ದೇವಯಾನದಲ್ಲಿ ಹೋಗುತ್ತಾನೆಂದು ಹೇಳಿದೆ; ಪಿತೃಯಾಣವು ಪುನರ್ಜನ್ಮಕ್ಕೆ ಒಳಗಾಗಿರುವ ಬದ್ಧಜೀವನಿಗೆ ಸೇರಿದ್ದು (ಕಠ್ಯತ್ರಾ, ೩೩). [ಸಂ.]

**ಪಿತೃಯಾನ** (ನಾ). ೧. ಪಿತೃಗಳು ಸಂಚರಿಸುವ ವಾಹನ. ೨. [ವೇದಾಂತ] ಪುನರ್ಜನ್ಮಕ್ಕೆ ಒಳಗಾಗುವ ಬದ್ಧಜೀವನು ಪಡೆಯುವ ಒಂದು ಗತಿ; ಪಿತೃಗಳು ಹೋಗುವ ಮಾರ್ಗ; ಕೃಷ್ಣಗತಿ: ಹುಟ್ಟಿದ ಪ್ರಜೆಗಳು ಸತ್ತ ಬಳಿಕ ಬೇರೆಬೇರೆಯಾಗಿ ಹೋಗುವರೆಂಬುದನ್ನು ಬಲ್ಲೆಯಾ . . . ದೇವಯಾನ ಪಿತೃಯಾನಮಾರ್ಗಗಳ (ಮರಣಾನಂತರ ಆತ್ಮನ ಗತಿಗಳು) ಸಾಧನಗಳೇನೆಂಬುದನ್ನು ಬಲ್ಲೆಯಾ? (ಶಾಕರ. ೯೦). 'ದೇವಯಾನ' ನೋಡಿ. [ಸಂ.]

**ಪಿತೃರೇಖೆ** (ನಾ). [ಸಾಮುದ್ರಿ] ಹಸ್ತರೇಖೆಗಳಲ್ಲಿ ಒಂದು: ಮಧ್ಯಮದ ಆದಿಯಲ್ಲಿ ಪಿತೃರೇಖೆಯಿರುವದು (ಸಾಮುಂ. ೯೮-೦೩).

[ಸಂ. ಪಿತೃರೇಖಾ]

**ಪಿತೃಲೋಕ** (ನಾ). ಮೃತರಾದ ಪಿತೃಗಳು ಇರುವ ಲೋಕ; ಚಂದ್ರಲೋಕಕ್ಕಿಂತ ಮೇಲಿರುವುದೆನ್ನಲಾದ ಒಂದು ಲೋಕ: ಮುಂದೆ ಪಿತೃಲೋಕಮಾರ್ಗಂ ದೂರಮಪ್ಪುದೆನಗೆಂದು ಬಗೆಯುದೆ . . . ಸಲೆ ಸಂದ ಸತ್ಕುಲಕುಜಕೆ ಕೊಡಲಿಯಾದಳ್ ಭಾವಿಸೆ (ಆರಾತ. ೧-೭-೨೯): ಶ್ರೋತ್ರಂಗಳಲಿ ಪ್ರಾಣವು ಪೋಗೆ ಪಿತೃಲೋಕದಲಿ ಸಂಚರಿಸುವರು (ಗಗಶಾ. ೯-೩೯); ಪಿತೃಭಕ್ತಿವಿಹೀನರಾದ ಸಂಕರಸಂತಾನದಿಂದ ಪಿತೃಲೋಕದಲ್ಲಿರುವ ಪಿತೃಗಳು ಲುಪ್ತಪಿಂಡೋದಕರಾಗಿ ನರಕಗತರಾಗುತ್ತಾರೆ (ಶಾಕರ. ೦೦೨).

[ಸಂ.]

**ಪಿತೃವಂಚಿತ** (ನಾ). ೧. ತಂದೆಯಿಂದ ವಂಚಿತನಾದವನು. ೨. ತಂದೆಯನ್ನು ಕಳೆದುಕೊಂಡವನು: ಅವನ ತೀಕ್ಷ್ಣಬುದ್ಧಿ ಮತ್ತು ಪ್ರತಿಭೆಗಳಿಗಾಗಿ ಎಷ್ಟು ಪ್ರೀತಿಸುತ್ತಿದ್ದರೋ ಅಷ್ಟೇ ಪಿತೃವಂಚಿತನಾದ ಅವನ ಬಡತನದ ಬಾಳಿಗಾಗಿ ಮರುಕಪಡುತ್ತಿದ್ದರು (ಶಾಶಿಶಿ. ೨೦). [ಸಂ.]

**ಪಿತೃವನ** (ನಾ). ಶ್ಮಶಾನ; ಪಿತೃಭೂಮಿ: "ಶ್ಮಶಾನಂ, ಪಿತೃವನಂ—ಈ ೨ ಮಸಣಗಾಡು" (ಶಬ್ದಮ. ೦೦೩-೧೮); ಗಿರಿಗುಹೋದರ ಕಂದರ ವಿಟಪಿ . . . ಪಿತೃವನ ಜೀರ್ಣದ್ವಾರ ಶೂನ್ಯಗೃಹಾದಿಗಳೊಳ್ (ಆಕಶಿ. ೯-೨೯ ಶ); ಪಿತೃವನಮುದಾ[ಶಾಶಾಂ. ಪರೇತವನಮಾ ಪರಿಭವನಮಾ]ಯ್ತುಂಬುಜವನಂ (೦೯೦೫೫. ೭-೯೩); ಲಲನೆನಂದನರನು ಮಹೀಸುರನಿಳಯದಲಿ ಮಾಜಿದನು ತಾನೇ ಹೊಲೆಯಗಾಳಾಗಿದ್ದನಾ ಪಿತೃವನಪತಿತ್ವದಲಿ (ಹರಿಶಾ. ೩-೨-೨೯).

[ಸಂ.]

**ಪಿತೃವಾಕ್ಯ** (ನಾ). ತಂದೆಯ ಮಾತು,—ನುಡಿ: ಪಿತೃವಾಕ್ಯಮನುಲ್ಲಂಘಿಪ ಸುತನೆ ಮಹಾಜ್ಞಾನಿಯಾದೊಡಂ ವಿಬುಧರ ಸಮ್ಮತಮಲ್ತವಂಗೆ ನರಕದ ಗತಿ ತಪ್ಪದು (ಪಿಶ್ಮು. ೦-೩-೨೩೭).

ಪಿತೃವಾಕ್ಯಪರಿಪಾಲನೆ = ತಂದೆಯ ಮಾತನ್ನು ನಡೆಸುವಿಕೆ; ತಂದೆಯ ಆಜ್ಞೆಯನ್ನು ಪಾಲಿಸುವಿಕೆ: ರಾಮನ ಪಿತೃವಾಕ್ಯಪರಿಪಾಲನೆಯು ರಾಮಾಯಣಕ್ಕೆ ನಾಂದಿಯಾಯಿತು (ಕೂಶಿ). [ಸಂ.]

**ಪಿತೃವಿತ್ತ** (ನಾ). ಪಿತ್ರಾರ್ಜಿತವಾಗಿ ಬಂದ ಹಣ,—ಸಂಪತ್ತು: ತಾಂ ಪಿತೃವಿತ್ತಮದೋನ್ಮತ್ತಧರ್ಮದೊಳ್ ಬಹಿರ್ಮುಖನುಂ . . . ಮೋಕ್ಷದೊಳ್ ನಿರಪೇಕ್ಷಕನುಮಾಗಿ (ಶಂಕಶಂ. ೨೯-೩); ಪಿತೃವಿತ್ತಭೋಗಿ ಕುನಖಂ ಮೆಲ್ಪಿಂದೆ ಬಲ್ಪಿಂದೆ ಸಾಧಿಸೆ ಸಾಧ್ಯಂ ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಶಾಶಶಿ. ೦೭-೯). [ಸಂ.]

**ಪಿತೃವಿಯೋಗ** (ನಾ). ತಂದೆಯನ್ನು ಕಳೆದುಕೊಳ್ಳುವಿಕೆ; ತಂದೆಯ ಮರಣ,—ಸಾವು: ಗುರುವಿರಹಜನಿತಚಿಂತಾತರಂಗಿಣೀರಯಮನಾತ್ಮಕುಲವೃದ್ಧವಚಸ್ತರಣಿಯಿನೆಂತಾನುಮಧಃಕರಿಯಿಸಿದಂ ಪಿತೃವಿಯೋಗಮೆಂದುಸ್ತರಮೋ (ಹಿಂದ್ರಶಿ. ೨-೬೦). [ಸಂ.]

**ಪಿತೃವ್ಯ** (ನಾ). ತಂದೆಯ ಸಹೋದರ; ಚಿಕ್ಕಪ್ಪ ಅಥವಾ ದೊಡ್ಡಪ್ಪ: "ತಾತನೊಡಹುಟ್ಟಿದಾತಂ ಪಿತೃವ್ಯನೆನಿಕ್ಕು (ಮಂಗರಾ. ೯೨-೦೩); ಅಂಕುಶನೊಳ್ ನಿರಂಕುಶಂ ಲಕ್ಷ್ಮಣಂ ಪಿತೃವ್ಯಂ ದಶಕಂಧರನೊಳ್ ನೆರೆಮಂತಿರೆ . . . ಮೆರೆದು ಕಾದುತ್ತಿರ್ದಂ (ಶಂರಾಮಾ. ೦೭-೧೩); ಚರಣಾಂಭೋಜಾತಮಂ ಪೂಜಿಸಿದ ತನಯನಂ ತತ್ಪಿತೃವ್ಯಂ ಧರಾಧೀಶ್ವರನಾಶೀರ್ವಾದಮೋತಂ ತೆಗೆದು ಬಿಗಿದು ತಬ್ಬಿಸಿದಂ ಪ್ರೀತಿಯಿಂದಂ (ಪರ್ವಶಿ. ೨-೯೯); ನೀನಲಾ ಗುರುವಂದ್ಯನೆಮಗತಿಮಾನನೀಯಂನಲಾ ಪಿತೃವ್ಯನದೇನ ಹೇಳದೆ ತಂದೆ ಲಾಲನಪೋಷಣಾರ್ಹರಿಗೆ (ಶಿರಂಗ. ೦೦-೯೩-೩೩). [ಸಂ.]

**ಪಿತೃಶೇಷ** (ನಾ). ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸಿದ ನೈವೇದ್ಯ. [ಸಂ.]

**ಪಿತ್ತ** (ನಾ). ೧. ಶರೀರದ (ವಾತ, ಪಿತ್ತ, ಶ್ಲೇಷ್ಮಗಳೆಂಬ) ಮೂರು ಬಗೆಯ ಧಾತುಗಳಲ್ಲಿ ಒಂದು: "ಪಾಮುಃ, ಪಿತ್ತಂ – ಈ ೨ ಪಿತ್ತಂ" (ಹರಾಯು. ೯೯-೯೩೨). ೨. ಪಿತ್ತಾಧಿಕ್ಯದಿಂದ ಉಂಟಾಗುವ ಜೇನೆ,–ರೋಗ: ಪಿತ್ತವಿಕಾರ : ಸಿತಮುಂ ದ್ರಾಕ್ಷೆಯುಮುಂ ಮಧುಯುತಮಾಗಿರೆ ತಿಂದು ಬಟಿಕ ತಣ್ಣೀರ್ಗುಡಿಯಲ್ ಹತಿಯಿಸುಗುಮಧಿಕಪಿತ್ತಮುಂ (ಲೋಕೋಪ. ೯-೦೦); ವಾತಂ ಪಿತ್ತಂ ಕಫಮೆಂಬೀ ತೆಱದಿಂ ಮೂಱು ದೋಷಮಪ್ಪುದ್ಯಂತ ಸಮಾಖ್ಯಾತಂಗಳವುಷ್ಣದಿನತಿಶೀತದಿನುಪಶಮಿಕುಮಲ್ಲಿ ಮಧ್ಯಮದೊಂದುಂ (ಶಾಬ್ದ್ಯಾತ. ೯೬೨); ತೊಂಡೆಯ ಹೂವು . . . ಈ ಎಲೆರಸ ಸಕ್ಕರೆ ಸಹ ಹಾಲಲ್ಲಿ ಕುಡಿಯೆ ಪಿತ್ತ ಮಾಣ್ಗುಂ (ಬ್ಯ್ರ.ಿ. ೫). ೩. ಕೋಪ ; ಸಿಟ್ಟು : ಬಿಟ್ಟ ಬಿಟ್ಟಂತಾಯ್ತು ಕಿವಿ ಘಟ್ಟುಟ್ಟಿ ಹೋಯಿತು ಘೋರರಭಸಕೆ ಹೆಚ್ಚಿ ಪಿತ್ತವು ತಲೆಯನೇಱಿದವೊಲ್ಸ ಶಿರುಗಿದರು (ಕೌಶಿಕ. ೦೯-೦೨); ಪುಂಡರ ಪುಂಡತನ ಇವುಗಳ ನಿರ್ಭೀತಚಿತ್ತ ಧಾರ್ಮಿಕರೆಂಬವರ ಪಿತ್ತವನ್ನು ಹೆಚ್ಚಿಸಿದೆ (ಸಾಸಮಾ. ೦೨): ಬರೆದ ಉತ್ತರವು ಆಚಾರ್ಯರ ಪಿತ್ತವನ್ನು ಕೆರಳಿಸಿತು (ಮಸಿಕ. ೯೩). ೪. ಮರುಳುತನ ; ಹುಚ್ಚು : ಇದೇನು, ನಿಮಗೆ ಕ್ಷಣಚಿತ್ತ ಕ್ಷಣಪಿತ್ತ? (ನಾಕೀಸಂ. ೩೬). ೫. ಹುಚ್ಚು ತಲೆಗೇರಿದವನು ; ಹುಚ್ಚ : ನಂಜುಣಪುರದ ವನದಲ್ಲಿ ಕೋಪದಿಂ ಪಿತ್ತನೆಯೊಂದು ಬೈದಂತೆ ಪಾಡು (ಕೃತಿಂ. ೨-೦೦೬ ಪ). 'ಪಿಚ್ಚ[1]' ಪರಾ.

**ಪಿತ್ತ ತಲೆಗೇಱು, ಪಿತ್ತ ತಲೆಗೇರು**=೧. ಹುಚ್ಚು ಹಿಡಿ : ವಿಷಯದ ಪಿತ್ತ ತಲೆಗೇಱಿದಲ್ಲಿ ವಿವೇಕವೆಂಬ ದೃಷ್ಟಿ ನಷ್ಟವಾಗಿ ಪಶುಪಶಿಯ ನೆನೆಹು ಕೆಟ್ಟು ಮತಿ ಮಂದವಾದಲ್ಲಿ (ಶೀಲಾವ. ೨೭-೪೬). ೨. ಸಿಟ್ಟು ಹೆಚ್ಚಾಗು ; ಅತಿಶಯವಾಗಿ ಕೋಪ ಬರು : ಪಿತ್ತ ತಲೆಗೇರಿದವನಿಗೆ ಶಂಖ ಕರ್‍ರಗೆ ಕಂಡರೆ ಅದರ ಬಣ್ಣ ಕೆಟ್ಟೀತೇ? (ಗಾದೆ). **ಪಿತ್ತದ ಗಂದೆ**=ಪಿತ್ತಾಧಿಕ್ಯದಿಂದ ಮೈಮೇಲೆ ಏಳುವ ಬೊಕ್ಕೆ,–ಗುಳ್ಳೆ : ಅವನ ಮೈಮೇಲೆಲ್ಲಾ ಪಿತ್ತದ ಗಂದೆಗಳೆದ್ದಿವೆ (ರೂಢಿ). **ಪಿತ್ತ ನೆತ್ತಿಗೇರು**=ಪಿತ್ತ ತಲೆಗೇಱು ೨ : ನನಗಂತೂ ಪಿತ್ತ ನೆತ್ತಿಗೇರಿಬಿಡುತ್ತದೆ (ಸುವಸಂ. ೦೪) : ಬಸಗೊಂಡನ ಹೆಂಡತಿ, ಬಸವಂತಿಯ ಈ ನಿತ್ಯಸ್ನಾನ, ಮಾಸಾಂತ್ಯದ ಬದಲಾವಣೆ, ಪಿತ್ತ ನೆತ್ತಿಗೇರಲು ಕಾರಣವಾಗಿದ್ದುವು (ಬೀಕತ. II. ೦೯೨). [ಸಂ.]

**ಪಿತ್ತಕ** (ನಾ). ಒಂದು ಬಗೆಯ ಕೀಳುತರದ ರತ್ನ : ಪಿತ್ತಕವೆಂಬುವದ ಗಿಣಿಯ ರೆಕ್ಕೆಯಂತಿರುವುದು (ಸೌಗಂಧಿ. ೩೬-೦೫). [ಸಂ.]

**ಪಿತ್ತಕಲ್ಲು** (ನಾ). ಪಿತ್ತಕೋಶದಲ್ಲಿ ಬೆಳೆಯುವ ಒಂದು ಬಗೆಯ ಕಲ್ಲಿನಂತಹ ವಸ್ತು ಮತ್ತು ಅದಕ್ಕೆ ಸಂಬಂಧಪಟ್ಟ ರೋಗ : ಇಂತಹವರು ಟೈಫಾಯ್ಡ್ ವಾಹಕರಾಗುವುದಲ್ಲದೆ, ಕೆಲವು ವೇಳೆ ಪಿತ್ತಕಲ್ಲು (Gall Stone)ಗಳಿಂದ ನರಳುತ್ತಿರೆ (ಕೆಂರೋ. ೬೦).

[ಪಿತ್ತ+ಕಲ್ಲು (<ಕಲ್[3])]

**ಪಿತ್ತಕೋಶ** (ನಾ). (ಕಶೇರುಕಪ್ರಾಣಿಗಳ) ಜಠರದ ಬಲಭಾಗದಲ್ಲಿ ಇರುವ, ಪಿತ್ತರಸವನ್ನು ಉತ್ಪತ್ತಿ ಮಾಡುವ, ಆಹಾರವು ಜೀರ್ಣವಾಗುವುದಕ್ಕೆ ಸಹಾಯಕವಾದ ಒಂದು ಮುಖ್ಯಾಂಗ ; ಪಿತ್ತಜನಕಾಂಗ : ಒಂದು ಯಕೃತ್ತಿನಿಂದ (Liver) ಪಿತ್ತಕೋಶವನ್ನು ಸೇರಿ (Gall-bladder) ಅಲ್ಲಿಂದ ಹರಿದು ಬರುವ ಪಿತ್ತರಸ (ಶಾಲಕ್ರ. I. ೫೩೦); ಪಿತ್ತದಲ್ಲಿ ಈ ರೋಗಾಣುಗಳು ಬಹು ವೇಗ ಬೆಳೆದು ಪಿತ್ತ ಕೋಶದಲ್ಲಿ ಆಶ್ರಯವನ್ನು ಪಡೆಯುತ್ತವೆ (ಕೆಂರೋ. ೬೦). [ಸಂ.]

**ಪಿತ್ತಕ್ಷೋಭೆ** (ನಾ). ಪಿತ್ತದ ಉದ್ರೇಕ ; ಪಿತ್ತಪ್ರಕೋಪ : ಮಲ ಮೂತ್ರಗಳ ದುರ್ಗಂಧದಿಂದ ನನಗೆ ಪಿತ್ತಕ್ಷೋಭವಾಗಿ ಓಕರಿಕೆ ಬರುತ್ತದೆ (ಮುಂಂಂಆ. ೫-೦೫೬). [ಸಂ.]

**ಪಿತ್ತಗ್ರಹಣೆ** (ನಾ). ಪಿತ್ತದಿಂದ ಉಂಟಾಗುವ ಅತಿಸಾರ,–ಆಮಶಂಕೆ ; ಪಿತ್ತಾತಿಸಾರ: ಬೆಲ್ಲವತ್ತದ ತಿರುಳು, ಕೊಡಸಿಗೆಬೀಜ, ಕೊಡಸಿಗೆ ತೊಗಟು, ಧಾತಕೀಕುಸುಮ, ಕಟುಕರೋಹಿಣಿ, ಶುಂಠಿ ಇವಂ ಚೂರ್ಣಿಸಿ ಅಕ್ಕಿ ಗಚ್ಚಿನಲ್ಲಿ ಕಲಸಿ ಜೇನುತುಪ್ಪವೆರಸಿ ಕುಡಿಯೆ ಪಿತ್ತಗ್ರಹಣೆ, ಮೂಲರೋಗ, ಪ್ರವಾಹವಾದ ಅತಿಸಾರ, ಹೊಟ್ಟೆಬೇನೆ ಸಹ ಪರಿಹರವಕ್ಕುಂ (ಸಕವ್ಯ. ೪೯೬). [ಸಂ.]

**ಪಿತ್ತಘ್ನಿ** (ನಾ). ಒಂದು ಬಗೆಯ ಸಸ್ಯ ; ಗುಡೂಚಿ. [ಸಂ. ಪಿತ್ತಘ್ನೀ]

**ಪಿತ್ತಜನಕಾಂಗ** (ನಾ). ಪಿತ್ತರಸವನ್ನು ಉತ್ಪತ್ತಿ ಮಾಡುವ ಒಂದು ಜೀರ್ಣಾಂಗ ; ಪಿತ್ತಕೋಶ : ವಿಷಮತೆ ದೇಹದಲ್ಲಿ ಹೆಚ್ಚಾದಾಗ ಹೃದಯಃಕ್ರಿಯ ನಿಲ್ಲುತ್ತದೆ . . . ಪಿತ್ತಜನಕಾಂಗ ಊದಿಕೊಳ್ಳುತ್ತದೆ (ಕೆಂರೋ. ೨೨) : ಆಹಾರದಲ್ಲಿ ಪ್ರೋಟೀನು ಅಭಾವವಾದರೆ . . . ಪಿತ್ತ ಜನಕಾಂಗ, ರಕ್ತ, ಚರ್ಮ ದುರ್ಬಲವಾಗುತ್ತವೆ (ಗೃಹಂ. ೦೦) ; ದೇಹದಲ್ಲಿ ಪಿತ್ತಜನಕಾಂಗವೂ ಈ ಕೆರೋಟಿನ್ ವಸ್ತುವನ್ನು Vitamin 'A' ರೂಪಕ್ಕೆ ಮಾರ್ಪಡಿಸುತ್ತದೆ (ಹಿಮ್ಮದ್ಯ. ೦೫೦). [ಸಂ.]

**ಪಿತ್ತಜಿಹ್ವೆ** (ನಾ). ಪಿತ್ತಾಧಿಕ್ಯದಿಂದ ನಾಲಿಗೆಯ ರುಚಿ ಕೆಡುವ ಒಂದು ಬಗೆಯ ರೋಗ : ಜಿಹ್ವಾಲಸವೆಂದು, ಅಧಿಜಿಹ್ವೆ ಎಂದು, ಉಪಜಿಹ್ವೆ ಎಂದು, ವಾತಜಿಹ್ವೆ, ಪಿತ್ತಜಿಹ್ವೆ, ಶ್ಲೇಷ್ಮಜಿಹ್ವೆ ಎಂದು ಆಱು ತೆಱ (ಕೃದ್ವಶಾ. II. ೦೦೬) ; ಪಿತ್ತಜಿಹ್ವೆ ಎಂಬುದು ಹಳದಿವರ್ಣವಾಗಿ ಬೆಂದ ಹಾಗೆ ಇಹುದು (ಕೃದ್ವಶಾ. II. ೦೦೬). [ಸಂ. ಪಿತ್ತಜಿಹ್ವಾ]

**ಪಿತ್ತಜ್ಜ** (ನಾ). (ಕರಾ). ತಂದೆಯ ಅಜ್ಜ ; ಮುತ್ತಜ್ಜ : ಹೆಗಡೆಯ ಪಿತ್ತಜ್ಜನ ಜನ್ಮಸ್ಥಳ ಗುಲ್ವಾಡಿ (ರಾಜಕಂ. ೦೬೯). 'ಪಿಜ್ಜ' ಪರಾ.

[<ಪಿತ+ಅಜ್ಜ[1]]

**ಪಿತ್ತಜ್ವರ** (ನಾ). ಪಿತ್ತದಿಂದ ಉಂಟಾಗುವ ಜ್ವರ: ಸಿರಿಕಂಡಂ ದೊಡ್ಡಿಪತ್ರೆ . . . ಕೊತ್ತುಂಬರಿ ಈ ಔಷಧಂಗಳಂ ಸಮಭಾಗಿಯಾಗೆ ಕೊಂಡು ಅಷ್ಟಾವಶೇಷ ಕಷಾಯಮಂ ಮಾಡಿ ಕುಡಿಯೆ ಪಿತ್ತಜ್ವರಂ ಕಿಡುವುದು (ಲೋಕೋಪ. ೯-೦೬ ಟೀಕೆ); ಪಿತ್ತಜ್ವರಂಬಡೆದವರ್ಗೆ ಪಾಲೋಗರದ ತುತ್ತು ಕಹಿಯಾದಂತೆ (ಸಮ್ಯ್ಕ. ೯-೩೬) ; ವಾತಜ್ವರ, ಪಿತ್ತಜ್ವರ, ಶ್ಲೇಷ್ಮಜ್ವರ . . . ಆಗಂತುಕಜ್ವರವೆಂದು ಎಂಟು ಪ್ರಕಾರವಾಗಿರುವುದು (ಸಕವ್ಯ. ೬೨). [ಸಂ.]

**ಪಿತ್ತದೋಷ** (ನಾ). (ವಾತ, ಪಿತ್ತ, ಶ್ಲೇಷ್ಮಗಳೆಂಬ) ತ್ರಿದೋಷಗಳಲ್ಲಿ ಒಂದು: ಪಿತ್ತದೋಷಂ ಗೋಮೂತ್ರವರ್ಣವಾಗಿರುವುದು (ಸಕವ್ಯ. ೦೫೨). [ಸಂ.]

**ಪಿತ್ತನಾಡಿ** (ನಾ). ಶರೀರದ ನಾಡಿಗಳಲ್ಲಿ ಒಂದು : ಪಿತ್ತಾಧಿಕವಾದ ಕಾಲದಲ್ಲಿ ಮಧ್ಯನಾಡಿಯೂ ಪಿತ್ತನಾಡಿಯೂ ಪ್ರಬಲವಾಗಿ ನಡೆವುದು (ಸಕವ್ಯ. ೦೦) ; ಮಧ್ಯಾಹ್ನದಲ್ಲಿ ಪಿತ್ತನಾಡಿ ಅಧಿಕವಾಗಿ ಆಡುವುದು (ಸಕವ. ೦೬). [ಸಂ.]

**ಪಿತ್ತಪಾಪಟ** 'ಪಿತ್ತಪಾಪಡಾ' ನೋ.

**ಪಿತ್ತಪಾಪಡಾ, ಪಿತ್ತಪಾಪಟ** (ನಾ). ಪಿತ್ತವನ್ನು ಶಮನ ಮಾಡುವ ಒಂದು ಬಗೆಯ ವನಸ್ಪತಿ,–ಮೂಲಿಕೆ : ಸೂರ್ತಿ ಚವಾಳಾಮಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು . . . ೧೨೬. ಪಾದೆಲೋಣ ; ೧೨೭. ಪಿತ್ತಪಾಪಡಾ (ಮುಂಬಾ. ೦೨೬). **ಪಿತ್ತಪಾಪಟ** : ಅಮೃತಬಳ್ಳಿ ಕಿರಾತಕಡ್ಡಿ, ಪಿತ್ತಪಾಪಟ, ನಾಗರಮೋಥ, ಶುಂಠಿ ಇವನ್ನು ಮುಕ್ಕಾಲು ತೊಲೆಯಂತೆ ಜಜ್ಜಿಹಾಕಿ . . . ಜೇನು ಕೂಡಿಸಿ ಮೂರುಸಲಕ್ಕೆ ಉಪ ಯೋಗಿಸುವುದು (ಮಚಿಪ. ೨೫).

[→ಹಿಂ. ಪಿತಪಾಪಡಾ ; ಮರಾ. ಪಿತ್ತಪಾಪಡಾ]

**ಪಿತ್ತಪ್ರಕೃತಿ** (ನಾ). ಹೆಚ್ಚು ಪಿತ್ತದಿಂದ ಕೂಡಿದ ದೇಹಸ್ಥಿತಿ: ೪ ಈ ಪ್ರಕೃತಿಯನ್ನು ಉಳ್ಳವರು—ಮುಂಗೋಪಿಗಳಾಗಿರುವುದು, ಹೆಚ್ಚು ಬುದ್ಧಿಯುಳ್ಳವರಾಗಿರುವುದು, ವೃದ್ಧಾಪ್ಯವಿಲ್ಲದೆಯೂ ಕೂದಲು ನರೆತವರಾಗಿರುವುದು ಮುಂತಾದ ಲಕ್ಷಣಗಳಿಂದ ಕೂಡಿರುತ್ತಾರೆ: ಬಿಸುಮೆಯ್ಯ . . . ಕೃಶ್ವದೆತಗೊಸೆತ ಪಲತೆಜಗಳನೆಗೆಸು ಪಿತ್ತಪ್ರಕೃತಿಯ ಪೆಣ್ಣು (ಶಬ. ೩-೩೦); ವಾತಪ್ರಕೃತಿ, ಪಿತ್ತಪ್ರಕೃತಿ, ಶ್ಲೇಷ್ಮಪ್ರಕೃತಿ, ಪಿತ್ತಪ್ರಕೃತಿ ಎಂದು ಪ್ರಕೃತಿಯು ನಾಲ್ಕುತೆರನಾಗಿರುವುದು . . . ಮುಂಗೋಪಿಯಾಗಿರುವುದು, ಬುದ್ಧಿಯುಳ್ಳನಾಗಿರುವುದು, ಸ್ವಪ್ನದಲ್ಲಿ ಕಿಚ್ಚು, ಕಿರಿ ಮೊದಲಾದ ಜ್ಯೋತಿಸ್ಸುಗಳ ಕಾಣುವುದು, ಈ ಲಕ್ಷಣವುಳ್ಳವನನ್ನು ಪಿತ್ತಪ್ರಕೃತಿಯುಳ್ಳವನೆಂದು ತಿಳಿವುದು (ಶಕಶ್ಯ. ೮೬): ಪೊವರೆ: ಪಿತ್ತಪ್ರಕೃತಿ, ಸಾಲದ್ವಕ್ಕೆ ಜೇಬಿನಲ್ಲಿ ಕಡಲೇಕಾಯಿ ತುಂಬಿ ಹಸಿದ ಹೊಟ್ಟೆಯಲ್ಲಿ ತಿನ್ನುವುದು (ಕಟ್ಕೊಂಡ. ೮೧). [ಸಂ.]

**ಪಿತ್ತಪ್ರಕೋಪ** (ನಾ). ಪಿತ್ತವು ಹೆಚ್ಚಾಗುವಿಕೆ,—ಉದ್ರೇಕಗೊಳ್ಳುವಿಕೆ; ಪಿತ್ತೋದ್ರೇಕ: ಉರಗಿಯ ಬಾಹ್ಯಾಕ್ಷಿಯ ಛನ್ನರುಹದ ಕೊಳುಗುಳಿಕೆಯ ಬಡೆದೊಳೊಂದನೆ ಸಕ್ಕರೆವೆಸು ಕುಡಿಯೆ ಕರಗುಬ್ಬರಿಸಿದ ಪಿತ್ತಪ್ರಕೋಪ ವಿರದುಪಶಮಿಸುಗು (ಲೋಕೋಪ ೬-೯); ಕಾರ, ಹುಳಿ . . . ವಿಷವನ್ನು ಭೋಜನ ಮಾಡತಕ್ಕವುಗಳಿಂದಲೂ ಶರತ್ಕಾಲದಿಂದಲೂ ಪಿತ್ತಪ್ರಕೋಪವಾಗುವುದು (ಶಕಶ್ಯ. ೫೨); ಬೇಗೆ ಎದ್ದ ಬಳಿಕ ಅನ್ನಾಶಯವು ತೆರವಾಗಿರುತ್ತದೆ. ಆಗ ಹಗುರಾದ ಆಹಾರವನ್ನು ಸ್ವಲ್ಪ ತಕ್ಕೊಂಡರೆ ಪಿತ್ತಪ್ರಕೋಪವಾಗುವುದಿಲ್ಲ (ಶಿಸು.ಬಿ. ೩-೦೮೪). [ಸಂ.]

**ಪಿತ್ತರಸ** (ನಾ). ಜೀರ್ಣರಸಗಳಲ್ಲಿ ಒಂದು; ಪಿತ್ತಜನಕಾಂಗವು ಉತ್ಪತ್ತಿ ಮಾಡುವ ಒಂದು ಜೀರ್ಣರಸ: ಪಿತ್ತರಸವೆನ್ನಂ ತಳ್ವೋರೆ ಪಚ್ಚನಾಗಿ ರಸವೇಷ್ಟಿತ ಸೂಕ್ಷ್ಮಸೂತ್ರದೆಳವಳ್ಳಿಯೆ ವಿಭ್ರಾಜಿಕು- (ಶಬ. ೩-೯೬): ಕಿಬ್ಬೊಟ್ಟೆಯಲ್ಲಿ ಆಹಾರದೊಡನೆ ಪಿತ್ತರಸ, ಮೇದೋಜೀರಕಗಳು ಸೇರಿ ಹುಟ್ಟಿನ ಯಾವತ್ತು ಪದಾರ್ಥಗಳು, ಶರೀರದ ಸ್ವೀಕಾರಕ್ಕೆ ಬೇಕಾದ ರೀತಿಯಲ್ಲಿ ರೂಪಗೊಳ್ಳುವುವು (ಸಾಕೃ. ೧. ೫೩೦): ಆಹಾರ ಜೀರ್ಣಕ್ಕಾಗಿ ಯಕೃತ್ತು ಸ್ರವಿಸುವ ಕಹಿಯಾದ ಹಳದಿಯ ಹಸಿರು ರಸ: ಪಿತ್ತರಸ (Bile. ...). [ಸಂ.]

**ಪಿತ್ತರೋಗ** (ನಾ). ಪಿತ್ತದಿಂದ ಉಂಟಾಗುವ ಕಾಯಿಲೆ: ಕಾರ್ಪಾಸಚೂರ್ಣ — ಹತ್ತಿಬೀಜದ ಚೂರ್ಣ ಗ ೪ ತೂ . . . ಸಕ್ಕರೆ ಗ ೧ ತೂ. ಇವನ್ನು ಒಟ್ಟು ಚೂರ್ಣ ಮಾಡಿ ಸೇವಿಸಲು ಪಿತ್ತರೋಗಗಳು ನಾಶವಾಗುವುವು (ಶಕಶ್ಯ. ೫೭. ೪೨೭). [ಸಂ.]

**ಪಿತ್ತರೋಗಿ** (ನಾ). ಪಿತ್ತೋದ್ರೇಕದಿಂದ ಉಂಟಾಗುವ ರೋಗಕ್ಕೆ ಒಳಗಾದವನು; ಪಿತ್ತರೋಗದಿಂದ ನರಳುವವನು: ಪಿತ್ತರೋಗಿ, ಜ್ವರರೋಗಿ, ಹಸಿವಿನವನು, ದಾಹರೋಗಿ . . . ಮೇಹರೋಗಿ ಇವೇ ಮೊದಲಾದ ರೋಗವುಳ್ಳವರು ವರ್ಜನಕ್ಕೆ ಅಯೋಗ್ಯರು (ಶಕಶ್ಯ. ೫೦). [ಸಂ. ಪಿತ್ತರೋಗಿನ್]

**ಪಿತ್ತಲ್** 'ಪಿಂತಿಲ್' ನೋ.

**ಪಿತ್ತಲ** (ಗು). ೧. ಪಿತ್ತಕ್ಕೆ ಸಂಬಂಧಿಸಿದ. (ನಾ). ೨. ತಾಮ್ರ ಮತ್ತು ಸತುವು ಸೇರಿ ಆಗುವ ಒಂದು ಬಗೆಯ ಹಳದಿಯ ಬಣ್ಣದಿಂದ ಕೂಡಿದ ಮಿಶ್ರಲೋಹ: ಪಿತ್ತಳೆ. ೩. ಹಳದಿಯಿಂದ ಕೂಡಿದ ಒಂದು ಮಿಶ್ರವರ್ಣ: ಸುವೇಶಲಮಾಂತೆಯಿಂ ನೊಗನಸನಾರಿತಿ ಪಿತ್ತಲಂ ಸಲೆ ಮುಸ್ಸಿಯಿ ಪೃಥುಕಾ ಮಯುಜನಗಿಮಾಸನಾನ್ವಿತಮಾದ ಲಕ್ಷಣಮಾಂ ನಸಾಂ . . . ಗೂಢ ಗುದಲ್ಲಿವ ಪಿತ್ತಲಂ ಶಿಕಪಾಕ್ಷಿಪಂ (ಶಾಕಶ್ಯ. ೩-೦೬೬). ೪. (ಅಲಂ) ಠಕ್ಕಿನ ನಡತೆ; ವಂಚನೆ: 'ಪಿತ್ತಲಾಟ' ಪರಾ. [ಸಂ.]

**ಪಿತ್ತಲಾಟ, ಪಿತಲಾಟ** (ನಾ). (ಅಲಂ) ಠಕ್ಕು; ಮೋಸ; ವಂಚನೆ: ಇದೆಲ್ಲಾ ಆ ಸರದ ಹೋಟಲ್ ಶಾನಭೋಗರವರ ಪಿತ್ತಲಾಟದಿಂದ ನಡೆದಿದೆ ಎಂದು ವಿಶೇಷವಾಗಿ ಮನಸ್ಸಿಗೆ ಕಟ್ಟಿತು (ಮುಸ್ತಗ. ೬೩). **ಪಿತಲಾಟ**: ಕಟಬೇಟೆಗೆ ಅವನ ಪಿತಲಾಟ ಹೆಚ್ಚಾಗುತ್ತಿದೆ (ಛಚ).
[ಪಿತ್ತಲ+ಆಟ. / ತಮಿ. ಪಿತ್ತಲಾಟ್ಟಂ, ಪಿತ್ತಲಾಟಕನ್; ಮಲ. ಪಿತ್ತಲಾಟ್ಟಂ; ತೆಲು. ಪಿತಲಾಟ, ಪಿತಲಾಟಕ]

**ಪಿತ್ತವಿಕಾರ** (ನಾ). ಪಿತ್ತವು ಹೆಚ್ಚಾಗಿ ಉಂಟಾಗುವ ತಲೆ ತಿರುಗುವಿಕೆ ಮೊದಲಾದುವು: ದ್ರಾಕ್ಷಿಹಣ್ಣು, ಇಪ್ಪೆಹೂವು . . . ಪ್ರತಿದಿನ ಉದಯ ಕಾಲದಲ್ಲಿ ಕಿಟ್ಟ ಸಹ ನಾಲ್ಕು ವರಹ ತೂಕದ ಸೇವಿಸಲು ಪಿತ್ತಗುಲ್ಮ ಹರ. ಸಲ ಪಿತ್ತವಿಕಾರಂಗಳು ಕೆಡುವುವು (ಕೃಶ್ಯಕಾ. ೧. ೩೦೩); ಒಂದಿಷ್ಟು ಹೆಚ್ಚಿಗೆ ಸುಣ್ಣವನ್ನು ಗುಡಾಕಿಗೆ ಸವರಿ ಬಾಯಿಗೆ ಹಾಕಿಕೊಂಡ. ಗುಡಾಕಿನ ಜೋರಿಗೆ ತಲೆ ತಿರುಗತೊಡಗಿತು. ಪಿತ್ತವಿಕಾರದಿಂದ ಹೆಗಡೆ ಕಂಗಾಲಾದ (ರೇಜತಂ. ೦೬೬). [ಸಂ.]

**ಪಿತ್ತವೇರಿಸು** (ಕ್ರಿ). ಪಿತ್ತವೇರುವಂತೆ ಮಾಡು; ಪಿತ್ತವನ್ನು ಕೆರಳಿಸು: ಶಿವಪೂಗ್ನದಲ್ಲಿ ಪಿತ್ತವೇರಿಸುವ ತುಂಗಾಪಾನವನ್ನು ನಿತ್ಯವೂ ಮಾಡಿ (ರಂಗಳ. ೦). [ಪಿತ್ತ+ಏರಿಸು (<ಏಱಿಸು)]

**ಪಿತ್ತವೇಱು** (ಕ್ರಿ). ಪಿತ್ತವು ಹೆಚ್ಚಾಗು; ಹುಚ್ಚು ಹಿಡಿ: ಸತ್ತ ಬಳಿಕಾ ಜೀವವೆತ್ತ ಹೋಹುದನರಿದು ಅತ್ತ ಪರಲೋಕವೆಂಬವರ ತಲೆಯಲ್ಲಿ ಪಿತ್ತವೇಱಿಹುದು (ಶರಣ್ಯ. ೬೫೨). [ಪಿತ್ತ+ಏಱು (<ಏಱ್)]

**ಪಿತ್ತಶಮನ** (ನಾ). ಪಿತ್ತವಿಕಾರವು ನಾಶವಾಗುವಿಕೆ,—ಇಲ್ಲವಾಗುವಿಕೆ: ಕಹಿ ಸಿಹಿ ತೊಗರು . . . ಪರಿಮಳಪುಷ್ಪ ನೂತ್ನಾಲಂಕಾರ ಮುಂತಾದವುಗಳೆಲ್ಲವೂ ಪಿತ್ತಶಮನವುಳ್ಳಗಳು (ಶಕಶ್ಯ. ೨೦). [ಸಂ.]

**ಪಿತ್ತಸನ್ನಿ** (ನಾ). ಪಿತ್ತದಿಂದ ಉಂಟಾಗುವ ಸನ್ನಿ,—ಬುದ್ಧಿಭ್ರಮಣೆ: ಅಂತರ್ದಾಹವೂ, ಭ್ರಮೆಯು . . . ಇವು ಮುಂತಾದ ಚಿಹ್ನೆಗಳೊಡನೆ ಕೂಡಿಕೊಂಡಿರುವುದೆ ಪಿತ್ತಸನ್ನಿಯ ಲಕ್ಷಣವೆಂದರಿವುದು (ಶಕಶ್ಯ. ೦೬೪) [ಪಿತ್ತ+ಸನ್ನಿ೩]

**ಪಿತ್ತಹರ** (ನಾ). ಪಿತ್ತವನ್ನು ನಾಶಪಡಿಸುವಂತಹುದು; ಪಿತ್ತಶಮನವನ್ನು ಮಾಡುವ ವಸ್ತು: ಪೀತಾಸ್ವದ ಗುಣ—ಮನಸ್ಸಿಗೆ ಸಂತೋಷಕರವಾಗಿಯೂ ಪಿತ್ತಹರವಾಗಿಯೂ . . . ಇರುವುದು (ಶಕಶ್ಯ. ೫೪); ಪಿತ್ತಹರ, ಪಿತ್ತನಾಶಕ (Antibilous. ೩೦೪೩). [ಸಂ.]

**ಪಿತ್ತಳೆ, ಪಿತ್ತಾಳೆ, ಹಿತ್ತಳೆ, ಹಿತ್ತಾಳೆ** (ನಾ). ಎರಡು ಭಾಗ ತಾಮ್ರ ಮತ್ತು ಒಂದು ಭಾಗ ಸತುವು ಸೇರಿ ಆಗುವ, ಒಂದು ಬಗೆಯ ಹಳದಿಬಣ್ಣದಿಂದ ಕೂಡಿದ ಮಿಶ್ರಲೋಹ; ಪಿತ್ತಲ: ಎಂತುಂ ನೇರಾಣೆಯ ಪೊನ್ನಂತಿರೆ ಲೇಸೆನಿಪುದೆಂತು ಪರಿಕಿಪೊಡವೊನಿಪ್ಪಂತದು ಧರ್ಮಂ ಪಿತ್ತಳೆಯಂತೆಸೆವುದು ಧರ್ಮವಾಗಿ ಸುಲಿಜಾವುದೇ (ಶಕಚ. ೦೫-೨೦); ಪಿತ್ತಳೆ ಪೊನ್ನಂತಾಗಿಯುಂ ಪೊನ್ನಲ್ಲನಂತೆ (ಧರ್ಮಾಮೃ. ೦೦-೦೬೬); ತನ್ನ ತವರುಮನೆಯವಿತ್ತ ಪಿತ್ತಳೆ ಪೊನ್ನೆಂದು ಬಗೆದು ಪೂಜಿಸುವ ಕನ್ನೆಯರೊಳು ಕಡುಗೂರ್ಮೆಯನೊಡರಿಸಿ ಪೊನ್ನುರನ್ನದೊಳು ಪೂಜಿವುದು (ಹಂಪ. ೩ ೨೨). **ಪಿತ್ತಾಳೆ**: 'ಹೋಲಿತ್ತಾಳೆ' ಪರಾ. **ಹಿತ್ತಳೆ**: "ಅರಕುಟಿ, ರೀತಿ—ಈ ೨ ಹಿ[ತ್ತಾ]ಳೆ"(ಶಕಾ. ೨೬-೦೬); ಹಿತ್ತಳೆಗೆ ಬೆಳ್ಳಿಯುಕ್ತವುಮುಕ್ತಮಾಡದಜೇಂ ಸುವರ್ಣವೆಂಬವೂರ್ (ಶಶ. ೦೫-೦೬). **ಹಿತ್ತಾಳೆ**: "ಹಿತ್ತಾಳೆಯೊಳು . . . ವಿಮಾನದೊಳು ಪುಷ್ಪಕವೆನ್ನು" (ಸುಗಠ. ೦೫೩-೬೬); ಉತ್ತಮಸುವರ್ಣವದು ಹಿತ್ತಾಳೆಯೆಹಗಹುದು ಹಿತ್ತಾಳೆಯೆನಿಸಿ ಕನಕವೆ ತಾನದೆಹಗಹುದು (ಆಕ್ಸಾಡೋ. ೪೪-೦೦); ಹಿತ್ತಾಳೆಯಬುರಿಗೆನಿ ತಾಗಿಯೊಗೆದರಾವುದೆನುದೊಳಧಿದ್ದು ಳಳ್ಳುದದು ದೈವವಲ್ಲ (ಬೀಕ್ತ. ೪-೩-೪೦); ಐದನೆ ಕೋಟೆ ಹಿತ್ತಾಳೆಯುದರಲ್ಲಿ ಮೋದದಿ

ಶರದನು ನೆಲಸಿ (ಶಾಗಂಕ. ೬-೨೩) ; ಎರಡನೆಯದರಲ್ಲಿ . . . ಪಿತ್ತಾಳೆ ವಸಾತ್ರ ಮಿಶ್ರಲೋಹವಾದ್ದರಿಂದ ಆ ವರ್ಗಕ್ಕೆ ಅದು ಸೇರುವಂತಿಲ್ಲ (ಶಿಲ್ಪಶ. ೩೩೬).

**ಪಿತ್ತಾಳೆಕಿವಿಯವನು**(ಆಲಂ) = ಚಾಡಿಮಾತುಗಳನ್ನು ಕೇಳುವವನು: ಪಿತ್ತಾಳೆಕಿವಿಯವನೆಂಬ ನಾಮಾಂಕಿತವೂ . . . ಹೆಡ್ಡನಿಗೆ ಸುಜ್ವರು ಕೊಟ್ಟ ಹೆಸರು (ಗೋಡಹುತ್ರ. ೩೩). **ಪಿತ್ತಾಳೆಯ ಕಿವಿ**=(ಆಲಂ) ಚಾಡಿಯ ಮಾತುಗಳಿಗೆ ಬಗ್ಗುವ ಕಿವಿ: ಚಾಡಿಯ ಮಾತನ್ನು ಕೇಳುವ ಸ್ವಭಾವ: ನನ್ನದು ಪೂರಾ "ಪಿತ್ತಾಳೆಯ ಕಿವಿ"ಯಾಯಿತು (ಕೆಕೊಅಕ. ೬೩). [<ಸಂ. ಪಿತ್ತಲ]

**ಪಿತ್ತಾತಿಸಾರ** (ನಾ). ಪಿತ್ತದಿಂದ ಉಂಟಾಗುವ ಅತಿಸಾರ; ಪಿತ್ತಗ್ರಹಣಿ: ಮತ್ತಂ ರಕ್ತ ಕೂಡಿಕೊಂಡು ಕಪ್ಪುವರ್ಣ ಹಳದಿವರ್ಣವಾಗಿಯೂ . . . ಬೆವರು ಬಾಯಾರಿಕೆಯೂ ಉಂಟಾಗಿ ತೋರ್ಪುದೆ ಪಿತ್ತಾತಿಸಾರವೆನಿಸಿಕೊಳ್ಳುವುದು (ಸಕಲ್ಯ. ೩೦೬). [ಸಂ.]

**ಪಿತ್ತಾಧಿಕ** (ನಾ). ೧. ಪಿತ್ತಾಧಿಕ್ಯದಿಂದ ಕೂಡಿದುದು; ಪಿತ್ತವಿಕಾರವುಳ್ಳದು: ಪಿತ್ತಾಧಿಕವಾದ ನಾಡಿಯು ಕಪ್ಪೆಯು ಹಾರ್ಯಾದೆಯಲ್ಲೂ ನವಿಲಂತೆಯೂ ತೀವ್ರವಾಗಿ ಉಷ್ಣವಾಗಿ ನಡೆವುದು (ಸಕಲ್ಯ. ೦೬). ೨. ಪಿತ್ತವು ತಲೆಗೇರಿದವನು; ಹುಚ್ಚು ಹಿಡಿದವನು; ಹುಚ್ಚ: ಪಿತ್ತಾಧಿಕನು ತಿರುಗುತ ಲೋಕ ತಿರುಗುವುದೆಂಬ ತೆಱನಂತೆ (ಶುಚಾ೧೦. ೬ ೩೩). [ಸಂ.]

**ಪಿತ್ತಾಧಿಕ್ಯ** (ನಾ). ಪಿತ್ತವು ಹೆಚ್ಚಾಗಿ ಇರುವಿಕೆ; ಪಿತ್ತದ ಹೆಚ್ಚಳ: ಬಲದ ಕೈಯ ಹೆಬ್ಬೆರಳಿನ ಮೂಲದಲ್ಲಿರ್ವ ನಾಡಿಯನ್ನು ಪರೀಕ್ಷಿಸಲಾಗಿ (ಆ ನಾಡಿಯು) . . . ಪಿತ್ತಾಧಿಕ್ಯವಾದೊಡೆ ಅತಿವೇಗದಿಂ ಚಂಚಲವಾಗಿ ನಡೆವುದು (ಸಕಲ್ಯ. ೦೦); ಪಿತ್ತಾಧಿಕ್ಯದಿಂದ ದೇಹ ಮಧ್ಯಮ. ಶ್ಲೇಷ್ಮಾಧಿಕ್ಯದಿಂದ ದೇಹವು ಸ್ಥೂಲವಾಗಿರುವುದು (ಸಕಲ್ಯ. ೦೯). [ಸಂ.]

**ಪಿತ್ತಾವರಣ** (ನಾ). ಪಿತ್ತದಿಂದ ಉಂಟಾಗುವ ಒಂದು ಬಗೆಯ ರೋಗ: ದ್ರಾಕ್ಷಿ ಯಷ್ಟಿಮಧುಕ . . . ಸಮರಸವ ಮಾಡಿ. ಉದಯಕಾಲದಲ್ಲಿ ಆ ಲೇಹ್ಯವನ್ನು ಸೇವಿಸೆ ಪಿತ್ತಾವರಣ ಸಕಲವಾದಾವರಣರೋಗ ರಕ್ತಪಿತ್ತ ಸಹ ಗುಣಮಕ್ಕುಂ (ಸಕಲ್ಯ. ೦೯೬). [ಸಂ.]

**ಪಿತ್ತಾವಿಳ** (ನಾ). ಪಿತ್ತದಿಂದ ಕೂಡಿದವನು; ಪಿತ್ತರೋಗಿ: ತೊಳಗುವ ನಭದೊಳ್ ಪಿತ್ತಾವಿಳದೃಷ್ಟಿಗವಿಸ್ಮಯಾಸವೇಚೇರದಚಿಯೊಂದೆಳಸಿ ಪಿಂಗೆ ತೋರ್ಪ ತೆಱದಿಂ ಖಳಂಗೆ ಪೊಲಸಿರ್ಪ ಕೃತಿಯೊಳಿಲ್ಲದ ದೋಷಂ (ಧಕೃಶಿ. ೦-೯೬). [ಸಂ. ಪಿತಾವಿಲ]

**ಪಿತ್ತಾಶಯ** (ನಾ). ಪಿತ್ತಜನಕಾಂಗ; ಪಿತ್ತಕೋಶ: ಜ್ವ ಜೀವಸತ್ವ . . . ಇದು ಹಾಲು, ಹಣ್ಣು, ಪಿತ್ತಾಶಯ (Liver), ಮೊಟ್ಟೆಗಳು, ಪಾಲಿಶ್ ಮಾಡದ ಇದ್ದ ಅಕ್ಕಿ ಮತ್ತು ಇತರ ಧಾನ್ಯಗಳಲ್ಲಿ ಸಿಕ್ಕುತ್ತದೆ (ಆಹಾರ. ೨೬). [ಸಂ.]

**ಪಿತ್ತಾಳೆ** 'ಪಿತ್ತಳೆ' ನೋ.

**ಪಿತ್ತಿಲ್** 'ಪಿಂತಿಲ್' ನೋ.

**ಪಿತ್ತಿಲ್ತೋಂಟ** (ನಾ). ಪಿತ್ತಲಿನ ತೋಟ,-ಉದ್ಯಾನ: ಬಸದಿಯ ಪೂಜೆಗಾ ಪಿತ್ತಿಲ್ತೋಂಟವುಂ ತೆವ್ವಾಱದೊಳು . . . ಕೊಟ್ಟ ಮಣ್ಣು (ಎಕ. X. ಕೋಲಾರ. ೯೦-೯೦: ೮೦೨). [ಪಿತ್ತಿಲ್ (<ಪಿಂತಿಲ್) + ತೋಂಟ]

**ಪಿತ್ತು**. ಪಿತ್ಥ (ನಾ). ೧. = ಪಿತ್ತ ೧. ೨. = ಪಿತ್ತ ೩: ಪಿತ್ತು ನೆತ್ತಿಗೇನಾದರೂ ಹತ್ತಿದೆಯೋ (ಮುಂಜಾನೆ. ೨): ಒಂದುಗನೆ ಕೂಡಿ ಒಂಬತ್ತರವರೆಗೆ ಏರಿದುವು; ಪಿತ್ತಿನಂತೆ. ಅವಕ್ಕೊಂದು ಸೊಕ್ಕೆ ಬಂದು ಸೇರಿ ಹತ್ತಾಯಿತು. ಒಳದ ಕೆಮ್ಮಿನಂತೆ (ಶರಶಾ. I. ೪೩೬). ಪಿತ್ಥ: ೧. ಪಿತ್ತ ಹೆಚ್ಚಾದಾಗ ಹೊಟ್ಟೆ ತೊಳಸುತ್ತದೆ (ರು:೬). ೨. ಸುಳ್ಳೇ ನನ್ನ ಪಿತ್ಥ ಕೆಣಕಬೇಡಾ . . . ಎಂದಾರೇ ಟೀತಲ್ಲಿಂದ ಎದ್ದು ಹೊರಗೆ ಹೋಗುವ ಉಡುಪನ್ನು ಧರಿಸ ಹತ್ತಿದರು (ಮೂಉಟಾ. ೯೦). ೩. = ಪಿತ್ತ ೫: ಕುಲಕೋಟಿಯೊಂಬಲ ತಿಂಬವ ಪಿತ್ಥನೊ (ದಾಸ.ಸಾ. ೬-೨೦೪). ೪. ಕೊಬ್ಬು; ಸೊಕ್ಕು; ಗರ್ವ: ಅಯುತ್ತ. ಬರುಪ್ಪನಾದರೆ ಬಾ. ನಿನ್ನ ಪಿತ್ಥ ಇಳಿಸದೆ ಬಿಡಲಾರೆ (ರಕ್ತರ.ಚ. ೬೪); ಈವತ್ತು ಇವರು ಸರಿಯಾಗಿ ಪಿತ್ಥ ಇಳಿಸಿದ್ದಾರೆ (ಮೂಉಟಾ. ೬೪). [<ಸಂ. ಪಿತ್ತ]

**ಪಿತ್ತೋದರ** (ನಾ). ಪಿತ್ತದಿಂದ ಉಂಟಾಗುವ ಒಂದು ಬಗೆಯ ಹೊಟ್ಟೆಯ ರೋಗ, - ಉದರಬೇನೆ: ತಾರೇಕಾಯಿ, ಹುಣಿಸೇಬೀಜದ ಸಿಪ್ಪೆ, ಇವುಗಳ ಸಮಭಾಗ ಚೂರ್ಣ ಮಾಡಿ ಸೇವಿಸಲು ಸರ್ವಾಂಗದಾಹ, ಕೈಕಾಲು ಮತ್ತು ಕಣ್ಣುಗಳ ಉರಿ, ಪಿತ್ತೋದರ . . . ಮೊದಲಾದ ರೋಗಗಳು ಗುಣವಾಗಿ ಶುಕ್ಲವೃದ್ಧಿಯುಂಟಾಗುವುದು (ಸಕಲ್ಯ. ಕಾ. ೪೦೬). [ಸಂ.]

**ಪಿತ್ತೋದ್ರೇಕ** (ನಾ). ೧. ಪಿತ್ತವು ಹೆಚ್ಚಾಗುವಿಕೆ; ಪಿತ್ತಪ್ರಕೋಪ: ಪಿತ್ತೋದ್ರೇಕವುಳ್ಳವನಾಗಿ ತೀವ್ರವಾದ ತೃಷ್ಣೆಯೂ ಹಸಿವೂ ಉಂಟಾದವನಾಗಿ . . . ಕೆಂಪಾಗುವ ಕಣ್ಣುಗಳುಳ್ಳವನಾಗಿ ಇರುವವನೇ ಪಿತ್ತಪ್ರಕೃತಿಯುಳ್ಳವನೆಂದರಿವುದು (ಸಕಲ್ಯ. ೦೬). ೨. ಪಿತ್ತವು ತಲೆಗೇರುವಿಕೆ; ಮತಿವಿಕಾರ; ಬುದ್ಧಿಭ್ರಮಣೆ: ಪಿತ್ತೋದ್ರೇಕಂ ಪುಗುಟುಂ ಚಿತ್ತಭ್ರಮೆಯೊಂಬಿವಕ್ಕುಂ (ಅಪಾರ. ೦೩-೩); ೧೮ ೧೮ ವೇಗಣೀಕೀರ್ತಿಯುಸೇವನಾ ತರುಣ ಬಂದೊದನೆ ಕೃಪುಗಿಯೆ ಹೊಂದಾಡಿ ಬಳಲಿದ ಮಗನೆ ಪಿತ್ತೋದ್ರೇಕ ತಿರುಗಿಸಿದುದೆ ನಿನ್ನನೆಂದ (ಕಕ. ೩೦-೦೦೦). [ಸಂ.]

**ಪಿತ್ಥ** 'ಪಿತ್ತು' ನೋ.

**ಪಿತ್ರಾರ್ಜಿತ** (ಗು). ೧. ತಂದೆಯು ಗಳಿಸಿದ, - ಸಂಪಾದಿಸಿದ. ೨. ವಂಶದ ಪೂರ್ವಿಕರು ಗಳಿಸಿದ: ಈ ದಿನ ನಾವು ನಮ್ಮ ಪಿತ್ರಾರ್ಜಿತ ಭೂಮಿಗಾಗಿಯೂ ನಮ್ಮ ನಮ್ಮ ಮಡದಿ ಮಕ್ಕಳ ಸಂರಕ್ಷಣಾರ್ಥವಾಗಿಯೂ ಪ್ರಾಣಗಳನ್ನು ಮುಡುಪಿಟ್ಟು ಯುದ್ಧಕ್ಕೆ ಹೋಗುತ್ತಿರುವೆವು (ಬಾಂಕರಾ. ೦೬೪); ಒಂದಿಷ್ಟು ಪಿತ್ರಾರ್ಜಿತ ಹೊಲಗದ್ದೆಗಳೂ ಬಂದಿದ್ದವು (ಕಂಕಾತು. ೨೩). (ನಾ). ೩. ತಂದೆಯು ಸಂಪಾದಿಸಿದುದು; ತಂದೆಯ ಆಸ್ತಿ. ೪. ವಂಶದ ಪೂರ್ವಿಕರು ಆರ್ಜಿಸಿದ ಸಂಪತ್ತು: ಪಿತ್ರಾರ್ಜಿತವನ್ನು ಅನುಭವಿಸುತ್ತಿರುವ ಅವನು ಆಸ್ತಿಸಂಪಾದನೆಗೆ ಬವಣೆಪಡಬೇಕಾದುದೇನೂ ಇಲ್ಲ (ಯಾಂ). [ಸಂ.]

**ಪಿತೃಧನ** (ನಾ). ಪಿತ್ರಾರ್ಜಿತವಾಗಿ ಬಂದ ಹಣ, - ಸ್ವತ್ತು: ಸೋವೇಶ್ವರಭಟ್ಟರು ತಮ್ಮ ಪಿತೃಧನಂ ಶುಕ್ಲದ್ರವ್ಯಮಪ್ಪ ದಶವಂಧದ ಸರ್ವಬಾಧಾಪರಿಹಾರಂ ಮಾನ್ಯದ ವಿಳಸ್ಥಳದ ಭೂಮಿಯುಂ . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಕತಿಆ. ೬೯-೧೦೮೮). [<ಸಂ. ಪಿತೃಧನ]

**ಪಿತೃ** (ಗು). ೧. ಪಿತೃಸಂಬಂಧವಾದ: ಪಿತ್ರಾರ್ಜಿತವಾಗಿ ಬಂದ. (ನಾ). ೨. ಪಿತೃಗಳಿಗೆ ಮಾಡಬೇಕಾದುದು; ಶ್ರಾದ್ಧ; ತಿಥಿ. [ಸಂ.]

**ಪಿದರ** (ನಾ). "ತೀರುಗಳನ್ನು ಬಿಗಿದು ಹಿಡಿಯುವ ಅಡ್ಡಮರ; ಬಿಗಿಮರ; ದೂಲ; ಅಡ್ಡಕೋಲು" (ಅಪಂಸಾ). [←ತುಳು. ಪಿಸ್ತರ, ಪಿದರ, ಪಿದಾರ]

**ಪಿದೆಗ** (ನಾ). ಒಂದು ಬಗೆಯ ಪಕ್ಷಿ: ಕುಳಿಗೆಯ್ವ ಕೊರರ್ವಕ್ಕಿ ಕಾವ ಪಿದೆಗು ಬಿಸಿಲ್ವಕ್ಕಿಯುಪ್ಪ ಮೊದಲಾಗಿ ಪಾವನಂ ವನದೊಳಗಂ ಪಾವನತ್ವವ ಸ್ವೈದ ಜೀವಿಪುವು ಭಯಾಂಗನುಳಿದು (ಕೃಕುಶಿ. ೬-೦೪). [?]

**ಪಿಧಾನ** (ನಾ). ೧. ಮುಚ್ಚುವಿಕೆ ; ಹೊದಿಸುವಿಕೆ. ೨. ಮುಚ್ಚುವಂತಹ ಸಾಧನ ; ಮುಚ್ಚಳ : "ಪಿಧಾನಂ, ಉದಂಚನಂ — ಈ ೨ ಎಸಮುಚ್ಚಳ" (ಕಠಾಷು. ೩೩-೦೬೦) ; ಈ ಭುಕ್ತ್ಯನ್ನಕ್ಕೆ ಅಪ್ಯತವು ಪಿಧಾನವಾಗಲಿ (ಶುಜಾಅ. ೩೦೩). [ಸಂ.]

**ಪಿನ್, ಪಿಂ, ಹಿಂ, ಹಿನ್** (ಗು). ೧. ಹಿಂಬದಿಯ ; ಹಿಂಭಾಗದ : 'ಪಿನ್ನಲೆ' ವರಾ. (ನಾ). ೨. ಹಿಂಬದಿ ; ಹಿಂಭಾಗ. ೩. ಮೊದಲು; ಮುಂಚೆ : ಪಿನ್ ಮಜುಮೋಗೀಶ್ವರನುಳ್ಳೆ ಕದಿ ತನೆದ ನಾಗನ್ನನ' (ಶಾಇ. IX-I. ೩೩೩-೯ ; ಕಕಮ ೩೪). ೪. ಮೊದಲಿನದು ; ಮುಂಚಿನದು ; ಹಿಂದಿನದು : 'ಪಿನ್ನೀಕ್ಷಿಸು', 'ಪಿನ್ನೋ' ವರಾ. ಪಿಂ : ೧. 'ಪಿಂಗಡೆ', 'ಪಿಂಗಾಲ್' ವರಾ. ೨. ನುಡಿಸಲ್ ಕೇಳೆ ಶುಕಾಳಿಯೊಳ್ ನುಡಿದ ಸೋಂಕಲ್ ಪಿಂಗೆ ಸಾರ್ದಿರ್ದ ಕೌಳುಡೆಯುಂ ಸೋಂಕುವ ... ಒವಳದೋದು ಭಾವರಸ ಗರ್ಭಶ್ರೀಡೆಯುಂ ವ್ರೀಡೆಯುಂ ಪಡೆವನ್ನಂ ಮುದದಿಂ ಮುಕುಂದನತಿರಾಗೋದ್ರೇಕಮಂ ತಾಳ್ದಿದಂ (ಜಗ. ೦೦-೦೩೬). ಹಿಂ : ೧. 'ಹಿಂಗಟ್ಟಿ', 'ಹಿಂಗಟ್ಟು' ವರಾ. ೩. ಹಿಂ ಭವನನೊಳಿಸಿದರ ಮಾಣಜಗದೊಳನಾದಭವನ ಕೃಪೆ ಪಡೆದವರ ಮುಂ ಭವನ ಮೆಚ್ಚಿ ಪದಪಾದಾಬ್ಜಕೆ ವಂದಿಪೆನಾನತಿಮುದದಿಂದೆ (ಶ್ರೀಕುತ. ೦-೦೩). ಹಿನ್ : ೧. 'ಹಿನ್ನಲೆ' ವರಾ.

**ಪಿನ್ನ** — ಮೊದಲಿನ ; ಮುಂಚಿನ ; ಹಿಂದಿನ : ನೀರಿಲ್ಲದ ಕಜೆಯ ನಡುವಂ ಕಂಡುದಜಿಂ ತೀರ್ಥಂಕರಚಕ್ರವರ್ತಿಗಳ ಪುಟ್ಟಿದ ಮಧ್ಯ ದೇಶದೊಳ್ ಪಿನ್ನ[ಪಾಠಾಂ. ಧರ್ಮದ]ನೆಗಟ್ಚಿಯಾಗದು (ಕಥಾ. ೬೬-೦೯).

[ದೇ. ॥ ತವಿ. ಮಲ. ಕೋತ. ತೊದ. ಪಿನ್]

**ಪಿನದ್ಧ** (ಗು). ೧. ಕಟ್ಟಿರುವ : ಬಂಧಿಸಿರುವ : ಪಿನದ್ಧ ವಿವಿಧ ವರ್ಣದಪರ್ಣಾಢ್ಯದಂಗಳುಂ . . . ಆವೋದಕಸುಮದಾಮನೀಮಕಮ ನೀಯಂಗಳುಮಪ್ಪ ತೋರಣಂಗಳನೆ ನುಗುಳುತ್ತುಂ (ಅಂಪು. ೯-೩೮ ವ) ; ಪರಿಚಿತಭೂತಿರೇಖಮುಖದರ್ಶಿತ ಸರ್ಪವಪುಂಜಮುಂಜನೋಪರಚಿತಖದ್ಧ ಪೇಟಕಸಮುದ್ಘಟವಿದ್ಧ ಪಿನದ್ಧಭಿತ್ತಿ . . . ಏಂ ಪಸಕ್ಕೊಲಪನಿತ್ತ್ರದೊ ದಾಗಲರಿಪ್ಪಸದ್ಮದಾ (ಕಂದ್ರಪ್ರ. ೩-೯೭). ೨. ಕೂಡಿದ : ಸೇರಿದ : ಆಗಳಾತನುಂ . . . ಅಶೋಕ ಪುನ್ನಾಗ ಪಕುಲ ಚಂಪಕ ಸಹಕಾರ ಲವಂಗ ಕ್ರಮುಕ ನಾ ರಿ ಕೇ ರ ನಾಗವಲ್ಲೀ ಪಿನದ್ಧದ್ರುಮ ಷಂಡ ಮಂಡಿತಮನಿಂದ್ರವನದೊ ಳಿ ರ್ದ ರಂ ತ ಪ್ಪು ದಂ ನೆ ೯ ದು ತು (ಕಥಾ. ೫೯-೨೫). ೩. ಹುದಿಸಿದ ; ಮೆಟ್ಟಿದ ; ತೆತ್ತಿಸಿದ : ಸುರತರುನಂದನಂಗಳೆರ ರತ್ನಪಿನದ್ಧವಿಪಣಿಕಟ್ಟಿಮಾಂತರಸುರಕಾಮುಮ ಗರ . . . ಕಡುಕೆಯ್ದು ಕೃತಾಂತನಿತು ನಿರ್ನೆರವೆಂಟಿದುಯ್ಯ ಬಾರಿಸದೆ ಕಿಮ್ಮನುವೇಕ್ಷಿಸಿ ನೋಡುತಿರ್ಪರೇ (ಅಂಪು. ೩-೯); ಸುರುಚಿರಚಂದ್ರಕಾಂತದ ಪಿನದ್ಧತಳಂ ವಿಕಸದ್ವಿನೀಳನೀರರುಹದಳಾವಭಾಸಿ ತಟರತ್ನ ಪಾಳಿಕಾ ಮನೋಹರಂ (ಹರಿಚ. ೨-೦೫). ೪. ಆವರಣವನ್ನು ಹೊಂದಿದ; ಮುಚ್ಚಿದ. ೫. ಚುಚ್ಚಿದ; ನಾಟಿದ. ೬. ಅಡಗಿದ; ಗುಪ್ತವಾದ. ೭. ಬಟ್ಟೆ, ಕವಚ ಮುಂತಾದುವನ್ನು ಧರಿಸಿದ. (ನಾ). ೮. ಕಟ್ಟುವಿಕೆಗೆ ಒಳಗಾದುದು : "ಬದ್ಧಂ, ಪಿನದ್ಧಂ, ಆಮುಕ್ತಂ, ಅಪಿನದ್ಧಂ — ಈ ೪ ಕಟ್ಟಲ್ಪಟ್ಟುದು" (ಕಠಾಷು. ೦೨೩-೬೨). ೯. ಕಟ್ಟು; ಬಂಧನ : "ಅಪಿನದ್ಧಮನೆ ಪಿನದ್ಧಂ ಬದ್ಧಮನೆ ಕಟ್ಟು" (ಶಬ್ದಣಾ. ೦೩೯-೩೫). ೧೦. ಬಟ್ಟೆ, ಕವಚ ಮುಂತಾದುವನ್ನು ಧರಿಸಿದವನು : "ಆಮುಕ್ತಃ, ಪತಿಮುಕ್ತಃ ಪಿನದ್ಧಃ, ಅಪಿನದ್ಧಃ — ೪ ಬಟ್ಟೆಗಳನ್ನು ತೊಟ್ಟುಟ್ಟು ಕಟ್ಟಿಕೊಂಡವನ ಹೆಸರುಗಳು" (ಶಿಥ್ಯಂ. ೨೩೦). 'ಅಪಿನದ್ಧ' ವರಾ. [ಸಂ.]

**ಪಿನಪಾಲ** 'ಪಿನಿವಾಲ' ನೋ.

**ಪಿನಾಕ** (ನಾ). ೧. ಶಿವನ ಒಂದು ಆಯುಧ ; ತ್ರಿಶೂಲ. ೨. ಶಿವನ ಧನುಸ್ಸು, – ಬಿಲ್ಲು : "ಪಿನಾಕಂ, ಅಜಗವಂ (ಸ್ತ್ರೀ) — ಈ ೨ ಮಹಾದೇವರ ಬಿಲ್(ಲ್ಲು)" (ಕಠಾಷು. ೯-೦೯) ; ವರತು ತ್ರಿಶೂಲ ಡಮರುಗ ತರವಾರಿ ಪಿನಾಕಬಾಣ ಖಟ್ವಾಂಗ ಕಪಾಲ ರಥಾಂಗ ವಜ್ರ ಧರನಪ್ಪರುತರ ದಶಬಾಹು ಲಸಿತ ಜಯ ಶಿವಲಿಂಗಾ (ಶ್ರೀಕುತ. ೩೩-೦೬) ; ಅಭವಂ ಪಿನಾಕಮಂ ನೆನೆಪಿ ಪೇಳ್ವೊಡೆದೊಂದು ಬಾಣಮಂ ಪೂಡಿ ತೆಗೆದಸಲ್ (ಕಂತ. ೩೦-೯೦). [ಸಂ.]

**ಪಿನಾಕಧರ** (ನಾ). ಪಿನಾಕವನ್ನು ಧರಿಸಿರುವವನು : ಶಿವ : ತಾನುದ್ರೇಕಿಸಿಯ ಸಮರದಲಿ ಸಿಲುಬು ಪಿನಾಕಧರನಿಗೆ ನೂಕದೆಂದನು ಸತಿಯರಿದಿರಿನಲಿ (ಕುಶ್ಯಾಅ. ೩-೦೩); ದರ್ವೀಕರೇಶೋರುಹಾರ್ವೀಪಿನಾಕಧರ . . . ಸುಸರ್ವ ಜಯಸಿದ್ಧನಂಜ (ಗುಣುಜಾ. ೦೯-೦). [ಸಂ.]

**ಪಿನಾಕಪಾಣಿ** (ನಾ). = ಪಿನಾಕಧರ : ಅಜೆಯುಮ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ಪ ಪಿನಾಕಪಾಣಿಯುಂ ನೆಜೆಯನಿದಿರ್ಚಿ ನಿಜ್ಜೊಡನೆ ಕಾದಿ ಗೆಲಲ್ಕೆ (ಗದಾಯು. ೯-೯೯). [ಸಂ.]

**ಪಿನಾಕಾಯುಧ** (ನಾ). ಪಿನಾಕವೆಂಬ ಆಯುಧವನ್ನು ಉಳ್ಳವನು ; ಶಿವ : ಬಿರೊಳ್ವಳೆ ಮುನ್ನಂ ಪಿನಾಕಾಯುಧನೆ ಸಕಳ ಚಕ್ರಾಯುಧಃ ಜಾಮದಗ್ನ್ಯಂ ಬಿಲ್ಲು . . . ಇಂದ್ರಾತ್ಮಜಾತಂ ಬಿಲ್ಲು ಕೇಳ್ಗ ಬಿಲ್ಲಾಳನೆ ಲಿಗಳ ದೇವಂ(ಎಂ VI. ೩೪ಷು. ೩೭-೩೩; 1180). [ಸಂ.]

**ಪಿನಾಕಿ$_1$** (ನಾ). = ಪಿನಾಕಾಯುಧ : ಲೋಕವೀರೇಶಕ ನೆಟಿ ಬಲ್ಲಿದನು ಪಿನಾಕಿಯೆಂಬರು ಕಥೆಯೊಳಗೆ (ಶ್ರೀಭಾಂ. ೩-೨೯); ನೀನೆನಗೋವರಾದರೆ ಸಾಜು ಪಾರಿತಡೆಯಾ ಪಿನಾಕಿಗೆ ತೆರಳುವೆನೆ ಒಳಲ್ಲಿ ನೋಡೆಂದ (ಕುಶ್ಯಾಅ. ೨-೩೯); ತೃಣರಾಜೀರದ ಮಧ್ಯ ಬೇಡತಿರ್ದಳ್ ಬಡದೆ ಫಣಧರ ಪಿನಾಕಿಯಾ ತನ್ನಭೀಪ್ಸ ಸಫಲಮಾಕ್ಕೊಂದು (ಶಕ್ಯಾಂಗ. ೩೨-೨೨೦).

[ ಸಂ. ಪಿನಾಕಿನ್ ]

**ಪಿನಾಕಿ$_2$** (ನಾ). ೧. ಒಂದು ಬಗೆಯ ವಾದ್ಯ : ಚಿನ್ನ ತಿತ್ತಿರಿ ಅಂಚಿ ಪಂಬಬ ತಾಪು ಹೆಗ್ಗಾಳೆ ಮನ್ನೆದಂಗಹಳೆ ಪಿನಾಕ ಉನ್ನತವಹ ಶಂಖಪಟಹ ಡಿಂಡಿಮ ಮದ್ದು ಸನ್ನಾಹಭೇರಿ ಮೊಳಗಲು (ಹಾಷುಂ. ೬–೭೦); ಕೊಂಬು ತಿತ್ತಿರಿ ಕಾಳೆ ತುಡುಮು ಪಿನಾಕಿಯಾಡಂಬರದೊಳು ಪೊಕ್ಕ ಪುರವ (ಚಕ. ೩೬ ೬೬); ಚೋಕವಿಡಿದು ಸೇನೆ ನಾಲ್ಕುದಿಕ್ಕಿನಲಿ ವಿವೇವಿಲ್ಲದೆ ಪರಿತರಲು ಸೂಕುತ ಕನಲಿ ಪಿನಾಕಿಗಜೆಪ ವಾದ್ಯದಾ ಕೂಗು ಚೊಕ್ಕೆ ರಂಜಿಸಿತು (ಚಿತಾಂ. ೯-೬೦). ೨. ಒಂದು ಬಗೆಯ ವೀಣೆ : ಪ್ರಾಚೀನ ಗ್ರಂಥಗಳು, ಕಿನ್ನರಿ, ಪಿನಾಕಿ, ರುದ್ರವೀಣೆ . . . ಭುಜಂಗವಿ ಣೆ, ರಾವಣಹಸ್ತ ಮುಂತಾಗಿ ನಾನಾರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀತಂ. ೩೦೦). [ಸಂ. ಪಿನಾಕಿ:]

**ಪಿನಾಕಿವೀಣೆ** (ನಾ). ಒಂದು ಬಗೆಯ ವೀಣೆ : ತಂತ್ರೀವಾದ್ಯಕಳಾಪಾಹಿತ ನಾದ ಪೂಮರಸ ರಾವಣವೀಣೆ, ರುದ್ರವಿ ಣೆ . . . ಕಿನ್ನರವೀಣೆ, ಪಿನಾಕಿ ವೀಣೆ ಮೊದಲಾದ ಪಹುವಕ್ಕೆರಡು ವೀಣೆಗಳನ್ನೂ ವೇಣುಸ್ವರಮಂಡಲ ಗಳನ್ನೂ ಶ್ರುತಿಗೊಳಿಸಿ (ಚಿತ. ೨೬೩). [ಪಿನಾಕಿ$_2$+ವೀಣೆ$_1$]

**ಪಿನಾಶಿ** 'ಪೀನಾಶಿ' ನೋ.

**ಪಿನಾಸಿ** 'ಪೀನಾಶಿ' ನೋ.

**ಪಿನಿಕ್ಷೀರ** (ನಾ). ಒಂದು ಬಗೆಯ ಸಸ್ಯ : ಪಯಸ್ಸ್ವಿನೀ...ಕ್ಷೀರಕಂದ. ಬೆಳ್ಳಿ (ಬೆಳ?)ಯ ಸೂರನ, ದುಗ್ಧಿ, ಪಿನಿಕ್ಷೀರ,ಕಾಕೋಳಿ, ಹಾಲುಗುಂಬಳ, ಎಮ್ಮೆ, ಆಡು, ಆಪಿನ ಹಾಲೆ" (ಚಿತ. ೯೦).- [ಪಿನಿ ? + ಕ್ಷೀರ]

**ಪಿನಿವಾಲ, ಪಿನಪಾಲ, ಪಿನ್ನಿವಾಲ** (ನಾ). ಒಂದು ಬಗೆಯ ಮರ : ಪಿನಿವಾಲ . . . ನಿಬಿಡವಾದ ಛಾಯೆಯುಳ್ಳದ್ದಾಗಿ ಬಹುಮನೋಹರ ವಿರುತ್ತದೆ. ಕಟ್ಟಿಗೆ ಮಿದು, ಕೆಲಸಕ್ಕೆ ಬಾರದ್ದು (ಕಂಸ. ೯೩).

**ಪಿನಪಾಲ** : ಪಿಲಾಲದ ಪಾರ, ಕಿಂಗೋಳಿ, ಜಿ:ವಿ. ಪಿನವಾಲ ( ಕ್ಯ.ಶಿಗ. ೩೬-೭೨೪). ಪಿನ್ನಿವಾಲ : (ಕ). [ ? ]

**ಪಿನಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡುಗಸಗಸೆಹುಲ್ಲು, ಪಿನಿಹುಲ್ಲು (ಕ್ಯ.ಶಿಗ. ೪೯-೬೩೬). [ ಪಿನಿ ? +ಹುಲ್ಲು (<ಪುಲ್)]

**ಪಿನ್ನಲ್‌ಕೋಲಾಟ** (ನಾ). ಒಂದು ಬಗೆಯ ಕೋಲಾಟ : ಜಡೆ ಕೋಲಾಟ ; p "ಕಲಾವಿದರು ಒಂದು ಕೈಯಲ್ಲಿ ದಾರವನ್ನು ಮತ್ತೊಂದು ಕೈಯಲ್ಲಿ ಒಂದು ಜತೆ ಕೋಲುಗಳನ್ನು ಹಿಡಿದು ನರ್ತಿಸುತ್ತಾರೆ. ಎತ್ತರದ ಪ್ರದೇಶಕ್ಕೆ ಅಥವಾ ಅಟ್ಟಕ್ಕೆ ವಿವಿಧ ಬಣ್ಣಗಳ ದಾರಗಳನ್ನು ತೂಗು ಹಾಕಿ ನರ್ತಕರು ತಮ್ಮ ತಾಳಬದ್ಧ ಚಲನೆಯಿಂದ ಆ ದಾರಗಳನ್ನು ಜಡೆ ನೇದಂತೆ ನೇಯುವ ಹಾಗೂ ಜಡೆ ಬಿಡಿಸುವ ಚಲನೆಗಳು ಪಿನ್ನಲ್‌ಕೋಲಾಟದಲ್ಲಿವೆ" (ಜಾಕೋ. ೧೨೬): ಹಾಡಿಗೆ ಅನುಗುಣವಾಗಿ ಅಭಿನಯಿಸಲ್ಪಡುವ ಪಿನ್ನಲ್‌ಕೋಲಾಟದಲ್ಲಿ ಹಲವು ರೂಪದಪುಗಳಿವೆ (ಜಾಕೋ. ೧೨೬).

[ ←ತವಿ. ಪಿನ್ನಲ್ಕೊೞ್ಲೇಲಾಟ್ಟಮ್ ]

**ಪಿನ್ನಿ, ಪಿನ್ನೆ₂** (ನಾ). ಮಣ್ಣಿನ ಪಾತ್ರೆ : ಹನ್ನೆರಡುವರ್ಷದ ತಂಗೆಳ ಕೂಳನು ಪಿನ್ನಿದೊಳಿಕ್ಕಿದು ನಾಲಗೆಲಿ ಕುನ್ನಿಯಂದದಿ ನೆಕ್ಕಿ ತ್ಯಾಗೋರಿಸಿ ಕೊಟ್ಟೋದು ಮುನ್ನ ಮಾಡಿದ ಪಾಪವ್ಯಸ (ಜಾಕ್ಕಾ. ೬.೬೨); ಮುನ್ನ ಉಂಬ ಶರಣರು ಪ್ಯಾಳಪ್ಯಾಳಕಿ ಚಿನ್ನ ಬೆಳ್ಳಿ ಪಾತ್ರದೊಳಗೆ ಇನ್ನು ಹಂಚಿ ಲುಂಬಂತಾಯ್ತು ಬನ್ನಿಯಿಂದು ಪಿನ್ನಿಯೊಳಂಬಲಿಯೆಂಟಿಯ (ಜಾಕ್ಕಾ. ೦೦-೨೪). ಪಿನ್ನೆ₂ : ನಾಯಿ ಮಣ್ಣ ಪಿನ್ನೆಯಲ್ಲಿ ಅಂಬಲಿಯನ್ನು ಕುಡಿಯುತ್ತಿದೆ (ಜಾಅ) [ ? ]

**ಪಿನ್ನಿವಾಲ** ' ಪಿನಿವಾಲ ' ನೋ.

**ಪಿನ್ನೀಕ್ಷಿಸು** (ಕ್ರಿ). ಮತ್ತೆ ನೋಡು ; ಮರಳಿ ನೋಡು : ಜನಪದಾದ ವಿಲಾಸನದರೊಳಗನುವು ಸಾಗದು ನಿಮ್ಮ ನೃಪಗನುಮನದಿ ಪಿನ್ನೀಕ್ಷಿಸು ತಲೈದುವುದೆನಲು ಗೋಪಳರು (ಜಕಳಾ. ೩೬-೧೮). [ಪಿನ್+ಈಕ್ಷಿಸು]

**ಪಿನ್ನು** (ನಾ). (ಉಡುಪಿನ ಭಾಗಗಳು, ಕಾಗದಗಳು, ತಲೆಯ ಕೂದಲು ಇತ್ಯಾದಿಗಳನ್ನು ಚುಚ್ಚಿ ಸೇರಿಸಲು ಉಪಯೋಗಿಸುವ) ಒಂದು ಬಗೆಯ ಸೂಜಿಯಂತಹ ಲೋಹದ ವಸ್ತು ; ಗುಂಡುಸೂಜಿ ಇತ್ಯಾದಿ : ತಲೆಗೆ ಕೆಂಪುರಿಬ್ಬನ್ ಕಟ್ಟಿಕೊಂಡು, ತಲೆಯಲ್ಲಿ ಹತ್ತೆಂಟು ಕಡೆಗೆ ಅಡ್ಡತಿಡ್ಡ ಪಿನ್ನು ಚುಚ್ಚಿಕೊಂಡಿದ್ದಳು (ಗಂಕಥಾ. ೯೩); ಬಸದ ಮಧ್ಯದ ಗುಬ್ಬಿ ಕಳಚಿ ಹೋಗಿದ್ದಕ್ಕೆ, ಕೊರಳಲ್ಲಿಯ ಬೆಳ್ಳಿ ಎಳೆಯಲ್ಲಿದ್ದ ' ಪಿನ್ನ'ನ್ನು ಹಾಕಿ ' ಫಿಟ್ ' ಮಾಡಿದಳು (ಜಾಕ್ಕ. ೯೬); ಪಿನ್ನು ಕಳಚಿ ಹೋಗಿ ಪುಸ್ತಕದ ಹಾಳೆಗಳೆಲ್ಲ ಅದಲುಬದಲಾದುವು (ಜಾಅ).

[ ← ಇಂ. ಪಿನ್ ]

**ಪಿನ್ನೆ₁, ಹಿನ್ನಿ, ಹಿನ್ನೆ** (ನಾ). ೧. ಸೂಜಿಯ ಹಿಂಭಾಗ,—ರಂಧ್ರವಿರುವ ಭಾಗ : ಸೂಜಿಯ ಪಿನ್ನೆಯೊಳಂ ಮಣಿಯ ದ್ವಾರದೊಳು ನುಸುಳ್ದಿರ್ದೆಡೆಯೊಳೊರ್ವಂ ಕಳ್ಳಂತಪ್ಪ ಕಳ್ಳರ ಕಳ್ಳನಿವಂ (ಧರ್ಮಾಮೃ. ೬-೦೯). ಹಿನ್ನಿ : ೧. ಸೂಜಿಯ ಮೊನೆಯಲ್ಲಿ ದಾರ ಪೇಜು ಹಿನ್ನಿ[ ಪಾಠಾಂ. ನ್ನೆ ]ಯ ಹಂಗ ಬಿಡಿಸಿತ್ತು ನೋಡಾ (ಆಶಾವ.೪. ೦೩೬-೩೨೪); ಸೂಜಿಯ ಹಿನ್ನಿಯಲ್ಲಿ ಮುಗಿಲ ತೋರದ ದಾರ ಹಿಡಿಯುತ್ತು (ಷಟ್ಸ್ಥಲ. ೪. ೬೬೦-೦೩); ನೊಣ ಮೂಡು ಒನ್ನಿಯೊಂದು ಆ ಸೂಜಿಯಲ್ಲಿ ಹೊರಿದಿಹನೆಂದಡೆ ಕುಪ್ಪಸಕ್ಕೆ ಚಿಪ್ಪು ಒಡಗೂಡವು ನೋಡಾ (ಸರ್ವಶ. ೦೩೬-೬೬೦). ೨. (ಬಾಣದ) ಹಿಂಭಾಗ ; ಗರಿ ; " ಕರ್ತರಿ, ಪುಂಖ " (ಶಾಶಣ. ೬). ಹಿನ್ನೆ : ೩. ಹಿಂಬದಿ ; ಹಿಂಭಾಗ : ಉಳ್ಳಿಯ ಹಿನ್ನೆಯಿಂದ ಸೂಸೆಯ ತಲೆ ಮೇಲೆ ಕುಕ್ಕಿದಳು (ಜಾಅ. ೦೮).

[ ದೇ. ; ತುಲ. ತುಳು. ಪಿನ್ನಿ ]

**ಪಿನ್ನೆ₂** ' ಪಿನ್ನಿ ' ನೋ.

**ಪಿನ್ನೆಣಿಕೆ** (ನಾ). ಹಿಂದಾದುದನ್ನು ಕುರಿತು ಯೋಚಿಸುವುದು ; ಪಶ್ಚಿಮಬುದ್ಧಿ : ಪಿನ್ನೆಣಿಕೆ ಮುನ್ ಬಗೆಯನೊತ್ತಿ ಮಸಿ ಮಾಡ್ಬುದು (ಅಂತಿಗೂ. ೧೮-೩೬೬). [ ಪಿನ್+ಎಣಿಕೆ ]

**ಪಿನ್ನೆತ್ತಿ** (ನಾ). ನೆತ್ತಿಯ ಹಿಂಭಾಗ : ಪಿನ್ನೆತ್ತಿಯೊಳ್ ತುಱುಬನಿಕ್ಕಿದಳು (ಕೋಚಕ. ೬-೨೬). [ ಪಿನ್+ನೆತ್ತಿ ]

**ಪಿನ್ನೆಲೆ, ಹಿನ್ನೆಲೆ** (ನಾ) ೧. ಹಿಂದಿನ ನೆಲೆ,—ಸ್ಥಳ ; ಹಿಂಬದಿ ; ಹಿಂಭಾಗ : ಪೂರ್ವರಿಪುವರ್ ನೂಂಕಿದರ್ ಪುರದ ಪಿನ್ನೆಲೆಗೆ ಸಾರ್ದರ್ ಪೋದೊಂದುಜಿ ತಮತಮಗೆ ಪೊಯ್ದಾಡುತಿರ್ದರ್ (ಕಅಕ. ೧೬-೨೮); ಪುವೀರನು ತೆಗೆಸಿದರ್ಪಿನ್ನೆಲೆಗೆ (ಕ್ಕಬಿಕ. ೬-೩೧). ಹಿನ್ನೆಲೆ : ೧. ಕಂಥೆಯು ಮಜಿಪೂತ್ತು ನಿಂದರು ನರರು ತೇಜಿಗಳೋಡಿ ತೆರಿನ ಮಜಿಯ ಸಾರ್ವವು ತೇರು ಹಾಯ್ದವು ದೊರೆಯು ಹಿನ್ನೆಲೆಗೆ (ಕುಮ್ಯಾ.೪. ೧೮-೩೬) ; ಮದಗಜಗವನೆಲೊರ್ವಳು ಚರಿಪಮಧ್ಯೆಯೊಳೊದಗಿ ಸರಸ ಕೈತುದು ಬೆದಱ ಹಿನ್ನೆಲೆಗೈದೆ (ಕಂಕು. ೨೮-೦೨೬) ; ಘಟನೆಗಳ ನಿರೂಪಣೆ ಮತ್ತು ಪಾತ್ರಸೃಷ್ಟಿಗಳೇ ಅಲ್ಲಿನ ಮುಖ್ಯೋದ್ದೇಶ. ಇವುಗಳನ್ನು ಅತ್ಯಂತ ಸ್ಪಷ್ಟವಾಗಿ ನಮ್ಮ ಕಲ್ಪನೆಗೆ ದೊರಕುವಂತೆ ಮಾಡಿ ಕವಿ ಹಿನ್ನೆಲೆಗೆ ಸರಿಯುತ್ತಾನೆ (ಶಾಕಾಂ. ೩). ೨. ಯುದ್ಧಭೂಮಿಯ ಹಿಂಭಾಗಕ್ಕೆ ಇರುವ ಸ್ಥಳ : ಮುಱಿದ ಚೂಣಿಯ ಭಟರು ತಂದರು ಬಿಜಾಸಿನರನೆಲೆಗಿದು ವಿಹಾರದೊಳೀಱಿದು ನೆಱ ಸೊಪ್ಪಾಗಿ ಸಾರಿತು ಸರಿದು ಹಿನ್ನೆಲೆಗೆ (ಕುಪ ೪. ೦೯-೦೨); ಲಗ್ಗೆಯೊಳಗೆ ನೊಂದು ರಿಪು ಭೂಪರ ಸೇನೆಯೊಗ್ಗೊಡೆದೋಡಿ ಹಿನ್ನೆಲೆಗೆ ಹಿಗ್ಗುದೆಗೆದು ದೂರ ಚೌದಿಕ್ಕಿನೊಳಾಗ ಬೊಗ್ಗನೆ ಪಾಳ್ಯವಿದರು (ಕಂಕಅ. ೩-೬೦). ೩. "ಮುಂದುಗಡೆ ಇರುವ ಮುಖ್ಯವ್ಯಕ್ತಿಗಳಿಗೆ ಅಥವಾ ವಸ್ತುಗಳಿಗೆ ಪ್ರಾಧಾನ್ಯ ಕೊಡುವಂಥ ದೃಶ್ಯ ಚಿತ್ರ ಅಥವಾ ವರ್ಣನೆ" (Back-ground. ೨೦೪೬) : ಶುದ್ಧವಾದ ಅಂತರಿಕ್ಷದ ಹಿನ್ನೆಲೆಯಲ್ಲಿ ಅವು ಮರಳ ರೆಕ್ಕೆಗಳಂತೆ ಕೊಂಬೆಗಳಂತೆ ತೋರುತ್ತಿದ್ದವು (ಕುಕಾ. ೪೨). ೪. ಭೂಮಿಕೆ ; ತಳಹದಿ ; ಬುನಾದಿ ; ಸನ್ನಿವೇಶ : ಈ ಗ್ರಂಥದ ಸ್ವರೂಪವನ್ನು ಅರಿಯಬೇಕಾದರೆ ಅದು ಹುಟ್ಟಿದ ಹಿನ್ನೆಲೆಯನ್ನು ಅರಿಯಬೇಕಾದುದು ಅತ್ಯಗತ್ಯ (ಜಾಕ್ಕಳು. ೦) ; ಗೊಟೆಲ್ ಯಾವ ಒಂದು ವಿಷಯ ಪ್ರತಿಪಾದನೆ ಮಾಡುವಾಗಲೂ ಅದರ ಚಾರಿತ್ರ್ಯ ಮತ್ತು ಹಿನ್ನೆಲೆಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದನು (ಸಕ್ಕ೪. ೯೬) ; ಕನ್ನಡದಲ್ಲಿ ಪ>ಹ ಆದುದಕ್ಕೆ ಒಂದು ಐತಿಹಾಸಿಕ ಹಿನ್ನೆಲೆ, ಬೆಳವಣಿಗೆ ಇದೆ (ಪ್ರಾಕಅ. ೩೩೬); ಶಂಕರ ರಾಮಾನುಜರಿಗೆ ಅವರವರ ಮತಸ್ಥಾಪನೆಗೆ ಹಿನ್ನೆಲೆ ಪರ್ಯಾಪ್ತವಾಗಿತ್ತು (ಶಾಕದ. ೨೪೬); ಇಂದು ಈ ಹಣ ಯಶೋದೆಗಾಗಿರಬಹುದು ಎಂಬ ಸಂದೇಹದ ಹಿನ್ನೆಲೆಯಲ್ಲಿ ಈ ಮಾತು (ಜಾಕ್ಕ೨. ೯೩).

[ ಪಿನ್+ನೆಲ₁ ]

**ಪಿನ್ನೇಕಾಯಿ** (ನಾ). ಒಂದು ಬಗೆಯ ಮರ : ಸುರಹೊನ್ನೆ, ಪಿನ್ನೇಕಾಯಿ, ಪುನ್ನಾಗ, ಸುರಹೊಬು, ಹೂಹೊಮ್ಮೆ (ಕ್ಯ.ಶಿಗ. ೦೬-೨೩೬) ; ಕಲ್‌ಹೊನ್ನೆ, ಕಿರಿಹೊನ್ನೆ . . . ಪಿನ್ನೇಕಾಯಿ, ಪುನ್ನಾಗ, ಬೊಬ್ಬಿ, ಶ್ರೀಹೊನ್ನೆ, ನಾಮೇರು, ಸುರಹೊಬು, ಇರ್ಕೈ (ಸಕ್ಕ೨. ೨೬).

[ ಪಿನ್ನೆ₀ ( p←ತವಿ ಪಿನ್ನೈ ) +ಕಾಯ್ದು (<ಕಾಯ್₁) ]

**ಪಿನ್ನೇಸಱು** (ನಾ). ಪಶ್ಚಿಮಕ್ಕೆ ಇರುವ ಸೂರ್ಯ ; ಮುಳುಗುತ್ತಿರುವ ಸೂರ್ಯ: ಇನ್ನೊಮ್ಮೆ ಶರವ ತಿರುವಿಗಿಟ್ಟು ನೋಡೆಂದು ತನ್ನ ದಿವ್ಯಾಸ್ತ್ರ ದಿನವನ ಪಿನ್ನೇಸಱು ಪಿಂಗದಲೊಳಗಗುಳದ ಮುನ್ನ . . . ಅವನುತ್ತಮಾಂಗವನಾಗಸದ ಅತ್ತ ಹಾಱುವ ತೆಱದಿಂದೆಚ್ಚನು (ಕೇಚಿಹ. ೨೪-೦೯೪).

[ಪಿನ್ + ನೇಸಱು (<ನೇಸಱ್)]

**ಪಿನ್ನೋ** (ಕ್ರಿ). ಹಿಂದೆ ಆದುದಕ್ಕಾಗಿ ವ್ಯಥೆಯನ್ನು ಹೊಂದು; ಪಶ್ಚಾತ್ತಾಪ ಪಡು: ಎಂತು ನೀನ್ ಪಿನ್‌ನೋಯದೆಯೆ ಪೋಪೆ? (ಅಂಕಿಗೊ. ೦೦-೨೦೨). [ಪಿನ್ + ನೋ]

**ಪಿನ್ನೋಡು** (ಕ್ರಿ). ಹಿಂದಕ್ಕೆ ಹೊರಳಿ ನೋಡು; ಹಿಂದಿರುಗಿ ನೋಡು: ಎನಗೆ ಅಂಜಿಕೆಯೆಂಬುದಿಲ್ಲ. ಅದಱಿಂದೆ ನೀನ್ ಬಂದ ದಾರಿಯೊಳೆ ಪಿನ್ನೋಡದೋಡು! (ಅದ್ಭುತ. ೩೦-೦೦೦೬). [ಪಿನ್ + ನೋಡು]

**ಪಿಪಾಸ** (ನಾ). ನೀರಡಿಕೆ; ಬಾಯಾರಿಕೆ; ದಾಹ: "ನೀರಡಿಕೆ ತರ್ಷಂ ಪಿಪಾಸವೆನಿಸಿಕ್ಕುಂ" (ಶಬ್ದಗಾ. ೬೦-೦೪), ಸತ್ಯಗುಪ್ತನು ಆ ಜಲವನ್ನು ಹಿಂಗಿ ಪಿಪಾಸವನ್ನು ಸ್ವಲ್ಪ ಶಮನ ಮಾಡಿಕೊಂಡು ಸುತ್ತಲೂ ನೋಡುತಾ ಕೂತುಕೊಂಡನು (ಸೀರಿಮಾ. ೩). [ಸಂ. ಪಿಪಾಸಾ]

**ಪಿಪಾಸಿತ** (ಗು). ೧. ಬಾಯಾರಿದ; ನೀರಡಿಸಿದ. (ನಾ). ೨. ಬಾಯಾರಿದವನು; ನೀರಡಿಸಿದವನು: "ತೃಷಿತಃ, ತರ್ಷಿತಃ, ಪಿಪಾ(ಸು:), ಪಿಪಾಸಿತಃ—ಈ ೪ ನೀರಡಿಸಿದಾತಂ" (ಶಬ್ದಮ. ೫೪-೨೦೬). [ಸಂ.]

**ಪಿಪಾಸು** (ಗು). ೧. = ಪಿಪಾಸಿತ ೧. (ನಾ). ೨. = ಪಿಪಾಸಿತ ೨: "ತೃಷಿತಃ, ತರ್ಷಿತಃ, ಪಿಪಾ(ಸು:), ಪಿಪಾಸಿತಃ—ಈ ೪ ನೀರಡಿಸಿದಾತಂ" (ಶಬ್ದಮ. ೫೪-೨೦೬). [ಸಂ.]

**ಪಿಪಾಸೆ** (ನಾ). ೧. ನೀರಡಿಕೆ; ಬಾಯಾರಿಕೆ; ತೃಷೆ: "ಉದನ್ಯಾ, ತರ್ಷ: . . . ಪಿಪಾಸಾ—ಈ ೫ ನೀರಟ್ಕೆ" (ಶಬ್ದಮ. ೬೦-೨೦೪); ಅಂತಳವಿಗಬ್ಬಿದ ಪಿಪಾಸೆಯುಂ ಪಸಿವುಮಸವುಯಂಬಡೆದು . . . ನೀರ್ಗೆ ಚಲನಜಸಿ . . . ನಡೆವಾಗಳ್ (ಲೀಲಾವ. ೬-೯೨ ಪ). ೨. (ಅಲಂ) ತಿಳಿದುಕೊಳ್ಳಬೇಕೆಂಬ ಇಚ್ಛೆ,—ಬಯಕೆ: ಅಂತೆಯೆ ಮುಂದೆ ಅದು ಶಾಶ್ವತ ವಾದ ಆನಂದದ ಬಗೆಗೆ ಪಿಪಾಸೆಯನ್ನು ಹುಟ್ಟಿಸುತ್ತದೆ (ಮಹಾವನೋ. ೦೬೪). [ಸಂ. ಪಿಪಾಸಾ]

**ಪಿಪಿಲೆ, ಪಿಪ್ಪಿಲ** (ನಾ). ಇರುವೆ; ಪಿಪೀಲಿಕೆ: ತರುಗಿರಿಯನೆಲ್ಲ ತಱಿಗೆಡೆಯುತೆ ಹಾಱಿಸುವ ಪುರುಶರದ ಪ್ರಳಯಮಾರುತನೊಳಂ ಪಿಪಿಲೆಗಳು ಹರುಷದಿಂದಿದಿರೊಡ್ಡಿ ನಿಲ್ವ ಸತ್ವವದುಂಟೆ (ಪ್ರಭುಲಿ. ೬-೦೨). ಪಿಪ್ಪಿಲ: ಉನ್ನತದ ಪಿಟ್ಟ [ಪಾಠಾಂ. ಪ್ಪಿ]ಲ ಪ್ರಸಾದದಗುಂಳು ಕಟ್ಟಿ ಬರೆ ಕಾಣುತದಕೆ ಬಸವಂ ಮನ್ನಣೆಯೊಳಂ ಸಕ್ಕರೆಯ ತಳಿಯೆ (ಪ್ರಭುಲಿ. ೭-೪೪).
[< ಸಂ. ಪಿಪೀಲ]

**ಪಿಪೀಲಕ** (ನಾ). ೧. ದೊಡ್ಡ ಕಪ್ಪುಇರುವೆ; ಗೊದ್ದ. ೨. (ಅಲಂ) ಅಲ್ಪವ್ಯಕ್ತಿ; ಕ್ಷುದ್ರಜೀವಿ: ಈ ಸುಶರ್ಮಕ ಶಕುನಿ ಸಲೆ ದುರ್ವಾಸನಾದಿ ಪಿಪೀಲಕರು ತವಗೇಸು ಬಲುಹುಟ್ಟಿಸನೊದಗಲಿ ಎಂದರವರು (ಕುಮಾ. ಕ. ೦೫-೦೩). [ಸಂ.]

**ಪಿಪೀಲಿಕ** (ನಾ). ೧. (ಹೆಣ್ಣು) ಇರುವೆ: "ಪಿಪೀಲಿಕಂ ಕ್ಷುದ್ರಮುಂದೆ ನಲ್ಲಿಯೆಂಬಹೆಯಕ್ಕುಂ" (ಶಬ್ದಗಾ. ೬೪-೦೬); ಅಲ್ಲಿಗೆ ಮರ್ಕಟನಂತಾಗದೆ ಇಲ್ಲಿಗೆ ವಿಹಂಗನಂತಾಗದೆ ಈಚೆಯಾಲ್ಲಿಗೆ ಪಿಪೀಲಿಕನಂತಾಗದೆ (ಷೋಡಶ. ೦೦೦-೯೬೩); ಬೆಲ್ಲದ ರಸವಂ ದಾರವಂ ಪೂಸಿ ಪವಳದ ಛಿದ್ರ ಮೊದಲೊಳಿಟ್ಟು ಇಱುಂವೆಗಳುಳ್ಳ ಠಾವಿನೊಳಿರಿಸಲ್ ಪಿಪೀಲಿಕಂಗಳು ದಾರವಂ ಪೆಱಗಣ ಛಿದ್ರಕ್ಕೆ ತೆಗತಪ್ಪುದುಂ (ಕೃಷ್ಣಾಸ್ರ. ೩-೨೦ ಪ); ಆ ಲಿಂಗದ ಮೇಲೊಂದು ಪಿಪೀಲಿ(ನಿರೆ ಕಂಡು ಬೆದಱಿ . . . ಶೂಲಿ ಕರಂ ನೋಡ ನೆಂದು ಬಳಲುತ್ತಿರ್ದಂ (ಪ್ರಭುಲಿ. ೦೬-೭). ೨. (ಇರುವೆಗಳು ಸಂಗ್ರಹಿಸುವುವೆಂದು ಭಾವಿಸಲಾದ) ಒಂದು ಬಗೆಯ ಚಿನ್ನ. [ಸಂ.]

**ಪಿಪೀಲಿಕಾನ್ಯಾಯ** (ನಾ). ಇರುವೆಯಂತೆ ಸಾವಧಾನವಾಗಿ, ನಿರಂತರವಾಗಿ ಕೆಲಸವನ್ನು ಪೂರೈಸುವಿಕೆ: ಎನಿತೂ ಸೋಜಿಗದ ಬಲ್ಲಾಳಿಕೆಯ ಕೆಯ್ಗಳ ಕಂಡಗೆ ಪಿಪೀಲಿಕಾನ್ಯಾಯದಿಂ ತಾನುಮಂತೆಸಗಬೇಕೆಂಬು ಸ್ಫೂರ್ತಿಯಾದರೆ ತಪ್ಪೊ ಅಚ್ಚರಿಯೊ ಏನಂತೆ? (ಚಿತ್ರಕ. ೦೭-೦೦). [ಸಂ.]

**ಪಿಪೀಲಿಕಾಸ್ತ್ರ** (ನಾ). ಇರುವೆಗಳನ್ನು ಉತ್ಪತ್ತಿ ಮಾಡುವ ಒಂದು ಬಗೆಯ ಅಸ್ತ್ರ: ಕೊಟ್ಟು ತೆಗೆದೆಚ್ಚಂ ಪಿಪೀಲಿಕಾಸ್ತ್ರವನೊಡನೆ ಟಿಟ್ಟಿಬಾಹೆ ಮುತ್ತಿದುವು ಘನೆಗಳಂ (ಕೃಮಾ. ೫೪-೩೪). [ಸಂ.]

**ಪಿಪೀಲಿಕೆ** (ನಾ). ಇರುವೆ: ಕ್ರಿಮಿಪಿಪೀಲಿಕಾಭ್ರಮರಮನುಷ್ಯಾದಿ ವಿಭೇದವಾಗಿ ದ್ವೀಂದ್ರಿಯಾದಿ ತ್ರಸಂಗಳ್ (ಸುಕುಮಾ. ೯-೬ ಪ); ಯಮದಂಡದದೇಂ ಮಾಣ್ಬುದೆ ಪಿಪೀಲಿಕಾಪಥವಿಧಿಯುಂ (ಜಗ. ೨-೫೪); ಧಾರುಣಿಯೊಳು ಪಿಪೀಲಿಯುಂ ವಿಸ್ತಾರದಲಿ ಮಾಡಿದ ಮನೆಯು ಕಾಳೋರಗನು ಹೊಗುವಂತೆ ರಿಪುಕುಂಚೀಕುಮಾರೇರು ವೈರದಲಿ ಸರ್ವಾಂಗವನು ಕೈಸೂಱೆಗೊಂಬರು (ಕುಮಾ. ಕ. ೯-೦೪). [ಸಂ. ಪಿಪೀಲಿಕಾ]

**ಪಿಪ್ಪರಗೆ** (ನಾ). ಒಂದು ಊರಿನ ಹೆಸರು; p ಬಿಜಾಪುರಜಿಲ್ಲೆಯ ಈಗಿನ ಹೂವಿನ ಹಿಪ್ಪರಿಗೆ: ಬಾಸುರಿಕೋಡು ಇಂಗಳೇಸರ ಬಾಗವಾಡಿ ಸಾವುಳವಾಡಿಗೆ ಒತ್ತುವೊಡಿಗೆ ಮಧ್ಯವರ್ತಿ [ಗ] ಪಿಪ್ಪರಗೆ ನಾಮಗ್ರಮೋ: (ಶಾಇಇ. XI-1. ೬-೨೦; ೩೦೭); [ಪೊ]ಲದ ಸಾಳೆವಾಡಿಗೆಯ × × ಯಿಂ ಪಡುವ ಪಿಪ್ಪರ[ಗೆ]ಯ ಸೀಮೆಯಿಂ ತೆಂಕ ಸರ್ವ[ನಮ]ಸ್ಯಂ ಬಿಟ್ಟ ಏರಿಯ ನೆಲ ಮತ್ತರ್ ೫೫ (ಶಾಇಇ. XI-i, ೧೯-೨೭; ಸು: 1062). [?]

**ಪಿಪ್ಪಲ, ಪಿಪ್ಪಳ** (ನಾ). ೧. ಒಂದು ಬಗೆಯ ಮರ; ಅರಳಿ; ಅಶ್ವತ್ಥ: "ಶ್ರೀವೃಕ್ಷಃ, ಪಿಪ್ಪಲಃ, ಅಶ್ವತ್ಥಃ, ಬೋಧಿಃ—ಈ ೪ ಅರಳಿ" (ಶಬ್ದಮ. ೩೩-೯೩); "ಪಿಪ್ಪಲಂ ಬೋಧಿಯಶ್ವತ್ಥ ಮೆನಲರಳಿಯಕ್ಕುಂ" (ಶಬ್ದಗಾ. ೩೯-೦೦); ಉರುಪಯೋಧರಬಿಲ್ವವನು ಹೊಯ್ದೊರಸಿ ಕದಳಿಯ ನುಣ್ದೊಡೆಯನಿಟ್ಟೊರಸಿ ರವಿಸುತ ಪನಸಿರಿಯ ಪಿಪ್ಪಲದಳಂಗದಲಿ (ಕುಮಾ. ಕ. ೨೦-೩೦); ಜಾಲಿ ಜೇನೊಡವಿಪ್ಪೆ ಪಿಪ್ಪಲ ಮಾರೆಯುತ ನೋಡಬಲೆ (ಕಾಶೀರಾ. ೩-೦-೨೮); ಖದಿರ ಬಿಲ್ವ ತಮಾಲ ತಂಡುಸ ಬಿದಿರು ಬೆತ್ತ ಪಲಾಶ ಪಿಪ್ಪಲ ಮಧೂಕ ಹೊನ್ನೆ ಕದಂಬ ಗುಗ್ಗುಳ ನಾಗ ಪುನ್ನಾಗ (ಅಶ್ವ. ೦೦-೪). ೨. ನೀರು; ಜಲ. ೩. ಜವುಗಿನ ನೆಲ,—ಭೂಮಿ. ೪. ಮೈಲಿಗೆ. ೫. ಯತಿ; ಸಂನ್ಯಾಸಿ: "ಉಪಭೇದಂ ಶ್ಲಕ್ಷ್ಣ ಯೋಗೀಶ್ವರ ಜಲ ಮಲಿನಂ ಪಿಪ್ಪಲಾಖ್ಯಾನಂ" (ನಾನಾ. ೬೩). ಪಿಪ್ಪಳ: ೧. ನನೆಪೊತ್ತಿರ್ದಿರ್ಗುಂತೆ ಪಲ್ಲವಿಸಿದತ್ತುದ್ಯತ್ಯಮಾಳಂ ಕರಂ ಕೊನರೇಱುತ್ತುರು ಪಿಪ್ಪಳಂ . . . ಘನತಾರಾಂಕುರಭಾರಮಂ ಉರವಕಂ ಪೆತ್ತತ್ತು ಬನ್ನೊಪ್ಪದಿಂ (ಅಜಿತ. ೦೯-೨೮); ಸಾಳ ರಸಾಳ ತಾಳ ತಿಲಕಾಮಳ ಪಿಪ್ಪಳ[ಪಾಠಾಂ. ಲ] . . . ತರುಸಂತತಿಯಿಂ ವನಪ್ಪಂದವೊಪ್ಪುಗುಂ (ಹರಿವಂಶ. ೧-೩೩). ೬. ಒಂದು ಊರಿನ ಹೆಸರು: ಪಿಪ್ಪಳಗ್ರಾಮನಾಮಾಗ್ರಹಾರ ಮುತ್ತನ್ನಿ (ಕ್ಷೇ. ೦೪೨೧, ೦೦-೧೯೩, ೦೪೭). [ಸಂ.]

**ಪಿಪ್ಪಲಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಹಿಪ್ಪಲಿ; ಬಾಲಮೆಣಸು: "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಪಿಪ್ಪಲೀ, ಕಣಾ—ಈ ೬ ಪಿಪ್ಪಲಿ" (ಶಬ್ದಮ. ೦೦೦-೪೬೦); ಚಕೋರಪಂಜರಂಗಳೊಳ್ ಪಿಪ್ಪ[ಪಾಠಾಂ. ಪ್ಪಿ]ಲೀತಂಡುಲಂಗಳ ಬೀಱಂ ಸೂಸಲುಂ (ಕಾದಂಬ. ೦೦೦೬); ಪಿಪ್ಪಲಿ ಚಪ್ಪಗಾಯಿರ್ ಮೆಣಸು ಮಾಗಿಳಿವೇರ್ಗೊಳಿಯುಲ್ಲದೇಲೆ . . . ಅರಿಸಮಾಮಸುಲಂಗಳಾಂಕಿಯಾದು ಪ್ಪಿನ ಕಾಯ್ಗಳಂ ಪಂಗಮಂಗಿಪ್ಪುವನಿಕ್ಕಿದನಬ್ಬಪತ್ರದೊಳ್ (ಲೀಲಾವ. ೩-೬೩); ಜ್ವರವೇಱಲು ಮಾಣ್ಗುಂ ಪಿಪ್ಪಲಿಗೂಡಿದ ಪಾಲ್ ಜೇನಱೆಡಿಗೆ ಶರ್ಕರೆಯಿಂದ (ಕಲ್ಯಾ. ೩. ೩-೯೩). [ಸಂ].

**ಪಿಪ್ಪಲಿಗ** (ನಾ). ಪಿಪ್ಪಲಿಯನ್ನು ಮಾರುವವನು; ಬಾಲಮೆಣಸಿನ ವ್ಯಾಪಾರಿ: ತಂಬುಲಮಂ ಕೊಳ್ವಂ ಮಾಱುವಂ ಪೋಣ್, ತಂಬುಲಿಗಂ, ಏವಂ ದವಸಿಗಂ, ಗಂದಿಗಂ, ಮೆಣಸಿಗಂ, ಪಿಪ್ಪಲಿಗ: (ಕಲ್ಯಾ. ಸು. ೪೦೧ ವೃತ್ತಿ). [ ಪಿಪ್ಪಲಿ + —ಗ ]

**ಪಿಪ್ಪಲಿಗಾಯಿ** (ನಾ). ಹಿಪ್ಪಲಿಕಾಯಿ : ಸುಂಟಿ ಕೊಗಲಿ ಪಿಪ್ಪಲ[ಲಿ] ಗಾಯು ಕೊಯ್ದು ರು ನಂಬೆಯು ಕಲಸಣ್ಣಗಳೊಡನೆ (ಸೂಶಾಸ. ೬-೩೦). [ ಪಿಪ್ಪಲಿ+ಕಾಯಿ ( ಕ ಆಯ್) ]

**ಪಿಪ್ಪಲೀಪತ್ರ** (ನಾ). ಅರಳಿಯ ಎಲೆ.–ಪತ್ರ ; **ಪಿಪ್ಪಲದಳ** : ಅಯಃಪಿಪ್ಪಲೀಪತ್ರಪ್ರಮಾಣಾಂಚಿತಮುದ್ಯತ್ಪ್ರಾದಶೀಶಾನ್ವಿತವತಿಧವಳ ಪ್ರಚ್ಛದಾಚ್ಛಾದಿತಂ ವಿ[ಸ್ತೃತಮಾದುತ್ತುಂಗಗರ್ಭೋಚಿತಶಯನ]ದೊಳಾ ಕಾಂತೆ ಒಣ್ಗಿದ್ದಮಾದಲ್ (ಕಾರಂಪು. ೩೯೯). [ಸಂ.]

**ಪಿಪ್ಪರೆ** (ನಾ).=ಪಿಪ್ಪಲ ೧ : ಪಿಪ್ಪರೆ ಅರಳಿಮೇರು ಫಲಾಸೇನ ಮುತ್ತುಗ ಮೇರು (ಕೃಶಿಕಾ. ೬-೬). [ ಸಂ. ಪಿಪ್ಪಲ ]

**ಪಿಪ್ಪಳ** ' ಪಿಪ್ಪಲ ' ನೋ.

**ಪಿಪ್ಪಿಲ** ' ಪಿಪಿಲೆ ' ನೋ.

**ಪಿಪ್ಪು** (ನಾ). ಮಚ್ಚೆ ; ಗುರುತು : " ಜಟುಲಃ . . . ಪಿಪ್ಲುಃ, ತಿಲಕಃ, ತಿಲಕಾಲಃ — ಈ ತಿಲಕಾಕಾರಗಳಾದ ಅರೀರಮಚ್ಚೆಗಳ ಹೆಸರುಗಳು, ಸಂಗಾತೀಮಚ್ಚೆ, ಹುಟ್ಟುಮಚ್ಚೆ "(ಸಿದ್ಧಾಂತಿ. ೦೬೩). [ಸಂ.]

**ಪಿಮ್ಮಡ, ಪಿಮ್ಮಡಿ, ಹಿಂಬಡ, ಹಿಮ್ಮಡ, ಹಿಮ್ಮಡಿ, ಹಿಮ್ಮಡು** (ನಾ). ೧. ಅಡಿಯ ಹಿಂಭಾಗ ; ಪಾದದ ಹಿಂಬದಿ : ಧತಿ ಕಡದ ಮನದ ಬಲ್ಪುಡುಗದೇ ಪಿಮ್ಮಡದೊಳತಿಧೈರ್ಯದಿಂ ನಡೆದು ಪೋಪಂ (ಕರಾಕ. ೨-೯-೫೭): ಪಿಮ್ಮಡದಿಂದೆ ಕೆಲವು ದೂರಂ ನಡೆದು ತುದಿಗಾಲೊಳನಿತು ದೂರಂ ಬರುತೆ ಕಾಲೋರೆಯಿಂದಡಿಯಿಡುತೆ ನಡೆವುತಿರೆ (ಶಾಸೋಕು. ೭-೫೭): ಚಂದದ ಪಿಮ್ಮಡ ಸೊಬಗಿಂತ ಬೆರಳುಗಳಿಂದೆಸೆವುವು ಪಡ್ಡ ಯವನ (ನಾಗಳು. ೨೫-೯೫). **ಪಿಮ್ಮಡಿ :** ೧. ತಲೆಕೆಳಗಾಗಿ ಒಟ್ಟದಲಗೂ ಬಿಗಿಯುನರ್ಚಿ ಬೀಟ್ ಪಿಮ್ಮಡಿಯುಂ ಪಡಿಯ ಪೆಜಿಗಂ ನೋಡುತಮ್ಮ ಮುವ ಪೆರ್ಬುಂಟಾಮಂ . . . ಕಂಡು (೦೦ಆಕ. ೫-೦೦೯ ಪ). **ಹಿಂಬಡ :** ೧. ಮೊದಲು ನಾವು ಸ್ಥಿರಾಸನದಲ್ಲಿ ಕೂಡಲು ಪ್ರಾರಂಭಿಸಬೇಕೆಂದು ಹೇಳಲಾಗಿದೆ . . . ಇದರಲ್ಲಿ ಎರಡು ರೀತಿಗಳಿರುವುವು ; ನಾವು ಬೇಕಾದರೆ ಎಡದ ಹಿಂಬಡವನ್ನು ಒತ್ತಬಹುದು ಇಲ್ಲವೇ ಬಲದ ಹಿಂಬಡವನ್ನು ಒತ್ತಬಹುದು (ಶರಕ. ೯೪) ಅಂಗುಷ್ಠ ಎಂಬುದಕ ಮುಂದ ಪಾದವ ಬರಿ ಹಿಂಬಡಕ ಕಾಲು ಭೇದವಿದ ನಡ ಧಡ . . . ಹತ್ತು ಶಿರಗಳ ಬರೆದಾಳು ಮುಂದೆರಡು ಪಾವ ಬರೆವಳು (ಕರ್ನಾಕ. ೨೬೦). **ಹಿಮ್ಮಡ :** ೧. ತವೆ ಹಿಮ್ಮಡಂಗಳು ಮಿಗುವ ಘನವೇಣಲತೆ (ಕರಕ. ೬-೯೩); ಅಣಿಯರಮತ್ತ ಹಿಮ್ಮಡದ ಎಣೆತೂಣೆಯಿಲ್ಲದಡಿಯ ರಂಗಾಯಿಂಬ [ರ]ಮಣಿ ಪ್ಮದೋ ರ್ವಣಿನ್ನೆಂದೊ (ಕಕಾಂ. ೨೨-೦೧); ನೀಲ ಆದಿನನು ತನ್ನ ಹಿಮ್ಮಡದಿಂದ ಸಾವಕಾಶವಾಗಿ ಎದುರಿಗೆ ತಿವಿದನು (ಶಂಗಾಕ. ೨). ೨. ಚಪ್ಪಲಿಯ ಹಿಂಭಾಗದ ಅಟ್ಟೆ : ಆ ಚಪ್ಪಲಿಗಳು ಕೊಂಚ ಅವನತಿಯನ್ನು ಹೊಂದಿದ್ದುದರಿಂದ, ಪಾತ್ರೆ ಅವಕ್ಕೆ ಹಿಮ್ಮಡ ಒಟ್ಟಿಸಿ ಹೊಳವು ಕೊಡಿಸಿದ್ದ (ಋಣಾಕ. ೦೦); ಒಕ್ಕಲಿಗನು ಬಾಗಿಲಲ್ಲಿ ಎತ್ತರವಾದ ಹಿಮ್ಮಡದ ತನ್ನ ಮೆಟ್ಟುಗಳನ್ನು ಬಿಟ್ಟು ಒಳಕ್ಕೆ ಹೋದನು (ಕಕೃಕ. ೦). **ಹಿಮ್ಮಡಿ :** ೧. ಅಟ್ಟ ಹರಿದು ಹರಿಯ ಹಿಮ್ಮಡಿಯ ಹಿಡಿದು ಕೊಂಡು ಬಿಟ್ಟನು ಒಟ್ಟ ಯಾಳಿದೆ ರುದ್ರನೆಂಬವನ (ಸಕಪ. II. ೨೪೬-೨೭); ವೇಣಿಃಪಲ್ಲಂ ತುಡುಕೆ ಹಿಮ್ಮಡಿಯ (ಕಂಸಹ. ೯-೬೬); ಹಿಮ್ಮಡಿಗಳಲ್ಲಿರುವ ಸುಳಿಗಳೆರಡು ಸ್ವಾಮಿಗೆ ನಾಶಕರಗಳಾಗುವುವು (ಸೌಗಂಧಿ. ೬೦೭-೨೦). ೨. ರಬ್ಬರಿನ ಹಿಮ್ಮಡಿಯುಳ್ಳ ಮೆಟ್ಟು . . . ಪಾದರಕ್ಷೆಗೆ ಬೇಕಾಗುವ ಹಾಳೆ, ಹಿಮ್ಮಡಿ, ಬಾರು_ಎಲ್ಲವನ್ನೂ ರಬ್ಬರಿನಿಂದ ಮಾಡಲು ಬರುತ್ತದೆ (ಶಾಕೃ. I. ೫೪): ಕೋಲಿಂಗ್ ಗ್ಲಾಸ್, ಒಮ್ಮಡಿ ಎತ್ತಿದ ಎಕ್ಕಡ . . . ಇಣುಕುಹಾಕುತ್ತವೆ (ಕಮ್ಮಾರು. ೬೦೫). **ಹಿಮ್ಮಡು :** ೧. ವಿಪಾದಿಕೆ_ಕಾಲ ಹಿಮ್ಮಡು ಒಡೆಯುವ ರೋಗ (ಗಂಗಾಕು. ೫೯೧). [ಪಿಂ (<ಪಿನ್)+ಮಡ್ಡ]

**ಪಿಮ್ಮಡಿ** ' ಪಿಮ್ಮಡ ' ನೋ.

**ಪಿಮ್ಮೆಟ್ಟು, ಹಿಮ್ಮೆಟ್ಟು** (ಕ್ರಿ). (ಹೆದರಿ) ಹಿಂದಕ್ಕೆ ಸರಿ ; ಹಿಂಜರಿ : ವಸುಧಾಚಕ್ರಂ ಪದಾಕ್ರಾಂತಿಯಿನದಿರೆ ಭುಜಾಕ್ರಾಂತಿಯಿಂ ದಿಗ್ಗಜಂಗಳ್ ದೆಸೆಯಿಂ ಪಿಮ್ಮೆಟ್ಟೆ (ಜಗಾ. ೯-೬೩); ತೇರೊಳ್ ಪೂಡಿದ ತೇಜಿಗಳ್ ಸರಲ ಕೂರ್ಪಿಂಗಳ್ಕೆ ಪಿಮ್ಮೆಟ್ಟೆ (ಕಕ್ಕಾಕ. ೫೬೩); ಇಟ್ಟಡಿಯ ನೆಟ್ಟನಿಳಿಸಂ ಪಿಮ್ಮೆಟ್ಟೆ ದಟವಟ್ಟಡರೆಯುಟ್ಟಳಿವರಂ ಕೈಗೊಟ್ಟು ಪುಯಿಲಿಟ್ಟರ್ (ಕಕಾ. ೨-೯೩). **ಹಿಮ್ಮೆಟ್ಟು :** " ಹಿಮ್ಮೆಟ್ಟಿತಕ್ಕೆ ಪೆಡಮೆಟ್ಟಿತೆಂದಕ್ಕು " (ಕಕ್ಕೃ. ೬೯); ಇಂತಿಬಿದು ಕೈವಿಟ್ಟು ಪಾತಕಂ ಹಿಮ್ಮೆಟ್ಟೆ ಮುಂತೆ ಹೂವಳೆಗರೆಸಿ ಶಂಕರಂ ನಿಜ ಪುಟ್ಟೆ(ಅಶಾರ. ಕೇ. ೧೨೩-೧೫); ದುರ್ಬಲನೊಡನೆ ಭಂಗಮ್ಮಾಪ್ತಿ ತನ್ನನು ಸುಗಲೆನುತ ಹಿಮ್ಮೆಟ್ಟ ಮುಮ್ಮಲಮಾಚುಗಿದನು ಭೀಮ (ಕುಪ್ಪಾಅ. ೪೦-೨೦); ಹಣ ಬಾಯ ಬಡಿಯಿತು ಸೋತು ಹಿಮ್ಮೆಟ್ಟಿತು ಗುಣವು (ಕಾಹಕ. ೨೦೩-೨). [ ಪಿಂ (<ಪಿನ್)+ಮೆಟ್ಟು ]

**ಪಿಮ್ಮೆಯ್, ಹಿಮ್ಮೆಯ್** (ನಾ). ೧. ದೇಹದ ಹಿಂಭಾಗ. ೨. ಹಿಂದಿನ ಜನ್ಮ ; **ಪೂರ್ವಜನ್ಮ :** ವಿಪ್ಪದೂತರಾ ತುಂಬುರನಂ ಕೆಯ್ದುದಿದು ಕರೆದುಯ್ಯು ಪಿಮ್ಮೆಯ್ಯೊಳೀಂ ನೋಂತನೋ ! ಎನುತೆ ಬಲ್ಲಗೆಯೊಳ್ ಪಂಬಲಿಸಿ (ಅಭ್ಯುಕ. ೨೦-೦೧). **ಹಿಮ್ಮೆಯ್ :** ೧. ಹಿಮ್ಮೆಯ್ಯ ಮುಮ್ಮೆಯ್ಯ ಶೋಧಿಪೆಯಲ್ತೆ ನೀನೊಮ್ಮೆ ಮೈದೋಱಿಂಬರು (ಕರಕ. ೯೨-೦೬೮). [ ಪಿಂ (<ಪಿನ್) + ಮೆಯ್ ]

**ಪಿಮ್ಮೊನೆದೋಱು** (ಕ್ರಿ). ಹಿಂಭಾಗದಲ್ಲಿ ಮೊನೆದೋರು ; ಹಿಂದುಗಡೆಯಲ್ಲಿ ತುದಿ ಕಾಣಿಸು : ಬಿಸ್ಮನೆ ಬಿಗುಪೇಱಿ ಏಱಿ ಪೊಣ್ಮುವ ಮೊಲೆಗಳ್ ಪಿಮ್ಮೊನೆದೋರ್ಪಿನೆಗಂ ಮಾನದುಮ್ಮಾಹದಿಂ ಬಿಗಿದು ಬಿಗಿದು ಬೆಂಡೇಱುವನೋ (ಕಕೆ. ೬-೨೦೯). [ ಪಿಂ (<ಪಿನ್) + ಮೊನೆದೋಱು ]

**ಪಿಮ್ಮೋರೆ** (ನಾ). ೧. ಹಿಂದಕ್ಕೆ ತಿರುಗಿದ ಮುಖ. ೨. ಹಿಂದಕ್ಕೆ ಮುಖ ಮಾಡಿದವನು.

**ಪಿಮ್ಮೋರೆಯಿಸು** = ಹಿಂಜರಿಯುವವರು : ಪಿಮ್ಮೋರೆಯರ್ ಸ್ವಾರ್ಥದಲ್ಲಿಯುತ್ಸಾಹಕೃರನರ್ಥದೊಳ್ ಭಯದೊಳ್ ತಲ್ಲಣಿಸರ್ (ಕೌಶಂದ. ೦೯-೯೦). [ಪಿಂ (<ಪಿನ್)+ ಮೋರೆ (<ಮೋಱೆ) ]

**ಪಿಯಣ** (ನಾ). ಒಬ್ಬಾತನ ಹೆಸರು : ಪಿಯಣನಾಳುತ್ತಿರೆ ತ್ಯೆಲಪದೇವಂ ರಾಜ್ಯಂಗೆಯೆ . . . ಬನೂರಮ್ಮ ಮಾಡಿಸಿದ ಕಲ್ಲು (ಎಕ. VIII. ಸೊರಬ. ೫೪೧ : 986). [?]

**ಪಿಯಾನೊ** (ನಾ). ಹಾರ್ಮೋನಿಯಂನಂತೆ ನುಡಿಸುವ ಒಂದು ಬಗೆಯ ವಾದ್ಯ ; P " ಹಲಗೆಯ ಮೇಲೆ ಅಳವಡಿಸಿರುವ ಕೀಲಿಕೈಗಳನ್ನು ಒತ್ತುವುದರಿಂದ ಆಯಾ ಸನ್ನೆಗಳು ಮೀಟಲ್ಪಟ್ಟು ಅವಕ್ಕೆ ಹೊಂದಿಸಿರುವ ಸುತ್ತಿಗೆಗಳು ತಂತಿಗಳನ್ನು ಬಡಿದು ನಾದವುಂಟುಮಾಡುವ. (ಮತ್ತು ತಂತಿಗಳ ಸ್ಪಂದನವನ್ನು ನಿಲ್ಲಿಸಲು ತಕ್ಕ ತಡೆಗಳನ್ನು ಅಳವಡಿಸಿರುವ) ಮತ್ತು ಸಾ., ಧ್ವನಿಗುಂಫನವನ್ನು ತಕ್ಕಂತೆ ಅನುಗೊಳಿಸಲು ಕಾಲೊತ್ತುಗಳಿರುವ, ಒಂದು ವಾದ್ಯ" (Piano. ೨೦೪೬) : ಮಧ್ಯವಯಸ್ಸಿನ ತೋರವಾದ ಹೆಂಗಸು ಮಿರುಗುವ ಬಿಳಿಯಾದ ಬಟ್ಟೆಯನ್ನು ತೊಟ್ಟು ಪಿಯಾನೊ ಬಾರಿಸುತ್ತಿದ್ದಳು (ಹೂಕಕ್ಕಿ. ೨೯೦); ಶ್ರುತಿ ತಪ್ಪಿದ ಪಿಯಾನೊ, ಗೋಡೆಯನ್ನಲಂಕರಿಸಿದ್ದ ಹಡಗಿನ ಹಳದಿ ತಿರುಗಿದ ಚಿತ್ರಗಳು ಎಲ್ಲದರ ಬಗಗ ಒಂದು ಅಭಿಮಾನ ಮನೆ ಮಾಡಿತ್ತು (ಅಕ್ಷೀ. ೬೯) ; ಭಾರತದ ವಾದ್ಯದ ಅನುಕರಣ ಮಾಡಿರುವ ಈಗಿನ ಪರದೇಶವಾದ್ಯವಾದ ಪಿಯಾನೋ (ಕಂಗೀಕಂ. ೦೨೦). [ ಇಂಗ್. Piano ]

**ಪಿಯಾಲ** (ನಾ). ಒಂದು ಬಗೆಯ ಸಸ್ಯ ; ಪ್ರಿಯಾಲ : " ಮೊಜಿಲೆ= ರಾಜಾದನಂ, ಪಿಯಾಲಃ, ಸನ್ನಕದ್ರುಃ, ಧನುಃಪಟಃ " (ಶಾಕಾ. ೬). ಪ್ರಿಯಾಲ ' ಪರಾ. [ ಸಂ. ]

**ಪಿರಂಗಿ** ' ಫಿರಂಗಿ ' ನೋ.

**ಪಿರಂಗಿಗೆಲಸ** (ನಾ). ಪಾಶ್ಚಿಮಾತ್ಯರ ಕೌಶಲ,—ಕುಶಲಕೆಲಸ : ಕುರುಮೂಡದ ಮೊತ್ತಮೊದಲ ನೆಲೆಯೇಚ್ಚುವಲ್ಲಿ ರಂಗುವಡೆದ ಪಿರಂಗಿ ಗೆಲಸದ ಕಾಲಾಂತರದೊಳವುರಿಸಿದ ಸವಡಿಗನ್ನಡಿಗೊಟಪಿಯೆಡೆಯಂ ಪೋಲಿ (ಜಕಪ. ೬-೧೯೯ ಜ). [ ಪಿರಂಗಿ (<ಫಿರಂಗಿ)+ಕೆಲಸ ]

**ಪಿರಕಣೆ, ಪಿರುಕಣೆ** (ನಾ). ಒತ್ತಾಯವನ್ನು ನಿರೀಕ್ಷಿಸಿ ಆಡುವ ಮಾತು ; ಬಲವಂತದ ನಿರೀಕ್ಷೆಯಿಂದ ಕೂಡಿದ ನಡವಳಿಕೆ : ಈ ಹೆಂಗುಸರ ಬಲವಂತದ ಮಾತುಗಳೂ ಪಿರಕಣೆಗಳೂ ರಾಮಮ್ಮನವರ ಕಿವಿಗೆ ಬಿತ್ತು (ಇರದು. ೧೦೨). ಪಿರುಕಣೆ : ಏನೂ ಬರದೆ ನಾಟಕದಲ್ಲಿ ಪಾರ್ಟು ಮಾಡೋದಕ್ಕೆ ಹೊರಟಿದ್ದೀಯಾ—ಹಾಡು. ಇರಲಿ ಈ ಪಿರುಕಣೆ (ಕದಿಜಾ. ೨೪). [ ? ]

**ಪಿರಚಲು** (ನಾ). (ಮೇಲೆ ಮೇಲೆ ಬರುವ ರೋಗದಿಂದ ಉಂಟಾದ) ತೊಂದರೆ ; ಕಾಟ ; ಹಿಂಸೆ : ಮಧ್ಯ ಮಧ್ಯ ಕಾಹಿಲೆ ಬೇರೆ ಬೀಳುತ್ತಿದ್ದರು. ಕಾಹಿಲೆಯ ' ಪಿರಚಲು ' ಬೇರೆ ಗಂಟುಬಿತ್ತು (ಕಾಳುಕ. ೦೬); ನನಗೆ ಕೆಟ್ಟ ಪಿರಚಲು ಬಂದು ಬಿಟ್ಟಿದೆ (ಗೃಹಂ. ೨೬೪). [ ? ]

**ಪಿರದು** (ನಾ) ಪಿರ್ರೆ ; ನಿತಂಬ : ಅವನ ಸ್ತ್ರೀಯು ಕೃಶವಾದ ನಡುವುಳ್ಳವಳು. ದೊಡ್ಡದಾದ ಪಿರದುಗಳುಳ್ಳವಳು (ಕುಳಸ. ೬).
[ ದೇ. ‖ ತೆಲು. ಪಿರುದು, ಪಿಟುಂದು ]

**ಪಿರಮಿಡ್ಡು** (ನಾ). " (ಮು. ಪುರಾತನ ಈಜಿಪ್ಟಿನಲ್ಲಿ) ಬಹುಭುಜಾ ಕೃತಿಯ ಅಥವಾ (ಸಾ.) ಚೌಕನೆಯ ತಳಹದಿಯ ಮೇಲೆ ಪಕ್ಕಗೋಡೆಗಳು ಇಳಿಜಾರಾಗಿರುವಂತೆಯೂ ಮೇಲಕ್ಕೆ ಹೋಗುತ್ತ ಹೋಗುತ್ತ ಕೊನೆಗೆ ಸೂಚ್ಯಗ್ರವಾಗಿ ಮುಗಿಯುವಂತೆಯೂ ಕಲ್ಲು ಮೊ.ಗಳಿಂದ ರಾಜರ ಸಮಾಧಿಗಳಾಗಿ ಕಟ್ಟಿದ ಸ್ಮಾರಕ ಕಟ್ಟಡ : ಗೋಪುರಾಕೃತಿಯ ಕಟ್ಟಡ" (Pyramid- ಇಂಕಪ) ; P ಇದು ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ : ಸುಮಾರು ಕ್ರಿ.ಪೂ. ೨೬೦೦ರಲ್ಲಿ ಜಗದ್ವಿಖ್ಯಾತವಾದ ಈಜಿಪ್ಟಿನ ಪಿರಮಿಡ್ಡುಗಳಲ್ಲಿ ಒಂದಾದ ಗಿಸೆಯ ಪಿರಮಿಡ್ಡು . . . ಕಟ್ಟಲ್ಪಟ್ಟಿತು (ಕಕಕ. ೭); ದ್ರಾವಿಡನಮೂನೆಯ ಶಿಖರವು ಅಡ್ಡಡ್ಡವಾದ ಹಂತಗಳಿಂದ ಕೂಡಿ, ಪಿರಮಿಡ್ಡಿನ ಆಕಾರವನ್ನು ಹೊಂದಿದೆ (ಕಾಕದ. ೯೯೨).
[ ←ಇಂ. Pyramid ]

**ಪಿರಿ₁, ಹಿರಿ₁** (ಕ್ರಿ). ೧. ತರಿ ; ಕೀಳು ; ತರಚು : ಪಿರಿದ [ ಪಾಠಾಂ. ತಱಿದು, ಬಿರಿತ, ಬಿರಿದ ] ತುಪ್ಪುಳಿನ ಕೊರಳ ಮಿಡುಕಿನ . . . ಪಕ್ಷಿಯು ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ಕೊಕಕಾ. ೦-೨-೦೧). ೨. ಹೊರಕ್ಕೆ ಎಳೆ ; ಸೆಳೆ ; ಕಿತ್ತು ತೆಗೆ : ಸೂರಾಂಬಿಕೆಯ ಮನೆಯ ಕೀರಂ ಕಿಡಪಿ . . . ತೊನೆದು ಸೂರಂ ಸೇರಿ ಪಿರಿಯುತ್ತು ಮಂತ್ಯಜನನನುಯದೆ ಪಿಡಿದು ಪೆಡಗುಡಿಗಟ್ಟಿ ತನ್ನಿಮೆಂದೆನಸುಮಿರ ದಿಂತು ನುಡಿಯುತ್ತಿರ್ಪ ವೇಳೆಯೊಳ್ (ಅಕಾಕ. ೦-೬-೨೬); ಒಱೆಯಿಂದ ಮಿರ್ಚಾಯ ಖಡ್ಗಮನ್ ಪಿರಿದು (ಅಕ್ಕಕ್ಕಾ. ೨-೩೬). ೩. ಹಾಳಾಗು ; ನಾಶವಾಗು ; ಇಲ್ಲವಾಗು : ಸುರಚಾಪಂದೋಲೆ ವಿದ್ಯುಲ್ಲತೆಗಳ ತೆಱ ದೋಲ್ ಮಂಜುಪೋಲ್ಕೊಳ್ಗುಳ್ ಬೇಗಂ ಪಿರಿಗುಂ ಶ್ರೀರೂಪಲೀಲಾಧನ ವಿಭವಮಹಾರಾಶಿಗಳ್ನಿಲ್ಲವಾಗ್ಗಲ್ಗೆ೦ (ಏಕ. II. ೬೬—೦; ಸು. ೭೦೧); ತಾಂ ಬಱಿ ದೆಂತು ಬಂದನೀ ಬಿಸಿಲೊಳಿದೇಕೆ ಮೆಯ್ಯುರಿಸಿನಂ ಪಿರಿದಕ್ಕಟ ತಳ್ತ ಬಾಸುಟುಂ ಪಸಿಯುಮ ನೊಂದನೆಂದು ನುಡಿದಳ್ ತಡೆದೊಯ್ಯನೆ ಬಂದ ನಲ್ಲನಂ (ಲೀಲಾಪ. ೨-೫೭); ಅ ಸುಖಾನುಭಾವಮುಂ ಪಿರಿಗುಂ (ಮುಂಪುರಾ. ೦೩೬-೦೨೬೯). ಹಿರಿ₁ : ೨. ಉರುಗದೆಯಿಂದ ಕೌರವನ ತೊಡೆಗಳನು ಮುಱಿದ ದುರುಳ ದುಶ್ಶಾಸನನ ಕರುಳುಗಳ ನೀ ಹಿರಿದೆ (ಪಾಂದೀ. ೩೦-೨);

ಹಿಂದ ಕತ್ತಿಯೊಡನೆ ಅರಸನೂ ಪ್ರಚ್ಛನ್ನವಾಗಿ ಅವಳ "ಬೆನ್ನೊಳೆ ಪೋದಂ ದೋಷದ ಬೆನ್ನೊಳೆ ಸಂಧಿಸುವ ದಂಡದಂತೆ" (ಕಾವ್ಯಕ. ೬೦); ತಗ್ಗಿದ ಸಲುವಾಗಿ ನೀರಿನ ಕುದಿಯನು ತಣ್ಣೀರು ಸುರಿಯುವ ಬದಲು ಒಲೆಯೊಳಗುರಿಯುವ ಸೌದೆಯೊಳೆರಡನು ಬೇಗನೆ ಹಿರಿವುದೆ ಮೇಲು (ಅಂಕಾಸ. ೨೦೩-೩೩). ೪. ಕತ್ತರಿಸು ; ತುಂಡುಮಾಡು : ಬಾಳೆಯ ಹೊದೆಯ ಹಿರಿದು ಹಸನಾಗಿ ಪಾಕಂ ಮಾಡಿಯದರಜರೆದಾಲಿಲಮೆಸರ ಕರೆವುದು (ಸೂಪಶಾ. ೩-೨೨). ೫. ಒಡೆ ; ಬಿರಿ ; ಸೀಳು : ಎರಡು ಮೋಟಕರಂಗಳಿಂ . . . ಹೊಡೆ ವೃತ್ತ ಬಡಿವೃತ್ತ ಮಾರೆಳ ಮತ್ತೆಯು ಕುಟ್ಟುತಿರೆ ತಲೆ ಹಿರಿದು ಬುಗುಟಿಗಳೆದ್ದೊಡೆದು ನೆತ್ತರು ಬಿಡದೆ ಜೋರನೆ ಸುರಿಯೆ (ಬಸಪು. ೪೮-೨೮). ೬. ಲೂಟಿಮಾಡು ; ಕಿತ್ತುಕೊಳ್ಳು : ಎನ್ನ ಸತಿಯುಂ ಎನ್ನ ಸುತರು ಎನ್ನ ಬಂಧು ಬಳಗವು ಇನ್ನು ಸಾಕಿ ಸಲಹು ಎಂದು ಎನ್ನ ಹಿ [ಪಾಠಾಂ. ಹ] ರಿದು ತಿಂಬರು (ಶ್ರೀಅದ. ೦-೦೬೬-೩); ನಿಂತರ ಕುಳಿತರೆ ದುಡ್ಡು ಹಿರಿಯ್ತಾರೆ (ಗೃಹಂ. ೦೬೧); ಬೆಂದ ಮನೆಯಲ್ಲಿ ಹಿರಿದದ್ದೇ ಲಾಭ (ಗಾದೆ). ೭. (ಸಂತೆ, ಜಾತ್ರೆ ಮುಂತಾದುವು) ಚೆದರು ; ಮುಕ್ತಾಯವಾಗು : ಜಾತ್ರೆಯು ಹಿರಿದ ಮೇಲೆ, ಚೋಮನ ಮನೆಯವರು ಕುಕ್ಕರಳ್ಳಿಗೆ ಬಂದು, ನಾಲ್ಕು ದಿನ ಇದ್ದು ಹೋದರು (ಚೋಮದು. ೩೯೨); ಕೊಳ್ಳಿರಿ ಕುದನು ಕೊಡದೆನಲ್ಲ ಹಿರಿವುದೆಂದೀ ಸಂತೆ ಬಲ್ಲರಾರು ನೆರಸಿದನಲ್ಲದೆ ? (ಗನಿಂಂ. ೫೯-೩).

ಪಿರಿದಿಡು, ಹಿರಿದಿಡು—ಬೇರೆ ಮಾಡಿ ಇಡು ; ಕಿತ್ತಿಡು ; ಪ್ರತ್ಯೇಕಿಸು : ದೆಳಕಲ್ಲ ತಳಕಲ್ಲ ಕಳೆಯಲ್ಲ ಕಲೆಯಲ್ಲ—ನಷ್ಟಮಹುದೂಯಿಲ್ಲಿ ಪ್ರಕೃತಿಯಿಂ ಪುರುಷನಿವ ತನ್ನ ತಾಂ ಪಿರಿದಿಡುವ ಶ್ರೀಮಾರ್ಹ ತಂತ್ರದಲ್ಲಿ (ಕುಲದಿ. ೨೬-೦೦); ನಿನ್ನ ದುರಹಂಕಾರವನ್ನೆಲ್ಲ ಅಡಗಿಸಿ ಅಡಮೀಪಾಲು ಮಾಡ್ತೇ ಇದ್ರೆ ನನ್ನ ನಾಲಿಗೆ ಹಿರಿದಿಟ್ಟುಬಿಡ್ತೀನೆ (ಅಕಾಂ. ೦೬೨).
[ದೇ. ‖ ತಮಿ. ಪಱಿ. ಮಲ. ಪಱಿ]

**ಪಿರಿ₂** ' ಪಿಱಿ ' ನೋ .

**ಪಿರಿ₃** (ನಾ) ನವಿಲುಗರಿ ; ಪೀಲಿ : ಅಂತು ಬರ್ವಿಂತುಪುರಕಾಂತೆಯರ ನಡುವೆ ಪಿರಿ [ಪಾಠಾಂ. ಪೀಲಿದಟ್ಟಿ]ಯ ತುಱುಂಗಲೊಳು ದ್ಯಾನಿಸಂಡಂ ಬೆರಸು ವನದೇವತೆಯ ಬರ್ಪಂತೆ . . . ಬಾದಳ್ (ಪರ್ಣಪು. ೩-೯೯ ಜ); ಪಣ್ಣಿದ ರಣದೊಳ್ಪನ್ನಯ ಕಣ್ಣಲ್ಲಮನೊಂದುನಿವಿಷಮಾತ್ರದೆ ಪಿರಿಯ ಕಣ್ಣನಿಱಿ ತೋಱದೊಡೆ ಮುಕ್ಕಣ್ಣಂ ನಾನಲ್ಲ (ಶಿಅ. ೦೦-೩೬).
[ದೇ. ‖ ತೆಲು. ಪಿರಿ]

**ಪಿರಿ₄**, ಪೆರ್, ಪೆರು₃, ಪೇರ್₁, ಹಿರಿ₂, ಹೆರ್, ಹೇರ್₁ (ಸಪೂರೂ). ' ಪಿರಿದು ' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : ' ಪಿರಿತನ ', ' ಪಿರಿಯಕ್ಕರ ' ಪರಾ. ಪೆರ್ : ' ಪೆರ್ಗರಡಿ ' ' ಪೆರ್ಗಿಚ್ಚು ' ಪರಾ. ಪೆರು₃ : ' ಪೆರುಂದಟ್ಟಾರ ' ಪರಾ. ಪೇರ್₁ : ' ಪೇರಡವಿ ', ' ಪೇರಡಿ ' ಪರಾ. ಹಿರಿ₂ : ' ಹಿರಿಗನಸು ', ' ಹಿರಿಗೆಯ್ಮೆ ' ಪರಾ. ಹೆರ್ : 'ಹೆರ್ಗಂಬ' ಪರಾ. ಹೇರ್₁: 'ಹೇರಂಬು', ' ಹೇರಿಟ್ಟಿ ' ಪರಾ. [<ಪಿರಿದು₁]

**ಪಿರಿಕಿ₁, ಬಿರಿಕಿ** (ನಾ). ೧. ತಿರುಗಣೆ ; ಮುರಸುತ್ತು : ಬಾಗಿಲುಗಳಿಗೆ ಇನ್ನೂ ಪಿರಿಕಿ ಹಾಕಿಲ್ಲ (ಕೂತ). ಬಿರಿಕಿ : ೨. ನೂಲು ತೆಗೆಯುವ ಸಾಧನ ; ತಕಲಿ : ಸಣ್ಣೆಳೆಗಳಂ ತೆಗೆದು ಸುತ್ತುತ್ತ ಬಿರಿಕಿಯಂ ತಿಣ್ಣನೇ ತಿರುಹುತಿರೆ (ದುಕಪು. ೬-೦೨).
[ದೇ. ‖ ತುಳು. ಪಿರಿಕಿ, ಪಿರಿಕಿ—ತಿರಿಚುವಿಕೆ, ತಿರುಗುವಿಕೆ]

**ಪಿರಿಕಿ₂, ಪಿರ್ಕಿ** (ನಾ). ೧. ಭಯ ; ದಿಗಿಲು : 'ಪಿರಿಕಿತನ' ಪರಾ. ೨. ಭಯಪಡುವವನು ; ಅಂಜುವ ಸ್ವಭಾವದವನು; ಪುಕ್ಕಲ : " ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ— ೪ ಹೆದರುವವನ ಹೆಸರು.

ಭಯಪಡುವ ಪಿರಿಕಿ" (ಬಿನ್ನ್ಯಾಂ. ೬೭) ; ಪಿರಿಕಿ. ಪುರುಕ: ತಮಿಳಿನಲ್ಲಿ ಉ ಬಹುವೇಳೆ ಇ ಆಗಿ ಉಚ್ಚಾರವಾಗುತ್ತವೆ. ಪುಲಿ ಪಿಲಿ; ಇದರಂತೆ ಪುರುಕ ಪಿರಿಕಿ ಆಗಿದೆ. ಅರ್ಥ ಪುಕ್ಕಲುಮನುಷ್ಯ (ಜಾನಪದ. ೧೦೭). ಪಿರ್ಕಿ: ೩. ಹುಚ್ಚು; ಮರುಳು: ಅವರಿಗೆ ಪಿರ್ಕಿಯೆಂದು (ಹುಚ್ಚೆಂದು) ನನಗೂ ಪಿರ್ಕಿಯೇ ? (ಗಂಗಾಜ. ೦೬೩). ೪. ಹುಚ್ಚ ; ಮರುಳ : ಆತ ಏನಾದರೂ ಪಿರ್ಕಿಯ ಹಾಗೆ ಮಾತಾಡಲಿಕ್ಕೆ ಹತ್ತಿದನೆಂದರೆ ಕೂಡಲೇ . . . ಕುಂಕುಮವನ್ನು ಸ್ವಲ್ಪ ಅವನ ಮೇಲೆ ಹಾರಿಸಿಬಿಡಿ (ಕೃಷ್ಣಾಂತ. ೨೬); ಸಾಣೆಕಲ್‌ನಂತಹ ಮಿತ್ರರೇ "ಅದೊಂದು ಪಿರ್ಕಿ ಅಲ್ಲವೇ" ಎಂದು ಅನ್ನುವುದೂ ಉಂಟು (ಶಿಶಾಂ. ೨೬).

[ ದೇ. ೩ ತಮಿ. ಪಿಱುಕ್ಕು ; ತೆಲು. ಪಿರಿಕಿ, ಪಿಱಿಕಿ ]

**ಪಿರಿಕಿತನ** (ನಾ). ಭಯ ; ಅಂಜಿಕೆ: ಇಷ್ಟಾದ ವೇಳೆಯೂ ನಮ್ಮ ಕಷ್ಟ ನಿವಾರಣೆಯಾಗಲಿಲ್ಲ ; ನಮ್ಮ ಪಿರಿಕಿತನ ದೂರವಾಗಲಿಲ್ಲ (ಕಂಜಾಕ್ತ. ೬).

[ಪಿರಿಕಿ₃+—ತನ]

**ಪಿರಿಕಿಸ್ವಭಾವ** (ನಾ). ಅಂಜುವ ಸ್ವಭಾವ ; ಪುಕ್ಕಲುತನ : "ಪಿರಿಕಿ ಸ್ವಭಾವದ ; ದಿಗಿಲು ಬೀಳುವ ; ರೇಗುವ" (Jumpy. ೩೦೬೮).

[ ಪಿರಿಕಿ₃+ಸ್ವಭಾವ ]

**ಪಿರಿಕೆಱೆ** (ನಾ). ಒಂದು ಊರಿನ ಹೆಸರು : ಅವನೀತಮಹಾಧಿರಾಜೀನ ದತ್ತೇನ ಪಡಿಯೇಱೆಱೊಳಂ ಊರೂರೊಳ್ಪನ್ನಿರ್ಕಣ್ಣಾಗಙ್ಗೆಯ್ದು ಅಮ್ಮಲಿಮಣ್ಣಾಂ ತಳವನಪುರದೊಳ್ಪಳಮಿತ್ತಿಯ ಮಣ್ಣಿಗಿರಿಗಿಟಿಱೊಳ್ಪ ನ್ನಿರ್ಕಣ್ಣಾಗಂ ಪಿರಿಕೆಱೆಯೊಳಂ ರಾಜಮಾನಂ . . . ದತ್ತಂ (ಎಕ. I. ೦-೫೦ ; ೪೬೦). [ ಪಿರ್₄(<ಪಿರಿದು₁)+ಕೆಱೆ ]

**ಪಿರಿಚು, ಪಿರುಚು, ಪಿಱಿಚು, ಪಿಱುಚು** (ಕ್ರಿ). ೧. ಬೇರೆ ಮಾಡು ; ಪ್ರತ್ಯೇಕಿಸು : ಪೂಜನೇನಾದೊಡಂ ಕುಱಿತು ತದ್ರೂಪಮಂ ಪಿರಿಚುತದ ಜಾತ್ಯಾಭಾಸಗಳನಾತ್ಮನೆಂದಱಿಯಲೊಂದನೆಯ ಸವಿಕಲ್ಪ (ಅಪರಾ. ೬-೪-೦೦); ಬಱಿದೆ ಹೋಗದಿರು ಬಾ ಬಾರೆಂದು ಕರೆದೊಂದು ಮಿಱುಗುವ ಪದಕವ ಕೊಟ್ಟು ಪಿರಿಚಿ ಮತ್ತವಳೊಡನಿದ್ದರ ಮನ್ನಿಸಿ ನೆಱೆಜಾಣ ಬೀಳ್ಕೊಟ್ಟನೊಡನೆ (ಚಕ. ೪೯-೬೬). ೨. ಬೇರೆಯಾಗು ; ಅಗಲು ; ಬಿಟ್ಟುಹೋಗು : ಮಱಸಿದೆ ತಾಯಿತಂದೆಯ ನಿಜದೇಶವ ತೊಱಸಿದೆ ಸಕಲಸುಖಗಳಿಂದ ನೆಱೆ ನಿನ್ನ ನಲ್ಲಗಳ ಮೆಚ್ಚಿದೆನಿನ್ನು ಪಿರಿಚಿ ಸೈರಿಪೆ ನೆಂತೊ (ಸೋಬಸೋ. ೯-೬೨); ನೆಱೆಯದಿರಕ್ಕ ಬೇಗದಿ ನೆಱೆದಾಗಮ್ಮ ಪಿರಿಚಿ ಹೋಹಿರಿ (ಚಕ. ೯೩-೯೩). P ಮೇಲಿನ ಎಲ್ಲ ಪ್ರಯೋಗಗಳಲ್ಲಿ ಶಕಟರೇಫದ ಪ್ರಾಸವಿರುವುದು ವಿಮರ್ಶಾರ್ಹವಾಗಿದೆ. ಪಿರುಚು : ೧. ಪೂರಗಣ ಘಟಾದಿ ವಿಷಯದ ನಾಮರೂಪಗಳ ಪಿರುಚುತುಳಿದಸ್ತಿಭಾತಿ ಪ್ರಿಯಗಳ ಸ್ಮರಿಸುವುದೆ . . . ಸವಿಕಲ್ಪಕಸಮಾಧಿಯಹುದು (ಕೈವಲ್ಯ. ೩-೬೭-೦). Δ ಪಿಱಿಚು : ೧. ಕಟಂಗೊಡಗೆಯನೂ ಪಿಱಿಚಿ (ಶಾಸಂ. ೧೯೩೯, ಫೂಗಸೂರು. ೦೫೬-೦೦ ; 1419). Δ ಪಿಱುಚು : ೧. ಅರಸಣ್ಣ ಹೆಗ್ಗಡೆ ತಾನು ತೆಱುವ ಭಂಡಾರಸ್ಥಳದ ನೆಲುವಾಗಿಲಿಗೆ ಒಕ್ಕಲನು ಎಂಗಡಿಸಿ ಕೊಂಡು ಧರ್ಮಸ್ಥಳವಾದ ತುಂಬುರವಳ್ಳಿಗೆ ಒಕ್ಕಲ ಪಿಱುಚಿ ಕೊಟ್ಟು (ಮೈ.ಅಂ. ೦೯೬೨. ೯೨-೩೦; 1419); ಪಟ್ಟದ ಗ್ರಾಮಕ್ಕೆ ಬಾರಕೂರ ರಾಜ್ಯ ದೊಳಗೆ ಯಿಂನೂಱ ಅಯಿವತ್ತು ವರಹನ ಹುಟ್ಟುವಳಿಯ ಗ್ರಾಮವನೂ ಪಿಱುಚಿ ಕೊಡ ಹೇಳಿ (ಮೈ.ಅಂ. ೦೯೬೯. ೩೦-೭ ; 1451). [ಪಿರಿ₁+—ಚು₁]

**ಪಿರಿತನ, ಹಿರಿತನ** (ನಾ). ೧. ಹಿರಿಮೆ; ಮೇಲ್ಮೆ; ಶ್ರೇಷ್ಠತೆ : ವಯಸ್ಸಿ ಗೇಂ ಪಿರಿತನಮೆ ? ನಿನ್ನ ಪರ್ಮೆಗೆ ವಂದಿ ನಿನ್ನಾತ್ಮದೋಷೆ ; ಮೇಣ್ ನಿನ್ನ ತೇಜಕ್ಕೆ ಸಾಕ್ಷಿ ನಿನ್ನಕ್ಷಿ ಕಮಲಾಕ್ಷ ! (ಶ್ರೀರಾಮಾ. ೦೬೩-೨೬೫). ಹಿರಿತನ : ೧. ಅಪಕಾರಿಗುಪಕಾರವೆಸಗುವುದಾದರೆ ಅದರೊಳು ಹಿರಿತನವುಂಟು (ಕಂಜಾಕ. ೨೨-೯೯); ಹಿರಿತನಕ್ಕೂ ಕಿರಿತನವೇ ಮಿಗಿಲು ಇದರೊಳಿಲ್ಲ ಔಚಿತ್ಯದ ದಿಗಿಲು (ಗಜೀಕ. ೨-೨೬). ೨. ಒಡೆತನ ; ಯಜಮಾನಿಕೆ : ಹಿರಿತನಕ್ಕೋಗುತ್ತಿ ಗರುವಿಕೆ ಮಾಡುತ್ತಿ ನೆರೆಹೊರೆಯರ ಕೂಡ ಬಡಿ ದಾಡುತ್ತಿ (ಫೋಂಲ. ೪-೦೫-೩); ತೊತ್ತಿಗೇತಕೆ ಮನೆಯ ಹಿರಿತನ (ಕ್ಷ್ಯಕಾಂ. ೦-೩೦). ೩. ಪ್ರಾಚೀನತೆ : ಈ ಕಾವು ಶಬ್ದದ ಹಿರಿತನವು (ಪ್ರಾಚೀನತೆಯು) ಕಾವೂರು, ಕಾವಾಡಿ . . . ಇತ್ಯಾದಿ ಊರ ಹೆಸರುಗಳ ಮೂಲಕವೂ, ಕಾವಕ್ಕ, ಕಾವಮ್ಮ, ಕಾವು ಎಂಬ ಹೆಂಗಸರಲ್ಲಿ ಬರುವ ಹೆಸರುಗಳ ಮೂಲಕವೂ ಉಳಿದು ಬಂದಿದೆ (ಕುಟುಜಾ. ೨೦೯).

[ಪಿರ್₄ (<ಪಿರಿದು₁) +—ತನ]

**ಪಿರಿತಿನಿ** ' ಪಿಱಿತಿನಿ ' ನೋ.

**ಪಿರಿತಿನಿಸು** (ನಾ). ಮಾಂಸಾಹಾರ : ನರಿಗೇನು ಪಿರಿತಿನಿಸೊ ಕಾಯುಂಡೂ ಬೇಕೆರಡು (ಕಾಂ.ಹ. ೩೬-೯೦). [ಪಿರ್₃ (<ಪಿಱ್)+ತಿನಿಸು₁]

**ಪಿರಿದೀ** (ಕ್ರಿ). ಹೇರಳವಾಗಿ ಕೊಡು ; ಹೆಚ್ಚಾಗಿ ಕೊಡು ; ಅಧಿಕವಾಗಿ ನೀಡು : ಅವಂದಿರ್ಗೆ ಪಿರಿದಿತ್ತು ಕಳಿಪುತೆ (ಜಲಂ. ೦೨-೦೯೩೬) ; ಧನಮಂ ಪಿರಿದಿತ್ತಪೆನೆಂಬ ಮಾಳ್ಕೆಯಂ ಮನದೊಳವರ್ಚ (ರಾಜಾ. ೦೦-೦೬೩). [ ಪಿರಿದು₂ (<ಪಿರಿದುಂ)+ಈ₂ ]

**ಪಿರಿದು₁, ಹಿರಿದು₁** (ನಾ). ೧. ದೊಡ್ಡದು ; ಗಾತ್ರವಾದುದು ; ಘನ ವಾದುದು : ಎಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತರೆಯಂತ್ರಿಟ್ಟು ಮಚ್ಚರ್ದಿದಂ . . . ಕಂಡು (ವಡ್ಡಾ.ಆ. ೬೬-೨೬) ; ಕತೆ ಪಿರಿದಾದೊಡಂ ಕತೆಯ ಮೆಯ್ಯಿಗಡಲೀಯದೆ ಮುಂ ಸಮಸ್ತಭಾರತ ಮನಪೂರ್ವಮಾಗಿ ಸಲೆ ಪೇಟ್ದ [ಕವೀಶ್ವರರಿ]ಲ್ಲ (ಪಂಪಭಾ. ೦-೦೦); ಪಿರಿದೊಂದು ವಸ್ತು ದೊರೆಕೊಂಡುದು ಬಾರ್ಪರೆ ಬರ್ದೆನೆಂದು ರಕ್ಕಸ ನಿದಿರೆರ್ದು ಕೊಲ್ವ ಪದದೊಳ್ (ಹುಳಿಹಾ. ೬-೦೬). ೨. ಮಿಗಿಲಾದುದು ; ಹೆಚ್ಚಾದುದು ; ಅತಿಶಯಂಮಾದುದು : ಇಂತಪ್ಪ ಕ್ಷತ್ರಿಯಪುತ್ರಾದಿ ಗಳ್ಗೆಲ್ಲಮೆನಗೆಱಗಿ ಪೊಡಮಟ್ಟು ಕಿಂಕರ್ವಾರ್ಣಂಗೆಯ್ದಪ್ಪರುಣ್ಬದರ್ಶೇವಿ ಗಳ್ ಸಂಕಟಮಿಲ್ಲ ತಪದ ಫಲಮಿನ್ನುಂ ಮುಂದೆ ಪಿರಿದುಂಟೆಂದು ಬಗೆ ದಿಂದುಪವಾಸಂಗೆಯ್ದವು (ವಡ್ಡಾ.ಆ. ೬೨-೬೮) ; ಮುಳಿಸೆಂಬುದೆಸಗೆ ಕೌರವರೊಳೆ ಪಿರಿದು (ಕುಕಹಾ. ೬-೬೨) ; ಪಿರಿದಪ್ಪ ಸಂತಸಮನೆಯ್ದು ಬಸಂತಂ . . . ನಿಸ್ಸಾಳಮಂ ಸೂಱೆಸವೇಟಲ್ (ಅಭ್ಯ.ಆ. ೩೨೦); ಬೆಟ್ಟಗಳ ಕಪಿನಿಕರ ತಂದೊಡೆ ಕಟ್ಟಿದನು ನಳ ರಾಮ ಶರಧಿಯ ಕಟ್ಟಿದುದು ಪಿರಿದಲ್ಲ (ಸಂಕಕ. ೨೦-೬೬). ೩. ಶ್ರೇಷ್ಠವಾದುದು ; ಮೇಲಾದುದು : ಕತೆ ಕಿಱಿದಾದೊಡಂ ಕತೆಯ ನಾಯಕನುನ್ನತವಂಶವೀರ್ಯವಿಕ್ರಮ ಮಹಿಮಪ್ರಪಂಚಿತಗುಣಂ ಪಿರಿದು (ಆದಿಪು. ೦-೯೬). (ಗು). ೪. ಹೆಚ್ಚಾದ ; ಅಧಿಕವಾದ; ಬಹಳವಾದ . ಕುದಿಸುವಿದತ್ತಣಿಂ ಕುದುರೆ ನೂಱಱೊಳು ಬಲದಾನೆ ಪತ್ತು ತಾಗಿದುವೆನೆ ದೋಷಮಾ ಪಿರಿದುಸಂಖ್ಯೆಯೊಳೇಕಬಹುತ್ವಸಂಗದಿಂ (ಶಬಾ. ೦-೨೨೦); ಪಿರಿದು ಮಾತೇಕೆ ಸಿಲುಕಿದೆವೆಮಗೊಡೆಯರಿಲ್ಲ (ಶಿಲಕ. ೮೬. ೦೬-೦೦); ಪಿರಿದು ಭಂಗವನಾಂತೆನೆನುತಬ್ಧಿ ತಗ್ಗಿ ತಾಂ ಹೆಚ್ಚುಕುಂದಿನೊಳೆಸೆದುದು (ಕಾವ್ಯ. ೨-೩). ೫. ಶ್ರೇಷ್ಠವಾದ ; ಮೇಲಾದ : ಪಿರಿದೈರಾವತಕಮನು ಪೂರ್ಣ ಚಂದ್ರನ . . . ಕಂಡು ನೆಱೆ ಕಣ್ದೆಱೆದಳು (ಕಂಕಂ. ೯-೩೨). ೬. ಅತಿಶಯ ವಾದ; ಮಿಗಿಲಾದ; ವಿಶೇಷವಾದ : ಕಿಱಿದಱೊಳೆ ಪಿರಿದುಮರ್ಥ ಮನಱಿಪಲ್ ನೆಱೆವಾತನಾತನಿಂದಂ ನಿಪುಣಂ (ಶಬಾ. ೦-೦೩) ; ನೀಲ ನಿಷಧಮುಮನೆಯ್ದುವ ನೀಲದ ಗಜದಂತಗಿರಿಗಳುಪ್ಪುವು ಪಿರಿದುಂ ಲೀಲೆಯಂ (ಆದಿಪು. ೨-೨೦); ತವದ ಪಿರಿದುಬ್ಬಿಯಿಂದಿದಸವರ್ಣರುಮ ಱಿಯ ನೆಱೆಯ ಪೇಟಿಸಿ (ಶಾಂತಿಪು. ೦-೩೩). ಹಿರಿದು₁ : ೧. "ಪಿರಿ— ಸ್ಥೌಲ್ಯೇ. ಹಿರಿದರೊಳಂ. ಕಿರಿದರೊಳಂ" (ಶಾಶಸಂ. ೨೦); ಅಲ್ಪವೊ ಭೂಮವೊ ಹಿರಿದೋ ಕಿರಿದೋ . . . ರಸಪ್ರಯೋಜನ ಭುವನಂ

ಕವನಂ : ಭಗವಂತನ ಕವಿ, ಸಹೃದಯನಾಂ! (ಅಹೀ. ೬೦-೦) ೨. ಹಿರಿದಪ್ಪ ಸ್ನೇಹಂ ಸಿಂಹಕ್ಕಂ ವೃಷಭಕ್ಕಂ ಕಾಂತಾರದೊಳಾಗಿರಲ್ (ಶಂಶಕ. ೨೦-೦೦); ಹಾನಿ ಹಿರಿದಂಟಜೀವನಂಗುಸ್ಪಂದಶಕುನದಲಿ (ಸಂಶಕ. ೦೬-೦೯); ಪರಿಕಿಸಲು ಕೋಡಗದ ಮಾಂಸವು ನರಪತಿಗಳಿಗೆ ಯೋಗ್ಯವೇ ಹೇಳರಸ ಹಿರಿದಹ ಹೇಸಿಕೆಯ ಕೈಕೊಂಡೆ (ಕೊಕಣ. ೯-೯-೩೬). ೪. ಹಿರಿದು ದುಃಖವಹ ಧನದಿಂ ಕಪಟಿಯಾದ ಮಿತ್ರನಿಂದೇಂ ಪ್ರಯೋಜನಂ (ಶಂಶಕ. ೦೦೦-೦೩); ಲಸತ್ಕ್ರಿಯದನಾಂ ಪುಣ್ಯನಿಮಿತ್ತಂ ಹಿರಿದಂ ಹರಿಸದೊಳಸಿರಿದೆನು (ಅಜೀತ. ೦-೨೬). ೫. ಪಂಚಭೂತಮಯವಾದ ಬ್ರಹ್ಮಾಂಡ ಶರಣ ಸಂಗದಲ್ಲಿ ಪಂಚಬ್ರಹ್ಮಮಯವಾಯಿತ್ತಾಗಿ ಇಷ್ಟಖಂಡಿತವಾಗಿ ಸೌರಾಷ್ಟ್ರ ಸೋಮೇಶ್ವರನ ಶರಣರಿಗೆ ಹಿರಿದೊಂದು ಘನವಿಲ್ಲ (ಅಕಕ. ೯೩-೦೦೦). 'ಕಿಱಿದು' ಪರ್ಯಾ.

**ಪಿರಿಪಿರಿದು, ಹಿರಿಹಿರಿದು** (ದ್ವಿರುಕ್ತಿ) : ಪಿರಿಪಿರಿದಾಗಿ ಗಡಣಿಸಿ ದಿಸುತ . . . ಬಳಗಿಹ ಕೊಪ್ಪರಿಗೆಗಳನನಿತುಮಂ ತರಹೇಳು ಬೇಗ ದೊಳಿನುತ (ಅಸಪು. ೩೯-೦೬): ಗುಹೇಶ್ವರಲಿಂಗವ ಕಿಱಿಕಿಱಿದಾಗಿ ನೆನೆದರೆ ಹಿರಿಹಿರಿದಾಗಿ ಕಾಡುವದು ನೋಡಾ ಮಹಾಹು (ಕೊಸ್ವಸಂ. ೦೩೩-೯). **ಪಿರಿದಾಗು, ಹಿರಿದಾಗು**=ಹೆಚ್ಚಾಗು; ವೃದ್ಧಿಯಾಗು; ಬೆಳೆ : ರಾಗು ಪಿರಿದಾಯ್ತು ವಸಂತಾಗಮದೊಳ್ (ಬುಲ್ಲಪು. ೩-೬); ಒರ್ವ ಬಾಲೆ ಮುಗ್ಧೆ ಹರೆಯಂ ಕಿಱಿದು ಯೌವನಂ ಪಿರಿದಾಗಿ ಮುಖಮೆಲ್ಲಂ ಕಣ್ಣ . . . ನೋಟಮೆಲ್ಲಂ ಬೇಟಮೆನಿಸಿ (ಶಂಶಕ. ೯-೩೬); ಎನಿತೆನಿತು ಭೂಮಿ ಕ್ರಮದಿಂ ಮಾಣ್ ಕಿಱಿದಾಗೆ ಅನಿತನಿತು ತನ್ನಯ ಮನಂ ಹೆಚ್ಚಿ ಹಿರಿದಾಗೆ (ಚಳಿಕೆ. ಕೀ. ೩೦-೨); ಇತ್ತ ದಿನ ಹಿರಿದಾದವೀಗಳು ಹೊತ್ತ ಕಾರ್ಯದ ಹೋಱಿಗೆ ಯಾವುದೊ ಹದನ ಹರ ಬಲ್ಲ (ಸಂಶಕ. ೩-೬೩). **ಪಿರಿದು ಮಾಡು** = ಹೆಚ್ಚು ಮಾಡು ; ವಿಸ್ತರಿಸು; ದೊಡ್ಡದಂ ಮಾಡು : ಮಹಾದ್ಭುತಭಯರೌದ್ರ ಭಯಾನಕವೀರರಸಂಗಳನೆ ಕಪಟಕ್ರಿಯೆಯಿಂ ಪಿರಿದು ಮಾಡಿ ಪೇಟ್ವುದುಂ (ಶಂಶಕ. ೯೬-೦೯). **ಪಿರಿಯ, ಹಿರಿಯ**—೧. (ವಯಸ್ಸು, ಪ್ರಭಾವ, ವಂಶ, ಗುಣ ಮೊದಲಾದಂವುಗಳಲ್ಲಿ) ದೊಡ್ಡವನು; ಶ್ರೇಷ್ಠ : ಏಂ ಪಿರಿಯನೋ ಖಗೇಂದ್ರಾಧೀಶಂ (ಶಾಂಶಪು. ೩-೯೩); ಕುಲಗೊಳು ಕಿಱಿಯಂ ಮನದೊಳು ಪಿರಿಯಂ (ಶಿಚಮಾ. ಕೀ. ೨೦೩-೦೩); ಧರ್ಮಶಾಸ್ತ್ರದೊಳು ಭೇದಿಸಿ ಪಿರಿಯರು ಪೇಳಿದುದನೆ ಕೃತಿಗೈದಾನು ಪಿರಿಗೊಳಿಸಿದೆನು (ಪುಂಶ. ೦-೩೦); ಮನಸು ಹೇಸದೆ ಕೂಡಿಕೊಂಡಿಪ್ಪನುವ ನೋಡಾ ಹರಹರಾ ತನಗನುಮತಮೆಯಿದು ತಾವು ಸರ್ಬಕೆ ಹಿರಿಯರಾಗಿರ್ದು (ಅಸಪು. ೩೬-೬) ; ಅರಸನಾಗಲಿ ಧನಿಕನಾಗಲಿ ಹಿರಿಯನಾಗಲಿ ಬಡವನಾಗಲಿ ಮರಣ ಜನಿಸಿದ ಬಳಿಕ ತಪ್ಪದು (ಕುಚ್ಯಾಕ್ರೋ. ೬-೨೯). ವಿಜಯದಾಸರು ಮನೆಯ ಹಿರಿಯರಿದ್ದಂತೆ ಊರಿನ ಹಿರಿಯರೂ ಆಗಿದ್ದರು (ಕಂಡು. ೦). ೨. ಮೊದಲನೆಯ ಮಗ; ಜ್ಯೇಷ್ಠಪುತ್ರ : ಹಿರಿಯನಲಿ ಜನಕಂಗೆ ಮೋಹವು ಕಿಱಿಯನಲಿ ಕಡುಮೋಹ ಜನನಿಗೆ (ಸಂಶಕ. ೫೦. ೦-೩೯). ೩. ಪತಿ; ಯಜಮಾನ : "ಹಿರಿಯ . . . ಹಿರಿಯ" ಅವಳ ನಾಲಗೆ ಆ ಅಕ್ಷರಗಳನ್ನು ಉಚ್ಚರಿಸಬೇಕಾದರೆ ಏಕೋ ತೊದಲಿದ ಹಾಗೆನ್ನಿಸಿತು (ಗುಣಾಗ. ೦೩೦); ನಮ್ಮ ಹಿರಿಯಾ ಮೊದಲಿನ ಗುಣಾ ಬಿಟ್ಟು ಸಂಭಾಯಾತ ಆಗಿದ್ದ. ಈಗ ಗೌಡರು ಬರಾಣಾ ಮತ್ತ ಕುಡಿಯೂದು, ನನ್ನ ಹೊಡಿಯೂದು, ನಡಿಸ್ಯಾನ (ಗ್ರಾಮೂಮ. ೩೨೦). ೪. ಬ್ರಾಹ್ಮಣ; ದ್ವಿಜ : "ದಿಮ್ಮಿದರುಮೆನಲ್ ಸ್ವೈದರೆನೆ ಗನಹರೆನೆ ಪೇರಿದರ್ ಪಾರ್ವರೆನೆ ಪಿರಿಯರೆನೆ ದ್ವಿಜರ ನಾಮಂ" (ಶಬ್ದಮಂ. ೩೩). **ಪಿರಿಯ ಕೋಲ್, ಹಿರಿಯ ಕೋಲ್** — ೧. ದೊಡ್ಡ ಕೋಲು ; ಬಲವಾದ ದೊಣ್ಣೆ. ೨. ಭೂಮಿಯನ್ನು ಅಳೆಯಲು ಉಪಯೋಗಿಸುವ ಒಂದು ಬಗೆಯ ಅಳತೆಗೋಲು : ಸುಗನ್ಧವರ್ತಿ ಸೀಮೆಯಿನ್ದ ಪಡುವಲು ಪಿರಿಯ ಕೋಲಲು ಮತ್ತರು ೬ (ಶಾಇಪ. XX. ೦೩-೯ ; 875) ; ಸರ್ವ್ವನಮಸ್ಯ ಸರ್ವ್ವಬಾಧಾಪರಿಹಾರವಾಗಿ ಬಿಟ್ಟ ಕೆಯಿ ಹಿರಿಯ ಕೋಲ ಮತ್ತರೇಳು (ಶಇ. II. ೨೯-೩೨; 1167). **ಪಿರಿಯ ಪಾಲಾಳ್** — ದೊಡ್ಡವಂಶಕ್ಕೆ ಸೇರಿದ ವ್ಯಕ್ತಿ; ಉತ್ತಮಕುಲಕ್ಕೆ ಸೇರಿದವನು : ನೀನ್ ಕಂಡಪಯ್! ಪಿರಿಯ ಪಾಲ್ ಅಳ್ಗಳ್ ಕೀಟ್‌ಪಟ್‌ಯ ಕೊಳ್ಗಿಯನ್ ತಾಮೊಂದುಮುಟ್ಟಿಯರ್, ಪಿರಿದಟಿಪರೆಂದು (ಅಂಶಗೂ. ೦೩-೨೯೦). **ಪಿರಿಯ ಮಗ, ಹಿರಿಯ ಮಗ, ಹಿರೀಮಗ, ಹಿರೇಮಗ**— ದೊಡ್ಡ ಮಗ; ಮೊದಲನೆಯ ಮಗ; ಜ್ಯೇಷ್ಠಪುತ್ರ : ಹರಿಶ್ಚಂದ್ರನೆಂಬ ತನ್ನ ಪಿರಿಯ ಮಗನಂ ಕರೆದು ... ಪೇಟ್ಪೊಡೆ (ಅಂಪು. ೨-೦೯ ಪ); ಅರಸನ ಪಿರಿಯ ಮಗನನೀಗಳೆ ಪೋಗಿ ಕೊಂದಪೆಂ (ಶಂಶಕ. ೦೦೩-೩); ಧುರವಿಶಾರದನಹೆ ವಿರಾಟನ ಹಿರಿಯ ಮಗ ನೀನಂದು ಗೋಕುಲಹರಣದಲಿ ಕಲಿಯಾಗಿ ಕಾದಿದೆಯೆನುತ ತೆಗೆದೆಚ್ಚ (ಕುಬ್ಯಾಶೀ. ೩-೨೩); ನೃಪೋತ್ತಮನ ಹಿರಿಯ ಮಗ ತಾನೀಗ ತನ್ನಂತರದಲಾ ಭರತಂಗೆ ಸೇರಿತು ಧರಣಿ (ಕೊಕಣ. ೯-೨-೨) : ಅವರ ಹಿರೀಮಗ ದೊಡ್ಡ ಕೆಲಸದಲ್ಲಿದ್ದಾನೆ (ಕೂಂ); ಹಿರೇಮಗ ಮಹಮುದಶಾಬಾಸಾಹೇಬರು . . . ಈ ವರ್ತಮಾನವೆಲ್ಲ ಹೇಳಿದರು (ಕೃಶಕ. ೨೯). **ಪಿರಿಯವು** (ಬಹುವ) — (ವಯಸ್ಸು, ಆಕಾರ, ಗಾತ್ರ, ನೀಳತೆ ಮೊದಲಾದುವುಗಳಲ್ಲಿ) ದೊಡ್ಡದಾದಂವು : ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪುವು ಪುರವರದೊಳ್ (ಕಾವ್ಯಾ. ೦೬೬ ಕೂದ್ರ೯) ; ವಾಯುಭೂತಿಯುಂ . . . ವಿದ್ಯಾಧರ ಲಿಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ ಪಿರಿಯವಪ್ಪ ಪೋಱಿಗಳಂ ಪೊತ್ತು ಪೋಗಿ (ವಡ್ಡಾರಾ. ೯-೦). **ಪಿರಿಯಾಳ್, ಹಿರಿಯಾಳ್**=ದೊಡ್ಡವಳು; ಜ್ಯೇಷ್ಠಳಂ : ಎಲ್ಲರಿಂ ಪಿರಿಯಾಳ್ ನಿನ್ನನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ ಮತ್ತಿನಿರ್ವರುಮಂ ಮದುವೆಯಂ ಮಾಡಿ (ಶಂಶಕಾ. ೦-೬೪ ಪ); ಆಕೆಯೇ ಆ ಮನೆಗೆಲ್ಲಾ ಹಿರಿಯಾಕೆ (ಕೂಂ). **ಪಿರಿಯಾತ** = ದೊಡ್ಡವನು ; ಜ್ಯೇಷ್ಠ : ಪಿರಿಯಾತಂ ಸ್ವಭಾವದಿಂ ಋಜುಮಾರ್ಗವೃತ್ತಿಯಂ ತಳೆದು ವಿನಯವಿಭೂಷಣನಾದಂ (ಸುಕುಸೂ. ೨-೩೬ ಪ). **ಪಿರಿಯೊಟ್ಟಿ, ಪಿರಿಯೊಟವೆ, ಹಿರಿಯೊಟ್ಟೆ** — ದೊಡ್ಡ ಮಂಳಗ್ಗೊದರು,—ಬೇಲಿ(?) : ಪೆರ್ಬಳದೊಳಗಣ ಬಾದುಪೊಲದಿನ್ದ ಪಿರಿಯೊಟ್ಟಿಯ ಕೈಪರದೊಳ್ ಒನ್ದು ಮಾನ್ಯಂ (ಎಇ. X (೩), ಕಳ್ವ. ೧೦೬-೬೨ ; 850) ; ಪೆರ್ಬಳದೊಳಗಣ ಭಾದಪೊಲದಿಂದೆ ಪಿರಿಯೊಟವೆಯ ಕೈಪರದೊಳೊಂದು ಮಾನ್ಯಮ್ (ಕ್ಯಾ. ೦೯೦೯, ೦೩-೬೨ ; 806) : ಅಲ್ಲಿಂ ತೆಂಕ ಹಿರಿಯೊಬ್ಬೆಯಿಂ ಪೋಗಲು ಬಿಂಬಿಸೆಟ್ಟಿಯ ಕೆಱೆಯ ಕೋಡಿಯ ಕೀಳ್ವಯಲು . . . ಅಲ್ಲಿಂ ಹಡವಲು ಹಿರಿಯೊಬ್ಬೆಯ ಸೆಳ್ವಮೊಱಡಿಯ ಹಡುವಣ ಬಳ್ಳಿಯ ಕೆಱೆಯ ತೆಂಕಣ ಕೋಡಿಯ ಬಳಿರಿಯ ಬನ (ಎಇ. II, ೩೯೩-೬೦; ಪು. 1169). **ಪೆರ್ಗಾಪಂ**— ಅತಿಶಯವಾಗಿ ಕಾಪಾಡುವವನು ; ವಿಷ್ಣು : ಸೃಷ್ಟಿಸುವ ಸಮರ್ಥ ಮೆರ್ಗಾವನೈಶ್ವರ್ಯಕರ್ತಳೀತನ ರಾಣಿ ನಿಖಿಳಮೈಭೋಗವು ವ್ಯರ್ಥ ದ್ವಾರಕಿ ದೊಡ್ಡಿತಹುದೆ (ಹೋಚಕ. ೨೯-೨೬). **ಹಿರಿದಾಗಿ** = ಹೆಚ್ಚಾಗಿ ; ಬಹಳವಾಗಿ : ಹೆಮ್ಮೆಯಲಿ ಹಿರಿದಾಗಿ ಕೆಡುವರು (ಸಂಶಕ. ೩-೦೨) ; ಬಿಪ್ಪರಿಳೆಯನು ಮಂದಮತಿ ಕೈಕೊಂಡು ಕವರಿದನವರ ಹಿರಿದಾಗಿ (ಸಂಶಕ. ೨೬-೩೬). **ಹಿರಿದು ಕಿಱಿದು** = ಮೇಲು ಕೀಳು : ಕಿಱಿಯರಾದಡೇನು ಹಿರಿಯರಾದಡೇನು ಅಱಿವಿಂಗೆ ಹಿರಿದು ಕಿಱಿದುಂಟೆ (ಕೊಸ್ವಸಂ. ೦೬೬-೬೨). **ಹಿರಿಯ ಗಡಿಂಬ** = ಭೂಮಿಯ ಒಂದು ಅಳತೆ : [ಹಿ]ರಿಯ ಗಡಿಂಬದ ಕೋಲೊಳ್ ಬಿಟ್ಟ ಮತ್ತ ೬೦ (ಶಾಇಪ. XX. ೩೯-೯೦; 1064) **ಹಿರಿಯ ಗಳೆ** — ೧. ದೊಡ್ಡ ಕೋಲು. ೨. = ಪಿರಿಯ ಕೋಲ್ ೨ : ಹಿರಿಯ ಗಳೆಯಲು ಗದ್ದೆ ಕಮ್ಮ (ಎಇ. ೦೯೯೬.

ಊಳಿಗಳ್. ೩೩೯-೩೪; ೪). ಹಿರಿಯಾತನ, ಹಿರೇತನ = ೧. ದೊಡ್ಡತನ ; ಘನತೆ; ಹೆಚ್ಚುಗಾರಿಕೆ : ನಿಮ್ಮ ಹಿರಿಯಾತನಕೆ ಪಡಿಯುಂಟೆ (ಚಿಮಿ. ಕೀ. ೧೧-೨); ಕಿರುಗಿ ನೋಡಿದಡೀಗ ಸನ್ನಯ ಹಿರಿಯಾತನವಳಿವುದೆ (ಕಿಕ್ಕೆ. ೩೯-೨೨); ಹಿರಿಯಾತನದಲಿ ನೋಡೆ ಸರಸಿಜೋದ್ಭವನಯ್ಯ ಗುರುವುತನದಲಿ ನೋಡೆ ಜಗದಾದಿಗುರುವು (ಶ್ರೀಕೃ. ೨-೧೬೯-೦). ೨. ದೊಡ್ಡಸ್ತಿಕೆ ; ಅಹಂಕಾರ : ಈ ಕಾಂಗ್ರೆಸ ಚಂಡಾಲರು ಹಿರೇತನ ಮಾಡಿ ಯಾರಿಗೂ ಬಿರುದುಗಳು ಇರಬಾರದು ಅಂದ್ರು (ಕಹ್ಯೊಂಕ. ೨೬). ಹಿರಿಯ ಮಗಳು, ಹಿರೀ ಮಗಳು = ದೊಡ್ಡ ಮಗಳು ; ಜ್ಯೇಷ್ಠಪುತ್ರಿ: ಅವರ ಹಿರಿಯ ಮಗಳು ಊರಿಗೆ ಬಂದಿದ್ದಾಳೆ (ಹೂಂ) ; ನಾಳೆ ಅವರ ಹಿರೀಮಗಳ ಮದುವೆ (ಹೂಂ). ಹಿರಿಯ ಮಾಣಿ, ಹಿರಿಯ ಮಣಿ, ಹಿರೇ ಮಣಿ = "ಪಾಠಶಾಲೆಯಲ್ಲಿ ತರಗತಿಯ ಶಿಸ್ತು ನೋಡಿಕೊಳ್ಳುವ ಹಿರಿಯ ವಿದ್ಯಾರ್ಥಿ: ಹಿರೇಮಣಿ (ಹಿರಿಯ ಮಾಣಿ)" (Monitor. ಇಂಕಿಂ): (ಪಾಠಶಾಲೆಯ) ಹಿರಿಯ ಮಣಿ (Captain. ಇಂಕಿಂ) ; ಎರಡು ಮೂರು ವರುಷಗಳ ಕಾಲದಲ್ಲಿಯೇ ಈ ಹುಡುಗನು . . . ಪಾಠಶಾಲೆಯಲ್ಲಿ 'ಹಿರೇಮಣಿ'ಯಾದವನು (ಗುಜಾಸಾ. ೬). ಹಿರಿಯ ಸೊಳಸ = ಒಂದು ಅಳತೆಯ ಪ್ರಮಾಣ : ಮೂಲೆನತ್ತಂ ಹೇಜಿಂಗೆ ಹಿರಿಯ ಸೊಳಸ ೨ . . . ಮೇಳಸು ಹೇಜಿಂಗೆ ಹಿರಿಯ ಸೊಳಸ ೨ ಜೀರಗೆ ಹೇಜಿಂಗೆ ಹಿರಿಯ ಸೊಳಸ ೨ (ಕೌಇ. IX-1, ೦೬೨-೩೦; 1106). ಹಿರೆ ಹದ್ದರಿ = ದೊಡ್ಡ ಎದುರಾಳಿ,–ಪ್ರತಿಸ್ಪರ್ಧಿ: ಹಿರಿಯೇದ್ದರಿ: ರಾಮನೂ ಶೀನನೂ ಹಿರೆ ಹುದ್ದರಿಜಾಗಿ ತಿಳಿಯಾಟವನ್ನು ಹೂಡಿರುವರು (ಪಹಂಕ. ೯೬). ಹಿರೇ ರೋಗ = ೧. ದನಗಳಿಗೆ ಬರುವ ಒಂದು ಬಗೆಯ ಸಾಂಕ್ರಾಮಿಕ ಕರುಳುಬೇನೆ : (೪). ೨. ಒಂದು ಬಗೆಯ ಕಂಪ್ಪರೋಗ : (೪).

[ದೇ.೪ ತಮಿ. ಪೆರಿತು; ಮಲ. ಪೆರು ; ತುಳು. ಪಿರಿ ; ತೆಲು . ಪೇರು]

**ಪಿರಿದು₄** 'ಪಿರಿದುಂ' ನೋ.

**ಪಿರಿದುಂ, ಪಿರಿದು₄, ಹಿರಿದು₄** (ಅ). ೧. ಹೆಚ್ಚಾಗಿ ; ಅಧಿಕವಾಗಿ; ಬಹಳವಾಗಿ : ಕರಂ ಪಿರಿದುಂ ಗಬವುತ್ತಮಿರ್ಪಲಂ ಸಾರಿಕೆಯಂಬುರಲ್ಲದಭಿ ಸಾರಿಕೆಯೆಂಬರೆ ಬುದ್ಧಿಯುಳ್ಳವರ್ (ಕಂಕಾ. ೯-೬೩); ಘನತೆ:ಜೋಗರ್ಭ ದುರ್ಬಂದಜೀಯದೆ ಪಿರಿದುಂ ತನ್ನ ಪಾದಂಗಳಂ ಸನ್ನಿನ್ನಿಂದಾಗಣ್ಣ ವುಣ್ಯಾಮಾಳತನಾತಿಯಂ ಮುಟ್ಟಿಯುಂ (ಕೊಹಡಾ. ೦-೯೦) : ೞದೆ ಮೊದಲಳಿದ ಗಗನದ ನಡುವೆ ಪಿರಿದುಂ ಬಳಸಿದಾ ವಾಯುಸ್ತಿತಯದೊಳ್ (ಶಾಶ್ವಾ. ೦-೫೦). **ಪಿರಿದು₄** : ೧. ಅಪನೀತಾಂಗದೊಡಂ ಪಲ್ಗಿಜ್ದು ಪಿ[ರಿದು.ಬಿ]ರಿದು ಬಾಯಿಂದ ದ್ವಿಸ್ವಾಕ್ಷರಂ ಸಂಭವಿಸುತ್ತಿನ್ನಾಳ್ವ ಸಂದೇಶ ಮನೆ ಉರುಣಿಸಂಗಳಿ (ಕಕ್ಕಾಪ. ೨೦) ; ಪಿರಿಯಂ ಅಃ ಪಿರಿದೀಪನಿತ್ತುದು ನೆನವನೆ ಚಿಃ ಅದಂ ಗೆನೆಯಂ (ಕಕುದ. ೦೩೨ ಶ್ರುಹೂ) ; ಸರಳ ಹತಿಯಲಿ ನಕುಲ ಸಾತ್ಯಕಿ ಬಿರುದ ಸಹದೇವಾದಿ ವೀರರು ಪಿರಿದು ನೊಂದರು (ಕುಮ್ಯಾಶ. ೦೬-೯೨). ೨. ಅತಿಶಯವಾಗಿ ; ವಿಶೇಷವಾಗಿ ; ವಿಂಗಿತಾಗಿ : ಅಂತು ಪಿರಿದೋಲನಂಗೊಟ್ಟೆರ್ವನ್ನೆಗಂ (ಪಂಕಕಾ. ೯-೨೯ ೪). **ಹಿರಿದು₄** : ೧. ಅಲು ಹಿರಿದಿದ್ದೇನು ಫಲ ಹೀಹಾಳಿದ್ದೆವಕೆ ಬೇಜಿ ಪಠಿಯ ವಿತಾಳವಿಲ್ಲ ವಿಪಕ್ಷದೊಳು (ಕುಮ್ಯಾಶ. ೦೩-೬); ನೊಂದಿರಿ ಪಿರಿದು ನಿಃಪದಲಿಂದ (ಕೊರೆಂ. ೦-೯-೬೬). [<ಪಿರಿದು₁]

**ಪಿರಿಪಿರಿ** (ನಾ). ಒಂದು ಅನುಕರಣಶಬ್ದ : ಅವರು ಯಾವಾಗಲೂ ಪಿರಿಪಿರಿ ಎನ್ನುತ್ತಾರೆ (ಕ್ಯಗಸು. ೦೫೬); ನೀವು ಇತ್ತೀಚೆಗೆಲ್ಲಾ ಎಂತದೋ ಪಿರಿಪಿರಿ ಮಾತಾಡುತ್ತೀರಪ್ಪ (ಹುಚಕ್ಕ. ೬೬). 'ಕಿಜಿಕಿಜಿ' ಪರಾ.

ಪಿರಿಪಿರಿ ತಿರುಗು = ಸುಮ್ಮನೆ ತಿರುಗಾಡು ; ಅತ್ತಿಂದಿತ್ತ ಅಲೆ : ದಿನದ ಇಪ್ಪತ್ತಾಲ್ಕು ತಾಸು ಪಿರಿಪಿರಿ ತಿರುಗಿ ದೇಶದುದ್ಧಾರಕ್ಕೆ ದೇಹವನು ತೇಯ ಬಲ್ಲ (ಕಂಕುಬ. ೨೯-೨೨) ; ಯಾವುದರ ಸಂಧಾನದಲ್ಲಿ ಎಷ್ಟೋ ವರ್ಷ ಅವಿಶ್ರಾಂತವಾಗಿ ಪಿರಿಪಿರಿ ತಿರುಗಿದ್ದನೋ ಅದರ ಸುಳಿವು ಈಗ ಹತ್ತುತ್ತಿದೆ (ಇಕ್ಕಶ. ೪೯೬). ಪಿರಿಪಿರಿ ಮಾಡು = ತೊಂದರೆ ಕೊಡು ; ಪೀಡಿಸು ; ಕಿರಿಕಿರಿ ಮಾಡು : ಯಾವಾಗಲೂ ಏನೋ ಪಿರಿಪಿರಿ ಮಾಡುತ್ತ ಕಾಡಿತುತ್ತಾಳೆ (ಹಳ್ಳಿಜಾ. ೦೦೬) ; ಬಸ್ಸಿನಲ್ಲಿ ಹೋಗೋಣ ಎಂದರೆ ಕಂಡೆಕ್ಟ್ರು ಮಾನು ಬಸ್ಸಿನಲ್ಲಿಡಲು ಪಿರಿಪಿರಿ ಮಾಡೋದು ಬೇರೆ (ಹೂಕ್ಕೆ. ೫೬) ; ನೆಂಟಸ್ತಿಕೆ ವಿಷಯ ಇನ್ನು ಪಿರಿಪಿರಿ ಮಾಡಬೇಡ (ಸಹಕ. ೮೬).

**ಪಿರಿಯಕ್ಕರ** (ನಾ). [ಛಂದ] ದೇಸಿಛಂದಸ್ಸಿನ ಅಕ್ಷರವೃತ್ತದ ಐದುಪ್ರಕಾರಗಳಲ್ಲಿ ಒಂದು ; ಪ್ರತಿಪಾದದಲ್ಲಿಯೂ ಮೊದಲು ಒಂದು ಬ್ರಹ್ಮಗಣ, ನಂತರ ಐದು ವಿಷ್ಣುಗಣ, ಕೊನೆಯಲ್ಲಿ ಒಂದು ರುದ್ರಗಣ–ಹೀಗೆ ಒಟ್ಟು ಏಳು ಗಣಗಳಿಂದ ಕೂಡಿದ, ನಾಲ್ಕು ಪಾದಗಳನ್ನುಳ್ಳ ವೃತ್ತ : ಮೊದಲೊಳಜಗಣಂ ಕುಂದದೆ ಬರ್ಕತ್ತೆಮಯಿಂಬುಗಣಂಗಳೆ ವಿಷ್ಣುಪಕ್ಕಂ ತುದಿಯೊಳೆಂಬ ತಾಣದೊಳ್ ಲ್ಲಿಯುಂ ಕಂದರ್ಪರಿಪುಗಣಂ ನೆಲೆನಿಲಿಸಿ ನಿಲೆ . . . ಪಿರಿಯಕ್ಕರಂ (ಛಂದೋಂಬು. ೩-೨೯೩) ; ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು :– ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿಜಿಯಕ್ಕರ (ಕ್ಯಛಂ. ೮೨೬) 'ಕಿಜಿಯಕ್ಕರ' ಪರಾ. [ಪಿರಿ₄ (< ಪಿರಿದು₁) + ಅಕ್ಕರ₂]

**ಪಿರಿಯಣ್ಣ, ಹಿರಿಯಣ್ಣ** (ನಾ). ೧. ಹಿರಿಯ ಸಹೋದರ ; ದೊಡ್ಡ ಅಣ್ಣ : ಪಿರಿಯಣ್ಣಂಗಿಬಗುವುದೇಂ ಪರಿಭವವೇ (ಅಶ್ವ. ೦೯-೬೩) ; ಪಿರಿಯಣ್ಣನ ನನ್ನಿಯನಾದರದಿಂ ಕಾಯಲ್ಕೆ ಪೆರ್ಗೆ ಬಾಣಸುಗೆಯ್ದಂ (ಗದಾಯು. ೬-೩೪) ; ಧರಣೇಶಾ ಕೇಳ್ಯಾನಿನ್ನ ಭವದೊಳ್ ಪಿರಿಯಣ್ಣಂ ನಾಂ ನಿನಗೆ (ಶಬುಶಾ. ೬-೬೬). **ಹಿರಿಯಣ್ಣ** : ೧. ಅವನು ಹಿರಿಯಣ್ಣನ ಮಾತಿಗೆ ಎಂದೂ ಎದುರಾಡಿದವನಲ್ಲ (ಹೂಂ). ೨. ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ . . . ಕಲ್ಲವ ಚವಡಿಕಿ ಮಾರಿ ಮಸಣ ಜಕ್ಕ ಸಲ್ಲದ ಹಿರಿಯಣ್ಣ ಗುರುವ ಜಲದೇವಿ (ಚಿತಾಮ. ೬೬-೨). [ಪಿರಿ₄ (< ಪಿರಿದು₁) + ಅಣ್ಣ₁]

**ಪಿರಿಯಪಸುಂಡಿ** (ನಾ). ಒಂದು ಊರಿನ ಹೆಸರು : ವಿಜಯಬ್ಬರಸಿ ತನ್ನ ಮಗಂ ಶಾನ್ತಿವರ್ಮ್ಮರಸಂ ಮಾಡಿಸಿ[ದ] ಪಿರಿಯ ಬಸದಿಗೆ ತನ್ನ ಗೀವಟಂ ಪಿರಿಯ ಪಸುಣ್ಡಿಗೆ ಪೋದ ಬಟ್ಟೆಯಂ ತೆಂಕ ಕಾಡಿಯೂರ ಪೊಲ[ದ] × × × ನೂಜಿಯ್ವುತ್ತು ಮ[ತ್ತ]ರ್ಕ್ಕಯ್ಯಂ ನಮಸ್ಯಮಾಗಿ ಬಿಟ್ಟಳ್ (ಕೌಇಇ. XX. ೦೬-೯೦ ; ೯೮೦). [< ಪಿರಿದು₁ + ಪಸುಂಡಿ]

**ಪಿರಿಯಬಾಣಗೆಜಿ** (ನಾ). ಒಂದು ಊರಿನ ಹೆಸರು : ಪಿರಿಯ ಬಾಣಗೆಜಿ ಯಸ್ಮತ್ತ್ರಯಯಣಸಂಕ್ರಾನ್ತಿಯೊಳ್ಕ್ಕಾಣಿಭಟಾರರ ಶಿಷ್ಯರ್ ಚಿಲ್ಲಾಕ ಭಟಾರರ ಕಾಲು ಕರ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII. ಶಿಶಾ. ೨೬-೩೬ ; ೯೪೨). [<ಪಿರಿದು₁ + ಬಾಣಗೆಜಿ ?]

**ಪಿರಿಯಬಿದಿರೂರ್** (ನಾ). ಒಂದು ಊರಿನ ಹೆಸರು : ಬೀರನೊಲಂಬ ಗೊಟ್ಟೆ ಕಿಬ್ಬನಾಡ ಪಿರಿಯಬಿದಿರೂರ ಕಲ್ನಡುಗೊಟ್ಟು (ಎಕ. X. ಗೌರಿಬಿ. ೯-೨೨ ; ಕ್ರಿ. ೯೭೦). [< ಪಿರಿದು₁ + ಬಿದಿರೂರ್]

**ಪಿರಿಯಬ್ಬೆ** (ನಾ). ದೊಡ್ಡ ತಾಯಿ ; ದೊಡ್ಡಮ್ಮ : ಅತನ ಪೂರ್ವಭವದ ಪಿರಿಯಬ್ಬೆ ದೇವಶ್ರೀಯೆಂಬಳ್ ಯಕ್ಷಿಯಾಗಿರ್ದಾಕೆ ಬಂದು (ವಡ್ಡಾರಾ. ೬೮). 'ಕಿಜಿಯಬ್ಬೆ' ಪರಾ. [ಪಿರಿ₄ (< ಪಿರಿದು₁) + ಅಬ್ಬೆ₁]

**ಪಿರಿಯಮಾಗುಂಡೆ** (ನಾ). ಒಂದು ಊರಿನ ಹೆಸರು ; ಈ ಶಿವಮೊಗ್ಗ ಜಿಲ್ಲೆಯ ಸೊರಬತಾಲ್ಲೂಕಿನ ಈಗಿನ ಹಿರೇಮಾಗಡಿ : ಅಮ್ಮಣ ಪುತ್ರ ನಾಗರವಣ್ಣ ಎಟ್ಟತ್ತು ಆಳುವಿಟ್ಟು ಪಿರಿಯಮಾಗುಣ್ಡೆಯ ಪೊಲೆಗ ಉಗ್ಗ್ರಮಾಯಾಡ್ದಿಯುಮ್ಮಿರೆ (ಎಕ. VIII. ಸೊರಬ. ೪೦೬-೦೫ ; ೯೮೦). [< ಪಿರಿದು₁ + ಮಾಗುಂಡೆ (< ಮಾಗುಂಡಿ)]

**ಪಿರಿಯಮಾಂಗುಳಿ** (ನಾ). ಒಂದು ಊರಿನ ಹೆಸರು ; ಈಗಿನ ಚಿಕ್ಕಮಗಳೂರು ಜಿಲ್ಲೆಯ ಹಿರೇಮಗಳೂರು : ಪಿರಿಯಮಾಂಗುಳಿಯ [ಕಿಱು] ಮಾರಯ್ಯನು [೦] (ಎಇ VIII. ೫೫-೦೩ ; ಕ್ರಿ. ಶ. 1000) 'ಕಿಱಾಯ ಮಂಗುಳಿ' ಪರಾ. [ < ಪಿರಿದು₁ + ಮಾಂಗುಳಿ₁ ]

**ಪಿರಿಯಮೇಟಪಿ** (ನಾ). ಒಂದು ಊರಿನ ಹೆಸರು : ಶ್ರೀಮಾತ್ ಪೊಲ್ಲ(ಲ)ಮಲ್ಲಾಧಿರಾಜರ್ ಪಿರಿಯಮೇಟಪಿಯ ಬಾಳಶೋಮಭಟರ್ಗ್ಗೆ ಕೊಟ್ಟ ಸ್ಥಿತಿ ಎನ್ನೆನ್ದೊಡೆ (ಸೌಇ. IX-1. ೬೨-೬ ; ಕ್ರಿ. ಶ. 10ನೆಯ ಶ.).
[ < ಪಿರಿದು₁ + ಮೇಟಪ್ಪಿ ]

**ಪಿರಿಯಯ್ಯ, ಹಿರಿಯಯ್ಯ** (ನಾ). ೧. ದೊಡ್ಡಪ್ಪ : ನಮ್ಮ ಪಿರಿಯಯ್ಯ ತಳೆದ ನಮ್ಮಯ್ಯನ ವಸುಧೆಯನು ಸೆಳೆದುಕೊಂಡನು ತನ್ನ ವಿದ್ಯಾಬಲದಿನಾತಂಗಳುಕಿ ಮತ್ಪಿತನೀ ಪುರದೊಳಿಹನು (ಶಾಕ್ನಿಣಾ. ೦೬-೨೬) ; ಭೀಮಂ ನಿನಗೆ ಪಿರಿಯಯ್ಯನಹನೆ (ಹರಿವಂ. ೦೯-೦೬). ೨. ಒಬ್ಬಾತನ ಹೆಸರು : ಮಾಚಿಸೆಟ್ಟಿಕಿಱಿಯ ತಂಡಾ ಕಡೆಯಿಂ ಪಿರಿಯಯ್ಯ ಪುನುಸೆವರಂ ನಟ್ಟ ಓಳಿಗಳ್ಗಿನ್ತುಂ ಪಡುವಣ ತವರಿಂದೊಳಗೆ ಆಯ್ಯ ಕೋಳಗ ಬೆದೆ ಪೂಂಬೊಲನುಮಿದು ಚನ್ದ್ರಾರ್ಕತಾರಂಬರಂ ಸಲ್ವುದು (ಎಕ. IV. ಹನ್ನ. ೦೬-೦೯ ; 1021) ; ಶ್ರೀಮಾತ್ಕಂಚಲಮಹಾದೇವಿಯರು ಶ್ರೀಮತ್ಪಿರಿಯಯ್ಯಂಗಳ್ ಮೊದಲಾಗಿ ಸಮಸ್ತಪ್ರಧಾನರುಂ . . . ಪುನರ್ದ್ದತ್ತಿ ಮಾಡಿ (ಸೌಇ. XX. ೪೬-೬೯ : 1072). ಹಿರಿಯಯ್ಯ : ೧. ಕೆಲಬರೊಡಹುಟ್ಟಿದರು ಗುರುಗಳು ಕೆಲರು ಕೆಲಬರು ಮಾವ ಮೈದುನ ನಳಿಯ ಮಗ ಹಿರಿಯಯ್ಯ ಮುತ್ತಯ್ಯ ಮೊಮ್ಮನೆನಿಸುವರು (ಕುಮಾ. ೮೬. ೩-೨೬) ; ತಾತ ಕೇಳ್ ಪಾರ್ಥ ನಿನಗೆ ಹಿರಿಯಯ್ಯನಹನೀತ ಈಧರ್ಮರಾಜನೀ ನೃಪನ ಜಾತಮಾತ್ರನಾಗಿರ್ದವ (ಕೃಜನಾ. ೨೭-೦೦).
[ ಪಿರಿ₄ (< ಪಿರಿದು₁) + ಅಯ್ಯ₁₁ ]

**ಪಿರಿಯರ** (ನಾ). ದೇವಸ್ಥಾನ ಮುಂತಾದ ಪವಿತ್ರಸ್ಥಳಗಳಲ್ಲಿಯ ಹಿರಿಯ ಅಧಿಕಾರಿ,—ಧರ್ಮಾಧಿಕಾರಿ : ಪುರದ ಪೆರ್ಗ್ಗಡೆಗೆ ಮತ್ತ ರಾಜು ಪಿರಿಯರಂಗೆ ಮತ್ತರಾಜು (ಎಇ. XIII. ೦೬೨-೯೬ : 1056).

**ಪಿರಿಯರವಾಳಸೂಳೆ** — ಧರ್ಮಾಧಿಕಾರಿಗಳ ಪಾಲನೆಯಲ್ಲಿರುವ, ದೇವರ ಹೆಸರಿನಲ್ಲಿ ಬಿಟ್ಟ ವೇಶ್ಯೆ,—ಸೂಳೆ : ದೇವರ ಭೋಗಕ್ಕೆ ನಡೆವ ಪಿರಿಯರವಾಳ ಸೂಳೆಗೆ ಮತ್ತರ್ನಿರ್ಪ್ಪತ್ತು (ಎಇ. XV. ೬೯-೯೯ ; 1060).
[ಪಿರಿ₄ (< ಪಿರಿದು₁) + ಅರ₂ (< ಅಱ₂)]

**ಪಿರಿಯರವಣ** (ನಾ). ಒಂದು ಬಗೆಯ ತೆರಿಗೆ ; ಹಿರಿಯ ಧರ್ಮಾಧಿಕಾರಿಗಳಿಗೆ ಕೊಡುವ ತೆರಿಗೆ (?) : ಅಲ್ಲಿ ಮನ್ನೆಯ ನಿಬನ್ಧದ ಕಿಱುದೆಱಗಳಮಾವುವೆನ್ದಡೆ ಮನೆವಣಂ ಪಿರಿಯರವಣಂ ಧನಬಳಂ . . . ಇನ್ನೀಗಡೆವ ತೆಱಗಳ್ಳಂ . . . ಸರ್ವ್ವಬಾಧಾಪರಿಹಾರಮಾಗೆ ಬಿಟ್ಟು ನಡೆಯಿಸಿದ (ಸೌಇ. XX. ೪೭-೬೬, 1076). [ ಪಿರಿಯರ + ವಣ₃ ]

**ಪಿರಿಯರಸಿ, ಹಿರಿಯರಸಿ** (ನಾ). ದೊಡ್ಡ ರಾಣಿ : ಪಟ್ಟದ ರಾಣಿ ; ಅಗ್ರಮಹಿಷಿ : ಪಿರಿಯರಸಿಯ ಪಟವೇಟದ ಪರಿಪಿಡಿ ಮಗುಟಮ್ಮಂ ಕೊಸರ್ದುದು (ಬಾಹುಬ. ೬-೩೨) ; ಪಡಿಯಱ ದೊರೆಯಯ್ಯನ ಪಿರಿಯರಸಿ ಪಾಂಬಪ್ಪೆ ತಲೆವಱದು ಮೂಱುವತ್ತು ವರಿಸಂ ತಪಂಗೆಯ್ದುಯ್ದಂ ನೋಂಪ್ಪನೋಂತು ಸಮಾಧಿಮೇಱಿದರ್ (ಎಕ. VI. ಕಡೂರು. ೦-೦೯ : 971) ; ಮದನಂ ಪಿರಿಯರಸಿಯ ಪೆರ್ಗಡೆಗಳ ಬರವಿನ ಕಾರಣಮಾನಱಿದು (ಜಂಜಂ. ೯-೩೬). ಹಿರಿಯರಸಿ : ಅಕ್ಕತಂಗಿಯರ್ಪ್ಪವರು ಒಬ್ಬನ ಅರಸಿಯರು ಕಿಱಿಯಕ್ಕನ ಕಿಱಿಯವರ ಹಿರಿಯರಸಿ ಕೊಂಟಣೆ ಪಿರಿಯರಸಿಯ ಕೂಡುಪರೆ ಕಿಱಿಯರಸಿ ಕೊಂಟಣೆ (ಕೂಕ್ಕಸಂ. ೨೨೨—೩೬) : ಸೇರಿದವು ಪೂರ್ವಾಂಶ ಭಾಗಗಳು ಹಿರಿಯರಸಿ ಕಿಱಿಯರಸಿಯುವರಿಬ್ಬರಿಗೆ (ಕೊಕಂ. ೦-೬-೩೬). 'ಕಿಱಿಯರಸಿ' ಪರಾ. [ ಪಿರಿ₄ (< ಪಿರಿದು₁) + ಅರಸಿ ]

**ಪಿರಿಯರಾಜಾನ್ನ** (ನಾ). ಒಂದು ಬಗೆಯ ಬತ್ತ : ಪಿರಿಯರಾಜಾನ್ನ ಜೀರಿಗೆರಾಜಾನ್ನವು ಪುರಾತರ ಸೊಗಸು ರಾಜಾನ್ನ ಪರಿಶೋಭಿಸುವ ಕಸ್ತೂರಿ ರಾಜಾನ್ನದ ಪರಶಾಲಿಯ ಗದ್ದೆಯಹುವು (ಕಂಥಂ. ೩-೬೬).
[< ಪಿರಿದು₁+ರಾಜಾನ್ನ]

**ಪಿರಿಯಹೊಟ್ಟ** (ನಾ). ಒಂದು ಊರಿನ ಹೆಸರು; ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಈಗಿನ ದೊಡ್ಡಹೊಮ್ಮ : ಎಡೆನಾಡ ಪಿರಿಯ ಹೊಟ್ಟದ ಪನ್ನಿರ್ಬ್ಬರುಂ . . . ಕೂಚಿಭಟರ್ಗೆ . . . ಕಾಲಂ ಕರ್ಚ್ಚಿ ಧಾರೆಯೆಱೆದು ಕೊಟ್ಟರ್ (ಎಕ. III. ನಂಜನ. ೦೪೩-೩, 977).
[ < ಪಿರಿದು₁+ಹೊಟ್ಟ₂ (< ಪೊಟ್ಟ) ]

**ಪಿರಿಯಾದಿ** 'ಫಿರ್ಯಾದು' ನೋ.

**ಪಿರಿಯಾಯ್ಚ** (ನಾ). ಒಬ್ಬಾತನ ಹೆಸರು ; ನಯಮುಂ ಮೆಱೆವಂ ತತ್ಸುತನಯನಾಯ [೦] ಪರನೆನಿಸಿ ನೆಗಟ್ದ ಪಿರಿಯಾಯ್ಚನನಾಶ್ರಯಣೀಯ ನಾದನಾ ಕ್ಷತ್ರಿಯಾದಿಗಂ ಸಕಳ ಸಮಯಿ[ಗಂ ಬು] ಧಜನಕಂ (ಸೌಇ. XI-1. ೯೩-೦೦; 980).
[ಪಿರಿ₄ (< ಪಿರಿದು₁) + ಆಯ್ಚ₀ (← ಸಂ. ಆದಿತ್ಯ)]

**ಪಿರಿಯಿಂದಿ** (ನಾ). ಒಂದು ಊರಿನ ಹೆಸರು; ಈಗಿನ ಬಿಜಾಪುರ ಜಿಲ್ಲೆಯ ಇಂಡಿ : ಆಲಂಪೂರ ಬಟ್ಟೆಯಿಂ ಪಡುವ ಕಿಱಿಯಿಣ್ಡಿಯ ಬಟ್ಟೆಯಿಂ ಪಿರಿಯಿಣ್ಡಿಯ ಸೀಮೆಯಿಂ ಮೂಡಲನೈರಡಂ ಬಟ್ಟೆಯಿಂ ದೊಳಗೆ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ (ಸೌಇ. XX. ೨೦-೬೦ : 1010). [ ಪಿರಿ₄ (< ಪಿರಿದು₁) + ಇಂಡಿ₀ ]

**ಪಿರಿಯಾಚಲ್, ಹಿರಿಯಾಚಲು, ಹಿರೀಚಲು** (ನಾ). ಒಂದು ಬಗೆಯ ಈಚಲುಮರ; ದೊಡ್ಡ ಈಚಲು : ಪಿರಿಯಾಚಲ ವಣ್ಣಂ ಸರಿಕನ ಬಿತ್ತಮರ್ದ್ದಪ್ಪು ಮೂಲಂಗಿಯ ಬೇರರಿಸಿನ ಮಡುವಾಗಲ್ ಎಷಹರ ಮಕ್ಕುಂ (ಖಗೇಂದ. ೩-೦೦೬). ಹಿರಿಯಾಚಲು : "ಇಂದ್ರಾಸಂ—ಹಿರಿಯಾಚಲು" (೬೫೦. ೦೩). ಹಿರೀಚಲು : "ಅಶೋಕಃ—ಅರಳಿ. ಅಶೋಕೇ. ಹಿರೀಚಲು" (೬೫೦. ೩). 'ಕಿಱೀಚಲ್' ಪರಾ.
[ಪಿರಿ₄ (< ಪಿರಿದು₁) + ಈಚಲ್ (< ಈಂಚಲ್)]

**ಪಿರಿಯುಬ್ಬಣ, ಹಿರಿಯುಬ್ಬಣ** (ನಾ). ಒಂದು ಬಗೆಯ ದೊಡ್ಡ ಮೊನಚಾದ ಆಯುಧ (?) : ಪಿರಿಯ [ಯು]ಬ್ಬಣ ಕಠಾರಿಯಿಂ ಕಿವಿದಾಡಿ ಗದೆಗಳಿಂದ ಧುರದೊಳ್ಬರು ಹೆಣಗಿ ಬಹುಲಾಗುವೇಗದಿಂ . . . ಕಾದಿದರು ಜಾತಿಯಿಂದುಭಯಭಟರು (ಹರಿಶ್ಚಂ. ೬೬-೨೯). ಹಿರಿಯುಬ್ಬಣ : ಹಿರಿಯುಬ್ಬಣದ ಸಬಳದ ಶೂಲ ಸುರಗಿಯ ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುಮಾದ್ರೋ. ೦೩-೦೯); ಹಿರಿಯುಬ್ಬಣವ ಜಡಿವುತ ಕುದುರೆಯ ಮೇಲೆ ಹರುಪದಿಂ ಬಹನಾರಿವನು (ಕುಮಾಶಾಂ. ೨೦-೯೦) ; ಹಿರಿಯುಬ್ಬಣವ ಜಳಿಪಿಸಿ ವಿಸಸೆಯ ಮೇಲೆ ದೆರಳಿಡುತತುಳಪೌರುಷದ ಬಿರುದಿನಗ್ಗಳಿಕೆಗಳನು ಪೊಗಳಿಸಿಕೊಳ್ಳ ದೊರೆ ಯಾವನುಸಿರು (ಕೆಂಪಂ. ೦೩-೬೪). [ಪಿರಿ₄ (< ಪಿರಿದು₁) + ಉಬ್ಬಣ₁]

**ಪಿರಿಸಂದಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಅಣುವಕ × × × ಯಾಲೋಕನೆಮ್ಬುದು ಎಟ್ಟಿತ್ತ್ಯದು ಪೆಸ್ದಿಯಂ ಕೊನ್ದತ್ತು ಇದುಮೆರಸಿ ಯಿಾ ನಾಯಕಥಳಗನೆಮ್ಬುದು ಪಿರಿಸನ್ದಿ ಮಗ ಯಿಪ್ಪತ್ತೃಱು ಪನ್ದಿಯಂ ಕೊನ್ದನ್(ಎಕ. X. ಮುಳಬಾ. ೯೩-೨; ಕ್ರಿ. ಶ. 975). [ಪಿರಿ₄(< ಪಿರಿದು₁)+ಸಂದಿ?]

**ಪಿರುಕಣೆ** 'ಪಿರಕಣೆ' ನೋ.

**ಪಿರುಚು** 'ಪಿರಿಚು' ನೋ.

**ಪಿರ್ಕೆ** 'ಪಿರಿಕ್ಕೆ₂' ನೋ.

Δ **ಪಿರ್ಕ್ಕು** 'ಪಿಕ್ಕು' ನೋ.

**ಪಿರ್ಗುೞ₁** 'ಪಿಳ್ಳು' ನೋ.

**ಪಿರ್ಗು₁**, ಹಿಗ್ಗು₁, ಹಿರ್ಗು, ಹಿಳ್ಗು₁ (ನಾ). ಸಂತೋಷ ; ಆನಂದ : ಇಂತಪ್ಪ ಪಿರ್ಗಿಂದಮೇ ಪೆರ್ಚುಗೆನ್ನಲ್ಲ ಪಗೆಗಳುಂ ವೇಣ್ ನೀನುವಾವ ರೊಳಗೆ ಒರ್ವನ್! (ಅದ್ಭಕ್ಷ. ೩೦–೧೧೨). ಹಿಗ್ಗು₁ : ಹಿಗ್ಗು ಬಡವಗೆ ಹೊಲ್ಲ ಸಿಗ್ಗು ಸೂಳೆಗೆ ಹೊಲ್ಲ ನುಗ್ಗಿಯು ಹೂಗೆ ವಾಳೆ ಹೊಲ್ಲ (ಸರ್ವಜ್ಞ. ೮೨೬); ಆನಂದ ಅಲೆಯಾದಾಗ ಹಿಗ್ಗಾಗಿಯೂ ಘನೀಭೂತವಾದಾಗ ಸೌಂದರ್ಯವಾಗಿಯೂ ಪರಿಣಮಿಸುತ್ತದೆ (ಸೌಂದರ್ಯ. ೦೬); ನಿಸರ್ಗವನ್ನುಂಡ ಅವನ ಸರಳ ಹೃದಯವು ಅದನ್ನು ಬಣ್ಣಿಸುವುದರಲ್ಲಿ ಹಿಗ್ಗಿನ ಬುಗ್ಗೆಯಾಗಿದೆ (ಕಕ್ಕ. ೨೦೦). ಹಿರ್ಗು : ತನುಜಾತೆರೊರ್ಗಿಸುತ ವೈವಾಹ ಹಿರ್ಗಿನನುಸುರ್ಗಿ ಸಂಪರ್ಗಾಳಿಂದ್ಯದಿ ಬರುತ (ಚಕಕು. ೩೨–೯). ಹಿಳ್ಗು₁ : "ಹರ್ಷಃ . . . ಹೃಷ್ಟಂ, ಹೃಷ್ಟಃ — ಈ ೭ ಹಿಳ್ಗು" (ಕಾಕ್ಯ. ೦೯೩). [<ಪಿಳ್ಗು]

**ಪಿರ್ರೆ** (ನಾ). ಅಂಡು ; ಕುಂಡಿ ; ನಿತಂಬ : ಕಟಿಃ. "ಕಟೀ, ಶ್ರೋಣಿಃ, ಶ್ರೋಣೀ, ಕಕುದ್ಮತೀ—ಅಂಡುಗಳ ಹೆಸರುಗಳು, ಪಿರ್ರೆಗಳು" (ಸಿಕ್ಕಾ. ೬೦. ೮೧೦). [ ದೇ. ॥ ತೆಲು. ಪಿಱ್ಱ ; ಕೋಲಾ. ನಾಯ್ಕಿ. ಪಿರ್ರ ]

**ಪಿಲ** (ನಾ). ಹಲಸಿನ ಮರ : ಪಿಲ (ಹಲಸು) ಪಿಜ (ಹೆಬ್ಬಲಸು) . . . ಇತ್ಯಾದಿಗಳನ್ನು ಸಂಕೇತವಾಗಿರಿಸಿಕೊಂಡವರೆಂಬ ಅರ್ಥದಿಂದಲೋ . . . ಅಥವಾ ಅವುಗಳನ್ನು ವಿಶೇಷವಾಗಿ ಪೋಷಿಸುತ್ತಿದ್ದವೆಂಬರ್ಥದಿಂದಲೋ ಬಂದ ಕುಲನಾಮಗಳು, ಪಿಲತ್ತಾಯ, ಪಿಜತ್ತಾಯ (ಕುಳನಾ. ೦೩೩).
[ ದೇ. ॥ ಮಲ. ಪಿಲಾವು ; ತುಳು. ಪಿಲ, ಪೆಲ ]

**ಪಿಲಿಕಂದೋಡಿ** (ನಾ). ಒಂದು ಬಗೆಯ ಮಂಡಲದ ಹಾವು ; ದೊಡ್ಡ ಜಾತಿಯ ಕನ್ನಡಿ ಹಾವು : ನಾಗರ ಹಾವಲ್ಲ. ಚಿಟ್ಟೆಹುಲಿಯಂತೆ ಅದರ ಮೈಮೇಲೆ ಪಟ್ಟೆಮುದ್ರೆ . . , ಅಯ್ಯೊ ಇದು ಪಿಲಿಕಂದೋಡಿ (ಚಾಕಿನ. ೬೦). [ ದೇ. ॥ ತುಳು. ಪಿಲಿಕಂದೊಡಿ ]

**ಪಿಲಿಚಾಮುಂಡಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಈತನ ಮನೆಯೊಳಗೆ ಕೆಂಪುವರ್ಣದ ಪಿಲಿಚಾಮುಂಡಿ ಬಂದು ಗಡಬಡಗುಟ್ಟುತ್ತಾ ಹೋಗುತ್ತದೆ (ಚಾಸ್ಕಮಂ. ೨೮).
[ ಪಿಲಿ?(ಪ ← ತುಳು. ಪಿಲಿ=ಹುಲಿ) + ಚಾಮುಂಡಿ ]

**ಪಿಲು** (ನಾ). ೧. ಒಂದು ಬಗೆಯ ಮರ ; ಉಗುನಿ ; ಪೀಲು : "ಪಿಲು ಸಹಸ್ರಾಂಶುವೆನಲುಗಿನಿ" (ಶಂಗಣ. ೯೮–೯೯). ೨. ಹುಲ್ಲು ; ತೃಣ. ೩. ಕಲ್ಲು ; ಶಿಲೆ : "ಕುಡಾತೇ ತೃಣಂ ಅಶ್ಮಂಗಳ್ ಪಿಲುವಕ್ಕುಂ" (ಚಾಪಕ. ೦೩೩). 'ಪೀಲು₁' ಪರಾ. [ ಸಂ. ]

**ಪಿಲ್ಲ** (ನಾ). ರೋಗದಿಂದ ನೀರು ಸುರಿಯುವ ಕಣ್ಣನವನು ; ಸೋರು ಗಣ್ಣನವನಂ : "ಪಿಲ್ಲಃ, ಚಿಲ್ಲಃ, ಚುಲ್ಲಃ — ಈ ೩ ಅಟುಗಣ್ಣವಂ" (ಕಣಾಖು. ೯೯–೧೩೩). [ ಸಂ. ]

**ಪಿಲ್ಲಕಿ** (ನಾ). ಹೆಣ್ಣಾನೆ; ಪಿಡಿ. [ ಸಂ. ಪಿಲ್ಲಕಾ ]

**ಪಿಲ್ಲಣೆ** (ನಾ). ಒಂದು ಬಗೆಯ ಆಯುಧ ; ಪರಿಘ : ನನೆಯುಂಬನೆಂಬ ಮಲ್ಲನ ಕನಕದ ಪಿಲ್ಲಣೆಗಳುಪಮೆಗೇವಯಿಸುದುವೆಂದೆನಿಸಿ ನಸುವಾಗಿ ಜಂಘೆಗಳನಸುಂ ಲೋಲ್ಗೊಳಿಪವು (ಶಾಂತೀಶ್ವ. ೦೩–೧೦೯೯); ಮಲ್ಲರ ಸದನದ ಕೈಗಳ ಪಿಲ್ಲಣೆಗಳ ಕಾಯಬಲದ ಕಳನಂ ಪುಗುತಪ್ಪಳ್ಳಿಯಭಿನಯಿದುರ್ಗುವ್ವಗಳೆಲ್ಲರ ಬಗೆಗೀಯ ಬಹಳ ನಯವುಂ ಭಯವುಂ (ಶುಚಾಕ. ೬–೬೩). [ ? ]

**ಪಿಲ್ಲಣೆಗೆ** (ನಾ). =ಪಿಲ್ಲಣೆ : "ಪರಿಘಮೆನೆ ಪಿಲ್ಲಣೆಗೆ" (ಶಂಗಣ. ೯೯–೯೭); ಸೊಕ್ಕಾನೆಯ ಕೆಯ್ಯ ಕರಿಯ ಪಿಲ್ಲಣೆಗೆಯುಂಮುಗುರ್ವುಮದ್ಭುತಮಾಗೆ (ಅರ್ಜಕ. ೬–೬೬ ಪ); ಪಿಲ್ಲಣೆಗೆ ಹರಿಗೆ ಚಕ್ರಂ ಭಲ್ಲೆಯಮುಸಿತಾದ್ರಿಮುದ್ಗರಂ ಕ್ಷುರಿಕೆಗಳೆಂಬೆಲ್ಲಾ ಶಸ್ತ್ರಮನಾಂತತಿಭುಲ್ಲವದಿಂ ವೀರರದಟನಿಂ ಪೆರ್ಚುಟ್ಟರ್ (ಕೃತ್ತಿಪು. ೬–೬). [ಪಿಲ್ಲಣೆ+ –ಗೆ]

**ಪಿಲ್ಲಿ₁**, ಪಿಲ್ಲೆ(ನಾ). (ಹೆಂಗಸರು) ಕಾಲಿನ ಬೆರಳಿಗೆ ತೊಡುವ (ಉಂಗುರದಂತಹ) ಒಂದು ಆಭರಣ : ಮುತ್ತಿನ ದಂಡೆ . . . ಮುತ್ತಿನುಂಗುರಂ ಮುತ್ತಿನ ಪಿಲ್ಲಿಯೆಂಬ ಸದಲಂಕರಣಂಗಳನೆಯ್ದೆ ತೊಟ್ಟು ತಾಂ ಮುತ್ತಿನ ದೊಂದೆಯೆಂಬ ಬಗೆಯಂ ನೆಱೆ ಪುಟ್ಟಿಸುತಿರ್ದಳಾಲಕ್ಷ್ಮಣಂ (ಚಾಕಥ. ೬–೦೦೯); ವರ ಹಸ್ತಕಡಗ ಮುಂಟಿಗೆ ಪಿಲ್ಲಿ ಕಾಲುಂಗುರಗಳಿಂ ಕುವರಿಯೊಪ್ಪಿದಳು (ಶಂಕ್ರಕಾಂ. ೯–೧೨); ಪಿಲ್ಲಿ ಕಾಲಿನೋಳೆ ಚೆಲ್ಲಿದ ನೆರಿಗ್ಗೊಳೆ ಕಲ್ಲೆಲೆ ಕಾಲ ಕೊಳೆಯೋಳೆ ಲಕ್ಕವ್ವ ಪಿಲ್ಲಿ ಹೊರೆದವ್ವ ದಿಬಿಲಿಗೆ (ಜಾಪಜ. ೨೩). ಪಿಲ್ಲೆ : ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು . . . ಕಾಂಚಿದಾಮ ರಾಳಿಯಾಯಂದಿಗೆ ಪಿಲ್ಲೆ ಮೆಂಟಿಕೆಗಳು (ಚಕಕೋ. ೦೦–೨೩); ಕಾಲ ಕಡಗ ಪಿಲ್ಲೆ ಕಿವಿಯಾಗ್ಗಿತ್ತಾಳೆ ವಾಲಿ . . . ಜಾಣೆ ನೀ ಯಾ ನಾಡದ ಕೊರವೆ (ಜಪ್ಪಗಿ. ೦೬); "ವಜ್ರದ ಹಚ್ಚಿದ ವಾಲೆ ಗೆಜ್ಜೆ ಹಚ್ಚಿದ ಪಿಲ್ಲೆ ಹೆಜ್ಜೆ ಹೆಜ್ಜೆಗೆ ನಗಿಸುವ ರಾಯರೊಡನೆ ಮಾಡಿದ ದಾಳು" ನ್ಯಾನ್ನಿತ್ಯ ಜ್ಞಾಪಕ ಬಂದು ವಿಧವೆಗೆ ಜೀವನದಲ್ಲಿ ಬೇಸರಿಕೆಯನ್ನು ಹುಟ್ಟಿಸುವುದು (ಜಾಪಜ. ೬೯). 'ಕಿಱುಪಿಲ್ಲಿ' ಪರಾ.
[ದೇ.॥ ತಮಿ. ಪಿಲ್ಲಾಣಿ ಮಲ; ಮಲ. ಪೀಲಿ; ತುಳು. ಪಿಲ್ಲಿ, ಪಿಲ್ಲಿ ತೆಲು. ಪಿಲ್ಲಾಡಿ, ಪಿಲ್ಲಾಣಿ]

**ಪಿಲ್ಲಿ₂** (ನಾ). ಬೆಕ್ಕು : ಮಾನವ ಮುಱಿದು ರಣದಲ್ಲಿ ಪಿಲ್ಲಿಸನ್ನಿಭನಾದ ಮಾಳ್ಪನು (ಚಕಕ. ೯–೩೩). [ದೇ.॥ ತಮಿ. ತೆಲು. ಕೋಲಾ. ನಾಯ್ಕಿ. ಪಿಲ್ಲಿ; ಪರ್ಜಿ. ಬಿಲೆಯ್./ಹಿಂ. ಬಿಲ್ಲಾ, ಬಿಲ್ಲೀ./ಸಂ. ಬಿಡಾಲ]

**ಪಿಲ್ಲಿಹೆಸರ**, ಪಿಲ್ಲಿಹೆಸರು (ನಾ). ಒಂದು ಬಗೆಯ ಸಸ್ಯ ; ಕಾಡುಹೆಸರು ; ಮುದ್ಗಪರ್ಣಿ : ನರಿಹೆಸರು, ಪಿಲ್ಲಿಪೆಸರ (ಪ್ರಾಶಿಶಿ ೬೦–೦೨೩೬). ಪಿಲ್ಲಿಹೆಸರು: "ನರಿಹೆಸರು, ಪಿಲ್ಲಿಹೆಸರು, ವನಮುದ್ಗ" (ಹ್ರಾಶಿ. ೦೦೯).
[ ←ತೆಲು. ಪಿಲ್ಲಿಪೆಸರ ]

**ಪಿಲ್ಲಿಯುಂಗುರ** (ನಾ). =ಪಿಲ್ಲಿ₁ : ಪಿಲ್ಲಿಯುಂಗುರವು ಜಗ್ಗೆಸೆಯ ಸಲ್ಲಲಿತಾಂಗಿಯು ಕೆಂಬಜ್ಜೆ ಮೆಱೆದುವು ಚೆಲ್ಲುವಂತನುರಾಗರಸವ (ಅಜಕ. ೯೦–೬೨).
[ ಪಿಲ್ಲಿ₁+ಉಂಗುರ ]

**ಪಿಲ್ಲಿಹೆಸರು** 'ಪಿಲ್ಲಿಪೆಸರ' ನೋ.

**ಪಿಲ್ಲೆ** 'ಪಿಲ್ಲಿ₁' ನೋ.

**ಪಿಶಂಗ** (ಗು). ೧. ಕೆಂಪು ಮಿಶ್ರಿತವಾದ ಕಂದುಬಣ್ಣದ : ಭಾಸ್ಕರ ತನೂಜೆಯನುಭಯತಟನಿಕಟ ಕುಸುಮನಿವಹ ತತ್ಪರಾಗಪಟಳಪಿಶಂಗತರತ್ತರಂಗಸರೋಜೆಯಂ ಮೆಚ್ಚಿ (ಶಂಕಚ. ೩–೩೯ ಪ). ೨. ನಸುಕೆಂಪಾದ : ಹರಿನೀಲಾಚಲದಿಂ . . . ಪಿಶಂಗಕಮಳಶ್ರೀಲೀಲೆಯಿಂ ಪಂಚರತ್ನರುಚಿ ವ್ಯಾಪ್ತಿ ನಿರಂತರಂ ನೆಗಟ್ತಾನು (ಅಜಪು. ೦೦–೨೨). 'ಪಿಶಂಗತಲ' ಪರಾ. (ನಾ). ೩. ಕಂದುಬಣ್ಣ ; ಕಪಿಲವರ್ಣ : "ಪಿಂಗಃ, ಪಿಶಂಗಃ—ಈ ೨ ಕಪಿಲವರ್ಣಂ" (ಕಣಾಖು. ೨೨೦–೩೦); "ಪಿಂಗಳಂ ಕದ್ರು ಕಡಾರ ಚಂಡಸೀಮ ನಸುಗೆಂಪು ಪಿಂಗಂ ಪಿಶಂಗಂ ಕಪಿಲ ಶ್ಯಾಮವನೆ ಹಸುರುಗೆಂಪದು" (ಶುಂಗಣ. ೦೩೦–೨೦). ೪. ಕೆಂಪು ಬೆರೆತ ಹಳದಿಯ ಬಣ್ಣ ; ಹೊಂಬಣ್ಣ : ನೀರಾಜನದೀಪಕಳಿಕಾಶ್ರೇಣೀಶೋಣಾಂಶುದಾಶಾತಪ ಪ್ರಸರಪಿಶಂಗಮುಂ . . . ಎನಿಸಿ ಗೋವರ್ಧನನಗಂ ಸೊಗಯಿಸೆ (ಜಗಜ. ೯–೬೨ ಪ) ; ಒಂದೆಡೆಯಲ್ಲಿ ಮಜ್ಜದಿಧಮಾನದ ಕೊಟ್ರದಿನೆಯ್ದೆ ಕೃಷ್ಣಮಾಯ್ತೊಂದೆಡೆಯಲ್ಲಿ ವಾರಿಜರಜೋವ್ರಜದಿಂದೆ ಪಿಶಂಗಮಾಯ್ತು . . . ಪಾತಿಕಾವಳಿಯಮೊಪ್ಪೆ ಮನೋಹರಮಾದುವೆತ್ತಲುಂ (ಚಾಕಥ. ೦–೦೦೬) ; ಇಂದುಬಿಂಬಂ ಸಾಲಾಗಿಯರುಣಂ ಪಿಶಂಗಮಮಾಸಿತರುಚಿಗಳೊಲ್ಪಿಸಿ ಪೂರ್ವಾದ್ರಿಯೆಂಬ ದೇವಗೃಹದ ಮೇಲಿಟ್ಟು ಮಣಿಗಳಸ ಪೊಂಗಳಸ ರಜತಕಳಶಂಗಳೆನೆ ಚೆಲ್ವಾದುದು (ಕಂಪು. ೯–೦೯). [ಸಂ.]

**ಪಿಶಂಗತಲ** (ನಾ). ನಸುಕೆಂಪುಬಣ್ಣದ ಅಂಗಾಲು : ಬಾಲಕನ ಪಿಶಂಗತಲಂ ಬಾಲಕನ ಸ್ಖಲಿತಚಲನವಿನ್ಯಾಸದ ಲೀಲಾಲಸಮುಂ ಕಾಣದ ದುರ್ಲೀಲವೆನಿಪ್ಪೊಂದು ಜೀವನಂ ಜೀವನಮೇ (ಜುಜಪ. ೬–೦೦೬). [ಸಂ.]

**ಪಿಶಂಗತೆ** (ನಾ). = ಪಿಶಂಗ ೪ : ತುಂಗತೆಯಿಂ ಕನಕಾಂಶು ಪಿಶಂಗತೆಯಿಂದಜಿಯಲಾದುದಿಲ್ಲಖಿಳ ವರುತ್ತುಂಗವನ ನೆಗದ ಭುಜಶಿಖರಂಗಳುಮಂ ಮೇರುಶಿಖರಿಶಿಖರಂಗಳುಮಂ (ಅಜಿತ. ೯-೯೯). [ಸಂ. ಪಿಶಂಗತಾ]

**ಪಿಶಂಗಾಶ್ಮ** (ನಾ). ಒಂದು ಬಗೆಯ ರತ್ನ ; ಗೋಮೇದಕ : "ಬಂಧುರ ಪಿಶಂಗಾಶ್ಮವೆನೆ ಗೋಮೇಧಿಕಂ" (ಶಬ್ದಮಣಿ. ೩೦-೬). [ಸಂ. ಪಿಶಂಗಾಶ್ಮನ್]

**ಪಿಶಂಗಿತ** (ಗುಂ). ಹೊಂಬಣ್ಣದಿಂದ ಕೂಡಿದ : ಕುಸುಮಕಿಸಲಯಪರಾಗ ಪಿಶಂಗಿತರಂಗತ್ಪರಂಗವಾದಂತೆ (ಅಜಿತ. ೬-೦೦೦ ಜ); ಸ್ವಸ್ತಿ ಸಮಸ್ತಮಂಡಳಿಕ ಮಸ್ತಕಪುಷ್ಪರಜಃಪಿಶಂಗಿತಾಂಘ್ರಿಸ್ತಬಕದ್ವಯಂ (ಶಾಂತಿ. ೦೦-೬೯) ; ದಳಿತಾಂಭೋಜರಜಃಪಿಶಂಗಿತಲಸದ್ಗಂಧಾದಿ ತೀರ್ಥೋದಕಂ (ಸಂಕ್ರಾಂತಿ. ೧೨-೦೦೬). [ಸಂ.]

**ಪಿಶನಾರಿ** 'ಪಿಸನಾರಿ' ನೋ.

**ಪಿಶವಿ** 'ಪಿಸಿವಿ' ನೋ.

**ಪಿಶಾಚ** (ನಾ). ೧. (ಸ್ವಂತವಾದ ಭೌತಿಕಶರೀರವಿಲ್ಲದೆ, ಇತರ ಭೌತಿಕ ಶರೀರಗಳ ಮೂಲಕ ತನ್ನ ಪ್ರಭಾವವನ್ನು ವ್ಯಕ್ತಪಡಿಸುವುದೆಂದು ನಂಬಲಾದ) ಒಂದು ಬಗೆಯ ಅಮಾನುಷಶಕ್ತಿ ; ದೆವ್ವ ; ಭೂತ : ಪಿಶಾಚವೇಷಮಂ ಕೈಕೊಂಡರವು ನೆಯಂಗಣದೊಳಿರ್ದು (ಕಣ್ಣ. ಶಾ. ೩೯-೨೩); ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್ . . . ನಿಜಕಾಯಂ ಕುರುಭೂಮಿಯೊಳ್ ನೆಲಸೆ (ಗದಾಯು. ೫-೩); ಅರ್ವ ಪಿಶಾಚರಬ್ಬರಿಪ ಜಟ್ಟಿಗರುಬ್ಬುವ ಚಂಡಿ ರಕ್ತಮಂ ಪೀರ್ವ ಕರಾಳಿ (ಶ್ರೀಕೃ. ೩೯-೩೬೩) ; ಪಿಶಾಚ ಬಿಟ್ಟರೂ ನಿಶಾಚರ ಬಿಡ (ಗಾದೆ). ೨. (ಶ್ಮಶಾನವಾಸಿಗಳಾದ) ಈಶ್ವರನ ಭೂತಗಣ : ವಿಯನ್ನದಿಯೊಳ್ ಮುಟುಂಗೆ ಮುಂದಲೆ ಜಡೆಗಟ್ಟಿ . . . ವಾಮತನು ಪೆಣ್ಣಡೆಯಾಗಿ ಪಿಶಾಚಸಂಗಮಗ್ಗಳಿಸೆ ಪುಟ್ಟುಪೊಂದಿಗೆಡೆಯಲ್ಲದೆ ತೋರ್ಪರಿದಲ್ತೆ ವಿಸ್ಮಯಂ (ರಕ್ಷಸ. ೯-೬). ೩. ದೇವಯೋನಿಗಳಲ್ಲಿ ಒಂದು ವರ್ಗ : "ಕಿನ್ನರರು ಗಂಧರ್ವರಪ್ಸರರು . . . ಪಿಶಾಚರು . . . ಭೂತನಾಮಿಗಳು ದೇವ ಯೋನಿಗಳೆನಿಸ್ಕುಂ" (ಶಬ್ದಮಣಿ. ೦೬-೦೬); ಹರಿ ನುಡಿದನಂದು ಪಿಶಾಚ ಗುತ್ತರವ (ಕಥಾಗ. ೦೦-೬೦-೨೬); ತಮೋಯೋಗ್ಯರಲ್ಲಿ ದೈತ್ಯ, ರಾಕ್ಷಸ, ಪಿಶಾಚ, ಮನುಷ್ಯಾಧಮ ಎಂದು ನಾಲ್ಕು ಪ್ರಕಾರಗಳು (ಹಂಪಶಾ. ೨೮೬). ೪. ಒಂದು ಜನಾಂಗದ ಹೆಸರು : ಆರ್ಯರು ವಾಯುವ್ಯಪ್ರಾಂತದಲ್ಲಿ ಪಿಶಾಚರೆಂಬ ಜನರೊಡನೆ ಕಾದಾಡಬೇಕಾಯಿತು (ಶಾಸ್ತ್ರ. ೩೩). [ಸಂ.]

**ಪಿಶಾಚಕೋಶಾತಕಿ** (ನಾ). ಒಂದು ಬಗೆಯ ಸಸ್ಯ ; ಕಹಿಹೀರೆ: "ಪಿಶಾಚಕೋಶಾತಕೀ-ಕಹಿಹೀರೆ" (ಚಿತ್ರ. ೯೬). [ಸಂ. ಪಿಶಾಚಕೋಶಾತಕೀ]

**ಪಿಶಾಚಗ್ರಹ** (ನಾ). ದೆವ್ವದ ತೊಂದರೆ ; ಭೂತದ ಕಾಟ: ಪ್ರಲಾಪ ಉಂಟಾಗಿಹಣ, ನಿಷ್ಠುರಭಾಷೆಯಾನಾಡುವಣ, ಭಯಂಕರವಾಗಿಹಣ . . . ಮಲಿನವಾಗಿಹಣ, ಜಿತೇಂದ್ರಿಯನಾಗಿಹಣ, ಹೀಗಿದ್ದರೆ ಪಿಶಾಚಗ್ರಹ ವೆಂದರಿವುದು (ಕೃಷ್ಣಶಾ. II. ೬೬). 'ದೇವಗ್ರಹ' ಪರಾ. [ಸಂ.]

**ಪಿಶಾಚಪ್ರಾಪ್ತ** (ನಾ). ಪಿಶಾಚಿ ಹಿಡಿದವನು ; ದೆವ್ವ ಮೆಟ್ಟಿಕೊಂಡವನು : ಗುರು ಲಗ್ನಸ್ಥಿತನಾಗೆ . . . ಮೇಣ್ ತ್ರಿಕೋಣಗ್ರಹದೊಳ್ ಪಾಪಗ್ರಹಂಗಳ್ ಸುಧಾಕರನಾ ಕರ್ಕಿ ವಿಲಗ್ನದೊಳ್ ನಿಲೆ ಪಿಶಾಚಪ್ರಾಪ್ತನಕ್ಕುಂ ನರಂ (ಜಾತಕ. ೨೦-೦೬). [ಸಂ.]

**ಪಿಶಾಚಬಾಧೆ** (ನಾ). = ಪಿಶಾಚಗ್ರಹ : ಜನನಕಾಲದಲ್ಲಿ ಗುರು ಲಗ್ನದಲ್ಲೂ ಶನಿಯು ಸಪ್ತಮದಲ್ಲಿ ಅಂಗಾರಕನೂ ಇದ್ದರೆ . . . ಜಾತಕನಿಗೆ ಪಿಶಾಚಬಾಧೆ ಇರುತ್ತದೆ (ಜಾತಕ. ೨೦-೦೬ ಟೀಕು). [ಸಂ. ಪಿಶಾಚಬಾಧಾ]

**ಪಿಶಾಚಲಿಪಿ** (ನಾ). ಒಂದು ಬಗೆಯ ಲಿಪಿ : ಜಲಲಿಪಿ ಪಿಶಾಚಲಿಪಿ . . . ಈ ಅಗಣಿತಲಿಪಿಗಳ ನೋಡಲಜಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳ ಗೊಳುತಿದ್ದರು ವಿದ್ವಾಂಸರುಗಳೆಲ್ಲ (ಬಾಸ್ಕರ. ೬೬-೯). [ಸಂ.]

**ಪಿಶಾಚಶೈಲ** (ನಾ). ಶೈಲೇಂದ್ರ, ದ್ವಿಶಿಖರ, ಮಹಾಶೈಲ, ಗಜಶೈಲ, ಪಿನಾಕಶೈಲ, ಪಿಶಾಚಶೈಲ, ಪಂಚಶೈಲ, ಕೈಲಾಸ, ವಾಸೋತ್ತರ ಮತ್ತು ಹಿಮಾದ್ರಿ ಎಂಬ ಹತ್ತು ಕುಲಪರ್ವತಗಳಲ್ಲಿ ಒಂದು ; ಈ ಕುಲಪರ್ವತಗಳ ಸಂಖ್ಯೆ ಮತ್ತು ಹೆಸರುಗಳ ಬಗ್ಗೆ ಪ್ರಾಚೀನಕವಿಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಶೈಲೇಂದ್ರ . . . ಪಿಶಾಚಶೈಲ . . . ಹಿಮಾದ್ರಿಗಳೆಂಬ ದಶಕುಲಪರ್ವತಂಗಳೆ ಪೂರ್ವೋಕ್ತ ಗಂಧಮಾದನ ಮೆಂಬ ಕೀಲಕಪರ್ವತಕ್ಕೆ ತೆಂಕಣದಿಕ್ಕಿನಲ್ಲಿಹವು (ಅಡೀಳ. ೨೦೩). [ಸಂ.]

**ಪಿಶಾಚಸತ್ತ್ವ** (ನಾ). [ಕಾಮಶಾ] (ಸ್ತ್ರೀಯರ) ಹನ್ನೆರಡು ಬಗೆಯ ಸ್ವಭಾವಗಳಲ್ಲಿ ಒಂದು ; ತಮೋಗುಣಪ್ರಧಾನವಾದ ಸ್ವಭಾವ : ಅಸಿಯ ನಡುವಿನ ಮಿಸುಗುವೆಸಳ್ಗಣ್ಣ ಪಿರಿದುಂಬ ಬಿಸುಮೆಯ್ಯ ಮದ್ಯ ಮಾಂಸ ಪ್ರೀತಿಯ ಪುಸಿಗೇಳ್ಪರುಳ್ ತೊಳಲ್ದ ಸುನಿರದ ಲಜ್ಜೆಯೇಳದೆಸವಳೆ ಪಿಶಾಚಸತ್ತ್ವದವಳ್ (ಅಪ. ೫-೩೯); ದೇವಸತ್ತ್ವ ಯಕ್ಷಸತ್ತ್ವ . . . ಪಿಶಾಚಸತ್ತ್ವ ರಾಕ್ಷಸಸತ್ತ್ವ ಕಿನ್ನರಸತ್ತ್ವ ಖಚರಸತ್ತ್ವವೆಂಬ ದ್ವಾದಶಸತ್ತ್ವಸತಿಯುಮಂ (ಅಡೀಳ. ೦೮೩). 'ದ್ವಾದಶಸತ್ತ್ವ' ಪರಾ. [ಸಂ.]

**ಪಿಶಾಚಸ್ತ್ರೀ** (ನಾ). ೧. ಹೆಣ್ಣು ಪಿಶಾಚಿ. ೨. [ಕಾಮಶಾ] ಸ್ತ್ರೀಯರಲ್ಲಿ ಒಂದು ಬಗೆ ; ತಮೋಗುಣಪ್ರಧಾನವಾದ ಸ್ವಭಾವವುಳ್ಳವಳು : ಲಜ್ಜೆಗೆಟ್ಟವಳು ಹಿರಿದನುಂಬುವವಳು ದೇಹವುಂ ಬಿಸುಪಾದವಳು ಮದ್ಯ ಮಾಂಸವನನುಂಬಳು ಇವಳು ಪಿಶಾಚಸ್ತ್ರೀ (ಕಾಮಶಾ. ೨೦೬). [ಸಂ.]

**ಪಿಶಾಚಿ**[1] (ನಾ). ಹೆಣ್ಣು ದೆವ್ವ : "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಅಭಿಧಾ. ೨೦೯); ರಕ್ಕಸಿಯುರಾಕಿಣಿಪಿಶಾಚಿಯರಿಟ್ಟಿಗಾತಿಯರು (ಅಜಿತ. ೧೦-೩೨). [ಸಂ. ಪಿಶಾಚೀ]

**ಪಿಶಾಚಿ**[2] (ನಾ). = ಪಿಶಾಚ ೧ : ಅರ್ವ ಪಿಶಾಚಿಯರ್ಕಳನಸುಂಗೊಳಿಬೇವ ಪೆಣಕ್ಕೆ ಕೋಪದಿಂ ಪೋರ್ವ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಕರೌದ್ರಕಂ (ಅಪ್ಪಣ. ೩೩೯); ಬೆನ್ನು ಬಿಡದ ಪಿಶಾಚಿ ಹೊನ್ನು ಕೊಟ್ಟರೆ ನಿಂತೀತೇ? (ಗಾದೆ). [ಸಂ.]

**ಪಿಶಾಚಿಕೆ**[1] (ನಾ). (ಆಲಂ) ದುಷ್ಟತನ ; ಕ್ರೌರ್ಯ : ನಾವನಾರ್ಯರು ಮೆಸಗದೀ ಪಿಶಾಚಿಕೆಯನಕಟಿಸಗದಿರೆ? (ಹಳ್ಳಿಕ. ೩೩-೦೯). [ಪಿಶಾಚ + - ಇಕೆ]

**ಪಿಶಾಚಿಕೆ**[2] (ನಾ). ೧. ಹೆಣ್ಣುದೆವ್ವ : "ಪಿಶಾಚೀ, ಪಿಶಾಚಿಕಾ, ಈ ೨ ಹೆಣ್ದೆವ್ವ" (ಅಭಿಧಾ. ೨೦೯). ೨. ಒಂದು ಬಗೆಯ ಸಸ್ಯ ; ಕಾಸರಿಕೆ : "ಪಿಶಾಚಿಕಾ—ಕಾಸರಿಕೆ, ನಸುಗುನ್ನಿ, ಮರುಳಿ" (ಚಿತ್ರ. ೯೬). [ಸಂ. ಪಿಶಾಚಿಕಾ]

**ಪಿಶಿತ** (ನಾ). ೧. ಮಾಂಸ ; ಬಾಡು ; ಅಡಗು: "ಪಲಲಂ, ಜಾಂಗಲಂ . . . ಪಿಶಿತಂ, ಆಮಿಷಂ, ಕ್ರವ್ಯಂ, ತರಸಂ, ಈ ೮ ಮಾಂಸಂ" (ಕರ್ಣಾಟ. ೦೦೯-೯) ; ಆತನುಂ ನಾಲಗೆಯಿಂದಂ ಪಿಶಿತದ ಖಂಡಮಂ ಬಾಯೊಳಿಡೆ (ಕಣ್ಣ. ಶಾ. ೨೦-೦) ; ಸೀಳ್ದಿಕ್ಕುಟ್ಟಿಂ ವೈರಿಯನೊಡ್ಡಿ ತತ್ಪಿಶಿತದಿಂದಾತಂಗೆ ನೀಂ ಕೂರ್ಪೊರ್ಡೆಗಟ್ಟುತ್ತಿನ್ನಡೆ ಮಾಡು ತದ್ವಿಜಗಣಕ್ಕಾಹಾರಮಂ ಭೂಪತೀ (ಶಂಕರ. ೦೩-೬೦) ; ಧುರದೆಡೆ . . . ಕರುಳ್ಗಳೆ ತೋರಣಂ ಪಿಶಿತದೊಬ್ಬುಳಿಗಳ್ ನೆರಪಿರ್ದ ಬುತ್ತಿ ನೆತ್ತರೆ ಜಳಮಾಗಲಂತು . . . ಉಣುತಿರ್ದುವು ಭೂತಸಂಕುಳಂ (ಶ್ರೀಕೃ. ೨೯-೩೬೯). ೨. ಮಾಂಸದ ಅಡುಗೆ ; ಪಾಕ : ನಡುವಿರುಳ್ಪೋಗಿ ವಣಿಜರನೊಟ್ಟಯಿಸಿ ಮಂಚಿಕೆ ಕುಣಿದಂದನೆಂದನೊರ್ವಂ ಪಿಡಿದು ತಂದಿತ್ತ ಕುಣಿಯಾನಾನುಣ್ ಕೊಂದು ಪಿಶಿತಮಂ ಮಾಡಿದೆನೆಂದ ನೊರ್ವಂ (ಸುಕುಮಾ. ೬-೦೩). [ಸಂ.]

**ಪಿಶಿತಖಂಡ** (ನಾ). ಮಾಂಸದ ಚೂರು : ಬಸುನೆತ್ತರುಮಂ ಕಂಡ ದಿಂಡೆಯುಮಂ ಕಂಡು ಕ್ಷುಧಾರ್ತನಪ್ಪದೊಂದು ಮೃಗಧೂರ್ತಂ ಪಿಶಿತ ಖಂಡಕ್ಕೆ ಸಾರ್ದು (ಶಬಶಾ. ೬೨-೦೬). [ಸಂ.]

**ಪಿಶಿತಭೋಜನ** (ನಾ). ಮಾಂಸದ ಊಟ : ಪಿಶಿತಭೋಜನದಲ್ಲಿಗೆ ನಿಲ್ಲ ದೆಕ್ಕೆಯಿಂ ಸಾರ್ವ ನಿಶಾಚರೀಜನಮಂ . . . ಈಕ್ಷಿಸಿದಂ ಪ್ರತಿರೂಪ ಕೊದ್ರಕಂ (ಕಾಕ್ವಾ. ೩೬೪). [ಸಂ.]

**ಪಿಶಿತಾಶ** (ನಾ). ೧. ಮಾಂಸವನ್ನು ಭಕ್ಷಿಸುವವನು ; ಮಾಂಸಭಕ್ಷಕ : ಕಡುಭಕ್ತಿ ಪಿಶಿತಾಶರಪ್ಪರಸುಗಳ್ ಮರ್ತ್ಯರ್ಕಳಮರ್ಪಿಸದಿಂದೊಡ ಗೂಡಿರ್ದ ನಿವೇದ್ಯಮಂ . . . ಕುಡರೇ (ಶಬಾರ. ೨೯೩). ೨. ರಾಕ್ಷಸ ; ನಿಶಾಚರ : ಯುವಪಾಶದಿಂ ಪಾವಕವರ್ಮಂ ಮೊದಲ ಬಗಿದ ಪಿಶಿತಾಶರಂ ಕೇಡಪ್ಪ ರಾವಣನ್ . . . ಸಂಹರಿಸಿ ಧರ್ಮಲಾಭಕೆ ಯಶೋದೀಪ್ತಿಯಂ ಮೆರೆವನಯ್ (ಶ್ರೀರಾಮಪಾ. ೨೯-೨೦): ಕೀಸಿದಾ ಕೂರಂಬುಗಳಿಗೊಂದಿನಿತೆ ಘಾಸಿಯಹಾಗುತ್ತೆ ಪಿಶಿತಾಶನನುದಿದ್ದನ್ (ಶ್ರೀರಾಮಪಾ. ೦೮೦-೦೩೦). [ಸಂ.]

**ಪಿಶಿತಾಶನ** (ನಾ). ೧. ಮಾಂಸವನ್ನು ತಿನ್ನುವುದು. ೨. ಪಿಶಾಚಿ. ೩. ರಾಕ್ಷಸ : ಪಿಶಿತಾಶನನು ಕಂಗಳ ಮುಚ್ಚಿ . . . ವಿವರಿಸಿದ (ಶಬಾಗ. ೦೦-೬೦-೨೮). [ಸಂ.]

**ಪಿಶಿತಾಶಿ** (ನಾ). ೧. = ಪಿಶಿತಾಶ ೧ : ವಸುಧಾಜನಂಗಳೆಲ್ಲಂ ಮಸಣ ಮದೆಂದೊಡೆ ಭಯಸ್ಥರಪ್ಪರದೇಂ ಪೇಟ್ ಪಿಶಿತಾಶಿಯು ತನುವಂತದೆ ಮಸಣಂ ಮಸಣಕ್ಕೆ ಬೇಜ್ ಕೋಡೆರಡೊಳವೇ (ಶಬಾರ. ೨೯೬). ೨. ರಾಕ್ಷಸ. ೩. ನೈಋತ್ಯದಿಕ್ಕಿನ ಅಧಿಪತಿ ; ನಿರುತಿ : ಇಂದ್ರನ ಮುಂದುಗೆಡಿಸಿ . . . ಪಂದೆಯೆನಿಸಿ ಯಮನನು ಪಿಶಿತಾಶಿಯು ತಂದನು ಹಿಡಿಯಾಳಾಗಿ (ಶ್ರೀಕೃಷ್ಣಾ. ೬೩೩). ೨, ೩ : ಎನಗೆ ವಿಜಾತಿ ಕೌಶಿಕನುಮಿಾ ತೃಣಕಾಷ್ಠಸಮೂಹಭೋಜಿಯಾಯನಲನನಾರಕಂ ಕೊಲುವ ನಿರ್ಘೃಣ (ನ:) ಪಿಶಿತಾಶಿ ದೈತ್ಯನೀ ವನಧಿಯೊಳಿರ್ಪ ಜಂಬುಕನುಮಿಾ ಸಲೆ ಚಂಚಳನಪ್ಪ ವಾಯುವೀ ಧನಪತಿಯಪ್ಪ ತದ್ಧನದನೀ ಬಡಭೌತಿಕನುಂ ಸಮಾನರೇ (ಕೇಬಪು. ೨-೦೦೪). [ಸಂ. ಪಿಶಿತಾಶಿನ್]

**ಪಿಶಿತಾಹಾರ** (ನಾ). = ಪಿಶಿತಭೋಜನ: ಮೃದುಪಿಶಿತಾಹಾರಮಂ ಪಡೆದುಂ ಮೆಚ್ಚಿ ಕರುಣಿಸಿ ತಿನಲೊಲ್ಲದೆ ಕಾದು ಕಟ್ಟಿದ ರಕ್ಕಸಂಗೆ ಮಿಕ್ಕಪರುಳ್ಕೊಡೆ ಪೇಟ್ಪೆಂದಂ (ಸುಕುಮಾ. ೬-೨೬ ವ). [ಸಂ.]

**ಪಿಶಿತೆ** (ನಾ). ಒಂದು ಬಗೆಯ ಔಷಧೀದ್ರವ್ಯ ; ಜಟಾಮಾಂಸಿ : "ಜಟಾಮಾಂಸಿ ಪಿಶಿತೆಯೆನಿಕ್ಕು" (ಮಂಗರಾ. ೯೩-೯೦). [ಸಂ. ಪಿಶಿತಾ]

**ಪಿಶುನ** (ನಾ). ೧. ತಿಳಿಯುವಂತೆ ಮಾಡುವುದು ; ಸೂಚಿಸುವಿಕೆ ; ಸ್ಪಷ್ಟಗೊಳಿಸುವುದು. ೨. ಸೂಚನೆ ; ಚಿಹ್ನೆ : 'ಸಂಗರಪಿಶುನ' ಪರಾ. ೩. ಚಾಡಿ ಹೇಳುವಿಕೆ ; ದೂರುವಿಕೆ : ಇದು ಅತಿಶಯೋಕ್ತಿ ಎಂದು ಕೆಲವು ಪಿಶುನಪ್ರವೀಣರು ಹೇಳಿ ಹಾಸ್ಯ ಮಾಡಿದಾಗ್ಯೂ . . . ಚಿಂತೆ ಇಲ್ಲ (ಹಬಸುಗ. ೩೬). ೪. ಚಾಡಿ ಹೇಳುವವನು; ಚಾಡಿಕೋರ : "ಕರ್ಣೇಜಪಃ, ಸೂಚಕಃ, ಪಿಶುನಃ – ೩ ಚಾಡೀ ಹೇಳುವವನು, ಕ್ಷುದ್ರಗಾರ" (ಸಿದ್ಧಾಂಶ. ೩೩೬); ನಿಶ್ಚಿತವಿದೆನಗೆ ಸಕಲವಚಶ್ಚತುರ ಜನೋಪದೇಶದಿಂ ಪಿಶುನವಚೋವೃಷ್ಟಿ ಕವಿಷಹರಮುಖವಿಪಕ್ಷಿನ್ನುತಿಮಂತ್ರ ಮೆಂಬುದಿನ್ನುಂ ಮುನ್ನುಂ (ಅಂರಾಶ.೦-೦೪): ಕೊಂಡೆಯಮಂ ಕೇಳಲ್ ಮನನುದರಲ್ ಪಿಶುನರ್ ಪೂರ್ದಿಯಿಂತೆಂದರ್ (ರಕಶಾ. ೯-೬೩ ವ). ೫. ನೀಚ ; ದುಷ್ಟ ; ಕ್ರೂರಿ : "ಪಿಶುನಃ—೧ ದುರ್ಜನ, ಚಾಡೀ ಕೋರ " (ಸಿದ್ಧಾಂಶ. ೪೦೪); ಸತ್ತ್ವಂ ಪಿಶುನಂ ಪೆಜರ್ಗಾಪತ್ತುಂ ಮಾಡ ದಿರನೆಂದು ಮಣುಗಿದವುದು ಮಚ್ಚಿತ್ತಂ (ಅಂರಾವ. ೦-೩೬): ನಿಷ್ಠುರಿಗಳಿಗೆ ಪಿಶುನ[ಕಾಶಂ.ನ]ರಿಗಯೋಗ್ಯರಿಗಿದನು ಪೇಳದಲೆ . . . ಪರಮ ಭಗವದ್ಭಾಸಂಗೆ ತಿಳಿಸುವುದು ಈ ರಹಸ್ಯ (ಹಜಾರ. ೦೩-೬೨) ; ತಂದೆ-ತಾಯಿ, ಬಂಧು, ಗುರು ಇವರನ್ನು ದ್ವೇಷಿಸುವವರೂ ಆದ ಪಿಶುನರು ಶೋಚನೀಯರಾಗಿರುವರು (ಶುಳಸಿ. ೧೬೨). ೬. ಕುಂಕುಮಕೇಸರಿ ; ಕೇಶರ : "ಪಿಶುನ–ಕುಂಕುಮ, ಕೊಂಡೆಯನು" (ಬಶಂ. ೯೬). [ಸಂ.]

**ಪಿಶುನತ್ವ** (ನಾ). ಚಾಡಿ ಹೇಳುವುದು; ದೂರು ಹೇಳುವಿಕೆ. [ಸಂ.]

**ಪಿಶುನೆ** (ನಾ). ಒಂದು ಬಗೆಯ ಸಸ್ಯ; ಸಂಕೇಬೇರು : "ಮರುನ್ಮಾಲಾ . . . ಪಿಶುನಾ, ಸ್ಪೃಕ್ಕಾ . . . ಕೋಟಿವರ್ಷಾ, ಲಂಕೋಯಿಕಾ . . . ೧೦ ಸ್ಪೃಕ್ಕೆಯೆಂಬ ಗ್ರಂಥದ್ರವ್ಯ, ಸಂಕೇಬೇರು" (ಸಿದ್ಧಾಂಶ. ೦೧೩). [ಸಂ. ಪಿಶುನಾ]

**ಪಿಷ್ಟ** (ನಾ). ೧. (ಧಾನ್ಯ ಮೊದಲಾದುವುಗಳ) ಹಿಟ್ಟು ; ಪುಡಿ : "ಪಿಷ್ಟದು ಪಿಷ್ಟಂ ಚೂರ್ಣತು" (ಶಸ್ತ್ರಕಾ. ೬೩-೨೦) ; ಅಂತು ಧರ್ಮತೀರ್ಥಪ್ರವರ್ಧ ನಂಗೆ ಸುಗಂಧಶುಷ್ಕಚೂರ್ಣ ಪಿಷ್ಟದಿನುದ್ವರ್ತನವಿಧಿಯಂ ನಿರ್ವರ್ತಿಸಿ (ಅಕಪು. ೯-೬೬ ವ) ; ಪಿಸ್ಟ –ಹಿಟ್ಟು (ಕಮಶ. ೨೬೬ ಕ್ರಿಯೋ). ೨. ಅಕ್ಕಿ, ಗೋಧಿ, ರಾಗಿ ಮೊದಲಾದ ಧಾನ್ಯಗಳ ಹಿಟ್ಟಿನಿಂದ ತಯಾರಿಸಿದ ಆಹಾರಪದಾರ್ಥ. ೩. ಒಂದು ಬಗೆಯ ಲೋಹ; ಸೀಸ. ೪. ರಾಸಾಯನಿಕವಾಗಿ 'ಕಾರ್ಬೋಹೈಡ್ರೇಟ್' ಎಂದು ನಿರ್ದೇಶಿಸುವ ವಸ್ತು,–ಅಂಶ: ಧಾನ್ಯಗಳು ಮತ್ತು ಆಲೂಗೆಡ್ಡೆ, ಮರಗೆಣಸು, ಗೆಣಸು ಮೊದಲಾದ ಗೆಡ್ಡೆಗೆಣಸುಗಳಲ್ಲಿ ಬಹಳ ಪ್ರಮಾಣದಲ್ಲಿ ಪಿಷ್ಟವಿದೆ (ಅಹುಆ. ೫೬). [ಸಂ.]

**ಪಿಷ್ಟಕುಟ್ಟ** (ನಾ). [ನಾಟ್ಯ] ಭ್ರಮರ, ಆಸ್ಕಂದಿತ, ಆವರ್ತ, ಶಕಟಾಸ್ಯ, ಅಡ್ಡಿತ, ಸಮೋಸರಿತ, ಅರ್ಧರ್ಥಿಕ, ಎಲಕಾಕ್ರೀಡಿತ, ಪಿಷ್ಟಕುಟ್ಟ ಮತ್ತು ಚಾಷಗತಿ ಎಂಬ ಹತ್ತುಬಗೆಯ ಭೌಮ ಮಂಡಲಗಳಲ್ಲಿ ಒಂದು ; ೬ ಸೂಚಿ, ಅಪಕ್ರಾಂತ, ಭುಜಂಗತ್ರಾಸಿತ ಗಳೆಂಬ ಚಾರಿಗಳನ್ನು ಕ್ರಮವಾಗಿ ಮಾಡಿ, ಮಂಡಲಾಕಾರವಾಗಿ ಸಂತ್ತುವುದು : ಎಲ[ಪದ]ದೊಳ್ ಸೂಚಿಯನೆಡಗಲದೊಳಪಕ್ರಾಂತ ಚಾರಿಯಂ ಬಲನೆಡದೊಳ್ ಸಲೆ ಭುಜಗತ್ರಾಸಿತಮಂ ಎಲಸಿತದಿಂದೆಸವ ಮಂಡಲಭ್ರಾಂತಿಯುಮಂ ಕವೆಯೊಳ್ ಸಮೆಯಲ್ ಕೇಳಿದು ಬಿಡದೆಸೆವೀ ಪಿಷ್ಟಕುಟ್ಟಮಂಡಲಮನೀಂ (ಛಾಸ್ಕರಂ. ೯-೩೦). [ಸಂ.]

**ಪಿಷ್ಟಚರ್ಚೆ** (ನಾ). ಹಿಟ್ಟಿನ ರಂಗವಲ್ಲಿ,–ರಂಗೋಲೆ : ಮುನಿಸುಮಾರಿ ಯರಿಕ್ಕಿದ ಪಿಷ್ಟಚರ್ಚೆಯಿಂ . . . ಎಸೆದು ತೋಜುದುದಾಗಳತೋರಭೂರುಹಂ (ಶಾದಂಪು. ೨೨೬). [ಸಂ. ಪಿಷ್ಟಚರ್ಚಾ]

**ಪಿಷ್ಟಪಚನ** (ನಾ). (ಧಾನ್ಯದ) ಹಿಟ್ಟನ್ನು ಬೇಯಿಸಲು ಉಪಯೋಗಿ ಸುವ ಪಾತ್ರೆ : "ಋಂಜೀಷಂ, ಪಿಷ್ಟಪಚನಂ–೨ ಬಾಣಲಿ, ಗಾದಿಗೇ ಮುಚ್ಚಳ, ಕಡುಬುಮುಚ್ಚಳ, ಹಿಟ್ಟು ತೊಳಸುವ ಬಾನಿ". (ಸಿದ್ಧಾಂಶ. ೨೮೩) [ಸಂ.]

**ಪಿಷ್ಟಪದಾರ್ಥ** (ನಾ). 'ಕಾರ್ಬೋಹೈಡ್ರೇಟ್'ನ ಅಂಶವು ಹೆಚ್ಚಾಗಿರುವ ಪದಾರ್ಥ : ಜೀರ್ಣಶಕ್ತಿ ಕಡಿಮೆಯಾಗಿರುವವರಿಗೆ ಪಿಷ್ಟ ಪದಾರ್ಥಗಳು ಅನಾರೋಗ್ಯಕಾರಿ (ಕಶಕ. ೬೦). [ಸಂ.]

**ಪಿಷ್ಟಪೇಷಣ** (ನಾ). ೧. ಹಿಟ್ಟನ್ನು ಪುನಃ ಪುಡಿ ಮಾಡುವುದು. ೨. (ಆಲಂ) ಮಾಡಿದುದನ್ನೇ ಮಾಡುವಿಕೆ : ಉಪಯೋಗವಿಲ್ಲದ ಕೆಲಸಮಾಡುವುದು ; ವ್ಯರ್ಥವಾದ ಪುನರಾವೃತ್ತಿ : ನಿಚ್ಚಮಿಾ ಪಿಷ್ಟ ಪೇಷಣಮಿಾ ಚರ್ವಿತಚರ್ವಣಂ ಸುಮಿಾದೇ ನಿನ್ನಂ ಮಾರುಳ್ ಮಾಡಿತೋ (ಅಂಕು. ೩-೬೯) ; ಉಣಸಿಂ ತಯಿಲದಿಂ ಭೂಷಣ ಗಣಿಕೆಗಾನ ವಸ್ತ್ರ ಮಾಲ್ಯಾದಿಗಳಿಂ ತಣಿಯೆಸಣಂ ಚರ್ವಿತಚರ್ವಣಮಾ ಪಿಷ್ಟಪೇಷಣಕ್ಕಂ ಮೂಢಂ (ಕಮಶ. ೬-೩೦): ಇವನ ಕವನಗಳಲ್ಲಿ ಪಿಷ್ಟಪೇಷಣವಿರಲಿಲ್ಲ (ಶಾರ್ದೂಪಾ. ೦೦೩); ದೇವಸುತರಿಗೆ ನರರ ಬಾಂಧವ್ಯವಂತಹುದು ? ಪಿಷ್ಟಪೇಷಣವೇಕೆ ? (ಭಾಕಸಾ. ೪೪). 'ಚರ್ವಿತ ಚರ್ವಣ' 'ತವಡುಕುಟ್ಟು' ಪರಾ. [ಸಂ.]

**ಪಿಷ್ಟಾತ** (ನಾ). (ಆಭರಣ, ವಸ್ತ್ರ ಮೊದಲಾದುವುಗಳನ್ನು ಸುವಾಸನೆಯಿಂದ ಕೂಡಿರುವಂತೆ ಮಾಡಲು ಬಳಸುವ) ಸುಗಂಧಯುಕ್ತವಾದ ಪುಡಿ ; ಬುಕ್ಕಿಹಿಟ್ಟು : "ಪಿಷ್ಟಾತಃ, ಪಟವಾಸಕಃ — ೨ ಬಟ್ಟೆಗೆಗೆ ಹೂವಿನಿಂದ ಕಟ್ಟುವ ಗಂಧದ್ರವ್ಯದ ಹೆಸರು" (ಸಿದ್ಧಾಂತಿ. ೨೦೦). 'ಪಟವಾಸ' ಪರಾ. [ಸಂ].

**ಪಿಷ್ಟಾತಕ** (ನಾ). — ಪಿಷ್ಟಾತ : ಜಗತ್ಕುಶೇಶಯನಿವಾಸಿನೀಪ್ರಮದವಮುಖ್ಯಪಿಷ್ಟಾತಕಂ ವಿಶಾಲತರತರಂಗಸೌಧತಳಸಂಗಿಪೌರಾಂಗನಾವಶೀಕರಣಚೂರ್ಣವಾದುದು ಬಳೌಘದೂಳೀಚಯಂ (ಅಂಕಿ. ೧೦-೧೩) ; ಕೆದಱಿದ ಪಿಷ್ಟಾತಕದಿಂದೊದವಿದ ಪಟವಾಸಚೂರ್ಣದಿಂ . . . ಪದೆಪಂ ಪುಟ್ಟಿಸಿದುದಿಟ್ಟಳಂ ನೃಪಸದನಂ (ಕಂಠಾಭಾ. ೯-೨೬); ಪಿಂಜರಿತಪಿಷ್ಟಾತಕಂ ದೆಸೆದೆಸೆಗೆ ಪಸರಿಸಿಯುಂ (ಕಂದರ್ಪ. ೦೨-೬೩ ವ). [ಸಂ.]

**ಪಿಷ್ಟಾತಕಕೇಳಿ** (ನಾ). (ಉತ್ಸವಸಂದರ್ಭಗಳಲ್ಲಿ) ಸುವಾಸನೆಯ ಪುಡಿಯನ್ನು ಪರಸ್ಪರ ಎರಚುವಿಕೆ : ದಿವಿಜೇಂದ್ರವೃಂದಂಬೆರಸಿಂದ್ರು ಪೊಸಗೆ ಮರುಳ್ಗೊಂಡು ಪಿಷ್ಟಾತಕಕೇಳೀವಿಧಾನಾನಂತರಂ (ಶಾಂತಿ ೧೦-೬೯ ವ). [ಸಂ. ಪಿಷ್ಟಾತಕಕೇಳಿ]

**ಪಿಷ್ಟಾತಕಚೂರ್ಣ** (ನಾ). — ಪಿಷ್ಟಾತ : ದಿಕ್ಪಾಲಕರ ಕೆದಱುವ ಪಿಷ್ಟಾತಕಚೂರ್ಣಮೆನಿಸುವ ರಜಃಪುಂಜಮುಮಂ . . . ನೋಡುತ್ತುಂ ನಡೆಯೆ (ಅಜಿತ. ೦೩-೯೯ ವ); ಕಾಮಸಾಮ್ರಾಜ್ಯದೊಸಗೆಯೊಳ್ ಪಸರಿಸಿದ ಪಿಷ್ಟಾತಕಚೂರ್ಣದಂತೆ ಮಂದವಾದ ಪೊಂದಾವರೆಯ ರಜದೊಳಂ (ಪುಷ್ಪ. ೨-೩೨ ವ); ಕೆದಱಿದ ಪಿಷ್ಟಾತಕಚೂರ್ಣದೊಳ ಪಟವಾಸಚೂರ್ಣದೊಳಮುಪ್ಪದಿಶಾವದನಮುಮಾ ನಭಮುಂ ಪಡೆದುದು ನಾನಾವರ್ಣರಚಿರರಚನಾಚ್ಛವಿಯಂ (ಕೃಷ್ಣ. ೯-೩೨). [ಸಂ.]

**ಪಿಷ್ಟಿ** (ನಾ). ಪುಡಿ ; ಹುಡಿ ; ಚೂರ್ಣ : ಕ್ರಿಮಿ ಪೋಣ್ ಭಸ್ಮಂ ಪೋಣ್ಪಿಷ್ಟಿ ಪೋಣ್ ಶರೀರಕ್ಕೆ ನಿಟ್ಟೆಯಿಯಾ ದೊರೆಯಿದುಱುಂಲ್ ಕವುನೀಯ ಪೊಂದುವಿಲ್ಲ (ಅಜಿ. ೨-೩೩). [ಸಂ.]

**ಪಿಷ್ಟೋದಕ** (ನಾ). ಹಿಟ್ಟಿನೊಡನೆ ಬೆರಸಿದ ನೀರು : ಪಿಷ್ಟೋದಕಗುಡಧಾತಕೀಸಂಯೋಗದಿಂದಮೆಂತು ಮದವಿಕಾರಮಸೆದಪ್ಪುದು (ಅಜಿ. ೨-೯ ವ); ಪಿಷ್ಟೋದಕಗುಡಧಾತಕ್ಯಾದಿಯತ್ರಣಂ ಮದಶಕ್ತಿ ಪುಟ್ಟುವಂತೆ (ಶಾಂತಿ. ೬-೦೩ವ). [ಸಂ.]

**ಪಿಸನಾರಿ, ಪಿಶನಾರಿ** (ನಾ). ಜಿಪುಣ ; ಲೋಭಿ : ಎಂಥಾ ಪಿಸನಾರೀನಪ್ಪಾ ಇವನು ಅಂತ ಅಂದುಕೊಳ್ತಾರೆ (ಶಬ್ದ. ೨೦). ಪಿಶನಾರಿ : ಜುಗ್ಗ, ಜಿಪುಣ ; ಪಿಶನಾರಿ (skinflint. ೩೦೯೩) ; ಇತರರೆಲ್ಲರೂ ಪಿಶನಾರಿಗಳೆಂದು ಹೇಳಬೇಕಾಗಿ ಬರುತ್ತದೆ (ಶಾಸಿ. ೬೬). 'ಪೀನಾರ್ಸಿ' ಪರಾ.
[ದೇ. ॥ ತಮಿ. ಪಿಚಿನಾಱಿ, ಪಿಚಿನೇಱಿ, ಪಿಚುನಾಱಿ ; ತೆಲು. ಪಿಸಿನಾರಿ ]

**ಪಿಸರು₁, ಪಿಸುರು₁** (ನಾ). ೧. ದೇಹದ ಕೊಳೆ, — ಕಶ್ಮಲ ; "ಶರೀರದ ಹೊಲಸು" (ಶಾಶಕೋ. ೦೬). ೨. ಕಣ್ಣು, ಮೂಗುಗಳ ಕೊಳೆ, — ಮಲ ; ಗೀಜು : (ಆ). 'ಪಿಚ್ಚು₁' ಪರಾ. ಪಿಸುರು₁ : ೧. ಹಸನವಿಲ್ಲ ಹರಿಯುವ ಪಿಾರಿದ ಪಿಸುರು ಪಿಚ್ಚುಗಣ್ಣಿನ ಮುಂದಕೆ. (ಕೀರ್ತನ ೩೩-೦೬). ೨. ಸಾಮಾನ್ಯಜನರು ಮಕ್ಕಳು ಹುಟ್ಟಿದ ಕೆಲವು ದಿನಗಳಲ್ಲಿ ಕಣ್ಣಿನಲ್ಲಿ ಪಿಸುರು ಮತ್ತು ಕೆಂಪು ಕಂಡರೂ ಕೂಡಾ . . . ಕಣ್ಕಾಪು ನೇತ್ರಾಂಜನಗಳನ್ನು ಕಣ್ಣಿಗೆ ಹಚ್ಚಿ ಕಣ್ಣು ಪೂರ್ತಿ ಇಂಗಿ ಹೋದ ಮೇಲೆ ವೈದ್ಯರಲ್ಲಿಗೆ ಚಿಕಿತ್ಸೆಗೆ ಕರೆದುಕೊಂಡು ಬಂದಿರುವ ಪ್ರಸಂಗಗಳು ಎಷ್ಟೋ ಉಂಟು (ಶಿಶುವೈದ್ಯ. ೦೩). 'ಕಿಸುರ್₂' ಪರಾ.
[ದೇ.॥ ತೆಲು. ಪಿಸರು]

**ಪಿಸರು₂, ಪಿಸುರು₂** (ನಾ). ೧. ಆವೇಶ ; ಉನ್ಮತ್ತತೆ : (ಆ). ೨. ಸೊಕ್ಕು ; "ಪಿಸರು — ಪಿಾರ್ಖಿ ಸೊಕ್ಕು ; ಉಪದ್ವ್ಯಾಪಿತನ ; ತುಂಟತನ" (ಶಾಶಕೋ. ೦೬). ೩. ಹಟಮಾರಿತನ ; ಮೊಂಡುತನ : (ಆ). ಪಿಸುರು₂ : ೨. ಪಿಸುರು ಇದ್ದವರ ಹತ್ತಿರ ಉಸುರಬಾರದು (ಗಾದೆ).
ಪಿಸರು ತೆಗೆ = (ಆಲಂ) ನಿಂದಿಸು ; ತೆಗಳು ; ಬಯ್ಯು : ಪಿಸರು ತೆಗೆದರೂ ಪಿಶಾಚಿ ಬಿಡುವುದಿಲ್ಲ (ಗಾದೆ).
[ ? . / ತುಳು. ಪಿಸ್ರ್, ಪಿಸುರ್ ]

**ಪಿಸರುಗಣ್ಣು** (ನಾ). ಹೆಚ್ಚು ಪಿಸರು ಬರುವ ಕಣ್ಣಿನ ಒಂದು ಬಗೆಯ ರೋಗ : ಅವನು ಪಿಸರುಗಣ್ಣಿನ ಬಾಧೆಯಿಂದ ನೇತ್ರವೈದ್ಯರಲ್ಲಿಗೆ ಹೋಗಿದ್ದಾನೆ (ಜೂಜು). 'ಪಿಳಿಚಲುಗಣ್ಣು' ಪರಾ.
[ ಪಿಸರು₁ + ಕಣ್ಣು ( < ಕಣ್ ) ]

**ಪಿಸಾಂಟ, ಪಿಸಾಂಟು, ಪಿಸಾಡಿ, ಪಿಸಾಳಿ** (ನಾ). (ಉಕ) ತಲೆ ಕೆಟ್ಟ ವ್ಯಕ್ತಿ ; ಹುಚ್ಚ : ಯಾರೋ ಹುಡುಗಿ ಹೆಚ್ಚಾದ ಅಪ್ಪನೊಬ್ಬ ಈ ಪಿಸಾಂಟನ ಕೊರಳಿಗೆ ತನ್ನ ಮಗಳನ್ನು ಕಟ್ಟುವ ಧೈರ್ಯ ಮಾಡಿದ (ಶಾಂಕರುಣಾ. ೦೩೨). ಪಿಸಾಂಟು : ಬಸ್ಲೇ ತಮ್ಮದು ಅಂತ ತಿಳ್ಕೊಂಡಿದ್ದೊ ಪಿಸಾಂಟುಗಳು (ಹೊಸ್ತ. ೩೬). ಪಿಸಾಡಿ : ಈ ಪಿಸಾಡಿನ್ನ ಯಾರು ಕೇಳತಾರ್ರೀ ? (ಕಾಕೋ.೩೬). ಪಿಸಾಳಿ : ಈ ದಾಂಡಿಗ ಜವಾನ ಪಿಸಾಳಿಗಳ ಕಯ್ಯಲ್ಲಿ ಸಿಕ್ಕು ನಾನು ಒದ್ದಾಡಲಾರೆನಪ್ಪಾ (ಅಂಕಣ. ೦೨೪).
[←ತುಳು. ಪಿಸಂಟೆ. ಪಿಸಿಂಟೆ = ಮುಂಗೋಪಿ./ಮರಾ. ಪಿಸಾಟ್ = ಹುಚ್ಚು]

**ಪಿಸಾಂಟು** 'ಪಿಸಾಂಟ' ನೋ.

**ಪಿಸಾಡಿ** 'ಪಿಸಾಂಟ' ನೋ.

**ಪಿಸಾಳಿ** 'ಪಿಸಾಂಟ' ನೋ.

**ಪಿಸಿ₁, ಹಿಸಿ** (ಕ್ರಿ). ೧. ಸಿಗಿ ; ಕಿತ್ತು ತೆಗೆ ; ಹರಿದು ಹಾಕು : "ಹರಿ, ಮುರಿ, ಒಡೆ, ಪಿಸಿ [ಹಿಸಿ]" (ಶಂಕುಹು. ೯೦). ೨. (ಬಟ್ಟೆ, ಮೊದಲಾದುವು) ಹಿಂಜು ; ಹರಿದುಹೋಗು ; ಕಿತ್ತುಹೋಗು : ಒಡಲು ಉಡಿಗೆಗಳಂತೆ ಮಾಸಿ ಪಿಸಿವುದು (ಬಾಹ್ಯ.ಕ. ೩೩-೯). 'ಪಿಸಂಕರ' ಪರಾ. ಹಿಸಿ : ೧. ಶಿಶುವ ಸಲಹಿದು ಸುರವಿರೋಧಿಯ ಬಸುಱ ಬಗಿದೆಳೆಗರುಳ ನುಗುರಲಿ ಹಿಸಿ [ಪಾಠಾಂ. ನಸಿ, ಸಸಿ]ದು ಕೊರಳಲಿ ಹಾಯ್ಕಿದನು ನರಹರಿಯ ರೂಪಿನಲಿ (ಕೊರವ. ೬-೨-೩೦) ; ಅವರ ಬಾಯಿಂದ ಆ ಮಾತು ಬರುವ ಮುಂಚೆ ಅವರ ಕಟವಾಯ್ಗಳನ್ನು ಹಿಸಿದಲ್ಲದೆ ನನಗೆ ನಿದ್ರೆ ಬಾರದು (ಅಗ್ನಿ ಕ. ೩೦); ಮಿತ್ತು . . . ಶಿಶುವನು ಕಿತ್ತು ಹಿಸಿದು ತಿಂಬುವ ಕಂಡು (ಶಾಂಕಕ. ೨೯-೦೩). ೨. "ಹಿಂಜು, ಹಿಕ್ಕು, ಬಾಚು, ಹಿಸಿ [ಪಿಸಿ]" (ಶಂಕುಹು. ೯೨) ; ಕಾಪ್ಪಸ ಹಿಸಿವಂತೆ ಮೈಯುಬ್ಬಿಕ್ಕೆ ಮಾಗಿದೊಪ್ಪದಿ ಸಾಗಿದರವರು (ಶಕಕ. ೩೯-೦೦೦); ಸುಲಭವಾಗಿ ಹಿಸಿಯುವ ದಾರಗಳಿಂದ ಮಾಡಿದ ಬಟ್ಟೆ ಬಾಳಿಕೆ ಬರುವುದಿಲ್ಲ (ಗೃಹಅ. ೬೯). ೩. (ಹಣ್ಣು ಮೊದಲಾದುವು) ಸೀಳಿಕೊಳ್ಳು ; ಬಿರಿ ; ಒಡೆ : ಅಸಿದಾದ ಬವನೆಯೊಳಿವದದ ಕಾಯ್ಗಳನು ನಾಲ್ಕೆಸಳಾಗಿ ಕುಯಿದು ತುಪದೊಳಗುಕ್ಕರಿಸಿಯವು ಹಿಸಿಯದಂದದಿ ಹಿಕ್ಕಿ (ಸೂಪಶಾ. ೯-೯); ಪೊಜೆವ ಪೋಗೊಡಮೊಲೆಯನವನ ವಕ್ಷಃಸ್ಥಳದೊಳೊತ್ತಿದೊಡೆ ಹಿಸಿದೊಳಗಣ ಕಿನಿಸಾಂಧಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು ಕಡಿಕಿ ಪಱಿದು ಗುಣ ಹಾರದ ಮುತ್ತುಗಳ ಮಣಿಗಳೆಡೆವಿಡದೆ ಸೂಸುತಿರೆ (ಕೃಷ್ಣಭಾ. ೦೦-೦೬) ; ಕಾಲೊಂದನಾ ದಾರಿಗಿನ್ನೊಂದನೀ ದಾರಿಗೆಂದೇಕಾಲದೊಳಾರಿ ನಡೆಯುವುದಾದರೆ ಎರಡಡಿ ಹೋದೀರಿ ಸೊಂಟವು ಹಿಸಿದು ಬಿದ್ದೀರಿ (ಇಂಕಾಶ. ೨೩೬-೬೯). ೪. ಬಿರಿಯುವಂತೆ ಮಾಡು; ಎರಡಾಗಿ ಸೀಳಿಸಿ : ಹಿರಿದಾಗಿಯದ ಹಿಸಿದು ನಾರುವದನಂ ಮಾಡಿ ಅರಗಿನೊಂದದೊಳು ಸರಿಗೆಯ ಮಾಡಿಕೊಂಡು ಕತ್ತರಿಸುವುದು (ಸೂಪಶಾ. ೦-೯೦) ; ತುಂಬಿದಕ್ಕರಿನೆದೆಯ ಹಿಸಿಯುತ ಹಿಂಡಿ ಬಾಳಸು ಬಸಿವರು (ದ್ರಾಕ್ಷಾ. ೩೬-೦೬); ಹಲಸಿನ ಹಣ್ಣಿನ ತೆರನಿರೆ ನಿನ್ನನು ಹಿಸಿವರು ಬಂಧುಬಾಂಧವರು (ಇಂಕಾಶ. ೨೨೯-೩೪).

೫. ಅಮುಕು ; ಒತ್ತು ; ಹಿಂಡು : ಕಕ್ಕಸದಿಂದ ಕಡಿವ ಚಿವುಟುವನು ಗುರಿಕ್ಕುವ ಹಿಸಿವ ಹೆಟ್ಟುವನು ಚಿಕ್ಕವರುಗಳನೆಲ್ಲರನು (ಕೀಚಕಸಂ. ೦೫-೦೦೯).

**ಹಿಸಿಹಿಸಿ** (ದ್ವಿರುಕ್ತಿ) : ಆಶಯೆಂಬ ಪಾಪಿಯು ಕೂಸು ಹಿಸಿಹಿಸಿದು ತಿನುತ್ತಿರ್ಪುದು (ಅಶಸಂ. ೨೫೬-೦೦೬೬). **ಹಿಸಿದು ಬೀಳು** = ಬಿರಿದು ಬೀಳು; ಒಡೆದಂ ಬೀಳ್ : ಮಳೆಯು ಮುಗಿಲೇ ಹಿಸಿದು ಬೀಳುವಂತೆ ಸುರಿಯುತ್ತಿತ್ತು (ಮಲೆಕು. ೬೨೪). **ಹಿಸಿದು ಹೋಗು** = ಸೀಳಿಹೋಗು ; ಬಿರಿ : ಅವರನ್ನು ನೋಡುವುದಕ್ಕೆ ಜನವು ಊರೇ ಹಿಸಿದು ಹೋಗುವಂತೆ ಕಿಕ್ಕಿರಿದು ಬಿಟ್ಟಿತು (ಕಕಡಾ. ೬೬).

**ಪಿಸಿ₂** (ನಾ). ಒಂದು ಬಗೆಯ ಔಷಧದ್ರವ್ಯ; ಜಟಾಮಾಂಸಿ: "ಪಿಸೀ:— ಜಟಾಮಾಂಸಿ" (ಒಡಂ. ೯೭) [< ಸಂ. ಪಿಶೀ]

**ಪಿಸಿ₃** (ನಾ). ತಲೆ ಕೆಟ್ಟವನು; ಹುಚ್ಚ : ಹೀಗೇಕೆ ತಲೆ ಕೆಟ್ಟವರಂತೆ ಮಾಡಿದರೂ ಏನೋ. ಮಹಾ ಪಿಸಿ ಇರಬೇಕು ಈ ಪೋಲೀಸ ಅಧಿಕಾರಿ (ಕೃಶ. ೯೯೨). [← ಮರಾ. ಪಿಸಾ = ತಲೆ ಕೆಟ್ಟಿರುವ]

**ಪಿಸಿತ₁, ಪಿಚ್ಚ₁** (ನಾ). ಮಾಂಸ ; ಅಡಗು ; ಪಿಶಿತ : ಗಗನಗಳಯಲ್ಲಿ ತಿರುಗುವ ಖಗರಾಜಂ ಕಂಡು ಪಿಸಿತಮೆಂದದ ಪಾನದೊಳ್ ಬಗೆದೆತ್ತಿ ಕೊಂಡು ಪೋಪುದು ಮೃಗಶಾಬೇಕ್ಷಣೆಯ ಪಾದಾಚರಣದ ಮೆಟ್ಟಂ (ಕುಮಾಸ. ೬-೬೪); ಪಿಸಿತದ ಮಧುರಮೆಂತಹುದೊ (ಕಕುಕೃ. ೪-೦೨ ೩೦). **ಪಿಚ್ಚ₂** : "ಪಿಚ್ಚ — (ಪಿಸಿತ) — ಪಿಶಿತ = ಮಾಂಸ" (ಕನ್ನಕೋ. ೨೬). 'ಪಿಚ್ಚವುಣಿಗ' ಪರಾ. [< ಸಂ. ಪಿಶಿತ]

**ಪಿಸಿತ₂** (ನಾ). ಕೆಟ್ಟ ನಡತೆ (?) : ಹುಸಿ ಕೊಲೆ ಕಳವು ಪಾರದಾರ ಇಂತೀ ಪಿಸಿತವ ಹಜಾಯೊ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಗಸ. ೬೫-೨೬೫). [ ? ]

**ಪಿಸಿತಾಂಗ** (ನಾ). ಮಾಂಸಮಯವಾದ ದೇಹ ; ಭೌತಿಕಶರೀರ : ಜ್ಞಾನಾಗ್ನಿ[ಗ್ನಿ]ಯೊಳ್ದಹನವಾದ ಪಿಸಿತಾಂಗ ಏಗೆ ಪಮಾನಿತ ಸುಮಂತ್ರ ವಾಗೆ ಗುರುಕರುಣದಿ (ಅಕೋಕೃ. ೬-೬೫). [ಪಿಸಿತ₁ + ಅಂಗ₁]

**ಪಿಸಿಪಿಸಿ** (ನಾ). ಒಂದು ಅನುಕರಣಶಬ್ದ : ಉಲಿಯೆ ಡೊಂಬನು, ಕೆಲರ ಪಿಸಿಪಿಸಿ, ಕೆಲರ ಗುಜುಗುಜು, ಕೆಲವರಾ ಗಲಭೆ ಕಳಕಳ ಆಟದಾ ಕಳದಲಿ ವಿಶಾಲಕೆ ತುಂಬಿತು (ಕಂಕೃ. ೩೯-೨೩); ಗುಜುಗುಜು ಮಾತಾಡಿ ಪಿಸಿಪಿಸಿ ನಗುವೆತ ಸರಗ ತಮ್ಮುಸಕ ಎಳೆದಾರ (ಕಜ್ಞಾ. ೩೬೨).

**ಪಿಸಿಪಿಸಿ ಮಾತಾಡು** = ತುಂಬ ಮೆಲ್ಲಗೆ ಮಾತಾಡು ; ಪಿಸುಗುಂಟ್ಟು : (೬). **ಪಿಸಿಪಿಸಿಮಾತು, ಪಿಸಿಪಿಸಿಮಾತು** = ತುಂಬ ಮೆಲ್ಲಗೆ ಆಡುವ ಮಾತು ; ಪಿಸುಮಾತು : ಅಯ್ಯಾ ನಿನ್ನ ಬಿನ್ನಣದ ಪಿಸಿಪಿಸಿಮಾತಂತಿರ್ಕೆ (ಕಕಶಂ. ೬-೦೩೪ ೮); ಕಿಸಿಕಿಸಿನಗು, ಪಿಸಿಪಿಸಿಮಾತು . . . ಅವಳ ಜೀವನಕ್ಕೆ ಚಿಟುಕುಮುಳ್ಳಾಗಿದ್ದವು (ದೀಕಹ. II, ೦೪೦).

**ಪಿಸಿವಿ, ಪಿಶವಿ** (ನಾ). (ಉಕ) ಕೈಚೀಲ : ಪಿಸಿವಿಯಲ್ಲಿ ಅಕ್ಕಿ ತಂದೆ (ಉಕ). **ಪಿಶವಿ** : ಪಿಶವಿಯೊಳಗಿನ ಪುಸ್ತಕಗಳನ್ನೂ ಪಾಟಿಯನ್ನೂ ಹೊರತೆಗೆದು ಚಾಪೆಯ ಮೇಲೆ ಹರವಿ . . . ನೋಡತೊಡಗಿದ (ಕ್ರಿಕ. ೯೪). [← ಮರಾ. ಪಿಸವೀ, ಪಿಶವೀ]

**ಪಿಸು** (ನಾ). ಒಂದು ಅನುಕರಣ ಶಬ್ದ : 'ಪಿಸುಗುಟ್ಟು' ಪರಾ.

**ಪಿಸುಂಕು, ಪಿಸುಕು, ಪಿಸುಗು, ಹಿಚಕು, ಹಿಚಿಕು, ಹಿಚಿಗು, ಹಿಚುಕು, ಹಿಜಿಗು, ಹಿಸಕು, ಹಿಸಿಕು, ಹಿಸುಕು₁, ಹಿಸುಗು** (ಕ್ರಿ). ೧. ನೀವು ; ಕೀಡು ; ಮರ್ದಿಸು : ರುಂಬಕೀತಿ ಪಿಸುಂಕಿದಪುದೆಂಬುದು (ಶಾಕೆಕ್ಕ. ೩೦). ೨. ಅಲಕ್ಷ್ಯ ಮಾಡು ; ಅನಾದರದಿಂದ ಕಾಣು ; ಅವಮಾನಿಸು ; ತಿರಸ್ಕರಿಸು : "ಪಿಸುಕು, ಪಿಸುಂಕು— ಅವಜ್ಞಾ ಶಿಶಯೇ (ಅಪಮಾನ ಮಾಡು)" (ಶಬ್ದಾ); ಪಿಸುಕಿ ಕಳೆದಟ್ಟ ಚೈತ್ರಪುತ್ರರಾಜನು ಭೂತಳಂ ಬಸುಬಡೆ ನಿದಾಘ ಭೂರಮಣಾನೇಳ್ಗೆಯಂ ತಾಳ್ದಿದಂ (ಕಂಠೀರಶು. ೬-೦೦೬). 'ಪಿಸಿ₁' ಪರಾ. **ಪಿಸುಕು** : ೨. ಮೇಲಿನ 'ಪಿಸುಂಕು' ಉಲ್ಲೇಖದ 'ಶಬ್ದಾ' ಪ್ರಯೋಗವನ್ನು ನೋಡಿ. ೩. (ಹಣ್ಣಿನಂತೆ) ಕಿವುಚು ; ಹಿಂಡು : (೬). ೪. ಅದುಮು ; ಒತ್ತು : (೬). ೫. ಹರಿದು ಹಾಕು : (೬). **ಪಿಸುಗು** : ೧. ತಳಿರ್ಹಾಸಿಗೆ ಮಾಡಿ ಮಲಗಿಸಿ ಬಳಿಕದಿ ನೀ ಮಾದ ಪಿಸುಗೆ ನಿದ್ರೆಯ ಗೈವೆ (ಕಪುತ. ೩೪). **ಹಿಚಕು** : ೩. "ಒಚಕು—ಹಿಂಡು" (ಹಾಕಕೋ. ೩೬) ; ಹಿಡಿದ ವಿಷಯವನ್ನು ಅವರು ಹೇಗೋ ಎತ್ತಿಕ್ಕೊಂ ಹಾರಿಸಬಲ್ಲರು, ಎಲ್ಲೆಲ್ಲೋ ಹಿಚಕಬಲ್ಲರು (ಗಾಳಕ. vii, ಮಾಸ್ತಿಗಳು ಹೂತು). **ಹಿಚಿಕು** : ೩. ಸ್ವಲ್ಪ ಅರಳಿ ಮುಷ್ಟಿಯಲ್ಲಿ ತಕ್ಕೊಂಡು ಕಿವಿಯ ಹತ್ತಿರ ವೈದು ಹಿಚಿಕಿ ನೋಡಬೇಕು (ಮುಂಶಿಟ್ಟು. ೪೦). ೪. ಕರಡಿಗಳು ಅವರ ಕುತ್ತಿಗೆ ಹಿಚಿಕಿ (ಮುಂಶಿಯು. ೪. ೬-೦೦೯). **ಹಿಚಿಗು** : ೪. ಮುಂದ ಅವರು ಕುತಗೀ ಹಿಚಿಗಿ-ಪತಗೀ ಹಿಚಿಗಿ ಮಾಡಬಾರದೂ ಅಂತ ನಿಮ್ಮ ಮನಸಿನಾಗ ಇದ್ರ, ಈಗ ಆ ಹುಡಿಗೀ ಕಡಿಯಿಂದ . . . ಜವಾಬು ತಗೊಂಡು ಬಿಡೋಣ (ಗಂಗಾಸಾ. ೦೩೨). **ಹಿಚುಕು** : ೪. ಹಿರಿಯರಿರ ಕಿಚಾಯಿಂಗೆ ಪಟ್ಟವೆ ಕೊಜಿತರ್ಲಟ್ಟಾ ಹಿಚುಕಿ ಕೊರಳನು . . . ಎಂದು ಭರತನು ಹಿರಿದು ಹಲುಬಿದನು (ಕೌಶಿರಾ. ೪-೦೯) ; ಆ ವ್ಯಕ್ತಿ, ಆಗ ನನ್ನ ಕುತ್ತಿಗೆ ಮಣ್ನು ಹಿಚುಕಬಹುದೆನಿಸಿತು (ಕೀತುರಿ. ೦೦೬); ರಾವಣ್ಣನ ಕೈಯನ್ನು ಹಿಚುಕಿ ಕೇಳಿದಳು (ಕನಕ. ೬೨). **ಹಿಜಿಗು** : ೪. ಕುತ್ತಿಗೆಯನ್ನು ಹಿಜಿಗಿ ಪ್ರಾಣ ತೆಗೆಯುತ್ತೇನೆ (ರಾಂಕ್. ೪೦೬). **ಹಿಸಕು** : ೩. "ಪಿಸಕು-ಹಿಚಕು, ಹಿಂಡು" (ಹಾಕಕೋ. ೩೬). **ಹಿಸಿಕು** : ೪. ಹೆದರದೆ ಕೊಟ್ಟಿಹ ಹಣವನು ಕೇಳ ಬಂದ ಭಕ್ತನ ಕೊರಳನು ಹಿಸಿಕಿ ಯಮುನೆಯ ಹಿಂದೆ ಸಮಾಧಿಯ ತೆಗೆದು (ಕೊಳ್ಳಗಬಾ. ೦೨೦-೦). ೬. ಪರಿಶೀಲಿಸಿ ನೋಡು ; ಪರೀಕ್ಷಿಸು : ಭೂಮಿಪಾಲೋತ್ತಂಸರೊಳಗೆ ಹಿಂದಂ ಹಿಸಿಕಿ ನೋಳ್ಪರೇ ಬಲ್ಲವರ್ಧರಣಿ ಪಾಲ (ಕಮ್ಮಕ್ಕೌ. ೬-೦೬). **ಹಿಸುಕು₁** : ೩. ಬೆರಳು ತಾಳ ಹಣ್ಣು ಹಿಸುಕಿದಡೆ[ಪಾ. ಹಿಸಿದಡೆ, ಹಿಸಿಕಿದಡೆ]ಮೆಲಲುಂಟೆ (ಕುಹಾರೇ. ೪. ೦೨-೨೬) ; ಅಸಮಾಸ್ತ್ರ ನಾಣ್ಚೆ ಜನನ ಮುಂದೆ ಸಿಹಿಎಲ್ಲ ಹಿಸುಕಿ ಬೀಸಾಡಿ ಸಾರ್ವಂತೆ ರಸದಾಳಿಗಬ್ಬಿನ ರಸದೊಳಾ ನೃಪತಿ ಮಾಯಿಸುವಂದ ಮೆಚ್ಚುದುದಾ ಜನನ (ಕಕ. ೦೬-೬೬) ; ಕಂದಯ್ಯ ಹಣ್ಣನ್ನು ಒಡೆದು ತಿರುಳನ್ನು ಹಿಸುಕಿ ತೋರಿಸಿದರು (ಹಸುಹೂ. ೩೪). ೪. ಎನಿತೋ ಕೋಗಿಲೆಗಳ ನುಣ್ಗೊರಳನು ಹಿಸುಕಲು ತಳುಹದ ಕಲಿಘಟನಿವನು ! (ಕಂಪಾ. ೯೩-೩) ; ದೈತ್ಯಬಾಹು ಮುಂಗ್ದತೆಯನು ಹಿಸುಕಲು ಚಾಚಿತು ಹಲಬಾರಿ (ಕಂಕು. ೩೯-೦೩); ರಾಣಿ ಸಂಗಾಮಿಯ ಕೈ ಹಿಡಿದು ಹಿಸುಕಿ, ಕೃಪಾಕಟಾಕ್ಷವನ್ನು ಬೀರಿದಳು (ಕಕದಾ. II, ೯೬೬). **ಹಿಸುಗು** : ೪. ಯಾರನ್ನು ಕಂಡರೆ ಕತ್ತು ಹಿಸುಗಬೇಕೆನಿಸುತ್ತದೆ ನಿಮಗೆ ? (ಹುಕ್ಕುಹು. ೬೬). 'ಹಿದುಕು' ಪರಾ.

[ದೇ. ॥ ತಮಿ. ಪಿಚಕ್ಕು ; ತುಳು. ಪಿಸ್ಕು ; ತೆಲು. ಪಿಸುಕು ; ಗಡಬ. ಪಿಸ್ಕೊಲ್ಪೆ ; ಗೋಂಡಿ. ಪಿಸ್ಕಾನಾ ; ಕುರುಖ್. ಪಿಚ್ಕಾನಾ ]

**ಪಿಸುಕ** (ನಾ). ಒಂದು ಬಗೆಯ ಕೀಟ : ತುಂಬಿ ಪತಂಗ . . . ಪಿಸುಕ ವಿಳಂಬಿ . . . ಕೊಟ್ಟಾರಿಗಂ ಯೆಡೆವುಬುಯೆಂದಿತ್ಯಾದಿಗಳೊಳ್ ಸ್ಪರ್ಶರಸಗಂಧರೂಪಶಬ್ದಂಗಳೆಂಬೀಯಯ್ದುಮನಜಾಪ (ಹಾಕ. ೪೯). [ < ಪ್ರಾ. ಪಿಸುಅ / ಸಂ. ಪಿಶುಕ ]

**ಪಿಸುಕು** 'ಪಿಸುಂಕು' ನೋ.

**ಪಿಸುಗು** 'ಪಿಸುಂಕು' ನೋ.

**ಪಿಸುಗುಟ್ಟು** (ಕ್ರಿ). (ಕಿವಿಯಲ್ಲಿ) ಮೆಲ್ಲಗೆ ಹೇಳು : ಪಿಸಂದನಿಯಲ್ಲಿ ಗುಟ್ಟಾಗಿ ಹೇಳು, ಪಿಸುಮಾತನ್ನಾಡು: "ಪಿನುಕು-ಅಂತರ್ಗತಶ್ಶನೇ (ಪಿಸುಗುಟ್ಟು), ಕಾಂತೌ ಚ (ಪ್ರಕಾಶಿಸು)" (ಶಬ್ದಾ) ; ಆ ಎಲೆಗಳು

ಗಾಳಿಯು ಕಿವಿಯಲ್ಲಿ ಹೀಗೆ ಪಿಸುಗುಟ್ಟಿದಂತಂತೆ (ಕಾಕುಹಾ. ೩೮); ಪಿಸುಗುಟ್ಟಿದರೂ ಕೇಳುವಷ್ಟು ಹತ್ತಿರ ಇದ್ದರು (ಕಾ.ಬಸ್ಕ. ೨೦); ಅರ್ಚಕನ ಅನಾಚಾರ ಕುರಿತು ಹೊಸೂರಿನ ಜನರು ಪಿಸುಗುಟ್ಟುತ್ತಿದ್ದರು (ಹೊಸೂಹ. ೨೩). 'ಗೊಣಗುಟ್ಟು' ಪರಾ. [ಪಿಸು+ಕುಟ್ಟು₁]

**ಪಿಸುಗುಡು** (ಕ್ರಿ). = ಪಿಸುಗುಟ್ಟು : 'ಅದು ಸರಿಯಲ್ಲ' ವೆಂದು ಅವನ ಸಮಸ್ತಚೇತನವೂ ಪಿಸುಗುಡುತ್ತಿತ್ತು (ಕ್ರಾಪಕು. ೩೬೪) ; ಇನ್ನೊಬ್ಬರ ಕಿವಿಯಲ್ಲಿ ಗುಟ್ಟಾಗಿ ಪಿಸುಗುಡುವಾಗ ... ಹಠಾತ್ತಾಗಿ ಆಸ್ಫೋಟವಾಗುವ ಸೀನಿನಿಂದ ಏನು ಅವಾಂತರವಾದೀತು (ದೇಕಪ್ಪ. ೧೨). 'ಗೊಣಗುಡು' ಪರಾ. [ಪಿಸು+ಕುಡು₁ (< ಕೊಡು₁)]

**ಪಿಸುಣ್**, ಪಿಸುಣ₁, ಪಿಸುಣು, ಹಿಸುಣ₁, ಹಿಸುಣು (ನಾ). ಚಾಡಿ ; ಚಾಡಿಯ ಮಾತು; ಕುತ್ಸಿತ : "ಪಿಸುಣೆಂದು ಕುತ್ಸಿತಂ"(ಶಮಾ. ೬೨-೬೪೬): ಆಳ್ಕೆಸಕಗಿಯೆ ನುಡಿದನೆಂಬೀ ಪಿಸುಣನನಂ ಕೇಳ್ದನಿಲ್ಲ ಬೀಡಿನೊಳವನು (ಶಂಕಲಾ. ೬-೪೨); ಪುಸಿಗೆ ಪಿಸುಣ್ಗೆ ಪೋರಟಿಗೆ ಮಾಯೆಗೆ ಹಿಂಸೆಗೆ . . . ಬಸಗಡಿದೀಟ್ಟ ಕಾಟ್ಪಿಸನದಟ್ಟುಳಿಗಂ ಪುಗದಂತಿರಲ್ಲರಂ ಪೊಸಯಿಸಿ ಕಾರ್ತ ವೀರ್ಯಾನಸಕಂಬಡೆದಂ ದೊಡದೇವಭೂವರಂ (ಶಕಪ. ೩-೧೫); ಸವತಿಯೊಂದು ಪಿಸುಣ್ಗೆ ಎಟಿಯಂ ಮಾಡುವೋದನೆಂಬೊಂದುಬ್ಬೆಗದಿಂ ಕೊರಗಿದಳೆನೆ ಪದ್ಮಿನಿ ನಾಡೆ ಬಾಡೆ (ಕಾಪಾಕ್ಯ. ೨೨-೪). ಪಿಸುಣ₁ : ಪಿಸುಣಂ ಪರಾಭವಂ ಕಲಹಮುಂ ಕಪಟಮುಳಿಜಸಮತಿಕ್ರೂರಮನ್ಯಾಯ ಮಿವು ಪರ್ಚೆ ತದ್ವಸುಮತೀವನಿತೆ ಕಾಳದೆ ಕಂಪಿಸುತ್ತಿರ್ಪಳು (ಶಪಿಕೃ. -೦೦). ಪಿಸುಣು : ಪಿಸುಣಂಗೆ ಮುಳಿವಂ ವಾದ್ಯವಿದ್ಯಾಧರಂ . . . ಸಿಂಗನ ಗರುಡ ನಾ[ಮಾ]ದಿ ಸಮಸ್ತಪ್ರಶಸ್ತಿಸಹಿತಂ (ಎಕ. XIX. ೦೬೪-೦೨; ೨೦೬೦); ವಿಕಾಳಿಸಿತೆ ಕೌರವನ ಬುದ್ಧಿ ವಿಟಾಳಸಂಗತಿಯಾಯ್ತಲಾ ಪಿಸುಣಾರ ಕರಳಿಚಿದು (ಕುವ್ಯಾಸ. ೦೨-೪೬); ಕಲಹಿಸದಿರಾರೊಡನೆ ಪಿಸುಣನುಳಿ ಪರಧನಕ್ಕಳುಪದಿರು ಶಪವಸಗು (ಕೃಶಪ. ೩-೨-೩). ಹಿಸುಣ : ಕಂಗಳು ಹಿಸುಣವ ಹೇಳಿಹವೆಂದು ನೋಡಲವ್ವೊನವ್ವಾ (ಸರ್ವಶ. ೬೦-೩೬೦) ; ಹಿಸುಣವನು ಹೇಳುವ ಕೇಳುವರಿಗಿನ್ನಾವುದ್ಯ ಪ್ರಾಯಶ್ಚಿತ್ತವಿಧಿಯೆಂದ (ಸಂಶಶ. ೦೩-೬೦). ಹಿಸುಣು: ಹಿಸುಣು ಧರ್ಮದ್ರೋಹ ರುಡೆ ಕೈಮಸಕ ಪಳಿಪನ್ಯಾಯವೆಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ಕೊಕರಾ. ೦-೩-೨೬). [< ಸಂ. ಪಿಶುನ]

**ಪಿಸುಣ₁** 'ಪಿಸುಣ್' ನೋ.

**ಪಿಸುಣ₂**, ಹಿಸುಣ₂ (ನಾ). ೧. ಚಾಡಿ ಹೇಳುವವನು; ಚಾಡಿಕೋರ: "ಪಿಸುಣನೆನಲ್ ಪೈಶೂನ್ಯಂ" (ಕಕುಹ. ೨೦೬) ; ಪಿಸುಣರ ಪೊಸೆವೊ ಕುಠಿ(ಟಿ)ಲಂ ಪೊ × × ವ ಈಬುದೆ ಈಜು(ಇಜು)ಯು[ದೆ] ನನ್ನಿ ನುಡಿಯುದ ನಣ್ಣ(ನ್ನಿ)ದೇವಂಗಟುಸ್ಸಿಮುಯ್ಯುವ್ಪಡೆದೊಂಗರ ಅಲೆದೊಂ ಮೂಡಲಿ ಪೊಂ (ಎಕ. XXIV. ೧೯೩-೦೨; ಸು. ೨೨೬); ದೈವ ಗುರು ದ್ವಿಜರ ಚರಣಸೇವೆಯಲಾರ್ತತೆಯು ಪಿಸುಣರ ನುಡಿಗಳಲಿ ಮೂರ್ಖತೆಯು ನೀ ವಿರಚಿಪೆಯೊ ಬೇಸಟುವೆಯೋ (ಕುವ್ಯಾಸ. ೦-೩೬): ಪುದಿದಿರ್ಪುದು ತೇಟ್ಗೆ ವಿಷಂ ತುದಿವಾಲದೊಳ್ಕದೆ ಘಣೆಗೆ ತುದಿದಾಡೆಗಳೊಳ್ ತುದಿನಾಲಗೆಯೊಳ್ಪಿಸುಣಂಗಿದು ಸರಿಯುವ್ರ ಸೋಂಕೆ ಕೊಲ್ವುವಿದು ಸೋಂಕದೊಡಂ (ಶಪ೮. ೦-೩೫); ಪಿಸುಣನ ಹತ್ತಿರ ಉಸುರಬಾರದು (ಗಾದೆ). ೨. ನೀಚ; ದುಷ್ಟ : "ದುರ್ಜನಃ, ಪಿಶುನಃ, ಕ್ಷುದ್ರಃ, ನೀಚಃ, ಕರ್ಣೇಜಪಃ, ಖಳಃ—ಈ ೬ ಪಿಸುಣನು" (ಹಲಾಯು. ೫೬-೦೯೧); ಪಿಸುಣನೆ ಪಾತ್ರಕ ಪರಸತಿಯರಿಗೆ ದ್ರೋಹಿಸುವನಧಮ ದುರ್ನುಡಿಯು ಉಸುರುವವನೇ ಕ್ರೂರ ಚಾರಿತ್ರಭ್ರಷ್ಟನೆ ವಸುಧೆಗೆ ಪಾಪಿಯೆನಿಸುವ (ಕೀಪಂಸಾಂ. ೬-೫೬); ಬಂಡೆ ಪ್ರಸವದ ನೋಪಟುವಳಿ ಪಿಸುಣಂ ಸಿರಿಗಳಿಂ ಜಸದೊಳಿಪ್ಪವನ ಸೈರಿಪನೆ (ಕುಕ್ಕಾಂಗ. ೦-೦೩); ಪಿಸುಣನ ದ್ರವ್ಯ ಲೋಭಿ ಬಯುಸಿದ ಹಾಗೆ (ಗಾದೆ).

೩. ಶಕುನವನ್ನು ಸೂಚಿಸುವುದೆನ್ನಲಾದ ಒಂದು ಬಗೆಯ ಹಕ್ಕಿ ; ಹಂಗನ ಹಕ್ಕಿ : ಗೊರವ ಗಿಳಿ ಬಾಗಿಲಿಗ ಹರಡೆ ಹಸುಬು ಪಿ[ಕಾಕಂ ಹಿ]ಸುಣ ಹೆಬ್ಬಕ್ಕಿ ಗಿಡುಗ . . . ಹಕ್ಕಿಗಳ ಮಳೆ ಕರೆದುದಡವಿಯೊಳಗೆ (ಸೋಕುತ. ೩-೪). ಹಿಸುಣ₂ : ೧. "ಹಿಸುಣ—ಪಿಶುನ=ಪಿಸುಣ" (ಕಕೃಕೋ. ೪೪); ಸಟಿನವೇ ನಿನ್ನ ಚಿತ್ತವುಳರಿಗೆ ಹಿಸುಣರಿಗೆ ವಂಚಕರಿಗಜ್ಞರಿಗುಸುರಿಯೆಲೆ ನಿನ್ನಂತರಂಗವನೆಂದನು ಮುನಿಪ (ಕುವ್ಯಾಸ. ಕಂ೩. ೦-೩೪) ; ಹಿಸುಣರ ಜಾಳಿಗರ ಚದುರೋಕ್ತಿ ಸಮಗೇಕಿವಳಿವರೊಡನೆ (ಕೊಕರಾ. ೨-೦-೨೬). ೨. ಚೋರನನು ಕಂಟಕನ ಹಿಸುಣನ ಜಾರನನು ಪುಡನನು ಸಮಯ ವಿಕಾರಭೇದಿಯನಿಂತಿವರನು ಕಂಡು ಮನ್ನಿಸದೆ ದೂರದಲಿ ವರ್ಜಿಸುವುದು (ಕುವ್ಯಾಉ. ೪-೪೬). ೩. ಮೇಲಿನ 'ಸೋಮಚ. ೩-೯' ರ ಪ್ರಯೋಗದ ಪಾಠಾಂತರವನ್ನು ನೋಡಿ. [ಪಿಸುಣ್ + — ಅ₇]

**ಪಿಸುಣತನ** (ನಾ). ಚಾಡಿಕೋರತನ; ಪಿಶುನತ್ವ : ನಿಜಬಾಂಧವರು ಅಳಿಯೆ, ಪಿಸುಣತನ ಅಡಗಿತೇ ? (ಕಂತ್ರಿ. ೫೦); ಸಂಗೀತದಲ್ಲಿ ಓದದಿದ್ದ ಅವರ ಬುದ್ಧಿ ಪಿಸುಣತನದಲ್ಲಿ ಚುರುಕಾಯಿತು (ಕೂಶಶ. ೦೫೪). [ಪಿಸುಣ₁ (<ಪಿಸುಣ್) + — ತನ]

**ಪಿಸುಣತೆ**, ಹಿಸುಣತೆ (ನಾ). (ಒಬ್ಬರ ಬಗ್ಗೆ) ಆಡಿಕೊಳ್ಳುವುದು,—ದೂರುವುದು : ಚಾಡಿ ಹೇಳುವುದು : ಇಳೆಯೊಳು . . . ಸಂಚಲಚಿತ್ತಪಂಥತ್ವ ಮುಳಿಸು ಹೊಲೆ ವ್ಯಪಿ ರೌದ್ರಪವು ದುರ್ಬಲವೆ ಜೀವನ್ಮೃತವು ಪಿಸುಣತೆ ಕೊಲೆಯದೆಲೆ ಸುಕುಮಾರ ಕೇಳೆಂದಟುಹಿದನು ಮುನಿಪ (ಜಸಂಕ. ೫-೬೦); ರಾಮಂಗೆ ಪಟ್ಟಗಟ್ಟುವ ಪ್ರೇಮದೆ ದಶರಥನೃಪಾಲನನುಮಾಡಿಸುತಿರಲಾ ಮಂಥರೆ ಪಿಸುಣತೆಯಿಂ ಕಾಮಿನಿ ಕೈಕಯಿಗೆ ಪೇಳಲಾಕ್ಷಣದೊಳಗೆ (ದಕಾಶ. ೬-೦೪೪). ಹಿಸುಣತೆ : ಹಿಸುಣತೆಯ ಹಿಂಗಿಸಿ ಮನಸ್ಸಿನ ಮುಸಕವನು ಮಾಣಿಸಿ ವಿಕಾರದ ವಿಷಯ ವಿಧಿಗಳನುಟಿ ವಿಸರ್ಜಿಸಿ . . . ಸಟಿನೆ ಸತ್ಯದಿ ನಡೆವಗಲ್ಲದೆ ಹುಸಿಯ ನುಡಿವಗೆ ಭಕ್ತಿಯಾಹುದೇ (ಕ್ರಕುಂ. ೧೩-೪೦). [ಪಿಸುಣ₁ (<ಪಿಸುಣ್) +—ತೆ₃./ ಸಂ. ಪಿಶುನತಾ]

**ಪಿಸುಣತ್ವ** (ನಾ). = ಪಿಸುಣತನ : ವಿಷಮವಿಶ್ವಾಮಿತ್ರಮುನಿ ಮುನಿದು ತಪ್ಪ ಸಾಧಿಸಿದಪ್ಪನಟಿದಿರೇದಬುಪಟೀಕಬುಟಿದಡೆ ಪಿಸುಣತ್ವ ಪಟುಪದಿರ್ದಡೆ ನೃಪನ ಕೇಡ ನಾನೋತುಪೇಕ್ಷಿಸಿದಾತನು . . . ಇದ ಪೇಳದಂತೆ ಪೇಳ್ದಪೆನೆಂದು ನೆನೆದನು ಮುನಿನಾಥನು (ಹಕಾ ೫-೬೨). [< ಸಂ. ಪಿಶುನತ್ವ]

**ಪಿಸುಣಾಡು**, ಹಿಸುಣಾಡು (ಕ್ರಿ). ಚಾಡಿ ಹೇಳು ; ದೂರು ಹೇಳು ; ದೂರು : ಮೂಡಿದ ಮೊಡವಿ ಮುಗುಳ್ಮೊಗವಿಡಿಟುವುದ್ಭಂಜರೀಸ್ತನಂ ತೋಳ್ಮೊದಲೊಳ್ ತೀಡುವ ಸಟುಗಂಪೇಂ ಪಿಸುಣಾಡಿದುದೋ ಸಟಿಗೆ ಪುಷ್ಪಸಮಯೋದಯಮಂ (ಕುಶ್ರೀ. ೩-೦೦೫); ಅದಟಿಳ್ಕಿದ್ಯಾಧರ ಮಿಥುನಂ ಕೂಡಿದುವನರಸನೊಳ್ ಪಿಸುಣಾಡುವೋಲ್ . . . ಆ ನಪ ... ಧಕೆ ಪದೆದೆಟಿಗುವ ಪೊಸಪಟಿವೆಗಳ ಪಸುಳೆಯಿಂಚರವೊಪ್ಪಿದುವು (ಶಹುಶಾ. ೪-೪); ನಿನ್ನ ಹಿಂಗಡೆಯೊಳು ಪಿಸುಣಾಡುವವನು ಓಡಿದೀಯ ತಡೆದೀಯ ನೀನು (ಶಂಕಾಕ. ೬೬-೬೨). ಹಿಸುಣಾಡು : ದುಡಿದು ಹಣ್ಣಾದ ದೇಹ ಮನದ ಬೇಸರವ ಭಾವನೆಯನ್ನು ಹಿಸುಣಾಡುವಂತಿವೆ (ಮೋಕಮು. ೯೬ ಶ್ರಶಾ ೩೩೨). [ಪಿಸುಣ್ + ಆಡು₁]

**ಪಿಸುಣಾಡುಹ** (ನಾ). ಚಾಡಿ ಹೇಳುವುದು; ಬೇರೆಯವರ ಬಗ್ಗೆ ದೂರುವುದು ; ದೂರು ಹೇಳುವುದು : "ಪಿಶುನಭಾವಃ—ಪಿಸುಣಾಡುಹಂ. ಕೊಡೆಯು" (ಅಶಿನಾ. ೨೬-೦೬). [ಪಿಸುಣಾಡು + — ಹ₂ (< — ಪ₂)]

**ಪಿಸುಣ** (ನಾ). ೧. ಕೆಟ್ಟ ವ್ಯಕ್ತಿ; ನೀಚ; ದುಷ್ಟ: ಬೇಡಿದರೆ ಬೇಡುವದು ಮಾಡುವ ಧರ್ಮಿಯನು ಮೂರ್ಖಮೂರ್ಖರನು ಪಿಸುಣಗಳ ಕೇಡಿಸಿ ಬೇಡಬೇಡೆಂಬ (ಸರ್ವಜ್ಞ. ೬೦೩). (ಗು). ೨. ಕೆಟ್ಟದಾದ; ನೀಚವಾದ; ದುಷ್ಟ: ಹಸಿದವರನು ಕೂಡಿ ಪುರುಷ ಮನೆಗೆ ಬಂದು ಅಸಿಯಳ ಕೇಳಲಾಕ್ಷಣದಿ ಗುಸುಗುಟ್ಟಿ ಕೂನರುವ ಪಿಸುಣಮನದ ಹೆಣ್ಣು ಕಪವೆಂದು ಸೀಯೆು ನಾನವಳ (ಕಪೋತ.೦೯-೬೩). [ಪಿಸುಣ್ + —ಅ₃]

**ಪಿಸುಣಿಗ, ಹಿಸುಣಿಗ** (ನಾ). ಚಾಡಿಮಾತನ್ನು ಹೇಳುವವನು; ಚಾಡಿ ಕೋರ: ಶ್ವಾನಬಾಲವು ಡೊಂಕು ಹೀನಮನವದು ಡೊಂಕು ಕಾನನದ ಹರಿವ ಹೊಳೆ ಡೊಂಕು ಪಿಸುಣಿಗನು ತಾನೆ ಡೊಂಕೆಂದ (ಸರ್ವಜ್ಞ. ೦೯೬೨); ಯಾವಾನನಂಥ ಪಿಸುಣಿಗರ ಒಂದು ಪರಿವಾರವೆ ದರ್ಬಾರಿನ ಸುತ್ತಲೂ ಅದರ ಬಿಗುಹನ್ನು ಶಿಥಿಲಮಾಡಲು ಸುಳಿದಾಡುತ್ತಿದೆ (ಕೂಕಿಶ. ೩೩). ಹಿಸುಣಿಗ: ಮಿತ್ರಂಗೆರಡು ಬಗೆದವನ ಹಿಸುಣಿಗನ ಕೃಪಣನ ವೃಥಾ ಕೋಪಿಸುವವನ ದುರ್ಗತಿಗಳಾಗಲಿ ಶಶಿಮುಖಿಯೆ ನಾ ಮರಳೆ ನಿನಗಳು ಪಿಧರೆ (ಶ್ರೀಮುಂ. ೦೦-೦೩). [ಪಿಸುಣ್+—ಇಗ]

**ಪಿಸುಣಿಸು** (ಕ್ರಿ). ಚಾಡಿ ಹೇಳು; ದೂರು ಹೇಳು; ದೂರು: ಇಂದಿವನ ಮೇಲೆ ಪಿಸುಣಿಸಿದವರ್ ಬಲ್‍ಬನ್ನಮಂ ದಿಟಂ ತಾಳ್ದರಲ್ಲದೆಯಾ ಮಹಿಪನಿನಿಸು ಕುಂದನಾಂಪನೆಯೆಂಬರ್ . . . ಕೆಲಂಬರಲ್ಲಿ (ಕವ್ಯಕಾ. ೬-೩೨). [ಪಿಸುಣ್ + — ಇಸು₂]

**ಪಿಸುಣು** 'ಪಿಸುಣ್' ನೋ.

**ಪಿಸುಣೆ** (ನಾ). ಚಾಡಿ ಹೇಳುವವಳು; ಚಾಡಿಕೋರಿ: ಪಿಸುಣೆ ದುರಾತ್ಮೆ ದುಶ್ಚರಿತೆ ದುರ್ಭಗೆ ದುರ್ಮತಿ ದುಷ್ಟೆ . . . ದುರಾತ್ಮೆಯುಪ್ಪ ವಧು ಸಜ್ಜನಮೇ (ಚು.ತ. ೮-೬). [ಪಿಸುಣ್ + — ಎ₂]

**ಪಿಸುಣ್ಗಡೆ** (ಕ್ರಿ). (ಬೇರೆಯವರ ಮೇಲೆ) ಅಪವಾದವನ್ನು ಹೊರಿಸು; ನಿಂದಿಸು; ದೂರು: ಅನುನಯಾಭಿವಾದನಸಮನ್ವಿತಂ ಮಧುಕೈಟಭಂ ಕಳಿಪೆ ನಾರದ ನಾರದಂ ನುಡಿದರೆಂಬಂತೆ ಪಿಸುಣ್ಗಡೆದು ಸನ್ಮಾರ್ಗಾನುವರ್ತಿಯಾಗಿ (ಅಜಿತ. ೦೩-೨೨ ವ); ಬಿಜ್ಜಳಂ ಸಭಾಸದರೊಡನೆ ಕಂಡು ಕೌತುಕಂಗೊಂಡು ಪಿಸುಣ್ಗಡೆ[ಪಾಠಾಂ. ಣ್ಗೈ]ದ ಖಳರಂ ತರ್ಜನಂಗೈದು ಮತ್ಸುರದೊಳನ್ಯಾಯನಾದೊಡೆಮಿಂತು ಬಸವನಂ ಕೂರ್ತು ಪಿಸುಣ್ಗಡೆಯೆ ಜಿಹ್ವಾಚ್ಛೇದನಂಗೈವೆನೆಂದು ಘೂರ್ಣಿಸಿ ನುಡಿದು (ಶೃ.ಪು. ೮-೦೬ ವ). [ಪಿಸುಣ್ + ಕಡೆ₂]

**ಪಿಸುಣ್ಪೇಟ್** (ಕ್ರಿ). ಚಾಡಿಯನ್ನು ಹೇಳು,–ನುಡಿ; ದೂರು: ಧರ್ಮಿಗಂ ಕೊಲೆಯೇ ಮಂತ್ರಿಗವಿಚ್ಛಿತ್ತಾಚಿತನವೇ ತರ್ಕ್ಯಂ ಪಿಸುಣ್ಪೇಟ್ಟನೇ ಚಲಮಂ ಗಂಡುಮನಪ್ಪ ಕಯ್ಯನಗವಾ ಕೌಂತೇಯರೊಳ್ ಸಂಧಿಯೇ (ಗದಾಯು. ೩-೯೬); ಈತನನುದಾಸೀನಂ ಮಾಡಿ ಕೇಳಿದನ ವೃಪಡೇನಾನುಮಂ ಪುಸಿದು ಪಿಸುಣ್ಪೇಟ್ದಪಂ (ಶಂಕರ. ೩೦-೦೯); ಕೇದಿಯ ನಡುಂಗಿ ಕಾದಲ್ ಮುಟಾಂಕೆ ಪಾತ್ರಾವರ್ಗಳೆಂ ಪಿಸುಣ್ಪೇಟ್ದುವೊ ಕೋಪಾಳೆಯಿರ್ದಡೆಯಾ ತತ್ಪರಿಪಾಳಕ್ಕೆ ಮೇಗೆಳಸಿ ಸುಟಿವ ಮಧುಕರನಿಕರಂ (ಶಂಕ್ರ.ಪು. ೬-೦೯೦). [ಪಿಸುಣ್ + ಪೇಟ್]

**ಪಿಸುದನಿ** (ನಾ). ತಗ್ಗಿದ ಧ್ವನಿ,—ಸ್ವರ: ಪಿಸುದನಿಯಲ್ಲಿ ಆಡಿದ ಮಾತುಗಳನ್ನೂ ಇವರು ಕೇಳಬಲ್ಲರು (ಅಶ್ರು. ೦೯); ಆದಾಗ ತಂದೆಯವರು ಪಿಸುದನಿಯಲ್ಲಿ ಅಮ್ಮನ ಹತ್ತಿರ ಮಾತನಾಡುತ್ತಿದ್ದರು (ಅಹೋರಾ. ೩). [ಪಿಸು + ದನಿ₁]

**ಪಿಸುನುಡಿ₁** (ಕ್ರಿ). (ಕಿವಿಯಲ್ಲಿ) ಮೆಲ್ಲಗೆ ಹೇಳು; ತಗ್ಗಿದ ಧ್ವನಿಯಲ್ಲಿ ಮಾತನಾಡು: ತಾಯಳಲುತಿರೆ ಮುಂದೆ ತಂಗಾಳಿಯೊಸೆ ಬಂದು ಕಾಯುವಳ್ ಪಿಸುನುಡಿದು ಕಾಲೂರ ಚೆಲುವೆ (ಕಾರಂಜಿ. ೦೬೬–೦೨೨). [ಪಿಸು + ನುಡಿ₁]

**ಪಿಸುನುಡಿ₂** (ನಾ). ಕಿವಿಮಾತು; ಗುಟ್ಟು: ನಡೆದಿವೆ ಹೊಸಗಂಡಿನ ಕಾಲುಗಳು . . . ಪಿಸುನುಡಿಗಳ ಮಾರ್ದನಿಗಳ ಕಿರುಗೋಣೆಗಳಿಂದ ಕಾಣದ ಗಡಿಗಾಡುಗಳಿಂದ (ಶ್ರೀಕ್ಷೇತ್ರ. ೦-೦೦); ಹೊರಗಡೆಗೊಯ್ಯುತೆ ವೃತ್ತ ವೃತ್ತಿಕೆಯ ಗೋಡೆ ಒಳಗುಸುಂದ ಪಿಸುನುಡಿಯು ಇಲ್ಲಿ ನೀ ಪ್ರಾರ್ಥಿಸಿ ಮೆಲ್ಲನೆ ಬೇಳ್ಕೊಡೆ ಕೇಳಿಸಿಕೊಳನೆ ಆ ಒಡೆಯ (೨೦ಕಾಶ. ೦೩೦-೯೯). [ಪಿಸು+ನುಡಿ₂]

**ಪಿಸುಮಾತು** 'ಪಿಸುವಾತು' ನೋ.

**ಪಿಸುರು₁** 'ಪಿಸರು₁' ನೋ.

**ಪಿಸುರು₂** 'ಪಿಸರು₂' ನೋ.

**ಪಿಸುವಾತು, ಪಿಸುಮಾತು** (ನಾ). ಕಿವಿಮಾತು; ಪಿಸುನುಡಿ: ಮುಂಜಾವದುದಯದಲಿ ಕಪ್ಪುಲರ ಪಿಸುವಾತು ಭೃಂಗಜೀವನವನೆಚ್ಚರಿಸುವಂತೆ . . . ಬಾ ಎನ್ನ ಬಯಲಾಗುಡಿಗೆ! (ಕರಣ. ೯೬-೦). ಪಿಸುಮಾತು: ಪಿಸುಮಾತೊಲು ದೆಸೆದೆಸೆಯೊಳು ಹಬ್ಬಿದೆ ಎಲೆಯ ದನಿ (ಕೂಂಕರ. ೯೨-೦೯); ಕಂಪಿತಸ್ವರದಿಂದ ಮೆಲ್ಲನೆ ಪಿಸುಮಾತಿನಲ್ಲಿ "ಶಿವ" ಎಂದೆ (ಹಾವಾಡಿ. ೦೦೩); ಅವನು . . . ಆಗಾಗ್ಗೆ ಪಿಸುಮಾತಿನಲ್ಲಿ ಏನಾದರೂ ಹೇಳುತ್ತಿದ್ದನ (ಚುರಿಕಾ. ೦೦೬); ಕಾಡಿದವನು ಬಲ್ಲನೆ ಪಿಸುಮಾತ? (ಗಾದೆ). [ಪಿಸು+ಮಾತು₁]

**ಪಿಸುಟ್** (ಕ್ರಿ). ೧. ಸಿಗಿ; ಸೀಳಿ ಹಾಕು: ಕಿತ್ತು ತೆಗೆ: ನೆಲಕ್ಕೆ ಬೀಳನಲ್ಲಾರದೆ ನೆಗಪ್ಪಿಕೊಂಡು ತೊಡೆಗಾ ನರಸಿಂಹನಮುಂತೆ ಕಂಭದಿಂ ಮೂಡಿದ ಕಾಳರಕ್ಕಸನನಿಕ್ಕುವವೋಲ್ ನಖದಿಂ ಕರುಳ್ಗಳಂ ತೋಡಿ ಪಿಸುಟ್ದು ಸೀಳ್ದು ಬಿಸುಟಂ ಕಲಿಕಂಸನನಬ್ಜಲೋಚನಂ (ಅರ್ಜನೀ. ೬-೦೦೬). ೨. ಹಿಸಿದು ಹೋಗು; ಹಿಂಜಿ ಹೋಗು; ಹರಿದು ಹೋಗು: ಪೆರ್ಬುಲಿ ಬಾಯೆ ಕಂಠಗತ ಜೀವಿತರಾದವರೆಕ್ಕಲಂ ಕನಲ್ದುರ್ಬಿ ಪಿಸುಟ್ದ ದೊಂಡೆಗರಳಂ ತಳೆದಿರ್ಪವರ್ . . . ಬರ್ಪವರೊಪ್ಪಿದರ್ (ದಶಕು. ೩-೪೦). ೩. ಸೀಳಿ ಹೋಗು; ಬಿರಿದು ಹೋಗು; ಒಡೆ: ಚುರ್ಚುವ ಮಾರ್ನುಡಿಯದೆ ಗಾಣದೊಳ್ ಪಿಟ ಪಿಸುಟ್ದಿರೆ [ಪೋ]ಟಸು ಪಿಡಿವಾಳದೊಳ್ (ಸುಕುಮಾ. ೬-೩೨); ಪರ್ಬಿದ ದುಸ್ಸಹಸ್ತಮೋನ್ಮದಕರಿಯೂಥದಂ ಪೆಳಱ ಪೋಟ ಪಿಸುಟ್ದ ತದಾತ್ಮಮಾಂಗದಿಂ ಕೆದಱದ ಮಾಕ್ತಿಕಾವಳಿಪೋಲಾದುವು ಮೂಡಣ ತಾರಕಾವಳಿಗಳ್ (ಕಾವ್ಯಾವ. ೯೦೨); ನೃಪಂ . . . ಆ ನೆತ್ತರ ಪಾಣೆಯಿಂದಿಱಿದೊಡೆ ನೆತ್ತಿ ಪಿಸುಟ್ದುತ್ತು ಸತ್ತುವಂತಾಯೆರಡುಂ (ಯಶೋಧರ. ೩-೯೩).

**ಪಿಸ್ತಾ, ಪಿಸ್ತೆ** (ನಾ). ಒಂದು ಬಗೆಯ ಮರ ಮತ್ತು ಬಾದಾಮಿಯಂತಹ ಅದರ ಬೀಜ; ೯ ಕೆಲವು ಸಿಹಿತಿಂಡಿಗಳನ್ನು ತಯಾರಿಸುವಾಗ ಈ ಬೀಜವನ್ನು ಬಳಸುತ್ತಾರೆ: ಇಷ್ಟರಲ್ಲೇ ಅವನು ಪ್ರತಿದಿನವೂ ಬಂದು ಪಿಸ್ತಾ, ಬಾದಾಮಿ ಲಂಚ ಕೊಟ್ಟು ಕೊಟ್ಟು ಮಿನಿಯ ಪುಟ್ಟಹೃದಯವನ್ನು ಅದೆಷ್ಟೋ ಆಕ್ರಮಿಸಿಕೊಂಡು ಬಿಟ್ಟಿದ್ದಾನೆ (ಇತ್ಯ. ೩೯); ೨೦ ಸೂರ್ತಿ ೪೨ ಬೇತಾಳವೆಣದ ಜೀನಸಗಳು . . . ೮ ಪಿಸ್ತಾ (ಕುಂತಳ. ೦೨೩). ಪಿಸ್ತೆ: ಈ ಹಡಗಗಳಲ್ಲಿ ಅರಬಸ್ಥಾನದಿಂದ ಉತ್ಪತ್ತಿ ಖಜೂರ, ದಾಳಿಂಬ, ಬದಾಮಿ, ರಾಳ, ಮಿಠಾಯಿ, ಮನೂಕ, ಪಿಸ್ತೆ ಮುಂತಾದ ಸರಕುಗಳು ಬರುತ್ತವೆ (ಕೆನರಾಗ. ೩೦೩); ಗೋಡಂಬಿ, ಮನೂಕ, ಮಾಂಬೆಯ ಪಿಸ್ತೆ, ಹಾಗು ಹತ್ತೆಂಟು ಹಣ್ಣುಗಳ ಶೀಕರಣೆಯನ್ನು ತಿನ್ನುವಾಗ ವಸಂತರಾಯನ ಆದರ ಏನಯಗಳು ಉಕ್ಕೇರಿದವು (ಗಂಪಾಯ. ೨೦೩). [←ಪಾರ. ಹಿಂ. ಮರಾ. ಪಿಸ್ತಾ]

**ಪಿಸ್ತೂಲು** (ನಾ). ಸಣ್ಣ ತುಪಾಕಿ,–ಬಂದೂಕು: ಜನರಲ್ ಮೆಂಡೂಸ್‍ಸಾಹೇಬ್‍ಬಹಾದ್ದೂರವರು ಒಡಂಬಡದೆ ತಮ್ಮ ಕೈಯಿಂದ ಪಿಸ್ತೂಲಿನ ಗುಂಡಿನಿಂದ ತಮ್ಮ ಮೈಗೆ ತಾವೇ ಹೊಡೆದು ಜಖಮಿ ಮಾಡಿಕೊಂಡು (ಟಿಪ್ಪುಸುಲ್ತ. ೦೩); ಪಿಸ್ತೂಲನ್ನು ದೊರಕಿಸ

ಬೇಕಾದರೆ ಸಾಕುಸಾಕಾಗಿ ಹೋಯಿತು(ಅಪುನಾಃ. ೩೦). [←ಇಂ. Pistol]

**ಪಿಸ್ತೆ** 'ಪಿಸ್ತಾ' ನೋ.

**ಪಿಹಿತ** (ಗು). ೧. ಮುಚ್ಚಿದ; ಮರೆ ಮಾಡಿದ: ಅನೇಕಸೇವಕ ಕ್ಷತ್ರಿಯಾತಪತ್ರಮಂಡಲಪಿಹಿತದಿನಕರನುಮುಚ್ಚಲಿತ ಬಹಲಧೂಳೀಪಟಲ ಪಿಹಿತರಿಪುನೃಪತಿನಗರನುಂ . . . ಆಗಿ ನಡೆಯೆ(ಆಂತ್ಯ. ೦೨–೬೦ ವ); ನಿರ್ದಯ ಪ್ರೋಗು ಬೇಗವೆಂಬಂತೆಯುಮೆನ್ನನಶ್ರುಪಿಹಿತಾಕುಲದೃಷ್ಟಿಗಳಿಂದೆ ನೋಡಿದಳ್ (ಕಾದಂಕಾ. ೩೬೬); ಕಾಂತಾಕೀರ್ಣಪಿಷ್ಟಾತಕಪಿಹಿತಲತಾಂತಂಗಳೊಳ್ ಪಾಯ್ವುದು ಮೆಯ್ ಶಂಕಿಸೆ (ಅಜಿತಪು. ೧೯–೨೦). (ನಾ). ೨. ಮುಚ್ಚುವಿಕೆ; ಮರೆಮಾಡುವಿಕೆ: "ಅಪವಾರಿತಂ ಸಂವೃತಂ ಸಂದಿತಂ ಪಿಹಿತಮೆನಲು ಮುಚ್ಚಲ್ಕೆ ನಾಮಂ" (ಕರ್ಣಾಟ. ೦೩೦–೦೯). ೩. ಮುಚ್ಚಿರುವಂತಹುದು; ಮುಚ್ಚಿದುದಂ: "ಅಪವಾರಿತಂ, ಪಿಹಿತಂ, ಸುಪಿಹಿತಂ, ಸಂವೃತಂ, ಸ್ಥಗಿತಂ-- ಈ ೫ ಮುಚ್ಚಿದುದು" (ಕರಾಜ. ೦೨೨–೩೬). [ಸಂ.]

**ಪಿಳಕಾರಿ** (ನಾ). ಒಂದು ಬಗೆಯ ಹೂವಿನ ಗಿಡ; ಕಣಗಿಲೆ: "ಪಿಳಕಾರಿ–ಗಣಜಲು" (ಚಿತ್ರ. ೯೯). [?]

**ಪಿಳಕಿಸು**, ಪಿಳಿಕಿಸು, ಪಿಳುಕಿಸು (ಕ್ರಿ). (ರೆಪ್ಪೆಯನ್ನು ಒಂದೇ ಸಮನೆ) ಬಡಿ; ಮಿಟುಕಿಸು: ಪಡಸ್ಥಾಯರೂ ಕಣ್ಣು ಪಿಳಕಿಸಿ ಕೊಂಡು . . . ಕುಳಿತಿದ್ದರು (ಗಂಗಾವ. ೨೩): ಎಚ್ಚರ, ಕಣ್ಣು ಪಿಳಕಿಸ ಬಾರದು; ಉಗುಳು ನುಂಗಬಾರದು; ಇಲ್ಲವಾದರೆ ಸತ್ತಿಯೇ ಮು ತಿಳಿ! (ಶಂಬೂಕಿ. ೨೬). ಪಿಳಿಕಿಸು: ಗೋವರ್ಧನನಿಗೆ ತಾನಾವುದೋ ಗೂಡನ್ನು ಸೇರಿದ ಅರಿವಾಗಿ ಕಣ್ಣು ಪಿಳಿಕಿಸಲು (ಮುಗಿಯ. ೦೦೬). ಪಿಳುಕಿಸು: ಚಾರು ತುಂಬ ಸಿಡಿಮಿಡಿಗೊಂಡು ಮಂಚದ ಮೇಲೆ ಕುಳಿತು ಕಣ್ಣು ಪಳಪಳ ಪಿಳುಕಿಸಿ . . . ದುರುದುರು ನೋಡಹತ್ತಿದಳು (ಇಕ್ಕಳ. ೨೬೬); ಪಿಳುಕಿಸದ ಸಿರಿಗಣ್ಣು ಸುತ್ತು ಚಿನ್ನದ ರೇಖೆ ಬೆಳ್ಳಿ ಮಿರುಗಿನ ಮೈಯ ಕಾಂತಿ ನಿನಗೆ (ಪಕ್ಷಿ. ೦೦–೯) 'ಪಿಳಿಪಿಳಿ' ಪರಾ. [ಪಿಳಕ್ಕು + —ಇಸು]

**ಪಿಳಗು** 'ಪಿಳ್ಗು' ನೋ.

**ಪಿಳಚಲು** (ನಾ). ಕಣ್ಣು (ಪಿಸರಿನಿಂದ ಕೂಡಿ) ಗುಳಿ ಬಿದ್ದಿರುವುದು; ಕಾಂತಿಹೀನವಾದುದು: ಅವನ ಕಣ್ಣು ಯಾವಾಗಲೂ ಪಿಳಚಲು (ರೂಢಿ). 'ಪಿಳಚಲುಕಣ್ಣು' ಪರಾ. [ಪಿಳಚು+—ಅಲು(<—ಅಲ್)]

**ಪಿಳಚಲುಕಣ್ಣು** (ನಾ). (ಪಿಸರಿನಿಂದ ಕೂಡಿ) ಗುಳಿ ಬಿದ್ದ ಕಣ್ಣು; ಕಾಂತಿಹೀನವಾದ ಕಣ್ಣು: ಹಣೆಯಲ್ಲಿ ಎದ್ದು ಕಾಣುವ ಗಂಧಾಕ್ಷತೆ, ಪಿಳಚಲುಕಣ್ಣಿಗೆ ಕನ್ನಡಕ . . . ಇವುಗಳಿಂದ ಅಲಂಕೃತರಾದ ಸೀತಾರಾಮಯ್ಯ (ಸೋಜುಗ. ೩). 'ಪಿಸರುಗಣ್ಣು' ಪರಾ.

[ಪಿಳಚಲು + ಕಣ್ಣು (<ಕಣ್). / ತಮಿ. ಪಿಳಿಚ್ಚೈಕ್ಕಣ್]

**ಪಿಳಚು** (ನಾ). ಕಣ್ಣು (ಪಿಸರಿನಿಂದ ಕೂಡಿ) ಆಕರ್ಷಣೆಯ ಶಕ್ತಿಯನ್ನು ಕಳೆದುಕೊಂಡಿರುವುದು;-ಕಾಂತಿಹೀನವಾದುದು: ಕಣ್ಣೇನೋ ಪಿಳಚು ದಿಟ, ಹಣ ಪಿಳಚೆ? (ಪಕ್ಷಿ. ೩). [ದೇ.II ತಮಿ. ಪಿಳಿಚ್ಚೈ]

**ಪಿಳಪಿಳನೆ** 'ಪಿಳ್ಪಿಳನೆ' ನೋ.

**ಪಿಳಿ**₁ 'ಪಿಟಿ' ನೋ.

**ಪಿಳಿ**₂, ಹಿಳಿ₂ (ಕ್ರಿ). ಒಡೆ: ಸೀಳಂ; ಬಿರಿ: ಒಡೆಯಲಜಾಂಡಂ ಕುಲಗಿರಿ ಕಿಡೆಯಲ್ ಪಿಳಿಯಲ್ಕೆ ಧಾತ್ರಿ ದಿಗ್ವಿಜರ್ಜರ್ದುರ್ಗಲ್ಕೆ . . . ಸಿಂಹನಾದಂಗೆಯ್ದಂ (ಗದಾಯು. ೬–೦೬). ಹಿಳಿ₂: ಇಳೆ ಹಿಳಿಯಲು ಜಪ ಜರಿಯಲು . . . ಹರಿ ಬೊಬ್ಬಿರು ಕಂಬನಿದುಂಬಿದರೆನೆಯಪಜಯ ಗಜಬಜವು (ಜೀಕೀ. ೨ ೩೯); ಪರ್ವತ ಹಿಳಿಯೆ ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮಾದ ಉಲಿಯ . . . ಗೊಂದಳದ ಕಳಗರ್ಚಿಯು ಕೌರವಸೈನ್ಯಶರಧಿಯಲಿ (ಕುಮಾವ್ಯಾ. ೬–೨೬). 'ಪಿಳ್ಗು' ಪರಾ.

[ದೇ.II ತಮಿ. ಪಿಳ್. ಪಿಳ; ಮಲ. ಪಿಳ]

**ಪಿಳಿಕಿಸು** 'ಪಿಳಕಿಸು' ನೋ.

**ಪಿಳಿಕು** 'ಪಿಳ್ಕು' ನೋ.

**ಪಿಳಿಗು** 'ಪಿಳ್ಗು' ನೋ.

**ಪಿಳಿಪಿಳಿ** (ನಾ). ಒಂದು ಅನುಕರಣ ಶಬ್ದ: ಅವನು ಪಿಳಿಪಿಳಿ ನನ್ನನ್ನೇ ನೋಡುತ್ತಿದ್ದ (ರೀಕಿ. ೮೬).

ಪಿಳಿಪಿಳಿ ಕಣ್ಣು ಬಿಡು = (ಆಶ್ಚರ್ಯ ಅಥವಾ ಅಸಹಾಯಕತೆಗಳಿಂದ) ಕಣ್ಣನ್ನು ಪಿಳಿಕಿಸು; ಒಂದೇ ಸಮನೆ ನೋಡು: ಬಂದಣ್ಣ ಪಿಳಿಪಿಳಿ ಕಣ್ಣು ಬಿಟ್ಟರು (ಶ್ರೀ. ೪೩೦); ನಾನೊಬ್ಬನೇ ಪಿಳಿಪಿಳಿ ಕಣ್ಣು ಬಿಡಬೇಕಾಗಿದೆ! (ಜಾಲ. ೬೬). 'ಪಿಳ್ಪಿಳನೆ' ಪರಾ.

**ಪಿಳಿಲ್** 'ಪಿಟಿಲ್' ನೋ.

**ಪಿಳಿಲ್ಲು**₁ 'ಪಿಣಿಲ್' ನೋ.

**ಪಿಳಿಲ್ಲು**₂ (ನಾ). ಕುತರ (?): ಇಂದುವದನೆಯರು ದೂರದೊಳಲ್ಲವನ ಮಹಾಸೌಂದರ್ಯವೆತ್ತ ಶ್ರೀಪಾದಪದ್ಮಗಳಾನಂದದಿಂ ಕಂಡು ಪಿಪುಳಿಗೆ ಮಾಯಗಂ ಪೇಳಿ ಜೀವದೊಳು ಪಿಳಿಲನಾಂತು (ಕೃಕುಥ. ೩–೦೯೬). [?]

**ಪಿಳುಕಿಸು** 'ಪಿಳಕಿಸು' ನೋ.

**ಪಿಳುಕು**₁ 'ಪಿಳ್ಕು' ನೋ.

**ಪಿಳುಕು**₂ (ನಾ). ಮರಿ; ಶಾಬ; ಪೋತ: ಬೇಡಂ ಪಿಳುಕೊತ್ತಿನ ತಾಯೊಡಲ್ ಬಟ್ಟಲ್ಲಿ ಪಿಡಿದನಂತಾ ಪಿಳುಕಂ ಬೇಡಿತಿಗೆ ಸಲಹಲಿತ್ತೊಡೆ ಗೂಡಿನೊಳದು ಬಳೆದು ತಳೆದುದಂಗಚ್ಛವಿಯಂ (ಯಶೋಚ. ೩–೩೬). 'ಪಿಳು ಗಾಡಿಸು', 'ಪಿಳ್ಳೆ' ಪರಾ. [<ಪ್ರಾ. ಪೀಲುಅ./ಸಂ. ಪೀಲುಕ]

**ಪಿಳುಕು**₃ (ನಾ). (ಪಕ್ಕದ) ಅಡಿಭಾಗ; ಬಾಣದ ಭಾಗ; ಕೂಳೆ (?): ಮತ್ತಮಾಂಸಮುದುಟಿಯ ಪಣಹದ ಪಿಳುಕುಬುಯಿಯ ಕೋಳಂಬೆಯ ಕೂಕಂಬದ ಕೋಡಂಬೆಯ ಮುಡಿಗೆಯ ತಾಣಂಗಳೊಳ್ ಮೇದು ಮೊಯ್ವೆರ್ಚ ಸೊವಡಂಗೆ ಸೋಲ್ತು ಕೂಡದೆ ಕರವಲ್ತು ಮೇವು ತಣಿವು ಕೊಟ್ಟ[ಣ]ಕಿಟ್ಟಾಡುವ ಮೃಗಂಗಳೊಳ್ (ಆದಿಪು. ೦೦–೩೯ ವ). [?]

**ಪಿಳುಗಾಡಿಸು**, ಹಿಳುಗಾಡಿಸು (ಕ್ರಿ). ಮರಿಯನ್ನು ಆಡಿಸು,-ಮುಂದ್ದಾಡು: ಅಳಿಗಳ ರತ್ನಕದಂಬದ ಬೆಳಗಿಂ ಬಹುವರ್ಣಜಲಮನಾಂತ ಕಟಾಹಂಗಳ ನಡುವೆ ಪೆತ್ತ ಮಾಜಿಯುಮಂ ಪಿಳುಗಾಡಿಸು[ಪಾಠಾಂ. ಬಳುಕಾಡಿಸು]ವಂತೆ ಸಸಿ ಪಡೆದುದು ಪವಮಂ (ಅಷ್ಟಪು. ೬–೨೩, ಸೂಕ್ತಿಸು. ೦೨–೩ ನೋ); ಪಾಡಿ ನಲಿವಾಜಿಸಿ ತೋಜಿಸಿ ಸೋಂಕಿ ನೂಂಕಿ ಕೌಮುದಿಯೊಳದೇಂ ಚಕೋರಿ ಪಿ[ಪಾಠಾಂ. ಹಿ]ಳುಗಾಡಿಸಿದತ್ತೊ ನಿಜಾಂಗಜಶಾಬಮಂ (ಅಷ್ಟಪು. ೬–೪೦; ಸೂಕ್ತಿಸು. ೯–೨೧೬ ನೋ). ಹಿಳುಗಾಡಿಸು: ಮೇಲಿನ 'ಅನಂಪು. ೬–೪೦'ರ ಪ್ರಯೋಗದ ಪಾಠಾಂತರವನ್ನು ನೋಡಿ.

[<ಪಿಳುಕು₂+ಆಡಿಸು]

**ಪಿಳ್ಕು**, ಪಿಳಿಕು, ಪಿಳುಕು₁, ಹಿಳಕು, ಹಿಳಿಕು, ಹಿಳುಕು₁, ಹಿಳ್ಕು (ನಾ). ೧. ಗರಿಗಳಿಂದ ಕೂಡಿದ ಬಾಣದ ಭಾಗ: ಪ್ರಂಖ: "ಪಿಳ್ಕೆಂದು ಸಾಯಕವುಂಖಂ" (ಕರಾಜ. ೨೨–೦೦೬): ವಿಕ್ರಮಸಾಧಿತ ವಿಶ್ವಲೋಕ ವಿಜಯ ಕುಲಿಶಾಸ್ತ್ರದ ಪಿಳ್ಕು ನಾರಿಯೊಳ್ ಕೂಡೆ ಕರ್ಣಪನೆಯ್ದ ಧನುಮಂ ತೆಗೆವರ್ಗಿಸಿದ ಜನಾರ್ದನಂ (ಶಂಖಾಪು. ೦೯–೦೬೩): ಶರವಂ ತೂಣೀರದಿಂದುರ್ಚಿ ತೊಟ್ಟನೆ ಪಿಳ್ಕಿಂ ತಿರುವಾಯ್ಸಿದಂತು ತೆಗೆದಾ ಕರ್ಣಾಂತಮಂ ತಾಗೆ ಕೋಲಿನ ಪಿಂತಂ ನೆಜಿ ಕೋಲ್ಗಳಟ್ಟುವಿನಮುಚ್ಚಂ (ಪುಹಾಶಿ. ೦೨–೦೦೯); ಪಿಳ್ಕು ಪೆಜಗಾಗಿ ಬರ್ಪ ಶರಮಂ ತನ್ನೊಂದಂಬಿನಿಂ ಮುಂಜಿದು (ಧರ್ಮಾಮೃ. ೦೯೩–೦೬). ೨. ಬಿಲ್ಲಿನ ತಂದಿ: ಕೊಪ್ಪು; ಗೊಲೆ: "ಕೊಪ್ಪು ಪಿಳ್ಕೆನೆ ಕೋಟಿಯು" (ಕಬ್ಬಿಗ. ೯೯). ೩. ಬಾಣ; ಅಂಬು; ಸರಳು: ಕಾವಲರಂ ಪಳಚಲಿದ ಪಾಚಶರಕ್ಕಮಜಿಂಕುರಂ (ಪುಣಂ) ಬಾದುದು . . . ಪುದೊಡಂಬೆ ಪಿಳ್ಕುದುದು (ಶಕ್ತಿಕ. ೬–೮೦). ಪಿಳಿಕು:

(ಅಶ್ವಶ್ರ. ೫೦-೦೦೦೯). **ಪಿಳಿಗು :** ೧. ಒಡೆದುದೊ ಪದ್ಮಷಾಂಡವಮವನೀ ವಳಯಂ ಪಿಳ [ಶಾಶಾ೩.೮]ಗಿತ್ತೊ ಮೇರು ವೇಣ್ ಕಿಡೆದುದೊ ವಾರ್ಧಿ ಯುರ್ಕಿದುದೊ (ಕಂಠ್ರಪು. ೬-೩೦). ಪಿಳಿಗು : ೧. ಗೋತ್ರನಗಂ ಪಿಳಿಗಿತ್ತೊ ಸಾಗರಂ ತಳರ್ದುದೊ ಮೇರೆಯಿಂದಂ. . .ಎನಲ್ ವಿಘೂರ್ಣಿಸಿದುದಿರ್ಬಲ ದೊಳ್ ಸಮರಾನಕಸ್ವನಂ (ಜಂಬಾಪು. ೦೩-೩೫); ಕುಳಿಕೆಣ್ ಕರ್ಗಿದ ನಾಸಿಕಂ . . .ಪಿಳಿಗಿರ್ದಂಘ್ರಿತಲು ಕೊರಂಟುದರೆ ಕೊಕ್ಕೋಡಿರ್ದ ಗೋಣಿನ್ನನೊಳ್ ಕಟೀಯಿಂಲ್ ವಾಪಮನರ್ಚಿಸಿರ್ದಬಲೆಯಕ್ಕುಂ ಮಿಕ್ಕಳೀನಕ್ಕುಮೇ(ಪುಷಾಶಃ ೩-೦೫೩). **ಹಿಗ್ಗು$_1$ :** ೧. ತಗ್ಗಿದುದು ದಿಗ್ದಂತಿ ಭೋಗಿರಾಜನ ಕೊರಲ್ಕುಗ್ಗಿ ದುದು ಧರಣಿತಲಮಿಟ್ಟಾಗವಾಗಿ ಸಲೆ ಹಿಗ್ಗಿದುದು ಪೋಗೆನಲ್ಗೊಯ್ದನುರು ಗದೆಯಿಂದ ವರಸ್ಯೆನ್ಯಮಂ ಭೀಮಂ (ಕೃಪಾಡಾ. ೬-೯೬). ೨. ಬಾಗುತೆ ಬಲಿಯುತ ಪೊಳೆದಿನಿದಾಗುತ ದಳವೇಜುತಿಡಿದಿಡಿದು ಹಿಗ್ಗುತೆ ಪಣ್ಣಾಗುತೆ ಕಾಯ್ಗಳ್ ಪೂಜಿಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿಂಚ. ೩-೫೦); ಕೊರಳ ಸೆರೆ ಹಿಗ್ಗಿದವು ಕಂಬನಿದುಙುಗಿದವು . . . ಆಕಸ್ಮಿಕದ ಭಯವಾಯ್ತು ಪಾರ್ಥಂಗೆ (ಕುಮ್ಮಾರಕ್ವ್ಯಾ. ೯-೬); ಹೃದಯ ಹಿಗ್ಗಿಕೊಂಡು, ರೋಗ ಪ್ರಬಲವಾದರೆ ಹೃಕ್ಕ್ರಿಯೆ ನಿಂತು ಹೋಗುತ್ತದೆ (ಗೃಹಶಾ. ೩೯). ೩. ಅಮ್ಮ ನೀ ನೋಡಿದರೆ ನೋಡು ನೋಡದಿದ್ದರೆ ಮಾಣು ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾಪೆನೆಯ್ಯ (ಪುಷಾರೇ. ೬.೩೯-೫೩); ಭೀಮಸೇನನ ವಿಕಟಸಿಂಹಧ್ವನಿಯನಾಲಿಸಿ ಹಿಗ್ಗಿದನು ಪಾರ್ಥ (ಕುಮ್ಮಾರಕ್ವ್ಯಾ. ೦೩-೦೮); ಹಿಗ್ಗುವೆ ಯಾಕೋ ಈ ದೇಹಕ್ಕೆ ಹಿಗ್ಗುವೆ ಯಾಕೋ . . . ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೦-೦೨೨ ಕೀರ್ತ). **ಹಿಳಿಗು :** ೧. ಬಲಿತ ಹೇಗಿನಕಾಯಿ ಬಿಸಿಲಿನ ಝಳಕ್ಕೆ ಹಿಳಿಗಿದೆ (ಜಾಪ). **ಹಿಗ್ಗು$_1$ :** ೩. ಹೃಷ್ಯತಿ=ಹಿಗ್ಗಿದವಂ; ಹೃಷ್ಟಃ, ಹೃಷ್ಟವಾನ್, ಹರ್ಷಕಃ, ಹರ್ಷ್ಟಾ, ಹರ್ಷನ್—ಈ ೫ ಹಿಗ್ಗಿದಂ (ಶಾಶಕೈ. ೦೯೩).

ಹಿಗ್ಗಿ ನುಗ್ಗೆಕಾಯಿಯಾಗು = (ಅಲಂ) ಅತಿಶಯವಾಗಿ ಆನಂದಿಸು ; ಆನಂದದಿಂದ ಉಬ್ಬು : ಸಣ್ಣದುರುಗಪ್ಪನು ಹಿಗ್ಗಿ ನುಗ್ಗೆಕಾಯಿಯಾದ (ಕೆಂಡೀ. ೦೦೮). ಹಿಗ್ಗಿ ಹತ್ತಾಗು = ಹಿಗ್ಗಿ ನುಗ್ಗೆಕಾಯಿಯಾಗು : ಈ ಇಬ್ಬರು ಸ್ನೇಹಜೀವಿಗಳ ನಡುವಿನ ಅದೇ ಆ ಹಳೆಯ ನಗೆಯಾಟ ನಡೆದಾಗ ನನ್ನ ಹೃದಯ ಹಿಗ್ಗಿ ಹತ್ತಾಗುತ್ತದೆ (ಇಕ್ಷಕ. ೩೬); ಭೂಪತಿಯು ಹಿಗ್ಗಿ ಹತ್ತಾಗಿ, ತನ್ನ ಉತ್ತರೀಯದ ಮುಸುಕಿನಿಂದ ತನ್ನ ಸ್ವಂತರಚನೆಯ ಪುಸ್ತಕ ಹೊರದೆಗೆದು ... ಎಂದನು (ಇಕ್ಷಕ. ೨೬೮). ಹಿಗ್ಗಿ ಹೀರೇಕಾಯಾಗು, ಹಿಗ್ಗಿ ಹೀರೇಕಾಯಿ ಆಗು, ಹಿಗ್ಗಿ ಹೀರೇಕಾಯಿಯಾಗು = ಹಿಗ್ಗಿ ನುಗ್ಗೆ ಕಾಯಿಯಾಗಂ : ಪೋರ್ಚುಗೀಸ್ ರಾಜ ತನಗೆ ಬಂದ ವರದಿಗಳಿಂದ ಹಿಗ್ಗಿ ಹೀರೇಕಾಯಿಯಾದ(ಕೃಪಾಶ.II, ೨೦೦); ನೆಕ್ಕಲ್ದೋಪನ ಎದೆ ಹಿಗ್ಗಿ ಹೀರೇಕಾಯಿ ಆಯಿತು (ಪುಶಶು. ೪೦೦); ಕಾಮಾಕ್ಷಮ್ಮನ ಮುಖ ' ಹಿಗ್ಗಿ ಹೀರೇಕಾಯಿ ' ಯಾಯಿತು (ಜಿಂಕೆಶ. ೩೬). ಹಿಗ್ಗಿ ಹೆಬ್ಬಾಗಿಲಾಗು = (ಅಲಂ) ಅತಿಶಯಂ ವಾಗಿ ಆನಂದಿಸು ; ಆನಂದದಿಂದ ಉಬ್ಬು : ದ್ಯಾವೇಗೌಡರು ಚಿನ್ನಪ್ಪಗೌಡರ ಮಾತನ್ನು ನಂಬಿ ಹಿಗ್ಗಿ ಹೆಬ್ಬಾಗಿಲಾಗಿದ್ದರು (ಕಂಶಿಕಂ. ೩೯).

[ < ಪಿಳ್ಳ ]

**ಪಿಳ್ಳೋಟೆ** (ನಾ). ಸಣ್ಣ ಕೋಟೆ ; ಕಿರಿದಾದ ದುರ್ಗ : ರಕ್ಕಸರೊಳ ಪೊಗದಂತೆ ಪಿಳ್ಳೋಟೆಗೆ ಉಕ್ಕಿನ ತನೆ ಪೆಟಲಂಬು ಸಿಕ್ಕಿನ ಕತ್ತರಿ ದೆಸೆಗೆ ಹಸಿಯು ಶೂಲ ಸೊಕ್ಕಿದರಿಯ ಗೆಲ್ವ ತೆರದಿ (ಜ್ಞಾಂಕಶಾ. ೫-೩೯).

[ < ಪಿಳ್ಳೆ + ಕೋಟೆ$_1$ ( < ಕೋಂಟೆ ) ]

**ಪಿಳ್ಳುಟ್ಟು, ಪಿಳ್ಳೆಂಜುಟ್ಟು, ಪಿಳ್ಳೆಜುಟ್ಟು** (ನಾ). (ಗಂಡಸರು) ತಲೆಯ ಹಿಂದೆ ಮೇಲ್ಭಾಗದಲ್ಲಿ ಬಿಡುವ ಸಣ್ಣ ಜುಟ್ಟು : ಅವರ ಪಿಳ್ಳುಟ್ಟು ಗಾಳಿಗೆ ಹಾರಾಡುತ್ತಿದೆ (ಜಾಪ). **ಪಿಳ್ಳೆಂಜುಟ್ಟು :** ವಿಶಾಲವಾದ ಹಣೆ, ಮುಖದ ಅಂದವಾದ ನಿಲುವಿಗೆ ಒಪ್ಪುತ್ತಿದ್ದ ಪಿಳ್ಳೆಂಜುಟ್ಟು (ಜಿಕಿಪ. ೦೨೮). **ಪಿಳ್ಳೆಜುಟ್ಟು :** ತಬಲಾ ಬಾರಿಸುವವನ ಪಿಳ್ಳೆಜುಟ್ಟು ಹೇಗೆ ಹಾರಾಡುತ್ತಿದೆ ಎಂಬುದನ್ನು ನೋಡಲು ಬಂದಿದ್ದಾರೆ (ಶಾಶಗೀ. ೦೩೬); ವಜ್ರಮುಷ್ಟಿಗಳ ಮೊನೆಯಿಂದ ಪಿಳ್ಳೆಜುಟ್ಟುಗಳು ಕುಣಿದಾಡುವ ಬೋಳುತಲೆಗಳ ಮೇಲೆ ಹೊಡೆದು (ಕೆಶಾಕುಂ. IV. ೨).

[ < ಪಿಳ್ಳೆ + ಜುಟ್ಟು ]

**ಪಿಳ್ಳೆಳನೆ, ಪಿಳಪಿಳನೆ** (ಅ). (ಆಶ್ಚರ್ಯ ಅಥವಾ ಅಸಹಾಯಕತೆ ಗಳಿಂದ) ಕಣ್ಣನ್ನು ಪಿಳುಕಿಸುತ್ತ ; ಒಂದೇ ಸಮನೆ ರೆಪ್ಪೆಯನ್ನು ಬಡಿಯುತ್ತ : ಜನರು ಪಿಳ್ಳೆಳನೆ ನೋಡುತ್ತಿರುವರು (ಕುಂಸಿ. ೦೩೬). **ಪಿಳಪಿಳನೆ :** ಕ್ಷಣಕಾಲ ಆತ ಪಿಳಪಿಳನೆ ನನ್ನನ್ನೇ ನೋಡುತ್ತಿದ್ದುಬಿಟ್ಟೆಳು (ಶಿಕಿಶಾ. ೦೯೬). [ < ಪಿಳಿಪಿಳಿ + — ಅನೆ$_1$ ]

**ಪಿಳ್ಳಂಗೋವಿ** (ನಾ). ಒಂದು ಬಗೆಯ ಚಿಕ್ಕ ಊದುವ ವಾದ್ಯ ; ಕೊಳಲು : ಪಿಳ್ಳಂಗೋವಿಯ ಚೆಲ್ವ ಕೃಷ್ಣನ ಎಲ್ಲಿ ನೋಡಿದಿರಿ (ಪುರಂದ. ೦-೦೩೬ ಕೀರ್ತ); ಗೊಲ್ಲನ ಪಿಳ್ಳಂಗೋವಿಯಿಂದ ಆರಂಭವಾದ ಪುಟ್ಟಪ್ಪನವರ ಕವಿತಾವಿಲಾಸ . . . ' ಸೋವಿಯಟ್ ರಶಿಯಾ'ದ ವರೆಗೂ ಕೈ ಚಾಚಿದೆ (ಶಾಶಕಶಾ. ೬೬); ಕೊಳಲಿಗೆ ಪಿಳ್ಳಂಗೋವಿಯೆಂದೂ ಹೆಸರು (ಸಂಗೀಶಂ. ೦೦೬).

[ < ಪಿಳ್ಳೆ+ಕೋವಿ$_1$ / ತಮಿ. ಪಿಳ್ಳಾಂಕುಟಲ್; ತೆಲು. ಪಿಲ್ಲಂಗ್ರೋವಿ, ಪಿಲ್ಲಗ್ರೋವಿ, ಪಿಲ್ಲನಗ್ರೋವಿ]

**ಪಿಳ್ಳೆಂಜುಟ್ಟು** ' ಪಿಳ್ಳುಟ್ಟು ' ನೋ.

**ಪಿಳ್ಳೆಗುಸೆ** (ನಾ). ಕೋಟೆಯ ದೊಡ್ಡ ಬಾಗಿಲಿನಲ್ಲಿರುವ ಚಿಕ್ಕ ಬಾಗಿಲು : ಸಮಸ್ತಕಾರ್ಯಕುಶಲರಿಂ ಕೋಟೆ . . . ಪಿಳ್ಳೆಗುಸೆ ದಿಡ್ಡಿ ಬೊಳೆಗದಂಗಳ್ ನಿರ್ಮಿತವಾಗಲು (ಹಾಲಾಸ್ಯ. ೦-೯-೩೩ ಪ). [ಪಿಳ್ಳೆ + ಅಗುಸೆ]

**ಪಿಳ್ಳೆಯ** (ನಾ). ಒಬ್ಬಾತನ ಹೆಸರು : ಬೂವಾಡಿಯ ತಳಾಱ ವಿಣ್ಣ ಪೋದಿಯ ಪಿಳ್ಳೆಯ (ಎಕ. X. ಗೌಂಔಬಿ. ೬೩-೯ ; ಸು. ೯೦೦).

[ಪಿಳ್ಳೆ + ಅಯ್ಯ$_1$ ( < ಅಯ್ಯ$_{1}$) ]

**ಪಿಳ್ಳಾರಿ** (ನಾ). ೧. ಚಿಕ್ಕದು ; ಸಣ್ಣದು. ೨. ಗಣೇಶ ; ಬೆನಕ: ' ಪಿಳ್ಳಾರಿಗೀತ ' ಪರಾ.

ಪಿಳ್ಳಾರಿ ಜುಟ್ಟು = ಪಿಳ್ಳುಟ್ಟು : ಅವನ ಪಿಳ್ಳಾರಿ ಜುಟ್ಟನ್ನು ನೋಡಿ ಮಕ್ಕಳು ಗೇಲಿ ಮಾಡಿದರು (ಜಾಪ).

[<ಪಿಳ್ಳೆ / ತಮಿ. ಪಿಳ್ಳೈಯಾರ್; ಮಲ. ಪಿಳ್ಳಯಾರ್; ತುಳು. ಪಿಳ್ಳಾರಿ; ತೆಲು. ಪಿಳ್ಳಾರಿ]

**ಪಿಳ್ಳಾರಿಗೀತ** (ನಾ). ಕರ್ನಾಟಕಸಂಗೀತದಲ್ಲಿ ಪುರಂದರದಾಸರು ರಚಿಸಿದ (ಗಣಪತಿಯನ್ನು ಕುರಿತ) ಚಿಕ್ಕ ಗೀತೆ : ಪುರಂದರದಾಸರು ಸಂಗೀತಾಭ್ಯಾಸಕ್ರಮ ವ್ಯವಸ್ಥೆಗೊಳಿಸಿ, ' ಪಿಳ್ಳಾರಿಗೀತಗಳು ' ಎಂಬ ಅಭಿಧಾನದಿಂದ ಕೆಲವಾರು ಗೀತಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ (ಸಂಗೀಶಂ.೬೦); ಕರ್ನಾಟಕಸಂಗೀತಸಂಪ್ರದಾಯಕ್ಕೆ ಪಿಳ್ಳಾರಿಗೀತೆಗಳನ್ನು ಮಾತ್ರವಲ್ಲ ಪುರಂದರದಾಸನು ಸಾವಿರಾರು ರಸಾನುಗುಣವಾದ ತಾಳಭೇದವುಳ್ಳ ಪ್ರಬಂಧಗಳನ್ನು ಒದಗಿಸಿಕೊಟ್ಟನು (ಕಶಾಕ. ೨೯೮). [ಪಿಳ್ಳಾರಿ + ಗೀತ]

**ಪಿಳ್ಳಾರಿಗೀತೆ** (ನಾ). = ಪಿಳ್ಳಾರಿಗೀತ : ಕರ್ನಾಟಕಸಂಗೀತ ಒಂದು ವೈಶಿಷ್ಟ್ಯ ಪೂರ್ಣವಾದ ರೂಪ. ಇದರಲ್ಲಿ ಪ್ರಮುಖವಾಗಿ ಕೀರ್ತನೆಗಳು, ಉಗಾಭೋಗ, ಸುಳಾದಿ, ಪಿಳ್ಳಾರಿಗೀತೆಗಳು ಎಂದು ನಾಲ್ಕು ರೂಪಗಳು ಕಾಣಿಸುತ್ತವೆ (ಕೀಪುಕೂ. ೦೦೯) ; ದಾಸರ ಗೀತೆಗಳಲ್ಲಿ ಪಿಳ್ಳಾರಿಗೀತೆ ಮೊದಲಾದ ಕೆಲವು ಗೀತೆಗಳು ಮಾತ್ರವಲ್ಲದೆ ತಾನವರ್ಣಗಳಾಗಲೀ ದಾಸರ ತಿಲ್ಲಾನಗಳಾಗಲೀ ಈಗ ಉಪಲಬ್ಧವಿಲ್ಲ (ಕಶಂ. ೨೩೦). [ ಪಿಳ್ಳಾರಿ + ಗೀತೆ ]

**ಪಿಳ್ಳೆಯಮ್ಮ** (ನಾ). ಒಬ್ಬಾತನ ಹೆಸರು : ಆ ವಿಭುಗಾತ್ಮಜಂ ನೆಜಿಯ ಪಟ್ಟದ ಪುಟ್ಟಿದ ಪಿಳ್ಳೆಯಮ್ಮಂ (ಎಕ. XI. ಹಕ್ಕರು. ೬೯-೩; ೯೬೩).

[ < ಪಿಳ್ಳೆ + ಅಮ ( < ಅಮ್ಮ$_1$ ) + ಅಯ್ಯ$_1$ ]

**ಪಿಳ್ಳು** 'ಪಿಳ್ಳೆ' ನೋ.

**ಪಿಳ್ಳುಜುಟ್ಟು** 'ಪಿಳ್ಳುಟ್ಟು' ನೋ.

**ಪಿಳ್ಳೆ, ಪಿಳ್ಳು, ಹಿಳ್ಳು, ಹಿಳ್ಳೆ₁** (ನಾ). ೧. ಚಿಕ್ಕದಾಗಿರುವಂತಹುದು; ಸಣ್ಣದು: (ಕ). ೨. (ಯಾವುದಾದರೂ ಪ್ರಾಣಿಯ) ಮರಿ; ಶಾಬ; ಪೋತ: ಕರಮೆೞ್ಗೆಯುಳ್ಳ ಪಿಳ್ಳೆಗಳಿರದುಮನೋಲಗಿಸುವಂ ನೃಪಂಗಲ್ಲಿಯು ಮಾದರನಿತ್ತ ಚಂಡಕರ್ಮಂಗರಸನವಂಗೆ ನೋಡಿ ಸಲಹು ನೀನೆಂದಿತ್ತಂ (ಸುಕುಚ. ೩-೭೭); ನೀಡುಂ ನೀಡದ ಪಕ್ಕಿಯು ಮೊನ್ನಂ ಬಂಜೆಯೆನುತೀಡಿಪಂತಿರೆನ್ನದಿರೊಳ್ ಪಿಳ್ಳೆಯುಂ ಮುದ್ದುಗೆಯ್ಯುಂ (ರಾಜಶೇ. ೦೪-೬): ಕಳ್ಳನಿಗೆ ಒಂದು ಪಿಳ್ಳೆ ನೆವ (ಗಾದೆ). ೩. ಕೂಸು; ಮಗಂ; ಶಿಶು: ಜವನೊಳ್ ಸೆಱೆಗಿಲ್ಲದೆ ಪೋಗಿ ತಾಗಿ ತಂದಂ ಗಡ ವಿಪ್ರಮಾರ್ಜುನನೆ ಪಾರ್ವರ ಪಿಳ್ಳೆಯು ಪೋದ ಜೀವಮಂ (ಕಂಕಥಾ. ೬-೨); ಪದಿಱಿದಂತಕನೊಳ್ ಪಾರ್ವರ ಪಿಳ್ಳೆಯ ಪೋದ ಜೀವಮಂ ತಂದಂ (ಗದಾಯು. ೨-೬೫); ನೀವು ಬೇಕಿದ್ದರೆ ಹೋಗಿ ಬನ್ನಿ . . . ಈ ಪಿಳ್ಳೆಗಳನ್ನು ಕಟ್ಟಿಕೊಂಡು ನಾನು ಎಲ್ಲಿಗೂ ಹೊರಡುವುದಿಲ್ಲ(ಕೀಶಹ. ೨೬೩). ೪. ಗಣಪತಿ; ವಿನಾಯಕ: ಇಂದುಮರೌಳಿಯ ಹಿರಿಯ ಪುತ್ರನಾ ವಿಘ್ನೇಶ್ವರಂ ಗಜಾನನ ಸದ್ಗುಣ ಸೌಂದರ್ಯನಿಧಿಯಾತನಂ ಭಜಿಸಿ ಸಂತನನಾನಂದದಿಂ ಜಯವೇಳ್ಕೆನುತ ದಂಪತಿಗಳುಱೆ ಬಂದರಶಿವೈಭವದೆ ಬಂದು ವಿಪ್ರರು ಸಹಿತಲಾ ಪಿಳ್ಳೆಯರ ಭವನಕೆ (ಶೀಕೃತ. ೩-೧೫-೮). ೫. ಭೈರವ: (ಕ). ೬. ತೋಟಗಳಲ್ಲಿ ನೀರು ಹರಿಯಲು ಅನುಕೂಲವಾಗುವಂತೆ ತೋಡಿರುವ ಸಣ್ಣ ನಾಲೆ: ಪಿಳ್ಳೆ ದಾಟುವಾಗ ಜೋಪಾನ, ತುಂಬ ಜಾರುತ್ತದೆ (ಆಡು). ಪಿಳ್ಳು: ೨. ಬಲೆಯಿಂ ತಪ್ಪಿದ ಮೊಲದಂತೆಯುಂ ಬಾಲಂ ಪಱಿದ ಪಿಳ್ಳಿನಂತೆಯುಂ . . . ಪಿಂದಿರುಗಿ ನೋಡದೆ ಓಡಿ ತನ್ನ ಬೀಡಂ ಸಾರ್ದಂ (ಶಬರ. ೫೯-೬). (ಗು). ೭. ಚಿಕ್ಕದಾದ; ಸಣ್ಣ: 'ಪಿಳ್ಳುಜುಟ್ಟು' ಪರಾ. ಹಿಳ್ಳು: ೨. ಹದ್ದಿನ ಬರವ ಕಾಣುತ ಕೋಳಿಗಳ ಹಿಳ್ಳೆದ್ದೋಡುವಂತೆ[ಪಾಠಾಂ. ಕುಕ್ಕುಟಸರ್ಪಯೆದ್ದೋಡುವಂತೆ] ಭೂಭುಜರು ಬಿದ್ದ ಬಂಗಾರವ ಬಿಟ್ಟು ತೆರಳಿದರು (ರಾಜಶೇ ೩-೦೬೬) ೮. ಒಂದು ಬಗೆಯ ಆಟ; ಚಿಣ್ಣಿಕೋಲಾಟ: ಗೋಪನಂದನರನು ಕೂಡಿ ಹಿಡಿಗವಡಿಕೆ ಹಿಳ್ಳು ಲಗ್ಗೆ ಸಡುಗುಡು ಮೊದಲಾದ ಮಕ್ಕಳಾಟವ ಕಡುಸಡಗರದಿಂದಾಡುತಿಹನು (ಕೀಬಸಂ. ೦೫-೦೦೬) ಹಿಳ್ಳೆ₁: ೨. ಒಂದು ಹಸ್ತದೊಳು ಮುಷ್ಟಿಗನ ಹಿಡಿದು ಮತ್ತೊಂದು ಕೈಯೊಳು ಮೊತ್ತಮೊದಲು ಅಂದದಿ ಹಿಡಿದ ಕೇಸರಿಯು ಹಿಳ್ಳೆಯ ಹೊಡೆವಂದದಿ ಹೊಡೆದಿಡಲಾಗ (ಕೀಬಸಂ. ೦೬-೦೩೦); ಗುಹೆವುಗುವ ಸಿಂಗ . . . ಹಸಿದು ಬಾಯಂ ಬಿಡುವ ಹಿಳ್ಳೆಗಳ ಬಳಿಗೆ ಹಾಱುವ ಸಾಳುವ . . . ತದ್ವನಾಂತದೊಳ್ ಸೊಗಯಿಸಿದುವು (ಸಮ್ಯಕೌ. ೦೦-೨೫).; ತಗರ ಹೋಯ್ವಾಟ ಹಿಳ್ಳೆಗಳೋಟ ಸಿಪಲೆಗಬ್ಬುಗಳ ಸರಸಾಟ ಜಾಣಾಂಕಿಗಳ ಕೋಳಿಗುಳಿಗ (ಲಕ್ಷ್ಮೀಶಾ. ೨೬-೫). ೯. ಮಕ್ಕಳು ಆಟಕ್ಕೆ ಬಳಸುವ ಮರದ ಸಣ್ಣ ತುಂಡು; ಚಿಣ್ಣಿ: ನಿಮ್ಮ ಧನುರ್ವಿದ್ಯಾಕೌಶಲವು ಈ ಭಾವಿಯಲ್ಲಿ ಬಿದ್ದಿರುವ ಹಿಳ್ಳೆಯನ್ನೂ ಉಂಗುರವನ್ನೂ ಎತ್ತದೆ ಇರುವುದರಿಂದ ವ್ಯರ್ಥವಾಗಿ ತೋರುತ್ತಲಿದೆ (ಕೃಪಾಅ. ೨೪೩).

**ಪಿಳ್ಳನೆ** = ಚಿಕ್ಕದಾದ; ಪುಟ್ಟ; ಸಣ್ಣ: ಟೋಪಿ ಪೇಟವ ತೊರೆದು ಪಿಳ್ಳನೆ ಜುಟ್ಟು ತೋರುವೆ ಊರೊಳು (ಗಕೋಶ. ೬೨-೬). **ಪಿಳ್ಳೆ ಹೆಸರಿಲ್ಲದಂತು** = ಹೆಸರು ಹೇಳಲು ಒಂದು ಮಗುವೂ ಉಳಿಯದಂತೆ; ನಿರ್ವಂಶವಾಗುವಂತೆ: ಮುನ್ನಂ ಪರಶುರಾಮನೀ ಕುಲದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದು ಸೂಳ್ವರೆಗಂ ಪಿಳ್ಳೆ ಪೆಸರಿಲ್ಲದಂತು ಕೊಂದು (ಗದಾಯು. ೬-೨೬ ವ). **ಪಿಳ್ಳೆ ಹೆಸರಿಲ್ಲಾಗು** = ಹೆಸರು ಹೇಳಲು ಒಂದು ಮಗುವೂ ಉಳಿಯದಾಗು; ನಿರ್ವಂಶವಾಗು: ಪಿಳ್ಳೆ ಪೆಸರಿಲ್ಲಾಯ್ತು ಕೌರವಕುಲಶ್ರೀ! (ಅಕ್ಷಕಾ. ೩೪-೬೫೫).
[ದೇ.॥ ತಮಿ. ಪಿಳ್ಳೈ; ಮಲ. ಪಿಳ್ಳ; ತುಳು. ಪಿಳ್ಳೆ; ತೆಲು. ಕೋಲಾ. ನಾಯ್ಕಿ. ಪಿಲ್ಲ; ಗೊಂಡಿ. ಪಿಲಾ; ಕುರುಖ್. ಪೆಲ್ಲೋ; ಬ್ರಾಹುಈ. ಪಿಲ್ಲೋಟ; ಪರ್ಜಿ. ಪಿಲ್ಲಕ. ಪಿಲ್ಲಿಕ]

**ಪಿಳ್ಳೆಕಾಲು, ಹಿಳ್ಳೆಗಾಲ್, ಹಿಳ್ಳೆಗಾಲಂ** (ನಾ). ೧. ಮನೆಯ ಮೇಲ್ಛಾವಣಿಗೆ ಆಧಾರವಾಗಿ ಕೊಡುವ ತೊಲೆಯ ಮೇಲ್ಭಾಗದ ಸಣ್ಣ ಕಂಭ: ಈ ಛಾವಣಿಗೆ ನಾಲ್ಕು ಪಿಳ್ಳೆಕಾಲು ಕೊಡಬೇಕು (ಆಡು). ಹಿಳ್ಳೆಗಾಲ್: ೨. ಸಣ್ಣಗಿರುವ ಕಾಲು; ಬಡಕಲಾದ ಕಾಲು: 'ಹಿಳ್ಳೆಗಾಲ' ಪರಾ. ಹಿಳ್ಳೆಗಾಲು: ೨. ಬತ್ತಿದ ಬಡ ಪೊಱವಾಱ ಬಳ್ಸರ ಸುತ್ತಿ ಹತ್ತಿದ ಹಿಳ್ಳೆಗಾಲುಗಳ . . . ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಶೀಬಸಂ. ೬-೦೦೪).

[ಪಿಳ್ಳೆ+ಕಾಲು₁ (<ಕಾಲ್₁)]

**ಪಿಱಿ, ಪಿರಿ₂** (ನಾ). (ಹೆಣದ) ಬಾಡು; ಮಾಂಸ: ಪೊಯ್ದಾಡಿ ಮಡಿದ ಕಲಿಗಳ ಶರೀರಂಗಳಂ ಪೊಯ್ದುಳಿದು ಪಿಱಿತಿಂಬ ಮರುಳ್ಗಳಂ . . . ಕಾಣುತೆ (ಕೃಪಕಾ. ೯-೩೩). ಪಿರಿ₂ : 'ಪಿರಿತಿನಿ' ಪರಾ.

△ **ಪಿಱಿಚು** 'ಪಿರಿಚು' ನೋ.

**ಪಿಱಿತಿನಿ, ಪಿರಿತಿನಿ** (ನಾ). (ಹೆಣದ ಮಾಂಸವನ್ನು ತಿನ್ನುವ) ಮರುಳು; ದೆವ್ವ: "ಪಿಱಿತಿನಿಯೆಂದು ಮರುಳ್" (ಶಬ್ದಮ. ೬೫-೪೩೦); ಪಸಿದ ಪುಲ್ಮರುಳ್ ಪಿಱಿತಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿವಂತುಗಿದು ತಿಂದುಪೋರೊಂದೆಡೆಯೊಳ್ (ಕಾವ್ಯಸಾ. ೫೩೬ ಪೊದ್ರಿಕ); ಎಲೆ ಪಿಱಿತಿನಿ ಪೋ ಮುಟ್ಟದೆ ತೊಲಗು (ಕಂಕಥಾ. ೮-೪೩); ನೀಂ ಪಿಱಿತಿನಿಯಂ ಪಾಂಗಿನಿಂ ಎಲ್ಲಮಂ ತಿಂದು ಸಾವುದೆಂದು ಬೈದಂ (ರಾಜಶೇ. ೬೫-೪). ಪಿರಿತಿನಿ: "ಪಿರಿತಿನಿಯೆನಲ್ ಪಿಶಾಚಿಯ ನಾಮಮಕ್ಕು" (ಕಚಿ. ೬೬); ಪಿರಿತಿನಿ ಖಗಪಕ್ಷವೀಜಿತಂಗಳನಾಗಳ್ ವರಚಂದನವಾರಿಗಳಿಂ ಸುರುಚಿರ ಸುರವೃಕ್ಷವಲ್ಕವೀಜಿತದೇಹರ್ . . . ಸುಂದರಿಯರ್ ತೋರಿಸೆ ಬೆರಳಿಂದಂ ಕಂಡರ್ ಸ್ವದೇಹಮಂ ಕೊಳುಗುಳದೊಳ್ (ರ್ಯಕಾರೂ. ೦೬೪); ಪಿರಿತಿನಿಯು ನಾಲಗೆಗೆಲ್ಲಿ ಕೊನೆಗಂಡ ಮಚ್ಚು (ಕಾಂಚಿಕ. ೦೬೫-೪೨೦).

**ಪಿಱಿತಿನಿಯಾಳ್ಮ, ಪಿರಿತಿನಿಯಾಣ್ಮ, ಪಿಱಿತಿನಿಯಾಣ್ಮ** = ೧. ಮರುಳುಗಳ ಒಡೆಯಂ; ಶಿವ: "ಗನಹ ಮಹಾದೇವ ಕಣ್ಣಡಿಯ ಕಱೆಗೊರಲ ಪಿಱಿತಿನಿಯಾಳ್ಮ[ಪಾಠಾಂ. ಣ್ಮ]ದಪ್ಪಕವಗೆಯ . . . ಎಂದೆಂಬಿವೀಶ್ವರನ ನಾಮಮಂ" (ಕಕ್ಷಮಂ. ೪); ಪಿರಿತಿನಿಯಾಣ್ಮನೆಂದರೆ ಚಂದ್ರಶೇಖರನಾದ ಚಂದ್ರನುಳ್ಳ ಈಶ್ವರನೆಂದು ಇರಬೇಕು (ಶಾಹಿಸಂ. ೦೪೨); "ಪಿಱಿತಿನಿಯಾಣ್ಮ . . . ಬೆಳ್ಪಡಿಯನೆನೆ ಶಿವಗೆ ಪೆಸರ್" (ಕಮ್ಮಕ. ೫). ೨. ಗಣಪತಿ; ವಿನಾಯಕ: "ಪಿರಿತಿನಿಯಾಣ್ಮನೆಂದೆನಲದುಂ ಗಜಾನನಗೆ ಪೆಸರಕ್ಕು" (ಕಕಿ. ೬೫). ಪಿಱಿತಿನಿಯೊಡೆಯ = ಪಿಱಿತಿನಿಯಾಳ್ಮ ೧: ಕೋಱೆಗಳನಂತು ತಾಳ್ದಚ್ಯುತನಡಿಯ ನೀರ ಪಿಱಿತಿನಿಯೊಡೆಯನೇ ಪಱಿಯೊಳು ಧರಿಸುವನೆ ತಾಂ (ನಿರ್ಕ್ರಿಯು. ೬-೬೫). [ಪಿಱಿ+–ತಿನ್ನಿ₂]

△ **ಪಿಱುಚು** 'ಪಿರಿಚು' ನೋ.

**ಪಿೞ್, ಪಿಳಿ₁, ಹಿಳಿ₁, ಹಿೞ್** (ಕ್ರಿ). ೧. ಹಿಸುಕಿ ರಸವನ್ನು ತೆಗೆ; ಹಿಂಡು: ಎಳ್ಳ ಗಾಣಂಗಳೊಳಿಟ್ಟಯಿಸ್ವರ್ ಋಷಿಯರ್ಕಳಂ ಪಿೞ್[ಪಾಠಾಂ. ರಿ]ದು ಕೊಂದು (ಪಂಪಭಾ. ೦೬೮-೬); ಒಲ್ಲಣಿಗೆಯಂ ಪಿೞ್ವಂತೆ ಪಿಂಡಿ ಪಿೞಿದ ಪಗೆಗೆ ರಥಚಕ್ರಮಂ ನುಂಗುವುದುಂ (ಕಂಕಥಾ. ೦೨-೨೦೬ ವ); ಮಾಮರನೆಳದಳಿರ ರಸಮಂ ಪಿೞಿದು ಕಳಕಂಠನ ಕಂಠನಾಳಕ್ಕೆಱೆದಬ್ಬಸಮಂ ಕಳೆದು (ರಾಜಶೇ. ೦೬-೦೫). ಪಿಳಿ₁: ೧. ಕಿವಿಯಾಗಿದುಂ ಪೈರಂದಱಿದು ಗಾಣದೊಳ್ ಪಿಳಿದು (ಕನ್ನೆ. ೨-೪ ವ); ಬೆಳೆದ ಕಮ್ಮಂಗಳವೆ ಪೊಲದಿಂ ಪಿಳಿದರೊಮ್ಮನೆ ರಸವೊಗುವ ಕಡು ಬೆಳೆದ ಕಬ್ಬಿನ ಕೆಯಿಗಳಂ

ಸೂಗುಯಿಸುವುದಾ ವಿಷಯು (ಕಾಶ್ಯಪ. ೦-೩೬). ೨. ಕರೆ : ಸುರಿಸು; ವರ್ಷಿಸಂ : ಕೊಳದಂಬು ಬತ್ತೆ ಚುಯ್ಯೆಂದೊಳಗಣ ನೀನಾಣೆ ೮ರಿಕುವರಿಗು ವೆನುತ್ತಂ ಜಳಜಸಖಂ ಜಳಕಿರಣಾವಳಿಯಂ ಪಿಳಿದಂತೆಪ್ಪೋಲ್ ಮರೀಚಿಕೆ ಮೆಱೆಗುಂ (೦ಚಹೇ. ೩-೪೮). ಹಿಳಿ₁. ೧. ಪರ್ಶ್ಯೋಗಳುಪ ದವರ ಗಾಣದಲ್ಲಿಕ್ಕಿ ಹಿಳಿಯನೆ (೩ಸಶ. ೩೬೬) ; ಬಿಸಿಲಂ ಹಿಳಿಯಲ್ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲವೆತ್ತಂ (೧೦೪. ೯-೦೪); ಕಳಿದ ಹಲಸಿನ ಹಣ್ಣ ತೊಳೆಗಳಂ ಸಲೆ ಕಿವುಚಿ ಹಿಳಿದ ರಸದಲ್ಲಿ ಮತ್ತು ತೊಳೆಯ ಹಾಕ್ಕಿ ಪರಿಮಳಿಸುವುದು (ಸೂಕ್ತಿಕ. ೩-೩೩). ೨. ಸಾಹಸ್ರಕೋಟಿಶುಭ್ರಾಂಶು ಗಳ ರುಚಿರಸವುನಾ ಹರಂ ಹಿಳಿದು ತನ್ನಯ ಕಳಿಯು ಕೂಡಿ ಕಣ್ಣಾ ಹಿನಿಂ ಘಟ್ಟಿಗೊಳಿಸಿದ ಪುಣ್ಯಘಟಕಿಯೋ . . . ಎನಲ್ ಕೈಲಾಸಪರ್ವತಂ ರಾಮಣೀಯಕಮಾದುದು (ಕಿಬಿ. ೨-೦೦). ೩. (ಆಲಂ) ನಾಶಪಡಿಸು ; ಧ್ವಂಸಮಾಡು ; ಹಾಳುಮಾಡು : ಧರಣಿಯನೊಕ್ಕಲಿಕ್ಕಿ ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀಕರಭೂನಲೋಕವಂ ಹಿಳಿದು ನಾಕವನೋಡಿಸಿ . . . ನೆಗಳ್ದನಕ್ರಮಕಾರಿ ಜಿತಾರಿ ತಾರಕಂ (೧೦೪. ೬-೩) ; ಎಲೆ ಕಕುತ್ಸ್ಥಜ ಕೇಳು ಲೋಕವ ಹಿಳಿವಳಿನಂದದಲಿ ಹಿಂದಣ ಬಲಿಯು ತಂಗಿ . . . ಕಡುಗಲಿಯ ಗೆಲಿದನು ಶಕ್ರನವಳನು (ತೊರವೆ. ೦-೦೦-೦೦); ಈ ಪರಿಯು ಲವಣಖಳಪರವನು ತಾ ಪಡೆದು ಸಂತಸದಿ ಸದ್ವೀರ್ಯೋಪಲಾಲಿತನಾಗಿ ಸಲಲಾವನಿಗಳನು ಹಿಳಿಯೆ (ತೊರಗರು. ೯-೨೦). ೪. ನಾಶವಾಗು ; ಹಾಳಾಗು : ಮಳೆಗೆ ಹೆಚ್ಚಿದ ಧೂಳಿನ್ಬುರವಳಿವವೊಲು ವಿಜಯಾಸ್ತ್ರಹತಿ ಯಲಿ ಹಿಳಿದ ಕರಿನರತುರಗದೊಡಲರುಣಾಂಬುಧಾರೆಯಲಿ ಕಳಚಿತೀ ಕಿಂಧೂಳಿ (ಕುಮಾ.ಕ. ೨೨-೩೮). ೫. ಹೋಗಲಾಡಿಸು; ನಿವಾರಿಸು: ತುಳಿದನು ಭವಂಗಳು ತೊಳದನು ತಪಂಗಳಂ ಹಿಳಿದ ಸಂಶಯಗಳಂ ತಳೆದ ಮೋಕ್ಷಂಗಳಂ (ಅಣ್ಣಾಲೋ. ೦೨೬-೦೪). ೬. ಕೊಲ್ಲು ; ಸಂಹರಿಸಂ: ಮೊಲೆಯನುಂಬುದೊಬ್ಬ ದನುಜೆಯು ಹಿಳಿದವೂದೆರವು ಶಕಟನನು (ಕುಮಾ.ಉ. ೦-೪೬); ಅಳಿವೆನೋ ಹದಿನಾಲ್ಕುಲೋಕವ ಹಿಳಿವೆನೋ ಹರ ಯಜಭವಮುಖ್ಯರ . . . ಎನುತುರಂಗಿಳೊಳುವ ಇಡುಗೋಪದಲಿ ಕಿಡಿಕಿಡಿ ಯೋದನಸುರೇಂದ್ರ (ಕೊರಂ. ೩-೭-೦೯). ೭. ಕುಗ್ಗು; ನಿಸ್ಸತ್ವಗೊಳ್ಳು: ಹಿಳಿದ ಛಲದ ವಿಡಾಯ ಧೈರ್ಯದ ತಳಿದ ಭೀತಿಗೆ ಕಾಲುವೊಳಿಯಾದಳಿ ಪವನದ ಭೂಪಾಲನಿರವನು ಕಂಡನಾ ಪಾರ್ಥ (ಕುಮಾ.ದ್ರೋ. ೦೬-೯). ಹಿಟಿ: ೧. "ಹಿಟಿ—ನಿರ್ದ್ರಾವಕರಣೇ (ಹಿಂಡು), ದಲನಾರ್ಥೇ ('ಸೀಳು' ಎಂಬರ್ಥದಲ್ಲಿ) ತುಳಂ" (ಶಬ್ದ) : ತವಮಾಲವಾದವವಪಲ್ಲವವಂ ಹಿಟಿದೊಂದು ನಿರ್ಮಲೋಪಲತಲದಲ್ಲಿ ತದ್ರುಸದಿನಾಗಳೆ ನೋಡಿ ನಿಜೋತ್ತರೀಯವಲ್ಕಲವಸನ್ನೇದೇಶವಮನೆ ಸೀಳ್ದದಱೊಳ್ ಬರೆದಂ (ಶಾಕುಂ.ಛ. ೬೬೩) ; ಕೂವಸಿಗಳಿಂದೆತ್ತಿ ಕುತ್ತುವುದುಂ ಪಿರಿಯ ಗಾಣ ಕೊಳಿಕ್ಕಿ ಹಿಟಿವುದುಂ . . . ಉಕ್ಕಿನ ಬಡಿಗೆಗಳಿಂ ಪೊಡೆಯೆಂಡನಾಡು ವುದುಂ (ಪುಣ್ಯಾ.ಕ. ೯-೦೦೦ ೩).

ಪಿಟಿದು ಪಿಂಡಿಸು=ಕುಗ್ಗಿಸು ; ದುರ್ಬಲಗೊಳಿಸು : ಜರೆ ನಿಜ ಶಕ್ತಿಯಿಂ ಪಿಟಿನು ಪಿಂ[ಶಾಕಾಂ.ಹಿಂ]ಡಿಸದನ್ನೆಗಮಾತ್ಮ ದೇಹದೊಳ್ನರೆ ತೆರೆದೋಱವನ್ನೆಗಂ . . . ಅರ್ಚಿಪುದರ್ಥಿಯಿಂ ಜಿನೇಶ್ವರನಾ (ಸಹಜ. ೦-೦೦೩). ಪಿಟಿದು ಪಿಂಡು, ಹಿಳಿದು ಹಿಂಡು=೧. ಅತಿಯಾಗಿ ಹಿಂಸಿಸಂ,– ನೋವುಂಟುಮಾಡು : ಈ ತೆಱದಿಂದಂ ನಿನ್ನಂ ಘಾತಿಸಿ ಬಿಡದಲೆದು ಪಿಟಿದು ಪಿಂಡಿದ ದುಃಖವ್ರಾತವಿದು ಮಗಳೆ ನಿನ್ನ ಪುರಾತನದುಷ್ಕರ್ಮವಿಟಪಿಕಟುಕಫಲಂಗಳ್ (ಅಂಕ. ೩-೩೮) ; ಬಲವನರಿ ಭಟ ಸುಳಿದು ತುಳಿದನು ಹಿಳಿದು ಹಿಂಡಿದನು (ಕೌರಾ. ೩೬-೦೬). ೨. ಬಲವಾಗಿ ಹಿಂಡು ; ಚೆನ್ನಾಗಿ ನುಲಿ; ಕಿರಿಚಿ ಹಿಂಡು: ಒಗೆದ ನಾದ ಪೆಚ್ಚುದವರ ಪಾಪ ಓಡಿಹೋಗಲೂಗದ ಪಳನಿಷ್ಠೆಯಿಂದ ಹಿಂಹಿ ಮುರಿಹಿ ಹಿಳಿದು ಹಿಂಡಿ ಮಾತ್ರ ಏಕನಘವನೆಬು ದಿಟದ ದಿಬಿಲೊಳೊಣಗಿಸುತ್ತ ಪುತ್ಕೆ (ಶಶಿಕೋ. ೩೮. ೨೩೩-೦೦) ; ತಳಿತ ತರೆಯೋದಿನೊಳು ಕೋಣಿತಹಲಿ ಕಾಸಿದರಳಿಯು ಕರುಳನು ಹಿಳಿದು ಹಿಂಡಿದರು (ಕುಮಾ.ಕ. ೩-೩೬). ಹಿಳಿದುಕೊಳ್–(ರಸವನ್ನು) ಹಿಂಡಿಕೊಳ್ಳು : ದೋಸೆವದದಿ ಸೂಗಿಯು ಸುವ ಸಕ್ಕರೆಗಳೆಳಿನೀರ ಕುಯಿದಿಳುಪಿ ತಣ್ಣಸವಾದ ಹಾಡೋಳಿಗಿರಿಸಿ ಮಾಜುದಿನ ಪೊಗಳ ಕಳಿದು ನಿಂಬೆಯ ಹಣ್ಣಿನಾ ಹೊಸ ಹುಳಿಯು ಹಿಳಿದುಕೊಂಬುದು (ಸೂಶಾ. ೨-೩೦). [ದೇ.೩ ತಮಿ.ಮಲ. ಪಿಟ್]

ಪಿಟಿನೀರು (ನಾ). ಹಿಂಡಿದ ನೀರು : ಮಿಂದೊಲ್ಲಣೆಗೆಯ ಪಿಟ್ [ಶಾಕಾಂ. ಹಿಟ್] ನೀರಿಂವಂ ಕಾಲ್ಗಚ್ಚಿ ನೆಲದೊಳಿರ್ದಾ ಕೊಟಿನೀರಿಂದಂ ಪಾರ್ವರ ಮಡಗಟಿಂದು ಪಿತ್ರಕೊಶ್ಯುಯುಕ್ಯುಮೆಂಬಪಾರ್ವರ್ (ಸಹಜ. ೦೦-೦೨೬). [ಪಿಟ್ + ನೀರು₁ (<ನೀರ್)]

ಪಿಟಿಯಿಸು, ಪಿಟಿಸು, ಹಿಳಿಸು (ಕ್ರಿ). ಹಿಂಡುವಂತೆ ಮಾಡು : ಹಿಂಡಿಸು : ಇಕ್ಷುಯಂತ್ರಂಗಳೊಳು ಕಡಿದು ಪಿಟಿಯಿಸಿಯುಂ (ಶಬ್ದ. ೩೦೬). ಪಿಟಿಸು : ದಿನಂತರಸಂತ್ರಾಸಕಪಾಕಾರಿಗಳಪ್ಪ ಇಕ್ಷುಯಂತ್ರದೊಳಿಕ್ಕಿ ಪಿಟಿಸುತ್ತುಂ (ಅಶ್ವ. ೦೦-೦೦ ೩). ಹಿಳಿಸು : ಕೊಳಲಿನ ಸರಗಳು . . . ಹೃದಯದಲ್ಲಿ ನರ್ತಿಸುತ್ತಾ ಬಗೆಬಗೆಯ ರಸವನ್ನು ಹಿಳಿಸುತ್ತಿವೆ (ಮೂಕಿಜ. vi ಮುನ್ನುಡಿ). [ಪಿಟಿ+–ಇಸು₁]

ಪಿಟಿಲ್, ಪಿಳಿಲ್ (ಕ್ರಿ). ಕೈಯಿಂದ ಬಿಡು,—ಎಸೆ : "ಬ(ಪಿ)ಟಿಲ್— ಹಸ್ತೋನ್ಮುಕ್ತೌ" (ಶಬ್ದ..ಬ). ಪಿಳಿಲ್ : "ಪಿಳಿಲ್—ಹಸ್ತೋನ್ಮುಕ್ತೌ (ಕೈಯಿಂದ ಬಿಡು)" (ಶಬ್ದ) p ಇಲ್ಲಿ ಶಬ್ದರೂಪ ನಿರ್ಧಾರವಿಲ್ಲದು ದರಿಂದ ಎರಡು ರೂಪಗಳನ್ನೂ ಸೂಚಿಸಿದೆ. [?]

ಪಿಟಿಸು 'ಪಿಟಿಯಿಸು' ನೋ.

ಪಿಟ್ಕುಕುಜುಕ್ಕಿ 'ಪಿಟ್ಕುಕುಜುಕ್ಕಿ' ನೋ.

ಪಿಟ್ಕುಕುಜುಕ್ಕಿ, ಪಿಟ್ಕುಕುಜುಕ್ಕಿ (ನಾ). ಒಂದು ಸ್ಥಳದ ಹೆಸರು : ಅರಕೆಱೆಯ ಪಿಟ್ಕುಕುಜುಕ್ಕಿಯ . . . ಪೊಲ ಮೇರೆ (ಕ್ಯಶಾ. ಕಾಶ. ೦೩-೩೬ ; ೩೦೦). ಪಿಟ್ಕುಕುಜುಕ್ಕಿ : ಸೀಯಮಂಗಲದ ಪೊಲ ಮೇರೆ ಇಸಾನದ ದೆಸೆ ನಡುಗಲ್ಲೆ ಅಪ್ಪುಲತಿಣ್ಣಿಯನ್ಯಂಕಾಯ್ ಪೇರೊಟ್ಟಿಯ ಅರಕೆಱೆಯ ಪಿಟ್ಕುಕುಜುಕ್ಕಿಯ (ಎಕ. X(೩). ಅಶ್ಯ. ೦೦೬-೩೬ ; ೩೬೦). 'ಪುಲಿಕುಜುಕಿ' ಪರಾ. [ಪಿಟ್ಕ ? + ಕುಜುಕ್ಕಿ (<ಕುಜುಕಿ)]

Δ ಪಿಟ್ಟುವಿ 'ಪೃಥುವಿ' ನೋ.

ಪಿಟ್ಟುವಿರಾಜ್ಯಂಗೆಯ್ (ಕ್ರಿ). ಭೂಮಿಯನ್ನು ಆಳು ; ರಾಜ್ಯಭಾರ ಮಾಡು : ಸ್ವಸ್ತಿ ಶ್ರೀಚತ್ರವಾಕ್ಯಪೆರ್ಮ್ಮಾಡಿ ಪಿಟ್ಟುವಿರಾಜ್ಯಂಗೆಯೆ (ಎಕ. V (೩), ಅರಕಸ. ೩೦೩ ; ಸು. ೩೩ಹು ೩೩). [ಪಿಟ್ಟುವಿ (<ಪೃಥುವಿ) + ರಾಜ್ಯಂಗೆಯ್]

ಪಿಟ್ಟುವಬ್ಬೆ (ನಾ). ಒಬ್ಬಾಕೆಯಂ ಹೆಸರು : ಕೋಸಿಗವಳ್ಳಿಯ ಕಣ್ಣಮ್ಯಂಗ ಪಿಟ್ಟುವಬ್ಬೆಗಂ ಪುಟ್ಟಿದ ಕನ್ನಯ್ಯನ್ (ಎಕ. VIII, ಸೊರಬ. ೯೯-೬ ; ೧೪೦). [ಪಿಟ್ಟುವಿ (<ಪೃಥುವಿ) + ಅಬ್ಬೆ₁]

Δ ಪಿಟ್ಟುವಿ 'ಪೃಥುವಿ' ನೋ.

ಪಿಟ್ಟುವಿಗಂಗ (ನಾ). ಒಬ್ಬಾತನ ಹೆಸರು : ಸ್ವಸ್ತಿ ಅಸಗ ಗಂಗಯನ ಮಾಗ ಪಿಟ್ಟುವಿಗಙ್ಗಂ ಭಟ ಸ್ವತಿ (ಎಕ.III(೩). ಸಂತಶ. ೨೦೩-೨; ೩೩ಹು ೩೩). [ಪಿಟ್ಟುವಿ (<ಪೃಥುವಿ) + ಗಂಗ]

ಪಿಟ್ಟುವಿಗಾಮುಂಡ (ನಾ). ಒಬ್ಬಾತನ ಹೆಸರು : ಸಂಗವಾದ ಪೆಂವರ್ಮನಡಿಗಾಮುಣ್ಡರುಂ ರಣವಿಕ್ರಮಗಾಮುಣ್ಡರುಂ . . . ಪಿಟ್ಟುವಿಗಾಮುಣ್ಡರುಂ ಪೆರ್ಮ್ಮಯಲ ಕೆಟರುಂ ತನನ್ನಾಕರುಂ ಕೊಳಪೆಲ್ಲೂರ ಸಾಲತ್ತರುಂ ವಾರದಗಂ ಎನಿಪ್ಪರುಂ ನರಸಾಕ್ಷಿ (ಎಕ. IV, ಎಹೆಶ. ೬೦-೩೦; ಸು. ೫೪೦). [ಪಿಟ್ಟುವಿ (<ಪೃಥುವಿ) + ಗಾಮುಂಡ]

**ಪಿಟ್ಟುವಿಪತಿ** 'ಪೊಡವಿಪತಿ' ನೋ.

**ಪಿಟ್ಟುವೆಯ್ಯ** (ನಾ). ಒಬ್ಬಾತನ ಹೆಸರು : ಚೋಬರ ಪಿಟ್ಟುವೆಯ್ಯ ಪೆರ್ಗ್ಗಡಿ ಯ ತುಱುಗೊಳೊಳ್ ಸ್ವರ್ಗಸ್ಥನಾದಂದು (ಎಇ. XI. ಹೊಳ್ಕೆ. ೬೨-೬; 977). [ಪಿಟ್ಟುವಿ (<ಪೃಥುವಿ) + <ಅಯ್ಯ₁]

**ಪೀ** (ನಾ). ಹೇಲು; ಮಲ : (೯). [ದೇ.॥ ತಮಿ. ಮಲ. ತುಳು. ನಾಯ್ಕ. ಹರ್ಜಿ. ಗಡಬ. ಪೀ; ತೆಲು. ಪೀಯಿ, ಪೀಯ್ಯ; ಕೋಲಾ. ಪಿಯಾ]

**ಪೀಕಜಾಲಿ** (ನಾ). ಒಂದು ಬಗೆಯ ಜಾಲಿ: ಪೀಕದಾಲಿ, ಹಂಬಟಿದಾಲಿ (ಕೃಷಿಶಿ. ೦-೦೨). [ಪೀಕ + ಜಾಲಿ₁]

**ಪೀಕದಾಣೆ** 'ಪೀಕದಾನಿ' ನೋ.

**ಪೀಕದಾನಿ, ಪೀಕದಾಣಿ, ಪೀಕುದಾನಿ** (ನಾ). ಉಗುಳುವ ಪಾತ್ರೆ; ಥೂಕದಾನಿ; ಪಡಿಗ: ಹಾಸಿಗೆಯ ಕಾಲುದೆಸೆಯಲ್ಲಿ ಬೆಳ್ಳಿಯ ಪತದ್ಗ್ರಹ (ಪೀಕದಾನಿ) ಇಡಲ್ಪಟ್ಟಿತ್ತು (ಶಾಕಾ. ೯೦); ರಾಜನ ಎಡಗೈಯಲ್ಲಿ ಚಿನ್ನದ ಪೀಕದಾನಿ ಇತ್ತು . . . ತಾಂಬೂಲವನ್ನು ರಾಜ ಅದರಲ್ಲಿ ಉಗಿಯು ತ್ತಿದ್ದ (ಕೃಶಾ. II. ೨೦೨). ಪೀಕದಾಣೆ: ಪಚ್ಚರ—ದಾಣಿ, ಗುಲಾಬ—ದಾಣಿ, ಪೀಕ—ದಾಣಿ, ಅತ್ತರ—ದಾಣಿ, ತಬಲ್—ಜ—ದಾಣಿ ಈ ಮೊದಲಾದವುಗಳಲ್ಲಿ ಕಂಡುಬರುವ ಪ್ರತ್ಯಯಗಳೂ 'ಪಾರಸಿ' ಆಗಿವೆ (ಕಾಕಾಶಾ. ೦೬೬). ಪೀಕುದಾನಿ : ಮಗ್ಗುಲಲ್ಲಿರುವ ಪೀಕುದಾನಿಯೊಳಕ್ಕೆ ಉಗಿಯುತ್ತಾ (ಪಿಕಕು. ೦).
[← ಹಿಂ. ಪೀಕದಾನ್; ಮರಾ. ಪೀಕದಾನೀ, ಪೀಕದಾಣೀ]

**ಪೀಕಲಾಟ, ಪಿಕಲಾಟ** (ನಾ). ೧. ಪೇಚು ; ತೊಂದರೆ ; ಪೇಚಾಟ ; ಒದ್ದಾಟ : ಕಾಕತಾಳದಂತೆ ನಿನ್ನ ಮಾತು ತಾಂ ಲೋಕದಲ್ಲಿ ಸಿದ್ಧ ಮೋದು ಪೇಳೆಯ್ಯ ಪೀಕಲಾಟಮೆಯ್ದೆ ಬರ್ಕುಮಿಹಗೀ ಪೋಕು ನಿನ್ನವಲ್ಲ ಸರ್ವಭೂಮಿಯೊಳ್ (ಹಾಣಾಕ್ಕ. ೯-೦೩-೯೦): ಇವರಿಗೇನು ಬಂದಿತಪ್ಪ ಅಂತಹ ಪೀಕಲಾಟ! (ಮುಂಗಾಳಿ ೬೩). ೨. ಜಗಳ : (೯). ಪಿಕಲಾಟ : ೧. ಹೊಟ್ಟೆಗಿಲ್ಲದಿದ್ದರೂ ನಿಮ್ಮ 'ಪಿಕಲಾಟ' ಇದ್ದೇ ಇದೆ (ಜಾಬ. ೧೦); ಇದು ನಾನು ಕಂಡ ಪಿಕಲಾಟ! (ಕೃಲಾಕ. ೦೪).
**ಪೀಕಲಾಟಕ್ಕಿಟ್ಟುಕೊಳ್ಳು**—ತುಂಬ ಇಕ್ಕಟ್ಟಿನ ಪ್ರಸಂಗವಾಗಂ : ಅಧಿಕಾರಿಗಳಿಗೆ ಪೀಕಲಾಟಕ್ಕಿಟ್ಟುಕೊಂಡಿತು (ಆರ್ಥ್. ೦೪): ತರಗತಿಯಲ್ಲಿ ಪ್ರಶ್ನೆ ಕೇಳಿದಾಗ ಪೀಕಲಾಟಕ್ಕಿಟ್ಟುಕೊಳ್ಳುತ್ತದೆ (ಶಾರಕು. ೯೬).
[<ಪೀಕು₁ / ತೆಲು. ಪೀಕಲಾಟ]

**ಪೀಕಿಸು** (ಕ್ರಿ) (ಹಣ ಮೊದಲಾದುವನ್ನು) ಬಲಾತ್ಕಾರದಿಂದ ಕೊಡುವಂತೆ ಮಾಡು,—ತೆರುವಂತೆ ಮಾಡು : ಈ ದಿವಸ ಸಿನಿಮಾಕ್ಕೆ ಅವನ ಕೈಯಿಂದಲೇ ದುಡ್ಡು ಪೀಕಿಸುತ್ತೇನೆ (ಹೂಂ). [ಪೀಕು₁ +—ಇಸು₁]

**ಪೀಕು₁** (ಕ್ರಿ). ೧. ಹೊರಕೆ ಎಳೆ,—ಜಗ್ಗು : ಚತುಷ್ಪಾದಿಗಳನ್ನೆದೆ ಬಿಡ ಸಿಡಿಲ ಬಳಗದಂತಾರ್ದು ತಾಕಿದವು ಘುಡುಘುಡಿಸಿ ಪೀಕಿದವು ಕಟಕಿಕರತ (ಜಜು. ೨೦-೬೦). ೨. (ಕೂದಲು ಮೊದಲಾದುವನ್ನು ಎಳೆಯುವುದ ರಿಂದ) ನೋವಾಗು,—ಅಳುಕು : ಕೂದಲಿನ ಸಿಕ್ಕು ಬಿಡಿಸುವಾಗ ಪೀಕು ತ್ತದೆ (ಹೂಂ). ೩. ಆವರಿಸು ; ಆಕ್ರಮಿಸು : ಭುವರಲೋಕವ ತಾಕಿ ನಾಲ್ದೆಸೆ ಸುವರಲೋಕವ ಪೀಕಿ ಖತಿಯಿಂ ಕವರಿ ಮಹರ್ಲೋಕವನು ಧಟ್ಟಿಸಿ ಜನರ ಲೋಕವನು ಕವಿದು ತಪಲೋಕಕ್ಕೆ ನಿಲುಕಿತು ಕಪಕವಿಳ ನೆರೆ ಸತ್ಯ ಲೋಕಕೆ ಶಿವ ಮಹಾದೇವೆಂದು ಶೋಣಿತಬೀಜಸಂತಾನ (ಹಂಶಿಕ. ೯೨-೯೫). ೪. ಹೊರದೂಡು; ಬಹಿಷ್ಕರಿಸು : (೯). ೫. ಕಷ್ಟಪಡು; ಹೆಣಗು : ಸಾಕು ರಣಸುಖವೆಂದು ವಿಕ್ರಮಿಸಿ ಲೋಕಪಾಲರು ಹರಿಭವಾದ್ಯರು ಪೀಕಿ ರಂಗದ ಕುರಿಗಳಾದರು ವಿಳರ ತೋಟಿಯಲಿ (ಹಂಶಿಕ. ೯೨-೩೯). ೬. (ಹಣ ಮೊದಲಾದುವನ್ನು) ಬಲವಂತದಿಂದ ಕೊಡು,—ತೆರು : ಅವನು ಪಂದ್ಯದಲ್ಲಿ ಸೋತುದರಿಂದ ಹತ್ತು ರೂಪಾಯಿಗಳನ್ನು ಪೀಕ ಬೇಕಾಯಿತು (ಹೂಂ). 'ಪೀಕಿಸು' ಪರಾ.
[ದೇ.॥ ತೆಲು. ಪೀಕು ; ನಾಯ್ಕ. ಪೀಕ್]

**ಪೀಕು₂** (ನಾ). ಬೆಳೆ ; ಪೈರು : ಮೊನ್ನೆ ರೈತರು ಪೀಕನ್ನು ಮನೆಗೆ ತಂದು ಹಚ್ಚಿದರು (ಆಕಹೂ. ೬೦) : ನನ್ನ ಮಗನಿಗೆ ಮಂಥದ ಭೂಮಿಯಲ್ಲಿ ಬೆಳೆದ ಎಲ್ಲ ಪೀಕು ಸಲ್ಲತಕ್ಕದ್ದು (ಮುಶಿಕ. ೬೩).
[← ಹಿಂ. ಪೀಕಾ = ಚಿಗುರು ; ಮರಾ. ಪೀಕ್]

**ಪೀಕುದಾನಿ** 'ಪೀಕದಾನಿ' ನೋ.

**ಪೀಕೆ** (ನಾ). ಬಾಣದ ಗರಿ : ಇಱಬಿನೊಳು ಸಿಕ್ಕಿಸಿದೆ ಬಲುಗಣೆಯ ನೋಡೆನುತ ಪೀಕೆಯ ಸನ್ನೆಗೆಯ್ದು . . . ಪರಿಚರರು ನುಡಿವುತಿರ್ದರ್ (ಐಶಿಕ. ೨೩-೦೬). [<ಪಿಚ್ಛ]

**ಪೀಚ** (ನಾ). (ಆಲಂ) ಸಣ್ಣ ಮನುಷ್ಯ ; ಅಲ್ಪನಾದವನು ; ಕ್ಷುದ್ರ : ಭೂಚರರ ಗೋಚರರಗೋಚರಸುರಾನ್ವಯವ ಪೀಚನಲ್ಲ (ಕಶಕು. ೬೩-೦). [ಪೀಚು₂ + —ಅ₁]

**ಪೀಚಕತ್ತಿ** (ನಾ). ಚಿಕ್ಕ ಕಠಾರಿ ; ಕಿರುಗತ್ತಿ : ನೀನು . . . ನಡುವಿಗೆ ದಟ್ಟಿಯನ್ನು ಬಿಗಿದು ಪೀಚಕತ್ತಿಯನ್ನು ಸಿಕ್ಕಿಸಿಕೊಂಡು ಬಾದೆ (ಕಶಕ. II. ೦೦೬೩) ; ದಟ್ಟಿಗೆ ಪೀಚಕತ್ತಿಯನ್ನು ಸಿಕ್ಕಿಸಿರಲಿಲ್ಲ (ಶುಶಿಕ. ೫).
[< ಪೀಚು₂ + ಕತ್ತಿ / ತಮಿ. ಪೀಚ್ಚಾಙ್ಕತ್ತಿ, ಪೀಚ್ಚಾಕ್ಕತ್ತಿ ; ಮಲ. ಪೀಚ್ಚಾಙ್ಕತ್ತಿ]

**ಪೀಚಲು** (ನಾ). ಚೆನ್ನಾಗಿ ಬೆಳೆಯದಿರುವುದು ; ಬಡಕಲು : ಪೀಚಲಾದ ಸರಳವಾದ ಉಡುಪಿನ ಚಿಕ್ಕ ಮನುಷ್ಯನೊಬ್ಬನು . . . ಬಳಲಿದ ಕಣ್ಣು ಗಳಿಂದ ನೋಡುತ್ತಿದ್ದಾನೆ (ಮಶಿವಾ. ೦).
[ಪೀಚು₂ + —ಅಲು (< —ಅಲ್₂)]

**ಪೀಚಾಡಿ** 'ಪಿಚಾಡಿ' ನೋ.

**ಪೀಚಾಳು** (ನಾ). ಸರಿಯಾಗಿ ಬೆಳೆಯದ ವ್ಯಕ್ತಿ ; ಸಣಕಲು ಮೈಕಟ್ಟಿ ನವನು : ಪೀಚಾಳೊಬ್ಬ ತನ್ನ ಕವಲುತೋಳೆಯ ಅಂಗಿಯನ್ನು ಕಳಚಿ ಬಿಸಾಡಿ ಬಿಕ್ಕುತ್ತ ಬಂದು ಅವಳನ್ನು ಬಿಗಿದಪ್ಪಿಕೊಂಡನು (ಕೃಕು. ೩೨೩).
[ಪೀಚು₂ + ಆಳು₂ (< ಆಳ್₂)]

**ಪೀಚು₁** (ಕ್ರಿ). (ದ್ರವ ಪದಾರ್ಥಗಳನ್ನು) ಪಿಚಕಾರಿ, ಜೀಕಳಿ ಮೊದಲಾದುವುಗಳಿಂದ ಚಿಮ್ಮು,—ಚಿಮುಕಿ ಬಿಡು : 'ಪೀಚುಗೊಳವಿ' ಪರಾ. [ದೇ. ॥ ತಮಿ. ಪೀಚ್ಚು, ಪೀಚ್ಚ್ಚು ; ಮಲ. ಪೀಚ್ಚು]

**ಪೀಚು₂, ಪೀಚೆ, ಪೀಚ್ಚು** (ನಾ). ೧. ಸಣ್ಣದಾಗಿರುವಿಕೆ : ಸರಿಯಾಗಿ ಬೆಳೆಯದಿರುವಿಕೆ : (೯). ೨. ಬಡಕಲು ; ಸಣಕಲು : ಅವರ ಮಗು ತುಂಬ ಪೀಚು (ಹೂಂ). ೩. ತೀರ ಎಳೆಯ ಕಾಯಿ ; ಮಿಡಿ : "ಪೀಚಿನಲ್ಲೆರಕಮದು ಮಿಡಿಗೆ" (ಕಶ. ೬೬), ಚಿಗುರಿನ ಪೀಚು ಕಾಯ್ ಬಲಿತ ದೋರೆಗಳುಂ ಗಿಳಿವಣ್ಗಳಾಗಳುಂ ಸೊಗಯಿಸೆ (ಹಾಣಾಕ್ಕ. ೬-೦-೯) (ಗ್ರಂ). ೪. ಸಣಕಲಾದ; ಬಡಕಲಾದ : ಮಗುವಿಗೆ ರಿಕೆಟ್ಸ್ ತರಹ ಆಗಿರುವಂತಿದೆ ; ತುಂಬಾ ಪೀಚುಮಗು (ಹಂಶಿಕ. ೦೨); ಆ ಪೀಚು ಮನುಷ್ಯನೊಬ್ಬ . . . ತಮಗೆಲ್ಲ ನಿಷ್ಕಾರಣವಾಗಿ ಕಿರುಕುಳಹಿಂಸಿಸುವಾಗು ತ್ತಿದ್ದಾನೆಂದು ಹೇಳಲಾರಂಭಿಸಿದನು (ಕುಶಕು. ೨೩೫). ಪೀಚೆ : ೨. "ಅದೇನೂ ಪೀಚೆಯಲ್ಲ; ಸರಿಯಾದ ಎತ್ತರವೆ" ಎಂದು ವರ್ತಕ ಉತ್ಸಾಹದಿಂದ ಸೆಕ್ಸ ದೋಷ್ ಕಿವಿಯಲ್ಲುಸುರಿದನು (ಕೃಶಕು. ೬೬). ೪. ಆ ಪೀಚೆ ಮನುಷ್ಯ ನಿರಾಶೆ ಯಿಂದ ಚೀರಿದನು (ಕೃಶಕು ೨೩೫). ಪೀಚ್ಚು : ೩. "ಎಳೆಗಾಯಿ ಮಿಡಿ ಹದಿರು ಪೀಚುು" (ಕಲ್ಯಶಿಕ. ೨೩); ಬೀಜಕೆ ಬಿಡುವುದ ಪೀಚಿನೊಳಱಿಯೆಂಬುದೀ ಜಗದೊಳಗುಳ್ಳ ಗಾದೆ (ಶಶಕ. ೨೩-೯೬); ವೃಕ್ಷದ ಬುಡಕ್ಕೆ ನೀರನೆರೆದಲ್ಲಿ ಆ ಉದಕಸಾರವು ಎಲೆ, ಹೀಚು, ಕಾಯಿ ಹಣ್ಣುಗಳೊಳಗೆಲ್ಲ ವೇಧಿಸಿಕೊಂಡಿರುವ

ಹಾಗೆ (ಕೋಳಿಕು. ೦೨೦-೯೬೪ ೦೪೯); ಹಣ್ಣಿನ ಗುಣವೆಲ್ಲ ಹೀಚಿನಲ್ಲಿ (ಕುಣಾಕ. ೦೪). (ನಾ). ೫. ಸಣಕಲು ವ್ಯಕ್ತಿ; ನರಪೇತಲ: ನಿನ್ನ ತಪ್ಪು ಹೀಚೇನೂ ಅಲ್ಲ. ನೋಡುವುದಕ್ಕೆ ಇಪ್ಪತ್ತೈದು ವರ್ಷದ ಆಳು (ಶಾಂಕಾ. ೦೯೦). ೬. (ಆಲಂ) ಅನುಭವವಿಲ್ಲದ ವ್ಯಕ್ತಿ: ಇದಕ್ಕೆಲ್ಲ ಕತೆ ಬರೆದ ಹೀಚುಗಳ ಅಮೋಘವಾದ ಅಪರಿಮಿತ ಅಜ್ಞಾನವೇ ಕಾರಣ (ಮುಕೋಕಿಂ. ೦೨೮). [ದೇ.೩ ಮಲ. ಪೀಚ್ಚು]

**ಪೀಚುಗದ್ದ** (ನಾ). ಸರಿಯಾಗಿ ಬೆಳೆಯದ ಗಡ್ಡ; ಕುರುಚಲುದಾಡಿ: (೯). [ಪೀಚು₃ + ಗಡ್ಡ₁]

**ಪೀಚುಗೊಳವಿ** (ನಾ). ಪಿಚಕಾರಿ; ಜೀಕಳಿ; ಜೀರ್ಕೊಳವೆ: (೯). [ಪೀಚು₁ + ಕೊಳವಿ (< ಕೊಳವಿ)]

**ಪೀಚೆ** 'ಪೀಚಂ₃' ನೋ.

**ಪೀಠ** (ನಾ). ೧. (ಕುಳಿತುಕೊಳ್ಳಲು ಮಾಡಿದ) ಮಣೆ; ಆಸನ: "ವಿಷ್ಟರಂ, ಪೀಠಂ, ಆಸನಂ—ಈ ೩ ಮಣೆ" (ಪರಾಯು. ೩೨-೦೩೩), "ಆಸಂದಿ ವಿಷ್ಟರಂ ವೇತ್ರಾಸನಕಂ ಪೀಠಮಾಸನಂ ಪಸರಿಂ" (ಶಬ್ದಮ. ೯೯-೨೩). ೨. ದೇವರ ಪ್ರತಿಮೆಯನ್ನು ಇಡುವ ವೇದಿಕೆ: ಎಸವ ಪೀಠವನೇರಿದು ರುದ್ರಾಣಿ ಚಿಪ್ಪರದೊಳ್ಕೆತಂದು ಕೆಯ್ಯ ಬಾಳ ಪಿಡಿದು . . . ಎರಡು ವರವನಿತ್ತಪೆನೆಂದಳು (ಕೃಪಾಪು. ೩೦-೬೮). ೩. ದೇವರ ಮುಂದೆ ನೈವೇದ್ಯ, ಬಲಿ ಮೊದಲಾದಂವುಗಳನ್ನು ಇಡುವ ವರ್ತುಲಾಕಾರದ ವೇದಿಕೆ: 'ಬಲಿಪೀಠ' ಪರಾ. ೪. ತಳಪಾಯ; ಬುನಾದಿ; ಅಡಿಪಾಯ. ೫. ಗುರುಗಳು, ಸ್ವಾಮಿಗಳು, ಅರಸರು ಮೊದಲಾದವರ ಗದ್ದುಗೆ,—ಅಧಿಕಾರಸ್ಥಾನ: ಪೀಠ ಮೂರ್ಧಗೆ ಹೊಲ್ಲ ಕೀಟ ನಿದ್ದೆಗೆ ಹೊಲ್ಲ (ಸರ್ವಜ್ಞ. ೪೩೦); ಪೀಠ ಸಿಕ್ಕಿದರೂ ಕಾಟಕತನ ಬಿಟ್ಟಾನೆಯೇ? (ಗಾದೆ). ೬. ವಿದ್ಯಾಕೇಂದ್ರ; ವಿದ್ಯಾಕ್ಷೇತ್ರ: ಮಯೂರಶರ್ಮನು ವ್ಯಾಸಂಗ ಮಾಡುತ್ತಿದ್ದುದು ಈ ಪೀಠದಲ್ಲಿಯೇ (ಕರ್ನಾಇ. ೩). 'ವಿದ್ಯಾಪೀಠ' ಪರಾ. ೭. ವಿಶೇಷ ಅಧ್ಯಯನಕ್ಕಾಗಿ ಗೊತ್ತುಮಾಡಿರುವ ಒಂದು ಅಧಿಕಾರ,—ಪ್ರಾಧ್ಯಾಪಕಸ್ಥಾನ: ಜೈನ ಶಾಸ್ತ್ರಾಭ್ಯಾಸಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಒಂದು ಪೀಠವಿದೆ (ಕೂಂ). [ಸಂ.]

**ಪೀಠಕ** (ನಾ). ೧. ಆಸನ; ಮಣೆ. ೨. "ಸ್ಥಾನ" (ಅಜಿತ. ೯೦೪೩): ಅಂತೆ ಜನನೀಜಠರಪೀಠಕ[ಪಾಠಾಂ. ಪಿಠರ]ಮನೆಯ್ದನೋರ್ದಂತಿದಂ ಪರಮಾರ್ಥ ಮಕ್ಕುಂ (ಅಜಿತ. ೯-೪-೭೦). ೩. [ನಾಟ್ಯ] ನೃತ್ಯದಲ್ಲಿಯ ಒಂದು ಭಂಗಿ: ಕಾಲುಗಳು ಪೀಠಕದಲ್ಲೇ ನಿಂತಿರಬೇಕು . . . ಅವು ನೇರಾಗ ಕೊಡದು (ಅಭ್ಯಕೂ. ೦೩೬). [ಸಂ.]

**ಪೀಠಮರ್ದ** (ನಾ). [ಕಾವ್ಯಮೀ] ಶೃಂಗಾರವಿಷಯಗಳಲ್ಲಿ ನಾಯಕನಿಗೆ ಸಹಾಯಕರಾಗಿ ಬರುವ ನಾಗರಕ, ವಿಟ, ವಿದೂಷಕ ಮತ್ತು ಪೀಠಮರ್ದ ಎಂಬ ನಾಲ್ವರಲ್ಲಿ ಒಬ್ಬ; ಕೋಪಗೊಂಡ ನಾಯಿಕೆಯನ್ನು ಸಂತೈಸುವುದರಲ್ಲಿ ನಿಪುಣನಾದವನು: ಒಡನೊಡನೆ ಪೊರೆದು ಕುಳ್ಳಿರ್ದಡೆಯೊಳ್ಳಂದೇಜಲಿಕ್ಕಿ ಕಾಲ ಪಿಡಿದೋಗಡಿಸದೆ ಮಿದಿಮಿದಿದಟ್ಟಿಯುನೊಡರಿಸುತಿರ್ಪವನ ಪೀಠಮರ್ದನೆನಿಕ್ಕುಂ (ಶೃಂಗಾರ. ೪-೦೨); ಮಗುಳ್ದು ಸರಸೋಕ್ತಿಗಳ ವಿರಚಿಪಂ ನಾಗರಿಕನಂತೆ ಪೀಠಮರ್ದನ ಪಾಂಗಿನಿಂ (ಅಜಿತ. ೯-೩-೩೬). [ಸಂ.]

**ಪೀಠಮರ್ದಕ** (ನಾ). = ಪೀಠಮರ್ದ: ತನ್ನಂ ಕಾಣಲೊಡಮಜಿಾದು ನುಡಿಯಿಸಿ ಮೆಚ್ಚಿ ಮೇಳದ ನಾಗರಿಕವಿಟವಿದೂಷಕಪೀಠಮರ್ದಕರ್ಕಳ್ವೆರಸು . . . ಸೂಳೆಗೇರಿಯೊಳಗನೆ ಬರ್ಪುದಂ (ಕಾಶಿಪು. ೪-೭೪ ವ); ದಿನಜನತಾ ಲ್ಯಾಂಘ್ರಿಪಂ ನಾಗರಕವಿಟವಿದೂಷಕ ಪೀಠಮರ್ದಕರ್ಕಳ್ವೆರಸು . . . ಬರ್ಪುಂ (ಪಾಂಚಪು. ೪-೭೨ ವ), ಪೀಠಮರ್ದಕ ವಿಟ ಚೇಟ ವಿದೂಷಕರೆಂಬ ಮಯಂ ಪೇಟ್ಟುವರಲ್ಲಿ ರಾಜನಿಂದಾಮ ಕಿಜಿದಾದ ಗುಣವಂತಂ ಶಷ್ಪ್ಯವನ ಪೀಠಮನಾಕ್ರಮಿತ್ತೊತ್ತಿ ಕುಳ್ಳಿರ್ಪುದರಿಂ ಪೀಠಮರ್ದಕಂ (ಅಜಿತ. ೩-೮೩ ವ). [ಸಂ.]

**ಪೀಠಮರ್ದನ** (ನಾ). = ಪೀಠಮರ್ದ: ಎಸೆವ ನಾಗರಿಕ ವಿಟ ವಿದೂಷಕ ಪೀಠಮರ್ದನ ನಟ ಗಮಕಿ ಗಾಯಕರು ಮಿಗೆ ಸಂಕಟಾಮ ಮೊಜಿದರು ಚಪ್ಪರದೊಳು (ಜೈಮಿನಿ. ೭-೨೬): ಮೂಢರಿಲ್ಲದು ವಿಟನಿಂಗೆ ಬಡಗಲದು ವಿದುಷಕಗೆ ಪಡುವಲದು ನಾಗರಿಕಗಂ ತೆಂಕಲದು ಪೀಠಮರ್ದನಗೆ (ಸಕಲ. ೦೬೩೦). [ಸಂ.]

**ಪೀಠವರ್ದನ** (ನಾ). = ಪೀಠಮರ್ದ: ಪೀನಸ್ಥ ರಕ್ತಕರ್ದಮಹ್ವಾಪ ಸುಗಂಧಾಧಿಕಾರಮರ್ದನಕುಶಲಂ ಕಾನಿಂಗಿತಜ್ಞನುಂ ವಿಜ್ಞಾನಿಯುಂ ಶಾಠಿ ಪೀಠವರ್ಧನನೆನಿಕುಂ (ಮುದ್ರಾ. ೦೦-೯೦), ಮನುಮಹರ್ಗಿ ಪರಿಹಾಸ ಸಕ್ಕವಾಣಿ . . . ಸಜ್ಜನನೆನಿಪ ಪೀಠವರ್ಧನನೊರ್ವ ಕೆಳೆಯಂ (ಅಜಿತ. ೯-೮): ವಿಟವಿದೂಷಕಪೀಠವರ್ಧನರೆಂದೆಂಬ ನಟನೆಯ ಪಾಗಲಿಕರಿಗೆ ಘಟಕ ಕಾಮನು ಕಾವಲಿರಿಸಿದನೆಂಬಂತೆ ಕುಟಿಲಾಕ್ಷಿಯರ ಮೊತ್ತವೆಸೆಯೆ (ಅಕ್ಕಾಪು. ೩-೯೯). [< ಪೀಠಮರ್ದನ]

**ಪೀಠಾಧಿಪತಿ** (ನಾ). ಮಠದ ಅಧಿಕಾರವನ್ನು ವಹಿಸಿಕೊಂಡ ವ್ಯಕ್ತಿ; ಪೀಠಾಧಿಕಾರಿ; ಜಗದ್ಗುರು: ಮೊನ್ನೆ ಶಿವಗಂಗೆಯ ಪೀಠಾಧಿಪತಿಗಳ ಉಪನ್ಯಾಸವಿತ್ತು (ಕೂಂ). [ಸಂ.]

**ಪೀಠಿಕಾಪ್ರಕರಣ** (ನಾ). ಆರಂಭದ ಘಟನೆ: ಧರೆಗವತರಿಸುವ ಲಕ್ಷ್ಮೀವರನವತಾರಕ್ಕೆ ಪೀಠಿಕಾಪ್ರಕರಣದಂತಿರೆ ಬಂದುದಂತಭೋಗೀಶ್ವರನಾ ದೇವಕಿಯ ಗರ್ಭದೊಳ್ ಜನಿಯಿಸಿದಂ (ಜಗನ್ನಾ. ೨-೬೦). [ಸಂ.]

**ಪೀಠಿಕಾಸಂಧಿ** (ನಾ). (ಕಾವ್ಯದಲ್ಲಿ) ಆರಂಭದ ಸಂಧಿ; ಮೊದಲನೆಯ ಸಂಧಿ: ಪ್ರಾಚೀನಕವಿಗಳೆಲ್ಲ ತಮ್ಮ ಕಾವ್ಯದ ಪೀಠಿಕಾಸಂಧಿಯಲ್ಲಿ ತಮ್ಮ ಇಷ್ಟದೇವತೆಗಳನ್ನು ಸ್ಮರಿಸಿದ್ದಾರೆ (ಕೂಂ). [ಸಂ.]

**ಪೀಠಿಕೆ** (ನಾ). ೧. ಆಸನ; ಪೀಠ: ಪ್ರತಿನಂದಿ . . . ಪೊಂದಾವರೆಯ ಪೂಗಳಂ ಪೀಠಿಕೆಯಂ ಸಮೆದು ಜಿನಪ್ರತಿಮೆಯನಲ್ಲಿ ನಿಲಿಸಿಯರ್ಚಿಸುತ್ತಿರ್ಪನ್ನೆಗಂ (ಕಂಠಾಪು. ೦೩-೬೩ ವ). ೨. ಶಿವಲಿಂಗದ ಪಾಣಿವಟ್ಟಲು; ಪಾಣಿಪೀಠ; ಪಿಂಡಿಗೆ: ದೇಹವೇ ಪೀಠಿಕೆ [ಪಾಠಾಂ. ಪಿಂಡಿಗೆ, ಪೀಠಿಕೆ, ಪೀಠಿಗೆ] ಜೀವವೇ ಲಿಂಗ (ಅಕ್ಕಮ. ೯೩-೦೯೯). ೩. ಯಾವುದಾದರೊಂದು ವಿಷಯದ ಸಮಗ್ರವಿವರದ ಸಂಗ್ರಹ,— ಸಮಸ್ತವಿವರದ ಸಾರ. ೪. ಮುನ್ನುಡಿ; ಉಪೋದ್ಘಾತ: ಈ ಗ್ರಂಥದ ಪೀಠಿಕೆಯನ್ನು ಬರೆದವರು ದೊಡ್ಡ ವಿದ್ವಾಂಸರು (ಕೂಂ).

ಪೀಠಿಕೆ ಹಾಕು—ಮುಂದಿನ ಕಾರ್ಯಕ್ಕೆ ಅನುಕೂಲವಾದ ಹಿನ್ನೆಲೆಯನ್ನು ರಚಿಸು; ಪೂರ್ವರಂಗವನ್ನು ನಿರ್ಮಿಸು: ಆ ಮನೆಯವನ್ನು ಅವರ ತಲೆಗೆ ಕಟ್ಟುವುದಕ್ಕೆ ಏಜೆಂಟ್ . . . ಪೀಠಿಕೆ ಹಾಕಿದ್ದನು (ಹೋರಾಟ. ೨೫); ಅವರೇ ಜವಾಬುದಾರಿ ಹೊತ್ತು, ಇವರನ್ನು ಈ ಊರಿಗೆ ತಂದದ್ದಲ್ಲವೆ? ಎಂದು ಪೀಠಿಕೆ ಹಾಕಿ ಕತೆ ಹೇಳಿದ್ದ (ಮುಖಾಮುಖಿ. ೬೯). [ಸಂ. ಪೀಠಿಕಾ]

**ಪೀಠೋಪಕರಣ** (ನಾ). ಮಣೆ, ಕುರ್ಚಿ, ಮೇಜು ಮೊದಲಾದ ವಸ್ತುಗಳು: (ಮನೆಯ, ಕಚೇರಿಯ,—ಕುರ್ಚಿ, ಮೇಜು, ಮೊ. ದ) ಪೀಠೋಪಕರಣ (Furniture. ೩೦೯೬); ಅನಂತರ ಜವಾಬುನಿಗಳನ್ನು ಪೀಠೋಪಕರಣಗಳನ್ನೂ ಹೊರಗೆ ತರಲಾಯಿತು (ಪ್ರಪಂ. ೨೬೦). [ಸಂ.]

**ಪೀಡ** (ನಾ). ಒಂದು ಬಗೆಯ ಮರ; ಸರಳವೃಕ್ಷ: "ಪೀತಂಪಡಾ ಅಂದಳ, ಸುರಹೊನ್ನೆ, ಜೀರಿಗೆ, ಪೀಡ, ಅತ್ತಿ" (ಬಿತಂ. ೯೯). [ಸಂ. ಪೀಡಾ]

**ಪೀಡನ** (ನಾ). ೧. ಹಿಸುಕುವುದು ; ಹಿಂಡುವುದು ; ಒತ್ತುವುದು : ಋಷಭಗೆ ಹರಣ ಹಿಂಡಿವಾದವನ ಬಾಹುಪೀಡನದಿ (ಶ್ರೀರಾಮಾ. ೬೮೬-೨೨೦). ೨. ನೋಯಿಸುವುದು ; ಹಿಂಸಿಸುವುದು ; ಕಾಡುವುದು : "ನಿಗ್ರಹಂ ಪೀಡನಂ" (ಚುಂಗರಾ. ೧೩೦-೧೭). ೩. ಹಿಡಿಯುವುದು : 'ಪಾಣಿಪೀಡನ' ಪರಾ. ೪. [ಕಾಮಶಾ] ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು : ಸಹಜಮೆಂಬ ತೆಱದಿ ನಡೆದು ಬರ್ಪಮೆನಿಪ ಮಂದಿಯೆಡೆಯು ಮಹಿಳೆಯೊಡಲನೊಲ್ದು ಸೋಂಕಿ ಶೆಕ್ಕಗಾನಿಸಿ ಅಹ ಇದಾರೆನಲ್ಕೆ ಬಿಡುವ ಬಹುವಿದಗ್ಧಪುರುಷನಿಂದ ಮಹಿಗೆ ಕಾಣಿಸಿದುದು ಪೀಡನಂ (ಶಬಶ. ೬-೫); ಪುಷ್ಕರ ವಿವಿಧಕ ಧೃಷ್ಟಕ ಪೀಡನ ವೃಕ್ಷಾರೋಹಣ ಲತಾವೇಷ್ಟನ ತಿಲತಂಡು ಲಾಖ್ಯ ಕ್ಷೀರನೀರ ಊರೂಪಗೂಢ ಜಘನೋಪಗೂಢ ಸ್ತನಾಶ್ಲೇಷ ಲಲಾಟಕಮೆಂಬ ದ್ವಾದಶಾಲಿಂಗನಾಲಿಂಗಿಗಳಿಂ (ಶಿಶೀಕ. ೧೮೩); ಅಲ್ಲಿರ್ದ ಕಾಮಿನೀ ಸ್ತ್ರೀಪುರುಷರೋರೋರ್ವರನೊತ್ತಿ ಕೊಂಡು ಹೋಗಿ ಆ ಬಾಧಗೆ ಆಲಿಂಗನಂಗೈವುದಂ ಪೀಡನಮೆಂಬರು (ಕಾಮಶಾ. ೨೨೦). ೫. ದಂತಕ್ಷತದ ಭೇದಗಳಲ್ಲಿ ಒಂದು : ಎಡಗಲ್ಲದಲ್ಲಿ ಅಡಿಗಡಿಗೆ ದಂತಕ್ಷತಗೈವುದು ಪೀಡನ ಮೆಂಬುದು (ಕಾಮಶಾ. ೨೨೬). ೬. ಸುರತದ ಆಸನಗಳಲ್ಲಿ ಒಂದು : ಅವಳ್ಗೆ ದಣಿವಿಲ್ಲದೊಡೆ ಅವಳು ಮೇಲಪ್ಪುದು. ತಾಂ ಕೆಳಗಪ್ಪುದು. ಆ ಧೃಷಾಧಿಪ ಮೆಲ್ಲನವುಕೆ ಪೀಡನಂ (ಕಾಮಶಾ. ೨೪೬). [ ಸಂ. ]

**ಪೀಡನಕ** (ನಾ). ೧. = ಪೀಡನ ೪ : ನೆರವಿಯೊಳ್ ಪೂರ್ದಿ ಪೆಣ್ಣಂ ಸರಸಾಟದಿ ಭಿತ್ತಿಗೌಂಕಿಯಹಹಮೆನುತ್ತಾದರದಿಂ ಬಗಿಬಗಿದಪ್ಪುತ್ತಿರಲದೆ ಪೀಡನಕಮೆಂದೆಸಿಪ್ಪಾಶ್ಲೇಷಃ (ಮನ್ಮಿ. ೧೧-೭). ೨. = ಪೀಡನ ೫ : ಎಡದ ಗಲ್ಲಮಂನೊತ್ತಿ ಪಿಡಿಯೆ ಪೀಡನಕಮಾದು (ಶಬಶ. ೬-೪೦). [ ಸಂ. ]

**ಪೀಡನೆ** (ನಾ). ಕಾಟ ; ಹಿಂಸೆ ; ಪೀಡೆ : ಯುರೋಪಿಯನರ ಪೀಡನೆಗೊಳಗಾಗಿರುವ ರಾಷ್ಟ್ರಗಳಲ್ಲಿ ತಮ್ಮ ಶಕ್ತಿಯ ವಿಚಾರದಲ್ಲಿ ಒಂದು ಬಗೆಯ ನವೀನವಿಶ್ವಾಸವು ಹುಟ್ಟುವುದು (ಜಗಸಂ. ೩೭). [ ಸಂ. ಪೀಡನ ]

**ಪೀಡಿ, ಪೀಢಿ** (ನಾ). ಪೀಳಿಗೆ ; ಪರಂಪರೆ ; ತಲೆಮಾರು : ನೀವು ಪೀಡಿದರಪೀಡಿಯಿಂದ ಈವೂರಲ್ಲಿದ್ದವರು (ಶಕ್ರಶಾ. ೮೦). ಪೀಢಿ: ಹಳೆ ಹೆಂಗಸಾಗಿ ಈ ತರುಣಪೀಢಿಯ ನಡತೆ ತಿಳಿಯೂದಿಲ್ಲ (ಗಂಡಹಾ. ೨೦).

[ ← ಮರಾ. ಪಿಢೀ ]

**ಪೀಡಿತ** (ಗು). ೧. ನೋಯಿಸಲ್ಪಟ್ಟ; ಬಾಧೆಗೊಳಗಾದ ; ಹಿಂಸೆಗೆ ಗುರಿಯಾದ : ನಿಜವಕ್ರೋಜನಿಕ್ಷಿಪ್ತಕ್ಷಿಪ್ತಪೀಡಪೀಡಿತಲೋಕಭಾತಿನಿಯಪ್ಪ ಪೂತನಿಯುಮಂ . . . ಕರೆದು (ಜಗಿ. ೩-೨೨). (ನಾ). ೨. ಪೀಡೆಗೊಳಗಾದವನು ; ನೊಂದವನು : ವಿದ್ಯಾಗರ್ವಗ್ರಹಪೀಡಿತರ್ ಸ್ವಪರಬಾಧಾಹೇತುವಂ ದುಸ್ತರೋದ್ಯೋಗಕ್ಲೇಶಿತರಾಗಿ ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನವುಂ (ಶಂರಾಮಾ. ೧-೩೯) ; ಅವನುರುದೀಪ್ತಿಗೆ ಕೀರ್ತಿಗೆ ರವಿರಾಜರ್ ಕಂದಿ ಬಲ್ಕಳುಂಬಿದ ದೆಸೆಯಿಂದವಧಿಯನೆಂದುಂ ಕಾಣದೆ ತವೆ ರಾಹುಗ್ರಹಣಗಾಢಪೀಡಿತರಾದರ್ (ಹಮ್ಮಿ. ೨-೩೬). ೩. ನೋಯಿಸಲ್ಪಟ್ಟುದು : "ತುನ್ನಂ, ಪೀಡಿತಂ_ಈ ೨ ನೋಯಿಸಲ್ಪಟ್ಟುದು" (ಕರಾಮ. ೦೨೬-೬೨); ಅತ್ಯಂತ ಪೀಡಿತವಾದ, ಅಶಾಂತವಾದ ಗುರುಚರಣರ ಹೃದಯದ ಮೇಲೆ ಗಿರೀಂದ್ರನ ಮಾತುಗಳು ಚೆನ್ನಾಗಿ ಮುದ್ರೆಯನ್ನು ಹಾಕುತ್ತಿದ್ದವು (ಕಂಕೀ. ೪೭). ೪. ನೋವು; ಬಾಧೆ; ಹಿಂಸೆ : "ಪೀಡಿತಂ ತುನ್ನಮೆನೆ ನೋವಕ್ಕು" (ಚುಂಗರಾ. ೦೩೨-೨೭). ೫. [ಕಾಮಶಾ] ಚುಂಬನದ ಹನ್ನೆರಡು ಬಗೆಗಳಲ್ಲಿ ಒಂದು ; ಇದರ ಸಂಖ್ಯೆ ಮಂತ್ರ್ಯ ಹೆಸರುಗಳಲ್ಲಿ ಭಿನ್ನಾಭಿಪ್ರಾಯಗಳಿವೆ : ಸ್ತ್ರೀಯೆರಡು ತುಟಿಯುಂ ತನ್ನೆರಡುತುಟಿಯಿಂದೊತ್ತಿ ಪೀರ್ವುದು ತೋರ್ವುದು ಬಲ್ಪಿಡಿವುದು ಚುಂಬಿಸುವುದು ಇದು ಪೀಡಿತಮೆಂಬ ಚುಂಬನ (ಕಾಮಶಾ. ೩೬೫). 'ಜಿಹ್ವಕ' ಪರಾ. ೬. ರತಿಬಂಧಗಳಲ್ಲಿ ಒಂದು : ಪೀನಸ್ತನದ್ವಯದೊಳಾನೆ ನಿನ್ನೆದೆಯನನುಮಾನವಿಲ್ಲದೆ ಶಿವಿವೆನೆಂದೊಱಗಿದ ಮಾನಿನಿಯ ತೊಡೆಯನವಧಾನದಿಂ ಮೆಟ್ಟಿ ನೆರೆವಾ ನಿಪುಣನಿಂದೆ ಪೀಡಿತಮುದಂ (ಶಬಶ. ೬-೩೭); ಮೆಲ್ಲನೆ ಮಲಗಿರ್ದವಳು ಪುರುಷಂ ತನ್ನೆಡಗಾಲಿಂ ಮೆಟ್ಟಿ ರಮಿಸೆ ಪೀಡಿತಮೆಂಬ ಕರಣಂ (ಕಾಮಶಾ. ೨೪೬). [ಸಂ.]

**ಪೀಡಿತಕ** (ನಾ). = ಪೀಡಿತ ೫ : ಸವಡಿದುಟವಿಡಿದು ನಲ್ಲಂ ಕವಕದಿ ನಂಗುಪಮ್ರ ತರ್ಜನಿಗಳಿಂ ಸೊಗಸುಣ್ಮುವಿನಂ ತೊಡರ್ದೊತ್ತೆಂಬದೆ ಸವಿಯಲ್ ಪೀಡಿತಕಚುಂಬನಂ ತಾನೆನಿಕುಂ (ಮನ್ಮಿ. ೦೨-೦೦). [ಸಂ].

**ಪೀಡಿಸು** (ಕ್ರಿ). ೧. ನೋಯಿಸು; ಬಾಧೆಗೊಳಿಸು : ಅವಧ್ಯದ ಲುಂಬವನ ವ್ಯಾಧಿಗಳ್ ಪೀಡಿಸುವುವು (ಶಂಕರ. ೦೬೪-೦೦); ಸರಸಿಜಾಕ್ಷನೆ ಸರಸ ನೀನಾದರ ದುರಿತಗಳೆನ್ನನು ಪೀಡಿಪುದುಂಟೆ (ಶ್ರೀಕಂ. ೨-೬೦-೨); ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಪೀಡಿಸಲು (ಮೋಹಕ. ೫-೦೯) ೨. ಕಾಡು; ಕಾಟ ಕೊಡು : ಮನುಷ್ಯರ ಹಿಡಿದು ಪೀಡಿಸಿ . . . ಈಡಾಡಿದ ಕೂಳಂಬಲಿಯನಾಯ್ದು ಕುಡುಕುವ ಹೇಸ ದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡಬೇಡ ಎಲವೋ (ಬಸವ. ೫೫೬); ಪುರುಷವರಮೇಶ್ವರನ ಕಾಲಂ ಹಿಡಿದು ಬಿಡದೆಲ್ಲರ್ಗೆ ಹಲವು ದೇಶಂಗಳಂ ಕೊಟ್ಟರಿ ನಮಗೆ ಕಿಱಿದು ನಾಡಂ ಕುಡಿಮೆಂದು ಬೇಡಿ ಪೀಡಿಸುತ್ತಿರಲು (ಚಿಕ್ಕಾಸ್ರ. ೦೦-೨೦೪) ; ಪುಟ್ಟಿಸಬೇಡಲೋ ದೇವ . . . ಪರರ ಪೀಡಿಸಿ ತಿಂಬ ಪಾಪಿಜೀವನವ (ಶ್ರೀಕಂ. ೦-೦೬೯-೦). ೩. ಹಿಸುಕು ; ಹಿಂಡು ; ಒತ್ತು : ನೆಟ್ಟನೆ ಮೊಗ ನೋಡಿ ಮುದ್ದಿಪ ತರಳನ . . . ಬಾಯೊಳ್ ಬಾಯನಿಟ್ಟು ಗಲ್ಲವ ಪೀಡಿಪಳು (ಮೋಹಕ. ೦೦-೫೬); ತೆಕ್ಕೆಗೊಂಡೆನ ಪೀಡಿಸಬೇಡ ಕಡುಶೈತ್ಯಕ್ಕೆಯೊಳಿರಿಸಿ (ಮೋಹಕ ೫೬-೫೪).

[ಪೀಡನ + — ಇಸು]

**ಪೀಡಿಸುಹ** (ನಾ) . ಕಾಡುವಿಕೆ; ಪೀಡನೆ : "ಅಭಿಯೋಗಃ—ಪೀಡಿಸುಹಂ" (ಶಿಕಿಶಾ. ೦೭-೫೭). [ಪೀಡಿಸು + — ಹ (<— ವ)]

**ಪೀಡೆ** (ನಾ). ೧. ನೋವು; ಬಾಧೆ : "ಆಬಾಧಾ, ವೇದನಾ, ದುಃಖಂ, ಆರ್ತಿಃ, ಪೀಡಾ, ವ್ಯಥಾ—ಈ ೬ ದುಃಖಂ" (ಕರಾಮ. ೦೦೪-೪) ಜ್ಞಾನಮಯಂ ತೇಜೋನಿಧಿ ತಾನಿರ್ದುಂ ಕಾಯ ಗರ್ಭದೊಳ್ ಪೀಡೆಯು ನಂತೇನಂ ಮಾಡಿದನಿಲ್ಲ (ಅಂಕಿ. ೬-೩೨); ಇಂದು ಪಿಂಗಿದುವೆಮ್ಮ ಪೀಡೆ [ಶಾಕಂ. ದೇಸೆ, ಸೇದೆ]ಗಳಿಂದು ಸಾರ್ದುವು ಸಯ್ಪು (ಕಾವ್ಯಾಪ. ೩೬೫). ೨. ಕಾಟ ; ತೊಂದರೆ : ಪುಣ್ಣನಂತೆ ನೋವಂ ಮಾಡುಪುದು ಗ್ರಹದಂತೆ ಪೀಡೆಯಂ ಮಾಡುಪುದು (ಧರ್ಮಾಮೃ. ೪-೦೬೫) ; ಸದಾಶಿವನಿಗೆ ಅಣ್ಣನ ಪೀಡೆಯೆ ಅಧಿಕ (ಕ್ಕಾಗದು. ೦೫೫) ; ಸದ್ಯಕ್ಕಂತೂ ಪೀಡೆ ತಪ್ಪಿತಲ್ಲ! (ಕಟ್ಟಿಹೂ. ೬೩). ೩. ಅರಿಷ್ಟ ; ಅನಿಷ್ಟ : ವೆಂಕಮ್ಮ . . . ಪೀಡೆ ತಪ್ಪಿತು ಎಂದು ಬಾಯಿ ಬಿಟ್ಟು ಹೇಳಿದ್ದರು. ಆದರೆ ಪೀಡೆ ಅಷ್ಟು ಸುಲಭವಾಗಿ ತೊಲಗಿರಲಿಲ್ಲ (ಹಕ್ಕಸ. ೫೦) ; ತನ್ನ ತಂದೆ ತಾಯಿಗಳನ್ನು ಕಳೆದುಕೊಂಡ ಈ ಘೋರ ಅನಿಷ್ಟವಾಗಿಯೇ ಅವಳಿಗೆ ಕಾಣುತ್ತಿದ್ದ. ಆದರಿಂದ ಇದೊಂದು ಪೀಡೆ ಎಂದೇ ಅವಳ ಭಾವನೆ (ಹೊಸಕ್ಕಿ. ೨೬). ೪. ಕಾಡುವ ವ್ಯಕ್ತಿ ; ಗೋಳಂ ಹೊಯ್ದುಕೊಳ್ಳುವ ವ್ಯಕ್ತಿ : ಕೋಡಿಗಾಟಿಸಿ ಕಾಡಿ ಬೇಡುವ ಪೀಡೆ ವೇಶ್ಯಾಮಾತೆ ದಿಟ್ಟಿಸಿ ನೋಡಿ ಅಳಿಯನ ಕೂಡೆ ತಾನಿಂತೆಂದಳಕಟದಲಿ (ಬಸವ. ೯೨-೬) ; ನಾವು ಇಂತಹ ಪೀಡೆಯನ್ನು ಎಂದೂ ನೋಡಲಿಲ್ಲ (ಮಂಕಿಶಾ. ೫೬); ೫. ಪಿಶಾಚಿ ; ಭೂತ. ೬. ಹಾಳು; ನಾಶ ; ಧ್ವಂಸ. ೭. ಅಡ್ಡಿ ; ತಡೆ. ೮. ಒಂದು ಬಗೆಯ ಮರ; ಸರಳದೇವದಾರು.

**ಪೀಡೆ ಕೊಡು** = ತೊಂದರೆಯನ್ನು ಕೊಡು ; ಬಾಧೆಯನ್ನುಂಟು ಮಾಡು : ನೋಡಲಿಕ್ಕೆ ಬೈರಾಗಿಗಳ ಹಾಗೆಯೇ ಇದ್ದವರು . . . ಹಾಗೇತ ಜನರಿಗೆ ಪೀಡೆ ಕೊಟ್ಟವರಲ್ಲ (ಮೂಕಜ್ಜಿ. ೨೦೯). **ಪೀಡೆ ಮಾಡು**=

ಪೀಡಿಸಂ ; ತೊಂದರೆ ಕೊಡು : ಎರಡನೆಯವರಿಗಾದರೂ ನೀನು ಪೀಡೆ ಮಾಡಬಾರದು (ಮುಂಂಖು. ೨-೪೪). [ಸಂ. ಪೀಡಾ]

**ಪೀಡೆಗೆಯ್** (ಕ್ರಿ). ತೊಂದರೆಗೊಳಿಸಂ ; ಬಾಧಿಸಂ ; ಪೀಡಿಸಂ : ಅಶ್ವಯುಜಕಾರ್ತಿಕದೊಳ್ ಪಿತ್ತಂ ಪೆರ್ಚುಗುಮಂತದು ಕುತ್ತಕ್ಕೆಡೆಯಾಗಿ ಪೀಡೆಗೆಯ್ಗುಂ ಹಯಮಂ (ಅಶ್ವಶಾ. ೬-೨೩). [ಪೀಡೆ + ಕೆಯ್$_1$]

**ಪೀಡೆಗೊಳ್** (ಕ್ರಿ). ತೊಂದರೆಯಂನ್ನು ಅನುಭವಿಸು ; ಬಾಧೆಪಡು : ಅಪ್ರಸ್ತುತವಾದ (ಅಚೇತನ) ಕಬ್ಬಿನ ಪರವಾಗಿ ಅರ್ಥವಾಡುವಾಗ 'ಪೀಡೆಗೊಂಡು' ಎಂಬ ಲಕ್ಷ್ಯಾರ್ಥ ಸ್ಫುರಿಸುತ್ತದೆ (ಕೃಷ್ಣಕೋ. ೪೪ ಅಡಿ). [ಪೀಡೆ + ಕೊಳ್$_1$]

**ಪೀಢಿ** 'ಪೀಡಿ' ನೋ.

**ಪೀತ$_1$** (ನಾ). ೧. ಅರಿಸಿನದ ಬಣ್ಣ ; ಹಳದಿ : "ಪೀತಂ, ಹಾರಿದ್ರಂ — ಈ ೨ ಅರಿಸಿನದ ಬಣ್ಣಂ" (ಕರಾಘು. ೦೨೦-೩೦); ಶುಕ್ಲ ರಕ್ತ ಪೀತ ಕೃಷ್ಣ ಎಂಬ ನಾಲ್ಕು ಬಣ್ಣಗಳಿಂದ ಜಾತಿವಿಭಾಗವೆಂದು ಮಹಾಭಾಷ್ಯ ದಿಂದ ತಿಳಿದುಬರುತ್ತದೆ (ಹಿಂದಶಾ. ೦೩೬). ೨. ನವರತ್ನಗಳಲ್ಲಿ ಒಂದು ; ಗೋಮೇದಕ. ೩. ಗೋರೋಚನ. ೪. ಚಿನ್ನ ; ಬಂಗಾರ. ೫. ಒಂದು ಬಗೆಯ ಸಸ್ಯ ; ಹಳದಿಗೋರಂಟೆ : "ಪೀತಮಾ ಸಹ ಚರಿಯು ಕೆಂಪುಗೋರಟೆ" (ಕುಂಗರಾ. ೩೬-೨೨). 'ಪೀತೆ' ಪಾಠ. [ಸಂ. ಪೀತಾ]

**ಪೀತ$_2$** (ಗು). ಕುಡಿದ ; ಹೀರಿಕೊಂಡ : ಚಳಚ್ಚಾಮರವಾತಪೀತನಿಜ ಘರ್ಮಾಂಭಃಕಣಂ . . . ಇರ್ದನಂದು ಸುಖದಿಂ ವಿದ್ವಿಷ್ಟವಿದ್ರಾವಣಂ (ಶಂಕರಾ. ೩-೮೫). [ಸಂ.]

**ಪೀತಕ** (ಗು). ೧. ಅರಿಸಿನದ ಬಣ್ಣವುಳ್ಳ ; ಹಳದಿ ಬಣ್ಣದ. (ನಾ). ೨. ಜವೆಗೋಧಿ ; ಯವಧಾನ್ಯ : "ಯಾವವಾದು ಪೀತಕಂ" (ವಸ್ತುಕೋ. ೯೪-೦೭). [ಸಂ.]

**ಪೀತಕಾಂತ** (ನಾ). ನವರತ್ನಗಳಲ್ಲಿ ಒಂದು ; ಪುಷ್ಯರಾಗ : "ಪೀತಕಾಂತ ಮೆನೆ ಪುಷ್ಯರಾಗಂ" (ಮುಂಗರಾ. ೩೦-೩). [ಸಂ.]

**ಪೀತಗಂಧ** (ನಾ). ಹಳದಿಬಣ್ಣದ ಚಂದನ : "ಮಾಧವಪ್ರಿಯಂ— ಪೀತಗಂಧ" (ಓಣಂ. ೦೨೫). [ಸಂ.]

**ಪೀತದಾರು** (ನಾ). ಒಂದು ಬಗೆಯ ಮರ ; ದೇವದಾರು : "ಚಕ್ರವಾದಃ . . . ಪೀತದಾರು, ದಾರು, ಪೂತಿಕಾಷ್ಠಂ — ೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತಿ. ೦೨೪); ಪರ್ವತಗಳಲ್ಲಿ ಸಿಕ್ಕುವ ಪೈನ್ ಎಂಬ ಪೀತದಾರುವಿನಿಂದ ಸೊಗಸಾದ, ಮೃದುವಾದ ಮರ, ದಿಮ್ಮಿ, ರಾಳ (Resin) ಸಿಕ್ಕುತ್ತವೆ (ಕೂಶಿಕ. ೨೬೩). [ಸಂ.]

**ಪೀತದ್ರು** (ನಾ). ೧. ಒಂದು ಬಗೆಯ ಮರ ; ಸರಳವೃಕ್ಷ : "ಸರಳಂ ಪೀತದ್ರು ಪಾಹಾತರುವಕ್ಕುಂ" (ವಸ್ತುಕೋ. ೩೬-೨೦). ೨. ಒಂದು ಬಗೆಯ ಮರ ; ಹರಿದ್ರ : "ಪೀತದ್ರುಃ . . . ಪರ್ಜನೀ — ೭ ಮರದರಿಸಿನ . . . ಕಾಡುಅರಿಸಿನ" (ಸಿದ್ಧಾಂತಿ. ೦೩೫). [ಸಂ.]

**ಪೀತನ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಕಾಯಿ ; ಅಮಟೆ : "ಪೀತನಃ, ಕಪೀತನಃ, ಆಮ್ರಾತಕಃ — ೩ ಅಂಬಟೇಗಿಡದ ಹೆಸರು" (ಸಿದ್ಧಾಂತಿ. ೦೦೬). ೨. ಕುಂಕುಮಕೇಸರಿ ; ಕೇಶರ. [ಸಂ.]

**ಪೀತನಕ** (ನಾ). = ಪೀತನ ೧ : "ಆಮ್ರಾತಕ ಪೀತನಕಂ" (ವಸ್ತುಕೋ. ೩೩-೩). [ಸಂ.]

**ಪೀತಪುಷ್ಪ** (ನಾ). ಹಾಗಲ ಬಳ್ಳಿ : "ಹಾಗಲು ಪೀತಪುಷ್ಪ" (ಕುಂಗರಾ. ೯೯-೯೯). [ಸಂ.]

**ಪೀತಫೇನ** (ನಾ). ಅರಿಟಾಳದ ಮರ ; ಅಂಟುವಾಳ : "ಅರಿಟಾಳ ಮದರಿಷ್ಟಕಂ ಪೀತಫೇನಮೆನಿಕ್ಕು" (ಮುಂಗರಾ. ೯೨-೩೯). [ಸಂ.]

**ಪೀತಲ, ಪೀತಳ** (ನಾ). ೧. ಅರಿಸಿನದ ಬಣ್ಣ ; ಹಳದಿ : ಹೊಸ ಮಳೆಯಲ್ಲಿ ಮಿಂದ ಪ್ರಕೃತಿ . . . ಪೀತಲ ಪೀತಲತರವಾಗಿ ಶೋಭಾಯ ಮಾನವಾಗಿತ್ತು (ಕೃಹು. ೪೬೬). ೨. ಒಂದು ಬಗೆಯ ಲೋಹ ; ಹಿತ್ತಾಳೆ. ಪೀತಳ : ೧. ಬರೆವುದಂತೆ ಕರ್ಣಿಕೆಯಂ ಪೀತಳಸಿತರುಧಿ (ಶಾಶಾಸ್ತ್ರ. ೪-೦೬-೦೪). [ಸಂ.]

**ಪೀತವಸನ** (ನಾ). ೧. ಪೀತಾಂಬರ ; ಪಟ್ಟೆವಸ್ತ್ರ : ಉಟ್ಟು ಮಲ್ಲಿಗಚ್ಚೆಯ ಪೀತವಸನವಂ, ಶಿರಾಗುತಿರೆ ಚಿತ್ರಾಂಗಿ, ಕಾನನದ ರಾಣಿ ತಾನೆಂಬವೊಲ್ (ಚಿತ್ರಾಂಗ. ೩-೬೪). ೨. ಪೀತಾಂಬರವನ್ನುಟ್ಟವನು; ಪೀತಾಂಬರಧಾರಿ: ಪೀತವಸನಂ . . . ಉಪೇಂದ್ರಂ ದುರ್ಜಯಂ ರಾಮಚಂದ್ರನ ಪಿಂದಂ ನಡೆತಂದನಾಯತಸಿತಾಂಭೋಜೇಕ್ಷಣಂ ಲಕ್ಷ್ಮಣಂ (ಕಂಕಾಖು. ೬-೬೬). [ಸಂ.]

**ಪೀತವಾಸ** (ನಾ). ೧. ಹಳದಿಯ ರೇಷ್ಮೆಬಟ್ಟೆ ; ಪೀತಾಂಬರ. ೨. ಪೀತಾಂಬರಧಾರಿ ; ವಿಷ್ಣು : "ವಿಷ್ಣುಃ . . . ಪೀತವಾಸಾಃ . . . ಗದಾಧರಃ — ಈ ೪೫ ನಾರಾಯಣನ ಪೆಸರ್" (ಕರಾಘು. ೩-೨೨); ಪೀತವಾಸಃ ಕೃಷ್ಣನಾಗಿ ಕಿರಾತನೆಚ್ಚ ನಿಶಾತಶರನಿರ್ಘಾತಪಾತದಿ ಮಡಿದನಲ್ಲಾ ಭೂತಳಾಗ್ರದೊಳು (ಬಸವ. ೫೪-೩೯) ; ಧೃತ ಕೌಸ್ತುಭೋದ್ಭಾಸನಂ ಪೀತವಾಸನಂ ನುತಸಮಸ್ತಾಭರಣನಂ ಪುಣ್ಯಚರಣನಂ ಕಲಿಸುಧನ್ವಂ ಕಂಡನು (ಕೃಷ್ಣಾ. ೦೩-೨೬). [ಸಂ. ಪೀತವಾಸಸ್]

**ಪೀತಸಾರ** (ನಾ). ೧. ಹೊನ್ನೆಮರ : "ಪೀತಸಾ(ಲ)ರಃ, ಅಸನಃ — ಈ ೨ ಹೊನ್ನೆ" (ಕರಾಘು. ೩೩-೯೬). ೨. = ಪೀತಗಂಧ. ೩. ಗೋಮೇದಕ. [ಸಂ.]

**ಪೀತಸಾಲ** (ನಾ). = ಪೀತಸಾರ ೧ : "ಪೀತಸಾ(ಲ)ರಃ, ಅಸನಃ — ಈ ೨ ಹೊನ್ನೆ" (ಕರಾಘು. ೩೩-೯೬). [ಸಂ.]

**ಪೀತಸಾಲಕ** (ನಾ). = ಪೀತಸಾರ ೧ : "ಪೀತಸಾಲಕಃ, ಸರ್ಜಕಃ . . . ಜೀವಕಃ — ೬ ಹೊನ್ನೇಮರದ ಹೆಸರುಗಳು" (ಸಿದ್ಧಾಂತಿ. ೦೨೨). [ಸಂ.]

**ಪೀತಳ** 'ಪೀತಲ' ನೋ.

**ಪೀತಾಂಬರ** (ನಾ). ೧. ಹಳದಿಬಣ್ಣದ ಬಟ್ಟೆ. ೨. ಪಟ್ಟೆವಸ್ತ್ರ : ರೇಷ್ಮೆಯ ಬಟ್ಟೆ : ನವನೀಲೋತ್ಪಲಸನ್ನಿಭಾಂಗರುಚಿಯಿಂ ಸತ್ಕಾಂತಿ ರಾತೋದ್ಗಮಚ್ಛವಿಪೀತಾಂಬರಕಾಂತಿಯಿಂ . . . ಚೆಲ್ವಾದನಮ್ಭೋದರಂ (ಜಗಂ. ೦-೪೪); ಕಂಸಾಂತಕಂ . . . ಜಗುಳ್ದ ಪೀತಾಂಬರವನು ಅಂಸದೊಳ್ ಸಾರ್ಚುತ್ತೆ ವರೂಥವನೇರಿದು . . . ಐತಂದನು (ಕೃಷ್ಣಾ. ೦೪-೨೩). ೩. (ಬೆಲೆ ಬಾಳುವ) ರೇಷ್ಮೆಯ ಸೀರೆ : ಬಣ್ಣಬಣ್ಣದ ಪಟ್ಟುವಸ್ತ್ರ ಪೀತಾಂಬರಗಳೂ, ಕುದುರೆ ಒಂಟೆ ಆನೆಗಳ ಮೇಲೆ ಹೇರಿ ಹೇರಿ ಬಂದುವು (ಕಾಂತರಾ. ೦೦೦). ೪. (ಹಳದಿಯ) ಪಟ್ಟೆವಸ್ತ್ರವನ್ನು ಧರಿಸಿದವನು ; ವಿಷ್ಣು : "ಶ್ರೀವತ್ಸಂ . . . ಪೀತಾಂಬರಂ ಚಕ್ರಭೃದ್ಗೋವಿಂದಂ" (ವಸ್ತುಕೋ. ೪-೨೨) ; ಸ್ಫುರಿತೋದ್ಯತ್ಕನಕಪ್ರಭಾಪ್ರಸರದಿಂ ಪೀತಾಂಬರಂ ಪದ್ಮವಿಷ್ಟರದಿಂ ಪಂಕಜವಿಷ್ಟರಂ ನತವಿನೇಯವ್ರಾತಚೇತಸ್ಸಮೋಹರನಾಗಿ ದುರ್ದರಂ ಹರಂ ಭವಹರಂ (ಅಂಕ್ಷು. ೦೬-೬) ; ಮಧುರಾಪುರದ ಪೊಚವೊಟಲೊಳ್ ಪೀತಾಂಬರನಿರ್ದಂ (ಜಗಂ. ೯-೨೬). ೫. [ಜೈನ] ವಾಸುದೇವ : ಪರಾಭವಿಸಿದಂ . . . ಸುರೇಂದ್ರಧನು ಮೂಡಿದಂಬರ ಮನಂದು ಪೀತಾಂಬರಂ (ಕಂಕಾಖು. ೫-೦೦೦). [ಸಂ.]

**ಪೀತಾಂಬರಧರ** (ನಾ). = ಪೀತಾಂಬರ ೪ : ಪೀತಾಂಬರಧರನಂ ಪುರುಹೂತ ಶಿಲೀಮುಖನಿಕಾಯಮೊಜಗಿದುದು (ಜಗಂ. ೦೩-೪೦). [ಸಂ.]

**ಪೀತಾಂಬ್ರ** (ನಾ). = ಪೀತಾಂಬರ ೩ : ಪೀತಾಂಬ್ರ ೧೯ಕ್ಕೆ, ತಟ್ಟು ಸೆಬುಗು ಲತೆ ಹೂಗಳು ಸಹಾ ತೂಂಕ ೧೯೯ಕ್ಕೆ ವಿವರ (ಶಾಸನ. IX-ii, ೫೪೬-೩ : 1682). [ < ಪೀತಾಂಬರ ]

**ಪೀತಾಂಶುಕ** (ನಾ). ೧.=ಪೀತಾಂಬರ ೪. ೨. ಹೊಂಬಣ್ಣದ ಕಿರಣಗಳುಳ್ಳವನು; ಅಗ್ನಿ. ೧, ೨: ದಂತವಕ್ತ್ರಂ ನಿಸರ್ಗವೈರದಿಂದ ಸಂರಬ್ಧರಿಯು ಪೆಸರ್ಗಳೆ ತನಗಸಹ್ಯಂಗಳಾಗೆ ಹರಿನಾವಾಯಾಂಕ್ತನೆಂದು ಶಕ್ರಶಾಸ್ತ್ರವಿಸಿಯುಂ ಪೀತಾಂಶುಕನೆಂದು ಪಾಪಕನಂ ಮೂಮೀದಿವಡಿಸಿಯುಂ . . . ಕಾಳಿಯಸರ್ಪದರ್ಪದಳನನದಿರದಿದಿರೊಳ್ ಕಂಡು (ಜಗಂ. ೯-೫೩ ವ). [ಸಂ.]

**ಪೀತೆ** (ನಾ). ೧. ಅರಿಸಿನ: "ಪೀತಾಭಿಖ್ಯಂ ಹಂದ್ರ" (ಶಬ್ದಮಣಿ. ೩೬-೨೫). ೨. ಒಂದು ಬಗೆಯ ಗಿಡ; ಹಳದಿಗೋರಂಟೆ: "ಪೀತಾ, ಸಹಚರೀ—ಈ ೨ ಹೊಂಬಣ್ಣದ ಗೋರಂಟೆ" (ಹಲಾಯು. ೩೪-೫೨). [ಸಂ. ಪೀತಾ]

**ಪೀನ** (ಗು). ೧. ದಪ್ಪವಾದ; ಪುಷ್ಟವಾದ; ಸ್ಥೂಲವಾದ: ಉತ್ತುಂಗಪೀನನಿಜಾಂಸಾರ್ಪಿತಲಂಬಹಾರನವನಾ ಪಾಂಡ್ಯ (ಶಂಕರಾ. ೩-೫೪); ಆ ನೃಪವೀರನುರಸ್ಥಳಕ್ಕೆ ಲಕ್ಷ್ಮೀವಧು ಪೀನಬಾಹುಯುಗಳಕ್ಕೆ ಜಯಾಂಗನೆ ತನ್ಮುಖಕ್ಕೆ ವಾಕ್‌ಶ್ರೀವಧುವಾಗಿ ರಂಜಿಸಿ ಮಹೋನ್ನತಿಯು ಪಡೆದುದ್ಧ ಕೀರ್ತಿಲೀಲಾವತಿಯೆಂದು ಬಣ್ಣಿಪುದು ಲಚ್ಚಲದೇವಿಯಾನೀ ಜಗಜ್ಜನ (ಎಕ. XIII, ೧೨೧-೨೩; 1066); ಈ ಸುದೃಢಪೀನಪಯೋಧರಂಗಳ್ಗೀ ತೆಱನ ಕಂಪನವೇತರ್ಕಾಯ್ತು? (ಲಾಟಾಪ್ಕ. ೦೯-೩೦). ೨. ದೊಡ್ಡ; ಘನವಾದ; ಮಹತ್ತಾದ: ಶಿವದಾಸಿಯರು ವಕ್ಷ್ಯವದಂಗೆ ನೇಮಿಸಲು . . . ಕರೆದು ತಂದನು ಪೀನ[ಪಾಠಾಂ. ದಾನಿ]ಶಿವಶರಣವ್ರಜವನನುಮಾನಿಸದೆ ಗಂಗೆಯನು ಭಗಿರಥ ಕೊಂಡು ಬಂದಂತೆ (ಶಿವೆರಾ. ೬-೨೪). (ನಾ). ೩. ದೊಡ್ಡದು; ಸ್ಥೂಲವಾದುದು: "ಬಹುಳಃ, ಸ್ಥೂಳಃ, ಪೀನಃ, ಪೀವಾ, ಪೀವರಃ—ಈ ೫ ದೊಡ್ಡ(ತು)" (ಹಲಾಯು. ೫೬-೦೯೬); ಆ ನಗಚರಯುಗವಾಲ್ಕೆಯುಮಾ ನಗದೊಳೆ ಕಲ್ಲೊಳಿರ್ದ ಸಲಿಲನಿಮಿತ್ತಂ ಪೀನಂಗಳ್ ಕಾದಲ್ ಸಲೆ ಕೀನಾಶನಿವಾಸಮೆಯ್ದಿಕೊಂದಾಕ್ಷಣದೊಳ್ (ಕೀಟಾಕ್ಷ. ೩-೩೪). ೪. ದಪ್ಪವಾಗಿರುವವನು; ಸ್ಥೂಲಕಾಯ: "ಪೀವರನೆನಲ್ ಸ್ಥೂಲನೆನೆ ಬಹುಲನೆನೆ(ಪೀನನೆನೆ) ದೊಡ್ಡಿತಪ್ಪವನೆನಿಕ್ಕುಂ" (ಶುಂಗಣಾ. ೩೯-೧೧). [ಸಂ.]

**ಪೀನಂ** (ಅ). ಅಧಿಕವಾಗಿ; ವಿಶೇಷವಾಗಿ: ಹೆಚ್ಚಾಗಿ: ಪೀನಂ ಲಲಾಟಾಗ್ರದೊಳ್ ನೆಲೆಗೊಂಡೊಪ್ಪುವ ವೀರಪಟ್ಟಪಾದಯಾಂಗೆಯ್ವಂದುಪಂ . . . ಗೆಲೆ ಪೋಲ್ತುತ್ತು ತಳಪ್ರಹಾರಿಯ ಶಿರಂ ಹೇಮಾದ್ರಿಯಾಕಾರಮಂ (ಕಾವ್ಯಸಾ. ೫೨೫ ಪೂರ್ವಪ್ರ); ಅಲಸದೆ ಪೀನಂ ಪದೆಯದೆ ಪಾಂಗಱಿದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇಟ್ವುದು (ಕರ್ಣಾ. ೦-೯೯); ಲಯಮಂ ಕರ್ಮತಮಸ್ತಮಕ್ಕೆ ಜಯಮಂ ಧರ್ಮಕ್ಕೆ ಪೀನಂ ಪರಾಜಯಮಂ ದೋಷಗಣಕ್ಕೆ ಲಕ್ಷ್ಮಿತಿಜದಿಂ ಮುಂ ಮಾಡಿ ಸರ್ವಾರ್ಥಸಿದ್ಧಿಯನೀಯಲ್ಕೆ . . . ಬಗೆದಂ ಸಂಸಾರಸಾರೋತ್ತಯಂ (ಆದಿಪು. ೬-೦೦೯); ಮಾನಸದ ಸಲ್ಮೆಯಾಗಂ ಮಾನಸರ್ಗಪವರ್ಗಸುಖಮನದಱೀವ ಗುಣಂ ಪೀನಂ ಪೆರ್ಚುಗುಮಮಲ ಗುಣಾನೀಕವಿಭೂಷರೊಳ್ ಸಮಾಗಮದಿಂದಂ (ಶೀಶಿಖಂ. II. ೩೦೯). [<ಪೀನ]

**ಪೀನಕ್ಷು** (ನಾ). ೧. ಡೊಳ್ಳುಹೊಟ್ಟೆ. ೨. ದೊಡ್ಡಹೊಟ್ಟೆಯವನು; ಮಹೋದರ: ಪೀನಕ್ಷು . . . ತಾನಿಂಗಿತಜ್ಞನುಂ ವಿಜ್ಞಾನಹಿತಂ ಶೌಚ . . . ಪೀಠವರ್ಧನನೆನಿಕುಂ (ಪುಕಿ. ೧೧-೪೦). [ಸಂ.]

**ಪೀನಸ** (ನಾ). ೧. ಶೀತಬಾಧೆ; ನೆಗಡಿ: "ಪೀನಸಮೆನೆ ನೆಗಡಿ ತಾಂ ಪ್ರತಿಶ್ಯಾಯಂ" (ಶಬ್ದಮಣಿ. ೬೩-೩೫); ನಲ್ಲಲರ ಕಂಪು ಪೀನಸದಲ್ಪೊಂದಿದವಂಗೆ ಸೊಗಸದಿರೆ ಕಟ್ಟುವುದೇ (ಅಭ್ಯಟ. ೧-೦೬); ಗಂಧಕ, ಹುಲಿಯುಗುರು . . . ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೆಯ್ಯೆ ಪೀನಸ ಮಾಣ್ಗುಂ (ಅಶ್ವಶಾ. ೬೮); ಬೆಂಡಿಕೆಯ ಕೊಯ್ದಡಾ ಶಿರಬೇನೆ ಬಡಿವುದೆ ಪೀನಸದ ವ್ಯಾಧಿ ಮೂಗಿಂದಡೂ ಬಡಿವುದೆ (ಜೈಮಿ. ೦೩-೨೮). ೨. ಮೂಗು ಕೊಳೆತು ಹೋಗುವ ಒಂದು ಬಗೆಯ ರೋಗ: ಹೂವುಗಳನ್ನು ಮೂಗಿಗೆ ತುಂಬಾ ಹತ್ತಿರದಲ್ಲಿಟ್ಟುಕೊಂಡು ಮೂಸಿ ನೋಡಿದರೆ ಪೀನಸ ಬರುತ್ತದೆಂದು ಹೇಳುತ್ತಾರೆ (ಜಾನಪದ). [ಸಂ.]

**ಪೀನಸರೋಗ** (ನಾ). =ಪೀನಸ ೨: ಪ್ರೀತಿಭೇದಗಳು ಮಾತು ತಪ್ಪಿದವಗೆ ಪೀನಸರೋಗ (ಕಷಕ. ೦೯೨-೨); ಪೀನಸರೋಗದವರು . . . ವಿಷದ ರೋಗದವರು ಇವರಿಷ್ಟೂ ವಮನಯೋಗ್ಯರೆಂದರಿವುದು (ಕಳವೈ. ೨೫). [ಸಂ.]

**ಪೀನಸಿ** (ನಾ). ೧. ನೆಗಡಿ ಬಂದವನು: ಗಂಧಕ ಪೀನಸಿಯು ಸಂಪದವನೊಂದಿಸಿ ರಸದ ಬಳಿಕೆಗೆ ಹವಳದಿಂದವೆ ಕಾಷ್ಠಜಿಹ್ವೆಯು ತೆರನನನುವಿಡಿದು (ಗಗಕಾ. ೦೬-೦೦). ೨. ಪೀನಸರೋಗದಿಂದ ಬಳಲುವವನು. [ಸಂ. ಪೀನಸಿನ್]

**ಪೀನಾರಿ**[1], ಪೇನಾರಿ (ನಾ). ಒಂದು ಬಗೆಯ ಮರ: ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೋಡಕನ ಮರ, ಭೂತಾಳ (ವೃಕಿಗ. ೬೨-೦೯೬೨). **ಪೇನಾರಿ**: ಪೇನಾರಿಮರ . . . ತೊಕಡಕನ ಮರ, ಭೂತಾಳ (ವೃಕಿಗ. ೬೨-೦೯೬೨). [ದೇ.॥ ತಮಿ. ಪೀನಾಱಿ; ಮಲ. ತುಳು. ಪೀನಾರಿ]

**ಪೀನಾರಿ**[2] (ನಾ). ಜಿಪುಣ; ಜೀನ; ಕೃಪಣ: ಸನ್ನ ಭಾವ ಆಸೆಯ ಪೀನಾರಿಯಲ್ಲ. ಅವನು ಮಡಕೇರಿಯಲ್ಲಿ ದೊರೆಯುವ ಕಳ್ಳನ್ನೆಲ್ಲ ತಂದು ಗುಡಾಣಗಳಲ್ಲಿ ತುಂಬಿಸಿಟ್ಟಿದ್ದಾನೆ (ಹುಂಡಾ. ೨೨೫). 'ಪಿಸನಾರಿ' ಪಠಾ. [←ತುಳು. ಪೀನಾರಿ]

**ಪೀನಾಶಿ, ಪಿನಾಶಿ, ಪಿನಾಸಿ** (ನಾ). ಮೂಗಂ ಕೊಳೆತು ಹೋಗುವ ಒಂದು ಬಗೆಯ ರೋಗ: ಪೂಜೆಗೈಯುವ ಪುಷ್ಪಗಳನು ಸೋಜಿಗದಿ ತಾ ಮೂಸಿ ನೋಡಿದ ಮೂಜಗದಿ ಪೀನಾಶಿಪೊಂದುವನು (ಶಾಸಂಗ. ೨೦). **ಪಿನಾಶಿ**: ವಾಸನೆಯುಳ್ಳ ಹೂವುಗಳನ್ನು ಮೂಸಬೇಡ. ಪಿನಾಶಿ ಬರುತ್ತದೆ (ಜಾನ). **ಪಿನಾಸಿ**: ಪೀನಸ ಎಂಬುದನ್ನೇ ಕೆಲವರು ಪಿನಾಸಿ ಎಂದು ಹೇಳುತ್ತಾರೆ (ಜಾನ). [<ಪೀನಸ]

**ಪೀನಾಸಿ** (ನಾ). ೧. ದುರಾಸೆಯುಳ್ಳ ವ್ಯಕ್ತಿ: ಏನೇನ ತಂದರು ಸಾಲದೆ ಮಗಳೊಳು ಪೀನಾಸಿಯರಗೊಡಲೆಂದು ಆನೆಯ ಮುಂದಕೆ ಮಾದಿಸೂಳೆಯ ನೆತ್ತಿ ತಾನಿಟ್ಟು ಸುಖದೊಳಗಿಹನು (ಜ್ಯೋಕಥ. ೦೯-೫೬). ೨. ಅತಿಯಾಗಿ ಕಾಡುವ ವ್ಯಕ್ತಿ: ಆ ಪೀನಾಸಿ ತನಗೆ ಬರಬೇಕಾದ ಹಣ ವಸೂಲು ಮಾಡುವುದರಲ್ಲಿ ತುಂಬಾ ಗಟ್ಟಿಗ (ಜಾನ). 'ಪೀನಾರಿ[2]' ಪಠಾ. [?]

**ಪೀನೋದರ** (ನಾ). ೧. ದೊಡ್ಡ ಹೊಟ್ಟೆ; ಡೊಳ್ಳುಹೊಟ್ಟೆ. ೨. ದೊಡ್ಡ ಹೊಟ್ಟೆಯುಳ್ಳವನು; ಡೊಳ್ಳುಹೊಟ್ಟೆಯವನು: ದ್ರುತಯಾನೋತ್ಕಂಪಿಪೀನೋದರನವನಿಪನೊಡ್ಡೋಲಗಕ್ಕೆಯ್ದೆ ವಂದು ಪ್ರತಿಹಾರಂ (ಕಂಪ್ರಕ. ೨-೬೪); ಚಂಚತ್ಕುಂಡಲಮಂಡಿತಂ ಗತಿಚಲಶ್ರೀನೋದರಂ ದೀರ್ಘದೇಹಂ . . . ಬಂದು ಪ್ರತೀಹಾರಕಂ (ರಾಜಶೇ. ೫-೨೩). [ಸಂ.]

**ಪೀನೋಧ್ನಿ** (ನಾ). ದೊಡ್ಡ ಕೆಚ್ಚಲುಳ್ಳ ಹಸು,-ಆಕಳು: "ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು" (ಹಲಾಯು. ೪೫-೧೦೦). [ಸಂ. ಪೀನೋಧ್ನೀ]

**ಪೀಪ, ಪೀಪಾಯಿ, ಪೀಪು, ಪೀಪೆ** (ನಾ). ಮದ್ಯ, ಎಣ್ಣೆ ಮೊದಲಾದ ದ್ರವಪದಾರ್ಥಗಳನ್ನು ತುಂಬಿಡಲು ಬಳಸುವ, ಮರ ಅಥವಾ ಲೋಹದಿಂದ ಮಾಡಿದ ದೊಡ್ಡ ಆಕಾರದ ಸಾಧನ; ಡ್ರಮ್ಮು: ಹೇಸರಗತ್ತೆಯ ಮೇಲೆ ಬಂಗಿಯ ಹೇರು ಸಾಸಿರ ಗಂಗಸಾರಗಳ ಸೂಸುವ ಸಾರಾಯಿಯ ಪೀಪಗಳ ಲೆಕ್ಕವಿಲ್ಲದು ಪೇಳ್ವರಾರದನು (ಕಂಪಾ. ೦೦-೩೮); ಕೆಲಕೆಲವದರ ಬೆಲೆಯು ಸಹ ಪೀಪಗಳ ಮೇಲೆ ಇಲ್ಲವೆ ಪೆಟ್ಟಿಗೆಗಳ ಮೇಲೆ

ಇರುತ್ತದೆ (ಮಯೂರ. ೨೩೩). **ಪೀಪಾಯಿ** : ಒಂದು ದೊಡ್ಡ ಪೀಪಾಯಿಯೊಳಗೆ . . . ನೀರು . . . ತುಂಬುತ್ತಾರೆ (ಮುಂಜಾವು. ೪-೩೩); ಒಂದೊಂದು ಅಲೆಯೂ ಇವಳನ್ನು ಪೀಪಾಯಿಯಂತೆ ಎತ್ತಿ ಹಾಕುತ್ತಿದ್ದಿತು (ಚಕಚೂ. ೩೪೪). **ಪೀಪು** : ನೀರು ತುಂಬಿದ್ದೊಂದು ಪೀಪಿನೊಳಗೆ ಇಳಿದು ಕೊಡ್ರಲಾಗಿ (ಮುಂಜಾವು. ೩-೬೬). **ಪೀಪೆ** : ಭೋಜನಸಮಾರಂಭವು ಮುಗಿಯಿತು. ಬೆಲೆಯುಳ್ಳ ಸಾರಾಯಿಗಳ ಪೀಪೆಗಳು ಹಾರಿ ಹೋದವು (ಕೀಚಕ. ೩೬). [ ← ಹಿಂ. ಪೀಪಾ; ಮರಾ. ಪೀಪ / ಪೋರ್ಚು. pipa ]

**ಪೀಪರಿ** (ನಾ). = ಪೀಪಿ ೧ : ನಿನ್ನೆ ಸಂಜೆ ನಿನ್ನ ಒಟಿ ಪೀಪರಿ ಸಮನಾಗಿ ಕೇಳಿಸುತ್ತಿತ್ತು ನನಗೆ (ಸ್ವಕೃಷ್ಣ. ೦೪). [ < ಪೀಪಿ ]

**ಪೀಪಾಯಿ** ‘ಪೀಪ’ ನೋ.

**ಪೀಪಿ** (ನಾ). ೧. ಪೀ ಪೀ ಎಂದು ಶಬ್ದ ಹೊರಡಿಸುವ, ಸೀಟಿಯಂತೆ ಊದುವ ಒಂದು ಸಾಧನ : ನಾರಾಯಣಸ್ವಾಮಿ ಆ ಕೊಳಲನ್ನು ಕೈಯಲ್ಲಿ ತೆಗೆದುಕೊಂಡು ಪರೀಕ್ಷೆ ಮಾಡುತ್ತ “ಇದು ಏನು ? ಪೀಪಿ ಅಲ್ಲವೇ ?” ಎಂದು ಕೇಳಿದ (ಇಂಕು. ೦೦೪). ೨. ನಾಗಸ್ವರ, ಶಹನಾಯಿ ಮುಂತಾದ ಊದುವ ವಾದ್ಯಗಳ ತುದಿಯಲ್ಲಿ, ನಾದವನ್ನು ಹೊಮ್ಮಿಸಲು ಸಿಕ್ಕಿಸುವ ಎರಡು ಚಪ್ಪಟೆಯಾದ ಬಿದಿರಿನ ಪಟ್ಟಿಗಳು : ಈ ವಾದ್ಯ ಸುಮಾರು ಎರಡು ಅಡಿಗಳಿಂದ ಎರಡೂವರೆ ಅಡಿಗಳ ಉದ್ದವಿದ್ದು ...ಚೂಪು ಕೊನೆಯಲ್ಲಿ ಈ ವಾದ್ಯಕ್ಕೆ ಪೀಪಿ (reed) ಸೇರಿಸಿರುತ್ತದೆ (ಸಂಗೀತಸಂ. ೦೦೬). ೩. ಬಾಳೆ ಎಲೆ, ತೆಂಗಿನ ಗರಿಗಳನ್ನು ಸುತ್ತಿ, ನಾದ ಹೊಮ್ಮುವಂತೆ ಮಾಡಿದ ಸಂರಚನೆ : ನಸ್ಯದ ಡಬ್ಬಿ, ಬಾಳೆಎಲೆ ಪೀಪಿ ಇವುಗಳಿಂದ . . . ಆಳುವ ಮಕ್ಕಳನ್ನು ಸಮಾಧಾನ ಪಡಿಸುವ ಕೆಲಸ ಇವರ ಮೇಲೆ ಬಿದ್ದಿರುತ್ತ (ಸಾವಿಗೇ. ೦೩೬). ೪. (ಆಲಂ) ಗಂಟಲು : ಆ ಸಂಗೀತಗಾರನ ಪೀಪಿ ಕುಗ್ಗಿಹೋಗಿದೆ (ಲೋಕ). [ ← ತುಳು. ಪೀಪಿ./ಹಿಂ. ಪೀಪಿಯಾ ]

**ಪೀಪು** ‘ಪೀಪ’ ನೋ.

**ಪೀಪೆ** ‘ಪೀಪ’ ನೋ.

**ಪೀಯೂಷ** (ನಾ). ೧. ಅಮೃತ ; ಸುಧೆ : “ಅಮೃತಂ, ತ್ರಿದಶಾಹಾರಃ, ಸುಧಾ, ಪೀಯೂಷಂ—ಈ ೪ ಅಮರ್ದಿನ ಪೆಸರ್” (ಬಲಾಯು. ೨೨-೦೩೩); ಆ ತ್ರಿದಶಜಯಮಹೀಭುಜಂ . . . ಮುಕ್ತ್ಯಂಗನಾಭುಜಪಾಶಕ್ಕೊಳಗಾಗಿ ಪೀರ್ದನೊಲವಿಂ ತನ್ನಕೃಪೀಯೂಷಮಂ (ಶಂಖಪ್ರ. ೦೦ ೬೨); ಶಿವಕಥಾಪೀಯೂಷಮಂ ಕರ್ಣದಿಂ ಸವಿಮೃತ್ತಂ . . . ಪಡೂವಲ್ಲಭರ್ದಿರ್ದ ರುತ್ತವಯುತರ್ (ರಾಜಶೇ. ೪-೬); ಮಾಯಿಸಿದರಮನಂ ದಿವ್ಯೋಧುನಿಯ ಪೀಯೂಷತೀರ್ಥದಿಂ (ಶ್ರೀಣವಪು. ೦೬-೪೩೦). ೨. ಹಾಲು ; ಕ್ಷೀರ : ಜಗಮೆಲ್ಲಂ ... ಪೀಯೂಷದ ತಣಿದುದೊ ಬೆಳ್ದಿಂಗಳೊಳ್ ಸಂದುದೋ ಸಂದೆಗಮೇನೆಂಬಂತದೇಂ ಪರ್ಮುದೊ ನೃಪನಿಸ್ಪೂರ್ತಿಕೀರ್ತಿಪ್ರತಾನಂ (ಶಕ್ತಪ್ರ. ೩-೦೪) ; ಭೈರವಾಂಕ . . . ಪೀಯೂಷದಲ್ಲೇಶಗಭಿಷೇಕವೆಚಿದ (ಕೃಕವೀ. ೪-೩೩). ೩. ಕರು ಹಾಕಿದ ಏಳು ದಿವಸಗಳೊಳಗಿನ ಆಕಳ ಹಾಲು ; ಗಿಣ್ಣುಹಾಲು : “ ಪೀಯೂಷಃ, ಅಭಿನವಪಯಃ—ಈದ ೭ ದಿನಗಳ ಒಳಗಾಗಿ ಹಸುವಿನ ಗಿಣ್ಣುಹಾಲು ” (ಸಿಷ್ಯಾಂ. ೨೪೦). [ ಸಂ. ]

**ಪೀಯೂಷಪಿಂಡ** (ನಾ). ಒಂದು ಬಗೆಯ ಭಕ್ಷ್ಯ ; ಹಾಲುಂಡೆ : “ ಪೀಯೂಷಪಿಂಡ[ಕಾಶಾಂ.ಪಿಷ್ಟ]ಮೆನೆ ಹಾಲುಂಡೆಯೆನಿಸಿಕ್ಕು ” (ಮಂಗರಾ. ೬೪-೨). [ ಸಂ. ]

**ಪೀಯೂಷಹಸ್ತ** (ನಾ). ಅಮೃತಕಿರಣ ; ಚಂದ್ರ : ಈ ದೈತ್ಯಶತ್ರು ಮಹೀಭೃನ್ಮುತ್ತರ್ನಕುವಲಯಕ್ಕಾ ತನ್ನ ಪೀಯೂಷಹಸ್ತಮೆ ತಾನಾಶ್ರಯಮೆಂದೊಡೇವೊಗಟ್ಟುದೋ ಶ್ರೀವೀರಬಲ್ಲಾಳನಂ (ಜಾಕವಂ. ೦೬೪-೪೪೬ ; 1188). [ಸಂ.]

**ಪೀರ್**, **ಪೀರಂ**$_1$, **ಹೀರ್**$^1$, **ಹೀರು**$_1$ (ಕ್ರಿ). ೧. ಹಾಲು, ನೀರು ಮೊದಲಾದ ದ್ರವಪದಾರ್ಥಗಳನ್ನು (ಬಾಯಿಯಿಂದ) ಸೇದಿಕೊಳ್ಳು,—ಎಳೆದುಕೊಳ್ಳು : ಪೀರೆ ತವಮುಣ್ಣುವ ಸೌರಭವೆಂದು ಪೀರ್ದು ಪೀರ್ದಪಚಲದೇಂ ತೆಱಂದಿರಿಮ ವಾಯ್ದುವೊ ಕೇತಕಿಯೊಳ್ ಮದಾಳಿಗಳ್ (ಆದಿಪು. ೧೦-೦೦೬); ರಕ್ತವರ್ಣದಿಂ ಕೂಡಿದ ಕಣ್ಗಳಿಂ ಶುಕನಿನಾದದ ಜೀವವುನೆಯ್ದೆ ಪೀರ್ವವೊಲ್ . . . ನೊಡಿದನಾ ಜರತ್ಕಬರನಾಯಕಂ (ಕಾದಂಪೂ. ೦೬೬); ಹಜ್ಜೆಗಟ್ಟಲೆಯಂ ತವೆ ಪೀರುತುಂ . . . ಬಂದಾಪಯಾದ್ರಿಯಸರ್ಪನೇಱದಂ (ಕಾಸುಕಥಾ. ೦೪-೨೦). ೨. ಆಸ್ವಾದಿಸು; ಚಪ್ಪರಿಸು ಸವಿ : ಪಾಲ್ಗೊರೆದ ನುಣ್ಚರಲಂ ಪೊಲೆಗಿತ್ತು ಪೀರ್ದು ಕಣ್ಣೆಱಿಯದ ಕಂದನಂದೆಸಗೆ ಕಣ್ಣೆಱಿಯುಪ್ಪನೊ ಮಂದಹಾಸಮಂ (ಅರ್ಜುನ. ೦-೦೦೦) ; ಪಥಿಕನೊರ್ವ ತರುಣಿಯ ಲಾವಣ್ಯರಸಮನಕ್ಷಿಗಳಿಂದಂ ಬರೆ ಪೀರ್ದು ದಣಿದು ಬಟ್ಟೆಯ ಪರಿಶ್ರಮನ್ನಥಯನಱಿಯದಿರ್ದಂ ಸುಖದೊಳ್ (ಗಂಳ. ೨-೨೩) ; ಪೊಸಗಂಪೇಱದ ಬೀಬಫಲವ ಗಿಳಿ ಮಸಗಿ ಸುತಸದಿ ಪೀರ್ವಂತೆ (ಶಂಖ. ೦೦-೪೦). ೩. ಕುಡಿ ; ಈಂಟು : ಜಿಗುಟಿಯಂತೆ ನೆತ್ತರನೆ ಪೀರ್ವ ಡಾಕಿನಿಯಿಂ . . . ರಣದೇವತೆಯು ರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೪ ಕೂಪ್ರಳ); ಯುವರಾಜನ ನೆತ್ತರಂ ಕುರುಧ್ವಜನಿಯೆ ನೋಡೆ ಪೀರ್ದು (ಶಂಕಪ. ೬-೩೨) ; ಹಂಸನಂತು ಪಾಲುಂ ನೀರುಂವೆರಸಿದಲ್ಲಿ ನೀರಿರೆ ಪಾಲನೆ ಪೀರ್ಗುಂ (ಕಾಪ್ಯಂಪ್ರ. ೬). **ಪೀರು**$_1$ : ೧. ನೀರಧಿಯ ಪೀರುವವೊಲ್ಪತಪ್ಪ ಮಾರುತಿಯ ನಿಟ್ಟಸುತ ನಕ್ರಕೂರ್ಮಂಗಳೆಲ್ಲ ತೋರಭಯದಿಂದೊಂದನೊಂದೊರಸಿ ಏತಳವಂ ಸಾರುತಿರಲು (ಪಂಪಾರಾ. ೩-೦-೨೬). ೩. ಅಂಬುಹಾರಗಳನೊಂದೆ ಗುಟುಕಿನೊಳ್ಪೀರಬೇಕು (ಶತುಪ್ರ. ೪-೦೩-೨೦). **ಹೀರ್**$^1$ : ೨. “ಹೀರ್ (ಪೀರ್)— ರಸಾಸ್ವಾದನೇ, (ಭೂಷಣೇ ಚ)” (ಶಮಧಾ). **ಹೀರು**$_1$ : ೧. ತನ್ನನುದರದೊಳು ಗರ್ಭೀಕರಿಸಿಕೊಂಡಿರ್ದ ಮುನ್ನೀರನಾ ವಡಬಶಿಖಿ ಹೀರುವಂದದಿಂ . . . ಸನ್ನುತಗುಣಾಭರಣಭೂಷಿತಂಗಾ ದುಷ್ಟವಹನಸಂ ಕೇಡನೆನಿಸಿ (ಸವ್ಯಾಳ. ೦೦-೩೪) ; ಬಣ್ಣದ ಚಿಟ್ಟೆ ಪುಷ್ಪದಿಂ ಪುಷ್ಪಕ್ಕೆ ಹಾರಿ ಬಂಡನು ಹೀರಿ ಕಂಗೊಳಿಸುತಿರೆ (ಜನ್ನಂಗ. ೪-೬೪) ; ಹತ್ತಿನಾರು ತಕ್ಕ ಮಟ್ಟಿಗೆ ಬೇಗ ನೀರನ್ನು ಹೀರುತ್ತದೆ . . . ಬಣ್ಣಗಳನ್ನು ಚೆನ್ನಾಗಿ ಹೀರುತ್ತದೆ (ಗೃಹಾ. ೬೨). ೨. ಕರದಿ ತಣಿದಾದಿ ಹೋದುದಿಲ್ಲಿ ನೆರೆ ದಿಙುಹಗಳ ಹೀರಲೊಡದ ಹುತ್ತವಿದೆ (ಕೋಪುಪ. ೨-೩). ೩. ಘೋರ ಪಾತಕಿ ದುಃಶಾಸನನ ರಕುತವ ಹೀರಿ ಮುಗದಿ ಮಾರವೈರಿಯು ಭಜಿಸಿದ (ಕೃಕಂದ. ೦-೨೦೬-೨); ಮೊಲೆಯುಂಬಂದದಲಿ ಕೆನ್ನೆತ್ತರನು ಹಂಗಿ ಹೀರೆ... ಬಿಡಱಿ ಪೂತನಿ ಪೋಯ್ತಾದೃಶ್ಯದಲಿ (ಹಾಕ್ಯರಾ. ೨೦-೪೦); ಕಾಲಕೂಟವ; ವಿನ್ನ ತುಟಿಗೊತ್ತಿ ಕಾಲಂ, ಜುಣಾಗದಲೆ ಹೀರದಂ (ಗೀತಾ. ೩೩೨-೪೩).

ಹೀರಿ ಹಿಪ್ಪೆ ಮಾಡು, ಹೀರಿ ಹಿಪ್ಪೆಯ ಮಾಡು—ನಿಸ್ಸಾರಗೊಳಿಸು ; ಸತ್ತ್ವಹೀನವಾಗಿಸು : ಗೂಢಚಾರರು...ನಮ್ಮ ದೇಶದ ಸಾರವನ್ನು ಹೀರಿ ಹಿಪ್ಪೆ ಮಾಡುತ್ತಿರುವರು (ಪಿಶಾಚ. ೬೪) ; ಅರಿರಾಯರುಗಳೆಂಬ ನವಧಪಳೇಕ್ಷುದಂಡಮನು ತವಕದೆ ಹೀರಿ ಹಿಪ್ಪೆಯ ಮಾಡಿ (ಶಂಕಾ. ೨೨-೦೨); ಮಾಯೆಯೆಂಬ ರಕ್ಕಸಿ ಸಕಲಪ್ರಾಣಿಗಳ ಸಾರವ ಹೀರಿ ಹಿಪ್ಪೆಯ ಮಾಡಿ (ಅಂಪ್ರೀ. ೦೩-೨೦).

[ದೇ.॥ ತುಳು. ಹೀರು; ತೆಲು. ಪೀರುಚು, ಪೀರ್ಚು, ಪೀಲುಚು]

**ಪೀರಖಾನಿ** (ನಾ). ಪೂರ್ವಕಾಲದಲ್ಲಿ ಬಳಕೆಯಲ್ಲಿದ್ದ ಹದಿನಾರು ಬಗೆಯ ರೂಪಾಯಿಗಳಲ್ಲಿ ಒಂದು ಬಗೆ : ಸನ್ ೧೮೪೦ರ ವರೆಗೆ ಹದಿನಾರುಪ್ರಕಾರದ ರೂಪಾಯಿಗಳು ನಡಿಯುತ್ತಿದ್ದವು. ಅವು— ಔರಂಗಾಬಾದಿ...೧೫. ಗೋವಿಂದ ಬಕ್ಷಿ, ೧೬. ಪೀರಖಾನಿ (ಕಥಾಗ. ೨೪೦). [?]

**ಪೀರಿಯಡ್ಡು** (ನಾ). ಶಾಲೆ, ಕಾಲೇಜುಗಳ ದೈನಂದಿನ ಪಾಠಕ್ರಮಕ್ಕಾಗಿ ವಿಭಾಗಿಸಿಕೊಂಡ (ಮುಕ್ಕಾಲುಗಂಟೆ, ಒಂದು ಗಂಟೆ ಮುಂತಾಗಿ ಅಧಿಕಾರ ವರ್ಗದವರು ತಮ್ಮ ತಮ್ಮ ಅನುಕೂಲತೆಯ ಮೇರೆಗೆ ನಿಗದಿಪಡಿಸಿಕೊಂಡ) ಪಾಠಕಾಲ : ಬುದ್ಧಪೂರ್ವಕಾಲದ ವಿವರವನ್ನು ೨–೩ ಪೀರಿಯಡ್ಡುಗಳಲ್ಲಿ ಮುಗಿಸಿಬಿಡುವುದು ಘೋರವಾದ ದೋಷವೆನಿಸುತ್ತದೆ (ಅಶಕ್ರ. ೫). [ ←ಇಂ. period ]

**ಪೀರು₁** 'ಪೀರ್' ನೋ.

**ಪೀರು₂** 'ಪೀಱು₁' ನೋ.

**ಪೀರೆ, ಹೀರೆ₁** (ನಾ). ಒಂದು ಬಗೆಯ ತರಕಾರಿಬಳ್ಳಿ ಹಾಗೂ ಅದರ ಕಾಯಿ : "ಪೀರೆ ಜಾಲಿನಿ" (ಶಬ್ದಕೋ. ೩೬–೨೦) ; ನೆಲ್ಲಿಯ ಸುಟ್ಟು...ಪೊಸಪೀರೆಯ ಬಿತ್ತಿನೊಳಾದ ಬೂದಿಯಂ ನಿಲ್ಲದೆ ಬಾವಿಪೊಳ್ ಕಲಸಲಂಬ್ಬನ ಕೈವೆಯ ಕಾ(ಖಾ)ರನೂಜಿಲೊ(ದೊ)ಳ್ ಪೊಲ್ಲವಿಷಂಬ ಬಾವಿಗಳ ನೀರಮೃತೋಪಮಂದೊಂಗೆ (ಅಭಿಧಾ. ೦೦–೬೩). 'ಕಾಟ್ಪೀರೆ', 'ಕೈಪೀರೆ' ಪರಾ. **ಹೀರೆ₁** : ಆ ರಾಜಗೃಹಾಂಗಣದೊಳ್ ಹೀರೆಯ ಹೂವಿಂತೆ ಸಮೆದ ಪೊಸಪೂವಲಿಯೊಳ್ ಕಾಲಿಲ್ಲದೆಯುಂ ಒಱಿದುವು ನೇರಾಣಿಯ ಹೊನ್ನ ಮಟೆ³ (ಅಶಂಕು. ೪–೬೮) ; ಪೀರೆಯೆಳೆಗಾಯ ಕಾಯಿದಾಕ್ಷಣದಿ ತಂದದಱ ಧಾರೆಯಂ ಕೆತ್ತಿ ಸಂಬಳಿಸಿ (ಸೂಶಾಸ್ತ್ರ. ೫–೦) ; ಹೀರೆ ಸೌತೆ ಕೂಷ್ಮಾಂಡಗಳಗೂರಿ...ಸಂಭಾರಂಬೆರದುಪ್ಪಿನಕಾಯಿಗಳಿಡ ಮಾಡಿಗಳು (ಮಾಲೀಕು. ೨೬–೬). [ದೇ.॥ ತಮಿ. ಪೀರ್ಕ್ಕು. ಪಿ.ರ್, ಪೀರ; ಮಲ. ಪೀರ. ಪೀರವ್; ತುಳು. ಪೀರೆ ; ತೆಲು. ಪೀರ ; ಕೋಲಾ. ಬೀರಾ; ಪರ್ಜಿ. ಬೀರ]

**ಪೀರ್ತರ್** (ಕ್ರಿ). ಹೀರಲ್ಪಡು ; ಬರಿದಾಗು : ಮದನಾಗ್ನಿಜ್ವಾಲೆಯಿಂ ಮಗ್ಗಿದುದೊ...ಸುಯ್ಗೆಟ್ಟಿಂದ ಭೃಂಗಾವಳಿಯನಿರದೆ ಪೀರ್ತರ್ಂದುದೋ ಪೇೞೆಮೆಂಬಂದದೆ ಲಜ್ಜಾಮಗ್ನಿಗೇನುಂ ನುಡಿ ಪೊಱಮಡದಾಯ್ತು (ಕಾದಂಸಂ. ೨೯೦). [ ಪೀರ್ + ತರ್ ]

**ಪೀಲಕ** (ನಾ). ಕರಿಯ ಬಣ್ಣದ ದೊಡ್ಡ ಇರುವೆ ; ಕಟ್ಟಿರುವೆ. [ಸಂ.]

**ಪೀಲಿ, ಹೀಲಿ** (ನಾ). ೧. ನವಿಲುಗರಿ : ಎವೆಯಿಕ್ಕದೆ ನೋಟ್ಪ ಕಣ್ಗಳ್ ಪೀಲಿವೂರಾಗೆ ಬಂದು ಪೞತೊಂದು ಪಾನಂಬುಗೆ ಪತ್ತಿ ಚಿತ್ರದೊಳ್ ಕೀಲಿಸೆ ಕಾವನಂಬು (ಶಂಕರಾ. ೪–೯೩); ಸೋಗೆಯ ಚೆಲ್ವು ಕಣ್ದೆಱೆದುದೋ ಪೇೞೆಂಬಿನಂ ಪೀಲಿಗಳ್ತರದಿಂ ಕಣ್ಗೊಳಿಸಲ್ಕೆ ನರ್ತಿಸುಗುಂ ಮುದ್ಯಾನಂಗಳೊಳ್ ಸೋಗೆಗಳ್ (ಕಾದಂಪೂ. ೨೯೩) ; ವನಲಕ್ಷ್ಮಿಗೆತ್ತಿದ ಪೀಲಿಯ ಸತ್ತಿಗೆಯೋ...ಎನೆ ಚೂತವೊಪ್ಪುಗುಂ (ಗಿರಿ. ೨–೩೪). ೨. ನವಿಲಿನ ಸೋಗೆ,— ತೋಕೆ : ನೀಲಮಣಿತ್ತಿನ ಸರಿಪಳಿಯೊಳು ಕೇಕಿಗಳ್ ಪೀಲಿಯನೆತ್ತಿ ಸಂತಸದಿ ಲೀಲೆಯಿಂ ಕುಣಿದುವು (ಅಶಂಕ. ೬–೨೦); ನವಿಲ್ ನೀಳ್ದ ಪೀಲಿಯ ಚಮರಿಯಿಂದಮದೊ ಗುಡಿಸುತಿದೆ (ಕ್ರೀರಾಮಾ. ೦೩೨–೦೯೯). ೩. ನವಿಲುಗರಿಯಲ್ಲಿರುವ ಕಣ್ಣಿನಂತಿರುವ ನಡುವಿನ ಭಾಗ ; ಚಂದ್ರಕ : (೯). **ಹೀಲಿ** : ೧. ಶಿವ ನಿಮ್ಮ ನೋಡದವನ ಕಣ್ಣು ಹೀಲಿಯ ಕಣ್ಣು (ಸವಚ. ೦೬೮–೭೯೩); ಬಿರುದಿನ ಕತ್ತರಿಯ ಹೀಲಿಗಳ ರಚ್ಚುಲ್ಲರಿ ಮುಸುಕಿದವು ಗಜವ (ಕುಮಾರರಾ. ೩–೬); ಸುತ್ತಿ ಸುಳಿದು ತುಂಬಿಗಳು ಮೇಲೆ ಹೀಲಿಯ ಸತ್ತಿಗೆಯಂತೆ ರಾಜಿಸಲು (ಕರಶ. ೫–೯೯). ೨. ಹೀಲಿಯನಡ್ಡಗಟ್ಟಿ ಬಿಡದಾಡುವ ಪೆಣ್ಣವಿಲೆಂದು ಕೇಕಿ ಬಂದು ಲಲಿತೋಲ್ಲಸತ್ಕಬರಿಗೊಯ್ಯನೆ ಜೋಡಿಸೆ (ಅಕ್ರೂ. ೨–೯೮). [ದೇ.॥ ತಮಿ. ಮಲ. ತುಳು. ಕೊಡ. ತೆಲು. ಪೀಲಿ]

**ಪೀಲಿಗಣ್** (ನಾ). ನವಿಲುಗರಿಯ ಮಧ್ಯದಲ್ಲಿರುವ ಕಪ್ಪುಬಿಂಬ : ಅಲರ್ದ ತಾವರೆಯ ತನಿವಂಡಿನ ಪನಿಗಳಿಂ ಪಸುರುವ ಪೀಲಿಗಣ್ಗಳೊಳಂ . . ರಂಜಿಸುವುದು (ಕಾದಂಪೂ. ೦೦೬). [ ಪೀಲಿ+ಕಣ್ ]

**ಪೀಲಿಗರಗ, ಹೀಲಿಕರಗ** (ನಾ). ನವಿಲುಗರಿಗಳಿಂದ ಅಲಂಕರಿಸಿದ ಕುಂಭ: ಪರಿಜನಂಗಳ್ ತಳೆವ ಪೀಲಿಗರಗದಾಲಿಗಾಡುವ ನೀರ ತೋರಪನಿಯ ತಂದಲೊಂದುಗೆಯೊಳಮೆಂತಾನುಂ ಹಮ್ಮದದಿನಗಲ್ದು (ಶಂಕ್ರಕು. ೫–೦೯ ಬ). **ಹೀಲಿಕರಗ** : ಬಿಜ್ಜಯದ ಹೀಲಿಕರಗದ ಬೋನದ ಪರಿಯಾಣದ . . . ನೆಲನನುಗ್ರಡಿವ ಮೞೆವುಂ ನಿಯೋಗದನ್ವಯಾಗತೆಯರುಂ (ಶಂಕ್ರಕು. ೬–೯೫ ಬ). [ ಪೀಲಿ + ಕರಗ ]

**ಪೀಲಿಗೊಡೆ, ಹೀಲಿಗೊಡೆ** (ನಾ). ನವಿಲುಗರಿಗಳಿಂದ ಮಾಡಿದ ಕೊಡೆ,—ಛತ್ರಿ : ಕಂಪಿಂಗೆಳಸಿ ಮುಡಿಗೆ ಮುಸುಱುವ ಭೃಂಗಂಗಳ್ ನೆಗೆದ ಪೀಲಿಗೊಡೆಯನೆ ತೋರ್ಕುಂ (ಕಸರ. ೨–೯೬). **ಹೀಲಿಗೊಡೆ** : ಮುಡಿಯ ಬಾಸಿಗಂಬಿಗೆಳೆದುಂಬಿಱಾಡೆ ಬೆಳ್ಗೊಡೆ ಮೇಲೆ ಮೆಱೆಯೆ ಭಾವಜನು ಅಡಕಿಟ್ಟ ಬೆಳುಗೊಡೆ ಹೀಲಿಗೊಡೆಯ ನೆಳಲಡಿಯೊಳಿರ್ದ ನೋಯಿಸಲೆಸೆದ (ಕರಶ. ೫೦ . ೯೫) [ಪೀಲಿ+ಕೊಡೆ₂]

**ಪೀಲಿದಲೆ** (ನಾ). ನವಿಲಿನ ಸೋಗೆಯಾಕಾರದ ಮುಡಿ,—ಕೂದಲು : ಬಾಡುಣಗಾತುಳ್ಗಳ ಪರಪೀಲಾಪದ ಪೀಲಿದಲೆಯ ಲಲನೆಯನೀಕ್ಷಿಸಿದನು (ಶ್ರೀಕೃಷ್ಣ. ೪–೦೯). [ಪೀಲಿ+ತಲೆ₁]

**ಪೀಲಿದಳೆ** 'ಪೀಲಿದಟ³' ನೋ.

**ಪೀಲಿದಳೆವಿಡಿ** (ಕ್ರಿ). ನವಿಲುಗರಿಗಳ ಕೊಡೆಯನ್ನು ಹಿಡಿ : ಪೀಲಿವಳೆವಿಡಿವಂತೆ ಮೃಗಂಪಿಗಳಿಕುಳಂ ಮೇಲೆತ್ತಿ ಬರೆ...ಒಂದು ಲೀಲಾಬ್ಜಮಂ ಪಿಡಿದು ಬರ್ಪಳೊಪ್ಪಿರ್ದಳು (ಶಂಕು. ೦೯–೨೩). [ ಪೀಲಿದಳೆ (<ಪೀಲಿದಟ³)+ಪಿಡಿ₁ ]

**ಪೀಲಿದಟ³, ಪೀಲಿವಳೆ, ಹೀಲಿದಳೆ** (ನಾ). ನವಿಲುಗರಿಗಳ ಕೊಡೆ ಪಿಂಛಾತಪತ್ರ : ಆ ಪುರದುಪವನದೊಳ್ . . . ವನದೇವತೆಗೆ ಪೀಲಿದಟೆ³ಯನೆತ್ತುವ ಸೋಗೆನವಿಲ್ಗಳಿಲ್ಲ (ಶಂಶಾಮಾ. ೦–೦೦೬ ವ); ಪಱಿದುಂಬಿಯ ಬಂಬಲ್ ಎತ್ತಿ ಪಿಡಿದ ಪೀಲಿದಟೆ³ಯಾಗೆ (ಶಬ್ದಕಾ. ೯೬). **ಪೀಲಿದಳೆ** : ನೆಗೆದು ಸುತ್ತುಂ ಪರಿಮಳಿಸುವ ಗಂಧಾಗಳೊಳು ಮುಡಿಗೆಱಗುವಳಿಕುಳಂಗಳ ಪೀಲಿವಳೆಯೊಳಗೆ . . . ಮೆಱೆ³ವುತಿರೆ (ಮಾಲತಿ. ರೀ. ೬೨–೦೯). **ಹೀಲಿದಳೆ** : ನೂತನೋದ್ಗತನರ್ತನಕ್ಕೆ ಮಾಯ್ಯಾನುತ್ತುಂ ಗೊಡೆ ಹೀಲಿದಳೆಯಣಾಕುಗಳ ನಡುವೆ ಮೆಱೆ³ವುತ್ತುಂ (ಶಂಬರ. ೩–೬೩) ಧವಳ ಬೆಳುಗೊಡೆಯ ತುಱುಗಿದ ಹೀಲಿದಳೆಯ ಮಂಪಳಿಸಿದಣಾಕುಗಳ ನೆಳಲೊಳು . . . ನಡೆವನಪ್ರತಿಮನಚಳಿತಸಿದ್ಧನು (ಸಿದ್ಧರಾ. ೬–೨೦) [ ಪೀಲಿ + ತಟ³ ]

**ಪೀಲಿದುಱುಬು** (ನಾ). = ಪೀಲಿದಲೆ : ಎಡುಗಣ್ಗಳ ನಿಬಿಡಸ್ತನಗಳ ಪಿಡಿನಡುವಿನ ಪೀಲಿದುಱುಬಿನ ಕಡುಚೆಲ್ವುವಡೆದ ಸೊಬಗುಗಾತಿ ಮೆಲ್ಲನೆ ನಡೆತಂದಳಾ ನೃಪನೆಡೆಗೆ (ಶೀಬಸಂ. ೦೨–೫೦). [ ಪೀಲಿ + ತುಱುಬು₂ (<ತುಱುಂಬು₂) ]

**ಪೀಲಿಬಿಜ್ಜಣಿಗೆ** 'ಪೀಲಿವಿಜ್ಜಣಿಗೆ' ನೋ.

**ಪೀಲಿವಿಜ್ಜಣಿಗೆ, ಪೀಲಿಬಿಜ್ಜಣಿಗೆ** (ನಾ). ನವಿಲುಗರಿಗಳಿಂದ ಮಾಡಿದ ಬೀಸಣಿಗೆ : ಪೀಲಿವಿಜ್ಜಣಿಗೆ ತಣ್ಪಿನ ನೀರ ಸೆಱೆ³ಯಾದ ಪೊಂಗಳಂತಿಗೆಯಿರೆ ಸಜ್ಜೆಯೋವರಿಯಿದೋರಿ ಮಾಡಿತು ಕಂತುಗೆಮುದ್ರೆಯಂ (ಶಂಕ್ರಕು. ೯–೬೦). **ಪೀಲಿಬಿಜ್ಜಣಿಗೆ** : ಅನುನಯದಿಂ ವಾರವಿಲಾಸಿನಿಯರ್ ಮೆಲ್ಲಲರ ಪೀಲಿಬಿಜ್ಜಣಿಗೆಯನೊಯ್ಯನೆ ಬೀಸುತ್ತಿರೆ ನೃಪನಂದನನಿನಿಸಿನಿಸು ಬಱಿಲ್ಕೆಗಟೆ³ಯುತ್ತಿರ್ದಂ (ಕಾದಂಕಾ. ೯೫೫). [ ಪೀಲಿ + ಬಿಜ್ಜಣಿಗೆ ]

**ಪೀಲಿವೊಜೆ³** (ನಾ). ನವಿಲುಗರಿಗಳ ಹೊರೆ,–ಪೆಂಡಿ : ಕಿರಿದಂತುಂಗಳ ನಾಂತು ಪೀಲಿವೊಜೆ³ಯಂ ತಟಕ್ಕೈಸಿ ಗಂಧೇಭಮುಕ್ತಾಫಳಭಾರಮಂ ತಳೆದು . . . ಬಂವರನೇಕರ್ ಬಱಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೦೬೯). [ ಪೀಲಿ + ಪೊಜೆ³ ]

**ಪೀಲು₁** (ನಾ). ೧. ಒಂದು ಬಗೆಯ ಮರ ; ಅಕ್ಷೋಟವೃಕ್ಷ: ಉಗುನಿ: "ಪೀಲುವನರ್ ಗುಡಫಲಂ" (ಶಬ್ದಸಾ. ೩೪೦.೮). ೨. ಹೂವು. ೩. ಬಾಣ. ೪. ಆನೆ : "ಪೀಲು ಪಿನದ್ವಿರದಾಂಕಂ" (ಶಬ್ದಸಾ. ೧೩೦-೬೨): "ಪೀಲುಃ — ಪುಂದೀಗಡ, ಆನೆ, ಸರಳು, ಹುವ್ವು" (ಶಿಲ್ಪಾ೬೬. ೪೦೬). ೫. ಹುಳು; ಕ್ರಿಮಿ. ೬. ಕಣ; ಅಣು : ಸೆರೆಮನೆ ಎನುವುದು ಏತಕೊ ಒಡಲಿಗೆ ಕಾಂಬುದು ಅರಮನೆ ತುಣುಕು ಅದು ಪೀಲುಪೀಲದಲಿ ಪೀಲುಪೀಲಿನಲಿ ರನ್ನದ ಕಣಕಣ ಮಿಣುಕುವದು (ಅಕಳು. ೦೯೩-೮). ೭. ಹುಲ್ಲು : "ಹುಲ್ಲಿನಲ್ಲಿ ಮರದಲಿ ಪೀಲು" (ಮುಂಗಣಾ. ೦೯೩-೨೩). [ಸಂ.]

**ಪೀಲು₂** (ನಾ). [ಸಂಗೀತ] ಒಂದು ರಾಗದ ಹೆಸರು : ಬರಕತ್ತುಲ್ಲಾ ಖಾನರು ಇವರ ಮನೆಯಲ್ಲಿ 'ಪೀಲು'ರಾಗವನ್ನು ನುಡಿಸಿದಾಗ (ಗಾಜಿಕ. ೨); ಅವನು ಪೀಲುರಾಗದಲ್ಲಿ ಕಟ್ಟಿದ ಪದವು ಹಳ್ಳಿಗಳಲ್ಲಿ ಎಷ್ಟೋ ದಿನ ಲೋಕಪ್ರಿಯವಾಗಿತ್ತು (ಗಂಡಾಬು. ೨೬೨). [←ಹಿಂ. ದುರಾ. ಪೀಲು]

**ಪೀಲುಕ** (ನಾ). ೧. ಒಂದು ಬಗೆಯ ಮರ : 'ಕಾಕಪೀಲುಕ' ಪರಾ. ೨. ಇರುವೆ. [ಸಂ.]

**ಪೀಲುಪರ್ಣಿ** (ನಾ). ೧. ಒಂದು ಬಗೆಯ ಸಸ್ಯ; ಹೆಗ್ಗುರುಟಿಕೆ : "ಮೂರ್ವಾ, ದೇವೀ . . . ಗೋಕರ್ಣೀ, ಪೀಲುಪರ್ಣೀ—೧೧ ಹೆಗ್ಗುರುಟಿಕೆಯ ಹೆಸರುಗಳು" (ಸಿದ್ಧಾಂತಿ. ೬೩೦). ೨. ತೊಂಡೆ ಗಿಡ : "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ—೪ ತೊಂಡೇಗಿಡದ ಹೆಸರು" (ಸಿದ್ಧಾಂತಿ. ೦೪೪). [ಸಂ. ಪೀಲುಪರ್ಣೀ]

**ಪೀವ** (ನಾ). ದೊಡ್ಡದು ; ಸ್ಥೂಲವಾದುದು : "ಬಹುಳಃ . . . ಪೀವಾ, ಪೀವರಃ—ಈ ೫ ದೊಡ್ಡ(ತು)" (ಕರಾಹುು. ೬-೦೬೬). [ಸಂ.]

**ಪೀವಡಿ, ಪೆವಡಿ** (ನಾ). ೧. ಅರಿಸಿನಬಣ್ಣದ ಮಣ್ಣು ; ಹಳದಿ ಮಣ್ಣು : ಘಟಕ, ಮುಶಿಯ ಮಣ್ಣು, ಕುಂಬಾರರ ಮಣ್ಣು, ಕಾವಿ, ಪೀವಡಿ ಮುಂತಾದ ವ್ಯಕ್ತಿಕಗಳು ಈ ಧಾತುವಿನಿಂದ (aluminium) ಹುಟ್ಟುತ್ತವೆ (ಮುಂಹಿಬು. ೬-೦೬). **ಪೆವಡಿ** : ೨. ಹಳದಿಬಣ್ಣ : ರತಲಿನ ಮೇಲೆ ಕಿಮ್ಮತ್ತು ಒಗತಕ್ಕ ಜೀನಸಗಳು. ೧. ಅಗರ . . . ೫೧. ಹಿತ್ತಾಳಿ ತಂತಿ; ೫೨. ಪೆವಡಿಬಣ್ಣ (ಹಳದಿಬಣ್ಣ) (ಮುಂಹಿಬು. ೦೨೮). [←ದುರಾ. ಪಿವಡೀ, ಪೇವಡೀ]

**ಪೀವರ** (ಗು). ೧. ಕೊಬ್ಬಿದ ; ಸ್ಥೂಲವಾದ ; ತೋರವಾದ : ಆಕೆಗಳ ಪೀವರತುಂಗನಿತಂಬಬಿಂಬದೊಂದಗಲದ ವೃದ್ಧಿ ಪೆರ್ಚಿ ನೆಲೆವೆರ್ಚಿ ದುದೀ ಕೊಳಂ (ಶಾಂತಿಪು. ೮-೨೮). 'ಪೀವರಸ್ತನಿ' ಪರಾ. (ನಾ). ೨. ದೊಡ್ಡದು ; ಸ್ಥೂಲವಾದುದು : "ಬಹುಳಃ, ಸ್ಥೂಳಃ . . . ಪೀವರಃ —ಈ ೫ ದೊಡ್ಡ (ತು)" (ಕರಾಹುು. ೫೬-೦೯೬); ಅತಿನಿಬಿಡಂಗಳ್ ವೃತ್ತೋನ್ನತಂಗಳತಿಪೀವರಂಗಳತಿಕಠಿನಂಗಳ್ . . . ಅವಳ ಕುಚಂಗಳ್ (ಗಣಾಹುು. ೬-೩೬). ೩. ಸ್ಥೂಲನಾದವನು ; ದಪ್ಪನಾದವನು : "ಪೀವರನೆನಲ್ ಸ್ಥೂಲನೆನೆ ಬಹುಲನೆನೆ (ಪೀನನೆನೆ) ದೊಡ್ಡಿತಪ್ಪವನೆನಿಕ್ಕುಂ" (ಕುಂಗಣ. ೬೯-೦೦). [ಸಂ.]

**ಪೀವರಸ್ತನಿ** (ನಾ). ೧. ಪುಷ್ಟವಾದ ಮೊಲೆಗಳುಳ್ಳವಳು. ೨. ದೊಡ್ಡ ಕೆಚ್ಚಲುಳ್ಳ ಹಸು : "ಪೀನೋಧ್ನೀ, ಪೀವರಸ್ತನೀ—ಈ ೨ ಹೆಗ್ಗೆಚ್ಚಲಾವು" (ಕರಾಹುು. ೪೩-೦೦೬). [ಸಂ. ಪೀವರಸ್ತನೀ]

**ಪೀವರೋಧ್ನಿ** (ನಾ). = ಪೀವರಸ್ತನಿ ೨ : "ಪೀವರಸ್ತನಿ ಪೀವರೋಧ್ನಿ ಯೆನೆ ಹೆಗ್ಗೆಚ್ಚಲಾವು" (ಮುಂಗಣ. ೫೪-೫). [ಸಂ. ಪೀವರೋಧ್ನೀ]

**ಪೀಳಿಗೆ** (ನಾ). ೧. ವಂಶ ; ಕುಲ : ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪಟ್ಟುವ ಕಟ್ಟುವಂದಿದಿಲ್ಲಮೊಡತನುತನ ಸಲ್ಲದು (ಕಣಕಾ. ೬-೦೦) ದೇವಕೀಸುತನೇನು ಬಂಡಿಯ ಭೋವಗುಲದಲಿ ಜನಿಸಿದನೆ ದೇಣಾ ವಿರಿಂಚಿಯದಾವ ಸಾರಥಿಕುಲದ ಪೀಳಿಗೆಯೊ (ಕುಮ್ಮಾ೪. ೫-೩೪); ತೆಗೆಸಿದನು ಬಳಿಕಿನಕುಲದ ಪೀಳಿಗೆಯ ನೃಪರಾರ್ಜಿಸಿದ ನಾನಾಯುಗ ಯುಗಂಗಳ . . . ನಾಣೆಯಂಗಳನಖಿಳವಸ್ತ್ರಗಳ (ಕೋಕಾ ೦-೬-೪). ೨. ತಲೆಮಾರು : ತಲೆಯಿಂದ ತಲೆಗೆ, ಪೀಳಿಗೆಯಿಂದ ಪೀಳಿಗೆಗೆ . . . ಇಳಿಯುತಿದೆ ಯುಗದಿಂದ ಯುಗಕೆ ಮಾನವಧರ್ಮ ನಿಲದವ್ಯುತಧಾರೆಯದು (ಪುಳಕಿ. ೪೦೬) ; ಹಿಂದಿನವರ ಆದರ್ಶಗಳು ಬರುವ ಪೀಳಿಗೆಗೆ ಮೇಲ್ಪಂಕ್ತಿಯಾಗುತ್ತವೆ (ಶಿಕ್ಷ. ೩೨೦). ೩. ವಂಶಕ್ಕೆ ಸೇರಿದವನು ; ವಂಶಜ : ನಿರೀಕ್ಷಿಸುತನಿಬರಿಂಗಿತವ ಮೇಲುಮೊಗದ ಗಭೀರಗತಿಯ ಭಡಾಳವನು ಕಂಡವರು ರಾಯರ ಪೀಳಿಗೆಗಳಹುದೆಂದು ನಿಶ್ಚೈಸಿದನು ಮನದೊಳಗೆ (ಕುಮ್ಮಾ೪. ೦೬-೨೬). 'ಪೀಟಿಗೆ' ಪರಾ.

**ಪೀಳ್ಕುದುರೆ** (ನಾ). [ಸಂಗೀತ] ಪಿಟೀಲಿನ ಧ್ವನಿಪೆಟ್ಟಿಗೆಯ ಮಧ್ಯ ಭಾಗಕ್ಕಿಂತ ಸ್ವಲ್ಪ ಮೇಲುಗಡೆಯಲ್ಲಿ ತಂತಿಗಳು ಹಾದು ಹೋಗಲು ಅಂಬವಾಗಿ ಅಳವಡಿಸಿರುವ ಕುದುರೆಗೆ ಸಿಕ್ಕಿಸುವ ಒಂದು ಉಪ ಕುದುರೆ ; ಆ ನಾದವನ್ನು ಕಡಮೆ ಮಾಡುವುದಕ್ಕಾಗಿ ಈ ಉಪ ಕುದುರೆಯನ್ನು ಸಿಕ್ಕಿಸುತ್ತಾರೆ : ಅವರ ಸಾಧಕ ಅತಿ ಗೋಪ್ಯ ಪಿಟೀಲಿಗೆ ಪೀಳ್ಕುದುರೆಯನ್ನು ಸಿಕ್ಕಿಸಿ ಸಣ್ಣನಾದದಲ್ಲಿ ಅಭ್ಯಾಸಮಾಡು ತ್ತಿದ್ದರು (ಪಾಕೆಗಾ. ೨೦). [ < ಪಿಳ್ಳೆ + ಕುದುರೆ ]

**ಪೀಱು₁, ಪೀರು₂** (ಕ್ರಿ). ಕೆದರು ; ಚೆದರು ; ಚೆಲ್ಲಾಪಿಲ್ಲಿಯಾಗು ; ಅಸ್ತವ್ಯಸ್ತವಾಗು : "ಪೀಱು—ವಿಕೀರ್ಣೇ" (ಶಮುಧಾ. ೮) ; ತೊಡಂಕಿ ಪೀಱಿದ ಕುರುಳ್ಗಳೆ ಚಿತ್ರದೊಳಾದ ಬೇಸಟಂ ನುಡಿವವೊಲಾಗೆ ಬರ್ಪ ಕಮಳಾಯತನೇತ್ರೆಯನಿಂದುವಕ್ತ್ರೆಯಂ ಕಂಡು (ಕಂಕಶಾ. ೦೬-೪೪) ; ಸುರ್ಬುಗೊಂಡ ಗಡ್ಡಮುಮಂ ಮಿಸೆಯುಮನಗಲೆ ನೂಂಕಿ ಪೀಱಿದ ತಲೆಯೋಲಂಕಿರ್ದ ಬಾಯೊಳಡ್ಡಗ್ಗಯನಿಡುವುದುಂ (ಆಆಪಾ. ೬-೩೬ ವ). **ಪೀರು₂** : ಕಪ್ಪುಕುರುಳುಗಳಿಂದ ತಲೆಯ ಪೀರಿದರು ಒಪ್ಪುವೊಲು ತಾರೆಗಳ ನಡುವೆ ಶೂಲಿಹಳು ರಾತ್ರಿಯೆಂಬವಳಾವ ಧಾತ್ರಿ ? (ಮಾಸಿಗ. ೩೩-೪) [ ದೇ.॥ ತಮಿ. ಪೀಱು = ಬಿರಿ, ಸೀಳು ; ಮಲ. ಪೀರು = ಹರಿ ]

**ಪೀಱು₂** (ನಾ). ೧. ಚೆದರುವಿಕೆ ; ಚೆಲ್ಲಾಪಿಲ್ಲಿಯಾಗುವಿಕೆ ; ಅಸ್ತ ವ್ಯಸ್ತವಾಗುವಿಕೆ : ಪಿಟ್ಟಾದ ಪೀಱಾದ ಸಿಂಧುರದಿಂ ತಟ್ಟಿದ ಮುಟ್ಟುದನ್ನರಥದಿಂ ಕಣ್ಗಂ ಮನಕ್ಕಂ ಭಯಂಕರಮಪಾದಾಜಿಯೊಳಟ್ಟಿ ತಿಂಬ ಜವನೆಂಬಂತಿರ್ದನಬ್ಜೋದರಂ (ಕಂಶಕಾ. ೪-೦೨೪). ೨. ಇರಚಲು ; ಇರಿಸಲು : ಪಾಱುವ ವಿಮಾನದೊಂದಳ್ಳೇಱಂ ಪಱದುಗುವ ಮುಗಿಲ ನೀರ್ಗಳ ಪಲವುಂ ಪೀ[ ಪಾಠಾಂ. ಪೇ, ಬೀ ]ಱುಗಳೊಳೆಳ ಖಚರರನಾ ಱಿಸಿದುದು ಗಗನದೊಳ್ ವಿಯತ್ತ್ರಳಿಪವನಂ (ಆಂಶ. ೪-೬೬). [ < ಪೀಱು₁ ]

**ಪೀಟಿಗೆ** (ನಾ). ಸಿಂಹಾಸನ ; ಪೀಠ : "ಪೀಠಿಕೆಗೆ ಪೀಟಿಗೆಯೆನಿಕ್ಕುಂ" (ಸಂಹಿತ. ೦೪) ; ನೀನಲ್ಲೊಡುಂಟು ರಾಜ್ಯಂ . . . ನೀನುಳ್ಳೊಡುಂಟು ಪೀಟಿಗೆ ನೀನಿಲ್ಲದಿವೆಲ್ಲಮೊಳವೆ (ಗಣಾಹುು. ೫-೨೦) ; ಬೇಡಿದೊಡೀಯ ನಾಂತಡಿಱಿಯಂ ಮಱವೊಕ್ಕೊಡೆ ಕಾಯನಂತವಂ ನಾಡರಸಾಗಿ ಪೀಟಿಗೆಯ ನೇಱಿದೊಡೇನವನಗ್ರಗಣ್ಯನೇ (ಸುಕ್ತಿಸು. ೦೬-೨೩) ; ಪೀಠಿಕಾ—ಪೀಟಿಗೆ (ಶಕುರ. ೨೩೬ ಕ್ರಟೋ). 'ಪೀಳಿಗೆ' ಪರಾ. [ < ಸಂ. ಪೀಠಿಕಾ ]

**—ಪು₁, —ಹು₁** (ಪ್ರ). ಪ್ರೇರಣಾರ್ಥದಲ್ಲಿ ಧಾತುಗಳ ಮೇಲೆ ಹತ್ತುವ ಒಂದು ಪ್ರತ್ಯಯ : 'ಅಱಿಪು', 'ತಿಳಿಪು₁', 'ನಡಪು₁' ಪರಾ. — ಹು₁ : 'ಕಳಿಂಹು', 'ತಿಳಿಹು₁' ಪರಾ.

**—ಪು₂, —ಹು₂** (ಪ್ರ). ಒಂದು ಭಾವನಾಮವಾಚಕಪ್ರತ್ಯಯ : 'ಒಳ್ಪು', 'ತೆಳ್ಪು', 'ನಣ್ಪು' ಪರಾ. —ಹು₂ : 'ತೆಗಹು', 'ತೊಡಹು₂' ಪರಾ.

**ಪುಂ** (ನಾ). ೧. ಗಂಡಸು ; ಪುರುಷ : ಪುಂ ಪೆಂಗಳಿಂದ (ಪುಂ ಪೆಣ್ಗಳಿಂದ) ಪುಟ್ಟಿದ ದೇಹವನು ತಿಳಿ . . . ಇಂತಾಗಿದೆಯೆಂದು ಹಿಗ್ಗದಿರಲವು ಹೊಲೆಗಂಪು ನಾರುವುದು ತೊಳೆಯದೆ ಇರಲು (ಶಿವಾಕ್ಯ. ೯-೦). ೨. ಗಂಡುಸಂತಾನವಿಲ್ಲದವರಿಗೆ ಪ್ರಾಪ್ತವಾಗುವುದೆಂದು ಹೇಳಲಾದ ಒಂದು ನರಕ. ೩. [ವ್ಯಾಕ] ಪುಲ್ಲಿಂಗ : ನೀನಱಿ ಕರ್ಣಾಟಕದೊಳ್. ಪೀನಂ ಸ್ತ್ರೀ ಪುಂ ನಪುಂಸಕೋಭಯ ಪುಂಸ್ತ್ರೀ ಸ್ತ್ರೀನಪ್ಸುಮಸ್ತ್ರವಾಚ್ಯಾ ನ್ಯೂನಾಪ್ಸ್ಯಯಮೆಂದು ಲಿಂಗಮೊಂಬತ್ತು ತೆಱಿ (ಶಮಾಕ. ೯೬).

[ಸಂ. ಪುಂಸ್]

**ಪುಂಕಿಸು** (ಕ್ರಿ). ಧ್ವನಿ ಮಾಡು ; ಸ್ವರವನ್ನು ಹೊರಡಿಸು : ಸುಷಿರವಾದ್ಯ ವಾದನವಿಶಾರದನಪ್ಪ ಕಿನ್ನರಂ ತನ್ನಯ ಸೊಳಹೆಯೆಂಬ ವಾಸಮಂ ಕೊಂಡು ಹಲ್ಲಣಿಯಂ ಸುದ್ಧವಾಗಿ ಪುಂಕಿಸಿ ಬಿಂಕಂಬಡೆಯೆ ಮುಹುಚಾರೆಯುಮಂ ಮಾಡಿ ರೂಢಿವಡೆದ ಮಧ್ಯಮಾದಿಯೆಂಬಾದಿರಾಗಮಂ ರೂಹುಗೊಳಿಪುದುಂ (ಶಾಂತೀಶ್ವ. ೦೩-೬೬ ವ); ಪುಂಕಿಸಿದ ಮಾಂಸ[ವಾಂಶ]ಕಾರನ ಪುಂಕ್ಕೃತಿಯುಮಂ ಶ್ರುತಿಯುಮೆಂದು ಭೇದಿಸಲಿನ್ನಾರ್ಗಂ ಕರವರಿದೆನೆ ಭಾರತಿಯುಂ ಕಿಱಿಯುಳಿವಳ್ದಿರೆನಿಸಿ ಸಮಗಾಯಿನಿಯರ್ ತಾರಯ್ಸುವುದುಂ (ಪುಣ್ಯಾಸ. ೯-೩೯).

[< ಪುಂಖಿಸು]

**ಪುಂಕೃತಿ** (ನಾ). ಸ್ವರ; ನಾದ: ಪುಂಕಿಸಿದ ಮಾಂಸ[ವಾಂಶ]ಕಾರನ ಪುಂಕ್ಕೃತಿಯುಮಂ ಶ್ರುತಿಯುಮೆಂದು ಭೇದಿಸಲಿನ್ನಾರ್ಗಂ ಕರವರಿದೆನೆ ಭಾರತಿಯುಂ ಕಿಱಿಯುಳಿವಳ್ದಿರೆನಿಸಿ ಸಮಗಾಯಿನಿಯರ್ ತಾರಯ್ಸುವುದುಂ (ಪುಣ್ಯಾಸ. ೯-೩೯). 'ಪುಂಕ್ಕೃತಿ' ಪಠಾ. [ಪುಂ + ಕೃತಿ]

**ಪುಂಖ** (ನಾ). ೧. ಬಾಣದ ಹಿಂಭಾಗ ; ಹಿಳಿಕು : "ಬಾಣದ ಪಿಳಿಕದು ಪುಂಖಂ" (ವಸ್ತುಕೋ. ೬೩-೦೯) ; ವಿರಹಜ್ವರದಿಂ ಪುಳಕೋತ್ಕರಮೊಗೆದುವು ರೋಮಕೂಪಮನಿತನಿತಱೊಳಂ ಸ್ಮರನ ಸರಲ್ಗಳ್ ನಾಂಟಲ್ ಶರೀರಮಂ ಪತ್ತಿ ನಿಂದ ಪುಂಖಂಗಳವೋಲ್ (ಕಾದಂಸಂ. ೬೩೯) ; ಮಿಸುಪ ಕಲಧೌತ ಪುಂಖಪ್ರಸರಂ ಖದ್ಯೋತತತಿವೊಲಾದುದು ನಭದೊಳ್ (ಆದಿಪು. ೦೨-೦೨). ೨. ಗಿಡುಗ. ೩. ಮಂಗಳಕಾರ್ಯ. ೪. [ಸಂಗೀತ] ನಾದ ; ಸ್ವರ : ಪುಂಖಶುದ್ಧಮೆನೆ ಭೂಂಕನೆ ಪುಂಖಿಸಿ ಮಧ್ಯಮಾದಿಯಂ ಚಾಳಿಸಿ . . . ಮೃದುಸ್ವರಂ ಪಾಡಿಯನೊಪ್ಪಂತಸೆಯೆ ಬಾಜಿಸಿದಳ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೩-೦೯). [ಸಂ.]

**ಪುಂಖಾನುಪುಂಖ** (ನಾ). ಒಂದರ ಹಿಂದೆ ಒಂದರಂತೆ ಎಡೆಬಿಡದೆ ಬರುವ ಬಾಣಪರಂಪರೆ,—ಬಾಣಗಳ ಸಾಲು : ನೈಷ್ಕಿಕಮೆಂಬ ಮುಷ್ಟಿಯೊಳಂ ಪುಂಖಾನುಪುಂಖಮೆಂಬ ಶರಸಂಧಾನದೊಳಮಯಮದೆಳ್ ತೆಗೆದೊಡೆ (ಶಂಕರಾ.೩-೩೨ ವ) ; ಏನ ಹೇಳುವೆ ಭಟನ ಶರಸಂಧಾನವನು ಪುಂಖಾನುಪುಂಖವಿಧಾನವನು ರೆಫುಂಕಾರಶರಜಾಳಪ್ರಸಾರಣವ (ಕುಮ್ಮಾಕ. ೩-೯೩).

**ಪುಂಖಾನುಪುಂಖವಾಗಿ** = ಒಂದರ ಹಿಂದೆ ಒಂದರಂತೆ ; ಎಡೆಬಿಡದೆ ; ನಿರಂತರವಾಗಿ : ವಿಚಾರಗಳು ಪುಂಖಾನುಪುಂಖವಾಗಿ ಏಳುತ್ತಿದ್ದವು (ಕಾಮನಾಂ. ೯೩) ; ಇದರ ಅರ್ಥವಿವರಣೆಗೆ ತೊಡಗಿದರೆ ಪುಂಖಾನುಪುಂಖವಾಗಿ ಜಿಜ್ಞಾಸೆಯೇಳುವುದು ಸಹಜ (ಕಾವ್ಯಸು. ೦೬).

[ಸಂ.]

**ಪುಂಖಾನುಪುಂಖಂ** (ಅ). ಒಂದರ ಹಿಂದೊಂದು ಎಡೆಬಿಡದೆ ಬಾಣಗಳು ಬರುವಂತೆ ; ಬಲಿಯಂ ಮೆಯ್ಗೊಂಡು ಪುಂಖಾನುಪುಂಖಮಿಸುತ್ತಿರ್ಪೆಡೆಯೊಳ್ ತೆರಳ್ದುದುವಗುರ್ವಿಂ ಪರ್ವಿ ಬಂದಿರ್ದ ಮೇಘಮುಖಾಹೀಂದ್ರರ ಪೊಂತಮಂ ಜಯಕುಮಾರೋನ್ಮುಕ್ತಬಾಣಾಳಿಗಳ್ (ಆದಿಪು. ೦೩ ೬೦) ; ಅಂತು ಪುಂಖಾನುಪುಂಖಮಿಸುವುದುಂ (ಶಂಕರಾಖ. ೦೯-೦೩೯ ವ).

[< ಪುಂಖಾನುಪುಂಖ]

**ಪುಂಖಾನುಪುಂಖಿತೆ** (ನಾ). ಎಡೆಬಿಡದಂತಿರುವ ಬಾಣಪ್ರಯೋಗ : ಎಕ್ಕಟಿಗ ಪುಂಖಾನುಪುಂಖಿತೆಯುಕ್ಕಿ ಹಾಕಿದನೈದಿದುಬುಗಳಕ್ಕಡಿಗೆ ತುಂಡಾಗು ತಿರ್ದವು ಪಾರ್ಥನೆಸುಗೆಯಲಿ (ಕರ್ಣಾ. ೯೩-೩೩).

[ಸಂ. ಪುಂಖಾನುಪುಂಖಿತಾ]

**ಪುಂಖಿ, ಪುಂಗ** (ನಾ). ಒಂದು ಬಗೆಯ ಮರ : "ಪುಂಡ್ರೀ—ತಿಲಕವೃಕ್ಷ. ಗೋಳಿಯ ಮರ, ಪುಂಖಿ, ಕೊಗ್ಗೆ" (ಚಿಕಂ. ೦೦೦). ಪುಂಗ : ಪುಂಗ— Pongamia glabra (ಹೊಂಗೆ) (ಶಾಶನಿ.೯). 'ಹೊಂಗೆ' ಪಠಾ.

[← ತಮಿ. ಪುಙ್ಕು]

**ಪುಂಖಿತೆ** (ನಾ). (ಬಾಣವನ್ನು ಬಿಡುವ) ಕೌಶಲ ; ಕೈಚಳಕ : ತೊಡುವ ಚಿತ್ರ್ಯಾರವನು ಬಾಣವ ಬಿಡುವ ಪುಂಖಿತೆಗಳನು ಕಣ್ಣೆ ಮೆಯ್ದದ ನೋಡಿದರ ನುರಸಭೆಯೊಳಗೆಲ್ಲ ಕಾಣದಲೆ (ಕರ್ಣಾ. ೯೩-೩೯).

[ಸಂ. ಪುಂಖಿತ = ಬಾಣದಂತೆ ಗರಿಗಳಿಂದ ಕೂಡಿದುದು]

**ಪುಂಖಿಸು** (ಕ್ರಿ). = ಪುಂಕಿಸು : ಕಳಿಸು ಮಯಾಣಮಂ ನಂಚ್ಯಾಗೆ ತಿರ್ದಿ ಪುಂಖಿಸಿ ಹೊರ್[ಹೆ]ಲ್ಲಣಿಯ ಶುದ್ಧವಾಗಿ ಮುಹುಚಾಳಿಯುಮಂ ಮಾಡಿ . . . ಸಮಯೋಚಿತರಾಗಮಂ ಸುವ್ಯಕ್ತಿವೆತ್ತು ನಿಡೆ ತೋರ್ಕೆಗೋಳಿಸು ವುದುಂ (ಶಾಂತೀಶ್ವ. ೭-೯೩ ವ), ಪುಂಖಶುದ್ಧಮೆನೆ ಭೂಂಕನೆ ಪುಂಖಿಸಿ ಮಧ್ಯಮಾದಿಯುಂ ಚಾಳಿಸಿ . . . ಬಾಜಿಸಿದಳ್ ಸುವಿಲಾಸೆ ವೀಣೆಯುಂ (ಸೂಕ್ತಿಸು. ೩-೦೯). [ಪುಂಖ + — ಇಸು]

**ಪುಂಗ** 'ಪುಂಖಿ' ನೋ.

**ಪುಂಗವ** (ನಾ). ೧. ಗೂಳಿ ; ಹೋರಿ ; ವೃಷಭ : ವೃಷಾಂಕಪುಂಗವ ವಿಘಟ್ಟಿತೋತ್ತೀರಪಂತದೊಂದೆತೆ (ಕಾದಂಸಂ. ೬೯೦) ; ಒರ್ಮೆಯ ಪುಟ್ಟಿ ವಂದುದು . . . ಪುಂಗವಂ (ಆದಿಪು. ೩-೬೩). ೨. (ಸಮಾಸದ ಕೊನೆಯ ಅಂಗವಾದಾಗ) ಒಡೆಯ ; ನಾಯಕ : "ಸ್ವಕುಲಪ್ರಧಾನ ಗಜವಾಜಿ ಕುಂಜರಂ ವಿಭು ವೃಷಾಖ್ಯ ಪುಂಗವಮುಕ್ಷ್ಯಂ" (ವಸ್ತುಕೋ. ೩೨೦-೦೩). 'ಮುನಿಪುಂಗವ' ಪಠಾ. ೩. ನಂದಿವೃಕ್ಷ : "ಪುಂಗವಮೆನಲ್ ನಂದಿ" (ಮುಂಗರಾ. ೩೩-೦೯). [ಸಂ.]

**ಪುಂಗವಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಬಾವುಟ : ಮುಂಗಡೆಯ ನಪನೆಲೆಯ ಗೋಪುರ ಪುಂಗವಧ್ವಜಗುಡಿಗಳಿಂದಂ ಗೊಳಿಪ ಶಿವಭವನಮಂ ನಲವಿಂದ ನೋಡಿದರು (ಶಿವಲೀ. ೨-೬೦). ೨. ನಂದಿಧ್ವಜವುಳ್ಳವನು ; ಶಿವ : ಪುರುಷಪುಂಗವಂ ಪುಂಗವಧ್ವಜು ಗುತ್ಮಾರ್ವಣಂಗೆಯ್ದುನಿಸಾಸುಂ ಪುಳ್ಳನಿವಿಷಾಕ್ಷಿಯುಂ ನಿರೀಕ್ಷಿಸಿ (ಕಾಶಿಖ. ೦೩-೩೯ ವ). [ಸಂ.]

**ಪುಂಗಳಿ** (ನಾ). ಒಂದು ಬಗೆಯ ಸಸ್ಯ (?) : "ಬೀಳ ಪುಂಗ [ಆ]ಳಿ ತಿಲುಪನಿಯರ್ನಿಕ್ಕು" (ಮುಂಗರಾ. ೯೦-೩೦). [?]

**ಪುಂಗಿ** (ನಾ). ೧. (ಸಾಮಾನ್ಯವಾಗಿ ಹಾವಾಡಿಗರು ಊದುವ) ಸೋರೆಬುರುಡೆಯಿಂದ ಮಾಡಿದ ಒಂದು ಬಗೆಯ ವಾದ್ಯ : ವಿಷ್ಣೂನ ಪಾತನ್ನು ಕೇಳುತ್ತ ಶೀನ ಸ್ತಂಭಿತನಾಗಿ ಕುಳಿತ. ಹಾವಾಡಿಗ ನೋರ್ವ ಪುಂಗಿಯನ್ನೂದಿದಂತಿತ್ತು (ಚಮಯ. ೯೮೦) ; ಪುಂಗಿ ನಾದಕ ನಾಗ ಹಿಂಗ ಹೆಡೆಯೆತ್ತಿದಂಗ (ಕಮ್ಮಾ. ೩೬೩). ೨. (ಆಲಂ) ಪ್ರಭಾವ ಬೀರಿ, ಮೋಹಗೊಳಿಸುವ ಯುಕ್ತಿ : ಮೊನ್ನೆ ಸಂಜೆಯಿಂದ ನಿಂತಿದೆ ಅವಳ ನಾಲಿಗೆಯ ಆಲೆದಾಟ, ಅವಳ ಮಾತಿನ ಪುಂಗಿ (ಕ್ರಿಶ. ೩೦). ೩. ಸೊನ್ನೆ ; ಶೂನ್ಯ : ಬೇಬೇಕಾದವರಿಗೆ ದುಂದು, ಮನೀವಂದಿಗೆ ಮಾತ್ರ ಪುಂಗಿ (ಗಂಪತಾಯಿ. ೯೬). [← ಮರಾ. ಪುಂಗೀ. / ಪ್ರಾ. ಪುಗ್ಗ]

**ಪುಂಗಿಸೊಗೆ** (ನಾ). ಒಂದು ಊರಿನ ಹೆಸರು : ಕುದುಗೂರ್ನಾಡೊಳ್ ಪೂರ್ವಮಧ್ಯದೇಶೇ ಪುಂಗಿಸೊಗೆನಾಮಗ್ರಾಮಂ(ಮಃ) (ಎಂ. XVIII. ೩೩೩-೦೩ : ಕಲಯ ೫೫). [?]

**ಪುಂಚ** (ನಾ). (ಕರಾ) ಹುತ್ತ ; ವಲ್ಮೀಕ : ಅಲ್ಲಲ್ಲಿ ದೊಡ್ಡ ದೊಡ್ಡ ಪುಂಚ (ಹುತ್ತ) ಗಳನ್ನು ನೋಡಿದರೆ ಅರಿಯದವರಿಗೆ ಮೈ ನಡುಗು ಹುಟ್ಟುವುದುಂಟು (ದಂಡಿಜಾ. ೧೬) ; ತೆಂಕಲಲ್ಲಿ ಒಂದು ಪುಂಚವಿತ್ತಂತೆ (ಒಚ್ಚಿಣಾ. ೦೪೩). 'ಪುತ್ತು₁' ಪರಾ. [ ← ತುಳು. ಪುಂಚ ]

**ಪುಂಚ್ಯ**, ಪುಂಜ್ಯ, ಪುಂಜೈ, ಪುಣಜ, ಪುಣಜಿ, ಪುಣುಜಿ (ನಾ). ಒಣ ಭೂಮಿ ; ಖುಷ್ಕಿ ಜಮೀನು : ಚತುಃಸೀಮೆಗೆ ಸಲುವ ನಂಚೈ ಪುಂಚೈ ವಾನ್‌ಪಯಿರು ಪುಪಪೌರು . . . ಮುಂತಾದ ಸಕಲಸುವರ್ಣಾದಾಯ ಸಕಲಭತ್ತಾದಾಯ . . . ಸೇರಿಸಿ (ಎ೩. XVII. ೦೦೫–೬೦; 1428). ☞ 'ಪುಂಚೈ' ಎಂಬ ಪದಪ್ರಯೋಗವು ತಮಿಳುನಾಡಿನ ಸಾಮೀಪ್ಯದ ಪ್ರಭಾವದಿಂದ ಆಗಿರಬಹುದು. **ಪುಂಜ್ಯ₁** : ಎಲ್ಲ ನಂಜವಾ ? ಪುಂಜವಾ ? ಬೈಲುಗದ್ದೆ, ಬೆಟ್ಟುಗದ್ದೆ, ಕಾಡು, ಬೀಡು ಎಲ್ಲ ಕೂಡಿ ಅಪ್ಪಾಗುತ್ತದೆಯೊ ? (ಬಾಳಿಗ. ೦೫). **ಪುಂಜೈ₁**: ನಂಚೈ (ಜೈ) ಪುಂಜೆ (ಜೈ) ಕಮುಕು (ಣ್ಣ್ಗೆ ವೈವು . . . ನಿಧಿನಿಕ್ಷೇಪ ಜಲಪಾಷಾಣ ಅಕ್ಷೀಣ ಆಗಾಮಿ ಸಿದ್ಧಸಾಧ್ಯಂಗಳುಂ (ಎ೩. XVIII. ೦೯೨–೯೬ ; 1434): ಯಿ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು ವಾಸಿಲುವರಿ . . . ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟೆವು (ಕ್ಕೌ೩. IX-ii. ೯೬೩-೭ ; 1470) ; ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು . . . ಮೊದಲಾದ ಹಲ ಉಪಾಧಿಗಳು ಸಹ . . . ಅನುಭವಿಸಿಕೊಂಡು (ಕ್ಕೌ೩. IX-ii. ೯೬೬-೫; 1472). **ಪುಣಜ** : ಪರಿಯ ಪುಂಗಿಯ ಪೇರೊಬ್ಬೆಯ ಮುರಿದು ಕಿಡಿವ ಗುಣ್ಣೆಯ ಬಬ್ಬಾಗಿಲ ದ್ವಿಸನ್ನಿಯ ಪುಣಜ ಪರಳ ನ್ದಿಯ ನಾಡ . . . ಕೂಡಿತ್ತು (ಎ೩. III (R). ನಂಜನ. ೨೬೨–೨೯; 969).

**ಪುಣಜಿ** : (೬). **ಪುಣುಜಿ** : (೬). 'ನಂಜೆ' ಪರಾ.

[ ದೇ. ☞ ತಮಿ. ಪುಞ್ಚೈ, ಪುನ್‌ಚೆಯ್; ಮಲ. ಪುಞ್ಜ ; ತುಳು. ಪುಂಜೊ ]

**ಪುಂಜ₁** 'ಪುಂಚ್ಯ' ನೋ.

**ಪುಂಜ₂**, ಹುಂಜ₁ (ನಾ). ೧. ಗಂಡುಕೋಳಿ : ಸುಪಕ್ಷದಿಂದ ರಂಜಿಸುದು ಪುಂಜನಗ್ಗದ ಸುವಸ್ತುವಿನಂತಿರೆ ತಟ್ಟು ಹೇಂಟೆಯೊಳ್ (ಹುಕೋಕ. ೩-೭೬). ೨. (ಆಲಂ) ಸಮರ್ಥ ; ಗಟ್ಟಿಗ : ಆಗ, ಇವ ಪುಂಜ. ಇವನ ಮೇಲೆ ಬಿದ್ದರೆ ಸಣ್ಣಕಲ್ಲು ದೊಡ್ಡ ಕಲ್ಲ ಮೇಗೆ ಬಿದ್ದಂಗೆ (ಕಾಟೀಬು. ೬೦) ; ಅವ ಪುಂಜ, ಅವನ್ಗೇನು, ನನ್ನ ಬಯ್ದು ಹೊಡೆದ (ಕಾಟೀಬು. ೬೫). **ಹುಂಜ₁** : ೧. ಅಂತು ಗೆದ್ದು ತೊಂಡೇಜದ ಹುಂಜನಂ ಕೊಂಡು ಪೋಗಿ ಶ್ರೇಣಿಕನ ಮುಂದೆ ಅಭಯಕುಮಾರೋಪದೇಶದಿಂ ಬಿಟ್ಟು (ಪುಣ್ಯಾಸ್ರ. ೩-೩೦ ವ) ; ಸಂಜೆಯೋಗದಶ್ವಗಳತ್ತಿತ್ತ ಕೋಳಿಯ ಹುಂಜನಂದದಿ ವಾಜಿ ಹರಿಯೆ (ಕಕಕ. ೨೨–೨೦) ; ನಾನೊಂದು .... ಕುಮರೆಯನ್ನು ಕಂಡೆ. ಅದು . . . ಹುಂಜದಂತೆ ತಲೆಯೆತ್ತಿಕೊಂಡು ಹೇಗೆ ನಡೆಯುತ್ತಿತ್ತು ಅಂತೀರಿ ! (ಅಕೃಪು. ೯೧).

[ದೇ. ☞ ತುಳು. ಪುಂಜೆ ; ತೆಲು. ಪುಂಜು ; ಕೋತ. ಬೂಜ್]

**ಪುಂಜ₃** (ನಾ). ೧. ಗುಂಪು ; ರಾಶಿ ; ಸಮೂಹ : "ನಿಕರಃ . . . ಪುಂಜಃ . . . ಸ್ತೋಮಃ—ಈ ೩೯ ಸಮೂಹಂ" (ಶಬ್ದಮ. ೦೦೯-೦) ; ತಳಿರ ಮುಗುಳ ಏಸಲಕಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಶಂಕರಾ. ೦-೩೯ ಟಳ) ; ಈ ಪುಣ್ಯದ ಪುಂಜವನೆನಗೆ ಕೊಟ್ಟೊಡೆ ನಿಮ್ಮ ಬಡತನಂ ತೀರ್ವುದೆನ್ನ ಮನೋರಥವಪ್ಪುದು (ಶಂಕರ. ೨-೬೯) ; ಭೂಮಾನಿತೆಯ ಪುಣ್ಯದ ಪುಂಜ ಮಾನುಷಭಾವವ ಪಡೆದುದೆಂಬಂತೆ . . . ಎಸೆದನು ಚಿಕ್ಕದೇವರಾಜನು ತೇಜದೊಳು (ಶಂಶಂ ೦-೦೦). ೨. ಮಗ್ಗದ ಹಾಸಿನಲ್ಲಿ ರುವ ರೇಷ್ಮೆಯ ಅಥವಾ ನೂಲಿನ ಲಡಿ, –ಎಪ್ಪತ್ತರಿಂದ ಎಂಬತ್ತು ಎಳೆಗಳ ಸಮೂಹ : 'ಪುಂಜಣಿಗ' ಪರಾ. [ಸಂ.]

**ಪುಂಜಗೊಳ್** (ಕ್ರಿ). ಒಟ್ಟಾಗು ; ಒಂದಾಗಿ ಸೇರು ; ಒಗ್ಗೂಡು : ಕಣ್ಗೆ ಮುತ್ತಿಟ್ಟುದಿಕ್ಕೆಲದಲ್ಲಿ ತಾಯಕ್ಕರೆಯ ಸಕ್ಕರೆಯ ಪುಂಜಗೊಂಡಂತೆ ಪೋಲ್ ಚಿತ್ರಮಯಧವಳಿಮಪುಳಿನರಾಶಿ (ಶ್ರೀರಾಮಾ. ೦೩೦-೨೦೯).

[ಪುಂಜ₃ + ಕೊಳ್₁]

**ಪುಂಜಣಿಗ** (ನಾ). ರೇಷ್ಮೆಯನ್ನು ಮಾರುವವನು : ರೇಷ್ಮೆ ವ್ಯಾಪಾರಿ: ಪಿಂಜಾರ ಕರ್ಪಾಸ ಮಾರುವ ಪುಂಜಣಿಗ ರೇಶಿಮೆಯ ಮಾರುವ ರಂಜಿಸು ಜರತಾರ ಮಾಡುವ ಥಾಲಿ ಆಯುಧವ (ಶಂಶಿಲ. ೯-೦೩).

[ಪುಂಜ₃ – < ವಣಿಗ₁]

**ಪುಂಜಿ** (ನಾ). ಉಂಡೆ ; ಮುದ್ದೆ ; ಪಿಂಡ : ಪವಂಗಾಸಿದ ಪೊನ್ನ ಪುಂಜಿಯ ಪೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (ಶಂಕಿಣ. ೩-೯೧). [ಸಂ.]

**ಪುಂಜಿಕೆ** (ನಾ). ೧. ಒಟ್ಟಿಲು ; ರಾಶಿ : ದೆಸೆಗಳ್ ನಿಜಾಂಶುವಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ ಕೊಸಗಿನ ಮಿಂದಮೂಜಂಗಳುಲ್ಲಸಿಪಂತೆಸೆದಿರ್ಪುವಲ್ಲಿ ಬಜ್ಜರವಸರಂ (ಜಗ. ೯-೦೦೬). ೨. ಗೊಂಚಲು ; ಕುಚ್ಚು : ತ್ರಿದಶಾಂಗನೆ ಜನಜನನಿಗೆ ಪದೆಪಿಂ ತಾರಾವತಂಸಮಂ ಭೂಷಿಸೆ ತಪ್ಪದ ನೇಂದಾಮಂಡಲದ ಜೊನ್ನದ ಪುಂಜಿಕೆಯಂತಿರೆಸೆದುದಿವರಡಂ ಕೆಲದೊಳ್ (ಶಾಂತೀಶ್ವ. ೦೩–೨೦೬). [ಸಂ. ಪುಂಜಿಕಾ]

**ಪುಂಜಿಗೆ**, ಹೊಂಜಿಕೆ (ನಾ). = ಪುಂಜಿಕೆ ೧ : ದಳ್ಳುರಿಯುಗ್ಗಡಂ ಪೊಗೆಯ ಕತ್ತಲೆ ಬೂದಿಯ ತೋರ್ಕೆವೆಟ್ಟು . . . ತಲೆಯ ಪುಂಜಿಗೆ ಕುಂದದವು ತತ್ಪ್ರದೇಶದೊಳ್ (ಕಾವ್ಯಸಾ. ೫೩೦ ಶಾರ್ದೂ.೯) ; ಅಗ್ನೇಯಕ್ಕೆ ಕಲ್ಲ ಪುಂಜಿಗೆ ತೋಲಿಲ ಲಿಂಗದ ಕಲ್ಲು . . . ಪಡುವ ಜಾಲಗಟ್ಟದ ಕಿಜಿಯಿಂಂ ಶೀ (ಸೀ)ಮೆ (ಎ೩. XIII. ೦೬೨–೯೨ : 1055). **ಹೊಂಜಿಕೆ** : ಅಲ್ಲಿಂ ಮೂಡತ ಹೆರಹಿನ ಕೋಡಿಯ ಕಲ್ಲ ಹೊಂಜಿಕೆಯ ಮೇಲ್ ನಟ್ಟ ಕಲ್ (ಎ೩. XIII. ೩೦-೯೯ : 1204). [ < ಸಂ. ಪುಂಜಿಕಾ ]

**ಪುಂಜಿಸು** (ಕ್ರಿ). ೧. ಒಗ್ಗೂಡಿಸು; ಒಟ್ಟು; ರಾಶಿ ಹಾಕು : "ಪುಂಜಿಸು— ರಾಶೌ" (ಕಪಾರ): ನಿತ್ಯದಾನಕ್ಕೆಂದು ನಿಯೋಗಿಗಳ್ ತಂದು ಪುಂಜಿಸಿದ ಪಂಚರತ್ನದ ಪೊನ್ನ ರಾಶಿಗಳನರ್ಥಿಜನಕ್ಕೆ ಗೋಸನೆಯಿಟ್ಟು ಬಿಡವೇಳ್ದು (ಶಂಕರಾ. ೦೨–೩೩ ವ); ತರವೇಟು ಪಾರ್ಣ್ಯಭಂಡಾರದ ಪುಡಿಕೆಗಳಂ ಪುಂಜಿಸವೇಟು ಸುವರ್ಣೋತ್ತ್ಕರಮಂ (ಕಾವ್ಯಾವ. ೨೯೯) ; ಬೆಳಿಯ ಮುಗಿಲ್ಗಳ್ ಪಟ್ಟಿಯ ತೊಳೆಯಂ ಪುಂಜಿಸಿದ ಪಾಟಿಯಿಂದಾಂಬರದೊಳ್ ತೊಳತೊಳಗುವ ಮಿಂಚೀದೇದಿಳೆಯೊಳ್ ಜಲಪ್ರಳಯ ಮುಟ್ಟಿನಂ ಮುಟಿ ಕೊಳ್ಗುಂ (ಅದ್ಯಪು. ೯-೦೫). ೨. ಒಟ್ಟುಗೂಡಿಸು ; ಸಂಗ್ರಹಿಸು : ಅತ್ಯುತ್ಕಟದಿಂದ ಮಾರ್ತ್ಯಭೋಗಂಗಳನನುಭವಿಸಲ್ ನೋಂತರಿಃಶೀಗಳಿಂತುಂತವರಂತೇಂ ಪುಣ್ಯಮಂ ಪುಂಜಿಸಿದರೊ ಏರಿದು ಶ್ರೀಪಾಶೀ ವಜ್ರಜಂಘರ್ (ಅಂಬಿ. ೯–೬೦). ೩. ಒತ್ತು ತುಂಬು ; ತುರುಕು ; ಗಿಡಿ : ಮಸಿಯಂ ಪುಂಜಿಸಿದಂತುಟಪ್ಪ ತನು ನೀಲಾಂಭೋಧರಂ ದಾಡೆಗಳ್ ಪೊಸಮಿಂಚುಗ್ರವಿಲೋಚನಂ ದಿವಿಜಗೋಪಂ ಕಾಲೊಮೇಣ್ ಕಾಳರಕ್ಕಸನೋ ಪೇಟೆನೆ ಬಂದು ತಾಗೆ ಗದೆಯಂ ಕೊಂಡೆದ್ದು ಭೀಮಂ . . . ಪೊಯ್ದು ನಿಳೆಯೊಳ್ ಕವಿಪ್ಪಾರನಂ (ಕುಪಿಶಾ. ೬-೨೩); ಕಂಜಭವಂ ಕರಂ ಕಮಲವೈರಿಗೆ ಕಾಯ್ದು ತದೀಯತೇಜಮಂ ಭಂಜಿಸಲೆಂದು ಕತ್ತಲೆಯನಂಜನದಿಂ ವಿದಿದಯ್ದೆ ಲೋಕದೊಳ್ ಪುಂಜಿಸಿದಂತಿರರ್ವಿಸುವ ದುಸ್ತಮದೊಳ್ ಪೊಲಗೆಟ್ಟು ನಿಂದ ದಿಕ್ಕುಂಜರದುಗ್ರದಂತೆ ಬಳನುಂ ವಸುದೇವನುಮಿರ್ದರ್ (ಶಾಂತಿ. ೬-೬೦); ಕಂಜಾಭರನು ತಮೋಗುಣವನೀ ಲೋಕದೊಳು ಪುಂಜಿಸಿದನೋ ತಥ್ಯಮೆನಲಂಧಕಾರದಿ ಬ್ರಹ್ಮಾಂಡಲೋಕವಸೆದಿ (ಕಾಂಚಕ. ೦೬–೦೬). [ ಪುಂಜ₃ + –ಇಸು₁ ]

**ಪುಂಜೀಕರಣ** (ನಾ). ಒಟ್ಟುಮಿಕೆ; ಒಗ್ಗೂಡಿಸುವಿಕೆ ; ರಾಶಿ ಮಾಡುವಿಕೆ: 'ಪುಂಜೀಕರಿಸು' ಪರಾ. [ಸಂ.]

**ಪುಂಜೀಕರಿಸು** (ಕ್ರಿ). ಒಗ್ಗೂಡಿಸು; ಶೇಖರಿಸು: ಅಲ್ಲೊಂದು ಇಲ್ಲೊಂದು ಕಡೆ ನೋಡಿ ಮೆಚ್ಚಿ, ಶ್ಲಾಘಿಸಿದ ಅಂಶಗಳನ್ನೆಲ್ಲಾ ಪುಂಜೀಕರಿಸಿ ನಿರ್ಮಿಸಿದ ಸುಖನಿಕೇತನ ಅದು (ಹಂಚಿಟು. ೦೯). [ ಪುಂಜೀಕರಣ + –ಇಸು₁ ]

**ಪುಂಜ್ಯೆ₁** 'ಪುಂಚ್ಯೆ' ನೋ.

**ಪುಂಜ್ಯೆ₂** (ನಾ). ಒಂದು ಬಗೆಯ ಮರ: ಪುಂಜೆ (ಪೂಯಿ)—ಇವ್ವತ್ತು ಘೂಟಗಿಂತ ಯೆತ್ತರವಾಗುವದಿಲ್ಲ . . . ಕಟ್ಟಿಗೆಸಾಮಾನುಗಳನ್ನು ಮಣಾವು ಮಾಡುವುದಕ್ಕೋಸ್ಕರ ಇದರ ಎಲೆಗೆಲಂಡ ತಿಕ್ಕುವರು (ಕಚಾಗ. ೯೩). [ ? ]

**ಪುಂಡ** (ನಾ). ೧. ತುಂಟ; ದುಷ್ಟ: ವೇದವೆಂಬುದು ಓದಿನ ಮಾತು ಶಾಸ್ತ್ರವೆಂಬುದು ಸಂತೆಯ ಸುದ್ದಿ ಪುರಾಣವೆಂಬುದು ಪುಂಡರ ಗೋಷ್ಠಿ (ಅವಕ. ೦೦೩–೯೬೫); ಇವನ ಹಿಡಕೊಂಡು ಹೋಗೆಲೊ ಜೋಗಿ ಇವ ನಮ್ಮ ಮಾತ ಕೇಳದೆ ಪುಂಡನಾದ (ಶ್ರೀಕಂಕ. ೩–೦೯ ಅಜುಕ್ಷಲಂ): ಅವನ ಗೆಳೆಯರೆಲ್ಲಾ ಮನೆಮಾರಿನ ಯೋಚನೆ ಬಿಟ್ಟ ಹಳ್ಳಿಯ ಪುಂಡರು (ಹ್ಯಾಗಮ. ೨೯). ೨. ನೀತಿಗೆಟ್ಟವನು; ನಿಯಮಬಾಹಿರ: (೬). (ಗು). ೩. ತುಂಟತನದ; ಪೋಕರಿಸ್ವಭಾವದ: ಛೀಮಪ್ಪ ತೋಟದ ಕಬಾಜಾ ತಗೊಳ್ಳುವ ಬಗ್ಗೆ ಪುಂಡ ಜನರನ್ನು ಕೂಡಿಸ ತೊಡಗಿದನು (ಮಕಕ. ೮); ದಾರಿಯಲ್ಲಿ ಪುಂಡಜನರ ಹಾವಳಿ (ಹೇಮಂಕ. ೨೯೫). [ ದೇ.₃ ತುಳು. ಪುಂಡೆ; ಕೊಡ. ಪುಂಡ. / ಮರಾ. ಪುಂಡ ]

**ಪುಂಡಗಂಡಾಯ** 'ಪುಂಡಂಗಂಡಾಯ' ನೋ.

**ಪುಂಡಗಾತಿ** (ನಾ). ಹಾದರಗಿತ್ತಿ; ಜಾರೆ: (೬). [ಪುಂಡ + –ಗಾತಿ]

**ಪುಂಡಗಾರ** 'ಪುಂಡುಗಾರ' ನೋ.

**ಪುಂಡಗಾರ್ತಿ** (ನಾ). = ಪುಂಡಗಾತಿ: (೬). [ಪುಂಡಗಾರ (<ಪುಂಡುಗಾರ) + –ತಿ₁ (< –ಇತ್ತಿ)]

**ಪುಂಡತನ** 'ಪುಂಡುತನ' ನೋ.

**ಪುಂಡರೀಕ** (ನಾ). ೧. ಬಿಳಿಯ ತಾವರೆ; ಬಿಳಿಯ ಬಣ್ಣದ ಕಮಲ: "ಪುಂಡರೀಕಮೆನಿಕುಂ ಸಿತಾಂಬುಜಂ" (ಶಬ್ದಮಣಿ. ೩೯–೨೦). ೨. ಬಿಳಿಯ ಕೊಡೆ; ಬೆಳ್ಗೊಡೆ: ಕನತ್ಕನಕದಂಡಮಂಡಿತಪುಂಡರೀಕನಿಕರಮಾವರಿಸಿ ತಳರ್ದತ್ತಲುಂ (ಚೆಲುವ. ೯–೦೦೫ ವ). ೩. ಹುಲಿ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ . . . ವ್ಯಾಘ್ರಾರಿಃ—ಈ ೭ ಹುಲಿ" (ಅಭಾಹು. ೩೯–೬೩); ಉಲಿಯ ಪುಂಡರೀಕಂಗಳೆಗಂ ತಕ್ಕದಿರುತಿರ್ಪ ದೀವಸ ಏಕ್ಕ ಮೃಗಂಗಳಲಿ ಭಯಮದಿನಿತಿಲ್ಲವನೋಳ್ (ಚಕ್ರಕಾ. ೩–೯೩). ೨, ೩: ರಿಪುನಗರಂ ಕರಂ ವಿಜನವಾಗಿಯುವಜ್ರ್ಜಿನರಾಜರಾಜಿತಂ . . . ಚಿವಳಭುಜಂಗಭಿ:ಮನಕುಳಾಶ್ರಯಮುದ್ಗತಪುಂಡರೀಕಮಿನ್ನುಪಮೆಗೆ ಚಿತ್ರಮಾಯ್ತೆನಿಪುದೀ ವಿಭು ಕಾವಣದಂಡನಾಥನ (ಎಕ. XI, ದಾವಣ. ೯೯–೩೮; ಕ್ರಿ. 1180). ೪. ಹಣೆಯ ಮೇಲೆ ಇಟ್ಟುಕೊಳ್ಳುವ ಮಣ್ಣಿಯ ಗುರುತು; ಪುಂಡ್ರ. ೫. ಕಪ್ಪೆ. ೬. ಕಲ್ಪವೃಕ್ಷ. ೧, ೨, ೩, ೬: ಹರಿಸಂದೋಹವಿರಾಜಿತಂ ವಿವಿಧಪದ್ಮಾಲಂಕೃತಂ ಹಂಸಸಂಚರಣ ಪ್ರಉಡ ಉದಾತ್ತವಿಕ್ರಮಗುಣೋದ್ಯತ್ಪುಂಡರೀಕಾಂಕ(ಂ) ಸೌಂದರಮಾಗಿರ್ಪುದ ಜಂದೆ ಪದ್ಮವನಮಂ ಧಾವಿಸಲ್ ವಿಷ್ಣುಭೂವರರಿರ್ಪಾ ಪುರಮಂ ಸುರೇಂದ್ರಪುರಮಂ ವಿದ್ವಿಟ್ಪುರಾನೀಕಮಂ(ಎಕ. V, ಅರಸೀ.೬೯–೬; 1186). ೭. ಆಗ್ನೇಯ ದಿಕ್ಕಿನ ದಿಗ್ಗಜ: "ಐರಾವತಃ, ಪುಂಡರೀಕಃ 'ಕುಮುದಃ' ಸಾರ್ವಭೌಮಃ . . . ಸುಪ್ರತೀಕಃ—ಈ ೮ ಮೂಲೆಗಳ ಕ್ರಮದಿನಿರ್ಪ ದೆಸೆಯಾನೆಗಳ್" (ಅಭಾಹು. ೦೯–೦೦೯); ಬೆದಱುದುದಭ್ರಮೂರಮಣ ನೊಟ್ಟಜೆಟ್ಟುದು ಪುಂಡರೀಕಮಟ್ಟುದು ಕುಮುದಂ . . . ಅದಿರ್ದುದು ಸುಪ್ರತೀಕಮಿರದಾಲಿಸಿ ತತ್ಪಟಹಪ್ರಣಾದಮಂ (ಕ್ರಿಕೃ. ೩–೬); ಇಂದ್ರಾದಿ ದಿಕ್ಕೋಟಿಯಲ್ಲಿ ಕ್ರಮದಿಂದೈರಾವತ ಪುಂಡರೀಕ . . . ಸುಪ್ರತೀಕ ಮೆಂದೆಂಟು ದಿಗ್ಗಜಗಳಾದೊಡೆ . . . ಭೂಮಿಯಂ ವಹಿಸಿರ್ಪವು (ಶಿಕೇಶ. ೦೯೯). ೩, ೭: ಆ ವನಂ . . . ದಾನಧಾರೆಯಂತೆ ಪುಂಡರೀಕಗಂಡಿತ ಮಂಡಿತಮುಂ . . . ಎನಿಸಿರ್ದುದು (ಚಾಚೆಜ. ೩–೬೯ ವ). ೮. ಬಾವುಟ; ಧ್ವಜ. ೯. ಬ್ರಹ್ಮ. ೧೦. ಕಂದುರೆಯ ಕೆನೆತ; ಹೇಷಾರವ. ೧೧. ಒಂದು ಬಗೆಯ ಸಸ್ಯ. ೧೨. ಹುತ್ತ; ವಲ್ಮೀಕ: "ದಿಗ್ಗಜದೊಳು ಮುನೀಂದ್ರನೊಳು ಪುಲಿಯೊಳು ಸಿತಾಬ್ಜದೊಳು ಛತ್ರದೊಳ್ ಭೇಕದೊಳು ಸರೆ ಪುಂಡರೀಕಮಕ್ಕು" (ಚುಂಗಅ. ೦೯೬–೯೦); "ಹುತ್ತ ಹುಲಿ ಕಪ್ಪೆ ಕಮಲಂ ಸತ್ತಿಗೆ ಮುನಿ ಏಪ್ಪು ಬ್ರಹ್ಮ ಸುರಕಾಜ ಸುರವಂ ಉತ್ತಮ ಕರಿ ಧ್ವಜ ಕಬ್ಬು ತತ್ಸೇಚನ್ನನಿ ಪುಂಡರೀಕ ಪ್ರಪಂಚಂ" (ಚಾಚಾಶ. ೬). [ಸಂ.]

**ಪುಂಡರೀಕೋದ್ಭವ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ: ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ ಖಂಡಪರಶುವು ರುದ್ರ ಭೂಮಿಯೊಳೆಂಡಲೆದು ತಿರುಗುವವನು (ಹೇಶಾ. ೬೨). [ಸಂ.]

**ಪುಂಡರ್ಯ** (ನಾ). ಒಂದು ಬಗೆಯ ಸಸ್ಯ ಮತ್ತು ಕಣ್ಣಿನ ರೋಗಗಳಿಗೆ ಔಷಧಿಯಾಗಿ ಬಳಸುವ ಅದರ ಗಡ್ಡೆ: "ಪೌಂಡರೀಕಂ, ಪುಂಡರ್ಯಂ— ೨ ಪುಂಡರೀಕವೆಂಬುವ ಗಂಧದ್ರವ್ಯದ ಹೆಸರುಗಳು" (ಸಿದ್ಯಾಂಕ. ೦೯೦). [ಸಂ.]

**ಪುಂಡಾಟ** (ನಾ). ಪುಂಡುತನ; ತುಂಟತನ: ಇವನು ಅರಮನೆಯೊಳಗಳಿಗೆ ಯಿರದ ಸ್ತ್ರೀಚೇಟಿಯೊಳು ಮೆರೆವುತಿಹ ಪುಂಡಾಟಗಳನು (ಕಂದ್ರಾಕ. ೩೦); ಇನ್ನು ಪುಂಡಾಟ ಮಾಡಕೂಡದು (ಕಮುಕ. ೦೬೯). [ ಪುಂಡು₁ + ಆಟ ]

**ಪುಂಡಾಟಿಕೆ** (ನಾ). ೧. = ಪುಂಡಾಟ: ಅವಳ ಚಿಕ್ಕಂದಿನ ಪುಂಡಾಟಿಕೆ ನೆನೆದರೆ ಬಾಳಿನಲ್ಲಿ ತುಂಬ ಆಸ್ಥೆ ಇರದೇಕಾದವಳು (ಬಮಾಕಲಾ. ೦೨೦); ಇವನ ಪುಂಡಾಟಿಕೆಗೆ ಹೆದರಿಕೊಂಡರೆ ಈ ಊರಲ್ಲಿ ಬದುಕುವುದೇ ಕಷ್ಟ (ದೇವಹಂ. ೦೨೨). ೨. ಬಂಡಾಯ; ದಂಗೆ: ಪಿತೂರಿ ಪುಂಡಾಟಿಕೆಗಳು ತಲೆಯೆತ್ತುವ ಲಕ್ಷಣಗಳು ಕಾಣಬರುತ್ತಿದೆ (ಕೂಲೇಜಾ. ೦೯೫). [ಪುಂಡಾಟ + –ಇಕೆ]

**ಪುಂಡಿ**, ಪುಂಡಿ₂, ಪೂಂಡಿ, ಹಿಂಡಿ₂ (ನಾ). ೧. ಸಾಮಾನ್ಯವಾಗಿ ಹೊಲಗಳಲ್ಲಿ ಬೆಳೆದುಕೊಳ್ಳುವ ಸೆಣಬಿನಂತಹ ಒಂದು ಸಸ್ಯ: ಇದರ ಸೊಪ್ಪನ್ನು ತರಕಾರಿಯಾಗಿಯೂ ಇದರ ಕಾಂಡವನ್ನು ನಾರಿಗಾಗಿಯೂ ಬಳಸಲಾಗುತ್ತದೆ: ಲೋಲತರ ಶಿರುಕಸಾಲೆಯ ಪುಂಡಿ ತುಂಬಿ ಬಸಳೆಯ ಭಂಗಿಸೊಪ್ಪುಗಳನು . . . ಬಿಟ್ಟನಂ ಗುರುವರಂ (ಮಹಾಶಿ. ೦೦–೩೫); ಪುಂಡಿ ಬೆಳೆದ ಭೂಮಿಯಲ್ಲಿ ಗೋದಿಯು ಎಂದಿಗೂ ಬೆಳೆಯಲಿಕ್ಕಿಲ್ಲ (ಮಾಂಅಮು. ೬–೨೬೦); ಕಿವಿಯ ಹತ್ತಿರ ಏನೋ ನಾಲ್ಕಾರು ಕೂದಲು ಪುಂಡಿಯ ನಾರಿನಂತೆ ಸುರುಳಿ ಸುತ್ತಿವೆ (ಕಾಂಚಿಹಿ. ೦೦೦). ೨. ಒಂದು ಬಗೆಯ ಸಸ್ಯ: (೬). ೩. ಒಂದು ಬಗೆಯ ಮರ: "ಪೀಲುಃ—ಪುಂಡೀಗಿಡ" (ಸಿದ್ಯಾಂಕ. ೯೦೬). **ಪುಂಡಿ₂**: ೨. (ಶ್ರಮಿಗ. ೯೦–೬೦೯). 'ಪುಂಡಿಸೊಪ್ಪು' ಪರಾ. **ಪೂಂಡಿ**: ೨. ಅಮಟಿ, ಪೂಂಡಿ (ಶ್ರಮಿಗ. ೬೦–೦೯೬೬); ಸೊಪ್ಪುಗಳು: ಅಗಸೆ . . . ಕೊತ್ತಂಬರಿ, ಪೂಂಡಿ (ಪುಂಡರೀಕ), ಕೆಂಪು, ನುಗ್ಗೆ, ತಂಬೆ (ಶಮ್ಮತು. ೨೩೬). **ಹಿಂಡಿ₂**: ೧. 'ದೊಡ್ಡಹಿಂಡಿಗಿಡ', 'ಹಿಂಡಿಸೊಪ್ಪು' ಪರಾ.

**ಹಿಂಡಿಯ ಸೊಪ್ಪು** = ಪುಂಡಿಸೊಪ್ಪಿನಿಂದ ತಯಾರಿಸುವ ಒಂದು ಬಗೆಯ ವ್ಯಂಜನಪದಾರ್ಥ: ಹಾಲು ಮೊಸರು ತುಪ್ಪ ಉದ್ದಿನ ಕಡುಬು ಹಿಂಡಿಯ ಸೊಪ್ಪು . . . ಇವಂ ಮಂತ್ರಸಹಿತಂ ಶಿಶುವಿಂಗೆ ಮೂಜಿಸೂಳು ನಿವಾಳಿಸಿ (ಚಾಂಅ. ೦೩೫–೯); ಅಪ್ಪ ಕೊಳ್ಳಿಲಪ್ಪು

ಅಗ್ರಜ ಕೊಳ್ಳೊ ಹಿಂಡಿಯ ಸೊಪ್ಪು ಕೋ ಸುಲಿವಣ್ಣಿಗೆವೆ ಕೋ (ಕೋಟಕ. ೦೬–೬೬).

**ಪುಂಡಿನಾರು** (ನಾ). ಪುಂಡಿಗಿಡದ ಕಾಂಡದಿಂದ ತೆಗೆದ ನಾರು : ನಾಡಿಯಿಂದಡೆ ಪುಂಡಿನಾರಿನಂತಿಪ್ಪುದು (ಅಭಿನ್ನ್ಯೇತ್ರ. ೩–೩೬–೦೬); ಕೂಡಲೆ ಪುಂಡಿನಾರಿನಂಥ ತಲೆ ರಂತಸೇವಳ ಹಿಂದೆ ಇಣುಕಿತು (ಕೃಕಮ. ೩೩೬).
[ ಪುಂಡಿ + ನಾರು (<ನಾರ್) ]

**ಪುಂಡು**₁ (ನಾ). ೧. ಪುಂಡತನ ; ತುಂಟಾಟ : ಬೆಳ್ಳನುವದಿ ಪೋಗಿ ಮನೆಮನೆ ಹೊಕ್ಕು ಲೂಟಿಯ ಗೈವ ಸಮಯದಿ ತಕ್ಕ ಮಾಡದೆ ನೀವು ಪುಂಡಿಗೆಯುಕ್ಕಿದಿರಿ ವಧವ (ಕೀಲ್ಹಾರ. ೬) : ಈ ಊರಲ್ಲಿ ಈ ದೊಡ್ಡ ಮನುಷ್ಯರ ಪುಂಡು ಅಡಗಬೇಕು (ಕುಕಳ. ೦೬೩). ೨. ಬಂಡಾಯ; ದಂಗೆ : ಅದೇ ಸಮಯದಲ್ಲಿ ಕೊಡಗರು ಯಾವತ್ತೂ ಪುಂಡುಎದ್ದು . . . ಸೀಮೆಯನ್ನು ಕಟ್ಟಿಕೊಂಡು ಇರುತಿರುವಲ್ಲಿ (ಕಾಕೀಂಲ್ರ. ೨೬); ಕೂಡಲೇ ರಾಯನು ಸೈನ್ಯವನ್ನು ಕಳುಹಿಸಿ ಅವನ ಪುಂಡನ್ನಡಗಿಸಿದನು (ಪ್ರಕಣ. ೦೬). (ಗು). ೩. ಪುಂಡಾಟಿಕೆಯುಳ್ಳ ; ಗೂಂಡಾಗಿರಿಯ ಸ್ವಭಾವದ : ಇಂಥ ಪುಂಡು ಉಪಾಧ್ಯಾಯರನ್ನು ಹತೋಟಿಗೆ ತರುವುಕೊಳ್ಳುವುದು ಹೇಗೆ ? (ಕಂಗಳ. ೩೬). [ಪುಂಡ + – ಉ]

**ಪುಂಡು**₂ 'ಪುಣ್' ನೋ.

**ಪುಂಡುಗಂದಾಯ**, ಪುಂಡಗಂದಾಯ (ನಾ). ತುಂಟಾಟದಿಂದ ಶಾಂತಿಗೆ ಭಂಗ ತಂದವರ ಊರಿನ ಮೇಲೆ ಸರಕಾರದವರು ಹೇರುವ ಒತ್ತಾಯದ ತೆರಿಗೆ : ಪುಂಡುಗಂದಾಯ ಹೊರಿಸಿ ಕಾಂಗ್ರೆಸ್ಸಿನ ಸಂಪರ್ಕವಿರುವವರನ್ನು ಸಹ ಗತಿಹೀನರಾಗುವಂತೆ ಮಾಡಿಸದಿರಲಾರೆ (ಕಕುಳಾ. ೦೨೨). **ಪುಂಡಗಂದಾಯ** : ೩೫೦೦೦ ರೂಪಾಯಿ ಪುಂಡ ಗಂದಾಯ (ಪ್ಯೂನಿಟಿವ್ ಟ್ಯಾಕ್ಸ್) ಅವರಿಂದ ವಸೂಲ ಮಾಡಲಾಯಿತು (ಕಕಹೀ. ೨೩೦). [ಪುಂಡು₁ + ಕಂದಾಯ]

**ಪುಂಡುಗರಡಿ**, ಪುಂಡಗರಡಿ (ನಾ). ೧. ತುಂಟ ಕರಡಿ; ದುಷ್ಟಸ್ವಭಾವದ ಕರಡಿ : ವ್ಯದೋಜಿಪ್ಪುವು ಪುಂಡುಗರಡಿ ಶೈಲಾಂತರದೊಳ್ (ಹೋತ್ತು. ೩–೦೩೦). **ಪುಂಡಗರಡಿ** : ೨. ಸ್ವೇಚ್ಛೆಯಾದ ಕರಡಿ : ನೀಲಿತನುಗಳ ಪುಂಡಗರಡಿಗಳೊಲಗಿಸಿ ಬರೆ ರಾಘವೇಶ್ವರನೋಲಗಕೆ ಜಾಂಬವರು ಬಂದರು (ಅಕೃಶಾ. ೨೬–೩೩). [ಪುಂಡು₁+ಕರಡಿ₁]

**ಪುಂಡುಗಾರ** 'ಪುಂಡುಗಾಜಿ' ನೋ.

**ಪುಂಡುಗಾಜಿ**, ಪುಂಡಗಾರ, ಪುಂಡುಗಾರ (ನಾ). ತುಂಟ; ದುಷ್ಟ : ಪುಂಡುಗಾಜಿರು ನಮಗಲ್ಲೆಂದು ಸಗ್ಗದ ಪುಂಡರೀಕಾಯತಾಕ್ಷಿಯರ ಪಂಡೆಯನಿಸಿ ಕೊಟ್ಟನು ರಣದೊಳು ಕಡಿಖಂಡದಡೆದು ಬಂದರಿಗೆ (ಕಜಾಹಾ. ೦೨–೬೬). **ಪುಂಡಗಾರ** : (ಕ). **ಪುಂಡುಗಾರ** : ಪುಂಡುಗಾರನಾದ ಜಯಂತನಂ ಕೂಡಿ ನಳಕೂಬರನು ದೇವವೇಶಿಯರೊಡನೆ ಮನಸ್ಸು ಬಂದಂತೆ ಯೆಲ್ಲಿಗೊ ಪೋರಟುಪೋದರು (ಕಗಂ೦. ೩೩೨–೨೦); ಪುಂಡುಗಾರನವ ಭಂಡನ ಸುದ್ದಿಯ ಬಿಡುಬಿಡು ಪ್ರಿಯತಮ (ಕಕಪ. ೧,೪೦೬). [ಪುಂಡು₁ + – ಕಾಜಿ]

**ಪುಂಡುತನ**, ಪುಂಡತನ (ನಾ). ತುಂಟತನ ; ಗೂಂಡಾಗಿರಿ : ಪರಸತಿಯ ಬೇಟಿಯ ಪುಂಡು[ತಾ ಕಣ್ಣತನದಲಿ ಹೇಡಿರನು ಬಿಟ್ಟಿರ್ಪ ಪೋಟರಿಗೆ . . . ಹೇಳದಿರು ಪಾಜಿದೀ ಅನುಭವಾಮೃತವ (ಅಭುತ. ೨–೨); ಹೆಂಡತಿಗೆ ನೀನಳುಪಿ ಅಳುಪದ ಪುಂಡುತನವನು ತೋಜಿದ್ಯ (ಕೃಷ್ಣಾ. ೨–೨–೬); ಪಾಲೀಕನನ್ನು . . . ಪುಂಡುತನ ಮಾಡುವುದರಿಂದ ರೊಚ್ಚಿಗೆಬ್ಬಿಸಿದ್ದರು (ಅಭುಕ್ಕ. ೯೩). **ಪುಂಡತನ** : ಚಂಡಿತನವೆಂಬ ಓಂದಿ ಇಡಬೇಕು . . . ಪುಂಡತನವೆಂಬೊ ಓಂದಿ ರುಬ್ಬಿಡಬೇಕು (ಕುಕಂಠ. ೨–೩೩–೨); ಪುಂಡತನವನ್ಮೊಡನೆ ಮಾಡ್ದಪಂ ಫಲವನಾಣಲಿ (ಕುಕಂಗ. ೩–೯೬); ಇದು ಸಾಹುಕಾರ ಮಾಡಿಸುವ ಪುಂಡತನವೆಂದು ರಾಜಪ್ಪನಿಗೆ ತಿಳಿಯುವುದು ತಡವಾಗಲಿಲ್ಲ (ಅಚುಳಾ. ೨೦೬); ಪುಂಡತನ ಮಾಡಿದವ ಭಂಡತನ ಬಿಟ್ಟಾನೇ ? (ಗಾದೆ). [ಪುಂಡು₁ + – ತನ]

**ಪುಂಡುಪೋಕರಿ** (ನಾ). ನೀತಿನಿಯಮಗಳಿಲ್ಲದವನು : ಪುಂಡುಪೋಕರಿ ಗುಂಟು ಹೆಂಡತಿಮಕ್ಕಳಿಗಿಲ್ಲೀ ಕಾಲ (ಕೃಕಂಠ. ೦–೦೨೦–೦); ನೀನು ಮಾತ್ರ ಪುಂಡುಪೋಕರಿಯಾಗಿ ಸೋದರಿಯೊಬ್ಬಳನ್ನು ಭರಿಸಲು ಮುಂದಾಗುವೇಕೆ ? (ಕಂಗಕೋ. ೦೦೯). [ಪುಂಡು₁+ ಪೋಕರಿ]

**ಪುಂಡೆ** (ನಾ). ಪುಂಡಾಟವಾಡುವ ಹೆಣ್ಣು : ಹೆಂಡತಿಯಿಲ್ಲದ ಪುಂಡ ಬಂದು ಅವನಂಗವ ಹೊಯ್ಯಲಾಗಿ ಕಂಡರು ಗನ್ನಮಾದ ಪುಂಡೆ[ಜಾಣ. ೮] ಯಾರೆಲ್ಲರೂ ಕೂಡಿ (ಮನುಗಂ. ೪. ೨೩೬–೨೯). [ಪುಂಡ+ – ಎ₂]

**ಪುಂಡೇಳ್** (ಕ್ರಿ). ದಂಗೆಯೇಳು ; ಬಂಡಾಯ ಹೂಡು : ಮೂಡದಿಕ್ಕಿನೊಳ್ ಶಬರರುಂ ಮತ್ತಂ ಕಿಲಂಬರ್ ತಂಡುಮನ್ನೆಯರುಮೊಂದಾಗಿ ಪುಂಡೆದ್ದು ದಾಳಿವರಿದಾರಮಂ ಬಗೆಯದೆ ರಾಜ್ಯಮಂ ಬಾಧಿಸುತ್ತುಮಿರಲ್ (೪೪ನ್ನ. ೦–೬೨). [ಪುಂಡು₁+ಏಳ್₁ (<ಎಟುರ್₁)]

**ಪುಂಡ್ರ** (ನಾ). ೧. ಬಿಳಿಯಪಟ್ಟೆಗಳುಳ್ಳ ಒಂದು ಬಗೆಯ ಕೆಂಪುಬಣ್ಣದ ಕಬ್ಬು : 'ಪುಂಡ್ರೇಕ್ಷು' ಪರಾ. ೨. ಹಣೆಗೆ ಇಟ್ಟುಕೊಳ್ಳುವ ಗಂಧ, ವಿಭೂತಿ, ತಿಲಕ ಮೊದಲಾದ ಲಾಂಛನ : "ತಿಳಕಂ, ತಮಾಳಪತ್ರಂ, ಚಿತ್ರಕಂ, ವಿಶೇಷಕಂ ,ಪುಂಡ್ರಂ, ಲಲಾಟಿಕಾ— ಈ ೬ ಬೊಟ್ಟು" (ಹಕಾಯ. ೬೯–೩೬೬); ನೊಸಲಲಿ ಅಸ್ತ್ರ ಪುಂಡ್ರವ ಪಟ್ಟಿಕೊಂಡವ ಹೊಲೆಯ (ಕಸಾಮ. ೩೦–೩) : ಮುಖದೊಳ್ ಪುಂಡ್ರಮನಿಟ್ಟು (ಕಾಗಂ೦. ೦೯೯–೦೬). ೩. (ಕಪ್ಪು, ಕಂದು ಮೊದಲಾದ ಬಣ್ಣದ) ಕುದುರೆಯ ಮೈ ಮೇಲಿರುವ ಬಿಳಿಯ ಪಟ್ಟೆ : ಕಟಿ ಶಂಖವರ್ಣಮಸ್ತಕಲಲಾಟತಟೀಪುಟದೊಳ್ ಶಶಾಂಕಮ್ದ್ಯುತಿಯಂ ಘಟಯಿಸಿದ ಪುಂಡ್ರಮೊಳ್ಪಂ ಘಟಯಿಸುಗುಂ (ಅಕ್ಕಶಾ. ೩–೬). ೪. ಒಂದು ದೇಶದ ಹೆಸರು ; ಇದು ಈಗಿನ ಬಂಗಾಳ, ಬಿಹಾರ ಪ್ರದೇಶ. ೫. ಚಿತ್ರ : "ಜನಪದದೊಳುಂ ಶಿಲೀದೊಳಂ ಚಿತ್ರದೊಳಂ ಪುಂಡ್ರಮಕ್ಕು" (ಮುಂಗಲಾ. ೦೬೨–೩೬). ೬. ಹಾಳು. ೭. ತಾವರೆ. ೮. ಬಿಳಿಯ ಕಮಲ : 'ಪುಂಡ್ರಾಂಬುಜ' ಪರಾ. ೯. ಹೊಳೆ ; ನದಿ : (ಕ). ೧೦. ಒಡವೆ : (ಕ). [ಸಂ.]

**ಪುಂಡ್ರಕ** (ನಾ). ೧. ಕೆಂಪು ಕಬ್ಬು. ೨. ಹಣೆಯ ಮೇಲಿಟ್ಟುಕೊಳ್ಳುವ ತಿಲಕ ಮೊದಲಾದುವು. ೩. ಪುಂಡ್ರವೆಂಬ ದೇಶ ಹಾಗೂ ಅಲ್ಲಿಯ ಜನ. ೪. ಒಂದು ಬಗೆಯ ಬಳ್ಳಿ : "ಅತಿಮುಕ್ತಃ ಪುಂಡ್ರಕಃ ವಾಸಂತೀ, ಮಾಧವೀ, ಲತಾ—ಇ ಕಾಡುಯಿರುವಂತಿಗೆ ಹೆಸರುಗಳು" (ಸಿಜ್ಜಾಂತಿ. ೦೨೬); ತವಕ್ಷೀರ, ಪುಂಡ್ರಕ, ಪದ್ಮಕ . . . ಇವಂ ಚೂರ್ಣಮಂ ಮಾಡಿ ಹಾಕಿ ಹದನಲ್ಲಿಳುಹಿಕೊಂಡು ಆ ತುಪ್ಪವಂ ಪ್ರತಿದಿನವೂ ಸೇವಿಸೆ ಕ್ಷಯವ್ಯಾಧಿ . . . ಗುಣಮಪ್ಪುದು (ಕಕಕ್ಕ. ೨೫೦). ೫. – ಪುಂಡ್ರ ೩ : ಅನನಮಲ್ಲದೆ ಧವಳಸ್ಥಾನ ತಾನಾದೊಡಕ್ಕುದುವ ಕಂಠತಳಯಂ ಸ್ಫುಟದೊಳಗಡೆ ವಿರ(ಮ)ಳಸ್ಥಾನ ಪುಟ್ಟಿದೊಡೆ ಲಲಿತ ಪುಂಡ್ರಕ ನಾಮಂ (ಅಕ್ಕಶಾ. ೩–೩). [ಸಂ.]

**ಪುಂಡ್ರಲಕ್ಷ್ಮ** (ನಾ). ಕುದುರೆಯ ಮೈಮೇಲೆ ಇರುವ ಬಿಳಿಯಂ ಪಟ್ಟೆಯ ಚಿಹ್ನೆ : ಚಾಪಂ ಶ್ರೀವೃಕ್ಷಂ ಸುಪವಿಯುಮಂ ಸ್ವಸ್ತಿಮುದ್ರೆಮದ್ರ ಮುಂಪೊಂದಿ ರೂಪಕದ ಪುಂಡ್ರಲಕ್ಷ್ಮನಿರೂಪಕಮಾ ವಾಜಿ (ಅಕ್ಕಶಾ. ೩–೩). [ಸಂ. ಪುಂಡ್ರಲಕ್ಷ್ಮನ್]

**ಪುಂಡ್ರಾಂಬುಜ** (ನಾ). ಬಿಳಿಯ ತಾವರೆ : ಶರನ್ನೀರದಸ್ತೋಮಂ ಪೋಬರುಶಿರ್ದುದೀಗಳೆನಲುದ್ಯನ್ನಾನಸನ್ನಿಧದಿಂ ತಾವೆಟ್ಟಿದು ಪರಾಳದಾಲಮೆನಸುಂ ಪೂರ್ದಿತ್ತು ಪುಂಡ್ರಾಂಬುಜೋದ್ಭಾಸಶ್ರಿಯ ವಿಳಾಸಮಂ ದ್ವಿಗುಣಿಸುತ್ತುಬ್ಬಾಕರಶ್ರೇಣಿಯೊಳ್ (ಕುಮುಖ. ೬–೯೯). [ಸಂ.]

**ಪುಂಡ್ರಿಕೆ** (ನಾ). = ಪುಂಡಿ ೧ : ಹೊಲದ ಪುಂಡ್ರಿಕೆ, ಪುಂಡ್ರಿಕೆ, ಗೋಗು, ಪುಂಡಿ (ವೈ.ಶಿ೧. ೮೪-೯೩೦). [<ಸಂ. ಪುಂಡ್ರಕ?]

**ಪುಂಡ್ರೇಕ್ಷು** (ನಾ). = ಪುಂಡ್ರ ೧ : ಉಗುವಳನೀರಿಂದಂ ಕದಳಿಗಳಾ ಕದಳಿಗಳ ವಣ್ಣಾ ರಸದಿಂ ಪುಂಡ್ರೇಕ್ಷುಗಳ್ . . . ಬಳಿಗಂ (೧೧೪. ೨-೦೪.) [ಸಂ.]

**ಪುಂಡ್ರೇಕ್ಷುಚಾಪ** (ನಾ). ಮನ್ಮಥ ; ಕಾಮ : ಪುಂಡ್ರೇಕ್ಷುಚಾಪನ ಮರ್ದಪ್ಪ . . . ಮುಂಗುರುಳ್ಳಿದ್ದಿ (ನವಕೋ. ೫-೨೩). [ಸಂ.]

**ಪುಂಡ್ರೇಕ್ಷುದಂಡ** (ನಾ). ಪಟ್ಟೆಕಬ್ಬಿನ ಜಲ್ಲೆ : ಪುಂಡ್ರೇಕ್ಷು[ಕಾಂಡ]ರಸದಿಕ್ಷು[ದುಡದಿ ವಣ್ಣಾನಜನಮರೆ (ಶಂಕರ. ೦೩-೫) ; ಸೋಗೆವೆರಸಿದ ಪುಂಡ್ರೇಕ್ಷುದಂಡಗಳನವರ್ಚಿ ಬಾಳವೇರ್ಗಳಿಂ ಬಿಗಿದು . . . ಅಳವಡಿಸಿದ ಸಂಧಯಿಯರಲ ಪರಾಗದ ಪೊಂಜಗಲಿಯ ಮೇಲಣಸುಗೆದೆರಲರ್ವಾಸಿ ನೊಳರಸಿವೆರಸಿ ಕುಳ್ಳಿರ್ದು (ಪಾಶ್ವ. ೦೦-೫೦ ವ). [ಸಂ.]

**ಪುಂನಪುಂಸಕಲಿಂಗ** (ನಾ). [ವ್ಯಾಕ] ಪುಲ್ಲಿಂಗ ಹಾಗೂ ನಪುಂಸಕ ಲಿಂಗ : ಪುಂನಪುಂಸಕಲಿಂಗಕ್ಕೆ—ರವಿ ಮೂಡಿದಂ, ರವಿ ಮೂಡಿದುದು (ಶಮದ. ೮೮ ಪ್ರಯೋ). [ಸಂ.]

**ಪುಂನಪ್ಪು** (ನಾ). = ಪುಂನಪುಂಸಕಲಿಂಗ : ಪುದಿಗುಮುದಂತಕೆ ಪುಲ್ಲಿಂಗದ ಪೋಲ್ ಕಿಜ್ಜದೆಡೆಗಳ್ಗಳ್ಯಲ್ಲಂ ಸ್ತ್ರೀಲಿಂಗದೊಳಂ ಪುಂನಪ್ಪನೊಳಂ ಪುದಿಗುಂ ತಿಳಿ (ಶಮದ. ೦೨೦ ೩). [ಪುಂ+ನಪ್ಪು]

**ಪುಂಬುಟ್ಟ** 'ಪೊಂಬುಟ್ಟ' ನೋ.

**ಪುಂಭಾವ** (ನಾ). ೧. ತಾನು ಪುರುಷನಾಗಿರಬೇಕಾಗಿತ್ತು ಎಂಬ ಭಾವನೆ; ಗಂಡಸಿನ ಮನೋವೃತ್ತಿ : ನಾಂದವರೆ ಪತ್ರಿದಂಬರದಿಂ ದೆಸೆವರಸಿಯು ನಿತಂಬಬಿಂಬಮನಬಳಾವೃಂದಮದೀಕ್ಷಿಸಿ ಹೃದಯದೊಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ (ಶಂದ್ರಕೃ. ೬-೦೩೧). ೨. [ಕಾಮಶಾ] ಪುರುಷಾಯಿತವೆಂಬ ಸುರತಬಂಧ : ಒರ್ವ ಗುರುಕುಚೆ ವೃದ್ಧವಿಪ್ರನೊಳ್ ಪುಂಭಾವದಿ ಸುರತದೊಳಿರೆ (ಧ್ಯಾಕಶ. ೩೬-೯೬). [ಸಂ.]

**ಪುಂವೇದ** (ನಾ). [ಜೈನ] ಗಂಡುಜೀವಕ್ಕೆ ಹೆಣ್ಣಿನ ಮೋಹವುಂಟು ಮಾಡುವ ಕರ್ಮ ; P ಚಾರಿತ್ರಮೋಹನೀಯದ ಭೇದವಾದ ವೇದನೋಕಷಾಯದ ಉದಯದಿಂದ ಕಾಮಭಾವ ಹುಟ್ಟುತ್ತದೆ. ಪುಂವೇದ ಅಥವಾ ಪುರುಷವೇದದ ಉದಯದಿಂದ ಸ್ತ್ರೀಯ ಬಯಕೆಯೂ ಸ್ತ್ರೀವೇದದ ಉದಯದಿಂದ ಪುರುಷನ ಬಯಕೆಯೂ ಉಂಟಾಗುತ್ತದೆ : ಕಿಡಿಸಿದು ಬೇಗದಿಂ ಕ್ರಮಕ್ಕಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ . . . ಘಾತಿಸಿ (ಆದಿಪು. ೦೦-೦೪ ವ) ; ಸಮನಂತರದೊಳ್ ಪುಂವೇದಪೂರ್ವಸತ್ಕರ್ಮಪರಂ ಪರಮೋಜಿಸಿ ಕಿಡಿಸಿದು ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳಾಜಿಂ (ಶಂದ್ರಕೃ. ೦೪-೬೦). [ಸಂ.]

**ಪುಂಶಿಲೆ** (ನಾ). [ಶಿಲ್ಪಶಾ] ವಿಗ್ರಹನಿರ್ಮಾಣಕ್ಕಾಗಿ ಆಯ್ದುಕೊಳ್ಳುವ ಕಲ್ಲುಗಳಲ್ಲಿ ಒಂದು ಪ್ರಕಾರ ; ಗಟ್ಟಿಕಲ್ಲು : ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂದು ಮೂರುವಿಧ; ಕಂಚಿನ ತಾಳದ ನಾದದಂತೆ ಧ್ವನಿ ಕೊಡುವ ಶಿಲೆಯು 'ಪುಂಶಿಲೆ'ಯೆಂದೂ, ಘಂಟಾನಾದದಂತೆ ಧ್ವನಿತವಾಗುವ ಶಿಲೆಯು 'ಸ್ತ್ರೀಶಿಲೆ'ಯೆಂದೂ, ತಾಳವಿಹೀನವಾದ ಶಿಲೆಯು 'ನಪುಂಸಕಶಿಲೆ' ಯೆಂದೂ ಉಕ್ತಿಯಿದೆ. ಪುರುಷದೇವತಾವಿಗ್ರಹಗಳನ್ನು ಪುಂಶಿಲೆಯಿಂದಲೂ ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ ಆಧಾರಪೀಠಾದಿಗಳನ್ನು ನಪುಂಸಕಶಿಲೆಯಿಂದಲೂ ಮಾಡಬೇಕೆಂದು ವಿಧಿಸಿದೆ (ಶಾರದ. ೬೬). [ಸಂ. ಪುಂಶಿಲಾ]

**ಪುಂಶ್ಚಲಿ, ಪುಂಶ್ಚಳಿ** (ನಾ). ಹಾದರಗಿತ್ತಿ ; ಜಾರೆ : "ಪುಂಶ್ಚಲಿ ಕುಲಟೆಯಸತಿ ಕುಲಪಾಂಸುಳೆ ಬಂಧಕಿ ಜಾರೆ ಪಾಣ್ಬೆಯಿತ್ವರಿಕೆಯುಪಳ್" (ವಸ್ತುಕೋ. ೩೨-೪); ಉಡಿಯಂ ಸಡಿಲಿಸಿಯುಡುವಡೆ ನಡೆ ನೋಟ್ಟಡೆ ತನ್ನ ಕಿವಿಯುಮಂ ತಲೆಯುಮನಂತಡಿಗಡಿಗೆ ತುಜಿಸಿಕೊಳ್ವಡೆ ಪಡಿವಾತೇಂ ನಿರ್ವಿಚಾರ ಪುಂಶ್ಚಲಿಯಾಕ್ಕುಂ (ಪಂಚತಂ. ೯-೧೦); ಭಾವಕಸುಖಿ ಸೋಲ್ತು ಕಣ್ಣಾಜಿದು ಪುಂಶ್ಚಲಿಯಂ ಜಡಿದಲ್ ರಹಸ್ಯದೊಳ್ (ಕೃಷ್ಣಕೃ. ೫-೪೯).

**ಪುಂಶ್ಚಳಿ** : "ಪಾಂಸುಳಾ, ಬಂಧಕೀ, ಸ್ವೈರಿಣೀ, ಅಸತೀ, ಪುಂಶ್ಚಲೀ... ಅಭಿಸಾರಿಕಾ—ಈ ೧೦ ಹಾದರಗಿತ್ತಿ" (ಹಲಾಯು. ೮೦-೫೪೨) ; ಪುಂಶ್ಚಳಿಯಂತೆ ನೀನೆಲ್ಲಿಗೆ ಪೋಗಿ ಬರ್ಪೆ (ಜಾತ್ರಂಕೃ. ೧೦೭) ; ಪುಂಶ್ಚಳೀಯರ್ ಬಂದುಮಕಳಾಂತಸೂಚಿತನಿಶಾಂತಾಂತಂಗಳಂ ಪೊದ್ದಿದರ್ (ಪಾಶ್ವ. ೦೦-೫೯). [ಸಂ. ಪುಂಶ್ಚಲೀ]

**ಪುಂಶ್ಚಳಿ** 'ಪುಂಶ್ಚಲಿ' ನೋ.

**ಪುಂಶ್ಚಾಂಕ** (ನಾ). ಲಿಂಗರೂಪಿಯಾದವನು : ಪುಂಶ್ಚಾಂಕ ಸದ್ಭಕ್ತ ವಾತ್ಸಲ್ಯ ಭೂಷ ಜನರಿಚ್ಛಾಸಫಲದಾಯಿ ಸಚ್ಚಿದಾನಂದರೂಪ . . . ಪೊರೆಗೆ (ಗುರುಚಾ. ೦-೩). [ಸಂ.]

**ಪುಂಸ** (ನಾ). ೧. ಗಂಡಸು ; ಪುರುಷ : ಹಿಂಸಾನಂದ ಅಸ್ತೇಯಾನಂದ ವ್ಯಾಷೆ ಮತ್ತೆ ವಿಷಯಸಂರಕ್ಷಣಾನಂದ ಸಂಶಯವಿಲ್ಲದೆ ನಾಲ್ಕು ರೌದ್ರ ಧ್ಯಾನ ಪುಂಸರೆಯ್ದುವರು ನರಕಕೆ (ಧ್ಯಾಕಶ. ೬-೬೪) ; ಆಸೆಯನು ನಿಜದಾಸಿಗೈದಿಹ ಪುಂಸರೆಲ್ಲರು ದಾಸರೆನಿಸುವರು (ಹರಿದಾ. ೩೬). ೨. ಗಂಡಸುತನ ; ಪುರುಷತ್ವ ; ಪುಂಸ್ತ್ವ : ಆ ಹೆಣ್ಣುಜನ್ಮದೊಳು ಪಡೆದತಿಶಯವಾಕೆ ಪುಂಸವ ಪಡೆದುದಾಗಿರೆ ನಿಮ್ಮ ಸುತರವರಡಿಯ ಕಾಯ್ವುರು (ಕರಾಕಟ. ೦೩೫-೬೬). [ಸಂ. ಪುಂಸ್]

**ಪುಂಸತ್ವ** (ನಾ). ಪುರುಷತ್ವ ; ಗಂಡುತನ : ಅವುಗಳು ಕಂತಮ್ಮ ಕೆಲಸವನ್ನು ಮಾಡದೆ ಹೋದರೆ . . . ಪುಂಸತ್ವ ಇಲ್ಲದಾಗುವುದು (ಪ್ರಾಂಶ್ರ. I, ೯೮೩). [<ಸಂ. ಪುಂಸ್ತ್ವ]

**ಪುಂಸವನ** (ನಾ). ೧. ಷೋಡಶಸಂಸ್ಕಾರಗಳಲ್ಲಿ ಒಂದು ; ಗರ್ಭಿಣಿಯಾದವಳಿಗೆ ಗಂಡುಮಗು ಆಗಲೆಂದು ಮಾಡುವ ಒಂದು ಶುಭ ಸಂಸ್ಕಾರ ; ಸೀಮಂತ : ಅವನೀಶ್ವರನಾಗಳ್ ಪುಂಸವನಂ ಮೊದಲಾದ ಸಕಲಮಾಂಗಲ್ಯಮಹೋತ್ಸವಮಂ ಮೆಜೆದಂ (ಶಂಖಾಶೂ. ೩-೦೦೩); ಇನಕುಲಾಧೀಶ್ವರಂ . . . ಪುಂಸವನಸೀಮಂತಮಂ ತಾಂ ಚಾರುಲೋಚನೆಗೆ ವಿಸ್ತರಿಸಿದಂ (ಕೃಪಾಣಾ. ೦೮-೬೮) ; "ಪುಂಸವನ" ವೆಂದರೆ ಗಂಡುಮಗುವು ಆಗಬೇಕೆಂದು ಮಾಡುವ ಸಂಸ್ಕಾರವು (ಆಹ್ನಿಕ. ೧೨೨). ೨. ಗಂಡಸಿನ ಸ್ನಾನ. ೧. ೨. ಸುವಿದಿತಮಿನಿತುದಿನಂ ಸ್ತ್ರೀಸವನಂ ನಿನಗೆಂದು ಕಾಂತೆ ಪುಂಸವನಂ ಮಾಡುವುದೆಂದರ್ಥಾಂತರದಿಂದ ಪಾನೀಶಂ ಸರಸವಾಡಿ ಕಾಡುಗುಮೆಂದೋ (ಕೃಷ್ಣಕೃ. ೩-೮೮). [ಸಂ.]

**ಪುಂಸ್ಕೋಕಿಲ, ಪುಂಸ್ಕೋಕಿಳ** (ನಾ). ಗಂಡುಕೋಗಿಲೆ : ಉನ್ಮದ ಮಧುಕರರಝಂಕಾರಮಂ ಕೌಮುದೀಸಂಪದಮಂ ಪುಂಸ್ಕೋಕಿಲಾಲಾಪ ಮನಲವೆಲರಂ ಚಾರ್ತಗೆಯ್ಯಂ ಮನೋಜಂ (ಬ್ರಹ್ಮಕೃ. ೩-೨೯); ತೀವಿದಲ್ ಮಾಸಂತಿಯಂ ಸಂದಿಸಿ ಪುಗಲೆನೆ ಪುಂಸ್ಕೋಕಿಲಂ . . . ತಿಳಿಪಿದಂ ಪ್ರೇಮಕಾಂತಂ ವಸಂತಂ (ಅಪಂಕೃ. ೬-೬೪). ಪುಂಸ್ಕೋಕಿಳ : ಮಧುಕರ ನಿಕರಮುಂ ಪುಂಸ್ಕೋಕಿಳಕಳಾಪಮುಂ ರಾಜಕೀರಕದಂಬಕಮುಂ ಮುಂದೆ ನಡೆಯಜಿದೋಲಗಿಸುತ್ತುಂ ಬರೆ (ಶಾಂತಿಕೃ. ೬-೦೨೮ ವ). [ಸಂ.]

**ಪುಂಸ್ಕೋಕಿಳ** 'ಪುಂಸ್ಕೋಕಿಲ' ನೋ.

**ಪುಂಸ್ತ್ರೀಲಿಂಗ** (ನಾ). [ವ್ಯಾಕ] ಪುಲ್ಲಿಂಗ ಹಾಗೂ ಸ್ತ್ರೀಲಿಂಗ : ಪುಂಸ್ತ್ರೀಲಿಂಗಕ್ಕೆ—ಇವರ್ ಪುರುಷರ್, ಇವರ್ ಸ್ತ್ರೀಯರ್ (ಶಮದ. ೮೮ ಪ್ರಯೋ). [ಸಂ.]

**ಪುಂಸ್ತ್ವ** (ನಾ). ೧. ಪುರುಷತ್ವ ; ಗಂಡುತನ. ೨. ವೀರ್ಯ; ರೇತಸ್ಸು. ೩. [ವ್ಯಾಕ] ಪುಲ್ಲಿಂಗ. [ಸಂ.]

**ಪುಕಪುಕ** (ನಾ). ಹೆದರಿಕೆಯಿಂದ ಎದೆ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣಪದ : ಧೈರ್ಯ ಮಾಡಿ ಹೊರಟಿದ್ದೇನೋ ಸರಿ ; ಆದರೆ ಒಳಗೆ ಪುಕಪುಕ ಎನ್ನುತ್ತಲೇ ಇದೆ (ಕೂ).

**ಪುಕಸಟ್ಟೆ** 'ಪುಕ್ಕಟೆ' ನೋ.

**ಪುಕಸಾಟೆ** 'ಪುಕ್ಕಟೆ' ನೋ.

**ಪುಕಳಿ** 'ಪುಕುಳಿ' ನೋ.

**ಪುಕಾರಿಸು** (ಕ್ರಿ). ೧. ಕೂಗು ; **ಚೀರು** ; ಕಿರುಚು : ಆ ಪದಕವಂ . . . ಪ್ರೀತಿಯಿಂ ಧರಿಸಲದು ಸಪಾಪಕೃತಿಯಾಗಿ ಪುತ್ರರಂಗೈಯಲದುಂ ಬಿಸುಟೋಡಿ ಪುಕಾರಿಸಲ್ ಅರಸನರಿದು ಬೆರಗಾಗಿ (ಕರ್ಣಾಕ್ಕಾ. ೩೩೩-೦೪). ೨. ಸಾರು ; ಕೂಗಿ ಹೇಳು : ದುಡ್ಡಿನ ಚೀಲ ಹೊತ್ತುಕೊಂಡು ಸಾಲ ಬೇಕೆ ಎಂದು ಸವಾಲು ಪುಕಾರಿಸುತ್ತ ತಿರುಗುತ್ತಿದ್ದರೆ ? (ಲೀಕಹ. I, ೦೦). [ಪುಕಾರು + –ಇಸು₃]

**ಪುಕಾರು,** ಪುಕಾರೆ (ನಾ). ೧. ಗದ್ದಲ ; ಗಲಾಟೆ : ಕಿಲ್ಲೇದಾರರುಂ ಕೊತ್ವಾಲರುಂ ನಾಳೆ ಬರುವ ಬಳ್ಳಾರಿ ಲಷ್ಕರ ಸರಬರಾಯಿಯುಂ ತುಸ ಪುಕಾರಿಲ್ಲದಂತೆಸಗ ವೇಳು (ಅಹಾರಾ. ೩೦-೩೪). ೨. ಆಕ್ಷೇಪಣೆ ; ತಕರಾರು ; ದೂರು : ಅವರ ಗೈರ್‌ಹಾಜರಿ ಕಾಲದಲ್ಲಿ ಪುಕಾರಿಲ್ಲದೆ ಕೆಲಸ ನಡೆಯಲು ತಮ್ಮ ಬಂಧುಮಿತ್ರರನ್ನು ತಮ್ಮ ಜವಾಬ್ದಾರಿಯ ಮೇಲೆ ನೇಮಿಸಬೇಕು (ಗ್ರಾಮೂಕ. ೬) ; ನಾಳೆಯ ದಿನ ಇಲ್ಲದ ಪುಕಾರುಗಳಿಗೆ ಅವಕಾಶವಾಗುತ್ತೆ (ಮುಕೀ. ೦೦) ; ಪ್ರತಿದಿನವೂ ಇವನ ಮೇಲೆ ಒಂದಲ್ಲ ಒಂದು ಪುಕಾರು ಇದ್ದೇ ಇರುತ್ತದೆ (ಕಲ್ಲಾ. ೬೪). ೩. ಅಪವಾದ ; **ಆಡಿಕೆ** : ಇನ್ನೂ ಏನೋ ಇರಬೇಕು, ಇಲ್ಲದಿದ್ದರೆ ಇಷ್ಟು ಪುಕಾರು ಹೇಗೆ ಹುಟ್ಟೀತು ? (ಅಪಾಕ. ೩೮) : ಪುಕಾರು ಇಲ್ಲದಂತೆ ನೋಡಿಕೊಳ್ಳಿ (ಸಾತ್ರಿ. ೩೬). **ಪುಕಾರೆ** : ೧. ಕಳ್ಳರು ಬಂದಂತೆ ಏನಾದರೂ ಪುಕಾರೇಯುಂಟಾದ ಕೂಡ್ಲೆ . . . ತಾಕೀದ್ ಮಾಡುವದು ಸಹ ಪೋಲೀಸ್ ಪಟೇಲನ ಕಾರ್ಯವಾಗಿರತಕ್ಕದ್ದು (ಗ್ರಾಮೂಕ. ೪ ೩೬೩೪). ೩. ನೀವೇ ಅವರಾಗಿ ಇದ್ದಿದ್ದರೆ ಈ ಏಲು ದೇಶದಲ್ಲೆಲ್ಲ ಪುಕಾರೆ ಎಬ್ಬಿಸುತ್ತಿತ್ತಲ್ಲ ! (ಕಹಾರು. ೦೯೭).

**ಪುಕಾರಾಗು,** ಪುಕಾರು ಆಗು = ಗಲಾಟೆಯಾಗು : ವಿಷಯವು ಬಯಲಾಗಿ ಎಲ್ಲರ ಕಿವಿಗೂ ಬೀಳು : ಈರ ಒಂದು ದಿನ. . .ಹೆಂಡತಿಯನ್ನು ಚೆನ್ನಾಗಿ ಬಡಿದ. ಅದು ಊರಲ್ಲೆಲ್ಲಾ ಪುಕಾರಾಯಿತು (ಶಪಾ. ೬೪) ; ಕಳಲೆಯ ನಂಜರಾಜನು ಮಾತ್ರ ಕೊಂಚವೂ ಪುಕಾರಾಗದಂತೆ ಹತ್ತುಸಹಸ್ರ ಸೈನ್ಯವನ್ನು ಸಿದ್ಧಗೊಳಿಸಿಟ್ಟನು (ಶ್ರೀಕಾಮು. ೦೦೬) ; ಪುಕಾರು ಆಗದೆ ಇದ್ದ ಹಾಂಗೆ ಅವನ್ನ ಸುಟ್ಟು ಹಾಕಿ ಬಿಟ್ರಂತೆ ಕಾಡಿನಾಗೆ (ಮುಕಮ. ೩೦೬). **ಪುಕಾರು ಮಾಡು** = ಗಲಾಟೆ ಮಾಡು ; ಕೂಗೆಬ್ಬಿಸು : ಗರಡಿಮನೆ ಹೊರಸೂರಿನಲ್ಲಿ ಬೆಂಕಿ ಉರಿ ಎದ್ದದ್ದು ಕಂಡು, ಪುಕಾರು ಮಾಡಿದ್ದರಿಂದ, ಬೆಂಕಿ ಹಾಕಿದವನು ಕಾಡೊಳಗೆ ಓಡಿಹೋದ (ರಾಕೇಂದ್ರ. ೨೬೩) ; ಉಣಲಿಕ್ಕೆಂದು ಕಾಡಿದೊಡೆ ಶಂಕೆಯಿಂದಿವರು ರಾಕ್ಷಸರುದಿಸಿದರೆಂದು ಪೋಡಿ ಪೋಗಿ ಪುಕಾರು ಮಾಡುವುದುಂ ಜನರೆಲ್ಲಾ ನೆರೆದು ವಿಚಾರಿಸಿ (ಕರ್ಣಾಕ್ಕಾ. ೬-೦೩೬) : ಮಾವನೂ ನೀನೂ ಸೇರಿಕೊಂಡು ಏನೇನೊ ಪುಕಾರು ಮಾಡ್ತಿದ್ದೀರಂತೆ ? (ಮುಕಮ. ೩೩೦). [← ಹಿಂ. ಮರಾ. ಪುಕಾರ್]

**ಪುಕಾರೆ** 'ಪುಕಾರು' ನೋ.

**ಪುಕುಳಿ,** ಪುಕಳಿ (ನಾ). ೧. ಸ್ತ್ರೀಯ ಜನನೇಂದ್ರಿಯ ; ಯೋನಿ : (೪). ೨. ಮಲದ್ವಾರ : (೪). **ಪುಕಳಿ** : (೪). 'ಪೂಕು'. 'ಮುಕುಳಿ' ಪರಾ. [ದೇ. ॥ ತುಳು. ಪುಕುಳಿ]

**ಪುಕ್ಕ₁** (ನಾ). ೧. ಹೇಡಿ ; ಅಂಜುಬುರುಕ : ಪಕ್ಕನೆ ನಕ್ಕರದುಂ ಕಂಡಕ್ಕಜ ಪಿಂಗೆ ಗೊಳ್ಳನೆಲ್ಲರುಂ ಕೈವೊಯ್ದುಂ ಪುಕ್ಕಮಹ ಜೈನಪತ್ರಿಕೆ ದಕ್ಕುಂ ಸೇಡಿದುದು ನಗ್ನರುಬ್ಬಿಕಂ ಚಿತ್ರಂ (ಹರಿಶ್ಚ. ೪-೦೩-೬೦) ; ನಾನು ಅವರ ಜೊತೆಗೆ ಹೋಗುತ್ತೇನೆ. ಅವರೇನೂ ನಿಮ್ಮಂತೆ ಪುಕ್ಕರಲ್ಲ (ಕೀಶ್ರಕ. ೦೦೪) ; ಅಷ್ಟು ಪುಕ್ಕನಾಗಿದ್ದರೆ ಉಮೇದಿನಿಂದ ಹೊರಟದ್ದು ಯಾಕೆ ನೀನು ? (ಮುಳಕ್ಷ. ೬೦). (ಗು). ೨. ಅಂಜುವ ; ಹೆದರುವ : ಈ ಜನಸ್ಥಾನವು ನಮ್ಮಂಥ ಪುಕ್ಕಜನರಾದರೂ ನಿರ್ಭೀತಿಯಿಂದ ಸಂಚಾರ ಮಾಡಲಿಕ್ಕೆ ಯೋಗ್ಯವಾಗಿರುತ್ತದೆ (ಉರಾಚ. ೩೦) ; ನಿನ್ನ ಜಾತಿಯೇ ಪುಕ್ಕಜಾತಿ (ಚಾಚಿಲ. ೦೦೦). [ಪುಕು₁ + – ಅ₇]

**ಪುಕ್ಕ₂** 'ಪುಚ್ಚ₂' ನೋ.

**ಪುಕ್ಕಟೆ,** ಪುಕಸಟ್ಟೆ, ಪುಕಸಾಟೆ, ಪುಕ್ಕಟ್ಟೆ, ಪುಕ್ಕಸಾಟೆ, ಪುಗಸಟ್ಟೆ, ಪುಗಸಾಟೆ, ಪುಕ್ಕಟೆ (ಅ). ೧. ಬಿಟ್ಟಿಯಾಗಿ; ಉಚಿತವಾಗಿ; ಧರ್ಮಾರ್ಥವಾಗಿ : ಇಕ್ಕದೆಚೆಯದೆ ಬಿತ್ತಿ ಬೆಳೆಯದೆ ಪುಕ್ಕಟೆಯು ಸ್ವರ್ಗಾದಿ ಭೋಗವು ಸಿಕ್ಕಲರಿವುದೆ (ಕುಶ್ಕಾಉ. ೪-೯೬) ; ಪಕ್ಕಕೋದುಪವಾಸ ಪುಕ್ಕಟೆ ಶ್ರೀತೊಲಸಿ ಸಿಕ್ಕಿಸಿಕ್ಕಿದಲಿ ಹರಿನಾಮ ಭವಭವದಿ ಸಿಕ್ಕಿ ಸಾಯುವದು (ಸರ್ವಜ್ಞ. ೯೦೪) ; ನಾನು ಔಷಧಿಗೆ ಬಂದೆ . . . ನೀವೂ ಪುಕ್ಕಟೆ ಕೊಡಬೇಕಾಗಿಲ್ಲ (ಕುಸಂಕಂ. ೮೦). ೨. ವ್ಯರ್ಥವಾಗಿ ; ಸುಮ್ಮಸುಮ್ಮನೆ ; ನಿಷ್ಪ್ರಯೋಜಕವಾಗಿ : ನೀವು—ನಿಮ್ಮ ಮಗ, ಮನಸಿನಿಂದ ಪ್ರೇಮದಿಂದ ಕಲಿಸುತ್ತೀರಿ. ಇತರರು ಏಕೆ ಪುಕ್ಕಟೆ ತಲೆಯೊಡಕೊಳ್ಳಬೇಕು (ಶ್ರೀಕೂಕ್ರ. ೨೦೬) ; ಇಲ್ಲಿಗೆ ಬಂದು ನಾನು ಪುಕ್ಕಟೆ ಮೆಯ್ಯುಕ್ಕಿರಲಿಲ್ಲ (ಲೀಕಹ. II, ೨೬). **ಪುಕಸಟ್ಟೆ** : ೧. ಪಂಚಾಯ್ತಿಮೆಂಬರುಗಳಿಗೆಲ್ಲ ಪುಕಸಟ್ಟೆ ಕ್ಷೌರ ಮಾಡುತ್ತೇನೆ (ಕಂಗಳ. ೬೩). **ಪುಕಸಾಟೆ** : (೪). **ಪುಕ್ಕಟ್ಟೆ** : ೧. ಸ್ವಾಮಿ, ಇವರು ಪುಕ್ಕಟ್ಟೆ ಕೆಲಸ ಮಾಡುತ್ತಿದ್ದಾರೆ (ಮುಕಾಚ. ೦೬೦) ; ಸಿಪಾಯಿಗಳಾದವರಿಗೆ ಪುಕ್ಕಟ್ಟೆ ಪ್ರಯಾಣದ ಸೌಕರ್ಯವಲ್ಲದೆ ಮತ್ತಾವ ಸೌಕರ್ಯವನ್ನೂ ಒದಗಿಸುವುದಿಲ್ಲ (ಶ್ರೀವಾ. II, ೪೪೦). **ಪುಕ್ಕಸಾಟೆ** : ೧. ಅದೇನು ಪುಕ್ಕಸಾಟೆ ಬಂದು ಬಿಡುತ್ತೇನು ? (ಕೂ). **ಪುಗಸಟ್ಟೆ** : ೧. ರಾಜಶ್ರೀಮಿಲ್ಲಿನ ಷೇರುಗಳನ್ನು ಪುಗಸಟ್ಟೆ ಕೊಟ್ಟರೂ ಕೊಳ್ಳುವವರಿರಲಿಲ್ಲ (ಸಾಚಿ. ೨) ; ಸುಮ್ಮನೆ ಪುಗುಸಟ್ಟೆ ಅನ್ನ ಹಾಕುತಾ ಇರಲಿಲ್ಲ (ಜಾಹೀರ್. ೬೩). **ಪುಗಸಾಟೆ** : ೧. ಇನ್ನೊಂದು ಸಾರಿ ಹುಟ್ಟಿ ಬರಬೇಕು ಪುಗಸಾಟೆ (ದುಂಂಕ. ೧೦೩). **ಪುಕ್ಕಟೆ** : ೨. ಪುಕ್ಕಟೆ ಕಳೆದ ಕಾಲೇಜದಲ್ಲಿ ಸಮಯವನ್ನು (ಸ್ವಕ್ರಕ. ೦೦೪) ; ಬಂಜೆಯಾಗಿ ಬಂದ ಗಿರಿಜಾ ಸಪ್ತ ಅಪತ್ಯದ ಪುಕ್ಕಟೆ ಅಭಿಧಾನದಿಂದ ಖುಷಿಯಾಗುತ್ತಿದ್ದಳು (ಲೀಕಹ. II, ೪೪೬).

**ಪುಕ್ಕಟೆ ಬಸವ** = (ಆಲಂ) ಬಿಟ್ಟಿಯಾಗಿ ಕೆಲಸ ಮಾಡುವ ವ್ಯಕ್ತಿ : ಬಿಟ್ಟಿ ಕೆಲಸವನ್ನು ಮಾಡಿಸಿಕೊಳ್ಳುವವರು ಈ 'ಪುಕ್ಕಟೆಬಸವ' ನಿಗಾಗಿ ಅಲೆದಲೆದು ಹುಡುಕಬೇಕಾಗಿರಲಿಲ್ಲ (ಕಳಸು. ೩).

[← ಮರಾ. ಪುಕಟ್, ಪುಕಾಸಾಠೀ./ತುಳು. ಪೊಕ್ಕಡೆ]

**ಪುಕ್ಕಟ್ಟೆ** 'ಪುಕ್ಕಟೆ' ನೋ.

**ಪುಕ್ಕತನ** (ನಾ). ಅಂಜುಗುಳಿತನ ; ಪುಕ್ಕಲು : ಅತಿಸೂಕ್ಷ್ಮತನವು ಪುಕ್ಕತನಕ್ಕೆಳಸುತ್ತದಲ್ಲವೆ ? (ಗಾಳಿಗು. ೬೬) ; ಮೊದಲಿನ ಪುಕ್ಕತನ ಈಗ ಅವನಲ್ಲಿ ಉಳಿದಿರಲಿಲ್ಲ (ಮುಕಚ. ೦೩೬). [ಪುಕ್ಕ₁ + – ತನ]

**ಪುಕ್ಕಲ** (ನಾ). ಹೇಡಿ ; ಪುಕ್ಕ : ಮೊದಲು ಧೈರ್ಯದಿಂದಿದ್ದ ಕೆಲವರು ಈ ಗೋಳಾಟವನ್ನು ಕೇಳಿ ಪುಕ್ಕಲರಾಗುತ್ತಿದ್ದರು (ರಾಹಿ. ೦೬೩).

[ಪುಕ್ಕಲು + –ಅ₇]

**ಪುಕ್ಕಲತನ** 'ಪುಕ್ಕಲುತನ' ನೋ.

**ಪುಕ್ಕಲಿ** (ನಾ). ಹೆದರುವ ಸ್ವಭಾವದವಳು; ಅಂಜುಬುರುಕಿ : ಅಯ್ಯೋ ಪುಕ್ಕಲಿ, ಕನ್ನೆಗೆ ಅಂಚಿನ ಹಚ್ಚಿಕೊಂಡು ಅಡಿಗೆಮನೇಲಿ ಬಿದ್ದಿರೋಕೆ ಸರಿ ನೀನು (ಕಂಕಾ. ೦೬೪). [ಪುಕ್ಕಲು + – ಇ₁]

**ಪುಕ್ಕಲು** (ನಾ). ೧. ಅಂಜಿಕೆ ; ಭಯ ; ಭೀತಿ : ಭರಮ್ಯೆಹೆಗ್ಗಡೆಯವರು ಶ್ರೀಮಂತರಾಗಿದ್ದರೂ ಸರಕಾರ, ಪೋಲೀಸು ಎಂದರೆ ಅವರಿಗೆ ತುಂಬ ಪುಕ್ಕಲು (ಮಲೆಮ. ೩೩೪). (ಗು). ೨. ಅಂಜಿಕೆಯುಳ್ಳ ; ಹೆದರುವ : ಅಪರಾಧಿಗಳು ಯಾವಾಗಲೂ ಪುಕ್ಕಲು ಸ್ವಭಾವದವರು (ಕನ್ನಡ. ೦೬೯); ಈ ಪುಕ್ಕಲುಮಾತುಗಳು ನಿನಗೆ ಸಲ್ಲವು (ಕಾಂತಶಾ. ೨೩); ಮೊದಲೇ ಅವಳದ್ದು ಪುಕ್ಕಲು ಜೀವ. ಅದೂ ಆ ಹೊತ್ತಿನಲ್ಲಿ ಬಂದರೆ ಹೆದರುವುದು ಸ್ವಾಭಾವಿಕ (ದೀಪಹಂ. ೨೧೩).

[ಪುಕ್ಕ$_1$ + –ಅಲು (< –ಅಲ್$_2$). / ತುಳು. ಪುಕ್ಕಲೆ; ಕೊಡ. ಪುಕ್ಕೀಲೇ]

**ಪುಕ್ಕಲುತನ, ಪುಕ್ಕಲತನ** (ನಾ). = ಪುಕ್ಕತನ : ಛೆ! ಎಲ್ಲಾ ಪುಕ್ಕಲುತನ (ಮುಂಜಾ. ೧೯೭); ವಾರ್ತಾಪತ್ರಿಕೆಗಳ ಪುಕ್ಕಲುತನವನ್ನೂ ಮುಂದಾಳುಗಳ ಡೋಲಾಯಮಾನವಾದ ನೀತಿಯನ್ನೂ ಕಂಡು, ಸ್ವತಂತ್ರವಾದ ಮತ್ತು ಧೈರ್ಯದಿಂದ ಕೂಡಿದ ಪತ್ರಿಕೆಯ ಅಗತ್ಯದ ವಿಷಯದಲ್ಲಿ ಅವನಿಗೆ ಸಂಶಯ ಉಳಿಯಲಿಲ್ಲ (ದಾದಾಪ. ೬೦). **ಪುಕ್ಕಲತನ** : ಅವಳ ಪುಕ್ಕಲತನಕ್ಕೆ ಚಪ್ಪಾಳೆ ತಟ್ಟಿ ನಗಬೇಕು! (ಮರುಳ. ೧೦೨); ಅವಳ ತೌರಿನವನೆ ಯಾವರೂ ಒಡ ಅವಳ ಈ ಅತಿಯಾದ ಪುಕ್ಕಲತನಕ್ಕೆ ಹಾಸ್ಯ ಮಾಡಿದ್ದುಂಟು (ಕಾಗೆ. ೦೦೦). [ಪುಕ್ಕಲು + – ತನ]

**ಪುಕ್ಕಸಾಟೆ** 'ಪುಕ್ಕಟೆ' ನೋ.

**ಪುಕ್ಕಿ** (ನಾ). = ಪುಕ್ಕಲಿ : ಕುಮುದಿನಿಯು ಎಷ್ಟಾದರೂ ಹೆಂಗಸು. ಆಕೆಯು ಪ್ರಸಂಗವಿಶೇಷದಲ್ಲಿ ಪುಕ್ಕಿಯಾದಳೆಂದೂ ಅನ್ನಬಹುದು (ಕುಮುಂ. ೧೬೧)

[ ಪುಕ್ಕ$_1$ + – ಇ$_2$ ]

**ಪುಕ್ಕು$_1$** (ನಾ). ಅಂಜಿಕೆ ; ಹೆದರಿಕೆ ; ಭಯ : "ಭೀರುತ್ವದೊಳ್ ಯೋನಿಯೊಳ್ ಪುಕ್ಕು" (ಕನ್ನಕುಂ. ೬೯); ಇನ್ನು ಕಾನೊಬ್ಬಳೇ ಹೋಗಬೇಕು. ಕಿಮ್ಮಣ್ಣ ಕಳಿಯುವವರೆಗೆ ಮಾತ್ರ ಸ್ವಲ್ಪ ಪುಕ್ಕು (ಹೂಕನ್ನ. ೯೯); ಜನ ರಸ್ತೆರೋಡಿನಿಸಿದರೂ ಅವರಲ್ಲಿ ಬೇಗನೆ ಪುಕ್ಕು, ಹೇಡಿತನಗಳು ಮೆಲ್ಲನೆ ಸೇರಿಕೊಳ್ಳುವುವು (ಮುಕ್ಕತ್ರ. ೩೧).

**ಪುಕ್ಕಾಗು** = ಹೆದರು ; ಅಂಜು : ಬ್ರಾಹ್ಮಣರೆಲ್ಲ ಅದಕ್ಕೆ ಪುಕ್ಕಾಗಿ . . . ನಾರಣಪ್ಪನ ಮನೆಯೆದುರು ಬಂದು ನಿಂತು ತೆರೆದ ಹೆಬ್ಬಾಗಿಲನ್ನು ನೋಡಿ ಭಯಗ್ರಸ್ತರಾದರು (ಸಂಸ್ಕಾರ. ೩೬).

[ ದೇ.॥ ತುಳು. ಪುಕ್ಕು, ಪುಕ್ಕ್; ಪರ್ಜಿ. ಪುಕ್ಕ್ ]

**ಪುಕ್ಕು$_2$** 'ಪೂಕು' ನೋ.

**ಪುಕ್ಕೊಳ್ಳಿ** (ನಾ). ಒಂದು ಬಗೆಯ ಭೂಮಿ : ಸ್ವಸ್ತಿಶ್ರೀವನಿತಾಲಪುರ ಅಟ್ಟರಾನಾರದಿಗೆ ಕಕ್ಕಿವಳ್ಳಿಯೋನ್ ಪುಕ್ಕೊಳ್ಳಿ ಕೊಟ್ಟು ಸರ್ವಪರಿಹಾರಪ್ ಕೊಟ್ಟುರ್ (ಎಕ. VI. ಮೂಡಗೆ. ೨೬–೪, ಸು. ೯೫೦?). [?]

**ಪುಗಡಿ** 'ಪುಗಡಿ' ನೋ.

**ಪುಗರಿ** (ನಾ). (?) : ಈಶಾನಂಗೆ ಸೀಮೆ ನೆಡುವೊಜಡಿಯಾ ಪುಣಾಸೆ ಪುಗರಿಯಾ ಎಡೆಮೆ ಬಿಟ್ಟಸ್ವ ಪಳ್ಳಮೆ (ಎಕ. IX (೩), ಕೆಂಗೇರಿ. ೧೩೦-೪೯; ೩೭೫). [ ? ]

**ಪುಗಲ್** 'ಪುಗಿಲ್$_2$' ನೋ.

**ಪುಗಸಟ್ಟೆ** 'ಪುಕ್ಕಟೆ' ನೋ.

**ಪುಗಸಾಟೆ** 'ಪುಕ್ಕಟೆ' ನೋ.

**ಪುಗಿಯಿಸು** 'ಪೊಗಿಸು' ನೋ.

**ಪುಗಿಲ್$_1$, ಪುಗಿಲು$_1$, ಹುಗಲು, ಹುಗಿಲು, ಹುಗುಲು, ಹೊಗುಳು** (ನಾ). ೧. ಪ್ರವೇಶ : ರಾಜಪುರಂಪರ್ಗೆ ಪುಗಿಲಿಲ್ಲ (ಇಕ. X, ೧೬೬-೩ : 7ತಯ ೬೩); ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಿಲ್ಲಗಳ್ ಪೊಸವೆ. . . ಎನೆ ಪೊಸಯಿಸಿದಳಾಕೆ ನಾಟ್ಯಂಗಮಂ (ಅಂಪು. ೯-೨೩); ರಸಭಾವದ ಕೆಯ್ಯೆಡೆವೊನೆ ಪೊಸದೆಸೆಯ[ಂ]ಪೊಕ್ಕ ಪುಗಿಲಿದನೆ ಚಿತ್ರಮಿದಂ ಪೊಸಯಿಸಿ ನರ್ತಿಸಿದಳ್ (ವರ್ಧಮಾ. ೧೦-೯೯) ; ಪುದಿದ ನೇತ್ರರ ಕೆಂಪಾಗಸದೊಳ್ ತೋಱುವುದಿಸ್ಸಂ ಕಿಸುಸಂಜೆಯು ನೆಪದೆ ದಿನದ ರಾತ್ರಿಯ ಪುಗಿಲೊಳ್ (ಶಾಂ. ೬-೯೯). ೨. ಬಾಗಿಲು ; ಪ್ರವೇಶದ್ವಾರ : ಆ ವ್ಯೂಹದ್ವಾರದೊಳ್ ಗುಹೆಯ ಪುಗಿಲೊಳ್ ಮಹೋಗ್ರಜರತ್ಸಿಂಹವಿವರ್ತಂತಿರ್ದ ಭಾರದ್ವಾಜನಾಜಿವೀರನಭಿಮನ್ಯುಕುಮಾರನನೆಬ್ಬರಪುಗಂಡಾಗಳ್ (ಪಂ ಭಾ ಕೃ. ೦೨-೩೯ ಪ). ೩. ಆರಂಭ ; ಉಪಕ್ರಮ ; ಪ್ರಾರಂಭ : ಯಾತ್ರೆಗವನೀತಲಪತಿಯಂ ಪ್ರೇರಿಸಿತುಬ್ಬುಗಿಲೊಳ್ ಶರದಂ (ಶಾಂತಿಪು. ೦೧-೦೯೦); ಪೋದುದು ಸುಣ್ಣನಿ ಮಮಿಲ್ಸೆಂತಿರದದ ಪುಗಿಲೋಳ್ (ಕಮುರ. ೨೯೨ ಪ್ರಯೋ); ಹೇಮಳಂಬಿಸಂವತ್ಸರ(ದೊಳ್)ದಾ ಪುಗಿಲೊಳ್ ಮಟಿ ಕೊಳ್ಳಂ (ಜಿಲ್ಲಿಮ. ೬-೦೪). ೪. ಮುಂಭಾಗ ; ಮುಂದೆಸೆ : ಪುಗಿಲ ಪುಲ್ಲೆಯ ಮೊದಲುರಮುಮಂ ಪೆಱಗಣ ಪುಲ್ಲೆಯ ನಡುವುಮನಯ್ದುಱೊಳ್ ಮೂಱುಮಂ ಮೂಱೊಳೆರಡುಮನೆರಡಱೊಳೊಂದುಮನೆಚ್ಚು ಬಲ್ಲಬಲ್ಮೆಯುಂ ಮೆಱೆದು (ಶಂಕರಾ. ೩-೪೬ ಪ). ೫. ಸಂದರ್ಭ ; ಸಮಯ ; ಹೊತ್ತು : ನಡುವಗಲ ಪುಗಿಲ ಬಿಸಿಲೊಳ್ ಬಿಡೆ ನಾಲಗೆಗಿಟ್ಟು ತೇಂಕಿ ತನ್ನಯ ನೆಟಲಂ ಕಡುಗಪ್ಪಲೆಂದು ಪೊರಳಲ್ಕೊಡರಿಸಿ ಮೆಯ್ಯಿಕ್ಕಲಿರ್ದ ವನ್ನಲುಲಾಯಂ (ಪುಷ್ಪಕೃ. ೬-೭೬) ; ಇಂದಿರೆ ಪದ್ಮಮಂದಿರದೊಳಿರ್ದು ಮಹಾಪ್ರಣಯಪ್ರಕೋಪದಿಂದೊಂದಿರುಳಿಕ್ಕೆ ಮುಚ್ಚಳವನಾ ಪುಗಿಲೊಳ್ ತೆಱವಾಗೆ ಸೂಟ್ಗೆ ಕೃಷ್ಣಂ ದಯೆಯಿಂದೆ ಬಂದು ಬಿಗಿಯಪ್ಪೆ ಧರಾಂಗನೆಯಂ ತದಂಗಕಾಪ್ಯರ್ಕಂ ದಿಟದಿಂ ಕವಲ್ತುದೆನೆ ಪರ್ವಿದುದುರ್ವಿಯ ಚಿತ್ರಮಂತವಂ (ದಶಕು. ೩-೩೯). ೬. ಖಡ್ಗಯುದ್ಧದ ಒಂದು ವರಸೆ : ರೂಪುಗೊಂಡುದೆನೆ ಚಾರಿ ಪುಗಿಲ್ ನೆಲೆ ನೋರ್ಪು ದಂಡೆ ಸೂಟು ನಿಜಿಸು ನಿಘಾತಮಾಂಕೆ ಬಗೆ ಬಗ್ಗಣೆ ವಂಚನೆ ಬಂಧಮೆಂಬಿವಂ ಮೆಱೆ ಪೋಪರ್ಜರ್ಕಳೆಂ ಕಲಿಸುತಿರ್ಪರೊ ಚಟ್ಟರನಟ್ಟಿವಟ್ಟರಂ (ಪುಷ್ಪಕೃ. ೨-೬೦).

**ಪುಗಿಲು$_1$** : ೨. ಮತ್ತೊಂದಿನಂ ಪುಗಿಲಿನೊಳೆ ಕುಳಿತು ಧ್ಯಾನಾರೂಢನಾಗಿ . . . ಪ್ರಾಣ ನಿರ್ಗಮಿಸಲಾಯಿತು (ಶ್ರಶುಪು. ೬-೦೬೬). ೭. ಆಶ್ರಯ ; ನೆಲೆ : ಮಾರಣಾಸಿಗೆಯು ಪುಗಿಲಾದ ಪಂಪಾಪುರಂ ಮಾರಾರಿ ಗೆಂತು ಪುಗಿಲಾದ ಪಂಪಾಪುರು (ಕಕೆ. ೩೨೦-೯). ೮. ಕಾಂತಿ ; ಶೋಭೆ : ನೈದಿಲ ಸುಮಾಲಂಕೃತದಿ ಪುಗಿಲಿಂದೆ ಚಿತ್ರಪರ್ಣದ ವಿಷ್ಣುರಾಗ್ರಹದೊಳಗಿಹ (ಶ್ರಶುಪು. ೦-೪೦). 'ಪುಗಿಲುಮೆಱು' ಪರಾ. **ಹುಗಲು** : ೯. ರಂಧ್ರ ; ತೂತು ; ಕಂಡಿ : ಹಸಿಯ ಜಾಲಿಯ ಕಟ್ಟಿಗೆಗಳನ್ನಾಗಲಿ ಬಸರಿಯ ಕಟ್ಟಿಗೆಗಳನ್ನಾಗಲಿ ತಂದು ಅವುಗಳಿಗೆ ಹುಗಲನ್ನು ಹೊಡೆದು (ಕೃಷಿಶ. ೪೦). **ಹುಗಿಲು** : ೭. ಸಿಗಳದೊಳು ಸಿಕ್ಕಿದಗೆ ಕೊಳನ ಹುಗಿಲಿನೊಳು ಪೊಕ್ಕವಗೆ (ಸ್ವರೂಪಾ. ೩-೪); ಭಾಗವತಾಭಿಮಾನದ ಹುಗಿಲು ಪರಮಾನಂದರಸ ವಿಶ್ರಮದ ತನಿಮುಗಿಲು . . . ತಾನೆನಲೆಸವ ವೈಕುಂಠವನು ನೆಱೆ ಕಂಡ (ಐಕಾಗ. ೧೦-೩೩-೦೬). ೯. ಹೊಗಿಸಿದರು ಕಾಡೆಮ್ಮೆ . . . ದೊಡ್ಡೆಗಳ ವಿಗಡರಕ್ಕಸ ಭಟನ ಮೂಗಿನ ಹುಗಿಲಿನಲಿ (ಕೊರಂ. ೬-೨೬-೩೩) ; ಕಾಮ್ಯಾರ್ಥವೆಂಬೆರಡು ನೊಗನ ಹುಗಿಲಾದವ್ವೆ (ಶಂಕೃಕ. ೨-೦೦-೦೦). ೧೦. ಸೀಳಿರುವ ಸ್ಥಿತಿ ; ಬಿರುಕು ; ಹೋಳು : 'ಹುಗಿಲುಗಳೆ' ಪರಾ. **ಹುಗುಲು** : ೯. ಹಸಿಯ ಬಸರೀಕಟ್ಟಿಗೆಗಳಿಗೆ ದೊಡ್ಡ ಹುಗುಲು ಹೊಡೆದು ಹಾಗು ಹಿಂದೆ ಮುಂದೆ ಗೂಟಗಳನ್ನು ಹೊಡೆದು (ಕೃಷಿಶ. ೦೦೬); [ಹಲಗೆ, ಮೊಳ . . . ಬೆಣೆ, ಮೊಳನ್ನು ಕೂರಿಸುವುದಕ್ಕಾಗಿ ಒಂದು ಚೌಕಟ್ಟನಲ್ಲಿ ಮಾಡಿರುವ] ಪೆಜ್ಜ, ಉಗಿಲು, ಹುಗುಲು (Mortise. ೩೦೩೧). **ಹೊಗುಳು** : ೯. ತೋಡಿಗೆ ಹಾಕಿದ ಕಟ್ಟೆಯಲ್ಲಿ ಹೊಗುಳು ತಲೆದೋರಿದಾಗ, ಚಿಮ್ಮಿ ಹರಿಯುವ ಅವಿರತಜಲಧಾರೆಯಂತೆ, ದುರುಳರ ಸಮೂಹ ನೆಲ್ಲಕ್ಕಿ ಬಾಡೆಯೊಳಗೆ ನುಗ್ಗಿತು (ಹುಲಿಹಾ. ೪೦).

[ಪುಗು (< ಪೊಗು) + ಇಲ್$_3$. / ತಮಿ. ಪುಕ್ಕಿಲ್, ಪುಕಲ್]

**ಪುಗಿಲ್$_2$, ಪುಗಲ್** (ನಾ). ೧. ಧ್ವನಿ ; ಸದ್ದು : 'ಪುಗಿಲ್ಗರೆ' ಪರಾ. ೨. ಕೋಗಿಲೆಯ ಧ್ವನಿ : "ಕಾಕಿಲ್ತ್ರುದೇದಂ ಪುಗಿಲ್ ಪುಗಿಲೆಂದುಂ ಕೋಕಿಲಾಲಾಪಂ" (ಶಬ್ದಾ. ೩೩-೨೦೬) ; ತದಾಶ್ರುವುದ ತರಾಗಳ ಬೋಗಿದರ್ ಪುಗಿಲ್ ಪುಗಿಲೆಂದಿತ್ತು ಬನ್ನಿಏರಿವೆಂಬ ಪೊಂಬಣ್ಣದ ಕೋಗಿಲೆಗಳುವಂ . . . ನೋಡಿ (ಹಂಪಶ. ೦-೦೦೩ ಕ) ; ಪುಗಿಲ್ ಪುಗಿಲೆಂಬ ಪಿಕಸ್ವನಂಗಳಂ ಮನಸಿಜನೊಲ್ದು ಕೇಳ್ದು (ಕಾಕಿ. ೯-೭೪). **ಪುಗಲ್**: ೨. ಪೋ ಪು[ಗ][ಪಾಠಾಂ. ಗಿ]ಲ್ ಪು[ಗ]ಲೆನುತಿರ್ಪ ಪಕ್ಕಿ ಮಾನವಂ ಕವರುತ್ತಿರೆ (ಹಂಪಶ. ೩-೩೩) ; ಭೋರ್ಗರೆದೆತ್ತಂ ಪುಗಲೆಂಬ ಕೋಕಿಲೆ . . . ಸುಸ್ವರದಿಂದೋದುವ ಕೀರವಾರ ಬಗೆಗಾ ಸಮ್ಮೋಹವಂ ಮಾಡವೇ (ಸುಕುಮಾ. ೦-೭೩); ಬನದಲ್ಲಿ ಪುಗಲ್ ಪುಗಲೆಂಬ ಗಂಡುಗೋಗಿಲೆ (ಕಸುಕ. ೨೬೯ ಕ್ರಹೋ). [ದೇ.॥ ತವಿ. ಪುಕಲ್ ; ಮಲ. ಪುಕಲು = ಹೇಳು]

**ಪುಗಿಲ ?** (ನಾ). (?) : ಪುಗಿಲಂ ಕ್ರೀಡನಶೀಲನಕ್ಕರಿಗನಾದಂ ಪಲ್ಲವ ಗ್ರಾಹಿ ಮಾಸುಗಿ ನಮ್ಯಾದುದಾಗಲುಂ ನವೋಯಲುಂ ಮೊಯ್ದಕರ್ಪಮೋ ಕಾರವೆಂದೆ ಗಡಾ (ಕಾವ್ಯಾ.ಕ. ೦೩೯). [ ? ]

**ಪುಗಿಲು$_1$** 'ಪುಗಿಲ್$_1$' ನೋ.

**ಪುಗಿಲು$_2$** (ನಾ). (?) : ಪೆನನಿರಕ್ಕಂ ಪುಗಿಲುವುದಱ ಪಪಣ (ಶಾ. ೦೯೪೭, ಶಾಸಗಲ್. ೨೨೯-೨೦ , ?). [ ? ]

**ಪುಗಿಲುವೆಱು** (ಕ್ರಿ). ಶೋಭಿಸು ; ಹೆಸರಾಗು ; ಪ್ರಸಿದ್ಧವಾಗು : ಅಗುಳಿಸಿರೆ ಕಾವಾಟದವರುಮವರೊತ್ತಿನೊಳು ಪುಗಿಲುವೆತ್ತತಿಮಾತ್ರ ರಾದಿಗಳು ಮಂತ್ರಿಸಲುವಗಿದವರಿಗೆಯು ಮಹಾಧೂತ ಪೊಯ್ಯಲು (ಕೃಷ್ಣ. ೩-೨೩). [ಪುಗಿಲು$_1$ (< ಪುಗಿಲ್$_1$) + ವೆಱು$_1$]

**ಪುಗಿಲ್ಗರೆ** (ಕ್ರಿ). ಧ್ವನಿ ಮಾಡು; ಸದ್ದು ಮಾಡು : ಮಯ್ಯ ಮಱಿ ಕೊರಲ ಬಕ್ಕಳೆ ಪೊಯ್ಯ ಪುಗಿಲ್ಗರೆವ[ಪಾಠಾಂ. ಕನಲ್ಗರೆವ, ಘೂಲ್ಗರೆವ]ಕಯ್ಯ ಲಂಕರಿಕ ಕರಂ ರಯ್ಯಂ (ಕಾವ್ಯಾ.ಕ. ೩೦೯). [ಪುಗಿಲ್$_2$ + ಕರೆ$_1$]

**ಪುಗಿಲ್ವಟ್ಟೆ** (ನಾ). ಪ್ರವೇಶದ್ವಾರ ; ಕಂಡಿ : ಬಲಸಗ್ಗಂ ಗುಪಿಸಂದಿ ದೋಣಿ ಪರಿಚಾರೇರುಂ ಪುಗಿಲ್ವಟ್ಟೆ ಮೇಖಳೆ ಕಾಲ್ಗಾಸಱ ಗಂಡಶೈಲವುಡಕಿಲ್ಪಾಟಂ ಹರಲ್ಪಟ್ಟು . . . ಅಜಸ್ರಂ ರಯ್ಯಮಾ ಬೆಟ್ಟದೊಳ್ (ಸೂಕ್ತಿಸು. ೩-೨). [ಪುಗಿಲ್$_1$ + ಬಟ್ಟೆ$_1$]

**ಪುಗಿಲ್ವಿಡು** (ಕ್ರಿ). ಎಡೆ ಬಿಡು ; ಅವಕಾಶ ಕೊಡು : ಒಡಿಲ್ವನಿಪೊಯ್ಲನಿಂ ಪುಗಿ[ಪಾಠಾಂ. ಪೊಯ್ಲನಿಂಪುನಿ]ಲ್ವಿಡದೊಡೆದತ್ತು ತಟ್ಟು ಘನಮಂಡಲ ಮುಂದೆನೆ ವಾರಿಧಾರೆಗಳ್ . . . ಸುರಿಯುತ್ತುವಿರ್ದುದು (ಶಬ್ದಮಣಿ. ೬-೨೭). [ಪುಗಿಲ್$_1$ + ಬಿಡು$_1$]

**ಪುಗಿಸು** 'ಪೊಗಿಸು' ನೋ.

**ಪುಗು** 'ಪೊಗು' ನೋ.

**ಪುಗುಡಿ** 'ಪುಗಡಿ' ನೋ.

**ಪುಗುತರ್** 'ಪೊಗುತರ್' ನೋ.

**ಪುಗುತೆ** 'ಪೊಗುತೆ' ನೋ.

**ಪುಗುದೆಸೆ, ಹೊಗದೆಸೆ** (ನಾ). ಹೋಗಬೇಕಾದ ದಿಕ್ಕು ; ಪಾರಾಗುವ ಹಾದಿ : ಮುಱಿದುದೆಮ್ಮಯ ಸೇನೆ ಸಮರದೊಳ್ ಪೊಕ್ಕು ಮೈಗುಱಿತ ಕಾಣಿಸಿಕೊಂಬರಂ ಕಾಣೆವಗ್ನಿಜನ ಬಱಿದೆ ಕರೆತಂದೆಪಕಟಕಟ ಪುಗುದೆಸೆ ಯಾವುದೆಮಗೆ (ಕೌಶ. ೩೯-೯). **ಹೊಗದೆಸೆ** : ಜಗವೆಲ್ಲವನೂರ ಮಾಡಿ ಊರೆಲ್ಲವ ಮನೆಯ ಮಾಡಿ ಹೊ[ಪಾಠಾಂ. ಹೋ]ಗದೆಸೆಯಿಲ್ಲದ ಸುಳುಹು ನೋಡಾ (ಅಕಕಂ ೨೬೯-೧೩೦೦) ; ಹೊಗದೆಸೆಯನು ಕಾಣದಬ್ಬಿಲ್ಲಹಾನ ಬಹುಬಗೆಯಲಿ ಕಂಗೆಟ್ಟಾಗ ಏಗ ಹುಲಿಯೂರ ಬಳಿಯು ಬಿಟ್ಟು ಪಾಳೆಯ ದೆಗದೋಡಿದನು (ಕಂಠೀ. ೦೩-೩೭). [ಪುಗು (< ಪೊಗು) + ದೆಸೆ$_2$]

**ಪುಗುಳ್$_1$** (ಕ್ರಿ). ಗುಳ್ಳೆಯೇಳು ; ಬೊಕ್ಕೆಯಾಗು : ಒರೊಮರ್ ಕಾಳಿವರ್ ಕಪ್ಪುರದ ಪಟ್ಟವಮನವಾರ್ಚಿ ಮನ್ಮಥಜ್ವಲನಪಾತದಿಂ ಮೆಯ್ಯೆ ಏಗೆ ಪುಗುಳ್ತ್ತುದೆಂಬ ಸಂಕೆಯಂ ಕೆಳದಿಯರ್ಗೆ ಬಳಯಿಸುವಳ್ (ಶಠಕಥೆ. ೯-೩೬ ಕ) ; ಮುಳಿದುಬೞದೋವರಳ್ದಿರ್ದೆ ಪುಗುಳ್ತ್ತಿರಿವಂತೆ ಮುಗುಳ್ತ್ತು ಸಂದ ನಾಣೊಳಗು ಸಡಿಲ್ವಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ದಾಡಿ ಪೊಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ದಳಲರ್ವರಿಪೆತ್ತು ಕಂಪು ಕೈಕೊಳೆ ಬರಿದತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಾತೆಯಂತೆಪೊರ್ (ಅಕಂಭ. ೬-೯೯). [ದೇ. ॥ ತವಿ. ಮಲ. ಪೊಕ್ಕುಳ್]

**ಪುಗುಳ್$_2$, ಪುಗುಳು, ಪೊಕ್ಕ, ಹುಗುಳು** (ನಾ). ಉಷ್ಣತೆಯಿಂದ ಅಥವಾ ಘರ್ಷಣೆಯಿಂದ ಮೈಮೇಲೆ ಹಾಗೂ ಬಾಯಲ್ಲಿ ಏಳುವ ಗುಳ್ಳೆ,—ಬೊಕ್ಕೆ : ಒರಿದಪ್ಪ ನಂಜುಪುಗುಳಾರ್ಬಿದುವಂಗಿಸಿತಾಹಿದಂಶ ಮಾದುದು ದಿಟಂ (ಕಾದಂಪೂ. ೫೯೩) ; ನಡೆದಡಿಗಳ್ ಪುಗುಳ್ಗೆದುವುಗ್ಗಡ ಮಾಯ್ತು ನಿದಾಘು (ಚಂಪಕ. ೧-೯೭) ; ತಂಬುಲದ ಚೂರ್ಣದಧಿಕತೆಯಿಂ ಬಾಯ್ ನೆಱ ಬೆಂದು ಪುಗುಳ್ಗಳಾದೊಡೆ . . . ತೈಲವೊಂದಱಿಂದಂ ಕಿಡುಗುಂ (ಚಸುಕ. ೨-೧೩೭). **ಪುಗುಳು** : ತವನನ ಮೆಯ್ಯೊಳ್ ಪುಗುಳುಗಳು ಪವಿಸೆ ಪಾವಕನ ತನುವಿನೊಳ್ ಮಹಾಸ್ಫೋಟಕವಾತಪದ ಕಡುಪಿಂದೆ ನೆಗೆತಂದವುವೆನೆ ಬೇಸಗೆಯು ಬಿಸಿಲನದನೇನೆಂಬೆ (ಗಿರಿಜಾ. ೯-೩೭) ; ಅಂಬು ಜಾಕ್ಷಿಯರುಗಳಧರಬಿಂಬನಕ್ಕೆ ಎನ್ನ ಜಿಹ್ವೆ ಹಂಬಲಿಸದ ಹಾಗೆ ಸೀಳಿ ಪುಗುಳವೇಳಲ್ಲಿ (ಸುಜಾಕ. ೪೦-೯). **ಪೊಕ್ಕ** : ಗುಳಿ ಸೇರಿದ್ದ ಕೆನ್ನೆಗಳೂ ಉಬ್ಬಿದ್ದುವು—ಕೆಂಡ ಬಿದ್ದು ಬಂದ ಪೊಕ್ಕದಂತೆ (ಚಾಣ. ೦೦೬). **ಹುಗುಳು**: "ವಿಸ್ಫೋಟಃ. ಪಿಟಕಃ—ಈ ೨ ಹುಗುಳು" (ಶಾಹನು. ೦೨೦) : ಕಿಚ್ಚಿಗೆ ಮೈಯಿ ಹುಗುಳುವುಟ್ಟಿತ್ತು ಉದಕಕ್ಕೆ ಧಳಿಯಾಗಿ ಸ್ಫಟಿಕಗಿರಿಯಲ್ಲಿ ಹಣ್ಣು ಹುಟ್ಟಿತ್ತು (ಅಕಕಂ. ೦೭೯-೮೦೩) : ಕರ್ಪೂರದ ಮಣಿಗಳನನುಕರಿಪ ಹುಗುಳು ಗಳು ಮೊಳೆಯೆ (ಚಸಕ. ೦೩-೨೦) : ತೀಂಟೆಯಂತಪ್ಪ ತುಱಿಯ ಹುಗುಳು ಗಳೊಡೆಯೆ (ಚೀಕ್ರಕ. ೯-೨೩-೭). [< ಪುಗುಳ್$_1$ /ತವಿ. ಪೊಕ್ಕುಳ ; ಮಲ. ಪೊಕ್ಕುಳ್, ಪೊಕ್ಕಳ್ : ಕೊಡ. ಪೊಕ್ಕಳ್ ; ಕೋತ. ಪೊಗ್]

**ಪುಗುಳು** 'ಪುಗುಳ್$_2$' ನೋ.

**ಪುಗುಳೇಳ್** 'ಪುಗುಳೇೞ್' ನೋ.

**ಪುಗುಳೇೞ್, ಪುಗುಳೇಳ್, ಹುಗುಳೇಳು** (ಕ್ರಿ). =ಪುಗುಳ್$_1$: ತದ್ವಿಷಾಗ್ನಿಯ ಕಿಡಿಯಿಂದೊಡನೆಯು ಗೋಪರ್ ತಂತಮ್ಮೊಡಲೊಳ್ ಪುಗುಳೇೞ ಪೋಗಿ ಪುಯ್ಯಲ್ವುದುಂ (ಜಗನಿ. ೩-೮೭). **ಪುಗುಳೇಳ್** : ನೆಗೆದ ತಂಪು ವರ್ಣನಿಗಳ ಮುಗಿಲ ಮೆಯ್ಯ ಪುಗುಳೇಳೆ ಪುಷ್ಕರದಿಂ ಪೂತ್ಕರಿಸುವ . . . ಕಟ್ಟಣಕದ ದುಷ್ಪಗಜವಂ (ಗಿರಿಜಾ. ೨-೦೦೩ ಕ). **ಹುಗುಳೇಳು** : ಇನ್ನಬರ ಹುಗುಳೆದ್ದು ನೋವುತಿರ್ಪುದೊ ತಳಂ (ಕಿರಾ. ಟೀ. ೩೦೦-೯); ಶಿವಶಿವೇಗುವೆ ನಿನ್ನ ಹುಗುಳೇಳುವವಲಾ ಶಿವನಾಗವೆನುತಂ ಶಿವನ ತನುವಂ ನೋಡಿ ತೂತೂ ಎಂದು ತೂಪಿಱಿದ (ಚಸಕ. ೦೩-೨೦). [ಪುಗುಳ್$_2$ + ಏೞ್$_1$]

**ಪುಗುಳೊಡೆ** (ಕ್ರಿ). = ಪುಗುಳ್$_1$ : ಕಠಿನಭೂಮಿಯೊಳ್ ನಡದೊಡೆ ಕಿಱುಗಲ್ಗಳುಂ ಪೆಟ್ಟಿಗಳುಮಗುಳ್ದು ಪುಗುಳೊಡೆದು (ಧರ್ಮಾ. ೨೯-೦೦). [ ಪುಗುಳ್$_2$ + ಒಡೆ$_1$ ]

**ಪುಗುಳ್ಗತ್ತ** (ನಾ). ಮೈಮೇಲೆ ಬೊಕ್ಕೆಯಾಗುವ ಒಂದು ಬಗೆಯ ರೋಗ : ಗುರು ಮಂದ ಶುಕ್ರರೊ(ನೊ)ಡನಿರೆ ಸುರನದಿ ಹೈ(ಹಿ)ಮಾದ್ರಿಯೆಡೆಯ ನಾಡೊಳಗೆಲ್ಲಂ ಒರಿದು ಭಯಮಾಕ್ಕುಮಲ್ಲಿಯ ನರರ್ಗಂ ಪುಟಗು(ಪುಗುಳ್ಗ)ತ್ತಮಕ್ಕುಮಿದು ಪರಮಾರ್ಥಂ (ಅಲ್ಪಶು. ೭-೩೩). [ ಪುಗುಳ್$_2$ + ಕತ್ತ ]

**ಪುಗ್ಗಾಯಿಲ, ಪುಗ್ಗಾಯ್ಲ** (ನಾ). ಸೊಕ್ಕಿದವನು ; ಅಹಂಕಾರಿ ; ಗರ್ವಿಷ್ಠ : ಮನ್ನೆಯರ್ಕಱುಂಬರ್ ಪುಗ್ಗಾಯಿಲರೆನಿಪಮ[ರ]ಸುಮಕ್ಕಳ್

ವಲರಮು ಬಾದಿರ್ವರಾ ನೃಪಾಸ್ವಾಯಾಕೆಯೊಳ್ (ಚರಿಕಾ. ೩-೩೨), ಆಯಿಲ ವೃತ್ತಯುಕ್ಕೆ—ಗೋಟಬಾಯಿಲು, ಪುಗ್ಗಾಯಿಲು (ಕಸುರ. ೨೦೫ ಕೃಪೋ); ಕಾಯುಂ ನಾಗನಿಂ ಕೊಲಿಸದೆ . . . ಬಾಯೀ ಸೈವರ ಪೊಸ ಪುಗ್ಗಾಯಿಲನಂ ಕೊಂದು ಕೂಗಿಸದೆ ಬಿದಿ ಸತತಂ (ಕಳಕಂ. ೬೪೨). ಪುಗ್ಗಾಯ್ಲ: " ಪುಗ್ಗಾಯ್ಲಂ—ಗರ್ವಿತಂ " (ಕಸುರ. ಶಾ. ೨), " ಗರ್ವಿತನಲ್ಲಿ ಪುಗ್ಗಾಯ್ಲ ನೆಂದೆಯ್ಕುಂ " (ಕಿತ್ಕ. ೬೬). [ ಪುಗ್ಗು$_2$ + ಆಯಿಲ$_2$ ]

**ಪುಗ್ಗಾಯಿಲತನ** (ನಾ). ಸೊಕ್ಕು; ಗರ್ವ; ಉದ್ಧಟತನ: ಇನಿತೇಕೇ ಪುಗ್ಗಾಯಿಲತನಮಿದಜೇಂದಸ್ಮದಾಜ್ಞೆಯಂ ಮಿಾಱದೆ ನೀಂ (ಶಿಕ್ಕು. ೩-೦-೦೫೫). [ ಪುಗ್ಗಾಯಿಲ + — ತನ ]

**ಪುಗ್ಗಾಯ್ಲ** 'ಪುಗ್ಗಾಯಿಲ' ನೋ.

**ಪುಗ್ಗಿ** 'ಪುಟ್ಗಿ' ನೋ.

**ಪುಗ್ಗಿಡು** ? (ಕ್ರಿ). (?): ಪುಡುಕಾನೀರೊಳರ್ದಯುಂ ಪುಟವಾಕಸುಡೆಯುಂ ಮದು ಪುಗ್ಗಿಡೆಯೆಯುಂ ಬಾಳಿತ್ತಿ ಸೀಳೆಯುಂ ಗುಗ್ಗುಳಂ ಬೊತ್ತಿಸೆಯುಂ (ಅಜಿ. ೧೦-೧೦ ವ). [ ? ]

**ಪುಗ್ಗು$_1$** 'ಪುಟ್ಗು' ನೋ.

**ಪುಗ್ಗು$_2$**, **ಹುಗ್ಗು$_2$** (ನಾ). ಸೊಕ್ಕು; ಗರ್ವ; ಅಹಂಕಾರ: "ಉಕ್ಕೆವಂ, ಬೀಱಂ, ಪುಗ್ಗು, ಪಂತ, ಹಮ್ಮು, ಗಬ್ಬು, ಅವಟು—ಈ ೭ ಗರ್ವಂ" (ಕಶಾ. ೩೬–೨೩೦); "ಹಮ್ಮದಟು . . . ಪುಗ್ಗುಮಾಕ್ಕೆಪವೆಸ್ಸಲ್ ಗಮ್ಮನೆ ಗರ್ವಮವಕ್ಕುಂ" (ಕರಕಂ ೧೧೩); ಅಗ್ಗದ ಪುಗ್ಗಿನ ಚಂಪೇನನಜಸಿ ನಾಜಿಸಾಂತು . . . ಬಲ್ಗೊಳ್ಗಳಂ ತಿಜುಂವಾಯ್ಮೆ ಸಂಧಿಸುತೆಚ್ಚು (ರಾತಜಕ. ೧೪೫–೦೦). 'ಪುಗ್ಗಾಯಿಲ' ಪರಾ. **ಹುಗ್ಗು$_2$**: 'ಹುಗ್ಗಿಗ' ಪರಾ. [ ದೇ. ತಮಿ. ಪುಲ್ಲು ]

**ಪುಗ್ಗೆ** (ನಾ). ೧. (ಉಕ) ಕಡಲೆಹಿಟ್ಟಿಗೆ ಉಪ್ಪು, ಕಾರ ಮೊದಲಾದುವನ್ನು ಬೆರೆಸಿ ದುಂಡಗೆ ಉಬ್ಬುವಂತೆ ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ; ಬುರುಬುರಿ: ಹಸಿವಾಗಿದೆಯೆಂದು ಪುಗ್ಗೆ ಕೊಳ್ಳಲು ಗಾಗೆ ಕಳಗಿದು ಹೋಗಿದ್ದಾಳೆ (ಗಂಗಾಗ. ೦೦೯); ನಾಲ್ಕಾಣೆಯ ಪುಗ್ಗೆ ತಿಂದು ಮುಗಿಸುವಷ್ಟರಲ್ಲಿ ಶಾಲೆ ಬಿಟ್ಟಿತು (ಗಾಕ. ೮೩). ೨. ಗಾಳಿ ತುಂಬಿ ಉಬ್ಬಿಸಿದ ರಬ್ಬರುಚೀಲ; ಬಲೂನು: ಒಂದೇ ಒಂದಾದರೂ ಅಂತಹ ರಬ್ಬರ್ ಚೆಂಡೋ ಪ್ಲಾಸ್ಟಿಕ್ ಹಕ್ಕಿಯೋ, ಬಣ್ಣದ ಪುಗ್ಗೆಯೋ ತನಗೆ ದೊರೆಯಬಾರದೆ (ಮುಂಗಾವು. ೨೬). ೩. (ಅಲಂ) ಉಬ್ಬು; ಉತ್ಸಾಹ: ಪುಗ್ಗೆಯನ್ನಿತ್ತದೆಗ ಲಗ್ಗೆಯನು ಹಾಕಿದೆನು; ಸಗ್ಗದಲ್ಲೆಹ ನೀನು ಬಗ್ಗಲಿಲ್ಲ! (ಕಂಬ. ೫೩). [ ← ಮರಾ. ಫುಗಾ ]

**ಪುಚ್ಚ$_1$**, **ಹುಚ್ಚ$_1$** (ನಾ). ೧. ಬುದ್ಧಿಭ್ರಮಣೆಯಾದವನು; ಉನ್ಮಾದ ರೋಗಿ: ಒರೊರ್ವ ಪುಚ್ಚನಂತಚ್ಚರಿಯೊಳಾಡುವನದೇರೋರ್ವ ಮಾತ್ರನಂತೊತ್ತರಿಸಿ ಮೇಲ್ವರಿಸನು (ಕಾಬ್ಯಾ. ೬ ೩೬). **ಹುಚ್ಚ$_1$**: ೧. "ಪ್ರೇಡೀರಃ = ಹುಚ್ಚಂ" (ಕಾಕ. ೦೫). ೨. ತಿಳಿಗೇಡಿ; ಮರುಳ; ದಡ್ಡ: ಹೆಚ್ಚಿನ ಸತಿಯಾತ ಕಚ್ಚೆಯ ಬಿಚ್ಚುವ ಹುಚ್ಚನೇನೆ (ಕರಂಕ. ೨-೯೩-೦); ಹುಚ್ಚರಿತ ಚಂದನವಿರೆ ಬದಿರ ಸುತ್ತಾಪರೆ (ಕೃಹಾಕ ೬.೦೧), ಓಗೆ ಹುಚ್ಚನಂತೆ ತಿರುಗಾಡುವುದು ತರವಲ್ಲ (ಮುಂಬರು. ೩-೦೨೫). ೩. ಮರುಳುಗೊಂಡವನು; ಮೋಹಿತನಾದವನು: ವಿವೇಕಾನಂದರು . . . ಸಂಬೋಧಿಸಿದ ರೀತಿ ಅಮೇರಿಕೆಯ ಜನರನ್ನು ಹುಚ್ಚರನ್ನಾಗಿ ಮಾಡಿತು (ರಮಾಗಿ. ೯೯). (ಗು). ೪. ಅರಿವಿಲ್ಲದ; ಬುದ್ಧಿಗೇಡಿಯಾದ: ಅಪ್ಪ ಸತ್ತ ಆರುತಿಂಗಳಿಗೆ ಹುಚ್ಚುಮಾವ ಬಂದು ಕೊರಳು ಕಟ್ಟಿಕೊಂಡು ಅತ್ತ (ಗಾರ). [ಪುಚ್ಚು$_1$ (<ಪುಚುರ್) + — ಅ$_7$]

**ಪುಚ್ಚ$_2$**, **ಪುಕ್ಕ$_2$**, **ಪುಚ್ಚು$_2$** (ನಾ). ೧. ಹಕ್ಕಿಯ ಗರಿ: ತುಪ್ಪುಳು: ಹಾರುಹಕ್ಕಿಯ ಪುಚ್ಚವಣಿಸಲಳವೆ ಬೆಡಗಿ! (ಅಹಲ್ಯಾ. ೦೨-೫); ಸೀಗೆ ಹುಣ್ಣಿಮೆಗಾ ಮುಸುರಿಯು ಹಸುರುಪುಚ್ಚವ ತೆರೆಯಿತು (ಕಂಮು. ೦೨–೦೪); ಅಂದಲೊಬ್ಬಳ ಮೈ ತುಂಬ ಪುಚ್ಚ ಹತ್ತಿದ್ದನ್ನು ಕಂಡೆ (ಕೃತಿಕ. ೨೩೯). ೨. (ಪಕ್ಷಿಗಳ) ಬಾಲದ ತುದಿ: "ಪುಚ್ಛ (ಸಂ) — ಪುಚ್ಚ = ಬಾಲ" (ಕದ್ಯಕೋ. ೨೬); ಹೀಗಡೆ ಬಣ್ಣದ ಪುಚ್ಚದ ಹಚ್ಚು (ಕಕಂ. ೦, ೯೫). **ಪುಕ್ಕ$_2$**: ೧. ದೈವಕೃಪೆಯಿಂದ ಆ ಮಹಾಪರ್ವತವು ಈಗ ತನ್ನಪುಕ್ಕ ಹಕ್ಕಿಯ ಪುಕ್ಕದಷ್ಟು ಹಗುರವೂ ಮೃದುವೂ ಆಯಿತಲ್ಲವೆ! (ಶಂಕಾ. ೯೪): ಭವಿತವ್ಯತೆಯನುಂತೆ ಓಡಿ ತಪ್ಪಿಸಿಕೊಳ್ಳಲರಿದು ಹಕ್ಕಿಯ ಪುಕ್ಕಕೆ ಹತ್ತಿದ ಉರಿಯಂತೆ ಅದು ನಿನ್ನ ಬೆನ್ನಟ್ಟಿ ಬಹುದು (ಶಂಕಾ. ೦೦೬–೦೬). ೨. ಒಂದು ಆಶ್ಚರ್ಯಕರವಾದ-ಪಕ್ಷಿಯಂದ: ಇದು ಕಾಡುಮಾರಿವಾಳದಂತಿದೆ . . . ಪುಕ್ಕ ಉದ್ದವಾಗಿರುತ್ತದೆ (ಕೃಕಾ. II. ೦೩೨); ನವಿಲು ಆಡಿದರೆ ಕಂಬೋತ ಪುಕ್ಕ ತೆರಕೊಂಡಿತು (ಗಾರ). **ಪುಚ್ಚು$_2$**.

**ಪುಚ್ಚ ಎಣಿಸು** = ಸಂಪೂರ್ಣವಾಗಿ ತಿಳಿ: ನಿನ್ನ ಪುಚ್ಚು ಎಣಿಸೂದು . . . ಶಕ್ಯ ಆಗತಿತ್ತೇನು ? (ಅಜ. II. ೬೦೩). **ಪುಚ್ಚ ಬಲಿ**, **ಪುಚ್ಚು ಬಲಿ** = ೧. ಹಕ್ಕಿಯ ಗರಿಯುಂ ಬೆಳೆ: ಇನ್ನೂ ಪುಚ್ಚ ಬಲಿಯದ ಆ ಗುಬ್ಬಚ್ಚಿ ಹಾರಲಾಗದೆ ಒದ್ದಾಡುತ್ತಿದೆ (ಕೂ); ಅದಕ್ಕೆ ಇನ್ನೂ ಪುಚ್ಚು ಬಲಿತಿಲ್ಲ (ಮುಂಬರು. ೫–೩೦೦). ೨. (ಅಲಂ) ಸಾಮರ್ಥ್ಯ ಹೆಚ್ಚಾಗು; ಶಕ್ತಿ ವರ್ಧಿಸು: ಅವನಿಗೆ ಮುಗಿಲು ಮೂರೇ ಗೇಣು ಉಳಿದಂತೆ ಭಾಸವಾಯಿತು. ಅವನ ಪುಚ್ಚ ಬಲಿತಿತ್ತು (ಕೃತಿಕ. ೩೩೦). [ ಸಂ. < ಪುಚ್ಛ ]

**ಪುಚ್ಚಣೆ** 'ಪುಚ್ಚಟ್ಟು$_2$' ನೋ.

**ಪುಚ್ಚವಣ**, **ಪಚ್ಚವಣ**, **ಪುಚ್ಚವಣೆ** (ನಾ). ೧. ಪರೀಕ್ಷಿಸುವಿಕೆ; ಪರೀಕ್ಷೆ: "ಪುಚ್ಚವಣಂ = ಪರೀಕ್ಷೆ: ಅಣ್ಮು" (ಕಸುರ. ಶಾ. ೨): ಪು[ಚಾಕಾಂ. ಪ]ಚ್ಚವಣಂ ನೋಡುವೆನೆನ್ನುತ್ತೆಯೋ ಮುನಿಯ ವರದ ಮಹಿಮೆಯುಂ (ಸಂಕರಾ. ೧–೯೦); ಆಗಳ್ ಪುಚ್ಚವಣವಾಗೆ ನೆರದ ಪಡಿಯ ಜತಿಯರ್—ಇವಂಗಿನ್ನೆವರಂ ಸ್ವದ್ಯಾನವೇ ಪುಟ್ಟಿತಿಲ್ಲವೆಂದು ತಳ್ಪಿದರ್ (ಅದ್ಭುತ. ೨೬-೨೫); ದೈವವೆ ನೋಡ ಪುಚ್ಚವಣವುಂ ಗೆಯ್ವನ್ನವಂ ಕಾಣರೇ: (ಪ್ರಸೂವು. ೯–೩೬). ೨. ಪೌರುಷ; ಶಕ್ತಿ; ಸಾಮರ್ಥ್ಯ: "ಪುಚ್ಚವಣ = ಪರೀಕ್ಷೆ; ಅಣ್ಮು" (ಕಸುತ. ಶಾ. ೨): "ಪುಚ್ಚವಣ—ಪುಂಸ್ತ್ವ = ಪೌರುಷ" (ಕದ್ಯಕೋ. ೨೬). **ಪಚ್ಚವಣ**: ೧. "ಪುಚ್ಚವಣ (ಪಚ್ಚವಣ)—ಪರೀಕ್ಷಣ" (ಕದ್ಯಕೋ. ೨೬). ೨. "ಪೌರುಷಂ ಪಚ್ಚವಣಂ" (ಕನಾಕಾ. ೫೫); ಒರಿವದು ಪಚ್ಚವಣವುಂ ನೋಡಲು ಸಿದ್ಧಂ . . . ಪರಿತುಷ್ಟನಾಗುತ್ತೆ (ಅನಾತ. ೨–೧೩–೨೦). **ಪುಚ್ಚವಣೆ**: ೧. "ಪುಚ್ಚವಣೆಯ ಪರೀಕ್ಷೆಯುಂ" (ಕಮ. ೦೯೨). [ < ಪ್ರಾ. ಪುಚ್ಛಣ./ಸಂ. ಪೃಚ್ಛನ ]

**ಪುಚ್ಚವಣಿಸು** (ಕ್ರಿ). ಪರೀಕ್ಷಿಸು: ತಚ್ಛೈಲದಲಘುತರಮಹಿಮೆಯುಂ ಪುಚ್ಚವಣಿಸಲ್ ಶಕ್ಯಮೇ ಸೂರಸಟಿವಾಗ್ರಣಿ (ಶಾಸೋಕ. ೫–೯೨). [ಪುಚ್ಚವಣ + — ಇಸು$_3$]

**ಪುಚ್ಚವಣೆ** 'ಪುಚ್ಚವಣ' ನೋ.

**ಪುಚ್ಚಳಿ$_1$** 'ಪುಚ್ಚಟ್ಟು$_1$' ನೋ.

**ಪುಚ್ಚಳಿ$_2$** 'ಪುಚ್ಚಟ್ಟು$_2$' ನೋ.

**ಪುಚ್ಚಳಿಸು** 'ಪುಚ್ಚಟ್ಟಿಸು' ನೋ.

**ಪುಚ್ಚಟ್ಟು$_1$**, **ಪುಚ್ಚಳಿ$_1$** (ಕ್ರಿ). ೧. ಹಾಳಾಗು; ಕೆಡು; ಭಂಗವಾಗು: ಶರದದ ಬಿಸಿಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಟ್ಟುದರೆ ಪೊರೆನಾದ ಕುಂಕುಮಪತ್ರಭಂಗದ ಕೊರಗಿದ ನಗೆಮೊಗಂಗಳುಂ . . . ಅಡಿಗಡಿಗೆ ತಡವತಪ್ಪ ನಡೆಗಳುಂ ಬೆರಸು (ಆಂಪು. ೧೦-೬೪೮); ಕಟ್ ಪೂವಾಂಗಲೊಡಂ ಪುಚ್ಚಟ್ಟಿದೊರ್ವಳಯೆ ಮಾಜಿ ಪೋಪ ಕಂಪಿನ ತೆಱದಿಂ ಟಿಕಾಟಪಾದೊಡಲಿಂ ಪಾಱಗುಟ್ಟಿಯದೆ ಪಱಿಪಟ್ಟು ಪೋದುದಸು

(ಹರಿಹರ. ೭-೯). ೧೭. ಗೋಡೆ ಕಟ್ಟುವಾಗ ಒಂದು ಸಲಕ್ಕೆ ಹಾಕುವ ಮಣ್ಣಿನ ಸ್ತರ: (ಆ). ೧೮. ಚಿನ್ನವನ್ನು ಬೆಂಕಿಯಲ್ಲಿಟ್ಟು ಶುದ್ಧಗೊಳಿಸಿ ಹೊಳಪುಕೊಡುವಿಕೆ ಮತ್ತು ಅದರಿಂದುಂಟಾಗುವ ಹೊಳಪು : "ಪುಟಂ=ಬಣ್ಣಂ" (ಶಬ್ದ. ೨೬೮) ; ದೇಹವು ಮಿಸುನಿಯಂದದಿ ಪುಟವನಿಟ್ಟುದು (ಕೌಶಿಕ. ೨೨-೬೮) : ತೋಱಿದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯೆನೆ ಹೊಳೆ ಹೊಳೆವ ಹೊಮ್ಮಱಿಯ ರೂಪಕವ (ಜೈಮಿನಿ. ೩-೬-೦೮) : ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಉತ್ಕೃಷ್ಟ ಬಂಗಾರದೊಳು ಎನ್ನ ಸೇರಿಸೊ (ಪುರಂದ. ೨-೨೬-೩). ೧೯. [ನಾಟ್ಯ] ಕಾಲಿನ ಒಂದು ಭಂಗಿ : "ಪುಟವದೊತ್ತಿ ತೋಱುವ ಹಜ್ಜೆಯೆನಿಕ್ಕು" (ಭುಜಂಗ. ೨೨-೯). ೨೦. [ಛಂದ] ಪ್ರತಿಯೊಂದು ಚರಣದಲ್ಲಿ ಹನ್ನೆರಡು ಅಕ್ಷರಗಳಿರುವ ಸಮಪಾದವೃತ್ತಗಳಲ್ಲಿ ಒಂದು : ನನಮಯ ಗಣಮಿಂತೀ ನಾಲ್ಕುಮೆತ್ತಂ ಜನಿಯಿಸೆ ಯತಿ ಸಪ್ತಸ್ಥಾನದಿಂದಂ...ಈ ಪಾಂಗಿನೊಳ್ ಕಾಮಿನಿ ಬಗೆ ಪು[ಶಾಂತಿ. ಪುಟಂ (ಛಂದೋಂಬು. ೨-೦೩೬). ೨೧. (?) : ಶ್ರೀರತೀಶ್ವರನಶೋಕೆಯ ತಳಿರ ಸರಳ್ಗಳಿಗೆಪೋಲಂತೆ ಮಿರುಗುವ ಸಿಪುಗನಂ ತೊಡಿವಂತೆ ತಾರಾಳಿಯ ಮೊಗ್ಗೆ ಕಂಚುಕಿಯವ ತೊಡಿಸಿ ಪುಟವಂ ಬಿಗಿದು ಬಂಧಿಸಿದರು (ಪಶುಸೋ. ೨೩-೩೨).

ಪುಟ ಇಳಿಸು=ಭಟ್ಟಿ ಇಳಿಸು : ಅಷ್ಟುಮಿಯ ರಾತ್ರಿ ಇಬ್ಬರು ಕುಳಿತು ಏನೋ ಪುಟ ಇಳಿಸುತ್ತಿದ್ದರು. ಮಡಕೆಯೊಂದಕ್ಕೆ ಮುಚ್ಚಳ ಹಾಕಿ . . . ಬೆಂಕಿಯ ಗುಳಿಯಲ್ಲಿ ಪುಟಕ್ಕೆ ಇಟ್ಟಿದ್ದರು (ಶಶಿಕ. ೦೨೮). **ಪುಟಕ್ಕೆ ಹಾಕು**= ೧. ಚಿನ್ನ ಮೊದಲಾದುವನ್ನು ಬೆಂಕಿಯಲ್ಲಿಟ್ಟು ಹೊಳಪು ಕೊಡು : ಅವಳ ಸೌಂದರ್ಯವು ಪುಟಕ್ಕೆ ಹಾಕಿದ ಚಿನ್ನದಂತೆ ಹೆಚ್ಚಿತು (ಮುಂಚಿಡ. ೬೮) ; ಬಂಗಾರ ಬೆಳ್ಳಿ ಮೊದಲಾದ ಪಂಚಲೋಹಗಳು ಪುಟಕ್ಕೆ ಹಾಕಿ ತೆಗೆಯದಿದ್ದರೆ ಅವುಗಳಿಗೆ ಕಾಂತಿ ಬರುತ್ತದೆಯೆ ? (ಕೃಕಾಶ. ೩). ೨. ಮೂಸೆಯಲ್ಲಿಟ್ಟು ಸುಡು : ಒಬ್ಬಣದ ಕಿಟ್ಟ ತಂದು ಪುಟಕ್ಕೆ ಹಾಕಿ ಲೋಹಭಸ್ಮ ಮಾಡುವರು (ಮುಂಬಯಿ. ೯-೦೪೩). **ಪುಟ ಮಾಡು** = ಹೊತ್ತಿದ ಬೆಂಕಿಯನ್ನು ಉಜ್ವಲಗೊಳಿಸು : ಜಾಂಬವಾದಿಗಳ್ ಕುಂಡವನಗುಟ್ಟಿ ಕಾಳಾಗರುಚಂದನಾದಿಯಿಂಧನಂಗಳಂ ಒಟ್ಟಿಯಗ್ನಿಯಂ ಪುಟ ಮಾಡಿ (ಪುಣ್ಯಾಸ್ರ. ೬-೨೯ ಪ) ; ಅವರು . . . ಸಡಗರದಿ ಪಂಜುಗಳ ಪುಟ ಮಾಡುತ (ಕೃಕುಷ. ೯-೨೦೨). [ಸಂ.]

**ಪುಟಂನೆಗೆ, ಪುಟನೆಗೆ** (ಕ್ರಿ). ಪುಟಚೆಂಡಿನಂತೆ ನೆಗೆ ; ಟಣ್ಣನೆ ಹಾರು : ತನ್ನ ಮುಂ ನೆರಪಿದ ಪಾಪಮೆ ಕೋಪದಿಂ ಪೊಡೆಸೆಂಡುಪೊಡೆಯುತಿರ್ದುದೆಂಬಂತೆ ಪೊಡರದೆ ಪುಟಂನೆಗೆದು ಮಗುಚೆ ಮಗುಚಿಅ ಶಿಲೆಯ ಮೇಲೆ ನುಚ್ಚುನೂಱಾಗಿ ಬಿಟ್ಟಂ (ಧರ್ಮಾಮೃ. ೬-೧೮ ಪ) ; ಒದೆದಿಳಿಯಂ ಪುಟಂನೆಗೆದು . . . ಅಪ್ಪಳಿಪ ಬಗ್ಗದ ಗಂಡಿಕೆಗಂಡು ನೆತ್ತಿಯಗ್ರದ ಮೊನೆಯುರ್ಚೆ ಕೆಯ್ಯುರಿಗೆಯಿಂದಿರದಿಕ್ಕಿದನಾ ವನೇಚರಂ (ಕಬಕಂ. ೩-೩೪). **ಪುಟನೆಗೆ:** ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತಾಯಿತ್ತು (ಸೀಮಾಶ. ೨೦-೩೪); ಪುಟನೆಗೆದೆದ್ದು ಪಳಯುವ ಕೊಡಹಿ ನಿಂದವು ವೇದವಾಜಿಗಳು (ಭಾಪ್ರ್ಯ. ೬-೨೨) ; ನೆಲಕಪ್ಪಿ ಹೊಡೆದರು ಮೇಲಕೆ ಪುಟನೆಗೆದೇಳುವ ಕಂದುಕದಂತೆ (ಜಂಶಾಶ. ೨೨೦-೯೩). [ಪುಟ$_1$+ನೆಗೆ$_1$]

**ಪುಟಕ** (ನಾ). ೧. ಮಡಿಕೆ ; ಪದರ. ೨. ಹಳ್ಳವಾಗಿರುವಂಥದು. ೩. ದೊನ್ನೆ. ೪. ಎಲೆಯ ಪೊಟ್ಟಣ. ೫. ಕರಂಡ ; ಸಂಪುಟ. ೬. ತಾವರೆ ; ಕಮಲ. ೭. ಜಾಜಿಕಾಯಿ. [ಸಂ.]

**ಪುಟಕೊಡು** ' ಪುಟಗೊಡು ' ನೋ.

**ಪುಟಕೋಸಿ** ' ಪುಟಗೋಸಿ ' ನೋ.

**ಪುಟಕ್ಕನೆ** (ಅ). ತಟ್ಟನೆ ; ಕೂಡಲೆ : ಮಲ್ಲಿ ಬೆಂಕಿಪಟ್ಟಿಗೆ ಹೊರಗೆ ಒಗೆದು ಮತ್ತೆ ಪುಟಕ್ಕನೆ ಒಳಗೆ ಹೋದಳು (ಶಶಿಕ. ೨೩).

[ ಪುಟಕ್$_0$ + — ಅನೆ$_1$ ]

**ಪುಟಗೈ** (ಕ್ರಿ). ಬೆಂಕಿಯನ್ನು ಉಜ್ವಲಗೊಳಿಸು,—ಪ್ರಕಾಶಮಯವಾಗುವಂತೆ ಮಾಡು : ದೀಪಗಳನತಿಪುಟಗೈದು ನರವರಕುಮಾರಕರ ಚಿತ್ರಮನುಪೋದೊಂದ ತರುಣಿ ತೋಱಲು ನೋಡಿ ನೋಡಿ ಬೇಸತ್ತಂ (ಶಶಸೋ. ೨೩-೩೪). [ ಪುಟ$_3$ + ಗೈ (<ಕೆಯ್$_1$) ]

**ಪುಟಗೊಡು, ಪುಟಕೊಡು** (ಕ್ರಿ). ೧. (ಅಲಂ) ಬೆಂಬಲವಾಗು ; ಪುಷ್ಟಿಕೊಡು : ಅವಳು ತನ್ನ ಮನೆಗಿಂತ ಹೊರಗಿನವಳಲ್ಲ ಎಂಬ ಭಾವನೆಗೆ ಇದು ಮತ್ತಷ್ಟು ಪುಟಗೊಟ್ಟಿತು (ತ್ಯಾಗಕು. ೦೬೬) ; ವಾರ್ತಾಸಂಗ್ರಹದ ಪುಟವು ಮಾತ್ರ ಅವನಿಗೆ ಪುಟಗೊಡುತ್ತಿತ್ತು (ಕೊಹಾಕಾ. ೬೮) , ರಾಯರ ಈ ದೊಡ್ಡ ನಡತೆಗೆ ಅವರ ಮನೆಯವರಲ್ಲ ಪುಟಗೊಟ್ಟು . . . ಕೂಡಿಕೊಳ್ಳುತ್ತಿದ್ದರು (ಕಾಂಚು. ೦೨೦). **ಪುಟಕೊಡು :** ೧. ಭಾವ ಕೃಷ್ಣರಾಯ ಈ ಯೋಚನೆಗೆ ಪುಟಕೊಟ್ಟ. ಅರ್ಧಾಂಗಿ ತಿದಿಯೂದಿದಳು (ಕುರುಕಾ. ೦೩೨) ; ಅವರು ಅವನಿಗೆ ಕಲಿಸುತ್ತಿದ್ದ ರೀತಿಯೂ ಅವನ ಉತ್ಸಾಹಕ್ಕೆ ಪುಟಕೊಡುವಂತಿತ್ತು (ಚಕೂಕಾ. ೦೦೭). ೨. ಲೋಹಗಳನ್ನು ಬೆಂಕಿಯಲ್ಲಿಟ್ಟು ಶುದ್ಧಗೊಳಿಸಿ ಹೊಳಪು ಕೊಡು : ಹಿರಾಕ್ರಮಕಾಲಿಗಳಿಗೆ ಯುದ್ಧವು ಸಂಭವಿಸಿದರೆ ಅಗ್ನಿಯಲ್ಲಿ ಚಿನ್ನಕ್ಕೆ ಪುಟಕೊಟ್ಟಂತಾಗುತ್ತದೆ (ಪ್ರಾಣಾಹು. ೬೦೮). ೩. (ಬೆಂಕಿಯನ್ನು) ಪಟುಮಾಡು; ಉತ್ತೇಜಿಸು : ಫಕೀರಪ್ಪನು ಇಸ್ತ್ರಿಯ ಬೆಂಕಿಗೆ ಗಾಳಿ ಹಾಕಿ ಪುಟ ಕೊಡುತ್ತಿದ್ದನು (ರಾಷಹು. ೨೨). [ಪುಟ$_3$ + ಕೊಡು$_1$]

**ಪುಟಗೊಳಿಸು** (ಕ್ರಿ). ೧. ಬೆಂಕಿಯನ್ನು ಹೊತ್ತಿಸು ; ಪಟುಮಾಡು : ಬರುಹಿಯಧ್ವರ್ಯುವರಗಳಂ ಸತ್ಕರಿಸಿ ವಿಧಿಪೂರ್ವಕದಿ ಮುಖಬಂಧುರ ತರೇಂಧನದಿಂದ ಪುಟ [ಪಾಠಾಂ. ಪಟು] ಗೊಳಿಸಿದರು ಹುತವಹನ (ಜೈಮಿನಿ. ೦-೬-೯೩) ; ಅವನು ಆ ಒಲೆಯನ್ನು ಪುಟಗೊಳಿಸುತ್ತಿದ್ದನು (ಕೃಹು. ೩೨೦). ೨. (ಅಲಂ) ಏರಿಸು ; ವೃದ್ಧಿಗೊಳಿಸು : ಸ್ಥಳಮಹಿಮೆಗೆ ಸಂಬಂಧಿಸಿದ ದೇಶಪ್ರೇಮವನ್ನು ಪುಟಗೊಳಿಸಿ ಪರಿಪೋಷಿಸುವ ಹಲವು ಯಕ್ಷಗಾನಗಳನ್ನು ಈ ಪಂಗಡಕ್ಕೆ ಸೇರಿಸಬಹುದು (ಯಕ್ಷಗಾ. ೦೯); ಆ ಅವರಣ ಅವನ ಮನಸ್ಸಿನ ವೇದನೆಯನ್ನು ಪುಟಗೊಳಿಸಿತು (ಕೂಪಕ. ೬೦).

[ಪುಟ$_3$ + ಕೊಳ್$_1$ +— ಇಸು$_3$]

**ಪುಟಗೋಸಿ, ಪುಟಕೋಸಿ** (ನಾ). ೧. ಲಂಗೋಟಿ ; ಕೌಪೀನ : ಪುಟಗೋಸಿಗಿಂತ ದರಿದ್ರವಿಲ್ಲ, ಮರಣಕ್ಕಿಂತ ಶಿಕ್ಷೆ ಇಲ್ಲ (ಗಾದೆ). (ಗ್ರಾಂ). ೨. ಚಿಕ್ಕವಯಸ್ಸಿನ : ಹತ್ತುವರುಷದ ಪುಟಗೋಸಿ ಬ್ರಹ್ಮಚಾರಿ ದೇಶೀಲು ಶ್ರೀವೈಷ್ಣವರಿಗೆಲ್ಲರಿಗೂ ತೀರ್ಥಪ್ರಸಾದ ವಿನಿಯೋಗವಾದ ಮೇಲೆ ಬಾಕಿಯವರ ಪಾತು (ಕಂಠ. ೩೧೦). ೩. (ಅಲಂ) ಕೆಲಸಕ್ಕೆ ಬಾರದ ; ಬೆಲೆಯಿಲ್ಲದ ; ಕ್ಷುದ್ರವಾದ : ಈ ಪುಟಗೋಸಿ ವಿಷಯಕ್ಕೆ ಯಾಕೆ ತಲೆ ಕೆಡಿಸಿಕೊಳ್ಳುತ್ತಿದ್ದಿ ? (ಕೂಪ). **ಪುಟಕೋಸಿ :** ೧. ಪುಟಕೋಸಿಗೂ ಗತಿಯಿಲ್ಲದವನು ಮಹಾಮಹಾ ಮಾತನಾಡುತ್ತಾನೆ (ಕೂಪ).

[ ಪುಟ$_3$+ಗೋಸಿ ( < ಗೋಚಿ)./ತೆಲು. ಪುಟ್ಟಗೊಂಚಿ ]

**ಪುಟದೋಷ** (ನಾ). ರತ್ನದ ಒಂದು ದೋಷ, —ಅವಗುಣ : ಕರ್ಕರಂ ಕೋಮಲಂ ಮುಂದದೀಪೀ ಹೊಗೆಯಂ ನಕ್ಕಲಿನ ಬಣ್ಣಮದು ಮೂಱು ರತ್ನಂಗಳೊಳು ಪೊಕ್ಕು ಮಿಶ್ರಿತಮಾಗಿ ದೋಷಮಮೈಸಗಿತಾ ಮೂಱರೊಳ್ ಬೇರೆ ಬೇರೆ ಅಕ್ಕರಿಂ ಧುಸಿದವರಿಗೆ ಫಲವ ಪೇಳುವೆಂ ಕರ್ಕರಕೆ ಭಸ್ಮವೆಂದೊಡದು ಹುಟ ದುದೇದು ಅಕ್ಕಜದ ಮೊರಬು ಬಿಳಿಯಾಣ ಸಸುನಗಳೆಂದು ಪುಟದೋಷವೆಂದಿರ್ಪುದು (ರತ್ನಶಾ. ೯-೩). [ ಸಂ. ]

**ಪುಟದೋಱು** (ಕ್ರಿ). (ಅಲಂ) ವ್ಯಕ್ತವಾಗು ; ಪ್ರಕಟಗೊಳ್ಳು : ಸುಗುಣನಿನ್ನಯ ಕಂಬಲ್ಲ ಕಂಡ ಮುಗುಳ್ನಗೆಯಿಂದವೆ ಪರಿಪರಿಮಳ ಪುಟದೋಱಿ

ವಿಂಗೆ ಉರದೊಳು ಉರ ಒತ್ತಿಕೋ ಬಾ ಬಾ (ಕಠಗೀ. ೦೬೯-೬೩೬).

[ ಪುಟ್ಟ + ತೋಱು ]

**ಪುಟನೆಗೆ** 'ಪುಟಂನೆಗೆ' ನೋ.

**ಪುಟಪಡು** (ಕ್ರಿ). ಪುಟಕ್ಕೆ ಬೀಳು ; ಪುಟಕ್ಕೆ ಹಾಕಲ್ಪಡು : ಚಳಿ ಚಳಿ ವಾಗೆ ಬಾಱಂ ಸೆಳೆವೆಳೆವಂ ವಟ್ಟಸಂಡಿ ಪುಟಪಟ್ಟರೆ ಕಿಚ್ಚುಱುರ್ದಟ್ಟಿಲೋಹದ ಪೊಲ್ ಕಂಕಳಕೋಹಂ ಕರಗಿ ಕೊರಗಿದಂ ಚಾಣೂರಂ (ಅರ್ಜು. ೬-೧೦೬).

[ ಪುಟ್ಟ + ಪಡು ]

**ಪುಟಪಾಕ** (ನಾ). ೧. ಬೇರೆ ಬೇರೆ ಔಷಧದ್ರವ್ಯಗಳನ್ನು ಎಲೆಗಳಿಂದ ಸುತ್ತಿ, ಮಣ್ಣು ಮೆತ್ತಿ ಬೆಂಕಿಯಲ್ಲಿ ಇಟ್ಟು ಬೇಯಿಸುವ ಒಂದು ಕ್ರಮ,-ವಿಧಾನ : ಪಸಿಯ ಕೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವವರುಂ (ಅಂಜ. ೬-೯೩ ಪ) ; ಕೆಂಗಲಿಸುವ ಕೆಂಡದೊಳ್ ಪೊಟ್ಟು ಪುಟಪಾಕಂ ಸುಡೆಯುಂ (ಜೀವಾ. ೩ ೩೯ ಪ); ಕಾಯ್ದಣ್ಣೆಯೊಳದ್ದುವರು ಲೋಹರಸದೊಳು ತೊಯ್ದಿಕ್ಕಿ ಪುಟಪಾಕದಿಂದೆ ಒಯ್ದು ತಾಳಿವರು ಶಾವಲಿಯೊಳು (ಕರ್ಣ. ೬-೩೬). ೨. (ಅಲಂ) ಒಳಗೊಳಗೇ ಬೇಯುವುದು : ಕಣ್ಮುಚ್ಚಿಸು ಕರುಳಿನಲ್ಲಿ ಎಂತಹ ಪುಟಪಾಕ ನಡೆದಿತ್ತೆಂಬುದನ್ನು ಹೆಣ್ಣು ಹಡೆದವರೆಲ್ಲರೂ ಬಲ್ಲರು (ಗಾಳ. ೦೩೬). [ಸಂ.]

**ಪುಟಪಾಕಂಗೈ** (ಕ್ರಿ). ಪುಟಪಾಕ ಮಾಡು : ತಾಳೀಸಪತ್ರ, ಮೆಣಸು . . . ಸಮಸಕ್ಕರೆವೆರಸಿ ಪುಟಪಾಕಂಗೈದು (ಕಲ್ಯ. ೨೬೯).

[ಪುಟಪಾಕ+ಗೈ (<ಕೆಯ್$_1$)]

**ಪುಟಪಾಕವಾಸು** (ಕ್ರಿ). (ಅಲಂ) ಬೇಯು ; ಶುದ್ಧಗೊಳ್ಳು : ಹೊಸ ಹೊಸಬನಾಗುವವನನುಕ್ಷಣಂ ಮೊನವನು ವಸುಧೆಯಾ ಮೂಸೆಯಲಿ ಪುಟಪಾಕವಾಂತು ರಸಮೂರ್ತಿಯಾಗುವನು ಜಗದಾತ್ಮವಂತಿ ಬೆಳೆಯಿ (ಜುಂಜ. ೬೦೯). [ಪುಟಪಾಕ+ಆಸು (<ಆನ್$_1$)]

**ಪುಟಪುಟ** (ನಾ). ಒಂದು ಅನುಕರಣ ಪದ : ಪುಟಪುಟನೆ' ಪರಾ.

**ಪುಟಪುಟನೆ** (ಅ). ಪುಟಪುಟ ಎಂದು : ರತ್ನದ ರಸದಾ ಕಾರಂಜೀಯೂ ಪುಟಪುಟನ ಪುಟಿದು (ಗಂ. ೦-೬). [ಪುಟಪುಟ+—ಅನೆ$_1$]

**ಪುಟಪುಟಿಸು** 'ಪುಟುಪುಟಿಸು' ನೋ.

**ಪುಟಬಾಳೆ** 'ಪುಟ್ಟಬಾಳೆ' ನೋ.

**ಪುಟಬೀಜ** (ನಾ). ಒಂದು ಬಗೆಯ ಸಸ್ಯ : "ಪುಟಬೀಜಂ—ಹರಳು ವೀರೆ" (ಒಶಧಿ. ೦೦೦). [?]

**ಪುಟಭೇದ** (ನಾ). ೧. ನದಿ ಮೊದಲಾದ ಜಲಾಶಯಗಳಲ್ಲಿರುವ ತಿರುವು,—ಸುಳಿ,-ಚಕ್ರ : "ಚಕ್ರಾದಿ. ಪುಟಭೇದಃ—ಈ ೨ ತೋಯಿಸು ಮುರಿವು" (ಕರಾಘು. ೦೦೦-೯೯). ೨. ನಗರ; ಪಟ್ಟಣ. ೩. ಒಂದು ಬಗೆಯ ವಾದ್ಯ. [ಸಂ.]

**ಪುಟಭೇದನ** (ನಾ). =ಪುಟಭೇದ ೨ : "ಪತ್ತನಂ ಪುಟಭೇದನಂ . . . ಪುರೀ—ಈ ೧೧ ಪಟ್ಟಣಂ" (ಕರಾಘು. ೬೬-೧೪೦); ತನ್ನ ಪುಟಭೇದನಕೆ ಪೋದನು ಮೇಘಸಂಧಿಧರಾಧಿನಾಯಕನು (ತಿಮ್ಮ. ೬-೦೦). [ಸಂ.]

**ಪುಟಮಿಕ್ಕು**, ಪುಟವಿಕ್ಕು (ಕ್ರಿ). ಪುಟಕ್ಕೆ ಹಾಕು; ಹೊಳಪುಗೊಡು : ಪುಟವಿಕ್ಕಿ ಮಿಱುಗುವ ಕಡೆಯಾಣೆಯ ಮಿಸುನಿಯಂ ಸಮದು ಥಳಥಳಿಸಿ ಪೊಳೆವ ನೆಲೆಮಾಡದ ಮೇಲೆ . . ಒಡ್ಡೋಲಗಂಗೊಟ್ಟು ಲೀಲೆ ಯಿಂದಿರ್ಪುದುಂ (ಶಾಂತಿ. ೦೦-೦ ಪ). ಪುಟವಿಕ್ಕು : ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ (ಬಸವ. ೨೫೦). [ಪುಟ್ಟ+ಇಕ್ಕು]

**ಪುಟವಿಂಗು** (ಕ್ರಿ). (ಅಲಂ) ಅಧಿಕವಾಗು; ಹೆಚ್ಚಾಗು; ಅತಿಶಯಿಸು : ಬೆಜಗಾಗಿ ಪುಟವಿಂಗೆ ಬೆಂಡಿಲಿಸಿ ತೊದಲಿಸುತ ಭಕ್ತಿಕರಂತ ಪೂಗಳದ ಪಾಡಿದಂ ಶ್ರೀ ಜಡೆಯ ಶಂಕರನ (ಶಂಕರ. ೩-೬). [ಪುಟ್ಟ+ಇಂಗು]

**ಪುಟವಾಳೆ** 'ಪುಟ್ಟಬಾಳೆ' ನೋ.

**ಪುಟವಿಕ್ಕು** 'ಪುಟವಿಂಕ್ಕು' ನೋ.

**ಪುಟವಿಡು** (ಕ್ರಿ). ೧. = ಪುಟಮಿಕ್ಕು : ಪುಟವಿಟ್ಟಪೊಳಪಟ್ಟ ಮಿಸುನಿ ಪೊಲ್ ಮಂಗಳನಿರ್ಮಳರುಚಿರರೂಪ ಕಣ್ಗೆಸೆದಿರ್ದಳ್ (ಗಿರಿಜಾ. ೩-೨೪); ನೆನೆದ ಮಾತವನು ತನ್ನ ತಂದೆಯು ಮನದ ಮಚ್ಚದೊಳೊರೆದು ಕರ್ಣನ ನೆನಹಿನಲ ಪುಟವಿಟ್ಟು ಶಕುನಿಯ ನೀತಿಯಲಿ ನಿಗುಚಿ . . . ವೈದುನನ ನುಡಿಯಲಿ ಬಣ್ಣವಿಟ್ಟನು (ಕುಮಾ. ಉ. ೨-೨೨); ನಡೆ ಪುಟವಿಟ್ಟ ಮಿಸುನಿಯ ಗುಬ್ಬಿಗಳ ಒಟ್ಟಿದ ಹೊಕ್ಕುಳ ಗಂಟೆಯ ತೇಜಗೋಟ್ಟಣೆಸು ತಲ್ಗೆದಿದುವು (ಕಂಠೀ. ೨೩-೯೯); ಕಾಳಿದಾಸನು ಜೀವಕಳೆ ತುಂಬಿ ನಿರ್ಮಿಸಿದ ಶಕುಂತಲೆ ಪುಟವಿಟ್ಟ ಸ್ವರ್ಣಪ್ರತಿಮೆ(ಕಾಳಿದ. ೯೬). ೨.(ಅಲಂ)ಉತ್ತೇಜನ ಗೊಳಿಸು; ಪ್ರೋತ್ಸಾಹಿಸು : ರಾಮಚಂದ್ರಗೆ ವನಿತೆಯನು ಕೊಡದೆಂತೆ ಮನದಲಿ ಖತಿಯ ಪುಟವಿಟ್ಟು ದಿನದಿನಂಪ್ರತಿ ವೈರಭಾವವನೆನಗೆ ಹುಟ್ಟಿಸಿ ಸಂಹರಿಸುವನು (ತೊರವೆ. ೨೩-೦೬); ನಾರಾಯಣನವಾಸ್ತ್ರ ರೊಡನೆ ವ್ಯತಿರಿಕ್ತವಾಗಿ ಕಾದಿಕೊಂಡು ನಕ್ಕು, ಸಡಗರದಿಂದ ಮಾತನಾಡು ವುದು ದಿನದಿಂದ ದಿನಕ್ಕೆ ಪುಟವಿಟ್ಟಂತಾಯ್ತು (ಶಾಕುಂ. ೬೩).

[ಪುಟ್ಟ + ಇಡು]

**ಪುಟವಿಳಿ** (ಕ್ರಿ). ಬೆಂಕಿಯಿಂದ ಕಾಂತಿ ಪಡೆದು ಹೊರಬರು: ಬಿನ್ನಣದಿ ಪುಟವಿಳಿದ ಸೊನ್ನೆಯ ತಿರಸ್ಕರಿಪ ಚೆನ್ನೆಯರ್ . . . ನಡೆತಂದರು (ಕಂಠೀ. ೪-೪). [ಪುಟ್ಟ + ಇಳಿ$_1$ (<ಇೞ್$_1$)]

**ಪುಟವೇರಿಸು** (ಕ್ರಿ). ೧. ಬೆಂಕಿಯಲ್ಲಿ ಹಾಕು ; ಸುಡು ; ದಹಿಸು : ಅವರನ್ನು ಹಿಡಿದು ಪುಟವೇರಿಸೋಣ ! (ಶಿಷ್ಟ ೩೩-೨೨). ೨. (ಅಲಂ) ಉತ್ಸಾಹಗೊಳಿಸು ; ಚೇತರಿಸು : ನಾನಿ ನೀಂಗಿಲು ಪರೀಕ್ಷಿತನ ಮನವ ಕಲಿಯೇರಿಸಿಯೆ ನೀತಿವಚನಂಗಳಿಂದಲವನ ಪುಟವೇರಿಸಿಯೆ ದುಗುಡವಂ ಬಿಡಿಸಿ(ತುರಂಗ. ೯೩-೨೨). [ಪುಟ್ಟ + ಏರಿಸು (<ಏಱಿಸು)]

**ಪುಟವೇಳ್$_1$**, ಪುಟವೇಳು (ಕ್ರಿ). ಪುಟಿದು ಏಳು; ಮೇಲಕ್ಕೆ ಹಾರು : ಪುಟಶತಘ್ನಿಗಳ ಗುಂಡುಗಳುಚಿ ಮೇಲಕ್ಕೆ ಪುಟವೆದ್ದು ನಡೆದುವು (ಕಾಶೀ. ೦೨-೦೦). ಪುಟವೇಳು : ಚೆಂಡು ತೂತಾಗಿರುವುದರಿಂದ ಪುಟವೇಳುತ್ತಿಲ್ಲ (ಜೂಜು). [ಪುಟ್ಟ + ಏಳ್$_1$ (<ಏೞ್$_1$)]

**ಪುಟವೇಳ್$_2$** 'ಪುಟವೇಱ್' ನೋ.

**ಪುಟವೇಳು** 'ಪುಟವೇಳ್$_1$' ನೋ.

**ಪುಟವೇಱು** (ಕ್ರಿ) ೧. (ಅಲಂ) ಕಾಂತಿಯನ್ನು ಹೊಂದು ; ಶೋಭೆ ಯನ್ನು ಪಡೆ : ಇನಿಸಿನಿಸು ಗರ್ಭಂ ಪ್ರತಿದಿನಮೊಯ್ಯನೆ ಬಳೆಯೆ ಸಯದೆ ಪುಟವೇಱೆ ನಿತಂಬಿನಿ ಕಾರೊಳೆಸೆವ ಕಾದಂಬಿನಿಯಂದದೆ ಮಂದಮಂದ ಗಮನದೆ ನಡೆದಳ್ (ಕಾದಂ. ೩೬೦). ೨. ಹೆಚ್ಚಾಗು ; ವೃದ್ಧಿ ಯಾಗು : ಪುಳಕಂ ಪುಟವೇಱೆ ಭೋಂಕನೆದ್ದು ನೃತಾಸನವೇಱಿ (ಜಿನಕ. ೦೦-೫). [ಪುಟ್ಟ + ಏಱು (<ಏಱ್$_1$)]

**ಪುಟವೇಱ್**, ಪುಟವೇಳ್$_2$ (ಕ್ರಿ). (ಅಲಂ) ಉಬ್ಬು; ಉತ್ಸಾಹ ಪಡು: ಪರ್ಚುವನಪ್ಪಂ ನಲಿವಂ . . . ಪುಟವೇಱ್ವನತಿಪ್ರಮೋದವಾಂತರ್ಚಿ ಪನಂದುಟ್ಟಕ್ಷಿಪಂ (ಅದ್ಯ.ಟಿ. ೦೦-೨). ಪುಟವೇಳ್$_2$ : ಗಿರಿರಾಜನೊಡಂ ಬಟ್ಟಾವರದೀಂದಂ ಪುಳಕಿಸುತ್ತೆ ಪುಟವೇಳುತ್ತಂ ಪರಿಚಾರಪಟುಗಳೆನಿಸುವ ಶರಣೆಯರಂ ಕೂಡಿ ಕೊಟ್ಟು ಸಂತಸದಿಂದಂ (ಗಿರಿಜಾ. ೩-೯); ಪೂಜೆಯಂ ಮಾಡಿ ಪುಟವೆದ್ದಾಡುವರ್ ಕಲರ್. (ಜಿನಕ. ೭-೯೬). [ಪುಟ್ಟ+ಏಱ್$_1$]

**ಪುಟಸಂಸ್ಕಾರ** (ನಾ). ಲೋಹಾದಿಗಳನ್ನು ಬೆಂಕಿಯಲ್ಲಿಟ್ಟು ಕಾಯಿಸಿ ಶುದ್ಧಗೊಳಿಸುವಿಕೆ ; ಪುಟಕ್ಕೆ ಹಾಕುವಿಕೆ : ನಿನಗಾದ ಜಗವ ಮುಟ್ಟಿಸುವ ಸೇತು ಸಂಸಾರ ಮನಕೆ ಪುಟಸಂಸ್ಕಾರ (ಜುಂಜ. ೬೦೦).[ಸಂ.]

**ಪುಟಸನ್ನೆಗೈ** (ಕ್ರಿ). ಕೈಯಿಂದ ಚಪ್ಪರಿಸಿ ಸನ್ನೆ ಮಾಡು : ವಾಯು ವೇಗದ ತುರಂಗಗಳನಡರ್ದು ಸಲೆ ಮೈಯಹಾದಿಂದ ಪುಟಸನ್ನೆಗೈದೊಲವಿ

ನಿಂದಾಯೆಸುತೆ ಕಂದವಂ ತಟ್ಟುತ್ತೆ (ಶೋಣಾಸು. ೧೨-೬).
[ಪುಟ್ಟ + ಸನ್ನಗ್ಗೆ (< ಸನ್ನಗೆಯ್)]

**ಪುಟಾಣ್ಣಿ** 'ಪುಟ್ಟಾಣಿ' ನೋ.

**ಪುಟಾಣ್ಣಿ** 'ಪುಟಾಣಿ' ನೋ.

**ಪುಟಿ** (ಕ್ರಿ). ಮೇಲಕ್ಕೆ ಚಿಮ್ಮು; ನೆಗೆ ; ಹಾರು : ಕುಂದ ಮಂದರ ಇಳಿದು . . . ಗಂಧಮಾದನಗಿರಿಗೆ ಹಿಂಗದೆ ಪುಟಿದು ವಾರಿನಿಧಿಯು ನೆರೆದ ಗಂಗೆಗಾರುತಿಯ ಬೆಳಗಿರೇ (ಅಹಲ್ಯಾ. ೦೬-೬); ಹಾಸ್ಯ ಅಂದರೆ ಬುಗ್ಗೆಯಾಗಿ ಪುಟಿಯುತ್ತದೆ (ಜಹೋಣ. ೦೫೬); ನೀರಿನ ಕಾರಂಜಿ ಪುಟಿಯುವುದನ್ನು ಈಕ್ಷಿಸುತ್ತ ರೇಣು ಕೇಳಿದಳು (ಹೇಮಂತ. ೨೦೬).

**ಪುಟಿಪುಟಿ** (ದ್ವಿರುಕ್ತಿ) : ಭರದೆ ವಾರಿಧಿಯಲ್ಲಿ ಹಾರಲು ಶಿರದ ಛಿದ್ರ ದ್ವಾರದಿಂದೆತ್ತರದೆ ನೀರ್ಪುಟಿಪುಟಿದು ಕಣ್ಣಿಗೆ ಚಂದಗಾಣುವದು (ರಹಸ್ಯ. ೦೧೦-೧೧).

**ಪುಟಿ₂** (ನಾ). ಚಕ್ರದ ಅರೆಕಾಲು : ಜನಪದಸಾಹಿತ್ಯವೆನ್ನುವುದು ಜಾನಪದಚಕ್ರದ ಒಂದು ಪುಟಿ . . . ಹಲವು ಪುಟಿಗಳು ಕೂಡಿ ತಾನೆ ಒಂದು ರಥದ ಚಕ್ರ ? (ಜನಪ. ೨೨). [?]

**ಪುಟಿಕೆ** (ನಾ). ೧. ಕರಂಡ; ಭರಣಿ; ಡಬ್ಬಿ: ಮದನನ ಸುಗಂಧಭಂಡಾರದ ಪುಟಿಕೆಗಳೆನಿಸಿ ಕಂಪು ಮಗಮಗಿಪಲರ್ವೆಟ್ಟಿದ ಪಡಲಿಗೆಗಳನೊಟ್ಟೈಸಿದನ ವನಚ್ಯುತನ ಮುಂದೆ ಮಾಲಾಕಾರಂ (ಜಗಂ. ೬-೦೬) : ತರವೇಜ್ಮಾಣಿಕ್ಯ ಭಂಡಾರದ ಪುಟಿಕೆಗಳುಂ (ಕಮುದ. ೨೯೯ ಕೃಯೋ). ೨. ದೊನ್ನೆ ; ಎಲೆಯ್ಯ ಬಟ್ಟಲು : ಪೂವಿಗೆ ಪು [ಶಾಕಾಂ. ಫಲಪುಟಿಕೆಯು ಮಾಳ್ಪೆನೆಂದಾಗ ಜಯಾ ವತಿಯುತಿಹರುಷದೊಳು ಆ ವನರುಹದೊಂದೆಲೆಗೊಯ್ದು ಬೆಳ್ಗೊಡೆಯಾ ವಸುಧಾಪತಿಗಾಯ್ತು (ಶ್ರೀಶಾಂ. ೧೨-೪೮). 'ಪತ್ರಪುಟಿಕೆ' ಪರಾ. ೩. ಜಾಡಿಯಿ; ಜಾಯಿಕಾಯಿ : ಎಕ್ಕೆಹಾಲಿನಲ್ಲಿ ಚತುಷ್ಕಟ ಟಂಕಣ ವನ್ನಾಗಲೀ ಪುಟಿಕೆಯನ್ನಾಗಲೀ ಹಾಕಿ ಮರ್ದಿಸಿ ಗಜಪುಟವನ್ನು ೨೦ ಕೊಟ್ಟರೆ ಭಸ್ಮವಹುದು (ಅಶ್ವ. ೨೨). ೪. ಏಲಕ್ಕಿ. [ಸಂ. ಪುಟಿಕಾ]

**ಪುಟಿಗಾಲು** (ನಾ). ನೆಗೆಯುವ ಕಾಲು ; ಪುಟಿದೇಳುವ ಕಾಲು : ನಿನ್ನ ಪುಟಿಗಾಲಿನಲಿ ಹರ್ಷ ದುಃಖದ ಋತು (ಪಂಪು. ೮೧-೩).
[ ಪುಟಿ₁ + ಕಾಲು₁ (<ಕಾಲ್₁) ]

**ಪುಟಿಗೆ** (ನಾ). ೧. ಪುಟಿಯುವಿಕೆ ; ನೆಗೆತ. ೨. ವಿನಾಟು ; ಜೀಕು : ಕಮಲಾಬಾಯರ ಕೈಗೆ ಪುಟಿಗೆ ಕೊಟ್ಟು ಉಮೆಯು ಸುಶೀಲೆಯೆಡೆಗೆ ಸಾಗರವರಿದಳು (ಕಪುಟ. ೬೨೪). 'ಮುಂಗಾಲ್ಪುಟಿಗೆ' ಪರಾ.
[ಪುಟಿ₁ + – ಗೆ]

**ಪುಟಿತ** (ಗು). ೧. ಹೆಣೆದ ; ಜೋಡಿಸಿದ. ೨. ಮಡಿಚಿದ. ೩. ಹೊಲಿದ ; ಕೂಡಿಸಿ ಕಟ್ಟಿದ. ೪. ಉಜ್ಜಿ ಪುಡಿ ಮಾಡಿದ; ಹುಡಿಗೊಳಿಸಿದ. ೫. ಸಂಕುಚಿತವಾದ ; ಸಂಕೋಚಗೊಳಿಸಿದ. ೬. ಪ್ರಕಟಿಸಿದ ; ವ್ಯಕ್ತಪಡಿಸಿದ. ೭. ಹೇಳಿದ; ನುಡಿದ. [ಸಂ.]

**ಪುಟಿಯಿಸು**, **ಪುಟಿಸು** (ಕ್ರಿ). ಚಿಮ್ಮಿಸು; ನೆಗೆಸು : ನಾಲ್ವತ್ತು ಗೆಳೆಯರ ಕೈ ಉಬ್ಬಿಸಿದವನ ತಲೆಯಿಂದ ನೆತ್ತರು ಪುಟಿಯಿಸದಿದ್ದರೆ ನಾನು ಜಾತಿವಂತ ಅಂಬಿಗನಲ್ಲ (ರಂಗಯೋ. ೧೨). **ಪುಟಿಸು** : ನಮ್ಮ ಹಳ್ಳಿಗರು ಆಗಾಗ ಹಾಸ್ಯದ ಬುಗ್ಗೆಯಾಗಿ ಬಿಡಗುಗಳನ್ನೊಳಗೊಂಡ ಹಾಡುಗಳ ಕಾರಂಜಿಯನ್ನು . . . ರಸಕವಿಗಳಾಗಿ ಪುಟಿಸಿದ್ದಾರೆ (ಅಕ್ಷಜಾ. ೪೯) [ ಪುಟಿ₁ + – ಇಸು₃ ]

**ಪುಟಿಸು** 'ಪುಟಿಯಿಸು' ನೋ.

**ಪುಟೀಪು** (ನಾ). ಗೋಡೆ ಅಥವಾ ಹಲಗೆಯ ಮೇಲೆ (ಚಿತ್ರ, ಸುಳುಹಂ ಮೊದಲಾದಂವುಗಳ ರಚನೆಗಾಗಿ) ಸುತ್ತಣ ಮಟ್ಟಕ್ಕಿಂತ ಉಬ್ಬಾಗಿ ಅಥವಾ ತಗ್ಗಾಗಿ ಮಾಡಿದ ವಿಭಾಗ,—ಅಂಕಣ : ಇದನ್ನು ಮಹಡಿಯ ಮೆಟ್ಟಿಲುಗಳ ಪುಟೀಪುಗಳು (Panels) ಮತ್ತು ಕೆಳಗೋಡೆ ಗಳಲ್ಲಿಯೂ ಉಪಯೋಗಿಸುತ್ತಾರೆ (ಶಿಲ್ಪಶಾ. ೩೨೪) ; ಎರಡು ಪಟ್ಟಿಕೆ ಅಥವಾ ಪುಟೀಪುಗಳಲ್ಲಿ (Panels) ನಟರಾಜನ ನಾಟ್ಯಭಂಗಿಗಳು ಶಿಲ್ಪಿತ ವಾಗಿವೆ (ಹೊಳಂ. ೯೬). [ ? ]

**ಪುಟು** (ನಾ). ಒಂದು ಅನುಕರಣಪದ : 'ಪುಟುಗುಟ್ಟು' ಪರಾ.

**ಪುಟುಗುಟ್ಟು** (ಕ್ರಿ). ಪುಟುಪುಟು ಎಂದು ಬಡಿದುಕೊಳ್ಳು : ಪುಟು ಗುಟ್ಟುತ್ತಿರಲಿದೆ ತುಟಿ ಕಚ್ಚಿ ಹಿಡಿದಿದ್ದೆ ನನ್ನಲ್ಲೆ ನಾನಿಲ್ಲ ಎಂಬಂತಿರೆ (ಕಡಲ. ೨೮-೫೪೫). [ಪುಟು + ಕುಟ್ಟು₁]

**ಪುಟುಪುಟಿಸು**, **ಪುಟಪುಟಿಸು** (ಕ್ರಿ). ಪಟಗುಡು ; ಗೊಣಗು : ಮೂರ್ತಿ ಮೆಲ್ಲಗೆ ನೆಲಕ್ಕೆ ಹಣೆ ಹಚ್ಚಿ ನಮಸ್ಕಾರ ಮಾಡಿ ಮನಸ್ಸಿನಲ್ಲಿಯೇ ಪುಟು ಪುಟಿಸಿದ (ಬರ್ಯೋಗ. ೨೦) ; ಭೀಮಪ್ಪ . . . ಬಾಯಲ್ಲಿಯೇ ಏನೇನೋ ಪುಟುಪುಟಿಸಿದ (ಮುದ್ದು. ಕ. ೧). **ಪುಟಪುಟಿಸು** : ಬಾಯಲ್ಲೇ ಏನೋ ಪುಟ ಪುಟಿಸುತ್ತ ಅಂಗಡಿಯತ್ತ ನಡೆದೇ ಬಿಟ್ಟರು (ಋಣಾನು. ೨೫೮).
[ < ಪುಟು + – ಇಸು₁ ]

**ಪುಟುವು** (ನಾ). (ಅಲಂ) ಪ್ರೋತ್ಸಾಹ; ಬೆಂಬಲ: ಅವನ ಮದುವೆ ಮಾಡ ಬೇಕೆಂದು ರಾಯರ ಹಂಬಲ ; ಆಚಾರ್ಯರ ಪುಟುವು (ಶ್ರೀರಂಜ. ೦೪); ಅವರೇ ಶ್ಯಾಮರಾಯನಿಗೆ ಪುಟುವು ಕೊಡುತ್ತಿದ್ದ ವಾರ್ತೆ ಗೌಡರಿಗೂ ಹತ್ತಿತ್ತು (ರಂಜ. II. ೦೦೦). [ < ಪುಟ್ಟ₂ + – ವು ]

**ಪುಟೆಗಳ್ಳ** (ನಾ). ಒಬ್ಬಾತನ ಹೆಸರು : ಅಯ್ಯಣಯ್ಯನ ಮಗಂ ಪುಟೆ ಗಳ್ಳನ್ನಾಗೆದೊಡೆ (ಶಾಶಾಪ. IX-1. ೬೩-೧೦; ೩೪೭). [ ? ]

**ಪುಟ್ಟ₁** (ನಾ). ೧. ಚಿಕ್ಕವನು ; ಸಣ್ಣವನು : ಹೊಟ್ಟೆಯ ಕರುಳೆ ಹಾರವ ಮಾಡಿ ಪುಟ್ಟಗೆ ವರವ ಕೊಟ್ಟಾನಾ (ಕಪ. ೬೬-೪) ; ರತಿಯು ಪರಿಪಾಲಿ ಸುವ ಪುಟ್ಟನನ್ನು ಕರೆತರ್ಪುದು (ಕರಹೋ. ೦೨-೬೦) ; ಹೋದ ಪುಟ್ಟ ಬಂದ ಪುಟ್ಟ, ಪುಟ್ಟನ ಹೆಜ್ಜೆ ಕಂಡೋರಿಲ್ಲ (ಗಾದೆ). ೨. ಮಕ್ಕಳನ್ನು ಪ್ರೀತಿ ಯಿಂದ ಕರೆಯುವಾಗ ಬಳಸುವ ಒಂದು ಪದ : ಊಟ ಮಾಡು ಬಾ ಪುಟ್ಟ (ಆಡು). (ಗು). ೩. ಚಿಕ್ಕ ; ಸಣ್ಣ : ತರಳನ ಪುಟ್ಟ ಪಾದ ದೋರ್ದ ತಾವರೆಯರಲನು ನೊಸಲಿಗೊತ್ತುವಳು (ಕೋಹಕ. ೦೬-೬೪) ; ಅರ್ಭಕನ ಕಣ್ಣೆ ಪುಟ್ಟ ಸಾಲಗ್ರಾಮದೊಂದು ರಮಣೀಯ ಶಿಲೆ ಕಟ್ಟಿಸಿಕ ದಿಂದೆ ಕಾಣಿಸಲದಂ ತಾನೆತ್ತಿಕೊಂಡು . . . ಬೈಚಿಟ್ಟುಕೊಂಬಂ ಬಾಯೊ ಳನವರತಂ (ಕೈಪಿಡಿ. ೨೪-೨೩) ; ನಂಜಮ್ಮ . . . ಮಗುವಿನ ಕೈಕಾಲು ಗಳಿಗೆ ಪುಟ್ಟ ಹೊನ್ನ ಬಳೆಗಳನ್ನು ತೊಡಿಸಿದಳು (ಚಾಕುಕ್ಕ. ೯೦).

**ಪುಟ್ಟದು**—ಚಿಕ್ಕದು ; ಸಣ್ಣದು : ಮಕ್ಕಳ ಕೈ ಪುಟ್ಟದು. ಅದರ ಗ್ರಹಣ ಶಕ್ತಿ ಅದಕ್ಕೆ ತಕ್ಕಂತೆ ಅಲ್ಪ (ಕಲಾಕ್ಷ. ೦೬೩) ; ಬಲ್ಲಿನಂತೆ ಬಾಗಿದ್ದ ತುಟಿ; ಪುಟ್ಟದಾದ ಬಾಯಿ (ಕಕತು. ೩).
[ದೇ.II ತುಳು. ಪುಟ್ಟ ; ತೆಲು. ಪುಟ್ಟಿ. ಪೂಟಿ./ಸಂ. ಪುಟ್ಟ್ = ಚಿಕ್ಕದಾಗು]

**ಪುಟ್ಟ₂** (ಗು). ೧. ಪೋಷಿತ ; ಪುಷ್ಟ : "ಪುಟ್ಟ – ಪುಷ್ಟ = ಪುಷ್ಟಿ ಯಾದ " (ಶಕ್ತಿಕೋ. ೨೬). (ನಾ). ೨. ಪೋಷಣೆ ಹೊಂದಿದುದು : 'ಪರಪುಟ್ಟ' ನೋ. [ < ಸಂ. ಪುಷ್ಟ./ಪ್ರಾ. ಪುಟ್ಟ]

**ಪುಟ್ಟಂಪುರಳೆ** (ನಾ). ಒಂದು ಬಗೆಯ ತರಕಾರಿ ಸಸ್ಯ ; ಪುಳ್ಳಂಪುರಚಿ : ಉಪ್ಪು, ಉಪ್ಪಿನ ಸೊಪ್ಪು, ಪುಟ್ಟಂಪುರಳೆ, ಪುಳ್ಳಂಪುರಚಿಸೊಪ್ಪು, ಹುಳಿಚಿಕ್ಕ (ಬ್ಯಾಕಿಗ. ೫೯-೨೦೬೬). [ ? ]

**ಪುಟ್ಟಗಾವುಂಡ** (ನಾ). ಒಬ್ಬಾತನ ಹೆಸರು : ತೊಟ್ಟಿಲ ಪುಟ್ಟಗಾವುಣ್ಣನುಂ ಎಚಿಯಣ್ಣ ಪೆರ್ಮ್ಮಾಡಿ ಕಟಿಯ ಕಟ್ಟ ಕಲ್ಲ ತುಂಬನಿಕಿಸಿದ (ಬ್ಯಾಅಂ. ೦೧೬೨. ೧೧-೪ ; ಸು. ೧೩೮೯ ಕಕ). [ಪುಟ್ಟ₁ + ಗಾವುಂಡ (< ಗಾವುಂಡ)]

**ಪುಟ್ಟಗೆ** ' ಪುಟ್ಟಿಗೆ₂' ನೋ.

**ಪುಟ್ಟಜ, ಹುಟ್ಟಜೆ** (ನಾ). ಹುಟ್ಟಿದ ಸ್ಥಳ; ತವರುಮನೆ; ಜನ್ಮಸ್ಥಾನ: ಮದನನ ಕೈದುವಲ್ಲಿದು . . . ಚದುರ ಪುಟ್ಟದನೆ[ಟ್ಟಜವು] ಲ್ಲಿದಂ (ಅನಂತ. ೩-೦೫); ಸಿರಿಯ ತವರ್ಮನೆ ಹವಳದ ಹರವರಿ ಮೌಕ್ತಿಕದ ಪುಟ್ಟಜಂ ಶಶಿಯಯ್ಯಂ ಹರಿಯಪ್ಪ ಸೆಜ್ಜೆವನೆ . . . ಎನಿಪಂಭೋನಿಧಿ ಸುತ್ತುವೊಪ್ಪೆ(ಪ್ಪ)ತ್ತಿರೆ ಜಂಬೂದ್ವೀಪವೊಪ್ಪುವುದು (ಶಾಸ. I. ೨೫-೯ : 1180); ಜಗತೀಕಾಂತನ ಮಾದೇವಿ ಲಕ್ಷ್ಮಿಣಾದೇವಿ . . . ಚದುರ ಪುಟ್ಟಜ [ಪುಟ್ಟಜ]ವೆನಿಪಳ್ (ಚಂದ್ರಪ್ರ. ೦೦-೯೦). **ಹುಟ್ಟಜೆ**: ಸಿರಿಯ ತವರ್ಮನೆ ಹವಳದ ಹರವರಿ ಮುತ್ತುಗಳ ಹುಟ್ಟಜೆ ಚಂದ್ರನ ತಾಯಿ ಹರಿಯುಪ್ಪ ಸೆಜ್ಜೆ[ನೆ] ರತ್ನರಾಶಿಪ್ರವರ್ಧನ ನಿಧಾನಂ . . . ಎನೆ ಚೆಲ್ವಿಂ ಜಳರಾಶಿ ಸುತ್ತುವಿರೆ ಜಂಬೂದ್ವೀಪವೊಪ್ಪುವುದು (ಶಾಸ. XV. ೨೪೦-೩ : 1174).

**ಪುಟ್ಟಣೆ** 'ಪುಠಾಣಿ' ನೋ.

**ಪುಟ್ಟಬಾಳೆ, ಪುಟಬಾಳೆ, ಪುಟವಾಳೆ** (ನಾ). ಸಣ್ಣಗಾತ್ರದ ಹಣ್ಣುಗಳನ್ನು ಬಿಡುವ ಒಂದು ಜಾತಿಯ ಬಾಳೆ: ಬಾಳೆಯಲ್ಲಿ ಅನೇಕ ಜಾತಿಗಳಿವೆ—ರಸಬಾಳೆ, ಚಂದ್ರಬಾಳೆ, ರಾಜಬಾಳೆ, ಪುಟ್ಟಬಾಳೆ, ಏಲಕ್ಕಿಬಾಳೆ, ಮಧುರಂಗಬಾಳೆ, ಸೇಲಂಬಾಳೆ ಇವೇ ಮೊದಲಾದವು (ಕೃಷು. ೩೭); ಹಟ್ಟಿ ಕಲ್ಲೊಳ್ಳಿಗೆ ಬಟ್ಟುಗಂಧವನಿಟ್ಟು ಪುಟ್ಟಬಾಳೆ ಹಣ್ಣ ಸುಲಿದಿಟ್ಟು (ಜಾಪದ. ೧೨೪). **ಪುಟಬಾಳೆ**: ಹಟ್ಟಿ ಕಲ್ಲಿಗೆ ಪುಟ್ಟು ಗಂಧಾವಸಿಕ್ಕಿ ಪುಟಬಾಳೇ ಹಣ್ಣಾ ಸುಲಿದಿಕ್ಕಿ ಒಳಗೀರೋ ನಿನ್ನ ಬಂದಕ್ಕಿ ತೊಳೆಸಾರೊ (ಹುಟ್ಟಿಹ ೩೦). **ಪುಟವಾಳೆ**: ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯಸವಾದೇವಾಳೆ ಬೊಬ್ಬಾಳೆ ಹಸುರುಗುಂದದ ಪಚ್ಚೆಬಾಳೆ ಮಧುರಂಗ ಪಸರಿಸಿ ಮೆಱೆದುದರ್ತಿಯಲಿ (೪೦ಪಾ. ೩-೮೩).

[ಪುಟ್ಟ₁ + ಬಾಳೆ₁ (< ಬಾೞೆ). / ತಮಿ. ಪುಟ್ಟುವಾೞೈ]

**ಪುಟ್ಟವಳ** (ನಾ). ಹುಟ್ಟುವಳ; ಆದಾಯಂ; ಉತ್ಪನ್ನ: ಧಾರಾಪೂರ್ವಕ ಮ್ಮಾಡಿಕೊಟ್ಟು ಕೊನ್ದು ಪೋಗದುದ್ಮಣ ನೂಱ ಪಡೂಱು ಇಂತಿ ಪುಟ್ಟುವಳದಲು ನಿಚ್ಚಂ ನಾಲ್ವರ್ಗ್ಗೆ ಸತ್ರಮಂ ನಡೆಸಂತಾಗಿ ಬಿಟ್ಟುಕೊಟ್ಟನು (ಶಾಸ. IX-1. ೮೯-೨೦ ; 1035): ಮೂಲಗಾಱ ಬರ್ಮಯ್ಯಮೊನ್ದು ಪಸದನದ ಪುಟ್ಟುವಳಮಂ ಬಿಟ್ಟು (ಎಕ. XVI. ೩೩೧-೨೫ : 1077).

[?·/ ಪುಟ್ಟು₁ + < ಪಣ₃]

**ಪುಟ್ಟಱಿವು, ಹುಟ್ಟರಿವು** (ನಾ). ಹುಟ್ಟಿನಿಂದ ಬಂದ ತಿಳಿವಳಿಕೆ; ನೈಸರ್ಗಿಕವಾದ ಬುದ್ಧಿ: ಕೇಡಡಸೆ ಪುಟ್ಟಱಿವುಮುಱಿಯುದೆಯೆ ನೆಲೆ ತಪ್ಪಿ ಪೋಕುಪುದ್ (ಅಂತಿಗೊ. ೨೬-೩೯೦). **ಹುಟ್ಟರಿವು**: ಈ ದೇಶ ಬಂಧುಗಳ ಹೃದಯದಲ್ಲಿ ಹುಟ್ಟರಿವಾಗಿ ಬಂದು, ಅವರ ಜೀವನಕ್ರಮವನ್ನೇ ವ್ಯಾಪಿಸಿ ನಿಯಂತ್ರಿಸುವ ನಂಬಿಕೆಗಳು—ದೇವರು . . . ಪರಲೋಕ ಇವುಗಳೆಂದು ಒಟ್ಟಿನಲ್ಲಿ ಹೇಳಬಹುದು (ಭಾರತ. ೯); ಹಾವುಗಳು ಸ್ವಪ್ರದೇಶಪ್ರೇಮಿಗಳು. ಆಗಂತುಕರನ್ನು ಶತ್ರುಗಳೆಂದೇ ಭಾವಿಸುವ ಹುಟ್ಟರಿವು ಇವುಗಳ ಸಹಜಸ್ವಭಾವ (ಹಕುಕೊ. ೬೬).

[ಪುಟ್ಟು₂ + ಅಱಿವು]

**ಪುಟಾಣಿ, ಪುಟಾಣಿ₁** (ನಾ). ೧. ಚಿಕ್ಕವನು; ಸಣ್ಣವನು: ಪುಟಾಣಿ, ನಿನ್ನ ಹೆಸರೇನು? (ಬೂತ). (ಗ್ರಾ). ೨. ಎಳೆಯ; ಚಿಕ್ಕವಯಸ್ಸಿನ: ಅಳಿಯನನ್ನೇ ಮನೆಯಲ್ಲಿ ಸಿಕ್ಕಿಸಿಕೊಳ್ಳುವೆ, ಈ ಪುಟಾಣಿ ಮಗಳನ್ನು ಕಳಿಸುವುದಿಲ್ಲ (ಕೃಷು. ೩೮); ನೀನಿನ್ನೂ ಸಣ್ಣವನು. ನಿನ್ನ ಪುಟಾಣಿ ಕೈಲಿ ಇಂಥಾ ಕೆಲಸ ಆಗುಲ್ಲ (ಪುಟ್ಟಕ. ೨೦). **ಪುಟಾಣಿ₁**: ೧. ಗಿಡ್ಡ ಪುಟಾಣಿ ಮಜ್ಜಿಗೆ ದೋಣಿ (ಗಾದೆ). [< ಪುಟ್ಟ₁]

**ಪುಟ್ಟಾರಿ** (ನಾ). ಚಿಕ್ಕ ಮಗು: ಪುಟ್ಟಾರಿಗೆ ಎಳೆದುಕೊಂಡು ಆಡುವುದಕ್ಕೆ ಅವನ ತಂದೆ ಒಂದು ಕೈಗಾಡಿಯನ್ನು ತಂದುಕೊಟ್ಟಿದ್ದರು (೪೦೪೮. ೦೯೩). 'ಚಿನ್ನಾರಿ' ನೋ. [< ಪುಟ್ಟ₁]

**ಪುಟ್ಟ₁, ಬುಟ್ಟಿ** (ನಾ). ೧. ತೆಂಗು, ತಾಳೆಗಳ ಗರಿ ಅಥವಾ ಬಿದಿರಿನಿಂದ ಹೆಣೆದು ಮಾಡಿದ ಗೂಡೆ, ಮಂಕರಿ ಮುಂತಾದುವು. ಅನೇಕ ಸುರಭಿಕುಸುಮಂಗಳಂ ಸಜ್ಜುಕಮಪ್ಪುವಂ ಪುಟ್ಟಿಯೊಳ್ ತೀವಿಕೊಂಡು (ಹಂಶಸಂ. ೦೧೩-೬); ನೆತ್ತರ ಮಾಡು ನಾಡಿಗಳ ಸುತ್ತುವಳಿ ನರವಿನ ನೆಣದಂತ್ರ ಮಾಂಸದ ಪುಟ್ಟಿಯು ತೆಪ್ಪ . . . ಮೋಹದ ಬಲೆ ತೋಱಿ ಕೆಡುವ ತನು ಇದು (ಚಕಸಂ. ೪೫-೬೨); ಹೊಟ್ಟೆಯೊದಸ ಪುಟ್ಟಿಸಿಂಗನ ಮುಟ್ಟಿವಿನೆ ಕೊರಳಾಣೆ ಪುಟ್ಟಿಯು ಮೇಲಾಣೆ ಬಿಟ್ಟಿದ ತಾಯಿತದಾಣೆ (ತ್ರಿಪು. ೬೩); ಪುಟ್ಟಿ ಕಿರಿದೇನು ಹೆಡಗೆ ಹೆಚ್ಚೇನು? (ಗಾದೆ). **ಬುಟ್ಟಿ**: ೧. ಈಕೆಯ ತಲೆ ನೋಡು ಹೇಗೆ ಬುಟ್ಟಿ ಆಗಿದೆ! (ಪಟಿಚೆಯ. ೧·೦೩); ಅನ್ನದ ರಾಶಿಗಾಗಿ ದೊಡ್ಡ ಬುಟ್ಟಿ ಬಾಯಿ ತೆರೆದು ನಿಂತಿತ್ತು (ಹುಡಿ. ೩); ಕೆಲವರು ಹೆಂಗಸರು ತಲೆಯ ಮೇಲೆ ಬುಟ್ಟಿಗಳನ್ನು ಹೊತ್ತುಕೊಂಡು ಬರುತ್ತಿದ್ದರು (ರಂಗಳ. ೨೭). ೨. ಬಿದಿರಿನ ಬುಟ್ಟಿಯಾಕಾರದ ನಾವೆ: ಬುಟ್ಟಿಯು ದೊಡ್ಡ ಸೆಳವಿನ ಸುಳಿಯನ್ನು ದಾಟಿ ಆಚೆಯ ದಡದ ಸಮೀಪಕ್ಕೆ ಬಂದಿತ್ತು (ರಾಜಕೆ. ೧೦೨).

ಬುಟ್ಟಿಗೆ ಹಾಕಿಕೊಳ್ಳು = (ಆಲಂ) ಉಪಾಯವಾಗಿ ಸ್ವಾಧೀನಪಡಿಸಿಕೊಳ್ಳು; ಯುಕ್ತಿಯಿಂದ ವಶಪಡಿಸಿಕೊಳ್ಳು: ಅವನು ವ್ಯವಹಾರಕುಶಲ . . . ಹೇಗೋ ಅವಳನ್ನು ತನ್ನ ಬುಟ್ಟಿಗೆ ಹಾಕಿಕೊಂಡನು (ಪುಪರು. ೯); ಇಲ್ಲಪ್ಪನ ಬೇಳೆ ನ್ಯಾಯಾಧೀಶರ ಬಳಿ ಬೇಯುವ ಹಾಗಿದ್ದರೆ ಅವರನ್ನು ತನ್ನ ಬುಟ್ಟಿಗೆ ಹಾಕಿಕೊಳ್ಳುತ್ತಿದ್ದನು (ಕಂಠಶಂ. ೨೦೯).

[ದೇ.॥ ತಮಿ. ಪುಟ್ಟಿಲ್; ತುಳು. ಪುಟ್ಟಿ. ಬುಟ್ಟಿ; ತೆಲು. ಪುಟಿ, ಪುಟ್ಟಿ, ಬುಟ್ಟ, ಬುಟ್ಟಿ; ಕೊಡ. ಪುಟ]

**ಪುಟ್ಟ₂** (ನಾ). ೧. ಚಿಕ್ಕವಳು; ಚಿಕ್ಕವಯಸ್ಸಿನವಳು. ೨. ಹೆಣ್ಣುಮಗು: ಗಂಡುಮಕ್ಕಳಿಗೆ "ಪುಟಾಣಿ", ಹೆಣ್ಣುಮಕ್ಕಳಿಗೆ "ಪುಟ್ಟಿ" ಯೆಂದೆನ್ನುವರು (ಕಾಂಗ. ೮೩). [ಪುಟ್ಟ₁ + -ಇ₂]

**ಪುಟ್ಟ₃** (ನಾ). ಒಂದು ಅಳತೆಯ ಪ್ರಮಾಣ: ಬಸಗೆ ಉತ್ಸಾಹಂಗಳ್ಗೆ ಐನೆಲ್ಲಕೈಲೊನ್ದು ಪುಟ್ಟಿಗೆ (ಎಕ. XIV. ೭೯೧ ೦೮; 765): ಸಜ್ಜುಕಕ್ಕೆ [ಪು]ಟ್ಟಿಗೆ ಒನ್ದರಿ ಮಾಳವೆಗೆ ಪೞಿ ಪಡಿನಾಱುಪಲಂ (ಎಕ. IX. ೨೨-೩; ಸು. 800). [ದೇ.॥ ತಮಿ. ತೆಲು. ಪುಟ್ಟಿ]

**ಪುಟ್ಟ₄, ಪುಟ್ಟು₄, ಹುಟ್ಟಿ, ಹುಟ್ಟು₄** (ನಾ). ೧. (ವಿಶೇಷವಾಗಿ) ಜೇನಿನ ಗೂಡು: ಪೊಮ್ಮ ಪೊಯ್ಗಳಿಂ ನೆಗೆವ ಮುಗಿಲ್ಗಳಟ್ಟಿಡೆಗಳೊಳ್ ತರೆಗಳ್ ತೊಡರ್ದಿರ್ದ ಜೇನ ಪುಟ್ಟಿಗಳನೆ ಪೋಲ್ತುವೆ (ಹಂಪಾ. ೧೦.೬೦); ಮಂದಲೆಗಳೆ ಜೇನ ಪುಟ್ಟಿಯೆನೆ ಕೊರ್ವಿದ ಕೊಂಬುಗಳಲ್ಲಿ ಪಕ್ಕಿವೋಲ್ ಚಲಿಯಿಸಿಯೆಂದುಮರ್ದ ಕೆಲಗಳ್ಗಣಪಾಲಯುದಾಲದೋಳ್ ಯೊಳ್ (ಅರ್ಜಸಿ. ೩-೩೭); ತರೆ ಕಟಗಾಗಿ(ರ್ದ) ಪೆರ್ಜೇನ ಪುಟ್ಟಿಗಳಂ ತಿರ್ದ ಪುಟ್ಟಿ(ಅಟ್ಟು)ಗಳೊಳ್ ಪುಟ್ಟಿ (ಕಜಪಾ. ೯೯-೦೦). **ಪುಟ್ಟು₄**: ೧. ಕಲ್ಲ ಪೊಗಱೆಯೊಳಿಟ್ಟ ಕಾಪುರ್ಗಳ ಮೊಟ್ಟೆಗಳ್ ತಾವೆನಿಸಿ ಪರ್ಬಿದುವು ಪೆರ್ಜೇನ ಪುಟ್ಟುಗಳ್ (ಅಕಂಪು. ೯-೨೭). **ಹುಟ್ಟಿ**: ೧. ಬಡಮಾಱ ಹುಟ್ಟಿಯ ಕೆಣಕಿದಂತೆಯುಂ (ಎಕ. VIII. ಸೊರಬ. ೧೩೩-೬; 1156); ಪುಷ್ಪಫಲಂಗಳ ನಾಯ್ದುಕೊಂಡು . . . ಜೇನ ಹುಟ್ಟಿ [ಪಾಠಾಂ. ಟ್ಟು]ಗಳನ್ನಿಟ್ಟಿಟ್ಟಲಸದೆ ಕಲಸಿ ತಣಿವಿನಂ ತಿಂದು ತೇಗಿ (ಗಿರಿ. ೧. ೧೨೮ ೩). ೨. ಗೂಡು: ವಿಷದ ಹುಟ್ಟಿಯೊಳೆಱಗಿ ನೊಣ ಜೀವಿಸುವುದೇ (ಕುಮಾರ. ೬.೯೦). **ಹುಟ್ಟು₄**: ೧. ಜೇನ ಹುಟ್ಟಿನ ಹುಳುವ ಬಡಿವ ಸಮುತ್ತನ ಜಾನೇನು ಬೊಣೆಯ ಸೇನೆಗೀನೆಯ ಸಪಜಿಲಾಯಿತ ಶೌರ್ಯಸಿರಿ ನಿನಗೆ (ಕುಮಾರ. ೯-೫೯); ಕೆಟ್ಟ ಮೈ ಹೆಂಗಸನು ಬಟ್ಟೆಯಲಿ ತಾಱಿಚಿಯನು ಅಟ್ಟಿಟ್ಟ ಕವಿಡ ಕವಡನ ಹುಟ್ಟನ್ನು ಮುಟ್ಟಬೇಡ (ಸರ್ವಜ್ಞ. ೮೩೫); ಆ . . . ಕೊಂಗೆಯನ್ನು ಕಡಿಯುವಾಗ ತಪ್ಪಿ ನನ್ನ ಕಾಲಿಗೆ ಹುಡುಗೋಲು ತಾಕಿತು (ಹುಟ್ಟಿಚಿಣ್ಣ ೦-೦೮).

**ಪುಟ್ಟಿ₆** (ನಾ). ಬಟ್ಟೆ; ವಸ್ತ್ರ : ಅಲ್ಲಿ ಮಹೇಶ್ವರಾಲಯದಂತೆ ಗೊರವು ... ಭೂಮಿ ಪರ್ವಿದಂತೆ ಸೀಗೆ ಪುಟ್ಟಿಯನಳಿವನಂತೆ ವೊಳಗೆ ಕುರುಕಲ್ಪಿಕ್ಕುವ ವಯಣಾದಂತಿರ್ದಿರ್ಪುದು (ಜಂಕಂ. ೨-೩೬ ಪ); ಮೂಲಾಶ್ಯಾರಭ್ಯ-ಧ್ವಜದ ಮೂಲಂ ಮೊದಲುಗೊಂಡು ತತ್‌ಪಾರ್ಶ್ವೇ—ಆ ಶಿಬಿಯೆಕ್ಕಲದೊಳು ಕೃಪಾಹೀನಃ-ಕ್ರಮದಿಂ ಕುಂದುತ್ತುಂ ಬಂದು ಅಗ್ರಪೌಷ್ಪಿಕಾತ್-ಕಡೆಯ ಪುಟ್ಟಿಯತ್ತಣಿಂದ (ಶ್ರೀಶೀ. ೦೪-೦೪). [<ಪುಟ್ಟಿಗೆ₂]

**ಪುಟ್ಟಿಕೆ** 'ಪುಡಿಕೆ' ನೋ.

**ಪುಟ್ಟಿಗೆ₁** 'ಪುಡಿಕೆ' ನೋ.

**ಪುಟ್ಟಿಗೆ₂**, ಪುಟ್ಟಗೆ, ಹುಟ್ಟಗೆ, ಹುಟ್ಟಿಗೆ, ಹುಟ್ಟುಗೆ (ನಾ). ೧. ಬಟ್ಟೆ; ಉಡುವ ವಸ್ತ್ರ : ವಿದ್ಯುಜ್ಜ್ಯೋರಂ . . . ಸ್ವಾಭಾವಿಕವಪ್ಪ ಮುನ್ನಿನ ರೂಪು ಕೈಕೊಂಡು ಪುಟ್ಟಿಗೆಯನುಟ್ಟು ಮೆಯ್ಯಂ ಪೂಸಿ ಪೂವಂ ಮುಡಿದು (ಶಬ್ದಾರಾ. ೧೨೩೪.೧); ಇಂತುಟಪ್ಪ ಮೆಯ್ಯನ್ನಾಕ್ರಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ಕುಂ (ಕಂಕರಾ. ೩-೭೫); ಪುಟ್ಟಿಗೆಯುಮಂ ಪೂವುಮಂ ತಳಿಗೆಯೊಳಿಟ್ಟುಕೊಂಡು ಪೋಪುದು ಕಂಡು (ಜೀವಸಂ. ೨೨೬-೧೬). **ಪುಟ್ಟಗೆ** : ೧. ಆದರದಿಂದಂ ಭೂಮಿ ಪೊ ಪುಟ್ಟಗೆ ವಸು ಧನವಂ ನೀಡುತ್ತೆ . . . ಧರೆಯೆಲ್ಲಂ ಮೆಚ್ಚಿ ನಿಚ್ಚಂ ಪೊಗಳೆ ನೆಗಟಾತಂ ದೇವಲೋಕಕ್ಕೆ ಪೋದಳ್ (ಎಕ. IV, ಹಗ್ಗಡೆ. ೧೮-೨೬ ; 1067). **ಹುಟ್ಟಗೆ** : ೧. ಈಕೆ ಹುಟ್ಟಗೆಗಟ್ಟಿ ಹುಟ್ಟಗೆಯಂತೆ ಹಡಣಂ (ಅಂಲಾ. ೨-೦೦೬ ಪ). **ಹುಟ್ಟಿಗೆ** : ೧. "ಹುಟ್ಟಿಗೆ, ದುಗುಲಂ, ಪಟ್ಟಣಿಗೆ, ಉಳ್ಳುಡಿಗೆ—ಈ ೪ ವಸನಕ್ಕೆ ಪೆಸರ್" (ಕರಣ ೩೩-೩೭೨); ನಿನ್ನಯ ನಕ್ಷೆ ದರೆಯು ತಂದ ಹುಟ್ಟಿಗೆಯುಟುದೇಟ್ಕೊಂಟುಗೊಬುದು ಸೇದೆಯ ಬಾವಿಯೊ ಬಂದ ದಾವೆಯೋ (ಅಂಲಾ. ೨-೦೦೦) ; ಹುಟ್ಟಿಗೆಯ ನಿದ್ದಂತೆ ಕೊಡು ಕೊಡು ಹುಟ್ಟಿಗೆಯನಯ್ಯಂಗೆ ಕೊಟ್ಟೊಡೆ ಹುಟ್ಟಿ ಎನ್ನಾವು (ಜಾಪು. ೧೧-೩೩). ೨. ದೇವತೆಯ ಹರಕೆಗಾಗಿ ಉಡುಗೆಯಂತೆ ಧರಿಸುವ ಬೇವಿನ ಸೊಪ್ಪು : ದೇವತೆಗೆ ಹರಕೆ ಹೊತ್ತವರು, ಮುಖ್ಯವಾಗಿ ಹೆಂಗಸರು, ಗುಂಥದ ಇಲ್ಲದೆ ಬೇವಿನ ಹುಟ್ಟಿಗೆಯ ಉಟ್ಟು ಕೊಂಡು ದರ್ಶನಕ್ಕೆ ಹೋಗುತ್ತಾರೆ (ಕಾಗಿ. ೫೦೬) ; ಪೂಜೆಯ ಕಾಲಕ್ಕೆ ಹುಟ್ಟಿಗೆ ಕಟ್ಟಿಕೊಳ್ಳುವ ವಾಡಿಕೆ ಅನೇಕ ಮನೆತನಗಳಲ್ಲಿವೆ (ಕಜಾಲಿ. ೪೯). ೩. ಬೇವಿನ ಸೊಪ್ಪಿನ ಉಡುಗೆಯೆನ್ನು ಧರಿಸುವ ಹಬ್ಬ : ಮನೆಯಲ್ಲಿ ಹುಟ್ಟಿಗೆ ಮಾಡುವುದರಿಂದ ತಮ್ಮೆಲ್ಲರನ್ನು ಕರೆದುಕೊಂಡು ಬರಬೇಕೆಂದು ಹಿರಿಯರು ಕಳಿಸಿಕೊಟ್ಟಿರುವರು (ಗ್ರಾಜಾಸಂ. ೩೬). **ಹುಟ್ಟುಗೆ** : ೧. "ಹುಟ್ಟುಗೆ ವಸ್ತ್ರದೊಳ್" (ಕಶಾರ. ೨೫) ; "ಹುಟ್ಟುಗೆಯೆನೆ ಸೀರೆ" (ಕರು.೦. ೭೪).

[ < ಸಂ.ಪುಟ್ಟಿಕಾ, ಪುಟ್ಟಕ./ತವಿಂ. ಪುಟ್ಟಕ ]

**ಪುಟ್ಟಿಗೆ₃** (ನಾ). ಆದಾಯ ; ಉತ್ಪನ್ನ (?) : ಎರಡು ಗದ್ಯಾಣಂ ಪೊನ್ನು ಇರ್ಪತ್ತುಗಣ್ಣುಗು ಭಕ್ತಮುಂ ಇಕೆರ್ೂಂದಿ ಕಬಿಗೋಡು ಪುಟ್ಟಿಗೆಯುಂ ತಸ್ಕ ಸೀಮಾನ್ತರಂ (ಎಕ. XVI. ಗುಬ್ಬಿ. ೬೩-೪೯ : 733).

[<ಪುಟ್ಟು₁ + — ಗೆ]

**ಪುಟ್ಟಿಗೋಲ್** (ನಾ). ಸಣ್ಣಕೋಲು,—ದಂಡ : ಮಾಜಿಯದೆ ನಮಃ ಶಿವಾ ಎಂಬುದೆಂದೆನುತಲಚ್ಚಜಿಸಿ ಭಸಿತದ ಪುಟ್ಟಿಗೋಲ ಉಂದಡಿಗಡಿಗೆ ಶಿವಿವರ್ಧರು ಚೋಳನ (ಚಾಕಾಂ. ೬-೬) ; ವಿಸುನಿವೆಸದ ಪುಟ್ಟಿ ಗೋಲ್ಲಳಂ ಪಿಡಿದು ಜಡಿದೊಟ್ಟಜಿಯುಂದಿಟ್ಟಣಿಸಿ (ರಾಜಕೀ. ೦೩-೬೩ ಪ).

[ಪುಟ್ಟು₀ (ಪ ←ತೆಲು. ಪೊಟ್ಟಿ = ಸಣ್ಣದು) + ಕೋಲ್₁]

**ಪುಟ್ಟಿಸು**, ಹುಟ್ಟಿಸು (ಕ್ರಿ). ೧. ಹುಟ್ಟುವಂತೆ ಮಾಡು; ಸೃಷ್ಟಿಸು : ಜನ್ಮ ಕೊಡು : ನಿನ್ನಂ ಪುಟ್ಟಿಸಿದ ಬಿದಿ ನೆಗಟಸ್ಸಿಯ ಚೆಟ್ಟಿಗನೊಳ್ ನೆರವುಗೀಗಳರಿಕೆಃಸರಿಯೊಳ್ (ಕಂಕರಾ. ೩-೪೮) ; ನಿನ್ನನಿಂತು ಮಗುಟ್ಟುಂ ಮಗುಟ್ಟುಂ ಕೊಲವೇಟ್ಟುದೆಂದು ಪೇಟಿನ್ನನಿದಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯಾ (ಅದಿಪು. ೬೨೦) ; ಬಸನದ ಬಸದಿಂದ ಪುಟ್ಟಿಸಿದಂ ಜನಕನೆ ...ಅಣನಂ ತಿಳಿವುವಾ ಮಹಾತ್ಮಂ ಜನಕಂ (ಕಜಶ. ೮-೯೨). ೨. ಉಂಟು ಮಾಡು ; ಬರಿಸು ; ಒದಗಿಸು : ಉಪಚಾರದ ನುಡಿ ಸಂದೇಹ ಬಾದ್ದಿಯಂ ಪುಟ್ಟಿಸದೇ (ಅದಿಪು. ೧೩೬), ಎನಿತು ಕಶ್ಮಿಯು ಳ್ೊಡವಹಾಷಧಂ ತಜಂಟುದಲೆಯೊಳ್ ರೋಮಮಂ ಪುಟ್ಟಿಸಲಾಜದು (ಕಜಾಕ್ಮು. ೬-೬೬) ; ಬಾಧಗ್ಗುರ್ಣತ್ಸವವಂ ಪುಟ್ಟಿಸಿದಂ (ಎಕ. VII. ಶಿಕಾರಿ. ೪-೧೦ ; 1122) ; ಪರಿತಾಪದ ಪುಟ್ಟಿಸಿ ಪೋಗಬಂದೆಯ (ಪೋಜಕ. ೪-೬೨). ೩. ರಚಿಸು ; ನಿರ್ಮಿಸು: ಚೌಪಳಿಗಳ್ ಪಲವಂ ಸಮೆದಲ್ಲಿ ರತ್ನದಿಂ ಬೆರಸಿದ ಬಣ್ಣದೊಳ್ ಮಾಜಿಯ ಕಟ್ಟಿಸಿ ಪುಟ್ಟಿಸಿ ರಂಗ ಭೂಮಿಯುಮಂ (ಕಂಕರಾ. ೩-೯೦). **ಹುಟ್ಟಿಸು** : ೧. ಎಲೆ ಹುಟ್ಟಿಸಿದೆ ಇಹಲೋಕದುಃಖಿಯ ಪರಲೋಕದೂರನ ಎಲೆ ಹುಟ್ಟಿಸಿದೆ (ಬಸವ. ೬೦); ದೇವ ಇಂತಹ ಬಸುಜೋಳಿನ್ನುವನು ನೀವು ಹುಟ್ಟಿಸಲಹುದೆ (ಚಪು. ೩೦-೬೪). ಆ ಮಹಾಮಹತ್ಮನನು ಹುಟ್ಟಿಸಿದಾ ಮಹಾದೇವಾದಿದೇವರು ಕಾಮಿನಿಯ ಕಳುಹಲ್ಕೆ ಚಾರದೆನುತ್ತ ಬೋಧಿಸಲು (ಲುಕ್ಮಾಕ್ರ್ಯೋ. ೬-೩೬); ಹುಟ್ಟಿಸಿದ ದೇವ ತಾ ಹೊಣೆಗಾಜನಾಗಿರಲು ಗಟ್ಟಾಗಿ ರಕ್ಷಿಪನು ಇದಕ್ಕೆ ಸಂಶಯವಿಲ್ಲ (ಕಶಕ.೬೧-೦); ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ? (ಗಾದೆ). ೨. ನಾಸಿಕೇಂದ್ರಿಯ ನಿನ್ನ ತನುಗಂಧಕಳಿಸಿ ಮೇಲ್ಲೂಸಿದ ಪುಣುಗು ಕಸ್ತುರಿಯ ವಾಸನೆವಿಡಿಯದು ನೀನಗಲದೆ ಸಂತೋಷವ ನೆಜ್ ಹುಟ್ಟಿಸಿದಕೆ (ಕಂಶಂ. ೯-೦೩೨) ; ಆ ಕಲ್ಲುಗಳು ನನಗೆ ಒಂದು ತೆರನಾದ... ಅಸಹ್ಯವನ್ನು ಹುಟ್ಟಿಸಿದುವು (ಕಂಗಾಳ್. ೯೦).

**ಪುಟ್ಟಿಸಿದರ್** = ಹೆತ್ತವರು ; ಜನ್ಮವಿತ್ತವರು: ಪುಟ್ಟಿಸಿದರ್ ತಾವೆಂದು ಬಗೆದು ಮುದ್ದಾಡುವ ತಾಯ್ಯಂದೆಗಳ ಮೊಗಮಂ ನೋಡಿ ನಗುವಾತೆ ಮಾಂಗುಳ್ಳೆಗೆ ನಗುತ್ತುಂ (ಕಂಕಕ. ೨-೮). **ಹುಟ್ಟಿಸಿಕೊಳ್ಳು** = ೧. ನಿರ್ಮಿಸಿ ಕೊಳ್ಳು; ಹುಟ್ಟುವಂತೆ ಮಾಡಿಕೊಳ್ಳು : ಉತ್ಪತ್ತಿಕಾರಣದ ಒಡೆಯ ನಾದಡೆ ಶಿರಸುವಂ ತಾನೊಡನೆ ಹುಟ್ಟಿಸಿಕೊಳ್ಳನೇ (ಚಪು. ೩೦-೬). ೨. ಇಲ್ಲದುದನ್ನು ಸೃಷ್ಟಿಸು ; ಕಲ್ಪಿಸು ; ಬನಾವಟಿ ಮಾಡು : ಅವನು ಹೇಳುವುದನ್ನು ನಂಬುವಿರಾ ? ಎಲ್ಲ ಹುಟ್ಟಿಸಿಕೊಂಡು ಹೇಳು ತ್ತಾನೆ (ಜನಪ).

[ಪುಟ್ಟು₁ + — ಇಸು₂]

**ಪುಟ್ಟಿಹಣ್ಣು** (ನಾ). ಸವುತೆ ಜಾತಿಗೆ ಸೇರಿದ ಒಂದು ಬಗೆಯ ಹಣ್ಣು ; ಕೆಕ್ಕರ ಹಣ್ಣು ; ಕೆಕ್ಕರಿಕೆ : (?). [ಪುಟ್ಟಿ₀+ಹಣ್ಣು₂ (<ಪಣ್₂)]

**ಪುಟ್ಟು₁**, ಹುಟ್ಟು₁ (ಕ್ರಿ). ೧. ಜನ್ಮ ತಾಳು ; ಜನಿಸು ; ಜನ್ಮಿಸು : "ಪುಟ್ಟು—ಉತ್ಪತ್ತೌ, ದಾರುಹಸ್ತೇ (ಚ ದೋಣಿ ನಡೆಯಿಸುವ ಮರಗೈ)" (ಶಮದ): ಇದೊಣ್ ಕೆಡಿಸಿದೊಣ್ ಪೆಞ್ಚಾಮಹಾಪಾತಕನಕ್ಕು ತೆನೊಕ್ಕಲು ಳ್ ಪೊತ್ತಿ ಮಕ್ಕಳ್ಪುಟ್ಟದೆ ಕಿಡುಗ (ಎಕ. III, ಮೈಸೂರು.೩೫-೨೦; ಸು.740); ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನವಮಾನಟ್ಟು ಬಡಿಸು ನಾಮಜೆಯ ದೆನಸುಂ ಸವಿಯುಂ ಪುಟ್ಟದಾರುಮಜಿಯದದೞ ಪೆಸರ್ಪಿಡುತ್ತುಂ ಪೇಟ್ ಕೇಳ್ದೆನಂದಜಿಯೆಂ (ಕಜಾ. ೨-೦೪೬); ಚಿಃ ಸತ್ತರೇಂ ಪುಟ್ಟರೆ ಪೂಣಿಮಾಡು ನೀಂ ಕೈದುಗೊಳ್ (ಗದಾಯು.೬-೦೩). ೨. ಬೆಳೆ ; ಮೂಡು : ಚಲಿಪಾರಣ್ಯದ ಪಕ್ಷಿಗೊಂದು ತೆರು ಗೊಡ್ಡಾಗಲ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಜಾಕ. ೨೬). ೩. ಉಂಟಾಗು; ಒದಗು; ಉತ್ಪನ್ನವಾಗು: ಶಂಕೆ ಪುಟ್ಟಿದುದೀಗಳ್ (ಕಾದಂಪೂ. ೯೬೦) ; ಎರಡು ಪದಂಗಳ ನಡುವೆ ಬೇಜೊಂದು ದುಷ್ಟಶೀಕಿ ಪುಟ್ಟುವೊಡೆ ಸಂಧಿಯಂ ಮಾಡಲಾಗದು (ಶಬ್ದಕ. ೬೩-ವೃತ್ತಿ); ನಿಟ್ಟಿಸಲು...ಪುಟ್ಟತು ಗದ್ದದ ಮೆಯ್ ಝುಮ್ಮು ಝುಮ್ಮೆಂದು ತಟ್ಟತು ಮನೆ ಮೂರ್ಛೆ ರಶಿಗೆ (ಮೋಹಕ. ೦೦-೪೨). **ಹುಟ್ಟು₁** : ೧. ಹೆಂಡಿರೊಳ್ ಮನೆಗೊರ್ವರುದಾರೆಯರಣ್ಣ ಹುಟ್ಟರೇ (ಎಕ. VII. ಶಿಕಾರಿ.

ಅವಳೊಬ್ಬಳು ಹುಟ್ಟುಕುರುಡಿ (ರೂಢಿ). [ಪುಟ್ಟು$_2$+ಕುರುಡಿ]

**ಪುಟ್ಟುಗಣ** (ನಾ). ಮೂಲನೆಲೆ,–ಸ್ಥಾನ: ಕನ್ನಡದ ಪುಟ್ಟುಗಣ [ಪಾಠಾಂ. ಪುಟ್ಟಗುಣ, ಪುಟ್ಟುಗುಣ] . . . ಎನ್ನದೀ ಕೃತಿಯುಸಿರ್ವನ್ನರನೆ ಬಿದಿ ಮುನ್ನ ಬೆನ್ನೊಳಿರ್ದಲೆಯದಿರನು (ಜಜಚ. ೧–೨೩). [ಪುಟ್ಟು$_1$+ಕಣ್$_2$]

**ಪುಟ್ಟುಗುರುಡ** 'ಪುಟ್ಟುಗುರುಡ' ನೋ.

**ಪುಟ್ಟುಗೆ** (ನಾ). ಹುಟ್ಟುವಿಕೆ ; ಜನನ : ದೋಷಸಂಭವ—ದೋಷದ ಪುಟ್ಟುಗೆ (ಶಿಕಿವಾ. ೯-೧೧೭) ; ಸ್ಮರಪರಿತಾಪದಿಂ ನೆಜಿ ಮರುಳ್ತಸದಿಂದಮ ತಾತನೆನ್ನೊಳಿಂ ಬೆರಸಿದನಿ: ವಧೂಭವದ ಪುಟ್ಟುಗೆ ಪೊರ್ಲೆನಾಸಿಲ್ಲಿ ರಾಗದೊಳ್ ನಿರುಪಮನಪ್ಪ ಮಂಗವಿಭುವಾದುದೊ ಭಾರತಿ (ಜಮುದ. ೦೩–೨).

[ಪುಟ್ಟು$_1$ + –ಗೆ]

**ಪುಟ್ಟುವೆಟ್ಟು** (ನಾ). ಸೂರ್ಯನು ಮೂಡುವ ಪರ್ವತ ; ಉದಯಾದ್ರಿ : ಕಟ್ಟನಿಮುಳ ಮುದ್ದುಸುಂತಂತಲರ್ವಟ್ಟೆಯನೆಯ್ದಲ್ ಪುಟ್ಟುವೆಟ್ಟನಡರ್ವಿನಿಗದಿರೆಂತಂತೆ . . . ಈ ಕೃತಿ ಚತುರರ ಬಗೆಗೆಗೊಗುವಿಂಗೆಯುಂ (ಉದ್ಯರೀ. ೦-೨೯). [ಪುಟ್ಟು$_1$+ಬೆಟ್ಟು$_2$ (<ಬೆಟ್ಟ)]

**ಪುಟ್ಟುಹ, ಹುಟ್ಟುಹ** (ನಾ). ಜನನ; ಜನ್ಮ: (ನಾಶಕಾ. ೬). **ಹುಟ್ಟುಹ** : ಮರಳಿಮರಳಿ ಹುಟ್ಟುಹ (ಶಾನಾರ. ೬. ೦೦೯ ಟೀಕು).

[ಪುಟ್ಟು$_1$ + –ಹ$_2$ (< –ವ$_2$)]

**ಪುಠಾಣಿ, ಪುಟಾಣಿ$_2$, ಪುಟ್ಟಾಣಿ** (ನಾ). ೧. ನೀರಿನಲ್ಲಿ ನೆನೆಸಿ ಹುರಿದ ಕಡಲೆ ; ಹುರಿಗಡಲೆ : ಹುಳಿಕಡ್ಲಿ ಫಕ್ತ ಪುಠಾಣಿ ಮಾಡುವದರ ಸಲುವಾಗಿ ಜಾತ್ರಿ ಹಂಗಾಮಿನಲ್ಲಿ ಸ್ವಲ್ಪ ಖರ್ಚು ಆಗುತ್ತಿರುತ್ತದೆ (ಮುಂಬವಾ. ೨೮೩) ; ಕೊನೆಗೆ ಮಂತಕ್ಕಿ ಪುಠಾಣಿಗಳಿಂದ ಮಧ್ಯಾಹ್ನ ನೀಗಿಸುತ್ತಾ ಟಿಟ್ಟಕಡೆಗೆ ಅಖಂಡನಿರಾಹಾರವ್ರತವೇ . . . ಘಟಿಸಹತ್ತಿತ್ತು (ಮೋಹೀಶ. ೩). **ಪುಟಾಣಿ$_2$** : ೧. ತೆಂಗಿನಕಾಯಿ ಚಟ್ನಿ ಮಾಡುವಾಗ ಸ್ವಲ್ಪ ಪುಟಾಣಿಯನ್ನು ಹಾಕಿದರೆ ಚೆನ್ನಾಗಿರುತ್ತದೆ (ರೂಢಿ). ೨. ಬಟ್ಟೆಯ ಮೇಲೆ ಕಡಲೆಯಾಕಾರದಲ್ಲಿ ನೇಯ್ದಿರುವ ನೇಯ್ಗೆ : ಅವಳು ಪುಟಾಣಿ ಸೀರೆ ಉಟ್ಟಿದ್ದಾಳೆ (ರೂಢಿ). **ಪುಟ್ಟಾಣಿ**: ೨. ಬಟ್ಟಕುಚೆಯೊರ್ವ ಸತಿ ಪುಟ್ಟಾಣಿಯ ರವಿಕೆಯನು ತೊಟ್ಟು ಕಾಲಿನೊಳವಳು ಪಟ್ಟೆಸೀರೆಯನು ಪೊದೆದು ಬೆನ್ನೊಳು ನೃಪನ ಮುವವ ನೋಡುವ ಭರದಿ ವದಗಿ ಮಾರ್ಗದಿ ಬರಲು (ಹವಾಶ. ೨೪೩).

**ಪುಠಾಣಿ ತಿಂದು ಬಿಡು** = (ಆಲಂ) ಆಸೆಯನ್ನು ಬಿಡು : ಊರು ಬಿಟ್ಟು ಹೋದ ಉಡಾಳ ತಮ್ಮನು ತಮ್ಮ ಪಾಲಿಗೆ ಸತ್ತನೆಂದು ಅವರಿಬ್ಬರೂ ದಂಪತಿಗಳು ಪುಠಾಣಿ ತಿಂದು ಬಿಟ್ಟಿದ್ದರು (ಕಟ್ಟಹೊ. ೪೩).

[←ಮರಾ. ಫುಟಾಣಾ]

**ಪುಡಪುಡ** (ನಾ). ಸುಡುವುದನ್ನು ಸೂಚಿಸುವ ಒಂದು ಅನುಕರಣಪದ: 'ಪುಡಪುಡನೆ' ಪರಿ.

**ಪುಡಪುಡನೆ** (ಅ). ಪುಡಪುಡ ಎಂದು : ಸಂಗತಧೂಮಾವಳಿಯನಿಭಂಗಳಿ ಗೆತ್ತೊಳಜ್ ಪಾಯ್ದು ಪೊಗೆ ಪುಗೆ ಕಣ್ಣಿಂ ಸಿಂಗಂಗಳಳುರೆ ಗರ್ಜಿಸಿ ಲಂಗಿಸಿ ಪುಡಪುಡನೆ ಪುಟ್ಟಿ ಸತ್ತುವು ಪಲವುಂ (ಶಂಶಪಾ. ೩-೯೨).

[ಪುಡಪುಡ + –ಅನ್$_1$]

**ಪುಡವಿ** 'ಪೃಥುವಿ' ನೋ.

**ಪುಡವಿಪ** 'ಪೊಡವಿಪ' ನೋ.

**ಪುಡಾರಿ** 'ಪುಢಾರಿ' ನೋ.

**ಪುಡಿ, ಹುಡಿ** (ನಾ). ೧. ಹಿಟ್ಟು ; ಚೂರ್ಣ : ಬದ್ದವಣದ ಪುಡಿಪೊರ್ ಪೆನ್ನೊಳ್ ಬವದಲುಗೆ ಕುಸುಮಕೊಳರಜಂ (ಅರಿಕು. ೭–೭೩) ; ಪುಡಿಯ ಕತ್ತುರಿ ಕುಂಕುಮಕಪ್ಪುರವುಡಿ ಬಿಡುಮುತ್ತು ಪಣೆಗೆಡೊಡನೆ ಓಡಿಪೊನ್ನ ಸೃಜಿಪ ಬಿಟ್ಟರಿಕ್ಕಲಮಗಡಿಗರತಿಃಪವೋಪವಲಿ (ಪೋತಶ. ೪೨–೨೮); ಡಿ.ಡಿ.ಟಿ. ಡಬ್ಬಿಯಿಂದ ಪುಡಿಯನ್ನು ಸುತ್ತಲೂ ಚಿಮುಕಿಸಿ. . . ಮೈಯನ್ನು ಚಾಚಿದೆನು (ಶಂಟಿಟು. ೪೮). ೨. ರವೆಯಂತೆ ತರಿತರಿಯಾದ ಹಿಟ್ಟು; ತರಿ: ಕುಡಿಬಿದಿರ ಕುಡಿಯು ಮಾವಿನ ಮಿಡಿಯು ಮಾತುಡಿನ ಮೆಣಸುಗಡಲೆಯ ಪುಡಿ[ಪಾಠಾಂ.ಳಿ]ಯೊಳಡಸಿದಲ್ಲವಲ್ಲಣಿಗೆಯ ಚಕ್ಕಣಂಗಳಂ ಸವಿಸವಿದು (ಶಂಶಕಾ. ೬–೭೭೪); ಕುಂಕುಮದ ಕತ್ತುರಿಯ ಪುಡಿಯಂ ಕನಕದ ಪುಡಿಯಿನಾಗ ಪಿಷ್ಟಾತಕಮಂ ಬಿಂಕದೆ ಕೆದಱುತಂ ನಡೆವಂ ಕಮಠಂ (ಪಾರ್ಶ್ವಕಿ. ೩-೩೦); ಘಟ್ಟಮೆಣಸುಳ್ಳಿ ಮೊದಲಾದ ಸಂಭಾರಗಳನಿಟ್ಟು ತಾಳಿಸಿದ ಪುಡಿಗಳನದ[ಜೊ]ಳು ತುಂಬಲಿಟ್ಟು (ಸೂಶಕಾ. ೯–೧೯). ೩. ಸಣ್ಣ ಮರಳಿನಂತೆ (ಉದುರಾಗಿರುವ) ಮಣ್ಣು : ಏಗೆಯ್ದುಂ ಪರೆದ ಪುಡಿಯೆಲ್ಲಮಂ ನೀರ್ ನೆರೆದು ಕಿಸರ್ಮಾಡದನ್ನೆಗಂ ನೆಲಸುಗುಮೇ (ಕಬಿಕಾ. ೩-೧೩೦); ಆ ಬಾರಿ ಕಾಯ್ದ ಪುಡಿಯೊಳಗೆ ಬಿಸುಟ್ಟೆಳವಾಟೆಯಂತೆ . . . ಬೇಟದೊಳ್ ಮಮ್ಮಲಮರುಗುತ್ತಿರ್ದಳ್ (ಶಂಶಕಾ. ೩–೧೦೪); ದ್ರುಪದಾತ್ಮಜಾತನೋವದೆ ಪುಡಿಯೊಳ್ ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತವೋದುದೊ (ಗದಾಯು. ೯–೩೦); ಪುಡಿಯೊಳಗೆ ಪುಡಿಯ ಪುಡಿಯಾದನ್ ನಾಣ ಸುಡಿಯಾದನ್ (ಅಶ್ವಕಾ. ೧೭-೩೭೭). ೪. ನಸ್ಯ : ಬೀಡಿ ಕಟ್ಟುವವನೂ ಪುಡಿ (ನಸ್ಯ) ಸೇದುವವನು (ಹೂವಾದ. ೦೦೭). ೫. ಹೊಗೆಸೊಪ್ಪು : ಪುಡಿ ಕುಟ್ಟುವವನೂ ಬೀಡಿ ಬೇಡುವವನು (ಹೂವಾದ. ೧೦೭). **ಹುಡಿ** : ೧. ಕರಿಬೇವು ಬಡಗಸಂಡಗೆಯಿಂಗು ಕಡಲೆವಿಟ್ಟುರಿಸಿನದ ಹುಡಿ . . . ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಶಕಾ. ೯–೦). ೩. ಎನ್ನಿಂದಲೆ ಆಯಿತ್ತು ಎನ್ನಿಂದಲೆ ಹೋಯಿತ್ತು ಎಂಬವನ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ (ಬಸವ. ೨೨೩); ಇಟ್ಟೊರೆಸಿ ಹುಡಿಯಲಿ ಹೂಳಿದನು ಕಿವಿಮ್ಮೀರದಾನವನ .(ಕುವ್ಯಾಅ. ೧–೩೯); ಹುಡಿಯಲ್ಲಿ ಕಮಲ ಬೆಳೆದಂದು ಹೊನ್ನಿನ ನುಡಿಯ ನಂಬುವದು (ಸರ್ವಜ್ಞ ೦೭೭೧) ೪. "ಹುಡಿ . . . ನಸ್ಯ, ನಾಸೀಪುಡಿ" (ಸಿಂಕೋ. ೩೩೦) ; ಕಲಾವಳಿಯ ಜನ ನಶ್ಯವನ್ನು ಹುಡಿ ಎಂದು ಹೇಳುತ್ತಾರೆ (ರೂಢಿ).

**ಪುಡಿವುಡಿ, ಪುಡಿಪುಡಿ, ಹುಡಿಹುಡಿ** (ದ್ವಿರುಕ್ತಿ) : ಅಂಕಾತಂ . . . ನಡೆವ ತಳರ್ನಡೆಯೊಳ್ ಪುಡಿವುಡಿಯಾದುವು ಶಿಲೆಗಳೊಡೆದು (ಶುಶಕಾ. ೨–೩) ; ಕೆಡೆವ ಭಟಬ್ರ್ಯಟಾಂತ್ರವೃತ್ತದಿಂದಮುರುಳ್ವ ಹಯಂ ಹಯಾಳಿಯಿಂ ಪುಡಿವುಡಿಯಾಗೆ ಮೆಟ್ಟುವ ಗಜಂ( ಎಕ. VIII, ಸೊರಬ. ೦೮೪–೯ ; 1033) ; ಬಸ್ಸಿನ ನುಗ್ಗಾಟದಲ್ಲಿ ಬಳೆಗಳೆಲ್ಲಾ ಪುಡಿಪುಡಿಯಾದುವು (ರೂಢಿ) ; ಕಾಯುವನುರುಹಿ ಹುಡಿಹುಡಿ ಮಾಡಿ ಬಿಱು ಗಾಳಿಯಲಿ ಚೆಲ್ಲು (ಅಶಕು. ೪೩–೩೧) ; ರಥಕುಳವೆಲ್ಲ ಹುಡಿಹುಡಿ ಪಾಯದಳ ನಿರ್ನಾಮವಾಯ್ತು (ಕುವ್ಯಾಕೀ. ೭–೨). **ಪುಡಿ ಮಾಡು, ಹುಡಿ ಮಾಡು** = ೧. ಹಿಟ್ಟಾಗುವಂತೆ ನುರಿಸು : ಪುಡಿ ಮಾಡಿದ ಉಪ್ಪು ಪ್ಯಾಕೆಟ್ಟುಗಳಲ್ಲಿ ದೊರೆಯುತ್ತದೆ (ರೂಢಿ). ೨. ಧ್ವಂಸಮಾಡು : ಪುಷ್ಪಶರನಂ ಹುಡಿ ಮಾಡಿದ ವಿರೂಪಾಕ್ಷ (ಹುಂಪಿಗ. ೬) ; ಹುಡಿ ಮಾಡಿದನು ರಥವ (ಕುವ್ಯಾಕೀ. ೮–೪೭). **ಪುಡಿಯಾಗು, ಹುಡಿಯಾಗು** = ನುರಿದು ಹಿಟ್ಟಾಗು : ಒತ್ತಿ ಮೆಟ್ಟೆ ಪುಡಿಯಾಗಿರೆ ತಿನ್ನದೆ ಪೋಗಲೀವರೇ (ಧರ್ಮಾಮೃ. ೭–೧೩೯) ; ಮುನಿಗಳ ಧೈರ್ಯಭೂಮಿ ರಜಮಪ್ಪಿನೆಗಂ ಮನುಚೇತನಾದ್ರಿ ಭೋಂಕನೆ ಪುಡಿಯಪ್ಪಿನಂ . . . ರತೀಶನ ಚತುರಂಗಸೇನೆ ನಡೆದತ್ತು (ಗಿರಿಕ. ೮-೭) ; ಪಡೆಯ ಕಾಲ್ತುಳಿದಾಗ ಗಿಡು ಬಳ್ಳಿ ಪೆಮ್ಮರ ಪುಡಿಯಾಗೆ . . . ಚೆನ್ನಪಟ್ಟಣದ ಮುಂಗಡೆ ಬೀಡಿಳಿವನು (ಕಂಪರಿ. ೧೨–೬) ; ಹುಡಿಯಾಗಲುರ್ವಿ ಪರ್ವತ ಸಪ್ತಶರಧಿಗಳಡಿಮೇಲಾಗೆ . . . ಮಹೇಶ್ವರ ಓಡಿದನು ಪರತ್ರಿಶೂಲವ (ಪೋತಶ. ೩೯–೩೮). **ಪುಡಿಯಾಳು** = ಕೆಲಸಕ್ಕೆ ಬಾರದವನು ; ಅಪ್ರಯೋಜಕ : ಅವನೊಬ್ಬ ಪುಡಿಯಾಳು (ರೂಢಿ). **ಹುಡಿಯ ಮುಕ್ಕು** = ೧. ಮಣ್ಣು ತಿನ್ನು. ೨. (ಆಲಂ) ಹಾಳಾಗು :

ಕಂಸನು ಪುಡಿಯು ಮುಕ್ಕುವನೆಂಬ ತೆರದಿ ಮತದಿ ದೇವಕಿ ಬಯಸಿ ಮನ್ನೀಂಬಳು (ಹಾಶ್ರಾ. ೨೨-೬). ಪುಡಿ ಹಾರಿಸು ೧. ಧೂಳೆಬ್ಬಿಸು. ೨. (ಅಲಂ) ಧನವ್ಯಯ ಮಾಡಿ ಆಡಂಬರದಿಂದ ಕಾರ್ಯವನ್ನು ನಡೆಸು : ಗದ್ದುಗಿನಲ್ಲಿ ಮದುವೆ ಪುಡಿ ಹಾರಿಸಿ ಸರ್ವ ಬಿಡಾರದಿಂದ ನರಹುಳುವೂ ಬರಲಾರದು (ಜೀವಕೃ. ೬೮). ೩. ವ್ಯರ್ಥವೆಚ್ಚ ಮಾಡು; ಧಾರಾಳವೆಚ್ಚಮಾಡು : ಅಷ್ಟು ತನ ಕೈಯಲ್ಲಿ ಏಟಳ ದುಡ್ಡುಗಳು ಕುಣಿದಾಡುತ್ತಿರಲಿಲ್ಲ . . . ನಾಗರಾಜನಂತೆ ಬೀಡಾ ಸಿಗರೇಟುಗಳನ್ನು ಪುಡಿ ಹಾರಿಸಬೇಕೆಂಬ ಹಂಬಲವಿರಲಿಲ್ಲ (ಮುಂಗಡು. ೩).

[ ದೇ. ಶ ತಮಿ. ಮಲ. ಪೊಟಿ ; ತುಳು. ಕೊಡ. ತೆಲು. ಪೊಡಿ ]

**ಪುಡಿಕಾಸು** ' ಪುಡಿಗಾಸು ' ನೋ.

**ಪುಡಿಕೆ**, ಪುಟ್ಟಿಕೆ, ಪುಟ್ಟಿಗೆ, ಪುಡುಕೆ, ಬುಡಿಗೆ, ಬುಡುಕೆ, ಹುಡುಕೆ (ನಾ). ೧. ಕರಂಡ ; ಭರಣಿ ; ಡಬ್ಬಿ : ತರಿದೆಸೆಯೊಳರ್ಚಿಸಿರ್ದ ಪುಡಿಕೆಯಂ ತೆಱೆದು ಹಾರವಂ ಕೊಂಡರವುನೆಯಿಂ ಪೂಜಿಪಟ್ಟು ಪೋಗಿ (ಶಶ್ಯಾಕಾ. ೧೨೩-೧೦) ; ಆ ಕಳ್ಳರ್ . . . ಪೊನ್ನ ಪುಡಿಕೆಯುಮನುಳಿಯುಮಂ ಬಟಿಪದುಮಂ ಅಲ್ಲಿ ಪಟ್ಟಿರ್ದ ಭಟ್ಟನ ಮುಂದೆ ತಂದಿಕ್ಕಿ (ಶಾಕಶಂ. ೨೩೨ ೬) ; ತರವೇಟ್ಟುಮಣಿಕ್ಯಭಂಡಾರದ ಪುಡಿಕೆಗಳಂ (ಶಾವ್ಯಾತ. ೨೬೯). ೨. ಪೊಟ್ಟಣ : ಪುಷ್ಪದಾಭರಣವ ಪುಡಿಕೆಯೊಳಗೆ ತಂದು ಒಪ್ಪಿಸಿದರು ಜಿನಗವರು (ಅನಂತ. ೯-೬೩) ; ರಾಜೇಶ . . . ಪುಡಿಕೆಯನ್ನು ಬಿಚ್ಚಿ ಅವಳೆಡೆಗೆ ಓಡಿದ (ಸ್ವಕ್ಷದ. ೦೯೯) ; ಖಾವರನು ಕೈಚೀಲದಲ್ಲಿ ಘೇಡೇದ ಪುಡಿಕೆಗಳನ್ನು ತಂದಿಟ್ಟನು (ಮುಕ್ತ್ರ. ೧೬೬). ೩. ಕಂತೆ ; ಸಿವುಡು ; ಪಿಂಡಿ : ವರತಪವುಂ ಕಸವೆಂದಾ ಪುರಾಣವುಂ ಪುಸಿಯ ಪುಡಿಕೆಯೆಂದಂ ದವರಾಪ್ಪರೆ ಅಕ್ಕರೆಂದು ಬಗೆವನೆ ನಿರುತಂ ದರ್ಶನಿಕನಪ್ಪನಲ್ಲದನಲ್ಲಾ (ಸಮಚ. ೯-೦೨೮) ; ೨೫೦ ಸೂಜಿಗಳಿಗೊಂದರಂತೆ ಪುಡಿಕೆಗಳನ್ನು ಕಟ್ಟುವನು (ಮುಂಬಿಡು. ೦-೦೫೩) ; ಅವನ ಪೆಟ್ಟಿಗೆಯಲ್ಲಿ ಎರಡು ಪುಡಿಕೆ ಪತ್ರಗಳಿದ್ದವು (ಇಶ್ವ. ೩೦೭). **ಪುಟ್ಟಿಕೆ** : ೧. ಹೊಸ ಪುಟ್ಟಿಕೆಯಲ್ಲಿ ಒಂದು ಪಡಿ ಮಾತ್ರ ಬಿಗಿಸಿ ಮಾಟಿಪಟ್ಟ (ಶಾಸಂ. IV, ೧೩). **ಪುಟ್ಟಿಗೆ** : ೧. ' ಪೂವುಟ್ಟಿಗೆ ' ಪರಾ. ೪. ದೊನ್ನೆ ; ಎಲೆವಟ್ಟಲು : ' ಪತ್ರಪುಟ್ಟಿಗೆ ' ಪರಾ. **ಪುಡುಕೆ** : ೧. ದೇಹಮುಂ ಧಾತುಗಳ ಪುಡುಕೆ ವಿದ್ಯುಲ್ಲತಾಸಂಚಳಂ ಜೀವನು (ವಜ್ಜಿ. ೯-೬೬) : ಮರಕತದ ಪುಡುಕೆಯಲನರ್ಘ್ಯದ ಸಿರಿರತ್ನನಗಳ ಕಿ ವಿ (ಹಾಶ್ರಾ. ೩೦-೦೯). ೩. ಅವನ ಜೇಬಿನಲ್ಲಿ ಯಾವಾಗಲೂ ನೋಟಿನ ಪುಡುಕೆಗಳಿರುತ್ತಿದ್ದವು (ರಶ್ಕ್ರ. ೯೩). ೫. ಪೆಟ್ಟಿಗೆ ; ಸಂದೂಕ : ಭಂಡಾರದ ಮನೆಯೊಳ್ ಕನ್ನಮಿಕ್ಕಿಸಿ ಭಂಡಾರದ ಪುಡುಕೆಗಳಂ ಪೋಬ್ದು [ದ್ರ]ವ್ಯಮುಮಂ ಪೊನ್ನುಂ ತುಡುಗೆಗಳುಮಂ . . . ಕೊಂಡು ಪೋಗಿ (ವಡ್ಡಾರಾ. ೧೬೬-೪) : ಪುಡುಕೆಯು ಪೊಂಗಳಾರೊಡನೆ ಭೂತಳಮಾರೊಡನೆ . . . ವಿಭೂತಿಯಾರೊಡನೆ ಪೋದುವು (ಅಶ್ವ. ೨-೦೦೩). ೬. ಬುಟ್ಟಿ ; ಹೇಳಿಗೆ : ಉಡಿಯುದ ಪಾಟ್ಟನೆಯಲ್ಲುಂ ಪಿಡಿದುರ್ಚುವ ತೆಱದಿನುರ್ಚಿ ರಿಪುಗಜರದವಂ ಸಿಡಿಲಡಸು ಪೊದೆದ ಜಂತ್ರದ ಪುಡುಕೆಪೊಲಿರೆ ಪೊಡೆವೆನಪಿತರಥಸಂಕಳವಂ (ಪರ್ಶಿ. ೭-೩೦). **ಬುಡಿಗೆ** : ೭. ಕುಡಿಕೆ : ಮಡಿಕೆಗಳನ್ನೆಲ್ಲಾ ಮಾರಿಕೊಂಡು ಬುಡಿಗೆ ತುಂಬಿಸಬೇಕೆಂದು ಎಣಿಸಿಕೊಂಡೆಯೋ (ಕಶಾಸಂ. IV, 22). **ಬುಡುಕೆ**. **ಹುಡುಕೆ** : ೮. ನೆಲೆ ; ಆಶ್ರಯ : ಹಲವು ಹಡಿಕೆಯು ಹುಡುಕೆ ಕೇಳಿದು ಹೊಲಸಿನಾಲಯು (ಕಶಿ. III, ೨೯೯ ಸುಜ್ಞಾನಶಾಸಂತಾರ).

· **ಪುಡುಕೆಯು** ಮೊಲ, ಬುಡುಕೆಯ ಮೊಲ = ಆಶ್ರಿತ್ತ ಹೋಗಲಾಗದೆ ಬುಟ್ಟಿಯಲ್ಲೇ ತೊಳಲುತ್ತಿರುವ ಮೊಲ : ಪುಡು[ಕಾಶಂ. ಡಿ]ಕೆಯ ಮೊಲನಂತೆ ಕುಂಬುಚಿರ್ಪರ್ಪಗೆವರ್ (ಹಾಪುಂಪು. ೪) ; ನಿನ್ನ ಕೂರಸಿಯಂಚೀ ಪಡೆಮಾತುಗೇಳ್ದು ಗೋಸುಗ ಪುಡುಕೆಯ ಮೊಲದಂತೆ . . . ಇರ್ಪರ್ ಮಾತೆವರ್ (ಎಶ. VIII, ಸಾಗ. ೧೦೯-೨೮ 1042) ; ತೊಡರಲ್ಕಣ್ಣಾದೆ ಕಿವ್ವುನೆ ಬುಡುಕೆಯ ಮೊಲದಂತೆ [ ಮೊಲದಂತೆ ] ಕುಂಬುತಿರ್ಪರನೇಕಂತಿರೊತೆತಾಗಿ ಮಾಬ್ಬರಪ್ಪುರುವೊಡನೆನ್ನಯ್ಯಂ ಬೆರಸ್ಗೆ ನೆರೆದೊಡೆ ಸಾಲ್ಗುಂ (ಬಂಶಂ. ೦೦-೨೧). [ <ಸಂ. ಪುಟಕಾ./ತೆಲು. ಬುಡಿಗ, ಬುಡಿಗೆ ]

**ಪುಡಿಖರ್ಚು** (ನಾ). ಚಿಲ್ಲರೆವೆಚ್ಚ ; ಚಿಕ್ಕಪುಟ್ಟ ಮೇಲುಖರ್ಚು : ಪುಡಿಖರ್ಚಿಗಾಗಿ ಇಪ್ಪತ್ತುರೂಪಾಯಿಗಳನ್ನೂ ಹತ್ತಿರವಿಟ್ಟುಕೊಂಡನು (ಮುಬಿಡು. ೯೮). [ ಪುಡಿ + ಖರ್ಚು (<ಖರ್ಚ್)]

**ಪುಡಿಗತ್ತುರಿ** (ನಾ). ಕಸ್ತೂರಿಯ ಹುಡಿ ; ಕಸ್ತೂರಿಚೂರ್ಣ : ಪುಡಿಗತ್ತುರಿಯಂ ತಲೆಯೊಳ್ ತೀವೆ ಪೊಯ್ದು . . . ನೆಱಿಯ ಕೆಯ್ಗೆಯ್ದು ಬಂದು (ಶಂಕರಾ. ೧೩-೦೦೬ ಶ) ; ಕಚಾವಳಿಗಳಂ ಬಗಿಬಗಿದು ಪುಡಿಗತ್ತುರಿಯ ನೆದ್ದಿ ತಳಿದು . . . ಬಲ್ಲುಡುಂಬಿಂ ನಿವಿರ್ಚಿ (ಶಶ್ವಶ. ೩-೯೯).

[ ಪುಡಿ + ಕತ್ತುರಿ ]

**ಪುಡಿಗಪ್ಪುರ**, ಪುಡಿಗರ್ಪೂರ (ನಾ). ಕರ್ಪೂರದ ಹುಡಿ,-ಚೂರ್ಣ : ಒನಕೆ ವಾಡಿನ ತಾಳಕ್ಕೆ ಕುಣುಕಿದ ಪುಡಿಗಪ್ಪುರದ ಕೈರದಂಬುಲವನ್ನು . . . ಆ ನಿನ್ನ ಚೋಡಬಾಯ್ಗೆ ಮೆಲ್ಲಮೆಲ್ಲಗೆ ಊಡಿ (ಮುಕ್ತಕ. ೭೧-೧೩). **ಪುಡಿಗರ್ಪೂರ** : ಪುಡಿಗರ್ಪೂರಂಬೆರೆದ ಚೆಂದುಟಿಯ ಕುಂಕುಮವಂದೊಡೆವ ಪೆರ್ಮೊಲೆಯ . . . ವಿಲಾಸಿನಿಯರೇಳ್ವಂದರು (ಸೌಂದಕ. ೬-೪೧).

[ ಪುಡಿ + ಕಪ್ಪುರ ]

**ಪುಡಿಗರ್ಪೂರ** ' ಪುಡಿಗಪ್ಪುರ ' ನೋ.

**ಪುಡಿಗಾಸು**, ಪುಡಿಕಾಸು (ನಾ). ಚಿಲ್ಲರೆ ನಾಣ್ಯ : ತನ್ನ ಹತ್ತಿರ ಪುಡಿಗಾಸೂ ಇಲ್ಲವಲ್ಲಾ (ಸ್ವಾಮೀ. ೭೮) ; ಕಷ್ಟಪಟ್ಟು ಸಂಪಾದಿಸಿದ್ದ ಪುಡಿಗಾಸನ್ನು ಖರ್ಚುಮಾಡಿಯಾಗಿತ್ತು (ಹಾರ್ಗತ ೨). **ಪುಡಿಕಾಸು** : ನಾಲ್ಕಾರು ತಿಂಗಳು ಕೈಯಲ್ಲಿ ಪುಡಿಕಾಸು ಓಡಾಡಿದಾಕ್ಷಣ 'ನಾನು ಪ್ರಬುದ್ಧ' . . . ಎಂದು ನೀನು ಭಾವಿಸಿದೆಯೇನು ? (ವಾಶ್ವ. ೩೦೦) ; ಆದರೆ ಎಲ್ಲ ಯತ್ನಗಳೂ ಪರಿಚಯವಿದ್ದವರಿಂದೆಲ್ಲಾ ಪುಡಿಕಾಸು ಸಾಲ ಪಡೆಯು ವುದರಲ್ಲೇ ಮುಕ್ತಾಯವಾಗುತ್ತಿದ್ದುವು (ಬಂಗಶ. ೩೭).

[ ಪುಡಿ + ಕಾಸು ]

**ಪುಡಿಗಿರಾಕಿ** (ನಾ). ಚಿಲ್ಲರೆ ಗಿರಾಕಿ ; ಚಿಲ್ಲರೆಗ್ರಾಹಕ : ಈ ಅಂಗಡಿಕಾರನು ತನ್ನ ಸರಕುಗಳನ್ನು ದೊರಕಿಸುವುದು—ಇಡಿಯ ದರದ ಅಂಗಡಿಗಳಿಂದ ; ಆದರೆ ಅವುಗಳನ್ನು ಪೂರೈಸುವುದು ಪುಡಿಗಿರಾಕಿಗಳಿಗೆ (ಅಶ್ವಶ. ೨೨).

[ ಪುಡಿ + ಗಿರಾಕಿ ]

**ಪುಡಿಗುಟ್ಟಿಸು** (ಕ್ರಿ). ಹಿಟ್ಟುಹಿಟ್ಟಾಗುವಂತೆ ಹೊಡೆಯಿಸು,— ಅರೆಯಿಸು : ಕಡಿದು ಕಿಱಕಿಱದನೆಲುವಂ ಪುಡಿಗುಟ್ಟಿಸಿ ತೊವಲನುಗಿದು ಕರುಳ ತೊಡಂಕಂ ಬಿಡಿಸಿ ನಡೆನೋಟ್ಟಿಂ (ಹುಕೋಶ. ೪-೧೯).

[ ಪುಡಿಗುಟ್ಟು + — ಇಸು ]

**ಪುಡಿಗುಟ್ಟು**, ಹುಡಿಗುಟ್ಟು (ಕ್ರಿ). ೧. ಕುಟ್ಟಿ ಪುಡಿಮಾಡು : ಆ ಚಿತ್ರರಥನಂದನೆಯು ಮದನಾನಲಂ . . . ಎಡವಱಯದೆ ಪುಡಿಗುಟ್ಟಿದ ಮುತ್ತಿನ ಮಳಲ್ಗೆ ದಱದ ಮಣಿಕಟ್ಟಿಮದೊಳಂ ಮಾಣದೆ (ಕಾಂಂಬ. ೩೨೬) ; ಕಾಳಂ ಜಜ್ಜು ತೆ . . ಪುಡಿಗುಟ್ಟ ಕಾಸಿ ಪಿಟಿದಂ ಶ್ರೀಖಂಡಖಂಡಂಗಳಂ ನೋಳುಂ ತೈಲವನೀವ ಜಂತ್ರಗಡಣಂ ಲೆಕ್ಕಕ್ಕೆ ಲಕ್ಕಂಗಳೇ (ವ್ಯಸೂಪು. ೩-೩೯). ೨. ನಾಶಗೊಳಿಸಂ ; ಧ್ವಂಸಮಾಡು : ಅನನ್ನಪಾಳಂ . . . ಅಱಿಯಟ್ಟಿ ಟಟ್ಟಿದಿರೊಳಿಬ್ಬದ ಕಂಟಕರದನ್ನ × × ತಾವ್ಮಿದಿ[ಜನಾ] ಳಯೆಲ್ಲಮಂ ನಿಜಭುಜಾಗ್ರಾಳದಿ ಪುಡಿಗುಟ್ಟಿ ತೂಱಿದ (ಶಶಿ. V, ೦೪-೦೦; 1099) ; ಕೃಷ್ಣನು ತಾನಾಗಿ ಬಂದು ಬಾಣನ ಕೋಟೆಯನ್ನು ಪುಡಿಗುಟ್ಟುವ ನೆಂದು ತಿಳಿಸು! (ಗುರುಚ. ೦೦೩). **ಹುಡಿಗುಟ್ಟು** : ೧. ಮಾರನ ಗರ್ವ ಮೆಂಬ ವರಪರ್ವತವಂ ಹು[ಕಾಶಂ. ಪು]ಡಿಗುಟ್ಟಿ ರಾಜಿತಾಘಾರವಿಶೇಷಮೆಂಬ ಕುಲಿಶಾಯುಧದಿಂದೆತಪಃಪ್ರಭಾವವಂ ಧಾರಿಣಿಯೊಳ್ ಕರಂ ತಳೆದನುತ್ಸ್ತವ

ಭೂರಿಗುಣಾತಿಶೋಭಿತಂ (ಪಾರಪ. ೧–೫೦) : ನಿಜಗದೆಯುಲಿರಾತನ ರಥವ ಪುಡಿಗುಟ್ಟಿದನು (ಉತ್ತರಗೋ. ೧೨–೧೮). ೨. ಧರೆಯು ಬೇಸಬಿಸಿಲಾದು ದೋಷವುಂ ಹುಡಿಗುಟ್ಟಲಿಂದು ಪುಟ್ಟಿದ ನಿನ್ನ ನಾನಿಲ್ಲಿ ಮಡಗುವೆನೆ ಮಗನೆ (ಸಿದ್ಧರಾ. ೩–೧೬) ; ಹುಟ್ಟಿದ ದಿನವೇಳಂಬೋಳಗೆ ಹುಸ್ಕುಬ ಪುಡಿಗುಟ್ಟಿದು ಶಾರಕಾಸುರನ ನೆಟ್ಟನೆ ಮುಖುದು ನಿರ್ಜರರಿಗೆ ವಟ್ಟವ ಕಟ್ಟಿದ ಕತೆಮ ಕೇಳ್ದುಜಿಯಾ (ವೀಣಾಶ. ೧೨–೧೬). [ಪುಡಿ+ಕುಟ್ಟು₁]

**ಪುಡಿಗೂಡಿಸು,** ಹುಡಿಗೂಡಿಸು (ಕ್ರಿ). ನಾಶಗೊಳಿಸು ; ಧ್ವಂಸ ಮಾಡು : ಆ ಗುಡ್ಡವನ್ನು ತಮ್ಮ ಸ್ವಾಧೀನ ಮಾಡಿಕೊಂಡರೆ ಮೈಸೂರು ಸೇನೆಯನ್ನು ಪುಡಿಗೂಡಿಸುವುದು ಸುಲಭ (ಶರೀಶ. ೦೬೦). **ಹುಡಿಗೂಡಿಸು** : ಕೈಯಲ್ಲಿ ಕಾಸಿದ್ದರೆ ಹುಡುಗರು ಕೋತಿಯಂತೆ ಲಟ್ಟಾಣಿಯನ್ನೂ ಹುಡಿಗೂಡಿಸುವವರು (ಪುಕಶ. ೨೦) ; ತನ್ನ ಬಾಳು ಹುಡಿಗೂಡಿಸಲು ಅವಳನ್ನು ಪ್ರೇರೇಪಿಸಿದ್ದು ಇಂದಿನ ಸಮಾಜವಲ್ಲವೆ? (ಶಶ್ಮ. ೦೪). [ಪುಡಿ+ಕೂಡಿಸು]

**ಪುಡಿಗೆಯ್,** ಪುಡಿಗೈ, ಹುಡಿಗೆಯ್, ಹುಡಿಗೈ (ಕ್ರಿ). ೧. = ಪುಡಿಗುಟ್ಟು ೧: ಕಲ್ಪವೃಕ್ಷಮಂ ಕಡಿದರೇ . . . ಮಾಣಿಕವನು ಪುಡಿಗೆಯ್ದುರೇ (ಶಶಿ. ೩೫–೩೯). **ಪುಡಿಗೈ** : ೨. = ಪುಡಿಗುಟ್ಟು ೨ : ವೀರಲಕ್ಷ್ಮಿನಾನಿಸುವ ಲೂರಂಬನೆಲ್ಲವಮಂ . . . ಧೀರಸಹ ಸೀತಾಕುಮಾರಕಂ ಸಾಯಕದ ಸಾರದಿಂ ಪುಡಿಗೈದನು (ಕೈಪಿರಾ. ೨೦–೫೯) ; ಗರುವ ತರುವರಕುಲಂ ಮೂಲವುಂ ಕಿರಿಪಿ ಪಿಂಟಿದವೋಲ್ ನೆಲಕ್ಕುರುಳಿದವು, ಪೊದರ್ ಗಿಡುಗಳಂ ಪುಡಿಗೈದು (ಶಶ್ಯಾಂಗ. ೯೩–೦೩೧೮). **ಹುಡಿಗೆಯ್** : ೨. ಹೆಚ್ಚಿನ ಮಾರುಳಾಟದ ಮಾಣಿಬೀ ಲೋಕಂಗಳನು ಹುಡಿಗೆಯ್ಯುತ್ತಿಹ ನರಸಿಂಹನ ಹಣೆಯಾ ಲಿಪಿ ತೊಡೆದಾ ವೀರೇಶನ ಲೀಲಾಕಥನವ ಪದವಿಡುವೆನು (ಬಿರೇಶ. ೦–೬). **ಹುಡಿಗೈ** : ೨. ವಿರಾಗಿಯ-ಜರ್ಜುನನೆದೆಯ ಕೋಂಟೆಯುಂ ಹುಡಿಗೈದ ಶೃಂಗಾರವೈತರಲಿ (ಶಶ್ಯಾಂಗ. ೨೯–೬೯೩). [ಪುಡಿ+ಕೆಯ್₁]

**ಪುಡಿಗೈ** 'ಪುಡಿಗೆಯ್' ನೋ.

**ಪುಡಿಚಂಡಿಕೆ** (ನಾ). ಕುರುಚಲುಕೂದಲು ; ಚಿಕ್ಕ ಚಂಡಿಕೆ : ಅವನ ಪುಡಿಚಂಡಿಕೆಗಳು ತಲೆಯ ಮೇಲೆ ಹೂಚಿನ ಗಡ್ಡದಂತೆ ಹಾರಾಡುತ್ತಿದ್ದವು (ಸಮಃ. ೬೯೯). [ಪುಡಿ+ಚಂಡಿಕೆ₁ (<ಚೆಂಡಿಕೆ)]

**ಪುಡಿಚಟ್ನಿ** (ನಾ). ಕಡಲೆಬೇಳೆ, ಉದ್ದಿನ ಬೇಳೆ, ಮೆಣಸಿನಕಾಯಿ ಮೊದಲಾದುವನ್ನು ಹುರಿದು, ಕುಟ್ಟಿ, ವ್ಯಂಜನವಾಗಿ ಉಪಯೋಗಿಸುವ ಪುಡಿ : 'ಚಟ್ನಿಪುಡಿ' ಪರಾ. [ಪುಡಿ+ಚಟ್ನಿ (<ಚಟ್ನಣಿ)]

**ಪುಡಿದುಡ್ಡು** (ನಾ). = ಪುಡಿಗಾಸು : ಗೋಲಕದ ಪುಡಿದುಡ್ಡು ಇದೆಲ್ಲಾ ಸೂರಯ್ಯನಿಗೆ ದೊರೆಯುತ್ತಿತ್ತು (ಶೀಶಿಶಂ. II. ೨೪); ಕೆಲವರು ತಮ್ಮಲ್ಲಿದ್ದ ಪುಡಿದುಡ್ಡುಗಳಿಗೆ ಎಣ್ಣೆಯನ್ನು ಕೊಂಡು ತಂದರು (ರಾಜಿ. ೨೨). [ಪುಡಿ+ದುಡ್ಡು₁]

**ಪುಡಿಯಾಟ,** ಹುಡಿಯಾಟ (ನಾ). ೧. ಧೂಳೆಬ್ಬಿಸುವ ಆಟ ; ಧೂಳಾಟ : ಪುಡಿಯಾಟವನಾಡಿ ಚರಾಚರಂಗಳಂ ಕರಿಮುರಿಯುಪ್ಪಿನಂ ಹುರಿವ ಹಂಚುವೊಲಿರ್ದೆಳೆಯೊಳ್ ಕೃತಾಂತನಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘಪಾನಿಳಂ (?) (ಅರಾಜಿ. ೪–೬೪). **ಹುಡಿಯಾಟ** : ೨. ಧೂಳಿನಲ್ಲಿ ಆಡುವ ಆಟ ; ಮಣ್ಣಾಟ : ಮೊಲಿಹಾಲು ಕುಡಿದು ದಿನವೇಸು ತಂಗವ್ವ ಹುಡಿಯಾಟವಾಡಿ ದಿನವೇಸ (ಜಾನಪದಗೀ. ೧೦–೮). [ಪುಡಿ + ಆಟ]

**ಪುಡಿಯಾಡು** (ಕ್ರಿ). ಧೂಳಿನಲ್ಲಿ ಆಡು ; ಮಣ್ಣಾಟವಾಡು : ಪುಡಿಯಾಡುವ ತೊದಲೊದವೆ ನುಡಿವ ನಗಿಸುವ ಬಾಲಕ್ರೀಡೆ ಮುರಾರಿಯ ಬಾಲಕ್ರೀಡೆಯನನುಕರಿಪುದಾದುದರಿಕೇಸರಿಯಾ (ಹಂಪಶಾ. ೨–೬). [ಪುಡಿ + ಆಡು₁]

**ಪುಡಿಯಿಡು** (ಕ್ರಿ). ಹೊಟ್ಟು ಹಾರು; ಹುರುಪು ಏಳು : ಪುಡಿಯಿಡುತ್ತಂ ವರಾಂಗಂ ಸುರುಳ್ಗೊಳ್ಳುತ್ತುಂ . . . ಮುಖಂ ಕಂದಿ ಕುಂದಿಕ್ಕುಂ (ಧರ್ಮಾ. ೧೧–೩). [ಪುಡಿ + ಇಡು₁]

**ಪುಡಿಯೇಳು,** ಹುಡಿಯೇಳು (ಕ್ರಿ). ೧. ನಾಶವಾಗಂ ; ಧ್ವಂಸಗೊಳ್ಳು : ತಲೆ ಸೀಳಾಗಿ ಮಿಡಿಸಿ ಸಿಗಾಡಿ ದೊಣೆಯಂತು ಪುಡಿಯೆದ್ದು ದಿಂಡುರುಳಿತಾ ಖಾನರಾಜಿ (ಕುಶಲ. ೦೯–೭೪). **ಹುಡಿಯೇಳು** : ೨. ಪುಡಿಯಾಗು : ನಿಡಿಗಲ್ಲು ನಿಶಿತ ಹಾಸಣಿಗಲ್ಲು ಚೌಕದ ಬಡಿಗಲ್ಲು ಬಟ್ಟುಗಲ್ಲು ಬೀಳಿ ತುಡುಕಿದ ವಜ್ರಮಾರ್ಗಣದಿಂದೆ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಳುಸಿದ (ಮೋಹತ. ೪೦–೬೩). [ಪುಡಿ + ಎಳು₂ (< ಏಟು₁)]

**ಪುಡಿವಡು** (ಕ್ರಿ). = ಪುಡಿಯೇಳು ೨ : ಕರ್ಪೂರದ ಬಿಡುವೀಳಿಯ ದಂಬುಲ ವಿರಹಾಗ್ನಿಗೆ ಪುಡಿವಟ್ಟುದೇನ ಬಣ್ಣಿಸುವೆ (ಕಂಶಂ. ೯–೦೬೨). [ಪುಡಿ + ಪಡು₁]

**ಪುಡಿವಡೆ** (ಕ್ರಿ). ೧. = ಪುಡಿಯೇಳು ೧: ಅವನ ಮಾಯೆಯುಂ ತಡೆವರಿಲ್ಲಾ ಬಲಂ ಪುಡಿವಡೆದುದು (ಕೃಪಿರಾ. ೯–೨೬). ೨. = ಪುಡಿಯೇಳು ೨ : ವೈಗಳು ಸೋಂಕಿ ಪುಡಿವಡೆದ ಕುಂಕುಮಸುಗಂಧಾನುಲೇಪನದ ಚೂರ್ಣಂಗಳೋ . . . ಎಂಬಿನಂ . . . ಕೆಂಧೂಳಿ ಮಸಗಿತಾಗ (ಕೃಪಿರಾ. ೦೨–೭). [ಪುಡಿ + ಪಡೆ₁]

**ಪುಡಿಹಿಟ್ಟು** (ನಾ). ನುಣ್ಣಗಿರುವ ಹಿಟ್ಟು : ಪಸಿವಾಗೆ ಮುನ್ನಿನ ತೆಱದೊಳವ್ಯಕಾನ್ನವನು ಬೇಡಿ ಕುಡಲು ವನಿತೆ ಪುಡಿಹಿಟ್ಟನೊಳು ಮಿದಿದನಿಗೆ ಸೀರ್ವೆರಸಿ ಪಾಲಿದೆಯೆನುತ್ತಿತ್ತಳು (ತ್ರಿಪುರದ. ೯–೩೮). [ಪುಡಿ + ಹಿಟ್ಟು]

**ಪುಡಿವಿಡು** (ಕ್ರಿ). ೧. = ಪುಡಿಯೇಳು ೧: ಕದಡಿ ಪದಾತಿಘಟ್ಟನದೆ ಕೋಟಿಕೈಸಜಾಗಿ ತುರಂಗಮಾಂಘ್ರಿಪಾತದೆ ಪುಡಿವಿಟ್ಟು ಕೂಡೆ ರಥಘಾತದೆ ತೀವಿ ಬಟುಕ್ಕೆ ದಂತಿದಾನದೆ ಕರಿದಾದುದಿಂತು ಯಮುನಾನದಿ ಕಿವ್ಮನೆ ದೇಶಗಾಯ್ತು ಕರ್ಪಿದಲೊಳ್ (ಜಗ. ೦೬–೬೦). ೨. ನಿರ್ದ್ರವವಾಗು ; ಒಣಗು : ಕಡುಬಿಸಿಲೊಳಿರ್ದು ತಾಳುಗೆ ಪುಡಿವಿಡೆ ಮುಖಮೊಣಗೆ . . . ತುರಗಕ ತಾಳುರೋಗಂ ತೋರ್ಕುಂ (ಅಶ್ವಶಾ. ೦೯–೦). [ಪುಡಿ + ಬಿಡು₁]

**ಪುಡಿಸಕ್ಕರೆ** (ನಾ). ಹಿಟ್ಟಿನಂತೆ ನಯವಾದ ಸಕ್ಕರೆ : (ಕ). [ಪುಡಿ + ಸಕ್ಕರೆ]

**ಪುಡಿಹಣ** (ನಾ). = ಪುಡಿಗಾಸು : ಅವನು ಕೇಳಿದ ಪುಡಿಹಣಕ್ಕೆ ಅವಳಿಂದೂ ಅಡ್ಡಿಯಾಡಿರಲಿಲ್ಲ (ಸಿಶಿರ. ೩೪). [ಪುಡಿ + ಹಣ (< ಪಣವು₁)]

**ಪುಡುಂಕು,** ಪುಡುಕು, ಹುಡುಕು (ಕ್ರಿ). ೧. ಕೈಯಿಂದ ತಡಕಾಡು ; ತಡವರಿಸು : "ಪುಡುಕು, ಪುಡುಂಕು—ಕರಾನ್ವೇಷಣೇ" (ಕಶಬ್ದಾ). ೨. ಅರಸು : ಶೋಧಿಸು : "ಪುಡುಂಕೆನಲ್ಪುಡುಕುಪುಡಕಪ್ಪುದು" (ಆಹ. ೬೬); ಲಕ್ಕಸವೇಡನೋರ್ವನುಚಿ ಬೇಂಟೆಯನಾಡಲೊಡಂ ಪುಡುಂಕಿ ಬರ್ಪಕ್ಕಿಗಳಂದು ಸಿಲ್ಕಿದುವು (ಹರಿಶ್ಚ. ೯–೬೨) ; ಭೂಮಿಯೊಳುಂಟಾದ ಪಾರ್ಥಿವರೆಲ್ಲರಂ ಮಾಣ್ಬಿಲ್ವೇಳೆ ಪುಡುಕಿ ಪುಡುಂಕಿ ಸಂಹಾರಂಗೆಯ್ದನೋ ಆ ಬಗೆಯ ಕ್ರೋಧಾತ್ಮಂಗೆ ಸಾಷ್ಟಾಂಗವಾಗಿ ನಮಸ್ಕಾರಂಗೆಯ್ದನು (ಶಾಕುಂ. ೩೨೯–೯೬). **ಪುಡುಕು** : ೨. "ಪುಡುಕೆಂದು ಅಱಸುವುದು" (ಕಶಬ್ದಾ. ೬೬–೩೯೬); ತಡವಡಿಸಿ ಪುಡುಕಿ ವಂಜನ ನಡುಬೀದಿಯೊಳಿರ್ದು ಮಾಣುಗುತಿರೆ ಕಂಡು (ಸುಕುಮಾ. ೯–೩೮) ; ಮತ್ತೊಮ್ಮೆ ಕೊಳಲಿ ನೋಡುವೆನೆನುತ ಪುಡುಕಲುಜ್ಜುಗಗೊಂಡನು (ವಂಕಾಬ. ೩–೩–೦೮) ; ಪಾಡದಿ ಪಿಂದೆ ನಿನ್ನಂ ಪುಡುಕಿವರೆ ತೊಡಕಿ ಬಿಲ ಸೂರ್ದು ಸಂದೆಸಂಬಡೆ ಸಾಂ ಪುತ್ರಿಮಾಂದಿರಕ್ಕಿದಿ . . . ಬಂದು (ಶ್ರೀಚಾರು. ೩–೩೬). **ಹುಡುಕು₁**: ೧. ಹಾನೊಡನೆ ಕರಯುಗದಿಂದೆ ಹುಡುಕುತ ಲಿಂಗಮೂರ್ತಿಯನರಸುತವೆ ಮುನ್ನ

(ಶಶಪು. ೫೦-೬೮). ೨. "ಮೃಗಯತೇ = ಪುದುಂಕಿದವುದು" (ಕಾಳ್ಳ. ೨೬೬); ಇರುವೆಗಳು ಯಾವಾಗಲೂ ಆಹಾರ ಪುದುಕುತ್ತಿರುತ್ತವೆ(ಮುಂಜಾವು. ೨-೬); ಅಜ್ಜರಿಯ ಬಚ್ಚಿಟ್ಟು ಪುದುಕಿ ಹಚ್ಚದೆ ಬಾಳ ನೀಳವಯನದ ಹಾದಿ (ಹಾಡು. ೬೬-೯).

[ದೇ. ೯ ತೆಲು. ಪುದುಕು,' ವುಲುಕು ; ಕೋಲಾ. ಪುದ್ಕ್ = ಮುಟ್ಟು ; ಪಾರ್ಜಿ. ಪುರ್ಕ್ = ಮುಟ್ಟು]

ಪುದುಂಕುನೀರ್ 'ಪುದುಂಕುನೀರ್' ನೋ.

ಪುದುಕು 'ಪುದುಂಕು' ನೋ.

ಪುದುಕುನೀರ್, ಪುದುಂಕುನೀರ್, ಹುದುಂಕುನೀರ್ (ನಾ). ಕುದಿಯುವ ನೀರು; ಸುಡುನೀರು: 'ಪುದುಕುನೀರಟ್ಟು' ಪರಾ. ಪುದುಂಕುನೀರ್: ಒದೆದು ಕಲಂಕಿ ಪಾಯ್ವ ಪದದೊಳ್ ಪದವೆತ್ತು ಪುದುಂಕುನೀರನರ್ದಿ ದಳಂಜಿ ಮೋದಿ ಮುಂದಲೆಗೆ ಪಾಯ್ದು ಪೊರಳ್ಚಿದಳ್ (ಅಜಿತಪು. ೧೪-೨೨). ಹುದುಕುನೀರ್: ಅಡವಿಯ ಹೊಗಿಸುತ್ತ ಹುದುಕುನೀರಲದ್ದಿತ್ತು... ಊರೊಳಗೆಲ್ಲ ಈ ಬೆಡಗಿನ ಮಾಯೆಯ ಬಡಿಹೋರಿಸುವಯಿಗಳ ನುಡಿಗೆ ನಾಚುವೆನು (ಶಶಾ. I. ೨೬೮-೦೬); ಮುಡಿಗಟ್ಟುಂ ಕಟ್ಟಿ ಹುದುಕು ನೀರೊಳ್ ಮಟ್ಟಿ ಕಾಡುತಿಹ ಪಾಪವರರ ಕೈವಿಡಿತೆಗೊಳಗಾಗಿ ... ಪುಲ್ಲರ್ಚಿ ಕಂಟಕಂಬಡೆದೆವು (ಶಾವಕಂ. ೨-೮); ನಮ್ಮ ನಿಮ್ಮಂದಖಿಳಶುಭಪ್ರಯೋಜನ ವಿರಲು ನಿಮ್ಮುವಂ ಸೀರಿ ಪೋಳ್ಗಿದು ಕುದಿಸುತ್ತಿಹರು ತಮ್ಮ ಮೂಗರಿದು ಮುಡಿಗಟ್ಟುತ್ತ ಹುದುಕುನೀರೊಳಗದ್ದಿ ಬಳಲಿಸುತಿರೆ ಹೆಮ್ಮೆಯುಳಿದೀ ಲೋಕದೊಳಗಿಹುದೆ ಕಷ್ಟವೆಂದುಂ ಮುಳಿದು ಸ್ವರ್ಗಕೆ ಪಂದು ಪೋಗುವ ತೆರದಿ ನೆಮ್ಮಿ ಗಗನವ ತುಡುಕಿ ಪುನ್ನಾಗ ನಾಗವಳ್ಳಿಯು ವೊಲಂ ಕಂಗೆಸೆದುವು (ಶಶಮೋ. ೪-೩೦). P "ಪಂಪನ ಪದ್ಯದಲ್ಲಿರುವ 'ಪುದಪುದನೆ' ಎಂಬ ಶಬ್ದ ಪುದು ಎಂಬ ಮೂಲಧಾತುವಿದ್ದಿರ ಬೇಕೆಂಬುದನ್ನು ವಿಶದಗೊಳಿಸುತ್ತದೆ. ಇದರಿಂದಲೇ 'ಪುದಂಕು' ಎಂಬ ಧಾತು ಬಂದು ಕುದಿ, ಬೇಯು ಎಂಬರ್ಥವನ್ನು ಪಡೆದಿರ ಬೇಕೆಂದು ಅರಿವಾಗುತ್ತದೆ. ಪುದುಕುನೀರ್ ಎಂದರೆ ಕುದಿನೀರು, ಬಿಸಿನೀರು, ಸುಡುನೀರು ಎಂದರ್ಥ" (ಕನ್ನ. ೬. ೦೪).

[< ಪುದು + ನೀರ್]

ಪುದುಕುನೀರರ್ದು 'ಪುದುಕುನೀರಟ್ಟು' ನೋ.

ಪುದುಕುನೀರಟ್ಟು, ಪುದುಕುನೀರರ್ದು, ಹುದುಂಕುನೀರದ್ದು (ಕ್ರಿ). ಕುದಿಯುವ ನೀರಿನಲ್ಲಿ ಮುಳುಗಿಸು; ಬಿಸಿನೀರಿನಲ್ಲಿ ಅದ್ದು: ಸಮುದ್ರದೊಳ್ ಮಹಾಪಾತಕದ ಪೊದಲೊಳಿಕ್ಕಿ ಪುದುಕುನೀರಟ್ಟು [ಪಾಠಾಂ. ದುರ್] ತ್ತಂ ಪಿಡಿದುಂ ಬೇಗಂ ದುಃಖಮನೆಯ್ದಿಸಿ ಕಾಡಿ ಕೊಲೆ (ಶಬ್ದಾರ. ೦೬೩-೦೨); ಮುಳಿಸಿಗೆ ಮಹಾವೇಶನ ಒಳವೆಲ್ಲಮನುಯ್ದು ಪುದುಕುನೀರಟ್ಟುವೆಂ (ಧರ್ಮಾಮೃ. ೪-೨೯೩). ಪುದುಕುನೀರರ್ದು: ಪುದುಕುನೀರರ್ದೆ [ಪಾಠಾಂ. ನೀರೊಳರ್ದೆ] ಯುಂ ಪುಟಪಾಕಂ ಸುಡೆಯುಂ (ಅಜಿಪು. ೧೦-೧೦ ವ): ಕಡುಸೀಜಿ ಜಂತ್ರದಂಚಿಯುನಡಿಗಡಿಗಾ ನೀರೊಳರ್ದಿದರ್ ನಡವೆಡೆಯೊಳ್ ಗಡ ನಾಣ್ಚದೆ ಪುರುಡಿಪುದೆನ್ನೊಡನೆಂಬುಯ್ಯಲ್ಲಿ ಪುದುಕು ನೀರರ್ದುವವೊಲ್ (ಪುಣ್ಯಾಪು. ೬-೧೧೧); ಕೇಸರಿಗಳಂ ಪಿಡಿದು ಪುದುಕು [ಪಾಠಾಂ. ಡಿತ]ನೀರರ್ದು[ಪಾಠಾಂ. ನೀರೊಳಟ್ಟು]ವಂತೆ ... ಸುಟಿ ಗೊಂಡರ್ದುವ ಸುಟಿಗಳೊಳಂ (ಅಜಿತಪು. ೦-೪೮ ವ). ಹುದುಕುನೀರದ್ದು: ಶಿವನಂ ನೆನೆಯುತಿಡೆವೊಳನ್ನಾಯುಮಂ ಮಾಡಿ ಮತ್ತಂ ನೆನೆಯುತಿರ್ದೊಡಾ ಶಿವನ ನಾಮಂ ಹುದುಕುನೀರದ್ದದಿಪುದೇ (ಸಿದ್ಧರಾ. ೮ ೦೮): ಸುಡುವೆ ಲಂಕೆಯ ಸಹಿತವೆಲ್ಲರ ಹುದುಕುನೀರದ್ದುವೆನು (ಕೌರಾ. ೯ ೩೦); ಗಂಗೆಯ ನಡುಗಡಲಲೀಕ್ಷಣನೆ ಖಳರನು ಹುದುಕುನೀರದ್ದುವೆನು ಕೌರವ ಕುನ್ನಿಗಳನು (ಶಶಾಗ. ೦೦-೬೬-೩೭). [ಪುದುಕುನೀರ್ + ಅಟ್ಟು]

ಪುದುಕಿ 'ಪುಡಿಕೆ' ನೋ.

ಪುದುಕೆಗಟ್ಟಿಸು (ಕ್ರಿ). (ಆಲಂ) ಗಂಟುಂ ಕಟ್ಟಿಕೊಂಡು ಓಡಿ ಹೋಗುಂ ವಂತೆ ಮಾಡು ; ಎತ್ತಂಗಡಿ ಮಾಡಿಸು : ಮಾಳವಮೇಳುಮಂ ಪುದುಕೆಗಟ್ಟಿಸಿದತ್ಸ್ರಚಿಯುಟ್ಟಿ ಚೇರನುಂ ಚೋಳನುಮಂ ಸಮುದ್ರ ದೊಳಗದ್ದಿರ್ದುದು ... ತೇಜದುರ್ಬ್ಬು (ಎಕ. VII. ಶಿಕಾ. ೦೩೬-೦೬ ; 1019). [ಪುದುಕೆ (< ಪುಡಿಕೆ) + ಕಟ್ಟಿಸು]

Δ ಪುದುಗ 'ಹುಡುಗ' ನೋ.

ಪುದುತಕೇಶ, ಪುದ್ರಕೇಶ (ನಾ). ಪೋರ್ಚುಗಲ್ಲು ದೇಶದವನು: ತಾವು ಪರಾಯ ತಾಲ್ಲೂಕು ಪುದುತಕೇಶನ ಆಶ್ರಯದಲ್ಲಿ ಇದ್ದೀರಿ(ರಾಜೇಂದ್ರ. ೨೦೦). ಪುದ್ರಕೇಶ: ಗೋವೆ ಪುದ್ರಕೇಶ ಪಾವಂದ ಗವರ್ನರ ಹೆಸರಿಗೆ ಒಂದು ತಾಕೀತಿ ಆದರೆ ಆ ಅರಸುಗಳು ಇಲ್ಲಿಗೆ ಬಂದು ತಲಪ್ಯಾರು (ರಾಜೇಂದ್ರ. ೨೦೩). 'ಪೋರ್ಚುಗೀಸ್' ಪರಾ.

[← ಇಂ. Portuguese /ತೆಲು. ಬುಡುತಕೀಚು]

ಪುದುಪುದನೆ (ಅ). ಪುದುಪುದು ಎಂದು : ಸಿಂಧುನಂದನನ ಕೋಪಶಿಖಿ ಶಿಖಾಳಾಪಂಗಳೊಳ್ ಪುದುಪುದನಟ್ಟಿ ಸಾಯಲೆಂದು ಪಾಯ್ವ ಪತಂಗಂಗಳಂತೆ ಸೋವಾಕ ಶ್ರೀಜಯಮುಖನಾಯಕರೊಂದಕ್ಷೋಹಿಣೀ ಬಲಂಬೆರಸು ಭರಂಗೆಯ್ದಾಂತೊಡೆ (ಹಂಪಕಾ. ೧೦-೫೪ ವ); ಎನ್ನ ಮಕ್ಕಳು ಮಾನಂ ದುಃಪಾಕ್ಗಿಯೊಳ್ ಪುದುಪುದನೆ ಪುರ್ಗಿ ನವೆವ ಪಾಪದ ಫಲವಂ ನೀನವರೋಘಮುಂಣ್ಬೆ (ಸುಕುಮಾ. ೫. ೭ ವ). [ಪುದುಪುದು + -ಅನೆ₁]

ಪುದುಪುದು (ನಾ). ಒಂದು ಅನುಕರಣಪದ : ನಡನಡನಡುಗಿ ಮಿಡು ಮಿಡುಮಿಡುಕಿ ಪುದುಪುದು ಪುಗ್ಗಿ ... ಪುಯ್ಯಲಿಡುತ್ತುಂ (ಅಜಿಪು. ೦೦-೦೦ ವ).

ಪುದೆ (ಅ). ಸ್ಪಷ್ಟವಾಗಿ ; ನಿಶ್ಚಿತವಾಗಿ : ಚಂಡಿಮಯ್ಯಂಗೆ ಶ್ರೀವನಿತೆಗೆ ತಾನಾಗಿ ಶ್ರೀವಿಶಾಲನೆ ಪುಟ್ಟುವಂತೆ ಪುದೆ ಪುಟ್ಟಿದಂ ಚಾವು[ಂ]ಡ (ಕಶಾ. ೦೦-೪-೯೭ ; ಸು. 1093).

[< ಪ್ರಾ. ಪುಡ. /ಸಂ. ಸ್ಫುಟ. /ತಮಿ. ಪುಟ್ಟ = ವ್ಯಕ್ತವಾಗು]

ಪುದೆಯ 'ಪುದೆಹ' ನೋ.

ಪುದೆಹ, ಪುದೆಯ (ನಾ). ಹಲಸು, ಕುಂಬಳ, ನೆಲ್ಲಿಕಾಯಿ ಮೊದಲಾದುವುಗಳಿಂದ ತಯಾರಿಸುವ ಒಂದು ಬಗೆಯ ಮೇಲೋಗರ : ಕಡುಮೆತ್ತನುಕ್ಕರಿಸಿಕೊಂಡ ಹಲಸಿನ ಕಾಯ ಕಡಲೆ ಯಂದದೊಳು ಕತ್ತರಿಸಿಯುಟ್ಟುಗು ಹುಳಿಯೊಡನೆ ತುಪ್ಪವನೆಣಿದು ತಾಳಿಸಿಯುಪರಿಯಂತೆ ಕತ್ತರಿಸಿ ಬಲಿದ ಹಾಲ ಬಡಗಸುಂಡಗೆಯುಳ್ಳ ತೆಂಗಾಯ ಶುಂಠಿಗಳ ಹುಡಿಯುವೆಲ್ಲವನು ತುಪ್ಪದಿ ಹುರಿದು ಹದಮೊಣಸ ಜಡಿದ ಮೆಣಸು ಬೆರಸಿ ತುಪ್ಪದೊಳಗಟ್ಟುವೊಗ್ಗರಿಸಿ ಪುದೆಹ[ಪಾಠಾ. ಡಿಯು]ವ ಮಾಳ್ಪುದು (ಸೂಪಶಾ. ೫-೯೨). ಪುದೆಯ : ನೆಜಿ ಸಣ್ಣನಾಗಿ ಕುಂಬಳಕಾಯನುತ್ತರಿಸಿ ... ಸಂಭಾರವಂ ತಳಿದುವೊಗ್ಗರಿಸಿ ಪುದೆಯವ ಮಾಳ್ಪುದು (ಸೂಪಶಾ. ೫-೩೪); ಎಳೆಯ ಹಲಸಿನ ಕಾಯ ಸಿಪ್ಪೆಯಂ ತೆಗೆದು ಸಂಬಳಿಸಿ ... ಬೇಯಿಸಿಕೊಂಡು ಬಳಿಕ ತಾಳಿಲ ಕೊಣಬು ಪುದೆಯಂ ಮುಂತಾದ ಮೇಲೋಗರಂಗಳನು ಮಾಳ್ಪುದು (ಸೂಪಶಾ. ೫-೩೬).

[ ? ]

ಪುದ್ರಕೇಶ 'ಪುದುತಕೇಶ' ನೋ.

ಪುಧಾಕಾರ (ನಾ). ಮುಂದಾಳುತನ ; ನೇತೃತ್ವ : ಈ ಎಲ್ಲ ಮಾತುಗಳಿಗೆ ಗಳಲ್ಲಿ ತುಂಗಕ್ಕನದೇ ಪುಧಾಕಾರವಿತ್ತು (ಶುಭರುದಾ. ೧೯೦); ನಾಲ್ಕತ್ತು ವರ್ಷ ವಯಸ್ಸಾಗುವವರೆಗೆ ಹೋಳೀಹುಣ್ಣಿವೆಯ ಚಟುವಟಿಕೆಗಳಲ್ಲಿ ಅವನ ಪುಧಾಕಾರವಿರುತ್ತಿತ್ತು (ಗಂಪಾರು. ೫೪).

[← ಮರಾ. ಪುಧಾಕಾರ]

**ಪುಢಾರಿ** ಪುಡಾರಿ (ನಾ). ಮುಂದಾಳು ; ನೇತಾರ ; ಮುಖಂಡ : ಹಳ್ಳಿಯ ಪುಢಾರಿಗಳು—ಹಿರಿಯರು—ಹುಂಬರು ಎಲ್ಲಾ ಸೇರಿದ ಬ್ರಹ್ಮ ಸಭೆ ಅದು (೯೦೫ಹು. ೬೮) ; 'ಬರಾಕು'ಗಳ 'ಪುಢಾರಿ'ಗಳಲ್ಲಿ ಒಬ್ಬೊಬ್ಬ ರಾಗಿ ಮುಂದೆ ಬಂದು ಜಿಗಿಜಿಗಿದು ಭಾಷಣ ಮಾಡಿದುದಾಯಿತು (೬ಗಜ್ಞ. ೩೮). **ಪುಡಾರಿ** : ದೇಶದ ಮುಖಂಡರೂ ಅವನಿಗೆ ಗೊತ್ತು ; ನಾಡಿನ ಪುಡಾರಿಗಳೂ ಅವನಿಗೆ ಗೊತ್ತು (೩೯೩. ೫೯) ; ಹೋಹಾಗ ಬರಂ ವಂತೆ ಬರುವಾಗ ಹೋಹಂತೆ ಕೋರ್ವವರೀ ಮೂರು ನೋಡಿ ಒಬ್ಬ ಪುಡಾರಿ ಮತ್ತೊಬ್ಬಳು ವಯ್ಯಾರಿ ಮತ್ತಿನದಿನ್ನೊಂದು ಎಡಿ (೩೦೩೫ಶ. ೦೯೬–೦೩). [ ← ಮರಾ. ಪುಢಾರೀ, ಪುಢಾಕಾರೀ ]

**ಪುಢಾರಿಕೆ** (ನಾ). ಮುಂದಾಳುತನ ; ಮುಖಂಡತ್ವ : ಅವನಿಗೆ ಜನತೆಯಲ್ಲಿ ಗಣ್ಯವಾದ ಸ್ಥಾನ ದೊರಕಿತ್ತು ; ದೇಶದಲ್ಲಿ ಪುಢಾರಿಕೆ ಬಂದಿತು (ಸ್ವಯಂವ. ೧೧). [ಪುಢಾರಿ + —ಇಕೆ]

**ಪುಢಾರಿತನ** (ನಾ). = ಪುಢಾರಿಕೆ : ಮಧ್ಯಮರು ಪುಢಾರಿತನದ ಯಜ್ಞದಲ್ಲಿ ಯಾರನ್ನೋ ದೂಗಿಸಿ . . . ಅವರು ಮೈಮರೆಸಿ ಕೊಳ್ಳುವುದು . . . ವಾಡಿಕೆಯದೇ ಆಗಿದೆ (ಕಂಕಹಂ. ೬ ಮುನ್ನುಡಿ). [ಪುಢಾರಿ+—ತನ]

**ಪುಣ್**. ಪುಂಡು, ಪುಣ್ಣು, ಹುಣ್, ಹುಣ್ಣು (ನಾ). ೧. ವ್ರಣ : "ಅರುಃ, ವ್ರಣಃ —ಈ ೨ ಪುಣ್ (ಹುಣ್ಣು)" (ಶಬ್ದಮ. ೦೦೪–೬); ಒಳ್ಪನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱೆದೊರಸಿ ಕರ್ಚುವರುಂ (ಅಂತ್ಯ. ೩-೯೭ ವ); ಪುಣ್ಗೊಳ್ ನೊಣಂ ಪುಪ್ಪದೊಳ್ ವ್ರಣಯುಂ ಮಾಡುವುದು ತುಂಬಿ (ಸೂಕ್ತಿಸು. ೧–೬೬) ; ಮನದೊಳ್ ದಯವಿಲ್ಲದವನ ಕಣ್ಣೀಂ ಪುಣ್ಣೀಂ (ಕವಿರ. ೬೯ ಕ್ರ.ಯೋ). ೨. ಗಾಯಂ ; ಏರು ; ಕ್ಷತ : ತಾಗದೆ ಪಲ್ಗಳ ತುದಿ ಪು[ಪಾಠಾಂ.ಹು]ಣ್ಣಾಗದೆ ನಡುಕಂದದೊಳಗು ನೋಯದ ಸವಿಗಿಂಬಾಗಿ ರತಿರಾಗದುರುಳಿವೊಲಾಗೆ ಕರಂ ಬೀಗಿ ಬಾಯ್ಗಳಂ ಚುಂಬಿಸಿದರ್ (ಅನ್ಯಪು. ೬೭೭ ಕ್ಯಾದ್ರಕ); ಚತುರ್ಬಲಂಗಳ ಮೊಯ್ಗಳೊಳ್ ಬಗಿದಸುಂಗೊಳೆ ಸುಯ್ದು ಕಿತ್ತುವ ಪುಣ್ಣ ಬಾಯ್ಗಳೆ ಬೀರವಂ ಪೊಗಟ್ಟ ಬಾಯ್ಗಳೆನಿಪ್ಪವು (ಕಾವ್ಯಾವ. ೩೨). **ಪುಂಡು** : ಶಿ. (ಅಲಂ) ವ್ಯರ್ಥ ; ವಿಫಲ : ಪದುಳಿದನಲ್ಲದನಂ ಕಲಿಸಿದೊಡಂ ತಿಳಿಪಿದೊಡಮೇಂ ನಿಲಲ್ಕಱಿಗುಮೆ ಚಿತ್ತದೊಳಾಪ್ತನ ವಚನಮದು ಪುಸಿದೊಡಂ ಪುಂಡಾಗಲಂತು ಮಱಿಯದ ತೆಱದಿಂ (ಶಬಶ. ೦೦–೦೩೪). **ಪುಣ್ಣು** : ೧. ಪುಣ್ಣಿನಂತೆ ನೋವಂ ಮಾಡುವುದು (ಧರ್ಮಾಮೃ. ೪–೦೬೩). ೨. ಕಾಸಿದೆಣ್ಣೆಯ ಪೊಯಿಲ್ಗೆ ಪಟುಭಟರ ಮೈದೊಗಲ್ ಕೀಸಿದುದು ಮಳಲ ಮಳೆಯಿಂದೆ ಪುಣ್ಣಾದುವು (ಕಂತ್ಯ. ೪೨–೬೪). **ಹುಣ್** : ೧. "ವ್ರಣಂ–ಹುಣ್" (ಕಾಕ್ಕ. ೨೯೦). ೨. ಸುಱುದು ಕಿತ್ತುವ ಹುಣ್ಬೆರಸಾಡುಮಟ್ಟೆಯಿಂ ಚರಮೊಸೆಯಲ್ಕೆ (ಎ.ಕ. XVIII, ೨೦೫–೩೩;1162). **ಹುಣ್ಣು** : ೧. "ವ್ರಣಃ, ಈರ್ಮಂ, ಅರುಃ—ಈ ೩ ಹುಣ್ಣು" (ಶಾಕಾ. ೩೨೦); ಅಂಬುಳುವಾದಡೆ ಹಣ್ಣುಖಿನೆಂಬರು ಸೀವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರು ತುಱಿಯಾದಡೆ ಘನೆಯೆಂಬರ್ ಮತಿಹೀನಜನರದೇನು ಮಾಡರ್ (ಶಮಶ. ೪–೨೬); ಬೆಂದ ಹುಣ್ಣ ಕಂಬಿಯಲ್ಲಿ ಕೀಸುವರೆ (೬ಶವ. ೩೧೬); ಬೆಂದ ಹುಣ್ಣಲಿ ಸಾಸಿವೆಯ ಬಳಿಯದಿರು ಸಂಜಯ (ಕುಮಾವ್ಯಾ. ೦–೮); ಅಂಗೈ ಹುಣ್ಣಿಗೆ ಕನ್ನಡಿ ಯಾಕೆ ? (ಗಾದೆ).

[ದೇ.೫ ತಮಿ. ಮಲ. ಕೋತ. ಪುಣ್ ; ತುಳು. ಪುಡಿ ; ಕೊಡ. ಪುಣ್ಣ್. ಪುಣ್ಣೀ ; ತೆಲು. ಪುಂಡು ; ಕೋಲಾ. ನಾಯ್ಕಿ. ಪುನ್ ; ಮಾಲ್ತೊ. ಪುನು]

**ಪುಣಂಬು** 'ಪುಳಂಬು' ನೋ.

**ಪುಣಗು** 'ಪುಣುಗು' ನೋ.

**ಪುಣಜ** 'ಪುಂಚೈ' ನೋ.

**ಪುಣಜಿ** 'ಪುಂಚೈ' ನೋ.

**ಪುಣಪುಣನೆ** (ಅ). ಪುಣಪುಣ ಎಂದು : ಅಳಲು ಪುಣಪುಣನೆ ಮರ ಹತ್ತಿ ಬಾದಾಮಿ ಮತ್ತು ಖರ್ಜೂರಗಳನ್ನೆಲ್ಲ ಪಟಪಟ ಉದುರಿಸಿತು (ಪುಟ್ಟಿಕ. ೨೪).
[ ಪುಣಪುಣ + —ಅನೆ ]

**ಪುಣಸುಗ** (ನಾ). ಒಬ್ಬಾತನ ಹೆಸರು : ಅವಚವಾಱಿಯ ಪೆರ್ಮ್ಮಡಿ ಗಾವುಣ್ಡನ ಲಕೊಳಾದಿತ್ಯನ ಮೆಳೆಯ ಪುಣಸುಗ ಸತ್ತಂ (ಎ.ಕ. IV, ಕಾಟುರಾ. ೧೬೪–೦೦; ೮೯೩). [ ? ]

**ಪುಣಸೆ** 'ಪುಳಿಸೆ' ನೋ.

**ಪುಣೆ**. ಹುಣೆ (ನಾ). (ಕರಾ) ಹೊಲಗದ್ದೆಗಳ ಬದು; ಒಡ್ಡು; ಏರಿ : ಜಾರಪ್ಪ ಆ ದೃಶ್ಯವನ್ನು ನೋಡಲಾರದೆ ಗದ್ದೆಯ ಪುಣೆಯ ಮೇಲೆ ಕುಸಿದು ಬಿದ್ದನು (ಕಣಶ. ೬೮) ; ಮೇಲಾಳುಗಳು ಒಬ್ಬೊಬ್ಬರಾಗಿ ಬಂದು ಗದ್ದೆಯ ಪುಣೆಯಲ್ಲಿ ನಿಂತರು (ಜುಂಹಾ. ೨೪). **ಹುಣೆ** : ನೀನು ಗಳಿಸುವುದು ಎಲ್ಲಿಂದ ? ಬಂದರಿನಲ್ಲಿ ಹೊರೆ ಹೊತ್ತೋ ? ಗದ್ದೆಯ ಹುಣೆ (ಏರಿ) ಕಡಿದೋ ? (ತೋಂ೦. ೩೭) ; ಕೆಲವರು ಗದ್ದೆಯ ಹುಣೆಯಲ್ಲಿ, ಕೆಸರಲ್ಲಿ ಹೊರಳಾಡುತ್ತಲಿರುವರು (ತಗುಹ. ೭). [ ← ತುಳು. ಪುಣೆ ]

**ಪುಣೆಚು** 'ಪುಳಿಂಚು' ನೋ.

**ಪುಣೆಚೇಟು** 'ಪುಳಿಚೇಟು' ನೋ.

**ಪುಣೆಜ** (ನಾ). ಒಂದು ಬಗೆಯ ಕೀಟ : 'ಪಟ್ಟಪುಣೆಜ' ಪರಾ.
[ ದೇ. ೫ ತೆಲು. ಪುಣುಜು. ಪುಣುದು ]

**ಪುಣೆಜಿ** 'ಪುಳಿಂಚಿ' ನೋ.

**ಪುಣೆಲ್** 'ಪುಟಾಲ್₂' ನೋ.

**ಪುಣೆವುಲ್** (ನಾ). ಒಂದು ಬಗೆಯ ಪಕ್ಷಿ : ಪರ್ದು ಮರವಂ ಮರ ಕುಟಿಗಂ ಪುಟಿಲೆ ಬುಱುಗಿ ಹಸುಬಂ ಪುಣೆವುಲ್ (ಸೂಕ್ತಿಸು. ೩–೧೧೪). [?]

**ಪುಣೆಸೂರ್** (ನಾ). ಒಂದು ಊರಿನ ಹೆಸರು : ಪುಣೆಸೂರ್ಪೊಲನೆಲ್ಲು ಪಾಣ್ಡಿಯಾಮಳೆವದು ಸರ್ವಪರಿಹಾರ (ಮೈಕಂ; ೦೯೩೦. ೩೬–೭; ೩ಶಿಯ ೫೩).
[ ಪುಣಸೆ ( < ಪುಳಿಸೆ ) + ಊರ್ ]

**ಪುಣೆಸೆ** 'ಪುಳಿಸೆ' ನೋ.

**ಪುಣೆಸೆಯಮ್ಮ** (ನಾ). ಒಬ್ಬಾತನ ಹೆಸರು : ಸತ್ತಿಮಂಗಲದ ಸ್ವಾಮಿಯ ಸಮ್ಮನ್ದಂ ಮಾರಯ್ಯನುಂ ಪುಣೆಸೆಯಮ್ಮನುವಿಟ್ಟು ತಮ್ಮಳೋವಾದಿ ಗೊಟ್ಟರ್ (ಎ.ಕ. IX, ಹೊಸಕೋ. ೦೦೦–೭;997).
[ ಪುಣಸೆ (<ಪುಳಿಸೆ) + ಅಮ್ಮ₁ ]

**ಪುಣೆಸೆವಣ್**, ಹುಣಸೆಹಣ್ಣು, ಹುಣಿಸೆವಣ್ಣು, ಹುಣಿಸೆಹಣ್ಣು(ನಾ). ೧. ಹುಣಸೆಮರದ ಹಣ್ಣು ; ತಿಂತ್ರಿಣೀಫಲ ; ೯ ಅಡುಗೆಯಲ್ಲಿ ಇದನ್ನು ವಿಶೇಷವಾಗಿ ಬಳಸುತ್ತಾರೆ : ಪೇಣ್ಪುಣಿಸೆವಣ್ಣೊಸನಾರ್ . . . ಪೀಲಿಯೆಂಬವಂ ತುಂಬಿದ ಕಂಬಿಯುಂ ತಳೆದದೇಂ ತಳರ್ದತ್ತೊ ಪುಳಿಂದಸಂಕುಳಂ (ಅಶಕೀ. ೩–೦೧೪). **ಹುಣಸೆಹಣ್ಣು** : ೧.ಈಗ ಹುಣಸೆಹಣ್ಣು ತುಟ್ಟಿಯಾಗಿದೆ (ರೂಢಿ). **ಹುಣಿಸೆವಣ್ಣು** : ೧. ಒಂದು ಮಾನೆಣ್ಣೆಯೊಳು ಹುಣಿಸೆವಣ್ಣಿನ ಹುಳಿಯನೊಂದಿಸಿಯದನುವೊರೆಯೊಳಿಂಗುಸಹಿತಂ ಕಾಸಿ (ಸೂಶಶಾ. ೩–೦೪). **ಹುಣಿಸೆಹಣ್ಣು**: ೧. ಹೋಳಿಯಲ್ಲಿ ಹುಣಸೆಹಣ್ಣು ತೊಳೆದ ಹಾಗೆ (ಗಾದೆ). ೨. (ಅಲಂ) ಗರ್ವ ; ಸೊಕ್ಕು : ಅವನ ತಲೆಯಲ್ಲಿ ತುಂಬಿದ್ದ ಹುಣಿಸೆಹಣ್ಣು ಸ್ವಲ್ಪವೇ ? (ಸ್ವಕ್ಕಹೂ. ೦೬೪). [ಪುಣಸೆ (<ಪುಳಿಸೆ) + ಪಣ್₂]

**ಪುಣುಂಬು** 'ಪುಳುಂಬು' ನೋ.

**ಪುಣುಗು**, ಪುಣಗು, ಪುನಗು, ಪುನುಗಂ, ಪುಳಗಂ, ಪುಳುಗು (ನಾ). ಒಂದು ಬಗೆಯ ಕಾಡುಬೆಕ್ಕಿನ ಗಂಧಗ್ರಂಥಿಯಿಂದ ಪಡೆಯುವ ಸಂಗಂಧದ್ರವ್ಯ ; ಜವಾದಿ : "ಪುಣುಗು ಮಾರ್ಜಾಲಿಯೆನೆ ಜವಾದಿಯೆನಿಕ್ಕು" (ಶುಂಗಶಾ. ೯೯–೨೨); ಪುರದೊಳಗೆ ಉಳ್ಳ ಪುಣುಗೆಲ್ಲವಂ

ಸುಕೃತಂ—ಈ ೫ ಪುಣ್ಯದ ಪೆಸರ್" (ಹಲಾಯು. ೨೦-೦೨೫) : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ . . . ಎಂಬೀ ಲೋಕಯಾತ್ರೆ ಕಿಡದೆ ಮಹಾತ್ಮಾ (ಶಾಂತಿಪು. ೬-೦೯೦) ; ನೀನೊಲಿಯುತ್ತೇ ಪುಣ್ಯ ನೀನೊಲ್ಲದುದೇ ಪಾಪ ಕಂಡಯ್ಯಾ (ಚೆಬ. ೫೦೭) ; ಒರ್ವನ ಪುಣ್ಯದ ಫಲವಂ ಪಲರನುಭವಿಸುವರ್ (ಚಾಶ್ಯಚ. ೧೫-೯೯). ೮. ಪವಿತ್ರವಾದುದಂ ; ಪಾವನಮಾದುದಂ: "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ—ಈ ೫ ಶುದ್ಧಮಪ್ಪ ವಸ್ತು" (ಹಲಾಯು. ೨೨-೧೬೨) ; ಪುಣ್ಯಮಹುದೆಮ್ಮ ಧರೆ ವಲ್ಲಭನ ಪದಧೂಳಿಯಿಂ (ಶಬ್ರಾಂಗ. ೬೦-೦೬೪೨). ೯. ಒಳ್ಳೆಯ ಕರ್ಮದ ಫಲವಾಗಿ ಬರುವ ಸುಖ ; ಭಾಗ್ಯ : ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ (ಹಹಾ. ೯-೦೦) ; ಅಂದಿನಾನಂದ ದೊಂದೊದವಿಂಗಂದಿವ ಪುಣ್ಯಕಂದಿನೆಸಕಕ್ಕುಂತಾಪಳುಂ ನೋಂತಳೇ (ಶಿತ್ಯಶಿ. ೦೦-೬೧) ; ಒಳ್ಳೆಯ ಕಾರ್ಯ ಮತ್ತು ಅದರ ಫಲವಾದ ಸುಖ— ಇವುಗಳ ಸಂಕೀರ್ಣಸಂಬಂಧಕ್ಕೆ ಪುಣ್ಯವೆಂದೂ . . . ಹೆಸರು (ಶಿಕಲು. ೨೪೬). ೧೦. ಧರ್ಮ : ದಾನ : ಪುಣ್ಯಕ್ಕೆ ಸೀರೆ ಉಡಿಸಿದರೆ ಹನ್ನೆರಡು ಮೊಳ ಅಂದಳು (ಗಾದೆ). ೧೧. ಭಾಗ್ಯವಂತ ; ಅದೃಷ್ಟಶಾಲಿ : ಪಾಡುವರು ಕೆಲರಲ್ಲಿ ಹರಿಯನು ನೋಡುವರು ನಿಜದೃಷ್ಟಿ ದಣಿಯಲು ಆಡುವರು ತಮ್ಮಿಂದ ಪುಣ್ಯರದಾರು ಲೋಕದಲಿ (ಕೌಶಲಾ. ೯೯-೦೩). ೧೨. ಸಜ್ಜನ ; ಪುಣ್ಯಪುರುಷ : ಶರಣೆಯರ ಬಾಯಿಗೆಂಪಂ ಸುಮಾಳ್ಪರ್ ಕವಿಗಳಾಗೆ ಪುಣ್ಯರನುತ್ತಂ ಪರಿಹಾಸ್ಯ ಮಾಳ್ಪ ವಿಕಸಿತಸರಸಪ್ರಸವಂಗಳಿಂದ ಬಂದುಗೆ ಯಸಗುಂ (ಮಲ್ಲಿಕಾ. ೬-೯೯೯). ೧೩. ಶುಚಿ : ನೈರ್ಮಲ್ಯ. ೧೪. ಶುಭ : ಮಂಗಳ. ೧೫. ಚೆಲುವು ; ಸೌಂದರ್ಯ. ೧೬. ಪ್ರಖ್ಯಾತಿ ; ಪ್ರಸಿದ್ಧಿ. ೧೭. ಮನೆ ; ಆವಾಸ. ೧೮. [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಾಜೀವಪುಣ್ಯಪಾಪಾಸ್ರವಸಂವರನಿರ್ಜರಬಂಧ ಮೋಕ್ಷಮೆಂದಿಂತು ನವಪದಾರ್ಥಂಗಳುಂ (ಶಬ್ದಾ.ಚಿ. ೬-೦೯) ; "ಅಕಳಂಕ ಯುದ್ಧದೊಳು ಸೌಮ್ಯದೊಳು ಧರ್ಮದೊಳು ಸುಕೃತದೊಳು ಪುಣ್ಯ ಮಕ್ಕುಂ" (ಮಂಗರಾ. ೦೫೨-೩೩) : "ಧರ್ಮ ಸುಕೃತಂ ಪ್ರಖ್ಯಾತ ನೈರ್ಮಲ್ಯ ಚೆಲ್ವಾವಾಸಂಗಳು ಪುಣ್ಯಮಕ್ಕು" (ಪಾಠಾರ. ೬೯).

**ಪುಣ್ಯ ಕಟ್ಟಿಕೊಳ್ಳು**=ಉಪಕಾರ ಮಾಡಿ ಪುಣ್ಯವನ್ನು ಗಳಿಸಿಕೊಳ್ಳು: ವಿದ್ಯಾಭ್ಯಾಸಕ್ಕೆ . . . ಪ್ರತಿವರ್ಷವೂ ಎರಡುಸಾವಿರರೂಪಾಯಿಗಳನ್ನು ಕೊಡಲು ಕೋರ್ಟಿನವರು ಒಪ್ಪುವಂತೆ ಮಾಡಿ ಆ ಲಾಯರ್ ಪುಣ್ಯ ಕಟ್ಟಿಕೊಂಡರು (ದೂರಚ. ೯೩). [ಸಂ.]

**ಪುಣ್ಯಂಗೆಯ್**, **ಪುಣ್ಯಂಗೈ** (ಕ್ರಿ). ಸತ್ಕಾರ್ಯವನ್ನು ಮಾಡು : ಪುಣ್ಯ ಬರುವ ಕೆಲಸವನ್ನು ಮಾಡು : ಎನಿತು ಪುಣ್ಯಂಗೆಯ್ದುದೋ ಮಜ್ಜನನಸಾಫಲ್ಯತ್ವಮಾಯ್ತು (ಅಜಿತಪು. ೫-೫೦). **ಪುಣ್ಯಂಗೈ** : ಸುಂದರಿಯೆ. ಪೇಳಾವ ಪುಣ್ಯಂಗೈದುದಾ ಬಯಕೆ (ಶಬ್ರಾಂಗ. ೩೬-೯೭೬).
[ಪುಣ್ಯ+ಕೆಯ್₁]

**ಪುಣ್ಯಂಗೈ** 'ಪುಣ್ಯಂಗೆಯ್' ನೋ.

**ಪುಣ್ಯಂಗೊಳ್** (ಕ್ರಿ). ಸುಕೃತವನ್ನು ಹೊಂದು.—ಪಡೆ : ಅಹ, ಧೃಷ್ಟದ್ಯುಮ್ನ. ಗುರುವನಿಂತಲ್ಲಿ ಕೊಚ್ಚಿದು ಪುಣ್ಯಂಗೊಂಡೆ ! (ಅಶ್ವಕಾ. ೩-೫೦). [ಪುಣ್ಯ+ಕೊಳ್₁]

**ಪುಣ್ಯಕರ್ಮ** (ನಾ). ಶ್ರೇಯಸ್ಸನ್ನುಂಟುಮಾಡುವ ಕೆಲಸ : ಸಂಕೃತ : ಮುಂ ಪುಣ್ಯಕರ್ಮಮುನಿಂತಾಗಿರೆ ಮಾಪದೀಗಳಬಲಿಂ ಪೇಟೆಂತಬುತ್ತಿ ಮರ್ಳಿಕ್ಕುಮೆ (ಕಾದಂಪೂ. ೩೯೭) : ಸಚಿಂತೆಯಿಂದೂ ಸವಿಶೇಷಚಿಂತೆಯಿಂದೂ . . . ಭಕ್ತಿಜ್ಞಾನವೈರಾಗ್ಯಚಿಂತೆಯಿಂದೂ — ಇವು ಮನಸ್ಸಿನಿಂದ ಮಾಡಲ್ಪಟ್ಟಂಥ ಪುಣ್ಯಕರ್ಮವೆನಿಸುವುವು (ವೇದಾರ. ೨೦).
[ಸಂ. ಪುಣ್ಯಕರ್ಮನ್]

**ಪುಣ್ಯಕಾರಿ** (ನಾ). ಒಳ್ಳೆಯ ಕಾರ್ಯ ಮಾಡುವವನು : ಆತ್ಮ ಧಾರಣೆಯೊಳವ ಪುಣ್ಯಕಾರಿ (ಕಲಿಪ. ೩೦-೩) ; ಪುಣ್ಯಕೋಟಿಯು ನಲಿದು ಕರುವಿಗೆ ಪುಣ್ಯಕಾರಿ ಎನುತ ಬೇಗದಿ ಚೆನ್ನಗೌಡನ ಕಂಡು ಕಾಮ ಉನ್ನತಾದಿಂದೆಂದಿತು (ಗೋಹಾಡು. ೦೦೪). [ಸಂ. ಪುಣ್ಯಕಾರಿನ್]

**ಪುಣ್ಯಕಾಲ** (ನಾ). ಪವಿತ್ರವಾದ ಸಮಯಂ : ಪುಣ್ಯಕಾರ್ಯಕ್ಕೆ ಪ್ರಶಸ್ತವಾದ ಕಾಲ : 'ದಕ್ಷಿಣಾಯನಪುಣ್ಯಕಾಲ' ಪರಾ. [ಸಂ.]

**ಪುಣ್ಯಕ್ಷಯ** (ನಾ). ಗಳಿಸಿದ ಪುಣ್ಯ ತೀರಿಹೋಗುವಿಕೆ: ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ (ಆದಿಪು. ೨-೦೯ ವ). [ಸಂ.]

**ಪುಣ್ಯಕ್ಷೇತ್ರ** (ನಾ). ಪವಿತ್ರಸ್ಥಳ : ಪಾವನವಾದ ಯಾತ್ರಾಸ್ಥಳ : ಇದು ಪುಣ್ಯಕ್ಷೇತ್ರಮಿದು ಇದರ್ದದೆ ದುರಿತಹರಕ್ಷೇತ್ರಮಿದು ಮೆಯ್ಯೊಳ್ ತೋರ್ಪುದೆ ಸಿದ್ಧಕ್ಷೇತ್ರಂ (ಸುಕುಮಾ. ೯-೪೬). [ಸಂ.]

**ಪುಣ್ಯಚರಿತೆ** (ನಾ). ೧. ಪಾವನಗೊಳಿಸುವ ಕಥೆ: ಪುಣ್ಯಕಥೆ : ಮೇದಿನಿ ಯೋಳೀ ಪುಣ್ಯಚರಿತೆಯನಾದರಿಸಿ ಬರೆದೋದಿ ಕೇಳುವ ಸಾಧುಸಜ್ಜನ ರಾದವರಿಗಹುದಖಿಳಸೈಪಲ್ಯ (ಕಳ. ೯-೬೨). ೨. ಉತ್ತಮವಾದ ನಡವಳಿಕೆಯುಳ್ಳವಳು; ಶುದ್ಧವಾದ ಜೀವನವನ್ನು ನಡೆಸುವವಳು: ಆ ಪುಣ್ಯಚರಿತೆಯು ಭುವನಮಾತೆಯುನುಪಚರಿಸಿಕೊಂಡಿರ್ದನೊಲವಿನಲಿ (ಸೂಚರಿ. ೦-೩-೬). [ಪುಣ್ಯ + ಚರಿತೆ]

**ಪುಣ್ಯಜನ** (ನಾ). ೧. ಒಳ್ಳೆಯ ಮನುಷ್ಯ ; ಸಜ್ಜನ. ೨. ಕುಬೇರನ ಸೇವಕ ; ಯಕ್ಷ : 'ಪುಣ್ಯಜನೇಶ್ವರ' ಪರಾ. ೩. ನೈಋತಿ : "ರಾಕ್ಷಸಃ, ಕೋಣಪಃ . . . ಪುಣ್ಯಜನಃ, ನೈರೃತಃ, ಯಾತು, ರಕ್ಷಃ—೧೫ ನೈಋತಿ ಹೆಸರುಗಳು" (ಸಿದ್ಧಾಂತಿ. ೬೯). ೪. ರಾಕ್ಷಸ : "ರಕ್ಕಸರಲ್ಲಿಯುಂ ಪುಣ್ಯಜನಮೆಂಬುದು" (ಹಲಾಯು. ೦೩೦-೯). [ಸಂ.]

**ಪುಣ್ಯಜನೇಶ್ವರ** (ನಾ). ಯಕ್ಷರಾಜನಾದ ಕುಬೇರ : "ಐಳಬಿಲಃ . . . ಪುಣ್ಯಜನೇಶ್ವರಃ—ಈ ೧೭ ಕುಬೇರನ ಪೆಸರ್" (ಹಲಾಯು. ೦೯-೭೯): ಶಿವಾನುಬಂಧಸಯುಕ್ತನಾಗಿಯುಂ ದಶಾನನಾಸ್ತಂಗತಪ್ರಾಭವನಲ್ಲದ ಪುಣ್ಯ ಜನೇಶ್ವರನುಮೆನಿಸಿ ದೇವತಾಸ್ವರೂಪನಾದಂ (ಶಿತ್ಯಶಿ. ೩-೨೦ ವ). [ಸಂ.]

**ಪುಣ್ಯಜಲ** (ನಾ). ಪವಿತ್ರವಾದ ನೀರು ; ತೀರ್ಥ : ಉದ್ದಾಮಮುನಿ ಜನರಚಿತ ಮಂತ್ರಸ್ತೋಮಪುಷ್ಕಲಪೂತಪುಣ್ಯಜಲಾಭಿಷೇಚನದ ಶ್ರೀಮುಡಿಗೆ ಕೈಯಿಕ್ಕಿದನು (ಕುಮಾ.ಸ. ೦೯-೬೬). [ಸಂ.]

**ಪುಣ್ಯತಿಥಿ** (ನಾ). ಶ್ರಾದ್ಧದ ದಿನ : ಹಿರಿಯರ ಪುಣ್ಯತಿಥಿಯಂದು ಮಕ್ಕಳಿಗೆ ಸಿಹಿಯನ್ನು ಹಂಚಿದರು (ರೂಢಿ). [ಸಂ.]

**ಪುಣ್ಯದಿನ** (ನಾ). ೧. ಶುಭದಿವಸ : ಮಂಗಳಕರವಾದ ದಿವಸ : ಅಕ್ಷಯ ತೃತೀಯೆಯೆಂದಖಿಳಕ್ಷಿತಿಗಂ ಸೆಗಟ್ಟುದಲ್ತೆ ತತ್ಪುಣ್ಯದಿನಂ (ಆದಿಪು. ೦೦-೩); ಸ್ಪಶ್ಯದಮಾಸೆ ಸೂರ್ಯಗ್ರಹಣ ಸಂಕ್ರಾಂತಿ ವ್ಯತೀಪಾತಗಳೆಂಬ ಸಕಳ ಪುಣ್ಯದಿನಂ ದೊರೆಕೊಣ್ಡಂದು (ಎಕ. XII. ಗುಬ್ಬಿ. ೦೦-೯೩ ; 1326). ೨. ಆಚಾರ್ಯಪುರುಷನು ಅವಸಾನ ಹೊಂದಿದ ದಿನದ ನೆನಪಿಗಾಗಿ ಮತ್ತೀಯ ಆಚರಣೆಯನ್ನು ಮಾಡುವ ದಿನ : ಇಂದು ಟೀಕಾಚಾರ್ಯರ ಪುಣ್ಯದಿನ (ರೂಢಿ). [ಸಂ.]

**ಪುಣ್ಯದೇವತೆ** (ನಾ). ಪುಣ್ಯದ ಅಧಿದೇವತೆ : ಇರ ಹರಿಯ ಪುಣ್ಯದೇವತೆ ಯರಲೆಡೆಯುಂ ಪೇಟ್ದು ತಾನೆ ಮಾಡುಗುಮೆನೆ ತನ್ನಿರವದ್ಯನ ಸೂಕ್ತಿಯ ನಾದರದಿಂದಾಂತರ್ ಮಹತ್ತರರ್ ಭೂಕಾಂತರ್ (ಶಾಂತಿಪು. ೭-೨೯).
[ಸಂ. ಪುಣ್ಯದೇವತಾ]

**ಪುಣ್ಯನದಿ** (ನಾ). ಪವಿತ್ರವಾದ ಹೊಳೆ : ಪಾವನವಾದ ನದಿ : ಪುಣ್ಯನದೀನದನಗ[ರಾ]ವಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾ ಪುಣ್ಯಸ್ತ್ರೀಯುಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಶಂಶಬ. ೩-೩೩). [ಸಂ. ಪುಣ್ಯನದೀ]

**ಪುಣ್ಯಪದಾರ್ಥ** (ನಾ). [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಪದಾರ್ಥಮಜೀವಪದಾರ್ಥಂ . . . ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥಮುಮಂ . . . ಕೈಕೊಂಡು (ಸುಕುಮಾ. ೩-೩೯ ವ). [ಸಂ.]

**ಪುಣ್ಯಪಾಠಕ** (ನಾ). ಶುಭವನ್ನು ಕೋರುವವನು : ಮಂಗಳಪಾಠಕ ; ಸ್ತೋತ್ರಪಾಠಕ ; ವಂದಿ : ಕುಬ್ಜವಾಮನಬಧಿರಮೂಕಕಿರಾತೋನ್ಮತ್ತ ಜಡಜನಂಗಳುಮಂ ಗಾಯಕವಾದಕನರ್ತಕಕಥಕಪುಣ್ಯಪಾಠಕವೈತಾಳಿಕ ನಿಕರಮುಮಂ ಕೊಟ್ಟು (ಆದಿಪು. ೯-೩೪ವ) ; ಭಜಿಯಿಸುವ ಪುಣ್ಯಪಾಠಕರ ವರಕೆಗಳೆಳಗೆ . . . ಬರುತಿರ್ದನಪ್ರತಿಮಸುಕುಮಾರಶೇಖರಂ (ಶಂಕರ. ೩-೬೦). [ಸಂ.]

**ಪುಣ್ಯಪ್ರವರ** (ನಾ). ೧. ಮಹಾಪುಣ್ಯಶಾಲಿ : ಶಿವನ ಕರುಣಾಲಾಭ ಪುಣ್ಯಪ್ರವರಪಾರ್ಥನ ಮುನ್ನಿನಂದದಲವನಿಗೀಳುಹಿದ ನಿಖಿಳದಿವ್ಯಾಯುಧದ ವೇದಿಕೆಗೆ (ಕುಮ್ಮಾರ್ಸ್ವೊ. ೯-೬). ೨. ಅತ್ಯಂತ ಪವಿತ್ರನಾದವನು : ಪಾಂಡುಪರಿಗಾವುದು ಕೊಟಿತೆ ಪುಣ್ಯಪ್ರವರ ಗದುಗಿನ ವೀರನಾರಾಯಣನ ಕರುಣದಲಿ (ಕುಮ್ಮಾಗ. ೪-೬೦). [ಸಂ.]

**ಪುಣ್ಯಫಲ** (ನಾ). ಒಳ್ಳೆಯ ಕಾರ್ಯಾಚರಣೆಯಿಂದ ಬರುವ ಫಲ : ಶರನಿಧಿಯ ವಡಬಾನಳನ ದಳ್ಳುರಿಯ ಪರ್ವುವ ತಿವಿವ ತುಂಬಿಗೆ ಮರಳುದಲೆಯುಂಟಾದಡದು ಭವಭವದ ಪುಣ್ಯಫಲ (ಕುಮ್ಮಾರ್ಸ್ವೊ. ೯-೬೭), ಅನ್ನಪಾನವ ನೀಡಿ ವಿಪ್ರರಿಗೊಲಿದಯಾಚಿಷ್ಮಾಪೂರ್ವಗಳ ಮುಗಿಸಿ ಷೋಡಿಯಲ್ಲದ ಪುಣ್ಯಫಲ ಕೈಗೂಡೆ (ಅಮೃತ. ೨-೦೦೦). [ಸಂ.]

**ಪುಣ್ಯಭೂಮಿ** (ನಾ). ಪವಿತ್ರವಾದ ಭೂಮಿ ; ಆರ್ಯಾವರ್ತ : "ಆರ್ಯಾವರ್ತಃ = ಪುಣ್ಯಭೂಮಿ" (ಶಾಕಕೃ. ೦೭೭) ; "ಆರ್ಯಾವರ್ತಃ, ಪುಣ್ಯಭೂಮಿಃ_೨ . . . ವಿಂಧ್ಯಪರ್ವತಕ್ಕೂ ಹಿಮಗಿರಿಗೂ ಮೂಡಲು ಪಡುವಲು ಕಡಲುಗಳಿಗೂ ನಡುವೆಯಿರುವ ಭೂಮಿ" (ಬಿದ್ಯಾಂತಿ. ೯೯). [ಸಂ.]

**ಪುಣ್ಯಮೆ** 'ಪುಣ್ಣಮೆ' ನೋ.

**ಪುಣ್ಯಯಜ್ಞ** (ನಾ). [ಜೈನ] ದೀಕ್ಷೆಗೊಂಡವನು ಮಾಡುವ ಚತುರ್ದಶ ಪೂರ್ವಗಳ ಪಠಣ ಹಾಗೂ ಶ್ರವಣ : ದೀಕ್ಷಾನ್ವಯಕ್ರಿಯೆಗಳಲ್ಲಿ ಆರನೆಯದು : ಅವತಾರವೃತ್ತಿಲಾಭ ಸ್ಥಾನಲಾಭಗಣಗ್ರಹಣಪೂಜಾರಾಧ್ಯ ಪುಣ್ಯಯಜ್ಞದೃಢಚರ್ಯೋಪಯೋಗಿತ್ವಮೆಂಬೆಂಟುಂ ಬೆರಸು . . . ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ (ಆದಿಪು. ೦೫-೧೬ ವ) ; ಪೂರ್ವೋಪವಾಸಪೂರ್ವಕಂ ಬ್ರಹ್ಮಚಾರಿಯಾಗಿ ಪೂರ್ವಂಗಳಂ ಕೇಳ್ವುದು ಪುಣ್ಯಯಜ್ಞ ಕ್ರಿಯೆ (ಚಾವುಂಪು. ೨೨೩). [ಸಂ.]

**ಪುಣ್ಯಲೋಕ** (ನಾ). ಪುಣ್ಯವಂತನು ಸೇರುವ ಲೋಕ : ದೇವಲೋಕ : ಸ್ವರ್ಗ : ಭಕ್ತಿಬಲವೇ ಪುಣ್ಯಲೋಕವ್ಯಕ್ತಿಯಂ ತೋರುವದು (ಗಗಶಾ. ೧೦-೧೬). [ಸಂ.]

**ಪುಣ್ಯವಂತ** (ನಾ). ಪುಣ್ಯಸಂಪಾದನೆ ಮಾಡಿದವನು : ಪುಣ್ಯಶಾಲಿ : ಭರತಂ ಶ್ರೇಯಾಂಸನಂ ನೀನೆ ಪುಣ್ಯವಂತನೆಯೆಂದು ಪೊಗಟ್ಟು ಪೂಜಿಸಿ ಪೋದಂ (ಚಾವುಂಪು. ೯೦) ; ನಯವಿದರೆಲ್ಲವಲ್ಲಿಯೆ ಕಲಾನ್ವಿತರಲ್ಲಿಯೆ ಪುಣ್ಯವಂತರಲ್ಲಿಯೆ . . . ಎಂಬಿನೆಗಮಾ ಮಹಿ ಪೋಲ್ವುದು ಭೋಗಭೂಮಿಯಂ (ಪುಷ್ಪಪು. ೯-೦೬). ೨. ಅದೃಷ್ಟಶಾಲಿ ; ಭಾಗ್ಯವಂತ : ಸಂದೈಪಿ : ಅವರು ಗತಿ ಇಲ್ಲದ ಜನ, ತಾವು ಪುಣ್ಯವಂತರು (ಸಬ್ಬ. ೧, ೯೩) ; ಈಗಿನ ಕಾಲದಲ್ಲಿ ಹೆಣ್ಣು ಹೆತ್ತೋರೇ ಪುಣ್ಯವಂತರು (ಕಂಕಕೂ. ೮). [ಸಂ. ಪುಣ್ಯವತ್]

**ಪುಣ್ಯವಂತೆ** (ನಾ). ೧. ಸಜ್ಜನೆ ; ಒಳ್ಳೆಯ ನಡತೆಯುಳ್ಳವಳು. ೨. ಅದೃಷ್ಟವಂತೆ : ಭಾಗ್ಯವಂತೆ : ಒಂದು ವಿಷಯದಲ್ಲಿ ನಸಂತಲೂ ನೀನು ಪುಣ್ಯವಂತೆ (ಅಯ್ಯ. ೪೦). [ಪುಣ್ಯವಂತ + –ಎ]

**ಪುಣ್ಯವತಿ** (ನಾ). = ಪುಣ್ಯವಂತೆ ೧ : ಆ ಪುಣ್ಯವತಿಯರ್ಗರ್ವರುಮಾ ಪರಮೇಶ್ವರನ ಮನಮನಿರ್ಕುಟಿಗೊಳೆ ಮತ್ತಾ ಪೀನವೃಷಸ್ಕಂಧನುಮಾ ಪದ್ಮಾಸ್ಯೆಯರ ಮನಮನಿರ್ಕುಟಿಗೊಂಡಂ (ಆದಿಪು. ೯-೨೩) ; ಪುಣ್ಯವತಿ ನೃಪೇಂದ್ರಕಾಂತೆ ನವಕಲ್ಪಲತಾಕೃತಿಯಿಂದಮೊಪ್ಪಿದಳ್ (ಶಾಂತಿಪು. ೯-೨೦೦). [ಸಂ. ಪುಣ್ಯವತೀ]

**ಪುಣ್ಯವಾಸರ** (ನಾ). = ಪುಣ್ಯದಿನ ೧ : ತತ್ಪೂಜಕರಣಪುಣ್ಯವಾಸರಂಗಳೊಳುಪವಾಸನಿರತಂ . . . ಅಭಿಷೇಕಂಗೆಯ್ದು (ಆದಿಪು. ೧೬-೦ ವ) ; ಒಂದು ಪುಣ್ಯವಾಸರಪ್ರಥಮಪ್ರಹರದೊಳ್ . . . ತಾನಿರ್ದನಾಸ್ಥಾನಿಯೊಳವಳ ಸರಃಕಲ್ಪದೊಳ್ ರಾಜಹಂಸಂ (ಶಂಪ್ರತಿ. ೨-೭೨). [ಸಂ.]

**ಪುಣ್ಯಶ್ಲೋಕ** (ನಾ). ೧. ಯಾರ ಸ್ತುತಿಯಿಂದ ಪುಣ್ಯ ಬರುವುದೋ ಅಂತಹವನು ; ಸತ್ಕೃತಿಗಳಿಂದ ಪ್ರಸಿದ್ಧನಾದವನು : ಪರಮಪುಣ್ಯಶ್ಲೋಕ ಜಯ ಜಗಭರಿತ ನಿರ್ಮಳರೂಪ ಜಯ ಜಯ ಕರುಣೆ ರಕ್ಷಿಸು (ಕುಮ್ಮಾಅ. ೨೪-೩೩). ೨. ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ ಮತ್ತು ಕಾರ್ತವೀರ್ಯ ಎಂಬ ಆರು ಜನ ಚಕ್ರವರ್ತಿಗಳಲ್ಲಿ ಪ್ರತಿಯೊಬ್ಬನಿಗೂ ಇರುವ ಹೆಸರು : "ವಿವರಿಸೆ ಹರಿಶ್ಚಂದ್ರ ನಳ . . . ಕಾರ್ತವೀರ್ಯರೆನಿಪ್ಪರಜುವರತ್ಕವಿರಳದ ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಂ" (ಮಂಗರಾ. ೬೯-೨) ; ಸೋಕಿತೇ ಇದುನಿಂದೆ ಪುಣ್ಯಶ್ಲೋಕನಿ[ಶಾಣಂ ೧]ಗೆ (ಕೂರರಾ. ೩-೨-೦೬). ☞ 'ಪುಣ್ಯಶ್ಲೋಕ' ಎಂದು ಧರ್ಮರಾಜನಿಗೂ ಜನಾರ್ದನನಿಗೂ ಹೇಳುತ್ತಾರೆ. [ಸಂ.]

**ಪುಣ್ಯಶ್ಲೋಕೆ** (ನಾ). ಪವಿತ್ರವಾದ ನಡವಳಿಕೆಯಿಂದ ಖ್ಯಾತಳಾದವಳು ; ಸದಾಚಾರಸಂಪನ್ನೆ : ಬಲ್ಲಂ ಬಲ್ಲೆನವಳಯೋನಿಜೆಯೆಂಬುದಂ ಪಾವನೆಯೆಂಬುದಂ ಪುಣ್ಯಶ್ಲೋಕೆಯೆಂಬುದಂ (ರಾಮಾಕ್ಕ. ೨೫-೨೬). ☞ ಇದು ಸೀತೆ ಹಾಗೂ ದ್ರೌಪದಿ – ಈ ಇಬ್ಬರಿಗೂ ಅನ್ವಯಿಸುತ್ತದೆ. [ಸಂ. ಪುಣ್ಯಶ್ಲೋಕಾ]

**ಪುಣ್ಯಸ್ತ್ರೀ** (ನಾ). ಮಡದಿ ; ಹೆಂಡತಿ : ಖತಿಯ ಹಿಡಿದವ ಬಳಿಕಲಾ ರಸೂಪತಿಯ ಪುಣ್ಯಸ್ತ್ರೀಯ ಕೊಲುವಾಯತದಲ್ಲಿದಿದನವನು ಬನವನು ಜನಕನಂದನೆಯ (ತೊರರಾ. ೭-೯೩-೨೯) ; ದೋಳಿಗೆಪಾರಯ್ಯಗಳ ಪುಣ್ಯಸ್ತ್ರೀ ಪಚನ (ಶರಚ. ೦೬೪). [ಸಂ.]

**ಪುಣ್ಯಾಂಗನೆ** (ನಾ). ಸಚ್ಚರಿತೆ ; ಸಜ್ಜನೆ : ಮುಪ್ಪುರ ಪಡಿಬರಿಸಿ ಪೊರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಚ್ಚರಿತದ ಸಲಿಗೆಯಿಂದೈಸೆ (ಹರಿ. ೨-೪೮). [ಸಂ. ಪುಣ್ಯಾಂಗನಾ]

**ಪುಣ್ಯಾತಗಿತ್ತಿ**, **ಪುಣ್ಯಾತ್ಗಿತ್ತಿ** (ನಾ). = ಪುಣ್ಯಾಂಗನೆ : ನಮ್ಮ ಗೆಣೆಕಾತಿ ಹೊನ್ನೂರ ಬಣಜಿಗಿ ಪುಣ್ಯಾತಗಿತ್ತಿ ಪುರುಷರ ತೊಡೆ ಮ್ಯಾಲೆ ನವ ಹಂಬಲವ ಮರತಳೆ (ಶಾತರ. ೬೯) ; ಪುಣ್ಯಾತಗಿತ್ತಿ ಎರಡು ಹಜ್ಜೆ ಒಂದು ಕಡೆ ಇಟ್ಟು ನಿಂತಿದ್ದರೆ ತಾನೇ ಕೇಳುವುದು (ಬೂಕಕ. ೩೩೬). ಪುಣ್ಯಾತ್ಗಿತ್ತಿ : ನನಗೆ ಬಂದ ತೊಂದರೆಯೆಲ್ಲಾ ಆ ಪುಣ್ಯಾತ್ಗಿತ್ತಿಯಿಂದ ಪರಿಹಾರವಾಯಿತು (ರೂಢಿ). [<ಪುಣ್ಯಾತ್ಮ + –ಗಿತ್ತಿ]

**ಪುಣ್ಯಾತ್ಗಿತ್ತಿ** 'ಪುಣ್ಯಾತಗಿತ್ತಿ' ನೋ.

**ಪುಣ್ಯಾತ್ಮ** (ನಾ). = ಪುಣ್ಯವಂತ : ಆ ಪುಣ್ಯಾತ್ಮನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ). [ಸಂ. ಪುಣ್ಯಾತ್ಮನ್]

**ಪುಣ್ಯಾರ್ಥ** (ನಾ). ಪುಣ್ಯವನ್ನು ಗಳಿಸಬೇಕೆಂಬ ಗುರಿ, – ಉದ್ದೇಶ : ಎಳಸಿ ಪುಣ್ಯಾರ್ಥದಿಂ ವಂದನೆ ನಿಮಿತ್ತ ಗುರುನಿಳಯಕ್ಕೆ ಶಿಷ್ಯನೆಯ್ದುಪ್ಪುದಕೆ ಸಾಹಸದ ಬಲವೇಕೆ ತಂದೆ (ಶಕಶಾ. ೬-೬). [ಸಂ.]

**ಪುಣ್ಯಾಸ್ರವ** (ನಾ). ೧. ನಾಗರಾಜಕವಿಯು ರಚಿಸಿದ ಒಂದು ಕನ್ನಡ ಕಾವ್ಯದ ಹೆಸರು : ವಿನಯನಿಧಿ ನಾಗರಾಜಂಗನುಪಮಗುಣನಿಧಿಯನಂತ

ವೀರ್ಯಬ್ರತಿಪಂ ಮನಮೊಲಿದು ಪೇೞ್ದ ತೆಱದಿಂ ಜನಹಿತಮಂ ಪೇೞ್ದಿ ನೊಲಿದು ಪುಣ್ಯಾಸ್ರವಮಂ (ಧರ್ಮಾಸ್ರ. ೦-೩೪). ೨. [ಜೈನ] ಪುಣ್ಯವು ಜೀವನಲ್ಲಿ ಕೂಡಿಕೊಳ್ಳುವಿಕೆ : ಪುಣ್ಯಸಂಪಾದನೆ: ಆಸ್ರವಮೆರಡು ತೆಱಂ ಪುಣ್ಯಾಸ್ರವವೊಂದದಱ ವೈಪರೀತ್ಯಭವಂ ಪಾಪಾಸ್ರವಂ (ಶಾಂತಿಪು. ೦೨-೪); ಜಿನಸ್ತವಂಗಳೊಳಗೊಂಡಂ . . . ಒಱಲ್ದು ಚಿಂತಿಸಿದವಂಗಂ ಸಾರ್ವ ಪುಣ್ಯಾಸ್ರವಂ ಪವಣಿಲ್ಲ (ಸುಕುಮಾ. ೦-೫೯). [ಸಂ.]

**ಪುಣ್ಯಾಹ** (ನಾ). ೧.=ಪುಣ್ಯದಿನ : ಮಾಘಶುದ್ಧದಶಮಿಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು ರೋಹಿಣಿಯೊಳ್ . . . ಆದುದಂದಜಿತ ತೀರ್ಥೇಶಾಬ್ಜವಿತ್ರೋದಯಂ (ಅಜಿತ. ೩-೨೨). ೨.=ಪುಣ್ಯಾಹವಾಚನ : ಗಣಕಗಣ ಪುನಃಪುನರುಚ್ಚರಿತ ಪುಣ್ಯಾಹಪ್ರಶಸ್ತರವದೊಡನೆ . . . ಪುಣ್ಯಾಂಗನಾಜನದಾಶೀರ್ವಾದನಾದವೊದವೆಯುಂ (ಶಂಕರಾಪು. ೫-೦೨೯); ಚೈತ್ರಸಿತಪಂಚಮಿಯಲುತ್ತರಪೂರ್ವವೇದಿಯು ವಿಮಲಪುಣ್ಯಾಹದ ಮಹಾವಾಚನೆಯ ವಿಸ್ತರಿಸಿ (ಕೂರಾ. ೦-೬-೪೦). [ಸಂ.]

**ಪುಣ್ಯಾಹವಾಚನ** (ನಾ). ಮದುವೆ ಮೊದಲಾದ ಮಂಗಳಕಾರ್ಯಗಳ ಆರಂಭದಲ್ಲಿ ಮಾಡುವ ಒಂದು ಶುಭಕರವಾದ ಧಾರ್ಮಿಕವಿಧಿ: ಸ್ವಸ್ತಿವಾಚನ : ಪುಣ್ಯಾಹವಾಚನಕ್ಕೆ ಕುಳಿತ ಮನೆಯ ಯಜಮಾನನಂತೆ ಅವನು 'ಮಾವ' ಎನ್ನುವುದನ್ನು ಅಷ್ಟೇ ರೂಢಿಸಿಕೊಂಡಿದ್ದ (ಎಚಚ. I, ೬೫).

[ಸಂ.]

**ಪುಣ್ಸೆ** 'ಪುಳಿಸೆ' ನೋ.

**ಪುತಪುತನೆ** (ಅ). ಒಂದು ಅನುಕರಣಾವ್ಯಯ : ಭೀಮಸೇನನು . . . ಮರವನ್ನು ಒದ್ದು ಅಲ್ಲಾಡಿಸುವನು ; ಹಣ್ಣುಗಳು ಪುತಪುತನೆ ಉದುರುವುವು (ಕಕಥಾ. ೦೬). [ಪುತಪುತ$_0$ + —ಅನ್$_1$]

**ಪುತಲಿ** 'ಪುತ್ಥಳಿ' ನೋ.

**ಪುತಳಿ** 'ಪುತ್ಥಳಿ' ನೋ.

**ಪುತುಗು** (ಕ್ರಿ). ಚಡಪಡಿಸು ; ಕಳವಳಿಸು : ಮನದಲಿದ್ದಾಶೆಯಲಿ ಬಾಡಿದ ವದನಕಮಲದಲಿ ಮನದೊಳಗೆ ಪುತುಗುತ್ತ ನಿಲ್ಲದೆ ಮನಕತದಿ ಬಾಗಿಲಿಗೆ ಬರುತಾ ವನಿತೆ ಬಳಲಿದಳು (ಶಿಭಾಗ. ೦೦-೦೫-೨). [ ? ]

**ಪುತ್ತ** 'ಪುತ್ತು$_1$' ನೋ.

**ಪುತ್ತರಿ**, ಹುತ್ತರಿ (ನಾ). ೧. ಹೊಸ ಅಕ್ಕಿ : ಹುತ್ತರಿ ಅಥವಾ ಪುತ್ತರಿ ಎಂದರೆ ಹೊಸ ಅಕ್ಕಿ ಎಂದು ಅರ್ಥ (ಕಪಹು. ೪-೬೩). ೨. ಕೊಡಗರು ಹೊಸ ಅಕ್ಕಿಯನ್ನು ಮನೆಗೆ ತರುವಾಗ ಆಚರಿಸುವ ಹಬ್ಬ : ಸುಗ್ಗಿ: ಪುತ್ತರಿಯ ದಿನ ಮುಂಜಾನೆಯೇ ಗ್ರಾಮದೇವಾಲಯದ ಅರ್ಚಕ ಮನೆಯೊಳಗೆ ತೀರ್ಥಜಲವನ್ನು ಪ್ರೋಕ್ಷಿಸಿ ಶುದ್ಧಿಗೊಳಿಸಿ ಹೋಗಿದ್ದ (ಹುಂಹಾ. ೦೬೩). **ಹುತ್ತರಿ** : ೧. ಹುತ್ತರಿ . . . ಎಂದರೆ ಹೊಸ ಅಕ್ಕಿ (ಕಕಹು. ೪-೬೩). ೨. ಹುತ್ತರಿ ಹತ್ತಿರ ಬಂದಂತೆ ಮನೆಯಲ್ಲಿ ತಿಂಗಳುಗಟ್ಟಲೆ ಅಕ್ಕಿಯ ದರ್ಶನವಾಗುತ್ತಿರಲಿಲ್ಲ (ಮಸಕೊ. ೦೬) : ಹುತ್ತರಿಹಬ್ಬವು ಕೊಡಗರ ಸುಗ್ಗಿಯ ಹಬ್ಬ (ಕಕಹು. ೪-೬೩).

[ದೇ.॥ ಮಲ. ಪುತ್ತರಿ ; ಕೊಡ. ಪುತ್ತರಿ, ಪುತ್ತೇರಿ]

**ಪುತ್ತಲಿ**, ಪುತ್ತಳಿ (ನಾ). ೧. ಬೊಂಬೆ : ವಿಗ್ರಹ : ಮೂರ್ತಿ : ನವಕುಮಾರನು ಯಂತ್ರದ ಪುತ್ತಲಿಯಂತೆ ಅವಳ ಸಂಗಡ ನಡೆದನು (ಕಹಾಳು. ೨೦). **ಪುತ್ತಳಿ** : ೧. "ಪುತ್ತಳಿಯೆನೆ ಪುತ್ರಿಕೆ" (ಕಬಕೊ. ೦೯೩) ; ಹೊಗೆ ಹತ್ತಿದ ಪುತ್ತಳಿಯಂತೆ ಬಂದನುದ್ಯಾನವನವೊಪ್ಪದಿಂ ಕಳೆದು ರಾಜಕುಮಾರನಪಾರಚಿಂತೆಯಿಂ (ಶಂಚರಿ. ೬ ಸೂಕಚ); ಪುತ್ತಳಿಯನೊಯ್ವಂತೆ ಯಾನದಿಯೆತ್ತಿ ತಂದರು ಖಳರು ಮೂದಲಿಸುತ್ತ ತೋಱಿದರಿರುಳು ರಣರೌರವವನವನಿಜೆಗೆ (ಕೌಶಾ. ೨೬-೦) : ಹುಡುಗಿ ಬೆಳೆದಳು ; ಯೌವನ ಬಂದು ಬಂಗಾರದ ಪುತ್ತಳಿಯಂತೆ ಶೋಭಿಸುವ ಹಾಗಾದಳು (ಕಕಥಾ. ೦೩೩). ೨. ಬಂಗಾರ : ಚಿನ್ನ : ಪರುಷದ ಪುತ್ತಳಿಯು ಕಾವಿನಂತೆ . . . ಅಸಲನ ನುಂಗಿದ ಶಿಲೆಯಂತೆ ಅರುಣನ ಕಿರಣವ ಕೊಂಡ ದ್ರವ್ಯದಂತೆ ಇನ್ನೇನುಪಮಿಸುವೆ (ಮೋಳಮ. ೬-೨೨).

[ಸಂ. ಪುತ್ತಲೀ./ ತುಳು. ಪುತ್ರೊಳಿ ; ತೆಲು. ಪುತ್ತಳಿ, ಪುತ್ತಡಿ]

**ಪುತ್ತಲಿಕೆ** (ನಾ). ಬೊಂಬೆ : ಪುತ್ಥಳಿ. [ಸಂ. ಪುತ್ತಲಿಕಾ]

**ಪುತ್ತಲಿಗೊಂಬೆ**, ಪುತ್ತಳಿಗೊಂಬೆ (ನಾ). ಲೋಹ, ಮರ ಮೊದಲಾದುವುಗಳಿಂದ ಮಾಡಿದ ಗೊಂಬೆ : ನಮ್ಮೂರಿಗೆ ಹಣ್ಣು ವೇಷದವರು, ಪುತ್ತಲೀಗೊಂಬೆ ಆಟದವರು, ಚಕ್ಕಳಗೊಂಬೇ ಆಟದವರು ಮುಂತಾದವರು ಬರುತ್ತಿದ್ದರು (ಹುಟ್ಟಿಹ. ೯೧). **ಪುತ್ತಳಿಗೊಂಬೆ** : (+). 'ಪುತ್ಥಳಿಬೊಂಬೆ' ಪರಾ. [ಪುತ್ತಲಿ+ಗೊಂಬೆ$_1$]

**ಪುತ್ತವುಗು** 'ಪುತ್ತುವೊಗು' ನೋ.

**ಪುತ್ತಳಿ** 'ಪುತ್ತಲಿ' ನೋ.

**ಪುತ್ತಳಿಗೆ** 'ಪುತ್ಥಳಿಕೆ' ನೋ.

**ಪುತ್ತಳಿಗೆಲಸ** (ನಾ). ಬೊಂಬೆಯಾಕಾರದ ಸುಳಿವುಗಳನ್ನು ಕಂಡರಿಸುವಿಕೆ: ಪುತ್ತಳಿಗೆಲಸದ ಬಾಗಿಲು ಕಾಂಚನಭಿತ್ತಿ ಮಾಣಿಕದ ಕಂಬಗಳು (ಛರಕ. ೪೬-೫೯).

[ಪುತ್ತಳಿ (=ಪುತ್ತಲಿ) + ಕೆಲಸ]

**ಪುತ್ತಳಿಗೊಂಬೆ** 'ಪುತ್ತಲಿಗೊಂಬೆ' ನೋ.

**ಪುತ್ತಳಿಬಣ್ಣ** (ನಾ). ಚಿನ್ನದ ವರ್ಣ : ಹೊಂಬಣ್ಣ : ಪುತ್ತಳಿಬಣ್ಣದ ಚಿತ್ರಶಾಲಿಯನುಟ್ಟು ಹಸ್ತಕಂಕಣ ಸಲಿವುತ ಮದುವಳಿಗೆ ಮುತ್ತಿನಾರುತಿ ಬೆಳಗಿರ (ಜೋಳಗೀ. ೦೩). [ಪುತ್ತಳಿ (=ಪುತ್ತಲಿ) + ಬಣ್ಣ]

**ಪುತ್ತಳಿಬೊಂಬೆ** (ನಾ). ಚಿನ್ನದ ವಿಗ್ರಹ : ಕೌಶಿಕಾದೇವೀ ಪುತ್ತಳಿಬೊಂಬೆ ಯಂದದಿ ತೊಳಗಿದಳು ತಾನತ್ಯಂತಲಾವಣ್ಯದಿಂದ (ದೇವೀಕ್ಷ. ೪೬).

[ಪುತ್ತಳಿ (=ಪುತ್ತಲಿ) + ಬೊಂಬೆ]

Δ **ಪುತ್ತುಟಿ** 'ಪುತ್ಥಳಿ' ನೋ.

Δ **ಪುತ್ತುಟಿಗೆ** 'ಪುತ್ಥಳಿಕೆ' ನೋ.

**ಪುತ್ತಾರು** (ನಾ). ಗೌರವಸೂಚಕವಾದ ಒಂದು ವಸ್ತು: ಸಾಧಾರಣ ಬಿರುದುಗಳು . . . ಪಂಚದೀವಟಿಗೆ, ಪೆಂಡ್ಯ, ಪಾದುಕೆ, ಪುತ್ತಾರು, ಅಂಬಾರಾಕುಳ, ಹಡವೆ (ಗುರುದ. ೦೦). [ ? ]

**ಪುತ್ತಿಕೆ** (ನಾ). ೧. ಒಂದು ಬಗೆಯ ದುಂಬಿ : "ಪತಂಗಿಕಾ, ಪುತ್ತಿಕಾ-೨ ಹೊನ್ನಪತಂಗದ ಹುಳುವಿಗೂ, ಈಚಲುಹುಳಕ್ಕೂ, ದೊಡ್ಡ ಜೇನು ನೊಣಕ್ಕೂ ಹೆಸರು" (ಸಿದ್ಧಾಂತಿ. ೦೬೦). ೨. ಬಿಳಿಇರುವೆ ; ಗೆದ್ದಲು ; ಒರಲೆ. ೩.=ಪುತ್ತಿಗೆ. [ಸಂ. ಪುತ್ತಿಕಾ]

**ಪುತ್ತಿಗೆ** (ನಾ). ಬೊಂಬೆ ; ವಿಗ್ರಹ : "ಪುತ್ತಿಗೆನೆ ಪುತ್ರಿಕೆಯು" (ಕಶಾಶ. ೩೮); ಪುತ್ರಿಕಾ — ಪುತ್ತಿಗೆ (ಕಮುದ. ೨೬೦ ಕ್ರಯೋ). [< ಸಂ. ಪುತ್ರಿಕಾ]

**ಪುತ್ತಿಡು**, ಹುತ್ತಿಡು (ಕ್ರಿ). ಹುತ್ತವನ್ನು ಕಟ್ಟು : ಮೆಯ್ಯ ಮೇಗ್ ಕೊರಲ್ಗೆ ಪುತ್ತಿಡೆ ಪರ್ಬಿದ ಬಳ್ಳಿ ಸುತ್ತಲುಂ ಸೊಗಯಿಸೆ . . . ಜಾನಿಸುತ್ತಗಲದೆ ನಿಂದನೊರ್ವ ಸವಣಂ (ಕಲ್ಯಾ. ೨೨೬); ಒಱಲೆ ತಗುಳ್ದು ಪುತ್ತಿಡುವುದೆಯ್ದೆ . . . ಮುನೀಂದ್ರನ ನಿಶ್ಚಲಾಂಗದೊಳ್ (ಧರ. ೨-೦೨೨). **ಹುತ್ತಿಡು** : ಗುಡುಗು ಬಿಡದಲೆ ಮೊಳಗೆ ಹುತ್ತಿಡಲೊಱಳೆ ಮೂಳದ ಬೆಕ್ಕು ಪೊಱಲುತಿರೆ (ಕೌಶಾ. ೦೪-೫). [ಪುತ್ತು$_1$+ಇಡು$_1$]

**ಪುತ್ತು$_1$**, ಪುತ್ತ, ಹುತ್ತ, ಹುತ್ತು (ನಾ). ೧. ಗೆದ್ದಲುಗಳು ಕಟ್ಟುವ ಮಣ್ಣಿನ ಗೂಡು ; ಹಾವು ವಾಸಿಸುವ ಗೂಡು : ಕೊಲ್ಲಂ ಬಿಸುಡಾಯುಧಮಂ ಪುಲ್ಲುಂ ಕರ್ಚೀಱು ಪುತ್ತಂ (ಕಶಾ. ೩-೨೦೦) : ಮಡಗಿಡಱಿಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯನಾಗಳುಗೆ . . . ಮಹೋರಗನೆಯ್ದೆ ಪಲ್ಗಳಿದೊಡೆ ಕಿಡಿಮೀಟ್ ನೆತ್ತರೊಱಿದುರ್ಗೆ ಕೊಂಡುದು ತತ್ಪ್ರಪಸ್ಸಿಯುಂ (ಅಜಿತ. ೨-೪೦) ; ಬೆರಲುಂ ಚರ್ಪುವ ಪುತ್ತಂ

**ಪೊಂಗುಪ್ಪೆ** (ನಾ). ಚಿನ್ನದ ಜಾಡಿ ; ಬಂಗಾರದ ಹೂಜಿ : ಪರಿಮಳಿಪ ಸೀತಳೋದಕವ ಪೊಂಗುಪ್ಪೆಯೊಳು ತುಂಬಿಡುತ್ತೆ (ಶಬರ. ೦೯-೦೬).

[ಪೊಂ (< ಪೊನ್) + ಕುಪ್ಪೆ₃ (< ಕುಪ್ಪಿ₁)]

**ಪೊಂಗುಬ್ಬಿ** (ನಾ). ಚಿನ್ನದ ಗುಬ್ಬುಟಂ,—ಗುಮುಟ : ಅಂಗದೊಳ ಗಮರ್ದ ಬಣ್ಣಬಗೆಗಳ ಬೆಳ್ಪೊಂಗುಬ್ಬಿವರಿಗೆಯಂ ತೊಡೆ ಚಾಟು ಗೊಳುತ (ಚಂಪೆ. ೧೫-೩೦). [ಪೊಂ (< ಪೊನ್) + ಗುಬ್ಬಿ₁]

**ಪೊಂಗುರು**, ಪಿಂಗುರು, ಪೆಂಗುರು, ಹೆಂಗುರು, ಹೊಂಗರಿ₂, ಹೊಂಗುರು (ನಾ). ಕೊಕ್ಕರೆಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ : ಕೋಗಿಲೆ ಚಾದಗೆ ಪೋದಗೆ . . . ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಳುಂದಂ ಬಲಾಕಿ ಲಾವುಗೆ ಸೇನಂ (ಕಾವ್ಯಾ. ೦೦೧೯ ಕಾಲ್ಪ೪). ಪಿಂಗುರು : ಪೊಣರ್ವಕ್ಕಿ ಪಿಂಗುರು[ಪಾಠಾಂ. ರಿ] ಗೂಗೆ ಮುಳುಂದ ಬಳಾಹಕ (ಪೋತ್ರಸ. ೩-೦೧೯). ಪೆಂಗುರು : ಗಿಳಿ ಪುರುಳಿ ಪೆಂಗುರು[ಪಾಠಾಂ. ಪಿಂಗುರಿ] ಕಾರಂಡವಾದಿ ಮೊದಲಾಗೊಡೆಯ ಗಗನಚರಂ ಪಂಚೇಂದ್ರಿಯಂ ಗಳುಮಾಗಿ (ಧರ್ಮಾ. ೧೬-೯). ಹೆಂಗುರು : ಚಾಸಾದಿ ಪರ್ಬಕ್ಕಿ ಹೆಂ[ಪಾಠಾಂ. ಹಿಂ]ಗುರು ಕಾಕಂ . . . ಇರ್ಕುಂ ತದ್ವನಾಗೌಘದೊಳ್ (ಚಾರುಚ. ೩-೬೯); ಕಾಕಂ ಬಕಂ ಕ್ರೌಂಚಿ ಹೆಂಗುರು . . . ಚಾತಕಮವಿರ್ಕುಂ ತತ್ಸರು ವ್ರಾತದೊಳ್ (ಜಾತಕಾ. ೯-೯೬); ಪಾರಾವತಂ ಹೆಂಗುರು ಟೀವಂ ಟಿಟ್ಟಿಭಂ . . . ತದ್ವನಾಂತಸ್ಥವಿರ್ಕುಂ (ಜಿನಾ. ೩-೩೩). ಹೊಂಗರಿ₂ : ಹೊಂಗರಿ ಚರಣಾಯುಧಂ ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಧರ್ಮಾ. ೬-೨೦೩). ಹೊಂಗುರು : ಹೊಂ[ಪಾಠಾಂ. ಹಂ]ಗುರು ಚರಣಾ ಯುಧಂ ಶಕುನಿ . . . ತಿತ್ತಿರಿ ಗಿಡುಗಂಗಳೀಬ ಖಗವೃಂದದಿನಲ್ಲಿಯರಣ್ಯ ಮೊಪ್ಪುಗುಂ (ಗಿರಿ. ೦-೬೯ ; ಹುಲ್ಲಾ. ೩-೦೧೦ ನೋ) : ಹರಡೆ ಹಸುಬ . . . ಹೊಂಗುರುವಕ್ಕಿಯಸೆದವಂದಲ್ಲಿ (ಶ್ರೀಪಾಂ. ೭-೦೬).

[<ಪ್ರಾ. ಪೋಕ್ಖರ./ಸಂ. ಪುಷ್ಕರ./ತೆಲು. ಪೆಗ್ಗುರು, ಬೆಗ್ಗುರು]

**ಪೊಂಗುರುಜು** (ನಾ). ಬಂಗಾರದ ಮಂಟಪ : ಕೇರಿಕೇರಿಯಲಿ ಪನ್ನೀರ ಚಳಯ ರನ್ನದೋರಣ ಪೊಂಗುರುಜುಗಳು ಮೇರೆಯಿಲ್ಲದ ಕಾಂತಿ ವಿಡಿದುವು (ಸಂಕಶ. ೨೩-೫೩). [ಪೊಂ (< ಪೊನ್) + ಕುರುಜು]

**ಪೊಂಗುಲ** (ನಾ). ೧. ಚಿನ್ನದ ಕೆಲಸ ಮಾಡುವವರ ಕುಲಕ್ಕೆ ಸೇರಿ ದವನು ; ಅಕ್ಕಸಾಲಿಗ : ಕಡೆಕೊಳಂದ ಮಣ್ಣಿಗಪ್ಪೊಂಗುಲಂ ಕೊಡ ಲಿಯಂ ಬಲ್ಲಸಿಯು ಕಮ್ಮಾಱಂ ಮುಟ್ಟುಗೆರಿಯೊಡನೊಂ ಓದಲವೊಲೆಯಂ ಮುಚ್ಚುಳಂ (ಪ್ರ್ಕಂ. ೦೧೩೯, ೩೬-೨೨ ; ಸ. 11ನೆಯ ಶ). ೨. ಒಬ್ಬಾತನ ಹೆಸರು : ಸಾಕ್ಷಿ ಕೂಡಲೂರ್ ಪೊಂಗುಲರು ಎಳ್ಕೆಡಿಯರು ಬದಿರಿಯರುಮ್ (ಪ್ರ್ಕಂ. ೦೧೦೩, ೦೩-೯ ; 726). [ಪೊಂ (< ಪೊನ್) + ಕುಲ]

**ಪೊಂಗುಲ್ಲಟ್ಟಿ** (ನಾ). ಒಂದು ಪ್ರದೇಶದ ಹೆಸರು (?) : ತನ್ನಣ ಕೊನೆದು ಪೊನ್ನುಲ್ಲಟ್ಟಿಯು ತೆನ್ನೊಳ್ಳೆ ತನ್ನಣಸೀಮೆ (ಪ್ರ್ಕಂ. ೦೧೨೬, ೦೨೨-೪೦ ; 808 ?). [ ? ]

**ಪೊಂಗುಳ** (ನಾ). ಚಿನ್ನದ ಕುಳ,—ಗುಳ : ಪೊಂಗುಳಂಗಳಿಂ ಕಬ್ಬಿಣದ ಗುಳಮೆಂದು ಕೈಯಲೀಯೆ (ಶಕುಕ್. ೬-೩-೨).

[ ಪೊಂ (< ಪೊನ್) + ಕುಳ₁ (< ಕುಟು) ]

**ಪೊಂಗುಳಿಗೆ** (ನಾ). ಚಿನ್ನದ ಗುಳಿಗೆ : ಪೊಂಗುಳಿಗೆಗಳ ಪರಿಯೊಳಂಗು ಷ್ಪಂಗಳೊಪ್ಪುಗು ನಿಮಿರ್ದ ಕೋಮಳದಂಗುಳಂಗಳು ಮೆಱೆವವುಡುಗಣ ದೊಲು ಪದನಖಾಳಿ (ಜಸಕ್. ೯-೦೬). [ ಪೊಂ (< ಪೊನ್) + ಗುಳಿಗೆ₁]

**ಪೊಂಗುಱುವ** (ನಾ). ಚಿನ್ನದ ದ್ವೀಪ : ಪಾಲ್ಗಡಲೊಳಗಣ ಪೊಂಗು ಱುವಂ ಗಡಮೆನಿಸಿದುದಮರನಗಮಿದೇನಚ್ಚರಿಯೋ (ಶರಶಚಾ. ೦೨-೩೩).

[ ಪೊಂ (< ಪೊನ್) + ಕುಱುವ₁ ]

**ಪೊಂಗೆಜ್ಜೆ**, ಹೊಂಗೆಜ್ಜೆ (ನಾ). ಚಿನ್ನದ ಗೆಜ್ಜೆ : ಮಧುಪಾನದಿಂ ಸೊಕ್ಕಿದ ಮುತ್ತುಂಬಿಯ ಧ್ವನಿಗಳಂತೆ ಜರ್ಝರಿತವಾದ ಪೊಂಗೆಜ್ಜೆಗಳ ಪೆಳ್ಪುಲಿ ಯೊಳಂ (ಕಾದಂಪೂ. ೬೬) ; ಪೊಂಗೆಜ್ಜೆಯುಲಿಪು ನೆಲಸುಗ್ಗಡಿಸುತ್ತಿಂದಸೆಯು . . . ನಡೆತರುತಿರ್ದಳ್ (ಗಿರಿ. ೩-೦೦೬) ; ಪೆಱೆಯರೆದ್ಯಾಣದ ಪೊಂಗೆಜ್ಜೆಗಳ ದನಿ . . . ಪಾಡುತ ಪಿರಿದು ಸಂಭ್ರಮದ ಬೀಱ್ದರು (ಸಂಕಶ. ೨೦-೦೦೦). ಹೊಂಗೆಜ್ಜೆ : ಹೊಂಗೆಜ್ಜೆಗಳ ಮುಖರದ ಘಂಟೆಗಳ . . . ಮಬ್ಬುಮಯಧಾರೆಗಳಲೆಸೆದುದು ಭದ್ರಮಂಟಪ (ಜಕ್ಕಾ. ೦೨-೦೨) ; ಪುಷ್ಪಪಾದಗಳ ಹೊಂಗೆಜ್ಜೆಗಳ್ ಘಲಿರೆನೆ ದಟ್ಟಡಿಯಿಡುತೊಡಗಿದನು (ಕೋಳಕ. ೦೬-೬೨) ; ಸುಗತಿಗಿಂಬಿಲವ ಹೊಂಗೆಜ್ಜೆಗಳ ರಭಸದಿಂದೆಸೆವ ನಿರ್ಮಲ ವಾಜಿಯಂ ಸುವೇಗಂ ತುದು ನಿಲಿಸಿದಂ (ಶ್ರೀಪಾಂ. ೩-೦೦).

[ ಪೊಂ (< ಪೊನ್) + ಗೆಜ್ಜೆ₁ ]

**ಪೊಂಗೆಲಸ**, ಹೊಂಗೆಲಸ (ನಾ). ಚಿನ್ನದ ರೇಕಿನ ಕೆಲಸ : ಪೊಸ ಪೊಂಗೆಲಸದ ಯೂಪಸ್ತಂಭಗಳ ಭಂಗಿಯನನುಕರಿಸಿದುವುಕ್ಕೊಡೆಯಾ ಕಮಲ ದಳಾಂಬಕಿಗೆ (ಜಸಕ್. ೩-೩೦). ಹೊಂಗೆಲಸ : ತೀವಿದವು ಹೊಂಗೆಲಸ ಗತಿಯಲಿ ಲೋವೆಗಳು (ಕುಮಾರ. ೦೨-೯) ; ಹೊಂಗೆಲಸದ ಪೊಱ್ಜವದುವು ವಿಟ್ಟರದೊಳು ಮಂಗಲಮಜ್ಜನಗೆಯ್ದು (ಕೋಳಕ. ೨೦-೩).

[ ಪೊಂ (< ಪೊನ್) + ಕೆಲಸ ]

**ಪೊಂಗೇದಗೆ**, ಹೊಂಗೇದಗೆ (ನಾ). ಒಂದು ಬಗೆಯ ಕೇದಗೆ ; ಹೊಂಬಣ್ಣದ ತಾಳೆಹೂವು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆ ಯಂಬ ಪಲವು ಪೂಮಾಲೆಗಳಂ ಬಗೆಯಱಿದೋಲಗಿಪುದು ಮಾಲೆಗಾಱನಂ ಪೋಲ್ತುದಗ್ರಮಾಲ್ಯಮಹೀಜಂ (ಅನಕ್. ೩-೩೬) ; ಸೋಮುರ್ಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱ್ (ಸಂಗಾಚರಾ. ೨-೦೩ ಬ) ; ವನಮ ನಾಱ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಚಂಪೆ. ೧೩-೦೬). ಹೊಂಗೇದಗೆ : ಕುರವಕದ ವಕುಳದೆಳೆಗೌಂಗಿನ ಹೊಂಗೇದಗೆಯ ಬಳಸಿ ನೊಳಂ . . . ಲತಾಮಂಟಪಗಳ್ ಮನಗೊಳಿಪುವು (ಕಾದಂಪೂ. ೯೭) ; ಈಸಿ ಹೊಂಗೇದಗೆಯ ಕಂಚಿಯ . . . ಕಿತ್ತೊರಸಿ ಹುಡಿಹುಡಿ ಮಾಡಿದನು (ಕುಮಾರ. ೦೦-೨೦) ; ಹೊಂಗೇದಗೆಯೆಸಳಂ ಮಸಿಸಿ (ಜಸಕ್. ೨-೦೯).

[ಪೊಂ (< ಪೊನ್) + ಕೇದಗೆ]

**ಪೊಂಗೊಡ**, ಹೊಂಗೊಡ (ನಾ). ಚಿನ್ನದ ಕೊಡ ; ಸ್ವರ್ಣಕುಂಭ : ಪೊಂಗೊಡಮ ತಮಾಳಪಲ್ಲವದೊಳೆ ಮುಚ್ಚಿಮಂದದೊಳೆ ಚೂತುಕ ಮಱಾಂತುದು ಕರ್ಪನಾಕೀಯಾ(ಪಂಕಶ. ೦-೦೨೬) ; ಬಿಳಿಯ ಸಾಸವೆ ಪೊಂಗೊಡ ನಷ್ಟಶೋಭೆ ಕನ್ನಡಿ . . . ಎಲ್ಲಡೆಗಳೊಳಳ್ಗಿಗಲ್ಲಿಗಧಿಕಂ ಪಡೆದತ್ತು ಜನಾನು ರಾಗಮಂ (ಕಾವ್ಯಾಶ. ೬೩೨) ; ಕೀಲಾಲಮನಾಱ ಸಾಸಿರಸೂಳ್ಪೊಂಗೊಡನಿಂ ತಂದು . . . ಅಭಿಷೇಕಂಗೆಯ್ದಂ (ಅಧ್ವರೀ. ೩-೯೩). ಹೊಂಗೊಡ : ತೊಳೆದ ಹೊಂಗೊಡದೊಳಗ್ಗಣಿಗಳಂ ತುಂಬಿ ತಂದಿಳುಹಿದರು ಕಾಮಿನಿಯರು (ಹಕಕಾ. ೩-೩೭) ; ಹೊಂಗೊಡನ ಹಿಡಿದೈತರಲಿ ನಾರಿಯರು (ಕುಮಾರ್ಕಸ್ತ್ರೀ. ೦-೩೭) ; ಮಜ್ಜನಕುಷ್ಣಜಲ ಹೊಂಗೊಡದಲಿಳುಹಿದವು (ಕೊಕಕಾ. ೩-೩-೩೯). [ಪೊಂ (< ಪೊನ್) + ಕೊಡ₂]

**ಪೊಂಗೊಡೆ** (ನಾ). ಚಿನ್ನದ ಛತ್ರಿ ; ಬಂಗಾರದ ಸತ್ತಿಗೆ : ಶಕ್ರಲಗೆತ್ತಿದ ಮಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸಿದುದು ಶಶಿಬಿಂಬಂ (ಜಗಂ. ೦೩-೦೦೬) ; ಚೈತ್ರನೆತ್ತಿದ ಪಲವುಂ ಪೊಂಗೊಡೆಗಳೆನಿಸಿ ಪೂತು ಮನಂಗೊಳಿಸಿದುವೆಸೆವ ಕರ್ಣಿಕಾರಕುಜಂಗಳ್ (ಕುಸುಶಚಾ. ೩-೯೦).

[ಪೊಂ (< ಪೊನ್) + ಕೊಡೆ₂]

**ಪೊಂಗೊಳಗು** (ನಾ). ಪಶುಗಳ ಗೊರಸಿಗೆ ತೊಡಿಸುವ ಚಿನ್ನದ ಆಭರಣ : ಪೊಂಗೋಡು ಪೊಂಗೊಳಗು ಪೊಂಗೆಜ್ಜೆ ಘಂಟೆಗಳು ಪೊಂಗಲಶ ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಿರಾ. ೩-೦೩).

[ಪೊಂ (< ಪೊನ್) + ಕೊಳಗು]

ಬೆಲೆವೆಣ್ಣಳಿಸೆದರ್ (ಶಾಂತಿನಾ. ೨೯-೮೮). 'ಪುತ್ತುರಿ' ಪಠಾ. [ ? ]

**ಪುತ್ತೂರ್** (ನಾ). ಒಂದು ಊರಿನ ಹೆಸರು : ಪುತ್ತೂರಾ ಚೆಟ್ಟಿಯು ಗೊಳುತ್ತಿಟ್ಟು ಪುತ್ತೂರತ್ತಾಣೆಗೆ ಅಯ್ದೂವಪ್ಪು ಕಟನಿಯುಂ ಅಯ್ದೂವಪ್ಪು ತೊಟ್ಟಪ್ಪಟ್ಟುಂ ಕೊಟ್ಟರ್ (ಎಕ. x. ಕೋಲಾರ. ೨೨೯-೩; ಸು. 750): ಪುತ್ತೂರುಡೆ ಶಿವಪಾರಪ್ಪುಂ . . . ಬಾಳೆ ತೊಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೊದು (ಎಕ. x. ಕೋಲಾರ. ೨೩೦-೨; ಸು. ೮೦೦ ?). 'ಹುತ್ತೂರು' ಪಠಾ. [ ? + ಊರ್ ]

**ಪುತ್ತೇಱು** (ಕ್ರಿ). (ಯುದ್ಧದಲ್ಲಿ ಸೋತು) ಶರಣಾಗುವುದನ್ನು ಸೂಚಿಸುವುದಕ್ಕಾಗಿ ಹುತ್ತದ ಮೇಲೆ ನಿಲ್ಲು : ಪುತ್ತೇಱಿದನಂ ಕೈದುವನಿತ್ತನನೇರ್ವತ್ತನಂ ರಣಾಂಗಣದೊಳ್ ಬೆನ್ನಿತ್ತನನಿಱಿಯರ ಮೋಘಂ ಪಾತ್ತನಿಸದೆ ತಾಟಿಲ ಸಂದ ಜನವಂ ಜಗದೊಳ್ (ಶಂಕಹ. ೨೯೯-೦೩). [ಪುತ್ತು$_1$ + ಏಱು$_1$ (<ಏಱ್$_1$)]

**ಪುತ್ಥಳಿ**, ಪುತಲಿ, ಪುತಳಿ, ಪುತ್ತಟಿ (ನಾ). ೧. ಬೊಂಬೆ; ವಿಗ್ರಹ; ಮೂರ್ತಿ: ಅರಗಿನ ಪುತ್ಥ[ಶಾಕಾಂ. ತ್ರ]ಳಿಯನುರಿಯು ನಾಲಗೆ ಹೊಯಿದು ಮಾತಾಡುವ ಸರಸ ಬೇಡ (ಶಸವ. ೬೬೦ ೬); ಅಱಿವು ಮಯಣಾಮಯದ ಭಕ್ತಿಯೊಳಱಿಗಿಸಿದ ಪುತ್ಥಳಿಯವೊಲು ಕಶುದೆಱಗ ಕೇಣಿಯು ಕೊಂಡು ಮೌನದೊಳಿದ್ದನಾ ವಿದುರ (ಕುಪ್ಪಾಉ. ೬-೦೩); ವಾರಿಕಲ್ಲು ಪುತ್ಥಳಿ ಅಪ್ಪುವನೊಡಗೂಡಿದಂತೆ ಮಾಡಿತ್ತೆನ್ನ . . . ನಿಮ್ಮ ವಚನೋಪದೇಶ (ಅಬಂಶೇ. ೨೦-೧೦). **ಪುತಲಿ :** ೨. ಹಳೆಯ ಕಾಲದ ಒಂದು ಚಿನ್ನದ ನಾಣ್ಯ; ವರಹ : ಇನ್ನೂ ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದುವು. ಯಾವುವೆಂದರೆ—೨ ಗಬರು . . . ೧ ಪುತಲಿ (ಚಕ್ರಾ. ೧೦೯): **ಪುತಳಿ :** ೧. ನೂಲಿನ ಸಂಬರ ೪೦. ಬಿಳೇದು . . . ಗೌಳಿಗಿತ್ತಿ ಛಾಪ. ಪುತಳಿಛಾಪ. ಚಕ್ರಛಾಪ (ಮುಂಬವ್ಯಾ. ೦೦೦). ೨. ನಾನು ನಿನಗೆ ಎರಡು ಪುತಳಿಗಳನ್ನು ಕೊಡುತ್ತೇನೆ . . . ವೆಚ್ಚ ಮಾಡಿಕೋ (ಮುಂಬಯಿ. ೩-೨೬೦). ೩. ಚಿನ್ನದ ನಾಣ್ಯಗಳಿಂದ ಮಾಡಿದ ಸರ : ಬಂಗಾರ ಬಂಗಾರ ಅನಲಿಕ್ಕೇನಂ ? ನಾಲ್ಕು ತೊಲೆ ಪುತಳಿ ಅವ. ಆರ ತೊಲೆ ಪಾಟಲಿ ಅವ (ಅಟೋಳ. ೧೧೯). △ **ಪುತ್ತಟಿ :** ೧. "ಪುತ್ತಳಿಗೆಯೆಂದು ಪುತ್ತಟಿ" (ಕಶಸಾ. ೬೬-೪೬೮); ಸಿರಿಕಂಡದ ಕೋಟಿಸಱಿಂ ಪುದಿದು ಜಂತದಿಂ ಕಡೆದು ಕಂಡರಿಸಿದ ಪುತ್ತಟಿಯಂಶಿರ್ಪರ್ಳ್ (ಕಬ್ಬಿಗ. ೩೧೩): ಲೆಪ್ಪದ ಬೋಂಬೆಯುನೆರಕಂಬೊಯ್ದೊಪ್ಪಂಬೂಸಿದ ಪುತ್ತಟಿಯಂ ಬೇಱಾಗಿ ತೋಱುಗುಮಲ್ತೆ (ರಾಮಾಶ್ವ. ೦೧-೨೦).

ಪುತ್ಥಳಿ ಬೊಂಬೆ=ಸುಂದರವಾದ ವಿಗ್ರಹ : ಸಾಧುಸಜ್ಜನರ ಚಿತ್ತದಿ ಹೊಳೆವ ಪುತ್ಥಳಿಬೊಂಬೆ (ಪುರಂದ. ೧-೨೦೧-೩). ಪುತ್ಥಳಿಯ ಸರ=ಚಿನ್ನದ ನಾಣ್ಯಗಳಿಂದ ಮಾಡಿದ ಸರ : ಅದರಲ್ಲಿನ ವಸ್ತು ಒಡವೆಗಳು . . . ಬಂಗಾರದ ಕೈಬಳೆ, ಪುತ್ಥಳಿಯ ಸರ, ಗುಂಡಿನ ಟಿಕ್ಕಿ. ತೋಳಬಂದಿ. ಚಿಂತಾಕು (ಮುದ್ದು.ಹ. ೨೦). [<ಸಂ. ಪುತ್ತಲೀ]

**ಪುತ್ಥಳಿಕೆ**, ಪುತ್ತಳಿಗೆ, ಪುತ್ತಟಿಗೆ (ನಾ). = ಪುತ್ತಲಿಕೆ : ತಳತಳಿಸಿ ತೊಳಗುವ ಪಳುಕಿನ ಪುತ್ಥಳಿಕೆಯಂತೆ ಕರಮೆಸೆದಿರ್ದಳ್ (ಕಾದಂಪೂ. ೬೬೬). **ಪುತ್ತಳಿಗೆ :** "ಪುತ್ತಳಿಗೆಯೆಂದು ಪುತ್ತಟಿ" (ಕಶಸಾ. ೬೬-೪೬೮); ದೂಳಿಗೊಂಡ ಪುತ್ತಳಿಗೆ ಮಾಜಗೊಂಡಬ್ಬನಿ ಕಾಪುರ್ಗಿಲೊಳಕೊಂಡಳವೆಱೆಯನೆ ಮೃಗಲೋಚನೆ ಸೀತೆ ನಾಡೆ ಪಾಡಟಿದಿರ್ದಳ್ (ಶಂಕಾಮಾ. ೧೧-೬೩): ಕತ್ತುರಿಯು ಬೊಟ್ಟ ಮೇಣೆಮ ಪುತ್ತಳಿಗೆಯೊ ನೀಳಮಣಿಯು ತೋಳ್ಗಮ್ಪುದೊಳೇಂ ತೆತ್ತಿಸಿದುದೆನಿಸಿ ಧರೆಯಂ ಪೊತ್ತುದು ಭುಜಪಜ್ರ ಕೋಟಿ ಸಿರಿವಲ್ಲಭನಾ (ಎಕ. VIII. ಪಗರ. ೩೭-೯೬: 1147 ; ಶಾಕಮು. ೩೦೦ ನೋ). △ **ಪುತ್ತಟಿಗೆ :** "ಪಾಂಚಾಲಿಕಾ. ಪುತ್ರಿಕಾ—ಈ ೨ ಪುತ್ತಟಿಗೆ" (ಹಲಾಯು. ೬೦-೩೩೯). [<ಸಂ. ಪುತ್ತಲಿಕಾ]

**ಪುತ್ರ** (ನಾ). ೧. ಮಗ; ಕುಮಾರ : "ನಂದನ ತನುಜನ್ಮ ತೋಕ ಸುತ ಪುತ್ರ ತನೂಭವ ಸೂನುನಾಮಕಂ ತನಯಂ" (ಅಭಿಕೋ. ೩೪-೦೭): ಇಳಾಪ್ರಭುವೊಗೆದನುದಿತ ಕಾಯಪ್ರಭೆಯೊಗೆದಿರೆ ದಳಿತಶತ್ರುಗೋತ್ರಂ ಪುತ್ರಂ (ಶಂಕಾ.೦-೦೨೭); ಪುತ್ರಕಳತ್ರ ಪರಿಗ್ರಹಗಾತ್ರಧನೈಶ್ವರ್ಯಮೆಂಬಿ ಮಾರ್ಗಮನಿತ್ಯಂ (ಧರ್ಮ. ೦೩-೨೭). ೨. (ಪ್ರಾಣಿಗಳ) ಮರಿ; ಪೋತ. ೩. ಚಿಕ್ಕವರನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಶಬ್ದ. ೪. (ಸಮಾಸದ ಕೊನೆಯಲ್ಲಿದ್ದಾಗ) ಚಿಕ್ಕದು, ಸಣ್ಣದು ಎಂಬರ್ಥದಲ್ಲಿ ಬರುವ ಶಬ್ದ. ೫. [ಜ್ಯೋತಿ] ಜನ್ಮಕುಂಡಲಿಯಲ್ಲಿ ಐದನೆಯ ಸ್ಥಾನ : 'ಪುತ್ರಮಂದಿರ' ಪಠಾ. [ಸಂ.]

**ಪುತ್ರಂಜಿ** 'ಪುತ್ರಂಜೀವಿ' ನೋ.

**ಪುತ್ರಂಜೀವ** (ನಾ). ಒಂದು ಬಗೆಯ ಸಸ್ಯ; P ಇದರ ಹೂವು ಅಥವಾ ಬೀಜಗಳಿಂದ ಮಾಡಿದ ಹಾರವನ್ನು ಧರಿಸುವುದರಿಂದ ಮಕ್ಕಳು ಆರೋಗ್ಯವಂತರಾಗಿ ಬದುಕುವರೆಂಬ ಭಾವನೆ ಇದೆ : ಪುತ್ರನಿಗೆ ಜೀವದಾನ ಮಾಡುವ ಗುಣ ಇದರ ಬೀಜಗಳಿಗಿವೆಯೆಂಬ ನಂಬಿಕೆ ಅವರಲ್ಲಿ ಊರಿತ್ತು. ಆದ್ದರಿಂದ ಮರಕ್ಕೆ ಪುತ್ರಂಜೀವ ಎಂದು ನಾಮಕರಣ ಮಾಡಿದರು (ಹಸುಹೂ. ೩೦). [ಸಂ.]

**ಪುತ್ರಂಜೀವಿ**, ಪುತ್ರಂಜಿ, ಪುತ್ರಜೀವಿ (ನಾ). = ಪುತ್ರಂಜೀವ : "ಪುತ್ರಂಜೀವಿ, ಮೆಣಸಿನ ಕಾಳೆ" (ಸಸ್ಯಾ. ೦೦೦) ; (ಪ್ಯಾಸಿ. ೬೫-೦೩೩೩). **ಪುತ್ರಂಜಿ :** ಪುತ್ರಂಜಿ—ಮಧ್ಯಮ ಆಕಾರದ್ದು...ಇದರ ಕಾಯಿಗಳನ್ನು ಹುಡುಗರ ಕೊರಳಲ್ಲಿ ಕಟ್ಟಿದರೆ ಬೇನೆ ಬರುವುದಿಲ್ಲವಂತೆ. ಅದರಿಂದ "ಪುತ್ರಜೀವಿ" ಎಂಬ ಹೆಸರು ಬಂದಿದೆ (ಕಾಗಿ. ೪೩). **ಪುತ್ರಜೀವಿ :** "ಪುತ್ರಜೀವಕಂ—ಪುತ್ರಜೀವಿ" (ಓಷಧಿ. ೦೦೦) ; ಪುತ್ರಜೀವಿಯು ಮಣೆಯಂ ಸೀಗೆಕಾಯ ರಸದಲ್ಲಿ ಅರೆದು ಅಲ್ಪ ಕಾಸಿ ಕುಡಿಯಿಸಲು ಗುರುಗಂಜಿಯು ವಿಷ ಮಾಣ್ಗುಂ (ಖಗೇ. ೬೦) : ಪುತ್ರಜೀವಿ ಬೀಜದ ತಿರುಳು ತಣ್ಣೀರಿನಲ್ಲಿ ಅರೆದು ನಸ್ಯ, ಅಂಜನ, ಪಾನ, ಲೇಪನಗಳಂ ಮಾಡಿಸಲು ಸಕಲವಿಷ ದೋಷಂಗಳು ಪರಿಹರವಹವು (ವೈದ್ಯಸಾ. II. ೦೬೭). [<ಸಂ. ಪುತ್ರಂಜೀವ]

**ಪುತ್ರಂಬಡೆ** (ಕ್ರಿ). ಮಗನನ್ನು ಪಡೆ ; ಪುತ್ರನನ್ನು ಹೊಂದು : ಪುತ್ರಂಬಡೆದೆನೆ ಪರಮಪವಿತ್ರೀಕೃತಭವಸುಖಾಮೃತಕ್ಕಾನೀಗಳ್ ಪಾತ್ರಂಬಡೆದೆಂ (ಸುಕುಮಾ. ೧೦-೨೯). [ಪುತ್ರ + ಪಡೆ$_1$]

**ಪುತ್ರಕ** (ನಾ). ಮಗ : ಕೌರವರು ತಾಮಸರು ಸುತರಲ್ಲವವರೆನಗೆ... ಅತಿಪ್ರೇಮದಿಂ ಪುತ್ರಕನು ನೀನೆನಗೆ (ತಿಪ್ಪಸ್ತ್ರೀ. ೨-೪೪). [ಸಂ.]

**ಪುತ್ರಕಾಮೇಷ್ಟಿ** (ನಾ). ಮಗನನ್ನು ಪಡೆಯಬೇಕೆಂಬ ಉದ್ದೇಶದಿಂದ ಮಾಡುವ ಯಜ್ಞ : ಸಂತತಿಯ ಸೌಭಾಗ್ಯಸಿರಿಯು ನಿತಾಂತಕಿದೆಲಾ ನಿನಗೆ ಸಪ್ತಸುತಂತು ನಿರುಪಮ ಪುತ್ರಕಾಮೇಷ್ಟಿ ಪ್ರಸಿದ್ಧಕದ (ತೊರವೆ. ೧-೪-೦೦); ಅಯೋಧ್ಯಾಪುರದೊಳವತರಿಸಿದಂ ಮಹಾವಿಷ್ಣು ಸುತರೂಪದಿಂ ರಾಮಾಭಿಧಾನದೊಳ್ ಪುತ್ರಕಾಮೇಷ್ಟಿಯಿಂ ದಶರಥಂಗೆ (ಕೃಖಾ. ೦೯-೦); ಗುರುವಸಿಷ್ಠಂ ಪುತ್ರಕಾಮೇಷ್ಟಿಯಂ ಪೇಳ್ದು...ಯಜ್ಞಶಾಲೆಗೆ ನಡೆದನಲ್ಲಿಂದೆ (ಶ್ರೀರಾಮಾ. ೯-೨೩೪). [ ಸಂ. ]

**ಪುತ್ರಕಾಮ್ಯ** (ನಾ). ಮಗನನ್ನು ಪಡೆಯಬೇಕೆಂಬ ಅಪೇಕ್ಷೆ, —ಆಸೆ : ನಿನ್ನನುಗ್ರಹವಾದುದಾದರೆ ತದ್ವಿಧಾನದಲಾದರಿಸುವೆನು ಪುತ್ರಕಾಮ್ಯವನು (ಕುವ್ಯಾಆ. ೪-೩೪). [ಸಂ. ಪುತ್ರಕಾಮ್ಯಾ]

**ಪುತ್ರಘಾತಿನಿ** (ನಾ). ಮಗನನ್ನು ಕೊಲ್ಲುವವಳು ; ಶಿಶುಹತ್ಯ ಮಾಡುವವಳು : ತಡೆ, ಪುತ್ರಘಾತಿನಿ! ಅದನ್ನು ಕೊಲ್ಲಬೇಡ! (ಶಕು. ೨). [ ಸಂ. ಪುತ್ರಘಾತಿನೀ ]

**ಪುತ್ರಜೀವಿ** 'ಪುತ್ರಂಜೀವಿ' ನೋ.

**ಪುತ್ರದಾತ್ರಿ** (ನಾ). (ಬಂಜೆತನವನ್ನು ನಿವಾರಿಸುವುದೆಂದು ನಂಬಲಾದ) ಒಂದು ಬಗೆಯ ಔಷಧೀ ಸಸ್ಯ ; ಶ್ವೇತಪುಷ್ಪಿಕೆ : "ವಾತಾರಿಃ—ಗಂಟು ಭಾರಂಗಿ, ಸೂರಣ, ಬಿಳಿಯಹಾಡಲ, ಪುತ್ರಧಾ[ದಾ]ತ್ರೀ" (ಒಷ೦. ೦೩೦); "ವೇಶೀಜಾತ–ಪುತ್ರಧಾ[ದಾ]ತ್ರಿ" (ಒಷಧಿ. ೦೩೬). [ಸಂ. ಪುತ್ರದಾತ್ರೀ]

**ಪುತ್ರದೆ** (ನಾ). ಒಂದು ಬಗೆಯ ಔಷಧೀಸಸ್ಯ; ವಂಧ್ಯಾಕರ್ಕೋಟಕಿ : "ದೃಷ್ಟಿಪ್ರಭಾ—ಪುತ್ರದೆ" (ಒಷಧಿ. ೬೯). [ಸಂ. ಪುತ್ರದಾ]

**ಪುತ್ರದೋಹದ** (ನಾ). ಗಂಡುಮಗುವನ್ನು ಪಡೆಯಬೇಕೆಂಬ ಬಯಕೆ ; ಗಂಡುಮಗುವು ಹುಟ್ಟಬೇಕೆಂದು ಉಂಟಾಗುವ ಹಂಬಲ : ಹರಿಹರದೇವಿಗೆ ಪುತ್ರದೋಹದ [ಪಾಠಾಂ. ಮೋಹವು]ಬಂದು ಭರದಿಂದ ಪುಟ್ಟಿತದೆಯೊಳು (ಕುಮಾರಾಂ. ೭ ಸಂಧಿ). [ಸಂ.]

**ಪುತ್ರದೋಹಳ** (ನಾ). =ಪುತ್ರದೋಹದ : ತಮ್ಮ ಮೆಯ್ಮೆಚ್ಚಿನ ವಿಬುಧರುಂ ನಮೆದರೇನವರ್ಗಾದುದೊ ಪುತ್ರದೋಹಳಂ (ಶಂಕರಾ. ೦–೦೩೫); ತಾನುಂ ಪುತ್ರದೋಹಳಕಾತ್ರೂಹಳೆಯುವಾಗೆ (ಮಲ್ಲಿ. ೩–೦೦೫). [ಸಂ. ಪುತ್ರದೋಹಲ]

**ಪುತ್ರದೌಹೃದ** (ನಾ). = ಪುತ್ರದೋಹದ : ಇವು ಮೊದಲಾಗೆ ಪಲವುಂ ಪುತ್ರದೌಹೃದಂಗಳಂ ಪಂಬಲಿಸುತ್ತುಮಿರ್ದಳ್ (ಪುಷ್ಪ. ೩–೯೯ ವ). [ಸಂ.]

**ಪುತ್ರಮಂದಿರ** (ನಾ). [ಜ್ಯೋತಿ] ಜನನಕುಂಡಲಿಯಲ್ಲಿ ಐದನೆಯ ಸ್ಥಾನ ; ಜಾತಕನಿಗೆ ಪುತ್ರಪ್ರಾಪ್ತಿಯನ್ನು ಸೂಚಿಸುತ್ತದೆಂದು ನಂಬಲಾದ ಸ್ಥಾನ : ಮೇಣ್ ಬರೆ ತದ್ದ್ವಿತೀಯಮೆನಿಪಾ ದ್ರೇಕ್ಕಾಣಮಾ ಪುತ್ರಮಂದಿರದೊಳ್ ಮೇಣ್ ಬರೆ ತತ್ತೃತೀಯಮೆನಿಪಾ ದ್ರೇಕ್ಕಾಣಮಾ ಧರ್ಮಮಂದಿರದೊಳ್ ಪಾಕ್ಷಿಯಿರ್ದನೆಂದಱಿಗೆ (ಜಾತಕ. ೨೯–೨). [ಸಂ.]

**ಪುತ್ರವಂತ** (ನಾ). ಗಂಡುಸಂತತಿಯುಳ್ಳವನು. [ಸಂ. ಪುತ್ರವತ್]

**ಪುತ್ರವತಿ** (ನಾ). ಮಗನನ್ನು ಪಡೆದವಳು : ಪುತ್ರವತಿಯಹುದು ಜನ್ಮಾಂತರದ ಪುಣ್ಯಮೈಸಲೆ ಪೆಣ್ಗೆ (ಕೈವಲ್ಯ. ೦೬–೦೯); ಪುತ್ರವತಿಯಾದ ಶಕುಂತಳೆಯನ್ನು . . . ದುಷ್ಯಂತನು ಪರಿಗ್ರಹಿಸಿದನು (ಶಾಕುಂತ. ೦೦೫–೧೨). [ಸಂ. ಪುತ್ರವತೀ]

**ಪುತ್ರವಧು** (ನಾ). ಮಗನ ಹೆಂಡತಿ : ಸೊಸೆ : "ಸ್ನುಷಾ, ಜನೀ, ಪುತ್ರವಧೂಃ, ವಧೂಃ—ಈ ೪ ಸೊಸೆ" (ಹಲಾಯು. ೬೩–೩೩೦). [ಸಂ. ಪುತ್ರವಧೂ]

**ಪುತ್ರವಾತ್ಸಲ್ಯ** (ನಾ). (ಹಿರಿಯರಿಗೆ) ಮಕ್ಕಳ ಮೇಲಿರುವ ಪ್ರೇಮ,–ಅಕ್ಕರೆ : ಎಲೈ ಮಿತ್ರನೆ, ಮಾತೃಶ್ರೀಯವರಿಗೆ ನಿನ್ನಲ್ಲಿ ಪುತ್ರವಾತ್ಸಲ್ಯವಿರುವುದು (ಶಾಕುಂತ. ೨೯–೧೫); ಮುಪ್ಪಿನ ತಂದೆಯು . . . ಪುತ್ರವಾತ್ಸಲ್ಯದಿಂದ ಆ ದುಃಖವನ್ನು ಮರೆತು ನನ್ನನ್ನು ಸಾಕಿಕೊಂಡಿರಲಾಗಿ (ದಶಕು. ೩). [ಸಂ.]

**ಪುತ್ರವಿಹೀನ** (ನಾ). ಮಗನಿಲ್ಲದವನು ; ಗಂಡುಸಂತಾನವಿಲ್ಲದವನು : ಕುಂಬಿನಿಯೊಳೆಮ್ಮ ಕುಲದೆ ತಿಲಾಂಬುವ ಮುಂದಕಟ ಕುಡುವನಾವನೆ ನುತ್ತುಂ ನಾಂ ಬಿಡೆ ಪುತ್ರವಿಹೀನಂ ಕಂಬಿಸಿದೊಳೆದುಳಿದ ಜಲವ ಪಿತೃಗಳ್ ಪೀರ್ವರ್ (ಶಾಕುಂತ. ೯೪–೧೫೬). [ಸಂ.]

**ಪುತ್ರಸಂತತಿ** (ನಾ). ಗಂಡುಸಂತಾನ : ಗಂಡುಮಕ್ಕಳ ಜನನ : ಗಾಂಧಾರಿ ಗಾಮುದು ಪುತ್ರಸಂತತಿ (ಕುವ್ಯಾ. ೪–೩೦). [ಸಂ.]

**ಪುತ್ರಸಂತಾನ** (ನಾ). ಪುತ್ರಸಂತತಿ : ಗುರು ವಸಿಷ್ಠಂ . . . ಪುತ್ರಸಂತಾನವಹುದೆಂದು ನಂಬಿಗೆಗೊಟ್ಟು ಸಂತೈಸಿ ಯಜ್ಞಶಾಲೆಗೆ ನಡೆವನಲ್ಲಿಂದ (ಶ್ರೀರಾಮಾ. ೯–೨೩೫) : ಸ್ಕಂದವರ್ಮನಿಗೆ ಪುತ್ರಸಂತಾನವಿದ್ದಿಲ್ಲ (ಕರ್ನಾಟ. ೧೯೦). [ಸಂ.]

**ಪುತ್ರಸ್ವೀಕಾರ** (ನಾ). ಬೇರೆಯವರ ಮಗನನ್ನು ತನ್ನ ಮಗನೆಂದು ಸ್ವೀಕರಿಸುವುದು,–ದತ್ತು ತೆಗೆದುಕೊಳ್ಳುವುದು : ನಾಲ್ವಡಿ ಕೃಷ್ಣರಾಜ ಒಡೆಯರು ಜಯಚಾಮರಾಜರನ್ನು ಪುತ್ರಸ್ವೀಕಾರ ಮಾಡಿಕೊಂಡು ಯುವರಾಜನನ್ನಾಗಿ ಮಾಡಿದರು (ಒೂ೦). [ಸಂ.]

**ಪುತ್ರಾಂತರಾಯ** (ನಾ). ಮಕ್ಕಳಾಗುವುದಕ್ಕೆ ಇರುವ ವಿಘ್ನ : ಈ ಪುತ್ರಾಂತರಾಯಂ ಪುರಾತನ ದುಷ್ಕರ್ಮವಿಪಾಕಮೋ ಬೆಸಸಿಂ (ಸುಕುಮಾ. ೯–೦೦೯). [ಸಂ.]

**ಪುತ್ರಿ₁** (ನಾ). ಮಗನನ್ನುಳ್ಳವನು ; ಪುತ್ರವಂತ : ಸುವಿನೀತರ್ಕವಿತಾಪ್ರವೀಣರಭಿರೂಪರ್ಸರ್ವಶಾಸ್ತ್ರಜ್ಞರಿಂತಿವರಿಂದೈಸೆ ಜಗಕ್ಕೆ ಸೌಮ್ಯನರಸಿಂಹಾರ್ಯೋತ್ತಮರ್ ಪುತ್ರಿಗಳ್ (ಚಿತ್ರಗೋ. ೩–೯). [ಸಂ. ಪುತ್ರಿನ್]

**ಪುತ್ರಿ₂** (ನಾ). ೧. ಮಗಳು ; ಕುವರಿ : "ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾನೆನಿಕ್ಕುಂ" (ಚಿತ್ರಕೋ. ೩೯–೦೬); ವರಪುತ್ರೀಸ್ಥಿರಭಾವಕಾಮ್ಯವಿಲಸತ್ಸನ್ಮಾನ್ಯೆಯುಂ ಯಾನೆಯುಂ . . . ಗಿರಿರಾಜಂ ಕಳಿಪುತ್ತುಮಿರ್ದನತಿಯೋಗಧ್ಯಾನೆಯುಂ ಮೇನೆಯುಂ (ಗಿರಿಜ. ೩–೦೦). ೨. (ಸಮಾಸದ ಕೊನೆಯಲ್ಲಿ ಬಂದಾಗ) ಚಿಕ್ಕದು ಎಂಬರ್ಥದ ಶಬ್ದ : 'ಅಸಿಪುತ್ರಿ' ನೋಡಿ. [ಸಂ. ಪುತ್ರೀ]

**ಪುತ್ರಿಕೆ** (ನಾ). ೧. ಪುತ್ರಿ; ಮಗಳು : ದುರ್ವಿನೀತನ ತಾಯಿಯಾದ ಜ್ಯೇಷ್ಠಾದೇವಿಯು ಪುನ್ನಾಡ ಸ್ಕಂದವರ್ಮನ 'ಪುತ್ರಿಕೆ' (ಕರ್ನಾಟ. ೦೯೦). ೨. ಬೊಂಬೆ ; ವಿಗ್ರಹ : "ಪಾಂಚಾಲಿಕಾ, ಪುತ್ರಿಕಾ – ಈ ೨ ಪುತ್ತಳಿಗೆ" (ಹಲಾಯು. ೮೧–೩೩೯); ಮೆಲ್ಲನೆ ನಡೆತರ್ಪ ನೀಲಮಣಿಪುತ್ರಿಕೆಯುಂದದಿನಾದಮೊಪ್ಪಿದಳ್ (ಕಾದಂಬ. ೩೮); ನೀಂ ಪರವೆಣ್ಗಳನಪ್ಪುವುದನೆ ಬಯಸುತಿರ್ಪೆಯಪ್ಪೆಂದು ಕರಂ ಚೆಪ್ಪರಿಸಿ ನಾರಕರ್ ತಂದಪ್ಪಿಸುವರ್ ಕಾಯ್ದ ಲೋಹಮಯಪುತ್ರಿಕೆಯುಂ (ಸುಕುಮಾ. ೦೦–೯೬); ಪೊಳೆವ ಮುತ್ತಿನ ಬೊಂಬೆಯೋ ಶಿಂಗಳ ತಿರುಳ ಪುತ್ರಿಕೆಯೊ ಕಪ್ಪುರವಳುಕಿನಲಿ ಬಿದಿ ಕಡೆದು ತಿದ್ದಿದ ಸಾಲಭಂಜಿಕೆಯೋ (ಜೈಮಿ. ೩೨–೯೫). ೩. ನಕಲು : ಪ್ರತಿರೂಪ; ಪಡಿಯಚ್ಚು : ಇದು ಕೂಡ ಮೂಲದ ಮಾತೃಕೆಗೆ ಪುತ್ರಿಕೆಯಂತಿದೆ (ಸಾಹಿಸಂ. ೬೬) ; ನಮ್ಮ ಛಂದಸ್ಸು . . . ಆ ಲಲಿತರಗಳೆಯುದೇ ನೆಟ್ಟನೆಯ ಪುತ್ರಿಕೆಯಲ್ಲದೆ ಸರ್ವಥಾ ಆಂಗ್ಲ ಸರಳರಗಳೆಯ ಅನುಕರಣೆಯಲ್ಲ (ಗೋಕ್ರೃಥಾ. ೩೫ ಮುನ್ನುಡಿ). ೪. (ಸಮಾಸದ ಕೊನೆಯಲ್ಲಿ ಬಂದಾಗ) ಚಿಕ್ಕದು ಎಂಬರ್ಥದ ಶಬ್ದ. [ಸಂ. ಪುತ್ರಿಕಾ]

**ಪುತ್ರೀಧರ್ಮ** (ನಾ). ಮಗಳು ಪಾಲಿಸಬೇಕಾದ ಧರ್ಮಾಚರಣೆ : ತಂದೆಯನ್ನು ಪ್ರೀತಿಸುವುದು ಪುತ್ರೀಧರ್ಮ (ಕಲಿಕ. ೯೦). [ಸಂ.]

**ಪುತ್ರೇಷಣ** (ನಾ). ಮಗನಾಗಬೇಕೆಂಬ ಹಂಬಲ : ಪುತ್ರೇಷಣ ವಿತ್ತೇಷಣ ದಾರೇಷಣಂಗಳೆಂಬ ಈಷಣಾತ್ರಯವನುಳಿದು (ಆದವ. ವಚ. ೯೦–೦೩೦) : ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣಾತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸಮಾಡುವನು (ಹಮಾರ. ೨೪–೧೦ ತಾತ್ಪರ್ಯ). 'ಈಷಣಾತ್ರಯ' ನೋಡಿ. [ಪುತ್ರ + ಈಷಣ₁]

**ಪುತ್ರೇಷ್ಟತೆ** (ನಾ). ಪುತ್ರಲಾಭದ ಅಪೇಕ್ಷೆ : ಸಾವಧಾನದಲಿ ದುಃಖಾಶ್ರುವಂ ತೊಡೆದು ಪುತ್ರೇಷ್ಟತೆಯ ಭಾವವರಿದುಯಿಂತೆಂದನು (ನವನೀ. ೦೧–೦೨). [ಸಂ. ಪುತ್ರೇಷ್ಟತಾ]

**ಪುತ್ರೋತ್ಸವ** (ನಾ). ೧. ಮಗನು ಹುಟ್ಟಿದ ಸಂತೋಷದಿಂದ ಆಚರಿಸುವ ಉತ್ಸವ : ರಂಗರಸರ ಮನೆಯ ಪುತ್ರೋತ್ಸವದಲಿ ಕಲುರೆಟಿಯ ಮಹಾಜನಂಗಳು ಕೂತ್ರ್ಮ ಅನಂತತೀರ್ಥದೇವರಿಗೆ ಕೊಟ್ಟ . . . ತೋಟ ೧ (ಎಪಿಇ. XX, ೨೦೩–೩; 1250); ಪುತ್ರೋತ್ಸವಂ ಮಾಡಿ ಕೆಲವು ದಿನವಿರೆ . . . ಧರಿತ್ರೀಶ್ವರನ ರಾಜ್ಯಮಂ

ಕೆಗೆದುಕೊಂಡಬಿತರಾಳ್ದರು (ಕೃ.ಐಶಾ. ೨೬-೦೩). ೨. ಮಗನ ಜನನ : ಗಂಡುಮಗುವಿನ ಜನನ : ಪುತ್ರೋತ್ಸವಂ ಪೂತ್ಸವಂ ಕೆಳೆಯೋ ಸರ್ವರೋಳುತ್ತವಮಂ (ಸೋಮೇಶ. ೦೯); ಹರಿದು ಪುತ್ರೋತ್ಸವದ ನುಡಿ ಗಜಪುರದೊಳುಬ್ಬರವಾಯ್ತು ಪಾಂಡುವಿನರಸಿಯಲಿ ಸಂತಾನ ಜನಿಸಿದು ದೆಂದು ಜನಜನಿತ (ಕುವ್ಯಾ.೮.೯-೧೦); ಪಂತಿಗೆ ಪುತ್ರೋತ್ಸವವಾಗಲು ಮೊದಮೊದಲು ಅವನ ಮನಸ್ಸಿನೊಳಗೆ ತುಸು ಈರ್ಷೆಯ ವೇದನೆ ಹುಟ್ಟಿತ್ತು (ತಕ್ಕ.ಕ. ೯೧೭). [ಸಂ.]

**ಪುದಳ್‌ನಾಡು** (ನಾ). ಒಂದು ಸ್ಥಳದ ಹೆಸರು : ಪುದಳ್‌ನಾಡ ರಾಷ್ಟ್ರೀ ಕೋಳನ್ನೂರ್‌ನ್ನಾಮ ಗ್ರಾಮ (ಮೈ.ಆ೦. ೧೯೧೬. ೧೨-೩೦ : ೧ನೆಯ ಶತ).

[ ಪುದಳ್₁ + ನಾಡು ]

**ಪುದಾರು** (ನಾ). ಒಂದು ಬಗೆಯ ಭೂಮಿ : ಕಾಪ್ಯಪ್ಪೆಯಾ ಸಾಸಿರ್ವ್ವರ ಮಾಗತಿನ್ ಕೋಸಿಗರಾ ಜಯಮೆಲ್ಲ ಎಮ್ಮೋನ್ ಗೋಸಾಸಿ ಪುದಾರುಂ ಬೆದೆಮತ್ತಲುಂ ಪದಲ್ಪಾಣಮುಮವು ಕೊಟ್ಟೋನ್ (ಎಕ. VIII. ಸೊರಬ. ೯೦-೩ ; ಸು. ೫೧೦). [ ? ]

**ಪುದಿ₁**. ಹುದಿ₁ (ಕ್ರಿ). ೧. ಒಳಸೇರು ; ಒಳಗೊಂಡಿರು : ಪುದಿದ ತಾವರೆವಳ್ಳಿಯ ತಳಿಪ್ಪಿಸಿಂ ಪಸುಪರ್ಣಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗಳಿಗಳ್ ನಿರಂತರಂ (ಪದ್ಮಾ. ೧೧, ೮೯). ೨. ಅಂಟಿಕೊಳ್ಳು ; ಹತ್ತು : ಮೊಲೆಯುಂಬ ಕುಮಾರನ ಕಣ್ಣ ಕಜ್ಜಳಂ ಪುದಿಯುಮರೋಜ ಮೇಕೆ (ಅನಂತಪು. ೧೨-೯೯). ೩. ತಾಕು ; ತಗಲು : ದಿಗುವಸನರಡಿಗಳ್ ನೆಲನಮೊ[ನೊ]ಯ್ಯಗೆ ಪುದಿವುತಿರೆ ಚಂದ್ರಗತಿಯಿಂ ಸಂಗುಣಭೂಪಣ ಕುಕ್ಕುಟಾಸನ ದೇಪನೇಳ್ತಂದ (ಸಾಳ್ವಭಾ. ೩-೪). ೪. ಕೂಡಿಕೊಂಡಿರು; ಬೆರೆತುಕೊಂಡಿರು ; ಸೇರಿರು : ಕ್ರಿಯಾಕಾರಕದೊಳ್ ಪುದಿದರ್ಥವ್ಯಕ್ತಿಯ ನೀವುದು ಗದ್ಯಮನೇಕರೂಪಭೇದವಿವಿಕ್ತಂ (ಕವಿರಾ. ೦-೨೩) ; ಮಲೆವ ಪೊಸಗಂಪಿನೊಳ್ ಪುದಿದಲೆವೆಲರಾಟಿಪುದು ಖಚರದಂಪತಿಶತಮಂ (ಅಂಪು. ೦-೭೮) ; ಪೆರ್ಬುಸಿಯೊಳ್ ಪುದಿದಿರ್ದಧರ್ಮನಂದನನನೆ ಧರ್ಮ ನಂದನನೆನಲ್ಜೊರೆ (ಗದಾಯು. ೩-೩೨) ; ಅನೇಕಾಕ್ಷರದೊಳ್ ಪುದಿಯೆ ಲಘೂಪದೆ ಕೆಲಕೆಲವೊದವಿರ್ಕುಂ . . . ಶಿಥಿಲತೆಯುಂ (ಶಮುದ. ೯೩). ೫. ಆಗು ; ಒದಗು ; ಉದ್ಭವಿಸು : ಪುದಿದ ಪುಳಕಂಗಳಡ್ಡೈಸದಿ ರವೆನುತ್ತಂಜಿದಂತೆ . . . ಕಾಂತೆ ಹೃದಯದಿಂದಪ್ಪಿದಳುತ್ಸುಕೆಯಾಗಿ (ಕಾದಂಬ. ೬೭) ; ತುದಿಯೊಳ್ ದೀರ್ಘಾದೇಶಂ ಪೊದಟ್ಟು ಷಷ್ಠೀವಿಭಕ್ತಿ ಗರೆಬರ ಮತದಿಂ ಪುದಿದಿರ್ಕುಂ (ಕಾವ್ಯಾವ. ೦೩೬) ; ಪುದಿದ ರೋಮಾಂಚ ದದ್ಭುತದ ಸೊಗಸಿನ ಮೋಹನದ . . . ನವರಸವನುಣಿ ಸವಿದು ಸೊಕ್ಕಿ ಮಱಿದರನ್ಯೋನ್ಯಭಾವವನವರ್ಗಳು (ಕೃಐಶಾ. ೦೦-೨೩). ೬. ಹೊದಿಸು; ಆಚ್ಛಾದಿಸು : “ಪುದ-ಆಚ್ಛಾದನೇ, ದ್ವಾದಶಾಶ್ವೇ ಚ” (ಶಮಾಠ) ; ಕರಡಿಯ ತೊವಲೊಳ್ ಪುದಿದ ಕರ್ಬೊನ್ನ ರಥಮುಮಂ (ಪಂಪಭಾ. ೦೨-೭ ವ) ; ಲಲಿತಚಂಪಕದಳಕೆ ಬೆಳುದಿಂಗಳ ತಗಡ ಪುದಿದಂತೆ (ಜೀವಂಧ. ೮-೩). ೭. ವ್ಯಾಪಿಸು ; ಆವರಿಸು : ನಿಜಕೀರ್ತಿ ಲೋಕಮಂ ಪುದಿದಿರೆ ಪೊಕ್ಕ ನಂದು ನಿಜಮಂದಿರಮಂ ಪರಸೈನ್ಯಭೈರವಂ (ಪಂಪಭಾ. ೫-೦೦೫) ; ಗದೆ ಗದೆಯಂ ಘಟ್ಟಿಸೆ ಪುಟ್ಟಿದ ಕೆಂಡದ ಕಿಡಿಯ ಕುಂಡವೇಟುಂದೆಸೆಯಂ ಪುದಿಯೆ (ಗದಾಯು. ೮-೦೩) ; ಉತ್ಕಟಕೋಪಹೂಂಕೃತಂ ವನಜ ಭವಾಂಡಮಂ ಪುದಿಯೆ (ಜಗಚ. ೦೫-೫). ೮. ಆವೃತವಾಗು ; ವ್ಯಾಪ್ತ ವಾಗು : ನಟ್ಟ ಕರ್ಗಣೆಯ ಬಿಣ್ಪೊಟಿಯಿಂದೆ ಬಟಲ್ದುನುರ್ವಿ ಪೆರ್ವಿದಿರ ಸಿಡಿಂಬಿನೊಳ್ ಪುದಿದದೊಂದು ಕುಳಾಚಳದಂತೆ ಸಿಂಧುಜಂ (ಪಂಪಭಾ. ೦೦-೯೩); ಸ್ಮರರುಪುಲಲಾಟನೇತ್ರಸ್ಫುರದುರುಹುತವಹನಿನೆಯ್ದೆ ಬೇವುತ್ತಿರ್ದಾ ಸ್ಮರನ ಪೊಗೆಯಿಂದೆ ಪುದಿದಿರ್ದ ರತಿಯವೊಲ್ಕಾಂತೆ . . . ಎಸೆದಿರ್ದಳ್ (ಕಾದಂಬ. ೯೩) ; ಕಾಮಿನಿ ತನ್ನ ತುಂಗಕುಚತಟದ ಕಸ್ತೂರಿಯೊಳ್ ಪುದಿದ ಪ್ರಿಯನಂಗಮಂ ಕಂಡಿದೇತಕೆ ಕೃಷ್ಣರೂಪಾದೆ ನೀನೆಂದು ಬೆಸಗೊಳಲ್ಕೆ (ಕೃಐಶಾ. ೨೬-೨೦). ೯. ಮುದುಗಿಸು ; ಮುಚ್ಚು : ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಳ್ಚಿ ಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದು ಯ್ಯಂತುಯ್ದು (ಆಂಪು. ೨-೩೯ ವ) : ಇಂದ್ರಿಯಕ್ಷರಣೆಯಾದೊಡವನೊಂದು ಕದಳೀಪತ್ರದೊಳ್ ಪುದಿದು . . . ಓಪಳಲ್ಲಿಗಟ್ಟಿದೊವೆ (ಪಂಪಭಾ. ೧-೭೮ ವ). ೧೦. ಅವಿತುಕೊಳ್ಳು : ಅಡಗು : ಬಚ್ಚಿಟ್ಟುಕೊಳ್ಳು : ರಸಾತಳಂಬರಂ ಬೆದಕಿಯುಮೆಂತುಮಿವ್ವಳಿಸಿ ಕೊಂದಪೆನೇಟ್ಟು[ಪಾಠಾಂ. ಟ್ಟು] ದಿದೇಂ ಸುಯೋಧನಾ (ಪಂಪಭಾ. ೧೩-೮೦) ; ಕಿರುಪಿಟ್ಟರೆ ತಾ ಟುಟುವಲ್ಲ ತನ್ನೊಳ್ಪುದಿ ದಿರೆ ಇದು ನಿಜವಲ್ಲ ಪುನರಪಿಯೊಳಂತಿರೆ ಅದು ಸಹಜವಲ್ಲ (ಸರ್ವಜ್ಞ. ೬೯-೯೩೯): ಚೇಂಪ್ರ ಪನನೆಯುರಂತರಂಗದೊಳ್ ಪುದಿದ ಕೆಚ್ಚಂ ನ್ವಿಸುಪಂತೆ ರಂಜಿಸಿ ರಮಿಸುತಿಹ ಪುರುಷರಾ ಪುರದೊಳೆಸೆದಿರ್ದರು (ಕೃಐಶಾ. ೨೬ ೦೭). ೧೧. ಹೊಂದು : ತಾಳು : ಪಡೆ : ಮಂದಿರಾ ರಸದಿಂದಂ ಬಾರ್ಚಿವರೋ ಪೇಟಿಸಿಸಿ ಪೊಳೆವ ತಲೆದುಡಿಗೆಯಾ ರನ್ನದಿ ನ್ಯೋಸರ್ಪ ರಾಗರುಚಿಯ ಪುದಿದೆಸೆದುದು ಕೇಶಪಾಶಮಾ ಕಾಮಿನಿಯಾ (ಕಾವಂಲು. ೨೦). ೧೨. ತುಂಬು; ಇಡುಗು : ನೆಱಿವಟ್ಟು ಭಕ್ತಿ ದಯೆ ಪುದಿದಜಿವೌದಾರ್ಯಂ ಕ್ಷಮಾಗುಣಂ ಶಕ್ತಿಯುಮೆಂಬಱಿಕೆಯ ಗುಣ ದೋಟಱಿಳಂ ನೆಱಿದಿತ್ತರ್ ಮುನಿಯುಗಕ್ಕೆ ದಾನಮನವರ್ಗಳ್ (ಆಪು. ೯-೬೭): ಪುದಿದಟ್ಟಿಯಿಂದೆ ಪೊಡೆಮಡುವುದು ದಯೆಗೆಯ್ ಮಹಾಪ್ರಸಾದಮೆಂಬುದು (ಸುಕುಮಾ. ೧೦-೩); ಮದನಯಶಃಪಟಹಧ್ವನಿ ಪುದಿಯೆ ವಿಯಚ್ಚರನ ಕರ್ಣಮು ಹೃದಯಕ್ಕೆಯ್ದುದಿಲ್ಲ ದಿವ್ಯವಚನ (ಪಂರಾಮಾ. ೯-೯೪); ಅಂಗಲತೆಯೊಳ್ ಪುದಿದ ಸಕಲಪರಿಮಳಕೆಱಗುವಳಿಮಾಲೆ ಮೇಲೆ ಮಂಡಳಿಸಿ ನಿಲೆ (ವಂಪು. ೭-೪). ೧೩. ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಆ ಕಂಪುಂ ಮನಸ್ತಾಪಮುಮಂ ಪುದಿದೆತ್ತಂ ಬರೆ ಸುಯ್ ಪೊದಟ್ದು ಬಿಸಿದುಂ ಕಮ್ಮಿತ್ತುಮಾಯ್ತೋಪಳಾ (ಕಾವ್ಯಸಾ. ೫೮೦ ಕುದ್ರ೪); ಪುದಿದವ್ವಳಿಪೆನ್ನ ಕಾಯ್ಪು ಪೋಪಿನಮಿರದೀಗಳೀಂಟುವೆನೊ ದಾಂಟುವೆನೋ ಲವಣಾಂಬುರಾಶಿಯುಂ (ಆಂಪು. ೧೨-೭೦); ಪುದಿದ ಸುತಮೋಹದಿಂದೆ . . . ಅಱಿಯದೆ ದುಷ್ಟಕಷ್ಟರೊಡನಾಡಿಸಿದೆಂ (ಧರ್ಮಾಮೃ. ೨-೮೦). ೧೪. ತುಂಬಿಸು ; ತುಂಬಿಕೊಳ್ಳುವಂತೆ ಮಾಡು : ಅಖಂಡಲಸುತನೆಯ್ದೆ ನಭೋಮಂಡಲಮಂ ಪುದಿದನೆಯ್ದೆ ಶರಪಂಜರದಿಂ (ಜಗಚ. ೦೫-೩); ಸುಕಂಠ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೧-೩೭). ೧೫. ಹೊದೆ ; ತೊಡು : ಅಸ್ಥಿ ಚರ್ಮವ ಪುದಿದ ಮಱಿಯ ಹರಿಗೆಯೊಳು ಅಸುಭಟನೆಂಬ ಬಂಟ (ಸುಂಕದಂ. ೪. ೬೬೬-೭೭). ೧೬. ಒದಗಿಸು ; ಪೂರೈಸು : ಕಿನ್ನರ ಪನ್ನಗ ಖೇಚರಾಮರಪ್ರಮದೆಯರೀಕ್ಷಣಾಳಿನಿಕರಕ್ಕೆ [ನವೀನಸುಮ]ಪ್ರತಾನದಿಂ ಪ್ರಮದವನಾವಗಂ ಪುದಿಪ ಪಾವನವೃಕ್ಷಸಮಾವೃತೋಲ್ಲಸತ್ಪ್ರಮದಪಸಂಗಳೋಳಿ ಪೊಳೆದೊಪ್ಪುವು ದಲ್ಲಿಯ ಚೈತ್ಯಧಾತ್ರಿಯೊಳ್ (ಶಾಂತೀಶ್ವ. ೦೭-೩೭). ೧೭. ಮೂಡು ; ಕೆತ್ತನೆಯಾಗು : ಸಿರಿಗಾವುಣ್ಣನ ಎಟಿಸ್ತ ಪುದಿ[ದಿ ?]ದುದು (ಎಕ. XII. ೨೦೯-೨೩ ; ೮೧೪). **ಹುದಿ₁** : ೧. ಸಂಬುದ್ಧಿಯ ರಸವು ಪಾಜಿತ್ರು ಹುದಿದ ರಾಗದ್ವೇಷವಹ್ನಿಯಲಿ (ಕುವ್ಯಾಸ. ೧೩-೪೪) ೮. ಕೆದಱಿಗೇಶದ ಕಾಂತೆ ಹುದಿದಳು ಹರುಷಪುಳಕದಲಿ (ಕುವ್ಯಾಸ. ೦೫-೩೨). ೧೦. ಹಿಮಗಿರಿಯ ಕುಕ್ಷಿಯಲಿ ಹು[ಪಾಠಾಂ. ಪು]ದಿದ ನಾನಾದ್ರೋಣಿಗಳ ಮಧ್ಯದ ಕಿರಾತಪುಳಿಂದನಿಚಯದ ಸದೆವು ಹತ್ತಿದನಗ್ರಶಿಖರಕೆ ಪಾರ್ವತೀ ಪತಿಸ (ಕುವ್ಯಾಸ. ೩-೨೯) ; ಈ ಪರದಕರಪೆ ಮುನಿಹೃದಯಾವರಣದೆ ಹುದಿದು ನಿಂದು . . . ನಲಿಯುಕುಮೆಮ್ಮಂ (ಷಟ್ಪ್ರವಂ. ೮). ೧೩. ಹುದಿದ ಮಱುಭೂಮಿಯಲಿ ಮಾನ್ಯಸು ಖದಿರನಲ್ಲಿಗೆ ಗೂಗೆ ಕೋಗಿಲೆ (ಕುವ್ಯಾಸ.

೦೦-೩೯). ೧೪. ಕೀಳ್. ಎದೆಯಲಿ ಹದಿಯುರಿ–ಹೊಸ ಅಳ ಬಾಳಲಿ ಹುದಿಯುರಿ (ಹೊಂಗಳು. ೨-೦೨). ೧೫. ರಾಯನ ಹುದಿದ ಕವಚವ ಭೇದಿಸಿದವೊಳಬದ್ಧವಂಬುಗಳು (ಕುಮಾ.ಕ. ೦೦-೩೪). ೧೬. ಕೆಚ್ಚು; ಮೆಟ್ಟು; ಕೂರಿಸು : ಈ ಉಂಗುರಕ್ಕೆ ಅನೇಕ ವಜ್ರಗಳನ್ನು ಹುದಿದಿದ್ದಾರೆ (ಕೂಡ). 'ಪುದುಗು₁', 'ಪೊದೆ₁' ಪರಾ.

[ದೇ. ೧ ತಮಿ. ಪುತೈ; ಮಲ. ಪುದಯು]

**ಪುದಿ₂**, ಹುದಿ₂, ಹೊದಿ₂ (ನಾ). ೧. ಬಾಗಿಲಿನ ಪಕ್ಕ; ದ್ವಾರಪಾರ್ಶ್ವ: "ಪುದಿ- ಆಚ್ಛಾದನೇ, ದ್ವಾರಪಾರ್ಶ್ವೇ‌ಚ" (ಕಮಠಾ); ಮಂದಿರೊಳು ಮಣಿವಾಡದೊಳು ಪೊಂಬಾಗಿಲ ಪು[ಪಾಠಾಂ. ತು]ದಿಯೊಳು ಪಟ್ಟಶಾಲೆಯೊಳು ಮದನನ ಪೆಂಡವಾಸವೆನಲಾ ಪುರಸುದತಿಯರವನ ನೋಡಿದರು (ಶ್ರೀಪಾಠಾ. ೦೩-೩೯); ಮರಳಿ ಗೂಡಂ ಸಾರ್ದು ತಿರುಗಿ ಪುದಿಯಲ್ಲಿ ನಿಂದು ಮತ್ತೆ ನೋಡುವುದೊಮ್ಮೆ (ಶಂಕರ. ೯೬-೬); ಆತಪತ್ರವನ್ನು ದೇಹಳಿಯ ಹೊರಗೆ ಕೊಡಕೊಡಹಿ, ಪುದಿಗೆ ಒರಗಿಸಿ ನಿಲಿಸಿ (ಮಂತ್ರ.ಕ. ೩೦-೩). **ಹುದಿ₂** : ೧. ಸುಗ್ಗವ್ವೆ ಮಗನ ಬರವಂ ಪಾರ್ದು ಹೊಜಿಗೆ ಬಾಗಿಲ ಹುದಿಯುನು ಹತ್ತಿ ನಿಂದಿರ್ದು . . . ಮಱುಗುತ್ತಮಿರಲು (ಸಿದ್ಧರಾ. ೨-೯೩); ಬಾಗಿಲ ಹುದಿ[ದಿ]ಯಲ್ಲಿ ಭಂಗಿ ವಡೆದಂಗನೆ ನಿಂದು . . . ಒಪ್ಪಿದಳ್ (ಶಾಂತೀಶ್ವ. ೦೦-೩೯). ೨. ನೆಲೆ; ಆಶ್ರಯಂ; ಬೀಡು: ಹುರುಡಿನ ಹುತ್ತು ಹುಸಿಯ ಹುದಿ ಗದುಕಿ [ಪಾಠಾಂ. ೧]ನ ಗರುಡಿ ಗನ್ನದ ಗಡಿ . . . ಎನೆ ಕಣ್ಗಲ್ಲಿ ಕರಮೆಸೆದುದು ಸೂಳೆಗೇರಿ (ಕುರಾಪಾಠಾಂ. ೯-೧೦೨). ೩. (ಮಣ್ಣಿನ) ದಂಡೆ; ಕಟ್ಟೆ; ದಿಂಡು : ಮೆಣಸಿನ ಗಿಡಕ್ಕೆ ಹುದಿ ಏರಿಸುವುದಕ್ಕೆ ಹೋದವಳು . . . ಅಗಸೇ ಬಾಗಲಾಗೆ ಹಾದು ಬರಬೇಕೋ? (ಶಿಲಪು. ೨೩). **ಹೊದಿ₂** : ೪. ಪಕ್ಕ; ಪಾರ್ಶ್ವ : ಭೋಗದೇವರಿಗೆ ಆ ತಿರುವಿಡಯಾತದೆ ಮೂಡಣ ಹೊದಿಯಲು ಗದ್ದೆ ಕಂ ೯೦೦ . . . ಸಲುಉದು (ಎಕ. XIV. ಎಳಂದೂ. ೧೬೦-೮ ; ಶು. 1376). [< ಪುದಿ₁ /ತಮಿ. ಪುದವು, ಪುದ = ಬಾಗಿಲು]

**ಪುದಿನ** 'ಪುದೀನ' ನೋ.

**ಪುದಿಯಣ್ಣ** (ನಾ). ಒಬ್ಬಾತನ ಹೆಸರು : ಮಾಚರಸರ ಮಗಂ ಪುದಿಯಣ್ಣ ಗಂಗೇಶ್ವರಕ್ಕೆ ಬಿಟ್ಟ ದೇವಭೋಗದ ಗಟ್ಡಿ ಮೂಗಣ್ಡುಗಂ (ಎಕ. X. ಶ್ರೀನಿವಾ. ೦೭-೦೩ ; ಶು. 1015). [ಪುದಿ₂ + ಅಣ್ಣ₁]

**ಪುದಿವಟು** 'ಪುದಿವಟ್ಟು' ನೋ.

**ಪುದಿವಟ್ಟು**, ಪುದಿವಟು, ಪುದಿವೆಟು, ಪುದಿವೊಟ್ಟು, ಪುದುವಟ್ಟು (ನಾ). ದೇವಾಲಯ, ಕೆರೆ, ಕಟ್ಟೆ ಮೊದಲಾದುವುಗಳ ಜೀರ್ಣೋದ್ಧಾರ ಇತ್ಯಾದಿ ಸಾರ್ವಜನಿಕಕಾರ್ಯಗಳಿಗಾಗಿ, ಉದಾರಿಗಳಿಂದ ದತ್ತಿಯಾಗಿ ಬಂದ (ಬಡ್ಡಿಯ ಉತ್ಪನ್ನವನ್ನು ಉಪಯೋಗಿಸಿ ಕೊಳ್ಳಬಹುದಾದ) ಕೊಡಿಟ್ಟ ನಿಧಿ, – ಸಂಪತ್ತು, – ಠೇವಣಾತಿ : ಸಂಜಪ್ಪಯ್ಯನ ಪುತ್ರನಾದ ಕಪ್ಪಯ್ಯನು ಬರಕೊಟ್ಟ ಪುದಿವಟ್ಟಿನ ಬನ್ನವತ್ತಳೆ (ಎಕ. V. ಶೀಲೂರು. ೨೯-೯ ; 1717); ನಂಜುಂಡೇಶ್ವರನಿಗೆ ಮುತ್ತಾಲಿಸಟ್ಟಿಯ ಹೆಸರಿನಲ್ಲಿ ಒಂದು ಸೇವೆ ನಡೆಯುವಂತೆ . . . ಮುನ್ನೂರುವರಹಗಳನ್ನು ಅದಕ್ಕೆ ಪುದಿವಟ್ಟಾಗಿಡುತ್ತೇನೆ (ಶೀತಿಶಾ. XI. ೦೬). **ಪುದಿವಟು** : ಮುದ್ದರಾಜಯ್ಯನವರು ಕೊಟ್ಟ ಪುದಿವಟು ಕಂ ಗ ೩೦ ಮುವ್ವತ್ತುವರಹಾ (ಎಕ. IV. ಎಳಂದೂ. ೦೭-೦೯ ; 1667). **ಪುದಿವೆಟು** : ವಿಠಲದೇವರ ಅಮ್ರುತಪಡಿ ಪುದಿವೆಟು ನೈವೇದ್ಯಕೆ (ಕೌಇಇ. IX–ii. ೬೩೩-೧; 1554). **ಪುದಿವೊಟ್ಟು** : ಲಕ್ಷ್ಮೀನರಸಿಂಹಸ್ವಾಮಿಯವರ ಶ್ರೀಭಂಡಾರಕೆ ಧಾರಾದತ್ತವಾಗಿ ಸಮರ್ಪಣೆ ಮಾಡಿದ ಪುದಿವೊಟ್ಟಿನ ದ್ರುವ್ಯದಲಿ ದೇವಸ್ಥಾನಕೆ ಕ್ರಯಲಬ್ಧವಾಗಿ ತೆಗೆದುಕೊಂಡ ವೃತ್ತಿಗಳ ವಿವರಕೆ ಬರಸಿದ ಶಾಸನ (ಎಕ. XII. ತುಮಕೂ. ೯೬-೮೯ ; 1719). **ಪುದುವಟ್ಟು** : ಪುಟ್ಟದೇವರಾಜ್ಯೆಅರಸಿನವರು ೧೦೦ ವರಹ ಹಾಕಿರುವ ಪುದುವಟ್ಟಿನ ಸೇವೆಗೆ ಭದ್ರುಂ ಭೂಯಾದ್ (ಎಕ. II. ೨೨೩-೨೮ ; 1827); ಸಾವಿರರೂಪಾಯಿ ಪುದುವಟ್ಟು ನಮ್ಮಪ್ಪನ ಹೆಸರಿನಲ್ಲಿ ಮಂಜುನಾಥನಿಗೆ ಕೊಟ್ಟುಬಿಡೋದು (ಚಿಕಮು. ೯೨); ಒಂದು ದೇವಸ್ಥಾನವನ್ನೂ ಒಂದು ಸತ್ರವನ್ನೂ ಕಟ್ಟಿಸಿ ಅವಕ್ಕೂ ತಕ್ಕಷ್ಟು ವರಮಾನ ದೊರೆಯುವಂತೆ ಪುದುವಟ್ಟು ಹಾಕಿ ಸಮಿತಿಗಳನ್ನೇರ್ಪಡಿಸಿದನು (ಗುಹಾ. ೯೩). 'ಪುಲಿವೆಟ್ಟು' ಪರಾ. [ಪುದಿ₁ + ಪಟ್ಟು₄]

**ಪುದಿವು** (ನಾ). ೧. ಹೊಂದಿಕೆ ; ಕೂಡಿಕೆ ; ಸೇರುವಿಕೆ : ಕವಚನವರತ್ನದೀಧಿತಿನಿವಹಾರುಣಧವಳಕಿರಣಮಪರಾಜಿತನುತ್ತವಳನಿಸೆ ದೂರಪಾತೇಷುವೇಧದೊಳ್ ಪುಣ್ಣ ಸರಲ ಪುದಿವಂ ಪೋಲ್ಸಂ (ಶಾಂತಿಪು. ೩-೦೦೦). ೨. ಗುಂಪು ; ಸಮೂಹ : ಮಾಕಂದನಂದನದ ಬಳಿಸಿನೊಳಮಶೋಕವನದ ಪುದಿವಿನೊಳಂ ನಾಗಚಂಪಕವನದ ಸುತ್ತಿನೊಳಮತಿರಮಣೀಯಮಾಗಿ (ಶಂಪಾಕು. ೯-೦೩೪ ವ); ಸಂಜನಿತಮುದರಲ್ಲಿ ಸುತ್ತಿದ ಘನಸಾರದ ಪುದಿವನಡರ್ದ ಲತೆಗಳ ಮನೆಯೊಳ್ ಪೊಕ್ಕಿರೆ (ಶೀಜಾತಿ. ೩-೩೦); ಪಂದಳಿರ ತೋರಣಂ ತಳ್ಡೊಂದಿದ ಕೆಂಗುಡಿಯ ಪುದಿವು ಮುತ್ತಿನ ಕಡೆ ಚೆಲ್ಡಿಂದೆಸೆವ ಮಂಗಳಾನಕದೊಂದು ರವಂ ಬಗೆಗೆವಂದು ದಂದರಮನೆಯೊಳ್ (ಶಾಕ್ಯಾ.ಶ. ೨೩೯). ೩. ಮುಚ್ಚುವಿಕೆ ; ಹೊದಿಸುವಿಕೆ ; ಆಚ್ಛಾದನೆ : ಉದಿರ್ದ ಘನಸಾರನಿಚಯದ ಪುದಿವುಮನಲ್ಲೊಕ್ಕ ಮಲ್ಲಿಕಾಕುಟ್ಮಳದೊಂದೊದವುಮನುದಾತ್ತವ್ಯಗಮದದುದಿತ ಸುಸೌರಭದ ಭಾರವುಮಂ ತಳೆದುದುಮಂ ಕಂಡು (ಶೀಜಾತಿ. ೯-೨೯). ೪. ಸಂಪ್ರಿಕೊಳ್ಳುವಿಕೆ ; ಹೆಣೆದುಕೊಳ್ಳುವಿಕೆ : ಚದುರ ನಲ್ಲರ ಬಂಧ ಫಣಿಗಳ ಪುದಿವು (ಶಾಕ್ಯಶಾ. ೨೨-೬೦). [ಪುದಿ₁ + – ವು]

**ಪುದಿವೆಟು** 'ಪುದಿವಟ್ಟು' ನೋ.

**ಪುದಿವೊಟ್ಟು** 'ಪುದಿವಟ್ಟು' ನೋ.

**ಪುದೀನ**, ಪುದಿನ (ನಾ). ಔಷಧಿ, ಅಡುಗೆ ಮುಂತಾದುವಕ್ಕೆ ಬಳಸುವ, ವಾಸನೆಯುಳ್ಳ ಒಂದು ಬಗೆಯ ಸಸ್ಯ : ಪುದೀನ, ಚಟ್ಣಸೊಪ್ಪು (ಸ್ಮಶಿಗ. ೩೩-೦೦೬೦). **ಪುದಿನ** : (೬).

[← ಪಾರ. ಪೂದಿನ ; ಹಿಂ. ಪುದೀನಾ, ಪೂದನಾ, ಪೋದೀನಾ ; ಮರಾ. ಪುದಿನಾ, ಪುದಾನಾ, ಪುದಾಣಾ]

**ಪುದು** 'ಪುದುವು' ನೋ.

Δ **ಪುದುಂಗಿಸು** 'ಪುದುಗಿಸಂ' ನೋ.

Δ **ಪುದುಂಗು** 'ಪುದುಗು₁' ನೋ.

**ಪುದುಂಗುಳಿಸು** 'ಪುದುಂಗೊಳಿಸು' ನೋ.

**ಪುದುಂಗೊಳ್**, ಪುದುಗೊಳ್ (ಕ್ರಿ). ಹೊಂದಿಕೊಳ್ಳು ; ಕೂಡಿಕೊಳ್ಳು ; ಬೆರೆತುಕೊಳ್ಳು : ಪಟಗನ್ನಡಂ ಪುದುಂಗೊಳೆ ಕೊಟಿಸಕ್ಕದವಂ ತಗುಳ್ಚಿ ಜಾಣ್ಕಿಡೆ ಮುತ್ತಂ ಮೆಟಸಂ ಕೋದಂತಿರೆ ಪೇಟ್ವೆಟಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾ.ಶ. ೩೩); ಯಮುನಾಪ್ಲವವಂ ಗಂಗೆಯ ವಿಮಲಪ್ಲವಮೊಂದಿದಂತೆ ಸಭೆಯಂ ಪುದಿದಗಮರೀಚಿಯನುಜ್ಜ್ವಲದಂತಮರೀಚಿ ಪುದುಂಗೊಳಲ್ಕೆ ಕೃಷ್ಣಂ ನುಡಿದಂ (ಜಗ೦. ೦೩-೩೭); ಬಗೆಯೆಂತಂತು ಪಾಡು ಪಾಡೆಂತಂತು ಹಾವಂ ಹಾವಮೆಂತಂತು ಭಾವಂ ಪುದುಂಗೊಳೆ . . . ಆಡುವ ನಟ್ಟವಿಗರ ಕೂಟದಿಂ (ರಾಮಾಶ್ವ. ೨೩-೦೬). **ಪುದುಗೊಳ್** : ಕೊಲಿಸುವ ಕೊಲ್ವ ಶಾಶ್ವತರಮಾಗಿಸುವಾಗುವ ಕಳ್ವ ಕಳ್ವರೊಳ್ ಸಲೆ ಪುದುಗೊಳ್ವ ಪಾದರಮನಾಡಿಸು ಮಾಡುವ ಕಾಂಕ್ಷೆಯೊಳ್ ಮನಂ ಸಲಿಸುವ ಸ್ವಲ್ಪಪಾಪವರನುಂ ಶಠನುಂ ಖಳನುಂ ಕೃತಘ್ನನುಂ ಕಲುಷಿಯುಮುಟ್ಟುಮುಗ್ರನರಕಾಬ್ಧಿಗಭೀರಮನೆಯ್ದುವನ್ನೆಗಂ (ಸುಕುಮಾ. ೩-೪೪). [ಪುದು (< ಪುದುವು) + ಕೊಳ್₁]

**ಪುದುಂಗೊಳಿಸು**, ಪುದುಂಗುಳಿಸು, ಪುದುಗೊಳಿಸು (ಕ್ರಿ). ೧. ಕೂಡಿಸು ; ಸೇರಿಸು ; ಹೊಂದಿಸು : ಪಂಚರತ್ನಂಗಳುಮಂ ಪುದುಂ

ಗೊಳಿಸಿ ಪೊಂಗಳಸಂಗಳೊಳಿರ್ದ ಪುಣ್ಯತೋಯಂಗಳೊಳ್ಮಿಱಿ ಮಿಸಿ ಕಟ್ಟಿದನಾ ವಿಘ ವೀರಪಟ್ಟಮಂ (ಶಂಕಭಾ. ೧೧-೨೫) ; ಅಜನಂ ಪಾಳಿಯುಮಂ ಪುದುಂಗೊಳಿಸಿಕೊಂಡೀ ಭೂಮಿಯುಂ ಭೂಮಿಪರ್ ನೆಱೆಪಡೆಣ್ಗಿಂದುಮಿಳಾತಳಂ ಬೆಳೆಯುತಿರ್ಕೆ (ಸಂದೋಂಬ. ೬-೨೬೮). ೨. ಬೆರೆತುಹೋಗು ; ಕೂಡಿಕೊಳ್ಳು ; ಒಂದಾಗು : ಮಲಯ ಸಮೀರಣೇರಣಚಲತ್ತರುಶಾಖೆಗಳೊರ್ಮೆಗೊರ್ಮೆ ನೀರೊಳಗೆ ಬಱಲ್ದು ಹೇಮಸರಸೀಜರಜಾರುಣವಾರಿಯುಂ ಪುದುಂಗೊಳಿಸಿ . . . ತಣ್ಪು ವೆಸಕೆಯ್ವುವು ತೀರವನಾಂತರಾಳದೊಳ್ (ಅಜಿಪು. ೧೦-೬೪) ; ಕನ್ನಡಿಯ ಕಲಶದ ಬಣ್ಣಪುರದಾರತಿಗಳೆಡೆಗೆಡೆಗಿಡಿಸಿದ ಪಂಚರತ್ನದ ಕದಿರ ಪೊದಱೊಳ್ ಪುದುಂಗೊಳಿಸಿ ಸೆಗೆವ ಜಾಗದ ಪಡಲಿಗೆಗಳ ಅಗೆಯ ತುಱುಗಲಿಂ (ಅಪಂಕೃ. ೬-೪೦ ಪ). ೩. ಒತ್ತಾಗು ; ದಟ್ಟವಾಗು : ಅಳಿಗಿಟಿಯು ಬಳೆದು ಪುದುಂಗೊಳಿಸಿರ ಬಿದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ (ಶಂಕಭಾ. ೮೫-೧೬೬ ಪ) ; ಬೞಯಲರ್ಗಣ್ಗಳ್ ಬೆಳ್ಪಂ ಲಲನಾಜನದಧರ ಮಣಿಗೆ ಕೊಟ್ಟುದೞ ಪುದುಂಗೊಳಿಸಿದ ಕೆಂಪಂ ನೀರ್ಪೊಳಿಕಱಯೊಳ್ ಪೂಜೂಡಿ ಕೊಂಡ ತೆಱದಿಂ ತೋರ್ಕುಂ (ಕಾವ್ಯಾಪ. ೬೦೮). ೪. ಮುಸುಂಕು ; ಮುಚ್ಚು ; ಆವರಿಸು : ವಜ್ರದಂತನ ವಜ್ರದಂತೆ ಪೊಳೆವ ದಂತ ಪಂಕ್ತಿಗಳ ಕಾಂತಿಯವ ಕಾಂತೆಯುಂ ಪುದಿದು ಪುದುಂಗೊಳಿಸೆ ವಜ್ರದಂತನೆಂಬ ಪೆಸರಂ ನನ್ನಿ ಮಾಡಿ (ಆಪು. ೩-೯೯ ಪ). ೫. ತುಂಬು : ಬಱಲ್ಮಡಿಯುಂ ಸಡಿಲಿಸಿ ಪನಮಂ ತನಿಗಂಪಿನಿಂ ಪುದುಂಗೊಳಿಸುತುಂ (ಶಾಂತೀಶ್ವ. ೦೫-೦೦೧ ಪ). ೬. ಆಶ್ರಯ ಕೊಡು : ನಾಗಪಾಶಮನಶ್ರಮದೊಳ್ ಪಱಿದು ಬಲದ ಕೆಯ್ಯೊಳ್ ನಿಜಪ್ರಾಣವಲ್ಲಭೆಯುರಂ ಪುದುಂಗೊಳಿಸಿ (ಶಾಂತಿಪು. ೮-೩೦ ಪ) ; ಉಲಿವ ತಳಿರೆಲೆಯ ದನಿಗೆ ಬೆರ್ಚುವ ಶಿಶುವನಾತ್ಮಪಕ್ಷಪುಟದೊಳ್ ಪುದುಂಗೊಳಿಸಿಯುಂ (ಪಾರ್ಶ್ವಪು. ೩-೧೮೫). ೭. ಉಂಟುಮಾಡು ; ಹುಟ್ಟಿಸು : ಮುಗುಳ್ಗಳಾಟಮಂ ಪಳಪಳನೆಮೆಯಿಕ್ಕದೆ ನೋಡಿ ಮುಗುಳ್ನಗೆ ನಗುವ ವೀರಭಟರ ಮಂದಲೆಗಳುಂ . . . ರೌದ್ರರಸಂಗಳಂ ಪುದುಂಗೊಳಿಸೆ (ಶಂಕಭಾ. ೧-೧೧೭ ಪ) : ರೂಪು ನೋಟಕರ ಕಣ್ಗಮೃತಾಂಜನಪುಂಜಮುಂ ಪುದುಂಗೊಳಿಸೆ ನೃಪೇಂದ್ರನೋಲಗದೊಳಿರ್ದುದು ಪಾಪವಿರಾಗಿಣೀಜನಂ (ಅಪಂಕೃ. ೨-೨೦). ೮. ಪಡೆ ; ಹೊಂದು ; ತಾಳು : ತೊಂಬತ್ತೊಂಬೆ ಸಾಸಿರ ಯೋಜನಮುಂ ನೆಗೆದೀ ಸುರಗಿರಿ ಪೆಂಪನೇಂ ಪುದುಂಗೊಳಿಸಿದುದೊ (ಆದಿಪು. ೭-೬೪) ; ಆರೋಗ್ಯಂ ಮಾಱ್ಪಮೃತಾಹಾರಮನಂಬಿಕೆಗೆ ಬೋನಮೆತ್ತುವ ದಿವಿಜಸ್ತ್ರೀರುಚಿರಭೋಜನಾಂಗಲತಾರಮಣೀಯತೆಯನೇಂ ಪುದುಂಗೊಳಿಸಿದಳೋ (ಶಾಂತಿಪು. ೯-೦೬೯) ; ನಾಂದಮರೆ ಪತ್ತಿದಂಬರದಿಂದೆಸೆ ವರಸಿಯ ನಿತಂಬಬಿಂಬಮುನಬಳಾವೃಂದಮದಿಕ್ಷಿಸಿ ಹೃದಯದೊಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ (ಸಂತ್ರಪು. ೭-೧೬೦). **ಪುದುಂಗುಳಿಸು**: ೮. ತನು ರುಜೆಯಂ ಪುದುಂಗುಳಿಸೆ ಸಂಸೃತಿಭೋಗಮಸಾರಮೆನ್ದು ನಿಟ್ಟಿಸಿ (ಎಕ. VII. ಶಿಕಾ. ೩೮೯-೨೨: ೨೧೪). **ಪುದುಗೊಳಿಸು** : ೧. ಕರಸ್ಥಳದಲ್ಲಿಪ್ಪ ಇಷ್ಟಲಿಂಗಲಕ್ಷಣಮೆಂಬ ಕುಮಾರಮೂರ್ತಿಯಲ್ಲಿ ಪುದುಗೊಳಿಸಿ ಆ ಚಿತ್ಕಲಾ ಲಿಂಗವನ್ನು ಕೊಟ್ಟು ಸಂಬಂಧವ ಮಾಡಿತ್ತು (ಶಶಾ. II. ೫೬) ; ಪುದುಂಗೊಳಿಸಿದಂ, ಪುದುಗೊಳಿಸಿದಂ (ಕಮರ. ೦೬೭ ಕೃಹೋ).

[ ಪುದುಂಗೊಳ್ + – ಇಸು$_3$ ]

**ಪುದುಕುಱ್** (ಕ್ರಿ). ಕೂಡಿ ಯೋಚಿಸು ; ಜೊತೆಯಾಗಿ ವಿಚಾರ ಮಾಡು : ನಾಮಿರ್ವರ್ ಪುದುವಾಟೆವರ್ ನಾಮಿರ್ವರ್ ಪುದುಕುಱಯೆವರ್ (ಅಂತಿಗೊ. ೦೮-೩೬೪). [ ಪುದು (< ಪುದುವು) + ಕುಱು$_1$ ]

**ಪುದುಗಳ್ಳ** (ನಾ). ಜೊತೆಯ ಕಳ್ಳ : ವನಿತೆಯ ಮೋಹದಿಂ ಸುತರ ಮೋಹದಿನಿಪ್ಪರೊಳಾವ ಮೋಹದಿಂ ಧನಮನುಪಾರ್ಜಿಸಲ್ಪುಱುಗುವಂ ಕಳವಿಂ ಧನಲಾಭಮಾದೊಡಾ ವನಿತೆಯುಮಿಪ್ಪರುಂ ಸುತರುಮುಣ್ಬೆಡೆಯೊಳ್ ಪುದುಗಳ್ಳರೆಂದು ಘೋಂಕನೆ ಕಡಿದಿಕ್ಕೆ ಪೆರ್ದೆಸೆಯೊಳಲ್ಲಿದ [ ಪ ] ವರ್ಗದ ವಾಗಳಾ [ ರಾ ] ವರೇ (ರಮಾನು. ೬-೦೩೮).

[ ಪುದು (< ಪುದುವು) + ಕಳ್ಳ$_1$ ]

**ಪುದುಗಿಸು**, ಪುದುಂಗಿಸು, ಹುದುಗಿಸು (ಕ್ರಿ). ೧. ಬೆರಸು : ಕೂಡಿಸು ; ಸೇರಿಸು : ಅದಕೆ ಸ್ವಕ್ಕರೆಯಿಕ್ಕಿ ಯಾಲಕ್ಕಿಪುಡಿಯುಮಂ ಪುದುಗಿಸುವುದು (ಸೂಶಾ. ೨-೩೭). ೨. ಮುಚ್ಚು ; ಅಡಗಿಸು : ಮರೆಮಾಡು : ತೊಟ್ಟಿಲೊಳವಕ್ಕಳನೊಂದು ಚಿಪ್ಪಂಟ ಪತ್ತುಮಂ ಪುದುಗಿಸಿ ತಾಯೊಳಾ ತೊರೆವ ಬೀಳ್ಕೊಲೆಯುಂ ಸವಿಮರ್ಬಿ ಕೊಬ್ಬುಗಂ (ಶಕಾ. ೩-೩೬); ಒಂದು ಚಿಟಿಕೆ ನೀಡದೊಳಿರ್ದಂ ಕಿಱುಮಱಿಯಂ ಕುಟುಂಕಿತ್ತೆ ಱಂಕೆಯೊಳ್ ಪುದುಗಿಸಿಯುಂ (ರಾಜಶೇಖ. ೦೮-೨). △ **ಪುದುಂಗಿಸು** : ೩. ಇರಿಸು : ಇವಂ . . . ಭಕ್ತಿಯುಂ ಪುರುಷೋತ್ತಮನೊಳ್ ಪುದುಂಗಿಸಿ ಪದುಳದೊಳಿರ್ದಂ (ಶಕಾ. ೩-೧೧). **ಹುದುಗಿಸು** : ೨. ಪದುಮಕುಟ್ಮಲ ದೊಳಗೊಂದಱ ಲೆಕ್ಕವ ಹುದುಗಿಸಿ ಬರೆದವನಾರೊ ಚದುರೆ ನೀ ಪೇಳು (ಕಂಪಕ. ೬-೧೬೨); ಬೂದಿಯೊಳು ಹುದುಗಿಸುತ ವೇದಿಸುತ ಪುಱು ಮಾಡಿ ಕಾದಿರ್ದ ಚಿನ್ನದೊಳು ಬೆರಸಿ ಒರೆ ಹಚ್ಚಿ ಊದುತರೆ ಟೊಣೆವ (ಸರ್ವಜ್ಞ. ೦೯೦೪) ; ಒಲೆಯ ಬದಿಯಲಿ ತಲೆಯ ಹುದುಗಿಸಿ ಮಲಗಿಕೊಂಡಿಹ ಬೆಕ್ಕಿಗೆ ಕನಸಿನಲ್ಲಿಯು ಇಲಿಯು ಬಾರದು (ಕೇಮು. ೧೩-೦). ೪. ಕುಂದಣಿಸು ; ಕೆಚ್ಚು ; ಕೀಲಿಸು : ಗದಗದಿಪ ನವರತ್ನನಿಚಯವ ಹುದುಗಿಸಿದ ಸೌವರ್ಣ ಕಲಶದಿ ಮದನನಾ ಸೆರೆಯೆನಿಸಿ ಮೆಱೆವುದು ಪರಪರೂಥಪದು (ವಕಶ. ೯-೦೯).

[ ಪುದುಗು$_1$ + – ಇಸು$_3$ ]

**ಪುದುಗು$_1$**, ಪುದುಂಗು, ಹುದುಂಗು, ಹುದುಗು$_1$ (ಕ್ರಿ). ೧. ಸೇರು ; ಕೂಡು : ಒಳಗೆ ಪುದುಗಿರ್ದ ಪಂಪುಳದೊಳೊಪ್ಪುವ ಲತಾಂತ್ರಕುಟ್ಮಲ ದಂತೆ ಪರಗರ್ಭಲಾಂಛನದ ಕಾಂತಿಯುಂ ತಳೆವುದು (ತ್ರಿಬುಚ. ೦೮-೦೯) ; ಸವಿರಸ ಪುದುಗಿದ ಕಡುಫಲ ಸಹ ಪಲಸಿಹುವು (ಕಂಪಕ. ೫-೮೫). ೨. ಅಡಗು ; ಮರೆಯಾಗು : ಕುತುಬಲಾಂಭೋರಾಶಿಯೊಳ್ ಸೈಂಧವಂ ಪುದುಗಲ್ ಬಾಟ್ದನೆ (ಸೋಮೇಶ. ೩೭); ಎತ್ತ ಬಲ್ಲರ್ ಸುಜನರೆಲೆ ಪಾರ್ಥ ಕಪಟಗಳ ಚಿತ್ತದೊಳ್ ಪುದುಗಿರ್ದ ಮಾಟಮಂ (ಕೃಬಾಹಾ. ೨೯-೩೭); ಬೆದಱಿಯಾ ಮಾಧವಿ ಕುಶಲಪತಿಯುರ್ ಪೊನ್ನಂ ಕೊಂಡೋಡಿ ಕಡಗೋಣೆಯೊಳ್ ಪುದುಗಿದರ್ (ಶಕಾ. ೬-೨೬೨ ಪ). ೩. ತುಂಬಿಕೊಂಡಿರು ; ಹೆಚ್ಚಾಗಿ ಸೇರಿರು : ಪವಕಚಮರಿಯಂತ ಕಟ್ಟಾಣಿಮುತ್ತುಗಳ ಪುದುಗಿದಾಭರಣ ಗಳಿಟ್ಟು ವಿಧುಮುಖಿಯೊರ್ವಳೊಪ್ಪಿದಳಾಗ ಬೆಳುದಿಂಗಳಧಿದೇವತೆ ಯುಂದದಲಿ (ಕಂಪಕ. ೬-೦೦೦). ೪. ಉಂಟಾಗು ; ಒದಗು ; ಹುಟ್ಟು : ಇದು ಗಿಳಿದೇರನ ದಾಳಿಯ ಭೀತಿಗೆ ಪುದುಗಿದ ನಡುಕವೊ (ತಯಶಾ. ೪-೦೯). ೫. ಒಳಸೇರಿಸು ; ತುಂಬಿಸು ; ಕೂಡಿಸಿ ಇಡು : ರಕ್ತಾರ್ದ್ರಮುಕ್ತೋತ್ಕರವಂ ಮಂತ್ರಾಯ್ದು ಪುಣ್ಯತ್ರಿಯೊಳ್ ಪು[ಪಾಠಾಂ. ಹು]ದುಗಿ . . . ದುಃಖೋದ್ರೇಕದಿಂವಂ ಬಸೆ ಪರಪಸೆ ಬೀಸಿತ್ತು ಕರ್ಣಾಗ್ರದಿಂದಂ (ಅಕಾ ..೨೦); ತಲೆಯೊಳು ಬಿಲ್ವದಳಗಳಂ ಪುದುಗಿ ಬಾಯಲ್ಲಿಯುದಕವನು ಮುಕ್ಕುಳಿಸಿ ಕೊಂಡೆಯ್ತಂದು (ಹಾಕೋಕೃ. ೪-೪೦). ೬. ಅಡಗಿಸು ; ಮುಚ್ಚು ; ಮರೆಮಾಡು : ಒಡಿವಿಗವಕ್ಕಿಯ ತುಂಡುತುಂಡುಗಳನು ಸಡಿಲದೆ ಸೊಪ್ಪಿನೊಳ್ ಪುದುಗಿ ದಡಿಗಿಕ್ಕಿ ಹೊತ್ತವರನಿತಿನಿತೆಂಬುದ ಪಡಿ ಗಾಣೊಪ್ಪಡೆ ಶಕ್ಯವಲ್ಲ (ಸೋಹತ. ೦೯-೬೬); ವಾಯುಸಪ್ರತತಿ ಗಱಿಗಳಂ ಪೊದಿಸಿ ಮಗ್ಗುಲೊಳಿಟ್ಟು ಕೋಗಿಲೆಯ ಮಱಿಗಳಂ ಮೈಯೊಳ್ ಪುದುಗಿಕೊಂಡು ಮಱುಕದಿಂದೈದೆ ಪಾಲಿಸುತಿರ್ದುವು (ಕೃಬಾಚ. ೨೮-೪). △ **ಪುದುಂಗು** : ೧. ನೀಸವನ ಗಂಟಲೊಳು ಸಿಕ್ಕಿ ಕೇಲಿಸಿಯುಗುಳಲ್ ಶ್ಲೇಷ್ಮದೊಳ್ ಪುದುಂಗಿ ನಾನಾನಿರೋಧದಿಂ ಪೊರಳುತಿರೆ (ಅಕ್ಕಪು. ೩ ೬-೫); ಪೊರೆದರ್ ಕೊಂಗಣಿವರ್ಮರಾ ಬಟಕೆ ಬಲ್ಲಾಳರ್ ಕಱಂಬರ್ ತೆಲುಂಗರು

ಮಸಲಂಪಿಂದಿತ್ತು ಮತ್ತಾವ ದುರ್ವ್ಯಸನಂಗಳ್ ಪುಗದಂತೆ ಪೂಣ್ದು ಪುದುವಂದೇಕಾಂಗದಿಂ ತಾನೆ ಮಹಾಸಭೆಯೊಳ್ ನಿಂದು ಜಿತಾರಿಪಕ್ಷನದಜಂ ಬಾಕ್ಷೋತ್ಸವಂ ಕೊರ್ತರ್ ರಕ್ಷಿಸಗೆ (ರಜಾನಾ. ೦-೪); ಪುದುವಂದುದೆಂದು ನೆಲೆವೆರ್ಚಿರೆ ಭಾವರಸಂ ರಸಶ್ಲಾಘೆಯೊಳ್ ಪ್ಪುದುಪದವಿಟ್ಟಳಕ್ಕುಮೆನೆ ಭಾರತಿ ಬಂದು ಕಲಾವಿಳಾಸನಾ (ರಜಾನಾ.೦ ೬೨).

[ಪುದು (<ಪುದುವು) + ಪರ್]

**ಪುದುವಾಳ್₁** 'ಪುದುವಾಟು' ನೋ.

**ಪುದುವಾಳ್₂**, ಪುದುವಾಳಂ (ನಾ). ಕೂಡಿಕೊಂಡು ಬಾಳುವಿಕೆ; ಹೊಂದಿಕೊಂಡು ಬದುಕುವಿಕೆ: ಭಪವೇಕಾನೇಕಸತ್ತ್ವಾದಿಗುಣದ ಪುದುವಾಳೇಕದಾನೇಕ ಕಾಮೋತ್ಸವವೇಕಾನೇಕ (ಕಣ್ಣ. ೩೬); ಪುದುವಾಳ್ದಾಣದವರ್ಗೆ ತುಂಬಿಸಲಿನವ ಬಾಲಮೃಗ್ಗಳ್ ಗರ್ವದಿಂ ತಳರ್ದರು (ಉದ್ಯರೀ. ೩-೨೦). **ಪುದುವಾಳು**: ತರುಚರರ ಪುದುವಾಳು ಲೇಸೇ (ಕೌಶಾ. ೦೪-೬೨): ಆ ಖಿಳನ ಕೊರಲ ಕೊಯ್ದುದೊಡೆ ಪೇಳಲೇನವ ನೊಳಗೆನಗೆ ಬಳಿಕ ಪುದುವಾಳೆ (ಕುಮಾರ. ೩೩ ೬೮).

[ಪುದು (< ಪುದುವು) + ಬಾಳ್₂ (< ಬಾಳ್₂)]

**ಪುದುವಾಳು** 'ಪುದುವಾಳ್₂' ನೋ.

**ಪುದುವಾಳ್ಕೆ** 'ಪುದುವಾಟ್ಕೆ' ನೋ.

**ಪುದುವಾಳ್ತನ** (ನಾ). = ಪುದುವಾಳ್₂: ಪುದುವಾಳ್ತನಂ ಗಡ ಸಖಿರ್ಗೆಂತಾದೊಡಂ ಮಿತ್ರರೊಳ್ (ರಾಜಕೇ. ೧೩-೨೭).

[ಪುದುವಾಳ್₂ + — ತನ]

**ಪುದುವಾಟ್**, ಪುದುವಾಳ್₁, ಹುದುವಾಳ್ (ಕ್ರಿ). ೧. ಕೂಡಿ ಬಾಳು; ಸಹಜೀವನ ನಡೆಸು: ಆ ಪಣ್ಣಿಮಹಾಪಾತಕನ ಊರಿ[೦] ಕಳೆವುದು ಊರಾತನೇದಾತಂ ಪುದುವಾಟ ಸಲ್ಲಂ (ಶಾಸಂ. IX - i, ೨೪-೩೬; ೯೩೬); ಉಡಿಸಿಯುಮುಡಿಸಿಯುಮಟ್ಟಿಯನೆಡೆಯುಡುಗದೆ ಸಲಿಸಿ ಪಲವುಕಾಲಂ ಪುದುವಾಟ್ದೊಡಲಾತ್ಮನೊಡನೆ ಪೋಗದೆ ಕಡೆಗಣಿಸುವುದೆಂದೊಡುಟೆದರಂ ನಂಬುವುದೇ (ಅಂಕು. ೩-೬೦); ಸಾದಿಸುವೆಂ ಪಲ್ಗುಣನಂ ಸಾದಿಸುವೆಂ ಪವನಸುತನ ಬಸಿಱಂ ಪಾ ಕರ್ಣಾ ಮಾಶ್ವಾಸನ ತೆಗೆವೆಂ ನಿರ್ದೋಷಿಗಳಕ್ಕ ಯಮಜನೊಳ್ ಪುದುವಾಟ್ಟಿಂ (ಗದಾಯು. ೪-೧೦); ರಾವಣನೊಳ್ ಪುದುವಾಟ್ದ ದೋಷ ಹರನಕ್ಕ ವಿಭೀಷಣನಮರನದಿಯೊಳಭಿಮಜ್ಜನವಿರ್ದಪೊಲಿರ್ದಸಧಿಪನಂಗ ಪ್ರಭೆಯಿಂ (ಶಾಂತಿಪು. ೦೩-೬೪). ೨. ದಾಂಪತ್ಯ ನಡೆಸು; ಸಂಸಾರ ಮಾಡು: ಪಿರಿಯರಸಿಯು ಪಟ್ಟವೇಟದ ಪರಿವಿಡಿ ಮಗುಟ್ಟು ಕೊಸತರ್ದಾ ಸತಿಯೊಡನಂ ನರಪತಿ ನಿನ್ನಂಗಾಲೊಳ್ ನರೆ ಬರ್ಪನಮಮತ್ರರೋತ್ತರಂ ಪುದುವಾಟಿಬಾ (ಶಾಂತಿಪು. ೪-೩೨); ಪುದುವಾಟ್ಟಿನಕ್ಕ ಮಾಕ್ಕ್ಯಂಗನೆಯೊಳ್ (ಅಜಿತ. ೨-೬೩): ಆತಂಗೆ ಪರಸೆಯೊಂಬಳ್ ಪಾತಕಿ ಕುಲವನಿತೆ ಬೆಂನಿಸಿ ಕಟಿಯನೆಂಬ ಮಹಾಪಾತಕನೊಳ್ ಪುದುವಾಟ್ದಳ್ (ಶಾಂತಿಪು. ೬ ೩೩); ನಾಲ್ವರೊಳ್ ಮಚ್ಚಿವಾಟ್ದು ಕೊಂತಿ ಪಾಂಡುರಾಜಂಗೆ ಕುಲಸ್ತ್ರೀಯೆಂದು ಮನ್ನಿಸಿಕೊಂಬುದೆತ್ತ . . . ದ್ರೌಪದಿ ಪಾಂಡವರಯ್ವರೊಳ್ ಪುದುವಾಟ್ದಳೆಂಬುದೆತ್ತ (ಶಾಂತಿ. ೦-೨೪ವ). **ಪುದುವಾಳ್₁**: ೧. ಚಿ ಸವತಿಯೊಳ್ಪುದುವಾಳ್ವುದು ಕಷ್ಟಂ (ಎಪಿ. XVI, ೩೦-೩೨ ; 1081); ಸದಮಲಮಪ್ಪ ಭೂಚರರೊಳು ಮುದದಿಂ ಪುದುವಾಳ್ವನು (ಕೀಪಿಸಂ. ೩-೬೭). ೨. ಒರ್ವಳೊಳ್ ಪುದುವಾಳಲಜಿಯದೆಕ್ಕತುಳಗೆಯ್ದೊರ್ವಳಂ ತರಲ್ (ಉದ್ಯರೀ. ೪-೨); ದೇವ ನಿನ್ನೊಳು ಪುದುವಾಳ್ವ ಮೆಚ್ಚಿವರ್ಗೆ ಶಿಪುಣ್ಯ ಬೇಕು (ಶತ. ೨೦:೦೦೩). **ಹುದುವಾಳ್**: ೧. ಅದು ಇದು ಎಂಬುದೆಲ್ಲ ಹದಪರಿತಿಲ್ಲಿ ಹುದುವಾಳ್ಗ! (ಶಂಕು. ೩೦-೪).

[ಪುದು (< ಪುದುವು) + ಬಾಟ್₁]

**ಪುದುವಾಟ್ಕೆ**, ಪುದುವಾಳ್ಕೆ, ಹುದುವಾಳಿಕೆ, ಹುದುವಾಳಿಗೆ (ನಾ). ೧. = ಪುದುವಾಳ್₂: ಪುದುವಾಟ್ಕೆಗೊಡಂಬಡಲೊಲ್ಲದಿನ್ನುಮವ್ವಳ್ ಸುವನೀಗಳಾತನನೆ ನೀಂ ಬೆಸಗೊಳ್ ಪುಸಿಯಂ ಸುಯೋಧನಂ (ಪಂಪಭಾ. ೦೩-೮೯): ನಾಂ ಗಡ ಮಧ್ಯಸ್ಥಂ ನುಡಿವಂ ಗಡ ಪುದುವಾಟ್ಕೆಯನಗಮ ಪರ್ಗಂ ಸಂಧಾನಂ ಗಡ (ಗದಾಯು. ೭-೧೯). ೨. ದಾಂಪತ್ಯಜೀವನ; ಗಂಡ ಹೆಂಡಿರಾಗಿ ಬಾಳುವಿಕೆ: ಅವಳೆನ್ನಂ ಪರಿಗ್ರಹಿಸಿ ಧನಮಿತ್ರನ ನುದಾಸೀನಂಗೆಯ್ದುದಱಾನವಳೊಳ್ ಪ್ರೀತಿಯಿಂ ಪುದುವಾಟ್ಕೆಯಿಂದಿಕಲ್ (ವಡ್ಡಾ. ೬ ೬೩ ವ). **ಪುದುವಾಳ್ಕೆ**: ೧. ಬನ್ನಿಮೆನ್ನೊಡನೀಗ ಬೇರೊಂದು ಪುದುವಾಳ್ಕೆಗೆ (ಜಾಬೂದಿ. ೩೬-೯೯). **ಹುದುವಾಳಿಕೆ**: ೧. ಹೀಗೆ ಹುದುವಾಳಿಕೆಯಲ್ಲಿದ್ದ ಮಾಚಯ್ಯನಿಗೆ ಅಂತರಂಗದಲ್ಲಿ ಅವುದೋ ಅತೃಪ್ತಿ (ಕರಕ. ೪೦೩). **ಹುದುವಾಳಿಗೆ**: ೧. ಮಸವೇ ಸರ್ವತನುವೇ ಹೇಳಿಗೆ ಹಾವಿನೊಡತನ ಹುದುವಾಳಿಗೆ (ಕಕಕ. ೧೬೦). [ಪುದುವಾಟ್ + — ಕೆ]

**ಪುದುವಿರ್** (ಕ್ರಿ). = ಪುದುವಾಟ್ ೨: ಆಕೆ ಗಾಳಿಯೊಳ್ ಪುದುವಿರ್ದಳೆಂ ಬುದೆತ್ತ ಗಾಳಿಗಮಾಕೆಗಂ ಭೀಮಂ ಪುಟ್ಟಿದನೆಂಬುದೆತ್ತ (ಶಂಶಾ. ೧-೨೪ ವ).

[ಪುದು (<ಪುದುವು) + ಇರ್₁]

**ಪುದುವೀ** (ಕ್ರಿ). ಹಂಚಿ ಕೊಡು; ಪಾಲು ಮಾಡಿಕೊಡು: ಧರೆಯುಂ . . . ಕೈತವದಿಂದೈವರ ಕೆಯ್ಯೊಳಿಟ್ದುಕೊಂಡುಂ ಕುರುರಾಜಂ ಮತ್ತಮವರ್ಗೆ ಪುದುವಿತ್ತಪನೇ [ಪಾಠಾಂ. ಪುದು ಮಾಡುವನೇ] (ಗದಾಯು. ೪.೦೦).

[ಪುದು (<ಪುದುವು) + ಈ₂]

**ಪುದುವು**, ಪುದು, ಹುದು₁, ಹುದುವು₁ (ನಾ). ೧. ಗುಂಪು; ರಾಶಿ; ಸಮೂಹ: ಅರಮ ಅರಲ್ದ ಬಯಲ್ದಾವರೆಗಳ ಪುದುವುಗಳೊಳರಮ ಎಳದಳಿರ ಲತಾಂತರದೊಳುಟಿದುಟಿದು ಕಾಡುಗುಮಿರು ಳಪ್ಪಿನಮಹಸುವಿನಿಯಳಂ ಚಕ್ರಾಹ್ವಂ (ಅಪ್ಪಾಕ. ೯೬). **ಪುದು**: ೧. ಜಳದೇವತೆಗಿತ್ತಿದ ಪಕ್ಷಿಯ ಸತ್ತಿಗೆಗಳ ಪುದುವೆನಿಪುದು ವನಜವನದ ಕೊಡೆಮಲೆ ಪಲವುಂ (ಅಂಕು. ೦೦-೬೩); ಮುನಿಪತಿಯ ತೋರ್ವ ಬರಿಯಲ್ಲಿನ ಪುದುವಿಂ ಬೂದಿವಾಟಿಕ್ಕಿರ್ದರವಿಂ ಕಾಮನ ಸುಟ್ಟ ಕಾಡಿದೆನೆ ಕರ್ಗನೆ ಕನಿತುದು ಮಲದ ಮುಸಿಯ ಮುಸಕದಿನಂಗಂ (ಅರ್ಜಪು. ೦-೬೩); ಸನೆಗಳ ಪೂಸ ಪೂಗಳ ಕಾಯ್ಗಳ ಪುದುವಿಂದೆಸೆದುದಾ ವಿನೂತಂ ಚೂತಂ (ಕಾಂತೀಕ್ಕ. ೦೦-೦೦೪). ೨. ಕೂಡುವಿಕೆ; ಸೇರುವೆ; ಹೊಂದಿಕೆ: ಉಟಿದ ಮಹಾವತ್ತುಗಳೊಳಮ್ಪುದುವಿನೊಳೆ ಪತ್ತೊಡ್ಡಿಯನಿಕ್ಕಿ ಊರ್ಗ್ಗ ಅಳವಿಯನಿಕ್ಕಿ ಉಳ್ಳೊ (ಎಕ. III, ಹುಂತ್ನ. ೦೪-೮; 907); ಉದಯಿಸುಗುಂ ಶೂಲಂ ವಾತದಿಂ . . . ಆ ತ್ರಿದೋಷದ ಪುದುವಿಂದಾವಿಶ್ರಮಾಗಿ ತೋರ್ಕುಂ ತಮ್ಮೊಳ್ (ಕೋಶೋಕ. ೪-೩); ಮೆಯ್ಯಮಿರ ತುಱುಗಲೊಳ್ ತೊಡರ್ದೊಗೆದ ಬೆಮರ ಬಿಂದುಗಳ ಪುದುವಿಂ ಪನಿವುಲ್ಲೊರೆದ ಶಾದ್ವಲಸ್ಥಳಿಯನಿಟಿಕೆಯ್ವಳ್ (ಕರ್ಣಕ. ೪-೩೮ ವ). ೩. ಸಹವಾಸ; ಸಂಬಂಧ; ನಂಟು: ಈ ದುರಾತ್ಮನೊಳ್ ಪುದುವೆಸಗೇವುದೆಂದು ಬರುತಿರ್ದಪನಲ್ತೆ ಶರಣ್ಬುಗಲ್ . . . ಆ ವಿಭೀಷಣಂ (ಹುರಾಣಾ. ೦೨-೬೬); ಆ ದುರ್ಜನಸಶ್ವಗ್ರೀವನಾ ಕೋಟಲೆಯ ಪುದುವವೇತರ್ಕೆ (ಕಾಂತೀಕ್ಕ. ೨-೦೦೪); ಪಾವಿನ ಪುದುವೊಳ್ಳಿತು ಮುದಕಳದಂತಾವಳನೊಳು ಕೂಟ ಪತಿಲೇಸು . . . ಕುಲಟೆಯೊಳೋವಿ ಬಾಳ್ವ ಬಲ್ಲಿದನಾರೊ (ಸೊಬಗಿನ. ೦೬-೬೪); ಮೊದಲು ಸಿಕ್ಕಿದುದೆ ಸಾಕೆಮಗಧಿರೊಳೇಕೆ ಪುದು (ಕರಕ. ೪೩ ೩೩). ೪. ಒಂಟಿ ಒಡೆತನ ಅಥವಾ ಸಾಮೂಹಿಕ ಸ್ವಾಮಿತ್ವಕ್ಕೆ ಒಳಪಟ್ಟುದು,-ಅಳಪಟ್ಟುದು: ಪೊಲ್ಲಮೆಯುಂ ಗುಣಮುಂ ತಮಗಲ್ಲದೆ ಪುದುವಲ್ಲ ಮತ್ತೆ ತನಗುಂ ಪೆಱರ್ಗಂ (ಕಾಬಾ. ೩-೦೬೪); ಇರ್ವರೆ ವಣಿಕ್ಪುತ್ರರ್ ಪುದುವಿನೊಳ್ ಪರದುವೋಗಿ ಪಿರಿದಪ್ಪ ಪೊನ್ನಂ ಪಡೆದು ಮಗುಟ್ದು ಬಂದು (ಶಂಕಕು. ೧೬೦-೪); ಪುದುವೇಕನ್ಯಗ್ರ್ಗಮಾನೊರ್ಬ್ಬನೆ

ಕಳಿಯಲಿವಂ ಸಾರ್ವನೆನ್ನು . . . ಅಖಿಳಧರಾಭಾರವಮಂ ತನ್ನ ವಿಕ್ರಾನ್ತದ ಒಳ್ಪಿಂ ತನ್ನ ತೋಳೊಳ್ಪುದುವಳವಿಂರಿಸಿದಂ ವಿಕ್ರಮಾದಿತ್ಯದೇವಂ (ಎಕ. VII, ಶಿಕಾರಿ. ೧೨೯-೮ ; 1077): ತೇಜಂ ಪುದುವಿಲ್ಲೆನಿಸಿ ಪಿರಿಯಜಿಸೆ ಪರರಾಜಮಂಡಲಂ ತನ್ನಿಂ ಸಿನ್ನೀಜಂಬೆತ್ತಿರೆ ಬೆಳಗಿದನೀ ಜಗಮಂ ಭಾನುವೆಬಿಸಂ ಭಾಸುರಥಾ (ಶಂಖಾಶಾ. ೨ ೬೬). ೫. = ಪುದಿವಟ್ಟು : ಮುಂದದಿಂದಯ್ಯೂರ್ವರ್ಪ್ಪುದು ಮೊದಲರ್ತರ್ಗ ಮನಿತ್ತಲೊಲ್ಪು ಸೋಮೇಶಂಗೆ (ಶಾಸಿಇ. IX-೧, ೦೬೩ ೬೧ ; 1099). ೬. ಸಾಟಿ ; ಸವಂ ; ಸದೃಶವಾದುದು : ಶಿಳಿಗೊಳದೊಳಗೆಡೆಯಾಡುವ ಕಳಹಂಸನ ಬಣ್ಣಕೇಳಿ ಪುದುವೆನೆ ಮಧುಪಾಳಿಕನೇತ್ರಂ ಧವಳಾಂಗಂ ಪಕನ ಕಟ್ಟಿಮವ ಮೇಲೆ ದಟ್ಟಡಿಯಿಟ್ಟಂ (ಶಂಕಾಶಾ. ೩-೦೨೩) ; ಕರಿ ಕೊರೆಯೊಳ್ ಜವಂಗೆ ಪುದು ಕಾಯ್ಪನೊಳಗ್ನಿಗೆ ದಾಯಿಗಂ ಸಹೋದರರವಳಿಂ ಸಿಡಿಲ್ಗೆ ವಾದದೊಳ್ ಕಳೆ ಕಾಳಗೆ (ಅರ್ಜಿನೀ. ೮-೩೩) ; ವೀರತೆಯುಂ ಶೂರತೆಯುಂ ರುಚಿರೋದಾರತೆಯುಂ ಗುಣಗಂಭೀರತೆಯುಂ ಧೀರತೆಯುಂ ಪುದುವಿಲ್ಲೆನೆ ತನ್ನೊಳು ಕೌಸಲ್ಯೆಯ ತನಯಂ ರಾರಾಜಿಸಿ[ಸ] (ಕುಮುರಾ. ೯-೨೦). ೭. ಹೊಂದಿಕೊಳ್ಳುವ ವ್ಯಕ್ತಿ : ಎನಗೆಕ್ಕಟಂಗೆ ನೋಡೀಗಳಿಳಾತಳಿತಾಂಗಿ ಪುದುವಲ್ಲಳ್ (ಶಂಕಶಾ. ೯-೯೬). ೮. (ಸಂಖ, ರಾಜ್ಯ ಮುಂತಾದುವುಗಳ) ಪಾಲು ; ವಿಭಾಗ ; ಹಿಸ್ಸೆ : 'ಪುದುಗುಡು' ಪರಾ. ೯. ಪ್ರಭಾವ ; ವರ್ಚಸ್ಸು : ನಿನ್ನ ದಂಡನೀತಿಯ ಪುದುವೆ ಪಲಂ ದಂಡರತ್ನಮೆಂಬುದು ಪೆಚ್ಚಿತ್ (ಅಂಕ್ರಿ. ೦೩ ೨೬). ಹುದು~1~ : ೨. ಹುದು ನಡೆಜುದಿವರೊಡನೆ ನವ್ಮಾಲಿ ಕದನವೇ ಕೈಗಟ್ಟುಪುದು (ಕುಮ್ಮಾ. ೬-೬): ಜಾಳ ಬೆಲೆ ಹುದುವೆಂದು ಕಲಿತು, ಎಲಿತು (ಹೊಂಗೆಳು. ೫-೦೬). ೩. ಮಾಸಲು ಮುರಿಯದ ಒಲವಿಗೆ ಬಾಬ್ಬಿಡದೆ ಕಣ್ಣೊಡ್ಡಿ ಹುದುವಿನ ಸವಿ ಬೇಡಿದೆ (ಕಪಲೀ. ೦೦-೦೦೯). ೪. ಕೌರವನೊಳವಾಗೀ ವಸುಧೆ ಹುದುವಲ್ಲ ನೆಲನೇಕಾಧಿಪತ್ಯವಲೆ (ಕುಮ್ಮಾ. ೨-೩೩). ೬. ಹೆಣ್ಮಕ್ಕಳಬ್ಬರ್ನಾದಿರಿನಲಿ . . . ಇಬ್ಬರೂ ಹುದುವಲ್ಲದಾಕಾರ (ಪಾರಣ. ೯-೨೦೨). ೮. ಎಲವೊ ಮಾರುತಿ ನಿಮ್ಮೊಳಗೆ ಕೋಮಲೆಯ ಹುದುವನು ಮೆಚ್ಚಿ ನವ್ಮೊಳಗಿಳೆಯ ಹುದುವನು ಬಯಸಿದ್ಯೆ (ಕುಮ್ಮಾ೦೯. ೫-೦೨). ಹುದುವು~1~ : ೨. ಧರೆ ಸಿರಿಗಳರ್ವರುಂ ನರರ್ಗೆ ಹುದುವಾಗಲೆಲೆ ಹರಿ ನಿನ್ನ ಭಕ್ತರಕ್ಷಣೆಗೆ ಒಲವು ನೆರೆಯದಿರಲೆಂದತ್ರಿ ವರಸೂನು ಹರಿಗಿತ್ತಿವರದುಃಖವನೊರೆದ (ಹಾಸಂಕ. ೨ ೬೯). ೪. ಸಡುಸಣ ಹುದುವಿನ ಹೊರದ ಮಣ್ಣು (ಕೃ೮೦. ೦೯೩೩, ೩-೦೩ ; 1160): ಹೆಣ್ಣು ಹೊನ್ನು ಮಣ್ಣಂಬ ಜಗದ ಹುದುವಿನ ಒಡವೆಗೆ ಹೊಡೆದಾಡಲೇಕೆ (ಹೊಲೀಶಾ. ೦೬೬-೬೦೯) ; ಹುದುವಿನ ಗಂಡುತನವಿದನು ಶಶಿವದನೆ ಸುದು (ಕುಮ್ಮಾ೦. ೩-೯೬).

ಪುದು ಮಾಡು, ಹುದು ಮಾಡು = ಹೋದಿಸು ; ಕೂಡಿಸು : ಸಂಬಂಧ ಮಾಡು : ದಮ್ಮಯ್ಯ ಎಂದು ಪುದು ಮಾಡಬೇಕಾದ ನೆಂಟಸ್ತಿಕೆ ಸೆಟ್ಟಿರೇ (ದಶಪು. ೦೦೨) ; ಸದುಹೃದಯನ ತಂದು ನಿನ್ನವಯವದಲ್ಲಿ ಹುದು ಮಾಡಿದವನು (ಸೋಹಶ. ೨೨ ೩೬). ಪುದುವಾಗು = ೧. ಅತಿಶಯವಾಗು; ಹೇರಳವಾಗು : ಪುದುವಾದ ರಾಗಸಂಪದವು ಹೃದಯದೊಳೆಸೆಯೆ (ಅಕುಶ. ೫೯-೨). ೨. ಸೇರು ; ಈಡಾಗು : ಮುದದಿ ತ್ರಿದಶದ್ವೇಷಿದಿಲಿವಧೋಗತಿಗೆ ಪುದುವಾದರು (ಶಶಸೋ. ೦೮-೬). ಹುದು ಹಾಕು = ಜೊತೆ ಮಾಡು ; ಕೂಡಿಸು : ಇದಕ್ಕೆ ಮತ್ತೆ ಬೇರೆ ಮಾತುಗಳನ್ನು ಹುದು ಹಾಕಬಹುದು (ಹಾಟಸಂ. ೦೨೪).

[ ದೇ.೩ ತಮಿ. ಪೊತು ; ಮಲ. ತುಳು. ಪೊದು ; ತೆಲು. ಪೊತ್ತು ]

**ಪುದುವುಗು** (ಕ್ರಿ). ಕೂಡಿಕೊಳ್ಳು ; ಹೊಂದಿಕೊಳ್ಳು : ಸಜ್ಜನಸುಭಾಷಿತದೊಳ್ ಪುದುವೊಕ್ಕು ಸೇಸೆಯಂ ಮನಮೊಸೆದಾಂತು . . . ವಿದೇಹಿಯುಂ ಜನಕನುಮೇಳ್ದರ್ ಮಣಿವಿತಾನವಿರಾಜಿತಮಂ ವಿಮಾನಮಂ (ಶಂಕಾಶಾ. ೬-೯೩) ; ನೀಳವಿಕಸನದೊಳ್ ಸೂರ್ಯೋದಯಕೆ ಸಹಾಯತ್ವಮನೊದುವ ತಣ್ಣೆಲರುಮಲಸದೇಂ ಪುದುವುಗಣೆ (೦೬ಶಾಶ. ೪-೩೩).

[ ಪುದು (< ಪುದುವು) + ಪುಗು (< ಪೊಗು) ]

**ಪುದುವೆನಿಸು** (ಕ್ರಿ). ಸಮಾನವೆಂದು ತೋರು; ಸದೃಶವಾಗಿ ಕಾಣು: ತಾರಾವಳಿಯುಂ ತಳೆವ ನಭೋರಂಗದ ಭಂಗಿ ತನಗೆ ಪುದುವೆನಿಸಿದುದುಂ ಪೇರುರವುನದೇಂ ಮೆಚ್ಚಿದನೊ ಹಾರಮನೋಸರಿಸುವಂತೆ ನೃಪಸುತನೊರ್ವಂ (ಶಂಶಾಶಾ. ೩ ೩೩). [ಪುದು (<ಪುದುವು) + ಎನಿಸು]

**ಪುದುವೆಱು** (ಕ್ರಿ). ಸಮಾನವಾಗು ; ಸರಿಜೋಡಿಯಾಗು : ಪುದುವೆತ್ತ ಕೃಟಾಳಿಗಂ ಸವುನಿಸಿತ್ತಮಿಷ್ಟ್ರ ಗದಾಯುದ್ಧಮಂ ತ್ರಿದಶರ್ ನೋಡಲೆ ಕೌತುಕಂಬೆರಸಿ ಬಂದಿರ್ದರ್ (ಗದಾಯು. ೭-೬೮).

[ ಪುದು (< ಪುದುವು) + ಪೆಱು~1~ ]

**ಪುದುವೋಗು** (ಕ್ರಿ). ಹೊಂದಿಕೊಂಡು ಹೋಗು; ಜೊತೆಯಲ್ಲಿ ಬಾಳು: ಹೇರೂರ ಹೆಂಗೂಸು ಭವಿಗೆ ಸತಿಯಾಗಳಿ ಎಲೆ ವೈಜಕ್ಕಮ್ವೆ ತಾಂ ಭವಿಗೆ ಪುದುವೋಗಳೇ ಎಲೆಲೆ ಮಾಂಗಕ್ಕರಸಿ ಪಾಂಡ್ಯನೊಳು ಕೂಡಳೇ (ಕುಂದೀ೮. ೩-೦೬೯). [ಪುದು (<ಪುದುವು) + ಪೋಗು~1~ (<ಪೋ~1~)]

**ಪುದ್ಗಲ, ಪುದ್ಗಳ** (ಗು). ೧. ಸುಂದರವಾದ ; ರಮಣೀಯವಾದ. (ನಾ). ೨. ಅಣುವಿನ ತೀರ ಚಿಕ್ಕಭಾಗ; ಪರಮಾಣು. ೩. ದೇಹ; ಜಡಸತ್ತ್ವ : ಭಕ್ಷುವು ತನ್ನ ಚಿತ್ತದಿಂದ ಇತರ ಸತ್ತ್ವಗಳ, ಪುದ್ಗಲಗಳ ಚಿತ್ತಗಳನ್ನು ಹೊಕ್ಕು ತಿಳಿಯುವವನು (ಬುತ್ತಕ. ೦೯೯). ೪. ಜೀವಾತ್ಮ; ಸಂಸಾರಿಯಾದ ಆತ್ಮ: "ಪುದ್ಗಲ-ಜೀವನು, ಪರಮಾಣು" (೧೮೯೦೩. ೪೩೦). ೫. [ಜೈನ] ಪರಮಾಣುಗಳ ಸಂಯೋಗದಿಂದ ಉಂಟಾದ ಹಾಗೂ ಸ್ಪರ್ಶ, ರಸ, ಗಂಧ ಮತ್ತು ವರ್ಣಗಳನ್ನು ಹೊಂದಿದ ಅಜೀವತತ್ತ್ವ : ಚೇತನಾರಹಿತಮಜೇವತತ್ತ್ವಂ ಅದು ಗತಿಸ್ಥಿತ್ಯವಗಾಹಶರೀರಾದಿವರ್ತನಾಹೇತು ಧರ್ಮಾಧರ್ಮಾಕಾಶಪುದ್ಗಲ ಕಾಲಭೇದದಿಂ ಪಂಚವಿಧಂ (ಅಂಕ್ರಿ. ೦೨-೬೬ ೩); ಅನಂತವರ್ಗಸ್ಥಾನಂ ಪೋದಲ್ಲಿ ಪುದ್ಗಲರಾಶಿ (ಎಂಬುದು) ಪುಟ್ಟುಗುಂ (ಕಾವ್ಯಂಪು. ೨೮೦); ಬಲುಂ ಕೊಡದೊಳು ತುಂಬಿಮುದಕದಂದದೊಳು ಪುದ್ಗಲ ವಸ್ತುಲೋಕ ತುಂಬಿ ಹುದು (ಕರಕ. ೬೬ ೩೮); ಅಜೀವವು ಪುದ್ಗಲ . . . (ವಿಶ್ರಾಂತಿಯನ್ನುಂಟು ಮಾಡುವ ವಸ್ತು), ಆಕಾಶ ಮತ್ತು ಕಾಲ ಎಂದು ಐದು ವಿಧ (ಧಾಕತ್ತ್ವ. ೨೩೬). **ಪುದ್ಗಳ** : ೫. ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲ ಮುತತ್ತ್ವದೊಳ್ ಮಾಸಂ ನಿಲಿಸದ ಭಾವಮುಳ್ಳಸದ ಪುದ್ಗಳವಿಲ್ಲೆನೆ ಕರ್ಮ ಬಂಧದಿಂ . . . ತಿರಿತಪ್ಪುವು ಜೀವರಾಶಿಗಳ್ (ಸುಕುಶಾ. ೫-೩೨). [ಸಂ.]

**ಪುದ್ಗಲದ್ರವ್ಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲಗಳೆಂಬ ಆರು ಬಗೆಯ ದ್ರವ್ಯಗಳಲ್ಲಿ ಒಂದು : ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ . . . ವ್ಯಾಖ್ಯಾನಂಗೆಯ್ಯಲ್ (ಸುಕುಶಾ. ೩-೩೯ ೩); ಅಣುಗಳ ಪುಂಜವೇ ಪುದ್ಗಲ ದ್ರವ್ಯವು (ಹಿಂದಶಾ. ೬೦). 'ಷಡ್ದ್ರವ್ಯ' ಪರಾ. [ಸಂ.]

**ಪುದ್ಗಲಪುಂಜ** (ನಾ). [ಜೈನ] ಪುದ್ಗಲಪರಮಾಣುಗಳು ಸೇರಿ ಉಂಟಾದ ದ್ರವ್ಯ : ಪುದ್ಗಲ ಪರಮಾಣುಗಳು ಒಂದಕ್ಕೊಂದು ಸೇರಿದರೆ, ಪುದ್ಗಲಪುಂಜಗಳೆನಿಸುವುವು. ಇವುಗಳಿಗೆ ಪುದ್ಗಲಸ್ಕಂಧಗಳೆಂದೂ ಕರೆಯುವರು (ಕೈಪಶ. ೯೨೦). [ಸಂ.]

**ಪುದ್ಗಲವಿಪಾಕಿ** (ನಾ). [ಜೈನ] ಮೂರು ಬಗೆಯ ನಾಮಕರ್ಮಗಳಲ್ಲಿ ಒಂದು ಪ್ರಕಾರ : ಜೀವವಿಪಾಕಿಯುಂ ಪುದ್ಗಲವಿಪಾಕಿಯುಂ ಕ್ಷೇತ್ರ ವಿಪಾಕಿಯುಮೆಂದಿಂತು ನಾಮಕರ್ಮಂ ತ್ರಿವಿಧಮಕ್ಕುಂ (ಗೊಮ್ಮಟಾ. ೨-೬).

[ಸಂ. ಪುದ್ಗಲವಿಪಾಕಿನ್ ?]

**ಪುದ್ಗಲಾಸ್ತಿಕಾಯ** (ನಾ). [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶ ಎಂಬ ಐದು ಬಗೆಯ ಅಸ್ತಿಕಾಯಗಳಲ್ಲಿ ಒಂದು : ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯನಿಕಾಯ ಮುಮಂ . . . ವ್ಯಾಖ್ಯಾನಂಗೆಯ್ವರ್ (ಸುಕುಮಾ. ೩-೩೯೪). 'ಪಂಚಾಸ್ತಿಕಾಯ' ಪರಾ. [ಸಂ.]

**ಪುದ್ಗಳ** ' ಪುದ್ಗಲ ' ನೋ.

**ಪುನಃ** (ಅ). ಮತ್ತೆ ; ಮರಳಿ : ನೀನು ಪುನಃ ಇಲ್ಲಿಗೆ ಬಾರದು ಹೋಗು (ಕೂಡಿ).

**ಪುನಃಪುನಃ** (ದ್ವಿರುಕ್ತಿ) : ಗೀತೆಯ ಪುಟಗಳನ್ನು ಪುನಃಪುನಃ ತಿರುವಿದಾಗ ಮುಖ್ಯಸಂದೇಶ ' ಕರ್ಮಯೋಗ ' ಎಂಬುದು ಸ್ಫುಟವಾಗುತ್ತದೆ (ಕರ್ಮಕಾ. ೧೧೩). [ಸಂ. ಪುನರ್]

**ಪುನಃಶ್ರವಣ** (ನಾ). ಮತ್ತೆ ಕೇಳುವುದು ; ಇನ್ನೊಂದು ಸಾರಿ ಕೇಳುವುದು : ಹಿಂದೆ ಹೇಳಿದ ಎಷ್ಟೋ ಕತೆಗಳ ಪುನಃಶ್ರವಣವಾಯಿತು (ಮೂರುತಾ. ೧೪೦). [ಸಂ.]

**ಪುನಃಸಮಾಗಮ** (ನಾ). ಮರಳಿ ಕೂಡುವಿಕೆ ; ಪುನರ್ಮಿಲನ : ಹೇಮಕೂಟದ ದಿವ್ಯಾಶ್ರಮದಲ್ಲಿ ದಂಪತಿಗಳ ಪುನಃಸಮಾಗಮ (ಕಾವ್ಯಸ. ೩೦). [ಸಂ.]

**ಪುನಃಸ್ವಯಂವರ** (ನಾ). ಒಮ್ಮೆ ಸ್ವಯಂವರವಾಗಿ ಮದುವೆಯಾದವಳಿಗೆ ಮತ್ತೊಮ್ಮೆ ನಡೆಸುವ ಸ್ವಯಂವರ : ಸೃಜಿಸಿದನು ಸುದ್ದಿಯನು ನೃಪಭೂಭುಜರ ನಗರಂಗಳಲಿ ನಿಷಧನ ನಿಜಪತಿತೆಗೆ ಪುನಃಸ್ವಯಂವರವೆಂದು (ಕೂರಿತಾ. ೩-೨-೧೭). [ಸಂ.]

**ಪುನಕಾಲ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಜಗನಜ × × ಬಟಯ ಪುನಕಾಲರ ಮಗಂ ಜೂನೀವನ ತಮ್ಮಂ ಚೋಟಿಮೆರ್ಮಡಿಯರ ಮಟಬುಲಾದ ಗಣ್ಡ × × ಸಾವಿತರದೇವ (ಎ. II. ೩೭೮-೨ ; ಸು. 1015). [?]

**ಪುನಗು** 'ಪುಣುಗು' ನೋ.

**ಪುನರಪಿ₁** (ನಾ). ೧. ಮತ್ತೊಂದಾವರ್ತಿ ; ಇನ್ನೊಂದು ಸಲ,— ಬಾರಿ : ಬಟ್ಟೆಯು ಮೆಟ್ಟಿ ಹೋಗಿ ಪುನರಪಿಯಾಗಿ ತಿರುಗಿದಲ್ಲಿ ಊರ ಬಾಗಿಲ ಬಟ್ಟೆಯೊಂದಬಿಲ್ಲಿಯೇ ಹೋಗಬೇಕು (ಮುದ್ರಾ. ೨೮೭-೩೩); ಹಿತ್ತಲ ಸೊಪ್ಪಿಗೆ ನೀರ ಹೊಯಿದು ಮತ್ತೆ ಪುನರಪಿಯಾಗಿ ಕೊಯುವವನಂತೆ ಭಕ್ತರಿಗೆ ಬೋಧೆಯ ಹೇಳಿ ಚಿತ್ತವೃತ್ತಿಯನಳಿದು ಬೇಡುವಂಗೆ ಇನ್ನೆತ್ತಣ ಮುಕ್ತಿ (ಬಸವ. ೪. ೩೬೪-೦೬). ೨. ಮತ್ತೆ ಮಾಡುವ ಪರಾಮರ್ಶೆ ; ಪುನರ್ವಿಮರ್ಶೆ : ಕುಜುಹಿನಿಂದ ಅರ್ಜಿದಿಹೆನೆಂದಡೆ ಆ ಅರ್ಜಿವು ಪುನರಪಿಗೊಳಗಾಯಿತ್ತು (ದೋಷಮೂ. ೭೩-೨೮೭). [< ಪುನರಪ್ಯೆ]

**ಪುನರಪಿ₂** (ಅ). ಮರಳಿ ; ಮತ್ತೆ ; ಪುನಃ : ಜನಮೇಜಯನು ಮುನ್ನಿತ್ತ ಅಗ್ರಹಾರವಿದಂ ಪುನರಪಿ ಸಮಗ್ರವಲ್ಲುದ್ಧರಿಸಿ (ಎಕ್ಷಿ. ೫೭-೯೫); ಕರ್ಣನು ಭೀಮಸೇನನ ರಥವನಟ್ಟಿಸುತ ಬಂದು ಪುನರಪಿ ಕಾಳಗವ ಒಡಿದ (ಕುಮಾರವ್ಯಾ. ೦೩-೪೧) ; ನಾನು ಪುನರಪಿ ಅಲ್ಲಿಗೆ ಹೋದರೆ ಫಲವೇನು? (ಮುಂತಃಕ. ೨೬). [ಸಂ.]

**ಪುನರಾಗಮನ** (ನಾ). ಮರಳಿ ಬರುವಿಕೆ : ಬೇಸಗಿನ ಮಳೆಗಾಲ ಮಂತಿರ್ಮಳಿ ಲಲನೆ ಸರಸ ಪುನರಾಗಮನದ ಶರತ್ಪ್ರಸನ್ನತೆಗೆ ತಪಮಿರ್ದ ನೆಲಮಣ್ಣಿನಂತೆ (ಕನ್ನಾಂಗ. ೫೯-೦೬೦೮). [ಸಂ.]

**ಪುನರಾವರ್ತನೆ** (ನಾ). ಮತ್ತೊಂದು ಸಲ ಮಾಡುವುದು ಅಥವಾ ಆಗುವುದು : ಪಾಠದ ಪುನರಾವರ್ತನೆಯನ್ನು ಪ್ರಶ್ನೋತ್ತರಗಳ ಮೂಲಕವಾದರೂ ಮಾಡಿಸಬಹುದು (ಶಿಕ್ಷಣ. ೨೨೬). [ಸಂ. ಪುನರಾವರ್ತನ]

**ಪುನರಾವರ್ತಿಸು** (ಕ್ರಿ). ಮಾಡಿದುದನ್ನೇ ಮತ್ತೆ ಮಾಡು ಅಥವಾ ಆದುದೇ ಪುನಃ ಆಗು : ಆ ಅಂತಸ್ಸುಗಳನ್ನೆಲ್ಲಾ ಇಂದಿನವರೂ ಪುನರಾವರ್ತಿಸುವುದು ವ್ಯರ್ಥ (ಶಿಕ್ಷಣ. ೧೨೩). [ಪುನರಾವರ್ತನೆ+—ಇಸು₃]

**ಪುನರಾವೃತ್ತಿ** (ನಾ). ಮತ್ತೊಂದು ಸಲ ಮೊದಲಿನಂತೆ ಆಗುವಿಕೆ ಅಥವಾ ಮಾಡುವಿಕೆ : ಸಾಗರದ ಸಂಪರಿಪೂರ್ಣಜಲದೊಳ್ಸೇರಿದ ನದಿಗಳಿಗಿನ್ನು ಪುನರಾವೃತ್ತಿದೋರದ ತೆರದಿ (ಗಗಹಾ. ೦೭-೩೭) ; ಇಂತಹವರ ಪುನರಾವೃತ್ತಿಯಾಗದಂತೆ ಎಚ್ಚರ ತೆಗೆದುಕೊಳ್ಳಿರಿ (ರಂಗಕೋ. ೬೦). [ಸಂ.]

**ಪುನರುಕ್ತ** (ಗು). ೧. ಮತ್ತೆ ಹೇಳಿದ ; ಪುನಃ ನುಡಿದ. (ನಾ). ೨. ಇನ್ನೊಮ್ಮೆ ಹೇಳಿದುದು ; ಮತ್ತೆ ನುಡಿದುದು : ಮರನಲ್ಲದೆ ತಿಲಕಂ ಖೇಚರರ್ಗಂ ನೃಪನದಟ ಮೇಗೆ ಚಕ್ರಂ ಪುಟ್ಟಿರ್ದಿರೆ ಮೊದಲಗಣ್ಯ ಪುಣ್ಯಾಂತರಕ್ಕೆ ಪುನರುಕ್ತವಾದುದೇಂ ವಿಸ್ಮಯಮೋ (ಶಾಂತಿಪು. ೨-೩೯) ; ಪೋಗೆ ಸಿರಿ ಬಂಧುಪಥೂತತಿ ವೃದ್ಧರಾಜ್ಯಮೆಂದೆಳಸದೆ ಕೂಡೆ ಬೇರ್ಪಡೆ ಬಟಿಕ್ಕಿವನಾನಿನುಟಿವೊಂದು ಮಾತು ಭೂತಳಭರಧಾರಣಕ್ಷಮಭುಜಾಬಳ ಪೇಟಿ ಪುನರುಕ್ತಮಲ್ಲವೇ (ಚಂದ್ರಪ್ರ. ೨-೩೦). ೩. = ಪುನರುಕ್ತಿ ೨ : ಪುನರುಕ್ತಂ ಸಂಧಿದೋಷಂ ಸ್ವರತತಿ ಪದಪೂರ್ಣೋಕ್ತಿದೋಷಂಗಳೆಂದೆಂಬಿನಿತುಂ ದೋಷಂಗಳಂ ಬಿಟ್ಟು (ಸೂಕ್ತಿಸು. ೦೭-೩೯). [ಸಂ.]

**ಪುನರುಕ್ತಿ** (ನಾ). ೧. ಹೇಳಿದುದನ್ನೇ ಮತ್ತೆ ಹೇಳುವುದು. ೨. [ಕಾವ್ಯವಿಮಾ] ಒಂದು ವಾಕ್ಯದೋಷ; ಅನಗತ್ಯವಾದ ಶಬ್ದಾರ್ಥಗಳ ಪುನರುಚ್ಚರಣೆ : ಪುನರುಕ್ತಿ—ವಿಶೇಷ ಪ್ರಯೋಜನವೇನೂ ಇಲ್ಲದೆ ಒಂದೇ ಅರ್ಥವುಳ್ಳ ಒಂದೇ ಪದವನ್ನು ಅನೇಕ ಸಾರಿ ಉಪಯೋಗಿಸಿರುವುದು (ಕೃತಿಶಿ. ೨೨೬). ೩. (ಅಲಂ) ಬೇರೆ ಮಾತು : ನಾಲಗೆಗೆ ಪುನರುಕ್ತಿಯಾಗೆ ಪುರಂಧ್ರಿ ನಗುವಳಿಲ ಮೇಲೆ ನಾವ್ ನುಡಿದೆಡಹೆಮೆಂಬುದು ಮೇಲುಮಾತಾಗಿಹುದು (ಕೂರಿತಾ. ೩-೬-೪೦). [ಸಂ.]

**ಪುನರುಚ್ಚರಿಸು** (ಕ್ರಿ). ಹೇಳಿದುದನ್ನು ಹೇಳಿದಂತೆಯೇ ಮತ್ತೆ ಹೇಳು : ಪರದೇಶದವರೂ ಅವರ ಅಭಿಪ್ರಾಯವನ್ನು ಮಕ್ಕೀಕಾಮಕ್ಕಿ ಪುನರುಚ್ಚರಿಸುವ ನಮ್ಮ ದೇಶದವರೂ ಹೇಳುವ ಮಾತುಗಳನ್ನು ನಾವು ನಂಬಬೇಕಾಗಿಲ್ಲ (ದೀಕ್ಷ. ೯೨); ಒಲೆನಿನ್ ಸಂತೋಷದಿಂದ ಆ ಮಾತುಗಳನ್ನೆಲ್ಲಾ ತನ್ನಷ್ಟಕ್ಕೆ ತಾನು ಪುನರುಚ್ಚರಿಸಿಕೊಂಡನು (ಮುಲಿವಾ. ೨೦೦). [ ಸಂ. ಪುನರುಚ್ಚರಣ + — ಇಸು₃ ]

**ಪುನರುಜ್ಜೀವನ** (ನಾ). ಮತ್ತೆ ಏಳಿಗೆಯಾಗುವಂತೆ ಮಾಡುವಿಕೆ ; ಪುನರುದ್ಧಾರ : ಕೋರಿಯದಲ್ಲಿ ಲೋಕಮತಾನುಸಾರವಾಗಿ ಕೋರಿಯದ ರಾಜಮನೆತನದ ಪುನರುಜ್ಜೀವನಕ್ಕೊಪ್ಪಬೇಕಾಯಿತು (ಜಪಾಂ. ೬೦). [ ಸಂ. ]

**ಪುನರುಜ್ಜೀವಿತ** (ನಾ). ಪುನರುದ್ಧಾರ ಹೊಂದಿದುದು ; ಏಳಿಗೆಯನ್ನು ಪಡೆದುದು : ಆರ್ಯಸಂಸ್ಕೃತಿಯು ಪುನರುಜ್ಜೀವಿತವಾಗಿ . . . ಪುರುಷರತ್ನಗಳು ಎಲ್ಲಾ ವಿಧವಾದ ಕಾರ್ಯಗಳಲ್ಲೂ ಪ್ರವರ್ತಿಸತೊಡಗಿದರು (ರಾಕ್ಮೋದ. IV ಕ್ರಿಸ್ತಾಶಕ). [ ಸಂ. ]

**ಪುನರುಜ್ಜೀವಿಸು** (ಕ್ರಿ). ಮತ್ತೆ ಪ್ರಚಾರಕ್ಕೆ ತರು : ಪುನಶ್ಚೇತನಗೊಳಿಸು : ಱ ಮತ್ತು ೞ ಕಾರಗಳನ್ನು ಪುನರುಜ್ಜೀವಿಸುವ ವಿನಮ್ರ ಪ್ರಯತ್ನಗಳು . . . ಪಾಂಡಿತ್ಯಪ್ರಿಯಮಂಡಿತಮಂಡಳಿಯಿಂದ ನಡೆದಿದೆ (ದ್ರಾವಿಡ. ೩೫೭). [ ಪುನರುಜ್ಜೀವನ + — ಇಸು₃ ]

**ಪುನರುತ್ಥಾನ** (ನಾ). ಚೈತನ್ಯವನ್ನು ಹೊಂದುವಿಕೆ ; ಅಭಿವೃದ್ಧಿಗೆ ಬರುವಿಕೆ : ಧಾರ್ಮಿಕಕ್ಷೇತ್ರದಲ್ಲಿ ದಕ್ಷಿಣಹಿಂದೂಸ್ಥಾನದಲ್ಲಿ ಹಿಂದೂಧರ್ಮದ ಪುನರುತ್ಥಾನವು ಜೋರಿನಿಂದ ನಡೆದಿತ್ತು (ಜಾಟ. ೦೩೪) : ಹಿಂದೂಧರ್ಮವು ಪುನರುತ್ಥಾನವಾದ ಮೇಲೆ ಅಲ್ಲಿಗೆ ವೈದಿಕಮತವೂ ಹೋಗಿ, ಅಲ್ಲಿ ಹಿಂದೂರಾಜರು ರಾಜ್ಯ ಕಟ್ಟಿದರು (ಬಿಘಟ. ೨೯). [ ಸಂ. ]

**ಪುನರ್ಘಟನೆ** (ನಾ). ಮರಳಿ ವ್ಯವಸ್ಥೆಮಾಡುವಿಕೆ : ಹೊಸ ಸಾಧಾರಣ ಚುನಾವಣೆ ನಡೆದು ಪರಿಷತ್ತಿನ ಪುನರ್ಘಟನೆಯಾಗುವವರೆಗೆ ರಾಜ್ಯಪಾಲರು . . . ನಿರ್ದಿಷ್ಟವಾಗಿರುವ ಕಾರ್ಯಕ್ರಮವನ್ನು ಕೈಕೊಳ್ಳಬಹುದು (ಭಾರಾಶ. ೨೬೪); ಆರ್ಥಿಕ, ಸಾಮಾಜಿಕ ಹಾಗು ರಾಜಕೀಯ ಪುನರ್ಘಟನೆಯಾಗದೆ ಹೋದರೆ ನವ್ಯಜೀವನಸಾಹಿತ್ಯಗಳ ವಿಕಾಸ ಬರಿ ಒಂದು ಮಧುರಸ್ವಪ್ನ. ಆದರೆ ಈ ಪುನರ್ಘಟನೆಯ ರೀತಿ ಯಾವುದು ? (ಕಶ್ಯಕಾ. ೧೬).
[ ಸಂ. ಪುನರ್ಘಟನಾ ]

**ಪುನರ್ಜನ್ಮ** (ನಾ). ಮರುಹುಟ್ಟು ; ಮತ್ತೊಂದು ಜನ್ಮ : ಮುನಿ ದೀಶಂ ತವೆ ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ ನಿನಗೆ (ಕಂಕಪಾ. ೯-೩೧) ; ನಿರ್ಜರೇಂದ್ರನ ಸೂನು . . . ವೈವಮಿಚಿದು ಬಿದ್ದನಿಳೆ ಯೊಳ್ ಪುನರ್ಜನ್ಮವೆನೆ ಕೂಡೆ ಚೇತರಿಸಿ ನರನೆಚ್ಚು ಕಡಿದನಾತನ ಧನು ವನು (ಕೃಶಿ:ಶಾ. ೨೩-೪೩) ; ಪುನರ್ಜನ್ಮ ಪಡೆಯಿತು ! ಹರಿದು ಹಂಚಿ ಹೋದ ನಾಡು ಮತ್ತೆ ಒಂದಾಯಿತು ! (ಕಿಶಕ. ೬೯-೦).
[ ಸಂ. ಪುನರ್ಜನ್ಮನ್ ]

**ಪುನರ್ಜಾತ** (ಗು). ೧. ಮರಳಿ ಹುಟ್ಟಿದ ; ಹೊಸಜನ್ಮವನ್ನು ಪಡೆದ. 'ಅಪುನರ್ಜಾತ' ಹೋ. (ನಾ). ೨. ಸಂಸ್ಕಾರದಿಂದ ಹೊಸ ಜೀವನವನ್ನು ಪಡೆದವನು : " ಪುನರ್ಜಾತಃ — ಶಿವದೀಕ್ಷೆ ಹೊಂದಿದ ವನು, ಗುರುಕೃಪೆ ಪಡೆದವನು " (ಶಶಾ. ೨೯-೬) ; ಪೂರ್ವಪಳಿದು ಪುನರ್ಜಾತರ ಮಾಡಿದೆವೆಂಬಿರಿ ಪೂರ್ವಪಳಿದುದಕ್ಕೆ ಭವ ಹಿಂಗಬೇಕು (ಷೋಣಮೂ. ೩೯-೦೬೩) ; ನರ ಪಶು ಪ್ರಾಣಿಗಳಿಗೆ ಸುಜ್ಞಾನದೀಕ್ಷೆಯನಿತ್ತು ಪೂರ್ವಗುಣವಳಿದು ಪುನರ್ಜಾತರೆನಿಪ (ಚಪಮೋ. ೦೯-೧೬). [ ಸಂ. ]

**ಪುನರ್ದತ್ತಿ** (ನಾ). ಮರಳಿ ಮಾಡುವ ದಾನ ; ಪುನಃ ಕೊಡುವ ದಾನ : ಅನೆಸೆಜ್ಜೆಯ ಬಸದಿಗೆ ತಾಂಬ್ರಶಾಸನಮರ್ಯಾದೆಯಿಂದಾಳ್ದ ಗುಡಿಗೆಬಿಯು ಕಮ್ಮತಪಳಗಾಗಿಯಿಬ ಪೊಲನುಳ್ಳನಿಸುಮನಿನ್ನಿಂ ಮೇರೆ ಯುಮ್ಮ ಧರ್ಮವಾಗಿ ಪುನರ್ದತ್ತಿ ಮಾಡಿ ಶ್ರೀನನ್ದಿಪಣ್ಡಿತದೇವರ್ಗ್ಗೆ ಹುಸ್ತೋದಕಂಗೆಯ್ದು ಕೊಟ್ಟೆವು (ಸೌಇಇ. XX. ೪೬-೪೦ ; 1078); ಪುನರ್ದ್ದತ್ತಿಯಾಗಿ ನಾಲ್ಕುಂ ಸುಂಕದೊಳಪೆರಪೊಲ್ದಬ ಕೊಡಎಸವ ಸಹಿತವಾಗಿ ಬಿಟ್ಟ ಉಪ್ಪಿನ ಪೆ[ಂಟೆ] ಅಬಾಪತ್ತು (ಸೌಇಇ. XX. ೬೦-೨೪ ; 1088). [ ಸಂ. ]

**ಪುನರ್ದರ್ಶನ** (ನಾ). ಮತ್ತೆ ಕಾಣುವಿಕೆ : ಪುನಃ ಮಾಡುವ ಭೇಟಿ : ಪುನರ್ದರ್ಶನಮಕ್ಕೆಂದುಂ ಯಶಮಕ್ಕೆ ವಿಜಯಮಕ್ಕೆಂದೊಲ್ದಿಕ್ಕೆಂದು . . . ಅಚ್ಯುತಕಲ್ಪಕಚ್ಯುತೇಂದ್ರಂ ಪೋದಂ (ಶಾಂತಿಪು. ೬-೧೦೬). [ ಸಂ. ]

**ಪುನರ್ಧಾರೆ** (ನಾ). ಮರಳಿ ಧಾರೆಯೆರೆದು ಕೊಡುವಿಕೆ ; ಪುನರ್ದತ್ತಿ : ಶ್ರೀಮೂಲಸ್ಥಾನಭೋಗೇಶ್ವರದೇವರಿಗೆ ಸರ್ವ್ವನಮಸ್ಯವಾಗಿ ಪುನರ್ಧಾ ರೆಯ ಮಾಡಿದರು (ಸೌಇಇ. XX. ೦೯೩-೮ ; 1215).
[ ಸಂ. ಪುನರ್ಧಾರಾ ]

**ಪುನರ್ನವ** (ಗು). ೧. ಮತ್ತೆ ಹೊಸತಾಗುವ. (ನಾ). ೨. ಮರಳಿ ಹೊಸತಾದುದು ; ಪುನಃ ಹುಟ್ಟಿ ಬೆಳೆದುದು : ಉಡಿದೀ ನಮ್ಮವರ ತೊಡರ್ಪಿಂದು ನೀಂ ಪುನರ್ನವಂ ಮಾಡಿನ್ನುಂ (ಶಾಂತಿಪು. ೬-೦೦೪). ೩. ಹೊಸ ಚೈತನ್ಯವನ್ನು ಪಡೆದವನು : ದಿನದಿನದ ಜಾಡ್ಯದಲ್ಲಿ ಹೊಸತೇನೊ ಒಂದು ಚೈತನ್ಯ ಚಿಗುರಿ ಪುನರ್ನವನಾಗಿ ಅವನು ಕೆಲಸಕ್ಕೆ ಮರಳಿದರೆ ಶ್ರೇಯಪಲ್ಲವೆ ? (ಗಾಳಕ. ೩೬). ೪. ಉಗುರು ; ನಖ : " ಕಾಮಾಂಕುಶಾಃ, ಕರರುಹಾಃ (ಪುನರ್ನವಾಃ) . . . ನಖರಾಃ — ಈ ೫ (೬?) ಉಗುರ್ " (ಕರಾಮು. ೯೪-೩೫೭). [ ಸಂ. ]

**ಪುನರ್ನವಿ** (ನಾ). ಒಂದು ಬಗೆಯ ಸಸ್ಯ : ಬಿಳಿಯ ಗಣಜಲೆ ; ಕೊಮ್ಮೆಗಿಡ: "ಗಣಜಲೆ ಪುನರ್ನಪಿ ಶಿವಾಟಕಮೆನಿಕ್ಕು "(ಕುಂಗಕಾ ೪೦-೩೦); ಕನಕದ ಕಾಯನೊಂದಾದೆವಸು ತಿಬಿದಟ್ಟುಹ ಸುಣ್ಣದೊಳಿಲೊಳ್ ದಿನವಿರಿಸಿಟ್ಟು ಕಬ್ಬಿ ಗುರುಗುಂಜೆ ಪುನರ್ನವಿ ಪದ್ಮಪತ್ರಪೊಂಬಿನಿತುಮನಿಕ್ಕಿ ಸುಣ್ಣದೊಳಮಂ ಪದಪಿಂ ತೆಗೆವುತ್ತೆ . . . ಅಡುಗಾವ ಪಾಡಮಂ (ಲೋಕೋಪ. ೬-೩೦). [< ಸಂ. ಪುನರ್ನವಾ]

**ಪುನರ್ನವೆ** (ನಾ). = ಪುನರ್ನವಿ : " ಪುನರ್ನವಾ, ಶೋಥಘ್ನೀ — ೨ ಕೊಮ್ಮೆಗಿಡ " (ಸಿದ್ಧಾಂಶಿ. ೦೪೬). [ಸಂ. ಪುನರ್ನವಾ]

**ಪುನರ್ಭರಣ** (ನಾ). ಮರಳಿ ನೆಲೆಗೊಳಿಸುವಿಕೆ ; ನವೀಕರಣ ; ಜೀರ್ಣೋದ್ಧಾರ : ಪ್ರಘಟ್ಟದಿಂ ಕೆಟ್ಟ ಸಮ್ಮನ್ತಿಯಂ ಪುನರ್ಬ್ಭರಣಂ ಮಾಡಿ (ಎಇ. XV, ೬೯-೦೬; 1060) ; ಪುರಿಗೆರೆಯೊಳ್ಪೆರ್ಮಾಡಿಯ ಪುರವರದಮಳದಿಬ್ಬದ ಗಡಾರಿಧ್ವಜಾದರದಿನ್ದಮೆ ನೋಡಿ ಪುನರ್ಬ್ಭರಣಂ ಮಾಡಲ್ವೇಡಿ ಜಯಕೇಶಿನೃಪಂ . . . ಮಾಡಿದು ತತ್ಪುರಮಂ (ಸೌಇಇ. XX, ೪೭-೩೩ ; 1074); ರಾಯಮುರಾರಿ ಸೋವಿದೇವ . . . ಮಣಿಯೂರು ಪುನರ್ಬ್ಭರಣಂ ಮಾಡಿ ಮುತ್ತಗೆಯ ನಡುವಣ ದಕ್ಷಿಣ ಮುಖ ಶ್ರೀಚೆನ್ನಕೇಶವರ್ಗೆ ಧಾರಾಪೂರ್ವ್ವಕಂ ಕೊಟ್ಟಂ (ಕೊಡ್ಯಾಶಾ.೯-೪೫ ; 1170). [ಸಂ.]

**ಪುನರ್ಭವ** (ನಾ). ೧. ಮರುಹುಟ್ಟು : ಪುನರ್ಜನ್ಮ : ಜಾನಿಸುತ ಪರಪದದಲ್ಲಿ ಕೂಡಿರ್ದನಾದೊಡೀ ರಸೆಯೊಳಾತಂಗಾ ಪುನರ್ಭವಮದಿಲ್ಲಾ (ಅಕ್ಕಶ. ೬೩-೬೨). ೨. ಉಗುರು ; ನಖ : "ಪುನರ್ಭವಃ , ಕರರುಹಃ, ನಖಃ, ನಖರಃ . . . ೪ ಉಗುರುಗಳ ಹೆಸರುಗಳು" (ಸಿದ್ಧಾಂಶಿ. ೦೪೩). ೩. ಕೂದಲು.

**ಪುನರ್ಭವನಾಗು** = ಮರಳಿ ಹುಟ್ಟುವವನಾಗು; ಸಾಯು : ದಿವಸಕರ ಚಂದ್ರಯುತ ಭಾರ್ಗವನಂ ಜನ್ಮಾವಸರದೊಳೀಕ್ಷಿಸುವಡೆ ದೇವವಿನೂತ ಪುಟ್ಟಿದ ಮಾನವನಿರದೆ ನವಾಬ್ದದಿಂ ಪುನರ್ಭವನಕ್ಕುಂ (ಜಾತಕ. ೬-೨೯). **ಪುನರ್ಭವನೆನಿಸು** = ಪುನರ್ಭವನಾಗು : ನಿಲೆ ತದುಶಾಧೀಶ್ವರಂ ಷಷ್ಠಗೇಹ ದೊಳಾ ಲಗ್ನಭವಂ ಪುನರ್ಭವನೆನಿಕ್ಕುಂ ತತ್ಕ್ಷಮಾಣಾಹವಿಂ (ಜಾತಕ.೬-೩೭).
[ಸಂ.]

**ಪುನರ್ಭವಿಸು** (ಕ್ರಿ). ಮತ್ತೆ ಹುಟ್ಟಿ ಬರು : ನಿನ್ನ ಪತಿ . . . ದಹನ ವಾದಾ ನೀನು ಬಂದೆಗಲಾವಿತ್ತಯಾಶೀರ್ವಚನವೇನು ಪುಸಿಯಾದು ಪುನರ್ಭವಿಸಿ ಬಾದಪನು (ಶಶಕೋ. ೬-೪೩). [ಪುನರ್ಭವ + — ಇಸು]

**ಪುನರ್ಭೂ** (ನಾ). ೧. ಮರಳಿ ಹುಟ್ಟಿ ಬಂದುದು ; ಪುನರ್ಜನ್ಮ ಹೊಂದಿದುದು. ೨. ಮರುಹುಟ್ಟು ; ಪುನರ್ಜನ್ಮ. ೩. ಮರು ಮದುವೆಯಾದವಳು ; ಎರಡನೆಯ ಸಲ ಮದುವೆಯಾದವಳು : "ಪುನರ್ಭೂಃ, ದಿಧಿಷೂಃ — ಈ ೨ ಮರುಮಾಟವಳ್" (ಕರಾಮು.೬೦-೩೩೦) ; ಪುನರ್ಭೂ ಎಂದರೆ ಮೊದಲು ಒಬ್ಬನನ್ನು ಮದುವೆಯಾಗಿ ಆಮೇಲೆ ಮತ್ತೊಬ್ಬನನ್ನು ಮದುವೆ ಮಾಡಿಕೊಂಡವಳು (ಅರ್ಥಶ. ೦೩೦). [ಸಂ.]

**ಪುನರ್ಮಿಲನ** (ನಾ). ಪುನಃ ಭೇಟಿಯಾಗುವಿಕೆ ; ಪುನಃಸಮಾಗಮ : ದುಷ್ಯಂತ . . . ತಮ್ಮ ಪುನರ್ಮಿಲನದ ಗುರುತಾಗಿ ಅದನ್ನು ತೊಡಿಸಲು ಬರುತ್ತಾನೆ (ಕರ್ಮಕಾ. ೬೩). [ಸಂ.]

**ಪುನರ್ರಚನೆ** (ನಾ). ಇದ್ದುದನ್ನು ನವೀಕರಿಸಿ ಪುನಃ ನಿರ್ಮಿಸುವಿಕೆ ; ಪುನರ್ನಿರ್ಮಾಣ : ಶಿಕ್ಷಣದ ಪುನರ್ರಚನೆಯಲ್ಲಿ ರಾಷ್ಟ್ರ ಈಗ ಎರಡು ಮುಖ್ಯ ಮುಂಬಾಗಗಳಲ್ಲಿ ಹೆಜ್ಜೆಯಿಡುತ್ತಿದೆ (ಶಿಕ್ಷಕ. VIII ಸುಪ್ರಮ).
[ ೞ 'ಪುನಾರಚನೆ' ಎಂಬುದು ಇದರ ಶುದ್ಧರೂಪ]

**ಪುನರ್ರಚಿಸು** (ಕ್ರಿ). ಮರಳಿ ನಿರ್ಮಿಸು ; ಪುನಃ ರಚಿಸು : ಪದಗಳ ಧ್ವನಿರೂಪವನ್ನು ಪುನರ್ರಚಿಸಲು ಈ ಎಲ್ಲ ದ್ರಾವಿಡಭಾಷೆಗಳ ರೂಪಗಳನ್ನು ತುಲನೆ ಮಾಡಿ ನೋಡಬೇಕು (ದ್ರಾಶಿಶಿ. ೦೦ ಟಿಪ್ಪಣಿ).

ೞ ವ್ಯಾಕರಣದ ಪ್ರಕಾರ ಇದು ಅಸಾಧುರೂಪವಾದರೂ ಈಚೆಗೆ

ಇಂತಹ ಶಬ್ದಗಳು ಅಧಿಕವಾಗಿ ಪ್ರಯೋಗಗೊಳ್ಳುತ್ತಿವೆ. ಉದಾಹರಣೆಗೆ 'ಅಂತರ್ರಾಷ್ಟ್ರೀಯ' ಇತ್ಯಾದಿ. [ಪುನರ್ರಚನೆ + –ಇಸು₃]

**ಪುನರ್ವಾರಣ** (ನಾ). = ಪುನರ್ಭರಣ : ರುದ್ರಶಕ್ತಿಪಂಡಿತರ್ಗೆ ಧಾರಾಪೂರ್ವಕಂ ಸರ್ವನಮಸ್ಯಂ ಪುನರ್ವಾರಣಮಾಗಿ ಕೊಟ್ಟ ಪೂರ್ವವೃತ್ತಿಯ ಗದ್ದೆ ಮತ್ತರೆರಡು (ಕ್ಯಾಅ. ೧೯೨೯, ೬೩–೩೬ ; 1028).

[ಈ ಇದು 'ಪುನರ್ಭರಣ' ಎಂಬುದರ ಅಪಲಿಖಿತವಿರಬಹುದು]

**ಪುನರ್ವಸತಿ** (ನಾ). (ಪುನಶ್ಚೈತನ್ಯವನ್ನು ಪಡೆಯಲು ಒದಗಿಸುವ) ಮರುವಸತಿ : ಆಯಿಲೆಯಿಂದ ನರಳಿದ ರೋಗಿಗಳಿಗೆ ಪುನರ್ವಸತಿಯನ್ನು ಮಾಡಿಕೊಡಬೇಕು (ಶಂಶಾ. ೯೭). [ಸಂ.]

**ಪುನರ್ವಸು** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಏಳನೆಯದು ಮತ್ತು ಆ ರಾಶಿಯಲ್ಲಿ ಬರುವ ಮಳೆ : ಪುನರ್ವಸುಃ, ಅದಿತಿಃ, ಆದಿತ್ಯಂ, ಅಧಿದೈವತಂ ಈ ೪ ಪುನರ್ವಸು ನಕ್ಷತ್ರಕೆ ಪೆಸರು (ಶಾಸ್ತ್ರಕ. ೬೨–೪). [ಸಂ.]

**ಪುನರ್ವಿಮರ್ಶೆ** (ನಾ). ಮರಳಿ ಪರಾಮರ್ಶಿಸುವುದು : "ಪುನಸ್ಮರಣ, ಪುನರ್ವಿಮರ್ಶೆ" (Revision. ಕಶ್ರಿ. ೬೦). [ಸಂ. ಪುನರ್ವಿಮರ್ಶ]

**ಪುನರ್ವಿವಾಹ** (ನಾ). ಮರುಮದುವೆ : ಕೆಲವು ಸಂದರ್ಭಗಳಲ್ಲಿ ಪುನರ್ವಿವಾಹವು ಯುಕ್ತವೆಂದು ಹೇಳಲ್ಪಟ್ಟಿದೆ (ಆರತ. ೩೩). [ಸಂ.]

**ಪುನರ್ವ್ಯವಸ್ಥೆ** (ನಾ). ಮೊದಲಿದ್ದುದನ್ನು ಬದಲಿಸಿ ಮರಳಿ ಮಾಡಿದ ಏರ್ಪಾಟು : ಮುಂದಿನ ನಮ್ಮ ಶಾಲೆಗಳು ಪುನರ್ವ್ಯವಸ್ಥೆಯಾಗಬೇಕಾಗಿದೆ (ಶಿಕ್ಷಶ. ೧೬೨) ; ತನ್ನ ಬಾಹ್ಯಜೀವನವನ್ನೆಲ್ಲ ಪುನರ್ವ್ಯವಸ್ಥೆಗೊಳಿಸಬೇಕೆಂದು ನೆಕ್ಲುದೋವ್ ಉದ್ದೇಶಿಸಿದ್ದನು (ಪುನರು. ೧೯೯).

[ಸಂ. ಪುನರ್ವ್ಯವಸ್ಥಾ]

**ಪುನಶ್ಚರಣೆ** (ನಾ). ಮಂತ್ರವನ್ನು ಪುನಃಪುನಃ ಉಚ್ಚರಿಸುವಿಕೆ ; ಜಪಿಸುವಿಕೆ : ಮಂತ್ರ ಕಲಿತಡೇನು ಪುನಶ್ಚರಣೆ ಮಾಡಿದಲ್ಲದೆ ಸಿದ್ಧಿಸದು (ಅಶಶಂ. ೧೯೩–೮೬) ; ಪಸುರಜತಸ್ಪಟಿಕಮುಕ್ತಿಕಾಶಿಲಾಮಯಲಿಂಗಮುಮನಿಟ್ಟು ಪೂಜಿಸುತೆ ತೇಜಪುನಶ್ಚರಣೆಯಿಂ ಪರಿಶುದ್ಧಿಯೊಡೆದು (ಶಶಶೋ. ೨–೩೬). [< ಸಂ. ಪುರಶ್ಚರಣ]

**ಪುನಶ್ಚೇತನ** (ನಾ). ಮರಳಿ ಚೈತನ್ಯವನ್ನು ಹೊಂದುವಿಕೆ : ಶ್ರೀಮತಿ ರುಕ್ಮಿಣಿದೇವಿ ಮುಂತಾದವರು ಕಲಾಸಂಪ್ರದಾಯಗಳನ್ನು ಪುನಶ್ಚೇತನಗೊಳಿಸಿ ಬೆಳೆಸಲು ಪ್ರಶಂಸನೀಯವಾದ ಸೇವೆಯನ್ನು ಸಲ್ಲಿಸಿದರು (ಶಾರದ. ೩೩೨). [ಸಂ.]

**ಪುನಶ್ಚೇತನಗೊಳ್ಳು** (ಕ್ರಿ). ಮರಳಿ ಚೈತನ್ಯವನ್ನು ಪಡೆ,–ಉತ್ಸಾಹವನ್ನು ಹೊಂದು : ಮಳೆಯಿಂದ ಪುನಶ್ಚೇತನಗೊಂಡ ತೋಟ ಹೊಲಗಳ ದೃಶ್ಯದಿಂದ ಅವನು ಆನಂದಪುಲಕಿತನಾದನು (ಶಿಕಾ. ೪೬೬).

[ಪುನಶ್ಚೇತನ + ಕೊಳ್ಳು₁ (< ಕೊಳ್₁)]

**ಪುನಸ್ಸ್ವಯಂವರ** (ನಾ). ≡ ಪುನಃಸ್ವಯಂವರ : ಎನಗೆಯನ್ನು ಪುನಸ್ಸ್ವಯಂವರ ಮನದೊಳುಂಟೇ ನೀವು ಬರಬೇಕೆನುತ ವಾರ್ತೆಯ ಕಲ್ಪಿಸಿದೆ (ಶಳಶ. ೬–೩೬). [ಸಂ.]

**ಪುನಹ** (ಅ). ಮತ್ತೆ ; ಪುನಃ ; ಮರಳಿ : ಮನಸ್ಸು ತೃಪ್ತಿಗೊಳ್ಳದೆ ಪುನಹ ಅದೇ ಪ್ರಶ್ನೆಯನ್ನು ಹಾಕುತ್ತಿತ್ತು (ಕಶಿಡಾ. II, ೪೪೪). [< ಪುನಃ]

**ಪುನಾರಚನೆ** (ನಾ). ಮರಳಿ ರಚಿಸುವುದು ; ಪುನರ್ನಿರ್ಮಾಣ : ಶರೀರದ ಬೆಳವಣಿಗೆ ಮತ್ತು ಪುನಾರಚನೆಗೆ ಅವಶ್ಯವಾದ ಕಚ್ಚಾಮಾಲನ್ನೊದಗಿಸುವುದು—ಮುಖ್ಯವಾಗಿ ಸಸಾರಜನಕಗಳು ಮತ್ತು ವಿವಿಧ ಜಾತಿಯ ಲವಣಗಳು—ಈ ಕೆಲಸವನ್ನು ಮಾಡುತ್ತವೆ (ಆಡುಆ. ೩೬).

[ಸಂ. ಪುನಾರಚನ]

**ಪುನಾಲಿ** (ನಾ). ಒಂದು ಬಗೆಯ ಔಷಧೀಸಸ್ಯ : ಚೀನಾಬಿಳಿಮರ, ಪುನಾಲಿ, ಹುದಿಬಳ್ಳಿ (ಸ್ಯಾಶಿ. ೫೯–೩೬೪). [?]

**ಪುನೀತ** (ಗು). ೧. ಪವಿತ್ರವಾದ ; ಶುದ್ಧವಾದ : ಆತನಂ ನೋಡಿದೊಡೆ ಸಾಕು ಪುನೀತಭಕ್ತಿ ಗುಣತ್ವಪಹುದು (ಬಸಪು. ೬–೦೩) ; ಆ ಪ್ರೇಮವೆಂಬ ಪುನೀತವಸ್ತುವಿಗೆ ಪಕ್ಷಪಾತವಿಲ್ಲ, ತಾರತಮ್ಯವಿಲ್ಲ (ಕುಂಕು. ೦೪). (ನಾ). ೨. ಪರಿಶುದ್ಧವಾದುದು : ಪಾವನ : ಸದ್ಗುಣಚರಿತ್ರನಾಮಾಳಿಯಿಂ ಜಗಮಂ ಪುನೀತಮಂ ಮಾಳ್ಪ ನಿನ್ನೇಳಿಗೆಯನವನೆತ್ತ ಬಲ್ಲಂ (ಕೃಚಾ. ೦೪–೪೩). ೩. ಪರಿಶುದ್ಧನಾದವನು : ಉತ್ತಮಕುಲದೊಳೊಗೆದು ಪುನೀತನಾಗಿ . . . ಬಾಳ್ದು (ಚಸಪು. ೩–೩೬) ; ಮಂದಬುದ್ಧಿಯವರೂ ಶಿಕ್ಷಣದಿಂದ ಪುನೀತರಾಗುವಂತಾಯಿತು (ಶಿಕ್ಷಶ. ೬೪೪). [ಸಂ.]

**ಪುನೀತೆ** (ನಾ). ಪರಿಶುದ್ಧಳಾದವಳು ; ಪಾವನೆ : ಆತನತ್ತಮಸತಿ ವಿಶೇಷಪುನೀತೆ ಮಾದಾಂಬಿಕೆ ಸವಿನಯಾನ್ವಿತೆ ಸತ್ಕುಲದಾತೆ (ಬಸಪು. ೨–೪೭).

[ಸಂ. ಪುನೀತಾ]

**ಪುನುಗು** 'ಪುಣುಗು' ನೋ.

**ಪುನುವಲವಳ್ಳಿ** (ನಾ). ಒಂದು ಊರಿನ ಹೆಸರು : ಈ ಸೊರಬ ತಾಲ್ಲೂಕಿನ ಈಗಿನ ಹುನವಳ್ಳಿ : ಬಳಗಾಜಿರ ಕೋಕರಂ ಪುನುವಲವಳ್ಳಿಯಲ್ಲಿಟ್ಟು ಪುಯ್ಯಲಂ ಪರಿದು ಮಾರ್ಬ್ಬಲಮಂ ತಳ್ತಿರಿದು ಸ್ವರ್ಗಾಲಯಕ್ಕೆ ಸನ್ದಾ (ಎಕ. VIII, ಸೊರಬ. ೩೩೦–೬ ; 979).

[ಪುನುವಲ್₆ + ಪಳ್ಳಿ₁]

**ಪುನೆ** (ನಾ). ಒಂದು ಬಗೆಯ ಸಸ್ಯ : ಸುರಗಿ, ಗದರ್ಗಂಡಿ, ಪುನ್ನಾಗ, ಪುನೆ (ಸ್ಯಾಶಿ. ೩೬–೦೦೪೩). [?]

**ಪುನ್ನಮಿ** 'ಪುಣ್ಣಮೆ' ನೋ.

**ಪುನ್ನಾಗ** (ನಾ). ೧. ಪುರುಷರಲ್ಲಿ ಶ್ರೇಷ್ಠನಾದವನು. ೨. ಗಂಡು ಆನೆ. ೩. ಬಿಳಿಯ ಆನೆ. ೪. ಪಟ್ಟದ ಆನೆ. ೫. ಕೋಣ. ೬. ಹಾವು. ೭. ಒಂದು ಬಗೆಯ ಮರ ಮತ್ತು ಅದರ ಹೂವು ; ಸುರಹೊನ್ನೆ : "ಪುನ್ನಾಗಃ. ಸುರಪರ್ಣಕಾ—ಈ ೨ ಸುರಹೊನ್ನೆ" (ಹಲಾಯು. ೬೩–೩೩) ; ಅಪೂರ್ವಮಪ್ಪ ಪುನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಗೆ ನಾಗಜಾಲವೆಂದಾಗಡೆ . . . ನಾಗಿಣಿ ನಾಗಬಂಧದೊಳ್ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಪಂಭಾ. ೪–೦೭) ; ಪಾಳೆದು ಸ್ವರ್ಗಕೆ ಪರಿದು ಪೋಗುವ ತೆರದಿ ನವಿಮ್ಮ ಗಗನವ ತುಡುಕಿ ಪುನ್ನಾಗ ನಾಗವಳ್ಳಿಯ ಪೊಲಂ ಕಂಗೆಸೆದುವು (ಶಶಪೋ. ೪–೩೦). ೧, ೩, ೭ : ಮಿಗುವ ದ್ವಿಜಪರಿವಾರತಮಾಗುಣಿತ ಪುನ್ನಾಗಸೇವ್ಯಮಾನಂ ವಂಶೋಪಗತಮೆನಿಸಿರ್ದ ಬೆಟ್ಟಂ ಸೊಗಯಿಸಿದುದು ರಾಜನಂತೆ ಲಕ್ಷ್ಮಿಯ ಪೆರ್ಚಿಂ (ಶಾರಪು. ೦೦–೦೪೩). ೨, ೬, ೭ : ಪುನ್ನಾಗವಿರಾಜಿತಮಿದು ಪನ್ನಗವಧುವಂ ಕರೇಣುವಂ . . . ನೆನೆಯಿಪುದಖಿಳಮೃಗಶರಣ್ಯಮರಣ್ಯಂ (ಪುಶ್ಯಪು. ೩–೬೬) ; "ನರಶ್ರೇಷ್ಠಾವನೀಜಾತಭೇದ ಲಾಲಿತ್ಯಯಂ ಫಣಿ ಪಟ್ಟವರ್ಧನಗಜಂ ಪುನ್ನಾಗಮಕ್ಕುಂ" (ಶಾಶಾ. ೬೨). [ಸಂ.]

**ಪುನ್ನಾಗತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ಪುನ್ನಾಗತೋಡಿ, ಆದಿತಾಳ (ಹಸುಕು. ೭೪). [ಸಂ. ಪುನ್ನಾಗತೋಡೀ]

**ಪುನ್ನಾಗವರಾಲಿ, ಪುನ್ನಾಗವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪುನ್ನಾಗವರಾಲಿಯಾದರೋ (೨) ಷಡ್ಜಗ್ರಹಸಹಿತವಾದುದು, ಸರ್ವಕಾಲವೂ (ಗಾನಯೋಗ್ಯವಾದುದು) (ಕಸುಕ್ರ. ೦೩೩). **ಪುನ್ನಾಗವರಾಳಿ** : ಪುನ್ನಾಗವರಾಳಿ : ೮ನೇ ಮೇಳಕರ್ತ ಹನುಮತೋಡಿಯಲ್ಲಿ ಜನ್ಯ (ಸಂಗೀಕಂ. ೦೩೨) ; ಇವರು ಪುನ್ನಾಗವರಾಳಿರಾಗವನ್ನು ನುಡಿಸಿ, ಹುತ್ತಗಳಲ್ಲಿ ಮಲಗಿದ್ದ ಹಾವುಗಳನ್ನು ಮೇಲಕ್ಕೆ ಸೆಳೆದು, ತಮ್ಮ ಮುಂದೆ ಹೆಡೆ ಮಾಡಿಸಿ ನರ್ತನ ಮಾಡುವಂತೆ ಮಾಡಿದ್ದಾರೆ (ಸಂಗೀಕ. ೯೨).

[ಸಂ. ಪುನ್ನಾಗವರಾಲೀ]

**ಪುನ್ನಾಗವರಾಳಿ** 'ಪುನ್ನಾಗವರಾಲಿ' ನೋ.

**ಪುನ್ನಾಟ** (ನಾ). ಒಂದು ನಾಡಿನ ಹೆಸರು : ಶ್ರೀಮತ್ಕೊಙ್ಗಣಿ ಮಹಾಧಿರಾಜಸ್ಯಾವಿನೀತನಾಮ್ನ[ಃ] ಪುತ್ರೇಣ ಪುನ್ನಾಟರಾ[ಜ]ಸ್ಕನ್ದವರ್ಮ್ಮ ಪ್ರಿಯಪುತ್ರಿಕಾಜನ್ಮನಾ . . . ಸಮಸ್ತ ಪುನ್ನಾಟ ಪುನ್ನಾಟಾಧಿಪತೀನಾ (ಕ್ವಾ೦. ೧೯೧೦, ೦ ೨೪; 7ಶ). [< ಪುನ್ನಾಡು]

**ಪುನ್ನಾಡಿ** (ನಾ). ದೇಹದಲ್ಲಿರುವ ಹನ್ನೆರಡು ನಾಡಿಗಳಲ್ಲಿ ಒಂದು : ೧. ಇಡಾನಾಡಿಯಲ್ಲಿ ಮಂದಾಕಿನೀ ... ೭. ಪುನ್ನಾಡಿನಾಡಿಯಲ್ಲಿ ಗಂಡಕಿ ... ೧೧. ವಾರುಣಿ–ಗೋದಾವರಿ, ೧೨. ಪೂಷಾ –ಪಯಸ್ವಿನೀ (ಹಠ. ೮-೦೯ ಅಡಿಟಿಪ್ಪಣಿ). [ ಸಂ. ]

**ಪುನ್ನಾಡು, ಪೂನಾಡು** (ನಾ). ಒಂದು ನಾಡಿನ ಹೆಸರು; ಕಾವೇರಿ ಮತ್ತು ಕಪಿನಿ ನದಿಗಳ ನಡುವೆ ಇರುವ, ನಂಜನಗೂಡು, ಹೆಗ್ಗಡದೇವನಕೋಟೆ ತಾಲ್ಲೂಕುಗಳ ಸುತ್ತಮುತ್ತಲಿರುವ ಜಾಗ : ಶ್ರೀಮತ್ಕೊಂಗಣಿ ಮಹಾಧಿರಾಜಸ್ಯ ಅವಿನೀತನಾಮ್ನಪುತ್ರೇಣ ಪುನ್ನಾಡರಾಜಸ್ಕನ್ದವರ್ಮ್ಮಪ್ರಿಯಪುತ್ರಿಕಾಜನ್ಮನಾ . . . ಬೆಮ್ಮೂರೀಶ್ವರಸ್ಥಾನಮುದಕಪೂರ್ಬ್ಬ ದತ್ತ (ಇಆ. V. ೦೫೯-೫; 513); ಸ್ವಸ್ತಿಶ್ರೀ ಶಿವಮಾರ ಪೃಥುವೀ ರಾಜ್ಯಂಕೆಯೆ ಪುನ್ನಾಡಮಾಸಾಸಿರಕ್ಕೆ ಎಱೆಯರ್ . . . ಸ್ತ್ರೀಯ ಮರಿಯಾದೆ ಕೊಟ್ಟರ್ (ಎಕ. III. ಸಂತಪ. ೨೬-೨; ಸು. 810); ಪುನ್ನಾಡರಸರಾ ಮಙ್ಗನ್ದಿರ್ ಸೀಮರಸ × × × (ಎಕ. IX. ದೇವನ. ೪೦.೨; ಸು. 900 ?). **ಪೂನಾಡು :** ತಳವನನಗರ ಶ್ರೀವಿಜಯಜಿನಾಲಯಕ್ಕೆ ಪೂನಾಡು ಭಾಸಹಸ್ರ ಎಡೆನಾಡು ಸಪ್ತತಿ ಮಧ್ಯೆ ಬದಣೆಗುಪ್ಪೆ ನಾಮ ಮಹಾಧಿರಾಜೇನ ದತ್ತೇನ ಪಡಿಯೋಲಿಕೆಯೊಳು (ಎಕ. I (R). ೦-೦೮; 466 ಕ್ಕೆ ಬಾ); ಬೂತರಸ ಯುವರಾಜ ಪಥಮಲ್ ನಿನ್ದು ಕೊಙ್ಗಳ್ನಾಡು ಪೂನಾಡಮನಾಳುತ್ತಿರ್ದ್ದು (ಎಕ. III. ಸಂತಪ. ೭೩-೬; 870).

[ದೇ.೩ ತಮಿ. ಪುನನಾಟು; ಮಲ. ಪುನ್ನಾಡು]

**ಪುನ್ನಾಹ** (ನಾ). ಒಂದು ಬಗೆಯ ಕುದುರೆ: ಇಂದಿರಸಕ್ಕೆ ಪೂಷಕ ವ್ಯದಚ್ಛಾಯಾವಿರಾಜಿತಂ ಕರ್ಗಲ್ಪಣ್ಣಂದದ ಕೇಸರಮಾ ನೊರೆಯಂದ ಮಾನಸುಕರಿಸಿ ತೋರ್ಪುದು ಪುನ್ನಾಹ (ಅಶ್ವಶಾ. ೨-೨೯). [?]

**ಪುನ್ನಿ** (ನಾ). ಒಬ್ಬಾತನ ಹೆಸರು : ಕೊಟಿಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕೆಱೆಯಂಮಾಡಿಸಿ ಕೊಸಲ್ಲಿಯ ಮಹಾಜನಕೆ ಗೋಸಾಸಮಿಟ್ಟು (ಎಕ. VIII. ಸಾಗರ. ೧೦೦-೭; ೯೫೦). [?]

**ಪುನ್ಪಯಿರು** (ನಾ). ಒಣಭೂಮಿ ಮತ್ತು ಅದರ ಮೇಲಿನ ಕಂದಾಯ; ಖುಷ್ಕಿಬೆಳೆ ಮತ್ತು ಅದರ ಮೇಲಿನ ಸುಂಕ : ಯಿಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ ವಾನ್‌ಪಯಿರು ಪುನ್‌ಪಯಿರು . . . ಉಂಟಾದ ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವು (ತಾಮ್ರ. IX-ii. ೪೬೬-೭; 1470); ನಂಜೆ ಪುಂಜೆ ವಾನ್ ಪಯಿರು ಪುನ್‌ಪಯಿರು . . . ಮೊದಲಾದ ಹಲ ಉಪಾಧಿಗಳು ಸಹ (ತಾಮ್ರ. IX-ii. ೪೬೬-೫; 1472). [← ತಮಿ. ಪುನ್ಪಯಿರ್]

**ಪುನ್ಪುಲ** 'ಪುನ್ಪೊಲ' ನೋ.

**ಪುನ್ಪೊಲ, ಪುನ್ಪುಲ** (ನಾ). ಒಣಭೂಮಿ; ನೀರಾವರಿಯಿಲ್ಲದೆ ಬೆಳೆಯುವ ಭೂಮಿ : ಕೊಟ್ಟೊದು ಬರಸೂರಾಯು ತೆಱೆಯುಂ ಪುನ್ಪೊಲಮು ×ನ್ನ × × (ಎಕ. X (೩). ಮುಳಬಾ. ೦೬೪-೬; ೩೩ಯು ೫೬). **ಪುನ್ಪುಲ :** ಕಿಱುಪನ್ನಿರ್ವ್ವರ್ಕ್ಕವಪ್ಪುನ್ಪುಲಮೆಲ ಪತ್ತೊನ್ಪವಿ × (ಎಕ. XIV. ಕಿರುಬು. ೨೫೨-೫; ?). [← ತಮಿ. ಪುನ್ಪುಲ]

**ಪುಪ್ಪ, ಪುಪ್ಫ, ಪುಬ್ಬ** (ನಾ). ಹೂವು ; ಪುಷ್ಪ : 'ಪುಪ್ಪಸರ', 'ಪುಪ್ಪುಡಿ' ಪರಾ. **ಪುಪ್ಫ :** ಪುಪ್ಫಕ್ಕೆ ಕೊಟ್ಟ ಗದ್ಯಾಣ ೧ (ಎಕ. II. ೬೨೬ ; 1076); ಶ್ರೀನಂದನಾದಿವಿಗೆಗಂ ಶ್ರೀಪದಪುಪ್ಫಕ್ಕಂ ನಂದನವನಕಂ . . . ಸಮಸ್ತವಸ್ತುಸಂಕವನಾಚಂದ್ರಾರ್ಕತಾರಂಬರಂ ಸಧರ್ಮಮುಂ ಪ್ರತಿಪಾಲಿಸಿದವಂ (ಎಕ. XIV. ಶ್ರೀರಂಗ. ೨೩೩-೫; ಸು. 1177). **ಪುಬ್ಬ :** ಆ ದೇವರ ಪೂಜೆಯು ಪುಬ್ಬಕ್ಕೆಂದು . . . ಹೂದೋಟಂ ಮತ್ತರು ೧ (ಕೌಶಾ. XX. ೦೦೯-೨೬ ; 1148).

[< ಪ್ರಾ. ಪುಪ್ಫ . / ಸಂ. ಪುಷ್ಪ]

**ಪುಪ್ಪಸರ** (ನಾ). ಹೂವಿನ ಬಾಣವನ್ನು ಹೊಂದಿದವನು ; ಮನ್ಮಥ : ಪುಪ್ಪಸರನ ರಾಣಿಗೆ ಮೆಯ್ಯೊಡ್ಡವನುಪೊಪ್ಪಿಸಿ ತಾತಿಯ ಮಾಡಿದರು (ನೋಹಕ. ೦೬-೯೩). [ಪುಪ್ಪ+ಸರ₃]

**ಪುಪ್ಪುಟ** (ನಾ). ಬಾಯಲ್ಲಿ ಆಗುವ ಒಂದು ಬಗೆಯ ಹುಣ್ಣು : 'ತಾಲುಪುಪ್ಪುಟ', 'ದಂತಪುಪ್ಪುಟ' ಪರಾ. [<ಸಂ. ಪುಪ್ಪುಟ]

**ಪುಪ್ಪುಡಿ** (ನಾ). ಹೂವಿನ ಹುಡಿ ; ಪುಷ್ಪರಜ : ಕರಿಯ ಮಲ್ಲಿಗೆಯ ಪಾವನಕುಸುಮಪರಿಮಳವನುಂಡು ಶನ್ಮಕರಂದದೊಳ್ ಮಿಂದು ಪುಪ್ಪುಡಿಯೊಳು ಮನಮೊಲ್ದು ಪೊರಳ್ದುದಿನಿಂದ ಕಪ್ಪಾಗಿ . . . ಸಂಚರಿಪ ಷಟ್ಪದಿಗಳನುರಾಗಿಸುತ್ತಿರ್ದುವಾ ಪರಮನಾಂತದೊಳ್ (ಶಂದಿಜಾ. ೩-೨೪) ; ತೆಂಬೆಲರಿಂದಲ್ಲಾಡುವ ತಳಿರ್ತೆಳಮಾವಿನ ಪೂಗೊಂಚಲ ಪುಪ್ಪುಡಿಯ ಮೊತ್ತದಿಂ ತಟ್ಟ ಕಾಲ್ಬಾರಿಗಳಿಂ . . . ಕಣ್ಣೊಳ್ಕಿಕುಂ (ಮಿತ್ರಗೋ. ೦೨-೦೨).

[ < ಪುಪ್ಪ + ಪುಡಿ ]

**ಪುಪ್ಪುಸ** 'ಪುಪ್ಪುಸ' ನೋ.

**ಪುಪ್ಪುಸರೋಗ** (ನಾ). ಶ್ವಾಸಕೋಶದ ರೋಗ ; ಉಬ್ಬಸ : ಅವಕ್ಕೆ ಬರುವ ಸಾಮಾನ್ಯರೋಗಗಳಲ್ಲಿ . . . ಶ್ವಾಸಕಾಂಗಗಳಿಗೆ ಸಂಬಂಧಪಟ್ಟ ಕೆಮ್ಮು, ಪುಪ್ಪುಸರೋಗಗಳೂ ಮುಖ್ಯವಾದುವು (ಕಂಕೋ. I. ೭೨೯).

[ ಪುಪ್ಪುಸ (< ಪುಪ್ಫುಸ) + ರೋಗ ]

**ಪುಪ್ಪುಸರೋಗಿ** (ನಾ). ಪುಪ್ಪುಸದ ರೋಗವುಳ್ಳ ವ್ಯಕ್ತಿ : ಪುಪ್ಪುಸ ರೋಗಿಗಳ ಉಗುಳಲ್ಲೂ ಎಲ್ಲರ ಕರುಳುಗಳಲ್ಲೂ ಈ ಅಣಬೆಗಳು ಸಾಮಾನ್ಯವಾಗಿ ಇದ್ದೇ ಇರುವುವು (ಕಂಕೋ. I. ೨೨೬).

[ < ಸಂ. ಪುಪ್ಪುಸರೋಗಿನ್ ]

**ಪುಪ್ಫುಸ** (ನಾ). ೧. ಶ್ವಾಸಕೋಶ. ೨. ಕಮಲದ ಹೂವಿನ ಬೀಜಕೋಶ. [ ಸಂ. ]

**ಪುಬ್ಬ** ' ಪುಬ್ಬೆ ' ನೋ.

**ಪುಬ್ಬಾಮಿಗ** (ನಾ). ಒಬ್ಬಾತನ ಹೆಸರು : ತೆಂಗಾಪಳ್ಳಿಯ ಗುಡ್ಡನ ಪುಬ್ಬಾಮಿಗಂಗೆ ಮಾಳಿಂಗಿಗಾಮಿಗಿತ್ತಿಯುಂಗೆ ಪುಟ್ಟಿದ ಶ್ರೀಮಾರಂ (ಎಕ. VII. ಶಿಕಾ೦. ೨೬೩ ೪ : ಸು. ೩೦). [?]

**ಪುಬ್ಬು** 'ಪುರ್ವು' ನೋ.

**ಪುಬ್ಬೆ, ಉಬ್ಬೆ₃, ಪುಬ್ಬ, ಪುರ್ಬ, ಪೂರುವ, ಹುಬ್ಬೆ** (ನಾ). ೧. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಪೂರ್ವಫಲ್ಗುಣಿ : ಪೂರ್ವೆ-ಪುಬ್ಬೆ (ಕಾಮ. ತು. ೨೮೪ ಪ್ರಯೋ); ಪುಬ್ಬೆ ೨ ಪುತ್ತರೆ ಮಂಚದ ಪಾದದ ಹಾಗೆ (ಬಾಸ್ಕರ. ೬೦-೪); ಪುಬ್ಬೆ ಮಳೆ ಉಬ್ಬುಬ್ಬಿ ಹುಯ್ದರೂ ಗುಬ್ಬಿ ಪುಕ್ಕ ನೆನೆಯದು (ಗಾದೆ). **ಉಬ್ಬೆ₃ :** ೧. ಉಬ್ಬೆಮಳೆ ಅಬ್ಬೇ ಹಾಲು (ಗಾದೆ). **ಪುಬ್ಬ :** ೧. ತ್ರಿಕೋಣದ ಕರ್ಣದ ಮೇಲಿನ ಸಕ್ಷತ್ರ ಪುಬ್ಬ, ಕೆಳಗಿನದು ಉತ್ತರಾ (ಕಕ್ಷತ್ರ. ೬೯). ೨. [ಜೈನ] ಒಂದು ದೊಡ್ಡ ಕಾಲಮಾನ ; ಎಪ್ಪತ್ತುಲಕ್ಷ ಐವತ್ತಾರುಸಾವಿರಕೋಟಿ ವರ್ಷಗಳ ಅವಧಿ : ತೊಳಗಮ ಪುಬ್ಬಕೋಟಿವರಿಸಂಬೈವರಂ ಪರಮಾಯು (ಆದಿಪು. ೧-೩೨); ನೀನುಮೊಂದು ಪುಬ್ಬಕೋಟಿಕಾಲಮರಸುಗೆಯ್ದು . . . ದೇವನಾದೆ (ಹಂಸಾಮ. ೬-೫೭ ವ) ; ಮೂವತ್ತಾಱುಲಕ್ಷಪುಬ್ಬಂ ರಾಜ್ಯಂಗೆಯ್ದು (ಶಾಂತಿಪು. ೦೭). **ಪುರ್ಬ :** ೧. ಸರಟಪುರದ ಅಯ್ವದಿಮ್ಬರ್ಗ್ಗ ×

ಯಶಾಸು ಪುರ್ಬ್ಬದಿನ್ನ ತಪ್ಪದೆ[ಚ]ನುಟುಬ್ಬೋನ್ (ಶಾಶಾ. XI-1. ೦೨-೦೪ ; ೩೬೭). ೨. ಮಹಾಬಲಬಚರೇಂದ್ರಂ . . . ಮಹಾಪತ್ರಾಬಲಕೃಪುರ್ಬಂ [ಶಾಕಾಂ. ಬ್ಬಂ] ರಾಜ್ಯಂಗೆಯ್ಯೆ (ಅಂಕಿ. ೨-೨೩ ಪ). **ಪೂರುವ** : ೩. ಹಿಂದಿನ ಕಾಲ ; ಪೂರ್ವಕಾಲ : ಆರು ನಿನ್ನಂದದಲಿ ತಪವನು ಪೂರುವದಲಾಚರಿಸಿದವರು (ಶಿವಾನ. ೬ ೨ ೩೯). **ಹುಬ್ಬೆ** : ೧. ಪೂರ್ವ—ಪುಬ್ಬೆ (ಕವುದ. ೨೬೦ ಕೃ ರಾ೬೦); ಅಬ್ಬವದು ರಕ್ತಾಕ್ಷಿಯುಮದ ಹುಬ್ಬೆಯಲಿ ರವಿಯಿರಲಿಕಾತನ ಸರ್ಬಸ್ವೈನ್ಯದ ರಕ್ತದಿಂದವೆ ಹುಟ್ಟಿತಾ ನದಿಯು (ಸಂಕಹ. ೨೬-೩೪).
[<ಸಂ. ಪೂರ್ವ]

**ಪುಮಪತ್ಕ** (ನಾ). ಗಂಡುಮಗು. [ಸಂ.]

**ಪುಮಾಂಸ** (ನಾ). ಗಂಡಸು ; ಪುರುಷ : ಕುಶಲರಾ ಗತಿಗಿಂದ ಕಿಂಚಿತ್ಕುಶಲವಿಲ್ಲೆನಸಲ್ಕೆ ವಿಷಯಾಪಕರ ಸಂಗತಿಯಿಂದಿಗಾಗುವದೊ ಪುಮಾಂಸರಿಗೆ (ಭೀಕ. ೦೨-೦೦). [<ಸಂ. ಪುಮಾನ್]

**ಪುಮ್ಮೆ** (ನಾ). ಒಂದು ಬಗೆಯ ಆಟ : "ಚಿಟ್ಟುಮುಂ ಪುಮ್ಮೆಯೊಳಕ್ಕುಂ" (ಕವಿಕಾ. ೨೨೬). [?]

**ಪುಯ್**, ಪುಯ್ಯಿ (ನಾ). ಹುಸಿ ; ಮಾಯೆ : ವಸುಧೆಯ ಭಾರವಮನೀಡಪದೆ ಸಿಸುತನದಿಂ ಪೊಯ್ಯುಗಳೆವ ಪುಯ್ಯಂ ಕಂಡೆಟ್ಟಿಸಿ ಬಿಸರುಹನಾಭನೋಳಿಂತು ಸಿರ್ದರ್ ಬಿಡುಗಣ್ಣರುಚಿತಕಾರ್ಯೋದಯಮಂ (ಗಿಆತಗೋ. ೬-೦೬). **ಪುಯ್ಯಿ** : 'ಪುಯಿನಡು' ಪರಾ. 'ಪುಸ್ಸಿ' ಹೋ.
[ದೇ.II ತಮಿ. ಮಲ. ಕೋತ. ಪೊಯ್]

**ಪುಯಲ್** 'ಪೊಯಲ್' ನೋ.

**ಪುಯಲ್ಲು** 'ಪುಯ್ಯಲ್ಲು' ನೋ.

**ಪುಯಲ್ದೋರು** (ಕ್ರಿ). ಕೂಗೆಬ್ಬಿಸು ; ಹುಯ್ಯಲಿಡು : ಬೊಬ್ಬಿಂದು ಬಹುರವದಿ ಪುಯಲ್ದೋರುತಿರಲತಿಕಠೋರಧ್ವಾನ ಕರ್ಣಯುಗದಲಿ ಪೊಕ್ಕು ಹೃದಯು ಕಂಡ ಕಡೆಗೆ ಪರಿದೋಡುತಿರೆ ಕುರಾಳಿ ರಘಸದಿಂ ದೆ (ಪಶಿಶೋ. ೦೬. ೨೦). [ಪುಯಲ್ (<ಪೊಯಲ್) + ತೋರು (<ತೋಱು)]

**ಪುಯ್ಯಿ**$_1$ 'ಪೊಯ್$_1$' ನೋ.

**ಪುಯ್ಯಿ**$_2$ 'ಪುಯ್' ನೋ.

**ಪುಯಿನಡು** (ನಾ). ಊಹೆ ಮಾಡಿಕೊಳ್ಳಬೇಕಾಗಿರುವಷ್ಟು ತೆಳ್ಳಗಿರುವ ನಡು : ಪುಸಿನಡುವಿನ ಪುಯಿನಡುವಿನ ಕಣ್ಗೆ ಕಾಣಿಸದ ನಡುವಿನ ಮೋಹಿಸುವ ಅಸಿಯ ನಡುವಿನಂಗುರವಿಡಿನಡುವಿನ ಪೊಸಜವ್ವನೆಯರಿದ್ದರು (ಕುಮಾರಾ. ೨೧-೯೩). [ಪುಯ್ಯಿ$_2$ (<ಪುಯ್) + ನಡು$_1$]

**ಪುಯಿಲ್** 'ಪೊಯಿಲ್' ನೋ.

**ಪುಯಿಲಿಡು**, ಹುಯಿಲಿಡು (ಕ್ರಿ). ೧. ಗರ್ಜಿಸು ; ವೀರಾವೇಶದಿಂದ ಕೂಗು : ಇಟ್ಟಡಿಯ ನೆಟ್ಟನಿಸಿಸು ಜಿಮ್ಮೆಟ್ಟಿ ಪಟಪಟ್ಟದರೆಯುಟ್ಟಳೆವರಂ ಕೈಗೊಟ್ಟು ಪುಯಿಲಿಟ್ಟರೆನೆ ದಿಟ್ಟತನಮೊತ್ತೋ (ತಿಕ. ೨-೯೩). **ಹುಯಿಲಿಡು** : ೨. (ರಕ್ಷಣೆಗಾಗಿ) ಮೊರೆಯಿಡು : ಸೆರೆ ಬಿದ್ದಿಹ ಕಾಲ ಹುಯಿಲಿಡುವುದೊ ಎನೆ ಜಿನ್ನನೆ ಜೀರುಂಡೆಮು ಮೊಳೆ ! (ಗಹಿಕ. ೨೬-೬).
[ಪುಯಿಲ್ (<ಪೊಯಿಲ್) + ಇಡು$_1$]

**ಪುಯಿಲ್ಲು** (ಕ್ರಿ). ೧. = ಪುಯಿಲಿಡು ೧ : ರಾಘವರಿರ್ದರಿಂದವರ್ ಬೇಸಜವಾಂಧ್ರಪ್ರಸಿಪಾಲಮರೂಲಸೈನ್ಯಂ ಬಿಜಾವಪ್ಪಂತೆ ಪುಯಿಲ್ಲಿ ಪೊಯ್ಯುಗೆಲ್ವರ್ (ಶಕಂ. ೨-೩೨). ೨. (ರಕ್ಷಣೆಗಾಗಿ) ಮೊರೆಯಿಡು : ಇವು ವಸಂತಕನ ದನಿಯುಂತಿರ್ಪುದು . . . ಸಾಸಿಗನುಂ ಮೋಸು ಬಂದುದಕ್ಕೆ ಪುಯಿಲ್ಲುವನಾಗವೇಟ್ಟುದು (ಶಕಾ. ೬-೭೦ ಪ).
[ಪುಯಿಲ್ (<ಪೊಯಿಲ್) + —ಚು$_1$]

**ಪುಯ್ಯಲ್** 'ಪೊಯಲ್' ನೋ.

**ಪುಯ್ಯಲಿಕ್ಕು**, ಪುಯ್ಯಿಲಿಕ್ಕು, ಹುಯ್ಯಲಿಕ್ಕು (ಕ್ರಿ). ೧. (ರಕ್ಷಣೆಗಾಗಿ) ಮೊರೆಯಿಡು ; ಗೋಳಿಡು : ನಾಗನಿಕರವುಂ ಮರ್ತ್ಯನಿಕರಮುಂ ತರದಿಂ ದೇವನಿಕರವುಂ ನಿಮ್ಮಾಳಿಗಮನೆ ಭರದಿಂ ಪುಯ್ಯಲಿಕ್ಕೆ ಕಳುಹಿದರೆನ್ನಂ (ಗಿರಿ. ೬-೨೩) ; ಅಬುದಿಂಗಳು ಮೊದಲೀ ತಾಣದೊಳು ಬಂದು ಮಱೆಯದೆ ಪುಯ್ಯಲಿಕ್ಕುವೆನು (ನಾಗಕು. ೦೩-೯೨). **ಪುಯ್ಯಿಲಿಕ್ಕು** : ೧. ಕುಕ್ಕುಟೋರಗ ಕೊಂದುದೆಂದು ಸುತಾರೆಯು ಪುಯ್ಯಿಲಿಕ್ಕುವಂದದಿ ವೈತಾಳಿಯೊಳು ಅಕ್ಕಟ ಪ್ರಾಣಕಂಟಕವಾದುದೆಂಬಂತೆ ಠಕ್ಕ ಮಾಡಿ ಸಿರಲಾಗ (ಶಾಂತೀಶ. ೦-೬೬). **ಹುಯ್ಯಲಿಕ್ಕು** : ೨. ಗದ್ದಲ ಮಾಡು ; ಹುಯ್ಯಲೆಬ್ಬಿಸು : ಕಳ್ಳಗೆ ಸುದ್ದು ಕೊಟ್ಟು ಒಡನೆ ಹುಯ್ಯಲಿಕ್ಕಿದ (ಗಾರಿ). [ಪುಯ್ಯಲ್ (<ಪೊಯಲ್) + ಇಕ್ಕು]

**ಪುಯ್ಯಲಿಗ** (ನಾ). ಮೊರೆಯಿಡುವವನು ; ಗೋಳಿಡುವವನು : ಧರ್ಮಜಂ ಮೆಚ್ಚಿ ನರನ ಕಜ್ಜಮನೆ ಕೆಯ್ಕೊಂಡು ಬೇಗಮದರ್ಮ ತಂತಮಸ್ತ್ರಾಯುಧಂಗಳಂ ಕೊಂಡು ನಡೆಗೊಂಡು ಪುಯ್ಯಲಿಗರೊಡನೆ ಪೊಱಮಟ್ಟು ವಿರಾಟನ ಪೆಱಗಂ ಬರೆ (ಪಂಪಭಾ. ೦೨-೯೨ ಪ).
[ಪುಯ್ಯಲ್ (<ಪೊಯಲ್) + —ಇಗ]

**ಪುಯ್ಯಲಿಡು**, ಪುಯ್ಲಿಡು, ಹುಯ್ಯಲಿಡು, ಹೊಯ್ಲಿಡು (ಕ್ರಿ). ೧. = ಪುಯ್ಯಲಿಕ್ಕು ೧ : ಬ[ರ್ದಿ] ಮನೆಯ ಮೋಗೇಱು ಕಳ್ಳರೆಂದು ಪುಯ್ಯಲಿಟ್ಟಾಗಳನಿಬರುಂ ತ್ರಸ್ತಾಭಿಭೂತರಾಗಿ ಪಟ್ಟನೆ ಪಾಱಿಯೋಡಿ . . . ಪಗೆಸಾರ್ದರ್ (ವಡ್ಡಾರಾ. ೦೬-೨೫) ; ಸುಯೋಧನನ ಮಹಾದೇವಿ ಭಾನುಮತಿ ಬಾಯಬಿಡುದು ಪುಯ್ಯಲಿಡುತ್ತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು (ಪಂಪಭಾ. ೬-೩೩ ಪ); ತನ್ನ ಮಗನಕಾರಣಂ ಕೊಯ್ದನೆಂದು . . . ಹಾಹಾಕ್ರಂದನರವದಿಂ ಪುಯ್ಯಲಿಡುವ ಕರುಣಾರವಮಂ ಶಿಳವಾಹಂ ಕೇಳ್ದು (ಶಬಶಂ. ೬೮ ೨೨). ೨. ಒದರು ; ಅರಚು ; ಕಿರಿಚು : ತೊಲತೊಲಗಿ ವಿರಹಿಗಳ್ಬೆಚ್ಚರದೊಳೆಂದೆತ್ತಲುಂ ಪುಯ್ಯಲಿಡುವಂತೆ ಕೂಗುತಿವೆ ಕೋಗಿಲೆಗಳು (ಕೃಷ್ಣರಾ. ೩-೨೪). **ಪುಯ್ಲಿಡು** : ೧. ದುಷ್ಟಬುದ್ಧಿ ಮುನ್ನಮೆ ಹಾಹಾ ಕೆಟ್ಟೆನೆಂದು ಬಾಯುಂ ಬಸಿಱುಂ ಪೊಯ್ದುಕೊಂಡು ಪುಯ್ಲಿಟ್ಟು . . . ಕಾತರಿಸಿ ನುಡಿಯೆ (ಶಂಕಶಂ. ೦೬೨-೬). **ಹುಯ್ಯಲಿಡು**: ೧. ಕೆಟ್ಟೆನಿನ್ನೇವೆನೆನ್ನಣುಗನಡವಿಯೊಳು ಹೊಲಗೆಟ್ಟನೋ . . . ಜಟ್ಟಿಯೊಳು ಕಳ್ಳರಿಂ ಹಿಡಿವಡೆದನೋ ಹುಯ್ಯಲಿಟ್ಟಾರಿದಂ ಪೇಳ್ವೆನು (ಸಿದ್ಧರಾ. ೨-೯೩) ; ಹುಯ್ಯಲಿಟ್ಟಳುವೊಡೆ ಕೇಳುವರಿಲ್ಲೆಂದು ಬಾಯ ಬಿಟ್ಟಿತು ಕಪೋತಕನು (ಕಶೋಕ. ೦೨-೯೨) ; ಚಳಿಗಾಲ ಕೊಣಗಿ ಬರಡಾದ ಗಿಡಗಂಟಿಯಲಿ ಹುಯ್ಯಲಿಟ್ಟಿತು ಗಾಳಿ ಈಸು ದಿವಸ (ಕಂಬನಿ. ೯೬-೦೦). **ಹೊಯ್ಲಿಡು** : ೧. ಹೊಯ್ಲಿಟ್ಟ ಋಷಿಗಳ ಮಾತ ಕೇಳ್ದು ರಘುನಂದನನು ನಸುನಗುತ ಬೆದರದಿರಿ . . . ಎಂದೊಡಂಬಡಿಸಿ (ತೊರವೆ. ೩).
[ಪುಯ್ಯಲ್ (<ಪೊಯಲ್) + ಇಡು$_1$]

**ಪುಯ್ಯಲಿಸು** (ಕ್ರಿ). = ಪುಯ್ಯಲಿಕ್ಕು ೧ : ನೆಗಟ್ಟಿನ್ನ ಗುಣಮಲಂಘ್ಯಂ ಜಗದೊಳಮಂ ಕಿಡಿಸಿದಪ್ಪನೀ ನೃಪನೆಂದಚ್ಚಿಗದೊಳೆ ಪುಯ್ಯಲಿಪಂತೆ ಪೊಲೊಗೆದುದು ಚಲದನಿಲಹತಪಯೋನಿಧಿನಾದಂ (ಆದಿಪು. ೦೨-೬೬) ; ಲೋಕಕೋಟರಮುಂ ತೀವಿದುದೆಂದು ಪುಯ್ಯಲಿಪವೋಲ್ ಮಹೀಲೋಕದೊಳ್ ಚಕ್ರಿಗೀ ಧುರದೊಳ್ ನೆಟ್ಟನೆ ಕೇಡು ತಪ್ಪದೆನುತುಂ ಗಂಭೀರ ಭೇರೀರವಂ (ನೇಮಿಪು. ೦೧-೯೯).
[ಪುಯ್ಯಲ್ (<ಪೊಯಲ್) + —ಇಸು$_1$]

**ಪುಯ್ಯಲ್ಲು**, ಪುಯಲ್ಲು (ಕ್ರಿ). = ಪುಯ್ಯಲಿಕ್ಕು ೧ : ಶ್ರೀವಿಜಯನ ಪೆಸರ್ಗೊಂಡು ಪುಯ್ಯಲ್ಲುವ ವನಿತಾಕ್ರಂದನಮಂ ಕೇಳ್ದು (ಶಾಂತಿಪು. ೩೬); ಎಮಗಿನ್ನಾರ್ ಶರಣೆಂದು ಮಾಂಡಲಿಕರುಂ . . . ವಿಲಾಸಿನಿಯರುಂ ಬಾಯ್ವಿಟ್ಟು ಪುಯ್ಯಲ್ವೆ (ಪಂಪರಾಮಾ. ೨-೯೯) ; ಗಿರಿಜೆಯು ಪದಯುಗ್ಗದೊಳ್ ರತಿ ಪೊರಳ್ದು ಪುಯ್ಯಲ್ವಿ ಪೇಳ್ದಳಲೆರ್ಮಡಿಸುತ್ತಿರೆ ಪಳಯು

ಘುತೆಯಿ (೧೧೪. ೬-೭೪). **ಪುಯಲ್ಚು** : "ಪುಯಲ್ಚು-ಆಕ್ರೋಶಧ್ವನೌ" (ಶಬ್ದ). [ಪುಯ್ಯಲ್ (< ಪೊಯಲ್) + –ಚು₁]

**ಪುಯ್ಯಲ್ವರಿ** (ಕ್ರಿ). ದಾಳಿಗೆ ನುಗ್ಗು ; ಕಾಳಗಕ್ಕೆ ನಡೆ : ಪೆರ್ಮ್ಮಾಡಿಯ ಬಲ ಕೊಬ್ಬುಗೆ ಪುಯ್ಯಲ್ವರಿದು ಬಯಲಕ್ಕಡಿನುಳ್ಳಾದಿ ತುಱುವನಿಕ್ಕಿ . . . ಪೆರ್ಮ್ಮಾನಡಿಗಾವುಂಡ್ನ ಮಗಂ ರಾವನಲ್ಲಿ ಸತ್ತೊಡೆ (ಎಸಿ. IV. ಹಗ್ಗ. ೦೦೬-೮; ಸು. ೯೧೦); ಸಣ್ಣಕೆನೂರ ಎರ್ಕ್ಕ ತುಱು ಪರಿದಲ್ಲಿ ಪುಯ್ಯಲ್ವರಿದು ವಗರೆಯಲ್ಲಟ್ಟಿ ಕಾದಿ ತುಱುವಂ ಮಚ್ಚಿ (ಎಸಿ. IX. ಹೊಸಕೋ. ೦೦-೦೦; 1041). [ಪುಯ್ಯಲ್ (<ಪೊಯಲ್) + ಪರಿ₂]

**ಪುಯ್ಯಲ್ವೋಗು** (ಕ್ರಿ). = ಪುಯ್ಯಲ್ವರಿ : ಗಂಗೆಸೆಟ್ಟಿ ಕಳಸ್ಯಜ ಪನಟಿಯ ತುಱುಗೊಳೊಳ್ಕೊಂಡು ಪುಯ್ಯಲ್ವೋಗಿ ಅನ್ಯಾಱಡು ಸಗ್ಗವೇಱದರ್ (ಎಸಿ. X. ಕೋಲಾರ. ೨೬೩-೩ ; ೯೯೦) ; ಪುಯ್ಯಲ್ಗೆ ಪೋದಂ — ಪುಯ್ಯಲ್ವೋದಂ [ ಪಾಠಾಂ. ಪುಯಲ್ಗೆ ಪೋದಂ—ಪುಯಲ್ವೋದಂ] (ಶಬ್ದ. ೦೬೨ ವೃತ್ತಿ). [ ಪುಯ್ಯಲ್ (<ಪೊಯಲ್) + ಪೋಗು₁ (<ಪೋ₁)]

**ಪುಯ್ಯೆನಿಸು** (ಕ್ರಿ). ಸಲ್ಲೆನಿಸಂ ; ಹುಸಿಗೊಳಿಸು ; ವ್ಯರ್ಥಗೊಳಿಸು : ಪೆತ್ತ ಗೆಲ್ಲವಂ ಪೆಱಸಾರ್ಚಿದಂ ಪೊತ್ತ ಜಸವಂ ಪು[ಪಾಠಾಂ. ಪು]ಯ್ಯೆನಿಸಿದಂ ಪಕ್ಕಿದೇಟ್ಗೆಯುಂ ಬಯಲ್ಗೆಯ್ದಂ (ಪಂಪಭಾ. ೧೬ ೬). [ಪುಯ್₂ + ಎನಿಸು₁]

**ಪುಯ್ಯೇಟಿಸು** (ಕ್ರಿ). ಗೋಳಾಡಿಸಂ ; ಗೋಳು ಹೊಯ್ದುಕೊಳ್ಳು : ಅನಿತಱೊಳವಳ ಬಾಜಿವ ಕೈಗಳಂ ಪಿಡಿದು ನಿಲಿಸಿ ಈ ಪೆಣಗುವ ಕಂಠಾಶ್ಲೇಷ ಪ್ರಣಯಿಯನೀ ತೆಱದೆ ಪೊಯ್ದು ಪುಯ್ಯೇಟಿಪರೇ ಎಂದನಿಬರಂ ನಗಿಸಿ ಕಳ್ಪಿರಿಸಿ (ಶಕರ. ೬-೦೩೩). [<ಪುಯ್ಯಲ್ + ಏಱಿಸು]

**ಪುಯ್ಯೋಲಗ** (ನಾ). ಕಪಟದ ಓಲಗ : ಪೊಸಯಿಸಿ ಪುಯ್ಯೋಲಗವಂ ಪೊಸಕುದುರೆಯವರ್ ಪೊಣರ್ಚಿ ಮಹಿಶೂರವರಂ ಪಸುಧಾರೆಕೂಟ್ಟರೆಂದೇ ಬಸವಟಿದಂ ಬೆರ್ಚಿ ಬೆದಱಿ ಬದಿರೂನ್ತಸವಂ (ಅಕ್ರ. ೬೬-೬). [ಪುಯ್₂ + ಓಲಗ₁]

**ಪುಯ್ಯಿಲ್ಲಿಕ್ಕು** ' ಪುಯ್ಯಲಿಕ್ಕು ' ನೋ.

**ಪುಯ್ಯಿಲ್ಲಿಡು** ' ಪುಯ್ಯಲಿಡು ' ನೋ.

**ಪುಯ್ವಗೆ** (ನಾ). ಕಪಟದ ಮನಸ್ಸು ; ಕುಟಿಲಬುದ್ಧಿ : ನಗೆಮೊಗ ಸವಿನುಡಿ ಸಿರಿಮೊಲ್ಲೊಗುನುಗಳಂ ಮೋಸಗೊಳಿಪ ಗೋವಾಲನ ಪುಯ್ವಗೆಯಂ ಬಯಲೆನಿಸುತೆ ಪಡಿಮೊಗದೊಳ್ ಮೂಡಲೆಯ ಮುಂದುಗೆಯ್ದಳ್ ಮತ್ತಂ (ಗೀತಗೋ. ೨೩-೪೩) ; ವ್ಯರ್ಥವಾಗಿ ವನವಂ ದಹಿಸಿದವರಂ ಪುಯ್ವಗೆಯಿಂದಂ ಬಜ್ಜೆಗಳು ಕಲ್ವವರಂ (ಧಾರಕಾಂ. ೨೪೨-೩೪). [ಪುಯ್₂ + ಬಗೆ₂]

**ಪುರ₁**, ಪುರ₁, ಪೂರ₁ (ನಾ). ಹೊನಲು ; ಪ್ರವಾಹ ; ನೆರೆ : " ಪುರ [ಪಾಠಾಂ. ಹೂರಂ]ಹೊನಲ್ " (ಅಭಿಧಾ. ೦೨) ; "ಪುರ ಹೊನಲ್" (ಕನ್ನಡಕಾಂ. ೩೬) 'ಕಪೋಟ್ಪುರ' ಪರಾ. **ಹುರ₁** : ದಿವಿಜಾವಳಿಯ ದುಂದುಭಿರವದಲುಬ್ಬಿದ ಸಾಧುವಾದಗಳ ಕಳಕಳದ ಕೊಲ್ಲಿನೆಗೆಯಲಿ ಹೂವಳೆಯ ಹುರದ ಹೊನಲಿನಲಿ[ಪಾಠಾಂ. ಪೂವಳೆಯ ಪೂರದ ಹರಹಿನಲಿ]ಜನ ವಾಳುಗಿತು (ಕುಮಾರವ್ಯಾ. ೧೩-೩೦) ; ಉರಿಗಣ್ಣ ಜ್ವಾಲೆ ದಳ್ಳಿಸೆ ನಿಜ್ಜವಳ್ಳದ ಪಂದಲೆ ತೋಗೆಲಾಡೆ ಬಿರದ ಹುರಂ ಸೀಱಬುಬ್ಬಾಡೆ . . . ಮೂರಾತಿಗ್ಳಿಮೊಗಂ ಮುಮ್ಮೊಗನಾಗಿ ಜಡಿದಂ (ರಾಮಚಂ. ೦೬೨-೯). **ಹೂರ₁**: "ಹೂರವೊಂದು ಹೊನಲ್" (ಕರ್ಣಾ. ೭೦-೩೩೦) ; ತಕ್ಕ ಸನ್ಮಾನವನು ಕೈಕೊಂಡೆಕ್ಕತುಳದಲಿ ಬಂದನವರರ ಹೆಕ್ಕಳದ ಹೂವಳೆಯ ಹೊನಲಿನ ಹೂ[ಪಾಠಾಂ. ಪೂ] ರದಲಿ ಹನುಮ (ತೊರವೆ. ೩ ೯-೬) ; ಪೊಸನೀರ ಹೂರದೊಳಗೆ ಮಱಿವೀನ್ಗಳು ಮಸಗಿ ಮುಂ ಪೊಳೆದಾಡುವಂತೆ ಮಿಸುಗುವ ವರಲಾವಣ್ಯಾಂಬುಧಿಯ ಒಳ್ಗೆಸೆದಾವು ಪೊಳಪೇಱ ಪಗುತ (ಶಂಕರ. ೦೦-೨೪). [<ಸಂ. ಪೂರ]

**ಪುರ₂** (ನಾ). ೧. ಕೋಟೆ ; ದುರ್ಗ. ೨. ಪಟ್ಟಣ ; ನಗರ : " ಪತ್ತನ ನಿಗಮ ನಗರ ಪುಟಭೇದನ ನಗರೀ ಪೂಃ ಸಮಸಹ್ವಯಂ ಪುರದೊಳ್ಕಂ " (ಚತುರ್ಗಕೋ. ೬೩-೩) ; ಪುಣ್ಯದ ಬೀಡಿನಿಪುದು ಪುರಮಿದಂಬರೇಚರವಿತಿಯ (ಪಾಂಡವಪು. ೩-೯) ; ಹರನ ಸಾಹಸಕಂಜದೆ ಪಲವಗಲು ಮುಪ್ಪುರ ಪಡಿಬಂಧಿಪೋರಿದುದು ಪುರದೊಳಗಿರ್ಪ ಪುಣ್ಯಾಂಗನೆಯರ ಸಲ್ಲಲಿತದ ಸಲಿಗೆಯಿಂದೈಸೆ (ಹಂಪೆ. ೨-೪೮). ೩. ಮನೆ ; ಬೀಡು. ೪. ದೇಹ ; ಶರೀರ : " ತನುಃ . . . ಪುರಂ, ಪಿಂಡಂ . . . ಮೂರ್ತಿಃ—ಈ ೧೭ ಶರೀರಂ " (ಕರ್ಣಾಟ. ೪೯-೩೬೬). ೫. ಲಿಂಗಭೇದ ; ಲಿಂಗ ವಿವರ : (?). ೬. ಗುಗ್ಗುಳ : " ಪುರಃ ಕೌಶಿಕಂ . . . ಪಲಂಕಷಃ—ಈ ೪ ಗುಗ್ಗುಳಂ " (ಕರ್ಣಾಟ. ೦೦೦-೬೬೬). ' ಪುರವಂತ ' ಪರಾ. ೭. ನಾಗರಮುಸ್ತೆ : ಮೊ(ಪು)ರಕೆಯ ಬೂದಿಯಂ . . . ಕೋಡಸಾಲಿಯಾಪುರಣ ಪುರಂ ಗಳಂಬನಿತವಮಂ ತಿಲತೈಲದೊಳಟ್ಟು ಪೂಸುಗೆ (ಗೋವೈದ್ಯ. ೯-೨೦೬). ೮. ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಎಂಬ ಮೂರು ಜನ ದೈತ್ಯರು ಕಟ್ಟಿಕೊಂಡ ಚಿನ್ನ, ಬೆಳ್ಳಿ ಮತ್ತು ಕಬ್ಬಿಣದ ಮೂರು ಪಟ್ಟಣಗಳು ; ತ್ರಿಪುರ : ' ಪುರವಿಜಯ ', ' ಪುರಹರ ' ಪರಾ. ೯. ದಾನವಾಗಿ ಕೊಟ್ಟ ಗ್ರಾಮ : ಅನ್ತರದು [ ಪುರದ] ಸಾಸಿರ್ವ್ವರುಂ ಪುರಸ್ಸರರಾಗಿ ನಡೆದು (ಕಾರ್ಣಾಟ. XI-1. ೬೪-೦೯; 1028) ; ಆ ಚವಡಿಸೆಟ್ಟಿಯರ ನಿಯಾಮದಿಂ ನಾಗರಸರು ಪುರದಿಂ ಪಡುವಲು . . . ಕೊಟ್ಟ ಸಾಸನ (ಎಕ. XXI. ೨-೬೬: 1260). ೧೦. ಪಟ್ಟಣದಲ್ಲಿ ನಿರ್ಮಿಸಿದ ವಿಸ್ತರಣ, ಬಡಾವಣೆ ಎಂಬ ಅರ್ಥದಲ್ಲಿ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ೧೧. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : " ಪುರ ವಹ್ನಿ ತ್ರಯ ಮೂಱು " (ಕುಂಗಸಾ. ೦೩೩-೪). ' ಪುರನಯನ ' ಪರಾ. [ಸಂ.]

**ಪುರಂ** (ಅ). ೧. ಮೊದಲು ; ಪೂರ್ವದಲ್ಲಿ : " ಆದಿಃ, ಅಗ್ರಂ, ಪು(ರು)ರಂ . . . ಪುರಃ — ಈ ೭ ಮುನ್ನಂ " (ಕರ್ಣಾಟ. ೦೦೬-೨೨) : "ಅಗ್ರಂ ಪುರಂ ಪ್ರಥಮಮಪಾದಿ ಪ್ರಾಕ್ ಪುರಮೆಂದನುಗ್ರಹಿಸೆ ಪೂರ್ವಕ್ಕೆ ಪೆಸರಕ್ಕು" (ಕುಂಗಸಾ. ೦೩೬-೪). ೨. ಪೂರ್ವ ದಿಕ್ಕಿನಲ್ಲಿ. [ಸಂ. ಪುರಃ]

**ಪುರಂತ₁** (ನಾ). ಪ್ರಾಚೀನ ಶಿವಶರಣ : ಗಾಂತು ಮಾನಿನದೊಳಹುದುಚಿತವೆ ಪುರಂತರಾಹೆನ್ನಾಣೆ (ಚಿಕ್ಕಪ. ೬೦-೩೬). ' ಪುರಾತ ' ಪರಾ. [<ಪುರಾತನ]

**ಪುರಂತ₂** (ನಾ). [ವೀರಶೈ] ಪೇಶಮಾನ್ಯಗಳನ್ನು ಹೊಂದಿ ಒಂದು ಸ್ಥಾನದಲ್ಲಿ ನೆಲಸಿರುವ ಜಂಗಮ : ಆ ಪುರಂತರು ಒಡವ ಹೇಳೂತ ನಡೆದಾರ (ಜಾ.ಗೀ. ೩೩); ಪುರಂತರು ಪ್ರೀತಿಯಿಂದ ಹೇಳುವ ವಚನಗಳಿವು (ಕರಶ. ೬೭೪). [<ಪುರವಂತ]

**ಪುರಂದರ** (ನಾ). ೧. ಶತ್ರುಗಳ ನಗರಗಳನ್ನು ನಾಶ ಮಾಡಿದವನು ; ಇಂದ್ರ : ಉಜ್ಜ್ವಲಮಚಿರತ್ನಭಾಸುರಸದನಂಗಳಿಂ ನೆಱದುದಂ ಸಮೆದು ಪುರಮಂ ಪುರಂದರಂ (ಆದಿಪು. ೬-೯೯) ; ಕರಮೊಪ್ಪಿದುದಂದು ಪುರಂದರನೀಯೆ ಪುಳೋಮಸುತೆಯ ಕಟ್ಟಿದ ಕಂಠಾಭರಣಕ್ಕೆ ತಗುಳ್ಚಿದ ಮತ್ತರಾಗನಾಯಕಮಿದೆಂದಿನಂ ರವಿಬಿಂಬಂ (ಶಾಂತಿಪು. ೯-೦೦೪) ; ಏಂದು ಲಡು ಶಚಿಯಾಗಿ . . . ಪುರಂದರನ ನೆನೆದಳು ಮುನೀಂದ್ರನ ಮಂತ್ರಶಕ್ತಿಯಲಿ (ಕ.ಭಾ. ೯ ೩೭). ೨. ಶಿವ. [ಸಂ.]

**ಪುರಂದರಚಾಪ** (ನಾ). ಇಂದ್ರಚಾಪ ; ಕಾಮನ ಬಿಲ್ಲು : ಅಂಬರಮಹಾಂಬುಧಿವಾರದವಾರತ್ತರುಗ್ಮಿಸರಮೊ ಭಾವಿವಂದಿದು ವಿಯಚ್ಚುಕಕಂಠದ ವರ್ಣರಾಜಿಯೊಂದೆಸೆಕವೆಂ ಸಾನಿದೆಂದೆನಿಸಿತಂದು ಪುರಂದರಚಾಪವಿಭ್ರಮಂ (ಶಂತ್ರಪು. ೯-೩೦). [ಸಂ.]

**ಪುರಂದರಮಹ** (ನಾ). ಇಂದ್ರನ ಆರಾಧನೆಗಾಗಿ ಮಾಡುವ ಉತ್ಸವ;

ಇಂದ್ರಪೂಜೆ : ನಂದಾದಿಗೋಪರಿಂದು ಪುರಂದರಮಹಮೆಂದು ಹರ್ಷದಿಂ ಸಂಭ್ರಮಿಸಲ್ (ಹರಿ. ೯-೬೩). [ಸಂ.]

**ಪುರಂದರವಂದ್ಯ** (ನಾ). ೧. ಇಂದ್ರನಿಂದ ವಂದನೆಯನ್ನು ಪಡೆಯತಕ್ಕವನು. ೨. ಗುರು ; ಬೃಹಸ್ಪತಿ : ಪುರಂದರವಂದ್ಯಂ ಪದಿನೈದು ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರವೋಚ್ಚಾಂಶದೊಳೊಂದಿ ನಿಂದೊಡವು ಪೂರ್ಣಾಯುಷ್ಯಮಕ್ಕುಂ ಧ್ರುವಂ (ಖಾತಕ. ೬-೧೧). [ಸಂ.]

**ಪುರಂದರಾರ್ಚಿತ** (ನಾ). ೧. ಇಂದ್ರನಿಂದ ಪೂಜೆಗೊಂಡವನು : ಅರವಿಂದನಾಭ ಪುರಂದರಾರ್ಚಿತ ನಂದನಂದ . . . ರಕ್ಷಿಸು ನಮ್ಮನನವರತ (ಪುಣ. ೧೨). ೨. ಗುರು ; ಬೃಹಸ್ಪತಿ : "ಪುರಂದರಾರ್ಚಿತ—ಗುರು" (ಅಭಿ. ಕಾ. ೬೮೦). [ಸಂ.]

**ಪುರಂಧ್ರಿ** (ನಾ). ೧. (ಗಂಡನೂ ಮಕ್ಕಳೂ ಉಳ್ಳ) ಹಿರಿಯಮುತ್ತೈದೆ : ಪೂರ್ಣಕಳಶಕಳಶಮಾವ್ರತಕರವಲ್ಲವೆಯುರಪ್ಪ ಪುರಂಧ್ರಿಯರುಂ ಬದ್ಧವಣದ ಪಟಿಗಳುಂಬೆರಸಿದಿರ್ವಂದು ಪೊಬಲಂ ಪುಗಿಸೆ (ಶಂಕರಾ. ೩-೨೫); ಪುರಪುರಂಧ್ರಿಯರುಂ ಪುರೋಹಿತಪುರಸ್ಸರಂ ಧರಾಮರರುಂ ಪರಸಿ ಸೇಸೆಯನಿಕ್ಕೆ (ಪುಷ್ಪ. ೬-೩೦೭); ಪುರಂಧ್ರಿಯರು ಮಂಗಳಾರತಿಯನ್ನು ಮಾಡಕೊಡಗಿದರು (ಕುಳಾ. ೬೯). ೨. ಹೆಂಗಸು ; ಸ್ತ್ರೀ : "ಭಾಮಿನಿ ನಿತಂಬಿನಿ . . . ಪುರಂಧ್ರಿ ವಧು ಯುವತಿಯಂಗನೆ . . . ಮಹಿಳೆಯ ಬಳಿ ರಾಮೆ ವರವರ್ಣಿನಿಯೆನಲ್ಕೆ ಹೆಂಗೂಸನಿಕ್ಕು" (ಶಬ್ದಮ. ೬೯-೧); ಮಕರಕೇತನರಾಜ್ಯಾಧಿದೇವತೆಯರುಮಪ್ಪ ನಿಜಾಂತಃಪುರಪುರಂಧ್ರಿಯರ್ವೆರಸು ಪೋಗಿ ಜಲಕ್ರೀಡೆಯಾಡುತಿರ್ಪುದುಂ (ಶಂತಂ. ೧೨೯-೬); ನಿಜಾಂತಃಪುರಪುರಂಧ್ರಿಯರ ಅಗಣ್ಯಲಾವಣ್ಯರಸವಿಸರದೆಳು (ಮಲ್ಲಿ. ೬-೯೫). ೩. ಹೆಂಡತಿ; ಪತ್ನಿ : "ಸಹಚರಿ ಭಾರ್ಯೆ . . . ಪುರಂಧ್ರಿ ಕಳತ್ರಂ ಗೃಹಿಣಿ ಗೃಹಂ ಸಜ್ಜನಕ್ಕೆ ಪೆಸರಿಂತಿನಿಸುಂ" (ಚೌಂಡ. ೩೨-೩); ರಕ್ಷಿಸಿದ ಧನದಿಂ ಪುರಂಧ್ರಿಯ ರಕ್ಷಿಸುವುದು ಪುರಂಧ್ರಿಯಿಂದನೆ ರಕ್ಷಿಸುವುದಾತ್ಮನನು (ಶಿವಾ. ಉ. ೩-೭೦); ನಮ್ಮಯ ಲೋಲಲೋಚನೆಗಾಡಿದುಕ್ತಿಯು ನಾಲಗೆಗೆ ಪುನರುಕ್ತಿಯಾಗೆ ಪುರಂಧ್ರಿ ನಗುವಳಲೆ (ಕೆಂಶಾ. ೩-೬-೯೦). [ಸಂ. ಪುರಂಧ್ರೀ]

**ಪುರಃಪ್ರದರ್ಶಿತ** (ಗು). ಮುಂದಾಗಿ ತೋರಿಸಿದ ; ಮುಂದೆ ಬಂದು ವಿವರಿಸಿದ : ವನಪಾಲಪುರಃಪ್ರದರ್ಶಿತಾನಂತತರುಲತಾಸಂದೊಹಸಂದರ್ಶನಾನಂದಕಂದಳಿತಹೃದಯಾರವಿಂದನುಂ . . . ಆಗಿ ನಡೆತರ್ಪಾಗಳ್ (ರಾಜಶೇ. ೧೧-೧೩ ಕ). [ಸಂ.]

**ಪುರಃಸರ** (ಗು). ೧. ಮುಂದಾಗಿ ನಡೆಯುವ—ಹೋಗುವ ; ಮುಂಭಾಗದಲ್ಲಿ ಚರಿಸುವ. (ನಾ). ೨. ಮುಂದಾಗಿ ಬಂದು ತಿಳಿಸುವ ಆಳು ; ವಾರ್ತಾಹರ ; ಸಂದೇಶವಾಹಕ. ೩. ತಾನೇ ಮುಂದಾಗಿ ನಡೆದು ಇತರರಿಗೆ ಮಾರ್ಗದರ್ಶನ ಮಾಡುವವನು; ಮುಂದಾಳು ; ಮುಖಂಡ: 'ಪುರಸ್ಸರ' ಪರಾ. [ಸಂ.]

—**ಪುರಕ** '—ಪುರುಕ' ನೋ.

**ಪುರಕ್ಷಯ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಇಕ್ಷುಕೋದಂಡಕ್ಷಯಾಯ ಪುರಕ್ಷಯಾಯ ಸಮುಕ್ಷಗತ ಮದ್ರಕ್ಷಣಾಯ ನಮೋ ನಮೋ ಗುರು ಸಂಗಮೇಶಾಯ (ಬಸವ. ೬೦-೯೬). [ಸಂ.]

**ಪುರಗಣ** (ನಾ). ದೇವಾಲಯದ ಸೇವಾವರ್ಗ ಮತ್ತು ಅವರಿಗಾಗಿ (ದೇವಾಲಯದ ಸುತ್ತಣ ಪೌಳಿಯ ಗೋಡೆಯ ಒಳಗೆ ಇರುವ ಬಯಲುಪ್ರದೇಶದಲ್ಲಿ) ನಿರ್ಮಿಸಿದ ವಸತಿಸ್ಥಾನ,—ಬಿಡಾರ ; ಪುರವರ್ಗ (?) : ಮಡಿತಯ್ಯ ಗೋಪರಸ ಬಿಟ್ಟ ಕಿಯ ಹುಳಿಯರ ಮತ್ತ ೧ ಮೊದಲೇರಿಯ ಅಲದ ಗದೆ ಕಂಬ ೫೦ ದೇವರ ಸುತಲು ಪುರಗಣಯಿಂತೀ ಬಿಟ್ಟ ಧರ್ಮ್ಮವ ಪ್ರತಿಪಾಳಿಸುವರು (ಎಪಿಗ್ರ. IX-i. ೨೮೯-೯೯ ; 1154). [ಸಂ.]

**ಪುರಜನ** (ನಾ). ಪಟ್ಟಣದ ಜನ ; ನಾಗರಿಕರ ವರ್ಗ : ಜನಪತಿಗೆ ಒಸಗೆಯುಂ ಪುರಜನಮೆಲ್ಲಂ ಬೀಡುಕ್ಕಿರ್ವರ್ (ಶಾಂತಿ. ೧-೯೬) ; ಪುರಜನ ಮಟ್ಟಿಯಿಂ ಮುಡಿವ ಕೊಡೆ ತುಡುಂಬುವ ಕಿಂಕಿರಾತಶೇಖರರಜದಿಂದಮಾದ ಪಟವಾಸದ ಧೂಳಿಯ ಪರ್ಣನಿಂದವಾಭರಣದ ಮಣಿಕಂಗಳ ಪೊದಟ್ಟರುಣಾಂಶುಗಳಿಂದಮಂದು ಪಿಂಜರಿತಪಿಶಂಗಿತಾರುಣಿತದಿಙ್ಮುಖ ಮಾದುದು ತನ್ಮಹೋತ್ಸವಂ (ಅಂತ್ಯ. ೬-೧೦೯); ಪುರಜನಮುಂ ಪರಿಜನಮುಂ ನೆರೆದು ಮನಂಗೊಂಡು ಕೂರ್ತು ಕೀರ್ತಿಸೆ ಧರಣೀಶ್ವರರಯ್ಯೂರ್ವರ್ . . . ದೀಕ್ಷೆಯುಂ ಕೈಕೊಂಡರ್ (ಸುಕುಮಾ. ೬-೩೯). [ಸಂ.]

**ಪುರಟ** (ನಾ). ಚಿನ್ನ ; ಬಂಗಾರ : ಹರೆಯದ ಸುಖಮುಹೂರ್ತ ವೀಕ್ಷಗಜುಹಲ್ ಮಂಚಕರನಂಗಲಾವಣ್ಯಜಲಭಾಂಡದಲ್ಲಿಟ್ಟ ಪುರಟ ನಿರ್ಮಿತವಾದ ಗಳಿಗೆವಟ್ಟಲೊ ಪಯೋಧರಗಿರಿಗಳು ನೋಳ್ಪರ ಉರುದಿಟ್ಟಿ ಜಾರಿದು ಬೀಳುವ ಗುಳಿಯೊ . . . ಎನಲ್ ಕಣ್ಗೆವಂದುದು ನಿಮ್ನತರ ನಾಭಿ ಶ್ರೀಪಾರ್ವತೀದೇವಿಯಾ (ಶಂಕರಾ. ೬-೨೨). [ಸಂ.]

**ಪುರಟಪುರಾಣ** (ನಾ). ಸುಳ್ಳುಕಥೆ ; ಹುಟ್ಟಿಸಿಕೊಂಡು ಹೇಳುವ ಕಥೆ : ಅವನಪ್ಪ ಸತ್ತದ್ದು, ಜವಾಬ್ದಾರಿ ಹೊರಿಸಿದ್ದು—ಈ ಪುರಟಪುರಾಣ ಎಲ್ಲ ಯಾರಿಗೆ ಬೇಕು ? (ಮಹಾಗ. ೧೩೬).
[ಪುರಟ್ಟು (ಪ←ತಮಿ. ಪುರಟ್ಟು=ಮೋಸ, ವಂಚನೆ) + ಪುರಾಣ]

**ಪುರಟವಸನ** (ನಾ). ಚಿನ್ನದ ಎಳೆಯುಳ್ಳ ಬಟ್ಟೆ ; ಜರತಾರಿವಸ್ತ್ರ : ಪುರಟವಸನದ ಮಧ್ಯ ಹೊಳೆವ ನಾನಾಭರಣ ಕರಕಂಜ ಕಂಬುಕಂಠ ಸರಸಮುಖಚಂದ್ರಶೋಭನಮೂರ್ತಿ ಹಯವದನ (ವಾದಿ. ೪೮-೩). [ಸಂ.]

**ಪುರಡಿ** (ನಾ). ಒಂದು ಬಗೆಯ ಪಕ್ಷಿ : ಭೇರುಂಡ ಬೆಳುವ ಸಾಳುವ ಹದ್ದು . . . ಸೋಗೆನವಿಲು ಪುರಡಿ [ಪಾಠಾಂ. ಪೂರುಡಿ] ಗವುಡ ಕರ್ಕರ ಲಾವುಗೆ ಗುಬ್ಬಿ ಆರಣ್ಯದೊಳಗವರಾಟ (ಚೆನ್ನ. ೦-೩೯). 'ಪುರುಳಿ' ಪರಾ. [?]

**ಪುರತ್ರಯ** (ನಾ). = ಪುರ್. ೮ : ತಿರುಗುವ ಪುರತ್ರಯಮನಹಿಕಾಂತಕಟಕನು ಬೇಗೆಯಿಂ ಸುಡುವಂತೆ ಸುಟ್ಟನಲಾ (ಬಸವ. ೫೯ ೩೯). [ಸಂ.]

**ಪುರತ್ರಯದಾಹ** (ನಾ). ತ್ರಿಪುರಗಳನ್ನು ಸುಟ್ಟವನು ; ಶಿವ : ಮದನಾಂತಕ ಪುರತ್ರಯದಾಹ ಹರಶಂಕರ ಮಹೇಶ ತ್ರಾಹಿ (ಶಿವಾ. ೪. ೬-೯೫). [ಸಂ.]

**ಪುರದರ್ಮ** (ನಾ). ಒಂದು ಬಗೆಯ ಸುಂಕ : ಪರಿಕಿಸದೀ ಧರ್ಮ್ಮದೊಳರಸರ ಕಾಣಿಕೆ ಕೋಳ್ಪಿಯರುವಣ ಕಿರುಸುಂಕಂ ಪುರದ[ಧ]ರ್ಮ್ಮಂ ಬಣ್ಣಿಗೆಯುಂದರವೀಸಮುಳಿಪಿ ಕೊಟ್ಟಂ ಚಾಣ್ಡಾಳ (ಎಪಿ. XXVII. ೬೯-೩೯; 1114). [ಪ ಇದು 'ಪುರದ್ರವ್ಯ' ಎಂಬುದರ ತಪ್ಪುರೂಪ]

**ಪುರದಾನಿಕೆ** (ನಾ). ಒಂದು ಬಗೆಯ ತೆರಿಗೆ : ಸ್ವರರೂಪ ಪೆರ್ಮ್ಮಾಡಿಯ ಪುರವರದೊಳ್ ನಡೆವ ಮನ್ನೆಯದ ಕಿರುದೆರೆಯುಂ ಪುರದಾನಿಕೆಯಳ್ದಿ ದೀವ ಪರಿಹಾರಂ ಬಿಟ್ಟು ಮಾಡಿದು ತತ್ಪುರಮಂ (ಎಪಿಗ್ರ. XX. ೪೬-೩೯ ; 1074). [?]

**ಪುರದೇವತೆ** (ನಾ). ಊರಿನ ದೇವತೆ ; ಗ್ರಾಮದೇವತೆ : ಪುರದೇವತೆಗಳ್ ಮುನಿಸಿಂ ಪರಿತಂದು ದುರಾತ್ಮನೆರಡುಕಣ್ಗಳುಮಂ ನಿಷ್ಠುರಮಾಗಿ ಪೊಯ್ಮೆ ತೊಟ್ಟನೆ ಕುರುಡಾದಂ (ಧರ್ಮಾಮೃ. ೧೧-೧೩೩).
[ಸಂ. ಪುರದೇವತಾ]

**ಪುರದ್ರವ್ಯ** (ನಾ). = ಪುರದರ್ಮ : ಆನೆಗೋಪನೆ ಸಲ್ಲನ್ನೆಗಂ ಹಲಪಣವು ಪುರದ್ರವ್ಯಮುಮಂ ಕೊಳ್ಳ ಸಲ್ಲ[ದು] (ಕಳಿ. ೪೬-೬.೦೫ ; ಕ್ರಿ. 1151).
[ಪುರ್ತ+ದ್ರವ್ಯ]

**ಪುರದ್ವಾರ** (ನಾ). (ಪಟ್ಟಣದ) ಹೆಬ್ಬಾಗಿಲು ; ಗೋಪುರ

"ಗೋಪುರಂ, ಪುರದ್ವಾರಂ—ಈ ೨ ಬಾಗಿಲುವಾಡಂ" (ಹರಾಯು. ೪೯-೧೩೩); ಅಡಿ ಮಗುಚಿ ಬಿದ್ದಳು ಪುರದ್ವಾರದ ಮಹಾಸೌಧ ಹುಡಿಗೆದಟಿ (ಕೋರಾ. ೩-೨-೦೦). [ಸಂ.]

**ಪುರಧ್ವಂಸಿ** (ನಾ). ತ್ರಿಪುರಗಳನ್ನು ನಾಶಮಾಡಿದವನು; ಶಿವ. [ಸಂ. ಪುರಧ್ವಂಸಿನ್]

**ಪುರನಯನ** (ನಾ). ಮೂರು ಕಣ್ಣುಗಳುಳ್ಳವನು; ಶಿವ: ಪುರನಯನ . . . ಪೂರೆವುದೀಕ್ಷಣವೆನ್ನ (ಶ್ರೀಕಾ. ೦-೫೦). [ಸಂ.]

**ಪುರಭೃತ್ತು** (ನಾ). ಪುರದ ಒಡೆಯ, – ದೊರೆ: ಪೇಚರಸ್ಸನ್ನಂ ವಿಜಯಾರ್ಥಾಚಲತಟಧಾತುರೇಣಾರಕ್ತಂ ಪುರಭೃದ್ಗೋಚರಕೋಪಾಗ್ನಿ ಶಿಖಾರೋಚಿಃಪಟಲೋಪಲಿಪ್ತಮೆನಿಸಿದುದಾಗಳ್ (ಶಾಂತಿಪು. ೪-೬). [ಸಂ. ಪುರಭೃತ್]

**ಪುರಮಥನ** (ನಾ). ೧. ತ್ರಿಪುರಗಳನ್ನು ನಾಶ ಮಾಡಿದವನು; ಶಿವ: ಪುರಮಥನರೂಪದಿಂ ನೀಂ ಮರುಳ್ಗಳೊಡನಾಡಿದ್ದೆ (ಶಗಾ. ೪-೧೦೪); ಪುರಮಥನನ ಮರಕೀರ್ತ್ಯಂಕುರವಿಪಾ ಗಿರಿಸುತೆಯ ವದನದೊಳ್ ಮೊಳೆ ತುದು ಸಾದರದಿಂ ತಾನೆಂಬಂತಿರೆ ಕರಮೆಸೆದುದು ವಿಮಳಮೌಕ್ತಿಕಂ ನಾಸಿಕದೊಳ್ (ನೇಳ. ೩-೩೩). ೨. [ಛಂದ] 'ಗುರು' ಎಂಬುದರ ಸಂಕೇತ (—): ಸುರರ ಪಡೆ ನೆರೆದಿರಲು . . . ಪದಾಂತಂ ಪುರಮಥನ ಕಿಡೆ ಬಟಾಚ ನೆರೆದು ಯತಿ ದಶಮದೊಳೆ (ಛಂದೋಂಬು. ೩-೨೦೩). [ಸಂ.]

**ಪುರಮರ್ದನ** (ನಾ). = ಪುರಮಥನ ೧: ಪುರಮರ್ದನನಾಗೇಂದ್ರನಂ ನಿಂದು ಬೆಚಾಗಿಸಿತ್ತಮಲ ಧರ್ಮಜನ ಕೀರ್ತಿ (ಕೃಷ್ಣಕಾ. ೨-೦೨). [ಸಂ.]

**ಪುರರಿಪು** (ನಾ). ತ್ರಿಪುರಗಳ ವೈರಿ; ಶಿವ: ಪುರರಿಪು ಸಾಮವೇದಿಯು ಪೂಳಲ್ವರಸೊಯ್ಯನೆ ತನ್ನ ಲೋಕಕಚ್ಚರಿಯನೆ ಘಂಟಿಗೂಡಿ ವಿಸು ಪೋಹಿಲನಂ ರಜತಾಚಲಕ್ಕೆ ಬಿತ್ತರದೊಳ್ ಕೊಂಡುಪೋಗನೆ (ಕೃಷ್ಣಕಾ. ೫೬-೦೨೩). [ಸಂ.]

**ಪುರಲಿ** 'ಪುಱಲೆ' ನೋ.

**ಪುರಲು** 'ಪುರುಳ್' ನೋ.

**ಪುರಲೆ, ಪುರುಳೆ** (ನಾ). ೧. ಒಣಗಿದ ಹುಲ್ಲು, ಸೌದೆಯ ಚಿಕ್ಕ ತುಂಡು ಮೊದಲಾದ ಉರುವಲು: ಗಿಡದಿಂದ ಅಡಿಗೆಗೆ ಬೇಕಾದ ಸೌದೆಯನ್ನೂ ಪುರಲೆಯನ್ನೂ ಆಯ್ದುಕೊಂಡು ಬರುವುದು (ಕೃಷರ್ಷ. ೧೭); ಅವಳು ನೀರಿನ ಒಲೆಗೆ ಪುರಲೆಯನ್ನು ಹಾಕುತ್ತಿದ್ದಳು (ಷಮ್ಮರಿ. ೩); ಮನೆಯ ಕಡೆ ತರಲೆ, ಹೊಲದ ಕಡೆ ಪುರಲೆ (ಗಾದೆ). ೨. (ಆಲಂ) ಒಣಮಾತು; ಜಳ್ಳುನುಡಿ: ಸಂಗೀತದಲ್ಲಿ ಓಡದಿದ್ದ ಅವರ ಬುದ್ಧಿ ಪಿಸುಣತನದಲ್ಲಿ ಚುರುಕಾಯಿತು. ಅವರು ದಿನಕ್ಕೊಂದು ಪುರಲೆ ಹಾರಿಸತೊಡಗಿದರು (ಕೂಷ. ೦೩೪). **ಪುರುಳೆ**: ೧. ಪುರುಳೇ ಸೌದೆ ಇಲ್ಲದೆ ದೊಡ್ಡ ಸೌದೆ ಉರಿಯುತ್ತದೆಯೇ (ಹುಟ್ಟಿ. ೦೪೨). 'ಪುಳ್ಳಿ' ಪರಾ.

**ಪುರುಳೆ ಹಚ್ಚು** = (ಆಲಂ) ಮನಸ್ತಾಪವನ್ನು ಉಂಟುಮಾಡು; ಜಗಳ ಹಚ್ಚಿಸು: ಆ ಈಶ್‌ದೇವತೆಗೋ ಮೊದಲೇ ಅನ್ಯೋನ್ಯ ವಾಗಿದ್ದವರ ಮಧ್ಯೆ ಪುರುಳೆ ಹಚ್ಚಿಡುವ ಸ್ವಭಾವ (ಕಳ್ಳಕಾ. ೦೬೪).

**ಪುರವಂತ** (ನಾ). ೧. ಗುಗ್ಗುಳದ ಉತ್ಸವದ ಸಂದರ್ಭದಲ್ಲಿ ಮಾಡುವ ವೀರಭದ್ರನೃತ್ಯ: ಒಡ್ಡಿ ಚಾಡುತ್ತೀಲಿ ಪುರವಂತನಾಡಸ್ಸ ಐಸೀರಿಲ್ಲೊಂಟಾರಲ್ಲ (ಜುಲ್ಲಗಿ. ೫೬). ೨. ವೀರಭದ್ರನೃತ್ಯವನ್ನು ಮಾಡುವವನು; ಈ ಕುಣಿತದ ಮಧ್ಯೆ ಮಧ್ಯೆ ಒಡಪುಗಳನ್ನು ಹೇಳುವುದು ಈತನ ಸಂಪ್ರದಾಯ. ವಚನಗಳನ್ನೂ ಹಾಡುವು ದುಂಟು: ಪುರವಂತರು ವೀರಭದ್ರನ ಅವತಾರವೆಂಬ ನಂಬಿಕೆಯಿದೆ (ಕಜಳ. ೦೦೨). [ಪುರ್ಕ + — ವಂತ]

**ಪುರವಂತಿಕೆ** (ನಾ). ಶಿವಭಕ್ತನಾದ ಪುರವಂತನಿಂದ ನಡೆಯುವ ಒಂದು ಬಗೆಯ ನಾಟ್ಯಕಲೆ: ಉತ್ತರಕರ್ನಾಟಕದಲ್ಲಿ ಪ್ರಚಲಿತವಿರುವ ಶೈವ ಪರಂಪರೆಯ ವಿಶಿಷ್ಟವಾದ ಧಾರ್ಮಿಕ ಕಲೆ 'ಪುರವಂತಿಕೆ' (ಕಜಳ. ೦೦೨). [ಪುರವಂತ + — ಇಕೆ]

**ಪುರವಟಿ** 'ಪುರವಣೆ' ನೋ.

**ಪುರವಣೆ, ಪುರವಟಿ, ಪುರೋಣಿ, ಪೂರೋಟಿ** (ನಾ). ೧. (ಉಕ) ಪೂರೈಕೆ; ಸರಬರಾಜು: ಒದಗಿಸುವಿಕೆ: ಬೇಕಾದಾಗ ಹಣದ ಪುರವಣೆ ಯನ್ನು ತಮಗೆ ಮಾಡಬೇಕೆಂದು ಅವರು ಬರೆದಿರುವರು (ಬಿಳ್ಳೆ. ೫೬); ಅವನ ನಿತ್ಯಾವಳೀ ಮನೆಯ ಗಂಡುಮಗನಾಕ್ಕೆ ಜೋಡಿ ಒಂಟಿ ಲೆಕ್ಕದಿಂದ ಯಜ್ಞೋಪವೀತದ ವಾರ್ಷಿಕ ಪುರವಣೆಯಾಗಬೇಕು (೦೬ಹ. II, ೪೪). ೨. ಸಮೃದ್ಧವಾಗಿರುವಿಕೆ; ವಿಪುಲವಾಗಿರುವಿಕೆ; ಸುಗ್ಗಿ: ನೀರು ಪುರವಣೆ ಆದ್ರ ಒಂದು ಮಗಿ ಎಲಿಬಳ್ಳಿ ಬೆಳಿಸೋಣ (ಜಾನಂ. ೬); ಕಮಲಜ್ಜಿಗೆ ಈಗ ಎಂಬತ್ತನಾಲ್ಕು ವರುಷಗಳು. ಆಕೆಯು ನಿದ್ದೆಯ ಪುರವಣೆಯಲ್ಲಿ ಈಗ ಒಣಗಿದ್ದರೂ ನೆನಪಿನ ಶಕ್ತಿಯು ಮಾತ್ರ ಹಚ್ಚ ಹಸುರಾಗಿತ್ತು (ಕಸ್ನ್ಯ. ೬೬). **ಪುರವಟಿ**: ೧. ವಿದೇಶೀಬಟ್ಟೆಯನ್ನು ಸಂಪೂರ್ಣವಾಗಿ ಬಹಿಷ್ಕರಿ ಬೇಕಾದರೆ ಪ್ರತಿವರ್ಷ ೧,೫೦೦ ದಶಲಕ್ಷ ಯಾರ್ಡು ಬಟ್ಟೆಯ ಪುರವಟಿ ಯಾಗಬೇಕು (ಜಾಂಡಾ. ೯೬). **ಪುರೋಣಿ**: ೧. ಲೋಕಲ್ ಫಂಡು . . . ಇವರ ಹಣದಿಂದ ಶಿಕ್ಷಣ, ಹೊಸಮಾರ್ಗಗಳು, ನೀರಿನ ಪುರೋಣಿ, ಕಾವಲಿ ಗಳು, ಧರ್ಮಶಾಲೆ, ವೈದ್ಯಶಾಲೆಗಳು ಮುಂತಾದ ಸಾರ್ವಜನಿಕಹಿತದ ಕೆಲಸಗಳಾಗುತ್ತಿರುತ್ತವೆ (ಕಡಾಗ. ೩೪೩). **ಪೂರೋಟಿ**: ೨. ಒಂದು ಬಾರಿ ನೀರು ಎಲ್ಲಾ ಕಡೆ ಪೂರೋಟಿ ಆಗಬೇಕಲ್ಲರಿ (ಜಾನಂ. ೦೩). [← ಮರಾ. ಪುರವಟಾ, ಪುರವಣಾ]

**ಪುರವಣೆ** (ನಾ). ಪೂರಕಪತ್ರ; ಅನುಬಂಧ; ಪರಿಶಿಷ್ಟ: ಅದಕ್ಕೆ ಎರಡು ನೂರು ಪುಟದ ಪುರವಣೆಯನ್ನು ಜೋಡಿಸಬೇಕಾಗಿದೆ (ಮುಕಾಚ. ೪); ಹೊಸ ಉಲ್ಲೇಖಗಳ ಪುರವಣೆಗಳನ್ನು (Supplements) ಕಾಲಕಾಲಕ್ಕೆ ಮುದ್ರಿಸಿ ಸೂಚಿಯ ನವೀನತೆಯನ್ನು ಕಾಯ್ದುಕೊಳ್ಳುತ್ತಿದ್ದವು (ಗ್ರಂಥಾ. ೪೨); ಪಾರ್ಸೀ ಪತ್ರಿಕೆಯಲ್ಲಿ ಒಂದು ಇಂಗ್ಲೀಷ್ ಪುರವಣಿ ಭಾಗವೂ ಇರುತ್ತಿತ್ತು (ಪತ್ರಿಕಾ. ೨೬). [← ಮರಾ. ಪುರವಣೀ]

**ಪುರವರ** (ನಾ). ಶ್ರೇಷ್ಠವಾದ ಪಟ್ಟಣ, — ನಗರ: ನಿಜಯುಲರ್ಗಣ್ಗಳ ಬೆಡಂಗಿಯರ್ಕಳರ್ಕಂ ನಡೆ ನೋಡಿ ಪೋಗಲಾಗದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಾ. ೦೬೮ ಕೂತ್ರಕ); ಆ ಕೋಟಿ ಯೊಳಗೆ . . . ಏಕದ್ವಿತ್ರಿಚತುಶ್ಶಾಲಾಕೀರ್ಣಂ ಪುರವರಂ ಕರಂ ಸೊಗಯಿ ಸುಗುಂ (ಶಾಂತಿಪು. ೪-೦೪೬). [ಸಂ.]

**ಪುರವರ್ಗ** (ನಾ). ದೇವಾಲಯದ ಸೇವಾವರ್ಗ ಮತ್ತು ಅವರಿಗಾಗಿ ನಿರ್ಮಿಸಿದ ವಸತಿಸ್ಥಾನ, — ಬಡಾವಣೆ: ಮನ್ನೆಯದೊಳಗೆರಡು ಪೊನ್ನುಮಂ ದೇವರ ಪುರವರ್ಗ್ಗಫಳೆಯ ಭತ್ತಮುಮಂ . . . ಹನ್ನರ ಹಣಮುಮಂ ಬಿಟ್ಟರು (ಕಿಇ. IV, ೩೪-೨೬; 1111); ಜನನಿಗೆ ಚಂದ ಲೇಶ್ವರಮನೆತ್ತಿಸಿದಂ ಪುರವರ್ಗ್ಗಮಂ ಜಗಜ್ಜನನುತಮಾಗೆ ಕಾಮನೆಚಿ ಮಟ್ಟಿನೆ ಮಾಡಿಸಿದಂ . . . ಕಾಮಿನಿಯರನಾಯ್ದು ತಂದು ಪುರವರ್ಗ್ಗದ ಸೂಳೆಯರಾಗೆ ಮಾಡಿದಂ (ಎಇ. XIII, ೪೬-೬೬; 1112); ಗುಂಮ್ಮಂಣ್ಣನ ಹೆಸರಲಿ ಪುರವರ್ಗ್ಗವಾಗಿ ಸಂಭುದೇವರ ಮುಂದೆ ಅಮ್ಮುವನಿವು ಕೊಟ್ಟು (ಮೃಆ. ೦೬೪೩, ೦೪-೦೦; 1318). [ಸಂ.]

**ಪುರವಾಸಿ** (ನಾ). ಪಟ್ಟಣದ ನಿವಾಸಿ; ಪಟ್ಟಣಿಗ; ನಗರವಾಸಿ: ಕರೆತಂದರ್ ಪುರವಾಸಿಗಳ್ ದೊರೆಯೆಮನುದ್ಯತ್ಪಾರಸೌರಂಭದಿಂ (ಹಾಕಾಶ್ಯ. ೦-೩-೦೪). [ಸಂ. ಪುರವಾಸಿನ್]

**ಪುರವಿಜಯ** (ನಾ). ತ್ರಿಪುರಗಳನ್ನು ಗೆದ್ದವನು; ಶಿವ: ಪುರವಿಜ ಯಂಗೆ ತನ್ನ ಸುತೆಯುಪ್ಪುಮೆಯುಂ ನಲಮಿಪ್ಪಮಿತ್ತು ಭೂಧರಪತಿ ಮಾವ

ನೆಂದೆನಿಸುವಂದದಿನಿನ್ನುಯ ಕನ್ನೆಯಂ . . . ನಿಮ್ಮಡಿಗೆ ಕೊಟ್ಟು ವಿವಾಹ ಮನೊಪ್ಪೆ ಮಾಳ್ಪೆಂ (ಕೃಷ್ಣ. ೩೩.೦೩೯). [ಸಂ.]

**ಪುರವೈರಿ** (ನಾ). ತ್ರಿಪುರಗಳ ಶತ್ರು ; ಶಿವ : ಪುರವೈರಿ ಮೆಳರ್ದು ನಿಜ ಮಂದಿರದ ಕವಾಟದೊಳ್ ತಳ್ತ ಬೀಯಗವಮನದಂ ಪರಿಹರಿಸಿ ತೆಗೆದು ಫಳಿಲನೆ ಸರಭಸವಾ ಜವಳಿಪಡಿಯನೇಂ ಬರ್ಚಿದನೊ (ಕೃಷ್ಣ. ೦೭-೪೦). [ಸಂ. ಪುರವೈರಿನ್]

**ಪುರಶಾಸನ** (ನಾ). ತ್ರಿಪುರಗಳನ್ನು ದಂಡಿಸಿದವನು ; ಶಿವ. [ಸಂ.]

**ಪುರಶ್ಚರಣ** (ನಾ). ದೇವರ ಹೆಸರನ್ನು ಅಥವಾ ಮಂತ್ರವನ್ನು ಜಪಿಸುವುದು : ಪುರಶ್ಚರಣಂಗೈಯದೆ ಸಂಖ್ಯಾನಿಯುತವಾಗಿ ದೇಹಾಂತ ಪರ್ಯಂತ ಮಾಳ್ಪುದೇ ನಿತ್ಯಜಪವಹುದು ಕನಿಷ್ಠವೆನಿಸುವುದು ಪುರ ಶ್ಚರಣಂ ಮಾಡಿ ಬಿಡುವುದೇ ಪುರಶ್ಚರಣಜಪವದು ಮಧ್ಯಮವೆನಿಸುವುದು ಪುರಶ್ಚರಣಂಗೈದು ಮೇಲೆ ಸಂಖ್ಯಾನಿಯಮದಿಂ ಪ್ರಾಣಾವಧಿ ಮಾಳ್ಪುದೇ ಪುರಶ್ಚರಣ ಪೂರ್ವಕ ನಿತ್ಯಜಪವದುತ್ತಮವೆನಿಸುವುದು (ಶಿವತ. ೬೭). [ಸಂ.]

**ಪುರಶ್ಚರಣೆ** (ನಾ). ಮತ್ತೆ ಮತ್ತೆ ಜಪಿಸುವುದು,-ಹೇಳುವುದು : ನಿಶ್ಚಲಹೃದಯನಾಗಿ ವಿಷ್ಣುನಾಮಂಗಳ ಪುರಶ್ಚರಣೆಯಿಂದಮಂ ಸುಖ ದೋರಂತಿರೆ (ಕೃಬಾಲ. ೦೦.೩೯); ಅವನು ಆಕೆಯ ಕನ್ಯಾವಸ್ಥೆಯಲ್ಲಿ . . . ಸೂರ್ಯನ ಮಂತ್ರದ ಪುರಶ್ಚರಣೆಯ ಪ್ರಭಾವದಿಂದ ಹುಟ್ಟಿದವನು (ಹಿಂಗಟ್ಟು. ೨೦). [ಸಂ. ಪುರಶ್ಚರಣ]

**ಪುರಸತ್ತು**, ಪುರಸೊತ್ತು, ಪುರುಸತ್ತು, ಪುರುಸೊತ್ತು (ನಾ). ಬಿಡುವು ; ವಿರಾಮ : ವೀರರಾಜೇಂದ್ರಪೇಟೆ ಉಗ್ರಾಣಕ್ಕೆ ದಿವಾಹತ್ತ್ರ ಯಲ್ಲೂ ಪುರಸತ್ತು ಇಲ್ಲದೆ, ಅಕ್ಕಿ ಹೊರುತ್ತಾರೆ (ರಾಜೇಂದ್ರ. ೦೩೮) ; ಪುರಸತ್ತಾದರೆ ಮಧ್ಯಾಹ್ನ ಅಕ್ಕನ ಮನೆಗೆ ಬರುತ್ತೇನೆ (ಕುಂಕುಮ. ೭೩೯); ಅವನಿಗೆ ಯೋಚನೆ ಮಾಡಲು ಅಗ ಪುರಸತ್ತಿರದು (ರಾಜ್ಯಾಂಗ. ೦೨೩).

**ಪುರಸೊತ್ತು** : ವರ್ಷಕ್ಕೆ ಆರು ತಿಂಗಳು ರೈತರಿಗೆ ಕೆಲಸ. ಮಿಕ್ಕ ಸಮಯ ಪುರಸೊತ್ತಿನಿಂದಿರುತ್ತಾರೆ (ಗಂಗಾಳ. ೦೨) ; ರಸ್ತೆಯಲ್ಲೋ ಮಸ್ತು ಜನ ಇಲ್ಲ ಪುರಸೊತ್ತು (ಹಂಚಿಕು. ೩೨-೦೨) ; ನಾವು ಪುರಸೊತ್ತೇ ಇಲ್ಲದೆ ಕೆಲಸ ಮಾಡುತ್ತಾ ಇದೀವಿ (ಮುಂಜಾ. ೧೧೩). **ಪುರುಸತ್ತು** : ಹೆಂಗಸರಿಗೂ ಪುರುಸತ್ತಿಲ್ಲ. ಗಂಡಸರಿಗೂ ವಿರಾಮವಿಲ್ಲ (ಹುಚ್ಚುಹ. ೭೦): ಚಹವನ್ನು ಕುಡಿದುಕೊಂಡು ಹೋಗುವುದಕ್ಕೂ ಬಾಳುವಿಗೆ ಪುರುಸತ್ತಿರಲಿಲ್ಲ (ಕಂಡುಬ. ೩೯); ಅವಳು ಚೆಲುವೆಯೋ ಅಲ್ಲವೇ ಎಂದು ನಿಂತು ನೋಡುವುದಕ್ಕೆ ಪುರುಸತ್ತಿಲ್ಲ (ರಾಜಾಕಿ. ೦೦೨). **ಪುರುಸೊತ್ತು** : ಸಸಿಗೆ ಮಧ್ಯಾಹ್ನ ಹನ್ನೆರಡು ಗಂಟೆಯವರೆಗೆ ಪುರುಸೊತ್ತೇ ಇಲ್ಲ (ದಾರಿ. ೪) ; ನಿನ್ನ ಜೊತೆ ಮಾತಾಡೋಕೆ ಪುರುಸೊತ್ತಿಲ್ಲ (ಕಂಪುಕಿ. ೩) ; ಉಸಿರಾಡಿಕೊಳ್ಳಲಿಕ್ಕೆ ಸ್ವಲ್ಪ ಪುರುಸೊತ್ತು ಕೊಡು (ಮುಡಾಂ. ೪೬). [←ಅರ. ಹಿಂ. ಪುರಸತ್, ಫುರ್ಸತ್; ಮರಾ. ಪುರಸತ್, ಫುರ್ಸತ್, ಪುರಸೊತ್, ಫುರ್ಸತೀ]

**ಪುರಸಭೆ** (ನಾ). ಸ್ಥಳೀಯ ಅಧಿಕಾರವುಳ್ಳ, ಚುನಾಯಿತ ಸದಸ್ಯರನ್ನು ಹೊಂದಿದ ಪಟ್ಟಣದ ಸಂಸ್ಥೆ ; ನಗರಸಭೆ ; ಪೌರಸಭೆ : ಪುರಸಭೆ ಬಿಟ್ಟಿದ್ದ ನಾಯಿಗಾಡಿಯು ನೋಡಿ ಶುನಿ ಗಲ್ಲಿ ಬಿದ್ದೋಡುವಂತೆ ತನ್ನನ್ನು ಬೆನ್ನಟ್ಟಿ ಬಂದವರೇದೀ ನೋಡಿ ಅವಿತು ಕದ್ದೋಡುವನಲ್ಲೆ (ಕಂಠೃ. ೦೩೯-೬೪). [ಸಂ. ಪುರಸಭಾ]

**ಪುರಸೊತ್ತು** 'ಪುರಸತ್ತು' ನೋ.

**ಪುರಸ್ಕರಿಸು** (ಕ್ರಿ). ೧. ಮನ್ನಿಸಂ ; ಗೌರವಿಸು ; ಆದರಿಸು : ಪಾಂಡು ಪುತ್ರರ ಸುಗುಣಗಳನ್ನು ಕಂಡು ಪ್ರಜೆಗಳು ಅವರನ್ನು ಅವಿಚ್ಛಿನ್ನವಾಗಿ ಪ್ರೀತಿಸಿ ಪುರಸ್ಕರಿಸುತ್ತಿದ್ದರು (ಹಿಂಕಿರು. ೨); ನನ್ನನ್ನು ಪುರಸ್ಕರಿಸಲು ಸಾವಿರ ಜನರು ಮುಂದೆ ಬಂದಾರು (ರಂಗಣೋ. ೦೦೨): ಆ ಬ್ರಾಹ್ಮಣ . . . ನಾವು ದೇವ ಸ್ಥಾನಕ್ಕೆ ಬರಬೇಕೆಂದೂ, ಸಕಲಮರ್ಯಾದೆಗಳೊಡನೆ ಪುರಸ್ಕರಿಸುವನೆಂದೂ ಹೇಳಿದನು (ಕಂಗಾಳ. ೩೦೨). ೨. ಬೆಂಬಲಿಸು ; ಪ್ರೋತ್ಸಾಹಿಸು : ಈ ಪತ್ರಿಕೆಯು ಪುರಸ್ಕರಿಸುತ್ತಿದ್ದ ಐಯರ್ಲೆಂಡಿನ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ಭಾರತದಲ್ಲಿಯ ಆಂಗ್ಲರಿಗೆ ಒಳ್ಳೇ ಅಭಿಪ್ರಾಯವಿರಲಿಲ್ಲ (ಪ್ರಾಶಾ. ೫೩). [ಪುರಸ್ಕರಣ + – ಇಸು]

**ಪುರಸ್ಕರ್ತ** (ನಾ). ಬೆಂಬಲಿಸುವವನು ; ಸಮರ್ಥಿಸುವವನು ; ಅನು ಯಾಯಿ : ಆಧುನಿಕಕಾಲದೊಳಗಿನ ಸಮತೆಯ ಪುರಸ್ಕರ್ತರೂ ತಿಳಿದೂ ತಿಳಿಯದೆಯೂ ಇದೇ ಶ್ರದ್ಧೆಯ ಸ್ವೀಕಾರವನ್ನು ಮಾಡುತ್ತಿರುವರು (ಕೃತಿಂರ. ೦೦೪) ; ಆಕ್ಸ್‌ಫರ್ಡಿಗೆ ಬಂದ ತಿಂಗಳೆರಡು ತಿಂಗಳಲ್ಲಿಯೇ ನಿಯೋಗಿಯು ಒಂದು ವಿಶಿಷ್ಟ ಧೋರಣದ ಪುರಸ್ಕರ್ತನಾದ (ಸಮೀ. ೩೩೪). [< ಸಂ. ಪುರಸ್ಕರ್ತೃ]

**ಪುರಸ್ಕಾರ** (ನಾ). ೧. ಗೌರವ ; ಸನ್ಮಾನ ; ಮರ್ಯಾದೆ : ಹಳ್ಳಿಗೆ ಒಳ್ಳೆಯ ಪುರಸ್ಕಾರ ದೊರೆತ ಹಾಗಾಯಿತು (ಕೂಶಿಂ. ೩೩); ನಿಸರ್ಗ ವಿಜ್ಞಾನಕ್ಕೆ ಹೆಚ್ಚಿನ ಪುರಸ್ಕಾರ ದೊರೆಯಿತು (೩ಸ್ಥಿಕ. ೨೯). ೨. ಸ್ವೀಕಾರ : ವ್ಯಕ್ತಿತ್ವದ ವರ್ಗೀಕರಣವಿಧಾನಯತ್ನ ಅಷ್ಟಾಗಿ ಪುರಸ್ಕಾರ ಪಡೆದಿಲ್ಲ (೩ಸ್ಥಿರ. ೩೩೪). ೩. ಬಹುಮಾನ ; ಇನಾಮು : ರವಿಯು ಹಣವನ್ನು ಕಳವು ಮಾಡಿದ ವ್ಯಕ್ತಿಯೇ ಆ ಮಗುವಿನ ಕೊರಗನ್ನು ಕಂಡು ಮನ ಕರಗಿ ಬಾಲಕಿಗೆ ಪುರಸ್ಕಾರವಾಗಿ ಇವನ್ನು ಕಳುಹಿಸಿರಬಹುದೇ ? (ಕೂಗು. ೦೩); ಮೋಹಿಸಿಯು ಕಾಗದವನ್ನು ತಂದವನಿಗೆ ಸ್ವಲ್ಪ ಪುರಸ್ಕಾರ ಮಾಡಿ ಕಳುಹಿಸಿಕೊಟ್ಟು . . . ಕಾಗದವನ್ನೋದಿ ಹೇಳಿದಳು (ಕಶಾಳಂ. ೬೦). [ಸಂ.]

**ಪುರಸ್ಕೃತ** (ಗು). ೧. ಮುಂದೆ ಇಟ್ಟ ; ಮುಂದು ಮಾಡಿದ. ೨. ಗೌರವವನ್ನು ಪಡೆದ ; ಸನ್ಮಾನಿತ ; ಪೂಜಿತ. (ನಾ). ೩. ಶತ್ರು ಗಳಿಂದ ಆಕ್ರಮಿಸಲ್ಪಟ್ಟವನು. ೨, ೩ : ನಾಡಿಗರೊಳೆಲ್ಲರುಂ . . . ಪುರಸ್ಕೃತರಭವನ್ನರಲ್ತು (ರಾಜಕ. ೬-೨೩). [ಸಂ].

**ಪುರಸ್ಸರ** (ಗು). ೧. ಮುಂದೆ ಬರುವ ; ಅಗ್ರೇಸರವಾದ ; ಶ್ರೇಷ್ಠ ವಾದ : ವಿಜಯಾರಂಭಪುರಸ್ಸರವಿಜಯಗಜಂಗಳನೆ ಏರಿದು ಘೂರ್ಜರ ರಾಜಧ್ವಜಿನಿಯಂನಿಟ್ಟೋಡಿಸಿ (ಕಂಶಕಾ. ೦-೩೩). (ನಾ). ೨. ಸಹಿತ ವಾದುದು ; ಸಮೇತವಾದುದು : ವಿಶ್ರುತಶ್ರುತಕೀರ್ತ್ಯಾಚಾರ್ಯ ಪುರಸ್ಸರಮಪ್ಪಾಚಾರ್ಯಪರಂಪರೆಯ ಕುಡುಗೆ ಭವ್ಯೋತ್ಸವಮಂ (ಕಂಶ. ೧-೦೨). 'ಪುರಃಸರ' ಪರಾ.

**ಪುರಸ್ಸರವಾಗಿ** = ಕೂಡಿಕೊಂಡು ; ಸಮೇತವಾಗಿ ; ಸಹಿತವಾಗಿ: ಬಾಚಿಮಯ್ಯನುಂ ಮಗ ಮಲ್ಲಿಯಣನುಂ ಪುರಸ್ಸರವಾಗಿ ಮಲ್ಲಿಕಾರ್ಜುನ ದೇವಗ್ಗೆ . . . ಬಿಟ್ಟ ಗದ್ದೆ (ಕೌಶಾ. IX-I, ೨೧೦.೫೩ 1258ರ ಶಿ); ವಾತ್ಸಲ್ಯದಿಂದಲೂ ಅಧ್ಯವಸಾಯ ಪುರಸ್ಸರವಾಗಿಯೂ ಯುಧಿಷ್ಠಿರಾದಿ ಕುಮಾರರನ್ನು ಲಾಲಿಸಿ ಪಾಲಿಸಿದುದನ್ನೂ ನೆನೆನೆನೆದು ಅವನು ಕಣ್ಣೀರ ತುಂಬಿದನು (ಹಿಕೃತ. ೬೨). [ಸಂ.]

**ಪುರಸ್ಸರಂ** (ಅ). ಸಹಿತವಾಗಿ ; ಸಮೇತವಾಗಿ ; ಪೂರ್ವಕ : ಪರಸ್ಪರ ಕ್ಷೇಮಕುಶಲಭಾಷಾಪುರಸ್ಸರಂ ಅಮರ್ದಪ್ಪೆ (ಕಂಶಚಾ. ೦೦-೫೫ ವ); ಸುಶ್ರುತನಂ ತಾಂಬೂಲದಾನಪುರಸ್ಸರಂ ವಿಸರ್ಜಿಸಿ (ಕುರ್ದಿತ್ರ. ೩-೩೬ ವ). [< ಪುರಸ್ಸರ]

**ಪುರಸ್ಸರತೆ** (ನಾ). ಕೂಡಿಕೊಂಡಿರುವಿಕೆ; ಸಹಿತವಾಗಿರುವಿಕೆ : ಚತುರ್ವಿ ಧಾರಾಧನಾಪುರಸ್ಸರತೆಯಿಂ ಸವಾಧಿವಿಧಿಗೇಂ ಪಸಂದಂದಳೋ (ಶುಕುಚಾ. ೯-೦೫). [ಸಂ. ಪುರಸ್ಸರತಾ]

**ಪುರಹರ** (ನಾ). ತ್ರಿಪುರಗಳನ್ನು ನಾಶ ಮಾಡಿದವನು; ಶಿವ : ಪುರಹರ

ಸೂಡೆ ಮುನ್ ತ್ರಿಪುರಮಂ ಮಲಕಾಲಮುಪೋಽಟತ ಪ್ರತಾಪರಣ ದೋರ್ದರ್ಪಂಗಳುಪವಾಸದ ಪಾರಣೆ ವಾಯುಪುತ್ರನಿಂ ದೊರೆಕೊಳೆ ಲಂಕೆಯಂ ಶಿಖಿ ಶಿಖಾವಧಿಯುಪ್ಪಿನಪಮುಂಡು ತೇಗುವಂತಿರೆ ಪೊಜಪೊಣ್ಮೆದತ್ತು ಧಗಿಲೆಂಬ ಧಗದ್ಧಗಿಲೆಂಬ ನಿಸ್ವನಂ (ಕುಂತಾಪು. ೧೦-೦೯೬); ಪುರಹರದರ್ಪಂ ನಿರುಪಮಮಾನತವೋಮುಮುನಾಗಿ (ಗಿಲೆ. ೬-೦೩). 'ತ್ರಿಪುರಹರ' ಪರಾ. **ಪುರಹರನಯನಮಣಿ**=ರುದ್ರಾಕ್ಷಿ: ನಿರಘಭಸಿತ ಪುರಹರನಯನಮಣಿ ವಿಸರವರಂ . . . ಶರಣನೆಸೆದಂ (ಹಾಲಾಸ್ಯ. ೦-೯-೬). [ಸಂ.]

**ಪುರಹರಸುತ** (ನಾ). ೧. ಶಿವನ ಮಗ; ಸ್ಕಂದ. ೨. ಸ್ಕಂದನ ಅವತಾರವೆನಿಸಿದ ತಿರುಜ್ಞಾನಸಂಬಂಧ ಎಂಬ ಪುರಾತನ ಶಿವಶರಣ: ಪುರಹರಸುತ ನೀನೆರೆದರ್ಗೀರದಿಪ್ಪವನೀವುದುಳ್ಳೊಡಿಂದೆನ ಗೊಲವಿಂದೆರೆವುದನೀವುದು (ಶ್ರೀಕೃಂ. ೩೩-೧೬೯). [ಸಂ.]

**ಪುರಹರವಕ್ತ್ರ** (ನಾ). ೧. ಶಿವನ ಮುಖ. ೨. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ: ಪುರಹರವಕ್ತ್ರಂ ಪಂಚಂ . . . ಪುರವೈರಿಮುಖಮ ಗಳ್ಮದಱ ನಾಮಂ (ಛಂದೋ. ೯-೩). [ಸಂ.]

**ಪುರಳಿಮರ** (ನಾ). ಒಂದು ಬಗೆಯ ಸಸ್ಯ: ಪಾದರಿ, ಕೊಲಾದ್ರಿ, ಪುರಳಿ ಮರ, ಕಲಿಹುಟ್ಟು, ಕಲ್ಲುಉರಿ (ಮೈಶಿಗಿ. ೬೨-೧೯೭೭). [ಪುರಳ್ಳಿ + ಮರ್ಗ]

**ಪುರಾಂಗನೆ** (ನಾ). ಪುರದಲ್ಲಿಯ ಹೆಂಗಸು; ಪುರಸ್ತ್ರೀ: ಒಲಗಶಾಲೆ ಪೂಗಿಡುಗಳೊಳಗೆ ನಾಟ್ಯಶಾಲೆ ಕುಸುಮಮೂಲಪಚಯುಪ್ರಚಳತ್ಪುರಾಂಗನಾ ಲೋಲಲಟಾಕ್ಷಲಕ್ಷ್ಮೀಗನಲೊಪ್ಪುವುಪಲ್ಲಿಯ ಪುಷ್ಪವಾಟಿಗಳ್ (ಕೃಕೃ. ೦೨-೩೦). [ಸಂ. ಪುರಾಂಗನಾ]

**ಪುರಾಂತಕ** (ನಾ). = ಪುರಹರ: ಪುರಾಂತಕಧ್ಯಾನದಲಿ ವಿಮಲಸ್ವಾಂತ ನೇಕಾಗ್ರದಲಿ ಭಜಿಸಿದನಿಂದುಶೇಖರನ (ಕುವ್ಯಾ. ೨೨-೯೩). [ಸಂ.]

**ಪುರಾಕೃತ** (ಗು). ೧. ಹಿಂದೆ ಮಾಡಿದ; ಪೂರ್ವಜನ್ಮಗಳಲ್ಲಿ ಮಾಡಿದ: ವಾಂಛೆಯಿಲ್ಲದ ಜೀವಿತವಮುಂ ಮುನ್ನೆಂಬುದಿಲ್ಲದ ವಿಕ್ರಮಮುಂ ಓಗಡಿ ಸಿದನುಭವಮುಂ ಪಗೆಯುಂ ಪೊಗಳಿಸುವ ಧೈರ್ಯಮುಂ ಪುರಾಕೃತ ಸುಕೃತ ಫಲಂಗಳ್ (ಚಾಂತಿಪು. ೪-೭೯ ವ); ತನ್ನನಿದ್ರನಾಗೆ ಬಗೆದು . . . ಪುರಾಕೃತ ಪುಣ್ಯದಿಂ ಸುಖಮನನುಭವಿಸುತ್ತಿರೆ (ಶಂತಾಪು. ೦೭-೦೩೪ ವ); ಹಗೆ ಯೊಳೆಮ್ಮವರೊಳಗೆ ಎದೆಗೆಚ್ಚುಗಳ ಖಿಲ್ಲಕುಠಾರರಪಂಜುಗೆಯ ಬಳಸಿ ದರಮು ಪುರಾಕೃತಕರ್ಮದವಶೇಷ (ಕುವ್ಯಾ. ೬-೦೦). (ನಾ). ೨. ಪೂರ್ವ ಜನ್ಮದಲ್ಲಿ ಮಾಡಿದ ಕರ್ಮ: ಒಳ್ಳಿತ್ತು ಕೆಯ್ದೊರುವೊಲ್ಲದುಪುದ ಱಂತೆ ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತಮಿಲ್ಲಿ ಸಂಧಿಕ್ಕುಂ (ಇಕ. X, ೬೦-೯; ಕು. ೧೦೦); ಪುರಾಕೃತ ತಪ್ಪದೇನಾದುದಾಗಲಿ (ಪಪವೋ. ೩-೦೦); ಅನುಬಂಧ ಜೀವಜೀವಕೆ ಪುರಾಕೃತದಿಂದ (ಶಂಕುಶ. ೮೬೯). [ಸಂ.]

**ಪುರಾಟಕ** (ನಾ). [ನಾಟ್ಯ] ಮೂವತ್ತೈದು ದೇಶೀಯಭೌಮಚಾರಿ ಗಳಲ್ಲಿ ಒಂದು; "ಕಾಲುಗಳನ್ನು ಮೇಲಕ್ಕೆತ್ತಿ ಒಂದನ್ನೊಂದು ತಟ್ಟುತ್ತಿರುವುದು" (ಭಾಸ್ಕರು. ೩೨೩ ಗದ್ಯಾಸುಬಂದ): ರಥಚಕ್ರ, ಪರಾವೃತ್ತ ತಲ . . . ಪುರಾಟಕ, ಅರ್ಧಪುರಾಟಕ . . . ಸಮಸ್ಪಂತಿ; ಈ ಮೂವತ್ತೈದು ದೇಶೀಯಸಂಬಂಧದ ಭೌಮಚಾರಿಗಳು (ಭಾಸ್ಕರಂ. ೬-೦೭ ವ). [ಸಂ.]

**ಪುರಾಣ** (ಗು). ೧. ಹಳೆಯ ಕಾಲದ; ಪ್ರಾಚೀನಕಾಲಕ್ಕೆ ಸಂಬಂಧಿಸಿದ; ಪುರಾತನವಾದ: ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯ ಪ್ರಯೋಗದೊಳ್ತತ್ಕಾಲದ ವಿರಸಂ ಕರಮವು ದೇಸಿಗೆ ಜರದ್ವಧೂವಿಷಯ ಸುರತರಸರಸಿಕತೆವೋಲ್ (ಕಾಶಾ. ೦-೩೦); ನೆರೆದಿಸುತಿರೆ ತೋಲ್ಪುಲ್ಲಿಯ ನಿರದದು ಬಟ್ಟೊಡೆ ಪುರಾಣಕೂಪದೊಳ್ (ಶಂಕಶಾ. ೨-೩೦); ಕತೆ ಯೊಳಗಜಯದ ವಿಪರೀತಶಯಿಂದಂ ಪೇಟ್ದ ಕೃತಿಗಳ್ಕೆ ಪುರಾಣಸ್ಥಿತಿ ಯೊಳೆ ಕವಿರತ್ನನಿನ್ನಿತಪುದುದು ಸಗರಚಕ್ರವರ್ತಿಯ ಚರಿತಂ (ಅಜಿಪು. ೦೨-೨೮). ೨. ಉದ್ದವಾದ; ದೀರ್ಘವಾದ: "ಅದಿಕಥೆಯೊಳು ದೀರ್ಘದೊಳು ಜೀವದೊಳು ಪುರಾಣಾ" (ಪಾಂಗಶಾ. ೦೩೦-೩೩). ೩. ಜರ್ಜರಿತ ವಾದ; ಜೀರ್ಣವಾದ. (ನಾ). ೪. ಹಳೆಯದು: ಪುರಾತನ ವಾದುದು: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ, ಪ್ರತನಂ, ಪುರಾತನಂ- ಈ ೬ ವ(ಹ)ಳದು" (ಶಬಾಮು. ೦೦೩-೨೬); "ಜೀರ್ಣವಾ ಜರತ್ಪ್ರತನವರ್ಗವ ಮನವಂ ಪುರಾಣಂ ಪುರಾತನವೆಂಬಲು ಹಳೆಗಿಂಗೆ ನಾಮವುಕ್ಕುಂ" (ಶಂಗಶಾ. ೦೨೯-೦೩). ೫. ಪೂರ್ವಕಾಲದಲ್ಲಿ ನಡೆದು ಹೋದ ಕಥೆ; ಪ್ರಾಚೀನವಾದ ಚರಿತ್ರೆಯನ್ನು ಹೊಂದಿದ ಕಾವ್ಯಪ್ರಕಾರ: ಅಸಮ ಬಸವಪುರಾಣಮಂ ಪಸರಿಸುವವು ಪಾವಂಗಳಂ ಪ್ರಸರಿಸುವಂ (ಬಸಪು. ೬೦-೬೯); ಇಂದಿನ ಬಾಳು ನಾಳೆಗೆ ಚರಿತ್ರೆ, ನಾಡಿದ್ದಿಗೆ ಪುರಾಣ (ನಾಪಿಜ. ೩೩). ೬. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ ಎಂಬ ಪಂಚಲಕ್ಷಣಗಳನ್ನು (ಅಥವಾ ಇನ್ನು ಕೆಲವರು ತಿಳಿಸುವಂತೆ ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶಾನುಚರಿತ, ಸಂಸ್ಥೆ, ಹೇತು ಮತ್ತು ಅಪಾಶ್ರಯವೆಂಬ ದಶಲಕ್ಷಣಗಳನ್ನು) ಉಳ್ಳ ಪ್ರಸಿದ್ಧವಾದ, ವ್ಯಾಸಪ್ರಣೀತವೆಂದು ತಿಳಿಯಲಾದ ಹದಿನೆಂಟು ಮಹಾಪ್ರಬಂಧ: "ಜಗತ್ತಿನ ಉತ್ಪತ್ತಿಯನ್ನೂ ನಾಶವನ್ನೂ ವಂಶವನ್ನೂ ವಂಶಾನುಚರಿತವನ್ನೂ ಮನ್ವಂತರಗಳನ್ನೂ ಹೇಳುವ ಪ್ರಬಂಧವು ಪುರಾಣ ವೆನಿಸುಗು" (ಶಾಕಶಾ. ೯೯); ಪುರಾಣದ ಭಟ್ಟವೃತ್ತಿಗೆ ಸರ್ಬ್ಬನಮಸ್ಯವಾಗಿ ಪಡೆದ ರೇವದಾಸಭಟ್ಟರ ಕೆಯ್ಯಿಂ ಬಡಗ ಬಿಟ್ಟ ಪಿರಿಯ ಕೋಲ ಮತ್ತ[ರ] (ಕಶಾಇ. XX. ೬೨-೦೦; 1111); ಶಾಸ್ತ್ರ ಪುರಾಣವ ಕೇಳಿದೊಡೇನು . . . ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ (ಬಸವ. ೧೮೬); ಹಲವು ವೇದ ಪುರಾಣ ಶಾಸ್ತ್ರವ ತೀಲದು ನೀ ಮರುಳಾದೆ (ಕೌಶಿಕಾ. ೩೬-೦೬). 'ಅಷ್ಟಾದಶ ಪುರಾಣ' ಪರಾ. ೭. (ಅಲಂ) ವೈಯಕ್ತಿಕವಾದ ದೀರ್ಘಕಥೆ: ನಿನ್ನ ಪುರಾಣ ಇರಲಿ. ಮೂರ್ತಿ. ಚಹಾ ಎಂದೋ ಆರಿಹೋಗಿದೆ. ಮೊದಲು ಕುಡಿದು ಮಾತನಾಡು (ಶರೋಕ. ೩); ಶ್ರೋತಾವಂದ ಬಸವಂತಿಯ ಪುರಾಣವನ್ನು ಖಾಸಗೀ ಆಗಿ ನಡೆಸಿತ್ತು (ಶಿಸಶ. II, ೦೯೮). ೮. ಹರಟೆ; ರಗಳೆ. ೯. [ಜೈನ]ಲೋಕಾಕಾರಕಥನ, ದೇಶನಿವೇಶ ವರ್ಣನ, ನಗರವರ್ಣನ, ರಾಜ್ಯವರ್ಣನ, ತೀರ್ಥಮಹಿಮೆ, ಚತುರ್ಗತಿ ಸ್ವರೂಪವಿವರಣೆ, ತಪೋದಾನವಿಧಾನ, ತಪಃಫಲವರ್ಣನೆ—ಎಂಬ ಎಂಟು ಅಂಗಗಳನ್ನು ಒಳಗೊಂಡ, ಅರ್ಹಂತರೇ ಮೊದಲಾದ ತ್ರಿಷಷ್ಟಿಶಲಾಕಾಪುರುಷರ ಕಥೆ: ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪ್ರರಿವರ್ಣನಮುಂ ರಾಜ್ಯ ರಾಮ ಣೀಯಕಾಖ್ಯಾನಮುಂ ತೀರ್ಥಮಹಿಮಾಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನವಿಧಾನವರ್ಣನಮುಂ ತತ್ಫಳಪ್ರಾಪ್ತಿಪ್ರಕಟನ ಮುಮೆಂದಿಂತಪಯುಪ್ರಗಳೆಂಟಕ್ಕುಂ (ಆದಿಪು. ೧-೯೨ ವ); ಸದ್ಧರ್ಮಕಥಾ ಥನನಿಬದ್ಧಗ್ರಂಥಂ ಪುರಾಣಮಿತಿಹಾಸಾಖ್ಯಂ (ಮಲ್ಲಿಪು. ೨-೯). [ಸಂ.]

**ಪುರಾಣಕವಿ** (ನಾ). ೧. ಹಿಂದೆ ಆಗಿ ಹೋದ ಕವಿ; ಪೂರ್ವಕಾಲದ ಕವಿ: ಪುರಾಣಕವಿ ಪ್ರಭು ಪ್ರಯೋಗಾವಳಿ ಸದ್ಗುಣೋದಯಮನಾಯ್ದು ಪಜೆಂ ಸಮೆದೊಂದು ಕಾವ್ಯದಿಂ . . . ಮುದಮಂ ತನಗಾಗಿಪುದು ಕವೀಶ್ವರಂ (ಶಂಪಾ. ೨-೦೫೩); ಕವಿಗಳೊಳಾ ಪುರಾಣಕವಿಪುಂಗವರೊಳ್ಬದರೀ ಗಳ್ಳ (ಗಡಾಯು. ೧-೪೭). ೨. ಪುರಾಣವನ್ನು ರಚಿಸಿದ ಕವಿ: ವಾಕ್‌ಶ್ರೀಸುಭಗಂ ಪುರಾಣಕವಿಯುಂ ಧರೆಗಾಗಿರಯುಣ್ಣೆ ಪೊಣ್ಣಮಿ ದೇಸಿಗಳಂತೆ ನಾಡೊಮಜನಾದನೊ ಪೇಟ್ ಕವಿತಾಗುಣಾರ್ಣವಂ (ಶಂಕಶಾ. ೦೯-೬೨). [ಸಂ.]

**ಪುರಾಣಚೂಡಾಮಣಿ** (ನಾ). ಪುರಾಣಗಳಲ್ಲಿ ಅತ್ಯುತ್ತಮವಾದುದು; ಶ್ರೇಷ್ಠವಾದ ಪುರಾಣ: ಶಾಂತಿಜಿನಜನ್ಮಜಲಧಿಗೆ ಶಾಂತಿಪುರಾಣಮೆ

ಪುರಾರ್ಥರತ್ನಮಿದಂ ಪೇಳ್ವೆಂತು ಕವಿಚಕ್ರವರ್ತಿಯಿಂ ನೋಂತಂ ಪೆಸರಿಂ ಪುರಾಣಚೂಡಾಮಣಿಯುಂ (ಶಾಂತಿಪು. ೧-೧೨). [ಸಂ.]

**ಪುರಾಣಜ್ವರ** (ನಾ). ಬಹಳ ದಿನಗಳಿಂದ ಇರುವ ಜ್ವರ; ಹಳೆಯ ಜ್ವರ: ಏಳು ರಾತ್ರಿ ಪರ್ಯಂತರ ತರುಣಜ್ವರವೆನಿಸಿಕೊಂಬುದು. ಹತ್ತು ರಾತ್ರಿ ಪರ್ಯಂತರ ಮಧ್ಯಮಜ್ವರವೆನಿಸಿಕೊಂಬುದು. ಅದರ ಮೇಲೆ ಪುರಾಣ[ಪಾಠಾಂ. ಹಳೇ]ಜ್ವರವೆನಿಸಿಕೊಂಬುದು (ವೈದ್ಯಸಾ. I. ೩೩); ಈ ಮಾತ್ರೆಗಳನ್ನು ಕೊಬ್ಬರಿರಸದಲ್ಲಿ ಕೊಡಲು ಜ್ವರಾತಿಸಾರ, ಪುರಾಣ ಜ್ವರಗಳು ಸಹ ನಿಲ್ಲುವುವು (ಸಕವೈ. ಶಂ. ೯೬೧). [ಸಂ.]

**ಪುರಾಣಪುರುಷ** (ನಾ). ೧. ಮುದುಕ; ವೃದ್ಧ: ಗಂಭೀರಸ್ವರದೊಳೆಂ ಭವಪ್ರಕಾರದೊಳಮಿಂತಂ ಕಾರಣಪುರುಷನಾಗಲೆವೇಳ್ಕುಮೆಂದು ನಿಶ್ಚಯಿಸಿ ಪುರಾಣಪುರುಷನೊರ್ವನಿಂತೆಂದು (ಶಂಕಾಪಾ. ೮-೩೬೪). ೨. ಆದಿಪುರುಷ; ವಿಷ್ಣು: ತಪನಕುಲಜಾತರ್ ಪುರಾಣಪುರುಷೋತ್ತಮನ ವಿಪುಲಸಂತತಿ ಯವರ್ (ಕೃಬಸಾ. ೨೧-೨೯); ನಾರದನುಂ ಪರ್ವತನುಂ ಪುರಾಣಪುರುಷನು ಕಂಡೆಜಗುತ (ಅಧ್ಯಾತ. ೧೩.೯); ಶ್ರೀಕೃಷ್ಣನು ಪುರಾಣಪುರುಷನೂ ನಿಜ; ಐತಿಹಾಸಿಕವ್ಯಕ್ತಿಯೂ ನಿಜ (ಶಾರದ. ೦೦೯). ೩. ಶಿವ; ಈಶ್ವರ. [ಸಂ.]

**ಪುರಾಣಮಾರ್ಗ** (ನಾ). ಪ್ರಾಚೀನಕಾಲದಿಂದ ನಡೆದು ಬಂದ ರೀತಿ, ಸಂಪ್ರದಾಯ: ಉಚಿತಪುರಾಣಮಾರ್ಗಪದಪದ್ಧತಿಬಂಧುರಬಂಧಮೆಂಬಿನಂ ರಚಿಯಿಸೆ . . . ಕಾಳಿದಾಸನುಮನೇಳಿಸಿ ಕೃತಿ ನಾಗವರ್ಮನಾ (ಛಂದೋಂಬು. ೧-೭). [ಸಂ.]

**ಪುರಾಣವಾಕ್ಯ** (ನಾ). ೧. ಬಹುಕಾಲದಿಂದ ಬಂದಿರುವ ಮಾತು; ಗಾದೆ: ಶರೀರಮಾದ್ಯಂ ಖಲುಧರ್ಮಸಾಧನಂ ಎಂಬ ಪುರಾಣವಾಕ್ಯ ಮುಂಟು (ಶಂಶಂ. ೦೦೩-೧೩); ಕೇನಾಪ್ಯುಪಾಯೇನ ಫಳಂ ಹಿ ಸಾಧ್ಯಂ ತಾನೆಂಬುಮುಂಟಲ್ತೆ ಪುರಾಣವಾಕ್ಯಂ (ಸುಕುಮಾ. ೩-೩೨). ೨. ಪುರಾಣ ದಲ್ಲಿರುವ ಮಾತು: ಬಿಸರುಹಾಕ್ಷನ ಹರನಿಜಾದನೆಂದುಸುರಲೊಲ್ಲನು ಸಹಜವಾದ ಪುರಾಣವಾಕ್ಯವನು (ಬಸಪು. ೩೭-೨೨). [ಸಂ.]

**ಪುರಾಣಶ್ರವಣ** (ನಾ). ಪುರಾಣವನ್ನು ಕೇಳುವಿಕೆ: ಮಠದಲ್ಲಿ ಶ್ರಾವಣಮಾಸದಲ್ಲಿ ಪುರಾಣಶ್ರವಣ ನಡೆಯುತ್ತದೆ (ಕೂಾ). [ಸಂ.]

**ಪುರಾಣಿ** (ನಾ). ಪುರಾಣ ಹೇಳುವವನು; ಪುರಾಣಿಕ: ಯಥಾರ್ಥವ ನೊರೆಯಲೊಲ್ಲನು ಪಕ್ಷಪಾತಿ ಪುರಾಣಿ [ಪಾಠಾಂ. ಣ]ಭಟ್ಟನಲಾ (ಬಸಪು. ೩೭-೨೮); ಪೇಳಿದ ಪರಮ ಪುರಾಣಿ ರಾಯಂಗೆ ಶರಣಾಳಿಯ ಮೇಲ್ಗತೆಗಳನು (ಮೋಳಿಪು. ೨-೭೬). [<ಪುರಾಣ]

**ಪುರಾಣಿಕ** (ನಾ). ೧. ಪುರಾಣಗಳನ್ನು ಚೆನ್ನಾಗಿ ಓದಿ ತಿಳಿದವನು. ೨. ಪುರಾಣಗಳನ್ನು ವಿವರಿಸಿ ಹೇಳುವವನು; ಪೌರಾಣಿಕ: ಅವನಿಪನ ನಗರಾಗ್ರದಲಿ ಪೊಂದಿವಸಮೋದಾತ ಸತ್ಯವ ಹೇಳುವ ಪುರಾಣಿಕ ನಂತೆ ಕೆಲಬರು ಕೇಳುತಿರಲಾಗಿ (ಬಸಪು. ೩೭-೨೦); ಇಂದ್ರಲೋಕವು ಪುರಾಣಿಕರ ವರ್ಣನೆಯಂತೆ ಇರುವುದಾದರೆ ಅದು ಎಂದೋ ಸಿಗುವುದು (ನಿತ್ಯಾಮು. ೪). [<ಸಂ. ಪೌರಾಣಿಕ]

**ಪುರಾತ** (ನಾ). = ಪುರಾತನ ೪: ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು (ಬಸವ. ೩೯೯); ಪುರಾತರೊಳಗೊಲವಿಂ ಮಿಳಿ ಚರನಾತ್ಮಭವರಂ ತಮ್ಮುಮಂ ಕೊಟ್ಟವರೊಳರು ಶತಕೋಟಿಕೋಟಿಗಳು (ಬಸಪು. ೨೩-೧೭). 'ಪುರಂತ್ರ' ನೋಡಿ.

**ಪುರಾತಭಕ್ತರು** = ಪ್ರಾಚೀನ ಶರಣರು: ಮುನ್ನೆ ಪುರಾತಭಕ್ತರು ಪರಂಬಡೆದೀ ಸ್ಥಳಮೆಂದು ಕೀರ್ತಿಯಂ ಬಿನ್ನವಿಸಲ್ಕೆ (ಸೌಇಇ. XX. ೧೭೮-೦೭; 1192). [<ಸಂ. ಪುರಾತನ]

**ಪುರಾತನ** (ಗು). ೧. ಹಳೆಯ ಕಾಲದ; ಪ್ರಾಚೀನ; ಪೂರ್ವಕಾಲದ: ಉನ್ನಮೆ ಪುರಾತನ ಭವಸಂಬಂಧಮೇದಿನಿ (ಶಾಂತಿಪು. ೬-೧೨ ವ); ಬುಧರಿಂದರ್ ನೋಟ್ಪುದು ಪುರಾತನ ನೂತನ ಕಾವ್ಯರೇಖೆಯಂ (ಗದಾಯು. ೧-೯೭); ನಮ್ಮ ಜನರಲ್ಲಿ ಬಹು ಪುರಾತನ ನಡತೆಗಳೆಷ್ಟೋ ಉಂಟು (ಕುಂಚಿಕಾ. ೪-೧೮೩). (ನಾ). ೨. ಹಳೆಯದು; ಪೂರ್ವಕಾಲಕ್ಕೆ ಸಂಬಂಧಿಸಿದುದು; ಪ್ರಾಚೀನವಾದುದು: "ಜೀರ್ಣಂ, ಜರತ್, ಪುರಾಣಂ, ಪ್ರತ್ನಂ, ಪ್ರತನಂ, ಪುರಾತನಂ—ಈ ೬ ಹ(ಹ)ಳದು" (ಹಲಾಯು. ೧೦೮-೨೩); "ಜೀರ್ಣಮಾ ಜರತ್ಪ್ರತನಮರ್ಣವಮುನ್ನಂ ಪುರಾಣಂ ಪುರಾತನಮೆನಲು ಹಳತಿಂಗೆ ನಾಮಮಕ್ಕುಂ" (ಕುಂಗಕಾ. ೦೨೯-೧೩); ಪುರಾತನದ ೯ಥೆ ಕಿರಾತ ಏನು ಬಲ್ಲ? (ಗಾದೆ). ೩. ಪೂರ್ವಕಾಲದವನು; ಹಿಂದಿನವನು; ಪೂರ್ವಿಕ: ರಸವತ್ಕಾವ್ಯವಿದರ್ ಪುರಾತನರೊಳಾದುದು ಪೂಣ್ಕೆಯಿಂ ಪೇಟ್ದು ಜೋಯಿಸೆಗಬ್ಬಂಗಳನೆತ್ತಿ ರಚಿಸಿದರಾರ್ (ಶಾಕಸ. ೨೪.೪೦); ಪೂರ್ವದ ಪುರಾತನರ ವಿಧಿಯು ವಿಸ್ತರಿಸುವೆವು ಕೇಳ್ (ಗಗಪು. ೯೮ ೪೩); ಈ ಕಥೆಗಳ ಮೂಲಕವಾಗಿ ನಾಗು ಪುರಾತನರೊಡನೆ ಪ್ರೀತಿಯ ಸಂಬಂಧವನ್ನು ಬೆಳೆಸಿಕೊಳ್ಳುವನು (ಕಥೆ. ೩೭). ೪. [ವೀಶೈ] ಪೂರ್ವ ಕಾಲದಲ್ಲಿ ಆಗಿ ಹೋದ, 'ಅರುವತ್ತುಮೂವರು ಪುರಾತನ' ರೆಂದು ಪ್ರಸಿದ್ಧಿ ಪಡೆದ ಶಿವಭಕ್ತರ ಗಣಕ್ಕೆ ಸೇರಿದವನು; ಪ್ರಾಚೀನ ಶಿವಶರಣ: ಪ್ಪಡನೇ ನಿಮ್ಮ ಪುರಾತನರ ಕಾಣುತ್ತ ಪಡೆಯದೆ ಇದಿರೆದ್ದು ಪೊಡಮಡದನಾಗಿ ಬಿಡದು ನಾಚಿಕೆ (ಅಕಶಂ. ೦೭೨-೬೩೪): ಬಂದಹರಯ್ಯಾ ಪುರಾತನರೆನ್ನ ಮನೆಗೆ ಬಂದಹರಯ್ಯಾ ಶರಣರೆನ್ನ ಮನೆಗೆ (ಬಸವ. ೩೭೦); ಶಿವಭಕ್ತಿಪಂಥವು . . . ತಮಿಳುನಾಡಿನಲ್ಲಿ ೬೩ ಮಂದಿ ಪುರಾತನರಿಂದ ಪ್ರಾರಂಭವಾಗುತ್ತದೆ (ಶಾರದ. ೩೦೬). [ಸಂ.]

**ಪುರಾತನಜ್ವರ** (ನಾ). = ಪುರಾಣಜ್ವರ: ಅರಳಿಮರದ ಒಳನಾರನ್ನು ಕಷಾಯಮಿಕ್ಕಿ ಕೊಡಲು ದಾಹಸಹಿತವಾದ ವಿಷಮಜ್ವರ, ಪುರಾತನಜ್ವರ, ಜ್ವರಾತಿಸಾರ ಸಹ ಶಮನವಾಹುದು (ಸಕವೈ. ೦೦೩). [ಸಂ.]

**ಪುರಾತನಪುರುಷ** (ನಾ). = ಪುರಾಣಪುರುಷ ೨: ಪುರಾತನಪುರುಷ ಪುಂಡರೀಕಾಕ್ಷನೆ ಪುರಂದರವಿಠಲನೆ ದಯಮಾಡೊ (ಪುರಂದ. ೨-೦೩೨-೩). [ಸಂ.]

**ಪುರಾತನಮತ** (ನಾ). ಪ್ರಾಚೀನರ ಅಭಿಪ್ರಾಯ, ಮಾರ್ಗ, ಸಂಪ್ರದಾಯ; ಆದಿಮಾರ್ಗ: ವ್ಯವಹಾರಮೆರಡು ರೂಪಿಂದಕ್ಕರಂ ಶ್ರಾವಣಂ ಸ್ವನೈಕಾಕಾರಂ ವಿವಿಧಾಕಾರಂ ಲಿಪಿಭೇದಪ್ರವೃತ್ತಿಯಿಂ ಚಾಕ್ಷುಷಂ ಪುರಾತನಮತದಿಂ (ಶಮದ. ೩). [ಸಂ.]

**ಪುರಾತವಳಿ** (ನಾ). ಪುರಾತನ ಶರಣರ ಪರಂಪರೆ: ಗುರುಲಿಂಗ ಜಂಗಮಕೆ ಪರೀಕ್ಷೆ ಉಂಟಾಗಿಯೆ ಆತ ಮಾಹೇಶ್ವರ ಪುರಾತವಳಿ ಎಂಬ ಪರಮಬಂಧುಗಳಾತನ ನೆನೆದು ಬದುಕುವರು (ಬಸವ. ೩೭೮). [ಪುರಾತ + ಬಳಿ₃ (< ಬಟ್ಟೆ₃)]

**ಪುರಾಧೀಶ** (ನಾ). ಊರಿನ ಒಡೆಯ; ಪಟ್ಟಣಾಧಿಪತಿ: ತತ್ಪು ರಾಧೀಶಂ ದೃಢ(ಧೃತ)ಸೇನಂ ನಿಲಿಸಿ (ನಿಜಿಸಿ) ಭಕ್ತಿಪೂರ್ವಕದಿಂದ ಮಹಾಹಾರಂಗುಡೆ ಕೊಂಡು ಭಟ್ಟಾರಕನುಮಾತ್ರನಂ ಪರಸಿ ಬಿಜಯಂ ಗೆಯ್ವುದಂ (ಶಾಂತಿಪು. ೯-೨೦ ವ). [ಸಂ.]

**ಪುರಾಭವ** (ನಾ). ಹಿಂದಿನ ಜನ್ಮ; ಪೂರ್ವಜನ್ಮ; ಜನ್ಮಾಂತರ: ಅಬೋಧಪೂರ್ವಕಂ ನೆನೆವಪನಂತು ಭಾವದೊಳ್ ನಟ್ಟ ಪುರಾಭವ ಸೌಹೃದಂಗಳಂ (ಶಾಕುಂತ. ೭೦-೧೮೨). [ಸಂ.]

**ಪುರಾರಿ** (ನಾ). ೧. ತಾರಕಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿ ಯೆಂಬ ಮೂವರು ರಾಕ್ಷಸರ ಶತ್ರು; ತ್ರಿಪುರಾರಿ; ಶಿವ: ಸಿರಿವಿರಿಂಚಿ ಮರುತ್ಸ್ವರ್ಗ ಪುರಾರಿವಂದಿತ ಚರಣಸರಸಿಜ (ಪುರಂದ.ಕಾ. ೩-೨೧೬ ಅಮುಕಲ್ಲು). ೨. ವಿಷ್ಣು. ೩. [ಛಂದ] ನಡುವೆ ಗುರುವಿರುವ

ನಾಲ್ಕು ಮಾತ್ರೆಗಳ ಗಣ ; ಜಗಣ (ᴗ—ᴗ) : ಶಶಿಪುರವಿಷಯಾದ್ರಿಯೋಆರದರ್ಕೆ ಪುರಾರಿಯೆಂಬ ಗಣಸಂಬ್ಬವಾಯ್ತೀ (ಛಂದೋಂಬು. ೪–೨೨೬). [ಸಂ.]

**ಪುರಾರ್ದನ** (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಕಾಲವೈರಿಪುರಾರ್ದನಾ . . . ಚಂದ್ರಶೇಖರ ಪಾಲಯ (ಹಮ್ಮೀರ. ೬–೪೭). [ಸಂ.]

**ಪುರಾವೃತ್ತ** (ನಾ). ೧. ಹಿಂದಿನ ನಡತೆ ; ಪೂರ್ವಪದ ತಿ : (೬). ೨. ಪೂರ್ವಕಾಲದಲ್ಲಿ ನಡೆದು ಹೋದ ಸಂಗತಿ ; ಪುರಾಣ : ಪರಮಾತ್ಮನೇ ವ್ಯಾಸರೂಪಿಯಾಗಿ ಅವತರಿಸಿ ಭಾರತ ಪುರಾಣಾದಿಗಳನ್ನು, ಬ್ರಹ್ಮಸೂತ್ರಗ್ರಂಥವನ್ನು ರಚಿಸಿದನೆಂದು ಪುರಾವೃತ್ತಗಳು ತಿಳಿಸುತ್ತವೆ (ಭಾರತ. ೨೬೯). [ಸಂ.]

**ಪುರಾವೆ** (ನಾ). ಪ್ರಮಾಣ : ಆಧಾರ; ನ್ಯಾಯನಿರ್ಣಯಕ್ಕೆ ಸಹಾಯಕವಾದ ಸಾಕ್ಷಿ ಮೊದಲಾದ ಸಹಾಯಕಸಾಮಗ್ರಿ : ಸರಿಯಾಗಿ ಪುರಾವೆಯಾದರೆ . . . ದಂಡವನ್ನು ಮಾಡಲಿಕ್ಕೂ ಮಾಜಿಸ್ಟ್ರೇಟನಿಗೆ ಅಧಿಕಾರವಿರುತ್ತದೆ (ಕಟಾಗಿ. ಹಂ. ೧೯) ; ಸಂಶಯವನ್ನು ಸಿದ್ಧಪಡಿಸಿ ಕೊಡುವ ಯಾವ ಪುರಾವೆಯೂ ಸಿಗಲಿಲ್ಲ (ರಂಗಪ. ೨೬೨); ಏನೂ ಪುರಾವೆ ಇಲ್ಲದೇ ಕುಂಗಕ್ಕೆ ಅಷ್ಟು ಧೈರ್ಯದಿಂದ . . . ಮಾತನಾಡಬಹುದೆಂದು ನನಗಂತೂ ಅನಿಸುವುದಿಲ್ಲ (ಮೂಕಜ್ಜಿ. ೧೬೦). [←ಮರಾ. ಪುರಾವ್, ಪುರಾವಾ]

**ಪುರಿ₁**, ಹುರಿ₁ (ಕ್ರಿ). ೧. ಬಾಣಲೆ, ಓಡು ಅಥವಾ ಹಂಚಿನ ಮೇಲಾಗಲಿ, ಕಾಯಿಸಿದ ಮರಳಿನಲ್ಲಾಗಲಿ, ಕಾಳು, ಬೇಳೆ, ಬತ್ತ ಮೊದಲಾದುವನ್ನು ಕಾಯಿಸಿ ಹದಗೊಳಿಸು ; ಅರಳು ಮಾಡು : ನೆಲ್ಲಂ ಪುರಿದು ಪಾಱಿದೆ ಕಾಣದಂತಿರಿಸಂಗಡಿಯೊಳ್ (ಕರಾ. ೨–೧೩೭); ಪುರಿದಂತಾದುವು ಪೂವಿನಂಬುಪನಿವಿಲ್ ನಿಸ್ಸಾರವಾದತ್ತು (ಪಂಪಭಾ. ೦–೦೩); ಎಕ್ಕಸರಂಗಳ ತೋರಮುತ್ತುಗಳ್ ಪುರಿದವೊಲಾದುವು (ಕಬ್ಬಿಗಾ. ೩೦೩). ೨. ಕಾಯಿಸು ; ತಪ್ತಗೊಳಿಸು : ಸರೋವರದ ಮಳಲ್ ಪುರಿಗಡಲೆಗೆ ಪುರಿದ ಮಳಲ್ಕಾಯ್ದು ತೆಱದೆ ಕಾಯ್ದತ್ತತ್ತಂ (ಗರಾಯು. ೭–೦೮) ; ಪುರಿದ ಮಣಲೊಳಂ ಪೂಣಸಿದ ಗಾಣದೊಳಂ ಬಿರ್ಚಿದ ಬೇರ್ಕೆಯೊಳಂ . . . ನೋಡಲರಿದೆನಿಸಿದ ಮಕರಮುಖದಾಡಾಯುಗ್ಗದಗ್ಗಳಿಕೆಯುಂ ಕಂಡು (ಆಪಂಚ. ೦೦–೮೨ ಬ); ಸುಣ್ಣವನೊರಸಿ ಮಿಗೆ ಪು[ಪಾಠಾಂ. ಹು]ರಿದ ಬಿಸಿಯ ಮಳಲಂ ತರಿಸಿ ಬಾಯ್ತುಂಬಿಸಿದಪೆಂ (ಲೀಲಾ. ೦೦–೦೯). ೩. ಸೀದು ಹೋಗು ; ಕರಿಕಾಗು ; ಸುಟ್ಟುಹೋಗು : ಒಕ್ಕಲುಳಿದ್ರೋತ್ತಿನಕ್ಕಳ್ಪ ಟ್ಟಿಲ್ಕಂ ಪುಟ್ಟಿದೊಂದು ಪುರಿಗ (ಎಕ. IV. ಹೆಗ್ಗಡ. ೮೭–೦೩ ; ಸು. 700). ೪. ಜಿಡ್ಡನ್ನು ಸವರಿ ತಾಳಿಸು,—ಬಾಡಿಸು : ತುಪ್ಪದೊಳ್ಪುರಿದಚ್ಚಗೆಪಮರಲ್ . . . ಅಟ್ಟು ತಂದು ಪಾಡಂಗಿದಕ್ಷುಣ್ಣಮಾಂಸನೀವಾವು ಪೊಪ್ಪಿದುದು (ಉದ್ಭಟ. ೫–೭೭). ೫. (ಹಪ್ಪಳ ಮೊದಲಾದುವುಗಳನ್ನು) ಕೆಂಡದ ಮೇಲಿಟ್ಟು ಸುಡು : (೬). ೬. ಎಣ್ಣೆ ಅಥವಾ ತುಪ್ಪದಲ್ಲಿ ಕರಿ : 'ಪುರಿಗಡುಬು' ಪರಾ. ಹುರಿ₁ : ೧. "ಹುರಿ–ನಿರ್ದ್ರವಕರಣೇ" (ಶಬ್ದಾನು) : ಚರಾಚರಂಗಳಂ ೯ರಿಪುರಿದುಪ್ಪಿನಂ ಹುರಿವ ಹುಂಚು ಪೊಲಿರ್ದಳಿಯೊಳ್ ಕೃತಾಂತನೆಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪ ನಿದಾಘದಾನಿಳಂ (ಅರ್ಜನಿ. ೪–೬೪) ; ಹುರಿದು ಬಿತ್ತಿದ ಬೀಜ ಮೊಳೆವುದೆ (ಕಠಕ. ೨–೩೩) ; ಉದ್ಯೋಗವಿಲ್ಲದ ತೊತ್ತು ಉದ್ದು ಹುರಿದು ತಿಂದಳು (ಗಾದೆ). ೨. ಕೆಲಬರು ಹುರಿದ ಪುರಳನು ಮೇಲೆ ಚೆಲ್ಲಲು ಹರಹಿ ಸಾಸಿವೆ ರಸಗಳನುಪ್ಪು ಮೆಣಸುಗಳ ಹಿರಿಯ ಮೂಗಿನ ಹೋರು ತುಂಬಲು (ಕೌಶಿಕಾ. ೨೪–೩) ; ಹುರಿವ ಮಳಲಂ ಹುಯ್ದು ಹುಲ್ಲ ಕಿಚ್ಚಂ ಹಿಡಿದು ಹರಿವ ಹಾವಂ ಹಾಕಿ ಕಾಸಿದಂಬಲಿಯೆಂಬಿದು . . . ಹತ್ತುವಾಳ್ಗಳಂ ಧರೆಗುರುಳ್ದ ತೆಱದಿ ಕೊಂದಿಕ್ಕಿದರ್ (ಸಮ್ಯಕ್. ೮–೩೫); ಹುರಿವ ಮಳಲಿನ ಕಾಸುವಂಬಲಿಯು ಬಿಸಿಯೆಣ್ಣೆವರವಿಗಳ ಪುದಿದ ಪುಕ್ಕೊಂದೆಗಳ . . . ಮೊತ್ತಂಗಳುಳ್ಳೇರಿಯೊಳ್ ಪಸರಿಸಿದುವು (ಕಬಿಷ. ೪೨–೦೦). ೩. ಎಮ್ಮ ಭಾಗ್ಯದ ಬಿತ್ತು ಹುರಿದರೆ ಬಿರಾದ ಭಟರಿದ್ದೇನ ಮಾಡುವರು (ಕುಮ್ಮಾರ. ೮–೨೦) ; ಹುರಿದುದು ಭವಬೀಜದುಷ್ಕರ್ಮದಂಕುರ ಹಱಿದುದು ಕಪಟದ ಬೇರು ಸುರಿದುದಾನಂದಾಶ್ರು (ಸೋಹಕ. ೪೨–೩೧). ೪. ಉಳ್ಳಿ ಶುಂಠಿ ಕೇದಗೆಯ ಹೂ ಹುರಿವ ಕರಿಬೇವು ಮೊದಲದ ಸೊಪ್ಪಿಕ್ಕಿ (ಸೂಶಕಾ. ೩–೨೮). ೬. 'ಹುರಿಗಡುಬು' ಪರಾ. ೭. (ಆಲಂ) ನಾಶಪಡಿಸು; ನಿವಾರಿಸು : ಕಂಗಳ ಕರುಳ ಕೊಯ್ದುವತ ಮನದ ತಿರುಳ ಹುರಿದವರ ಮಾತಿನ ಮೊದಲ ಬಲ್ಲವರನೆನಗೊಮ್ಮೆ ತೋಱಾ (ಅವಕಾ. ೦೨೦–೪೩೦). ೮. ನಾಶವಾಗು ; ಇಲ್ಲವಾಗು : ಹುರಿವ ಧೈರ್ಯದ ತಳ್ವಮುಱುವ ತರಳಹೃದಯದ ದೇವರಿಂದ್ರನನಱಿಸಿ ಕಂಡರು (ಕುಮ್ಮಾರ. ೬–೦೨).

ಹುರಿದುಕೊಂಡು ತಿನ್ನು =(ಆಲಂ) ಪೀಡಿಸು ; ಗೋಳಾಡಿಸು ; ಹಿಂಸಿಸು; ಗೋಳು ಹುಯ್ದುಕೊಳ್ಳು : ಮಲಮಗಳು ಇದ್ದಷ್ಟು ದಿನವೂ ಹುರಿದುಕೊಂಡು ತಿನ್ನುತ್ತಿದ್ದಳು (ರೂಢಿ). ಹುರಿದು ತಿನ್ನು =ಹುರಿದುಕೊಂಡು ತಿನ್ನು : ರಾಜೇಶ್ವರಮ್ಮನು ಪ್ರತಿದಿನವೂ ಮಾತು ಮಾತಿಗೂ ಸೊಸೆಯ ದೋಷಗಳನ್ನು ಎಣಿಸಿ ಹುರಿದು ತಿನ್ನುತ್ತಿದ್ದಳು (ಲಕ್ಷ್ಮೀಶ್ರ. ೪೩). ಸಮಾಜವನ್ನು ಆಕ್ರಮಿಸಿ ಹುರಿದು ತಿನ್ನುತ್ತಿದ್ದ ಸಹಸ್ರರಾವಣರ ಸಂಹಾರ ಮಾಡಬಲ್ಲ ರಾಮನೊಬ್ಬನನ್ನು ಸೃಷ್ಟಿಸಬೇಕೆಂದು ನಿರ್ಧರಿಸಿದ (ಭಾರತ. ೪೭೦). ಹುರಿದು ಮುಕ್ಕು = ಹುರಿದುಕೊಂಡು ತಿನ್ನು : ಹುರಿದು ಮುಕ್ಕುವಂತಹ ಹವೆಯು ವಿಸ್ಫೋಟಿಸುತ್ತಿದ್ದಿತು (ಋಷಿರಾಜ. ೩೨೯).

[ದೇ.₃ ತಮಿ. ಪೊರಿ ; ಮಲ. ಪೊರಿಯು ; ತುಳು. ಪೊರಿ, ಪೊರಿಪು, ಪೊರಿಯು]

**ಪುರಿ₂**, ಪೊರಿ (ನಾ). ೧. ಹಂಚಿನಲ್ಲಿ ಅಥವಾ ಮರಳಲ್ಲಿಟ್ಟು ಕಾಯಿಸುವಿಕೆ, –ಹುರಿಯುವಿಕೆ : (೬). ೨. ಮಂಡಕ್ಕಿ; ಚುರುಮುರಿ : ನಿಮಗೆ ಹಾಲೂ, ಹಣ್ಣೂ, ಕಡಲೆಕಾಯಿ, ಪುರಿ_ಮೊದಲಾದುವನ್ನು ಕೊಡಿಸುತ್ತೇನೆ (ರಂಗಪ. ೮೭). ಪೊರಿ : ೨. ಎಳ್ಳ ಪೆಱಂಗೆ ಬ ೧₃ ಮಾಱುವ ಪೊರಿಗಳ್ಗೆ ಏ ೧ (ಕಶಾಅ. ೦೭೩–೦೯–೩೭; 1057).

[< ಪುರಿ₁./ ತಮಿ. ಮಲ. ತುಳು. ಕೊಡ. ಪೊರಿ]

**ಪುರಿ₃**, ಹುರಿ₃ (ನಾ). ೧. (ದಾರ ಅಥವಾ ಹಗ್ಗದಂತೆ) ಹೊಸೆಯುವಿಕೆ ; ನುಲಿಯುವಿಕೆ : 'ಮುಪ್ಪುರಿ'₁ ಪರಾ. ೨. ಹೊಸೆದು ಮಾಡಿದ ನೇಣು,–ಹಗ್ಗ,–ರಜ್ಜು : ಅಸಗೆಟ್ಟುವೊ ಪುರಿ ಹರೆಯಿತ್ತೊ ಕೀದುದೊ ಅಸಮಾಶ್ವಗಳು ಬಾಂದೊಱೆಯು ಕೆಸಱೊಳು ಬಿದ್ದೇಕಲಾಱದಾದುವೊ ಎಂದು ಬಿಸಜಾಕ್ಷಿ ರವಿಯ ನೋಡಿದಳು (ಸೋಹಕ. ೨೭–೮೯); ಹೊಸೆದ ಕಾಲ್ಗಣ್ಣವಲೆ ತಳ್ಳುವಲೆ ಪುರಿಯೊಕ್ಕಣ್ಣವಲೆ (ಶಾಳ್ವಭಾ. ೫–೧೬). ೩. ಕೆಚ್ಚು; ಬಲ; ಗಟ್ಟಿತನ : 'ಪುರಿಗಣೆ', 'ಪುರಿಯೇಱು' ಪರಾ. ೪. ಪ್ರೋತ್ಸಾಹ ; ಮೆಚ್ಚಿಕೆಯ ಕೊಂಡಾಟ : 'ಪುರಿಯಿಡು', 'ಪುರ್ರೆ₁' ಪರಾ. ಹುರಿ₃ : ೧. ಹರಿತಂದು ಬಂಡಿಯ ಶಿರದ ಹಲಗೆಯ ನಡರಿದನು ಬಲುಹುರಿಯ ಹಗ್ಗವ ಹಿಡಿದು ಜಡಿವನು ಹೂಡಿದೆತ್ತುಗಳ (ಕುಮ್ಮಾರ. ೦೦–೨೭); ಹಗ್ಗ ಸುಟ್ಟರೆ ಹುರಿ ಹೋದೀತೇ? (ಗಾದೆ). ೨. "ಹುರಿ –ನಿರ್ದ್ರವಕರಣೇ, ರಜ್ಜುಭ್ರಮಣಕ್ರಿಯಾಯಾಂ" (ಶಬ್ದಾನು. ಪ): ಕಾಳರಕ್ಕಸಿಯು ಮಗುವು ಚಂದ್ರ ಸೂರ್ಯರ ಜೂಟಿಕೆವ ಹುರಿಯೊಳಗೆ ತಿರುಗಿತ್ತು (ಅರಕ. ೦೩–೬೨); ಚಟುಲಹಯಂಗಳು ಹುರಿಯ ವಾಘೆಯುಸಳವಡಿಸೆ ಬಲನೆಡಕ ವಾಜಿಯ ಸುಳಿಸಿ ಸಾರಥಿತನವ ತೋಱುವನೆಂದು ಕಲಿ ಶಲ್ಯ (ಕುಮ್ಮಾರ. ೮–೨೩); ತೆಗೆದು ಡೊಂಬನು ಹುರಿಯ ಸೂಜನು ಬಿಗಿದು ಬಟ್ಟಲನೇರಿಸಿ . . . ನೆಗೆದು ಉಣಿವನು ಧಿಮಿಧಿಮಿ (ಕುಷ. ೩೮–೮). 'ಬೆನ್ನುಹುರಿ' ಪರಾ. ೩. ಹೂಣಿಗರು ಹುರಿ ಬಲಿದು ಹಾಣಾಹಾಣಿಯುಲಿ

ಹೊಯ್ದಾಡಿದರು (ಶುಚ್ಯಾ. ೧. ೮-೦೫); ಹೇವದ ಹುರಿ ಬಲಿದುದೀಶಂಗೆ ಹಬಿಬದ ಸೂಳೆಬಂಟಿಕೆಯು ಧುರಕೆ ನಿಂದವು (ಸೋಮ. ೪-೨-೨೫). ೫. ಹೊಸೆದು ಮಾಡಿದ ನಾರು, ಸೆಣಬು, ಕಾತಿ ಮೊದಲಾದುವುಗಳ ದಾರ: ಗುಂಡನು ಅದಕ್ಕೆ ಒಂದು ಹುರಿ ಕಟ್ಟಿ ಚೀಲವನ್ನು ಎಳೆಯುತ್ತ ಮನೆಗೆ ಹೋದನು (ಕಕಪು. ೬ ೯೩); ಹೂ ಮಾರಿದ ಊರಲ್ಲಿ ಹುರಿ ಮಾರಬಾರದು (ಗಾದೆ). ೬. (ಮೋಸದ) ಕಟ್ಟು; ಪಾಶ: ಬಲೆ: ಸಿಮ್ಮಾರಸುಗಳು ಭೀಮಂಗೆ ಮಾಡಿದ ಹುರಿಪುಸಾ ಹುರಿ ಹಚ್ಚಿದ ಪರಿಯನು ಪುತ್ರೆ ಕೇಳು (ಸಂಕಕ. ೧೬ ೩೯). ೭. (ಹಗ್ಗದ ಎಳೆಗಳಂತೆ ಒತ್ತಾಗಿ) ಸೇರಿದುದು: ಹೆಣೆದುಕೊಂಡುದು: ಮೋಚಿದೆದ್ದು ಸಕಲರಾಣಾವ ಯೊಂದು ಹುರಿಯಾಗಿ[ಹಾಕಾ.ಗೂಡಿ] ಪುರವರದೊಳಿತ್ತು ಹದಿಕೆಯನು ತದ್ವಿ ತ್ರಿದಿಂ ನರರೂಪನೊಂದನನುಗೆಯ್ದು ಮಣಿದೊಡವಿಟ್ಟು ಬಳಿಕೊಂದು ರಥದ ಮೇಲೆ ಆರಿಸಿ (ಚಿಕ್ಕ್ರಿಶಾ. ೨ ೩೯); ನಿನ್ನಯ ಮನೋವಾಕ್ಕಾಯವೊಂದು ಹುರಿ ಯಾದುದ್ದು (೦ಗಿ. ೫-೦೦); ಮಾದಿವಿ ಆಗದಿದ್ರು ಇಬ್ಬರೂ ಕೂಡಿ ಬೆಂಕೀ ವಳಗ ಹಾರಿಕೊಳ್ಳೋಣ ಅಂತ ಹೊಂಟಿದ್ದುವು ಅವೆರಡೂ. ಅಟು ಒಂದೇ ಹುರಿ ಜೀವನ (ಪಕಾಡ. I. ೩೨). ೮. ಬಿಗಿಪು: ಬಿಗುವು; ಅರ್ತ ಕದಂಪು ಒತ್ತಿದ ಕಾಲುಂ ಹುರಿಯುಟ್ಟಿದಬಿಟಿಸಿಳಿಯೊಸವ[ಯಿಸಕದ] ಸೆರೆಯುಂ (ಕಕುಕ. ೨೪೦ ಕ್ರ ಹೋ); ಎಸೆವ ದಾಡೆಯು ಹುರಿಯ ಹುಬ್ಬುಗಳ ಇಡಿದ ಹೊಗರಿನ ಜವ್ವನದ . . . ರಕ್ಕಸರಾಯನೆಸೆದಿರ್ದ (ಕೂಲಿಚ. ೩-೭ ೩). ೯. ಬಲ ವುಳ್ಳುದು: ಸತ್ತ್ವಶಾಲಿಯಾದುದು: ದೃಢವಾದುದು: ಸ್ನಾಯು ಗಳು ಹುರಿಯಾಗಿ, ಶರೀರವು ಅಂದವಾಗಿಯೂ, ಬಲಾಢ್ಯವಾಗಿಯೂ ಕಾಣುವುದು (ಕಸ್ತ್ಕಾ. ೩೩). 'ಹುರಿಕಟ್ಟು' ಪರಾ. ೧೦. ಉತ್ಸಾಹ: ಹುರುಪು: 'ಹುರಿಗಟ್ಟು' ಪರಾ.

**ಹುರಿ ಮಾಡು**=ಹೊಸೆ: ನುಲಿ: ತೀಡು: ಕಮ್ಮಾರಿಗಳ ಹುರಿ ಮಾಡಿ (ಶಾಗಿಂ. ೫೦-೦೯); ದೇಸಾಯಿಗೂ ಅಪ್ಪು ಗೊತ್ತಾಗಲಿ ಎಂದು ಮಿಸೆಯನ್ನು ಹುರಿ ಮಾಡಿಕೊಂಡನು (ಗಂಡುಜ. ೧೯೬). **ಹುರಿಯಾಗು** =ಉತ್ಸಾಹಗೊಳ್ಳು: ಹುರುಪುಗೊಳ್ಳು: ವಿಶ್ರಾಂತಿ ಪಡೆದು ಹುರಿ ಯಾಗುವಷ್ಟರಲ್ಲಿ ಜೂಸತೀಗಳು ಬಂದಿತ್ತು (ಕ್ರೀಕಗ. ೧೬೦); ಬಿಸಿಬಿಸಿ ಟೀ ಬಿಡಿದ ನಂತರ ಅವರ ರಕ್ತ ಕಾವೇರಿ ಮೈ ಹುರಿಯಾಯಿತು (ಭೂಸರು. ೩೩೦); ಪ್ರತಿಭಾ ಹುರಿಯಾದಳು (ಬಾಂಚಿ. ೧೯).

[ದೇ.₂ ತಮಿ. ಮಲ. ತುಳು. ತೆಲು. ಪುರಿ, ಓರಿ]

**ಪುರಿ₄** (ನಾ). ಪುರ: ಪಟ್ಟಣ; ನಗರ: "ಪತ್ತನಂ . . . ಪುರಂ, ಪುರೀ—ಈ ೧೧ ಪಟ್ಟಣಾ" (ಹಲಾಯು. ೪೬-೨೬೦); ಗುರುಕುಲಾದ್ಯರ ಪುರಿಗಳಿಂ ಘನಕವೀಶರ ರಾಜಧಾನಿಗಳಿಂ . . . ದೇಶಂ ನವಗ್ರಹಾತ್ಮಕ ಮೆನಿಸಿತು (ಕಾಪಚಂ. ೨-೬). [ಸಂ.]

**ಪುರಿ₅** 'ಪೂರಿ' ನೋ.

**ಪುರಿಕರನಗರ** 'ಪುಲಿಕರನಗರ' ನೋ.

**ಪುರಿಗಡಲೆ**, ಪುರಿಗಡಲೆ (ನಾ). ಸೀರಿನಲ್ಲಿ ನೆನೆಯಿಟ್ಟು, ಕಾದ ಮರಳಿನಲ್ಲಿ ಅರಳುವಂತೆ ಹುರಿದ ಕಡಲೆ: ಪುಟಾಣಿ: ಘೀಪುಕೋಪಿಸಿ ಮುಟ್ಟಿ ಸರೋವರದ ಮಳಲ್ ಪುರಿಗಡಲೆಗೆ ಪುರಿದ ಮಳಲ್ಮಾಯ್ತು ತೆಜದ ಕಾಯ್ಕತ್ತ್ಸಂ (ಗರಾಚ.೨. ೬-೦೭). **ಹುರಿಗಡಲೆ**: ಹುರಿಗಡಲೆ ಯಂಕಾಸಂ ಕಾಮ್ಮಾಜದೋಡಿನ ಜೋಳದೊಳ್ಪರಬಲರುಪೇತಾಸುಂ . . . ಪೊಯ್ ಬರ್ಕರ್ಘರ್ಕನೆ ನಿಬ್ಬರಂ ಬಿರಿದೊಳಜುಗುಂ (ಜಂಚಿಪು. ೭-೯೨); ಹಂಚಿನ ಹುರಿಗಡಲೆಪೊಸೊಡೆದು ಪಾಚಿದುವು ಚೆಟ್ಟಿಗಳ್ (ಜಗಾ. ೦೬-೬೨): ಬದಿಯಲ್ಲೇ ಮಂಡಕ್ಕಿ ಹುರಿಗಡಲೆಯ ರಾಶಿಗಳು ಇದ್ದವು (ಕಕಪು. ೩-೨೫). [ಪುರಿ₁+ಕಡಲೆ]

**ಪುರಿಗಡುಬು**, ಹುರಿಗಡುಬು (ನಾ). ತುಪ್ಪ ಅಥವಾ ಎಣ್ಣೆಯಲ್ಲಿ ಕರಿದ ಕಡುಬು: ಪುರಿಗಡುಬು ತಳಿಗು ಚಕ್ಕುಲಿ ಕರಂಜಿಗಾಯಂತಿರಸಂ ಚಿಗುಳಿ ಲಡ್ಡುಗೆ . . . ನಿಂ ಬಯಸೆ ಪೋಗಿ ತಂದಪೆನೀಗಳ್ (ಕೃಕಾ. ೬-೬೯); ಸಕ್ಕರೆ, ಜೇನು, ಬಾಳೆಹಣ್ಣು, ಪುರಿಗಡುಬು . . . ಶಿಖರಣೆ—ಎಮು ಬೇಕು ಹೇಳು ತಂದೆ (ಜಿಜ. ೨೨). **ಹುರಿಗಡುಬು**: ಹಬ್ಬಕ್ಕೆ ಹುರಿಗಡುಬು ಮಾಡಬೇಕು (ಬಾಡು). 'ಕರಿಗಡುಬು' ಪರಾ.

[ಪುರಿ₁+ಕಡುಬು (< ಕಡಂಬು)]

**ಪುರಿಗಣೆ** (ನಾ). ಅತಿಶಯವಾದ ಶಕ್ತಿಯಿಂದ ಕೂಡಿದ ಬಾಣ: ವಿಶೇಷ ಶಕ್ತಿಯಿಂದ ಕೂಡಿದ ಬಾಣ: ಪುರಿಗಣೆಯು ದೊಣೆಗೆ ಕಯ್ಯಂ ನೀಡದೆ ರೌದ್ರಶರವ ದೊಣೆಗೆ ಕಯ್ಯಂ ನೀಡಿದಾಗಳ್ (ಪಂಭಾ. ೧೨-೦೯೦ ಪ); ಪುರಿಗಣೆಯಪ್ಪ ಕಾರಣದಿನಂತದು ತಪ್ಪಿದನೆಂದು ನೊಂದು ಪಲ್ಮೊರೆದಹಿ ರೂಪದಿಂ ಮಗುಟ್ಟಿ ಬಂದು (ಪಂಭಾ. ೧೨-೨೦೩); ಕೊಂತಿ ಬೇಡೆ ಚಿಚ್ಚದೆ ಕೊಟ್ಟಿಯ್ ಪು[ಶಾಪಾ. ಹು]ರಿಗಣೆಯುಂ (ಗದಾಯು. ೫-೨೬); "ಪುರಿಗಣೆಯುಪ್ಪ=ದಿವ್ಯಾಸ್ತ್ರವಾಗಿರುವ (?)" (ಪಂಶಂ. ೫೦೨); "ಪುರಿಗಣೆ—ಸುಡುವ ಬಾಣ (?), ಒಂದು ಬಗೆಯ ದಿವ್ಯಾಸ್ತ್ರ" (ಗದಾಸಂ. ಟಿಪ್ಪಣಿ. ೦೯೩).

[ಪುರಿ₃ + ಕಣೆ₁]

**ಪುರಿಗೆಯ್**, ಹುರಿಗೈ (ಕ್ರಿ). ೧. ಹೊಸೆ: ತಿರುವು: ಹುರಿಮಾಡು: ಮೀಸೆಗಳಂ ಪುರಿಗೆಯ್ದು ಕಣ್ಗಳಿಂದೆ ಭುಗಿಲಿತುತ್ತ ಸೂಸ ಕಿಡಿಗಳ್ . . . ಅಭಿಮುಖರಾಗಿ ಸಿಂದರತಿಮುಷ್ಕರದಿಂದೆ ತುರುಷ್ಕರಲ್ಲದಾರ್ (ಕಾಚ. ೨-೦೦೬). **ಹುರಿಗೈ**: ೧. ಅವನಂ . . . ಚಾಟಿಯಂತೆ ಹುರಿಗೈದ ಕುಡಿಮೀಸೆಯ ತೇಜಃಪುಂಜಮುಖದ ಅಧಿಕಾರಿಯೊಬ್ಬನನ್ನು ನೋಡಿದನು (ಭೂಸರು. ೩೦೨). ೨. ಉತ್ಸಾಹಗೊಳಿಸು: ಹುರಿದುಂಬಿಸು: ಓಡುವ ಸುರಾಳಿಯುಮಂ ಕೂಡಿ ಹುರಿಗೈದನಂದು (ಚಿಹ. ೩೦-೨೮).

[ಪುರಿ₃ + ಕೆಯ್₁]

**ಪುರಿಗೆಜ**[3] 'ಪುಲಿಗೆಜ' ನೋ.

**ಪುರಿಗೊಳ್**, ಹುರಿಗೊಳ್, ಹುರಿಗೊಳ್ಳು (ಕ್ರಿ). ೧. (ಹುರಿಯಂತೆ ಹೊಸೆದು) ಕೂಡಿಸು: ಹೊಂದಿಸು: ಸೇರಿಸು: ಬಸವನು ಹಿರಿದು ಭಯುಮುಮನತಿಸುಭಕ್ತಿಯುಮಂ ಚಿತ್ತದೊಳು ಪುರಿಗೊಂಡು . . . ನಮಿಸಿ (ಬಸಪು.೪-೩೬). ೨. ಕೂಡಿಕೊಳ್ಳು: ಹೊಂದಿಕೊಳ್ಳು: ಸಮನ್ವಯವಾಗು: ಕೊರಲ ನುಣ್ಪಿನ ಬೀಣೆಯಿಂಚರಂ ಪುರಿಗೊಳೆ, ಮರ್ದಳೆಯ ತಾಳದ ಲಯಂ ಜತಿಗೂಡೆ (ಅನಾಥ. ೨೬-೯). **ಹುರಿಗೊಳ್**: ೨. ಹೊರಯಿಲ್ಲದೆ ಮರುತೇಂದ್ರಿಯ ಸಂಶಯ ಕರಣಂಗಳು ತವೊಳಗೆ ಪರಃಪುರ ಹುರಿಗೊಂಡೇಕತ್ವದ ಸಮರಸದಿಂದಿಹವಶ್ರಾಂತದೊಳು (ಹೊನ್ನಂ. ೨-೦೬). ೩. ಉತ್ಸಾಹಗೊಳ್ಳು: ಹುರುಪನ್ನು ಪಡೆ: ಸದ್ವೀರರನೆದ್ದೆ ಕೋಂದೆಸವ ಮೀಸೆಗಳಿಂ ಹುರಿಗೊಂಡ ಗಂಡಪೆಂಡಾರವ ನಾಳ್ದ ಸೀವಕುಳವಮಂಡನನೊಳ್ಪಡಿಯಪ್ಪ ಗಂಡರಾರ್ (ಎಇ. XX. ೦೬-೨೯; 1167); ವಿಘಾತಿಯುಲಿದು ಹುರಿಗೊಂಡೊದಗಿ ಹಾಣಾಹಾಣಿಯಲಿ ಹೊಯ್ದಾಡಿತುಭಯಬಲ (ಶುಚ್ಯಾರ್ಕ್. ೨-೨೫). ೪. ಬಲವಾಗು: ಶಕ್ತಿಗೂಡು: ಹುರಿಗೊಂಡುದಾತನ ಸತ್ತ್ವವಾತನ ದಂಡೆಯಲಿ ಬಹರಾರು (ಶುಚ್ಯಾಗ. ೪-೬). **ಹುರಿಗೊಳ್ಳು**: ೨. ಜ್ಞಾನದೇವನ ಮನೆತನದಲ್ಲಿ ವಿಠ್ಠಲಭಕ್ತಿಯೂ ನಾಥದೀಕ್ಷೆಯೂ ಮೊದಲೇ ಹುರಿಗೊಂಡು ಬಂದಿದ್ದವು (ಪುಜಾಹಿ. ೦೩). ೩. ಅವರೆಲ್ಲರೂ ಮತ್ತಷ್ಟು ಹುರಿಗೊಂಡರು (ಕ್ರಪುಕ. ೬೫).

[ಪುರಿ₃ + ಕೊಳ್₁]

**ಪುರಿಗೊಳಿಸು**, ಹುರಿಕೊಳಿಸು, ಹುರಿಗೊಳಿಸು (ಕ್ರಿ). ೧. ಗಟ್ಟಿಗೊಳಿಸು: ದೃಢಗೊಳಿಸು: ಬಲಪಡಿಸು: ಭಿತ್ತಿಯಿಲ್ಲದೆ ಬರೆವಂತೆ ಚಿತ್ರವ ಬಗೆವೆತ್ತು ಪುಸಿಯ ಪುರಿಗೊಳಿಸಿ ಬಿತ್ತರಿಸಿದಳು ರಾಯನ ಮುಂದಾಕೆಯ ಪೆತ್ತಜನಾವನೆಂದಬಿಯ (ಶುಕಾಚಾ. ೩೯-೬೬). **ಹುರಿಕೊಳಿಸು**: ೨.

ಹುರಿದುಂಬು ; ಉತ್ಸಾಹಿಸು : ಮಂತಳಿಯೊಳ್ಳಕ್ರಸೇನೆಯು ಮಸು ತಾ ಹುರಿಗೊಳಿಸಿ ಪರಯಜನ ಮೊದಲಾದುರುತರದ ಷಟ್ಕರ್ಮವೆಲ್ಲವ ಧರಣಿ ಸುರರಿಂದ ರೂಢಿ ಮಾಡಿದ (ಸಂಕಶ. ೯-೩೩) ; ರಿಪುವಿದವರು ಪಕ್ಷಿದರು ಹರವರ್ತಿತವ ಹುರಿಕೊಳಿ [ಪಾಠಾಂ. ಹುರಿಕಟಸಿ, ಹುಂಗೋಳಿಸಿ, ಸರಕಟಿಸಿ] (ಕೊಹಂಸ. ೯-೯-೨೬). ಹುರಿಗೊಳಿಸು : ೧. ಪರಿಪಿಡಿಗಲಂ ತನ್ನ ನೂಲಿಂ ಕೆರೆಯುವೊಲು ಪೋಲ್ಮಟ್ಟನಂದದಿ ಪರಿವೃತ್ತಿರೋನ್ನತವೃಕ್ಷಗುಲ್ಮಲತಾ ತೃಣಂಗಳಲಿ ಹುರಿಗೊಳಿಸಿ ಮೇಲೆ ಕಪೋತವನಿರೆ ರಚಿಸಿ ಕರುವಿಟ್ಟು . . . ಶಿಖರವಂ ನಿಲಿಸಿ (ಅಕಶ. ೧೮-೩೬); ಲಲಾಟೇಕ್ಷಣಾಗ್ನಿಯಿಂ ಹುರಿಗೊಳಿ ಪಾಶುಪತಬಾಣವಂ ಬಿಡೆ . . . ಉರಿಪಿದುದು ತತ್ಪುರಂಗಳ ಪರಿಕರಂಗಳು (ಅಕಶ. ೧೭-೧೬). ೩. ಹೊಸೆದು ಬಿಗಿಮಾಡು ; ಹುರಿ ಹಾಕು : ಕಣ್ಣಿದ್ದವರು ಮುತ್ತು ಹುಡುಕಿ, ಹಸುವಿದ್ದವರು ಹೊಸ ಎಳೆಯ ಹುರಿಗೊಳಿ, ನೋಡಿ ಗಾತ್ರ (ಸಂಕಬು. ೨೩-೦೨). ೪. ಹೊಂದಿಸು; ಅಳವಡಿಸು : ಸಕಳವಂ ಹುರಿಗೊಳಿಸಿ ಲೀಲಾಸಂಕರ ದೃಷ್ಟಿಮಾತ್ರದಿಂದಂ ವಿಕೃತಿಗಳನೆಯ್ದುಸುವ ಮಹಿತಮಹಾಮಹಿಮೋನ್ನತ (ಅಕಶ. ೩೦-೯೩) ; ಅಲ್ಲಮಪ್ರಭು ಲಿಂಗಸಂಗವನು ಹೃದಯದೊಳು ಹುರಿಗೊಳಿಸುವೊಡೆ ಬಳಿದಳ ಮಹಿಮೆಯನೀನ ಹೇಳುವೆ (ಪ್ರಭುಲೀ ೩-೨೦). ೫. ಹುರಿದುಂಬಿಸು ; ಉತ್ಸಾಹಗೊಳಿಸು : ಹುರುಪು ಕೊಡು : ಸಾತ್ಯಕಿಯು ಅವರನ್ನು ಹುರಿಗೊಳಿಸಲು ದ್ರವಿಡಾಂಧ್ರಸಿವಾಗಳಿಂದ ಬಲಗಳು ಒಮ್ಮಡಿಯಾಗಿ ಆ ಕರ್ಣನನ್ನು ಸುತ್ತಿ ಮುತ್ತಿಕೊಂಡಿರಲು (ಶ್ರೀವಾಳ. ೬೦); ಅರ್ಜುನನು ಓಮೆಡಿಯನ್ನು ಹುರಿಗೊಳಿಸುತ್ತ . . . ಎಂದನು (ಶಕಶಾ. ೨೬೩) ; ರಣರಂಗದಲ್ಲಿ ವೀರಾಗ್ರೇಸರರನ್ನುದ್ರೇಕಿಸಿ ಹುರಿಗೊಳಿಸುವುದು ಸಂಗೀತವೇ ಅಲ್ಲವೇ? (ಟಿಗಸಾ. ೬೨).

[ಪುರಿಗೊಳ್ + –ಇಸು]

**ಪುರಿನೇಣ್,** ಹುರಿನೇಣು (ನಾ). ಹೊಸೆದ ಹಗ್ಗ; ಹುರಿ ಮಾಡಿದ ಹಗ್ಗ: ನೆನೆಯ ಮತ್ತವನ ತಾಯ್–ಪೆಂಡತಿಯನ್! –ಇರ್ಪೊಜೆಯ ಪೆಸರನ್! – ಪುರಿನೇಣನುಸಿರ್ದಿರಿಟಿ ಪೊಲಗೆಯ್ದು ಬಾಟನೀಡಾಡಿದಲ್ (ಅಂಕಿಗೊ. ೩–೯೩). ಹುರಿನೇಣು : ತರಿಸಿ ಹುರಿನೇಣುಗಳನೀತನ ಕರವೆರಡ ನೊಡೆಬಿಗಿದಡವದಿರು ಕೆಲಿ ಮಾಡುವುದಾವುದು (ಕುಮಾವ್ಯಾಸ. ೯-೯೦).

[ಪುರಿ₃ + ನೇಣ್₁]

**ಪುರಿಯಿಡು** (ಕ್ರಿ). ಹುರಿದುಂಬಿಸು ; ಪ್ರೋತ್ಸಾಹಿಸು : (ಮೆಚ್ಚಿ) ಕೊಂಡಾಡು : ಭೃಂಗೀಶಮುಖ್ಯರುಂ ಪುರಿಯಿಟ್ಟು ಸತ್ಕೃಪಾಪಾಂಗದಿಂ ನಿಜಕುಮಾರನ ಗುಹನನೀಕ್ಷಿಸುತ್ತುಂಗಜಾರಾತಿ ಬೊಮ್ಮನ ನೋಡಲಿರ್ದು ಕರಕಮಲಮುಂ ಮುಗಿದು ನಿಂದ (ಅಕಶ. ೧ ೩೬); ನಾಟಕದ ಹರುಷದಿಂ ನೋಡಿ ಪುರಿಯಿಟ್ಟೀಗಚಿತ್ರಮಂ ಕರುಣಿಸಿದನೆಂದಿನೊಡ್ಡೋಲಗದೊಳಂ ಶೂಲಿ (ಸಂಕಶಾ. ೫-೯೩). 'ಪುರೆಯಿಡು' ಪಠಾ. [ಪುರಿ₃ + ಇಡು₁]

**ಪುರಿಯೇಱು,** ಹುರಿಯೇರು, ಹುರಿಯೇಱು (ಕ್ರಿ). ೧. ಬಲವಾಗು ; ದೃಢವಾಗು ; ಗಟ್ಟಿಗೊಳ್ಳು : ನೆವಮಿಲ್ಲದಿರ್ಪ ಹರಿಕ್ಕವೆ ಪವನಲ್ಲದೆ ವಾಯ್ದು ಕವಿದು ಪರಿಹರಿಸುವರಾರ್ ಭುವನದ ಪುಣ್ಯದ ಪುಂಜಂ ಸವನಿಸಿ ಪುರಿಯೇಱಿ ಬಿರ್ತಿ ಸಡಿಲಿಸುವರಾರ್ (ಅಕಶ. ೩–೧೦೩). ಹುರಿಯೇರು : ೧. ಅಂತಃಕಲಹವು ಹುರಿಯೇರುತ್ತಿತ್ತು (ಶಾಹಕೋಶ. ೩೨೮). ೨. ಹುರಿದುಂಬು : ಉತ್ಸಾಹಗೊಳ್ಳು : ಉಬ್ಬು : ಬೋಗರಿ ಚಂಡಾಟ ಗುರಿ ಸ್ಪರ್ಧೆಗಿಲು ಚಿಣಿಫಣೀ ಚದುರಂಗ ಪಗಡೆಗಳ ವಿನಿರ್ಗೊಳಿಸಿ ಹುರಿಯೇರು ತಾಡುತ್ತೆ ಗೆಲ್ಲಪಂ ಮಂದಿರಕ್ಕೈತಪ್ಪನು (ಕಕಶು. ೯-೯). ಹುರಿಯೇಱು : ೧. ಕೆರಳಿದರೆ ಕಾಳಹುದು ಭೀಮನ ದುರುಳತನವೀ ಕೌರವೇಂದ್ರನ ಹುರುಡು [ಪಾಠಾಂ. ಳು] ಹುರಿಯೇಱುವುದು ಮತಪಲ್ಲಿಂದನಂಧನೃಪ (ಕುಮ್ಯಾ. ೦೬-೨೨). ೨. ತವತವಗೆ ಧುರತೋರಹತ್ತರು ತವಕಿಸುತ ಹುರಿಯೇಱಿದರು ಕೌರವರು ಕರ್ಣನ ಹಂಬಿದಾಹವಮೆಂಗೆ ತಮಗೆನುತ (ಕುಮ್ಯಾ. ೦೯-೪೩); ಹರಿಕರಾಬ್ಜಸ್ಪರುಶಸುಖದಲಿ ಕರಗಿ ಮನ ಹಂಕರಿಸಿ ಪುಳಕದ ಹರಹಿನಲಿ ಹುರಿಯೇಱಿ ಹೊಂಪುಳಿಯೋಗಿ ಬೆಜಗಾಗಿ . . . ಭಕ್ತಾಭರಣನಿದ್ದನು ಪರಮಭಕ್ತಿಯ ಪಾರವಶ್ಯದಲಿ (ಹರಿಭಗ. ೩–೮–೧೯).

[ಪುರಿ₃+ಏಱು₁ (< ಏಱ್₁)]

**ಪುರಿಯೋಡು,** ಹುರಿಯೋಡು (ನಾ). ಹುರಿಯುವುದಕ್ಕಾಗಿ ಬಳಸುವ ಲೋಹದ ಅಥವಾ ಮಣ್ಣಿನ ಬಾಣಲೆ : "ಸಿರಿವಂತಿಗೆಯೆಂದೆನಲ್ಕೆ ಪುರಿಯೋಡಕ್ಕುಂ" (ಶಬ್ದಾನು. ೩೨) : ಬಜಗೊಡನೆಣ್ಣೆ ಪಟ್ಟೆ ನುರಿನೇಣ್ ಬಡಿಕೋಲ್ ಬರೆಯಿರ್ದಿಲಲ್ಲು ಸಾವಱ್ ಪುರಿಯೋಡು ಸುಟ್ಟಡಗು . . . ಇದಿರೊಳ್ ಬರೆ ಕಾಣಬುಮಾಗದು (ಕರ್ನಾಟಕ. ೧೨ ೦೦); ದೇವಂ ದಿಟದಿಂ ನಿರುತಮಿಪನೆಂದು ಬಿಣ್ಣಸುತಿರೆ ಗುಣಮಂ ಬಿಟ್ಟು ಕಟ್ಟು ಪುರಿಯೋಡಾದೈ (ರಕ್ಷಾಶ್ಯ. ೩ ೧೨೬). ಹುರಿಯೋಡು : "ಸಿರಿವಂತಿಗೆಯೆಂದೆ [ನ]ಲ್ಕೆ ಹುರಿಯೋಡಕ್ಕು" (ಶಬ್ದಮಂ. ೨); ಮಸಿಯೆಂಬುದು ಹುರಿಯೊಡೆಂಗೆ ಪಣೆಕಟ್ಟೆಂಬುದು ಪಟವಲೆಟ್ಟಿಂಗೆ (ಅಸಂಶ ೨-೨೩ ಪ); ಹುರಿಯೋಡಿನಂತಿಪ್ಪುದು ನೆಲನಾ ಗಿರಿವರನೊಳೀಳುವ ಕಿಚ್ಚಿನಿಂದ (ನೇಶುಸಂ. ೦೦-೯೦).

[ಪುರಿ₁ + ಓಡು₂]

**ಪುರಿವರಲ್** (ನಾ). ಕಾದ ಕಲ್ಲು ; ಸುಡುವ ಕಲ್ಲು : ನಾನಲುಮಂ ಬಾನಲುಮಂ ಸಡೆಬವುನಿಡಿಂಬವುಂ ಪರಲುಮಂ ಪುರಿವರಲುಮಂ ಕಿಸು ಗಾಡುಮಂ ನೆಗ್ಗಿಲ್ಗಡುಮಂ . . . ಕಳಿವು ಪೋಗಿ (ಅಂಬಾಪ. ೬ ೦೩ ಪ).

[ಪುರಿ₁ + ಪರಲ್]

**ಪುರಿವಳಲ್,** ಹುರಿಮರಳು, ಹುರಿಮಳಲು (ನಾ). ಚೆನ್ನಾಗಿ ಕಾದ ಮರಳು ; ಸುಡುವ ಮರಳು : ಸಱುವಳಿಯಿಂ ಬಿಸಮುರಿಯಿಂ ಬಿತವು ಗುಳ್ಪುರಗಳಿಂ ಸೂಸುವ ಪುರಿವಳಲಿಂ ಮಸೆದಸಿಯಿಂ . . . ಆ ಬಿಬ್ಬೋದರಿ ಮಸಗಿ ಕರಂ ದಾರುಣತರಮುಪಸರ್ಗಂ ಮಾಡಿದಳು (ಕಥಾಕೋ. ೦೩-೦೯). ಹುರಿಮರಳು: ಕರಿಯ ಮದ್ದಿನ ಪೊಟ್ಟಣ ಕಟ್ಟೆದಂಬಿನ ಹೊಱ ಹುರಿಮರಳಿನ ರಾಶಿ ಅರೆದ ಸಾಸವೆಗೊಡ ಕಾದದವಿಯ ಬಹು ಹರವಿಗೆಳೊಟ್ಟಿದುವಾಗ (ಕಂಶಪ. ೦೧-೦೯೩) ಹುರಿಮಳಲು : ಕಾಸು ವೆಣ್ಣೆ ಹುರಿಮಳಲು ಕವನೆದಸಿ ಸಾಸಿರಮುಖವಾಗಿಹವು (ಕಂಶಕ. ೩ ೦೩).

[ಪುರಿ₁+ ಮಳಲ್₃ (<ಮಣಲ್)]

**ಪುರಿವಿಳಂಗಾಯಿ** (ನಾ). ೧. ತುಪ್ಪದಲ್ಲಿ ಕರಿದು ತಯಾರಿಸುವ ಒಂದು ಬಗೆಯ ಸಿಹಿ ಭಕ್ಷ್ಯ : ಹೆಸರುಬೇಳೆಯು ಹುರಿದು ಬೀಯಿಸಿಕೊಂಬುದು, ದೊಡ್ಡ ಸಜ್ಜಿಗೆಯು ಬೀಯಿಸಿಕೊಂಬುದು, ತೆಂಗಿನ ಕಾಯಿ ಹೆಸರ ತೋರ ದಲಿ ಕೊಯಿದು ಹಾಕಿ ಸಕ್ಕರೆಯು ಹಾಕಿ, ಮೆಣಸು ಏಲಕ್ಕಿ ಕರ್ಪೂರವ ತಳಿದು ಕಲಸುವುದು, ಅದಕೆಯು ತೋರ ಉಂಡೆಯ ಮಾಡಿ, ಅಕ್ಕಿಯ ಹಿಟ್ಟ ಸಣ್ಣವಾಗಿ ಅರೆದು, ಗಟ್ಟಿಯಾಗಿ ಕಲಸಿ, ಈ ಉಂಡೆಗಳ ಆ ಹಿಟ್ಟಿ ನೊಳಗೆ ಅದ್ದಿ, ಕಾದ ತುಪ್ಪದಲ್ಲಿ ಹಾಕಿ ತೆಗೆವುದು. ಇದು ಪುರಿವಿಳಂಗಾಯಿ ಯೆನಿಸಿಕೊಂಬುದು (ಅಲಸೂ. ೨೪). ೨. ಹೆಸರುಹಿಟ್ಟಿನಿಂದ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ.–ಉಂಡೆ. 'ಪುಳ್ಳಂಗಾಯಿ ಉಂಡೆ' ಪಠಾ. [ದೇ.॥ ತಮಿ. ಪೊರಿವಿಳಙ್ಙಾಯ್, ಪೊರಿವಿಳಾಙ್ಙಾಯ್; ತೆಲು. ಪೊರಿವಿಳಂಗಾಯಲು]

**ಪುರಿಸ** (ನಾ). ಅಮೇಧ್ಯ; ಮಲ : ಮುನಿಸಾಮು ಕೀಳೆನ್ನ ತನು ಪೊಲಸು ಪುರಿಸವೇ ವಿನಯದಿಂ ನೋಡೆಂಬುದರವ ಬಗೆವು ತೋಱ ಘನ ತಸಿವಾಲು ಸೂಸೆ (ಪ್ರಭುಲೀ. ೨-೯೦). [< ಸಂ. ಪುರೀಷ]

**ಪುರಿಸಂಡಗೆ,** ಹುರಿಸಂಡಗೆ (ನಾ). ಒಂದು ಬಗೆಯ ಸಂಡಗೆ : ಎಣ್ಣೆ ಯಲ್ಲಿ ಹುರಿಯುವ ಬತ್ತದ ಅರಳಿನ ಸಂಡಿಗೆ : ತೆಗೆ ತಿಲವನೌಪಾಸನದ ಕೊಳವಿಗಳ . . . ಹಪ್ಪಳವ ಪುರಿ[ಪಾಠಾಂ. ಮುರಿ]ಸಂಡ[ಪಾಠಾಂ. ಡಿ]

ಗೆಯ ಹೂರಿಗೆಯು (ಕೊರಿರಾ. ೩-೬-೭೦). **ಹುರಿಸಂಡಗೆ :** ನೊರೆಸಂಡಗೆ ಯನು ಹುರಿಸಂಡಗೆಯು ಬಾಳಕವನು ತಪ್ಪದೆಲ್ಲಾ ಸಾಧಸವನು ಸಂವರಿಸಿ ತಂದೊಪ್ಪಿಸಿದರೆ (ಸಿದ್ಧರಾ. ೬-೩೨). [ಪುರಿ$_1$ + ಸಂಡಗೆ]

**ಪುರೀತತ್ತು** (ನಾ). ಕರುಳು : "ಅಂತ್ರಂ, ಪುರೀತತ್‌—ಈ ೨ ಕರುಳ್" (ಕಣಾಘು. ೦೦೯-೦೪). [ಸಂ. ಪುರೀತತ್]

**ಪುರೀಷ** (ನಾ). ೧. ಹೇಲು ; ಮಲ : "ವರ್ಚಃ . . . ಪುರೀಷಂ, ಶಮಲಂ, ಮಲಂ—ಈ ೧೩ ವಿಷ್ಠೆ" (ಕಣಾಘು. ೧೦೩-೦೩) ; ಅರಯೆ ಮೂತ್ರ ಪುರೀಷಾಗಾರಂ ಸಂಪ್ರಾಪ್ತಸಪ್ತಧಾತುವಿಕಾರಂ ಚಾರುಗುಣಮಾರಮತಿ ವಿಷದಾರು ಶರೀರಂ ದುರಂತದುಃಖಾಧಾರಂ (ಅಕಥೆ. ೨-೩೦). ೨. ಕೊಳೆ ; ಹೊಲಸು : ಸಿಂಬುಳು ಕೀವು ಕೆರಂಕಸ್ವಗಂಬು ಮಲಂ ಮೂತ್ರಮಾ ಪುರೀಷಂ ಜೀವಂ ಬೆಂಬಿಡದೀ ಮಂದೊವಲ ಪಸುಂಬೆಯೊಳೀಯೊಡಲೊಳಾವ ಸುಖಕಿರ್ದಪುದೋ (ಅಕಥೆ. ೬-೩೩) ; ಕೀವಿನ ರುಧಿರ ಪುರೀಷದ ಬಾವಿ ಯೊಳಾವಾಸವಾಗಿ ನೆಲಸಿಹ ನಾನಾಜೀವಿಗಳ ನೋವ ನೋಡುತ್ತಾ ವಿಭು ಸಾವಂದತಂದೆ ಮರುಗುತ್ತಿರ್ದಂ (ಕನ್ನಕಾ. ೩-೦೪೦). [ಸಂ. ]

**ಪುರು** (ಗು). ೧. ಹೇರಳವಾದ ; ವಿಪುಲವಾದ ; ಅಧಿಕವಾದ : ಪುರು ಪುಣ್ಯಂ ವಿಮಳೋರುಕೀರ್ತಿ . . . ನಾಕಿಗಂ (ವರ್ಧಮಾ. ೦-೩೦) ; ಪರಮಾರ್ಥಂ ಪುರುಧರ್ಮದಾನಫಲದಿಂ ಸ್ವರ್ಗಾಪವರ್ಗಕ್ಕೆಮಿಾಶ್ವರನಪ್ಪಂ ವರಪಾತ್ರ ಸಂತತಿಗೆ ದಾನಂಗೆಯ್ವುದಾನಂದದಿಂ (ಆ:ಶೀಕ್ಷ. ೬-೦೦೮). ೨. ಮಹ ತ್ತಾದ : ವಿಶಾಲವಾದ : ಪ್ರತ್ಯಹಮೊಪ್ಪುಗುಂ . . . ಆದಿತ್ಯಪುರಂ ಪುರಂದರಪುರಪ್ರತಿಮಂ ಪುರುರತ್ನಗೋಪುರಂ (ಶಂಖ್ರ ಪು. ೬-೩). (ನಾ). ೩. ಹಿರಿದು ; ದೊಡ್ಡದು : "ಬೃಹತ್, ಉರು, ಗುರು, ವಿಸ್ತೀರ್ಣಂ, ಪುರು . . . ವರಿಷ್ಠಂ—ಈ ೧೨ ಹಿರಿದು" (ಕಣಾಘು. ೧೮೬-೧೯) : "ಬೃಹದುರು ಪುರು ಪೃಥುಳ ಪೃಥು ವಿಶಾಲಮುಮಾ ಗುರು ಮಹದತಿ ಪ್ರೌಢಮೆನೆ ವಿಸ್ತೀರ್ಣಮೆಂದೆನಿಕು" (ಶುಂಗರಾ. ೧೨೮-೮). ೪. ಚಂದ್ರ ವಂಶದ ಒಬ್ಬ ಪ್ರಸಿದ್ಧನಾದ ಅರಸು ; ಯಯಾತಿಯ ಮಗ ; ಕೌರವ, ಪಾಂಡವರ ವಂಶದ ಮೂಲಪುರುಷ : ಸರಿಯೆ ಪೇಳ್ಕನಗಿದು ಭೂಪ ಓಹೋ ಪುರುವಂಶದೀಪ (ಶಾಕುಂತ. ೬೯ ಅಡಿ). 'ಪುರುಕುಲ' ಪರಾ. ೫. [ಜೈನ] ಮೊದಲನೆಯ ತೀರ್ಥಂಕರನಾದ ವೃಷಭನಾಥ : ಆದಿತೀರ್ಥಂಕರ : ಪುರುಪರಮೇಶ್ವರನಳಿಗವತರಿಸಿದಂ (ಆದಿಪು. ೬-೩೭) ; ಪುರುವಂಶದ ಕುರುವಂಶದ ಹರಿವಂಶದ ನಾಥವಂಶದುಗ್ರಾನ್ವಯದುರ್ವರೆಯೊಡೆಯರಾದಿಪರಾಗಿರೆ ನರನಾಥಸುತರ್ಕಳಿನಿಬರಾನಂ ಬಂದರ್ (ಹರಿಃಶಾ. ೩-೩೬) ; ಪುರುವಂಶಾಭರಣಂ ತ್ರಿಪಿಷ್ಟನೃಪನಾ ವಿದ್ಯಾಧರೇಂದ್ರಂಗೆ ಸಾದರದಿಂ ತಾನಿದಿರ್ವಂದು (ಶಾಂತೀಶ್ವ. ೯-೨೦೩). [ಸಂ.]

**-ಪುರುಕ,-ಪುರಕ** (ಪ್ರ). ಭಾವನಾಮವಾಚಕವಾದ ಒಂದು ತದ್ಧಿತ ಪ್ರತ್ಯಯ : 'ಅಂಜುಪುರುಕ', 'ಅಳುಬುರುಕ' ಪರಾ.—**ಪುರಕ :** 'ಅಳುಬುರಕ', 'ಅಸಿಬುರಕ' ಪರಾ.

**-ಪುರುಕಿ** (ಪ್ರ). ಭಾವನಾಮವಾಚಿಯಾದ ಒಂದು ತದ್ಧಿತಪ್ರತ್ಯಯ : ಕುಳಿ ಪ್ರತ್ಯಯವು ಯಾವ ಅರ್ಥದಲ್ಲಿ ಬರುತ್ತದೆಯೋ ಅದೇ ಅರ್ಥದಲ್ಲಿ ಪುರುಕಿ ಪ್ರತ್ಯಯ ಬರುತ್ತದೆ (ಹೊಸ:ಗ. ೬೯). 'ಅಂಜುಪುರುಕಿ' ಪರಾ. [-ಪುರುಕ + — ಇ$_2$]

**ಪುರುಕುಲ** (ನಾ). ಪುರುಮಹಾರಾಜನ ವಂಶ : ಎಲೆ ಪುರುಕುಲೋತ್ಪನ್ನನೆ . . . ಇಂಥ ಕಠಿನೋಕ್ತಿಗಳಿಂದ ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲ್ಲಾ ? (ಶಾಕುಂತ. ೩೬-೦೩). [ಸಂ.]

**ಪುರುಚಲಿಗಿಡ** (ನಾ). ಒಂದು ಬಗೆಯ ಸಸ್ಯ : ಹೇನುಕುರುವಿನ ಗಿಡ, ಪುರುಚಲಿಗಿಡ, ಪುಲ್ಸಾರೆ (ಮೈಶಿಗ. ೩೩-೦೦೦೬). [ಪುರುಚಲಿ$_3$+ಗಿಡ (< ಗಿಡು)]

**ಪುರುಚಲು** (ನಾ). ಕೆದರಿದುದು : ಕೂದಲು ಪುರುಚಲು ಪುರುಚಲಾಗಿದೆ (ಜಾತಿ). [ಪುರುಚು ? + — ಅಲು (< — ಅಲ್$_3$)]

**ಪುರುಜ** (ಗು). ಅಧಿಕವಾದ ; ಅನೇಕವಾದ. [ಸಂ.]

**ಪುರುಡಿ$_1$** (ನಾ). ಮತ್ಸರವುಳ್ಳವಳು ; ಅಸೂಯೆಪಡುವವಳು ; ಈರ್ಷ್ಯೆಯುಳ್ಳವಳು : ಅಪನ ಸತಿ ಪುರುಡಿ ನೆಪದಿ ಬವರವನೆ ಪೂಣ್ಚಿ ಮಾರಿದತ್ತಾಖ್ಯ ಮಹಾಹವಶೀಲೆ ತನ್ನ ಮನೆಯಿಂದವೆ ಪೊಱಮಡಿಸಿದಳ್ ಕನಲ್ದು ಪದ್ಮಾವತಿಯಂ (ಪುಣ್ಯಾಸ್ರ. ೨-೯೩). [ಪುರುಡು$_1$ + — ಇ$_3$]

**ಪುರುಡಿ$_2$ ?** (ನಾ). (?): ಕರ ಚರಣವನು ವಿಸುಕಲಮ್ಮದೆ ಗರುಡಿಯೋಜನು ಪು [ಹಾ.ಪಾ. ಪ]ರುಡಿಯನು ಮರವಂತೆ ಸಿಂದಿರ್ದ (ಸೌಕ್ಶಾ. ೩೦-೬೨). [ ? ]

**ಪುರುಡಿಗ, ಹುರುಡಿಗ** (ನಾ). ಹೊಟ್ಟೆಕಿಚ್ಚಿನವನು; ಈರ್ಷ್ಯೆಪಡು ವವನು : ಮತ್ಸರಬುದ್ಧಿಯುವನು : ಆಗಮಾರ್ಥಮನೇನೆಂದಱಿ ಯದರೊಳ್ ಪುರುಡಿಗರೊಳ್ ಬಱಿದಲೆಯೊಂದೆಳಸಿ ಕೇಳಲಾಗದು ಪುರುಷಂ (ರಕರಾಶತ. ೬-೨೧೩); ಪಾಱಿಪ ಪುರುಡಿಗನಂ ಪೂಣ್ದು ಬೇರ್ಕೆಯ್ದು ಲೋಭೋಜ್ವಳನಂ ಟಿೊಡಾಡಿ ಪೋಗಾಡುವ . . . ಚಾತುರ್ಯದ ಪೊಸ ಬಗೆಯನ್ನೊಳ್ ನಿಶಾಂತಂ ನಿಸರ್ಗಂ (ಕೃಕರ. ೨೯-೨೮). **ಹುರುಡಿಗ :** "ಈರ್ಷ್ಯಾಳುಃ, ಕುಹಕಃ—ಈ ೨ ಹುರುಡಿಗಂ" (ಕಣಾಘು. ೬೩-೨೨೯) ; ಹುರುಡಿಗರನೇಕಾಂತದೊಳಗಾದರಿಸುವರು ಭೇದಕರ ಬುದ್ಧಿಗೆ ತೆಱಹು ಗೊಡುವರು . . . ಈ ಧರೆಯರಸುಗಳಿಗಿದು ಸಹಜ (ಕುವ್ಯಾಸ. ೧-೩೩). [ಪುರುಡು$_1$ + — ಇಗ]

**ಪುರುಡಿಸು, ಹುರುಡಿಸು** (ಕ್ರಿ). ೧. ಸ್ಪರ್ಧಿಸು; ಪೈಪೋಟಿ ನಡೆಸು : ಸ್ಥಿರನೇ ಮೇರುಗಿರೀಂದ್ರದೊಳ್ಸೆಣಸುವಂ ಗಂಭೀರನೇ ವಾರ್ಧಿಯೊಳ್ ಪುರುಡಿಪ್ಪಂ (ಎಕ. VII, ಶಿಮೊ. ೦೦-೨೩ ; 1085 ?) ; ಉದಾರಗುಣದೊಳ್ ಪುರುಡಿಸುವಂ ಕಲ್ಪವೃಕ್ಷದೊಳ್ತದ್ವಣಿಜಂ (ರಮಣೀವ್ಯ. ೦-೯೦); ಹರಿಚಂದನ ಪಾರಿಜಾತ ಮಂದಾರದ ತರುಚಯದಿಂ ಸಿವ್ದರಸದ ಸರಸಿಗಳಿಂದಾ ಗಿರಿ ಗೀರ್ವಾಣರ ಪುರದೊಡನವು ಪುರುಡಿಪುದು (ಕುಮಾರಸಂ. ೨-೦೯). ೨. ಹೊಟ್ಟೆಕಿಚ್ಚು ಪಡು ; ಮತ್ಸರಿಸು : ಅಸೂಯೆ ಪಡು : ವಜ್ರದಾಡಂ ಕೇಳ್ದು ಮನದೊಳ್ ಮುಳಿದು ಪುರುಡಿಸಿ . . . ಬಾವಿಯ ಬಾಗಿಲೆಲ್ಲವುಂ ನಿಶ್ಛಿದ್ರವಾಗಿ ಮುಚ್ಚಿ ಕವಿದಿಕ್ಕಿ ಪೋದಂ (ವಡ್ಡಾರಾ. ೧೩೭-೨೩); ನರನಂದನನಂ ಕಂಡು ವಿಕ್ರಮಕ್ಕಂ ಕ್ರಮಕ್ಕಂ ಪುರುಡಿಸುವ ಸುಯೋಧನನ ಮಕ್ಕಳ್ . . . ಸೂರ್ವರುಮೊಂದಾಗೆ ಬಂದು ತಾಗಿದಾಗಳ್ (ಪಂಪಭಾ. ೦೦-೯೯ ವ); ಸವತಿಗೆ ಸವತಿ ಪುರುಡಿಪಳ್ (ಶಬ್ದಮ. ೧೩೦ ವೃತ್ತಿ); ಗುಣಕೆ ಪುರುಡಿಪರೊಳರೇ (ರಸರ. ೦-೬). **ಹುರುಡಿಸು :** ೧. ಕೈಲಾಸವದಕೆ ಹುರುಡಿಸುತಲಿರ್ಪುದು ನೋಡ ಮೇಲೆಸೆವ ಮೇರು ಸೆಣಸುತ್ತಿರ್ಪುದುಂ ನೋಡ (ಶಿತುಕ. ರೀ. ೩-೨೦); ಎಳೆಯ ಮಿಂಚೆಳ ಕುಡಿಯ ಸೂಸುವ ನಳಿನದ್ರುಶೆಯರು ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು ಕೋಮಲಾಂಗಿಯರು . . . ಕುರುರಾಜು ನೆಡಮಂಕದಲಿ ಮೋಹಿದರು (ಕುವ್ಯಾಉ. ೬-೯೯); ಚಕ್ರವರ್ತಿಯ ಸೇವೆ ಯೆಂದು ಪುಷ್ಪ ಪುಷ್ಪವೂ ಹುರುಡಿಸುತ್ತಿದೆಯೋ ಎಂಬಂತೆ ಪಾರಿಜಾತ, ಜಾಜಿ . . . ಜಲಜಗಳು ತಮ್ಮ ತಮ್ಮ ಸುಗಂಧವನ್ನು ಸೂರೆಗೊಡುತ್ತಿವೆ (ವರಿಶಾ. II, ೦೯೭೯). ೨. ಒಸೆದು ಕಪೋಲಿನಿ ನಗಲು ಮಿಗೆ ಹುರುಡಿಸುತ ಪೂರ್ವದಿಶಾನಿತಂಬಿನಿ ನಿಶಿತಕೋಪದ ಕಿಡಿಯನುಗುಳಿದಳೆನಲು ರವಿ ಮೆಱೆದ (ಕುವ್ಯಾದ್ರೋ. ೨-೦೩). [ಪುರುಡು$_1$ + — ಇಸು$_3$]

**ಪುರುಡು$_1$, ಹುರುಡು$_1$** (ನಾ). ೧. ಸ್ಪರ್ಧೆ ; ಪೈಪೋಟಿ : ಪೋಲಾಟ : ಪೇಚರನುಂ ಕುಮಾರನಂ ಕಂಡು ಪುರುಡಿಂ ಮುಳಿಸು ಪೆರ್ಚೆ . . .

ಕೊಲ್ಲೆನೆಂದು ಕಿಚ್ಚು ಪಾಲ್ಗೆರಸು ಬಂದೆಬಗಿ ಇರ್ದುದು (ವಡ್ಡಾರಾ. ೫೯-೨೬); ಪಿಸುತಾಸಂ ತೆಜದೊಳಿಳಿಪಿನ ಲಲ್ಲಿಯು ಬೆಲ್ಲದ ಪುರುಡಿನ ಮುಳಿಸಿನ ನೆಪದ ಪದೆಪಾತಂಗಳಂ ನುಡಿದುಂ ಕಾಲ್ವಿಡಿದುಮುಚಿಳಿತಧೈರ್ಯನ ಮಾನಮಂ ಚಳಿಯಿಸಲಾಜದೆ (ಹಂಕಕಾ. ೬.೬೮೨); ನಿನಗಂ ಮದನಂಗಂ ರೂಪಿನ ಪುರುಡುಂಟು (ಅನಂತ. ೬-೩೭). ೨. ಹೊಟ್ಟೆಕಿಚ್ಚು; ಈರ್ಷ್ಯೆ; ಮತ್ಸರ: ಅತನ ಪ್ರಾಣೇಶ್ವರಿ ಪಪ್ರಮಾಳಿನಿ ಕಂಡು ಪುರುಡುಮುಜಲುಮೊಡಮೆಳೆಯ ನಿಶಿತಾಸಿ ಧೇನುಮಂ ಕಿಚ್ಚು ಬೆಸ್ನಟ್ಟ ಮುಟ್ಟ ಬೆಳಗಿಲ್ಲದಾತನ ಬೆಸ್ನಂ ಎಸ್ನಿವರವಿಕ್ಕಿದು ತಿರೆ ಪೊಯ್ಯೆ (ಚಾಂತಿಪು. ೪-೯೬ ವ): ಪುರುಡಿಂ ಭಾರತೀಶನಂ ಸೋಂಕಳ್ . . . ವಿಸೀತನಂ ದೂರದಿಂ ನೋಡಿ ಪಾಪಕಣಿಪನೆಂದು ತೀದು ಪೋಗಳೀದಿರೆ ನಬದಿರ್ (ಶಾಂತೀಶ. ೩೬೯); ಉರ್ವಿಯೊಳ್ ನಿಜಲಪುಣ್ಯಾಂಭೋಧಿಯುಪ್ಪುತನಂ ಪುರುಡಿಂದಂ ಕೊಲಲೆಂದು ಕಾಯ್ದು ಸರಸುಂ ಗಾಂಪಂ ಪೆಜಿರ್ ಗಾಂಪರೇ (ರವಿಚಾಕ್ಕು. ೧೧-೨೦೩). ೩. ಹಟ: ಛಲ: ಎರೆದಾಗ ಕೊಡ ದಿಹುದು ನೆಲದ ಕ್ಷುಬ್ಬೆಗೇನು ಮುರುಳೊ ಕರೆಯದೆ ಕೊಡುವ ಪುರುಡೇಕೆ ಬಿಡದು ? (ಅಲಿಂಗಿ. ೩೬-೯೦). ಹುರುಡು₁: ೧. ಕಮಳಪ್ರಭೆಗಂ ತನಗಂ ಹುರುಡಿಂದಮೋ ಪರಸ್ಪರಾನುರಾಗಮಳವಿಗಟಯ (ಅರ್ಜುನ. ೩-೧೦೭ ವ); ಹುರುಡು ಜಾಣುಮ ಚಳಚಳಿಕೆ ಚಪ್ಪರಣೆ ಪಂಚನೆ ನೇಹವೇಬೇ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರವೆ. ೧-೩ ೩.೨); ಒಂದೊಂದು ಸಲ ಹೆಣ್ಣಾಳುಗಳಿಗೂ ಗಂಡಾಳುಗಳಿಗೂ ಹುರುಡು ಬಂದು ಜಿದ್ದಾಕ್ಕಿತ್ತು (ಪಮ್ಮೂರಿ. ೦೯೨). ೨. ಹುಸಿಯಿಲ್ಲ ಹುರುಡಿಲ್ಲ . . . ಮತ್ಸರವಿಲ್ಲ ನೆರವಿಲ್ಲ ವಸುಧೆಯೊಳು ಸಿದ್ಧರಾಮಂಗೆಂಬ ಕೀರ್ತಿ ಪಸರಿಸಿತು ಮೂಲೋಕದೊಳಗೆ (ಸಿದ್ಧರಾ. ೬-೨೫); ಹುರುಡೇಕೆ ಗುಣದೊಳಗೆ (ಶುದ್ಧಾ. ೧-೨೫); ಹುರುಡು ಹುಟ್ಟಿದಪೊಲು ಸಲಿಲಕಾಂತೆಯರೊಳು ಮಣಿಮಯಿಸಿರುತಿಹನಾಗಿ ಪುರುಷರೊಳುತ್ತಮನೀತನೆಂದಾತಗೆ ಪುರುಷೋತ್ತಮನೆಂಬ ನಾಮ (ಶರಕ. ೧೫-೦೭). ೩. ಗುರುಗಳಿಂದ ಉಪದೇಶವಾಗಿ ಪಡೆಯಬೇಕೆಂಬ ಹುರುಡು ಸಂಜೀವಯ್ಯನಿಗೆ ಹತ್ತಿತ್ತು (ಶಾಂತಿ. ೫೫). ೪. ಆಸೆ; ಬಯಕೆ; ಇಚ್ಛೆ: ಇಂತಪ್ಪ ಸಿರಿಯುನಾಂ ಪಡೆದೊಸೆದು ಸತ್ಪಾತ್ರಸಂತತಿಗೆ ದಾನಮಂ ಕೊಡುವೆನೆಂದೆಂಬ ಹುರುಡಂತರಂಗದೊಳು ಸಂಜನಿಯಿಸಲ್ (ಪಮ್ಮಾಳಿ. ೧೧-೭). ೫. ಉಪಲವಿಕೆ: ಉತ್ಸಾಹ: ಎನ್ನನ್ನು ಮನ್ನಿಸುವ ದೊರೆಯಿಲ್ಲ ಹರಣವಲ್ಲಿ ಹುರುಡಿಲ್ಲ ಕರಣದಲ್ಲಿ ದೃಢವಿಲ್ಲ (ಶರಕ. ೨೯).

ಹುರುಡು ಮಾಡು = ೧. ಸ್ಪರ್ಧಿಸು: ಪೈಪೋಟಿ ಮಾಡು: ಸ್ವಯಂವರಮಂದಿರದೊಳಗೆ . . . ಒಬ್ಬರೊಡನೆ ಒಬ್ಬರು ಹುರುಡು ಮಾಡುತ್ತಾ ಎಲ್ಲ ರಾಜರೂ ಕುಳಿತಿದ್ದರು (ದಕ್ಷಾ. ೩೦); ಇಬ್ಬಣದವರೂ . . . ಹುರುಡು ಮಾಡುತ್ತಿರುವುದೂ ಈ ಕಾಲದ ವಿಶೇಷ ಲಕ್ಷಣ (ಬಿಕಪು. ೪. ಪೊಂಬಳಿಕೆ ಪಾಠ). ೨. ಉತ್ಸಾಹಗೊಳಿಸು; ಹುರಿದುಂಬಿಸು: ಚುರುಕುಗೊಳಿಸು; ಪ್ರಚೋದಿಸು: ಯುಧಿಷ್ಠಿರನು . . . ತನ್ನ ಸೈನಿಕರನ್ನು ಕರೆದು ಭೀಷ್ಮನನ್ನು ಸುತ್ತ ಮುತ್ತಿಕೊಂಡು ಸಂಹರಿಸುವುದಕ್ಕಾಗಿ ಹುರುಡು ಮಾಡಿದನು (ಕೃಷ್ಣಾರ. ೦೩೩).

[ದೇ. ॥ ಕೊತ. ಪುರ್ಡ್; ತೆಲು. ಪುರುಡು ]

**ಪುರುಡು₂** (ನಾ). ೧. ಮಗುವಿನ ಜನನಸಂಬಂಧವಾದ ಮೈಲಿಗೆ: ಹುಟ್ಟುಸೂತಕ; ಜಾತಾಶೌಚ; ವೃದ್ಧಿ: ದೇಯಿಯು . . . ಅವಳಿ ಜವಳಿ ಗಂಡುಮಕ್ಕಳನ್ನು ಹೆತ್ತಳು. ಪುರುಡಿನ ದಿವಸಗಳು ಕಳೆದ ನಂತರ ಮಕ್ಕಳಿಗೆ ನಾಮಕರಣವಾಯಿತು (ಕೋಟಿಚ. ೩). ೨. ಮರಣಕ್ಕೆ ಸಂಬಂಧಪಟ್ಟ ಮೈಲಿಗೆ; ಮೃತಾಶೌಚ; ಸೂತಕ: ಹತ್ತುದಿವಸದವರೆಗೆ ಪುರುಡು. ಹತ್ತನೇ ದಿವಸ ಶುದ್ಧಕರ್ಮಾಂತರಗಳು (ಕೆಂಗಾಕ್ಕ. ೨೦೩); ಬಿಗಿದುಡೆಯ ಬಿಡಳದಕೊ ಹುಟ್ಟು ಸಾವುಗಳಿಂದ ಆಗಳು ಪುರುಡಾಗಿ

ನೆಲೆಪೆಣ್ಣ ಮಾಪು (ಕಾಂಊಂ. ೪೬ ೩೬).

[ದೇ. ॥ ತಮಿ. ಪುರುಟು ; ತೆಲು. ಪುರುಡು]

**ಪುರುಡುಗೆಯ್** (ಕ್ರಿ). ಅಸೂಯೆಗೊಳ್ಳು ; ಮತ್ಸರಿಸು : ವಂಚಿಸದೆ ಪುಸಿಯದುಳುಪದೆ ಸಂಚಳಿಸದೆ ಪುರುಡುಗೆಯ್ಯದಾರದಿರದೆ ೯ರಂ ಬೆಚಿಸ ದಳಲಿಸದುಬ್ಬಗಿಸದುಂ ಚದುರಂ ಸಜ್ಜನಂಗಳಿ (ಪುರಾತ. ೮-೧೨).

[ಪುರುಡು₁ + ಕೆಯ್₁]

**ಪುರುಡುದೋಱು** (ಕ್ರಿ). ಹೊಟ್ಟೆಯುರಿಯನ್ನು ವ್ಯಕ್ತಪಡಿಸು : ಮಾತ್ಸರ್ಯವನ್ನು ತೋರಿಸು : ಇಂತು ಪಲ್ವಿಂದು ಗಜಜು ಗರ್ಜಿಸಿ ಪುರುಡುದೋಱು ಬಾಯ್ದೆ ಬಂದಂತೆ ಗಳಪಿ ಮಾನಸಿಥಿಯಾದ ಮಲ್ಲಣನಂ ಮಲ್ಲಣಿಯ ಮಾತೆ ಮನೆಯಿಂ ಪೊಱಮಡಿಸಿ (ವೃಷಭ. ೨೮-೨೫ ವ).

[ಪುರುಡು₁ + ತೋಱು]

**ಪುರುಡುಮಾತು** (ನಾ). ಸ್ಪರ್ಧೆಯ ಮಾತು : ಪೈಪೋಟಿಯ ನುಡಿ : ಸಾರ್ದೆಸಸುತ್ತುಂ ಪೋರ್ವ ಬಿಂಕಂ ಪದಯುಗದೊಳವಿಾ ವಿಶ್ವತಃಪಾದನೊಳ್ ಸಂಗಳಿಸಿಲ್ಪೀ ವಿಶ್ವತೋವಕ್ತ್ರನೊಳೆ ಪುರುಡುಮಾತೆನ್ನದೋ ಮದ್ವಿಮೋಹಂ (ಕಂಚ. ೪-೧೩೦). [ಪುರುಡು₁ + ಮಾತು₁]

**ಪುರುಪಕ್ಷ** (ನಾ). ದೊಡ್ಡ ರೆಕ್ಕೆಯುನ್ನುಳ್ಳುದು: ನವಿಲು : "ಚಿನ್ನಶ್ಚ ವಾಶಂ ಕಳಾಪಿ ಶಿಖಿ ಕೇಕಿ ಪುರುಪಕ್ಷಂ ಮಯೂರಂ ಶಿಖಂಡಿ ಹರಿಕಂಠಂ ಶಿಖಾಪಳಂ ಸವಿಲನಿಕ್ಕುಂ" (ಶಂಗರಾ. ೩೬-೨). [ಸಂ.]

**ಪುರುಪಾತ್ರ** (ನಾ). ಅಗಲವಾದ ಪಾತ್ರೆ : ಹರಿವಾಣ : "ಪುರುಪಾತ್ರ ಮನೆ ಪರಿಯಾಣಮಕ್ಕು" (ಶಂಗರಾ. ೬೩-೨೫). [ಸಂ.]

**ಪುರುಪೃಷ್ಠ** (ನಾ). ಹಾವು ; ಸರ್ಪ : "ಭುಜಂಗಮಂ ಪುರುಪೃಷ್ಠನಪಿ ಚಕ್ರಿ . . . ಎನಲು ಸರ್ಪಂಗೆ ನಾಮಂ" (ಶಂಗರಾ. ೦೦೮-೦). 'ದೀರ್ಘಪೃಷ್ಠ' ಪರಾ. [ಸಂ.]

**ಪುರುಲೆ**₁ 'ಪುಜಲೆ' ನೋ.

**ಪುರುಲೆ**₂ (ನಾ). ಒಂದು ಬಗೆಯ ಹುಲ್ಲು : 'ಅಂಟುಪುರುಲೆ' ಪರಾ. [?]

**ಪುರುವಳ್ಳಿ, ಪುರುಳಿ₁, ಹುರುವಲ್ಲಿ, ಹುರುವಳ್ಳಿ, ಹುರುಳಿ** (ನಾ). ಒಂದು ಬಗೆಯ ದ್ವಿದಳಧಾನ್ಯ ; ಕುಲತ್ಥ : ಜ್ವರದೆಚ್ಚರಿಗೆಯೊಳ್ ಕವುಡೆಯ ರಸಮಕ್ಕ ಲೊಕ್ಕಿಯನರಿಷ್ಟಫಲಂಗಳನಕ್ಕ ಪಂದಿಗಡ್ಡೆಯ ಪುರುವಳ್ಳಿಯೂಷ ಜಳಮಕ್ಕುಪಯೋಗಿಸಿದಂದು ಮಟ್ಟುಗಂ (ಕೋಣಿಕೂಚ. ೯-೨೦೩); ಮೋಟಿ ಪುರುವಳ್ಳಿ ಎಲೆಯುತ್ಪಾಟಸಂಗುಂ ನಸ್ಯಕರ್ಮದೊಳ್ ವಿಷಮಂ (ಖಪುದ. ೬-೯೯). **ಪುರುಳಿ**₁ : "ಶುಕ ಕುಳುತ್ಥಗಳೆಳಂ ಪುರುಳಿ" (ಕಬ್ಬಿಪಂ. ೦೦೪); ಪೆಸಱ್ ಕಡಲೆಯುದ್ದು ನೆಲ್ ಗೋದುವೆ ಜವೆ ತಕ್ಕವರೆ ತೊಗರಿ ಪುರುಳಿ ಯುಮಿಕ್ಕಲಿವಂ ಸವಿದು ಸವಿದು ನುಂಗಿದನಾಗಳ್ (ಶಾಬಸ್ಕ. ೦-೯-೨೦). **ಹುರುವಲ್ಲಿ** : .ಗೋಧಿ . . . ಉದ್ದು ತೊಗರಿ ಹುರುವಲ್ಲಿ ಮುಂತಾದ ಧಾನ್ಯಕ್ಕೆ (ಎಕ. ೪. ಹೇಲೂರು. ೬೩-೯೫; ೨೫೭೭). **ಹುರುವಳ್ಳಿ** : ಯವ-ಯವೆ, ಸರ್ಷಪ—ಸಾಸವೆ . . . ಕುಲತ್ಥ-ಹುರುವಳ್ಳಿ (ಕೃಷಿಷ್ಕಾ. ೪-೨೬); ಬಿತ್ತುಗೆ ಹ(ಪ)ಸಬು ಹಸ್ತ(ದಿ)ದೆ ಮತ್ತಂ ಸಲೆ ಪೂರ್ವಷಾಡ(ದ)ಲಸಂದೆಗಳಂ ಸತ್ಯ ಮಾನುರಾಧೆಯೊಳ್ ತಾಂ ಬಿತ್ತುಗೆ ಹುರುವಳ್ಳಿಯುಗಸೆಗಳ್ವಿನಿಯಕ್ಕುಂ (ಅಬ್ಬಿಕು. ೯-೪೭) : ಹುರುಳಿಯ ವಿಷಕ್ಕೆ—ಹುರುವಳ್ಳಿ[ಪಾಠಾಂ. ಹುರಿವಳಿ, ಹುರುಳಿ]ಯ ಸೊರ್ಕಿಂಗಂ ಹರೀತಕೀಯುಕ್ತಮೋಘನಾದಿಯುಮಂ ಮೇಣ್ ವರ ಹುಗು ವಿಳಂಗಮನಿರದರೆದೀಂಟಲ್ ಪಾಲೊಳುಮವಿಷಂ ತಾಂ ಧರೆಯೊಳ್ (ಚಿಕಿತ. ೨-೦೭೦). **ಹುರುಳಿ** : ಕರಿಬೇವು ಬಡಗುಸಂಡಗೆಯುಗು . . . ಹುರುಳಿ ಸಾಸುವೆ ಮೆಂತೆಯುದ ಚೂರ್ಣ ಹವ್ವಳ ಸಂಭಾರವಸ್ತುವಹವು (ಸೂಪಶಾ. ೪-೦); ಹುರುಳಿ ಗುಗ್ಗುರಿ ಮುಕ್ಕಿ ಮೇಲೆ ಮಜ್ಜಿಗೆ ಕುಡಿದು ಓರಿಯ ತೆಬ್ಬುಲಿಯಂತೆ ನಿದ್ರಿಪ ಮೋಡಿ (ಭರತೇಶ. ೨-೩೮-೯); ಕುದುರೆಗೆ ಹುರಿದ ಹುರುಳಿ (ಗಾದೆ).

**ಪುರುಷ** (ನಾ). ೧. ನರ ; ಮನುಷ್ಯ ; ಮಾನವ : "ಮನುಷ್ಯಃ, ಮಾನುಷಃ . . . ಪುರುಷಃ, ಪೂರುಷಃ, ಎಟ್—ಈ ೧೨ ಮಾನಸರ್" (ಕರ್ಣಾಟು. ೩೩–೦೭೬); ಪುರುಷಂ ಧನಮೆನಗುಂಟೆಂದಿರಲಾಗದು ದ್ರವ್ಯಮುಳ್ಳೊಡಂ ದ್ರವ್ಯಮನಾರ್ಜಿಪುದು (ಚಾರುಗು. ೦–೯೩). ೨. ಮನುಷ್ಯಜಾತಿ; ಮಾನವಕುಲ. ೩. ಗಂಡಸು : " ಮಾನವಂ . . . ಪುರುಷನಾ ಪಂಚಜನಮಾ ನೃ ಮನುಜಾ ಗಂಡುಗೂಸಕ್ಕು " (ಕುಂಗಾ. ೬೬–೦) ; ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ (ಬಸವರ. ೩. ೩೯–೦೯೭) ; ಪುರುಷರ್ ವಧುಗಳ್ಗೆ ವಧೂತ್ಕರಮಾ ಪುರುಷರ್ಗೆ ಸೋಲ್ವುದುಚಿತಮದು (ಗಿರಿ. ೬–೨೩). ೪. ಗಂಡ; ಪತಿ: ಸಂಸ್ಕಾರಿಸಲೀ ಮಾತೆಯರ್ಗೆ ವರವರ ಪುರುಷರಂ ಕುಡವೇಳ್ಕುಂ (ಹಂಪಾ. ೦೯–೮); ಅರಸನ ಕಂಡು ತನ್ನ ಪುರುಷನ ಮಚ್ಚಿತಡೆ ಮರನನೇಱೆ ಕೈ ಬಿಟ್ಟಂತಾದೆನಯ್ಯ (ಬಸ. ೯೨೩) ; ಅರಸಿನವನೆ ಏಂದು ಹೊಂದೊಡಿಗೆಯನೆ ತೊಟ್ಟು ದೇವಾಂಗವನ್ನುಟ್ಟು ಪುರುಷ ಬಾರಾ (ಜನಪದ. ೩. ೦೯೦–೬೨೦); ಪುರುಷನುಳ್ಳವಳು ನಾ ಪುರುಷರು ಕೇಳ್ಯಾರು ಗುಱುತು ಕಂಡರೆ ಕೊಲೆಯ ಕೊಂದ್ಯಾರು (ಜನಪ. ೩–೬೯.೨). ೫. ಒಬ್ಬ ಮನುಷ್ಯನ ಎತ್ತರದಷ್ಟು ಪ್ರಮಾಣ ; ಸುಮಾರು ಆರು ಅಡಿ ; ಆಳುದ್ದ : ಕಂಟಕಕುಜವನದೊಳ್ ನಿಷ್ಕಂಟಕಕುಜಮಾಗೆ ಪೋಗೆ ವಿಕಂಟಕವನದೊಳ್ ಕಂಟಕಮಹೀಜಮಾರ್ದೆಯಿಂ ಮುಂಬರಿದು ಪಡುವಲಯ್ದು ಪುರುಷದೊಳುದಕಂ (ಲೋಕೋಪ. ೩–೦೬); ಅಕ್ಕಿಯ ಪಡುವಲ್ ಮೂಗಯ್ಯುತ್ತರಲ್ ನೀನಗುಟ್ಟಿಸಿರದೆ ಪುರುಷದೆ ನೀರುಂ ಮಾತ್ತೊಂದು ಪುರುಷದೊಳ್ ಭುಜಗೋತ್ತಮನಂತಪ್ಪ ಕರಿಯ-ಕಲ್ ಪಡುವ ಜಲಂ (ಅಭಿನ. ೦೦-೯) : ೧೦ "ಪುರುಷ"ಗಳ ಅಳತೆಯುಳ್ಳ ಹಗ್ಗದಿಂದ ೨೦ ಚದರ ಪುರುಷಗಳೂ (ಚಾವುಂಡದ ಸಲಿ): ೨೦ ಪುರುಷಗಳ ಅಳತೆಯುಳ್ಳ ಹಗ್ಗದಿಂದ ೭೦ ಚದರ ಪುರುಷಗಳೂ ಉಂಟಾಗುತ್ತವೆ (ಗಣಿ. ೦೯೯). 'ಪುರುಷಪ್ರಮಾಣ' ಪರಾ. ೬. ಪರಾಕ್ರಮಿ; ಗಂಡುಗಲಿ: ಪುರುಷರ ಪುರುಷನಲ್ಲಾ ಭೀಷ್ಮ ಕನ್ನಯ ಪರಮಶಾಕ್ತಕೋದಯವಲಾ ನೀನೊಬ್ಬನು (ಕುಮಾ.ಭಾ. ೩–೬೩). ೭. ಗಂಡುತನ ; ಪೌರುಷ ; ಪುರುಷಶಕ್ತಿ : ಪುರುಷಮಂ ಸಮಕಟ್ಟುವವಪ್ಪೊಡೆ ಪುಷ್ಯಲೆಯಲಣ್ಮುವರಿಲ್ಲ (ಹಂಪಾ. ೬–೩೭ ೫). ೮. ಆತ್ಮ; ಜೀವಾತ್ಮ: "ಆ ಪಸ್ತು ಸಂಸಾರಿ ಚೇತನಂ ಕ್ಷೇತ್ರಜ್ಞ ಪುರುಷನೆಂಬಾಕ್ಷರಸಕ್ಕುಂ" (ಕುಂಗಾ. ೯–೨೯); ಸೂಜಿಕಲ್ಲಿನ ಸನ್ನಿಧಿಯಲೀ ಸೂಜಿ ಚಲಿಸಿದಂತೆ ಪುರುಷನ ತೇಜದಿಂದಲಿ ಪ್ರಕೃತಿ ಚರಿಸುತ್ತಿಹುದು (ಜ್ಞಾನಸಿಂ. ೨೭–೨೨). ೯. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ಪ್ರತಿಯೊಬ್ಬ: ಪುರುಷಮೂರ್ತಿವರೊಳೊರ್ಬನೆಂಬರ ಸುರಪ್ರಧ್ವಂಸಿಯೊಂಬರ್ಗದುರ್ಗರುಮೆಂಬರ್ಪರ್ಗೆ ತೇರನೆಸಪಂ(ಗಣಾಧ್ಯ. ೩–೯೩). ೧೦. ಪರಮಾತ್ಮ: ಅನಂತನಾದುದರಿಂದಲೂ ಪೂರ್ಣನಾದುದರಿಂದಲೂ ಪುರುಷನೆಂದು ಪರಮಾತ್ಮನಿಗೆ ಹೆಸರು (ಶ.ರಾಶಿ. ೬–೩ ಅರ್ಥ). 'ಪುರುಷಸೂಕ್ತ' ಪರಾ. ೧೧. ಸುರಗಿ ಮರ; ಪುನ್ನಾಗವೃಕ್ಷ: "ಪುನ್ನಾಗಃ, ಪುರುಷಃ, ತುಂಗಃ, ಕೇಸರಃ, ದೇವವಲ್ಲಭಃ—೫ ಸುರಗೀಮರ, ಸುರಹೊನ್ನೆ ಮರಕ್ಕೂ ಹೆಸರುಗಳು" (ಶಬ್ದಕೋ. ೦೦೬). ೧೨. ಗಂಡಸಿನ ಜನನಾಂಗ: 'ಪುರುಷವ್ಯಾಧಿ' ಪರಾ. ೧೩. [ಸಾಂಖ್ಯ] ಇಪ್ಪತ್ತೈದು ತತ್ತ್ವಗಳಲ್ಲಿ ಒಂದು: ಹೋದುತಿಹರಾ ಪುರುಷತತ್ತ್ವದಿ ನಿಂದು ತೋರುತಲಿರ್ಪ ಭುವನವ . . . ಪಾಶುಪತರಾದಿಯರು (ಗಣಾ. ೬–೩೩); ಪಂಚವಿಂಶತಿತತ್ತ್ವಗಳು—೧ ಪ್ರಧಾನ, ೧ ಮಹತ್ತತ್ತ್ವ, ೧ ಅಹಂಕಾರತತ್ತ್ವ, ೫ ಭೂತತನ್ಮಾತ್ರಗಳು, ೫ ಮಹಾಭೂತಗಳು, ೧೧ ಇಂದ್ರಿಯಗಳು, ೧ ಪುರುಷ (ಅಧ್ಯಾತ್ಮ. ೩–೦೩೦ ಅರ್ಥ). ೧೪. [ವ್ಯಾಕ] ಪುರುಷವಾಚಕ ಲಿಂಗ ; ಪುಲ್ಲಿಂಗ: ಪುರುಷ ಪರಮಾದೊಡತ್ವಂ ದೊರೆಕೊಳ್ಗುಂ (ಶಬ್ದ. ೦೦೦). ೧೫. ಸರ್ವನಾಮಗಳಲ್ಲಿ ಒಂದು ಪ್ರಕಾರ ; ಪುರುಷವಾಚಕ ಸರ್ವನಾಮ : ಇದು ಉತ್ತಮ, ಮಧ್ಯಮ ಮತ್ತು ಪ್ರಥಮ ಎಂದು ಮೂರು ಬಗೆ. ನಾನು, ನಾವು—ಇವೆರಡು ಉತ್ತಮಪುರುಷ. ನೀನು, ನೀವು—ಇವೆರಡು ಮಧ್ಯಮಪುರುಷ. ಉಳಿದುವೆಲ್ಲ ಪ್ರಥಮಪುರುಷ : ಅವಱೊಳಗೆ ನಪುಂಸಕಲಿಂಗವಿಷಯಮಾದಲ್ಲಿ ಮೊದಲ ಪುರುಷಂಗಾದುಮೆಂಬುವೆ ದಲ್ ಸಮನಿಸುಗುಂ (ಶಬ್ದಾನು. ೩೯೦) ; ಅಳಿ ತಾಂ ನೀನಾನೆಂಬರ್ಥಗಳೆಂಬುಗಳ್ ಪ್ರಥಮ ಮಧ್ಯಮೋತ್ತಮ ಪುರುಷಂಗಳ್ (ಶಬ್ದ.೨೨೯). 'ಪುರುಷತ್ರಯ' ಪರಾ. [ಸಂ.]

**ಪುರುಷಕಾರ** (ನಾ). ೧. ಮನುಷ್ಯಪ್ರಯತ್ನ : ಪುರುಷನ ಸಾಹಸ : ಪುರುಷಕಾರದ ಪೆಂಪಂ ಬೀರಿ ತರಿಸಿ ಮಹೀಶನನೆತ್ತಪ್ಪೊಡಂ (ಶಾಂತಿ. ೬–೩೯) ; ದೈವವಿಸೂತ್ರಮಂ ಪುರುಷಕಾರಂ ಮೀಱಿ ನೇನಕ್ಕುಮೇ (ಜಗ. ೩–೦೯) ; ಪುರುಷಕಾರಮು ಬರಿಗೆ ಬಾಳುಸಿರ್ (ಶ್ರೀರಾಮ. ೬೨–೦೦೯). ೨. ಪೌರುಷ ; ಪರಾಕ್ರಮ : ನಿಮ್ಮೊಳಗೆ ನೀಂ ಮಾಳಿಯಲ್ವೇಡ ನಿಮ್ಮ ಪುರುಷಕಾರಮನೆ ಬಗೆದು ನೆಗಳ್ವುದು (ಹಂಪಾ. ೦೨–೯೬ ೫); ಪುರುಷಾಕಾರಮದಿಲ್ಲೈ ಹರಿ ನಿನ್ನೊಳ್ ಪುರುಷಕಾರಮಂ ಕುಱಿಂ (ಗದಾಯು. ೬.೩೦) ; ಪುರುಷಕಾರದ ತಾಯ್ಗರು ಮೇಟಿನಾಗರಂ . . . ನೆಗಳ್ದ ಜಕ್ಕಣನೆಂದಡದಾರೊ ಪೋಲ್ವವರು (ಶಾ. IV, ೦೦-೩೫; 1121). [ಸಂ.]

**ಪುರುಷಗುಣ** (ನಾ). ಗಂಡುತನ ; ಗಂಡಸಿಗೆ ಯೋಗ್ಯವಾದ ಗುಣ ; ಪೌರುಷ : ಅಬಲೆಯರಳ್ಕಿರ್ದಿಗಳ್ ಪುರುಷಗುಣಮನಱಿದೆಱಗುಗುವೇ (ಆದಿಪು. ೬೨–೦೭) ; ಪುಟ್ಟಿದುದು ಪುಗನೂರೊಳಪುಟ್ಟಿದುದಪರಿಮಿತ ಪುರುಷಗುಣಗಣಮರ್ದಿಯೊಳ್ ಪುಟ್ಟಿದುದು ಜಿನಮತಂ ಗುಡಿಗಟ್ಟಿದುದಿಳೆ ಪುಟ್ಟಿ ನಾಗಮಯ್ಯನಪಯ್ಯಂ (ಶಾಂತಿಪು. ೦–೯೩) ; ಪುರುಷಗುಣಾಭರಣರ್ ಕುಡಲಾಪ್ತರ್ನಧಿಕವ × × × ಯೆನ್ನು ಪೊಗಳ್ದು ಧರೆ ಕಾಳಿಗನೆಸೆವನಾಪ್ತರ್ನೊಳ್ಪ ಗುಣಮಂ (ಶಾ. XX, ೨೯–೦೯; 1034). [ಸಂ.]

**ಪುರುಷತನ** (ನಾ). ೧. ಗಂಡುತನ ; ಗಂಡಸುತನ ; ಪುರುಷತ್ವ : ಕೆಟ್ಟುದು ಪುರುಷತನವಿಂದ್ರಂಗಹಲ್ಯಾದೇವಿ ಶಿಲೆಯಾಗಿ ಧರಿಸಿದಳು ನಿಜತನುವನು (ಕೊರಟಾ. ೦–೦೨–೦೮). ೨. ಗಂಡಸಿನ ರೂಪ ; ಪುರುಷಾಕೃತಿ: ಹರನ ಹಣೆಗಣ್ಣಿನ ಮಹಾನಲನುರಿಯ ಹೊಯ್ಲಲಿ ಸಾಯಲಾಱದೆ ಪುರುಷತನವನು ಬಿಸುಟು ಮಂಡೋದರಿಯ ರೂಪತವ ಧರಿಸಿದನೂ ಕಂದರ್ಪನೆನೆ . . . ಮೆಱೆದಿರ್ದಳಾ ಕಾಂತೆ (ಕೊರಟಾ. ೫–೨–೬೩). ೩. ಮನುಷ್ಯತ್ವ : ಸಜ್ಜನಿಕೆ : ಪರಮಮಾಹೇಶ್ವರರು ನೀವೆಂದಾ ನಮಿಸೆ ಲೇಸಾಗಲೀ ಎಂದು ಹರುಷಲೊಲ್ಲದೆ ಸುಮ್ಮನಿಹುದಿದು ಪುರುಷತನವೇ ಗುಣವೆ ಪೇಪೇ (ಬಸವ. ೯೩–೦೦). [ಪುರುಷ + — ತನ]

**ಪುರುಷತ್ರಯ** (ನಾ). ೧. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳು : ದೇವ ಪುರುಷತ್ರಯಾಕಾರಪ್ರಧಾನ ಜಯ (ಜಗ. ೩–೦೦೩ ಕಗ). ೨. ಉತ್ತಮ, ಮಧ್ಯಮ ಮತ್ತು ಅಧಮ ಎಂಬ ಮೂರು ವರ್ಗಗಳ ಮನುಷ್ಯರು: ಕ್ಷಿತಿಯೊಳುತ್ತಮ ಮಧ್ಯಮಾಧಮಗತಿಯ ಪುರುಷತ್ರಯಪರಿವರಿಂಗಿತಪನವರಾಯತವನಱಿವ ಭೂಪ (ಕುಮಾರು. ೩–೨೭). ೩. [ವ್ಯಾಕ] ಉತ್ತಮ, ಮಧ್ಯಮ ಮತ್ತು ಪ್ರಥಮ ಎಂಬ ಮೂರು ಬಗೆಯ ಪುರುಷವಾಚಕ ಸರ್ವನಾಮ : ಅಮರಯಿರೆನೆವುಗಳಕ್ಕುಂ . . . ಆಖ್ಯಾತವರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ (ಶಬ್ದ. ೨೦೭). [ಸಂ.]

**ಪುರುಷತ್ವ** (ನಾ). ೧. ಗಂಡುತನ ; ಪುಂಭಾವ : ಭ್ರಮರಕೀಟನ್ಯಾಯ

ಥಾವದಿ ರಮಣಿಯೊಬ್ಬಳು ತನ್ನನಿಯನು ಕ್ರಮದಿ ನೆನೆಯಲು ನೆನೆಯಲಾ ಪುರುಷತ್ವವಳಪಟ್ಟು ಸಮರ್ದ ರತಿಕೇಳೀವಿನೋದದಿನಮರ್ದದಕ್ಕನ್ನಂತ ರಾಯತ್ತಮಪ್ಪಹುದೊ ತನಗೆನುತ . . . ಇನಿಯನಂ ತಾ ನೆನೆಯಲುಂಜುತ ನೆನೆವುತುಂಜುತಲಿನಿಮಳಿದ್ದಳು (ಬಸವ. ೩೩-೨೩). ೨. ಶಕ್ತಿ ; ಪೌರುಷ : ಹಗಡೆಯ ಹತ್ತಿರ ಹೋರಾಡುವುದಕ್ಕೆ ನಿಂತ ಮೇಲೆ ನಾವು ಗೆಲ್ಲಬೇಕು. ಇಲ್ಲವಾದರೆ ಪುರುಷತ್ವಕ್ಕೆ ಏನು ಬಂತು ಗೌರವ ? (ರಣಹ. ೨೦೪). [ಸಂ.]

**ಪುರುಷದೋಷ** (ನಾ). ಮನುಷ್ಯನಿಂದ ಆಗುವ ತಪ್ಪು ; ಮನುಷ್ಯನ ಕೈವಾಡದಿಂದ ಉಂಟಾಗುವ ದೋಷ : ವೇದವು ಅನಾದಿಕಾಲದಿಂದ ಏಕರೀತಿಯಾಗಿಯೇ ಇರುವುದರಿಂದ ಪುರುಷಸಂಬಂಧವಿಲ್ಲ, ಪುರುಷದೋಷವೂ ಇಲ್ಲ (ಹಿಂದೂಸಾ. ೦೩೭). [ಸಂ.]

**ಪುರುಷದ್ವೇಷಿ** (ನಾ). ಗಂಡಸರನ್ನು ಕಂಡರಾಗದವಳು ; ಗಂಡಸರನ್ನು ದ್ವೇಷಿಸುವವಳು : ಬಾಲ್ಯದಲ್ಲಿ ನಡೆದ ಘಟನೆಗಳ ಪರಿಣಾಮವಾಗಿ ಅವಳು ಪುರುಷದ್ವೇಷಿಯಾಗಿಯೇ ಬೆಳೆದಳು (ರೂಢಿ). 'ಸ್ತ್ರೀದ್ವೇಷಿ' ಪರಾ. [ <ಸಂ. ಪುರುಷದ್ವೇಷಿನ್ ]

**ಪುರುಷದ್ವೇಷಿಣಿ** (ನಾ). = ಪುರುಷದ್ವೇಷಿ : ಸಂಧ್ಯಾನಗರಪುರಾಧಿಪತಿ ಸಿಂಹೋದರನೆಂಬೊನಾತನ ಮಗಳ್ ಓಡಿಜಿಯೆಂಬೊಂಬನಾಂ ಪುರುಷ ದ್ವೇಷಿಣಿಯೆಂ (ಜಿಸಂ ೦೦-೬ ವ). [ ಸಂ. ಪುರುಷದ್ವೇಷಿಣೀ ]

**ಪುರುಷಧರ್ಮ** (ನಾ). ೧. ಮನುಷ್ಯಧರ್ಮ : ಆಕೆಯ ಅಂತಸ್ತಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲ್ಲಿ ಕೈಬಿಡುವುದೆ ? ಅದು ಪುರುಷಧರ್ಮವಲ್ಲ (ಶಕಾ. II. ೬೭೦). ೨. ಗಂಡನಾದವನು ಪಾಲಿಸಬೇಕಾದ ವ್ರತ ; ಪತಿಧರ್ಮ : ಪರಪರಿಗ್ರಹಿತೆಗಳಿವರ ತರೆ ಪುರುಷಂ ಪುರುಷಧರ್ಮಮಾರ್ಗಂ ಪಟಿಗಂ ಧರೆ ದುರ್ಗತಿ ಸಮುನಿಸುಗುಂ (ಹಂಪಾಷು. ೬-೦೬೨). [ಸಂ.]

**ಪುರುಷನಾಡಿ** (ನಾ). ದೇಹದ ಬಲಭಾಗದಲ್ಲಿರುವ ನಾಡಿ : ಎಡಭಾಗದ ನಾಡಿಗಳು ಸ್ತ್ರೀನಾಡಿಗಳೆಂತಲೂ, ಬಲಭಾಗದ ನಾಡಿಗಳಿಗೆ ಪುರುಷನಾಡಿಗಳೆಂತಲೂ ಹೆಸರು (ಹಸಾರ. ೪-೩ ತಾತ್ಪರ್ಯ). [ಸಂ.]

**ಪುರುಷನಿಧಿ** (ನಾ). ಪರಾಕ್ರಮದ ನೆಲೆ : ಪೌರುಷದ ಆಕರ : ಪುರುಷನಿಧಿಯೆನಿಪನ್ನಂ ಧರೆ ನಿಸ್ಸಿನವಿಾ ಸ್ವಯಂಭುಸೋಮೇಶ್ವರದೇವರ ಮುನ್ದೆ ಭಕ್ತಿಯಿಂದವಚ್ಚರಿಯಾಗಿರೆ ಸೂಳೆಕೇರಿಯಂ ಮಾಡಿಸಿದ (ಎಶಿಇ. XX. ೬೪ ೨೬ ; 1112). [ಸಂ.]

**ಪುರುಷನಿರ್ವಾಣ** (ನಾ). ಗಂಡನ ಸಾವು ; ಪತಿಯ ಮರಣ : ಮುನ್ನಿನ ಪುರುಷವ್ರತಿಯರು ಒಲಿಸಿದ ಆಹುತವ ಪರಿಪರಿಯಲಿ ಬಣ್ಣಿಸಲು ಬಹುದಲ್ಲದೆ ಪುರುಷನಿರ್ವಾಣಾಕ್ಕುರಿವಗ್ನಿಯ ಬಂದು ಹೊಕ್ಕು ತೋಜಲು ದೂರದು (ಶಕವ. ೬೭೬). [ಸಂ.]

**ಪುರುಷಪಕ್ಷಿಗ್ರಹ** (ನಾ). ಬಾಲಗ್ರಹದಲ್ಲಿಯ ನಾಲ್ಕು ಬಗೆಯ ಪಕ್ಷಿಗ್ರಹದೋಷಗಳಲ್ಲಿ ಒಂದು : ಕಣ್ಣುಗಳು ಗುಳಿ ಬೀಳುವವು. ಮೈ ಕಾಜಾಡುವದು. ತಾಪ ಉಂಟಾಗಿಹದು. ಹಸುರಾಗಿ ಉಚ್ಚುವದು. ಬಾಯಾಡಿಕೆ ಉಂಟಾಗಿಹುದು. ನಾಲಿಗೆ ನೀಡಿಕೊಂಬುದು . . . ಇದು ಪುರುಷಪಕ್ಷಿಗ್ರಹಶಂಕೆ ಎಂದೆನ್ಪುದು (ವೈಕೃಸಾ. II. ೦೩). 'ಪಕ್ಷಿಗ್ರಹ' ಪರಾ. [ಸಂ.]

**ಪುರುಷಪ್ರಮಾಣ** (ನಾ). ಒಂದಾಳು ಎತ್ತರದಷ್ಟು ಅಳತೆ ; ಸುಮಾರು ಆರುಅಡಿ: ಪುರುಷಪ್ರಮಾಣಮೆಂತೆನೆ ಪುರುಷಂ ತನ್ನೆರಡು ಕೆಯ್ಯು ಮೇಲು ಕೈತ್ತಲ್ ಪುರುಷಪ್ರಮಾಣಮೆನಿಸುಗು (ವ್ಯವಹಾ. ಅನುಬಂಧ. ೯) ; ಮಂದಿರದ ಮಧ್ಯದಲ್ಲಿ ಪುರುಷಪ್ರಮಾಣಕ್ಕಿಂತಲೂ ದೊಡ್ಡದಾದೊಂದು ಕರಾಳ ಕಾಳಿಕಾಮೂರ್ತಿಯು ಪ್ರತಿಷ್ಠಿತವಾಗಿದ್ದಿತು (ಕಪಾಲಕುಂ. ೩೦). [ಸಂ.]

**ಪುರುಷಪ್ರಯತ್ನ** (ನಾ). ಮನುಷ್ಯನ ಯತ್ನ.–ಸಾಹಸ ; ಪೌರುಷ : ಶತ್ರುಜಯಕ್ಕೆ ಪುರುಷಪ್ರಯತ್ನವೇ ಕಾರಣವಾಗಿರುವುದು (ಕೈಪಾಸ. ೨೭); ಪುರುಷಪ್ರಯತ್ನಮಂ ಬರ್ದುಕುವಾಸೆಯ ಕೂಡೆ ನೀಗಿ, ಕೈಮುಗಿವೆನೊ ಪ್ಪೋಮಕ್ಕೆ ದೇವರಂ ಬೇಡಿ (ಶ್ರೀರಾಮಪ. ೭೭-೬೨೩). [ಸಂ.]

**ಪುರುಷಬ್ರತ** (ನಾ). ೧. ಬ್ರಹ್ಮಚರ್ಯವ್ರತ : ರಾವಣನು ಕೊಂದು ಜಯಶ್ರೀವಧುವಂ ತಾಳ್ದಿ ಮುಯ್ವಿನೊಳ್ ವರಸೀತಾದೇವಿತೆಯುಂ .ತರ್ಪನ್ನೆಗಮೋವದೆ ಪುರುಷಬ್ರತೋಚಿತಂ ವಿರರಸಂ (ಕರಾಂ. ೩-೦೪೦). ೨. ಪತಿವ್ರತೆಯ ಆಚಾರ ; ಪತಿವ್ರತಾಧರ್ಮ (?): ಆತನ ಸತಿ ದೇವಿಯಕ್ಕಂ ಪುರುಷಬ್ರತಮಂ ಕೈಕೊಂಡು ಮಂಡಲಿ ಸಾಸಿರದ ಎಡತೊರೆನಾಡ ಉತ್ತರದ ಗ್ರಾಮದಲು ಸುರಲೋಕಪ್ರಾಪ್ತಳಾದಳ್ (ಎಕ. VII. ಶಿಕಾರಿ. ೩೨-೮ ; 1134 ?). 'ಪುರುಷವ್ರತಿ' ಪರಾ. [ <ಸಂ. ಪುರುಷವ್ರತ]

**ಪುರುಷಭಾಷೆ** (ನಾ). ಪೌರುಷದ ವಾಣಿ; ಪುರುಷಪ್ರಯತ್ನದ ಮಾತು: ಸತ್ಯದನ್ನವನೆ ಉಂಡು ಬಾಳಿ ಎನ್ನುವುದು ಪುರುಷಭಾಷೆ (ಸೂರ್ಯಕಾ. ೦೬-೦೪). [ಸಂ. ಪುರುಷಭಾಷಾ]

**ಪುರುಷಭಿಕ್ಷ** (ನಾ) ಗಂಡನನ್ನು ಉಳಿಸಿ ಕೊಡುವುದು ; ಪತಿಭಿಕ್ಷೆ : ಪುರುಷಕಾತರ ಪೇಮ ಚಿಂತಿಸಿ ತರಿಸಿ ಮಹೀಶನನೆಂತಪ್ಪೊಡದೆಯೆನಗೆ ಪುರುಷಭಿಕ್ಷವನಿಕ್ಕಿಂ (ಶಂಕಸಾ. ೬-೩೪); ವನದೇವಿಯರಿರಾ ನೆರೆದೆಲ್ಲರು ಮೆನಗೆ ಪುರುಷಭಿಕ್ಷಮನಿಕ್ಕಿಂ (ಕಾಶಂಪು. ೬೨೩); ಮುಳಿಸಂ ಪಿಂದಿಕ್ಕಿಯುಮಿಾ ಫಣಿಯಂ ಕೊಂದಿಕ್ಕದಿರಿಕ್ಕೆಮಗೆ ಪುರುಷಭಿಕ್ಷಮಂ (ಕನಪ. ೩-೦೦೦). [ಸಂ. ಪುರುಷಭಿಕ್ಷಾ]

**ಪುರುಷಭೈಕ್ಷ** (ನಾ). = ಪುರುಷಭಿಕ್ಷ : ಎನಗಬ್ಬಿಕೆಗಂ ಪುರುಷಭೈಕ್ಷಮನಿಕ್ಕು (ಅರ್ಜನೀ. ೦-೯೦). [ಸಂ.]

**ಪುರುಷಭೈಕ್ಷೆ** (ನಾ). = ಪುರುಷಭಿಕ್ಷ: ಪ್ರಿಯಮಿತ್ರೆಯಕಳಂಕಚಾರಸಾರನಪ್ಪ ಮೇಘರಥನರೇಂದ್ರಂಗೆ . . . ನಿಮ್ಮಡಿಗಂ ಕೈಯನೊಡ್ಡಿ ಪುರುಷ ಭೈಕ್ಷೆಯೆಂ ಬೇಡಿ ದೀಕ್ಷೆಯುಮಂ ನಿಸರ್ಗಸ್ನೇಹಿತೆಯಾದ ಕಾರಣಮುಮನಿದ ನಱಿಯೆ ಬೆಸಸುವುದೆನೆ (ಶಾಂತಿಪು. ೯-೬೩ ವ). [ಸಂ. ಪುರುಷಭೈಕ್ಷ]

**ಪುರುಷಮಿಗ** (ನಾ). = ಪುರುಷಾಮೃಗ : ಕಳಕಳಿಸಿ ನಗುತೆ ಕುಕ್ಕಿಲಿಲೆಯೊಂದುಯಿರದೆ ಕೂಗುತ್ತಡವಿಚರಿಯರು ಪುರುಷ ಮಿಗಮರಿಯಟ್ಟಿ ಸರಳ್ಗರೆವ ಮಾಳ್ಕೆಯಿಂ ತರುಣಿಯರು ತವಕದಿಂ ನೀರ್ಗರೆವುತೆ ಬರುತಿರಲು (ಪಪಷೋ. ೦೦-೬೨). [ <ಸಂ. ಪುರುಷಮೃಗ]

**ಪುರುಷಮೃಗ** (ನಾ). ೧. ಒಂದು ಬಗೆಯ ಜಿಂಕೆ. ೨. ಗಂಡು ಜಿಂಕೆ. ೩. = ಪುರುಷಾಮೃಗ : ಪುರುಷಮೃಗಂಗಳಲ್ಲಮಿವರಪ್ಪೊಡೆ ದಿವ್ಯ ಮುನೀಂದ್ರರೆಚ್ಚೊಡರಿ ಶರವಿದು ತಾಗಲಣ್ಮದಿವರಂ (ಅರ್ಜನೀ. ೩-೬೬); ನರಿ ಶಶಕಂ ವೃಕಂ . . . ಸೈರಿಭಂ ಪುರುಷಮೃಗಂ ಗಜ ಶರಭ ಸಿಂಹದಿ ನೊಪ್ಪುವುದಲ್ಲಿ ಕಾನನಂ (ಮಲ್ಲಿಕಾ. ೩-೦೩೯); ಅಲ್ಲಿ ಕಸ್ತೂರಿಮೃಗ ಚಮರೀಮೃಗ ಪುರುಷಮೃಗ ಸುವರ್ಣಮೃಗ . . . ಸಿದ್ಧಿಮೃಗಾದಿ ದೇವಾರ್ಹ ರಾಜಾರ್ಹ ಋಷ್ಯಾರ್ಹಯಸಂಭಧುಪವಿತ್ರಮೃಗಜಾತಿಗಳುಂ (ವಿವೇಕ. ೨೦೨). [ಸಂ.]

**ಪುರುಷಮೇಧ** (ನಾ). ಮನುಷ್ಯನನ್ನು ಬಲಿ ಕೊಡುವ ಯಜ್ಞ ; ನರಬಲಿಯನ್ನು ಕೊಡುವ ಯಾಗ. [ಸಂ.]

**ಪುರುಷಯುಕ್ತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ; ಸ್ತ್ರೀಯು ಪುಂಭಾವದಿಂದ ರಮಿಸುವಿಕೆ ; ಪುರುಷಾಯಿತ : ನಿದ್ದೆಗೈವಳು ಕಾನು ಅವನ ನಿದ್ರೆಗೈಯುಳೀಸಳು. ಕಾಪನಂಗೈವಳು ರೇತಃಪತನಮಂ ನಿಲ್ಲಿಸಲರಿಯದೆ ಕೋಪಮಂ ಸೈರಿಸಲಾರದೆ ಅಂತರಮಂ ಮಾಡಿದರ್ದೊನಾದೊಡೆ ಅವನ ಮೇಲೆ ರಮಿಸುವಳು. ಇದು

ಪುರುಷಯುಕ್ತಂ (ಕಾಶಿಖಾ. ೩೩೮). [ಸಂ.]

**ಪುರುಷಯುಗಕರಣ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ : ಓರ್ವಂ ಮೆಲ್ಲನೆ ಮಲಗಿರೆ ಆತನ ಮೇಲೇರಿ ರವಿಸುತ ನಿಂದಿರ್ದ ಮತ್ತೊರ್ವ ಪುರುಷನ ಲಿಂಗಮಂ ತನ್ನ ಬಾಯೊಳಗಿಕ್ಕಿ ಮುಖಸುರತಗೈಯುತ್ತಾಯಿರೆ ಪುರುಷಯುಗಕರಣಂ (ಕಾಮುಕಾ. ೨೩೬). [ಸಂ.]

**ಪುರುಷರತುನ** (ನಾ). = ಪುರುಷರತ್ನ ೧ : ಪುರುಷರತುನಂ ಪುರಾತನ ಚರಿತಂ ಜಿನಚರಣಕಮಲಭೃಂಗಂ ಸತ್ಯಾಭರಣಂ ದಯಾಂಬುನಿಧಿ (ರತ್ನಾಕರ. ೪-೨೬೪). [<ಸಂ. ಪುರುಷರತ್ನ]

**ಪುರುಷರತ್ನ** (ನಾ). ೧. ಶ್ರೇಷ್ಠನಾದ ಮನುಷ್ಯ ; ನರೋತ್ತಮ ; ಪುರುಷಾಗ್ರಣಿ : ಸ್ತ್ರೀರತ್ನವಿಜಾಗಳೀಕೆಯ ಧಾರಿಣಿಯೊಳ್ ಪುರುಷರತ್ನವಿಜಾತನೆ ಸದೃಶಾಕಾರರ್ (ಆದಿಪು. ೪-೨೮); ಪುರುಷರತ್ನಕ್ಕೆ ಸ್ತ್ರೀರತ್ನವಲ್ಲದೆ ಸಾಮಾನ್ಯಮಣಿಯುಂ ಪಸುವರ್ಣಿಯುಂ ದೊರೆಯಲ್ಲಂ (ಶಾಂತಿಪು. ೪-೬೪ ವ). ೨. ಒಂದು ಬಗೆಯ ಸಸ್ಯ : (ಚಿಕಿ೯. ೪೬-೯೦೬). [ಸಂ.]

**ಪುರುಷರಾಗ** (ನಾ). [ಸಂಗೀತ] ರಾಗಗಳಲ್ಲಿ ಒಂದು ವರ್ಗ ; ಪ ಭೂಪಾಲಿ, ಭೈರವಿ, ಶ್ರೀರಾಗ, ಫಲಮಂಜರಿ, ವಸಂತ, ಮಾಲವ, ಬಂಗಾಲ ಮತ್ತು ನಾಟಿ ಎಂಬುವು ಎಂಟು ಪುರುಷರಾಗಗಳು : ಸ್ತ್ರೀರಾಗಚತುರ್ವಿಂಶತಿಸೌರಾಷ್ಟ್ರಗಭೀರಪುರುಷರಾಗಂಗಳಮಂ ಮಾರಿಜಮುಖಿಯರ್ ಪಾಡಿದರ್ (ಚಂದ್ರಕ. ೨-೯೫). [ಸಂ.]

**ಪುರುಷರಾಶಿ** (ನಾ). [ಜ್ಯೋತಿ] ಜ್ಯೋತಿಶ್ಶಾಸ್ತ್ರದಲ್ಲಿರುವ ಹನ್ನೆರಡು ರಾಶಿಗಳಲ್ಲಿ ಆರು ರಾಶಿಗಳ ಒಂದು ವಿಭಾಗ; ಪ ಜ್ಯೋತಿಶ್ಶಾಸ್ತ್ರದಲ್ಲಿ ಹನ್ನೆರಡುರಾಶಿಗಳನ್ನು ಪುರುಷರಾಶಿ ಮತ್ತು ಸ್ತ್ರೀರಾಶಿ ಎಂದು ಎರಡು ವಿಭಾಗ ಮಾಡುತ್ತಾರೆ. ಮೇಷ, ಮಿಥುನ, ಸಿಂಹ, ತುಲಾ, ಧನುಸ್ಸು, ಕುಂಭ ಈ ಆರೂ ಪುರುಷರಾಶಿಗಳು. ವೃಷಭ ಕರ್ಕಾಟಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಆರೂ ಸ್ತ್ರೀರಾಶಿಗಳು. ಜಾತಕನಿಗೆ ಪುರುಷರಾಶಿಗಳು ಕ್ರೂರವೆಂದೂ ಸ್ತ್ರೀರಾಶಿಗಳು ಸೌಮ್ಯವೆಂದೂ ನಂಬಲಾಗುತ್ತದೆ : ಹರಿ ಮಿಥುನ ತುಲಾಜ ಧನುರ್ಧರ ಘಟಮಿವು ಪುರುಷರಾಶಿಗಳ್ ಕ್ರೂರಂಗಳ್ (ಜಾತಕ. ೦-೨೨). [ಸಂ.]

**ಪುರುಷರೂಪು** (ನಾ). ಪುರುಷಾಕಾರ; ಪುರುಷಾಕೃತಿ : ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ (ಹಕಾ. ೯-೦೦). [ಪುರುಷ + ರೂಪು]

**ಪುರುಷವಶ್ಯ** (ನಾ). ಗಂಡಸನ್ನು ವಶಮಾಡಿಕೊಳ್ಳುವುದು ; ಪುರುಷವಶೀಕರಣ : ವೃತ್ತಕುಚಿ ಮುಟ್ಟವೆಯ [ಕಾಕಾಂ, ಲಿನ] ನೇತ್ರರಿಂ ಭಾವನೆಯಸಿತ್ತ ಗೋರೋಚನಮನದ ತೇದು ಚಿತ್ರಕ್ಕೆ ಬರ್ದನಂ ಚಿತ್ರದೊಳ್ ನಿಲಿಸಿ ನೆನೆವುತ್ತಮಾ ತಿಲಕಮಿಡೆ ಪುರುಷವಶ್ಯಂ (ಶನಿಕ. ೦೩-೬೫); ಕಿರು ನೆಲ್ಲಿಯ ಅರ್ಚನೆ ಮಾಡಿ ತಂದು ಚೂರ್ಣಿಸಿ . . . ಅದನ್ನು ಬೆಣ್ಣೆಯಲ್ಲಿ ಕಲಸಿ ತುಪ್ಪವ ಕಾಸಿ ಊಟದಲ್ಲಿ ಆ ತುಪ್ಪವನಿಕ್ಕಲು ಹೆಂಡತಿಯನೊಲ್ಲದ ಪುರುಷನೊಲಿವನು. ಪುರುಷವಶ್ಯ ತಪ್ಪದು (ಚಿಕಿ. ೨೦೦). [ಸಂ.]

**ಪುರುಷವಾಚಕ** (ನಾ). ೧. [ವ್ಯಾಕ] ಪುಲ್ಲಿಂಗಸೂಚಕವಾದ ಪದ : ಸಮುಚ್ಚಯದಿಂ ಅಪತ್ಯ, ಕಳತ್ರ—ಎಂಬ ಶಬ್ದಂಗಳ್ ಸ್ತ್ರೀವಾಚಕಮಾಗಿಯುಂ, ಜನಶಬ್ದ ಲೋಕಶಬ್ದಂಗಳ್ ಪುರುಷವಾಚಕಂಗಳಾಗಿಯುಂ ನಪುಂಸಕಂ (ಶಬ್ದಮ. ೧೫೩ ಪ್ರಯೋ). ೨. ಉತ್ತಮ, ಮಧ್ಯಮ ಮತ್ತು ಪ್ರಥಮ ಎಂಬ ಮೂರು ಸರ್ವನಾಮಗಳಿಗೆ ಅನುಕ್ರಮವಾಗಿ ಸೇರುವ ಆಖ್ಯಾತಪ್ರತ್ಯಯಗಳು : ಪುರುಷವಾಚಕಪ್ರತ್ಯಯಗಳು ವಚನವನ್ನೂ (ಪ್ರಥಮಪುರುಷದಲ್ಲಿ) ಲಿಂಗವನ್ನೂ ತಿಳಿಸುತ್ತವೆ (ಕೈಪಿಡಿ. ೪೩). ೩. ಉತ್ತಮ, ಮಧ್ಯಮ ಹಾಗೂ ಪ್ರಥಮಪುರುಷದ ಸರ್ವನಾಮ : ಈ ಮೂರು ಬಗೆಯ ಸರ್ವನಾಮಗಳನ್ನೂ ಒಟ್ಟಿಗೆ ಪುರುಷವಾಚಕಸರ್ವನಾಮಗಳೆಂದು ಕರೆಯುತ್ತಾರೆ (ಮಧ್ಯಮ. ೩೦). [ಸಂ.]

**ಪುರುಷವೇದ** (ನಾ). [ಜೈನ] ಮೋಹನೀಯಕರ್ಮದ ಇಪ್ಪತ್ತೆಂಟು ಪ್ರಕಾರಗಳಲ್ಲಿ ಒಂದು ; ಗಂಡಿಗೆ ಹೆಣ್ಣಿನ ಮೋಹವನ್ನುಂಟುಮಾಡುವ ಕರ್ಮ : ಪುರುಷವೇದಮಂ ಸಂಜ್ವಲನಚತುಃಕ್ರೋಧಮಾನಮಾಯಾಲೋಭಂಗಳನೊರ್ಮೆಯೆ ನಿರ್ಮೂಲಿಸಿ ತಳೆದನಜೇಯಂ ಜಯಾಂಗನಾಲಿಂಗನಮಂ (ಶಾಂತಿಪು. ೦೪-೬೩) ; ಸ್ತ್ರೀವೇದಂ ಪುರುಷಾಭಿಲಾಷೆಯಂ ಮಾಳ್ಪುದು ಪುರುಷವೇದಂ ಸ್ತ್ರೀಯಾಭಿಲಾಷೆಯಂ ಮಾಳ್ಪುದು ನಪುಂಸಕವೇದಮುಭಯಾಭಿಲಾಷೆಯುಂ ಮಾಳ್ಪುದು (ಕರ್ಮ. ೧೨). [ಸಂ.]

**ಪುರುಷವ್ಯಾಧಿ** (ನಾ). ಗಂಡಸರಿಗೆ ತಗಲುವ ಗುಹ್ಯರೋಗ,—ಲೈಂಗಿಕ ರೋಗ : ಪುರುಷವ್ಯಾಧಿಗೆ . . . ರಸ, ಹೊನ್ನೇತೊಕ್ಕು, ತುತ್ತ, ಪಟಿಕ ಮೂರು ವರಹ ತೂಕ, ಮುಸ್ತಕಿ ಐದು ವರಹ ತೂಕ, ಧೂಪದ ಹಳುಕು ಮೂರು ವರಹ ತೂಕ . . . ಇಷ್ಟನ್ನೂ ಒಳ್ಳೇಎಣ್ಣೆಯಲ್ಲಿ ಮರ್ದಿಸಿ, ಅಲ್ಲ, ಬಿಸಿನೀರ ಬಿಟ್ಟು ಕೊಂಬುದು. ಇದು ಪುರುಷವ್ಯಾಧಿಗೆ ಸಿನ್ದ ಪ್ರಯೋಗ (ಚಿಕಿ. ೬೦). [ಸಂ.]

**ಪುರುಷವ್ರತ** (ನಾ). ೧. ಬ್ರಹ್ಮಚರ್ಯ : ಅಂಗಜೋತ್ಪತ್ತಿಸುಖಕ್ಕೆ ಸೋಲಬಾರಂ ಪುರುಷವ್ರತಂ (ಕಂಕಥಾ. ೦ ೬೩); ಬಿಸುಡೆಂ ಮದೀಯ ಪುರುಷವ್ರತಮೊಂದುಮಂ (ಕಂಕಥಾ. ೦-೯೩). ೨. ಇಂದ್ರಿಯನಿಗ್ರಹ : ಪುರುಷವ್ರತಕ್ಕೆ ಭಂಗಂ ಪರವಧುವಂ ನೋಡಿದಂಮುಮಳಿಬು ಪರಸುಂದರಿ ನೀನೆಂಬುದನೀ ಕಾತರತೆಯ ಪೇಟ್ದಪುದು ಬಾಗು ಪಾತಕಿ ಬೇಗಂ (ಅನಂತ. ೦೪-೧೦೬). ೩. ಪಾತಿವ್ರತ್ಯ ; ಪತಿನಿಷ್ಠೆ : ಗಿರಿಜೆಯ ಪಾದಪದ್ಮವಿಗಳ ಜ್ಯಳದಿಂದಮೆ ಕೀರ್ತಿ ನೀತಿ ವಿಸ್ತರಿಸಿರೆ ಸೋವುವೆತ್ತು ಪುರುಷವ್ರತದಿಂ ದಳಮೇಳ್ ಭಾಗ್ಯಮಂದಿರಗಳನಾನ್ತು ರಂಜಿಸುವ ಶಾಂತಲದೇವಿಯ ರೂಪು ಕಲ್ಪವಲ್ಲರಿಯಡರ್ದ್ದತ್ತು ವಿಷ್ಣುನೃಪನೆಂಬ ಸಮುನ್ನತಕಲ್ಪವೃಕ್ಷಮಂ (ಎಕ. V, ಹಾಸನ. ೦೦೬-೩೦ ; 1123). [ಸಂ.]

**ಪುರುಷವ್ರತಿ** (ನಾ). ಪತಿವ್ರತಾಧರ್ಮವನ್ನು ಪಾಲಿಸುವವಳು ; ಪತಿವ್ರತೆ : ಮುನ್ನಿನ ಪುರುಷವ್ರತಿಯರು ಒಲಿಸಿದ ಆಯತವ ಪರಿಪರಿಯಲಿ ಬಣ್ಣಿಸಲು ಏಹುದಲ್ಲದೆ ಪುರುಷನಿರ್ವಾಣಕ್ಕುರಿವಗ್ನಿಯ ಬಂದು ಹೊಕ್ಕು ತೋಱಲು ಬಾರದು . . . ಇಂತೀ ಅರೆಬಿರುದಿನ ಬಂಟರು ಪುರುಷವ್ರತಿಯರು ಪುರಾತನರು ಬಱಿಯ ಮಾತನಾಡಿ ಹೊಱಗೆ ಮೆಱೆವರಲ್ಲ (ಬಸವ. ೬೭೬). [< ಪುರುಷವ್ರತ]

**ಪುರುಷಶೀಲೆ** (ನಾ). ಗಂಡಸಿನ ಸ್ವಭಾವವುಳ್ಳವಳು ; ಗಂಡುಬೀರಿ : ಜಲಜಸಖಸೂನು ಮಧ್ಯಮಬಲನೆನೆ ಬಲರಹಿತರೆನೆ ಸಿತೇಂದುಜಶಶಿಗಳ್ ಬಲಯುಕ್ತರನ್ಯರೆನೆ ವಿಷಮಲಗ್ನಮೆನೆ ವನಿತೆ ಪುರುಷಶೀಲೆಯೆನಿಕ್ಕುಂ (ಜಾತಕ. ೨೨-೨೨). [ಸಂ. ಪುರುಷಶೀಲಾ]

**ಪುರುಷಸೂಕ್ತ** (ನಾ). ಪರಮಾತ್ಮನ ವಿರಾಟ್‌ಸ್ವರೂಪವನ್ನು ವಿವರಿಸುವ ಒಂದು ವೇದಭಾಗ : ಸಾಹಸ್ರಶೀರ್ಷಾ ಪುರುಷನೆಂದೇ ಪುರುಷಸೂಕ್ತಂ (ಗಗಪಾ. ೦೬-೨೦); 'ಪುರುಷಸೂಕ್ತ'ದಲ್ಲಿ ದೇವತಾಭಾವನೆ ಇನ್ನೊಂದು ರೂಪದಲ್ಲಿದೆ. ವಿಶ್ವವನ್ನೇ ಒಬ್ಬ ಪುರುಷನೆಂದು ಭಾವಿಸಿ, ಅವನನ್ನೇ ದೇವತೆಗಳು ಪಶುವನ್ನಾಗಿ ಮಾಡಿ ಒಂದು ಮಹಾಯಜ್ಞವನ್ನು ನಡೆಸಿದ್ದರಿಂದ ಈ ವಿಶ್ವವು ಸೃಷ್ಟಿಯಾಯಿತು ಎಂಬ ಒಂದು ಅದ್ಭುತಕಲ್ಪನೆ ಇದೆ (ಶಾರದ. ೨೬). [ಸಂ.]

**ಪುರುಷಾಂಗ** (ನಾ). ಪೌರುಷ ; ಪುರುಷತನ : ಹೆಂಗುಸುಗಳಾವ್ ಬಲ್ಲೆವೆ ಪುರುಷಾಂಗ ನಿಮ್ಮದು ಪೌರುಷಾಂಗದ ತುಂಗಬಲರಿಂದೆ ನಿಮ್ಮ ಬಳಿಯಲಿ ಲಕ್ಷಸಂಖ್ಯೆಯಲಿ (ತೊರವೆ. ೪-೦೦-೨೬). [ಸಂ.]

**ಪುರುಷಾಂತರ** (ನಾ). ೧. ಇನ್ನೊಬ್ಬ ಗಂಡಸು ; ಪರಪುರುಷ : ಪುರುಷಾಂತರಕ್ಕೆಳಸಿ ಪುಷ್ಪಶರತಾಪದಿಂ ಕರಗಿ ಕಾತರಿಸಿ ಮೆಲ್ಲನೆ ದೂತಿಯೊರ್ವಳಂ

ಕರೆದೊಡಂಬಡಿಸಿ . . . ಮದನಕೇಳಿಗೆ ಸಂದು ಮರಳಿ ಮಾನಿನಿಯರಂತಿರ ಬಲ್ಲರವರೆ ಜಾರೆಮರ್ (ಕೃಷ್ಣಾ. ೩-೩೯). ೨. (ಯೋಗ್ಯ ಮತ್ತು ಅಯೋಗ್ಯರಾದ) ಪುರುಷರ ನಡುವಣ ಭೇದ,—ತಾರತಮ್ಯ: ಅಗ್ಗಳವ ವಿವೇಕವಿಲ್ಲ ನಿನಗೆತ್ತಣವಾ ಪುರುಷಾಂತರಂಗಳಾ (ಗದಾಯು. ೯-೩); ಮರುಳೆ ಮದಾಂಧತೆಯೊಳುಲಿವೆ ಪುರುಷಾಂತರಮನರಿಯದೆಯ್ದಿದ ಧರಣಿಪನ ನೆರೆಯದಾದಳ್ ತರುಣಿಯೆಂದೆನುತೆ ನಿನ್ನಂ ನಗರೇ ಸರಿಯ ಸೂಳೆಯರೆಲ್ಲರ್ (ಶಬ್ದಾ. ೩-೬೯). [ಸಂ.]

**ಪುರುಷಾಂತರಸಂಧಿ** (ನಾ). [ರಾಜನೀ] ಸಂಪ್ರದಾನ, ಕಪಾಲ, ಉಪಹಾಸನ, ಸಂತಾನ, ಸಂಗತ, ಉಪನ್ಯಾಸ, ಪ್ರತೀಕಾರ, ಸಂಯೋಗ, ಪುರುಷಾಂತರ, ಅದೃಷ್ಟಪುರುಷ, ಅದುಷ್ಟ, ಆತ್ಮಾಮಿಷ, ಉಪಗ್ರಹ, ಪರಿಕ್ರಮ, ಅರಿಪರದೂಷಣ ಮತ್ತು ಸ್ಕಂಧೋಪನಯ ಎಂಬ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು: ನಿನ್ನ ಸೇನಾನಾಯಕರಿಂದೆನ್ನ ಕಾರ್ಯಮಂ ಸಾಧಿಸಿದೊಡೆ ನುಡಿವ ಪಣಮಂ ಕುಡುವೆನೆಂಬುದು ಪುರುಷಾಂತರಸಂಧಿಯೆಂಬುದಕ್ಕುಂ (ಪಂಚತಂ. ೨೨-೦೩). [ಸಂ.]

**ಪುರುಷಾಕಾರ** (ನಾ). ಗಂಡಸಿನ ರೂಪ; ಗಂಡುರೂಪು: ಪುರುಷಾಕಾರವಾದಿಲ್ಲ ಹರಿ ನಿನ್ನೊಳ್ ಪುರುಷಾಕಾರವಂ ಕಾಣೆಂ (ಗದಾಯು. ೬-೩೦); ನಿನ್ನ ಪುರುಷಾಕಾರಮುಂ ಮನೋಹರಾಕಾರವುಮಪ್ಪ ವಾಯುವೀರ್ಯಮುಮಿನ್ನವರಂ ಶ್ರವಣಭೂಷಣಮಾಗಿರ್ದುವೀಗಳೆನಗೆ ಪ್ರತ್ಯಕ್ಷಮಾದುವು (ಪಂಪಾಭಾ. ೧೨-೩೩ ವ): ಪುರುಷಾಕಾರದೊಳ್ ಪುರುಷಕಾರದೊಳಾರುಂ ನೆಗಳ್ದೀಶ್ವರಾರ್ಯನಂ ಪೋಲ್ತಪರೇ (ಎಇ. VII. ಶಿಕಾ. ೦೩೨-೪೩; 1104). [ಸಂ.]

**ಪುರುಷಾಕೃತಿ** (ನಾ). ೧. = ಪುರುಷಾಕಾರ: ತಮ್ಮ ದಿವ್ಯಾಯುಧಂಗಳನೆಲ್ಲಮಂ...ಶಮೀವೃಕ್ಷದ ಮೇಲೆ ಪುರುಷಾಕೃತಿಯಾಗಿ ನೇಲ್ದಿಟ್ಟು (ಪಂಪಭಾ. ೮-೩೨ ವ); ಪೊಂಪುಟಪೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ ನಿತ್ಯಯೋಗನಿಷ್ಠನಂ (ಆದಿಪು. ೯-೦೦೬); ಪುರುಷಾಕೃತಿಯಿಂ ತಾನವತರಿಸಿದ ಶಶಿಯೆಂದು ಬಂದು ಬಳಸಿದ ತಾರಾಪರಿಕರಮೆನೆ ಕಣ್ಗೆಸೆದುದು ಪಿರಿದುಂ ಬಾಲಕನ ಮೌಕ್ತಿಕದ ಕಟಿಸೂತ್ರಂ (ಶಾಂತೀಶ. ೯-೬೮). ೨. ಗಂಡಸಿನಂತೆ ಆಕಾರವುಳ್ಳವಳು: ಪುರುಷಾಬೊಲೀಕೆ ಕರಂ ಪುರುಷಾಕೃತಿಯೆಂಬುದಿಂತು ನಾನಾಲಿಂಗಂ (ಶಬ್ದಾ. ೩-೮೯). [ಸಂ.]

**ಪುರುಷಾಣು** (ನಾ). ವೀರ್ಯದ ಅಣು; ಶುಕ್ಲಾಣು: ತಾಯಿ ಗರ್ಭ ಧರಿಸಿದಾಗ ತಾಯಿಯ ಗರ್ಭಕೋಶದಲ್ಲಿರುವ ತತ್ತಿಯು ತಂದೆಯಿಂದ ಬಂದು ಸೇರಿದ ಪುರುಷಾಣುವಿನೊಡನೆ ಸಂಯೋಗ ಹೊಂದುವುದು (ಗೃ.ಶಾ. ೦೧೬); ಪುರುಷಾಣುವಿನ ಸಂಬಂಧವಿಲ್ಲದೆಯೆ...ಸಂತಾನೋತ್ಪತ್ತಿಯನ್ನು ಮಾಡುವುದು ಎಷ್ಟೋ ಕೀಟಗಳಲ್ಲಿ ಕಂಡುಬರುತ್ತದೆ (ಕೀಟಶಾ. ೬). [ಸಂ.]

**ಪುರುಷಾದ** (ನಾ). ಮನುಷ್ಯಭಕ್ಷಕ; ನರಮಾಂಸಭಕ್ಷಕ. [ಸಂ.]

**ಪುರುಷಾದಕ** (ನಾ). =ಪುರುಷಾದ: ರಕ್ಕಸರನಿಬರೆಲ್ಲರುಂ ದೀರ್ಘದೇಹಿಗಳ್ ವೆಕ್ಕಸದ ಕೋಪಿಗಳ್ ಮೀರೆ ಪುರುಷಾದಕರ್ (ಕೃಷ್ಣಾ. ೦೬-೨೨). [ಸಂ.]

**ಪುರುಷಾಧಮ** (ನಾ). ನೀಚಮನುಷ್ಯ; ಕೀಳಾದ ವ್ಯಕ್ತಿ: ನಿಮಗೆ ಪೌರುಷವಿಲ್ಲ ನಳನಾಕ್ರಮಿಸಿಕೊಂಡನು ಸತಿಯ ಪುರುಷಾಧಮರು ನಿಮಗಿನ್ನೇಕೆ ಕೊಡಿ ಪಟುವೇಷವನು ನಮಗೆ ಕಮಲಮುಖಿಯನು ನಿಮಗೆ ಪಟ್ಟದ ರಮಣಿಯನು ಮಾಡುವೆನು (ದಳಕ. ೯-೦೨). [ಸಂ.]

**ಪುರುಷಾಮೃಗ** (ನಾ). ಅರ್ಧ ಮನುಷ್ಯನಂತೆಯೂ ಅರ್ಧ ಮೃಗದಂತೆಯೂ ದೇಹವಿರುವುದೆಂದು ನಂಬಲಾದ ಒಂದು ಬಗೆಯ (ಪೌರಾಣಿಕ) ಪ್ರಾಣಿ: ಎಂಜಲಿನ ಶುದ್ಧತೆಗೆ ಹೇಳಿದಕೆ ಬುದ್ಧಿಯನೆ ಶದ್ಯನಮಾಲಿ ಪುರುಷಾಮೃಗವನಿಲ್ಲಿಗೆ ನಾಳೆ ಭೀಮನ ಕಳುಹಿ ತರಿಸುವೆಲು (ಕುಮಾ.ಭ. ಒ೦೨. ೬-೬); ಇದಿರ ಮೃಗವೇನಾನುವವೆ ಕೆರಳಿದರೆ ಪುರುಷಾಮೃಗದ ಗಾವಳಿಗೆ (ಜೈಮಿ. ೬-೩೦-೯೯); ಪರಿವ ಪುರುಷಾಮೃಗಂಗಳಿಂ ನೆರೆದು ಪರಿವ ಕರಿಗಳಿಂ ... ಸರ್ವಪರ್ವತಸಾರ್ವಭೌಮನಖರ್ವಸಂಪದಂ ಮಿಗೆ ಮೆಚ್ಚಿಸುತಿರ್ದುದು (ರಾಜಶೇ. ೦-೦೩೩ ವ). [<ಪುರುಷ+ಮೃಗ]

**ಪುರುಷಾಮೃಕ** (ನಾ). =ಪುರುಷಾಮೃಗ: ಹಿರಿಯ ಆರತಿ ೮ ಪುರುಷಾಮೃಕದ ಆರತಿ ೩ ನಾಗಾರತಿ ೧ ಧೂಪಾರತಿ [೧] . . . ಅಂತು ಆರತಿ ೨೫ (ಸೌಇಇ. IV, ೨೬೩-೯೦; 1618). [< ತಮಿ. ಪುರುಷಾಮಿರುಕಮ್./ ಸಂ. ಪುರುಷಮೃಗ]

**ಪುರುಷಾಯಿತ** (ನಾ). [ಕಾಮಶಾ] ಒಂದು ಬಗೆಯ ರತಿಬಂಧ; ಸ್ತ್ರೀಯು ಪುರುಷನ ಸ್ಥಾನವನ್ನು ವಹಿಸಿ ನಡೆಸುವ ಸಂಭೋಗ; ವಿಪರೀತರತಿ: ಪೊದಟ್ದು ಕಬರೀಭರಂ ಪರೆದು ಪರ್ವೆ ತುಂಗಸ್ತನಂ ಕದಕ್ಕದಿಸೆ ಕಣ್ಮಲರ್ ಪೊಳೆಯೆ ಕಾಂತನು ಮೆಚ್ಚುಸಲ್ ವಿದಗ್ಧೆ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆ ಸವಿಲಾಸವಂ ತೋರ್ಪವಳ್ (ಅಜಿತ. ೦೨-೦೯); ಪೆರ್ಮೊಲೆಗಳ್ ಕದಕ್ಕದಿಸೆ ನರ್ತಿಸೆ ಕುಂಡಲಂ . . . ತನ್ವಿ ಪುರುಷಾಯಿತದೊಳ್ ಪ್ರಿಯನಂ ಮಂಗುಲ್ವಾದಳ್ (ಸೂಕ್ತಿಸು. ೦೯-೩೦); ಪುರುಷಾಯಿತದೊಳಾದು ತೊಡಗು ವರವರಿಗೆ ಜಘನಭಾರದ ಸೇದೆಯಾದುದು (ಗಾಹಾಸ. ೯೯-೯೬). [ಸಂ.]

**ಪುರುಷಾರ್ಥ** (ನಾ). ೧. ಮನುಷ್ಯನು ಸಾಧಿಸಬೇಕಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪರಮಧ್ಯೇಯ: ಪುರುಷಾರ್ಥನಿಧಿ ಪುರಂದರಪರಮಪ್ರಿಯಮಿತ್ರನೋರ್ವನುದಯಿಸಿದಂ . . . ಹಂಸಂ (ರಾಜಂಪು. ೬೦೦); ಸುರಧೇನುಸ್ತನಧಾರದಂತೆ ಪುರುಷಾರ್ಥಂ ಮೂರ್ತಿಗೊಂಡಂತೆ ನಾಲ್ವರುಮೊಂದಾಗಿರೆ ನಂದನರ್ ದಶರಥಂ . . . ಉತ್ಸಾಹಮುಮಾಳ್ದಿದಂ (ಪಂಪರಾ. ೩-೦೯೩); ಸ್ನೇಹಪೂರ್ವಕದಿಂದ ಮನದೊಳಗಾಚಿಸಲು ಲಕ್ಷ್ಮೀಶನವರಿಗೆ ಬೇಹ ಪುರುಷಾರ್ಥಂಗಳನವೆಲ್ಲವಿದ್ದರಲ್ಲಲ್ಲಿ (ಕುಮಾ.ರಾ. ೩-೦೭೦). ೨. ಮೋಕ್ಷಮಾರ್ಗ: ಮುಕ್ತಿಪಥ: ಕಲಿಕಾಸ್ತೋತ್ರಂಸಿತ ಪದನಲಿನಂಗೆ ತನುಜರಾಗಿ ಪುರುಷಾರ್ಥಮನುಜ್ಜಳಿಸದೆ ಮಾಣ್ಬವೆ (ಅಜಿತ. ೦೯-೩೩); ರಾಜ್ಯಲೋಭವಶದಿಂ ಪುರುಷಾರ್ಥಮನೊಕ್ಕು ಪಾರ್ಥಿವಾಗ್ರಣಿಗಳ ನೇಕರುಂ ಜವನ ದಾಡೆಯೊಳಟ್ಟಿದರ್ (ಕೃಷ್ಣಕು. ೦೩-೬೯); ಬ್ರಹ್ಮದ ಅರಿವೇ ಪುರುಷಾರ್ಥವು (ಬ್ರಹ್ಮಶಾ. ೦೯). ೩. ಯೋಗ್ಯವಾದುದು; ಸಾರ್ಥಕವಾದುದು: ಮತ್ಸರಮುಹೋರಗಕ್ಕಮಾಗ್ರಹಮಹಾಗ್ರಹಕ್ಕಂ ಕೋಪಮದಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೬೨ ವ); ಪುರುಷಾರ್ಥಮಲ್ತು ಪರನಿಂದೆಯುಮಾತ್ಮಗುಣಪ್ರಶಂಸೆಯುಂ (ಪಂಪಾಭಾ. ೩-೨೪); ದಿವೌಕಸರ ಸಮ್ಮೇಳವೇ ಪುರುಷಾರ್ಥತನಗೆ (ಕುಮಾ.ದ್ರೋ. ೬-೦೩). ೪. ಮನುಷ್ಯಪ್ರಯತ್ನ: ಪುರುಷಾರ್ಥಂ ತನಗುಳ್ಳ ಮಾನವನವಂ ತಾನೆಂತುಮಿರ್ಕುಂ (ಶಾಂತೀಶ. ೬-೦೩೬). ೫. ಸಂಪತ್ತು; ಧನ; ಹಣ: ಖಳರ ಪುರುಷಾರ್ಥಮಂ ಕಾಮಿಸುವ ಯಾಚಕಾವಳಿಯಂತೆ ಪೊಳಲಿಂದೆ ಪೊಣ್ಮವಟ್ಟು ಸರಸಿಯೊಳ್ ಮುಳುಗುತಿರ್ಪಾನೆಗಳ ದಾನಾಭಿಲಾಷೆಯಿಂ ಬಿಟ್ಟಳಿಕುಳಂ ತೊಳಲುಗುಲು (ಕೃಷ್ಣಾ. ೩-೩೯). ೬. ಉಪಕಾರ; ಸಹಾಯ: ಇದ್ದವರೆ ಮಾಡಿದು ಪುರುಷಾರ್ಥಮಂ ಮಾಡಿದರನುದ್ದಾಮಗುಣಮುಳ್ಳ ಜೀವಿಗಳ್ (ಕೃಷ್ಣಾ. ೩-೩೦). ೭. ವಿಶೇಷವಾದ ಫಲ; ಹೆಚ್ಚಿನ ಪ್ರಯೋಜನ: ಗೋವಿಂದಭಟ್ಟನ ಅಪಲಕ್ಷಣತವ . . . ತಿಳಿದ ಬಗ್ಗೆ ಸಾಕ್ಷಿ ಸಾರುವುವರಲ್ಲಿ ಈಗ ಪುರುಷಾರ್ಥವೇ ಇರಲಿಲ್ಲ (ದೀಪಹ. II, ೬); ಪುಣ್ಯವಿಲ್ಲ, ಪುರುಷಾರ್ಥವಿಲ್ಲ (ಹುಚ್ಚುಹೊ. ೩೯೦). [ಸಂ.]

**ಪುರುಷಾರ್ಥಿ** (ನಾ). ೧. ಉತ್ತಮವಾದ ಧ್ಯೇಯಗಳಿಗಾಗಿ ಶ್ರಮಿಸುವವನು; ಸತ್ಪುರುಷ; ಸಜ್ಜನ : ದುರ್ಜನರು ಪುರುಷಾರ್ಥಿಗಳ ಹಾವಿಂಗ ನಿಲಿಸೇ ಆಹಾರವಾದತೆ ಬಿಟ್ಟುದೇ ಪಿಪಸ (ಶಂಕ್ರಾ. ೬. ೪); ಪೊಲಿಗೊಟ್ಟಳಸು ಗುಡಿದವಂ ಪುರುಷಾರ್ಥಿಯಾದವನೆ (ಶ್ರೀರಾಶಾ. ೬-೩೩). ೨. ಬಲಶಾಲಿ ; ಸತ್ತ್ವಶಾಲಿ : ನೀವು ಪುರುಷಾರ್ಥಿಗಳೂ ಮತ್ತು ಸ್ವತಂತ್ರರೂ ಆಗಬೇಕೆಂದು ಇಚ್ಛಿಸುವಿರೇನು ? (ಕೃಷ್ಣಶೀ. ೮). [ಸಂ. ಪುರುಷಾರ್ಥಿನ್]

**ಪುರುಷೋತ್ತಮ** (ನಾ). ೧. ಮನುಷ್ಯರಲ್ಲಿ ಶ್ರೇಷ್ಠನಾದವನು ; ನರಶ್ರೇಷ್ಠ : ಮಹಾಪುರುಷ : ಆ ಪುರುಷೋತ್ತಮು ತಿಳಿದು ನಿಸಂ ನೆನಸಾಗೆ ಬಾಗದಿಂ (ಶಾಂತಿಪು. ೯-೨೮೯) ; ಪುರುಷೋತ್ತಮನಾದರದಿಂ ಪರೋಪಕಾರಾರ್ಥವಿತ್ತನಾತ್ಮೀಯಕಳೇಬರವು ಸುತರಕ್ಷಾರ್ಥಂ ಶರೀರವುಂ ಜನಕ ನೀವುದಾವುದು ಚೋದ್ಯಂ (ಶಂತಶಂ. ೦೭೮. ೩). ೨. ವಿಷ್ಣು ; ನಾರಾಯಣ : "ವನಜಾಕ್ಷಂ ಪುರುಷೋತ್ತಮು ನಗಧರಂ . . . ವೈಕುಂಠನಬ್ಜೋದರಂ" (ಚನ್ನಕೋ. ೪-೨೦) ; ನೆಗಟ್ತಿಯ ಪುರುಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್ . . . ಕುಂತಿ (ಶಂಕಿಶಾ. ೦-೬೮) ; ಆ ಮಹಾರ್ಣವಂ . . . ಪುರುಷೋತ್ತಮನಂತೆ ಶಂಖಚಕ್ರಾಂಕಿತಮುಂ (ಜಗಸ. ೦-೪೪ ವ) ; ಪುರುಷೋತ್ತಮಂಗೆ ಕಮಲಂ ಕಣ್ (ಶೋಮಶೇ. ೬೬). ೧, ೨ : ಅಚ್ಯುತ ನೇತ್ರನಾದಿಪುರುಷಂ ಪುರುಷೋತ್ತಮನೀ ಚಳುಕ್ಯನಾರಾಯಣದೇವ ನೀಗೆಮಗೆ ಮಂಗಳಕಾರಣಮುತ್ತಮಂಗಳಂ (ಗದಾಯು. ೦-೦). ೩. [ಜೈನ] ವಾಸುದೇವ ; ಲಕ್ಷ್ಮಣ : ಪುರುಷೋತ್ತಮನಿಸೆ ದಶಕಂಧರನಂ ಕೂರ್ಗಣೆಗಳುರ್ಚಲಾಚಿಂ (ಶಂಠಶಾ. ೦೯-೦೩೯). [ಸಂ.]

**ಪುರುಷ** (ನಾ). ೧. ಮಾನವ ; ಮನುಷ್ಯ : ಇದೇಂ ಗುಣವಂತನಿದೇಂ ಪುರುಷರನ್ನನೋ ಗಡ ಪುಣ್ಯಂ (ಶಾಂತಿಪು. ೧-೩೯) ; ಇದು ಮೇರುವಿಗೆಣೆ ಪುರುಷರೆಲ್ಲ ಸಾಜದ ಕಾರಣ ಧಾರುಣಿಯೊಳಗಣ ಜಂಗಮದಾರಾಧನೆ ಇಂದಯೆ ಸಾಶೀ ಜಗೆಲ್ಲಂ (ಎಶ. XI. ದಾವ. ೮೭೦-೪ : 1268). ೨. ಗಂಡ ; ಪತಿ : ಮಾದವ್ವ ಪುರುಷಾಗೆ ಹೇಳು ತರುತಾನೆ (ಹ್ಯಾಶ. ೧೦೩). [ <ಪ್ರಾ. ಪುರುಸ./ಸಂ. ಪುರುಷ ]

**ಪುರುಸತ್ತು** 'ಪುರಸತ್ತು' ನೋ.

**ಪುರುಸೊತ್ತು** 'ಪುರಸತ್ತು' ನೋ.

**ಪುರುಹ** (ನಾ). ಅಧಿಕವಾದುದು ; ವಿಪುಲವಾದುದು : "ಪ್ರಭೂತಂ, ಪ್ರಚುರಂ . . . ಪುರುಹಂ, ಪುರು, ಭೂಯಿಷ್ಠಂ, ಸ್ಫಾರಂ, ಭೂಯಂ, ಭೂರಿ — ೧೨ ಅಧಿಕವಾದದ್ದರ ಹೆಸರುಗಳು, ಬಹಳವಾದ್ದು" (ಶಿವ್ವಾಂಶಿ. ೩೪೦). [ಸಂ.]

**ಪುರುಹೂತ** (ನಾ). ಅನೇಕರಿಂದ ವಿಶೇಷವಾಗಿ ಪ್ರಾರ್ಥಿಸಲ್ಪಟ್ಟವನು ; ಇಂದ್ರ : "ಪುರುಹೂತಂ ಮಘವಂ ದಿವಸ್ಪತಿ . . . ವಾಸವಂ" (ಚನ್ನಕೋ. ೬-೩೩) ; ಉತ್ತಸ್ತ್ಯಮಾನ ಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು (ಆದಿಪು. ೬-೬೬ ವ) : ಮರುದೇವಿಗೆ ಪುಟ್ಟಿದಪಂ ಪುರುದೇವಂ ಬಂದು ದಿವದಿನೆಂಬಪಧಿಯಿನಾ ಪುರುಹೂತನಜದಯೋಧ್ಯಾಪುರಮಂ ನಾಡಾಡಿಯಲ್ಲದಂತಿರೆ ಪಡೆದಂ (ಶಂಠಶಾ. ೦-೯೯). [ಸಂ.]

**ಪುರುಹೂತಗಣ** (ನಾ). [ಛಂದ] ಮೂರು ಅಂಶಗಳ ಗಣ ; ವಿಷ್ಣುಗಣಕ್ಕೆ ಸಮಾನವಾದ ಗಣ ; ಪ ತೆಲುಗಿನಲ್ಲಿ ಇದನ್ನು 'ಇಂದ್ರಗಣ'ವೆಂದು ಕರೆಯುತ್ತಾರೆ : ಪುರುಹೂತಗಣಗಳಾಱುಂ ಸರಸಿಜಸುಗಣಗಳೆರಡು ಸಂಧಿಸಿ ಬಳಸಂ ಚರಣಕ್ಕೆ ಸೀಸದಂತದೊಳೊರಗಿಂತಹ ಸರಳ ತನ್ನೊಳೊಪ್ಪುವ ತೆಱದಿಂ (?) (ಕೃಶಿಶಾ. ೦೫೦). [ಸಂ.]

**ಪುರುಹೂತಜಾತ** (ನಾ). ೧. ಇಂದ್ರನ ಮಗ. ೨. ವಾಲಿ : ಸಂಭ್ರಮವಾರೆ ನೋಡಿದರ್ ಪುರುಹೂತಜಾತನಂ . . . ಇಳೆಗುರುಳ್ದ ಬಿಲ್ಲಾತನಂ (ಶ್ರೀರಾಮಾ. ೩೦೨-೨೯೩). [ಸಂ.]

**ಪುರುಳ್**, ಪುರಲು, ಪುರುಳು, ಪೊರಳ್ಳು, ಪೊರುಳ್, ಪುರುಡ್ಡು, ಪುರುಳ್, ಪುರುಳು (ನಾ). ೧. ವಸ್ತು ; ಪದಾರ್ಥ : ನಾಣನೆಳ್ನಿತುಂ ಕಾದೆನೆ ಬೇಡಿದೊಂದು ಪುರುಳಂ [ಪಾಠಾಂ. ಬೇಡಿದೊಂದೊಡಮೆಯಂ] ಮಾರ್ಕೊಂಡನೇ . . . ಆನೆರೆದಟ್ಟಿಯುಂ ಬಗೆಯಮೇ ಗಂಡಂ ಮಾನಂಗೊಂಡನೋ (ಆದಿಪು. ೦೨-೩೬) ; ಮನವಿಚ್ಚಿಪಟ್ಟ ಪುರುಳಂ ಬೇಡಿ ಪೊಟ್ಟಮಿಲ್ಲದ ರಾಗರಸದಿಂ ಬಳಿಕೊರ್ಗೆಡಿ . . . ಪೊಟ್ಟುಗಳೆವುದು ನೃಪನ ಪೊಡವಾಸಂ ಕೂಡಿ (ಪುಷ್ಪಕ. ೨-೪೪) ; ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೆ ! ಬೇಡಿದ ಪುರುಳನುಱದಿಂ ತಂದೀಗಂ (ರಾಜಶೇಕ್. ೦೦೩-೨೯). ೨. ಸತ್ತ್ವ ; ಸಾರ ; ತಿರುಳು : ದೊರೆಯಲ್ಲದಂಗೆ ನುಡಿವುದು ಪುರುಳಿಲ್ಲದ ಮಾತನೆಮ್ಮೊಳಂ ನುಡಿವುದೆ (ಆದಿಪು. ೦೪-೬೦) ; ಮರುಳ ಮಾತಿನೊಳ್ಪುರುಳೇನೆಂದರಸಂ ಪೋಗೆವೋಗೆ (ಗದಾಯು. ೪-೪೩ ವ) ; ಆನುಂ ನೋಟ್ಟಿಂ ಕತೆಯು ಪುರುಳೆಂತಿರ್ಕುಮೆಂದು (ರಾಜಶೇಕ್. ೩-೨೮). ೩. ಕೆಚ್ಚು ; ಶಕ್ತಿ ; ಚೈತನ್ಯ : ಅದಟನ ಪುರುಳಂ ಪೊಣರ್ದ ಗಳಜೀವೆನುಗ್ರಾಹವದೊಳ್ (ಆದಿಪು. ೦೨-೯೯) ; ತೆರಳ್ದ ಪೊಗಂ ಕರ್ಗಿದ ಬಾಯ್ ಪುರುಳಿಲ್ಲದ ಮಿಳ್ಗೆಗಾಲ್ (ಧರ್ಮಾಮೃ. ೬-೨೨೪). ೪. ಬೆಲೆ ; ಮೌಲ್ಯ . ೨, ೪ : ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತಿಸಯೆ ಪೇಟ್ದ ಕಬ್ಬಮದೆಂತುಂ ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತಿಸವ ರನ್ನದುತ್ತೆರ್ದೆವುಗದೇ (ಕಬ್ಬಿಗ. ೬). ೫. ಧನ ; ದ್ರವ್ಯ ; ಹಣ : ಪತವಧುಗೆ ಸೋಲುತ್ತ ತಮ್ಮಯ ಪುರುಳೆಲ್ಲಮನಿತ್ತು ರಾಗದಿಂದಂ ದವರೊಳ್ ನೆರೆದು (ಸಮಜ. ೩-೬೬) ; ಪುರುಳನ್ನಲ್ಲದೆ ಪುರುಷನನನುಭವಿಸ ಬಲ್ಲರೇ ಚೆಲುವೆಣ್ಗಳ್ (ಅನಂತಪು. ೬-೨೩) ; ಪುರುಳಂ ಪಡೆದೊಳ್ಗೆಯ್ಮೆಯೊಳೆ ರ್ಪರ್ಗಿತ್ತುಟ್ಟು ತೊಟ್ಟು ಪೆಂಡಿರ್ ಮಕ್ಕಳ್ವೆರಸು . . . ಪದುಳದೊಳಿರ್ಕುಂ (ಶಶಿಪ. ೩-೭೯೦). ೬. ಸಂಪತ್ತು ; ಐಶ್ವರ್ಯ : ನೆಲನಿಮ ನೆಲನಂ ಪಾಲಿಸು ನೆಲದಿಂ ಪುರುಳಕ್ಕುಮವಾರ್ ನೆಲಕ್ಕೆಜಗದಪರ್ (ಕಾವ್ಯಾವ. ೬೬) ; ತಮ್ಮ ಪುರುಳೆಂಬರ್ ತಮ್ಮಕ್ಕಳನ್ (ಶಬ್ದಾಳ್. ೦-೬-೩). ೭. ಒಳಿತು ; ಲೇಸು : "ಪುರುಳೆನಲೊಳ್ಳಿತು" (ಕಾಶಿ. ೦೪) ; ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದುದುಱಂ ಚಿರಕಾಲಂ ನಿಲಲರಿಯದು ಪಂಕಿಸುವೊಡದಂತೆ ನಾಯ್ಗೆ ನೆಯ್ಯಕ್ಕುಗುಮೇ (ಸಮಜ. ೪-೩೯) ; ಸುಜನರ್ಬ್ಬಮ್ಮರೆ ತನಗವರಜನ್ರಮುತ್ತಂಸಮಪ್ಪ ಪುರುಳಿಂ ಬೊಪ್ಪಂ ಸುಜನೋತ್ತಂಸನೆನಿಪ್ಪಂ ಸುಜನಗ್ರ್ರಾತ್ತಂಸಮೆಂಬ ಪುರುಳಿಂದೆನಿಸಂ (ಎಕ. II. ೨೩೪-೬೬ : ಸು. 1160). ೮. ಚೆಲುವು ; ಚಂದ : "ಪುರುಳೆನೆ ಚಂದ ಪಾಕ್ಕು" (ಕಕರ. ೦೩೬). ೯. ಫಲ ; ಪ್ರಯೋಜನ : ತನಗೆ ಪೊಜೆತುಡುಗೆ ನವಲೇಪನಮ ಪಾಳಂ . . . ಇಂತಿನಿತಱೊಳವೊಂದಱೊಳ್ ಪುರುಳುಂಟೇ (ಆದಿಪು. ೯-೩೩) ; ನಾಲಗೆಯುಂ ಪಲ್ಲುಂ ತವುವನ್ನೆಗಮೋದಿದೊಡಂ ಕುತತ್ತ್ವದೊಳ್ ಪುರುಳುಂಟೆ (ಸುಕುಮಾ. ೩-೯೪) ; ಈ ಪುರುಳಿಲ್ಲದ ನಾಯೊಡಲಂ ಮರುಳೇ ಕರಮೊಲ್ದು ಕೂರ್ಪ ಮಾನಿಸರೊಳರೇ (ಧರ್ಮಾಮೃ. ೬-೧೯೨). ೧೦. ಬುದ್ಧಿವಂತಿಕೆ ; ಜ್ಞಾನ : ಪುರುಳಂ ಮರುಳಂ ಮಾಟ್ಪಂ ಶರಸಿಧಿಮಂ ಬೆಂಚೆ ಮಾಡುವಂ ಕೇಸರಿಯುಂ ನರಿ ಮಾಟ್ಪಂ . . . ಕುಸುಮಾಪತಾಕಂ (ಲೀಲಾವ. ೪-೨೩). ೧೧. ಜ್ಞಾನಿ ; ತಿಳಿವಳಿಕೆಯುಳ್ಳವನು : ಪುರುಳಾಗು, ಮರುಳಾಗು, ಕಲಿಯಾಗು, ಪೇಡಿಯಾಗನ್ನ, ನೀನೊರ್ವನಿರ್ದಪಯ್ (ಅಕ್ಷ್ಯಾ. ೨೦-೪೦೯). **ಪುರಲು** : ೧೨. ಶೋಭೆ ; ಕಾಂತಿ : ಎರಡು ತಿಂಗಳ ಹರೆಯ ಮುಂಗಳ ಬರಲು—ತುಂಬಿತು ಪತ್ತಗೆ ಬರುಮನಗಳ ಸಿರಿಯು, ಕಂಗಳ ಪುರಲಿದೇ ಕಡೆಕಂಜಮು (ಕಂಪು. ೨೦-೩೪). **ಪುರುಳು** : ೧. ನಿನ್ನ ಪುರುಳಿಲ್ಲಪನು ಬೇದಿಗಿಡು ಮಾರಿಬಿಡು ನಿನ್ನ ಸಿರಿಯಿಲ್ಲವನು ಬಡವಂಗಿರೆದು ಬಿಡು (ಕಗದ್ಯ. ೬೨). ೨. ನೀಸುಪಜಿಸಿನ ತಿರುಳು ನೀನು

ಮಾಱಿಮೆಯ ಪುರುಳು (ಕೃಮು. ೬-೧೫) ; ಎನ್ನ ಪ್ರಾಣದ ಪುರುಳನೆನ್ನ ಜೀವನರುಚಿಯನೆನ್ನ ಗರಿಮೆಯ ತನೆಯ ಕಾಣುತಿಹೆ ಸುಖದ (ಪಾಂಗೀ. ೪೦-೩). ೮. ಪರಿಪರಿಯಾಗಿ ಸಿಂಗರಿಸಲೇಕಹುದೆಂದು ಪುರುಳಿಗೆ ಸಿಂಗರಿಸಿದರು (ಕೃಕ. ೩೦-೪೪) ; ಪದಪಣಿಗೆಯೊಪ್ಪ ಪುರುಳು ಪೊಗರೇಱೆಯಂಗವಿಸೆ ಯಲಂಕಾರಗಳು ಕವಿದು ಪರಿಯೆ ರಸದೊಳ್ಗಂಪು[ರ]ವ್ವನೆ ಕವಿತೆಯೊಂದನು ಪೇಳಿಸಿದ (ಕಲಿ. ೧-೨೬). ೧೩. ಆಶಯ ; ಅಪೇಕ್ಷೆ ; ಉದ್ದೇಶ : ಒಳ್ಜಗೆಯೊಳು, ಮಗನ, ನನ್ನ, ಮನೆಯ, ಹರಸಿ ನುಡಿದಿರಿ. ನಿಮ್ಮ ಪುರುಳು ನಡೆಯಲಣ್ಣ. ಹರಕೆಯಿಡಲು ತೆರಳುವೆ (ಪಾರು. ೦೦-೩೯೦). ೧೪. ಶಬ್ದದ ಅಭಿಪ್ರಾಯ ; ಅರ್ಥ : "ಅನೇಕಾರ್ಥಃ—ಪಲವು ಪುರುಳುಳ್ಳವಾಗಿ" (ಶಾಶ್ಮ. ೦) ; ಪುರುಳೊಂದೆಡೆ ಪದಮೊಂದೆಡೆ ಸಂಬಂಧದಿರವೊಂದೆಡೆಯೆನೆ ಕೃತಿಯ ವಿರಚಿಸಿ ಕುಕವಿಜನಗಳೇಕೆ ಮಾಳ್ಪರೊ ಶಿರಕ ಬೇನೆಯ ಸುಕವಿಗಳ (ಶಬಸಾಂ. ೦-೬೨). **ಪೊರಳ್ನು** : ೬. ಅಲಂಙಣವುಂ ಅಪುತ್ರಕ ಪೊರುಳುಮಾನ್ ವಿಟ್ಟಾರ್ (ಇಅ. XIX. ೦೯೯-೬; ೬೮೦). **ಪೊರುಳ್** : ೫. ನೆಲ್ಲಿಗೆಱೆಯ ಕೆಱೆಗಂ ಕೊಟ್ಟ . . . ನಾಲ್ವತ್ತೆರಡು ಪೊರುಳುಂ ಬ್ರಾಹ್ಮಣರ್ಗ್ಗಂ ತಪಸಿಯರ್ಗ್ಗಂ ಕೊಟ್ಟ ಪೊರುಳು ಮೂವತ್ತೇಳುಂ (ಎಕ. IX. ಹೊಸಕೋ. ೦೦-೦೪ ; 1023). **ಹುರುಡು₂** : ೨. ಇದಱೆಸಲು ಹೊಕ್ಕು ವಿಚಾರಿಸಿದೊಡೆ ಹುರುಡಿನಿತುಂಟೇ (ಕೃಕಶ. ೨-೬ ಶಲ್ಯ) ; ಈ ಗರುಡನ ಹುರುಡು ಗೊತ್ತಿಲ್ಲವೆಂದು ಕಾಣುತ್ತದೆ ಈ ಜನರಿಗೆ (ಜಪ್ರಾ. ೩). **ಹುರುಳ್** : ೨. ನೀತಿಯೆಂಬುದು ನೀರ ಮೇಲೆ ತೇಲುವ ತಪ್ಪ ಮಾತ ಬಲ್ಲವರೆತ್ತ ತೆಗೆದಂತೆ ಬಹುದದು ಕೇಳಿದರೆ ಹುರುಳಾಗದು (ಸರ್ವಜ್ಞ. ೯-೧೮). ೬. ಗಂಡುಳಿಮ ಸಿತಗರೆಲ್ಲಂ ಪೆಂಡಿರವೊಲು ಕರುಳ ಬೆರಳ ಹುರುಳಂ ಕೊಟ್ಟುಂ ಕಂಡುಂ ನಡೆವರು ಸಿತಗರ ಗಂಡಂ ಶ್ರೀವಾಚಿ ಜಡಿಪನಸಿಯನೆನುತ್ತಂ (ಎಕ. VII. ಶಿಕಾ. ೨೩೬-೯ ; 1174 ; ಶಾಪವು. ೬೯೬ ನೋ.). ೭. ಸನ್ನಿಂತಂ ಸಕಳಜಗಂ ಸುಖದಿಂದಿರ್ಪೊಡೆ ಹರಣದೊಂದು ಹುರುಳಱಿಸುವರೇ (೧೧೪. ೭-೩೨) ; ತರುಣನನ್ನೊಳು ತರಳನನ್ನೊಳು ದುರುಳನನ್ನೊಳು ಮರುಳನನ್ನೊಳು ಹುರುಳದೇನುಂಟೈ ಪರೀಕ್ಷಿಸೆ (ಶಾಪುಕ. ೯-೦೦೬). **ಹುರುಳು** : ೧. ಧರಧುರ ದೊಳಭಿಮಾನಹಾನಿಯ ಹುರುಳಹುದು ಬಿಲುಹೋರಟೆಗೆ ನಿಲಲರಿದೆನುತ್ತಂ ಗವಣೆಗುಂದಿತು ನೆರೆದ ನೃಪನಿಕರ (ಶುಪ್ರಾ. ೦೯-೦೬). ೨. ಗಜ ತೋಱೆ ಗಂಡರೆಂಬವರ ಕಾಣೆ ನಿಜ ಸೋಂಕಲು ಪುಣಿಯಿಲ್ಲ ನೋಡಯ್ಯಾ . . . ಹುಲ್ಲ ಕಿಚ್ಚು ಹೊಲೆಯನ ಮೇಳಾಪ ಅಲ್ಲಿ ಹುರುಳಿಲ್ಲ (ಬಸವ. ೦೦೫) ; ಸತ್ಯದ ಹುರುಳನಱಿಯದೆ ಆಳುಗೆಡೆದರೆ ಕಾರ್ಯವೆಂತಹುದು (ಶುಪ್ರಾ. ೦೭-೦೬) ; ಆ ಮಹಾತ್ಮನ ಹುರುಳ ನಾನೆಂತಱಿವೆನೆನುತಲಿ ಬಸವ ಚಿಂತಿಸಿದ (ಕೃಚು. ೨೦-೬). ೩. ಹುರುಳು ಬಲ್ಲೆವು ಸಾಕು ಹೋಗು (ಚಶಿಂ. ೨೦-೨೦) ; ದಿಗ್ವಿಜಯದ ಪರಾಕ್ರಮದ ಹುರುಳು ನಿನಗುಂಟೆಂಬುದರ ಕೆಲಕಿರಿಸು (ಕೋಶಾ. ೦-೯-೩೦) ; ಪುರುಷರಲಿ ಹುರುಳಿಲ್ಲ ಸಲಹೆ:ದೊರಲಲಕ್ಷ್ಮಿಯುವೆಂದು ಪಶ್ಚಿಮ ಕರುಣಿಸಿದ (ಕೋಗಲು. ೦೫-೩೦). ೭. ತುದಿಗೊನೆಯ ಚೆಂದೆಗು ಖರ್ಜೂರದಲಿ ಕಾಣೆನು ಹುರುಳ ನಾರಂಗದ ವಿರಾಮವನೇನನೆಂಬೆನು ನಿವಿಮಪಾತ್ರದಲಿ (ಕ.ಪ್ರಾಶ. ೦೯-೩೬) ; ಬಿಚ್ಚಿ ಹೇಳಲು ಹುರುಳ ಕಾಣೆನು ತುಚ್ಛಕನುವಿದನು (ಅಪ್ಪಶ. ೨-೯೯). ೮. ಧಿಗೆಂದುದು ಧರಾಧೀಶ್ವರನ ತಂದೆಯ ಹೃದಯದಲಿ ಹುರುಳೇನು ಬಳಿಕಳಿವವರ ಪೋಱೆಗಳ (ಶುಪ್ರಾ. ೦-೨). ೯. ಓದಿದ ಹಳೆಯ ಕತೆಯನ್ನು ಕೆದರುವುದರಲ್ಲಿ ಹುರುಳಿಲ್ಲ (ಹಾತುಕ. ೪೦). ೧೦. ಮರುಳಲಾ ಮಾಱೆಮಾತು ಕಡುವೃದ್ಧರಿ ಗದೇಕೆಂಬಂತೆ ಚಿತ್ರದ ಹುರುಳ ಬಲ್ಲೆನು ಪಥವ ಬಿಡಿ ಕೆಲಸಾರಿ ಸಾಕು (ಶುಪ್ರಾದ್ರೋ. ೦೨-೨೫). ೧೫. ನೆಲೆ ; ಬೀಡಂ ; ಆಶ್ರಯ : ಈ ಚರಾಚರ ನೆರೆದು ನಿಮ್ಮಯ ರೋಮಕೂಪದ ಹೊಱೆಯೊಳಗೆ ಹೊಳೆವಾಡುತಿಹು ದೆಂಬಗ್ಗಳಿಕೆಗಳಿಗೆ ಹುರುಳೆನಿಪ ಹೇರಾಳದಂಗದ ಸಿರಿಯ ಶೋಭಿಸೆ ಕೃಷ್ಣ (ಶುಪ್ರಾಶಿ. ೩-೬೨). ೧೬. ಮರ್ಮ ; ರಹಸ್ಯ : ಶ್ರೀಕಂಠಶಾಸ್ತ್ರಿಗಳು ಸುಭಗೆಯೊಡನೆ ಅಧಿಕಪ್ರಾಸಂಗಿಕವಾಗಿ ವರ್ತಿಸಿದುದಕ್ಕಾಗಿ ತಮ್ಮ ಹುರು ಳನ್ನು ಅವಳು ಬೈಲಿಗೆಳೆದಿ ಎಳೆಯುವಳೋ ಎಂಬ ಭಯದಿಂದ ರಾತ್ರಿಯಲ್ಲ ನಿದ್ರೆ ಮಾಡಿದ್ದಿಲ್ಲ (ಗಂಗಾಚಾ. ೪೪). ೧೭. ನಾಯಕ ; ಒಡೆಯ ; ಮುಂದಾಳು : ಎಲೆಲೆ ವಿಲಯಕೃತಾಂತನೋ ನಮ್ಮಳವು ಕೊಳ್ಳದು ಬೆಂಗೊಡಲಿ ಮುಂಕೊಳಿಸದಿರಿ ಮರುಳಾಗದಿರಿ ಹುರುಳಾಗಿ ಹೆಂಡಿರಿಗೆ (ಶುಪ್ರಾಶಿ. ೩-೦೦) ; ವ್ಯಾಸಸ್ಮೂರ್ತಿಗೆ ನಡೆಕೋಲಾದನೆ ಮರುಳ್ಗಳ ಹುರುಳೇ ಎಡರಾಳುವನೇ ಏ ಬಿಸದಕೆ ನನ್ನೆಡೆಗೈತಂದೆ (ಗಹೇಶ. ೨-೪೬). ೧೮. ಸತ್ವಶಾಲಿಯಾದವನು (?) : ಧರೆಯೊಳು ಮೈಸೂರರವರ ಕೂಡೆ ವೈರವ ಬೆರಸಿದವರು ಹುರುಳಹರೆ (ಕಂಪರ. ೩-೯೬).

[ದೇ.॥ ತಮಿ. ಮಲ. ಪೊರುಳ್ ; ತುಳು. ಪೊರ್ಲು ; ತೆಲು. ಪುರುಲು ; ಕೋತ. ಪೊರ್ಳ್]

**ಪುರುಳಿ₁** 'ಪುರುವಳ್ಳಿ' ನೋ.

**ಪುರುಳಿ₂** (ನಾ). ೧. ಹೆಣ್ಣು ಗಿಳಿ ; ಸಾರಿಕೆ : "ಪುರುಳಿಯೆಂದುಂ ಸಾರಿಕೆ ಯೆಂದುಂ ಪೆಣ್ಗಿಳಿ" (ಕಕಾ. ೩೩-೨೦೩) ; ಕಲ್ತೊಡನೋದುವುದಲ್ತೆ ಗಿಳಿ ಗಳುಂ ಪುರುಳಿಗಳುಂ (ಕಲಿ. ೦-೦೦) ; ತುಂಬಿ ಗಿಳಿ ಪುರುಳಿ ಕೋಗಿಲೆ ಯೆಂಬಿವುವೆರಸುಖಿಲತರುಗಳಿಂದ್ರನ ಬೆಸದಿಂದಂ ಬಂದುವೆಂದೊಡುವಪವನಮಂ ಬಣ್ಣಿಸಲೆನಗೆ ನಾಡೆಯುಂ ಕುಱಿಪಲ್ತೇ (ಅಪು. ೬-೬೨) ; ಕೂರ್ತ ಧೂರ್ತ ಸುರಮಿಥುನಂಗಳ್ ನೆರೆದಳಸುಗಲಿಸೆ ಗಿಳಿಯುಂ ಪುರುಳಿಯುಮಳಸುವವು ದೇವಭಾಷೆಗಳಸು (ಕಾವ್ಯಾವ. ೬೫೦). ೨. ಗಿಳಿ ; ಶುಕ : "ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿಯೆನಲು ಗಿಳಿ" (ಕಪ್ರಾಕ್ಕಿ. ೨೩) ; "ಕನ್ನಡವಕ್ಕಿ ಪುರುಳಿ ಪಂಡಿತವಕ್ಕಿ ಗಿಳಿಯಕ್ಕು" (ಕಪ್ರಮಂ. ೨೧). ೩. ಗಿಳಿಯ ಮರಿ ; ಮರಿಗಿಳಿ ; "ಗಿಳಿವಱೆ" (ಕಮಂ. ೬. I. ೨೦).

**ಪುರುಳಿ₃** (ನಾ). ಹಸು : ಪರವತ್ಸಂಗಳ ಬಟ್ಟಯಂ ಪಱಿಗೊಳುತ್ತಂ ತೋಱೆದ ಗೊಂತಮಂ ಬಿಡುತುಂ ಹೂಂಕರಿಸುತ್ತುಂ ಪೋಪಗ್ಗದ ಪು[ಶಾಕಾಂ. ಮ] ರುಳಿಗಳಂ ಮಿಗೆ ಮರಲ್ದು ನೋಡಿದನರಸಂ (ಲಾಪ. ೩-೪೦). [?]

**ಪುರುಳು** 'ಪುರುಳ್' ನೋ.

**ಪುರುಳುಗಾಣು** 'ಪುರುಳ್ಗಾಣ್' ನೋ.

**ಪುರುಳುಗೆಡಿಸು,** ಹುರುಳುಗೆಡಿಸು (ಕ್ರಿ). ೧. ಬಲಗುಂದಿಸು ; ನಿಸ್ತೇಜ ಗೊಳಿಸು ; ನಿಶ್ಶಕ್ತಗೊಳಿಸು ; ನಿಸ್ಸಾರವೆನ್ನುವಂತೆ ಮಾಡು : ವರುಣನ ಪುರುಳುಗೆಡಿಸಿ ವಾಯುವ್ಯನ ಮರುಳುಮಾಡುತ ಧನದನನು ದೊರೆಗೆಡಿಸಿದನು (ಕೃಕಾಂ. ೬-೬೬). ೨. ಹೀಯಾಳಿಸು ; ಧಿಕ್ಕರಿಸು : ಪುರುಳಿಯ ಪುರುಳುಗೆಡಿಪ ನುಡಿ ಕವಳೀಸ್ತಂಭವನೇಳಿಸುವೂರುಗಳೊಪ್ಪಿ ದುವಾ ಸತಿಗೆ (ಬಹುಶಾ. ೨-೮). **ಹುರುಳುಗೆಡಿಸು** : ೧. ಬಾಹ್ಲಿಕ ದುರುಳ ಸೌಬಲ ಸೋಮದತ್ತರ ಹುರುಳುಗೆಡಿಸಿದನೊಬ್ಬ ಶಿಶು ಗೆಲಿದನು ಮಹಾ ರಥರ (ಶುಪ್ರಾದ್ರೋ. ೩-೨೬) ; ವಿವಿಧ ವಿಟರನು ಹುರುಳುಗೆಡಿಸುವ ನವ ಯವ್ವನಭರದ ವನಿತೆಯರೊಪ್ಪಿದರು (ಕೋರಾ. ೦.೩-೨೬) ; ಆ ಸುರಾಧಿಪನ ಹುರುಳುಗೆಡಿಸುವೆನು (ಅಕ್ರಾ. ೬-೯). ೨. ಹುರುಳುಗೆ[ಶಾಕಾಂ.ಗ]ಡಿಸು ವಿರಾಮವು ನುಡಿದೊಡೆ ಕರಗಿ ಕುಂತಿ:ಮಕ್ಕಳೆಂದೊಡೆ ಹರಹಿಕೊಂಬರಿ (ಶುಪ್ರಾಶಾ. ೩-೧೮) ; ಹರುಹುಗೆಟ್ಟುದು ತೇರು ಸಾರಥಿ ಹುರುಳುಗೆಡಿಸಿಯೆ ನುಡಿದ ನಂಬಿನ ಕೊಱತೆ ತಾ ಮುನ್ನಾಯ್ತು ದೈವದ್ರೋಹಿಗಳು ನಿಮಗೆ ಅರಿವಿಜಯ ವಲ್ಲಿಯದು (ಶುಪ್ರಾಶ. ೦-೦೫). ೩. ಮಾನಸೋಲಿಸು : ಹರಿ ಹರ ಬ್ರಹ್ಮಾದಿ ದೇವರು . . . ಸುಮನಸರೆಲ್ಲರನು ಬಿಡದೆ ಹುರುಳುಗೆಡಿಸುವೆ ಸಾಕು ನಳಭೂಮಿವರನ ಮಾತೇನಿನ್ನು (ನಳ. ೯-೯). ೪. ಪೋಲುಮಾಡು ; ಹಾಳುಮಾಡಂ ; ವ್ಯರ್ಥಗೊಳಿಸು : ಆತನೆಚ್ಚದು ಪಾಶುಪತವದ

ನಾತುಕೊಂಬವರಾರು ಬಜಿದೆ ಘಟಾತಿಶಯವನು ಹುರುಳುಗೆಡಿಸುವಿರಿ (ಶಃಣ್ಮುಕ್ಷ್ಯಾ. ೦೫-೦೯). [ ಪುರುಳುಗೆಡು + — ಇಸು₁ ]

**ಪುರುಳುಗೆಡು**, ಪುರುಳುಗೆಡು (ಕ್ರಿ). ೧. ಶಕ್ತಿಗುಂದು; ನಿಃಸತ್ತ್ವವಾಗು; ಬಲಹೀನವಾಗು: 'ಪುರುಳುಗೆಡಿಸು' ಪರಾ. **ಹುರುಳುಗೆಡು**: ೧. ಅಭಿಮನ್ಯುವಿನ ಹೊಯ್ಲಲಿ ಹುರುಳುಗೆಟ್ಟುದು ಹೆಸರ ನಾಯಕವಾಡಿ (ಉತ್ತರಾ ಕುಮಾ. ೫-೩೩); ಮಹಾಮುನಿಯ ಪರಮಶಾಪವದೊಂದು ನೃಪನಲಿ ಹುರುಳುಗೆಟ್ಟುದು (೭ಜೈಮಿ. ೯-೩-೩). ೨. ಅವಹೇಳನವಾಗು; ಅವಮಾನವಾಗು: ದುರುಳತನದಿಂದಣ್ಣದೇವನ ಹುರುಳುಗೆಡೆ ನುಡಿದನು (ಉತ್ತರಾ.ಕ. ೦೨-೩೦). [ ಪುರುಳು (< ಪುರುಳ್) + ಕೆಡು₁ ]

**ಪುರುಳುಗೊಳ್** 'ಪುರುಳ್ಗೊಳ್' ನೋ.

**ಪುರುಳುಗೊಳಿಸು** (ಕ್ರಿ). ಅರ್ಥಪೂರ್ಣವಾಗುವಂತೆ ಮಾಡು; ಸಾರವತ್ತಾಗಿ ಮಾಡು: ಅರಸಿಯರನಿಬರುಮಾದರದಿಂದೆನ್ನ ಸರಸಕಾವ್ಯವ ಸವಿವಂತೆ ಪರಮಪತಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ ಪೊಗಳುವೆನು (ಶಂಬ. ೦-೪೭). [ ಪುರುಳುಗೊಳ್ (< ಪುರುಳ್ಗೊಳ್) + —ಇಸು₁ ]

**ಪುರುಳೆ** 'ಪುರಲೆ' ನೋ.

**ಪುರುಳ್ಗಾಣ್**, ಪುರುಳುಗಾಣು (ಕ್ರಿ). ೧. ಪ್ರಯೋಜನವನ್ನು ಕಾಣು; ಫಲವನ್ನು ಪಡೆ: ನಾಡಿಗರ ದಿನದಿನಂ ಬೇಳ್ಕೊಂಡು ಹವ್ಯಮನುಂಡು ಸವಿಗೊಂಡ ಬೋಳೆಯರತ್ತಾನುಮೊರ್ವನೀ ನಿಚ್ಚವಲಿಯಡೆಯಿಂ ಪುರುಳ್ಗಾಣದೆ ಪಟ್ಟೆಯಿಟ್ಟು ಶಿರುಳಂ ಸಮಂತು ಪುರುಳಂ ತೋರ್ಪ ಜೋಗವೆಣ್ಗೆ ಸಚುಗ್ಗಯಲೊಡಂ ಕಟುಂಬಿ ನಿರ್ನರಮಾಪುದುಪ್ಪುಗಳ್ಕೆ ತಡೆವರ್ವರ್ (ಧರ್ಮಾಮೃ. ೫೫-೩೦). **ಪುರುಳುಗಾಣು**: ೨. ಧನವನ್ನು ಕಾಣು; ಐಶ್ವರ್ಯವನ್ನು ಪಡೆ: ಪುಟ್ಟಿದಂದಿಂದ ಪುರುಳುಗಾಣದವರು ನೆಟ್ಟನೆ ನಿಧಿಯು ಕಂಡಂತೆ ಕಟ್ಟಿಕಡೊಣಿಯಿಾಸ ಕಾಣುತ ಮರವಟ್ಟು ಮೈಮರೆತು ನಿಟ್ಟಿಪಳು (ಶಂಬ. ೭-೯೦).

[ ಪುರುಳ್ + ಕಾಣ್ ]

**ಪುರುಳ್ಗೊಳ್**, ಪುರುಳುಗೊಳ್, ಹುರುಳುಗೊಳ್ಳು (ಕ್ರಿ). ೧. ಸತ್ತ್ವಯುತವಾಗು; ಹುರಿಯೇರು; ಕೆಚ್ಚುಗಟ್ಟು: ಮಹಾಸ್ವಾಮಿಯವರ ಸೊಮ್ಮಿನ ಸಮ್ಮಿನ ಬಿರುದು ಕುಬೇರನನ್ನೂ ಕಲ್ಪವೃಕ್ಷ ಕಾಮಧೇನು ಚಿಂತಾಮಣಿಗಳನ್ನೂ ನಾಚಿಸುತ್ತ ಪುರುಳ್ಗೊಂಡಿರುವುದು ವಿಶ್ವವಿದಿತವಾಗಿದೆ (ಚಿಕ್ಕ. ೫೩-೬). ೨. ಧನವನ್ನು ಪಡೆ; ಹಣವನ್ನು ಗಳಿಸು: ಪುಯಿಲನೆಸಗುವಲ್ಲಿಯುಂ ಪೊಡವಿಯುಂ ಪೊರೆವಲ್ಲಿಯುಂ ಪುರುಳ್ಗೊಂಬಲ್ಲಿಯುಂ ಪುಸಿವುಗದೆ ಧರ್ಮಮನಾರಯ್ದು ನಡೆವುದು (ಚಾವುಂ. ೩೩.೦೦). **ಹುರುಳುಗೊಳ್**: ೧. 'ಪುರುಳುಗೊಳಿಸು' ಪರಾ. ೨. ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ ದಿಟ್ಟ ಗಂಡುಗಳಂತಿರಲಿ ಕೊಟ್ಟುದರಿಂದ ತಣಿವ ಕೂಸರಿಗೆ ಮನಮುಟ್ಟಿ ಕೊಡುವುದು ಕೋವಿದರು (ಶಂಬ. ೩-೦೦). **ಹುರುಳುಗೊಳ್ಳು**: ೧. ಹುರುಳುಗೊಂಡ ತಿರುಳಿನಲ್ಲಿ ನನ್ನ ರುಚಿಯು ನೀನು ಕಂಡು ನಿನ್ನ ಸವಿಯ ನಾನು ಉಂಡು (ಅರಳು. ೯೯೬-೦೩). [ ಪುರುಳ್ + ಕೊಳ್₁ ]

**ಪುರುಳ್ತೊಡವು** (ನಾ). ಅರ್ಥಾಲಂಕಾರ: ನೂಱುಪುರುಳ್ತೊಡವುಗಳಂ ಬೇಱೆ ಬಣ್ಣಿಸಿದನವಱ ಭೇದಂಗಳುಮಂ (ಅಕ್ರಿತಿ. ೦-೦೭).

[ ಪುರುಳ್ + ತೊಡವು ]

**ಪುರೆ₁** (ನಾ). ಭಲೆ, ಶಹಬ್ಬಾಸ್ ಎಂಬರ್ಥದ ಒಂದು ಹೊಗಳಿಕೆಯ ನುಡಿ,—ಮೆಚ್ಚುಗೆಯ ಮಾತು: "ಅರರೇ ಭಾಪುರೆ ಮಝು . . . ಧಿರುರೇ ಪುರೆಯೆನೆ ಕೊಂಡಾಟಂ" (ಶತಾಂ. ೫೫); ಪುರೆ ಮಝು ದಾನವೆ ದಾತೃವೆ ಪಾತ್ರವೆ ಸರಿಯುಂಟೆ ನಿನಗೆ (ಶಶ. ೩-೦೦೦); ಹರ ಮೆಚ್ಚಿ ಹೋಹೊ ಭಾಪುರೆ ಪುರೆ ಪುರೆಯೆನೆ ಸುರಿವರ್ಪುಮಳೆಯು ನಿರ್ಜರರು (ಕೈರಕಾ. I. ೫೩೬). 'ಪುರ್ಸಿ', 'ಪುರೆಯಿಡು' ಪರಾ.

[ ದೇ.॥ ತಮಿ. ಪುರ್ಶೈ = ತಕ್ಕುದಾಗು, ಒಪ್ಪು; ತೆಲು. ಪುರೆ, ಪುರೇ ]

**ಪುರೆ₂** (ನಾ). (ಕರಾ) ಭಾವಣೆ; ಸೂರು: ಮಳೆಗಾಲ ಆರಂಭವಾಗಲು ಹಡಗಸಂಚಾರ ನಿಂತು ಹೋಯಿತು. ಮಂಜಿ ಪತ್ತೆಮಾರುಗಳನ್ನು ದಡಕ್ಕೆ ಎಳೆದು ಮಳೆಯಿಂದ ಒದ್ದೆಯಾಗದಂತೆ ಪುರೆ ಕಟ್ಟಿದರು (ಓಂಲಾ. ೬).

[ ← ತುಳು. ಪುರೆ, ಪೂರೆ ]

**ಪುರೆ₃** 'ಪೂರಿ' ನೋ.

**ಪುರೆ₄**, ಪುರೇ (ಅ). ಸಾಕು, ಇನ್ನು ಬೇಡ ಎಂಬರ್ಥದ ಮಾತು: ಶ್ರೀಕಂಠ ಹೋ ಪುರೆ ಸಾಕು ನಿಲ್ಲು ಎನುತ (ಕೈಕಚೆ. ೦-೩೬೫); ಪುರೆ ಸಾರು ನಿಲ್ಲು ಕುಳ್ಳಿರು ಕೊಲಗೆಂದು ನಿರ್ಜರವೇತ್ರಧರರು ತಿದ್ದಿದರು (ಶಶ. ೫೯-೦೩). **ಪುರೇ**: ಹೋಹೋ ಪುರೇ ಪುರೇ ಸಾಕುಸಾಕೈ ನಿನ್ನ ಸಾಹಸದ ಭಕ್ತಿಗೆಮ್ಮಯ ಮನಂ ಮೆಚ್ಚಿತು (ಕೆಂಪು. ೦೯-೦೬).

[ ← ಮರಾ. ಪುರೇ ]

**ಪುರೆಕಾಮ** (ನಾ). ಒಬ್ಬಾತನ ಹೆಸರು: ದಾಣಸಾಮಿ ಮಗನ್ ಪುರೆಕಾಮನ್ . . . . ಅಱದಿಯೊಳ್ಸತ್ತನ್ (ಎಕ. X. ಶಾಂಗ್. ೯೫-೭; ಸು. ೬೬೦೯). [ ? + ಕಾಮ ]

**ಪುರೆಯಿಡು** (ಕ್ರಿ). ಭಲೆಯೆನ್ನು; ಕೊಂಡಾಡು: ನಿಮ್ಮ ದೊರೆಯೆಂತು ನಡೆವನುತವನೆ ಪುರೆಯಿಟ್ಟು ಪೊಗಳ್ವರಿ (ಶಶ. ೯೭-೯೦); ಕೆದಱಿ ಜಂತ್ರದ ಪುಷ್ಪವೃಷ್ಟಿಳಾಸವ ಸುದತಿರನ್ನಳು ಪುರೆಯಿಟ್ಟು ಮದನಮಂಜರಿಯತ್ತ ಕೈನೀಡಿ ಕೊಟ್ಟಳಾ ಚದುರೆ ಮಂದಾರಮಾಲೆಯನು (ಹಾಗಳು. ೨೨-೦೦೬). 'ಪುರಿಯಿಡು' ಪರಾ. [ ಪುರೆ₁ + ಇಡು₁ ]

**ಪುರೇ** 'ಪುರೆ₄' ನೋ.

**ಪುರೋಖ್ತು**, ಪುರೋಕ್ತು, ಫ್ರೋಕ್ತು (ನಾ). ಮಾರಾಟ; ಬಿಕರಿ; ವಿಕ್ರಯ: ಅಮಾನೀ ದವಸ . . . ಜತನದಿಂದ ಇರಿಸಿ ಗಿರಾಕಿ ಬಂದ ಬಂದ ಪ್ರಕಾರ ಸರಕಾರಕ್ಕೆ ನಿರಖು ಜಾಸ್ತಿ ಕೂಡಿ ಬರುವ ಮೇರೆ ಪುರೋಖ್ತು ಮಾಡಬೇಕು (ಮಹಾರಾಜ. II. ೭೩). **ಪುರೋಕ್ತು**: (೬). **ಫ್ರೋಕ್ತು**: (೬).

[ ← ಪಾರ. ಹಿಂ. ಫರೋಖ್ತ್ ]

**ಪುರೋಖ್ತಾನಿ** (ನಾ). ಎರಡನೆಯ ಸಲ ಆಗುವ ಮಾರಾಟ,—ಬಿಕರಿ: ಪುರೋಖ್ತಾನಿ ಆದ ದವಸ ಹೋಗಲಾಗಿ ಬಾಕಿ ನಿಂತ . . . ದವಸಕ್ಕೆ . . . ಬಂದೋಬಸ್ತು ಮಾಡಬೇಕು (ಮ.ರಾಜ. II. ೭೩).

[ ← ಪಾರ. ಫರೋಖ್ತಾನೀ ]

**ಪುರೋಗ** (ಗು). ೧. ಮುಂದಿರುವ; ಅಗ್ರೇಸರ; ಮುಖ್ಯವಾದ. (ನಾ). ೨. ಮುಂದಾಳು; ನೇತಾರ; ಪ್ರಮುಖನಾದವನು: "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ . . . ಅಗ್ರಣೀಃ — ಈ ೧೩ ಮುಖ್ಯಂ" (ಕರ್ಣಾಮು. ೦೦೩-೩). [ ಸಂ. ]

**ಪುರೋಗಮ** (ನಾ). ಮುಂದಾಳು; ಮುಖಂಡ; ಪ್ರಮುಖ: "ಅಗ್ರೇಸರಂ ಪುರಸ್ಸರನಗ್ರಣಿ ಮುಖ್ಯಂ ಪುರೋಗಮಂ" (ಅಭಿ.ಕೋ. ೮೩.೯); ಮುಕುಂದಂ . . . ಮುಂದೆ ನಿಂದಿರ್ದ ನಂದಗೋಪ ಪುರೋಗಮವಾರನನುರಾಗದಿಂ ನೋಡಿ (ಜಗನ್. ೯-೫೦ ೩). [ ಸಂ. ]

**ಪುರೋಗಾಮಿ** (ನಾ). ೧. ಮುಂದೆ ಹೋಗುವವನು; ಅಗ್ರಗಾಮಿ: ಕೈಲಾಸದಲ್ಲಿ ಕಮ್ಯುನಿಸ್ಟರನ್ನು ಕಂಡು ಪುರೋಗಾಮಿಗಳಂತೆಯೇ ಪ್ರತಿಗಾಮಿಗಳೂ ಹೌಹಾರಬಹುದು (ಕೈಲಾಸ. ೧ ಮುನ್ನುಡಿ). ೨. ಮುಖಂಡ; ಮುಂದಾಳು. ೩. ಮುಂಭಾಗದಲ್ಲಿ ನಡೆಯುವ ಸೇವಕ: "ಪುರೋಗಃ, ಅಗ್ರೇಸರಃ...ಪುರೋಗಮಃ, ಪುರೋಗಾಮೀ—೭ ಮುಂದುಗಡೆ ನಡೆಯುವ ಊಳಿಗದವನು" (ಸಿದ್ಧಾಂತ. ೨೩೬). ೪. ಮೊದಲು ಬಂದುದು; ಪೂರ್ವಭಾವಿಯಾದುದು: ಡಾ॥ ವಿಟ್ಟೆ ಅವರ ಪ್ರಕಾರವಂತೂ ಕ್ರಿಯಾ

ರೂಪಗಳೇ ಭಾಷೆಯ ಪುರೋಗಾಮಿಗಳು (ಭಾಶಾಕ. ೨೬೩).

[ ಸಂ. ಪುರೋಗಾಮಿನ್ ]

**ಪುರೋಟಿ** (ನಾ). ೧. (ಉಕ) (ಕಲಿಯಬೇಕಾದ ಮಗ್ಗಿ, ಕೋಷ್ಟಕ ಮೊದಲಾದುವುಗಳನ್ನು ಕಂಠಪಾಠ ಮಾಡುವ ಉದ್ದೇಶದಿಂದ ಬೆಳಗಿನಲ್ಲಿ ಹಾಗೂ ಸಾಯಂಕಾಲದಲ್ಲಿ) ಪುನಃ ಪುನಃ ಸಾಮೂಹಿಕವಾಗಿ ಹೇಳುವುದು; ಸಂತೆ ಹೇಳುವುದು; ಪುರಶ್ಚರಣ: ಎಲ್ಲ ವಿದ್ಯಾರ್ಥಿಗಳನ್ನು ಸಾಲಾಗಿ ನಿಲ್ಲಿಸಿ "ಪುರೋಟಿ" ಹೇಳಿಸುವಾಗ ನನಗೆಂಥಹ ಉಬ್ಬು! (ನಾಕೆ. ೭೬). ೨. ನಡೆದು ಹೋದ (ದುಃಖದ) ಸಂಗತಿಯನ್ನು ಪುನಃ ಹೇಳುವುದು; ಪುನರಾವರ್ತನೆ: ಅಣ್ಣ ತಂದೆ ತಾಯಿಗೆ ತಾರು ಕೊಟ್ಟ. ಅವರೂ ಬಂದರು. ಹೈದ್ರಾಬಾದಿನ ಕತೆಯ ಪುರೋಟಿಯಾಯಿತು (ಶಿಕು. ೭೬); ಎಲ್ಲವನ್ನೂ ಮುಂಚಿನಿಂದ ನಾನು ಮತ್ತೆ ಪುರೋಟಿ ಹಾಡಿದೆ (ಶಿಕಪ. II, ೮೩).

[ ← ಮರಾ. ಪರವಚಾ, ಪರವಾಚಾ, ಪರೋಚಾ ]

**ಪುರೋಟಿ** 'ಪುರವಣಿ' ನೋ.

**ಪುರೋಡಾಶ** (ನಾ). ೧. ಯಜ್ಞಯಾಗಾದಿ ಶ್ರೌತಕರ್ಮಗಳಲ್ಲಿ ದೇವತಾಪ್ರೀತ್ಯರ್ಥವಾಗಿ ಕೊಡುವ ಹವಿಸ್ಸು; ತುಪ್ಪದಲ್ಲಿ ಹುರಿದು ನೀರಲ್ಲಿ ನೆನೆಸಿದ ಹಿಟ್ಟು: ಅದರಿಸಿ ಪರಿಚಾರಕರು ಸಂಪಾದಿಸಿದ ಘೃತ ಚರು ಪುರೋಡಾಶಾದಿ ಸಂಭಾರೌಘವನಾವಾಯಿತ್ತು ನಿಮಿಷದಲಿ (ಶಾಕ್ತ. ೬ ೨೨); ಚರು ಪುರೋಡಾಶ ತಂಡುಲ ತಿಲ ವ್ರೀಹಿ ಘೃತದುರುಹವಿರ್ಭೂಮದಿಂದರುಣಲೋಚನನಾಗಿ . . . ಯಜ್ಞಶಾಲೆಯೊಳಧ್ವರದೀಕ್ಷೆಯಿಂದೆ ಕುಳ್ಳಿರ್ದಿಸವ ರಾಮನಂ ಕಂಡು ಬರುತಿಂತೆಂದರು (ಕೃಜಾ. ೨೦-೩೩). ೨. ಹೋಮಂ ಮಾಡಿ ಉಳಿದ ಹವಿಸ್ಸು; ಹುತಶೇಷ: ಅಂತು ಪುರೋಡಾಶಪವಿತ್ರೋದರನುಂ ಸೋಮಪಾನಕಷಾಯಿತೋದರನುಮಾಗಿ ಮೂವತ್ತೆರಡುದಿವಸದೊಳ್ ಕ್ರತುವಂ ನಿರ್ವರ್ತಿಸಿ (ಶಬರಾ. ೬-೩೬ ವ); ಪುರೋಡಾಶಭೋಜನಪವಿತ್ರೀಕೃತಗಾತ್ರನುಂ . . . ದೇವಶರ್ಮನೆಂಬ ಬಾರ್ಮನಿರ್ಪಂ (ಕುಶಚ. ೦೮೪-೬). [ ಸಂ. ]

**ಪುರೋದ್ಯಾನ** (ನಾ). ನಗರದ ಉಪವನ; ನಗರೋದ್ಯಾನ: ಪಾಳೆಯಂ ಬಿಟ್ಟುದು ಪುರೋದ್ಯಾನವೀಥಿಗಳೊಳ್ (ಕೃಜಾ. ೦೬-೦೦); ಪುರೋದ್ಯಾನವೀಥಿಯೊಳ್ ಪಾಳೆಯಂ ಬಿಟ್ಟುದರ್ಜುನನ ಸೇನೆ! (ಜ್ಞಾಂಗ. ೬೨-೦೯೬).

[ ಸಂ. ]

**ಪುರೋಧ** (ನಾ). ಪುರೋಹಿತ: "ಸೌವಸ್ತಿಕಂ ಪುರೋಧಂ ಪುರೋಹಿತನಕ್ಕು" (ಮುಚಾ. ೬೯-೩). [ ಸಂ. ಪುರೋಧಸ್ ]

**ಪುರೋಧಸ** (ನಾ). ೧. ರಾಜಪುರೋಹಿತ. ೨. ಪುರೋಹಿತ: ಅಂತು ಬಿನ್ನಪಿಸಿದ ಪುರೋಧಸಪುರಸ್ಸರಂ . . . ರಾಜ್ಯಾಭಿಷವಣಮಂಡಪದೊಳ್ ಮಂಗಳವಿಧಾನಮನವ್ಯವಧಾನು ಮಾಡಿಮೆಂದು ಕಟ್ಟುಪಿದಾಗಳ್ (ಆಪು. ೬-೯೨ ವ); ಶರ್ಮಾತಿರಾಜಂ . . . ಜನ್ನಕ್ಕೆ ತನ್ನಳಿಯನನೆ ಪುರೋಧಸನಾಗೆ ಬರವೇಟ್ಟು (ಜಜ್ಞ. ೬೯-೨೩). [ಸಂ. ಪುರೋಧಸ್]

**ಪುರೋಪಕಂಠ** (ನಾ). ಪಟ್ಟಣದ ಹತ್ತಿರದ ಪ್ರದೇಶ: ದನುಜಪುರೋಪಕಂಠದ ಕುಲವತಿಗಳ ತೀರದಲಿ ಬಿಡಿಸಿದನು ಪಾಳೆಯವ (ಶಾಕ್ತ. ೦೨-೦೩); ರಾಜಶಿರೋಮಣಿಯು ಟಕಾಯ ಬಿಟ್ಟುದು ಬಳಿಕ . . . ಪುರೋಪಕಂಠದಲಿ (ಕೊರಾ. ೦-೬-೦೨). [ ಸಂ. ]

**ಪುರೋಭಾಗ** (ನಾ). ೧. ಮುಂಭಾಗ; ಮುಂದಣ ಪ್ರದೇಶ: ಅನಿಂದ್ಯರಾಜಭವನಪುರೋಭಾಗದೊಳಿರ್ದು ನಡೆದರೆದರ(ವ)ನರಸಿಸಿ ಲೋಭಕೃಸರಪಸರದಿಂಲ್ಲದಿರ್ದ ಬಚ್ಚರ ಪಸರಂಗಳುಮಂ . . . ತೋರುತ್ತುಂ ಬಂದು (ಶಾಂತಿಪು. ೩-೭೩ ವ); ಭಗವದಿಂದುಮಪೌಳಿಯ ಪುರೋಭಾಗದೊಳ್ ನಿಂದು ಪೊಡಮಟ್ಟು (ಗಂಚಪು ೬೩); ಚಂದ್ರಾರ್ಕರಂ ಗೆಲೆವಂದಾ ಬರುತಿರ್ಪವರ್ ಭರತ ಶತ್ರುಘ್ನರ್ ಪುರೋಭಾಗದೊಳ್ (ರಾಮಾಪು. ೩-೦೦೦). ೨. ಮುಂಭಾಗದ ಸೈನ್ಯ; ಮುಂಚೂಣಿ: ಕಲಿಭೀಮನೆಡದಲಿ ಕಲಿಕಿದನು ಬಲವಂಕದಲಿ ಕೈವಳಿಸಿ ಕೊಂದನು ವರ ಪುರೋಭಾಗವ ವಿಭಾಡಿಸಿದ (ಕುಮ್ಮ. ೧೩-೦೯). ೩. (ತನಗೆ) ಸಂಬಂಧವಿಲ್ಲದ ವಿಷಯದಲ್ಲಿ ಬಾಯಿ ಹಾಕುವಿಕೆ; ಅಧಿಕಪ್ರಸಂಗತನ. ೪. ಹೊಟ್ಟೆಕಿಚ್ಚು; ಮತ್ಸರ. [ಸಂ.]

**ಪುರೋಭಾಗಿ** (ಗು). ೧. ಅಧಿಕಪ್ರಸಂಗ ಮಾತುವ. ೨. ಕುಹಕ ಬುದ್ಧಿಯುಳ್ಳ; ರಂಧ್ರಾನ್ವೇಷಿಯಾದ; ಹುಳುಕುಗಳನ್ನು ಹುಡುಕುವ ಸ್ವಭಾವದ. (ನಾ). ೩. ಮತ್ಸರಬುದ್ಧಿಯುಳ್ಳವನು; ದೋಷೈಕದೃಷ್ಟಿಯುವನು: ಛಿದ್ರಾನ್ವೇಷಿ: "ದೋಷಗ್ರಾಹಿ ಪುರೋಭಾಗಿ" (ಕನ್ನಕೋ. ೦೦೦-೦೬). ೪. ಎರಡುನಾಲಗೆಯುವನು; ಸುಳ್ಳುಗಾರ: "ಎರಡು ನುಡಿವವ ಪುರೋ[ಪಾಠಾಂ. ಪರೋ]ಭಾಗಿ ದ್ವಿಜಿಹ್ವಕಂ" (ಮುಚಾ. ೬೯-೯). [ಸಂ. ಪುರೋಭಾಗಿನ್]

**ಪುರೋಭಿವೃದ್ಧಿ** (ನಾ). ಮುಂದಿನ ಏಳಿಗೆ; ಉತ್ತರೋತ್ತರ ಉನ್ನತಿ,—ಶ್ರೇಯಸ್ಸು: ಅವನು ಎಷ್ಟರ ಮಟ್ಟಿಗೆ ಪುರೋಭಿವೃದ್ಧಿ ಹೊಂದುವುದು ಸಾಧ್ಯವೋ ಅಷ್ಟು ಮಟ್ಟಿಗೆ ಪುರೋಭಿವೃದ್ಧಿ ಹೊಂದುವುದಕ್ಕಾಗುವುದಿಲ್ಲ (ಶ್ರೀಯುಶಿ. ೦೩೯); ವ್ಯಕ್ತಿಯ ಪುರೋಭಿವೃದ್ಧಿ . . . ರಾಷ್ಟ್ರದ ಅಖಂಡ ಹಿತ (ಶಿಕ್ಷದ. ೨೬). [ಸಂ.]

**ಪುರೋಹಿತ** (ಗು). ೧. ಮುಂದೆ ಇರಿಸಿದ,—ಇಟ್ಟ. ೨. ನೇಮಕ ಮಾಡಿದ; ನಿಯಮಿಸಿದ. (ನಾ). ೩. ಕಾರ್ಯನಿರ್ವಹಣೆಗಾಗಿ ನಿಯಮಿತನಾದವನು. ೪. (ಒಂದು ಮನೆತನದ) ಎಲ್ಲ ಧಾರ್ಮಿಕ ವ್ರತಾದಿಗಳನ್ನು ತಾನೇ ಮುಂದಾಗಿ ನಿಂತು ಮಾಡಿಸುವವನು: "ಪ್ರಶಾಂತಿಪುಷ್ಟಾನುಷ್ಠಾನರತಂ ಕೃತಶಾಂತಿವಿಧಾನಂ ಸೌವಸ್ತಿಕಂ ಪುರೋಹಿತನಾತಂ" (ಚನ್ನಕೋ. ೬೦-೩೯); ಪುರೋಹಿತು . . . ಅಟ್ಟಲೆವೇಟ್ಟನವರ್ಗೆ ಶಾಸನಹಪರಂ (ಆದಿಪು. ೦೯-೩೦); ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ . . . ಪರಸಿ ಪೋಪುದುಮಂ (ಹರಿ. ೩-೨೬ ವ); ಪೊಡವಿಯೊಳಗೆ ಪುರೋಹಿತರನವಗಡಿಸಿ ಧರ್ಮದ ಬಲದಿ ನಾಕಕೆ ನಡೆವ ರಾಯರ ಹೊಯಿದಿಳಿಯಲಿಕ್ಕುವರಧೋಗತಿಗೆ . . . ನಿರ್ಜರರು (ಕುವ್ಯಾಅ. ೪-೬೬). [ಸಂ.]

**ಪುರೋಹಿತಪ್ರಭುತ್ವ** (ನಾ). ಧರ್ಮಾಧಿಕಾರಿಗಳ ಅಧಿಕಾರ: "(ಧರ್ಮವಿಷಯಗಳಲ್ಲಿ) ಪುರೋಹಿತಪ್ರಭುತ್ವ" (Hierarchy. ೨೦೪೪). [ಸಂ.]

**ಪುರೋಹಿತರತ್ನ** (ನಾ). [ಜೈನ] ಚಕ್ರವರ್ತಿಗೆ ಒದಗುವ ಏಳು ಜೀವರತ್ನಗಳಲ್ಲಿ ಒಂದು; ಉತ್ತಮನಾದ ಪುರೋಹಿತ: ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯಾದಿಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ . . . ಮನೋಹರಮಪ್ಪ ಸ್ತ್ರೀರತ್ನಮುಮೆಂದಿಂತು ಜೀವಾಜೀವರತ್ನಂಗಳಂ . . . ಪೂಜಿಸಿ (ಆದಿಪು. ೦೦-೩ ವ); ಚಕ್ರವರ್ತಿಯನೆಯ್ದಲೀಯದೆ ರಾಜ್ಯತಂತ್ರವೆಲ್ಲವಂ ಸಂತಯ್ಸಿ ನಡೆಯಿಸುವ ಪುರೋಹಿತರತ್ನಮುಂ (ಜಾಕಸಂ. ೦೬-೨೩). [ಸಂ.]

**ಪುರ್ಗಿ** 'ಪುಟ್ಗಿ' ನೋ.

**ಪುರ್ಗು** 'ಪುಟ್ಗು' ನೋ.

**ಪುರ್ಚು**, ಪುಚ್ಚು, ಹುಚ್ಚು (ನಾ). ೧. ಮರುಳು; ಬುದ್ಧಿಭ್ರಂಶ; ಮತಿಭ್ರಮಣೆ: ಸಂಭವಿಸಲ್ ವಾರುಣಿಯಿಂದೆ ಪುರ್ಚು ದಿನವಂ ತಾಂ ಬಿಳ್ದನಸ್ತಾದ್ರಿಯೊಳ್ (ಚಂದ್ರಶ. ೮೦-೩); ಇಂತೆಪಾಗೆ ಪೆರ್ಮರಗು—ಆ ಪುರ್ಚು ಪಚ್ಚಿದೊಡಂ (ಅಕ್ಕಾ. ೦೦-೭೩೩). 'ಪುರ್ಚುಗೊಳ್' ಪರಾ. ೨. ಮರಂಳಂ ಹಿಡಿದ ವ್ಯಕ್ತಿ; ಬುದ್ಧಿಭ್ರಂಶವಾದವನು: ಅಕಟಾ, ಮನವೇ, ನೀಂ ಪುರ್ಚಲಾ! (ಹುಸೋಪ. ೦-೯ ಟೀಕು).

೩. ಹೆಚ್ಚಳ; ಆಧಿಕ್ಯ : 'ಪುರ್ಚುವೊಳೆ' ನೋ. **ಪುಚ್ಚು₁** : ೧. ಎಲ್ಲಿಯ ಗಂಗೆ ನೀನಾರು ವಿಚಾರವೇನಿಲ್ಲವೆ ಗಿಂಡಿಯ ಮಾಸಲ ಪುಲ್ಲಾಳಿಯು ಪೆಚ್ಚಿಸ ಪುಚ್ಚು ಪೆಚ್ಚಿತೆ (ಕೋಶಕೋ. ೦೨-೬೦). ಕಚ್ಚಿದುದಾ ಪರೀಕ್ಷಿತನ ತಕ್ಷಕವಂಶದು ಪೋಗೆ ಚಿತ್ತದೊಳ್ ಪುಚ್ಚುಗೊಂಡ ಮಾಳ್ಕೆಯೊಳು ಭೂಮಿಯೊಳಿಪ್ಪುರಗಂಗಳೆಲ್ಲ ಹಾಕ್ಕುಚ್ಚಿಕೊಳ್ಳುತ್ತಿಲಂತು ಜನಮೇಜಯನಿಂ ಹತವಾದುದಿಲ್ಲವೇ ಕಿಚ್ಚಿರಿ (ಕಾಳ. ೨೯). ೪. ಆಸಕ್ತಿಯನ್ನುಂಟುಮಾಡುವಂತಹುದು ; ಮೋಹಕವಾದುದು : ಬುಧಜನರಿಗೆ ಪುಚ್ಚು ದುಂತವನಕೆ ಕಾಳ್ಕಚ್ಚು ವಿರಹಿಗಳಿಗೆ ಪುಚ್ಚು ವೀರರ್ಗೆ ನುಚ್ಚು ಕೇಳ್ವರಿಗಿದು ಕನಿದಲ್ಲದುಚ್ಚು (ಕೋಶಕ. ೦-೩೯). **ಹುಚ್ಚು** : ೧. ಶರಧಿಗೆ ಮಿಗೆ ಪೆಚ್ಚಿಂ ರಥಾಂಗಕ್ಕೆ ಹುಚ್ಚಿಂ ಪಿರಿದ[ದಿ]ತ್ತುದ್ದಾವಿಸಿತ್ತು ... ಸುಧಾಸೂತಿಬಿಂಬಂ (ತ್ರಿಕೂ. ೨೯-೦೩೪); ರಚ್ಚಿನಿಂ ಕನಕಕಳಶ್ರಪ ರಕ್ತಗಂಡಿಪುಲುರೆ ಹುಚ್ಚು ಪರಿವೇಷ್ಟಿಸಿತು ಜಾಹ್ನವಿಯು ಗತವಾಗಿ ತಿರ್ಯಕ್ಕು ಮೃಗವಾದಲಾ (ಹಕು. ೩-೦೭). ೨. ಮಾನಿನಿಯರಾತನ ರೂಪ ಕಂಡುದುಂಟಾದಡೆ ತಮ್ಮ ಗಂಡರ ಮಚ್ಚಿದು ಹುಚ್ಚಹರು (ಕೋಶಕ. ೨೯-೨೭). ೫. ಪೆಚ್ಚು ಮಾತು ; ಬುದ್ಧಿವಂತಿಕೆಯಿಲ್ಲದ ಬಾಲಿಶವಾದ ನುಡಿ : ಮೆಚ್ಚಿದ ನಿಯಳೊಂದು ಹುಚ್ಚ ನುಡಿದರೆ ನೊಚ್ಚಗಾಗಿಹುದು ನಲ್ಲರಿ! (ಹಕ. ೦೦-೩೯). ೬. ಗೀಳು ; ಅತ್ಯಾಸಕ್ತಿ; ವ್ಯಾಮೋಹ : ಅನುಗಾಲ ಕಿಚ್ಚು ಭವದೊಳಗದ್ದುಚ್ಚು ಅನಾಥವದ ಕಿಚ್ಚು ಸವಿ ನೋಡೋ ಹುಚ್ಚು (ಪುರಂದ. ೨ ೩೩-೩); ವಿಜಯದಾಸರ ತತ್ತ ಮಾತ್ರಾತಂದಿರಿಗಿದ್ದ ಈ ಹುಚ್ಚು ಅಚ್ಚಳಿಯದೆ ಇವರಿಗೂ ಅಂಟಿಕೊಂಡಿತ್ತು (ಕಂಜಹು. ೦). 'ಪಿಚ್ಚು₁', 'ಪೆಚ್ಚು₄' ನೋ.

**ಹುಚ್ಚುಹುಚ್ಚು**, **ಹುಚ್ಚುಚ್ಚು** (ದ್ವಿರುಕ್ತಿ) : ಅವನು ಯಾವಾಗಲೂ ಹೀಗೇ, ಹುಚ್ಚುಹುಚ್ಚು (ಆಡು); ಹುಚ್ಚುಚ್ಚಾಗಿ ಮಾತಾಡಬೇಡ (ಆಡು). **ಹುಚ್ಚಾಗು** = ಬುದ್ಧಿಗೇಡಿಯಾಗು ; ವಿಚಾರಶಕ್ತಿಯನ್ನು ಕಳೆದುಕೊಳ್ಳು : ಹುಚ್ಚಾಗದೇಡ ಕಾಳಗದೊಳು ನೀನೆಂದಚ್ಚರಿಯಾಗಿ ನುಡಿದನು (ಅಜಿತ. ೨೫-೩೭) ; ಅವರಿವರನು ಕಂಡು ಹುಚ್ಚಾಗದಿರು ಜೋಕೆ (೨೦ಜಾಕ. ೦೦೩-೨೩). **ಹುಚ್ಚುಚ್ಚಾರ** = ಮನಸ್ಸಿಗೆ ಬಂದಂತೆ ನಡೆದುಕೊಳ್ಳುವುದು; ಹತೋಟಿಯಿಲ್ಲದಂತೆ ಇರುವುದು : ಇಲ್ಲಿ ನಿಮ್ಮ ಹುಚ್ಚುಚ್ಚಾರವನ್ನು ಕಟ್ಟಿಡಿರಿ (೮೦೩೪. ೯೯); ನನಗೆ ಈಗಿನ ಹುಚ್ಚುಚ್ಚಾರ ಎಷ್ಟೂ ಸೇರಿಕೆ ಬರುದಿಲ್ಲ (ಅಕಾ. ೨೯೭). **ಹುಚ್ಚು ಮಾಡು** = ಬುದ್ಧಿಭ್ರಮಣೆಯಾಗುವಂತೆ ಮಾಡು ; ದಿಕ್ಕುಗೆಡಿಸು : ಪೆಣಗಳು ಪೆಚ್ಚಿದರ್ ಭೂತವೇತಾಳಸಂಕುಲಕೆ ವೆಚ್ ಹುಚ್ಚು ಮಾಡಿದರೊಂದು ನಿಮಿಷದೊಳ್ ದಿವಿಜರಂ ಖಳಭಟರ್ (ತೊರವೆ. ೧೨-೩೩). **ಹುಚ್ಚುಹುಚ್ಚಾಗು** = ಕಳೆಗುಂದು; ವಿವರ್ಣವಾಗು : ನಿನ್ನ ಮುಖವೇಕೆ ಹೀಗೆ ಹುಚ್ಚುಹುಚ್ಚಾಗಿದೆ (ಆಹಾರ. ೯೩).

[ದೇ. ತಮಿ. ಪುಲ. ಪಿಚ್ಚು ; ತೆಲು. ಪಿಚ್ಚಿ; ಕೋತ. ಪುಚ್]

**ಪುರ್ಚುಕುಣಿತ**, ಹುಚ್ಚುಕುಣಿತ (ನಾ). ಆವೇಶದ ಕುಣಿತ ; ಮನಸ್ಸು ಬಂದಂತೆ ಕುಣಿಯುವಿಕೆ : ಮುಂಗಾರ ಭೈರವಂ . . . ಧಿಮ್ಮೆಂದು ಧೀಂಕಿಟ್ಟು ಪದಮೆತ್ತಿ ಪದಮಿಟ್ಟು ಪುರ್ಚುಕುಣಿತಂ ಕುಣಿದನು ತಲ್ಲಣಿಸೆ ಲಂಕೆ! (ಶ್ರೀರಾಮಾ. ೩೪೯-೨೨೨). **ಹುಚ್ಚುಕುಣಿತ** : ಏ ರಘು, ಏನೋ ಅದು ಹುಚ್ಚುಕುಣಿತ ! (ಕುಂಗಕ. ೨). [ಪುರ್ಚು+ಕುಣಿತ]

**ಪುರ್ಚುಗೊಳ್**, ಪುಚ್ಚುಗೊಳ್, ಹುಚ್ಚುಗೊಳ್ (ಕ್ರಿ). ೧. ಹುಚ್ಚು ಹಿಡಿ ; ಮತಿಭ್ರಂಶವಾಗು : ನೀಲಿಯ ಕನಕದ ಬೇರಂಕೋಲೆಯ ಬೇರೆಯುಮಂ ಸಮಂಗೊಂಡರ ನೀಂ ಪಾಲಿಂದೆ ಕುಡಿಸಲಂತದು ಸೋಲಿಸುಗುಂ ಪುರ್ಚು[ಪಾಠಾಂ. ಚ್ಚು]ಗೊಂಡ ನಾಯ್ಗಳ ವಿಷಮಂ (ಜಾಜು. ೦೩-೨೯) ; ಬಲ್ಲವೆ ಗಾನವಮಂ ಬಧಿರಂ . . . ಪುರ್ಚುಗೊಂಡ ಮನುಜಂ ಶಿವತತ್ತ್ವಸದರ್ಥಸಾರಮಂ ಬಲ್ಲನೆ (ಶೃತಂ. ೧೦-೩೯). **ಪುಚ್ಚುಗೊಳ್** : ೧. ಪುಚ್ಚುಗೊಂಡ ನಾಯಿ ಬಲ್ಲುದೇ ಸಾಕಿದೊಡೆಯನ (ಶಿಕಕಾ. ೦೩-೦೬). **ಹುಚ್ಚುಗೊಳ್** : ೧. ಪಚ್ಚೆ ವಿಲ್ಲಿನ್ನೇನಾದ ಹುಚ್ಚುಗೊಂಡಂತೆಮ್ಮ ಬಿಸುಟು ಹೋದನೆ (ಹಕ. ೩೩-೫೩). ೨. ಗೀಳು ಹಿಡಿ ; ಮೋಹವುಂಟಾಗು : ಮಚ್ಚ ಜಿಹ್ವಾಲಂಪಟದಿ ಗಜ ಕಚ್ಚೆಯಲಿ ನೇತ್ರದಲಿ ಶಲಭ ಶ್ರುತೇಚ್ಛೆಯಲಿ ದರ್ವೀಕರನು ಘ್ರಾಣೇಚ್ಛೆಯಲಿ ಭ್ರಮರ ಹುಚ್ಚುಗೊಂಡೊಂದೊಂದು ವಿಷಯಕೆ ಮೆಚ್ಚಿ ಕೆಟ್ಟವು ಪಂಚವಿಧವಿಷಯೇಚ್ಛೆಯಲಿ ತಗಲಿರ್ಪ ಮನುಜನು ಕೆಡುವುದೇನರಿದು (ಅಕ್ಷುಕ. ೨-೯೯). ೩. ಮೋಹಗೊಳ್ಳು ; ಮರುಳಾಗು : ಹುಚ್ಚುಗೊಂಡುದು ನೃಪರ ತಿಂಥಿಣಿ ಅಚ್ಚರಿಯ ಗಂಧರ್ವದತ್ತೆಯು ವೀಣೆಯನು ಕೇಳಿ (ಜೀವಕಾ. ೦೮-೬). [ಪುರ್ಚು + ಕೊಳ್₁]

**ಪುರ್ಚುವೊಳೆ**, ಹುಚ್ಚುಹೊಳೆ (ನಾ). (ಒಮ್ಮೆಂದೊಮ್ಮೆಲೆ) ಮಹಾಪೂರ ಬಂದ ಹೊಳೆ; ಉಕ್ಕಿ ಹರಿಯುವ ತೊರೆ : ಬಿದ್ದುದೆ ತಡಂ ಪೊಡೆಗೆ ಮದ್ದು ನೆಗೆದುದು, ನನ್ನಿ ಪೂರಗೆ! ಪರಿದುದು ಪುರ್ಚುವೊಳೆಯಂತೆ (ಶ್ರೀರಾಮಾ. ೩೭೩-೩೦೯). **ಹುಚ್ಚುಹೊಳೆ** : ಹುಚ್ಚುಹೊಳೆ ಮಾತ್ರತ್ರಣಂದಕಟ ನೋಡಿದುದು (ಹಕು. ೦೩-೨೩); ಎಲ್ಲವನ್ನೂ ಕೊಚ್ಚುತ್ತೇನೆಂದು ಹೊರಟ ಈ ಹುಚ್ಚುಹೊಳೆಯನ್ನು ಲೋಕೋಪಕಾರಿಯಾಗುವಂತೆ ಮಾಡುವ ಮಾರ್ಗ ವೇನಾದರೂ ಇದೆಯೇ ? (ಕಕಂಡಾ. ೦೩೭).

[ ಪುರ್ಚು + ಪೊಳೆ₄ (< ಪೊಟೆ₁) ]

**ಪುರ್ಚೇಟ್**, ಹುಚ್ಚೇಳು (ಕ್ರಿ). ೧. ಮರುಳು ಹಿಡಿ ; ಬುದ್ಧಿ ಕೆಟ್ಟುಹೋಗು : ತಣಿವೆಂಬುದೇ ಇದರ ತೊನಸಿಯಾ ರೋರ್ಮೋನೆಯ ಕುಟುಕಿಂದೆ ಪುರ್ಚುವರ್ಚಿಟ್ಟು ನೆಗೆನೆಗೆದು ಓಡಿದನ್ ಸೆನ್‍ಕ್ರಿಯದ ತಣ್ಪೆಲೆವ ಪುನಲೆಡೆಗೆ (ಅಕ್ಷತ್ರ. ೩೩-೬೭೩). **ಹುಚ್ಚೇಳು** : ೧. ಕೃಷ್ಣನು ಹೇಳಿದ ಗೀತೆಯ ಪಾರ್ಥನು ಕೇಳಿದನಾತುಲ ನೀಗಿ ಅಭಿಮನ್ಯು ಮಡಿದಾಗ ಮಾತ್ರ ಹುಚ್ಚೆದ್ದನು (೨೦ಜಾಕ. ೦೧೮-೪೦). ೨. ಆವೇಶವು ಹೆಚ್ಚಾಗು; ಉದ್ರಿಕ್ತವಾಗು : ಕ್ರಾಂತಿ ಎಂಬುವ ಭೂತ ತಲೆಗೇರಿ ಹುಚ್ಚೆದ್ದು ಸುತ್ತುತ್ತಿದೆ ಭೀಮಾಥಿಯಯು ಚೆಲ್ಲಿ (ಹಾಂಕಜ. ೩೨-೬); ಕೊಲೆ ಮಾಡಿದ ಆರೋಪಿಗಳಿಗೆ ಶಿಕ್ಷೆಯಾದ ಸುದ್ದಿ ಕೇಳಿ ಲಕ್ಷ್ಮಣ ಹುಚ್ಚೆದ್ದು . . . ಕುಣಿದಾಡಹತ್ತಿದನೆಂದು ಕೇಳಿದೆ (ಹುಣಕ. ೨೯). [ ಪುರ್ಚು + ಏಟ್₁ ]

**ಪುರ್ತಿಯ** (ನಾ). ಒಬ್ಬಾತನ ಹೆಸರು : ಸೋನು ತಾಮ್ ತಮಗೆ ಮೃತ್ಯುವರವಾನಜಿದಂ ಶ್ರೀ ಪುರ್ತಿಯ (ಎಕ II, ೦೦೪-೩ ; ಸು. ೭೦೦).

[ ? ]

**ಪುರ್ದಾಲಿ** (ನಾ). ಒಂದು ಬಗೆಯ ಸಸ್ಯ : ಪುರ್ದಾಲಿ, ಮುಳ್ಳು ಹಣ್ಣು (ಶ್ರುತಿನಿ. ೬೯-೦೩೬). [ ? ]

**ಪುರ್ಬ** 'ಪುಬ್ಬೆ' ನೋ.

**ಪುರ್ಬಿಕ್ಕು** 'ಪುರ್ವಿಕ್ಕು' ನೋ.

**ಪುರ್ಬು** 'ಪುರ್ವು' ನೋ.

**ಪುರ್ಬೇಱಸು**, ಹುಬ್ಬೇರಿಸು (ಕ್ರಿ). (ಆಶ್ಚರ್ಯ, ಗರ್ವ, ಕೋಪ ಇತ್ಯಾದಿಗಳಿಂದ) ಹುಬ್ಬನ್ನು ಎತ್ತರಿಸು : ಸಿರಿಮೊಗಮಂ ನಸು ಬಾಗಿ ಕರಂ ಭೂವರನಂ ಪುರ್ಬೇಱಸಿ ನಡೆ ನೋಡುವ ತರುಣಿಯ ನಡುಗಣ್ಣಳಗು . . . ಕರಮೆಸೆದುದು (ಅಜಿತ. ೪-೦೩). **ಹುಬ್ಬೇರಿಸು** : ಅವಳು ಹುಬ್ಬೇರಿಸಿ, ಏಕೆ, ಯಾರದೇನು ಹೆದರಿಕೆ ? ... ಎಂದಳು (ಕ್ರಾಂತಿಸ್ತ್ರೀ. ೨೨).

[ ಪುರ್ಬು (<ಪುರ್ವು) + ಏಱಸು ]

**ಪುರ್ರನೆ** (ಅ). ಒಂದು ಅನುಕರಣ ಪದ : ಪುರ್ರನೆ ಪಾರುತ ಕಿರ್ರನೆ ಕಿರುಚುತ . . . ಚಿರ್ರನೆ ಚೀರುತಲಿ (ಹಮಚ. ೦೯). [ ಪುರ್₂ + -ಅನೆ₂ ]

**ಪುರ್ವಸಿದ್ಧಾಯ** (ನಾ). ಪೂರ್ವಕಾಲದಿಂದ ಕೊಡುವ ತೆರಿಗೆ : ಕೊಪುಡ ಗೇಯ ಗದ್ದ್ಯಾ ಏಳಜ್ಜಿನನ್ನ × [ಮ]ಡಿಸಿದ ದೇಗುಲಕೆ ದಿಬ್ಬ ಕೆಯಂ

ಪುರ್ವ್ವಸಿ[ದ್ಧಾ]ಯ ಕಟಿದು[ಕೊ]ಣ್ಡರಪ್ಪಡೆ . . . ಲೋಕಕೆ ಸಲ್ಲ (ಕ್ಶಾಶ. XI-1, ೩೩-೯; ೨೨೨) · [ <ಪೂರ್ವ + ಸಿದ್ಧಾಯ ]

**ಪುರ್ವಿಕ್ಕು**, ಪುರ್ಬಿಕ್ಕು, ಹುಬ್ಬಿಕ್ಕು (ಕ್ರಿ). ೧. ಹುಬ್ಬು ಹಾರಿಸು ; ಹುಬ್ಬಿನಿಂದ ಸನ್ನೆ ಮಾಡು : ತನ್ನೊಳೊರ್ತಿರ್ದವರ್ ಕಟಿದಂದಾಕ್ಷಣ ದೊಳ್ ಧರಾರವಣ ವಾತ್ರೊರ್ವಂಗೆ ಪುರ್ವಿಕ್ಕುವರ್ (ಶಂಠಾವಾ. ೬-೩೯). ೨. ಹುಬ್ಬುಗಳನ್ನು ಎತ್ತರಿಸು ; ಹುಬ್ಬುಗಳ ಚಲನೆ ಮಾಡು ; ಹುಬ್ಬೇರಿಸು : ಬೆಟ್ಟುವನೆಡಿಸುತುಂ ಪುರ್ವಿಕ್ಕುವೊಡಂ ಕಣ್ಮುಟಲೆ ಯುಂತದಾಗಳೆ ಮಣ್ಣುಂ (ಟೋಳಿತೋಚ. ೯-೩೭) : ಬೆರಲನಾಡಿಸುತ್ತುಂ ಪುರ್ವಿಕ್ಕುತ್ತುಂ ಸೊಕ್ಕಿದರಂತೆ ಮರಳ್ಗೊಂಡವರಂತೆ ದೆಸೆಯಂ ನೋಡುತ್ತುಂ (ಧರ್ಮಾಮ್ಮ. ೩-೦೩೭). **ಪುರ್ಬಿಕ್ಕು** : ೨. ಪುರ್ಬಿಕ್ಕಿ ಪಲ್ಗಿರಿದು ಹುಚ್ಚಿಂದು ಕಿರಾತಕಾಂತೆಯರಂ ಮಿಗೆ ನಗಿಸುತಿರ್ಪ ಮರ್ಕಟ ಪ್ರಕರದಿಂ (ಗಿ೦೪. ೦-೦೨೬ ವ); ಪುರ್ಬಿಕ್ಕಿ ಪಲ್ಗಳಂ ಕಿರಿದು . . . ಬಿಸಿಲ್ ಪರ್ವಿರೆ ಕ್ಕಾಯುತ್ತಿರ್ದುದು ಕೊರ್ಬಿದ ವೃಕ್ಷಾಗ್ರದಲ್ಲಿ ಮರ್ಕಟರಾಜಂ (ದಶಕು. ೨-೬೭) ; ಕೊಂಬನೇಱ ಪುರ್ಬಿಕ್ಕುವ ವರ್ಗಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಅನ್ವಿ.ಚ. ೦೦೦೬). **ಹುಬ್ಬಿಕ್ಕು** : ೨. ನೆಗೆನೆಗೆದು ನಭಕುಪ್ಪರಿಸಿ ತಾರೆಗಳ ತಿಱದಂಭೋಜಮಿತ್ರನ ಮೊಗೆ ಹುಬ್ಬಿಕ್ಕುವವು (ಕೊರಡಾ. ೬-೬-೩೯). [ಪುರ್ವು+ಇಕ್ಕು]

**ಪುರ್ವು**, ಪುಬ್ಬು, ಪುರ್ಬು, ಹುಬ್ಬು, ಹುರ್ವು (ನಾ). ಎರಡೂ ಕಣ್ಣುಗಳ ಮೇಲ್ಭಾಗದಲ್ಲಿ ಹಣೆಗೆ ಹೊಂದಿದಂತೆ ಇರುವ ಕಿರಿಂಗೂದಲಿನ ಸಾಲು ; ಭ್ರೂ : "ಪುರ್ವನೆ ಭ್ರೂಲತಾಹ್ವಯಂ" (ಶಬ್ದಾಶ. ೩೭); ಕುಡುಃಪುಂ ಕಯ್ಯುಂ ಜತಿಯೊಳ್ ತಡತಡಪರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವದೆ ಕುಡುವೆನೆ ನರ್ತಕಿಯ ಸಭೆಗೆ ವಾದಕಿಯಾದಳ್ (ಅಂಕೃ. ೯-೩೨) ; ಪುರ್ವಿನ ಗಂಟುಂ ಕಣ್ಗೊಳ್ ಪರ್ವಿದ ಕಿಸುಸರೆಗಳುಂ...ಕರಮರ್ವಿಸೆ ಮುನಿಸಿಂ ಕುಮಾರನಂದಿಂತೆಂದಂ (ಶಂಠಾಪು. ೬೦-೦೨); ಪುರ್ವಿನ ಕೊರ್ವು ಕರ್ವುವಿಲ್ಲಂ ಕೀಳ್ಮಾಡೆ (ಗಿ೦೪. ೨-೦೦೫ ವ)· **ಪುಬ್ಬು** : ಒಲವ ಕಣ್ಪುಬ್ಬು ಮೆಯ್ಯೆಟ್ಟಿ ಕೆತ್ತುತ್ತಮಿರೆ (ಶಬ್ದ.ರ. ದೀ. ೦೨೬-೦೯). **ಪುರ್ಬು** : "ಪುರ್ಬುವಲ್ಲಿ ತಾಂ ಭ್ರೂನಾಮಂ" (ಐಸ್ವ.ಕೋ. ೭೦-೦೬); ಜರೆಯಿಂದಂ ಪುರ್ಬು ಜೋಲಲ್ (ಅರೀಪೂ. ೦೬೩); ಕರ್ಬಿನ ಬಿಲ್ಲಂ ಗೆಲೆ ಪುರ್ಬು . . . ದೇಸೆ ಪೊಚ್ಚ ಪೊಸತಾಯ್ತು (ಗಜಾಯು. ೦-೬); ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬೆಳ್ಮಾಡಿ . . . ಬೇಟಕಾತಿಯರೊಪ್ಪಿದರು ನರನಾಥನಿದಿರಿನಲಿ (ಕೊಂಠಾ. ೦-೩-೩೦). **ಹುಬ್ಬು** : ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆದ (ಬಸವ. ೬೦೯) ; ಕೆಂಪ ಕಾಱದವಾಲಿಗಳು . . . ಗಂಟಿಕ್ಕಿದನು ಹುಬ್ಬುಗಳ (ಕುಮ್ಮಾರ. ೩-೨೬) ; ನೋಟದಲಿ ಮದನಾಸ್ತ್ರವೆದೆಯಲಿ ನಾಟವು ವಿಟರುಗಳ ಹುಬ್ಬಿನ ಬೇಟದಲಿ ಬೆಂಡಾದರಗ್ಗದ ನಿರ್ಜಿತೇಂದ್ರಿಯರು (ಕೊರಡಾ. ೦-೦೯-೨೪)· **ಹುರ್ವು** : ಹುರ್ವಿನ ಜರ್ವು ವಿಶ್ವರ ಹುರ್ವಿದ ಬಡತನದ ಕೊರ್ವನುಡುಗಿಸು ಮದಜಿಂ ಹುರ್ವಿನವರೆಂಬ ನಾಮದಗುರ್ವಿನ ಗೋವರ್ದ್ಧನಂಗೆ ನಂದನನೆನಿಪ . . . ನಾಗದೇವಂ (ಎಷ. V, ೧೭ ೨೩ ; 1142).

**ಪುರ್ವು ಗಂಟಿಕ್ಕು**, ಪುರ್ಬು ಗಂಟಿಕ್ಕು, ಹುಬ್ಬು ಗಂಟಿಕ್ಕು=ಕೋಪದಿಂದ ಮುಖವನ್ನು ಸಿಂಡರಿಸು : "ಭ್ರುಕುಟಿಃ, ಭ್ರೂಕುಟಿಃ—ಈ ೨ ಹುಬ್ಬು (ಪುರ್ವು) ಗಂಟಿಕ್ಕುವುದು" (ಕಲಾಡು. ೦೨೬-೯೯) ; ಬಳಿಕೊರ್ವಳಪರಾಧ ರಮಣನಂ ಕಂಡು ನೆಲೆವೊಲೆ ನಡುಗೆ ಪುರ್ಬು ಗಂಟಿಕ್ಕಿ . . . ಶಿಳಿಪಲೆಂದೆಱಗಿದಿನಿಯನನೊದೆಯೆ (ಕಂಖ. ೦೦-೩೯) ; ಪೋರದೆ ಪುರ್ಬು ಗಂಟಿಕ್ಕದೆ ಪುಸಿಯದೆ ಸೇರಿ ಸೇವೆಯನೆಸಗುವುದು (ಹರಿ. ೦-೨೩) ; ಹುಬ್ಬು ಗಂಟಿಕ್ಕಿದ ಮುಖ ಪುನಃ ಅರಳಿಕೊಂಡಿತು (ಕೇಮೋಟ. ೦೦೦); ಪೇಡಂ ಮತ್ತೆ ಹುಬ್ಬು ಗಂಟಿಕ್ಕಿ ನುಡಿದರು (ಮೂಕಿಟ್ಟಿ. ೦೬). **ಹುಬ್ಬಾಡು** = ಹುಬ್ಬನ್ನು ಅಲುಗಾಡಿಸು : ಆಡಿಗೆ ಆರ್ಕೋಟಿ ಕೋಡಗಗಳ್ಕೊಂಡು ದಿನ ಕೋಡಗವು ಕೋಟಿ ಮಡಿದಲ್ಲಿ ಬಳ್ಳು ಹುಬ್ಬಾಡ ಹೊತ್ತಿಲ್ಲ (ಸರ್ವಜ್ಞ. ೨೬೬). **ಹುಬ್ಬು ಕುಣಿಸು**=ಹುಬ್ಬನ್ನು ಎತ್ತರಿಸು ; ಹುಬ್ಬು ಹಾರಿಸು. **ಹುಬ್ಬುಗಂಟು ಹಾಕು**=ಪುರ್ವುಗಂಟಿಕ್ಕು : ಆಗ ಆವನು ಹುಬ್ಬುಗಂಟುಹಾಕಿಕೊಂಡು ನನಗೆ ಬಹಳ ಕೆಲಸವಿದೆ. . . ಎಂದು ಓಡ ಹತ್ತಿದನು (ಮುಂಬಹು. ೯-೩೭); ಆ ರಾಕ್ಷಸನು . . . ಹುಬ್ಬು ಗಂಟುಹಾಕಿಕೊಂಡು ಅವುಡು ಕಚ್ಚಿ,ಇದು ಯಾರು ಎಂದು ಗರ್ಜಿಸಿದನು (ವಕಥಾ. ೯೭). **ಹುಬ್ಬುಗೈಹಚ್ಚು** = (ದೂರದ ವಸ್ತುವು ಚೆನ್ನಾಗಿ ಕಾಣದಾದಾಗ) ಹುಬ್ಬಿನ ಬಳಿ ಅಂಗೈಯನ್ನಿಟ್ಟು ನೆರಳು ಮಾಡು : ದೂರದಲಿ ಯಾರೋ ಮಬ್ಬುಗತ್ತಲಲಿ ಹುಬ್ಬುಗೈಹಚ್ಚಿ ನೋಡುತಿದ್ದಾರೆ ಹೊರಳಿ ಹೊರಳಿ (ಶಂಕುಮ. ೦೬-೨೦). **ಹುಬ್ಬು ಹಾರಿಸು**, **ಹುಬ್ಬು ಹಾರಿಸು** = ಹುಬ್ಬನ್ನು ಕುಣಿಸು : ಮೋಱಯೊಲಿದು ನೋಡಿ ನೃಪಸುತರಿಗೆ ಹುಬ್ಬು ಹಾಱಸುವಳು ನಸುನಗುತ (ಶಕಕ. ೦೨-೬೦); ಚಲುವಾದ ಪೋರಿ ಎಂದೊಬ್ಬ ಹುಬ್ಬು ಹಾರಿಸಿದನು (ಕೃಷರು. ೦೩೬)

[ದೇ. ॥ ತಮಿ. ಪುರುವಮ್, ಪುರೂರ ; ಮಲ. ಪುರಿಗ; ತುಳು. ಪುರುಬು, ಪುರ್ಬು. / ಸಂ. ಭ್ರೂ]

**ಪುಲ್**, ಪುಲು, ಪುಲ್ಲು, ಹುಲು, ಹುಲ್ಲು (ನಾ). ೧. ಗರುಕೆ; ತೃಣ; p ಸಾಮಾನ್ಯವಾಗಿ ದನ, ಕರು ಮುಂತಾದುವುಗಳ ಆಹಾರ : ಬೆಳೆಯೊಳ್ ಪುಲ್ಗಳ್ ಪಲವಕ್ಕುಂ (ವಡ್ಡಾರಾ. ೦೬-೦೯); ಶತಬಿಂದುವಿನ ಮಕ್ಕಳಪ್ಪಯ್ವರು ಗಾಳಿಗೊಡ್ಡಿದ ಪುಲ್ಲ ಬಿಂದುಗಳಂತೆ ನಕುಲಂ ನೆಲಕ್ಕೆ ಸೋವತಂ ಮಾಡಿದಂ (ಶಂಪಠಾ. ೦೩-೪೦ ವ); ಪುಲ್ಲಂ ಸುಲಿವೊಡಂ ಕಿವಿ ಕೀಂಬೊಡೆ ತುಱಸುವೊಡಂ ಪುಲ್ಲಿಂದೆನಿತುಂ ಪ್ರಯೋಜನಮುಂಟು(ಶಂಕಕಂ. ೩೯-೦೯). ೨. (ಆಲಂ) ಬೆಲೆಯಿಲ್ಲದ ವಸ್ತು; ನಿಕೃಷ್ಟವಾದುದು; ಕ್ಷುದ್ರವಾದುದು ; ಅಲ್ಪವಾದುದು : ಆವನಂ ಪುಲ್ಲಂ ತಿಳಿದಂ . . . ಸ್ಮರಂ ಹರನಂ ಪುಲ್ಗೆ ಬಗೆದಂ (ಕಪ್ಪಾತು. ೨೦೯ ಕೃಯೋ). **ಪುಲು** : ೧. ಕ್ಷೀರಶರಧಿಯೊಳಿಪ್ಪ ಹಂಸಂ ಕ್ಷಾರನೀರಂ ಸೇವಿಪುದೆ ಕಂಠೀರವಂ ಪುಲು[ಶಾಕಂ. ಲ್] ಮೇವುದೇ (ಚಕೃ. ೧೦-೦೦); ಸುತನ ಸಾವಂ ಲೋಗರಱಯದ ಗತಿಯೊಳು ಗೋದಣದೊಳಗಮಂ ಹಾಯ್ಕಿ ಪು[ಕಃಶಂ.ಹು]ಲು ಮುಚ್ಚಿ (ಬಸಕೃ. ೨೯-೩೭). ೨. 'ಪುಲುಬೂತು' ಪರಾ. **ಪುಲ್ಲು** : ೧. ವ್ಯಳಟಬ್ಬೂಡರ ತಟ್ಗೆಯುರಾಳೆ ಆವುಕ್ಕ ಇಯಾರೆ ಪಣ ಪುಲ್ಲು (ಎಕ. IV, ಗುಂಡ್ಲುಪೇ. ೯೭-೪; ಸು. 760); ಪಶುಗಳು ಬೆಳೆದ ಹೊಲದತ್ತ ತೆಗೆಯಲು ಸರಸಿಗಳು ತುಂಬಿರ್ದ ಬೆಂಚೆಗಳ ಒತ್ತಿನಲಿ ನಿಲಿಸಿದಡೆ ಬಾಯ್ದೆಱೆಯುತ್ತೆ ಪುಲ್ಲಿಗೆ ಮೋಱಯಂ ನೀಡಿತ್ತೆ ನೀರಿಂಗೆ (ಬಸಕೃ. ೬೦-೨೩). **ಹುಲು** : ೧. ಎಂದಿನಂತುದಯಕಾಲದೊಳೆದ್ದು ಹುಲು ಹುಳ್ಳಿಗೆಂದರಣ್ಯಕ್ಕೆ ನಡೆದು (ಹಕಳಾ. ೦೨-೬). ೨. ಘಾಸಿಯಾದನು ದೈತ್ಯ ಲಜ್ಜೆಯ ನೀಗಿ ಹುಲುವಾಗಿ . . . ನಾಚಿ ಲಂಕೆಯ ಹೊಕ್ಕ ರಾವಣನು (ತೊರಿರಾ. ೨೨-೩೩); ನಂಟತನ ಕೂಡಿ ಬರುವ ಹುಲು ಆಸೆ ನಿನಗಿನ್ನು ಬೇಡ (ಕುರುಕ್ಷೇ. ೦೬). 'ಹುಲುಮನುಜ' ಪರಾ. **ಹುಲ್ಲು** : ೧. ಹುಲ್ಲ ಕಚ್ಚಿ ಹೊಲೆಯನ ಮೇಳಾಪ ಅಲ್ಲಿ ಹುರುಳಿಲ್ಲ (ಬಸವ. ೧೦೦೨); ಹಳೆಯಮ್ಮ ಗೌಜವ ಸುಟ್ಟುದಾಸರಕಿತ್ತಿ ನಡೆವ ಬೀಡ ನಡೆಯಲೀಯದೆ ಕಾದುತ್ತಿರಲು . . . ಹುತ್ತಮೇಱ ಹುಲ್ಲಂ ಕಚ್ಚಿದರ ಕೊಲಲೊಲ್ಲದ ಕಾಯ್ದು ಕಳಿಹಿ ಸತ್ತು ಸುರಲೋಕಪ್ರಾಪ್ತನಾದ (ಎಕಂ. ೦೯೩೦, ೬೬-೯; 1164); ಹೂವ ತರುವರ ಮನೆಗೆ ಹುಲ್ಲ ತರುವ ಅವ್ವೆ ಲಕುಮಿಬಾರಮ್ಮ ಇಪಗಿಲ್ಲ ಗರುವ (ಪುರಂದ. ೦-೦೯೭ ಕಲ್ಯಾ); ಹುಲ್ಲಾಗು ಬೆಟ್ಟದಡಿ. ಮನೆಗೆ ಮಲ್ಲಿಗೆಯಾಗು (ಮಂಕುತಿ. ೬೮೯): ಹುಟ್ಟಿಸಿದ ದೇವರು ಹುಲ್ಲು ಮೇಯಿಸಿಯಾನೆ ?

(ಗಾದೆ). ೨. ನಿಮ್ಮ ಮಂಡೆಗೆ ಹೂವ ತಪಸಲ್ಲದೆ ಹುಲ್ಲ ತಾರೆನು (ವು.ಹಾರೇ. ೮. ೭೦-೧೯೬).

ಪುಲ್ಲಂ ಕರ್ಚು = (ಶರಣಾಗತಿಯನ್ನು ಸೂಚಿಸುವ ಸಲುವಾಗಿ) ಬಾಯಲ್ಲಿ ಹುಲ್ಲನ್ನು ಕಚ್ಚಿ ಹಿಡಿ : ಪುಲ್ಲಂ ಕರ್ಚಿಯುಂ ಪುತ್ತನಡಿಗೆಯುಂ (ಕಬಿಗ. ೩-೦೯೯); ಕಲರ್ ಶರಣೆಂದು ಉಪಾರನ ಕಾಲ್ಗೆರಗಿ ಪುಲ್ಲಂ ಕರ್ಚಿ ಪೊಡೆವಟ್ಟರ್ (ವಡ್ಡಾ.ರಾ. ೬೨-೦೩). ಪುಲ್ಲ ನೀರ್ = ಹುಲ್ಲಿನಲ್ಲಿ ನಿಂತಿರುವ (ಮಂಜು, ಮಳೆಹನಿ ಮೊದಲಾದುವುಗಳ) ನೀರು : ಪನಿವ ಪುಲ್ಲ ನೀರ್ಗಳ್ವೆರಸಲರುದುರುತ್ತಮಿರ್ದುವಂತಾ ಕ್ಷಣದೊಳ್ (ಕಾದಂಪೂ. ೦೧೯). 'ಪನಿನೀರ್' ಪರಾ. ಪುಲ್ಲ ಬೆಂಟೆ = ಹುಲ್ಲಿನ ಹಗ್ಗ : ಪುಲ್ಲ ಬೆಂ[ಟಾಕಾಂ. ಪುಲ್ಲ ಬೆರ, ಪೊಲ್ಲ ಬೆಂ]ಟೆಯುಂ ಪೊಸೆದು ಕಿಚ್ಚುಮೊಗ್ಗೆಯ ಕೊಡನುಂ ಬೆಂಟೆಯುಮಂ ಕೊಂಡು ಪೋಗಿ (ವಡ್ಡಾ.ರಾ. ೦೫೩-೦೦). ಪುಲ್ಲ ಮುಂಜಿ = ಹುಲ್ಲಿನ ತುಂಡು ; ಗರುಕೆಯ ತುಂಡು : ಪುರಹರನಿಟ್ಟ ಪುಲ್ಲ ಮುಂಜಿಯುಂ ಮುರವೈರಿ ವಿರಿಂಚಿಮುಖ್ಯನಿರ್ಜರರದನೆತ್ತಲಾಱದೆ ಪಲಂ ಧೃತಿಗುಂದಿದರ್ (ರಾಜಶೇ. ೦೩-೨೪).

[ದೇ. ೫ ತಮಿ. ಮಲ. ಕೋತ. ತೊದ. ಪುಲ್; ತುಳು. ಪುಲ್ಲು ;ಕೊಡ. ಪಿಲ್ಲ್; ತೆಲು. ಪುಲು, ಪುಲ್ಲು, ಪಿಲ್ಲು]

**ಪುಲ.** ಪುಳ$_2$ (ಗು). ೧. ದೊಡ್ಡ ; ಬೃಹತ್ತಾದ. (ನಾ). ೨. ಗಾತ್ರ ; ಆಕಾರ. ೩. ನವಿರೇಳುವಿಕೆ ; ಪುಳಕ. ಪುಳ$_2$ : ೩. ಕಸ್ತೂರಿಗೆ 'ತಾಯಿ' ಎಂಬ ಶಬ್ದ ಪುಳವನ್ನುಂಟುಮಾಡಿತು (ಶಂಬರ. ೦೨೬). [ಸಂ.]

**ಪುಲಕ.** ಪುಳಕ$_1$ (ನಾ). ೧. ಮೈನವಿರೇಳುವಿಕೆ : ರೋಮಾಂಚನ : ಪುಲಕಂ ಜಾನಕಿಗುತ್ಸವಂ ಜನಕರಾಜಂಗೆ . . . ಆಯ್ತೇಱಿಸಿ ನೀವಿ ಜೇವೊಡೆಯೆ ವಜ್ರಾವರ್ತಮುಂ ರಾಘವಂ (ಕಂಠಾವಪ್ರಾ. ೫-೯೧) ; ತೃಣರಾಶಿ ಮೈದೋರಿ ಪಚ್ಚೆಯ ಪುಲಕದಂತೆ (ಶಬ್ದಾಂಗ. ೬೦ ೦೬೭೩). ೨. (ಪ್ರಾಣಿಗಳ ಮೈಗೆ ಅಂಟಿಕೊಳ್ಳುವ) ಕ್ರಿಮಿ. ೩. ಅನ್ನದ ಉಂಡೆ. ೪. ಹಾರಕ ಮೊದಲಾದ ತೃಣಧಾನ್ಯ. ಪುಳಕ$_1$ : ೧. "ಪೊಂಪುಱಿಯನೆ ಪುಳಕಾಕ್ಯಂ" (ಚಂದ. ೯); ತಿಳಿಪಲದಿಗೆಱಗಿದ್ದೋಪನ ತಳಂಗಳಾ ತೀಟದಿಂ ಪವಂಗಳೊಳೋಗಿದಾ ಪುಳಕಚಂಗಂಗಳ್ ಕಳೆದುವು ಮುಳಿಸಂ ನಲ್ಲಳ್ಗೆ (ಕಬಿಗ. ೩-೦೦); ಪುಳಕಂ ಪುದಿದಿರೆ ರಾಗಂ ಪೊಳಪು ತನುರುಚಿಗೆ ಮಾಡೆ . . . ಕಳಿಕೆಯೊಳೆ ತುಱುಗಿ ಪಳಿವೊಳೆ ತಳತಳಿಸಿದದೊಂದಶೋಕಲತೆಯನೆ ಪೋಲ್ತಳ್ (ಅಂಕ್ರ. ೬-೨೯); ಮಾನ ಮಾನ ಬೆರಸಿದಲ್ಲಿ ತನು ಕರಗದಿದ್ದರೆ ಸೋಂಕಿನಲ್ಲಿ ಪುಳಕಂಗಳು ಹೊಱಹೊಮ್ಮದಿದ್ದರೆ . . . ಎನ್ನಲ್ಲಿಲ್ಲವಾಗಿ ಆನು ಡಂಭಕ ಕಾಣಿರೇ (ಬಸವ. ೩೭೬). "ಅನ್ನದಗುಟಲ್ಲಿ ಧಾನ್ಯ ದಲಿ ಪುಳ[ಕಾಪಂ. ಳು]ಕವೆಂದೆನಿಕ್ಕು" (ಮಂಗರಾ. ೦೯೩-೨೨). ೫. ಅಕ್ಕರೆ; ಕಕುಲಾತಿ: ಈವತ್ತು ಒಮ್ಮಿಂದೊಮ್ಮೆಲೆ ಆ ಚಂದ್ರಭಾಗಕ್ಕನ ಬಗ್ಗೆ ಇಷ್ಟೊಂದು ಪುಳಕವೇಕೆ ? (ಮುಂದಾರಾ. ೫೦); ಆ ಹುಡುಗಿಯ ಬಗ್ಗೆ ಇಷ್ಟೇಕೆ ಪುಳಕವೋ (ಮುಂದಾರಾ. ೦೯೫). ೬. ಒಂದು ಬಗೆಯ ರತ್ನ. "ಪುಳಕಮೆನಿಕ್ಕುಂ ರತುನೋಪಳಮುಂ . . . ಕೀಟಕಮುಂ" (ಪಟ್ಟಕೋ. ೦೨೯-೬೮). [ಸಂ.]

**ಪುಲಕಂಗೊಡು** (ಕ್ರಿ). ನವಿರೇಳು ; ರೋಮಾಂಚಿತವಾಗು : ನಿಮಿರ್ದತ್ತಿದೊಂದು ಪುರ್ವಿಂ ಮೆರೆವೀ ವದನಂ ಪುಲಕಂಗೊಡುವ ೯ದಪಿ ಕನ್ನಡಿವುದೆ ನ್ಯೊಳಿವಪಭಿರತಿಯುಂ (ಕಾಶುಂಕ. ೩೯-೬೬). [ಪುಲಕ + ಕೊಡು$_1$]

**ಪುಲಕವೇರು** (ಕ್ರಿ). ೧. ರೋಮಾಂಚನ ಹೊಂದು. ೨. (ಅಲಂ) ಚಿಗುರು ; ಮೊಳಕೆಯೊಡೆ : ನನ್ನ ಶರೀರ, ಮನಸ್ಸು ವಸಂತದ ಮಲಯ ಪವನಕ್ಕೆ ಪುಲಕವೇರುವ ಬಕುಲಪನದ ನವಪಲ್ಲವರಾಶಿಯ ಹಾಗೆ ಕಂಪಿಸಿ ಕಂಪಿಸಿ ತತ್ತರಿಸಿ ಹೋಯ್ತು (ಇಚ್ಛಕ. ೯೯೬).

[ಪುಲಕ + ಏರು$_1$ (< ಏಱ್$_1$)]

**ಪುಲಕಾಂಕುರ.** ಪುಳಕಾಂಕುರ (ನಾ). = ಪುಲಕ ೧ : ಪುಲಕಾಂಕುರ ಮೊಗೆತರೆ ಕೋಮಲೆಯುಪ್ಪಿದ ಕಾಂತಕರವಕಂ ಕಣ್ದೆಱೆದಾ ಕುಲಟೆಯೆ ತಳ್ಳಳೆ ಗೆತ್ತುಮ್ಮಳಿಸಿದನಿಂತಪ್ಪ ಪಾಪಭೀರುಗಳೊಳರೇ (ಲೀಲಾವ. ೦೯-೦೩೦). **ಪುಳಕಾಂಕುರ** : ಒದವೆ ಪುಳಕಾಂಕುರಂಗಳ್ . . . ಇದಿರೆಟ್ಟಿಳ್ ತರಳ ನಯನೆ ಸಂಭ್ರಮದಿಂದಂ (ಕಾತುಂಠ. ೩೫); ಕೈಗನ್ನಡಿಯುವೊಲೆಲ್ಲರ ಕೈಗೊಪ್ಪುವ ಮಗನನೆತ್ತಿ ಪುಳಕಾಂಕುರಮಂ ಮೈಗಗ್ಗಳಿಸವ ಕಾಂತೆಯ ಕೈಗವುದೇಂ ಭೇದಮುಂಟೆ ಸೀರೆಯ ಕೈಗು (ಮಲ್ಲಿಪು. ೩-೧೦೫) ; ನೆಗೆದ ಪುಳಕಾಂಕುರದ ನೆಱಿ ಮುಗುಳ್ದಕ್ಷಿಯು ಮಿಡುಪದಂಗದಿಳಿದೇಱದೆ ನೆಟ್ಟಗೆ ನಿಂದ ಸುಯ್ಯ ಸುಳಿಯದ ಬಗೆಯ ಪೊದರ್ಪಸಿಪ ತಾಪಸಂ ತಪಮಿರ್ದಂ (ಶಬರಂ. ೨-೯೯). [ಸಂ.]

**ಪುಲಕಿತ,** ಪುಳಕಿತ (ಗು). ೧. ರೋಮಾಂಚನ ಹೊಂದಿದ ; ರೋಮಾಂಚಿತವಾದ : ದಶರಥಮಹೀನಾಥು ಸುತಮುಖನಿರೀಕ್ಷಣಾ ಭರದಿಂ ಪಾರಿಜಾತಂ ಕೋರಕಿತವಾದಂತೆ ಪುಲಕಿತಶರೀರನಾಗಿ (ಶಂರಾಮಾ. ೩-೦೦೭ವ). (ನಾ). ೨. ರೋಮಾಂಚನಗೊಂಡ ವ್ಯಕ್ತಿ : ಅತ್ತಿಮುಟ್ಟೆ ಪುಲಕಿತಳಾಗಿ ನುಡಿದಳು (ದಾಸಕಂ. ೦೭೭); ತುಂಗಕ್ಕ . . . ತುಸು ಸಮಯದ ಮೇಲೆ ಥಟ್ಟನೆ ಹೊಳೆದ ಒಂದು ಹೊಸ ವಿಚಾರದಿಂದ ಪುಲಕಿತಳಾದಂತೆ ತುಟಿ ಕಚ್ಚಿಕೊಂಡಳು (ಪುರುದಾ. ೫೦). **ಪುಳಕಿತ** : ೧. ಪುಳಕಿತಕಪೋಳಫಳಕಂ ವಿಕಸಿತಮದಿರಾರುಣೇಕ್ಷಣಂ ಸ್ಫುರಿತೋಷ್ಠಂ ಕೆಳದೀ ನಿನ್ನ ಮುಖಂ ತಳೆವುಳಗೊಳಿಸುಗುಮಿಂತು ನಿಭೃತಶೃಂಗಾರರಸಂ (ಕಬಿಗ. ೩-೦೯೨); ಮುನಿಕಾಂತಾದರ್ಶನೋತ್ಕಂಠೆ ಪುಳಕಿತಸರ್ವಾಂಗಿ ಇಂತಾತಾತುರದೊಳಿರ್ದಳ್ (ರಾಮಾಶ್ವ. ೨೯-೪). ೩. ರೋಮಾಂಚಿತವಾದುದುಂ: ಆಲಿಕಲ್ಲ ರೂಹಿನಂತೆ ಅರಗಿನ ಪುತ್ಥಳಿಯಂತೆ ತನು ಪುಳಕಿತವಾದ ಬೆಮರುಬಿಂದುಗಳಿಲ್ಲಾ . . . ಮನಪೂಲಿದು ನೆರೆವ ಭರವನೇನ ಹೇಳುವೆನಯ್ಯಾ (ಬಸವ. ೪೯೩) ; ಇಳೆಯೊಳ್ ಪಾರ್ವತಿಯುಮುದಯಿಸೆ . . . ಪುಳಕಿತಮಾಯ್ತುಂದುಧರನ ವರವಾಮಾಂಗಂ (ಗಂಠಕ. ೩-೯೬). [ಸಂ.]

**ಪುಲಕಿತಗೊಳ್ಳು** (ಕ್ರಿ). ರೋಮಾಂಚನ ಹೊಂದು ; ಜುಮ್ಮೆನ್ನು : ಹದಿನಾರನೆಯ ಶತಮಾನದ ಉತ್ತರಾರ್ಧ ಮತ್ತು ಹದಿನೇಳನೆಯ ಶತಮಾನದ ಪೂರ್ವಾರ್ಧಗಳು ನೂತನ ಕಾವ್ಯಪ್ರವಾಹದಿಂದ ಪುಲಕಿತಗೊಂಡವು (ಶಾವಗೀ. ೫೩). [ಪುಲಕಿತ + ಕೊಳ್ಳು$_1$ (<ಕೊಳ್$_1$)]

**ಪುಲಕಿಸು,** ಪುಳಕಿಸು (ಕ್ರಿ). ೧. ಪುಲಕಿತಗೊಳ್ಳು ; ರೋಮಾಂಚಿತವಾಗು : ಅಲ್ಲಿ ಕುಳಿತನು ಮೆಲ್ಲನೆಯು ತನುವೆಲ್ಲ ಪುಲಕಿಸಲು (ಗದಾ. ೨-೨೨). **ಪುಳಕಿಸು** : ೧. ಗಿರಿರಾಜನೊಡಂಬಟ್ಟುವರದಿಂದಂ ಪುಳಕಿಸುತ್ತೆ ಪುಟಮೇಳುತ್ತುಂ ಪಾಚಾರಪಟುಗಳೆನಿಸುವ ತರುಣಿಮುತಂ ಕೂಡಿಕೊಟ್ಟು ಸಂತಸದಿಂವಂ (ಗಂಠಕ. ೩-೯). ೨. ಸಂತೋಷಪಡು ; ಉತ್ಸಾಹಿಸು : ಹರನ ಕೃಪೆಯಾಯಿತೆಂದೆನುತೆ ಪುಳಕಿಸುತಿರಲು (ಬಸಕ. ೦-೩೨); ಚೆಲುವಲರಿ ಪೋಪಂತೆ ಭಕ್ತರು ಪುಳಕಿಸುತ ಕೇಳಿಕೆಗಳಿಂ ತಾವಳವಡಿಸುತಾಡುತ್ತ ಪಾಡುತ ಹೋಗುತಿರಲು(ಶಿತತ್ವ. ೫೭-೯೬) ; ಗಂಗಾತನುಜನುಚಿತೋಕ್ತಿಗಳ ನೆನೆವಡಿಗಡಿಗೆ ಪುಳಕಿಸುತ ವಿನುತಮತಿ ನಡೆತರಲು (ಕುಮಾವ್ಯಾ. ೨-೨೯).

[ಪುಲಕ + _ ಇಸು$_3$]

**ಪುಲಕೇಶಿ** 'ಪುಲಿಕೇಶಿ' ನೋ.

**ಪುಲವಡು** (ನಾ). ಹುಲ್ಲುಗಾವಲು ; ಗೋಮಾಳ : ದೇವಗ್ರಿಗ್ಗೆ ಸಾಸಿರ ಬಳ್ಳಿಯ ತೋಂಟ ದೇವರ ಸುತ್ತಣ ಬೆದ್ದಲೆ ತೋಟಗಟ್ಟು ಪುಲವಡು ಕೆಂಗಾಡು (ಸೌಇಇ. IX-1. ೨೦೬-೨೩ ; 1122). 'ಪುಲ್ಪಡಿ' ಪರಾ.

[?. / ತುಳು. ಪುಲವಾಡೆ, ಪುಲಾಡಿ]

**ಪುಲಾಕ** (ನಾ). ೧. ಜೊಳ್ಳಾದ ಕಾಳು. ೨. ಅನ್ನದ ಮುದ್ದೆ.— ೧೦ಡ : "ಫಳದರ್ವಿವ ತುಷ ಧಾನ್ಯಾವಳಿ ಭಕ್ತಸಿಕ್ಥಕವಿವೆ ಪುಲಾ

ಕಾವ್ಯಂಗಳ್" (ವಸ್ತುಕೋ. ೦೨೯-೬೮). ೩. ಸಂಕ್ಷೇಪ; ಸಂಗ್ರಹಗೊಳಿಸಿ ದುದು. ೪. ಅಕ್ಕಿಯ ಗಂಜಿ. ೫. [ಜೈನ]ಐದು ಬಗೆಯ ಮುನಿವರ್ಗ ಗಳಲ್ಲಿ ಒಂದು; ಃ ಉತ್ತರಗುಣಭಾವನಾರಹಿತರೂ ವ್ರತಗಳಲ್ಲಿ ಪರಿ ಪೂರ್ಣತೆಯನ್ನು ಹೊಂದದೆ ಇರುವವರೂ ಆದ ಮುನಿಗಳು ಅಶುದ್ಧ ವಾದ ಪುಲಾಕ(=ಅನ್ನದ ಮುದ್ದೆ)ದಂತೆ ಇರುವುದರಿಂದ ಈ ಹೆಸರನ್ನು ಪಡೆದಿದ್ದಾರೆ: ಏತ್ತನುಂ ಅಪರಿಪೂರ್ಣವ್ರತರುಂ ಉತ್ತರ ಗುಣಭಾವನಾರಹಿತರುಂ ಅಪ್ಪ ಪುಲಾಕರುಂ (ತತ್ತ್ವಸೂ. ೩೩೬); ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಐದು ಪ್ರಕಾರಗಳು (ಕೃಷಪ. ೯೯). [ಸಂ.]

**ಪುಲಾವು** 'ಪಲಾವ್' ನೋ.

**ಪುಲಿ**, ಹುಲಿ₁ (ನಾ). ೧. (ಅರಣ್ಯದಲ್ಲಿ ಬೇಟೆಯಾಡಿ ಜೀವಿಸುವ, ಮೈ ಮೇಲೆ ಕರಿಯ ಪಟ್ಟೆಗಳುಳ್ಳ ಹಳದಿಬಣ್ಣದ) ಒಂದು ಬಗೆಯ ಕ್ರೂರಮೃಗ ; ವ್ಯಾಘ್ರ : ಪುಲಿ ಪುಲಿ ಪರಿವುದು ಪೋಪೊ ಗೆಲೆ ಎಲೆ ಪೆಜಪಿಗು (೪೭೮೧.೨-೨೬); ತಪ್ಪುಗವುಣ್ಣನು ಪುಲಿಯನ್ ಇಱಿದು × × × ಸತ್ತೊಪೆ (ಮೈಅ೨. ೦೯೨೭. ೯೯ ೩; 855); ಪೊಯ್ತು ಸಿಡಿಲ್ ತಿಂಬರೆವಾವು ಪಾಯ್ತು ಪುಲಿಯೆಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ (ಅಜಿಪು. ೬-೩೯); ಈಂದ ಪುಲಿಯೂ ಪೋಲಿರ್ದಳ್ (ಕವಿಚ. ೦೭೮ ಕೃಯೋ). ೨. ಒಬ್ಬಾತನ ಹೆಸರು: ಪೆರ್ಗಡೆಗೌಡ ಶ್ರೀ ಪುಲಿ ಅಗಳಿ ಪನ್ನೆರಡುಮೂಳೆ ಪಾಳುಕೋಡ ಕೆಱೆಯು ಅಯ್ನೂನ್ದಿ ಕಾಡು ಪತ್ತೊನ್ದಿ ಪ್ರಸಾದಂಗೆಯ್ದೋರ್ (ಮೈಅ೦. ೦೯೨೬. ೦೦೦ ೩; ೧೨ನೆಯ ೭೩). (ಗು). ೩. (ಆಲಂ) ದೊಡ್ಡದಾದ ; ದೊಡ್ಡ : 'ಪುಲಿವಲೆ' ಪರಾ. ಹುಲಿ₁ : ೧. "ವ್ಯಾಘ್ರಃ, ದ್ವೀಪೀ . . . ಮೃಗಾರಿಃ—ಈ ೭ ಹುಲಿ" (ಕರಾಯು. ೬೩-೭೩); ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಗೆ ಉಣಬಾರದು (ಬಸವ. ೬೬೩) ಹುಲಿಯು ಬಾಯಿದೆಱೆದೊತ್ತಿದೊಡೆ ಪರಸಂಬಲಕೆ ಸಂಕಟವೇನು (ಕುವ್ಯಾಅ. ೨೦-೩೦). ೪. ಒಂದು ಬಗೆಯ ಸಸ್ಯ : ಹುಲಿಯ ಬೀಜ, ಕರ್ನಾಟಕ ಶೃಂಗಿ, ರಕ್ತಗಂಧಕ (ಅಪ್ಪಾಂ. ೯೨).

**ಪುಲಿಯ ಬಾಲ**=ಒಂದು ಬಗೆಯ ಆಭರಣ : ಕುಜುಪಿನ ಪಟ ಕಿಱು ಘಂಟೆ ಪುಲಿಯ ಬಾಲ ಪೆಱೆಯೆ ಗಡಮರೆಯುತ್ತಂದು . . . ಇಱಿದಾಡಿ ದರು ರಣದೊಳಗೆ (ಕುಭಾಶಾಂ. ೦೨-೬೩). **ಹುಲಿಕುರಿ ಆಟ**=ನಾಲ್ಕು ಕಲ್ಲು ಗಳನ್ನು ಹುಲಿಗಳಾಗಿಯೂ ಹದಿನೆಂಟು (ಹುಣಸೆ) ಬೀಜಗಳನ್ನು ಕುರಿಗಳಾಗಿಯೂ ಇಟ್ಟುಕೊಂಡು ಆಡುವ ಒಂದು ಬಗೆಯ ಆಟ : ಹಳ್ಳಿಗರು ಚೌಕಾಬಾರ, ಹುಲಿಕುರಿ ಆಟ ಮೊದಲಾದ ಆಟಗಳನ್ನು ಆಡುತ್ತಾರೆ (ಕಾವ). **ಹುಲಿಮನೆಯಾಟ**=ಹುಲಿಕುರಿಯಾಟ : (೬). **ಹುಲಿಯ ಜಂಗುಳಿ, ಹುಲಿಯ ಜ್ಯಗುಳಿ**=ಒಂದು ಬಿರುದು : ಸೊರಬದ ಹುಲಿಯ ಜಂಗುಳಿ ಬೀರಣ್ಣನ ಮಗ (ಎಕ. VIII, ಸೊರಬ. ೯೬-೯; 1018 ?); ಭಾಸೆಗೆ ತಪ್ಪುವ ರಾಯರ ಗಂಡ ಹುಲಿಯ ಜ್ಯಗುಳಿಯ ಮೊತ್ತದ ಸೇನಾ ನಾಯಕಂ (ಎಕ. III, ಮಂತ್ರ. ೬೩-೨೬; 1305 ?).

[ದೇ. ॥ ತಮಿ. ಪುಲಿ, ಪುಲ್ ; ಮಲ. ಕೊಡ. ತೆಲು. ಪುಲಿ ; ತುಳು. ಪಿಲಿ ; ಕೋತ. ಪುಜ್ ; ಕೋಲಾ. ನಾಯ್ಕಿ. ಪುಲ್ ; ಗೊಂಡಿ. ಪರ್ಲೀ]

△ **ಪುಲಿಂಗಿಲ್** 'ಪುಲಿಗಿಲ್' ನೋ.

**ಪುಲಿಂದ**, ಪುಳಿಂದ (ನಾ). ೧. ಕಾಡಿನಲ್ಲಿ ವಾಸಿಸುವ ಒಂದು ಜನಾಂಗ; ಭಿಲ್ಲಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು : ಬೇಡ; ಶಬರ: 'ಪುಲಿಂದಿನಿ' ಪರಾ. **ಪುಳಿಂದ** : ೧. "ಕಿರಾತಃ, ಶಬರಃ, ನಿಷಾದಃ, ಪುಳಿಂದಃ, ನಾಹಳಃ, ಭಟಃ, ಮಾಳಾ, ಮ್ಲೇಚ್ಛಃ—ಈ ೮ ಬೇಡರ್ ಮೊದಲಾಗುಳ್ಳಂತ್ಯಜಾತಿಗಳ್" (ಕರಾಯು ೯೮-೯೯೩); ಅವರುಮವರೆರ್ದೆಗೊಳ್ವುದಿದಾರುವನೆಂದೊಡೆ ಬಾಣಕೃತಿ ಪುಳಿಂದನ ಸಂಧಾನಮನೆಯ್ದಿದತ್ತು ಮಾತ್ರಿನ ಕವಿಕುಳದೆರ್ದೆಗೊಳ್ವುದೆಂಬುದೊಂದಚ್ಚರಿಯೋ (ಕಾದಂಪು. ೪); ಆ ಮರದೊಳಿರ್ಪ ಕಪೋತಶಿಶುಮಾಣಿ ಕಂಡು ಕರುಣಾರಸಾರ್ದ್ರಹೃದಯನಾಗಿ . . . ಚಂಚೂಪುಟದಿನೊಂದು ಕೋಳ್ಪಿಯಂ ಕರ್ಚಿ ತಂದು ಪುಳಿಂದನ ಮುಂದಿಟ್ಟು (ಶಾಂತಪು. ೨೯೩-೧೭). ೨. ನಾವೆಯ ಒಂದು ಭಾಗ ; ನೌಕಾಶಿರ : "ಪುಳಿಂದಃ, ವಂಗಃ — ಈ ೨ ನಾವೆಯ ಬಿಸುಜು" (ಕರಾಯು. ೧೧೧-೩೦); "ಹಡಗಿನಿದ್ದೆಸೆ ಪುಳಿಂದ[ಪಾ. ಪುಳಿಂಗಂ, ಪುಳಿನು] ವಂಗಮುಕ್ತು" (ಮಂಗರಾ. ೦೨೧.೩). [ಸಂ.]

**ಪುಲಿಂದಿನಿ**, ಪುಳಿಂದಿನಿ (ನಾ). ೧. ಬೇಡರವಳು ; ಬೇಡಿತಿ ; ಶಬರಿ : ಉಳಿದು ಪುಲಿಂ[ಪಾ. ಳಿಂ]ದಿನೀವಿಹಿತವಿಭ್ರಮಮುಂ ಸುರಕಾಮಿನೀಜನಂ ಬಳಸಿರೆ ತಾನುಮಂತೆ ನಗನಂದನೆ . . . ನೆಲಸಿರ್ದಳುದಾರಶೋಭೆಯಿಂ (ಕಾಶಿಂ. ೩-೦೩). **ಪುಳಿಂದಿನಿ** : ೧. ಗಂಡನಂ ತೊಲಗದೆ ಪಿಂದೆ ಬಿಸ್ಸಿಡಿದು ಬರ್ಪ ಪುಳಿಂದಿನಿಯೊರ್ವಳೊಪ್ಪಿದಳ್ (ಹರಿಪು. ೧೦-೧೦೬); ಅಚಲೇಂದ್ರ ಮೊಸೆದಿರ್ಪುದು ಪುಳಿಂದಿನೀತನುಗಂಧಬಂಧುರದೊಳು (ಕೃಬಿಶ. ೦೦-೯). ೨. [ಸಂಗೀತ] ಒಂದು ರಾಗದ ಹೆಸರು : ಕೌಶಿಕ ವೇಳಾವಳಿ . . . ಪುಳಿಂದಿನಿ . . . ಎಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗ ದಿಂದ ಪುಟ್ಟಿದುವು (ಅಪೀಕ. ೨೩೯). [< ಸಂ. ಪುಲಿಂದೀ]

**ಪುಲಿಕದ್ದ** (ನಾ). ಒಬ್ಬಾತನ ಹೆಸರು : ಕಿತ್ತರಸಂ ಪಟ್ಟಂಗಟ್ಟಿಸ ಪಾಂಗ ವುಲಿಕದ್ದಅರಸರ್ ಸಿಯಗೆಲ್ಲಕ್ಕಾರ್ಗಿ ಕೊಪಯಾರನ್ ಕಿಕ್ಕೊರ್ಗಳತ್ತುಬಗ ಬಳ್ಳಿಮುಳಿಱಿದು ವಿಟ್ಟೋಂ (ಎಕ. XVI, ತುಮುಕೂ. ೯೦-೯; ಸು. 775). [ ? ]

**ಪುಲಿಕರನಗರ**, ಪುರಿಕರನಗರ (ನಾ). ಒಂದು ಊರಿನ ಹೆಸರು : ಃ ಧಾರವಾಡಜಿಲ್ಲೆಯ ಈಗಿನ ಲಕ್ಷ್ಮೇಶ್ವರ : ಪುಲಿಕರನಗರಸ್ಯ ಶಂಖತೀರ್ಥವಸತೇಃ (ಇಆ. VII, ೦೦೭-೦೯ ; 10ನೆಯ ೭೩) ; ಪುಲಿಕರ ನಗರ ತ್ರಿಶತ್‌ಗ್ರಾಮಾಂತರ್ವರ್ತಿ ಹುಲ್ಲುಂಗೂರು ಮುಖ್ಯ ಬಹು ವಿಷಯಂ ಸಿಂಹಣರಾಯ್ಯಾಲಬಧ್ವಾ (ಕಇ. IV, ೩೯-೨೯; 1245). **ಪುರಿಕರ ನಗರ** : ಶ್ರೀ ಚಿಕ್ಕರಾಣಕೇನ ಪುರಿಕರನಗರೇ . . . ಸಂಬೊಳಲ ನಾಮ ಗ್ರಾಮಂ ಸರ್ವಬಾಧಾಪರಿಹಾರಂ ದದೌ (ಸೌಇಇ. XX, ೩ ೨೬; 723); ಶ್ರೀಮಂತ್ ಪುರಿಕರನಗರ ಪ್ರಖ್ಯಾತ ಶ್ರೀಶಂಖಜಿನೇಂದ್ರ ನಿತ್ಯನೈಮಿತ್ತಿಕ ಪೂಜಾನಿಮಿತ್ತಂ . . . ಕದ್ದಮಗ್ರಾಮಂ ದತ್ತವಾನ್ (ಸೌಇಇ. XX, ೬-೦೯; 730). 'ಪುಲಿಗೆಱೆ' ಪರಾ.

[ಃ ಇದು 'ಪುಲಿಗೆಱೆ' ಎಂಬ ಶಬ್ದದ ಸಂಸ್ಕೃತೀಕರಣ]

**ಪುಲಿಕಲ್ಲದಿ** (ನಾ). ಒಬ್ಬಾತನ ಹೆಸರು : ಕೊಜ್ಜುಗಮುತ್ತರಸರ್ಕೆ ಇಪ್ಪತ್ತಾಱನೆಯ ವರ್ಷದುಳ್ ಪುಲಿಕಲ್ಲದಿ ಅಪ್ಪದ ವಾರ್ಕೆಉಳ್ ಸೆಗಣ್ಣನೊಳ್ ಎಱಿದು ವಿಟ್ಟೊ (ಎಕ. X (೮), ಕೋಲಾರ. ೬೮-೨; ಸು. 752). [ ? ]

**ಪುಲಿಕಲ್ಲು**, ಹುಲಿಕಲ್ಲು (ನಾ). ಎರಡು ಅಥವಾ ಮೂರು ಕಲ್ಲುಗಳನ್ನು ಹುಲಿಗಳಾಗಿಯೂ ಅವುಗಳಿಗಿಂತ ಚಿಕ್ಕವಾದ ಹನ್ನೆರಡು ಅಥವಾ ಹದಿನೈದು ಕಲ್ಲುಗಳನ್ನು ಕುರಿಗಳಾಗಿ ಅಥವಾ ಬೇಟೆಗಾರರಾಗಿಯೂ ಇಟ್ಟುಕೊಂಡು ಆಡುವ ಒಂದು ಬಗೆಯ ಆಟ; ಹುಲಿಘಟ್ಟದ ಆಟ ; ಹುಲಿಮನೆ ಆಟ : (೬). **ಹುಲಿಕಲ್ಲು** : ಹುಲಿಕಲ್ಲೋ, ಚೌಕಾ ಬಾರವೋ ಯಾವುದು ಆಡೋಣ? (ಕಾವ). [ ಪುಲಿ+ಕಲ್ಲು(<ಕಲ್₃) ]

**ಪುಲಿಕುಜುಕಿ**, ಪುಲಿಕುಜುಕ್ಕಿ (ನಾ). ಒಂದು ಊರಿನ ಹೆಸರು : ಕಾಳೆಗದುಳ್ ಗಾರವರಾಳ್ ಅವಧೀರರಾ ಮಗನ್ ಚಾತಗುದ್ದಿಯಾಗುವನ್ ಪುಲಿಕುಜುಕಿಯರಾ ದುಗ್ಗಮಾರನ್ . . . ಅನ್ನಿಱಿದು ಸತ್ತರ್ (ಎಕ. X, ಶ್ರೀನಿಪಾ. ೯೦ ೩ ; ಸು. ೮೦೦). **ಪುಲಿಕುಜುಕ್ಕಿ** : ಬಾಣರಸರಾ ದಣ್ಣು

ಪುಲಿಕುಱುಕ್ಕಿಯುಳ್ಳೆ ಎರಡು ದಣ್ಡಾ ಕಿಟ್ಟೆ ಎಱೆಯುತ್ತಿರೆ (ಎಫ್. X, ಕೋಲಾರ. ೨೦೦-೬ ; ಸು. ೬೯೦ ?). [ಪುಲಿ+ಕುಱುಕಿ]

**ಪುಲಿಕುಱುಕ್ಕಿ** 'ಪುಲಿಕುಱುಕಿ' ನೋ.

**ಪುಲಿಕೇಶಿ**, ಪುಲಕೇಶಿ, ಪುಲಕೇಶಿ, ಪೊಲಕೇಶಿ, ಪೊಲಿಕೇಶಿ, ಪೊಲೆಕೇಶಿ, ಪೊಲೆಕೇಸಿ (ನಾ). ಕನ್ನಡನಾಡನ್ನು ಆಳಿದ ಸುಪ್ರಸಿದ್ಧನಾದ ಒಬ್ಬ ಅರಸನ ಹೆಸರು; ● ಇದು ಇಬ್ಬರು ಅರಸುಗಳ ಹೆಸರು. ಬಾದಾಮಿ ಚಾಳುಕ್ಯವಂಶದ ದೊರೆಗಳಲ್ಲಿ ಒಬ್ಬನಾದ ಒಂದನೆಯ ಜಯಸಿಂಹನ ಮಗ ಒಂದನೆಯ ಪುಲಿಕೇಶಿ (ಕ್ರಿ. ಶ. ೫೫೦) ; ಈತನ ಮೊಮ್ಮಗ ಅಂದರೆ ಒಂದನೆಯ ಕೀರ್ತಿವರ್ಮನ ಮಗ ಎರಡನೆಯ ಪುಲಿಕೇಶಿ (ಕ್ರಿ. ಶ. ೬೧೦-೬೪೨) : ಪುಲಿಕೇಶಿವಲ್ಲಭಮಹಾರಾಜಸ್ಯ ಪುತ್ರಃ (ಎಇ. XXVII. ೬೯-೬ ; 552). **ಪುಲಕೇಶಿ** : ಶ್ರೀಪುಲಕೇಶಿವಲ್ಲಭಮಹಾರಾಜಸ್ಯ ಪ್ರಪೌತ್ರಃ (ಎಇ. XXVII. ೦೦೬-೬; 597); ವಾತಾಪಿಪುರವರೇಶ್ವರನುಂ . . . ದ್ವೀಪಾಂತರಪ್ರಕಟಪ್ರಭುವನುಮೆನಿಸಿದ ಪುಲಕೇಶಿದೇವನಿಂ (ಗದಾಯು. ೨-೬೩). **ಪುಲಕೇಶಿ**: ಶ್ರೀಪರಾಂ ಸತ್ಯಾಶ್ರಯ ಪುಲಿಕೇಶಿವಲ್ಲಭಮಹಾರಾಜರಾಜ್ಯೇ ವರ್ತ್ತಮಾನೇ ಲಿಖಿತಮಿತಿ (ಎಇ. V, ೬-೬; ಸು. 650). **ಪೊಲಕೇಶಿ** : ಧರಾಚಕ್ರಮೆ ಮೆಚ್ಚಿ ಬಣ್ಣಿಸೆ ಜಸಂಬಡೆದಂ ಪೊಲಕೇಶಿವಲ್ಲಭಂ (ಕಾವ್ಯಾವ ೪೬೬). **ಪೊಲಿಕೇಶಿ** : ಶ್ರೀಪೊಲಿಕೇಶಿವಲ್ಲಭ ಮಹಾರಾಜಸ್ಯ ಪ್ರಿಯಸೂನು (ಇಇ. VII. ೦೦೬ ೩೬ ; 10ನೆಯ ಶ). **ಪೊಲೆಕೇಶಿ** : ತನೂಜಃ ಪೊಲೆಕೇಶಿ (ಎಇ. VI. ೫-೬; 634). **ಪೊಲೆಕೇಸಿ** : ಪೊಲೆಕೇಸಿಅರಸರ × × × (ಎಫ್. VII. ಶಿಕಾ. ೦೦-೨; ಸು. 640 ?); ಪೊರೆಕೇಸಿಯ ಮೇಲೆ ಪೋಗಿ ಪುಲಿಮಟ್ಟಿಯುಳ್ ಕಾದಿ (ಕ್ಯಾಅ. ೦೯೨೬. ೩೦-೮೦ ; 1056). [ ? ]

**ಪುಲಿಕ್ಕಲಯ್ಯ** (ನಾ). ಒಬ್ಬಾತನ ಹೆಸರು : ಶ್ರೀಪುಲಿಕ್ಕಲಯ್ಯ (ಎಫ್. II, ೪೬೯, ಸು. 1000). [ ?+ಅಯ್ಯ೬೩ ]

**ಪುಲಿಗಾರ** (ನಾ). ಒಂದು ಸ್ಥಳದ ಹೆಸರು : ಪುಲ್ಪದಿಯೇ ಎಱಗಲ್ಲೀ ಪುಲಿಗಾರದ ಗೆಱೆ ಮುಱಿಯೊಡಲ್ (ಇಇ. XII. ೦೬-೨೦; 813). [?]

**ಪುಲಿಗಿಲ್**, ಪುಲಿಂಗಿಲ್, ಪುಲಿಗಿಲು, ಪುಲಿಗಿಲೆ, ಹುಲಗಲಿ, ಹುಲಗಿಲ್, ಹುಲಗಿಲು, ಹುಲಿಗಿಲ್,ಹುಲಿಗಿಲಿ, ಹುಲಿಗಿಲು, ಹುಲುಗಲ; ಹುಲುಗಿಲು (ನಾ). ಹೊಂಗೆಮರ; ತಮಾಲವೃಕ್ಷ: ಪುಲಿಗಿಲ ಕಿಲದೊಳ್ ಪನ್ನಗನಿಲಯಂ ಸಮನಿಸಿದೊಡದಱ ತೆಂಕಣದೆಸೆಯೊಳ್ ಜಲಮಕ್ಕುಂ (ಲೋಕೋಪ. ೩-೨೨) ; ಸಮನಾಗಿರೆ ಪೂಸುಗೆ ಪುಲಿಗಿಲೆಣ್ಣೆಯಂ ಸುಣ್ಣಮುಮಂ (ಅಕ್ಯಾ. ೦೩-೨೦). **△ಪುಲಿಂಗಿಲ್**: ಹೊನ್ನೆ ಚೆನ್ನೆ ಕವಳಂ ಕಾರಾಚಮಾಚು ಪುಲಿಂಗಿಲಿರಂ ಗುರ್ಗುಳಮತ್ತಿ ಮತ್ತಿ ಮಧುಕಂ (ರಾಜಶೇ. ೩-೩೬). **ಪುಲಿಗಿಲು** : ನೆಗಟ್ಟ ಪುಲಿಗಿಲೀಶಾನ್ಯದೊಳೆ (ದಲ್ಲು) ಬಿಳಿಯ ಕಲ್ ಕೂಡೆ ಪುತ್ತಿರ್ವಾಗಳ್ (ಜಗೆಯೆ) ನಡುವೊಪ್ಪುರುಷಪ್ರಮಾಣದೊಳ್ ಪಡುವ ಉಸುಬುಮಿದಂತೆ ಪಣ್ಣೆರ್ಕೆರ್ (ಅನ್ನಿಪು. ೦೦-೦೩). **ಪುಲಿಗಿಲೆ** : ಪುಲಿಗಿಲೆ ಮಾವು ಬೇವು ಬೆಳಲಿಟ್ಟಿ ನಿಟ್ಟ . . . ಎತ್ತಲುಂ ಕಲಸಿದ ಕಾಡು ಕಳ್ತಲಿಸಿ ಕೊಂಗಳನಪ್ಪಿದುದು (ಶಾಂತಾಸ್. ೦ ೪-೪). **ಹುಲಗಲಿ** : ಹುಲಗಲಿ (ಕರಂಜ) —ಎತ್ತರವಾಗಿ ಬೆಳೆಯುತ್ತದೆ. ಕಟ್ಟಿಗೆ ಹಗುರು (೪ವಾಗ. ೩೦); ಮೈಸೂರು ಸೀಮೆಯಲ್ಲಿ ಹುಲಗಲಿಯ ಒಣಿಯನ್ನು ಹೊಲಗಳಿಗೆ ಹಾಕುತ್ತಾರೆ (ಮುಂಕಿಮು. ೬-೨೯೨). **ಹುಲಗಿಲ್** : ಕಂಚಿಮಾಲದ ಗಡಣಂ ಕೊಸಗಿಜ ಬಸಿಱೀ ಹುಲಗಿಲ್ಗೊಳ್ದವಿ . . . ಹೊನ್ನೆಯ ತರುಗಳ್ (ಪುಷ್ಪಾರ. ೪-೩೬). **ಹುಲಗಿಲು** : ಹುಲಗಿಲ ಬೇರ್ ತವಸದ ತಿಗುಡು ಲಕ್ಕಿ ಕಡಸಿಗೆಯ ಬೇರ್ ಪರಂಗುಳೊಳಗಗ್ಗಲಿಸಿರೆ . . . ಬಲವರ್ಧನಮಕ್ಕುಮಗ್ನಿದೀಪನಮಕ್ಕುಂ (ಕಲ್ಯಾಕಾ. ೪-೨೨) ; ತೊಟ್ಟುಚ್ಚುತ ತೊಟ್ಟಿಡಿಸಿದ ಮೊಗ್ಗನು ಹೂ ಹಾಸಿ ಹುಲಗಿಲು ಗಾನನಿಮಗ್ಗಳ್ಯಾನವ ಹೊಸ ದಾಸಿ (ಅರೇ. ೦೬೨-೦೦). **ಹುಲಿಗಿಲ್**: ಹುಲಿಗಿಲ್ ಕಂಡಸು ನುಗ್ಗಿ . . . ಉತ್ತರಣೆಯುಂ ಚೂರ್ಣಂಗಳಂ ಮಾಡಿ (ಐಮಿಡ. ೦೬-೩೪): ಬರಿವದಱ ಲೊಕ್ಕಿಲೋಯಿ (ಹಿ) ಸರವಣಿಲೆ ಗುಳೂಚಿ ಪಿಪ್ಪಲಿ ಹುಲಿಗಿಲ್ ವಿಷನಾಗರ ಲಶುನಂ ಗಳೊಳುಪ್ಪಂ ಬೆರಸುಗೆ ಪವಣಱಗೆ ಪಿಂಡಮಮಾರೋಗ್ಯಕರಂ (ಅಶ್ವಶಾ. ೬-೩೩). **ಹುಲಿಗಿಲಿ** : "ಚಿರಿಬಿಲ್ವ, ನಕ್ತಮಾಲಃ, ಕರಜಃ, ಕರಂಜಕಃ- ಇ ಹುಲಿಗಿಲಿಮರದ ಹೆಸರು" (ಸಿದ್ಧಾಂತಶಿ. ೦೨೩) ; ಹೊಂಗೆ, ಕರಂಜ, ಹುಲಿಗಿಲಿ ಮರ (ಕ್ಯಾಶಿಗ. ೬೪-೦೨೪೪). **ಹುಲಿಗಿಲು** : ಹುಲಿಗಿಲ ಸೊಪ್ಪು ಗುಗ್ಗುಳಯಿಮಂ ಧೂಪವಿಕ್ಕುವುದು (ಹಾಅಶ. ೦೨೪-೦೨). **ಹುಲುಗಲ** : ಚಿಗುರಿತು ಈ ಹುಲುಗಲ (೩ಂಪು. ೯-೦). **ಹುಲುಗಿಲು** : 'ಬೇ ಹುಲುಗಿಲು' ಪರಾ.

**ಪುಲಿಗಿಲು** 'ಪುಲಿಗಿಲ್' ನೋ.

**ಪುಲಿಗಿಲೆ** 'ಪುಲಿಗಿಲ್' ನೋ.

**ಪುಲಿಗೆಱೆ**, ಪುರಿಗೆಱೆ, ಪೊರಿಗೆಱೆ, ಹುಲಿಗೆಱೆ (ನಾ). ಒಂದು ಊರಿನ ಹೆಸರು ; ● ಧಾರವಾಡಜಿಲ್ಲೆಯ ಈಗಿನ ಲಕ್ಷ್ಮೇಶ್ವರ : ಗಜ್ಜವುರ್ ಪುಲಿಗೆಱೆ ಗಣ್ಣಾಪಗ್ರಾಮ(ಮ)) ಇತಿ ಅಸ್ಮಭುಕ್ತಿ(ಕ್ತೌ) (ಇಇ. VIII. ೨೯೩-೦೬ ; ೯೯೪) ; ಅದಱೊಳಗಂ ಕಿಸುವೊಬಲಾ ವಿದಿತ ಮಹಾಕೊಪಣ ನಗರದಾ ಪುಲಿ[ಹಾಶಂ. ರಿ]ಗೆಱೆಯಾ ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೦-೩೭); ಪುಲಿಗೆಱೆನಗರಾತ್ ಪೂರ್ವಸ್ಯಾಂ ದಿಶಿ (ಇಇ. VII. ೦೦೫-೨೩ ; 10ನೆಯ ಶ). **ಪುರಿಗೆಱೆ** : ಪುರಿಗೆಱೆಯಾ ಮಱುಬಿಬ್ಬೇರಿಯಾ (ಎಇ. VI. ೦೬೩-೩; ಸು. 763) ; ಪುರಿಗೆಱೆಯಂ ಬನ್ದ ಪೊರೆಯಣ್ಣನ ಶಿರಾಕವರ್ಮ್ಮ (ಸೌಇಇ. XI-i. ೦೦.೨೩ ; ೪೦೩); ಶ್ರೀಮತ್ ಕುಂಕುಮಮಹಾದೇವಿ ಪುರಿಗೆಱೆಯಲು ಮಾಡಿಸಿದ (ಇಇ. VII. ೩೯-೨೦; 999). **ಪೊರಿಗೆಱೆ** : ಪೊರಿಗೆಱೆಯಾ ಮಹಾಜನಕ್ಕಂ (ಎಇ. XIV. ೦೯೦-೨; 725). **ಹುಲಿಗೆಱೆ** : ಹುಲಿಗೆಱೆಯ ಸೋಮನಾಥ ದೇವರ ಕ್ಷೇತ್ರ(ಎಫ್. VII, ಶಿಕ್ಕಿಗ. ೩೨-೦೩೫; ಸು. 1050?). 'ಪುಲಿಕರನಗರ' ಪರಾ.

**ಪುಲಿಗೆಱೆಮೂನೂಱು**, **ಹುಲಿಗೆಱೆಮೂನೂಱು** – ಹುಲಿಗೆರೆಯೇ ಮುಖ್ಯವಾದ ಮುನ್ನೂರು ಹಳ್ಳಿಗಳ ನಾಡು: ಪೆರ್ಮ್ಮಾಡಿ ಬೂತಾಯ್ಯಂ ಗಂಗವಾಡಿ ತೊಂಭತ್ತಱುಸಾಸಿರಂ ಬೆಳ್ವೊಲಮೂನೂಱುಂ (ನಾಳು) ಪುಲಿಗೆಱೆಮೂನೂಱುಮನಾಳುತ್ತಿರೆ (ಸೌಇಇ. XI-i. ೩೬-೩; 942); ಶ್ರೀಸೋಭನರಸರು ಹುಲಿಗೆಱೆಮೂನೂಱ ಬೆಳುವಲ ಮೂನೂಱುಂ ಹುಲುಗೆ ಪನ್ನಿಚ್ಛಾಸಿರಮುಮನಾಳುತ್ತಮಿರೆ (ಸೌಇಇ. XI-i. ೩೦.೦೨; 1050). [ಪುಲಿ + ಕೆಱೆ]

**ಪುಲಿಗೋಣ** (ನಾ). (ಹುಲಿಯಂತೆ) ಬಲಿಷ್ಠವಾದ ಕೋಣ : ಅಯಿಜ್ ಪಾಪಂ ಪಗೆ ಮಿಗೆ ತಿಂದುದು ಮೋಪಂಕಿರೆ ಪುಲ್ಲ ಸರವಿಯುಂ ಪುಲಿ[ಹಾಶಂ. ಬಲ್]ಗೋಣಂ (ಜುಕೋಪ. ೩-೪೩). [ಪುಲಿ + ಕೋಣ್ಣ]

**ಪುಲಿಚರ್ಮ**, **ಹುಲಿಚರ್ಮ** (ನಾ). ಹುಲಿಯ ತೊಗಲು ; ವ್ಯಾಘ್ರಚರ್ಮ : ಕೆಂಜೆಡೆಯ ಚಂದ್ರಕಳೆಯರಸನೊಪ್ಪುತ್ತಿರಲು ರಂಜಿಸುವ ಪುಲಿಚರ್ಮದಭವನೊಪ್ಪುತ್ತಿರಲು (ಶಿಕೆ. ೧-೩); ಹರಿಣ ಗೋರೋಜನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಸೋಹಶ. ೧೯-೬೩). **ಹುಲಿಚರ್ಮ**: ದಕ್ಷಿಣದವರಲ್ಲಿ ಕಂಬಳಿಯ ಕೋರ, ನಿಲುವಂಗಿ, ಕೊರಳಲ್ಲಿ ಭಂಡಾರ ಇಡುವ ಹುಲಿಚರ್ಮದ ಚೀಲ . . . ಕೈಯಲ್ಲಿ ಡಮರುಗ, ತ್ರಿಶೂಲ ... ಇವು ಮುಖ್ಯವಾದುವು (೪೩೪. ೩೮). [ಪುಲಿ+ಚರ್ಮ]

**ಪುಲಿದೊಗಲ್** 'ಪುಲಿದೋಲ್' ನೋ.

**ಪುಲಿದೊಗಲು** 'ಪುಲಿದೋಲ್' ನೋ.

**ಪುಲಿದೊಡೆಯ** (ನಾ). ವ್ಯಾಘ್ರಾಸುರನನ್ನು ನಾಶಮಾಡಿದವನು; ಶಿವ ·

ಜಾಹ್ನವೀನಾಗಂಗವ್ಯಾಪ್ತಶರನಿಧಿಯುನೆಱೆದರ್ಗೆ ತವನಿಧಿಯು ಮೆಚ್ಚಿ ತಸ್ತ್ರಿ ಮೆಱೆದ ಪುಲಿದೊಡೆಯು[ಪಾಠಾಂ. ಮೆಱೆದೈ ಪುಲಿತ್ತೊಡೆಯು]ಶರಣಾ (ಶಾಪಾಂ. ೬-೭). [ಪುಲಿ + ತೊಡೆ + –ಅ]

**ಪುಲಿದೊವರ್** 'ಪುಲಿದೋಲ್' ನೋ.

**ಪುಲಿದೊವಲು** 'ಪುಲಿದೋಲ್' ನೋ.

**ಪುಲಿದೋಲ್**, **ಪುಲಿದೊಗಲ್**, **ಪುಲಿದೊಗಲು**, **ಪುಲಿದೊವಲ್**, ಪುಲಿದೊವಲು, ಹುಲಿದೊಗಲು, ಹುಲಿದೊವಲು (ನಾ). = ಪುಲಿಚರ್ಮ : ಪಾರುಳಿಂದನಾಡುವಂ ಮಸಣದೊಳ್ಪಡುವಂ ಪುಲಿದೋಲನುಟ್ಟು ಭೀಕರಕರಿಚರ್ಮಮಂ ಪೊದೆವಂ (ಸಮಚ. ೦-೬೨). **ಪುಲಿದೊಗಲ್** : ಪ್ರಭುಮಾಕೂಲದಂಕರ್ವ ಪುಲಿದೊಗಲಿಂದೊಪ್ಪ ಪಶುಪತಿ ಬಸವನ ಬಸದ ಮೊಸೆಯೊಳೊಪ್ಪೆ ಮೂರ್ತಿಗೊಂಡು (ಬಸ. ೪-೨೦). **ಪುಲಿದೊಗಲು** : ಪುಲಿದೊಗಲು ಕೆಂಜೆಡೆಯು ಕೇವಣಾದಿಂದುಫಣಿಪತಿಯು . . . ಅಭಯದ ವರದಕರಪರಿಕಲಿತನೆಸೆದನು ಶಂಭು ಸದ್ಯೋಜಾತ ಪ್ರಾಡಲಿ (ಶುಪ್ಪಾಂ. ೬-೬೯); ಕಳದರೀ ಚಂಡಾಂಶುವಂಶೋಜ್ವಲರು ಓಳಿಕಾ ಹಿಮಸವಿಯುವನು ಪುಲಿದೊಗಲು ಹರಿಣಾಜಿನದ ಹಾಸಿಕೆಯು ಕೊಡೆಪುಲಿ (ಕೊರಾ. ೬-೨-೩). **ಪುಲಿದೊವಲ್** : ಉಡುವೊಡೆ ಸಂತತಂ ಪುಲಿದೊವಲ್ ನಿಮಗಲ್ಲದೊಡಾ ದಿಗಂಬರಂ ಪಡುವೊಡೆ ರುದ್ರಭೂಮಿ ನಿಮಗಲ್ಲದೊಡಾ ನಿಗಮೋತ್ತಮಾಂಗಂ (ಕಂಹಾ. ೨೦); ಪುಲಿದೊವಲ ಜೋಗವಟ್ಟನೆ . . . ಮಾಯುವ ಕುಂಚಂ ನೆಲನನಲವಿನಿಗೆ ರಂಜಿಸೆ ನಲವಿಂ ಪಾವಪಾವಿಯೆಯ್ದಿದಂ ನೃಪಸಭೆಯಂ (ಮಳ. ೬-೦೩೦); ಪುಲಿದೊವಲಂ ಗುಜವಜನಮನೆಲೆ ನೀನುಡದಿರ್ಪೆಂದು ಬಿಡಿಸುತೆ ಮೃಡನಂ ಸುಲಲಿತದಿವ್ಯಾಂಬರವಂ ನಲಿದುಡಿಸುವ ದೂಸಿಗರ್ ಕರಂ ನೆಲಸಿರ್ಪರ್ (ರಾಶಾ. ೨-೬೬). **ಪುಲಿದೊವಲು** : ಪೂಸಿದ ವಿಭೂತಿ ಕಯ್ಯೊಳು ಪಾತ್ರೆಯೋಜೆಡೆ ಭಾಸುರದ ಪುಲಿದೊವಲು ರಾಕಾಳಂ ಬೆಲುವ ನಡೆ ಎಸವ ಭಿಕ್ಷುಕ ನೀಪಮುಮಪನೊಪ್ಪೆ ಕೈಕೊಂಡು (ಹರಿ. ೮೮. ೦೦-೦೦); ತೊಟ್ಟ ಬೀಳು ಜೋಡು ಮೆಯ್ಯನ್ನು ಬರಹದೊಳಟ್ಟು ಕಾಸೆಯ ಪುಲಿದೊವಲು ಮಾಟ್ಟಿ ಗಜಾಸುರನೊಳು ಕಾದಿ ಕೆಡವುತ ಕಟ್ಟಾಳು ಹರನಂತೆ ಮೆಱೆದ (ಏರ್ಕ. ೬-೦೦೩). **ಹುಲಿದೊಗಲು** : ಸನ್ಯಾಸಿಯು . . . ನೆಲದ ಮೇಲೆ ತನ್ನ ಹುಲಿದೊಗಲು ಹಾಸಿ ಗಂಟು ಕಲೆದಿಂಬಿಗೆ ಇಟ್ಟುಕೊಂಡು . . . ಅಡ್ಡಾದನು (ಮು.ಶಾ. ೪-೦೩೦). **ಹುಲಿದೊವಲು** : ಹುಲಿದೊವಲನುಟ್ಟು ಮುಂಡಿಗೆದಿದ ಉನ್ಮಾದಮೂರ್ತಿ ಅರೆವಣ್ಣಿನಲ್ಲಿ ಮೂಡಿ ಅಭಿನಯಿಸುತ್ತಾನೆ (ಹಾಂಕಾ. ೦೩-೦).

**ಪುಲಿದೊವಲುಡೆ**=ಹುಲಿಚರ್ಮದ ಉಡುಗೆ : ಪುಲಿದೊವಲುಡೆ ಭಸಿತಂ ಕುಂಡಲಮುಗ್ರತ್ರಿಶೂಲ ಡಮರುಗಂ ಕಿಱುಜೆಡೆಗಳ್ ಸರೆ ಮೆಱೆವ ರುದ್ರನಂ ಕಂಡೊಲವು ಪಿಗಲ್ ಚರಣಕೆಱಗಿದಂ ಸಿರಿಯಾಳಂ (ಶ್ರೀಕೃ. ೦೦-೪೩). **ಪುಲಿದೊವಲುಡೆಯ**=ಹುಲಿಯ ಚರ್ಮವನ್ನು ಉಟ್ಟಿರುವವನು ; ಶಿವ : ಪುಲಿದೊವಲುಡೆಯಂಗೆ ಪುನರಪಿ ರತ್ನಪುಷ್ಪಂ ದಾರಾಕಿಗಳ ಬೆಳಗಿ ಸಲಿಲಜ ಮಂದಾರ ಮಲ್ಲಿಗೆ ಪುಷ್ಪಾಂಜಲಿಯ ಮಾಡಿದ ಮಹೋತ್ಸವದಿ (ಶೋಕಚ. ೨೦-೯೩). [ಪುಲಿ + ತೋಲ್$_1$]

**ಪುಲಿನ**, ಪುಳಿನ (ನಾ). ೧. ಮರಳಿನಿಂದ ಕೂಡಿದ ನದಿ, ಸಮುದ್ರ ಮುಂತಾದುವುಗಳ ತಟ, –ದಂಡೆ. ೨. ನೀರು ಕಡಮೆಯಾದಾಗ ನದಿಯ ಒಡಲಲ್ಲಿ ಅಥವಾ ದಂಡೆಯಲ್ಲಿ ಉಂಟಾಗುವ ಮಣ್ಣಿನ ದ್ವೀಪ : ಸೈಕತದ್ವೀಪ. ೩. ನದೀತಟ; ನದೀತೀರ. ೪. ಮರಳು. **ಪುಲಿನ** : ೧. "ಸೈಕತಂ ಪುಳಿನಂ ದ್ವೀಪಂ (ನಿಕಶಾ)__ಈ ೩ ಮಳಲ ದಿಣ್ಣೆ (ದಿಣ್ಣೆ)" (ಶಬಾಮ. ೦೦೦-೪೬); ಕಿರ್ಪ ಪುಲಿನಂಗಳೊಳಂ ಕೋಡುವ ಭಾಂಗಗೃಹಂಗಳೊಳಂ ವಿಶ್ರಮಿಸಿ ಶಾತಮಾತಪಮಶ್ರಮಂ ಮುಂ ಕಳೆಯೆ (ಅಕೃ. ೦೦-೬೨ ವ). ೨. ನೀರೆಂಬ ಸೀರೆಯುಂ ಪೆಜಸಾರಿಸುತುಂ ಪುಳಿನ ಮೆಂಬ ಜಘನಸ್ಥಳದಿಂ ನಾರಿಯವೊಲ್ ನದಿ ಮೆಱೆಗುಂ ಶಾರದಸಮಯಂ ದಲೆಂಬ ವಿಟಸನ್ನಿಧಿಯೊಳ್ (ಶಾರ್ಕೃ. ೪-೬೪). ೩. ಗಂಗಾನದೀಪುಳಿನ ಪರಿಸರಪ್ರದೇಶದೊಳ್ ಮಱಿದೂಡಿಗುವೈರಾವತದಂತೆ ಪವಡಿಸಿ (ಕಂಕಚಾ. ೪-೦೦೦ ವ). ೪. ಪಶ್ಚಿಮಾಂಭೋಧಿಯ ಪುಳಿನಚಯಂ ಬೆಳ್ಪನಾಳ್ದಿರ್ದುದಾಗಳ್ (ಕಾಂತೂ. ೦೯೨) ; ಕಣ್ಗೆ ಮುತ್ತಿಟ್ಟಪ್ಪದಿರ್ಕಲದಲ್ಲಿ . . . ಧವಳಿಮ ಪುಳಿನರಾಶಿ (ಶ್ರೀಜಾಮ. ೦೩೦-೨೨೦). [ಸಂ.]

**ಪುಲಿನಖ**, ಹುಲಿನಖ (ನಾ). ೧. ಹುಲಿಯ ಉಗುರು. ೨. (ಮಕ್ಕಳಿಗೆ ತೊಡಿಸುವ) ಹುಲಿಯುಗುರಿನಿಂದ ಮಾಡಿದ ಅಥವಾ ಹುಲಿಯುಗುರಿನಾಕಾರದ ಒಂದು ಆಭರಣ : ಬಿಂದಿಲರಳೆ ಗೆಜ್ಜೆಯನ್ನು ಪಾಲ್ಗಡಗ ಪೊಕ್ಕುಳ ಘಂಟೆ ಪುಲಿನಖಮನೂನಕಟಿಸೂತ್ರ ಮಾಗಾಯಿ ಮಣಿಮಯಮುದ್ರೆಗಳ ಬೆರಳ್ಗಳಗಮರ್ಚೆ (ಕವಹೋ. ೦೨-೦೬). **ಹುಲಿನಖ** : ೩. ಒಂದು ಬಗೆಯ ಔಷಧೀಸಸ್ಯ ; ಗರುಡವಮೂಗಂ : ಹುಲಿನಖ, ಗರುಡ ಮೂಗು (ವೃಕೊ. ೩೨-೦೦೩೩). [ಪುಲಿ + ನಖ]

**ಪುಲಿನಾಡು** (ನಾ). ಒಂದು ಊರಿನ ಹೆಸರು : ದೊಸಿ ಅರಸರಾ ಕಳಿ ಪುಲಿನಾಡಬಾಮತ್ತ್ಯಂ ಪಡೆದು ಕೊಟ್ಟೊಡು (ಎಕ. X, ಮುಳಬಾ. ೨೪೪-೯; ಸು. ೬೨೦); ಪುಲಿನಾಡು ರಾಸಮಯ್ಯ ಹಬಿಯೂರರಸರಂ ದಣ್ಣು ಮೆಟ್ಟೊಡೆ (ಎಕ. X, ಶ್ರೀನಿವಾ. ೬೩. ೪; ಸು. ೯೦೦?). [ಪುಲಿ+ನಾಡು]

**ಪುಲಿಪಟ್ಟು** 'ಪುಲಿವೆಟ್ಟು' ನೋ.

**ಪುಲಿಮುಖ**, ಹುಲಿಮುಖ (ನಾ). ಕೋಟೆಯ ಹೆಬ್ಬಾಗಿಲು,–ಪ್ರವೇಶದ್ವಾರ : p ಕೋಟೆಯ ಹೆಬ್ಬಾಗಿಲಿನಲ್ಲಿ ಸಾಮಾನ್ಯವಾಗಿ ಹುಲಿಯ ಮುಖದ ಆಕಾರದಲ್ಲಿರುವ ಒಂದು ಶಿಲ್ಪದ ಮಾದರಿ : ಪುಲಿಮುಖ ಚೋರ್ಕಂಡಿ ದಿಡ್ಡಿಗಳಿಂದ ಪೊಳಲ ನಾಲ್ದೆಸೆಯೊಳಲೆವುತ ಲಲಿತಗೋಪುರ ತೋರಣಗಳೆಸೆವ (ಕೆಮಂಶಾ. ೦-೪೦); ಗಜದ ಭಾರಿಯಂ ಮಾಪುತರ್ ಪುಲಿಮುಖ[ಪಾಠಾಂ. ವೊಗ]ಕೆ ನೂಂಕಿದರ್ (ಕಂಕೃ. ೪೨-೨೬); ಅಗಸವ ಸೋಂಕಿ ಸನ್ನುತಂ ಪಬ್ಬುವ ಪತಾಕೆ ಮುರಿಮುರಿದ ಕೊತ್ತಳ ಪುಲಿಮುಖಗಳಿಂದ (ಬಲ್ಕಾಲ. ೩-೩). **ಹುಲಿಮುಖ** : ದುರ್ಗದ ಹಿಂದು ಹುಲಿಮುಖದೊಳಗೆ ಹೊಯ್ದರು ಬೇಹ ಬೇಹವರ (ಕುಮ್ಮಾಶ. ೭ ೩೦); ಬಿಲಿದುದನಿತಕೆ ಕೋಟೆ ಪರಿಘಾವಳಿಯ ರಚನೆಯಲಾಳುವೇರಿಯ ಹುಲಿಮುಖದ ಮುಗಿಲಟ್ಟೆಯ ಸಾಲುಗಳ ಸೊಗಸಿನಲಿ (ಕೊರಾ. ೦-೦೩-೨); ಮಲಿತಃ ಪುನಕೃತಹ ರಿಪುನೃಪಪಶುಕುಲಸಮೂಹಹನನಗಿದುಗುಳ್ದ ಸಲೆ ಶಾರ್ದೂಲವದನವೆನೆ ಹುಲಿಮುಖ ಬಲುಭಯಾಂಕುರವ ಬೀಱುವುವು (ಕುಮಾ. ೨-೬೪). [ಪುಲಿ + ಮುಖ]

**ಪುಲಿವೊಗ**, ಹುಲಿವೊಗ (ನಾ). ೧. ಹುಲಿಯ ಬಾಯಿ : ಆ ಪುರದ ಪಿಸುಜ ಹುಲಿವೊಗವೊಪ್ಪಿದುದರಿಧರಣೀಪಾಲಪಶುಗಳಂ ನುಂಗುವ ಪುಲಿವೊಗವೆಂಬಂತೆ (ಶಪಚಾ. ೦-೩೪). ೨. =ಪುಲಿಮುಖ : ಗೊಂಟು ಗೊಂಟನೊಳ್ ಬಳಸಿದ ಕೊತ್ತಳಂ ಸೊಗಯಿಪಾಳ್ವೇರಿ ಡಂಕಣಿ ಸಾರವಾರಿ ಯಗ್ಗಳಿಸುವ ಗೋಪುರಂ ಪುಲಿವೊಗಂ ಮೆಱೆಗುಂ ಪುರದೊಳ್ ನಿರಂತರಂ (ರಂಶ. ೨-೬೪); ಅಗಳಾಳ್ವೇರಿ ಕೋಟೆಕೊತ್ತಳ ನೆಲದಿಡ್ಡಿ . . . ಪಲ ಪುಲಿವೊಗಗಳನನುಮಾಡಿಸಿದನು (ಕುಶಾಸಾ. ೩೬-೩೨); ಸಮಸ್ತಕಾರ್ಯಕುಶಲರಿಂ ಕೋಟೆ ಕೊತ್ತಳ ಮುಗಿಲಟ್ಟಣೆ ಬುರುಜು ಪುಲಿವೊಗ ಡೊಂಕಣಿಯುಗಳಾಳ್ವೇರಿ ಓಳ್ಳಗುಸೆ ದಿಡ್ಡಿವೊಳಗೆದುಂಗಳ್ ನಿರ್ಮಿತಮಾಗಲೊಡನೆ (ಕಾರಾಕ್ಷ. ೦-೪-೬೩ ವ). **ಹುಲಿವೊಗ** : ೨. ಕೋಟೆ ಹೋಯ್ತೀಳೆಯೆನುತಿರದೆ ಕುಲಿಲಿಯೆಂದಾರಿ ಕೊಬ್ಬೆಱಿದು ಹುಲಿವೊಗ ದೊಳಗೆ ಹೊಗಲೊಡನೆ ಸೂತ್ರವಿಡಿದು (ಸಮ್ಯಾಕ. ೬-೩೬) ; ತನ್ನಿದಿರ್ವರ ಒಡಿದು ಉಲಿದು ಹೊಯ್ದು ಪೆನೆಬ ರೌದ್ರದಿಂ ಕೋಟೆಯ ಹುಲಿವೊಗ

ಕಣ್ಗೆ ತನ್ನಿದಿರ್ವರೆ ರಂಜಿಸಿತು (ಪೂಜಕಕ. ೩-೯). [ಪುಲಿ+ಮೊಗ]

**ಪುಲಿಯಣ್ಣ** (ನಾ). ಒಬ್ಬಾತನ ಹೆಸರು : ಶ್ರೀವುಳಿನ್ದೆಯಾರುಂ ಕಣ್ಣಾಟ ಕುಳ್ಳಿಯುಂ ಪಾಣದರುಂ ಅಶ್ವಶಾಲೆಯರು ಪುಲಿಯಣ್ಣಂಗಳು ಏರಕಾಡನಳ ದೊರ್ (ಶಾಇ. IX-i, ೯೭-೦೫; ಪು. ೩೩ದು ೩೪). [ಪುಲಿ + ಅಣ್ಣ$_1$]

**ಪುಲಿಯುಂಡಿಗೆ** (ನಾ). ಹುಲಿಯ ಚಿತ್ರವುಳ್ಳ ಮುದ್ರೆ : ಅವನಿನ್ದಿಸ್ತಣ ತತ್ಕುಲದವನೀಶಗ್ರಾಗ್ರಿಯುಪ್ಪ ಹೊಯ್ಸಳಾಖ್ಯಂ ಮಾತ್ರಂತವರ್ಗೆ ಪುಲಿದುಂಡಿಗೆಯುಮಾದಿ(ರ)ವಿಜಚ್ಛಿತೆಯೆಸಿವ ಶಶಪುರಂಬಿಕೆಯೊಲವಿಂ (ಎಕ. XI, ಚಿತ್ರದು. ೬೯-೦೦; 1214 ?). [ಪುಲಿ+ಉಂಡಿಗೆ]

**ಪುಲಿಯುಗುರ್**, ಪುಲಿಯುಗುರು, ಹುಲಿಯುಗುರ್, ಹುಲಿಯುಗುರು (ನಾ). ೧. ಹುಲಿಯ ಪಂಜದ ಉಗುರು ; ವ್ಯಾಘ್ರನಖ : ಪುಲಿಯುಗುರೆಯ್ದೆ ನಾಟಲುರವಂ ಪಾಂಗದೆಯ್ದೆ ಪುಳಿಂದನೊತ್ತಿ ಗಟಲಿನದು ಪಾಯೆ (ಪಂಪಭಾ. ೩-೩೦೯). ೨. (ಮಕ್ಕಳಿಗೆ ತೊಡಿಸುವ) ಹುಲಿಯ ಉಗುರಿನಿಂದ ಮಾಡಿದ ಅಥವಾ ಹುಲಿಯ ಉಗುರಿನಾಕಾರದ ಒಂದು ಆಭರಣ : ಅರಳೆಲೆ ಪೊಂಗುನೂಲ್ ಪುಲಿಯುಗುರ್ ಪಣೆಕಿಂಕಿಣಿ ಗೆಜ್ಜೆ . . . ಮನಂಗೊಳೆ ಭುವನೈಕವಂದನನೋಳೆಸೆದಿರ್ದುದೊ ಬಾಲವಂಡನಂ (ಅಜಿತ. ೩-೬೨); ಅರಳಲೆ ಮತ್ತಿಗಾಯತ್ ಪುಲಿಯುಗುರ್ ನವರತ್ನದ ಕಂಕಣಂಗಳ್ . . . ಒಪ್ಪಿರೆ ಚಿತ್ರಪಾತ್ರಗಳ್ಗೆ ಪತೆದರ್ ತನಯರ್ ನಯನೋತ್ಸವಂಗಳಂ (ಶಂಕರಮಾ. ೩-೦೯೭); ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪೆನೆನ್ನಗಮೊಂದಂದುದು ಶಶಿಕಲೆ ನೆಲೆಸಿತ್ತೆನೆ ಪೊಡೆಯರಲನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಗಂ. ೩-೯೯). **ಪುಲಿಯುಗುರು : ೨.** ಬಾಲಶಶಾಂಕನಂದದ ಪುಲಿಯುಗುರನು ಥಳಿಪ ಬಂದಿ ರಂಜಿಸಿತು (ಅಂಬಿಕ. ೪-೪೪). ಅರಳೆಲೆ ಮಾಗಾಯ್ಪುಲಿಯುಗುರೊಲಿಯುತ ಚರಣದಂದುಗೆ ಗೆಜ್ಜೆಗಳು ಕರದ ಕಂಕಣಗಳು ಫಳಫಳಿರೆನಲಾಡಿ ಬರುವಳು ತಂದೆಯ ಬಳಿಗೆ (ಕನಕಕೀ. ೨೨೬). **ಹುಲಿಯುಗುರ್ : ೨.** ಐಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಗಂ ನಳನಳಿಪ ಲಾವಣ್ಯದಿಂದೆಸೆವ ಬಣ್ಣಗಂ (ಶಿಸರ. ೦-೦೩೦). **ಹುಲಿಯುಗುರು : ೧.** ನಮ್ಮ ದೇಶದ ಜನರು . . . ಹುಲಿಯುಗುರಿನ ಆಭರಣ ಮಾಡಿಸಿ ಮಕ್ಕಳ ಕೊರಳೊಳಗೆ ಹಾಕುತ್ತಾರೆ (ಪಂಚತಂತ್ರ. ೪-೩೭); ತನ್ನ ಮೈಯೆಲ್ಲ ಹುಲಿಯುಗುರುಗಳ ಗಾಯದಿಂದ ಕೆಂಪಾಗಿದೆ (ಕಾಸಕಾ. ೨೯೩). ೨. ಕರದಲ್ಲಿ ಕಂಕಣ ಬೆರಳಲ್ಲಿ ಉಂಗುರ ಕೊರಳಲ್ಲಿ ಹಾಕಿದ ಹುಲಿಯುಗುರವು, ಅರಳೆಲೆ ಕನಕಕುಂಡಲ ಕಾಲಲಂದುಗೆ ಉರಗ ಶಯನ ಬಂದ ಕಾಣಿರೇನೆ (ಕೃಕಂದ. ೦-೦೭೦-೨); ಕಟ್ಟಿನಲ್ಲಿ ಅಡ್ಡಿಕೆ . . . ಹನುಮಾನ ತಾಳಿ, ಹುಲಿಯುಗುರು (ಮುಕ್ಕಿ. ೪೦). ೩. ಸುಗಂಧವುಳ್ಳ ಒಂದು ಬಗೆಯ ಔಷಧೀ ಸಸ್ಯ : ಗಂಧಕ, ಹುಲಿಯುಗುರು, ಬಜೆ . . . ಪದಕ, ಎಣ್ಣೆ, ಅಜಮೂತ್ರದಲ್ಲಿ ಬೆರಸಿ ಅಟ್ಟು ನಸ್ಯಂಗೈಯೆ ಶೀತಸ ಮಾಣ್ಗುಂ (ಅಶ್ವಶಿ. ೬೬).

ಪುಲಿಯುಗುರ ಪಟ್ಟು = ಒಂದು ಬಗೆಯ ರೇಷ್ಮೆ ವಸ್ತ್ರ : ನೇತ್ರಾವಳಿಯು . . . ಗಜವಾಳ ಪುಲಿಯುಗುರ ಪಟ್ಟೆಂದ್ರರಾಗಂ ಲಲಿತವೀಣಾವಳಿಯು (ಶಶಿಕ. ೦೦-೨೫). [ಪುಲಿ + ಉಗುರ್]

**ಪುಲಿಯುಗುರು** 'ಪುಲಿಯುಗುರ್' ನೋ.

**ಪುಲಿಯೂಟು** 'ಪುಲಿವೆಟ್ಟು' ನೋ.

**ಪುಲಿವಟ** 'ಪುಲಿವೆಟ್ಟು' ನೋ.

**ಪುಲಿವಟೆ** 'ಪುಲಿವೆಟ್ಟು' ನೋ.

**ಪುಲಿವಟ್ಟ** (ನಾ). ಒಂದು ಊರಿನ ಹೆಸರು : ಮೂಗುನ್ದವನ್ನೆರಡು ಪುಲಿವಟ್ಟವನ್ನೆರಡುಂ ಕಲ್ವತ್ತಿಯೊಳಂ ಸಾನ್ತಗೆಸಾಯಿರಮುಮಂ ದುಷ್ಟಾಟವಿಕನಿಮ್ಮೂಳಸಂವ್ಯಾಡಿ ಸುಖದಿಂ ರಾಜ್ಯಂಗೆಯ್ಯುತ್ತಿರ್ದು (ಎಕ. VIII, ಸೊರಬ ೪೬೭-೨೩ ; ೯೯೧). [ಪುಲಿ + ಪಟ್ಟ$_1$]

**ಪುಲಿವಟ್ಟೆ** 'ಪುಲ್ಲಿಪಟ್ಟೆ' ನೋ.

**ಪುಲಿವರೆ** (ಕ್ರಿ). (?) : ಮದನಂ ಶ್ರೀವುಲ್ಲಿಭಟ್ಟಾರಕನ ವಿಮಳಬೋಧಾನಳಜ್ವಾಳೆಗಳ್ ಸೋಂಕದ ಮುನ್ನಂ ತತ್ಪುರಾಶಿಗೆ ಪುಲಿವರೆ[ಹಾಂ.ರ] ದತ್ತೆಂಬನಂ ಬೂದಿಯಾಗಿರ್ಪುದುಮವಾಗಳ್ ಮೋದಿಕೊಂಡಳ್ ರತಿ ಮಾತಿಮಾಣದಳ್ ಮಯ್ಯನೀಡಾಡಿದಳ್ (ಪುಳ್ಳಿಶ. ೦೯-೯೩). 'ಹುಲಿವಿರಿ' ನೋ. [ ? ]

**ಪುಲಿವಲೆ**. ಹುಲಿಬಲೆ (ನಾ). ಒಂದು ಬಗೆಯ ದೊಡ್ಡ ಬಲೆ : ಪುಲಿವಲೆ ಕೊಂಬು ಕಣ್ಣಿ ಮಿಡಿಗಣ್ಣಿ ತೊವಲ್ವಲೆ ಸಿಕ್ಕು ದಕ್ಕು ಪೆರ್ವೊಲವಲೆ ಸಂದಹಾಸುವಲೆ ನೀರ್ವಲೆ ಮೇಲ್ವಲೆ . . . ಎಂಬಿನಿತಂ ಪೊಳೆಗಟ್ಟಿ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ಚಕಾ. ೨-೦೦೫). **ಹುಲಿಬಲೆ :** ಅದಟರೊಳಗಡಗಿಪ್ಪ ರೈವರು ಕಳ್ಳರು ಒಬ್ಬನರಿಬರೆಯುವನೊಬ್ಬ ಹುಲಿಬಲೆಹುವ (ಕಲ್ಯಾ,ಕಾಂ. ೦೦೯-೦೬). [ ಪುಲಿ + ಬಲೆ$_1$ ]

**ಪುಲಿವಾಲ್** (ನಾ). ಹುಲಿಯ ಹಾಲು : ಪುಲಿವಾಲಂ ಕುಡಿವಲ್ಲದೆ ಕಲಿಯಾಗಂ ಪುತ್ರನ್ (ಎಕ. XI, ದಾವಣ. ೯೩-೨೭ ; 1164) ; ಪುಲಿವಾಲಂ ನಲಿದುಣ್ಣ ಶಕ್ತಿ (ಎಕ. XIV, ೨೬೨-೨೯ ; 1178). [ ಪುಲಿ + ಪಾಲ್$_1$ ]

**ಪುಲಿವಾಲ** (ನಾ). ಹುಲಿಯ ಬಾಲ : ಪುದಿದು ತಳಿರುಡೆ ಸುರಗಿ ಪುಲಿವಾಲದಲಿ ವಿರಚಿಸಿದ ಹಮರುಗಂಟಣ ಖಡೆಯ ಪೆಂಡೆಯದೊದವಿನಿಂ . . . ಬಲೆವಿಡಿದಿಹರು ಬಿಯದರು (ಹಾನ್ನಭಾ. ೩-೭). [ ಪುಲಿ + ಬಾಲ ]

**ಪುಲಿವುತು** (ನಾ). ಒಂದು ಸ್ಥಳದ ಹೆಸರು : ಪುಷ್ಪರ್ವೀಕ್ಷತ್ರದಿಗ್ಬಾಗೇ ಸಿರಿಗಾಳಗ್ರಾಮಸೀಮ್ನಿ ಪುಲಿವುತು ತತ ಆಗತ್ಯ ಕವ್ವಸುರಿಗೊಳಂ ತತಃ ಪೆಬ್ಬ್ರ್ಯತ್ತು (ಎಕ. XI, ದಾವಣ. ೬೬-೬೦ ; ೬೯೪). [ ? ]

**ಪುಲಿವೆಟ್ಟು**, ಪುಲಿಪಟು, ಪುಲಿಯೂಟಂ, ಪುಲಿವಟ, ಪುಲಿವಟೆ, ಪುಲಿವೇಟು, ಪುಲ್ಲಿವೆಟು, ಪುಲ್ಲಿವೇಟಂ (ನಾ). ದೇವಾಲಯ, ಕೆರೆ, ಕಟ್ಟೆ ಮುಂತಾದುವುಗಳ ಜೀರ್ಣೋದ್ಧಾರ ಇತ್ಯಾದಿ ಸಾರ್ವಜನಿಕ ಕಾರ್ಯಗಳಿಗಾಗಿ ಉದಾರಿಗಳಿಂದ ದತ್ತಿಯಾಗಿ ಬಂದು, (ಬಡ್ಡಿಯ ಉತ್ಪನ್ನವನ್ನು ಉಪಯೋಗಿಸಿಕೊಳ್ಳಬಹುದಾದ) ಕೊಡಿಟ್ಟ ನಿಧಿ,-ಸಂಪತ್ತು,-ಠೇವಣಾತಿ : ೧೦೦ಂಜಾವರಹಂನು ಕೊಟ್ಟು ದೇವರ ಗುಡಿಯಲ್ಲೂ ಮಾಡಿಸಿದ ಪುಲಿವೆಟ್ಟು (ಶಾಇ. IX ii, ೫೩೩-೯ ; 1534). **ಪುಲಿಪಟು**: ಶ್ರೀವಿಠಲದೇವರ ಅಮೃತಪಡಿಗೆ ಪುಲಿಪಟು ನೈವೇದ್ಯಕೆ . . . ಧಾರಾಗ್ರುಹೀತವಾಗಿ ಬಂದ ತೆಕ್ಕಲಕೋಟೆಸೀಮೆಯೊಳಗಣ ನಿಟೂರಗ್ರಾಮ ೧ (ಶಾಇ. IX-ii, ೬೦೭-೨ ; 1543). **ಪುಲಿಯೂಟು** : ನಮ್ಮ ಧರ್ಮವಾಗಿ ಸ್ವಾಮಿಯ ಸನ್ನಿಧಿಯಲೂ ಪುಲಿಯೂಟಾಗಿ ನಡವ ಉಟ್ಟಳೆಯ ವಿವರ (ಎಕ. XIV, ಶ್ರೀರಂಗ. ೨೩೯-೭ ; 1544); ಶ್ರೀಚಲಪತಿರಾಯರ ಸನ್ನಿಧಿಯಲಿ ನಡವ ಪುಲಿಯೂಟ ಉಟ್ಟಳೆಯ ವಿವರ (ಎಕ. XIV, ಶ್ರೀರಂಗ. ೨೪೦-೫ ; 1551). **ಪುಲಿವಟ** : ಪುಲಿವಟವಾಗಿ ಶ್ರೀವಿಠಲದೇವರ ಭಂಡಾರಕ್ಕೆ ಸಮರ್ಪಿಸ್ಪಥು ಘಟಿವರಹಯಿಂನೂಱು (ಶಾಇ. IV, ೨೬೯-೦೫; 1530). **ಪುಲಿವಟೆ** : ಶ್ರೀವಿಠಲದೇವರ ಭಂಡಾರಕೆ ಪುಲಿವಟೆ ಆಗಿ ಸಮರ್ಪಿಸಿದ ರೊಕ್ಕ ವರಹ ಗ 100 ಉ (ಶಾಇ. IX-ii, ೫೩೩-೩ ; 1534). **ಪುಲಿವೇಟು** : ಶ್ರೀವಿಠಲದೇವರಿಗೆ . . . ಪುಲಿವೇಟುಗಳಿಗೆ ಸಮರ್ಪಿಸಿದ ಗದೆಯ ಬಳಿಯಲೂ ಸಮರ್ಪಿಸಿದ ಬೀಜವರಿ ಗದ್ದೆ (ಶಾಇ. IV, ೨೬೩-೫; 1561). **ಪುಲ್ಲಿವೆಟು** : ಯಿಾ ಪುಲ್ಲವೆಟು ನಯಿವೇದ್ಯವಾದ ಖಜಾಯ ಪ್ರಸಾದ ಪಲ್ಲ ನಯಿವೇದ್ಯ ಶ್ರೀವಿಠಲದೇವರ ಭಂಡಾರದವರಿಗೆ ಪ[ಕ್ಕೆ] ಪಾಲು (ಶಾಇ. IV, ೨೬೩ ೭ ; 1561). **ಪುಲ್ಲಿವೇಟು** : ಉದಗಿರಿ ತಿಂಪರಾಜಯ್ಯನವರು ಮಾಡಿಸಿದ ಪುಲ್ಲಿವೇಟು (ಶಾಇ. IV,

೨೭೩. ೪: ೧೬೬೧). 'ಪುದಿವಟ್ಟು' ಪರಾ. [ದೇ.॥ ತಮಿ. ಪುಲಿವೀಟು, ಪುಲಿವೇಟು, ಪೂಲಿಯಾಟ್ಟು; ತೆಲು. ಪೂಲಿಪೆಟ್ಟು]

**ಪುಲಿವೇಟು** 'ಪುಲಿವಟ್ಟು' ನೋ.

**ಪುಲಿಸಮ್ಮ** (ನಾ). ಹುಲಿಯ ತೊಗಲು : ಪುಲಿಸಮ್ಮದುಡುಗೆಯು ತೆಗೆದ ನೆಱುದ ಕೇಳ ಬಲಿಸುತ ಶಿವಪೂಜೆಗೆಯ್ವು . . . ಹೊಜವಟ್ಟ ಕಲಿಗಳ ದೇವ ಕಾಳೆಗಕ (ವೀರಭ. ೧೦-೪): ಜನನಿಯುಳ್ಳೊಡೆ ಸರ್ವನಾಭರಣಂಗಳಂ ತಲೆಮಾಲೆಯುಂ ತನಯನುಂ ತೊಡಲೀವಳೇ . . . ಕರಿಕೃತ್ತಿಯುಂ ಪುಲಿಸಮ್ಮಮುಂ ತನಗೆ ತಾಂ ಪೊದೆವಂತೆ ಮಾಣ್ಪಳೆ (ವೃಷಭ. ೯-೦೦೪). [ಪುಲಿ+ಸಮ್ಮ, (<ಚಮ್ಮ)]

**ಪುಲಿಸು**, ಪುಲುಸು, ಹುಲಸು, ಹುಲಿಸು, ಹುಲುಸು (ನಾ). ೧. (ಪೈರಿನ) ಹೆಚ್ಚಳ; ಸಮೃದ್ಧಿ; ಸೊಂಪು : ಧರೆಯೊಳಿ ಸಜ್ಜನಪ್ರತತಿ ದೊಂಬುರು ಬಲ್ಲಿಸಿಲಂಚಿಮುಂ ನರೇಂದ್ರರ ಮನೆದೀವದಂತೆ ಧನರಾಶಿ ದುನಾ ಪುಲಿಸಿಂದಲೀಯದೇ (?) (ಮಲ್ಲಿಕಾ. ೦ ೩೪); ಪಿರಿದಂಚೆಯೋಗಿ ಕಿಡು ತಿರ್ಪುರಾಗದೇದುಸೊಲ್ದು ಪುಕ್ಕೊಡದು ಫಲಮಕ್ಕುಂ ನಿರುತ ಪುಲಿಸಪ್ಪದು (ಶೃಂಗಾ. ೦೪-೬); ಫಳಿಕುಂ ತ್ರಿವರ್ಗಮುಂ ಕೈಗೊಳಿಕುಂ ತತ್ಸಾಧನಂಗಳುಂ ಸಂಗತಿಯಿಂ ಶಿವಲ್ಕೆಂದೀ ರೀತಿಯನಳವಂ ಕಡೆಗಣಿಸಿತಲ್ತೆ ಬೆಳಿಸುಂ ಪುಲಿಸುಂ (ಅಜಿ. ೪-೭೯). ೨. ಒಕ್ಕದೆ ಇರುವ ತೆನೆ : ಪುಲಿಸಂ ಪೊತ್ತಾತನೆ ಕಳದಲಿ ಪಡುವುದು ಭಕ್ತಪ್ರಾಳಿತ ಮುಷ್ಟಿನಮಾತ್ರಂ ತೊಲಗಲು ಸಲ್ಲದು (ಸಮುಚ. ಅನುಬಂಧ. I. ೭೬೨-೯೩). **ಪುಲುಸು** : ೧. ಅರಸಿಂದುಜಿರುಬುಪರ್ ಮಚಿಯೆಂಬ ವರುವಾನ ಪುಲುಸುಗುಂದಿದುದು (ಶಬ್ದ. ೦-೨-೪). **ಹುಲಸು** : ೧. ಬೆಳಸು ಹುಲಸಾತ ಜಗದಾಗ (ಜನಾ. ೭೭); ಹರಿಯುವ ಹೊಳೆಗೊಂದು ಕಟ್ಟೆಯ ವಿರಚಿಸಿ ಕೊಂಡವೆ ಕೃಷಿಕರ್ವರ್ಗ ಹುಲಸು (ಇಶಾಕ. ೦೭೯-೭೭). **ಹುಲಿಸು**, : ೧. ಆಧರಕ್ಷತವಂ . . . ಚುಂಬನವಳಯಂಗಳು ಪ್ರತಿಸಲಚ್ಚಣದಿಂ ಪ್ರತಿಯುಟ್ಟು ನೋಡಿ ಕಾಮನಿ ಹುಲಿ[ಜನಾ. ೦] ಸಾದ ಬೇಟವೆಳಸಂ ಕಡು ಸಂತಸದಂತಮೆಯ್ದಿದರ್ (ಕೋಕ್ತಿ. ೦೪-೯೪); ಕಾಲನ ಹೆಬ್ಬೆಳಸು ಹುಲಿ[ಪಾಠಾಂ. ಲು] ಸಾಯ್ತು (ಶುಕ್ಲಾ. ೪-೦೨); ಮಾರಿಯು ಹೆಬ್ಬೆಳಸು ಹುಲಿಸಾಗಿ ಹಸರಿಸಿದ ಕಣನೆನಿಸಿ ಕಾಣಿಸಿತು ಸಮರಾಂಗಣವು (ಚಿತ್ರಾ. ೨೨-೦೬). **ಹುಲುಸು** : ೧. ಫಲಪುಷ್ಪಗಳ ಬೆಳಸು ಹುಲುಸಾದುದು (ರಾಜ. ೨ ೦೪); ಭಾರತದಲ್ಲಿ ಅನುಭಾವವಿದ್ಯೆಯು ಬಲು ಹುಲುಸಾಗಿ ಬೆಳೆಯಿತು (ಚನ್ನಬ. ೩೩೬). ೨. ಒಕ್ಕಲಿಗನು ಕಣದ ಹುಲುಸನ್ನು ದನದ ಸಗಣಿಯ ಉಂಡ ಹೊರಗೆ ಒಗೆಯುವಂತದು (ಚನ್ನಬ. ೦೩೬).

[ದೇ.॥ ತಮಿ. ಪೊಲಿಚ್ಚಿ=ಲಾಭ; ಮಲ. ಪೊಲಸ = ಬದ್ಧಿಯಾಗಿ ಕೊಡುವ ಧಾನ್ಯ; ತುಳು. ಪೊಲ್ಲುಸ=ಲಾಭ]

**ಪುಲಿಸುದಳೆ** (ಕ್ರಿ). ಸಮೃದ್ಧಿಯನ್ನು ಹೊಂದು; ಹುಲುಸಾಗಿ ಬೆಳೆ ; ಸೊಂಪಾಗಿ ಬೆಳೆ : ಈಳ್ ಕೆಮ್ಮಗ್ ಪುಲಿಸುದಳೆದತ್ತಿಗಳಗ್ಗಂ ಪೊಮ್ಮತ್ತಿಗಳ್ ಸರ್ವಂ ಸಫಲಮೆನಿಸಿತ್ತಿಗಳೆಲ್ಲಿಲ್ಲ ಗೆಲ್ಲಂ (ಕಳಿ. ೩-೦೦೦). [ಪುಲಿಸು+ತಳ್]

**ಪುಲು** 'ಪುಲ್' ನೋ.

**ಪುಲುಗರ್ಚು** 'ಪುಲ್ಲಗರ್ಚು' ನೋ.

**ಪುಲುಗುಡಿತೆ**, ಹುಲುಗುಡಿತೆ (ನಾ). ಒಂದು ಬಗೆಯ ಕೀಟ (?) : ಪಿಲಿಸನ್ನಿತ್ರಯುತಂ ಕೋದಲ ನೇಣಂ ಮೂಸಲ ಪಂಥಮಂ ಪೂರೆ ಪುದುಲೊಪಲವಂ ಪೋಣ್ ಬಾಸುಬ್ಬಲ್ ಪುಲುಗುಡಿತೆಯು ಮೆಯ್ಯೊಳೇ ಬುಗುಂ ತತ್‌ಕ್ಷಣದಿಂ (ಜಿವಪ. ೦೬-೬೨). **ಹುಲುಗುಡಿತೆ** : ಒಸೆದೀ ಪಾತ್ರದೊಳೇಂ ಮಂತ್ರಿಸೊಡಿದ ಭಸ್ಮಮಂ ಶಿವಾಲಯದಾ ದೆಸೆಗಂ ಹುಲುಗುಡಿತೆಗಳುಂ ಮಿಸುಕದೆ ಚಿತ್ರಗಳಾಗಿ ತೊಲಗುಗುಮಿದಜೀ (ಬಸವ. ೦೬-೯೪). [?]

**ಪುಲುದೇಗುಲ** 'ಪುಲ್ದೇಗುಲ' ನೋ.

**ಪುಲುದೊಂದೆ** 'ಪುಲ್ದೊಂದೆ' ನೋ.

**ಪುಲುಬೂತು** (ನಾ). ಅಲ್ಪನಾದ ಯಾಚಕ : ಪಾವಿನಂತೆ ಗೀತಕ್ಕೆಬಗೆದೆ ಪುಲುಬೂತಿನಂತೆ ಇಂದರನೇನಾನುಮಂ ಬೇಡುತ್ತಿರದೆ (ಧರ್ಮಾಮೃ. ೬-೪೪). [ಪುಲು (<ಪುಲ್)+ ಬೂತು,]

**ಪುಲುಮನೆ** 'ಪುಲ್ಮನೆ' ನೋ.

**ಪುಲುಮೃಗ** 'ಪುಲ್ಮೃಗ' ನೋ.

**ಪುಲುವಟ್ಟೆ** 'ಪುಲ್ವಟ್ಟೆ' ನೋ.

**ಪುಲುವಿಲು**, ಹುಲಿವಿಲಿ, ಹುಲಿವಿಲು, ಹುಲುವಿಲು, ಹುಲುವಿಲೆ (ನಾ). ಒಂದು ಬಗೆಯ ಮರ : ಬೇಲವರುಟಾಳ ಪುಲುವಿಲುಯ ಸಂದಿ[ಪಾಠಾಂ. ಹಲಸಲವ ಕಿಱುಸಂದಿ] ಚಂದನ ಚಕ್ಕೆ ಬಿಕ್ಕೆ ತಱಯ . . . ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಶ. ೩-೨). **ಹುಲಿವಿಲಿ** : "ಚಂಕ್ರಸಂದರಣಃ_ಹುಲಿವಿಲಿ" (ಚಿಕಿ. ೩೩). **ಹುಲಿವಿಲು** : "ರಥಿಕ_ಹುಲಿ(ಗ)ವಿಲು" (ಚಿಕಿ. ೦೩೪). **ಹುಲುವಿಲು** : "ಅಶ್ವಗರ್ಭಃ_ಹುಲುವಿಲು, ಪಚ್ಚಿ" (ಚಿಕಿ. ೩). **ಹುಲುವಿಲೆ** : ಹುಲುವಿಲೆ ಮರ ಪ್ರಿಯಂಗು ದಾಳಿಂಬ ಮೊದಲಾದ ವೃಕ್ಷಂಗಳು (ಶಿಗಂಧ. ೪೨೩-೦೨). 'ಪುಲಿಗಿಲ್' ಪರಾ. [?]

**ಪುಲುವೀಡು** (ನಾ). ಹುಲ್ಲಿನ ಮನೆ ; ಹುಲ್ಲುಜೋಪಡಿ : ಪುಲುವೀಡೊಳ್ ಪಲವುಂ ಪಗಲ್ ಪರದನಿರ್ದಾದಾಯಮುಂ ಪೆತ್ತು ಬಾಳ್ಪೆಲೆಯುಳ್ಳೊಂದೆಡೆ ಗೈದಲಾ ನೆಲೆಯುಮರ್ ನೋಪಂತೆ (ಧರ್ಮಾ.ಕ. ೦೩). [ಪುಲು (<ಪುಲ್) + ಬಿ.ಡು,]

**ಪುಲುಸು** 'ಪುಲಿಸು' ನೋ.

**ಪುಲುಸೋಗು** (ಕ್ರಿ). ಆಧಿಕ್ಯವು ಕುಂದು,–ಕಡಮೆಯಾಗು : ಒಡೆಯದ ಕಂತುಮುಂದ್ರೆ ಪುಲುಸೋಗದ ರಾಗದ ರಾಶಿ ನಿರ್ಜರರ್ ಕಡೆಯದ ಪಾಲ್ಗಡಲ್ ಗಿರಿ ಕರ್ದುಂಕದ ಪಕ್ಕೊನೆ . . . ಕಾದಿ ಕೋಳ್ವಡೆಯದ ದುರ್ಗದಂತೆಸೆಯುತಿರ್ದಳು ಕನ್ನೆ ಕುಲಾಭಿಮಾನದಿಂ (ಮಲ್ಲಿಕಾ. ೬-೩೦). [ಪುಲುಸು (<ಪುಲಿಸು) + <ಪೋಗು,]

**ಪುಲೆಕೇಶಿ** 'ಪುಲಿಕೇಶಿ' ನೋ.

**ಪುಲ್ಕಸ** (ನಾ). ೧. ನಿಷಾದಜಾತಿಯವನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದವನು. ೨. ಮಾದಿಗ ; ಶ್ವಪಚ : "ಶ್ವಪಚಃ, ಪುಲ್ಕಸಃ, ಮಾತಂಗಃ, ಪ್ಲವಕಃ_ಈ ೪ ಮಾದಿಗಂ" (ಕರ್ಣಾಟ. ೭೬-೪೪೪); ಪರದೇಪತೋಪಹಾರಕೃತಿಥಿತರ್ಪಣಿಕೆ ಪರವೈಶ್ವದೇವರ್ಗೆ ಪ್ರಾಣಾಗ್ನಿ ಹೋತ್ರಕ್ಕೆ ಪಿರಿದು ಧರ್ಮಕ್ಕನರ್ಹಂ ಮತ್ತೆಯುಂ ಕೇಳಿರಲೆ ವಿಪ್ರ ಪುಲ್ಕಸರಿರ (ಅನಂತ. ೦-೫ ೩೬); ಕ್ರೂರವಾದ ಕರ್ಮಗಳಿಂದ ರಜಕರಾಗಿ ಕುಂಭರರಾಗಿ ಸಾವರ್ನಕರಾಗಿ ಕುಮಿಂದರಾಗಿ ಪುಲ್ಕಸರಾಗಿ ಕಿರಾತರಾಗಿ . . . ಪುಟ್ಟುವರು (ಚಿಕರ. ೦೪). [ಸಂ].

**ಪುಲ್ಕೊಂಥಬೋಯ** (ನಾ). ಒಬ್ಬಾತನ ಹೆಸರು : ಪುಲ್ಕೊನ್ತಬೋಯಸ್ಯ ಕಾಶ್ಯಾ(ಶ್ಯ)ಪಗೋತ್ರ (ಇಎ. VII. ೦೬೬-೯೯; ೬೬೬). [ಪುಲ್ಕೊಂಥ,+ಬೋಯ]

**ಪುಲ್ಗಚ್ಚು** 'ಪುಲ್ಲಗರ್ಚು' ನೋ.

**ಪುಲ್ಲಗರ್ಚು**, ಪುಲುಗರ್ಚು, ಪುಲ್ಗಚ್ಚು, ಹುಲುಗಚ್ಚು (ಕ್ರಿ). ೧. ಹುಲ್ಲಂ ಕಡ್ಡಿಯನ್ನು ಬಾಯಲ್ಲಿ ಕಚ್ಚಿ ಹಿಡಿ : ಪುಲ್ಲಗರ್ಚಿದ ಪುಲ್ಲೆಯುಂ ಕುಜದ ಕೂಬಂ ಸಾರ್ವ ಸತ್ವಕ್ಷಿಸಂಕುಲಮುಂ ಕುಂದದೆ ಕೊಂದಪುಕ್ಕಿದೆ ಫಲಂ ನೋಡೆಂಬವೊಲ್ ಬೇಡರಂ ಬಲಿಗೊಂಡತ್ತು...ಉಗ್ರಕಂಠೀರವಂ (ರಾಜಶೇ. ೩ ೦೨೨). ೨. (ಅಲಂ) ಹುಲ್ಲು ಕಚ್ಚಿ ಹಿಡಿಯುವುದರ ಮೂಲಕ

ಶರಣಾಗತಿಯನ್ನು ಸೂಚಿಸು,– ಸೋತೆನೆಂದು ತಿಳಿಸು : ಕರುಣಿಸಲಿ ಶಬರ ತುಡದಿರು ಸತಲಂ ನೀನೆಂದೆನುತ್ತೆ ಪುಲ್ಗರ್ಚಿದವೋಲ್ ಮರವಟ್ಟು ಸ್ವಕ್ಷದೂರ್ವಾಂಕುರನಾಗಿರ್ದುದು ಭಯಾತ್ತಕರಣಂ ಹರಿಣಂ (ಕಸುಖಾ. ೧೧–೪೨); ಪುಲ್ಗರ್ಚಿದರುಮಂ ಪುತ್ರನೇಜಿದರುಮಂ . . . ತಲೆಗಾದು ಮನ್ನಿಸಿ (ಕಳವಂ. ೯೦–೩). **ಪುಲುಗರ್ಚು** : ೨. ದೇಸಿಗನಪ್ಪನಂ ಭಯದಿನೋಡುವನಂ ಕರವಂಜಿದಾತನಂ . . . ಪುಲುಂಗರ್ಚಿದನಂ ಕೊಲಲಾಗದೆಂಬವಂ ವೇಸದೆ ಪಾಳಿಪುಳ್ಳನಿನಿತುಳ್ಳ ಮೃಗಂಗಳನೆಂತು ಕೊಲ್ವನೋ (ಕಸಾಕ. ೨೪೮). **ಪುಲ್ಗಚ್ಚು** : ೨. ದೊರೆದೊರೆಗಳುಂ ಪಲಾಯನವುನ ನುಕರಿಸಿ ಕಡುಭೀತಿಯಿಂದೆ ಜಲದೊಳ್ ಮುಳುಂಗಿ ಪುಲ್ಗಚ್ಚಿ ಪೆರ್ವರ ಪುತ್ರುಗಳನೇಜು ಕೈಗಳಂ ಮುಗಿದು . . . ಹಾಯ್ದರ್ ಕಂಡ ಕಡೆಗೆ (ಶಂಪು. ೬೨–೪೨) . **ಹುಲುಗಚ್ಚು**: ೧. ಉಚ್ಚೈಃಸುತಪ್ಪಳಿಸುತಂ ಹು[ಪಾಠಾಂ. ಪು]ಲುಃಗಚ್ಚಿ ಹಾಯ್ಯುತ ಮೆಲುಕಿಜಿದು . . . ನೆಗೆಪುತಂ ಗೂಡಿಸಾಡುತಂ ನೆಲನ (ಚಕಪು. ೬೨–೨೬). [ಪುಲ್ + ಕಚ್ಚು$_1$]

**ಪುಲ್ಲಗುರ್ಚು, ಹುಲ್ಲುಗಬ್ಬು** (ನಾ). ಒಂದು ಬಗೆಯ ಕಬ್ಬು : ತವ್ವಳ್ಳಿ ಪುಲ್ಲಗುರ್ಚನಾವಗಮೊಂದಂ ಸವಿವಂತೆ ತಾವೆ ಜಗೆಲ್ಲಂ ದೇವರೆಂಬಂತೆ ತೀವುಗುವಮುತ್ತಾನಿತವಿಕ್ಷುಯಾತ್ರನಿನದಂ ದಿಕ್ಕುವಿನೀಕರ್ಣವಂ (ಮಲ್ಲಪು. ೨.೪೪). **ಹುಲ್ಲುಗಬ್ಬು** : ಕಬ್ಬಿನ ಜಾತಿಗಳು–ರಸದಾಳಿ, ರಾಮಗಬ್ಬು . . . ಬೆತ್ತಗಬ್ಬು ಅಥವಾ ಹುಲ್ಲುಗಬ್ಬು ಎಂದು ಅನೇಕವುಂಟು (ಲೋಕೋಪ. ೩–೨೦೦). [ಪುಲ್ + ಕರ್ಬು (<ಕರ್ಪು$_1$)]

**ಪುಲ್ಗಲಿ, ಹುಲುಗಲಿ** (ನಾ). ಕ್ಷುದ್ರನಾದ ಯೋಧ; ನಾಡಾಡಿ ಬಂಟ : ಕಜ್ಜಮುಂ ಕಾಲಮುಂ ಪಾರ್ವ ಕಜ್ಜಗಲಿಗಳುಮಂ ಮಾರ್ಗವಿಮಾಯದ ಬದಿರಿದ ಲೋಭಿಗಲಿಗಳುಮಂ ನೊಂದು ಪಲ್ಗಿರಿದೋಡುವ ಪುಲ್ಗಲಿಗಳುಮಂ ಮೋದಿ ಮೆಯ್ಗೊಳ್ ನಿಂದಿಜುವಗಲಿಗಳುಮಂ . . . ನೋಡಿ (ಗದಾಯು. ೮–೩೪ ವ). **ಹುಲುಗಲಿ** : ಇವನೆಂದರೆ . . . ಹೊರಗಣ ಪರಿಗೂ ಅವೊಬ್ಬ ದಳವಾಯಿಯಲ್ಲಿದ್ದ ಭಯುಗೌರವಗಳೂ ಇಲ್ಲ.— ಆ ತೂಕದ ಹುಲುಗಲಿಯೆನಿಸಿಕೊಂಡಿದ್ದಾನೆ (ಮುಂಕ್ರಕ. ೬೬–೦೩). [ಪುಲ್+ಕಲಿ$_3$]

**ಪುಲ್ಗಸ** (ನಾ). ಹುಲ್ಲು ಮೊದಲಾದ ಕಳೆ : ಕಿಯ್ಯ ಮರಗಸಂ ಪುಲ್ಗಸಮೆಂಬೆರಡುಮಂ ಕಳೆದು ಪದದೊಳ್ ಬಿತ್ತಿದೊಡಂ ಮನದೊಳುಳ್ಳ ರಾಗದ್ವೇಷಮೆಂಬೆರಡುಮಂ ಕಳೆದು ಶುದ್ಧಚಾರಿತ್ರದೊಳೆ ಪತ್ರದೊಡಮಾತಂಗೆ ಬೆಳಸುಮಿಾತಂಗೆ ಸುಗತಿಯುಮೆಂತಕ್ಕುಮೆಂಬುಮಂ ಬಗೆವುದು (ಆಚಸಂ. ೪೬–೦೪). [ಪುಲ್ + ಕಸ]

**ಪುಲ್ಗಾಡು** (ನಾ). ಹುಲ್ಲು ತುಂಬಿರುವ ಕಾಡು : ಕಂಡಿಯೊಳ್ ಕಡೆ ಕುತ್ತಿಟ್ಟಿಸು ನೀಲಿ ಪಾಯ್ವ ಪುಲಿಯಂ ಪುಲ್ಗಾದೊ[ಪಾಠಾಂ. ನೊ]ಳ್ (ಸುಕ್ತಿಸು. ೩–೦೦೩). [ಪುಲ್ + ಕಾಡು$_1$]

**ಪುಲ್ಗಿಚ್ಚು, ಹುಲುಗಿಚ್ಚು** (ನಾ). (ಹುಲ್ಲಿಗೆ ಬಿದ್ದ ಬೆಂಕಿಯಂತೆ) ಬೇಗನೆ ಆರಿ ಹೋಗುವ ಬೆಂಕಿ : ಸಿರಿಯಪ್ಪೊಡೆ ಪುಲ್ಗಿಚ್ಚಿನ ದೊರೆ ರಾಜ್ಯವಿಭೂತಿ ಮುಗಿಲ ನೆಬಲ ಸಮಾನಂ (ಧರ್ಮಾಮೃ. ೬–೦೩೪). **ಹುಲುಗಿಚ್ಚು** : ಹೊಲೆಯಗಿತ್ತಾ ಸಾಲ ಒಲೆಯ ಮೇಲಿನ ಹಾಲು ಲಲನೆಯರ ಒಲುಮೆ ಹುಲುಗಿಚ್ಚು ಇವು ನಾಲ್ಕು ನಿಲಲಿಲ್ಲವಯ್ಯ (ಸರ್ವಜ್ಞ. ೮೪೪೪). [ಪುಲ್ + ಕಿಚ್ಚು]

**ಪುಲ್ಗುಡಿ** (ನಾ). ಹುಲ್ಲಿನ ಗುಡಿಸಲು ; ಪರ್ಣಶಾಲೆ : "ತೃಣಕುಟಿ ಪುಲ್ಗುಡಿ" (ಪ್ರಾ ಕೋ. ೪೬–೯). [ಪುಲ್ + ಗುಡಿ$_3$]

**ಪುಲ್ಗುಡಿಸಲ್** 'ಪುಲ್ಗುಡಿಸಿಲ್' ನೋ.

**ಪುಲ್ಗುಡಿಸಿಲ್, ಪುಲುಗುಡಿಸಲ್, ಪುಲ್ಗುಡಿಸಿಲು, ಹುಲುಗುಡಿಸಿಲು, ಹುಲ್ಲುಗುಡಿಸಲು** (ನಾ) = ಪುಲ್ಗುಡಿ : ಪುಲ್ಗುಡಿಸಿಲಿವೊರ್ವಂಗೆ ಮಣಿಮಾಡಮಾದಂತೆ ನಾಯಕತನಂಗೆಯ್ದಂಗೆ ಚಕ್ರವರ್ತಿತ್ವಮಾದಂತೆ (ಧರ್ಮಾಮೃ. ೦೦–೨೯೩); ಜಗವಿಾರೇಟುಮುದೊಂದು ಪುಲ್ಗುಡಿಸಲಂತಕ್ಕಾಡೆ ಕಲ್ಪಾಂತದೊಳ್ ನೆಗೆವೊಂದಗ್ನಿಯೊಳಂ ಕಿದೊಂದೆಸಕವಿಲ್ಲೇಬನ್ನೆಗಂ . . . ಜ್ವಾಲೆಯುಂ ಪೊಗೆಯುಂ ತಳ್ತೊಗೆವೀ ಶಿವಾಸ್ತಕರನೀ ಮೋಷಸ್ಥಿತಂ ಪಾವಕಂ (ಜಗ. ೦೩–೬೭). **ಪುಲ್ಗುಡಿಸಲ್** : ಕರುಮಾಡಮಂ ಬಿಟ್ಟು ಪುಲ್ಗುಡಿಸಲನಾಶ್ರಯಿಸುವಂತೆ . . ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವಪ್ರೀತನಾಗಿರ್ಪುದುಂ (ಧರ್ಮಾಮೃ. ೦೦–೦೬೨). **ಪುಲ್ಗುಡಿಸಿಲು** : ತಂದೆ ತಾಯಿಲ್ಲದ ಅನಾಥನ್, ಅಜ್ಜಿಯೊಡನಿಹನಂತೆ, ಆ ಪಾಳ್ಗುಡಿಯ ಬಳಿಯ ಪುಲ್ಗುಡಿಸಿಲಲ್ಲಿ (ಕಂಕ್ರಸ. ೦೯–೨೪). **ಹುಲುಗುಡಿಸಿಲು** : ನೋಡಿರೆ ಹುಲುಗುಡಿಸಿಲಾತನ ರೂಢಿ ವಿಭವಗಳದಕೆ ಕಾರಣವು ನಾಡೆ ಏನೆನಲೊಳಗಣಾ ಕಳೆಯಿದಕೆ ಕಾರಣವು (ಸ:ಕಕ. ೨೪–೬೩): **ಹುಲ್ಲುಗುಡಿಸಲು** : ಹುಲ್ಲುಗುಡಿಸಲು ಅಲ್ಲಲ್ಲಿ ಸೋರತೊಡಗಿ, ಮನುಷ್ಯರಲ್ಲಿ ಕೆಲವರು ಸ್ಥಳ ಬದಲಿಸಬೇಕಾಯಿತು (ಶಾಕೂಕು ೦೪೪). [ಪುಲ್ + ಗುಡಿಸಿಲ್]

**ಪುಲ್ಗುಡಿಸಿಲು** 'ಪುಲ್ಗುಡಿಸಿಲ್' ನೋ.

**ಪುಲ್ಗೊನರ್** (ನಾ). ಹುಲ್ಲಿನ ಚಿಗುರು,—ಕುಡಿ : ಗಿಳಿಯೊಡಲಿಕೆಯ ಬಣ್ಣದ ಪುಲ್ಗೊನರ್ ಪೊಸವಟ್ಟುದು ಪೊಲದೊಳ್ (ಜಗ. ೪–೬). [ಪುಲ್ + ಕೊನರ್$_3$]

**ಪುಲ್ಚೇಡು** (ನಾ). ಒಂದು ಊರಿನ ಹೆಸರು : ಅದಱ ಪೊಲಮೇರೆ ಮುಡಣದೆಸೆ ಪೆರ್ಬಳ್ಳಿಯಿಂ ಪುಲ್ಚೇಡು ಉಡಿಚೇಡು ಚೇರಳಿಚಿನ್ತ (ಎಕ. XII, ಸಿರಾ. ೬೮–೬೬ ; 878). [ ? ]

**ಪುಲ್ದಂಡೆ** (ನಾ). ಒಂದು ಬಗೆಯ ಬೇಟೆಯ ಸಾಧನ ; ಹುಲ್ಲಿನ ಹಗ್ಗ : ಬಡಿಕೋಲ್ ಕಿರ್ಗಟ್ಟು ಪಾಸಂ ಶುನಕವಿತತಿ ಹೇರಿಟ್ಟ ಕೂರಂಬುಗಳ್ ಕಿಯ್ಪೊಡೆ ಬಲ್ ಪುಲ್ದಂಡೆ ಬೆಳ್ಪುವರ್ಗಟಮೆರಬಲೆಗಳ್ ಸಾಳುವಂ ಕೂಳೆ ಗಾಳಂ ಗಿಡುಗಂ ಬಲ್ಕಿಂಡಿಯೊಳ್ ದೀಹವ ಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ಧತ ಕಿರಾತಪ್ರಜಾತಂ (ಗಲೆ. ೦–೬೯). [ಪುಲ್ + ದಂಡೆ$_1$]

**ಪುಲ್ದೇಗುಲ, ಪುಲುದೇಗುಲ** (ನಾ). ಹುಲ್ಲಿನ ಛಾವಣಿಯುಳ್ಳ ದೇವಾಲಯ : ಆಗಲೊಂದು ಪುಲ್ದೇಗುಲಮನವರವಸರವಸರದಿಂ ರಚಿಯಿಸಿ ಬಳ್ಳಮನೊಂದಂ ತಂದವಾಜ್ಞಾಖಿಮಾಗಿ ನಟ್ಟು ಕಾಡಲಗೋಂ ಚಲ್ಗಿಂ ಪೂಜೆಗೆಯ್ದು ಲಿಂಗವಿಾಯೆಡೆಲೋನ್ನ ಪುಣ್ಯದಿನಿರ್ದುದೆಂದು ಶೆಟ್ಟಿಯುಂ . . . ಒಳಗಣ್ಗೆ ಪುಗಿಸಲೊಡನೆ (ವೃಸಂ. ೬–೯ ವ). **ಪುಲುದೇಗುಲ** : ಶಿವಲಿಂಗದರ್ಶನನಿಯತಿ ತಪ್ಪಿದೊಡೆ ಜೀವಮಂ ತಾಂ ತ್ಯಜಿಸುವಂ ಗಡ ಭಾವನೆಂದತಿಕುಟಿಲಚಿತ್ತದ ಗಾವಿಲರು ಪುಲುದೇಗುಲವನೊಂದಂ ರಚಿಸಿ (ಚಕಪು. ೯–೬). [ಪುಲ್ + ದೇಗುಲ]

**ಪುಲ್ದೊಂದೆ, ಪುಲುದೊಂದೆ** (ನಾ). ಹುಲ್ಲಿನ ಸಿವುಡಿನಿಂದ ಮಾಡಿದ ಪಂಜು,—ಸೂಟಿ : ಸುಡುವ ಪುಳಲ ರಾಸಿ ಕಾಸುವಂಬಲಿಯೆಣ್ಣೆಗೊಡ ಸುಣ್ಣಮರಲ ಕೊಪ್ಪರಿಗೆ . . . ಪುಲ್ದೊಂದೆ ಬಿಡದೆಸೆದವು ದುರ್ಗದೊಳಗೆ (ಕುಲಾಸಾಂ. ೪೨–೩೬); ಬಿಸಿಯೆಣ್ಣೆವರವಿಗಳ ಪುದಿದ ಪುಲ್ದೊಂದೆಗಳ ತರತರದೋರಿಸಿರ್ದ ಬಲ್ಗೊಲೆಯ ಡಂಕಣಿಯ . . . ಮೊತ್ತಂಗಳಾಳ್ವೇರಿಯೊಳ್ ಪಸರಿಸಿದುವು (ಶಂಪು. ೪೨–೦೦). **ಪುಲುದೊಂದೆ** : ತೊಲೆ ಪಂದಿ ಪೊಟ್ಟಿಟ್ಟಿ ಭಂಡಿ ಡೊಂಕಣಿ ಪಂದಿದಳಿ ಭೀಮಂಗದೆ ಬಿಡದುರಿವ ಪುಲುದೊಂದೆ ಪುದಿದ ಮಳಲುಂಗಳಿಂದೊಳಗಣ ಕಲಿಗಳಳುಕದೆ ಕಾದಿದರು (ಕುಲಾಸಾಂ. ೪೩–೬). [ಪುಲ್ + ದೊಂದೆ]

**ಪುಲ್ಪಡಿ, ಪುಲ್ಪದಿ** (ನಾ). ಹುಲ್ಲುಗಾವಲು : ಕೂರಮಂಗಲ ಕಱು ಪಳ್ಳಿಯವರ್ ಪುಲ್ಪಡಿಯುಮ್ ಪಡುವಾಯ್ಪೊಳ್ಳಿ (ಪ್ರಕಂ. ೦೬೨೪. ೬೦–೦೦೦; 700); ಆನೆದಳೊಗೆಜಿವಿ ಪುಲ್ಪಡಿಯೋ ಎಟಗಲ್ಲೀ ಪುಲಿಗಾವದ ಗೆಱ

ಮುಂತೂರಿತಲ್ ತತಃ ಪೂರ್ವ್ವತಃ ನಿಡುವಿಳಂಕ್ಕೆ ×× ದವಿನ ಪುಲ್ಪಡಿಯೆಃ ಕಲ್ಚುಗಾಱಗಲ್ಲೇ (ಇಇ. XII. ೦೬-೨೦; 813). **ಪುಲ್ಪದಿ :** ಮೂಡಾಯ್ತು ದುವುಱಿಯ ವೇರೊಬ್ಬಿ ತೆಜ್ಜುಯಿಯ್ಸ ಕಂಬಳ್ಯಂ ಪಡುವಾಯ್ಸುವಣಱಮುಂ ಪುಲ್ಪದಿಯುಂ (ಎಕ. IX. ಹಂಪುಂ. ೬೦-೬೨; 802).

[ಪುಲ್ + ಪಡಿ$_0$ (ಘ ← ತಮಿ. ಪಟಿ=ಭೂಮಿ)]

**ಪುಲ್ಪದಿ** 'ಪುಲ್ಪಡಿ' ನೋ.

**ಪುಲ್ಪಾಸು** (ನಾ). ಹುಲ್ಲಿನ ಹಾಸುಗೆ; ದರ್ಭಶಯನ : ಭರಸನಂ ಪುಲ್ಪಾಸಿನೊಳ್ ಬಟ್ಟು ಗುರುವಾದಕರಿಗೆ ಮುಂತ್ರಿಗೆ ಮೆತ್ತನುಚ್ಚರಿಸಿ (ಶಬಕ. ೫೦೩). [ಪುಲ್ + ಪಾಸು$_2$]

**ಪುಲ್ವೊದಱು, ಹುಲುವೊದಱು** (ನಾ). ಹುಲ್ಲಿನ ಪೊದೆ: ತರುತತಿ ಬಳ್ಳಿ ಪುಲ್ವೊದಱು ಪಕ್ಕಿ ಮೃಗುಳ ಘಣಿ ಜೀನ್ ಮೃಗವ್ರೀ . . . ಕಿನ್ನರ ವಿಥುನಂಗಳ್ ವಿಹಮುಮಾಟಿ ತೀರ್ವುದು ಶೈಲವರ್ಣನಂ (ಸೂಕ್ತಿಸು. ೩-೦). **ಹುಲುವೊದಱು :** ಹೊಲಮೇರಿಗೆ ಉಳುವ್ವರದ ಹುಲುವೊದಱು ಗಳೊಳಗಲಕೆ ಹರಿದು ಹೊರಬೀಗುಟ್ಟಿದನು ಹೊವ್ಮುಱಿಯ ಬೆನ್ನಿನಲಿ (ಕೊರಕಾ. ೩-೬-೫೭). [ಪುಲ್ + ಪೊದಱು (<ಪೊದಱ್)]

**ಪುಲ್ವೊಱ್** 'ಪುಲ್ವೊಱ್' ನೋ.

**ಪುಲ್ಬಂಟ** (ನಾ). ಕ್ಷುದ್ರನಾದ ಯೋಧ; ತೀರ ಸಾಮಾನ್ಯನಾದ ಸೈನಿಕ : ಪುಲ್ಬಂಟನಂ ನಂಬಿ ಬಲ್ಬಂಟನಂ ಬಿಡುವ ಪಗೆಗಾಱನುಮಂ . . . ತನ್ನಾಂ ಬಟ್ಟು ಬಿಸಿಬಂ ಕಾಮ್ವ ಪಿತ್ತಾಧಿಕನುಮಂ ಪೋಲ್ವೇ (ರವಾಕಿವು. ೬ ೫೨). [ಪುಲ್ + ಬಂಟ$_1$]

**ಪುಲ್ಬಗೆ** 'ಪುಲ್ವಗ' ನೋ.

**ಪುಲ್ಮನೆ** 'ಪುಲ್ವನೆ' ನೋ.

**ಪುಲ್ಮರುಳ್** (ನಾ). ಕ್ಷುದ್ರ ಪಿಶಾಚಿ; ಕ್ಷುಲ್ಲಕವಾದ ಭೂತ : ಸೀಯೆ ತರಲೆ ಬೇಯೆ ಮೆಯ್ ಮುಲ್ವಾಯೆ ಕರಂ ಪಸಿದ ಪುಲ್ಮರುಳ್ ಪಿಱಿಸಿನಿಗಳ್ ಬಿಯುತ್ತುಮಿರ್ಪ ಪೊನಂ ನಾಯುಗಿವಂತುಗಿದು ತಿಂದುವು (ಗಕ್ಕಿಸಾ. ೫೩೬ ೩೦ತ್ರಿ); ಆ ಮರುಳನೊ . . . ಸೀ ಮರುಳಿಯೊ ವೇಟ ವೇಟ ದೊಡೆ ಪೂಗದಿರೀಶ್ವರನಾಣೆಯೆಂತು ಪುಲ್ಮರುಳಿನಿಸಾನುಮಂ ತೆಗೆದು ಕಾಡಿಮುದಲ್ಲಿ ಘಣೀಂದ್ರಕಿತುಮ (ಶಂಕರಾ. ೦೩-೫೫); ಮರುಳ್ಗಳ ಮೇಳದಲಿ ಪೆರ್ಮರುಳೊಂದಿರುತ್ತಿರಲ್ ಕಂಡು ಭಯಭಕ್ತಿಯಿಂ ಚರಣ ಕಱಗುವುದೊಂದು ಪುಲ್ಮರುಳ್ ಶಿವನೆಂದು (ಶಂಕೃ. ೧೦-೨೩). [ಪುಲ್ + ಮರುಳ್$_2$]

**ಪುಲ್ಮಾನಸ** 'ಪುಲ್ಮಾನಿಸ' ನೋ.

**ಪುಲ್ಮಾನಿಸಿಗ** (ನಾ). ಕ್ಷುದ್ರನಾದ ಮನುಷ್ಯ; ಹುಲುಮನಂಜ : ರಾವಣನೇಱೊಂ ಪುಲ್ಮಾನಿಸಿಗನುರಿವಿಭಿತಬಲಂಬೆರಸು ಎಮ್ಮ ಮೇಲೆ ಬಂದವ್ವನೆಂದು ಕೇಳ್ದಂ (ಹಾಲಲಕ್ಕು. ೩೦೦). [ಪುಲ್ + ಮಾನಸಿಗ]

**ಪುಲ್ಮಿಗ** (ನಾ). ೧. ಹುಲ್ಲು ತಿಂದು ಬದುಕುವ ಪ್ರಾಣಿ; ಕ್ಷುದ್ರವಾದ ಪ್ರಾಣಿ: ಮೇಪಿಂ ಪುಲ್ಮಿಗವುಂ ಬೆಳ್ಮಿಗವುಂ ಪಲ್ಮಿಗವುಂ ತಣಿಮುಮೆಯ್ದು ಕಾಪಿನ ಪೊಲದೊಳ್ (ಅಶಂಪು. ೦೦-೬೯). ೨. ಜಿಂಕೆ; ಹರಿಣ : ಬಹುದಾಂತಿಗಳಂ ಬೆಗಳ್ಗೊಳಿವ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ (ಶಾಕಕೀ. ೫-೦೩೦). [ಪುಲ್ + ಮಿಗ]

**ಪುಲ್ಮೃಗ, ಪುಲುಮೃಗ, ಹುಲುಮೃಗ** (ನಾ). ೧. = ಪುಲ್ಮಿಗ ೧ : ಪುಲ್ಮೃಗಮುಂ ಬೆಳ್ಮೃಗಮುಂ ಬಲ್ಮೃಗಮುಂ ಶಿಲೆಗುಹೆಯೊಳೊಂದೊಡಂ ಪಿಡಿದಪ್ಪಂ (ಸೂಕ್ತಿಸು. ೩-೯೦). **ಪುಲುಮೃಗ :** ೧. ಪಲುಮೃಗ ಬೆಳ್ಮಿಗ ಪುಲುಮೃಗ ಬಂದವು ಸಲವಿಂದ ಕಾಪಿನ ಪೊಲಕೆ (ಅಶಂಪು. ೦೬-೯). **ಹುಲುಮೃಗ :** ೨. = ಪುಲ್ಮಿಗ ೨: ಹುಲುಮೃಗವ ಪಿಡಿವುಜ್ಜುಗದಿ ಪೆರ್ಬುಲಿ ಹುದುಗುವೊಲು ದುರ್ಜನಂ ಮಿಗೆ ಹುದುಗಿಕೊಂಡಿಹ (ಶಂಕರಾ.

೦೬-೯೬). [ಪುಲ್ + ಮೃಗ]

**ಪುಲ್ಲ** (ಗು). ೧. ಅರಳಿದ ; ವಿಕಸಿತವಾದ: (*). (ನಾ). ೨. ಹೂವು ; ಪುಷ್ಪ : ಕುಳ್ಳಿರ್ದು ಬೆಳಗ ನೋಡುತ್ತಲ್ಲಾಡದೆ ಮುಗಿದ ಕೆಯ್ಗಳಂ ನೊಸಲಲಿಡುತ್ತಲ್ಲಿಯೆ ನಡುವುಂ ಬಾಗೆಯ ಪುಲ್ಲವನೊಲಿಟೆಯು ದಿರ್ದೊಡಱಯಬಹುದಿಂಗಳ್ (ಶಕಾಕ.೩೩೦); ಇಱಭಕ್ತನು ದಿವ್ಯನೆ ನಾರುವಂ ಕೊಂದು ಬಱಿದಿರ್ದವುದು ಕರಂಡದ ಪುಲ್ಲವಂ ಚೆಲ್ಲಿ ಕೊಱಱಡು ತಿರ್ದ ಗಜವುಂ ದ್ರೋಹಿಯುಂ (೦೦ಗಪು. ೨೯-೨೯). 'ಪುಲ್ಲಂಬ' ಪರಾ. [< ಸಂ. ಫುಲ್ಲ]

**ಪುಲ್ಲಂಗ** (ನಾ). ಒಂದು ಬಗೆಯ ಔಷಧೀಸಸ್ಯ : ಕಳ್ಳಂಗಡಲೆ, ಬೋಳಂಗಡಲೆ, ನಾಗಮುತ್ತು, ಪುಲ್ಲಂಗ . . . ಮರದರಿಶಿನ ಇವುಗಳನ್ನು ಸಮಭಾಗವಾಗಿ ಕಷಾಯುವಿಕ್ಕಿ ಕೊಡಲು ಪಂಚಾಹೀಜ್ವರ ಗುಣಮಕ್ಕುಂ (ಸಕಕ್ತ. ೦೦೬). [?]

**ಪುಲ್ಲಂಪುರಚಿ** 'ಪುಳ್ಳಂಪುಣಸೆ' ನೋ.

**ಪುಲ್ಲಂಪುರುಚಿ** 'ಪುಳ್ಳಂಪುಣಸೆ' ನೋ.

**ಪುಲ್ಲಂಬ** (ನಾ). ಹೂವಿನ ಬಾಣಗಳುಳ್ಳವನು ; ಮನ್ಮಥ : ಮಲ್ಲಿಗೆ ಕಳಹುಸ ತುಗೊಳಿವನಿಲಿವಂತೆ ಪುಲ್ಲಂಬನರಸಿಯ್ಯಂತಂದೊಂದು ಮೆಟ್ಟಿಗೆಯೊಳಲ್ಲಿ ಮುಂಡಿಸಿ (ಶತಕಪೂ. ೯-೩೬). [ಪುಲ್ಲ + ಅಂಬು$_1$ + —ಅ$_2$]

**ಪುಲ್ಲಗ** (ನಾ). ಒಂದು ಮನೆತನದ ಹೆಸರು : ಜ್ಯೇಷ್ಠದ ಪುಣ್ಣಮೆ ಆದಿತ್ಯವಾರದನ್ದು ಎದಿಯು ಪುಲ್ಲಗರಣ್ಣವುಸೆಟ್ಟಿಯು ಮಗು ಪೆದ್ದಣ್ಣಂ ತಱುಗೊಳಳ್ ಕಾದಿ ಸತ್ತು ದೇವಲೋಕಕ್ಕ ಸನ್ದಂ (ಎಕ. VIII. ಸೊರಬ. ೩೬೬-೫ ; 1004). [?]

**ಪುಲ್ಲಡಕಿ** (ನಾ). ಹುಲ್ಲುಂ ಹೊರುವವನು ; ಹುಲ್ಲುಹೊರೆ ತಂದು ಉಪಜೀವನ ಸಾಗಿಸುವವನು : ರಾಜಕುಮಾರರ ಕೆಳೆಯಂ ಬಟ್ಟು ಪುಲ್ಲಡಕಿಯೊಳ್ ಕೆಳೆಗೊಳ್ವಂತೆ . . . ಸದ್ವರ್ಗಮಂ ಬಟ್ಟು ವಿಥ್ಯಾತ್ವ ಪ್ರೀತನಾಗಿರ್ಪುದುಂ (ರಪಾಕವು. ೦೦-೦೬೨).

[ಪುಲ್ + ಅಡಕು$_1$ (<ಅಡುಕು) + —ಇ$_3$]

**ಪುಲ್ಲಡಿಗ** (ನಾ). (?) : ಪುಲ್ಲಡಿಗ[ಪಾಠಾಂ.ಗೆ] ರೇಚಯ್ಯ ಮಲ್ಲಣ ಮೊಲ್ಲೆಯರ ಬೊಮ್ಮಯ್ಯ ಮಲ್ಲಣ ತಲ್ಲಗೇಶನ ಮಸಣಹುಳ್ಳಿಯ ಮಾರತಂದೆಗಳು (ಶಾಸಂಕ. ೯-೬೯). [< ಪುಲ್ಲವಡಿಗ ?]

**ಪುಲ್ಲತ್ತಿ** (ನಾ). ಒಂದು ಊರಿನ ಹೆಸರು; ಘ ಬೆಳಗಾವಿಜಿಲ್ಲೆಯ ಈಗಿನ ಹುಲ್ಲತ್ತಿ : ಮುದುಗೇಱು ಪೂರ್ವ್ವಶ್ಯಂಘ(ಗ)ವ ಪುಲ್ಲತ್ತಿಎ (ಯ) (ಇಇ. XIII, ೨೦೯-೩೮; 1068ಕು ಕಕ ?). [?]

**ಪುಲ್ಲಪ್ಪ** (ನಾ). ಒಬ್ಬಾತನ ಹೆಸರು : ಶ್ರೀ ಪುಲ್ಲಪ್ಪನ್ ಶ್ರೀ (?)ಮಾ (?)ಣದೇವಃಕ(ಕ)ಟಿತಪ್ರತಿಮಾ (ಇಇ. X. ೦೬೮ ; ಸು. ೭೫೦ ಕಕ).

[ ? + ಅಪ್ಪ$_1$ ]

**ಪುಲ್ಲಮಂಗಲ** (ನಾ). ಒಂದು ಊರಿನ ಹೆಸರು : ××× ವರಸರು ××× ಕಡುಕಲ್ಲ ಪುಲ್ಲಮಂಗಲ ತೆಱುದಾರ ಪುನ್ನಾಡನಾಳೆ (ಎಕ. IX. ದೇವಹ. ೯೩ ೮; ಸು. ೯೦೦ ?). [ಪುಲ್ಲ + ಮಂಗಲ]

**ಪುಲ್ಲವಟುಕ** (ನಾ). ಹೂವನ್ನು ಮಾರುವ ಹುಡುಗ; ಹೂವಾಡಿಗ : ಸುರಪತಿಯಱವಸರ್ಹತ್‌ಪರಮೇಶ್ವರಪಾದಸೇವೆ ಪಾಂಗಾ ಅವುದಿರ್ದ ಪರಿದು ಗಡಿದೆನಿಸಿ ತಂದರ್ ಸುರವಟ್ಟುಕರ್ ಪುಲ್ಲವಟುಕರಂತಿರೆ ಪೂವಂ (ಅಪು. ೫-೬೬). [ಪುಲ್ಲ + ವಟುಕ]

**ಪುಲ್ಲವಡ** (ನಾ). ಹೂವು ಮಾರುವವನು; ಹೂವಾಡಿಗ : ಕಱಗೊಂಡಲನ ಪುಲ್ಲವಡ[ಪಾಠಾಂ. ಪುಲ್ಲವಳ, ಪುವ್ವಾಳ]ರೊಳು ಮನಜನೆಂಬವನೊರ್ವನಾವನು (ಸೂಕಸೂ. ೦೨-೨೦). [ಪುಲ್ಲ + — ವಡ$_2$]

**ಪುಲ್ಲವಡಕಾಱ** (ನಾ). = ಪುಲ್ಲವಡ : "ಮಂಲರ್ವಡಿಗನೆಂಬಲ್ ಪುಲ್ಲವಡ

ಕಾಜ ಪೂವಳನೆಂದು ಪೂವಡಿಗನೆಂದೆನಿಕ್ಕುಂ" (ಶಬ್ದಮ. ೩೪); ಇರಿಸಿದೆನ ವಳಡಿಯುರಿ ಜಾಜಿಯು ಚೌಸರವನೆಂಬನು ಫುಲ್ಲವಡಕಾ[ಪಾಠಾಂ. ವಡಿಗಾ, ಪೂಡೆಕಾ, ಶರಕಾ]ಜ (ಸೂಂಕೋ. ೧೨-೬೨). [ಫುಲ್ಲವಡ + – ಕಾಜ]

**ಫುಲ್ಲವಡಿಗ** (ನಾ). =ಫುಲ್ಲವಡ: "ಪೂವಡಿಗ ಫುಲ್ಲವಡಿಗಂ" (ಶಬಅಂ. ೨೬೬); ಕುಂಚವಡಿಗಂ, ಫುಲ್ಲವಡಿಗಂ (ಕಮುದ. ೦೯೬ ಪ್ರಯೋ); ಕುಸುಮಮಪುಡದ ಫುಲ್ಲವಡಿಗಂ ಕುಸುಮದತ್ತನೆಂಬವಂ . . . ಮಂದಸಮಂ ಕೊಂಡು ಬಂದು ನಿಜವಧುವಪ್ಪ ಕುಸುಮಮಾಲೆಗೆ ಕುಡುವುದುಂ (ಪುಣ್ಯಾಸ್ರ. ೨-೭೦ ವ). [ಫುಲ್ಲ + –ವಡಿಗ]

**ಫುಲ್ಲವಡಿಗಿತಿ** (ನಾ). ಹೂವಾಡಗಿತ್ತಿ, ಮಾಲೆಗಾತಿ: ಫುಲ್ಲವಡಿಗಿತಿಯರ ವಸರದಿನಂದಂಬಡೆದ ಸೂಳೆಗೇರಿಯು ಕೆಲದಲ್ಲಿ ಗರುವರ ಗೊಟ್ಟಿಗಾಜರ . . . ಆಗರವೆನೆ ವೆಂಪುಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಅನ್ನಾ. ೬೦). [ಫುಲ್ಲವಡಿಗ+–ಇತ್ತಿ (< –ಇತ್ತಿ)]

**ಫುಲ್ಲವಡಿತಿ** (ನಾ). = ಫುಲ್ಲವಡಿಗಿತಿ: ಬಂದುಗೆಯೊಳ್ ನಯನದ್ಯುತಿ ಬಂದುಗೆ ಮಲ್ಲಿಗೆಯು ಪೂಗಳೆಂದೀವರ್ ಕಂಪಂ ದಳವೇಳ್ದುಪರಳಿಗಂಪಂ ದಳವಡೆ ಫುಲ್ಲವಡಿತಿಯರ್ ಸೊಗಯಿಸುವರ್ (ಜಗ. ೨-೨೬). [ಫುಲ್ಲವಡ + – ಇತ್ತಿ (< – ಇತ್ತಿ)]

**ಫುಲ್ಲವಡುಗ** (ನಾ). =ಫುಲ್ಲವಡ: ಫುಲ್ಲವಡುಗರೊಕ್ಕಲುಂ ಕಲುಕುಟಿಗರೊಕ್ಕಲುಂ ಸರ್ವ್ವಮಾನ್ಯವಾಗಿ ಬಿಟ್ಟರು (ಸೌಇಇ. IX – 1, ೦೦೬-೩೯; ಸು. 1067); ಕಂಬೆ ಸ್ವರದೇವರ ಫುಲ್ಲವಡುಗ ನಾಗಂಣಂಗೆ ಮತ್ತ ೩ [?] (ಸೌಇಇ. IX – 1. ೦೭೩. ೦೯; ಸು. 1086).

[p ಇದು 'ಫುಲ್ಲವಡಿಗ' ಎಂಬುದರ ಅಪಲಿಖಿತವಿರಬಹುದು]

**ಫುಲ್ಲವಿಸು** (ಕ್ರಿ). ಉತ್ಸಾಹಗೊಳ್ಳು (?): ನಲ್ಲ ಶ್ರೀಚಿಕದೇವನಾಥ ನಿನಗೊಲಿದೆನ್ನ ಮೆಲ್ಲೆರ್ದೆಯು ಹರುಷವೀ ಮೇರೆ ಎಂದು ಸೊಲ್ಲುವವಳೊಡನೊಡನೆ ಫುಲ್ಲವಿಸಿ (ಚಿಕ. ೯೬). [ಫುಲ್ಲ + – ಇಸು₃]

**ಫುಲ್ಲಶರ** (ನಾ). ಪುಷ್ಪಬಾಣ; ಮನ್ಮಥ: ಫುಲ್ಲಶರನಂಜಿ ಕರ್ಬಿನ ಬಿಲ್ಲಂ ತಲೆಚೆಮರಿವೆರಸು ಬಿಸುಟಂತೆ ತಪೋವಲ್ಲಭನ ಕೆಲದ ವೇತ್ರಲತೋಲ್ಲಸಿತ ಕಳಾಪಗುಚ್ಛಮೆಸೆದುದು ತುಚ್ಛಂ (ಅಜಿತಪು. ೩-೧೮). [<ಸಂ. ಫುಲ್ಲಶರ]

**ಫುಲ್ಲಶರಹರ** (ನಾ). ಮನ್ಮಥನನ್ನು ನಾಶ ಮಾಡಿದವನು; ಶಿವ: ಬಲ್ಲವರು . . . ಫುಲ್ಲಶರಹರಲಿಂಗವರ್ಚಿಪರು (ಶಪಟೀ. ೨-೩೯). [< ಸಂ. ಫುಲ್ಲಶರಹರ]

**ಫುಲ್ಲಸೊಜ್ಜಿಗೆ** (ನಾ). ನೆನೆದು ಅರಳಿದ ರವೆ: ಬಿಸನೀರನೆಚಿದು ಕಿವಿಚಿದ ಫುಲ್ಲ[ಪಾಠಾಂ. ಪುಲ್ಲ, ಪುಟ್ಟ] ಸೊಜ್ಜಿಗೆಯು ರಸದೊಳಗೆ ಅರೆದಕ್ಕಿಯು ಸಮಂಗೂಡಿ (ಸೂಪಶಾ. ೦-೩೬). [ಫುಲ್ಲ + ಸೊಜ್ಜಿಗೆ (< ಸಜ್ಜಿಗೆ)]

**ಫುಲ್ಲಾಯಟ್** (ನಾ). ಒಂದು ಊರಿನ ಹೆಸರು (?): ಪ್ರಾಚೀದೆಸೆ ಪನೆದುಗ್ಗನ್ನೆಯನ್ನೂಡಾಯಟ್ ಕಡೆ ಆಗ್ನೇಯದೆಸೆ ಫುಲ್ಲಾಯಟ್ದಕ್ಷಿಣದೆಸೆತಳ (?) ಅಣ್ಣಯ್ ನೈರಿತ್ರಿದೆಸೆ ನೆಲಮಾಟ್ಟುಗೂರ್ (ಎಕ. X (೩). ಮುಳಬಾ. ೩೨೬-೩೦; ಸು. 660; ಪ್ರಕಆ. ೦೯೦೭, ೯-೩೦ ನೋ). [?]

**ಫುಲ್ಲಿ** (ನಾ). ಒಂದು ಬಗೆಯ ಬಟ್ಟೆ: ಅಲ್ಲಲ್ಲಿ ಕಟ್ಟಿದ ಫುಲ್ಲಿಯ ಪಟ್ಟೆಗಳ ಮೇಲೆ ಮೇಘವಣ್ಣಗೆಯ ಚೌಕದ ವಿಳಾಸದ ಕಥಾಯಿಯು ಸುಚ್ಛವಿಯನೀವ ಪಚ್ಚೆಯು ಪಟ್ಟೆಗಳ . . . ಸಕಲಸೌಂದರ್ಯಮನೊಳಕೊಂಡ ಮೇಲ್ಕಟ್ಟಿನ ಬೆರಕೆವೆಳಗು ಮಂಟಪದೊಳಗಂ ಪೂಜಿಗಂ ತೆಕ್ಕನೆ ಕೀವೆ (ಗಿರಿಕ. ೦೮-೨೬ ವ); ತೋರಮುತ್ತುಗಳ ಹಾರಮುರಸ್ಥಳದೊಳ್ ಪ್ರಕಾಶಮಂ ಪಸರಿಸೆ ಪಂಚವಣ್ಣಗೆಯ ಫುಲ್ಲಿಯ ಚಲ್ಲಣದಿಂ ಕಟೀತಟಂ ನಸುಸಗೆ (ಮುಜಾಶೀ. ೩. ೬೦); ಪಳಿ ಪಟ್ಟೆ ಫುಲ್ಲಿ ಚೀನಾಂಬರ ದಸರಿ ಗಬ್ಬುಳಗಂದಿ ಮೇಘವಣ್ಣಗೆಯೂ ತರೆಯ ಮೇಲೆಲ್ಲರ್ಗೆ ಕಟಿದರು ವಸ್ತ್ರದ ಪಳೆ ಶಾನೆ ಕಚಿದುದೆಂಬಂತೆ (ರಕಶ. ೭೩-೦೦೩). [?]

**ಫುಲ್ಲಿಊರ್** (ನಾ). ಒಂದು ಊರಿನ ಹೆಸರು: ಕೊರಿಕುನ್ನಭಾಗೇ ಫುಲ್ಲಿ ಊರನ್ನಾಮ ಗ್ರಾಮೇ ಮಹಾತಟಾಕಸ್ಯಾಧಸ್ತಾತ್ ಮೂಲಾಭ್ಯಾಶೇ ಶ್ರಮಣಕೇದಾರಸಹಿತಂ ಸಪ್ತಕಣ್ಡುಕಾವಾಪಮಾತ್ರಂ ಕ್ಷೇತ್ರಂ . . . ಪಾನೀಯಪಾತ್ರಪುರಸ್ಸರನ್ದತ್ತಂ (ಪ್ರಕಆ. ೦೯೩೬, ೦-೨೩; ಸು. 570). [ಫುಲ್ಲಿ + ಊರ್]

**ಫುಲ್ಲಿಂಗ** (ನಾ). [ವ್ಯಾಕ] ಪುರುಷರನ್ನು ಸೂಚಿಸುವ ಲಿಂಗ; ಪುರುಷವಾಚಕಲಿಂಗ: ಪುರುಷರೆ ಪುಲ್ಲಿಂಗ ಸ್ತ್ರೀಯರೆ ತಾಂ ಸ್ತ್ರೀಲಿಂಗ ಮುಂಟಾದುವೆಲ್ಲಂ ನಪ್ಪಾಗಿರೆ ಸಲ್ಗುಂ ಕನ್ನಡದೊಳ್ (ಕಮಣ. ೯೦); ಗಂಡಸರನ್ನು ಹೇಳುವ ಪದಗಳಿಗೆ ಫುಲ್ಲಿಂಗವೆಂದೂ ಹೆಂಗಸರನ್ನು ಹೇಳುವ ಪದಗಳಿಗೆ ಸ್ತ್ರೀಲಿಂಗವೆಂದೂ ಹೆಸರು (ಮಾರ್ಗ್ಯಷ. ೩೦). [<ಸಂ. ಪುಂಲಿಂಗ]

**ಫುಲ್ಲಿಕೆ** 'ಫುಲ್ಲಿಗೆ₂' ನೋ.

**ಫುಲ್ಲಿಗೆ₁** (ನಾ). ೧. ಊಟದ ಎಲೆ: ರಸಂ ಬಂದೊಡೆ ತಂಬುಲಮಂ ಎಳ್ ಬಂದೊಡೆ ಕೊದಳಿಯುಂ ಬೆಳಸು ಬಂದೊಡೆ ನೆಲನಂ ಸಾಲಂ ಬಂದೊಡೆ ಬಟ್ಟೆಗುತ್ತನಂ ಕೂಟನುಂಡೊಡೆ ಫುಲ್ಲಿಗೆಯುಂ[ಪಾಠಾಂ. ಪತ್ರ್ಮಳೆಯಂ] ಬಿಡುವಂತೆ ತನ್ನ ಕಾರ್ಯಂ ತೀರ್ದ ಬಟೀಕ್ಕೆ ಕಡೆಯೊಳ್ ಶರೀರಮುಮಂ ಪಂಗ್ರಹಮುಮಂ ತ್ರಿಶುದ್ಧಿಯಿಂ ಬಿಟ್ಟು ಪರಿಚ್ಛೇದಿಯುಪ್ಪುದು (ರತ್ನಾಕಮ್ಮ.೦೯. ೦೩೯). ೨. ಎಲೆಯ ಹೊದಿಕೆ,–ಮುಸುಕು: ನಾರು ಸುತ್ತಿ ಮಾದಳದ ತಳಿರ ಫುಲ್ಲಿಗೆಗಳಂ ಹೊದ್ದಿಸಿ ನೆಲದೊಳಗೆ ಪುಟವಿಕ್ಕಿ ಬಿಸಿಯಂ ಮಾಳ್ಪುದು (ಸೂಪಶಾ. ೩-೯೭); ನೆಲದ ಸೆಪೆಯಿಂದ ಬೇಂದ ಕಾಯ ತೆಗೆದು ಪುದಿದೆಲೆಯ ಫುಲ್ಲಿಗೆಯುಮಂ ಬಿಸುಟು (ಸೂಪಶಾ. ೩-೯೬). [←ತೆಲು. ಪುಲ್ಲಿಯ, ಪುಲ್ಲೆಯ]

**ಫುಲ್ಲಿಗೆ₂, ಫುಲ್ಲಿಕೆ** (ನಾ). ಒಂದು ಬಗೆಯ ಸಿಹಿಭಕ್ಷ್ಯ; ಹೋಳಿಗೆ: "ಫುಲ್ಲಿಗೆ—ಪೋಲಿಕಾ = ಒಂದು ಭಕ್ಷ್ಯ" (ತರ್ಕಕೋ. ೨೭); ಫುಲ್ಲಿಗೆಯ ತತ್ಸವಿಯ ಮಂಡಿಗೆಯಲ್ಲಿ ನವಘೃತಸೂಪದುಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತವಟುನಿಕರ (ಕುವ್ಯಾಕ. ೦೩-೭); ಮಲ್ಲಿಗೆಪುಡಲಂತೆ ಬಿಟ್ಟೋಗರ ಮೊಸರೊಳ್ಳೆಯ ಬಹಳುಪ್ಪುಗಾಯಿ ಫುಲ್ಲಿಸಿ ಗಟ್ಟಿಯ ಒಟ್ಟಿದ ಪಿರಿಯರು ಫುಲ್ಲಿಗೆಗಳು ತರತರಿಸೆ ರಸರಸಾಯನವ ಚಪ್ಪರಿದು ನೀರ್ವುಜ್ಜಿಗೆ ಹಸಗೆಯ್ದುರಲೀಂಟಿದರು (ಮೋಹತ. ೩. ೩೩). **ಫುಲ್ಲಿಕೆ**: ಕಾರವಣ್ಣದ ಬಟುವ ಕೀರವಣ್ಣದ ಕಟು ನೀರಜದ ಕೈತೊತವ ಹೂರಣದ ಪ[ಪು]ಲ್ಲಿಕಯನಾರೋಗಣೆಗೆ ನೀಡಲು (ಅಂಗಪು ೬-೯). 'ಪೋಳಿಗೆ₁' ಪರಾ. [< ಸಂ. ಪೂಲಿಕಾ]

**ಫುಲ್ಲಿಗೆ₃** (ನಾ). = ಫುಲ್ಲಿ: ಎರಲ್ವಟ್ಟೆಗೆತ್ತಿ ಸುಟ್ಟಿಸಿದ ಕೆಯ್ಯ ಸುಯ್ಯಭರದೊಳ್ ಸುಚಿದು ಸೂಸುವ ಪುಷ್ಪರದ ತುಂತುರುಂ ತುಚಾಗಿ ಸುತ್ತಿದ ಪಂಚಾಯುಧದ ಫುಲ್ಲಿಗೆಯ ತೊಂಗಲ ಸೆಜಂಗು ನಾಂದು ಪಿನೆಲೇಚಿದೆ ಬಲ್ಪಿದ ವೇಣಿಯೊಳ್ಪೆಸೆದು . . . ಮೇಲೆ ಮೊಚೆಯಿಯುಂ (ಅಜಿತಪು ೨-೨೪ವ). [< ಫುಲ್ಲಿ]

**ಫುಲ್ಲಿದೊಂಗಲ್** (ನಾ). ಒಂದು ಬಗೆಯ ಕೊಡೆ; ಫುಲ್ಲಿಯೆಂಬ ಬಟ್ಟೆಯಿಂದ ಮಾಡಿದ ಛತ್ರಿ,—ಸತ್ತಿಗೆ: ಮತ್ತವರ್ಗವರ್ಗೆ ಪಿಡಿದ ಮೇಘಡಂಬರದ ಝಲ್ಲರಿಯ ಪ[ಪು]ಲ್ಲಿದೊಂಗಲ ಚೌಕಸತ್ತಿಗೆಯ ಕೊಡೆಯ ಗಡಣಂಗಳುಂ (ಶಂಕ್ರಪು. ೭-೬೦ವ). [ಫುಲ್ಲಿ + ತೊಂಗಲ್]

**ಫುಲ್ಲಿಪಟ್ಟೆ, ಫುಲಿಪಟ್ಟೆ** (ನಾ). =ಫುಲ್ಲಿ: ಮಕರತೋರಣ ಓರಣಂಗೊಂಡ ವಲ್ಲಲ್ಲಿ ಸುಕರಮೆನೆ ಫುಲ್ಲಿಪಟ್ಟೆಗಳಿ[ಶ.ಪಾಠಾಂ. ಪಲ್ಲಯಿಸಿ]ರ್ದವಲ್ಲಲ್ಲಿ ಪೊನ್ನಿಂ ವಿವಾಹವೇದಿಕೆ ಸಮೆದುದಂತಲ್ಲಿ (ಪಾಪಕ. ೮೬. ೦೬೯-೦೬); ಅಲ್ಲಲ್ಲಿ ಕಟ್ಟಿದ ಚಿತ್ರಪಟಗಳಿಂದ ಝಲ್ಲರಿಗಳಿಂದ ರಾಜಸುವ ಫುಲ್ಲಿ[ಪಾಠಾಂ. ಲ್ಲಿ]ಪಟ್ಟೆಯ ನೆಜೆಯುದಿಂದಲದ ತಳುವಿಲ್ಲದೆ ಸಿಂಗರಿಸಿದರು (ರಾಮಾಯ. ೬-೮೯); ಫುಲ್ಲಿಪಟ್ಟೆಯೊಳು ಸಂಧ್ಯಾರಾಗದೊಳು ಕಾಗಿನಲ್ಲಿ ದುಕೂಲಂಗಿ ಪಟ್ಟೆಯೊಳು ಚಲ್ಲಣ . . . ಚಲ್ಲಣಾಪಿಯರಿಗೊಪ್ಪಿದುವು (ಚಿಕ. ೦೩-೯೯). **ಫುಲಿಪಟ್ಟೆ**: ಜಲಧರ

ಬಣ್ಣದ ವರದೇವಾಂಗದ ಪುಲಿವಟ್ಟ[ಟ್ಟೆ]ಯ ಪಠ್ಠಾವಳಿ ಮಂಜಿಷ್ಟಿಯು (ಕ್ಷ್ಮಾ.ಪಠ. ೬-೭೩). [ಪುಲ್ಲಿ + ಪಟ್ಟ]

**ಪುಲ್ಲಿವೆಟು** 'ಪುಲಿವೆಟ್ಟು' ನೋ.

**ಪುಲ್ಲಿವೇಟು** 'ಪುಲಿವೆಟ್ಟು' ನೋ.

**ಪುಲ್ಲು** 'ಪುಲ್' ನೋ.

**ಪುಲ್ಲುಂಗೂರ್** (ನಾ). ಒಂದು ಊರಿನ ಹೆಸರು ; ☞ ಇದು ಧಾರವಾಡ ಜಿಲ್ಲೆಯ ಈಗಿನ ಹುಲಗೂರು : ಮೂಡ ಬನ್ದಿಗಾವುಣ್ಡನ ಕೆಯಿ ತೆಂಕ ಪುಲ್ಲುಂಗೂರ ಬಟ್ಟೆ ಪಡುವ ಬಸದಿಯು ಕೆಯ್ಯು[೦] (ಇಇ. XVIII, ೩೯-೨೮ ; ೯೯೦). [? + ಊರ್]

**ಪುಲ್ಲುಣೆ** (ನಾ). ಒಂದು ಊರಿನ ಹೆಸರು : ಬ್ರಹ್ಮರಾಸಿಮಣ್ಡಲಾನ್ತರ್ಗ್ಗೆ . . . ಕೊಟ್ಟಂ ಪುಲ್ಲುಣೆಯ ಮರ್ಯಾದೆ ಸಿರಿಗೆಱೆ ಪೊಸವೂರು ಸವಣೂರು ಕಿಱುಗೇರಿ ಇವು ಪೂರ್ವ್ವಮರ್ಯ್ಯಾದೆ (ಎಕ. XI, ದಾವಣ. ೦೦೯-೦೯ ; ೯೯೭). [?]

**ಪುಲ್ಲುರಿ** (ನಾ). ಹುಲ್ಲಿನ ಉರಿ,–ಜ್ವಾಲೆ : ಸಾಡೊಳಗೆ ಮಿಸಾಸದೆಱೆಯಂ ಬೇಡಿಸುವಂ ಬೀರರರಸಿಯರಮೆಸಂ ಕೂಸಾಡಿಸಲೀಯಂ ಪು[ಹಾಕಾಂ. ಹು]ಲ್ಲುರಿಯಾಡಿಸುವಂ ತೇಜದುರಿಯಿನರವಿಸಾಸಿಗಳಂ (ಅಜಿಶೇ. ೬-೬೦). [ಪುಲ್ + ಉರಿ]

**ಪುಲ್ಲುಟ್ಟು** (ನಾ). ಒಂದು ಬಗೆಯ ತೆರಿಗೆ : ಪುಲ್ಲುಟ್ಟು ಬಾಲವಣವು ಮಾಯಿಲಿದೆಱೆಗಳುಮಿನ್ನಲದ ನೇಸಬಿ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಕೌಇಇ. IX–I. ೫೯-೩ ; ೯೭ಪು ೫೫). [?]

**ಪುಲ್ಲೆ**, ಹುಲ್ಲೆ (ನಾ). ಚಿಗರೆ ; ಜಿಂಕೆ ; ಎರಳೆ : ಒಡನೆ ನೆರೆದರಸು ಮಕ್ಕಳ ನಿಡುಗಣ್ಗಳ ಬಳಗವೆಱಗೆ ತನ್ನಯ ಮೆಯ್ಯೊಳ್ ನಡೆ ಬಳಸಿ ಪಲರುಮಂಬು ತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ (ಶಂಶಠಾ. ೩-೩೦) ; ಪುಲ್ಲೆಯ ನೋಟದಂತೆ ಸಂಚಳನಾಗದೆ (ರವಾರ್ಜ್ಞ. ೦೦-೬೭) ; ಪುಲ್ಲಂ ಕಚ್ಚಿದ ನರಸಂ ಕೊಲ್ಲಂ ಭಟನಿವರ ಬಾಯೊಳುಂ ಬಸಿಱೊಳಗುಂ ಪುಲ್ಲೆ ಗಡ ಬಗೆವಡದಱಿಂ ಪುಲ್ಲೆಗಳೆನಿಸಿರ್ದುಪಕೃಟವನೇಕಚ್ಚೆ (ಬಂಹು. ೦೦-೬). **ಹುಲ್ಲೆ** : ಹುಲಿಯ ಬೆನ್ನಿನಲ್ಲಿ ಒಂದು ಹುಲ್ಲೆ ಹೋಗಿ ಮೇದು ಬಂದನೆಂದರೆ ಇದ ಕಂಡು ಬೆಱಗಾದೆ (ಅವಠಂ. ೬-೨೬) ; ಹೊಲಬುಂದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನ್ನೆ (ಉಪ್ಸಾಸ. ೦೯-೦೨೨) ; ನಂದನನ ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆಬಾಣ ತಾಗಿದ ಹುಲ್ಲೆಯಂತೆ (ಮೋಹಠ. ೯-೬೯).

ಪುಲ್ಲೆಯ ಬಯಲ್, ಹುಲ್ಲೆಯ ಬಯಲ್ = ಜಿಂಕೆಗಳು ಓಡಾಡುವ ಪ್ರದೇಶ : ಜಿಡ್ಡುಳಿಗೆ ೭೦ ಱ ಬಳಿಯ ರಾಜಧಾನಿ ಬಳ್ಳಿಗಾವೆಯ ಪುಲ್ಲೆಯ ಬಯಲೊಳ್ ಭೇರುಣ್ಡಗಳೆಯೊಳ್ ಕೊಟ್ಟ ಗಟ್ಟಿ (ಎಕ. VII, ಶಿಕಾ೦. ೦೨೦-೦೬ ; 1048) ; ಬಳ್ಳಿಗಾವೆಯ ತಳದ ಹುಲ್ಲೆಯ ಬಯಲೊಳ್ ಕಚ್ಚವಿಯ ಗಡಿಂಬದ ಗಳೆಯೊಳಳೆದು ಕೊಟ್ಟ ಗಟ್ಟಿ ಮತ್ತರೆರಡು (ಕ್ಯುಆ೦. ೦೯೨೯, ೬೩-೬ ; 1024). **ಪುಲ್ಲೆಯ ಮೊಣೆ** = ಪುಲ್ಲೆಯ ಬಯಲ್ : ವಿದ್ಯಾಕ್ಷೆತ್ರಿವಹಣೆಯಗ್ಗೆ ಪುಲ್ಲೆಯ ಮೊಸೆಯಿಂ ಪಡುವಲ್ ಮತ್ತರ್ಪ್ಪದಿನಾಱು (ಕೌಇಇ. IX–i, ೦೦೬-೫೯ ; 1075). **ಹುಲ್ಲೆಯ ತೆವರ್** = ಪುಲ್ಲೆಯ ಬಯಲ್ : ಹುಲ್ಲೆಯ ತೆವರಲಬ್ಬೆಯನವರ ಕೆಯಿಂ ಮೂಡಲುಕೇರಿಯ ಎಱಕನವರ ಕೆಯಿಂ ತೆಂಕಲು . . . ಮತ್ತರು ೧೨ ಶ್ರೀವಮಾನ್ಯ (ಕೌಇಇ. IX–i, ೬೭೦-೩೯ ; 1258). [ದೇ.೩ ತಮಿ. ಪುಲ್ವಾಯ್ ; ತುಳು. ಪುಲ್ಲೆಮ್ಮಗ]

**ಪುಲ್ಲೆ** (ನಾ). (?) : ಬೆಳ್ಳಿಬಸವನ ಆಭರಣದ ಲೆಖ್ಖಾ . . . ಪುಲ್ಲೆಕಡೆ ಸಾವಮಾನು ೦೬ ತಾಳಿಗಳು ೨ ಯಿದರ ಹಗ್ಗದ ಪಟ್ಟಿ (ಎಕ. XIV, ಸಂಶಠ. ೨೮೯,೩ಪುಟ ೯೦೦ ; ಸು. 1848). [ ? ]

**ಪುಲ್ಲೆಗಣ್**, ಹುಲ್ಲೆಗಣ್, ಹುಲ್ಲೆಗಣ್ಣು (ನಾ). ೧. ಜಿಂಕೆಯ ಕಣ್ಣು. ೨. ಜಿಂಕೆಯ ಕಣ್ಣನಂತಿರುವ (ಚೆಲುವಾದ ಮತ್ತು ಚಂಚಲವಾದ) ಕಣ್ಣು : ಪು[ಹಾಕಾಂ. ಹು]ಲ್ಲೆಗಂಗಳ ಕೊಲ್ಲೆನೋಟದ ಮಲ್ಲಿಗೆಯ ಮೊಗ್ಗೆಗಳ ದಂತದ . . . ವಟಫಲಾಧರೆ ನಿಲ್ಲಲೆಸೆದಳು (ಹಾಗಿಚ. ೨-೦೩). **ಹುಲ್ಲೆಗಣ್** : ೨. ತವಕದಿ ಹುಲ್ಲೆಗಣ್ಣವಳೊರ್ವಳುಂದಕವನಲ್ಲಸದಿ ಚೆಲ್ಲಿದಳು (ಕೀವಂಚ. ೦೬-೬೦) ; ಚೆಲ್ಲೆಗಣ್ಣವರರಳ್ಗಣ್ಣವರ್ ನಿಡಿಗಣ್ಣ ಹುಲ್ಲೆಗಣ್ಣವರ್ ... ತೋರಧಮ್ಮಿಲ್ಲೆಯರೆಯ್ದೆ ತೊಗ್ಗಿನಲಿ (ಮೋಹಠ. ೨೯-೧೨). **ಹುಲ್ಲೆಗಣ್ಣು** : ೨. ಹುಲ್ಲೆಗಣ್ಣುಗಳಿಂದ ನಲ್ಮೆನೋಟಗಳಿಂದ ಗೆಲ್ಲ ಕರುಣೆಗಳೀಂದ ಬೆಳೆವ ಮೂರುತಿಯು ನಿನ್ನ ಕರುಣೆಯಿನೆನ್ನ ತೊಳೆದು ಹೋಗ್ಗೆಯು (ಅಶೀ೧೧. ೯೩-೦೩).

ಪುಲ್ಲೆಗಣ್ಣಳ್ = ಜಿಂಕೆಯ ಕಣ್ಣನ ಹಾಗಿರುವ ಕಣ್ಣುಗಳುಳ್ಳವಳು ; ಹರಿಣನೇತ್ರೆ : ಪುಲ್ಲೆಗಣ್ಣಳಿ ಕೇಳು (ಶಶಜೋ. ೦೦-೯೬). [ಪುಲ್ಲೆ₁ + ಕಣ್]

**ಪುಲ್ಲೆಗೋಡು** (ನಾ). ೧. ಜಿಂಕೆಯ ಕೊಂಬು,—ಕೋಡು. ೨. ಜಿಂಕೆಯ ಕೊಂಬಿನಾಕಾರದ ಒಂದು ಬಗೆಯ ಆಭರಣ : ವನಸಿ ಮುತ್ತಗಶಿಶುಗಂದನುನಯದಿಂ ಪುಲ್ಲೆಗೋಡು ಪುಲಿಯುಗುರ್ಗಳನೊಲ್ದು ನುರಾಗದಿಂದೆ ಕಟ್ಟಿದಳೆನೆ ನನೆ ಕಿಲವೆಸೆಯುತಿರ್ಪುವಾ ಮುತ್ತುಗದೊಳ್ (ಪುಳ್ಗಠ. ೩-೩೩೩). [ಪುಲ್ಲೆ₁ + ಕೋಡು₂]

**ಪುಲ್ಲೆಮಱಿ** 'ಪುಲ್ಲೆವಱಿ' ನೋ.

**ಪುಲ್ಲೆವರಿ** 'ಪುಲ್ಲೆವಱಿ' ನೋ.

**ಪುಲ್ಲೆವಱಿ**, ಪುಲ್ಲೆಮಱಿ, ಪುಲ್ಲೆವರಿ, ಹುಲ್ಲೆಮರಿ (ನಾ). ಜಿಂಕೆಯ ಮರಿ ; ಚಿಗರೆಯ ಮರಿ : ಅಸು ಪೋಪ ಪುಲ್ಲೆವಱಿಯಂ ಕ್ಕೆಯಿಂದದಂ ಕೊಂಡು ಬೇಡನಗುರ್ವಿಂ ನಡೆಗೊಂಡಂ (ಉಸುಪಠ. ೦೯-೫೫). **ಪುಲ್ಲೆಮಱಿ** : ಬವರಂಗೆಯ್ದು ಗಜಂಗಳ ನಿಪಹದ ನಿಗ್ಗವಮಡುಡಿದು ಸೂಸಿರೆ ನೆಲದೊಳ್ ತವೆ ಪಸಿದ ಪುಲ್ಲೆಮಱಿಗಳ್ ತವಕದೆ ಬಿಸಮೆಂದು ತುಡುಕುಗುಂ ತದ್ವನದೊಳ್ (ರಾಜಶೇ. ೫-೬೦). **ಪುಲ್ಲೆವರಿ** : ಪುಲಿಯೊಡನೆ ಕಲಹವೇ ಪುಲ್ಲೆವರಿಗೆ (ಕೀಶರಾ. ೦೬-೩೩). **ಹುಲ್ಲೆಮರಿ** : ಅವನು ಹುಲ್ಲೆಮರಿಯನ್ನು ಅಟ್ಟಿಸಿಕೊಂಡು ಹೋಗಿ ದಟ್ಟವಾದ ಕಾಡಿನೊಳಗೆ ಸಿಕ್ಕಿಬಿದ್ದನು (ಚೂತ). [ಪುಲ್ಲೆ₁ + ಮಱಿ]

**ಪುಲ್ಲೆವೆಚ್ಚು** (ನಾ). ಜಿಂಕೆಯಂತೆ ಗಾಬರಿಯಾಗುವಿಕೆ : 'ಪುಲ್ಲೆವೆಚ್ಚುವೆಚ್ಚು' ಪರಾ. [ಪುಲ್ಲೆ₁ + ಬೆಚ್ಚು₂ (< ಬೆರ್ಚು₂)]

**ಪುಲ್ಲೆವೆಚ್ಚುವೆಚ್ಚು** (ಕ್ರಿ). ಜಿಂಕೆಯಂತೆ ಗಾಬರಿಯಾಗು : ಕದನದೊಳನ್ನು ನಿನ್ನ ತರವಾರಿಯ ಬಾರಿಗೆ ಮೆಯ್ಯನೊಡ್ಡಲಾಱದೆ ನಳಿದಿನ್ನುವನ್ನದನೆ ಜಾನಿಸಿ ಜಾನಿಸಿ ಗಂಗ ತನ್ನ ನಮ್ಬಿದ ಸುವತೀಕದಪ್ಪುಗೆರ್ದೆ ಪೌವನೆ ಪೋಗಿರೆ ಪುಲ್ಲೆವೆಚ್ಚುವೆಚ್ಚಿದವಸಹರ್ನಿಶಂ ತಿಗುಳ ದಾಮುನರಣ್ಯಶರಣ್ಯವೃತ್ತಿಯಿಂ (ಎಕ. II, ೨೯೦-೨೯ ; ಸು. 1175). [ಪುಲ್ಲೆವೆಚ್ಚು + ಬೆಚ್ಚು₁ (< ಬೆರ್ಚು₁)]

**ಪುಲ್ಲೋರಿ** (ನಾ). ಹೋರಿ ಕರು : ಕಿಲವ ಕೇಸಿಗ ನಿಱುವ ಹಂಡ ಹಾಱುವ ಚಂಚ ಮಲೆವ ಪುಲ್ಲೋರಿ ಬೆಚ್ಚುವ ಬೆಳ್ಳೆ . . . ನಾನಾಪಾರಿಯ ಕಬ್ಬಸಿಗಳೊಳಗಾದ ಪಲವುಪರಿಯೆತ್ತು ತೊಂಭತ್ತಾಱುಲಕ್ಷ ಮೊಳ್ಳಸಿ ಹಿಡಿದುವು ಗೆಲ್ಲಕೆ (ಸಂಗಠಾ. ೭೩-೬). [ಪುಲ್ + < ಪೋರಿ₂]

**ಪುಲ್ವಕಿ** 'ಪುಲ್ವಕ್ಕಿ' ನೋ.

**ಪುಲ್ವಕ್ಕಿ**, ಪುಲ್ವಕಿ (ನಾ). ಒಂದು ಪ್ರದೇಶದ ಹೆಸರು : ತಮ್ಮುಮರ್ ಪರಿದು ಪುಲ್ವಕ್ಕಿಯಲ್ಲಿ ಕಾದಿ ತುಱುವವರ್ ಮಗುಟ್ಟಿ (ಕ್ಯುಆ೦. ೦೯೨೯, ೯೯-೩ ; ೧). **ಪುಲ್ವಕಿ** : ದುಗ್ಗಮಾರೆಱೆಯಪ್ಪೊ ಕೊವಳಾಲನಾಡು ಮೂಣೂಱುಂ . . . ಪುಲ್ವಕಿನಾಡುಸಾಸಿರಮು ಬೆಪೋದು ಸಾಸಿರಮು

× × × ನಾಡಜುವತ್ತುವೂನಾಳುತ್ತಿರೆ (ಎಕ. X. ಶ್ರೀನಿವಾ. ೫೭-೫; ಸು. 770).
[ ? ]

**ಪುಲ್ಲಗೆ**, ಪುಲ್ಬಗೆ (ನಾ). ಹೀನವಾದ ವಿಚಾರ ; ಕೀಳಾದ ಯೋಚನೆ : ಅವರ ವಶದ ಪುಲ್ಲಗೆಯುಂ ಪೊಲ್ಲಮೆಯುಮಂನಱಿಯದೆ ಸವಾಸ್ತ್ಯ ಬಳಿರ್ಯೋದ್ಯುಕ್ತನಾಗಿ . . . ಮದಗಜೇಂದ್ರಪುರವನೆಯ್ದೆ ಬರೆ (ಶಂಕಕಾ. ೬-೬೬ ವ); ಮಾರಂ ವಿದ್ಯಾಪ್ರೀತನಪ್ಪುದಱಿಂ ತನ್ನ ನುಡಿಯುಂ ಕಡೆಗಣಿಸ ದೊಡಂಬಡುಗುವೆಂಬ ಪುಲ್ಲಗೆಯಿನಾ ವಣ್ಣಿಯೀಂತೆಂದಳ್ (ಕಂಪು. ೬-೧೪೬ ವ). **ಪುಲ್ಬಗೆ** : ಅವರ ಪುಲ್ಬಗೆಯುನ್ನೂ ಪೊಲ್ಲಮೆಯುನ್ನೂ ಅರಿಯದೆ ಅವನು ಹಸ್ತಿನಾಪುರಕ್ಕೆ ಬರುವನು (ಕರ್ಣ. ೬೯). [ಪುಲ್ + ಬಗೆ]

**ಪುಲ್ವಟ್ಟೆ**, ಪುಲುಮಟ್ಟೆ, ಹುಲುವಟ್ಟೆ (ನಾ). ೧. ಸಣ್ಣಹಾದಿ; ಕಿರುದಾರಿ; ಕಾಲುದಾರಿ : ನೆತ್ತರುಂ ಬಸಿವುತ್ತಿರ್ಪುದು ಪೋದವಿಕ್ಕಿ ಮಱಿಯಂ ಪುಲ್ಲ[ಲ್ವ]ಟ್ಟೆಯೊಳ್ ಪುಲ್ಲೆಗರ್ (ಕಾದಂಪೂ. ೦೫೬); ಕಿರಾತರಾಜವಾ ಕನ್ನೆಯ ಪಾದಂಗಳು ಪಲತೆಱದಿಂದಿರ್ದುಸಿ. . .ಪುಲ್ವಟ್ಟೆಯಿಂ ವೇರಡವಿಯಿಂ ಪೊಱಮಡಿಱ ಕಿಱಿದುಂ ದೂರಂ ಪೋಗಿ (ಧರ್ಮಾಮೃ. ೩-೦೦೫); ನೆಟ್ಟನೆ ಸತ್ಪಥಂಬಿಡಿದು ಪೋಪ ವರಂ ಪತಿಗೆಟ್ಟು ಪಾಯ್ದು ಪುಲ್ವಟ್ಟೆಯ ನೆಯ್ದಿ ಪೋಗುತಿರೆ ಕಾನನದೊಳ್ (ಧರ್ಮಾಕ. ೦-೯೯). **ಪುಲುವಟ್ಟೆ** : ೧. ಒರ್ವ ವನಚರಂ ಮಹಾವನದೊಳ್. . .ಒಂದು ಮಹಾಹಿ ತೊಟ್ಟಗೆ ಬರೆ ಪುಲುವಟ್ಟೆಯೊಳ್ ತೊಲಗಲಿಂಬಿಲ್ಲದೆ ಬಿಲ್ಲಂ ಕೊಂಡು ವಿಷದೂಷಿತ ಮಪ್ಪಂಬಂ ತೊಟ್ಟಸುವುದುಂ (ಶಂಕಕಾ. ೪೦೦-೦೯). **ಹುಲುವಟ್ಟೆ** . ೧. ಹುಲುವಟ್ಟೆಯೊಳು ಬೆಳೆದ ಹೆಮ್ಮರನ ಮಲಗಿಸಿ ನಿಂದ ಹುಳ್ಳಿಹೊಱೆಯಂ ಕಂಡಳು (ಪಕಕಾ. ೨೨-೨೦); ಪರಿಕಿಸಲು ಸ್ವರ್ಗಕ್ಕೆ ಪಂಪ ಹುಲುವಟ್ಟೆ ಗಳಪರಿಮಿತಂ ವಿಷ್ಣುಭಯವಿಪಿವಪಸಿತುಂ (ಶಾಶಂಕ. ೩-೫). ೨. ಕ್ಷುದ್ರವಾದ ಹಾದಿ ; ಕೆಟ್ಟ ಮಾರ್ಗ: ಧರ್ಮಪಥ ಹುಲುವಟ್ಟೆಯೆನಿಸಿದ ಹಮ್ಮಿನಲಿ ಕೆಡದೇಡ (ಕುಪ್ಪಾಳಾ. ೯-೦೩). [ಪುಲ್ + ಬಟ್ಟೆ]

**ಪುಲ್ವಟ್ಟೆವಿಡಿ**(ಕ್ರಿ). ಕಿರುದಾರಿಯನ್ನು ಅನುಸರಿಸು; ಕಾಲುದಾರಿಯನ್ನು ಹಿಡಿ : ಆ ಮಹಾಟವೀಮಧ್ಯದೊಳೊಂದು ಪುಲ್ವಟ್ಟೆವಿಡಿದು ನಡೆಯೆ (ಶಂಕೃತಿ. ೫-೫೨ ವ); ಕಟ್ಟೊಲ್ಮೆಯೊಳಿವೆಯಲುಗದೆ ನೀಡುಂ ನಿಟ್ಟಪ ನೀಱಿನ ಬಗ ದಾಸಿಯು ಪುಲ್ವಟ್ಟೆವಿಡಿದು ನಡೆಯುತ್ತಿರೆ (ಶಜಂಕಾ. ೯-೦೦); ಅವನಲ್ಲಿಂದ ಪುಲ್ವಟ್ಟೆವಿಡಿದು ನಿಲ್ಲದೆ ಪೋಗಿ ಕಂಡನು ಕಾನನಮಧ್ಯದಲ್ಲಿ ಮಹಾಸರೋವರವ (ಚಾಗಕು. ೦೦-೬೮). [ಪುಲ್ವಟ್ಟೆ + ಪಿಡಿ₁]

**ಪುಲ್ವನೆ**, ಪುಲುಮನೆ, ಪುಲ್ಮನೆ, ಹುಲ್ಲುಮನೆ (ನಾ). ಹುಲ್ಲಿನ ಮನೆ; ಗುಡಿಸಲು ; ಪರ್ಣಕುಟಿ : ಕಲ್ವಾಟು, ಪುಲ್ವನೆ, ನೀರ್ವಾವು (ಶಾಶಾಕೂ. ೩೦ ೮೦೨). **ಪುಲುಮನೆ** : ಚಂದನೆಯುಂ . . . ಶೃಂಖಳಾಬಂಧನೆಯಂ ಮಾಡಿ ತಲೆವಾಗಿಲ ಕೆಲದ ಪುಲುಮನೆಯೊಳಿರಿಸಿ ಕೊಟ್ಟನಿಕ್ಕಿ ನಡಸುತ್ತು ಮಿರ್ದಳ್ (ಪುರಾ. ೦೫-೫೯ ವ). **ಪುಲ್ಮನೆ** : ಪುಲ್ಮನೆಯೊಳಿರ್ದವಂ ಕಿರ್ಚಿನ ಪೆರ್ಚನಿಚ್ಚೈಸಿದೊಡಂ ಸಂಸಾರದೊಳಗಿರ್ದಾತಂ ಕಷಾಯಂಗಳ ಪೆರ್ಚನಿಚ್ಚೈಸುವೊಡಂ ಆಯುರ್ವರುಂ ದೇವುದುಂ ನೋವುದುಂ ಎಂ ಪಿರಿದೆ? (ಚಾವಸಂ. ೦೧೩-೦೦). **ಹುಲ್ಲುಮನೆ** : ಕೆಳಶಾನೂರಿನ ಹುಲ್ಲುಮನೆಯ ಮುಂದುಗಡೆ . . . ಸೇರೆಗಾರರ ಹೂವಯ್ಯನೂ ಉದ್ವೇಗದಿಂದ ಮಾತಾಡುತ್ತಿದ್ದರು (ಕಾಷೂರು. ೯೦೦) ; ಸಿದ್ದಣ್ಣನ ಹುಲ್ಲುಮನೆ ಸ್ಮಶಾನದಂತಾಗಿತ್ತು (ಕುಕಕು. ೭೦). [ಪುಲ್ + ಮನೆ]

**ಪುಲ್ವರಿ** (ನಾ). ಒಂದು ಬಗೆಯ ತೆರಿಗೆ : (ದನಗಳನ್ನು) ಹುಲ್ಲು ಮೇಯಿಸಿದುದಕ್ಕಾಗಿ ಕೊಡುತ್ತಿದ್ದ ತೆರಿಗೆ : ಇಡತೊರ್ರೆ ಪುಲ್ವರಿ ಮುಂದೈಕಂಢ(ಡೆ) (ಎಇ. XVIII. ೦೯೨-೫೦: 1434).
[ಪುಲ್ + ಪರಿ₁./ತಮಿ. ಪುಲ್ವರಿ, ಪುಲ್ಲರಿ ; ತೆಲು. ಪುಲ್ಲರಿ]

**ಪುಲ್ಮಾನಿಸ**, ಪುಲ್ಮಾನಸ, ಹುಲುಮಾನಿಸ (ನಾ). ಅಲ್ಪನಾದ ವ್ಯಕ್ತಿ ; ಕ್ಷುದ್ರಮನುಷ್ಯ : ಕೆಟ್ಟೊಡಲಂತು ಕರ್ಮಭೋಗಂಗೆಯ್ದು ಕುತ್ಸದಿಂ ಮಡಿವ ಪುಲ್ಮಾನಿಸರುಮಂ ಕ್ಷುದ್ರದೈವಮಂ ಪೊಗಳ್ದು ಮುನ್ನುಳ್ಳ ಮತಿಯುಂ ಕಿಡಿಸಿಕೊಳ್ವುದವರುವಿಗಳ ಮಾತವೇಕಿಲ್ಲಿ (ಶಬ್ದಾ. ೦-೯೭). **ಪುಲ್ಮಾನಸ** : ಇಕ್ಷ್ವಾಕುವಂಶಶಿಖರನಪ್ಪ ರಾಮನಂ ಪುಲ್ಮಾನಸನೆಂದೇಕೇಳಿಸಿ . . . ನಾಣ್ಚದೆಂತು ನುಡಿವೆ (ಕಾಪುಂಪು. ೩೦೨) ; ಕಲ್ಮಷರಹಿತಂಗೆ ತಿಕ್ಕರಾಜಂ ಗುಳಿದೀ ಪುಲ್ಮಾನಸರಂ ದೊರೆಯೆನೆ ಕಲ್ಮಷಾನಕದನ್ನುಟೆಂದಡೆಂತಂತೆ ದಿಟಂ (ಎಕ. VII, ಶಿಕಾ. ೦೯-೫೬ : 1181) ; ಪುಲ್ಮಾನಸನಾದ ಚಂಡಶಾಸನ ಪೆಸರಂ ಚಾಂಡಾಲ ನೀರೋಳೀತರ್ದುರ್ಮಪರೇ (ಅಪಂಕೃ. ೦೦-೫೨). **ಹುಲುಮಾನಿಸ** : ಕಾಲಿಂಗಸದಳದ ಕಲ್ಪಾಂತರುದ್ರನ ವಿಷಮನಯನಜ್ವಾಲೆ ಗಳಂತದ ವೀರಭಟರೊಡನೆ ಉಸುರಬಹುದೇ ಜೀಯ ಹುಲುಮಾನಿಸರ ವ್ಯಧರಣರಾಜಕಾರ್ಯವ (ಕೊರಂಶ. ೬-೨-೦೨).
[ ಪುಲ್ + ಮಾನಿಸ₁ (<ಮಾನುಸ) ]

**ಪುಲ್ವಿಡಿ**, ಹುಲುವಿಡಿ (ಕ್ರಿ). (ಅಲಂ) ಹುಲ್ಲನ್ನು ಕಚ್ಚಿ ಹಿಡಿಯುವುದರ ಮೂಲಕ ಶರಣಾಗತಿಯನ್ನು ಸೂಚಿಸು : ಪುಲ್ವಿಡಿಯ ಸಚಿವತನಯಂ ಕಾಲ್ವಿಡಿಯೆ ನಿಜೇಶಂ ... ಪಲಗವಿಡಿದಳ್ ಕಲ್ಪಾನಸೆ (ಲೀಲಾವ. ೦೯-೨೬). **ಹುಲುವಿಡಿ** : ಬೊಮ್ಮನ ಮಡದಿಯ ನಾಸಿಕಪರಿಯಾಗಲಿ ಮಿಕ್ಕರು ಹುಲುವಿಡಿಯಲಿ ದಿಗಧೀಶರು ಭಂಗಿತರಾಗಲಿ (ಶೀಲೇಶ. ೦-೩೦).
[ಪುಲ್ + ಪಿಡಿ₁]

**ಪುಲ್ವೊಱೆ**, ಪುಲ್ಲೊಱೆ, ಹುಲ್ಲುಹೊರೆ (ನಾ). ಹುಲ್ಲಿನ ಕಂತೆ,-ಕಟ್ಟು : ಕಲ್ಮೊಱದು ಸದೆಸಟ್ಟು ಪುಲ್ವೊಱೆಗಳಾಂತರ್ ನಿಲ್ಕಿದರ್ ಪುರದಗಳಂ (ಕಂಪು. ೧೨-೨೯) ; ಮಡಿದ ಪೆಣಗಳನೆಳೆದು ತುಂಬಿದರ್ ಪುಲ್ವೊಱೆಗಳಂ ಕೊಱಡುಗಳನೊಟ್ಟಿದರ್ ಕಲ್ಗುಂಡು ಮಣ್ಗಳಂ ಸುರಿದು ನೆಲಸರಿಮಾಡಿದರ್ (ಕಂಪು. ೧೨-೩೦). **ಪುಲ್ಲೊಱೆ** : ಪುಲ್ವೊಱೆಪೊತ್ತು ಶ್ರೀಪತೀಶನ ಪುರಕೆ ನಡೆಯುತಿರಲು (ಅರಾಕ. ೦-೯-೩). **ಹುಲ್ಲುಹೊರೆ** : ತೃಣ್ಯಾ, ತೃಣಾನಾಂ, ಸಂಹತೀ—ಹುಲ್ಲ ಪಾವೆ, ಹುಲ್ಲುರಾಶಿ, ಹುಲ್ಲುಹೊರೆ, ಹುಲ್ಲ ಮೆದೆ, ಹುಲ್ಲುಮೂಟೆ, ಹುಲ್ಲದಕ (ಸಿದ್ಧಾಂತಿ. ೦೫೨) ; ದೋಸೆ ತಿನ್ನುವ ಆಸೆಯಿಂದ ಬೇಗ ಹುಲ್ಲುಹೊರೆ ಹೊತ್ತುಕೊಂಡು ಸುಗ್ಗಿಗದ್ದೆಯಿಂದ ಮನೆಗೆ ಬಂದಿದ್ದಳು (ಶಧ್ವಸ. ೫೬). [ಪುಲ್ + ಪೊಱೆ]

**ಪುಲ್ಸರವಿ**, ಹುಲುಸರವಿ (ನಾ). ಹುಲ್ಲನ್ನು ಹೊಸೆದು ಮಾಡಿದ ಹಗ್ಗ : ಪಲವು ಪುಲ್ಸರವಿಗಳ್ ಕೂಡಿ ದೃಢಮಪ್ಪೊಂದು ಲಳಿತರಥಪಾಶಕ್ಕೆ ಪಾಸಟಿಯೆನಿಸಿಕ್ಕುಮೋ (ಅರಾಕ. ೩-೨-೯). **ಹುಲುಸರವಿ** : ನಿಮ್ಮ ನಂಬ ನಂಬದವನ ಬಾಳುವೆ ಸೂಳೆಯರ ನಾಯಿ ಹುಲುಸರವಿಯಿಂದ ಕರ ಕಷ್ಟ (ಲೀಲಾವ. ೨೦-೩೬) ; ಹುಲುಸರವಿಗಳನೆಟ್ಟೆ ಹೊಸೆಹೊಸೆದು (ಶಕಪು. ೦೬-೨೦). [ಪುಲ್ + ಸರವಿ₁]

**ಪುಲ್ಸಾರೆ** (ನಾ). ಒಂದು ಬಗೆಯ ಔಷಧೀಸಸ್ಯ : "ಬೆಟ್ಟದುರುಳಿ, . . . ಪುರುಚಲಿಗಿಡ, ಪುಲ್ಸಾರೆ" (ಶಸ್ತ್ರಕೃ.೬೨); ಹೇನುಕುರುವಿನ ಗಿಡ, ಪುರುಚಲಿಗಿಡ, ಪುಲ್ಸಾರೆ (ಕೃಷಿಶಿ. ೫೫-೦೦೦೬). [ ? ]

**ಪುವಗಾಮ** (ನಾ). ಒಂದು ಊರಿನ ಹೆಸರು : ಶ್ರೀಪುರುಷಮಹಾರಾಜ ಪ್ರಿತುವೀರಾಜ್ಯಂಕೆಯ . . . ಮುಡುಗುನ್ನೂರ ಸಿಜ್ಜಡಿಅರಸ ಪುವಗಾಮ ಮಾಳ್ವಿದ್ದರ್ (ಎಕ. VII (R), ಮುಕಕ. ೦೨೨-೬ ; ಸು. 740).
[ ? + ಗಾಮ ]

**ಪುವ್ವು** 'ಪೂ' ನೋ.

**ಪುಷ್ಕರ** (ನಾ). ೧. ನೀಲಿಬಣ್ಣದ ತಾವರೆ. ೨. ಪದ್ಮ ; ಕಮಲ : "ಸಹಸ್ರಪತ್ರಂ . . . ಪುಷ್ಕರಂ, ರಾಜೀವಂ, ಅರವಿಂದಂ, ಪದ್ಮಂ, ಪಂಕಜಂ —ಈ ೧೭ ತಾವರೆ" (ಕರಾಯ್ಯು. ೦೦೨-೫೭) ; ಮಾರಹರಂ ಪೂಜೆಗೆಯ್ದುವಸರದೊಳೊಂದು ಪುಷ್ಕರಮಿಲ್ಲದಿರೆ ನೋಡಿ ತನ್ನ ಬೆಳತಿಗೆಗಣ್ಣನಿರದೆ

ಕಿಳ್ತ್ರಭವನಂಪುಗ್ಗೆ ಪೂಜೆಗೆಯ್ದಂಜಿ (ಅರಾತ. ೧-೩-೨೨). ೩. ಒಂದು ಬಗೆಯ ಮೂಲಿಕೆ; ಚಂಗಲಕೋಷ್ಠ: ಕೋಷ್ಠಂ ಪದ್ಮಕಂ ಕರ್ಪೂರ ಬಾಳದ ಬೇರು ಪುಷ್ಕರಂ ಭದ್ರಮುಸ್ತೆಯುಮಂ ಸರಿಗೊಂಡು . . . ಪೂಸಲು ಯೋನಿದೋಷ ಕೆಡುವುದು (ಕಾಪಾಶಾ. ೨೬೩). ೪. ಆನೆಯ ಸೊಂಡಿಲಿನ ತುದಿ: "ಕರಾಗ್ರಂ, ಪುಷ್ಕರಂ—ಈ ೨ ತುದಿಗೈ" (ಹರಾತು. ೩೬-೬೬); ಕರಿಗಳ್ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ (ಆದಿಪು. ೯-೯೬); ಕರಪುಷ್ಕರಂಗಳಿಂ ತಂದು ಪೂಗಿಡುಗಳ್ಗೆ ನೀರೆಱೆವ ಮಱಿಯಾನೆಗಳಿಂ (ಕಾದಂಪೂ. ೨೨೦); ಜಲಕರಿನಿಕರಂ ಪುಷ್ಕರಮಲರೆ ಕರಂ ನಿಮಿರ ಪೂತ್ಕರಿಸೆ ಸಿಡಿದ ಲಸಜ್ಜಲಕಣಮನಮಳಮುಕ್ತಾಫಳಮೆಂದುಱೆ ಮುಗ್ಧಖಚರಿಯರ್ ಕೈಯಿಡುವರ್ (ರಾಜಶೇ. ೧-೯೩). ೫. ಚರ್ಮವಾದ್ಯದ ಮುಖ. ೬. ಒಂದು ಬಗೆಯ ಚರ್ಮವಾದ್ಯ; ನಗಾರಿ: ನವಮೇಘಧ್ವನಿ ಪುಷ್ಕರಧ್ವನಿ ಲಸತ್ತಾರಾಳಿ ಪುಷ್ಪೋಪಹಾರವಿಲಾಸಂ (ಆದಿಪು. ೬-೭೨). ೭. ಡಮರುಗ: ನಯನತ್ರಯಾಂಚಿತಪುಷ್ಕರ ಪುಷ್ಕರಪುಷ್ಕರಾಂಕ (ರಾಜಶೇ. ೧೩-೫೨). ೮. ಪಾತ್ರೆ; ಭಾಂಡ. ೯. ಕೊಕ್ಕರೆ; ಸಾರಸಪಕ್ಷಿ: "ಪುಷ್ಕರಂ ಸಾರಸಂ" (ಶಂಗರಾ. ೫೦-೬). ೧೦. ಬಾಣ; ಅಂಬು. ೧೧. ಕತ್ತಿ; ಖಡ್ಗ. ೧೨. ಕತ್ತಿಯ ಅಲಗು,–ಧಾರೆ. ೧೩. ಕತ್ತಿಯ ಒರೆ; ಖಡ್ಗದ ಕೋಶ. ೧೪. ಯುದ್ಧ; ಕದನ. ೧೫. ಗಗನ; ಆಕಾಶ: "ಸುರಸರಣಿ ವಿಷ್ಣುಪದಮಂಬರಂ ವಿಯತ್ ಖಂ ವಿಹಾಯಸಂ ಗಗನಂ ಪುಷ್ಕರಮಾಕಾಶಂ" (ಚತುಕೋ. ೧೦. ೫೬); ಮೊಱೆವ ದುಂದುಭಿರಭಸದಲಿ ಪುಷ್ಕರಕೆ ಪುಷ್ಪಕವಡರಿದುದು (ಕೊಕರಾ. ೬-೫೪-೧೧); ಖಣಿಖಟಿಲೆಂಬ ಶಬ್ದವತಿ ಪೂರಿಸೆ ಪುಷ್ಕರ ಭೂತಳಂಗಳಂ ಮಣಿದವು ಕೂಡೆ ದಿಗ್ಗಜ ಫಣೀಂದ್ರ ಮಹಾಕಮಠಂಗಳ್ (ಹಂಪ್ನಾ. ೩-೯೬). ೧೬. ನೀರು; ಜಲ. ೧೭. ಕೊಳ; ಸರೋವರ. ೧೮. ಒಂದು ಬಗೆಯ ಹಾವು,–ಸರ್ಪ. ೧೯. ಮದ; ಉನ್ಮಾದ. ೨, ೪, ೧೯: ಸಿರಿಗೆಡೆಯಾದ ಪುಷ್ಕರದೊಳೊಂದಿದ ದೀರ್ಘಸುವೃತ್ತಹಸ್ತದಿಂ . . . ಈ ನರಸಿಂಹಭೂಭುಜಂ ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗನ್ಧವಾರಣಂ (ಎಕ. V. ಬೇಲೂರು. ೧೯೩-೫೦; 1161). ೨೦. ಕೆಂಪುಬಣ್ಣ: ಪಶ್ಚಿಮದಲ್ಲಿ ಕಂಡ ಪಚ್ಚೆಯ ಕಲ್ಲ ಉತ್ತರದಲ್ಲಿ ಕಂಡ ಪುಷ್ಕರದ ಕಲ್ಲ ಪೂರ್ವದಲ್ಲಿ ಕಂಡ ಬಿಳಿಯ ಕಲ್ಲ ಮಾಱಿಱಿ ಕೂಡ ಮಡಿಕೆಯ ಮಾಡೆಯ ಮೇಲಿರಿಸಲಾಗಿ ಕಂಡಿತ್ತು ಎಲ್ಲಿನ ಇರವು (ಶಬ್ದಮಣಿ. ೧೮೦-೬೪೯). ೨೧. ಶಿವನ ಒಂದು ಹೆಸರು: ನಯನತ್ರಯಾಂಚಿತಪುಷ್ಕರಪುಷ್ಕರಪುಷ್ಕರಾಂಕ (ರಾಜಶೇ. ೧೩-೫೨). ೨೨. ಕೃಷ್ಣನ ಒಂದು ಹೆಸರು. ೨೩. ವರುಣನ ಮಗ. ೨೪. ನಳಮಹಾರಾಜನನ್ನು ದ್ಯೂತದಲ್ಲಿ ಸೋಲಿಸಿ ರಾಜ್ಯವನ್ನು ಕಿತ್ತುಕೊಂಡ ಅವನ ದಾಯಾದಿಯ ಹೆಸರು: ನಳನೃಪತಿಯ ದಾಯಾದಂ ಸಲೆ ಬಡವಟ್ಟಿರ್ಪನಲ್ಲಿ ಪುಷ್ಕರನೆಂಬಂ (ನಳಚಂ. ೫೦೩). ೨೫. ಸೂರ್ಯ. ೨೬. ಗುಹೆ; ಗವಿ. ೨೭. ಭಾಗ; ವಿಭಾಗ. ೨೮. ಪವಿತ್ರ ಕ್ಷೇತ್ರಗಳಲ್ಲಿರುವ ನದಿ, ಸರೋವರ ಮುಂತಾದುವು; ಪುಣ್ಯತೀರ್ಥ. ೨೯. [ಜ್ಯೋತಿ] ಕೆಲವು ಗ್ರಹಗಳ ಕೂಟದಿಂದ ಉಂಟಾಗುವ ಅಶುಭಯೋಗ. ೩೦. [ಜೈನ] ಕಾಲೋದಧಿಯ ಆಚೆಗೆ ಇರುವ ಒಂದು ದ್ವೀಪ: ಕಾಳೋದಕಜಲಧಿ ಬಿಡೆಗಾಗೆ ತದ್ಬಾಹ್ಯದೊಳ್ ಪುಷ್ಕರನಾಮದ್ವೀಪವಿರ್ಪುದು (ಧರ್ಮಾಮೃ. ೧-೯೦). ೩೧. [ಕಾವ್ಯಮೀ] ಚಿತ್ರಕಾವ್ಯದಲ್ಲಿ ಒಂದು ಬಗೆ; ಪುಷ್ಕರವೆಂಬ ವಾದ್ಯದ ಆಕಾರದಲ್ಲಿ ಬರೆಯುವ ಪದ್ಯ: ಶರಶೂಲಚಾಪ ಚಕ್ರಾಸಿ ರೂಪಂ . . . ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೫೬೯). "ಅಸಿಯೊಳು ಸುತೀರ್ಥದೊಳು ಪಾವ್ಯಘಟತುಂಡದೊಳು ಜಸಜದೊಳು ಗಜಹಸ್ತದಗ್ರದೊಳು ಗಗನದೊಳು ಕುಶದೊಳೌಷಧದೊಳಾ ಪುಷ್ಕರಾಖ್ಯಂ" (ಶಂಗರಾ. ೧೯೬-೩೨); "ಕಮಲ ನಭ ವಾದ್ಯ ಭಾಂಡಂ ಉಮೆಯುರಗ ಸರ್ಪ ಮದಂ ಖಡ್ಗಂ ತೀರ್ಥೋತ್ತಮ ಭೇಷಜ ಕರಿಕರತುದಿ ಕ್ರಮದಿಂ ಪನ್ನೊಂದು ಪುಷ್ಕರಾಂಕಿತ ಶಬ್ದಂ" (ನಾನಾರ್ಥ. ೨೮). [ಸಂ.]

**ಪುಷ್ಕರಚಿಕುರ** (ನಾ). ಆಕಾಶವೇ ಕೂದಲಾಗುಳ್ಳವನು; ವ್ಯೋಮಕೇಶ; ಶಿವ: ಶರಣು ಪುಷ್ಕರಚಿಕುರ ಶಿವಭಕ್ತಿಮುಖಮುಕುರ (ಹಂಪಿ. ೧೧-೧). [ಸಂ.]

**ಪುಷ್ಕರಜ** (ನಾ). ೧. ನೀರಿನಲ್ಲಿ ಹುಟ್ಟಿದುದು; ಕಮಲ. ೨. ಕಮಲದಲ್ಲಿ ಹುಟ್ಟಿದವನು; ಬ್ರಹ್ಮ. ೧, ೨: ಹರಿ ಹುಸು ರವಿ ಕೌಶಿಕಂ ಶಿಖಿ ಮಹೀಜಾತಂ ಶುಕಂ ಭೃಂಗ ಪುಷ್ಕರಜಂ ಚಕ್ರವಿನಾಯಕಂ . . . ರಂಜಿಸುತ್ತಿರ್ಪ ಶಂಕರನಾಸ್ಥಾನದ ಮಹಾಳ್ಕೆಯಿಂದೆ ಪರಿದೊಪ್ಪುತ್ತಿರ್ದುದಂತಾವನಂ (ತ್ರಿಪುರ. ೨-೧೨೬). [ಸಂ.]

**ಪುಷ್ಕರಮಿತ್ರ** (ನಾ). ತಾವರೆಯ ಗೆಳೆಯ; ಸೂರ್ಯ: ಪುಷ್ಕರಮಿತ್ರನಂ ದುದಯಪರ್ವತಮಂ ಪರಿವೇಱೆ ತಾರೆಗಳ್ ನಿಷ್ಕಳೆಯಾಗಿ ಪೋಗೆ ಪೂಗೆ ಸುತ್ತಿದ ಮುತ್ತಿನೊಲಿರ್ದುವಾಗಳಾ ಪುಷ್ಕರದೊಂದು ಪಾಂಡುರರುಚಿಯುಂ ತಳೆದಿರ್ದುದು ಮಾಡಣಾಗಸಂ (ಬಲ್ಲಾ. ೯-೩೨). [ಸಂ.]

**ಪುಷ್ಕರಮೂಲ** (ನಾ). ಒಂದು ಬಗೆಯ ಮೂಲಿಕೆ; ಚಂಗಲಕೋಷ್ಠ: "ಪುಷ್ಕರಂ, ಕಾಶ್ಮೀರಂ, ಪದ್ಮಪತ್ರಂ, ಈ ೩ ಪುಷ್ಕರಮೂಲ" (ದಾಶಿರಾ. ೧೧೧); ಶುಂಠಿ, ಪುಷ್ಕರಮೂಲ . . . ಇಷ್ಟನ್ನು ಕಷಾಯವ ಕಾಸಿ ಕುಡಿಸಲು ಕಾಸ, ಶ್ವಾಸ ... ಪರಿಹರವಹವು (ಕೃದ್ಯಶಾ. II. ೬೧); ಶುಂಠಿ, ಪುಷ್ಕರಮೂಲ, ನೆಲಗುಳ್ಳ . . . ಕಷಾಯ ಕಾಯಿಸಿ ಜೇನುತುಪ್ಪಗೂಡಿ ಸೇವಿಸೆ ಶ್ಲೇಷ್ಮಜ್ವರ ಗುಣವಾಗುವುದು (ಸಕವ್ಯ. ೮೮). [ಸಂ.]

**ಪುಷ್ಕರವಾಣಿ** (ನಾ). ಆಕಾಶದಿಂದ ಕೇಳಿ ಬರುವ ಮಾತು; ಆಕಾಶವಾಣಿ: ಪುಷ್ಕರವಾಣಿ ನುಡಿದುದೆಲೆ ಸುಸ್ಥಿರಭೂಪತಿ ಕೇಳೆನುತ್ತ (ಜೈಮಾಶ್ವ. ೦-೪-೯೬). [ಸಂ.]

**ಪುಷ್ಕರಾವರ್ತಕ** (ನಾ). ಅತಿಯಾಗಿ ಮಳೆಯನ್ನು ಸುರಿಸುವ ಮೇಘಗಳ ಒಂದು ಗುಂಪು: ಜಗಕೆ ಜಗತ್ಪ್ರಳಯಂಬರಮೊಗೆದೊಡೆ ಸಂವರ್ತ ಪುಷ್ಕರಾವರ್ತಕಮಲ್ಲಿಗಮೊಂದೆ ಮಾಟ್ಕೆಯಿಂ ನೆಟ್ಟಗೆ ಕಱೆಗುಂ ಜಲಧಿ ಜಲಧಿಯೊಳ್ ಕೂಡುಮಿನು (ಜಗನ್ನಾ. ೯-೧೧). 'ಪುಷ್ಕಳಾವರ್ತಕ' ಪಠಾ. [ಸಂ.]

**ಪುಷ್ಕರಿ** (ನಾ). ಆನೆ; ಹಸ್ತಿ. [ಸಂ. ಪುಷ್ಕರಿನ್]

**ಪುಷ್ಕರಿಣಿ** (ನಾ). ೧. ಹೆಣ್ಣಾನೆ. ೨. (ತಾವರೆಯ) ಕೊಳ; ಕಲ್ಯಾಣಿ: "ಖಾತ, ಪುಷ್ಕರಿಣೀ—ಈ ೨ ಹೊಕ್ಕರಣಿ" (ಹರಾಯು. ೧೦೭-೫೩); ಸಲಲತರ್ಕವನದಿಂ ದೀರ್ಘಿಕೆಯಿಂ ಪುಷ್ಕರಿಣಿಯಿಂ ಸರೋವರದಿಂ ಕೌತುಕಮನವರ್ಕಂಡಕರ್ತಾಕಮಂಗಳಪುರಮಂ (ಶಾಂತಿಪು. ೩-೩೪); ಅವಗಾಹಿತಪಥಿಕಜನಮನಕರುಣೆಗಳಾವ ಪುಷ್ಕರಿಣಿಗಳುಂ . . . ಅನೂನ ಶೋಭೆಯುಂ ಪಡೆಯೆ (ಪುಷ್ಪದಂ. ೯-೨೨ ವ); ಗಂಗೆಯ ನೀರು ಹರಿದು ಬಂದು ನಮ್ಮ ತೋಟದ ಪುಷ್ಕರಿಣಿಯಲ್ಲಿ ರಭುರಿಯಂತೆ ಧುಮುಕುತ್ತಿತ್ತು (ಶಿಬಂರ. II. ೩). [ಸಂ. ಪುಷ್ಕರಿಣೀ]

**ಪುಷ್ಕಲ, ಪುಷ್ಕಳ** (ಗು). ೧. ಹೇರಳವಾದ; ಸಮೃದ್ಧವಾದ; ವಿಪುಲವಾದ: ಭೂಮಿಯಿಂದ ಪುಷ್ಕಲಬೆಳಸು ಬರಲು ಏನೇನನ್ನು ಮಾಡಬೇಕೋ ಎಲ್ಲವನ್ನೂ ಮಾಡಿದ ಹೊರತು ಅವನು ಏಳಿಗೆಗೆ ಬಾರನು (ಹಂಶ್ರ. ೧೫೬); ಶಿವಾಜಿಯು ಗೋಲ್ಕೊಂಡಕ್ಕೆ ದಂಡೆತ್ತಿ ಹೋಗಿ ಸುಲ್ತಾನನಿಂದ ಪುಷ್ಕಲಧನವನ್ನು ಕೈಗೆ ಹಾಕಿಸಿಕೊಂಡು ರಾಯಗಡಕ್ಕೆ ಹಿರುಗಿದನು (ಛತ್ರಪ. ೨೨೩). ೨. ಉತ್ತಮವಾದ; ಶ್ರೇಷ್ಠವಾದ. (ನಾ). ೩. ಹೇರಳವಾದುದು; ಸಮೃದ್ಧವಾದುದು. ೪. ಶ್ರೇಷ್ಠನಾದವನು: "ಶ್ರೇಯಾನ್, ಶ್ರೇಷ್ಠಃ, ಪುಷ್ಕಲಃ, ಸತ್ತಮಃ, ಅತಿಶೋಭನಃ—೫

ಬಹಳ ಶ್ರೇಷ್ಠನಾದವನ ಹೆಸರುಗಳು" (ಸಿದ್ಧಾಂತಿ. ೩೩೬). ೫. ಶಿವ; ಪರಮೇಶ್ವರ. ೬. ರಾಮನ ತಮ್ಮನಾದ ಭರತನ ಮಗನ ಹೆಸರು: ಪುಷ್ಕಲಂ, ಆಗಳೆ ತಂದೆತಾಯ್ವಿರಡಿಯೊಣಾತಿವಡೆದು ಕಿಱಿಯಯ್ಯನ ಬೆಂಬಲ ಕ್ಕೆಂದು ಸಾಜುಕಂಗಳನೆಸ್ತಿ ಪೋಪವಸರದೊಳ್ (ರಾಮಾಶ್ವ. ೧೬-೦೭).

**ಪುಷ್ಕಳ**: ೩. ರಾಯರು ... ನನ್ನ ಜತೆಯಲ್ಲಿಯೇ ಪುಷ್ಕಳವಾದ ಭೋಜನ ವನ್ನು ಮುಗಿಸಿದರು (ರಾಮಾಳ. ೪); ನಾನು ಅದನ್ನು ಪುಷ್ಕಳವಾಗಿ ತಿಂದೆ (ಗಂಶ್ರ. ೬). [ಸಂ.]

**ಪುಷ್ಕಲಾವರ್ತ**, ಪುಷ್ಕಳಾವರ್ತ (ನಾ). = ಪುಷ್ಕರಾವರ್ತಕ: ಅಮರ ಸವಿತ್ರಿಯು ತಂದ ಪಾಲ್ಗಡಲ ಪುಷ್ಕಲಾವರ್ತ ಬಲಾಹಕಾಂಬುದಂಗಳ್ ಕನಕಾಚಳಕಟಕೋಳಿಯೊಳ್ ಸುರಿವುತಿರ್ಪಂತಿಂದ್ರರುಂ ಭಗವದುಷ್ಣೀಷದೊಳ್ ಸುರಿಯೆ (ಅಜಿತಪು. ೧೦-೯೩ ವ). **ಪುಷ್ಕಳಾವರ್ತ**: ಪೌಲೋಮಿಪತಿ... ವಿಳಯಕಾಳಾಂಬುದದಂತೆ ಮೊಳಗುವಂ ಸಿಡಿಲ ಬಳಗವನೊಳಕೊಂಡ ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸಂವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್ (ಶಂಖಾಭ. ೩-೯೩ ವ); ಅವರಿಸಿದವು ಪುಷ್ಕಳಾವರ್ತಾವಳಿಗಳಿನೆ ಬಹಳವಿಷಧೂಮಾವಳಿಯಾಲೇ ಧಾತುಗಟ್ಟುದು ಸಕಳಭುವನಜನ (ಕುಮಾ್ಯ.ಕ. ೨೫-೬). [ಸಂ.]

**ಪುಷ್ಕಳ** 'ಪುಷ್ಕಲ' ನೋ.

**ಪುಷ್ಕಳಂ** (ಅ). ಅಧಿಕವಾಗಿ; ಅತಿಶಯವಾಗಿ: ಅಲಘುಭುಜಪ್ರತಾಪಂ . . . ಪುಷ್ಕಳಂ ಪುಷ್ಕಳನಂ ನೋಯಿಸಿದಂ (ರಾಮಾಶ್ವ. ೧೯೩-೩). [<ಪುಷ್ಕಲ]

**ಪುಷ್ಕಳಭೋಜನ** (ನಾ). ಸಮೃದ್ಧವಾದ ಊಟ,—ಭೋಜನ: ಎಲ್ಲಾ ಇಂದಿರಮ್ಮನ ದಳಿದೀದ ನಮಗೆ ಪುಷ್ಕಳಭೋಜನಮೆಂದುಕೊಂಡಿದ್ದಾರೆ (ಕೃಪಾಲ. ೧೮೩). [ಸಂ. ಪುಷ್ಕಲಭೋಜನ]

**ಪುಷ್ಕಳಾವರ್ತ** 'ಪುಷ್ಕಲಾವರ್ತ' ನೋ.

**ಪುಷ್ಕಳಾವರ್ತಕ** (ನಾ). = ಪುಷ್ಕರಾವರ್ತಕ: ಭೂಧರವಿರೋಧಿ ಭೂಧರ ಧರಂಗೆ ಕ್ರುದ್ಧನಾಗಿ ಪುಷ್ಕಳಾವರ್ತಕನಿಕಾಯಮುಮಂ ಕರೆದು (ಜಗ. ೪-೬೧ ವ). [ಸಂ. ಪುಷ್ಕಲಾವರ್ತಕ]

**ಪುಷ್ಟ** (ಗು). ೧. ಚೆನ್ನಾಗಿ ಬೆಳೆಸಿದ,—ಪೋಷಿಸಿದ. ೨. ಶಕ್ತಿ ಸಂಪನ್ನವಾದ. ೩. ವಿಪುಲವಾದ; ಹೇರಳವಾದ; ಅಧಿಕವಾದ. ೪. ಸಮೃದ್ಧವಾದ; ಶ್ರೀಮಂತ. ೫. ಶ್ರೇಷ್ಠವಾದ; ಉತ್ತಮ ವಾದ. (ನಾ). ೬. ಹೆಚ್ಚಳ; ಅಧಿಕ್ಯ: "ಬಹುಳಂ ಪ್ರಭೂತಂ ಪ್ರಭೂತಿ ಬಹು ಪುಷ್ಕಳಂ ಪುಷ್ಟಮೆನೆ ಪೆರ್ಚುಮಕ್ಕುಂ" (ಕರಂಗರಾ. ೧೨೬. ೬). ೭. ಶಕ್ತಿವಂತ; ಸಮರ್ಥ: ಪ್ರಮದಾವಲ್ಲಭನಂತಮರ್ಧ್ಯ ಸುಖಿ ಪುಷ್ಟಂ ತ್ಯಾಗಿ . . . ಉತ್ಕೃಷ್ಟೋದ್ಭವಂ (ಜಾತಕಿ. ೧೭-೨). [ಸಂ.]

**ಪುಷ್ಟಿ** (ನಾ). ೧. ಬೆಳೆಸುವಿಕೆ; ಪೋಷಿಸುವಿಕೆ. ೨. ಆಧಾರ; ಊರೆ. ೩. ಚೆನ್ನಾಗಿ ಬೆಳೆದ ಸ್ಥಿತಿ; ಕೊಬ್ಬಿರುವಿಕೆ. ೪. ಬೆಳವಣಿಗೆ; ಏಳಿಗೆ; ಅಭಿವೃದ್ಧಿ: ವಚನಕಾರರಿಂದ ಕನ್ನಡಭಾಷೆಗೆ ಒದಗಿದ ಪುಷ್ಟಿ ಎಷ್ಟು ವಿಧವಾದುದು (ಒಲ್ಕನುಕು. ೧೬೬). ೫. ಒದಗಿಸುವಿಕೆ; ಪೂರೈಕೆ: ನಾಗರಿಕಮಾನವನ ರಕ್ತದ ರುಚಿಗೋ . . . ಆಹಾರದ ಪುಷ್ಟಿಗೋ ಮೋಹಿಸಿ ಅವನ ಜೊತೆಗೇ ತಾವೂ ಬಿಡಾರ ಹೂಡಿ ಕಾಡುವ ಅಲ್ಪಜಂತು ಗಳು ಅನೇಕ ಇವೆ (ಶಂಕರು. ೪೨). ೬. ಪೂರ್ಣತೆ; ಪೂರ್ಣವಾಗಿ ವ್ಯಾಪ್ತವಾಗುವಿಕೆ: ಅನಂತಚತುಷ್ಟಯಪುಷ್ಟಿವರಪುಷ್ಟ[ನುಂ] . . . ಅಪ್ಪ ಶಾಂತೀಶ್ವರನಕಲಂಕಾಚಾರಸಾರಂ (ಶಾಂತಿಪು. ೦೨-೨೯ ವ). ೭. ಐಶ್ವರ್ಯ; ಸಂಪತ್ತು: ಸಮಸ್ತಭಾರತಕಥಾಸಂಬಂಧಮಂ ಬಾಜಿಸಲ್ . . . ಅಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ (ಕುಶಲಾ. ೦೯-೬೩). ೮. ಸಂಪತ್ತಿನ ಸುಖಪ್ರಾಪ್ತಿಗಾಗಿ ಆಚರಿಸುವ ಒಂದು ಬಗೆಯ ಧಾರ್ಮಿಕಕರ್ಮ: ಅಥರ್ವಣವೇದವು ಯಾಗಕ್ಕೆ ಉಪಯೋಗವಿಲ್ಲ. ಅದರಲ್ಲಿ ಶಾಂತಿ ಪುಷ್ಟಿ ಮೊದಲಾದ ಕರ್ಮಗಳ ವಿಧಿಯಿರುತ್ತದೆ (ಹಿಂದುಮಾ. ೦೫೬); ದಿನವೂ ಒಂದಲ್ಲ ಒಂದು ಶ್ರಾದ್ಧ—ಶಾಂತಿ, ಪುಷ್ಟಿ, ಹೀಗೆ ಅವರಿಗೆ ಕಾದಿದ್ದದ್ದೇ (ಹೊಚ್ಚ. ೨೮). ೯. ಶಕ್ತಿ; ಸಾಮರ್ಥ್ಯ. ೧೦. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರ ನಾದೊಡೆ ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ ಧವಳವರ್ಣ ಶರೀರದಿಂ . . . ರಂಜಿಸುತ್ತಿರ್ಪಂ (ಏಕೀಕ. ೨೬೬). [ಸಂ.]

**ಪುಷ್ಟಿಕರ** (ಗು). ೧. ಶಕ್ತಿದಾಯಕವಾದ; ಪೋಷಕವಾದ. (ನಾ). ೨. ಶಕ್ತಿದಾಯಕವಾದುದು: ನಮ್ಮದು ಮೊದಲೇ ಪುಷ್ಟಿಕರವಾದ ಆಹಾರಾಂಶಗಳೆಲ್ಲಾ ಇಲ್ಲದಿರುವ ಜನಾಂಗ (ಕರಕ. ೬೩). [ಸಂ.]

**ಪುಷ್ಟಿಕಾರಕ** (ಗು). ಶಕ್ತಿಯನ್ನೊದಗಿಸುವ; ಪೋಷಣೆಯನ್ನುಂಟು ಮಾಡುವ; ಸತ್ತ್ವಯುಕ್ತವಾದ: ಅವು ತಿಂಬುವವರಿಗೆ ಹಾಲು ತುಪ್ಪ ಮುಂತಾದ ಪುಷ್ಟಿಕಾರಕ ಪದಾರ್ಥಗಳು . . . ಇಲ್ಲದೆ ಹೋದರೆ . . . ಮೈ ಒಣಗಿ ಹೋಗುವದು (ಕಬುಂಭಬು. ೪-೪೦). [ಸಂ.]

**ಪುಷ್ಟಿಕಾರಿ** (ನಾ). = ಪುಷ್ಟಿಕರ ೨: ಆತ್ಮಗುಪ್ತಾ . . . ಮರ್ಕಟೀ—ಎ ನಸಗುನ್ನಿಗಿಡ, ಕಪಿತುರಚೀಗಿಡವೆಂದು ಕೆಲವರನ್ನುವರು, ಇದರ ಬೀಜ ಪುಷ್ಟಿಕಾರಿ (ಸಿದ್ಧಾಂತಿ. ೦೫೨) [ಸಂ. ಪುಷ್ಟಿಕಾರಿನ್]

**ಪುಷ್ಟಿಕೊಡು** (ಕ್ರಿ). ೧. ಬೆಳೆಯಲು ಸಹಾಯ ಮಾಡು; ಬೆಳೆಸು. ೨. ಬೆಂಬಲಿಸು; ಸಮರ್ಥಿಸು; ಬಲಪಡಿಸು: ಆಂಗ್ಲರಾಜನೀತಿಜ್ಞರು ನಿರೂಪಿಸಿದ ವಿದ್ಯಾಭ್ಯಾಸವಿನ್ಯಾಸ ಇವೆರಡಕ್ಕೂ ಪುಷ್ಟಿ ಕೊಟ್ಟಿತು (ಮುಕ್ಕಾಕ. ೦೦೯ ೬೬೩); ಆ ಶಂಕೆಗೆ ಪುಷ್ಟಿ ಕೊಡಲು ಯಶೋದೆಯ ವರ್ತನೆಯೂ ಬಹುಮಟ್ಟಿಗೆ ಕಾರಣವಾಯಿತು (ವಾತ್ಸಲ್ಯ. ೨೪೦). [ಪುಷ್ಟಿ + ಕೊಡ್ಮು]

**ಪುಷ್ಟಿಗೊಳಿಸು** (ಕ್ರಿ). = ಪುಷ್ಟಿಕೊಡು ೨: ಕೆಂಪುದೇವಯ್ಯನು ರಾಜ ಮರ್ಯಾದೆಯೊಡನೆ ಅರಮನೆಗೆ ಹೋಗುತ್ತಿದ್ದುದೂ ಆ ವಾರ್ತೆಯನ್ನು ಪುಷ್ಟಿಗೊಳಿಸಿದುವು (ಕರೇವ. ೩೮). [ಪುಷ್ಟಿ + ಕೊಳ್[1] + —ಇಸ್ಮು]

**ಪುಷ್ಟಿಮಾರ್ಗ** (ನಾ). ಪರಮಾತ್ಮನ ಅನುಗ್ರಹಸಂಪಾದನೆಯೇ ಮುಖ್ಯ ವೆಂದು ಪ್ರತಿಪಾದಿಸುವ ವೈಷ್ಣವಮತ; ವಲ್ಲಭಾಚಾರ್ಯರು ಸ್ಥಾಪಿಸಿದ ಮತ: ಈಶ್ವರಾನುಗ್ರಹ ಸಂಪಾದಿಸಬೇಕಾದರೆ ಜೀವಿ . . . ಸರ್ವಸ್ವವನ್ನೂ ಅವನಿಗೆ ಅರ್ಪಿಸಬೇಕು. ಆಗ ಅವನು ಜೀವಿಯ ವಶವಾಗುತ್ತಾನೆ. ಇದಕ್ಕೆ ಅನುಗ್ರಹ, ಪುಷ್ಟಿ, ಪೋಷಣ ಎಂದು ಹೆಸರು. ವಲ್ಲಭಾಚಾರ್ಯರ ಮತವನ್ನು ಶುದ್ಧಾದ್ವೈತವೆಂದೂ ಪುಷ್ಟಿಮಾರ್ಗವೆಂದೂ ಕರೆಯುತ್ತಾರೆ (ಭಾರಕ. ೨೪೪). [ಸಂ.]

**ಪುಷ್ಟೀಕರಿಸು** (ಕ್ರಿ). ಬಲಪಡಿಸು; ಬೆಂಬಲಿಸು; ಸಮರ್ಥಿಸು: ನಾನು ಅವರ ಅಭಿಪ್ರಾಯವನ್ನು ಪುಷ್ಟೀಕರಿಸಿದೆ (ಕಂಗಾಳ್ವ. ೩೪೬); ಕ್ಯಾಂಬೆಲ್‌ನು . . . ಸಸ್ಯಗಳ ಬಗ್ಗೆ ನಡೆಸಿದ ಸಂಶೋಧನೆಗಳಿಂದ, ತನ್ನ ಹೊಸ ತತ್ತ್ವ ಗಳನ್ನು ಪುಷ್ಟೀಕರಿಸಿದನು (ಸಸ್ಯಕ. ೩೩). [ಪುಷ್ಟೀಕರಣ್ಮ + —ಇಸ್ಮು]

**ಪುಷ್ಪ** (ನಾ). ೧. ಹೂವು; ಕುಸುಮ: "ಪ್ರಸವಂ ಪ್ರಸೂನಕಂ ಸುಮನಸಂ ಪುಷ್ಪಮೆನೆ ಕುಸುಮಮವು" (ಕರಂಗರಾ. ೩೨-೩); ಲಳಿತವಿಚಿತ್ರಪತ್ರಫಲಪುಷ್ಪ ಯುತಾಟವಿ ಸೊರ್ಕಿದಾನೆಯಂ ಬೆಳೆವುದು (ಕಂಶಕಾ. ೦-೩೪); ಭೂಜಾಳಿ . . . ಪತ್ರಪುಷ್ಪಫಲಭಾರಾಕ್ರಾಂತವಾಗಿರ್ದುವು (ಜಗಪು. ೩-೬೬); ಪರಿಪರಿಯ ಪುಷ್ಪಮಂ ಸಿರಿಮುಡಿಯೊಳಗೆ ಸೂಡಿ (ಪಂಶರ. ೫-೩೬). ೨. ಮುಟ್ಟು; ಋತುಸ್ರಾವ: ಪುಷ್ಪ ನಷ್ಟವಾದರೆ—ಎಕ್ಕೆಯ ಹಾಲು ಹನಿಸಿ ಬೆಲ್ಲವ ಬೆರಸಿ ಮೆದ್ದು ಮಧುರಂಹಾರವನುಣ್ಣೆ ೭ ದಿನಕ್ಕೆ ಮುಟ್ಟು ಗಾಂಬರು (ಏಪ್ಪಕ. ೯೦). ೩. ಒಂದು ಬಗೆಯ ಕಣ್ಣಿನ ರೋಗ. ೪. ಒಂದು ಬಗೆಯ ನೇತ್ರಾಂಜನ,-ಕಣ್ಣಿಗೆ ಲೇಪಿಸುವ ಕಾಡಿಗೆ:

"ಪುಷ್ಪಾಂಜನಂ—ಪುಷ್ಪ" (೬೫೧. ೦೦೦). 'ಕುಸುಮಾಂಜನ' ಪರಾ. ೫. ಕುದುರೆಯ ಮೈಮೇಲೆ ಇರುವ ಒಂದು ಬಗೆಯ ಚಿಹ್ನೆ: ತುರಗದ ಮೆಯ್ಯೊಳ್ ಪುಷ್ಪಂ ಕಿರಿದಾದಂದಶುಭಮಾವ ಬಣ್ಣದೊಳಂ ಪಾಂಡರಮಾದೊಡೆ ಶುಭಮದನಾದರಿಪುದು ಪರಿಹರಿಪುದಸಿತಪುಷ್ಪಾದಿಗಳಂ (ಅಶ್ವಶಾ. ೩-೦೨). ೬. ಒಂದು ಬಗೆಯ ನಾಣ್ಯ: ಪಂಚಪುಷ್ಪಾಣಿ ದೇಯಾನಿ ವಿವಾಹೇ ಸತಿ ತಜ್ಜನ್ಯೈಃ (ಎಕ. IV. ೬೦-೬೯; ೯೪೮). ೭. ಒಂದು ಬಗೆಯ ರತ್ನ; ಪುಷ್ಪರಾಗ.

**ಪುಷ್ಪದಂಬಿನ ಚೆಲುವ** = ೧. ಮನ್ಮಥ. ೨. ಮನ್ಮಥನಂತೆ ಸುಂದರನಾದವನು: ಕೇಶವ ಪುಷ್ಪದಂಬಿನ ಚೆಲುವ ಸರ್ವಜ್ಞನೆಸೆದಿರ್ದ (ಶಿಶಾಗ. ೦೦-೦೩-೩). [ಸಂ.]

**ಪುಷ್ಪಂಗತಿ** (ನಾ). ಔನ್ನತ್ಯ; ಊರ್ಧ್ವಮುಖತ್ವ: 'ಪುಷ್ಪಂಗತಿವೆಱು' ಪರಾ. [ಸಂ.]

**ಪುಷ್ಪಂಗತಿವೆಱು** (ಕ್ರಿ). ಉನ್ನತವಾಗಿರು; ಊರ್ಧ್ವಮುಖವಾಗಿರಂ: ಲಿಂಗದ ಭಕ್ತನಾಗಿ ಪೊಸಬೋನವಮರ್ಪಿಸಿಯೊಕ್ಕುದುಂಡು ಪುಷ್ಪಂಗತಿವೆತ್ತು ಬಾಳ್ವುದರಿದಲ್ಲೆನುತಂ ಘನಭಕ್ತಿಭಾವದಿಂ . . . ಅಮರನೀತಿಗಳ ರ್ಚಿಸುತಿರ್ಪರಾಮಗಂ (ಶ್ರೀಪು. ೯-೮). [ಪುಷ್ಪಂಗತಿ+ವೆಱು]

**ಪುಷ್ಪಕ** (ನಾ). ೧. ಹೂವು; ಕುಸುಮ: 'ಹೇಮಪುಷ್ಪಕ' ಪರಾ. ೨. ಒಂದು ಬಗೆಯ ಕಣ್ಣಿನ ರೋಗ. ೩. ಒಂದು ಬಗೆಯ ನೇತ್ರಾಂಜನ. ೪. ಹಿತ್ತಾಳೆ. ೫. ಮಣಿ; ರತ್ನ. ೬. ಬಿಸಿಲು. ೭. (ಕರಿಯಲು ಬಳಸುವ) ಬಾಣಲೆ. ೮. ಬಾಣಂತಿ. ೯. ಕೈಬಳೆ; ಕಂಕಣ. ೧೦. ಕುಬೇರನ ಬಳಿಯಲ್ಲಿದ್ದು, ಅವನಿಂದ ರಾವಣನಿಗೆ ವಶವಾಗಿದ್ದ ಸ್ವಯಂಚಾಲನಶಕ್ತಿಯುಳ್ಳ ವಿಮಾನ: "ಚೈತ್ರರಥಮೆಂಬುದು ಕುಬೇರನ ಬನಂ ಪುಷ್ಪಕಮೆಂಬುದಾತನ ವಿಮಾನಂ" (ಪಂಪರಾ. ೦೩-೬೩); ರಕ್ಕಸರಾಯ ಪುಷ್ಪಕವೇಱಿ ನಭದಲಿ ನೋಡಲೈತಂದ (ತೊರೆರಾ. ೦೭-೦೯): ತರಿಸಿ ಧನಪನ ಪುಷ್ಪಕವ ಮುಂದಿರಿಸಿ ಬಿಜಯಂಗೈವುದೆಂದನು ನರಪತಿಗೆ ಕೈಮುಗಿದು ಲಂಕಾನಾಥನೊಲವಿನಲಿ (ತೊರೆರಾ. ೬-೩೯-೩). ೧೧. ಆಕಾಶದಲ್ಲಿ ಉಡ್ಡಾಣ ಮಾಡುವ ದೇವವಿಮಾನ: ಕಾಯವ್ನಿಡೆ ಪುಷ್ಪಕವ ಕಂಡ ನಮ್ಮ ಬಸವಯ್ಯನು (ಶಿ.ಪಶ.೯. ೦೯-೩೬); ಆ ಸಮಯದೊಳ್ಗಂಡ ಹೆಂಡತಿಗೆ ತನಯಂಗೆ ಭಾಸುರದ ಪುಷ್ಪಕಂಗಳ್ ಬಂದುವು (ಅಶೆ. ಶೇ. ೩೬-೨); ನೋಡುತಿರೆ ಪುಷ್ಪವೋರ್ದ್ದುದಂಬರಕೆ ಜನತೆಯುತ್ಕಂಠೆಯಲಿ (ಕಣ್ಣಾಂಗ. ೯೦-೨೯೯೦). ೧೨. ಹೂವುಗಳಿಂದ ಅಲಂಕರಿಸಿದ ರಥ; ಪುಷ್ಪರಥ: "ಅನೇಕವಿಧಕೇಳೀವಿಳಸನಹೇತು[ಪುಷ್ಪ]ಕಂ ಪುಷ್ಪರಥಂ" (ವಸ್ತುಕೋ. ೬೬-೨೬). ೧೩. ಕುಬೇರ. ೧೪. ಕುಲಪರ್ವತಗಳಲ್ಲಿ ಒಂದು: ಸುಗಂಧಿ ಶಿವಿ ತ್ರಿಶೃಂಗಿ ಪುಷ್ಪಕ ಸುಪಕ್ಷ ಕಂಕುಶೈಲ ವೈಡೂರ್ಯ ಕಿಪಿಲ ಭದ್ರ ಕುಮುದ ಮಧುಮಾನ್ ಅಂಜನ ಮಕುಟ ಪಾಂಡುರ ಸಹಸ್ರಶಿಖಿ ಪಾರಿಜಾತವೆಂಬ ಹದಿನಾಱು ಕುಲಾಚಲಂಗಳೇ ಪೂರ್ವೋಕ್ತ ವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ತಿಪೆಶ ೨೦೩). ೧೫. ಅರಮನೆಯ ಒಂದು ಭಾಗ: ಪರಿಮಳದ ಪೂರಾಯಮೊಸುವ ಹಿರಿಯ ಪುಷ್ಪಕದೊಳಗೆ ಹೊಕ್ಕನು ಧರಣಿಜಾತೆಯನಱಸುತಿರೆ ಹನುಮಂತ (ತೊರೆರಾ. ೦೦-೯೦). "ಹಿತ್ತಾಳೆಯೊಳು ನಯನರೋಗದೊಳು ಬಾಣಲೆಯೊಳು ಕುಬೇರನೊಳು ರತ್ನದೊಳು ಕಂಕಣದೊಳು ಅಯನದ ವಿಮಾನದೊಳು ಪುಷ್ಪಕಮೆನಿಕ್ಕು" (ಕುಂಗಬಿ. ೧೩೨-೬೩); "ರೀತಿಕೆಯಕ್ಷಿರೋಗ ಧನಮಂ ಮಣಿ ಸೂತಕಿ ಕಂಕಣಂ ವಿಮಾನಾತಪಯಂಬರೀಷಕುಸುಮಂಗಳು ಪುಷ್ಪಕಮಕ್ಕುಂ" (ಶಾಪಕ. ೦೨೪). [ಸಂ.]

**ಪುಷ್ಪಕರಂಡ** (ನಾ). ೧. ಹೂವಿನ ಪಾತ್ರೆ; ಹೂವನ್ನಿಡುವ ಬುಟ್ಟಿ. ೨. ಅಲಂಕಾರಕ್ಕಾಗಿ ಮೇಜುಗಳ ಮೇಲೆ ಜೋಡಿಸಿ ಇಡುವ ಹೂದಾನಿ; ಪುಷ್ಪಪಾತ್ರೆ: ಪುಷ್ಪಕರಂಡದಲ್ಲಿ ಜೋಡಿಸಿಟ್ಟ ಗುಲಾಬಿಗಳಿಂದುಂಟಾಗುವ ಅನುಭವ ನಿಜಕ್ಕೂ ಬೇರೆಯಾಗಿರುತ್ತದೆ (ಶ್ರೀಕೃಕ್ರ. ೦೦). [ಸಂ.]

**ಪುಷ್ಪಕವಿಮಾನ** (ನಾ). ೧. ರಾವಣನ ವಶಕ್ಕೆ ಬಂದ ಕುಬೇರನ ವಿಮಾನ: ಪುಷ್ಪಕವಿಮಾನದ ರತ್ನವಿಚಿತ್ರಪುತ್ರಿಕಾಸಂಕುಲಮುಟಿಟ್ಟುವ ಬೆಮರ್ತೊರೆ ಕೂಡೆ ಬೆಮರ್ತುವು (ಕುಂಶಪ೨. ೯-೦೦೯); ರಾವಣನು ಅವನ ಪುಷ್ಪಕವಿಮಾನವನ್ನು ಅಪಹರಿಸಿದನು (ಕಕಶಾ. ೯೦೯). ೨. ಇಂದ್ರನ ವಿಮಾನ: ವ್ಯಾವರ್ಣಿಸಲ್ ಬಲ್ಲನೇ ಮಹಿಯೊಳ್ ಮಾನವನೊಂದೆ ನಾಲಗೆಯೊಳಂತಾ ಭೂಭುಜಾಗಾರಮಂ ಬಹುವಿಸ್ತಾರಮನಿಂದ್ರಪುಷ್ಪಕವಿಮಾನಾಕಾರಮಂ (ಜೈಶಿ. ೨-೩೬). [ಸಂ.]

**ಪುಷ್ಪಕಳಂಬ** (ನಾ). ೧. ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನು; ಮನ್ಮಥ: ಜೇವಣಶಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ . . . ಮಧುಭೂಭುಜನೋಲಗಶಾಲೆ ಮಾಮರಂ (ಶಾಶಿ. ೯-೩೩). [ಸಂ. ಪುಷ್ಪಕಲಂಬ]

**ಪುಷ್ಪಕಾಸೀಸ** (ನಾ). ೧. ಕಣ್ಣಿನ ದೋಷವನ್ನು ಪರಿಹರಿಸುವ ಒಂದು ಬಗೆಯ ಔಷಧದ್ರವ್ಯ.—ನೇತ್ರಾಂಜನ; ಹಳದಿಬಣ್ಣದ ಕಾಸೀಸ "ವಿಸದಂ—ಪುಷ್ಪಕಾಸೀಸ" (೬೫೦. ೦೩೩). ೨. ಒಂದು ಬಗೆಯ ಔಷಧೀಸಸ್ಯ: ಪುಷ್ಪಕಾಸೀಸ ಸಸ್ಯ . . . ಈ ಗಿಡವು ಜವುಗುಪ್ರದೇಶದಲ್ಲಿ ಬೆಳೆಯುತ್ತದೆ (ಸಸ್ಯಶಾ. ೯೬). [ಸಂ.]

**ಪುಷ್ಪಕೇತು** (ನಾ). ೧. = ಪುಷ್ಪಾಂಜನ: "ರೀತಿಪುಷ್ಪಂ, ಪುಷ್ಪಕೇತುಃ, ಪೌಷ್ಪಕಂ, ಕುಸುಮಾಂಜನಂ—ಳ ಕುಸುಮಾಂಜನದ ಹೆಸರು" (ಸಿದ್ಧಾಂಶಿ. ೩೦೩). ೨. ಹಿತ್ತಾಳೆಯ ಭಸ್ಮ. ೩. ಕಾಮ; ಮನ್ಮಥ. [ಸಂ.]

**ಪುಷ್ಪಗಣೆಯ** (ನಾ). ಹೂವಿನ ಬಾಣಗಳನ್ನುಳ್ಳವನು; ಮನ್ಮಥ: ತ್ರಿಣಯನುರಿ ಹಣೆಗಿಚ್ಚಿನಿಂದ ಬೆಂದನಾ ಪುಷ್ಪಗಣೆಯಂಗೆ ಪೊಂದೆ ನಿಮಿಷಂ ದುಃಖ ಯಿಾ ರತಿವನಿತೆಯಾಳಿಗಾಮರಿಸಿದತುಳದುಃಖಾನಲನು ಕೊಲ್ಲದೆ ಜೀವದೊಡನೆ (ಪಶೋ. ೬-೩೬). [ಪುಷ್ಪ + ಕಣೆ + — ಅ]

**ಪುಷ್ಪಚಾಪ** (ನಾ). ೧. ಹೂವಿನ ಬಿಲ್ಲು: ಅತಿಮೃದುಪುಷ್ಪಚಾಪದಳಿನೀಗುಣಟಂಕೃತಿರಾವವಾಗಮಾವ್ಯತಪರಿಪೂರ್ಣಕರ್ಣಯುಗನಂ ಸಲೆ ಕೇಳಿಸದು (ಕಂದ್ರಪು. ೦-೨೩). ೨. ಮನ್ಮಥ; ಕಾಮ: ಪೊಸತಂ ಸ್ತ್ರೀರಾಜ್ಯಮಂ ಮೇಣ್ ಪಡೆದನೊ ಬಿದಿ ಲಾವಣ್ಯಸಿಂಧುಪ್ರವಾಹಂ ಪೊಸತೀಗಳ್ ಬಂದು ಬೆಳ್ವಂಗೆಡೆದುದೊ ಗಣಿಕಾಸೃಷ್ಟಿಯಂ ಪುಷ್ಪಚಾಪಂ ಪೊಸತಂ ಮಾಡಿಟ್ಟನೋ (ಅದಪು. ೦-೬೨); ಅದೇಂ ಮಾಡಿದನೊ ವಿರಹ ಸಂತಾಪಮಂ ಪುಷ್ಪಚಾಪಂ (ಶಾದಪು. ೩೩೬). [ಸಂ.]

**ಪುಷ್ಪಣಂದಿ** (ನಾ). ಒಬ್ಬ ಜೈನಯಂತಿಯ ಹೆಸರು: ಶ್ರೀ ಪುಷ್ಪಣನ್ದಿ ನಿಸಿಧಿಗೆ (ಎಕ. II (R). ೬೫; ಶಕಸಂ ೬೬). [ಪುಷ್ಪ + < ನಂದಿ]

**ಪುಷ್ಪದಂತ** (ನಾ). ೧. ಶಿವನ ಪರಿಚಾರಕರಲ್ಲಿ ಒಬ್ಬ. ೨. ಅಷ್ಟದಿಗ್ಗಜಗಳಲ್ಲಿ ಒಂದು; ವಾಯವ್ಯದಿಕ್ಕಿನ ಆನೆ: "ಐರಾವತಃ . . . ಪುಷ್ಪದಂತಃ, ಸಾರ್ವಭೌಮಃ, ಸುಪ್ರತೀಕಃ—ಈ ೮ ಮೂಡಣಂ ಕ್ರಮದಿನಿರ್ದ ದೆಸೆಯಾನೆಗಳ್" (ಪಂಪರಾ. ೦೩-೦೦೯); ಬೆದಱಿದುದಭ್ರಮೂರಮಣಂ . . . ದಿವಿರ್ದುದು ಪುಷ್ಪದಂತಮುಕಿಪ್ಪಲಮಾದುದು ಸಾರ್ವಭೌಮಂದದಿರ್ದುದು ಸುಪ್ರತೀಕವಿರದಾಲಿಸಿ ತತ್ಪಟಹಪ್ರಣಾದಮಂ (ಶ್ರೀಕೃಪು. ೩-೯). ೩. ಸೂರ್ಯ ಮತ್ತು ಚಂದ್ರರಿಬ್ಬರಿಗೂ ಒಟ್ಟಾಗಿ ಇರುವ ಹೆಸರು: "ಚಂದ್ರ ಸೂರ್ಯರ್ಕಳನೊಂದಾಗಿ ಪೇಳ್ವೊಡೆ ಪುಷ್ಪದಂತರೆಂಬುದು" (ಪಂಪರಾ. ೨೦-೦೨೦). ೪. [ಜೈನ] ವರ್ತಮಾನ ಕಾಲದ ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಒಂಬತ್ತನೆಯವನಂ: ಅನಶ್ವರಸುಖಧಾಮಮಪನೆಮಗೀಗೆ ಪುಷ್ಪದಂತಜಿನೇಂದ್ರಂ (ಶಾಪುಪು.

೮೨೭); ವರಪುಷ್ಪದಂತಜಿನಪತಿ ಪರಮಶ್ರೀಮುಕ್ತಿಲಕ್ಷ್ಮಿಯಿಂ ಕೆಯ್ಕೊಂಡು (ಶಕ್ತ್ಯಪು. ೧೪-೩೩). [ ಸಂ. ]

**ಪುಷ್ಪದರ್ಶನ** (ನಾ). ೧. ಹೂವನ್ನು ನೋಡುವಿಕೆ. ೨. ಮುಟ್ಟಾಗುವಿಕೆ ; ರಜಸ್ವಲೆಯಾಗುವಿಕೆ : ಮಕ್ಕಳಸೀಯದೆ ನೋಡೆ ನಾಡೆ ನೋಯಿಸಿದಪುದಿಕ್ಕುಪುಷ್ಪದಪೊಲೆನ್ನಯ ನಿಷ್ಫಲಪುಷ್ಪದರ್ಶನಂ (ಶಂಕರಾ. ೦-೦೦೬). ೧, ೨ : ಪುಷ್ಪದರ್ಶನದಿಂ ಕೆಯ್ಮಾಸಿದನೆಂಬುದೀಕೆಗೆ ಪಾಳಿಯೊಳ ಮಂದು ವಕ್ರೋಕ್ತಿಯುಂ ನುಡಿದು (ಶಾಂತಿಪು. ೬-೩೨ ಪ). [ಸಂ.]

**ಪುಷ್ಪದಾಮ** (ನಾ). ಹೂವಿನ ಸರ ; ಹೂಮಾಲೆ: ರತ್ನಾಭರಣತೋರಣ ಘಟಾಜಾಲಮುಕ್ತಾಲಂಬನಪುಷ್ಪದಾಮಪುಷ್ಪಮಂಗಲನವನಿಧಿಪ್ರಧಾನಂಗಳುಂ (ಅಜಿತಪು. ೦೦-೩೨ ಪ) ; ಲಲನೆಯರ್ಗಂಗರಾಗಮದು ದುರ್ವಹಮುಂಶುಕಭಾರಮಂಗಸಂಚಲತೆಗೆ ಕಾರಣಂ ಕುಸುಮಮವಲಿಕೆಯುಂ ಪೊಚಿ ಪುಷ್ಪದಾಮಮೇಖಲೆ ಸಡಿಲಗಡ್ಡ . . . ಎಂದೊಡಜೀಯಂ ಪೊಗಟಲ್ ಸುಕುಮಾರವೃತ್ತಿಯುಂ (ಅದಿಂಪು. ೦೦೦೩) ; ಧರಣಿಸುತ ನವಪುಷ್ಪದಾಮವ ಹರಿಯು ಕಂಠದಲಿಕ್ಕಿ ಮಂಗಳಮಹಿಮನೊಪ್ಪಿದನು (ಕೌತಿಠ. ೨-೯೯). [ ಸಂ. ಪುಷ್ಪದಾಮನ್ ]

**ಪುಷ್ಪಧನು** (ನಾ). (ಮನ್ಮಥನ) ಹೂವಿನ ಬಿಲ್ಲು : ರತಿಯಾರ್ತದಿಂದತನು ಪುಷ್ಪಧನುವಂ ಕೊಂಡು ಪತಿಯನಲ್ಲಡಸಿ ಮನದೊಳಗಸಲು ಪೊಗೊಂಡು (ಹರಿ. ಕಿ. ೭-೨೦). [ ಸಂ. ಪುಷ್ಪಧನುಸ್ ]

**ಪುಷ್ಪಧನ್ವ** (ನಾ). = ಪುಷ್ಪಚಾಪ ೨ : "ಪ್ರದ್ಯುಮ್ನಃ . . . ಪುಷ್ಪಧನ್ವಾ ಮನೋಭವಃ– ಈ ೨೮ ಕಾಮ(ದೇವ)ನ ಪೆಸರ್" (ಕರಾಯು. ೭-೬೯); ಪುಷ್ಪಧನ್ವನ ಕೃತಕಪೂಜ್ಯಪೂಜಮೆನೆ ಕಣ್ಗೆಸೆದಿರ್ದುದು ಚಂದ್ರಮಂಡಲಂ (ಸೂಕ್ತಿಸು. ೬-೨೪೦). [ ಸಂ. ಪುಷ್ಪಧನ್ವನ್ ]

**ಪುಷ್ಪಪುಟ** (ನಾ). ೧. ಹೂವಿನ ಕೋಶ. ೨. [ನಾಟ್ಯ] ಹದಿಮೂರು ಬಗೆಯ ಸಂಯುತಹಸ್ತಗಳಲ್ಲಿ ಒಂದು ; ಅರಳಿದ ಹೂವಿನಾಕಾರವಾಗುವಂತೆ ಎರಡೂ ಅಂಗೈಗಳನ್ನೂ ಜೋಡಿಸಿ ಹಿಡಿಯುವುದು : ಮಿಗೆ ಕೈಗಳಂ ಕುಚದಲ್ಲಿ ಪುಷ್ಪಪುಟದಂತಿರಿಸಿ (ಅಶ್ವರಂ. ೪-೯೩). ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಯುಂ ಕೆದರ್ದು (ಧರ್ಮಾ. ೩-೦೯೮). [ ಸಂ. ]

**ಪುಷ್ಪಫಲ** (ನಾ). ಬೇಲದ ಮರ ; ಕಪಿತ್ಥವೃಕ್ಷ : "ಕಪಿತ್ಥಃ . . . ಪುಷ್ಪಫಲಃ, ದಂತಶಠಃ– ೭ ಬ್ಯಾಲದ ಮರಕ್ಕೆ ಪೆಸರುಗಳು" (ಕಬ್ಬಿ.ಅ. ೦೦೬). [ ಸಂ. ]

**ಪುಷ್ಪಬಾಣ** (ನಾ). ೧. (ಮನ್ಮಥನ) ಹೂವಿನ ಬಾಣ : ಸುಗ್ಗಿ ಬರ್ಪುದನೀ ನಂದನಕಾನೆ ಮುಂದುದೆಗೆದಂ ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣಿಕೆಗೊಟ್ಟಿಂ (ಜಗಂ. ೦೪-೬೩); ಮದನಂ ಪುಷ್ಪಬಾಣಂಗಳಂ ಹೂಡಿದ ಬಿಲ್ಲಂ ಪೊತ್ತು ಪಿಂದಂ ಬರೆ (ಗಿರಿ. ೪-೯೭). ೨. ಹೂವಿನ ಬಾಣಗಳನ್ನುಳ್ಳವನಂ ; ಮನ್ಮಥ ; ಕಾಮ : ನಲ್ಲಂಬಿದಿಸೆ ಪುಷ್ಪಬಾಣನೆರ್ದೆಯುಂ (ಕಾವ್ಯಸಾ. ೩೫೦ ಪೂರ್ವ). [ ಸಂ. ]

**ಪುಷ್ಪಮಂಜರಿ** (ನಾ). ೧. ಹೂವುಗಳ ಗೊಂಚಲಂ ; ಪುಷ್ಪಗುಚ್ಛ : ಪುಷ್ಪಮಂಜರಿಯುಂ ತನ್ನುನಿರ್ಕರ್ಣಪೂರಕಮನತ್ಯಾಶ್ಚರ್ಯದಿಂ ನೋಡಿದಂ (ಅದಿಂಪು. ೬೬೦); ಅಮರಸ್ತ್ರೀನಿಚಯಂ ವಿಚಿತ್ರಲತೆಯಂ ಧತ್ತಾಗಿ ಭುಜಂಗಳಂ ಚವರೀಜಾವಳಿ ಪುಷ್ಪಮಂಜರಿಯಂ . . . ಪೋಲೆ ವಿಭ್ರಮದಿಂ ಬಂದನದೊಂದು ನಂದನವನಂ ಬರ್ಪಂತೆ ಸಂಕ್ರಂದನಂ (ಶಕ್ತ್ಯಪು. ೦೪-೧೩); ಮಣಾಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದಾಕ್ಷಣಮ ತಳ್ತಡರ್ದು ಕಿರಾತನ ಮಂಡೆಯುಲಿರೆ (ಹಂಪೆ. ೪-೦೦೬). ೨. ಒಂದು ಬಗೆಯ ಭತ್ತ,–ನೆಲ್ಲು : ಸೋಮಶಾಲಿಯುಂ ಬಿಳುಪಳ್ಳಿಗೆ ಕಂಬೂತಿ ಹೇಮವರ್ಣದ ಕೊನೆವಾಳೆ ರಾಮಣೇಯಕಮಪ್ಪ ಪುಷ್ಪಮಂಜರಿಯ ಸನಾಮಾದ ತೆನೆಗಳೊಪ್ಪಿಹುವು (ಶಂಕರ. ೩-೬೯). [ ಸಂ. ಪುಷ್ಪಮಂಜರೀ ]

**ಪುಷ್ಪಮಂಟಪ** (ನಾ). ಹೂವುಗಳಿಂದ ಅಲಂಕರಿಸಿದ ಮಂಡಪ : ಆ ವನಂಗಳಲ್ಲಿ ಚಿತ್ರಶಾಲೆ ಚಂದ್ರಶಾಲೆ ಶಿಶಿರಶಾಲೆ ಸುರಭಿಶಾಲೆಗಳಲ್ಲಿ ಪುಷ್ಪ[ಶಾಲಾಂ. ಲತಾ]ಮಂಟಪ . . . ತರುವಾಟಗಳ ಶಕ್ಯೆಲಲ್ಗಳೊಳಗೆಯುಂ (ಶಶಿ. ೨೦೩); ಒಂದು ಪುಷ್ಪಮಂಟಪವನ್ನು ಕಟ್ಟಿ ಅದರಲ್ಲಿ ಭಗವಾನ್ ವಿಶ್ವಾಮಿತ್ರರನ್ನು ಕುಳ್ಳಿರಿಸಿ ನಾವೆಲ್ಲರೂ ಆ ರಥವನ್ನು ಎಳೆದುಕೊಂಡು ಹೋಗಬೇಕು (ಮುಕಾಶಾ. ೩೦೦). [< ಸಂ. ಪುಷ್ಪಮಂಡಪ]

**ಪುಷ್ಪಮಾರ್ಗಣ** (ನಾ). ೧. ಹೂವಿನ ಬಾಣ. ೨. ಹೂವಿನ ಬಾಣಗಳನ್ನುಳ್ಳವನು; ಮನ್ಮಥ : ಮಣಿಮನೆ ಕಾತ ಕಲ್ಪಲತೆ ಸಿಂಜಿನಿಯುಂ ತೆಗೆದಿಟ್ಟ ಪುಷ್ಪಮಾರ್ಗಣನ ಧನುಃಶಲಾಕೆ . . . ಹಾನೆನಿಸುತ್ತೆ ಹಾಳ್ತ ಸನ್ನಣ ಕಿನೆಲಚ್ಚಮುತ್ತು ಕನಕಾಂಬರದಿಂ ಕಮಲಾಕ್ಷಿ ತೋಜಿದಳ್ (ಧರ್ಮಾ. ೦೦-೦೬). [ಸಂ.]

**ಪುಷ್ಪಮಾಲೆ** (ನಾ). ೧. ಹೂವಿನ ದಂಡೆ,–ಮಾಲೆ ; ಹೂವಿನ ಹಾರ : ಹತ್ತಿರ ನಿಂತಿದ್ದ ಮಹಾಶಿಕಟೈ ಮಗಳ ಕೈಗೆ ಪುಷ್ಪಮಾಲೆಯನ್ನು ತೆಗೆದು ಕೊಟ್ಟರು (ಶಾಂಕರಾ. ೦೦೯). ೨. ಒಂದು ಬಗೆಯ ಭತ್ತ,–ನೆಲ್ಲು : ಕುಂದದ ಚಂದ್ರಲೇಖೆ ನಸುಗುಂದದೆ ರಂಜಿಪ ಪುಷ್ಪಮಾಲೆ ಕುಂದೊಂದದ ಸೋಮಶಾಲೆ . . . ನಿರಂತರಮೊಪ್ಪುವ ಧರ್ಮಗುಪ್ತಿಯುಂಬಂದದನೇಕನಾಮಮೆಸೆಗುಂ ಮೃದುಬಂಧುರ ಗಂಧಶಾಲಿಗಳ್ (ಪುಣ್ಯಾಸ. ೪-೩೬). [ಸಂ. ಪುಷ್ಪಮಾಲಾ]

**ಪುಷ್ಪಮಾಸ** (ನಾ). ಗಿಡಬಳ್ಳಿಗಳು ಹೂವು ಬಿಡುವ ಸಮಯಂ; ವಸಂತ ಕಾಲ ; ಚೈತ್ರಮಾಸ : ಪುಷ್ಪಮಾಸವು ಕಳೆಯೆ ಪುಷ್ಪವಿರಹಿತೆಯಾಗ ಭೂಷಣವ ಕಳೆದಿಟ್ಟ ಕಾಂತೆಯಂತಿಹಳು (ಕೃಷ್ಣಾರೋ. ೬೭). [ಸಂ.]

**ಪುಷ್ಪರಥ** (ನಾ). (ಸಂತೋಷವಿಹಾರಕ್ಕಾಗಿ) ಹೂವುಗಳಿಂದ ಸಿಂಗರಿಸಿದ ಬಂಡಿ : "ವಿನೋದದ ರಥಮಂ ಪುಷ್ಪರಥಮೆಂಬುದು" (ಕರಾಯು. ೬೩-೨೧೨); ಮರುದಿನ ಪುಷ್ಪರಥವು ಸಿದ್ಧವಾಯಿತು (ಮುಕಾಶಾ. ೩೦೨). [ಸಂ.]

**ಪುಷ್ಪರಸ** (ನಾ). ೧. ಹೂವಿನಲ್ಲಿರುವ ಸಾರವತ್ತಾದ ದ್ರವ; ಮಕರಂದ : "ಮಕರಂದಃ, ಪುಷ್ಪರಸಃ—೨ ಹುವ್ವಿನ ಜೇನು, ಹುವ್ವಿನ ಬಂಡು" (ಕಬ್ಬಿ.ಅ. ೦೦೫). ೨. ಜೇನುತುಪ್ಪ : "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ–ಈ ೫ ಜೇನ ತುಪ್ಪಂ" (ಕರಾಯು. ೦೦೨-೯೬೭). [ಸಂ.]

**ಪುಷ್ಪರಾಗ** (ನಾ). ನವರತ್ನಗಳಲ್ಲಿ ಒಂದು ; ನಸುಹಳದಿಬಣ್ಣದ ಒಂದು ಬಗೆಯ ಹರಳು ; ಪುಷ್ಯರಾಗ : "ಪೀತಮಣಿಃ—ಪುಷ್ಪರಾಗ" (ಚಿಕಂ. ೯೯). [ಸಂ.]

**ಪುಷ್ಪರಾಜ** (ನಾ). ೧. = ಪುಷ್ಪರಾಗ. ೨. ಹೂವುಗಳ ಅರಸ; ವಸಂತ (?) : ಆ ಲಲಿತಕುಸುಮತತಿಯಾ ಬಾಲಕಪದಪದ್ಮಮಾಲಮಂ ಬಳಸಿದುಪೊಡ್ಡೋಲಗಕೆ ಪುಷ್ಪರಾಜನನೋಲಗಿಸಲ್ ಬಂದ ಪುಷ್ಪನಿಚಯದ ತೆಱದಿಂ (ಶಾಂತಿಪು. ೦೦-೬೦). [ಸಂ. ಪುಷ್ಪರಾಜನ್]

**ಪುಷ್ಪಲತೆ** (ನಾ). ಹೂವಿನ ಬಳ್ಳಿ : ಕಾಮಚಾಪದೀ ಜನಿಯಿಸಿದಿಕ್ಕು ಚಂದ್ರನವರ್ದಿಂ ಮಡುಗೊಂಡ ಕೊಳಂ ದಿವಂ ತಪರ್ವನೆ ತನಗೆಂಬ ಪುಷ್ಪಲತೆ ಕಲ್ಪಮಹೀಜದ ಬೀಜದುತ್ಸವಂ (ಶಕ್ತ್ಯಪು. ೨-೩೬). [ಸಂ. ಪುಷ್ಪಲತಾ]

**ಪುಷ್ಪಲಾವ** (ನಾ). ಹೂವುಗಳನ್ನು ಆಯ್ದು ತರುವವನು; ಹೂಮಾಡಿಗ. [ಸಂ.]

**ಪುಷ್ಪಲಾವಕ** (ನಾ). = ಪುಷ್ಪಲಾವ : ಹರಿಯುಂ ಕಾಣ್ಬುದುಮಾದುದು ಪರಮಜ್ಞತೆ ಪುಷ್ಪಲಾವಕಂಗಮಿದೇನಚ್ಚರಿ (ಜಗಂ. ೬-೦೪). [ಸಂ.]

**ಪುಷ್ಪಲಾವಿ** (ನಾ). ಹೂವಾಡಿಗಿತ್ತಿ ; ಹೂವಡಿತಿ : ಮಾಲೆವೂವಂ ನೆಗೞ್ದು ಸೊಗಯಿಸಲು . . . ಪುಷ್ಪಲಾವೀಕದಂಬಂ (ಶಂರಾವಿ. ೧-೧೨೦); ಮಾಲೆಗಳಂ ಕೋಳ್ಗೆಳಸುವೊಪ್ಪೆ ಕಣ್ಗೊಳಿಸುತಿರ್ಕುಂ ಪುಷ್ಪಲಾವೀಜನಂ (ಜಗ. ೯-೧೧೩). [ಸಂ. ಪುಷ್ಪಲಾವೀ]

**ಪುಷ್ಪಲಾವಿಕೆ** (ನಾ). =ಪುಷ್ಪಲಾವಿ : ಮದನನ ಪರಿಚಾರಿಕೆಯರಂತೆತ್ತು ವಂತೆ ಪೂವನೆತ್ತುವ ಪುಷ್ಪಲಾವಿಕಾಚತುಷ್ಪಥದೊಳ್ (ಶಾಂತಿಪು. ೯-೬೨ ವ). [ಸಂ. ಪುಷ್ಪಲಾವಿಕಾ]

**ಪುಷ್ಪಲಿಹ** (ನಾ). ದುಂಬಿ ; ಭ್ರಮರ : "ಅಳಿ ಚಂಚರೀಕಮಿಂದಿಂದಿರಂ ತುಂಬಿ ಪುಷ್ಪಲಿಹಂ . . . ಭ್ರಮರಮಕ್ಕುಂ" (ಪಂಗರು. ೩೨-೧೧). [ಸಂ. ಪುಷ್ಪಲಿಹ್]

**ಪುಷ್ಪವಂತ** (ಗು). ೧. ಹೂವುಗಳುಳ್ಳ ; ಹೂವು ಬಿಡುವ : ಪುಷ್ಪವಂತ ಸಸ್ಯಗಳು . . . ಈ ಸಸ್ಯಗಳು ಹೂವುಗಳನ್ನು ಬಿಡುತ್ತವೆ (ಸಸ್ಯಶಾ. ೩). (ನಾ). ೨. ಹೂವುಗಳಿಂದ ಅಲಂಕಾರಮಾಡಿಕೊಂಡವನು. ೩. ಸೂರ್ಯ ಮತ್ತು ಚಂದ್ರರಿಬ್ಬರಿಗೂ ಕೂಡಿ ಇರುವ ಒಂದೇ ಹೆಸರು: ಅವನ ಮೆಯ್ಯೊಗುಂ ಈ ಪುಷ್ಪವಂತರ್ಗೆ ಪೊಳೆವೊದವಿದತ್ತೋ . . . ಆ ವನಜಾಕ್ಷನ ದಿವ್ಯಮೂರ್ತಿಯಂ ಕಣ್ ತಣಿಯೆ ಕಂಡು (ಅದ್ಯಶ. ೬-೧೬). [ಸಂ. ಪುಷ್ಪವತ್]

**ಪುಷ್ಪವತಿ** (ನಾ). ೧. ಮುಟ್ಟಾದವಳು ; ಋತುಮತಿ ; ರಜಸ್ವಲೆ : "ಅವೀ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ — ಈ ೫ ಮುಟ್ಟುವೆಂಗಡವಳ್" (ಹಲಾಯು. ೬೧-೩೩೯); ಒಂದು ದಿವಸಂ ದೇವಕೀ ದೇವಿ ಪುಷ್ಪವತಿಯಾಗಿ (ಜಗ. ೨-೫೯ ವ); ನೀ ಪುಷ್ಪವತಿಯಾಗಲ್ಲಿ ಫಲ ವತಿಯಾಗು ನಡೆ ಕುರುರಾಯಭವನದಲಿ (ಕುವ್ಯಾಸ. ೧೯ ೬೩). ೨. ಹೂವುಗಳನ್ನು ಉಳ್ಳ ಬಳ್ಳಿ ; ಹೂವುಬಿಟ್ಟ ಬಳ್ಳಿ : "ಪುಷ್ಪವತೀ =ಹೂತ ಬಳ್ಳಿ" (ಶಾಕಸ್. ೧೬೩). ೧, ೨: ಪರಾಂಗಿ ಲತೆಯಂತೆ ಪುಷ್ಪವತಿ ಯಾಗಿರ್ಕುಂ (ಚಂಕೇಶ. ೯-೧೭೯); ಸಲೆ ಪಂಥ್ಯಾಲಯಮಂತಿರೆ ಪಲಕಾಲಂ ಪುಷ್ಪವತಿಯೆನಾದಪೆನೆಂದುಂ ಫಲವತಿಯಾದಪೆನಿಲ್ಲೆಂದು ಲತಾಲಿತಾಂಗಿ ಬಾಡಿ ಪಾಡಟ್ಟಿದೆಂಗುಂ (ಸುಕುಮಾ. ೯-೯೬); ಪರಪುಷ್ಪ ವತಿಲತೆ ಬಾಗಿ ತಬ್ಬಿದಳೆಂದು ವಿಂದೆದ್ದು ವಿಮಲವಾರಿಯನು ಮತ್ತೆ ಸೋಂಕುವಳೆಂದು ಅಂಜಿ ಮಾರುತನಿಂದು ಮೆಲ್ಲಮೆಲ್ಲನೆ ಬರುತಿಹನು (ರಾಜಾಶೇ. ೯೭-೬೨). [ಸಂ. ಪುಷ್ಪವತೀ]

**ಪುಷ್ಪವರ್ಷ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ : ಜಯನಿನದಂ ಸುರದುಂದುಭಿಧ್ವನಿನಮಂ ಪುಷ್ಪವರ್ಷಮೊರ್ಮೆಯೆ · ಸಕಲೋರ್ವಿಯು ನೆಯ್ದೆ ವರ್ಷತಿರೆ ಚಿತ್ರಯು ಸುಯಾತಲಗ ಪೋದುದಮರಸಮಾಜಂ (ಆದಿಪು. ೧೯-೧೯೭); ಕರಂ ಸೊಗಯಿಪನ್ನೆಗಮಾಗಳೆ ತೋಱ ತನ್ನ ರೂಪಂ ಕಱದಂ ಬಟ್ಟಿಳ್ಕೆವಿದಬ್ಬರ ಹರ್ಷದೆ ಪುಷ್ಪವರ್ಷಮಂ (ಚಂದ್ರಪು. ೩-೯೧). [ಸಂ.]

**ಪುಷ್ಪವಸೆ** (ನಾ). ಹೂವಿನ ಹಾಸುಗೆ; ಪುಷ್ಪಶಯ್ಯೆ : ಕೆಲವೆಡೆಗೆ ಕೆಂದಳಿರ ಹಸೆಗಳು ಕೆಲವು ಕೆಲವೆಡೆ ಪುಷ್ಪವಸೆಗಳು (ಭಾರಿಲಾ. ೧೧-೨೨). [ಪುಷ್ಪ + ಪಸ್ಸೆ]

**ಪುಷ್ಪವಾಟ** (ನಾ). ಹೂವಿನ ತೋಟ ; ಹೂದೋಟ : ಇಕ್ಷು ಪುಷ್ಪ ವಾಟಂಗಳನಾವ ಮಂಡಲಮುಮಂ ಗೆಲೆವಂದುದು ಮೆಗಿಮೆಂಡಲಂ (ಅಜಿತ. ೦-೨೦); ಪುಷ್ಪವಾಟದಿನಗಲ್ದಬ್ಜಾಕರಕ್ಕಾಗಿ ಪೊರ್ದುವ ಮತ್ತ ಪ್ರಮರಾಳಿ . . . ಎತ್ತಲುಂ ಸೊಗಯಿಸಲು ಚಂಪಾಪುರೋಪಾಂತದೊಳ್ (ಸುಕುಮಾ. ೪-೯೩). [ಸಂ.]

**ಪುಷ್ಪವಾಟಿ** (ನಾ). = ಪುಷ್ಪವಾಟ : "ಹೂವಿನ ತೋಂಟವಂ ಪುಷ್ಪ ವಾಟಿಯೆಂಬುದು" (ಶಬ್ದಮು. ೩೩-೬೦); ಅಗಳಂ ಮುಸುಕಿ ನಿಂದಳಿ ಮಾಲೆಯ ಗೀತನಿಸ್ವನಾಭೋಗದೆ ಪುಷ್ಪವಾಟಿ ಬಗೆಗೊಳ್ವುದನಂಗನ ಗೀತಶಾಲೆವೋಲ್ (ಜಗ. ೯-೯೩); ಅಲರ್ಗಣೆ ಪುಷ್ಪವಾಟಿಕಾಲದೊಳ್ ಬಳೆದಿಪ್ಪ ವಿಮಾನಕೇತುಗಳ್ ಜಲರುಹಷಂಡದೊಳ್ ಮೆಱೆವುತಿರ್ದಪುವು (ಅಸಂಪು. ೩-೮). [ಸಂ. ಪುಷ್ಪವಾಟೀ]

**ಪುಷ್ಪವಾಟಕ** (ನಾ). = ಪುಷ್ಪವಾಟ : ಲಿಂಗಂಗಳಿಗೆ ಕೂರ್ತು ತಂದು ಪೂಜಿಪ ಪುಷ್ಪವಾಟಕವೃಂದಮುಂ ಲಿಂಗಂಗಳಿಗೆ ನಯಮೊಂದಿ ಧೂಪದ ನೀವ ಗುಗ್ಗುಳತರುಸಮುಚ್ಚಯಮುಂ (ಬಸಪು. ೦೯-೬೦). [ಸಂ. ಪುಷ್ಪವಾಟಕಾ]

**ಪುಷ್ಪವಾಟಿಕೆ** (ನಾ). = ಪುಷ್ಪವಾಟ : ಪುಷ್ಪವಾಟಿಕೆಗಳು ಮುರುಟಿದವು ಪಶುಗಳಳಿದುವು (ಬಸಪು. ೩೬-೯೮); ಪೂಗಳಿಂದ ತಮ್ಮವಯವ ಸೌಂದರ್ಯವಂ ವಿಟರಿಗೆ ತೋರಿಸುವಂತೆ ಮಾರುವ ಮಾಲೆಕಾರನ ಬಾಲೆಯರಿಂ ಮನೋಹರಮಾದ ಪುಷ್ಪವಾಟಿಕೆಗಳಿಂ (ಶಾಗಂಧಿ. ೩-೦); ತುಂಬಿಗಳು ಪುಷ್ಪವಾಟಿಕೆಯು ಬಳಿ ಹಾಡುತ್ತಿವೆ (ಶಾಕಶ್ರ. ೬). [ಸಂ. ಪುಷ್ಪವಾಟಿಕಾ]

**ಪುಷ್ಪವಾಸ** (ನಾ). ಹೂವಿನ ವಾಸನೆ ; ಪುಷ್ಪಗಂಧ : ಸುಕುಮಾರಂ . . . ಪುಷ್ಪವಾಸದಕ್ಕಿಯು ಕೂಳನಲ್ಲದೆ ಮತ್ತಿನಾಹಾರಮನುಂತಱಯಂ (ಜೀವಸಂ. ೦೦೬-೩೩ ವ). [ಸಂ.]

**ಪುಷ್ಪವೃಷ್ಟಿ** (ನಾ). =ಪುಷ್ಪವರ್ಷ : ಆ ರಾಜಭವನದೊಳ್ ವಸುಧಾರೆಯು ತಣ್ಣೆಲರ ಪುಷ್ಪವೃಷ್ಟಿಯು ಸುರಭೇರೀರವದ ಪೊಗಟ್ಟ ದೇವರಹೋರಭಸದ ಪುದುವಿನಾಯ್ತು ಪಂಚಾಶ್ಚರ್ಯಂ (ಪುಶ್ಯಪು. ೦೯-೦೦); ಅಂತರಿಕ್ಷದಲ್ಲಿ ಅಮರರು ನೋಡಿ ಆಗ ಪುಷ್ಪವೃಷ್ಟಿಯನ್ನೆ ಕಱಯಲು (ಪುರಂತ. ೯-೬-೬); ಆಕಾಶದಲ್ಲಿ ದೇವತೆಗಳೂ ಋಷಿಗಳೂ ಅಪ್ಸರೆಯರೂ ಪುಷ್ಪವೃಷ್ಟಿ ಕರೆದು ಇವನು "ಭೀಷ್ಮ!" ಎಂದು ಹೊಗಳಿದರು (ಪಕಥಾ. ೯). [ಸಂ.]

**ಪುಷ್ಪಶಯನ** (ನಾ). ಹೂವಿನ ಹಾಸುಗೆ : ಇದು ತಾನಾಕೆ ಪೊರಳ್ದ ಪುಷ್ಪಶಯನಂ . . . ಇದು ಹಸ್ತಾಬ್ಜದೆ ಜಾರಿದಾಕೆಯ ಮೃಣಾಳೀ ಕಂಕಣಂ (ಶಾಕುಂತ. ೯೩. ೬೬). [ಸಂ.]

**ಪುಷ್ಪಶಯ್ಯೆ** (ನಾ). = ಪುಷ್ಪಶಯನ : ಜನತಾಸೇವೆಯೆಂದರೆ ಪುಷ್ಪ ಶಯ್ಯೆಯಲ್ಲ, ಮುಳ್ಳಿನ ಹಾಸಿಗೆ (ಜಕಸ. ೦೦೦). [ಸಂ. ಪುಷ್ಪಶಯ್ಯಾ]

**ಪುಷ್ಪಶರ** (ನಾ). ೧. (ಮನ್ಮಥನ) ಹೂವಿನ ಬಾಣ : ಪುಷ್ಪಶರತೀವ್ರತೆ ಯೆಂತು ರವಿಪ್ರತಾಪಮೆಂತೆಳಗುಳದಂಗನೀಳರುಚಿಯೆಂತು ನಿಜಂ ತನಗಂತು ಸದ್ಗುಣಾವಳಿ ಸಹಜಾತಂ (ಶಾಂತಿಪು. ೬-೦೦೯). ೨. ಮನ್ಮಥ ; ಕಾಮ : ಜಿತಕಾಮರ್ ಮರುಳಾದರ್ ಪುಷ್ಪಶರನ ಪಡೆ ನಡೆವಾಗಳ್ (ಗಂಕ. ೮-೮). [ಸಂ.]

**ಪುಷ್ಪಸಮಯ** (ನಾ). ೧. ಹೂವು ಬಿಡುವ ಕಾಲ ; ವಸಂತಮಾಸ : "ವಸಂತಃ, ಪುಷ್ಪಸಮಯಃ, ಸುರಭಿಃ—೩ ವಸಂತಋತುವಿನ ಹೆಸರುಗಳು" (ಸಿದ್ಧಂಶಿ. ೯೦). ೨. ಮುಟ್ಟಾಗುವ ಕಾಲ; ಋತು ವಾಗುವ ಸಮಯ : ಮೂಡಿದ ಮೊಡವಿ ಮುಗುಳ್ಮೊಗವೀಡಿ ಅವುನ್ಮಂಜರೀಸ್ತನಂ ತೋಳ್ಕೊದಲೊಳ್ ಶೀಡುವ ನಱುಗಂಪೇಂ ಓಸು ಣಾಡಿದುದೋ ಸತಿಗೆ ಪುಷ್ಪಸಮಯೋದಯಮಂ (ಪುಶ್ಯಪು. ೩-೦೦೩). [ಸಂ.]

**ಪುಷ್ಪಸಾಯಕ** (ನಾ). ೧. (ಮನ್ಮಥನ) ಹೂವಿನ ಬಾಣ : ಪುರಂದರಾದಿಗಸ ಸಿಡಿಲ್ದುಗುತಂದುವು ಪುಷ್ಪಸಾಯಕಂಗಳ ಪೊಗವಗಟ್ಟು ಚಂದ್ರಿಕೆಯು ಬಿಟ್ಟು . . . ಎಂಬ ವಾರಿಧರವಾರಣವೇಣುವರಾಹಮೌಕ್ತಿಕಂ (ಜಗ. ೦೩-೨೮). ೨. ಕಾಮ ; ಮನ್ಮಥ : ಬಿಲ್ ಪುರ್ವು ಬಾಣಂ ನಿಜಾಕ್ಷಿ ವನಕ್ರೀಡೆಗೆ ಪುಷ್ಪಸಾಯಕನಿಭಂ ತನ್ನಾಯಕಂ ಸಿಲ್ಕುದಂ (ಶಾಂತಿಪು. ೮-೦೦); ಇಂದುಪಯೋಜಜಂಗೆ ಕೃತಕೃತ್ಯತೆ ಸಾರ್ದುದು ಪುಷ್ಪಸಾಯಕಂಗಿಂದೊಳ

ಸೋಮರ್ದೇಸುವೆಸಂ . . . ಎಂದು ನೋಡಿದರ್ (ತಂತ್ರಕು. ೬-೬೯): ಪುಷ್ಪಸಾಯಕ ಜಗದೇಕವೀರನ ಮದಂಗಿಡೆ ಮರ್ದಿಸಿದ ಪ್ರತರ್ಕ್ಯನೊಳ್ . . . ಎಚ್ಚು ಗೆಲ್ವ ಬಗೆಯೂತೆನಿದೆನ್ನಯ ಮೋಹಮೆಂತಟೋ (ಕಂಕಂ. ೯-೦೨೬). [ಸಂ.]

**ಪುಷ್ಪಸ್ರಜ** (ನಾ). ಹೂವಿನ ಮಾಲೆ: ಅನಲ್ಪಕಲ್ಪಲತಿಕಾಪುಷ್ಪಸ್ರಜಾ ಮೋದಂ . . . ಸೌಗಂಧ್ಯಮೇದೀಕೃತಭ್ರಮರಂ ತೆಕ್ಕನೆ ತೀವೆ ಗಂಧ ಮಯಮಾಯ್ತೆಂದಾ ಮಹಾಮಂಡಪಂ (ಪುಶ್ಪಕು. ೦೦-೯೦). [ಸಂ. ಪುಷ್ಪಸ್ರಜ್]

**ಪುಷ್ಪಹೀನೆ** (ನಾ). ಮುಟ್ಟು ನಿಂತು ಹೋದವಳು; ಮಕ್ಕಳಾಗುವ ವಯಸ್ಸನ್ನು ಮೀರಿದವಳು: "ಪುಷ್ಪಹೀನಾ, ನಿಷ್ಫಲಾ – ಈ ೨ ಮುಟ್ಟವೆ ಪಟ್ಟಾವಳ್" (ಕಠಾಯು. ೬೦-೬೬೬). [ಸಂ. ಪುಷ್ಪಹೀನಾ]

**ಪುಷ್ಪಾಂಜನ** (ನಾ). ಹಿತ್ತಾಳೆಯ ಭಸ್ಮದಿಂದ ತಯಾರಿಸಿದ ಒಂದು ಬಗೆಯ ನೇತ್ರಾಂಜನ,–ಕಣ್ಣಿಗೆ ಲೇಪಿಸುವ ಕಾಡಿಗೆ: "ಪುಷ್ಪಕೇತು– ಪುಷ್ಪಾಂಜನ" (೬೩೦. ೦೦೦). 'ಕುಸುಮಾಂಜನ' ಪರಾ. [ಸಂ.]

**ಪುಷ್ಪಾಂಜಲಿ, ಪುಷ್ಪಾಂಜಳಿ** (ನಾ). ೧. ಬೊಗಸೆಯ ತುಂಬ ಇರುವ ಹೂವು. ೨. ಬೊಗಸೆಯಲ್ಲಿ ಹೂವುಗಳನ್ನು ತಂದು ಅರ್ಪಿಸುವಿಕೆ; ೩ ನೃತ್ಯ, ನಾಟಕಪ್ರಯೋಗಗಳ ಆರಂಭದಲ್ಲಿ ರಂಗಪೂಜೆಯ ಅಂಗವಾಗಿ, ರಂಗಭೂಮಿಯ ಎಲ್ಲ ಭಾಗಗಳಿಗೂ ಬೊಗಸೆಯಿಂದ ಹೂವುಗಳನ್ನು ಚೆಲ್ಲುವ ಪರಿಪಾಟಿಯು 'ಪುಷ್ಪಾಂಜಲಿ' ಯೆನಿಸಿ ಕೊಂಡಿದೆ: ಕಂತು ಪುಷ್ಪಾಂಜಲಿಯಂ ಸೂಸಿದ ಪದದೊಳ್ ಸಘಿಸು ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ (ಅಂಶು. ೬-೩೦); ಬಸವ ರಾಜಂ ನಲಿದು ಪುಷ್ಪಾಂಜಲಿಯನೀಯೆ (ಬಸವ. ೬-೯೨೦); ನಾಟ್ಯಕಾರರು ಪುಷ್ಪಾಂಜಲಿಯೊಡನೆ ಪ್ರಾರಂಭಿಸುತ್ತಾರೆ (ಕಾರತ. ೩೩೬). ಪುಷ್ಪಾಂಜಳಿ: ೨. ನಾಟ್ಯಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕೆದಱೆ (ಶಾಂತಿಪು. ೦೦-೬೦ ವ); ಸುರದ್ರುಮಪುಷ್ಪಪ್ರಕರದೆ ರಂಗಮುಖದೊಳ್ ಮಾಡಿ ಮುಂದೆ ಪುಷ್ಪಾಂಜಳಿಯಂ (ಅಜಿತ. ೩ ೩೦): ಇದು ಸಾಧ್ಯತಾಂಡವಾರಂಭದೊಳೀಶ್ವರಬಾಹುನರ್ತನಕ್ಷೇಪದೊಳಿಕ್ಕಿದ ಪುಷ್ಪಾಂಜಳಿಯೆನಲೇನುದಯಿಸಿದುದೊ ಗಗನದೊಳಗೆ ತಾರಾನಿಕರಂ (ಕೃತ್ಯಪು. ೩-೦೦೨). [ಸಂ.]

**ಪುಷ್ಪಾಂಜಳಿ** 'ಪುಷ್ಪಾಂಜಲಿ' ನೋ.

**ಪುಷ್ಪಾಂಜುಲಿ, ಪುಷ್ಪಾಂಜುಳಿ** (ನಾ). ೧. = ಪುಷ್ಪಾಂಜಲಿ ೧: ಒಲವು ಮಿಗೆ ಲಲಿತಾರ್ಘ್ಯಪುಷ್ಪಾಂಜುಲಿ[ಪಾಠಾಂ. ಳಿ]ಯನರ್ಪಿಸಿ (ಶಿಸಪು. ೬೦-೬೦). ೨. = ಪುಷ್ಪಾಂಜಲಿ ೨: ಒಲವಿನಿಂದಾ ಮೆಲ್ಲಡಿಗಳಂ ತೊಳೆದು ಪುಷ್ಪಾಂಜುಲಿ[ಪಾಠಾಂ.ಳಿ]ಗಳಂ ಕೈಗೊಳಿಸಿ (ಶಿಸಪು. ೩೨-೪೦); ಪುಷ್ಪಾಂಜುಳಿ: ೨. ಎಡೆಬಿಡದ ಪುಷ್ಪಾಂಜುಳಿಗಳಿ ಅಗ ಮಳೆಯಾಗೆ (ರಾಶಶ. ೯-೯). [< ಪುಷ್ಪಾಂಜಲಿ]

**ಪುಷ್ಪಾಂಜುಳಿ** 'ಪುಷ್ಪಾಂಜುಲಿ' ನೋ.

**ಪುಷ್ಪಾಪಚಯ** (ನಾ). ಗಿಡಬಳ್ಳಿಗಳಿಂದ ಹೂವುಗಳನ್ನು ಬಿಡಿಸುವುದು,–ಕಿತ್ತುವುದು: ಮಹೀಪತಿ ವನವಿಹಾರದೊಳಿರೆ ತದೀಯಾಂತಃಪುರಾವರೋಧಜನಂ ಪುಷ್ಪಾಪಚಯಾಸಕ್ತಿಯಿಂ ವನಮಂ ತೊಳಲುತ್ತುಂ(ಶಾಂತಿಪು. ೯-೬೬ ವ); ಅಂತು ನಿರ್ವರ್ತಿತ ಪುಷ್ಪಾಪಚಯವಿನೋದ ರುಮಾಗಿ (ಜಗ. ೦೯-೯೯ವ). [ಪುಷ್ಪ+ಅಪಚಯ]

**ಪುಷ್ಪಾಯುಧ** (ನಾ). ಹೂವಿನ ಬಾಣಗಳನ್ನುಳ್ಳವನು; ಕಾಮ; ಮನ್ಮಥ: "ಮನಸಿಜಂ ಮನ್ಮಥಂ ಕಂದರ್ಪನಂಗಜಂ . . . ದರ್ಪಕಂ ಪುಷ್ಪಾಯುಧಂ" (ಮಾಗಸ. ೬-೨೨); ಪುಷ್ಪಾಯುಧನ ಕೋದ ಕಿಂಕಿಣಿಗಳಂ ಪೋಲ್ವ ಪುಗೊಳದೊಳ್ ಸಾಜನ್ಯಕಂದಾಂಕುರನುಮಪ್ಪ ಪಜಾಪ್ರಿಯಯಾಧು . . . ಜಳಕ್ರೀಡಾವಿನೋದದೊಳಿರೆ (ಶಾಂತಿಪು. ೯-೯೬ ವ); ಅಂಗಜಾಗೀ ತ್ರಿಜಗಮುಮಿದಿರಿಲ್ಲೆಂಬಿನಂ ಪೂವಿನಂಬಂ ತಿರುವಾಯೊಳ್ಪೂಡಿ ಪುಷ್ಪಾಯುಧನಿರೆ ಕೆಲದೊಳ್ ಲೀಲೆಯಿಂ ಬಾಲೆಯಿರ್ಪಳ್ (ಚಗಪ. ೦೦-೦೬); ನೋಡಾ ನೋಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತವೋ . . . ಎಂಬ ಸಂಪದಮುಂ ಬೀಱುದುದಿಂದ್ರದಿಗ್ವಿಪರದೊಳ್ ಚಂದ್ರದ್ಯುತಿ ಪ್ರಾಭವಂ (ಗಿಳಿ. ೯-೯೯). [ಸಂ.]

**ಪುಷ್ಪಾಯುಧಕೇಳಿ** (ನಾ). ಕಾಮಕೇಳಿ; ಸಂಭೋಗ: ಮತ್ತೀಯಸಿ ಯಿಂಪುವೆತ್ತ ತಾಟಿಯಂ ದಯೆಯಿಂದವೆ ಪೀರ್ದಪಲ್ಲೆ ಪುಷ್ಪಾಯುಧ ಕೇಳಿಯೊಳ್ (ಶ.ಕುಂ.ಕ. ೯೦-೦೩೦). [ಸಂ. ಪುಷ್ಪಾಯುಧಕೇಲಿ]

**ಪುಷ್ಪಾಯುಧವೈರಿ** (ನಾ). ಕಾಮನ ಶತ್ರು; ಶಿವ: ಪೊಱಮಟ್ಟ ದಟಂ ನಡೆಗೊಂಡಲ್ಲಿ ಪುಷ್ಪಾಯುಧವೈರಿಯಂಘ್ರಿಗಳನಾಂತರ್ದೆಯೊಳ್ಳಗೆ ರಾಜಶೇಖರಂ (ರಾಜಶೇ. ೦೯-೯೩). [ಸಂ. ಪುಷ್ಪಾಯುಧವೈರಿನ್]

**ಪುಷ್ಪಾರ್ಘ್ಯ** (ನಾ). ಹೂವುಗಳ ಕಾಣಿಕೆ,–ಅರ್ಘ್ಯ: ಬಂದಿ ದಿಗ್ರೋರ್ಳ್ತಂಕಾಯ್ತು ಕಲ್ಪಕ್ಷಿತಿರುಹಜಹುಪುಷ್ಪಾರ್ಘ್ಯದಿಂದೆಂಬಿನಂ ಚೆಲ್ವಿದ ರ್ಗೋಡತ್ತಿಂವ್ರಶ್ಛಿಶೀಕ್ಕಶಿಶಯಮುಹುಮಂ ಬಾದೊಡಂದಾದಿದೇವಂ (ಅಜಿತ. ೬-೬೨). [ಸಂ.]

**ಪುಷ್ಪಾಸವ** (ನಾ). ಹೂವಿನ ರಸ; ಜೇನು; ಮಕರಂದ: ಕ್ಷೀರಸ್ಥ ಲವಂಗಚೂತಲವಲೀಪುಷ್ಪಾಸವಾಸ್ವಾದಿತಾಳಿಯುತೋನ್ನಾದೆಯು . . . ಸೀತೋದೆಯು ಪೋಲ್ವೆಗಿಲ್ಲ ತೊಱೆಗಳ್ ವಿಶ್ವಂಭರಾಭಾಗದೊಳ್ (ಅಜಿತ. ೦-೩೯); ಪುಷ್ಪಾಸವವನ್ನು ಳಿಉವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಕಾಕುಂಶ. ೯೦-೦೬). [ಸಂ.]

**ಪುಷ್ಪಾಸಾರ** (ನಾ). ಹೂಮಳೆ; ಪುಷ್ಪವೃಷ್ಟಿ: ನುತ ಪುಷ್ಪಾಸಾರ ಮುದ್ಯದ್ದಿವಿಜಜಯನಿನಾದಂ . . . ಚಾರುಸಿಂಹಾಸನಮನೆ ನೆಗಟ್ದೀ ಪ್ರಾತಿಹಾರ್ಯಾಷ್ಟಕಂ ವಿಶ್ರುತಮಪ್ಪಾಗಿರ್ಪಂ ಸುರೇಂದ್ರೋಪಕ್ಕತಮೆನಿಸಿ (ಸುಕುಮಾ. ೯-೩೦). [ಸಂ.]

**ಪುಷ್ಪಾಸ್ತ್ರ** (ನಾ). ೧. (ಕಾಮನ) ಹೂವಿನ ಬಾಣ: ಇದು ನಿನ್ನರ್ಚಿಸು ವಿಕ್ಷುಚಾಪಮಿದು ನಿನ್ನೀ ಲೋಕಮಂ ಕೈಗೆ ಮಾಡಿದ ಪುಷ್ಪಾಸ್ತ್ರಂ (ಅಜಿತ. ೦೦-೦೬). ೨. ಕಾಮ; ಮನ್ಮಥ. [ಸಂ.]

**ಪುಷ್ಪಿಣಿ** (ನಾ). ೧. ಹೂವು ಬಿಟ್ಟುದು; ಹೂತುದು. ೨. ಮುಟ್ಟಾದವಳು; ಋತುಮತಿ: "ಪುಷ್ಪಿಣೀ–ರಜಸ್ವಲ" (ಕಾಶ್ಯ. ೦೬೩). ೧, ೨: ಅವಗಂ ಪುಷ್ಪಿಣಿಯರಾಗಿರ್ದರಿಲ್ಲಿಯ ಲತಾವಧುಗಳಿವರ ಸೋಂಕಲೆ ಬಾರದೆಂದು ರಾಜೀವಮಿತ್ರಂ ತನ್ನ ನಿರ್ಮಲಕರಂಗಳಿಂ ಪೆಱ ದೆಗೆದಂ (ಕೈ.ಬಿಜಾ. ೩-೨೩). [ಸಂ. ಪುಷ್ಪಿಣೀ]

**ಪುಷ್ಪಿತ** (ಗು). ೧. ಹೂವು ಬಿಟ್ಟ; ಹೂವರಳಿದ: ಏರಿದನು ಸೌಮಿತ್ರಿ . . . ವಿರಳ ವರ್ಣದ್ರುಮದ ಪುಷ್ಪಿತಶರೀರದಾ ಸ್ವರ್ಗಚುಂಬಿತಸಾಲಮುನ್ನತ ಶಿರದ ಕರದ ಗೋಪುರಕೆ (ಶ್ರೀರಾಮಾ. ೦೩೬-೦೯೬). (ನಾ). ೨. ಹೂವು ಬಿಟ್ಟುದು; ಹೂತುದು: ಒದೆದಶೋಕೆಯು ಬಕುಳವಂ ಮುಕ್ಕುಳಿಸಿ ಮುದ್ಯದಿಂದೆ . . . ಪುಷ್ಪಿತಂ ಮಾಡಿ ತೋಱಿದರಂಬುಜಾಕ್ಷಿಯರ್ (ಕೈ.ಬಿಜಾ. ೮-೦೬). [ಸಂ.]

**ಪುಷ್ಪಿತಾಗ್ರ** (ನಾ). [ಛಂದ] ಅರ್ಧಸಮವಾದ ಅಕ್ಷರವೃತ್ತಗಳಲ್ಲಿ ಒಂದು: ಪುಷ್ಪಿತಾಗ್ರ,–ಇದರ ವಿಷಮಪಾದಗಳಲ್ಲಿ ನನರಯ ಗಣಗಳೂ ಸಮಪಾದಗಳಲ್ಲಿ ನಜಜರ ಗಣಗಳೂ ಒಂದು ಗುರುವೂ ಬರುವುವು (ಕೈ.ಬಿಜಾ. ೯೯). [ಸಂ. ಪುಷ್ಪಿತಾಗ್ರಾ]

**ಪುಷ್ಪಿತೆ** (ನಾ). =ಪುಷ್ಪಿಣಿ ೨: "ತುಱುಬಿಂದಿಯೆಂದು ಪುಷ್ಪಿತಯಾದ ಕಾಂತೆ" (ಕಠಾಯು. ೬೨-೬೬೨); ಮೈನೆರೆಯದೆ ಬಹುಕಾಲ ಕಳೆದ ಸ್ತ್ರೀಯು ಈ

ಚೂರ್ಣವಂ ಸೇವಿಸೆ ಪುಷ್ಪಿತೆಯಃಹಳು (ಸಳವ್ಯ. ೧೯೭). [ಸಂ. ಪುಷ್ಪಿತಾ]

**ಪುಷ್ಪಿಸು** (ಕ್ರಿ). ಹೂವು ಬಿಡು; ಪುಷ್ಪಿತವಾಗು : ಅಲಕ್ತಕರಂಜಿತವಾದ ಚರಣಸ್ಪರ್ಶದ ಮಹಿಮೆಯಿಂದ ಪುಷ್ಪಿಸಿ ಸರ್ವದಾ ಪರಿಮಳಯುಕ್ತ ವಾಗಿರುವುದಾಯಿತು (ಶಾಗಂ. ೨೬೨-೦೭); ಪುಷ್ಪಿಸಿದ, ಮರಗಳ ಮಧ್ಯದಲ್ಲಿ ಪರಾವಸುವಿನ ಹೆಂಡತಿ ತನಿಯಾಗಿ ನಡೆಯುತ್ತಾ ಇದ್ದಳು (ಬ್ರಾಶಚಿ. ೦೭೦). [ಪುಷ್ಪ + –ಇಸು₁]

**ಪುಷ್ಪೇಷು** (ನಾ). ೧. (ಕಾಮನ) ಹೂವಿನ ಬಾಣ : ಇವು ಕಂದರ್ಪಂಗೆ ದೋರ್ದರ್ಪವಂ . . . ಅಡಿಸಿಸುಗುಂ ತಮ್ಮ ಪುಷ್ಪೇಷುವಿಂ ತಮ್ಮ ವಿಕಾಸೋಲ್ಲಾಸದಿಂ ತಮ್ಮ ಕಿಪರಿಮಳದಿಂ ತಮ್ಮ ಚೆಲ್ವಿಂದೆನಲ್ ಜಾತಿವನೇ ಜಾತಪ್ರಸೂನಾವಳಿಯನಿಟಿಸಿ ಸಂಪತ್ತುವೆತ್ತಿರ್ದುದೆತ್ತಂ (ಜಗಂ. ೯-೬೩). ೨. ಕಾಮ; ಮನ್ಮಥ : ಅದೆ ಕಂದರ್ಪಂಗೆ ದೋರ್ದರ್ಪದ ಮೊದಲದೆ ಪುಷ್ಪೇಷುಗೀ ಲೋಕಮಂ ಗೆಲ್ವದಚೆಂದತ್ತಿರ್ಪ ಚೈತ್ರಧ್ವಜು (ಅಶಪು. ೨-೯೬). [ ಸಂ. ]

**ಪುಷ್ಯ** (ನಾ). ೧. ಹೂವು; ಪುಷ್ಪ. ೨. ಪುಷ್ಯರಾಗವೆಂಬ ರತ್ನ. ೩. ಚಾಂದ್ರಮಾನತಿಂಗಳುಗಳಲ್ಲಿ ಹತ್ತನೆಯದು : ಅವುರ್ದಿರೆ ಪುಷ್ಯ ಪೂರ್ಣಿಮೆಯೊಳಂ ನಯವಂಂತಶಿಶುದ್ಧವಪ್ಪ ಕುಂಕುಮವುಮನ ಪೂರ್ವಮಪ್ಪ ಫಲವಂ . . . ಪಿಡಿದಿರ್ದು ಮಾಜಿಲಾ ಕ್ರಮದೊಳಗಕ್ಕು ಮಾಂಜಿನೆಯ ತಿಂಗಳೊಳಯ್ದುಡಿಲಾಭಮುತ್ತಮಂ (ಅಭ್ನಪು. ೬-೯೦); ಆ ಮಾಸವೇ ಚೈತ್ರ ವೈಶಾಖ . . . ಪುಷ್ಯ ಮಾಘ ಫಾಲ್ಗುಣವೆಂದು ಹನ್ನೆರಡು ತೆಜಿನಾಗಿಹುದು (ಶಿವೀಳ. ೩೨೦); ಪುಷ್ಯಪ್ರಘಾತದೊಳ್ ಕ್ರೌಂಚ ಪಕ್ಷಿಯ ಪಂಕ್ತಿ ನೆರೆದು . . . ದನಿಸಂತೆಗ್ಯೆವಂತೆವೋಲ್ ! (ಶ್ರೀರಾಮಪ. ೧೦. ೩೫೯). ೪. ಪೂಜೆ ; ಅರ್ಚನೆ. ೫. ಬೆಲೆ; ಕ್ರಯ. ೬. ಶೂನ್ಯ; ಅಮಂಗಳ : "ಬೆಲೆ ಶೂನ್ಯ ಮಾಸ ತಾರೆ ಕಲು ಪೂಜೆಯುಮಾಜು ಪುಷ್ಯ ಶಬ್ದಮದಕ್ಕುಂ" (ನಾನಾಕಂ. ೦೫೨); "ಶಿಳೆಯುಂ ತಾರಗೆ ಮಾಸಭೇದ ಬೆಲೆಶೂನ್ಯಂ ಪುಷ್ಯಮಕ್ಕುಂ" (ನಾನಾರ. ೦೩೦). ೭. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಎಂಟನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : "ಪುಷ್ಯಂ ತಿಷ್ಯಮೆಂದೆನಿಕ್ಕುಂ" (ಮಂಗರಾ. ೦೨-೬); ಪುಷ್ಯ ಆಂಗೀರಸ ತಿಷ್ಯಂ ವಾಚಸ್ಪತಿ ಬೃಹಸ್ಪತಿ—ಈ ೫ ಪುಷ್ಯನಕ್ಷತ್ರಕೆ ಹೆಸರು (ಚಾಸ್ಯರ. ೬೨-೦); ಪುಷ್ಯ ಪುಸಿಯದ ಹಾಳೆ (ಗಾದೆ). [ ಸಂ. ]

**ಪುಷ್ಯಮಾಸ** (ನಾ). ೧.= ಪುಷ್ಯ ೩: "ಪುಷ್ಯಮಾಸಮಂ ಸಹಸ್ಯಮೆಂಬುದು" (ಶಬ್ದಾಭು. ೦೯-೦೦೬). ೨. ಮಂಗಳಕಾರ್ಯಗಳು ನಡೆಯದ ತಿಂಗಳು; ಶೂನ್ಯಮಾಸ : ಪುಷ್ಯಮಾಸವೆಂದರ ಶೂನ್ಯಮಾಸ. ಮಂಗಳಕಾರ್ಯ ಗಳಿಗೆ ಪ್ರಶಸ್ತವಲ್ಲದ ತಿಂಗಳು (ರೂಢಿ). [ ಸಂ. ]

**ಪುಷ್ಯಮಿ** (ನಾ). ೧.= ಪುಷ್ಯ ೭ : ಆ ಖಗೋಳದಲ್ಲಿ ಅಶ್ವಿನಿ ಭರಣಿ ಕೃತ್ತಿಕಾ ರೋಹಿಣಿ ಮೃಗಶಿರಾ ಆರ್ದ್ರಾ ಪುನರ್ವಸು ಪುಷ್ಯಮಿ . . . ರೇವತಿ ಗಳೆಂಬಿಪ್ಪತ್ತೇಳು ತಾರೆಗಳು (ಶಿವೀಳ. ೨೫೬); ಕಟಕದ ದೇಹವೇ ನಮ್ಮ ಪುಷ್ಯಮಿನಕ್ಷತ್ರ (ವಚ್ಚಕ್ರ. ೬೩); (ಎಕಜ್ಞ. XV. ೩೦). 'ಪಾಡ್ಯಮಿ' ಪರಾ. [< ಪುಷ್ಯ ]

**ಪುಷ್ಯರಾಗ** (ನಾ). ೧. ಹಳದಿಬಣ್ಣದ ಒಂದು ಬಗೆಯ ರತ್ನ : "ಪೀತಕಾಂತಮೆನೆ ಪುಷ್ಯರಾಗಂ" (ಮಂಗರಾ. ೩೦-೬); ವಜ್ರದ ಕಂಬ ವಿದ್ರುಮದ ತೊಲೆ ಪುಷ್ಯರಾಗವೊಪ್ಪುವ ಜಂತೆ ಮರಕತದ ಲೋವೆ ಮುತ್ತಿನ ಸೂಸಕ (ಹಕೀಣ. ೯-೬); ಸಲೆ ಪುಷ್ಯರಾಗದ ತೊಲೆಗಳೆಸೆವ ಮಾಣ ಕಂಗಳ ಲೋವೆ ಮುತ್ತುಗಳ ಸೂಸಕಂ . . . ರಂಜಿಸುತ ಚಾವಡಿಯ ಚೌರಸದೆಡೆಯೊಳು (ಕೃಶಿಂಹಾ. ೦೬-೨೩). ೨. ಒಂದು ಕುಲಪರ್ವತದ ಹೆಸರು : ಶಂಖಕೂಟ . . . ಪುಷ್ಯರಾಗ . . . ಶೈಲೇಂದ್ರವೆಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕ ಪರ್ವತಕ್ಕೆ ಬಡಗಣದಿಕ್ಕಿನಲ್ಲಿಹವು (ಶಿವೀಳ. ೨೦೬). [ ಸಂ. ]

**ಪುಸ್** (ನಾ). ಒಂದು ಅನುಕರಣ ಪದ : ಮಳೆ ಬಂದು ಪಟಾಕಿಗಳೆಲ್ಲ 'ಪುಸ್' ಎಂದುವು (ರೂಢಿ).

**ಪುಸಕಿ** (ನಾ). ಕೈಲಾಗದವನು ; ದುರ್ಬಲ : ಹೋಗೋ ಲೇ ಹೋಗೋ . . . ಕರೀ ಕುರೀ. ಹೆಣ್ಣಾ ಪುಸಕೀ. ಕೈಲಾಗದವನೇ ! (ಪಠಣಾ. I, ೩೨೩). [← ಮರಾ. ಪುಸಕಾ]

**ಪುಸಕ್ಕನೆ** (ಅ). ಕೂಡಲೆ ; ಒಮ್ಮೆಲೆ ; ಒಮ್ಮಿಂದೊಮ್ಮೆಲೆ : ನಿನ್ನಪ್ಪ ಮನೇಲೇ ಇರಬಹುದಾಗಿತ್ತು. ಪುಸಕ್ಕನೆ ತೌರುಮನೆಗೆ ಹೊರಟುಹೋದರು (ಕಂಕಕಾ. ೯೧). [ಪುಸಕ್₀ + – ಅನೆ₁]

**ಪುಸಲತ್ತು**, ಪುಸಲತ್ತು (ನಾ). ೧. (ಉಕ) ಸಲಿಗೆ ; ಸದರ. ೨. ಬೆಂಬಲ ; ನೆರವು ; ಪ್ರೋತ್ಸಾಹ : ನಿನ್ನ ಪುಸಲತ್ತಿನಿಂದಲೇ ಈ ನಿನ್ನ ಬಂಧುವು ನನಗೆ ಕಟಿಪೆಷ್ಟೆ ಮಾಡುತ್ತಿರುವನು (ತುಳಸೀ. ೯೭); ಅತ್ತೆಯವರು ತಾವಾಗಿ ಹೆಂಗ ಇರವಲ್ಲರ್ಯಾಕ. ನೀವೂ ಅಷ್ಟು ಪುಸಲತ್ತು ಕೊಟ್ಟು ನನ್ನ ಕರಿಭಾವಿ ಪಾಲಾಗೂ ಹಂಗ ಮಾಡಬ್ಯಾಡಿರಿ (ಗಂಡಾಡು. ೦೩೩). **ಪುಸಲತ್ತು**: ೨. ಅಣೆಗೆ ನಿಮ್ಮ ಗೆಳತಿಯರ ಪುಸಲತ್ತು ಬಹಳ ಅದ (ಚಾಕ್ತಗ. ೬೮); ಗಂಡನ ಪುಸಲತ್ತು ಇದೆ. ಅದಕ್ಕೆಂತರೇ ಪಾರ್ವತಿ ಹೀಗೆ ಮಾಡುವಳು (ಬಿಬ್ಬಹೂ. ೬೦). [←ಹಿಂ. ಪುಸಲಾನಾ = ಸವಿಮಾತುಗಳಿಂದ ಮನವೊಲಿಸು]

**ಪುಸಲಾಯಿಸು** (ಕ್ರಿ). ೧. ಸವಿಮಾತುಗಳಿಂದ ಮನವೊಲಿಸು,- ಪ್ರೇರಿಸು : ನಾವು ಇದಕ್ಕೂ ಸೊಗಸಾದ ಮತ್ತೊಂದು ಊರಿಗೆ ಹೋಗೋಣವೆಂದು ಮೆಲ್ಲನೆ ಪುಸಲಾಯಿಸುವನು (ಛಾತ್ರ. ೬); ರಾಜಣ್ಣ ಗೋಗರೆಯುವ ದನಿಯಲ್ಲಿ ಪ್ರಮೀಳಳನ್ನು ಪುಸಲಾಯಿಸತೊಡಗಿದ (ಮರೆ. ೩೭). ೨. ಎತ್ತಿ ಹಾಕು ; ಕಳವು ಮಾಡು : ಮನೆಮಕ್ಕಳು ಅಟ್ಟದ ಮೇಲಣ ಡಬ್ಬದಿಂದ ಲಾಡುಗಳನ್ನು ಪುಸಲಾಯಿಸಲು ಸದ್ದಿಲ್ಲದೆ ಮೆಲ್ಲಮೆಲ್ಲನೆ ಹೆಜ್ಜೆ ಹಾಕಿ ಹೋಗುವಂತೆ, ನಾವಿಬ್ಬರೂ ಕ್ಲಬ್ಬಿಗೆ ಹೋಗಲು ಸದ್ದಿಲ್ಲದೆ ಹೆಜ್ಜೆಯನ್ನು ಹಾಕಲು ಪ್ರಾರಂಭಿಸಿದೆವು (ಪಠಣಾ. II, ೩೩೦). [ ಪುಸಲಾ₀ (ಗ ← ಹಿಂ. ಪುಸಲಾನಾ) + – ಇಸು₁]

**ಪುಸಲಾವಣೆ** (ನಾ). ಸವಿಮಾತುಗಳನ್ನಾಡಿ ವಶಪಡಿಸಿಕೊಳ್ಳುವಿಕೆ,— ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವಿಕೆ : ಅವರ ಪುಸಲಾವಣಿಗೆ ಮರುಳಾದವ ನಂತೆ ನಟಿಸಿ, ಅವರ ಮಾತನ್ನೆಲ್ಲಾ ಕೇಳಿ ನನಗೆ ವರದಿ ಮಾಡಬೇಕು (ಕೀಚಕ. ೦೦೦); ಇದೆಲ್ಲ ಎರಡನೆಯವರ ಪುಸಲಾವಣೆಯ ಫಲ (ಕ್ರೀಶತಾಕ್ರ. ೯೨); ಈ ಪುಸಲಾವಣೆಯ ವಿಷಯವನ್ನು ಇವರು ತಮ್ಮ ನಿಶೆಯ ಗುಂಗಿನಲ್ಲಿ ಸಾಹೇಬರನಿಗೆ ಹೇಳಿದರೆ ಎಲ್ಲ ದೋಷ ನಿಮ್ಮ ಮೇಲಲ್ಲವೇ ? (ಛಾಕಿ. ೬೦). [ಪುಸಲಾಯಿಸು + – ಅಣೆ./ಮರಾ. ಪುಸಲಾವಣೀ]

**ಪುಸಿ₁**, ಹುಸಿ₁ (ಕ್ರಿ). ೧. ಸುಳ್ಳಾಗು ; ನಿಷ್ಫಲವಾಗು ; ವ್ಯರ್ಥ ವಾಗು : ಪುಸಿಗುಮೆ ದೇವ ಮಂತ್ರಮಾಲೋಹಿಸಿಜಯ ಎಂದೀ ವಾಕ್ಯಂ (ಕಂಶಕಂ. ೨೦೦-೯); ಋಷಿಗಳಾಡಿದ ಮಾತು ಪುಸಿಯದು (ಕೃಬಿಶಾ. ೩೦-೩೬); ಶಿವನ ಬೆಸನದು ಪುಸಿವುದೇ (ಪಶುಮೋ. ೯-೩೩). ೨. ಕೊಟ್ಟ ಮಾತಿಗೆ ತಪ್ಪು ; ಕೈಕೊಂಡ ಪ್ರತಿಜ್ಞೆಯನ್ನು ಈಡೇರಿಸದಿರು ; ವಚನಭಂಗ ಮಾಡು : ಚಾಳುಕ್ಯವಂಶದೊಳೆಲ್ಲಿಯುಮಿನ್ನೆವರೆಗಂ ನುಡಿದು ಪುಸಿವುದುಂ ಅಡಿ ಅಳುಪುವುದುಂ . . . ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೭ ವ); ಬಿನ್ನಾಳಿ ವಾಸುದೇವ ಮೂಳಭದ್ರೋದ್ಭವನ್ ನುಡಿದು ಪುಸಿಯತ್ತೊರ್ದಟ್ಟು ಲಿಂಸಿಯುಂ ಮಹಾಸಮುದ್ರದನ್ನೆ ಮೇರೆದಪ್ಪಬ್ಬಲದಲ್ ಮಹೇಶ್ವರನನ್ನರ್ (ಎಳ. IV. ಹಗ್ಗ. ೦೬-೦೨ ; 1033) ; ವಂಚಕನಂ ನುಡಿದು ಪುಸಿವನಂ ಸಂಗರದೊಳ್ ಹಿಂಚುವನಂ ಪುಟುಗೊಂಡದ ಸಂಚದೊಳಕ್ಕಾವ ಕಾಲಮೇಟದ ತೆಜಿನಿಂ (ರಕಸು. ೩-೦೬). ೩. ಸುಳ್ಳು ಹೇಳು ; ಅಸತ್ಯವನ್ನು ನುಡಿ: ಪುಸಿಯುದುದು ಮೂಂಗನೆಗಾಟಸುದುದು ಕೊಲ್ಲದುದು

ತಡಿಗೀ ಪುಣಿಲಿನಾ ಪುಣಿನ್ಗಾ ಕೊಳನೊಳ್ (ಸುಕುಮಾ. ೪-೦೭೬). **ಪುೞಿಲ್** : ೨. ಶಿರಘಾಸುರತರತಾಳನಂದನದಲಂಪು ಪುೞಿಲ್ಗಳದರ್ಪು ಚಿಲ್ಕ ಬಿತ್ತರಿಸೆ . . . ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಕಜಕಂ. ೦-೩೪); ಮುಕುಳೀ ಕುಚಪುಂದ್ರತರಂಗಸಂಚಯಂ ಪಳಿ ಜಘನಂ ಪುೞಿಲ್ (ಚಂದ್ರಕಾ. ೩-೨೦). **ಪುೞಿಲು** : ೧. "ಪುೞಿಲೆನಲು ಮರಳು" (ಕರ್ಣಾ. ೦೨). ೨. ತದ್ವನಲಕ್ಷ್ಮಿಯ ಮುಂದೆ ಮಂಗಳಂಬಾಡುವ ತುಂಬಿ ಕೋಡುವ ಪುೞಿಲು ನಡೆದಾಡುವ ಹಂಸೆ ರಾಗದಿಂದಾಡುವ ಸೋಗೆ (ಶಾಸ. IX-i. ೨೬೭-೨೩; 1160); ಪುೞಿಲೆಡೆಯಿಂದ ಹಸಿಮುತ್ತಿಂಗ ಕೊಳನ ಪೊಗುವಂತೆ (ಅಪಂಕೆ. ೩-೮೪). [?./ಸಂ. ಪುಲಿನ]

**ಪುೞಿಲ್ಗಟ್ಟು** (ಕ್ರಿ). ಮರಳಿನ ಸಾಲಾಗು; ಮರಳಿನ ಕಟ್ಟೆಯುಂಟಾಗು: ಮೊದಲೊಳ್ ವಾಗ್ದೇವಿಯನೊಲಿಸಿದ ತಿಲಕಂ ತಾನಿದೆನಿಪ ತಿಲಕಂ ನಭಸ್ಸ ದಿನಸೆಯಲವು ಪುೞಿಲ್ಗಟ್ಟಿದ ಗಂಗೆಯ ಪೊನಲನನುಕರಿಸಿರ್ದಂ (ಕಾದಂಪೂ. ೬೩೦); ಕರ್ಪೂರದ ರಜದ ಜಗುಲಿಯೊಳ್ ಜಗುಟ್ಟಾ ಮಾಡಿಯ ಮುಂಗೊಳ್ಗೀ ಕಡೆಯಿಕ್ಕಿಯುಮಾದಡೆ ಕೆಲದೊಳ್ ಕೆಲಗೆ ಪುೞಿಲ್ಗಟ್ಟಿದ ಮುತ್ತಿನ ಪುಡಿಯ ನುಣ್ಪುಳಲೊಳ್ (ಲೀಲಾವ. ೦೦-೬೩ ವ). [ಪುೞಿಲ್$_2$+ಕಟ್ಟು$_1$]

**ಪುೞಿಲ್ದಾಣ** (ನಾ). ಉಪವನ; ನಂದನ: [ಊರೂರೊಳ್ ಪ]ರಿಪಕ್ವ ಶಾಳಿವನಮೂರೂರೊಳ್ ಪುೞಿಲ್ದಾಣಮೂರೂರೊಳ್ ಪತ್ತಿಬಿರ್ದ ಪೂಗೊಳಗಳೂರೂರೊಳ್ ಮಹೋದ್ಯಾನಂ . . . ಎನೆ ಪೇೞ್ವಾರ್ ಮೆಚ್ಚರಾ ದೇಶಮಂ (ಶಬ್ದಮ. ೧೧-೬). [ಪುೞಿಲ್$_1$+ತಾಣ]

**ಪುೞಿಲ್ದೊಱೆ** (ನಾ). (ಒಣಗಿ) ಮರಳಿನಿಂದ ತುಂಬಿದ ಹೊಳೆ: ಪೆರ್ದೊಱೆ ಕಾಲ್ದೊಱೆಯುಂ ಕಿಱುದೊಱೆ ಪುೞಿಲ್ದೊಱೆಯುಮಪ್ಪುವು ನಾಡುಂ ಕಾಡುಂ ಬೀಡುಂ ಸೂಡುಂ ಸೇರಿಪೋಯ್ತು (ಜಗನ್ನಾ. ೩೨-೦). [ಪುೞಿಲ್$_2$+ತೊಱೆ$_2$]

**ಪುೞಿಲ್ವಜ್ಜೆ** (ನಾ). ಮರಳಿನ ಮೇಲೆ ಮೂಡಿದ ಹೆಜ್ಜೆ: ದಾಯುಂ ಮೂಡಿರ್ದ ನೀರೊತ್ತಿಟ್ಟತರೆ ಕೊಡಿಗೆಲ್ಲಂ ಪುೞಿಲ್ವಜ್ಜೆ ಪೆಯ್ಯೊಡ್ಡಿಜಾರೆ ಸ್ವಪಾಳಂ ಪುಳಲ್ದಿಂಟೆಗಳಸೆಯೆ . . . ತಿಂದತ್ತಂದು ಸಿಂಧುಪ್ರತಾನಂ (ಶಗಂ. ೪-೬೨). [ಪುೞಿಲ್$_2$+ಪಜ್ಜೆ]

**ಪುೞಿವಾಳಬಾಟ್** (ನಾ). ಒಂದು ಊರಿನ ಹೆಸರು: ಶ್ರೀಮತು [ಪು]ೞಿವಾಳಬಾಟ ಗ್ರಾಮ (ಶಾಸ. IX-i. ೨೪-೦೯ ; 936). [ ? ]

**ಪುೞು, ಪುೞು, ಹುಳ, ಹುಳು, ಹುೞು** (ನಾ). ೧. ಕ್ರಿಮಿ; ಕೀಟ: "ಕೃಮಿಃ, ಕೀಟಃ, ಸಿ ಲಂಗುಃ, ಪುಲ್ಲಕಃ—ಈ ೪ ಪು[ಹು]ೞು" (ಶಬ್ದಮ. ೦೦೩-೦೪); ಇತ್ರೊದಾನಟ್ಟಿಪೊನ್ ಪಶ್ವಮಹಾಪಾತಕನೀಂ[ಕ್ಕಿಂ] ಪುಟಿನೆಯಾ ಸರಕದಾ ಪುೞು ಆಕು[ಕ್ಕಿ]ವರ್ (ಶಾಸ. X. ೬೦-೪ ; 678); ಬಾಗದೊಳ್ಪಿನಚ್ಚೊತ್ತಿದ ಪೊಣ್ಣು ಜಾಟ್ಟ ಪುೞುವಾಸನೆಂಬನ ಜಾಂಡಮಂಬುದೊಂದತ್ತಿಯ ಪಣ್ಣೊರ್ದ ಪುೞುವಲ್ಲದೆ ಪಾಸನೇ (ಕಂಕಪಾ. ೩-೬೩); ನೀರಂ ಸೋಧಿಪುದಿಂಬಾಗಾರ್ಕೃವುದು ಪುಳ್ಳಿ ಚರಟಿ ಯೊಳಗಣ ಪುೞುಮಂ ಸರ್ಕೃಸುವಲ್ಲಿ ದಯೆಯಿಂದಾರ್ಕೃವುದೆನಿಪ್ಪ ಮನೆಗಳಲ್ಲವೆ ತೀರ್ಥಂ (ಸಮು. ೬-೯೯). ೨. (ಅಲಂ) ಕ್ಷುದ್ರವಾದುದು: 'ಪುೞು ವಗೆ' ಪರಾ. **ಪುಳು** : ೧. ಬೇಕೆ ಪಶ್ವಾವುದೊಳ್ಪುಳುವಾಗಿ ನವೆಗುಂ (ಶಾಸ. VIII. ಶಗ. ೬೦-೮೮ ; 897); ಭೂರಿಭೂಜಂ ಪುಳು ಖಗಮೃಗ ವಾಗುತ್ತುಮೆಂತಕ್ಕೆ ಬಂದಂ ಸರಜನ್ಮಕ್ಕೆಯ್ಯ (ರಕ್ಷಾಕೆ. ೨); ಇಂದ್ರಗೋಪದ ಪುಳುವುದುರಿದುವು (ಸೋಮಶ. ೪-೩೬). ೩. ಕ್ಷುದ್ರವ್ಯಕ್ತಿ: ಕ್ಷುಲ್ಲಕನಾದ ಪನಂ: ದ್ರುಪದ ವಿರಾಟರೆಂಬೀ ಪು[ಹುಮಾ. ಹು]ಳುಗಳವರಂತೆಹೀಗೆಡ ದರು (ಕುಮಾವ್ಯಾ. ೨-೪೦). **ಹುಳ** : ೧. ಪೊನ್ನ ಹುಳವ ಕಂಡು ನರಿ ತನ್ನ ಬಾಲವ ಹುಣ್ಣ ಮಾಡಿಕೊಂಡರೆ ಹೋಲ ಬಹುದೆ (ಬಸವ. ೨೬೬); ಒಂದು ಹುಳವು ಕಾಣಿಸಿಕೊಳ್ಳಲು ಆ ರಾಮನು . . . ಈ ಹುಳವಾದರೂ ತಕ್ಷಣನಾಗಿ ಕಚ್ಚಲಿ' ಅನ್ನಲು (ಭ್ರಮೇಶ. ೬೬); ಒಂದು ಸಣ್ಣ ಹುಳವಾದರೂ ಈ ಮನೆಯ ಕರ್ತನಾದ ದೇವರಿಂದ ರಕ್ಷಿಸಲ್ಪಡದೇ ಇರುವುದಿಲ್ಲ (ಮುಂಬಯಿ. ೪-೩೪); ಅತ್ತೀಯ ಹಣ್ಣು ಅತಿ ಕೆಂಪು ಇದ್ದರು ಒಡೆದು ನೋಡಿದರ ಹುಳ ಭಾಳ (ಜಾಪ. ೦೨೪). **ಹುಳು** : ೧. ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಬಸವೇ. ೩. ೦೩-೦೬); ಜೇನ ಹುಟ್ಟಿನ ಹುಳುವ ಬಡಿದ ಸಗಾನಶನ ತಾನೇನು ಚೂಣಿಯ ಸೇನಾನೇನು ಸವಬಲಾಯಿತೆ ಶೌರ್ಯಸಿರಿ ನಿನಗೆ (ಕುಮಾವ್ಯಾ. ೮-೩೪); ವನದ ಕರಿನೆರೆಯ ಹುಳುಗಳೆಲ್ಲ ಹೊತ್ತೇರಿ ನಿದ್ದೆ ಹೀಯೆ (ಅಕಳ. ೦೯೦-೨); ಒಂದು ಎಲೆಯಂತೆ ಇನ್ನೊಂದಿಲ್ಲ. ಕೆಲವನ್ನು ಹುಳುಗಳು ತಿಂದಿವೆ, ಕೆಲವಕ್ಕೆ ಕಜ್ಜಿ (ಗಾಜುಕ. ೦೦೩). ೩. ಆವ ಬಲ್ಲವ ನಿನ್ನ ಮಹಿಮೆಯನಾವ ದೇವರು ನೆನೆಯಬಲ್ಲರು ಜೀವರಾಶಿಯೊಳೊಂದು ಹುಳು ತಾನೇನ ಬಲ್ಲವನು (ಕುಶಲ. ೮-೮೮). ೪. ಹಾವು; ಸರ್ಪ: ಕಡಿಕ ಹುಳು ಕಚ್ಚಿತು ಮಗನಂ (ಅನಘ. ೪೮-೯). **ಹುೞು** : ೧. 'ಪಡ್ಡಿಂದು ಹುೞು' ಪರಾ.

**ಪುೞು ಪತ್ತು, ಹುಳ ಹತ್ತು, ಹುಳು ಹತ್ತು** — ೧. ಹುಳು ಹಿಡಿ; ಹುಳುವುಂಟಾಗು: ಅದಱಡಗು ಮುಗ್ಗಿ ಪುೞು ಪತ್ತಿದೊಡಾಱಿರ್ ಪರಪೆ ಕಾಗೆಯುಂ ನಾಯುಂ ಮುಟ್ಟಿದುದನೆ ಶುದ್ಧಮಂ ಮಾಳ್ಪುದನಾತೆಂದೋದಿ ದರ್ ಪುರೋಹಿತರೆಲ್ಲರ್ (ಹುಬೋಧ. ೩-೩೮); ಚೀಲದಲ್ಲಿದ್ದ ಕಾಳಿಗೆ ಹುಳ ಹತ್ತಿ ಹಾಳಾಗಿವೆ (ರೂಢಿ); ಗಿಡಕ್ಕೆ ಹುಳು ಹತ್ತಿದೆ (ರೂಢಿ). ೨. ಹಾಳಾಗು; ನಿಸ್ಸತ್ವವಾಗು: ವಂಚಕರಿಗಾವವರೂ . . . ಮೋಸ ಮಾಡಿದ ಗಳಿಗೆಯಿಂದ ಅವರ ವಿವೇಕಕ್ಕೆ ಹುಳ ಹತ್ತಿಬಿಡುತ್ತದೆ (ಬೂಬಾಶಾ. ೬೪). **ಹುಳ ಹುಪ್ಪಡಿ, ಹುಳು ಹುಪ್ಪಟೆ, ಹುಳು ಹುಪ್ಪಡಿ** = ಕ್ರಿಮಿ ಕೀಟ: ಹುಳ ಹುಪ್ಪಡಿ ಮುಂತಾದವುಗಳು ಕಾಣಿಸದೆ, ಹೊಟ್ಟೆಯೊಳಗೆ ಹೋಗಿ ಬಾಧಿಸುತ್ತವೆ (ಮುಂಬಯಿ. ೩-೦೬೨); ಮನೆಯನ್ನು ಪರಿಶುದ್ಧವಾಗಿಟ್ಟುಕೊಳ್ಳುವುದರಿಂದ ಹುಳು ಹುಪ್ಪಟೆಗಳು ಸೇರಲು ಅವಕಾಶವಿರುವುದಿಲ್ಲ (ಗೃಹಾ. ೦೬೨); ಹುಪಾರು, ಹುಳು-ಹುಪ್ಪಡಿ ಇದ್ದೀತು (ಮಾರ್ಗರ. ೮೬); ಮಣ್ಣು ಹುಳು ಹುಪ್ಪಡಿಯ ಅನ್ನ. ಹುಳು ಹುಪ್ಪಡಿ ಹಕ್ಕಿ ಪಕ್ಕಿಗಳ ಅನ್ನ (ಶಿವಾಮಂ. ೩೩) [ದೇ. ೩ ತಮಿ. ಮಲ. ಪುೞು; ತುಳು. ಪುರಿ; ಕೊಡ. ಪುಳು; ತೆಲು. ಪುರುಗು, ಪುರ್ಗು, ಪುರುವು, ಪುರ್ವು, ಪ್ರುವ್ವು; ಕೋಲಾ. ನಾಯ್ಕಿ. ಪುರ್ಕ; ಗೊಂಡಿ. ಪುರೀ; ಪರ್ಜೆ. ಪುರಾತ್; ಗದಬ. ಪುಡಾತ್; ಕೂಇ. ಬಿರು]

**ಪುೞುಂಕು** (ನಾ). ಕೊಳೆ; ಪಿಚ್ಚು; ಪಿಸರು: 'ಕಣ್ಪುೞುಂಕು' ಪರಾ. [←ತುಳು. ಪುಳ್ಕು, ಪುರ್ಕು]

**ಪುೞುಕ, ಹುಳುಕ** (ನಾ). (ಅಲಂ) ಕ್ಷುದ್ರನಾದ ವ್ಯಕ್ತಿ: ಕ್ಷುಲ್ಲಕ ಮನುಷ್ಯ; ಕೀಳಾದವನಂ: ಪತನ್ಯಪರನಲ್ಲದೀ ಪುೞು[ಕಾಮಂ. ಟು] ಕರಸೂಱುವುದೆ ಮಾದ್ಯಬಾಸಿ (ಹುಬೋಧ. ೨-೩೪). ಹುಳುಕ ಗಭವಿ ಹೆಣ್ಣುಗಳ ಕೂಡುಂಡ ಬಾಯ ಹುಳುಕ ನಾಸಯ್ಯ (ವಚನ. I. ೨೬೩-೬); ಆ ಹುಳುಕರನ್ನು ಕೊಲ್ಲುವುದಕ್ಕೂ ಅವನು ಹೇಸಿದನು (ಕಾವ್ಯಸ. ೬೨). [ಪುೞುಕು + -ಅ$_7$]

**ಪುೞುಕು, ಹುಳುಕು** (ನಾ). ೧. ಹುಳು ಹಿಡಿದ ವಸ್ತು: ಹುಳು ತಿಂದು ಕೆಟ್ಟುದು. ೨. ಹುಳು ಹಿಡಿದಿರುವಿಕೆ; ಕೆಟ್ಟುಹೋಗಿರುವ ಸ್ಥಿತಿ. ೩. ಕ್ಷುದ್ರತನ; ಕ್ಷುಲ್ಲಕಸ್ವಭಾವ: 'ಪುೞುಕ' ಪರಾ. ೪. ಹುಣ್ಣು; ವ್ರಣ: (?). (ಗು). ೫. ಕ್ಷುದ್ರವಾದ: ನೀಚವಾದ: ಏಸಗಪ್ಪೊಡೆ ಮನ್ನಿನ ಜವ್ವನಮುಂ ಲಾವಣ್ಯಮುಂ ವಿಳಾಸಮುಮಿಲ್ಲೀ ಪಾತಕಿಯಾರತೋಂಪೋ ಪೆರ್ಗಣಮಸಿಕ್ಕಿ ಮಸಿಮಾಡು ಮಂಡಪಾಶುಂ ಕಡೆಯೊಳ್ [ಎಂದು ತನ್ನ ಪುೞುಕುಮನಾಂ]ದಿರಿಸಿ

ಕೊಳ್ಳಲಣ್ಣದ ವ್ಯಾಳದೆಂಬ ಕುಂಟಣಿಗೆ ಮಾಡುವುದುಂ (ಧರ್ಮಾಮೃ. ೩-೧೨೩).
**ಹುಳುಕು :** ೧. ಬಟ್ಟವಸ್ತ್ರವುಂ ಹುಳುಕುಯಿಲ್ಲದ ಕೋವಿಲವಾಗಿ ಯಿರುವುದಂ ನೋಡಿ ಸಂಗ್ರಹಿಸಿ ನನಗೆ ಸಮರ್ಪಿಸಲು ಕೋಟಿಯಜ್ಞವಂ ಮಾಡಿದ ಫಲವು ಲಭಿಸುವುದು (ಶಿ೦ಗಿ. ೩೬೦-೩); ವಾಕ್ಕಳ ವಚನಸ್ಸು . . . ಹುಳುಕು, ಕೊಳಕಾಗಿ, ಕೇಡೋಹೀನವಾಗಿ ಅಪವಿತ್ರವಾಗಬಹುದು (ಜ್ಞಾಮು. ೪). ೨. ಖಳರ ಹೃದಯದ ಕಾಳಕೂಟದ ಹುಳುಕು ಬಲ್ಲರೆ ವಹ್ನರು (ಕುವ್ಯಾ. ೦೪-೦೪) : ಹೊಳಲು ಬೇವಂದಿವಸ ಮಂದಿರವಾಳದು ದಂದೇ ಅಚೀತ ನಿನ್ನಯ ಹುಳುಕನೆಲವೋ ನಿನ್ನ ರಾವನ ಕೊಂಡು ಬಾಳೆಂಬ (ಕೌಶಿಕ. ೦೪-೪೪). (ನಾ). ೬. ಕುಂದು; ದೋಷ; ಲೋಪ; ತಪ್ಪು : ಭ್ರಷ್ಟನಾದ ನೀನು ಮತ್ತೊಬ್ಬರ ಹುಳುಕನ್ನು ಹುಡುಕಿಕೊಂಡು ಹೋಗುತೀಯೆ (ಸೀತಾ. XIII. ೦೬) : ಕುಳಿತರೆ ನಿಂತರೆ ಹುಳುಕನೆ ಬಗೆವೆ (ಬಂಡು. ೨೬-೭). [< ಪುಟು]

**ಪುಟುವಗೆ**, ಪುಳುವಗೆ (ನಾ). ಹೀನವಾದ ವಿಚಾರ; ಕ್ಷುದ್ರವಾದ ಯೋಚನೆ : ಕೃತಾಂತಂ ಬಗೆದಂ ಪಟಿತೊಂದನಾರ ಪುಟುವಗೆಯುವುದುವಂ ಬಗೆಯದಿರ ನಿಮಿರ್ಗುವಾತಂ ಬಗೆದೊಡೆ ಬಗೆದಂತೆ ಬಗೆದ ಬಗೆ ನಿವಿರ್ದ ಪುದೇ (ಶಾಂತಿಪು. ೩-೦೦) ; ಇಂತಪ್ಪುದೆಲ್ಲವುಂ ನೀನಜಾದಿರ್ದೆನ್ನುವಂ ಸಾಕ್ಷಿ ಮಾಡಿ ನುಡಿಸಿ ಕೆಡಿಸಲ್ಬಗೆದ ನಿನ್ನ ಪುಟುವಗೆ ವಮ್ಮ ಕುಲಮನೆಲ್ಲವುನಟಾವ ಬಗೆ (ಶಾಂತಿ. ೦೬೩-೭) ; ಬಟಯಿಟ್ಟ ಬಾರು ಮುನ್ನಂ ಪುಟುವಗೆಗೊಳ ಗಾದಳೆಂದು ಸಾವಾಸಿಗಳಂ ಕಟಾಪಿದನೆಲ್ಲಂ ಕಲೆಯಂ ಬಟಯಟ್ಟಿದನೆಂದು ಪೋದುದುಸು ಶಶಿತ್ವ ಯಿಖವ (ಅಂಶು. ೦೨ ೩). **ಪುಳುವಗೆ :** ಪುಸಿ ಪೃಥಿವಿಗೆ ಪುಳುವಗೆಯಾ ಪುಸಿ ನರಕದ ಕಾರಾಗಾರ ಪುಸಿ ಪುಳುವಿನ ಕೊಂಡಕೆ ಸಂಗಮಂ (ಪಾಟುಶ. ೦೦-೦೦). [ಪುಟು + ಬಗ್ಗೆ]

**ಪುಟುವಚ್ಚೆ**, ಪುಳುವಚ್ಚೆ (ನಾ). ದುಂಬಿಯು ಹಸುರುಬಣ್ಣದ ರೆಕ್ಕೆ. **ಪುಳುವಚ್ಚೆ :**

**ಪುಟುವಚ್ಚೆಯ ಬೊಟ್ಟು**, **ಪುಳುವಚ್ಚೆಯ ಬೊಟ್ಟು** = ದುಂಬಿಯ ಹಸುರು ಬಣ್ಣದ ರೆಕ್ಕೆಯ ತಿಲಕ : ಕೇತಕಿಪತ್ರದೋಲೆ ಗುರುಗುಂಜಿಯ ದಂಡೆ ಕಳಾಪಗುಣೆಣಂ ಸಯ್ಪೊಳವಲ್ಲ ಬಂದಿ ಪುಟುವಚ್ಚೆಯ ಬೊಟ್ಟು ವನಾಂತವುಪ್ಪದಿಂ ಪೋತ ತಜಂಬು (ಪುಷ್ಪಾ. ೪-೯೩) ; ಪ್ರಮಾಳವಂಜರಿ ದುವತಂಸವುಷ್ಟ ಪುಳುವಚ್ಚೆ[ಪಾಠಾಂ. ಪಸುವಚ್ಚೆ]ಯ ಬೊಟ್ಟುಮರಲ್ಕೆ ಬಿಲ್ಸರೇವೆರಸಿ ಕಿರಾತೆಯಾದ ಶಿವಮೋಹಿನಿ ರಕ್ಷಿಸಲೆಬ್ಬಜಿಂದವಂ (ಸೋಮೇಶ. ೨-೯೬); ಸುಡಿದುತ್ಪಳದಳವಬಲೆ ಶಾಲ್ಡ ಪುಳುವಚ್ಚೆಯ ಬೊಟ್ಟು . . . ಒಪ್ಪಿರೆ ಪುಳಿಂದಿಯರಾದರುಮತ್ಕಾಂತೆಯರ್ (ಕಿರಾ. ೩-೯).

[ಪುಟು+ಪಚ್ಚೆ, (< ಪಸ್ಸು)]

**ಪುಟುವಾನಸ**, ಪುಟುವಾನಿಸ (ನಾ). ಕ್ಷುದ್ರಮನುಷ್ಯ; ಅಲ್ಪನಾದ ವ್ಯಕ್ತಿ : ಸಂವನ್ನಯೋಗನಿಯೋಗದಿಂದವರಣ್ಣದೊಳ್ ನೇಸಿದರ್ಗಾಲ್ ಬನ್ನವಿಲ್ಲದ ದಾಟ್ಬುದೇಂ ಪುಟುವಾನಸಂಗೆನಗಕ್ಕುಮೇ (ಕ. ಶಾ. ೯-೧೭), ಎಶ್ವಮೆಲ್ಲಂ ನಿನ್ನಾಣತಿಯೊಳಿರ್ಪಿನಂ ಪುಟುವಾನಸರ್ ದೂಜಿಲಾರ್ಪರೆ! (ಪಾಷಾಕ್ಕ. ೨೪-೦) ; ಪುಟುವಾನಸರ್ ಇನ್ನೆಗಂ ರಕ್ಕಸರೆಯೊಳ್ ಪೋಣರ್ದ ಗೆಲ್ಲಂಗೊಂಡುದುಂಟೇ! (ಅದ್ಭು. ೯೭-೨೨). **ಪುಟುವಾನಿಸ :** ಪದಪದವಾಗಿ ವಾಂಗಬಿದು ಒರ್ದಯರಂ ತನಗಾಗುವಾದರಾಜದೆಯುವುದಂಪು ಪೋಗೆ ಕುದರಾಜದೆಯಂ ಬಸವಂ ನಿವರ್ತಿಲಾಜದೆಯುವುದೆಂತೊ ಶಿವಮ್ಮನೆ ಕೆಲರ್ ಪುಟುವಾನಿಸರಕ್ಕಟಾ ಚದುರ್ ಚದುರೆನುತಿರ್ಪರ್ (ಸೋಮೇಶ. ೬-೩೬೩).

[ಪುಟು + ಮಾನಸ್ಸ (< ಮನುಸ)]

**ಪುಟುವಾನಿಸ** 'ಪುಟುಮಾನಸ' ನೋ.

**ಪುಟೊಲೂರ್** (ನಾ). ಒಂದು ಊರಿನ ಹೆಸರು : ಪುಟೊಲೂರ್ ದೋಮಪ್ಪ ಪುತ್ರ ವಾಸುದೇವರ್ಗ (ಎಇ. VII. ೦೬೭-೪೦ ; ೦೦೬). 'ಪುಟಲೂರ್' ಪರಾ. [? + ಊರ್]

**ಪುಟ್ಟಿ**, ಪುಗ್ಗಿ, ಪುರ್ಗಿ, ಪುಳ್ಗಿ, ಪುಳ್ಗೆ, ಹುಗ್ಗಿ, ಹಂಗೆ (ನಾ) ೧. ಅಕ್ಕಿಯೊಡನೆ ಹೆಸರು ಮೊದಲಾದ ಬೇಳೆಗಳನ್ನೂ ಇತರ ಪರಿಕರಗಳನ್ನೂ ಸೇರಿಸಿ ಮಾಡಿದ ಖಾರ ಅಥವಾ ಸಿಹಿಯ ಒಂದು ಬಗೆಯ ಅನ್ನ ; ಪೊಂಗಲ್ : "ಪುಟ್ಗಿ — ಉದ್ದಿನ ತೊವರಿ ಹೆಸರು ಮೊದಲಾದುವನಿಕ್ಕಿ ಅಟ್ಟ ಕೂಟು" (ಕಮುದ. ಶಿ. ೨೯೬) ; "ಪುಟ್ಗಿಯೆನಲ್ ಮುದ್ಗಾನ್ನಂ" (ಕರ್ಣಾಶ. ೩೩) ; ಕಿಚಾಕಿಚಿದಾಗಿರ ಮೆಯ್ಯಂ ಕೋಚಿಕೊಚಿದುಂ ಪುಟ್ಗಿಯಟ್ಟು . . . ಕಿಚ್ಚಿನೊಳಿದುವರ್ (ಧರ್ಮಾಮೃ. ೩-೬೪) ; ಇದು ಮೊದಲಾಗೆ ಬಿನ್ನನೆ ನಿನ್ನನೆ ಕರೆವೆಡೆಯೊಳಂ ತಿಂಬ ಪುಟ್ಗಿಯೊಳೊಗ್ಗರಿಸಿದ ಕಡರೆಯಂತೆತೆಗೆಡೆಗೆ ಬಾಯ್ಗೋಜಿವಂದವುದ್ಯೆಸೆ (ಜಾಹ್ನ. ೦೬೪-೦೩).
**ಪುಗ್ಗಿ :** ೧. ಪುರ್ಗಿ — ಪುಗ್ಗಿ (ಕಮುದ. ೨೬೦ ಕ್ರಿಯೋ); ಮಳಲ ಪುಗ್ಗಿಯೊಳಜಿಯುವರ ಕಲ್ಲರನು ನಿಂಬೆಯ ಪಣ್ಣನೊಳು ಕಡುವುಳಿಯ ನೋಳ್ಪರೆ ಬೇವಿನೊಳು ಕಹಿಯಂ ವಿಚಾರಿಪರೆ (ಕಳಕಾ. ೬. ೬). **ಪುರ್ಗಿ :** ೨. (ಉಕ) ಗೋದಿಯನ್ನು ನೆನಸಿ ಬೆಲ್ಲದೊಡನೆ ಕುದಿಸಿ ಮಾಡುವ ಪಾಯಸದಂತಹ ಒಂದು ಬಗೆಯ ಪಕ್ವಾನ್ನ: ತನ್ನರು ರಸನೆಗುರು ಸವಿಯದಾಗಲಾ ಪುರ್ಗಿಯಂ ಮುಟ್ಟಿ ಸದ್ಯಸ್ಸದಿಂದೆ ವರ ಭೀಮನಾಥಗೀ ಯೆಂದು ತೋಳ್ಪಿನ ಕಿಯ್ಯೋರಿದಿತ್ತು ಕಳುಪಲು (ಶಂಪಾಪು. ೯-೩೦). **ಪುಳ್ಗಿ :** ೨. ಪುಳ್ಗಿಯಂ ತಂದು ತಮ್ಮವರು ಪೊಂಬಟ್ಟಲೊಳು ನೀಡಿಯಲಾರೆಂದು ಕೊಟ್ಟೊಸರಿಸಿ ಪೋಗಲು (ರಾಘಶ. ೦೨-೩೦): ಪುಳ್ಗಿಮನಿವಂ ಸದ್ಯಸ್ಸವಿಂ ಮುಟ್ಟಿ ಭಾಳಾಕ್ಷಂಗೀವುದೆನುತ್ತೆ. ಬೇಟಿಯು ಕರಾಂಭೋದಾತದಿಂದಟ್ಟಿದಳ್ (ಶ್ರೀಕಾ. ೨೨-೦೨). **ಪುಳ್ಗೆ :** ೧. ಮಾಡಿದ ಪುಳ್ಗೆ ಕಜ್ಜ ತೊಗೆ ತುಪ್ಪದೆ . . . ಇಂತಿವರ ಭೋಜನಕಾರ್ಗಜಿಯ್ಯೆ ಮಹೀಶ್ವರಾ (ಪಾಲಸ್ಕ. ೦-೬-೩).
**ಹುಗ್ಗಿ :** ೧. ಬೇಮದ ಹುಗ್ಗಿಯನುಂಟ ಶಾದ ನೀರ್ಗುಡಿವ ಬಯಲ್ಗಳೊಳ್ ಪಡುವ ಬೇಪಸಮೋಲಗಿವಂಗೆ ದುಡಿನೊಳ್ (ಸೋಮೇಶ. ೦೦-೩೦) ; ಖಾರ ಹುಣ್ಣಿಮೆಯಂದು ದನಗಳ ಹಬ್ಬ. ಅಂದು . . . ಎತ್ತು ಮೊದ ಲಾದವುಗಳಿಗೆ ಹುಗ್ಗಿಯನ್ನುಣಿಸುತ್ತಾರೆ (ಕಪ್ಪ. ೦೬೯). ೨. ಹೋಮದ ಹುಗ್ಗಿಯ ತಿಂದಾ ದೇವರ್ಕಳ ನೆಲೆ ಹೊಡೆದು (ಪಿತೃಕೀ. ೨-೦೩); ಹುಗ್ಗಿಯು ತುಪ್ಪವು ಮನೆಯೊಳಗಿರಲಿಕ್ಕೆ ಗುಗ್ಗುರಿಯನ್ನವ ತಿಂದ್ಯಲ್ಲೊ ಪ್ರಾಣ (ಕುಂತ. ೦-೬೭-೨); ಹುಗ್ಗಿ ಕಿಚ್ಚಡಿಯರೆಹುಪ್ಪ ಸೇವಗೆ ಹಿಂಡಿ ಗುಗ್ಗುರಿ ಸೂಸಲುಂಡಲಿಗೆ . . . ಬಗ್ಗೆಯಾಪುಕಿಯೊಟ್ಟಿತಲ್ಲೆ (ಕೆರೆ. ೨೦-೦೨೮). **ಹುಗ್ಗೆ :** ೧. ದೇವರ ಓಟ್ಟು ಹುಗ್ಗೆ ತೆಜಿಗೇನು ಬಿಟ್ಟು (ಎಕ. VI. ಕಕ್ಕಡು. ೯೬-೦೯ : ೧೬೪೯). [ < ಪುಟ್ಟು ]

**ಪುಟ್ಗು**, ಪುಗ್ಗು, ಪುರ್ಗು (ಕ್ರಿ). ೧. ಸಂದು ; ವಹಿಸು : "ಪುಟ್ಗು— ದಹನಕ್ರಿಯಾಯಾಂ (ಉರಿಸು)" (ಶಬ್ದಾ). ೨. ಸಂಟ್ಟು ಹೋಗು : ಪೊಗೆ ಪುಗೆ ಚಣ್ಣಂ ಸಿಂಗಂಗಳುರಿ ಗರ್ಜಿಸಿ ಲಂಗಿಸಿ ಪುಡುಪುಡನೆ ಪುಟ್ಗಿ ಸತ್ತುವು ಪಲವುಂ (ಶಂಕರಾ. ೩-೯೩). **ಪುಗ್ಗು :** ೨. ಸುಡುವಿಡುವಂದು ನಡನಡನಡುಗಿ ಮಿಡು ಮಿಡುಮಿಡುಕಿ ಪುಡುಪುಡು ಪುಗ್ಗಿ ತಡತಡದಡಿಸಿ ಬೀಟುತ್ತುಮೋಟುತ್ತುಂ (ಅಕ್ಕ. ೦೦ ೦೦ ವ). **ಪುರ್ಗು :** ೨. ಪುಡುಪುಡನೆ ಪುರ್ಗಿ ಜೋರ್ವೆಟಲ್ಲುತಗಾಗಿ ಸುರುಳ್ದು ಸುರುಳ್ದು ಬಾಯ್ಬಿಟ್ಟಿಲ್ಕಂ (ಸುಕುಮಾ. ೩-೦೩).

[ದೇ.ಶ ತಮಿ. ಪುಟುಜ್ಕು, ಪೊಜುಪ್ಪು, ಪೊಜುಕ್ಕು ; ಮಲ. ಪುಟುಕ್ಕು, ಪುಟುಕು, ಪುಟುಕ್ಕು]

**ಪುಟ್ಟಿ** (ನಾ). ಒಂದು ವಂಶದ ಹೆಸರು : ಪೇರವಾಸರು . . . ಬೆಳ್ವೆಮಣ ಯರುಂ ಸನ್ನಿಗಾಲಾ. ಪುಟ್ಟರುಂ ಬಟ್ಟವರುಂ ಮಸುನ್ನಾಯ ಕಟಬ್ಬಾಕಡು ಬಿರದರುಂ ಇ ಪೊಲನಂ ನಡಯಿಜದೋರ್ (ಎಕ. XVI. ಗುಬ್ಬಿ ೩೩-೬೯ ; ೭೨೩). [?]

**ಪುಷ್ಪ** 'ಪುಷ್ಪ' ನೋ.

**ಪೂ$_1$**, ಹೂ$_1$ (ಕ್ರಿ). ಪೂತ$_1$, ಹೂತ$_1$ (ಭೂತಕೃ) : ಪೂತು$_1$, ಹೂತು$_1$ (ಭೂತನ್ಯೂ) : ಪೂವ$_1$ (ಭವಿಕೃ). ೧. (ಮರ, ಬಳ್ಳಿಗಳು) ಹೂವಿನಿಂದ ತುಂಬು ; ಹೂವು ಬಿಡು : "ಪೂ—ಪುಷ್ಪಸಂಭವೇ. ಪುಷ್ಪೇ ಚ" (ಶಬ್ದ) ; ಎಯ್ದೆ ಪೂತು ಕಿಕ್ಕಿಱಿಗಿಱಿದಿರ್ದ ಮಾದರಿಯಂ . . . ಒಪ್ಪೆ ತೋಱುಗು[ಂ] (ಎಂ. XIII. ೩೩೦-೨೭ : ೯೭೯) ; ವನದೊಳಲಂಪನಾಳ್ದು ನಿಡುಸುಟ್ಟಿರದೂದರ ಸೀಯನಪ್ಪ ಮಾತಿನ ರಸದೊಳ್ ಕೊಸರ್ವುದು ತಳಿರ್ವುದು ಪೂವುದು ಕಾಯ್ವುದು . . . ವನದೊಳ್ ಕೊರತೆಯಿಲ್ಲದ ನಲ್ಮೆಯಿಂ ನಂದನವನವೋಪರೊಳ್ ನೆರೆದೊಡಂತು ರಸಂಬಿಡೆ ಪಣ್ತುದಾಗದೇ (ಕಾದಂ. ೪-೧೦೩); ಮಱಿದುಂಬಿ ಪೂತ ಚೂತದೊಳಿಱ ಗುಗುಮಱಿಗುಗುಮೆ ಸಲ್ಲಕೀಪಲ್ಲವದೊಳ್ (ಶಾಂತಿ. ೩-೭೯) ; ಆವ ಮರುವಿದು . . . ಸಕಲರಿತುವೊಳು ಪೂವ ಪಣ್ತ ಮರವೇನು ? (ಗಿರಿಜಾ. ೨೯-೩೮). **ಹೂ$_1$** : ೧. ಎಲವದ ಮರ ಹೂತು ಫಲವಿಲ್ಲದ ತೆಱನಂತೆ ಸಿರಿಯಾದರೇನು ಶಿವಭಕ್ತಿಯಿಲ್ಲದನ್ನಕ್ಕ (ಬಸವ. ೧೨೦); ಹೂತ ಸಂಪಗೆವನವನಳಿಸಂಘಾತ ಮುತ್ತಿವತೇನು (ಶಬ್ದ. ೭೩-೮) ; ಎನಿತು ಮಳೆಗರೆದೊಡೇಂ ಹುಟ್ಟೆ ಹೂವುದೇ ದೀಪ (ಪಪ್ಪಿರ. ೭೮-೩೦). ೨. ಅರಳು : ವಿಕಾಸವಾಗು : ಹುಟ್ಟಿದಾನಂದಾತಿರೇಕಕೆ ಚಿತ್ತ ನೆಱಿಯದು ಹೂತು ಹಿಗ್ಗುವ ಪುಳಕರಾಜಿಗೆ ದೇಹ ಕಿಱಿದು (ಶಬ್ದ. ೦೩-೨).

**ಹೂತ ಹೊಕ್ಕುಳ ಮಗ**=(ಪುರಾಣಗಳಲ್ಲಿರುವಂತೆ, ವಿಷ್ಣುವಿನ) ನಾಭಿಕಮಲದಿಂದ ಹುಟ್ಟಿದವನು ; ಪದ್ಮನಾಭನ ಮಗ ; ಬ್ರಹ್ಮ : ಹೂತ ಹೊಕ್ಕುಳ ಮಗನು ಬಂದನು ತಂದೆಯಿದ್ದೆಡೆಗೆ (ಜೈಮಿ. ೬-೦೪-೨೩). [ದೇ. ‖ ತಮಿ. ಮಲ. ಪರ್ಜಿ. ಪೂ]

**ಪೂ$_2$**, ಪುವ್ವು, ಪೂವು, ಪುವ್ವು, ಹೂ$_2$, ಹೂವು (ನಾ). ೧. ಅರಳು ; ಮಲರು ; ಕುಸುಮ ; ಪುಷ್ಪ : ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂವುಮಕ್ಕಿಯುಂ ಮಾದುಫಲಮುಂ ಮೊದಲಾಗೊಡೆಯ ನೇರ್ಕಾರ್ಚನೆಯಿಂದಿದಿರಂ ಬಂದು ನಿಱಿಸಿ ಬಲಗೊಂಡು ಬಂದು (ವಡ್ಡಾರಾ. ೬೧-೩); ತನ್ಮುನಿಗಳ ಪಾದಪ್ರಕ್ಷಾಳನೋದಕದೊಳ್ ಪೊರಳ್ದು ಪುಷ್ಪವರ್ಷ ಪೂಗಳೊಳ್ ಪುದಿದು . . . ಉಪಶಮಭಾವಮಂ ತಾಳ್ದಿ (ಆದಿಪು. ೩-೨ ವ) ; ನಂಪಿಲ್ಲದ ಕೇದಗೆಯುಂ ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ . . . ಏನೊಪ್ಪುಗುಮೇ (ಅಜಿತ. ೬-೯೨): ಕಂಪುಳ್ಳ ಸಂಪಗೆಯ ಪೂಗಳಂ ಕಿಱಿತ್ತುಮ ಪೊಂಬನಿಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸವ. ೧-೨೭). ೨. ತಾವರೆ ; ಕಮಲ : 'ಪೂಗೊಳ' ನೋಡಿ. ೩. ಕಣ್ಣುಗುಡ್ಡೆಯ ಮೇಲೆ ಉಂಟಾಗುವ ಬಿಳಿಯ ಚುಕ್ಕೆ ಮತ್ತು ಹಾಗೆ ಚುಕ್ಕೆ ಬಿದ್ದು ಉಂಟಾಗುವ ನೇತ್ರರೋಗ; ಕಾಚ : ಮೋತಿಬಿಂದು : ಅರೆದುಬಾಗಿರೆ ತಾಱಿಯ ತಿರುಳಂ . . . ಜೇನೆಯ್ಯುಂ ಕಪ್ಪುರಮುಂ ಬೆರಸಿಟ್ಟೆ ಕಣ್ಣ ಪೂಗಳ್ ಕಿಡುಗುಂ (ರಾಮಕಾರ್ಮ. ೯-೭೭); ಕಣ್ಣೊಳೀತನ ಪೂ . . . ಎಂದು ಬಾಯಂ ಕಿಸಿದಳ್ (ರಾಜಶೇಖ. ೬೭-೨೮). 'ಪೂಗಣ್' ನೋಡಿ. ೪. (ಅಲಂ)ಹಿತವಾದುದು; ಸುಖಕರವಾದುದು: 'ಪೂಗನಸು' ನೋಡಿ. **ಪುವ್ವು** : ೧. ಕಪ್ಪುರ ಕೆಸ್ಸಾನ ಮಗಳ್ × ಒಜಿಬದ ಜಟ್ಟಿ ಪುವ್ವ ಶಾಲೆ ಕಂಮಾವಳ್ಳಿ ಆಮಾ ಸಾಸಿರ್ವರ್ಗಂ ಸಾಲೆ (ಎಂ. VII, ಶಿಕಾ. ೯೩b-೭ ; ಕ್ರಿ. ೮೯೦ ?); ಪುವ್ವಿ[ಜಾತಾಂ. ಪೂವಿ]ನೊಳ್ ಕಂಪು (ಶಾಬಾರ. ೪-೮೮ ಕ್ರಮ). **ಪೂವು** : ೧. ಪೂವಿನಿಂ ಸಮೆದ ಪಕ್ಕಿಯಿಂದೆಂಬಿನಮಾಗಳೊಂದು ಸಾರಿಕೆ ಪರಿತಂದುದು (ಕಾದಂಬ. ೩೦): ಈಕೆಯ ನಳಿತೋಳ್ಗಳಿಂಗೊಲ್ದು ತಮ್ಮ ಚೆಲ್ವಿಕೆಯಂ ಕಂಡೆಳಲತೆಗಳ್ ಪೂವುಗಳಂ ತಳೆದಿರ್ದುಂ ತಳೆಯದಿರ್ಪುದು ಫಲಿನತೆಯಂ (ಧರ್ಮಾಮೃ. ೩-೦೫೩) ; ಪೂಜ್ಯವು, ಪೂಜಕ, ಪೂಜೆಯು, ಪೂವು ರೂಪರೂಪಗಳು ನಾವೂ ನೀವು (ಅರಳು. ೦೭೮-೦೦). **ಹುವ್ವು** : ೧. ಚೆನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ ಹುವ್ವ[ಪಾಠಾಂ. ಹೂವ] ತಾಹೆನಲ್ಲದೆ ಹುಲ್ಲ ತಾರೆನು (ಮಹಾದೇ. ೮.೩೦-೦೪೮); ಹುವ್ವ[ಪಾಠಾಂ. ಹೂವ] ತರುವರ ಮನೆಗೆ ಹುಲ್ಲ ತರುವ ಅವ್ವೆ ಲಕುಮಿ ದಾರಮು ಇವಗಿಲ್ಲ ಗರುವ (ಪುರಂದ. ೦-೦೪೭ ಕೃತಿ) : ಸುರರು ದುಂದುಭಿ ಮೊಳಗೆ ಹುವ್ವಿ[ಪಾಠಾಂ. ಹೂವಿ]ನ ಅರಳು ಸುರಿದರು (ರಾಮಾಶ್ವ. ೩೨-೦೦೭); ನಿನಗೆ ವೈಜಯಂತಿಯೆಂಬ ಒಂದು ದಿವ್ಯವಾದ ತಾವರೇ ಹುವ್ವಿನ ಮಾಲೆಯನ್ನು ಕೊಡುತ್ತಲಿದ್ದೇನೆ (ಕೃಷ್ಣ. ೪೪). **ಹೂ$_2$** : ೧. ಹೂ ಬಾಡಿದಲ್ಲಿ ಪರಿಮಳ ವನಜಸುಮರೆ (ಬಸವ. ೦೨೭) ; ಒಂದರ್ಥ ಮಲ್ಲಿಗೆ ಒಂದು ಹೂ ಮುಂದಾರ ಪುತ್ತಲ ಒಂದು ಚೆನ್ನೆಯ್ದಲು ಬಕುಳ ಒಂದೊಂದು ಅರವಿಂದ (ರಾಜ. ೦೯-೬೩). ೨. 'ಹೂಗೊಳ' ನೋಡಿ. ೩. ಅಲಿ ನೋಡುದೊ ಕಣ್ಣ ಬೇನೆಯೊ ಮೈಲಗೆಯೊ ಹೂ ಹುಟ್ಟಿದುದೊ (ರಾಜ. ೦೭-೬೬). ೪. (ಕಾಗದ, ಬಟ್ಟೆ, ಚಿಟ್ಟೆ ಮುಂತಾದುವುಗಳ ಮೇಲೆ ರಚಿಸುವ) ಹೂವಿನಾಕಾರದ ಚಿತ್ರ : ಕರಿಯ ಮಾಯಲಿನ ಮೇಲೆ ತಾನೇ ಹೂ ಹಾಕಿದ ವಸ್ತ್ರಲವ ಸೀರೆ ಅಲ್ಲಿರಲಿಲ್ಲ (ಕುಕ್ಕಿರ. ೨೪). ೬. ಎಳೆಯದು : ಕೋಮಲವಾದುದು ; ಮೃದು : 'ಹೂಮರಿ' ನೋಡಿ. **ಹೂವು** : ೧. ಸಿರಿಮುಡಿಗೆ ಹೂವನಡಕುತ್ತವಿರು ನೀನು (ಸಂಚಿರ ೦-೩೩) ; ಕಳೆದ ಹೂವಿನ ತೊಡಬೆಯೋ ಕುಸುದಲಿಯ ಬಟ್ಟಲ ಭಾರವೋ . . . ನಳಿನನಾಭನ ಮಾತು ಹಿಂಚಿತು ಕಳಚಿದವು ಕೈದುಗಳು (ಕುಮಾರವ್ಯಾ. ೦೯-೩೦); ಜಡೆಗಳೊಳಗೆ ಮಲ್ಲಿಗೆಯ ಹೂವಿನ ಸರ ಬಿಡದುಟ್ಟ ಸಾಲಿಯ ಸೀರೆ ಕಡುಪರಿಮಳವಾಂತ ದಿವ್ಯಾಂಗದ ಚೆಲ್ವ ಮಡದಿರನ್ನೆಯರೊಪ್ಪಿದರು (ಕಂಪಿ. ೨-೯೦) ; ಒಂದಾರ ಕೊಳಲಿಲ್ಲ ಲೋಕದ ಮುಂದಿ ನಿಂದಾವ ಲೋಕದ ಬಲು ಹೂವು ಎಂದೇನೊ (ಶಾಸಗ. ೨೦-೨೦).

**ಪೂಗಳನಿರು** = ಪುಷ್ಪರಸ ; ಮಧು ; ಮಕರಂದ : "ಮಧು ಮಕರಂದಮೆನಲು ಪೂಗಳ್ನಿದಕ್ಕು" (ಮಂಗರಾ. ೩೩-೬). **ಪೂವಿನಂಬು**= (ಮನ್ಮಥನ) ಹೂವಿನ ಬಾಣ: ಮದನನ ಪೂವಿನಂಬುಗಳ ಪೆಣ್ಬರಿಜೆಂಬ ಬೆಡಂಗನುಂಟುಮಾಡಿದ . . . ರಾಜಕನ್ನಿಕೆಯರು ಮಲರಂ ತನಯಂಗೆ ಮಾಡಿದು (ಮಲ್ಲಿ. ೪-೦೪೦); ಆವನ ಪೂವಿನಂಬಿನಟರು ತಲೆವಾಗಿಸುತಿರ್ಪುದು . . . ಆತನೀಗಾಮಗಮೆನ್ನ ಜಾಣ್ಣುಡಿಗೆ ಮೆಯ್ಸಿರಿಯು (ಕಬ್ಬಿಗ. ೦). **ಪೂವಿನ ಪೊಟ್ಟು**, **ಹೂವಿನ ಹೊತ್ತು**=(ಸಾಮಾನ್ಯವಾಗಿ) ಹೂವುಗಳು ಅರಳುವ ಸಮಯ; ಸಾಯಂಕಾಲ : ಆಗಳಾ ಪೂವಿನ ಪೊಟ್ಟಿನೊಳ್ ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಹಾರಿಸುತ್ತುಂ ಬಂದು (ಹರಿ. ೬-೦೦ ವ); ಪೂವಿನ ಪೊಟ್ಟು ಸಾರಿಪರೆ ಸಿಂಗರಗೈದನುರಾಗದಿಂ ಪ್ರಿಯಂ ಭಾವಜನಮ್ಮ ಕೇಳಿಗೃಹಮಂ ಪುಗುತಂದು (ಮನ್ಮ. ೦೦.೯) ; ಪಗಲೊಳೆ ಚಂದದಿಂ ಮಲಗಿ ಹೂವಿನ ಹೊತ್ತಿನೊಳೆಬ್ಬಿ . . . ಒರ್ವಳ ದೊತ್ತಗೆಯ್ದುದಳ್ (ಮಲ್ಲಿಕಾ. ೬-೪೮೭) ; ಸರಸಿಜಾಕ್ಷಿಯರು ಹೂವಿನ ಹೊತ್ತಿನೊಳಗಾಗ ಚರಿಸುವರು ಬೀದಿಯೊಳಗೆ (ಕಂಪಿ. ೬-೦೦೨). **ಪೂವಿನ ಸುಗ್ಗಿ** = ಹೂವುಗಳ ಸಮೃದ್ಧಿಯ ಕಾಲ ; ವಸಂತಕಾಲ : ಪೂವಿನ ಸುಗ್ಗಿಯಲ್ಲಿ ಪೊಸವೇಟಂ (ಲೀಲಾವ. ೦೪-೪೩). **ಹೂವಾಗು**=೧. ಅರಳು ; ವಿಕಸಿತವಾಗು : ಮುತ್ತುಗನಿಡುಗೊನೆ ನಿಕರ ಹೂವಾದಂತೆ ನೆತ್ತರ ಬಣ್ಣ ತೋಱಿಸಲು ಚಿತ್ತಜನಾತ್ಮಸಂಭವನ ಕೀರ್ತಿಸಿದ ಖಳೋತ್ತಮ ಕಡುಮೆಚ್ಚಿ ನಗುತೆ (ಮೋಹತ. ೩೩-೪೦). ೨. ನಲಿ ; ಸಂತೋಷಪಡು : ಹೊಸಮನೆ ಹೂಡಿ ಸುಖಿಸುವ ನನ್ನ ಆಸೆ ಪೂರೈಸಿತೆಂದು ಹಿಗ್ಗಿ ಹೂವಾಗುತ್ತಿದ್ದೆ (ಕೂಕಸಂ. ೦೩). ೩. ಮೃದುವಾಗು : ಮಗಳ ಪರಿಸ್ಥಿತಿಯನ್ನು ಕೇಳಿ ತಂದೆಯ ಮನಸ್ಸು ಹೂವಾಯಿತು (ರೂಢಿ). **ಹೂವಿನಕಾರ**=ಹೂವಾಡಿಗ (?) : ಶ್ರೀನಖರೇಶ್ವರದೇವರಲಿ ಮಾಡಿದ ಧರ್ಮ್ಮದ ವಿವರ . . . ಹುಲರ ದೇವಸ್ತದ ಗಡಿಯಿಂದಂ ಪಡುವಲು

ತೆಂಕಲು ಮಾರ್ಗದ ಕೇರ್ಯ್ವ ಹಲರ ಹೂವಿನಕಾರ ದುಗಣಸೆಟ್ಟಿಯ ಗಡಿಯಿಂದಂ ಬಡಗಲು ಪಡುವಲು (ಶಾಸ. IX-ii, ೪೪೪-೦೨ : 1433). **ಹೂವಿನ ಕೆಲಸ** = ಕಲ್ಲು, ಮರ, ಬಟ್ಟೆ, ಗೋಡೆ ಮೊದಲಾದುವುಗಳ ಮೇಲೆ ಹೂವು, ಎಲೆ ಮೊದಲಾದ ಚಿತ್ರಗಳನ್ನು ಬಿಡಿಸುವ ಕೆಲಸ : ಕಡಕತೂರ ಸೇನಬೋವ ರಾಮರಸರ ಮಗ ಲಖಿಯನೂ ಜನಾರ್ದನ ದೇವರಿಗೆ ಹೂವಿನ ಕೆಲಸ ಮಾಡಿಸಿದನು (ಪ್ರೈಸ. ೦೯೩೩, ೬೨-೨ : 1754). **ಹೂವಿನ ಕೋಲು** = ೧. ಹೂವಿನಿಂದ ಅಲಂಕೃತವಾದ ಕೋಲು. ೨. ಯಕ್ಷಗಾನ ಬಯಲಾಟಗಳಲ್ಲಿ ಒಂದು ಪ್ರಕಾರ: ☞ ಈ ಕಲೆಯನ್ನು ಅಭ್ಯಾಸ ಮಾಡಿದವರು ಶಿಷ್ಯರೊಂದಿಗೆ ನವರಾತ್ರಿಗೆ ಮನೆ ಮನೆಗೆ ಹೋಗಿ, ಪ್ರದರ್ಶನ ಮಾಡಿ ತೋರಿಸುತ್ತಾರೆ : ಆ ಶಿಷ್ಯರ ಕೈಯಲ್ಲಿ ದಂಡಿನ ಹೂವುಗಳಿಂದ ಅಲಂಕೃತವಾದ ಒಂದೊಂದು ಕೋಲು ಇರುತ್ತದೆ. 'ಹೂವಿನ ಕೋಲು' ಎಂದು ಹೆಸರು ಇದಕ್ಕೆ. ಈ ಪ್ರದರ್ಶನ ಸಂಪ್ರದಾಯಕ್ಕೂ ಹೂವಿನ ಕೋಲು ಎಂದು ಹೆಸರು ಬಂದಿದೆ (ಯಕ್ಷ. ೨೦). **ಹೂವಿನ ಪಡಿ, ಹೂವಿನ ಪಡಿ** = ಹೂವಾಡಿಗರಿಗೆ ಕೊಡುವ ಸಂಭಾವನೆ : ಶ್ರೀಗೊಮ್ಮಟದೇವರ ಪಾರಿಶ್ವದೇವರಿಗೆ ಪರ್ವನಿಬನ್ಧಿಯಾಗಿ ಹೂವಿನ ಪಡಿಗೆ ದಾತಿಹವಳಕ್ಕೆ ಕೊಳಗ ತಾ ೧ . . . ಯಿದ ಆಚಂದ್ರಾರ್ಕ್ಕ ತಾರಂಬರಂ ಸಲಿಸುವರು (ಎಕ. II. ೨೪೦-೨ ; ಸು. 1178) : ಶ್ರೀ ಗೊಮ್ಮಟದೇವರಯರ್ಚ್ಚನೆಗೆ ಹೂವಿನ ಪಡಿಗೆ ಶ್ರೀಮನ್ಮಹಾಮಣ್ಡಲಾಚಾರ್ಯ್ಯರು (ಎಕ. II, ೨೩೯-೩ ; 1198 ?). **ಹೂವಿನ ಮಕ್ಕಳ ಕುಣಿತ** = ಒಂದು ಜಾನಪದ ಕಲೆ ; ☞ ಇದರಲ್ಲಿ ಕಲಾವಿದರು ಜಾತ್ರೆಯ ಸಮಯದಲ್ಲಿ ಕೆಂಪು ಹೂವಿನಿಂದ ಉದ್ದವಾದ ಮಾಲೆಯನ್ನು ಕಟ್ಟಿ ತಲೆ, ಕೊರಳು, ಮಂಗ್ಯೆ, ತೋಳು ಮೊದಲಾದುವುಗಳಿಗೆ ಹೂವಿನ ಅಲಂಕಾರ ಮಾಡಿಕೊಂಡು, ಹೂವಿನ ಹಾರ ಸುತ್ತಿದ 'ಅಂಬುಗತ್ತಿ'ಯನ್ನು ಹಿಡಿದು, ಕಲಶಗಳನ್ನು ಹೂವಿನಿಂದ ಸಿಂಗರಿಸಿ, ಡೋಲಿನ ಬಡಿತಕ್ಕೆ ಸರಿಯಾಗಿ ಗೆಜ್ಜೆ ಕಟ್ಟಿ ಹೆಜ್ಜೆ ಹಾಕುತ್ತಾ ವೃತ್ತಾಕಾರವಾಗಿ ಕುಣಿಯುವರು : ಉತ್ತರಕನ್ನಡಜಿಲ್ಲೆಯಲ್ಲಿ ವಾಸವಾಗಿರುವ 'ಪಟಗಾರ'ರಲ್ಲಿ ಮಾತ್ರ ಕಂಡುಬರುವ ಕಲೆ 'ಹೂವಿನ ಮಕ್ಕಳ ಕುಣಿತ' (ಕಜಾ. ೦೪೦). **ಹೂವಿನ ಮಳೆ** = ಪುಷ್ಪವೃಷ್ಟಿ : ನಳನೃಪನ ಕರೆಸಿದರು ಹೂವಿನ ಮಳೆಯ ಕರೆದರು ದೇವದುಂದುಭಿ ಮೊಳಗಲರಸನ ಕೊರಳಿಗಿಟ್ಟಳು ಪುಷ್ಪಮಾಲಿಕೆಯ (ನಳಚ. ೩-೬೭). **ಹೂವಿನ ಹಬ್ಬ** = ವಸಂತಕಾಲ : "ಹೂವಿನ ಹಬ್ಬ ಸುಗ್ಗಿ ಬಂದುದು ಬಸಂತಂ ದಲೆಂದೆನೆ ವಸಂತಕ್ಕೆ ವಿಸುಗುವ ಪೆಸರ್" (ಕಾವ್ಯ. ೦೭) ; "ಹೂವಿನ ಹಬ್ಬಮೆಂದು ಸುಗ್ಗಿಯು ಬಸಂತನುಮೆಂದು ಪೆಸರು ತಾನೊಂದುಗು ವಸಂತಾಖ್ಯದಲ್ಲಿ" (ಕಾವ್ಯಸಾ. ೨೮). **ಹೂವಿನ ಹಾಸಿಗೆ** = ೧. ಹೂವುಗಳಿಂದ ಮಾಡಿದ ಹಾಸುಗೆ ; ಪುಷ್ಪಶಯ್ಯೆ : ಪಶಿಕಾಂತ ವೇದಿಕೆಗಳಲ್ಲಿ ಹೂವಿನ ಹಾಸಿಗೆ[ಪಾಠಾಂ. ಕೆ]ಗಳಲ್ಲಿ . . . ನೆರೆವು (ಶಿವಕ. ೦೭೦). ೨. (ಅಲಂ) ಸುಗಮವಾದುದು; ಸುಲಭವಾದುದು ; ಸುಖಮಯವಾದುದು : ಜೀವನವೆಂದರೆ ಹೂವಿನ ಹಾಸಿಗೆಯಲ್ಲ (ರೂಢಿ).

[<ಪೂ$_1$ ./ ತಮಿ. ತುಳು. ಪೂ ; ಮಲ. ಪೂ, ಪೂವು ; ತೆಲು. ಪೂ, ಪುವ್ವು, ಪೂವು ; ಕೋಲಾ. ಪೂವ್ ; ಗದಬ. ಪೂ, ಪುವ್ವು ; ಮಾಲ್ತೊ. ಪೂಪು]

**ಪೂಂಡಿ** 'ಪುಂಡಿ' ನೋ.

**ಪೂಂಬಳಿ ?** (ನಾ). ಹೂವಿನ ಕಾಣಿಕೆ; ಪುಷ್ಪೋಪಹಾರ (?) : ಒರ್ವಳ್ ಮುಂಪಿನದಿನಿಯನಂ ಕಿರಿವರ್ ಕೆಳದಿಯಂ ನಂಬದೆ ಕೆಂದಲರ್ಗೆ ಪೂಂಬಳಿಯುಂ ಬಟಾಯಟ್ಟುವಂತೆ ತನ್ನ ತಂಗಿಯನೆ ಬಟ್ಟಿಯಟ್ಟೆ (ಅಜಿತ. ೬-೦೦ ವ).

[<ಪೂ$_1$ + ಬಳ್$_1$ (=ಬಳಿ$_1$)]

**ಪೂಂಬೆ** (ನಾ). (ಕರಾ) ಬಾಳೆಯ ಹೂವು$_1$— ಮೋತೆ : ಬಾಳೆಗಿಡದ ಗೊನೆಯ ತುದಿಯಲ್ಲಿದ್ದ ಪೂಂಬೆಯನ್ನು ತಂದು ಅದನ್ನಾದರೂ ಬಜ್ಜಿ ಮಾಡೋಣ (ಬಾಳಗಿ. ೦೩೩) ; ಬಾಳೆಗೊನೆಯ ತುದಿಗೆಗೆ ನಮ್ಮಲ್ಲಿ 'ಪೂಂಬೆ' ಎಂಬ ಹೆಸರು (ಕಾರ್ತಿಕಸು. ೪೩). [←ತುಳು. ಪೂಂಬೆ]

**ಪೂಂಬೆಕಿರೀಟ** (ನಾ). ಬಾಳೆಯ ಮೋತೆಯ ಆಕಾರದ ಕಿರೀಟ : 'ಪೂಂಬೆಯಂತಿರುವ ಕಿರೀಟ' ಎಂಬ ಅರ್ಥದಲ್ಲಿ 'ಪೂಂಬೆಕಿರೀಟ' ಎಂದೂ ಆಡುತ್ತಾರೆ (ಕಾರ್ತಿಕಸು. ೪೩). [ಪೂಂಬೆ + ಕಿರೀಟ]

**ಪೂಂಬೊಲ** (ನಾ). ಹೂವಿನ ತೋಟ ; ಹೂದೋಟ : ಬಸವಸೆಟ್ಟಿ ಪದಿನಯ್ಗಳ ನೀರ್ಮಣ್ಣು ಅಯ್ಗಳ ಪೂಮ್ಬೊಲನುಂ . . . ದೇಗುಲಕ್ಕೆ ಬಿಟ್ಟಂ (ಎಕ. IV, ಹಗ್ಗಡ. ೦೬-೦೦ ; 1021) : ಶ್ರೀದೇಕಬ್ಬೆ ಮಹಾದೇವರ್ಗ್ಗೆ ಬಿಟ್ಟ ಪೂಂಬೊಲಂ ತೋಣ್ಟಖಣ್ಡಮುಮಂ . . . ಈ ವಂಸದ[ಲ್] ಪುಟ್ಟಿದವರ್ ಕಾ[ದ]ಳಿಸುಗೆ (ಎಇ. VI, ೨೦೭-೧೩ : 1057). [<ಪೂ$_1$ + ಪೊಲ]

**ಪೂಕರೆ** (ನಾ). (ಕರಾ) ಅಲಂಕಾರದ (ಬಾಳೆಯ) ಕಂಬ : ಬುದ್ಧಿವಂತನ ಗದ್ದೆಯ ಬಿತ್ತವನ್ನು ದಂಡಿಗೆಯಲ್ಲಿಯೂ, ಬಿಲ್ಲರ ಗದ್ದೆಯ ಬಿತ್ತವನ್ನು ಕುಕ್ಕೆಯಲ್ಲಿಯೂ ತಂದು ಬಿತ್ತಿ, ಬಾಳೆಯ ಪೂಕರೆಯನ್ನು ಹಾಕಿದರು (ಕೋಟಿಚೆ. ೯) ; "ಗದ್ದೆ ಬಿತ್ತಿದ ತರುವಾಯ ಅದರ ಮಧ್ಯದಲ್ಲಿ ಒಂದು ಬಾಳೆಯ ಗಿಡವನ್ನು ತಂದು ಅಲಂಕರಿಸಿ ನಡುವ ಸಂಭ್ರಮ" (ಕೋಟಿಚೆ. ಕೋಶ). [←ತುಳು. ಪೂಕರೆ]

**ಪೂಕು, ಪುಕ್ಕು$_2$** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (*). **ಪುಕ್ಕು$_2$** : "ಭ್ರಾತೃತ್ವದೊಳ್ ಯೋನಿಯೊಳ್ ಪುಕ್ಕು" (ಕರ್ಣಾಮಂ. ೬೯).

[ದೇ. ॥ ತೆಲು. ಕೊಂಡ. ಪೂಕು]

**ಪೂಕುತಿತ್ತಿ** (ನಾ). ಶರಾಯಿ ; ಇಜಾರ ; ಚಲ್ಲಣ : (*). [?]

**ಪೂಗ** (ನಾ). ೧. ಗುಂಪು ; ಸಮೂಹ ; ಸಮುದಾಯ : "ನಿಕರಃ ಸಿರಾಮಃ ... ಕದಂಬಕಃ, ಪೂಗಃ ... ಸ್ತೋಮಃ—ಈ ೩೭ ಸಮೂಹಂ" (ಕರಾಯು. ೦೦೪-೦) ; ಪೂಗದ ನವನಾಗಲತಾಪೂಗದ ಫಲಪತ್ರದೊಡನೆ ಬಹುವಿಧಫಲದಿಂ ರಾಗಯುತಕ್ರಮಪರಿಹನ ರಾಗಯುತಕ್ರಮಮನ ಮಾಭುಜನರ್ಚಿಸಿದಾ (ಅಕ್ರೂರ. ೦೪-೬) ; ರಾಘವನು ವೈಮಾಜಿದ ಲಕ್ಷ್ಮಣ ಯೋಗನಿದ್ರೆಯ ತಾಳ್ದ ಕಪಿಗಳ ಪೂಗ ಜೀವನ್ಮುಕ್ತವಾದುದು (ತೊರವೆ. ೨೮-೬೩) ; ಶಿವಾಗಮಪೂಗದರ್ಪಮಂ ವಿವರಿಪ ಶೈವವರ್ಯವರರಿಂ ಮಜಿದತ್ತು ಪುರಂ (ಶಿ.ಶಿ. ೨-೪೩) ; ಇಂದ್ರಿಯಸಂಬಿದ ಪೂಗಮಂ ಮಿೞಿರದ ಪೊರ್ ಪೆಗಳ್ವುದವಿರುದ್ಧಂ (ಶಂಕರಖ. ೦೨.೦೬). ೨. ಸಂಘ ; ಸಮಿತಿ; ಮಂಡಳಿ: ಗುಂಪುಗಳ ಅಭಿಪ್ರಾಯದ ಮೇಲೆ ರಚಿಸಲ್ಪಟ್ಟ ಪೂಗ, ಶ್ರೇಣಿ, ಕುಲ ಎಂಬ ವಿಚಾರಣಾಸಮಿತಿಗಳಿದ್ದುವು. ರಾಜನ ನ್ಯಾಯಾಲಯವು ಈ ವಿಚಾರಣಾಸಮಿತಿಗಳ ಕಾರ್ಯಗಳನ್ನು ಪರಿಶೀಲಿಸುತ್ತಿತ್ತು (ಭಾರತ. ೩೬). ೩. ಅಡಕೆ ; ಕ್ರಮುಕ : "ಪೂಗಂ ವ್ರಜಮುಂ ಕೌಂಗುಂ" (ಪಂಪನಿಘ. ೦೨೬-೩೦) ; ಬಾಲಸಹಕಾರತರು ನವಮಾಲಿಕಗಳಲಿತಪೂಗಭೂಜಾತಂ ತಾಂಬೂಲಲತೆಗೆಂಬವೋಲ್ ಸ್ಮರಲೀಲಂ ನಿಜತನಯನೆನ್ನ ತನುಜೆಗೆ ತಕ್ಕಂ (ಅದಿಪು. ೬-೨೦) ; ಲಸತ್ಪ್ರಳಸವೋ ಪುನ್ನಾಗವೋ ಪೂಗವೋ . . . ಕೇದಿರೆ ಪೇಟೆಪೆಂಪ್ನ ಪತಿಯಂ (ಸುಕುಮಾ. ೦೨-೨೦) ; ತುದಿಗೆ ಪರ್ವಿದೆಳೆವಳ್ಳಿಯಿಂದೆಸೆವ ಪೂಗಂ ನಾಡೆ ಕೊರ್ವಿ ತಿಂತಿಣಿವಣ್ಣಳಾಂತ ಕದಳಂ . . . ನಾಡೆ ಸಾರ್ವಕಾಲಂ ಕುಂದವು (ಕರಿಪು. ೦೦-೨೨). ೪. ಒಂದು ಬಗೆಯ ಸಸ್ಯ ; ಹೂವರಸೆ ಗಿಡ : "ತೂದಃ, ಪೂಗಃ, ಕ್ರಮುಕಃ, ಬ್ರಹ್ಮಣ್ಯಃ. ಬ್ರಹ್ಮದಾರು, ತೂಲಂ—೬ ಹುವ್ವರಿಸೆಗಿಡ, ಬೀಜವಿರುವ ಹುವ್ವರಿಸೇಗಿಡವೆಂದು ಕೆಲವರನ್ನುವರು" (ನಿಘಂ.ಟೀ. ೧೨೦). [ಸಂ.]

**ಪೂಗಂಪು, ಹೂಗಂಪು** (ನಾ). ಹೂವಿನ ವಾಸನೆ; ಪುಷ್ಪಗಳ ಸುಗಂಧ,—ಸೌರಭ: ಮಾದರಿಪೂಗಂಪಿಂಗೆಡಿಪಾದರಿಪರ್ಣಗಳ ಕಾಳಿಕ್ಕೆ ನಿರವಧಿರಾಗೋತ್ಪಾದಪಟುವಾಯ್ತು ವಿಳಸತ್ಪಾದಪಪಾತಿಯೊಳದೊಂದೆ ಸುಂದರಮಲ್ತೇ (ಅಜಿತ.

೨-೯) ; ಸರನ ಪೂಗಂಪುಗಳ ಸೊಂಪುಗಳ ತಂಪುಗಳ ಪರಿಗಂಧ ಪನ್ನೀರೊಳು ಬೆರಸಿರ್ಪ ಚಳಿಯಿಂದ . . . ಕೀರಿಗಳ ಭೂರಿಗಳ ಭೇರಿಗಳ ರಭಸದಿಂ ಪುರ ಮೆಸೆದುದು (ಕಂಕು. ೩-೩) ; ಸತತಕುಸುಮಿತತರುಲತಾಳಿಗಳ ಪೂಗಂಪ . . . ಪೂಚೆ ಪೊದಾವರೆಗಳ ಧೂಳಿಗಳ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲು (ಕೃಶಿಂಶಾ. ೩-೬). **ಹೂಗಂಪು :** ಅಸುಕೆಯ ಬನದ ಕಡೆಯಿಂದ ಉತ್ತಮದ ಹೂಗಂಪು ಬರುತಿರಲು (ಕೌಶಾ. ೧೦-೯೯).

[ಪೂ₂ + ಕಂಪು]

**ಪೂಗಟ್ಟು**, ಹೂಕಟ್ಟು, ಹೂವುಕಟ್ಟು₁ (ಕ್ರಿ). ಹೂವುಗಳನ್ನು ಮಾಲೆಯಾಗಿ ರಚಿಸು.–ಹೆಣ್ : ಎರಡಕ್ಕೆಮಾಜದೊಂದಜಾಳಿ ನೆಗಟ್ದು ನಿರಂತರ ಸುಖಮಂ ಪಡೆವೆನೆಂಬ ನಿರ್ಬುದ್ಧಿ . . . ನಾರಿಲ್ಲದೆ ಪೂಗಟ್ಟುವೆನೆಂಬ ಪೆರ್ಗಾವಿಲನಂ ಪೋಲ್ಗುಂ (ರಪೂಶಪು. ೩-೧೦೬). **ಹೂಕಟ್ಟು :** ಹೂಕಟ್ಟುವುದನ್ನು ನಿಲ್ಲಿಸಿ, ಹೂಮಾರಿಗಳನ್ನು ನೋಡಲು ಓಡಿ ಹೋಗಿದ್ದ ಚಿನ್ನಮ್ಮನಿಗೆ ಅವಳ ಅಜ್ಜಿ . . . ಅಜ್ಜಿ ಮಾಡಿದಳು (ಮಲೆಮ. ೨೭೦) **ಹೂವುಕಟ್ಟು₁ :** ಮನೆಯ . . . ಒಂದು ಮೂಲೆಯಲ್ಲಿ ಚಿನ್ನಮ್ಮ ಹೂವುಕಟ್ಟುವ ಕಾರ್ಯದಲ್ಲಿ ನಿರತಳಾಗಿದ್ದಳು (ಮಲೆಮ. ೨೬೯).

[ಪೂ₂ + ಕಟ್ಟು₁]

**ಪೂಗಣ್**, ಹೂಗಣ್ಣು, ಹೂವುಗಣ್ಣು (ನಾ). ೧. ತಾವರೆಯಂತೆ ಚೆಲುವಾದ ಕಣ್ಣು : 'ಪೂಗಣ್ಣ' ಪರಾ. ೨. ಹೂವು ಬಿದ್ದ ಕಣ್ಣು ; ಮೋತಿಬಿಂದುವಿರುವ ಕಣ್ಣು. ೧, ೨ : ಅಸಿದೊಡಲ ಪೂಗಣ್ಣ ಪೆಣ್; ಸಸಿವೊಗದ ಕಿಸುವಾಯ ಪುಸಿನಡುವಿನರಸಿ (ರಾಪಪಾಕ್ಕ. ೬೬-೨೩). **ಹೂಗಣ್ಣು :** ೨. ಹೂಗಣ್ಣಿಗೆ ನಾಟಿ ಔಷಧಿ ಮಾಡಲು ಹೋಗಬಾರದು (ಕೂಶ). **ಹೂವುಗಣ್ಣು :** ೨. ಹೂವುಗಣ್ಣಿಗೆ : — ಸೀಲಿಯ ರಸವಂ ಹಚ್ಚಿದರೆ ಹೂವುಗಣ್ಣು ಮಾಣ್ಗುಂ (ಲಶ್ಮಂ. ೬೯). [ಪೂ₂+ಕಣ್]

**ಪೂಗಣ** (ನಾ). ಹೂಗೊಂಚಲು ; ಪುಷ್ಪಗುಚ್ಛ : ಸ್ಥಿರ ಹರಶಕ್ತಿ ದೇವಮುನಿಪೋತ್ತಮಹಸ್ತದೆ ದಾನದೀಕ್ಷೆಯಿಂ ಸುರಕುಜವೀಕ್ಷಿಸಲು(ಲ್) ತಳೆದವೋಲೆಸುಗುಂ ಸುರಶೈಲವಲ್ಲಿ ಬಂಧುರತರಪಪ್ಪ ಕೆಂದಳಿರ ಕೆಂಜೆತ ಪೂಗಣ ರಾಶಿಗಳುಂ ಸುಭಾಸುರವೆನಿಪಾ ವಿಭೂತಿಯ ಪರಾಗವಿಭೂತಿ ಫಳಂ ಕವುಂಡಳವು(ಂ) (ಕ೨. IV, ೦-೬೦ ; 1204). [ಪೂ₂+ಗಣ]

**ಪೂಗಣೆ**, ಹೂಗಣೆ, ಹೂವುಗಣೆ (ನಾ). (ಮನ್ಮಥನ) ಹೂವಿನ ಬಾಣ : ಅಂತು ತೊಟ್ಟ ಪೂಮುಡುಗೆ ಮದನನ ತೊಟ್ಟ ಪೂಗಣೆಗಳಯಾಗಿರೆ (ಶಂಕಪಾ. ೨-೧೬ ಪ) ; ಪೂಗಣೆ ನಾಂಟಿದಂತೆ ತನು ಕಂಪಿಸುತಿರ್ದುದು (ಲಾಪಂಶು. ೬೯೬) ; ಮನ್ಮಥನಾಗ ಪೂಗಣೆಗಳನು ಸಂಧಿಸಿಯೆಚ್ಚನಂಗನೆಯ (ಶಕಶ. ೦-೬೬). **ಹೂಗಣೆ :** ಎನ್ನ ತರಳಕಟಾಕ್ಷೇಕ್ಷಣಯುಗವಿರ್ದಂತೀ ಹೂ[ಪಾಠಾಂ. ನನೆ, ಪೂ]ಗಣೆಗಳ ಪರ್ಯಂತವೇಕೆ ಮಕರಪತಾಕಾ (೧೦ಳ. ೬-೬೩) ; ಮದನ ಮಸೆದೋಜಿಸಿದನು ಹೂಗಣೆ ಹೃದಯವನು ತಾಗಿದುದು (ಶುಪ್ತಾಶಿ. ೨-೬) ; ಹೂಗಣೆಯ ಪರವರಿಯನುಗುಳುವ ಸೋಗೆಗಂಗಳ ಚೆಳಗ ಹಸರಿಸಿ ರಾಗರಸದೊಳು ಮೂಡಿ ಮುಳುಗಾಡಿದಳು ಜನದತ್ತ (ಪಾಶೃಶಾ. ೩ ೨೬). **ಹೂವುಗಣೆ :** ಬನವೆಣ್ಣೆ, ನಿನ್ನೊಳೇನಿದೆ ಎನಗೆ ಎಣೆಯಾಗಿ ? ಮೇಣೆನ್ನೆರ್ದೆಗೆ ಹೂವುಗಣೆಯಾಗಿ ? (ಕಪ್ಪಾಂಗ. ೨೯-೬೬೬).

**ಪೂಗಣೆಯವ** = ಪೂಗಣೆಯ : ಪೂಗಣೆಯವನ ಕಿಚ್ಚು ನೂರ್ಮಡಿಯಾಗಿ ಮುಂದೆದುಪಾಯವಂ ಪಾಯೋಗಿಸುವುದದನರಿದು ಕೋವುಳಿ . . . ಮಡುಗಿ (ಶಕಪು. ೯೩-೬). [ಪೂ₂ + ಕಣೆ₁]

**ಪೂಗಣೆಯ**, ಹೂಗಣೆಯ (ನಾ). ಹೂವಿನ ಬಾಣಗಳುಳ್ಳವನು ; ಮನ್ಮಥ : "ಪೂಗಣೆಯನಿಂಗೋಲ್ವಿಲ್ಲನಕ್ಕುಂ" (ಶಬ್ದಾಶಿ. ೬) ; ಪೂಗಣೆಯನ ಚಾಮರವಂ ಸೀಗುರಿಯಂ ಪಿಡಿವಳಂತೆ ಸೆಳೆಗೊಂಬು ಗಳಿಂಬಾಗೊತ್ತಿ ಗುಜ್ಜುಮಾವಿನ ಪೂಗೊಂಚಲನುಡಿದು ಪಿಡಿದಳಂ ವೆರಸೊರ್ವಳ್ (ಲೀಲಾಶ. ೦೩-೬೨) ; ಮುಟ್ಟಿತು ಸುಟ್ಟಿತು ತಿಂದು ತೇಗಿದಶ್ಶಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (೧೦ಳ. ೬-೯೬); ಎಸೆದುದು ಪೂಗಣೆಯನಾಡುಂಬೊಲನವೊಲು ಶಶಪ್ಪ ರೋದ್ಯಾನ (ಕೂಶಶಾ. ೦-೯-೦೩). **ಹೂಗಣೆಯ :** ಸುಗ್ಗಿಯಲಿ ತುಂಬುವರೆ ತೆಂಗಾಳಿ ಹೂಗಣೆಯರೊಡ್ಡಿದುರುಳಿಗೆ ಸಿಲುಕಿ ಅಳುಕದೆ ಇಹರು ಉಂಟೇ (ಕಂಪ್ರಕ. ೯೬-೦೬). [ಪೂಗಣೆ + – ಅ₇]

**ಪೂಗಣ್ಣ** (ನಾ). ೧. ತಾವರೆಯಂತೆ ಚೆಲುವಾದ ಕಣ್ಣುಗಳುಳ್ಳವನು ; ಕಮಲಲೋಚನ ; ವಿಷ್ಣು. ೨. ಕಣ್ಣಲ್ಲಿ ಹೂವು ಬಿದ್ದವನು ; ಕಣ್ಣಿನ ಕಾಚರೋಗವುಳ್ಳವನು. ೧, ೨ : ಅಳಿಯಂ ಪೂಗಣ್ಣನನ್ನೀ ಮಗಳೆ ಚಪಳೆ ಪುತ್ರಂ ಕತಂ ರಾಜಯಕ್ಷ್ಮಾಕುಳನೆನ್ನೈಶ್ವರ್ಯಮುಂ ನಿರ್ಜರರೆ ಕವರ್ದರ್ . . . ಎಂದೆಂದೋಳಗಂಭೋರಾಶಿ ಚಿಂತಾಗ್ನಿಯನೆ ತಳೆದವೋಲೌರ್ವನಂತಸ್ಥಮಿರ್ಕುಂ (ಶಾಕಕಿ. ೦-೦೦೨). [ಪೂಗಣ್ + –ಅ₇]

**ಪೂಗನಸು**, ಹೂಗನಸು (ನಾ). ಹಿತಕರವಾದ ಸ್ವಪ್ನ; ಸುಖಕರವಾದ ಕನಸು : ಪಣ್ಣಾಗಲಿರ್ಪುದು ಸಿರಿಯ ಪೂಗನಸಿಂದು ತನ್ನಿಷ್ಟದಾದರ್ಶವಂ ಪೂಜಿಸೋಲ್ದಸಿ ಬೆಂಬಾಲಿವುದೊ (ಶ್ರೀರಾಮಪಾ. ೦೨೬-೬೨). **ಹೂಗನಸು :** ಇದಿ ಪರುಷದ ಹೊಸ ಹರುಷಕೆ ಹೂಗನಸಿನ ತೇರು (ಶಂಕು. ೯ ೩).

[ಪೂ₂ + ಕನಸು]

**ಪೂಗಫಲ**, ಪೂಗಫಳ (ನಾ). ಅಡಕೆ ; ಕ್ರಮುಕ : ಅತಿಮಧುರ ಪೂಗಫಲಂಗಳೊಳಂ ಸರಸನಾಗವಲ್ಲೀದಳಂಗಳೊಳವೆಸೆವ ತಾಂಬೂಲಿಕಾ ನಿಕೇತನಂಗಳೊಳ್ (ಪುಶ್ಪಕೃ. ೨-೮೦ ಪ). **ಪೂಗಫಳ :** ಕುಲುಸೆಯ ದುಗ್ಧದೊಳೊಂದಿರೆ ಮಲವು ಸೂಜಿಶ್ ತೊಯ್ದ ಪೂಗಫಳಮಂ ಪಣೆಶ್ ಪಿಪ್ಪಲಿಯಂ ಬಿಸುನೀರೊಳ್ ಕುಡಿಯಲೊಡಂ ಪ್ಲೀಹಾದಿ ಜಠರರೋಗಂ ಕೆಡುಗುಂ (ಕೋಕೋಶ. ೯-೦೨೩) ; ಗಿಳಿ ಗಿಳಿವೆಣ್ಗೆ ಪೂಗಫಳಮಂ ಕಳಹಂಸೆಗೆ ಹಂಸಸೆಬ್ಬ ಕಂದಳಮನಿಭಂ ಕರೇಣುಗೆ ಲವಂಗದಳಂಗಳನೀವ ಚಿತ್ರಮಂ ತಳೆದು ವಿಳಾಸಮಂ ತಳೆದ . . . ಮೃಣಭಿತ್ತಿ ಚೆಲ್ವನೊಳಕೊಂಡೊಳಕೊಂಡುದಪೂರ್ವಭಿತ್ತಿಯುಂ (ಮಲ್ಲಕು. ೨-೬೩). [ಸಂ.]

**ಪೂಗಫಳ** 'ಪೂಗಫಲ' ನೋ.

**ಪೂಗರಡಿಗೆ** (ನಾ). ಹೂವಿನ ಬುಟ್ಟಿ ; ಪುಷ್ಪಕರಂಡಕ : ಲಿಂಗವಂ ಮೆಚ್ಚಿ ಪುಷ್ಪದ ದಂಡಿ ಲಿಂಗವಂ ಪೂಗರಡಿಗೆಯಲಿ ಬಿಡಿದು ಅಂಗುಗದ್ಯಾನ ಗುರುವ ಶಿವ ತೋಜಿಶ್ (ಕಬ್ಬು. ೩೬-೯೬). [ಪೂ₂ + ಕರಡಿಗೆ (<ಕರಂಡಿಗೆ)]

**ಪೂಗಲ್ಲು**, ಹೂಗಲ್ಲು (ನಾ). ಹೂವಿನಾಕಾರದ ಪಾಣಿಪೀಠದ ಕಲ್ಲು : ಅಗಲಂ ನಿಮ್ಮುತ್ತವಮಂಗದ ಭಾಗಕೀ ಕಲ್ಲುಗಳ ಪೂ[ಪಾಠಾಂ. ಹೂ] ಗಲ್ಲಾಗಿಯೆಲ್ಲಾ ದೇಗುಲಂಗಳೊಳಿರಿಸಿ ಪೂರೆ (ಶಶು. ೩೦ ೬೩); ಗವನಿಸುವ ಲಿಂಗಸಮುಚ್ಚಯಂ ಪೂಗಲ್ಲನಾಜ್ ಕಿಡನೂಂಕಿ ಪೋಜಮುಡುವ ಅಚ್ಚಲಿಂಗವ (ಶಶು. ೩೬-೯೩). **ಹೂಗಲ್ಲು :** ಶಿವನ ಸದ್ಭಕ್ತನೆಂದೆನಿಪ ವೀರಣ್ಣನುಜ್ ಶಿವನಿಳಯದಲ್ಲಿರ್ದ ಹೂಗಲ್ಲ ಹಾಜಿಸುತ ಶಿವಲೋಕಕ್ಕೆದಿದೆಡೆಯಂ ನೋಡಿ (ಶಿಕ್ಕಣು. ೩-೨). [ಪೂ₂ + ಕಲ್ಲು (<ಕಲ್₂)]

**ಪೂಗವನ** (ನಾ). ಅಡಕೆಯ ತೋಟ : ಆ ಪುರದುಪವನದೊಳ್ . . . ಪಂಚಬಾಣ ಕೃಪಾಣ ಪಟ್ಟದೊಡನೆ ಕೊನೆಯ ಬಿಟ್ಟಂ ಕೊನೆದು ತೂಗದ ಪೂಗವನವಿಲ್ಲ (ಕಂಪಾಪು. ೧-೦೦೬ ಪ) ; ಫಳಭರದಿಂ ಮನಂಗೊಳಿಪ ಪೂಗವನಂ . . . ಬನವಾಸಿದೇಸದೊಳು (ಎಕ. VIII, ಸೊರಬ. ೨೬೬-೯೩ ; ಸು. 1165) ; ವರಿಪಪ್ಪಾಂಬುವನೂಡಿ ಪೂಗವನಮಂ ಕಿಲ್ಬಿಕ್ಕಿ . . . ಮೆಜೆದುದುರ್ವಿಬಂಧುರಂ ಸಿಂಧುರಂ (ಪುಶ್ಪಕೃ. ೩-೬೯). [ಸಂ.]

**ಪೂಗವಸರ** (ನಾ). ಅಡಕೆಯ ಅಂಗಡಿ : ನಾಗವಲ್ಲಿಯ ದಲದೊಡಗೂಡಿ ನಲ್ಲರ ಬಾಯ್ಪಿಜಿಗಳ ರಾಗವಮಾಡುವ ಪೂಗವಸರ (ಪುರಾಕ. ೦-೦೦೨).

[ಪೂಗ + ಪಸರ]

**ಪೂಗಾರ**, ಹೂಗಾರ (ನಾ). ಹೂವು ಮಾರುವವನು; ಹೂವಾಡಿಗ : ಪೂಗಾರಗೊಲಿದ ಬಂಡುಗಾರ ಗೊಲ್ಲ (ಶಾಶ್ವ. ೦೩೩-೩) ; ಪೂಗಾರಗೊಲಿದ ಭಂಡುಗಾರ ಗೋವ (ಶಿಷ್ಟ್ರೀಸು. ೨೬-೩). **ಹೂಗಾರ** : ಗೊರವರು—ಇವರಿಗೆ ಕೆಲವು ಕಡೆಯಲ್ಲಿ ಜೀರರೆಂತಲೂ ಕೆಲವು ಕಡೆಯಲ್ಲಿ ಹೂಗಾರರೆಂತಲೂ ಅನ್ನುವರು (ಕೆಶಾಗ. ೦೦೬) ; ಆ ಹೂಗಾರವನು ಅವರಿಗೆ ಇರಲಿಕ್ಕೆ ಒಂದು ಕೋಣೆಯನ್ನು ಕೊಟ್ಟನು (ಶಾಕಹಂ. ೦೬) ; ಹಳೆಯ ಕವಿತೆಯ ಬಂಧವು ಹೂಗಾರನು ಕಟ್ಟಿದ ಬಾಸಿಂಗವಾಂತಹದು (ಶಾಹಿಶ ೯೬).

[ಪೂ$_2$ + –ಆರ$_1$ (< –ಕಾಱ)]

**ಪೂಗಿ** (ನಾ). ಅಡಕೆಯ ಮರ : ನಾಳಿಕೇರ ಪೂಗಿಯ ಫಲ ಪನಸೀಳೆ ಬಾಳೆ ಮಾವು ಮಾತುಳುಂಗ ಶಾಲಿಯಾದಿ ವನವೆಲ್ಲಾ ಕಡೆಯಲಿ ಲೀಲೆಯಿಂದ ಬಳಸಿಹವು (ದ್ಯಾಠಾ. ೦೦-೯೯೬). [ಸಂ. ಪೂಗೀ]

**ಪೂಗಿಡ** 'ಪೂಗಿಡು' ನೋ.

**ಪೂಗಿಡು**, ಪೂಗಿಪ, ಹೂಗಿಡ, ಹೂಗಿಡು (ನಾ). ಹೂವಿನ ಗಿಡ; ಹೂವು ಬಿಡುವ ಸಸ್ಯ: ಕರಪುಷ್ಪರಂಗಳಿಂ ತಂದು ಪೂಗಿಡುಗಳ್ಗೆ ನೀರೆಱೆವ ಮಾಣಿಯಾನೆಗಳಿಂ (ಶಾಮಪು. ೨೨೦); ಪೂಗಿಡುವೆಂಬ ಪೆಸರಾಗೆ ಕೋಳವಳ್ಳಿಯು ಗಿಡುಗಳಂ ನಟ್ಟು ನೀರೆಱೆದು ನಡಪೆ ವಳ್ಳಿಗೆಯು ಪೂವಿನಂತಾಗಲಱಿಯದು (ಹೂಣಿಪ್ಪ. ೬-೩೯); ಓಲಗಶಾಲೆ ಪೂಗಿಡುಗಳೊಳಗೆ ಜೇವಣಶಾಲೆ ಮತ್ತ ಭೃಂಗಾಳಿಗೆ . . . ಎನಲೊಪ್ಪುವುವಲ್ಲಿಯ ಪುಷ್ಪವಾಟಿಗಳ್ (ಪುಪ್ಪ. ೨-೫೦). **ಪೂಗಿಡ** : ಪೂಗಿಡದೊಳ್ ಸಿಲ್ಕಿದೊಡು ನಾರುಡೆಯು ಬಿಡಿಸುತ್ತೆ ತಿರುಗಿ ನೋಡಿದಳೆನ್ನಂ (ಶಾಕುಂತ. ೨೬-೯೬). **ಹೂಗಿಡ** : ನಲ್ಲೆಯಂ ನಗುನಗುತ ಹೂಗಿಡಂ ತಲೆದೂಗುತಿಲ್ಲಿ ದಾದಾರೆಂದು ಕರೆಯುತಿಹುವಲ್ಲಿ (ಶಾಬೂಕ. ೦೦೨-೨೬೨). **ಹೂಗಿಡು** : ಕೆಱೆಬಾವಿ ಹೂಗಿಡುಮರಂಗಳಲ್ಲಿ ಗ್ರಾಮ ಮಧ್ಯಗಳಲ್ಲಿ ಚೌಪಥ ಪಟ್ಟಣಪ್ರದೇಶದಲ್ಲಿ ಹಿರಿಯಾಲದ ಮರದಲ್ಲಿ ಮನೆಯ ಮಾಡಿ (ಜಹ. ೫೫೬); ಆವ ಗಿಡುವಂ ನೋಯಿಸಿದಡಂ ಭಾವಿಸುವಡಿದು ಹಿಂಸೆಯನುತಂತೋವಿ ಹೂಗಿಡುಗಳ ಕೆಳಗೆ ಸುತ್ತುವರೆ ಸುರಿಸುತ . . . ಕಮತವಾಗೆ ಧರೆಯ ಮೇಲೆ ಬಿದ್ದೊಂದೊಂದರಳನಾಲ್ಕೆಲವಾನರಲಿ ತಂದು ತಿಪಟ್ಟಂ ಕಾಲ ವೇಳೆಯನಱಿದು ಪೂಜಿಪನು (ಜಹಪು. ೩೮-೦೦). [ಪೂ$_2$ + ಗಿಡು]

**ಪೂಗಿಱು** (ಕ್ರಿ). ಹೂವೆಂದು ಭ್ರಮಿಸು; ಪುಷ್ಪವೆಂದು ಭಾವಿಸು : ಪೂಗೊಯ್ವ ಖಚರ ಶಿಖರದ ಪೂಗಿಡುಗಳ ಕೊಂಬಿನಲ್ಲಿ ತೊಡರ್ದರೆ ಮಿನ್ನಲ್ ಪೂಗೆತ್ತು ತುಡುಂತಾವಳ್ (ಅಜಿತಪು. ೯-೬೯). [ಪೂ$_2$ + ಗಿಱು]

**ಪೂಗು**, ಹೂಗು (ನಾ). ಹೂವು; ಪುಷ್ಪ: ಉಡಿಯ ಲಿಂಗದ ಬೋಳುದಲೆಗಳ ಒಡೆದರಿಸಿವದ ಪಾತ್ರೆ ಕಿವಿಯೊಳು ಜಡಿವ ಪೂಗಿನ ಕಂಬಳಿಯ ಟೊಪ್ಪಿಗೆಯ ಶೃಂಗಾರ . . . ಗೊರವರ ಗಡಣವೀರರು ದೀವಟಿಗೆಯರು ಪೊಗ್ಗತಿ ಗೂಡಿ ಬಂದು (ಹರಿಶ್ಚ. ೦೩-೩೪). **ಹೂಗು** : " ಹೂಗಂಗು ಹೂವಿಂಗೆ " (ಶಶಂ. ೦೬). [< ಪೂ$_2$]

**ಪೂಗುಡಿ** (ನಾ). ೧. ಹೂವಿನ ತುದಿ, –ಕೊನೆ : ರತಿಗವತಂಸಮಾದ ಕೆಳದಾವ ಮರಕೊಳ್ವವನ್ನ ಬಿಲ್ಗೆ ಸಂಗತಶರಮಾದ ಪೂಗುಡಿಗಳಾವ ಮಾರಕೊಳ್ವವು . . . ಎಂದು ಮನ್ಮಥಂ ಪೃಚ್ಛಿಯಿಸಿ ಮಾಮರಕ್ಕೆ ಕೆಂಚರಾಜಸಮಾಶ್ರಯವಿತ್ತನಟ್ಟೆಯಿಂ (ಚಂದ್ರಪ್ರ. ೬-೯೩). ೨. ಹೂವಿನ ಗೊಂಚಲು; ಪುಷ್ಪಸ್ತಬಕ : ಪದಿವಾಱುಂ ಚಮರಜಮಂ ಪದಿನಱುವರ್ ಖಚರಕನ್ಯೆಯರ್ ಪೂಗುಡಿವೇಱಿದ ಜಂಗಮಲತೆಗಳೆನಲ್ ಬಿದಿರ್ಚಿಕ್ಕಿದೆರೊಡನೆ ಮದನನಂದಿಕ್ಕುವಿನಂ (ಶಂಶಾಪು. ೦೨-೨೩); ಆಗಳೆಡೆಗಿಱಿದ ಪೂಗುಡಿಯ ಗುಡಿಗಳೊಳು . . . ಪಾದರಿಯ ಚೌಕಿಗಗಳೊಳು ಬಟ್ಟಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸದಿರ್ದುದು (ಕಶ್ಯಾ. ೨೩೬); ಪಲ್ಲಟಿಸಿತ್ತು ಪೂಗುಡಿಗಳಂ ಗಿರಿಮಲ್ಲಿಗೆ ಬೀತು ಬಿನ್ನನಾಯ್ತೊಳ್ಳಿಹ ಮೊಲ್ಲೆ ಸೋಗೆನವಿಲೊಲ್ಲದೆ ಮಾಣ್ದುದು ನವ್ಯನಾಟ್ಯಮಂ . . . ಶರದಾಗಮನ ಪ್ರವೇಶದೊಳ್ (ಶಾಶಪು. ೯-೬೩). [ಪೂ$_2$ + ಕುಡಿ$_2$]

**ಪೂಗುವರ** (ನಾ). ಕಮಲದ ಹೂವಿನ ಪುತ್ರ; ಬ್ರಹ್ಮ.

**ಪೂಗುವರಪ್ಪು** – ಬ್ರಹ್ಮಾಂಡ : ನೀಮರ್ಗಳ ಗಂಡನು ಪೆಂಡತಿ ಯೊಳ್ಗೆ ಪನ್ನತಿಯು ಪರಿಜುವೆತ್ತ ಬಿಸುಗೆರಲ ರಕ್ಕಸು ಪೂಗುವರ ತತ್ತಿಯಂ (ಅಜಿತಪು. ೩-೩). [ಪೂ$_2$ + ಕುವರ$_2$]

**ಪೂಗೊಂಚಲ್**, ಪೂಗೊಂಚಲು, ಹೂಗೊಂಚಲು (ನಾ). ಹೂವುಗಳ ಗುಚ್ಛ : " ಆ ಗುಚ್ಛ ಗುಚ್ಛಕಂ ಸ್ತಬಕವೆಂದೆನಲು ಪೂಗೊಂಚಲಕ್ಕು " (ಶಬ್ದಮ. ೩೩-೩); ಮಾಧವೀಲತೆಯನೆ ಸಂದದಿವರ್ಗತ್ತೆಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮಾಱಿದಪುವೇ (ಅಂಪು. ೦೦-೫೦೬); ಪೂಗೊಂಚಲಿಂದೆಯ್ದೆ ಹೇಮನಿಭದ್ಯೋತದಿನೊಪ್ಪುತಿರ್ಪ ಕಳಮಕ್ಷೇತ್ರಂಗಳಾ ದೇಶದೊಳ್ (ಕಬುಕಥಾ. ೨-೯೨); ಲಂಬವಿಸಾದ ಪುರಳಿ ನಿನಗೆ ಪೂಗೊಂಚಲು (ಕಬ್ಬಿಗ. ೩೧೬). **ಪೂಗೊಂಚಲು** : ಮುಂದೆ ಕಂಡನು ದೂರದಲ್ಲಿಹ ನಂದನದ ಮೇಳೆ ತರುನಿಕಾಯದ ಸಂದಣಿಯ ಪೂಗೊಂಚಲಿನ ಪಲ್ಲವನಿಕಾಯದಲಿ ಗೊಂದಣದ ತರುಮಧ್ಯದಲ್ಲಿಹುದೊಂದು ಜಂಬೂವೃಕ್ಷ ಮೆಱೆದಿರೆ ನಿಂದು ನೋಡಿದ ಭೀಮ (ಕುಮ್ಯಾ. ೩-೦೨); ಪರಿಮಳಿತ ಪೂಗೊಂಚಲಿನ ಕೆಂಪೊರೆದ ಕಿಸಲಯ ವಲ್ಲರಿಯ . . . ಕೊಂಡಾಡಿದನು ವನದಣಿಯ (ಕೊಕರಾ. ೫-೨-೯೧); ಕರುಳ ಪೂಗೊಂಚಲು ಖಂಡದ ಕಳಿಕೆ ಜುಧುರದೆಲು ಶಾಖೆಗಳಾಗೆ ಒಂದು ಚೆಂದೊರಳೆದಿರ ಕಬಂಧದ್ರುಮ ಮೆಱೆದುವು ಖಡ್ಗಚೈತ್ರದಲಿ (ಕಂಪಿ. ೦೩-೫೦). **ಹೂಗೊಂಚಲು** : ಕರುಳ ಹೂಗೊಂಚಲಿನ ಮೂಳೆಯ ಬಿರಿಮುಗುಳ ನವಖಂಡದಿಂಡೆಯ ಕರತಳದ ತಳಿರೆಲೆಯ . . . ರಣವನ ಮೆಸೆದುದೀತನ ಖಡ್ಗಚೈತ್ರದಲಿ (ಕುಮ್ಯಾಕಪ್ರೀ. ೬-೯೨); ನಿನ್ನ ಸ್ಪರ್ಶ ಮಾತ್ರದಿಂದ ಪಲ್ಲವ — ಪುಲಕ ಪಡೆದೆ, ಕಂಪಿನ ಕಂಪನ ಪಡೆದೆ, ಹೂಗೊಂಚಲ ರೋಮಾಂಚನ ಪಡೆದೆ! (ಕರುಣೆ. ೨೬-೨೬). [ಸಂ.]

**ಪೂಗೊಂಚಲು** 'ಪೂಗೊಂಚಲ್' ನೋ.

**ಪೂಗೊಯ್**, ಹೂಕೊಯ್, ಹೂಕೊಯ್ಯು (ಕ್ರಿ). ಹೂವುಗಳನ್ನು ಬಿಡಿಸು, –ಕಿತ್ತು : ಮರನ ಮೇಗಿರ್ದು ಪೂಗೊಯ್ವ ವಸಂತಕನೆಂಬ ಮಾಲೆಗಾಱನರಸನ ಸಾವಂ ಕಂಡು . . . ಭಯಸ್ಥನಾಗಿ (ವಡ್ಡಾರಾ. ೦೮೦-೨೩); ನಿಲುಕಿ ಪೂಗೊಯ್ವ ಲಲಿತಾಂಗಿಯ ಬಟ್ಟಬರೊಲ್ಲೆಗಳಂ ಪೊಱಲಾಱದಸಿಯ ಸೆಳೆನಡುವಿಂ ಶಿಥಿಲು (ಕೃಬಿಶಾ. ೬-೦೯); ಪೂಗೊಯ್ದು ಸರಸಿಜಾನನೆ ಪೋಗಲ್ ನೆರೆ ಮುಗಿದುದಿಲ್ಲ ಬಂಧನಕೋಶಂ . . . ನಾಡೆ ಕಾಣೆವುದಿನ್ನುಂ (ಶಾಕುಂತ. ೩೩-೫೬). **ಹೂಕೊಯ್** : ಹೊಲಮನೆಯೊಳೊಲವುಗಳ ಕಾಣ ಕಾಣಿಸಿ ಹೂಕೊಯ್ದು . . . ಮುಡಿಯುವಳ್ ನೇದು (ಶಾಬೂಕ. ೩೩-೩೨). **ಹೂಕೊಯ್ಯು** : ನಾನು ಮಾಮರವನಪ್ಪಿರುವ ಮಲ್ಲಿಗೆಯ ಹೊದರ ಬಳಿಯಲಿ ಹೂಕೊಯ್ಯುತಿದ್ದಾಗ ಆಲಿಸಿದೆ (ಚಂದ್ರಸ. ೬೩-೩).

[ಪೂ$_2$ + ಕೊಯ್]

**ಪೂಗೊಳ**, ಹೂಗೊಳ (ನಾ). ತಾವರೆಗಳುಳ್ಳ ಕೊಳ; ಕಮಲಸರೋವರ: ತಿಳಿಗೊಳನಂ ಪೂಗೊಳನನದಂ ನೆಗಟ್ಟೆ ಮುಳಿದು ಕೊಳ್ವ ಬಳಸೆ ನಾನದಂ (ಕಬಿರಾ. ೨-೦೩೬); ಎಂಟು ಕೋಡಮಟ್ಟೊಳಂತೊಂದೊಂದಱೊಳ್ ಪೂಗೊಳು ನೆಗಟ್ಟ್ವಂದೊಂದೆಸದಿರ್ಕುಂ (ಅಂಪು. ೬-೫೩); ಸಿರಿಯ ಮೊಗರಸದ ಪೊಸ ಮೈಸಿರಿಯೆನಿಕುಂ ಪೂಗೊಳುಗಳ್ (ಶಂಶಾಪು. ೦-೬೪). **ಹೂಗೊಳ** : ಸುಳಿದುದಾ ಮೃಗಪೋತ . . . ಅವನೀನಂದನೆಯ ಹೂ[ಪಾಠಾಂ. ಪೂ]ಗೊಳನ ಹೊರೆಗಾಗಿ (ತೊರರಾ. ೩-೬-೦೮). [ಪೂ$_2$ + ಕೊಳ$_2$]

**ಪೂಗೋಲ್**, ಪೂಗೋಲು (ನಾ). ಹೂವಿನ ಬಾಣ; ಪುಷ್ಪಬಾಣ : ಎಲ್ಲರುಂ ದಾಯ್ಮಡೆ ಗಡಣದ ಪೂಗೋಲ್ಗೆಕೈತಂದುವಾಗಳ್ (ಕಬ್ಬಿಗ. ೩೦೩);

ಗೀದೇಜಗಳಲ್ಲಿ ಕರ್ವಿಲ್ಲು ಮೊರೆವ ಬಾಲಿಪವೆದೆ ಪೂಗೋಲ್ಗಳಿಲ್ಲಿ (ಶಬ್ದಹ. ೯-೬) ; ಖಳು ಕೃಮಾಡುವಂಗಜವ ಪೂಗೋಲ ಗಾಯದಿಂ ವ್ಯಾಮಾಹಿದು . . . ಏಮೊಗನ ರಾಣಿಯುಂ ನಾಡಿಸಿದೊಡೆ (ಕೃಬಣ. ೦೫-೨೬). ಪೂಗೋಲು : ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಕೆಡಿಸಲು (ಶಬ್ದಹ. ೩-೦೯) ; ಬಾಳುಬಟ್ಟಲ ಪಿಡಿದೊಮ್ಮೊಮ್ಮೆ ಪೊನ್ನ ಪೂಗೋಲು ಪೊಂಬರಿಗೆಯಮಂಕೊಮ್ಮೆ ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಮೊಹರಾಳುಗಳಂತೆ ದಿಟ್ಟೆಯರು (ಶಕ. ೦೨-೯೦). [ಪೂ₃ + ಕೋಲ್₁]

**ಪೂಗೋಲ** (ನಾ). ಹೂವಿನ ಬಾಣಗಳುಳ್ಳವನು ; ಮನ್ಮಥ : "ಮನ್ಮಥನೊಳಂ ಪೂಗೋಲನೆಂದಾಯ್ತು" (ಶಬ್ದಾ. ೯೨) ; ಪೊಸ ಪೂಗೋಲನಂತೆಸೆವ ಜೀವಣನು ಶಶಿಮುಖಿ ಕಂಡು ಮದನನ ಕುಸುಮ ಶರಗಳಿಗೆ ತನುವಿತ್ತು ವಿರಹದುಬ್ಬಸದೊಳಗವಳೊಱಗಿದಳು (ಜೀವಂಧ. ೦೬-೦೯) ; ದಾಯನುತೆ ಪೂಗೋಲನ ಬಿಗಿಯುಪ್ಪಿ ಮುಂಗಾರಿಯದಾಗ ಮಾಂತರವ ಪೇಳಿದಳು (ಶೋಹಕ. ೦೦-೬೯) : ಕಾಮಿನಿಯೊರ್ವಳ್ ಲೀಲೆಯಿಮಲರ್ವಿಲ್ಲಂ ಪೂಗೋಲಂಗಿರದೆತ್ತಿ ಕೊಡುವ ರತಿಯಂ ಪೋಲ್ತಳ್ (ಕೃಷು. ೯-೬೬). [ಪೂಗೋಲ್ + –ಅ₇]

**ಪೂಗೋಲು** 'ಪೂಗೋಲ್' ನೋ.

**ಪೂಗೌಂಗು** (ನಾ). ಮೃದುವಾದ ಅಡಕೆ : ಉತ್ತಮವಾದ ಅಡಕೆ : ಲತೆಯುಳಲತೆ ಮಾವಿಮ್ಮಾವು ತೆಂಗು ಚೆಂದೆಂಗು ಕೌಂಗು ಪೂಗೌಂಗು . . . ಪಲಸು ಬಕ್ಕೆವಲಸಾ ಬಸದೊಳ್ (ಶಗು. ೨-೦೯).

[ಪೂ₃+ಕೌಂಗು (<ಕವುಂಗು)]

**ಪೂಚಂಡು** 'ಪೂಚೆಂಡು' ನೋ.

**ಪೂಚೆಂಡು**, ಪೂಚಂಡು, ಹೂಚೆಂಡು (ನಾ). ೧. ಹೂವುಗಳಿಂದ ರಚಿಸಿದ ಚೆಂಡು; ಹೂವಿನ ಚೆಂಡು : ಕಟ್ಟಲುಜ್ಜುಗವೆತ್ತ ಪೂಚೆಂಡು ಪನ್ನೀರ ಪೊಟ್ಟಣ ಯಕ್ಷಕರ್ದಮವ ಬಟ್ಟ ಕಂತುಕದಿಂದೆ ಬಲ್ಲಿರ್ದ್ದಲೆ ಬಿದಿರುವಂತಿಪ್ಪಾಡಿದೂದು ಸವಿನಿವಹ (ಶೋಹಕ. ೦೯-೬೬). ಪೂಚೆಂಡು : ೨. ಹೂವಿನ ಗೊಂಚಲು ; ಪುಷ್ಪಗುಚ್ಛ : ಮೆಟ್ಟಿದ ಪೊನ್ನ ಪಾವುಗೆ ಕರದೊಳಗಳವಟ್ಟ ಸಂಪಗೆಯ ಪೂಚೆಂಡು ತೊಟ್ಟ ಮುತ್ತಿನ ಪೈಠಣೆಯಿಂದ ಚೆಲುವಿನ ಕಟ್ಟೆಱಕದೆ ನಡೆತಂದ (ಕಂಶಪ. ೯-೯೯). ಹೂಚೆಂಡು : ೨. ಮೇಲು ಮುತ್ತಿನ ಗೊಂಡೆ! ಮಲ್ಲಿಗೆಯ ಹೂಚೆಂಡೆ! ಹಾಳಾದೆ ಅಕಟ-ನಾ-ನಿಂದೋಡಾದೆ (ಕುಪ್ಪ. ೯೨-೦). [ಪೂ₃+ಚೆಂಡು (<ಸೆಂಡು)]

**ಪೂಜಕ** (ಗು). ೧. ಪೂಜಿಸುವ ; ಆದರಿಸುವ : ಪೂಜಿತನಪ್ಪ ಶಿವಲಿಂಗಕ್ಕೆ ಸಂತತವು ನಮಿಸಿ ಪೂಜಿಸಿ ಉಂಬ ಪೂಜಕಸಮಾತಿ ದೊರೆಯೇ (ಬಸವ. ೫೯-೨೯). (ನಾ). ೨. ಪೂಜೆ ಮಾಡುವವನಂ ; ಆರಾಧಿಸುವವನು : ಸ್ಥಾವರಜಂಗಮವಱಿಯದ ಪೂಜಕ ನಾನು (ಬಸವ. ೬೬೯) ; ಲೌಕಿಕಾರ್ಚನೆಯ ಮಾಡುವ ಪೂಜಕರ ಮೆಚ್ಚನೆಂದ . . . ನಿಃಕಳಂಕ ಮಲ್ಲಿಕಾರ್ಜುನಾ (ಶೋಭಮ. ೬೦ ೨೩೦) ; ಸಾಧ್ಯ ಸಾಧಕ ಪೂಜ್ಯ ಪೂಜಕ ದೇವ ದೇಹಿಕ ಎಂಬವರಾರೂ ಇಲ್ಲದ ಎರಡಿಲ್ಲದ ನಿರಾಳ ನೀನೆ (ಸಿದ್ಧೇಶ. ೦೬೬-೩೬೦). [ಸಂ.]

**ಪೂಜನ** (ನಾ). ೧. ಪೂಜಿಸುವುದು: ಆರಾಧಿಸುವುದು. ೨. ಆರಾಧನೆ; ಪೂಜೆ : ಸಿದ್ಧಕೂಟದ ಜಿನಬಿಂಬಪೂಜನಾ [ಹಾಂ. ಪೂಜಾ] ನಂತರಂ . . . ಅಕಾಶಚಾರಣಋದ್ಧಿಪ್ರಾಪ್ತರಾಗಿರ್ದು (ಕಾಪುಂಕ. ೦೨೯). [ಸಂ.]

**ಪೂಜನೆ** (ನಾ). = ಪೂಜನ ೨ : ದೇಗುಲಂಗ ಅರ್ಚನೆ ಪೂಜನೆಯ ಮಾಡುವುದು (ಬಸವ. ೦೬೩). [ಸಂ. ಪೂಜನಾ]

**ಪೂಜಲ್ಲಿ**, ಹೂಜಲ್ಲಿ (ನಾ). ಹೂವಿನ ಕುಚ್ಚು : ರಂಗವಲ್ಲಿಗಳನಿಟ್ಟು ಪೂಜಲ್ಲಿಗಳಂ ಬಿಟ್ಟು (ಅದ್ಯಪ. ೦೦-೨೬). ಹೂಜಲ್ಲಿ : ಬಳ್ಳಿ ಬಳ್ಳಿ ಹೂಜಲ್ಲಿಯಲ್ಲಿ ಮುಂಬನಿಯ ತುಳುಕಿ ಚೆಲ್ಲು (ಕವೀಶ. ೬-೨೦). [ಪೂ₃ + ಜಲ್ಲಿ₂]

**ಪೂಜಾಕಾರಿ** (ನಾ). ಅರ್ಚಕ ; ಪೂಜಾರಿ : ನಖರ ಜಿನಾಲಯದ ಪೂಜಾಕಾರಿಗಳು ಒಡಮ್ಬಟ್ಟು ಬರಸಿದ ಸಾಸನದ ಕ್ರಮವೆನ್ತೆನ್ದಡೆ (ಎಕ. II, ೩೩೬-೬; 1279) ; ಕೊಡಗಣಿಯ ರಾಮಯಿದೇವರ ಪೂಜಾಕಾರಿ ರಾಮಯಿದೇವನ ಅಳಿಯ ಬೊಮ್ಮಿದೇವಗೆ ಕನ್ಯಾದಾನವಾಗಿ ಮದುವೆಯನು ಮಾಡಿ (ಎಕ. VIII, ಸೊರಬ. ೦೯-೩೧ ; 1449). [ಸಂ. ಪೂಜಾಕಾರಿನ್]

**ಪೂಜಾಗಜ** (ನಾ). ರಾಜನ ಪಟ್ಟಾಭಿಷೇಕಕಾಲದಲ್ಲಿ ಪೂಜೆ ಮಾಡಿಸಿಕೊಳ್ಳುವ ಆನೆ ; ಪಟ್ಟದಾನೆ : ಪಟ್ಟವರ್ಧನ : "ಪೂಜಾಗಜಮೆನಲ್ ಪಟ್ಟವರ್ಧನಾಖ್ಯಂ" (ಕಕೈ. ೯೦) ; "ಪೂಜಾಗಜಮೆಂದೆನಿಪ್ಪುದು ಪಟ್ಟವರ್ಧನ ನಾಮ" (ಕಶ್ಯಮ. ೩೯). [ಸಂ.]

**ಪೂಜಾಗಾರ** (ನಾ). ದೇವರ ಪೂಜೆ ಮಾಡುವ ಸ್ಥಳ ; ದೇವಾಲಯ : ನಗರಗಳಲ್ಲಿ (ಬಹುಮಟ್ಟಿಗೆ ಹಳ್ಳಿಗಳಲ್ಲಿಯೂ) ಮೂರ್ತಿಯುತ ಅಥವಾ ಮೂರ್ತಿಗಳಿಲ್ಲದ ಪೂಜಾಗಾರಗಳಿದ್ದುವು. ಇವುಗಳಿಗೆ ಆಯತನ ಅಥವಾ ಚೈತ್ಯಗಳೆಂಬ ಹೆಸರಿತ್ತು (ಕಶ್ಯಪ್ರಾ. ೬೦). [ಸಂ.]

**ಪೂಜಾದ್ರವ್ಯ** (ನಾ). ಅರ್ಚನೆಗೆ ಬಳಸುವ ನೀರು, ಹೂವು, ಗಂಧ, ಪತ್ರೆ, ಧೂಪ, ದೀಪ ಮೊದಲಾದ ಪರಿಕರ : ಅರಮನೆಯ ಸುಮಂಗಲೆಯರೂ ಬ್ರಾಹ್ಮಣರೂ ವೇದಘೋಷಗಳೊಡನೆಯೂ ಪೂಜಾದ್ರವ್ಯಗಳೊಡನೆಯೂ ನಂದಿನಿಯ ಬಳಿ ಸಾರಿದರು (ಮುಹಾಅ. ೨೯). [ಸಂ.]

**ಪೂಜಾಫಲ** (ನಾ). ಪೂಜೆ ಮಾಡುವುದರಿಂದ ಉಂಟಾಗುವ ಪರಿಣಾಮ,– ಸಂಪಾದಿಸುವ ಪುಣ್ಯ : ನಹುಷಾವನೀಶನೆಂಬವನಿತ್ತರ್ ಪೂಜಾಫಲದಿಂ ಸಗ್ಗಕ್ಕೋಡೆಯನೆಯ್ತರ್ಪ ಸಮಯದೊಳ್ (ಶಾಂತೀಶ. ೧-೨-೫೬) ; ಹಾಗಾದರೆ ಪೂಜಾಫಲದಲ್ಲಿ ನನಗೂ ಅರ್ಧ (ಕಾಳಂತ. ೬೦-೯). [ಸಂ.]

**ಪೂಜಾಮಂದಿರ** (ನಾ). ದೇವರ ಪೂಜೆಯನ್ನು ಮಾಡಲು ಇರುವ ಕೋಣೆ : ಬೆಳಕಿನ ಮೋಡದ ನಡುವೆ ತೂಗುವ ಹಸಿರು ಮನೆಯಲ್ಲಿ ಮೇನಕೆಯು ತನ್ನ ಪೂಜಾಮಂದಿರವನ್ನು ಕಟ್ಟಿದ್ದಾಳೆ (ಮುಹಾಅ. ೦೬೮).

[ಸಂ.]

**ಪೂಜಾಮದ** (ನಾ). [ಜೈನ] ಎಂಟು ಬಗೆಯ ಮದಗಳಲ್ಲಿ ಒಂದು ; ತಾನು ಪೂಜ್ಯನೆಂಬ ಗರ್ವ : ಪೂಜಾಮದ . . . ತನಗೆ ಮಾನ ಮರ್ಯಾದೆಗಳು ದೊರಕಿದವೆಂಬ ವಿಷಯದಲ್ಲಿ ಹಲವರಿಗೆ ಸೊಕ್ಕು ಬರುತ್ತದೆ. ಇಂಥ ಸೊಕ್ಕನ್ನು ಸಮ್ಯಗ್ದೃಷ್ಟಿಯು ಮಾಡುವದಿಲ್ಲ (ಪ್ರಾರಕಾ. ೬೦). [ಸಂ.]

**ಪೂಜಾಯ** (ನಾ). ಅರ್ಚನೆಯ ಕ್ರಮ ; ಪೂಜಾವಿಧಿ : ರಾಯನು ರಾಯನ ಸುತರು ವಸ್ತುಗಳ ಪೂಜಾಯವಱಿದು ನೀಡಿ ಕೊಡಲು ತಾಯಿ ಪೂಜಿಸಿದಳಾ ಸ್ವಾಮಿಯನು (ಶಹ. ೫೯-೨೦). [ಸಂ.]

**ಪೂಜಾರಾಧನ** (ನಾ). [ಜೈನ] ನಲವತ್ತೆಂಟು ಬಗೆಯ ದೀಕ್ಷಾನ್ವಯ ಕ್ರಿಯೆಗಳಲ್ಲಿ ಒಂದು ; ಗುರುಮುಖದಿಂದ ಧರ್ಮವನ್ನು ತಿಳಿಯುವುದು: ಎರಡನೆಯ ದೀಕ್ಷಾನ್ವಯಕ್ರಿಯೆಯೊಳಗವತಾರಮುಂ ವೃತ್ತಿ(ಧೃತಿ)ಲಾಭಮುಂ ಸ್ಥಾನಲಾಭಮುಂ ಗುಣಗ್ರಹಣಮುಂ ಪೂಜಾರಾಧನ [ಶಾಂ. ಪೂಜಾರಾಧ್ಯ]ಮುಂ . . . ಉಪಯೋಗಿತ್ವಮೆಂಬೆಂಟು ಗರ್ಭಾನ್ವಯ ಕ್ರಿಯೆಯೊಳ್ ಪೇಟ್ದ ಉಪನೀತಂ ಮೊದಲಾಗೆ ನಿವೃತ್ತಿಪರ್ಯಂತಮಪ್ಪ ನಾಲ್ವತ್ತುಮಂತು ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಯೊಳ್ (ಕಾಪುಂಕ. ೨೦೨). [ಸಂ.]

**ಪೂಜಾರಿ** (ನಾ). ಅರ್ಚಕ ; ಪೂಜಕ : "ಪೂಜಕಃ, ಪೂಜಾರೀ, ಪೂಜಾಕಾರಃ—ಈ ೩ ಅರ್ಚಕಂ" (ಅಭಿಕೋ. ೨೬೩) ; ದೇವರ್ಗ್ಗೆ ಭಕ್ತರಪ್ಪರನೆ ಪೂಜಾರಿ ಮಾಡಿ . . . ನಡಸುವುದು (ಕೊಲ್ಲಾಪುರ. ೯-೦೯ ; 1083) ; ಅಚ್ಚಗುಗ್ಗುಳಮನರ್ಪಿಸುತೋಹಿಲದೇವನುದ್ದಂಡಭಕ್ತಿಯಿನಾ ಸೋಮೇಶ್ವರನ ಪೂಜಾರಿಗಳ್ಕಂಡು (ಅದ್ಯಪ. ೦೦-೯೩ ಶ) ; ಪೂಜಾರಿಯು ಕರ್ತವ್ಯ

ಭ್ರಷ್ಟನಾದರೆ ಅವನನ್ನು ದೇವರು ಶಿಕ್ಷಿಸುತ್ತಾನೆ (ಹಳ್ಳಿ. ೨೮) ; ದೇವರು ವರ ಕೊಟ್ಟರೂ ಪೂಜಾರಿ ಕೊಡ (ಗಾದೆ). [<ಸಂ. ಪೂಜಾಕಾರಿನ್‌. / ಓಂ. ಮರಾ. ಪುಜಾರೀ./ತೆಲು. ಪೂಜಾರಿ]

**ಪೂಜಾರಿಕೆ** (ನಾ). ಅರ್ಚಕನ ಕೆಲಸ ; ಪೂಜೆ ಮಾಡುವ ವೃತ್ತಿ : ನವಿರಂಗಳ ಅಯಿಸೂರ್ಬ್ಬರ ಸಮಕ್ಷದಲ್ಲಿ ಕೊಟದು ೧೧ ಪೂಜಾರಿಕೆಗೆ ೧ (ಸೌಇಇ. XX. ೧೦೨-೧೪ ; 1132) ; ನಿಮ್ಮ ಓರಿಯುವರೇನೋ ನೀಲಕಂಠನ ಗುಡೀಲಿ ಪೂಜಾರಿಕೆ ಮಾಡ್ತಿದ್ದರಂತಲ್ಲ (ಶೇಷು. ೪೪). [ಪೂಜಾರಿ + –ಇಕೆ]

**ಪೂಜಾರ್ಹ** (ನಾ). ೧. ಪೂಜೆಗೆ ಯೋಗ್ಯವಾದುದು : ಕಳಾಹೀನವಾದ ಆ ಮೂರ್ತಿಯು ಪೂಜಾರ್ಹವಾಗುವುದಿಲ್ಲ (ಶಾರತ. ೭೮). ೨. ಮಾನ್ಯನಾದವನು ; ಪೂಜೆಗೆ ಯೋಗ್ಯನಾದವನು : ಎಲೈ ಅಗ್ನಿಯೇ, ನೀನು ಅಲೌಕಿಕವಾದ ಪ್ರಕಾಶವುಳ್ಳವನು. ಪೂಜಾರ್ಹನು (ಋಕ್ಸಾರ. ೨೩). [ಸಂ.]

**ಪೂಜಾವಚನ** (ನಾ). ಗೌರವಾರ್ಥವಾಗಿ ಬಳಸುವ ಮಾತು : "ತತ್ರಭವಾನ್ ಭಗವಾನ್—(ಇವೆರಡುಂ) ಈ ೨ ಪೂಜಾವಚನಂ. ಪಾದಃ, ದೇವಃ, ಭಟ್ಟಾರಕಃ—ಈ ಮೂಱುಂ ಪೆಸರ ಕಡೆಯೊಳ್ ಪೂಜಾವ(ಚ)ನಂ" (ಶಬ್ದಾಯು. ೨೩-೦೩೪). [ಸಂ.]

**ಪೂಜಾವಾಜಿ** (ನಾ). (ರಾಜನ ಪಟ್ಟಾಭಿಷೇಕಕಾಲದಲ್ಲಿ) ಪೂಜೆ ಮಾಡಿಸಿಕೊಳ್ಳುವ ಕುದುರೆ ; ಪಟ್ಟದ ಕುದುರೆ : ಪೂಜಾವಾಜಿ ವಿಲೋಚನವಿಗಳದಶ್ರುಬಿಂದುಗಳನಾನಂದಾಶ್ರುಬಿಂದುಗಳೆಂದುಂ . . . ಅಭೂತಪೂರ್ವಮುತ್ಪಾತಂಗಳನೇನುಮಂ ಬಗೆಯದೆ ಕೋಪಮನೆ ಬಗೆದು (ಶಂಕಾವಾ. ೦೪-೧೨೪ ವ). [ಸಂ.]

**ಪೂಜಾವಿಧಾನ** (ನಾ). ಪೂಜೆ ಮಾಡುವ ಕ್ರಮ : ಇಂದ್ರ ಚಕ್ರವರ್ತ್ಯಾದಿನಿತ್ಯಸಿರ್ವರ್ತ್ಯಮಾನಂ ಮಹಾಮಹಸರ್ವತೋಭದ್ರಾದಿಕಂ ಪೂಜಾವಿಧಾನ ಮನೇಕವಿಧಂ (ಶಾಂತಿಪು. ೬–೪೪ ವ). [ಸಂ.]

**ಪೂಜಾವಿಧಿ** (ನಾ). ಆರಾಧನೆ; ಪೂಜಾಕಾರ್ಯ : ದ್ವಿಜರಿಂ ಪೂಜಾವಿಧಿ ಮಂತ್ರಪೂರ್ವಕಂ ಬಾಗಿಲೊಳ್ ತೋರಣಂಗಟ್ಟಿ . . . ಗೃಹವೇದಿಗಳಿಂ ಪ್ರಯೋಗಿಸುವುದು ಪ್ರೀತಿಕ್ರಿಯೆ (ಶಾಷಂಪು. ೨೦೩) ; ಯಾರ ಹೆಸರಿನಲ್ಲಿ ಅಷ್ಟೆಲ್ಲ ಪೂಜಾವಿಧಿಗಳು ಜರುಗುತ್ತಿದ್ದುವೋ ಅವೆಲ್ಲ ಆ ಯೇಸುವಿನ ಮುಖಕ್ಕೆಸೆದ ಪರಿಹಾಸವಂತೆ ಪ್ರೈತಳೆದ ಪಾಷಂಡಿತನದಂತಿದ್ದುವು (ಕ್ರಿಸರು. ೦೭೪). [ಸಂ.]

**ಪೂಜೆ** (ನಾ). ೧. ಬಿಂದು ; ಅನುಸ್ವಾರ : ಪಾಜಿ ಪ್ರಶ್ನಾರ್ಥಕವು. ವಿಷ್ಣುಕ್ರಾಂತಿ ವಿಸರ್ಗ, ಪಾರಿಜಾತವೆ ಪೂಜಿ. ಅನುಸ್ವಾರವು ! (ಕರುಶ್ರಾ. ೨೩.೦೨). ೨. ಸೊನ್ನೆ ; ಶೂನ್ಯ : ಉತ್ತರ ನೂರು ಬರಬೇಕು. ಹತ್ತು ಬರೆದಿರುವಿ. ಮುಂದಿನ ಪೂಜಿ ಸ್ವಲ್ಪ ಅಳಿಸಿದ್ದೀತು! (ಸಿರಾಶ. ೮೬) ; ಅವನ ಸಂಬಳ ದೊಡ್ಡದು, ಭೂಮಿಯು ಉತ್ಪನ್ನ ಬೇಕಾದಷ್ಟು. ಆದರೆ ಉಳಿಕೆ ಮಾತ್ರ ಪೂಜಿ (ಕವನ. ೩೦). [<ಪೂಜೆ]

**ಪೂಜಿಗ** (ನಾ). ಅರ್ಚಕ ; ಪೂಜಾರಿ : ಆ [ಪೂ]ಜಿಗಂಗ ಮುದ್ದಳಿ ಕಾಱಿರಿವ್ವರ್ಗ್ಗ ಏರೆ ಮತ್ತರ ೨೭ ಪೊಗೆ ಮಾತ್ತ ೨೦ (ಸೌಇಇ. XX. ೩೦೦-೪ : 12ನೆಯ ಶ). [ಪೂಜೆ + –ಇಗ]

**ಪೂಜಿತ** (ಗು). ೧. ಅರ್ಚನೆಯನ್ನು ಪಡೆದ; ಪೂಜೆ ಮಾಡಿಸಿಕೊಂಡ: ಈ ವಿಚಾರಶಾಸ್ತ್ರವೂ ವೇದದಂತೆ ಪೂಜ್ಯವಾದುದರಿಂದ ಪೂಜಿತ ವಿಚಾರ ಶಾಸ್ತ್ರವೆಂದು ಇದನ್ನು ಕರೆಯುತ್ತಾರೆ (೭೦ನಿಶಾ. ೦೪೪). (ನಾ). ೨. ಪೂಜೆಯನ್ನು ಪಡೆದುದು : ಸುರಪತಿಪೂಜಿತಂ . . . ಜಿನಸೇನಮುನೀಂದ್ರಪದಾಂಬುಜದ್ವಯಂ (ಆಪು. ೧–೬). ೩. ಪೂಜೆಯನ್ನು ಹೊಂದಿದವನು ಪೂಜ್ಯ : "ಪೂಜಿತಃ, ಅಪಚಿತಃ—ಈ ೨ ಪೂಜೆ ಪಡೆವವಂ" (ಶಬ್ದಾಮಣಿ ೩೩ ೨೨೪) ; ಈ ದಿವ್ಯತೂರ್ಯಸ್ವರವೊ, ದಿವ್ಯಗಾಯನವೊ ಇವುಗಳಿಂ ಸುಗತನಿದೊ ಸತ್ಕೃತಂ, ಗುರುಕೃತಂ, ಮಾನಿತಂ, ಪೂಜಿತಂ ತಾನಲ್ಲ! (ಕೃಶಾಮ. ೬೩–೩೦೨). ೪. ಗೌರವ; ಮರ್ಯಾದೆ : 'ಪೂಜಿತಗೆಡಿಸು' ಪರಾ. [ಸಂ.]

**ಪೂಜಿತಗೆಡಿಸು** (ಕ್ರಿ). ಗೌರವವನ್ನು ಇಳಿಸು ; ಮರ್ಯಾದೆ ಕೆಡಿಸು; ಅಗೌರವಕ್ಕೆ ಗುರಿಮಾಡು : ರಾಜವಂಶೋದ್ಭವರನು ರಾಜರೆನ್ನದೆ ಪೂಜಿತಗೆಡಿಸಿ ಪೇಳ್ವಾಗ ರಾಜತ್ವಕದು ಭಂಗವಲ್ಲವೆ (ಶರಶ. ೩೮-೦೦೦). [ಪೂಜಿತ + ಕೆಡಿಸು₁]

**ಪೂಜಿಸು** (ಕ್ರಿ). ೧. ಅರ್ಘ್ಯ, ಪಾದ್ಯ, ಗಂಧ, ಮಾಲೆ ಮೊದಲಾದುವುಗಳಿಂದ ಸತ್ಕರಿಸು ; ಪೂಜೆ ಮಾಡು : ಪ್ರತಿಮಾಯೋಗಂ ನಿಂದೊರು ದೇವರ್ಕಳುಂ ಮನುಷ್ಯರ್ಕಳುಂ ಬಂದು ಕಿರಿದಪ್ಪ ಪೂಜೆಯುಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆ (ವಡ್ಡಾರಾ. ೭೪-೨೬) ; ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ (ಬಸವ. ೪೪) ; ಕರ್ಣನಾಯುಧ ಶಾಲೆಯುಳಿ ಶುಚಿಯಾಗಿ ಶಸ್ತ್ರಾಸ್ತ್ರವನು ಪೂಜಿಸಿದ (ಕುವ್ಯಾ. ೪-೬) ; ಪೂಜಿಸುವರೆಲ್ಲರೂ ಪೂಜ್ಯರೆನಗೆ : ಪೂಜ್ಯರನು ಪೂಜಿಸುವುವೂ ಪೂಜೆ ನಿನಗೆ ! (ಅರಶೇ. ೩೬-೦). ೨. ಗುಣಿಸು; ಗುಣಾಕಾರಮಾಡು : "ಕಾದಿಸು ಪೂಜಿಸು ಉತ್ತಮದಿಂ ಪೇಟ್ ಮೊದಲ ಗುಣಕಾರಂಗಳ್" (ವ್ಯವಶಾ. ೦೦-೦೦). [ಪೂಜನ + –ಇಸು₁]

**ಪೂಜು** (ಕ್ರಿ). ೧. ಪೂಜೆಮಾಡು ; ಅರ್ಚಿಸು : ಹವಣೆಗಾರನು ಕಾರ್ಯ ಮಾಳ್ವರೆ ಜವದಿ ಹರಿಯಸು ಪೂಜೆ ನುತಿಸುವ ಕವಡು ಕುಟಿಲಗಳಿಲ್ಲ ಮನದೊಳು ಅರಸಿ ನೋಡಿದಡೆ (ಹಮುಶ. ೦೦೬). ೨. ಗೌರವಿಸು; ಮನ್ನಿಸು: ತನ್ನ ಮನೆಯ ಮದುವೆಯೊಳು ಮಂಗಲದೊಳು ತನ್ನ ಬಾಂಧವರೆಲ್ಲರನು ಅನ್ನಪಾನಂಗಳಿಂದಾದರಿವುದು ಪತ್ತೆ ಪೊನ್ನುಡೆಯಿತ್ತು ಪೂಜುವುದು (ಕಂಠ. ೪-೩೪). [ < ಪೂಜೆ ]

**ಪೂಜೆ** (ನಾ.) ೧. ಅರ್ಚನೆ; ಆರಾಧನೆ : ದೇವರ್ಕಳುಂ ಮನುಷ್ಯರ್ಕಳುಂ ಬಂದು ಕಿರಿದಪ್ಪ ಪೂಜೆಯುಂ ಮಾಡಿ (ವಡ್ಡಾರಾ. ೭೪–೨೬); ಕವಿತೆಯೊಳಾಸೆಗೆಯ್ದು ಫಲಮಾವುದೊ ಪೂಜೆ ನೆಗಟ್ಟೆ ಲಾಭಮೆಂಬವೆ ಮಲ (ಅಂಕಿ. ೦-೩೬); ಒಲುವಿಲ್ಲದ ಪೂಜೆ ನೇಹವಿಲ್ಲದ ಮಾಟ ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ (ಬಸವ. ೦೨೭). ೨. ಗೌರವ ; ಮನ್ನಣೆ : ಸೆಣಸಿ ಶೂರ ಸಂಗ್ರಾಮದಲಿ ಬಳ್ದೊಡಂ ಬಳ್ದೊಡಂ ಸನ್ಮಾನ್ಯನಾ ಕಲಿಯೆ, ಮೇಣಾಳಿದ ಮಂದೆಗಳಿಗಾ ಪೂಜೆ ಸಲ್ಲದೈ (ಶಶ್ರಾಂಗ. ೬೪–೨೧೮೬). ೩. ಸೊನ್ನೆ; ಶೂನ್ಯಚಿಹ್ನೆ: ಎಲ್ಲಕ್ಕೂ ಹತ್ತರಿನ ನಕ್ಷತ್ರವನ್ನು ಹೇಳಬೇಕಾದರೆ ಎರಡರ ಮುಂದೆ ಹದಿಮೂರು ಪೂಜೆಗಳನ್ನಿಡಬೇಕಾಗುವುದು (ಜ್ಯೋತಿಶ್ಯಾ. ೦೨). ೪. (ಆಲಂ) ಶಾಸ್ತಿ ; ಶಿಕ್ಷೆ : ನಿಮ್ಮ ತಂದೆಯವರಿಗೆ ಹೇಳಿ ಬಡುತ್ತೇನೆ, ನಿನಗೆ ಪೂಜೆ ಆಗುತ್ತದೆ (ರೂಢಿ).

ಪೂಜೆ ಪುನಸ್ಕಾರ, ಪೂಜೆ ಪುರಸ್ಕಾರ = ಅರ್ಚನೆ ; ಆರಾಧನೆ : ಸನ್ನಿವಿಗ್ರಹಿ ನಾಗದೇವಯ್ಯಂ . . . ಮೂಲಸ್ಥಾನದೇವರ್ಗ್ಗಂ ಮಲ್ಲಿಕಾರ್ಜುನದೇವರ್ಗ್ಗಂ ಪೂಜೆ ಪುನಸ್ಕಾರ ನಿವೇದ್ಯಕ್ಕವಿವು ಬಿಟ್ಟ ದತ್ತಿ (ಎಕ. VI, ಕಡೂರು. ೦೪೨-೦೭; 1196); ತೌರುಮನೆಯಲ್ಲಿದ್ದರೆ ಏನೋ ಒಂದಿಷ್ಟು ಪೂಜೆ ಪುರಸ್ಕಾರಗಳನ್ನಾದರೂ ಮಾಡಬಹುದು (ಶಾಶಬ. ೬೪). ☞ ಇದೊಂದು ಕೂಡುನುಡಿ. **ಪೂಜೆ ಮಾಡು** = ೧. ಅರ್ಚಿಸು; ಪೂಜಿಸು: ಆರಾಧನೆ ಮಾಡು: ಶಾಂತಲೆ ಲಕ್ಷ್ಮಿಯರಿಬ್ಬರೂ ಸಹಸ್ರಸಹಸ್ರಪುಷ್ಪಗಳಿಂದ ಪರಮಾತ್ಮನ ಪೂಜೆ ಮಾಡಿ ಧನ್ಯರಾದರು (ಶಾಂತಲಾ. ೦೩೦); ಹುತ್ತಕ್ಕೆ ಹಾಲು ಹೊಯ್ದು ಪೂಜೆ ಮಾಡಿದರಂತೆ (ಸಮ್ಮಿರು. ೩೦). ೨. (ಆಲಂ) ಶಾಸ್ತಿ ಮಾಡು: ಪಾಠ ಓದದೆ ಇದ್ದುದಕ್ಕೆ ಮೇಷ್ಟರು ಪೂಜೆ ಮಾಡಿದರು (ರೂಢಿ). **ಪೂಜೆ ಹಾಕು** = ೧. ತಾಂತ್ರಿಕ ಪೂಜೆ ಮಾಡಿ ಮೆಟ್ಟಿಕೊಂಡ ದೆವ್ವವನ್ನು ಬಿಡಿಸು : ಪೂಜೆ ಹಾಕಿದ

ನಂತರ ಅವಳಿಗೆ ಅರ್ಧ ಘಂಟೆ ಎಚ್ಚರ ತಪ್ಪಿತ್ತು (ಚೂತ). ೨. ಮಂತ್ರ ಹಾಕು; ಮಂತ್ರಿಸು : ರೋಗಿಯನ್ನು ಕೂರಿಸಿ ೧೦೮ ಬಿಂದಿಗೆ ನೀರನ್ನು ರವರವ ಅಂತ ಎರಚಿ ಸ್ನಾನ ಮಾಡಿಸುತ್ತಿದ್ದರು; ಅನಂತರ ಪೂಜೆ ಹಾಕುತ್ತಿದ್ದರು (ಮತೋಶಿ. ೩೩೫). [ಸಂ. ಪೂಜಾ]

**ಪೂಜೆಗ** (ನಾ). (ಅಲಂ) ಸತ್ವವಿಲ್ಲದವನು : ಅರಸುಗಳ್ಗೆ ವಿರಸಮಾದವ ಸರದೊಳ್ ಜಾಗಿಯುಂ ಲುಬ್ಧನೆಂಬರ್ ಭೋಗಿಯಪ್ಪನಂ ಪೂಜೆಗನೆಂಬರ್ ಸೌಭಾಗ್ಯಮುಳ್ಳವನಂ ಪಾಣ್ಬನೆಂಬರ್ ತ್ಯಾಗಿಯುಂ ಅರ್ಥದೂಷಕನೆಂಬರ್ ಅರ್ಥದೂಷಕನಂ ತ್ಯಾಗಿಯೆಂಬರ್ (ಕಂಕಶಿ. ೩೦-೦೦). 'ಹೂಜೆಗ' ನೋ. [ಪೂಜೆ + -ಗ₁]

**ಪೂಜೆಗೊಟ್ಟು** (ಕ್ರಿ). ಪೂಜೆ ಮಾಡು; ಅರ್ಚಿಸಂ : ಪೂಜೆಗೊಟ್ಟುವ ಪೂಜಾಂಗವಲ್ಲಿ . . . ಧಾರಾಪೂರ್ವಕಂ ಮಾಡಿ ಬಿಟ್ಟ ಬೆದ್ದಲೆ ಮತ್ತಂ ೫ (ಶಾಇ. IX—1. ೦೦೬-೦೨; ೧೦೬೬). [ಪೂಜೆ + ಕೊಟ್ಟು₁]

**ಪೂಜೆಗೆಯ್**, **ಪೂಜೆಗೈ** (ಕ್ರಿ). = ಪೂಜೆಗೊಟ್ಟು : ಅಗ್ಗವಣಿಹೂಗಳಂ ಬೇಗಂ ತಂದಂತಂತೆ ಪೂಜೆಗೆಯ್ಯುತ್ತ (೩ಚಿಶ. ೯-೮೦); ನಿನಲ್ಲದನ್ಯದೈವವ ಪೂಜೆಗೆಯ್ದು ಮತ್ತೇನ ಕಂಡರು ಮಿಥ್ಯಾದವರು (ಶೋಚಿಶ. ೯೦-೬೨). ಪೂಜೆಗೈ : ಸಂಗಮೇಶ್ವರಂಗೆ . . . ಒಸೆಯಂ ಪೂಜೆಗೈದು ಪ್ರಸಾದಕಾಯ ನಾಗಿ ಸುಖದೋಳಿಪ್ಪುದು (ಬಚಿ. ೨-೩೬); ಪೂಜೆಗೈದು ಮೊರೆಯಿಡುತಿಹರಿಲ್ಲ ಭಕುತರವೇ ಬೇಡಲು ದಾಯಿಲ್ಲ (ಗಚಿಶ. ೨-೨೩). [ಪೂಜೆ+ಕೆಯ್₁]

**ಪೂಜೆಗೈ** 'ಪೂಜೆಗೆಯ್' ನೋ.

**ಪೂಜೆಗೈಸು** (ಕ್ರಿ). ಪೂಜೆ ಮಾಡಿಸು; ಅರ್ಚಿಸುವಂತೆ ಮಾಡು : ಕುತೂಹಲಮಂ ಮಿಾಜಲೀಯ ಪಾಂ ಬಂದ ವಿಪ್ರರನಾದರಿಸಿ ಪೂಜೆ ಗೈಸದಿರನು (ಕೃಚಿಶಾ. ೦೦-೨೯). [ಪೂಜೆ + ಕೈಸು (< ಕೆಯ್ಸು)]

**ಪೂಜೆಗೊಡಗಿ** (ನಾ). ದೇವರ ಪೂಜೆಗಾಗಿ ಕೊಟ್ಟ ಭೂಮಿ.—ಉಂಬಳಿ : ಚಾವುಂಡನಾಯಕಂಗೆ ಚತುರಾಣಸೀಮೆಯೊಳಗಾಗಿ ಕೊಟ ಪೂಜೆಗೊಡಗಿಯು ಕ್ರಮ (ಎಕ. XVI. ತುಮುಕೂ. ೬೫-೦೯ ; ೪). [ಪೂಜೆ+ಕೊಡಗಿ (< ಕೊಡಂಗೆಯ್₂)]

**ಪೂಜೆಗೊಳ್** (ಕ್ರಿ). ಪೂಜಿಸಿಕೊಳ್ಳು; ಪೂಜೆಯನ್ನು ಹೊಂದು : ಇಂತೀ ದ್ವಿವಿಧ ಒಂದಾಗದ ಮುನ್ನ ಕೂಡಲಸಂಗಮದೇವರು ಪೂಜೆ ಗೊಂಡರು (ಬವಚ. ೯೩೬); ಪೂಜೆಗೊಳಲ್ಕೆ ಬಂದು ನಿಜಮಂದಿರಕಮಂ ಪೆಲೆವೆಡಗೊಂಡು ರಾಜಿಪ ನಂದನಂದನನ ಚಂದಮನೊಂದಿಸಿ ಚಿತ್ರ ಭಿತ್ತಿಯೊಳ್ (ಜಾಶ. ೩-೦೯). [ಪೂಜೆ + ಕೊಳ್₁]

**ಪೂಜೆವಂತ** (ನಾ). (ಆಡಂಬರದ) ಪೂಜೆ ಮಾಡುವವನಂ: ಗುಣಾವನಜಾಯ ರಾಗಿ ಶೀಲವಂತಂಗೆ ನೇಮವಿಲ್ಲ ಘಾತಕಂಗೆ ಭಕ್ತಿಯಿಲ್ಲ ಪೂಜೆವಂತಂಗೆ ಲಿಂಗವಿಲ್ಲ ತ್ರಿವಿಧವ ಮಚ್ಚಿಯದವಂಗೆ ಜಂಗಮವಿಲ್ಲ (ಶೋಶಿಖಾ. ೩೨-೨೦೬). 'ಪೂಜ್ಯವಂತ' ಮರಾ. [ಪೂಜೆ + -ವಂತ]

**ಪೂಜೆವಡೆ** (ಕ್ರಿ). ಪೂಜೆಯನ್ನು ಹೊಂದು ; ಪೂಜಿಸಿಕೊಳ್ಳು : ಈ ಮಹಾತ್ಮಂ ಧರೆಗಚ್ಚರಿಯಾಗೆ ಭಕ್ತಿಯಿಂದಂ ಸುರರಿಂದಂ ಪೂಜೆವಡೆದಂ (ಕರ್ಣಾಮೃ. ೬-೨೬೩); ಈ ಪೊಡವಿಯೊಳಜಂ ಪೂಜೆವಡೆಯನ ಹೇಗುಲ ದೊರೆದರ್ (ಚತು. ೫೯-೩). [ಪೂಜೆ + ಪಡೆ₁]

**ಪೂಜೋತ್ಸಾಹ** (ನಾ). ೧. ಪೂಜೆ ಮಾಡುವುದರಲ್ಲಿರುವ ಉತ್ಸುಕತೆ. ೨. ಆರಾಧನೆಯಲ್ಲಿ ಉತ್ಸುಕನಾದವನಂ : ಷಟ್ಕರ್ಮನಿರತರತಿಥಿ ಅಭ್ಯಾಗತವಿಶಿಷ್ಟಜನಪೂಜೋತ್ಸಾಹವ್ಯವಹಾರಚತುರ್ಮುಖರ್ . . . ಅಪ್ಪ ಶ್ರೀಮತ್ ಪಟ್ಟಿಲನಾಲ್ವತ್ತೆಂಟ್ವರ್ದಿಂಬರ್ (ಶಾಇ. XX. ೩೬-೯; ೧೦೬೬). [ಸಂ.]

**ಪೂಜೋಪಕರಣ** (ನಾ). ಪೂಜೆ ಮಾಡಲು ಬೇಕಾಗುವ ಸಾಧನ.— ಸಲಕರಣೆ : ಚಿನ್ನ ಬೆಳ್ಳಿಗಳ ಪೂಜೋಪಕರಣ, ಸೇವೋಪಕರಣ . . .

ಇವುಗಳನ್ನು ಒಪ್ಪಿಸಿ ದೇವತಾಸೇವೆಯನ್ನು ಮಾಡಿದರು (ಮಚಾಚ. II. ೦೨೪). [ಸಂ.]

**ಪೂಜ್ಯ** (ಗು). ೧. ಗೌರವಕ್ಕೆ ಯೋಗ್ಯವಾದ ; ಮಾನ್ಯ ; ಆದರಣೀಯ. (ನಾ). ೨. ಪೂಜೆಗೆ ಅರ್ಹನಾದವನು ; ಪೂಜನೀಯ ವ್ಯಕ್ತಿ : "ಪ್ರಶಿಕ್ಷ್ಯಃ ಪೂಜ್ಯಃ—ಈ ೨ ಪೂಜಿಸಲ್ಪಕ್ಕಮಂ" (ಕಶಾಹು. ೬೪-೨೨೯); ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು ಕಂಡುದೊಂತೆಯ ಜಂಗಮ ಬಂದರೆ ಹೀನವೆಂದು ಕಂಡೆನಾದರೆ ಪಂಚಮಹಾಪಾತಕ (೩ವಚ. ೯೦೦); ಪೂಜ್ಯರೆ, ತವಸ್ಮಾಜ್ಞೆಯೇನು ? ಕರುಣಿಸ ಬೇಕು (ಶಾಕುಂತ. ೨೬-೨೦); ಪೂಜ್ಯನನ್ನು ಮಹನೀಯನೆಂದು ತಿಳಿಯುವುದೇ ಭಕ್ತಿ ಎನಿಸುವುದು (೩೬೨. ೬೯). ೩. ಪತ್ನಿಯ ಅಥವಾ ಪತಿಯ ತಂದೆ ; ಮಾವ. ೪. ಆದರಣೀಯವಾದುದು ; ಮನ್ನಣೆಗೆ ಯೋಗ್ಯವಾದುದು : ಆಗಸದೊಳು ಚರಿಸುವ ಸುರಸತಿಯರ ಸೋಗೆ ಮುಡಿಗೆ ಪೂಜ್ಯವಾಗಿ ಆಗರಳಿದ ಕಸ್ತೂರಿ ಹೊಂದಾಳೆಯು ಪೂಗವೃಕ್ಷಗಳೊಪ್ಪ ತಿಪ್ಪುವು (೬೦೩ಚ. ೨-೯೦); ಪ್ರಕೃತಿಹಿತಾರ್ಥಂ ಕ್ಷಿತಿಪಾಲಕರುದ್ಯೋಗಿಸುಗೆ ಪೂಜ್ಯಮೆನಿಸುಗೆ ಜಗದೊಳ್ ಸುಕವಿಗಳ ಸೂಕ್ತಿ (ಶಾಕುಂತ. ೦೦೬-೨೯೬). ೫. ಸೊನ್ನೆ ; ಶೂನ್ಯ : ರಾಜ್ಯಗೋಮಿನಿಯೊಳು ನೆಲಸಿರ್ದನೆಂದೊಡೆ ರಾಜ್ಯವು ಪಾಪದಪ್ಪಿರವು ಪೂಜ್ಯವಾಗಿರಬೇಕನಲಾಯುಷ್ಯವ ಪೂಜ್ಯವಲ್ಲದೆ ಚಿರವಲ್ಲ (ಅಸಂತ. ೬-೦೩೦) ; ಜನಾರ್ದನನ ಆಡಳಿತದಲ್ಲಿ ಸಂವಾದನೆಯು ಪೂಜ್ಯವಾದುದರಿಂದ ಸಂಸಾರದಲ್ಲಿ ವ್ಯಾಜ್ಯಗಳೂ ದಿನದಿನಕ್ಕೆ ಅಧಿಕವಾಗ ತೊಡಗಿದುವು (ಮೀಕಮಂ. ೦೦೯). [ಸಂ.]

**ಪೂಜ್ಯತೆ** (ನಾ). ಗೌರವ ; ಮನ್ನಣೆ : ಪೂಜ್ಯಪದರನಾರಾಧಿಪ ಜನಕ್ಕೆ ಪೂಜ್ಯತೆಯರಿದೇ (ಶಾಕ್ಯಗಿ. ೦೯-೦೦೬); ಧಾರ್ಮಿಕ ಮತ್ತು ಆಧ್ಯಾತ್ಮಿಕ ಮಹಾಪುರುಷರ ಆದರ್ಶದಲ್ಲಿ ಯುವಕರಿಗೆ ಪೂಜ್ಯತೆಯೂ ಆಸಕ್ತಿಯೂ ಇರುವುದರಿಂದ ಅವರ ಜೀವನಕಥನಗಳೂ ತತ್ತ್ವದೃಷ್ಟಿಗಳೂ ಪಠ್ಯವಸ್ತು ವಿನಲ್ಲಿ ಅಳವಡಬೇಕು (೩೪ಪ. ೦೬೦). [ಸಂ. ಪೂಜ್ಯತಾ]

**ಪೂಜ್ಯಪದ** (ನಾ). ೧. ಗೌರವದ ಸ್ಥಾನ; ಆದರಣೀಯವಾದ ಪದವಿ : ನನ್ನನ್ನು ಯಾವ ಗೃಹಿಣೀಪದದಿಂದ ನೀಚನಾದ ನೀನು ಒಮ್ಮೆ ಭ್ರಷ್ಟ ಗೊಳಿಸಿರುವೆಯೋ ಆ ಪೂಜ್ಯಪದವು ಜನ್ಮಜನ್ಮಾಂತರದಲ್ಲಿಯೂ ನನಗೆ ದುರ್ಲಭವಾಗಿಬಿಟ್ಟಿತು (೩೬೦ಶ. ೦೬). ೨. ಆದರಣೀಯವಾದ ಪದವಿ ಯಲ್ಲಿರುವವನು ; ಪೂಜನೀಯ ವ್ಯಕ್ತಿ : ಹರಿವಧು ನೂಪುರಮಂ ಜನಚರಣದೊಳಳವಡಿಸಿ ತಳೆಯೆ ಶಿರದೊಳ್ ಮಣಿಶೇಖರಮೆನಿಸಿತಂತೆ ಪೂಜ್ಯಪದರನಾರಾಧಿಪ ಜನಕ್ಕೆ ಪೂಜ್ಯತೆಯರಿದೇ (ಶಾಕ್ಯಗಿ. ೦೯-೦೦೬). [ಸಂ.]

**ಪೂಜ್ಯಪಾದ** (ನಾ). ೧. ಧರ್ಮಬೋಧಕರು, ಸಂನ್ಯಾಸಿಗಳಂ ಮುಂತಾದವರನ್ನು ಸಂಬೋಧಿಸುವಾಗ ಗೌರವಕ್ಕಾಗಿ ಬಳಸುವ ಶಬ್ದ : ಪೂಜ್ಯಪಾದ ಶ್ರೀ ಶಿವಾನಂದಸ್ವಾಮಿಯವರು ಈ ಪೀಠದಲ್ಲಿ ಕುಳಿತು ಕೊಳ್ಳಲಿ (ಚೂತ). ೨. (ಕ್ರಿ. ಶ. ೬೦೦ರಲ್ಲಿ ಇದ್ದ, ಪ್ರಸಿದ್ಧನಾದ) ಒಬ್ಬ ಜೈನಮುನಿಯ ಹೆಸರು : ಪೂಜ್ಯಪಾದಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ (೩೦ಶಿ. ೦-೦೦); ಸುಕವಿಪ್ರಣತವ್ಯಾಕರಣಕರ್ತೃಗಳ್ ಗಗನಗಮನಸಾಮರ್ಥ್ಯರ್ ತಾರ್ಕಿಕಶಿಖರರೆಂದು ಪೊಗಟ್ಟುದು ಸಕಳಜನಂ ಪೂಜ್ಯಪಾದಭಟ್ಟಾರಕರಂ (ಜಾಪುಕೃ. ೨). [ಸಂ.]

**ಪೂಜ್ಯಪಾದತೆ** (ನಾ). ೧. ಪಾದಗಳಿಗಿರುವ, ಪೂಜೆಯನ್ನು ಪಡೆಯುವ ಘನತೆ. ೨. ಪೂಜ್ಯಪಾದಮುನಿಯಂತೆ ಇರುವಿಕೆ. ೧, ೨ : ಕ್ಷಿತಿನಾಥವೃಷಪೂಜ್ಯಪಾದತೆ ನಿಜಾಚಾರ ಪ್ರತೀತಾಕಳಂಕತೆ ವಿದ್ವನ್ನುತ ವೀರಸೇನತೆ ನಿಜಂ ತಾಂ (ಜಂಕೃಶಿ. ೦-೩೦). [ಸಂ. ಪೂಜ್ಯಪಾದತಾ]

**ಪೂಜ್ಯಭಾವ** (ನಾ). ಗೌರವದ ಭಾವನೆ : ಆದರಭಾವ ; ಅವಳ ಅಕ್ಕ

ಸಂಪದರಿಯು . . . ಗುಣಶಾಲಿನಿಯಾಗಿದ್ದುದರಿಂದ ಚಂದ್ರಶೇಖರನ ಯೋಗ್ಯತೆಯನ್ನು ಗ್ರಹಿಸಿ ಅವನನ್ನು ಪೂಜ್ಯಭಾವದಿಂದ ಕಾಣುತ್ತಿದ್ದಳು (ಶಂಕವು. ೨೦೦). [ಸಂ.]

**ಪೂಜ್ಯಭಾವನೆ** (ನಾ). = ಪೂಜ್ಯಭಾವ : ಗಡ್ಡವು ಎದೆಯವರೆಗೂ ಬೆಳೆದಿದ್ದು ನೋಡುವವರಿಗೆ ಒಂದು ಪೂಜ್ಯಭಾವನೆಯನ್ನುಂಟುಮಾಡು ತ್ತಿದ್ದುದು (ಕಳಹು. ೦). [ಸಂ. ಪೂಜ್ಯಭಾವನಾ]

**ಪೂಜ್ಯವಂತ** (ನಾ). ಗೌರವಾನ್ವಿತನಾದವನು ; ಮಾನ್ಯ : ಪೂಜೆಯಿಂದ ತಾ ಪೂಜ್ಯವಂತನಾದಿಹೆನೆಂದು ಮಾಡುವವನಿರವು ಹೊಲತಿ ತನ್ನ ಹೊಲೆಯು ಮಜ್ಜಿಸಿ ಶುದ್ಧ ನೀರ ಮಿಂದೆನೆಂದು ಕೆಲವರ ಮುಟ್ಟುವಂತೆ ಆ ವಿಧಿ ನಿರ್ಮಲಯುತ್ತು ತ್ರಿಕರಣಶುದ್ಧವಿಲ್ಲದ ಪೂಜೆ (ಸೋಣಿವಹ. ೩೯-೦೬೨). [ಸಂ. ಪೂಜ್ಯವತ್]

**ಪೂಜ್ಯೆ** (ನಾ). ಗೌರವಾರ್ಹಳಾದವಳು ; ಆದರಕ್ಕೆ ಯೋಗ್ಯಳಾದವಳು; ಮಾನ್ಯೆ : ದಯೆಯು ತವರ್ಮನೆ ಭವ್ಯಪ್ರಿಯೆ ... ಭುವನೈಕ ಪೂಜ್ಯೆ ಬೀಳಿನಿ ಧರೆಯೊಳ್ (ರಹಸ್ಯ. ೬-೯) ; ಪೂಜ್ಯೆಯಾದ ದ್ರಾಕ್ಷಾಯಣಿ ಹೇಳಿದುದು ನನ್ನ ಕೋರಿಕೆಯೇ ಅಲ್ಲವೆ ? (ಶಾಕುಂತ. ೦೦೩-೪) : ಪೂಜ್ಯೆಯುಂ ಪ್ರಾಣವಲ್ಲಭೆಯಾಗಿ ಪಡೆದ ನಾಂ ಧನ್ಯನ್ (ಶ್ರೀಣವಾ. ೬೨೬-೩೦೬). [ಸಂ. ಪೂಜ್ಯಾ]

**ಪೂಟ, ಪೂಟೆ, ಹೂಟ, ಪೂಟೆ, ಹೂಟೆ** (ನಾ). ೧. ಏರ್ಪಾಟು ; ಯೋಜನೆ : ಇನ್ನುವೋಂದಂ ಬಯಸಿ ಪೂಟವಂ ಪೂಡಿದರ್ (ಹೊಂಗಳು ೩೭-೦). **ಪೂಟ** : ೨. ಬಂಡಿ, ರಥ, ಕುಂಟೆ, ನೇಗಿಲು ಮೊದಲಾದುವು ಗಳನ್ನು ಎಳೆಯುವುದಕ್ಕಾಗಿ ಎತ್ತು, ಕುದುರೆ ಮೊದಲಾದುವು ಗಳನ್ನು ಅಳವಡಿಸಿ ಕಟ್ಟುವಿಕೆ,—ನೊಗ ಹೇರುವಿಕೆ : ಚಿತ್ರಂ ಪೂಟೆಯು ಪಳ್ಳುದುರೆಯು ತನ್ನ ರನ್ನದೇರಂ ನೋಂಕಿ ಕೋಲ ಹಂದರವನೊಡ್ಡಿ ... ನಿಲ್ಲೆಂದು ತಡೆದಂ (ರಾಜಶೇಖ. ೯೬-೩). **ಹೂಟ** : ೧. ಹೂಟ ಇನ್ನೇನು ಗದ್ದಿತು ಎನ್ನುವ ಹೊತ್ತಿನಲ್ಲಿ ಅದು ಹೀಗೆ ಕಾಲು ಜಾರಬೇಕೆ ? (ಶಕಲಾ. ೩೩೦) ; ಕಾಳು ಮನೆಗೆಯ್ದು ಮದುಮೆಯ ಹೂಟವಂ ಶಿಳಿಸಿ ಕೇಳದಂ ಕಡೆಗೆ ಕಾಲ್ಗಟ್ಟುಪೆಹ ಕೇಡೆ (ಕಾಂಡರಿ. ೦೧೦-೪೦೬). ೨. ಧೈರ್ಯ; ಧೌರೇಯ:—ಈ ೨ ಹೂಟದೆತ್ತು (ಹಲಾಯು. ೪೪-೦೦೦) ; ಹೂಟದೊಳು ಏರಿಂಡ ಕಿಟ್ಟದೊಳು ಹೆಟ್ಟಿಂ (ಲ್ಮವಂ. ೪೦). ೩. ತೋರಿಕೆ ; ನಟನೆ : ಶಿವನತ್ತ ಕಾಲಾಗಿ ಮಾಜಿದು ಹೂಟದ ಹೆಣನ ಮಾಳ್ಕೆಯಿಂದಿರ್ಪನಂ ಅಜಿಸುಟ್ಟ . . . ಕಾಲ್ಕೆಗೆಯೆನಲು (ಶಿಕೃಷ್ಣ. ೪-೬-೩). ೪. ಕುಯುಕ್ತಿ ; ಪಿತೂರಿ ; ಸಂಚು ; ಜಾಲ : ನಮ್ಮ ತಪವನು ಕೆಡಿಸೆ ಸುರರು ಹೂಡಿದ ಹೂಟ—ಇಂತಿಲ್ಲದಿನ್ನಿಲ್ಲ—ಬಲ್ಲೆ ನಾನವರಾಟ (ಅತಕ್ಕ. ೪೪-೪); ಎಲ್ಲ ತರಹದ ಹೂಟ ಆವುಟಗಳೂ ನಿಷ್ಫಲವಾದಾಗ ಅವನನ್ನು ಹಿಡಿದೆಳೆದು ರಂಪ ಮಾಡುವಾಗ (ಶಂಕುಂತ. ೬೬). ಅವನನ್ನು ಕಳಿಸಿಬಿಡಲು ಹೂಡಿದ ಹೂಟ ಅದು (ಚಾ:ಕಲಾ. ೨೬೬) . ೫. ರಚನೆ; ಬಂಧ; ಸೇರುವೆ: ಸರಳ ಹರಹಿನ ಹೂಟವನು ಕಾಹುರದ ಕಡುಹಿನಲೊದೆದು ಬೊಬ್ಬಿಜಿ ದುರವಣಿಸಿದನು ಪಾರ್ಥನು (ಕುವ್ಯಾ೪. ೦೫-೩೦). **ಹೂಟ** : ೬. 'ಎಳ ಹೂಟ' ಪರಾ. **ಹೂಟೆ** : ೨. ಧೃತಿಗೆಡಿಸಿ ಹೋರಿಗಳ ಒಡಿಸುಗಳ ಬಡಿದ ಸನ್ನತ ಬಂಜೆಯಾಕಳಂ ಹೂಟೆಯಂ ಹೇಜೂವಾಶ್ರಿತರ ರಕ್ಷಿಸಲಜೀಯನು (ಚಿತಿರ ೩೯-೨೦) ; ಮತ್ತೆ ಕಡಿದನು ರಥವ ಚಾಪವ ಮತ್ತೆ ಹೊಸ ಹೂಟೆ ಯೊಳು ಹೊಕ್ಕರು ತೆತ್ತು ಸವೆದುರು ಶೌರ್ಯದಧಿಮಾನವನು ಪಟು ಭಟರು (ಕುವ್ಯಾಶೀ. ೬-೩೯). ೬. ಉಳುಮೆ; ಬೇಸಾಯ; ಸಾಗುವಳಿ : ಯೂರಯಾಠ ಹೂಟೆಯುಲುಂ ಗಾವುದಶಾನ್ವಿಯುಲುಂ ದೇವರ್ಗ್ಗೆ ಸಹಸ್ರ ನಡುಗೆ ಪೂಜೆ ನಿವೇದ್ಯಕ್ಕೆ . . . ಯೆರೆ ಮತ್ತ ೧ ಕಂ ಳಿಶಿಂ (ಶಾಸ್ತ್ರ- IX—1. ೨೬೬- ೬; 1183); ಜಡಿಮಳೆಯಾದುದರಿಂದ ಯಾರೂ ಹೂಟೆಗೆ ಹೊರಡುವ ಹಾಗಿರಲಿಲ್ಲ (ನಶಿಣ. II. ೦೨೨೬) : ಬೀಜ ಬಿತ್ತುವ ಸಮಯವಾಗಲಿಲ್ಲವೆ ? ಗದ್ದೆ ಹೂಟೆಯಾಗಬೇಡವೇ? (ಕುಂಗಯು. ೪೩). ೭. ಭಾರ; ಹೇರು : ಭಣ್ಣಿಗೆ ದಣ್ಣಿಗೆ ಪೊಂದು ಸೆವೆಯಯ್ದು ಹೂಟೆಯ ರಡರ್ಕ್ಕಂ ವಣ್ಣಿಗೆಪೊಂಡು(ದು)ಸೆವೆಯೆರಡು (ಎಪಿ. XIX. ೪೯-೩೨; 1135). ೮. ಕಟ್ಟು; ಬಂಧನ : ಇಕ್ಕೆಲದೊಳು ಕಬ್ಬಿಯೊಳು ಕಟ್ಟೆ ನೇಲುತಿರ್ಪುಕ್ಕಿನ ಗುಂಡುಗಳಿಂದ ದಿಕ್ಕುದಿಕ್ಕಿನ ಹಗ್ಗದ ಹೂಟೆಯಿಂದತಿಕರ್ಕಸದಿಂ ನಡೆಯುವರು (ಶುಕಾಣಂ. ೯-೯೯). ೯. (ಉದ್ಯೋಗದಲ್ಲಿ ಬಂಡವಾಳವನ್ನು) ತೊಡಗಿಸುವಿಕೆ ; ಹೂಡುವುದು : ಖಾಸಗಿ ಉದ್ಯಮಗಳಲ್ಲಿ ಬಂಡವಾಳ ಹೂಟೆಯು ಬೆಳೆಯುವುದಕ್ಕೆ ಉತ್ತೇಜನ ಕೊಡುವುದರ ಮೂಲಕ ಪ್ರಪಂಚದ ಆರ್ಥಿಕಾಭಿವೃದ್ಧಿಗೆ ಸಹಾಯ ನೀಡುವುದೇ ಕಾರ್ಪೊರೇಷನ್ನಿನ ಉದ್ದೇಶವಾಗಿದೆ (ಅಂಕಸಂ. ೦೦೪).

**ಹೂಟ ಹಾರು** = ಬಂಡಿಯ ಹಿಂಬದಿಗೆ ಭಾರ ಜಾಸ್ತಿಯಾಗಿ ನೊಗದ ಭಾಗ ಕಳಚಿಕೊಂಡು ಮೇಲಕ್ಕೆ ನೆಗೆ: (೪). [< ಪೂಡು]

**ಪೂಟರ್ಜಿ** (ನಾ). ಸಾರಾಂಶವನ್ನು ಒಳಗೊಂಡ ಅರ್ಜಿ : (೪). [ಪೂಟು (< ಪೂಟ್ಟು) + ಅರ್ಜಿ₂]

**ಪೂಟಲಾಯರಿ** 'ಪೂಟ್‍ಲಾಯರಿ' ನೋ.

**ಪೂಟೆ** 'ಪೂಟ' ನೋ.

**ಪೂಟು** 'ಪೂಟ್ಟು₁' ನೋ.

**ಪೂಟುಲಾಯರು** 'ಪುಟ್‍ಲಾಯರು' ನೋ.

**ಪೂಡಿಸು, ಹೂಡಿಸು** (ಕ್ರಿ). ೧. ತೊಡಿಸಂ; ಸೇರಿಸಂ; ಹಾಕು : ಸೊಕ್ಕಿದರವನ ಭೃತ್ಯರವರೆಲ್ಲರಂ ತಂದು ಕಾರಾಗಾರದೊಳ್ನಿಗಳವಂ ಪೂಡಿಸುವೆನು (ಕೃಷ್ಣರಾ. ೨೯-೨೩). ೨. (ಬಂಡಿಯ ಮೇಲೆ ಹೇರಿ) ಸಾಗಿಸು; ರವಾನಿಸು : ಎಣ್ದೆಸೆಯ ಸೀಮೆಗಳನೊತ್ತಿದಂ ಪೂಡಿಸಿದ ನವರವರ ಮನೆಗಳ ಸುವಸ್ತುಜಾಲಂಗಳಂ ತನ್ನ ಪುರಕೆ (ಕೃಷ್ಣರಾ. ೨೯-೪). ೩. ನಿರ್ಮಾಣ ಮಾಡಿಸು ; ರಚನೆಗೊಳಿಸು : ಧರಣ ಬೋಯಿತಿ ಧರೆಯೊಳ್ ಹೊಡೆಹುಲ್ಲ ಬೀಸಿ ಪೂಡಿಸಿ ಪಡೆದಳು ತುಂಗಭದ್ರ ಮಧ್ಯದ ಮೊಜನಂ (ಎಕ. VII. ಹೊನ್ನಾ೪. ೩-೦೩; 1220). ೪. ತಂದು ಒದಗಿಸು; ತರಿಸು : ಶಕಟಸಂದೊಹದಿಂ ಪೂಡಿಸುವ ಸಂಭಾರನಿಕರಕಧಿ ಪತಿಯಾದನನಿರುದ್ಧನು (ಕೃಷ್ಣರಾ. ೩೪-೬). **ಹೂಡಿಸು** : ೨. ಆಂಧ್ರ ಜಾಳಾಂಧ್ರಾಳಿಗಳನಪ್ಪಳಿಸಿ ಹೂಡಿಸಿದನು ಮಹಾಧನವ (ಕುವ್ಯಾಸ. ೪-೦೦); ರೂಢಿಗುತ್ತರದುರುಗಳರ್ಥವ ಹೂಡಿಸಿದನರಮನೆಗೆ ದೈತ್ಯರ ಬೀಡ ಬಿಜಿಗ್ಯೆದನು (ಕುವ್ಯಾಶಿ. ೬-೯). ೩. ಕಂದರ್ಪಾಂಧಕನನುಳುಹುವೊಡೆ ತನಗಿನ್ನಿಂಧನವ ಹೂ[ಪಾಠಾಂ. ಮಾ]ಡಿಸುವುದೈಸಲೆಯೆಂದನಾ ಭೀಮ (ಕುವ್ಯಾಅ. ೨೨-೬೬). ೫. (ಕುದುರೆಗಳನ್ನು ಬಂಡಿಗೆ ಹೂಡಿ) ಅಣಿಗೊಳಿಸು; ಸಿದ್ಧಪಡಿಸು : ಈ ರಥವನೇ ಹೂಡಿಸಿದೆನೀ ಸಾರಥಿಯ ಬೆಸಸಿದೆನು (ಕುವ್ಯಾಕ. ೦೨-೦೦). ೬. ನೊಗವನ್ನು ಹೇರಿ, ಎಳೆಯಲು ತೊಡಗಿಸು,—ಎಳೆಯಿಸು : ಅವನಿಸುರರೊಳೀ ಸೋಮಯಾಜಿಯೆನಿಪ್ಪನಂ ಕೊಯ್ದು ಇಸಿತು ನೀರಂ ತೋಜಿಸೇ ಧಿಕ್ಕನೆ ಇದಕೆ ಅಜದಡೆ ನಿಮ್ಮಾಪಸಿ ನಿಬರಂ ಪಟ್ಟಣದ ಸುತ್ತ ಹೂಟೆ ಹೂಡಿಸುವೆ [ಪಾಠಾಂ. ಹೂಟೆಯೊಳೆಳಸುವೆ] (ರಕಷ. ೩೬ ೪೦). ೭. ತೊಡಗಿಸು; ಆರಂಭಿಸು: ಬೇರೆ ಹವ್ಯಾಸ ಹೂಡಿಸ ಬೇಕು (ಶುಂಟವಕ. ೬೧). [ಪೂಡು + — ಇಸು₁]

**ಪೂಡು, ಹೂಡು₁** (ಕ್ರಿ). ೧. ಬಂಡಿ, ರಥ, ರೆಂಟೆ, ಕುಂಟೆ ಮೊದಲಾದುವುಗಳನ್ನು ಎಳೆಯುವುದಕ್ಕಾಗಿ ಅವುಗಳಿಗೆ ಎತ್ತು, ಕುದುರೆ ಮೊದಲಾದುವನ್ನು ಹೊಂದಿಸು, —ಕಟ್ಟು ; ನೊಗ ಹೇರು : ಬೆಳ್ಗಟ್ಟಿ ಪೂಡಿದ ಪೊನ್ನ ರಥವಂ ಬೆಳ್ಗಟ್ಟಿಯುನರಸರ್ಕಳೇ

ಬುವುದುವಮಂ . . . ಕಂಡೆಂ (ಪಮ್ಪಾರಾ. ೯೩ ೩೦) ; ಆ ರಥದೊಳೊಡಂಬಡೆ ಪೂಡಿದ ಕುದುರೆಗಳುಂ . . . ಅಸದಳವೆಸೆಯೆ (ಶಂಕಪು. ೧೦-೫೨ ವ) ; ಸಂಜೀವಕ ನಂದಕಾಖ್ಯ ವೃಷಭಂಗಳನಂಬೆನೆ ಪೂಡಿ . . . ತಳರ್ದಂ ವಣಿಗ್ವರಂ (ಪಂತತಂ. ೨೩-೬). ೨. ಅಣಿಗೊಳಿಸು ; ಸಿದ್ಧಗೊಳಿಸು : ಗಳಿಯು ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯಮೆಂಬ ರಥಮನೇಱಿ (ಅಂಜು. ೦೨ ೬೪ ವ) ; ಎಯ್ದೆ ಪೂಡಿ ತರವೇಟ್ಪೇರೆಲ್ಲಮಂ (ಅರ್ಜಚೇ. ೨-೩೩) ; ವಲ್ಲಣಿಸು ಕುದುರೆಯಂ ಪೂಡು ತೇರಂ ಭಟರ್ ಕೈದುಗಳು ಕೈಕೊಳ್ಳಿಂ (ಅಗಂ. ೬-೬೩). ೩. (ಬಂಡಿಗಳಲ್ಲಿ ಸರಕುಗಳನ್ನು ಹೇರಿ)ಸಾಗಿಸು; ರವಾನಿಸು; ಕಳಿಸು : ನಿಚ್ಚಮೊಂದು ಮನೆಯೊಳಿರದೆಮ್ಮ ಪೋರಿಯೊಳ್ ಪೂಡಿದ ಪನ್ನಿರ್ಚಂಡುಗದಕ್ಕಿಯು ಕೂಬುವು[ವ]ದರ್ಕೆ ತಕ್ಕ ಪರಿಕರಮುಮುಮನೊರ್ವ ಪಸಾಸಂ ಕೊಂಡು ಪೋಪು (ಶಂಕಪು. ೩-೨೫ ವ). ೪. (ಬಂಡಿಯ ಮೇಲೆ) ಸಾಗು ; ರವಾನೆಯಾಗು : ಹರಿಯುಜಪುರದ ಸರಕುಗಳ್ ಪೂಡಿದುವು ಶಿವಲೋಕಕೆ (ಶಬಕು. ೪೦-೩೦). ೫. ಜೋಡಿಸು ; ಸೇರಿಸು : ಕರಿಯು ರದನಂಗಳ್ಗೆ ತಲೆಯೋಡ ಸೋರೆಗಟ್ಟಿ ನರದ ತಂತ್ರಿಯು ಪೂಡಿ ದಂಡಿಗೆವಿಡಿದು ಪಾಡಿದುವು ಕೆಲವು (ಕೃಪುಶಾ. ೨೨-೨೪). ೬. ಬಿಲ್ಲಿಗೆ ಬಾಣವನ್ನು ತೊಡು ; ಶರಸಂಧಾನ ಮಾಡು : ಪೂಡು [ಶಿತ]ಶರಸಂತತಿಯಂ ಬಿಲ್ಲೊಳ್ (ಕಂಕಶಾ. ೫-೬೩) ; ಅರ್ಜುನನದಿ ಬಾಣಮಂ ಪೂಡಿದಂ (ಕೃಪುಶಾ. ೧೩-೦೫) : ಮದನಶಬರ ಸಂಯುಮಿಮೃಗಗಳಿಗಾಗ ಕದುಬಿ ಪೂಡಿದ ಪೂಸರಕೆ ಪುದುಗಿದ ಮಿಂಚುಗಳೆನೆ ಪರಡುಗಳತಿಮುದವನಿತ್ತುವು ನೋಳ್ಪರಿಗೆ (ಶಂಸಪ. ೯-೦೪). ೭. ತೊಡಿಸು ; ಅಳವಡಿಸು : ಕಾಲಿಂದನಂ ದಂಡಿಸಿದನಾ ದುಷ್ಟಬುದ್ಧಿ . . . ಸೆಱೆಮನೆಗಿಕ್ಕಿ ನಿಗಳವಂ ಕಾಲ್ಗೆ ಪೂಡಿ (ಕೃಪುಶಾ. ೩೦-೨೬). ೮. (ಆಟ, ಕೆಲಸ ಮುಂತಾದುವನ್ನು) ಹಮ್ಮಿಕೊಳ್ಳು : ಪಿಂಗಾಕ್ಷನಕ್ಷಕ್ರೀಡೆಯಂ ಶಕುನಿಯೊಳ್ ಸಮಂಟ್ಟ ಪೂಡಲ್ಕೆಟ್ಟು (ಕಂಕಶಾ. ೬-೬೯೫). ೯. ತೊಡಗು ; ಮೊದಲಾಗು ; ಆರಂಭವಾಗು : ಪೂಡಿದುದು ಕರ್ಕಶದ ಕಾಳೆಗಂ ಸವ್ಯಸಾಚಿಗೆ ಬಭ್ರುವಾಹನನ ಕೂಡೆ (ಕೃಪುಶಾ. ೦೬-೩೪). ೧೦. ಉಂಟುಮಾಡು ; ಆಗಿಸು : ಕಲೆಗಳ ವಿಲಾಸಮಂ ಪೂಡುತ್ತೆ ಕೂಡುತ್ತೆ ಕಣ್ಗೆಸೆದರೆವೆಣ್ಣಾಳು (ಕೃಪುಶಾ. ೩೦-೦೮). ೧೧. ಗುರಿಯಿಡು ; ಚಾಚು : ನಿನ್ನನಿಲ್ಲಿ ಕೊಲ್ಲದೆ ಮಾಣೆನೆಂದು ಸುರಗಿಯಂ ಕಿತ್ತು ಗಂಟಲ್ಗೆ ಪೂಡು [ಪಾಠಾಂ. ಮೋದು]ವುದುಂ (ರಶೂಚಪ್ಪ. ೨-೦೨೯). ೧೨. ಮುಚ್ಚು ; ಹಾಕು : ಕೂಡೆ ಗಜಬಜಮಾಯ್ತು ಮನೆಮನೆಯು ಕವಗಳಂ ಪೂಡಿದರ್ (ಶಂಚ. ೨೯-೨೬) ; ನಳಿನಾಳಿ...ಬಾಗಿಲ್ಗಳಂ ಪೂಡಿಕೊಳುತಿರ್ಪುವೆಂಬಂತೆ ಮುಗಿಯುತಿರ್ದುವು (ಕೃಪುಶಾ. ೦೬-೨೦). ೧೩. ಪ್ರಯೋಗಿಸು ; ಪ್ರಯೋಗ ಮಾಡು : ಸುಂಕಿಗನಂಕಿರ ಪೂ[ಪಾಠಾಂ. ಹೂ]ಡಿ ರೇಖೆಯಂ ಭೋರೆನಲೊಡ್ಡಿ . . . ಥಾಪ್ಪನಿಸಲಾಡಿದರಿರ್ವರಿಗೇನೊ ಕೌತುಕಂ (ಶಬ್ದಾಸ. ೪-೦೬).

ಹೂಡು : ೧. ಅರಿಷಟ್ಕವರ್ಗಮಂ ತಂದು ಹೂಡುವೆತ್ತಂ ಮಾಡಿ (ಶಂಕ. ಈ. ೯೬-೦೫) ; ಆ ರಥಾಗ್ರಕೆ ವೇದ ನಾಲುಂ ವಾರುವಂಗಳ ಹೂಡಿದರು (ಶಬ್ದಾಕ. ೬-೫). ೨. ಬಂಡಿ ಹೂಡುವವರಂತೆ ತೋರಣಂ ಗಟ್ಟುವವರಂತೆ ಬಾಗಿಲ್ಮಾಡುವವರಂತೆ . . . ಮುನ್ನಿನ ದರ್ಶನಮುಂ ನಿಶ್ಶಂಕೆಯುಮೆಂಬೆರಡುಂ ಲೇಸು ಮಾಡುವುವು (ರಶೂಚಪ್ಪ. ೨-೪) ; ಬಱಿದೆ ಸೈನ್ಯವ ಹೂಡಿ ಹಲಬರ ಕೊಲಿಸಿ ಬಲವಕ್ಕಾಡೆ ಕುರುಪತಿ ಕಟ್ಟುವಡೆಯನೆ ಕಳನ ಮಧ್ಯದಲಿ (ಕುಮ್ಯಾಕ. ೯-೨೬). ೩. ಸಾರಥಿಗಳನು ಹೂಡಿತಂತಕಪುರಿಗೆ ತೇಜಿಗಳಸುವ ಕಾಱಿದವು (ಕುಮ್ಯಾಕಿ. ೯-೪೦). ೪. "ಹೂಡು-ಯೋಜನೇ" (ಕಮುಶಾ) ; ಧರಣಿಪತಿ ನಿನ್ನಿಂದ ಕರ್ಣನ ತುರಗಪಾಶ್ಚಯು ಚಮ್ಮಟಗೆಗೀ ಕರವು ಹೂಡು[ಪಾಠಾಂ. ಹೊದ್ದು]ವುದಾಯ್ತು (ಕುಮ್ಯಾಕ. ೫-೨೪) ; ಹೂಡಿದಲು ಮರಮುಟ್ಟು ಮಾಂಸದ ಗೋಡೆ . . . ನರವಿನ ಕೂಡೆ ಹಿಂದಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಕಾ. ೯೫) ; ಮುಖದಲ್ಲಿ ನಗೆಯನ್ನು ಹೂಡಿದ್ದರೂ ಕೈಗಳು ಕಂಪಿಸುತ್ತಿದ್ದುವು (ಕುಕೋಶಂ. ೦೫೩). ೬. ಮದನಂ ಪುಷ್ಪಬಾಣಂಗಳಂ ಹೂಡಿದ ಬಿಲ್ಲು ಪೊತ್ತು ಪಿಂದಂ ಬರೆ (ಗಂಕ. ೪-೯೬) ; ಗಾಂಡೀವದಲಿ ಹೂಡಿದನು ಫಲುಗುಣ ಪಾಶುಪತಶರವ (ಕುಮ್ಯಾದ್ರೋ. ೦೪-೩೯) ; ಹೂಡಿದ ಕರ್ಗಣೆಯಿಂದ ದೈತ್ಯನ ಮೆಯ್ಯ ತೋಡಿದನ್ಯದಂಬಿನಲಿ (ಕೋಹಕ. ೩೪ ೦೪). ೭. ಎನ್ನ ಮನೆ ಎಂಬವಂಗೆ ಬ್ರಹ್ಮನಿಕ್ಕಿದ ಕೋಳವಾಯಿತ್ತು, ಎನ್ನ ಸ್ತ್ರೀ ಎಂಬವಂಗೆ ವಿಷ್ಣುವಿಕ್ಕಿದ ಸಂಕಲೆ ಹೂಡಿತ್ತು (ಕಸ್ಯವ. ೪. ೨೪೩-೫೩೦) ; ಒಂಬತ್ತು ಬಾಗಿಲ ಕದವನಿಕ್ಕಿ ಬಲಿದು ಬೀಗವ ಹೂಡಿ ನವಸಾಸಿರ ಮಂದಿಯ ಕೊಂದುಳಿದನು ಗುಹೇಶ್ವರ (ಅಶಸಂ. ೦೦೪-೫೪). ೮. ತಪ್ಪದೆ ಬಾಲಕೇಳಿಯೊಳು ಮೇಗುಲುಗುಲುಗುಪ್ಪಂಡೆಯ ಹೂಡಿದಂತೆ ಒಪ್ಪುವಡೆದ ಹಿಮದಿಂಡೆಗಳೆಸೆದುವು (ಕೋಹಕ. ೬-೩೦) ; ಮಕ್ಕಳು . . . ಹೊಸ ಹೊಸ ಕೆಲಸಗಳನ್ನು ತಾವೆ ಹೂಡಬಯಸುವಂತೆ ಮಾಡಬೇಕು (ಶ್ರೀಹಾಶಿ. ೯). ೯. ಚತುರ್ವಿಧ ಸೃಷ್ಟಿಯೊಡ್ಡಣೆ ನಿಗಮಮತದಲಿ ಹೂಡಿತು (ಕುಮ್ಯಾಅ. ೦೪-೩೫). ೧೦. ಲಜ್ಜೆಗೆ ನೆಲೆಯ ಮಾಡಿದ ಹೂಡಿದ್ಯ ದುರಿಯಾಶವನೆನಗೆ (ಕುಮ್ಯಾದಿ. ೬-೩೪). ೧೧. ಕೃಪಾಣವ ಜಡಿದು ಗಂಟಲ ಬಳಿಗೆ ಹೂಡಿದನರಿವುದಕೆ ಕೊರಳ (ಕುಮ್ಯಾದ್ರೋ. ೦೪-೦೦) ; ದೆಸೆಯಿಂದೆ ದೆಸೆಯಾವ ತಾಣಕ್ಕೆ ಹೂಡಿದ ಹೊಸಮಸೆವೆತ್ತ ಖಡ್ಗದಲಿ ಕುಸಿವೆತ್ತು ಖಳನ ಮಸ್ತಕವ ಕೀಳ್ವಡಿಸಿ ರಂಜಿಸೆ ಕಾಮದೇವ ನಿಟ್ಟಿಸಿದ (ಕೋಹಕ. ೦೦-೬೬). ೧೨. ಜಗವರಾಜಕವಾಯ್ತು ಕುಮುದಾಳಿಗಳ ಬಾಗಿಲು ಹೂಡಿದವು ಸೂಱೆಗರು ಕವಿದುದು ತುಂಬಿಗಳು ಸಿರಿವಂತರರಮನೆಯ (ಕುಮ್ಯಾದ್ರೋ. ೦-೪೩). ೧೩. ಶಿವ ಶರಣೆಂಬ ದಂಡೆಯ ಹೂಡಿ ಗಣಮೇಳಾಪವೆಂಬಲಗಿನಿಂದಿಱಿವೆ (ಬಸವ. ೬೪೪) ; ತೋಳ ಮೊದಲ ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರುವೊಪ್ಪವನೇನ ಬಣ್ಣಿಪೆನು (ಕೋಹಕ. ೦೨-೪೪). ೧೪. (ಬಲೆಯನ್ನು) ಬೀಸು ; ಒಡ್ಡು : ಸಿಲುಕುವವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುಮ್ಯಾಕ. ೦೩-೦೪). ೧೫. ಆರಂಭಿಸು ; ಉಪಕ್ರಮಿಸು : ಖಂಡೇರಾಯನು ಮುಂದಾಗಿ ಕದನವನ್ನು ಹೂಡಿ ಹೈದರನನ್ನು ಚೆನ್ನಾಗಿ ಸೋಲಿಸಿಬಿಟ್ಟನು (ಒಕಳ. ೪೦) ; ಅಂತೂ ಮನೆ ಮಾಡಿಯಾಯಿತು–ಸಂಸಾರ ಹೂಡಿದೆವು (ಕೂಕಸಂ. ೦೦). ೧೬. ರಚಿಸು ; ನಿರ್ಮಾಣಮಾಡು : ಕೊಳನ ತಡಿಯಲಿ ಹೂಡಿದನು ಶರವಳಯವಲಿ ಚಪ್ಪರವನು (ಕುಮ್ಯಾದ್ರೋ. ೦೦-೩೩) ; ಹೂಡುವ ಜಗವನೊಂದೆವೆಯಾಟದೆ ಬಯಲ್ಮಾಡುವ ಮಾರಳಿ ಸೃಷ್ಟಿಸುವ . . . ಒಳಹೊಱಗಾಡುವ ಚೇಷ್ಟಕನೀತ (ಕೋಹಕ. ೦೩-೬೪) ; ತ್ರಿಪುಟಿಯೆಂಬ ಒಲೆಯ ಹೂಡಿ . . . ಮಹಾಜ್ಞಾನವೆಂಬ ಪಾಕವ ಮಾಡಿ (ಅಪಂಚೀ. ೩೦೪-೦೨). ೧೭. ಉಳು ; ನೇಗಿಲು ಹೊಡೆ : ಗೌಡಬಸವಪ್ಪಯ್ಯಂಬವನು ಗದ್ದೆ ಹೂಡಿಕೊಂಡು ಕೃಷಿರೂಪದಿಂದ ಕಾಲಕ್ಷೇಪ ಮಾಡಿಕೊಂಡು (ಕಳವಂ. ೦-೫) ; ನಿನ್ನಪ್ಪನೂ ನಾನೂ ಹೂಡುತ್ತೇವೆ ; ನಡುತ್ತೇವೆ (ಸ್ವಕೃಹೂ. ೩) ; ಫಲ ನೋಡದೆ ಕೆಟ್ಟಿತು, ಹೊಲ ಹೂಡದೆ ಕೆಟ್ಟಿತು (ಗಾದೆ). ೧೮. ಊರು ; ನೆಡು : ಹುರುಳುಗೆಡದೆಚ್ಚಾಡಿದರು ಫಲುಗುಣನ ರಥದಲಿ ಹೂಡಿದರು ಹೊಗರಂಬುಗಳನುಬ್ಬೆದ್ದು ತವಾತವಾಗೆ (ಕುಮ್ಯಾದ್ರೋ. ೧-೬೫) ; ನೆಲದೊಳ ಗೊತ್ತಿ ಹೂಡಿದ ಕೈಗೋಲು ಹೊತ್ತು ಬೆಳ್ನರೆಕೂದಲಾ ಮುದಿಸೂಳೆಯರ ಮೊತ್ತವೊಪ್ಪಿದುದು (ಕುವಕಿ. ೬-೮೪೦). ೧೯. ಸಿದ್ಧಗೊಳ್ಳು ; ಅಣಿಯಾಗು : ನಿಮಿಷಕೆ ಹೂಡಿದವು ತೇರುಗಳು (ಕುಮ್ಯಾದ್ರೋ. ೨-೦೪). ೨೦. (ಬ್ಯಾಂಕು, ವ್ಯಾಪಾರ, ವ್ಯವಹಾರ ಮೊದಲಾದುವುಗಳಲ್ಲಿ ಹಣವನ್ನು) ತೊಡಗಿಸು ; ವಿನಿಯೋಗಿಸು : ಹಣವಿರುವವರು ದೊಡ್ಡ ಕೆಲಸಗಳಿಗೆ ಹಣ ಹೂಡುವರು (ಹಪತ್ರ. ೫).

[ದೇ.॥ ತಮಿ. ಮಲ. ಪೂಟ್ಟು]

**ಪೂಡೆ** (ನಾ). ಒಂದು ಬಗೆಯ ಖಾದ್ಯ ; P ಅಕ್ಕಿಯ ನುಚ್ಚಿನಂತೆ ಸಣ್ಣಗೆ ಕತ್ತರಿಸಿದ ಬದನೆಕಾಯಿಯ ಚೂರುಗಳನ್ನು ಬೇರೆ ಬೇರೆ ಭಾಗ ಮಾಡಿ, ಒಂದೊಂದಕ್ಕೆ ಒಂದೊಂದು ಬಗೆಯ ಸಂಬಾರವನ್ನು ಸೇರಿಸಿ, ಚೆನ್ನಾಗಿ ಬೆರಸಿ, ಒಗ್ಗರಣೆ ಕೊಟ್ಟು ಒಂದೊಂದಕ್ಕೂ ಒಂದೊಂದು ಬಗೆಯ ಸುವಾಸನೆಯನ್ನು ಕೊಟ್ಟು ಬಿಸಿ ಆರದಂತೆ ಅರಿಸಿನದ ತರಗೆಲೆಯಲ್ಲಿ ಪ್ರತ್ಯೇಕವಾಗಿ ಕಟ್ಟಿ ಇರಿಸಿದುದು : ಕಡಿಯಕ್ಕಿಯಂತೆ ಕತ್ತರಿಸಿ ಬದನೆಯ ಕಾಯ . . . ಅರಿಸಿನದ ತಱಗಿಂದವಂ ಕಟ್ಟಿ ಬಿಸಿಯಾಱದಂತಿರಿಸಲವು ಪೂಡೆವೆಸರಂ ಪಡೆದವು (ಸೂಶಾ. ೯-೨೩).
[ < ಪೂಡು ? ]

**ಪೂಣ್₁**, ಹೂಣ್ಣು (ಕ್ರಿ). ೧. ಹೂಡು ; ತೊಡು : ಕಬ್ಬುವಿಲ್ ತುಂಬಿವೆದೆ ಪೂಸರಲ್ ಪೂಣ್ದ ಸಲ್ಲಿಬ್ಬರುಮಿದೆಂದು ಮದನಂ ಮಾಲೆಗಾರ್ತಿಯರ ಹುಬ್ಬೆಂಬ ಚಾಪವಮಂ . . . ಅಳವಡಿಸಿಕೊಂಡು ಬಿಡದಬ್ಬರಿಸಿ . . . ಕೆಡಪುತಿಹನಲ್ಲಿ ವಿಟರಕ್ಷವನ್ನುಗಳುಮಲಪನು (ಕ್ಕಬಾಶಾ. ೬-೦೭). ೨. ಹೊಂದಿಸು ; ಅನ್ವಯಂಗೊಳಿಸಂ : ರಸಪ್ರಸರದೊಳು ಸವಿ ಸಂಗಳಿಪಂತೆ ಪೂಣ್ದು ಪೇಳ್ವುದು ಕೃತಿಯಂ (ಕುಸುಮಾ. ೦-೩). ೩. ಅಳವಡಂ ; ಹೊಂದಿಕೆಯಾಗು ; ಕೂಡಿಕೊಂಡಿರು : ಜಾಣ್ ಮನಂಗೊಳಿಸೆ ಪೂಣ್ದೆರದರ್ಥಕೃತಿಪ್ರಬಂಧವಂ ಕಿವಿಗಿನಿದಾಗೆ . . . ಪೇಟಲೊಡರ್ಚಿದೆನೀ ಪ್ರಬಂಧವಂ (ರುಕ್ಮಾಂಗ. ೦-೦೦) ; ಇಟ್ಟ ನವಚಂದನದ ಬೊಟ್ಟಿಳವಟ್ಟರಲು ಪೂಣ್ದೆಳ್ಗಂಟನ ತೊಟ್ಟ ಜವಕೆಯು . . . ಉಟ್ಟ ಸಾಲೆಯ ಮೇಲುದೊಪ್ಪಿರೆ ದಿಟ್ಟೆಯೊರ್ವಳು ನಿಂದಳಂಗಜನಲಗಿನಂದದಲಿ (ಜಂಹಂಕ. ೦೭-೪೩). ೪. ಪಡೆ ; ಹೊಂದು : ಆ ಪೇಚರೇಂದ್ರರ್ಗಮೇಂ ಬೆರಲಿಂದಗ್ಗಳಮಿವ ಕಾವ ಗುಣವಂ ಪೂಣ್ದಂದಭೂಪಾಳಕ (ಎಇ. XXVII, ೬೨.೪೦ ; 1114) ; ಬಂದುದತಿವ್ಯುದುಗತಿಯಿಂ ಪೂಣ್ದೆಸವ ... ಬಟ್ಟದೊಡೆಗಳಬಲಾನೀಕಂ (ಜಗಂ. ೯-೦೦೬). ೫. ತೊಡಗಿಸು ; ಯೋಜಿಸು:ಬಲಸ್ಥನೊಳ್ ಬಲವುನೆ ಪೂಣ್ಬುದುಂ [ಪಾಠಾಂ. ಮಾಟ್ಬುದುಂ, ಮಾಣ್ಬುದುಂ] ಪರಿಭವಕ್ಕೆ ಮೊದಲ್ (ಅಂಪು. ೦೨-೦೦೩). ೬. ಉಂಟುಮಾಡು ; ಆಗಿಸು : ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳೆನ್ನವಸ್ತ್ರ ಮಾಡಿ ಪೂಣ್ದಭವವಿಾಗೀ ಭವದೊಳಿಂತಿದು ನೀಗದು (ಅಂಪು. ೨-೩೯). ೭. ಸುತ್ತುಗಟ್ಟು ; ಆವರಿಸು ; ಮುಚ್ಚು ; ಕವಿ : ಮೊನೆಯಂಬುಗಳಿಂ ಪೂಣ್ದಪವನನಿಬರುಮಂ ಕಿಱಿದು ಬೇಗದಿಂ ಹರಿಗನವರ್ಕೆಸಗೆದೇಟ್ಟುಮೆ ಎಂಬವೊಲನಿಬರುಮಂ ಪೂಣ್ದನ[ತನು] ನನೆಯಂಬುಗಳಿಂ (ಶಂಕಶಾ. ೩-೩೨) ; ಪಾರ್ಥಂ . . . ಶಲ್ಯನ ಪದಾತಿಯುಂ ಪೂಣ್ದನುಗ್ರ ಶರಸಂಹತಿಯಿಂ (ಪಂಭಾರ. ೦೨-೯೨). ೮. ಉಪಕ್ರಮವಾಗು ; ಆರಂಭವಾಗು ; ತೊಡಗು : ತಪನಸುತನುದನ ಸುಧನ್ವರ್ಗೆ ಕಾಳೆಗಂ ಪೂಣ್ದುದು (ಕ್ಕಬಾಶಾ. ೦೨ ಸೂಕನ). ೯. ಒಪ್ಪಿಕೊಳ್ಳು ; ಸಮ್ಮತಿಸು ; ಒಡಂಬಡು : ಇಱಿಯಲ್ಕೀಡೆಮ್ಮನೆಮ್ಮಳ್ಕುದಂ ನೆಱೆ ಕೊಂಡೆಮ್ಮಯ ಬಾಟ್ವೆಯೊಳ್ ನಿಱಿಸುವ ನೀನೆಂದು ತಂದಿತ್ತು ಕಯ್ಯಿಱೆಯಂ ಕೊಟ್ಟುಳವಟ್ಟ ಸಾರಧನವಂ ಮೂಱಿಟ್ಟಿಗು ಪೂಣ್ದು ಕಾಲ್ಗೆಱಗಿತ್ತಂತರಿಗಂಗೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ (ಶಂಕಶಾ. ೬-೩೦); ಎನ್ನಾಳ್ದನಪ್ಪ ಮೃಗಾಧಿರಾಜು ಪಿಂಗಳಕನಂ ಕಾಣದೆಯುಂ ಆಳ್ವನೆಕ್ಕೆ ಪೂಣದೆಯುಮಿಲ್ಲಿ [ಪಾಠಾಂ. ಪೂಣ್ದಿಲ್ಲಿಯುಂ] ನಿನ್ನ ಬಾಟ್ವುಪಾಯುಮಾವುದು (ಶಂಕಶಂ. ೯೯-೦೩); ನಗರನಾಯಂನುನ್ನತಿ ತನ್ನಂ ಮುನ್ನಲೆಯುತ್ತಿರೆ ಮಂದರಂ . . . ಸೇವಾವೃತ್ತಿಗೆ ಪೂಣ್ದು ನಿತಾಂತಮೊಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ಪುದೆಂಬಿನಂ ಸೊಗಯಿಪ್ಪುದು ಪೊಮ್ಮದಿರ್ (ಕುಶಿಪು. ೨-೯೦). ೧೦. (ಕೆಲಸ, ವ್ರತ, ನಿಯಮ ಮೊದಲಾದುವನ್ನು) ಕೈಕೊಳ್ಳು ; ಸ್ವೀಕರಿಸು : ಇರು ಮೌನವ್ರತಮಂ ಪೂಣ್ದ[ಪಾಠಾಂ. ಕೊಂಡ, ತಳೆದ] ರನ್ನುದೊಳಗಾರ್ಗೆ ಮಱೆವಪ್ಪ ನಿನ್ನೆಸೆವಾಚರಮಂ ಕಳಕೋಕಿಳ (ಅಂಪು. ೦೦-೦೩೨) ; ಬೆಸನೆಂದು ಪೂಣ್ದು ದೇವರ ಬೆಸಸಂ ಸುಕುಮಾರರೆನಿಪ ರಾಜಕುಮಾರರ್ ಬೆಸದಪ್ಪಿದರ್ (ಅಶಪು. ೦೦-೩೨); ಆ ವಿಷ್ವಿತ್ತ್ರಮಂ. . . ಮಾಸತ್ರಯಂಬರೇ ಪ್ರಾಯೋಪಗಮನವಿಧಿಯಂ ಪೂಣ್ದು (ಶಿಖಾಪು. ೨-೬೯೮) ೧೧. ದೃಢವಾಗು ; ಸ್ಥಿರವಾಗು : ಪರಭೂಪಾಳಕರುರ್ಕಡಂಗೆ ಪಣವ್ಯರ್ಗ [ತ]ವಿಕ್ಕಿರ್ಕಿಯೋಳ್ ಸುರ್ಕ್ಕಿ ಮುಪ್ಪುರೆಯಲು ಗಣ್ಣನ ತೊಣ್ಡ ನಂಕದಧಟಲ್ಪೊಂಕ್ಕಾಳ್ವನಂಬೂಣೆ ದಿಗ್ವರಿತಾತ್ಕೋಜ್ವಳಕೀರ್ತಿ ಪರ್ವಕಿರೆ ಲೋಕಾಲೋಕಮುವರ್ (ಕ್ಕಆಸಿ.XIII, ೨೬.೬೩; 1090). ೧೨. ಆಣೆಮಾಡು; ಪ್ರತಿಜ್ಞೆಮಾಡು; ಶಪಥಮಾಡು: "ಪೂಣ್–ಪ್ರತಿಜ್ಞಾಯಾಂ" (ಶಮ:ದಾ) ; ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿಲ್ವನಿತುವರಂ ಸುರಂಗಹನಮೇ (ಅಂಪು. ೦೨-೬೦); ಸಮಸ್ತಲೋಕಮಱಿದಂತಿರೆ ಪೂಣ್ದೆನಗಾಗದೇಂಗ ಜೋತ್ಪತ್ತಿಸುಖಕ್ಕೆ ಸೋಲಲ್ (ಕಃಶಾ.೦ ೬೩) ; ಕುರುನಂದನರಾ ಕೊಂದು ಕುರುಶಾಬಾನಃಜನ ನೆತ್ತರಂ ಕುಡಿದೆಂ ಪೂಣ್ದರಡು ತೀರ್ಚಿದೆಂ (ಗದಾಯು. ೦-೬೯). ೧೩. ವಚನ ಕೊಡು ; ಭಾಷೆ ಕೊಡು; ಮಾತು ಕೊಡು: ಉಟಿಯಲಾಗದು ನೆಟ್ಟನೆ ಪೂಣ್ದುದಂ ಪುಸಿವರಾಗಿರದೆ ಮಾನಸರ್ (ಕಪಾಪು.೦-೧೩೩); ಎನ್ನ ಬೇಡಿದುದನೀವೊಡೆ ನಿನ್ನಂ ಕಾಬೆನೆಂದೊಡಾಕಯುಮಿವಿವೆನೆಂದು ಪೂಣ್ದೊಡೆ (ವಡ್ಡಾರಾ. ೦೩-೨೩) ; ಇಂತತ್ತ ಬನಮನಿದನಿ[ನ್ನೆ]ಂತನಲನೂತಲೆಂದು ಪೂಣ್ದಯ್ ಮುಂ ಪೂಣ್ದಂತೂಡು (ಶಂಶಂಶಾ. ೩-೯೩) ; ಪೂಣ್ದುದು ವಿಫಳಮೆನಿಸದೇ ನೀತಿವಪ್ಪದಿಂ ನೆಗಟ್ಗೆ ಬಲ್ಲಹೋಲ್ ನಿನ್ನರಸಂ (ಪಂಪು. ೬-೩೦). ೧೪. ನಿರ್ಧಾರಮಾಡು; ನಿರ್ಣಯಿಸು: ತನುವಂ ತೆಯ್ದಪ್ಪಳಕ್ಕ ಬ್ರತದೊಳೆನುತೆ ಕನ್ಯಾಬ್ರತಕ್ಕೆತೆ ಪೂಣ್ದರ್ದಂ (ಕಾತಂಶಾ. ೬೯) ; ಈ ಕುಮಾರನಖಿಲೋರ್ವಿಗದೊರ್ವನೆ ವಲ್ಲಭಂ ಪ್ರತಾಪದೆ ಪೆಱನಿಲ್ಲೆನುತ್ತೆ ನೆಱೆ ಪೂಣ್ದು ವಿರಾಜಿಪ ರಾಜ್ಯಲಕ್ಷ್ಮಿ ರಾಗದೆ ಬೆರಲೆತ್ತಿದಂತೆ . . . ನವೀನಚೀನ ಚೇಲದ ಗುಡಿ ಕಣ್ಗೆವಂದುದು (ಕುಸುಮಾ. ೬-೬೬) ; ಬರ್ದಿಲದ ನಾಡ ಕಟ್ಟಕಡೆ ಬೀದಿಯ ಹಾದಿಯೊಳೊರ್ಮೆ ಸಲ್ವೆವೆಂದಿರ್ದೆಯೊಳೆ ಪೂಣ್ವಪರ್ ಪಡದ ಪಾಡುಗಳಾವುದುಮಿಲ್ಲ (ಶಶಾ. ೦-೯೯). **ಹೂಣ್ಣು₁** : ೧. ಅಲಗು ಮುಱಿಯಿತ್ತು ಗಱಿ ಜಾಱಿತ್ತು ನಾರಿಯ ಹೂಣುವ ಹಿಳುಕು ಹೋಳ್ಕಾಯಿತ್ತು ಗೊಹೇಶ್ವರನ ಶರಣ ಅಲ್ಲಮು ಹಿಡಿದ ಬಿಲ್ಲು ಮುಱಿಯಿತ್ತು (ಸರ್ವಶ. ೩೯-೦೫೯). ೨. ವೀಣೆಯ ನುಡಿಸುತ ಪಾಡಿದರಿವಳೀಗ ವೀಣೆಗಳೆರಡ ನೊಂದಾಗಿ ಹೂಣಿ ನುಡಿಸುತ್ತಿದ್ದಳೆಂಬೊಲಿಹುದು (ಶಶಕ. ೦೦-೬) ; ಅನಾದಿಯೋಳಿರಲು ಹೂಣೆ ಲಿಂಗದಿ ಮನವ ಕೇಣವಿಡದಿಹನು ವಿರತಿಯಲಿ ದೇಹದಿಹ ಪ್ರಾಣಲಿಂಗಿಯು ತಾ (ಸರ್ವಜ್ಞ. ೦೩೯). ೧೫. ಹೂಣೆ ಛಾಂದಸರ ನಟ್ಟದೆ ಕಾವುನೆಡೆಗೆ ಪ್ರವೀಣ ದಕ್ಷಿಣನನಟ್ಟಿದನು (ಶಶಕ. ೯೬-೬೦). ೧೬. ಒದಗು; ಉಂಟಾಗು : ಅತಿ ಚಿಂತಾತುರ ಹೂಣೆಮನಾ ಕಾಮಿನಿಗೆ (ಅಂಕಶ. ೬-೨); ವಿಶಾಲಾಕ್ಷಿಯರನೆಣಿಸಿಯೆದೆಗಟ್ಟಿ ಮೋಹಿಗಳು . . . ಉರ್ವೀತಳದೊಳಪಕೀರ್ತಿ ಹೂಣೆ ಹುಟ್ಟುವುದೆಂಬುದಂ ನೆನೆಯರು (ಸಮ್ಯಕ್ತ್ವ. ೬-೨೨). ೧೭. ಎದುರಿಸು; ಹೋರಾಡು : ಹೂಣೆ ಹಿಡಿದು ಮೋಹವಲ್ಲನ ಕೆಡಹಿ . . . ಗೋಣ ಮುಱಿದು ಹಾಕಿದ ಬಲ್ಲಿದನ ನಿರ್ವಾಣಪೂಜೆಯ ಮಾಡಿದರು (ಶ್ರೀಪಾಂ. ೦೯-೯೩). ೧೮. ಹೇರಂ ; ಹೊರಿಸಂ : ಹೂಣಿದ ಹೊಱೆ ಜಾಱಿದಂತಾದುದೆನಗೆ (ಭಶಕ. ೮-೯).

**ಪೂಣೆ ಪುಗು, ಪೂಣೆ ಪೊಗು, ಹೂಣ ಹೊಗು, ಹೂಣಿ ಹೊಗು, ಹೂಣೆ ಹೊಗು, ಹೂಣೆಯ ಹೊಗು** = ೧ ಸುತ್ತುಗಟ್ಟಿ ದಾಳಿ ಮಾಡು.— ರಭಸದಿಂದ ನುಗ್ಗು : ಅಂತಿಕಾಳಾನಳಂ . . . ತಾನುಂ ಭೀಮಸೇನನುಂ ದಿವ್ಯಶರಾಸನಂಗಳಂ, ಕೊಂಡು ಪೂಣೆ ಪುಗುವರಾತಿಬಲವುಂ ಮಾರ್ಕೊಂಡು ತಿಗೆನೆಱೆದಿಸೆ (ಶಂಕಶಾ. ೩-೬೯ ವ); ಹೂಣೆ ಹೊಕ್ಕನು ಹಿಡಿದು ವೈರಿಕ್ಷೋಣಿಪನ ತಱುಬಿದನು (ಕುಮಾರ್ರ್ಯ. ೯-೬); "ಹೂಣೆ

ಪೊಕ್ಕೊಂದಮೊನೆ ಸತ್ರಾಣದಿನೊಳಪೊಕ್ಕನೆಂಬುದು" (ಶಬ್ದಾ. ೨೦೬): ಮಗ ನೆಳಲು ಮಿಗೆ ಹೂಣೆ ಹೊಕ್ಕನು ಮಂಗುಳಲಱಿಯನು ತಮ್ಮನೆನುತ ಮನಃ ಶಂಕಿಸಿದ (ಕುಮಾ.ರಾ. ೭೨ ೧); ಪ್ರಾಣನಾಯಕ ನಿನ್ನ ಸವಿನುಡಿ ಯಲ್ಲದೆ ವೀಣಾದಿಗಾನರವಗಳು ಸಾಣೆವಿಡಿದ ಶಲ್ಯದಂತೆ ಕಿವಿಯೊಳು ಹೂಣೆ ಹೊಸ್ವುವು ನಿನ್ನಾಣೆ (ಕುಮಾ. ೯-೦೬೦). ೨. ಪೂರ್ತಿಯಾಗಿ ಒಳಪಡು (?) : ನೋಡಿದ ಪೆಂಡಿರೆಲ್ಲಂ ಕಾಮದೇವನೆಂಬ ಬೇಂಟೆ ಕಾಱಂಗೊಡ್ಡಿದ ಪುಲ್ಲೆಗಳಂತರಲಂಬಿನ ಮೊನೆಗೆ ಪೂಣೆ ಪೊಕ್ಕು ಪಕ್ಕಾಗಿರೆ (ಚಂದ್ರಪ್ರ. ೪-೩೯ ವ). ೩. ಒಂದಾಗು ; ತಲ್ಲೀನವಾಗು ; ತನ್ಮಯ ವಾಗು : ಅವುದು ನಿಮಿತ್ತ್ರಮಾದೊಡಂ ಬ್ರಹ್ಮದೊಳು ಹೂಣ ಹೊಗಲಾ ಬ್ರಹ್ಮಮಪ್ಪನು (ಜೈಮಿ. ೫ ೬-೨೦); ಚನ್ನಮಲ್ಲಿಕಾರ್ಜುನನ ಶರಣರ ಸಂಗದಲ್ಲಿ ಹೂಣಿ ಹೊಕ್ಕು ಬದುಕು ಕಂಡಾ ಮನವೆ (ಶೂನ್ಯಸಂ. ೪. ೩೦. ೬೯); ಕಾಣಲಿಕೆ ಬಯಲೆಂಬ ಮೂರುತಿಯು ತಾನಲ್ಲ ಹೂಣೆ ಹೊಕ್ಕಿರಡಳಿದ ಲಿಂಗೈಕ್ಯನು (ಶಿವಗೀ. ೫೮ ೨೬೬); ಚತುರ್ವಿಧ ಫಲ ಪದಂಗಳಲ್ಲಿ ಹೂಣೆಯು ಹೊಗದೆ ಸುಖದುಃಖ ಅತುರಂಗಳಲ್ಲಿ ಭೇದಿಸಿ ಕೊಳ್ಳದೆ (ಸಗರ. ೪. ೬೩೩-೪೩). ೪. (?) : ಸಲಪಪ್ರಾಣಿಗಳಲತ್ಯಧಿಕ ನಾಗಿರುತಿರ್ದು ಜಡತೆಯಲಿ ಕೇಣಪನು ಕೈಕೊಂಡು . . . ಮರುಳಹ ಹೂಹೆ [ಣೆ] ಹೊಕ್ಕಿರುತಿರ್ಪ ಮರಿಯೇನು (ಶಿವಗ. ೧೦. ೦೩-೬).

[ದೇ.॥ ತಮಿ. ಪೂಣ್. ಪೂಣ ; ಮಲ. ಪೂಣ್ ತೆಲು. ಪೂನು]

**ಪೂಣ್₂** 'ಪೂಟ್' ನೋ.

**ಪೂಣ್₃**, ಹೂಣೆ (ನಾ). ೧. ಪ್ರತಿಜ್ಞೆ; ಶಪಥ : "ಪೂಣೆಂದು ಪ್ರತಿಜ್ಞೆ" (ಶಬ್ದಾ. ೫೯-೨೬೦). **ಹೂಣೆ :** ೨. ಮಾತು; ವಚನ; ನುಡಿ : ಹೂಣೆಯೇಕಪರೊಡನೆ ಸೆಣಸಿನ ಸಾಣೆಯೇಕ್ಕುವ ಮಸೆವ ಕದನವ ಕಾಣೆವೆಮ್ಮಱಿಕೆಯಲಿ . . . ಬಹೆವರಸ ನಿಮ್ಮಡಿಯಾಣೆಯೆಂದೊಡಬಡಿ ಸಿದರು (ಕುಮಾ.ಭಾ. ೬೦೨. ೦೯-೨೩); ಶರಣಸಿಹ ಪಾರ್ಥನನು ಹರನ ಕೈಲಾಸವನು ಹಿಂದು ಕಿರಿದಿನ ಹೂಣೆಯಿಂದೆ ಪ್ರಮಥರ್ಗೂಡಿ ಪರಿಕಿಸಲ್ ಬೇಕೆಂದು ಸವಸೂತ್ರಧರ್ಮಾಚಿಂತಾಲಿನಿಂ ತೂಗಲೊಡನೆ (ಮೃಚ್ಛ. ೩. ೦೪). ೩. (?) ; ದಿನಗಳೆದು ದುರ್ವ್ಯಸನದಿಂ ಕಿರಿಯ ಹೂಣೆಯಂ ನೆನೆದು ... ಅಣ್ಣನಂ ನೋಯಿಪನುಜರ್ಗೆ ··· ತಪ್ಪದೆಂದೆಂದಿಗುಂ ನರಕವು (ಶ್ರೀರಾಮ. ೪. ೪೪); "ಹೂಣೆಯ-ತ್ಸ. ವೈಶೂನ್ಯ. ಹೊಟ್ಟೆಯ ಕಿಚ್ಚು" (ಶ್ರೀರಾಮ. ೬೯೮ ೨೩). [< ಪೂಣ್₁]

**ಪೂಣಿಕೆ** 'ಪೂಣ್ಕೆ' ನೋ.

**ಪೂಣಿಗ**, ಪೂಣಿಗ, ಹೂಣಿಗ (ನಾ). ೧. ಬಾಣವನ್ನು ಹೂಡುವವನು; ಬಿಲ್ಲುಗಾರ; ಧನುರ್ಧರ : ಎಚ್ಚು ಕಾದಿದುಮ ತಗುಳ್ದು ಬಿಲ್ವಡೆ ಪಡಲ್ವಡೆ ಪಾಣದೆ ನಿಂದು ಪೂಣಿಗರ್ (ಚಂದ್ರಪ್ರ. ೦೦. ೬೮); ಪೂಣಿಗರೆನಿಸಿದರಱಿಕೆಯ ಪ್ರಾಣದ ಬಿಲ್ದೆಗೆದ ಬಿಲ್ಮೆಯಂತಾಱುವವೋಲ್ ಬಾಣಾ ನೆಱೆಗೊಳೆ ತೆಗೆದರ್ ಪ್ರಾಣಮನಪಯಾಪದಿನೆಚ್ಚು ರಿಪುನೃಪಬಲದೊಳ್ (ಶಾಕ್ಯ. ೩-೦೮೯); ಲವಣಾಂತಕನಂತೇನಂತೆ ಕನಲ್ದು ತೇರನೇಱಿ ಬಂದು ಕಟ್ಟಿದಿರ ಪೂಣಿಗನಂ ಕಂಡು (ರಾಮಾಶ್ವ. ೦೫೬-೬). ೨. ಹೋರಾಟಗಾರ; ಸಾಹಸಿ ; ಶೂರ : ಕಿರಿಯರಂ ಪೂಣಿಗರಂ ಬಿರುದರನದಟನೊಳಬ್ಬರಮುರಿವರ ನಾಯ್ದಱಿಸಿಕೊಂಡುಪರಿಗನ ಕಣೆಗಳ್ (ಚಂದ್ರಪ್ರ. ೦೨-೦೭೪); ಪೂಣಿಗರಂ [ತ]ಜೇಯರಥಟರ್ ಪೂಗ್ಗಾಯಿಲರ್ ಜಟ್ಟಿಗರ್ ಚಲಮಂ ಪೂಣ್ದಿದರಳ್ . . . ಶರಣೆಂದು ಬಂದೆಱಗಿದರ್ ಚಕ್ರೇಶ ಪಾದಂಗಳೊಳ್ (ಶರ್ಮ. ೯-೬೦). ೩. ಹಟಮಾರಿ ; ಛಲವಾದಿ ; ತನ್ನ ರೀತಿಯೇ ಸರಿಯೆಂದು ವಾದಿಸುವವನು : ಜಾಣರ್ಕಳಲ್ಲವಪರುಂ ಪೂಣಿಗರಱಿಯದೆಯುಮಱಿವ ಪೋಲವಗುಣದಾ ತಾಣವುನಿನಿಸೆಡೆವತ್ತೊಡೆ ಪಾಣದೆ ಒಡಿಥಧನೆ ಕೃತಿಗಳಂ ಕಿಡಿಸುಡಿರ್ (ಶಬ್ದಾ. ೦-೪೦). ೪. ರಚಿಸುವವನು ; ನಿರ್ಮಾಪಕ : ಕರ್ತೃ : ಕಾಣನೇಗೆಯ್ದುಂ ತನ್ನ ದೋಷಮಂ ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯುಂ ಪೂಣಿಗನಾದುದಱಿಂ ಪೆಱರಿಂ ಜಾಣರಿನೋದಿಸಿ ಪೇಟ್ಟುದು ಕಬ್ಬಮಂ (ಶಬ್ದಾ. ೬-೪೫). **ಹೂಣಿಗ :** ೧. ಅರರೆ ಕವಿಕವಿದಂಬು ಕಡಿದವು . . . ಹೊತೆಗೆಡೆಹಿದವು ಹೊಕ್ಕಿಸವ ಹೂಣಿಗರ (ಕುಮಾ.ಕಿ. ೪-೧೩); ದ್ರೋಣ ಭೀಷ್ಮರ ಪೋಲು ನೆಟ್ಟನೆ ಹೂಣಿಗರು ರಾಧೇಯ ಮಾದ್ರಕ್ಷೋಣಿಪತಿಯೆಂದೆಂಬ ನುಡಿಯುಂಟೆರಡು ಥಟ್ಟಿನಲಿ (ಕುಮಾ.ಶ. ೫ ೦೬). ೨. "ಹೂಣಿಗನೆನೆ ಸಾಹಸಿಗ" (ಕಾಶಿಕ. ೨೬); ಸಾಣೆಗಂಡಲಗಿವನು ಸಮರಕೆ ಹೂಣಿಗನು (ಕುಮಾ.ಶ. ೦೬-೨೧) ; ಆತನುರವಣಿಸಿ ಹೂಣಿಗರು ನೆರೆ ಮುಸುಕಿತು (ಕುಮಾಗ. ೫೫-೪೯). ೩. ಜಾಣೆ ಗುಡ್ಡ ವ್ವೆಗಳು ವೀರಂ ಹೂಣಿಗು ಹೆಂದಯ್ಯನೋವದೆ ಕೇಣಿಗನ ಕೊಂದೆಸದ ಸಗರದ ಚೊಮ್ಮಿತಂದೆಗಳುಂ (ಸಾಕಂಪ. ೯-೬೮) ; ನೀವು ಹೂಣಿಗರಾಗಿ ರಿಪುವನು ಕಾವಡಿಸ್ತಲೆ ತೊಲಗುವೆನು (ಕುಮಾ.ದ್ರೋ. ೯-೫೦). ೫. ಪ್ರಯೋಗ ಸಾಧನ,-ಸಲಕರಣೆ : ಅಱೆ ಹೊದೆದ ಗೋಣ ಹೂಣಿಗನಾಯ್ತು ಕೊಲೆಗೆ ಸಲೆ ಉಱಿದಱಿಸಿಕೊಂಡ ತಲೆಗಾಱಿ ನೆಱೆಯಿತಿಲ್ಲಿಗೆ (ಸಾಕಂಪ. ೪-೨೨೫); ಶಿವನ ಘಾಟದ ಶರ ಚತುರ್ದಶ ಭುವನಭಂಜನವಿದು ಮದೀಯಾಹವಕೆ ಹೂಣಿಗನಾಯ್ತಲಾ ಹೇರಾಳ ಸುಕೃತವಿದು (ಕುಮಾ.ಶ. ೦೨-೬೪). **ಹೂಣೆಗ :** ೨. ಬರುದ ಭಟರಿಗೆ ಬೆಱಗು ಬಲಿದುದು ಹೂಣೆಗರ ಹೋರಟೆಗಳಳುಕಿದವು (ಕುಮಾ.ಕಿ. ೬-೬).

**ಪೂಣಿಗಳ್** = ಪ್ರತಿಜ್ಞಾಬದ್ಧಳಾದವಳಂ : ಪೂಣಿಗಳಾಗಿ ಬರ್ದು ಪೊಗಟ್ದಿಪ್ಪ ವಿದಗ್ಧೆಯನೆಲ್ಲಿಮಾತನಂ ಕಾಣಲೊಡಂ ಕರಂ ಬಯಸಿ ತಾಮೆಱೆದಟ್ಟುವರಟ್ಟ ಕೂಡೆಯುಂ ನಾ[ಣ]ಲಿವನ್ನರಾದರೆನುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಕಿಯ ಯೆಂತಾಗೆ ಕೂಡುತೆ ಗೆಲ್ದಿಯಾತನಂ (ಶಬ್ದಾ. ೩-೬೧). [ಪೂಣ್₁ + —ಇಗ]

**ಪೂಣಿಗತನ**. ಹೂಣಿಗತನ (ನಾ). ಸಾಹಸ; ಶೌರ್ಯ : ಪಲವು ದಿವಸಮಾಹಾರಂಬಡೆಯದೆ ಕಂಗೆಲ್ಸಗಿದ ಸಿಂಹಕ್ಕೆ ಪೂಣಿಗತನದಿಂದೇನಾ ನುಮೊಂದಂ ನುಡಿದೆನಪ್ಪೊಡೆನ್ನನೆ ಮುನ್ನಮಾಪೋಶನಂಗೊಳ್ಗುಂ (ಶಾಂತಿಪು. ೦೬೫-೨೦). **ಹೂಣಿಗತನ :** ಇವನ ಹೂಣಿಗತನವನಿವನಾಹವದ ಹೊಱಗೆಯನಿವನ ಭಾರಿಯ ಪೆಗ್ಗಳೆಯತನವ ದಿವಿಜರಾನಲು ನೂಕದಿದು ನಮ್ಮವರ ಪಾಡೇನ್ನೆ (ಕುಮಾ.ದ್ರೋ. ೦೬-೦೪). [ಪೂಣಿಗ + — ತನ]

**ಪೂಣಿಸು₁**, ಹೂಣಿಸು₁ (ಕ್ರಿ). ೧. (ಬಿಲ್ಲಿಗೆ ಬಾಣವನ್ನು) ಹೂಡು,—ಸಂಧಾನಿಸು : ಧೃಷ್ಟದ್ಯುಮ್ನಂ ಪೂಣಿಸಿ ಕರ್ಣನ ಶಿರುವಾಯ್ಗಾಣಲೊಡಂ ತೀವಿ ತೆಗೆದು ಪೊಱಮುಯ್ಯುವರಂ ದ್ರೋಣನ ನೆಚ್ಚಂ (ಜಗನ್ನಾ. ೦೨-೨೦೩) ; ಶಂಬರಸೂದನನಾರ್ದೆದಂಬುಗಳ್ ಸಾಸಿರಂಬೆನಲ್ ಪೂಣಿಸಿಯಾರ್ಪಿಂ ಬಿಡದೆಚ್ಚಪನೆನ್ನಂ (ಧರ್ಮ. ೬-೨೬೪). ೨. ಹೊಂದಿಸು ; ಸಜ್ಜುಗೊಳಿಸು : ಅಳವಡಿಸು : ಪೊಯ್ದು ಬೊಬ್ಬಿಱಿವ ಪಱೆಯೊಳಂ ತೆವೆಯಂ ತಳ್ತ ಪರಿಗೆಯೊಳಂ ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಅಜಿತ. ೦೬-೬೨ ವ). ೩. ಕೊಡು ; ನೀಡು : ಅನುಗ್ರಹಿಸು : ಅವರ ದೇಶನಾಮಕುಲ ಗೋತ್ರಂಗಳನಱಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ ಸನ್ಮಾನ ದಾನಾದಿಗಳೊಳ್ ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್ವೇಳ್ದು (ಆದಿಪು. ೦೩-೪೦ ವ); ಮಾಣದಿತ್ತಳು ಮಾಂಗಲ್ಯಪಾಠಕಿಯರಿಗೇಣಲೋಚನೆ ಕರೆಕರೆದು ಪೂಣಿಸಿ ಕೊಟ್ಟಳಾರತಿಯೆತ್ತಿದವರ್ಗೆಲ್ಲ ಜಾಣೆ ರನ್ನದ ಭೂಷಣಗಳ (ಅಜಿತ. ೬-೦೩೪). ೪. ನಿಯಮಿಸು ; ಆಜ್ಞಾಪಿಸು : ಬೆಸನನಿರ್ಮ ಕೇಳದಂತು ಪೂಣಿಸಿ ಕಟುಪಿ (ಆದಿಪು. ೦೩-೮೦ ವ); ಪೆಱಗಾ ಕಾಪನೆನ್ನನೆ ಮಹೀಪತಿ ಪೂಣಿಸಿ ಪೋದಂ (ಪಂಪಭಾ. ೬-೪೩). ೫. ತಡೆ ಗಟ್ಟು; ಎದುರಿಸು : ಎದುರುಬೀಳು : ಮಾರ್ಬಲಮಂ ಕಂಡು ಪೂಣಿಸಿ

ಜೀವ ಕಡುಗಲಿಗಳುಮಂ . . . ನೋಡಿ (ಗದಾಯು. ೯-೩೯ ವ); ಕಾಣದೆ ದೆಸೆಯುಂ ಬಂಪಕ್ಷೋಣಾಬಳಂ ಚಂಚುಯುಂಗ್ಮದಿಂ ಫಾಳಿಸೆ ತತ್ಕ್ಷಣಂ ತಿದಿಯುಂ ಬಿಸುಟುಂ ಪೂಣಿಸಿ ತಗುಳ್ದೆಯ್ದಿ ಮತ್ತೆ ತಿದಿಯುಂ ಪಿಡಿಗುಂ (ಪಂಚತಂ.೯-೧೦೭). ೬. ಲಕ್ಷ್ಯವಿಡು ; ಗುರಿಯಿಡು : ನರನೆಚ್ಚೊಡೆ ಪಜೀದು ಕರಂ ಕರವಾಳೊಡನವರೆ ಕಾಸಿ ಬೆಚ್ಚಂತೆ ವಸುಂಧರೆಯೊಳ್ ಬಿದ್ದುದಿರ್ದರದೇಂ ತಿರವೋ ಪೂಣಿಸಿದ ಮುಷ್ಟಿ ಭೂರಿಶ್ರವನಾ (ಪಂಪಭಾ. ೧೧-೧೪೧) ; ಬಾಚಿಯಿಂ ತಡಂಗಡಿದಿಂ ಕೊಂತದಿಂ ತಗುಳ್ದಿಜಿದುಂ ಖಡ್ಗದಿಂ ಪೂಣಿಸಿ ಬಿಸುಟುಂ ಪೊಯ್ದುಂ (ರಘುಚಂ. ೩-೭೩) ; ಪೂಣಿಸಿ ಕೆಂಡವುಂ ತಿರಿಪಿ ಚಕ್ರದೊಳೆಟ್ಟೊಡೆ . . . ಶಿರಂ ಕರಿಯಿಂದೆ ನೆಲಕ್ಕೆ ಬೀಟ (ಚಂದ್ರಪ್ರ. ೧೧-೧೦೩). ೭. ಶಪಥ ಮಾಡಿಸು ; ಪ್ರತಿಜ್ಞೆ ಮಾಡಿಸು : ಅನಿನಿತಂ ನಿಮ್ಮ ಪೂಣಿಸಲೆ ಬಂದೆಂ (ಪಂಪಭಾ. ೧೧-೩೯ ವ). **ಹೂಣಿಸು₁** : ೨. ಜಾಣಿಂದ ತಮ್ಮ ವಿಮಾನವ ಹೂಣಿಸಿ ಮಾಣದೆ ಮತ್ತೆ ನೋಡಿ ಬರು (ಅಂಜನಾ. ೧೧-೧೦೭). ೩. ವಾಣಿ ಕಲ್ಯಾಣಿ ಕಟ್ಟಾಣಿ ಮಾತಿನೊಳು ಸುಪ್ಪಾಣಿ ತಂದಿರಿಸು ನಿಲ್ಲಿಸದೆ . . . ಕಡುಜಾಣನುಡಿಯು ತಂದು ಹೂಣಿಸು ಕೃತಿಗೆ ಮಂಗಳದಿ (ಸೌಂದರ. ೦-೬). ೫. ಅರು ಲಕ್ಷಿಸಬಹುದು ಹೂಣಿ[ಪಾಠಾಂ.೪]ಸಿದಾರುಘಟಿಗಳ (ಕೃಂದರ. ೭-೩೦-೦೬); ಭೂತೇಶ ತಾನಡ್ಡಬೀದು ಶ್ವೇತೋರಸ್ಥಲ ಬಲರಾಮ ತೊಲಗೆಂದು ಪೀತಾಂಬರಗೆ ಹೂಣಿಸಿದ (ಪೋಷಕ. ೩೯-೨೦). ೬. ನೀಟಿ ನೂಕದಿರೆನ್ನ ಮನ ಮುಮ್ಮಾಜುವೋದುದು ನೀನು ಚಿತ್ತವ ಸೂಟಿಗೊಂಡೀ ಮದನ ಸಂಬಂಗೊಡಲ ಹೂಣಿಸುವೆ (ಶಬ್ದಮ. ೨-೩೯) ; ಅಲಗಂ ಪಿಡಿಯೊಳಳವಡಿಸಿ ತಳತಳಿಸಿ ತನ್ನ ಕಂಠಕೆ ಹೂಣಿಸುತ್ತ ಶಿವಶಿವ ಕೊಜೆಯಲುನುಗ್ಗಿದನು (ರಾಜಶೇ. ೯-೧೧); ಹೂಣಿಸಿ ಕೂರ್ಗಣೆಯಿಂದೆಚ್ಚು ಬಜೀಗಾಯುಗಾಣಿಸಿದರು (ಪೋಷಕ. ೩೫-೧೨). ೭. ಹೂಣಿಸುತ್ತಿಂದು ತಾರೀನಡಗ ನಿನ್ನ ನಿಜಬಾಣ ಕಾಹುತಿಯ ಕೊಟ್ಟೆಮ್ಮನುಳಿಸು (ಚೆನ್ನ.೩೯-೨೦). ೮. ಕೂಡಿಸು; ಸೇರಿಸು; ಬೆರಸು : ರಿಪುಶ್ರೇಣಿಯು ತಜೀದ ರೋಹಿತದಿ ಹೂಣಿಸಿ ಕೆಸಗೂಡಿ ಕೋಟಿಯು ರಚಿಸಲ್ಕೆ ಶೋಣಿತಪುರವೆಂಬುದಾಯ್ತು (ಪೋಷಕ. ೨೦-೩) ; ಕ್ಷೋಣಿಯೊಳು ಸತ್ಕೀರ್ತಿ ಬಪ್ಪೊಲು ಹೂಣಿಸುವೆನಗ್ನಿಯೊಳ್ ತನುವನು ಪ್ರಾಣವಾಜುವಪ್ಪುರ್ಕವಿಹುದೆ ತಾಯೆ (ಅತ್ತಿ.೯೪-೧೧). ೯. ಆಕ್ರಮಿಸು ; ದಾಳಿಮಾಡು : ಕಾಳರಕ್ಕಸಿ ತಿರುಗಿ ಹನುಮನ ಮೇಲೆ ಹೂಣಿಸಿ ಹನುಮನಾಬೆಯು ಕಾಲಿರಡ ಒಡಿದಭ್ರಮಂಡಲಕಿಟ್ಟನಬ್ಬರಿಸಿ (ತೊರವೆ. ೩-೧-೪). ೧೦. ಸ್ಪರ್ಧಿಸು ; ಪುರುಡಿಸು : ಜಾಣೆ ನಿನ್ನಯ ನಿಜವೇಷ ಮಾಣದೆ ನಿಂದ ವಿಲಾಸ ಹೂಣಿಸಿ ಬಲಿದ ಪ್ರಕಾಶ ನೆಜಿ ಕಾಣಿಸುತಿದೆ ಕೈಲಾಸ (ಶಿವಗೀ. ೦೬೬-೬೭೩) ; ಏಡು ಚೂಣಿಯ ಭಟರು ಹೂಣಿಸಿ ಬೆರಸಿ ಹೊಯ್ದಾಡಿತ್ತು (ಶೌರಿಚ. ೩೭-೦೩); ಕಾಣಾತ ಬೇಡರ ಪಡೆ ಹದೆವಿಲ್ಲಿಗೆ ಬಾಣವ ಹೂಡಿ ಬೊಬ್ಬಿಜಿದು ಹೂಣಿಸಿ ಕವಿದೆಸೆಯುಲು ಮಥನನು ಬೆಂಗಾಣಿಸಿ ಮರೆಳದ ಪುರಿಗೆ (ಚೀರಪುಜಿಂ. ೬-೭೬) ; ಕ್ಷೋಣಿಯೊಳೀ ಬಲ್ಪಿನಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ವುದು (ಪೋಷಕ. ೦೯-೯೩). ೧೧. ಆಣೆ ಮಾಡು ; ಶಪಥ ಮಾಡು : ಶೂಲಿಯೊಳು ತಾ ಹೂಣಿಸಿದ ಹೀಹಾಳಿಯನು ಮಜೆಗಳೆಸಿ . . . ತಬ್ಬಿಬ್ಬುವೋಗುತಲಿರ್ದಳಾ ಮಾಯೆ (ಪ್ರಭುಲೀ. ೭-೨೬). ೧೨. ಹಂಗಿಸು; ಮೂದಲಿಸು : ಹೂಣಿಸಿ ಪೆಣ್ಣುಸುರಿದೊಡದನಾಲಿಪುದೇಣಾಂಕಾಂಕನವರ್ಗಿಸ್ಸೀ ಸುಡು ನಾಣಿಲಿತನವಿದೆನುತೆ (ಉತ್ತರರಾ. ೩-೬೨). ೧೩. ಉಂಟಾಗು ; ಹುಟ್ಟು : ಕಾಣುತವೆ ರಾಯುಸವ ದೊರೆಗಳು ಕ್ಷೋಣಿಪತಿಗೀಜುವವೊಲಾಗಳು ಹೂಣಿದ ಭೀತಿಯಿಂದ ಹೂಣಿಕೆಯು ನಾಯಕರು ಸಹಿತ (ಕಲ್ಯಾಣ. ೦೯೬). [ಪೂಣ್₁ + – ಇಸು₃]

**ಪೂಣಿಸು₂**, ಹೂಣಿಸು₂, ಹೂಳಿಸು (ಕ್ರಿ). ೧. ನೆಡು ; ನಿಲ್ಲಿಸು : ಪುಂದ ಮಣಲೊಳಂ ಪೂಣಿಸಿದ ಗಾಣದೊಳಂ . . . ಮೊನೆಯುಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಆಪಂಚ. ೦೧-೬೨ ವ). **ಹೂಣಿಸು₂** : ೨. (ಆಲಂ) ಅಡಗಿಸು ; ನಾಶಮಾಡು : ದೈತ್ಯನ ಮಹಾಗರ್ವವ ಹೂಣಿಸಿ ಎನ್ನ ಮೊಮ್ಮಗೆ ತಕ್ಕ ಸತಿ ಕಟ್ಟಾಣಿರತ್ನವ ತಂದೆ ಜೀಯ (ಪೋಷಕ. ೯೨-೩೩). **ಹೂಳಿಸು** : ೨. ನಿಮ್ಮ ಮಾವನ ಆಶೆ ಯಾಕೆ ? ಇನ್ನು ಸಾಯುಂಕಾಲದೊಳಗೆ ಅವನನ್ನು ಹೂಳಿಸಿ ಬಿಡುತ್ತೀನಿ (ಕಂಗಾಳ್. ೧೨೬). ೩. ಹುದುಗಿ ಹೋಗುವಂತೆ ಮಾಡು ; ಮುಚ್ಚಿಸು : ಅಬುಧಿಯು ಹರುಹ ಹೇಳದಿರೊಂದುನಿವುಮಪಕೆ ಹೂಳಿಸುವನು (ತೊರವೆ. ೬-೯-೨); ಹೂಳಿಸಿ ಹುತವಹಕುಂಡವನು (ಕುಮಾರಾಂ. ೩೬-೦೬೬).

[ಪೂಣ್₂(<ಪೂಟು) + – ಇಸು₃]

**ಪೂಣ್ಕೆ**, ಪೂಣಿಕೆ, ಹೂಣಿಕೆ (ನಾ). ೧. ಪರಿಶ್ರಮ ; ಸಾಧನೆ : ಕುಲಮಿಲ್ಲೆಯೋ ನಮಗೆ ದಾಯಿಗರಲ್ಲರೊ ಶಸ್ತ್ರವಿದ್ಯೆಯೊಳ್ ಪೂಣ್ಕೆಗಳಿಲ್ಲೆಯೋ (ಪಂಪಭಾ. ೨-೯೧) ; ಪಲವುಂ ಪೂಣ್ಕೆಗಳಿಂದು ಛಲದಿಂದ ಸಹಾಯವಿಕ್ರಮಂ ತನ್ನಳವಂ ಕಲಿತನವುಂ ನಂಬಿ (ರಘುಚಂ. ೦೨-೦೯). ೨. ಸಮಗ್ರತೆ ; ಸಮಷ್ಟಿ : ಸಾಕಲ್ಯ : ಶಾಸ್ತ್ರದರ್ಥಮಂ ಬಿಸುಡದೆ ಪೂಣ್ಕೆಯಿನೋದುವೇಟಿಸ್ಕೊಡಾರ್ ಮೆಚ್ಚರಿದಂ (ಜಾತಕ. ೦-೦೨). ೩. ಆಣೆ ; ಶಪಥ ; ಪ್ರತಿಜ್ಞೆ : "ಪೂಣ್ಕೆಯದು ಪ್ರತಿಜ್ಞೆಯೊಳಕ್ಕುಂ" (ಶಬ್ದಮ. ೦೨೯) ; ಆ ಕನ್ನೆಗೆ ಯೌವನಂ ನೆಜಿದಃದು ಮದುವೆಯಾದೊಡೆ ತನ್ನ ಪೂಣ್ಕೆ[ಪಾಠಾಂ. ಪೂಣ್ದ ಪ್ರತಿಜ್ಞೆ]ಯುಂ ನೆನೆದು . . . ಮೈದುನ ನಿರ್ದಾಕ್ಷಿಣ್ಯ ಪೋವನ್ನೆಗಂ (ವಡ್ಡಾರಾ. ೦೫-೨೬); ತುದಿಯಿಟ್ಟುತ್ತೆನಗೆನ್ನ ಪೂಣ್ಕೆ ನಿನಗಂ ಪೂಣ್ಕೋದಯಂ ಸಾರ್ಚ ಬಂದುದು (ಅಂತ್ಯ. ೯-೦೬) ; ಅತನ ಪೂಣ್ದ ಪೂಣ್ಕೆ ಶಿಲಾತಳಾಕ್ಷರಂ (ಗದಾಯು. ೦-೭೦). ೪. ದೃಢನಿರ್ಧಾರ; ಸಂಕಲ್ಪ : ಪೂಣ್ಕೆಯರಿದೋ ಮೆಚ್ಚಿದಂತೆ ನಡೆವುದರಿದೋ (ರಘುಚಂ. ೭-೬೦). **ಪೂಣಿಕೆ** : ೧. ಎದಗ್ಗತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಕಿಯೆಯೆಂತಾಗೆ ಕೂಡುತೆ ಗೆಲ್ದಯಾತನು (ಅಂಕಹಂ. ೩-೬೦). **ಹೂಣಿಕೆ**; ೩. ಹೂಣಿಕೆಯು ಸಬಳಿಗರೋಳಮ್ಮೈಗಾಣಿಕೆಯು ಬಲುಸೂತರಥಿಕರ ಜಾಣತಿಯ ಬಿಲ್ಲವರ ಧಾಳಾಧೂಳಿ ಬಲುಹಾಯ್ತು (ಕುಮಾ.ಭಾ. ೨-೦೯); ಆಯಿತೇ ಕಡೆಯಾಟ ಹೂಣಿಕೆ ಹೋಯಿತೇ ಹುಸಿಯಾಗಿ (ಪ್ರಭುಲೀ. ೭-೩೯); ಕರ್ಣಾಸು ಬಲ್ಪಿಡಿಯುದ ಹೂಣಿಕೆ ಮಾಡುತ್ತಾನೆ (ತಪೂ. ೬೭). ೫. ಹವಣಿಕೆ; ಏರ್ಪಾಡು ; ಯೋಜನೆ : ಕಟ್ಟೆಗೆಯ ಹೊರೆ ಹೊತ್ತು ಮಾರಿ ಜೀವನ ನಿರ್ವಹಿಸುವ ಹೂಣಿಕೆಯನ್ನು ಸ್ವಯಂಪ್ರೇರಣೆಯಿಂದ ಆರಿಸಿಕೊಂಡ ಕಾರಣದಿಂದ ಅದು ಆತನಿಗೆ ಸಹನೀಯವಾಯಿತು (ಪಾಳಿ. ೩೫) ; ನಮ್ಮ ಅಂತಶ್ಶತ್ರುಗಳಾದ ಗಂಗರಾಜಾದಿಗಳು ಅಂಥದೇ ಹೂಣಿಕೆಯನ್ನು ಬೇರೊಂದು ಒಗೆಯಲ್ಲಿ ಪೋಣಿಸುತ್ತಿದ್ದಾರೆ (ಚೀರಶಾಂ. ೬).

**ಪೂಣ್ಕೆಯಾಳ್** = ದೃಢಸಂಕಲ್ಪವುಳ್ಳ ಸೇವಕ : ಕುದಾನಪ್ರೀತಿಯೆಂಬ ಪೂಣ್ಕೆಯಾಳ್ಗೆರಸು ದುರ್ಬುದ್ಧಿಯೆಂಬ ಪೊಲಂಬಿಗರ್ವೆರಸು ನಿಲ್ಲದೆಲ್ಲಿಯುಂ ಬೆನ್ನಟ್ಟಿ ತಗುಳ್ದು (ರಘುಚಂ. ೧೧-೬೭). [ಪೂಣ್₁ + – ಕೆ]

**ಪೂಣ್ಕೆಗೆಯ್**, ಪೂಣ್ಕೆಗೈ (ಕ್ರಿ). ಆಣೆ ಮಾಡು ; ಶಪಥ ಮಾಡು ; ಪ್ರತಿಜ್ಞೆ ಮಾಡು: ತದೀಯ ಪ್ರಿಯಮಂ ನಿಮಿರ್ಚದೊಡೆ ಮನ್ನಿತ್ರತ್ವಮೇ ಬಾಜಿಸ್ತಿ ತತ್ಸತಿಯುಂ ತಂದಪೆನೆಂದು ಮಂತ್ರಿತನಯಂ ತಾಂ ಪೂಣ್ಕೆಗೆಯ್ದಾಗಳುಣ್ಮಿತಾ . . . ಭೇರೀಗಭೀರಸ್ವರಂ (ಕುಸುಮಾ. ೧೧-೦೦೯). **ಪೂಣ್ಕೆಗೈ** : ನಿನ್ನನರನಿವಿಸದೊಳಗೆ ಧರೆಗೆ ನಾಂ ಕೆಡಹದಿರಲು . . . ದುರಿತಲಂಪಟನಾದ ದುರ್ಮತಿಯಘಂ ಘಟಿಸಲೆನಗೆಂದು ಪೂಣ್ಕೆಗೈದು (ಶಶಿಕಾ. ೩೦-೦೬). [ಪೂಣ್ಕೆ + ಕೆಯ್₁]

**ಪೂಣ್ಕೆಗೈ** 'ಪೂಣ್ಕೆಗೆಯ್' ನೋ.

**ಪೂಣ್ಕೆದಪ್ಪು** (ಕ್ರಿ). ಪ್ರತಿಜ್ಞೆಯನ್ನು ಮೀರು: ಕದನೋದ್ಯೋಗದಿನಾಳ್ದನೆತ್ತಿ

ಬರೆಯುಂ ಬೆಳ್ಳುತ್ತು ಬಿನ್ನತ್ತನಿಲ್ಲ ದೃಢಾತ್ಮಂದಲೆದು ವಲಪೂಗಟ್ಟಿನಂ ನಿಶ್ಶಂಕೆಯಿಂ ಪೂಣ್ಕೆದಪ್ಪಿದನಿಲ್ಲ (ಪಂಪಾಪು. ೭ ೩೬). [ಪೂಣ್ಕೆ+ತಪ್ಪು₁]

**ಪೂಣ್ಕೆವತ್ತಳೆ** (ನಾ). ಪ್ರತಿಜ್ಞೆಯ ಕಾಗದ : ಪ್ರತಿಜ್ಞಾಪತ್ರ : ಪೂಣ್ಕೆವತ್ತಳೆಯನ್ನೂ ಮುದ್ರೆಯನ್ನೂ ಲಿಂಗರಾಜನ ಬಗನಿಗಿರಿಸುವನು (ಮುಂಶ್ರಕ. ೧೬೬-೨೯). [ಪೂಣ್ಕೆ+ವತ್ತಳೆ₁]

**ಪೂಣ್ಕೆವೆಡು** (ಕ್ರಿ). ಪಟ್ಟುಹಿಡಿ; ಹಟತೊಡು : ಅಂತೆಸಗಿದೆಸಪ್ಪೊಡೋವದೆ ಖಳರ್ನೆರತಂದು ಕಟುತ್ತು ಪೂಣ್ಕೆವೆತ್ತೊಸದೊಳಗಾಗಿ ಮೂಗನರಿದೀ ವಿಧಿಯಾಗಿರೆ ಮಾಡಿರ್ಪರೇ (ಸುಕುಮಾ. ೬-೩೩).

[ಪೂಣ್ಕೆ+ವೆಡು₁]

**ಪೂಣ್ಕೊಳ್** (ಕ್ರಿ). ನಿರ್ಧಾರ ಮಾಡು; ದೃಢನಿಶ್ಚಯವನ್ನು ಕೈಕೊಳ್ಳು: ಪೂಣ್ಕೋಡಕ್ಕಟಾ ಸಾರಿದಂ ನಡೆನೋರ್ಪುರ್ಪಿಸು ಕೀರ್ತಿಸಾದರಿಸು . . . ಎಂದುಂ ವಿರೂಪಾಕ್ಷನಂ (ಶಂಖಾಸ. ೬೨). [ಪೂಣ್₃+ಕೊಳ್₁]

**ಪೂತ₁** 'ಪೂ₁' ಪರಾ.

**ಪೂತ₂** (ಗು). ೧. ಶುದ್ಧಿಗೊಳಿಸಿದ; ಸ್ವಚ್ಛ ಮಾಡಿದ. ೨. ಧಾನ್ಯದ ಜಳ್ಳು ಹೋಗುವಂತೆ ಒಕ್ಕಿದ,-ತೂರಿದ. ೩. ಪವಿತ್ರವಾದ ; ಪಾವನವಾದ ; ಪುಣ್ಯಕರವಾದ : ಶಿವಕಥಾಪೂತಪೌರಾಣವನಿವಂ ಪೇಳಿಸಿದನತಿಪ್ರೀತಿಯಿಂದಂ (ಶಂಶ್ರ ೩೬-೦೭) ; ಆತನಂಗನೆ ಸೀತಮಾಂಬೆಯ ಪೂತಗರ್ಭದೊಳುದಿಸಿ ಕನ್ನೆಯ ರೀತಿಯೂನುತಲಿರ್ದಳೀ ಚೆಲ್ಲಾಂಬೆ ಧರೆಯೊಳಗೆ (ಶಿವಾಕೆ. ೩೦೦). (ನಾ). ೪. ಒಕ್ಕಿದ ಧಾನ್ಯ ; ತೂರಿದ ಧಾನ್ಯ : "ಪೂತಂ, ಬಹುಳೀಕೃತಂ—೨ ತೂರಿಕ್ಕಿದ ಧಾನ್ಯ" (ಸಿದ್ಧಾಂತ. ೨೬೦). ೫. ಪವಿತ್ರವಾದುದು ; ಪಾವನವಾದುದು : "ಪವಿತ್ರಂ ಪೂತಂ" (ಷಟ್ಕೋ. ೦೦೬-೬೦); ವನಜಾಕ್ಷಖ್ಯಾತಿಪೂತಂ ಕಥೆ ಕವಿ ಕವಿರಾಜಂ (ಜಗಂ. ೦-೨೨). ೬. ಪವಿತ್ರಾತ್ಮ ; ಪುಣ್ಯವಂತ : ಪಾಪಿಯ ಪೀಡಿಪ ಪುರುಷನು ಪೂತನೆಂತೋ (ಕಕಸಾಂ. ೭೬-೯೦); ಆತನ ವ್ರತದ ನಿಟ್ಟೆಯ ಕಂಡು ಪಲಬರು ಪೂತರಾದರು (ಕರ್ನಾಕ. ೦೨-೯೯). [ಸಂ.]

**ಪೂತಕ್ರತಾಯಿ** (ನಾ). ಇಂದ್ರನ ಹೆಂಡತಿ; ಶಚೀದೇವಿ: ಮಾಯಗಾಶಿಶುವಂ ತಂದಿಟ್ಟಾಯಿಡೆಯೊಳ್ ಬೇಗನೆತ್ತಿಕೊಂಡಳ್ ಭುವನತ್ರಾಯಿಯಾನಾ ಜಿನಶಿಶುವಂ ತಾಯಿಲಿ ಪೂತಕ್ರತಾಯಿ ದಾದಿಯ ತೆಱದಿಂ (ವರ್ಧಮಾ. ೦೨-೦). [ಸಂ. ಪೂತಕ್ರತಾಯೀ]

**ಪೂತತೆ** (ನಾ). ಪವಿತ್ರತೆ; ಪಾವನತೆ : ಸೊದರವೊಲನೂನಕಾಂತಿಯ ಕುಡಿಯಿಂದಂ ನಾಕದಂತೆ ಮಂದಾಕಿನಿಯಿಂ ನುಡಿಜಾಣಿ ವಿಬುಧನಪೊರಲ್ ಪಡೆವಂ ಪೂತತೆಯನಂತೆ ಶೋಭಿಯಾನವಳಿಂ (ಕೃಷ್ಣಾಕೋ. ೨೦೯). [ಸಂ. ಪೂತತಾ]

**ಪೂತನಾಂತಕ** (ನಾ). ಪೂತನೆಯೆಂಬ ರಾಕ್ಷಸಿಯನ್ನು ಕೊಂದವನು; ಕೃಷ್ಣ : ದಾರುಣಾಕ್ಷಿಪೂತನಾಂತಕನಾಡಿದಂ . . . ಮುರಾರಿ ಕೈಪಱಿಗಾಡಿದಂ (ಜಗಂ. ೩-೩೬). [ಸಂ.]

**ಪೂತನಿ** (ನಾ). ೧. (ಕೃಷ್ಣನು ಶಿಶುವಾಗಿದ್ದಾಗ ವಿಷವುಣಿಸಿ ಕೊಲ್ಲಲೆಂದು ಕಂಸನ ಆದೇಶದ ಮೇರೆಗೆ ಬಂದು, ಕೃಷ್ಣನಿಂದಲೇ ವಧೆಯಾದ) ಒಬ್ಬ ರಾಕ್ಷಸಿಯ ಹೆಸರು : ನಿಜವಕ್ಷೋಜನಿಕ್ಷಿಪ್ತಕ್ಷ್ವೇಡಪೀಡಿತ ಲೋಕಘಾತಿನಿಯಪ್ಪ ಪೂತನಿಯುಮಂ . . . ಬೆಸಸಿ (ಜಗಂ. ೩-೨೨ ವ); ಶತಶ್ರೀಕ್ಷೆ ಲಕ್ಷ್ಮಣಾರ್ಗಖಿಳಸೇನೆ ಭಾವಿಸೆ ತವಾಕೃತಿಯ ಬಾಲಕರ ದೆಸೆಯಿಂದ ಗೋವರ್ಧನಂಗೆ ಮೊರೆಗೊಟ್ಟ ಪೂತನಿವೊಲಾಯ್ತು (ಕೈಬಾರ. ೨೦-೩). ೨. ಪಿಶಾಚಿ; ರಕ್ಕಸಿ; ರಾಕ್ಷಸಿ : ಸಂದಣಿಸಿ ಹರಿದೇಱಿ ಬಾಯ್ಗ ಳೊಳೊಂದಿ ಬಾಯ್ಗಳನಿಡುವ ಪೂತನಿವೃಂದವನು ಕಂಡೋಸರಿಸುವನದೊಂದು ದೆಸೆಗಾಗಿ (ಕುಮಾರಾ. ೩-೦೦). [< ಸಂ. ಪೂತನಾ]

**ಪೂತನೆ** (ನಾ). ೧. = ಪೂತನಿ ೧ : ಪೂತನೆಯುಂ ಕೊಂದಾ ಸ್ತ್ರೀಘಾತುಕವೃತ್ತಿಯುಮನೆನ್ನೊಳೇಂ ತೋಱಿದಪೈ ಪೂತನೆಯ ತೆಱದೆ ನಿನಗಾನೇತಱಿ ಪೊಲ್ಲಮೆಯನರಸ ಬಗೆದೆಂ ಬಗೆಯೊಳ್ (ಜಗಂ. ೦೨ ೯೬). ೨. = ಪೂತನಿ ೨. ೩. ಒಂದು ಬಗೆಯ ಮರ ಮತ್ತು ಅದರ ಕಾಯಿ; ಅಳಲೆ: "ಅಭಯಾ, ಅವ್ಯಥಾ, ಪಥ್ಯಾ, ವಯಸ್ಥಾ, ಪೂತನಾ, ಅಮೃತಾ . . . ಶಿವಾ—೧೧ ಅಳಲೇಗಿಡದ ಹೆಸರು ; ಅಳಲೇಕಾಯಿ ಪ್ರಸಿದ್ಧವು" (ಸಿದ್ಧಾಂತ. ೦೨೩). ೪. ಮಕ್ಕಳು ನವೆದು ಅಶಕ್ತರಾಗುವ ಒಂದು ಬಗೆಯ ರೋಗ ; ಹಕ್ಕಿರೋಗ ; ಬಾಲಗ್ರಹ. ೫. ಬಾಲಗ್ರಹಕ್ಕೆ ಕಾರಣಳಾದವಳೆಂದು ಭಾವಿಸಲಾದ ದೇವತೆ.

[ಸಂ. ಪೂತನಾ]

**ಪೂತಾಚರಣ** (ನಾ). ಪರಿಶುದ್ಧವಾದ ಆಚಾರವುಳ್ಳವನು ; ಸರಿಯಾದ ನಡವಳಿಕೆಯವನು; ಸಮರಜಿತಭೂಪ ಜೀವಪ್ರದನುಂ ಅತಿಪೂತಾಚರಣಾರಿಪುಖಿತಕಿರಣಂ (ಎಕ. III. ಮಂಡ್ಯ. ೬೬ ೬ ; 1022). [ಸಂ.]

**ಪೂತಾತ್ಮ** (ನಾ). ಪರಿಶುದ್ಧವಾದ ಮನಸ್ಸುಳ್ಳವನು : ಪೂತಾತ್ಮಂ ಪರಿತೋಷಪಂಡಿತವರಂ . . . ರಾಜೇಂದ್ರಚೋಳೇಶ್ವರಂ (ಹಮ್ಮಾ. ೧.೨೭). [ಸಂ. ಪೂತಾತ್ಮನ್]

**ಪೂತಿ** (ಗು). ೧. ಹೊಲಸುವಾಸನೆಯುಳ್ಳ ; ದುರ್ಗಂಧಮಯವಾದ : 'ಪೂತಿಗಂಧ' ಪರಾ. (ನಾ). ೨. ಕೊಳೆಕಂಪು; ದುರ್ಗಂಧ ; ದುರ್ವಾಸನೆ. ೩. ದುರ್ಗಂಧವುಳ್ಳ ದ್ರವ; ಕೀವು. ೪. (ದುರ್ಗಂಧಮಯವಾದ) ಒಂದು ನರಕದ ಹೆಸರು : ಕೊಲ್ವೋರುಂ ಕೊಣ್ಣುಉಣ್ಬೋರುಂ ಪಞ್ಚಮಹಾಪಾತಕಸಂಯುಕ್ತನಾಗಿ ಪೂತಿ ಎನ್ವ ನರಗಕ್ಕೆ ಸಲ್ಗೆ (ಎಕ. VI. ಕೊಪ್ಪ. ೩೬-೮ ; ಸು. 675 ?). ೫. ಒಂದು ಬಗೆಯ ಸಂಗಂಧ ದ್ರವ್ಯ ; ಪುಣುಗು : ಕತ್ತುರಿ ಕಾಲಾಗುರು ಚಂದನಂ ಹಿಮಕರಂ ಜಾತೀಫಳಂ ಪೂತಿ . . . ಚೂಡಾರತ್ನಮೆಂಬೀ ಪದಾಂತರಸಂಜಾತಮನಾತ ನೋಲಗಿಸಿದಂ (ಶೃಕೃಪ. ೩-೦೦೨) ; ಪೂತಿ ಎಂಬ ಹುಲ್ಲುಜಾತಿಯನ್ನೂ ಒಳಗೊಂಡಿದ್ದ ಹಳ್ಳಿಯನ್ನು . . . ಗೋವಿಂದಚಂದ್ರದೇವನು ದಾನವಾಗಿ ಇತ್ತ (ಶಾಸಗ. ೬).

**ಪೂತಿಯ ಬೆಕ್ಕು**=ಪುಣುಗಿನ ಬೆಕ್ಕು : ಪೂತಿಯ ಬೆಕ್ಕಿರಳೆಯ ಮಱಿ ಮಾತಂಗದ ಮುತ್ತು . . . ಎನಿಪ್ಪವನಾಂತು ಕಿರಾತರ ನಿಜವಕ್ಕಣಕ್ಕೆ ನಡೆತರುತಿರ್ದರ್ (ಶ್ರೀಕೃಷ. ೨೭-೯೩). [ಸಂ.]

**ಪೂತಿಕ** (ಗು). ೧. ದುರ್ಗಂಧವುಳ್ಳ ; ದುರ್ವಾಸನೆಯುಳ್ಳ. (ನಾ). ೨. ತವಸಿ ಗಿಡ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತವಸೀಗಿಡದ ಹೆಸರುಗಳು" (ಸಿದ್ಧಾಂತ. ೦೨೩). ೩. ಮಲ; ವಿಷ್ಟೆ. [ಸಂ.]

**ಪೂತಿಕರಜ** (ನಾ). ಒಂದು ಬಗೆಯ ಸಸ್ಯ ; ತವಸಿಗಿಡ : "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತವಸೀಗಿಡದ ಹೆಸರುಗಳು" (ಸಿದ್ಧಾಂತ. ೦೨೩). [ಸಂ.]

**ಪೂತಿಕಾಷ್ಠ** (ನಾ). ೧. ಒಂದು ಬಗೆಯ ಮರ ; ದೇವದಾರುವೃಕ್ಷ : "ಸರಳಮುದು ಪೂತಿಕಾಷ್ಠಮೆನಿಕ್ಕು" (ಪಂಗಣ. ೩೯-೨೬). ೨. ಒಂದು ಬಗೆಯ ಮರ ; ಪೀತದಾರು; ಪೈನ್‌ಮರ. [ಸಂ.]

**ಪೂತಿಗಂಧ** (ನಾ). ೧. ದುರ್ವಾಸನೆ ; ದುರ್ಗಂಧ : ಆ ವಿವಿಧ ಭಕ್ಷೋಪದಂಶಪ್ರಾಯಮಪ್ಪ ದಿವ್ಯಾಹಾರಮೆತ್ತಲೀ ಕ[ನಿ]ತ ಪೂತಿಗಂಧ ಮಪ್ಪ ಮೃಗಪಿಶಿತಮೆಂತ್ತಲ್ (ವರ್ಧಮಾ.೬-೯ ವ) ; ಆವೋದ ಗಂಧದೊಳ್ ಪೂರೆದು ವರ್ಣ್ಣಂ ತಳೆಯೆ ಪೂತಿಗಂಧದ ಗಿಡುಗಳ್ ಗೋವಿಂಯ ತೋಯುಮನೆಱೆಯಲ್ಕಾಮೋದಸುಗಂಧಪುಷ್ಪಮಾಗಳೆ ಬಕರ್ಗಂ (ಶೋಕೋಶ. ೬-೨೦). ೨. ದುರ್ಗಂಧದ ವಸ್ತು: "ಪೂತಿಗಂಧಃ, ದುರ್ಗಂಧಃ—೨ ಕೆಟ್ಟನಾತವುಳ್ಳ ವಸ್ತುವಿನ ಹೆಸರುಗಳು" (ಸಿದ್ಧಾಂತ. ೪೭). ೩. ಗಾರೆಗಿಡ ; ಇಂಗುದೀ ವೃಕ್ಷ. [ಸಂ.]

**ಪೂತಿಗಂಧಿ** (ಗುಂ). ದುರ್ಗಂಧವುಳ್ಳ. [ಸಂ.]

**ಪೂತಿದ್ರವ** (ನಾ). ಹೊಲಸು ನಾರುವ ಕೀವು ಮೊದಲಾದ ದುರ್ಗಂಧ ದ್ರವ : ನವವಿವರಾವೃತಪೂತಿ[ಪಾಠಾಂ. ತ]ದ್ರವ ಕ್ಷಗಾವೃತವಿಮಿಶ್ರ ಮಾಂಸೋಪಚಿತಮಧ್ರುವಮಸುಚಿತ್ರಭ್ರವಿತಕ್ರಿಪಹಂ ಮೆಯ್ ಬಗೆ ಪೊಡಿಂತು ಕಿಸುಗುಳಮಾದಂ (ಕಬಾ. ೩-೧೯೩). [ಸಂ.]

**ಪೂತಿನಾಶಕ** (ಗು). ೧. ಹುಣ್ಣು, ಗಾಯ ಮುಂತಾದುವು ಕೊಳೆತು ಕೀವಾಗುವುದನ್ನು ತಡೆಯುವ : ರೋಗಿಯು ಕೊಠಡಿಯಿಂದ ಹೊರಬಂದ ನಂತರ ಕೂಡಲೆ ಪೂತಿನಾಶಕದ್ರಾವಕದಲ್ಲಿ (Anti-Septic Lotion) ಕೈತೊಳೆಯಬೇಕು (ಕಲಕೋ. ೩). (ನಾ). ೨. ಹುಣ್ಣು, ಗಾಯ ಮುಂತಾದುವು ಕೊಳೆಯುವುದನ್ನು ತಡೆಗಟ್ಟುವಂಥ ವಸ್ತು : ಪೂತಿನಾಶಕ(ಆ್ಯಂಟಿಸೆಪ್ಟಿಕ್)ದ ಮಹದುಪಕಾರದಿಂದ ಶಿರೋಗೋವ್‌ನಿಗೆ ಅಶಕ್ಯವಾದಂತಹ ಶಸ್ತ್ರಕ್ರಿಯೆಗಳನ್ನು ಕೂಡಾ ಈಗ ಸರ್ಜನರು ಮಾಡುತ್ತಿರುವರು (ಹುತ್ಮಕು. ೩೯). [ಸಂ.]

**ಪೂತಿಫಲಿ** (ನಾ). ಒಂದು ಬಗೆಯ ಔಷಧೀಸಸ್ಯ ; ಬಾಹುಂಜಿಗೆ : ಸೋಮವಲ್ಲಿ : "ಅವಲ್ಗುಜಃ ... ಕೃಷ್ಣಫಲಾ, ವಾಗುಜೀ, ಪೂತಿಫಲೀ — ರ ಬಾಹುಂಜಿಗೆಯ ಹೆಸರುಗಳು" (ಸಿದ್ಧಂಆ. ೧೪೩). [ಸಂ. ಪೂತಿಫಲೀ]

**ಪೂತಿಬೆಕ್ಕು** 'ಪೂತಿವೆಕ್ಕು' ನೋ.

**ಪೂತಿಮಾಂಸ** (ನಾ). ೧. ಕೊಳೆತ ಮಾಂಸ : ಹೊಲಸು ನಾರುವ ಮಾಂಸ. ೨. ಒಂದು ನರಕದ ಹೆಸರು : ಕೃತು ಪೂತಿಮಾಂಸ . . . ಉಚ್ಛ್ವಾಸವೆಂಬೈದು ಮಂತ್ರಿನರಕಂಗಳಿಂ ಕೂಡಿ ಕಾಲರಾತ್ರವೆಂಬರಸುನರಕ ವಿಹುದು (ವಿಪೀಠ. ೦೮೦). [ಸಂ.]

**ಪೂತಿರಸ** (ನಾ). = ಪೂತಿದ್ರವ : ಸಪ್ತಧಾತುಮಯಮುಂ ಅವಸ್ಕರದ ಪೋಲ್ ಮೂತ್ರ ಪುರೀಷಾದಿ ಮಲಭಾಜನಮುಂ ಅಲ್ಲಿ ಪೂತಿರಸನಿಷ್ಯಂದಿ ಶ್ರವಣಾದಿ ನವರಂಧ್ರಪರೀತಮುಂ . . . ಅಪ್ಪ ಶರೀರಮುಂ (ಕಲ್ಯಕ್ರ. ೩೨೯). [ಸಂ.]

**ಪೂತಿವಕ್ತ್ರ** (ನಾ). ಒಂದು ನರಕದ ಹೆಸರು : ಪೂತಿವಕ್ತ್ರ ರಕ್ತಪೂತಿ ವೃಶ್ಚಿಕ ಕಣ ಧೂಮವೆಂಬೈದುಮಂತ್ರಿನರಕಂಗಳಿಂ ಸುತ್ತಿ ಭೀಮವೆಂಬರಸು ನರಕವಿಹುದು (ವಿಪೀಠ. ೦೮೦). [ಸಂ.]

**ಪೂತಿವೆಕ್ಕು, ಪೂತಿಬೆಕ್ಕು** (ನಾ). ಪುಣುಗಿನ ಬೆಕ್ಕು ; ಕಸ್ತೂರಿಬೆಕ್ಕು : ಪೊಂಬುಲಿಸಮ್ಮವಾನೆದಲೆಮುತ್ತು ಮೊಲಂಗಳ ಬಿಕ್ಕು ಪೂತಿವೆಕ್ಕು . . . ಪೀಲಿಯೊಂಬಿಮಂ ತುಂಬಿದ ಕಂಬಿಯುಂ ತಳೆದದೇಂ ತಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೩-೧೦೪); ಮರೆ ನರಿ ಪೂತಿವೆಕ್ಕು ನಕುಲಂ ಮರವಾವುಗಳೆಂಬಿವಾಗಳುಂ ಕರಮೊಸೆದಿರ್ಪನಂ ಮೆಱೆದುದಾ ವಿಪಿನಂ (ಕಂಠಂ. ೩-೩೯). **ಪೂತಿಬೆಕ್ಕು** : ಸಿಂಗದುಗುರಂ ವ್ಯಾಘ್ರಚರ್ಮವಂ ಕ್ರೋಡಶಾಬಂಗಳಂ ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡಪಡೆಯೊಡೆಯರು (ಹಶಾ. ೩-೩). [ಪೂತಿ + ಬೆಕ್ಕು (< ಬೆಕರ್)]

**ಪೂತು₁** 'ಪೂ₁' ಪರಾ.

**ಪೂತು₂** (ನಾ). ಭಲೆ, ಭಾಪು ಎಂಬಂತೆ ಬಳಸುವ ಒಂದು ಕೊಂಡಾಟದ ಮಾತು,—ಉದ್ಗಾರ : ಆ ಮಾಳವಚಕ್ರವರ್ತಿ ಜಗದೇವನೆ ತನ ಮದಾಂಧಸಿಂಧುರಂ ಕೀಳಡೆ ಪೂತು ರಾವುತನೆ ರಾವುತನಲ್ಲನಿದಿಟ್ಟರ್ ವೀರಬಲ್ಲಾಳನೆನೆಂದು ಮಟ್ಟಿ ತಿವಿದಾಳ್ವನಚ್ಚರಿಯಾಯ್ತು ಧಾತ್ರಿಯೊಳ್ (ಎಕ. VI, ಕಡೂ. ೧೩-೨೯; 1196); ನಿರ್ಘರ್ಜನಾರ್ಭಟಿಸುತ್ತುಂ ಪೂತು ಮಜ ಬಾಪೆನುತ್ತುಂ ಶಾತಾಸಿಯುನಾಂತು ಸವಱತೊಡಗಿದನಾಗಳ್ (ಉದ್ಭಟ. ೪-೮೧); ಪೂತು ಸಾರಥಿ ಭಾಪು ಮರಘುರೇ ಸೂತ ಧಿರುಧಿರು ಎನುತ ರಥಿಕವ್ರಾತ ಮಿಗೆ ಬೋಳೈಸಿ ಕೊಂಡರು ಹಯದ ವಾಘೆಗಳ (ಕುಮಾ ಭಾ. ೪-೯೩).

**ಪೂತುರೆ** (ನಾ). =ಪೂತು₂ : "ಅರರೇ ಭಾಪುರೆ ಮರಘು ಪೂತುರೆ ಭಲರೇ ಲೇಸು ಜಾಗುಮಾ ಧಣು ಧಿರುರೇ ಪುರೆಯೆನೆ ಕೊಂಡಾಟಂ" (ಕಸಾ. ೩೩) : ಭಾಪುರೇ ಕಣ್ಣಂದ ಪೂತುರೇ ಕಣ್ಣಂದ ಭಾಪು ಮರಘು ಭಾಪು ಮರಘು ಭಾಪುರೇ ಕಣ್ಣಂದ (ಕಬ್ಬಿಗ. ಕೀ. ೦೪೯-೦೭) : ನೆರೆದ ನಾಗಗಳು ಗಿರಿಯ ಕಾಡುವ ಪರಿಯ ನೋಡ್ಯೆ ಪೂತುರೆ (ಕುಮಾ ರಾ. ೨-೭೩). [<ಪೂತು₂]

**ಪೂತೆ** (ನಾ). ೧. ಪರಿಶುದ್ಧಳಾದವಳು ; ಪವಿತ್ರವ್ಯಕ್ತಿ : ಮುನ್ನಂ ಲಂಕೆಯೊಳ್ ನೀನೆ ಪೇಟ್ದಿಯಲ್ತೆ ಸೀತೆ ಪೂತೆ, ಅವಳು ಕೈಕೊಳ್ವುದೆಂದು (ರಾಮಾಶ್ವ. ೨೩-೩); ಮಲ್ಲಮ್ಮ ನಾರೀಲೋಕದ ದಾರಿದೀಪ, ನಾರೀಕುಲಕ್ಕೆಲ್ಲ ಗೌರವ ತಂದ ಮಹಾಮಾತೆ, ಪೂತೆ, ಖ್ಯಾತೆ (ಕಶತ. ೬೬೬). ೨. ದುರ್ಗೆ. [ಸಂ. ಪೂತಾ]

**ಪೂತ್ಕರಿಸು** (ಕ್ರಿ). ಬಾಯಿಂದ ಊದಿ ಶಬ್ದಮಾಡು : ಬುಸುಂಗುಡು : ಎಸೆಮುದಾ ಮಣಿಖಚಿತಕಿರಣಪ್ರಸರಮುದ್ರಿಕೆ ಪೂತ್ಕರಿಸಿ ಲಳಿಮಸಗಿದುಪವನ ಪೆಡೆವಣೆಯವೊಲು ಕರವಲನಿಲಜನ (ಕಜಕಂ. ೪. ೯-೦೭) : ಈ ಸುರಭಿತ ಸುಮಮಂಜರಿಯ ಹಿಂಜೆ ಪೂತ್ಕರಿಸುವ ಕಾಳಸರ್ಪ ! (ಕಲ್ಯಾಣ. ೨೩-೦೩). 'ಪೂತ್ಕರಿಸು' ಪರಾ. [ಪೂತ್ಕರಣ₀ + — ಇಸು₃]

**ಪೂತ್ಕೃತಿ** (ನಾ). ಪೂತ್ಕರಿಸುವಿಕೆ ; ಊದಿ ಶಬ್ದ ಮಾಡುವಿಕೆ ; ಫೂತ್ಕಾರ : 'ಪೂತ್ಕೃತಿಗೆಯ್' ಪರಾ. [ಸಂ.]

**ಪೂತ್ಕೃತಿಗೆಯ್** (ಕ್ರಿ). =ಪೂತ್ಕರಿಸು : ಪೂತ್ಕೃತಿಗೆಯ್ದು ಸುಭಟನ ಸಿಂಹನಾದಕೆ ಮುಮ್ಮೊಗೆದು ಕರಿ ಕಾದುತಿರ್ದುದು ಭೀಮಸೇನನಲಿ (ಕುಮಾ ದ್ರೋ. ೩-೩೩). [ಪೂತ್ಕೃತಿ+ಕೆಯ್₁ (<ಕೆಯ್₁)]

**ಪೂದಂಡೆ** (ನಾ). ಹೂಮಾಲೆ ; ಹೂವಿನ ಸರ ; ಪುಷ್ಪಮಾಲೆ : ಮುತ್ತೈದೆಮೊಗಳು ಸಿರಿಮುಡಿಯ ಪೂದಂಡೆಗಳೊಡನೆ ಹಿಡಿಯಕ್ಕಿದಳೆದು ಬಂದರು ಮುತ್ತಿನಾರತಿವಿಡಿದಾ ರತಿದೇವಿಯೊಡನೆ (ಮೋಹತ. ೧೭ ೪೯). [ಪೂ₂ + ದಂಡೆ₁]

**ಪೂದಂದಲ್** (ನಾ). ಹೂವಿನ ಮಳೆ ; ಪುಷ್ಪವೃಷ್ಟಿ : ಎಸಗಿತ್ತಂದಸು ಕೊಲಮಂದಪವನಂ ಪೆಣ್ದುಂಬಿಗಳ್ ಮುತ್ತುತುಂ ಮುಸುಱುತ್ತುಂ ಬರೆ ಬಂದುದಿಂದ್ರವನದಿಂ ಪೂದಂದಲ್ (ಶಂಶಾ. ೯-೯೩). [ಪೂ₂ + ತಂದಲ್]

**ಪೂದಳೆ** (ಕ್ರಿ). ಹೂವನ್ನು ತಾಳು, – ಧರಿಸು : ಪೂದಳೆದುಮೆನಿಪ ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ . . . ಎಂತು ದೊರೆಕೊಳ್ಗುಮೆಂಬು ಭಾವಿಸಿ (ಕಾದಂಬ. ೬೩೯). [ಪೂ₂ + ತಳೆ₁]

**ಪೂದಿಂಗಳ್, ಹೂದಿಂಗಳ್** (ನಾ). ಹೂವು ಬಿಡುವ ಕಾಲ ; ವಸಂತ ಮಾಸ : ಕೋದು ಪೂಮಿಡಿ ತಳಿರ ಕಾಡು ನರುಪೊಗರಿನಿಂ ಪೂದಿಂಗಳರಸನಂ ಕರೆಯುಗುಂ ತುಳಿಲ್ಗೆ (ಕಾಂಜಿಕ. ೦೦೯-೨೪೯). **ಹೂದಿಂಗಳ್** : ಹೂದಿಂಗಳ್ಪೆತರಲ್ಕೊಸಗೆಯಿಂ ಬನದೇವಿ ದೀಪೋತ್ಸವಂಗೈವಳೆಂಬಂತೆ ಮೊಗ್ಗುಗೊಳ್ಳಿಗಳಿಂದೆ ಪೊಂಜಿನುರಿವೂವಿಂದೆ ರಂಜಿಸುವ ಮುತ್ತುಗದ ಮರಗಳು : ನೆನೆ, ಮನವೆ (ಶ್ರೀರಾಮಾ. ೧೪೦-೪೦೮). [ಪೂ₂ + ತಿಂಗಳ್]

**ಪೂದಿಸು** (ಕ್ರಿ). ಪೂಜೆ ಮಾಡು; ಪೂಜಿಸು; ಅರ್ಚಿಸು : ಉಚ್ಚಿಯ ಬಚ್ಚಲ ಕೊಟ್ಟಿಯ ತಾವ ಪೂದಿಸುವ[ಪಾಠಾಂ. ಪೂಜಿಸುವ, ಪೂಸುವ] ನಿಶ್ಚಯರಿಗೆ ಮಱಿವಮಾಡುವ ಮೆಚ್ಚುನಂಗಿಗೇಕೆ ನಿಶ್ಚಯದ ಅಱಿವು (ಸಗಪೊ. ೪. ೬೨೪-೦೭೭೨) ; ಇ[ವರ] ದೇವಸ್ತಾನವಂ ಬ್ರಾ(c)ಹ್ಮಣರು ಪೂದಿಸುವರು (ಶಾಇಇ. IX—1, ೨೭೨-೨೩; ಸು. 1173); ಈ ದಿವ್ಯಲಿಂಗವಂ ಭಕ್ತಿಯಿಂದಂ ಕೊರ್ತು ಪೂದಿಸಿರೆ ನೀವಖಿಳರು (ಶೀಕ್ಯಶು. ೬-೩-೩೦). [<ಪೂಜಿಸು ]

**ಪೂದಿಱ್, ಹೂದಿಱ್** (ಕ್ರಿ). ಹೂವುಗಳನ್ನು ಕೊಯ್ಯು,–ಬಿಡಿಸು : ತರಳಿಕ ದೇವತಾರ್ಚನಕೆ ಪೂದಿಱಿಯುತ್ತಿರಲಾಗಳೀಕೆಯಂ ಕರೆದು (ಕಾದಂಬ. ೩೩೭): ನಿನ್ನಬಲಾಳಿ ಪೂದಿಱುವುದಂ ನೋಡಿಂ ವನಕ್ರೀಡೆಯೊಳ್ (ಜಗಂ. ೦೪-೪೭); ವರಭಕ್ತಂ ಪೂದಿಱಿಯಲ್ ಕರಂಡಮಂ ಕೊಂಡು

ಪುಷ್ಪವನಕೇಳೀದರ (ವೃಕು. ೬ ೦೩). **ಹೂದಿಱ್** : ತಾನೆ ಬಿತ್ತಿದ ಪುಷ್ಪವಾಟಿಗೀದರದೊಳುದಕವನೆತ್ತಿ ತೋರೆದು ಹೂದಿಱುವ ಜಾಣ್ಕೆ ಯನದೇವಣ್ಣಿಸುವೆನು (ಸಿದ್ಧರಾ. ೯-೩೩). [ಪೂ$_3$ + ತಿಱ್]

**ಪೂದುಡುಗೆ** 'ಪೂದೊಡಿಗೆ' ನೋ.

**ಪೂದುಱುಂಬು**, ಹೂದುಱುಬು (ನಾ). ಹೂವುಗಳನ್ನು ಮಂಡಿಸಿದ ತುರುಬು; ಪುಷ್ಪಗಳಿಂದ ಅಲಂಕೃತವಾದ ಹೆರಳು : ಪೂದುಱುಂಬಿನ ಪುಷ್ಪವತಿಯರಂದುಗೆಯ ಭಂಗಿಯರುಂ ನಗೆಗಣ್ಣಳ ನೀಱೆಯರುಂ ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ (ಗಿರಿಕ. ೯-೨೦ ವ). **ಹೂದುಱುಬು** : ಸನೆಯ ಕಂಚುಳಿಕೆಗಳ ಹೂದುಱುಬಿನ ಹಿಡಿಲ್ಗಳ ದಂಡೆಗಳ . . . ಕನಕರತ್ನಾಭರಣಕಾಂತಿಯ ವನಿತೆಯರು ಬಳಸಿದರು (ಕೊಡಕಾ. ೦-೦೬ ೩೨). [ಪೂ$_2$ + ತುಱುಂಬು$_1$]

**ಪೂದುಱುಗಲ್**, ಹೂದುಱುಗಲು (ನಾ). ಹೂವುಗಳ ರಾಶಿ.–ಒಟ್ಟಿಲು : ಮೇದಿನಿ ಬೇಗೆ ಬಿಟ್ಟ ಮುಡಿಯಂತೆಸೆದಿರ್ಪುದು ಪುಷ್ಪಿತಂ ತಟೀವಾದಪವೀಥಿ ಪೆಂತಿಗುರುಳಂತಿರೆ ಸಂಚಳಮಾನಸಂಚಯಂ ಪೂದುಱುಗಲ್ ತಡಂ ತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಿಂ ನಿಜಗೊಂಡು ಬಟಲ್ದ ಭಂಗಿಯಿಂ (ಅರ್ಧನೇ. ೧-೬೦). **ಹೂದುಱುಗಲು** : ಮೆಱೆದುದಸುರನ ಹಸ್ತದಲಿ ಹೂದುಱುಗಲಿನ ಗಂಧಾಕ್ಷತೆಯ . . . ಶೂಲ ಮಹೋಗ್ರತೇಜದಲಿ (ಕೊಡಕಾ. ೬-೯೯-೩೩). [ಪೂ$_3$ + ತುಱುಗಲ್ (< ತುಱುಂಗಲ್)]

**ಪೂದುಱುಬು** (ಕ್ರಿ). ಹೂವುಗಳನ್ನು ಮೆಂಡಿದುಕೊಳ್ಳು : ಕಸ್ತೂರಿ ಪುನುಗು ಜವಾದಿ ಮುಂತಾದ ಸುವಸ್ತುವ ತೊಡೆದು ಪೂದುಱುಬಿ ವಿಸ್ತಾರದಿಂದ ಪಾಡಿಸಿಕೊಂಡಳಾಗ ಸಮಸ್ತಭೃಂಗಗಳಿಂದ ತನ್ನ (ಶಶಿ. ೦೦-೬೬). [ಪೂ$_2$ + ತುಱುಬು$_1$ (< ತುಱುಂಬು$_1$)]

**ಪೂದೂಳಿ**, ಪೂಧೂಳು (ನಾ). ಹೂವಿನ ಹುಡಿ ; ಪುಷ್ಪಪರಾಗ : ಪವನಂ ಪೂದೂಳಿಯಿಂ ರಂಗವಂ ಕ್ರಮದಿಂ ಮಾಳ್ಪುದು ಕೇಕಿ ಬರ್ಹದೆಲಂ ಹೋಮಾಗ್ನಿಯಂ ವರ್ಧಿಕುಂ (ಶಬರ. ೨-೬೨). **ಪೂಧೂಳು** : "ಪರಾಗಃ, ಕೌಸುಮೇರೇಣುಃ – ಪೂಧೂಳು" (ಸಿದ್ಧಾಂತಿ. ೩೬೬). [ಪೂ$_2$ + ದೂಳಿ]

**ಪೂದೇರ್**, ಹೂದೇರ್ (ನಾ). ೧. ಹೂವುಗಳಿಂದ ಅಲಂಕರಿಸಿದ ರಥ ; ಪುಷ್ಪರಥ : ಮಾಲೆಗಾಱ ಪೂದೇರುಳ್ಳನ್ನೆಗಂ ಸಲ್ಗೆ (ಕ್ಯಶಾ. ೦೯೩೬, ೨೬-೩೫; ೩೭೬ ; ತೋಡೆಮುಟೆಯ ತರುಣೀರತ್ನದ ಸುಣ್ಣಿಂಡೆ ಮನೋಭವನೇಱುವ ಪೂದೇರೆಂದದಿನೊಪ್ಪಿದುದು (ಜಿಹುಕಾ. ೩-೬); ಮಿಸುಪ ಕೀದಗಿಯೆಸಳ ಕಿಗ್ಗಟ್ಟ ಕಟ್ಟಿ ರಂಜಿಸುವ ಪೂದೇರನಾ ರಚಿಯ ಕೈವಿಡಿವಡರಿ ಬಸಜಾತ ಪತ್ರಂಗಳಿಂದೆ ಪೊಂಬಾಳೆಗಳ ಚಮರದಿಂ ರಂಜಿಸಿದನು (ಕಂಠೀ. ೩೩-೬). ೨. ಪುಷ್ಪಕವಿಮಾನ : ರಾಮಂ . . . ಪೂದೇರೊಳ್ ಸರ್ವರಿಂ ಕೂಡಿ, ನಿಜನಗರಿಯಂ ಪದಿನಾಲ್ಕಾಲು ಸಮೆಯ ಪುಗುತೆ (ಅದ್ಭುತ. ೩೬-೨೯). **ಹೂದೇರ್** : ೧. ಸುದತೀಮಣಿ . . . ಅರಸಂಚೆಯಂ ಕಿಱುದುಮ್ಮುಳುವಾಸಂ ಪರಿಸದಿನೇಱದಳಗೋದ್ಯವನದರ್ದರಗೀ ಹೂಡಿದ ಹೂದೇರೇಱುವ ರಶಿಯೆಂಬಂದದೊಳು (ಜಡಿವಾ. ೨-೩೨). [ಪೂ$_3$ + ತೇರ್$_2$]

**ಪೂದೊಂಗಲ್**, ಪೂದೊಂಗಲು (ನಾ). ಹೂವಿನ ಗೊಂಚಲು; ಪುಷ್ಪಮಂಜರಿ : ಪುಷ್ಪಪರಾಗಮಲ್ಲುಗುವಿನಂ ಪೂದೊಂಗಲಲ್ಲಾಡಿ ತೋಱುವಿನಂ . . . ಲೀಲೆಯಿನಾ ಪುದೇರದೊಳದಾರ್ ತನ್ನಂಗಿಯರ್ ಕ್ರೀಡಿಪರ್ (ಜಗ. ೧೧ ೬೬). **ಪೂದೊಂಗಲು** : ಕಂಗೊಳಿಸುವ ಕಾಮಂಗೆ ಬೃಹಸ್ಪತಿ ಪೂದೊಂಗಲನಿತ್ತು ಸಂಧಿಸಿದ (ಮೋಹತ. ೩-೪೩) ; ಸುರಿವ ಪೂದೊಂಗಲ ತುಷಾರದಿಂ . . . ತಿರದಿಂಪೆಲ್ಲೆಯುಂ ನಂದನದೊಳು (ಕೃ ಬಿ:ಕಾ. ೩-೨೫). [ಪೂ$_3$ + ತೊಂಗಲ್]

**ಪೂದೊಂಗಲು** 'ಪೂದೊಂಗಲ್' ನೋ.

**ಪೂದೊಂಬೆ** (ನಾ). = ಪೂದೊಂಗಲ್ : ಪೂದೇರ ಬಲಬಂದ ಪೊಣರ್ವಕ್ಕಿ ಗಾಲಿಯ ಪೂದೊಂಬೆಯಿಂದ ಪೂಜಿಸಿದ ಪಾದಕೆ ನಮಿಸುತ ನಿಗಿಗುದುರೆಯ ಮಾರನಾದರದೊಳಗೇಱ ನಡೆದ (ಪರ್ವಕ. ೦೦-೧೦೩) ; ನಗೆ ಮಲ್ಲಿಗೆ ಮೊಗ ದಾವರೆ ಕಣ್ಣಾಡಿ ಸೊಗಸುವ ಕನ್ನೈದಿಲಾಗೆ ಮುಗುಳಂಬನ ಮುಡಿಗ ಮರಿದ ಪರಿಮಳವೊಗುವ ಪೂದೊಂಬೆಯಂತಿಹರು (ಕೌನವ. ೬-೯೯). [ಪೂ$_3$ + ತೊಂಬೆ$_1$]

**ಪೂದೊಡಂಬೆ$_1$** (ನಾ). ಹೂವಿನ ದೇಟು,–ತೊಟ್ಟು : "ಪ್ರಸವಬಂಧಃ ವೃಂತಮೆನೆ ಪೂದೊಡಂಬೆಗಳ ಪೆಸರಕ್ಕು" (ಚುಂಗಶಾ. ೩೩-೩); ಕೆಂದಳಿರ್ ಮಿಸುಪ ಕೆಂಗೞೆಯಾದುದು, ಪೂದೊಡಂಬೆ ಪಿಲ್ಕಾದುದು (ಚಮುರ. ೨೫೨ ಕೃಷ್ಣ). [ಪೂ$_3$ + ತೊಡಂಬೆ$_1$]

**ಪೂದೊಡಂಬೆ$_2$**, ಹೂದೊಡಬೆ (ನಾ). = ಪೂದೊಂಗಲ್ : ಬಂದವಲೆದುದು ಪಶ್ಚಿಮಾನಿಳನರ್ಚಿತು ಕೇತಕಿ ಪೂದೊಡಂಬೆಯಂ (ಗಿರಿಕ. ೯-೩೬); ಮುಗುಳ್ತುದು ಜಾದಿ ಕದಂಬಕೋರಕಂ ಬಲಿದುದು ಪೂದೊಡಂಬೆಗಳ ನಾಂತುದು ಕೇತಕಿ (ಪಶ್ಚಿಮೂ. ೩-೨-೯೦); ಸುತ್ತಿಡಿದ ಕೆಂದಳಿರ ಕೆಂಗಾವಿಗಾಸೆ ತಾನಿತ್ತಂತಮಾಗಿ ನೇಲುವ ಪೂದೊಡಂಬೆಗಳ್ ಮತ್ತೆ ರೆಖ್ಖಿಗಳ್ (ಪ:ಜಾಹಿ. ೨೬-೩೯). **ಹೂದೊಡಬೆ** : ತಲ್ಲಣದ ತೋಪಿನ ವಿಷಾದದ ವಲ್ಲರಿಯ ಹೂದೊಡಬೆಗಳ ಹೊಯ್ಕಳ್ಗಿಗಳ ಮುನಿಜನವ ಕಂಡರು ಪಾಂಡುನಂದನರು (ಕುವ್ಯಾಸ. ೨೨-೨೨). [ಪೂ$_3$ + ತೊಡಂಬೆ$_2$]

**ಪೂದೊಡವು** (ನಾ). ಹೂವಿನ ಆಭರಣ,–ಒಡವೆ : ಉಟ್ಟ ನವಾಂಬರಕ್ಕೆ ಮಾರಿ ಪೂದೊಡವಂ ತುಡುವೊಂದು ಕೌತುಕಂ ಪುಟ್ಟೆ ಮುರಾರಿಗೀಯಲರ ಕಂಪನೆ ಕಾಣಿಕೆಯಾಗಿ ಪೋಗಿ ನೀಂ ಕೊಟ್ಟೊಡಗೊಂಡು ಬರ್ಪುದು (ಜಗ. ೬-೦೨); ಒಳ್ಪಿಂ ಸಮೆದಚ್ಚಪೂದೊಡವನೋರಂತಿಟ್ಟು ನಾನಾ ವಿಳಾಸಂದೋಱುತ್ತಿನಿಯರ್ಗೆ ರಂಜಿಪುವಜಸ್ರಂ ಬೀಚರೀಸಂಚಯಂ (ಕಬಿಕಂ. ೨-೩೯). [ಪೂ$_2$ + ತೊಡವು]

**ಪೂದೊಡಿಗೆ**, ಪೂದುಡುಗೆ, ಹೂದುಡಿಗೆ, ಹೂದೊಡಿಗೆ (ನಾ). = ಪೂದೊಡವು : ಮಧುಕರಿಕೆಯುಂ ಪೂದೊಡಿಗೆಯುಂ ಮಾಡಲುಂ ಮಯೂರಿಯುಂ ಕಿನ್ನರಮಿಥುನಂಗಳಂ ಸಂಗೀತಶಾಲೆಗೆ ಕಳುಪಲುಂ . . ಪೆಸರ್ವೆಸರೊಳೆ ಕರೆದು ಪೇಟ್ವ ಮನೋಹರಾಲಾಪಂಗಳಂ ಕೇಳುತ್ತಂ ಪೋಗೆಪೋಗೆ (ಕಾದಂಪೂ. ೦೦೦೬). **ಪೂದುಡುಗೆ** : ಬಗೆಗೆ ವಂದ ಪೂಗಳೊಳ್ ಪೂದುಡುಗೆಯಂ ಮಾಡಿ ವಸಂತಕಾಂತೆಯರಂತೆ ನೆಱೆಯೆ ಕೆಯ್ಗೊಯ್ಯಾಗಳ್ (ಆದಿಪು. ೦೦-೦೨೯ ವ); ಪೂದುಡುಗೆಯಿಂ ಚೆಲ್ವಾದರಾ . . . ಬಾಲೆಯರ್ (ಶಾಂತಿಪು. ೮-೦೩). **ಹೂದುಡಿಗೆ** : ವಾಸಂತಋತುಕಾಲಸಮಯ ಕುಸುಮವನಾ ವಿಳಾಸಿನೀಜನ ತೊಡಿಗೆಯಂ ಮಾಡಿ ತಂದೊಲ್ದು . . . ಶಿವಾರ್ಚಿತಂ ಮಾಡಿ ಹೂದು [ಹಾಠಾಂ. ದೊ]ಡಿಗೆದೊಟ್ಟು (ಹಕಾ. ೩-೪೪). **ಹೂದೊಡಿಗೆ** : ಎಲೆ ಮುಗ್ಧೆ . . . ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ (ಸಂಶಿ. ೦೪-೦೩). [ಪೂ$_3$ + ತೊಡಿಗೆ (< ತೊಡುಗೆ)]

**ಪೂದೊಣೆ$_1$** (ನಾ). ಹೂವುಗಳಿಂದ ತುಂಬಿದ ಕೊಳ; ಹೂಗೊಳ : ನೈದಿಲಿಂ ಮೆಱೆವ ಪೂದೊಣೆಗಳಿಂದೆಸೆದತ್ತು . . . ರಜತಶೈಲಂ (ಚಾವತಾ. ೦-೨೬). [ಪೂ$_3$ + ದೊಣೆ$_1$]

**ಪೂದೊಣೆ$_2$** (ನಾ). ಹೂಬಾಣಗಳ ಬತ್ತಳಿಕೆ : ಮನೋಜನಸ್ತುತಿ ಗೊಪ್ಪುವ ಪೂದೊಣೆಯಕ್ಕುಮಿತಾಕ್ಷಿಸಲ್ ಪಂಜುಳದಾಡಿಮಾಕುಸುಮ ಮೊಂದದೞದೊರ್ವ ಸುಧಾಂಶುವಕ್ತ್ರೆ . . . ಕರು ತಿಱಂದಳ್ಪೆಡಂಗಿನಿಂ (ಅದ್ಭುತ. ೯-೬೦). [ಪೂ$_3$ + ದೊಣೆ$_2$ (< ತೊಣೆ$_2$)]

**ಪೂದೋಂಟ**, ಪೂದೋಟ, ಹೂದೋಂಟ, ಹೂದೋಟ (ನಾ). ಹೂವುಗಳನ್ನು ಬೆಳೆಯುವ ತೋಟ ; ಪುಷ್ಪೋದ್ಯಾನ : ದೇಗುಲದ

ಬಡಗಣ ಪೂದೋಂಟ (ಪ್ರಿಲಂ. ೦೬೨೯, ೬೬-೯; 1024) ; ಮತ್ತೊರ್ವ ಚಿನ್ನ ಪೊನ್ನ ಕರುಮಾಡದವಂ ಬಳಸಿ ಬೆಳೆದ ಪೂದೋಂಟಮಂ ಪೊಕ್ಕು ಮಯ್ಯುರೆದ ನಲ್ಲನಂ ನೆವದಿಸಿಂತೇವರ್ (ಕಬ್ಬಿಗ. ೬೯) ; ಅಲ್ಲಲ್ಲಿ ಪೂದೋಂಟವಲ್ಲಲ್ಲಿ ಕೊಳಗಳುಂತಲ್ಲಲ್ಲಿ ಕರ್ವಿನ ಪೊನಲು (ಶಬರ. ೦-೩೬). **ಪೂದೋಟ** : "ಪುಷ್ಪವಾಟಿ ತಂಂ ಪೂದೋಟಂ" (ಪಟ್ಟಕೋ. ೩೨-೦೨) ; ಪೂದೋಟವಮು ವಾಜಿಯಂ . . . ತಿಳಿಯಲ್ ಸ್ವಪ್ನದಿ ಲೇಸಲ್ತೆ (ಸೋಮ:ಕ. ೬೯) ; ಸೌರಭ್ಯವ ತಾಳಿದನೇಕ ಪೂದೋಟ ಕೇಳಿಯ ವನಗಳಿದ್ದುವು ಪುರಲಕ್ಷ್ಮಿಯ ತಾಳಿಯ ಮರಕತದಂತೆ (ಸೋಮಕ. ೨-೩೬) ; ಎತ್ತಣ ತುರಂಗವಿದು ಪೊಕ್ಕು ಪೂದೋಟವಮಂ ಕೊತ್ತಳದುಳಿವುದು (ಕೃಪಚಾ. ೨೦-೬). **ಹೂದೋಂಟ**: ಪಡುವಲು ಹೂದೋಂಟ (ಶಾಶ್ವ. XI-೧೧, ೦೨೨-೮೬ ; ಸು. 1072) ; ಹೂದೋಟಗಳನುಚಿ ಹೊಕ್ಕು ಚೆಲುವನಾಗಿ ಪರೀಕ್ಷಿಸು ತ್ತಂ (ಜಕ್ಕು. ೨೨-೬). **ಹೂದೋಟ** : ಹಲವು ಹೂದೋಟಗಳಪರ್ಜಿಸಿ . . . ಹೂಗಳನೆಯ್ದೆ ಕುಯಿತಂದು (ಬಸವು. ೨೨-೨೫) ; ಪರಿಪರಿಯ ಹೂದೋಟಗಳ ಹೊಯ್ದೊರಸಿದನು . . . ಲಾಂಗೂಲದಲಿ ಕಲಿ ಹನುಮ (ತೊರಿರಾ. ೫-೯ ೦೬) ; ಇಂತಹ ದಾಂಪತ್ಯ ಪ್ರಣಯಲೀಲೆ ಗಾಳಿ ಬೀಸದ ಹೂದೋಟ (ಕಪ್ಪಣಾ. ೦೦೯).

[ ಪೂ₁ + ತೋಂಟ ]

**ಪೂದೋಟ** 'ಪೂದೋಂಟ' ನೋ.

**ಪೂದೋಱಿಸು** (ಕ್ರಿ). ಹೂವು ಬಿಡುವಂತೆ ಮಾಡು ; ಪುಷ್ಪಿಸುವಂತೆ ಮಾಡು : ಮಿಂಡೆದ್ದ ಹೆಣ್ಣಳುಪ ನಿನಕ್ಕೆ ನಡೆತಂದು . . . ಕಂಡಕಂಡವನಿಜಾತಂಗಳು ಚಿಗುರಿಸಿದರೊಡನೆ ಪೂದೋಱಿಸಿದರು (ಕೃಪಚಾ. ೬೦-೫).

[ಪೂ₁ + ತೋಱಿಸು]

**ಪೂಧೂಳಿ** 'ಪೂದೂಳಿ' ನೋ.

**ಪೂನಾಡು** ' ಪುನ್ನಾಡು ' ನೋ.

**ಪೂನಿಱು** (ಕ್ರಿ). ಹೂವುಗಳನ್ನು ಹೆಣೆ,—ಮಾಲೆಕಟ್ಟು : ಲಂಜಿಗೇಸರಂ ದೇವರ್ಕೆ ಪೂನಿಱುವ ಮಾಲ (ಲಾ) ಕಾರಗ್ಗ್ ಅರ್ದ್ದ ವಿಸದಿ (ಎಕ. X. ೬೬-೨; 678). [ಅ ಇದು ' ಪೂ ನಿಱು ' ಎಂಬುದರ ಅಪಲಿಖಿತವಿರಬಹುದು]

**ಪೂನೀರ್**, ಹೂನೀರು (ನಾ). ಹೂವಿನ ರಸ ; ಮಕರಂದ ; ಪುಷ್ಪರಸ : ತಳಿರಂ ತೂಗಿ ಪರಾಗವಂ ಪಿರಿದು ಪೂನೀರಂ ತಡಂಗೂಡಿ ಗುಗ್ಗುಳ ನಿರ್ಯಾಸಮನಾಂತು . . . ಏ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಜುನ. ೫-೯೬). **ಹೂನೀರು** : ನೀರಿನೊಂದು ನೀರಜಾತ ಬೆಳಕಿಗಾಗಿ ಕೆರಳಿತು ಈ ಕಿರಣಕರಳಿತು ಹೂವ ಹೊಕ್ಕ ಕಿರಣವಾಗ ಹೂನೀರ ನೆಕ್ಕಿತು (ಗಂಗಾಕ. ೦೫-೦೨).   [ಪೂ₁ + ನೀರ್]

**ಪೂಪ** (ನಾ). ಹಿಟ್ಟಿನಿಂದ ಮಾಡುವ ದೋಸೆ, ಇಡ್ಲಿ, ಹೋಳಿಗೆ ಮುಂತಾದ ಮೃದುವಾದ ಭಕ್ಷ್ಯ : '' ಪೂಪಃ, ಅಪೂಪಃ, ಪೂಪಳಿಕಾ —ಈ ೩ ಪಕ್ವಾನ್ನಂ '' (ಕರಣು. ೩೬-೦೬೯) ; ವ್ಯಕ್ತ ಕಿ:ರಾನ್ನವಂ ಘೃತದುಗ್ಧಶರ್ಕರೆಯು ವ್ಯಕ್ತಿಯಿಂಗೈದ ಕಜ್ಜಾಯವಮು ಪೂಪವಮು ಮುಕ್ತಭವಜಾಲನಾ ಶಿವಲಿಂಗನಾರೋಗಿಸಿದನು (ಮಲಕು. ೬-೩೨) ; ಲಡ್ಡು ಚಕ್ಕುಲಿ ಶರಗು ಪೂಪವ [ಪಾಠಾಂ. ತುಪ್ಪವ] ಬಡ್ಡಿಸಿದ ಪೊಂದಟ್ಟೆಯನು ಮುಂದೊಡ್ಡಿ (ಪರಮಾಮ. ೦೬೬-೨೯). 'ಅಪೂಪ' ಪರಾ.   [ಸಂ.]

**ಪೂಪಲಿಕೆ** (ನಾ). = ಪೂಪ : ''ಪೂಪಲಿಕಾ ಪೂಪನಾಮಂ'' (ಪಟ್ಟಕೋ. ೯೯-೦೨).   [ ಸಂ. ಪೂಪಲಿಕಾ ]

**ಪೂಪುಟ್ಟಿಗೆ** (ನಾ). ಹೂವಿನ ಬುಟ್ಟಿ ; ಪುಷ್ಪಕರಂಡ : ಪೂಪುಟ್ಟಿಗೆ ಪನ್ನೀರ್ಗುಪ್ಪಿಗೆ . . . ಕರ್ಪುರ ಕರಡಿಗೆಯಿರ್ದವು (ಸೊಂಡೂರ. ೨೬-೩೨).

[ ಪೂ₁ + ಪುಟ್ಟಿಗೆ₁ (< ಪುಡಿಕೆ) ]

**ಪೂಪುಣುಂಬ** (ನಾ). ಹೂವುಗಳನ್ನು ಬಾಣಗಳಾಗಿ ಉಳ್ಳವನು ; ಮನ್ಮಥ : "ಇಂಗೋಲ್ಕಿಲ್ಲಂ . . . ಪೂಪುಣುಂಬು . . . ಗಿಳಿದೇರು — ಇವು ೧೩ ಕಾಮದೇವಂಗೆ ಪೆಸರ್" (ಕರಣು. ೯೬-೦೬) : "ಕಬ್ಬುವಿಲ್ಲ ಸಿಂಗರ ಪೂಪುಣುಂಬ ಪಿಂಬಟವಿಗೆಯ ಪೆಣ್ಬಡೆಯನ್ನೆಸರಲ ಕಾವ ಜತಿಗಳವಗೆಯು ನೆನೆ ಮನ್ಮಥನ ನಾಮಮಕ್ಕುಂ" (ಕಬ್ಬಿಗ. ೬).   [ಪೂಪುಣುಂಬು + —ಅ₁]

**ಪೂಪುಣುಂಬು** (ನಾ). ಮನ್ಮಥನ ಹೂವಿನ ಬಾಣ, — ಪುಷ್ಪಾಸ್ತ್ರ : ಕಯ್ಯುಱಿಗುಟ್ಟಿಯಾಡಿದರ್ ; ಪೊಪುಣುಂಬು ; ಪಲ್ಲಱಿಗುಟ್ಟಿದಂ (ಹುಡ. ೬೬ ಕ್ರಮೋ) ; ಭಾವಜಶೌರ್ಯ ಪೂಪುಣುಂಬಂ[ಪಾಠಾಂ. ಪೂಮಿನಂಬಂ] ಪೂಡಿದಂ (ದಶಾವ. ೬-೬೦ ಕ).   [ಪೂ₁ + ಪುಣುಂಬು (< ಪುಱುಂಬು)]

**ಪೂಪುರುಳ್** (ನಾ). ಹೂವಿನ ಸತ್ತ್ವ ; ಮಕರಂದ : ಪೂಂಬೆಳ್ಳಿ ಪೂಪುರುಳ್ ಬೆಳ್ದಂಗಳಿನ ಚಿತ್ತ ತುಂಬಿದರ್ಪಿನ ಬಗೆಯು ಬರೆಹದೊಳ್ಗಳೆ ? (ಗಾಂಧಾರಿ. ೬೩-೦೦೨).   [ಪೂ₁ + ಪುರುಳ್]

**ಪೂಪೊಡೆಯ**, ಹೂಪೊಡೆಯ (ನಾ). ಹೊಕ್ಕುಳಲ್ಲಿ ತಾವರೆಯ ಹೂವುಳ್ಳವನು; ಪದ್ಮನಾಭ; ವಿಷ್ಣು : "ವಿಷ್ಣು ಪೂಪೊಡೆಯನೆಂದೆನರ್" (ಕರಣು. ೯೫). **ಹೂಪೊಡೆಯ** : ಹರನ ಹಟ್ಟುಗೆ ಹೂಪೊಡೆಯನೋಪಳ ನಜನರಸಿಯನಂಗಶೇಖರನ ತರುಣಿಯರನು ಗೆಲ್ದಳು ಗುಡಿ ಸಿರಿಜಾಣ್ಮೆ ಪಿರಿದಪ್ಪ ರೂಪಿನೀವದೆವಳು (ಕ್ರೀಡಾಕ. ೩-೬೦).   [ಪೂ₁ + ಪೊಡೆ₃ + —ಅ₁]

**ಪೂಬನ** (ನಾ). = ಪೂದೋಂಟ : ಬಾಲೀರವ್ವಾಯ ಪೂಬನದಿ ಆಡಲು ಬಂದು ನುಡಿವರು (ಗೀತಂ. ೦೯-೩೨).   [ಪೂ₁ + ಬನ₁]

**ಪೂಬಾಣ**, ಹೂಬಾಣ (ನಾ). ೧. ಹೂವಿನ ಬಾಣ ; ಮನ್ಮಥನ ಬಾಣ. ೨. ಮನ್ಮಥ ; ಕಾಮ : ಬಾಣಪುತ್ರಿಯು ಕೆಳದಿಯರ ನೋಡಿದರು ಪೂಬಾಣಗಣೆಯು ಸದ್ವಿಟರು (ಸೋಮಕ. ೨೯-೨೦). **ಹೂಬಾಣ** : ೩. ಸ್ಫೋಟವಾದಾಗ ಮೇಲಕ್ಕೆ ಸಿಡಿದು ಹೂವಿನಾಕಾರದ ಕಿಡಿಗಳನ್ನು ಸೂಸುವ ಒಂದು ಬಗೆಯ ಸುಡುಮದ್ದು : ಈ ಜನಸಾಲೆಯಲ್ಲಿ ಹಗಲುಬತ್ತಿ, ಹೂಬಾಣ, ಆಕಾಶಕೊಳವಿ . . . ಉತ್ಸವಗಳ ಕಾಲದಲ್ಲಿ ಹತ್ತಿಸುವಂತೆ ಕಟ್ಟಲೆ ಮಾಡಿದರು (ಮಹಾಪಂ. I. ೦೨೯) ; ಎಡಪೂರ ತಳದಲ್ಲಿ ಏನೇನ ಶಡಗರ . . . ಹಾರೂವ ಹೂಬಾಣ ಹೂಬತ್ತಿ ಕಂಡಿರಿ (ಕಪ್ಪಣಾ. ೯).   [ಪೂ₁ + ಬಾಣ₁]

**ಪೂಬಿಡು**, ಹೂಬಿಡು (ಕ್ರಿ). ಹೂವುಗಳನ್ನು ಹೊಂದು ; ಪುಷ್ಪಿತವಾಗು : ಪೂಬಿಡುವ ವಸಂತದಾ, ಪಣ್ ಬಿಡುವ ಗ್ರೀಷ್ಮದಾ, ಮುನ್ನಱಿವು ಇರ್ದುದಿಲ್ಲಂ (ಶಿಕ್ಷಕ. ೨೯-೩೦೬). **ಹೂಬಿಡು** : ಒಂದೂವರೆ ತಿಂಗಳಿಗೆ ಸಸಿಗಳು ದೊಡ್ಡವಾಗಿ ಹೂಬಿಡುತ್ತವೆ (ಕುಂಬಾರು. ೯-೨೬) ; ಗಿಡ ಹಬ್ಬುವುದು ; ಚಿಗುರುವುದು ; ಹೂಬಿಡುವುದು ; ಹಣ್ಣು ಬಿಡುವುದು (ಕಾಕೀಲ. ೬೦).   [ಪೂ₁ + ಬಿಡು₁]

**ಪೂಮಡಿ** (ನಾ). ಹೂವಿನ ಮಡಿಕೆ ; ಹೂದಂಡೆ : ತರೆವಿಕ್ಕಿ ಕಟ್ಟಿಲೆಗಮಿಂದು ಮರೀಚಿಗಮಾಯ್ತು ನಾಡೆ ಕಣ್ಣಳವಡೆ ಮಲ್ಲಯುದ್ಧಮೆನೆ ದೇಸೆಯ ಪೂಮಡಿಯಂ ತೊಡರ್ಚಿದರ್ (ಕಂದ್ರಕ. ೬-೬೯).   [ ಪೂ₁ + ಮಡಿ₂ ]

**ಪೂಮರ** (ನಾ). ಹೂವು ಬಿಡುವ ವೃಕ್ಷ ; ಹೂವಿನ ಮರ : ತಳ್ತಿರಟ್ಟಡಿಯ ಪೂಮರದಿಂ ಕಟಿಪೂಸಳತ್ರವಿತ್ತಂ ಕವಿದಲ್ಲಿ ಮೆಲ್ಲನೆಗೆ ತೀಂಕುವ ಪೂವಿನ ಸೀಕರಂಗಳಿಂ (ಆದಿಪು. ೦-೬೦) ; ಪೂಮರನಂ ಕೋಡಗ ವೇಱಿದಂತೆ ಕಬ್ಬಿನ ತೋಂಟವಮಂ ನರಿ ಪೊಕ್ಕಂತೆ (ಧರ್ಮಾಮೃ. ೨-೬೦).

[ಪೂ₁ + ಮರ₁]

**ಪೂಮಲಗು** (ನಾ). ಹೂವಿನ ದಿಂಬು ; ಹೂವುಗಳಿಂದ ರಚಿಸಿದ ಮೆತ್ತೆ : ಪೂಗೋಲ ತೂಗುತೆ ಶಶಿರ ಪಾದಾಸನ ಮೇಗೆ ಕಾಲಿಟ್ಟು ಪೂಮಲಗ ರಾಗದೊಳೊಱಗಿ ತಾವರೆಗದ್ದುಗೆಯೊಳಿರ್ದ ಪೂಗೋಲನು (ಪರಕ. ೦೦-೬೬).

[ಪೂ₁ + ಮಲಗು₁ (< ಮಲಂಗು₂)]

**ಪೂಮಳೆ** 'ಪೂಮಟಿ' ನೋ.

**ಪೂಮಳೆಗಟಿ** 'ಪೂಮಟಿಗಟಿ' ನೋ.

**ಪೂಮಟಿ** 'ಪೂವಟಿ' ನೋ.

**ಪೂಮಾಲೆ, ಹೂಮಾಲೆ** (ನಾ). ಹೂವಿನ ಹಾರ, — ದಂಡೆ; ಪುಷ್ಪಮಾಲೆ: ನಿನ್ನಾಳ್ದ್ನ ಪೂಮಾಲೆಯಿಂದದೆ ನಿಂದಿರ್ಪುದು ಮತ್ಕಿರೀಟದೊಳ್ (ಆದಿಪು. ೧೩-೧೬); ಕಪಿಯ ಕೊರಲೊಳ್ ಪೂಮಾಲೆಯಕ್ಕಿದಂತಾನುಮಕ್ಕುಂ (ರಘುಚ. ೧-೧೦೬); ಕಂಠದೊಳೊಂದಿಸಿದ ಕೊರಲಗುಮಂ ಪೂಮಾಲೆಯಂ ಮಾಡಿ ಅಕ್ಷಯಂ ನಿಟಲಾಕ್ಷನಥಮಂ . . . ಅಕ್ಷಣದೊಳುರು ಮೋಕ್ಷಮಂ ಕೊಡಲು (ಬಸಪು. ೨೮-೩೧). **ಹೂಮಾಲೆ**: ಹೂಮಾಲೆಗಳ ಸಿಂಪಿಸಿದ ಗಂಧದ ಬಂಧದಕ್ಷತೆಯ ಕೀಲಣೆಯ ಮಣಿವೆಳಗುಗಳ ಹರಿದಾಳಿಯಲಿ . . . ಎಸೆದುದಂಕುಶ ಭಟನ ಮುಖ್ಯಯಲಿ (ಶಬ್ದಾಕ್ರೋ. ೩-೩೬); ಎಸ್ತಿದ ಹೂ[ಕ.ಸಾ. ಪು]ಮಾಲೆ ಬಿಲ್ಲಿನಂತಿರಲಾಗ ಮುತ್ತುಮಾಣಿ ಹೆದೆಯಾಗೆ ಚಿತ್ರಭವಗೆ ಪುಷ್ಪಚಾಪವನೀವೊಲು ಬಿತ್ತರದೊಳ್‌ಗೊರ್ವಳಿಸಗು (ಶರಶ. ೧-೧೦೩); ಕೋತಿಯ ಕೈಯಲ್ಲಿ ಹೂಮಾಲೆ ಕೊಟ್ಟ ಹಾಗೆ (ಗಾದೆ). [ಪೂ₂+ಮಾಲೆ]

**ಪೂಮಾಲೆಗಾರ್ತಿ** (ನಾ). ಹೂವು ಮಾರುವವಳು; ಹೂವಾಡಿಗಿತ್ತಿ: ಮಲ್ಲಿಗೆಯಲರ್ದಂಡೆಯಿಡಿಯ ಬಂದೆಳಗುವ ಜಲ್ಲಿದಂಬಗೆ ಚೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ ಕಾವನ ಕಟ್ಟುವಿಲ್ಲಿನಂತಿರ್ದಳು (ಸೋಮಶ. ೩-೦೬). [ಪೂಮಾಲೆ + — ಕಾಱ + — ತ್ತಿ (< — ಇತ್ತಿ)]

**ಪೂಮಾಱು, ಹೂಮಾರು** (ಕ್ರಿ). ಹೂವುಗಳನ್ನು ವಿಕ್ರಯಿಸು,—ಮಾರು: ಇದು ಮನೆಯಣ್ಣನಂ ಮಾಱುವಂದವಲ್ಲದೆ ಪೂಮಾಱುವಂದವಲ್ತು (ಶಂಕಚ. ೯-೮೧ ವ). **ಹೂಮಾರು**: ಹೂಮಾರುವ ಅಂಗಡಿಯಲ್ಲಿ ಹುಲ್ಲು ಮಾರುವುದುಂಟೆ? (ವಾಡಿಗೆ. ೭೨೨). ಹೂಮಾರಿದ ಕೈಲಿ ಹುಲ್ಲು ಮಾರಿಸಬಾರದು (ಶರಶಿ ೬೬). [ಪೂ₂+ಮಾಱು₂]

**ಪೂಮಿಡಿ, ಹೂಮಿಡಿ** (ನಾ). ತೀರ ಎಳೆಯ ಕಾಯಿ; ಚಿಕ್ಕ ಮಿಡಿ: ಮರ್ಮರಪತ್ರಮಂಬುತಳಮಂ ನಡುಮಂತಿರೆ ನಟ್ಟೊಡೆತ್ತ ಬೀಟ್ಮರ್ಗುಟ್ಟೆತ್ತ ಪೂಮಿಡಿಯ ಪೂವಿನ ಕಾಯ್ಗಳ ಕಯ್ಪುವುಳ್ಳಗುಂ (ಶಾಂತಿಪು. ೬-೯೯); ಸುತ್ತಿಟ್ಟು ಪರ್ಬಿದುದು ಮಾದವೇರಿ ಪೂಮಿಡಿಗಳೆತ್ತಲುಂ (ಜಗನ್ನಾ. ೦೯-೫); ಕೋದು ಪೂಮಿಡಿ ತಳಿರ ಕಾಡು ನರುಪೊಗರಿನಿಂ ಪೂದಿಂಗಳರಸನಂ ಕರೆಯುಗುಂ ತಳಿರ್ಲ್ಗ (ಶಾಂತೀ. ೦೦೯-೨೯೮). **ಹೂಮಿಡಿ**: ಹೂಮಿಡಿಯ ಹಱಿದು ಒತ್ತಿ ಹಣ್ಣ ಮಾಡಿದೆನೆಂದರೆ ಹಣ್ಣಾಗಬಲ್ಲುದೆ (ಬಸವ.೨೨೯-೦೦೩೯); ಎಳೆಯ ಹೂಮಿಡಿಗಳಂ ಹಱಿದು ಹಣ್ಣಂ ಮಾಡಲಳವೆ (ಶಬಪು. ೬-೯); ಗೋದಿ ಹೊಡೆಗಟ್ಟಿರಲು ಕಡಲೆಯು ಮಡಿಲು ಹೂಮಿಡಿ ತುಂಬಿತು (ಶಂಕುಬು. ೧೨-೦೨). [ಪೂ₂+ಮಿಡಿ₂]

**ಪೂಮುಡಿ₁, ಹೂಮುಡಿ₁, ಹೂವುಮುಡಿ** (ಕ್ರಿ). ಹೂವುಗಳನ್ನು ಧರಿಸು,—ಮುಡಿದುಕೊಳ್ಳು: ಸ್ಮರಸಂಜೀವನೆ ಕೃಷ್ಣ ಪೂಮುಡಿದಳ್ (ಗದಾಯು. ೬-೪೦). **ಹೂಮುಡಿ₁**: ಹಸುರೆಲ್ಲವು ಕುಸುರಾಯಿತು ಹೂಮುಡಿಯಿತು ಬೇಲಿ (ಶಂಕುಬು. ೬-೨೨); ನೀಲ್ಗೊಂಬಿನಿಂ ಮಾವು ಹೂಮುಡಿಯಿಯು ಕಿಹುದು (ಶಾಂತೀ. ೦೦೩-೨೩೯). **ಹೂವುಮುಡಿ**: ಹೂವುಮುಡಿಯುವ ಹಬ್ಬ ಹೆಂಗಸರಿಗೆ ಜನ್ಮಸಿದ್ಧವಾದುದು (ದೂಕಲ್ಪ. ೬೦). [ಪೂ₂ + ಮುಡಿ₁]

**ಪೂಮುಡಿ₂, ಹೂಮುಡಿ₂** (ನಾ). ೧. ಹೂವುಗಳನ್ನು ಮುಡಿದುಕೊಂಡ ಹೆರಳು.–ಜಡೆ: ಬಟಲ್ಮುಡಿಯ ಸೋರ್ಮುಡಿಯ ಪೂಮುಡಿಯ ನಿಱುದಲೆಯ ಸುಱಿಗುರುಳ . . . ವಿದ್ಯಾಧರಮಾರನಾರೀಕದಂಬಂ (ಧರ್ಮಾಮೃ. ೮ ೦೯೬); ತರುಣಿಯರ ಪೂಮುಡಿಯ ಕಂಪಿಂದೆ ಸೌರಭ್ಯಧರನಾಗಿ . . . ಮಾರುತಂ ಸುಳಿದನು (ಕೆಪು. ೦೦-೬). **ಹೂಮುಡಿ₂**: ೧. ಅವನ ಹೆಂಡತಿ ಐವತ್ತೆರಡು ಕಣ್ಣುಳ್ಳವಳು ಅವಳು ತನ್ನ ಹೂಮುಡಿಯ ಬಿಟ್ಟು ಅತ್ತಾಳು (ಬಸವ. ೯೬೨). ೨. ಹೂವನ್ನು ಹೆಣೆದ ಜಡೆ; ಮೊಗ್ಗಿನ ಜಡೆ: ಪೂರವಾರ್ಗಳಂ ಮಿಡಿವ ಹೂವುಮುಡಿಯ ಪಿಡಿಯಲೆನೆ ಸೆರಗು ದಡದಡಿಸುತಿರೆ ಚಿಕ್ಕೆಯರ್ ಮೆರೆದು ತರಿವಿಂಡಿಯರ್ ನಡೆದರ್ (ಶಾಂತೀ. ೦೨೯-೨೬೦). [ಪೂ₂+ಮುಡಿ₂]

**ಪೂಯ** (ನಾ). ೧. ಗಾಯಗಳಿಂದ ಹೊರಡುವ ಬಿಳಿಯ ದ್ರವ: ಕೀವು. ೨. ಊತ; ಬಾವು: "ಪೂಯಂ, ಪೂಯೀ, ಪೂಯು, ಪೂಯನೀ, ಪೂಯನೀಯಂ ಈ ೫ ಬಾವು" (ಖಗೇಶ. ೦೦೦). [ಸಂ.]

**ಪೂರ₁** (ನಾ). ೧. ತುಂಬುವುದು; ತುಂಬಿಸುವುದು; ಪೂರ್ಣಗೊಳಿಸುವುದಂ. ೨. ತೃಪ್ತಿಗೊಳಿಸುವುದಂ; ಸಂತೋಷಗೊಳಿಸುವುದು. ೩. ಸುರಿಯುವುದು. ೪. ನದಿ, ಸಮುದ್ರ ಮೊದಲಾದುವು ಉಕ್ಕಿ ಹರಿಯುವುದು; ನೆರೆ: "ಪೂರಯೆಂಬುದು ತೊಱೆಯ ಪೂ(ಬೂ)ರಂ" (ಕಹಾಪ್ರ. ೦೦೦-೯೬); ಮಳೆಗಾಲದಲ್ಲಿ ಗಂಗಾನದಿಗೆ ಪೂರ ಬಂದ ಸಮಯದಲ್ಲಿ ಹುಮಾಯೂನನು ದಿಲ್ಲಿಯ ಕಡೆಗೆ ತಿರುಗಿದನು (ಹಿಂದುಸ. ೯೯). ೫. ಹರಿವು; ಪ್ರವಾಹ: ಬಿಡದಟ್ಟು ಬಂಧುಜನದೊಟ್ಟಯಿಯದ ಕಣ್ಣೀರ ಪೂರವಮಾ ಪ್ರೇತಮನೋಗಡಿಸದೆ ಸುಡುವುದು ಗತ (ಶಂಕಶಾ. ೨-೨೮); ಕಣ್ಣೀರ ಪೂರದಗುರ್ವಿಂ ದೆಸೆಗಾಣದಂದೆಡಪುತಂ . . . ಪೋದಂ (ಶಾಂತೀಪು. ೯೦೯); ಪಾದಮರೀಮಯುಖಶಿಶಿಗೊಸರ್ವಿಂದುಗ್ರಾವನಿರ್ಮಳಜಲದ ಪೂರದಿಂ ಬೆಳೆವುತಿಹ ಶಾಳಿಗಳ್ ಕಣ್ಗೆಸೆದುವು (ಶಂಪು. ೦೦-೬). ೬. ನೀರಿನ ಸಮೂಹ; ಜಲಾಶಯ: 'ಪೂರಾಂಬು' ಪರಾ. ೭. ಹುಣ್ಣು, ಗಾಯ ಮೊದಲಾದುವನ್ನು ತೊಳೆದು ಶುದ್ಧಗೊಳಿಸುವುದು. ೮. ಹಿಟ್ಟಿನಿಂದ ಮಾಡಿದ ರೊಟ್ಟಿ, ದೋಸೆ ಮೊದಲಾದ ಖಾದ್ಯ. ೯. ಮಾದಳದ ಗಿಡ; ಮಾತುಲುಂಗವೃಕ್ಷ. ೧೦. [ಯೋಗ] ಪ್ರಾಣಾಯಾಮದ ಒಂದು ಅಂಗ; ಮೂಗಿನಿಂದ ಉಸಿರನ್ನು ನಿಧಾನವಾಗಿ ಒಳಗೆ ಎಳೆದುಕೊಳ್ಳುವುದು: 'ಪೂರಕ' ಪರಾ. [ಸಂ.]

**ಪೂರ₂, ಪೂರಾ**(ಅ). ತುಂಬ; ತೀರ; ಪೂರ್ತಿಯಾಗಿ; ಬಹಳವಾಗಿ: ಕಾಲುಗಳು ಪೂರ ಸೋತುವು (ಶೂಇಮು. ೩೦); ರಾವಣಗೆ ಪೂರ ಕೋಪ ಬಂತು (ಶಂಕಕ. ೦೨೯). **ಪೂರಾ**: ನಾನು ಹೇಳುವ ಮಾತನ್ನು ಪೂರಾ ಕೇಳಬಾರದೆ? (ರಂಜಕಾ. ೦೯); ನಿನ್ನ ತಿಳಿವಳಿಕೆ ಪೂರಾ ತಪ್ಪಲ್ಲ (ಅಕ್ರಮು. ೨೦).

**ಪುಟ್ಟಪೂರಾ, ಪುಟ್ಟಾಪೂರಾ** (ದ್ವಿರುಕ್ತಿ): ಮಿಂಚುಬಳಗ ತೆರೆತೆರೆಗಳಾಗಿ ಅಲೆಯುವುದು ಪುಟ್ಟಪೂರಾ (ಹೃದಸ. ೧-೨); ಛಲಬಲ ಇದ್ದು ಧೀರಾ ಎಂಥ ಶೂರಾ ಆಸಕ್ತಿ ಇಲ್ಲದಾ ವೀರಾ ಪುಟ್ಟಪೂರಾ (ಸ.ಜ.ಗಾ. ೨೦-೦೬); ಕೃಷ್ಣದೇವರಾಯನು . . . ಮುಸಲ್ಮಾನರನ್ನು ಈ ಯುದ್ಧದಲ್ಲಿ ಪುಟ್ಟಾಪೂರಾ ಸೋಲಿಸಿದ ಕಾರಣ ಮುಸಲ್ಮಾನರು ವಿಜಯನಗರದ ರಾಜ್ಯದ ಕಡೆಗೆ ಆತನ ಕಾಲದಲ್ಲಿ ಇಣಿಕಿ ನೋಡಲಿಲ್ಲ (ಕಕಕ್ಕ. ೦೨೨). [<ಪೂರ₁]

**ಪೂರಂಗವಿ** (ಕ್ರಿ). ಹೆಚ್ಚಾದ ನೆರೆ ಬಂದು ಆವರಿಸು; ಮಹಾಪೂರವು ಬಂದು ಮುಸುಕು: ಸಭೆಯೆಲ್ಲಂ ಹೊನ್ನ ನೀರಿಂದರೆ ಬೀಳದಪ್ಪಲಿ ದಪ್ಪುದೇಕೀ ಜಗದ್ವಲ್ಲಭನಂಗಚ್ಛಾಯೆ ಪೂರಂಗವಿದ ಪಸರದಿಂದೆ (ಅಪಂಪು. ೦೦-೩೯). [ಪೂರ₁+ಕವಿ₁]

**ಪೂರಂಗೊಳ್** (ಕ್ರಿ). ಪ್ರವಾಹವಾಗಿ ಹರಿ; ಧಾರೆಗಟ್ಟಿ ಸುರಿ: ಮುದಶ್ರುಗಳ್ ನಯನದಿಂ ಪೂರಂಗೊಳ್ಳಲ್ . . . ರಥಾಂಗರಾಜಿ ನೆರೆದತ್ತು (ಕುಸುಮಾ. ೦-೩೬); ಹೃದಯದೊಳ್ದೂತನವಪ್ರಸನ್ನಸುಧ ಪೂರಂಗೊಂಡುದು (ಕುಸುಮಾ. ೯-೦೦೩). [ಪೂರ₁+ಕೊಳ್₁]

**ಪೂರಂಬರಿಸು** (ಕ್ರಿ). ತುಂಬಿ ಹರಿಯುವಂತೆ ಮಾಡು; ಉಕ್ಕೇರಿಸು: ನೀರ್ಗಾಯ್ಗಳಿಂ ಭೋರ್ಗಱೆದುಗುವೆಳನೀರ . . . ಅತುಳಾಮಾಳ ಖಾತಂಗಳಿಂ ಶೀವಿ ನಿಶಾಂತಂ ಸುತ್ತಿ ಪೂರಂಬರಿಪುವದಱೊಳೇ ನಾರಿಕೇಳಂಘ್ರಿಪಂಗಳ್ (ಕುಸುಮಾ. ೦-೮೬). [ಪೂರ₁+ಪರಿಸು (<ಪರಿಯಿಸು)]

**ಪೂರಕ** (ಗು). ೧. (ಅರೆಯನ್ನು) ತುಂಬುವ; (ಕೊರೆಯನ್ನು)

ಪೂರ್ತಿಮಾಡುವ. ೨. ಸಹಾಯಕವಾದ; ಸಹಕಾರಿಯಾದ: 'ಪೂರಕಪರೀಕ್ಷೆ' ಪರಾ. ೩. ತೃಪ್ತಿಗೊಳಿಸುವ. (ನಾ). ೪. ಪೂರ್ಣಗೊಳಿಸುವಂಶವಹುದು; ಪೂರ್ತಿಗೊಳಿಸುವ ಭಾಗ: ಮೊದಲನೆಯ ಕ್ರಮಕ್ಕೆ ಎರಡನೆಯ ಕ್ರಮ ಪೂರಕದಂತಿದೆ (ಶಿಕ್ಷ. ೨೩೬); ಈ ಜ್ಞಾನಮಾರ್ಗಗಳು ಪರಸ್ಪರ ಪೂರಕಗಳಾಗಿವೆ (ಕನ್ನಕ್ರಾ. ೩೭೦); ಅನೇಕ ಸಂದರ್ಭಗಳಲ್ಲಿ ಒಂದು ದರ್ಶನವು ಮತ್ತೊಂದು ದರ್ಶನಕ್ಕೆ . . . ಪೂರಕವಾಗಿಯೂ ಇರುತ್ತದೆ (ಜಾತಾಕ್ಕ. II ಪುಟ್ಟುಕ್ಕ). ೫. ಮಾದಲದ ಗಿಡ; ಮಾತುಲುಂಗವೃಕ್ಷ. ೬. ಶ್ರಾದ್ಧದಲ್ಲಿ ಪಿತೃಗಳಿಗೆ ಅರ್ಪಿಸುವ ಪಿಂಡ. ೭. ರೊಟ್ಟಿ, ದೋಸೆ ಮೊದಲಾದ ಹಿಟ್ಟಿನಿಂದ ಮಾಡಿದ ಖಾದ್ಯ. ೮. [ಯೋಗ] ಪ್ರಾಣಾಯಾಮದ ಒಂದು ಅಂಗ; ಮೂಗಿನಿಂದ ವಾಯುವನ್ನು ಒಳಗೆ ಎಳೆದು ಕೊಳ್ಳುವುದು: "ನಾಸಿಕದಿ ನಿಂದಾನಿಲಂ ಕುಂಭಕಮೆನಿಕ್ಕು ನಾಸಿಕದಿ ಬಿಡುವಾನಿಲಂ ರೇಚಕಮೆನಿಕ್ಕು ನಾಸಿಕದಿ ಸೇದುವಾನಿಲಂ ಪೂರಕಮೆನಿಕ್ಕು" (ಪುಂಗಿಂ. ೧೬-೧೪); ಕುಂಭಕ ರೇಚಕ ಪೂರಕಂ ಪರಿಮಳೋನ್ನಿಶ್ರಂ. . . ನಂಜಿನ ಸುಯ್ಯ ಗಾಳಿ ನೃಪನಂ ಕೊಂದಿಕ್ಕಿತು (ಕಾಂತೀಶ. ೬-೯೬); ಅಣು ಎನಲಿ ಲಘುವೆನಲಿ . . . ವಶಿತ್ವದಲಿ ಮೆಟೆನಿಸಿ ರೇಚಕ ಪೂರಕವ ಲಿಂಗನ ವನಜುವುದು ಯೋಗಸಿದ್ಧಿಗೆ ಲಕ್ಷಣವನು (ಕುಮಾ. ಊ. ೯-೯). ೯. = ಪಾದ ಪೂರಕ: ಮತ್ತೆಂಬ ಪೂರಕದ ಬಟ್ (ಎಂಬ) ಅವ್ಯಯಂ ಬಟಂ (ಕಶಬ್ದ. ೩. ಕ್ಷಿ ೬೬). ೧೦. [ಗಣಿತ] ಗುಣಿಸುವ ಸಂಖ್ಯೆ; ಗುಣಕ. [ಸಂ.]

**ಪೂರಕಪರೀಕ್ಷೆ** (ನಾ). ೧. ಮುಖ್ಯಪರೀಕ್ಷೆಯಲ್ಲಿ ತೇರ್ಗಡೆಯಾಗದ ವಿಷಯಗಳಿಗಾಗಿ ಪುನಃ ನಡೆಯಿಸುವ ಪರೀಕ್ಷೆ: ಸೆಪ್ಟೆಂಬರಿನಲ್ಲಿ ಪೂರಕಪರೀಕ್ಷೆ ನಡೆಯಿತು (ರೂಢಿ). ೨. ವಾಕ್ಯಗಳಲ್ಲಿ ಬಿಟ್ಟು ಹೋಗಿರುವ ಭಾಗವನ್ನು ಸರಿಯಾಗಿ ಊಹಿಸಿ ತುಂಬುವ ಪ್ರಶ್ನೆಗಳನ್ನೊಳಗೊಂಡ ಪರೀಕ್ಷೆ: ಪೂರಕಪರೀಕ್ಷೆ—ಉದಾಹರಣೆ ೧. ಹಿಂದುಸ್ಥಾನ . . . ಖಂಡದಲ್ಲಿದೆ. ಮೇಲಿನ ಪ್ರಶ್ನೆಗಳಲ್ಲಿ ಒಂದೊಂದು ಪದ ಬಿಟ್ಟುಹೋಗಿದೆ. ವಿದ್ಯಾರ್ಥಿಗಳು ಅದನ್ನು ಸ್ಮರಣೆಗೆ ತಂದುಕೊಂಡು ಅದನ್ನು ಬಿಟ್ಟಿರುವ ಸ್ಥಳದಲ್ಲಿ ಬರೆದು ಪೂರೈಸಬೇಕು (ಶಿಕ್ಷಣ. ೩೫೪). [ಪೂರಕ + ಪರೀಕ್ಷೆ]

**ಪೂರಣ** (ನಾ). ೧. (ಅರಕೆಯನ್ನು) ತುಂಬುವುದು,—ಭರ್ತಿ ಮಾಡುವುದು: ಸಾಹಿತ್ಯದಲ್ಲಿ ಅಪ್ರತ್ಯಕ್ಷತೆಯ ಅಭಾವವನ್ನು ಪೂರಣ ಮಾಡಬೇಕು (ಹಿಂದ. II, ೨೬೬). ೨. ಸಹಾಯಕವಾದುದು; ಪೂರಕ ವಾದುದು: ಆರೋಗ್ಯ ಆಯುಸ್ಸು ಐಶ್ವರ್ಯವೆಂಬ ಈ ಮೂರುವಿಧ ವಸ್ತುಗಳು ನಾರಾಯಣನ ಭಜಕರಾದವರ ಸಾಧನಕೆ ಪೂರಣವಾಗಿಪ್ಪವು (ಜಗನ್ನಾ. ೦೩೨). ೩. ಪೂರ್ಣತೆ; ತುಂಬಿರುವಿಕೆ: ಸೋರುವಾನಂದಾಶ್ರು ಪುಳಕದ ಪೂರಣದಲೆತ್ತಿದನು ಪವನಕುಮಾರಕನ ಮಸ್ತಕವ ನಲಿದೊಲಿದ ಬುಜಭವಸೂನು (ಕೊರಣ. ೫-೯-೬); ಕಡೆದೊಡಲ ಸೀಳಿಂದೆ ಕಡಿವಡೆದ ತೊಳಿಂದೆ . . . ಇಡಿದಿರ್ದುದಾ ರಣದಲೋರಣದ ಪೂರಣದ ಕಾರಣದ ಪೂರಣದೊಳು (ಕೃಷ್ಣಸಾ. ೦೨-೪೪). ೪. (ನದಿ, ಸಮುದ್ರಗಳ ನೀರು) ಉಕ್ಕುವುದು; ಹೆಚ್ಚುವುದು. ೫. ನೆರವೇರಿಸುವುದು; ಮುಗಿಸುವುದು; ಮುಕ್ತಾಯ: ನಮ್ಮ ಬಾಳ್ ಬರಿ ಸಮಸ್ಯೆಯೆ? ಅದರ ಪೂರಣವದೆಲ್ಲಿ? (ನಂ.ಕ. ೩೩). ೬. ಹಿಟ್ಟಿನಿಂದ ಮಾಡಿದ ಒಂದು ಬಗೆಯ ಖಾದ್ಯ. ೭. ಕಡುಬು ಮೊದಲಾದುವುಗಳಲ್ಲಿ ತುಂಬುವ ಹುದುಗಲು: 'ಪೂರಣಗಡುಬು', 'ಹೂರಣ' ಪರಾ. ೮. (ಸುಷಿರವಾದ್ಯಗಳನ್ನು) ಊದುವುದು,—ಬಾರಿಸುವುದು: 'ಪೂರಿಸು' ಪರಾ. ೯. ಬೂರುಗದ ಮರ; ಶಾಲ್ಮಲಿ. ೧೦. ಪೂರ್ಣ ಗೊಳಿಸುವ ಸಂಖ್ಯೆ. ೧೧. ಬಿಲ್ಲನ್ನು ಬಾಗಿಸುವಿಕೆ. ೧೨. [ಗಣಿತ] ಗುಣಾಕಾರ. [ಸಂ.]

**ಪೂರಣಂಗೆಯ್** (ಕ್ರಿ). ತುಂಬು; ಭರ್ತಿಗೊಳಿಸು: ಕಿಕ್ಕೆಂದದಿಂ ಪೂರಣಂಗೆಯ್ವಲ್ಲಿ ಸಗಣ ಪ್ರಚ್ಛನ್ನ ನೆಮ್ಮುಗೆಗಳೊಳಗಡೆ ಶಬ್ದವು (ಕಲ್ಪಶಾಂ. ೯೨). [ಪೂರಣ+ಕೆಯ್[1]]

**ಪೂರಣಗಡುಬು** (ನಾ). ಹೂರಣವನ್ನು ತುಂಬಿಸಿ ಮಾಡಿದ ಕಡುಬು: ದೇವಿ ಮುಳಿಸನುಬಿಡದು . . . ತನ್ನ ಕಯ್ಯಿಂದಮೆ ಪೂರಣಗಡುಬನಿತ್ತಳ್ (ಶಿಕ್ಷಗೋ. ೩೦-೧೪); ನಿನಗಾವ ಭಕ್ಷ್ಯದೊಳಿಷ್ಟಂ? ಪೂರಣಗಡುಬ ನೀವೆನೊ ಚಕ್ಕುಲಿಯಂ? (ರಾಜಶೇ. ೯೦-೦). 'ಹೂರಣಗಡುಬು' ಪರಾ. [ಪೂರಣ+ಕಡುಬು (<ಕಡುಂಬು)]

**ಪೂರಣಿ** (ನಾ). ಬೂರುಗದ ಮರ; ಶಾಲ್ಮಲೀವೃಕ್ಷ: "ಪಿಚ್ಛಿಲಾ ಪೂರಣೀ, ಮೋಚಾ, ಚಿರಾಯುಃ, ಶಾಲ್ಮಲೀ—ಇ ಬೂರುಗದ ಗಿಡ" (ಶಿವ್ಯಾಕ. ೦೨೨). [ಸಂ. ಪೂರಣೀ]

**ಪೂರಣೆ** (ನಾ). ೧. ಪರಿಸಮಾಪ್ತಿ; ಮುಕ್ತಾಯ: ಕ್ಷೀರಂ ದಧಿ[ಘೃ]ತಸಿತ ಮಧುಧಾರಾಳಿಯಃ ಲಕ್ಕೀಗಡುಗೆಗೊಟ್ಟ [ಸೊಂ]ಟಿಗೆ ಕರ್ಪೂರದಿ ಪೂರಣೆ ಮಾಡಿ ಮನೋರಾಗದ ಚಿತ್ರವಿಧದ ಪೂಜಾವಿಧಿಯಂ ಅನ್ತು ಮಹಾಪೂಜೆಯಂ ಮಾಡಿ (ಶಾಶಾ. XX, ೯೯-೩೨; ಸು. 1076 ?). ೨. ಅರ್ಚನೆ; ಪೂಜೆ (?): ಅರಲಿಂ ಕುಂಕುಮದಿಂ ಕರ್ಪುರದಿಂ ತೀರ್ಥಕರದಿವ್ಯಚೈತ್ಯಾವಳಿಯಂ ಸರಸಿಜನೇತ್ರೆಯ ಮುಂದಾದವರದಿಂ ಲೇಸಾಗಿ ಮಾಡುವಂ ಪೂರಣೆಯಂ (ರಹುರಾಮ. ೦೦-೩೩). [ಸಂ. ಪೂರಣ]

**ಪೂರತಿ** (ನಾ). ಪರಿಸಮಾಪ್ತಿ; ಕೊನೆ: ಕುಜನರ ಪಾಪ ಪೂರತಿ ಯಾಗುವ ತನಕ ಅಜನಯ್ಯ ಎನಗೆ ಈ ಮಾತು ದೊರಕುವದೇನೊ (ಮೋಹನ. ೬ ೩). [<ಸಂ. ಪೂರ್ತಿ]

**ಪೂರತೆ** 'ಪೂರ್ತೆ' ನೋ.

**ಪೂರಯಿಕೆ** 'ಪೂರೈಕೆ' ನೋ.

**ಪೂರಯಿಸು** 'ಪೂರಿಸು' ನೋ.

**ಪೂರವಟ** (ನಾ). ಒಂದು ಊರಿನ ಹೆಸರು (?): ಇತ್ತೂಡು ಪೂರವಟ ಗೋಸಾಸಿಗರಾ ಮಡಿಧರ್ಮ್ಮ ತುಸವಿನ್ ಪಡೆದು (ಇಹ. VIII, ೨೬೩-೩; 700). [?]

**ಪೂರವಾರ** (ನಾ). ದಡವನ್ನು ಸೂಸಿ ನೀರು ಹರಿಯುವಿಕೆ; ಮಹಾಪೂರ: ಧರೆಯೊಳ್ ಶಾಲೂರಸಂಘಂ ಪವನಪಥದೊಳಂ ಭೋಧರಾನೀಕಂ . . . ತಟನೀವ್ಯೂಹದೊಳ್ ಪೂರವಾರಂ . . . ರುತಂ ಪರ್ವಿಸುತ್ತಿರ್ದುವೆತ್ತಂ (ಕಾದಂಬ. ೫೩೨). [ಸಂ.]

**ಪೂರವಿಸು** 'ಪೂರಿಸಂ' ನೋ.

**ಪೂರಾ** 'ಪೂರ್ತ' ನೋ.

**ಪೂರಾಂಬು** (ನಾ). ಜಲಾಶಯದ ನೀರು: ನೊರೆವೆಲ್ಲಂ ಮೇದೆರಟ್ಟಿಕ್ ತುಮುಲಟ ಕುಡಿದು ಪೂರಾಂಬುವಂ . . . ಮಾಹೀಪಸಂತತಿ ವಿಪಿನಧವಂ ಕಣ್ಗೆಗುರ್ವಾಯ್ತು ಕಾರೊಳ್ (ಕಂದ್ರಕ. ೯-೯೬). [ಪೂರ್[1]+ಅಂಬು[1]]

**ಪೂರಾಯ** (ನಾ). ೧. ಸಂಪೂರ್ಣತೆ; ಸಮಗ್ರತೆ: ಪೂರಾಯದಲಿ ನುಂಗಿದುದು ಕತ್ತಲೆ ನಿಮಿಷದಲಿ ಜಗವ (ಕುಮಾ. ೯-೩೯); ಕೆಲ ಕೆಲರು ಪೂರಾಯದಿಂ ಪೊಯ್ದು ಘಾಯಂಗಳಿಂ ನೋವಿನೊಳ್ ಪೊರಳೆದರ್ವಿ ತಳಕಿ (ಕುಕಂಗ. ೩೦-೩೩). ೨. ನೆರವೇರುವಿಕೆ; ಪೂರ್ಣ ಗೊಳ್ಳುವುದು: ಬಲ್ಲಿದರೊಡನೆ ಬವರವಾದಡೆ ಗೆಲಲುಂಟು ಸೋಲಲುಂಟು ಕಳ್ಳನೊಡನೆ ಭಾಷೆ ಪೂರಾಯವೆ ಅಯ್ಯಾ (ಬಸವ. ೦೩೦). ೩. ಅತ್ಯಧಿಕವಾದುದು; ಅತಿಶಯವಾದುದು: ರಾಯನೊಡ ಹುಟ್ಟಿ ದರಲಾ ಪೂರಾಯವಿವದಿರ ಕೈ ಮಹಾದೇವಾಯುಧದ ಮಳೆಗಟೆದರ್ (ಕುಮಾರ್ರಾ. ೦೩-೨೮); ಕೋಪಾಗ್ನಿ ಪರ್ಬಿ ಪೂರಾಯಮಾಗಲ್ಕೆ (ಕಬಕ.

೨೩-೨೩). (ಗು). ೪. ಪೂರ್ಣವಾದ ; ಸಮಗ್ರವಾದ ; ಸಂಪೂರ್ಣವಾದ : ನೀರುನೀರಾಗಿ ಬೆರಸಿ ಪಾದೋದಕಧಾರೆಯು ಕಡಲೋಕುಳಿಯಲ್ಲಿ ಪೂರಾಯ ಸನ್ನುತವಾಗಿ ಮುಳುಗಿ ಕೂಡಲಸಂಗನ ಕೃಪೆಯಿಂದುಳಿದೆ (ಶಿಕಗೀ. ೧೦೬-೩೬೦). ೫. ಅಧಿಕವಾದ ; ಅತಿಶಯವಾದ : ಸರಸಸೌಗಂಧಿಕದ ಪುಷ್ಪೋತ್ಕರಕೆ ಪವನಜ ಹೋದನೆಂಬುದನರಸಿಯಿಂದರಿದಪನಿಪತಿ ಪೂರಾಯ ದುಗುಡದಲಿ . . . ಚಿಂತಾಭರಿತನಿದ್ದನು ಭೀಮಸೇನನ ಕಾಂಬ ತವಕದಲಿ (ಕುವ್ಯಾ೩. ೧೧-೨) ; ಆ ಯುವತಿ ಕಣ್ಣೀರಿನಲಿ ಪೂರಾಯಶೋಕದೊಳೆಂದಳಾ ತರಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ದು (ಕಳಕ. ೫ ೫೩). [ಪೂರ್ಣ + ಆಯ್]

**ಪೂರಾಯಗಾಯ, ಪೂರಾಯಘಾಯಂ** (ನಾ). ಆಳವಾದ ಪೆಟ್ಟು ; ಏಟಂ ; ತೀವ್ರವಾದ ಕ್ಷತ : ಘಾರಮೇಘವೆದ್ದು ಧಾರಾವರ್ಷ ಸುರಿವಾಗ ಧಾರಿಣಿಯೆಲ್ಲವು ಮುಳುಗಿತ್ತು ನೋಡಾ . . . ಪೂರಾಯಗಾಯದಲ್ಲಿ ಸಾಯ ಕೊಂದಲ್ಲದೆ ಸೂರ್ಯರನೇಕರು ಮಡಿಯರು ಗುಹೇಶ್ವರ (ಅಪ್ರಭು. ೭೬-೪೯೦) ; ನಾರಾಯಣ ಮಹಾರೋಕ್ಷದಿಂದಸಾಕಿರ್ಪ ತೋರಾಯದಸುಗೆಯುಂ ತರಹರಿಸದಾಕ್ಷಣಂ ಪೂರಾಯಘಾಯದಿಂ ಬಲಮುಳಿಯ (ಕಂಪು. ೩೨-೯) ; ಪೂರಾಯಗಾಯದಿಂದಿರದೆ ಶತ್ರುಘ್ನಂ ಮಹೀತಳಕೆ ರಥದಿಂದೆ ಬೀಳ್ವನಿತರೊಳ್ (ಕೈಜಭಾ. ೨೦-೩೦). **ಪೂರಾಯಘಾಯ :** ಎನ್ನವರೆಪ್ಪಗೊಳಿದು ಹೊನ್ನ ಶೂಲದಲಿಕ್ಕಿದರಯ್ಯಾ ಅಹಂಕಾರ ಪೂರಾಯಘಾಯದಲಿ ಅನಂತು ಬಡಿಕಮನೆಂತು ಜಿ ವಿಸುವೆ (ಬಸವ. ೩೯೭) ; ಬಿಜ್ಜಳನ ಕಾಯದಲಿ ಒಂದೆರಡುಮೂಪೂರ್ಪೂರಾಯಘಾಯದೊಳಿರ್ದು ಕೆಡಹಿ (ಬಸವ. ೬೦-೪೦) ; ಐದಾಱು ಶರದಲಿ ಕರ್ಣನೆದೆಯನು ದೋಱಂಗಳೆಯಲು ಬಳಲಿದನು ಪೂರಾಯಘಾಯದಲಿ (ಕುವ್ಯಾಕರ್ಣ. ೫-೨೯). [ಪೂರಾಯ + ಗಾಯ]

**ಪೂರಾಯಗೆಯ್** (ಕ್ರಿ). ಮುಗಿಸು ; ಪೂರೈಸು : ಪೂರ್ಣಗೊಳಿಸು : ಕುಮಾರತಿಯರು ಶಿವಾರ್ಚನೆಯ ಪೂರಾಯಗೆಯ್ದು ಸದ್ಭಕುತಿಯನಾಂತು ಕೈವಾರಿಸುತಿರ್ದರು (ಶೋಹಕ. ೨೭-೨೫). [ಪೂರಾಯ + ಕೆಯ್₁]

**ಪೂರಾಯಘಾಯ** 'ಪೂರಾಯಗಾಯ' ನೋ.

**ಪೂರಾಯತ** (ಗು). ಸಂಪೂರ್ಣವಾದ ವಿಸ್ತಾರವುಳ್ಳ ; ಸಮಗ್ರತೆಯುಳ್ಳ : ಸ್ಥಾಯಿಸಂಚಾರಂಗಳ ಸರಿಗಮಪಧನಿಯ ಸರದಾಯತದ ಶುದ್ಧ ಸಂಕೀರ್ಣ ಸಾಳಗದ ಪೂರಾಯತ ಸುತಾನಂಗಳಂ . . . ಗೇಯರಸಮೊಸರೆ ಪಾಡಿದರವರ್ (ಕೈಜಭಾ. ೨೦-೫೯). [ಸಂ.]

**ಪೂರಿ, ಪುರ್ರಿ, ಪುರ್ರೈ** (ನಾ). ಕಣಕವನ್ನು ಲಟ್ಟಿಸಿ ಎಣ್ಣೆ ಅಥವಾ ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ಖಾದ್ಯ : ಮಸಾಲ್‌ದೋಸೆ, ಚಪಾತಿ, ಪೂರಿ, ರವೆಇಡ್ಲಿ ಏನು ಕೊಡಲಿ ಸಾರ್? (ಕುಹಾರಿ. ೪೭). **ಪುರ್ರಿ :** ಖೀರು – ಪುರಿ ಅಂದಿನ ಮುಖ್ಯಭೋಜನವಾಯಿತು (ಸ್ವಸ್ವರ. ೦೪೩) ; ಶ್ರೀಖಂಡ ಪುರಿಯನ್ನು ಚಕ್ಕರಿಸುವೆಯಂತೆ ಏಳು ! (ಬಾಕಥೆ. ೫೫). **ಪುರ್ರೈ :** ಅಂದು ಮನೆಯಲ್ಲಿ ಪುರೆ–ಸುಧಾರಸವಾಗಿತ್ತು (ಸಚುಕೀ. ೦೦೦) ; ಪುರೆ; ಶ್ರೀಖಂಡ, ಸಿರ, ಅವಲಕ್ಕಿ . . . ಇತ್ಯಾದಿಯಿಂದ ದೊಡ್ಡ ಬಾಳೆಯೆಲೆ ಭರಗಚ್ಚಾಗಿ ತುಂಬಿದ್ದವು (ಅಶ್ವ. ೨೩೫). 'ಪೂರಿಗೆ' ಪರಾ. [ ← ಹಿಂ. ಪೂರೀ : ಮರಾ. ಪುರೀ ]

**ಪೂರಿಗ** (ನಾ). ಕಠೋರನಾದವನು ; ಕಠಿಣಸ್ವಭಾವದವನು : "ಪೂರಿಗೆ[ಗ]ನೆ ಕಠೋರಂ" (ಶಾಕಿ. ೩೯). [?]

**ಪೂರಿಗೆ, ಹೂರಿಗೆ** (ನಾ). ತುಪ್ಪವನ್ನು ಸವರಿ ಹಂಚಿನ ಮೇಲೆ ಬೇಯಿಸಿ ಮಾಡುವ ಒಂದು ಬಗೆಯ (ಸಿಹಿಯಾದ) ಭಕ್ಷ್ಯ : ಪೂರಿಗೆಯಿಡ್ಡಲಿಗೆ . . . ಮಂಡಿಗೆ ಮೊದಲಾಗೊಡೆಯಾಪದಿನೆಂಟುಂ ತೆಱದ ಭಕ್ಷ ರೂಪ ಗಳುಮಂ...ಬಡ್ಡಿಸಿದೊಡೆ(ಶಬ್ದಾಶಾ. ೭೬-೮೭); ಕಲ್ಪೂರಿಗನೊಯ್ಯನೆ ಪೂರಿಗೆಗೊಟ್ಟೈದಾಱನೆ ಕೊಂಡವನಟ್ಟಿಯಾದೊರಸಿ ನೋಟ್ಟುದುಂ (ಅಂಪು. ೫-೦೯); ಮಿದಿದಿಂದಾಗಿರೆ ಖರ್ಜೂರದ ಪಣ್ಣಂ ನಾರಿಕೇಳಮಂ ಶರ್ಕರೆಯುಂ ಪುದಿದಡಾಗೆ ಕಣಕದೊಳ್ ತುಪ್ಪದೊಳದು ರಸಭರಿತಮಪ್ಪ ಪೂರಿಗೆಯಕ್ಕುಂ (ಶೋಕೋಶ. ೯-೯) ; ರುಚಿಮೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ಆಜ್ಯಯುತಮಪ್ಪುವಂ ಮೆಲ್ದು (ಚರ್ಚೋಪು. ೦-೦೯೭). **ಹೂರಿಗೆ :** ಗಾರಿಗೆಯು ಅಳಸುಗಳ ಕಾತ್ತಱಗಳಲ್ಲಲ್ಲಿ ಹೂರಿಗೆಯು ಲಡ್ಡುಗೆಯು ದಿಟ್ಟಂಗಳಲ್ಲಲ್ಲಿ (ಬಸ. ೭-೦೦) ; ಶೋಧಿಸಿದ ತನಿಬೆಲ್ಲವಿಕ್ಕಿದ ಹೂರಿಗೆಯು ಮೊದೆಯಲ್ಲಿ . . . ನವಘೃತಸೂಪದಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತಪಟುನಿಕರ (ಕುವ್ಯಾ೩. ೦೩-೭) ; ಅರೆದ ತೆಂಗಾಯ ಬಿಡದೊಳು ಚಿಲುಪಾಲಿನೊಳು . . . ಹೆಱದುಪ್ಪ ಸಕ್ಕರೆಯು ಬೆರಸಿದಾ ಹೂರಣವನಿರದಿಕ್ಕಿ ಹೂರಿಗೆಯು ಮಾಡಿಕೊಂಡವಱವಱ ಹೆಸರ ಹೂರಿಗೆಯೆಂಬುದು (ಸೂಶಾ. ೦-೨೭).

[ < ಸಂ. ಪೂರಿಕಾ ]

**ಪೂರಿತ** (ಗು). ೧. ತುಂಬಿದ ; ಭರ್ತಿಮಾಡಿದ ಪೂರ್ಣಗೊಳಿಸಿದ. ೨. (ಸುಷಿರವಾದ್ಯವನ್ನು) ಊದಿದ ; ಬಾಜಿಸಿದ : ಪೂರಿತ ರಣಕಹಳೆಗಂಭೀರಾರಾವಂ ದೆಸೆಯ ಕೋಣ ಕೊಸುಕೊಱ ಗಜಘಟಾರವ ಮುನಿಱದೆ ಪೆಱಗಿಡ ಧ್ವರವಮಸದತ್ತು ಚರದ ಬಲಜಲನಿಧಿಯೊಳ್ (ಶಾಂಪು ೬-೯೭). (ನಾ). ೩. ಪೂರ್ಣತೆ : "ಪೂರಿತನಲದು ಪೂರ್ಣಂ" (ಶಚು. ೪. I. ೯೦). [ಸಂ.]

**ಪೂರಿತಗೆಯ್** (ಕ್ರಿ). ಪೂರ್ಣಗೊಳಿಸು ; ಪೂರ್ಣವಾಗಿ ಸಿದ್ಧಪಡಿಸು : ಗಾಡಿಕಾಱನ ತಾವರೆಗೋಲ್ಗೆ ಚಾಪದ ಮಾಡಿ ಪೂರಿತಗೆಯ್ದು ಕೂಡಿ ಚೋಡಿಯಿಲ್ಲದೆ ರತಿದೇವಿಯ ಕಣ್ಣಗೆ ಕಾಡಿಗೆವಿಡಿದಿಟ್ಟರು (ಶೋಕಚ. ೦೭-೪೫). [ ಪೂರಿತ + ಕೆಯ್₁ ]

**ಪೂರಿಸು, ಪೂರಯಿಸು, ಪೂರವಿಸು, ಪೂರೈಸು** (ಕ್ರಿ). ೧. ತುಂಬು ; ಭರ್ತಿಮಾಡು : ಪಲಕಾಲದೊಳಱಿದಿರ್ದಾಮಲಕದ ಪಣೆಯಂ ಕಱಾರದು ಸೀಳ್ದದಱೊಳ್ ತಿಲ ಮಧು ಘೃತಮಂ ಪೂರಿಸೆ ಫಲಮಾ ಮರದೆಲೆಗಳಿಂದಮವು ಪಿರಿದಕ್ಕುಂ (ಶೋಕೋಶ. ೬-೩೯) ; ಅರ ಮೃದೂಕ್ತಿಯಂ ಬಯಸಿ ಕೇಳ್ದು ತನೂಜ ಮದೀಯಕರ್ಣದೊಳ್ ಪೂರಿಪನಿಂ ರಸಾಯನಮಂ (ಹುಕ್ರಕ. ೫-೦೭) ; ಮಿಸುಪ ಕಾಂಚನಪಾತ್ರೆಯಲಿ ಪೂರಿಸಿದ ಪರಮಾನ್ನವನು ಚೊಮ್ಮದ ರಸದ ಪರಿಪೂರ್ಣವನು . . . ಒಲಿದಿತ್ತುದಾ ನಿಜ ಮೂರ್ತಿ ದಶರಥಗೆ (ಕೋರಾ: ೦ ೭-೫೫). ೨. ಮುಸುಕು ; ಕವಿ ; ವ್ಯಾಪಿಸು : ಮುಸುಕಿದುದು ದುಂದುಭಿಧ್ವನಿ ದೆಸೆಯಂ . . . ತೂರ್ಯಧ್ವನಿ ಪೂರಿಸಿದುದು ತಳ್ಪೊಯ್ದು ರೋದಸೀಮಂಡಳಮುಂ (ಹುಕ್ರಕ. ೬-೭೨); ಧಾರುಣಿ ನಭ ದೆಸೆಗಳನು ಪೂರಿಸಿದಂತಂಧಕಾರ ದಟ್ಟೈಸಿರೆ (ಕೈಜಭಾ. ೫-೦೯). ೩. ತುರುಕು ; ಗಿಡಿ ; ಒತ್ತಿ ತಳ್ಳು ; ಒಳಸೇರಿಸು : ಮೃತ್ಯುವಿನ ವನವಹ್ನಿವಕ್ತ್ರದೊಳ್ ಪೂರಿಪೆನೋ ಕಱುತ್ತುಗಿದು ಕತ್ತಿಗೆಯಿಂದೆರಡಾಗಿ ಪೋಟ್ಟೆನೋ . . . ಈತನಂ (ಹುಕ್ರಕ ೫-೩೭). ೪. ತುಂಬಿಡು ; ಕೂಡಿಡು ; ಸಂಗ್ರಹಿಸು : ಜವೆಯುಂ ನೆಲ್ಲಂ ಕುಂದದೆ ಪೂರಿಸೆ ಕಾರ್ತಿಕೆಯಂದಿಗೆ(ನ)ಮಾಱಂಗೆ ಮಾಱ(ಱು)ಮುಮ್ಮಡಿ ಲಾಭಂ (ಅಶ್ವಶು. ೬-೩೯). ೫. ತುಳುಕು ; ಹೊರಸೂಸು ; ಅಧಿಕವಾಗು ; ಹೆಚ್ಚಾಗು : ಅಮಂದಾಶ್ರುಸಲಿಲಂ ಕಂಗಳಲಿ ಪೂರಿಸಲು (ಚಾಪು. ೩೭-೬೨) ; ಬುಂಬರಿದು ಚಂದ್ರ ಸುಧೇನು ಕೊರ್ತು ಚಕೋರವತ್ಸಗೆ ಮೊಲೆಗುಡಲುಪೂರಿಸಿ ಕರೆವಾಯೊಳಿವ ತಣ್ಪಲೆನೆ ಸೋರಿತು ಬೆಳ್ದಿಂಗಳೆಳೆಗೆ (ಶೋಚಕ. ೦೭-೫೫). ೬. ಪೂರ್ತಿ ಮಾಡು ; ಪೂರ್ಣಗೊಳಿಸು : ಸಮಸ್ಯಮಂ ಕೊಡಲೊಡನೆ ಪೂರಿಸುವ . . . ನವರಸರಸಿಕರ್ (ಕಂಪು. ೭-೦೦). ೭. ಪುಷ್ಟವಾಗು ; ವರ್ಧಿಸು : ಪೂರಿಸುವುದೊರ್ಮೆ ವಿಗತಾಹಾರದೆ ಗಟಾಯಿಸುವುದೊರ್ಮೆ ತಾನೀ

ವೆಯ್ಯೊಳ್ (ಜಚಂ. ೨೦೯-೨೦). ೮. (ಬಾಯಿಂದ) ಊದು ; ಊದಿ ಬಾಜಿಸು : ಪರಸೈನ್ಯಭೈರವಂ . . . ದೇವದತ್ತಶಂಖಮಂ ಪೂರಿಸಿ (ಪಂಪಭಾ. ೧೦-೬೪ ವ) ; ಶಾರ್ಙ್ಗವಾನಂದೇಜಿಸಿದಪನಚ್ಯುತಯೆಯ್ದಯಾನೇಜಿದ ನಯ್ದಾಯು ಶಂಖವಂ ಪೂರಿಸಿದಂ (ಗಜಾಷ್ಟ. ೨೬೯) ; ಬಿಸಜಾಕ್ಷಂ ಶಂಖಮಂ ಪೂರಿಸೆ (ಜಗ. ೬-೨೪). ೯. ನಾಟು ; ನಡು : ಮಾರನ ಸರಳು ಸವಿಾರ ಕುಮಾರನ ಚಾರುತನುವಿನೊಳಗೆಯ್ದೆ ಪೂರಿಸಲವ ದೆರಜುತ ರವಿಪುರವಿಷ್ಟ ದಾರಿಯನೊದು ನೋಡಿದನು (ಶಂಜ. ೬-೦೬೦) ; ಒರ್ಗೋರ್ವರ ಮೆಯ್ಯೊಳಂಟಿದ ಪುಳಕಗಳೋರೊರ್ವರ ಮೈಯೊಳಗೆ ಪೂರಿಸಲು (ಶಬಾಶಾಂ. ೬-೦೯). ೧೦. ಆಗು ; ಒದಗು ; ಬರು : ಕೂರ ಪ್ರಾಕಾರಂಗಳ ಮೇಲೆಯು ರೇಫಕ್ಕೆ ಪರದ ಖ ಟ ಲಕ್ಷ್ಯಂಗಳ್ ಪೂರಿಪುವಸ್ವರ ವಿಧಿಯಿಂ (ಶಬ್ದ. ೨೯೦(ವ)). ಪೂರಯಿಸು : ೫. ಆ ಮಾತಿಂಗೆ ನಸುನಾಣ್ಚಿ ಹೃದಯಾರವಿಂದದುಲ್ಲಾಸ ಪೂರಯಿಸಿ ಚಂದನಸೌರಭ್ಯವಡೆದ ವಿಗ್ರಹಜಾತ ಸಂದೋಹ ಗುಡಿಗಟ್ಟಿತವಳ (ಕೋಹಕ. ೨೬-೬೬). ೬. ಆ ಕೆಜ್ಜೆಯನೂ ಪೂರಯಿಸಿ ಆ ಕೆಜ್ಜೆಯ ಕೆಳಗೆ (ಶಾಸಂ. ೦೯೩೪, ಕುಂಗಜೂರು. ೦೫೬-೬ ; 1419) ; ಈ ಕಾರ್ಯದ ಜವಾಬ್ದಾರಿಯನ್ನು ಕೈಕೊಂಡಿರುವ ಮಹನೀಯರು ಅದನ್ನು ಆದಷ್ಟು ಬೇಗ ಪೂರಯಿಸಿಕೊಡಬೇಕೆಂದು ಬೇಡುತ್ತೇನೆ (ಶಾಹಿಶ. ೬೬). ೮. ಭು ಭೂ ಭೂ ಎಂದು ಪೂರಯಿಸಿದುದು ಶಂಖು (ಕಬುರ. ೧೦ ಕ್ರಯೋ) ; ಭು ಭೂ ಭೂ ಎಂದು ಪೂರಯಿಪ ಶಂಖದ ಧಟಂ ಧಟಂ ಧಟವೆಂದು ಮೊಳಗುವ ಭೇರಿಯ . . . ಬಲ್ಲಾಲಿಯೊಳ್ ಮಾಪೂಜೆ ಸಮಸಂದುದು (ರಾಜಾಶ. ೬೬-೫). ೧೧. ಮುಗಿ ; ಮುಕ್ತಾಯವಾಗು ; ಸಮಾಪ್ತಿ ಹೊಂದು : ಸ್ತೋತ್ರವು ಪೂರಯಿಸಿದ ಬಳಿಕ ವಂಶಲೋಚನರೆಂದರು (ಎರಕ. ೨೬). ೧೨. ಬಳಿ ; ಹಚ್ಚು ; ಲೇಪಿಸು : ಹಣೆಗೆ ರಾರಾಜಿಪ ತಿಲಕವನಿಟ್ಟು ಗಂಧವ ಪೂರಯಿಸಿದನು ನಾಣ್ಮೆಯ್ಗೆ (ಪೋಹಕ. ೦೨-೪೬). ೧೩. ನೀಡು ; ಕೊಡು ; ಒದಗಿಸು : ಹಿಂದೂಸ್ತಾನದಲ್ಲಿ ಬಂದು ನಿಂತುಕೊಳ್ಳುವ ಪೋರ್ತುಗೀಜ ಮತ್ತು ಇಂಗ್ಲೀಷರ ಬಗ್ಗೆ ಇವನು ಸಾಕಷ್ಟು ಲಕ್ಷ್ಯ ಪೂರಯಿಸಲಿಲ್ಲ (ಹಿಂಮುಇ. ೦೨೦).

ಪೂರವಿಸು : ೨. ಉಗಿಪರೋ ಕತ್ತುರಿಯ ತವಲಾಯಿಗಳ ಮುಚ್ಚಳವನೆ ಕವಾಟವ ತೆಗೆಯೆ ಕವಿದರು ದಿವ್ಯಪರಿಮಳಸಾರ ಪೂರವಿಸೆ . . . ಅಂಕಕಾತಿಯರಿಂದ್ರನೋಲಗದ (ಶುಹ್ಯಾ. ೬-೦೯). ೫. ಚೀರದಲಿ ನೆಜ ತುಂಬಿದಂತಿರೆ ಪೂರವಿಸಿ ಬುದಿಲನಿಸಿ ಭಸಿತದ ಧಾರೆ ಪೂಜಿಮಡೆ ಜಿ.ಕೊರ್ಳವೆಯಲಿ ಚಿಮ್ಮಿದಂತಾಯ್ತು (ಬಸವ. ೪೪-೦೫). ೮. ಜಗವು ಸ್ತೋಮ . . . ಘೋರೆನಲಿಂದುಭಯಶಂಖವ ಪೂರವಿಸಿಕೊಳುತಿದ್ದು ಹೋದರು (ಕೃಷೋ. ೨೩-೦೦). ೧೨. ಪೂರವಿಸಿದನು ಗಂಧವನು ಸರಳೋರಪ್ಪೋರೆಯ ಮೈಯ ಘಾಯದ ಹೇರುಗಳ ಹೂಳಿದನು ವರ ಕಸ್ತೂರಿಯ ಸಾರದಲಿ (ಶುಹ್ಯಾಗ. ೫-೪೦). ೧೪. ತೃಪ್ತಿಗೊಳಿಸು ; ತಣಿಸು : ಸುದಿರುಳು ರತಿ ಪೂರವಿಸದೋ ಬಂದು ಕಾಮನು ಕೈವಿಡಿದನೋ ಬಂದಿತಂದೋ . . . ಇದಟ ಚಂದವೆಲ್ಲಂ ಹೇಳದಡೆ ಗುಣವ್ಯಂ . . ನಿಮ್ಮಡಿಯಾಣೆಯೆನಲ್ (ಬಸವ. ೪೩-೦೪). ೧೫. ನೆರವೇರಿಸು ; ಈಡೇರಿಸು : ಸಾವಿಮಾಲಪ್ರಾಣಪದದಲಿ ಸೇರಿದೋಗರವಂ ಸಮರ್ಪಿಸಿ ಪೂರವಿಸುವುಪಚಾರವುಪಚಾರಂ ಶಿವಂಗೆ (ಬಸವ. ೬೫-೦೫).

ಪೂರೈಸು : ೧. ಹರಭಕ್ತಿ ಪೂರೈಸೆ ಪರಮಸುಖ ಕೋರೈಸೆ ಎಸದಿರ್ದ ನಮ್ಮಮ್ಮ ಬಾಹೂರ ಬೊಮ್ಮಯ್ಯ (ಶಾಹೂರ. ಹ. ೩೦೬-೦೨) ; ಆ ಬುದ್ಧ ಸಂಘನಂ ಪರಮೈಶ್ಯಸವಿಾತಿಯಂಗದೊಳಸುವಂ ಪೂರೈಸಿ . . . ಪೂಜಿಸಿದ ರಳ್ತಿಯಿಂ (ಸಶ್ಯ. ೯-೪೪). ೨. ನಾನಾರವದ ವಾದ್ಯನಿರ್ಘೋಷವಾದಿಕ್ತಟವ ಪೂರೈಸಿ (ಕಬಿ. ೫೬-೪೬); ರಥಘೋಷದ ಚೀತ್ಕಾರರವಂ ದಿಶಾವಿವರವಂ ಪೂರೈಸೆ (ಕೃಕಬಿ. ೫-೨೨). ೫. ಸೋರಿದುವಮೃತಪಾಷಾಣ ಪಾಲ್ಗಡಲಂತೆ ಪೂರೈಸಿತು ಚಂದ್ರಕಿರಣ (ಕೋಹಕ. ೫೬-೫೩). ೬. ಇವಂ ತಿರ್ಯಕ್ಕ್ಯದೊಳ್ನಿಲ್ಲನೆನ್ನಗ[ವಾಯುಷ್ಕರಮಾದ ಯಜ್ಞಮನಿದಂ ಪೂರೈಸದಾನಿರ್ಪಂ] (ಶಾರಂಗ. ೬೬೪); ಆ ಗರುವಮುನಿಮಂತ್ರದಿಂದ . . . ಯಾಗವನು ಪೂರೈಸಿದನು (ಕಶಿ. ೦-೩೦); ತನ್ನ ಕೆಲಸ ಪೂರೈಸಿ ಹುತಾಲಿಶನು ಹಿಂದಿರುಗಿದನು (ಹುಜ. ೯೫). ೮. ಪಲತೆಱದ ಪಜ್ಜೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ . . . ಎಂತುಂ ಪೋಜಿಮಾಡಿಸ ಲಾಱದೆ (ಗದಾಯು. ೬-೦ ವ); ದುರುದೆತ್ತಿ ದೆಸೆದೆಸೆಗೆ ಕರೆವ ಕಹಳೆಗಳೊಳಗೆ ನೆರೆದು ನೆಜ ಪೂರೈಪ ಶಂಖಧ್ವನಿಗಳೊಳಗೆ . . . ಬರುತಿರ್ದನಪ್ರತಿಮ ಸುಕುಮಾರಶೇಖರನು (ಸುಕು. ೫-೬೯); ಫಲುಗುಣಂ ಪೂರೈಸಿದಂ ದೇವದತ್ತವಂ (ಕೃಷಿ. ೨೫-೩೪). ೧೨. ಬಣ್ಣ ಬಂಗಾರವನುಡತೊಡಕೊಟ್ಟು ಹೊಂಬಣ್ಣಚಂದನವ ಪೂರೈಸಿ (ಕೋಹಕ. ೦೦-೬೩). ೧೩. ನಿಮ್ಮ ಕುಟುಂಬಕ್ಕೆಬೇಕಾದ್ದನ್ನೆಲ್ಲನಾನು . . . ಪೂರೈಸಿ ಕೊಡುವೆನು (ಹುಂಶಿಖ. ೪-೬೬); ಕಾಗದ ಪೂರೈಸುವವರ ಕಡೆಯಿಂದ ವಕೀಲನ ಮುಖಾಂತರ ಪತ್ರ ಬರಲು ಭೂಪತಿಯು ಬೆರಗಾಗಿ ಬಿಟ್ಟನು (ಅಶ್ಯ. ೨೬೦). ೧೫. ಜನದ ಮನದಾಸೆಯುಂ ತಾನಿನಿಸುಂ ಪೂರೈಸದಾತನರ್ಥಂ ವ್ಯರ್ಥಂ (ಜಿರತ್ನ. ೫-೨೬); ಭಾಷೆಯುಂ ಪೂರೈಸದಿಹನೇ ಕಾಶಿನಾಥನು (ಬಸವ. ೫೪-೫)। ಈತನಿಂದು ನೀನನಾಥನ ಮುಂದೆ ಭಾಷೆಯಂ ಪೂರೈಸಿ ಕೊಳುಗುಳದೊಳಿರ್ದನು (ಕೃಷಿ. ೦೩-೬೦). ೧೬. ಸರಿದೂಗು ; ಸಾಕಷ್ಟಾಗು: ಮೇಲೆ ಬರೆದಂತೆ ಅಡಕೆ ಮತ್ತು ಮಡೂರಿ ತೆಗೆದುಕೊಂಡರೆ ಸಹ ನಮಗೆ ಪೂರೈಸುವದಿಲ್ಲ (ಹುಂಶಿಖ್ಯ. ೦೪೬). ೧೭. ನೀಗಿಸು; ಸಾಗಿಸು: ಹೋರುವ ಸತಿಯಿಂದ ಸೋರುವ ಮನೆಯಿಂದ ಪೂರೈಸದವನ ಬದುಕಿಂದ ಕೊಂಡೊಯ್ವ ಮಾರಿ ಲೇಸು (ಸರ್ವಜ್ಞ. ೦೩೨೪) ; ಬೆಕ್ಕಿಗೆ ಶಿಕ್ಷಾಕಲಿಸಿ ಯಾರು ಪೂರೈಸಾರು (ರಾಕಹು. ೪೦). ೧೮. ಸಂಪೂರ್ಣವಾಗು ; ಸಮಗ್ರವಾಗು : ಪೂರೈಸಿ ವೇದಮೋದಿದನನೂಚಾನನಕ್ಕು (ಹುಂಗಶಾ. ೬೪-೩) ; ಪೂರೈಸಿ ತಾರಾಕರು ಕಂಠೀರವೇಂದ್ರನ ಕೂರಸಿಯಾಲಿ ನುಗ್ಗಾಯ್ತು (ಕಂಹು. ೦೫-೫೪). [ ಪೂರಣ+—ಇಸು ]

ಪೂರುವ 'ಪುಬ್ಬೆ' ನೋ.

ಪೂರುಷ (ನಾ). ಪುರುಷ : ಮನುಷ್ಯ : "ಮನುಷ್ಯಃ, ಮಾನುಷಃ. . . ಪುರುಷಃ, ಪೂರುಷಃ, ವಿಟ್—ಈ ೧೨ ಮಾನಸರ್" (ಹಲಾಯು. ೫೫-೦೬೬); "ಮಾನವಂ ಮರ್ತ್ಯಂ ಮನುಷ್ಯಂ ನರು ಪುಮಾನ್ ಮಾನುಷಂ ಪೂರುಷಂ . . .ಗಂಡುಗೂಸಕ್ಕು" (ಹುಂಗಶಾ. ೬೬-೦). [ಸಂ.]

ಪೂರುಷತನ (ನಾ). ಪರಾಕ್ರಮ; ಪೌರುಷ : ಕೆಲಬಲದಿಂದುಮುಖಿಯರ ನೋಡಿದನು ನಲಘಿಂದ ನುಡಿದನು ತನ್ನ ಪೂ[ಪಾಠಾಂ. ಪೌ]ರುಷತನದ ಪರಿಣತೆಯ (ಶುಹ್ಯಾಶಿ. ೫-೦೫). [ಪೂರುಷ+—ತನ]

ಪೂರೈಕೆ, ಪೂರಯಿಕೆ (ನಾ). ೧. ಈಡೇರಿಕೆ ; ನೆರವೇರಿಕೆ : ಕಾವೇರಿ ತನ್ನ ಬಯಕೆಯ ಪೂರೈಕೆಗಾಗಿ ಬೇರೆ ಗಂಡನನ್ನು ಹಿಂಬಾಲಿಸಲು ಸಾಧ್ಯವೇ (ಗಾಹಿಂ. ೬೫). ೨. ಒದಗಿಸುವಿಕೆ; ಸರಬರಾಜು : ಹಾಲು, ಮಧ್ಯಾಹ್ನದ ತಿಂಡಿ, ವೈದ್ಯಪರೀಕ್ಷೆ, ಚಿಕಿತ್ಸೆ ಮತ್ತು ಇತರ ಪೂರೈಕೆಗಳು—ಇವಕ್ಕೆ ಪಾಶ್ಚಾತ್ಯದೇಶಗಳಲ್ಲಿ...ವೆಚ್ಚ ಆಗುತ್ತಿದೆ (ಶಿಕ್ಷರ. ೦೫೬). ೩. ಸಾಮಗ್ರಿಯ ಸಮೃದ್ಧಿ : ತನ್ನದೂ ಒಂದು ಸಂಸಾರ, ಹೆಂಡತಿ, ಹೊಲ, ಇತರ ಪೂರೈಕೆ ಸಾಕಷ್ಟು ಇದೆ ಎಂದು ನಂಬಿ ಅಭಿಮಾನದಿಂದ ಸುಟ್ಟು ಸುಧಾರಿಸಿದ್ದ (ಹೊಕ್ಕ. ೬೪). ಪೂರಯಿಕೆ : ೨. ಸಿದ್ಧವಾದ ಉಡುಪುಗಳು ವಿತರಣೆಗೋಸುಗ ಪೂರಯಿಕೆಯ ಮಂದಿರಗಳಿಗೆ ಹೋಗುತ್ತಿದ್ದುವು (ಗಾಂಯು. ೯೯). [ಪೂರೈಸು (< ಪೂರಿಸು) +—ಕೆ]

ಪೂರೈಸು 'ಪೂರಿಸು' ನೋ.

ಪೂರೋಟಿ 'ಪುರುವಠ' ನೋ.

**ಪೂರ್ಣ** (ಗು). ೧. ತುಂಬಿದ ; ಭರ್ತಿಯಾದ ; ಪೂರ್ತಿಯಾದ : ಪೂರ್ಣಾಂಬುಪೂರ್ಣಕುಂಭಾಗ್ರಮುಚಿತಕಂಕೇಲಿಪಲ್ಲವೋಲ್ಲಾಸರಚಿತಂ (ಅಜಿ. ೬-೩೦ ಕಳ). ೨. ಸಮಗ್ರವಾದ ; ಎಲ್ಲ ; ಇಡಿಯಾದ. ೩. ನೆರವೇರಿದ ; ಈಡೇರಿದ. ೪. ತುಂಬುದನಿಯುಳ್ಳ ; ನಾದಮಯವಾದ. ೫. ಸಮರ್ಥ ; ದಕ್ಷ ; ಬಲವುಳ್ಳ. ೬. (ಬಿಲ್ಲಿನಂತೆ) ಎಳೆದು ಬಾಗಿಸಿದ. ೭. ಮುಗಿದ ; ಮುಕ್ತಾಯವಾದ. (ನಾ). ೮. ಕಡುಬು, ಹೋಳಿಗೆ ಮೊದಲಾದುವುಗಳ ಹೂರಣ: ಹೂರಣ: (೬). ೯. ಸಂಕೀರ್ಣವಾದುದು ; ಸಂದಣಿ : "ಆಚಿತಂ, ನಿಚಿತಂ . . . ಪೂರ್ಣಂ—ಈ ೯ ಸಂದಣಿ" (ಅಭಿಧಾ. ೦೦೬-೦೭). ೧೦. ಸಮಗ್ರತೆ; ಸಂಪೂರ್ಣತೆ : ಕೊಂಚಕೊಂಚಗಳಿಂದವು ಪೂರ್ಣದಿಂವಾದೀತೆ ? (ಜಂಕುಳ. ೩೨೦). ೧೧. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು; "ಕೆನ್ನೆಗಳನ್ನು ಸ್ವಲ್ಪ ಉಬ್ಬಿಸುವುದು, ರೋಷ, ಹರ್ಷ ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಅಸ್ಕರಂ. ೨೭೫ ಗದ್ಯಕುವಾರ) : ಕುಂಚಿತ, ಕಂಪಿತ, ಪೂರ್ಣ, ಕ್ಷಾಮ, ಫುಲ್ಲ, ಸಮ—ಈ ಆರುಂ ಗಲ್ಲದ ಭೇದಂಗಳ್ (ಅಸ್ಕರಂ. ೩-೬೯ ಕ).

**ಪೂರ್ಣವಾಗು** = ಪೂರೈಸು ; ಪೂರ್ತಿಯಾಗು : ಅದರ ಬೆಳವಣಿಗೆ ಪೂರ್ಣವಾಗಲಿಕ್ಕೆ ಐದು ವರ್ಷ ಹತ್ತುವವು (ಕುಂಅಜು. ೬-೯೬). [ಸಂ.]

**ಪೂರ್ಣಕಂಠ** (ನಾ). ತುಂಬುಶಾರೀರ ; ತುಂಬು ಧ್ವನಿ : ಪೂರ್ಣಕಂಠದಿಂದ (ಧಾತು ಮತ್ತು ಮಾತು) ಮಹಾವೈದ್ಯನಾಥಅಯ್ಯರ್ ಅವರು ಹಾಡುತ್ತಿದ್ದರು (ಸಂಗೀತ. ೯). [ಸಂ.]

**ಪೂರ್ಣಕಾಮ** (ನಾ). ೧. ಇಷ್ಟವನ್ನು ಈಡೇರಿಸಿಕೊಂಡವನು. ೨. ಭಗವಂತ; ಪರಮಾತ್ಮ : ಕರ್ಣ ಕರ್ಣಕಠೋರಸಾಹಸ ನಿರ್ಣಯಿಸು . . . ಪೂರ್ಣಕಾಮನು ನೀನು ಕುರುಬಲಕರ್ಣಧಾರನು ನೀನು (ಕುವ್ಯಾದ್ರೋ. ೦-೦೭). [ಸಂ.]

**ಪೂರ್ಣಕುಂಭ** (ನಾ). ೧. (ನೀರು ಮೊದಲಾದ ದ್ರವದಿಂದ) ತುಂಬಿದ ಕೊಡ ; ಕಲಶ : ಕಳಸಂ ಕನ್ನಡಿ ತೋರಣಂ . . . ರತ್ನಂ ದಧಿ ಪೂರ್ಣಕುಂಭಮಿನಿತುಂ ಪೂ ಪಂಗೆ ಬರ್ಪಂಗನಾಕುಳದಿಂ ಕಟ್ಟಿದಿರ್ವಂದೊಡಿಷ್ಟಫಲಮಂ ಶ್ರೀಶಿಷ್ಟಕಲ್ಪದ್ರುಮಾ (ಲೀಲಾಶ:ಕ. ೦೨-೬). ೨. ಮಂಗಳ ಸೂಚಕವಾಗಿ ಬಾಗಿಲಲ್ಲಿ ಇಡುವ ನೀರು ತುಂಬಿದ ಕೊಡ : "ಭದ್ರಕುಂಭ, ಪೂರ್ಣಕುಂಭ—೨ ಅರಮನೆಯ ಬಾಗಿಲು ಮುಂತಾದವುಗಳಲ್ಲಿ ಮಂಗಳಕರವಾಗಿ ಇರಿಸತಕ್ಕ ಪೂರ್ಣಕಲಶಗಳ ಹೆಸರು" (ಸಿದ್ಧಾಂತ. ೨೯೩); ಬಿಗಿದೊಗೆದಾತ್ತತುಂಗಕುಚಕುಂಭಮನೊಡ್ಡಿಪ ಪೂರ್ಣಕುಂಭಮಂ . . . ಅಂಬುಜವದನೆ ಕಂಡಳ್ (ಕ್ಷತ್ರ. ೯-೦೦೦); ಊರ ಬಾಗಿಲ್ಲಿಯೂ, ಊರ ಒಳಗೂ ಅಲ್ಲಲ್ಲಿ ಮಂಗಳಾರ್ಥವಾಗಿ ಪೂರ್ಣಕುಂಭಗಳನ್ನು ಇಟ್ಟಿದ್ದರು (ಕಠಾ. ೩೬೦).

**ಪೂರ್ಣಕುಂಭಪುರಸ್ಕಾರ** = ದೊಡ್ಡ ವ್ಯಕ್ತಿಗಳನ್ನು ಎದುರುಗೊಳ್ಳುವಾಗ ಮಠ, ದೇವಸ್ಥಾನಗಳಲ್ಲಿ ಪೂರ್ಣಕುಂಭಸಹಿತವಾಗಿ ಮಾಡುವ ಸ್ವಾಗತ : ರಾಷ್ಟ್ರಪತಿಗಳನ್ನು ರಾಮೇಶ್ವರದೇವಸ್ಥಾನದಲ್ಲಿ ಪೂರ್ಣಕುಂಭ ಮರ್ಯಾದೆಯೊಂದಿಗೆ ಎದುರುಗೊಳ್ಳಲಾಯಿತು (ಒಂ). [ಸಂ.]

**ಪೂರ್ಣಕ್ರಿಯಾಪದ** (ನಾ). [ವ್ಯಾಕ] ವಾಕ್ಯದ ಅರ್ಥವನ್ನು ಪೂರ್ಣಗೊಳಿಸುವ ಕ್ರಿಯಾಪದ : ಧಾತುಗಳಿಗೆ ಕೆಲವು ಆಖ್ಯಾತಪ್ರತ್ಯಯಗಳು ಸೇರಿ ಪೂರ್ಣಕ್ರಿಯಾಪದಗಳಾಗುತ್ತವೆ (ಕ್ರಿಬಿಬಿ. ೯೯); 'ಒಂದು' ಕಾಲವನ್ನಾಗಲಿ, 'ಅರ್ಥ' ವನ್ನಾಗಲಿ ಸೂಚಿಸುವ ಕ್ರಿಯಾಪದವನ್ನು ಉಪಯೋಗಿಸಿದರೆ ವಾಕ್ಯದ ಅರ್ಥವು ಪೂರ್ಣವಾಗುತ್ತದೆ. ಉದಾಹರಣೆಗೆ, ಅವನು ಮನೆಯಿಂದ ಹೊರಡುತ್ತಾನೆ . . . ಈ ಬಗೆಯ ಕ್ರಿಯಾಪದಗಳಿಗೆ ಪೂರ್ಣಕ್ರಿಯಾಪದಗಳೆಂದು ಹೆಸರು (ಕನ್ನಡಕು. ೬೪). [ಸಂ.]

**ಪೂರ್ಣಗರ್ಭಿಣಿ** (ನಾ). ತುಂಬಿದ ಬಸಿರಿ ; ಗರ್ಭವು ಸಂಪೂರ್ಣವಾಗಿ ಬೆಳೆದು, ಹೆರಿಗೆ ಸನ್ನಿಹಿತವಾಗಿರುವ ಹೆಣ್ಣು : ಎಮ್ಮಣ್ಣನಾಣತಿಗಳಿಂ ವನದೊಳಿರಿಸಿ ಪೋಪೆಂ ಪೂರ್ಣಗರ್ಭಿಣಿ ತಾಯಿರಿ ನೀವೆಲ್ಲರ್ ಕಾವಲಿರ್ದು (ರಾಮಾಶ್ವ. ೬೯-೩); ಪೂರ್ಣಗರ್ಭಿಣಿಯಾದೀ ಹುಲ್ಲೆಗೆ ಯಾವಾಗ ಸುಖ ಪ್ರಸವವಾಗುವುದೋ ಆಗ ನನಗೆ ಕುಶಲಪತ್ರಿಕೆಯನ್ನು ಕಳುಹಿಸಬೇಕು (ಶಾಕುಂತ. ೩೩-೩). [ಸಂ. ಪೂರ್ಣಗರ್ಭಿಣೀ]

**ಪೂರ್ಣಗೊಳಿಸು** (ಕ್ರಿ). ಪೂರ್ತಿ ಮಾಡು ; ಮುಗಿಸು ; ಪರಿಸಮಾಪ್ತಿ ಮಾಡು : ಅಂಗವಿಜ್ಞಾನಿ ಹಾರ್ವೆಯು ರಕ್ತಪರಿಚಲನಾಸಂಶೋಧನೆಯನ್ನು ಪೂರ್ಣಗೊಳಿಸಿದನು (ಅಶಾಸ. ೦೯); 'ಪರಿಶಿಷ್ಟ' ವು (Supplement) ಹೊರಬಿದ್ದು ಅದನ್ನು ಪೂರ್ಣಗೊಳಿಸಿತು (ಸವಾರೋ. ೨೬೩).

[ ಪೂರ್ಣ + ಕೊಳ್ಳು + — ಇಸು ]

**ಪೂರ್ಣಗೊಳ್ಳು** (ಕ್ರಿ). ಮುಗಿ ; ಸಮಾಪ್ತವಾಗು : ಈ ಕೊಪೆಯುವರಿಬ್ಬರ ಆಡಳಿತದಲ್ಲೇ ನಿಘಂಟು ಪೂರ್ಣಗೊಂಡದ್ದು (ಸವಾರೋ. ೨೬೨).

[ಪೂರ್ಣ + ಕೊಳ್ಳು (< ಕೊಳ್))]

**ಪೂರ್ಣಗ್ರಹಣ** (ನಾ). ಸೂರ್ಯ ಅಥವಾ ಚಂದ್ರನು ಪೂರ್ತಿಯಾಗಿ ಮರೆಯಾಗುವ ಗ್ರಹಣ ; ಖಗ್ರಾಸಗ್ರಹಣ : ಚಂದ್ರಗ್ರಹಣ ಪೂರ್ಣಗ್ರಹಣವಾದರೂ ಆಗಬಹುದು, ಅರ್ಧಗ್ರಹಣವಾದರೂ ಆಗಬಹುದು (ಅಕಾಶ. ೪೨). [ಸಂ.]

**ಪೂರ್ಣಚಂದ್ರ** (ನಾ.) ೧. ಹದಿನಾರುಕಳೆಗಳಿಂದ ಕೂಡಿದ ಚಂದ್ರ ; ಹುಣ್ಣಿಮೆಯ ಚಂದ್ರ : ಉದಯಂಗೈಯಲಿರ್ದ ಪೂರ್ಣಚಂದ್ರನನೊಳಕೊಂಡು ಬೆಳ್ಪಿಸೆವ ವಾಸವದಿಗ್ವನಿತಾನನಚೊಲಾನನರುಚಿ ಚೆಲ್ವನೇಂ ಪೆರ್ಚಿಯೆ ತಾಳ್ದಿದುದೋ ಬಿಸಕಾಂಡಪಾಂಡುರಂ (ಅಜಿ. ೬-೯೭). ೨. [ಕಾಮಶಾ] ಸ್ತ್ರೀಯರ ಯೋನಿಯಲ್ಲಿರುವ ಒಂದು ನಾಡಿ : ಮದನಾಂದೋಳನ ಮದನಚ್ಛತ್ರ ಪೂರ್ಣಚಂದ್ರಾದಿ ನಾಡೀಮರ್ಮಜ್ಞರಿಂ (ಶಶೀಶ. ೨೪೦) : ಭಗಕ್ಕೆ ಕೊಂಚ ದೂರದಿ ಕಾಮಜಲ ತುಂಬಿರ್ಪುದು ಪೂರ್ಣಚಂದ್ರವೆಂಬ ನಾಡಿಯುಂಟು (ಕಾಮಕಾ. ೨೪೦). [ಸಂ.]

**ಪೂರ್ಣಚಂದ್ರನಾಡಿ** (ನಾ). = ಪೂರ್ಣಚಂದ್ರ ೨ : ತುಟಿತುದಿಯಿಂ ಪೂರ್ಣಚಂದ್ರನಾಡಿಯಂ ಮರ್ದಿಸಿ ಪಲ್ಗಳಿಂ ಕಾಮಾತಪತ್ರದ ನಾಡಿಯ ಕರ್ಷಣ್ಮರ್ದನ. ನಾಲಿಗೆಯ ತುದಿಯಿಂ ಮದನಾಂದೋಳಕನಾಡಿಯಂ ಹಲವು ದಾರಿ ಅಲ್ಲಾಡಿಸುವುದು (ಕಾಮಕಾ. ೨೪೯). [ಸಂ.]

**ಪೂರ್ಣಚಂದ್ರಿಕೆ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ಣಚಂದ್ರಿಕೆ—೨೯ನೇ ಮೇಳಕರ್ತ ಧೀರಶಂಕರಾಭರಣವಲ್ಲಿ ಜನ್ಯ (ಸಂಗೀತಾ. ೦೯೮) ; ಪಟ್ಣಂ ಸುಬ್ರಮಣ್ಯಅಯ್ಯರ್ ಅವರು ಪೂರ್ಣಚಂದ್ರಿಕಾರಾಗವನ್ನು ಹಾಡಿದ ರೀತಿಯಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ತೋರುತ್ತಿದ್ದರು (ಸಂಗೀತ. ೨೭). [ಸಂ. ಪೂರ್ಣಚಂದ್ರಿಕಾ]

**ಪೂರ್ಣಜಠರ** (ನಾ). ೧. ತುಂಬಿದ ಹೊಟ್ಟೆ. ೨. [ನಾಟ್ಯ] ನರ್ತನದಲ್ಲಿ ತೋರುವ ಕ್ಷಾಮ, ಖಲ್ವ, ಪೂರ್ಣ, ರಿಕ್ತಪೂರ್ಣ ಎಂಬ (ಉದರಭಾಗದ) ನಾಲ್ಕು ಪ್ರಕಾರಗಳಲ್ಲಿ ಒಂದು ; ಹೊಟ್ಟೆಯನ್ನು ಮುಂದಕ್ಕೆ ಚಾಚುವುದು : ಪೂರ್ಣಜಠರಮೆಸೆಗುಂ ಪೊಡೆಯುಬ್ಬರ ರೋಗದನೊಳ್ ತೋಜುತ್ತುರುಜಠರನೊಳೆಯ್ದೆ ತೋರ್ಪ ನೆಗಳ್ದಾಟದನೊಳ್ (ಅಸ್ಕರು. ೨-೦೬೩). [ಸಂ.]

**ಪೂರ್ಣಜ್ವರ** (ನಾ). ಅತ್ಯಧಿಕವಾದ ಜ್ವರ : ಶುಂಠಿಯುಂ ಸೈಂಧವ ದಾಪ್ಪಿನಲ್ಲಿ ಬಿಸಿನೀರು ಕೂಡಿಸಿ ತುಪ್ಪವು . . . ನೆಲಗುಳ್ಳ ಇವುಗಳ ಕಷಾಯದಿಂದ ಸಿದ್ಧಮಪ್ಪುದಂ ಕುಡಿಯಲು ಪೂರ್ಣಜ್ವರ, ಹಲವು ಕಾಲದ ಜ್ವರ, ಕೆಮ್ಮು, ಶೂಲೆ, ಊರ್ಧ್ವತೃಷೆ, ಮಂದಾಗ್ನಿ, ಗ್ರಹಣಿ, ಸಂಗ್ರಹಿಣಿ, ಈ ವ್ಯಾಧಿಗಳೊಳು ಹಿತವಪ್ಪುದು (ವೈಶಿ. ೦೦). [ಸಂ.]

**ಪೂರ್ಣತಟಾಕ** (ನಾ). ತುಂಬಿದ ಕೆರೆ : ಕೊಳನಂ ತಾವರೆಯುಂ . . . ಪೂರ್ಣತಟಾಕಮಂ ತಾವುಮುದವಂ ದೇವರ್ಕಳಂ ತುಂಬಿಯುಂ ತೀವಿಯುಲ್ ಸ್ವಪ್ನದಿ ಲೀಸೆಲ್ವೆ (ಶಾಂತೀಶ. ೬೯); ಕೊಳರ್ವಕ್ಕಿಯಿಂದೊಪ್ಪುವ ಪೂರ್ಣತಟಾಕಂಗಳಿಂ (ಶಬರ. ೦೨-೨೬). [ಸಂ.]

**ಪೂರ್ಣತೆ** (ನಾ). ೧. ಸಮಗ್ರತೆ; ಪೂರ್ತಿಯಾಗಿರುವಿಕೆ. ೨. ಸಮೃದ್ಧಿ. [ಸಂ. ಪೂರ್ಣತಾ]

**ಪೂರ್ಣತ್ವ** (ನಾ). ಎಲ್ಲ ಬಗೆಯ ಶಕ್ತಿಗಳಿಂದ ಕೂಡಿರುವಿಕೆ ; ಸರ್ವಸಮರ್ಥತೆ : ಶಿವನ ಸರ್ವಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ ಎಂಬ ಶಕ್ತಿಗಳು . . . ಕ್ರಮೇಣ ಪಂಚಕಂಚುಕಗಳಾಗುತ್ತವೆ (ಭಾರತ. ೨೦೪). [ಸಂ.]

**ಪೂರ್ಣದೃಷ್ಟಿ** (ನಾ). ಎಲ್ಲವನ್ನೂ ಚೆನ್ನಾಗಿ ಹೊಂದಿಸಿ ನೋಡುವ ಮನೋಧರ್ಮ ; ಸಮಗ್ರದೃಷ್ಟಿ : ಸಾಕಲ್ಯದೃಷ್ಟಿ : ವಿಜ್ಞಾನಿಗಳಲ್ಲಿ . . . ಗಭೀರವಾದ ವಿಶ್ವದ ಮೂಲಸಮಸ್ಯಾಪರಿಹಾರಕ್ಕೆ ಆವಶ್ಯಕವಾದ ಪೂರ್ಣದೃಷ್ಟಿ ಇರಲಿಲ್ಲ (ಕುವೆಂಪು. ೨೬ ೩೮೪). [ಸಂ.]

**ಪೂರ್ಣಪಾತ್ರ** (ನಾ). ೧. ಮಂಗಳವಸ್ತುಗಳಿಂದ ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ. ೨. ಒಂದು ಬಟ್ಟಲಿನಷ್ಟು ಪ್ರಮಾಣ. ೩. ಇನ್ನೂರಐವತ್ತಾರಂ ಮುಷ್ಟಿಗಳಷ್ಟು (ಕಾಳಿನ) ಅಳತೆ ; ಎಂಟು ಮುಷ್ಟಿ = ೧ ಕಿಂಚಿತ್ (ಅಥವಾ ಕುಂಚಿ), ೮ ಕಿಂಚಿತ್ = ೧ ಪುಷ್ಕಲ, ೪ ಪುಷ್ಕಲ=೧ ಪೂರ್ಣಪಾತ್ರ. ೪. ಯಜ್ಞಸಮಾಪ್ತಿಯಾದಾಗ ಬ್ರಾಹ್ಮಣರಿಗೆ ಕೊಡುವ ದಕ್ಷಿಣಾರೂಪವಾದ ಇನ್ನೂರೈವತ್ತಾರು ಮುಷ್ಟಿ ಅಕ್ಕಿ. ೫. ಹೋಮಕಾರ್ಯದಲ್ಲಿ ಬಳಸುವ ತುಪ್ಪದ ಪಾತ್ರೆ : ಚಮಸ ದರ್ವೀ ಆಜ್ಯಸ್ಥಾಲೀ ಪ್ರೋಕ್ಷಣಪಾತ್ರ ಪೂರ್ಣಪಾತ್ರ ಪ್ರಮುಖಪಾತ್ರವಿಶೇಷಂಗಳಿಂ (ಪಾಲಿ. ೦೪೩). ೬. ಪುತ್ರ ಜನನ ಮೊದಲಾದ ಸಂತೋಷಸಮಾರಂಭಗಳಲ್ಲಿ ಅಥವಾ ಒಳ್ಳೆಯ ವರ್ತಮಾನವನ್ನು ಕೇಳಿದ ಸಮಯದಲ್ಲಿ ಪರಿಜನರಿಗೆ ಪಾರಿತೋಷಕವಾಗಿ ಕೊಡುವ ವಸ್ತ್ರ, ಆಭರಣ ಮೊದಲಾದುವನ್ನು ತುಂಬಿದ ಪಾತ್ರೆ ಅಥವಾ ಪೆಟ್ಟಿಗೆ: ಪರಿಜನರೂ ಬಂಧುಮಿತ್ರರೂ ಯಜಮಾನನಿಂದ ಈ ವಸ್ತ್ರಾಭರಣಗಳನ್ನು ತಾವಾಗಿ ಎಳೆದು ತೆಗೆದುಕೊಳ್ಳುತ್ತಾರೆ : ಮಹಾತ್ಮಜಾತಜನನೋತ್ಸವದೊಳ್ . . . ಪೂರ್ಣಪಾತ್ರಹರಣವಿಲುಪ್ತಮಾನವಸನಭೂಷಣಮುಂ (ಕಾದಂಬ. ೪೦೦); ಒಸೆದೀ ವಾರ್ತೆಗೆ ಪೂರ್ಣಪಾತ್ರವಿದು ದೇವರ್ ಮನ್ನಿಸಲ್ವೇಟ್ಟು ಮೆಂದು ಸಮಂತೀಟ್ಟುಕೆಗೊಂಡಳಾಕೆ ನೃಪಕಂಠೋದ್ದೇಶದಿಂ . . . ಹಾರಮುಂ (ಧರ್ಮಾಮೃ. ೪-೨೬). [ಸಂ.]

**ಪೂರ್ಣಪ್ರಜ್ಞ** (ನಾ). ೧. ಸಮಗ್ರವಾದ ಜ್ಞಾನವುಳ್ಳವನು; ಸರ್ವಜ್ಞ : ಅರ್ಜುನನು ಪಾರ್ಥಿವಪ್ರಜ್ಞೆಯ ಪಾರ್ಥ; ಶ್ರೀಕೃಷ್ಣನು ಪೂರ್ಣಪ್ರಜ್ಞನಾದ ಅಧ್ಯಾತ್ಮಶಕ್ತಿಯ ಪ್ರಭು (ಭಾರತ. ೦೦೧). ೨. ದ್ವೈತಮತಪ್ರವರ್ತಕರಾದ ಮಧ್ವಾಚಾರ್ಯರ ಹೆಸರುಗಳಲ್ಲಿ ಒಂದು : ಯತ್ಯಾಶ್ರಮವನ್ನು ಸ್ವೀಕರಿಸಿದ ಕೆಲವು ದಿನಗಳಲ್ಲಿಯೇ ಪೂರ್ಣಪ್ರಜ್ಞರ ಯಶಸ್ಸು ಎಲ್ಲ ದಿಕ್ಕುಗಳಿಗೂ ವ್ಯಾಪಿಸಿತು (ಭಾರತ. ೨೬೦); ಮಧ್ವಾಚಾರ್ಯರು ಈ ಕಾಲದಲ್ಲಿ ಜನ್ಮತಾಳಿದರು; ಆನಂದತೀರ್ಥರೆಂತಲೂ ಪೂರ್ಣಪ್ರಜ್ಞರೆಂತಲೂ ಅವರನ್ನು ಕರೆಯುತ್ತಾರೆ (ಕರ್ನಾಕ. ೩೭). [ಸಂ.]

**ಪೂರ್ಣಫಲ** (ನಾ). ೧. ಸಂಪೂರ್ಣವಾದ ಸಿದ್ಧಿ; ಪೂರ್ಣತ್ವ : ವಾರಣಾಸಿಯ ವಿಶ್ವೇಶ್ವರನ ದರುಶನದಿಂದ ಮಾತ್ರ ಪೂರ್ಣಫಲ ಪ್ರಾಪ್ತವಾಗದು (ನವಾ. ೦೩). ೨. ಒಡೆಯದೆ ಇರುವ ತೆಂಗಿನಕಾಯಿ : ಪಂಡಿತರು ಮಗಳ ಕೈಗೆ ಪೂರ್ಣಫಲವಿತ್ತು . . . ಧಾರೆಯೆರೆದು ಕೊಟ್ಟರು (ಕಾಂತಾ. ೦೦೨). [ಸಂ.]

**ಪೂರ್ಣಮಾಸ** (ನಾ). ೧. ಚಂದ್ರ. ೨. ಹುಣ್ಣಿಮೆ : ಅದು ಪೂರ್ಣಮಾಸ. ಹೀಗಾಗಿ ದೇವಸ್ಥಾನದಲ್ಲಿ ವಿಶೇಷಪೂಜೆ (ತೊಟ್ಟಿ. ೦೫). ೩. ಹುಣ್ಣಿಮೆಯ ದಿನ ಮಾಡುವ ಯಾಗ (ಆಗ್ನೇಯ, ಅಗ್ನಿಷೋಮೀಯ ಮತ್ತು ಉಪಾಂಶುಯಾಜ — ಎಂಬ ಯಾಗಗಳನ್ನೊಳಕೊಂಡುದು) : "ಕೃಷ್ಣಪಕ್ಷ ಮುಗಿಯುವಾಗ ಮಾಡತಕ್ಕ ಯಾಗಕ್ಕೆ ದರ್ಶವೆಂತಲೂ, ಶುಕ್ಲಪಕ್ಷ ಮುಗಿಯುವಾಗ ಮಾಡತಕ್ಕ ಯಾಗಕ್ಕೆ ಪೂರ್ಣಮಾಸವೆಂತಲೂ ಹೆಸರು" (ವಿದ್ಯಾ.ಪ್ರ.೨೪೦). [ಸಂ.]

**ಪೂರ್ಣಮಾಸಿ** (ನಾ). ಹುಣ್ಣಿಮೆ; ಪೂರ್ಣಿಮೆ. [ಸಂ.ಪೂರ್ಣಮಾಸೀ]

**ಪೂರ್ಣಮಿ** 'ಪುಣ್ಣಮೆ' ನೋ.

**ಪೂರ್ಣಮೆ** (ನಾ). = ಪೂರ್ಣಮಾಸಿ : ಕಾರ್ತಿಕಮಾಸದ ಪೂರ್ಣಮೆ ಕಳೆದಿವಸವಾಗೆ . . . ಬಿಟ್ಟ ಧರ್ಮಸ್ಥಿತಿಕ್ರಮಂ (ಶ್ರವಣ. ೦೯೯೬; ೫೯-೪; 1032). [ಸಂ. ಪೂರ್ಣಮಾ]

**ಪೂರ್ಣವರ್ತಮಾನಕಾಲ** (ನಾ). [ವ್ಯಾಕ] ಕ್ರಿಯೆಯು ಸಂಪೂರ್ಣವಾಗಿದೆ ಎಂಬುದನ್ನು ತಿಳಿಸುವ ಕಾಲ : ಒಂದು ಧಾತುವಿನ ಭೂತಕೃದಂತ ರೂಪಕ್ಕೆ 'ಇರು' ಧಾತುವಿನ ವರ್ತಮಾನಕಾಲದ ವಿಶೇಷರೂಪಗಳನ್ನು ಹತ್ತಿಸಿದರೆ ಪೂರ್ಣವರ್ತಮಾನಕಾಲದ ರೂಪಗಳಾಗುತ್ತವೆ (ಕನ್ನಡ. ೦೦೦). [ಸಂ.]

**ಪೂರ್ಣವಿರಾಮ** (ನಾ). ೧. ವಾಕ್ಯವು ಮುಗಿದುದನ್ನು ಸೂಚಿಸುವ ಚುಕ್ಕೆಯ ಗುರುತು (.) : ಅಲ್ಪವಿರಾಮ, ಅರ್ಧವಿರಾಮ, ಪೂರ್ಣವಿರಾಮಗಳನ್ನು ಅರಿತುಕೊಳ್ಳಬೇಕು (ಮುಂಜಾವು. ೨-೮). 'ಅರ್ಧವಿರಾಮ', 'ಅಲ್ಪವಿರಾಮ' ಪರಾ. ೨. (ಅಲಂ) ಮುಕ್ತಾಯ; ನಿಲುಗಡೆ; ಕೊನೆ : ಗಂಡ ಲಕ್ಷ್ಮೀದಿಂದ ಮರಳಿ ಬರುವ ತನಕ ಯಶೋದೆಯ ಕಾಲೇಜುವ್ಯಾಸಂಗದ ಕುರಿತಾದ ಚಿಂತೆಗೆ ಪೂರ್ಣವಿರಾಮ (ವಾತ್ಸಲ್ಯ. ೬೯); ಮುದುಕಿ ಮಾತ್ರ ತನ್ನ ಕಥನಕ್ಕೆ ಪೂರ್ಣವಿರಾಮ ಎತ್ತಿರಲಿಲ್ಲ (ಹಳ್ಳಿ.ಹಾ. ೦೦೩). [ಸಂ.]

**ಪೂರ್ಣಷಡ್ಜ** (ನಾ). [ಸಂಗೀತ] ಒಂದು ರಾಗದ ಹೆಸರು : ಪಲ್ಲವಿ ಶೇಷಯ್ಯರ್ ಅವರು ನಾದನಾಮಕ್ರಿಯಾ, ಭೈರವಿ, ಕೀರವಾಣಿ, ಪೂರ್ಣಷಡ್ಜಂ, ಗೌರೀಮನೋಹರಿ . . . ಷಣ್ಮುಖಪ್ರಿಯರಾಗಗಳಲ್ಲಿ ರಚಿಸಿರುವ ಕೃತಿಗಳು ಮನಮೋಹಕವಾಗಿವೆ (ಸಂಗೀತ. ೯೬). [ಸಂ].

**ಪೂರ್ಣಸಮಾಧಿ** (ನಾ). [ಯೋಗ] ವ್ಯಷ್ಟಿ, ನಿಶ್ಚಿತ, ವಿಲಕ್ಷಣ, ನಿರ್ವಿಷಯ, ಸಮಷ್ಟಿ ಮತ್ತು ಪೂರ್ಣ ಎಂಬ ಆರು ಬಗೆಯ ಸಮಾಧಿಗಳಲ್ಲಿ ಒಂದು : ಪೂರ್ಣಸಮಾಧಿಯೆಂಬುದು ವಿಷಸಂಗ್ಯೆದರಿ ವನುನ್ಮನಿ ಸುಖಸಮಗ್ರವನೆಸಗಿ ತನುಮೋಹವನು ಮರಸುವುದು (ಗಗನಾ. ೦೩-೪೦). [ಸಂ.]

**ಪೂರ್ಣಾಂಕ** (ನಾ). [ಗಣಿತ] ಪೂರ್ಣವಾದ ಸಂಖ್ಯೆ ; ದುಂಡಂಕೆ ; ವಿಭಾಗವಾಗದ ಮೊತ್ತ : ಅಳತೆಯಲ್ಲಿ ಸರಪಣಿ ಸಂಪೂರ್ಣವಾಗಿ ಅದಲ್ಲಿ ಒಂದು ಪೂರ್ಣಾಂಕವೆಂತಲೂ . . . ಲೆಕ್ಕವಿಡಬೇಕು (ಭೂಮಿ. ೪). [ಸಂ.]

**ಪೂರ್ಣಾಯುಸ್ಸು** (ನಾ). ಜೀವಿತದ ಸಮಗ್ರ ಅವಧಿ; ದೀರ್ಘಾಯುಷ್ಯ; ನೂರುವರ್ಷಗಳ ಜೀವನಕಾಲ : ನಿನಗೆ ದೇವರಂಥಾ ಪೂರ್ಣಾಯುಸ್ಸಿನ ಗಂಡ ಸಿಕ್ಕಲಿ (ಹಿರಿಯೂ. ೦೦೩). [ಸಂ. ಪೂರ್ಣಾಯುಸ್]

**ಪೂರ್ಣಾವತಾರ** (ನಾ). ದೈವತ್ವವು ಪೂರ್ಣವಾಗಿ ಪ್ರಕಟವಾಗುವ ಭಗವಂತನ ಅವತಾರ ; ನರಸಿಂಹಾವತಾರ, ರಾಮಾವತಾರ ಹಾಗೂ ಕೃಷ್ಣಾವತಾರಗಳು ಪೂರ್ಣಾವತಾರಗಳೆಂದು ಗಣಿಸಲ್ಪಟ್ಟಿವೆ; ಅದರಲ್ಲಿಯೂ ಕೃಷ್ಣಾವತಾರವು ಪರಿಪೂರ್ಣವೆನಿಸಿದೆ : ಯಾರಲ್ಲಿ ದೈವತ್ವವು ಅತ್ಯಂತಪ್ರಕಾಶಮಾನವಾಗಿ ಮೆರೆಯುತ್ತದೊ ಅಂಥವರದು

ಪೂರ್ಣಾವತಾರ; ಯಾರಲ್ಲಿ ಅದು ಯಾವುದೇ ಒಂದು ವಿಶಿಷ್ಟಮುಖದಲ್ಲಿ ಪ್ರಕಟವಾಗುತ್ತದೋ ಅಂಥವರದು ಅಂಶಾವತಾರ; ಇನ್ನೂ ಕಡಿಮೆ ಯಾಗಿದ್ದರೆ ಅಂಥವರದು ಕಲಾವತಾರ (ಶಕ್ತಿಶ್ರಾ. ೭೬೯). 'ಅಂಶಾವತಾರ' ಪರಾ. [ಸಂ.]

**ಪೂರ್ಣಾಹುತಿ** (ನಾ). ೧. ಯಜ್ಞಾದಿಗಳಲ್ಲಿ ದರ್ವಿ ಅಥವಾ ಸವುಟನ್ನು ಪೂರ್ತಿಯಾಗಿ ತುಂಬಿಕೊಂಡು ಕೊಡುವ ಆಹುತಿ. ೨. ಯಜ್ಞದಲ್ಲಿ ಅಗ್ನಿಗೆ ಕೊನೆಯಲ್ಲಿ ಒಪ್ಪಿಸುವ ಬಹುಮುಖ್ಯವಾದ ಬಲಿ; ಯಜ್ಞವನ್ನು ಪೂರ್ಣಗೊಳಿಸುವ ಆಹುತಿ : ಭೂಪತಿಯ ರಣಯಜ್ಞ ಮುಖಕೆ ನಿಜಾಪಘನಪೂರ್ಣಾಹುತಿಯಲೇ (ಶಬ್ದಾಗ. ೧-೨೬); ಚಂದ್ರ ಹಾಸಂ . . . ಪೂರ್ಣಾಹುತಿಗೆ ಶಿವವನರಿದಪೆನೆಂದು ಖಡ್ಗಮಂ ಗೋಣ್ಗೆ ಪೂಡಿ . . . ಅರಿಯಲನುವಾದನು (ಕೃಶಾಶ. ೩೦-೬೭); ಪೂರ್ಣಾಹುತಿ ಗೊಂಡು ವಿಜೃಂಭಿಸಿ ಶಾಂತನಾಗುವ ಯಜ್ಞೇಶ್ವರನಂತೆ ಸುತ್ತಮುತ್ತಲೆಲ್ಲ ಏನೋ ಶಾಂತಿ ತಲೆದೋರಿತು (ಶಾಹಾಶ. ೦೬೯). ೩. (ಅಲಂ) "ಒಟ್ಟಿಗೆ ಕೊಟ್ಟ ಬಲಿ; ಸರ್ವನಾಶ" (Holocaust· ೩೦೪೫). [ಸಂ.]

**ಪೂರ್ಣಿಮಾಂತ** (ಗು). ೧. ಹುಣ್ಣಿಮೆಗೆ ಕೊನೆಗೊಳ್ಳುವ. (ನಾ). ೨. ಹುಣ್ಣಿಮೆಯ ಕೊನೆ,_ಮುಕ್ತಾಯ. [ಸಂ.]

**ಪೂರ್ಣಿಮಾಂತಮಾಸ** (ನಾ). ಹುಣ್ಣಿಮೆಗೆ ಮುಗಿಯುವ ತಿಂಗಳು; ಹುಣ್ಣಿಮೆಯಿಂದ ಹುಣ್ಣಿಮೆಯವರೆಗೆ ಎಂದು ಎಣಿಸುವ ತಿಂಗಳು; ಚಾಂದ್ರಮಾನಮಾಸ : ಕೃಷ್ಣಪ್ರತಿಪದೆಯಿಂದ ಪೂರ್ಣಿಮೆಯ ತನಕ; ಇದಕ್ಕೆ ಪೂರ್ಣಿಮಾಂತಮಾಸವೆಂಬ ಹೆಸರು (ಮುಂಬಯಿ. ೬-೩೮). 'ಅಮಾಂತಮಾಸ' ಪರಾ. [ಸಂ.]

**ಪೂರ್ಣಿಮೆ** (ನಾ). ಚಂದ್ರನು ಹದಿನಾರುಕಳೆಗಳನ್ನೂ ಹೊಂದಿ ಪೂರ್ಣವಾಗಿರುವ ತಿಥಿ; ಹುಣ್ಣಿಮೆ : ಅನುಮತಿಯೆನಿಸುವ ಪೂರ್ಣಿಮೆ ಯನಿಸಾನುಂ ಕಾಂದಿ ತೋಱುತಿರೆ ಚಂದ್ರಂ (ವಸ್ತುಕೋ. ೦೬-೯); ಮಾರ್ಗಶಿರ ಪೂರ್ಣಿಮೆಯು ಸಾಮಾನ್ಯವಾಗಿ ಡಿಸೆಂಬರ್ ಮಧ್ಯಭಾಗದಲ್ಲಿ ಬರುತ್ತದೆ (ಹಬ್ಬ. ೭). [ಸಂ. ಪೂರ್ಣಿಮಾ]

**ಪೂರ್ಣೆ** (ನಾ). ೧. ಪೂರ್ಣತಿಥಿ; ೫ ಪಂಚಮಿ, ದಶಮಿ ಮತ್ತು ಹುಣ್ಣಿಮೆ—ಇವು ಪೂರ್ಣತಿಥಿಗಳು. ೨. ಚಂದ್ರನ ಹದಿನಾರು ಕಳೆಗಳಲ್ಲಿ ಒಂದು: ಅಮೃತ ಪೂಷ ... ಪೂರ್ಣೆ . . . ಕಾಮದಾಯಿನಿ ಯೆಂಬ ಷೋಡಶಕಲೆಗಳಂ (ಎಕೋಕ. ೨೬೭). ೩. [ಸಂಗೀತ] ಮಧ್ಯಮ ಸ್ವರದಿಂದ ಹುಟ್ಟುವ ನಾಲ್ಕುಶ್ರುತಿಗಳಲ್ಲಿ ಒಂದು : ರಂಜಕಿ ಪೂರ್ಣೆ ಅಲಂಕಾರಿಣಿ ವಾಂಶಿಯೆಂಬ ನಾಲ್ಕುಶ್ರುತಿಗಳೆ ಮಧ್ಯಮಸ್ವರದಿಂ ಪುಟ್ಟಿದವು (೭ಪಃಕ. ೨೩೨). [ಸಂ. ಪೂರ್ಣಾ]

**ಪೂರ್ಣೇಂದು** (ನಾ). = ಪೂರ್ಣಚಂದ್ರ ೧ : ಸೌಂದರಪೆರುಮಾಳೆ . . . ರಾತ್ರಿಯುಂ ಬೆಳಗಲಿರ್ದ ಪೂರ್ಣೇಂದುವಿನಂತೆ ದಿವಮುಂ ಧವಳಿಸಲಿರ್ದ ಸಹಸ್ರಕರನಂತೆ ಇರ್ದಪಂ (ಸಂಬಿಕ. ೯-೦೫); ಕಂದ ಬಾರೋ ಎನ್ನ ಮನಕಾನಂದ ಬಾರೋ ಬಾಲಕರ ಪೂರ್ಣೇಂದು ಬಾರೋ (ಶಾಸ್ತ್ರಕ್ರೋ. ೬ ೨೦). [ಸಂ.]

**ಪೂರ್ಣೋಪಮೆ** (ನಾ). [ಕಾವ್ಯಮೀ] ಉಪಮೇಯ, ಉಪಮಾನ, ಸಾದೃಶ್ಯವಾಚಕ ಮತ್ತು ಸಾಧಾರಣಧರ್ಮ ಎಂಬ ನಾಲ್ಕೂ ಅಂಗಗಳನ್ನು ಸ್ಪಷ್ಟವಾಗಿ ಹೇಳಿರುವ ಉಪಮೆ : ತಾಯಂತೆ ಪೊರೆವ ತಂದೆವೊಲಾಯತಿಯೊಳ್ ಹಿತಮನೆಣಿಪ ಚಿಕದೇವಮಹಾ ರಾಯಂ ಪ್ರಜೆಯನಿತಂ ನಾರಾಯಣನಂತೆ ಟ್ಟಿಗೆ ಪಡಿಸಿಯಾಳ್ಗುಂ ಸೊಗ ದೊಳ್ ಇದಱೊಳ್ 'ಚಿಕದೇವಮಹಾರಾಯಂ' ಎಂದು ಉಪ ಮೇಯಮುಮಂ, 'ತಾಯ್ತಂದೆ ನಾರಾಯಣರ್' ಎಂದು ಉಪಮಾನಂಗಳಂ, 'ಪೊರೆವ' 'ಹಿತಮನೆಣಿಪ' 'ಏಟ್ಟಿಗೆಪಡಿಸಿ' ಎಂದು ಸಮಾನಧರ್ಮ ಗಳಂ 'ಅಂತೆ', 'ವೊಲ್' ಎಂದು ಉಪಮಾವಾಚಕಪದಂಗಳುಮಂ ಪೇಳ್ದ ರ್ದದಱಿಂದಿದು ಪೂರ್ಣೋಪಮಾಲಂಕಾರಮೆನಿಪುದು (ಅಪ್ರತಿ. ೩೩-೦೩); ಬಳಸಿ ಸುಟ್ಟದಾಡಿ ಕಾಲ್ಗೆಡೆದಳಸಿ ಲಲಾಪವಮೊದವೆ ಜನನಿಯ ಮೊಲೆ ವಾಲ್ಗಳನುಣ್ಬ ಶಿಶುಗಳಂತಿರೆ ಕಳವೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್ — ಈ ಪದ್ಯದಲ್ಲಿ ಗಿಳಿಗಳೆಂಬ ಉಪಮೇಯವೂ ಶಿಶುಗಳೆಂಬ ಉಪ ಮಾನವೂ 'ಅಂತಿರೆ' ಯೆಂಬ ಉಪಮಾವಾಚಕವೂ ಸಹ . . . ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಈ ಹೋಲಿಕೆ ಪೂರ್ಣೋಪಮೆ (ಕ್ರಿಶಿ. ೨೫೩). [ಸಂ. ಪೂರ್ಣೋಪಮಾ]

**ಪೂರ್ತ$_1$** (ಗು). ೧. ಎಲ್ಲ; ಸಂಪೂರ್ಣವಾದ; ಸಮಗ್ರವಾದ. ೨. ತುಂಬಿದ; ಭರ್ತಿಯಾದ. (ನಾ). ೩. ಪೂರ್ಣಗೊಳಿಸುವಿಕೆ; ಪೂರೈಕೆ; ನೆರವೇರಿಕೆ. ೪. ಬಾವಿ, ಕೆರೆಗಳ ನಿರ್ಮಾಣ, ಯಾತ್ರಾರ್ಥಿ ಗಳ ಸೌಕರ್ಯಕ್ಕಾಗಿ ಉದ್ಯಾನವನ, ಅನ್ನಸತ್ರ, ಅರವಟ್ಟಿಗೆ, ದೇವಾಲಯ, ಧರ್ಮಶಾಲೆ ಮೊದಲಾದುವುಗಳನ್ನು ಏರ್ಪಾಟು ಮಾಡುವುದು ಮುಂತಾದ ಧರ್ಮಕಾರ್ಯ : ಇಷ್ಟಂ ಯಾಗಾರ್ಥ ದೊಳುತ್ಕೃಷ್ಟಂ ಪೂರ್ತಂ ವದ[ದಾ]ನ್ಯಹೇತುವಿಕೀರ್ಣಂ ಇಷ್ಟಾಪೂರ್ತಂ ಗಳವುತ್ಕೃಷ್ಟಶ್ರೇಯೋನಿಮಿತ್ತಮಕ್ಕುಮಪೆರ್ಚಂ (ಅನ್ನುಕೋ. ೫೯-೯೩); ಮಾಡಿ ಷೋಡಶದಾನವನು ಮನ ಬೇಡಿದಂದದಲನ್ನಪಾನವ ನೀಡಿ ವಿಪ್ರರಿಗೊಲಿದಿಯುತಿಷ್ಟಾಪೂರ್ತಗಳ ಮುಗಿಸಿ ಜೋಡಿಯಿಲ್ಲದ ಪುಣ್ಯಫಲ ಕೈಗೂಡೆ (ಅನ್ನುಕ. ೨-೦೦೦). [ಸಂ.]

**ಪೂರ್ತ$_2$** (ಅ). ಪೂರ್ಣವಾಗಿ; ಪೂರ್ತಿಯಾಗಿ; ಸಂಪೂರ್ಣವಾಗಿ : ಪೂರ್ತ ಕೂಲಿ ಅವಳಿಗೆ ಕೊಟ್ಟರು (ಕೊಕಕೆ. ೨೨೧); ಸಾಮಾನುಗಳನ್ನು ಪೂರ್ತ ಹಿಂದಿರುಗಿ ಕೊಟ್ಟಿರಲಿಲ್ಲ (ಶ್ರಣಾ. II. ೨೨೦). [<ಪೂರ್ತ$_1$]

**ಪೂರ್ತಗೊಳಿಸು** (ಕ್ರಿ). ಪೂರೈಸು; ಪೂರ್ಣ ಮಾಡು; ಮುಗಿಸು : ಈ ಕೆಲಸವನ್ನು ಇಂದೇ ಪೂರ್ತಗೊಳಿಸಬೇಕು (ಬಳಕೆ). [ ಪೂರ್ತ$_1$+ಕೊಳ್$_1$+_ಇಸು$_2$ ]

**ಪೂರ್ತತೆ** (ನಾ). ಪೂರ್ಣತೆ; ಪರಿಪೂರ್ಣತೆ : ಜೀವನದಲ್ಲಿ ಗೌರೀಶ, ನಿನಗೆ ಆತ್ಮಸಿದ್ಧಿ ದೊರೆಯಲಿ, ಪೂರ್ತತೆ ನಿನ್ನ ಪಾಲಿಗೆ ಬರಲಿ (ಜುಗ್ತ. ೨೫೩); ದೈವದೊಳಗೆ ಪೌರುಷದ ಪೂರ್ತತೆಯಿರುವುದು (ಕ್ರಬಂಧ. ೩೨). [ಸಂ. ಪೂರ್ತತಾ]

**ಪೂರ್ತಾನುಪಾಲನ** (ನಾ). 'ಪೂರ್ತ' ವೆಂಬ ಹೆಸರಿನ ದಾನದತ್ತಿಗಳನ್ನು ನಿರಂತರವಾಗಿ ನಡಸಿಕೊಂಡು ಬರುವುದು,_ರಕ್ಷಣೆ ಮಾಡುವುದು : ಪೂರ್ವದಿಂದ ನಡೆದು ಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ ಪೂರ್ತಾನುಪಾಲನ ಸರ್ವಮಾನ್ಯ ಭಟ್ಟಮಾನ್ಯ . . . ಮುಂತಾದುವೇನೂ ಹೆಚ್ಚುಕಡಿಮೆಯಾಗದಂತೆಯೂ ಅವೊಂದೂ ಈ ಪೌಜುಗಂದಾಯಕ್ಕೆ ಒಳಸೇರದಂತೆಯೂ ನಮ್ಮ ಕರಣಿಕರು ಎಚ್ಚರಿತ್ತಿರ ಬೇಕು (ಶಾಸಂ. ೩೬-೨೦). [ಸಂ.]

**ಪೂರ್ತಿ$_1$** (ನಾ). ೧. ತುಂಬುವುದು; ಭರ್ತಿಮಾಡುವುದು. ೨. ಮುಗಿಸು ವುದು : ಮುಕ್ತಾಯಗೊಳಿಸುವುದು. ೩. ಪೂರ್ಣಗೊಳಿಸುವುದು; ಪೂರೈಸುವುದು : ವಸುಧೆಯೊಳಿಷ್ಟಾರ್ಥಪೂರ್ತಿಯ [ಚಾಕಂ. ಮಂ ತವೆ] ನೆಗಳ್ವವನ ಬಹುವಿಧದ ಧರ್ಮಂಗಳಂ ರಚಿಸುವನ ಮನೆಯೂ ಇಂದಿರೆ ಬಿಡದೆ ನೆಲಸಿರ್ಪಳು (ಕೃಶಾಶ. ೩-೬೭). ೪. ಪೂರ್ಣಗೊಳ್ಳು ವುದು; ಪೂರ್ಣತೆ. ೫. ತಣಿವು; ತೃಪ್ತಿ. [ಸಂ.]

**ಪೂರ್ತಿ$_2$** (ಅ). ಸಂಪೂರ್ಣವಾಗಿ; ಪೂರಾ : ಇಲ್ಲಿಯ ಪಂಕ್ತಿ ಪೂರ್ತಿ ಹದಗೆಟ್ಟುಹೋಗಿದೆ (ಬಳಕೆ). [<ಪೂರ್ತಿ$_1$]

**ಪೂರ್ತಿಗೊಳಿಸು** (ಕ್ರಿ). ೧. ಮುಗಿಸು; ಮುಕ್ತಾಯಗೊಳಿಸು : ಈ ಕೆಲಸವನ್ನು ಪೂರ್ತಿಗೊಳಿಸದೆ ಇಂದು ಮನೆಗೆ ಹೋಗುವಂತಿಲ್ಲ (ಬಳಕೆ).

೨. ಈಡೇರಿಸು ; ನೆರವೇರಿಸು ; ಕೈಗೂಡಿಸು : ಈಗ ನನ್ನ ಮನೋಭಿಲಾಷೆಯನ್ನು ಪೂರ್ತಿಗೊಳಿಸು (ಮತಿಶ. ೬೩).

[ಪೂರ್ತಿ$_1$+ಕೊಳ್$_1$+ —ಇಸು$_1$]

**ಪೂರ್ತಿಸು** (ಕ್ರಿ). ೧. ಮುಗಿಸು ; ಮುಕ್ತಾಯಗೊಳಿಸು : ಕುಂದದನುದಿನ ವಚನನಿದ್ರಾವಂದಡೆಯನುಳಿದಧಿಕಜಾಗ್ರತೆಯಿಂದ ವನವಾಸವನು ಪೂರ್ತಿಸಿ ಬಹುದು ನೀನು (ಅಕಂಕಾ. ೨-೦-೬೬) ; ಸಂಜೆಗಿಂತ ಮೊದಲೆ ಆಹಾರವನ್ನು ಪೂರ್ತಿಸಬೇಕೆಂಬುದು...ಸ್ವತಃ ಬಂಕೆಯನಿಗೇ ನೆನಪಾಗಲಿಲ್ಲ (ಪಿ:ಚಾಂ.೦೦). ೨. ಈಡೇರಿಸು ; ಕೈಗೂಡಿಸು : ಚೆಲುವನ್ನೇ ಮೂರ್ತಿಸಿ ಬಯಕೆಗಳನು ಪೂರ್ತಿಸಿ ಬರಲಿ ದೇವ—ದ್ವೀಪಿನೀ ಬಾರ ದಾ ಮನೋನ್ಮನೀ (ಕೃದಸ. ೨೦-೮). [ಪೂರ್ತಿ$_1$+—ಇಸು$_1$]

**ಪೂರ್ಬ** (ಗು). ೧. ಹಿಂದಿನ ; ಪ್ರಾಚೀನ : 'ಪೂರ್ಬಮರ್ಯಾದೆ' ಪರಾ. (ನಾ). ೨. ಮೂಡಣದಿಕ್ಕು ; ಪೂರ್ವದಿಕ್ಕು : 'ಪೂರ್ಬಾಭಿಮುಖ' ಪರಾ. [<ಸಂ. ಪೂರ್ವ]

**ಪೂರ್ಬಮರ್ಯಾದೆ** (ನಾ). ಹಿಂದಿನಿಂದ ನಡೆದು ಬಂದ ಕ್ರಮ ; ಪರಂಪರಾನುಗತವಾದ ನಿಯಮ : ಹಾರಮರಪೂರ ಕೋಟೆಯ ಪೂರ್ಬ್ಬಮರ್ಯ್ಯಾದೆಯ ಚತುಸ್ಸೀಮೆ ಗದ್ದೆ ದೆದ್ದಲು ಸೀಮೆ . . . ಕೊಟ್ಟೆವು (ಎಕ. IX. ಹಂಗಳೂ. ೩೦-೦೨ ; 1340). [ಪೂರ್ಬ+ಮರ್ಯಾದೆ]

**ಪೂರ್ಬಾಭಿಮುಖ** (ನಾ). ಮೂಡಣದಿಕ್ಕಿಗೆ ಎದುರಾಗಿರುವುದು; ಪೂರ್ವಕ್ಕೆ ಅಭಿಮುಖವಾಗಿರುವುದು: ಸರೋವರದ ಪಶ್ಚಿಮತಟದಲ್ಲೂರ್ಬ್ಬಾಭಿಮುಖವಾಗಿಟ್ಟು ಶಿವಾಲಯಂ ಪ್ರದಕ್ಷಿಣಂ ಬಂದು ಶ್ರೀಸೋಮೇಶ್ವರದೇವರಂ ಕಂಡು (ಎಕ್ಕಾ. XX. ೯೯-೯೯ ; ಸು. 1076).

[<ಪೂರ್ವಾಭಿಮುಖ]

**ಪೂರ್ಬಾಯ** (ನಾ). ಒಂದು ಬಗೆಯ ತೆರಿಗೆಯಿಂದ ಬರುವ ಆದಾಯ : ನಾಡುಮರಿಯಾದೆಯಲ್ಲಿ ಪೂರ್ಬ್ಬಾಯವೇನು ಬಂದಡೆ ಆ ಸ್ಥಾನದವರು ತೆಱುವರು (ಎಕ. III. ತಿರುಕು. ೦೦೦—೬೫ ; 1281) ; ಪಂಚಕಾರುಕ ಅಲೆದೆಱೆ ಮುಱುಡಿದೆಱೆ ಚಿಟ್ಟಿದೆಱೆ ಕೊನೆದೆಱೆ ಖಾಣಸಂಬಳವೊಳಗಾದ ಪೂರ್ಬ್ಬಾಯ ಅಪೂರ್ಬ್ಬಾಯ . . . ಎಲ್ಲವನೂ ಕಾರುಣ್ಯಂಮಾಡಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. VI. ಕಡೂರು. ೯೯-೯೩ ; 1291). [<ಪೂರ್ವಾಯ]

**ಪೂರ್ಬಿಗ, ಪೂರ್ವಿಗ, ಪೂರ್ವಿಕ** (ನಾ). (ವಂಶದ) ಹಿರಿಯ ; ಪೂರ್ವಿಕ : ಅಡಗಿನ ಬಸನಿಗರ್ಗ್ಗಂ ಕಳ್ಳುಡಿವವರ್ಗ್ಗಂ ವೃತ್ತಿಲೋಪವೆಂದಿ: ನುಡಿಯಂ ಕಡೆಗಣ್ಗಣಿಸದೆ ಮೊದಲಿಂದೆ ಕಿಡಿವುದದಂ ಸ್ಥಾನ ಗುರುಗಳುಂ ಪೂರ್ಬ್ಬಿಗರುಂ (ಕ್ಕಾಜ. IX-i. ೦೦೬-೭೯ ; ಸು. 1055). ಪೂರ್ವಿಗ : ಬಂದರನೂರ ಪೂರ್ವ್ವಿಗರ ಗೊಲುಕೆಗಾವುಣ್ಡನ ಮಗ ಪೆರಿಯಮ್ಮಗಾವುಣ್ಡನು (ಎಕ. IX (ii). ಹೊಸಕೋ. ೨೦೭-೯ ; ಸು. 900) ; ಜಗವಱಿಯೆ ಪಮ್ಮನ್ನೆಯದ ಪೂರ್ವಿಗನೆಲಾ ನಹುಷಂಗೆ ಬಂದುದ್ದೈಗದ ಹದನಿದು (ಉತ್ತ್ರಾ.೮.೦೬-೬೦). ಪೂರ್ವಿಕ: ಅವರ ಪೂರ್ವಿಕರೆಲ್ಲ ಒಳ್ಳೆಯ ವಿದ್ವಾಂಸರಾಗಿದ್ದರು (ಕಿಂತ). [< ಸಂ. ಪೂರ್ವಿಕ]

**ಪೂರ್ಯ** (ಗು). ೧. ತುಂಬಬೇಕಾದ. ೨. ತೃಪ್ತಿಗೊಳಿಸಬೇಕಾದ. ೩. ಅಧಿಕವಾದ ; ಅತಿಶಯವಾದ : ಗದ್ಗದಕಂಠವೆಸೆಯಲು ಪೂರ್ಯಹರುಷಸಮುದ್ರ ಕಾಪ್ಪ್ಪಿಳಕ್ಷಿಗಳೆಸೆಯಗಲು (ಐಕಪ. ೬-೬) ; ಕ್ಷ್ಮೈರ್ಯಶೌರ್ಯಂ ವರಕ್ಷಣನಿಧಿ ಪೂರ್ಯಧೈರ್ಯಂ . . . ಧರ್ಮಜನ ಪರಮಸ್ವಾರ್ಯಸೇನೆರಸಿದ (ಐಕಪ. ೨೨-೨೯). [ಸಂ.]

**ಪೂರ್ವ** (ಗು). ೧. ಹಿಂದಣ ; ಪ್ರಾಚೀನ : ನಿಮ್ಮಯ ಪೂರ್ವವೃದ್ಧೀಶಾಖಾದ್ದರು ಗುಪಿತದಿಂದ ವಿಕಾಖನಗರಿಯಲಿ (ಉಜ್ಜ್ರ.೬. ೨-೦). 'ಪೂರ್ವಕಾಲ' 'ಪೂರ್ವಾಚಾರ್ಯ' ಪರಾ. ೨. ಮೊದಲಿನ ; ಎಳೆಯ : 'ಪೂರ್ವವಯಸ್ಸು' ಪರಾ. ೩. ಇಂದಿಗೆ ಹಿಂದಿನ ಕಾಲಕ್ಕೆ ಸೇರಿದ ; ಇಂದಿಗೆ ಮುಂಚಿನ ಸಮಯದ. ೪. (ಅನುಕ್ರಮದಲ್ಲಿ) ಮೊದಲನೆಯ ; ಅಗ್ರೇಸರ ; ಪ್ರಥಮ. ೫. ಮೂಡಣ ; ಮೂಡಣ ದಿಕ್ಕಿನಲ್ಲಿರುವ : ಪೂರ್ವದಿಕ್ಕಿಗೆ ಸಂಬಂಧಿಸಿದ. (ನಾ). ೬. ಹಿಂದಣಕಾಲ ; ಪ್ರಾಚೀನಕಾಲ : ಪ್ರಾತಸಲ್ಲಾ ರಾಯರಲಿ ನಳಿನಾತ ಗಾಡಾವಪತ್ತ ಬಲ್ಲೆ ಕೇಳಿ ಪೂರ್ವದಲಿ (ಕೊಪಶಾ. ೬-೨-೦೬) ; ತ್ರಿಮೂರ್ತಿಗಳು . . . ಅತ್ರಿಯ ಸತಿಗನುಸೂಯದೇವಿಗೆ ಪುತ್ರರಾದರು ಪೂರ್ವದೊಳು (ಹಾಂ. ೨-೯೬). ೭. ಹಿಂದೆ ನಡೆದು ಹೋದ ಸಂಗತಿ ; ಪೂರ್ವಕಾಲದ ಘಟನೆ : ನಂಬಿಯಣ್ಣಂ ಪೂರ್ವಮಂ ನೆನೆದು ಪಂತಂದು ಚರಣದೊಳು ಬಿ.ಳುತುಂ (ಶಂಕಶ. ೬-೨೨೬). ೮. ಮೊದಲು ಇರುವಂತಹುದು ; ಮೊದಲಿನದು : "ಆದಿಃ, ಪೂರ್ವಃ, ಪೌರಸ್ತ್ಯಃ, ಪ್ರಥಮಃ, ಆದ್ಯಃ—ಇ ಮೊದಲನ ದರ ಹೆಸರುಗಳು" (ಸಿದ್ಧಾಂತ. ೬೯೯) ; ವಿದಿತ ಸಮಾಸಂಗಳ ಪೂರ್ವದಕ್ಕರಂ ಹ್ರಸ್ವಮದಱ ಪರದಕ್ಕರವಂತದು ದೀರ್ಘಂ (ಶಮತ. ೯). ೯. ಹಿಂದಿನ ಭಾಗ ; ಹಿಂಭಾಗ : ಆದೇಶವಾಗಿ ಮುಂಗಲ್ಲಾದರುವದು ನಿಲ್ಲುಮಿರ್ಗಮವ್ಪುಂ ಪೂರ್ವಕ್ಕೆ (ಶಮದ. ೨೨೦). ೧೦. ಮೂಡಣದಿಕ್ಕು : "ಪ್ರಾಚಿಯೆನೆ ಪೂರ್ವನ್ನೈಂದ್ರಿಯೆನೆ ಮೂಡಲೆನಿಕ್ಕು" (ಕುಂಗಣ. ೦೭-೨೯). ೧೧. ಹಿಂದಿನವನು ; ಹಿರಿಯಂ : "ಪೂರ್ವಃ-೧ ಮೂಡಲಲ್ಲಿರುವಂಥಾದ್ದು, ಪೂರ್ವಕಾಲ, ಮೂಡಲಲ್ಲಿ ಹುಟ್ಟಿದವರು, ಪೂರ್ವಕಾಲದಲ್ಲಿ ಹುಟ್ಟಿದವರು" (ಸಿದ್ಧಾಂತ. ೮೦೫) ; ಅರಸ ದೂರಾಗತರ ಪೂರ್ವರ ಚಿರಸಮಾಶ್ರಿತರೆನಿಪ ಧರಣೀಸುರರ ಸಲಹಲು ಸಮನೆನಿಸುವೀ ಮೂಱು ತೆಱದವರ . . . ರಕ್ಷಿಸುತಲಿರಬೇಕು (ಶಿಮ್ಮ.೮. ೬-೬೬). ೧೨. [ಜೈನ] ಹನ್ನೆರಡನೆಯ ದೃಷ್ಟಿವಾದದ ಅಂಗಗಳಲ್ಲಿ ಬರುವ, ಶ್ರುತಾಂಗಗಳ ವಿವರಣೆಯನ್ನು ನೀಡತಕ್ಕ ಉತ್ಪಾದಪೂರ್ವ, ಅಗ್ರಾಯಣೀಯಪೂರ್ವ, ವೀರ್ಯಾನುವಾದಪೂರ್ವ, ಅಸ್ತಿನಾಸ್ತಿಪ್ರವಾದಪೂರ್ವ, ಜ್ಞಾನಪ್ರವಾದಪೂರ್ವ, ಸತ್ಯಪ್ರವಾದಪೂರ್ವ, ಆತ್ಮಪ್ರವಾದಪೂರ್ವ, ಕರ್ಮಪ್ರವಾದಪೂರ್ವ, ಪ್ರತ್ಯಾಖ್ಯಾನಪೂರ್ವ, ವಿದ್ಯಾನುವಾದಪೂರ್ವ, ಕಲ್ಯಾಣವಾದಪೂರ್ವ, ಪ್ರಾಣಾವಾಯುಪೂರ್ವ, ಕ್ರಿಯಾವಿಶಾಲಪೂರ್ವ ಮತ್ತು ಲೋಕಬಿಂದುಸಾರಪೂರ್ವ ಎಂಬ ಹದಿನಾಲ್ಕು ಆಗಮಗ್ರಂಥಗಳು : ಪ್ರಥಮಾನುಯೋಗಮುಮಂ ಪದಿನಾಲ್ಕುಪೂರ್ವಂಗಳುಮನಯ್ದು ಚೂಳಿಕೆಯುಮಂ . . . ಪೇಸರ್ಗೊಂಡು (ಅಚ್ಚ. ೬-೪೦೫) ; ಅಂಗಗಳಿಗಿಂತ ಮುಂಚೆ ಶಾಸ್ತ್ರಜ್ಞಾನವು ಶ್ರುತರೂಪದಿಂದ ಪ್ರಚಾರದಲ್ಲಿತ್ತು. ಆಗ ಅದು ಹದಿನಾಲ್ಕು ಪೂರ್ವಗಳ ರೂಪದಲ್ಲಿ ಪ್ರಚಲಿತವಾಗುತ್ತಿತ್ತು (ಕೃಪಿಕ. ೦೩೯). 'ಚತುರ್ದಶಪೂರ್ವ' ಪರಾ. ೧೩. ದೀರ್ಘವಾದ ಒಂದು ಕಾಲಮಾನ : ಎಪ್ಪತ್ತುಲಕ್ಷದ ಐವತ್ತಾರುಸಾವಿರ ಕೋಟಿ ವರ್ಷ : ಲಕ್ಕೆಯ ಲೆಕ್ಕದೊಳೊಂದಿ ಪೂರ್ವವಿರ್ವತ್ತು ನಿರಂತರಂ ನಡೆದುದಾ ವೃಷಭಂಗೆ ಕುಮಾರಕಾಲದೊಳ್ (ಅಚ್ಚ. ೬-೩೯) ; ಎರಡುಲಕ್ಷಪೂರ್ವಂ ಪರಮಾಯುಷ್ಯಮನಂ . . . ಧವಳವರ್ಣಸಮಾನ ಬಳೆದಯ್ವತ್ತುಸಾಸಿರಪೂರ್ವಂ ಕುಮಾರಕಾಲಂ ಪೋಗೆ ರಾಜ್ಯಾಭಿಷೇಕಮಾಗಿ (ಅಪ್ಪಂತ. ೦೨೬). ೧೪. ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ. ೧೫. [ಯೋಗ] ಉಚ್ಛ್ವಾಸ ನಿಶ್ವಾಸಗಳ ಒಂದು ಬಗೆ : "ನಾಸಿಕದಿಂದಾನಿಲಂ ಕುಂಭಕಮೆನಿಕ್ಕು . . . ಅನವರತ ಸಂಚರಿಸೆ ಪೂರ್ವಮೆಂಬಕ್ಕುಂ" (ಮುಗಿಂ. ೦೬-೦೯).

**ಪೂರ್ವಪೂರ್ವ** — ೧. ಹಿಂದು ಹಿಂದಿನ ; ಹಿಂದಿನದಕ್ಕಿಂತ ಹಿಂದಿರುವ : ಹೀಗೆ ಉತ್ತರೋತ್ತರಾವಸ್ಥೆಗಳಿಂದ ಉತ್ಪತ್ತಿವ್ಯವಹಾರಗಳು, ಪೂರ್ವಪೂರ್ವಾವಸ್ಥಾವಿನಾಶದಿಂದ ವಿನಾಶವ್ಯವಹಾರ (ಹಿಂದಶಾ. ೯೩). ೨. ಹಿರಿಯರಿಗೆ ಹಿರಿಯ; ಪುರಾತನರಿಗೆ ಪುರಾತನನಾದವನು;

ಆದಿಪುರಂಪ ; ಪರಮೇಶ್ವರ : ನಿಜನಿರ್ವಾಲಿತರೂಪವನಂ ಪೂರ್ವ ಪೂರ್ವನಂ . . . ದೇವದೇವನಂ ಭಜಿಸಿದಳಗಜೆ ಬನದೊಳು (ಕೈಬಿಠ. ೦೩-೨೩). **ಪೂರ್ವದ ಹಳಗನ್ನಡ** = ಹಳಗನ್ನಡಕ್ಕೂ ಹಿಂದಿನ ಅತಿ ಪ್ರಾಚೀನವಾದ ಕನ್ನಡಭಾಷೆಯ ರೂಪ : ಹಳಗನ್ನಡಕ್ಕೂ ಹಿಂದೆ ಕನ್ನಡಕ್ಕೆ ಒಂದು ರೂಪವಿತ್ತು. ಅದನ್ನು "ಪೂರ್ವದ ಹಳಗನ್ನಡ" ವೆನ್ನುತ್ತಾರೆ (ಕೈಶಿ. ೦). **ಪೂರ್ವಾಪರ** = ೧. ಮೊದಲಿನ ಮತ್ತು ಅನಂತರದ. ೨. ಹಿನ್ನೆಲೆಯಿಂದ ಪರಿಣಾಮದ ವರೆಗಿನ ಸಮಸ್ತ ವೃತ್ತಾಂತ; ಹಿಂದುಮುಂದಿನ ಸಮಗ್ರವಿಷಯ : ಎಲೆ ಮುನೀಶ್ವರ ಪೇಳು ಪೇಳೆನೆ ತಿಳುಹಿ ಪೂರ್ವಾಪರವ ರಾಮಂಗೆ ಬಳಿಕಹಲ್ಯಾದೇವಿಯರ್ತಿಯು ಸಲಿಸಿ ಬೀಳ್ಕೊಂಡ (ಕೌಶಿಠ. ೦-೯೬). ಪೂರ್ವಾಪರಗಳನ್ನು ಅರಿಯದ ಮಾನವರ ಕಣ್ಣಿಗೆ ನಾವು ಹುಚ್ಚರು (ಬುಪಾ. ೦೩). ೩. ಹಿಂದೆ ಇರುವುದು ಮತ್ತು ಮುಂದಿರುವುದು : ಪರಿಗೀತಾರ್ಥಂ ಪೂರ್ವಾಪರ ದೊಳ್ ಬಗೆವಾಗಳೆಂದುಮೊಂದಱೊಳೊಂದುಂ ದೊರೆಕೊಳ್ಳದ ದೊಡದು ದುಷ್ಕರಮ ವಿರುದ್ಧಾರ್ಥಮೆಂಬುದಾದು ದೋಷಂ (ಕಾವ್ಯಾ. ೦-೬೦). ೪. ಸಂಬಂಧ. **ಪೂರ್ವಾಪೂರ್ವ** = ಬಹಳ ಹಿಂದಿನ : ಪ್ರತಿ ಕ್ಷಣಂ ವಿಶರಾರುಗಳ್ ಚಿತ್ರಕ್ಷಣಂಗಳ್ ಪೂರ್ವಾಪೂರ್ವಚಿತ್ತವಿಶೇಷ ಪ್ರಥಮಂಗಳ್ ಪ್ರಬೋಧದಿಂದಂ ಪ್ರವರ್ತಿಸುವುವು (ಜಾಂತಿ. ೬-೦೧೨ ವ). **ಪೂರ್ವೋತ್ತರ** = ಮೊದಲಿನ ಮತ್ತು ಅನಂತರದ; ಮುಂಚಿನ ಹಾಗೂ ಕೊನೆಯ : ಪೂರ್ವೋತ್ತರಕಾಲವ್ಯಾಪ್ತಿ ಜೀವತತ್ತ್ವಮೊಂದುಂ ಟಿಂಬರ ದೊಂದುಮಿಲ್ಲ (ಜಾಂತಿ. ೬-೦೧೨ವ) ; ವಿದಿತಪೂರ್ವೋತ್ತರದ ಯಾದು ವಂಶದ ಕಥಾವಿಸ್ತಾರವನು ಹೇಳಿದನು ದುಷ್ಯಂತನಲಿ ಶಾಕುಂತಲೆಯು ಕಥೆಸಹಿತ (ಜೈಮಿ. ೩-೦೪). [ಸಂ.]

**ಪೂರ್ವಂ** (ಅ). ಮುಂಚೆ; ಮುನ್ನ; ಮುಂಚಿತವಾಗಿ : "ಆದಿಃ, ಅಗ್ರಂ, ಪು(ರಾ)ರಂ, ಪೂರ್ವಂ, ಪ್ರಥಮಂ, ಪ್ರಾಕ್, ಪುರಃ — ಈ ೭ ಮುನ್ನಂ" (ಅಭಿಧಾ. ೦೦೬ ೨೨); ಪೂರ್ವಂ ದೇವೇಶನಿಂ ನಿರ್ಮಿತ ತುರಗಚಯಂ ಲಾಯದೊಳ್ ಕಟ್ಟಿರುತ್ತುಂ . . . ಪರ್ವಿತ್ತಾ ಪಟ್ಟಣಾದ್ಯಂತ್ಯದೊಳ್ (ಜಾಂಚಂ. ೪-೦೨-೨). [ಸಂ.]

**ಪೂರ್ವಕ** (ಗು). ೧. ಮುಂಚಿನ ; ಮೊದಲಿನ : ಹಿಂದಣ. ೨. ಸಹಿತ ವಾದ ; ಕೂಡಿಕೊಂಡ : ಆದರಪೂರ್ವಕ ವಿಜ್ಞಾಪನೆಗಳು (ಊಹಿ). (ನಾ). ೩. ಪೂರ್ವಜ; ಪೂರ್ವಿಕ. ೪. ಸಹಿತವಾದುದು; ಕೂಡಿ ಕೊಂಡಿರುವುದು : ದೃಕ್ಕಿಗೆಗೆಯ್ದಿಸದವಂ ನಿಜದೃಕ್ಕಿಪೂರ್ವಕವಹಾಗಿ ನೋಡಲು ದೃಷ್ಟಾವ ತನನ ೦ವಪೆನೆಂದ ತರನಡಸುವವ (ಅತಿ. ೩೧-೯೪). [ಸಂ.]

**ಪೂರ್ವಕಂಕಣ** (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ . . . ಪೂರ್ವಕಂಕಣ ಕಾಮ್ಯಕಂಕಣ . . . ಜಯಾಳಮುಂಬವು ಮೊದಲಾದ ನೂಱೆಂಟು ತಾಳಂಗಳು (ಅಕೀ. ೨೪೬). [ಸಂ.]

**ಪೂರ್ವಕಕ್ಷೆ** (ನಾ). ವಾದದಲ್ಲಿ ಮಂಡಿಸುವ ಮೊದಲನೆಯ ಆಕ್ಷೇಪಣೆ : ಇಂತೀ ಸ್ಥಲಂಗಳಲ್ಲಿ ಸ್ಥಿರೀಕರಿಸಿ ಆರೋಪಿಸಿ ಪೂರ್ವಕಕ್ಷೆಯಂ ಕಂಡು . . . ಉತ್ತರಕಕ್ಷೆಯ ಕೂಡಿದಲ್ಲಿ ಅಱಸ್ಥಲದ ಸೋಂಕಿಲ್ಲ (ಕೋರಾ. ೦೪೯-೩೩೩); ಜಾತಿಭೇದಂಗಳಂ ಸಪ್ತಕ್ಷಿಪಂಗಳಂ ಪ್ರೀತಿಬಿಂದಾ ತ್ರಿಶಿವಂಗಳಂ ವೀರ ಶೈವಾತಿಶಯಕಂ ಪೂರ್ವಕಕ್ಷೆಯೊಳಗೆಂದವಂ ಬಿತ್ತರಿಸಿದಂ ದೇಶಿಕಂ (ಸೌಕೃತಿ. ೬-೨ ಸೂಚನ). [ಸಂ. ಪೂರ್ವಕಕ್ಷಾ]

**ಪೂರ್ವಕರ್ಮ** (ನಾ). ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮ ಮತ್ತು ಅದರ ಫಲ : ಪೂರ್ವಕರ್ಮವ ಕೆಡಿಸಿದನೆನ್ನ ಗುರು ಉಭಯಕರ್ಮವ ಬಿಡಿಸಿ ತೋಱಿದ ಶರಣರವರಿಂದ ಬದುಕಿದೆನು(ಸಕಪ. III. ೦೩೩-೨೪೪); ಅಂಗ ವೆಂಬುದು ಪೂರ್ವಕರ್ಮಸಂಗಳೇಪವು ಪುಣ್ಯಪಾಪೋತ್ಪನ್ನನಿಳಯಂ ಸುಕೃತದುಃಕೃತಗತಿಗಳಾಶ್ರಯವು (ಅತಿ. ೩೧-೨೬). [ಸಂ. ಪೂರ್ವಕರ್ಮನ್]

**ಪೂರ್ವಕಲ್ಪನೆ** (ನಾ). ೧. ಮೊದಲು ಮಾಡಿದ ಕಲ್ಪನೆ; ಮುಂಚೆ ಮಾಡಿದ ಊಹೆ : ಅವರು ಬಹಳ ಅಹಂಕಾರಿಗಳೆಂಬುದು ನನ್ನ ಪೂರ್ವ ಕಲ್ಪನೆಯಾಗಿತ್ತು (ಊಹಿ). ೨. ಪುರಾಕೃತಕರ್ಮ : ಪೂರ್ವಕಲ್ಪನೆಯ ವಿಜಾಱುವರಾರ್ (ಕಳಿ. ೦೦). [ಸಂ. ಪೂರ್ವಕಲ್ಪನಾ]

**ಪೂರ್ವಕಲ್ಯಾಣಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವ ಕಲ್ಯಾಣಿ-ಇತಿನೇ ಮೇಳಕರ್ತ ಗಮನಶ್ರಮದ ಜನ್ಯ. ಪ್ರಾಚೀನ ರಕ್ತಿರಾಗ. ಕರುಣಾರಸಪ್ರಧಾನರಾಗ (ಸಂಗೀಕೋ. ೦೩೩). [ಸಂ. ಪೂರ್ವಕಲ್ಯಾಣೀ]

**ಪೂರ್ವಕಾಲ** (ನಾ). ೧. ಮುಂಚಿನ ಕಾಲ; ಹಿಂದಿನ ಕಾಲ; ಪ್ರಾಚೀನ ಕಾಲ : ಪೂರ್ವಕಾಲದಲ್ಲಿ ಈ ಪ್ರಾಣಿಗಳು . . . ಕಮಲಗಳನ್ನು ಮಾತ್ರ ಸುತ್ತುತ್ತಿದ್ದವು (ಗಾಳ. ೨೦೬). ೨. [ವ್ಯಾಕ] ಭೂತಕಾಲ : ಇಕಾರ ಮುಮುಮುಕಾರಮುಂ ಪೂರ್ವಕಾಲಕ್ರಿಯೆಯೊಳಕ್ಕುಂ (ಶಬ್ದ. ಶ. ೨೪೬ ವೃತ್ತಿ). [ಸಂ.]

**ಪೂರ್ವಕೋಟಿ** (ನಾ). ೧. ಪೂರ್ವಪಕ್ಷ; ವಾದದ ಪ್ರಾರಂಭದಲ್ಲಿ ಮಂಡಿಸುವ ಪ್ರಶ್ನೆ. ೨. [ಜೈನ] ಅತಿದೀರ್ಘವಾದ ಒಂದು ಕಾಲ ಪ್ರಮಾಣ; ಒಂದು ಕೋಟಿ ಪೂರ್ವವರ್ಷ : ಪೂರ್ವಕೋಟ್ಯಾಯ ತಾಯುರ್ವಿತಿಪ್ರವೃತ್ತಂ ಪಡ್ವಿಧೇತಿಪ್ರಕೃತಿನಿಯತಷಟ್ಕನೂಱುಬಿಲ್ ಮರ್ತ್ಯ ಮೂರ್ತ್ಯುನ್ನತಿಯಿಂದುಂ ತನ್ನೊಳೆಂಬೀ ಸ್ತುತಿವಡೆದುದು ಸೌಖ್ಯಾವಗಾಹಂ ವಿದೇಹಂ (ಅಂದ್ರಪ್ರಿ. ೦-೬೬) ; ಪೂರ್ವಗಳು ಒಂದು ಕೋಟಿಯಾವರ್ಷ ಯಾದರೆ . . . ಪೂರ್ವಕೋಟಿ (ಧರ್ಮಪ. ೦೩). [ಸಂ.]

**ಪೂರ್ವಕ್ರೀ** (ನಾ). ಹಿಂದೆ ನಡೆದು ಹೋದ ಸಂಗತಿ; ಪೂರ್ವಚರಿತ್ರೆ : ಶಾಸ್ತ್ರ ಬಲ್ಲಿತ್ತೆಂದೆನೆ ಶಬ್ದಕ್ರೀ ಪುರಾಣ ಬಲ್ಲಿತ್ತೆಂದೆನೆ ಪೂರ್ವಕ್ರೀ [ಪಾಠಾಂ. ಕ್ರಿ] (ಅಕ. ೩೩೨) ; ಮುತ್ತು ರತ್ನಸಿತಕೆ ಘ್ರಾತಕೆ ವಸ್ತ್ರ ಪೂರ್ವಕ್ರೀ [ಪಾಠಾಂ. ಕ್ರಿಯ]ಗಳಂತೆ ನಿತ್ಯಮುಕ್ತಶರಣಗಂತೆ ಮತ್ತೆ ಪೂರ್ವಚರಿತವು (ಅಪ್ರ. ೦೨-೯೯೪). [<ಸಂ. ಪೂರ್ವಕ್ರಿಯಾ]

**ಪೂರ್ವಗಿರಿ** (ನಾ). ಮೂಡಣ ದಿಕ್ಕಿನ ಬೆಟ್ಟ; ಸೂರ್ಯನು ಹುಟ್ಟಿ ಬರುವ ಸ್ಥಾನವೆಂದು ನಂಬಲಾದ ಪರ್ವತ; ಉದಯಾಚಲ : ಪೂರ್ವಗಿರಿಯ ಶಿಖರಾಂತರದ ಪದ್ಮರಾಗದ ಕಳಸಮೆನೆ ಸೂರ್ಯಮಂಡಲಂ ರಂಜಿಸಿದುದು (ಅಂಪ. ೯೬-೯೬). [ಸಂ.]

**ಪೂರ್ವಗುಣ** (ನಾ). ಹಿಂದಿದ್ದ ಸ್ವಭಾವ. —ಪ್ರಕೃತಿ : ಆರಾಧ್ಯ ಪ್ರಾಣಲಿಂಗವೆಂದಱಿದು ಪೂರ್ವಗುಣವಳಿದು ಪುನರ್ಜಾತನಾದ ಬಳಿಕ ಸಂಸಾರಬಂಧಂಗಳೆನ್ನವರಿಂದೊಡೆ ನಂಟಭಕ್ತಿ ನಾಯಕನರಕ (ಅಪ. ೯೯). [ಸಂ.]

**ಪೂರ್ವಗ್ರಹ** (ನಾ). ಯಾವುದಾದರೊಂದು ವಸ್ತು, ವಿಷಯ ಅಥವಾ ವ್ಯಕ್ತಿಯ ವಿಷಯಕವಾಗಿ, ಪರಿಶೀಲನೆಗೆ ಮುಂಚಿತವಾಗಿಯೇ ಮಾಡಿಕೊಂಡ (ಅನುಕೂಲವಾದ ಅಥವಾ ಪ್ರತಿಕೂಲವಾದ) ಅಭಿಪ್ರಾಯ ; ಅವಿಚಾರಕಲ್ಪಿತಅಭಿಪ್ರಾಯ ; ಅಭಿನಿವೇಶ : ಅದು ಅನಾರ್ಯಪದ್ಧತಿ ಎಂಬ ಪೂರ್ವಗ್ರಹವನ್ನು ನಾವೇಕೆ ಒಪ್ಪಬೇಕು ? (ಅಂಪ್ಪ. ೬೨) ; ವಿಮರ್ಶಕನ ಮನಸ್ಸಿನ ಸ್ವಾಸ್ಥ್ಯವನ್ನು ಎಲ್ಲಕ್ಕಿಂತಲೂ ಮಿಗಿಲಾಗಿ ಕೆಡಿಸತಕ್ಕದ್ದು ಪೂರ್ವಗ್ರಹ (ಎಪರ್. ೦೬).

**ಪೂರ್ವಗ್ರಹಪೀಡಿತ** = ಯಾವುದಾದರೊಂದು ವಸ್ತು, ವಿಷಯ ಅಥವಾ ವ್ಯಕ್ತಿಯ ವಿಷಯವಾಗಿ, ಪರಿಶೀಲನೆಗೆ ಮುಂಚಿತವಾಗಿಯೇ (ಅನುಕೂಲವಾದ ಅಥವಾ ಪ್ರತಿಕೂಲವಾದ) ಅಭಿಪ್ರಾಯವನ್ನು ಹೊಂದಿದ ವ್ಯಕ್ತಿ; ಅವಿಚಾರಕಲ್ಪಿತಅಭಿಪ್ರಾಯವನ್ನುಳ್ಳವನು : ಪೂರ್ವಗ್ರಹಪೀಡಿತರಾದವರಿಂದ ಯಾವ ವಿಚಾರದಲ್ಲಿಯೂ ನಿರ್ದುಷ್ಟವಾದ ಪರಿಶೀಲನೆ ಸಾಧ್ಯವಿಲ್ಲ (ಊಹಿ). [ಸಂ.]

**ಪೂರ್ವಗ್ರಹಿಕೆ** (ನಾ). = ಪೂರ್ವಗ್ರಹ: ಆದರ್ಶವಾದಿ ಎಷ್ಟೋ ಸಲ ತನ್ನ ವಿಶ್ವದ ಪರಿಚಯವನ್ನ ಸಂಪೂರ್ಣವಾಗಿ ಮಾಡಿಕೊಂಡಿರುವುದಿಲ್ಲ. ಪೂರ್ವಗ್ರಹಿಕೆಯ ಬಣ್ಣದ ಕನ್ನಡಕದಲ್ಲಿಯೆ ಎಲ್ಲವನ್ನೂ ನೋಡುತ್ತಾನೆ (ಕೀಳ್ವ. ೭). [ಸಂ. ಪೂರ್ವಗ್ರಹಿಕಾ]

**ಪೂರ್ವಚಿಂತನೆ** (ನಾ). ಮೊದಲಿನ ಆಲೋಚನೆ: ಪೂರ್ವಚಿಂತನೆಯಿಂದ ಕಂಡು ಉತ್ತರಚಿಂತನೆಯಿಂದ ಖಂಡಿಸಿ . . . ಪುರಾಣಾಗಮಂಗಳೆಲ್ಲವೂ ನಾನಾರೆಂಬುದ ತಿಳಿವುದಕಿಕ್ಕಿದ ಭಿತ್ತಿ (ಸಕಚ III. ೨೬೩-೨೦೪). [ಸಂ. ಪೂರ್ವಚಿಂತನಾ]

**ಪೂರ್ವಜ** (ಗು). ೧. ಮೊದಲು ಹುಟ್ಟಿದ; ವಯಸ್ಸಿನಲ್ಲಿ ಹಿರಿಯ. ೨. ಬಹು ಹಿಂದಿನ ಕಾಲಕ್ಕೆ ಸೇರಿದ; ಪುರಾತನ; ಪ್ರಾಚೀನ: ಬಹುಶಃ ಅವುಗಳ ಪೂರ್ವಜ ಕೀರ್ತಗಳಿಗೆ ರೆಕ್ಕೆಗಳು ಇಲ್ಲದೆ ಇದ್ದಿರಬಹುದು (ಕೀಟಪ. ೦೮). (ನಾ). ೩. ಹಿರಿಯ ಸೋದರ; ಅಣ್ಣ: "ಅಗ್ರಜಃ, ಪೂರ್ವಜಃ, ಶ್ರೇಷ್ಠಃ—ಈ ೩ ಅಣ್ಣಂ" (ಕರಾಮು. ೬೩-೬೪). ೪. ವಂಶದಲ್ಲಿ ಹಿಂದೆ ಆಗಿಹೋದವನು; ಮೂಲಪುರುಷ; ಪೂರ್ವಿಕ: ಅವರ ಪೂರ್ವಜರಪ್ಪರಸುಗಳೊಳಗೆಯೋಧ್ಯಾಪುರಪರಮೇಶ್ವರನುಂ ಸತ್ಯಾದಿ ಗುಣಾಶ್ರಯವಲ್ಲಭನುಮತಿಪ್ರೌಢದಿಶಾದಂತಿಪ್ರಕಟಪ್ರಭಾವನಪ್ಪ ಸತ್ಯಾಶ್ರಯದೇವನಿಂ (ಗಣಾಮು. ೨-೬ ವ); ನಮ್ಮ ಪೂರ್ವಜರ ಪುಣ್ಯದಿಂದ ಕೆಲವು ಸಂಪ್ರದಾಯ ಇನ್ನೂ ಬದುಕಿದ್ದು ನಮ್ಮ ವಿನೋದಪ್ರವೃತ್ತಿಗೆ ಆಗಾಗ ಅನುವು ಮಾಡಿಕೊಡುತ್ತವೆ (ಗಾಂಕ. ೪೩). ೫. (ಚಂದ್ರಲೋಕದಲ್ಲಿ ವಾಸಿಸುವ) ಪಿತೃ. [ಸಂ.]

**ಪೂರ್ವಜನ್ಮ** (ನಾ). ಹಿಂದಿನ ಜನ್ಮಗಳಲ್ಲಿ ಯಾವುದಾದರೊಂದು: ಪೂರ್ವಜನ್ಮನಿವೃತ್ತಿಯಾಗಿ ಗುರುಕರುಣವಿಡಿದಂಗೆ ಬಂಧನವೆಲ್ಲಿಯದೊ (ಬಸವ. ೬೬೦); ಅರಿಸಿನ ಮಾಡುವರು ಆನಿಂದಲೇನಹುದು ಪೂರ್ವಜನ್ಮದ ಕರ್ಮವಿಧಿ ಬೆನ್ನ ಬಿಡದು (ಪುರಂದ. ೨-೬೦ ಪಲ್ಲ). [ಸಂ. ಪೂರ್ವಜನ್ಮನ್]

**ಪೂರ್ವತತ್ತ್ವ** (ನಾ). ಮೊದಲಿನ ಸಂಬಂಧ; ಪೂರ್ವಾಶ್ರಯ: ಪೂರ್ವತತ್ತ್ವ ಬಿಟ್ಟುದು ಭಕ್ತಿಸ್ಥಲ ಮಧ್ಯದ ಭಾವವ ಬಿಟ್ಟುದು ಮಾಹೇಶ್ವರಸ್ಥಲ ತ್ರಿವಿಧವ ಕೂಟವ ಬಿಟ್ಟುದು ಪ್ರಸಾದಿಸ್ಥಲ (ಚೋಳಕ. ೦೬೯-೩೬೬). [ಪೂರ್ವ + ತತ್ತ್ವ]

**ಪೂರ್ವದಿಕ್ಕು** (ನಾ). ಮೂಡಣ ದೆಸೆ: ಈ ಕೋಲಲರು ಕೇವಲ ಭಾರತದ ಪೂರ್ವದಿಕ್ಕಿನಲ್ಲಿ ಮಾತ್ರ ನೆಲಸಿದಂತೆ ತೋರುತ್ತದೆ (ದ್ರಾಹಾ. ೬೦); ನಾವು ಪೂರ್ವದಿಕ್ಕಿನ ಕಡೆ ನಮ್ಮ ಮುಖ ತಿರುಗಿಸೋಣ . . . ಚಂದ್ರನು ನಮ್ಮ ಗಮನವನ್ನು ಕೂಡಲೆ ಸೆಳೆಯುತ್ತಾನೆ (ನಕ್ಷತ್ರ. ೯). [ಪೂರ್ವ + ದಿಕ್ಕು]

**ಪೂರ್ವದಿಕ್ಪತಿ** (ನಾ). ಮೂಡಣ ದಿಕ್ಕಿನ ಒಡೆಯ; ಇಂದ್ರ: "ಇಂದ್ರಃ . . . ಪೂರ್ವದಿಕ್ಪತಿಃ . . . ಮೇಘವಾಹನಃ—ಈ ೩೯ ದೇವೇಂದ್ರನ ಪೆಸರ್" (ಕರಾಮು. ೦೦-೩೩). [ಸಂ.]

**ಪೂರ್ವದೀರ್ಘ** (ನಾ). [ವ್ಯಾಕ] ಹಿಂದಿನ ಸ್ವರ ದೀರ್ಘವಾಗಿರುವ ಶಬ್ದ: ಪೂರ್ವದೀರ್ಘವಾದೊಡಂ ಅವ್ಯಯವಾದೊಡಂ ಅನೇಕಾಕ್ಷರವಾದೊಡಂ ದ್ವಿತ್ವವಿಲ್ಲ (ಶಮ. ೬೯ ವೃತ್ತಿ). [ಸಂ.]

**ಪೂರ್ವದೇವ** (ನಾ). ೧. ಹಿಂದೆ ದೇವತೆಗಳಾಗಿದ್ದು, ಅನ್ಯಾಯ, ಅಕೃತ್ಯಗಳಿಂದ ಹಾಗು ದ್ವೇಷದಿಂದ ದೇವತ್ವವನ್ನು ಕಳೆದುಕೊಂಡ ವರ್ಗ. ೨. ದೇವತೆಗಳ ಶತ್ರು; ರಾಕ್ಷಸ: "ಅಸುರಃ, ದಾನವಃ . . . ಪೂರ್ವದೇವಃ, ಶುಕ್ರಶಿಷ್ಯಃ, ಪಾತಾಲನಿಲಯಃ (ಸ್ಮೃತಾಃ)—ಈ ೮ ಅಸುರರ ಪೆಸರ್" (ಕರಾಮು. ೨-೩); ಅಮೇಯಂ ಸಕಲನೃಪ ಕುಲಜ್ಯಾಯನಾಂ ಪೂಜನೀಯಂ ಸಮನಾವಂ ಪೂರ್ವದೇವಂಗನಗೆ (ಜಗು. ೦೩-೬೦). ೩. ಅನಾದಿದೇವ; ಪುರಾತನಪುರುಷ; ವಿಷ್ಣು. ೧, ೩: ಈ ಮಹಾಪುರುಷಂ . . . ಸರ್ವಾರ್ಥಿಯಾಗಿಯುಂ ಹುತವಹನಲ್ತು ಸಮವರ್ತಿಯಾಗಿಯುಂ ದಕ್ಷಿಣದಿಕ್ಪಾಲಕನಲ್ತು ಪೂರ್ವದೇವನಾಗಿಯುಂ ನೈಋತನಲ್ತು (ಆಗು. ೯-೦೦ ವ). [ಸಂ.]

**ಪೂರ್ವದ್ರಾವಿಡ** (ನಾ). ದ್ರಾವಿಡಭಾಷೆಗಳಿಗೆ ಮೂಲವಾಗಿ ಇದ್ದಿರಬಹುದಾದ ಪ್ರಾಚೀನ ಭಾಷಾರೂಪ; ಮೂಲದ್ರಾವಿಡ: ಕ್ರಿ.ಪೂ. ೫೦೦–೬೦೦ ವರುಷಗಳಿಂದಲೂ ಈ ದ್ರಾವಿಡಭಾಷೆ ಬೆಳೆದುಬಂದಿರಬೇಕೆಂದು ಹೇಳಲು ಸಾಧ್ಯವಿದೆ. ಆಗಿನ ದ್ರಾವಿಡಭಾಷೆಯನ್ನು ಮೂಲದ್ರಾವಿಡ ಅಥವಾ ಪೂರ್ವದ್ರಾವಿಡ ಅಥವಾ ಪ್ರಾಕ್‌ದ್ರಾವಿಡವೆಂದು ಕರೆಯಲಾಗಿದೆ (ದ್ರಾಹಿ. ೩೨). [ಸಂ.]

**ಪೂರ್ವಧರ** (ನಾ). [ಜೈನ] ಪೂರ್ವಗಳೆಂಬ ಆಗಮಗಳನ್ನು ಚೆನ್ನಾಗಿ ತಿಳಿದವನು; ಚತುರ್ದಶಪೂರ್ವಗಳಲ್ಲಿ ಪಾರಂಗತನಾದವನು: ಎಣ್ಬತ್ತುನಾಲ್ವರ್ ಗಣಧರದೇವರುಂ ನಾಲ್ಸಾಸಿರದೇಳ್ನೂರಯ್ವತ್ತುದಿಂಬರ್ ಸಕಲಪೂರ್ವಧರರುಂ ನಾಲ್ಸಾಸಿರದೆಣ್ನೂರಯ್ವದಿಂಬರ್ ಶಿಕ್ಷಕರುಂ (ಆದಿಪು. ೦೬-೯೦ ವ); ಇರ್ಪತ್ತೆಣ್ಬರ್ ಗಣಧರರುಂ ಅಯ್ನೂರಯ್ವದಿಂಬರ್ ಪೂರ್ವಧರರುಂ (ಶಾಂತಿಪು. ೦೯-೦೬೯). [ಸಂ.]

**ಪೂರ್ವನಾಡಿ** (ನಾ). ದೇಹದೊಳಗಿನ ನಾಡಿಗಳಲ್ಲಿ ಒಂದು: ಮಯೂರನಾಡಿ . . . ಉತ್ತರನಾಡಿ ಪೂರ್ವನಾಡಿ ಪಶ್ಚಿಮನಾಡಿ ಗಜಗಮನನಾಡಿ, ಅಚ್ಯುತನಾಡಿ . . . ಸಂತೋಷನಾಡಿ ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋರುವ ನಾಡಿ ಜೀರ್ಣವರ್ಣದೇತೆ (ಶಿಕಚ. ೯೮೦). [ಸಂ.]

**ಪೂರ್ವನಿರ್ದಿಷ್ಟ** (ಗು). ಮುಂಚೆ ನಿಶ್ಚಯಿಸಿದ: ಮೊದಲು ನಿರ್ಧಾರ ಮಾಡಿದ; ಪೂರ್ವನಿಶ್ಚಿತ: ಈ ಷಡ್ದರ್ಶನಗಳೂ ಅಲ್ಲಲ್ಲಿ ತಮ್ಮ ಪೂರ್ವನಿರ್ದಿಷ್ಟಉದ್ದೇಶದಿಂದ ಭಿನ್ನವಾದ ಅಡ್ಡದಾರಿ ಹಿಡಿದಂತೆ ಕಾಣುತ್ತದೆ (ಜಾಕಿರ. ೦೨೦). [ಸಂ.]

**ಪೂರ್ವನಿರ್ದೇಶಿತ** (ಗು). ಮುಂಚೆ ತೋರಿಸಿದ,—ತಿಳಿಸಿದ: ಇವೆಲ್ಲವನ್ನೂ ಪೂರ್ವನಿರ್ದೇಶಿತ ರೂಪದಲ್ಲಿ ನಡೆಸಬೇಕು (ಶಿಕ್ಷಣ. ೩೩೭). [ಸಂ.]

**ಪೂರ್ವನಿಶ್ಚಯ** (ನಾ). ಮೊದಲೇ ಮಾಡಿದ ನಿರ್ಣಯಂ; ಪರಿಚಿತವಾಗಿ ಮಾಡಿಕೊಂಡ ತೀರ್ಮಾನ: ಅವರು ಪೂರ್ವನಿಶ್ಚಯವಿಲ್ಲದೆ ಯಾವ ಕಾರ್ಯದಲ್ಲೂ ತೊಡಗುವುದಿಲ್ಲ (ಕಂನಿ). [ಸಂ.]

**ಪೂರ್ವನಿಶ್ಚಿತ** (ಗು). ೧. ಮೊದಲೇ ನಿರ್ಧಾರವಾದ,—ನಿಗದಿಯಾದ. (ನಾ). ೨. ಮೊದಲೇ ನಿರ್ಣಯಿಸಿದುದು: ಅನುಭವಾನ್ನ ಹುಡುಕಿಕೊಂಡು ಹೋದರೆ, ಸಿಗೋದು ಪೂರ್ವನಿಶ್ಚಿತವಾದದ್ದು (ಹೂಸಕ್ಟ. ೨೪೬). [ಸಂ.]

**ಪೂರ್ವನೇತ್ರ** (ನಾ). ಕಣ್ಣಿನ ಕೊನೆ: "ಅಕ್ಷಿಮೂಲಂ ಪೂರ್ವನೇತ್ರಮೆಂಬೆ ಮೊದಲಗಣ್" (ಕುಗೆರಾ. ೯೯-೩). [ಸಂ.]

**ಪೂರ್ವಪಕ್ಷ** (ನಾ). ೧. ತಿಂಗಳಿನ ಮೊದಲನೆಯ ಹದಿನೈದು ದಿನಗಳ ಅವಧಿ; ಶುಕ್ಲಪಕ್ಷ. ೨. ವಾದವನ್ನು ಮಂಡಿಸುವ ಮೊದಲ ಭಾಗ. ೩. ಶಾಸ್ತ್ರಸಿದ್ಧಾಂತವನ್ನೊ, ಪ್ರಮೇಯವನ್ನೊ ವಿರೋಧಿಸುವುದಕ್ಕಾಗಲಿ ಅಥವಾ ಸಂಶಯಗಳ ಪರಿಹಾರಕ್ಕಾಗಲಿ ಹೂಡುವ ಪ್ರಶ್ನಸಹಿತವಾದ ಯುಕ್ತಿ: ಇಲ್ಲಿಗೇವಿಧೇಯಂ ಮಾಟ್ಪುದೆಂದು ಪೂರ್ವಪಕ್ಷದ ಪಕ್ಷಸಿದ್ಧಿಯ ವಿಸ್ತಾರಕ್ಕವಕಾಶವಪ್ಪಂತು ನುಡಿದು (ಶಾಂತೀಶ. ೨-೩೩ ವ); ಪೂರ್ಣವಾಗಿ ವಿಚಾರ ಮಾಡದೆ ಇರುವಾಗ ತೋರುವ ಪಕ್ಷವೇ ಪೂರ್ವಪಕ್ಷವು (ಬ್ರಹ್ಮಸೂ. ೩೭-೨); ಅವಳು ಹೀಗೆ ತನ್ನ ಇಡೀ ಪೂರ್ವಪಕ್ಷವನ್ನೇ . . . ವಿರೋಧಿಸುತ್ತಾಳೆಂದು ಅವನು ಬಗೆದಿರಲಿಲ್ಲ (ದೂಕಸ. ೨೬೯). ೪. ಹೇಳಿಕೆ; ಪ್ರತಿಪಾದನೆ. ೫. ವಿರುದ್ಧವಾದ ಹೇಳಿಕೆ: ನಿಷ್ಫಲ ಪೂರ್ವಪಕ್ಷಮೆಮಗಾದುದೇ ವಲಂ ಸಿದ್ಧಾಂತಂ (ಗದಾಯು. ೯-೮). [ಸಂ.]

**ಪೂರ್ವಪಕ್ಷಿ** (ನಾ). ಪೂರ್ವಪಕ್ಷವನ್ನು ಮಂಡಿಸುವವನು: ಸಿದ್ಧಾಂತವನ್ನು ವಿರೋಧಿಸಿ ಪ್ರಶ್ನಿಸುವವನು : ಸಿದ್ಧವಸ್ತುವು ಪ್ರತ್ಯಕ್ಷಾದಿಗಳಿಗೆ ವಿಷಯವಾಗುವುದರಿಂದ ಶಾಸ್ತ್ರಕ್ಕೆ ಅನುವಾದ ತತ್ತ್ವವು ಬರುವುದೆಂಬ ದೋಷವನ್ನು ಇಲ್ಲಿ ಪೂರ್ವಪಕ್ಷಿಯು ತೆಗೆದಿರುತ್ತಾನೆ (ಶ್ರಿಶ್ರ. ೨೨ ೩೬೪). [ಸಂ. ಪೂರ್ವಪಕ್ಷಿನ್]

**ಪೂರ್ವಪದ** (ನಾ). [ವ್ಯಾಕ] (ಸಮಾಸದಲ್ಲಿ) ಮೊದಲು ಇರುವ ಪದ : ಪರಪದಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಬ್ದ. ೩೮); ಉತ್ತರಪದವೆಂದರೆ ಮುಂದೆ ನಿಲ್ಲುವ ಪದ; ಹಿಂದೆ ನಿಲ್ಲುವ ಪದಕ್ಕೆ 'ಪೂರ್ವಪದ' ಎಂದು ಹೆಸರು. 'ಮಳೆಗಾಲ' ಎಂಬುವದರಲ್ಲಿ 'ಮಳೆ' ಪೂರ್ವಪದ; 'ಕಾಲ' ಉತ್ತರಪದ (ಶುಕ್ಕ. ೨೦ ೩೨೩). [ಸಂ.]

**ಪೂರ್ವಪರಾಮರ್ಶೆ** (ನಾ). ಹಿಂದಿನ ಸಂಗತಿಯ ಸ್ಮರಣೆ; ಪೂರ್ವಸ್ಮರಣೆ : ಆಯೆಂಬುದು ಪೂರ್ವಪರಾಮರ್ಶೆಗವೊದವುಗುಂ (ಶಬ್ದ. ೦೬೪). [ಸಂ. ಪೂರ್ವಪರಾಮರ್ಶ]

**ಪೂರ್ವಪರಿಷ್ಕಾರ** (ನಾ). ಮುಂಚೆ ಮಾಡಿಕೊಳ್ಳಬೇಕಾದ ಅವಶ್ಯಕ ಬದಲಾವಣೆ, ಹೊಂದಾಣಿಕೆ, ಸಿದ್ಧತೆ ಮೊದಲಾದ ಕಾರ್ಯ : ಭಿನ್ನಶ್ರುತಿಪ್ರಮಾಣವಿರುವ ವಾದ್ಯಸಮೂಹವು ಪ್ರಬಲವಾಗಿ ರಚನೆಗಳಲ್ಲಿಯೂ, ಪ್ರಯೋಗದಲ್ಲಿಯೂ ಪೂರ್ವಪರಿಷ್ಕಾರದ ಅವಶ್ಯಕತೆಯು ಹೆಚ್ಚಿ . . . ಸಂಗೀತವು ಒಂದು ಮೂರುಕಾಲಿನ ಓಟದಂತೆ (Three legged race) ಆಗಿದೆ (ಶಾಂಕರ. ೩೩೬). [ಸಂ.]

**ಪೂರ್ವಪರ್ವತ** (ನಾ). ಮೂಡಣದಿಕ್ಕಿನ ಬೆಟ್ಟ; ಸೂರ್ಯನು ಹುಟ್ಟುವ ಪರ್ವತ ; ಉದಯಾಚಲ : "ಉದಯಃ, ಪೂರ್ವಪರ್ವತಃ— ೨ ಉದಯಪರ್ವತದ ಹೆಸರುಗಳು. ಮೂಡಲಲ್ಲಿ ಸೂರ್ಯನು ಮೂಡುವುದಕ್ಕೆ ಸಂಧ್ಯಾಸ್ಥಾನವಾದ ಪೂರ್ವಾದ್ರಿ" (ಸಿದ್ಧಾಂತಿ. ೦೦೬). [ಸಂ.]

**ಪೂರ್ವಪುಣ್ಯ** (ನಾ). ಮುಂಚಿನ ಜನ್ಮಗಳಲ್ಲಿ ಗಳಿಸಿದ ಪುಣ್ಯ : ಕನ್ನಡದೊಳಗೆನಗಭಿರುಚಿ ಬೆಳೆಯಿತು ಪೂರ್ವಪುಣ್ಯದ ಫಲದ ತೆರದೆ (ಕಂಚಾಕ. ೨೩.೪). [ಸಂ.]

**ಪೂರ್ವಪ್ರಕೃತಿ** (ನಾ). ಮೊದಲಿನ ಸ್ಥಿತಿ; ಮುಂಚಿನಿಂದಲೂ ಬಂದ ಸಹಜಸ್ಥಿತಿ ; ಅರಳಿದ ಮಧುಮಾಸ ಮಾಣಿಲಿ ಮರುಹುಟ್ಟುತಮೇ ಸಾಕು ಜಾತಿಗೆ ಜರ್ಜರಿತವಾಗಿನ್ನೇನು ಪೂರ್ವಪ್ರಕೃತಿ ವನವಾಸ (ಕಂಚ್ಯ. ೦೬ ೩೨). [ಸಂ.]

**ಪೂರ್ವಪ್ರಜ್ಞೆ** (ನಾ). ಮುನ್ನರಿವು ; ಮುಂಗಾಣ್ಕೆ; ಪೂರ್ವಸೂಚನೆ : ಸ್ನಾನ ಮಾಡುವಾಗ, ದೇವರ ಪೂಜೆಗೆ ಲೋಟ ಕೈಯಲಿರುವ ಯಾವುದೋ ಕಿಡಕಿನ ಪೂರ್ವಪ್ರಜ್ಞೆಯಿಂದ ಎಂಬಂತೆ ಜೀವ ನಡುಗಿತು (ಮಂಕುಶಿ. ೦೪). [ಸಂ. ಪೂರ್ವಪ್ರಜ್ಞಾ]

**ಪೂರ್ವಪ್ರತ್ಯಯ** (ನಾ). [ವ್ಯಾಕ]ಶಬ್ದಗಳ ಆದಿಯಲ್ಲಿ ಸೇರಿ ಪದವನ್ನು ಸಿದ್ಧಗೊಳಿಸುವ ಪ್ರತ್ಯಯ; ಉಪಸರ್ಗ: ಪೂರ್ವಪ್ರತ್ಯಯ (ಪ್ರಿಫಿಕ್ಸ್), ಪರಪ್ರತ್ಯಯ(ಸಫಿಕ್ಸ್), ಅಂತಃಪ್ರತ್ಯಯ(ಇನ್‌ಫಿಕ್ಸ್) (ಕಂಕೋ. I. ೬೬೩). [ಸಂ.]

**ಪೂರ್ವಫಲ್ಗುನಿ** (ನಾ). ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹನ್ನೊಂದನೆಯದು. [ಸಂ. ಪೂರ್ವಫಲ್ಗುನೀ]

**ಪೂರ್ವಭವ** (ನಾ).—ಪೂರ್ವಜನ್ಮ ; ಶಾರ್ದೂಲನ ಪೂರ್ವಭವವೃತ್ತಾಂತಮುಮಂ . . . ಅಱಿಪಿ (ಆದಿಪು. ೩ ೧೧ ಕ); ನಿನ್ನ ತಪಕ್ಕೆ ಮೆಚ್ಚಿ ವರವಿತ್ತಂ ಶ್ರೀವರಂ ತಾನೆ ನಂದನನಪ್ಪಂ ನಿನಗೆಂದು ಪೂರ್ವಭವದೊಳ್ (ಶಾಂತಿ. ೨-೬೮). [ಸಂ.]

**ಪೂರ್ವಭಾಗ** (ನಾ). ೧. ಮೊದಲನೆಯ ವಿಭಾಗ—ಖಂಡ : ವೇದದಲ್ಲಿ ಪೂರ್ವಭಾಗ, ಉತ್ತರಭಾಗವೆಂದು ಎರಡು ವಿಭಾಗ (೬೦೮೩೩. ೨೯೩). ೨. ಮೂಡಣದಿಕ್ಕಿಗಿರುವ ಪ್ರದೇಶ; ಪೂರ್ವಪಾರ್ಶ್ವ : ಬೆಟ್ಟದ ಪೂರ್ವಭಾಗದಲ್ಲಿ ಒಂದು ಆಳವಾದ ಕಮ್ಮರಿಯಿದೆ (ಜಾತಿ). ೩. ಮುಂಭಾಗ; ಮುಂದಿನ ಪ್ರದೇಶ. [ಸಂ.]

**ಪೂರ್ವಭಾವಿ** (ಗು). ೧. ಮುಂಚೆ ಇರುವ ; ಮೊದಲೇ ಇರುವ. ೨. ಮುಂಚೆ ಆಗಬೇಕಾದ ; ಮೊದಲೇ ಮಾಡಬೇಕಾದ: ಈ ಕೆಲಸಕ್ಕೆ ಕೆಲವು ಪೂರ್ವಭಾವಿ ಸಿದ್ಧತೆಗಳನ್ನು ಮಾಡುವುದು ಅಗತ್ಯ (ಶುದ್ಧ. ೪೯). (ನಾ). ೩. ಮೊದಲನೆಯದು ; ಮುಂಚಿತವಾದುದು : ಪ್ರತಿಷ್ಠಾಪನೆಗೆ ಪೂರ್ವಭಾವಿಯಾದ ವಿಧಿಗಳೆಲ್ಲ ಸಾಂಗವಾಗಿ ನಡೆದುವು (ಶಾಂತಲಾ. ೦೨೪) ; ಓದು ಬರಹ, ಲೆಕ್ಕಗಳನ್ನು ಹೇಳಿಕೊಡದಿದ್ದರೂ ಅವುಗಳನ್ನು ಕಲಿಯಲು ಅವಶ್ಯಕವಾದ ಪೂರ್ವಭಾವಿಯಾದ ಶಿಕ್ಷಣವೀಯಬಹುದು (ಶಿಕ್ಷಣ. ೦೨೬). [ ಸಂ. ಪೂರ್ವಭಾವಿನ್ ]

**ಪೂರ್ವಭಾಷಿ** (ನಾ). (ಗೌರವಸೂಚಕವಾಗಿ) ಬೇರೆಯವರನ್ನು ತಾನೇ ಮೊದಲು ಮಾತನಾಡಿಸುವ ವ್ಯಕ್ತಿ. [ಸಂ. ಪೂರ್ವಭಾಷಿನ್]

**ಪೂರ್ವಮರ್ಯಾದೆ** (ನಾ). ಹಿಂದಿನಿಂದ ನಡೆದು ಬಂದ ಕ್ರಮ ; ಸಂಪ್ರದಾಯ : ನಾಲ್ಕು ನಾಡ ಸುಂಕಮುಂ ಪೂರ್ವ್ವಮರ್ಯ್ಯಾದೆಯುಂ ಪ್ರತಿಪಾಳಿಸಿ ಕೊಟ್ಟ ಸಾಸನಂ (ಶಾಸ. ೦೦೩—೦೯—೨೫; 1057). [ಸಂ. ಪೂರ್ವಮರ್ಯಾದಾ]

**ಪೂರ್ವಮೀಮಾಂಸೆ** (ನಾ). [ತತ್ತ್ವಶಾ] ಸಾಂಖ್ಯ, ವೈಶೇಷಿಕ ಮೊದಲಾದ ಆರು ದರ್ಶನಗಳಲ್ಲಿ ಒಂದು ; ಕರ್ಮಮೀಮಾಂಸೆ : ವೇದಗಳಲ್ಲಿ ಉಕ್ತವಾದ ಕರ್ಮಾಚರಣೆ ಹಾಗೂ ವೇದಪಾಠಗಳನ್ನು ಕುರಿತ ನಿರ್ಣಯಗಳನ್ನೊಳಗೊಂಡು ಜೈಮಿನಿಋಷಿಗಳಿಂದ ರಚಿತವಾದ ದರ್ಶನ : ಪೂರ್ವಮೀಮಾಂಸೆಯು ತಾತ್ಪರ್ಯನಿರ್ಣಾಯಕವಾದ ಉಪಕ್ರಮಾದಿ ಷಡ್ವಿಧಲಿಂಗಂಗಳಂ ವೇದವಾಕ್ಯವಿಚಾರಪೂರ್ವಕಮಾಗಿ ಜ್ಯೋತಿಷ್ಟೋಮಾದಿ ಯಾಗಪ್ರಮುಖವಿಧಾನಕ್ರಮಮಂ ನಿರ್ವಹಿಸುವುದರಿಂದ ಕರ್ಮಕಾಂಡದೆನಿಪುದು (ವಿವೇ. ೯) ; ಜೈಮಿನಿಸೂತ್ರಕ್ಕೆ ಪೂರ್ವಮೀಮಾಂಸೆ, ಧರ್ಮಮೀಮಾಂಸೆಯೆಂದೂ, ಬಾದರಾಯಣಸೂತ್ರಕ್ಕೆ ಉತ್ತರಮೀಮಾಂಸೆ, ಬ್ರಹ್ಮಮೀಮಾಂಸೆಯೆಂದೂ ವ್ಯವಹಾರ (ಹಿಂದೂ. ೦೬೪). [ ಸಂ. ಪೂರ್ವಮೀಮಾಂಸಾ ]

**ಪೂರ್ವರಂಗ** (ನಾ). ೧. ಪೂರ್ವಸಿದ್ಧತೆ ; ಪೂರ್ವಭಾವಿವ್ಯವಸ್ಥೆ : ಜಿನಜನ್ಮಾಭಿಷವಂ ನರ್ತನದಿಂ ಸೊಗಯಿಸುವುದಂತಿರದಂ ಸುರರಾಜಂ ಪುನರುತ್ಸವಂ ಮಾಡೆ ಜಿನೇಂದ್ರನ ವಿಹರಣಪೂರ್ವರಂಗಮೇನೊಪ್ಪಿದುದೋ (ಶಾಂತಿಪು. ೦೨-೦೬). ೨. [ನಾಟ್ಯ] ನೃತ್ಯ ಅಥವಾ ನಾಟಕವು ಆರಂಭವಾಗುವುದಕ್ಕೆ ಪೂರ್ವಭಾವಿಯಾಗಿ ರಂಗಸ್ಥಳದಲ್ಲಿ ನಡೆಸತಕ್ಕ ರಂಗಪೂಜೆ, ನಾಂದಿ ಮೊದಲಾದ ಕಾರ್ಯಕ್ರಮ : ಶುದ್ಧಚಿತ್ರ[ಶಾಂಗ. ಪವಿತ್ರ, ವಿಚಿತ್ರ]ಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರಪೂಜಾಮಂಗಲಪಠನೋಚ್ಚಾರಣಪುಷ್ಪಾಂಜಲಿವಿಕ್ಷೇಪಣಾದಿ ನಾಂದೀವಿಧಿಯುಮಂ ನಿರ್ವರ್ತಿಸಿ (ಆದಿಪು. ೬-೦೦೩ ವ) ; ಪೂರ್ವರಂಗಪ್ರಸಂಗದೊಳುರ್ವಿಂದಂ ಕೂಡೆ ಚೆಲ್ಲಿ ಪುಷ್ಪಾಂಜಳಿಯುಂ ಸರ್ವಜ್ಞಂಗೆಱಗಿ ಮುಂದಂ ಪರಿವಿನ್ನಂ ನಡೆದು ಬಂದು ರಂಗಮನೊಕ್ಕಂ (ಚಾರಿತ್ರ. ೯.೦೦) ; ಪೂರ್ವರಂಗವೆಂದರೆ ನಾಟಕದ ಕಥೆ ಕ್ರಮವಾಗಿ ಆರಂಭವಾಗುವುದಕ್ಕೆ ಮುಂಚೆ ರಂಗಸ್ಥಾನದಲ್ಲಿ ನಟರು ನಡಸ ತಕ್ಕ ಕಾರ್ಯಗಳು (ಶ್ರೀಶಾ. ೨೦೨). ೩. ಮೊದಲನೆಯ ನೃತ್ಯ : " ಮೊದಲ ನಾಟ್ಯಮುಂ ಪೂರ್ವರಂಗಮೆಂಬುದು " (ಶಿಲಾಯು. ೦೩-೯೩). [ ಸಂ. ]

**ಪೂರ್ವರಾಗ** (ನಾ). [ಕಾವ್ಯಮೀ] ನಾಯಕನಾಯಿಕೆಯರ ಸಮಾಗಮಕ್ಕೆ ಪೂರ್ವದಲ್ಲಿಯೇ ಅವರಿಬ್ಬರಲ್ಲಿ ಉಂಟಾಗುವ ಪರಸ್ಪರ

ಪ್ರೇಮಭಾವ,-ಅನುರಾಗ ; ಕಣ್ಣೋಟ, ಕಿವಿಮಾತುಗಳಿಂದ ಉದ್ಭವಿಸುವ ಅನುರಾಗ : ಸೀತೆಯು ಮನಸ್ಸಿನಲ್ಲಿ 'ಪೂರ್ವ-ರಾಗ'ವನ್ನು ಉದ್ದೀಪನಗೊಳಿಸುವುದು ಕವಿಯ ಅಭೀಪ್ಸವಾಗಿದೆ (ಶ್ರೀಕೃಶ್ರ. ೨). [ಸಂ.]

**ಪೂರ್ವರಾತ್ರಿ** (ನಾ). ಸಾಯಂಕಾಲದಿಂದ ಮಧ್ಯರಾತ್ರಿಯ ವರೆಗಿನ ಸಮಯ ; ಇರುಳಿನ ಪೂರ್ವಾರ್ಧ : ಪೂರ್ವರಾತ್ರಿಯಲ್ಲಿ ಬೇಗನೆ ಮಲಗಿಕೊಂಡು, ಬೆಳಗ್ಗೆ ಬೇಗ ಏಳುವುದು ಬಹಳ ಹಿತವು (ಮ.೦ಆಮ. ೪-೨೩). [ಸಂ.]

**ಪೂರ್ವರಾತ್ರೆ** (ನಾ). = ಪೂರ್ವರಾತ್ರಿ : ತುರಗಂ ವಾಯುಗ್ದಿಶಾಂತರದೊಳ್ ಘನರವದೆ ಮಲವು ಸೂಸುಂ ಕಿಳಿಬುತ್ತಿರೆ ಪೂರ್ವರಾತ್ರೆಯೊಳ್ ತನ್ನರಸನ ಪೆರ್ಗಡೆಗೆ ಮರಣಮಂ ಪ್ರಕಟಿಸುಗುಂ (ಅಶ್ವಶಾ. ೪ ೩೩). [ಸಂ. ಪೂರ್ವರಾತ್ರ]

**ಪೂರ್ವರೂಪ** (ನಾ). ೧. ಮೊದಲು ಇದ್ದ ರೂಪ,-ಆಕಾರ; ಹಿಂದಿನ ರೂಪ. ೨. ಹಿಂದಿರುವ ಅಕ್ಷರದ ರೂಪ : ನಿರುತಂ ಚಟತವರ್ಗಂಗಳವರದ ದಕಾರಕ್ಕೆ ಪೂರ್ವರೂಪವಮದಕ್ಕುಂ (ಶಮದ. ೨೫೦). ೩. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತುವು ತನ್ನ ಗುಣವನ್ನು ಬಿಟ್ಟು ಬೇರೆ ಗುಣವನ್ನು ಹೊಂದಿದ್ದರೂ ಕಾರಣಾಂತರದಿಂದ ಪುನಃ ತನ್ನ ಮೂಲಗುಣವನ್ನೇ ಪಡೆಯುವುದು : ಒಂದು ವಸ್ತುವಿನ ಗುಣಂ ಪೆಱತೊಂದು ತೆಱನಾಗಿ ತೋಱಿ ಪಗುಟಿಲ್ದಿನಂತಾಮದೆಂಬುದು ಪೂರ್ವರೂಪಂ ಎಂತೆನೆ ವಗೂರರಸನ ಪೆಂಡಿರ ಮೊಗುತಿ ಕಣ್ಣನೀರೊಳೆಬ್ಬ ಕಾಡಿಗೆಯಿಂ ಕರ್ಪಾಗಿ ಬಟ್ಟಕೆಗುವ ತಸಿನೆರ್ ತಾಗುವಿನು ತೊಳಗಿತೆಂದಿನಂತಪ್ರತಿಸಮ (ಅಕ್ಷ. ೧೧-೯೯). [ಸಂ.]

**ಪೂರ್ವರೂಪಾಲಂಕಾರ** (ನಾ). = ಪೂರ್ವರೂಪ ೩ : ತನ್ನ ಗುಣವನು ಬಿಟ್ಟು ಅಂತಹ ಅನ್ಯಗುಣವನು ಹೊಂದಿ ಮತ್ತೆ ತನ್ನ ಪೂರ್ವಗುಣವನು ಹೊಂದಿದರೆ ಪೂರ್ವರೂಪಾಲಂಕಾರ (ಕಃಶಂ. ೧೧೦). [ಸಂ.]

**ಪೂರ್ವಲಿಖಿತ** (ನಾ). (ಅಲಂ) ಹುಟ್ಟುವುದಕ್ಕೆ ಮುಂಚೆಯೇ ನಿರ್ಧಾರವಾದುದಂ ; ಹಣೆಬರಹ ; ವಿಧಿಲಿಖಿತ : ಮಾಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು (ಜಕಚ. ೩೫೦) ; ಪೂರ್ವಲಿಖಿತವಿದಾಯಿತು (ಜಕ. ೧೮-೦೨). [ಸಂ.]

**ಪೂರ್ವವಯಸ್ಸು** (ನಾ). ಎಳೆಯ ವಯಸ್ಸು ; ತಾರುಣ್ಯ ; ಯೌವನ : ಪೂರ್ವವಯಸ್ಸಿನ ಪರಿಶುದ್ಧ ಪರಿಸ್ಥಿತಿಯನ್ನವಳು ಪಡೆದಿರಲೆಂಬುದೂ ಅವನ ಇಚ್ಛೆಯಾಗಿತ್ತು (ಕೃಕು. ೧೯೬). [ಸಂ. ಪೂರ್ವವಯಸ್]

**ಪೂರ್ವವರ್ಣ** (ನಾ). ಹಿಂದಿರುವ ಅಕ್ಷರ : ಲಘ್ವಾದಿಯೂ ದ್ವಿಲಘುಸ್ವರಯುಕ್ತವೂ ಆದ ಧಾತುವಿನ ಅಂತ್ಯಾಕ್ಷರವು ಗು, ಸು, ಡು, ಬು ಆಗಿದ್ದರೆ ಆ ಅಕ್ಷರಗಳಿಗೆ ಕ್ರಮವಾಗಿ ಕ್, ಚ್, ಟ್, ತ್‌ಗಳೂ ಪ್ರತ್ಯಯಕ್ಕೆ ಪೂರ್ವವರ್ಣವು (ಕ್, ಚ್, ಟ್, ತ್) ಆದೇಶವಾಗುತ್ತವೆ (ಕೈಶಬ್ದ. ೪೭). [ಸಂ.]

**ಪೂರ್ವವಾಸನೆ** (ನಾ). ೧. ಹಿಂದಿನ ಜನ್ಮದ ನೆನಪು ; ಪೂರ್ವಜನ್ಮದ ಸ್ಮರಣೆ : ಮೆಲ್ಲಮೆಲ್ಲನೆ ಪೂರ್ವವಾಸನೆ ಮನಕೆ ತೋಱೆ ಇಲ್ಲಿ ಪುಟ್ಟಿದುದೆಲ್ಲ ಕನಸಿನಂದದೆ ತೋಱೆ (ಕಂಕಕ. ೭-೦೦೪). ೨. ಪೂರ್ವಜನ್ಮದ ಸಂಸ್ಕಾರ : ಈ ಬುದ್ಧಿ ಅವನವನ ಪೂರ್ವವಾಸನೆಗಳಿಂದ . . . ಅಲ್ಲಿ ಪ್ರಧಾನವಾದ ತಾಮಸ ಅಥವಾ ರಾಜಸಗುಣಗಳ ಪ್ರಬಲತೆಗೆ ಅವಕಾಶ ಮಾಡುತ್ತದೆ (ಶಾಂತಃ. ೦೦೦). [ಸಂ. ಪೂರ್ವವಾಸನಾ]

**ಪೂರ್ವವಿದೇಹ** (ನಾ). [ಜೈನ] ಸುಮೇರುಪರ್ವತದ ಪೂರ್ವದಿಕ್ಕಿನಲ್ಲಿ ಇದ್ದ ಕಚ್ಛ ಮೊದಲಾದ ಹದಿನಾರು ಕ್ಷೇತ್ರಗಳ ಪ್ರದೇಶ ; ಜಂಬೂದ್ವೀಪದ ಸಪ್ತಕ್ಷೇತ್ರಗಳಲ್ಲಿ ಒಂದು ; ಮಂದರದ ಪರ್ವತದ ಪೂರ್ವಕ್ಕೆ ಇದೆ (ಶ್ರೀಕೃಶೂ. ೦೬೨) : ಅಪೂರ್ವಸಂಪತ್ಸಾರಸರ್ವಸ್ವಗೇಹವಾದ ಪೂರ್ವವಿದೇಹಮನುಷ್ಯಮಧ್ಯದೊಳ್ (ಚಂದ್ರ. ೦-೮೦ ಕ): ಮೋಡಶಮಹಾವಿಷಯಂಗಳನೊಳ್ಳ ಮಾಟ್ಟುದುರ್ವಿಗೆ ಮುದವಂ ಸುಟ್ಟಿಕನಿಧಿ ಪೂರ್ವವಿದೇಹಮುಖರ್ವಸಂಪದಂ (ಕೃಕೃ. ೨-೩). [ಸಂ.]

**ಪೂರ್ವವಿರೋಧ** (ನಾ). ಮೊದಲಿನಿಂದಲೂ ಇರುವ ಹಗೆತನ : ಪೂರ್ವವಿರೋಧದಿಂ ಸಿಜವರಾಶ್ರಯದಿ ಪರರಾಜ್ಯಕಾಂಕ್ಷೆಯಿಂ . . . ಮಾಳವಭೂಮಿಪಾಲಕಂ ಸರ್ವಬಲಾನ್ವಿತಂ ನಡೆದು ಮಾಗಧನೊಳ್ ಮುಳಿದೊಡ್ಡನೊಡ್ಡಿದಂ (ಚಕಶ. ೨-೮೪). [ಸಂ.]

**ಪೂರ್ವವೃತ್ತಿ** (ನಾ). ಮೊದಲಿನ ಉದ್ಯೋಗ ; ಪರಂಪರೆಯಿಂದ ಬಂದ ಉದ್ಯೋಗ : ತಾಂಬೂಲಾದಿ ದಾನಸನ್ಮಾನಪುರಸ್ಸರಮವರ ಪೂರ್ವವೃತ್ತಿಯುಮಂ ಕಮ್ಮವಟ್ಟೆಯುಮನಿತ್ತು (ಸುಕ:ವಾ. ೨-೮೩ ಕ). [ಸಂ.]

**ಪೂರ್ವವೇದಿ** (ನಾ). ಯಜ್ಞಕುಂಡದ ಮುಂದಿರುವ ಜಗಲಿ : ಯಮನಂದನನು ವೈಶಾಖದ ಚತುರ್ದಶಿದಿನದಲುತ್ತರಪೂರ್ವವೇದಿವರಾಭ್ಯುದೈಕ್ಯದಲಿ . . . ಮಾಡಿದನ ಯಜ್ಞದೀಕ್ಷಿತನಾವನೊಲವಿನಲಿ (ಜೈಮಿ.ಭಾ. ೭-೨೭). [ಸಂ. ಪೂರ್ವವೇದೀ]

**ಪೂರ್ವವೈಭವ** (ನಾ). ಹಿಂದಿನ ಕಾಲದ ಸಂಪತ್ತು, ಯಶಸ್ಸು ಮುಂತಾದುವುಗಳ ಸಮೃದ್ಧಿ : ಶೈಲಪನು . . . ತನ್ನ ಮನೆತನದ ಪೂರ್ವವೈಭವವನ್ನು ಸಂಪಾದಿಸಿದನು (ಕಶಾಂ. ೫೧). [ಸಂ.]

**ಪೂರ್ವವೈರ** (ನಾ). = ಪೂರ್ವವಿರೋಧ : ಪೂರ್ವವೈರದಂ ಮನಸ್ಸಿನೊಳ್ ವಿಚಾರಿಸುತ್ತೆ ಬಂದೊರ್ವನಿಲ್ಲಿ ಸಿಕ್ಕಿದಂ (ರಶಾ:ಕ. ೦ ೯೬). [ಸಂ.]

**ಪೂರ್ವಶಾಸ್ತ್ರ** (ನಾ). ಪ್ರಾಚೀನಕಾಲದಿಂದ ನಡೆದು ಬಂದ ಶಾಸ್ತ್ರ : ಪರಂಪರಾಗತಶಾಸ್ತ್ರ : ಅಱಿದು ಪೀನು ಮಾರ್ಗಗತಿಯಂ ತಱಿಸಲಾಗದಾರ್ಗಂ ಬಹುವಿಕಲ್ಪದೊಳ್ ಕಱಿತು ಪೂರ್ವಶಾಸ್ತ್ರವದವಿಧಿಯಂ ತೆಱಿದಿರೆ ಪೇಟ್ಟಿನಿಸು ಕನ್ನಡದೊಳ್ (ಕವಿರಾ. ೨-೮೬). [ಸಂ.]

**ಪೂರ್ವಶೈವ** (ನಾ). ಶೈವದ ಪ್ರಭೇದಗಳಲ್ಲಿ ಒಂದು : ಶುದ್ಧಶೈವದ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವದ ಮನ್ನಣೆಯ ಮಾಡದೆ ವೀರಶೈವವನಾಧರಿಸದೆ ಆದಿಶೈವವನನುಕರಿಸದೆ ಭೇದಿಸಬಾರದ ಲಿಂಗ ಕರದಲ್ಲಿದ್ದು ಕಂಗಳಲ್ಲಿ ನಿಂದು ಮನದಲ್ಲಿ ಸಿಂಹಾಸನಂಗೈದು ಸಕಲೇಂದ್ರಿಯವ ಮಱೆದು ಕಾಯದ ಜೀವದ ಹೊಲಿಗೆಯ ಬನ್ನಣದಿಂ ಬಿಟ್ಟು ದೇಹೊಂದ ಅಳಿಕಿಲ್ಲವಾಗಿ ಬಯಕೆ ಅಱತು ಭವ ಹಿಂಗಿ ತಾನೆನ್ನದೆ ಇದಿರೆನ್ನದೆ ಏನುವೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ (ಷಟ್‌ಸ್ಥ. ೦೨೬-೪೫೦); ಶುದ್ಧ ಮಿಶ್ರ ಸಂಕೀರ್ಣ ಪೂರ್ವಮಾರ್ಗಶೈವಂಗಳಲ್ಲಿ ಕರ್ಮಭಕ್ತಿಯಲ್ಲದೆ ನಿರ್ವಾಣಸದ್ಭಕ್ತಿ ಎಲ್ಲಿಯದೋ (ಅವಕ. ಮು. ೯೩-೭೭). [ಸಂ.]

**ಪೂರ್ವಶಾಸನ** (ನಾ). ಹಿಂದಿನ ಕಾಲದ ರಾಜಾಜ್ಞೆ ; ಪೂರ್ವಕಾಲೀನ ಶಾಸನ : [ಪೆ]ರ್ಗ್ಗಡೆ ವಾಸುದೇವಯ್ಯನುಂ ಮಲ್ಲಯ್ಯನುಂ ಪೂರ್ವ್ವಶಾಸನಮರ್ಯ್ಯಾದೆ ಕೊಟ್ಟಿರ್ದ್ದರೆಂದು ಬಿನ್ನಪಂಗೆಯ್ಯಲು (ಕ್ಕಾಶ. XX. ೬೦-೨೦; 1088). [<ಸಂ. ಪೂರ್ವಶಾಸನ]

**ಪೂರ್ವಸಿದ್ಧತೆ** (ನಾ). ಮುಂಚಿತವಾಗಿ ಮಾಡಿಕೊಳ್ಳಬೇಕಾದ ಏರ್ಪಾಡು,-ತಯಾರಿ : ಈ ಪೂರ್ವಸಿದ್ಧತೆ ಪ್ರದರ್ಶಕರ ಕಡೆಯಿಂದ, ಅದಕ್ಕಿಂತ ಹೆಚ್ಚಾಗಿ ಪ್ರೇಕ್ಷಕರ ಕಡೆಯಿಂದ ಆದಾಗ ಮಾತ್ರ ಆ ಪ್ರದರ್ಶನ ಸಂಪೂರ್ಣ ಫಲದಾಯಿ (ರಾಕುಮಾ. ೬೦). [ಸಂ. ಪೂರ್ವಸಿದ್ಧತಾ]

**ಪೂರ್ವಸಿದ್ಧಾಯ** (ನಾ). ಒಂದು ಬಗೆಯ ತೆರಿಗೆ : ರುದ್ರದೇವಂ ಪತಿ ಬೆಸಸಿದ ಧರ್ಮೋತ್ಕರ್ಷಿಯಿಂ ಪೂರ್ವಸಿದ್ಧಾಯದೊಳೊಲ್ದಿಯ್ಯತ್ತು ಪೊಂನಂ ನಿಯ[ಮ]ದ ಪುರಾಣಕ್ಕೆ ಭೋಗಕ್ಕೆಂನು . . . ಪೂಣ್ಣು . . . ಧಾರಾ

[ಪೂ]ರ್ವ್ವಗೆಲ ಮಾಡಿ ಕೊಟ್ಟರ್ (ಕ.ಶಾ. V. ೨೪-೪೦; ೧೧೨೬). [ಸಂ.]

**ಪೂರ್ವಸುರ** (ನಾ). = ಪೂರ್ವದೇವ ೨ : "ಸುರವೃಂದಗಳು . . . ಅಸುರರು ಪೂರ್ವಸುರರೆನಲು ದೈತ್ಯರು" (ಕುಂಗಾ. ೩-೯). [ಸಂ.]

**ಪೂರ್ವಸೂಚನೆ** (ನಾ). ೧. ಮುಂಚಿತವಾಗಿ ಸೂಚಿಸುವುದು,—ತಿಳಿಸುವುದು; ಮುನ್ಸೂಚನೆ : 'ಪೂರ್ವಸೂಚನೆಗೆಯ್' ನೋ. ೨. ಮುಂದೆ ಒದಗಲಿರುವ ಘಟನೆಗಳ ವಿಚಾರವಾಗಿ ಮುಂಚೆಯೇ ತಿಳಿದು ಬರುವ ಕುರುಹು : ಅಪಘಾತದ ಪೂರ್ವಸೂಚನೆ ಸಿಕ್ಕಿದ ತಕ್ಷಣ ವಿಮಾನಚಾಲಕ ಪ್ರಯಾಣಿಕರಿಗೆಲ್ಲ ಎಚ್ಚರಿಕೆಯನ್ನು ನೀಡಿದನು (ಆಡು). [ಸಂ. ಪೂರ್ವಸೂಚನ]

**ಪೂರ್ವಸೂಚನೆಗೆಯ್** (ಕ್ರಿ). ಮುಂಚಿತವಾಗಿ ತಿಳಿಸು; ಮುನ್ಸೂಚನೆ ಕೊಡು : ಇದೆಲ್ಲಮಂ ದೇವರ್ಗೆ ಪೂರ್ವಸೂಚನೆಗೆಯ್ದು ಬಟುಕೊಡ ಗೊಂಡು ಬರ್ಪೆಂ (ಜಂಜೆಂ. ೩೩.೦೪). [ಪೂರ್ವಸೂಚನೆ + ಕೆಯ್$_1$]

**ಪೂರ್ವಸ್ಥಿತಿ** (ನಾ). ಮೊದಲು ಇದ್ದ ರೀತಿ; ಮೊದಲಿನ ಕ್ರಮ : ಅವಾಸಿತವಿಜಯಕಟಕನಾಗಿ ಪೂರ್ವಸ್ಥಿತಿಯೊಳ್ ಪೋಗಿ (ಅಂತಾ. ೦೩-೩ ಪ). [ಸಂ.]

**ಪೂರ್ವಸ್ಮರಣ** (ನಾ). ಹಿಂದಿನದನ್ನು ನೆನೆಸಿಕೊಳ್ಳುವುದು; ಹಿಂದಾದುದನ್ನು ನೆನೆಯುವುದು : ಅ ಎಂಬುದು ಪೂರ್ವಸ್ಮರಣದೊಳಂ ಪ್ರಸಿದ್ಧಿಯೊಳವುಂಟು (ಶಬ್ದ. ೦೬೯ ವೃತ್ತಿ). [ಸಂ.]

**ಪೂರ್ವಸ್ಮರಣೆ** (ನಾ). ಹಿಂದಿನ ಕಾಲದ ನೆನಪು : ಸ್ವಾಮಿಯಡಿಗೆ ಶಿರ ಬಾಗಿ ಬಂದೆವಿದೊ ಎಲ್ಲ ಸೀಮೆಯಿಂದ, ಅರಿವು_ಮರೆವು ಕಣ್ತೆರೆದು ಕರೆದ ಆ ಪೂರ್ವಸ್ಮರಣೆಯಿಂದ (ಕಂಯು. ೩೪-೨). [ಸಂ. ಪೂರ್ವಸ್ಮರಣ]

**ಪೂರ್ವಸ್ವರ** (ನಾ). [ವ್ಯಾಕ] ಸಂಧಿ ಮಾಡಬೇಕಾದಾಗ ಸಂಧಿಸ್ಥಾನದಲ್ಲಿರುವ ಎರಡುಸ್ವರಗಳಲ್ಲಿ ಮೊದಲು ಇರುವ ಸ್ವರ : ಸ್ವರವಿರೆ ಪರದೊಳ್ ಪೂರ್ವಸ್ವರಲೋಪಂ ಕೃತವಿಭಕ್ತಿಗಕ್ಕುಂ ಪ್ರಕೃತಿಸ್ವರದೊಳುಂದೇ ದಂತಕ್ಕುಚ್ಚರಿಸುವರವಿಸಷ್ಟನಾಮಭಾಗಸ್ಥಿತಿಯೊಳ್ (ಶಾವ್ಯಾಕ ೩೨); ವಿಧು ಇದು, ಕವಿ ಅರ್ ಎಂಬಿವನ್ನು ವಿಧಿದು, ಕವಾರ್ ಎಂದು ಪೂರ್ವಸ್ವರಕ್ಕೆ ಲೋಪಮಾಡಿ ಕೂಡಿಸಿದರೆ ಅರ್ಥಕ್ಕೆ ಹಾನಿ ಬರುತ್ತದೆ (ಕಬಶ. ೭). [ಸಂ.]

**ಪೂರ್ವಹಗೆ** (ನಾ). ಮೊದಲಿನ ದ್ವೇಷ; ಮುಂಚಿನ ವೈರ : ಅಂತರಿಸದೆ ಕೊಲ್ಲಿದೆಂದು ಕಳುಹಿದ ವಿಂತವನಿಗೆ ಪೂರ್ವಹಗೆಯೊ (ಚನ್ನರಾ. ೬-೪). [ಪೂರ್ವ + ಹಗೆ$_2$ (<ಪಗೆ)]

**ಪೂರ್ವಾಂಗ** (ನಾ). ೧. ಮೊದಲನೆಯ ಭಾಗ; ಪೂರ್ವಾರ್ಧ : ನಾಟ್ಯಶಾಸ್ತ್ರದ ಪ್ರಕಾರ ತಾಂಡವವು . . . ನಾಟಕದ ಪೂರ್ವಾಂಗವಾಗಿ ಅಭಿನಯಿಸಲ್ಪಡುತ್ತಿತ್ತು (ಶಾರದ. ೩೩೨). ೨. ಅಂಗೈ ಮತ್ತು ಮಣಿಕಟ್ಟಿನ ಮಧ್ಯಭಾಗ : ಸೆಳೆಯುತ್ತಿರ್ಪಂತರಿಂ ಮೌರ್ವಿಯ ಕರಿಸತೆವೆತ್ತಿರ್ಪ ಪೂರ್ವಾಂಗದಿಂ ಕಂಗೊಳಿಸುತ್ತುಂ (ಶಾಕುಂತ. ೨೨-೩೬). ೩. [ಜೈನ] ಎಂಬತ್ತುನಾಲ್ಕುಲಕ್ಷ ವರ್ಷಗಳ ಅವಧಿ : ರಾಜ್ಯದೊಳ್ನಿಂದುಮಯ್ದು ಲಕ್ಕೆಯುಮಾನೂಱು ಪೂರ್ವವಿಪ್ಪತ್ತುನಾಲ್ಕುಪೂರ್ವಾಂಗಮುಂ ರಾಜ್ಯಕಾಲಂ ಸಲೆ (ಶಾಪುಂತ. ೦೨೨); ಎಂಬತ್ತುನಾಲ್ಕುಲಕ್ಷವರುಷಗಳಾದರೆ ಪೊಂದು ಪೂರ್ವಾಂಗವೆಂದು ಪೇಳುವರು (ಭರತೇ. ೦೩). [ಸಂ.]

**ಪೂರ್ವಾಚಲ, ಪೂರ್ವಾಚಳ** (ನಾ). = ಪೂರ್ವಗಿರಿ : "ಮೂಡವೆಟ್ಟೆಂದು ಪೂರ್ವಾಚಲಂ" (ಕಶಾ. ೪೯-೩೦); ಬೀಡುಗೊಂಡಿರ್ದ ಕತ್ತಲೆಯು ಪಾಳೆಯ ಮೆತ್ತಲೋಡಿದುದೋ ನೋಡಿದಪೆನೆಂದು ಪೂರ್ವಾಚಲದ ಕೋಡುಗಲ್ಲಂ ಪತ್ತುವಂತೆ ಮೇಲ್ವಿದಂ ಪ್ರಭೆವೊಳೌನ್ನತ್ಯನಾದಿತ್ಯನು (ಕೃಚಂಭಾ. ೨-೬೩). **ಪೂರ್ವಾಚಳ** : "ಪೂರ್ವಾಚಳಮೆ ಮೂಡವೆಟ್ಟೆಂದಕ್ಕುಂ" (ಕಶಂ. ೪೯); ಮಣಿಮಚಿತಾಸನದೊಳ್ ಮಾಸಿಗಣಪತಿಯುಂ ನೃಪತಿ ತಂದು ಕುಳ್ಳಿರಿಸೆ ನಭೋಮಣಿ ಪೂರ್ವಾಚಳಚೂಡಾಮಣಿಯೆನಿಸಿದನೆನೆ ಪೊದಬ್ದುದಪಘನಕಿರಣಂ (ಸುಕುಮಾ. ೦೪-೩); ಸುರುಚಿರ ಪೂರ್ವಾಚಳದೊಳ್ ಗುರುತರ ಪೂರ್ಣೇಂದುವುದಯಿಪಂತಿರೆ ರಾತ್ರೀಶ್ವರವದನೆ ಗಿರಿಜೆ ಭರದಿಂ ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ (ಗಿರಿಕ. ೪-೪೪). [ಸಂ.]

**ಪೂರ್ವಾಚಳ** 'ಪೂರ್ವಾಚಲ' ನೋ.

**ಪೂರ್ವಾಚಾರ** (ನಾ). ಹಿಂದಿನ ಕಾಲದಿಂದ ಬಂದ ನಡವಳಿಕೆ; ಸಂಪ್ರದಾಯ : ಶ್ರೀಪ್ರಭುವಮಾಣ ಪರಮಸುಭಗನ್ . . . ಪೂರ್ವ್ವಾಚಾರದಾ ಕೆಱೆಯಪ್ಪ ಈಯಿಮೆನ್ದೊಡೆ ಪೊನ್ನೆಱನುಂ ಚೋಳಮಹಾರಾಜನುಂ ಮೂವರಿವ್ವುಪ್ಪೂರ್ವ್ವರಾನ್ನೊನ್ನಾ × ಶ್ರೀಧನಪತಿಆಚಾರಿಯಾ (ಎಕ. XVI. ಮಧ್ಯಗಿ. ೦೦೬-೩ : ೩೬೪ ೬೪); ವಿಷ್ಣುಖಂಡದ ಜನರು ಪೂರ್ವಾಚಾರಗಳಲ್ಲಿ ಬಹುಪ್ರೀತಿಯುಳ್ಳವರಾಗಿದ್ದಾರೆ (ಭೂಗೋಳ. ೨೨). [ಸಂ.]

**ಪೂರ್ವಾಚಾರ್ಯ** (ನಾ). ಹಿಂದಿನ ಕಾಲದ ವಿದ್ವಾಂಸ,—ಪಂಡಿತ : ಪೂರ್ವಾಚಾರ್ಯರ್ ದೇಸಿಯನೆ ನಿಱಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ (ಛಂದೋ. ೦-೬೩); ಹದಿಮೂರುವಿಧವಾದ ಸನ್ನಿಪಾತಗಳಿಗೂ ಆಯುಃಪ್ರಮಾಣಂಗಳ ಅವಧಿಯು . . . ಪೂರ್ವಾಚಾರ್ಯರಿಂದ ಪೇಳಲ್ಪಟ್ಟಿರುವುದು (ಸಕಸ್ವ. ೦೬೯). [ಸಂ.]

**ಪೂರ್ವಾದತ್ತ** (ಗು). ಹಿಂದೆ ಗಳಿಸಿಕೊಂಡ,—ಸಂಗ್ರಹಿಸಿದ; ಪೂರ್ವಸಂಚಿತವಾದ : ಜಲಧಿಯಲಿ ಫಣಿವದನದಲಿ ರಿಪುಬಲದ ಮುಖದಲಿ ಸಿಡಿಲ ಹೊಯ್ಲಲಿ . . . ಸಿಲುಕಿದಡೆ ಬಿಡಿಸುವವಲೇ ಪ್ರತಿಫಲಿತ ಪೂರ್ವಾದತ್ತಪುಣ್ಯಾವಳಿಗಳು (ಕುವ್ಯಾಗ. ೪-೨೩). [ಸಂ.]

**ಪೂರ್ವಾದ್ರಿ** (ನಾ). = ಪೂರ್ವಗಿರಿ : ಪೂರ್ವಾದ್ರಿಯೊಳಪರಾದ್ರಿಯ ನಿರ್ವಂದದೆ ತಾಗುವಂತೆ ತಾಗಿದುವು ಗಜಂ (ಶಾರ್ಙ್ಗ. ೩-೦೨೬). [ಸಂ.]

**ಪೂರ್ವಾನುಭವ** (ನಾ). ಹಿಂದೆ ಅನುಭವಿಸಿದುದು : ಇಂದ್ರಿಯ ಮೂಲಕವಾಗಿ ಅಥವಾ ಮಾನಸಿಕವಾಗಿ ಈ ಮುಂಚೆ ಪಡೆದ ಅನುಭವ : ಮತ್ತೊರ್ವಂ ಪೂರ್ವಾನುಭವಮಂ ನೆನೆದು . . . ಕೆಳದಿಯೊಳ್ ನುಡಿದಂ (ಶಂದ್ರಶ್ರು. ೬-೭೪ ವ). [ಸಂ.]

**ಪೂರ್ವಾನುರಾಗ** (ನಾ). [ಕಾವ್ಯಮೀ] ಪೂರ್ವಾನುರಾಗ, ಮಾನ, ಪ್ರವಾಸ ಮತ್ತು ಕರುಣಾತ್ಮಕ ಎಂಬ ನಾಲ್ಕು ವಿಪ್ರಲಂಭಶೃಂಗಾರ ಪ್ರಭೇದಗಳಲ್ಲಿ ಒಂದು; ಪ್ರಿಯೆ, ಪ್ರಿಯಕರರು ಒಂದುಗೂಡುವ ಉತ್ಸುಕತೆಯಲ್ಲಿದ್ದರೂ ಅದು ಸಾಧ್ಯವಾಗದೆ ಉಂಟಾಗುವ ಮರುಕ : ಸಮಸಂದು ನೋಡಿ ಮೋಹ್ನಾಡಿದು ಮೋಹ್ಮನಂಗೊಂಡು ಕೂರ್ತರ್ ಕೂಟಂ ತನ್ನೊಳ್ ಸಮನಿಸದೆ ಮಱುಗುವಾ ಮಱುಕಮುಮದು ಪೂರ್ವಾನುರಾಗಮೆನೆ ಪೆಸರ್ವಡೆಗುಂ (ಶೃಂಗಾರ. ೪-೪೦); ಪೂರ್ವಾನುರಾಗವೆಂಬುದಭಿಲಾಷೆ ಅದು ದೈವ ಪಾರವಶ್ಯವೆಂದಿರ್ಪೆಱಿಂ (ಚಿಕ. ೦-೩೪ ಟೀ). [ಸಂ.]

**ಪೂರ್ವಾಭಾದ್ರ** (ನಾ). ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಇಪ್ಪತ್ತೈದನೆಯದು : ಪೂರ್ವಾಭಾದ್ರಾ ಅಜಪಾದ ಪೂರ್ವ ಪ್ರೋಷ್ಠಪದ ಯಿವು ಪೂರ್ವಾಭಾದ್ರನಕ್ಷತ್ರಕ್ಕೆ ಪೆಸರು (ಅಸ್ಯರ. ೬೩-೭). [ಸಂ.]

**ಪೂರ್ವಾಭಾದ್ರಪದೆ** (ನಾ). = ಪೂರ್ವಾಭಾದ್ರ : ಪುಟ್ಟೆಯುತ್ತರೆ ಶತವಿಶಾಖೆ ಸಂದ ಪೂರ್ವಾಭಾದ್ರಪದೆ ಮೂಜಹವು (ಶುಂಗಾ. ೦೪.೨). [ಸಂ. ಪೂರ್ವಾಭಾದ್ರಪದಾ]

**ಪೂರ್ವಾಭಾದ್ರೆ** (ನಾ). = ಪೂರ್ವಾಭಾದ್ರ : ಅಶ್ವಿನಿ ಭರಣಿ . . . ಪೂರ್ವಾಭಾದ್ರೆ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳು (ಶಬ್ದಮ. ೨೩೬). [ಸಂ. ಪೂರ್ವಾಭಾದ್ರ]

**ಪೂರ್ವಾಭಿಮುಖಿ** (ನಾ). ೧. ಮೂಡಣದಿಕ್ಕಿಗೆ ಎದುರಾಗಿ ಇರುವವನು; ಪೂರ್ವದಿಕ್ಕಿಗೆ ಮುಖ ಮಾಡಿದವನು : ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ

(ಆಂಕ್ಲ. ೧೬-೯೦ ವ); ಪೂರ್ವಾಭಿಮುಖಂ ಜಿನಶಿಶು . . . ಕನಕೋರ್ವೀಧರ ಶಿಖರವಂತೆ ಇಂಗೆ ಸೊಗಯಿಸಿದಂ (ಶಾಂತಿ. ೦೪-೧೩) ೨. ಪೂರ್ವ ದಿಕ್ಕಿಗೆ ಎದುರಾಗಿರುವುದು : ವಿಂಧ್ಯಪರ್ವತಗಳು . . . ನರ್ಮದಾ ನದಿಯು ಉತ್ತರದಲ್ಲಿ ಪೂರ್ವಾಭಿಮುಖವಾಗಿ ಹಾಯುತ್ತವೆ (ಭೂಗೋಳ. ೩೧). [ಸಂ.]

**ಪೂರ್ವಾಮರ** (ನಾ). = ಪೂರ್ವದೇವ ೨ : ಪೂರ್ವಾಮರರೊಳಾ ದುರ್ದಾ ಧುರ ಮಹಾದ್ಭುತಮಾಗಿ (ಕೌಶಿಕ. ೦-೩೬); ಮಥಿಯಿಸಿದೊಡಂ ತಕ್ಷೀರ್ಧಿ ಪೂರ್ವಾಮರಾಮರರ ಬಲ್ಪಾವ ಓಡಿಸುತುಚ್ಚೈಃಶ್ರವಮೆನಿಪ್ಪ ಹಯಮ ಸರ್ವಬಾಧೆಯೊಳಿತ್ತಂ (ಶಾಂತೀಶ. ೬-೦೨). [ಸಂ.]

**ಪೂರ್ವಾಯ** (ನಾ). = ಪೂರ್ಬಾಯಂ : ರಾಮನಾಥದೇವಂಗೆ ಆಗುವ ಚಿಕ್ಕ ಕೊಡಲಿಯ ಹನಸವಾಡಿಯ ಪೂರ್ವ್ವಾಯ ಅಪೂರ್ವ್ವಾಯ ಅಳಿಯನ್ಯಾಯ ಯೇನುಯಿಲ್ಲೆಂದು ಧಾರಾಪೂರ್ವ್ವಕ ಮಾಡಿದ ಧರ್ಮ್ಮ (ಎಕ. VII. ಶಿಮಮೊ. ೬೦-೩ ; 1313); ರಾಮದೇವರಂಗಭೋಗಕ್ಕೆ ಕೊಟ್ಟ ಧರ್ಮವಿದಕೆ ಪೂರ್ವ್ವಾಯವಪೂರ್ವ್ವಾಯಯೊಂದಿಲ್ಲ (ಎಕ. VII. ಶಿಮಮೊ. ೬೯-೨೬; 1320). [ಸಂ.]

**ಪೂರ್ವಾರ್ಜಿತ** (ಗು). ೧. ಹಿಂದೆ ಗಳಿಸಿದ ; ಪೂರ್ವಜನ್ಮದಲ್ಲಿ ಸಂಪಾದಿಸಿದ : ಯಥಾಕಾಲಾನುಭವನ ತಪೋನಿಮಿತ್ತಮಾಗಿ ಸವಿಪಾಕಾವಿಪಾಕ ರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು (ಆದಿ. ೧೧-೬೩ ವ) ; ಗಣಪತಿಯಷ್ಟು ನಿಷ್ಠೆಯಿಂದ ಅಷ್ಟೊಂದು ದೀರ್ಘಕಾಲ ಸಾಧನೆಮಾಡಿದ ಒಬ್ಬನನ್ನೂ ಅವರು ಕಂಡಿರಲಿಲ್ಲ. ಅದಕ್ಕೆ ಪೂರ್ವಾರ್ಜಿತ ಪುಣ್ಯವಿಶೇಷ ಬೇಡವೆ? (ಹೊಸ್ಲಿ. ೩೮). ೨. ಹಿರಿಯರು ಗಳಿಸಿ ಕೊಟ್ಟ; ಪೂರ್ವಜರಿಂದ ಸಾಗಿ ಬಂದ : ಅವರಿಗೆ ಪೂರ್ವಾರ್ಜಿತ ಆಸ್ತಿ ಏನೂ ಇರಲಿಲ್ಲ. ಸ್ವಂತ ಪರಿಶ್ರಮದಿಂದಲೇ ಅವರು ಮುಂದೆ ಬಂದರು (ಜೀವಿ). (ನಾ). ೩. ಹಿಂದೆ ಗಳಿಸಿದುದು ; ಪೂರ್ವಸಂಚಿತವಾದದಂ : ಸಮ್ಯಗ್ದರ್ಶನ ಜ್ಞಾನಚಾರಿತ್ರವಿಷಯಮಪ್ಪಖಿಳ . . . ಅದೆಂತೋ ಪೂರ್ವಾರ್ಜಿತಮಪ್ಪ ಮಹಾಸುಕೃತವಿಶೇಷದಿಂ ಪ್ರಾಪ್ತಮಾದುದು (ಶಬ್ದಾನು. ೦೪೬-೨೬). ೪. (ಆಲಂ) ಹಣೆಬರಹ : ಮಣೆಯೊಳಂ ಪೂರ್ವಾರ್ಜಿತಂ ಹಾಗಿರಲ್ ಕೊಲನೇ ಕ್ಷುದ್ರ ಸಮರ್ಥನಂ (ಸೋಮೇಶ. ೩೦). [ಸಂ.]

**ಪೂರ್ವಾರ್ಣವ** (ನಾ). ಮೂಡಣ ಕಡಲು ; ಪೂರ್ವಸಮುದ್ರ : ಪೂರ್ವಾರ್ಣವಮಂ . . . ನೋಡಿದಂ ಚಕ್ರನಾಥಂ (ಆದಿ. ೦೨-೬೦). [ಸಂ.]

**ಪೂರ್ವಾರ್ಧ** (ನಾ). ಮೊದಲನೆಯ ಅರ್ಧಭಾಗ : ಕಂದದ ಪೂರ್ವಾರ್ಧದೊಳನು ಸಂದಿಸಲಾ ರ್ಯಾಪರಾರ್ಧಮದನುಕ್ರಮದಿಂದೊಂದಿರ್ದೊಡೆ ಸಂಕೀರ್ಣಕಂ (ಛಂದೋಂಬು. ೪-೨೩೪) ; ಈ ಶತಮಾನದ ಪೂರ್ವಾರ್ಧಕ್ಕಿಂತಲೂ ಉತ್ತರಾರ್ಧದಲ್ಲಿ ಭಾಷಾವಿಜ್ಞಾನದ ದೃಷ್ಟಿಯಿಂದ. . .ಒಳ್ಳೆಯ ಕೆಲಸ ನಡೆಯುತ್ತಿದೆ (ದ್ರಾವಿಡ. ೦೩೨). [ಸಂ.]

**ಪೂರ್ವಾರ್ಧಗೋಳ** (ನಾ). ಭೂಮಂಡಲದ ಪೂರ್ವಭಾಗ : ಪಶ್ಚಿಮಾರ್ಧಗೋಳದಲ್ಲಿರುವ ಭೂಮಿಯ ಎರಡರಷ್ಟಕ್ಕಿಂತಲೂ ಪೂರ್ವಾರ್ಧಗೋಳದಲ್ಲಿರುವ ಭೂಮಿಯು ಹೆಚ್ಚಾಗಿದೆ (ಭೂಗೋಳ. ೦೩). [ಸಂ. ಪೂರ್ವಾರ್ಧಗೋಲ]

**ಪೂರ್ವಾಶ್ರಮ** (ನಾ). (ಸಂನ್ಯಾಸಕ್ಕೆ) ಮುಂಚಿನ ಆಶ್ರಮ : ಬ್ರಹ್ಮಚರ್ಯ ಅಥವಾ ಗೃಹಸ್ಥಾಶ್ರಮ : ಶೈವಪಂಥೀಯಸಂನ್ಯಾಸಿಗಳು ತಮ್ಮ ಪೂರ್ವಾಶ್ರಮದ ಮನೆಯನ್ನು ಅಪರಿಚಿತಸ್ಥಳವೆಂದು ತಿಳಿಯುತ್ತಾರೆ (ಆಶ್ರಮ. ೨೪). [ಸಂ.]

**ಪೂರ್ವಾಶ್ರಯ** (ನಾ). ಹಿಂದಿನ ಇರವು; ಮೊದಲಿನ ಅಸ್ತಿತ್ವ : ಗುರುಕಾರುಣ್ಯವ ಹಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬಿರಸಿದರೆ ಗುರುದ್ರೋಹ ಲಿಂಗದ್ರೋಹ ಜಂಗಮದ್ರೋಹ ಆಚಾರದ್ರೋಹ ಪ್ರಸಾದದ್ರೋಹ (ಬಸವ. ೬೬೬): ಇಂತಪ್ಪ ಪದಾರ್ಥದ ಪೂರ್ವಾಶ್ರಯವನು ಶಿವಮಂತ್ರ ಶ್ರೀವಿಭೂತಿಯಿಂದೆ ಕಳೆದು ಶುದ್ಧಸಂಸ್ಕಾರವೆನಿಸಿ . . . ಶಿವಲಿಂಗಕ್ಕೆ ಅರ್ಪಿಸಿದಲ್ಲಿ ಶಿವಪ್ರಸಾದವೆನಿಸಿತ್ತು (ಚಿಕ್ಕಣ್ಣ. ೦೩೨-೨೪). [ಸಂ.]

**ಪೂರ್ವಾಷಾಢ** (ನಾ). ಇಪ್ಪತ್ತೇಳುನಕ್ಷತ್ರಗಳಲ್ಲಿ ಇಪ್ಪತ್ತನೆಯದಂ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಆರ್ದ್ರೆ ಪೂರ್ವಾಷಾಢ . . . ಮಖೆಯೆಂಬುವೇ ಕ್ರಮದಿಂದ ಷಡ್ಜಾದಿ ಸ್ವರೇಗಳ ಜನ್ಮನಕ್ಷತ್ರಂಗಳು (ಶಿವತ. ೨೪೦). [ಸಂ. ಪೂರ್ವಾಷಾಢಾ]

**ಪೂರ್ವಾಸನ** (ನಾ). ಮುಂದಿನ ಆಸನ; ಪೂರ್ವಪೀಠ : ಪೂರ್ವಾಸನದೊಳ್ ಪರೆಪಿಂ ಪಾರ್ವತಿಯುಂ ಪರ್ವವೇಚಿ ಬಿಜಯಂಗೆಯ್ಯುತ್ತೆ . . . ಪರ್ವತರಾಜಂ ಪುರಕ್ಕೆ ತಿರುಗಿದನಾಗಳ್ (ಗಿರಿಜಾ. ೩-೦೨೨); ಮಹಾದೇವಿ ಶರ್ವಾಣಿ ಸಮಸ್ತಾಧಿಕ್ಕೆ ಪೂರ್ವಾಸನದೊಳಿರೆ ಬರುತ್ತೊಕ್ಕದಂ ಶೈಳಪಂ (ಗಿರಿಜಾ. ೩.೦೦೩). [ಸಂ.]

**ಪೂರ್ವಾಹ್ಣ** (ನಾ). ಸೂರ್ಯೋದಯದಿಂದ ಮಧ್ಯಾಹ್ನದ ವರೆಗಿನ ಕಾಲ; ಹಗಲಿನ ಪೂರ್ವಾರ್ಧ : ಪೂರ್ವಾಹ್ಣದೊಳಾಂ ಕಂಡ ಬಲಾಕೆಯ ನುತ್ತೊಂದಿದಲ್ತು (ಶಕ್ತಿ. ೩೩); ಅಯೋಧೆಯ ಸೌಂದರ್ಯ ಪೂರ್ವಾಹ್ಣದ ಸೂರ್ಯರಶ್ಮಿಯಂತೆ (ಕಾಂತು. ೦೩೩). [ಸಂ.]

**ಪೂರ್ವಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಿ ರಾಗವು ರಕ್ತದ ಒತ್ತಡವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರ ಭಾರತದಲ್ಲಿದೆ (ಭಾರತದ. ೩೪೪); ಆನಂದಭೈರವಿ ಮುಗಿಯುವುದೇ ತಡ ನೇರವಾಗಿ ಪೂರ್ವಿರಾಗವನ್ನೆತ್ತಿಕೊಂಡ (ಸಂಧ್ಯಾರಾ. ೦೪೬). [ಸಂ. ಪೂರ್ವೀ]

**ಪೂರ್ವಿಕ** (ಗು). ೧. ಹಿಂದಿನ; ಪೂರ್ವಕಾಲದ ; ಪೂರ್ವಕಾಲದಿಂದ ಬಂದ. (ನಾ). ೨. ಹಿರಿಯ; ಪೂರ್ವಜ; ವಂಶದ ಹಿಂದಿನ ವ್ಯಕ್ತಿ : ನನ್ನ ಪೂರ್ವಿಕರನು ಕುರಿತೀಗ ಹೇಳುವೆ ತಿಳಿದಷ್ಟು ಸಂಗತಿಗಳನು (ಇಂಚರ. ೯-೦೦); ಮೊದಲು ಮಗುವಿನ ಪೂರ್ವಿಕರ ಇತಿಹಾಸವನ್ನು ಸಂಗ್ರಹಿಸಬೇಕು (ಶಿಶು. ೯೬). [ಸಂ.]

**ಪೂರ್ವಿಗ** 'ಪೂರ್ಬಿಗ' ನೋ.

**ಪೂರ್ವೀಕ** 'ಪೂರ್ಬಿಗ' ನೋ.

**ಪೂರ್ವೆ** (ನಾ). ೧. ಮೂಡಣ ದಿಕ್ಕು : "ಐಂದ್ರೀ, ಪೂರ್ವಾ, ಪ್ರಾಚೀ— ಈ ೩ ಮೂಡಣ ದೆಸೆ" (ಕರ್ಣಾಟ. ೦೬-೦೧೦). ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; ಪುಬ್ಬೆ ನಕ್ಷತ್ರ ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಭರಣಿ ಮಘ ಪೂರ್ವೆ ಕೃತ್ತಿಗೆ . . . ಎಂಬೆಟುಂ ವೈಶ್ವಾನರ ಮಂಡಳಮೆಂಬ ನಾಮಮಂ ತಳೆದಿರ್ಕುಂ (ಲೋಕೋಪ. ೯-೮೦); ಮಹಾ ಪೂರ್ವಾ ಉತ್ತರಾನಕ್ಷತ್ರಗಳ ಮಳೆಗೆ ಹತ್ತಿಯ ಬಿತ್ತಿಗೆಯಾಗುತ್ತದೆ (ಮುಂಗಾರು. ೪-೨೬). [ಸಂ. ಪೂರ್ವಾ]

**ಪೂರ್ವೇತರ** (ಗು). ಪಶ್ಚಿಮದ; ಪಡುವಣ ದಿಕ್ಕಿನ : ಘನಸಂಧ್ಯಾರಾಗತೀವ್ರಾನಲನೊಳೊಲವಿನಿಂ ಕಾಸಿ ತಿಗ್ಮಾಂಶುವೆಂದೆಂಬ ನವೀನ ಸ್ವರ್ಣಸಪಿಂಡಮಂ . . . ಪೂರ್ವೇತರಶರನಿಧಿಯೊಳ್ ಬಾಡೆಂದೋ ಜನಲ್ದಲ್ಲ ನಿಸರ್ಬೇಳ್ವುದೋ ಕಾಬೊಗೆಯೆನೆ ದೆಸೆದೀವಿತ್ತು ಘೋರಾಂಧಕಾರಂ (ರಾಜಶೇ. ೦೦-೯೪). [ಸಂ.]

**ಪೂರ್ವೇತಿಹಾಸ** (ನಾ). ಹಿಂದಿನ ಕಥೆ : ಪೂರ್ವಚರಿತ್ರೆ : ತುಸು ನೀಳವಾಗಿಯೆ ಮನದೊಳು ಮೂಡಿತು ಪೂರ್ವೇತಿಹಾಸದ ನೆಳಲು (ಅಂಚಾಕ. ೬೦-೯೯). [ಸಂ.]

**ಪೂರ್ವೋಕ್ತ** (ಗು). ೧. ಹಿಂದೆ ಹೇಳಿದ ; ಮೊದಲೆ ತಿಳಿಸಿದ,— ನಿರೂಪಿಸಿದ : ಆ ವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವೋಕ್ತ

ದೋಷಪಾಷಾಣಸಂಚೂರ್ಣಿತಪ್ರಾಶಿಯ್ಯೆ ಏನನೇತಱೊಳ್ ನಿಶ್ಚಯಿಸುವೈ (ಅಜಿತ. ೨-೧೦ ಪ); ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಾಟನಂಗೆಯ್ದು (ಶಾಂತಿ. ೧೦-೬೬ ಪ). (ನಾ). ೨. ಮಸುಂಚೆ ಹೇಳಿದುದು; ಮೊದಲು ನಿರೂಪಿತವಾದುದು: ವಿಶ್ವಸಾರೋತ್ತರಾಗ್ರನಿರ್ವಾಣಸೂತ್ರದಿಂದ ಪೂರ್ವೋಕ್ತಪ್ರವಹ ಕಾರ್ಯಂಗಳೊಳು ಶಬ್ದವೃತ್ತಿ ಕೋಜಾತ್ರನಿರ್ದಿದಲ್ಲಿ (ಶಬ್ದ.ಕೌ. ೩-೨-೩೪); ಎದುರುಗೋಡೆಯಲ್ಲಿ ಪೂರ್ವೋಕ್ತವಾದ ಕಿಟಕಿಗಳ ಮಧ್ಯೆ . . . ಗಡಿಯಾರವಿದೆ (ಶೀಹೊ. ೧). [ಸಂ.]

**ಪೂರ್ವೋದಿತ** (ಗು). =ಪೂರ್ವೋಕ್ತ ೧: ಪುನರುಕ್ತವೆಂಬುದಕ್ಕಂ ನೆನೆಯದೆ ಪೂರ್ವೋದಿತಾರ್ಥಪದದಪದ್ಭಶಿಗೊಂದಿನಿಕುಂ ವಿಶೇಷವಿಲ್ಲದೆ ಜನಿಯಿಸಿದ ಪದಾರ್ಥಂ (ಶಮ. ೦-೪೪). [ಸಂ.]

**ಪೂರ್ವೋಪಾರ್ಜಿತ** (ಗು). =ಪೂರ್ವಾರ್ಜಿತ ೧: ಅಂತವರ್ ಕರ್ಕಟಕೇಶರ್ವರಾಗಿ ಪುಟ್ಟಿ ಪೂರ್ವೋಪಾರ್ಜಿತಸುಕೃತಮಹೀರುಹನಿಶಾಕರನಿಜಾಂಗುಳಿನಿಸ್ಸಪದ್ಮುಗ್ಧಾಜ್ಯಧಾರೆಯು ಸವಿಯಂ ಸೇವಿಸಲೇಟ್ಟು ದವಸಂಗಳುಂ ಪೋಗೆಪೋಗೆ (ಶಾಂತಿ. ೬-೦೦೩ ಪ); ನೀಳನೆಂಬ ಮಾದಿಗಂಗಂ ಕೌಶಂಬಿಯೆಂಬ ಮಾದುಗಿಗಂ ಮಗಳಾಗಿ ಪೂರ್ವೋಪಾರ್ಜಿತ ಶುಭಾನು ಪೂರ್ವಿನಾಮಕರ್ಮೋರ್ವೀರುಹಫಲಪಾಕಫಳಮನನುಭವಿಸುತ್ತುಂ (ಸುಕುಮಾ. ೫-೨೧ ಪ). [ಸಂ.]

**ಪೂಲತೆ** (ನಾ). ಹೂವು ಬಿಟ್ಟಿರುವ ಬಳ್ಳಿ: ಪೂಲತೆ ಪೂಗಿಡು ಪೂಮರ ಸಾಲಿಂದಲ್ಲಲ್ಲಿ ಕೇಳಿಕೇಳಿಗಳೊಳ್ ಚೈತ್ರಾಲಯದ ದುಂದೆ ತುಂಬಿಯ ಜಾಳಂ ಮುದವೇಱಿ ಮೆಱೆವವಾ ಪುಮುಳದೊಳ್ (ಎಕ. VIII. ಸೊರಬ. ೨೩೦-೨೨ : 1408). [ಪೂ₂+ಲತೆ]

**ಪೂಲಿ₁**, ಹೂಲಿ₁ (ನಾ). ಒಂದು ಬಗೆಯ ಸಸ್ಯ: ಪೂಲಿಯ ವರ್ಣಂತೆ ಪೊಱಪಾಯ್ವ ಕೀವುಂ (ರಮಾಪ್ಪ. ೪-೬೩); ಅದಱ ಬಱಿವಿದಿದು ಬೆಳೆದ ಬಳ್ಳಿದು ಪಸಿಯ ಪುಲ್ಲ ಪೂಲಿಯ ಸಾನಲನಱಿದು ನಡೆವಾಗಳ್ (ಅಂಧಾಕ. ೬ ೪೨ ಪ). ಹೂಲಿ₁: "ಶಂಬಾ ಸುಖಿನಿ ಹೂಲಿಯಾಕ್ಸ್ಯಂ" (ಮುಂಗಡಾ. ೩೭-೨೦): ಪಂಪತಿಸಾಗರಂ ಓರಿದಾಗಿರೆ ಹೂಲಿಯ ಬೇರ ತ್ರಿಗುಣಸವಿಪ್ಮಯ ಪೊಸರೊಳ್ ಬೆರಸಿಟ್ಟು ಸ್ಕಂಧಮಂ ಕೂಡಿರೆ ಮೆಲುವುದು ದಿವ್ಯಯೋಗಮಿದು ಪರಿಹಾರಕಂ (ಕಲ್ಯಾಣ. ೪-೧೩); ಹೂಲಿ ಮಾಲಿನಿ ಬನ್ನಿ ಹೊನ್ನೆ . . . ನಾನಾಭೂಜದೊಗ್ಗಿನಿಂ ಕಾನನಂ ಕಣ್ಗೆಸೆದುದು (ಸೋಮಶ. ೩-೨). [ದೇ.॥ ತಮಿ. ಪೂಳ; ತೆಲು. ಪೂಲಿ./ಹಿಂ. ಪೂಲೀ, ಪೂಲಾ]

**ಪೂಲಿ₂**, ಹೂಲಿ₂ (ನಾ). ೧. ಒಬ್ಬಾತನ ಹೆಸರು: ಪೂಲಿಯೂ ಕೊಂಗಿಯೂ ಕಾಲಿಗಂಡನೂ ಇಟ್ಟು ಕೊಟ್ಟರ್ (ಎಕ. VIII. ಸೊರಬ. ೨೨-೦೦; ಸು. ೮೦೦). ೨. ಒಂದು ಊರಿನ ಹೆಸರು: ಅರವಡ್ಡಗಿಯರವರ್ದೂಲಿಯವರ್ಮಾಡಿದ ಸಿಲಾಶವರ್ಮ್ಮ (ಎಕ. VIII. ಸೊರಬ. ೨೨-೧೦ : ಸು. ೮೦೦); ಸ್ವಯಂಭುದೇವರ ದೇಗುಲದ ಪೂಲಿಯ ಪಣ್ಡಿತರ ವಿದ್ಯಾಶಿಷ್ಯಕೊರ್ಪ್ಪಿನ ವಕ್ಕಾಣಿಜೀಯರ ಶಿಷ್ಯರಪ್ಪ ಕಾಳಗ್ನಾನಿ ವಕ್ಕಾಣಿಜೀಯರ್ಗ್ಗೆ ಧಾರಾಪೂರ್ವ್ವಕಂ ವಿದ್ಯಾದಾನವಾಗಿ (ಕ್ವಾಇ. XI-1. ೯೮-೯೯: 1002); ಪಡುವಲು ಪೂಲಿಯ ದಶಕಂ ಒಡ[ಗಲು] ಪೆರ್ವಟ್ಟೆ (ಕ್ವಾಇ. XV. ೩೦-೪೪: 1142). ಹೂಲಿ₂: ೨. ಅಬ್ಬಗರ್ಭಸಹಿತಂ ಶ್ರೀಹೂಲಿಗೆಯ್ಯಂದು ನಿನ್ನಾರಾಧ್ಯಂ ಕರುಣಾಂಬರಸಾರ್ದ್ರಹೃದಯಂ ರಕ್ಷಿಕ್ಕೆ ಸಾಸಿರ್ವ್ವರಂ (ಕಾ. I. ೨೬-೩ ; 1162): ಆ ಸಿದ್ಧೇಶ್ವರರಾಚಾರ್ಯ್ಯ ಚಂದ್ರಭೂಷಣದೇವರು ಹೂಲಿಯ ಯಿಶ್ವರಭಟ್ಟರ ಕೈಯಿಂ ××× ಗೆ ಕೊಟ್ಟ . . . ಪೊಂದು (ಕಾಂ. ೩ ೬೭ ; ೪).

**ಪೂಲಿ₃** (ನಾ). ಒಂದು ಬಗೆಯ ಚಿನ್ನದ ನಾಣ್ಯ: (೪). 'ಕಾಲ್ಪೋಲಿ ರೂಪಾಯಿ' ಹೋ. [ದೇ.॥ ತೆಲು. ಪೂಲಿ]

**ಪೂಲಿಕುಂಟೆ**, ಹೂಲಿಕುಂಟೆ (ನಾ). ಒಂದು ಊರಿನ ಹೆಸರು: ಆಗ್ನೇಯದ ಎಲಂಟೆಕುಂಟೆಯಿನ್ದ ಪೂಲಿಕುಂಟೆಯಿನ್ದ ಪೆರ್ವಳದೊಳಗಣ ಚಾದುಪೂಲದಿನ್ದ ಓರಿಯೊಟ್ಟಿಯ ಕೈವರದೊಳ್ ಒನ್ದು ಪಾನ್ನಂ (ಎಕ. X (೪), ಶಿಕ್ಕ. ೦೦೩-೬೦ : ೩೩೦). ಹೂಲಿಕುಂಟೆ: ಹೂಲಿಕುಂಟೆ ಚೇದ ನಾಯಕನ ಮಗ ತಳಪಾಜಿ ದೊಡ್ಡಗೆ ಕಾಚಪ್ಪೊಡೆಯ ಆಗಳಿ ತಳವಾಱಿಕೆನೂ ಆಚಂದ್ರಾ(ಂ)ರ್ಕಸ್ಥಾಯಿಯಾಗಿ ಕೊಟ ಶಾಸನ (ಕ್ವಾಇ. IX-II. ೩೦೪-೧; ೪). [ಪೂಲಿ₂+ಕುಂಟೆ₃]

**ಪೂಲಿಕೆಱೆ** (ನಾ). ಒಂದು ಊರಿನ ಹೆಸರು: ಪೂಲಿಕೆಱೆ ಕಾದವರ್ ಕಣ್ಮೊರ್ವ್ದಿ (ತ್ರಿಪುರಾ. ೦೯೨೪, ೪೦-೦೮೦; 799). [ಪೂಲಿ₂+ಕೆಱೆ]

**ಪೂಲು** (ನಾ). ಸಂಕ; ಸೇತುವೆ; ಕಟ್ಟೆ: ಹರಿಹರದ ಹತ್ತಿರ ಈ ಹೊಳೆಗೆ ದೊಡ್ಡ ಪೂಲು ಕಟ್ಟಿದ್ದಾರೆ (ಕಥಾಗ. ೧೨); ಅಪ್ಪಣ್ಣನು ಲೋಕಾಪುರದ ಹಳ್ಳದ ಪೂಲಿನ ಮೇಲೆ ಬರುತ್ತಿದ್ದನು (ಕಿಂಕು.೦೩೬). [←ಪಾರ. ಹಿಂ. ಪುಲ್; ಮರಾ. ಪೂಲ]

**ಪೂವ** (ನಾ). ಒಂದು ಬಗೆಯ ಔಷಧೀಸಸ್ಯ: ರಜಾ ಕೃತಾಂಜಲಿ ಕಳವಿಗೆ ಬಜೆ ಗಂಧಕ ಪೂವಮೆಂಬಿವಂ ತವೆ ತಿಲತೈಲಜಲಾನ್ವಿತಘೃತದಿಂ ದಂಬುಜಾಕ್ಷಿಯರ್ಗೆಱೆಯೆ ನಸ್ಯಮಂ ಪೊಲೆ ಬರ್ಪಂ (ರೋಗಕೋಕ. ೯-೦೬೦). "ಸುಗಂಧಿ" (ರೋಗಕೋಕ. ಟೀಕು). [ದೇ.॥ ತಮಿ. ಮಲ. ಪೂವ—ಅರಗಿನ ಮರ]

**ಪೂವಂಡು** (ನಾ). ಹೂವಿನ ರಸ; ಮಕರಂದ; ಪುಷ್ಪರಸ: ಅಂಚೆ ಕೊಂಚೆ ಪೂವಂಡು ಗಳಿವಿಂದು ರಂಜಿಸುವ ಕಾದಲರಲರ್ ಸವಿಮಾವು ಪೂವು . . . ಸೊಂಪು ಪೆಂಪಿಂದೀ ಪುರೋಪವನಮೆಸೆದಿರ್ಪುದು (ಅಂಶು. ೧೧-೨೦); ಬರೆ ಪೀರಿ ಪೂವಂಡನಾರೆ ಸೊಕ್ಕಿ ಝೇಂಕರಿಪ ಮರಿದುಂಬಿಗಡಣದಿಂ . . . ಒಪ್ಪುವೊಂದುದ್ಯಾನಮಲ್ಲಿರ್ದುದು (ಶೀಶಮ. ೯-೩೬). [ಪೂ₂+ಉಂಡು₂]

**ಪೂವಕ್ಕಿ**, ಹೂವಕ್ಕಿ (ನಾ). ೧. ದುಂಬಿ; ಭ್ರಮರ: ಸುರುಳಿಊ ಪೂವಕ್ಕಿಗಳ ಬಳಗವೊ ಅರವೆಱೆಯೊ ಪಣೆಯೋ . . . ಪೇಳಲೇನೆಂದ (ಕಪತ್ಕು. ೦೩-೯೩); ತೀಡೆ ತಂಗಾಳಿ ಪರಿದಾಡೆ ಪೂವಕ್ಕಿ ದಾನಮಾಡೆ ವರಪುಟ್ಟ . . . ಆರ್ಯಮನನುದಿಸಿದಂ (ಗುರುಚಾ. ೩-೦೪). ಹೂವಕ್ಕಿ: ೨. ಒಂದು ಬಗೆಯ ಹಕ್ಕಿ: ಹೂವಕ್ಕಿಯ ಇಂಚರ ಟ್ರೂವ್ವಿಟ್ಟುವೊ (ಅಶೀ. ೩೦-೬). 'ಅಲರ್ವಕ್ಕಿ' ಪರಾ. [ಪೂ₂+ಪಕ್ಕಿ]

**ಪೂವಟ್ಟೆ** (ನಾ). ಹೂವುಗಳನ್ನು ಪಟ್ಟೆಗಳಂತೆ ಜೋಡಿಸಿ ರಚಿಸಿದ ಚಿತ್ರ,—ಹಸೆ: ಕತ್ತುರಿಯ ಸಾರವಣೆ ಬಡುಮುತ್ತಿನ ಕಡೆ ಕಂಪು ವಿಡುವ ಕಪ್ಪುರವುಡಿಯಿಂದೊತ್ತಿದ ಲತೆ ಪೂವಟ್ಟೆಯಿನೊತ್ತಿರಿಸಿದ ಬಂಧ ವೆಸೆಯೆ ದೇವಿಯ ಗೃಹದೊಳ್ (ಅಂಧಾಕ. ೦೦-೪). [ಪೂ₂+ಪಟ್ಟೆ₂]

**ಪೂವಡಿ** (ನಾ). ಹೂವಿನಂತೆ ಕೋಮಲವಾದ ಪಾದಗಳುಳ್ಳ ವ್ಯಕ್ತಿ: ಶಾಂಭವಲೋಕದ ಗಂಭೀರ ಪೂವಡಿ ಜಂಬೂದ್ವೀಪಕೆ ಕೆ ಪೋಪೆ (ಕೋಜಕ. ೦-೪೪). [ಪೂ₂+ಅಡಿ₁]

**ಪೂವಡಿಗ**, ಹುವ್ವಾಡಿಗ, ಹೂವಡಿಗ, ಹೂವಾಡಿಗ (ನಾ). ಹೂವುಗಳನ್ನು ಕಟ್ಟಿ ಮಾರುವವನು; ಹೂವಿನ ವ್ಯಾಪಾರಿ: "ಪೂವಡಿಗಂ ತಾಂ ಪುಲ್ಲವಡಿಗನೆಂದು ಕಿಳಿವುದು" (ಕಚುಶ.. ೦೦೦); ಅಡಿಗ ಪ್ರತ್ಯಯಕ್ಕೆ—ದೇವಡಿಗಂ, ಪಾವಡಿಗಂ, ಪೂವಡಿಗಂ (ಶಬ್ದಮ. ೨೦೩ ವೃತ್ತಿ); ಪೊಸ ಪೂವಡಿಗರ ಗರವಟಿಗರ ಕೊಲ್ಲಾಯ್ತರ ಸುಡಿಗಾಱರ ಮಾಸ್ತಾರರ ಸಂದಣಿ ಸಲೆ ಸೊಗಯಿಸಿತಾಗ (ಜಯು. ೦೨-೦೪); ಈ ಧರ್ಮವತೀ ಪಟ್ಟಣವು ಸೋಮಸೂರ್ಯವೀಥಿಗಳಿಂದಲೂ . . . ಪೂವಡಿಗರ ಸಾಲಿನಿಂದಲೂ ಒಪ್ಪುತ್ತಿರುವುದು (ಕೃಶಸ. ೬). ಹುವ್ವಾಡಿಗ: "ಮಾಲಾಕಾರಃ, ಮಾಲಿಕಃ—೨ ಹುವ್ವಾಡಿಗನ ಹೆಸರುಗಳು" (ಅಮ.ಶಿ. ೩೦೪); ಹುವ್ವಾಡಿಗರು ಬಣ್ಣಗಿತ್ತಿಯ ಕೆಲಸದವರು ಚಿಟ್ಟಗರು . . . ಮುಂಟ್ಟಿಗರು ಮೊದಲಾದ ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳು ಹಂಚಿ (ಕ್ವಾಗಂ೦.

೦೩೩-೬). **ಹೂವಡಿಗ** : ಪಡಪಿಗರು ಚಾಮರಿಗರಡೆಯಾಡುವವರು ಪೂವಡಿಗರು ಸುವಾರರರಸಾಳಗಳು . . . ಇಡಿಕಿಱಿದು ಸೊಗಯಿಸಿದರು (ಕೌಂಡಕ್ಷ. ೬ ೩೯); ಹೂವು ಯಾವ ತೋಟದಲ್ಲಿ ಬೆಳೆಯಿತು ಎಂಬ ಚಿಂತೆಯನ್ನು ಹುಟ್ಟಿಕೊಳ್ಳದೆ ರಸಿಕರು . . . ಮುಡಿದು ನಲಿಯಲಿ ಎಂಬ ಹೂವಡಿಗನ ಸಲವು ನನ್ನದು (೨೦ಶತಕ. VI. ೫೦೪). **ಪೂವಾಡಿಗ** : "ಹೂವಾಡಿಗನೆನಲ್ಕೆ ಹೂ ಮಾರುವವನು" (ಶಕಳ. ೧೧೩); ಹೂವಾಡಿಗನ ಪುತ್ರಿಯರಿಬ್ಬರು ಜಿನದೇವನ ಪೂಜ್ಯ್ಯಿ ಮೇಲೆ ಹೂವನರ್ಚಿಸಿದ ಫಲದಿ ಸ್ವರ್ಗದೀವ್ರಂಗೆ ದೇವಿಯರಾಗಿ ಪುಟ್ಟಿದರು (ದ್ವಾರಕಾ. ೧೦-೬೬೪).

[ಪೂ, + — ಅಡಿಗ,]

**ಪೂವಡಿಗವೆಣ್** (ನಾ). ಹೂವನ್ನು ಕಟ್ಟಿ ಮಾರಂವ ಹೆಣ್ಣು; ಹೂವಾಡಿಗಿತ್ತಿ : ಕುಸುಮದ ವಸರದೊಳೊಪ್ಪಿದರಲ್ಲಿ ಪೂವಡಿಗವೆಣ್ಣುಗಳವ ನೇವೇಳ್ವೆನು (ತ್ರಿ.ಖಂಡ. ೬-೧೬). [ಪೂವಡಿಗ + ಪೆಣ್]

**ಪೂವಡಿಗಿತಿ**, ಪೂವಾಡಗಿತ್ತಿ, ಹೂವಾಡಗಿತ್ತಿ (ನಾ). = ಪೂವಡಿಗವೆಣ್ : ಪೂವಡಿಗಿತಿ, ಪೂವಡಿಗಿತಿ, ವಾಲೆವಡಿಗಿತಿ (ಕರ್ಣಾ.ಶು. ೧೪೦ ಕ್ರಯೋ). **ಪೂವಾಡಗಿತ್ತಿ**: ವಾಸವರಾಯನ ಓರಿ ಹೂವು ಎಂದು ದೇಶವ ತಿರುಗಿದರು ಪೂವಾಡಗಿತ್ತೇರು (ಹಾಸಗ. ೨೦-೦೦). **ಹೂವಾಡಗಿತ್ತಿ** : ಬಾಗಿಲಲ್ಲಿ ಹೂವಾಡಗಿತ್ತಿಯೊಬ್ಬಳು ಸೊಗಸಾದ ಮಲ್ಲಿಗೆಮಾಲೆಗಳನ್ನು ಹಣೆದುಕೊಂಡು ಬಂದಳು (ಕಮಲ. ೦೩೦).

[ಪೂವಡಿಗ + — ಇತಿ, (< — ಇತ್ತಿ)]

**ಪೂವಡೆ** (ನಾ). ಒಂದು ಬಗೆಯ ವಸ್ತ್ರ (?) : ಕುಡುಗುಂ ಚಿತ್ರಾವಟು ಪಟ್ಟಾಯಿದವಟ್ಟೆ ಸುವರ್ಣಚೇಲವುಂ ತಿವಟಂ ಪೂವಡೆ ಕರ್ಮಂ ನೆರೆವಂ ವಣಾಲೆಡೆಯುಂ ರತ್ನಂಗವಸನವುಂ ಪಸನಾಂಗು (ಶಾಂತಿಪು. ೬-೦೦೦). [?]

**ಪೂವಣಿಗ** (ನಾ). = ಪೂವಡಿಗ : ಪೂವಣಿಗಂ ಪಟಿಗಂ (ಕರ್ಣಾ.ಶು. ೪೦೬ ಕ್ರಯೋ). [ಪೂ, + — ವಣಿಗ, (< — ವಳಿಗ,)]

**ಪೂವರಸೆ** (ನಾ). ಒಂದು ಬಗೆಯ ಕಣ್ಣಿನ ರೋಗ : ಅರಿವಾಳ ಪಟೋಲಂ . . . ತವುಸ್ಸಿವಿರಂ ಪೂವರ[ಹಾಕಂ ವರಿ]ಸೆ ಸರಿಯೆಂಬ ಪಲವಕ್ಷಿರೋಗವುಮಂ ಕಳೆಗುಪಂಜನಂ (ಅಕ್ಷಿಶಾ. ೦೩-೦೩). [?]

**ಪೂವಲಿ**, **ಪೂವಳಿ**, **ಹೂವಲಿ** (ನಾ). ೧. ರಂಗವಲ್ಲಿಯಂತೆ ರಚಿಸಿದ ಹೂವುಗಳ ಅಲಂಕಾರ : ಗಂಧಾಂಬುವೀದಾದ ಪೂವಲಿಯಿಂ ಚೆಲ್ವೆಸೆದಿರ್ದ ಬೀದಿಗಳ್ . . . ಚೆಲ್ವಸಗ್ಗಳಸುತ್ತಿತ್ತುವು ತತ್ಪುರಕ್ಕೆ ಸುರರಾಜಮಾಸ ಸಾಮ್ರಾಜ್ಯಮಂ (ಅಜಿತ. ೬-೦೦೩); ಇದಟ ತಪನೀಯಸಾನುಗಳ್ ಜಿನಸವನ ಗಂಧೋದಕಂಗಳಿಂ ಪೂವಲಿಯುಂ ಮುದದೆ ತಲೆಯೊಳ್ ಪೂತ್ತಂತಿರ್ದುವು (ಶಾಂತಿಪು. ೮೦-೬೭); ಸೊಗಯಿಪ ಸುಧಾಬ್ಧಿವೋಹದೊಳಿಂದು ಬಂದನ್ನವಾಗನು ದಟ್ಟಡಿಯಿಡುವ ರಾಜಾಂಗಣವಿಂದು . . . ಸಮ್ಮಾರ್ಜನೆಯ ಮಾಡಿ ಮಲ್ಲಿಗೆಯ ಪೂವಲಿಯ ಕೆದಱಿ ಗಗನವನಲಂಕರಿಸಿದಳೊಯಿಸಿಪ್ಪಂತೆ . . . ಮೃಗಧರಂ ಕಣ್ಗೆಸೆದುದು (ಹರಿಶ. ೩-೮೦). ೨. ರಂಗವಲ್ಲಿ : "ಕಡೆಯುವೆಂದುಂ, ಪೂವಲಿಯೆಂದುಂ ರಂಗವಲಿ" (ಶಬ್ದಾ. ೩೩-೧೦೪). ೩. ಹೂವುಗಳ ಮಳೆ ; ಪುಷ್ಪವೃಷ್ಟಿ : ಸುರವೈರಿಯ ವಧದಿನದೊಳ್ ಧರೆಗುದಿರ್ದುವು ತಾರಕಂಗಳೆನೆ ಪೂವಲಿ ಭಾಸುರವಾಯ್ತು ಮಲ್ಲರಂಗದೊಳ್ (ಜಗಸ. ೬-೪೦); ಮಲಯಾದ್ರಿಗಂಧವಹನರ್ತಕನು ತಳಿರೆಂಬ ಕರಗಳಿಂ ಪೂವಲಿಯ ಸಲೆ ಸೂಸಿ (ಶ್ರೀ.ಕಶಂ. ೦-೬೦); ಸೂಸಿ ಪೂವಲಿಯನಾಹ್ವಾನಗೈವಳಿದೊ ಈ ವಿಪಿನರಾಜೇಶ್ವರಿ (ಶ್ರೀ.ಶಾಕು. ೦೧೩-೨೬). **ಪೂವಳಿ** : ೧. ಸುರಹೆಯ ಕಾರಣೆಯ ಗಂಧೋದಕದ ಚಳೆಯಗಳ ಸೌರಭದ ಪೂವಳಿಗಳಲಿ ಶೃಂಗಾರಿಸಿದ ಬೀದಿಗಳ ಸೊಬಗಿನ ಸಾರದಲಿ ಸಮನಿಸಿದುದತಿ ಸೌರಭ ಬನವಸೆಯ (ಪ್ರಭುಲಿಂ. ೩-೪). ೩. ಇಳೆಯುಂ ಪಾದಾಬ್ಜರಾಗಂ ಮಿಱುಗುವ ಘುಸೃಣಾಂಭಶ್ಛಟಾಸಕ್ತಿಯಿಂ ಪೂವಳಿಯಿಂ ದಿಕ್ಚಕ್ರಮುಂ . . .

ಪೂರಿಸೆ ನೆರೆದುದಜಸ್ರಂ ಪುರಸ್ತ್ರೀಸಮಸ್ರಂ (ಜಗಸ. ೦೩-೬೯). **ಹೂವಲಿ** : ೧. ಹೂವಲಿಯ ವೀಥಿಗಳ ನವರತ್ನಾವಳಿಯ ಸೂಸಕದ ಭದ್ರದ ಲೋವೆಗಳ ಲಂಬಳವಲೆಸೆದವು ಕೇರಿಕೇರಿಗಳು (ಕುವ್ಯಾಭಿ. ೧೮-೯೭); ಹೂವಲಿಯ ಪುರರಚನೆಗಳ ಸಂಭಾವನೆಯನೆಸಗುವುವು (ಕವಿಜಿ. ೧-೬-೯).

[ಪೂ, + ಬಲಿ,]

**ಪೂವಲಿಗೆದಱ್**, ಪೂವಲಿಗೆದಱು (ಕ್ರಿ). ಹೂವುಗಳನ್ನು ಚೆಲ್ಲು; ಪುಷ್ಪಗಳನ್ನು ಹರಡು : ಪೂವಲಿಗೆದರ್ದ ಸಂಪಗೆಯೆಸಟ ಪ್ರಸರದಿಂ ಸುವರ್ಣದ್ವೀಪದಂತೆಯುಂ . . . ಅಪ್ಪ ಮಾರ್ಗಮಂ ನೋಡುತ್ತೆ (ಶಾರಂಪು. ೦೦೧೦); ನಲಿದು ನರ್ತಿಸುವ ಪೂವಲಿಗೆದರ್ವ . . . ಪೂಗಳ ಬೊಂಬೆಗಳ ಸಾಲ್ಗಳಿಂದೆ ಚೆಲ್ವಾದುದಾ ಬನಂ (ಕಬ್ಬಿ. ೩೩-೨೬). **ಪೂವಲಿಗೆದಱು** : ಪೂವಲಿಗೆದಱಿದ ಪೊಂಗೇದಗೆಯ ಗಱಿಯ ಕಿಱುವಾಳ್ಗೆ ಬಱಿದೆ ಬೈಗಾಳಂ ಮಾಡಿಯುಂ . . . ಎಂತಾನುಂ ತತ್ಕಾಂತೆ ಒಂದೆರಡಡಿಯನಿಡುವಲ್ಲಿ (ಶಾರಂಸ. ೩೬); ಅವಱೆಡೆಯೆಡೆಯೊಳ್ ಪೂವಲಿಗೆದಱಿದಂದದಿಂ ಪ್ರಕೀರ್ಣಕಂಗಳಿರ್ಪುವು (ಪರ್ವಾಂ. ೦೦-೩ ಪ); ಕತ್ತುರಿಯ ಕೆಸಱಿನಲಿ ಸಾರಿಸಿ . . . ಸುರಕುಜಕುಸುಮದಲಿ ಪೂವಲಿಗೆದಱಿ . . . ಸೇವೆಯ ಮಾಳ್ಪರಮರಿಯರು(ಶಾಣ್ಮಶಾ. ೩೨-೩೩). [ಪೂವಲಿ + ಕೆದಱು,]

**ಪೂವಲಿಗೆದಱು** 'ಪೂವಲಿಗೆದಱ್' ನೋ.

**ಪೂವಲಿಗೆಯ್** (ಕ್ರಿ). = ಪೂವಲಿಗೆದಱ್ : ಪೂವಲಿಗೆಯ್ದು ಪೂವಿನ ತೊಡಂಬೆಯ ನಿಬ್ಬರಮಪ್ಪ ಸೋಂಕಿನೊಳ್ ನೋವುವೆನಿಪ್ಪ ಮೆಲ್ಲಡಿಯ ನೇತಿಡುವಂ ಮಹಿಪಂ ತಪೋವನಸ್ರಾವವಿಕೀರ್ಣಮಪ್ಪೆಡೆಯೊಳ್ (ಮಲ್ಲಿಕಾ. ೧೧-೩೩); ಸ್ತನಕಲಶಂ ಕದಕ್ಕದಿಸೆ ಸೋವರ್ಮುಡಿ ಪೂವಲಿಗೆಯ್ಕೆ . . . ತಾಂ ತಳರ್ದತ್ತು ವಿಲಾಸಿನೀಜನಂ (ಕುಸುಮಾ. ೩-೯೯).

[ಪೂವಲಿ + ಕೆಯ್,]

**ಪೂವಲಿಗೊಡು** (ಕ್ರಿ). = ಪೂವಲಿಗೆದಱ್ : ವಣಿಮಯುಕಳಕವೃಂದ ವಿಪಣಿ ನಿರ್ಜನದೆಡೆ ಕುರೂಪಾದ ಲಲನೆ ಪೂವಲಿಗೊಡದ ಮಾರ್ಗಸ್ಥಳದ ಕೋವಿದಮನುಜರಿಲ್ಲೆನೆ ಹೊಳಲ ಮಹದೈಶ್ವರ್ಯವನು ವರ್ಣಿಸುವರಾರು (ಜಾಂಬಂಶ. ೨-೨೩). [ಪೂವಲಿ + ಕೊಡು,]

**ಪೂವಲ್ಲಿ** (ನಾ). ಹೂವು ಬಿಡುವ ಬಳ್ಳಿ; ಪುಷ್ಪಲತೆ : ಪೂವಲ್ಲಿ ಹಾಳಾಗಿ ಮಾವುಫಲಗಳು ಪೋಗಿ ಗೋವುಗಳೆಲ್ಲವು ಮಾಲು ಕೊಡದಾಗ ಜಗದೊಳಗೆ ಸಾವು ಪೆಚ್ಚುವುದು (ಕಾಂಶಂ. ೬೬-೧೦೦); ಓರಿದೆಸಿಸುವ ಕಲ್ಪವೃಕ್ಷ ನಾನಾಬಗೆ ಪರಿಮಳಪೂವಲ್ಲಿಗಳು ವರದಿವ್ಯಸರಸಿಯ ಬಳಸಿದುದ್ಯಾನದ ಮೆಱೆದುವು (ಕೆಂಪಶಂ. ೨೩-೩೩). [ಪೂ, + ವಲ್ಲಿ,]

**ಪೂವಸರ** (ನಾ). ಹೂವು ಮಾರುವ ಅಂಗಡಿ : ಪ್ರೀತಿ ವಿಗೆ ಮಾಲೆಗಾರ್ತಿಯರುರಾಸಿರುತಿರ್ದ ಸವಿವಾತನರ್ ಮಧುಪರವಮೊಡಗೂಡಿ ಕಂಪುಗಳ ಜಾತಿಯಂ ಬೇಱೆಬೇಱೆದಿಸುತೆ ಸುಳಿಗಾಳಿ ಪೂವಸರದೊಳ್ ಮೆಱೆದುದು (ಕಬ್ಬಿ. ೦೨-೩); ಮದಹಸ್ತಿಗಮನೆ ಮತ್ತೋರ್ವಳಾ ಪೂವಸರಸವನಕ್ಕೆ ಮಾಂಗಡೆ(ಯೊಳಿಟ್ಟು) ಸಾಣೆಯನು ಮೃಗಮದಕುಂಕುಮಂಗಳಂ ಧರಿಸಿ ಪೋಷಣೆಗೆಯ್ಕೆ (ಕೆಂಪಶಾಂ. ೦-೯-೨೬). [ಪೂ, + ಪಸರ]

**ಪೂವಸೆ** (ನಾ). ಹೂವಿನ ಹಾಸುಗೆ; ಪುಷ್ಪಶಯ್ಯೆ : ಕೋಮಲ ವೀಣಾರುತಿಗಳ್ಗೆ ಪೂವಸೆಗಳೊಳ್ ಪಟ್ಟಿರ್ಪ ಸೌಖ್ಯಾಳಿ ದೋಹಲಕೇಳೀ ಮುದಮುಂ ಸಮಂತು ತಳೆದಿಲ್ ತತ್ಕಾಂತೆಯಿಂತಾಮಾಗು (ಕೆ.ಸು.ವಜ್ರ. ೦೨-೩೯); ಪೊಸಸುಸಿಲೊಳ್ ನೃಪಾತ್ಮಜೆಯೊಳಿಂತು ಪರಂ ಪಡೆಯಲ್ಕೆ ಕೂರ್ತು ಪೂವಸೆಗೆಸೆವಾಕೆಯಂ ಬರಿಪುದುಂ (ಜಶ. ೦-೩೯); ಕೂರ್ಪಳ ಕೈವಿಡಿದೆಯ್ದು ಪಲ್ಲವಪ್ರಸರಸವೇತಮಪ್ಪಾದ ಪೆರ್ಬೆಯೊಳ್ ಪೊಸ ಪೂವಸೆಯಲ್ಲಿ ಕೂಡಿದಂ (ರಾಜಶೇ. ೩-೦೦೩). [ಪೂ, + ಪಸೆ,]

**ಪೂವಳ**, **ಹೂವಳ** (ನಾ). = ಪೂವಾಡಿಗ : "ಅಲರ್ವಡಿಗನೆನಲ್

ಪುಲ್ಲವಡಕಾಱ ಪೂವಳನೆಂದು ಪೂವಡಿಗನೆಂದೆನಿಸ್ಸುಂ" (ಕಶ್ಯ್ಕೃ. ೩೯); ಒಂದುದಿವಸಂ ಪೂವಳಂ ಶ್ಯೆಲಪಾತೆಗಾ ವಾಲೆಯಂ ಕೊಡುತಿರಲ್ಕೆ (ಕಾಕ್ಕ. ೪೩-೩). **ಹೂವಳ** : ವಾಡದಿ ವುುಡಿದಿರುವ ಹೂ ಯುವಕಂಗೆ ಚೆಂದ ಗುಡಿಯೊಳಗೆ ಕೊಡುವ ಹೂ ದ್ಯೆವಭಕ್ತಗೆ ಚೆಂದ ಬಿಡಿಗಾಸು ಹೂವಳಗೆ (ಜುಂಕಂಕ. ೩೦೦). [ಪೂ$_{3}$ + — ವಳ]

**ಪೂವಳಿ** 'ಪೂವಲಿ' ನೋ.

**ಪೂವಳೆ** 'ಪೂವಟೆ' ನೋ.

**ಪೂವಟೆ**, **ಪೂಮಳೆ**, **ಪೂವಮಟೆ**, **ಪೂವಳೆ**, **ಹೂಮಳೆ** (ನಾ). ಮಳೆಯಂತೆ ಹೂವು ಸುರಿಯುಂವಿಕೆ; ಹೂವಿನ ಮಳೆ; ಪುಷ್ಪವೃಷ್ಟಿ : 'ಪೂವಟೆಗಱೆ' ಪರಾ. **ಪೂಮಳೆ** : ದುಂದುಭಿಗಳೆಸೆಯೆ ಪೂವಮಳೆ ಸುರಿಯೆ (ಸಿಕ್ಕಣ. ೦-೩೬) ; ಅಬುಜಾಸನ ಸುರೇಂದ್ರಾದಿಗಳು ಜಯಜಯ ನಿನದದಲಿ ಸೂಸಿದರು ಸುಮ್ಮಾನದಲಿ ಪೂವಮಳೆಯ (ಕೊಕಣ. ೦-೦೦-೨೩) ; ಚಿನ್ನಾರಂಗದ ಮೇಲೆ ವೆಚ್ಚಿ ಪೂವಮಳೆಗಳು ಕಱೆದರವಮರರ್ (ಕೃಪಾ. ೨೦-೧೨). **ಪೂಮಟೆ** : ಪೂವಮಟೆಯ ಕಂಪನಿತಿಂವು ಪೂದಟ್ಟು ಬಂದು ಬಂಧುರಹಿಮವಮಂದಗಂಧವಹವೆಟ್ಟಱಿಸಿತ್ರ್ವ್ಯಾತಾಂಶುವಕ್ತ್ರಿಯಂ (ಅಂಶ. ೩-೨೨) : ನಭದೊಳ್ ಪೂವಮಟೆ ಭೂಮಿಯೊಳ್ ಮರುತಕಂ ದಿಗ್ಭಿತ್ತಿಯೊಳ್ ದೇವದುಂದುಭಿನಾದಂ . . . ಒಪ್ಪುತಿರೆ ಬಂದಂ ಲೋಕನಾಥಂ (ಶಾಂತಿಪು. ೯-೫೦) ; ಪೂವಮಟೆಯಂತಲ್ಲೊಕ್ಕುವು ಪೂವರಗಳ ಪೂಗಳ್ (ಶಂಚಾಪು. ೦೦-೦೩). **ಪೂವಳೆ** : ಸರಿದುದು ಪುಸಿವೇಷದ ತೆರೆ ಸುರಿದುದು ಕಯ್ಯಾರ ತೆಱದ ಪೂವಳೆ (ಗಂಳ. ೯-೩೦) ; ಸುರಿದುದು ಪೂವಳೆ ಕಾವಾಗೆ ನೇತ್ರದೆ ಸುರಿದುದಾನಂದಾಶ್ರು ರತಿಗೆ (ಕೊಚಕ. ೦೨-೬೯) ; ದೇವಗಂಧರ್ವಸಂದೋಹ ಚದುರಿಂದ ಪೂವಳೆಯ ಕರೆದು ಪಾಡಿದರಾ ಮರುತಸ್ಸುತನ ಕೀರ್ತಿಗಳನು (ವೆಂಕಣ. ೩-೦-೨೯). **ಹೂಮಳೆ** : ಹೂವಮಳೆಗಳೆಱಗಿ ಸುರಿದವಾತನ ಮೇಲೆ (ಇಹ. ದೀ. ೪೩-೦) ; ಎಕ್ಕತುಳದಲಿ ಬಂದನಮರರ ಹಕ್ಕಳದ ಹೂ ಮಳೆಯ ಹೊಯ್ಲಿನ ಪೂರದಲಿ ಹನುಮ (ಕೊಕಣ. ೩-೯-೬) ; ದೇವತೆಗಳು ಹೂಮಳೆ ಕರೆದರು (ದ್ಯಾಕಣ. ೧೩). [ಪೂ$_{3}$ + ವಟೆ]

**ಪೂವಟೆಗಱೆ**, **ಪೂವಂಳೆಗಱೆ**, **ಹೂಮಳೆಗಱೆ** (ಕ್ರಿ). ಮಳೆಯಂತೆ ಹೂವುಗಳನ್ನು ಸುರಿಸು ; ಪುಷ್ಪವೃಷ್ಟಿ ಮಾಡು : ಅಱಿವುದುಮ ಘಾತಿಗಳ್ ಪೂವಟೆಗಱೆದುದು ನಭದಿಂ (ಶಾಂತಿಪು. ೦೨-೩೩) ; ಸುರರ್ ಪೂವಟೆಗಱೆವರ್ (ಕಣ್ಣಾಸು. ೦೦೩ ಕ್ರಶೋ.). **ಪೂಮಳೆಗಱೆ** : ಸುರರು ಪೂವಂಳೆಗಱೆದರು (ಕೊಕಣ. ೪-೦೨-೪೩) ; ದೇವದುಂದುಭಿ ವೊಳಗೆ . . . ಪೂವಮಳೆಗಱೆಯೆ (ಕ್ರಿಂಕಚ. ೩-೧೦). **ಹೂಮಳೆಗಱೆ** : ದೇವದುಂದುಭಿ ವೃಂದವುಲಿಯಲು ತೀವಿ ಹೂವಮಳೆಗಱೆಯೆ . . . ಪ್ರಮಥರುತ್ಸವಿಸೆ (ಬಸಪು. ೦೮ ೬೯) ; ವಾಕಜನಿವಹ ಹೂವಮಳೆಗಱೆದು ಹರುಷಿಸಿ ಪವನಜನ ತಾಯ್ಗೆ ಭೀಮಸೇನನಾಯೆಂದು ಹೆಸರಿಡಲು (ಕಂಶಕ. ೦೩-೩೬) ; ಅವರಿರ್ವರಿಗೆ ಹೆತೆನ್ನೊಸಲವರಾಂಗನೆಯರು ಹೂವಮಳೆಗಱೆದರು ರಣ ರಂಗದೊಳಗೆ (ಕೋಕಕ. ೩೯-೨೯). [ಪೂವಟೆ + ಕಱೆ$_{1}$]

**ಪೂವಾಡಗಿತ್ತಿ** 'ಪೂವಡಿಗಿತಿ' ನೋ.

**ಪೂವಾಸು$_{1}$** (ಕ್ರಿ). ಹೂವಿನ ಹಾಸುಂಗೆಯನ್ನು ರಚಿಸು : ಚಂದನದೆಳ ದಳಿಗರ್ಗಳಂ ಪಾಸಿ ವಲ್ಲಿಗೆಯುಲರ್ಗಳಂ ಪೂವಾಸಿ (ಕಂಶಕಾ. ೩-೬ ಶ).

[ಪೂ$_{3}$ + ಪಾಸು$_{1}$]

**ಪೂವಾಸು$_{2}$** (ನಾ). = ಪೂವಸೆ : ಪೂವಾಸಿಗೆ ತಿಱಿವರೆಂಬ ಭಯದಿಂ ಮುುಟುಂಗಿದ ಚೆನ್ನೆಯ್ದಿಲ್ಗಳಂತಿರೆ ನಿರಂತರಾಶ್ರುಪಾತದಿಂ ಕೆಂಪುದಳೆದ ಕಣ್ಮಲರನೊಳೆಯ್ದು ಪವನದ ಕಿಳಗೊಳಂಗಳೊಳು ಪುಗುವಳ್ (ಕಾದಂಣ. ೩೩೯) ; ತರಳೆ ನಿನ್ನಯ ವಿರಹದಿಂದ ಪೂವಾಸಿನೊಳು ಪೊರಳ ಮತ್ತಲ್ಲಿ ಸ್ಯೆರಿಸಲಾಱದೆರ್ದು ಕುಳ್ಳಿರಲ್ (ಕಣ್ಣಕ. ೨-೨೯) ; ಪಾಸಿದ ಪೂವಾಸಿನೊಳು ಸ್ಮರರಾಸಿಯಂದದಿ ಮಲಗಿತಳೇ ಮಡದಿ (ಜಾಕುಂಕ. ೩೩ ೫೩೫).

[ಪೂ$_{3}$+ಪಾಸು$_{2}$]

**ಪೂವಿನಹಿಪ್ಪರಗೆ** (ನಾ). ಒಂದು ಊರಿನ ಹೆಸರು ; ಈಗಿನ ವಿಜಾಪುರಜಿಲ್ಲೆಯ ಬಾಗೆವಾಡಿ ತಾಲ್ಲೂಕಿನ ಹೂವಿನ ಹಿಪ್ಪರಗೆ ಎಂಬ ಊರು : ಪೂವಿನ ಪಿಪ್ಪರಗೆ[ಯ] ನಾಲ್ಕು ದೆಸೆಯ ಪೊಲ ಮೇರೆಯಂ [ನ]ಡುಸರಿಯಾಗಿ ನಡದು[ಂ] ಕೊಟ್ಟರ್ (ಶಿಇಅ. XI-1, ೯-೩೩ ; ೩೬೨). [<ಪೂ$_{3}$+ಪಿಪ್ಪರಗೆ]

**ಪೂವಿನಪುಲ್ಲಿಮಂಗಲ** (ನಾ). ಒಂದು ಊರಿನ ಹೆಸರು : ದೆಂಪೂರು ತೊವಗೂರು ಪೂವಿನಪುಲ್ಲಿಮಂಗ್ಗಲ . . . ಪಿರಪೂರು ಕೊಡಲೆ ಇವಿತು ಮಮ್ ಪೂಲಮೇರ ಸಹಿತಂ ಇತ್ತನ್ ಎಱೆಯಪಂ ಕೇಪುಚರನ್ ಆಗ [ತ್ರ]ರಪ್ಪ (ಎಕ. IX. ಕಂಗಳೂ. ೬೩-೬ ; ಕು. ೬೭೦).

[<ಪೂ$_{3}$+<ಪುಲ್ಲಮಂಗಲ]

**ಪೂವಿಲ್**, **ಪೂವಿಲು**, **ಪೂವಿಲ್ಲು** (ನಾ). ಹೂವಿನ ಧನುಸ್ಸು ; ಮನ್ಮಥನ ಬಿಲ್ಲು : 'ಪೂವಿಲ್ಲ' ಪರಾ. **ಪೂವಿಲು** : 'ಪೂವಿಲುಗಾಱ' ಪರಾ. **ಪೂವಿಲ್ಲು** : ಸ್ಮರನಿಗೆ ಪೂವಿಲ್ಲನು ಕೊಡುವಂದದಿ ಪರಗುಣ ಮಾಲೆಯು ತನ್ನ ಹರಣದೊಡೆಯನ ಕ್ಯೆಯಲಿ ಪೂಮಾಲೆಯಾದರದಿಂದಿತ್ತಳು (ಜಾಕುಂ. ೦೮-೨೯) ; ಕಾವನ ಪೂವಿಲ್ಲ ಗೊಂಡೆಯಗಳನೊರ್ವ ಭಾವಕ ವಂಚಿಸಿ ತಂದು ಪೂವಿನಂಗಡಿಯೊಳಿರಿಸಿ ಮಾಱುವೊಲು ಪೊಸ ಸೇವಂತಿಯರಲ ಮಾಱುವಳು (ಅಂಕಕ. ೩-೬೯) ; ಪೂವಿಲ್ಲನೇರಿಸಿ ಕಾವನು ಕೆಱೆಗೊಂಡು ಟಂಕಾರ ಮಾಡಿದನಲ್ಲ (ಜಾಕಾಕ. ೦೯೯-೯). [ಪೂ$_{3}$+ಬಿಲ್$_{3}$]

**ಪೂವಿಲು** 'ಪೂವಿಲ್' ನೋ.

**ಪೂವಿಲುಗಾಱ** (ನಾ). ಹೂವಿನ ಬಿಲ್ಲಿನಲ್ಲಿ ಹೂಬಾಣಗಳನ್ನು ಹೂಡುವ ಬಿಲ್ಲುಗಾರ ; ಮನ್ಮಥ ; ಪುಷ್ಪಬಾಣ : ನಾಡಿವುಾಲವ ತೀಡು ಗಲವಿತ್ತು ಸುಸಿಲಿಂಪುಗಲಿಸಿ ಕಾಣೆವರು ಪೂವಿಲುಗಾಱನಾಗೆ ಮಾರ್ಥವನು (ಕೃಕವೇ. ೨-೦೦೩). [ಪೂವಿಲು (<ಪೂವಿಲ್) + —ಕಾಱ]

**ಪೂವಿಲ್ಲ** (ನಾ). ಕಾಮ ; ಮನ್ಮಥ : "ಅಲರಯಿಂ ನನೆವಿಲ್ಲ ಬಲ್ಲಹ ನೆಸಲ್ ಪೂವಿಲ್ಲ ಕಾವಂ" (ಕಜಾಗ. ೮) ; ಪುಣ್ಣಲ್ಲದೆಯುಂ ಪೂವಿಲ್ಲನ ಶರಹತಿಯಿಂ ನೋವನೆ ತಳೆದುವುದಿದ್ದು ಹೃದಯಂ (ಜಾಕ್ಕೃ. ೦೦-೬೦) ; ಪೂವಿಲ್ಲನ ಚಾಪಸಂಜನಿತಮೋಹನನಾದಮೊ ಸೋಮರಾಜಭೂವಲ್ಲಭ ನಿಂಪುವೆತ್ತ ವಚನಾಮೃತಮೋ ವಿಬುಧಾನುರಾಗಮೋ (ಉದ್ಭ. ೦-೩೩) ; ಹೊರ್ಲ್ಲೆಹದೊಂದು ಹೆಣ್ಣೀನು ಕಂಡೆಱ ಪೂವಿಲ್ಲನ ನೆಱ ನುಂಗಿತಾಗ (ಕೊಚಕ. ೦೨-೬). [ಪೂವಿಲ್+—ಅ$_{3}$]

**ಪೂವಿಲ್ಲು** 'ಪೂವಿಲ್' ನೋ.

**ಪೂವು** 'ಪೂ$_{3}$' ನೋ.

**ಪೂವುಟ್ಟಿ**, **ಹೂಬುಟ್ಟಿ** (ನಾ). ಹೂವಿನ ಕರಂಡ, —ಬುಟ್ಟಿ : ರಾಣಿ ಕೋರಿದ್ದ ಹಾರವನ್ನು ... ಅದೇ ಪೂವುಟ್ಟಿಯಲ್ಲಿರಿಸಿದಳು (ಹರಿ. ೨೪೨). **ಹೂಬುಟ್ಟಿ** : ದೇವರ ಪೂಜೆಗೆಂದು ಅವರು ಹೂಬುಟ್ಟಿಯ ತುಂಬ ಸಂಪಿಗೆಹೂವುಗಳನ್ನು ತಂದಿದ್ದಾರೆ (ಜಾ೩). [ಪೂ$_{3}$+ಪುಟ್ಟಿ$_{3}$]

**ಪೂವುಡಿ** (ನಾ). ಹೂವಿನ ಧೂಳು, —ಪರಾಗ : ಅಲರ್ಗುಡಿ ಚಾಮರಂ ನೆಗೆವ ಪೂವುಡಿ ಸೀಗುರಿ ತುಂಬಿಯಿಂಚರಂ ಸುಲಲಿತಗಾನಂ . . . ಆಗೆ ಬನವೋಲಗಶಾಲೆವೊಲಾಯ್ತು ಕಾವನಾ (ಕೃಷು. ೯-೪೩) ; ತನಿಯುಸಿರ ಪೂವುಡಿಯ ಪೊಸಸೋನೆಯೆಸಿತು ? (ಕಾಗೂಶ. ೦೨೦-೨೩೦) ; "ಉದಿರ್ದ ಪೂವುಡಿ ಬನರಾಣಿಯ ಮೊಗವಾಡದ ಪಳಿಕಿನ ಪೊಸಂತಿಲೊಳ್ ಬರೆದ ರಂಗವಲ್ಲಿ"ಯಂತಿದ್ದಿತು (ಜಾಜುಹೂ. ೨೩೯). [ಪೂ$_{3}$ + ಪುಡಿ]

**ಪೂವೃಷ್ಟಿ** (ನಾ). = ಪೂವಟೆ : ನಿಟ್ಟಿಸಿ ಟಟ ಗಾವ ಗಜವದನಗೆ ಪೂವೃಷ್ಟಿಯ ಸುರರು ಚೆಲ್ಲಿದರು (ಕೋಚಕ ೩೯-೬೯). [ಪೂ$_{3}$ + ವೃಷ್ಟಿ]

**ಪೂವೆಂಟೆ** (ನಾ). ತಾವರೆಯಿಂದ ತುಂಬಿದ ಸರೋವರ; ಹೂಗೊಳ : ಪೂವೆಂಟೆಯಾ **ಪೊಱವಟ್ಟಂ**ಚರವಾನಡಾಗದೆ ಪರಿದು ಮುತ್ತುವ ಮತ್ತಮುಂಬಳಂಗಳುಮಂ (ಅಜಿತ. ೫-೭೨ ವ). [ಪೂ₂ + ಬೆಂಟೆ]

**ಪೂವೆತ್ತು, ಹೂವೆತ್ತು** (ಕ್ರಿ). ೧. ಹೂವಿನ ಮಾಲೆಯನ್ನು ಮೇಲೆತ್ತು,–ಎತ್ತಿ ಹಿಡಿ : ಚೆಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರ ನಂದರಸೀಸರಿ ನಿಂದು ನೋಡಿದಂ (ಕುಕಪಾ. ೪-೬೦). **ಹೂವೆತ್ತು :** ೨. ಹೂವನ್ನು ಕೀಳು,– ತಿರಿ : ಬೆಳಗ್ಗೆ ಪೂಜೆಗೆ ಹೂವೆತ್ತುವುದು ಅವರ ಪ್ರತಿದಿನದ ಕಾರ್ಯಕ್ರಮ (ಜಾತಿ). [ಪೂ₂ + ಎತ್ತು₁]

**ಪೊವೊರ್ಕುಟ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು ; ಪದ್ಮನಾಭ ; ವಿಷ್ಣು : ಬೊಮ್ಮಂ ಪೂವೊರ್ಕುಟನ ಗಂಗಾವರ್ತಸನಾಭಿಯೊಳ್ ನಾಭಿಯೊಳ್ ಪುಟ್ಟಿಯುಂ ಸತ್ಯಲೋಕಕ್ಕೊಡೆಯನಾದಂ (ರಾಮಾಕ. ೦೯೮–೨). [ಪೂ₂+ಪೊರ್ಕುಟು (< ಪೊಕ್ಕುಟು) + –ಅ₇]

**ಪೂಷ** (ನಾ). ೧. ಸೂರ್ಯ : "ರವಿ ಮಾರ್ತಂಡಂ ಪತಂಗಂ ತಪಿ ತಪನನಿನಂ ಭಾನು ಪೂಷಂ ... ಆದಿತ್ಯನಕ್ಕುಂ" (ಶಬ್ದಮ. ೦೦-೬೪): ಅಘತಿಮಿರಪೂಷನತಿವಿಗತದೋಷ . . . ಪಂಪಾವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನಸಂಪದವನು (ಹಕಪಾ. ೦-೪); ಹರಿಯ ಶಿರವರಿದು ಸಿರಿ ಮುಂದಲೆಯ ತಱಿದುಯಾ ವರುಣನಂ ಮೆಟ್ಟಿ ಪೂಷನ ಪಲ್ಗಳಂ ಕುಟ್ಟಿ . . . ವೀರನಂ ಭಂಗಂಬಟ್ಟರೆಸೆ ಜನವಾದ ಬಂದು ನುಡಿದಂ (ಹರಿ. ೬-೦೦೪). ೨. ವಿಶ್ವರಕ್ಷಕ; ಜಗತ್ಪಾಲಕ : ಎಲೈ ಸವಿತೃವೇ . . . ನಿನ್ನ ಸಂಚಾರಕಾರ್ಯಗಳಿಂದ ನೀನೇ ಪೂಷನೆನ್ನಿಸಿಕೊಳ್ಳುತ್ತೀಯೆ (ಋಗ್ವೇ.ರ. ೦೬೬). ೩. ಒಬ್ಬ ವೈದಿಕದೇವತೆ : ಜಗನ್ನಿರ್ಮಾತ್ರಿಯಾದ ರಾತ್ರಿಗೆ ಪತಿಯಾದ ಪೂಷನನ್ನು ನಾನು ಸ್ತುತಿಸುತ್ತೇನೆ. ಸಹೋದರಿಯಾದ ಉಷಸ್ಸಿಗೆ ಉಪಪತಿಯಾದ ಪೂಷನು ನಮ್ಮ ಸ್ತುತಿಗಳನ್ನು ಕೇಳಲಿ (ಋಗ್ವೇ.ರ. ೦೬೬). ೪. ಹನ್ನೆರಡು ಜನ ಆದಿತ್ಯರಲ್ಲಿ ಒಬ್ಬ : ಧಾತಾ ಅರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟೃ ವಿಷ್ಣುಗಳೆಂಬವರಃ ಕ್ರಮದಿಂ ದ್ವಾದಶಾದಿತ್ಯರು (ಶಿಕೋ. ೨೬೬). ೫. ಭೂಮಿ. [ಸಂ. ಪೂಷನ್]

**ಪೂಷಕ** (ನಾ). ಸೂರ್ಯ : ಪೂಷಕ ನಿಶೇಶಾಕ್ಷಿಯಾಶಾಂತ ಭಾಸುಯಶ ಶೇಷ . . . ನಂಜೇಶ ಜಯತು (ಗುರುಚಾ. ೦೩-೦). [ಸಂ.]

**ಪೂಷಣ** (ನಾ). ಸೂರ್ಯ : "ಸೂರಃ, ಸೂರ್ಯಃ . . . ಅರುಣಃ, ಪೂಷಾಃ, ದ್ಯುಮಣಿಃ . . . ರವಿಃ–೩೭ ಸೂರ್ಯನ ಹೆಸರುಗಳು" (ಸಿದ್ಧಾಂತಿ. ೩೨). [ಸಂ.]

**ಪೂಷೆ** (ನಾ). ೧. ಮನುಷ್ಯಶರೀರದಲ್ಲಿರುವ ಒಂದು ನಾಡಿ : ತರಳಿತೀ ನಾಡಿಗಳ ಬಾದಶಗಳಿಗೆ ನಾಮಗಳೆಂಬುದುರಃ ಸುಷುಮ್ನೆಯು ಪಿಂಗಳೆಯು ಇಡಾ ಸರಸ್ವತಿ ಪೂಷೆ ವಾರುಣಿ ಮೆರೆವ ಹಸ್ತಿನಿ ಜಿಹ್ವೆಯಾ ಅಶ್ವಿನಿ ಅಲಂಬುಸೆಯು . . . ಗಾಂಧಾರಿಯು ಮೆರೆದಪ್ಪದೆಯಿರುವವು (ಗಗಶಾ. ೪-೦೦). ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿ ಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲಾಧರಿತನಾಗಿ (ಅಜೀ. ೨೦೪). [ಸಂ. ಪೂಷಾ]

**ಪೂಷ್ಣ** (ನಾ). =ಪೂಷಣ : "ನಿಶಿವೈರಿ ಮಿಹಿರಂ ವಿರೋಚನಂ ಭಾಸ್ಕರಂ . . . ಸಹಸ್ರಾಂಶು ಪೂಷ್ಣವೆನೆ ಸೂರ್ಯನಕ್ಕುಂ" (ಕುಚರಿ. ೦೦–೨): ಕೃಷ್ಣಂಗೀ ಯಾತ್ರಾಟನೆ ಪೂಷ್ಣಂಗಂ ಕೃಷ್ಣವರ್ತ್ಮಕೃಷ್ಣಗಂ ವೇಣುಪಾಣ್ಡರ್ಜವೆಯೊಳ್ಕಿತ್ನಂ ವಿಷ್ಣುಶ್ವಾರ್ಜನೆಯ ಯತ್ನವೆಂಗುಂ ವಿಬುಧರ್ (ಕೃಷ್ಣಕೂಟ. ೫–೦೬೬). [< ಸಂ. ಪೂಷಾ]

**ಪೂಸ, ಹೂಸ** (ನಾ). (ಅಲು) ಒಳಗೊಂದು, ಹೊರಗೊಂದು ನಡವಳಿಕೆ ಇರುವ ವ್ಯಕ್ತಿ; ಡಂಭಾಚಾರಿ : ಭಕ್ತಿಧಾಳಕರ ದರ್ಶನ ಚೋರಕರ ವಾಚಾರಚನೆಗರ ಬಱಿವಾತಿನ ಪೂಸರ ಈಶ್ವರಭಕ್ತರ ಪರಮೇಶ್ವರನೆರೂಪು ಎನಲಾಱೆ (ಬಸವೂಮ್ಮ. ೪. ೫೬೦-೨೭); ಹಂದೆಯ ಶೃಂಗಾರ ಪೂಸನ ಕಱಿಸದಂದ ಅಱಿವಿಲ್ಲದವನ ಸಂಗ (ಶುತುಗಂ. ೪. ೨೫೬–೩೪); ವಿರತಿಗಳ್ ನಿಜವನಱಿದು ಪೂಸರ ಆಸೆಯನಱಿದು ವೇಷಗಳ್ಳರ ನಿಹಿತವ ನೋಡಿ (ಸರ್ವಶ. ೦೨೨-೬೨೪). **ಹೂಸ :** 'ಹೂಸತನ' ಪರಾ.

**ಹೂಸಹುಂಡ**=ತೋರಿಕೆಯವನು; ಡಂಭಾಚಾರಿ : ಹೂಸಿ{ಸ}ಹುಂಡನೆಂದಾಡಿದ ಮಾತೆ ನಿರ್ವಾಣನನಪ್ಪ ಜಿನೇಂದ್ರನೊರ್ವರ್ ಕೂರ್ತು ಕೊಂಡಾಡಿದೊಡಣ್ಣ ಮುಕ್ತಿ ಮನೆದೊಟ್ಟನೆ ಮಚ್ಚ ಮರಲ್ದು ಬಾರಳೇ (ರತ್ನಾಪಾ. ೧–೩೩); ಮರ್ತ್ಯರ ಹೂಸಿ{ಸ}ಹುಂಡರ ನಡೆವಳಿಯ ನೀನೊಪ್ಪವಿಟ್ಟೆಯಲಾ (ಕ್ರಶುಲೀ. ೦೩–೦೨); ಮಾಡಬಾರದು ಮಾಡಬಾರದು ಹುಸಿಡಂಭಕ ಹೂಸ ಹುಂತರ ಸಂಗವ (ಅಂದೀ. ೦೨೯–೯೩). [ಪೂಸು₁ + –ಅ₇]

**ಪೂಸಂತೆ** (ನಾ). ಹೂವನ್ನು ಮಾರುವ ಅಂಗಡಿಗಳ ಸಾಲು : ಇನಿತು ಸೊಬಗಂ ಪಡೆದ ಪೂಸಂತೆಯುಂ ಮುಂದೆ ನೆನೆವವರ ಚಿತ್ತಮೆಲ್ಲಂ ಪರಿಪುಳ (ಕಂಪ. ೦೦–೫). [ಪೂ₂ + ಸಂತೆ₁]

**ಪೂಸಣಂಬ, ಪೂಸಣಬ, ಹೂಸಣಂಬ** (ನಾ). ಒಂದು ಬಗೆಯ ಸಿಹಿಯಾದ ಭಕ್ಷ್ಯ (?) : ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ ವರಮಧುರ ಪೂಸಣಂಬಂ ಸಮೆದವರತೊಳಗೆ (ಅಶಕ. ೬–೦೪). **ಪೂಸಣಬ :** ಅಂಗಾರಕಂ ಕ್ಷೀರಪೂರಿಗೆಯುಂ ಪೂಸಣಬಾದಿ ಭಕ್ಷ್ಯಚಯಮಂ ತಂದಿಕ್ಕಿದರ್ಕಾಂತೆಯರ್ (ರಜರ್ಶ. ೨-೩೪). **ಹೂಸಣಂಬ :** ಹಾಲಲವುಗು ಹಾಲಲುಂಡೆ ಹಾಲ ಮಂಡಿಗೆಗಳನಟ್ಟು ಮೇಲೆನಿಪ್ಪ ತಱಿಗ ಹೂಸಣಂಬು[ಪಾಠಾಂ. ಪೂಷಣಂಬು]ಮಂ ತೆರಳ್ಕೆ ಇಟ್ಟು (ಕೃಪಶ. ಹ ೨೬೬-೨); ತಱಿಗು ಚಕ್ಕುಲಿ ಹೂಸಣಂಬ ಪೂರಿಗೆಗಳಂ ... ಕಱಿಕಂಠನಾರೋಗಿಸಿದೊಡೆ ಇನಿದಾಮರಿಸಿ ಗರಳ ಸುಧೆಯಂತಿರ್ದುದು (ಸಿದ್ಧಚಾ. ೬–೬೫). [?]

**ಪೂಸಣಬ** 'ಪೂಸಣಂಬ' ನೋ.

**ಪೂಸತನ, ಹೂಸತನ** (ನಾ). ದಂಭ; ದಂಭಾಚಾರ : ಆಸೆಯೆಂಬ ಕತ್ತಿಯ ಮೇಲೆ ಪೂಸತನವೆಂಬ ಸಟ್ಟವೇಷ ವೇಷಲಾಂಛನದ ತನ್ನಾತ್ಮವಾಸದ ಪಾಶವನೆತ್ತಿ ಈಶನಱಿಯದ ಸಟ್ಟ ವಿಷಕ್ಕಾಗಿ ಕೈಯಾಂತು ತನ್ನ ದೆವಹಾರಕ್ಕೆ ನಷ್ಟ ಬಂದಿತ್ತು ಬಂಕೇಶ್ವರಲಿಂಗಕ್ಕೆ ಲಾಭವಾಯಿತ್ತು (ಸಂಕಲಂ. ೪. ೬೩೪-೨೫); ಪೂ[ಪಾಠಾಂ. ಹೂ]ಸತನದಂದವ ಹೇಳಿ ಎಡಗಾಲ ಸಂಧಿಯ ಮಚ್ಚಿ ಅನಂಗನ ಬಲೆಯೊಳಗಾದವರಿಗೆ ಘನಲಿಂಗನ ಶುದ್ಧಿಯೇಕೆ (ಶಗಮ. ೪. ೪೨೦-೩೪). **ಹೂಸತನ :** ಮೇಲಿನ 'ನಗೆಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೂಸ + – ತನ]

**ಪೂಸತ್ವ** (ನಾ). = ಪೂಸತನ : ಕೂಪರ ಕೈಯಿಂದ ಘಾತಕತನದಿಂದ ವ್ಯಾಪರಿಸುತ್ತ ಸುಡು ಅದೇತಱ ವಿರಕ್ತಿ ಮಾತಿನ ಮಾಲೆಯ ಪೂಸತ್ವದ ನಿಹಿತ ಲಿಂಗಾಂಗಿಗಳೊಪ್ಪರು (ಬಸೋಸಂ. ೪. ೩೬೦-೩೦). [ಪೂಸ+–ತ್ವ]

**ಪೂಸರ** (ನಾ). ೧. ಹೂವಿನ ಹಾರ ; ಹೂಮಾಲೆ : ಬಲಗೈಯ ಪೂಸರದೊರ್ವ ವನಿತೆ ನಿಂದಿರ್ದಳುತ್ಸವದಿ (ಮೋಹಶ. ೫–೩೬); ಅವನ ಕರವಾಬ್ಬದೆ ಪರಿಮಳವನು ನಿನ್ನ ಜವಳಿವೊಲೆಗಳ ಮಧ್ಯದಲಿ ತವೆ ತಿಗುರಿಸಿಕೊಂಡು ಮುಡಿಗೆ ಪೂಸರವ ಬಲ್ತವಕದೆ ಬಿಗಿದು ಸುತ್ತುವುದು (ಅಂಕಶ. ೬–೦೩೪); ತುರು ನಡೆವ ದೆಸೆಗೊಲ್ದು . . . ಸರಳಿಸುತುಮಾಡುತುಂ ಕರು ಪಿಂತನೆಯೆ ಪೋಪ ಪಾಂಗಿನಿಂ ಪೂಸರದ ಪಥಕೆ ಪೊರಮಟ್ಟೆ ನಾಂ (ಸಂಶಕ. ೨೮–೬). ೨. ಹೂವಿನ ಬಾಣ; ಪುಷ್ಪಬಾಣ; ಮದನಾಸ್ತ್ರ : ಅಟ್ಟರಿಪಡೆದ ಭ್ರೂಲತೆ ಸಿಂಗಾಡಿಗಳೊಟ್ಟೀರೆಗಣ್ಣ ಪೂಸರದಿ ಎಚ್ಚಱುವರ ಜಿತೇಂದ್ರಿಯರೆರ್ದೆಯನು ತಟ್ಟುರ್ಚಲು ವನವಧೂಟಿಯರು (ಮೋಹಶ. ೦೪–೬೨); ಕಬ್ಬಿನ

ಬಿಲ್ಲಲರ್ವಕ್ಕಿಯ ತಿಬ್ಬಂ ಒಲಿದತನು ಪೂಸರಂಗಳನಿಸಲಾ ಉಬ್ಬೆಗೆ ಕೊಬ್ಬಿದ ಪೆಣ್ಣಿಂ ತಪ್ಪಿದೊಡದಱಿಂ ಬಟ್ಟು ನಿಲ್ಕುವಿಂತಿದು ಸುಖಮೇ (ಶಬ್ದಾನು. ೩೮ ಶ್ರೀಹೋ); ಮದನಶಬರಸಂಯಮಿಮೃಗಗಳಿಗಾಗ ಕದುಬಿ ಪೂಡಿದ ಪೂಸರಕೆ ಪುದುಗಿದ ಮಿಂಟೆಗಳೆನೆ ಪರಡುಗಳತಿಮುದದಿನಿತ್ತುವು ನೋಳ್ಪರಿಗೆ (ಕಂಕಪ. ೯-೧೯). ೩. ಕಾಮಂ; ಪುಷ್ಪಾಸ್ತ್ರ; ಮನ್ಮಥ: ಎಳದೆರ ನನೋಡಿಪೆನೆಂದು ಪೂಸರಂ . . . ಪಡೆಯೆಲ್ಲಮಂ ಪಲವುಂ ಸನ್ನಣದಿಂ ಬರಲಿಮೆಂದು ಪೇಳೆ (ಕಬ್ಬಿಗ. ೧೦೩); ಮಾಸರವಾಹವಪಸ ಪೂಸರಸಂಗ ದಹನಕರ . . . ಲೋಕಾಧ್ಯಕ್ಷ ಸಲಹೆಮ್ಮನು (ತಂಕ. ೨೦-೦); ಚೆನ್ನಿಗನೆ ಸೂಸಿ ನಿನ್ನಯ ರತಿಸುಖದ ವಿಲಾಸದ ಪೂಸರನುಱಿಬ ನೀ ಬಡಿಸೊ (ಕಂಕಪ. ೦೦-೩೨). [ಪೂ₂ + ಸರ₂]

**ಪೂಸರಂಬಡೆ** (ಕ್ರಿ). ಹೂವಿನ ಗುಚ್ಛಗಳನ್ನು ಹೊಂದು; ಹೂಮಾಲೆಯನ್ನು ಧರಿಸು: ನಿನ್ನಡಿಯಂ ನೆರವಿಲ್ಲದೆ ನಂಬಿದೆವೆಂಬರಸರ ಚೆನ್ನ ಪೊನ್ನ ನೆಲೆವಾಡದಂತ ಪೂಸರಂಬಡೆದ ಕೊಸಗಿನ ಮರಂಗಳೊಳಂ (ಕಬ್ಬಿಗ. ೬೯). [ಪೂಸರ + ಪಡೆ₁]

**ಪೂಸರಗರ್ಭಿಣಿ** (ನಾ). ಮನ್ಮಥನನ್ನು ಗರ್ಭದಲ್ಲಿ ಧರಿಸಿದವಳು; ರುಕ್ಮಿಣಿ: ಮಾಣಿಕ್ಯಸಿಂಹಾಸನದೊಳು ಕೃಷ್ಣ ಕುಳಿತು ಪೂಸರಗರ್ಭಿಣಿ ಮೊದಲಾದ ರಾಣೀವಾಸಕ್ಕೆ ವನವನೊಪ್ಪಿಸಿದ (ನೇಮಿಷ. ೯-೩೬). [ಪೂಸರ + ಗರ್ಭಿಣಿ]

**ಪೂಸರದಹನ** (ನಾ). ಕಾಮದಹನ: ಪೂಸರದಹನ ಕಾಮೋತ್ಪತ್ತಿ ಪರಶಂಬರಾಸುರವಧೆ ಕಂತುಸುತನ ಭಾಸುರಲೀಲೆ ಬಾಣನ ಗೆದ್ದ ಜಯಲಕ್ಷ್ಮೀಶನ ಕೃತಿಯ ವರ್ಣಿಪೆನು (ಮೋಹಕ. ೦ ೩೬). [ಪೂಸರ + ದಹನ]

**ಪೂಸರಲ್**, ಪೂಸರಲು, ಪೂಸರಳು (ನಾ). ಹೂವಿನ ಬಾಣ; ಕಾಮನ ಬಾಣ: ಇಂದು ನೀನೆನಗೋಸುಗ ಧೂರ್ಜಟಿಯ ಮೇಲೊಂದು ಪೂಸರಲಿಂದಲೆಸೆಯೊ ನೊಂದು ಲಲಾಟನೇತ್ರನ ತೆಱೆದರೆ ನೀನು ಬೆಂದು ಹೋದವೆ ಬೇಡ ಮಗನೆ (ಮೋಹಕ. ೬-೨೬); ಕಬ್ಬುವಿಲ್ಲುಂಬಿವೆದೆ ಪೂಸರಲ್ಪೂಣ್ದಿಸಲ್ ನಿಬ್ಬರವಾದು (ತ್ರಿಪುರಾ. ೬-೦೬). **ಪೂಸರಲು**: ಕಾಣದಾರದು ಪುಂಡ್ರೇಕ್ಷುಕೋದಂಡನೊ ಬಾಣ ಪೂಸರಲುಗಳಿಲ್ಲ . . . ಜಾಣನಾರೆಂದು ನೋಡಿದರು (ಮೋಹಕ. ೦೬ ೬೦). **ಪೂಸರಳು**: ಪೂಸರಳಿಂದ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ ಜೀವನಿಗೆ (ಮೋಹಕ. ೩-೬೦). [ಪೂ₂ + ಸರಲ್₁]

**ಪೂಸರಲ**, ಪೂಸರಳ (ನಾ). ಹೂವುಗಳ ಬಾಣವುಳ್ಳವನು; ಮನ್ಮಥ: ತೊಳಪ ತೋರವೊಲೆಗಳೆಂಬ ಪೂಗೊಂಚಲ್ ಪೂಸರಲನೆಂಬ ತುಂಬಿಗಿಂಬಾಗೆಯುಂ (ಕಬ್ಬಿಗ. ೦೨೩); ಪೂಸರಲನ ಜಸಮಂ ದೂಸರಮಂ ಗೆಯ್ವನ . . . ದಿವಿಜಾಸುತನತಪದನಂ . . . ನುತಿಸಿದ ವನಭವನ (ಉದ್ಭಟ. ೬-೦೯); ಸೂಸುಮೋಹನದ ಸಿಂಗರದೊಟ್ಟು ತನ್ನ ವಿಲಾಸಿನಿಯರ ಬಳಸಿನೊಳು ಪೂಸರಲನ ಪುಣ್ಯದೇವತೆಯಂತಿರ್ದ ಭಾಸುರಾಂಗಿಯ ಕಂಡರಾಗ (ಶಶಿ. ೯೦-೯೯). **ಪೂಸರಳ**: ಮೈಸೂರಧಿಕಾರಿಯುವನೀಗ ಚಿತ್ತೈಸು ಪೂಸರಳನ ಪಟ್ಟದಾನೆ (ಕಂಕಪ. ೨೩ ೬೦). [ಪೂಸರಲ್ + -ಅ₁]

**ಪೂಸರಲು** 'ಪೂಸರಲ್' ನೋ.

**ಪೂಸರಳ** 'ಪೂಸರಲ' ನೋ.

**ಪೂಸರಳು** 'ಪೂಸರಲ್' ನೋ.

**ಪೂಸರಿ** (ನಾ). ಹೂವಿನ ಮಳೆ; ಪುಷ್ಪವೃಷ್ಟಿ: ವೇಣನೆಧರಗೀಶ ಪ್ರತ್ಯಕ್ಷವಾಗಿ ಸುರದುಂದುಭಿಯೊಳು ಪೂಸರಿಯೊಳು ಕೈಲಾಸಗಿರಿಗೆ ಕೊಂಡೆಯ್ದು ಸೋಮೇಶ (ಕೈರಪ. ೦-೨೯೯). [ಪೂ₂ + ಸರಿ₂]

**ಪೂಸಿ** 'ಪೂಸು₁' ನೋ.

**ಪೂಸಿಕೆ** (ನಾ). ಬಳಿಯುಂಪಿಕೆ; ಪಚ್ಚುವಿಕೆ; ಲೇಪನ: ಭರದ ತೊಲೆ ಸಿಡುಗಂಭ ಜಂತೆಸುಸ್ತಿಗಳುಮಾ ನರಗಳೇ ಕಟ್ಟುವಿಂದಿಗೆ ಮಾಂಸ ಪಂಕದಾ ಸಱಿಯ ಪೂಸಿಕೆ (ರಕಂ. ೩೯-೧೨). [ಪೂಸು₁ + -ಇಕೆ]

**ಪೂಸಿಮಾತು** (ನಾ). ಪುಸಲಾವಣೆಯ ಮಾತು; ರಮಿಸುವ ಮಾತು: ಅವಳು ಅಳುವ ಮಾಡುಗನನ್ನು ಪೂಸಿಮಾತುಗಳಿಂದ ಸಮಾಧಾನಗೊಳಿಸಿದಳು (ಬೃಹ). [ಪೂಸಿ (<ಪೂಸು₁) + ಮಾತು₁]

**ಪೂಸು₁**, ಪೂಸು₁ (ಕ್ರಿ). ೧. ಬಳಿ; ಸವರು; ತೊಡೆ; ಲೇಪಿಸು: "ಪೂಸು-ವಿಲೇಪನೇ, ಅಪಾನವಾಯಾವಿ" (ಶಮಂ); ಏವಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱೆಯದು ನೀನಿರಾನೆ ರಿಪುಸೇನೆಗೆ ಸಾಲ್ವೆಂ (ಕಾವ್ಯಸಾ. ೯೦೦ ಕೂದ್ರಳ); ಎಮ್ಮ ಮಾವಂ . . . ಕೆಱೆಗೆವೋಗಿ ವಿಮಾನಗಳ್ ತಲೆಯಂ ಪೂಸಲೆಣ್ಣೆಯಸಪ್ಪೂಡವೆಱೆಯಿಸಿಯಮಾಱಿಯಂ (ವಡ್ಡಾರಾ. ೯-೦೬); ಪೂಸಿದರು ಸೇವಕರು ಪರಿಮಳ ವಾಸಿಸುವ ಸಿರಿಗಂಧ ವಸು (ಕೊರಕ. ೬-೨೬-೬೦). ೨. ತೊಳೆ; ಪ್ರಕ್ಷಾಲನ ಮಾಡು: 'ಬಾಯಿಪ್ಪೂಸು' ಪರಾ. ೩. ಪರಿಮಳವನ್ನು ಕೊಡು; ಸುವಾಸನೆಯನ್ನು ಕೊಡು: ಅರೆದ ತೆಂಗಾಯ ಸವಿಹಾಲು ಸಕ್ಕರೆ ಬೆಣ್ಣೆವೆರಸಿ ಪಾಕಂ ಮಾಡಿ ಪೂಸಿದ[ಪಾಠಾಂ. ಪೂವಿನೊ, ಹುವ್ವಿನೊ]ಗ್ಗರಣೆಯಂ ಕೊಟ್ಟು ಪರಿಪೂಳಯಿಡುವುದು (ಸೂಪಶಾ. ೯-೬೨). ೪. (ಅಲಂ) ಸಲ್ಲಿಸು; ಕೊಡು: ಘಾಸಿಯ ನೀ ಮಾಡುತನ್ನನು ಪೂಸಿದರೆ ಧನವನೆಲ್ಲಿ ನಾ ತರಲೀಗ (ಜಮಿ. ೬೩). ೫. (?): ಇದಾನಬೆತ್ತೋನ್ನಿಳ್ಳಿಮಹಾ ಪಾತಕನಾಗಿ . . . ಆಟ್ಟುವೆಣ್ಣತ್ತಲ ಪೂಸುಪೋನಕ್ಕು (ಎಳ. III, ಹಂಕಶ. ೨೬-೬; ಸು. 810). **ಹೂಸು₁**: ೧. ಹಂದಿ ಶ್ರೀಗಂಧವ ಹೂಸಿದಡೇನು ಗಂಧರಾಜನಾಗಬಲ್ಲುದೇ (ದೇದಾಶ. ೨೨-೩೯); ದೂಪಿಸಿದ ಬಿಳಿದುಗುಳ ಸುಟ್ಟನು ಲೇಪನಂಗಳ ಹೂಸಿ ಮಧುರಾಳಿಪದಲೆ ಬೋಳೈಸಿ ಸಾರಥಿ ಗಜಹಮಾಪಳಿಯ (ಕುಮಾ.ಗ. ೦-೨೬); ಎಣ್ಣೆಮಜ್ಜನವಿಲ್ಲದವಳ ತಲೆ ವಾಸಿಹುದೊ ಹೂಸಿ ಎರೆವನು ತನ್ನ ಕೂಸು ಬರಲಿ (ಶಿಕಾಶ. ೩೩-೦೯). ೪. ಬೊಪ್ಪಣಾಗೆ ಹಿಟ್ಟಂ ಹೂಸಿ ಗೆಜ್ಜೆಯ ಹಸ್ಕಿಯಾದು (೩೦. ೦೯೩೦, ಕಾವನಕ. ೬೦-೩೬; 1026). ೬. ಲೇಪಿಸಿಕೊಳ್ಳು; ಬಳಿದುಕೊಳ್ಳು: ಒಲಿಯ ಬೂದಿಯ ಬಿಲಿಯಲು ಬೇಡ ಒಲಿದಂತೆ ಹೂಸಿಕೊಂಡಿಪ್ಪುದು ಹೂಸಿ ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ (ಬಸವ. ೦೧೯).

**ಪೂಸಿಕೊಳ್**, ಪೂಸಿಕೊಳ್ಳು = ೧. ತೊಡೆದುಕೊಳ್ಳು; ಬಳಿದುಕೊಳ್ಳು: ಇದು ಪೇಲಿಮ ಮೆಯ್ಯೊರಬುದನಱಿಯದೆ ಮೆಯ್ಗೆ ಪೂಸಿಕೊಳ್ಳುವು ಮಕ್ಕಳ್ (ಧರ್ಮಾಮೃ. ೩-೭೬೬); ಪೂಸಿಕೊಂಬ ಅನುಲೇಪನ ಮೊದಲಾಗಿ (ಗಜಶಾ. ೨೩೨-೩). ೨. ಶೀಡಿಕೊಳ್ಳು; ನೀವಿಕೊಳ್ಳು: ಪಕ್ಷಿಗಳು . . . ತಮ್ಮ ಗರಿಗಳನ್ನು ಪೂಸಿಕೊಳ್ಳುತ್ತಿರ್ದ್ದವು (ಶಿವತ. ೩). **ಹೂಸಿಹುಂಡನ ಮಾತು**, **ಹೂಸಿಹುಂಡನೆ ಮಾತು** = ತೋರಿಕೆಯನ್ನು ಮಾಡು; ಡಂಭಾಚಾರವನ್ನು ಮಾಡು: ಹೂಸಿಹುಂಡನ **ಮಾಡಿ** ಸಂಗೆಟ್ಯೋಸರಿಸದಸ್ಪುಂತಲಕ್ಷ್ಮವನಾಸುರತೆಯಂ ತೊಡರಿ ಬಿಡದಂತ ಡಗದನ್ಯೋನ್ಯವಾಸಿಯಾಗಿರುತಿರಲು (ಸದ್ಗುರು. ೨ ೬); ನಾನೀಸುದಿನ ಪರಿಯಂತರಂ ಬಹಿಃಕ್ರಿಯೆಗಳಿಂ ಹೂಸಿಹುಂಡನ ಮಾಡಿ ಹೊಱಗೆ ನಾಂ ಪೂಜಿಸೆ ವೃಥಾ ದಿನಂಗಳು ಸವೆದುವು (ಶಂಕ. ೬-೦೦); ಹೂಸಿಹುಂಡನೆ ಮಾಡಿ ಬಾಯ ಸವಿಯ ನುಡಿವರೆಲ್ಲಾ ಭಕ್ತರಪ್ಪರೆ (ಇಪಶಂ. ೨೨೩-೦೦೦೦). [ದೇ. ॥ ತಮಿ. ಮಲ. ಪೂಚು; ತುಳು. ಪೂಜು; ತೆಲು. ಪೂಯು]

**ಪೂಸು₂**, ಹೂಸು₂ (ಕ್ರಿ). ಅಪಾನವಾಯುವನ್ನು ಬಿಡು: "ಪೂಸು ವಿಲೇಪನೇ, ಅಪಾನವಾಯೌ ಚ" (ಶಮಂ). **ಹೂಸು₂**: "ಹೂಸು— ಅಧೋವಾಯೌ" (ಶಮಂ); ಹೂಸಿದವರ್ಯಾರು ಅಂದ್ರೆ ಹಳೇಸೀರೆ ಯಾವರು (ಹುಟ್ಟಿತ. ೦೫೦).

ಮೆಟಿಯಿತ್ತು (ಹಕಣ. ೩-೦೯). **ಹೂಳು**₁ : ೧. ಬೀದಿಯಲ್ಲಿ ಬಿದ್ದ ವಣಿಕ್ಕನ ಹೂಳಿರ್ದ ನಿಧಾನದಾರಿಗೂ ಕಾಣಬಾರದು ನೊ.ಡ (ಅವಕಂ. ೩೨೬-೦೦೩೩); ಒರೆಸಿ ಹಡಿಯಲಿ ಹೂಳಿದನು ಕಿವ್ಮಾರದಾನವನ (ಕುವ್ಯಾ.ಆ. ೦-೪೯) ; ಭ್ರಭರಣ ಧಾನ್ಯ ಬೇವುದೆ ಮಣ್ಣು ಸತ್ತವರನು ಹೂಳಿ ಸುಡುವುದೆ ಮಣ್ಣು (ಪುರಂ.ತ. ೨-೬೦-೩). ೨. ಸರೆ ಸುರಂಗಗಳ ಘಾತವ ಹೂಳಿದರಾಗ ತಳುಪದೆ ಹೋಳಿಶಾಹಿನವರು(ಕಂತಹ. ೦೯-೯೩). ೩. ವಾರಣೌಘವ ಸೀಳಿದನು ಹೂಳಿದನು ರಕುತದಲಿ (ಕುವ್ಯಾ.ಕ. ೨೦-೨೨). ೪. ಹಗಲು ಹೂಳಿ ದರಮವಮ ಬಾಣಾಳಿಗಳಲಸಮವಪಾರಥರು (ಕುವ್ಯಾ.ಉ. ೪-೯೮) ; ಹೊಗರು ಗಣೆ ಹೂಳಿದುವು ಗುರುಸುತನಪಿನಂಬುಧಿಯ (ಕುವ್ಯಾ.ಕ. ೩-೫). ೫. ಉಗಿವ ಹುಂಗಳ ಬಾಯಿದೊಟಿದುಗುವ ಸೆತ್ತರಿಂ ಹೂತೊಟಿಗಿ ಬಂದಾಗೆ ಪೊರೊಟಿಗಿದಂ ಕಲಿ ಸಂಕನು (ಶಾಸ. XX. ೦೨೩-೦೦ ; 1186) : ಅಲಿ ಹೂಳಿದವಶ್ರುಜಲದಲಿ (ಕುವ್ಯಾ.ಸ್ತ್ರೀ. ೦೩-೦) ; ಹೂಳಿದಾಸ್ಯಪಂಕದಲಿ ಹೂತಿರುವೆವು (ಚಿತ್ರ. ೦೨೦-೨೦). ೬. ಮಹಾರಥರೆಸಟಗೆಸುಲಿ ಹೂಳಿದುದು ನಭ ನುಗ್ಗಾಯ್ತು ನೆಲ ಚತುರಂಗಪದಹತಿಗೆ (ಕುವ್ಯಾ.ಕ. ೦೦-೦೨) ; ಅಲ್ಲವು ಹೂಳಿ ಹೋದನು ಕವಣೆಗಲ್ಲಲಿ (ಕೃಶುಂ. ೦೩-೦೯) ; ಹೂಳಿತಂಬರ ರತ್ನ ಮಯ ಕಲಶಾಳಿ ಸತ್ತಿಗೆಗಳಲಿ (ಕೃಹರಾ. ೬-೨೦-೪೯). ೭. ತುಂಬು ; ಗಿಡಿ ; **ಭರ್ತಿ ಮಾಡು** : ಹೊಟ್ಟೆಯ ಹೂಳಲಿಕೆ ಹಿಂಸೆಯನು ಮಾಡುವ ಹೊಲಬು ತಾನಲ್ಲ (ಕೃಶುಂ. ೦-೦೨) ; ಜೋಗಿ ಕಡುದರವೇಸಿ ಜಂಗಮರು ಹಡಗೆಯೊಳಗೆ ಹೂತು ಕೊಡುವನ್ನಪಾನದೆ ಬಿಡದೆ ಸಂತುಷ್ಟಪಡೆದರು (ಕಂಹಿ. ೨೦-೦೦). ೧೦. ಇಂಗಿಸು ; ಪರಿಹರಿಸು ; ನಾಶಪಡಿಸು : ರಾಮಾಯಣವನಾ ಮುನಿ ಹೇಳದನು ಹೂಳಿದನು ಭೂಪನ ಮಾನಸ ವ್ಯಥೆಯ (ಕುವ್ಯಾ.ಆ. ೨೩.೦) ; ವಿಷಯದ ಹೂಳುವದು ನಿಜಮುಕ್ತಿಕಾಂತೆಯ ನಾಳುವದು (ಹಂಚಾ. ೦೦೨) ; ಕರಣಂಗಳನು ಆಳು ಕಾಮಂಗಳನು ಹೂಳು (ಹಂಚಾಕ. ೦೩೩-೫೨). ೧೧. ಅಡಗು ; ಹುದುಗು ; ಮರೆಯಾಗು ; **ಕಾಣದಾಗು** : ಹೂಳಿಹೋಯಿತನ್ನಪಾನದ ಮೇಲಣಿಚ್ಛೆ (ಕೃಶುಂ. ೬-೦೯); ಮುಚ್ಚಿದರಡುತುಟಗಳಲ್ಲಿ ಅರ್ಥವೆಲ್ಲ ಹೂಳಿದೆ (ಅಕಸು. ೨೩-೬). ೧೨. (ಕಣ್ಣು, ಕಿವಿ, ಬಾಯಿ ಮುಂತಾದುದುವನ್ನು) ಮುಚ್ಚು ; **ಮುಚ್ಚಿ ಕೊಳ್ಳು** : ಕಾಳಿ ನಿರ್ವಾಣದಾಕೃತಿಯ ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ ಹೂಳಿದ ದೃಗ್ಯುಗಳವನು (ಮೋಹತ. ೩೬-೨೯). ೧೩. ಹೊಗು ; **ಪ್ರವೇಶಿಸು** : ಹೂಗಣೆ ಹೃದಯದೊಳನು ಹೂಳಿದವು [ಕಹಾಂ. ತಾಗಿದುವು] (ಕುವ್ಯಾ.ಆ. ೨.೬).

**ಹೋಳದು, ಹೂತಿದು** = (ನೆಲದಲ್ಲಿ) ಮುಚ್ಚಿಡು ; ಬಚ್ಚಿಡು : ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ . . . ಹತ್ತುಸಾವಿರಹೊನ್ನು ತಿಪ್ಪೇಲಿ ಹೂಟ್ಟು ವಾತ್ರೆ ಉಪ್ಪಿಲ್ಲದೆ ಉಂಡ್ಕಲ್ಲೊ ಪ್ರಾಣಿ (ಪುರಂದ. ೦-೯೭ ೦) : ಹೆಂಗುಸ ರೆಂದರೆ 'ಗೃಹಸ್ವಾಮಿನಿಯರು', ಎಂಬ ಚೀದವಾದ ಹೆಸರಿನಿಂದ ಅವರನ್ನು ಅಡುಗೆಯ ಮನೆಯಲ್ಲಿ ಹೂಳಿಡುವ ಕಾಲವು ಮುಗಿದು ಹೋಯ್ತು (ಹುಳ್ಳಕ. ೦೪೦) ; ಹಣವನ್ನು ಹೂಟ್ಟು ಅದರ ಮೇಲೆ ಗೋಣಿತಟ್ಟನ್ನು ಹಾಸಿಕೊಂಡು ಯಾವಾಗಲೂ ಅಲ್ಲಿಯೇ ಕೂತಿರುತ್ತಿದ್ದನು (ಕಂಕಿಂ. X. ೩) ; ಗೆದ್ದವರು ಬಳೆಗಾಜನ್ನು ಹೂತಿಡುವ ಕೆಲಸವನ್ನು ಮಹಿಸಬೇಕಾಗುತ್ತದೆ (ಕಹಕೋ. I. ೬೦೩) ; ನೆಲದಲ್ಲಿ ರೂಪಾಯಿ ಹೂತಿಟ್ಟರೇನು ಫಲ ? (ಶಕಂ. I. ೩೭೦).

[ದೇ.॥ ಮಲ. ಪೂಟು, ಪೂಣಾ ; ಕೊಡ. ಪುಳ್ ; ತೆಲು. ಪೂಡುಚು, ಪೂಡ್ಚು ; ಬಾಯ್ಕಿ, ಪುರ್ವ್; ಕೋತ. ಪುಗ್ ]

**ಪೂಟ್ಕೆ** (ನಾ). ಶವವನ್ನು ಹೂಳುವುದು, –ಸಮಾಧಿ ಮಾಡುವುದು : ಇನ್, ಅವಳ ಮೇಲೆಯುಮ್ ಪೂಜಿಸಿದಪನ್, ಈ ಪೂಟ್ಕೆಯಾ ಸಂಟಿ ವೋಳಗೆ ಸರಿಹಾಲ ತಪ್ಪನ್. ಕರೆತನ್ನಮವಳನ್ (ಅಂಚಿಗೊ. ೨೩-೯೬೬).

[ಪೂಟ್ + –ಕೆ]

**ಪೂಟ್ದು** 'ಪೂಟು' ಪರಾ.

**ಪೂಟ್ದು** 'ಪೂಟು' ಪರಾ.

**ಪೃಕ್ತಿ** (ನಾ). ಸ್ಪರ್ಶ ; ಸಂಪರ್ಕ : "ಸ್ಪೃಷ್ಟಿಃ, ಪೃಕ್ತಿಃ – ೨ ಮುಟ್ಟುವಿಕೆ, ಸೋಂಕುವಿಕೆ" (ಸಿದ್ಧಾಂತಿ. ೩೫೭). [ಸಂ.]

**ಪೃಚ್ಛಕ** (ನಾ). (ಪ್ರಶ್ನೆಯನ್ನು) ಕೇಳುವವನು : 'ಪೃಚ್ಛಕಲಗ್ನ' ಪರಾ. [ಸಂ.]

**ಪೃಚ್ಛಕಲಗ್ನ** (ನಾ.) [ಜ್ಯೋತಿ] ಪ್ರಶ್ನಿಸುವ ಕಾಲ : ದಿವಾಕರನಂ ಪೃಚ್ಛಕಲಗ್ನದೊಳ್ ನೆಲಸೆ ಮತ್ತಂ ಗ್ರೀಷ್ಮಮಾ ಕಾಲಮುಂ (ಕಾಹಿ. ೨೯-೬); ಪೃಚ್ಛಕಲಗ್ನದಿಂ ಸರುತದಿಂದಾರೂಢದಿಂ ನೋಡಿದಾ ಬೋಧಂ . . . ಭೋಂಕನೆ ಪೇಟ್ದು ಜೋಯಿಸಮವರ್ಗಂ ಮತ್ತರ್ಕರೊಳ್ ದುರ್ಲಭ (ಕ.ಕುರು. ೩ ೨೦). [ಸಂ.]

**ಪೃಚ್ಛನೆ** (ನಾ). ೧. ಕೇಳುವುದು ; ಪ್ರಶ್ನಿಸುವುದು. ೨. ವಿಚಾರಣೆ. ೩. [ಜೈನ]ವಾಚನ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ—ಎಂಬ ಪಂಚವಿಧಸ್ವಾಧ್ಯಾಯಗಳಲ್ಲಿ ಒಂದು; "ಶಬ್ದಾರ್ಥಗಳೆರಡರಲ್ಲಿಯೂ ಪ್ರಶ್ನೆಗಳನ್ನು ಮಾಡಿ ನಿರ್ಣಯ ಮಾಡಿಕೊಳ್ಳುವುದು" (ಕೃಕಕೋ. ೦೩೨) : ವಾಚನೆಯುಂ ಪೃಚ್ಛನೆಯುಮನುಪ್ರೇಕ್ಷೆಯುಮಾಮ್ನಾಯಮುಂ ಧರ್ಮೋಪದೇಶಮುಮೆಂಬ ಪಂಚವಿಧಸ್ವಾಧ್ಯಾಯದೊಳಂ ನೆಟಿಮ (ಆಕೃ. ೦೨-೪ ವ) ; ವಾಚನಾ – ವಕ್ಖಾಣಿಸುವುದುಂ, ಪೃಚ್ಛನಾ—ಬೆಸಗೊಳ್ವುದುಂ . . . ಧರ್ಮೋಪದೇಶಃ—ಧರ್ಮಮನುಪದೇಶಂಗೆಯ್ವುದುಂ ಎಂಬಯ್ದುಸ್ವಾಧ್ಯಾಯವಿಕಲ್ಪಂಗಳಪ್ಪುವು (ತತ್ತ್ವಸೂ. ೪೯೯); ಸ್ವಾಧ್ಯಾಯವು ವಾಚನೆ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂದು ಅಯ್ದು ಬಗೆಯಾಗಿದೆ (ಕೃಸಹ. ೬೮).

[ಸಂ. ಪೃಚ್ಛನ]

**ಪೃಚ್ಛಿಸು** (ಕ್ರಿ). ಪ್ರಶ್ನೆಮಾಡು ; ಪ್ರಶ್ನಿಸು : "ಗಾಂಧಾರೀನೂ ರಾಜರ ತಾಯಿನಾ ಅಲ್ಲ ಏನರೀ ?" ವಿಶ್ವಾಸ ಪೃಚ್ಛಿಸಿದ (ಅಚಹ. I. ೯೩).

[<ಪೃಚ್ಛನೆ + –ಇಸು]

**ಪೃಚ್ಛೆ** (ನಾ). ೧. ಕೇಳುವುದು; ಪ್ರಶ್ನೆಮಾಡುವುದು; ಪ್ರಶ್ನಿಸುವುದು : "ಪ್ರಶ್ನಃ, ಅನುಯೋಗಃ, ಪೃಚ್ಛಾ–೩ ಕೇಳುವದಕ್ಕೆ ಹೆಸರುಗಳು" (ಸಿದ್ಧಾಂತಿ. ೫೨). ೨. ಪ್ರಶ್ನೆ : ಪರಮಹಂಸಂ ಬಂದು ಕುಳ್ಳಿರ್ದೊಡಿತ್ತು ಬಟ್ಟಿಕ್ಕರ್ಘ್ಯಮನೆಯ್ದೆ ನೀಮೇವಾಗ ಪೇಟಿಂ ಸ್ವೇಚ್ಛೆಯಿಂ ಪೃಚ್ಛೆಯಂ (ಸಂಕಹ. ೩-೬). ೩. ವಿಚಾರಣೆ ಮಾಡುವುದು; ವಿಚಾರಿಸುವುದು.

**ಪೃಚ್ಛಾಪೃಚ್ಛೆ** (ದ್ವಿರುಕ್ತಿ) : ನೀವಿಷ್ಟು ಪೃಚ್ಛಾಪೃಚ್ಛೆ ಮಾಡಿದ ಕಾರಣವೇನೆಂದು ನಮಗಿನ್ನೂ ಹೇಳಲಿಲ್ಲವಲ್ಲ ? (ಅಂಬರು. ೦೯); ಭಾರತೀಯರು, ಇಲ್ಲದ ಪೃಚ್ಛಾಪೃಚ್ಛೆ ಮಾಡದೆ, ಎಷ್ಟೋಸಲ ವಿಚಾರಸಹ ಮಾಡದೆ, ಪರಾತ್ಪರಸತ್ಯವನ್ನು ಒಪ್ಪಿ ಸ್ವೀಕರಿಸಿ ಬಿಡುತ್ತಾರೆ (ಪುಹಾಕೋ. ೦೫೯).

**ಪೃಚ್ಛೆ ಮಾಡು**=ಪೃಚ್ಛಿಸು : ಸಾಮ್ಯವಾದದ ಪ್ರವೃತ್ತಿಗಳ ರಸವೇನು ಎಂದು ಪೃಚ್ಛೆಮಾಡಿ ಆತ್ಮನಲ್ಲಿ ಅವುಗಳ ಉಗಮವನ್ನು ತೋರಿಸಲು ಯತ್ನಿಸುವವನು (ಕಾಹಿ. ೬೯). [ಸಂ. ಪೃಚ್ಛಾ]

**ಪೃಚ್ಛ್ಯ** (ಗು). ೧. ಕೇಳಬೇಕಾದ ; ಪ್ರಶ್ನಿಸಬೇಕಾದ. ೨. ವಿಚಾರಣೆ ಮಾಡಬೇಕಾದ; ವಿಚಾರಿಸಬೇಕಾದ. [ಸಂ.]

**ಪೃತನಾಜಾಳ** (ನಾ). ಸೇನೆಯ ಸಮೂಹ,–ಗುಂಪು : ಗಿರಿರಾಜೋದಗ್ರ ಸಿಂಧೂರಿತರಥಘಟಾಟೋಪಮಂ . . . ಚಿತ್ರನೇತ್ರಾಂಬರನಾನಾ ಹೇತಿಹಸ್ತೋದ್ಭಟಭಟಪೃತನಾಜಾಳಮಂ ಚಿತ್ರದೊಳ್ ವೀರರಸಂ ಕೈಗಣ್ಮೆ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ (ಅಂಕೃ. ೦೪-೯೭).

[ಸಂ. ಪೃತನಾಜಾಲ]

**ಪೃತನೆ** (ನಾ). ೧. ಸೈನ್ಯ; ಪಡೆ : "ಪೃತನಾ, ಸೇನಾ . . . ಅನೀಕಂ

–ಈ ೧೦ ಪಡೆ" (ಕರಾಮು. ೬೩-೪೦೩); ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮಮೆಂದುಂ ವಾಹಿನಿಯೆಂದುಂ ಪೃತನೆಯೆಂದುಂ ಚಮುವೆಂದುಮನೀಕಿನಿಯೆಂದುಮಿಂತೆಂಟುತೆಱದಿಂ ಪಡೆಗೆ ಪೆಸರಕ್ಕುಂ (ಶಂಖಾಪಟ. ೦೩-೯ ವ); ಫಣಿಪತಿ ಪೃತನಾಭರದಿಂ ಪೃಥಗ್ಭಣನಾದುದು ಸೂನೃತಮೆಂದು ಸೂಚಿಪಂತದ್ಭುತಮಾದುದು ಬಾಣಗಮನದೊಳ್ ಘೋಷಕಂಪಂ (ಚಗಿಪು. ೦೬-೪೩); ಅತ್ತಲಾ ತೆರೆತೆರೆ ತೆರಳ್ದುದದ್ಭುತಪೃತನೆ (ಶ್ರೀಚಾಪಟ. ೬೩೨-೯೬). ೨. ೨೪೩ ಆನೆಗಳು, ೨೪೩ ರಥಗಳು, ೭೨೯ ಕುದುರೆಗಳು ಮತ್ತು ೧೨೧೫ ಕಾಲಾಳುಗಳಿಂದ ಕೂಡಿದ ಒಂದು ಸೇನಾವಿಭಾಗ : ಆನೆ ೨೪೩ ರಥ ೨೪೩ ಕುದಿರೆ ೭೨೯ ಕಾಲಾಳು ೧೨೧೫ಅಯದು ೧ ಪೃತನೆಯೆಂಬ ಬಲ (ಪ್ರತಿಹಾ. ಅಪಮಂಶ. ೦-೦೨). ೩. ಕದನ; ಯುದ್ಧ. [ಸಂ. ಪೃತನಾ]

**ಪೃಥಕ್ಕರಣ** (ನಾ). ಬೇರೆಬೇರೆ ಮಾಡುವಿಕೆ ; ವಿಂಗಡಿಸುವಿಕೆ : ವಿಂಗಡಣೆ : ಅಲೆಯು ವೈಜ್ಞಾನಿಕಪೃಥಕ್ಕರಣಕ್ಕೆ (Scientific analysis) ತೆರೆಬಾಗುವ ಶಾಸ್ತ್ರವಲ್ಲ (ರಾಜಕೃ. ೦೨). [ಸಂ.]

**ಪೃಥಕ್ಕರಣೆ** (ನಾ). = ಪೃಥಕ್ಕರಣ : ಈ ವಿಷಯದಲ್ಲಿ ಶ್ರೀಗೋವಿಂದ ಪೈಗಳು ಮಾಡಿದ ಪೃಥಕ್ಕರಣೆ ಯೋಗ್ಯವೇ ಆಗಿದೆ (ಕಕಾಚ. ೬೬); ಈ ಕವಿಯ ಕಾಲಕ್ಕಾಗಲೇ ಭಾಷಾಕ್ಷೇತ್ರದ ಪೃಥಕ್ಕರಣೆ ನಡೆದಿತ್ತೆಂಬುದು ಸಂತೋಷದಾಯಕವಾದ ಮಾತು (ದ್ರಾಪಿಶ. ೦೨ ಹಿನ್ನರಿ). [ಸಂ. ಪೃಥಕ್ಕರಣ]

**ಪೃಥಕ್ಕರಿಸು** (ಕ್ರಿ). ವಿಂಗಡಿಸು ; ವಿಭಾಗಿಸು : ಕಥೆ ಮತ್ತು ರೇಖಾಚಿತ್ರಗಳ . . . ಸಾಮ್ಯ ವೈಷಮ್ಯಗಳನ್ನು ಬರಹಗಾರರೇ ನೇರವಾಗಿ ಪೃಥಕ್ಕರಿಸದೆ, ಬೇರೊಬ್ಬರ ಬಾಯಿಂದ ಹೇಳಿಸಿರುವ ರೀತಿ ಮನೋಜ್ಞವಾಗಿದೆ (ಕ್ರೀಶೃಕೃ. iv ಮುನ್ನುಡಿ); ಕಾದಂಬರಿಗಳಲ್ಲಿ ಪಾತ್ರ ಮೇಲ್ಕಟ್ಟಿದ ಹುಡುಗ—ಹುಡುಗಿಯರ ಗುತ್ತಿಯಲ್ಲ. ಕೇವಲ ಅವರ ಮುಳ್ಳು ಪರಿಚಿದ ಸಂಕಷ್ಟಗಳನ್ನು ಹೇಳುತ್ತ, ವರ್ಣಿಸುತ್ತ, ಪೃಥಕ್ಕರಿಸುವುದೊಂದೇ ಕಾದಂಬರಿಯ ವಸ್ತುವಲ್ಲ (ರಕ್ತರಥ. ಪ್ರಸ್ತಾವ). [ಪೃಥಕ್ಕರಣ + –ಇಸು]

**ಪೃಥಕ್ತ್ವ** (ನಾ). ೧. ಬೇರೆಯಾಗುವಿಕೆ; ಹೊರತಾಗಿರುವಿಕೆ; ಪ್ರತ್ಯೇಕತೆ. ೨. = ಪೃಥಕ್ತ್ವವಿತರ್ಕವೀಚಾರ : ಇರ್ವರುಪಶಮಕರ್ಗಂ ನಾನಾಜೀವಾಪೇಕ್ಷೆಯಿಂ ಸಾಮಾನ್ಯದವೊಲ್ ಏಕಜೀವಾಪೇಕ್ಷೆಯಿಂ ಜಘನ್ಯದಿಂ ಅಂತರ್ಮುಹೂರ್ತಂ ಉತ್ಕೃಷ್ಟದಿಂ ಪಲ್ಯೋಪಮಶತಪೃಥಕ್ತ್ವಂ (ತತ್ತ್ವಸೂ. ೯೦). [ಸಂ.]

**ಪೃಥಕ್ತ್ವವಿತರ್ಕವೀಚಾರ** (ನಾ). [ಜೈನ] ಎಂಟನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದ ಕೆಲವು ಭಾಗಗಳವರೆಗೆ ನಡೆಯುವಂತಹ ಶುಕ್ಲಧ್ಯಾನ; ಪ್ರಥಮಶುಕ್ಲಧ್ಯಾನ: ● "'ವಿತರ್ಕ' ಎಂದರೆ ಶಾಸ್ತ್ರ, 'ವೀಚಾರ' ಎಂದರೆ ವಿಪರೀತವರ್ತನೆ" (ಕೈಪಜೈಅ. ೬೭೨): "ಮೊದಲ ಶುಕ್ಲಧ್ಯಾನದಲ್ಲಿ ೮ನೆಯ ಗುಣಸ್ಥಾನದಿಂದ ೧೨ನೆಯ ಗುಣಸ್ಥಾನದ ಕೆಲವು ಭಾಗದವರೆಗೆ ನಡೆಯುವಂಥದು" (ಜಕ್ಕಾಳ. ಕೈನವಾಂಬಾಪಿಳಕಪ್ಪೋಣಿ); "ಗುಪ್ತಿ ಮುಂತಾದವುಗಳ ಅಭ್ಯಾಸ ಮಾಡಿದವನು ಮತ್ತು ದ್ರವ್ಯಪರ್ಯಾಯಗಳ ಚಿಂತನೆಯಲ್ಲಿ ನಿಪುಣರಾದ ಮುನಿಗಳು ಅರ್ಥ, ವ್ಯಂಜನ, ಕಾಯಯೋಗ, ವಚನಯೋಗ ಇವುಗಳ ಪೃಥಕ್ ಪೃಥಕ್‌ರೂಪದಿಂದ ಸಂಕ್ರಮಣ ಮಾಡುವ ಮನಸ್ಸಿನ ಮುಖಾಂತರವಾಗಿ ಮೋಹನೀಯ ಕರ್ಮ ಪ್ರಕೃತಿಗಳ ಉಪಶಮ ಅಥವಾ ಕ್ಷಯ ಮಾಡುವುದಕ್ಕೋಸ್ಕರ ಉದ್ಯುಕ್ತರಾಗುತ್ತಾರೆ. ಅಂಥವರಲ್ಲಿ ಈ ಶುಕ್ಲಧ್ಯಾನವು ಉದಯವಾಗುತ್ತದೆ" (ಆಪು. ಕೈಪಜಬಾಟಾಪಿಳಕಪ್ಪೋಣಿ) : ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನದೊಳ್ ಕೂಡಿಯುಪಶಾಂತಗುಣಸ್ಥಾನದೊಳಿರ್ದ ರತ್ನತ್ರಯಮಂ ಸಾಧಿಸಿ ಸಮಸಪ್ತಮದೇವನಾಗಿ ಪುಟ್ಟಿದೊಂ (ಪಚ್ಚ್ಯಾರ. ೨೯–೧೩); ಪೃಥಕ್ತ್ವವಿತರ್ಕವಿ[ವೀ]ಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳಹಮಿಂದ್ರನಾದಂ (ಅಪು. ೬–೪೪ ವ): ಪೃಥಕ್ತ್ವವಿತರ್ಕವೀಚಾರಮೆಂಬ ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗಛದ್ಮಸ್ಥಗುಣಸ್ಥಾನವ್ಯವಸ್ಥಿತನಾಗಿ (ಸುಕುಮಾ. ೮–೬೨ ವ). [ಪೃಥಕ್ತ್ವ + ವಿತರ್ಕ + ವೀಚಾರ ?]

**ಪೃಥಕ್ಪರ್ಣಿ** (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೆಗಿಡ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ—೪ ಕೋಲಿವೊನ್ನೆಯೆಂಬುವಮ, ನರಿಹೊನ್ನೇಗಿಡ, ನಕ್ಕಚಿಕ್ಕನಾಕು" (ಸಿದ್ಧಾಂತಿ. ೦೪೩). [ಸಂ. ಪೃಥಕ್ಪರ್ಣೀ]

**ಪೃಥಗರ್ಥ** (ನಾ). ಬೇರೆಯ ಅರ್ಥ : ಪೆಸರೊಳಸಂಭವಮೆನಿಸುಗುಮ ಸಂಭವಂ ತದ್ವಿಶೇಷಣಂ ಪೃಥಗರ್ಥಂ ಪೊಸಯಿಸೆ ಭಿನ್ನರಸಂ ಸುಪ್ರಸಿದ್ಧ ವಾಚ್ಯದೊಳದಲ್ತೆ ವಕ್ರೋಕ್ತಿ ಕರಂ (ಕಾವ್ಯಾಪ. ೬೬೩); ಏಗಂ ಪಲಂ ವೆಟ್ಟಂ ದರ್ ತಾಗುಗುಮತಿನಿಶ್ಚಯಾರ್ಥಮಂ . . . ಬೇಱಬೇಱಯೆನೆ ಪೃಥಗರ್ಥಂ (ಶಮದ. ೩೮೬). [ಸಂ.]

**ಪೃಥಗ್ಜನ** (ನಾ). ೧. ತಿಳಿವಳಿಕೆ ಇಲ್ಲದವನು ; ದಡ್ಡ ; ಪಾಮರ : "ಪ್ರಾಕೃತನಪಶದಂ ಪೃಥಗ್ಜನಿತರಂ ಪಾಮರನೆನಿಪ್ಪನಕ್ಕುಂ ಜಾಲ್ಮಂ" (ಶಬ್ದಮಣಿ. ೬೯–೬೨); ಪೃಥಗ್ಜನಪವಂತುದಾತ್ತಚಿತ್ತಂ ಜನಪತಿ ಧೈರ್ಯಾರ್ಥಂಬು ರಾಶಿ ಚಲಿಯಿಸಿದವನೆ (ಅಕಪು. ೦೦–೯೮). ೨. ನೀಚ ; ದುಷ್ಟ : "ವಿವರ್ಣಃ, ಪಾಮರಃ, ನೀಚಃ, ಪ್ರಾಕೃತಃ, ಪೃಥಗ್ಜನಃ . . . ಇತರಃ—೧೦ ನೀಚನ ಪೆಸರು" (ಸಿದ್ಧಾಂತಿ. ೩೦೨). [ಸಂ.]

**ಪೃಥಗ್ಭಾವ** (ನಾ). ಬೇರೆಯೆಂಬ ಭಾವನೆ, —ಆಲೋಚನೆ ; ಬೇರೆ ಎಂಬ ಕಲ್ಪನೆ : ಅನೇಕ ಪ್ರಕಾರಕಪಟೋಪಾಯಂಗಳಿಂದಿತಸ್ನೇಹಿತರೊಳ್ ಪೃಥಗ್ಭಾವಮಂ ಮಾಡ್ಪುದೇ ಭೇದಮೆಂಬುದು (ಪಂಚತಂ. ೨೦–೨೨) ; ನೀವು ನಾಮೆಂಬೀ ಪೃಥಗ್ಭಾವಾವಲಂಬನವೇಕೆ ನಿಮ್ಮಲಿ ನಾವು ನಮ್ಮಲಿ ನೀವೆಯೆಂದನು ನಗುತ ಕುರುರಾಯ (ಕುಮಾವ್ಯಾ. ೮೩–೩೬) ; ಭಾವಿಸಲು ಯಾದವರೊಳು ಪೃಥಗ್ಭಾವದಲಿ ಸಂಕರುಷಣಾಖ್ಯೆಯೊಳೀ ವಿಬುಧನುತನೆಮ್ಮುವನು (ಜಕಾಗ. ೦೦–೭–೧೦). [ಸಂ.]

**ಪೃಥಗ್ವಿಧ** (ನಾ). ಬೇರೆ ಬೇರೆಯ ರೀತಿ,—ವಿಧ : "ವಿವಿಧಃ, ಬಹುವಿಧಃ, ನಾನಾರೂಪಃ, ಪೃಥಗ್ವಿಧಃ—೪ ಬೇರೆ ಬೇರೆ ರೂಪವುಳ್ಳದ್ದು, ನಾನಾರೂಪವಾಗಿರುವಂಥಾದ್ದು" (ಸಿದ್ಧಾಂತಿ. ೪೯೬). [ಸಂ.]

**ಪೃಥವಿ** (ನಾ). ಭೂಮಿ; ಧರೆ: ಪೃಥವಿಗೊಡೆಗಿದುವೆಂಟುಸಾವಿರಪೃಥುಳಹಯನುಗ್ಗಾಯ್ತು ಗಣನೆಯ ರಥ ಪದಾತಿಯೊಳಿತ್ತಲೆನೆ ಸವಜಿದನು ಪರಬಲವ (ಕೃಷ್ಣಾಗ. ೧–೦೨). [ಸಂ. ಪೃಥವೀ]

**ಪೃಥಾಕು** (ನಾ). ಹಾವು ; ಸರ್ಪ : "ವಿಷಧರಃ, ದಂದಶೂಕಃ. . . ಪೃಥಾಕುಃ, ಕಾಕೋದರಃ . . . ಭುಜಂಗಮಃ—ಈ ೨೫ ಹಾವಿನ ಪೆಸರ್" (ಕರಾಮು. ೦೦೩ ೦೯) ; ಪೃಥಾಕು ಸನ್ನಂಡನನ್ನಕ್ಕಮಂ ವಿಧಿಸುವೀ ಕೃತಿಯಂ ಕಿಱಿದೆನ್ನಬಪ್ಪುದೇ (ಚಿಶಿಂ. ೦ ೦೯). [ಸಂ.]

**ಪೃಥಾಸುತ** (ನಾ). ಕುಂತಿಯ ಮಕ್ಕಳಲ್ಲಿ ಒಬ್ಬ ; ಭೀಮ : ರಥವಾಜಿಗಳೊಂದೆಸೆಯೊಳ್ ರಥಾಂಗಗಳೊಂದೆಸೆಯೊಳುರುಳ್ದು ಕೆಡೆದುವು ನೋಡಾ . . . ಪೃಥಾಸುತಪ್ರಥಿತ ಪೃಥುಗದಾಪ್ರಹರಣೆಯಿಂ (ಗದಾಯು. ೩–೬). ● ಧರ್ಮರಾಯ, ಭೀಮ, ಅರ್ಜುನ ಈ ಮೂವರೂ ಕುಂತಿಯ ಮಕ್ಕಳಾದರೂ ಅರ್ಜುನನೊಬ್ಬನಿಗೇ ವಿಶೇಷವಾ. ಈ ಹೆಸರನ್ನು ಅನ್ವಯಿಸುವುದುಂಟು ಮತ್ತು ಪಾಂಡವರಲ್ಲಿ ನಕುಲ ಸಹದೇವರು ಮಾದ್ರಿಯ ಮಕ್ಕಳಾದರೂ ಒಟ್ಟು ಪಾಂಡವರೈವರಿಗೂ ಅನ್ವಯಿಸಿ ಹೇಳುವುದು ಬಳಕೆಯಾಗಿದೆ.

**ಪೃಥಾಸುತರ್** —ಕುಂತಿಯ ಮಕ್ಕಳು ; ಪಾಂಡವರು: ನಿರ್ದೋಷಿಗಳೊಳ್ ಪೃಥಾಸುತರೊಳಿಂ ಮಗುಳ್ದುಂ ಪುದುವಾಟ್‌ನೆಂಬೆನೇ (ಕಂಪಕಾ. ೦೩-೦೯) ; ಆಗದು ಮಾಡಿದ ನಿಮ್ಮ ಮಕ್ಕಳ ವಿಗಡತನಕಂಜದರೋ ದುರಿತದ ಸೊಗಡಿಗಂಜಿದರೋ ಪೃಥಾಸುತರೆಂದೆಳಿಂಮುಪಾಯಿ (ಕುಮಾ್ಯ.ಸ. ೦೫-೯೬). [ಸಂ.]

**ಪೃಥಿವಿ** (ನಾ). ೧. ಪಂಚಭೂತಗಳಲ್ಲಿ ಒಂದು ; ನೆಲ ; ಧರೆ ; ಭೂಮಿ : "ಭೂಃ, ಭೂಮಿಃ, ಪೃಥಿವೀ . . . ಧರಾ, ಅಧಾರಾ—ಈ ೩೭ ಭೂಮಿಯ ಪೆಸರ್" (ಹಲಾಯು. ೨೬.೦) : ಸೊಗಯಿಸಿಪೆಂದು ಪೃಥಿವ್ಯಾದಿಗಳೆನಿಸುವ ಪಂಚಭೂತಮೊಳ್ದನುಟಾದಾವಗಮುಜ್ಜ್ವಲಾಂಗಿಯಂ ಧವಳಗುಣದೆ ನಿರ್ವಿಗಸಿದನಾಗವೇಟ್ಟುಂ ಧಾತ್ರಂ (ಕಾದಂಸಂ. ೬೬೦) ; ಪೃಥಿವಿ ನೆಗ್ಗಿತು ಹೊತ್ತ ಕವಾಠನ ವ್ಯಥೆಯುನಾರುಸುರುವರು ಸುಮಹಾರಥರ ಹೊರಬಿಲಿ ಹೊಕ್ಕನುರಿ ಬಲುಮಳೆಯ ಹೊಕ್ಕಂತೆ (ಕುಮಾ್ಯಕ್ವ್ರೀ. ೨-೩೦) ; ಮತ್ತಂ ಪೃಥ್ವಂಶಮರ್ಧಮುಂ ಮಿಕ್ಕ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ಪೃಥಿವಿಯೆನಿಕ್ಕುಂ (ಚಳಿಶ. ೨೯ ಕ). ೨. ಮಣ್ಣು.

**ಪೃಥಿವಿಯಾತ್ಮಜೆ**—ಭೂಮಿಯಲ್ಲಿ ಜನಿಸಿದವಳು ; ಸೀತೆ : ಪೃಥಿವಿಯಾತ್ಮಜೆ ಬಳಿಕ ಚೇತರಿಸಿ ತನಗಿನ್ನು ಪಥಮಾವುದೆಂದು ದೆಸೆದೆಸೆಗಳಂ ನೋಡಿ . . . ಹಲುಬಿದಳ್ಕಲ್ಲರಂ ಕರಗುವಂತೆ (ಕೃಖಿಕಾ. ೦೯-೩೬). [ಸಂ.]

**ಪೃಥಿವಿಜೆ** (ನಾ). ಭೂಮಿಯಲ್ಲಿ ಹುಟ್ಟಿದವಳು ; ಸೀತೆ : ಪೃಥಿವಿಜೆಯುನಟಸಲ್ಕೆ ವೀರಹನುಮಂತನಂ ಕಳುಹಿದಂ ಕಾಕುತ್‌ಸ್ಥನು (ಕೃಖಿಕಾ. ೦೯-೩). [ಸಂ. ಪೃಥಿವಿಜಾ]

**ಪೃಥಿವಿಪ** (ನಾ). ಭೂಮಿಯ ಒಡೆಯ; ಪೃಥ್ವೀಪತಿ : ಬಂದುದೆ ಪೃಥಿವಿಪನ ಮುಖಕೆದರಕಟಯೆನುತೆ ಮನದೊಳಗೆ ಕೃಷ್ಣನಂ ಧ್ಯಾನಿಸಿದನು (ಕೃಖಿಕಾ. ೦೩-೨೦). [ಸಂ.]

**ಪೃಥಿವಿಪಂಚಕ** (ನಾ). [ವೇದಾಂತ] ಭೂಮಿಯ ಅಂಶದಿಂದ ಉತ್ಪನ್ನವಾದ ವಾಕ್ಕು, ಪಾಣಿ, ಪಾದ, ಪಾಯು ಮತ್ತು ಉಪಸ್ಥಗಳೆಂಬ ಐದರ ಗುಂಪು : ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳ್ಕಿದಸ್ಸು ಇವು ಪೃಥಿವಿಯ ಅಯಿದುಭಾಗಗಳಿಂದ ಉತ್ಪನ್ನವಾದವುಗಳು, ಇವು ಪೃಥಿವಿ ಅಂಶವಾದ್ದರಿಂದ ಇವುಗಳನ್ನು ಪೃಥಿವಿಪಂಚಕವೆಂದು ಹೇಳುವರು (ವೇದಾಂತ. ಶಾಂತ್ಯಾಕೂಶ್ರ). [ಸಂ.]

**ಪೃಥಿವಿಪತಿ** (ನಾ). ಭೂಮಿಯ ಒಡೆಯ ; ರಾಜ : ಪೃಥಿವಿಪತಿ ಕೇಳಿದೆಯ ಮೇಲೆ ಕೋಲ್ಗೀಲಿಸರ್ ಪೃಥಿಸಿ ವ್ಯೈವಾಟಿದನು (ಕೃಖಿಕಾ. ೬-೩೯). [ಸಂ.]

**ಪೃಥಿವಿಪಾಲ** (ನಾ). =ಪೃಥಿವೀಪಾಲ. [ಸಂ.]

**ಪೃಥಿವೀಚಕ್ರ** (ನಾ). ಭೂಮಂಡಲ ; ಭೂಭಾಗ : ಪೃಥಿವೀಚಕ್ರಂ ಪ್ರಕಂಪಾಕುಳಿತಮುದಧಿಸೀಮಾತಿಮಾತ್ರಂ ಘನಾಧ್ವಂ ಪಥಿಕಾಂಭೋವಾಹಮಪ್ಪಂತೊದವೆ ಬಹುಳಪಕ್ಷಾನಿಳಂ ಕೂಡೆ ಬಂದಂ . . . ಆ ವೈನತೇಯಂ (ಜಗಂ. ೦೦-೯೦). [ಸಂ.]

**ಪೃಥಿವೀಧಾತು** (ನಾ). [ತತ್ತ್ವಶಾ] ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಮತ್ತು ಋತುಗಳೆಂಬ ಆರು ಧಾತುಗಳಲ್ಲಿ ಒಂದು : ಪೃಥಿವೀಧಾತು . . . ಋತುಧಾತು ಇವುಗಳೇ ಆರು ಧಾತುಗಳು. ಇವುಗಳಲ್ಲಿ ಪೃಥಿವೀಧಾತುವು ಅಂಬುರದಲ್ಲಿ ಕಾಠಿಣ್ಯವನ್ನು ಮತ್ತು ಗಂಧವನ್ನು ಹುಟ್ಟಿಸುವುದು (ಕಾಶಕ್ಕೃ. ೨೦೯). [ಸಂ.]

**ಪೃಥಿವೀಪತಿ** (ನಾ). ಭೂಮಿಯ ಒಡೆಯ ; ರಾಜ : ಪೃಥುಲಯಶನಮಿತತೇಜಂ ಪೃಥಿವೀಪತಿನತಕಿರೀಟಮಣಿಗಣಕಿರಣಗ್ರಥಿತಪದಪೀಠ ನಾಗಳ್ ರಥನೂಪುರಚಕ್ರವಾಳಪುರಮಂ ಪೊಕ್ಕಂ (ಶಾಂತೀಶ್ವ. ೬-೦೬೩). [ಸಂ.]

**ಪೃಥಿವೀಪಾಲ, ಪೃಥಿವೀಪಾಳ** (ನಾ). ಭೂಮಿಯನ್ನು ಪಾಲಿಸುವವನು ; ಭೂಮಿಯ ರಕ್ಷಕ ; ರಾಜ. ಪೃಥಿವೀಪಾಳ : ಪೃಥಿವೀಪಾಳಸಹಸ್ರಂ ಪ್ರಥಿತಮಹೀನಾಥನಂತೆ ದೀಕ್ಷೆಯನಾಂತೇಂ ಕಥಿಯಿಪೊಡೆ ಯಥಾರಾಜಾ ತಥಾಪ್ರಜಾಯೆಂಬ ನೀತಿಯಂ ಪ್ರಕಟಿಸಿತೋ (ಪಾಕ್ಕಗ. ೦೫-೫೦). [ಸಂ.]

**ಪೃಥಿವೀಪಾಳ** 'ಪೃಥಿವೀಪಾಲ' ನೋ.

**ಪೃಥಿವೀರಾಜ್ಯಂಗೆಯ್** (ಕ್ರಿ). ಭೂಮಿಯನ್ನು ಆಳು ; ರಾಜ್ಯಭಾರ ಮಾಡು : ಗಂಡತ್ರಿಣೇತ್ರ ಶ್ರೀಬೆಯ್ದುಂಬಮಹಾರಾಜರ್ ಪೃಥಿವೀರಾಜ್ಯಂಗೆಯೆ (ಎಇ. XXIV. ೨೬-೯ ; ಸಂ. ೩೩೬). [ಸಂ. ಪೃಥಿವೀ + ರಾಜ್ಯಂಗೆಯ್]

**ಪೃಥಿವೀಶ್ವರ** (ನಾ). ಭೂಮಿಯ ಒಡೆಯ ; ರಾಜ : ಆ ಪೃಥಿವೀಶ್ವರಂ ಪಗಲ ತಿಂಗಳೆನಚ್ಚರಿವಟ್ಟು ನೋಡಿದಂ (ಕಂಪ್ರತಿ. ೯-೬). [ಸಂ.]

**ಪೃಥು** (ಗು). ೧. ವಿಸ್ತಾರವಾದ ; ವಿಶಾಲವಾದ. ೨. ದೊಡ್ಡದಾದ ; ಗಾತ್ರವಾದ : ಪೃಥುಕಮಲಪರಿಮಲಪರಾಗಭರದಿಲಿದಿಂ . . . ಪರಮಜಿನರಾಜನಂ ದುರಿತಾಬ್ದರಾಜನಂ ಪೂಜಿಸಿ (ಕಂಪ್ರತಿ. ೬-೦೦೦ ರಗಳೆ) ; ಪಾಂಡುಸುತರ್ಕೈವರು ನಡೆಯಲು . . . ಆ ಪೃಥುಕಾಕ್ಷರನು ಸಪ್ತಮವಾಗಿ ಕಾನನಸುಸರಿಸಿದುದು (ಅಮ್ರು. ೦-೦೯). ೩. ಅಸಂಖ್ಯವಾದ ; ಲೆಕ್ಕವಿಲ್ಲದ ; ಹೇರಳವಾದ. ೪. ವಿವರವಾದ. ೫. ವಂಶ್ಯವಾದ. ೬. ವಿವಿಧವಾದ; ಬೇರೆಬೇರೆಯ. ೭. ಚತುರನಾದ; ಕುಶಲತೆಯುಳ್ಳ. (ನಾ). ೮. ವಿಶಾಲವಾಗಿರುವಿಕೆ : ವಿಸ್ತಾರವಾಗಿರುವಿಕೆ: "ಬಹು ಭೂಯಿಷ್ಠಮದಭ್ರಂ ಬಹುಳಂ . . . ಪೃಥು ಗುರು ಮಹದ್ವಿಶಾಳಂ ವಿಶಂಕಟಂ ವಿಸ್ತೀರ್ಣಂ" (ಚಸ್ತ್ರಕೋ. ೦೦೬-೩೩) ; "ಬೃಹದುರು ಪುರು ಪೃಥುಳ ಪೃಥು . . . ವ್ಯೂಢಮೆನೆ ವಿಸ್ತೀರ್ಣಮೆಂದೆನಿಕು" (ಕುಂಗಣ. ೦೨೬-೮). ೯. ದೊಡ್ಡದಾಗಿರುವುದು ; ಹಿರಿದಾದುದು : "ಬೃಹತ್ . . . ಪೃಥು, ಪೃಥುಳು . . . ಭದ್ರಂ, ವರಿಷ್ಠಂ—ಈ ೧೨ ಹಿರಿದು" (ಹಲಾಯು. ೦೦೬-೦೯). ೧೦. ಒಂದು ಬಗೆಯ ಜೀರಿಗೆ ; ಕರಿಜೀರಿಗೆ : "ಸುಷವೀ, ಕಾರವೀ, ಪೃಥ್ವೀ, ಪೃಥುಃ, ಕಾಲಾ, ಉಪಕುಂಚಿಕಾ—೬ ಕರೀಜೀರಿಗೆ" (ಸಿದ್ಧಾಂತ. ೩೯೯). ೧೧. ಹಿಂಗಿನ ಮರ : "ಕಾರವೀ, ಪೃಥ್ವೀ, ಬಾಷ್ಪಿಕಾ, ಕಬರೀ, ಪೃಥುಃ—೫ ತತ್ಪತ್ರೀ—ಆ ಹಿಂಗಿನ ಮರದ ಹೆಸರುಗಳು" (ಸಿದ್ಧಾಂತ. ೨೯೩). ೧೨. ಅಗ್ನಿ. ೧೩. ವಿಷ್ಣು. ೧೪. ಮಹಾದೇವ ; ಶಿವ. ೧೫. ಅಷ್ಟವಸುಗಳಲ್ಲಿ ಒಬ್ಬ. ೧೬. ಅಫೀಮು. ೧೭. ಪ್ರಸಿದ್ಧರಾದ ಹದಿನಾರು ಜನ ಚಕ್ರವರ್ತಿಗಳಲ್ಲಿ ಒಬ್ಬ ; ಈ ಭೂಮಿಯನ್ನು ಆಳಿದ ಮೊದಲನೆಯ ರಾಜ ಇವನೇ ಎಂದೂ ಇವನಿಂದಲೇ ಭೂಮಿಗೆ 'ಪೃಥ್ವೀ' ಎಂಬ ಹೆಸರಾಯಿತೆಂದೂ ನಂಬಿಕೆಯಿದೆ : ಮಹಿಯೊಳುದಿದರೇ ಪೃಥುಪುರೂರವ ಹರಿಶ್ಚಂದ್ರಾದಿ ನರಪತಿಗಳು (ಕೃಖಿಕಾ. ೦೫-೩೯). [ಸಂ.]

**ಪೃಥುಕ** (ನಾ). ೧. ಅವಲಕ್ಕಿ : "ಪೃಥುಕಮೆನಲವಲಕ್ಕುಂ" (ಚಸ್ತ್ರಕೋ. ೯೬-೦೫) ; "ಅವಲಕ್ಕಿ ಪೃಥುಕಮಕ್ಕು" (ಕುಂಗಣ. ೦೦೦-೬). ೨. ಯಾವುದೇ ಪ್ರಾಣಿಯ ಮರಿ ; ಶಾಬ. ೩. ಮಗು ; ಶಿಶು : "ಬಾಲಃ, . . . ಪೋತಃ, ಪೃಥುಕಃ, ಶಿಶುಃ, ಶಾಬಃ, ಡಿಂಬಃ— ಈ ೯ ಮಗುವು" (ಹಲಾಯು. ೦೩-೪೯೬). ೪. ಒಂದು ಬಗೆಯ ರತ್ನ ; ಪಚ್ಚೆ : ಪಿಸ್ತ್ರಕವೆಂಬುವದು ಗಿಣಿಯ ರೆಕ್ಕೆಯಂತೆ ಇರುವುದು . . . ಪೃಥುಕವೆಂಬುವದು ತಾವರೆಯ ಎಲೆಯ ವರ್ಣವಾಗಿಯಿರುವುದು (ಶ್ರೀಗಂಧಿ. ೬೬೭-೦೬). [ಸಂ.]

**ಪೃಥುಕತ್ವ** (ನಾ). ಎಳೆತನ ; ಬಾಲ್ಯ ; ಶೈಶವ : ದೊರೆವೆತ್ತುದು ಪೃಥುಕತ್ವಂ ಪರಮನೊಳಾತ್ಮೀಯಜನನಿಯುದರದೊಳಿರ್ದಂ ಪರಿಕಿಪೊಡಾಕ್ರಾಂತಚರಾಚರಗೋಚರಸಕಳಭುವನನಾದುದಜಿಂದಂ (ಶಂಕ್ರತಿ. ೦೨-೦೬೩). [ಸಂ.]

**ಪೃಥುಕುಂಭ** (ನಾ). ವಿಶಾಲವಾದ ಕುಂಭಸ್ಥಳಪ್ರದೇಶ : ಪೃಥುಕುಂಭು ದೀರ್ಘಹಸ್ತಂ ವಿಪುಳತರರದಂ ಪೀನಬದ್ಧೋದರಂ . . . ಮೇಚಕೋಚ್ಛ್ರಾಂಡಚಂಚತ್ಪೃಥುವಿಭೃತ್ವಪ್ರವ್ಯಕಾಯಂ ಘನನಿನದಮದೇಂ ಬಂದುದೋ ದಂತಿಪಾಳಂ (ಧಾಶಕ್ತಿ. ೦೪-೬೬). [ಸಂ.]

**ಪೃಥುತ್ವ** (ನಾ). ವಿಶಾಲವಾಗಿರುವಿಕೆ : ವಿಸ್ತೀರ್ಣತೆ : "ಪೃಥುತ್ವಮೆಂಬುದಕ್ಕುಂ ಪ್ರಥಿಮಂ" (ಶಬ್ದಕೋ. ೦೦೫-೨೬). [ಸಂ.]

**ಪೃಥುನಿತಂಬಿನಿ** (ನಾ). ವಿಶಾಲವಾದ ನಿತಂಬವನ್ನು ಉಳ್ಳವಳು : ಲಲಿತವಿಲಾಸಿನಿಯಂ ಕೋಮಳಾಂಗಿಯುಂ ಪೃಥುನಿತಂಬಿನಿ[ಶಾಂತಿ. ಪೃಥುನಿತಂಬಬಿಂಬೆ]ಯನುಟೆಯದಂ (ಶಾಂತಿ. ೩-೦೨). [ಸಂ. ಪೃಥುನಿತಂಬಿನೀ]

**ಪೃಥುನಿತಂಬೆ** (ನಾ). = ಪೃಥುನಿತಂಬಿನಿ : ಆ ಪೃಥುನಿತಂಬೆ ನಿತಂಬಭರಪರಿಸ್ಖಲಿತಪದವಿನ್ಯಾಸದಿಂದಂಬೆಯುಂ ಪೆಳಂಚಲೆವ ತನ್ನುಟಿಲ ಕೇಣವುಮಂ . . . ಅವಲೋಕಿಸುತ್ತುಂ (ಶಂಗಾಪು. ೯-೦೨೦ ವ); ಪೆಱತೊಂದೆಡೆಯೊಳೊರ್ವ ಪೃಥುನಿತಂಬೆ . . . ಆ ತಳಿರಂ ತನ್ನ ಸೋರ್ಮುಡಿಯೊಳ್ಮುಡಿದು (ಧಾಶಕ್ತಿ. ೦೦-೪೪ ವ).
[ಸಂ. ಪೃಥುನಿತಂಬಾ (ಪೃಥು + ನಿತಂಬ + —)]

**ಪೃಥುಯಶ** (ನಾ). ೧. ಅತಿಶಯವಾದ ಕೀರ್ತಿ. ೨. ಅತಿಶಯವಾದ ಕೀರ್ತಿಯನ್ನು ಹೊಂದಿದವನು : ಸಾಹಿತ್ಯನಟೀಶೈಲೂಷನತ್ಯೂರ್ಜಿತ ಶುಭಚರಿತಂ ಸಜ್ಜನಾಧಾರನಿರ್ದಂ ದ್ಯುನದೀಫೇನಪ್ರಕಾಶಪ್ರಥಿತಪೃಥುಯಶಂ ಭಾರತೀಕರ್ಣಪೂರಂ (ಶಂಗಾಪು. ೬-೦೭೦). [ಸಂ. ಪೃಥುಯಶಸ್]

**ಪೃಥುರೋಮ** (ನಾ). ಮೀನು. ತಿಮಿಂಗಿಲ ಮೊದಲಾದ ಜಲಚರ ಪ್ರಾಣಿ : "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಶಾರಂ ಮತ್ಸ್ಯಂ ಮೀನವೆಸರ್ ತದ್ಭೇದಮನೂನತಿಮಿತಿಮಿಂಗಿಳಾದಿ ಪೃಥುರೋಮಂಗಳ್" (ಶಬ್ದಕೋ. ೨೨-೫) ; ಪೃಥುರೋಮವೇಶ ತಿಮಿಂಗಿಲಂ ತಿಮಿಯ ನೂರ್ಗಲ್ ಸಿಂಧು ತಾನುಕ್ಕಿದೇ (ಕೋಟೀಶ. ೬೮) ; ಪ್ರಸಾದವ . . . ಪೃಥುರೋಮ ಭುಂಜಿಸಲು ಜಾಲವನಿಕ್ಕಿಯದನೊಯ್ದು ಧೀವರಂ ಭಕ್ಷಿಸಿದನೀರ್ವರ್ಗೆ ಪದಪಾದೆ ಶಿವಲೋಕವಾಯಿತು (ಧಾಶಕ್ತಿ. ೦೨-೨೨).
[ಸಂ. ಪೃಥುರೋಮನ್]

**ಪೃಥುಲ, ಪೃಥುಳ** (ಗು). ೧. ವಿಶಾಲವಾದ ; ವಿಸ್ತಾರವಾದ : ಶ್ರೀವಧೂಚಂಚತ್ಕಾಂಚನಲೀಲಾಮಂದಿರ ಶ್ರೀನಿಲಯ ಪೃಥುಲವಕ್ಷಸ್ಥಲಂ ತೀರ್ಥನಾಥಂ (ಅಜಿತ. ೫-೯೯). ೨. ದೊಡ್ಡದಾದ; ಗಾತ್ರವಾದ : ನೂತಸುವರ್ಣದ ಚಿತ್ರಮಂಟಪದ ಮಧ್ಯದೊಳು ಪೃಥುಲನವರತ್ನನವಮಣಿ ಖಚಿತಸಿಂಹಾಸನದಿ . . . ಸಿದ್ಧನಾಥೇಶಗುರುಮೂರ್ತಿಯೊಪ್ಪಿರ್ದನು (ಗುರುಸಿದ್ಧ. ೦-೪೦) ; ಪೃಥುವಿಗಿಳಿದತ್ರಿಕುಲವಾ ಪೃಥುಲಪುಷ್ಪರಂ(ಶ್ರೀಧಾಮ. ೨೦೬-೧೯೪). ೩. ಅಸಂಖ್ಯವಾದ ; ಲೆಕ್ಕವಿಲ್ಲದ. ೪. ಅಧಿಕವಾದ ; ಅತಿಶಯವಾದ : 'ಪೃಥುಲಯಶ' ಪರಾ. (ನಾ). ೫. ದೊಡ್ಡವನು; ಹಿರಿಯ : ಸೃಷ್ಟಿಮೂಲಪ್ರಥಮನಾಂ, ಸ್ಫೂರ್ತಿಯಾಂ, ಪೃಥುಲಸವ್ ಸುಖದುಃಖಪಾಶದಿಂ ಜೀವರನು ಬಂಧಿಸುವೆನಾಂ ಭಾಪಜಾ ! (ಚಿತ್ರಾಂಗ. ೨೪-೬೨೬). **ಪೃಥುಳ** : ೧. ಪೃಥುಳಭುಜದಿಂ ಪೃಥ್ವೀಶಾ ತಾಳ್ದಿದಂ ನೆಲನೆಲ್ಲಮಂ (ಗದಾಯು. ೦೬). ೨. ಅಂಗರುಚಿ ಶರಭಬಲವಂ ಬಲದ ವಾಜಿಕರಣಂಗಳಂ ಲೋಹಿತಾಕ್ಷಿಗಳತುಳಭೂಧರಶೃಂಗವಂ ಪೃಥುಳಕಂಧರ ಮೃಗಲುಲಾಯರಿತುಮಹಿಷಿಗಳ ನಡುವಿರ್ದುದು (ಹರಿಶ್ಚಂ. ೫-೩೮) ; ಪೃಥುಳಕರ್ಕಶಕುಚಂಗಳ ನಿಮ್ನನಾಭಿಯ ಕೃಶಸುಮಧ್ಯದ ತನುಲತೆಯ ಗಜಗಮನೆಯಂ ನೋಡಿ (ಚಿತ್ರ. ೦೨-೫); ಪೃಥವಿಗೊಪ್ಪಿಗದೆಂಟುಸಾವಿರ ಪೃಥುಳಹಯ ನಂಗ್ರಾಯುತ್ತ ಗಣನೆಯ ರಥ ಪದಾತಿಯೊಳಿಕ್ಕಲಿನೆ ಸಪಚುದನು ಪರಬಲವ (ಶಬ್ದಾಂಗ. ೦-೦೨). ೪. ಪೃಥುಳಬಳವಾಜಿಗಳ್ ಮಣಿರಥಂಗಳ್ ಪರಿಸುತಿರದೆ ಪರಿದುವು ರಣದೊಳ್ (ತ್ರಿಪುರ. ೨೪-೩೦೯). 'ಪೃಥುಳಬಲ' ಪರಾ. ೬. ವಿಶಾಲವಾಗಿರುವಿಕೆ : ವಿಸ್ತಾರವಾಗಿರುವಿಕೆ : "ಬೃಹದುರುವುರು ಪೃಥುಳ ಪೃಥು . . . ಪ್ರಾಥಮನೆ ವಿಸ್ತೀರ್ಣಮೆಂದೆನಿಕು" (ಕುಂಗಣ. ೦೨೬-೬). ೭. ದೊಡ್ಡದು; ಗಾತ್ರವಾದುದು : "ಬೃಹತ್, ಉರು, ಗುರು, ವಿಸ್ತೀರ್ಣಂ, ಪುರು, ಪೃಥು, ಪೃಥುಳಂ . . . ವರಿಷ್ಠಂ—ಈ ೧೨ ಹಿರಿದು" (ಕರ್ಣಾಟಕ. ೦೦೬-೦೪). [ಸಂ.]

**ಪೃಥುಲಯಶ** (ನಾ). ಅತಿಶಯವಾದ ಯಶಸ್ಸನ್ನು ಹೊಂದಿದವನು ; ಅಧಿಕವಾದ ಕೀರ್ತಿಯನ್ನು ಪಡೆದವನು : ಪೃಥುಲಯಶನಮಿತತೇಜಂ . . . ರಥನೂಪುರಚಕ್ರವಾಳಪುರವಂ ಪೊಕ್ಕಂ (ಶಾಂತೀಶ್ವ. ೬-೧೩೬).
[ಸಂ. ಪೃಥುಲಯಶಸ್]

**ಪೃಥುಲೆ** (ನಾ). ಪಾರ್ವತಿ ; ಶಿವೆ : ಶರ್ವಾಣಿ ಮೃಡೆ ರುದ್ರಾಣಿ ಪೃಥುಲೆ ನಿಗಮಾಲಯೆ ಸಹಸ್ರಭುಜಸಂಯುಕ್ತೆ (ಕರ್ಣ. II. ೬-೪).
[ಸಂ. ಪೃಥುಲಾ]

**ಪೃಥುವಿ, ಪಿಟ್ರುವಿ, ಪಿಟ್ದುವಿ, ಪುಡವಿ, ಪೊಡವಿ, ಪ್ರಿತುವಿ, ಪ್ರಿಥುವಿ** (ನಾ). = ಪೃಥಿವಿ ೧ : ಶ್ರೀಪೃಥುವಿಸಾಗರ ಶ್ರೀಮದುಪಳಪೇನ್ದ್ರ ಸೋಮವಂಶೋದ್ಭವ ಕುಲತಿಲಕನ್ (ಎಕ. IX, ೨೧-೦ ; ಕ್ರಿ. ೮೦೦); ಪೃಥುವಿ ನೆಗ್ಗಲು ಸುಭಟಸಾಗರಮಥನ ಕರ್ಣನು ಭೀಮಸೇನನ ರಥವನಬಿಸುತ ಬಂದು ಪುನರಪಿ ಕಾಳೆಗವ ಹಿಡಿದ (ಕುಮಾರವ್ಯಾ. ೦೪-೪೨) ; ರಥಿಕರಿಬ್ಬರು ಮುಲತು ನಿಲಲು ಬೊಬ್ಬಿರಿದು ಸಾರಥಿಗಳಿಬ್ಬರು ತೇರ ತೇಜಿಯಂ ಚಪ್ಪರಿಸಿ ಪೃಥುವಿ ನೆಗ್ಗಲ್ಸುಭಟರುದ್ದಂಡಶಾಮರ್ಗವನೊದರಿಸುತ ಹೂಂಕರಿಸುತ (ಕುಮಾಂಗ. ೫೫-೫೦). △ **ಪಿಟ್ರುವಿ** : 'ಪಿಟ್ರುವಿರಾಜ್ಯಂಗೆಯ್' ಪರಾ. △ **ಪಿಟ್ದುವಿ** : 'ಪಿಟ್ದುವಿಪತಿ' ಪರಾ. **ಪುಡವಿ** : ಪುಡವಿಯೊಳಗ್ಗಳನ್ ನೆಗಟ್ದ ದಾನಿಗಳಿನ್ನಿವರನ್ನರ್ ಆರೊ ಪೇಟ್ (ಎಕ. IV. ನಾಗಮಂ. ೦೯-೪೨ : 1118 ?) ; ಚರಿಸಿದರ್ವು ಸತ್ಯಕಂ ಪು[ಶಾಂತಿ. ಪೊ]ಡವಿಯೋಳ್ಮಾವ (ಕುಮಾಂಗ. ೪೩-೩೬). **ಪೊಡವಿ** : ಪೊಡವಿ ಪಟ್ಟಂಡಕ್ಕಡಿಯುಡು ಪಡಿಗಳಂ ತೊಳಗಿ ಬೆಳಗುವ ಪೆಜಿನೊಸಲಂ ಪಡೆದ . . . ಬಾಲಕನಂ . . . ಎತ್ತಿಕೊಂಡಿರ್ದ್ದನ ದೇವಿ ಬಂದಳ್ (ಶಾಂತಿ. ೦೦-೯); ಹಗೆ ಕೆಡಲಿ ಕೌರವರಾಯನಾಳಲಿ ಪೊಡವಿಯನು ಪರಿತೋಷವಾಗಲಿ ನೃಪನ ಚಿತ್ತರಿಗೆ (ಕುಮಾರವ್ಯಾ. ೩-೫೬); ಸುಡುವರೆ ಪಂಜಿಹದು ಬಡಿಯೆ ಭೇರಿಯು ಇಹುದು ಪೊಡವಿಯಾಳ್ವರ ಮದುವೆಯ ವೆಚ್ಚಕೊವದಡಿಕೆಲೆಯು ಬೇಡ (ಸರ್ವಜ್ಞ. ೬೪೬); ಪೊಡವಿಯಲ್ಲಿದ್ದಪಗೆ ಅಡವಿ ಗೊಡವೆ ಯಾಕೆ? (ಗಾದೆ). **ಪ್ರಿತುವಿ** : ಹೊಯ್ಸಳ ಶ್ರೀ ವೀರಬಲ್ಲಾಳದೇವರು ಪ್ರಿತುವಿ ರಾಜ್ಯಂಗೆಯ್ಯುತಿರಲು (ಎಕ. X (೬). ಕೋಲಾರ. ೩೨-೪ ; 1342). **ಪ್ರಿಥುವಿ** : ದೋರು ಪ್ರಿಥುವಿರಾಜ್ಯಂಕೆಯ್ಯೆ (ಎಕ. VI. ೦೬೩-೦; 780). P 'ಪೃಥುವಿ' ಎಂಬುದರ ಜೊತೆಗೆ ಪರ್ಯಾಯರೂಪವಾಗಿ ಬಂದಿರುವ ಈ ಎಲ್ಲಾ ಶಬ್ದರೂಪಗಳಲ್ಲಿ 'ಪುಡವಿ', 'ಪೊಡವಿ' ಎಂಬ ಎರಡು ರೂಪಗಳನ್ನು ಬಿಟ್ಟು ಮಿಕ್ಕುವೆಲ್ಲ ಅಪಲಿಖಿತಗಳು.
[< ಸಂ. ಪೃಥ್ವೀ./ಪ್ರಾ. ಪುಢವಿ, ಪುಢವೀ]

**ಪೃಥುವೀರಾಜ್ಯ** (ನಾ). ವಿಸ್ತಾರವಾದ ಸಾಮ್ರಾಜ್ಯ : ಸ್ವಸ್ತಿಶ್ರೀಸಾನ್ತರಸ ಪೃಥುವೀರಾಜ್ಯದುಳ್ . . . ಬೆಸಗೆಯ್ವಲ್ಲಿ ಮಾರಲಿ ಬಟಾರಂಗೆ ಕೊಟ್ಟಾರ್ (ಎಕ. VI, ಕೊಪ್ಪ. ೩೯-೨; ಸು. 700); ಸ್ವಸ್ತಿ ಶ್ರೀಕೊಂಗಣಿವರ್ಮಮಹಾರಾಜ ಶ್ರೀಪುರುಷ ಪೃಥುವೀರಾಜ್ಯ ವಿಜಯಸಂವತ್ಸರ ಇಪ್ಪರ್ದಾ ಎಣ್ಟನೆಯೊಳು (ಎಕ. X. ಕೋಲಾರ. ೬-೦; 753). [< ಸಂ. ಪೃಥ್ವೀರಾಜ್ಯ]

**ಪೃಥುಶ್ರೋಣಿ** (ನಾ). ವಿಶಾಲವಾದ ಜಘನವನ್ನುಳ್ಳವಳು : ಅತನಧಾರಿಣಿ . . . ಪರಮಕಲ್ಯಾಣಿ ಭವಪಾತಕಾತೀತೆ ತತ್ವಾನುಭವೆ ಮಾವರಬಿತೆ ಅತತಪೃಥುಶ್ರೋಣಿಯರುಣಪಲ್ಲವಪಾಣಿಯಾ ವಿಮಲ ರುದ್ರಾಣಿಯು (ಧಾಶಕ್ತಿ. ೦-೪೫). [ಸಂ. ಪೃಥುಶ್ರೋಣೀ]

**ಪೃಥುಸತ್ತ್ವ** (ನಾ). ೧. ಹೆಚ್ಚಾದ ಬಲ – ಸಾಮರ್ಥ್ಯ; ಪರಾಕ್ರಮ. ೨. ಹೆಚ್ಚಾದ ಸಾಮರ್ಥ್ಯವನ್ನುಳ್ಳ ವ್ಯಕ್ತಿ; ಪರಾಕ್ರಮಿ: ಪೃಥುಸತ್ತ್ವಂ . . . ಜಗತ್ಪ್ರಥಿತಕ್ಷಾತ್ರಗುಣಂ ಭುವತ್ಪದಪಯೋಜಾತಾಂಚಿತ ಕೃಟ್ಟದಿಂ ಪೃಥಿವೀಪಾಲನೃಪಾಲನುಜ್ಜ್ವಲಯಶಂ ಮತ್ತಾಶ್ವಿ ಸತ್ಯೇಮದಿಂ (ಶಂದ್ರಪ್ರ. ೯-೯೬); ಪೃಥುಸತ್ತ್ವರ್ ದೇವದೈತ್ಯರ್ ತಮಗಭುತ ವಾಗಲ್ಕೆ ಸಂರಂಭದಿಂದಂ ಪಥುಸಲ್ ಮಾಂಗಲ್ಯವಸ್ತುಪ್ರಕರವಮನಮೃತಾ ಹಾರವಂ ಕೊಟ್ಟು . . . ಪ್ರಖ್ಯಾತಿವೆತ್ತಂ ಸಲೆ ಜಲಚರಸಂಘಾತರೌದ್ರಂ ಸಮುದ್ರಂ (ರಕಾ. ೬-೩). [ಸಂ.]

**ಪೃಥುಸ್ಕಂಧ** (ನಾ). ೧. ದೊಡ್ಡ ಭುಜಗಳನ್ನುಳ್ಳುದು; ಅಗಲವಾದ ಹೆಗಲನ್ನುಳ್ಳುದು: ದೀರ್ಘವಾಲಂ ಪೃಥುಸ್ಕಂಧಂ . . . ಸುನಾಸಾಪುಟಮವರ್ದ ತುರಂಗಂಗಳಂ ಕಾಣ್ಕೆಗೆಯ್ದಂ (ರಾಜಶೇ. ೦೨-೧೦೦). ೨. ದೊಡ್ಡ ಕೊಂಬೆಗಳನ್ನುಳ್ಳುದು: ಕಾಂತಾರಾಂತರದೊಳ್ . . . ಅತಿದೀರ್ಘ ಪೃಥುಸ್ಕಂಧಮುಮಪ್ಪುದೊಂದು ಮಹಾವಟವಿಟಪಿಯೊಳನೇಕವಿಹಗಕುಳಂ ಗಳಿರ್ಪವು (ಶಂಕರಂ. ೨೮೮-೨೨). ೩. ಹಂದಿ; ವರಾಹ. [ಸಂ.]

**ಪೃಥುಳ** 'ಪೃಥುಲ' ನೋ.

**ಪೃಥುಳಗತಿ** (ನಾ). ಸರ್ವಾಂತರ್ಯಾಮಿ; ಪರಮಾತ್ಮ: ಶಿತಿಕಂಠ ಪೃಥುಳಗತಿ ವರದಹತಮಲವಿರತವಿತತಿ ಹೃನ್ನಳಿನಭೃಂಗ . . . ಮಾಯಾದೂರ ಸತತ ರಕ್ಷಿಸುಗೆಮ್ಮುಮಂ (ಅಕಾಲೇ. ೦-೬). [ಸಂ. ಪೃಥುಲಗತಿ]

**ಪೃಥುಳಬಲ, ಪೃಥುಳಬಳ** (ನಾ). ೧. ಹೆಚ್ಚಾದ ಬಲ; ಅತಿಶಯವಾದ ಶಕ್ತಿ; ಪರಾಕ್ರಮ. ೨. ಹೆಚ್ಚು ಶಕ್ತಿಯುಳ್ಳವನು; ಪರಾಕ್ರಮಿ. ಬಳಿರಥಿಕರೀತನ ಬಟ್ಟು ಹಾಯ್ದರು ಪೃಥುಳಬಲನೈ ಭೀಮನೆಚ್ಚನು ಗುರುತನೂಭವನ(ಕುಮ್ಮಾ. ಕ. ೬-೨೩). **ಪೃಥುಳಬಳ:** ೨. ಪೃಥುಳಬಳಮಾದಿ ಕೂರ್ಮಂ . . . ಮಿಥಿಳಾಪುರದರಸನೆಂಬ ಮಹಿಮಾವರ್ಮಂ(ರಕಾ. ೦೦-೩). [ಸಂ. ಪೃಥುಲಬಲ]

**ಪೃಥುಳಬಳ** 'ಪೃಥುಳಬಲ' ನೋ.

**ಪೃಥ್ವಿ** (ನಾ). ೧. ಪಂಚಮಹಾಭೂತಗಳಲ್ಲಿ ಒಂದು; ಧರೆ; ಭೂಮಿ: "ಭೂ, ಭೂಮಿ . . . ಪೃಥ್ವೀ, ಪೃಥವೀ . . . ಧರಾ, ಅಧಾರಾ—ಈ ೩೭ ಭೂಮಿಯ ಪೆಸರ್" (ಹಲಾಯು ೨೬-೦); ಪೃಥ್ವಿಯೊಳಗಿಲ್ಲ ಆಕಾಶದೊಳಗಿಲ್ಲ ಚತುರ್ದಶಭುವನಾದಿ ಭುವನಂಗಳೊಳಗೆಯೂ ಇಲ್ಲ ಹೊಱಗೆಯೂ ಇಲ್ಲ ಏನಾಯಿತ್ತೆಂದಱಿಯೆನಯ್ಯ (ಅಪಶಂ. ೩೬-೬೨೦);ನವದ್ವಾರಗಳ ಮುಚ್ಚಿ ಶಿವಧ್ಯಾನದೊಳಗಿರಲು ನವಖಂಡ ಪೃಥ್ವಿಯೊಳಗಣ ಮಾತೆಲ್ಲ ಕಿವಿಯೊಳಗೆ ಇಹುದು(ಸರ್ವಜ್ಞ. ೩೪೯); ಗಗನಮಂ ಪೃಥ್ವಿಯಂ ವಾರ್ಧಿಯಂ ಪರ್ವತಾರಣ್ಯ ವಿಸ್ತಾರಧೀರೋದಾತ್ತಗಾಂಭೀರ್ಯಮಂ . . . ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾವಿಸಿದನಾ ಭೂಮಿಪಂ (ಶ್ರೀರಾಮಾ. ೦೨-೩೦೭). ೨. ಕರಿಜೀರಿಗೆ: "ಸುಷವೀ, ಕಾರವೀ, ಪೃಥ್ವೀ, ಪೃಥುಃ, ಕಾಲಾ, ಉಪಕುಂಚಿಕಾ—೬ ಕರೀಜೀರಿಗೆ" (ನಿಘಂ.೩೩೯). ೩. ದೊಡ್ಡ ಏಲಕ್ಕಿ. ೪. ಹಿಂಗಿನ ಮರ: "ಕಾರವೀ, ಪೃಥ್ವೀ, ಬಾಷ್ಪಿಕಾ, ಕಬರೀ, ಪೃಥುಃ — ೫ ತತ್ಪತ್ರೀ—೮ ಹಿಂಗಿನ ಮರದ ಹೆಸರುಗಳು" (ನಿಘಂ.೩೩೯) .೫. [ಛಂದ] ಪಾದದಲ್ಲಿ ಹದಿನೇಳು ಅಕ್ಷರಗಳಿರುವ, ಅತ್ಯಷ್ಟಿಛಂದಸ್ಸಿನ ಒಂದು ವೃತ್ತದ ಹೆಸರು: ಇನಾನಿಲ ದಿನೇಶ ಪೂತುತಪಯೋಲಗಂಗಳ್ಪಡಂಗನಾಳ್ದು ನಿಲೆ ವಿಶ್ರಮಂ ಪಸುಗಳಲ್ಲಿ ಚಿಹ್ನಗೆ ನೀಲನೀರಜವಿಲೋಚನೇ ಬಗೆದು ಕೇಳಿದಂ ಪೃಥ್ವಿಯೆಂಬ ಪಾವುದಿನಿದಲ್ತೆ ಸಂದುದು ನಿರಂತರಂ ಪೃಥ್ವಿಯೊಳ್ (ಛಂದೋಂಬು. ೨-೦೬೯); ಜಸಜಸಯಲಂಗಮೊಂದಿದೊಡೆ ಪೃಥ್ವಿಯೆಂಬರ್ ಬುಧರ್ (ಛಂಸಾ. ೮೫). ೬. [ಜೈನ] ಷಡ್ದ್ರವ್ಯಗಳಲ್ಲಿ ಒಂದು: ದ್ರವ್ಯಗಳು ಆರು ವಿಧಗಳೆಂದು ವಿಭಾಗ ಮಾಡಿರುವುದರಿಂದ ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲದಲ್ಲಿ ಸೇರಿರುವುವು (ಹಿಂದಶಾ. ೬೦). 'ಷಡ್ದ್ರವ್ಯ' ನೋ. [ಸಂ. ಪೃಥ್ವೀ]

**ಪೃಥ್ವಿಕೆ** (ನಾ). ೧. ದೊಡ್ಡಜಾತಿಯ ಏಲಕ್ಕಿ: "ಪೃಥ್ವಿಕಾ, ಚಂದ್ರಬಾಲಾ, ಏಲಾ, ನಿಷ್ಕುಟಿಃ, ಬಹುಲಾ—೫ ದೊಡ್ಡಯಾಲಕ್ಕೀ ಹೆಸರುಗಳು" (ನಿಘಂ.೩. ೦೪೧). ೨. ಜೀರಿಗೆ: "ಜೀರಿಗೆಯಜಾಜಿ ಪೃಥ್ವಿಕೆಯಕ್ಕು" (ಬಂಗರಾ. ೪೦ ೩೪). [ಸಂ. ಪೃಥ್ವಿಕಾ]

**ಪೃಥ್ವಿತತ್ತ್ವ** (ನಾ). ಮಣ್ಣಿನ ಸ್ವಭಾವ; ಭೂಮಿಯ ಗುಣ: ಘಟತತ್ತ್ವ ಪೃಥ್ವಿಭೇದವಾಗಿ ಆತ್ಮತತ್ತ್ವ ಅಪ್ಪುಭೇದವಾಗಿ ತೇಜತತ್ತ್ವ ಅಱಿವುಭೇದವಾಗಿ . . . ಪೃಥ್ವಿತತ್ತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು (ಷೋಷೀಮ. ೬-೨೩). [<ಸಂ. ಪೃಥ್ವೀತತ್ತ್ವ]

**ಪೃಥ್ವಿಮಂಡಲ** (ನಾ). ಭೂಮಂಡಲ; ಭೂಗೋಳ: ವಜ್ರದಿಂದಂಕಿತಮಪ್ಪ ನಾಲ್ಕು ರೇಖೆಗಳನ್ನುಳ್ಳುದು ಹೊಂಬಣ್ಣಮಾಗಿರ್ಪುದು ಪೃಥ್ವಿಮಂಡಲಂ (ಶ್ರಕಿಪ್ಪಾ. ೦೦-೩೨). [<ಸಂ. ಪೃಥ್ವೀಮಂಡಲ]

**ಪೃಥ್ವಿವಲ್ಲಭ** (ನಾ). ದೊರೆ; ರಾಜ: ಶ್ರೀಪೃಥ್ವಿವಲ್ಲಭ ಮಹಾರಾಜಾಧಿರಾಜಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ . . . ಆಚಂದ್ರಾರ್ಕತಾರಂಬರಂ ಸಲುತ್ತಮಿರೆ (ಶಾಇ. XX. ೯೬-೩; 1072). [<ಸಂ. ಪೃಥ್ವೀವಲ್ಲಭ]

**ಪೃಥ್ವೀಗೋಳ** (ನಾ). = ಪೃಥ್ವಿಮಂಡಲ: ಪಾಠಶಾಲೆಗಳಲ್ಲಿರುವ ಒಂದು ಅಡಿ ವ್ಯಾಸದ ಪೃಥ್ವೀಗೋಳದಲ್ಲಿ ಅತ್ಯಂತ ಎತ್ತರವಾದ ಪರ್ವತವೆಂದು ತೋರಿಸಲು ಒಂದು ಸಣ್ಣ ಮರಳುಕಣವನ್ನು ಉಪಯೋಗಿಸಿರುವರು (ಕೂಆಶ. ೯). [ಸಂ. ಪೃಥ್ವೀಗೋಲ]

**ಪೃಥ್ವೀತತ್ತ್ವ** (ನಾ). = ಪೃಥ್ವಿತತ್ತ್ವ: ಅವಳ ಮಾಂಸಲದೇಹವು ಪೃಥ್ವೀತತ್ತ್ವಕ್ಕೆ ಜೋತುಬಿದ್ದು ಕುಡಿಚಿಯನ್ನು ಒಮ್ಮೆ ಪ್ರಭು ಎಂದು ಒಪ್ಪಿಕೊಂಡಿತ್ತು (ಸಮಜ. ೬೩೦). [ಸಂ.]

**ಪೃಥ್ವೀಧವ** (ನಾ). ಭೂಮಿಯನ್ನು ಆಳುವವನು; ಭೂಮಿಯ ಒಡೆಯ; ದೊರೆ; ರಾಜ: ಶಿವಶಿವಾ ಪವಡಿಸಿತೆ ಚತುರಂಗವಿಪರಿಪರಿಧಾನ ಪೃಥ್ವೀಧವನ ಬಾಳಿಕೆ ನೀರೊಳೆಂದಳಲಿದನು ಗುರುಸೂನು (ಕುಮ್ಮಾ. ಗ. ೯-೬), ಪ್ರಣತಪ್ರತ್ಯರ್ಥಿಪೃಥ್ವೀಧವನಿವಹಕಿರೀಟಾಗ್ರಮಾಣಿಕ್ಯಮಾಲಾಪ್ರಣಿ ಚಂಚಚ್ಚಂಚಲಾಂಚತ್ಸುರವಮಣಿಮಹಾಪೀಠಮೇಘಸ್ಫಾದಂ . . . ಲಸದ್ಭಕ್ತಿನಾ ರಾಜ ಚೂಡಾಮಣಿ ಪೆಂಪಂ ತಾಳ್ದು ಕಣ್ಗೊಪ್ಪಿದಂ (ರಾಜಶೇ. ೩-೦೩). [ಸಂ.]

**ಪೃಥ್ವೀಪಾಲ** (ನಾ). ಭೂಮಿಯ ರಕ್ಷಕ; ದೊರೆ; ರಾಜ: ಖೂಳ ಗೋವರಹಳ್ಳಿಯಲಿ ಕಟ್ಟಾಳಲಾ ಬಳಿಕೇನು ಪೃಥ್ವೀಪಾಲರೀಕಗೆ ಸರಿಯ ದಿಟದಿಟವೆಂದನಾ ಚೈದ್ಯ (ಕುಮ್ಮಾ. ಸ. ೦೦-೦೨); ನೆರೆದ ಪೃಥ್ವೀಪಾಲರಿಗೆ ವಿಪ್ರರಿಗೆ ಮಣಿಮಯದಾಲಯಂಗಳು ಸವದವೈಗಾಪುದದಱಿಕೆ ಯಲಿ (ಕೂರಾಮ. ೦-೦೩-೦). [ಸಂ.]

**ಪೃಥ್ವೀರಾಮ** (ನಾ). ಒಬ್ಬಾತನ ಹೆಸರು: ಶ್ರೀಮದಮರೇಂದ್ರವಿಭವೋದ್ದಾಮಂ ಸಂಗ್ರಾಮರಾಮನೂರ್ಜಿತತೇಜಂ ಭೀಮಪರಾಕ್ರಮನೆನಿಸಿದನೀ ಮಹಿಯೊಳ್ ಪೃಥ್ವೀರಾಮನನುಪಮರೂಪಂ (ಶಾಇ. XX. ೦೮-೦೦; ೯೮೦). [ಸಂ.]

**ಪೃಥ್ವೀವಲ್ಲಭ** (ನಾ). = ಪೃಥ್ವೀಧವ: ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ದ್ವಾರಾವತೀಪುರವರಾಧೀಶ್ವರಂ ವಿಷ್ಣುವಂಶೋದ್ಭವಂ (ಕೂಶಾ. ೦೬-೩೪; 1160); ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ (ಶಾಇ. XX. ೫೦-೨; ೯). [ಸಂ.]

**ಪೃಥ್ವೀಶ** (ನಾ). = ಪೃಥ್ವೀಧವ : ಪೃಥ್ವೀಶಕೋಟೀರವ್ಯಾಪ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತವಮಂ ಗೆಲ್ದ ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ (ಜಗ. ೧-೧). [ಸಂ.]

**ಪೃಥ್ವೀಶ್ವರ** (ನಾ). = ಪೃಥ್ವೀಧವ : ಅಖಿಳಪೃಥ್ವೀಶ್ವರರ ಬಹಳಾಸ್ಥಾನದಲಿ ಮೋಹಿಸಿದರು ಮೋಹನದ ಮೋಡಾವೊಡಿಯಬಲೆಯರು (ಕುಮ್ಯಾ.ಅ. ೦೩-೪೪). [ಸಂ.]

**ಪೃಥ್ವೀಸ್ವರ** (ನಾ). (ಭೂಮಿ, ಜಲ, ಅಗ್ನಿ, ವಾಯು ಮತ್ತು ಆಕಾಶಗಳೆಂಬ ಪಂಚಭೂತಗಳಿಗೆ ಸಂಬಂಧಿಸಿದ ನಾಳಗಳಿಂದ ಹೊರಡುವ) ಪಂಚಸ್ವರಗಳಲ್ಲಿ ಒಂದು (?) : ಇಡೆ ಪಿಂಗಳೆಂಬೆರಡು ನಾಡಿಗಳಿಂದೊಡಗೂಡಿದೆರಡು ನಾಳಗೀಹವು ಅವುಗಳೊಳಗೊ:ದೊಂದು ನಾಳದಲ್ಲಿ ಪೃಥ್ವೀಸ್ವರ ಅಪ್ಪುಸ್ವರ ತೇಜಸ್ಸಿನ ಸ್ವರ ವಾಯುವಿನ ಸ್ವರ ಆಕಾಶಸ್ವರ ಇಂತೀ ಪಂಚಸ್ವರಸಂಜ್ಞೆಯಿಂ ತಾಳಿ ಕಾಲಕಲ್ಪಿತ್ವಿಯಿಂ ಉಚ್ಛ್ವಾಸ ನಿಶ್ವಾಸವಾಯುವೇ ಸಂಚರಿಸುತ್ತಿಹುದು (ಶಿವೇಶ. ೦೬೭). 'ಆಕಾಶಸ್ವರ' ವರಾ. [ಸಂ.]

**ಪೃದಾಕು** (ನಾ). ೧. ಹಾವು ; ಸರ್ಪ : "ಉರಗಂ . . . ಪೃದಾಕು ಭುಜಗಂ ಕುಂಭೀನಸಂ ಪನ್ನಗಂ ಪುರುದಾಶಂ ಶನಿಗೂಢಪಾದ್ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ" (ಚಿಕ್ಕ.ಕೋ. ೦೯-೭). ೨. ಚೇಳು ; ವೃಶ್ಚಿಕ. ೩. ಹುಲಿ; ವ್ಯಾಘ್ರ. ೪. ಆನೆ; ಗಜ. ೫. ಚಿರತೆ. ೬. ಒಂದು ಬಗೆಯ ಮರ. [ಸಂ.]

**ಪೃಶ್ನಿ** (ಗುಂ). ೧. ಚಿಕ್ಕ : ಕುಳ್ಳಾದ : ಕುಬ್ಜ. ೨. ದುರ್ಬಲವಾದ : ಕ್ಷೀಣವಾದ. ೩. ಚುಕ್ಕೆಗಳಿಂದ ಕೂಡಿದ. ೪. ಬೇರೆಬೇರೆಯ : ವಿಭಿನ್ನವಾದ. (ನಾ). ೫. ಕುಳ್ಳಾಗಿರುವವನು ; ಕುಬ್ಜ : "ಗಡುಳಂ ತಾಂ ಕುಬ್ಜನಲ್ಪಸತ್ವನುಪರಿಗತಂ ಪೃಶ್ನಿ[ಯಾತಂ] ಕಿರಾತಂ" (ಚಿಕ್ಕ.ಕೋ. ೬೯-೪೦). ೬. ಕದಿರು ; ಕಿರಣ. ೭. ಭೂಮಿ. ೮. ನಕ್ಷತ್ರಗಳಿಂದ ತುಂಬಿದ ಆಕಾಶ. ೯. ಮೋಡ : ಮೇಘ. ೧೦. ಕೃಷ್ಣನ ತಾಯಿ; ದೇವಕಿ. ೧೧. ಹಾಲು; ಕ್ಷೀರ. ೧೨. ಮೈಮೇಲೆ ಮಚ್ಚೆಗಳಿರುವ ಹಸು. [ಸಂ.]

**ಪೃಶ್ನಿಪರ್ಣಿ** (ನಾ). ಒಂದು ಬಗೆಯ ಸಸ್ಯ : ನರಿಹೊನ್ನೆಗಿಡ : "ಪೃಶ್ನಿಪರ್ಣಿ ಫನರ್ಜಕಂ" (ಚಿಕ್ಕ.ಕೋ. ೩೬-೨೩). 'ಪೃಥಕ್ಪರ್ಣಿ' ವರಾ. [ಸಂ. ಪೃಶ್ನಿಪರ್ಣೀ]

**ಪೃಷತ** (ನಾ). ೧. ಮೈಮೇಲೆ ಚುಕ್ಕೆಗಳಿರುವ ಜಿಗರೆ.– ಎರಳೆ; ಸಾರಂಗ : "ಸಾರಂಗಃ, ರು(ಮ)ಪ್ಯಃ, ಪೃಷತಃ, ರುರುಃ — ಈ ೪ ಸಾರಂಗಂ" (ಹಲಾಯು. ೩೯-೬೬). ೨. ತುಂತುರು : ಹನಿ : "ಪೃಷತ ವಿಪ್ರುಟ್ಸ್ತೋಕ್ಷಂ" (ಚಿಕ್ಕ.ಕೋ. ೨೪-೧೯). [ಸಂ.]

**ಪೃಷತ್ಕ** (ನಾ). ಬಾಣ; ಶರ : "ಕಂಕಪತ್ರಃ . . . ಪೃಷತ್ಕಃ, ಪತ್ರೀ, ಖಗಃ, ಶಿಲೀಮುಖಃ, ರೋಪಃ–ಈ ೧೬ ಅಂಬು" (ಹಲಾಯು. ೬೩-೩೦೩): ಉತ್ಕೋಪದಹನದೊಡನೆ ಪೃಷತ್ಕಂಗಳ್ ಕೋಟಿಗಣಿತದಿಂದುಜುವಿನಂ... ಎಚ್ಚಂ (ಶಂಕರಾ. ೦೨-೬) ; ಇರದೆ ವಿಮಚ್ಛರಾಧಿಪತಿಯಚ್ಚ ಕೃಶಾನು ಪೃಷತ್ಕಮಂ ಪಯೋಧರಶರದಿಂ ಅಜಿತಸೇನನದ:ಕ್ಕಿರದೆಚ್ಚು ತೂಳ್ದಿದಂ (ಕಂದ್ರಕೃ. ೬-೩೯). [ಸಂ.]

**ಪೃಷದಶ್ವ** (ನಾ). ದೇಹದಲ್ಲಿ ಬೇರೆ ಬೇರೆ ಬಣ್ಣಗಳನ್ನುಳ್ಳ ಕುದುರೆಗಳನ್ನು ಹೊಂದಿರುವಂತಹುದು ; ಗಾಳಿ ; ವಾಯು : "ಪವನಃ, ಶ್ವಸನಃ . . . ಪೃಷದಶ್ವಃ, ಪವಮಾನಃ . . . ಮಹಾಬಲಃ — ಈ ೨೦ ಗಾಳಿಯ ಪೆಸರ್" (ಹಲಾಯು. ೦೯-೬೩) ; ವಿಶ್ವಮೂರಾತಿ ಗಗನ ಶಿಖಿ ಪೃಷದಶ್ವ ಜಲತತ್ತ್ವಾತ್ಮನಾಗಿರೆ ಕಂಡನಸುರೇಂದ್ರ (ಕೂಹಾ. ೬-೩೦-೪೪). [ಸಂ.]

**ಪೃಷದಶ್ವಸಖ** (ನಾ). ವಾಯುಸಖ : ಅಗ್ನಿ : ಅಶ್ವತ್ಥಾಭರಣ ಪೃಥಾಸ್ವರ ಶಶಾಂಕಪೃಷದಶ್ವಸಖ ಚಂಡಸಪ್ತಾಶ್ವಲೋಚನ . . . ಜಯ ಶಶ್ವದಗಣಿತ ಚಿತ್ಸುಖ (ಕಾರ್ತ್ರ.ರೀ. ೬-೩೦). [ಪೃಶದಶ್ವ+ಸಖ]

**ಪೃಷದಾಜ್ಯ** (ನಾ). (ಹೋಮಕ್ಕೆ ಉಪಯೋಗಿಸಲೆಂದು ಸಿದ್ಧಪಡಿಸುವ) ಮೊಸರಿನೊಂದಿಗೆ ಬೆರಸಿದ ತುಪ್ಪ : "ಪೃಷದಾಜ್ಯಂ . . . ಮೊಸರಿನಿಂದೊಡಗೂಡಿದ ತುಪ್ಪ, ಮೊಸರು ಬೆರೆತ ತುಪ್ಪ" (ಸಿಧ್ಯಾ.ಕಿ. ೨೨೦) ; ಗುರುಸೂನು . . . ಸರೆನರಂಗಳ ದರ್ಭೆ . . . ವಿಶಾಳದನು ಮಜ್ಜೆಗಳ ಪೃಷದಾಜ್ಯ ಅರುಣಜಲದಾಜ್ಯಾಹುತಿಯ ವಿಸ್ತರದ ವಿರಚಿತ ನಿಗಮಮಂತ್ರೋಚ್ಚರಣೆಯಲಿ ಪೂರ್ಣಾಹುತಿಗೆ ತನ್ನೊಡಲನೊಪ್ಪಿಸಿದ (ಕುಮ್ಯಾ.ಗ. ೯-೨೨). [ಸಂ.]

**ಪೃಷಿತ** (ನಾ). ಸುರಿಯುತ್ತಿರುವ ಹನಿ ; ತುಂತುರು ಮಳೆ : "ಪೃಷಿತಂ, ಪೃಷತಮಿನೆ ಕೆದರ್ದ ಕಿಱುವನಿಗಳಕ್ಕು" (ಮುಂಗಲಾ. ೬೪೯-೦೩). [ಸಂ.]

**ಪೃಷ್ಠ** (ನಾ). ೧. ಹಿಂಬದಿ ; ಹಿಂಭಾಗ : 'ಪೃಷ್ಠಭಾಗ' ವರಾ. ೨. ಶರೀರದ ಹಿಂಭಾಗ; ಬೆನ್ನು : "ಪೃಷ್ಠಂ, ಪಶ್ಚಿಮಭಾಗಃ — ಈ ೨ ಬೆನ್" (ಹಲಾಯು. ೬೬-೩೭೪); "ಬೆನ್ನದು ಪಶ್ಚಿಮವುಂ ಪೃಷ್ಠಮಕ್ಕು" (ಮುಂಗಲಾ. ೯೭-೦೩). ೩. ಪಿರ್ರೆ ; ಕುಂಡೆ : ಆಸನದ ಪೊಱಗೆ ಪೃಷ್ಠಮಿದೆಸನಿಪಾ ಪೆಸರದಕ್ಕುಂ (ಅಕ್ಷಕಾ. ೯-೪೪). ೪. ಪುಟ ; ಹಾಳೆ : ಹಾಳೆ ಅಥವಾ ಪತ್ರಸಂಪುಟಯನ್ನು ದಕ್ಷಿಣದಲ್ಲಿ ಪೃಷ್ಠ ಅಥವಾ ಪ್ರಥಮಪುಟದ ಮೇಲೂ ಇತರ ಕಡೆ ಎರಡನೆಯ ಪುಟದ ಮೇಲೂ ಗುರುತಿಸುತ್ತದೆ (ಛಾರಿಕ. ೨೦).

ಪೃಷ್ಠಮಾಂಸಾದನ = ಒಬ್ಬ ವ್ಯಕ್ತಿಯ ಬೆನ್ನ ಹಿಂದೆ ಆಡಿಕೊಳ್ಳುವಿಕೆ : (*). [ಸಂ.]

**ಪೃಷ್ಠಕ** (ನಾ). ೧. ಹಿಂಭಾಗ ; ಬೆನ್ನು. ೨. [ಜೈನ] ಅರುವತ್ತು ಮೂರು ದೇವವಿಮಾನ ಅಥವಾ ಇಂದ್ರಕಗಳಲ್ಲಿ ಒಂದು ; "೧. ಋತು, ೨. ವಿಮಳಂ, ೩. ಚಂದ್ರಂ, ೪. ವಲ್ಗು, ೫. ವೀರಂ, ೬. ಅರುಣಂ, ೭. ನಂದನಂ, ೮. ನಳಿನಂ, ೯. ಕಾಂಚನಂ, ೧೦. ಲೋಹಿತಂ, ೧೧. ಚಂಚನ್ನಾಮಂ, ೧೨. ಮರುತಂ, ೧೩. ಋದ್ಧೀಷಂ, ೧೪. ವೈಡೂರ್ಯಂ, ೧೫. ರುಚಕಂ, ೧೬. ರುಚಿರಂ, ೧೭. ಅಂಕಂ, ೧೮. ಸ್ಫಟಿಕಂ, ೧೯. ತಪನೀಯಂ, ೨೦. ಮೇಘಂ, ೨೧. ಅಭ್ರಂ, ೨೨. ಹಾರಿದ್ರಂ, ೨೩. ಪದ್ಮಂ, ೨೪. ಲೋಹಿತಂ, ೨೫. ವಜ್ರಂ, ೨೬. ನಂದ್ಯಾವರ್ತಂ, ೨೭. ಪ್ರಭಾಕರಂ, ೨೮. ಪೃಷ್ಠಕಂ, ೨೯. ಗಜಂ, ೩೦. ಮೈತ್ರಂ, ೩೧. ಪ್ರಭಾ, ೩೨. ಅಂಜನಂ, ೩೩. ವನಮಾಲಕಂ, ೩೪. ನಾಗಂ, ೩೫. ಗರುಡಂ, ೩೬. ಲಾಂಗಲಂ, ೩೭. ಬಲಭದ್ರಂ, ೩೮. ಚಕ್ರಂ, ೩೯. ಅರಿಷ್ಟಂ, ೪೦. ಸುರಸಮಿತಂ, ೪೧. ಬ್ರಹ್ಮಂ, ೪೨. ಬ್ರಹ್ಮೋತ್ತರಂ, ೪೩. ಬ್ರಹ್ಮಹೃದಯಂ, ೪೪. ಲಾಂತವಂ, ೪೫. ಶುಕ್ರಂ, ೪೬. ಶತಾರಂ, ೪೭. ಆನತಂ, ೪೮. ಪ್ರಾಣತಂ, ೪೯. ಪುಷ್ಪಕಂ, ೫೦. ಶತಾಕಂ, ೫೧. ಆರಣಂ, ೫೨. ಅಚ್ಯುತಂ, ೫೩. ಸುದರ್ಶನಂ ೫೪. ಅಮೋಘಂ, ೫೫. ಸುಪ್ರಬುದ್ಧಂ, ೫೬. ಯಶೋಧರಂ ೫೭. ಸುಭದ್ರಂ, ೫೮. ಸುವಿಶಾಲಂ, ೫೯. ಸುಮನಸಂ, ೬೦. ಸೌಮನಸ್ಯಕಂ, ೬೧. ಪ್ರೀತಿಂಕರಂ, ೬೨. ಆದಿತ್ಯಂ, ೬೩. ಸರ್ವಾರ್ಥಸಿದ್ಧಿ — ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್" (ಕ ಕ್ರ. ೨೦೩). [ಸಂ.]

**ಪೃಷ್ಠಗ್ರಂಥಿ** (ನಾ). ಬೆನ್ನಿನ ಮೇಲೆ ಏಳುವ ಗಂಟು,—ಡುಬು: "ಪೃಷ್ಠಗ್ರಂಥಿಃ, ಗಡುಃ — ಈ ೨ ಬೆನ್ನ ಕುಱು" (ಹಲಾಯು. ೯೯-೮೩೦). [ಸಂ.]

**ಪೃಷ್ಠಚಕ್ಷು** (ನಾ). ಏಡಿ; ನಳ್ಳಿ. [ಸಂ. ಪೃಷ್ಠಚಕ್ಷುಸ್]

**ಪೃಷ್ಠದ್ವಾರ** (ನಾ). ಗುದದ್ವಾರ : ನಿರ್ಗಮವಪ್ಪುದೇ ಕಾರಣವಾಗಿ

ಕಡುಮಿಸಿಲಿಂಗೆ ತಪ್ತಾಙ್ಗದ ಚರ್ಮದಿಂ ಪೃಷ್ಠದ್ವಾರಂ ಮುಚ್ಚಲಾ ಜಂಬುಕಂ ತನಗಲ್ಲಿಯುಂ ಪೋಗಲಿಂಬಿಲ್ಲದೆ ಚಿಂತಾಕ್ರಾಂತನಾಗಿರಲ್ (ಪಂಚತಂ. ೧೯–೨೦). [ಸಂ.]

ಪೃಷ್ಠನಾಳ (ನಾ). ಗುದನಾಳ : ಅಡವಿಯಲ್ಲಿ ಒಂದು ಸರಿಯಾಹಾರಂಬಡೆಯದೆ ಬರಬರುತ್ತ ಒಂದು ಸತ್ತ ಎತ್ತಂ ಕಂಡು ಸಡಗಲಿಸಿ ಅದರ ಪೃಷ್ಠನಾಳದಿನೊಡಲೊಳಪೊಕ್ಕು ತಿನುತಿರ್ಪನ್ನೆವರಂ (ಪಂಚತಂ. ೦೯–೬).

[ ಸಂ. ಪೃಷ್ಠನಾಲ ]

ಪೃಷ್ಠಭಾಗ (ನಾ). ೧. ಹಿಂಭಾಗ ; ಬೆನ್ನಿನ ಭಾಗ : ನೀವೀ ಪಶುವಿನ ಪೃಷ್ಠಕುಪಷ್ಟೋದಕವಂ ತಂದೆಱೆದು ದೂರಂ ಪೋಗಿವೆನಲಾ ಕ್ಷಪಣಕರ್ ದೆವಱಿಯಾ ಗೋವಿನ ಪೃಷ್ಠಭಾಗಕ್ಕೆ ಕಾಯ್ದ ನೀರಂ ತಂದೆಱೆದು (ಪಂಚತಂ. ೦೯–೦೮); ತಳವನಹೀಂದ್ರರುಂದ್ರಫಣಮೊಂದು ಧನುರ್ಗುಣವೇಗಾಡನಾಕಳಿತವಿಶೀರ್ಣಕೋಣ್ಮವೆನೆ ಕೂರ್ಮವಿನುತ್ರರಪೃಷ್ಠಭಾಗವೆಂದು. . .ಧಾತ್ರಿ ಬಾದು ನಿಶ್ಚಳತೆಯಾನಿರ್ಪಳತ್ರ ಭುಜಮಂಡಳದೊಳ್ ವಸುಧಾಧಿನಾಥನಾ (ಚಂದ್ರ.ಕ. ೩–೨೦). ೨. ಮೇಲ್ಭಾಗ ; ಮೇಲ್ಮೈ : ಸಮುದ್ರದ ಪೃಷ್ಠಭಾಗದ ಮೇಲೆ ದೇಕಾದಂಥ ಅಲ್ಲೋಲಕಲ್ಲೋಲವಾದರೂ ಗುಡ್ಡದಂಥ ತೆರೆಗಳೆದ್ದರೂ ಸಮುದ್ರವು ತತ್ತ್ವತಃ ಸಮುದ್ರವೆ ಇರುವದು (ಪಕಿ. ೯). [ಸಂ.]

ಪೃಷ್ಠವಾಹ್ಯ (ನಾ). ಹೊರೆಯನ್ನು ಹೊರುವ ಎತ್ತು : "ಪೃಷ್ಠವಾಹ್ಯಂ ಸ್ಥೌರಿಯೆನಿಕ್ಕುಂ" (ಚನ್ನಕೋ. ೯೯–೨); "ಸ್ಥೌರೀ, ಪೃಷ್ಠವಾಹ್ಯ: —ಈ ೨ ಹೇಱುವೆತ್ತು" (ಪಂಚಾಯು. ೪೪–೦೦೦). [ಸಂ.]

ಪೃಷ್ಠಸ್ವಸ್ತಿಕ (ನಾ). [ನಾಟ್ಯ] ನೃತ್ಯದ ಒಂದು ಭಂಗಿ ; ನೂರೆಂಟು ಕರಣಗಳಲ್ಲಿ ಒಂದು : P "ಕೈಗಳನ್ನು ಉದ್ವೇಷ್ಟ ಮಾಡಿ ಮೇಲಕ್ಕೆತ್ತಿ ಅಪಕ್ರಾಂತಚಾರಿಯನ್ನು ಮಾಡಿ, ಕೈಗಳನ್ನು ಆವೇಷ್ಟನ ಮಾಡಿ ಎದೆಯ ಹತ್ತಿರಕ್ಕೆ ತರುವಾಗ ಸೂಚೀಚರಣಗಳನ್ನು ಸ್ವಸ್ತಿಕದಂತಿರಿಸಿ ಕೈಗಳನ್ನೂ ಸೂಚೀಮುಖಹಸ್ತದಲ್ಲಿ ಸ್ವಸ್ತಿಕದಂತೆ ಹಿಡಿಯುವುದು'' (ಅಭಿನ. ಗದ್ಯಾನುವಾದ ೨೯೯) : ಉರು ಪೃಷ್ಠಸ್ವಸ್ತಿಕಮುಂ ತರುಣೀ ಕೇಳ್ ಸ್ವಸ್ತಿಕಂ ಸಮಂತಂಚಿತಮುಂ ಬಿಂದಪವಿದ್ಧಂ ಸಮನುಖರಣಂ ಕೇಳ್ ಮತ್ತಮೆಂಬ ಕರಣಂಗಳಿವುಂ (ಅಭಿನ. ೪–೨೬); ತಲಪುಷ್ಪಪುಟ . . . ದಿಕ್ಸ್ವಸ್ತಿಕ, ಪೃಷ್ಠಸ್ವಸ್ತಿಕ... ಗಂಗಾವತರಣ—ಈ ನೂಱೆಂಟು ಕರಣಂಗಳ್ (ಅಭಿನ. ೪–೪೨ ಆ) : ಈ ನಟರಾಜ 'ಪೃಷ್ಠಸ್ವಸ್ತಿಕ' ಭಂಗಿಯಲ್ಲಿ ನೃತ್ಯ ಮಾಡುವಂತೆ ಶಿಲ್ಪಿತವಾಗಿದೆ (ಬೇಲೂರು. ೯೩). [ಸಂ.]

ಪೃಷ್ಠಾನುಸಾರಿ (ನಾ). [ನಾಟ್ಯ] ತೋಳಿನ ಚಲನೆಯ ಒಂದು ಭಂಗಿ ; P "ಬೆನ್ನಿನ ಮೇಲೆ ತೋಳನ್ನಿರಿಸುವುದು'' (ಅಭಿನ. ಗದ್ಯಾನುವಾದ ೨೬೦) : ಊರ್ಧ್ವ, ಅಧೋಮುಖ . . . ಉದ್ವೇಷ್ಟಿತ, ಪೃಷ್ಠಾನುಸಾರಿ . . . ಉತ್ಸಾರಿತ—ಈ ಹದಿನಾಱು ತೋಳ ಭೇದಂಗಳ್ (ಅಭಿನ. ೨–೦೨೨ ಆ). [ ಸಂ. ಪೃಷ್ಠಾನುಸಾರೀ ]

ಪೃಷ್ಠಾಸ್ಥಿ (ನಾ). ಬೆನ್ನಿನ ಮೂಳೆ ; ಕಶೇರುಕ : "ಪೃಷ್ಠಾಸ್ಥಿಯೆ ಕಶೇರುಕಂ ನಿಟ್ಟೆಲುವು" (ಚಂಗಪಾ. ೦೦೬–೬). [ಸಂ.]

ಪೃಷ್ಠೋತ್ಕ್ಷೇಪ (ನಾ). [ನಾಟ್ಯ] ನೃತ್ಯದ ಒಂದು ಭಂಗಿ; ಆಕಾಶಚಾರಿಗಳಲ್ಲಿ ಒಂದು : P "ಉತ್ಕ್ಷೇಪಚಾರಿಯನ್ನು ಹಿಂಭಾಗದಲ್ಲಿ ಮಾತ್ರ ಮಾಡುವುದು" (ಅಭಿನ. ಗದ್ಯಾನುವಾದ ೬೨೯) : ಮಿಗೆ ವೇಷ್ಟನಮುದ್ವೇಷ್ಟಂ ನೆಗಳ್ದಿಸವುತ್ಕ್ಷೇಪವೆಸೆವ ಪೃಷ್ಠೋತ್ಕ್ಷೇಪಂ . . . ಇವುಂ ಮಿಸುಗುವ ಪತ್ತೊಂಬತ್ತುಂ ಪಸರಿಸುವಾಕಾಶಚಾರಿವೆಸರಿಂದೆಸಗುಂ (ಅಭಿನ. ೬–೦೩). [ಸಂ.]

ಪೃಷ್ಠೋತ್ತಾನತಲ (ನಾ). [ ನಾಟ್ಯ ] ನೃತ್ಯದ ಒಂದು ಭಂಗಿ ; ಇಪ್ಪತ್ತುಮೂಱು ಬಗೆಯ ದೇಶೀಯಸ್ಥಾನಕಗಳಲ್ಲಿ ಒಂದು : P "ಒಂದು ಕಾಲಿನ ಬೆರಳುಗಳನ್ನು ಮಡಿಸಿ ಹಿಂದುಗಡೆ ನೆಟ್ಟು ಮೇಲೂರಿ ಇನ್ನೊಂದು ಪಾದವನ್ನು ಮುಂದೆ ಸಮವಾಗಿರಿಸುವುದು" (ಅಭಿನ. ಗದ್ಯಾನುವಾದ ೩೩೦) : ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸಂಹತ, ಸಮಪಾದ, ಏಕಪಾದ, ಪೃಷ್ಠೋತ್ತಾನ [ತಲ], ಚತುರಸ್ರ, ಪಾರ್ಷ್ಣಿವಿದ್ಧ, ಪಾರ್ಷ್ಣಿಪಾರ್ಶ್ವಗತ, [ ಏಕಪಾರ್ಶ್ವಗತ ], ಏಕಜಾನುನತ, ಪರಾವೃತ್ತ, ಸಮಸೂಚೀ, ವಿಷಮಸೂಚೀ, ಖಂಡಸೂಚೀ, ಬ್ರಾಹ್ಮ, ವೈಷ್ಣವ, ಶೈವ, ಗರುಡ, ಕೂರ್ಮ, ನಾಗಬಂಧ, ವೃಷಭಾಸನ—ಈ ಇಪ್ಪತ್ತಮೂಱು ದೇಶೀಯಸ್ಥಾನಕಂಗಳ್ (ಅಭಿನ. ೬–೦೨ ಆ). [ಸಂ.]

ಪೃಷ್ಠ್ಯ (ನಾ). ಹೊರೆಯನ್ನು ಹೊರುವ ಕುದುರೆ: "ಸ್ಥಾರಿ ಪೃಥುಕಾಖ್ಯಂ ಪಾ ಪೃಷ್ಠ್ಯಂ" (ಚನ್ನಕೋ. ೬೬–೨೬). [ ಸಂ. ]

—ಪೆ (ಪ್ರ). ಒಂದು ಕೃದಂತಭಾವನಾಮಪ್ರತ್ಯಯ : 'ಕೇಳ್ಪೆ' ಪರಾ. ಹೆಂ, ಹೆ (ಸಪೂರೂ). ಸಮಾಸದಲ್ಲಿ 'ಪೆಣ್' ಎಂಬ ನಾಮವಾಚಕಕ್ಕೆ ಬರುವ ಆದೇಶರೂಪ: 'ಪೆಂಗೂಸು', 'ಪೆಂಗೊಳೆ' ಪರಾ. ಹೆಂ : 'ಹೆಂಗುಸು' ಪರಾ. [ < ಪೆಣ್ ]

ಪೆಂಕುಳಿ, ಪಿಂಕುಳಿ, ಪೇಂಕುಳಿ, ಪೇಕುಳಿ, ಹೇಕುಳಿ (ನಾ). ೧. ಹೆನ್ನಗ ; ಹೇಡಿ : ಎಲವೊ ಪೆಂಕುಳಿಯ ಪಡಿಯಾರನಪೋಲೇಕಿಲ್ಲಿ ನಿಂದಿರ್ಪೆ (ಸಿಜಾಕ. ೦೦–೦೬). ೨. ಹುಚ್ಚುನಾಯಿ : "ಅಲರ್ಕಮೆಂಬ ಪೆಂಕುಳಿಯಕ್ಕುಂ" (ಚನ್ನಕೋ. ೪೦–೦೦). ೩. ಹುಚ್ಚು ; ಮರುಳುತನ : "ಪೆಂಕುಳಿಯೆಂದು ಮರುಳ್ತನಂ" (ಕಜಾ. ೩೦–೬೨೬) ; ದಿಂಡುಕಂ, ಪೆಂಕುಳಿ, ದಾಲಕಂ (ಕಬ್ಬಿಸ. ೪೪೦ ಪ್ರಯೋ). ೪. ಹುಚ್ಚ ; ಮರುಳ : "ಹುಚ್ಚನಥವಾ ಪೆಂಕುಳಿ" (ಕಾಕ. ೩೯) ; ಪೇರೊಡಲ ಪೆಂಕುಳಿಗಳುಂ . . . ಮುಸುಕಿಗೊಂಡು (ಕೃಪು. ೩೮–೫೫ ಆ). ಪಿಂಕುಳಿ : ೩. "ಪಿಂಕುಳಿ ಮನೋಭ್ರಮೆಯಕ್ಕುಂ" (ಕಜಾ. ೩೩). ಪೇಂಕುಳಿ: ೩. "ಪೇಂಕುಳಿಯೆನೆ ಮರುಳ್ತನಂ" (ಕಬ್ಬಿಸ. ೫೦) : "ಮರುಳ್ತನಕಂ ಬಾಧಿನಕ್ಕು ಪೇಂಕುಳಿಯೆಂದುಂ" (ಕಜಾ. ೨೯೦). ೪. "ಪೇಂಕುಳಿಯೆನಲ್ ಮರುಳನಂ" (ಕಬ್ಬಿಸ. ೩೯). ೫. ಪಿಶಾಚಿ; ಭೂತ: ಅಜವಡಗೆಗೊಂಟನೊಳ್ ಪೇಂಕುಳಿ ಪುಂತೆ ಕಾಳ್ಪರ್ದ ಭಕ್ತನಂ ನೋಡಿ (ಪಾಬಸ. ೩–೦೦–೨೦ ಆ). ೬. ಆವೇಶ; ಕೋಪೋದ್ರೇಕ : ಕುಳಿ ಪ್ರತ್ಯಯಕ್ಕೆ—ಮುಱುಕುಳಿ, ಪೇಂಕುಳಿ (ಶಬ್ದಮ. ೨೦೩ ಪ್ರಯೋ). ಪೇಕುಳಿ : ೩. ಎಕ್ಕಡು ಕೋಶಕಮುಂ ತಂದಿಕ್ಕುಗೆ . . . ದುರ್ಜ್ಞಾನಂ ಪೇಕುಳಿ[ ಪಾಠಾಂ. ಪೆಕ್ಕುಳ, ಪೇಕುಳ ]ಯಾಗಿರ್ದ ಜನಕನ ಪಿಸಂ (ಜಕುದ. ೦೩–೨೬). ಹೇಕುಳಿ : ೪. ಶ್ರೀಕಂಠನಂ ಬಿಟ್ಟು ಹೇಕುಳಿಗಳವಳಕ್ರುತಿ ವೈಕುಂಠನಂ ಪೇಳ್ವವೆಂದೂಳ್ವರು (ಸಾಸಂಕ. ೨–೦೯೩).

ಪೆಂಕುಳಿಯ ನಾಯ್ = ಹುಚ್ಚು ಹಿಡಿದ ನಾಯಿ : "ಪೆಂಕುಳಿಯ ನಾಯುಂ ಅಲರ್ಕಮೆಂಬುದು" (ಪಂಚಾಯು. ೪೬–೦೨೬). ಪೆಂಕುಳಿರಾಯ = ಹೆನ್ನಗರಾಯ : ಹೇಡಿ : ದಿನಪತಿಯ ಪೆಂಕುಳಿರಾಯನೇಂ ಕಟ್ಟುಗುಂ ! (ಅಕಾವ್ಯ. ೬೨–೩).

[ದೇ.; ತಮಿ. ಪೆಕುಳಿ; ತೆಲು. ವೆಂಗಲಿ, ವೆಂಗಳಿ, ವೆಕಲಿ]

ಪೆಂಕುಳಿಗ (ನಾ). ಹುಚ್ಚು ಹಿಡಿದ ನಾಯಿ; ಹುಚ್ಚುನಾಯಿ : ಜನಕದೇರುಂ ಶರ್ಕರೆಯನುಪಮಾಮೆನ್ನಿಸಿರ್ದ ತುಪ್ಪವಿಂತಿವನೊಸೆದಿಂಬಿನ ಪಾಲೊಳ್ ಕುಡಿದೊಡಂ ಜನಕನ ಪೆಂಕುಳಿಗನಧಿಕ[ಪಾಠಾಂ. ಪೆಕ್ಕುಳಿಗನಗಿದ, ಪೇಕುಳಿಗಳಧಿಕ]ವಿಷಮುವರದುಗುಂ (ಜಕುದ. ೦೩–೨೯). [ಪೆಂಕುಳಿ + —ಗ]

ಪೆಂಕುಳಿಗಲಿ (ನಾ). ಆವೇಶಗೊಂಡ ಶೂರ,—ವೀರ : ದಟ್ಟ ಕಣ್ಣುಂ ದಾಗದ ಮೊಗಮುಂ ಕರ್ಪುದವೊಂದುಂ ಕಡಿತಲೆಯಾಂದರಸು ಬೊಬ್ಬೆಯುತ್ತುಂ ಪುವ ಪೆಂಕುಳಿಗಲಿಗಳುಮಂ (ಅಜಿತ. ೫–೦೦೪ ಆ).

[ಪೆಂಕುಳಿ + ಕಲಿ]

**ಪೆಂಕುಳಿಗೊಳ್, ಪೇಕುಳಿಗೊಳ್, ಹೇಕುಳಿಗೊಳ್** (ಕ್ರಿ). ೧. ಆವೇಶಗೊಳ್ಳು; ಉದ್ರೇಕಗೊಳ್ಳು : ಧರ್ಮಪುತ್ರಂ ಶಿಖಂಡಿಯಂ ಮುಂದಿಟ್ಟುಕೊಂಡು ಬಂದು ಪೆಂ[ಪಾಠಾಂ. ಪೇಂ]ಕುಳಿಗೊಂಡ ಸಿಂಹಮಂ ಮುತ್ತುವಂತೆ ಸುತ್ತಿ ಮುತ್ತಿದಾಗಳ್ (ಪಂಪಭಾ. ೧೧–೪೦ ವ); ಪೆಂಕುಳಿಗೊಂಡ ಮದೇಭಮೈರಿಪ್ಪೋಲ್ ಕೆರ್ದು(ಶಾಂತಿಪು. ೧೧–೧೦೩); ಕೇಸರಿ ಪೆಂಕುಳಿಗೊಂಡಂತಾಸುರನತ್ಯುಗ್ರದಿವ್ಯಬಾಣಾಳಿಗಳಿಂ ಪೇಸೇಟ್ ಕೊಂದಂ (ಕೇಶಿರಾಜ:ಕೃ.೦೨–೧೦೦). ೨. ಹುಚ್ಚು ಹಿಡಿ; ಹುಚ್ಚಾಗು : ಪೆಂಕುಳಿಗೊಂಡರೋ ತಿಳಿಯದೈ ಶ್ರೀಪಾರ್ವತೀವಲ್ಲಭಾ (ಪಾರ್ವ. ೩೮). **ಪೇಕುಳಿಗೊಳ್** : ೨. ಆ ನಾಯ್ . . . ಬಾಯ್ಬಿಟ್ಟು ಪೋಳಿಟ್ಟು ಪೇಕುಳಿಗೊಂಡಾದ ವಿಷಾದದಿಂ ಪುಟ್ಟಿತು ಸತ್ತಿತು (ಸುಕುಮಾ. ೩–೨೦) ; ಕನಕದ ರಸಮಂ ಗುಡಮುಂ ವಿನುತಕ್ಷೀರದೊಳವಿರ್ಪಲಮನೀಂಟಲ್ಕಂ ಶುನಕಂ ಪೇಕು[ಪಾಠಾಂ. ಪೇಕರ್(ಕ್ಕು)]ಳಿಗೊಂಡುದು ತಿನೆ ಕದ್ದಿಪಮಟ್ಟುಗುಂ (ಚಂದ್ರ. ೦೩-೨೮). **ಹೇಕುಳಿಗೊಳ್** : ೨. ಅಲರ್ಕ, ಯೋಗಿತ—ಮದ್ದಿಂದ ಮರುಳಾಗಿ ಹೇಕುಳಿಗೊಂಡಿದ್ದ ನಾಯಿ (ಶಾಕಟಾ. ೬). [ಪೆಂಕುಳಿ + ಕೊಳ್$_1$]

**ಪೆಂಕುಳಿನಾಯ್, ಪೇಕುಳಿನಾಯ್** (ನಾ). = ಪೆಂಕುಳಿಗ : ಬಡಿಗೊಂಡು . . . ಪೆಂಕುಳಿನಾಯುಂ ಬಡಿಪಂತಿರೆ ಪಾಟಿಸುವಂ ಬಡಿವಂತಿರೆ ಬಡಿದ ನನಿಬರಂ ಕೌರವರಂ (ಗದಾಯು. ೩–೦೦); ಶಿರೀಷವೊಂದನೆ ಜಲದಿಂದೆ ಪೊಸಗದು ಪೆಂಕುಳಿನಾಯ ವಿಷಾಪಹಾರಕಂ (ಕೋಶಕೋಶ. ೦೦–೩೫); ಪೇಕುಳಿನಾಯ ವಿಷಕ್ಕೆ—ಕನಕದ ಬೇರುಂ ಶರ್ಕರೆಯುಮುಪಮಾಮೆನಿಸಿರ್ದ ತುಪ್ಪವಿಂತಿವನೊಸೆದಿಂಟಿನ ಪಾಲೊಳ್ ಕುಡಿಸಿದೊಡಂ ಶುನಕನ ಪೆಂಕುಳಿಗನಧಿಕವಿಷಮನದಟಿಗುಂ (ಚಂದ್ರ. ೦೩–೨೪). **ಪೇಕುಳಿನಾಯ್** : ಪಳಿಯಂ ದೊರೆಜಗುಂ ಪೇಕುಳಿನಾಯೊಳಗಾಗಿ ಖಳನದೇಂ ಕಷ್ಟಸೊ (ಧರ್ಮಾಮ. ೦–೩೩). [ಪೆಂಕುಳಿ + ನಾಯ್]

**ಪೆಂಗ್‌ನಾಮ** 'ಪಂಗನಾಮ' ನೋ.

**ಪೆಂಗ, ಪೆಗ್ಗ, ಹೆಗ್ಗ$_1$, ಹೇಗ** (ನಾ). ಪೆದ್ದ; ದಡ್ಡ ; ಶಿಳಿಗೇಡಿ ; ಮರುಳ : ರಾಘು ಪೇಗನಂತೆ . . . ಕಣ್ಣು ಹೊರಳಿಸುತ್ತ ಹೊರ ಬಂದನು (ಶುಕರಾಜ. ೨೦೦) ; ಬುದ್ಧಿ ಕೆಟ್ಟುಹೋಗ್ತದೆ: ಪೆಂಗ ಆಗ್ತೀಯೆ (ಪೆಂಗೂ. ೧೩); ಲಿಂಗವೇ ಗತಿಯೆಂದು, ಪೆಂಗ ಕುರುಬರಿಗೆಂದ (ಕಪ್ಪಜಾ. ೦೯೨). **ಪೆಗ್ಗ** : ಪೆಗ್ಗನಾದರೂ ಅಗ್ಗದಲ್ಲಿ ತಂದ (ಗಾದೆ). **ಹೆಗ್ಗ$_1$** : ಹೆಗ್ಗ ಬುದ್ಧಿಯ ಬಲ್ಲನೇ ಅಯ್ಯ (ಸಿದ್ಧೇಶ. ೨೦೭–೩೯೩); ಲವಲೇಶ ಮೌಲ್ಯವಿಲ್ಲದೆಯರ್ಥಮಂ ಪಡೆವೆನೆಂದೆಂಬ ಕಡುಹೆಗ್ಗ [ಪಾಠಾಂ. ಹೆಡ್ಡ, ಹೆಬಗ]ನಂ (ಸಮ್ಯಕ್ತ್ವ. ೦೧-೭): ಕುನ್ನಿ ಮರುಳ ಜೋಗಿ ಹೆಗ್ಗ . . . ಎನ್ನಿಸಿ ನಾಮಮೆತ್ತಿಹ ಪರಮಳಿಪರ್ಗೆ ನಿನ್ನೊಲವುಂಟೆ (ಕಠಸಾಂ. ೦೨–೩೫). **ಹೇಗ** : ಹೇಗರಿರ . . . ಬಸದಿಗಳನೆಲ್ಲವ ಬೇಗದಿಂ ಹಿರಿಹಿಂದು ಕೆಡಹಾಯ್ಸುವೆನು (ಬಸವ ೫೦.೫೨); ಹೇಗರೆನಿಸುವ ಸವಣರುಗಳು ಶಾಸ್ತ್ರದ ವಾದವಾಗಿ ಸೋಲ್ವೊಡೆ (ಸಿದ್ಧೇಶ. ೭ ೨೬); ತಾಗಿ ಬಾಗುವರಿಂದ ತಾಗದಿರುವುದು ಲೇಸು ತಾಗಿ ಮೂಗೊಡೆದು ಬಾಗುಟೆದ್ದು ಬಾಗುವದು ಹೇಗದ[ಸ] ಗುಣವು (ಸರ್ವಜ್ಞ. ೦೫೫೩). 'ಎಗ್ಗ', 'ಹೆಬಗ' ಪರಾ. [ದೇ. ॥ ತುಳು. ಪಂಗೆ; ತೆಲು. ಪೇಂಕಿ]

**ಪೆಂಗಣಿಸು, ಹಿಂಕಣಿಸು, ಹಿಂಗಳಿಸು** (ಕ್ರಿ). ಅಗಲವಾಗಿ ತೆರೆ; ಅಗಲಿಸು : ಕುರುಪುಗಣ್ಣನಿತು ಪೆಂಗಣಿಸೆ ಕಾಣದ ತೆಱದೆ ಕರುಮವನಿತೆಸಗಿದರು ವಸ್ತು ತೋಱುವುದೆ (ಕೈವಲ್ಯ. ೫–೫–೩). **ಹಿಂಕಣಿಸು** : ಕಣ್ಪಿಂಕಣಿಸುತೊಲೆವ ಶಿರ ಸವಿವ ಬಾಯಧರಧರಮುಂ ಕಡಿವುತ (ಚಿಕದೇ. ೦೦–೦೪). **ಹಿಂಗಳಿಸು** : ಮತ್ತೆ ಅವನು ಕಣ್ಣನ್ನು ಹಿಂಗಳಿಸಿ ನೋಡಿದನು (ಶುಕರಾ. ೪೪). [? + –ಇಸು$_2$]

**ಪೆಂಗಿನಾಮ** 'ಪಂಗನಾಮ' ನೋ.

**ಪೆಂಗು$_1$, ಪೆಗ್ಗು** (ನಾ). ೧. ದಡ್ಡತನ; ಮುಠಾಳತನ : ಯಾಕೆ ಹೀಗೆ ನಿನ್ನ ಪೆಂಗು ತೋರಿಸಿಕೊಳ್ಳುತ್ತಿದ್ದೀಯಾ ? (ಕೂಕ). ೨. ಪೆದ್ದ : ದಡ್ಡ : ಇಷ್ಟು ಹೊತ್ತಾದರೂ ನಿನಗೆ ಜ್ಞಾಪಕ ಬರಲಿಲ್ಲವೆ ? ಅಯ್ಯೋ ಪೆಂಗ ! (ಅಶ್ವಾಸ. ೬೨) ; ಪೆಂಗಿನ ಹಾಗಾಡಬೇಡ (ತೂಕ:ತ. ೨) ; ಹೋಗೊ, ಹೋಗೊ, ಪೆಂಗೆ ! (ಕಠಿಕಾ. II, ೯೨೩). **ಪೆಗ್ಗು** : ೧. 'ಪೆಗ್ಗ' ಪರಾ. [ಪೆಂಗ + –ಉ$_4$]

**ಪೆಂಗು$_2$** (ನಾ). ದ್ರಾವಿಡಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ : ಪೆಂಗು ಎಂಬುದೂ ದ್ರಾವಿಡಗುಂಪಿಗೆ ಸೇರಿದ ಭಾಷೆಯಾಗಿದ್ದು; . . . ಒರಿಸ್ಸಾಸಂಸ್ಥಾನದ ಕೋರಾಪುಟ್‌ಜಿಲ್ಲೆಯ ಉತ್ತರಭಾಗಕ್ಕೆ ಇರುವ ಜನರು ಆಡುತ್ತಾರೆ (ದ್ರಾಭಾ. ೦೬೨).

**ಪೆಂಗುರು** 'ಪೊಂಗಾರು' ನೋ.

**ಪೆಂಗುಸು** 'ಪೆಣ್ಣ್ಗುಸು' ನೋ.

**ಪೆಂಗೂಸು** 'ಪೆಣ್ಣ್ಗೂಸು' ನೋ.

**ಪೆಂಗೊಲೆ** 'ಪೆಣ್ಗೊಲೆ' ನೋ.

**ಪೆಂಗೊಲೆಯ** (ನಾ). ಹೆಣ್ಣನ್ನು ಕೊಲೆ ಮಾಡುವವನು ; ಸ್ತ್ರೀಹತ್ಯೆ ಮಾಡುವವನು : ವಿರಹದಿಂದಾಗನೆ ಬಳಲ್ದು . . . ಪೆಂಗೊಲೆಯರಿವರೆಂದು ಶಪಿಸಿಯುಂ ತಣಿಯದೆ ವಿಹಂಗಪತಿಯುಬ್ಬಿ ಪರಶಿವ ಬ್ರಹ್ಮರಂ ಬೈದಳೇನೆಂಬೆನಚ್ಚರಿಯನು (ಕಠಕೃ. ೧೦–೩೫). [ಪೆಂಗೊಲೆ (<ಪೆಣ್ಗೊಲೆ) + –ಅ$_7$]

**ಪೆಂಗ್ವಿನ್** (ನಾ). "(ನೀರೊಳಗೆ ಈಜಾಡಲು ಉಪಯೋಗವಾಗುವ ಹುಟ್ಟುಗಳಂಥ ರೆಕ್ಕೆಗಳುಳ್ಳ, ದಕ್ಷಿಣಾರ್ಧಗೋಳವಾಸಿಯಾದ) ಒಂದು ಜಾತಿಯ ಕಡಲ ಕೋಳಿ" (Penguin. ೩೦೪೩) : ದಕ್ಷಿಣ ಶೀತವಲಯದಲ್ಲಿ 'ಪೆಂಗ್ವಿನ್' ಗಳ ಸಮೂಹವೂ ಅಟ್ಲಾಂಟಿಕ್ ಕಡಲಿನಲ್ಲಿ 'ಪಫ್ಫಿನ್' ಗಳ ಸಮೂಹವೂ ಕೋಟಿಸಂಖ್ಯೆಯನ್ನು ಮೀರುತ್ತದೆ (ಶಕ್ತಿ. ೩೬). [ ← ಇಂ. Penguin ]

**ಪೆಂಚಱಿ** (ನಾ). "ಒಂದು ಬಗೆಯ ಹಾವು" (ಅಪಾಪ). [ದೇ. ॥ ತೆಲು. ಪೆಂಜೆರ]

Δ**ಪೆಂಚು** 'ಹೆಂಚು$_2$' ನೋ.

**ಪೆಂಚಿ** 'ಹಿಂಚೆಯ' ನೋ.

**ಪೆಂಚೆಯ** 'ಹಿಂಚೆಯ' ನೋ.

**ಪೆಂಡಱಿ** 'ಪೆಂಜಱುವು' ನೋ.

**ಪೆಂಜಱುವು, ಪೆಂಜಱಿ, ಪೆಂಜಱಿವು, ಪೆಂಜೆಱು, ಹೆಂಜಱಿ, ಹೆಂಜೆಱು** (ನಾ). ೧. ಒಂದು ಸ್ಥಳದ ಹೆಸರು ; ಈ ಮಡಕಶಿರಾ ತಾಲ್ಲೂಕಿನ ಈಗಿನ ಹೆಂಜೇರು : ಪೆಂಜಱುವಿನ ಪಟ್ಟಮಟಸ್ಥಾನಮುಂ ಮಹಾನಖರಮುಂ ಸಕಿಯಾಗಿ ಬರಗೂರ ಮಹೇಂದ್ರೇಶ್ವರದೊಳಗನ್ದು ಕೊಟ್ಟುದು (ಎಕ. XII, ಶಿರಾ. ೩೯–೪೪ ; ೨೨೦) ; ಪೆಂಜಱುವಿನ ನೊಲಪ್ಪುಗಾವುಣ್ಡನು (ಎಕ. XII, ಶಿರಾ. ೨೮-೪೬ ; ೨೪೩). **ಪೆಂಜಱಿ** : ೧. ಸ್ವಸ್ತಿಶ್ರೀಶಿವಮಾರ ಮಹಾರಾಜ ಪೃಥುವೀರಾಜ್ಯಂಗೆಯ್ ಕಾಡುವೆಟ್ಟಿ ಪೆಂಜಱಿ ಕನ್ದಳ್ಳಿಯ ರಾಜಿಗದೊಳ್ × × ಚ್ಚನ್ ಕವಿತ್ತೊರನ್ ಪಸುವಟ್ಟಿಧನುವೆಟ್ಟು ಕೊನ್ದು ಬಿಟ್ಟಾರ್ (ಎಕ. IX (೩). ತೂಗಿಕೋ. ೦೬೯-೨; ಸು. ೮೦೦). **ಪೆಂಜಱಿವು** : ೧. ಪೆಂಜಱಿವಂ ಕಾವ ತಳಜ ಬಟ್ಟರೇಚಯ್ಯನೆಂಬ ತೈಲಕಟೇಲಿ ದೇವಕೆಱಿಯ ಕಟ್ಟಿ . . . ಬಿಟ್ಟ ಭೂಮಿ (ಎಕ. XII, ಶಿರಾ; ೩೩–೭ ; ಸು. 1100 ?). **ಪೆಂಜೆಱು** : ೧. ಪೊಗಱಿವೆಱಿಗನ ಜಾವಲ್ಲು ಕೇಳ ಪೆಂಜ್ಜೆಱಿಲ್ಲಂ ಪೊಗಟಲ್ಕೆ ವೀಱಿನ ಸಾವು ಕತೆಯಾಗಿ ಪರದುದು (ಶಾಇಇ. IX-1, ೩೦–೦೪; ೨೦೦). **ಹೆಂಜಱಿ** : ೧. ಹೆಞ್ಜಱಿಸಮರದೊಳ್ಮರಾರಿ ಮಾರನಾಗಿ ಗುದುಗೆಯ ಪಾಯಿಸಿ (ಎಕ. III, ಪಂಡಿತ. ೦೨೨-೧೪ ; 266 ? ಕೃಶಾ);

ದಿಗ್ವಿಜಯಯಾತ್ರಾಂ ಬಿಜಯ ಕರೆವಿ ಹೆಂಜಜಗ್ರಾಮಾತು ಕಟಕ ಮಾಣಲೀತವು (ಎಕ. VIII, ೯೯ ೦: 444 ಶ್ರೀ). ೨. ಒಬ್ಬಾತನ ಹೆಸರು: ಮಧಿಗವುತನ ಶಾಪುತ್ರ ರಾಮದೇವನು ಹೆಞ್ಜಱಿನಿಱಿಯು (ಎಕ. VII, ಶಿಕಾ೦. ೩೨-೦೩; 357 ? ಶ್ರೀ). **ಹೆಂಜೆಱು** : ೧. ಕೊಯತೂರ ತುಳಿವ ಹೆಂಜೆಱು ದಿಸಾಪಟ್ಟಸಂಗ್ರಾಮ ಜಕ್ಕಲಬ್ಬ ಪಾಂಡ್ಯನು ಬೆಂಕೊಂಡ (ಎಕ. II, ೦೧೩-೩೬; 1131). [?]

**ಪೆಂಜಱಿವು** 'ಪೆಂಜಱುವು' ನೋ.

**ಪೆಂಜೆಱು** 'ಪೆಂಜಱುವು' ನೋ.

**ಪೆಂಟಿ**₁ 'ಪೆಟ್ಟೆ' ನೋ.

**ಪೆಂಟೆ**₁, **ಪೆಟ್ಟೆ**₁, **ಪೆಂಡಿ**₂, **ಪೆಂಡೆ**₂(ನಾ). ೧. ಮೂಟೆ; ಗಂಟು: ಪುನರ್ದೃಷ್ಟಿಯಾಗಿ ನಾಲ್ಕುಂ ಸುಂಕದೊಳವೆರಡೊರ್ಳ್ಳಿಕ್ ಕೊಡವೀಸವ ಸಹಿತಮಾಗಿ ಬಿಟ್ಟ ಉಪ್ಪಿನ ಪೆ[ಂಟೆ] ಅಱುವತ್ತು (ಕಾತ್ರಾ. XX, ೬೦-೨೩; 1088). **ಪೆಟ್ಟೆ**₁ : ೨. ಹೊರೆ; ಸಿವುಡು; ಪಿಂಡಿ: ವಿರಹಭರೋತ್ಕಂಠ ಮನೋಹರಿಯ ಕಪೋಲಂಗಳಂತೆ ನಿಬ್ಬರಿಸಿದ ಬೆಳ್ಕರಿಸಿದೆಲೆಗಳ ಪಡಲೆಗಳ ಬರಿಸುವುದನುನನುದೆ ಪೆಂಟೆ ಗಂಟಲ ವಿಟರಂ (ಕೃಷ್ಣಕು. ೨-೮೨). **ಪೆಂಡಿ**₂ : ೨. ಕದಿರು ಸೂತ್ರ ದಾರ ಬಲುಗಣಿಕೆಯ ಪೆಂಡಿ ಹೂಡುಗೋಲುಗಳನು ಒಲಿದು ಕಟ್ಟಿದನು ಆ ಶರಣ (ಅಱುಬಾಣ. ೫-೫); ಒಣಗಿ ಹಾರವಾದ ಸಿಬುರಿನ ಪೆಂಡಿಯನ್ನು ತೆಗೆದು, ಮೊದಲು ಸೂಜಿಯಂತಹ ಸಿಬುರು ಪೆಟ್ಟಿಟ್ಟುಕೊಳ್ಳುತ್ತಾನೆ (ಜನಪದ. II, ೩); ಎಲ್ಲಾರು ಕಟ್ಟ್ಯಾರ ಮಲ್ಲಿಗ್ಹೂವಿನ ದಂಡಿ ಬೀಗುತಿ ಕಟ್ಯಾಳ ಹುಲ್ಲ ಪೆಂಡಿ (ಜನಪದ. ೨೫). **ಪೆಂಡೆ**₂ : ೨. ಚಂಡಿತನವೆಂಬ ಹಿಂಡಿ ಇಡಬೇಕು ದಿಂಡತನವೆಂಬ ಪೆಂಡೆಮೇವು ಪುಂಡತನ ವೆಂಬೊ ಪಿಂಡಿ ರುಬ್ಬಿಡಬೇಕು (ಶ್ರೀರಂಗ. ೨-೫೫-೨): ಹೊಲ ಕೊಯ್ಯುವವರಿಗೆ ಅವರು ಕೊಯ್ದ ಪೆಂಡೆಗಳನ್ನೇ ಕೂಲಿಯಾಗಿ ಕೊಡುತ್ತಾರೆ (ಮಾಂಡವ್ಯ. ೫-೦೪೭); ಬಲಗಡೆ ನಾರಿನ ಪೆಂಡೆಯಿತ್ತು (ಶ್ರೀಪಾತ. ೯೭). [<ಸಂ. ಪಿಂಡಿ]

**ಪೆಂಟೆ**₁, **ಪಿಟ್ಟೆ**₁₁, **ಪೆಂಟಿ**₁, **ಪೆಂಡಿ**₁, **ಪೆಟ್ಟ**, **ಪೆಟ್ಟು**₁, **ಪೆಟ್ಟೆ**₁, **ಹೆಂಟೆ**₁, **ಹೆಂಡೆ**₁, **ಹೆಟ್ಟು**₁, **ಹೆಟ್ಟೆ** (ನಾ). ೧. (ಮಣ್ಣು, ಬೆಲ್ಲ ಮೊದಲಾದಂವುಗಳ) ಮುದ್ದೆ; ಉಂಡೆ: "ಪೆಟ್ಟೆಯ ತಾಂ ಪೆಂಟೆಯಕ್ಕುಂ" (ಶಬ್ದ. ೨೨೬); ಪೆಂಟೆಯ ಅಂಟುಮಲೆಯ . . . ಬಲ್ಲಾಬುಗಳ ಬಲ್ಮೊಱೆಯೊತ್ತು (ರಾಮಾಶ್ವ. ೯೩-೨೯); ಈ ಕಟ್ಟವ ಆರಿ ಕಲ್ಲಿನಂತ ಭಾರವುಳ್ಳ ಪೆಂಟಿಸಾಗುತ್ತದೆ (ಮಾಂಡವ್ಯ. ೯ ೦೯೯). **ಪಿಟ್ಟೆ**₁ : ೧. ಕಲ್ಲು ಜಲ್ಲು ಪಿಟ್ಟೆಗಳನ್ನು ನಾವೇಂಪರಿಂದ ಹೆಕ್ಕುತ್ತೇವೆ (ನಾತೂಜ. ೬೫). ೨. (ಮಣ್ಣಿನ) ರಾಶಿ; ಗುಪ್ಪೆ; ದಿಬ್ಬ: ನಾಲ್ಪಿಟ್ಟೆಯ ಪಿಟ್ಟೆವೊಲ್ ಕುಲಸಗಿರಿಷುಂ ನುರ್ಗಿದತ್ತು (ಜಗ. ೦-೬೦). ೩. (ಶರೀರದಲ್ಲಿ ರೋಗದ ಪರಿಣಾಮವಾಗಿ ಬೆಳೆಯುವ) ಗಡ್ಡೆ; ಗಂಟು: ಕಾಮೇರಿಯ ಹೊಟ್ಟೆಯಲ್ಲಿ ಅನ್ನದ ರಸ ಹೋಗಿ ಪಿಟ್ಟೆ ಬಿಎತ್ತು (ಚಾವುಂ. ೨೦೨). **ಪೆಟ್ಟೆ**₁ : ೧. ಬೆಲ್ಲದ ಪೆಂಟೆಯ ಅವಲ್ಲಿ ಕಟ್ಟಿ ನೋಡಿದಡೆಯೂ ರುಚಿಕರವಾಗಿ ತೋರುವದಲ್ಲದೆ ವಿಷವಾಗಿ ತೋರದು (ಶಕಸ. II, ೦೯೩-೬೨ ಅರ್ಥ). **ಪೆಂಡಿ**₁: ೨. "ಪೆಂಡಿ—ಪಿಂಡಿ=ಕಣೆಗಾಲು, ಗುಂಪು" (ಕನ್ನಕೋ. ೨೬). **ಪೆಟ್ಟ**: ೧. "ಪೆಟ್ಟವೆಸಲೋಷ್ಟ" (ಶಬ್ದ. ೬೯); ನೇಗಿಲೊಳುಕ್ಕೆಯನುಳುವ ಕುಡಿಯಸಂ ಕಂಡುಮಿಾ ಹಲಕ್ಕೆನಿತು . ಪೆಟ್ಟಿಯೀಂ[ಪಾಠಾಂ. ಹೊಲಕ್ಕೆ ಪೆಟ್ಟಿಯೆನಿತೆಂ, ಹಳ್ಳಕ್ಕೆನಿತು ಪೆಂಟಿಯೆಂ]ದು ಬೆಸಗೊಳುತ್ತಲ್ಲಿಂ ಪೋಗಿ (ಶಬ್ದಾಸ್ಮೃ. ೩-೧೨ ಪ). ೪. ವ್ಯವಸಾಯದ ಒಂದು ಉಪಕರಣ; ಮಣ್ಣಿನ ಗಟ್ಟಿಯನ್ನು ಒಡೆಯಲು ಬಳಸುವ ಸಾಧನ: 'ಪೆಟ್ಟುಪೆಟ್' ಪರಾ. **ಪೆಟ್ಟು**₁ : ೧. "ಪೆಟ್ಟೆಯೆಂದು ಹೆಂಟೆ" (ಶಬ್ದ. ೬೦-೬೦೬). **ಪೆಟ್ಟೆ**₁ : ೧. "ಪೆಟ್ಟೆಯ ತಾಂ ಪೆಂಟೆಯಕ್ಕುಂ" (ಶಬ್ದ. ೨೨೬); ದಿವ್ಯಮಪ್ಪ ಶಯ್ಯಾತಳದೊಳ್ ನಿದ್ರೆಗಯ್ವಾನಮಯ್ ತಾಗಲ್ ಪೆ[ಪಾಠಾಂ. ಬೆ, ಪೆ]ಟ್ಟೆಗಳುಂ ಕಿಱುಗಲ್ಲುಗಳುಮೊತ್ತೆ ನಿದ್ರೆಗೆಯ್ವುಯಾದಯ್ (ವಡ್ಡಾರಾ. ೦೪೦-೨); ಕಡುಕುಂ ಪೆಟ್ಟೆ[ಪಾಠಾಂ. ಪಿಟ್ಟೆ]ಯುವತೊತ್ತೆ ಮಲ್ಲಡಿಗಳಂ (ಕಂಶಪಾ. ೩-೯); ಆಕೆ ಕಕ್ಕಳಗೆರ್ದಿಟ್ಟರ್ಗಾಳಿದೆ ಪೆಟ್ಟೆಯಂ [ಪಾಠಾಂ. ಹೆಂಟಿಯಂ, ಪೆಂಟೆಯಂ] ಕಚ್ಚುವಂತೆ . . . ಆ ಕಪ್ಪಡಮನೆರಟ್ಟಿಡಿಯಾಗೆ ಸಣ್ಣನೆ ಸೀಳ್ದಿದಾಡುವುದುಂ (ಅರ್ಜನ. ೬-೯ ಪ); ತನ್ನ ನೆಳಲಂ ಪ್ರತಿಗಜವೆಂದುಱಿದ ಕಱುತ್ತೆಱಗಿ ಬೆಟ್ಟದ ಪೆಟ್ಟೆ[ಪಾಠಾಂ. ಪೆಂಟೆ] ಗಳೆನೆತ್ತಿಯೆತ್ತಿ ಕೋಪವಮಾಱಿದ (ಗಿರಿಜಾ. ೦-೦೩೬ ಪ). **ಹೆಂಟೆ**₁ : ೧. "ಮಣ್ಣಿನ ಹೆಂಟೆ—ಲೋಷ್ಟ" (ಪಾತಪಾ. ೬); ಕಲ್ಲು ಹೆಂಟೆ ಹೋರಿಯಾಡಿ ಕಲ್ಲು ಕರಗಿ ಹೆಂಟೆ ಉಳಿಯಿತು (ಪಾಪಗಾಂ. ೪. ೨೯೯-೦೩); ತಾನಿರ್ಪ ನೆಲದ ದೊಗಱೊಳಗೆ ಹೊಕ್ಕಗೆಯುತ್ತುವಿರೆ ಜಱಿವ ಬಲು ಹೆಂಟೆಯಾಗಿ ಮೇಲಿಪ್ಪೆರೆಯ ಮಣ್ಣಿನ್ನ ಬೆನ್ನನೋಪದ ಮಱಿಮಾವು (ಸಪ್ತಾಳ್. ೨-೯೩); ಬೇಸಾಯಗಾರನು . . . ಉಂಟಿಯಿಂದ ಹೆಂಟೆ ಒಡೆದು ಪುಡಿ ಮಾಡಿ (ಕಾಂತ. II, ೨೬೨). ೪. 'ಹೆಂಟೆಗೊಡತಿ' ಪರಾ. ೫. ಹಸಿಯ ಇಟ್ಟಿಗೆ; ಸುಡದೆ ಇರುವ ಇಟ್ಟಿಗೆ: ಕಪ್ಪುಮಣ್ಣಿನ ಹೆಂಟೆಯನ್ನು ಕೆಂಪಾಗಿ ಸುಟ್ಟು, ನೀರಲ್ಲಿ ಹಾಕಿ, ಆರಿದ ನೀರಂ ಕುಡಿಯಲು ಪಿತ್ತ ಛರ್ದಿ ಮಾಣ್ಗುಂ (ಸಕಪ್ಪ. ೨೬೫); ಒಂದು ಹೆಂಟೆಯದಾದರೂ ಸುಂದರವಾದ ಮನೆಯೂ ಇತ್ತು (ಶ್ರೀಪಾತ್ರ. ೯೯). **ಹೆಂಡೆ**₁ : ೧. "ಹೆಂಡೆ[ಪಾಠಾಂ. ಹೇಂಟೆ] ಲೋಷ್ಟಂ" (ಮಂಗರಾ. ೦೧೯-೨); ಬಿಡ ಸಕ್ಕರೆ ಹಣ್ಣು ಕೊಟ್ಟರೊಲ್ಲದೆ ಮಣ್ಣು ಹೆಂಡೆಯನು ಬೇಡಿ (ಪುರಂದ. ದಾ. ೩-೦೦೬-೨); ಹೆಂಡೆ ಕಲ್ಲಿನೊಳಿಟ್ಟು ಕೊಲಲಿ (ಅವಯಾಣಾ. ೩-೦೩೦). **ಹೆಟ್ಟು**₁: ೪. 'ಹೆಟ್ಟುಹೊಡೆ' ಪರಾ. ೬. ಉಳುಮೆ: ಹೂಟಿ. ೭. ಹರಳಿನಿಂದ ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ ಹಿಂಡಿ,— ಗಪ್ಪು: "ಲೋಷ್ಟದೊಳು ಹೂಟದೊಳುಯೋರಂಡಕಿಟ್ಟದೊಳು ಹೆಟ್ಟಂ" (ಕಬ್ಬಿಗಂ. ೯೦). **ಹೆಟ್ಟೆ**: ೧. "ಲೋಷ್ಟಕಃ, ಲೋಷ್ಟಂ—ಈ ೨ ಹೆಟ್ಟೆ" (ಕರಾಭು. ೯೯-೯೨೨); ತೊಟ್ಟನೆ ಪಲ್ಮಾಂಬು ತವೆ ಬತ್ತಿಮಾದಾಕ್ಷಣವೆಟ್ಟು ಹೆಟ್ಟೆ[ಪಾಠಾಂ. ಟ್ಟ]ಕಾಯ್ದಿಟ್ಟಿಗೆಯುಂದವಮಾಯ್ತು (ಕಟಾಸುಮಾ. ೯-೦೨೯); ಮಣ್ಣಿನ ಹೆಟ್ಟೆಯೊಂದನ್ನೆತ್ತಿ ನೀರಿಗೆ ಒಗೆದ (ಮೂರುಗಾ. ೨೯೫).

[ದೇ.॥ ತುಳು. ಹಂಟೆ, ಎಂಟೆ; ತೆಲು. ಪೆಂಟ, ಪೆಡ್ಡ, ಬೆಡ್ಡ./ ಪ್ರಾ. ಪೇಂಡ./ಸಂ. ಪಿಂಡ]

**ಪೆಂಟೆ**₂, **ಹೆಂಟೆ**₂, **ಹೇಂಟೆ**, **ಹೇಟೆ**, **ಹೇಟೆ** (ನಾ). ೧. (ಕುದುರೆ, ಕತ್ತೆ ಮುಂತಾದ) ಪ್ರಾಣಿಗಳಲ್ಲಿ ಹೆಣ್ಣು: ಅಂತು ಪೆಂಟೆಗಳಂ ದಾಂಟಿ ಕೆಡಪುತ್ತುಂ ಕಡವಂಗಳಂ ಕಟ್ಟಿ ಕೆಡಪುತ್ತುಂ . . . ಕೇಲ್ದರ್ದೆ ತೆಱಿವಿನ ಮೊಳಱ್ ಪೆಂಟೆ[ಪಾಠಾಂ. ಪೆಟ್ಟ, ಪೆಟ್ಟೆ]ಯ ಪೊಟ್ಟೆಯಂ ಕರ್ಚಿ ಸೆಳೆಯೆ (ಅರ್ಜನ. ೬-೯೦ ಪ). **ಹೆಂಟೆ**₂ : ೨. "ಹೆಣ್ಣುಕೋಳಿ" (ಪಾಠಾಕ. ೨೨೬). **ಹೇಂಟೆ** : ೨. ಚಂದ್ರಮನಂತೆ ಸುಪಕ್ಷದಿಂದೆ ರಂಜಿಸಿಮುದು ಪುಂಜನಗ್ಗದ ಸುಮಸ್ತ್ರುವಿನಂಕಿರೆ ತಟ್ಟು ಹೇಂಟೆಯೊಳ್ (ಹರಿಕಾಂತ. ೩-೬೪); ತನ್ನ ಹೂಮರಿಗಳೊಡನೆ ನೆಲವನ್ನು ಕೆದರಿ ಗಲೀಜು ಮಾಡುತ್ತಿರುವ ಹೇಂಟೆ (ಕಾಸೂರು. ೩೬). **ಹೇಟೆ** : ೨. ಪೇಳಲಿನ್ನೇಂ ಸಿದ್ಧರಾಮ ಹೇಟೆಯ ಮರುಳ ಕೋಳಿಗಳ ಮೇಲೆ ತನ್ನಯ ಹೇಟೆಯಂ ಬಟ್ಟು ಕಾಳಗದಿನೆಲ್ಲವಂ ಗೆದ್ದುಕೊಂಡು (ಹರಿಕೃ. ೬೩-೨೬). **ಹೇಟೆ** : ೨. ಹೇಟೆಯ ಮಗ್ಗುಲಲ್ಲಿನ ಕೋಳಿಮರಿಗಳಂತೆಯೂ . . . ಹೋದರು (ಕೊಂಟಿಕ. ೯೬).

[ದೇ.॥ ತಮಿ. ಪೆಟೈ, ಪೆಟ್ಟೈ, ಪೇಟು, ಪೇಟ್ಟೈ; ಮಲ. ಪೆಟ್ಟ, ಪೆಡ, ಪೇಡ, ಪಿಡ; ತುಳು. ಪೆರಡೆ; ತೆಲು. ಕೋಲಾ. ಪೆಟ್ಟ]

**ಪೆಂಟೆ**₃ 'ಪೆಂಟೆ₂' ನೋ.

**ಪೆಂಟೆ**₄ 'ಪೆಟ್ಟೆ₂' ನೋ.

**ಪೆಂಟೆಗಟ್ಟು** (ಕ್ರಿ). ಮುದ್ದೆಯಾಗು; ಉಂಡೆಯಾಗು: (೬). [ಪೆಂಟೆ₁ + ಕಟ್ಟು₁]

**ಪೆಂಟೆಬೆಲ್ಲ** (ನಾ). ಮುದ್ದೆಯಾಗಿರುವ ಬೆಲ್ಲ ; ಉಂಡೆಬೆಲ್ಲ : ಒಂದು ದೊಡ್ಡ ಕೊಪ್ಪರಿಗೆಯಲ್ಲಿ ಕಬ್ಬಿನ ಹಾಲನ್ನು . . . ಚೆನ್ನಾಗಿ ಕುದಿಸಿ ಪೆಂಟೆಬೆಲ್ಲವನ್ನು ಮಾಡುತ್ತಿದ್ದರು (ಕಹಕೃ. ೩-೮೨). [ಪೆಂಟೆ₁ + ಬೆಲ್ಲ]

**ಪೆಂಡ, ಹೆಂಡ** (ನಾ). ಈಚಲು, ತೆಂಗು, ಬಗನಿ, ತಾಳೆ ಮೊದಲಾದ ಮರಗಳಿಂದ ಇಳಿಸಿ ತೆಗೆದ ರಸ ; ಮದ್ಯ : "ಮದ್ಯಂ=ಪೆಂಡು" (ಶಾಲಿ. ೭೯೦) ; ಕಂಡವರೆಲ್ಲರು ಉಗುಳ ಓಕರಿವಂತೆ ಪೆಂಡದ ಗಡಿಗೆ ಮುಂದಿಟ್ಟು (ಬಸ್ವಾ. ೬-೭೮). **ಪೆಂಡ** : ಬೆಳದಿಂಗಳಲ್ಲಿ ನಿಂದು ಹೆಂಡವ ಕೊಂಬವಂಗೆ ಲಿಂಗದ ಸಂದನಿನ ಬಲ್ಲ (ತೋಂಟದಾ. ೬೬-೨೬೫) ; ಲಡ್ಡುಗೆಯಂ ಬೆಸಕಂಗೆ ಪೆಂಡಮಂ ಮಾರಿಗೆ ಬೊಮ್ಮಯಂಗೆ ಚರುವಂ ಪಡೆದೆತ್ತುವೆಂ (ಶೂದ್ರಕ. ೬-೬೯) ; ಹೇರೂರ ನಾಗಣ್ಣ ಹೆಂಡದಾ ಮಾರಯ್ಯನು (ಗ.ರುಚಾ. ೯-೭೮).

ಹೆಂಡದ ಬುರುಡೆ=ಹೆಂಡವನ್ನು ತುಂಬಿಡುವ ಒಣ ಸೋರೆಕಾಯಿ ಯಿಂದ ಮಾಡಿರುವ ಉರುಟುಪಾತ್ರೆ : (೬).

[ದೇ.॥ ತುಳು. ಹೆಂಡ ; ಗದಬ. ಪೆಂಡೂಮ್./ಪ್ರಾ. ಪೇಂಢಾ]

**ಪೆಂಡತಿ** 'ಪೆಂಡಿತಿ' ನೋ.

**ಪೆಂಡತಿವಂತ** (ನಾ). ಪೆಂಡತಿಯುಳ್ಳವನು ; ಮದುವೆಯಾಗಿರುವವನು : ಪೆಂಡತಿವಂತನೀತಂ (ಶಬ್ದಾನು. ೬೧೨ ವೃತ್ತಿ).

[ಪೆಂಡತಿ (<ಪೆಂಡಿತಿ) + – ವಂತ]

**ಪೆಂಡಯ** 'ಪೆಂಡೆಯ' ನೋ.

**ಪೆಂಡವಾಸ** (ನಾ). ೧. ಅಂತಃಪುರ ; ರಾಣಿವಾಸ : "ರಾಣಿವಾಸಕ್ಕೆ ಪೆಂಡವಾಸವದೆನಿಸುಗುಂ" (ಅಭಿ. ೩೬); ಧಾರಿಣಿಮಹಾದೇವಿಯ ಯ್ಮೂರ್ವರರಸಿಯರ್ಕಳುಂ ಪೆಂಡವಾಸದಗ್ಗಳದ ಸೂಳೆಯರ್ಕಳುಂ ಬೆರಸು . . . ಪೊಕ್ಕು (ವಡ್ಡಾರಾ. ೬೦-೯) ; ಪೆಂಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್ (ಅಂಕೃ. ೦೦.೯೦) ; ಪಲುಂಬಿ ಪಂಬಲಿಸುವ ಪೆಂಡವಾಸದ ತಂಡಮಂ ಕಂಡು (ಅವಂಪು. ೩-೦೦೨ ವ). ೨. ಅಂತಃಪುರದಲ್ಲಿ ವಾಸಮಾಡುವ ಸ್ತ್ರೀಯರು : "ಪೆಂಡವಾಸಮೆಂದು ಅಂತಃಪುರಸ್ತ್ರೀಯರ್" (ಶಬಕಾ. ೬೦-೩೭೦) ; ಅಂತು ಪೆಂಡವಾಸಮುಂ ಪುರಪುರಂಧ್ರಿಯರುಂ . . . ಶುಮಾರರುಂ ಬೆರಸು ಧಾರಿಣೀಮಹಾದೇವಿಯುಂ ತಾನುಂ ಗಂಧಸಿಂಧುರಾರೂಢರಾಗಿ (ಧರ್ಮಾಮೃ. ೮೬-೦೬) ; ಪಣ್ಯವೀಧಿಯೊಳ್ ನಡೆವುದು ಪೆಂಡವಾಸಮಾತಸಾಧ್ವಜನೀರಥಯೂಥ ಮೋಹನಂ (ಧರ್ಮಪು. ೩-೩೯). ೩. ಸೂಳೆ ; ವೇಶ್ಯೆ : 'ಪೆಂಡವಾಸಗೇರಿ' ಪರಾ. [<ಪೆಣ್ + ವಾಸ₂]

**ಪೆಂಡವಾಸಗೇರಿ** (ನಾ). ವೇಶ್ಯೆಯರು ವಾಸಿಸುವ ಬೀದಿ ; ಸೂಳೆಗೇರಿ; ವೇಶ್ಯಾವಾಟ : ಆ ಪೆಂಡವಾಸಗೇರಿಯೊಳಗೆ ಸೌಭಾಗ್ಯದ ಭೋಗದ ಬಾಗದ ರೂಪುಗಳ್ ಮಾನಸರೂಪಾದಂತೆ (ಶಂಕರಾ. ೯-೮೬ ವ) ; ಪೆಂಡವಾಸಗೇರಿಯೊಳಗನೆ ಬರೆವರೆ (ಶಾಂತೀಕೃ. ೬-೭೩ ವ). [ಪೆಂಡವಾಸ + ಕೇರಿ]

**ಪೆಂಡಾರ** (ನಾ). ೧. ಕಾಲಿಗೆ ಧರಿಸುವ ಒಂದು ಬಗೆಯ ಆಭರಣ : ಅಂದುಗೆ : ಉರಗೆಜ್ಜ ದಂಡೆ ಪೆಂಡಾರ ಬಾಸಿಗವನಾವರದಿ ರುದ್ರಾಕ್ಷಿಯೊಳಲಂಕರಿಸಿ ಭಸಿತದಿಂ ಹೊರಿಸ ಹೊಸ ಹೋರಿಯೆತ್ತುಗಳ ನೊತ್ತಂಬದಿಂ ದೂಡಿದಂ ಗಾಡಿವಡೆದು (ಸಿದ್ಧರಾ. ೬-೨೯). ೨. ಶ್ರೇಷ್ಠನಾದ ವೀರನಿಗೆ ಶೌರ್ಯಸೂಚಕವಾಗಿ ಒಡೆಯನು ಕೊಡುವ ಬಿರುದು ಮತ್ತು ಅದನ್ನು ಸೂಚಿಸುವ ಆಭರಣ: ಎಡಗಾಲೊಳ್ ಪೊಸತಪ್ಪ ಪೊಂಬಸದ ಪೆಂಡಾರಂ ಭುಜದ್ವಂದ್ವದೊಳ್ ಕುಡುಮಿಂಚು ಕೊನರಿಪ್ಪ ವಜ್ರವಳಯಂ (ಜಗನ್ನಾ. ೬-೯೦). 'ಗಂಡಪೆಂಡಾರ' ಪರಾ. ೩. (ಅಲಂ) ಶ್ರೇಷ್ಠನಾದವನು; ಹಿರಿಮೆಯುಳ್ಳವನು : ಗಂಭೀರಾಭೀರವ್ರಚಂಡಪೆಂಡಾರ ವೀರಲಕ್ಷ್ಮೀದೇವ . . . ಪ್ರತಿಜ್ಞಾಪರಶುರಾಮ ಇತ್ಯಾದಿ ನಾಮಾವಳೀವಿರಾಜಮಾನ ಶ್ರೀಮತು ಪ್ರಾಥಪ್ರತಾಪ ಚಕ್ರವರ್ತಿ (ಕಶಾ. V, ಚಿ-೦೨ ; 1239) ; ಗಂಭೀರಾಭೀರಪ್ರಚಂಡಪೆಂಡಾರ ನಿಖಿಳಕುಲಕಾಂತಾರದಾವಸಾವಳದಹನ (ಮೈಕಂ. ೦೬೩೯, ೬೯-೦೪ ; 1276).

[ದೇ.॥ ತೆಲು. ಪೆಂಡಾರ, ಪೆಂಡರ, ಪೆಂಡೆರ, ಪೆಂಡೇರ]

**ಪೆಂಡಾರಿ** 'ಪಿಂಡಾರಿ' ನೋ.

**ಪೆಂಡಾರೆ** (ನಾ). (ಕಣ್ಣಿನ ಬೇನೆಗೆ ಮದ್ದಿನಂತೆ ಉಪಯೋಗಿಸುವ) ಒಂದು ಬಗೆಯ ಔಷಧೀಸಸ್ಯ : (೬). [< ಸಂ. ಪುಂಡರ್ಯ]

**ಪೆಂಡಾರೆಗಡ್ಡೆ** (ನಾ). ಪೆಂಡಾರೆಗಿಡದ ಗಡ್ಡೆ ; ಬಿಳಿನೈದಿಲೆಗಡ್ಡೆ : "ಪ್ರಪೌಂಡರೀಕಂ, ಪೌಂಡರ್ಯಂ—೨ ಪುಂಡರೀಕಮೆಂಬುವ ಗ್ರಂಥ ದ್ರವ್ಯದ ಹೆಸರುಗಳು. ಪೆಂಡಾರೆಗಡ್ಡೆ, ಪಾಂಡವರ ಮದ್ದು, ಇದು ಬಿಳೀನೈದಿಲೆಗಡ್ಡೆ" (ನಿಘಂ.ಶಿ.೦೯೦). [ಪೆಂಡಾರೆ + ಗಡ್ಡೆ]

**ಪೆಂಡಾವಾಸ** (ನಾ). = ಪೆಂಡವಾಸ ೨ : "ಪೆಂಡಾವಾಸಮುಮನಲ್ಲಿ ಯಂತ್ರವುತದೊಳ್ ಗುಂಡುಗೊಂಡಿರ್ಪ ಸಖಿಯರ್" (ಕಬಿಗಂ. ೦೯೬).

[☞ ಇಲ್ಲಿ 'ಪೆಂಡವಾಸ' ಎಂಬ ಶಬ್ದವನ್ನು ಛಂದಸ್ಸಿಗಾಗಿ 'ಪೆಂಡಾವಾಸ' ಎಂದು ಮಾಡಿಕೊಂಡಿದೆ]

**ಪೆಂಡಾಳ** (ನಾ). ದರೋಡೆ ಮಾಡುವವನು ; ಕಳ್ಳ : ಜಾರಚೋರಶಿಖಾಮಣಿಯಾದ ಕೃಷ್ಣನಂ ಪೆಂಡಾಳರುತೆ ಕುದುರೆಯನ್ನೇರಿ (ಅಹಾರ. ೨೬-೨೬ ವ). 'ಪೆಂಡಾರಿ' ಪರಾ. [< ಪಿಂಡಾರಿ]

**ಪೆಂಡಿ₁** 'ಪೆಂಟೆ₁' ನೋ.

**ಪೆಂಡಿ₂** 'ಪೆಂಟೆ₂' ನೋ.

**ಪೆಂಡಿ₃** (ನಾ). ಕುಲ ; ಮನೆತನ : 'ಅರಸುಪೆಂಡಿ', 'ರಾಜಪೆಂಡಿ' ಪರಾ. 'ಪೀಡಿ' ಹೋ. [← ಹಿಂ. ಪೀಢೀ]

**ಪೆಂಡಿಕ್ಕಿಜು** (ನಾ). ಒಂದು ಸ್ಥಳದ ಹೆಸರು (?) : ಅಂಗಾರಸಿಂಗ ಪೆಂಡಿಕ್ಕಿಜುಮಂ ಕಾಳಾ ಉಡುಗುಟೆಯನುಟ್ಟುಕೊಳ್ಳ (ಎಕ. VIII, ಸೊರಬ. ೨೨-೩ : ಸು. 800). [?]

**ಪೆಂಡಿತಿ, ಪೆಂಡತಿ, ಹೆಂಡತಿ, ಹೆಂಡತ್ತಿ, ಹೆಂಡಿತಿ** (ನಾ). ೧. ಮಡದಿ ; ಪತ್ನಿ : ಆತನ ಪೆಂಡಿತಿ ಪೃಥುಶ್ರೀಯೆಂಬಳ್ (ಶಾಂತಿಕೃ. ೯-೬೬ ವ) ; ಪೆಂಡಿತಿಯ ಮಂಗಳಸೂತ್ರವದು ಮೊದಲು ಇಂದು ನಾಳೆನ್ನದೆ ದಿನಂಪ್ರತಿಯಿಂದೆ ಧನವಂ ಸಲಿಸಲು (ಬಸವ. ೨೬-೯) ; ಕನಕಂ ನೀರಕ್ಕರಂ ಪೆಂಡಿತಿ ಕನಸು (ರತ್ನಾಕ. ೩೦). **ಪೆಂಡತಿ** : ೧. ಕಾಷ್ಠಕೂಟಂ ತನ್ನ ಪೆಂಡತಿ ಜಯಘಂಟೆಯೆಂಬೊಳನಿಂತೆಂದು ಕಲ್ಪಿಸಿದಂ (ವಡ್ಡಾರಾ. ೬೬-೫) ; ಕಿಚ್ಚಿಲ್ಲದಡುಗೆಯುಂ ನಚ್ಚಿಲ್ಲದ ಪೆಂಡತಿಯುಂ . . . ಒಪ್ಪಲಾರ್ಕುಮೆ (ಧರ್ಮಾಮೃ. ೦-೬೩). ೨. ಹೆಣ್ಣು ; ಸ್ತ್ರೀ : ಅರಾತಿಗಳ್ಗಳ್ಕಿಂ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ ಬಾಳ್ವಂ ಗಂಡರೂಪಿನೊಳ್ ಗಂಡನಲ್ಲಂ ಪೆಂಡತಿಯ ವಲಂ (ಆದಿಪು. ೦೨-೯೬). **ಹೆಂಡತಿ** : ೧. ರಾಮಧೇವನು ಹೆಜ್ಜಾಜನಿಜೀಗು ರಾಜವಲ್ಲಭ ಹೆಂಡತಿ ಭಣ್ಣಾರವನು ಬಲ್ಲಾಳತಿನ್ನೊಪ್ಪಿಸಿದಲ್ಲಿಗೆ ಮೆಚ್ಚುಗೊಟ್ಟ ಭೂಮಿ (ಎಕ. VII, ಶಿಕಾ. ೩೨-೦೨ ; 867 ? ಕೃತಾ) ; ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ . . . ಇದ್ದರೇನೊ ಶಿವಶಿವಾ ಹೋದರೇನೊ (ಬಸವ. ೦೦೯) ; ಹೆಂಡತಿ ಪ್ರಾಣ ಹಿಂಡುತಿ ದೊಡ್ಡ ಕೊಂಡಕೋತಿಯಂತೆ ಕುಣಿಕುಣಿಸುತ್ತ (ಪ್ರಿಂಂದ. ೯-೦೫ ಪಲ್ಲ); ನನ್ನ ಹೆಂಡತಿ ಪ್ರಶ್ನೆ ಕೇಳುವುದರಲ್ಲಿ ನಿಸ್ಸೀಮಳು (ಜುಹಾಕಾ. ೦೦). **ಹೆಂಡತ್ತಿ** : ೧. ಆತನ ಹೆಂಡತ್ತಿ ಸೋಮವ್ವೆ (ಎಕ. VII, ಚನ್ನಗಿ. ೩೨-೬೩೬ ; ಸು. 1060 ?). **ಹೆಂಡಿತಿ** : ೧. "ದಾರಾಃ, ಕ್ಷೇತ್ರಂ . . . ಗೃಹಿಣೀ, ಗೃಹಾಃ—ಈ ೧೩ ಹೆಂಡಿತಿ" (ಹಲಾಯು. ೬೦-೩೯೦) ; ಮಾಟಕುಟಿಲಗಳಿಂದ ನನ್ನನ್ನು ನೀನು ಹೆಂಡಿತಿಯನ್ನಾಗಿ ಮಾಡಿಕೊಂಡೆ (ಅರ್ಯಾಕ. ೬೯). [< ಪೆಣ್ + –ಅತ್ತಿ (< –ಅತ್ತಿ)]

**ಪೆಂಡಿಲ್ಪಿಂತೆ** (ನಾ). ಒಂದು ಸ್ಥಳದ ಹೆಸರು : ಮುಡಣದೆಸೆ ಪೆಣ್ಡಿಲ್ಪಿನ್ತೆ

ವುಲ್ಲೇಡು ಉದಿಚೇಡು ಚೇರಳಟಿನ್ನೆ (ಎಕ್. XII. ತಿಪ. ೩೬-೩೩; 878)·
[ ? ]

**ಪೆಂಡೆ₁** 'ಪೆಂಡೆಯ' ನೋ.

**ಪೆಂಡೆ₂** (ನಾ). ಹೆಣ್ಣು : ಸಮಶೀಲರೊಳು ಪೆಂಡೆ ದೊರಕಲು ನಾಡೆ ಸಮನಿಲ್ಲದ ಸುಖವಹುದು ಸಮಾನಿಲ್ಲದರೊಳು ನಂಟು ದುಃಖಿಗಳ ನಮಗಿರಿಸುವುದು ಚಿತ್ತದೊಳು (ಶಕಗ್. ೦೯-೩೦). [ < ಪೆಣ್ ]

**ಪೆಂಡೆ₃** 'ಪೆಂಟೆ₂' ನೋ.

**ಪೆಂಡೆಯ**, ಪೆಂಡಯ್ಯ, ಪೆಂಡೆ₁, ಪೆಂಟೆಯ್ಯ₁ (ನಾ). ೧. ಕಾಲಿಗೆ ತೊಡುವ ಒಂದು ಬಗೆಯ ಆಭರಣ ; ಗೆಜ್ಜೆಗಳಿಂದ ಕೂಡಿರುವ ಕಾಲುಬಳೆ,—ಅಂದುಗೆ: "ಪೆಂಡೆಯಮಂ ಪಾಯವಟ್ಟಂ" (ಶಬ್ದಮ. ೦೦೦-೩೦) ; ಬಾಲೆ ಮಾಣಿಕವನುಡು ಸಾದ ಕಿವಿಯಲಿ ಕೂಡು ಕಾಲ ಪೆಂಡೆ ಯವ ಮುಡಿ (ಜಕಾ. ೪-೧೧) ; ಪೆಂಡೆಯಮವರಳೆಲೆಯೆಬಟ್ಟ ಕಿಬುವುಲಿಯುಂಗುರ್ಗಳ್ . . . ಅತ್ಯಾಡುಗೆ ರಂಜಿಸುತಿರ್ಕುಂ (ದಕಳು. ೨-೭೩). ೨.—ಪೆಂಡಾರ ೨: ಮುತ್ತಿನ ಪೆಂಡೆಯಂ ಮುರಹರಂ ಕನಕಾದ್ರಿಯೊಳಂದು ಶೇಷನಂ ಸುತ್ತಿದ ಭಂಗಿಯಿಂದಮೆಸೆದಿರ್ಪುದು (ಎಕ್. V. ಹಿಂ೦ತಿರು. ೦೦೨-೭೩; ಸು. 1220 ?) ; ಕಾಲ ಕಡೆಹದ ಪೆಂಡೆಯಂಗಳ . . . ಸರಪಳಿ ಪಾಳದಾಭರಣಂಗಳ ಧರಿಸಿ (ಜಕ್. ೬೦-೨೭) ; ಪೆಂಡೆಯದ ಪಾಮಾಂಘ್ರಿ ಮೆಚ್ಚಿದಿರೆ (ಕೌಕಾ. ೯೦-೩). ೩. ಒಂದು ಬಗೆಯ ಆಯುಧ ಮತ್ತು ಅದನ್ನು ಹಿಡಿದು ಮಾಡುವ ಸಾಧನೆ ( ? ) : ಜಟ್ಟಿಸಾಧಕ ಬಲ್ಲು ಎದ್ದೆ ಕತ್ತಿ ಕಠಾರಿ ಪೆಂಡೆಯ ನೆಟ್ಟ ತಿರುಗುಚಕ್ರ ಗಂಡುಕೊಡಲಿ ಮೊದಲಾದ ಸಾಧಕಗಳನು ಕಲಿತು (ಜಕಾ. ೯). ' ಪಟ್ಟೆಯ್ಯ₁ ' ಹೋ. **ಹೆಂಡಯ** : ೧. ಮುತ್ತಿನ ದಂಡೆ ಮುತ್ತಿನ ಲಸತ್ಸಿಲಕಂ ಸುರಿಮುತ್ತಿನೋಲೆಯೊಳ್ ಮುತ್ತಿನ ಪೆಂಡ[ಪಾಠಾಂ. ದೆ]ಯಂ . . . ಪಿಲ್ಲಿಯೆಂಬ ಸದಲಂಕರಣಂ ಗಳನೆಯ್ದೆ ತೊಟ್ಟು (ದಾರಕ್. ೬-೦೦೬). **ಪೆಂಡೆ₁** : ೧. ಎಸರುವ ಮುತ್ತಿನ ಪೆಂಡೆ ಚರಣದಿ . . . ಧರಿಸಿ (ಜಕಪಾ· ೦೯-೯೯) . . ೨. ಬಿರಿದೀನ ಕಾಲ ಪೆಂಡೆಯು (ಕೌಂದಕಾ. ೫-೬೯). **ಪೆಂಟೆಯ್ಯ₁** : ೧. ನೇವಳದ ಪೆಂಟೆಯವ (ಕೀಶಶ. ೬೭-೨೨): ಹರಳೋಲೆ ಟಿಬ್ಬುಣೆ ಮುತ್ತಿನ ಪೆಂಟೆಯ ಮಿಮುಗುವ ಚಿನ್ನಸರಗಳು ತುಂಬಿಗಿದ ದಿವ್ಯಕಾಂತಿಯ ಮೂಕುತಿಯಿಂದ ಸರಸಿಜಗಂಧಿಯೊಪ್ಪಿದಳು (ಕಂಕಶ. ೯-೬೩)·

[ದೇ. ೫ ತಮಿ. ಪೆಣ್ಣಯ, ಪೆಣ್ಣಯ ; ತೆಲು. ಪೆಂಡಿಯ, ಪೆಂಡೆ]

**ಪೆಂಪಾನ್** (ಕ್ರಿ). ಚೆಲುವನ್ನು ಹೊಂದು ; ಶೋಭಿಸು : ವಕ್ರದ ಪೆಂಪಾಂತ ಕೋಡಾಡೆಗಳು ನುಂಬಿನ ಬೆಳ್ಪಾಂತ ಮೈಸಿರಿ ರೌದ್ರದ ಜೊಂಪಿನ ಸಿಂಗವೆಸೆದುದು (ಶರಕ್. ೯-೯೬)· [ಪೆಂಪು+ಆನ್₁]

**ಪೆಂಪಿಡಿ** (ಕ್ರಿ)· ಹಿರಿಮೆಯಿಂದ ಕೂಡಿರು; ಘನತೆಯನ್ನು ಹೊಂದಿರು : ಪೆಂಪಿಡಿದೊಪ್ಪಿಪ್ಪನಪೂರ್ಜಿತೋಜ್ವಳಯಶಶ್ರೀಕಾಂತನಾಗಿಪ್ಪು (ಎಕ್·XVI. ಶಕ್ಯ೬೨. ೯೦-೯೯ ; 1160); ನೆಜ್ಜಿಯ ನವಿರ್ ಪೆಂಪಿಡಿದೆಡದಿಪ್ಪಿಲ್ಲದ ನೆವದ ಪ್ರೌದಿಂ ಸೂರ್ಕೊತಾಂ (ಶಕಿ. ೬-೨೨೯). [ಪೆಂಪು+ಇಡಿ]

**ಪೆಂಪು**, ಪೆಣ್ಪು, ಹೆಂಪು (ನಾ). ೧. ಹಿರಿಮೆ ; ಘನತೆ ; ಶ್ರೇಷ್ಠತೆ : "ಪೆಂಪೆಂದನಲ್ಗಾರವಂ" (ಶಕೀಕಿ. ೬೨) ; ಸುನ್ನರವೆಪ್ಪುದಾಗ್ರುತವ (ಎಕ್. II, ೬೯-೦ : ಸು. 750) ; ವಾಗೆ ಮನದ ಪೆಂಪುಮಂ ಕೈವಾಗೆ ವಿಭವದ ಪೆಂಪುಮಂ ವಿಶೇಷಿಸಿ ಪೇಳ್ವಲ್ ಬಗೆವುದುದಾತ್ತಾಲಂಕಾರಗುಣೋದಯಂ (ಕೀಕಾ· ೩-೦೭೩) ; ಕುಡುವೆಟ್ಟನ ಕುಡುವನ ಕುಡೆ ಪಡೆವನ ಪೆಂಪೇಂ ನೆಗಟ್ಟೆವರ್ಪುದೊ (ಕಂಕಪಾ· ೬-೯೯). ೨. ಕೀರ್ತಿ ; ಯಶಸ್ಸು ; ಖ್ಯಾತಿ : ಪಡೆದಂ ಬ್ರಹ್ಮಂ ಜಗಮಂ ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ ಪಡೆದಲ್ತೆ ಪಡೆವನೆನಿಸಿದ ಕಡುಪೆಂಪಿನ ಪೊಜೆಗೆ ನೀವು ಮೊದಲಿಗರಾದಿರ್ (ಕಂಕಶ. ೬-೦೨); ಪೆಂಪಿನುಬ್ಬಂಗಿಯ ಕೋಟಿಯುಂ . . . ಕೊಣ್ಡ ನೆಗಟ್ಚಿ (ಎಕ್. II. ೩೯-೯೨; 974); ತನಗೆ ವಲ್ಲಭೆ ಲಕ್ಷ್ಮಿಯೆನಿಪ್ಪ ಪೆಂಪು (ದಕಳು. ೦-೦೯). ೩. ಆಧಿಕ್ಯ ; ಹೆಚ್ಚಳ; ಅತಿಶಯ : " ಉಬ್ಬರಂ . . . ಪೆಂಪು . . . ಪೆರ್ಚುಗೆ—ಈ ೧೯ ಅತಿಶಯಂ " (ಶಬ್ದಾ. ೩೭-೨೩೯); ಕಂಪಿನ ಪೆಂಪು ಪೊಂಪುಳ್ಪುಯೆನಲ್ (ಶಾಂತಿಕ್. ೫-೭೩); ಆ ಕುಮಾರರ್ಗೆ ಪೆಂಪಿಂದ ಮದುವೆಯಂ ಮಾಡಿದಂ (ಧಾಶಕಂ. ೫-೩೦); ಧನದ ಪೆಂಪನು ಹೊಗಳಲೇಂ (ಶಾಕ್ಯಶಾ. ೦೭-೭)· ೪. ಶೋಭೆ; ಸೊಗಸು; ಚೆಲುವು; ಮೃಡಗಣಾವಳಿಸಹಿತ ಪೆಂಪಂ ಪಡೆದು (ಏಕಕ್. ೩೨-೩೯); ಪೆಂಪೊಗುವ ತಾವರೆಗೊಳಂಗಳ . . . ಸೊಂಪು ಸೆಳೆದುದು ಮನವನು (ಶಂಪ್ರಾಕ. ೯-೩೭); ಪೆಂಪಿಂದೆ ಪುರವನಿತೆ ಗಹಗಹಿಸಿ ನಗುವಂತೆಸೆವ ಸೌಧಂಗಳ ಮರೀಚಿ ನೋಡೆಂದನು (ಕೈಶಿಪಾ. ೩ ೦೫); ತಂಗದಿರ ಬೆಂಗದಿರನುದಯಾಸ್ತಂಗಳ ಪೆಂಪು (ಶಕ್ಯಾಂಗಿ. ೨೯-೬೦೭). ೫. ಎತ್ತರ ; ಔನ್ನತ್ಯ : ತೊಂಭತ್ತೊಂಬೆಸಾಸಿರ ಯೋಜನಮಂ ನೆಗೆದೀ ಸುರಗಿರಿ ಪೆಂಪನೇಂ ಪುಮಂಗೊಳಿಸಿದುದೋ (ಅದಿಕ್. ೬-೬೯); ತುತ್ತತುದಿ ರುತುವಿಮಾನವಮನೊತ್ತಿರ್ದುದು ನಗದ ಪೆಂಪನದನೇವೊಗಟ್ಟಿಂ (ಅಕಕ್. ೦೦-೬); ಗೋಪಾಮಂಖವಿಲಸನದಿಂ ತಾನೆ ಮೇಲಾದ ಪೆಂಪಿಂ ಮುಗಿಲಂ ಮುಟ್ಟಿರ್ದುದೆಂಬಂತಿರೆ ಕರಮೆಸೆಗುಂ ವಿಶ್ರುತೋತ್ತುಂಗವಪ್ರಂ (ಸುಕುಮಾ. ೦೦-೫೨). ೬. ಏಳಿಗೆ ; ಅಭಿವೃದ್ಧಿ : ' ಪೆಂಪೇಜಿಸು ' ಪರಾ. ೭. ಹೆಮ್ಮೆ ; ಜಂಭ : ಅವರ ಪೆಂಪುಗಳನುರ್ಕಿವದೆ ತನ್ನ ಒರ್ವಗಲ ಪುಟುಗಳ್ಗೆ ಬಯಲ್ ಗೈದವನ್ (ಅಧ್ಯಕ್ಷ. ೫೦-೦೦೯೬). **ಪೆಣ್ಪು** : ೧. ಅಮರಶ್ಮಳದ ಪೆಣ್ಪಂ ತಳೆದಯ್ಯಂದಿಂಬರೇಂ ಕೇವಳಮೋ (ಕೌಶ್ರ. XI— ii. ೦೯೯-೦೨: 1098) ; ಪೆಣ್ಪನ ಕಣಿಯೆಂದು . . . ಪೊಗಳುತಿರ್ಪುದು (ಕೌಶ್ರ. IX— i. ೨೭೬-೨೨; 1183). **ಹೆಂಪು** : ೧. ಪೇದಮಲಿ ಹಿರಿದು ಹೆಸರಾದ ಹೆಂಪುಳ್ಳ ಶಿವನಾದಿನಾಮವು ನೋಡು ಪಂಚಾಕ್ಷರಿ (ಶಿವಗೀ. ೦೯-೫೦); ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದಂ (ತಿರುವಾ· ಹ. ೦೨೩-೬): ದೇವ ನಾವ ಭಯವನು ಬೇಡಲು ನೀವೊಲಿದು ಕೊಡದಿಹುದು ಹೆಂಪೇ (ಏಕಕ್. ೪೬-೯೭)· ೩. ವೀರಭಕ್ತಿಯ ಹೆಂಪು ಧೀರೋದ್ದಾರತೆಯ ಸೊಂಪು (ಏಕಕ್. ೩೬-೨೯): ಆ ದೇವತಾಂನಿ ಪೊಗಳುತ್ತಲಿರ್ದನು ಹೊಚಿವ ಹರುಷದ ಹೆಂಪಿನುಬ್ಬಿನಲಿ (ಕೊಕಶ· ೬-೫೦-೦೦)· ೪. ಎನ್ನ ಭಕ್ತಿ ಎಲವದ ಕಾಯ ಫಲದಂತೆ ನೋಡಯ್ಯ ಹೊಅಗೆ ಹೆಂಪು ಒಳಗೆ ಬೂರವಯ್ಯ (ಬಕಶ. ೨೯೬); ಕುಸುಮದ ಕಳಿಕೆಗಳ ಹೆಂ[ಪಾಠಾಂ. ಹಿಂ]ಪಿನಲಿ . . . ತಂಬೆಲರ ತಂಪಿನಲಿ ಸಲಿಸಿತಾ ಸಹಕಾರ ಸೊಗಸಿನ ಸುಲಭತೆಯನರಸಂಗೆ (ಕೊಕಶ. ೩-೬ ೬೨): ಮನಸ್ಸನ್ನು ಮರುಳುಗೊಳಿಸುವ ಬೆಳದಿಂಗಳ ಹೆಂಪೂ . . . ಅನುರಾಗದ ವೊಳಕೆಯನ್ನು ನಾಟಿದುವು (ಶಾಕೀ. ೦೪). ೫. ಪರಮಾಣು ಮೇರುವಿನ ಹೆಂಪಿಗೆ ಮುಳಿದಂತೆ (ಶಿಕಕ. ಹ. ೯೯೯-೨೦); ಸುರಗಿರಿಯ ಸೌಭಾಗ್ಯವನು ಹರಗಿರಿಯ ಹೆಂಪನು ಮಂದರಗಿರಿಯ ಸೊಂಪನು (ಅಕಾಗ. ೯-೨-೦೦). ೬. ಹಿಬುಪ್ಪಳ್ಳಿಯಾಗಿಯು ಕಣ್ಗೆ ಮೆಚ್ಚಿದು ಹೆಂಪಿನೊಳಿರ್ಪುದು (ಸಿದ್ಧರಾ. ೦-೪೦) ; ಕಳದನೆಳೆಯೊಳು ಭಕ್ತಿಬೀಜಮನಳಿದನಾ ಕಬ್ಬಿಲರ ಹೆಂಪು (ಏಕಕ್. ೫೯-೫೯)· ೮. ಸಂತೋಷ ; ಹಿಗ್ಗು : ಕಂಪುಳ್ಳ ಸಂಪಗೆಯ ಪೂಗಳಂ ತಿಪ್ಪಿತಂದು ಹೆಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು . . . ಕೊಡಲು (ಏಕಕ. ೦-೨೯): ಶಿವಕವಿಗಳ ಮನದಿಂಪು ಭುವನಜನರ ಹೆಂಪು ಲಿಂಗನ ಕೃತಿ (ಕಪಿ. II. ೨೦೮ ಕೋಕಿಲಶತಕ)· ೯. ವಿಲಾಸ ; ಬೆಡಗು : ಕೆಳದ ಹೂವಿನಲ್ಲಿ ಕಂಪಮಳಿದ ಸೂಳೆಯಲ್ಲಿ ಹೆಂಪ ಕೊಳಚಿಯ ನೀರಿನಲ್ಲಿ ಗುಂಪನಹಿಸುವಿರಿ (ಏಕಕ. ೫೬೯) ; ಮತ್ತವಳಿವಕ್ರತೆಯನೀವ ವಹಣಿ ತರಂಗಿಸುವ ತಿರುವು ಸುಳಿಗೊಳ್ಳ ಹೆಂಪು (೧೦ಕ. ೨-೦೦೫ ಪ).

[ < ಪಿರಿದು₁ + -ಪು₂. / ತೆಲು. ಪೆಂಪು, ಪೆಸುಪು ]

**ಪೆಂಪುಂಗಾಣಿ** ' ಪೆಂಪುಗಾಣಿ ' ನೋ.

**ಪೆಂಪುಗಾಱ,** ವೆಂಪುಂಗಾಱ (ನಾ). ಹಿರಿಮೆಯುಳ್ಳವನು : ಘನತೆಯುಳ್ಳವನು : ಪೆಂಪುಗಾಱಂ, ಪೆಂಪುಂಗಾಱಂ . . . ಬೇಹುಗಾಱಂ (ಶಾಣಾಕ್ಷ. ೦೬೩ ಕ್ರ ಹೋ)· **ಪೆಂಪುಂಗಾಱ :** ಮೇಲಿನ ಪ್ರಯೋಗವನ್ನು ನೋಡಿ. [ ಪೆಂಪು + — ಗಾಱ ]

**ಪೆಂಪುಗಿಡು** 'ಪೆಂಪುಗೆಡು' ನೋ.

**ಪೆಂಪುಗೆಡು,** ಪೆಂಪುಗಿಡು (ಕ್ರಿ). ೧. ಹಿರಿಮೆಯು ಹಾಳಾಗು,-ನಾಶವಾಗು: ದಿವಾಕರನಂ ಪೋಲ್ಪವರೆ ಪೆಂಪುಗೆಟ್ಟಣ್ಣರೆಗಳ್ (ಶಾಂತಿ. ೪೭. ೯೬–೯೭; 1076?): ಬಡತನದೆ ಒದವಿದುದನ್ನಂಬಡೆಯದೆ ವಾಙಿಗಿ ಕರನೆಣ್ಣೀವಿಂ ಪೆಂಪುಗೆಟ್ಟು ನಮೆಯುತ್ತಿರ್ದರ್ (ಕಬ್ಬಿಗ. ೯–೨೦). **ಪೆಂಪುಗಿಡು :** ೨. ಘನತೆಯನ್ನು ಕಳೆದುಕೊಳ್ಳು : ಕಿರಿ:ಟವಿದು ಪೆಂಪುಗಿಡ ವೆಳಂಗೆಙಗುವುದೇ (ಅಂತ್ಯ. ೦೨–೦೦೦). [ಪೆಂಪು+ಕೆಡು₁]

**ಪೆಂಪುಗೊಳ್,** ಪೆಂಪುಗೊಳು (ಕ್ರಿ). ೧. ಅಧಿಕಗೊಳ್ಳು; ಹೆಚ್ಚಾಗು : ಕಡಂಗಿ ಬಾಯ್ದೆಙಿಯನೊಲ್ದು ಕರ್ದಂಕಿ ಕರ್ದಂಕಿ ಪೀರ್ದು ಪೀರ್ದೊಡ ನಡಸಿರ್ಪ ಬಾಯಙಿಕೆಯಂ ತವಿಪ ಸವಿಪೆಂಪುಗೊಂಡಿಪಂ (ಶಶಿ. ೬–೨೦೨). **ಪೆಂಪುಗೊಳ್:** ೨. ಘನತೆಯನ್ನು ಪಡೆ; ಹಿರಿಮೆಯನ್ನು ಹೊಂದು: ಬಡುವಂ ಈ ಬಾಳ್ ಅದೇಕೆಂಬ ಚರ್ಚೆಯ ; ನಾವು ದುಡಿವಂ ಅದು ಪೆಂಪುಗೊಳೆ (ಜನಪದ. ೬೦೯). [ ಪೆಂಪು + ಕೊಳ್₁ ]

**ಪೆಂಪುಗೊಳು** 'ಪೆಂಪುಗೊಳ್' ನೋ.

**ಪೆಂಪುವಡೆ** (ಕ್ರಿ). ೧. ಹಿರಿಮೆಯನ್ನು ಹೊಂದು; ಘನತೆಯನ್ನು ಪಡೆ: ಚಿತ್ರರಥನಂಬನೊರ್ವಂ ಪುತ್ರಂ . . . ಪೆಂಪುವಡೆದು ಜಗತ್ತ್ರಯವಿಖ್ಯಾತ ಕೀರ್ತಿ ಮುನ್ನಿಗುದಯಿಸಿದಂ (ಕಾದಂಬ. ೭೦೬) : ಜಿನದತ್ತಂ ಗುಣವಾರ್ಧಿ ತಪ್ಪಲಱಿಯಂ ಜೀವಾದಿಗಳ್ಗೆಂಬ ಭಾವನೆಯಿಂದಾನಿನಿತೊಂದು ಪೆಂಪುವಡೆದಂ (ಕಬ್ಬಿಗ. ೨–೨೩೩): ಭೂತಳದಲ್ಲಿ ಪೆಂಪುವಡೆದಂ ಭವ್ಯಾದಿ ಭಾಳೇಕ್ಷಣಂ (ಶರಕ. ೦೨–೦೦೩). ೨. ಖ್ಯಾತಿಯನ್ನು ಪಡೆ; ಯಶಸ್ಸಿನಿಂದ ಕೂಡಿರು : ಪೆಂಪುವಡೆದ ಗೋತ್ರನವಿಭಾಗಂಗನುಕೂಳನಮಂತ್ರಿ ನರಸಿಂಗನಾಯಕಂ ಶಿಷ್ಟತುಷ್ಟಿದಾಯಕನೆನಿಸದಂ (ಶಾಸ. ೬೬–೦೨–೨೭ ; 1170): ಈ ರೀತಿಯ ಪೆಂಪುವಡೆದ . . . ತಾತಾಚಾರಿಯ ರಡಿಗೆಙಗುವನು (ಪೋಶಕ. ೦–೯) ; ಪರಮವುಣ್ಯನಾವಾಙನಿಸುವ ಸಿದ್ಧವೀರೇಶನೆಸಿದನಂದವನಿಯೊಳು ಪೆಂಪುವಡೆದು (ಚೆಂಕಿ. ೦–೨೦). ೩. ವೈಭವದಿಂದ ಕೂಡಿರು : ಜಗಕ್ಕತಿಶೋದ್ಧವಕವಾಗಿ ಪೆಂಪುವಡೆದತ್ತುಂತಾತ್ಮಜನ್ಮೋತ್ಸವಂ (ಅಂತ್ಯ. ೭–೩೬); ಭಟಹರಗೆ ಕರಸರಸಿಜವನಾ ಪರವೆ ವುಙಿದು ನಿಲಲಂದು ಮೇಳಂ ಪೆಂಪುವಡೆದಿರ್ದುದು (ಶಾಂತಿ ೯–೩). ೪. ಚೆಲುವಾಗಿರು ; ಶೋಭಿಸು: ಸೂಳೆಗೇರಿಯಂಗಡಿಯ ವಗುಂತಿ ಪೆಂಪುವಡೆದಾ ಪೊಂಬೆಲೋಳ್ ನೆಙಿದೊಪ್ಪಿ ತೋಙಗುಂ (ಕಾಶಿಕಿ. ೯–೦೯೭). [ಪೆಂಪು+ಪಡೆ₁]

**ಪೆಂಪುವೆಱು** (ಕ್ರಿ). ೧. ಹಿರಿಮೆಯನ್ನು ಹೊಂದು ; ಶ್ರೇಷ್ಠತೆಯನ್ನು ಪಡೆ : ಇದು ಮಾಳಯಾಚಳಂ ಮಾಳಯಜಂ ಮಾಳಯಾನಿಳನೆಂದು ಪೆಂಪುವೆತ್ತುದು (ಕಾಕಶಾ. ೯–೨೦): ಪೆಂಪುವೆತ್ತ ಮಹಿಮೋನ್ನತಿ ಮೇರುಗೆ ಮಂಡಪಂ ದಲಾಗೆಸೆವುದು(ಎಕ. VII. ಶಿಕಾರಿ. ೯–೬೩; 1122); ವರಸೌಂದರ್ಯ ಗಭೀರವಾರಿನಿಧಿಯೋ . . . ತಾನೆನೆ ಪೆಂಪುವೆತ್ತುದವನೀಶೋದ್ಯತ್ಸಭಾಮಂಡಲಂ (ಕಚುಮ. ೩–೯೦). ೨. ಕೀರ್ತಿಯನ್ನು ಹೊಂದು; ಪ್ರಸಿದ್ಧವಾಗು : ಸಕಳವರ್ಣಾಶ್ರೇಷ್ಠವಿಮಾ ವರ್ಣಾಮೆಂದೆನೆಸಂ ಕೈಕೊಳೆ ಪೆಂಪುವೆತ್ತ ನೆನೆವ್ಯತ್ತಂಭೋಜಜನ್ಮಾನ್ವಯಂ (ಶಾಸ. ೩–೨–೩೭; 1058); ತೊಡವಾರ್ಹತಕ್ಕೆನೆ ಜನಂ ಭೂಭಾಗದೊಳ್ಪೆಂಪುವೆತ್ತುದು ಸೂರಸ್ಥಗಣಂ (ಶಾಸ. XI–೯. ೦೦೦–೦೯; 1071). ೩. ಅತಿಶಯವಾಗು; ಅಸಾಧಾರಣತೆಯಿಂದ ಕೂಡಿರು : ಪೆಂಪುವೆತ್ತ ತಪಃಪೋತದಿನಣ್ಣ ನೀಂ ತಡಿಮುನೆಯ್ದು (ಅಂತ್ಯ. ೩·೩೬): ಕಟ್ಟಾಯುವ ಪೆಂಪು ಶಕ್ರನೊಡನೆಱಿದ ಪೆಂಪವೆತ್ತು ನಿಟ್ಟಾಯುಗಳಾಗಿ ನಿನ್ನೊಳವರ್ದಿರ್ದುವು (ಪಂಕಶಾ. ೦೯–೦೩); ತನ್ನ ಪವರನ ಯುತು ಪೆಂಪುವೆತ್ತೊಪ್ಪಿ ತೋರ್ಕುಂ (ಅಭಿ.೮. ೦-೦೦೦). ೪. ಅಂದವನ್ನು ಪಡೆ; ಶೋಭೆಯನ್ನು ಹೊಂದು : ಪೆಂಪುವೆತ್ತಗಲ್ ಬಿಸರುಹಮುಳ್ಳರಲ್ಲು ಸಿರಿ ಕಣ್ಣೆಱಿವಂತಿರೆ (ಕುಂತ. ೩–೩೬) ; ಪೆಂಪುವೆತ್ತಸಕದಿನಿರ್ದ ಸಂಪಗೆಯ ಪೂವಿನೊಳಾದ ಬೆಡಂಗು ನಾಡೆ ರಂಜಿಸೆ (ಚಂದ್ರಶ. ೦೩–೦೭). [ ಪೆಂಪು + ಪೆಱು₁ ]

**ಪೆಂಪುವೇೞ್** (ಕ್ರಿ). ಹಿರಿಮೆಯನ್ನು ಹೇಳು,-ಸಾರು : ಎರೆದವ ಪೆಂಪುವೇೞ್ವೊಡನಲಾ ಪೊನರ್ವಾಕನ ಪೆಂಪುವೇೞ್ವೊಡಾ ಸುರಪತಿ (ಪಂಕಶಾ. ೩–೭೩). [ ಪೆಂಪು + ಪೇೞ್ ]

**ಪೆಂಪೇಱಿಸು** (ಕ್ರಿ). ೧. ಏಳಿಗೆಯನ್ನುಂಟುಮಾಡು ; ಅಭಿವೃದ್ಧಿಗೊಳಿಸು : ತತ್ತತ್ಕುಲಧರ್ಮದೊಳ್ ಸ್ವಜನಮಂ ಪೆಂಪೇಱಿಸು (ಶಶಿ. ೩–೦೨೦). ೨. ಹೆಚ್ಚು ಮಾಡು ; ವೃದ್ಧಿಪಡಿಸು : ಎನ್ನ ಮುತ್ತಿನ ವಣಿಯೋ ಬಿನ್ನಣಮಂ ಪೆಂಪೇಱಿಸಿ ತನ್ನೊಙಗಿಸಿತ್ತು ಮನ್ನಿಪಂ ನಿನ್ನಿನಿಯಂ (ಶಶಿ. ೬–೨೨೯). [ ಪೆಂಪೇಱು + — ಇಸು ]

**ಪೆಂಪೇಱು** (ಕ್ರಿ). ೧. ಹೆಚ್ಚು ; ಅಭಿವೃದ್ಧಿಗೊಳ್ಳು: 'ಪೆಂಪೇಱಿಸು' ಪರಾ. ೨. ಕಾಂತಿಯನ್ನು ಪಡೆ ; ಸೌಂದರ್ಯವನ್ನು ಹೊಂದು ; ಚೆಲುವಾಗು : ಸಕಳಜಗು ಪೆ[ ಪಾಠಾಂ. ಹೆ ]ಪೇಱಿತು ಪನ್ನಮಿತ್ರನುದಯಿಸುವಾಗಳ್ (ಗಂಗ. ೩–೯) : ಪೆಱಿಕೊಂದು ಪೆಂಪೇಱುವರ್ದೆಯ ವಿಱಿಯವ ಮೆಯ್ಯ . . . ಉಙಿತು ನೋಡುವ ನೋಟದ ಕೊವಂರಿಯ ಬಗೆಯಱಿತಙಕದೊಳೆಙಗುವುದು (ಪಂಪ. ೬–೦೭). [ ಪೆಂಪು + ಏಱು₁ ( < ಏಱ್₁ ) ]

**ಪೆಂಬಿದಿರ್** (ನಾ). ಒಂದು ಸ್ಥಳದ ಹೆಸರು: ಗಾವುಣ್ಡುಗಳೆ ಸೀಮೆದೋಱಿದ ಕ್ರಮ ತೊಳಂಚಿಮದ ಪೆರ್ಗ್ಗಯ್ಯಾಡಿಯ ಸೂಱಿದ್ಗಳ ಪೆಂಬಿದಿರವ ಮೆಪ್ಪ ಕೊ× (ಎಕ. XII. ಕುಣಿಕ. ೫೬–೭೦ ; ೯೦೪). [ ? ]

**ಪೆಂಬುಯ್ಯಲ್** 'ಪೆಣ್ಬುಯ್ಯಲ್' ನೋ.

**ಪೆಕರ** 'ಪೆಕ್ರ' ನೋ.

**ಪೆಕ್ಕ** (ನಾ). ಆಧಿಕ್ಯ; ಹೆಚ್ಚಳ : ಸುಡುವಡಂ ಕರಂ ಪೊಗೆವ ಪರ್ಬುವ ಕರ್ಬೊಗೆ ಪೆಕ್ಕಮಪ್ಪ ಪೆರ್ಬಡಿಕೆಯ ನಾಶಂ (ಅಂದಾಕ. ೬–೩೩)· 'ಪೆಕ್ಕಳ್ಳ' ಪರಾ. [ ದೇ. ೩ ತೆಲು. ಪೆಕ್ಕು, ಪೆಕ್ಕುವ ]

**ಪೆಕ್ಕಣ,** ಪೆಕ್ಖಣ, ಪೇರ್ಕಣ (ನಾ). ೧. (ನಾಟಕದಂಥ) ನೋಟ; ಕಾಣ್ಕೆ; ದೃಶ್ಯ: "ಪೆಕ್ಕಣಮೊಂದು ಪ್ರೇಕ್ಷಣಂ" (ಶಬ್ದ. ೬೭–೨೦೯); ಕೂಗುವ ಬೇಡರ ತಂಡವರ್ಪಾ ಪಾಯುಙಗಳಗುರ್ವಿನಿಂದೆಸೆಯೆ ಪೆಕ್ಕಣದಿಂದೆಸೆದತ್ತು ಪಕ್ಕಣಂ (ಕ್ರಿಕೃ. ೨೬–೩೯). ೨. ನೃತ್ಯ ; ಕುಣಿತ : ಕಳ್ಳರೊಡಲ್ಗಳೊಟ್ಟು ರಜನೀಚರಿಯರ್ಕಳ ವಿಕ್ಕ ಪೆಕ್ಕಣಂ (ಕಾವ್ಯಸಾ. ೩೩೦ ಪೂರ್ವಕೆ); ಹೃದ್ಯ ವಾದ್ಯಲಯದೋಡೆಯಿನೊಂದೆ ಲಯಕ್ಕೆ ಲಕ್ಕಿಯಂ ಮೆಟ್ಟುವ ಪೆಕ್ಕಣಂ . . . ಲೀಲೆಯಿಂ ಪುಟ್ಟಿಸೆ (ಸುಕು. ೯–೯೦); ಗಂಧರ್ವಾಮರರ್ ಪಾಡೆ ಪೆಕ್ಕಣಮಂ ದೇವಿಯರಾಡೆ . . . ಕಣ್ಗೆಂ ಬೆಡಂಗಾದುದೋ (ಸಂಕ್ರಕ. ೦೨–೬೩); ಬಿರುದರ ಕೂರಲಗಿನೆಸೆವ ನಾದಮೆ ತಾಳಂ ನರರಟ್ಟೆಯ ಪೆಕ್ಕಣದಿಂ ಕರಮೆಸೆದುದು (ಎಕ. VI. ಕಡೂರು. ೦೯೯–೫೨ ; 1206). ೩. ಒಂದು ಬಗೆಯ ನೃತ್ಯ ; ತಾಂಡವ, ನಾಟ್ಯ, ನೃತ್ತ, ಲಾಸ್ಯ, ಗುಂಡಿಲ, ಪೆಕ್ಕಣ, ಲಚ್ಚಣ, ಅಪರಿಪಾತ್ರ, ಸುಪಾತ್ರ ಮತ್ತು ಸರ್ವತೋಭದ್ರವೆಂಬ ಹತ್ತು ಬಗೆಯ ನೃತ್ಯಪ್ರಭೇದಗಳಲ್ಲಿ ಒಂದು : ತಾಂಡವ ನಾಟ್ಯ ನೃತ್ತ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರಸರ್ವತೋಭದ್ರವೆಂಬ ದಶವಿಧ ಪಾತ್ರಗಳೇ ತೋಱಿ ರಂಜಿಸುವ ನರ್ತಕಿಯರಿಂ (ಅನೇಕ. ೦೬೩); ಪೇರಣಂ ಪೆಕ್ಕಣಂ ಗುಂಡಳಂ ಸದಮಲದ ದಂಡಲಂ ಲಾಸ್ಯಮೆಂಬಿವಂ ತೋಱಿತೀರ್ವಂ ಮಾಹೇಶಂ (ಪೂರಮು. ೦೦–೩೯) ; ಪೇರಣ ಪೆಕ್ಕಣ ಗುಂಡಲಂಗಳಂ ಬಲ್ಲ

ಸಾತ್ವಿಕ ಆರಭಟ ಕೌಶಿಕಿಯೆಂಬ ಪಾತ್ರಂಗಳಿಂ (ದಶಾವ. ೨-೧೦ ವ). ಪೆಕ್ಖಣ: ೪. ಮದ್ದಲೆಯನ್ನು ಬಾರಿಸುವ ಒಂದು ಕ್ರಮ : ಆ ಸಮಯದೊಳ್ ಮದ್ದಳಿಗಂ ಮದ್ದಳೆಯು . . . ಪಟಣಬಿದು ಪೆಕ್ಖಣ ಪಕ್ಕಿಯೊಳ್ತಕ್ಕ ನೆನಿಸಿ ಲಾಗು ಮೋಡಿ . . . ಪಹರಣೆಗಳೆಂಬ ನಾನಾಶಬ್ದಂಗಳಂ ಬಾರಿಸಿ (ರಘುಕ. ೨-೨೩ ವ). ಪೆರ್ಕಣ : ೧. ಚಿತ್ರಗಣ್ಣವಲೆಯಂ ಸಮಕಟ್ಟುವ ದಟ್ಟುಗೊಂಟವಂ ಬಸಿವ ಪುಳಿಂದಸಂಕುಳದ ಪೆರ್ಕಣದಿಂದೆಸೆದತ್ತು ಪಕ್ಕಣಂ (ಚಂದ್ರಪ್ರ. ೫-೫೪).

[< ಸಂ. ಪ್ರೇಕ್ಷಣ. / ಪ್ರಾ. ಪೇಕ್ಖಣ. / ತುಳು. ಪೆಕ್ಕಣ, ಪ್ರೆಕ್ಕಣ]

ಪೆಕ್ಕಣ$_{2}$, ಪೆಕ್ಕಳ$_{2}$ (ನಾ). ಬೇಡರು ವಾಸಿಸುವ ಹಳ್ಳಿ : ಬೇಡರ ಬಿಂದ ಮೊಟ್ಟೆಸಾ ಪೆಕ್ಕಣದೊಳು (ಸಕ್ಕರೆ. ೧೦-೨೬); ಗುಂಜಾಭರಣವಾಂತಾ ಲೀಲೆಯಿಂ ಶಬರಿಯಾರಸೆದರಾ ಪೆಕ್ಕಣದೊಳಂದು (ಕಾಳ್ಗಾ. ೩-೮); ತನಾಜೆಯಾಹ ಪೊಲತಿಪತಿಯಾಳ ಕೊಂಡು ಬೇಗ ಪೋಗುತ್ತ ಕೈರಾತದೇಶ ದೊಳ್ ಒಂದು ಪೆಕ್ಕಣವ ಸಾರಲು (ಕಕುಪ್ರ. ೩-೫-೬೦). ಪೆಕ್ಕಳ$_{2}$ : ವ್ಯಾಧರೆಕ್ಕತುಳದಿಂದಿರ್ದ ಪೆಕ್ಕಳ ವರ್ಣಿಸಲ್ ಮಾರ್ಗ್ಗಣ್ಣಗಳವಲ್ಲ (ಉತ್ತ್ಯಾಂಗ. ೧೦-೨೦).

[<ಸಂ. ಪಕ್ಕಣ]

ಪೆಕ್ಕಣಂಗೆಯ್ (ಕ್ರಿ). ನೃತ್ಯ ಮಾಡು ; ಕುಣಿ : ಪೆಕ್ಕಣಂಗೆಯ್ವ ಸೋಗೆಗಳಿಂದ . . . ತಂಬೆಲರಿಂದೆ ಕಾಮ್ಯನೋಹರದ ವನಮಧ್ಯದೊಳ್ ಸರಸಿ ಮಾಡಿದುದು ಕೂಡೆ ಸೊಗಸುವೆರಸಿ (ಶೀಲಪು. ೬-೦೮).

[ಪೆಕ್ಕಣ$_{1}$ + ಕೆಯ್$_{1}$]

ಪೆಕ್ಕವಿ (ನಾ). ಒಂದು ಸ್ಥಳದ ಹೆಸರು : ಅರಿಉಷ್ಪನ್ನಿಪ್ಪರು ತೊಟ್ ಕ್ಯಾರಾಟ್ಟಲು ಪೆಕ್ಕವಿಡು ಮುಪಲ್ಪೋಗೆಯು ಕೂಡಲೂರು ಇನೆತ್ತು ಪಾರೊರ್ ನೆರ ಸಾಸನವಾಗ ಕುದಿಯ್ಯ ಕೊxx ಲುx (ಎಇ. IV, ಗುಂಡ್ಲು.ಕೇ. ೬೮-೫, ಸು. 760). [?]

ಪೆಕ್ಕಳ$_{1}$, ಪೆರ್ಕಳ, ಹೆಕ್ಕಳ, ಹೆಗ್ಗಳ (ನಾ). ೧. ಹೆಚ್ಚಳ ; ಅತಿಶಯ : ಚಿಕ್ಕದೇವೇಂದ್ರನಿಗೆ ಸಿರಿಯನೇಟ್ಗೆಗೊಳಿಪ ಪೆಕ್ಕಳದೊಳೆಸೆವ ಪೊಸಬಿನ್ನಣಕೆ ಪಂಗಳಂ (ಗೀತಗೋ. ೩೫-೮); ಸೊಕ್ಕುಜವ್ವನದ ಲಲಿತಾಂಗಿಯರುವರದ ಮೇಲೆ ಪೆಕ್ಕಳದೊಳಿಟ್ಟು ಚೂದನದ (ಉತ್ತ್ಯಾಂಗ. ೩-೦೨). $\Delta$ಪೆರ್ಕಳ್ : ೧. ತರ್ಗಂಗಲಿಸುವರುಂ ಮಿಗೆ ಪೆರ್ಕಳದಿಂ ರಾಯನೆಡೆಗೆ ಪೇಟ್ದರ್ (ಜಗನ್ನಾ. ೪-೯೯); ಕುಳಿಕನಂ ಗುಳಿಗೆಗಟ್ಟುವ ಪೆರ್ಕಳದ ಕಾಲಾಳ್ಗಳ ಪಡೆಯು (ಜ.ಪುರಾ. ೯೯ ೦೬). ೨. ಹಿಗ್ಗು ; ಸಂತೋಷ : ಇದೆ ಬಂದನೆಂದು ಕೇಳ್ದಿರ್ಗೊಂಡು ಪೆರ್ಕಳದೆ ಪವಳಿಸಿ (ಜಗನ್ನಾ. ೬-೦೩೩). ಹೆಕ್ಕಳ : ೧. ಚೈದ್ಯನಿಂದುಬ್ಬುಸವ ಮಾಡಿದೊಡೆನ್ನ ಕೈಯಲಿ ಹರಿವ ಹೆಕ್ಕಳವೆ (ಕುಮಾ.ಭಾ. ೦೦-೦೫); ಜನಪತಿಯು ಮಗಳೆಂಬ ಹೆಕ್ಕಳ ಹೆಮ್ಮೆ (ತ್ರಿಶುಂ. ೫ ೨೫); ಹುಲುನೃಪಾಲನ ಹಗೆತನದ ಹೆಕ್ಕಳವ ಹೇಳುವ ಹಂದೆಗಳ ಬಾಯ್ಗಳನು ಹೊಯ್ (ಕೊರಟಾ. ೬-೦ ೨೪); ತಾಯಿಗೆ ಮಕ್ಕಳ ಸಾವಿವೇ ಹೆಕ್ಕಳ (ಹರಿಶ. ೩೪). ೨. ಪರತನೂಭವೆ ಬಂದಳೆಂಬ ಹೆಕ್ಕಳದಿ ಮಣಿಮಯನಿಳಯದೊಳಗಣಿಂದ ಪರಿದು ಬಂದು (ಹಾಶಕ. ೧೬-೦); ಆ ವೈಭವವನಾರೂ ಕಿಸುತಲಾ ಹೆಚ್ಚಿ ತೆಕ್ಕಳದೊಳಿರೆ (ಕಕುಪ್ರ. ೩-೩-೪). ೩. ಗರ್ವ ; ದಂಭ : ಅಳಿಬುತ ಹೆಮಜಿಸಿವ ಹೆಕ್ಕಳವೇಕೆ ಸಾರೆನುತ ತುಳುಕಿದನು ಕೆಂಗೋಲ ಜಲಧಿಯ (ಕುಮಾ.ಭೀ. ೬-೧೪); ಅಳಿಗಬ್ಬಿಗನ ಹೆಕ್ಕಳದ ಕೃತಿಯವೊಲು (ಕೊರಟಾ. ೩-೦೦-೮). ೪. ಠೀವಿ; ಗಾಂಭೀರ್ಯ: ಥಳಥಳಿಸಿ ಪರಿತಂದು ಉಂಗುಟದಿಂ ಭಾಳಾಗ್ರಂಬರಂ ಪೋಲ್ದಿತ್ತಿ ತನಗಿದಿರು ಕಾಣದೆ ಹೆಕ್ಕಳದಿಂ ಕೆಕ್ಕಳಿಸಿ ನೋಡುವೆಕ್ಕಲಂಗಳುಮಂ (ಶಂಕರ ೦೮-೦೯); ಹೆಕ್ಕಳದೊಳಾತನಂ ಬೀಳ್ಕೊಂಡು ಭೀಷಣಾ ಮುಳಿದಿದ್ದು ನಡೆಯುತಿರಲು (ಕೃಷ್ಣರಾ. ೦೬-೩೦). ೫. ಉಬ್ಬರ ; ಉಕ್ಕುವಿಕೆ : ಉಕ್ಕಿದುದು ಜೆಟಿಗಂಡ ಕಡಲಿನ ಹೆಕ್ಕಳದವೊಲು ಹರುಷರಸ (ಕೊರಟಾ. ೧-೦೫-೪೩). ಹೆಗ್ಗಳ : ೧. ಅಂಬನು . . . ಬಿಡಲಾಗಿ . . . ಬಸವನೆಂದಟ್ಟಿದು ಮಾಜುಗಿ ಹೆಗ್ಗಳದೋಷವಾದುದೆಂದು (ರೇಕ್ಕಶ. ೪-೬-೩೮); ಹೆಗ್ಗಳವಾದ ಹೃದಯತಾಪದಿಂದ . . . ಅಳುತ್ತಿರುವ ಮಾದ್ರಿಯನ್ನು ನೋಡಿ (ಕೃಪಾಠ. ೨೨೯). 'ಪೆಗ್ಗಳ' ಪಠಾ.

ಪೆರ್ಕಳವಾಗು = ಅಧಿಕವಾಗು; ಮೀರು : ಇಂತಳವಿಗಟೆದ ಸೊಬಗಿನ ಸೊಂಪು ಪೆರ್ಕಳವಾಗಿರ್ಪುದುಂ (ಕಬ್ಬಿಗ. ೦೨೩). [<ಪೆರ್ಕ್ಕ ?]

ಪೆಕ್ಕಳ$_{2}$ 'ಪೆಕ್ಕಣ$_{2}$' ನೋ.

ಪೆಕ್ಕಳಿಗ 'ಪಿಕ್ಕಳಿಕ' ನೋ.

ಪೆಕ್ಕಳಿಸು, ಪೆರ್ಕಳಿಸು, ಹೆಕ್ಕಳಿಸು (ಕ್ರಿ). ೧. ಅಧಿಕವಾಗು ; ಉಲ್ಬಣಿಸು : ಆ ರಣಾಗ್ರದೊಳ್ಪೆಕ್ಕಳಿಸಿದುಕ್ಕಂದದದಟಿಂದೆ ಸುರಥನಬಿಸಿದನಚ್ಯುತಾರ್ಜುನರನು (ಕೃಷ್ಣರಾ. ೦೯-೬). $\Delta$ಪೆರ್ಕಳಿಸು : ೧. ಅಂದಿಂಗೆ ಪುಯಿಲ್ ಪೆರ್ಕಳಿಸಿ ಪರಿಯದಿರೆ (ಜಗನ್ನಾ. ೨-೯೦). ೨. ಹಿಗ್ಗು; ಉಬ್ಬು; ಸಂತೋಷಗೊಳ್ಳು : ಲಾಯನ ಕುವರಿ ಬಳಿಸಲ್ವ ದಾದಿಯ ಬನ್ನಣೆನುಡಿಗೆ ಪೆರ್ಕಳಿಸುತ್ತೈದಿದಳಾ ಸಭೆಗೆ (ಕರ್ಣಾವ. ೫-೦೨); ದೇವರ್ಲಿಗೆಯ್ದುಂದುದರ್ಕೆ ಪೆರ್ಕಳಿಸಿ ದೇವರ ಕುಶಲಮಂ ತಿಳಿಯುತ್ತಾವುದುಮಂ ಕೊಟ್ಟೆನ್ನಂ ಕಳುಪಿದರ್ (ಜಗನ್ನಾ. ೦೮-೪). ೩. ಗರ್ವಿಸು ; ಅಹಂಕಾರಪಡು ; ಹೆಮ್ಮೆಪಡು : ಸಕಲಲೋಕ ಸ್ತುತೆಯಿಂ ಗೌರಿಯನಾಯ್ತುದನೀಗಳ್ ಬಾರಿಸಲುತಿಜಡರಿದೇಕೆ ಪೆರ್ಕಳಿ [ಹಾಡು. ಗಲಿ]ಸುವರೋ (ರಾಜಶೇ. ೦೪-೦೦೬); ಈ ಮೆಯ್ಯಂ ನಿಚ್ಚಮೆಂದೆ ನಂಬಿ ಸೊಮ್ಮಿಂ ಪೆರ್ಕಳಿಸುವಂ ಗಾಂಪನಲೇ! (ರಾಜಶೇಖ. ೬೫-೬) 'ಪೆರ್ಗಲಿಸು' ಪಠಾ. ೪. ಎರಗು ; ಆತುರದಿಂದ ಬರು ; ಮುನ್ನುಗ್ಗು : ಪೆರ್ಕಳಿಸುವ ರಕ್ಕಸವಡೆಯುರ್ಕಂ ಮುಜಿದಿಕ್ಕಿ ತಕ್ಕನ ಚ್ಯುತನೊರ್ವಂ (ಅಶ್ವಪ್ರ. ೬೦-೬); ಕಿವಿವೇಟದ ಬಗೆ . . . ಅನಿತುಂ ಬಿಸಿಟಕ ಮಾಯಾಟಮಂ ವಿಟು ಕೇಳ್ದು ಪೆರ್ಕಳಿಸಿ ಬರ್ಕೆಂದು ಬನ್ನಂಬಡುವ ಬಗೆಯಂಬುದುಂ (ಜಗನ್ನಾ. ೬-೦೩೬ ವ). ಹೆಕ್ಕಳಿಸು : ೧. ಲೋಲಲೋಚನೆಯಾಳಲು ಮಿಗೆ ಹೆಕ್ಕಳಿಸಿತಡಿಗಡಿಗೆ (ಕುಮಾ.ಭಾ.೨-೦೬); ನಕ್ಕಳಗಜೆ ಮಹೇಶ್ವರನ ಹಗೆ ಹೆಕ್ಕಳಿಸಲು (ಶಿವಾಗ. ೧೦-೨೮-೦೫); ಅಂಗನೆಯುತ್ಸಂಗದೊಳು ಅಂಗವನೀಡಾಡಿಯವಳ ಸಂಗತಿಯೊಳಿ ಹಿಂಗದೆ ಹೆಕ್ಕಳಿಸುವುವು (ಜಗನ್ನಾ. ೬-೧೩೬ ಶಾಂಗತ್ಯ). ೨. ನಿನ್ನ ಕಂದಾ ಪಡೆದು ನಾಂ ಸುಖಿಯಾದೆನೆಂದುಡಲಿತ್ತ ಹೆಕ್ಕಳಿಸಿ (ಕೊರಟಾ. ೨೦-೨); ಕಂಗಳು ಹೊಳೆಯೆ ಮಜಿ ಮಿನೆಂದು ಹೆಕ್ಕಳಿಸಿದರು ಹಿಡಿಹಿನಲಿ (ಕುಮಾ.ಭಾ. ೦೦-೨೮); ಹೊಳಲು ಹೊಸ ರೀತಿಯಲಿ ಮಿಗೆ ಕಂಗೊಳಿಸುತಿರ್ದುದು . . . ಹೆಕ್ಕಳಿಪ ಕೋಗಿಲೆಗಳಲಿ ಮೊರೆವಳಿಗಳದ ಮೇಳದಲಿ (ಕೊರಟಾ. ೧-೪-೧೧). ೩. ಜಗ ತನ್ನದೆಂಬ ಹೆಮ್ಮೆಗೆ ಹೆಚ್ಚಿ ಹೆಕ್ಕಳಿಸಿ ದುಗಿಲುಗ್ದವಾಗಿ (ಶಿವಕೋಶ. ೬-೦೬); ಹೆಕ್ಕಳಿಸಿ ಜಟಿದನು ಕರ್ಣಶಲ್ಯನನೆಲವೊ ಘಡ ನೋಡೆನುತ ತೆಗೆವೆಚ್ಚನು ಧನಂಜಯನ (ಕುಮಾ.ಭಾ. ೨೪-೨೮); ಹೆಮ್ಮೆಮಾತಾಡದೆ ಹೆಕ್ಕಳಿಸದೆ ಚಿತ್ತಸಮ್ಮತಿ ಯಜಿತ್ರಸಗುವುದು (ಹರಿಶ. ೪-೦೫). ೪. ಪರಬಲಕೆ ಜಾಟಿವ ಜಯ ಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುಮಾ.ಭಾ. ೨-೫೦); ಹೆಕ್ಕಳಿಸಿ ಹರಿ ತಿವಿವ ಘಾತಕೆ ಉಕ್ಕರಿಸಿ ಕೆಡೆದು (ಅಶ್ವಪ್ರ. ೬-೩೦). ೫. (ಆಲಂ) ಹೆದರು; ಹಿಂಜರಿ: ಲಕ್ಕುಮಾರಿಯ ಧಾಳಿಯು ಕಂಡು ಮನದೊಳು ಹೆಕ್ಕಳಿಸಿದನೆ ಬಾಮರನು (ಕುಮಾರರಾ. ೦೮-೦೩೫); ಮುಸ್ಕಳಿಸಿ ಮೇಲಾಗುಳ್ದಪನೇನನಾದೊಡು ಮಾಡುವಂ ನೀನದಕ್ಕೆ ಹೆಕ್ಕಳಿಸಿ ಹಿಮ್ಮೆಟ್ಟಿದಿರ್ದೊಡೆ (ಕೃಷ್ಣರಾ. ೫-೨೯). ೬. ಅಧಿಕವಾಗಿ ತೋರು ; ಮೇಲಾಗು : ಸಿಡಿಲ ದೊಟ್ಟಿಯ ಧಾರೆಯಲಿ ನಡನಡಿಸಿ ತಾಗಿ ನಿವಾಘಭವನ ಹಿಡಿದು ಹೆಕ್ಕಳಿಸಿದನು ಮೇಘಾಗಮುವುಹೀಪಾಲ (ಕೊರಟಾ. ೪-೬-೪). ೭. ಹುರಿದುಂಬಿಸು ;

ಪ್ರೋತ್ಸಾಹಿಸು : ಅವಂ ಕಂಡು ಕಂಸಂ ವಂದಿಗೆಱಗಿದ ನಾಯುಂ ಹೆಕ್ಕ [ಪಾಠಾಂ. ಪೆಕ್ಕ]ಳಿಸುವಂತೆ ಕೊಡೆಯನಪ್ಪಳಿಸಿ (ಅರ್ಜಚ. ೯-೧೦೬ ವ); ಕವಿವ ಕಣೆ ಕಿಱುಗಣೆಯು ಮುಕ್ಕುಳಿಸಿದವು ಹೆಕ್ಕಳಿಸಿದವು ಹಂದೆಗರ (ಕುಮಾ.ರಾ. ೪-೦೪). ೮. ಅಗಲವಾಗಿ ತೆರೆ : ಪಿಂಗದಸುರರ ಬಲುವ ಪಾಱಿಸುತ್ತೇೞಿಸುತ ಕಂಗಳಂ ಕೆಕ್ಕಳಿಸಿ ಕಿವಿಗಳಂ ಹೆಕ್ಕಳಿಸಿ (ಕವಿಜಿ ೩-೬-೬೬). ೯. ಸಿಡಿ ; ಚಿಮ್ಮು ; ಹಾರು : ಸೀಸಿಳಿಧ್ವನಿ ಮಸಗೆ ತಿಲ ಹೆಕ್ಕಳಿಸಿದವು ಝುಮ್ಮೆಂದು ಸವಿಧಾವಗಳಬ್ಬರಿಸಿದವು ಛಟಛಟಛಟನಿನದದಲಿ (ಹೊಸ. ೦-೬-೯೯). [ಪೆಕ್ಕಳ್$_1$ + — ಇಸು$_1$]

**ಪೆಕ್ಕಣ** 'ಪೆಕ್ಕಣ$_1$' ನೋ.

**ಪೆಕ್ರ**, ಪೆಕರ (ನಾ). ದಡ್ಡ ; ತಿಳಿಗೇಡಿ : ನಿನಗೆ ಮದುವೆಯಾಗಿರಬೇಕಲ್ಲವ? . . . ನಾನೊಬ್ಬ ಪೆಕ್ರನ ಹಾಗೆ ಕೇಳುತ್ತಿದ್ದೇನೆ? (ಸಂಸ್ಕೃತಿ. ೦೦೯). **ಪೆಕರ** : ಅವನೊಬ್ಬ ಪೆಕರ (ಆಡು). [?]

**ಪೆಗಲ್**, ಪೆಗಲು, ಹೆಗಲ್, ಹೆಗಲು (ನಾ). ೧. ಸ್ಕಂಧ; ಭುಜ : "ತೆಗಳ್ – ಪೆಗಲ್" (ಶಬ್ದಮ. ೫೦ ೨); ಬಲದೇವಂ ದುರ್ಯೋಧನನ ಗಾಯು ಬರ್ಪಂತೆ ಪೆಗಲೊಳ್ ಹಲಾಯುಧಮನಿಕ್ಕಿಕೊಂಡು ಜಂಗಮ ಪರ್ವತವೆ ಬರ್ಪಂತೆ ಬಂದು (ಗದಾಯು. ೦೩-೯೯ ವ); ನೇಹದಿಂದಾ ಮಹತಂ ಪೇಳ್ದ ತುಂಬುರನ ಪೆಗಲೊಳ್ ಕಯ್ಯಿಕ್ಕಿ (ಹರಿವಂ. ೪-೯೮) ; ಕಾಮಮಂಜರಿ ಮುನಿಪನ ಪೆಗಲೊಳ್ ಕೆಯ್ಯನಿಟ್ಟಿರ್ದಳ್ (ಧರ್ಮಾ. ೬ ೬೦ ವ); ಜನ್ನವಿತಮಂ ಪೆಗಲೊಳ್ ತೆಗೆದಿಕ್ಕಿ (ಅಭಿನ್ನ. ೩೩೩). **ಹೆಗಲು** : ೧. ಮುಂಚಿತಗ ನಿಲಿವಿದು ಪೆಗಲೆತದ ಸುತ್ತಿ (ಜಗನ್ನಾಥ. ೦೧೮-೩೨೯). **ಹೆಗಲ್** : ೧. ಸೊದ್ದಳ ಬಾಚರಸರ ಹೆಗಲ ಮೇಲೆ ಹಸ್ತನಮಂ ಮಡಗಿ (ಸೌಂದರ್ಯ. ೨೦೦-೨); ಹೆಗಲ ಕಂಬಳಿ ಕೈಯು ಕಲ್ಲಿಯೋಗರದಿಂದೆ . . . ಎಸವುತಿರೆ (ಬಸವ. ೯-೯೩) ; ಹೆಗಲಡ್ಡವರಿಗೆಯು ನೀಡಿ ವ್ಯಸನಿಮೌಳಿ ತಿವಿವಾಡಿದರು ಸಬಳಿಗರು (ಕುಮಾ.ರಾ. ೯-೦೩). ೨. ಎತ್ತು, ಆನೆ ಮುಂತಾದವುಗಳ ಹೆಗ್ಗತ್ತು—ಬೆನ್ನಿನ ಮೇಲೆ ಇರುವ ಏಣು : "ಸ್ಕಂಧದೇಶ:, ವಹ:— ಈ ೨ ಹೆಗಲ್" (ಕರ್ಣಾಟ. ೯೯-೦೦೨). **ಹೆಗಲು** : ೧. ಅರೆಮರಳು ವಾಲಿಗಳ ಹೆಗಲಲಿ ಮೂರಿದ ಗೋಣಿನ . . . ಅರಸನನು ಕಂಡಳಲಿದನು (ಕುಮಾ.ರ ೦೦-೩೩) ; ಅಕ್ಷಯಮೂಡಿಗೆಯು ದಕ್ಷಿಣದ ಹೆಗಲಿಗೇಱಿಸಿ (ಕೋದಂಡ ೩-೬-೩); ಹೆಗಲ ಹಸಿಬೆಯೊಳಗಿಟ್ಟು ಮಡಿಯನುಟ್ಟು (ಪುರಂದ. ೨-೩೯-೧) ; ಹೆಗಲು ಮೇಲೆ ಹೊದೆದಿದ್ದ ಒಂದು ಉತ್ತರೀಯ (ಕಳಶ. ೦). ೨. "ಹೆಗಲು=ಸ್ಕಂಧಪ್ರದೇಶ, ವಹ" (ನಾಕಾರಾ. ೬) ; ದಂತಿಗಳ ಹೆಗಲಲಿ ನಿಡುನೊಗನ ಕಟ್ಟಿದರು (ಕುಮಾ.ದ್ರೋ. ೯-೯೩) ; ಅಗಣಿತಲೋಕಾದಿ ಲೋಕಂಗಳುದರದಿ ಸೊಗಯಿಪ ನಾರಾಯಣನ ಹೆಗಲೊಳು ಹೊತ್ತು ಪೆಚಿರದೆ ಸಂಚರಿಸುವ ಖಗರಾಜ ಕರುಣಿಪುದು (ಮೋಹತ. ೦-೦೩); ಸಿಂಹವ . . . ಗೋಣು ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವುವು (ಕುಂಬಾರಿ. ೪-೨೦೩).

**ಪೆಗಲಿಣೆ**, ಹೆಗಲಿಣೆ=ಸರಿಸಮಾನ ; ಸಾಟಿ : ಅವನ ಪೆಗಲಿಣೆಯು ಕೆಳೆಯರನ್ ಟಾಟರಸ್ ಗವಿಗಟ್ಟಲೆಯಿತುಳ್ ಮುಟ್ಟಿ ಮುಸುಕಿರ್ದಪುದು (ಅಧ್ಯಕ್ಷ. ೦೩-೨೬೩) ; ಜನದೊಳು ಪರಮರೋಹಿಣಿಗೆ ಹೆಗಲಿಣೆ . . . ಚಂದ್ರಮತಿ (ಹರಿಶ. ೦-೯೯). **ಹೆಗಲ ಕೆಲಸ**=ಭುಜದ ಸಹಾಯದಿಂದ ಮಾಡುವ ಕೆಲಸ ; ಹೊರುವ ಕೆಲಸ : ಬುದ್ಧಿಯ ಕೆಲಸ ಶ್ರೇಷ್ಠ . . . ಕಾಲ್ಕೆಲಸ ಹೆಗಲ ಕೆಲಸಗಳು ಅಧಮ (ವಚನ. ೩೩೬). **ಹೆಗಲ ಮೇಲೆ ಬೀಳು**=ಹೊಣೆ ಹೊರುವಂತಾಗು ; ಭಾರ ಬೀಳು : ಆತನ ಹೆಗಲ ಮೇಲೆ ಬಿದ್ದಿದ್ದ ಜವಾಬ್ದಾರಿ ಎಷ್ಟು ಗುರುತರವಾಗಿತ್ತು (ಸ್ಮರಣ. ೮೨). **ಹೆಗಲ ಸಾಳುವ**=ಬೇಟೆಗಾರರು ಬೇಟೆಗೆ ಹೊರಡುವಾಗ ಭುಜದ ಮೇಲೆ ಕೂಡಿಸಿಕೊಂಡು ಹೋಗುವ ಸಾಕಿದ ಗಿಡುಗ : ಹಿಡಿನಾಯಿಗಳು ಹೆಗಲ ಸಾಳು[ಪಾಠಾಂ. ೪]ವಂ . . . ಪರಿಪರಿಯ ಹಕ್ಕಿವರಸಡವಿಗಂತಕರಂತೆ ನಡೆವ ಶಬರರ ಕಂಡನು (ಶಿವತತ್ತ. ೩-೪). **ಹೆಗಲಿಗೆ ಹೆಗಲು ಕೊಡು**=ಜೊತೆಯಾಗಿರು ; ಸಮಸಮವಾಗಿರು : ಶಿಷ್ಯರ ಹೆಗಲಿಗೆ ಹೆಗಲು ಕೊಟ್ಟು ನಾನು ದುಡಿಯುತ್ತೇನೆ (ಶಿಕ್ಷಣ. ೫೦) ; ನನ್ನ ಹೆಗಲಿಗೆ ಹೆಗಲು ಕೊಟ್ಟಿರಿ, ಹಿಂದೆ ಬೆಂಬಲವಾದಿರಿ (ಶಂಕು. ೩೨-೦೩). **ಹೆಗಲು ಕೊಡು** = ಸಹಾಯ ಮಾಡು ; ನೆರವು ನೀಡು : ನೆರೆಹೊರೆಯವರು ಸಹಾಯ ಬೇಡಿದರೆ ಎಷ್ಟು ಶ್ರಮವಾದರೂ ಹಿಂಜರಿಯದೆ ಹೆಗಲು ಕೊಡುವವನು (ಹೋರಾಟ. ೬೪) ; ಬಾ ಬಂಧು, ಹೆಗಲು ಕೊಡು, ನಡುದಾರಿಯಲಿ ನಿಂತ ಈ ರಥವ ಸಾಗಿಸೋಣ (ಶಂಕು. ೦೯-೨೨). **ಹೆಗಲು ತೊಳೆ** = ಜವಾಬ್ದಾರಿ ಇಲ್ಲದಂತೆ ಮಾಡು : ನನಗಂತೂ ಸಾಧಿಸುವದಿಲ್ಲ, ನನ್ನ ಹೆಗಲು ತೊಳೆದು ಬಿಡಿರಿ (ಅಶ್ವಿನಿ. ೦೩). **ಹೆಗಲೆಣೆಯಾಗು** = ಸರಿಸಮಾನವಾಗು ; ಸಾಟಿಯಾಗು : ಅವಳಿಗೆ ಹೆಗಲೆಣೆಯಾಗಿ ನಿಲ್ಲಬಲ್ಲ ಮತ್ತೊಬ್ಬ ವ್ಯಕ್ತಿಯೆಂದರೆ ಮುಕ್ತಾಯಕ್ಕ (ಒಕ್ಕಲು. ೦೦೩) ; ಮಾನವನಿಗೆ ಸೌಂದರ್ಯದರ್ಶನವೃತ್ತಿ ಲಭಿಸಿದಾಗ ಅವನು ದೇವತೆಗಳ ಹೆಗಲೆಣೆಯಾಗಿ ನಿಂತು ಅಮರನಾಗುತ್ತಾನೆ (ಕಾವ್ಯಾ. ೫೯).

[ದೇ.॥ ತಮಿ. ಪಿಡರ್ ; ತುಳು. ಪುಗೆರ್, ಪುಗ್ಗೆಲ್ ; ಕೋತ. ಪೆಯ್ಗ್, ಪೆಯ್ಗ್]

**ಪೆಗಲಿಕ್ಕು** (ಕ್ರಿ). ಹೆಗಲಿನ ಮೇಲೆ ಇಡು,—ಇರಿಸು : ಬಲ್ಗೆಯ್ಯ ಪೆಗಲಿಕ್ಕಿ ಬಪ್ಪ ಯೋಗೀಂದ್ರರ ಸುಳುಹುಗಾಣದೆ ಚಿಂತೆ ಮಾಳ್ಪ (ಅನ. ೩-೩೩). [ಪೆಗಲ್ + ಇಕ್ಕು]

**ಪೆಗಲೀ** (ಕ್ರಿ). ಹೆಗಲನ್ನು ಕೊಡು : ಪೆಗಲಿತ್ತು ಪೊತ್ತು ಜವದಿಂ ಬಿಗೆ ಪರಿಯೆ ವಿರಾಜಿಸಿರ್ದ ಗೋರಥಮಂ ಪೆಂಪಗಲದೊಡನೇಱೆ (ಧರ್ಮಾ. ೩೬ ೬೦). [ಪೆಗಲ್ + ಈ$_2$]

**ಪೆಗಲು** 'ಪೆಗಲ್' ನೋ.

**ಪೆಗಲೇರು** 'ಪೆಗಲೇಱು' ನೋ.

**ಪೆಗಲೇಱು**, ಪೆಗಲೇರು, ಹೆಗಲೇರು, ಹೆಗಲೇಱು (ಕ್ರಿ). ೧. ಭುಜವನ್ನು ಹತ್ತು ; ಭುಜದ ಮೇಲೇರು : ಸಮನಾಗೆ ಮೋಹದೊಳ್ ಕಾಳಮಹಾಕಾಳರ್ಕಳವರ ಪೆಗಲೇಱಿದ ವಿಭ್ರಮದಿಂ ನೋಡುವರ್ಗನ್ನರ್ಘವಾದುದಾ ಮೋಘರಥನ ಪೆಸರಂಬರದೊಳ್ (ಜಗನ್ನಾಥ. ೯-೬೪). ೨. ಹೆಗ್ಗತ್ತಿನ ಮೇಲೆ ಏರು,—ಹತ್ತು : ಸಿಂಗನ ಪೆಗಲೇಱಿ ಸಾಗೆ ಕರಿ (ಸುಕುಮಾ. ೨-೬೪-೩). **ಪೆಗಲೇರು** : ೧. ಬಡಬಡಿವ ಪರಿಗಳುಂ ಪೆಗಲೇರೆ (ಜಗನ್ನಾಥ. ೦೫೦-೬೬೦). **ಹೆಗಲೇರು** : ೧. ಮಂಗ ಡೊಂಬರವನ ಹೆಗಲೇರಿ ಕುಳಿತುಕೊಂಡಿತು (ಆಡು). **ಹೆಗಲೇಱು** : ೧. ಪಾಪ ಪುಣ್ಯಗಳೆರಡು ವ್ಯಾಪಿಸುತ ಬೆಂಬಿಡಿದು ಪಾಪ ಮಾಡಿದನ ಹೆಗಲೇಱಿ ರಾಜಕುಲದೀಪ ಬರುತಿಹನು (ಕಥಾಮೃ. ೬೩೩).

**ಪೆಗಲೇಱಿಸಿಕೊಳ್**=ಹೆಗಲಿನ ಮೇಲೆ ಕೂಡಿಸಿಕೊಳ್ಳು : ಸುಖದೋಱಿ ಲೋಕವಱಿಯಲ್ ಪೆಗಲೇಱಿಸಿಕೊಂಡು ಪೋದಂ (ಕುಮಾರ. ೬೪): ಪೆಗಲೇಱಿಸಿಕೊಂಡೆನ್ನಂ ಬಿಗೆ ನಿಮ್ಮೋಲಗಕೆ ಬರ್ಪನತಿಸಂಭ್ರಮದಿಂದಗಲದನು ದಿನಮುಮಂ (ಧರ್ಮಾ. ೬೨-೯೦). [ಪೆಗಲ್+ಏಱು$_1$ (<ಏಱ್$_1$)]

**ಪೆಗಲ್ಗೂಟ್** (ನಾ). ಹೆಗಲ ಮೇಲಿಟ್ಟುಕೊಂಡು ಹೋಗುವ ಬುತ್ತಿ: ಹರಿ ಗೋಪಾಲರೊಳಾಡಿದೊಡೆ ಪೆಗಲ್ಗೂ [ಪಾಠಾಂ. ಪಸಲ್ಗೂ]ಟುಂಡ ಠಾಣಂ . . . ತನ್ನದೀತೀರದೊಳ್ ತರದಿಂ ರಂಜಿಪುವು (ರಸಿಕ. ೦೯-೬). [ಪೆಗಲ್+ಕೂಟ್$_1$]

**ಪೆಗಲ್ವೊಱೆ** (ನಾ). ಹೆಗಲಿನ ಮೇಲೆ ಹೊತ್ತುಕೊಂಡಿರುವ ಹೊರೆ : ಪಟು ಕೊಟ್ಟಿಗೆ ಪೆಗಲ್ವೊಱೆ . . . ಅಪ್ಪವರ್ಗಂ ಸಹಿತವನಿಪನಂ ಸೇನೆಯುಂ ಕೊಟ್ಟು (ಧರ್ಮಾ. ೩-೬). [ಪೆಗಲ್+ಪೊಱೆ]

**ಪೆಗೆವೆಗೆ** (ನಾ). ಒಂದು ಸ್ಥಳದ ಹೆಸರು : ಗೆಟ್ಟಿವಡಿಗೆ ಪೆಗೆವೆಗೆಯ ಎಲ್ಬದಿಪ್ಪುಗ್ಗೆ ಏಳಚಾಗುವಳ್ಳಿಯ ಪಾರಯ್ಯ . . . ಕವ್ಬುಳದೆಳೆಪೆಟ್ಟು ಕೊಟ್ಟು (ಎಕ. III, ಶಿಕಾರ. ೯೬-೨; ೫೨೩ ?). [?]

**ಪೆಗೋಡ** 'ಪಗೋಡ' ನೋ.

**ಪೆಗ್ಗ** 'ಪೆಂಗ' ನೋ.

**ಪೆಗ್ಗಡೆ** 'ಪೆರ್ಗಡ್ಡೆ' ನೋ.

**ಪೆಗ್ಗಣ** 'ಪೆರ್ಗಣ' ನೋ.

**ಪೆಗ್ಗಟಿಯ್ಯ** (ನಾ). ಒಬ್ಬಾತನ ಹೆಸರು : ಪಚ್ಚಪಯ್ಯನ ಮಗ ಶ್ರೀ [ಕೊ]ನ್ನದ ಪೆಗ್ಗಟಿಯ್ಯಂ (ಶಾಇಶ. XI-1, ೯೩-೦೯, 970). [? + ಅಯ್ಯ₁]

**ಪೆಗ್ಗಟ್ಟಿ, ಹೆಗ್ಗದ್ದೆ** (ನಾ). ದೊಡ್ಡ ಗದ್ದೆ; ವಿಸ್ತಾರವಾದ ಗದ್ದೆ: ದೇಗುಲಕೆ ಸಲ್ವುದು ದೇವರ ಕೆಱೆಯ ಮೂಡಣ ಕಡೆಗೋಡಿನಲಿ ಪೆಗ್ಗಟ್ಟಿ (ಎಕ. IX, ದೊಡ್ಡ. ೬೬-೨೦; ೯೬೦). ಹೆಗ್ಗದ್ದೆ : ವಿಷ್ಣುಭಟ್ಟೋಪಾಧ್ಯಾಯರಿಂಗೆ . . . ಮೂಡಣ ಹೆಗ್ಗದ್ದೆ ಅದಱ ಮೇಗಣ ಕೊಡಂಗೆ ಎರಡೞಲ್ಲಿಯೂ ಮೂಡೆ ೨ (ಎಕ. XXVII. ೨೮-೯೮; 1286). [< ಪಿರಿದು₁ + ಗಟ್ಟಿ]

**ಪೆಗ್ಗು** 'ಪೆಂಗು₁' ನೋ.

**ಪೆಗ್ಗೊರಿಡು** 'ಪೆರ್ಗೊರಿಡು' ನೋ.

**ಪೆಗ್ಗೊರು** 'ಪೆರ್ಗೊರು' ನೋ.

**ಪೆಗ್ಗೊಲ್ಲಿ** 'ಪೆರ್ಗೊಲ್ಲಿ' ನೋ.

**ಪೆಗ್ಗೋಣಿ** 'ಪೆರ್ಗೋಣಿ' ನೋ.

**ಪೆಚ್ಚ** (ನಾ). ದಡ್ಡ; ತಿಳಿಗೇಡಿ: "ಎಗ್ಗ, ಹುಂಬ . . . ಪೆಚ್ಚ" (ಶಂಮಸು. ೬೯); ಶುದ್ಧ ಪೆಚ್ಚ ನಾನು (ಕ್ರಕ್ಕ. ೬೯). 'ಪಿಚ್ಚ₁' ಪರಾ. [ಪೆಚ್ಚು₃ + -ಅ₇]

Δ**ಪೆಚ್ಚಳ₁** 'ಹೆಚ್ಚಳ' ನೋ.

**ಪೆಚ್ಚಳ₂** 'ಪಚ್ಚಳ₂' ನೋ.

Δ**ಪೆಚ್ಚಳಿಸು** 'ಹೆಚ್ಚಳಿಸು' ನೋ.

**ಪೆಚ್ಚಾಟ** (ನಾ). ತಿಳಿಗೇಡಿತನ; ಹುಚ್ಚಾಟ; ಅವಿವೇಕ: ಈಚೀಚೆಗಂತೂ ಅವನ ಪೆಚ್ಚಾಟ ಹೇಳತೀರದು (ರೂಢಿ). [ಪೆಚ್ಚು₃ + ಆಟ]

**ಪೆಚ್ಚಿ** (ನಾ). ದಡ್ಡ ಹೆಂಗಸು; ಪೆದ್ದಿ : ಅವಳೊಬ್ಬಳು ಪೆಚ್ಚಿ. ಬಾಯಿಗೆ ಬಂದ ಹಾಗೆ ಹರಟುತ್ತಿದ್ದಾಳೆ (ರೂಢಿ). [ಪೆಚ್ಚ + -ಇ₂]

**ಪೆಚ್ಚಿಸು** 'ಪೆರ್ಚಿಸು' ನೋ.

**ಪೆಚ್ಚು₁** 'ಪೆರ್ಚು₁' ನೋ.

**ಪೆಚ್ಚು₂** 'ಪೆರ್ಚು₂' ನೋ.

**ಪೆಚ್ಚು₃** (ಗು). ೧. ಏನೂ ತಿಳಿಯದ; ಮೂಢತನದಿಂದ ಕೂಡಿದ : ಏನೋ ಪೆಚ್ಚುಹುಡುಗಿ. ಕನಿಕರದಿಂದ ಹಾಗೆ ಆಡುತ್ತಾಳೆ (ಶಿರಾಶಿ. ೬೩). (ನಾ). ೨. ದಡ್ಡತನ; ತಿಳಿಗೇಡಿತನ : 'ಪೆಚ್ಚ', 'ಪೆಚ್ಚಿ' ಪರಾ. ೩. ಹುಚ್ಚು; ಮರುಳು : "ಪೆಚ್ಚು (ಪುಚ್ಚು) - ಪಿತ್ತ = ಧಾತುವಿಕಾರ" (ಕಶ್ವಕೋ. ೨೭). ೪. ಕಾಂತಿಹೀನವಾದುದು; ಮಂಕು : ನವಶಾಸ್ತ್ರ ದೊರೆಸಾವಿ ಇವಗಚ್ಚುಮಚ್ಚು ವೇದವೇದಾಂತಗಳೆ ಅವನಿದಿರು ಪೆಚ್ಚು! (ಗಹಕಿ. ೬೦-೦೨). ೫. ದಡ್ಡವ್ಯಕ್ತಿ; ತಿಳಿಗೇಡಿಯಾದ ವ್ಯಕ್ತಿ : ಅಯ್ಯೋ ಪೆಚ್ಚೆ . . . ನಿನಗೆ ಗೊತ್ತೇ ಆಗಿಲ್ಲ (ಪಕಿರಾ II, ೯೯೬); ಪೆಚ್ಚುಗಳು ಲಲಿತ, ನರಸಪ್ಪ (ಪಕಿರಾ. II. ೦೦೫೯).

**ಪೆಚ್ಚಾಗು** = ತಬ್ಬಿಬ್ಬಾಗು; ಕಂಗಾಲಾಗು; ಮಂಕು ಕವಿ : ಅವಳು ಮಾತನಾಡಿದ ಧಾಟಿಗೆ ಆನಂದ ಪೆಚ್ಚಾಗಿ ಕುಳಿತ (ದೂರಕಿ. ೬೭); ರಂಗನಾಥನು ಬಹಳ ಪೆಚ್ಚಾಗಿದ್ದನು (ಕಂಕಕು. ೭೬೩); ಪೆಚ್ಚಾಗಿ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ (ಶಂಳಳೂ. ೩೯). **ಪೆಚ್ಚುಪೆಚ್ಚಾಗು** = ಪೆಚ್ಚಾಗು : ಏನೇ ಪೆಚ್ಚುಪೆಚ್ಚಾಗಿ ನಿಂತಿದ್ದೀಯಾ? (ಕೊಗ್ಗ. ೦೭). **ಪೆಚ್ಚುಬೀಳು** = ಪೆಚ್ಚಾಗು : ಹಿಂದೆ ಕೆಲವು ಸಲ ಇವರ ಮಾತಿನಂತೆ ನಡೆದು ಪೆಚ್ಚು ಬಿದ್ದಿದ್ದ ತಂಗವೇಲು ಅಂಗಡಿಯವನನ್ನು ಕೇಳುವುದಕ್ಕೆ ಹಿಂಜರಿದ (ಹುಂಕೂ. ೦೯೩). **ಪೆಚ್ಚು ಮಾಡು** = ಮಂಕು ಕವಿಸು; ತಬ್ಬಿಬ್ಬುಗೊಳಿಸು : ಭೋಳೆಮನುಷ್ಯರೆಂದು ನಮ್ಮ ನಂದಬಾಬುಗಳನ್ನು ಪೆಚ್ಚು ಮಾಡಿದ (ಶಂಶಿಜ. ೯೭). **ಪೆಚ್ಚೆನ್ನಿಸು** = ತಬ್ಬಿಬ್ಬಾಗು; ಮಂಕಾಗು : ಈ ನಾಮಕರಣದ ಪರಿಯನ್ನು ಕಾಣದವರ ಮಾತು ಹಾಗಿರಲಿ, ಕಂಡವರಿಗೂ ಸ್ವಲ್ಪ ಪೆಚ್ಚೆನ್ನಿಸದೇಳು (ಪಮ್ಮಕು. ೨೩೨).

**ಪೆಚ್ಚುಗೆ** 'ಪೆರ್ಚುಗೆ' ನೋ.

**ಪೆಚ್ಚುತನ** (ನಾ). ೧. ದಡ್ಡತನ; ಅವಿವೇಕ : ನಿನ್ನ ಪೆಚ್ಚುತನದಿಂದ ಕೆಲಸ ಹಾಳಾಯಿತು (ರೂಢಿ). ೨. ಹುಚ್ಚುತನ : "ಉನ್ಮಾದ, ಚಿತ್ತವಿಭ್ರಮ . . . ಪೆಚ್ಚುತನವು" (ಸಿದ್ಧಾಶಿ. ೬೬). [ಪೆಚ್ಚು₃ + -ತನ]

**ಪೆಚ್ಚುಂಕ** 'ಪೆರ್ಚುಂಕ' ನೋ.

**ಪೆಚ್ಚೆ** 'ಪಚ್ಚೆ' ನೋ.

**ಪೆಚ್ಚೆಗೆಡು** 'ಪಚ್ಚೆಗೆಡು' ನೋ.

**ಪೆಚ್ಚೆವಿಡು** (ಕ್ರಿ). ದಾರಿ ಬಿಡು; ಕ್ರಮವನ್ನು ಮೀರು : ನಾಡಿಗರ್ ದಿನದಿನಂ ಬೇಳ್ಪೊಂದು ಹವ್ಯಮಂನುಂಡುಂಡು ಸವಿಗೊಂಡ ಬೋಟಿಯ ರಕ್ಷಾನುಪೂರ್ವನೀ ನಿಚ್ಚಪಲಿಯಡಯಿಂ ಪುರುಳ್ಗಾಣದೆ ಪೆಚ್ಚೆವಿಟ್ಟು . . . ತಡೆವರ್ಪರ್ (ರಾಮಾಶ್ವ. ೫೩ ೩೦). [ಪಚ್ಚೆ (< ಪಚ್ಚೆ) + ಬಿಡು₁]

**ಪೆಟಲ್, ಪೆಟಲ, ಪೆಟಲು, ಪೆಟ್ಟಲು, ಪೆಟ್ಲು** (ನಾ). ೧. ಯುದ್ಧದಲ್ಲಿ ಮದ್ದನ್ನು ಸಿಡಿಸಲು ಉಪಯೋಗಿಸುತ್ತಿದ್ದ ಒಂದು ಬಗೆಯ ಸಾಧನ; ತುಪಾಕಿಯಂತಹ ಸಾಧನ : ಹೊಡಿದುವು ಪೆಟಲ್ಗಳಿಕ್ಕುವ ದಟಿಗಳಾಗಳೊಲಾಡಿದುವು (ಕಲಕು. ೯೨-೩೨). **ಪೆಟಲ** : ೧. ಹಾರಿದರಿ ಕೊಱೆದು ಪೆಟಲ ತಿರುಗಣಿ ಬೀಸುವಲೆ ತಳಿಯ ಮರದ ಗೊಂಡಣದ ಸಂತರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಮ್ಮಳಾ. ೬-೨೯); ಗುಂಡು ಪೆಟಲ ತಿರುಗುಣಿ ಜಾಲದ ಕಱೆಗೆಂಡ . . . ಹಾಣೆಯು ಕಂಡತಂಡದಿಂದೆಸೆದುದಾ ಕೋಟೆ (ಕಂಕ್ರಶಾ. ೬-೦೦). **ಪೆಟಲು** : ೧. ಸುಡುವ ಪೆಟಲು ಕೊಡೆ ನೆಗೆವ ಗುಂಡಿ ಕೇತು ತೋರಣದಿಂದ ಪಾಯ್ದಳವೆಲ್ಲ ಸಡಗರಗೊಂಡುದು (ಕಶಕ. ೯೩-೨೨); ಪೆಟಲು ಡವ್ವೆನೆ ಗುಂಡು ಸಿಡಿದು ಪೋಪಂತೆ (ಕ್ರಕುಕು. ೬-೦೩೬); ಸುಭಟರ ಹರಣಗೊಳುವ ಪೆಟಲಂಗಳ ಕಱೆವ ಗುಂಡಿನ ಮಳೆಯಂಒರೋಳಗೆಸೆದುದು (ಕಂಕಕು. ೦೬ ೩೭); ಛಟಿಛಟಿಲಂಛಟಿಲೆಂದು ನಾದಿಸೆ ಪೆಟಲಿನಿಂ ಸಿಡಿವ . . . ಗುಂಡುಗಳು (ಅಕಂಗಾ. ೯-೨-೬). **ಪೆಟ್ಟಲು** : ೧. ಇಡುವ ಪೆಟ್ಟಲು ಕೊಡಬ್ಬರಿಸುವ ಬಾಣ . . . ಹರಿಗೆಗಳ ಕಡುಗಲಿಭಟರು ಭೀಮಯದಾರ್ದು ರಿಪುಗಳ ತುಡುಕಿದರು (ಕಂಕಕು. ೩-೬೫). ೨. ಮಕ್ಕಳು ಆಟಕೆಯಾಗಿ ಬಳಸುವ ತುಪಾಕಿಯಂಥ ಒಂದು ಸಾಧನ: (೪). **ಪೆಟ್ಲು** : ೨. ಪೆಟ್ಲಿಗೆ ಗಜ ಒದಗಿಸುತ್ತಿದ್ದವರು ರಾಗಜ್ಜ (ಕ್ರಕ್ಕ. ೦೭); ಉಡುಪಿಯಲ್ಲಿ ಕೃಷ್ಣಜಯಂತಿಯಂದು ಯಾವ ಹುಡುಗರ ಕೈಯಲ್ಲಿ ನೋಡಿದರೂ ಪೆಟ್ಲು ಇರುತ್ತದೆ (ರೂಢಿ) ೩. ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಮಕ್ಕಳು ಈ ಕಾಯಿಯನ್ನು ತುಪಾಕಿಯಂತಿರುವ ಸಾಧನದಲ್ಲಿ ಹಾಕಿ 'ಟಪ್' ಎಂದು ಸದ್ದಾಗುವಂತೆ ಹೊಡೆಯುತ್ತಾರೆ: ಉಸುಮುಂ, ಹೂಮುಗುಳಿ, ಪೆಟ್ಲು, ಗೋರಿ (ಪಮ್ಮಸು. ೨೩೯).

**ಪೆಟಲ ಕಂಡಿ** = ಯುದ್ಧಕಾಲದಲ್ಲಿ ಕೋಟೆಯಲ್ಲಿ ಮರೆಯಾಗಿ ನಿಂತು ತುಪಾಕಿಯನ್ನು ಹೊಡೆಯುವುದಕ್ಕಾಗಿ ಮಾಡಿಕೊಂಡಿರುವ ಕಂಡಿ : ಏಸುವಂಬುಗಂಡಿ ಪೆಟಲ ಕಂಡಿ . . . ಲಾಳವುಂಡಿಗೆ ಕಣ್ಗೆಸೆದವು

ಕುಮ್ಮಟದೊಳಗೆ (ಶಾಂತಿನಾ. ೩೭-೩೨). **ಪೆಟಲ ಗುಂಡು** = ಪೆಟಲಿಗೆ ಹಾಕುವ ಗುಂಡು,–ಗೋಲಿ: ಒಂಗದಿಡುವ ಚೆಂಡು ಪೆಟಲ ಗುಂಡಿನ ಸಮುಭಂಗಿಯಂತೆದೆಗೆಡಿಸಿದುದು (ಶಾಂತಿನಾ. ೩೧-೧೧೦); ತೂಳಿಸು ಪೆಟಲ ಗುಂಡುಗಳನೆಂಬಸುರರ ಕೋಳಾಹಳವೊಪ್ಪಿತು (ಶಂಪರಿ. ೦೯-೩). **ಪೆಟಲವರ್**, ಪೆಟಲವರು = ತುಪಾಕಿಯನ್ನು ಹಿಡಿದಿರುವವರು : ಪೆಟಲವರ್ ಫಿರೆ ಮಾಲೆಯೊಳ್ ಪರಿದರು (ರಕ್ಷಣಾ. ೧-೨೧); ಸುತ್ತ ಬಳಸಿ ಪೆಟಲವರು ಕೋವಿಗಳನು ತೆತ್ತಿಸಲು (ಶಾಂತಿನಾ. ೦೦-೩೩).

[ ದೇ. ॥ ತಮಿ. ಪೊಟ್ಟಿಲ್ ; ತುಳು. ಪೆಟ್ಲ, ಪೇಟ, ಪೇಟ್ಲ, ಪೇಟ್ಲು; ತೆಲು. ಪೆಟಲು, ಪೆಟಿಲು, ಪೆಟಾಲು, ಪೆಟ್ಲು ]

**ಪೆಟಲ** 'ಪೆಟಲ್' ನೋ.

**ಪೆಟಲಂಬು** (ನಾ). = ಪೆಟಲ್ ೧ : ಪೆಟಲ ಕೋವಿಯು ಬಂಡಿ ಪೆಟಲಂಬಿನ ಬಂಡಿ . . . ಕಟಕದೊಳೆಯ್ದಿದವು (ಶಾಂತಿನಾ. ೪೦-೪೯); ಪೆಟಲಂಬು ಗುಂಡುಗಳಾಂತು ರಕ್ಕಸರು . . . ಕೋಂಟೆಗಳಗವನುಜ್ ಮಾಡುತಿರೆ (ಬೀಶ್ವ. ೨. ೦೧-೨೦). [ಪೆಟಲ್ + ಅಂಬು$_{2}$]

**ಪೆಟಲು** 'ಪೆಟಲ್' ನೋ.

**ಪೆಟಲುಪ್ಪು**, ಪೆಟ್ಲುಪ್ಪು (ನಾ). ೧. ಒಂದು ಬಗೆಯ ಉಪ್ಪು; ಬಂದೂಕಿಗೆ ಹಾಕುವ ಮದ್ದು : ಪೆಟಲುಪ್ಪು ಗುಂಡು ದಸಿ ಬಿತ್ತರಿಸಲೇಂ (ಕನ್ನರಾ. ೩-೨೦): ಪೆಟಲ ಬೆಣೆಯ ಬಂಡಿ ಪೆಟಲುಪ್ಪಿನ ಬಂಡಿ ಕಟಕದೊಳೆಯ್ದಿದವು (ಶಾಂತಿನಾ. ೪೦-೪೯). ೨. ಒಂದು ಬಗೆಯ ಉಪ್ಪು; ಕಡ್ಡುಪ್ಪು: ಪಿ[ಪೆ]ಟಲುಪ್ಪನ್ನು ಸಣ್ಣಗಾಗಿ ಪುಡಿ ಮಾಡಿ . . . ನಿಂಬೇಹುಳಿಯನ್ನು ಬಿಟ್ಟು ಕಲಸಿಕೊಂಡು ನುಂಗುವುದು (ಬಸ್ವ. ೪೯). **ಪೆಟ್ಲುಪ್ಪು**: ೧. ಉಪ್ಪು, ಪೆಟ್ಲುಪ್ಪು, ಎಣ್ಣೆಕಾಳುಗಳು, ಪರಿಮಳದ್ರವ್ಯಗಳು ಪರನಾಡುಗಳಿಗೆ ಹೋಗುವುವು (ಮುಂಬಯಿ. ೪-೦೩೭); ಈ ದಹನಕಾಲದಲ್ಲಿ ಅಂಗಾರ, ಗಂಧಕ, ಪೆಟ್ಲುಪ್ಪು ಮೊದಲಾದುವು ಆಮ್ಲಜನಿಲದೊಡನೆ ಸೇರಿ ಕೆಲವೊಂದು ಆಮ್ಲಗಳು ಉಂಟಾಗುವುವು (ಶಾಸ್ತ್ರ. II, ೦೧೦೪). ೨. "ಪಾಂಡುಜಃ —ಪೆಟ್ಲುಪ್ಪು" (ಲಕು. ೯೪); ಪೆಟ್ಲುಪ್ಪುಗ ೧ ತೊಲವಂ ನರಮೂತ್ರದೊಳರೆದು ಕೊಡಲು ಆ ಕ್ಷಣವೇ ಮೂತ್ರ ಬಿಡುವುದು (ಕಲ್ಯ. ೩೭೪).

[ ಪೆಟಲ್ + ಉಪ್ಪು$_{1}$./ತಮಿ. ಪೊಟ್ಟಿಲುಪ್ಪು; ತುಳು. ಪೆಟ್ಲುಪ್ಪು. ಪಟ್ಲುಪ್ಪು; ತೆಲು. ಪೆಟ್ಲುಪ್ಪು ]

**ಪೆಟಲುಯಂತ್ರ** (ನಾ). ಪೆಟಲನ್ನು ಅಳವಡಿಸುವ ಯಂತ್ರವಿಶೇಷ: ರಡಿ ದಸಿ ಕಪಣೆ ಕೈಕಲ್ಲೆತ್ತುಗುಂಡಾರ್ದಿಡುವ ಪೆಟಲುಯಂತ್ರ . . . ಎಸೆದವು (ಶಾಂತಿನಾ. ೩೭. ೩೯). [ ಪೆಟಲು ( < ಪೆಟಲ್) + ಯಂತ್ರ ]

**ಪೆಟಲ್ಗೋವಿ** (ನಾ). =ಪೆಟಲ್ ೧: ನಾಸಿಕದಿರವು ಹೊಂಚಂಪಕವೊ ಹೇಮದಿ ವಿರಚಿತದ ಪೆಟಲ್ಗೋವಿ ಕೀಳಲರಂಬನಾಡುತಿಹ ಪರಿಯೊಳೆ ಸದಿಹುದು (ಶತಕಾ. ೮೬-೩೪). [ ಪೆಟಲ್ + ಕೋವಿ$_{1}$ ]

**ಪೆಟಾರಿ** 'ಪಿಟಾರಿ' ನೋ.

**ಪೆಟಾರಿಗೆ** 'ಪಿಟಾರಿ' ನೋ.

**ಪೆಟ್ಟ** 'ಪೆಂಟೆ$_{1}$' ನೋ.

**ಪೆಟ್ಟಣಿಗೆ** (ನಾ). ನೆಲವನ್ನು ಧಮ್ಮಸ್ಸು ಮಾಡಲು ಉಪಯೋಗಿಸುವ ಒಂದು ಬಗೆಯ ಮರದ ಸಾಧನ ; ಬಡಿಮಣೆ : "ಪೆಟ್ಟಣಿಗೆ [ಪಾಠಾಂ. ಕೇಜಣಿಗೆ] ಶರಪೀಠವಕ್ಕು" (ಮಂಗರಾ. ೪೭-೩). [ ? ]

**ಪೆಟ್ಟಮೆಟಿಸು**, ಹೆಟ್ಟವೆಳಸಂ (ಕ್ರಿ). ಹೆಂಟೆಯೊಡೆಯುವ ದಿಮ್ಮಿಗೆ ಕಟ್ಟಿ ಎಳೆಯಿಸಂ : ಬೆಟ್ಟೇಜ್ ಬೀಟ್ದರಂ ಪೆಟ್ಟಮೆಟಿಸಿಕೊಳ್ದರಂ . . . ನರೆದು ನೋಡುವರಂತೆ (ರವಾತ್ಸು. ೯-೨೩). **ಹೆಟ್ಟವೆಳಸು** : ಕಡಹಿ ಮೂಗನರಿದೆಳೆಹೂಟೆಯಂ ಕಟ್ಟಿ ಹೆಟ್ಟವೆಳಸುವ ಬಟ್ಟಬಯಲೊಳು (ಹಕಾ. ೯-೦೩). [ ಪೆಟ್ಟ (< ಪೆಂಟೆ$_{1}$) + < ಎಟಿಸು ]

**ಪೆಟ್ಟಮೆಟ್**, ಪೆಟ್ಟವೆಟ್ (ಕ್ರಿ). ೧. ಹೆಂಟೆ ಒಡೆಯುವ ದಿಮ್ಮಿಗೆ ಕಟ್ಟಿ ಎಳೆ ; ☞ ಇದನ್ನು ಅಪರಾಧಕ್ಕೆ ಶಿಕ್ಷೆಯಾಗಿ ಪ್ರಯೋಗಿಸುತ್ತಿದ್ದರು : ಪಿಡಿ ಪಿಡಿ ಕಟ್ಟು ಪೆಟ್ಟವೆಟ್ ಕೋಲಾಗಿ (ಪರಶು. ೩-೨೪); ಈ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪೆಟ್ಟಮೆಟ್ದು ಬಳಸಿದ ದಸಿಯೊಳ್ಳಿಗೆಯಿಂ (ಸುಕುಮಾ. ೬. ೩ ೮). **ಪೆಟ್ಟವೆಟ್** : ೨. (ಅಲಂ) ನೆಲಸವಂ ಮಾಡು ; ನಾಶಮಾಡು. ೧, ೨ : ಮೂವತ್ತಾಱುಂ ಗುಣದಿಂ ಭಾವಜನಂ ಕಟ್ಟಿ ಪೆಟ್ಟವೆಟ್ [ ಪಾಠಾಂ. ಪಟ್ಟವೆಟ್, ಪೆಟ್ಟವೇಳ ] ದರ್ ವೃಷದಿಂ (ಶಂಕರಾಭ. ೮-೦೪). [ ಪೆಟ್ಟ (< ಪೆಂಟೆ$_{1}$) + ಎಟ್$_{1}$ ]

**ಪೆಟ್ಟಿಯ**, ಪೆಟ್ಟಿಯ (ನಾ). ಪೆಟ್ಟಿಗೆ ; ಸಂದೂಕ : "ಪೇಟಾ, ಮಂಜೂಷಾ—ಈ ೨ ಪೆಟ್ಟಿಯಂ" (ಹರಿಹುರು. ೩೨-೦೩೭). **ಪೆಟ್ಟಿಯ** : "ಪೆಟ್ಟಿಗೆ(ಯ)—ಪೇಟಕ (ಪಿಟಕ)" (ಕನ್ನಕೋ. ೨೭). [< ಪ್ರಾ. ಪೇಡಿಅ./ತಮಿ. ಮಲ. ಪೆಟ್ಟಕಮ್; ತೆಲು. ಪೆಟ್ಟಿಯ; ಪರ್ಜಿ. ಪೆಟೆಯ]

**ಪೆಟ್ಟಲು** 'ಪೆಟಲ್' ನೋ.

**ಪೆಟ್ಟವೆಟ್** 'ಪೆಟ್ಟವೆಟ್' ನೋ.

**ಪೆಟ್ಟಾರಿ** 'ಪಿಟಾರಿ' ನೋ.

**ಪೆಟ್ಟಿ$_{1}$** 'ಪೆಂಟೆ' ನೋ.

**ಪೆಟ್ಟಿ$_{2}$** (ನಾ). ಒಂದು ಬಗೆಯ ಪಕ್ಷಿ : ಪರಡೆ ಪಸುಂಬಂ ಪೈನಂ ಎರಳೆ ನವಿಲ್ಗಾಗೆ ಪೆಟ್ಟಿ ಪೋದಗೆ ಕರಭಂ ಶರಕವಿಂಪ್ಪ ಪೋಗೆ ಶಾರುಂ ಬರೆಯೆಡಕಯಂದೂರೊಳೊಳ್ಪಂ (ಕೋಕೋಶ. ೦೨-೦೭).

[ ದೇ. ॥ ತೆಲು. ಕೋಲಾ. ಪಿಟ್ಟ: ಗೊಂಡಿ. ಪಿಟೆ, ಪಿಟ್ಟೆ. ಪಿಟ್ಟೇ ]

**ಪೆಟ್ಟಿ$_{3}$**, ಪೆಂಟೆ$_{4}$, ಪೆಟ್ಟೆ$_{3}$ (ನಾ). ೧. = ಪೆಟ್ಟಿಯ : ಮುಜ್ಞಾತಂದ ಪೆಟ್ಟಿ[ಪಾಠಾಂ. ಪಚ್ಚಿ]ಯಂ . . . ಎನುತ ಸಖಿಯರು ನೆರೆದು ಪೆಟ್ಟಿಗೆಗಳು ಮನೊಡೆದು (ಶಂಕರ. ೦೩-೩೩): ಚಂದ್ರಾನನೆ ತೊಡವಿನ ಪೆಟ್ಟಿಯಾನಂದದಿನೀಯಲ್ (ದಕಳು. ೬-೦೦೪): ಅವರ ಕನಸಿನೊಳು ಶಂಕರ ನಿರಿಸಲಾ ಪುಸ್ತಕವನೆದ್ದು ಪೆಟ್ಟಿಯೊಳ್ಕಂಡು (ಬಿಕ್ಷು. ೭-೦೭-೬). ೨. (ಹಾವುಗಳನ್ನಿಡುವ, ಬಿದಿರಿನಿಂದ ಮಾಡಿದ) ಬುಟ್ಟಿ : ಹೇಳಿಗೆ : ಪಾವುಗಳಿಗಾದೊಡಂ ಸುಖಮುಂಟೆ . . . ಜೋಗಿಗಳು ಮಂತ್ರದಿಂ ಪಿಡಿದು ಪೆಟ್ಟಿಯೊಳು ಮುದುಡಿ ತುಂಬಿ (ಬಿಕ್ಷು. ೪-೨೩-೩೦). ೩. ಭರಣಿ ; ಕರಂಡ : ಅಲ್ಲಿರ್ದ ಪೆಟ್ಟಿಯೊಳಗಣ ಸಲ್ಲಲಿತಕ್ರಮುಕಪತ್ರಕರ್ಪೂರವಮಾಂ ಬಲ್ಲನಿತಂ ಕೊಂಡು (ದಕಳು. ೬-೩೦೩). **ಪೆಂಟೆ$_{4}$** : ೪. ಧಾನ್ಯಗಳನ್ನು ತುಂಬುವ ಗಳಗೆ ; ತೊಂಬೆ ; ಮೂಡೆ : ಧಾನ್ಯವನ್ನು ಪೆಂಟೆಯಲ್ಲಿಟ್ಟರೆ ಹುಳು ಬೀಳುವುದಿಲ್ಲ (ಜಾಪ). **ಪೆಟ್ಟೆ$_{2}$** : ೧. ಪರಿಪರಿಯ ವಸ್ತುಗಳಂ ತುಂಬಿರುವ ಪೆಟ್ಟಿಗಳ ಪೆಸರ ದುಕೂಲಗಳ ಪಿಂಡಿಗಳ್ (ಕಕ್ಷ. ೪-೬೭-೩). ೪. ಹಗ ಪೆಟ್ಟೆ ಕಣಜದೊಳಿಹ ಬಹುಧಾನ್ಯವ ಬಗೆಯದೆ ಸೂಜೆಯ ಕೊಟ್ಟು . . . ಜನವಂಜಿ ಜಗುಳಿದರು (ಶಾಪರಿ. ೦೦-೪೮).

[ < ಸಂ. ಪೇಟೀ./ತಮಿ. ಪೆಟ್ಟಿ, ಪೊಟ್ಟಿ : ತುಲ. ಪೆಟ್ಟಿ : ಕೊಡ. ಪೊಟ್ಟಿ; ತೆಲು. ಪೆಟ್ಟೆ ]

**ಪೆಟ್ಟಿಕಾಳಿ** (ನಾ). ಪೆಟ್ಟಿಗೆಗಳ ಸಾಲು,—ಪಂಕ್ತಿ : ಮುಂದೆ ಸುವರ್ಣದ ಪೆಟ್ಟಿಕಾಳಿಯಗ್ಗಳಿಸಿ ಬರುತ್ತಮಿರೆ (ಶಂಕರ. ೦೩ ಕೋಶ):

[ <ಸಂ. ಪೇಟಿಕಾಲಿ ]

**ಪೆಟ್ಟಿಕ್ಕು** (ಕ್ರಿ). ಏಟು ಕೊಡು ; ಹೊಡೆ ; ಬಡಿ : ನೆತ್ತಿಯನು ನೀರ್ವಂದಿಗೆಯೊಳು ಟೊಂಗುಟೊಂಗೆನಲ್ಪೆಟ್ಟಿಕ್ಕಿ (ಮಾದೇವು. ೨೩-೩೦).

[ ಪೆಟ್ಟು$_{2}$ + ಇಕ್ಕು ]

**ಪೆಟ್ಟಿಗೆ**, ಪೆಡಗೆ, ಪೆಡಿಗ, ಪೇಳಿಗೆ, ಪೇಳ್ಗೆ, ಹೆಡಗೆ, ಹೆಡಿಗೆ, ಹೇಳಿಗೆ (ನಾ). ೧. (ವಸ್ತುಗಳನ್ನು ತುಂಬಿಡಲು ಮಾಡಿದ, ಲೋಹ ಅಥವಾ ಮರದ) ಸಂದೂಕ : ಪೇಟಕಾ—ಪೆಟ್ಟಿಗೆ (ಕಮದ. ೨೩೩ ಕ್ರಿಯೋ) ;

ಪೆಟ್ಟಿಗೆಯೊಳಗಿನ ಆಪ್ಪಾಭರಣ ನೀನೆ (ಪುರಂದ. ೦-೦೯೬-೦) : ನನ್ನ ಬಳಿಯಲ್ಲಿ ಒಂದು ಇಂಥಾ ದೊಡ್ಡ ಪೆಟ್ಟಿಗೆಯುಂಟು (ಮುಂಬಯಿ. ೪-೧೭೬). ೨. ಭರಣಿ; ಕರಂಡಕ : ಸಾದಿನ ಪೆಟ್ಟಿಗೆಗಳ ಮೃಗಮದದ ಕೊಂಬುಗಳ (ಗಿರಿ. ೧೦-೭೪ ವ) : ಸಾರಪರಿಮಳವಸ್ತುಗಳ ಬಲುಭಾರಣೆಯ ಪೆಟ್ಟಿಗೆಗಳೊಟ್ಟಿತು (ಶಬ್ದಾ. ೦೬-೨೮) ; ಬಾರಿಸಿದ ಬಲು ಹೋಹಿಯ ಬಂಡಿಗಳೋರಣಿಸಿದವು ಪಯಣದಲಿ ಕರ್ಪೂರ ಕಸ್ತುರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ (ಕೃಷ್ಣ. ೦-೬-೩). **ಪೆಡಗೆ :** ೩. (ದೊಡ್ಡ) ಕುಕ್ಕೆ ; ಗೂಡೆ : ಪೂಜೆಗೊಂದು ಪೆ[ಪಾಠಾಂ. ಹೆ]ಡಗೆ ಮಣ್ಣಂ ನೆಟಿ ಶೌಚಂಗೆಯ್ವರೊಳಗೆ ಪಲಕೆಲದಡಗಂ ತುಱುಕುವರಿಂತುಟು ಶೌಚದ ತೆಱಂ (ಸಮಶ. ೧೪-೦೫೦) : ಪರದರ ಪುತ್ರಿಗೆತ್ತಣದೊ ಪೀಣೆಯು ಜಾಣಱಿವಂತು ಬಳ್ಳಿವೊ ಪರಿಕಿಪ ಮಾನವೋ ಪೆಡಗೆಯೋ (ಮುಹಾವೀ. ೪-೦೦೨) ; ಮತ್ತೊಂದುದಿವಸಂ ಪೆಡಗೆಯೊಳೆಲ್ಲಂ ತುಂಬಿ ಆವ ಮಾನದೊಳಳದುಕೊಂಡಪರಾ ಮಾನದೊಳೆಣ್ಣಯನಳದು ಮಗುಟ್ಟುವುದೆನಲ್ (ಪುಣ್ಯಾಸ್ರ. ೩-೩೦ ವ). **ಪೆಡಿಗೆ :** ೩. ಸಕಲಪುಷ್ಪಂಗಳಂ ಪೆಡಿಗೆಯೊಳುಮುಲ್ಲಾಸದಿಂ ತುಂಬಿ . . . ಕಳುಪಿದಳು (ಶ್ರೀಕುಪು. ೩-೯೩). **ಪೇಳಿಗೆ :** ೧. ಭೂಷಣಾದಿಗಳಂ ಪೇಳಿಗೆವೆರಸಿ ತೋರ್ಪ ಭಂಡಾರಿಗನೆನಿಸಿದನಮರನಜರನಾಸ್ಥಾಯಿಕೆಯೊಳ್ (ಶಾಂತಿಪು. ೦೦-೭೬೨) ; ದೇವಶರ್ಮಂ ತನಗೆ ತಕ್ಕನಿತು ದ್ರವ್ಯಮಂ ದಾನಂಗೆಯ್ಯಲ್ವೇಟ್ಟುಮೊಂದು ದೇವರ ಪೇಳಿಗೆಯೊಳಿಕ್ಕಿ (ಪಂಶಕಂ. ೬೦-೦೬) ; ಪೇಟಿಂ, ಪೇಳಿಗೆ . . . ಪುಳಂ— ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಶಬ್ದ. ೨೨ ವೃ.). ೨. ಮಗಮಗಿಪ ಬಹುವಿಧಪರಿಮಳದ್ರವ್ಯಂಗಳ ಪೇಳಿಗೆಗಳಿಂದೆಯುಂ . . . ಸೊಗಯಿಸುತಿರ್ಪುದು (ಮುದ್ರಾಶ. ೬-೬ ವ). ೪. (ಹೂಳುವುದಕ್ಕೆ ಮುಂಚೆ) ಹೆಣವನ್ನಿಡುವ ಪೆಟ್ಟಿಗೆ : ಒಡಲ ಪೇಳಿಗೆಯಲಿ ಒಪ್ಪ ಮಾಡಲು ಇಲ್ಲ (ತಿಂಗಳ. ೦೯-೪). ೫. (ಹಾವುಗಳನ್ನಿಡುವ) ಬಿದಿರಿನಿಂದ ಮಾಡಿದ ಬುಟ್ಟಿ : "ಪೇಟಿಕೆ ಪೇಳಿಗೆ" (ಕಕುಶಿ. ೦೩) : ಪಾಪಿನ ಪೇಳಿಗೆಯಂ ಬಿಟ್ಟು ನೋಡಿದ ಮರ್ಕಟನಂತೆ (ಪಂಚತಂ. ೮೩-೬) ; ಫಣಿವಲ್ಲಿಯ ಪೇಳಿಗೆಯುಮನಿಱದ ದೇವರಮಣೋದ್ಯಾನವಂ . . . ಪುಗುತರ್ಪಾಗಳ್ (ಶಾಂತೀಶ್ವ. ೦೦-೭೮ ವ) : ಪೇಳಿಗೆಯ ಪಾವಿನೊಂದು ಪಾಟೆಕ್ಕೆಯಿಂ ತಡೆಗಟ್ಟುವಟ್ಟರಾಗಿ ಮರಳ್ದು (ರಾಶಶಾಶ್ವ. ೮೬-೪). **ಪೇಳ್ಗೆ :** ೫. ವಿಟರೆರ್ದೆಪಾವುಗಳ್ಗಿಟ್ಟ ಪೇಳ್ಗೆ (ಅಕ್ರೂರ. ೫-೨೦). **ಹೆಡಗೆ :** ೩. ಒಂದು ಬೀಜವ ಬಿತ್ತಿದಷ್ಟೆ ಪಾಜು ಫಲವಾಯಿತ್ತು . . . ಹೆಡಗಗೆ ಅಳ ಪಡಿಸುವಾಗ ಐವತ್ತೊಂದು ಕೊಳಗವಾಯಿತ್ತು (ಕೋಟಿಶಾ. ೨೦೬-೬೬೦) ; ಮಾಱುವ ಹೆಡಗೆಯ ಹಣ್ಣು ಹಂಪಲ್ ಬಾಡುಕಾಯ್ಗ . . . ಕೊಟ್ಟರ್ (ಎಕ. V. ೨೦-೬೯; 1161) ; ಒಂದು ಹೆಡಗೆಯ ಬತ್ತವಂ ಭರದಿಂದ ಕಳಹಲು (ಬಸವು. ೨೩-೬). **ಹೆಡಿಗೆ :** ೩. ಹಿಕ್ಕೆಯ ಹೆಡಿಗೆಯ ಬುಟ್ಟಿ . . . ಮುಂದಕೆ ನಡೆತರಲು (ಅಕಸಂ. ೩೦೦-೪) : ಮಾಱ ಬಂದ ಹಣ್ಣು ಹೆಡಿಗೆ ಸೂಱೆಗೊಂಬ (ಪುರಂದ. ೦-೧೦೪-೪) : ಹಿಂಡಿಯ ಹೆಡಿಗ್ಗೆ ಕೋಣನೆ ತಂದು (ಸರ್ವಜ್ಞ. ೦೮೬೩). **ಹೇಳಿಗೆ :** ೫. "ಸರ್ಪಪರ್ಯಂಕವೆನೆ ಹೇಳಿಗೆ" (ಮುಂಗರಾ. ೧೦೫-೮) ; ಮನವೇ ಸರ್ಪ ತನುವೇ ಹೇಳಿಗೆ (ಬಸವ. ೦೬೦) : ರವಿಕುಲದ ವೈರಿಗಳ ಶುಭಕೀರ್ತಿಶಶಿಯಂ ಒಡಿವ ರಾಹುವಿಪ್ಪ ಹೇಳಿಗೆಯೊ (ಹಕಗ. ೦-೩೬) ; ಹೇಳಿಗೆಯ ಮುಚ್ಚಳ ದಾಱಿಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ (ಕುಮಾ. ೨೩-೩೮). [< ಸಂ. ಪೇಟಿಕಾ. / ತುಳು. ಪೆಟ್ಟಿಗೆ]

**ಪೆಟ್ಟಿಗೆಗಾಡಿ** (ನಾ). ಮುಚ್ಚುವ ಮರದ ಬಾಗಿಲುಗಳುಳ್ಳ ಗಾಡಿ,— ಬಂಡಿ : ಸಾರೆಟ್, ಬಗ್ಗಿ, ಪೆಟ್ಟಿಗೆಗಾಡಿ ಮುಂತಾದ್ದು ಕಲಶಕಾಟ್ಟಿನ ಗೆಜ್ಜೆ ತೇರಿಗೂ ಹೆಸರು (ಬಿನ್ನಂಪ. ೨೫೨) : ಘೋಷಾಪದ್ಧತಿಯಿರುವ ಕೆಲವರು ಹಿಂದೆ ಪೆಟ್ಟಿಗೆಗಾಡಿಗಳಲ್ಲಿ ಹೋಗುತ್ತಿದ್ದರು (ಕಾಶಿ). [ಪೆಟ್ಟಿಗೆ + ಗಾಡಿ₁]

**ಪೆಟ್ಟಿಗೆಬಂಡಿ** (ನಾ). = ಪೆಟ್ಟಿಗೆಗಾಡಿ : ಪೆಟ್ಟಿಗೆಬಂಡಿಗಳು ೪. ಚಕ್ಕಡಾ ಬಂಡಿಗಳು ೫೦ (ಗುರುಚ. ೦೦). [ಪೆಟ್ಟಿಗೆ + ಬಂಡಿ₁]

**ಪೆಟ್ಟಿಯ** 'ಪೆಟ್ಟಿಯಂ' ನೋ.

**ಪೆಟ್ಟಿಲು** (ನಾ). (?) : ಯೆರಡು ಮುಡಿ ಕಾಡೆ ಪೆಟ್ಟಿಲ ಭೂಮಿಯಿಂದ (ಸೌಇ. ೦೯೩೦, ಮುಂಗೆಕೊರು. ೫೨೬-೨೨ : 1376). [?]

**ಪೆಟ್ಟಿಸು, ಹೆಟ್ಟಿಸು** (ಕ್ರಿ). ೧. (ನಾಣ್ಯವನ್ನು) ಮುದ್ರಿಸು,— ತಟ್ಟಿಸು : ಸೇದಿರಾಜನು ಸೂಕರನಂಗ ಸುವರ್ಣವಾಗಲು ಕಂಡು ಪೊನ್ನ ಪೆಟ್ಟಿಸಿ [ಪಾಠಾಂ. ಘಟ್ಟಿಸಿ, ಪುಟ್ಟಿಸಿ] ವರಹನೆಂದು ಪೆಸರಿಟ್ಟು (ಕೃಕಸೂ. I, ೨೩೬) : ಈ ನಾಣ್ಯಗಳಲ್ಲಿ ಪರದೇಶದಿಂದ ಇಲ್ಲಿಗೆ ಬಂದ ಮಾತ್ರ ನಮ್ಮ ದೇಶದಲ್ಲಿಯೇ ಪೆಟ್ಟಿಸಿದ ನಾಣ್ಯಗಳೆರಡೂ ಸೇರಿವೆ (ಕೃಶಾ. I, XI ಕೃಶಾ ಪಠ). **ಹೆಟ್ಟಿಸು :** ೨. ತಿವಿಸು : ಚುಚ್ಚಿಸಂ : ಕಂಡವರ ಕೈಯಲ್ಲಿ ಎದೆಯ ಹೆಟ್ಟಿಸಿಕೊಂಬಂತೆ (ಕೋಲಾಟ. ಶ. ೦೯-೬೨). [ಪೆಟ್ಟು₁ + —ಇಸು₃]

**ಪೆಟ್ಟು₁, ಹೆಟ್ಟು** (ಕ್ರಿ). ೧. (ಕೈ, ದೊಣ್ಣೆ, ಸುತ್ತಿಗೆ ಮುಂತಾದುವುಗಳಿಂದ) ಹೊಡೆ,— ಬಡಿ : ಗುಡಿಯನೆತ್ತುವರಂತೆ ಗೂಂಟಮಂ ಪೆಟ್ಟುವರ್ (ಧರ್ಮಾಮೃ. ೩-೬೩), ತೊಲೆಯಂ ಹೇಱ ಕಬ್ಬುನದ ಪೆಟ್ಟಿ ಸಂಕಲೆಗೆಯ್ದು (ಸಿದ್ಧೇಪು. ೧೪-೬೬) ; ಕುದುರೆಯ ಗೂಟವನ್ನು ನೆಲದ ಮೇಲೆ ಇರಿಸಿ ಗಟ್ಟಿಯಾಗಿ ಪೆಟ್ಟಿದನು (ಶಕ್ರಶಾ. ೦೧). ೨. ಚುಚ್ಚು; ಇರಿ : ನಾಟುವಂತೆ ಮಾಡು : ಸಂದುಸಂದುಗಳೊಳ್ ಸೂಜಿಯಂ ಪೆಟ್ಟಿಯುಂ (ಧರ್ಮಾಮೃ. ೩-೬೩) ; ಒಣಗಿದ ಮರದ ಮೊನೆಯ ಕೊಂಬಂ ತಂದು ಮುನೀಶ್ವರನ ಜಂಘೆಯೊಳ್ ಪೆಟ್ಟುವುದುಂ (ಪುಣ್ಯಾಸ್ರ. ೩-೮೫ ವ). ೩. (ನಾಣ್ಯವನ್ನು) ಮುದ್ರಿಸು : ಪೆಟ್ಟೆಂಬ ನುಡಿ ಟಂಕದೊಳಗೆ . . . ಅಲ್ಲದೆ ಬೇಱ ದಿಟ್ಟಿಸಲು ನಾಡೊಳಿಲ್ಲ (ಶಾಪಂ. ೨-೦೫). 'ಪೆಟ್ಟಿಸು' ಪರಾ. ೪. ಸಂಭೋಗಿಸು : (†). **ಹೆಟ್ಟು :** ೨. ಹೆಟ್ಟಿ ಮಾರ್ಗದಲ್ಲಿ ಲೋಹದಾದಿರಸಮನೆಱದು ಸುಡುವರೆಯ್ದು (ಶಾಪಂಚ. ೬-೦೯೪) ; ಅಟ್ಟಿ ಒಹ ಮಾಸವನ ಕೊಂತದಿ ಹೆಟ್ಟಿದನು (ಅಂಬಿಗ. ೨೨-೦೨) ; ಬೇಗ ಬೇಗ ಹೆಜ್ಜೆ ಇಡುವ ಅಂದರೆ ಮುಳ್ಳು ಹೆಟ್ಟಿದ ನೋವು (ಕದ್ಯಶ. ೬೪). ೪. (†). ೫. ಬಲವಂತದಿಂದ ಒಳಸೇರಿಸು ; ತುರುಕು : ಕೆಡಹಲರಿದಿ ಖಳನನೆನೆ ಕೇಳ್ದೊಡನೆ ರಾಘವ ಕಡಿದು ಬಸುಱೊಳು ತಲೆಯ ಹೆಟ್ಟಿದನು (ತೊರವೆ. ೫-೩೦) ; ಅಗುಳು ನುಂಗಲಿಕ್ಕೆ ತೀರದವನ ಬಾಯಲ್ಲಿ ಕಡುಬು ಹೆಟ್ಟಿದ (ಗಾದೆ). ೬. ಮುಷ್ಟಿಯಿಂದ ಕುಟ್ಟು ; ಗುದ್ದು : ಮಕ್ಕಳ ಮಂಡೆ ಬೋರೆಹೋಹಂದದಿ ಹೆಟ್ಟಿ (ಕೇಯುಸಂ. ೧೫-೦೦೬) ; ನೊಸಲೊಡೆದಂತೆ ಹೆಟ್ಟಿದ ವಜ್ರಮುಷ್ಟಿಯಲಿ (ಜೋಹಶ. ೦೨-೮೮) ; ನೆತ್ತಿಯ ಮೇಲೆ ಹೆಟ್ಟಿ ನೀನುದಕವಂ ತಂದೀವುದೆನೆ (ಗುರುಚಾ. ೫-೬೫).

[ದೇ.೫ ತೆಲು. ಪೆಟ್ಟು ; ಕೋತ. ಪೆಟ್]

**ಪೆಟ್ಟು₂** (ನಾ). ೧. ಏಟು ; ಹೊಡೆತ ; ಪ್ರಹಾರ : ಪೆಟ್ಟನಿಕ್ಕನೆ ಪ್ರಲಂಬಾಸುರನ ಬಾಳಹರಣಗಳೊಂಕೆ ಏಗೆ ಕೂಸಾಟದಿ (ಮುರೇಪು. ೦೪-೦೨) : ಸಾಯದರಿಲ್ಲ ಖಂಡೆಯದ ಪೆಟ್ಟಲಿ (ಶಂಕರ. ೦೫-೪೮) ; ನಿಪುಣೆಕೆಯ ಕಠೋರಧಿಕ್ಕಾರವಾಕ್ಯಗಳ ಪೆಟ್ಟನ್ನು ಕ್ಷಣಕಾಲವೂ ಮರೆಯಲಾಗಲಿಲ್ಲ (ಪಾಠ. ೩೦೨). ೨. (ಆಲಂ) ನೋವು ; ಅಳಲು ; ವ್ಯಥೆ : ನೀನು ಪೆಟ್ಟನ್ನು ಅನುಭವಿಸಿದ್ದು ನನಗೆ ತುಂಬಾ ದುಃಖದ ಸಂಗತಿಯಾಗಿದೆ (ಕಂಗಕೋ. ೦೦).

[< ಪೆಟ್ಟು₁. / ತುಳು. ಕೊಡ. ಕೋಲಾ. ಪೆಟ್ ; ತೆಲು. ಪೆಟ್ಟು]

**ಪೆಟ್ಟು₃** (ನಾ). ೧. ಸಾಹಸ ; ಪರಾಕ್ರಮ : "ದಪ್ಪ ಪೆಟ್ಟಿದಟಾರ್ಪು ಸಾಸ ಪೆರ್ಚುಬ್ಬಟೆಯದವ್ವುದು" (ಕಬ್ಬಿಗರ. ೩೮) ; "ಪನ್ನತಿಕೆ ಪೆಟ್ಟು . . . ಅಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಅಭಿಧಾ. ೦೨೫). ೨. ಸೊಕ್ಕು ; ಗರ್ವ : "ಅದಟು ದಪ್ಪಂ ಪೆಟ್ಟು[ಪಾಠಾಂ. ಪೆಂಪು] ಪೆರ್ಚೆಂದು ಗರ್ವ ಮಪ್ಪುದು" (ಅಭಿಧಾ. ೬೫). 'ಪೆಟ್ಟುವೆರ್ಚು₁' ಪರಾ.

**ಪೆಟ್ಟುಗೆ**, ಪೆಟ್ಟಿಗೆ, ಹೆಟ್ಟಿಗೆ, ಹೆಟ್ಟುಗೆ (ನಾ). ೧. ಹೆಂಡತಿ : ಪತ್ನಿ : ಪೆಟ್ಟಿಗ ಕಾಳಿವುಯಂಗಂ ಪೆ[ಟ್ಟು]ಗೆ ಶುಚಿ ಮಾರಕಟ್ಟೆಗಂ . . . ಪುಟ್ಟಿದ ನೊಳ್ಗಣ್ಣ ನೆನಿಸಿ ತಿಪ್ಪಗವುಂಡ್ಡ (ಕಾ. I, ೫೪-೨೬ ; 1148). **ಹೆಟ್ಟಿಗೆ** : ೨. ಹೆಂಗಸು.; ಸ್ತ್ರೀ : ಜಗದೊಳಿನ್ನಾವ ಹೆಟ್ಟಿಗೆ ಪಡೆದಳೊ (ಶಂಕಾರಾ. ೬-೯-೯). **ಹೆಟ್ಟಿಗ್ಗೆ** : ೧. ಭೂಪಾಲರೆಲ್ಲರು . . . ಹೆಟ್ಟಿಗೆಯರ ಹಂಗು ಬಿಟ್ಟೋಡಿ ಭೀಕರಡವಿಯ . . . ಹೊಕ್ಕು (ಕೃಕಥೀ. ೦-೨೯೦). ೨. ಹೆಟ್ಟಿಗೆ ಯರವಾಳ ಶಶಿಮೊಗದ ಬೆಳಗಿಂದೆ ಪೊರವಟ್ಟು ಬರುತಿರ್ದರು (ಪಹಪೋ. ೦೦-೨೬). **ಹೆಟ್ಟುಗೆ** : ೧. ಹೆಟ್ಟುಗೆಗೆ ಗುಜ್ಜುಗರೆದುವು ಮೆಟ್ಟುವ ಮೆಲ್ಲಡಿ (ಅಕಂಕ್ಕೆ. ೦೨-೬೫) ; ಹೆಟ್ಟುಗೆಗೆ ಪೇಟ್ಟ ಮಾತಂ ಪೊಟ್ಟೆಯು ಶಿಶು ಕೇಳ್ದಂದೆಂಬುದಿದು ವಿಪರೀತಂ(ರರ್ಹಕ. ೬-೯). ೨. "ಹೆಟ್ಟುಗೆಯೆಂದು ವನಿತೆ" (ಶಡಾ.೬೨-೬೯೯); ಹೆಟ್ಟುಗೆಯರೆಲ್ಲ ಮೊದಲಿಸಿ ಮುಮಕ್ಕಳಿಗೊಂಡು (ಹರಕಾ. ೬-೫೦) ; ಅಜಂ ಕಪ್ಪಿನ ನಲ್ಗೊಟ್ಟಿಟ್ಟಂತೆವೊಲಂತಾ ಹೆಟ್ಟುಗೆಯ ಕನಿನಿಕರ ಗಳ್ (ಉತ್ತಮಟಿ. ೬-೦೦೬). ೩. ಗೆಳತಿ ; ಸಖಿ : "ಗೆಳತಿ ಹೆಟ್ಟುಗೆ ಸಖಿಗೆ ತೋರ್ಪ ನಾಮಂ" (ಕಕ್ಕೃಕೈ. ೨೮) ; "ಗೆಳತಿ ಹೆಟ್ಟುಗೆಯೆನಲ್ ಸಖಿ" (ಕಕ್ಕಖಂ. ೬೩). ೪. ಕನ್ಯೆ : ಹೆಟ್ಟುಗೆಗೆ ಶಿವಯೋಗರಾಜ್ಯದ ಪಟ್ಟಗಟ್ಟುವ ರಂತೆ ನೊಸಲಿನೊಳಿಟ್ಟರವಲವಿಭೂತಿಯನು . . . ಸುಮತಿ ನಿರ್ವಾಳರು (ಕೃಕುಂ. ೯-೩). ೫. ಹೆಣ್ಣುಮಗಂ.—ಕೂಸು : ಪುತ್ರನನು ಬೇಡಿದೊಡೆ ದೇವತೆಯಿತ್ತಳೇ ಹೆಟ್ಟುಗೆಯನು (ಶಾಶ್ವಶಾ. ೨೦-೨೦).

**ಪೆಟ್ಟುಮಣೆ**, ಪೆಟ್ಟಿಮಣೆ (ನಾ). ೧. = ಪೆಟ್ಟಣಿಗೆ : (*). **ಪೆಟ್ಟಿಮಣೆ** : ೨. (ರಥದ) ಚಕ್ರಗಳ ವೇಗವನ್ನು ತಡೆಯುವ ಒಂದು ಬಗೆಯ ಸಾಧನ ; ಗೊದಮ : ಅವನ ಆತುರತೆಯ ತೇರಿನ ಗಾಲಿಗೆ ಬಲವಾದ ಪೆಟ್ಟಿಮಣೆ ಹಾಕಿದಂತಾಗಿತ್ತು ಹೆಂಡತಿಯ ಹೇಳಿಕೆ (ಹುಕಹು. ೨೯೯). [ಪೆಟ್ಟು$_1$ + ಮಣೆ]

**ಪೆಟ್ಟುವೆರ್ಚು$_1$** (ಕ್ರಿ). ೧. ಅಹಂಕಾರಪಡು ; ಗರ್ವಿಸು ; ಸೊಕ್ಕು : "ಪೆಟ್ಟುವೆರ್ಚು (ಪೆಟ್ಟುವೆರ್ಚು) — ದರ್ಪೇ (ಗರ್ವಪಡು). (ಬೆಟ್ಟು ವೆರ್ಚು)" (ಶಮಣಿ) : ಮಾರಗೆಳೆ ಮುನ್ನಿಕ್ಕಿನಿಸಂ ಮಾರಪಟ್ಟವು ಪೆಟ್ಟುವೆರ್ಚಿ ಕುದಿದಿತ್ತೊಡವಿಪ್ರಾ ಧರಣತಲಕ್ಕವಿಳೇಕಿಯುಮರವಾನಸನೀವ ಬಾಗವೇಂ ಸಿವಿರ್ದಪುದೇ (ಆದಿಪು. ೬-೫೦) ; ಪೆಟ್ಟುವೆರ್ಚಿ ಕಡುಮಸನಂ ಮಾಬ್ಬ ಸೊಸೆ ಮಾವನ ಮಂಡೆಯಂ ಬೋಳಿಸಿದಳೆಂಬಂತೆ (ಶಬ್ದಾರ್ಣವ. ೬-೫೯). ೨. ದೊಡ್ಡದಾಗು ; ಉಬ್ಬು : ಬೆಂದ ಮುತ್ತುಗಳಂತೆ ಪೆಟ್ಟುವೆರ್ಚದೆ (ಶಬ್ದಾರ್ಣ. ೦೦-೬೬). [ಪೆಟ್ಟು$_3$ + ಪೆರ್ಚು$_1$]

**ಪೆಟ್ಟುವೆರ್ಚು$_2$** (ನಾ). ಅತ್ಯಧಿಕವಾದ ಸಾಹಸ,—ಕೆಚ್ಚು : "ವನ್ನತಿಕೆ, ಪೆಟ್ಟುವೆರ್ಚು, ತಕ್ಕು . . . ಅಣ್ಮು — ಈ ೮ ಪರಾಕ್ರಮಂ" (ಶಶನಾ. ೫೯-೬೬೩). [ಪೆಟ್ಟು$_3$ + ಪೆರ್ಚು$_2$]

**ಪೆಟ್ಟಿ$_1$** 'ಪೆಂಟಿ$_1$' ನೋ.

**ಪೆಟ್ಟಿ$_2$** 'ಪೆಟ್ಟು$_3$' ನೋ.

**ಪೆಟ್ಟಿಮಣೆ** 'ಪೆಟ್ಟುಮಣೆ' ನೋ.

**ಪೆಟ್ರೋಮ್ಯಾಕ್ಸ್** (ನಾ). ಸೀಮೆಎಣ್ಣೆಯ ಸಹಾಯದಿಂದ (ಉಜ್ವಲ ವಾಗಿ) ಉರಿಯುವ ದೀಪ : ಪೆಟ್ರೋಮ್ಯಾಕ್ಸ ಹಚ್ಚಿಸಿ ತರಿಸಲಾಯಿತು (ತುಂಬಿಕೊ. ೯೩). [← ಇಂ. Petro + ?]

**ಪೆಟ್ರೋಲ್** 'ಪೆಟ್ರೋಲು' ನೋ.

**ಪೆಟ್ರೋಲಿಯಂ** (ನಾ). ಒಂದು ಬಗೆಯ ಖನಿಜತೈಲ : ಕರೆಯು ಹೋಗ ದಿದ್ದರೆ . . . ಬಿಳಿ ಪೆಟ್ರೋಲಿಯಂ ಅಥವಾ ಬೆನ್‌ಝಿನ್ ಉಪಯೋಗಿಸಿ ಎಣ್ಣೆ ಜಿಡ್ಡನ್ನು ತೆಗೆಯಬಹುದು (ಗೃಶಾ. ೯೦). [←ಇಂ. Petroleum]

**ಪೆಟ್ರೋಲು**, ಪೆಟ್ರೋಲ್ (ನಾ). (ಮೋಟಾರಂ ಮುಂತಾದ ಸ್ವಯಂ ಚಾಲಿತ ವಾಹನಗಳಿಗೆ ಉಪಯೋಗಿಸುವ) ಶುದ್ಧೀಕರಿಸಿದ ಪೆಟ್ರೋಲಿಯಂ ಎಣ್ಣೆ : ಕಲ್ಲೆಣ್ಣೆ : ಪೆಟ್ರೋಲು ತುಂಬಿಸಿಕೊಳ್ಳುವುದಕ್ಕಾಗಿ ಧಾರವಾಡದಲ್ಲಿ ಮೋಟಾರು ನಿಂತುಕೊಂಡಿದ್ದಾಗ ಆಕೆಯ ಚಿತ್ತ ಹೊಯ್ದಾಡತೊಡಗಿದ್ದಿತು (ಬೋಹಂ. ೯೨೬) ; ಹುರಿದ ಬಿತ್ತವನೆತ್ತಿ ಚೆಲ್ಲಿ . . . ಪೆಟ್ರೋಲ ಸುರಿದೆರೆಲೆ ಗಿಡವಾಗಿ ನಳನಳಿಸಿ ಬೆಳೆ ಮಾರವಾಗಿ ಎನುವ ಗೆಳೆಯನೆ! (ಶತಂ. ೮೪-೩). **ಪೆಟ್ರೋಲ್** : ಇವನಪ್ಪ ಕೆಂಪೇಗೌಡನ ರಸ್ತೆ ಪೆಟ್ರೋಲ್ ಪಂಪಿನಾಗೆ ಕಸ ಗುಡಿಸುತ್ತಿದ್ದುದು ನಾನರಿಯೆನಾ ? (ಕಂಗಾ. ೨೬). [←ಇಂ. Petrol]

**ಪೆಟ್ಲ** 'ಪೆಟಲ್' ನೋ.

**ಪೆಟ್ಲತುರುವೆ** (ನಾ). (ಪೆಟಲಿಗೆ ಹಾಕಲು ಬಳಸುವ ಕಾಯಿಗಳನ್ನು ಬಿಡುವ) ಒಂದು ಬಗೆಯ ಸಸ್ಯ : (*).

[ಪೆಟ್ಲ (<ಪೆಟಲ್) + ತುರುವೆ (<ತುಱುವೆ)]

**ಪೆಟ್ಲಪ್ಪು** 'ಪೆಟಲುಪ್ಪು' ನೋ.

**ಪೆಠಾರಿ** 'ಪಿಟಾರಿ' ನೋ.

**ಪೆಡ**, ಹೆಡ, (ಸಪೂರೂ). 'ಪೆಱಗು' ಎಂಬ ನಾಮಪದಕ್ಕೆ ಸಮಾಸದಲ್ಲಿ ಬರುವ ಆದೇಶರೂಪ : ಪೆಡಮೆಂಬಾದೇಶಂ ಬಂದೆಡೆಗೊಳ್ಗುಂ ಪೆಱಗೆನಿಪ್ಪ ಶಬ್ದದೊಳ್ (ಶಮದ. ೦೬೩). 'ಪೆಡಂಗೆಯ್', 'ಪೆಡಂಮಗೆಟ್' ಪರಾ. ● 'ಡ', 'ಱ'ಕಾರಗಳಿಗಿರುವಂತೆ ವ್ಯಾಕರಣಬದ್ಧವಾದ ಹತ್ತಿರದ ಸಂಬಂಧವು, 'ಡ', 'ಱ'ಕಾರಗಳಿಗಿಲ್ಲದಿರುವುದರಿಂದ, 'ಪೆಱಗು' ಶಬ್ದದ 'ಸಪೂರೂ'ಗಳಾದ 'ಪೆಡ', 'ಪೆಱ' ರೂಪ ಗಳನ್ನು ಪ್ರತ್ಯೇಕವಾಗಿ ಕೊಟ್ಟಿದೆ. ಹೆಡ : 'ಹೆಡಕತ್ತು' ಪರಾ.

**ಪೆಡವೆಡಸಾರ್** = ಹಿಂದೆ ಹಿಂದೆ ಹೋಗು ; ಹಿಂಬಾಲಿಸು : ಪೆಡವೆಡಸಾರ್ದು ಸಾರ್ದವನ ನೇಹಿಗರೊಳ್ ನೆಱೆ ನೇಹವಾಂತು (ಇಶಾ. ೬-೦೬೦). [<ಪೆಱಗು. / ತೆಲು. ಪೆಡ; ಪರ್ಜಿ. ಪಿಟ್ರೆಲ್]

**ಪೆಡಂಗಯ್** 'ಪೆಡಂಗೆಯ್' ನೋ.

**ಪೆಡಂಗಲಿಸು** (ಕ್ರಿ). ಮಂಗ್ಗರಿಸು ; ನಡೆಯು ಕುಂಠಿತವಾಗು : ಕಿಱು ವೇಂಟೆಯ ನಾಯ್ಗಳಿಂದ [ಮು]ಟ್ಟುಪಟ್ಟ ಪೆಣ್ಗೊಲಸಂತೆ ಭಯಮನೆಡ ಗಲಿಸಿ ಬೆಳ್ಳೊಟವೋಡಿ ಜಪಂಗಟ್ಟು ಕಾಲ್ ಪೆಡಂಗಲಿಸೆ ಬೀಱುತ್ತು ಪೋಱುತ್ತುಮೆಂತಾನುಮೆಯ್ದಿ (ಶಾಂತಿಪು. ೭-೯೧ ವ). 'ಎಡಗಲಿಸು' ಪರಾ. [ಪೆಡ (<ಪೆಱಗು) + ಅಲಸು$_1$]

**ಪೆಡಂಗಾಲ್**, ಪೆಡಗಾಲ್ (ನಾ). ೧. ಪಾದದ ಹಿಂಭಾಗ ; ಹಿಂಗಾಲು. ೨. ಚತುಷ್ಪಾದಿಗಳಿಗೆ ಇರುವ ಹಿಂಭಾಗದ ಕಾಲು : ಪೆಡಂ ಗಾಲೊಳಡಗಿದ ಬಾಲಮುಂ ಬಟ್ಟಿತ್ತಾದ ಬಿರಿಯುಂ . . . ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪುಲ್ಲೆಯಂದಿಯು ಕಂಡು (ಆದಿಪು. ೬-೦೬ ವ).

**ಪೆಡಗಾಲ್**: ೧. ಪೆಡಗಾಲ್, ಪೆಡಗಯ್ (ಶಬ್ದಾನು. ೬೬೯ ಕೃಯೋ).

[ಪೆಡ (<ಪೆಱಗು) + ಕಾಲ್$_1$]

**ಪೆಡಂಗೆಯ್**, ಪೆಡಂಗಯ್, ಪೆಡಗಯ್, ಪೆಡಗೆಯ್, ಪೆಡಗೈ, ಹೆಡ ಗಯ್, ಹೆಡಗೈ (ನಾ). ಕೈಯ ಹಿಂಭಾಗ; ಹಿಂಗೈ : ಆತನುಂ ಪೋಗಿಮು ಪರಾಜಿತನೊಡನೆ ಮಹಾಯುದ್ಧಂಗೆಯ್ದು ಗೆಲ್ದು ಪೆಡಂಗೆಯ್ಯುಡಿದು ಕಟ್ಟಿ (ಶಶ್ಯಾರಾ. ೫೦-೨೫) ; ಅಂತೊರ್ವನಂ ಪೆಡಂಗೆಯ್ಯುಡಿಯುಟ್ಟಿ ಪೊಱಲ ಜನಂಗಳೆಲ್ಲಂ ನೆರೆದು ನುಡಿಯುತ್ತುಂ (ಸುಕುಮಾ. ೬-೫೩ ವ).

**ಪೆಡಂಗಯ್** : ಗಂಡನುಮಂ ಪೆಂಡತಿಯನೊಡಗೂಡಿ ಇರ್ವರುಮಂ ಪೆಡಂ ಗಯ್ಯುಡಿಯ ಕಟ್ಟಿಕೊಂಡು ಪೋಪವರಂ ಕಂಡು (ಪಶ್ಯಾರಾ. ೨೦-೫೫) ; ಪೆಡಮಾದೇಶಕ್ಕೆ—ಪೆಡಂಗಯ್, ಪೆಡಂದಲೆ (ಶಮದ. ೦೬೩ ಕೃಯೋ).

**ಪೆಡಗಯ್** : ತಳಾಱರ್ ಪರಿತಂದು ಪದನಂ ಪಿಡಿದು ಪೆಡಗಯ್ಯಂ ಕಟ್ಟಿ ಧರ್ಮಾಧಿಕರಣರಲ್ಲಿಗುಯ್ದು (ಪಂಕಶಾ. ೦೯೨-೩), ಅಬಂದಃವಿಗೆ—ಪೆಡಗಯ್, ಪೆಡದಲೆ (ಶಮದ. ೧೬೩ ಕೃಯೋ) ; ಪೆಡಗಯ್ಯಂ ಕಟ್ಟಿಸಿ . . . ನಡೆಯಿಸಿದನು

(ಶಬ್ದಮಂ. ೩೬-೬). **ಪೆಡಗೆಯ್** : ಪೆಡಗೆಯ್ಯಂ ಪಿಡಿದೀಟ್ಟು ಕಟ್ಟಿ . . . ಕರಸಿಮೆಂದಂ (ಧರ್ಮ. ೦೨-೪೫). **ಪೆಡಗೈ** : ಆ ಪಾರ್ವನಂ ಪಿಡಿದು ಪೆಡಗೈಯಂ ಕಟ್ಟಿ ತಂದೊಪ್ಪಿಸುವುದುಂ (ಶಂಕರಂ. ೦೦೨-೦೬) ; ಮೋಹಾಸುರನ ಪೆಡಗೈಯನು ಕಟ್ಟಿ . . . ಕೆಡಹಿದರು (ಪ್ರಭು. ೨೩-೨೫೭) : ವ್ಯಾಡನೆಲ್ಲರುಂ ಕರಿಸಿ ಪೆಡೆ[ದ]ಗ್ಗೈಗಳಂ ಬಿಡಿಸೆ ಸ್ತುತಿಸಿದರ್ ಭಕ್ತಿಯಿಂದ (ಕಂಕು. ೩೬-೧೪). **ಹೆಡಗೆಯ್** : ಮತ್ತೊಂದು ಬಾಣದ ಬಿಡರಾಗಿ ಪದ್ಮನಾಭನ ಹೆಡೆ[ದ]ಗೆಯ್ಯ ಕಟ್ಟಿತ್ತು (ಶರ್ಕರ. ೩೭-೦೯೯) ; ಕಟ್ಟು ಹೆಡಗಯ್ಯನಂಬುಜದ ಹೊಸನೂಲಿಂದೆ (ಶಂಕರ. ೦೫-೯೩) ; ಹೆಡಗಯ್ಯ ಬಿಗಿದ ನೇಣಂ ಕೊಯ್ದು ಬಿಸುಟು (ಹರಿಶ. ೦೩-೦೨). **ಹೆಡಗೈ** : ನೀನಿದಮಾಖ ಹೆಡಗೈಯ ಬಿಡು (ಶಬ್ದಾ. ೨೦-೪) ; ಹೆಡಗೈಯ ಬಿಗಿದು ಕಟ್ಟಿದ ಕಳ್ಳಗಾಲಟ್ಟು ಸದಲಿದಪ್ಪಕೆ ಸುಖವಹುದು (ಶರ. ೧೪-೯೩) ; ಒರ್ವ ಕಳ್ಳನ ಪಿಡಿದು ಹೆಡಗೈಯು ಕಟ್ಟಿ ಕೊಂಡೊಯ್ಯುತಿರಲು (ಗುರು. ೭-೯೦).

[ಪೆಡ(<ಪೆಱಗು) + ಕೆಯ್₂]

**ಪೆಡಂಗೈಸು** (ಕ್ರಿ). ಹಿಮ್ಮುಖವಾಗಿ ಮಾಡು : ಮುಳಿಸಿಂದಂ ಭೂತವೃಂದಂ ಕೊಳುಗುಳದೆಡೆಯೊಳ್ ಸಿಲ್ಕಿದಸ್ವಪ್ನರಂ . . . ತತ್ಕೇಶದಿಂದಂ ಬಿಗಿದಿಗಿದುರದಾರ್ದುಂ ಪೆಡಂಗೈಸಿ ನಿಂತಾಗಳೆ ಕಟ್ಟುತ್ತುಂ (ಶೀಲ. ೦೨-೬೪).

[ಪೆಡ (< ಪೆಱಗು) + ಕೈಸು (< ಕೆಯ್ಸು)]

**ಪೆಡಂದಲೆ**, ಪೆಡತಲೆ, ಪೆಡದಲೆ, ಹೆಡತಲೆ, ಹೆಡದಲೆ (ನಾ). ೧. ತಲೆಯ ಹಿಂಭಾಗ; ಹಿಂದಲೆ : ಪೆಡಮಾದೇಶಕ್ಕೆ—ಪೆಡಂಗಯ್, ಪೆಡಂದಲೆ (ಶಬ್ದ. ೦೭೩ ವೃ.ಯೋ). **ಪೆಡತಲೆ** : ೧. ಪಡಿಯಬಿನಿಂದಮೆಟಿಯಿಸಿ ಪೆಡತಲೆಯುಂ ಪಿಡಿದು ನೂಂಕುತ್ತಮುರದಮನೆಯುಂದು ಪೊಱಮಡಿಸಿ (ವಡ್ಡಾ. ೦೫೭-೨); ನುಡಿಯ ನುಡಿಯ ನಾಲಗೆಯಂ ಪಿಡಿದು ಪೆಡತಲೆಯಿಂದುರ್ಚುವರಂ (ಆದಿಪು. ೫-೯೫ ವ); ನೀವಿತ್ರಂ ಬರಲಾಗದೆಂದು ಪೆಡತಲೆಯುಂ ಪಿಡಿದು ನೂಂಕಿ (ಪುಣ್ಯಾ. ೯-೫ ವ): ಆಡುಗೋಪದಿಂದ ತನ್ನಯ ಪೆಡತಲೆಯುಂ ಪೊಡೆದು ಕಡಿವೆನೆಂದೆನುತಿರ್ದ ಕೊಡಲಿಯ ಕೈಯಂ ಪಿಡಿದಂ ವೃಡಂ (ಪ್ರಭು. ೨೨-೨೯). ೨. ಕತ್ತಿನ ಹಿಂಭಾಗ; ಹೆಡಕು; ಹೆಗ್ಗತ್ತು : ಸತಿಗೆ ಭಂಗಮಂ ಮಾಡಿದನಂ . . . ಪೆಡತಲೆಯಂ ಮೆಟ್ಟಿ ಕಿಟ್ಟುಕೊಳ್ವೆಂ ತಲೆಯಂ (ಶಂಖ. ೯-೯೯). **ಪೆಡದಲೆ** : ೧. ಪೆಡದಲೆಯ ಹಾವು ಸೋಂಕಿಲ ಕಿಡಿ ನಣ್ಪಿನ ವ್ಯಾತ್ಯ (ಜಗ. ೫-೬೦); ಅಬಿಂದುವಿಗೆ ಪೆಡಗಯ್, ಪೆಡದಲೆ (ಶಬ್ದ. ೦೭೩ ವೃ.ಯೋ). ೨. ಚರನಂ ಪೆಡದಲೆಯಂ ಪಿಡಿದು ನೂಂಕಿಸಿದನವನೀಶಂ (ಧರ್ಮ. ೯-೭೦೯). ೩. ಹಿಂಭಾಗಕ್ಕೆ ತಿರುಗಿಕೊಂಡಿರುವ ತಲೆ; ಹಿಮ್ಮುಖವಾಗಿರುವ ತಲೆ : ಎಮ್ಮೆಂತಲ್ಲ ಪರ ರೂಪು . . . ಕೆಲರ್ಗೆ ಪೆಡದಲೆ ; ಕೆಲರ್ಗೆ ಬಿಡುದಲೆ (ಅಮ್ಮ. ೯೪-೪). **ಹೆಡತಲೆ** : ೧. ಹೆಡತಲೆಯ ಮಾತ ಬಲ್ಲರೆ ಪ್ರಸಾದಿ (ಸರ್ವ. ೦೭೦-೦೦೩); ಹೆಡತಲೆಗೆ ಮೋಹಿ ಕಯ್ಯಿಕ್ಕಿ ಕಂಧರ ಹಱಿಯೆ ಹೊಡೆಯಲನುವಾದಂ (ಜಕಣ. ೦೩-೦೨); ಸರಸಿಜಾಸನನಂದು ನೊಸಲಲಿ ಬರೆದ ಲಿಪಿ ಹೆಡತಲೆಗೆ ಹೋಹುದೆ (ಚಿಕ್ಕು. ೯೬-೦೩); ಹೆಡತಲೆಯು ತುಱಿಸುವರೆ ಹಾವಿನ ಹೆಡೆಯನಕಟಾ (ಶಬ್ದಾ. ೦೪-೩೭); ಮುನಿವನುತ್ತರದಲಗು ಬೆನ್ನಲಿ ಮೂಡಿದುದು ಹೆಡತಲೆಗೆ ಸಾರ್ದುದು (ಕೃಷ್ಣ. ೦-೯-೨೫). ೪. ಹಿಂಭಾಗ; ಹಿಂದುಗಡೆ; ಹಿಂಬದಿ : ಅರ್ತಿಯಾಗಿದೆ ಬದುಕು ಸಾಯ ಲಾಜಿನ ಎನಲು ವ್ಯಾತ್ಯ ಹೆಡತಲೆಯಲ್ಲಿ ನಗುತಿರ್ದಳಯ್ಯ (ಶೂನ್ಯ. ೨-೬೦-೪); ಮೊಗಲರು ಹೆಡತಲೆಯ ಗಂಡವನ್ನು ಮರೆತು ಮನೆಗಳನ್ನು ಸೂರೆಗೊಳ್ಳುವುದಕ್ಕೆ ಹೊರಟರು (ಚಿಕ್ಕು. ೬೫). **ಹೆಡದಲೆ** : ೧. ಶಬರ ಸಂಕುಲದ ಸೀಳಿ ಹೆಡದಲೆಯಿಂದಲುಗಿಪೆನು ನಾಲಗೆಯನು (ಕುವಂಶ. ೬-೭).

[ಪೆಡ (< ಪೆಱಗು) + ತಲೆ]

**ಪೆಡಂಬಾಯ್** (ಕ್ರಿ). ಹಿಂದಕ್ಕೆ ನೆಗೆ,—ಹಾರು,—ಜಿಗಿ : ಮತ್ತಮವಱೊಳಗೆಂದು ಜಾತಿಜಾಯಿಲು ಪೋಗುತೆ ನಿಂದು ಮುಳಿದಟ್ಟಿ ತಿರುಗಿ ನೋಡುತ್ತೆ . . . ಪೆಡಂಬಾಯ್ವಲೆಲಿಂ ಬಳಸುತ್ತಿರೆ (ಗಿರಿ. ೦—೦೦೯).

[ಪೆಡ(<ಪೆಱಗು)+ಪಾಯ್₂]

**ಪೆಡಂಭೂತ** (ನಾ). ೧. ಭಯಂಕರವಾದ ದೊಡ್ಡ ಭೂತ : ಪೆಡಂಭೂತಗಳು ಕುಣಿಯುವುವು,—ತೆರೆಗಳ ಹೆಡೆಗಳ ಮೇಲೆ (ಕಂಕ. ೨-೦೪); ಸ್ಕೂಲ್‌ನಲ್ಲಿ ಪ್ರತಿಯೊಬ್ಬರನ್ನೂ ಪರೀಕ್ಷೆಯ ಪೆಡಂಭೂತ ಹಿಡಿದುಕೊಂಡು ಬಿಟ್ಟಿತ್ತು (ಸ್ವಾತಂತ್ರ್ಯ. ೫೪). ೨. ತುಂಬ ದೊಡ್ಡದು: ಅಲ್ಪವನ್ನು ಪೆಡಂಭೂತವನ್ನಾಗಿ ಮಾಡಿದಿರಿ (ಕುರುಕು. ೦೦೯-೬೧೯). ೩. ಪ್ರಾಚೀನ ಕಾಲದಲ್ಲಿ ಇತ್ತೆಂದು ನಂಬಲಾದ ಬೃಹದಾಕಾರದ ಒಂದು ಪ್ರಾಣಿ. [←ತೆಲು. ಪೆನ್ಭೂತ. ಈ ಪೆಡ<ಪೆಱಗು ಅಥವಾ ಪೆಡ<ಪಿರಿದು—ಹೀಗೆಯೂ ವ್ಯುತ್ಪತ್ತಿಗೊಂಡಿರುವುದು ಸಾಧ್ಯ]

**ಪೆಡಂಮಗುಳ್** 'ಪೆಡಂಮಗುಱ್' ನೋ.

**ಪೆಡಂಮಗುಳಿಸು** (ಕ್ರಿ). ಹಿಂದಕ್ಕೆ ಬರುವಂತೆ ಮಾಡು: ಹಿಂದಿರುಗಿಸು: ತೀರ್ದಯ್ಯನುಸಿರನೆಂತುಂ ಪೆಡಂಮಗುಳಿಸುವುದಸದಳಂ (ಶ್ರೀಪ. ೦೦೦-೩೬).

[ಪೆಡಂಮಗುಳ್ (<ಪೆಡಂಮಗುಱ್)+—ಇಸು₃]

**ಪೆಡಂಮಗುಱ್**, ಪೆಡಂಮಗುಳ್, ಪೆಡಮಗುಱ್ (ಕ್ರಿ). ೧. ಹಿಂದಕ್ಕೆ ಚಲಿಸು,—ಹೋಗು : ನೆರೆದರಸುಮಕ್ಕಳೆಲ್ಲರಾ ಬಲ್ಲಂ ಕಂಡು ಬಲ್ಲರಂ ಪೊಡೆದಂತೆ ಪೆಡಂಮಗುಱೆ (ಶಂಖ. ೫-೬೨ ವ); ಪಟಯಿಗೆ ದಾಂಗೆ ಪೆಡಂಮಗುಱೆ ಸೂತರೆಗ ತ್ತಿರೆ ವಾಹಂಗಳತಿಜವದೆ ಪರಿಯ ರಥಂಗಳ್ ಪರಿದುವು (ಜಗ. ೬-೬೨): ರಣರಭಸೋತ್ಕಟಂ ಧರೆ ಪೆಡಂಮಗುಳ್ವಂತೆ (ಕಂಕು. ೦೦-೬೯). ೨. ಹಿಂದಕ್ಕೆ ತಿರುಗಿ ಆಕ್ರಮಿಸು,—ಎದುರಿಸು : ಆಗಳಾ ಕಳಕಳಕ್ಕೆ ಮುನ್ನೀರೆ ಮೇರೆದಪ್ಪಿದಂತೆ ಬೆಂದಗುಳ್ದು ಬರ್ಪ ಮಾರ್ವಡೆಗೆ ಕಡುಗಾಲದ ಕೃತಾಂತನಂತೆ ಪೆಡಂಮಗುಳ್ದು (ಶಂಖ. ೬-೨೯ ವ). ೩. ಅಡಿಮೇಲಾಗು: ಬೋರಲಾಗು: ನೆಲಂ ಪೆಡಂಮಗುಳ್ದು ಕವಿದಿಕ್ಕಿದಂತೆ ತೊಟ್ಟನೆ ಪುಟ್ಟಿದತಿಭಯದಿಂ ವಿಭ್ರಾಂತವನಸರಾಗಿ . . . ಮೂಡಲಿಸುತ್ತುಂ (ಶಬ್ದ. ೦೦-೯೨ ವ). ೪. (ಅಲಂ) ಕುಸಿ; ಕುಗ್ಗು : ಉರಗೇಂದ್ರಂ ಪೆಡೆಗಳ್ ಪೆಡಂಮಗುಳ್ವಿನಂ ಪೊತ್ತಿರ್ದ ವಿಶ್ವಂಭರಾಧರಮಂ ತನ್ನ ಭುಜಾಗ್ರದೊಳ್ಪಿಡಿದು (ಬಲ್ಲು. ೬-೦೫). **ಪೆಡಂಮಗುಳ್** : ೧. ಪೋದಿದ ತಾಳಪಟ್ಟದೊಳ್ಪಂದ ಪೆಣ ಪೆಡಂಮಗುಳೆ ಕಣ್ಗೆಸಗಂ ಜವ ನೇಱಿದೊಂದು ಜಕ್ಕಂದೊಳದಂತೆ ಸೇವುಣಧರಿತ್ರನ ವೀರವಿಳಾಸಂ (ಎಪಿ. VI. ೩೩೯. ೩೫-೬೬; ೩೨೦೦). **ಪೆಡಮಗುಱ್** : ೧. "ಪೆಡಮಗುಱ್ (ಪೆಡಂಮಗುಱ್)—ಪರಾಙ್ಮುಖೀಪೇ (ಹಿಂದಿರುಗು) " (ಶಬ್ದ).

[ಪೆಡ (<ಪೆಱಗು) +ಮಗುಱ್]

**ಪೆಡಂಮೆಟ್ಟು₁**, ಪೆಡಮೆಟ್ಟು₁ (ಕ್ರಿ). ಹಿಂದಕ್ಕೆ ಸರಿ; ಹಿಮ್ಮೆಟ್ಟು : "ಅಕ್ಕುಳಿಸಿತೆಂದುಂ . . . ಪೆಡಂಮೆಟ್ಟಿತೆಂದುಂ . . . ಪಾರಗೆಯ್ಯೆಂದುಂ— ಈ ೧೩ ಅಪಸರಣಕ್ಕೆ ಪೆಸರ್" (ಶಬ್ದ. ೬೨-೬೦೪); ಮುಳಿಸಿ ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಱ ಕಿರ್ಗುಟ್ಟುತೆ ಮುಳಿದಟ್ಟಿ ಪೆಡಂಮೆ[ಟ್ಟಂ.ಮು]ಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ (ಗಿರಿ. ೦-೦೦೨); ಚಂದ್ರಮಣಿಕುಟ್ಟಿಮಂಗಳಂ ತಿಳಿಗೊಳಂಗಳೆಂದಡಿಯಿಡಲಂಜಿ ಪೆಡಂಮೆಟ್ಟುವ ಕಿಱುಮಂದಿರಂ (ಶಬ್ದ. ೨-೦೩೬ ವ). **ಪೆಡಮೆಟ್ಟು₁** : ಪೆಡಮೆಟ್ಟದನಾಂಧ್ರಮಗಧಂ ಮಱಿಗಡೆಗೆ ಜಗುಳ್ದಂ (ಜಗು. ೭-೪): ಉರಿಯನುಗುಳುವ ಫಣೆಯ ಗರಳವನು ಕಾಣಲ್ಕೆ ಗರುಡ ಶಾನಾದಡಂ ಪೆಡಮೆಟ್ಟುವಂ (ಜ್ಞಾನ. ೪-೦೦೦); ಪೆಡಮೆಟ್ಟದೊಂದಡಿಯನಾದೊಡಂ ರಣದಲ್ಲಿ ಹೊಡೆದಾಡುವುದು (ಕಂಕ. ೨-೩೯).

[ಪೆಡ (<ಪೆಱಗು) +ಮೆಟ್ಟು₁]

**ಪೆಡಂಮೆಟ್ಟು₂**, ಪೆಡಮೆಟ್ಟು₂, ಹೆಡಮೆಟ್ಟು (ನಾ). ಹಿಂದುಗಡೆ; ಹಿಂಭಾಗ; ಹಿಂಬದಿ : "ಪೆಱತು ಪಿಂಗಡೆ ಪೆಡಂಮೆಟ್ಟುಱ್ ಪೆಱಗುಂ

ಹಿಂತೆ ಪಿಂತಿಲಿನ ಹಿಂದೆನಿಕಂ" (ಶಬ್ದಮ. ೦೯೬). ಪೆಡಮೆಟ್ಟು₂: "ಪೆಡಮೆಟ್ಟು, ಪೆಱಗು, ಪೆಱತು, ಪಿಂತಿಲ್ — ಈ ೪ ಪಿಂಗಡೆಗೆ ಪೆಸರ್" (ಶಕಾ. ೬೩-೪೩೩): ಆ ಪದಾತಿಬಲದ ಪೆಡಮೆಟ್ಟನೊಳ್ ಪೂಡಿದ ಕುದುರೆಯು ನೀಡಿ ನೆಗೆದ ಪಳವಿಗೆಯು (ಗಂಪ. ೬-೩೩ ಪ). ಹೆಡಮೆಟ್ಟು : ತುರಗದ ಹೆಡೆ[ಡ] ಮೆಟ್ಟಿನ ಗಜಘಟೆಯು ಸಂದಣಿಸಿದ ರಥತತಿ ಮೆಱೆಯಲ್ (ಪಂಪಭಾ. ೨-೩೩): ಹೆಡಮೆಟ್ಟನೊಳಲಗಂ ಕೊಂಡೆಯ್ವಂದೊಡನೆ ಬೆರಸಿ ಕಲಕಿಲಬರ್ಬರೀರರ ಕಡಿಖಂಡದ ಮಾಡಿದಂ (ಶಾಂತಿಪು. ೬-೩೦). [<ಪೆಡಮೆಟ್ಟು₁]

**ಪೆಡಕಟ್ಟು** 'ಪೆಡಗಟ್ಟು' ನೋ.

**ಪೆಡಕು. ಹೆಡಕು** (ನಾ). ೧. ಕತ್ತಿನ ಹಿಂಭಾಗ : ಹೆಗ್ಗತ್ತು : ಕಡಲಂ ದಾಟಿದ ಬಲುಧೀರನೆ . . . ಪೆಡಕಿಲಾಸನವಿತ್ತ ದಾತಗೆ (ಕೃಷ್ಣ. ೩-೩). **ಹೆಡಕು** : ೧. "ಘಾಟಾ, ಅವಟು, ಕೃಕಾಟಿಕಾ — ಈ ೩ ಹೆಡಕು" (ಹಲಾಯು. ೯೭-೩೭೦) ; ಘನರಾಜನೆಂಬನ ಹೆಡಕು ಮಣಿದುದು (ಸಂಕಶ. ೨೦-೬೯) : ಹಾಲಿನ ಸವಿಯಂ ನೋಡುವ ಬಡಿಗೆಗಾಣದೆ ಹೆಡಕ ಮೋಹಿಪ ರಾಮಬಾಣವಿರೆ (ಶಾಕಾ. ೦೯-೯೯) : ತುಡುಗುಗುಣಗಳು...ಹವಿಗೊಂಬಮರರ ನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೊರಶಾ. ೦-೧೦-೪). ೨. (ಕೋಟೆ ಮುಂತಾದುವುಗಳ ತುದಿಯ) ಹಿಂಭಾಗ,-ಹಿಂಬದಿ : ಕೇಳು ಬಳಿಕಕ್ಷೀಣಬಲಂ . . . ಘುಡುಘುಡಿಪ ಕೋಪದಲಿ ದುರ್ಗದ ಹೆಡಕು ಪರಿಯಂತೇಱ ಪುರ ಗಡಬಡಿಸಿ ಬೆಚ್ಚಿತು (ಕೊರಶಾ. ೪-೬-೨೦). [ ದೇ.॥ ತಮಿ. ಪಿಟರ್ಹು : ತುಳು. ಪೆದಂಗ್]

**ಪೆಡಕೆಡವು** (ಕ್ರಿ). ಹಿಂದಕ್ಕೆ ತಳ್ಳು : ಹಿಮ್ಮುಖವಾಗಿ ಬೀಳಿಸು : ನಡೆಸಾರಂ ನೆಲವಳಗೆ ಪೆಡಕೆಡವುವ ಡೆಗ್ಗ (ಕೃಶಂ. ೩-೦೦).

[ ಪೆಡ (< ಪೆಱಗು) + ಕೆಡವು ]

**ಪೆಡಗಟ್ಟು. ಪೆಡಕಟ್ಟು. ಹೆಡಕಟ್ಟು₂. ಹೆಡಗಟ್ಟು** (ನಾ). (ಶಿಕ್ಷೆಗಾಗಿ) ಕೈಗಳನ್ನು ಬೆನ್ನಿನ ಹಿಂದೆ ಸೇರಿಸಿ ಕಟ್ಟುವ ಕಟ್ಟು; ಹೆಡಮುರಿಗೆ : ಹಿಂಗಟ್ಟು : ಶೇಷು . . . ಅಲಘುಬಲೇಶಯುವಾಶದಿನೋವದೆ ಬಲ ಯುತ ರವಿಕೀರ್ತಿಯ ತೋಳಂ ಪೆಡಗಟ್ಟಂ ಕಟ್ಟಿದನು (ಆದಿಪು. ೬-೯೬); ಕಟ್ಟು ನುಡಿದ ಪೊಳಲಧಿಕಾರಿಯ ಪೆಡಗಟ್ಟನಿಂತಂದೊಪ್ಪಿಸಿದರು (ಕುಮಾರಾಂ. ೦೦-೩೨). ಪೆಡಕಟ್ಟು : ಪೆಡಕಟ್ಟ ಕಟ್ಟಿ ಮಂಡೆಯ ಕೆದಱಿಕೊಂಡು ಕಡಿವೆವು ತಲೆಯನೆಂದೆನುತ (ಕೃಶಂ. ೨-೦೯೭). **ಹೆಡಕಟ್ಟು₂** : ಸಂಕೋಲೆ ಹೆಡಕಟ್ಟು ಹಾಕಿದ್ದಾಗ ಕಂಡರೆ ಆರೋಗ್ಯ . . . ಬಲಿತ ವೈರುವುಳ್ಳ ಭೂಮಿಯಂ ಕಂಡರೆ ಐಶ್ವರ್ಯಾವು (ಸ್ವಗಂ. ೩೯೦-೦೯); ಗಂಗಾತೀರದಲ್ಲಿ ನಿದ್ರೆಹೋಗುವ ಭೀಮನನ್ನು ಹೆಡಕಟ್ಟಾಕಿ ಗಂಗೆಯ ಮಧ್ಯದಲ್ಲೆತ್ತಿ ಹಾಕಲು (ಕೃಷ್ಣ. ೯೬). **ಹೆಡಗಟ್ಟು** : ಪುಷ್ಪೋದ್ಯಮ ಹೆಡಗಟ್ಟಿಗೀಡಾದ (ಕೋಲಕು. ೦೯೬-೬೨೯) : ಕರಮ ಹೆಡ[ಪಾಠಾಂ. ಪೆಡ] ಗಟ್ಟಿನಿಂ ಕೈಸಂಕಲೆಗಳು ಮಿಗೆ . . . ನಡೆಗುಱಗಳು ಮಾಡಿ (ಶಾಸಂಕ. ೪-೦೯೦); ರಾಯ ಕೋಪಾಟೋಪನಾಗಿ ತನ್ನ ಶಕ್ತಿಯಿಂದ ಅವನ ಮಾಯೆಯ ಗೆದ್ದು . . . ಹೆಡಗಟ್ಟ ಕಟ್ಟಿ (ಅಕ್ಕಲ. ೬೯).

[ ಪೆಡ ( < ಪೆಱಗು ) + ಕಟ್ಟು₂ ]

**ಪೆಡಗಡೆ** (ನಾ). ಹಿಂಬದಿ : ಹಿಂಭಾಗ : ಪೆಡಗಡೆ ಸಾರ್ಚಿದೊಂದು ಕರ ದಿಂದೆಳೆದೋರೆದುಱಂಬಂ (ಪಂಪ. ೬-೨೦೨). [ ಪೆಡ < ಪೆಱಗು) + ಕಡೆ₂ ]

**ಪೆಡಗಯ್** 'ಪೆಡಂಗೆಯ್' ನೋ.

**ಪೆಡಗಾಲ್** 'ಪೆಡಂಗಾಲ್' ನೋ.

**ಪೆಡಗುಡಿ. ಹೆಡಗುಡಿ** (ನಾ). ೧. =ಪೆಡಗಟ್ಟು : ಒಟ್ಟಿಯೊಳೊರ್ವ ಪ್ರಾಯದವನಂ ಪೆಡಗುಡಿಯಂ ಕಟ್ಟಿ ಕೊಲಲ್ವೊಯ್ಗುತ್ತಿರೆ (ಧರ್ಮಾಮೃ. ೬-೯ ಪ) ; ಕಮಲಜಮುಖ್ಯರಂ ವೀರಭದ್ರನತಿಕೋಪದಿಂ ಪೆಡಗುಡಿಯ ಕಟ್ಟಿ ಭೂತಾಳಿಗಳ ವಶಕಿತ್ತನು (ಕಬಿಕ. ೩೦ ೩೦೩೩). **ಹೆಡಗುಡಿ** : ೧. ದೃಢವಿರಬೇಕು ಲಿಂಗಾರ್ಚನೆಯಲ್ಲಿ ದೃಢವಿಲ್ಲದವನ ಹೆಡಗುಡಿಯ ಕಟ್ಟಿ ಎಡಹಿ ಬಿಡುವ ಭವದಡಿಗೆ (ಸಿದ್ಧಶ.ವ. ೦೬೩-೩೦೩) ; ಹೊಡೆಯಲೆಂದತಿ ವೀರ್ಯನನುಗೆಯ್ಯಲು ಹಡೆಯದಾಗಳೆ . . . ಹೊಡೆಮ ಹೆಡಗುಡಿಯ ಕಟ್ಟಿದನಾತನಂ (ಶಬರಶಂ. ೬-೩೩) ; ದೈತ್ಯನ ಜಡಿದು ವಾರಣಪಾಶದಲಿ ಹೆಡಗುಡಿಯ ಬಿಗಿದನು (ಶಿವಾಗ. ೪-೦೯-೨೮). ೨. ಹಿಂಭಾಗ : ಹಿಂಬದಿ : ನಡಿಯದಟು ಮಹಾನಗ್ರಹದ ಹೆಡಗುಡಿಯಲಿದ್ದುದು ರಾಯ ಕಾಲವು (ಶುಕ್ಕಾಶ. ೬-೯೩). [ ಪೆಡ (<ಪೆಱಗು) + ಕುಡಿ₂ ? ]

**ಪೆಡಗುಡಿಗಟ್ಟು. ಹೆಡಗುಡಿಗಟ್ಟು** (ಕ್ರಿ). ಕೈಗಳನ್ನು ಹಿಮ್ಮುಖವಾಗಿ ಕಟ್ಟು : ಹೆಡಮುರಿಗೆ ಹಾಕು : ಪಿಡಿದೆಬ್ಬಂದು ಮುಂದಲೆಯನಾಗ್ರಹದಿಂ ಪಿಡಿದೊತ್ತಿ ಹಗ್ಗದಿಂ ಪೆಡಗುಡಿಗಟ್ಟಿ (ಧರ್ಮಾಮೃ. ೩-೩೦) : ಅಂತ್ಯಜನ ನನುನಯದೆ ಪಿಡಿದು ಪೆಡಗುಡಿಗಟ್ಟಿ ತನ್ನ (ಅಕಾಶ. ೦೦ ೬-೨೩) : ರಥಾಶ್ವಮಂ ಕೊಲ್ಲಿ ಪೆಡೆ[ಡ]ಗುಡಿಗಟ್ಟಿ ವಿಧಿಯನಂಬು ಮತ್ತೆ ವೀರ ಭದ್ರಂ ಕರಳುತ್ತೆತಂದನು (ಕಲಕು. ೩೦-೩೨). **ಹೆಡಗುಡಿಗಟ್ಟು** : ನಾ ನಿನ್ನ ಹೆಡಗುಡಿಗಟ್ಟಿ ನಿನ್ನಸುಗಳೆಯುತಿರಲು (ಜಿನಶಂ. ೦೩-೯೬); ದಿಂಡು ಗೆಡೆವಂತೆ ಒಳಗುದ್ದು ಹೊಗುದ್ದಿಕ್ಕಿ ದಂಡಿಸಿ ಬಳಿಕ ಬಲುಹೂಸಿ ಹೆಡ ಗುಡಿಗಟ್ಟಿ[ ಪಾಠಾಂ. ಪೆಡಗ್ಯಗಟ್ಟಿ, ಹೆಡಗ್ಯೆಕಟ್ಟಿ ]ಕೊಂಡು ಬಪಾರ್ಗಳು (ಹಮ್ಮೀ. ೪-೦೯). [ಪೆಡಗುಡಿ + ಕಟ್ಟು₁]

**ಪೆಡಗೆ** 'ಪೆಟ್ಟಿಗೆ' ನೋ.

**ಪೆಡಗೆಪಾಗು** (ನಾ). ಬುಟ್ಟಿಯಾಕಾರದಲ್ಲಿರುವ ರುಮಾಲು.- ಮುಂಡಾಸು : ಪೆಡಗೆಪಾಗು ದಡಿದೋತ್ರದ . . . ಹಂಡಹುಂಡ ಪಟ್ಟಗರೆಸೆದರ್ (ಪಾವ್ಯಶ. ೬-೦೯). [ಪೆಡಗೆ ( < ಪೆಟ್ಟಿಗೆ) + ಪಾಗು₁]

**ಪೆಡಗೆಯ್** 'ಪೆಡಂಗೆಯ್' ನೋ.

**ಪೆಡಗೆಯ್ಗಟ್ಟು** (ನಾ). = ಪೆಡಗಟ್ಟು : ನಿನ್ನ ಪೆಡಗೆಯ್ಗ[ಟ್ಟಿ]ಂ ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ (ಶಂಕರಾ. ೬-೩೩).

[ಪೆಡಗೆಯ್ ( < ಪೆಡಂಗೆಯ್ ) + ಕಟ್ಟು₂]

**ಪೆಡಗ್ಯೆ** 'ಪೆಡಂಗೆಯ್' ನೋ.

**ಪೆಡಗ್ಯೆಗಟ್ಟು** (ಕ್ರಿ). = ಪೆಡಗುಡಿಗಟ್ಟು : ಪೆಂಡಿರೆಲ್ಲಂ ಪರಿಚಾರಕಿಯರಂ ಕೂಡಿಕೊಂಡಜ್ಜಗಾಪಿನಪ್ಪರಂ ಪಿಡಿದುರುಳ್ಚಿ ಚಿನ್ನಸಂಕಲೆಯಿಂ ಪೆಡಗ್ಯೆಗಟ್ಟಿ (ಅರ್ಗಳ. ೩-೨ ಪ); ಪಿಡಿದು ಪನ್ನಗಪಾಶದಿಂ ಪೆಡಗ್ಯೆಗಟ್ಟಿ (ಕಲಬಸಂ. ೦೯-೦೭೭). [ಪೆಡಗ್ಯೆ ( < ಪೆಡಂಗೆಯ್ ) + ಕಟ್ಟು₁]

**ಪೆಡಗೊಳ್** (ಕ್ರಿ). ಕುಗ್ಗು : ಕುಸಿ : ನೆ[ಪಾಠಾಂ. ಪೊ]ಕ್ಕ ಕದಂಪು ಪತ್ತಿ ಪೆ[ಪಾಠಾಂ.ದೆ]ಡೆ[ಡ]ಗೊಂಡ ಕೊರಲ್ . . . ಅಕ್ಕುಟಿಸಿರ್ದ ಪೆರ್ಬಸಿಱ ಗುರ್ವಿಸೆ ಬಂದನದೊರ್ವ ಪಾರ್ವಂ (ಅಲಂತ. ೬-೩೬).

[ಪೆಡ ( < ಪೆಱಗು ) + ಕೊಳ್₁]

**ಪೆಡತಲೆ** 'ಪೆಡಂದಲೆ' ನೋ.

**ಪೆಡದಲೆ** 'ಪೆಡಂದಲೆ' ನೋ.

**ಪೆಡಪೌಜು** (ನಾ). ಯುದ್ಧದಲ್ಲಿ ಹಿಂಭಾಗದಲ್ಲಿ ನಿಲ್ಲುವ ಸೈನ್ಯ : ಹಿಂಚೂಣಿ : ಪೆಡಪೌಜಿನೊಳೊಟ್ಟೈಸಿದ ಮದಮಾತಂಗದ ಬಲ್ಮಿಣಿ ಲೆ.ಱದ ಕದನೋದ್ಧತಮಹಾನುಹರೆನಿಪ್ಪಗ್ಗದ ಮಾಪತಿಗರ್ . . . ಹಾಣಾ ಹಣೆಯಿಂದ ನಿಮಿರ್ಚಿದರು (ಕಮಲಾ. ೬-೩೭).

[ ಪೆಡ (< ಪೆಱಗು)+ಪೌಜು (< ಫೌಜು) ]

**ಪೆಡಮುಗುಟು** 'ಪೆಡಂಮುಗುಟು' ನೋ.

**ಪೆಡಮೆಟ್ಟಿಸು** (ಕ್ರಿ). ಹಿಮ್ಮೆಟ್ಟಿಸು : ಹಿಂಜರಿಯುವಂತೆ ಮಾಡು : ಅಡಕಿಕೆ ನಿಲ್ಲದಾಸೆ ಮನಮಂ ಪೆಡಮೆಟ್ಟಿಪ ಲಜ್ಜೆ (ಶಶಿಪ. ೪-೦೨೩).

[ ಪೆಡಮೆಟ್ಟು₁ ( < ಪೆಡಂಮೆಟ್ಟು₁ ) + — ಇಸು₁ ]

**ಪೆಡಮೆಟ್ಟು₁** 'ಪೆಡಂಮೆಟ್ಟು₁' ನೋ.

**ಪೆಡಮೆಟ್ಟು** 'ಪೆಡಂಮೆಟ್ಟು' ನೋ.

**ಪೆಡಲು** (ನಾ). ಬೈಸಿಕಲ್ಲನ್ನು ನಡೆಸುವವನು ಕಾಲು ಇಡುವುದಕ್ಕೂ ತುಳಿದು ಅದನ್ನು ಮುನ್ನಡೆಸುವುದಕ್ಕೂ ಅಳವಡಿಸಿರುವ ಸಾಧನ : ಈಗ ಕಾಲೊಂದನು ಪೆಡಲಿನ ಮೇಲಿಟ್ಟು...ಸೈಕಲ್ಲಿನಿಂದಿಳಿಯದಂತಿರ್ಪನು ನಿಟ್ಟಿಸುತ್ತಾಕೆ ಬರ್ಪುದನು (ಕಂಕ್ರ್ಯ. ೦೬೯-೯೩). [← ಇಂ. pedal]

**ಪೆಡಸರ** (ನಾ). ಸೊಕ್ಕು ; ಗರ್ವ : ಅಪ್ಪಾಜಿಯವರ ಗೆಳೆಯ ಅಂತ ಅವರದು ಆಸು ಪೆಡಸರ (ಕಳಗ. ೦೬೬). [← ತೆಲು. ಪೆಡಸರ]

**ಪೆಡಸಾರ್** (ಕ್ರಿ). ಹಿಂದಕ್ಕೆ ಹೋಗು ; ಹಿಂಜರಿ : ನರವುವಂ ಬರಿಯುವಂ ಪತ್ತಿ ತೆಗೆದು ಪೆಡಸಾರ್ವ ನರಿಗಳುವಂ (ಕಂಕಣ. ೦೩-೩೬ ಪ); ಪೆಡಸಾರ್ದಂ ನೆರೆವಿಡಿದಂ ಪಡಿಬರಿಸಿದುಬ್ಬೆಯದೋಡಿದಂ ನಿಡು ವಯಣಂ (ಆಕ್ರಿ.ಶಿ. ೬೦-೩). [ ಪೆಡ (<ಪೆಡಂಗು) + ಸಾರ್₁]

**ಪೆಡಸು**, ಪೆಟಸು , ಹೆಡಸು (ನಾ). ೧. (ಲೋಹದ್ದೇತೆ) ಗಡುಸಾಗಿರುವುದು ; ಬಿರುಸಾಗಿರುವುದು : ಪೆಡಸಾದ ಲೋಹವಾದರೂ ಕರಗಿ ಗಟ್ಟಿಯಾಗುವಾಗ ವಿಕಾಸಗೊಳ್ಳುವ ಗುಣವನ್ನು ಪಡೆದಿದೆ (ಕಂಕೋ. ೩. ೦೯೩). ೨. ಭಂಗುರತೆ : ನೀರೆಲ್ಲ ವ್ಯೆಯುಂಡು ಸೂಜಿಗಳ ಪೆಡಸು ಕಡಿಮೆಯಾಗುತ್ತದೆ (ಜುಂಂಅಯು. ೬. ೪-೦೩೮). ೩. ಕಾಠಿಣ್ಯ ; ನಿಷ್ಠುರತೆ ; ಒರಟುತನ : ವುವುತೆಯುನ್ನೀದು ಪೆಡಸಿಂದಿರಲು ಒರ್ವೆಯಿಂತೆಂದಳು (ಕಂಗಾಹ. ೩-೦೦-೦೦) ; ನಿನ್ನದೂ ಬಲು ಪೆಡಸು ! (ಎಳೀ. ೩೮). ೪. ಕಷ್ಟ ; ಎಡರು ; ಬಿಕ್ಕಟ್ಟು : ಪೆಡಸಿನ ಹಾದಿಗೆ ಪೆಟರರ್ ಚಲದಂಕರೊಲ್ಲು ಬೂಡಿಗೆ ಸಲೆ ನಡೆವರ್ (ಬ್ಯಕೂಹು. ೩-೦೪); ದಾರಿ ಬಹಳ ಪೆಡಸು (ಕೀಚಾಳಿ. ೬). **ಪೆಟಸು** : ೫. ಇನ್ನೆಬರಂ ಕೊನೆವರಿದು ನೀಟ್ಟರಿಸಿದ ಬಟ್ಟೆಯ ಬಟ್ಟೆಯಿಸಾಗಳ್ ತನ್ನೊಳ್ ತಡೆದುದೊಂದು ದಾಗುಳ ಪೆಟಸಿನಗವಟ್ಟಾಗಳಿವಿಾ ಕತದೊಳೆ ಬಗೆಟ್ಟಿರ್ವ ರಾಯನೋಲಗಕೊರ್ವ ಹಾಬಾಲಿವುನಿವ ಬಿಜಯಂಗೈದಂ (ಆಪುಕ್ಕ. ೦೦೯-೨೦). ೬. ಕದನ : ಹೋರಾಟ (?) : ''ಪೆಟಸೆಂದು ತೋಟಿಯೋಳ್'' (ಕಣಾಲ. ೬.೯). 'ಪೆಣಸು'₁ ಪರಾ. **ಹೆಡಸು**: ೭. ಬಿಂಕ ; ಗರ್ವ : ತಾವೇ ಅಪ್ಪರೆಯರೆಂದುಕೊಂಡು ಕೆಲವು ಹುಡ್ಗುವರ್‍ಗಳು ಹೆಡಸಿನಿಂದ ತಿರುಗಾಡುತ್ತಾರೆ (ಅಂಜೂ. ೯). ೮. ಸಾಂದ್ರತೆ ; ಸ್ನಿಗ್ಧತೆ : ಇಬ್ಬನಿಗಳು ಹೆಪ್ಪು ಹೆಡಸಿನಲ್ಲಿ ಉಗಿಯೊಲು ತೋರುವ ಉಸಿರಿನ ಸರಣಿ (ದ್ಯಾಕಾಕ್ಕ. ೩-೨) ; ಮೊಸರು-ಅವಲಕ್ಕಿಯ ಹೆಡಸು ಇನ್ನೂ ಕೈಗೆ ಅಂಟಿಕೊಂಡೈತೆ (ಕಅ. ೦೯); ಉಕ್ಕಿದ ಹಾಲಿಗೆ ಹೆಡಸು (ಅಶ್ರೈ. ೦೩೬). ೯. ತಲೆಗೂದಲಿನ ಬುಡದಲ್ಲಿ ಉಂಟಾಗುವ ಒಣಗಿದ ಚರ್ಮದ ಹೊಟ್ಟು ; ಹಗರು : (೬).

**ಪೆಡಸಾಗು** = ೧. ಗಟ್ಟಿಯಾಗು ; ಬಿರುಸಾಗು : ಸೂಜಿಗಳು ಸಿದ್ಧವಾದವೆಂದರೆ . . . ತಣ್ಣೀರೊಳಗೆ ಚಲ್ಲುವನು. ಅವರಿಂದ ಅವು ಪೆಡಸಾಗುವವು (ಜುಂಂಅಯು. ೪-೦೩೯). ೨. ಕಠಿಣವಾಗು; ನಿಷ್ಠುರವಾಗು; ಎಲ್ಲಿಯೂ ಅವರ ಭಾಷೆ ಪೆಡಸಾಗಿಲ್ಲ (ಕಂಜಿ. ೦೦೦). ೩. ಗರುಗಾಗು : ತುಂಡುಗಳು ಚೆನ್ನಾಗಿ ಕಾದು ಪೆಡಸಾದಾಗ . . . ಎಣ್ಣೆ ಬಸಿದು ಹೋಗುವಂತೆ ತೂತುಗಳಿರುವ ಪಾತ್ರೆಯೊಂದರಲ್ಲಿ ಹಾಕಬೇಕು (ಅಚುಗಾ. ೯೦).

[ ದೇ.೩ ತೆಲು. ಪೆಟುಕು, ಪೆಳುಸು ; ತುಳು. ಪೆಡ ]

**ಪೆಡಸುಗಟ್ಟು** (ಕ್ರಿ). ಗಟ್ಟಿಯಾಗು ; ಗಡ್ಡೆಕಟ್ಟು : ವಯಸ್ಸಾದವರಲ್ಲಿ ಮಿದುಳಿನ ತಳದ ನರಗಂಟುಗಳಿಗೆ ರಕ್ತ ಒದಗಿಸುವ ರಕ್ತನಾಳಗಳು ಪೆಡಸುಗಟ್ಟುವುದು (ಕಂಕೋ. ೩. ೨೩೩). [ಪೆಡಸು+ಕಟ್ಟು₁]

**ಪೆಡಸುಗೊಳ್ಳು** (ಕ್ರಿ). ಒರಟಾಗು ; ಬಲಿ : ಪೆಡಸುಗೊಳ್ಳದಿದ್ದ ಎಳೆಯ ಮಣ್ಣಿನ ಮೇಲೆ . . . ಸ್ಥಿರವಾಗಿ ನೆಲಸುವುದು (ಅಳ. ೩೩). [ಪೆಡಸು+ಕೊಳ್ಳು₂ (<ಕೊಳ್₃)]

**ಪೆಡಸುದಾರಿ** (ನಾ). ಅಡ್ಡಿ, ಆತಂಕಗಳಿಂದ ಕೂಡಿರುವ ದಾರಿ ; ಬಿಕ್ಕಟ್ಟಾದ ಮಾರ್ಗ : ಕಷ್ಟನಷ್ಟದ ಪೆಡಸುದಾರಿಯ ಯಾವುದೊಂದನು ಗಣಿಸನು (ಕಜ. ೦೪-೦೯). [ಪೆಡಸು+ದಾರಿ]

Δ**ಪೆಡಳು** 'ಪೆಳಬು₁' ನೋ.

**ಪೆಡಿಗೆ** 'ಪೆಟ್ಟಿಗೆ' ನೋ.

**ಪೆಡೆ**, ಹೆಡೆ₁ (ನಾ). ೧. ಹಾವಿನ ಬಿಚ್ಚಿದ ತಲೆ,—ಫಣೆ : "ಫಣಾತ್ಯಯುಂ ಪೆಡೆಯುಕ್ಕುಂ" (ಶಬ್ದ್ಯಕೋ. ೦೯-೩): ಪೆಡೆ ಪಲವಪ್ಪ ವಾಸುಕಿವುಹೋರಗನಂ ಕಡೆಗಣ್ಣ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಆದ್ಯಪು. ೯೩೦ ಕೂದ್ರಳ) ; ಎರಟಾಸ್ಯಲಿಂಗನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತುಂ ಬಂದೊಡೆ (ಕಣ್ಣ. ೦೦೦-೬೦) ; ಪಡೆಯ ಪೊಚಿಗಗಿದು ಶೇಷಂ ಪೆಡೆಗಳನಾಡುಗುವುದುವೆಳೆ ಬೊದಿಲ್ಲೆನೆ ಬಿಟ್ಟಿತ್ತು (ಕಂಕಣ. ೧೧-೬೦).

**ಹೆಡೆ₂** : ೧. "ಫಣಃ, ಫಣಾ, ಫಟಾ—ಈ ೩ ಹಾವಿನ ಹೆಡೆ" (ಕರಾಯು. ೦೦೩-೯೦): ಹಾವಿನ ಹೆಡೆಗಳ ಕೋಂಡು ಕೆನ್ನೆಯ ತುಟುಸುವಂತೆ (ಜನಕ. ೬೩೦ ಅ) ; ಹೆಡೆಯ ಮಣಿಗಳ ಕಂಡು ಸೂಸಿದ ಕಿಡಿಗಳಹಹಾಯೆನುತ ಶಿರಗಳ ಕೊಡಹಿ ಮಜುಗಿದರುರಗಿಯರು ಮಜುಗೇಗೆ ಮೈಚಾಚಿ (ಕುಮ್ಯಾ. ೦೩-೬೧) ; ಜಡೆಯುಳ್ಳೆ ಹಿರಿಯಾಗೆ ಹೆಡೆಯುಳ್ಳ ಸರ್ಪನಿಗೆ ನಡುಗುತ್ತ ನವಿಸಿ (ಕರ್ಣ್ಣ. ೩೨೩) : ಹಳದಿಯ ಹೆಡೆಯನು ಬಿಚ್ಚೋ ಬೇಗಾ (ಕಶ್ಮ. ೦೨೨). ೨. ಅಗಲವಾದ ತುದಿ : ದೆಂಕಿಯೊಳಗೆ ಸೌಟು ಚಲ್ಲಿದರೆ ಮೊದಲು ಅವರ ಹೆಡೆಯು ಕಾಯ ಎತ್ತದೆ (ಮುಂಂಅಯು. ೦೩-೦೯೯). ೩. ತೆಂಗು, ತಾಳೆ ಮೊದಲಾದುವುಗಳ ಗರಿ; ಸೋಗೆ : ದೊಬ್ಬರ್ಯಗಳ ಹಾಗೆ ನಿಂತ ಹನೆಮರಗಳಿಗೆ ನಿಮ್ಮ 'ಹೆಡೆ' ತೂಗಿಸಬಾರದು ಎನಲು ಅವರಿಗೆ ಹಕ್ಕಿದೆಯೇ ? (ಜುರಕು. ೦).

**ಹೆಡೆಯಾಡಿಸು** = ೧. ಹೆಡೆಯನ್ನು ತೂಗು,—ಅಲ್ಲಾಡಿಸು ; ಎಲೆಬಸಿರಿನಲ್ಲಿ ಹಾವು ಹೆಡೆಯಾಡಿಸುತ್ತಾ ಇತ್ತು (ಕಾ). ೨. ಪ್ರಧಾನವಾಗಿ ಕಂಡು ಬರು ; ಎದ್ದು ಕಾಣು : ಕ್ಷುಲ್ಲಕವಿಷಯ ಹೆಡೆಯಾಡಿಸುತ್ತದೆ. (ಜೂಕ್ಕಿ. ೬೩). **ಹೆಡೆಯಾಡು** = ೧. ಹೆಡೆಯನ್ನು ಆಡಿಸು,—ತೂಗು : ಧರಮನ ತಲೆಯ ಬಳಿಯಲ್ಲಿ ನಾಗಸರ್ಪ ಹೆಡೆಯಾಡುವುದನ್ನು ಕಂಡು ಇವನ ಬಳಿಗೆ ಬಂದರು (ಜಶ್ರ್ಯ. ೩೬). ೨. ಪೊಲೇಳು ; ಆಸ್ಫೋಟಿಸು : ಸಾಮಾಜಿಕದಾಸ್ಯದ ವಿಷಯದಲ್ಲಿ ಅಸಂತೋಷದ ಭಾವನೆ ದೇಶಾದ್ಯಂತ ಹೆಡೆಯಾಡತೊಡಗಿತು (ಕ್ರೀಕೃಕ್ರ. ೦೩೬).

[< ಸಂ. ಸ್ಫಟ]

**ಪೆಡೆಗಟ್ಟು** (ಕ್ರಿ). ಹೆಡೆಯ ಆಕಾರದಲ್ಲಿ ಕಟ್ಟು,—ರಚಿಸು : ಮುಂ ಕೊಂಡು ಮುಡಿ ಮಾಡಿ ಪೆಡೆಗಟ್ಟುವಾ ಕೇಳ್ ನಿನ್ನ ಗಂಡಂಗೆ ಲೇಸೆ ಪೇಳೆಂಬಳಕದಿಂ ಮಿಂದು ರಾಜಿಸಿದಳಾ ಮಾನಿನಿ (ರಾಜಕಂ. ೩-೬೩).

[ಪೆಡೆ + ಕಟ್ಟು₁]

**ಪೆಡೆಗಲ್** (ನಾ). ಹಾವಿನ ಹೆಡೆಯಲ್ಲಿರುವ ಮಣಿ,–ರತ್ನ ; ಫಣಾರತ್ನ : ಪಾವಡಿಗಿಯನ ಕಡೆವಣಿಗಳೆನಿಪ ಪೆಡೆಗಲ್ಗಳೊಳಂ . . . ಕಾಳ್ಗಿರ್ಪ ಕೋಟಲೆಯಂ ಮಾಚಿಸು ನಿನ್ನ ದುಂಡುದೋಳೊಳ್ ನೆಲೆ ನಿಲಿಸಿ ಸೊಗಂ ಬಡೆದುದು (ಕಕಂ. ೦೩೩-೦೩). [ಪೆಡೆ + ಕಲ್₃]

**ಪೆಡೆದಲೆಯ** (ನಾ). ಹೆಡೆಯನ್ನೇ ತಲೆಯಾಗುಳ್ಳವನು ; ಆದಿಶೇಷ : ಪೆಡ[ದೆ]ದಲೆಯನ ಪೆಂಡತಿ ವ್ಯೆಗಣ್ಣನ ಮುಡದಿ . . . ಮುಪ್ಪೊಡವಿಯ ಹೆಣ್ಮಕ್ಕಳ ನಿಕುರುಂಬಂ (ಜಯಾ. ೦೩-೪೦). [ಪೆಡೆ + ತಲೆ₁ + – ಅ₇]

**ಪೆಡೆಮಣಿ** 'ಪೆಡೆವಣಿ' ನೋ.

**ಪೆಡೆಯುಕ್ಕಿ** (ನಾ). ಒಂದು ಬಗೆಯ ಸಸ್ಯ ; ಹಾಲುತೊಟ್ಟಿನ ಗಿಡ : ಪೆಡೆಯುಕ್ಕಿಯ ಬೇರಂ ಕಟ್ಟಿಡುವುದು ಕರ್ಣದೊಳೆ ಪಿಂಗುಗುಂ ಸೂಚೀಜ್ವರಮುಂ (ಕೋಕೋಶ. ೯-೨೩). 'ಅಕ್ಕಿಹೆತೆ' ಪರಾ. [ಪೆಡೆ + ಅಕ್ಕಿ₁]

**ಪೆಡೆಯಿಕ್ಕು** (ಕ್ರಿ).. (ಆಲಂ) ತಲೆಯೆತ್ತು : ಪೆಡೆವಣಿದಳೆದ ನಾಗರ ಮಾಣಿಕ್ಯದಂತೆ ಹೊಡೆವರಳುವ ತನ್ನ ತಾನೇ ಪೆಡೆಯಿಕ್ಕುವ ಮುಕ್ತಿನರ ಳಿಲಿದಾಳ್ದು ಕಂಡಿದೆ ಮುದ್ದುಮೊಗದಲ್ಲಿ ನಲಿಯೆ (ಕೋಹಕ. ೦೭-೬೦). [ಪೆಡೆ + ಇಕ್ಕು]

**ಪೆಡೆಯೆತ್ತು, ಹೆಡೆಯೆತ್ತು** (ಕ್ರಿ). ೧. ಹೆಡೆಯನ್ನು ತೆಗೆ, ಬಿಚ್ಚು : ನಾಗವರಾಳಿಯನೊರ್ವನಾಲಾಪಿಸಲಾಗಳೆ ನೆರೆದು ಸರ್ಪಗಳು ರಾಗಿಸಿ ಪೆಡೆಯೆತ್ತಿ ಕೇಳುತಿರ್ದುವು (ಶಕಕ. ೬೯-೦೦). **ಹೆಡೆಯೆತ್ತು** : ೧. ತನು ಹೇಳಿಗೆ ಮನ ಸರ್ಪನಾಗಿ ತನ್ನಯ ವಿಲಾಸಿತದಿಂದ ಹೆಡೆಯೆತ್ತಿ ಆಡುತ್ತಿರಲಾಗಿ (ಸಗವಚ ೪. ೬೪೬-೦೦೦೮) ; ಹೆಡೆಯೆತ್ತಿ ಬುಸುಗುಟ್ಟುತಿಪ್ಪವರವರನು ಕಚ್ಚಿ ಹುತ್ತವ ಹಾವು ಹೊಗುವ ಪೋಲು (೩೦ಚರಿ. ೯೮-೭೬). ೨. (ಆಲಂ) (ದ್ವೇಷ, ರೋಷ ಮುಂತಾದವು) ಕಾರ್ಯೋನ್ಮುಖವಾಗು : ಅವರ ಬಗೆಗಿದ್ದ ದ್ವೇಷ ಅವನಲ್ಲಿ ಹೆಡೆಯೆತ್ತಿತು (ಜೂಂ). [ಪೆಡೆ + ಎತ್ತು]

**ಪೆಡೆವಣಿ, ಪೆಡೆಮಣಿ, ಹೆಡೆಮಣಿ, ಹೆಡೆವಣಿ** (ನಾ). ಹಾವಿನ ಹೆಡೆಯಲ್ಲಿರುವ ರತ್ನ ; ನಾಗಮಣಿ : ಸೊಡರ್ವಾವನಿಪ್ಪ ಪೆಡೆವಣಿಯು ಸರ್ವಾಂಗಳಿಂದಾರಾಧ್ಯಮಪ್ಪಾನೆಯಪ್ಪೊಲಂತೆಸೆದು ತೋರ್ಪುದುಂ (ಆದಿಪು. ೨೮೦) : ಪಡೆವಂ ರಜೋಧಿಕಂ ವಿಧಿ ಪೆಡೆವಣಿಯಂ ಫಣಿಯುಂ . . . ಮುಟ್ಟಿಯಂ ಸಿಡಿಲಂ ಪಡೆದಂತೆ ಸುಜನರಂ ದುರ್ಜನರಂ (ಶಾಂತಿಪು. ೦-೬೨) ; ಪೆಡೆಯ ಸರಮಣಿ ತೋಳ್ಬಂದಿಗೆ ಪೆಡೆವಣಿಯು ಮಣಿಹಾವುಗಳನಳವಡಿಸಿದನು (ಶಿಂಕ. ೬-೮೨). **ಹೆಡೆಮಣಿ** : [ಉರಗಂ] ಪೆಡೆವಣಿಯುಂ ವಿಷಮುಂ . . . ಧರೆಯುಸಿದಂತಿರೆ ಸಜ್ಜನರಂ ದುರ್ಜನರಂ ಪಡೆದಂ ಕಮಳಭವಂ (ಸುಕುಮಾ. ೦-೩೩). **ಹೆಡೆಮಣಿ** : ಮೆರೆದಳು ಕೈಕೆ ಮಂಥರೆಯ ತೊಡೆಯಲ್ಲಿ ಕಾಳಾಹಿಭೋಗದಲಿ ಹೊಳೆವ ಹೆಡೆವಣಿಯಂತೆ (ತೊರವೆರಾ. ೨೬-೬೦೭). **ಹೆಡೆವಣಿ** : ಫಣಿಪನ ಹೆಡೆವಣಿಯನುದ್ಧರಿಸುವಂತಿರೆ ಫಣಿಪನ ಭುಜಬಲನು ರತುನಮುದ್ರಿಕೆಯು (ಜೈಮಿ. ೬-೩೪) : ಒತ್ತಿ ತಿವಿಯ ಛಿದ್ರವ ಮಾಡಿ ಭೂಮಿಯ ಹೊತ್ತ ಹಾವಿನ ಹೆಡೆವಣಿಯು ಕಿತ್ತು ಕನ್ನ (ಕೃಷ್ಣಾಉ. ೦೬-೬೬) ; ಎಡೆಯು ಪಂಜುಗಳಿರ್ದುವು ನಾಗನಾಥನ ಹೆಡೆವಣಿಗಳ ದೀಪ್ತಿಯಂತೆ (ಕೋಹಕ. ೦೩-೫೮). [ಪೆಡೆ + ಮಣಿ]

**ಪೆಡೆವರಲ್** (ನಾ). = ಪೆಡೆವಣಿ : ಪೆಡೆವರಲಾವುದೊ ರನ್ನದ ಸೊಡರಾವುದೊ ಪೇಟಾಮೆಂಬಿನಂ ಸುದೆಗದಟ್ಟಿಡಿದಿರೆ ನಾಗಾಂಗನೆಯರ್ . . . ಸಾರ್ತಂದರ್ (ಶಂಖಚರಿ. ೦೬-೬೩); ಪೆಡೆವರಲ ಬೆಳಗುಮುರಗನ ವಿಷಮುಂ ನಿಮಿರ್ದುವೆನೆ ರಾಗ ಪೇದಮನೆಸಗಿತ್ತುದು ಪಿನ್ನ ನುಡಿಯ ಮೊದಲುಂ ತುದಿಯುಂ (ಛಂದೋ. ೬-೨); ನೇವಳದ ಫಣಿಯ ಪೆಡೆವರಲ್ಗಳೊಳು ಮಾರ್ಪೊಳೆವ (ಚಂದ್ರಾ. ೨-೦). [ಪೆಡೆ + ಪರಲ್]

**ಪೆದ್ದಗೆಯ್** (ಕ್ರಿ). ಲಟ್ಟಿಸು (?) : ದೊಡ್ಡ ಒಣಕೆ ಬೆಳ್ಳ ಮಡ್ಡಿಯ ಸಣ್ಣಗೆ ಸುರದ್ದ ಕಂಪಿನ ಮಿಶ್ರದಿಂದ್ರಿಮದಮುದುರಪಡುದಿ ನಿಡ್ಡಗಲ್ಲಿಂದಲೀರ್ಗುಲದ ಚೌಕದಿಂ ಪೆದ್ದಗೆಯದು ಸ್ವೌಲ್ಮದಿ (ಅಂಬ. ೬-೩೩). [? + ಕೆಯ್]

**ಪೆಣ್, ಪೆಣ್ಣು, ಹೆಣ್, ಹೆಣ್ಣು** (ನಾ).. ೧. ಹೆಂಗಸು ; ಸ್ತ್ರೀ : "ಪೆಣ್ಗಳ್ ಪೊಸೆಯರಪ್ಪರ್" (ಕರ್ಣಾಟ. ೯); ಶೀತಕ್ಕಾಅದಲ್ಕಿ ಕೊಟ್ಟಿರ್ದ ಧರಾತಳಮೇಲಿ ಪೆಣ್ಣಾ ಪೊಸ ಕಂಚಿಳಿಕೆಯು ಸೀಮೂರ್ತಿನಂದವಪಾದುವ ಪನಿಗಳ್ (ಕಾವ್ಯಾವ. ೬೬೯ ಹೊಸ್ತೃಕ); ಪರವಾಜಪೇಂದ್ರಪಾಣಿಯ ಸರಸ್ವತಿ ಬೇಟದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು (ಅನಂತ. ೦-೯) ; ಅವನ ಬಿಲ್ಮೆಕೆ ಗಂಡು ಪೆಣ್ಗಳ ಕಂಗಳ ಸಲ್ಕಿಮಿದಿಹುದು (ಶಬ್ದ. ೦-೫೦). ೨. ಮಗಳು ; ಪುತ್ರಿ : "ಪೆಣ್ ದುಹಿತೃ ನಂದನೆ ಪುತ್ರಿ ತನೂಜೆ" (ಚೆನ್ನಕೇ. ೫೯-೦೩); ಬುಧನೆ ಮನ್ನಂ ನೋಡೆ ಕಾಂತಾದ್ರಿದೇಹನಮಾಂಶುಕೋಪಗತ ಗ್ರಹೋದಯಮುಮಾ ಪೆಣ್ಬಂದರಟ್ಟಿಂಡುಗಳ್ (ಜಾತಕ. ೬-೦೯); ಬೆಲೆಪಣ್ ಪೆಣ್ಣಂ ಪೆತ್ತಂತಿರೆ (ಧರ್ಮಾಮೃ. ೦-೦೨೬). **ಪೆಣ್ಣು** : ೧. ಪೆಣ್ಣಂಗಂ ಪೊನ್ನಿಂಗಂ ಮಣ್ಣಿಂಗಂ ಕಾಂಕ್ಷೆಯಿಂದಮೋಜಗದೆ (ಧರ್ಮಾಮೃ. ೬-೯೯): ಕಂಡುದಿಲ್ಲವು ಪೆಣ್ಣಿಗೆ ಪೆಣ್ಣು ಮನ ಮಾರುಲ್ಗೊಂಡಿದೆ ಕೇಳಾಯತಾಕ್ಷಿ (ಕೋಹಕ. ೨೬-೨೬) ; ಪೆಣ್ಣಾಳ್ವವ ತಪ್ಪನೆಲ್ಲ ಪಡೆದ ತಾಯಿ . . . ಪೆಣ್ಣು ಪೆಣ್ಣಿಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು (ಹರಿ. ೫-೬). **ಹೆಣ್** : ೧. ಹೆಣ್ಗಳ ಕಣ್ಣನಿಂದಿಗೆ ಗುಜಿಯಾದೊಡೆ (ಕಾಸಂ. ೯-೦೩೫). **ಹೆಣ್ಣು** : ೧. ಮೊಲೆ ಮುಡಿ ಬಂದರೆ ಹೆಣ್ಣೆಂಬರು ಗಡ್ಡ ಮೀಸೆ ಬಂದರೆ ಗಂಡೆಂಬರು ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ (ದೇವರಾ. ೬೮-೦೩೬); ಹೆಣ್ಣಿನಿಂದಲೆ ಇಹವು ಹೆಣ್ಣಿನಿಂದಲೆ ಪರವು (ಸರ್ವಜ್ಞ. ೦೬೪೮); ಹೆಣ್ಣಿನಿಂದ ಏನಾಗುವುದೋ ಯಾರು ಬಲ್ಲರು ? (ಅಪರೀ. ೪೪). ೨. ಹೆಣ್ಣು ಕೊಡುವವರಲ್ಲದೆ ಕೂಟಗಾಡವರುಂಟೆ (ಕೂಕ್ಷ್ಮಸಂ. ೨೨೬-೨೬). ೩. ಹೆಂಡತಿ ; ಪತ್ನಿ : ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು (ಹುಚಾಕೀ. ೬. ೯೮-೦೦೭). ೪. ಮದುಮಗಳು ; ವಧು : ಗಂಡಿನ ಕಡೆಯ ಮೆರವಣಿಗೆ ಇದ್ದಂತೆಯೇ ಇರುತ್ತದೆ ಹೆಣ್ಣಿನ ಕಡೆಯು ಎದುರುಗೊಳ್ಳಲು ಬಂದವರ ಮೆರವಣಿಗೆ (ಶತ್ರುಕು. ೬೫); ಹೆಣ್ಣಿನ ಕಡೆಯವರೂ ಕನ್ಯೆಯರೂ ಹಿಂದಿನ ರಾತ್ರಿಯೇ ಬಂದು ಅರಮನೆಯ ಒಂದು ಭಾಗದಲ್ಲಿ ಬಿಡಾರ ಮಾಡಿದ್ದರು (ಶಾಂತಲಾ. ೦೩೯).

**ಪೆಂಗಳ್, ಹೆಂಗಳ್, ಹೆಂಗಳು** (ಬಹುವ) : ಆ ವಹ್ನಿಯಂ ಕಾದ ಪೆಂಗಳಿಗೆ ಪಾತಿವ್ರತ್ಯಪಳಿದುದು (ತೀಕೃತಿ. ೬-೨೦-೨೯); ಪೆಂಗಳ ಸೂಚಿಕೆ ವಿಶೇಷಮಾಯ್ತು (ಶಬ್ದಾರಿ. ೬-೬); ಕೊಡೆಯ ಹತ್ತಿ ಹೆಂಗಳಿಕ್ಕುಗಡೆ ಹೇಜೂಳವ ಮಾಡುತ್ತಮಿರಲು (ಕೃಅಂ. ೦೯೦೯, ೦೫-೯ : 12ಶತು ೬೬) ; ಲೋಕೇಶ್ವರನೆಂಬ ಪಾಪಿಷ್ಠ ಹೆಂಗಳನೇಕೆ ನಿರ್ಮಿಸವ ಮಾಡಿದನೋ ಸಾಕೀ ಜನ್ಮವಿದೇಕೆಂದಾಕೆಯೊಳಾಕೆ ಪೇಳಿದಳು ದುಃಖಮನು (ಕೋಹಕ. ೦೦-೬೦) ; ಚೆಲುವಿನ ಹೆಂಗಳೊ ಒಲವಿನ ಕಂಗಳೊ (ಅಂಬೆ. ೩೦-೦೯). **ಪೆಂಡಿರ್, ಪೆಂಡಿರು, ಪೆಂಡಿರ್, ಹೆಂಡಿರ್ಕಳ್, ಹೆಂಡಿರು, ಹೆಂಡಿರ್, ಹೆಂಡಿರು** (ಬಹುವ) : ಪನ್ನಿಬ್ಬರ್ ಚಾ[ದೇ]ರರುಮಂ ಪೆ[ಣ್ಣ][ರಂ] ಕವಿಲೆಯುಮುನಜಿದ ಪಾತಾಪಾತಕಂ (ಶಾಸನ. XI-i. ೪೦-೦೬ : ೯೬೬); ಲೋಕದೊಳ್ಪೋದದ ಪೆಂಡಿರಿಲ್ಲ ಆಡು ಮುಟ್ಟದ ಗಿಡುವಿಲ್ಲ (ಧರ್ಮಾಮೃ. ೬-೯೨); ತೆಜಗೆ ನೆಚ್ಚೂರಿಲ್ಲದಾಗಳ್ಪೆಣ್ಡರು ಮಕ್ಕಳುಂ (ಎಕ. III, ಶಿಚಕ. ೦೩೯-೫ : 915 ?); ಕಲಿಗಳ್ಗನೆಂಬೋ × × × [ಜಿ]ಯ ಬಾಚ್ನೆಂನ್ಡು ಪರಿಚ್ಛೇದಿಸಿ ಪೆಣ್ಡರನಟ್ಟೋದೊಡೆ ಪೊಟ್ಟೆದೊ × × × ರದೆ (ಶಾಸನ. XI-i, ೨೦-೮ : 893); ಪೆಂಡಿರ್ ಪೆಂಡಿರೊಳಂತಾ ಬೆರಸುವರಲ್ಲದೇ (ಶಂಕರಾ. ೦-೭೬) ; ಸಮಸ್ತಶಾಸ್ತ್ರಂಗಳೊಳಂ ಪರಿಣತನೆನಿಸಿದನಂ ಪೆಂಡಿರ ಚಿತ್ತಮನಿಂತಾಟಿಂದು ನಿಟ್ಟಿಸಲಾಜಂ (ಸಕುಚ. ೯-೦೦೦), ಪಶಿಹಿತಕಾರ್ಯೆಯುಂ . . . ಕಳತ್ರಮೆಂದತಿಶಯದಿಂದ ಪಾಲಿಸುವುದಲ್ಲದ ಪೆಂಡಿರಾಕ್ಕು ಕಿಚ್ಚಿನೊಳ್ (ಚಕಳ. ೧೩-೦೦೭) ; ಪೆಂಡವಾಸದೊಳ್ಪೆಂಡಿರ್ಕಳುಂ ವಿವಾಹಾಂಗಳ ಮುಂದಾಡುತ್ತಂ (ಶಬ್ಧಾಲಾ. ೬೯-೦) ; ಪಿಂಡ ಬಲಿದವು ಬಳಿಕ ಮಾಣವರು ಹೆಂಡರಿಗೆ (ಕೊರಟಾ. ೦-೯-೦) ; ಹೆಂಡರ ಕೌತಕವ ಗಂಡರು ಬಲ್ಲರೇ (ಸರ್ವಜ್ಞ. ೦೭೬೮); ಮಕ್ಕಳೆಲ್ಲ ಮನೆವಾರ್ತೆ ಮಾಡಿದರೆ ಅಪ್ಪಗೆ ಯಾಕೆ ಇಬ್ಬರು ಹೆಂಡರು ? (ಗಾದೆ); ಗುಡ ಹೆಂಡಿರನತ್ಯಾಗ್ರದಿ ಶಿಕ್ಷಿಸಲ್ . . . ಹರ ಕೊಲ್ಲನ್ ಪರ ಕಾಯ್ವನೇ (ಕೋಟೀಶ. ೨೯) ; ರಿಣ ತಪ್ಪಿದ ಹೆಂಡಿರಲ್ಲಿ . . . ಜೀವವಿಲ್ಲದ ದೇಹದಲ್ಲಿ ಫಲವೇನೊ (ಶತಕ. ೫೬೯); ಸೂಚಿಪೊಯಿತಾ ಸುರಪತಿಯ ಭಂಡಾರ ಹೆಂಡಿರುಸಹಿತ ನಿರ್ಜರನಾರಿಯರು ತೊತ್ತಾದರು (ಶಿಂಗ್ರಾಕ. ೬-೦೦); ಕಂಡರೆದೆಯಾಲಿ ಖರನ ನಗರದ ಹೆಂಡಿರಾಗಳಕ್ಕಿಗಳ . . . ಬಸುಜ ಹೊಯ್ಯುಗಳ (ಕೊರಟಾ. ೬-೫-೨); ಹೆಂಡಿರಾಗಳ ಬಿಟ್ಟೋಡಿದವರ . . . ಅಂದಲೆಗಳನೇಪೇಳ್ವೆ (ಕುಕಾ. ೦೦-೫೨). **ಹೆಂಡಿರಾಳಿಗ** = (ಆಲಂ) ಬರಿಯ ಮಾತಿನ ಜಗಳ :

ಕಾಳೆಗಮನುಟಿದುಂ ಪೆಂಡಿರ್ಗಾಳೆಗಮುಂ ಮಾಟಪ್ಪಿ (ಹಂಗಾಹು. ೦೩-೦೩೯). ಪೆಣ್ಣಲೆರನ್ನೆ = ಹೆಂಗಸರಲ್ಲಿ ತಲೆಮಣಿಯಂತಿರುವವಳು ; ಅತ್ಯಂತ ಶ್ರೇಷ್ಠಳಾದವಳು : ಚಿತ್ರಾಧಾರುಬಿಜ್ಜಂ ಗರ್ಭದೋಹರ್ಲನಾಗಿ ಪೆಣ್ಣಲೆ ರನ್ನೆಗೆ ಅರರೆ ವಸ್ತ್ರಗಳ ರುಚಿಯರುಚಿಯಾದುವು (ಶಕ್ತಾ. ೨-೯೦); ಇಪ್ಪರವ ಚೆನ್ನಾಗಿ ಹದ ಮಾಡಿ ಲೇಪಿಸಿ ಪೆಣ್ಣಲೆರನ್ನೆಗೆ ತಳವನಿಕ್ಕಿದರು (ಮೋಹತ. ೩೦-೩). ಪೆಣ್ಮಂಡೆವಮಾಣಿಕ = ಪೆಣ್ಣಲೆರನ್ನೆ : ಪೆಣ್ಮಂಡೆ ವಮಾಣಿಕ ಹರಿಪಧ್ಧತಿಯಲಿ ಮುಂಗುಳೆಂಬನೊಡಲ ಬೇಡಿದಳು (ಕೋಹತ. ೦೦-೯); ಪೆಣ್ಮಂಡೆವಮಾಣಿಕವಹ ಪಟ್ಟದರಸಿ . . . ಪುಗೋಲನ ಕಾಣಿಸಿದಳು ಕಾಂತನೆಡೆಗೆ (ಮೋಹತ. ೨೨-೦೩). ಪೆಣ್ಮಾಡು, ಹೆಣ್ಮಾಡು = ೧. ಹೆಣ್ಣು ರೂಪಾಗಿ ಮಾಡು; ಸ್ತ್ರೀಯನ್ನು ಸೃಷ್ಟಿಸು : ವಿಶುದ್ಧಮಪ್ಪ ಪರೀಕಿಂ ಪೆಣ್ಮಾಡಿದಂತೊಪ್ಪಿದಳ್ (ಆದಿಪು. ೬-೨೩); ಕಾಮದೇವನಯ್ಯುಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕದೊಳ್ಳಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ (ಹಂಶಪ. ೯-೭೩ ಶ). ೨. ಹೇಡಿಯನ್ನಾಗಿ ಮಾಡು ; ಓಂಜರಿಯುವಂತೆ ಮಾಡು : ನಿಜಾರಿಬಳಮಂ ಪೆಣ್ಮಾಡಿ ಪೆರ್ಮಾಡಿ ತತ್ಸುತುಪುತ್ರಂ ನೆಗಳ್ದಂ (ಕಇ. ೬೪ ೦೨-೮ ; 1170) ; ಉದ್ಧತಾರಿಬಳಮಂ ಪೆಣ್ಮಾಡಿ ಪೆರ್ಮಾಡಿ ತಾಂ ನೆಗರ್ದ್ದಂ (ಎಇ. XV. ೩೦೯-೦೨ ; 1172). ಹೆಂಗಳೆ = ಹೆಂಗಸು; ಸ್ತ್ರೀ : ಹೆಂಗಳೆಯೊಬ್ಬಳು ಅಳುತ್ತ ನಿಂತಿದ್ದಳು (ಕ್ರೀಣಾಶ. ೬); ಹೆಂಗಳೆಯಾದ ನನಗೆ ಹೇಗೆ ತಿಳಿಯಬೇಕು ? (ಇಂದುಮತು. ೪೩). ಹೆಂಡಹೆಂಡಿರು (ದ್ವಿರುಕ್ತಿ) : ಗಂಡಗಂಡರನೆಲ್ಲ ಹೆಂಡಹೆಂಡಿರಾಗಿ ಆಳುವ ಗರುವನ ಕಂಡೆ ನಾನು (ಶುಷಾರೀ. ಬ. ೩೨-೬೯). ಹೆಣ್ಣಾಗು = ೧. ಸ್ತ್ರೀಯಾಗು ; ಹೆಂಗಸಾಗು : ಮಕ್ಕೊಮ್ಮೆಯಾನು ಹೆಣ್ಣಪ್ಪೆ ನಯ್ಯಾ . . . ನಿಮ್ಮ ಶರಣರಿಗೆ ವಧುವಪ್ಪೆ (ಬಸವ. ೭೦೩); ಹೆಣ್ಣಾದೊಡೆ ಗಂಡಾದೊಡಂ . . . ಸರ್ವನಿಂಬವಾದಿಯಾದುವರ್ಕೆ ಪುಲ್ಲಿಂಗದಂತೆ ರೂಪು ಪತ್ತುಗುಂ (ಶಮದ. ೦೨೦ (ಅ) ಪ್ರಯೋ) ; ಹೆಣ್ಣಾಗಿ ಜಾನಪದ ಪವಣಜೀ ದುದಿಲ್ಲಲಾ (ಕೃಷ್ಣಾ. ೨-೬೧). ೨. ಮೈನೆರೆ : ಋತುಮತಿಯಾಗು : ಅವಳು ಹೆಣ್ಣಾದ ಮೇಲೆ ಅವಳ ಸುಂದರತೆ ಮನ್ಮಥನೊಡನೆ ಪ್ರತಿ ಸ್ಪರ್ಧಿಸುವಂತಿತ್ತು (ಶಿಲಾಮು. ೦೦೩); ಮಣ್ಣಾಯ್ಯನರಲಿಸುತ ಹೆಣ್ಣಾದಳವಳು (ಕಾಂಡಿ. ೩೩-೩೦). ಹೆಣ್ಣಾಪುಸಕಲಿ = ಹೇಡಿ ; ಅಂಜುಬುರುಕ : ನೀನು ಯಾವಾಗಲೂ ಹೆಣ್ಣಾಪುಸಕಲಿ ಕಳ್ಳಿಕಾಯಿ ಹಾಗೆ ... ಅಳ್ತೀಯ ! (ಹ್ಯಾಟ್ಕ್ರೀ. ೧೬೨). ಹೆಣ್ಣಾಪುಸಕೀ = ಹೆಣ್ಣಾಪುಸಕಲಿ : ಹೆಣ್ಣಾಪುಸಕೀ ಕೈಲಾಗದವನೇ (ಸಶಚಾ. I. ೩೨೩). ಹೆಣ್ಣುದಿಕ್ಕು = ಹೆಂಗಸಿನ ನೆರವು.‿ ಸಹಾಯ : ಅವನ ತಾಯಿ ಸತ್ತುಹೋದಳು. ಆಗ ಅವನಿಗೆ ಮನೆಯಲ್ಲಿ ಹೆಣ್ಣುದಿಕ್ಕಿನ ಅವಶ್ಯಕತೆ ಗೊತ್ತಾಯಿತು (ಜಂಶಿಮು. ೧೯೦). ಹೆಣ್ಣುಹುಡುಗಿ = ಬಾಲಿಕೆ : ಗರಡಿಮನೆಗೆ ಬೆಂಕಿ ಹಾಕಿದ್ದು ಯಾರೋ ಹೆಣ್ಣುಹುಡುಗೀರ ಕೆಲಸ (ರಾಜೇಂದ್ರ. ೨೬೬). ಹೆಣ್ಣುಹೆಂಗಸು, ಹೆಣ್ಣುಹೆಂಗುಸು = ಅಬಲೆ ; ಆಶ್ರಯರಹಿತಳು : ನಾನು ಒಬ್ಬಳೇ ಹೆಣ್ಣುಹೆಂಗಸು, ಸಣ್ಣಮಕ್ಕಳನ್ನು ಕಟ್ಟಿಕೊಂಡಿರುವುದು ಹ್ಯಾಗೆ ? (ಕಂಗಾಳ್ಳ. ೬); ಹೆಣ್ಣುಹೆಂಗುಸು ನಾನು. ಈ ಕಾರ್ಯದಲ್ಲಿ ಪ್ರವರ್ತಿಸುವುದೆಂದರೇನು ? (ಅತುಲ್ಯ. ೪೯).

[ದೇ. ೫ ತಮಿ. ಮಲ. ಕೋತ. ಪೆಣ್ ; ತುಳು. ಪೊಣ್ಣು ; ಕೊಡ. ಪೊಂಗು, ಪೊಣ್ಣ್]

ಪೆಣ, ಹೆಣ (ನಾ). ಜೀವ ಹೋದ ಶರೀರ; ಶವ : “ಪ್ರೇತಃ, ಪರೇತಃ, ಕುಣಪಃ, ಶವಃ‿ಈ ೪ ಪೆ(ಹೆ)ಣ” (ಕಣಾಮು. ೦೦೯-೬); ಬೆದೆಕಾಜರ್ದೆಯಂತೆ ಬೇಮುತಿರ್ದ ಪೆಣಂಗಳಿಂ . . . ರಣದೇವತೆಯು ರಿಂದತಿಭಯಂಕರಾಕಾರಮಪ್ಪುದು (ಕಾವ್ಯಹು. ೩೩೯ ಹೊತ್ರ್ಯ) : ತಾಬು ಪರಿವಾಗಳೆಪ್ಪ ಪೆಣನಂ ತುಟಿದುಂ ಪರಿಗುಂ ದರ್ (ಹಂಶಪ. ೬-೯೩) ; ಪೆಣದ ಕೈಗಳೆ ಪುಟ್ಟುಗಳಾಗೆ . . . ನೆತ್ತರ ತೊಱೆಯುಂ ಮರುಳ್ಪೊಟಸಿ ಪಾಯಿಸುತಿರ್ದುವು ಯುದ್ಧಭೂಮಿಯೊಳ್ (ಹಂಗಾಹು. ೦೩-೬೩). ಹೆಣ : ಅಡವಿಯೊಳಟುಹವುಂ ಹೆಣಕ್ಕೆ ಲೇಪನುಗೆಯ್ಯುದುಂ . . . ಇವಱೋಪಾದಿ ಎಂಬ ನೀತಿಕಾಜನ ಮಾತದೇಕೆ ತಪ್ಪುಗುಂ (ಹಂಶಕ. ೦೩೬-೩): ನೆಲನಾಳ್ದನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ (ಬಸವ. ೦೩೩) ; ಆರ್ಜುನನಂಬಿನಿಂಬುಬೆಗೆ ಹೆಣನ ದಾವಣಿ ಹಾಸಿದವು (ಕುಮಾವ್ಯ. ೦೦-೩) ; ಊರು ಉಪಕಾರ ಅರಿಯದು, ಹೆಣ ಶೃಂಗಾರವರಿಯದು (ಗಾದೆ).

ಹೆಣ ಎತ್ತಿಸಿ ಬಿಡು = ಕೊಲ್ಲು ; ಸಾಯಿಸು : ಮೊದಲು ಹಣ ಇಲ್ಲಿ ಬಡೀರಿ, ಇಲ್ಲದಿದ್ರೆ ನಿಮ್ಮ ಹೆಣ ಎತ್ತಿಸಿ ಬಿಡ್ತೀನಿ ಈಗ್ಲೇ ! (ಹೇಕುಳಿ. ೩೯). ಹೆಣ ಎತ್ತು = ಸಾಯು ; ಸತ್ತುಹೋಗು : ಬರೆದವನು ಎಂತಹ ಹೊಲಸು ಮಾತುಗಳನ್ನು ಬರೆದಿದ್ದಾನೆ ನೋಡು. ಇವನ ಹೆಣಾ ಎತ್ಲಿ (ಕಂಗಟೋ. ೦೬೩). ಹೆಣಚಾಕರಿ = ಹೆಣವಾಗುವಂಥ ಕೆಲಸ ; ಅವಿರತ ವಾದ ದುಡಿಮೆ : ಕಂಪನಿ ಕೆಲಸ ಇದ್ದೇ ಇರುತ್ತೆ ಹೆಣಚಾಕರಿ (ಕುಣ ೩೯). ಹೆಣದತ್ತ = ಹೆಣಕ್ಕಿಂತಲೂ ಕಡೆಯಾಗಿರುವವನು ; ನಿಷ್ಪ್ರಯೋಜಕ : ಹೆಣದತ್ತನ ಹಾಗೆ ಈ ರೀತಿ ಕೂತಿದ್ದರೆ ಯಾವ ಕೆಲಸ ತಾನೇ ಆದೀತು ? (ಲೂಡಿ). ಹೆಣನುಂಡು ಹೋಗು = “ಹಾಳಾಗು” (ಅಶಹಂ. ೩೩೦೬) : ಹರಿದು ಹತ್ತಿ ಮುತ್ತಿ ಹಿಡಿದಹೆನೆಂದು ಜಾಜು ಉರುಳಿ ಬಿದ್ದರು ಅನಂತರು ಹಿಡಿದವರೆಲ್ಲ ಹೆಣನುಂಡು ಹೋದರು (ಅಬಕಂ. ೦೦೩-೫೬೩). ಹೆಣ ಬಿದ್ದು ಹೋಗು = ಅತ್ಯಂತ ಕಷ್ಟಕ್ಕೆ ಒಳಗಾಗು: ವಿಪರೀತವಾದ ತೊಂದರೆಗೆ ಈಡಾಗು : ಸರಳಬಡ್ಡಿ, ಚಕ್ರಬಡ್ಡಿಗಳನ್ನು ತೆರುವುದರಲ್ಲೇ ಅವರ ಹೆಣ ಬಿದ್ದು ಹೋಗಿತ್ತು (ಹೇಕುಳಿ. ೩೯). ಹೆಣ ಬೀಳು = ೧. ಸಾಯು : ಸತ್ತುಹೋಗಂ. ೨. ಹಾಳಾಗು; ನಾಶವಾಗು : ಕೇಳಿ ದಿಯಾ, ಸ್ವಾಮಿಜಿ ! ನಮ್ಮ ಹೆಣ ಬಿದ್ದ ಸಮಾಜದ ಈ ವಿಷೋದ್ಧಾರ ಗಳನ್ನು ! (ಹೂಕಂ. ೦೦). ೩. ಅಡಗು. ಇಲ್ಲವಾಗು : ನಿದ್ದೆ ಕಟ್ಟಿ ಹಾಕಿದೆ : ಸದ್ದು ಹೆಣ ಬಿದ್ದಿದೆ ! (ಅಂಕೇ. ೨-೬). ಹೆಣಭಾರ = ಹೆಣದಷ್ಟು ಭಾರ ; ಬಹಳವಾದ ಹೊರೆ : ದೆಸ್ಸೆಸಲಿ ಹೆಣಭಾರವಿಟ್ಟು ಈಗ ನಮ್ಮ ಹೆಗಲಿಗೇ ಕೈಹಾಕಿ ನಡೆದಿರುವೆಯಲ್ಲ (ಕಂಶಮು. ೨೩-೦೦). ಹೆಣವಾಗು = ಬಹಳವಾಗಿ ದಣಿ.‿ಬಳಲು : ಬೆಳಗ್ಗೆಯಿಂದ ಒಂದೇ ಸಮನೆ ಕೆಲಸ ಮಾಡಿ ಹೆಣವಾಗಿದ್ದೀನಿ (ಲೂಡಿ). [ದೇ. ೫ ತಮಿ. ಮಲ. ಪಿಣ ; ತುಳು. ಪುಣ ; ತೆಲು. ಪೀನಿಗ, ಪೀನುಗ, ಪೀನುಗು, ಪೀನ್ಗು ; ಗದಬ. ಪೀನಿಗೆ ; ಕುವಿ. ಪೀನುಗು]

ಪೆಣಕಿ ‘ಪೆಳಕೆ’ ನೋ.

ಪೆಣಕ್ಕೆ, ಹೆಣಕೆ (ನಾ). ೧. ಹೆಣಿಗೆ; ಜೋಡಣೆ : ಎರಡುಗಯ್ಯ ಸುಳ್ಳೆರಲ ನಡನಡುವೆ ಪೆಣಕೆಯೊಳಿಟ್ಟು ಹೆಡಕಿಲಿರದಿಟ್ಟು ತೂನೆ ಬಾರದೊಡೆ ಶುಭವು ಹಿರಿದು ಬರಲು ತಿಂಗಳಿಗೆ ಮರಣಂ (ಜಕ್ಕೃಶ. ೯-೨೨-೨೯). ಹೆಣಿಕೆ : ೨. ಉಲ್ಲನ್ನು, ಬಣ್ಣದ ದಾರ ಮುಂತಾದುವುಗಳಿಂದ ಹೆಣೆಯುವುದು: ತಾಯಿಯುವರು ಹೆಣಿಕೆಯ ಕೆಲಸವನ್ನು ಮಾಡುತ್ತಿದ್ದರು (ಕುಐದು. ೨೦೦) ; ನಿನಗೆ ಮೊದಲಿನಿಂದಲೂ ಹೊಲಿಗೆ ಹೆಣಿಕೆ ಅಂದರೆ ಪ್ರೀತಿ ತಾನೆ ? (ಕಂಶುಮು. ೦೨). ೩. ಹೆಣೆದುದು ; ಅದನ್ನು ಹೆಣೆದ ಹೆಣಿಕೆ, ಅವರಲ್ಲಿ ತೆಗೆದ ಚಿತ್ರ ಅವನವಾಗಿವೆ (ಕಹು. ೦೦) ; ಹೂಬಿಸಿಲ ಕರವಸ್ತ್ರದಲಿ ತರತರದ ಹೆಣಿಕೆಯು ನಕ್ಷೆಯು (ಕಂಮು. ೦೦೩)

[ಪೆಣ್ಕ + -ಕೆ./ತಮಿ. ಪಿಣಕ್ಕು, ಪಿಣಕ್ಕು]

ಪೆಣಕ್ಕೆ ‘ಪೆಳಕೆ’ ನೋ.

ಪೆಣಗಾಟ, ಹೆಣಗಾಟ (ನಾ). ೧. ಕಷ್ಟ ; ತೊಂದರೆ ; ತಾಪತ್ರಯ : ಈ ಪೆಣಗಾಟದಿನ್ ಎನಾನುಮಾನ್ ಬಿಡುಗಡೆಯನಱಿಸು (ಅಧ್ಯಕೃ. ೦೩-೩೦೬). ಹೆಣಗಾಟ : ೧. ಜೀವನ ಅಂದ ಮೇಲೆ ಹೆಣಗಾಟ ಇದ್ದದ್ದೆ (ಲೂಡಿ). ೨. ಪ್ರಯತ್ನ : ಹೋರಾಟ : ಅವರ ಬರವಣಿಗೆ ನಿರ್ದುಷ್ಟವಾಗಿ

ಅಚ್ಚುಸಲು ಅವರ ಹಣಗಾಟ (ಚಿಕ್ಕೋ. ೧೬). ೩. ಜಗಳ ; ಕಲಹ : ಶುದ್ಧಾತ್ಮ ಪರಮಾತ್ಮರಿಬ್ಬರೂ ಒಂದು ರತ್ನಕ್ಕೆ ಹಣಗಾಟವನಾಡಿಹರು ಅವರ ಹಣಗಾಟವ ನೋಡಿ ಆ ರತ್ನವ ಸೆಳೆದುಕೊಂಡರೆ ಕೂಡಲ ಸಂಗಂಗಾರೋಗಣೆಯಾಯಿತ್ತು (ಬಸವ. ೧೦೩); ಯಾವದೊಂದು ಸಮಾಜದಲ್ಲಿ ಕೆಲವು ಜನರ ಜೀವನದ ಹಣಗಾಟವು ಬೇರೆ ಕೆಲವರ ಹಣಗಾಟದೊಡನೆ ತೊಡಕಾಗುತ್ತದೆ (ಅರ್ಥಶಾ. ೧೦). [ಪೆಣಗು + ಆಟ]

**ಹೆಣಗಿಸು, ಹೆಣಗಿಸು** (ಕ್ರಿ). ಹೋರಾಡುವಂತೆ ಮಾಡು ; ಕಾಳಗವನ್ನು ಏರ್ಪಡಿಸು : 'ತಗರ್ವೆಣಗಿಸು' ಪರಾ. **ಹೆಣಗಿಸು** : ಯಾರು ತಗರುಗಳನ್ನು ಹೆಣಗಿಸುತ್ತಿದ್ದರು (ಅಮರು. ೨೩). [ಪೆಣಗು + - ಇಸು]

**ಹೆಣಗು, ಹೆಣಕು, ಹೆಣಗು** (ಕ್ರಿ). ೧. ಹೋರಾಡು ; ಕಾದು : ಮದನಕಲಹದೊಳೊಲ್ದು ಕೊಸರು ಪೆಣಗುವ ಸತಿಯರ್ವೊಲ್ ಪೆಣಗಿದುವು ಶಿವನೊಳು (ಅನಂತ. ೦-೦೦-೩೬); ಗಿರಿತಟದೊಳೊಂದೊಂದರ್ಹೊಳ್ಳಣಗಿ ಸೋಲ್ವ ಮದಕರಿ ಧರೆಗುರುಳ್ವಂತೆ (ಕೈಬಿಡಿ. ೨೦-೭೦) ; ಪೆಣಗೆ ಕಡುಗವಡನಿಂದಂ ಕಣೆಗಲ ನರಸಿಂಗಪುರದ ನಾಯಕರಿರ್ವರ್ (ಶಾಸ. ೩-೯೯). ೨. ಸ್ಪರ್ಧಿಸು ; ಪೈಪೋಟಿ ಮಾಡು : ಮಣಿಭೂಷಣದ ಶೋಭೆ ಮುಂಕೊಂಡು ಬೇಗ ದಿನಮಣಿಯನರುಣಾಕ್ಷಿಗನ್ನರ್ತನೆಯ ಪೆರ್ಚಿಸಲು ಪೆಣಗು[ಪಾಠಾಂ. ಮಿಣಗು]ತುಭಯಕಟಾಕ್ಷ ಮುಂಬರಿದು ಶುಭ್ರಾಂಶುವಂ ಕರೆಯ (ಜೈಮಿನಿ. ೦-೨೨-೯೨). ೩. ಹಠ ಮಾಡು ; ಪೊಂದುಹಿಡಿ : ಪಾದವಂ ಬಲ್ಪಿಡಿದು ಬಿಡೆನೆಂದು ಪೆಣಗುತಿರೆ (ಚನ್ನಬ. ೬೩-೦೭).**ಹೆಣಕು**: ೧. ತೆಗೆ ತೆಗೆ ಸಾರು ಭಸಭಯನಾತ ಮಂದಗೆ ಹಾಯ್ದು ಹೆಣಕಿದನು (ಭಾರತ. ೦೯-೨೮). **ಹೆಣಗು** : ೧. ಬಲ್ಲಿಹಾನೆಯಾವೊಂದು ಸಲದಿಯಾಪಿಲ್ಲಿ ಹಣಗಿದವು (ಬಸವ. ೦೪-೩೬) ; ಬಿಡದೆ ಹೆಣಗಿದನನಾವ ರಕ್ಕಸನೊಡನೆ (ಭಾರತ. ೨೬-೬೯), ಅಲ್ಲಲ್ಲಿ ಪಾತ್ರವ ಕಾಣಿಸಿ ಹೊಗುವ ಮಲ್ಲರ ತೋಟುತ (ಶಬರ. ೯೬-೬೦). ೨. ಅಡಸು ಪದಹತಧೂಳಿ ಮದವನು ಕಡಿದುದಾ ಮದಧಾರೆ ರೇಣುವನಡಗಿಸಲು ಪದಧೂಳಿಗಳು ಹೆಣಗಿದುವು ತಮ್ಮೊಳಗೆ (ಭಾಕ್ಷ್ಯ. ೯-೬೩) : ಕಂಚಗಳನುವಿನಿಂದೊಂದನೊಂದಾ ಲಿಂಗಿಸುತ್ತಮಿರೆ ವನಜವನಜಗಳೊಡನೆ ಹೆಣಗುವಂದದಿ ತೋಳ್ಗಳೊಡನೊಡನೆ ಕೋರುತಮಿರೆ (ಜೈಮಿನಿ. ೩-೯-೦೬) : ಒದು ಬರಹ ಬರೋ ಮಂದಿ ಹಾವು ನಾವು ಹೆಣಗಾಕೆ ಆಗೋಲ್ಲಾ (ಜಾನಪ. ೯೩). ೪. (ಆಲಂ) ಕಷ್ಟಪಡು: ಪೇಚಾಡು : ಹಣವುಳ್ಳವರು ಹೆಣಗಿದರು (ಭಾರತ. ೯-೬) ; ಈ ಕಾಲನೆಂಬುವ ಪ್ರಾಣ ... ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು ಹೆಣಗಿದ್ದೇವೆ (ಕಿಂಮು. ೩೦-೦೦) : ಅವರು . . . ಭಾರತೀಯ ಸಂಸ್ಕೃತಿಯ ವಿಕಾಸಕ್ಕೆ ಹೆಣಗಿದರು (ಕರ್ನಾಟಕ III ಕೃಷ್ಣಾಚಿ). ೫. (ಹಿಡಿತದಿಂದ ತಪ್ಪಿಸಿಕೊಳ್ಳಲು) ಒದ್ದಾಡು ; ಪ್ರಯಾಸಪಡು: ಆ ರಾಣಿ ಹಲುಬಿದಳೊತೆಮುತುಟಿ ಹೆಣಗಿದಳು ಖಳನೊಡನೆ (ಭಾಕ್ಷ್ಯ. ೦೩-೨೩) ; ಸರ್ವನಂದದಿ ಹೆಣಗಿ ತಪ್ಪಿ ಸುಳಿಯುತ್ತ (ಕಂಠೀ. ೬೬-೬). ೬. ಏಗು ; ನಿಭಾಯಿಸು : ಅವಳ ಸಂಗಡ ಹೆಣಗುವದು ಬಲುಕಷ್ಟ (ಕಂಠೀ. ೨೬). ೭. ಮಾಡು ; ಆಚರಿಸು : "ಮಾಡು, ಎಸಗು, ನೆಗಳು, ಸಮೆ, ಗೈ, ಹೆಣಗು" (ಕಂಪಸು. ೬೯-೩)). ೮. ಸಂಭೋಗಿಸು : ಹೆಣಗುವಲ್ಲಿ ಮೈಯೆಲ್ಲಾ ಕೈಯಾಗಿ ಹೆಣಗಬೇಕವ್ವ (ಸರ್ವಜ್ಞ. ೬೬-೩೬೩).

[ದೇ. ೪ ತಮಿ. ಪಿಣಕ್ಕು ; ಮಲ. ಪಿಣಕ್ಕು, ಪಿಣಙ್ಙು ; ತೆಲು. ಪೆನಂಗು, ಪೆನಗು]

**ಹೆಣಗೆಡಹು, ಹೆಣಗೆಡಹು** (ಕ್ರಿ). ಹೆಣವನ್ನು ಬೀಳಿಸು ; ಸಾಯಿಸು : ಬೆಂಟೆಯನನೆಣಮರದಿಂ ಬೇಡಾಡುತಿರೆ ಘನ ಪನಹಾಗ್ರಣಿ ಫೈಷ್ಟಿ ಕೊಂದ ಚಂದದೆ ಹಣಿದಾಚ್ ಪೆಣಗೆಡಹಿತಾಗಳತಿಶೌರ್ಯದೊಳಂ (ಚನ್ನಪ. ೯-೯೬). **ಹೆಣಗೆಡಹು** : ದೊಪ್ಪನೆ ಕೊಯ್ದು ಸೀಳುವ ಹೆಣಗೆಡಹುವಬ್ಬರಕೆ ವಿಗಿಲೊದಗಿದರು ಬಿಲ್ಲವರು (ಭಾಕ್ಷ್ಯ. ೯-೦೯).

[ಪೆಣ + ಕೆಡಹು (<ಕೆಡವು)]

**ಹೆಣದಿನಿ, ಹೆಣದಿನಿ** (ನಾ). ಹೆಣವನ್ನು ತಿನ್ನುವ ಭೂತ, ಪಿಶಾಚಿ ಮುಂತಾಗುವು : ಪೆಣದಿನಿಗಳ ತಂಡಂ ಬಲ್ಪೆಣಗಳನಱಸುತ್ತುಮಲ್ಲಿ ಬರಪರ (ಗದಾಯು. ೯-೦೩) ; ಪೆಣದಿನಿಗಳವೊಲು ಬಾಂಧವರುಗಳ ಹರಣವ ಕೊಂಡವು (ಕರ್ಣಕ. ೯-೦೦) ; ಈ ಪೆಣದಿನಿಗಳ ಬಸಮಸೆ ಬಾಚ್ಚಿಣಂಗ ಳೆವಂಗಲ್ಲಿ ರಸಿಕರೆಲ್ಲಿಯ ನೇಹು (ಶಬರ. ೬-೦೬೬). **ಹೆಣದಿನಿ** : ಸಾತ್ವಿಕ ಗುಣಯುತ ಕಾಮಕಂದರ್ಪ ಹೆಣದಿನಿ ದಡಿಗದೈತ್ಯರ ಕೂಡೆ ಕಾದಿ ಪರ್ಗಣದಿಂದೆ ಕಡಿದೊಟ್ಟಿದರು (ಸೋಮೇಶ. ೧೦-೩೩) ; ಹೆಣದಿನಿಗಳಹ ಗೃಧ್ರರೂಪವು ಪರಿದು ದ್ವಿಜರಿಗೆ (ಚಾರಿತ್ರ. ೯-೩೦). [ಪೆಣ + - ತಿನ್ನಿ]

**ಹೆಣಬಣಂಬೆ, ಪೆಣಬಣಬೆ** (ನಾ). ಹೆಣಗಳ ರಾಶಿ, - ಒಟ್ಟಿಲು : ಎಱಗಿದರಂ ತಳ್ತು ಬಾಳ ಕೀಟ್ಕೊನೆಯಿಂ . . . ಅರಿದಿರ್ದರ್ ಪೆಣ ಬಣಂಬೆಗಳ್ ನೆಗೆವನೆಗಂ (ಕಂಠಶಾ. ೦೦-೬೨). **ಹೆಣಬಣಬೆ** : ಧೊಪ್ಪೆನುತೆ ಕೆಡೆದನ್ ಆ ಕೆಡೆದ ಪೆಣಬಣಬೆಯೊಳ್ (ಅಕ್ಕಿಶಾ. ೦೩-೨೬೯).

[ಪೆಣ + ಬಣಂಬೆ]

**ಹೆಣಬಣಬೆ** 'ಪೆಣಬಣಂಬೆ' ನೋ.

**ಹೆಣಮಯ, ಹೆಣಮಯಂ** (ನಾ). ಶವಗಳಿಂದ ತುಂಬಿರುವುದು : ಶವಮಯವಾಗಿರುವುದು : ಈ ತೊರ್ವ ನದಿಯ ತೀರದೊಳ್ ಚತುರ್ಬಲಯುತರಿರ್ವರರಸುಗಳ್ ಕಾದಿದಲ್ಲಿ ಪೆಣಮಯಮಪ್ಪಾಗಿರ್ದ ರಣ ಭೂಮಿಯಂ ಕಂಡಂ (ಕಂಠಕಂ. ೧೦-೨) ; ಪೆಣಮಯಂ ಮಿಱುಗಿ ಮೆದೆಗೆಡೆದಿರ್ದ ವಾಜಿವಾರಣಮಯಂ ... ಸಲೆ ಭಯಂಕರವಾದುದಂದು ರಣರಂಗಮಾ ಪ್ರದ್ಯುಮ್ನನ (ಕೈಬಿಡಿ. ೨೨-೨೩). **ಹೆಣಮಯ** : ಹೆಣ ಮಯಮಾ ಮಾಡುತುಂ ಪೊಣಮಟ್ಟುವುದು ನೋಡೆ . . . ಮಹಾವಿಹಂ (ಕಂಠೀ. ೦-೦೦) ; ಆಳನಾಳ ಮೇಲಿಕ್ಕಿ ಹೆಣಮಯವಾಗಿ (ಕ್ಕುಅಂ. ೦೯೩೬. ೩೦-೫, 1910); ಶಿರದ ಹರಹಿನ ಕಣಿತ ಮುಂಡದ ಕರಿ ತುರಗ ಪಯದಳದ ಹೆಣಮಯವಾಯ್ತು ರಣಭೂಮಿ (ಭಾಕ್ಷ್ಯ. ೦-೯೦). [ಪೆಣ + - ಮಯ್ಯ]

**ಹೆಣಲ್, ಪೆಣಲು, ಹೆಣಲ್ಲು, ಹೆರಳ್ಳು, ಹೆಳಲು** (ನಾ). ಕೂದಲನ್ನು ಒಟ್ಟಾಗಿ ಸೇರಿಸಿ ಹೆಣೆದುದು: ಜಡೆ : ನಿನ್ನ ಬಂಧುರದೀರ್ಘಲೋಚನಕೆ ಕಂಚ್ಚಯಾಗಿಕೆ ಪೆಣಲಿಂಗೆ ... ಎರಲೆಯೆಂದುಂ ಮತ್ತಗಜದ ಮಸ್ತಕವೆಂದು ಫಣಿಯುರಗನೆಂದು . . . ವ್ಯಾಘ್ರ ಹರಿ ಕೇಕಿ ಶರಭ ಶುಕಂಗಳೆಳಗಿ ಕೊಲ್ವುವೆ (ರಾಜಶೇ. ೦೬-೬೩). **ಹೆಣಲು** : ವನಜಾಕ್ಷಿಯಳ ವದನ ಚಂದ್ರಮನ ರಾಹು ತಾಂ ಹಿಸಿಂದೆ ಪಿಡಿದು ನಿಂದಿರ್ಪಂತೆ ನಿಡಿದಾದ ಪೆಣಲು ಪಿಜಡಿಪುತಿರೆ (ಶಬರೋ. ೦೩-೩೬). **ಹೆಣಲ್ಲು** : ಹೆಣಲು ಬಿಚ್ಚಿಕೊಂಡಿರೆ ಜನರು ಹಳಿಯುತಿರೆ . . . ಇನಿತುಳ್ಳ ನಾರಿಯ ಗುಣಗಳ ತಿಳಿದು ಒಬ್ಬನೆ ಇರಲಾಗದು (ಬಿಜಾಸು. ೩೩-೫). **ಹೆರಳ್ಳು** : ಹೊಂಗ್ಯಾದಿಗೆ ಮುಡಿದ ಬಂಗಾರದ ಹೆರಳಿನ . . . ಮಂಗಳಮೂರ್ತಿಯ ತೋಱ್ ಶುಭಾಂಗಿ (ಪುರಂದ. ೦-೦೯೦-೫) ; ಕರಿವೋಡಗಳ ಬಾಚಿ ಚಿಕ್ಕಹೂಗಳನಿಟ್ಟು ಹೆಣೆದಂತೆ ಇವರ ಹೆರಳು (ಕರಿಸ್ತ್ರಿ. ೬-೬) ; ಸೋಮರ್ಪುಡಿಯ ಹೆರಳು ಮುಂಗುರುಳು (ಚಿತ್ರಾಂಗ. ೧೦-೦೦೨೬). **ಹೆಳಲು** : ಅರೇನ ಮಾಡುವರು ಅವನಿಯೊಳಗೆ . . . ಹೆಳಲು ಹಾವಾದರೆ ಗೆಳೆಯ ರಿಪುವಾದರೆ (ಪುರಂದ. ೩-೨೦೬-೨) ; ಮುಡಿಪುದಿಲ್ಲವ ಚೆಲುವ ಹೂಮಾಲೆಯನು ನೀನು ಕಂದು ಗೂದಲ ಹೆಳಲ ಸಿಂಗಾರಕೆ? (ಕಿಂಮು. ೧೯-೦೩): ಹೆಳಲು ಹೆಣೆದುಕೊಳ್ಳುವ ಕರ್ಮ ಬೇಡವೆಂದು ಸೋಮಾರಿಯಾದ ಗಂಡು ಹಜಾಮನಿಗೆ ಶರಣು ಹೋಗಿರಬೇಕು (ಕಣಕ್ಕ. ೬೯).

**ಹೆರಳು ಹಾಕು, ಹೆಳಲು ಹಾಕು** — ಜಡೆಯನ್ನು ಹಾಕು, -ಹೆಣೆ :

ಹೆರಳು ಹಾಕದ ನಿಬಿಡವಾದವಳ ಕೇಶರಾಶಿಯು ಹಿಂದಿನ ಭಾಗವನ್ನೆಲ್ಲ ಕತ್ತಲೆಯಾಗಿ ಮಾಡಿದ್ದಿತು (ಕಹಾಕ್ಯಂ. ೪೯) : ಅತ್ತೆಯು . . . ದಿನಾಲು ಅವಳಿಗೊಂದೊಂದು ಬಗೆಯ ಹೆಳಲು ಹಾಕಿ . . . ಪತ್ತಲಗಳನ್ನು ಉಡಿಸುವಳು (ಹೂಅಸಿ. ೯) ; ಮುಂದಾ ತನ್ನ ಕೋಣೆಯಲ್ಲಿ ಕುಳಿತು ಹೆಳಲು ಹಾಕಿಕೊಂಡು ಕೂದಲಿಗೆ ಕುಂದಿ ಹಾಕಿ ಹೆಣೆದುಕೊಳ್ಳುತ್ತಿದ್ದಳು (ಇಕ್ಕಿ. ೨೪೬). 'ಪಿಣಿಲ್₂' ಪರಾ.

[ಪೆಣ್₁ + – ಅಲ್₂. / ತಮಿ. ಪಿಣ್ಯಯಲ್]

**ಪೆಣಲಿಕ್ಕು** (ಕ್ರಿ). ಜಡೆಯನ್ನು ಹೆಣೆ ; ಹೆರಳು ಹಾಕು : ಕುರುಳ ನಾರಿಸುತೆ . . . ತ್ವರಿತ ತ್ರಿಭಾಗವಂ ಗೈದುವುನ್ನತಕೇಶದಿರದೆ ಪೆಣಲಿಕ್ಕಿ (ಕವಮೋ. ೨೬-೬೬). [ಪೆಣಲ್ + – ಇಕ್ಕು]

**ಪೆಣಲು** 'ಪೆಣಲ್' ನೋ.

**ಪೆಣವೊಗೆ** (ನಾ). ಹೆಣವನ್ನು ಸುಡುವುದರಿಂದ ಉಂಟಾಗುವ ಹೊಗೆ,– ಧೂಮ : ಪೆಣವೊಗೆ ಸುತ್ತಿ ನರಲೋಕವೆಲ್ಲಮಂತಕ ದಾವಾರದೊಳಿ ಬೆಂದು ಧೂಮಮಯಮಾದ ದಿಶಾಭೂಮಂ ಕವಿದೀಕಾಭೀಳಮಾಗೆ (ಶಾಂತಿಪು. ೬-೯೬ ಕ) ; ಮಾಗುವಟ್ಟುವು ಪಿಡಪ ಪಕ್ಕಿಗಳ್, ಪೆಣವೊಗೆಗೆ ಪೇಸಿದೋಲಂತೆ (ಕ್ರೀಣಾಪಟಾ. ೬೯೯-೨೩). [ಪೆಣ + ಪೊಗೆ]

**ಪೆಣಸು₁** (ಕ್ರಿ). ಹೋರಾಡು ; ಕಾದು ; ಪೆಣಗು : (೪).

[<ಪೆಣಗು ?]

**ಪೆಣಸು₂** (ನಾ). ಪ್ರಯತ್ನ (?) : 'ಬಲ್ಪೆಣಸು' ಪರಾ.

[<ಪೆಣಸು₁]

**ಪೆಣಚಿಸು** 'ಪೆಣಚಿಸಂ' ನೋ.

**ಪೆಣಬು** 'ಪೆಳಬು₁' ನೋ.

**ಪೆಣೆ₁, ಹೆಣೆ₁** (ಕ್ರಿ). ೧. (ರೇಷ್ಮೆ, ಉಣ್ಣೆ ಮುಂತಾದ ದಾರಗಳಿಂದ) ಹೆಣಿಗೆಯನ್ನು ಹಾಕು : "ಪೆಣ–ವಿಶ್ರಬಂಧನೇ(ಹೆಣೆ), ಸಂಯೋಗೇ ಚ" (ಶಬ್ದಾ) ; ಪಂಚಾಯುಧದ ಪುಲ್ಲಿಗೆಯ ಕೊಂಗಲ ಸೆಜಂಗು ನಾಂದು ಪಿಣಿಲೇಜಾಡಲ್ಕಿದ ವೇಣಿಯೊಳ್ಪೆಣೆದು ಮಿಂಚಿನಂಚಿವರಸು ಕಾರ್ಮುಗಿಲ ಬಿಬಲು ಕಾಲಂಜಿಜಾಡಂತೆ (ಕಹಂಪು. ೨-೨೯ ಪ). ೨. ತಳುಕು ಹಾಕಿಕೊಳ್ಳು : ನೆಜಿದಿರೆ ಸಂಕಲೆವಂದದ ತೆಱದಿಂ ಪೆಣೆದಿರ್ದ ನಾಗರಜ್ಜುಗಳ್ಗಳ್ಲಂ (ಶಾಂತಿಪು. ೮-೫೦) ; ಪೆಣೆದು ಮೋಣದ ಬೋಟಿಮೊರದು ಮೈಸೋಂಕಿ ಸಾರದಣೆಗೈದವಟ್ಟರಿಯೆಂಬೆ (ಕಕ. ೧೧-೯೬) ; ಆನೆಮರಮೆಣಗೊಂಡಿಭುಂಗಳಂ ಭರಿಕ್ಕೈಗಳ್ಪೆಣೆದಿರೆ ಕಾದಿಸಿ ತಾಮುಂ ಪೊಣಾರ್ದರಿಭಾರೋಹಕರ್ (ರಾಜಶೇ. ೦೪-೯೬). ೩. ಒಂದಕ್ಕೊಂದು ಸೇರಿ ತಡಿಕೆಯಾಗು : ಱಣೆಯಿಂ ಪೆಣೆದುದೊ ಗಗನಾಂಗಣಮೆನೆ ಱಣೆಗಳನಿರ್ವಲದ ಬಿಲ್ಲ ವೀರರ್ ಕಜಿದರ್ (ಜಗಂ. ೬-೫೯). ೪. ಆವೃತವಾಗು ; ಆವರಿಸಲ್ಪಡು : ಕಣೆ ಕಣೆಯು ತಾಗೆ ಪೊನ್ನಿದ ಕಿಡಿಯು ಗಡಣದಿಂ ಪೆಣೆದುದು ಸಮಸ್ತ ಜಗಮೆನಲ್ (ಕಬಪು. ೪೦-೬). ೫. ಸೇರು : ಹೊಂದಿಕೊಳ್ಳು ; ಒಂದಾಗು : "ಪೆಣ–ವಿಶ್ರಬಂಧನೇ(ಹೆಣೆ), ಸಂಯೋಗೇ ಚ" (ಶಮದ) ; ಗಭೀರಧೀರಮುರಜಧ್ವನಿ ಯೌವನಮತ್ತಕಾಮಿನೀಮೃದುಪದನೂಪುರಕ್ವಣಿತದೊಳ್ ಪೆಣೆದೊಂದಿರೆ (ಕಂಶಪಾ. ೬-೨೭) ; ಅಗ್ನಿಕುಂಡದೊಳ್ ಲಾಜೆಯುಮಂ ಕ್ರಮದಿಂದಮಿಕ್ಕಿದಲ್ ಪೆಣೆದ ಮನಃಪ್ರಣಯಕ್ಕೆ ಮುಂದಿಗೆಯಿಕ್ಕುವ ತೆಱದಿಂ (ಶಾಂತಿಪು. ೬-೦೭) ; ಮಾತುಮತಮೌದುಂಬರಮುಂ ಪೆಣೆದಿರೆ ಬಡಗಬ್ ದೊರೆಕೊಳ್ಳಂ . . . ಜಳಂ (ಲೋಕೋಪ. ೫-೦೯). ೬. ಸೇರಿಸು ; ಕೂಡಿಸು : ತಾನ್ ಪೂಣ್ದ ಧರ್ಮಮುಮನ್ ತನ್ನಯ ಬಾಟೆಯೊಳ್ ಪೆಣೆದು (ಶಾಂತಿಗೂ. ೮೯-೩೩೬). ೭. ತುಂಬು ; ಆವರಿಸು : ಮಣಿಯ ವಿರಹಾಂಧಕಾರಂ ಕಣಿಪೋ ಜಗತ್ತಿಯ ನೇತ್ರಪುತ್ರಿಕೆ ಮಿಯ್ಯೊಳ್ ಪೆಣೆಯೆ ಪುಲಕಾಳಿ ಚೂಡಾಮಣಿಯಂ ಕೊಟ್ಟಂ ನೃಪಂಗೆ ಪವಮಾನಸುತಂ (ಕಂರಾಪಾ. ೧೧-೦೬೪). ೮. ನಿಕಟಗೊಂಡು ಕಾದು,– ತಾಗು,– ಪೆಣಗು : ಕನಲ್ದೊನಲ್ದು ಮಾಣದೆ ಪೆಣೆದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ (ಕಂಕಿಶಾ. ೮-೩೦) ; ಪೆಣೆದು ಬಿಲ್ವಿಲ್ಲಂ ತೇರ್ ತೇರನಾನೆಯುಮಾನೆಯಂ . . . ನಿಂದಣ್ಪ ಮಣ್ಮುಟ್ಟಯಪ್ಪುದುಂ (ಶಾಂತಿಪು. ೩-೩೬) ; ಮಹಾರಾಜನ ಬೆಸದಲ್ ಕನ್ನಮ್ಮನ ಕುದುರೆಯಂ ಪೆಣದಿಱಿದು ಪಡೆವಳ ಜೋಗಯ್ಯು ಸರ್ಗ್ಗಕೆ ಸನ್ದ (ಎಕ. V. ಮುಂಜರಾ. ೯೩-೧೯ ; 1022).

**ಹೆಣೆ₁** : ೧. ದಾರಗಳನ್ನು ಹೆಣೆದು (Knit) ಬಟ್ಟೆಗಳನ್ನು ತಯಾರಿಸಲಾಗುತ್ತದೆ (ಗೃಕಾ. ೬೨) ; ಅವಳು ಕಾಲುಚೀಲ ಹೆಣೆಯುತ್ತ . . . ನಿಂತಿದ್ದಳು (ಕೃಸಕು. ೦೯೨). ೬. ನಾಡಿನ ಚರಿತ್ರೆಯನ್ನು ಪೌರಾಣಿಕ ಕಥಾನಕಗಳಲ್ಲಿಯೇ ಹೆಣೆದು ಹೇಳುವ ಹೊಸಪ್ರಕಾರವೊಂದು ಈ ಶತಮಾನದಲ್ಲಿ ಮೊದಲಾಯಿತು (ಸಾಹಿಚ. ೦೫) ; ಭೂ ವ್ಯೋಮ ಪಾತಾಳ ಒಂದಾಗಿ ಹೆಣೆದಿರುವ (ಅಕಳು. ೪೨೦-೯). ೯. ಹೂವು, ಮಣಿ ಮುಂತಾದುವುಗಳನ್ನು ಪೋಣಿಸು : ಬಾಸಿಂಗ, ದಂಡೆ ಹೆಣೆಯುಲು 'ವಾಲಿಯವ'ನೂ ಹೂಗಾರನೂ ಬೇಕು (ಕನ್ನಡಾ. ೬೬) ; ಕನ್ನಡಿಯ ಪೂವೀಡು ಹೆಣೆದು ಕೊಡಲೇಂ ಕಾಣ್ಕೆ (ಕಾಲಪಿ. ೨೨-೫). ೧೦. ಜಡೆಯನ್ನು ಹಾಕು ; ಹೆರಳು ಹಾಕು : ಎರಡು ಕೈಯುಲು ಬಾಚಿ ಜಡೆಯಂ ಹೆಣೆದು(ಬಸಪು.೪೬-೬೦). ೧೧. (ಅಲಂ) (ಅಸ್ವಾಭಾವಿಕವಾಗಿ) ರಚನೆ ಮಾಡು ; ಹೊಸೆ : ಕಂಡ ಕಂಡವರ ಬಗ್ಗೆ ಸಿಕ್ಕ ವಿಷಯದ ಮೇಲೆ ಪದ ಹೆಣೆದು ಚೆಲ್ಲಿದ್ದಾನೆ (ಸಾಹಿಚ. ೧೧೦). ೧೨. ಹೂಡು ; ಏರ್ಪಾಡು ಮಾಡು : ಮೈಸೂರಿನ ಅರಮನೆಯಲ್ಲಿ ಒಡೆಯರಿರುವಾಗಲೇ ಅವರನ್ನು ವಧೆ ಮಾಡಿಸುವ ತಂತ್ರವನ್ನು ಹೆಣೆದರು (ಚಳ. ೨೩).

**ಹೆಣೆದುಕೊಳ್ಳು**=ಸೇರಿಕೊಳ್ಳು ; ಒಂದಾಗು ; ಬೆರೆ : ಸಂಗೀತವು... ಎಲ್ಲಾ ಜನತೆಯ ಜೀವನದಲ್ಲಿಯೂ ಹೆಣೆದುಕೊಂಡಿದೆ (ಶಾರತ. ೩೬೩) ; ರಸಪೋಷಣೆಯನ್ನು ಚೆನ್ನಾಗಿ ಮಾಡಬಲ್ಲ ಅಕ್ಷರಯುತ ಶಬ್ದಗಳು ಹಾಡುಗಳಲ್ಲಿ ರಮ್ಯವಾಗಿ ಹೆಣೆದುಕೊಂಡಿವೆ (ಜಗಲ. ೬೦). [ದೇ. ॥ ತಮಿ. ಪಿಣ್ಯ ; ಮಲ. ಪಿಣೆ, ಪಿಣಯು ; ತೆಲು. ಪೆನಯು, ಪೆನು]

**ಪೆಣೆ₂, ಹೆಣೆ₂** (ನಾ). ೧. ಕೂಡಿಕೊಂಡಿರುವುದು ; ಹೆಣೆದುಕೊಂಡಿರುವ ಸ್ಥಿತಿ : (೪). **ಹೆಣೆ₂** : ೧. ಕುಜಾತದ ಕೂಟ – ಮರದ ಹೆಣೆ (ಜಜನರ. ೬. ೦೯೯). ೨. ಕಣದಲ್ಲಿ ಧಾನ್ಯವನ್ನು ಒಕ್ಕುವುದಕ್ಕಾಗಿ ಕೆಲವು ಎತ್ತುಗಳನ್ನು ಸಾಲಾಗಿ ನಿಲ್ಲಿಸಿ ಸರಪಣಿಯಂತೆ ಕಟ್ಟಿದುದು : ಆರೆಂಟು ಎತ್ತುಗಳನ್ನು ಉದ್ದಕ್ಕೆ ನಿಲ್ಲಿಸಿ ಸರಪಣಿಯಂತೆ ಬಿಗಿಯುತ್ತಾರೆ. ಇದಕ್ಕೆ "ಹೆಣೆ" ಎಂದು ಹೆಸರು . . . ಒಬ್ಬ ಆಳು ಇಡೀ ದಿನ ಹೆಣೆಯ ಹಿಂದೆ ಸುತ್ತುತ್ತಿರಬೇಕಾಗುತ್ತದೆ (ಜಾಜಾನ. ೩೪).

[<ಪೆಣೆ₁. / ಮಲ. ಪಿಣ ; ತೆಲು. ಪೆನ]

**ಪೆಣೆಗೊಳ್** (ಕ್ರಿ). ಸೇರು ; ಒಂದಾಗು ; ಬೆರೆ : ಸಿರಿ ನೆಲೆಗೊಂಡುದಲ್ಲಿ ಮದನಂ ಮನೆಗಟ್ಟಿದನಲ್ಲಿ . . . ಗುಣಂ ಪೆಣೆಗೊಂಡುದಲ್ಲಿ (ಸೂಕ್ತಿಸು. ೪-೨೬) ; ತಮಗದಱೊಳ್ ಪೆಣೆಗೊಂಡಿರೆ ಸಂಬಂಧಮುಮೆಣಿಸುವ ರಾರವಜೀನಪ್ಪ ಸಂತಸದೊಳ್ಪಂ (ಜಅಪು. ೪-೧೩೦). [ಪೆಣೆ₁ + ಕೊಳ್₁]

**ಪೆಣೆಗೊಳಿಸು** (ಕ್ರಿ). ಕೂಡುವಂತೆ ಮಾಡು : ಜೊತೆಗೂಡಿಸು : ಒಣವೆಣದೊಳ್ ಪೆಣೆಗೊಳಿಸಿಯುಮ್ಮುಮಂ ಮಸಗೊಂಬೀ ಪೆಣದಿನಿಗಳ ಬಸವಾನೆ ಬಾಬ್ಬಿಣಂಗಳಮಗಲ್ಲಿ ರಸಿಕರಲ್ಲಿಯು ನೇಹಃ (ಜಅಪು. ೬-೦೩೬).

[ಪೆಣೆಗೊಳ್ + – ಇಸು₁]

**ಪೆಣೆದಾವಣಿ** (ನಾ). ಹುರಿಗಳನ್ನು ಸೇರಿಸಿ ಹೊಸೆದು ಮಾಡಿದ ಹಗ್ಗ,– ಪಾಶ : ಅಂಬುಜಸೂತ್ರಮೆಂಬ ಪೆಣೆದಾವಣಿ(ಣ) [ಪಾಠಾಂ. ಪೆಣದಾಣ,ಣಿ] ಯಂ ಪಱಿದಾವಲೆಂಬ ಬಾಬ್ಬಿಂಬಮನೊತ್ತಿ ಕಿಬ್ಬಿ (ಕಾವ್ಯಾವ. ೬೬೯ ; ಕಹ. ೪-೨೪೭ ನೋ). [ಪೆಣೆ₁ + ದಾವಣಿ₁]

**ಪೆಣಲಿ** (ನಾ). (?) : ಮತ್ತ್ರ ಕೀಳ್ದು ತಿಪಾತ್ರದೊಳ್ ಪೆವೆತ್ತ ಜಾಪದ ಪೆಣಲಿಯಂತಾಜ್ ತೆತ್ತಿಸಿದ ಸೂತ್ರಾನುರೂಪದ ಬೊಂಬೆಯಂದದಲಿ ಯುಕ್ತಿಯಿಂ ಪ್ರಾಣಾದಿಗಳು ನಿಜಕರ್ತರ್ಗವಂ ಲಕ್ಷಿಸುವ ದೆಸೆಯಿಂ ವ್ಯರ್ಥ ಕೇಳ್ (ತತ್ತ್ವರು. ೩-೨೦). [ ? ]

**ಪೆಣೆವಾವು** (ನಾ). ಒಂದನ್ನೊಂದು ತೆಕ್ಕೆಹಾಕಿಕೊಂಡಿರುವ ಹಾವು : ತಳಕು ಹಾಕಿಕೊಂಡಿರುವ ಹಾವು : ಜನ್ನಪೆಣೆವಾವಿನಂತೆ ಪೆಣೆದ ಕಯ್ಯ ಕಾಲ ಕೂಂಟದ ಉಂಭಸ್ಥಳದೆಡೆಗಳೊಳ್ ಪೆಣ್ಣೊದವದ ಬಟ್ಟನಂತ ನುಣ್ಣ ನುಸುಳ್ದು (ಕರ್ಣಾಟ. ೬-೮೯ ಕ) : ತಲೆಯಸತಿಘಟದಿಂ ಬಾಗಿದ ಪೆಣೆವಾವುಗಳನಿವಿರಿದಂ ಸೊಗಸಿದುವು (ಅಪರಾ. ೧೦ ೩೨).
[ಪೆಣ್$_1$ + ಪಾವು$_1$]

**ಪೆಣ್ಕೊರಂಗು** (ನಾ). ಹೆಣ್ಣಿನ ವ್ಯಥೆ,-ಅಳಲು : ರಾವಣನ ಪತಿವ್ರತೆಯ ತವದ ತೀವ್ರಪ್ರತಪದ ರೌದ್ರವಂ, ಪೆಣ್ಕೊರಂಗದೇನುದೇವೇದಯ್ಯನ್ನವುದು ತರವೊ . . . ನಮ್ಮ ದಾನವಕುಲದ ಬಲದ ಪೌರುಷಕೆ ? (ಶ್ರೀರಾಮಾ. ೩೬೩-೩೮೩). [ಪೆಣ್ + < ಕೊರಂಗು]

**ಪೆಣ್ಗಜ** (ನಾ). ಹೆಣ್ಣು ಆನೆ : ಪಿಡಿ : "ಪಿಡಿ ಸವಡಿಯೆನಲ್ ಪೆಣ್ಗಜ" (ಬಾರಿ. ೩೩). [ಪೆಣ್ + ಗಜ]

**ಪೆಣ್ಗಡಣ** (ನಾ). ಹೆಂಗಸರ ಗುಂಪು : ಸ್ತ್ರೀಸಮೂಹ : ಸಡಗರದಿಂ ಕೃಷ್ಣ ಸೋಳಸಾಸಿರ ಪೆಣ್ಗಡಣದಿಂ ಪೊಕ್ಕನಾಲಯವ (ವಿರ.ಚರ. ೪-೬೬).
[ಪೆಣ್ + ಗಡಣ]

**ಪೆಣ್ಗತ್ತೆ**, ಹೆಂಗತ್ತೆ, ಹೆಣ್ಣುಗತ್ತೆ (ನಾ). ಕತ್ತೆಯ ಜಾತಿಯಲ್ಲಿ ಹೆಣ್ಣು : ವೀಣೆಯ ಬದಿರ ಮೇಗೇಱುವಕಾಶದೊಳಿದುವ ವಿದ್ಯಾಧರ ಬಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ (ವಡ್ಡಾರಾ. ೯-೦). **ಹೆಂಗತ್ತೆ** : "ರಾಸಭಾ – ಹೆಂಗತ್ತೆ" (ಚಿತ್ರಾ. ೦೩೭). **ಹೆಣ್ಣುಗತ್ತೆ** : "ದೂರಂಗವಮಾ–ಹೆಣ್ಣುಗತ್ತೆ" (ಚಿತ್ರಾ. ೩೮). [ಪೆಣ್ + ಕತ್ತೆ$_1$ (<ಕತ್ತೆ)]

**ಪೆಣ್ಗಳ್ಳ**, ಹೆಂಗಳ್ಳ (ನಾ). ಹೆಂಗಸನ್ನು ಕದ್ದು ಒಯ್ಯುವವನು : ಆ ದಿನದ ಪೆಣ್ಗಳ್ಳನೇನಾದನೆಂದೀ ದಿನದ ಹಸುಗಳ್ಳಂ ನೀಂ ಬಗೆಯಲ್ಕೆಡಾ (ರಾಮಾಶ್ವ. ೧೧೨-೨೨). **ಹೆಂಗಳ್ಳ** : ಈ ಹೆಂಗಳ್ಳನನು . . . ರಕ್ಕಸನ ಎಳ್ಳಿನಿತು ಕಡಿಖಂಡಮಾಡಿಯೆ ಹೊಳ್ಳುವಾಜಿಸಲೂದುವೆನು (ತೊರವೆ. ೩-೬-೩೬) : ಎಲ್ಲಿಯ ವೃತಿ ಪಾರ್ಥನೆಂಬವನೆಲ್ಲಿಯುವ ನಿನಗುಂಟು ಛಲವಿದ ಬಲ್ಲನೀಕ್ಷಿಸಿ ಬಹೆನು ಹೆಂಗಳ್ಳನನು ಸಾರು (ಕಿರಾತ. ೧೦-೬೨-೩೯).
[ಪೆಣ್ + ಕಳ್ಳ$_1$]

**ಪೆಣ್ಗಾಡಿ** (ನಾ). ಹೆಣ್ಣಿನ ಸೌಂದರ್ಯ, -ಸೊಬಗು : ಪರಂಬಡೆವನೋ ಪೆಣ್ಗಾಡಿಯುಮಂ ಚಂದ್ರಮಂ ನನೆಯುಂಬಂ ತಪೆ ನೋಂತು ಪೆಣ್ಣಾದಿವನೆಂಬಂತಾಕೆ ಕಣ್ಗೊಪ್ಪಿದಳ್ (ಅಜಿತ. ೩-೯೬). [ಪೆಣ್+ಗಾಡಿ$_1$]

**ಪೆಣ್ಗಾಡು** (ನಾ). ಹೆಂಗಸರ ಸಂದಣಿ ಇರುವ ಪ್ರದೇಶ : ಮುನಿನ್ನುಗಾ ವಳಿಯ ಬೇಂಟೆಯುಂ ತಾನಾದರೆಂದು ಸಿಂಗರದ ಪೆಣ್ಗಾಡಿ[ಪಾ. ಪೆಣ್ಗಾಡಿ] ನೊಳ್ ವಿಸಾಸಾಂಕ ನೃಪತಿ ಕಟ್ಟಿಸಿದ ಬೆಳ್ಳಿರಂಗಳಿಗಬೇಕೆಂಬಂತಿರ (ಕೃ.ವಿಜಾ. ೬-೨೦). [ಪೆಣ್+ಕಾಡು$_1$]

**ಪೆಣ್ಗಾಸೆ** (ನಾ). ಹೆಂಗಸರು ಹಾಕುವಂತೆ ಹಾಕುವ ಕಚ್ಚೆ : ಕಟ್ಟಿದ ಪೆಣ್ಗಾಸೆ ಮುಂದಲೆಚುಂಗಿಂದ ನಟ್ಟುವರಾಯತವಾಂತು ಬೆಟ್ಟದೊಳವರೇಂದ್ರ ಕುಣಿದಾಡುತಿರ (ಛಂದ. ೭೦-೯೯). [ಪೆಣ್ + ಕಾಸೆ$_1$]

**ಪೆಣ್ಗಣೆ** 'ಪೆಣ್ಗಳಿ' ನೋ.

**ಪೆಣ್ಗಿಳಿ**, ಪೆಣ್ಗಣಿ, ಹೆಣ್ಗಿಳಿ, ಹೆಣ್ಣುಗಿಳಿ (ನಾ). ಗಿಳಿಯ ಜಾತಿಯಲ್ಲಿ ಹೆಣ್ಣು ; ಸಾರಿಕೆ : "ಪುರುಳಿಯೆಂದುಂ ಸಾರಿಕೆಯೆಂದುಂ ಪೆಣ್ಗಿಳಿ" (ಶಬ್ದಮ. ೩೩-೨೦೩) ; ಪೆಣ್ಗಿಳಿ ಕಾಯಜನುಪಹತಿಯಿಂದಮುದಂ ನೀಗು ವುದರಱಿಂ ನಾನು ಸಾಯದೆ ಸುಮ್ಮನಿರೆನು (ಅಮೂಶಾ. ೨-೩೯) ; ಮರದ ತುದಿಯ ಕೊಂಬಿನೊಳಿ ವ್ಯಸನವಾಗಿಯೊಂದಿನಿವ ಪೆಣ್ಗಿಳಿ . . . ಶೋಕಿಸುತಿರ್ಪುದು (ಶಬ್ದಮ. ೩೦-೪). **ಪೆಣ್ಗಣೆ** : ಕಳವಳಿಸಿ ವಿರಹದಲಿ ಪೆಣ್ಗಣೆ ಸುಳಿಸುಳಿದು ಸಿಂದಿಸುತ (ಅನಂತ. ೦ ೬೦ ೯). **ಹೆಣ್ಗಿಳಿ** : ಅವನ ಒತಲು ಚಿಲ್ಲಿನ ಕದಿರು ತಾಂಬಿನ ಹೊಲಸಂತಿದ್ದು ಹೆಣ್ಗಿಳಿಗಳನ್ನು ಕರೆಯುವಂತಿತ್ತು (ಕಾವೇರಿ. ೨ ಕಥಾಸಾರ). **ಹೆಣ್ಣುಗಿಳಿ** : "ಪ್ರಿಯವಾದಿನೀ–ಹೆಣ್ಣುಗಿಳಿ" (ಚಿತ್ರಾ. ೯೯). [ಪೆಣ್ + ಗಿಳಿ]

**ಪೆಣ್ಗುದುರೆ**, ಹೆಂಗುದುರೆ, ಹೆಣ್ಣುಕುದುರೆ, ಹೆಣ್ಣುಗುದುರೆ (ನಾ). ಕುದುರೆ ಜಾತಿಯಲ್ಲಿ ಹೆಣ್ಣು : ಪಾರ್ಥನ ತುರಂಗಮದು ಪೆಣ್ಗುದುರೆ ಯಾಗಿ . . . ಸ್ತ್ರೀರಾಜ್ಯಮಂ ಪೊಕ್ಕುದು (ತ್ರಿ.ಚರ. ೧೩ ಸಂಧಿ) : ಪೆಣ್ಗುದುರೆಯಾಗಿ ಪುಲಿಯಾಗಿ ವಿಕ್ರಮದಿಂದೆ ಪಾರ್ಥನಂ ಬೆದಱಿಸಿ . . . ಮುನ್ನಿನಂತೆ ನಿಜಮಹಿತಮಹಾಸ್ತ್ರಮಾದತ್ತು (ಕೃ.ವಿಜಾ. ೧೩-೬). **ಹೆಂಗುದುರೆ** : ನೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ಸಕಲ ಕಾಲಿನ ಹೆಂಗುದುರೆಗಳು ನಿಂತುವು (ಪುಸರು. ೩೩೩). **ಹೆಣ್ಣುಕುದುರೆ** : "ವಾಮಿಕಾ, ಅಶ್ವಾ, ಬಡಬಾ–ಹಿ ಹೆಣ್ಣುಕುದುರೆ" (ಬಿಲ್ಹ.ಅ. ೨೫೦) ; ಗಂಡುಕುದುರೆ ಆ ಬಂದ ಹೆಣ್ಣುಕುದುರೆಯನ್ನೂ . . . ಓಗ್ಗಿನಿಂದ ಬಳಿಸಾರಿತು (ಕುರಿಚ. ೪೨೪). **ಹೆಣ್ಣುಗುದುರೆ** : "ಬಡಬಾ–ಹೆಣ್ಣುಗುದುರೆ" (ಚಿತ್ರಾ. ೧೦೩). [ ಪೆಣ್ + ಕುದುರೆ ]

**ಪೆಣ್ಗೂಸು**, ಪೆಂಗುಸು, ಪೆಂಗೂಸು, ಹೆಂಗಸು, ಹೆಂಗುಸು, ಹೆಂಗೂಸು, ಹೆಣ್ಣುಕೂಸು, ಹೆಣ್ಣುಗೂಸು (ನಾ). ೧. ಹೆಣ್ಣು ಮಗು: ಮುನೀಂದ್ರು ನಿಂದ್ರಿಯದೊಳೊಗೆದ ಪೆಣ್ಗೂಸುಮಂ ಗಂಡುಗೂಸುಮಪ್ಪವಿಱ ಕೆಲ ದೊಳಿರ್ದ ದಿವ್ಯಶರಾಸನಶರಂಗಳುಮಂ ಕೊಂಡು ಕೊಂಡುಪೋಗಿ (ಪಂಪಭಾ. ೨-೩೩ ಕ) : ಗರ್ಭದ ಪೆಣ್ಗೂಸಿಂಗಂ ಗರ್ಭಿಣಿಗಂ ಬಾಧೆ ಒಂಗೆ ಪೆತ್ತಾಗಡೆ ಗರ್ಭಾರ್ಭಕನನುಮ್ಮೆನೆಂಬೆ ದುರ್ಭಾವನೆಯಂ ವಿದೇಹಿಯಂ ಕಾದಿರ್ದಂ (ಪಂಪರಾಮಾ. ೯-೦೩), ಮಾಡಿದುದು ಚಿಂತಾಕ್ರಾಂತತೆಯನೆಪಾರೀ ಮಗಳ ಬಳವಿ ತುದಿಯೋಳೀ ತೆಱನೆ ಪೆತ್ತಪರ್ಗೆ ಪೆಣ್ಗೂಸಂ (ಧರ್ಮಾ. ೬-೩೯). ೨. ಸ್ತ್ರೀ : ವನಿತೆ : ಇಂತಱುವರ್ ಪೆಣ್ಗೂಸುಗಳಿಂತಪರ್ಗಳಿಪ್ಪ ವಿಷಯಮಂತಾಮುಭೋಗಂಗಳನನುಭವಿಸುತ್ತುಂ ಕಾಲಂ ಸಲೆ (ವಡ್ಡಾರಾ. ೦೦೩-೦೩); ಈ ಪೊತ್ತಿನೊಳೀ ಪೆಣ್ಗೂಸೀ ವಸವನಮೊಸೆಯೆ ಪೋಪುದೆಲ್ಲ ವಿದಫಟವ್ಯಾಪಾರಂ (ಸುಕುಮಾ. ೬-೨೦), ಪಸುಗೂಸು ಪೋಲೆಯಂ ಪೆಣ್ಗೂಸು ತನರ್ಪುನೆಮಂ . . . ನೆನೆದಂತು (ಧರ್ಮಾಮೃ. ೩-೦೯೦). **ಪೆಂಗುಸು** : ೨. ಪೆಂಗುಸೆನುತನುಮಾನದಿಂದ ಮಹಿಚಿಸಲಪಳು ಒಂಗ ದೆನ್ನಂ ಪೊಡೆಯೆ (ಪಂಪಾಶ. ೩-೦೯-೨೨). **ಪೆಂಗೂಸು** ; ೨. 'ಒಳು ಪೆಂಗೂಸು' ಪರಾ. **ಹೆಂಗಸು** : ೨. ಜೊತೆಗೆ ಬಂದ ಹೆಂಗಸೂ ಹಾಗೆಯೇ . . . ಶೋಭಿಸುವ ವ್ಯಕ್ತಿತ್ವವನುಳ್ಳವಳು (ಅಪೂರ್ವ. ೧೫೦) : ಅಳುವ ಹೆಂಗಸನ್ನೂ ನಗುವ ಗಂಡಸನ್ನೂ ನಂಬಬೇಡ (ಗಾದೆ). **ಹೆಂಗುಸು** : ೨. ಹೆಂಗುಸುವೆಂತೆಂದು ಬಗೆವ (ಅಕ್ಕ. ೨೯-೬೯) ; ಕಾವುದೆನ್ನನು ಹೆಂಗು ಸಲ್ಲಾ (ಕುಮಾ.ರಾ. ೦೫-೨೮) : ಹೆಂಗುಸಿವಳಿವಳಸುವನುಚ್ಚುವುದಂಗವೇ ಕ್ಷತ್ರಿಯರಿಗೆ (ತೊರವೆ. ೧-೧೧-೯); ಹೆಂಗುಸರಂದರೆ . . . ಅಡುಗೆಮನೆಯಲ್ಲಿ ಹೂಳಿಡುವ ಕಾಲವು ಮುಗಿದುಹೋಯಿತು (ಮುಕ್ತಿ. ೦೫೦). **ಹೆಂಗೂಸು** : ೨. "ಭಾಮಿನಿ . . . ರಾಮೆ ಪರವರ್ಗನಿಯೆನಲ್ಕೆ ಹೆಂಗೂಸನಿಕ್ಕು" (ಶಬ್ದಮ. ೯೯ ೦); ನಾವಾದಲ್ಲಿ ಹೆಂಗೂಸೆಬ ಹೆಸರಾದಡೇನು ಭಾವಿಸಲು ಗಂಡುರೂಪು ಬಸವ ನಿಮ್ಮ ದಯದಿಂದ (ಮಹಾದೇ. ೧. ೬೨-೦೬೯) ; ನಾವು ಹೆಂಗೂಸಲ್ಲದೆ ಇರ್ದುದಿಲ್ಲೆಂಬ ಮಾತಂ ಕೇಳ್ದು (ಬಸವ ೦೨ ೦೦೩) ; ಕಿಚ್ಚಿ ನೊಳಗುಲ್ಲಸದಿಂ ಬೀಳುತ ಸೆಜಗನಂತೋಲಸಿಸುವಾ ವೈಶೀದ ಹೆಂಗೂಸಿ ನಂದದಲಿ ಹರಣಾಪಂ ತ್ಯಜಿಸುವೆನೆನುತ (ಬಸವ. ೨೦. ೨೨). **ಹೆಣ್ಣುಕೂಸು** : (೪). **ಹೆಣ್ಣುಗೂಸು** : ೧. "ಬಲ್ವಾ = ಹೆಣ್ಣುಗೂಸು" (ಕಾಶ್ಯ.ಅ.)

**ಪೆರ್ಗಾಗಾವಮಾಸಿ** (ನಾ). ಒಂದು ಊರಿನ ಹೆಸರು : ಪೆರ್ಗ್ಗಾಗಾವಮಾಸಿ ಗ್ರಾಮದ ಪಶ್ಚಿಮಭಾಗ ಕೃತಾಕೃತಕ್ಷೇತ್ರಾ (ಎಕ. XI. ದಾವಣ. ೬೬-೨೯ : ೧೧೬೪). [ ? ]

**ಪೆರ್ಗಾಡು**, ಹೆಗ್ಗಾಡು (ನಾ). ದಟ್ಟವಾದ ಅಡವಿ ; ಗೊಂಡಾರಣ್ಯ : ಬಾಗೆ ತೇಗು ಪನೆ ಕವ್ವುರಮುಸಳೆಯೆನಿಪ್ಪುವಿರ್ಪುವಾ ಪೆರ್ಗಾಡೊಳ್ (ರಾಜಶೇ. ೩-೩೪) : ಇದು ದವಶಿಖಿಯಿದು ಕಿಂಶುಕಂ...ಇದು ಮದಗಜ ವೀಕ್ಷಿದು ಗಂಡಶೈಲವೆಂದೆಂಬುದು ತೀವುದಶಕ್ಯಮೆನಿಪುದಾ ಪೆರ್ಗಾಡೊಳ್ (ಶಬರ. ೩-೩೦). **ಹೆಗ್ಗಾಡು** : "ಮಹಾರಣ್ಯಂ, ಅರಣ್ಯಾನೀ–ೞ ದೊಡ್ಡ ಅಡವಿ, ಹೆಗ್ಗಾಡು, ಗೊಂಡಾರಣ್ಯ" (ಸಿದ್ಧ್ಯಂ ೬. ೦೨೯) : ಈ ಹೆಗ್ಗಾಡಿನಲ್ಲಿ ಯಾವ ಮದ್ದನ್ನರೆಯಬಹುದು? (ಶೀರಹಂ. ೯೯) : ಸುತ್ತಲೂ ಹೆಗ್ಗಾಡೂ ಅಡಕೆತೋಟಗಳೂ ಬೆಳೆದು ಸ್ಥಳ ಏಕಾಂತವಾಗಿತ್ತು (೧೩೩ ಹು. ೩೯೪). [ ಪೆರ್ (<ಪಿರಿದು₁) + ಕಾಡು₂ ]

**ಪೆರ್ಗಾಲ್** (ನಾ). (ನೀರು ಹಾಯಿಸಲು ಮಾಡಿರುವ) ದೊಡ್ಡದಾದ ನಾಲೆ,–ಕಾಲುವೆ : ಲೀಲೆಗಾರ್ತಿಯರುಮ್ಮುತನಾಸ್ಥೆಯಿಂದ ಪೆರ್ಗಾಲ ಹೊಂದೊಂಬನು ನೆಗಹೆ . . . ಸುರಿದುದು ಸಲಿಲ (ಹೊಯಿಸ. ೦೯-೩೪). [ ಪೆರ್ (<ಪಿರಿದು₁) + ಕಾಲ್₂ ]

**ಪೆರ್ಗಾವಲಿ**, ಹೆಗ್ಗಾವಲಿ (ನಾ). ದೊಡ್ಡದಾದ ಹಾರಿಯಾಡುವ ಹೆಂಚು; ಅಗಲವಾದ ತವೆ : ಕಾಯ್ದು ಕರ್ಬೊನ್ನ ಪೆರ್ಗಾವಲಿವೊಲಾಯ್ತು ನೆಲಂ (ಜಗಂ. ೦೬. ೬೦). **ಹೆಗ್ಗಾವಲಿ** : ಕಾದ ಹೆಗ್ಗಾವಲಿಯ ಮೇಲಿರಿದಿರಿದು ದೇಹವನುರುಹಲೂಹಿಸುವ (ಶಕ್ಷು. ೧೪-೨೪). [ ಪೆರ್ (<ಪಿರಿದು₁) + ಕಾವಲಿ₂ ]

**ಪೆರ್ಗಾವಿಲ** (ನಾ). ಸ್ವಲ್ಪವೂ ತಿಳಿವಳಿಕೆಯಿಲ್ಲದವನು ; ಮಹಾ ಮೂರ್ಖ : ಬಾದೆ ಗಾಲಿಯೊಳ್ ರಥಮಂ ನಡೆಯಿಸುವೆನೆಂಬ...ನಾರಿಲ್ಲದೆ ಪೂಗಟ್ಟುವೆನೆಂಬ ಪೆರ್ಗಾವಿಲನಂ ಪೋಲ್ಬುಂ (ಕರ್ಣಾಟ್ಟು. ೩-೦೦೬). [ ಪೆರ್ (<ಪಿರಿದು₁) + ಗಾವಿಲ ]

**ಪೆರ್ಗಾವುಂಡ** (ನಾ). ಹಿರಿಯ ಗೌಡ ; ಮುಖ್ಯ ಗ್ರಾಮಣಿ : ಮುಳ್ಗುನ್ದ(ನ್ದ) ಪನ್ನೆರಡುಮಂ ಪಾಯಿಪರ್ಮ್ಮನಾಳೆ ಸಿರಿವುರಕೆ ಬಗೆಗ ಪೆರ್ಗ್ಗಾವುಣ್ಡುಮಾಗುತ್ತಿರೆ (ಎಆ. XXVI. ೬೨-೦೨ ; ೯೦೦). [ಪೆರ್ (<ಪಿರಿದು₁) + ಗಾವುಂಡ (<ಗಾಮುಂಡ)]

**ಪೆರ್ಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಬಿರುಗಾಳಿ : ಪೆರ್ಗಾಳಿಯ ಕೋಲೊಳ್ (ಪೊಯ್ಲೊಳ್) ಕೆಡದಿರ್ದ ವಟವೃಕ್ಷಮಂ ಕಂಡು (ಕಾಕ್ಷಂ ಕ. ೨೬೩) ಸದ್ಯಸ್ಸುಸಂದೋಹಮಂ ನಿರುತಂ ತೀವಿ ಬರುತ್ತೆ ಧೃತ್ರಮದೆಯೊಳ್ ಪೆರ್ಗಾಳಿಯಿಂ ಪುಟ್ಟಿದಾ ತರೆಯಿಂ ದುರ್ಧರಮಪ್ಪುದೋಡು ಸುಟಿಯೊಳ್ಪಿಟ್ಟು (ಕರ್ನಾಟ. ೦೦-೮೨). ಕಾಳಿಂಗಮರ್ದನ ಖಗರಾಯನ ಮೇಲೆ ವಾಳಿಯ ಬಂದ ನಿಷ್ಠುರದಿ ಕೇಳಿ ಮಾಡುವುದೇನು ಗರುಡನ ಗಾಳಿಯು ಪೆರ್ಗಾಳಿಯಂ ದೀಶ್ವರ ನುಡಿದ (ಹೊಯಿಸ. ೩೬-೬೦). [ಪೆರ್ (< ಪಿರಿದು₁) + ಗಾಳಿ₁]

**ಪೆರ್ಗಿಚ್ಚು** (ನಾ). ದೊಡ್ಡ ಉರಿ : ದಳ್ಳುರಿ : ಮದನನ ಪೆರ್ಗಿಚ್ಚಿಂ ಮುಗ್ಗಿದ ಪೊಣರ್ವಕ್ಕಿಗಳ ಹೃದಯಸಂಕುಳದಿಂದುಣ್ಮಿದ ಕರ್ಬೊಗೆಯೆಂಬನೆಗಂ ಪುದಿದತ್ತಂ ಮರ್ಬುಸುರ್ಬು ಪರ್ಬಿತ್ತು (ಜರಾಹಿಂ. ೦೯೦); ಮುಕುರಂ ಮಾಂಸವು ಮದ್ಯ ತುಂಬಿದ ಕೊಡ ಪೆರ್ಗಿಚ್ಚು[ಜಾಹಂ ಚರ] ನಾರ್ ಕಂಡೊಡಾ ಶಕುನಂ ಶೋಭನಕಾಸ್ಪದಂ (ಹೊಚಿಷಿ. ೬೬) ; ಸಲೆ ಮುಕ್ಕುಳಿಸಿ ಮೊಗೆವ ಪೆರ್ಗಿಚ್ಚುಗಳ ಪೆಂಕೆ ಮೇಲಿಕ್ಕಿದುದು (ಕೈಪಾಂ. ೦೬-೨೩). [ಪೆರ್ (<ಪಿರಿದು₁) + ಕಿಚ್ಚು]

**ಪೆರ್ಗಿಡಿ**, ಹೆಗ್ಗಿಡಿ (ನಾ). ಬೆಂಕಿಯ ದೊಡ್ಡ ಕಣ : ವಡಬಾಗ್ನಿಯಿ ಒಡೆದ ಪೆರ್ಗಿಡಿಯಿದೋ . . . ಎನಲಶ್ವಗಿರಿಮಸ್ತಕದೊಳಿನಬಿಂಬವೆಸೆದಿರ್ದುದು (ಕಂಕು. ೯-೨). **ಹೆಗ್ಗಿಡಿ** : ಕುಟಿಲ ಯಮನುಬ್ಬರದ ಕೋಪವೊ ಕಾಲರುದ್ರನ ಹಣೆಯ ಹೆಗ್ಗಿಡಿಯೋ (ಕುಮ್ಯಾ೪. ೨-೬೦). [ಪೆರ್ (<ಪಿರಿದು₁) + ಕಿಡಿ]

**ಪೆರ್ಗಿಡುಗ**, ಹೆಗ್ಗಿಡುಗ (ನಾ). ದೊಡ್ಡ ಜಾತಿಯ ಡೇಗೆ : ಕಾರಂಡಂ. ಕಿಂಗಣ್ಣಂ . . . ಹರಡೆ ಸುರಗಿಗಿಡಿ ಪೆರ್ಗಿಡುಗಂ (ಆಶ್ವಶಾ. ೦೦೯೬). **ಹೆಗ್ಗಿಡುಗ** : 'ದೊಡ್ಡಡೇಗೆ, ಹೆಗ್ಗಿಡುಗ (Gerfalcon. ಇ೪೪೦). [ಪೆರ್ (<ಪಿರಿದು₁) + ಗಿಡುಗ (< ಗಿಡಿಗ)]

**ಪೆರ್ಗುಂಜಿ**, ಹೆಗುಂಜಿ (ನಾ). ಒಂದು ಸ್ಥಳದ ಹೆಸರು ; ☞ ಸೊರಬ ತಾಲ್ಲೂಕಿನ ಈಗಿನ ಮಾವಳಿ : ಆ ಕಾಕರಾಸರುಮುಖ್ಯು ಪೆರ್ಗುಂಜ್ಯಯ ಕೋಟಿಯಾನ್ ರೋಹಿಸಿ (ಎಆ. VIII, ಸೊರಬ. ೦೦-೯ ; ಕು. ೩೦೦). **ಹೆಗುಂಜಿ** : ಬಾಳ ಚತುಸೀಮೆಯ ವಿವರ . . . ಹೆಗುಂಜ್ಯಿಯ ಗಡಿಯಿಂದಲು ಬಡಗಲು ಪಡುವಲು ಕಿಂಬಿಕಗಾವಂ[ದನ] ಬಾಳಿಂದಲು ಮೂಡಲು (ಶ್ಚ. IX-ii. ೪೦೬-೬ ; 1377) ; ಹೆರಿಯ ದೇವ[ರ]ನಾಯಕತಿಯ ಮೊಂಮಗ ಹೆಗುಂಜಿಯಲಿ ಹುಟಕೊಂಡ ಹೊಲೆಯ ಬಳಿಯ (ಆ. I. ೬೬-೦೦ ; 1494). [?]

**ಪೆರ್ಗುಂಡು**, ಹೆಗ್ಗುಂಡು (ನಾ). = ಪೆರ್ಗಲ್ : ಎರಡು ಪೆರ್ಗುಂಡುಗಳು ತಮ್ಮೊಳಗಿರದೆ ತಾಗುವವೆಡೆವಿಡದೆ ವಂತರರ ದೆಸೆಯಿಂದೆ (ಜಾಳ್ಮಸ. ೨೬-೨೬) ; ಒಂದು ಪೆರ್ಗುಂಡನು ಕಟ್ಟಿ ಕೊರಳಲಿ . . . ನಿಂದಿರಲ್ (ಕಂಕು. ೬-೩೬). **ಹೆಗ್ಗುಂಡು** : ಒದಗಾದರೆ ಪರ್ವತದ ಶಿಖರದ ಲುದುರುದುವು ಹೆಗ್ಗುಂಡುಗಳು (ಕುಮ್ಯಾ೪. ೦೦-೯). [ಪೆರ್ (<ಪಿರಿದು₁) + ಗುಂಡು]

**ಪೆರ್ಗುಡಿ** (ನಾ). ಅತಿಯಾಗಿ ಮದ್ಯಪಾನ ಮಾಡುವವನು : ಜೂಜಾಟಕೆ ಸೂಳೆಬಂಟಿಕೆ ರುಣದ ಸಂಚಾಜ ಪೆರ್ಗುಡಿಗಳ ಚರ್ಚೆ ರಾಜ ವೀಧಿಯೊಳಾಡಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಹೊಯಿಸ. ೨೮-೨೬). [☞ ಇದು 'ಪೆರ್ಗುಡಿಹ' ಎಂಬುದರ ಸಂಕ್ಷಿಪ್ತರೂಪವಿರಬಹುದು]

**ಪೆರ್ಗುಡುಗು** (ನಾ). ಭಾರಿಯಾದ ಮೇಘಧ್ವನಿ : ಕಾರ್ಮುಗಿಲ್ ಗಡಣದೆನಿಪ್ಪ ದಂತಿಕತಿಯುಗ್ರದ ಡಿಂಡಿಮನಾದದೇಕೆ ಪೆರ್ಗುಡುಗು ನಿದಾಘನಂ ತಗುಳಲೈದಿದ ನೀರದಕಾಲರಾಜನಾ (ರಾಜಶೇ. ೬-೦೦೨). [ಪೆರ್ (<ಪಿರಿದು₁) + ಗುಡುಗು₂]

**ಪೆರ್ಗುಡುಗೋಲು** (ನಾ). ದೊಡ್ಡ ಕುಡುಗೋಲು : ಮಿಂಡವೆಂಗಳ ನಗಲಿದ ಚದುರರು ತಮ್ಮ ದಂಡಿಪ ಸ್ಮರಚಾಪವೆಂದು ಭಂಡಿ ಪೆರ್ಗುಡುಗೋಲುಗಳಿಂದಲಡಗಿಕ್ಕಿ ಖಂಡಿಸುವರು ಕಬ್ಬುಗಳನು (ಹೊಯಿಸ. ೨-೯೯). [ಪೆರ್ (< ಪಿರಿದು₁) + ಕುಡುಗೋಲು (< ಕುಡುಗೋಲ್)]

**ಪೆರ್ಗುತ್ತ** (ನಾ). ೧. ದೊಡ್ಡ ಕಾಯಿಲೆ ; ಮಹಾರೋಗ : ಈ ಮಹಾಪುರುಷಂ ನಿಷ್ಠುರಮಪ್ಪೀ ಪೆರ್ಗುತ್ತದ ನಿರೋಧಮಂ ತಾಳ್ದಿ ಮಾಣಿಗ ದೆಂತಿರ್ದಪನೋ (ಕರ್ಣಾಟ್ಟು. ೯-೬೬). ೨. ದೊಡ್ಡ ಅಪಾಯ ; ದೊಡ್ಡ ಕೇಡು,–ವಿಪತ್ತು : ಸಣ್ಣಕುತ್ತಂ ಚಿಕ್ಕದಾದ ಯತ್ನದಿಂ ಮಾಣಲಪ್ಪುದು ಪೆರ್ಗುತ್ತಂ ಪಿರಿದುಂ ಯತ್ನಂಗೆಯ್ಯೆ ಪೋಕುಮೊ ಪೋಗದೊ (ಚಾಕಂಡ. ೦೦-೦೦) : ಅಡಸಿದ ಪೊಸವಗೆ ಪೆರ್ಗುತ್ತಗಳನ್ ನುಡಿಯಲ್ಕಾರ್ಪಂ (ಅದ್ಭ. ೬-೦೩೬). [ ಪೆರ್ ( <ಪಿರಿದು₁) + ಕುತ್ತ]

**ಪೆರ್ಗುರುಂಟಿಗೆ**, ಹೆಗ್ಗುರಂಟಿಕೆ, ಹೆಗ್ಗುರಟಿಗೆ, ಹೆಗ್ಗುರಟಿಗೆ, ಹೆಗ್ಗುರಟಿಕೆ, ಹೆಗ್ಗುರಟಿಗೆ (ನಾ). ಒಂದು ಬಗೆಯ ಔಷಧೀಸಸ್ಯ : ಅಜಶೃಂಗಿ: ಕಕ್ಕೆ ಮಾದಲ(ರ) ಪೆರ್ಗುರುಂಟಿಗೆ . . . ನುಗ್ಗೆಯಿವೆಲ್ಲಮಂ ಟೆಯಿಂ ಕೊರಂತಿರೆ ಪೂಸಲಿಂ ನಿಕ್ಕುವಂ ಕಿಡುಗಂ ಫಣೀಂದ್ರಮುಖ ಪ್ರಚಂಡವಿಷಂಗಳುಂ (ಕಪುದ. ೩-೬೯). **ಹೆಗ್ಗುರಂಟಿಕೆ** : ಮಂಜನ ನಾರು, ಗೊಡ್ಡುಮಂಜಿ, ಹೆಗ್ಗುರಂಟಿಕೆ (ಕ್ಯಾಶಿ. ೬೯-೦೬೬೦). **ಹೆಗ್ಗುರಟಿಗೆ** : ಗಂಟುಭಾರಂಗಿ, ದ್ರಾಕ್ಷಿ, ನೆಲಬೇವು, ಹೆಗ್ಗುರಟಿಗೆ . . . ತೈಲಪಾಕ

ದಲ್ಲಿಳುಹಿಕೊಂಡು ಸೇವಿಸಲು ಶೀತಜ್ವರಂ ಶಮನಮಕ್ಕುಂ (ಶಸ್ತ್ರ. ೬೨). **ಹೆಗ್ಗುರುಟಗೆ:** "ತ್ರಿಪರ್ಣಿ–ನಿಡಿವಾಲ, ಹೊನ್ನೆ, ಹೆಗ್ಗುರುಟಗೆ, ಮುಂತ್ರಗ, ಕುಹುರಲೆಹೊನ್ನೆ" (೬೩೦. ೬೯). **ಹೆಗ್ಗುರುಟಿಕೆ:** "ಮೂರ್ವಾ, ದೇವೀ... ಗೋಕರ್ಣೀ, ಪೀಲುಪರ್ಣೀ–೧೦ ಹೆಗ್ಗುರುಟಿಕೆಯ ಪೆಸರುಗಳು" (ಶಿವ್ಯ.೩. ೦೩೦). **ಹೆಗ್ಗುರುಟಿಗೆ:** "ಮೂರ್ವೆ . . . ಗೋಕರ್ಣಿ, ಪೀಲುಪರ್ಣಿ–ಹೆಗ್ಗುರುಟಗೆ" (೩೩ತಾ. ೪); ಹೆಗ್ಗುರುಟಗೆ, ಇದನ್ನು ಕೆಲವರು ಸವಗೇ ಗಡ್ಡೆ ಎಂಬುರು (ಚಿ.೩. ೬೬). ಅಂಬಟಿಬೇರು,ಕಟುಕರೋಹಿಣಿ,ಹೆಗ್ಗುರುಟಗೆ, ಹುರುಗಲುಬೇರು, ಕಹಿಪಡವಲ ಸಹ ಕಷಾಯವಂ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ನಾಶವಾಗುವುದು (ಶಶಸ್ತ್ರ. ೯೯).

[ ಪೆರ್ (< ಪಿರಿದು₁) + ಕುರುಂಟಿಗೆ₀ (< ಕುರಂಟಿಗೆ) ]

**ಪೆರ್ಗುಳಿ** 'ಪೆರ್ಗುಳಿ' ನೋ.

**ಪೆರ್ಗುಱು, ಹೆಗ್ಗುಱು** (ನಾ). ೧. ಕೊಬ್ಬಿದ ಕುರಿ : ಆತನ ಬಲಿಗಟ್ಟ ಮಸ್ತಭುಬಲಾರಿಗೆ ಪೆರ್ಗುಱು ಮಾಡಿ ಪೊಯ್ದುಪೆಂ (ಜಾಜಿ. ೧೧-೧೩). **ಹೆಗ್ಗುಱು :** ೨. (ಅಲಂ) ಅತ್ಯಂತ ತಿಳಿಗೇಡಿ : ಮಹಾಮೂರ್ಖ : ಹೆಣ್ಣಾಗಿಕ್ಕಿ ಹೆಗ್ಗುಱುಯಾಗಬೇಡಾ (ಚಪ. ೩೦೦).

[ಪೆರ್ ( < ಪಿರಿದು₁) + ಕುಱು₃]

**ಪೆರ್ಗುಱುಪು, ಪೆರ್ಗುಱುಪು, ಹೆಗ್ಗುಱುಹು** (ನಾ). ೧. ಮುಖ್ಯವಾದ ಲಕ್ಷಣ : ಪ್ರಧಾನವಾದ ಗುರುತು,–ಚಿಹ್ನೆ : ಜನಪತಿಯಪ್ಪ ಪೆರ್ಗುಱುಪಿನಿಂದವು ಬಿಡದವು ನಾಡಮುಱುಗೆಗಳಿಂದನುಮಿಪರೆಲ್ಲರುಂತಱುಯಬರದು (ಅಜಿತ. ೧೧-೧೧). **ಪೆರ್ಗುಱುಪು :** ೨. ಅಧಿಕವಾದ ಕೀರ್ತಿ,–ಪ್ರಸಿದ್ಧಿ : ಪೆರ್ಗುಱುಪಿ[ಪಾಠಾಂ. ಪೆಗ್ಗುಱುಹಿ]ನ ಬೇಡರಂ ತಱದು ಸೀಲ್ದಱದಿಕ್ಕಿತು ಸೊಕ್ಕಿದೆಕ್ಕಲು (ತ್ರಿತಿ. ೨೬-೬೨; ಶಕ್ವಸಾ. II, ೮೫೩ ನೋ). **ಹೆಗ್ಗುಱುಹು :** ೨. ಆಸ್ಥಾನದೊಳು ಸತಿಯರ ನಾವು ಸಲ್ಲದಂತಸ್ಥದೊಳ್ ಪತಿ ಕೇಳಲೇಕೆ ಈ ಸ್ಥಿತಿಗರ ಹೆಗ್ಗುಱುಹಿನವರನ್ನು ಸ್ವಸ್ಥವೆಂದೆನಿಸಿದರವರು (ಚಕ್ರ. ೨೬-೩೩). [ಪೆರ್ ( < ಪಿರಿದು₁) + ಕುಱುಪು ]

**ಪೆರ್ಗುಱುಪು** 'ಪೆರ್ಗುಱುಪು' ನೋ.

**ಪೆರ್ಗುೞ್, ಪೆರ್ಗುಳಿ, ಹೆಕ್ಕುಳಿ, ಹೆರ್ಕುಳಿ** (ನಾ). ದೊಡ್ಡದಾದ ಹಳ್ಳ,–ಗುಣಿ,–ತೆರವು : ಎಯ್ದೆ ಮುನ್ನೀರನಡುರ್ತು ಪೀರ್ದುಗಟ್ಟೆ ಪೆರ್ಗುೞ್ಗಳ್ ದಿನಕೃದ್ಧಿಮಾನವಾಕಾರವಡಂಗೆ ಪೃಷ್ಠದರ್ ಮುಚ್ಚಿದುದೆಂಬಿನೆಗಂ ವಿಕೀರ್ಣಸೇನಾರಜಮುಮಿರ್ ಪರ್ವಿದುದು (ಕರ್ಣಾ. ೬-೦೪). **ಪೆರ್ಗುಳಿ :** ಸಮದ ಪೆರ್ಗುಳಿಯೊಳ್ ಕರಿಪೋತಕಂಗಳು ಕೆಡೆವು (ಗಿರಿ. ೦-೬೩). **ಹೆಕ್ಕುಳಿ :** ಎತ್ತಾನುಮಿದಿವತ ಮಾಣಿದೊಡೆ ಮೆಯ್ಮರಂ ಹುಳಿತು ಸತ್ತು ನರಕದ ಹೆಕ್ಕುಳಿ[ಪಾಠಾಂ. ಹೆಃಳುಳಿ]ಯೊಳಾಳುತಿಹರಿದಕ್ಕೆ ಸಂದೇಹ ಬೇಡ (ಸಪ್ತಃ. ೩-೬೦). **ಹೆರ್ಕುಳಿ :** ಇರಿದು ನರೇಭಭೂಮಿಮು ಹೆರ್ಕುಳಿಯೊಳ್ ಮುಳುಗಿ ನೆಗೆದು ಜೀವಿಸುತಿಹರ್ (ಶಹುಶಾ. ೦೦-೦೪).

[ಪೆರ್ (< ಪಿರಿದು₁) + ಕುೞಿ₁]

**ಪೆರ್ಗೂಪ** (ನಾ). ಆಳವಾದ ಭಾವಿ : ದೊಡ್ಡದಾದ ಕೂಪ : ಲಿಂಗದಿಂ ನೃಪಗೆ ಸಾಕ್ಷಿಯ ಕೊಟ್ಟು ತನ್ನಿಷ್ಟಲಿಂಗದಿಂ ಪೆರ್ಗೂಪವಗುಳಿಸಿದ (ಸ್ಯಶತ. ೦-೪-೨). [ಪೆರ್ (< ಪಿರಿದು₁) + ಕೂಪ₁]

**ಪೆರ್ಗೂರಿಕ್ಕು** (ಕ್ರಿ). = ಪೆರ್ಗೂರಿಡು : ಪೆ[ಪಾಠಾಂ. ಹೆ]ರ್ಗೂರಿಕ್ಕಿ ನುಡಿವ ನಾಲಿಗೆ ಜಳಿ (ಬಿಂಕೋಟ. ಹ. ೩೦೬-೦೩). [ಪೆರ್ಗೂರು+ಇಕ್ಕು]

**ಪೆರ್ಗೂರಿಡು, ಪೆಗ್ಗೂರಿಡು, ಹೆಗ್ಗೂರಿಡು** (ಕ್ರಿ). ಅತಿಯಾದ ಉಬ್ಬಸದಿಂದ ಕೂಡಿರು ; ದಮ್ಮು ಹೆಚ್ಚಾಗು : ಪೆರ್ಗೂರಿಡುತ್ತೆಯ ಬಂದಿರ್ದವರಂಜಲ್ ಶ್ವಾಸಮೇಱುತ್ತಿಯಾಯುತುಮಿರೆ (ಶಬ್ದ. ೪೦). **ಹೆಗ್ಗೂರಿಡು :** ಕಾಲನವರನುವಾಗೆ ಬಾಯೊಳ್ಸುರಿಯ ಲೋಳೆ ಮೊಗವು ಕ್ಕುಡಿಹಿ ಗೂರು ಪೆ[ಪಾಠಾಂ. ಹೆ]ಗ್ಗೂರಿಡುತ್ತಮಿರೆ (ಬಿಂಕೋಟ. ಹ. ೩೦೬-೨೬). **ಹೆಗ್ಗೂರಿಡು :** ಕವಿನ್ನು ಹೆಗ್ಗೂರಿಟ್ಟು ಸುಯಿವುತ್ತೆ (ಪುರೇತ. ೬-೩೩).

[ಪೆರ್ಗೂರು+ಇಡು₁]

**ಪೆರ್ಗೂರು, ಪೆಗ್ಗೂರು, ಹೆಗ್ಗೂರು** (ನಾ). ಹೆಚ್ಚಾದ ದಮ್ಮು,–ಉಬ್ಬಸ : 'ಪೆರ್ಗೂರಿಡು' ಪರಾ. **ಹೆಗ್ಗೂರು :** 'ಪೆಗ್ಗೂರಿಡು' ಪರಾ. **ಹೆಗ್ಗೂರು :** 'ಹೆಗ್ಗೂರಿಡು' ಪರಾ.

[ಪೆರ್ (< ಪಿರಿದು₁)+ಗೂರು₂]

**ಪೆರ್ಗೋಳಿ** (ನಾ). ಮಾನಂ ಹಿಡಿಯುವ ದೊಡ್ಡ ಬುಟ್ಟಿ : ಕಿಱುಗೋಳಿ ಪೆರ್ಗೋಳಿ . . . ಸೂಸುಗೊಳ್ಗಳೆಂಬಿವಂ ಕೊಂಡು . . . ಬಿನ್ನಣಂಬಡೆದ ಬೇಡರೊಡಸರೆ (೦೩೬೬. ೩-೦೦೪೪).

[ಪೆರ್ (< ಪಿರಿದು₁)+ಕೋಳಿ (<ಕೊಳ್ಗೆ₁)]

**ಪೆರ್ಗಂಡ** (ನಾ). ದಪ್ಪವಾದ ಕೆಂಡ,–ಇಂಗಳ : ಪೆರ್ಗೆಂಡಂಗಳಂ ಸೂಸುತುಂ ಗಜ್ಜೆಂದೋವದೆ ತೇಗಿಯುಂ (ಧರ್ಮಾ. ೬-೦೯೯).

[ಪೆರ್(< ಪಿರಿದು₁)+ಕೆಂಡ]

**ಪೆರ್ಗೆಚ್ಚಲ್, ಹೆಗ್ಗೆಚ್ಚಲು** (ನಾ). ದೊಡ್ಡ ಕೆಚ್ಚಲು : ತುಂಬಿದ ಕೆಚ್ಚಲು : ಜರಲಾಱದೆ ಪೆರ್ಗೆಚ್ಚಲ ಭರದಿಂದು ಪೆಱಗು ಕುಸಿಯೆ . . . ಬಂದುವಂದು ಪಯಗಳ್ ಪಲವುಂ (೮೬೦೩. ೩-೯೯) ; ಪೊರಲಾರದೊಲೆ ದಾಡುತಿರ್ಪ ಪೆರ್ಗೆಚ್ಚಲಿಂ ಚುಸುತಿಪ ಹೋಮಧೇನುಗಳಿಂದೆ . . . ಅಶ್ರುಮವರೇನೊಪ್ಪಿತೊ (ಶೀತಿ. ೩೦-೬). **ಹೆಗ್ಗೆಚ್ಚಲು :** ಪೀನೋಧ್ನೀ, ಪೀವರಸ್ತನೀ–ಈ ೨ ಹೆಗ್ಗೆಚ್ಚಲಾವು (ಹಟು. ೪೩-೦೦೬) : ಪೀವರಸ್ತನಿ ಪೀವರೋಧ್ನಿಯೆನೆ ಹೆಗ್ಗೆಚ್ಚಲಾಪದು (ಚಂಗರಾ. ೩೪-೩).

[ಪೆರ್ (< ಪಿರಿದು₁) +ಕೆಚ್ಚಲ್]

**ಪೆರ್ಗಡೆ** 'ಪೆರ್ಗಡೆ₁' ನೋ.

**ಪೆರ್ಗಡೆತನ** 'ಪೆರ್ಗಡೆತನ' ನೋ.

**ಪೆರ್ಗಡೆತನಂಗೆಯ್** 'ಪೆರ್ಗಡೆತನಂಗೆಯ್' ನೋ.

**ಪೆರ್ಗೆಯ್ವಾಡಿ** (ನಾ). ಒಂದು ಊರಿನ ಹೆಸರು : ಗಾವುಣ್ಗಳೆ ಸೀಮೆದೋಱದ ಕ್ರಮ ತೊಳಂಚಿಯವ ಪೆರ್ಗೆಯ್ವಾಡಿಯ . . . ತೊಳಂಚಿಯದ ಸೀಮೆಯೊಳ್ ತಾಗಿ (ಎಕ. XII, ಶಂಜಿ. ೨೬೯-೯೦ ; ೯೦೪).

[ಪೆರ್ (< ಪಿರಿದು₁) +ಕಯ್₄+ಪಾಡಿ₁]

**ಪೆರ್ಗೆಲಸ** (ನಾ). ದೊಡ್ಡ ಕೆಲಸ ; ಮಹತ್ಕಾರ್ಯ : ಕಳಕಳಸಂಭ್ರಮಂ ನೆಲಸಿ . . . ಸಮಂತು ವಿವಾಹಗೇಹಮಂಗಳ[ಕರ]ವಾದ ಪೆರ್ಗೆಲಸಮಂಪುಗವಂ ತಳೆದಿರ್ದುದಾವಗಂ (ಶಶಿಶ. ೪೨೬). [ಪೆರ್ (< ಪಿರಿದು₁) +ಕೆಲಸ]

**ಪೆರ್ಗೆಸಱ್, ಹೆಗ್ಗೆಸಱು** (ನಾ). ಅತಿಶಯವಾದ ರಾಡಿ ; ಅಧಿಕವಾದ ಕೆಸರು : ಪೆರ್ಗೆಸಱಾಗಿರ್ಪುದು ಬಟ್ಟೆ ಪೋದವಿದೞಳೊಳ್ ಪೆರ್ಬುಂದಿಗಳ್ (ಕಾದಂಬ. ೦೩೪) ; ಅಂಭೋಧಿಯುಂ ಪಿರಿದುಂ ಪೆರ್ಗೆಸಱಾಗಿ ಶತ್ರು ಶಿರವಂ ಸೆಣ್ಡಾಡಿ ವೈರಿಶ್ರೀಯುಂ ಪರಿತಂದೀವುದು (ಎಕ. XI, ದಾವಿ. ೩೯-೬೩; 1280). **ಹೆಗ್ಗೆಸಱು :** ದೇವವಯರಿಯ ಸೇನಿಸಿ ಸವರದಿ ದಾಪಸಿಱಿವರಿಪರಿದು ರಿಪುಗಳ ಹೇವಗೆಡಿಸಿದ ರಣಾಂಕಣದ ಹೆಗ್ಗೆಸಱು ಮಾಯಮೆನಿಸಿ (ಕುಮಾರಾ. ೪-೬೨). [ಪೆರ್ (< ಪಿರಿದು₁) + ಕೆಸಱ್]

**ಪೆರ್ಗೆಱೆ, ಹೆಗ್ಗೆರೆ₁, ಹೆಗ್ಗೆಱೆ, ಹೆರ್ಗೆಱೆ** (ನಾ). ದೊಡ್ಡ ಕೆರೆ,–ತಟಾಕ : ಪೆರ್ಗೆಱೆಯಾ ಕೆಱಗೆ ಅಱುಗಣ್ಡುಗಂ (ಎಕ. IV, ಹಾಗಡಂ. ೬೩-೬೮; 770); ಪೆರ್ಗೆಱೆಗಳ ಚೆಲ್ವಿಂ . . . ಒಪ್ಪುವುದು ರೌರವಪುರಂ (ರಘುಕಂ. ೪-೬); ಪೆರ್ಗೆಱೆಗಳೆಂಬ ವಿನಿಶ್ಚಲಲೋಚನಂಗಳಿಂ ಭೂಮಿಯ ದೇಶಸಂಪದಮನೀಕ್ಷಿಸಿ (ಚಾರುಚ. ೪-೦೬). **ಹೆಗ್ಗೆರೆ₁ :** ಒಂದು ಅಡವಿಯುಲ್ಲಿ ತಿಳಿನೀರನೆಂಬ ಹೆಗ್ಗೆರೆಯುತ್ತು (ಶಸ್ತ್ರ. ೩೯). **ಹೆಗ್ಗೆಱೆ :** ಆ ಊರ ತೆಂಕಣ ಹೆಗ್ಗೆಱೆದು ಕೀಲೇರಿಯಲು ಗದ್ದೆ ಖಣ್ಡುಗ ಐದಕ್ಕೆ ಗುಳಿ ೫೦೦ (ಎಕ IV (B), ಹಾಸುಹಾ. ೨-೨೯; ಸು. 1110); ಮತ್ತಿಹ್ಳಿಯ

ಹೆಗ್ಗೆಱೆಯ ಬಡಗಣ ಕೋಡಿಯ ಸಂಕಿನ ಯೇರಿಯ ಕೆಳಗೆ (ಶಾಇ. XX. ೨೨೮-೩೭; 1207). **ಹೆರ್ಗೆಱೆ**[3] : ಕಣಂಬುರಿಗೆಯಾಳೂಂ ಪಡುವಣ ಹೆರ್ಗ್ಗೆಱೆಯುಂ ಪಡುವಲ್ ಕೆಯ್ಯುತ್ತರ್ ಹನ್ನೆರಡು (ಎಇ. XIII. ೨೦-೯೩; 1204). [ಪೆರ್ (< ಪಿರಿದು$_1$) + ಕೆಱೆ[3]]

**ಪೆರ್ಗೇಡು** (ನಾ). ಭಾರಿಯಾದ ಕೇಡುಕು,–ಅಪಾಯ; ಮಹಾ ವಿಪತ್ತು : ಈ ನಿನ್ನ ಪೆರ್ಗೇಡ ನೋಡುತ್ತುಮಾನುಂ ಮುನ್ನಮಿದೆ ಅರಯ್ಯ ಅರಯ್ದಂ (ಅಚ್ಯುತ. ೨೯-೬೨೦). [ಪೆರ್ (< ಪಿರಿದು$_1$) + ಕೇಡು]

**ಪೆರ್ಗೊಂಬು**, ಹೆಗ್ಗೊಂಬು (ನಾ). ೧. ದೊಡ್ಡದಾದ ಶಾಖೆ,–ಟೊಂಗೆ : ಪಿರಿಯ ಭೂಮಿಯೊಡಗೂಡಿ ಮೊದಲಿಂದಂ ಪಣೆಯಿಂದಂ ಪೆರ್ಗೊಂಬುಗಳಿಂದಂ [ಕಿಱುಗೊಂಬುಗಳಿಂದಂ] ಆಲದ ಮರನೆಂತೊಪ್ಪುಗುಂ (ಕರ್ಮಾಕು. ೦೩-೩); ಪಿರಿ ಮುಱಿದ ಪೆರ್ಗೊಂಬಿನಿಱುಂಬಿನೊಳೊಱೆತ್ತಾಗುವ ವಾಲ ಪಾನದೊಳ್ ಮಿಗೆ ನೆಗೆವ ಗಗನಚರಿಯು ನಿಡುಜಡೆ ತೊಡಂಕೆ (ಶಾಂತಿ. ೩-೩೩ ಆ) : ಪೊಯ್ದು ಬಲ್ಪಿಂ ಮುಱಿದ ಮರದ ಪೆರ್ಗೊಂಬಿನೊಳ್ ಕೊಂಬದೊಂದಂಟಿರೆ (ಶಾಂತಿಕ. ೦೬-೩೩). ೨. ಕಹಳೆಯಾಕಾರದ ಒಂದು ಬಗೆಯ ದೊಡ್ಡ ವಾದ್ಯ : ಬುರುಗಿನ ಪೆರ್ಗೊಂಬಿನ ಕಾಳೆ ಡಾಗುಟೆ ... ದಮಾಸಗಳಬ್ಬರಮೆಸೆದುದು (ಶಂಕರ. ೯-೬೦). **ಹೆಗ್ಗೊಂಬು** : ೧. "ಸ್ಕಂಧಶಾಖಾ. ಶಾಲಾಃ – ಈ ೨ ಮರದ ಹೆಗ್ಗೊಂಬು" (ಹಲಾಯು. ೩೦-೨೮); ಮರದ ಹೆಗ್ಗೊಂಬುಗಳಲಿಟ್ಟನು (ಕುಮಾ.ರಾ. ೬-೨೨); ದಧಿಮುಖನೊಂದು ಹೆಗ್ಗೊಂಬುಳ್ಳ ಹೆಮ್ಮರನ ಹಿಡಿದು ಕಡಹಾತ ಹರಿದು ಬಂದನು (ತೊರವ. ೩೨-೩೬); ಖಳನಿಕುರುಂಬವನು ಬಲುಹೆಮ್ಮರನ ಹೆಗ್ಗೊಂಬುಗಳಲೇ ಹೊಯ್ದು ಹೊಱಮಂಡಿಸಿದನುಸುರುಗಳ (ತೊರ. ೩-೯-೨೨). [ಪೆರ್ (< ಪಿರಿದು$_1$) + ಕೊಂಬು$_1$]

**ಪೆರ್ಗೊಡಲಿ** (ನಾ). ದೊಡ್ಡದಾದ ಪರಶು : ಸಂಜಯಂತಮುನೀಶ್ವರಂ ಕ್ಷಮೆಯೆಂಬ ಪೆರ್ಗೊಡಲಿಯಿಂ ದುರಿತಾಟವಿಯಂ ತಱಿದು (ಧರ್ಮಾಮೃ. ೯-೦೦೯) : ಮೊಳೆಯೊಳ್ ಕೋಡಿ [ಸೀಂಟಿ] ಕಳೆಯಲ್ ಬಗೆದಪ್ಪುದು ಮೂಡದಾಗಳುಮ್ಮಳಿಸಿ ಬಟ್ಟೆ ಪೆರ್ಗೊಡಲಿಗೊಳ್ವುದೊಲಕ್ಕುಮದೊಳ್ಳಿತಕ್ಕುದೇ (ಸೂಕ್ತಿಸು. ೦೬-೦೯). [ಪೆರ್ (< ಪಿರಿದು$_1$) + ಕೊಡಲಿ]

**ಪೆರ್ಗೊಣ್ಣೆಂದ** (ನಾ). ಒಂದು ಸ್ಥಳದ ಹೆಸರು (?) : ಪೆರ್ಗೊಣ್ಣೆಂದ ತಟಾಕ ಪೂರ್ವ್ವಭಾಗ (ಎಇ. VII (B). ಶಿಂಕ. ೩೩-೩೯ ; 713). [ಪೆರ್ (< ಪಿರಿದು$_1$) + ಕೊಣ್ಣೆಂದ]

**ಪೆರ್ಗೊತ್ತಳ** (ನಾ). ದೊಡ್ಡ ಬುರುಜು : ಪರಿಖಾದಿಗಳಂ ಸಾಂಗಮೆನೆ ರಚಿಸಿಯುಂ ಪೆರ್ಗೊತ್ತಳ ಪಿರಿಯ ಪಿರಂಗಿಗಳನಮರ್ಚಿಯುಂ (ಕೃಷ್ಣ. ೦೨-೦೦ ಆ). [ಪೆರ್ (< ಪಿರಿದು$_1$) + ಕೊತ್ತಳ$_1$]

**ಪೆರ್ಗೊತ್ತು** (ಕ್ರಿ). ಹೆಚ್ಚಾಗಿ ತಳ್ಳು; ಅಧಿಕವಾಗಿ ನೂಕು (?) : ಮೊಲೆಯಿಂದಬರಿವಿಟ್ಟು ಪಾಲುಗುತಃದೋರಂತಿರ್ದೊಡಂ ತಮ್ಮ ಕಿಬ್ಬಲ ಪಂದೊಯ್ಯುವೆ ಕಂದದರ್ವ ಕಿಲನಂ ಪೆರ್ಗೊತ್ತೆಯುಂ . . . ವಿಭ್ರಾಜಿಸುತಿರ್ಪವಾ ವಿಷಯದೊಳ್ ಸಾನಂದದಿಂ ಧೇನುಗಳ್ (ಶಾಂತೀಶ್ವ. ೦-೬೨); ಮನದೊಳ್ ಪುಟ್ಟಿದ ಸಮ್ಮದಂ ಪುದಿದು ಪೆರ್ಗೊತ್ತಲ್ಕೆ ತಾನುರ್ದಿದತ್ತನೆ ಮೆಯ್ಮೆರ್ಚೆ . . . ಸುತನಂ ನೋಡುತ್ತುಮಿರ್ದಂ ನೃಪಂ (ಕುಸುಮಾವ. ೦೩-೦೨೯). [?]

**ಪೆರ್ಗೊನೆ** (ನಾ). (ಹಣ್ಣು, ಹೂವು ಮುಂತಾದುವುಗಳ) ದೊಡ್ಡ ಗೊಂಚಲು ; ತುಂಬಿದ ಗೊಲೆ : ಸುಲಭದಾನಿಯು ಪೋಲ್ತು ಪೆರ್ಗೊನೆಯೊಳು ಕಾತ ಹಲಸಿನ ಮರಗಳೊಪ್ಪಿದುವು (ಸೋಮೇಶ. ೨೬-೯೬); ಪೆಱ್ಚಿದ ಪೆರ್ಗೊನೆಗಳಿಂದೆ ಎಸೆವ ಚೆಂದೆಂಗಾಯ್ಗಳೊದೊಂದನೊಡೆಯೊತ್ತಲೊಸರಿ ಸೋರ್ವೆಳನೀರ್ಗಳರ್ಘ್ಯಂಗಳಾಗೆ (ಕೃ.ರಾ. ೩-೨೭). [ಪೆರ್ (< ಪಿರಿದು$_1$) + ಗೊನೆ$_2$ (< ಗೊಲೆ$_2$)]

**ಪೆರ್ಗೊರವ**, ಹೆಗ್ಗೊರವ (ನಾ). ೧. ಉತ್ತಮ ಸಂನ್ಯಾಸಿ ; ಹಿರಿಯ ತಪಸ್ವಿ : ಕೀಳೋಯ್ಪ್ಪನೃಟವಪ್ರಕೈಲಮಡಱ್ದೇನಮ್ಮಾ ಕಳನ್ನೂರನಂ ದಾಲೇ ಪೆಗ್ಗೊರವಂ ಸಮಾಧಿ ನೆಱೆದೊನ್ ನೋನ್ತುಯ್ದದೋಸ್ವರ್ದ್ದಿಯೂನ್ (ಎಇ. II. ೨೨-೯; ಸು. 700). **ಹೆಗ್ಗೊರವ** : ೨. ಈಶ್ವರ : ಶಿವ : ಧಿಟ್ಟನೈ ಹೆಗ್ಗೊರವ . . . ಅಬಲಾಜನಾನ್ಯಮ[ನ]ನಂಗನನು ಬಳಿಕ ಸುಟ್ಟನು (ಶಂಕರ. ೨೯-೯೦). [ಪೆರ್ (< ಪಿರಿದು$_1$) + ಗೊರವ]

**ಪೆರ್ಗೊಲ್ಲಿ**, ಪೆಗ್ಗೊಲ್ಲಿ (ನಾ). ದೊಡ್ಡ ಪ್ರವಾಹ,–ಹಳ್ಳ : ತೆಂಕಯ್ಯ ಗ್ಗೊರ್ಕ್ರಿಗೂಡಲ ಪಳ್ಳಮೇ ಪಡುವಾಯ್ ಪೆಗ್ಗೊರ್ಲ್ಲಿಯೆ . . . ಸೀಮೆ (ಎಇ. IV. ಹಗ್ಗಡ. ೯-೨೬ ; ಸು. 750), ಪೆಗ್ಗೊರ್ಲ್ಲಿಯುಮುಳ್ಳುಡಿತ್ತು ಪೆಟಿಕ್ಕೋಗೆಯು ಮೊದಲುಳ್ ಬಡಗಾಯ್ಪುಗ್ಗೊರ್ಲ್ಲಿಯೆ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಇ. IV. ಎಡತೊ. ೬೮-೭೭ ; ಸು. 890). **ಪೆಗ್ಗೊಲ್ಲಿ** :ಪೆಗ್ಗೊಲ್ಲಿಯ ನೀಃವೃರ್ಗಿಲು ಬಡಗಣದೆಸೆಯೊಳ್ (ಪ್ರೊಆ. ೦೯೨೦, ೦೦-೧೮೪ ; 967). [ಪೆರ್ (< ಪಿರಿದು$_1$) + ಕೊಲ್ಲಿ]

**ಪೆರ್ಗೊಸರ್ಕೆ** (ನಾ). ಅತ್ಯಧಿಕವಾದ ಮೋಹ : ಘನಕುಚಮಧ್ಯತಾಡನೆಗೆ ಮುಂದಲೆಯೊಳ್ ಸಮನಾಗೆ ಬಲ್ಲಿಯಿಂದಿನಿಯನ ಪೆರ್ಗೊಸರ್ಕೆ ಸರಿಯಾಗೆ ಪತಿಕ್ಕಮನಾಳ್ದ ಚಾಟುನಿಸ್ವನಮರ್ದಗೊಳ್ವ ಚುಂಬನಕೆ ಬೆಂಬಟಿಯಿಂದಿದಿರ್ವಪ್ಪ ತನ್ನ ಚುಂಬನ[ಮ]ಣಿಯಾಗೆ ಕಾಂತೆ ಪುರುಷಾಯಿತದೊಳ್ ಕರವೊಪ್ಪಿ ತೋಱಿದಳ್ (ಸೂಕ್ತಿಸು. ೦೯-೯೬). [ಪೆರ್ (< ಪಿರಿದು$_1$) + ಕೊಸಱು$_0$ (< ಕೊಸಱು$_2$) + –ಕೆ]

**ಪೆರ್ಗೊಱಡು** (ನಾ.) ದೊಡ್ಡ ಮರದ ತುಂಡು,–ಕಟ್ಟಿಗೆ : ಆತನ ಕೈಗಳಂ ಕಟ್ಟಿಸಿ ತಳವಳನೆ ಕುದಿವೆಣ್ಣೆಗೊಪ್ಪಂಗೆ ಕಾಯ್ದುಲ್ಲಿಗಳತರಿಸಿ ಮತ್ತೆ ಪೊತ್ತುವೃಲರಿವ ಪೆರ್ಗೊಱಡುಗಳನಿಡಿಸಿ (ಕೃ.ರಾ. ೦೦-೩೧). [ಪೆರ್ (< ಪಿರಿದು$_1$) + ಕೊಱಡು (< ಕೊಱಂಡು)]

**ಪೆರ್ಗೋಣೆ**, ಪೆಗ್ಗೋಳೆ (ನಾ). ಗೋಣಿಯ ಮರದಲ್ಲಿ ಒಂದು ಬಗೆ; ದೊಡ್ಡ ಗೋಣಿ : ಗೋಣಗೆ–ಕಿಱುಗೋಣಿ, ಗೋಣಿಕಾಪುತ್ರ, ಪೆರ್ಗೋಣಿ (ಕಬಿದ. ೨೯೮ ಕ್ರಮೋ). **ಪೆಗ್ಗೋಳೆ** : ಹಾಲೆಯಾರನೇಱಲು ಕಡವ ಪೆಗ್ಗೋಳೆ . . . ಹಾದರಿಯು ಮರ ಮೊದಲಾದವುರ್ವಿಹವು (ಕಾಳ್ಯ. ೩-೩). [ಪೆರ್ (< ಪಿರಿದು$_1$) + ಗೋಣಿ$_1$ (< ಗೋಳಿ$_1$)]

**ಪೆರ್ಚಾಳ್**, ಹೆಚ್ಚಾಳು (ನಾ). ಹಿರಿಮೆಯುಳ್ಳವನು ; ಶ್ರೇಷ್ಠನಾದವನು : ಕೋಪಪ್ರಸಾದಮುಳ್ಳವರೆ ದೈವಮೆಂಬೊಡೆ ಮನ್ನೆಯರುಮರಸರುಂ ತಳಾಱರುಂ ದಂಡಾಧಿಪರುಂ ಪೆರ್ಚಾಳ್ಗಳುಂ ದೈವಮಪ್ಪರ್ (ಧರ್ಮಾಮೃ. ೯-೦೦೪). **ಹೆಚ್ಚಾಳು** : "ಮಹೋತ್ಸಾಹಃ, ಮಹೋದ್ಯೋಗಃ, ಮಹೇಚ್ಛಃ, ಮಹಾಮನಾಃ—ಈ ೪ ಹೆಚ್ಚಾಳು" (ಹಲಾಯು. ೩೮-೨೦೦) ; ನಿನಗೆ ಮಣಿವವನಲ್ಲ ರಾಧಾತನಯನವ ಹೆಚ್ಚಾಳು ಕಡ್ಡಿಯ ಮೊನೆಗೆ ಕೊಂಬನೆ ನಿನ್ನನು (ಕುಮಾ.ಭಾ. ೦೬-೦೬). [ಪೆರ್ಚ್$_2$ + ಆಳ್$_1$]

**ಪೆರ್ಚಿಸು**, ಪೆಚ್ಚಿಸು, ಪೆಚ್ಚಿಸು, ಹೆಚ್ಚಿಸು (ಕ್ರಿ). ೧. ವೃದ್ಧಿಪಡಿಸು : ಅಧಿಕಗೊಳಿಸು: "ಪೆರ್ಚಿಸು-ವರ್ಧನೇ" (ಶಮಂದ) : ಬಂಧುಜನಕ್ಕೆ ಮುಗ್ಧಮುಖಚಂದ್ರಾಲೋಕಮಾಲೋಕನೋತ್ಸವಮಂ ಪೆರ್ಚಿ[ಪಾಠಾಂ. ಚ್ಚಿ]ಸೆ ಬಾಲನಿಂತೊದವಿದಂ ಸಂಸಾರಸಾರೋದಯಂ (ಆದಿಪು. ೬-೦೨೯); ತದೀಯ ಸರ್ಬ್ಬಸ್ವಮಂ ನಿಜೇಶಂಗೆ ತಂದುಕೊಟ್ಟು ಪತಿಪ್ರಸಾದಮಂ ತನ್ನೊಳಮದಿನಂ ಪೆರ್ಚಿಸುತ್ತುಂ (ಶಾಂತೀಶ. ೩-೨೨ ಪ: 1047); ಚೇತಃಪ್ರೀತಿಯಂ ಪೆರ್ಚಿಸುವುದು ಪವನಸ್ವೈರಚಾರಂ ಸಮೀರಂ (ಶುಳ್ಳಿಪು. ೨-೯೦). ೨. ಹಬ್ಬಿಸು; ಹಬ್ಬುವಂತೆ ಮಾಡು : ವಿಷಯವಿಷವಲ್ಲಿಯಂ ಪೆರ್ಚಿಸುವ ಜಳಧಾರೆ (ಶಾರಂಪೂ. ೩೩೩). ೩. ಉಕ್ಕುವಂತೆ ಮಾಡು ; ಹೊರಹೊಮ್ಮಿಸು : ಕೊಳವ ದಯಾಂಭೋನಿಧಿಯಂ ಪೆರ್ಚಿಸಿಯುಱುವಾಗಳಿದ ಸತ್ಪಥದೊಳ್ಪರಿಯಿಸುವಲಘುಗುಣಪ್ರಾಭೇಂದುಪದಂ ನಮ್ಮಂ ಪರಿರಕ್ಷಿಸುಗೆ (ಅಜಿತಾ. ೮-೯); ಬಾಣನ ಮಹ

ದಾಸ್ಥಾನದುಗ್ರಾಬ್ಧಿಯು ಕ್ಷೀಣವಿಲ್ಲದೆ ಪೆರ್ಚಿಸುವ ಏಕಾಂಕ ತಾನೆಂಬಂತೆ . . . ಮಂತ್ರೀಶನೊಪ್ಪಿದನು (ಶಾಂತೀಶ. ೨೦-೩೨). ೪. ವಿಸ್ತಾರಗೊಳಿಸು : ಮನೆಯುಂ ಪೆರ್ಚಿಸುವೊಡೆ ಮುನ್ನಿನ ಪಾಟ್ಯೆಯೊಳಯ್ದೆ ಮಾಡಲುಂ ಬಡಗರ್ವೃತ್ತಿ ನಿಮಿರ್ಚುಗುಟಾದ ದೆಸೆಗಳೊಳನಿತುಂ ಪೆರ್ಚಿಸಲೇಡ (ಲೋಕೋಪ. ೩-೦೩). ೫. (ಅಲಂ) ಕತ್ತರಿಸು : ಕಡಿ; ಕೊಯ್ಯು : ಆಗಳಾ ಮದಗಜಾಂಕುಶದಿಂದೆ ಪೆರ್ಚಿಸಿ ನಾಭಿಯುಃ (ಶಂಕರ. ೦-೯೩); ಕ್ಷೀರಾಬ್ಧ್ಯಾಮೃತಮಾನ್ಧಿಯೊಳ್ತಿರ್ದು ಘಾತಿಕ್ಷಯಮುಖ್ಯೆಂದು ಪರಸೆ ನಾಭಿನಾಳಮಂ ಪೆರ್ಚಿಸುವುದು (ಶಾಂತೀಶ. ೨೩೫); ಪೊರ್ಕ್ಕುಳ ಕುಡಿಯುಂ ಪೆರ್ಚಿಸಲಿಕ್ಕಿದ ಮಣಿಕನಕಪುಂಜಮೊಸದಿರೆ (ಅಜಿತ. ೦೨-೬೨). 'ಪಚ್ಚಿಸು₁' ಪರಾ. ೬. ಬೀಗುವಂತೆ ಮಾಡು; ಉಬ್ಬಿಸು : ಅವರನೆ ಪೊರೆವರ್ ಪೆರ್ಚಿಪರವರನೆ . . . ನೋಡುವರ್ಗಳೆ ನಂಟರ್ (ಗಾಂಪಾ. ೫೬೨); ಸಂತಸದೆ ಪೆರ್ಚಿಪುದೆಂದಮಾರ್ದಕ್ಕಿನೊಳ್ ಕರಂ ಕರಗಿವುದೆನ್ನನಂ ದೊಸೆವು ನೀಂ ಕೃಪೆಯಿಂದಲೆ ಹಾವೆಯಾಳ್ದನೇ (ಶಂಖಾಶ. ೫); ನೀನೆಣಿಕೆಗೊಂಡನ್ನ ಪೆರ್ಚಿಸಿ ಬಯಲಿಗೀಗ ಮಾನಿದಣಕದಿಂ ದಿಟ್ಟ ತಪ್ಪಿಸಿದೊಡೆ (ಸೌಂದರ. ೦೯-೨೯). ೭. [ಗಣಿತ] ಗುಣಾಕಾರ ಮಾಡು; ಗುಣಿಸು : "ಪೆರ್ಚಿಸು ನೂಂಕು . . . ಗುಣಿಸು . . ಬೆಳಸುದು ಇಂತಿನಿತುಂ ಗುಣಿಸೋವಕ್ಕೆ ಹೆಸರು" (ಕ್ಷೇತ್ರ. ೦೦-೬); ಕ್ರಮದಿಂದು ಗ್ರಹರಾಶಿಭಾಗಕಲೆಯುಂ ನೂರಿಂಟಿಂ ಪೆರ್ಚಿಸು (ಜಾತಕ. ೬-೦). ಪೆಚ್ಚಿಸು : ೧. ಚತುರೋಪಾಯಮನೊದವಿಸಿ ಸಿಹಾಧಿಪತಿ ಯಾದವನಾರಾಯಣನ ರಾಜ್ಯಶ್ರೀಯಂ ಪೆಚ್ಚಿಸುವಜ[ಂ]ಗೆ ನಲ್ಲಂ ಮಲ್ಲಂ (ಕ್ಕಾಇ. XX. ೨೦೩-೦೬; 1244). ಪೆಚ್ಚಿಸು : ೧. ಮಾಯ ತೋಳ್ಪದ ನೆಲನುಮಾದಿತ್ಯಭಟರರ ಸ್ಥಾನವುಮ ರಕ್ಷಿಸಲ್ಪೆಚ್ಚಿಸಲಿವರ ಸಮರ್ಥರೆನ್ದು ಗೋಕರ್ಣ್ನ್ವಣ್ನ ಭಟರ್ಗ್ಗೆ . . . ಕೊಟ್ಟರು (ಕಇ. I, ೦೩-೦೫; ೫೯೫); ತನ್ದೆ ನಡಯಿಸಿದ ಬಂಕನ್ರಿಂದುವರ ಬಡ್ಡಿಗೊಟ್ಟು ಪೆಚ್ಚಿಸಿ ಪೊನ್ನಂ ಮನ್ದರಗಿರಿಧೈರ್ಯ್ಯಂ ಸಾನನ್ದದ ಶ್ರೀಸಾನ್ತಿಸೆಟ್ಟಿ ಪರಿರಕ್ಷಿಸಿದಂ (ಕ್ಕಾಇ. XX. ೫೫-೬೨; 1082). ಹೆಚ್ಚಿಸು : ೧. ಅಸನ-ಶತ್ರುವನಾಕ್ರಮಿಸಲು ಸಮರ್ಥನಲ್ಲ ಎಂದು ದೇಶ ಕಾಲಾದಿಗಳಂ ಹಾರಾತೆ ದುರ್ಗಾದಿಗಳಂ ಹೆಚ್ಚಿಸುವ ವಿಡೋಹುವಿನ ಸ್ಥಿತಿಯು (ಶಾಶಕಾ. ೬); ಕೊಳುಗುಳದ ಹೆಚ್ಚಳಸು ಹೆಚ್ಚಿಸಿತಂತಕನ ಭುಜವ (ಉತ್ತರಕ್ರೋ. ೨-೨೬). ೬. ಮಕ್ಕಳನ್ನು ಪ್ರೀತಿಯಿಂದ ಸಾಬೇಕೇ ಹೊರತು, ಅವರನ್ನು ಹೆಚ್ಚಿಸಿ ಹಾಳು ಮಾಡಬಾರದು (ಲೋಕ). ೭. "ಗುಣಿತಂ, ಆಹತಂ — ೨ ಗುಣಿಸಲ್ಪಟ್ಟದ್ದು, ಹೆಚ್ಚಿಸಲ್ಪಟ್ಟದ್ದು, ಹೊಡೆಯಲ್ಪಟ್ಟದ್ದು" (ಸಿದ್ಧಾಂತ. ೩೯೬). ೮. (ಅಲಂ) (ಶುಭವೆಂದು ಗಣಿಸುವ ದೀಪವನ್ನು ಕುರಿತು ಹೇಳುವಾಗ) ಆರಿಸು,– ನಂದಿಸು : ಕಡೆ ಹಗಲ ಕೊಳುಂಡ ಮೇಗೆ, ಹಣತೆ ಹೆಚ್ಚಿಸೆ ಕಣ್ಣು ತೂಗೆ ಮುಚ್ಚುವುದೆ ವಾನಚ್ಚಿಯಾ (ಗೀತಾ. ೬೦-೨೬).

ಪೆರ್ಚಿಸಿಕೊಳ್ಳು—ವೃದ್ಧಿಯನ್ನುಂಟು ಮಾಡಿಕೊಳ್ಳು : ವಿಧಿಪೂರ್ವಸಾಧಿತ ಮಹಾಮಂತ್ರವ್ರಜಂ ತನ್ನ ತೋಳ್ಬಲದಿಂ ಪೆರ್ಚಿಸಿಕೊಂಡಿಲಾಲಲನೆಯೊಳ್ ಮುಗಿಂಗಮೆಕ್ಕೆಗಂ ಚಲಂಗೆಯ್ವುದುರ್ (ಶಾಂತೀಶ. ೫-೦೩).

[ಪೆರ್ಚು₂ + — ಇಸು₁]

**ಪೆರ್ಚು₁, ಪೆಚ್ಚು₁, ಪೆಚ್ಚು, ಹೆಚ್ಚು₁** (ಕ್ರಿ). ೧. ಅಧಿಕವಾಗು : ವೃದ್ಧಿಯನ್ನು ಹೊಂದು : ಅತಿಶಯವಾಗು : ಸಂಸಾರವೈರಾಗ್ಯ ಮಾದವನಾನು ಪೆರ್ಚೆ (ಶಬ್ದಾನು. ೬೫-೨೮); ಆ ಶಂಕೆ ಪೊಣ್ಮುತ್ತಿರೆ ಪೆರ್ಚಿತ್ತುಗ್ರಭೋಹಂ (ಆದಿಪು. ೦೩-೩೬); ಪಗೆ ನೀಗೆಯುಂ ಮುಳಿಸು ಪೋಗೆಯುಮಾಯುತಿ ಪೆರ್ಚೆಯುಂ ಜಗಂ ಪೊಗಟೆಯುಮಾಂತರಾತಿನೃಪರಂ ಕವೆ ಕೊಲ್ವುದು (ಶಂಕರ. ೬-೯೯). ೨. (ಮರ, ಗಿಡ ಮೊದಲಾದುವುಗಳಂತೆ) ಬೆಳೆ : ಸರಿದಧಿಪತಿ ಮೊಟಕಾಲ್ವರಂ . . . ತಲೆಯುನೆಲೆಗೆ ಲೋಕಾಂತರಮಡೆಯಲ್ಲಿನಿಸೆ ಪೆರ್ಚಿದಂ ದನುತನಯಂ (ಶಂಕರಾ. ೬೨-೦೧) : ಗಸದೊಡನೆ ಕೂಡಿ ಪೆರ್ಚಿದ ಸಸಿಯುಂ . . . ಫಲವಂ ಭಾವಿಸುತಿರ್ಪನ ತಪಮುಮೊಪ್ಪಲಾರ್ಕ್ಕುಮೆ ಕಡೆಯೊಳ್ (ಧರ್ಮಾಮೃ. ೨-೯೨). ೩. ದೊಡ್ಡದಾಗು ; ಹಿರಿದಾಗು : ಅಲ್ಲಿಯ ಖಚರರ್ . . . ದೇಹಪ್ರಮಾಣದೊಳ್ ಕುಂದುವರುಂ ಪೆರ್ಚುವರುಮುಲ್ಲರ್ (ಆದಿಪು. ೯-೦೨೦ ೫) : ಪವನಂ ಪೆರ್ಚಿದ ಮಹಾವೃಕ್ಷಂಗಳಂ ಕೀಳ್ವುದಲ್ಲದೆ ಮೃದುಮವ್ವ ತೃಣಂಗಳಂ ಕೀಟಿದು (ಶಬ್ದಮ. ೯೬-೯); ಕೆಳಮಸಿಯಿಂ ಪೆರ್ಚಿತು (ಸಿದ್ಧರಾ. ೦-೯೯). ೪. ಉಕ್ಕು ; ಪ್ರವಹಿಸು : ಸುಯ್ಯೆಲರಂಬುಬಾಶಿ ವಾರಿವಾಯುಮನಲ್ಕೆ ಪೆರ್ಚುವುದು (ಕಾದಂಬ. ೩೩೫) ; ಶ್ರುತದುಗ್ಧಾಂಭೋಧಿ ಪೆರ್ಚಲ್ಕಿನನಿಗದಿತ ತತ್ವಾಂಶು ಪರ್ವಲ್ (ಧರ್ಮಾಮೃ. ೦-೯): ಜಿನಧರ್ಮ್ಮಾಂಬೋಧಿ ಪೆರ್ಚುತ್ತಿರೆ (ಎಇ. VIII (S). ಸೊರಬ. ೫೮೭-೯೭ ; 1207). ೫. ವಿಸ್ತಾರವಾಗು; ಹಬ್ಬು; ವ್ಯಾಪಿಸು ; ಹರಡು : "ಪೆರ್ಚು – ವಿಸ್ತಾರೇ" (ಶಬ್ದಾ) : ಪೊಗೆ ಪೆರ್ಚೆ [ಪಾಠಾಂ. ಪೊಣ್ಮೆ] ನೆಗೆದ ಕಾಟ್ಕಿಚ್ಚುಮುಂ ಸಿಂಹಾಸನದ ಮೇಗೇಱಿದ ಕೋಡಗಮುಮುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆನೆಂದಂಜಿ (ಶಬ್ದಾನು. ೬೫-೨೭), ದಿಗ್ಭಿತ್ತಿವಿಭೇದಿ ಪೆರ್ಚೆ ಕವಸಾನೇರಾವಂ (ಶಂಕರಾ. ೯-೯೨); ಹಿಡಿಂಬೇಶ್ವರಮೆಂಬುದು ಆ ಲಿಂಗಂ ಪೆರ್ಚ್ಚೆ ಪೆರ್ಚುವ ಕಾರಣದಿಂ ಕಳೇಶ್ವರಮದಮೃತಲಿಂಗದೇ[ವರ್] ಪ್ರಸನ್ನತೆಯಿಂ ಕಣ್ದಶ್ರೀಪದ್ಮಣ್ಣನಾಯಕ ದೇವಪಯ್ಯ . . . ದೇಗುಲದ ಅಧಿಷ್ಠಾನಮಂ ಕಟ್ಟಿಸಿ (ಕ್ಕಾಇ. IX-i. ೦೨೬-೨೯ ; 1084). ೬. ಬೀಗು ; ಹೆಮ್ಮೆಪಡು ; ಗರ್ವಿಸು : ಎನ್ನನೆ ನಚ್ಚಿ ಪೆರ್ಚೆ ಮುಂ ಪೊರೆದು (ಶಂಕರಾ. ೯-೬೦) : ಗಂಗಾನ್ವಯಂ ಪೆರ್ಚ್ಚೆ ವರ್ತಿಸುತ್ತಿರೆ (ಎಇ. VII. ಶಿಕಾರಿ. ೯ ೩೯ ; 1122) : ಅದಟಿಂ ಮುಂ ಗೆಲ್ದುದಂ ನೀಂ ನೆನೆನೆನೆದು ಭುಜಾಗರ್ವದಿಂ ಪೆರ್ಚಿದಿರ್ ಪೆರ್ಚಿದಿರ್ (ಶಿಗಾ. ೬-೬೯). ೭. ಸಂತೋಷಿಸು ; ಹಿಗ್ಗು : ಸವಣರೆಂದೊಡೆ ಪೆರ್ಚುವಳ್ ಜಿನಪೂಜೆಯೆಂದೊಡೆ ನೋಡುವಳ್ (ಧರ್ಮಾಮೃ. ೬-೦೯); ನುಡಿಯ ಬಳಲ್ದ ಪಾಂಥನೆರ್ದೆ ತಣ್ಪಿನ ಸೋನೆಯನಾಂತ ಮಾಳ್ಕೆಯಿಂ ಪೊಡಕರಿಸುತ್ತೆ ಪೆರ್ಚೆ (ಗಿರಿಜಾ. ೨-೦೯): ಅವಗುಣಕೋಟಿಯಂ ಮಟಿದು . . . ತಲೆದೂಗಿ ಮೆಚ್ಚಿ ಪೆರ್ಚುವ ವಿರಸೂಯರಂ . . . ಅರ್ಚಿಪೆಂ (ಜಗನ್ನಾ. ೦-೦೦). ೮. ನೀಳವಾಗು ; ಚಾಚು ; ನಿಡಿದಾಗು : ದೆಸೆಗಳ್ ಪೆರ್ಚಿದೆ ಮೊಟ್ಟನಾದುವಗಲಕ್ಕೆಂಬನ್ನೆಗಂ . . . ಅದ್ರೀಂದ್ರಂಗಳಂ ತಂದು ಕೀಲಿಸಿದಂ (ಆದಿಪು. ೮೫-೫೦). ೯. ವಿಜೃಂಭಿಸು ; ಅಟ್ಟಹಾಸ ಮಾಡು : ದಡಿಗನ ವಿಟ್ಟುಮಂ ಮಿದಿದೊಡಲ್ಲದೆ ಪಾಪಿನ ಮೊಃಭವೆಂದು . . . ರಥಂಗಳನಟ್ಟಿದಿಯಟ್ಟು ಭೀಮನಂ ಕಡೆಯದ ಮಾಟ್ಟ ಪೆರ್ಚೆ ನುಡಿದಂ ಕಟಕೀತನಮಂ ಮುರಾಂತಕಂ (ಶಂಕರಾ. ೬೨-೦೬). ೧೦. ಅಭಿವೃದ್ಧಿ ಹೊಂದು; ಏಳಿಗೆಯಾಗು, ವರ್ಧಿಸು : ಒಳಗಿರ್ದ ವೈರಿಗಳ್ ಪೊಕ್ಕಳವಿಯಾರ್ ಪೆರ್ಚಲಧಿಪವರ್ಕಳುಮಂ ತಳರದೊಡನಿರ್ದು ಬಡದಾನಳನೆಂದುಂ ಪೆರ್ಚಲೀಯು[ದಂ]ತಂಬುಧಿಯುಂ (ಕಬ್ಬಿಗ. ೩-೦೯೯); ಪೆಣ್ಣ ಪೆತ್ತವರ ಬಳಗ ಬಳೆವುದು ಬೇಗ ಪೆಣ್ಣ ಪೆತ್ತವರು ಪೆರ್ಚುವರು (ಹರಿ. ೫-೯). ೧೧. ಉಬ್ಬು : ಒಳಗಿರ್ದ ವೈರಿಗಳ್ ಪೊಕ್ಕಳಿಯಾಯರ್ ಪೆರ್ಚಲಧಿಕವಿಭವರ್ಕಳುಮಂ ತಳರದೊಡನಿರ್ದು ಬಡಬಾನಳನೆಂದುಂ ಪೆರ್ಚಲೀಯು[ದಂ]ತಂಬುಧಿಯುಂ (ಕಬ್ಬಿ. ೩-೦೯೯); ಉರಿಗಣ್ಣ ಕೆತ್ತುವ ಮೀಸೆ ಪೆರ್ಚಿದ ಕೊರಲ್ ಪೆರ್ಚಲ . . . ಚಿಲ್ಲಾಗೆ ತತ್ಸ್ಯಾನನಂ ತರದೊಳ್ ಪೆರ್ಚುತಿಯುದ್ದುದು (ಶಶಿಸಂ. ೬೬). ಪೆಚ್ಚು₁ : ೧. ಎನಿತೆನಿತು ಪೆಚ್ಚುಗುಮಂತನಿತನಿತೊಡನೊಡನೆ ಪೆರ್ಚುತಿರ್ಪ್ಪಂ ಮೋಹಂ ಧನದಿಂ ಪರಿಜನದಿಂದೆಂದಿನಿತಱಿವಗ್ಗಳವನೊಲ್ಲೆನೆಂಬಂ ಜೈನಂ (ಶಬ್ದ. ೫-೬೩) : ಒಂದಕ್ಕೆ ನೂಱುಮಡಿಯಾಗಿ ಪೆಚ್ಚುಲ್ಕು(೬ಕ್ಕೆ ೩-೦೯) : ಉಚ್ಚವದೊಳಗಿತ್ತನವರತ್ನಭೂಷಣ ಪೆಚ್ಚಿ ಬಂದಿದೆ ನೋಡೇಳು (ಶಂಕರ. ೨೨-೯೩). ೪. ಒಸೆದು ಕಣ್ಣಾಳಿಂದೆ ಸುಱಿದ ರಸದ ಹೊನಲು ಸಚ್ಚಿ ಪೆ[ಪಾಠಾಂ. ಮು]ಚ್ಚಿ (ಶಬ್ದ. ಕೀ.

ನೀಲಪುಟುಗಳೊಳೀಯಿಸಿ (ಶಾಂತಿಪು. ೬-೭೯). [ ಪೆರ್ಚು$_2$ + ಕಿಡು$_1$ ]

**ಪೆರ್ಚುಗೆವಡೆ** (ಕ್ರಿ). ವಿಸ್ತಾರಗೊಳ್ಳು ; ವಿಶಾಲವಾಗಂ : " ಅಗ್ಗಲಿಕಂ-ಪೆರ್ಚುಗೆವಡೆದುವು " (ಕವಿರಾ. ೦೩೬ ೮೬೪). [ ಪೆರ್ಚುಗೆ + ಪಡೆ$_1$ ]

**ಪೆರ್ಚುವಡೆ** (ಕ್ರಿ). ಹೆಚ್ಚಾಗು ; ಅಧಿಕವಾಗು : ತನುಭೋಗಾಯುಷ್ಯಂಗಳ್ ಮನುಷ್ಯರೊಳ್ ಪೆರ್ಚುವಡೆಗುಮುತ್ಸರ್ಪಣದೊಳ್ (ಶಂಕಾಶಾ. ೦-೨೮); ಎರಡುಂ ಪಕ್ಕದ ವಜ್ರವೇದಿಕೆಗಳಂ ಮೆಯ್ಯೆರ್ಚೆಯುಂ ಕ್ಷೀರಸಾಗರಮುಲ್ಲಂಘಿಸದಂತೆ ಪೆರ್ಚುವಡೆದುಂ ಧರ್ಮಾರ್ಥಮು ಕಾಮರಾಗರಸಂ ವಿಡಿದೆ ಚಿತ್ತವೃತ್ತಿಗದು ಲೀಲಾಮಾತ್ರವಹಾದೀತನಲ್ . . . ಭೂಚಕ್ರಮಂ ತಾಳ್ದಿದಂ (ಜುಕ್ಕಪು. ೩-೫೦). [ ಪೆರ್ಚು$_3$ + ಪಡೆ$_1$ ]

**ಪೆರ್ಚುವೆಱು** (ಕ್ರಿ). ಅತಿಶಯವಾಗು : ಪೆರ್ಚುವೆತ್ತಪರಂಜಿಗಳಶವನಷ್ಟ ವಿಧಾರ್ಚನೆಯಿಂದ ಸತ್ಕರಿಸಿ (ಹರಿ. ೦೬-೬೩). [ ಪೆರ್ಚು$_2$ + ಪೆಱು$_1$ ]

**ಪೆರ್ಜಡಿ** ' ಪೆರ್ಜೆಡಿ ' ನೋ.

**ಪೆರ್ಜಸ** (ನಾ). ಹಿರಿದಾದ ಕೀರ್ತಿ,—ಹೆಸರು : ಪೆರ್ಜಸಮನೆ ಪಡೆದನ್ನನೆ ರಣದೊಳಟಃವಂ (ಶಂಕಶಾ. ೯-೬೬); ಚಿಕದೇವನೃಪನಂದು ಪೆರ್ಜಸಮೊಂದಿ ಸೊಗವಾಳ್ದಂ (ಅಕ್ರಶಿ. ೦-೨೦). [ ಪೆರ್ (< ಪಿರಿದು$_1$) + ಜಸ$_1$ ]

**ಪೆರ್ಜಾರಂಗಿ** (ನಾ). ಒಂದು ಊರಿನ ಹೆಸರು : ಎಡದಿರ್ಕ್ಕೇ ಸಪ್ರತಿ ಪ್ರತಿಬದ್ಧಃ ಪೆಜ್ಜಾರಙ್ಗಿ ನಾಮಗ್ರಾಮಸ್ಸರ್ವಬಾಧಾಪರಿಹಾರಸಮೇತೋ (ಶ್ಕ್ರಿಆ. ೦೯೬೭, ೬೩-೦೦೦; 819). [ ? ]

**ಪೆರ್ಜುಂಕ**, ಪೆಜ್ಜುಂಕ, ಹೆಜುಂಕ, ಹೆಜ್ಜುಂಕ, ಹೆರ್ಜುಂಕ (ನಾ). ಬೆಲೆಬಾಳುವ ಸರಕು, ಪ್ರಾಣಿ, ಧಾನ್ಯ, ಅಂಗಡಿ ಮೊದಲಾದುವುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಟಾಣೋಪಸಹಿತಂ ಪಜ್ಜುಂಕಂ ಬಿಲ್ಕೊಡೆ (ಓಂಶಾ. ೦೯೩೬, ಹಾಸನಗ. ೬೩-೦೯; 975); ಆಯೂರ ಪೆಜ್ಜುಂಕಮುಮಂ ಬಿಟ್ಟು (ಶ್ಕ್ರಿಆ. ೦೯೩೦, ೬೬-೪೭; 1080); ಅತ್ತಿಮರಸಂ ಮೂರುಲಕ್ಷದಡಕೆಯ ಪೆಜ್ಜುಂಕಮುಂ ಬಿಟ್ಟ (ಶ್ಕಾ೨. IX—1. ೦೦೪-೬೬. 1107). **ಹೆಜ್ಜುಂಕ** : ಪೆಜ್ಜುಂಕಕ್ಕೆ ದ್ರಮ್ಮ ೧ (ಶಾಂದೇಶ. ೩-೨೨ ಶ; 1047); ಕೆಱೆಗೆ ಪೆಜ್ಜುಂಕದಲುಯೆರಡುಲಕ್ಕವ(ಂ)ಡಕೆಯುಂ ಬಿಟ್ಟರ್ (ಶಾ. II. ೬-೨೯; 1072). **ಹೆಜುಂಕ** : ಹೆಜುಂಕ ಪಡರುವು[ಳ]ದ ದಂಡನಾಯಕಂ ಕರಿಯ ಮಹೇಸ್ವರದೇವ ಗೋಯಿದರಸರ ಬಸದಿ (ಶಾ೩. IV. ೦೯-೦೦; ಶು. 1172); ಉಭಯಮಾರ್ಗದ ಹೆಜುಂಕ × × ಸುಂಕ (ಎಪಿ. XII. ಶಿಶಾ. ೬೬-೦೬; 1379). **ಹೆಜ್ಜುಂಕ** : ಶ್ರೀಮನ್ಮಹಾಪ್ರಧಾನಂ ಬೆಳ್ವಲನಾಡ ಹೆಜ್ಜುಂಕ ದಂಡನಾಯಕ ಮಲ್ಲಪಂ (ಶಾಕಶ. ೨೩-೨೯; 991); ಗವಱೇಶ್ವರದೇವರ್ಗ್ಗೆ ಮೂಱುಲಕ್ಕ ಅಡಕೆಯ ಸುಂಕ ವಡ್ಡರಾಉಳ ಹೆಜ್ಜುಂಕಮಂ ಬಿಟ್ಟರು (ಶ್ಕಾ೨. IX—1. ೨೩೬-೯; 1142); ಹೆಜ್ಜುಂಕದ ಅಧಿಕಾರಿ ಮಲ್ಲರಸರು (ಎಪಿ. IX. ಕಂಗುಶಿ. ೬-೯; 1440). **ಹೆರ್ಜುಂಕ** : ವಿನಾಯಕ ದೇವರ ನಿವೇದ್ಯಕ್ಕೆ ಹೆಜ್ಜುಂಕದಲು ತಿಂಗಳಿಂಗೆ ಪಣಮೆರಡಂ ಬಿಟ್ಟರು (ಶ್ಕಾ೨. IX—1. ೨೨೩-೬೬, 1127) ; ಪಟ್ಟಣದೊಳಗೆ ಹೆರ್ಜುಂಕದಲೂ . . . ಕೊಟ್ಟರು (ಶಿಂಂ೭. ೪೦-೦೩ ; 1186) ; ಭತ್ತ ಭ[ಾ]ಗ ಕ್ಕಂ ಹೆರ್ಜುಂಕಂ (ಶ್ಕಾ೨. IX-II. ೪೦೦-೦೬ ; 1366) ; ಹನ್ನಿಚ್ಛಾಸಿರದ ಹೆಜ್ಜುಂಕ ಬಿಲ್ಕೊಡ (ಶ್ಕಾ೨. ೦೯೪೬, ಹಾಸನಗ. ೨೦೯-೨೯ ; ?).

**ಹೆರ್ಜುಂಕದ ಹೆಗ್ಗಡೆ, ಹೆಜ್ಜುಂಕದ ಹೆಗ್ಗಡೆ** — ಬೆಲೆ ಬಾಳುವ ಸರಕು, ಪ್ರಾಣಿ, ಧಾನ್ಯ ಅಂಗಡಿ ಮೊದಲಾದುವುಗಳ ಮೇಲೆ ಹಾಕುವ ತೆರಿಗೆಯನ್ನು ವಸೂಲು ಮಾಡುವ ಅಧಿಕಾರಿ : ಶ್ರೀಮತ್ ಪೆಜ್ಜುಂಕದ ಪೆರ್ಗ್ಗಡೆ ಪಾವಣಯ್ಯಂಗಳ ಬಸದೆ (ಶ್ಕಾ೨. XX. ೩೯-೦೦ ; 1039) ; ಹೆಜ್ಜುಂಕದ ಪೆರ್ಗ್ಗಡೆ ಕರಣಂಗಳುಂ ಗ್ರಾಮೇಶ್ವರದೇವರ್ಗ್ಗೆ . . . ಬಿಟ್ಟರ್ (ಶ್ಕಾ೨. XI—II. ೦೯೩-೩ ; 1099).

[ಪೆರ್ (< ಪಿರಿದು$_1$) + ಸುಂಕ$_1$]

**ಪೆರ್ಜೆಡಿ**, ಪೆರ್ಜಡಿ (ನಾ). ಒಂದು ಊರಿನ ಹೆಸರು : ಶ್ರೀ ಕೀಲಾವಿಗ್ಗ್ಗರವಡಿಗಳ ಶಿಷ್ಯರ್ ಚಱಿಕಾಡ ಪೆಜ್ಜೆಡಿಯ ಮೊದೆಯ ಕಲಾಪಕದ ಗುರವಡಿಗಳ್ ((ಎಪಿ. II. ೩೩-೨ ; ಶು. 700). **ಪೆರ್ಜಡಿ** : ಪೆಜ್ಜಡಿಯ ಕೆಱೆಯ ಕೆಳಗೆ ಮೂಗಣ್ಣಾಗಂ ಕಳನಿ(ಎಪಿ. IX. ಹಾಗಪುಂ. ೬೦-೦೨೩; 797).[?]

**ಪೆರ್ಜೆಡೆ** (ನಾ). ನೀಳವಾದ ಜಡೆ : ಉದ್ದವಾದ ಹೆರಳು : ಪೊಳೆವ ಪೆರ್ಜೆಡೆಯಲವರ್ಗಾಲೆ ಹೋಗೆಡ್ಡ ಬಿಡಯವಿಲ್ಲದ ಹೊನ್ನಂಡಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಕಪಾಹಕ. ೦೯-೬೦).

[ಪೆರ್ (< ಪಿರಿದು$_1$) + ಜಡೆ (< ಜಡ$_1$)]

**ಪೆರ್ಜೆಱಿವು** (ನಾ). ದೊಡ್ಡ ಆತಿಥ್ಯ : ಮೂಱುಮ ಪೆರ್ಜ್ಜೆಱಿವು ಪಟ್ಟುಮು ತ್ರಿಭುವನಾಚಾರಿಯನ್ನು ಪೆಸರಿಟ್ಟು (೨೪. X. ೦೬೪-೩ ; ಶು. ೭೫೪ು ೬೫)

[ಪೆರ್ (< ಪಿರಿದು$_1$) + < ಸೆಱವು]

**ಪೆರ್ಜೊಡರ್**, ಹೆಜ್ಜೊಡರ್, ಹೆಜ್ಜೊಡರು (ನಾ). ೧. ದೊಡ್ಡ ದೀವಿಗೆ,—ದೀಪ : ಇರುಳ ಪೆರ್ಜೊಡರ ಕಜ್ಜಳ ಬೇಱೀನುಮಿಲ್ಲದಿರಲಾಗ ದೀಪದ ಕಲಿಯನಾರು ತಲೆನವಿರ ಪೆರ್ಜೊಡರ ಪಕ್ಷಿಸಿ (ಶಾಹಶ. ೬-೨೨). ೨. ದೊಡ್ಡ ಪಂಜು,—ದೀವಟಿಗೆ : ದುರ್ಜಯರುಂ ಬಡಿವ ಹಜೆಗಳ ಕೈಗಳೊಳಗಾಂತ ಪೆರ್ಜೊಡರ ಗಡಣದಿಂ . . . ಕೋಂಟೆಯುಂ ಕಾದಿರ್ದರು (ಶಿಶಪು. ೪೨-೯). ೩. [ತತ್ತ್ವಶಾ]ಚಿದಾಕಾಶದ ದೀಪದ ಕುಡಿ : ಚಿಜ್ಜ್ಯೋತಿ : ಅಹಿಗಳ್ ಪಕ್ಷಿ ಪರಿದಾಡುತ್ತಿರೆ ನಡುನೆತ್ತಿಯ ಪೆರ್ಜೊಡರನೊರ್ವನೀಕ್ಷಿಸುತಿರ್ದಂ (ಶಾಶೀ. ೦-೦೩೪). **ಹೆಜ್ಜೊಡರ್** : ೧. ಮೊಳೆವ ಸಂಧ್ಯಾಂಗನೆಗಬುಧಿ ನಿವಾಳಿಸಲೆಂದು ತಳೆದ ಪಹಣಿದ ಹೆಜ್ಜೊಡರೊ . . . ಎನಿಸಿ ಕಡೆವಗಲ ರವಿ ಟಲ್ಗೆ ಸೊಗಸಿರ್ದನು (ಹಕಾ ೩-೬೩) ; ಹಿಡಿದ ಹೆಜ್ಜೊಡರನಿಂದುರ್ಬಿಬಂ ಪೋಲ್ವುದು (ಸಿಕ್ಕೃಕಾ. ೦-೩೪). **ಹೆಜ್ಜೊಡರು** : ೧. ನಡೆಮುಡಿ ಕಱಿಬೋನ ಕಳಸ ಟನ್ನದ ಹೆಜ್ಜೊಡರು ವೆರಸಿ ನಿನ್ನ ಬಾಗೆ ನಡೆವಂ (ಶಾಬುಂ. ೬-೦೨೩) ; ಅಂಚೆನೊಳುರಿವ ತುಪ್ಪಗಳ ಹೆಜ್ಜೊಡರಿಂದ ಸಂಚಿಸಿದ್ದುದು ಶಸ್ತ್ರಪೂಜೆ (ಶರಶ. ೨೦-೦೨೭) ; ಬೆಳಗಲಿ ಹೆಜ್ಜೊಡರು (೨೦ಶಾಶ. ೦೫೦-೬೬). [ಪೆರ್ (< ಪಿರಿದು$_1$) + ಸೊಡರ್]

**ಪೆರ್ಜೋಡೆ** (ನಾ). ಅನುಭವಸ್ಥೆಯಾದ ಸೂಳೆ : ಪೆರ್ಜೋಡೆಯಂತೆ ನುಣ್ಣಿತಂ ದೇಟ್ಟು (ಶಂಕಶಾ. ೬-೬೨ ೪). [ಪೆರ್ (< ಪಿರಿದು$_1$) + ಜೋಡೆ]

**ಪೆರ್ಜ್ವಾಲೆ** (ನಾ). ಉರಿಯನ್ನು ಚಾಚುವ ಜ್ವಾಲೆ,—ಅಗ್ನಿಶಿಖೆ : " ಉರಿಯ ಪೆರ್ಜ್ವಾಲೆ ಕೀಲಕಮೆನಲ್ " (ಶಂಜಗಾ. ೦೯-೬).

[ಪೆರ್ (< ಪಿರಿದು$_1$) + ಜ್ವಾಲೆ]

**ಪೆರ್ತಾಯ್** (ನಾ). ಶ್ರೇಷ್ಠಳಾದ ಜನನಿ ; ಹಿರಿಮೆಯುಳ್ಳ ತಾಯಿ : ಓ ತಾಯೆ, ಕನ್ನಡದ ಪೆರ್ತಾಯೆ, ನಮ್ಮಮ್ಮ, ದೇವಿ, ಸಾಮ್ರಾಜ್ಞಿ (ಹೊಂಗಳು. ೦೩-೦೬). [ಪೆರ್ (< ಪಿರಿದು$_1$) + ತಾಯ್]

**ಪೆರ್ದಂಡೆ** (ನಾ). ವಿಶಾಲವಾದ ದಡ : ವಿಸ್ತಾರವಾದ ತೀರ : ಉಪಾಂತದೊಳ್ ಪರ್ವಿದ ಪೊಗೇದಗೆಯ ರಜದಿಂ ಪುಟ್ಟಲ್ಪಟ್ಟಿದ ಪೆರ್ದಂಡೆಗಳೊಳಂ (ಶಾಶಂಪು. ೦೦೬). [ಪೆರ್ (< ಪಿರಿದು$_1$) + ದಂಡೆ]

**ಪೆರ್ದಡಿ** (ನಾ). ಉದ್ದವಾದ ಬಡಿಗೆ ; ದೊಡ್ಡದಾದ ದೊಣ್ಣೆ : ಪಾಣಿಯೊಳಾಂತ ಪೆರ್ದಡಿಗಳ ಲುಬ್ಧಕಶ್ರೇಣಿ ಬೊಬ್ಬಿಡುತಲ್ಪೆಯಿದುದು (ಶಂಜಿಪಕ. ೦೯-೯). [ಪೆರ್ (< ಪಿರಿದು$_1$) + ದಡಿ$_1$]

**ಪೆರ್ದರಿ** (ನಾ). ದೊಡ್ಡದಾದ ಗೀ..–ದೊಗರು : ವಿಜಃಗುವ ದಾಡೆಯಿಂದಡೆದು ಪೆರ್ದರಿಯಂ ಕರದಿಂದಮೆತ್ತುತುಂ . . . ಬರುತಿರ್ದುದು ಭೀಕರನೊಂದು ಸೂಕರಂ(ಶಾಕೃಶಾ. ೦೦೧೨). [ಪೆರ್ (< ಪಿರಿದು$_1$) + ದರಿ]

**ಪೆರ್ದರಿಯಂಗಿ** (ನಾ). (?) : ಕರಡಿ ರುರುಪ್ರತಾನಮುಂಡು ಬೆಳ್ಳಿಲಿ ಪೆರ್ದರಿಯಂಗಿ ಪೇರಣಿಲ್ ಮರದಣಿಲೆಂಬಿವಂ ಕಿಡಪಿಯೇಂ ತಿರುಗಿತ್ತೊ ಕಿರಾತಸಂಕುಳಂ (ಅಕಕು. ೨-೦೨೦). [?]

**ಪೆರ್ಗಲ** (ನಾ). ಒಂದು ಸ್ಥಳದ ಹೆಸರು : ಪೆರ್ದ್ಗಲೆಯೂ ಸೀಮ್ಮನ್ತಃ ಪೂರ್ವ್ವತಃ (ಎಕ. VIII, ಸೊರಬ. ೩೩-೩ ; ಕ್ರಿ. ೩೭೦ ಕ್ರಿ.ಶ). [?]

**ಪೆರ್ದಲೆ, ಹೆದ್ದಲೆ** (ನಾ). ೧. ದೊಡ್ಡ ತಲೆ: ಪೆರ್ದಲೆಯ ಕಟ್ಟಿದುಪ್ಪೆಗಳುವಣಾಗಿ ಮೆಯ್ಯೊಲ್ಲವೆನುನರ್ಚಿ[ಯಿಂ] (ಪಂಪ. ೧೩-೮) ; ಪೆರ್ಗರಡಿಯು ಕೊಂಡಡೆ ಕಡಿದ ಪೆರ್ದಲೆಯ ಸಂತಸ ಬಡದೆ ಪೊತ್ತಿರ್ದರು (ಕೋಕಶ. ೦೯-೨೯). **ಹೆದ್ದಲೆ :** ೨. ಮುಖ್ಯನಾದವನು ; ಪ್ರಮುಖ: ಬ್ರಹ್ಮಾಚ್ಯುತಾದಿಗಳ ಒಳಗೆ ಹೆ[ಪಾಠಾಂ. ಹೊ]ದ್ದಲೆಯಾಗಿ ಬಾಳ್ವನ ತಲೆಯು ನಿನ್ನಯ ತಲೆಯು ಸರಿಯು (ಬಸವ. ೩೭-೨೧). [ ಪೆರ್ (< ಪಿರಿದು$_1$ ) + ತಲೆ$_1$ ]

**ಪೆರ್ದಸಿ** (ನಾ). ದೊಡ್ಡ ಬೆಳೆ,—ಗೂಟ : ಪೆರ್ದಸಿಯ ಮೇಲೆ ಮಹಾದ್ಯುತದಿಂದಮಿದ್ದು . . . ವೇದನೆಗೆ ಸೈರಣೆಗೆಟ್ಟುಬಿಡಿರ್ದ ಭೀತರಂ ನೋಡುತ್ತುಂ (ಧರ್ಮಾಮೃ. ೦೨-೨೦). [ ಪೆರ್ (< ಪಿರಿದು$_1$ ) + ದಸಿ]

**ಪೆರ್ದಳಿ** (ನಾ). ದೊಡ್ಡ ದಿಮ್ಮಿಗಳ ಬೇಲಿ : ಸಾಲ್ಗೋಡು ತರತರದ ಪೆರ್ದಳಿಯ ದಡ್ಡಿಗಳನುಟ್ ಮುಚ್ಚಿದು . . . ಪುರವನೊಳಪುಗುತಿರ್ದರು (ಶಬ್ದ. ೧೨-೨೮). [ ಪೆರ್ ( < ಪಿರಿದು$_1$ ) + ತಳ್$_4$ (< ತಟ್ ) ]

**ಪೆರ್ದಾತು?** (ನಾ). ಒಂದು ಸ್ಥಳದ ಹೆಸರು (?) : ತತ ಆಗತ್ಯ ಕರ್ದೇಸುರಿ ಗೋದು ತತ ಪೆರ್ದಾ(?)ತು ತತ ಅಲೆಚಿ (ಎಕ. VI, ೯೩-೩೨: ೧೮೧೮). [?]

**ಪೆರ್ದಾರಿ, ಹೆದಾರಿ, ಹೆದ್ದಾರಿ** (ನಾ). ದೊಡ್ಡ ಹಾದಿ ; ಪ್ರಧಾನವಾದ ಬೀದಿ ; ರಾಜಮಾರ್ಗ : "ಪರ್ದಾರಿ—ಬಟ್ಟೆಸಳ್ತ್ರು" (ಶಬ್ದ. ೯. I. ೩೨) : ನರಕಕ್ಕೆ ಪೋಪ ಪೆರ್ದಾರಿ ವಯಾವ್ಯಸನಕ್ಕೆ ಮೂಲವಮಪ್ಪುದೆ ಪುಸಿಯಿಂದಂ ಬಟ್ಟು ಪಾತಕಂ ಪೆಟತೂಳಪೇ (ಧರ್ಮಾಮೃ. ೦೦-೦೯೦). **ಹೆದಾರಿ:** ಪಟವಲು ಸುಗ್ಗಿಯ ಗದುಯ ಕೀಟಗಡಿ ಬಜಗಲು ಹೆದಾರಿಯು ಸುಗ್ಗಿಯು ಗದ್ದೆಯ ಹಾಳಿ ಗಡ . . . ಬಿಟ್ಟರು (ಕಶ. I. ೯೦-೯೦೪: 1417 ೯). **ಹೆದ್ದಾರಿ :** ಪಡುವ ಮೂಲಿಗವ ನೆಯ ಹೆ[ದ್ದಾ]ರಿ ಮೂಡ ಬಡಗ ಮುಖ ಬಂದ ಕೈ ಳರ (ಕೌ೩ಅ. XI-1. ೬೯ ೩೫; 1038) ; ಕೂಗುವ ಕಲ್ಲ ಸಮೀಪದ ಹೆದ್ದಾರಿ (ಎಕ. VII. ಶಿಕನ. ೨೬-೨೫೬ ; 1584) ; ವಿವಿಧ ರಾಷ್ಟ್ರಗಳ ನಡುವೆ ಕ್ರಮವಾಗಿ ಹೆದ್ದಾರಿಗಳನ್ನು ಒದಿಸುವುದರ ಮೂಲಕ ಉತ್ಪನ್ನವಾದ ಅಂತರರಾಷ್ಟ್ರೀಯ ಹೆದ್ದಾರಿಗಳನ್ನು ನಿರ್ಮಿಸುವುದು ಇಲಾಖೆಯ ಮುಖ್ಯ ಉದ್ದೇಶ (ಅಂಕಸಂ. ೯೬) ; ಉದ್ದು ಉರುಳಿದರೆ ಹೆದ್ದಾರಿ ದಾಟೀತೇ ? (ಗಾದೆ).
[ ಪೆರ್ ( < ಪಿರಿದು$_1$) + ದಾರಿ ]

**ಪೆರ್ದಿದಿ** (ನಾ). ದೊಡ್ಡ ಚೀಲ : ಪೆಟಲುಪ್ಪಿನ ಪೆರ್ದಿದಿ ಮರ್ದಿದೆಂಬಿವಂ ಸುರಿದು . . . ಭುಟಂಂತಾ ಕಾಮತಿರೆ (ಧರ್ಮಾಮೃ. ೬-೦೦೬).
[ ಪೆರ್ (< ಪಿರಿದು$_1$ ) + ತಿದಿ]

**ಪೆರ್ದಿನಿ, ಹೆದ್ದೀನಿ$_1$** (ನಾ). ಎಲ್ಲವನ್ನೂ ತಿನ್ನುವವನು ; ಸರ್ವಭಕ್ಷಕ : "ಸರ್ವಾನ್ನೀನಃ, ಸರ್ವಭಕ್ಷಃ—ಈ ೨ ಪೆರ್ದಿನಿ [ಪಾಠಾಂ. ಹೆದ್ದೀನಿ]" (ಕರ್ಣಾಟು. ೩೬-೦೯೬). **ಹೆದ್ದೀನಿ$_2$ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಪೆರ್ ( < ಪಿರಿದು$_1$ ) + — ತಿನಿ$_2$ ]

**ಪೆರ್ದುಡುಗೆ** (ನಾ). ಬಹಳ ಬೆಲೆಬಾಳುವ ಆಭರಣ ; ಅಮೂಲ್ಯವಾದ ಒಡವೆ : ಪಸರಿಸಿದ ತೋರಹಾರದ ಪೊಸಪೆಣ್ದಿಂಗಳುಮನವರ್ದ ಪೆರ್ದುಡುಗೆಗಳೊಳ್ ಮಿಸುಗುವ ಪೊಸಮಾಣಿಕದಳವಿಸಲುಮನೊಡಗೂಡಿ ಲಾದುದಾಸ್ಥಾಯಿಕೆಯೊಳ್ (ಅಜಿತ. ೯-೩).
[ ಪೆರ್ ( < ಪಿರಿದು$_1$ ) + ತುಡುಗೆ ( < ತೊಡುಗೆ) ]

**ಪೆರ್ದುರ್ಗ** (ನಾ). ದೊಡ್ಡ ಕೋಟೆ,— ಕಿಲ್ಲೆ : ಬರುತಿರಲು ಮುಂದೊಂದು ಪೆರ್ದುರ್ಗಮಿರಲದರ ಬಾಹ್ಯದೊಳೆಸೆದುದುದ್ಯಾನವನಂ (ಶಶಿಪೋ. ೮-೦೮). [ ಪೆರ್ ( < ಪಿರಿದು$_1$ ) + ದುರ್ಗ]

**ಪೆರ್ದುಂಬು** (ನಾ). ದೊಡ್ಡ ಮಂಡಿ,—ಗಂಟು : ಪೂಸಿದ ಗಂಧ ನಡುವಿನ ಬಂಕಂ ಪೆರ್ದು[ಪಾಠಾಂ. ಪೂದು]ಂಬು ಉಡಿಜಲ್ಲಿಯುಟ್ಟ ಕಾಶೆಯ ಸಬಳಿಗರಂದು ನಡೆದು ಬಂದರು (ಶಂಕಾಪಾ. ೦೦-೩೬): ಪಟ್ಟಿಕ್ಕಿದ ಹಾರ ಕಿರೀಟ ಪೆರ್ದುಂಬಿನೊಳೊಪ್ಪುವ ತೋರಮುತ್ತುಗಳ ಪಾಲಿಸಿದ (ಕೋಕಶ. ೦೫-೦೬).
[ ಪೆರ್ (< ಪಿರಿದು$_1$) + ತುಂಬು$_2$ (< ತುಂಬು$_3$) ]

**ಪೆರ್ದೂಲ** (ನಾ). ದೊಡ್ಡ ದಿಮ್ಮಿ ; ಭಾರಿಯಾದ ತೊಲೆ : ಸಾಲ ದಂತಣೆ . . . ಪೆರ್ದೂಲ ಕಕ್ಕಡವಂದಿ . . . ಜೊತ್ತುಗೂಂಡುಗಳ ಜಾಲ ಪೊಪ್ಪಿಹವು (ಗುಶಕ. ೦-೩೦). [ಪೆರ್ (< ಪಿರಿದು$_1$)+ದೂಲ]

**ಪೆರ್ದೆಪ್ಪ** (ನಾ). ದೊಡ್ಡದಾದ ಹರಿಗೋಲು,—ನಾವೆ : ಈಡೊಡಮುಂ . . . ಬೇಡರೊಡವರ ನೀಡುಂ ಪರಿವ ಪೆರ್ದೊಟಿಗೆಯ್ದಿ ಸಾರ್ದ ಪೆರ್ದೆಪ್ಪಮನೇಜ ನಿಂದು (ಗಾಡಿಕೀ. ೩-೦೦೯ ಕ).
[ಪೆರ್ (< ಪಿರಿದು$_1$)+ ತೆಪ್ಪ]

**ಪೆರ್ದೆರೆ, ಹೆದ್ದೆರೆ** (ನಾ). ೧. ದೊಡ್ಡ ಅಲೆ,—ತರಂಗ : "ಊರ್ಮಿಃ, ಉತ್ಕಲಿಕಾ, ಉಲ್ಲೋಲಃ, ಕಲ್ಲೋಲಃ, ಲಹರೀ—ಈ ೫ ಪೆರ್ದೆರೆ" (ಕರ್ಣಾಟು. ೦೦೩-೩೦): ಭಯಂಕರತರಮಾದ ಪೆರ್ದೆರೆಗಳಂ ಹಮಸಂತತಿ . . . ನಿರಂತರಂ ತಿರಸ್ಕರಿಸಿರೆ (ಶಂಕರಾ. ೦೦-೨೦); ಕಣ್ಗೊಳಿಸಿದೀಂಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೀಬಿನಂ (ಕಬ್ಬಿಗ. ೬೯): ಪಾರ್ವಲ ತಾಳನುಗತಿಯೊಳು ನಡೆದಳು ಪೆರ್ದೆರೆಯಂತೆ ಮುಂದೊತ್ತಿ (ಚಕತ. ೦೨-೬೯). **ಹೆದ್ದೆರೆ :** ೧. "ಹೆದ್ದೆರೆ—ಉಲ್ಲೋಲ, ಕಲ್ಲೋಲ" (ಪಾಠಾಂ. ೯): ಇದ್ದನದ್ದನು ನರಕದುಃಖದ ಹೆದ್ದೆರೆಯ ಹೊನಲಿನಲಿ (ತಾಗೆ. ೬-೨-೩೩) ; ಪೆರ್ಗಡಲ ಹೆದ್ದೆರೆಗಳೆನ್ನದು ತನ್ನಂ ಕೊಂಡು ಕರ್ಗತ್ತಲೋಳದ್ದುವಂತೆ (ಜಕ. ೯-೬೩). ೨. ಅಗಲವಾದ ಪರದೆ,—ಜವನಿಕೆ : ಅಸಹನೀಯ ಮೌನದ ಹೆದ್ದೆರೆಯೊಂದು ನಮ್ಮ ನಡುವೆ ಇಳಿಬಿದ್ದಿತು (ಶಂಕೆ. ೦೩೯).
[ಪೆರ್ (< ಪಿರಿದು$_1$)+ತೆರೆ$_1$]

**ಪೆರ್ದೆವರ್, ಹೆದ್ದೆವರು** (ನಾ). ಎತ್ತರವಾದ ದಿಣ್ಣೆ,—ತಿಟ್ಟು : ಪೆರ್ದೆವರುದ್ದ ಬಟ್ಟುಮಂಚಿಡೆಯುಣಮಿಲ್ಲದೆಯ್ದೆ ಧರೆ ತರ್ಗಿ ಬರ್ಟಕ್ಕದು ಕೊಳ್ಪಾವುದಾ ಪಡೆ ನಡೆಯಲ್ (ಕರಾಜ. ೦೨-೩೬). **ಹೆದ್ದೆವರು :** ವಿಗಡ ಭೀಮನ . . . ಮುಂದುಹು ಸೋಂಕಿದೊಡಾ ಮಹಾದ್ರಿಗಳೊಡನೆ ತೋರ ಹತರು ಕೆಡೆಮಪಡಿಯುಡಲು ಹಜ್ಜೆಗೆ ತಗ್ಗಿದುದು ನೆಲಸಹಿತ ಹೆದ್ದೆವರು (ಕಂಭಾ. ೦೨-೯). [ಪೆರ್ (< ಪಿರಿದು$_1$)+ತೆವರ್ (< ತೆವರ್$_2$)]

**ಪೆರ್ದೆಸೆ** (ನಾ). ಏಳಿಗೆಯ ಕಾಲ; ಅಭ್ಯುದಯಾವಸ್ಥೆ; ಸುಸ್ಥಿತಿ : ಕಳವಿಂ ಧನಲಾಭಮಾದೊಡಾ ವನಿತೆಯುಮಿಷ್ಟರುಂ ಸುತರುಮಂಟೆಪ್ಪಡೆಯೊಳ್ ಪುದುಗಳ್ಗನೆಂದು ಭೋಂಕನೆ ಕಡಿಕ್ಕಿ ಪೆರ್ದೆಸೆಯೊಳಲ್ಲಮವರ್ಪುದು ವಾಗಳಾರ್ಪರೇ (ಧರ್ಮಾಮೃ. ೬-೦೩೬). [ಪೆರ್ (< ಪಿರಿದು$_1$)+ದೆಸೆ$_1$]

**ಪೆರ್ದೊಡವು** (ನಾ). ಬಹಳ ಬೆಲೆ ಬಾಳುವ ಆಭರಣ,—ಒಡವೆ : ಮಾಣಿಕದ ಪೆರ್ದೊಡವಿಂ ಪೊಣಿಪ್ಪೊನ್ನುಮಂಶುಗಳ್ ದಾನಾಟಕೋಪಪಾವಕನೆ ತನ್ನೊಡಲಂ ಸುಡುವಂದ ಮಾಗೆ (ಶಂಕಾಪಾ. ೦೯-೦೨೬).
[ಪೆರ್ (< ಪಿರಿದು$_1$)+ತೊಡವು]

**ಪೆರ್ದೊಡೆ, ಹೆದ್ದೊಡೆ, ಹೆದೊರ್ಡೆ** (ನಾ). ಸೊಂಟದಿಂದ ಮಂಡಿಯವರೆಗಿನ ದೇಹಭಾಗ; ಊರು : "ಊರುಗಳು ಪಿಚಂಡಿಗಳೆನಲು ಪೆರ್ದೊಡೆಗೆ ನಾಮಮಕ್ಕುಂ" (ಶಂಗಣ. ೯೯-೦೬); ಪೆರ್ದೊಡೆ ಕಟಿಮುಂಪ್ಪುಡಂ ಪರಡು ಸಂದಿ ನೊಸಲ್ ಪಣೆ ಕಣ್ ಕದಂಪಿವೆಂಬಿಡೆಯನೆ ನಟ್ಟುಪುರ್ಚಿದಂವು ನೇರ್ದುವು ಸೀಳ್ದುವು ಪಾರ್ದಸಂಬುಗಳ್ (ಶಂಕಶ. ೦೦-೦೩೬): ನೆನೆಯಿಸಿ ಕಾಡುಗಂ ಸತತವಾತನುದಗ್ರ ಲಲಾಟಪಟ್ಟವು . . ಆತನ ಬಗೆಗೊಳ್ವ ಪೆರ್ದೊಡೆಗಳ್ (ಜಗನ. ೦೨-೦೫): ಬಟ್ಟಮುತ್ತುಗಳು

ಕೀವಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣವ ತೊಟ್ಟು ಪೆರ್ದೊಡೆಗೆ ಕೇಸಂ ಮಧ್ಯಕೆ ಬಿಗಿದುಟ್ಟ ಕಾಸೆಯ ರಣೋತ್ಸವದಿ (ಪೊಹಿತ. ೧೨-೯೩). **ಹೆದ್ದೊಡೆ :** ಊರುದಘ್ನ, ಊರುಮಾತ್ರಂ, ಊರುದ್ವಯಂ ಇವು ಹೆದ್ದೊಡೆಯ ಉದ್ದವ ಹೇಳುವುದು (ಶಾಶಂ. ೧೨೨); ಹಾಯ್ದು ಗಡೆ ಹೆದ್ದೊಡೆಗಳನು ಮುರಿದಯ್ದುತ್ತಮನಿಯುಸರಾಣಜಲದಲಿ ತೊಯ್ದು ಧೂಪ್ಪನೆ ಕೆಡೆವನಿಳೆಯಲಿ ಕಾರವರ ರಾಯ (ಕುವ್ಯಾಗ. ೭-೩೧). **ಹೆದೊರ್ಡೆ :** ೧. "ಊರುಃ. ಸಕ್ಥಿ. ಒಚಂಡಂ ?–ಈ ೩ ಹೆದೊರ್ಡ" (ಹಲಾಯು ೬೩-೩೧೦). 'ಕಿಱುದೊಡೆ' ಪರಾ. [ಪೆರ್ (< ಪಿರಿದು$_1$) + ತೊಡೆ$_2$]

**ಪೆರ್ದೊರೆ** 'ಪೆರ್ದೊಱೆ' ನೋ.

**ಪೆರ್ದೊಲೆ** (ನಾ). ದೊಡ್ಡ ದಿಮ್ಮಿ : ಬಲ್ಗಂಡು ಪೆರ್ದೊಲೆ ಕೊಱೆದು ಕಾಯ್ದು ಮಣಲ ರಾಶಿ (ಕವ್ಯಶಾ. ೩-೨೦); ಉರಿಪರಿವೆಣ್ಣ ಪಂದಿವಲೆ ಪೆರ್ದೊಲೆ . . . ಪೆರ್ದಿಡಿಮುರ್ದಿವೆಂಬಿವು ಸುರಿದು (ರಾಶಕೀ. ೬-೦೦೬).
[ಪೆರ್ (< ಪಿರಿದು$_1$) + ತೊಲೆ$_3$]

**ಪೆರ್ದೊಱೆ**, ಪೆದ್ದೊರೆ, ಪೆದ್ದೊಱೆ, ಪೆರ್ದೊರೆ, ಪೆಱ್ದೊಱೆ, ಹೆದ್ದೊರೆ$_1$, ಹೆದ್ದೊಱೆ (ನಾ). ೧. ದೊಡ್ಡ ಹೊಳೆ ; ಮಹಾನದಿ : ಎರಡು ಚಟ್ಟದ ನಡುವೆ ಪರಿವ ಪೆರ್ದೊಱೆಯಂತೆ (ರಕಶಾಶು. ೨-೬೩); ಗೋಮತಿಯೆಂಬ ಪೆರ್ದೊಱೆಯ ರಾಮಣೀಯಕ ಶೀತಜಲವೀಂಚಿ (ಕಿಹಿತ. ೩೬-೬೪). ೨. ಕೃಷ್ಣಾನದಿ: [ಪೆದ್ದೊ]ಱೆ[ಪ]ರ್ಯ[೦ತ]ಮುಮ ನಾಳುತ್ತುಮಿಟ್ದು (ಎಇ. IV. ೩೫೨-೦೩; 975); ಅಱೆಕೆಯ ಗಟ್ಟಗೆಯುಂ ಪೆರ್ದೊಱೆಯುಂ ಪರಿದಲ್ಲಿ ತದ್ದಪಾಡಿಗೆ ತೆಂಕಲ್ (ಐಶೃ. ೦೨-೪೬); ಪೆದ್ದೊಱೆಯ ತಡಿಯ ಕೊಪ್ಪದಲು (ಕೃಇಉ. ೧೯೩೮, ೩೦-೨; 1056) **ಪೆದ್ದೊರೆ :** ೨. ಅವನು ಪೆದ್ದೊರೆಯ ದಂಡೆಯಲ್ಲಿದ್ದಾಗ ಅನುಕೂಲಸ್ಥ ನಾಗಿದ್ದ (ಹಾಹುಕ್ರ. ೩೪). **ಪೆದ್ದೊಱೆ :** ೧. ಇದ್ದೊಱೆಯೆಂಬ ಪೆದ್ದೊಱೆ ತುಂಬಿ ಬರೆ (ಐಶೃ.೩೨-೩೨) ; ಒಂದುದಿನ ಪೆದ್ದೊಱೆಯು ತುಂಬಿ ಪರಿವುತ್ತಿರಲು (ಗುರುಚಾ. ೦೩-೮). **ಪೆರ್ದೊರೆ :** ೧. ಪೆರ್ದೊರೆಗಳಂ ಪೇರಡವಿ ಪೆರ್ಬೆಟ್ಟುಗಳನಂತು ನೂರಾರು ಪೇರೂರ್ಗಳಂ ದಾಂಟಿ (ಕೀಕಾ. ೬-೩೦) ; ಮುಂಗಾರ ಸಮಯವಿದು ಪೆರ್ದೊರೆಯ ಸಂಚ ಲಾಗದು (ಅನಾ೯. ೩೯). △ **ಪೆಱ್ದೊಱೆ :** ೨. ಗಂಗಾನ್ವಯ ಕುಲತಿಳಕಂ ಬೂತಯ್ಯ ಪೆರ್ಮ್ಮಾಡಿ ಪೆಱ್ದೊಱೆ ಮರ್ಯ್ಯಾದೆ ಗಂಗಾವಾಡಿ ತೊಂಬತ್ತಱುಸಾಸಿರಮುಮಂ ಪ್ರತಿಪಾಳಿಸೆ (ಕೌಇತಿ. XI-1. ೩೬-೯; 950); ಪೆಱ್ದೊಱೆ ಮರ್ಯ್ಯಾದೆಯಾಗೆ ಸಿರಾಕುಳಪಾಳುತ್ತಿರೆ(ಎಇ. VI. ೨೩೯-೩;975). **ಹೆದ್ದೊರೆ$_1$ :** ೧. ಅಲ್ಪಾಲ್ಪಕಾವ್ಯಗಳ ಭಾವನೆಯ ಹೊನಲಾದರೂ ಆ ತೊರೆ—ಹೆದ್ದೊರೆಗಳತ್ತಲೇ ಹರಿದುಹೋಗುವುದೆಂಬುದನ್ನೂ ಬಗೆವಡೆದವು (ಶಾಕೊಅ. ೩೩೩); ಸಾಹಿತ್ಯವಾಹಿನಿ ಬತ್ತದ ತೊರೆ. ಅದು . . . ಹೊಳೆ ಹಳ್ಳಗಳ ಜೀವಂತವಾಹಿನಿಯನ್ನು ತುಂಬಿಕೊಂಡು ಹೆದ್ದೊರೆಯಾಗಿ ಹರಿಯುತ್ತದೆ (ಸುಚಂ೯. ೨೨೯). ೨. ವಿಷ್ಣುವರ್ಧನಪ್ರಭು ಹೆದ್ದೊರೆಯನ್ನು ಸೇರಿ, ಆ ನದಿಯಲ್ಲಿ ತಮ್ಮ ಕಾಂಭೋಜವನ್ನೂ ಕತ್ತಿಯನ್ನೂ ತೊಳೆದರು (ಶಾಂಕೊ. ೨೩೩). **ಹೆದ್ದೊಱೆ :** ೧. ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕು ಹರಿದು ಹೆದ್ದೊಱೆಯ ಕೆಱೆ ತುಂಬಿದಂತ್ರಯ್ಯ (ಬಸ. ೦೩೯); ಹೆದ್ದೊಱೆಯನುಱೆ ತಡಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮನಹಾರಿ ಸೂರೆಯೋಡಂ ಪಿಡಿದು ತಾಂ ಪಾರವೆಯ್ದುವೆನು (ಐಶೃ.೬೦-೯೬); ಕರಗಿ ಹರಿದವು ಹೇಮಗಿರಿ ಹೆದ್ದೊಱೆಯವೊಲು (ಕೊರಅ. ೩-೪-೬೦). ೨. ಹುಲಿಗೆಱೆ ಮಾನೂಱುಮಂ ಹೆದ್ದೊಱೆ ಪರಿಯನ್ತವಾಗೆ ಯನ್ನಿನಿತುಮಂ . . . ಸುಖದಿಂರಾಜ್ಯಂಗೆಯ್ಯುತ್ತಿರೆ (ಎಇ. XII. ಶಕ್ಯಅ. ೩೦-೦೨ ; 1149 ?); ಬಾದುರನೊಕ್ಕಲ ಕೊಂಡು ಹೆದ್ದೊಱೆಯ ದಾಂಟಿದನು (ಕುಊಶಾಂ, ೦೬-೭೩೦). [ಪೆರ್ (< ಪಿರಿದು$_1$) + ತೊಱೆ$_2$]

**ಪೆರ್ದಮ್ಮಿಲ್ಲ** (ನಾ). = ಪೆರ್ದಱುಬು : ನಿರ್ಮಲ ಬಹಿರ್ಭಾಗದೊಳೆಸೆ ವಂತೆ ಪೆರ್ದಮ್ಮಿಲ್ಲ ಜಡೆಗಳೊಪ್ಪಿದವು (ಪೊಹಿತ. ೦೪-೯೩).
[ಪೆರ್ (< ಪಿರಿದು$_1$) + ಧಮ್ಮಿಲ್ಲ]

**ಪೆರ್ನಂದಿ** (ನಾ). ಒಂದು ಬಗೆಯ ನಾಣ್ಯ (?) : ಅವರಾ ಮದೆಯಂ ಪೆರ್ಮ್ಮಟ್ಟಿಯೂರನ್ದು ತೆಱೆ ಪೆರ್ನ್ನನ್ದಿ ಎರಡು ತೆಱುವುದು (ಎಇ. IV. ಹೆಗ್ಗ. ೪-೨೨; ಸು. 750). [?]

**ಪೆರ್ನಗರ** (ನಾ). ಒಂದು ಸ್ಥಳದ ಹೆಸರು : ಅನ್ದರಿಯ ಆಲನ್ತೂರ ಪೌರುಳಜಾಅ ಪೆರ್ನ್ನಗರಾದ್ಯನೇಕ ಸಮರಮುಖಾಹೂತ ಪ್ರಪಾತ ಶೂರಪುರುಷ (ಇಅ. V. ೦೩೯-೯; ಸು. 788); ಕ್ವೆಅ. ೧೯೩೯. ೬೯-೦೩: ಸು. 788 ನೋ). [ಪೆರ್ (< ಪಿರಿದು$_1$) + ನಗರ]

**ಪೆರ್ನಗೆ** (ನಾ). ಅಧಿಕವಾದ ನಗೆಪಾಟಲು : ಘನನಾಮಂ ಲೋಕದೊಳ್ ಪೆರ್ನ್ನಗೆಗೆಡೆಯೆನಿಸಿಕೃಕೃಟಾ (ರಾಶಕೀ. ೬-೪). [ಪೆರ್(< ಪಿರಿದು$_1$) + ನಗೆ]

**ಪೆರ್ನರ**, ಹೆನ್ನರ (ನಾ). (ದೇಹದೊಳಗಿನ) ಮುಖ್ಯವಾದ ರಕ್ತನಾಳ,– ಸೆರೆ : ಗೋಣರೆಗಡಿದು ಪೆರ್ನರವಾಂತು ಮಿಡುಕುವ ಪ್ರಾಣದ ಶವಗಳೊಪ್ಪಿ ದುವು (ಪೊಹಿತ. ೪೦-೬೦). **ಹೆನ್ನರ :** "ಕಳಂದರವೆಂಬುದು ಕೊರಳ ಹೆನ್ನರ" (ಹಲಾಯು. ೦೦೪-೧೨); ತಲೆ ಕಿವಿಸಂದುಯೆಲ್ವಿನ ಪುಷ್ಪ ನೋವಡೆ ದಾಹಮಾಗೆ ಮೆಯ್ಯ ಬಲಿಪಡೆ ಹೆನ್ನರಂ ತೆಗೆಯೆ ಮೂರ್ಛೆಗೆ ಕಣ್ಣಾಶಿ ರಕ್ತಮಾಗೆ (ಕಲ್ಯಾಅ. ೩-೧೩); ಶಿರದೊಳು ಖಡ್ಗವನಿರಿಸಿ ಚಲ್ಪಿನಲೊತ್ತಿ ಘಂಘರಿ ನರಿದು ಹೆನ್ನರವ ಭರದಿಂದ ಬಿಡಿಸಿ ಗೋನಾಳಿ ಇಬ್ಬಗಿಯಾಗೆ ಉರವಣಿಸಿತು ಬಲುರುಧಿರ (ಶಜಾಂ. ೪-೧೦೬). [ಪೆರ್ (< ಪಿರಿದು$_1$) + ನರ$_1$ (< ನರವು)]

**ಪೆರ್ನಾವೆ** (ನಾ). ದೊಡ್ಡ ತೆಪ್ಪ,– ದೋಣಿ : ಕಟ್ಟಿದೆ ೬ಲಿ ಕಾಲಾಳಂ. ಮೆಚ್ಚಿನ ಪೆರ್ನಾವೆಗಳುಂ, ಬಾಜಾಜನಾಣೆಯಾಯ್ತು ! (ಶಾಕಸಿ. ೩-೧). 'ಪೆರ್ದೆಪ್ಪ' ಪರಾ. [ಪೆರ್ (< ಪಿರಿದು$_1$) + ನಾವೆ]

**ಪೆರ್ನೆಣ** (ನಾ). ಅಧಿಕವಾದ ಕೊಬ್ಬು,– ಮೇದಸ್ಸು : ಪೆರ್ನೆಣದ ಖಂಡದ ಮಾಂಸದ ತಾಣಮಲ್ಲವೇ ಎಂದು ಶರೀರದೊಳಾದ ಅಶುಚಿತ್ವಮಂ ಭಾವಿಸಿ (ರಕಶಾಶು. ೩-೨೮). [ಪೆರ್ (< ಪಿರಿದು$_1$) + ನೆಣ]

**ಪೆರ್ನೊಣ** (ನಾ). ದೊಡ್ಡ ಜಾತಿಯ ನೊಣ : ಪೆರ್ನೊಣಂಗಳಿಂ ತಗುಳ್ದೊಱೆಸಿಯುಂ . . . ಸೈರಿಸಲಾಱದೆ (ರಕಶಾಶು. ೩-೬೩).
[ಪೆರ್ (< ಪಿರಿದು$_1$) + ನೊಣ (< ನೊಳವು)]

**ಪೆರ್ನೊರೆ** (ನಾ). ಅಧಿಕವಾದ ಫೇನ ; ಅತಿಶಯವಾದ ಬುರುಗು : ಪೆರ್ನೊರೆ[ಶಾಶಂ. ಪೊನ್ನೊರೆ]ಯುಂ ತಗುಳ್ದ ವಿಹತಾಂಬುವ ಪಲ್ಲೊನಲಿಂದ ಪರಿಜಿದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿದು ಕಾಡಾನೆಗಳಾಗಡೆ ಪೋದುದಂ (ಕಾವ್ಯಾಶ. ೬೨೬); ಪೆರ್ನೊರೆ ಸೂಸುತ್ತಿರೆ ಭೀರಂ ಸೊಗಯಿ ಸಿತ್ತುತ್ತೇಕರಂ ಸೂಕರಂ (ಕಂಕೃಶ. ೩-೬೦).
[ಪೆರ್ (< ಪಿರಿದು$_1$) + ನೊರೆ$_2$]

**ಪೆರ್ನೊಸಲ್** (ನಾ). ವಿಶಾಲವಾದ ಹಣೆ; ದೊಡ್ಡ ಹಣೆ : ಪೆಱ್ನೊಸಲ್ ಪೆರ್ನೊಸಲಂಗೆ . . . ಸೀತೆ ಕರಾಳಮುಖಿಯಾದಳ್ (ಅದ್ಯುಶ. ೩೦-೨೦).
[ಪೆರ್ (< ಪಿರಿದು$_1$) + ನೊಸಲ್]

**ಪೆರ್ಪಟ್ಟಪೊಲ** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀ ಕೊಂಗುಣಿ ಮುತ್ತರಸರ್ ಕೊಟ್ಟತು ಪೆರ್ಪಟ್ಟಪೊಲವ (ಎಇ. X (8). ಶ್ರೀವಿಅ. ೦೦೬-೩; 750). [? + ಪೊಲ]

**ಪೆರ್ಬಂಟು** (ನಾ). ದೊಡ್ಡ ಸೈನ್ಯ,– ಪರಿವಾರ : ತಲೆಕಟಿಗಾಗಿ ಕಟ್ಟಿದಲ ಗೋಜಿಸುನರ್ಚಿ ಬೀಟೆ ಹಿಮ್ಮಡಿಯಿಂ ಪಱೆಯ ಪೆಱಗಂ ನೋಡುತ್ತುಂ ಪರಿವ ಪೆರ್ಬಂಟುಮಂ (ಶಿಲಾಶ. ೩-೦೦೪ ಶ).
[ಪೆರ್ (< ಪಿರಿದು$_1$) + ಬಂಟು]

**ಪೆರ್ಬಂಡಿ** (ನಾ). ದೊಡ್ಡ ಗಾಡಿ,– ಶಕಟ : ಎತ್ತಲಾ ಪೆರ್ಬಂಡಿ ದೀಳಸಿ

ದತ್ತಲೀತನ ಮೇಲೆ ಬರ್ದುಂಬುವುದತ್ತಲೀ ಶಿಶು ಪರಮಪುರುಷನ ಕೃಪೆಯ ದಲ್ಲದಡೆ (ಶಿಶಾಗ. ೧೦-೧೦-೩). [ಪೆರ್ (<ಪಿರಿದು₁) + ಬಂಡಿ₁]

**ಪೆರ್ಬಂದಿ** 'ಪೆರ್ವಂದಿ' ನೋ.

**ಪೆರ್ಬಕ್ಕವಾಣ** (ನಾ). ಒಬ್ಬಾತನ ಹೆಸರು : ತಸ್ಯ ಸಾಕ್ಷಿಣ ಗಣ್ಡರಾಜಕುಲ ಸಕಲ ಸ್ಥಾಯಿಕ ಪುರುಷ ಪೆರ್ಬಕ್ಕವಾಣಮಜಾಗರೆಯ ಸೇನ್ದ್ರಕ ಗಂಜೆ ನಾಡ ನಿರ್ಗುನ್ದ ಮಣೆಯುಗುರೆಯ ನನ್ನಾಕ್ಕಿಲ ಸೀಂಬಾಲಾದವಭೃತ್ಯಾಯಾಃ (ಎಕ. I (R). ೦-೩೨ ; 466). [ ? ]

**ಪೆರ್ಬಕ್ಕಿ** 'ಪೆರ್ವಕ್ಕಿ' ನೋ.

**ಪೆರ್ಬಟ್ಟು, ಹೆರ್ಬಟ** (ನಾ). ಒಂದು ಸ್ಥಳದ ಹೆಸರು ; ☞ ಈಗಿನ ಕೋಲಾರಜಿಲ್ಲೆ : ಪೆರ್ಬ್ಬಟ್ಟಕ್ಕಂ ಬಿದಿರೂರ ಅಗ್ಗಳಮೀಳಿಪಲ್ಲಿ ಅಂಕಕೆ ಕಾದಿದ ಬದೆಯಿತ್ತ ಸತ್ತನ್ (ಎಕ. X. ಶ್ರೀನಿವಾ. ೨೬-೨೨ ; ಸು. 870). **ಹೆರ್ಬಟ** : ಮಹಿಷವಿಷಯ ಹೆರ್ಬಟಗ್ರಾಮವ (ಕೃಅಂ. ೦೯೨೫. ೦೦೬-೦೦;?). [ ? ]

**ಪೆರ್ಬಟ್ಟೆ** 'ಪೆರ್ವಟ್ಟೆ' ನೋ.

**ಪೆರ್ಬಡಗು** 'ಪೆರ್ವಡಗು' ನೋ.

**ಪೆರ್ಬಡಿಕೆ** 'ಪೆರ್ವಡುಕೆ' ನೋ.

**ಪೆರ್ಬಡಿಗೆ** (ನಾ). ದಪ್ಪವಾದ ಕೋಲು,-ದೊಣ್ಣೆ : ಪಲಗೆ ಪೆರ್ಬಡಿಗೆ ಎಕ್ಕಟಿಗರ ಪೋರೆ ಚಿಮ್ಮುವ ಚಮರವ ಲೆಕ್ಕವ ಮಾಡುವರಾರು (ಕೋಣಕ. ೪೦-೦೩). [ಪೆರ್ (<ಪಿರಿದು₁) + ಬಡಿಗೆ₁]

**ಪೆರ್ಬಡಿಸು** (ಕ್ರಿ). ಅಧಿಕವಾಗಿ ಶಬ್ದ ಮಾಡು ; ಜೋರಾಗಿ ಧ್ವನಿ ಮಾಡು ; ಗುಡಿಗುಡಿಗಳ ನರ್ತನಗಾತಿಯರೊಳು ಪೆರ್ಬಡಿಸುವ ಗೀತ ಶ್ಲುಗಳ ಪಡಿ ತಪ್ಪದೆ ಕೋಲ ಟಾರಿಗಳಿಂದ ಜಕ್ಕುಡಿ ಮೆಟ್ದುವು ದೇವಾಲಯದಿ (ಕೋಣಕ. ೦೬-೭). [ಪೆರ್ (<ಪಿರಿದು₁) + ಬಡಿಸು₁]

**ಪೆರ್ಬಡೆ** 'ಪೆರ್ವಡೆ' ನೋ.

**ಪೆರ್ಬತ್ತಿ** (ನಾ). ದಪ್ಪವಾಗಿರುವ ಬತ್ತಿ : ಆಗಳ್ ಪಂತಂದೊಂದಾಯು ಮೇಗಣ್ಣೆಲೆಯುಲುರಿವ ಪೆರ್ಬ[ಪಾಠಾಂ. ಪ್ಪ]ತ್ತಿಯಿಂ ಕರ್ಚಿ ಬೇಯುತ್ತಿರೆ ಬಾಯ್ಬಿಟ್ಟೋಡೆ ಬದ್ದತ್ತದು ನಯನದೊಳ್ (ಕರ್ಣಾಕ. ೪-೦೬). [ಪೆರ್(<ಪಿರಿದು₁) + ಬತ್ತಿ]

**ಪೆರ್ಬಯಕೆ, ಹೆಬ್ಬಯಕೆ** (ನಾ). ೧. ಹಿರಿಯ ಆಸೆ ; ಮಹತ್ವಾಕಾಂಕ್ಷೆ. ೨. ಗರ್ಭಿಣಿಯ ಹಿರಿಯ ಆಸೆ,-ಬಯಕೆ : ಸ್ವರ್ಭಾನುಭಯವಿರಹಿತ ಚಂದ್ರಪದನೆ ಕೀಳರ್ಭಕಸತಿಯರಾಗಮದಿ ಪೆರ್ಬಯಕೆಯ ಭುಕ್ತ ನವ್ಯಾಂಬರಗಳ ಗರ್ಭಾಂಗನೆಗುಡಿಸಿದರು (ಕೋಣಕ. ೮೬-೦೦). **ಹೆಬ್ಬಯಕೆ:** ೧. ತಮ್ಮ ತಮ್ಮ ವಿಶಿಷ್ಟಕಾಣಿಕೆಯನ್ನು ಸಲ್ಲಿಸಬೇಕೆಂಬ ಹೆಬ್ಬಯಕೆ ಅಂಕುರಿಸುತ್ತದೆ (ಶಿಕ. ೦೦೩) ; ದುಷ್ಯಂತನನ್ನು ಆವಳು ಪರಿಸಿದ್ದಕ್ಕೆ ತಾನು ರಾಜಮಾತೆಯಾಗಬೇಕೆಂಬ ಹೆಬ್ಬಯಕೆಯೊಂದೇ ಮುಖ್ಯ ಕಾರಣ (ಶಾಕ್ಕಸ. ೨೪). [ಪೆರ್ (<ಪಿರಿದು₁) + ಬಯಕೆ₂]

**ಪೆರ್ಬಯಲ್** 'ಪೆರ್ವಯಲ್' ನೋ.

**ಪೆರ್ಬರಿ** (ನಾ). ಪಕ್ಕೆಯ ಮೇಲ್ಭಾಗ : ಮಿಡಿಯಿಂ ಬೆಂಬರಮೊಯ್ದು ಸೀಳ್ದು ಶಬಸಂಘಾತಂಗಳಂಗುಷ್ಪದಿಂ ತೊಡೆಯಂ ತಾಪಿನಮೊಯ್ದು ಪೊಟ್ಟೆ ಪೆಣಗಳ್ ಬೆರ್ವಟ್ಟೆಯಂ ಮುಟ್ಟೆ ಮಯ್ಯಾಡೆ ಭೀಳಾಗ್ರುಮನೆಯ್ದು ಬಟ್ಟ ಕುಣಪವ್ರಾತಂಗಳು ಬಟ್ಟೆಯೊಳ್ ಮಡದಿಂ ಪೆರ್ಬರಿಗೆಯ್ದು ನೇರ್ದ ಪ್ರಮೃತಕವ್ಯೂಹಂ ಕರಂ ಭೀಕರಂ (೦೦ಆಪ. ೬-೭). [ಪೆರ್ (<ಪಿರಿದು₁) + ಬರಿ

**ಪೆರ್ಬಲ** 'ಪೆರ್ವಲ' ನೋ.

**ಪೆರ್ಬಲೆ** 'ಪೆರ್ವಲೆ' ನೋ.

**ಪೆರ್ಬಸ** 'ಪೆರ್ವಸ' ನೋ.

**ಪೆರ್ಬಸವು** 'ಪೆರ್ವಸ' ನೋ.

**ಪೆರ್ಬಸಿಱ್** (ನಾ). ದೊಡ್ಡ ಹೊಟ್ಟೆ : ಪೆರ್ಬಸಿಱುಂ ಕ್ರೂರೇಕ್ಷಣಮುಂ ದನುಜಾಕಾರಮನೊಡರಿಸೆ ನಿರಾಕರ್ವಿಸಿ ಕೋಣರ್ವರ್ (ಆದ್ಯಾಕ. ೨೨೦) ; ಉರ್ಬರಿಸಿದ ಪೆರ್ಬಸಿಱ್ ನಸು ಕುಸುಂಗಿದ ಬೆನ್ (ಕೃಕಅ. ೦೧-೬೦). [ಪೆರ್ (<ಪಿರಿದು₁) + ಬಸಿಱ್ (<ಬಸಿಱು)]

**ಪೆರ್ಬಳ** (ನಾ). ಒಂದು ಊರಿನ ಹೆಸರು (?) : ಆಗ್ನೇಯದ ಎಲಂಚಿಕೊಣ್ಣೆಯಿನ್ದ ಪೂಲಿಕುಣ್ಣೆಯಿನ್ದ ಪೆರ್ಬಳದೊಳಗಣ ಬಾದು ಪೊಲದಿನ್ದ (ಎಕ. X (೩). ಕಳ್ಳ. ೦೦೬-೬೨ ; 850). [☞ ಇದು 'ಪೆರ್ಬಳ್ಳ'ದ ಅಪಲಿಖಿತವಿರಬಹುದು]

**ಪೆರ್ಬಳ್ಳ** 'ಪೆರ್ವಳ್ಳ' ನೋ.

**ಪೆರ್ಬಳ್ಳಿ₁** (ನಾ). ವಿಸ್ತಾರವಾಗಿ ಹರಡಿದ ಬಳ್ಳಿ ; ಚೆನ್ನಾಗಿ ಹಬ್ಬಿದ ಲತೆ : ಒರ್ವ ಲುಬ್ಧಕಂ . . . ಮಾರನನೇಱರ್ ಸಾಲದೆ ಕಾಲಪಾಶ ದಂತೆ ಮುರಿದು ಪರಿದು ಪರ್ವಿದ ಪೆರ್ಬಳ್ಳಿಯಿನಡರ್ದೇಱ್ (೧೦೪. ೦-೦೨೬ ಕ) ; ಪೆರ್ಬಳ್ಳಿಯ ಬಳಿಯನಡರ್ದು ಪಿಡಿಯಲೆಳಸಿ ಫಳಲನೆ ಸಾರೆವರ್ಪ ಘೋರಲುಬ್ಧಕನಂ ಕಂಡಗಿದು (ರಾಜಕಿ. ೩-೩೩ ಕ) ; ಪದಕೆ ತೊಡರ್ದ ಪೆರ್ಬಳ್ಳಿಗಳ್ ಪಾಶದಾತೊಪ್ಪಿರೆ (ಶಾಕುಂತ. ೦೬-೩೩). [ಪೆರ್ (<ಪಿರಿದು₁) + ಬಳ್ಳಿ]

**ಪೆರ್ಬಳ್ಳಿ₂** 'ಪೆರ್ವಳ್ಳಿ' ನೋ.

**ಪೆರ್ಬಱ್** 'ಪೆರ್ವಱ್' ನೋ.

**ಪೆರ್ಬಟ್** (ನಾ). ಅಮೂಲ್ಯವಾದ ಬಟ್ಟೆ,-ವಸ್ತ್ರ : ಎಳಸದ್ದಿ ಮಲ್ಲಾಪುರೀ ಪರಶ್ರೀನಟಿ ನರ್ತಿಸುತ್ತುಮಿರೆ ತತ್ಕರವಿಧೃಮಂದಂದಮಾಯ್ತು ಮಂದಾನಿಳಸಂಚಳಲ್ಲುಳಿತ ಚೀನದ ಪೆರ್ಬುಟ್[ಪೆರ್ಬಟ್] ವಿಧುವಿಧಿ ಯೊಳ್ (ಆಸುಚಾ. ೬-೦೦೬). [ಪೆರ್ (<ಪಿರಿದು₁) + ಪಟ್₁]

**ಪೆರ್ಬಾಗಿಲ್** 'ಪೆರ್ವಾಗಿಲ್' ನೋ.

**ಪೆರ್ಬಾಣ** (ನಾ). ಒಂದು ಊರಿನ ಹೆಸರು : ಪಾಣಿಗ್ರಹಣಾಂಕಿಯನ್ನು ಕೊಟ್ಟಾಪೆರ್ಬ್ಬಾಣ ಮುತ್ತರಸರು (ಕೃಅಂ. ೦೯೧೦, ೧-೩೩ ; 788) ; ಪೆರ್ಬಾಣನ ಪಳ್ಳಿಯ ಕೊಣ್ಣಾ ಶ್ರೀಕೇಸಿಗ × × × ತಲೆನೀಱಯಲ ಕಟ್ಟಂ ಕಟ್ಟುವುದರ್ಕ್ಕೆ ಕೊಟ್ಟ ಸ್ಥಿತಿಕ್ರಮವೆನ್ತೆನ್ದೊಡೆ (ಎಕ. VI (R). ಶ್ರೀಶೃಂಗ. ೮೩-೦೩ ; ಸು. 90೩). 'ಪೆರ್ಬಾಟ್' ಪರಾ. [?]

**ಪೆರ್ಬಾರವ** 'ಪೆರ್ವಾರ್ವ' ನೋ.

**ಪೆರ್ಬಾರ್ವ** 'ಪೆರ್ವಾರ್ವ' ನೋ.

**ಪೆರ್ಬಾಲ** (ನಾ). ಉದ್ದವಾದ ಬಾಲ ; ನಿಡಿದಾದ ಬಾಲ : ಪರ್ಚಿದ ಕೊರಲ್ ಪೆರ್ಬಾಲವುದ್ದಂಡವಕ್ರರದಂ ಮಿಂಚುವ ಮೆಯ್ . . . ಚಿಲ್ಲಾಗೆ ತತ್ಕಾನನಾನ್ತರದೊಳ್ ಪೆರ್ಬಾಲಿಯಿರ್ದುದು (ನೇಪು. ೭೬). [ ಪೆರ್ (<ಪಿರಿದು₁) + ಬಾಲ₁ ]

**ಪೆರ್ಬಾವು** 'ಪೆರ್ವಾವು' ನೋ.

**ಪೆರ್ಬಾವುಗ** (ನಾ). ದೊಡ್ಡ ಗಂಡುಬೆಕ್ಕು : ಎಲೆ ಮಹಾರ್‌- ನಿನ್ನ ಮಕ್ಕಳೀ ಬೇಂಟೆಗಾಗಿ ನಮ್ಮನೆಯೋಗ ಪೊಂದಿ ಪೆರ್ಬಾವುಗನು ಪುನಾಗಿ ಕಾಳಿತಿದೆ (ಕಚಪಿ. ೦೭-೨೩). [ ಪೆರ್ ( < ಪಿರಿದು₁ ) + ಬಾವುಗ ]

**ಪೆರ್ಬಾಳ್** 'ಪೆರ್ಬಾಟ್' ನೋ.

**ಪೆರ್ಬಾಳು₁** 'ಪೆರ್ವಾಳ್' ನೋ.

**ಪೆರ್ಬಾಳು₂** 'ಪೆರ್ಬಾಟ್' ನೋ.

**ಪೆರ್ಬಾಟ್, ಪೆರ್ಬಾಳ್, ಪೆರ್ಬಾಳು₂, ಹೆಬ್ಬಾಳು₂** (ನಾ). ಒಂದು ಸ್ಥಳದ ಹೆಸರು : ಪೆರ್ಬ್ಬಾಟ ಉತ್ತಮಹಾಮುಣ್ಡರುಂ ಕಾನ್ದ ಗಾಮುಣ್ಡರುಂ (ಎಕ. IV, ಕೃಶೃಂಗ. ೦೬೦-೨೦; ಸು. 900) ; ಪೆರ್ಬ್ಬಾಟ ನಾಳುತ್ತಮಿಟ್ಟು (ಎಕ. IV. ೩೩೩-೨೦ ; 976). **ಪೆರ್ಬಾಳ್** : ಪೆರ್ಬ್ಬಾಳ

**ಹೇನ ಕೆರೆ**=ಕೂದಲು ಉದುರುವ ಒಂದು ಬಗೆಯ ರೋಗ : ಇಂದ್ರಲುಪ್ತ ಎಂಬುದೊಂದು ಮಂಡೆಯು ಕೂದಲು ಒಂದೂ ಇಲ್ಲದೆ ಉದುರಿ ಮಂಡೆಯು ಚರ್ಮ ಕಾಣಲ್ಪಡುವುದು ; ಅದನೇ ಹೇನ ಕೆರೆ ಎಂಬರು (ವೈದ್ಯಸಾ. II. ೦೬೦).

[ದೇ. ಕ ತಮಿ. ಮಲ. ನಾಯ್ಕ್. ಗಡಬ. ಪೇನ್ ; ತುಳು. ತೆಲು. ಕುಇ. ಮಾಲ್ತೊ. ಪೇನು ; ಕುವಿ. ಪೇನು, ಪೇನೂ]

**ಹೇನ್ನ** (ನಾ). ನೊರೆ ; ಬುರುಗು : "ಫೇನ—ಫೇನ=ನೊರೆ" (ತತ್ಸಕೋ. ೨೭); ಫಕಾರಕ್ಕೆ ಪಕಾರಂ . . . ಫಾಲ್ಗುನ – ಪಾಲುಗುಣ ; ಫೇನ-ಪೇನ (ಶಮದ. ೨೫೫ ಕ್ರಸೂ).  [ <ಸಂ. ಫೇನ ]

**ಹೇನ್ನ₂** 'ಪೆನ್ನು' ನೋ.

**ಹೇನಾ** 'ಪೆನ್ನು' ನೋ.

**ಹೇನಾರಿ** 'ಪೀನಾರಿ₁' ನೋ.

**ಹೇನಿ** (ನಾ). ೧. ಒಂದು ಬಗೆಯ ಪಿಶಾಚಿ : ಬಟ್ಟೆವೋಮ್ ಪಸಿದೆಳೆಗೆಯ್ಮಂ ಪೊಕ್ಕಂತೆ ಪೊಟ್ಟೆಯನುರ್ಚಿ ತಿಂಬ ಪೇನಿಗಳುಂ (ಅಂಶಪು. ೨-೦೦ ವ). ೨. (ಅಲಂ) ಲೋಭಿ ; ಜಿಪುಣ : ಪೇನಿಗಳಂ ಪೊಗೞದಿರಭಿಮಾನಿಗಳಂ ಗುಣದ ಕಣಿಗಳಂ ವಸುಮತಿಯೊಳ್ ದಾನಿಗಳನೂನಮಿಲ್ಲದ ಮೋನಿಗಳಂ ಪೋಗಿ ಪೊಗೞ (ಎಕ. V. ಚಾಂಲಾಕು. ೧೨೩-೦೬ ; ೯೬೫) ; ತಾನುಣ್ಣದ ಪೆರ್ಗಿಕ್ಕದ ಪೇನಿಯ ಪಕ್ಷಡಿಕೆಯೆನಿಪ ಲೋಭಿಯ ಪೊನ್ನ . . . ಕವರ್ದುಕೊಂಡು (ಧರ್ಮಾಮೃ. ೨-೩೪).  [ದೇ. ಕ ಕುವಿ. ಪೇನು]

**ಹೇನು₁** 'ಪೇನ್' ನೋ.

**ಹೇನು₂** 'ಪೆನ್ನು' ನೋ.

**ಹೇಪಂದಿ** (ನಾ). ಹೆಣ್ಣುಹಂದಿ : ಆ ಪೂಬರೊಳ್ . . . ಪೇಪಂದಿಯಾಗಿ ಪುಟ್ಟಿ (ಧರ್ಮಾ. ೧೦-೬) ; ಆ ಪುರದೊಳ್ ಪೇಪಂದಿಯಾಗಿ ಬಂದು (ಸುಕುಮಾ. ೫-೨೭) ; ಅಮೇಧ್ಯದ ನಾಯು ಪೇಪಂದಿಯ ಕತ್ತೆಗಳ ನಡುವೊಂದೆ ರಡು ಜಾವಂಬರಮಿರ್ದು (ಅಂಶಪು. ೪-೪ ವ).  [ <ಪೆಣ್ + ಪಂದಿ ]

**ಹೇಯ** (ನಾ). ೧. ಕುಡಿಯಲು ಯೋಗ್ಯವಾದುದು ; ಪಾನೀಯ ; ಮದ್ಯ, ಪಾನಕ, ಚಹಾ, ಕಾಫಿ ಮುಂತಾದುವು : ನೀರಿಲ್ಲದಿದ್ದರೆ ಚಹಾ, ಕಾಫೀ, ಕೋಕೋ ಮೊದಲಾದ ಪೇಯಗಳನ್ನು ಕುಡಿದು ಬದುಕಬಹುದಲ್ಲವೆ (ಶಕೋರ. ೦೪) ; ಬಾವಿನಿಂದ ಯಾವ ಯಾವುವೋ ಪೇಯಗಳನ್ನು ತರಿಸಿ ಕುಡಿಯುತ್ತಿದ್ದಾರೆ (ಚೈತ. ೬). ೨. ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಪೇಯ ಎಂಬ ನಾಲ್ಕು ವಿಧವಾದ ಆಹಾರಗಳಲ್ಲಿ ಒಂದು : ಬಾರದ ಭವದಲ್ಲಿ ಬಂದು, ಉಣ್ಣದ ಪೇಯವನು ಉಂಡು, ಕಾಣದ ದುಃಖವ ಕಂಡು (ಶರಶ. ೬೩೬) : ಮನುಷ್ಯರ ಜಠರದಲ್ಲಿರುವ ವೈಶ್ವಾನರಾಗ್ನಿಯಲ್ಲಿ . . . ಸಂಯುಕ್ತನಾಗಿ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ ಎಂಬ ನಾಲ್ಕು ವಿಧ ಅನ್ನವನ್ನು ಜೀರ್ಣ ಮಾಡುತ್ತೇನೆ (ಭಾಶತ. ೦೬೪). ೩ ಭೋಜ್ಯ, ಪೇಯ, ಚೋಷ್ಯ, ಲೇಹ್ಯ, ಖಾದ್ಯ, ಚರ್ವಣ, ನಿಷ್ಪೇಯ ಮತ್ತು ಭಕ್ಷ್ಯಗಳೆಂದು ಆಹಾರಗಳು ಎಂಟು ವಿಧ ಎಂಬ ವಿವರಣೆಯೂ ಇದೆ. ೩. ನೀರು. ೪. ಹಾಲು.  [ಸಂ.]

**ಹೇಯತ್ತಿ** (ನಾ). ಒಂದು ಬಗೆಯ ಅತ್ತಿಮರ : "ಮಲಯೂಃ-ಕಲ್ಲತ್ತಿ, ಪೇಯತ್ತಿ" (ಓಶಂ. ೦೦೪).  [ಪೇಯ₂ + ಅತ್ತಿ₁]

**ಹೇರ್₁** 'ಪಿರಿ' ನೋ.

**ಹೇರ್₂** 'ಪೆಸರ್' ನೋ.

**ಹೇರ್ಡಂಡೆ** (ನಾ). ದೊಡ್ಡ ಪಾತ್ರೆ.–ಅಂಡೆ : ಶತಸಂಪೃಕೆ ಕೊಪ್ಪರಿಗೆಯ್ಂ ಬಹುವಿಧದ ತೈಲಂಗಳ ಏಂದೆದ್ದು ಪೇರಂಡೆಗಳಲಿ ಮೊಗದತಿ ಪಂಜು ತಂಡಮಂ ಪತ್ತಿಸಿದರು (ರಕ್ಷಶಾ. ೬-೬-೩೩).

[ಪೇರ್₁ (<ಪಿರಿದು₁)+ಅಂಡೆ₂]

**ಹೇರಂದ** (ನಾ). ಅತಿಶಯವಾದ ಪ್ರದರ್ಶನ : ಆ ಪರ್ತಕನು ದೊರೆಯನ್ನು ತನ್ನ ಮನೆಗೆ ಔತಣಕ್ಕೆ ಕರೆದನು ; ತನ್ನ ಭಾಗ್ಯವನ್ನೆಲ್ಲಾ ಪೇರಂದ ಮಾಡಲು ಹೊರಟನು (ಶಾತಿಶಾ. IV. ೫).

[ಪೇರ್₁ (<ಪಿರಿದು₁)+ಅಂದ]

**ಹೇರಗಳು** 'ಪೇರಗಟಿ' ನೋ.

**ಹೇರಗಟಿ**, ಪೇರಗಳಂ (ನಾ). ದೊಡ್ಡದಾದ ಕಂದಕ : ಸೀಪಣಿಯಮ್ಯುಬ್ಧಿಯೆನುತ್ತುಮಾರ್ದುಲಿವವೋಲೊಪ್ಪಿರ್ದುದಾ ಪೇರಗಟಿ (ಸುಕುಮಾ. ೨-೭೪). **ಹೇರಗಳು** : ಪೇರಗಳು ವಾರಿನಿಧಿ ಚಕ್ರವಾಳಾದ್ರಿ ವಿಸ್ತಾರತರ ಕೋಟೆ ತತ್ಪುರವೆ ಜಂಬೂದ್ವೀಪ (ಸಕ್ಕೃತಕ್ಕ. ೨-೪) ; ನೆಗಳಾನೆ ಮಾನ್ಸಳನೊಳಕೊಂಡು ಬಂದು ಪೇರಗಳಾಮದಬ್ಧಿ ದ್ವಾರಕೆಗೆ (ನೋತಶ. ೩-೫) ; ಬಂದು ಬಿದ್ದರಮರಾವತಿಯ ಪೇರಗಳನಮರ್ತಭಟರು (ಕಂಪು. ೨೯-೨೪).  [ಪೇರ್₁ (<ಪಿರಿದು₁)+ಅಗಟು₂(<ಅಗುಟು₂)]

**ಹೇರಗುಟಿ** (ನಾ). ದೊಡ್ಡ ಅಗುಳಿ ; ಭಾರಿಯಾದ ಲಾಳವಿಂಡಿಗೆ : ಭರದೊಳ್ಮುರಿದಗ್ ಬಡಿದುಗಣ್ಣರೂರ ಪೇರಗುಟಿಗಳಂ (ಅಕ್ರಕಿ. ೩೨-೨).

[ಪೇರ್₁ (<ಪಿರಿದು₁)+ಅಗುಟಿ (<ಅಗ್ಗುಳಿ₁)]

**ಹೇರಟಿ** (ನಾ). (ಕರಾ) ವರನ ಮನೆಗೆ ಮದುಮಗಳ ಸಂಗಡ ಹೋಗುವ ಆಕೆಯ ಅಕ್ಕ ಅಥವಾ ತಂಗಿ : ಅಕ್ಕನ ಜೊತೆಗೆ ಪೇರಟಿಯಾಗಿ ಅವಳ ಊರಿಗೆ ಹೋಗಿದ್ದಳು (ರೂಪಿ).  [ ? ]

**ಹೇರಟ್ಟಣೆ** 'ಪೇರಟ್ಟಳೆ' ನೋ.

**ಹೇರಟ್ಟಳೆ**, ಪೇರಟ್ಟಣೆ (ನಾ). ದೊಡ್ಡ ಬುರುಜು,—ಕೊತ್ತಳ : ಮಿಳಿರ್ದುತ್ತುಂಗಧ್ವಜು ಮಾರ್ಪೊಳೆಪ ಜಲಧರವ್ರಾತಮೆಂಬಂತೆ ಪೇರಟ್ಟಳೆಗಳ್ ತಳ್ತಿರ್ಪುಲುಂ ಬಿಬಿಸೆ (ಧರ್ಮಾ. ೨-೬೪). **ಹೇರಟ್ಟಣೆ** : ಮಕರಬದ್ಧ ಪೇರಟ್ಟಣೆಗಳಮರನಾಯತರ ಕಾಯ್ಪಿಂ . . . ಮನಕೆ ಮಂಗಳವೆನಿಸು ವಮರಾವತಿಯ ಪುರಕ್ಕೈತಂದನೆಪ್ಪು ರುದ್ರಂ (ಅಕ್ಕೃತ. ೨-೩-೦೪).

[ಪೇರ್₁ (<ಪಿರಿದು₁) + ಅಟ್ಟಳೆ]

**ಹೇರಟ್ಟಿ** (ನಾ). ದೊಡ್ಡ ಮುಂಡ ; ದಪ್ಪವಾದ ದೇಹ : ನೆಟ್ಟನೆ ನಡೆಯುತ್ತೆ ಪಡಲ್ವಟ್ಟರ ಪೇರಟ್ಟಿಗಳನೆ ಮೆಟ್ಟುಗೆಯ್ದು (ಕಕಾ. ೨-೦೦೪).

[ಪೇರ್₁ (<ಪಿರಿದು₁)+ಅಟ್ಟಿ₁]

**ಹೇರಡಗು** (ನಾ). ಅಧಿಕವಾದ ಮಾಂಸ : ದೆಸೆದೆಸೆಗೆ ನರಶಿರಂ ತತ್ತಿಸಿ ಮೆಚಿದುವು ಮಾಗಿರೊಳಟ್ಟಿ ಪೇರಡಗಿನ ಪರ್ದಿಸನದೆ ಪೊಣಗಣ ಜೀವ ಪ್ರಸರಮುಮಂ ಪಲವು ಮುಖದಿನವಳೋಕಿಪವೋಲ್ (ಚಂಶೀಲ. ೦-೫೩) ; ತೊಡೆ ಪೇರಡಗಿನ ಕಾಳಜದಡೆ ಚರಣಂ ದುರಿತಕಾರಣಾ ಕಾಣೆನಿಪ . . . ಗಣಿಕೆಯರೊಡಲೊಳ್ಪಿರುವುದುಂಟೆ (ಕ್ವಶಾ. ೨೪-೬೦).

[ ಪೇರ್₁ (<ಪಿರಿದು₁)+ಅಡಗು₃ ]

**ಹೇರಡಬಳ** (ನಾ). ಹೆಚ್ಚಾದ ಆತಂಕ ; ಅಧಿಕವಾದ ಕಾತರ : ಕಾರುಣ್ಯನಿಧಿಯು ಕಾರುಣ್ಯಮಿಂತಾಯ್ತೆನುತಪಾರಭೀತಿಗ್ರಸ್ತಮನನಾಗಿ ದಾಯಾಳಿದು ಪೇರಡಬಳಂ ಬಲಿದು ಬಸವಳಿವುತಿರ್ದನ್ನಂ (ಶಾಟ್ಟೋಬಿ. ೦೩-೦೪).

[ ಪೇರ್₁ (<ಪಿರಿದು₁) + ಅಡಬಳ₃ ]

**ಹೇರಡವಿ**, ಹೇರಡವಿ (ನಾ). ದೊಡ್ಡ ಕಾಡು ; ದಟ್ಟವಾದ ಅರಣ್ಯ : ಒರ್ವನೆ ಸಂಧಿಸಿ ಪೋದನಂದು ಪೇರಡವಿಯೊಳಾ ತುರಂಗಪದನರ್ಕಳ ಬೆಂಬಳಿಯಂ ಮಹೀಭುಜಂ (ಶಾಂತೀಶ್ವ. ೬೨೦) ; ಭೃತ್ಯರ್ಗೆ ಪೇರಡವಿಯೊಳ್ ಪಣ್ಣಲಂಗಳನಜಿಸಿ ಕಣ್ಣೆಮೆಂದು ಪೇಟ್ಬುದರಿ (ಧರ್ಮಾಕೃ. ೨-೦೫೩) ; ಪಾತಕಿಯುನಟ್ಟುವಂತೆ ಪೇರಡವಿಗಟ್ಟುವೊಡೆ (ಕ್ರಿಣಾಕು. ೫-೨೨). **ಹೇರಡವಿ** : ಆಡಿನ ತಳ್ತಿಯೊಳಗೊಂದು ಹೇರಡವಿ ಇದ್ದಿತ್ತು ಆ ಹೇರಡವಿಯೊಳಗೆ ಪೋರುವದೆ ಇದ್ದಿತ್ತು (ಆಡಕ. ೪೦-೦೦೭) ; ಕೌರವಪಡೆಯು ಹೇರಡವಿಯುನು ಸವಬಲು ಕಡಿತಕಾಜಿರು ಮುಂದೆ ಹೊಕ್ಕುದು(ಕುಮ್ಮಿಳ. ೫-೬);

ಪೇರಡವಿಗಳ ಮೊತ್ತದಲಿ ವ್ಯವಹರಿಯದಡಬಸಿದರಾ ನಿಶಾಚರನ (ಹರಿಚ. ೯-೫೦-೦೩). [ಪೇರ್$_1$ ( < ಪಿರಿದು$_1$) + ಅಡವಿ ]

**ಪೇರಡಿ** (ನಾ). ೧. ದೊಡ್ಡ ಪಾದ: ಪದದಾದಿಯ ಹ್ರಸ್ವಕ್ಕೆ ಬಹುಳತರಂ ದೀರ್ಘಮಕ್ಕುಂ . . . ಪೇರಡಿ, ಪೇರೊಡಲ್ (ಶಮದ. ೧೪೦ ಶ್ರ ಹೊ.). ೨. ಶ್ರೇಷ್ಠವಾದ ಪಾದವುಳ್ಳವನು ; ಪೂಜನೀಯ: ಶರ್ವಾನ್ ಶರ್ವಾ ಪೇರಡಿ ಬಾರಯ್ ! ನೋವನ್ ನೀಗುವ ಪೇರಡಿ ಬಾರಯ್ ! (ಅಂಕಗೊ. ೫೦-೦೦೦೩). ೩. ದಾವುಗಾಲಂ ಹಾಕಲು ಅನುಕೂಲವಾಗುವಂತಹ ಕಾಲುಳ್ಳದ್ದು ; ನಾಯಿ : "ಪೇರಡಿ, ಸೊಣಗಂ, ಜಾಗಿಲಂ—ಈ ೩ ಕುಕ್ಕುರಂ" (ಕರ್ಣಾ. ೫೦-೦೦೯); ಪೇರಡಿ ತನ್ನನಟ್ಟಿಯಿಂ ನಲಿನಲಿದಾಡೆ ಪೋದ ಮನುಜಂ ಪಡೆಗುಂ ತನಗಿಷ್ಟಸಿದ್ಧಿಯಂ (ರಾಜಶೇಖ. ೦೨-೨೩); ಬೇಂಟೆಯ ಪೇರಡಿಗಳಂ ಮುಂ ಬಿಟ್ಟು (ಶಬರಶ. ೦೦-೩೧).

[ಪೇರ್$_1$ ( < ಪಿರಿದು$_1$) + ಅಡಿ$_1$]

**ಪೇರಡ್ಡ** (ನಾ). (ಅಲಂ) ಮುಖವನ್ನು ತಿರುಗಿಸುವಿಕೆ; ತಿರಸ್ಕಾರ : ಅಂತುದಾಸೀನವಮಾನಸಂ ಮಸಕಮಿಲ್ಲದ ಸಾರ್ವಭೌಮಂ ಪೇರಡ್ಡಮಾಗಿ ಕೆಲದ ಚಕ್ರಾಯುಧನೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ (ಶಾಂತಿಪು. ೦೦-೦೦೬ ಪ). [ಪೇರ್$_1$ (< ಪಿರಿದು$_1$) + ಅಡ್ಡ$_1$]

**ಪೇರಣ, ಪೇರಣೆ** (ನಾ). ನೃತ್ತ ಮಂಂತಾದ ಮನರಂಜನೆಯ ಪ್ರದರ್ಶನ : ಭೂಪರನ ಮುಂದಾಡುತಿಹ ಪೇರಣ ದಲೆಂಬ ಸಂವರಣೆ ಗುಂಟಾದ ವಾಜಿಗಳೆಯ್ದೆ ಚಾರಿವರಿದಾಡಿದವು ಶತಕೋಟಿಯು (ಹಕಾ. ೩-೨೦); ರುದ್ರಕನ್ನೆಯರುಗ್ಗಡದ ಪಾತ್ರ ನೂಜಿಱದು ತಾಳಮೇಳದ ಲಕ್ಷಲಕ್ಷಣದ ತೋಟು[ತ್ತ] ಗುಂಡಾಲದೊಲಂಡಲೆದು ಪೆಕ್ಕಣದ ಪೇರಣದ ಲಾಸ್ಯಗಳ (ಗುಹಕ. ೩-೯೯); ಪೇರಣ ಪೆಕ್ಕಣ ಗುಂಡಲಂಗಳಂ ಬಲ್ಲ ಸಾತ್ವಿಕ ಆರಭಟಿ ಕೌಶಿಕಿಯೆಂಬ ಪಾತ್ರಂಗಳಂ (ದಶಾವ. ೨-೦೦ ಪ). **ಪೇರಣೆ:** ಹಾಡುತಿಹ ಗುರುನಿರೂಪಿತದ ವಚನಂಗಳಿಂದಾಡುತಿಹ ಪೇರಣೆಯ ಪೇಡಾಂಕ ಕೇಳಿಕೆಯ ನೋಡುತಿಹ ಪೃಥ್ವಿಯ ಮಹಾಭಕ್ತಜನದ ಸಮ್ಮರ್ದನವ ಕೆಲವಿಂಗಿಸಿ (ಸಿದ್ಧರಾ-೪-೬೯); ಲಾಲಿಪ ಪೇರಣೆಯೊಳ್ಗೆ ಮೇಳೆನಿಸುವ ಕುಶಲೆ . . . ಕಾಲೇ ನಾಲಗೆಯೆಂಬಂತೋಲಗದೊಳ್ ಕುಣಿದು ದೇವಿಯುಂ ಮೆಚ್ಚಿಸಿದಳ್ (ಚಾರಪು. ೬-೬೩) ; ನಾಟಕದ ಪಾತ್ರದ ಪೇರಣೆಯ ಮೋಳಗಳ ಜೋಕೆಗಳ ಪ್ರಕಟವೆಸೆಯಲು (ಬಸಪು.೯-೬) ; ಬಿತ್ತರದ ನೂಪುರಂಗಳನಿಟ್ಟು ಕಾಲೊಳಗೆಯುತ್ಕಧಿಕ ಸಪ್ತತಾಳದ ಪೇರಣೆಯ ನಟನೆ (ಚಕುಪು. ೦-೯-೬೬). [ < ಪ್ರಾ. ಪೇರಣ./ಸಂ. ಪೇರಣಿ]

**ಪೇರಣ$_1$** (ನಾ). ೧. ದೊಡ್ಡ ಪದಾತಿಸೇನೆ; ಭಾರಿ ಸೈನ್ಯ: ಅಂತು ಪೇರಣ ಪೊಂಮಯಮಾಗೆ (ಶಂಶಾಪು. ೦೩-೩೬ ಪ); ಇಸುವ ಧನುರ್ವಲು ಭರದಿನೆಯ್ದುವ ಪೇರಣಿ (ಜಗ. ೦೬-೯೯). ೨. ದೊಡ್ಡ ಸಾಲು, — ಶ್ರೇಣಿ : ಅಣಿಯರಮಿಸೆ ಬವರದ ಕೂರ್ಗಣೆಯೇಱಿಂ ಪಱಿದು ಬಿರ್ದ ಖಚರರ ತಲೆ ಸಂದಣಿಸೆ ವಿಮಾನಂಗಳ ಪೇರಣಿ ಪೋಲ್ತುದು ತೆಱಿದ ಮೊಗದ ಪೇಳಿಗೆಗಳವಂ (ಶಂಶ್ರಪು. ೬-೩೯). [ಪೇರ್$_1$ (<ಪಿರಿದು$_1$)+ಅಣ್ಣ$_1$]

**ಪೇರಣ$_2$** (ನಾ).=ಪೇರಣ: ಗೀತದ ಮಾತ ಮಾನುಷಮಿದೇಂ ಪಂಚಾಂಗ ಮೊಪ್ಪಿತ್ತೊ ಪೇರಣಿ ಸಂಕ್ರಿಯನನಲ್ಲದಿರ್ದನಿಸಿವತ್ತಾ ತಾಂಡವಾಡಂಬರಂ (ಅನಂಪು. ೫-೯೬). [ಸಂ.]

**ಪೇರಣಿಗ** (ನಾ). ನಾಟ್ಯ ಮಾಡುವವನು; ನರ್ತಕ : ಕವಿ ಗಮಕಿಗಳ ನವರಸಂಗಳಂ ಕೇಳುತಂ ನವಪೇರಣಿಗರ ರಸದಾಟವಂ ನೋಡುತಂ (ಶಂಬಿಲ. ೯-೬೯೦); ಸುಕವಿಗಳ ಶಾಸ್ತ್ರಾಗಮಿಕ ಭಾವಕ ಕಲಾವಿದ ಪೇರಣಿಗ ವಾದ್ಯಕರ ಶಿಲ್ಪಿಗ . . . ಸುಗಂಧಾಧಿಕರ ಕೇರಿಗಳರವ ಚಿತ್ರೈಸೆಸುತರಸ ಸಡೆದ (ಶಂಕರಾ. ೯-೨೬). [ಪೇರಣ+—ಇಗ]

**ಪೇರಣಿಲ್, ಹೇರಣಿಲ್, ಹೇರಣಿಲೆ** (ನಾ). ೧. ಒಂದು ಬಗೆಯ ಕೋಡಗ (?): "ಪೇರಣಿಲೆನೆ ಸೊಂದಿಗೋಡಗಂ" (ಹಕಾ. ೬೬). **ಹೇರಣಿಲ್:** ೨. ದೊಡ್ಡ ಜಾತಿಯ ಅಳಿಲು : ಪೇರಣಿಲ್ ಗಿಡುಗ ಮೊಲಂ . . . ಕೂರಗೆಯೆಂಬಿವನ್ನೆದೆ ಕಾನನೊಳ್ಗಡಣದೆ ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೦೬೩). **ಹೇರಣಿಲೆ:** ೨. ಪೇರಣಿಲೆಯಿವು ಮುಂಗುರಿಗಳಿವು ಗೌಜುಗೆಗಳಿವು ಗಜಗಮನೆ ನೋಡು (ಕೆ.ರಕಾ. ೩-೧-೩೦).

[ಪೇರ್$_1$ (< ಪಿರಿದು$_1$)+ಅಣಿಲ್]

**ಪೇರಣೆ** 'ಪೇರಣ' ನೋ.

**ಪೇರಣೆಮಣಿ** (ನಾ). (?) : ಪಕ್ಕಿದರುಗೌಘದಿನಾ ವೃಷಶೃಂಗಯುಗ್ಮ ಮೊಂದಣಿಯರವಾಯ್ತು ಸಾರವಿಹಿ ನೆತ್ತರೊಳೊಕ್ಕೆಱದರ್ಚಿಸಿರ್ದ ಪೇರಣೆ [ಹಾಕಾಂ. ಣೆ]ಮಣಿಯಂಬ ಭೈರವನ ಲಿಂಗದ ಸೀಯದರಂಬೊಲದ್ಭುತಂ (ಅರ್ಜಸೇ. ೯-೦೨೨). [ ? ]

**ಪೇರರ್ಬಿ** 'ಪೇರರ್ವಿ' ನೋ.

**ಪೇರರ್ವಿ, ಪೇರರ್ಬಿ** (ನಾ). ದೊಡ್ಡ ಜಲಪಾತ : ಪೇರರ್ವಿಗಳ್ಪೆರಸು ಜಾಜಿನ ಪರ್ವತಂಗಳಂತೆ ಕೆಡೆದು (ಶಂಶಶಾ. ೦೦-೯೬ ಪ): ಪೇರರ್ವಿಗಳ ನಸದಳಂ ಕಣ್ಗೆ ಚೆಲ್ವಾಗಿ . . . ಚಿತ್ರಕೂಟಂ ಸೊಗಯಿಸೆ (ಶಂರಾಮಾ. ೬-೩೦). **ಪೇರರ್ಬಿ:** ಪೆರ್ಗಱಗಂ ಪುಂಡ್ರೇಕ್ಷುವಾಟಕ್ಕೆ ಪೊಣ್ಮುವ ಪೇರರ್ಬಿಗಳೆತ್ತಲುಂ ಸೊಗಯಿಕುಂ (ಶುಕುಪಮಾ. ೯-೯೩).

[ಪೇರ್$_1$ (<ಪಿರಿದು$_1$) +ಅರ್ವಿ]

**ಪೇರಲ, ಪೇರಲೆ$_2$, ಪೇರಿಲ, ಪೇರಿಲು** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಸೀಬೆ : ಚುಂದೂರಿನಲ್ಲಿಯೇ ಅವರ ಪೇರಲ ಬನ ದೊಡ್ಡದು (ಪಸಗ. ೯೩) ; ಪೇರಲದ ತೋಟಗಳ ಹಳದಿ ಬಣ್ಣದ ಹಣ್ಣು (ಕಾಕಜಾ. ೨೨-೨೩) ; ಹುಬ್ಬಳ್ಳಿಯಿಂದ ಪೇರಲಹಣ್ಣಿನ ಬುಟ್ಟಿ . . . ಕಳಿಸಿ ಕೊಡುವಳು (ಗಂಧಹಾ. ೬೭). **ಪೇರಲೆ$_2$:** ಹೊರಗಡೆ ಪೇರಲೆ ಮರದ ಮೇಲೆ ಮಂಗಗಳ ಕುಣಿತ (ಹೊಸಕ್ಕಿ. ೬೬). **ಪೇರಿಲ :** ನೇರಿಲ ಪೇರಿಲ ಬೋರೆಯ ಬೆಳವಲ ಫಲವಿಹುದು (ಕರುಣಾ. ೫೯-೦೩). **ಪೇರಿಲು :** ಬೆಲ್ಲವತ್ತಂ ಬೇವು ಬಿಕ್ಕೆ ತಂಡಸಿ ತವಸಿ ನೆಲ್ಲಿ ಪೇರಿಲು ಮಾವು ಬದರಿ (ಸಿದ್ಧರಾ. ೬-೦೬). [?./ಮರಾ. ಪೇರ, ಪೇರು]

**ಪೇರಲೆ$_1$** (ನಾ). ಭಾರಿಯಾದ ಅಲೆ ; ದೊಡ್ಡ ಅಲೆ : ಇದು—ದುಗುಡ ಸಂತಸದ ಪೇರಲೆಗಳೇರಿಳಿತದಿಂದೆ ಮರೆದಾಡುತಿಹ ಸಂಸಾರಸಾಗರದೊಳಲೆ ಯುಚಿಹ ಜೀವಿಗಳ . . . ನೀರ್ಗುಡಿಸಿ ನಗುನಗುವ ಕಾಲನರಮನೆ ! (ಕಂಹಾ. ೨೯-೦೯). [ಪೇರ್$_1$ (< ಪಿರಿದು$_1$) + ಅಲೆ$_1$]

**ಪೇರಲೆ$_2$** ' ಪೇರಲ ' ನೋ.

**ಪೇರಳ್ಕು$_1$** (ನಾ). ಅತಿಯಾದ ಹೆದರಿಕೆ,—ಅಂಜಿಕೆ : ಪೇರಳ್ಕು ಪೇರಚಲ ಕಲ್ಲೋಲದಂತೆಪೋಲ್ ಪೂರ್ಚುಟ್ಟು ಬಡಿಗುಮೇ ಬಡಿಬಡಿವ ನುಡಿಗಳ್ (ಬಿತ್ತಶ್ರ. ೯೬-೦೦೦೩). [ಪೇರ್$_1$ (< ಪಿರಿದು$_1$) + ಅಳ್ಕು$_2$]

**ಪೇರಳ್ಸಿ** (ನಾ). ಹೆಚ್ಚಿನ ಪ್ರೀತಿ ; ಅತ್ಯಾಸಕ್ತಿ : ಬುಧಜನಪ್ರಿಯವಪ್ರಜಕೆ ಪೇರಳ್ಸಿಯಂ ಜನಿಸುವೀ ಕಾವ್ಯಂ . . . ಫಲವನೀಯದಿರದು (ಟೀಕಾ. ೦-೦೨). [ಪೇರ್$_1$ (< ಪಿರಿದು$_1$) + ಅಳ್ಸಿ (< ಅಟ್ಸು) ]

**ಪೇರಜಾಣ್ಕೆ, ಹೇರಜಾಣ್ಕೆ** (ನಾ). ಅಧಿಕವಾದ ಕೀರ್ತಿ ; ಅತಿಶಯವಾದ ಖ್ಯಾತಿ : ಪೆರ್ಬ್ಬುಲಿಯ ವಿಾಸೆಯೊಳುಯ್ಯಲನಾಡುವೊಂದು ಪೇರಜಾ ಣ್ಕೆಯ ಬೀರರ್ (ಎಕ. VII, ಶಿಕಾ. ೯೯-೦೬ ; 1100) : ಇರ್ಪರಿರ್ಪರ್ ನೆಱೆದೊಕ್ಕಲ್ತನದ ಪೆರ್ಮೆಯೊಕ್ಕಲಿಗರ್ ಪೇರಜಾಣ್ಕೆಯ ಶಶಿ ಸೂರ್ಯರ್ ಪ್ಪರ್ (ಶಂಶ್ರಪು. ೫-೬೭) ; ತಕ್ಕಿನ ರಕ್ಕಸರನೊಕ್ಕಲಿಕ್ಕಿದ ಪೆಸರ ಪೇರಜಾಣ್ಕೆ ಯೊಳಿಂತೆಂದಂ (ಕಕ್ಕಾ. ೨೯೩). **ಹೇರಜಾಣ್ಕೆ:** ಅದಲ್ಲರ ರಾಮಂ ಮಜುಗರೆ ನಾಡೊಳಗೇ ಹೇರಜಾಣ್ಕೆಯ ಕಯ್ಯಾಳದಲಿ ಧರ್ಮ್ಮೋನ್ನತಿಯಂ ಆ ಕಯ್ಯಾ ಳದ ವಿಳಾಸಾಬ್ಬದವದೆಂತೆಂದೊಡೆ (ಎಕ. XII, ಕುಣಿಗಲ. ೯-೫೬; 1151) ;

ಌಂದದೆ ಲಕ್ಷ್ಮಿಯಿರ್ಪ್ಪ ಹೇರಜಿಕೆಯಶೇಷಸೌಖ್ಯನಿಳಯಂ (ಎಕ. IV. ಹುಣಸೂ. ೦೪೭-೯೩ : 1162). [ಪೇರ್$_1$ (< ಪಿರಿದು$_1$) + ಅಜಿಕೆ]

**ಪೇರಜಿ³** (ನಾ). ದೊಡ್ಡ ಬಂಡೆ : ಪೇರಜಿಯ ತೆಱದೆ ಜಲವುಂಜದಿಂ ಮಿಂಚಿನಿಂ ಸಾರವೊಳಗಿಂದೆ . . . ಮುಂಗಾರ್ ಬಂದುದು (ಛಾಪಚಂ. ೬-೨). [ಪೇರ್$_1$ (< ಪಿರಿದು$_1$) + ಅಜಿ$_4$]

**ಪೇರಾಣ್ಕೋವ** (ನಾ). ಒಬ್ಬಾತನ ಹೆಸರು : ಸತ್ಯಾನ್ ಪೇರಾಣ್ಕೋವನ್ (ಕೃಊಶಂ. ೧೧೦೭, ೦೦-೩ ; 7ನೆಯ ೪೪); ಮಂದುವೂರಾ ತೊಱು ಕೊಳ್ವಲ್ಲಿ ಏಟ್ಟೋರ್ ಪೇರಾಣ್ಕೋವರ್ (ಎಕ. X, ಶ್ರೀನಿವಾ. ೨೦-೬ ; ಸು. 750). [?]

**ಪೇರಾನಂದ, ಹೇರಾನಂದ** (ನಾ). ಅತಿಶಯವಾದ ಸಂತೋಷ,-ಹಿಗ್ಗು ; ಮಹದಾನಂದ : ಹೋ! ಆನಂದಂ! ಪೇರಾನಂದಂ! ನೆಗೆವಾ ಗುಣವಾ ಮಿಗುವಾನಂದಂ! (ಅಶ್ವತ್ಥಾ. ೨೮-೩೯೩). **ಹೇರಾನಂದ** : ಅವನಾಟವನು ಕಣ್ಣುಂಬ ನೋಡುತಿಹವದುವೆ ಹೇರಾನಂದವಾನಂದ! (ವಚನಾ. I. ೯೩೨). [ಪೇರ್$_1$ (< ಪಿರಿದು$_1$) + ಆನಂದ]

**ಪೇರಾನೆ, ಹೇರಾನೆ** (ನಾ). ದೊಡ್ಡ ಆನೆ : ಪಾಜುಂ ತಾಜುಂದ ಪೇರಾನೆಯೊಡಲ್ಗಳಭ್ರುತಳದೊಳ್ ಸಿಲ್ಕಿರ್ದುವು (ಶಂತಕಾ. ೧೦-೬೬); ಭೂತಗಣಂ ಪೇರಾನೆಯ ನೆಣನಂ ತೀದೆರ್ದಾನಂದದೆ ಕೂಡೆ ನಲಿದು ನರ್ತ್ತಿಸುತಿರ್ಕ್ಕುಂ (ಎಕ. VIII, ಸಾಗರ. ೦೦೯-೩೯ ; 1042) ; ಪೇ[ಪಾಠಾಂ. ಹೇ]ರಾನೆವೆಟ್ಟುಗಳ ನೆತ್ತಿಯ ಮುತ್ತುಗಣೆಯುನಗುಜ್ಜಿ ವಜ್ರದ ಗುದ್ದಲಿಗಳೆನಿಸಿ . . . ಅಳುಂಬವಾದ ದಂಷ್ಟ್ರಾಂಕುರಂಗಳೊಳಂ . . . ಭಯಂಕರವಾದುದು (ವರ್ಧಕೃ. ೦೦-೩೭). **ಹೇರಾನೆ** : ಕಡಿದು ಬಿಸುಟನು ತುರಗದಳವನು ಕೆಡಹಿದನು ಹೇರಾನೆಗಳ (ಕುಮಾ.ಪ. ೯-೦೯); ಹೇರಾನೆಯ ತಲೆಯಡಗ ಭಕ್ಷಿಸುವ ಕಂಠೀರವನೊಡಲ ನೆಗ್ಗೊತ್ತಿ . . . ಶರಭ ಹೂಂಕಾರದಿಂದಿರ್ದವಂದುದಾಗ (ಮೋಹತ. ೦೯-೩೯). [ಪೇರ್$_1$ (< ಪಿರಿದು$_1$) + ಆನೆ$_1$]

**ಪೇರಾಮೆ, ಪೇರಾವೆ** (ನಾ). ೧. ದೊಡ್ಡ ಆಮೆ. ೨. ವಿಷ್ಣುವಿನ ಹತ್ತು ಅವತಾರಗಳಲ್ಲಿ ಎರಡನೆಯದು ; ಆದಿಕೂರ್ಮ : ಶ್ರೀಯುಣ್ಮೆ ಶೈಲಮಂ ಪೊತ್ತಾಯಸಮಂ ಮಜಿದು ನೀಡಿ ಕೊರಲಂ ಮಲೆತೊಂದೋಯರದಿಂದಂ ನಿಟ್ಟಿಪ ಮಾಯೆಯ ಪೇರಾಮೆ ಕುಡುಗೆ ನರಪತಿಗೊಳ್ಪಂ (ಕಕಶಂ. ೩-೧). **ಪೇರಾವೆ** : ೧. ಪಾವಸೆಗೊಂಡ ಪೇರಾವೆಯಂ ತಾಪರೆಯು ಕೊಡೆಯೆಲೆಗೆತ್ತಱಿಯದೆಱಗಿ (ಶಂದ್ರಪ್ರ. ೩-೧೦ ವ); ಏಡಿಯಿಂ ಮೊಸಳೆಯಿಂ ಪೇರಾವೆಯಿಂದಾನೆಯಿಂ ... ಒಪ್ಪಿದುದಿಳಾಶ್ರೀಗಾಗರಂ ಸಾಗರಂ (ಶಾಂತಿಕ. ೦-೦-೦೮). [ಪೇರ್$_1$ (< ಪಿರಿದು$_1$) + ಆವೆ$_1$]

**ಪೇರಾಲ್** 'ಪೇರಾಲ' ನೋ.

**ಪೇರಾಲ, ಪೇರಾಲ್, ಹೇರಾಲ** (ನಾ). ದೊಡ್ಡ ಆಲದ ಮರ : ಚಳಿಗಾಱದ ಪೇರಾಲದ ಕೆಳಗಿರ್ಪನಿತಜಿಳೆ . . . ಸೂಸುವರೆವನಿಗಳೆನೊರ್ವಂ ನೆನೆದು ನಡುಗಿ ಸಿಡಿಮಿಡಿಗೊಂಡಂ (ರಾಜಶೇ. ೯-೨೪); ಬಳಿಯ ಪೇರಾಲವು ಬೀರ್ವರಸುರುಳಿಗಳವೆಡೆಗೆಡೆಯೂರಿನಿಸಿವುದು (ಗಾಥಾಸ. ೨೪-೯೯). **ಪೇರಾಲ್** : ಮೊಜಿಡಿಯ ಮೇಗಿಟ್ಟ ಪೇರಾಲೆ ಈಶಾನಂಗೆ ಸೀಮೆ ನೆಡು ಮೊಜಿಡಿಯಾ . . . ಪಳ್ಳಮೆ (ಎಕ. IX (3). ಕೆಂಗಳೂ. ೦೩೦-೪೮ ; 828). **ಹೇರಾಲ** : ಅದೊಂದು ವಟಭೂಜಾತಮೊಪ್ಪಿತು ಪಿರಿದಾಗಿ ಕಾಲೆತ್ತಿ ನೆಜಿದ ಹಲ ಹೆಣನೆಲ್ಲಲುವಾಲೆಗಟ್ಟಿದ ಬಳ್ಳಿಗರುಳು ಸಾಲೇಜಿದ ಪಂದಲೆಯಿಂದ ಹೇ[ಪಾಠಾಂ. ಪೇ]ರಾಲಯ[ವು] ಭಯಂಕರವಾಯ್ತು (ಶ್ರೀಕಾಂ. ೬-೩೩). [ಪೇರ್$_1$ (< ಪಿರಿದು$_1$) + ಆಲ$_1$]

**ಪೇರಾವೆ** 'ಪೇರಾಮೆ' ನೋ.

**ಪೇರಾಸೆ, ಹೇರಾಸೆ** (ನಾ). ಹಿರಿಯಾಸೆ ; ಹೆಬ್ಬಯಕೆ ; ಮಹತ್ವಾಕಾಂಕ್ಷೆ : ನಾಡಿನಲ್ಲಿ ಹಿಂದಣ ಅದೇ ದಿನಗಳು ಮರುಕಳಿಸಬೇಕು ಎಂಬ ಪೇರಾಸೆಯಿಂದ ಅಂತಹ ಕಜ್ಜದಲ್ಲಿ ಮನವಾಡಿದೆನಹುದು (ಸವಹಿ. ೦೭೦) ; ತನ್ನ ಕುವರಂ ತನಗೆ ಸರಿಯೆನ್ನಲೆಳಸಿದೊಂದುನ್ನತಿಯ ಪೇರಾಸೆ ಬಯಲಾದುದೇ (ಅರುಣ. ೨೦-೬೯). **ಹೇರಾಸೆ** : ಈ ಪಾಳೆಯಗಾರಿಕೆಗಳ ಹೇರಾಸೆಯು ದೊರೆಗಳು ಒಬ್ಬರೊಬ್ಬರ ಮೇಲೆ ಮತ್ತೆ ಮತ್ತೆ ಯುದ್ಧ ಮಾಡಿದುದು ಕಂಡುಬರುತ್ತದೆ (ಕನ್ನಡ್ರಾ. ೩೨೯) ; ಹೇರಾಸೆಗಳನಟ್ಟ ಮಿತಿಯೊಳಗಿದ್ದರೆ ನೆಮ್ಮದಿಯಿರುವುದು ಮನಕೆ (ಇಂತಿಶತ. ೨೨೬-೦೭). [ಪೇರ್$_1$ (< ಪಿರಿದು$_1$) + ಆಸೆ$_1$]

**ಪೇರಾಳ್** ಹೇರಾಳು (ನಾ). ಕಟ್ಟಾಳು ; ಮಹಾಶೂರ : ಈರಯ್ಯನಸ್ತ್ರದಿಂದೆಟ್ಟು ಖಂಡಿಸಿ ಪೇರಾಳ್ ತಿಱದಿಕ್ಕಿದಂತೆ ತಲೆಯಂ ಪೋಗೆಚ್ಚನಾ ಶ್ವೇತನಾ (ಶಂಕರಾ. ೦೦-೧೨೩); ದ್ವಿಷತ್ಸೇನೆಯೊಳ್ ಪೇರಾಳುಂ ತುರಗಂಗಳುಂ ರಥಮುಮುನ್ಮತ್ತೇಭಮುಂ ಬಿಟ್ಟುವು (ಶಂಕಾಪಾತ. ೦೩-೦೨೦). **ಹೇರಾಳು** : ಬಂದ ಬಲ ಹೇರಾಳ ತೆಗೆತೆಗೆ (ಕುಮಾರ. ೦೮-೩೩). [ಪೇರ್$_1$ (< ಪಿರಿದು$_1$) + ಆಳ್$_3$]

Δ **ಪೇರಾಳ$_1$** 'ಹೇರಾಳ$_1$' ನೋ.

**ಪೇರಾಳ$_2$** (ನಾ). ಅತಿಯಾದ ಆಳ,-ಗಭೀರತೆ : ಇಹರು ಹೆಗ್ಗಡಲ ತಳಕೂ ಮುಳುಗಿ ಬಂದವರು . . . ಈ ಬರಿಹೆಣ್ಣ ಎದೆಗಡಲ ಪೇರಾಳ ಕಂಡ ಕಲಿಗಳು ಮಾತ್ರ ಕಂಡರಿಲ್ಲ (ವಕಶಂ. ೩೯-೩). [ಪೇರ್$_1$ (< ಪಿರಿದು$_1$) + ಆಳ$_1$ (< ಆಟ)]

**ಪೇರಾಟ್ಟಿಪಳ್ಳ** (ನಾ). ಒಂದು ಹಳ್ಳದ ಹೆಸರು : ಬಡಗ ಪೋಗಿ ಬೆಳ್ಳೊಲೆಯ ಬಟ್ಟೆಯ ಪೇರಾಟ್ಟಿಪಳ್ಳಂಬಡಿದು ಪೋಗಿ ಪಿರಿಯ ಪಳ್ಳದಳ್ಕೂಡಿ (ಸೌಇಇ. IX–I. ೩೮-೨ : ?). [ಪೇರಾಟ್ಟಿ$_0$ + ಪಳ್ಳ]

**ಪೇರಿ$_1$** 'ಫೇರಿ' ನೋ.

**ಪೇರಿ$_2$** (ನಾ). (?) : ಪೇರಿಯಾ ಒಸಗೆಯಂ ಅಲವಣವುಂ ಅಪುತ್ರಕ ಪೊತಳುವಾನ್ ಏಟ್ಟಾರ್ (ಇಇ. XIX. ೦೪೪-೩ ; 680); ತಪ್ಪದೆ ನಡಸುವುದಕ್ಕೆ ಕೊಟ್ಟು ಕೇಳ್ವಿಯ × ಪೇರಿಯ × × × ಉಭಯಂವೆರಸಿ ಯಿಾ ಗ್ರಾಮಕೆ ಅಱಿವಾನ್ಯವು ಮಠಕ್ಕೆ ಅಱಿವಾನ್ಯವಾ[ಗಿ] ಕೊಟದು (ಸೌಇಇ. IX—II. ೯೬೬-೮ ; ಸು. 1472). [?]

**ಪೇರಿಕೆ** (ನಾ). ಓರಣವಾಗಿ ಒಂದರ ಮೇಲೊಂದರಂತೆ ವಸ್ತುಗಳನ್ನು ಇಟ್ಟದ್ದು : ಪಟ್ಟಿಗಳನ್ನು ಸೇರಿಸಿ ಪರಮಾಣು ಪೇರಿಕೆಗಳನ್ನು (Atomic piles) ಮಾಡುತ್ತಾರೆ (ಶಿಲ್ಪಶಾ. ೨೬೨) ; ಹೀಗೆ ಮಾದರಿಗಳನ್ನು ಒಳಗೊಂಡ ಹೀರುದಾಳಿಗಳ ಪೇರಿಕೆ ಒಂದು ಒಂದೂವರೆ ಅಡಿ ಎತ್ತರವಾದರೂ ಚಿಂತೆಯಿಲ್ಲ (ಹಸುಹೂ. ೦೨೬). [ಪೇರು$_1$ (<ಪೇಱು$_1$) + -ಇಕೆ/ತುಳು. ಪೆರಿಕೆ]

**ಪೇರಿಟ್ಟಿ, ಹೇರಿಟ್ಟಿ, ಹೇರೀಟಿ** (ನಾ). ನೀಳವಾದ ಶಲ್ಯ ; ದೊಡ್ಡ ಈಟಿ : "ಪೇರಿಟ್ಟಿಯ ಬಿಟ್ಟೇಱು" (ಕಸುಶಿ. ೨೦೩) ; ಮುಸಲ ಪೇರಿಟ್ಟಿ ··· ಶಕ್ತಿಯಾದಿಯನು ವಿಭುಗಳು ಧರಿಸಿ ಯುದ್ಧಕೆ ಸೇರಿದರಾಗ ಸುಭಟರಂದಾಳು ಪೇರಿಯನು (ಅಪಂಚ. ೦೮-೯೩). **ಹೇರಿಟ್ಟಿ** : ಸುಲಿ ತೊಗಲ ಹಿಡಿದು ಹೇರಿಟ್ಟಿಯಿಂದಿಱಿ ಕರುಳ (ಹಕಳಾ. ೬-೩೯) ; ಹೇರಿಟ್ಟಿ ಪೊಱಿಯ ಪರ್ಬಲೆ . . . ಕವಲಂಬುಸಹಿತಂ ಭೋರನೆ ನೆಱಿವತ್ತು ಬೇಂಟೆಕಾಱರ ತಂಡಂ (ವಕಶಂ. ೬೯) ; ಸಾಲವನು...ಹಿಂದೆ ಕೊಡುವಾಗ ಹೇರಿಟ್ಟಿ[ಪಾಠಾಂ. ಟ್ಟೆ] ಒಂದು ಬಡಿದಂತೆ (ಸರ್ವಜ್ಞ. ೦೪೯೨). **ಹೇರೀಟಿ** : ಹೇರೀಟಿಯಿಂದಿಱುಬುವ . . . ಕರಗಸದಿ ಕೊಱಿವ ರೌರವದ ನರಕಂ ಭಯಂಕರವಾದುದು (ಸಿತ್ತರಾ. ೬-೨೮). [ಪೇರ್$_1$ (<ಪಿರಿದು$_1$) + ಇಟ್ಟಿ$_2$]

**ಪೇರಿರ್ಪೆ** (ನಾ). ದೊಡ್ಡ ಹಿಪ್ಪೆಮರ : ತಸ್ಯ ಸೀಮಾನ್ತರಂ ಕೊಳ್ಳಿನ ತೊಱಿವ ಪೇರಿರ್ಪ್ಪೆಎ (ಎಕ. XVI. ಗುಬ್ಬಿ. ೭೩-೩೦ ; 733). [ಪೇರ್$_1$ (<ಪಿರಿದು$_1$) + ಇರ್ಪೆ]

**ಪೇರಿಲ** 'ಪೇರಲ' ನೋ.

**ಪೇರಿಲು** 'ಪೇರಲ' ನೋ.

**ಪೇರಿಸು**$_1$ 'ಪೇಱಿಸು$_1$' ನೋ.

**ಪೇರಿಸು**$_2$, **ಪೇರ್ಸೈಸು** (ಕ್ರಿ). ೧. ದೊಡ್ಡದಾಗು ; ಅಗಲವಾಗು : ಕೊಡಿದುವವ್ವ ಕಣ್ಮಲರ್ಗಳಳ್ಳೆರ್ದೆಯೊಳ್ ತಡವಾಡ ಕಾವ ಕಣ್ ಪೇರಿಸೆ ಪುರ್ವ ನಾಲಗೆವೊಲಾಗೆ ಮನಂಬುಗಿಸಲ್ಕೆ ಬಲ್ಲೊಡಾ ಜಾರೆಯ ಜಾರ (ಜಂಶಿಕಾ. ೯.೬೩). **ಪೇರ್ಸೈಸು** : ೨. ಅಧಿಕವಾಗು ; ಅತಿಶಯಿಸು(?) : ಅದಱ ಕರ್ಣಚಮರದ ರ್ಘಲ್ಲಿಯಂತೆ ಜಲ್ಲಿನೊಲ್ಕು ಧಾರೆಗೆದಱ ಪೇರ್ಸೈಸಿ ಸೂಸುವುಭಯಕಟದ ಸೊರ್ಕಿರ್ಕದಡಿನ ತೆರ್ಕಿಗಡಲ್ಗಳೊಕ್ಕೈಸಿ (ಅಸಂಪು. ೦೩-೨೦ ವ). [ಪೇರ್$_1$ (< ಪಿರಿದು$_1$) + — ಇಸು$_3$]

**ಪೇರೀಳೆ**, ಪಿರಳೆ, ಹೆರಳೆ, ಹೇರಳೆ, ಹೇರಿಳೆ, ಹೇರೀಳೆ (ನಾ). ಈಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕಂಚೀಕಾಯಿ : ಪೇರೀಳೆಯ ನಾರಂಗದ ಕಂಚೀಳೆಯ ತನಿವಣ್ಣನಿಕ್ಕಿ ಮೆಲ್ಲು (ಧರ್ಮಾಮೃ. ೦-೦೫೦) ; ಬಾಳೆ ಪೇರೀಳೆ ತಾಳೀತರು ತೆಂಗುಂ . . . ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ (ಜಗಚಿ. ೨-೬೬); ಕಿತ್ತೀಳೆ ಪೇರೀಳೆ ಬಾಳಿಂಬಂ . . ಮನೋಹರವಾಗಿರ್ಕುಂ (ರಾಜಶೇ. ೬-೨೫). **ಹಿರಳೆ** : "ಹಿರಿಳೆ, ಹಿರುಳೆ, ಹಿರಳೆ = ಕಂಚೀಕಾಯಿ" (ಗಂಗಾಮ. ೩೯೯) ; ಹಿರಳೆ ಕಾಯಿ ಗೊಜ್ಜು, ಉಪ್ಪಿನಕಾಯಿ ತಿನ್ನಲು ರುಚಿಯಾಗಿರುತ್ತವೆ (ಊಂ). **ಹೆರಳೆ** : "ಐರಾವತಃ, ನಾಗರಂಗಃ—೨ ಹೆರಳೇಗಿಡ" (ಸಿದ್ಧೌಷ. ೦೨೦) ; ನಾರಾಯಣನಿಗೆ ಕಣ್ಣು ಹೆರಳೆಕಾಯಿ ಗಾತ್ರವಾಯಿತು (ಗರುಡಾ. ೬೬). **ಹೇರಳೆ** : "ಕಾಗಿನೇರಳೇಗಿಡ . . . ನೆಲನೇರಳೇಗಿಡ—ಈ ೪ ಹೇರಳೇ ಗಿಡವೆಂದು ಕೆಲವರನ್ನುವರು" (ಸಿದ್ಧೌಷ. ೦೨೦) ; ಹೇರಳೆ: ಈ ಚಿಕ್ಕೆಯನ್ನು ಎಮ್ಮೆಕಟ್ಟುವೊಸರಿನಲ್ಲಿ ಅರೆದು ಕಟ್ಟುವೊಸರಲ್ಲಿ ತೆಗೆದು ಕೊಳ್ಳೆ ಅತಿಸಾರ ಪರಿಹಾರಂ (ಶಿಶ್ನಾ. ೬) ; ಕಿತ್ತಲೆ, ಹೇರಳೆ . . . ಅಂಜೂರ ಇವೇ ಮುಂತಾದ ಹಲವು ಹಣ್ಣಿನ ಗಿಡಗಳನ್ನು ತೋಟಗಳಲ್ಲಿ ಬೆಳೆಯಬಹುದು (ವೃಕಶು. ೩೬). **ಹೇರಿಳೆ** : "ಜಂಬೀರಃ—ನಿಂಬೆ, ಹೇರಿಳೆ, ಮರುಗ, ಲಕ್ಕೊರಲೆ" (ಟಿಕಂ. ೬೦) ; ಹೇರಿಳೆ ಪರಿಮಳಸಾರವಂ ನಿನ್ನಲ್ಲಿ ಮಾರಿಾರಿಗೀಯೆಸುತ್ತಂ ಹೂಗೊಳುತ್ತಲ್ಲಿ (ಭುಕ್ತಾರ. ೯-೦೬) ; ಪೂರೈಸಿದ ಫಲ ಸಹ ಹೇರಿಳೆಯ ಮರವಾರಾವುದೊಳೊಪ್ಪಿದುವು (ಕಂಶಶಿ. ೩-೬೨) ; ಹೇರಿಳೆ ಹಾಗಲಗಳಲ್ಲಿ, ಒಬ್ಬೊಬ್ಬರಿಗೆ ಒಂದೊಂದು ಇಷ್ಟವಾಗಿರುತ್ತದೆ (ಜೀವಶಾ. ೩೪). **ಹೇರೀಳೆ** : "ಹೇರೀಳೆಯೆನೆ ಕಂಚಿ" (ಮಂಗರಾ. ೩೪-೦೦) ; ಮಂಜುಳಫಲೋಚ್ಚಂಡವಾದ ಕಿತ್ತೀಳೆಯಿಂ ಕೆಂಜಿಗುರಲರ್ವಣ್ಣಳವರ್ದ ಹೇರೀಳೆಯಿಂ . . . ವಿಮಲಪಲ್ಲರಿಗಳಿಂ ಪೊಂಗಿ ಪೊಪುಬೀಯೊಗಿ (ಉದ್ಭಟ. ೩-೯೦) ; ಮಧುರರಸದ್ರುಮದ ಕಿತ್ತೀಳೆ ಕಂಪಿತ ಫಲಭರದ ಹೇರೀಳೆ (ತೊರಶಾ. ೩-೯-೬). [ಪೇರ್$_1$ (< ಪಿರಿದು$_1$) + ಈಳೆ]

**ಪೇರು**$_1$ 'ಪೇಱು$_1$' ನೋ.

**ಪೇರು**$_2$ 'ಪೇಱು$_2$' ನೋ.

**ಪೇರು**$_3$ 'ಪೆಸರ್' ನೋ.

**ಪೇರುಕಟ್ಟು** (ಕ್ರಿ). ತಕ್ಕಡಿಯ ಪರಡೆಗಳ ಸಮತೋಲನವು ವ್ಯತ್ಯಾಸಗೊಂಡಾಗ ಭಾರವನ್ನು ಹೆಚ್ಚು ಕಡಮೆ ಮಾಡಿ ಸಮಗೊಳಿಸಂ : ಪದಾರ್ಥವನ್ನು ತೂಕ ಮಾಡುವುದಕ್ಕೆ ಮುಂಚೆ ಪೇರುಕಟ್ಟಿ ತೋರಿಸು (ಊಂ). [ಪೇರು$_2$ (< ಪೇಱು$_2$) + ಕಟ್ಟು$_1$]

**ಪೇರುಡು**, ಹೇರುಡು (ನಾ). ದೊಡ್ಡ ಉಡು : ಫಲ್ಗಾನೋಳಾ ಪೋಪ ಪೇರುಡುವಂ ಸೋವು (ಸೂಕ್ತಿಸು. ೩-೦೦೫) ; ಪೇರುಡುವಿಂದು ಬಂದುಂಡು ರಸವನು ಪೋಗುತದ (ಶಾಕ್ಯಾ. ೦೭-೬೬). **ಹೇರುಡು** : ಭಲ್ಲಾತಕತರು ಮೂಲಂ ಸಲ್ಲಲಿತ ಗುಡಸಿಚಿ ಭದ್ರಮುಸ್ತೆಯಿವಂ ತಾಂ ನಿಲ್ಲದೆ ನೀರಿಂ ಕುಡಿಯಲ್ ನಿಲ್ಲದು ಪೇರುಡುಗಳಗಿದು ತುಡುಕಿದ ಗರಳಂ (ಖಶರ. ೦೩-೯೪). [ಪೇರ್$_1$ (< ಪಿರಿದು$_1$) + ಉಡು$_2$]

**ಪೇರುರ**, ಹೇರುರ (ನಾ). ೧. ವಿಸ್ತಾರವಾದ ಎದೆ : ಹರವಾದ ವಕ್ಷಸ್ಥಳ : ಸಕಳಕಳಾಧಾರನ ಪೇರುರದೊಳ್ಮಣಿಹಾರಂ ಥಳಥಳಿಸಿ ಪೊಳೆವುತ್ತಿರ್ದತ್ತಾಗಳ್ (ಕಾದಂಪೂ. ೩೦) ; ಶ್ರೀರಮಣಗೆ ನೆಲೆ ತನ್ನಯ ಪೇರುರಮಂ ಮಾಟ್ಪೆನೆಂಬ ಬಗೆ ಮಿಗೆ (ಗಣಾಯು. ೬-೦) , ಖಳನ ಪೇರುರದಲ್ಲಿ ತಾಗ ಲೆಚ್ಚನು ಕೆಡೆಯೆನುತ (ತೋಜಕ. ೩೯-೨೦). ೨. (ಸ್ತ್ರೀಯ) ಉನ್ನತವಾದ ಎದೆ ; ಪುಷ್ಟವಾದ ಸ್ತನ : ಜಾರ ಗೋಪಾಂಗನೆಯ ಪೇರುರದ ಸೋಂಕು ಚಿಂತಾರತ್ನವೆನೆ ತ್ರಿದಿವದೂರ ಸಂಪತ್ತಲಾ (ಶಾವಶಂ. ೩-೪). **ಹೇರುರ** : ೧. ಕಲಿಪಾರ್ಥನು . . . ಕೌರವನ ಹೇರುರದಲಂಬನು ಹೂಳಿದನು (ಕುಮ್ಯಾಕೀ. ೬-೦೦೬) ; ಓನಹೃದಯನ ಹೇರುರವನೆಚ್ಚೊಡನೆ ಕೆಡೆಕೆಡೆಯೆನುತ ನಡೆತಂದ (ತೊರಶಾ. ೧-೪-೨೯). ೨. ಮದನಾರಿಯರ್ಧದ ನಾರಿ ಹರಿ ತಾ ಹೇರುರದ ಹೆಂಗುಸುಱೆ ಬೊಮ್ಮನು ಮಗಳ ಮೊಱೆಗೇಡಿ (ಕುಮ್ಯಾಶ. ೦೩-೬೭). [ಪೇರ್$_1$ (< ಪಿರಿದು$_1$) + ಉರ$_2$]

**ಪೇರುರಿ**, ಹೆಬ್ಬುರಿ (ನಾ). ದೊಡ್ಡ ಉರಿ ; ದಳ್ಳುರಿ : "ದಳ್ಳುರಿಯು ಪೇರುರಿಯು ಘನಜ್ವಲಿತದೊಳು ಸೊಗಯಿಪ್ಪುದು" (ಶಬ್ದಮಂ. ೦೨) ; ಪೇರುರಿಯಾರತಿಯನೋರಂತೆ ಪಿಡಿದು ಬೆಳಗೆಯುಂ (ವೃಷಶ. ೯-೨೦ ವ). **ಹೆಬ್ಬುರಿ** : ಎಬ್ಬಿಸುತೆ ಹೆಬ್ಬುರಿಯು ಕಾರ್ಬೊಗೆಯ ಕಣೆಗಳಂ (ಶರಕು. ೨೯-೩೩). [ಪೇರ್$_1$ (< ಪಿರಿದು$_1$) + ಉರಿ$_2$]

**ಪೇರುಸಿರು**, ಪೇರುಸಂರು (ನಾ). ನಿಡಿದಾದ ಉಸಿರು ; ನಿಟ್ಟುಸಿರು : ಕೊಡವಿಡಿದು ಪೆಡಯುಸದರಡಿಯ ಮರಿಯನ್ನಿಟ್ಟು ನಿಡುತರದ ಪೇರುಸಿರ ಗಾಳಿಯಿಂ ತಣ್ಣೆನಿಸುತೊಡನೆಂದು ಮರುಗುತಿರಲು (ವೆಂಕಶಾ. ೩-೬-೦೨). **ಪೇರುಸುರು** : ತಲ್ಲಣಿಸಿ ಹೋಗುತ ಬರುತ್ತಿದೆ ಡಿಳ್ಳವಾಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರುಗಳು ತೊಡಕಿ (ಬಸಪು. ೩೪-೪೦). [ಪೇರ್$_1$ (< ಪಿರಿದು$_1$) + ಉಸಿರು$_2$ (< ಉಸಿರ್$_2$)]

**ಪೇರುಸುರು** 'ಪೇರುಸಿರು' ನೋ.

**ಪೇರೂರ್**, ಹೇರೂರ್ (ನಾ). ೧. ದೊಡ್ಡ ಊರು ; ಗ್ರಾಮ : ನೂರಾರು ಪೇರೂರ್ಗಳಂ ದಱಂಟ (ಶೀತಶಾ. ೬-೩೦). ೨. ಒಂದು ಊರಿನ ಹೆಸರು : ಕೋಱಿಕುನ್ದವಿಷಯೇ ವೆನ್ನೆಲ್ಕರನಿಗ್ರಾಮಃ ಪೇರೂರೇವಾನಿ ಅಡಿಗಳ್ (ಎಕ. X, ಮಾಲೂರು. ೭೨-೨೪; 425 ? ಕೃಶಾ); ನೈರಿತಿಯೊಳೆ ಅವದಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭ ೬; ೯೮೨). **ಹೇರೂರ್** : ೨. ಹೇರೂರ . . . ಶ್ರೀಪಾದಪದ್ಮಾರಾಧಕ ರಾಚಯ್ಯ (ಎಕ. VII, ಶಿಕ್ನಗಿ. ೩೨-೨೩೩; ಸು. 1050 ?); ಮುನ್ನ ತನ್ನತ್ತಿಗೆ ಹೇರೂರ ಹೆಣ್ಣಂ ಗಂಡುರೂಪಂ ಮಾಡಿದೋಪಾದಿಯಿಂದೆನ್ನಂ ಹೆಣ್ಣಂ ಮಾಡದೆಂತು ಪೋದಪಂ (ಖಶರ. ೦೨-೦೨೫). [ಪೇರ್$_1$ (< ಪಿರಿದು$_1$) + ಊರ್]

**ಪೇರೆದೆ** (ನಾ). = ಪೇರುರ ೧ : ಉನ್ನತನ ಭುಜಯುಗಲ ಪೇರೆದೆ ಹೊನ್ನ ಸೆಳೆನಡು ಬಾಳೆದೊಡೆ ಮೊಱೆದನ್ನರಂ ಸೋಲಿಸುವ ಜವ್ವನ ಮಾಂತನಾ ಕುವರ (ಶಾಕ್ಯಶಾ. ೯-೬). [ಪೇರ್$_1$ (< ಪಿರಿದು$_1$) + ಎದೆ (< ಎರ್ದೆ)]

**ಪೇರೆಲು** (ನಾ). ದೊಡ್ಡ ಎಲುಬು; ನಿಟ್ಟೆಲುವು : ರಕ್ತದೊಳ್ ನನೆದು ಪೇರೆಲುಗಳುಮನೊದೆದು ಕೈದುಗಳ ಸೋಂಕಿಂ ಗಾಯವಡೆದು (ಶಂಪು. ೯೯-೯೪). [ಪೇರ್$_1$ (< ಪಿರಿದು$_1$) + ಎಲು$_1$ (< ಎಲ್ಬು)]

**ಪೇರೆಲೆ** (ನಾ). ಅಗಲವಾದ ಎಲೆ : ಬಲದ ಕೈಯಲಿ ಮಾಂಸವಿಹ ಪೇರೆಲೆಯ ಜೊನ್ನೆಯನಾ ಶಿವೈಕ್ಯಂ ಪಿಡಿದು ನಡೆತಂದು (ಬಸಪು. ೧೮-೨೦). [ಪೇರ್$_1$ (< ಪಿರಿದು$_1$) + ಎಲೆ$_1$]

**ಪೇರೆಳ್ತು** (ನಾ). ಭಾರಿಯಾದ ಎತ್ತು : ಭಾಳವಾಧ್ಯಸ್ಥಳಬದ್ಧಸ್ವರ್ಣಪಟ್ಟಾಂಕನದಿನಸವ ಪೇರೆಳ್ತುಗಳ್ಪೆರ್ವೆಯಿಂದಂ . . . ಪರಿಯೆ (ಶೃಕಶ. ೩೮-೬೯). [ಪೇರ್$_1$ (< ಪಿರಿದು$_1$) + ಎಳ್ತು (< ಎಟ್ತು$_1$)]

**ಪೇರೇರ** (ನಾ). ಒಬ್ಬಾತನ ಹೆಸರು : ಇಳವ್ಪಟುವಸ್ಯ ಪುತ್ರೇಣ ಪೇರೇರನಾಮ್ನಾವಲಿಖಿತಮ್ ಪಟ್ಟಿಕಾ (ಮ್ಯಆಂ. ೧೯೩೬. ೦-೩೯; ಸು. 667).
[?]

**ಪೇರ್ಸಿರಿ** (ನಾ). ಹಿರಿದಾದ ಸಂಪತ್ತು,—ಐಶ್ವರ್ಯ : ಈ ರೇಖೆಯೆ ಧನರೇಖೆಯಿದಾರಯ್ಯಂ ನುಡಿಗುಮಿವನ ಪೇರ್ಸಿರಿಯುಂ (ಪಶ್ಚಕಂ. ೫-೩೭).
[ಪೇರ್$_1$ (< ಪಿರಿದು$_1$) + ಸಿರಿ]

**ಪೇರ್ಸು** 'ಪೇರಿಸು$_1$' ನೋ.

**ಪೇರೊಕ್ಕಲ್**, ಪೇರೊಕ್ಕಲು (ನಾ). ದೊಡ್ಡ ಮನೆತನ,—ಕುಟುಂಬ : ದೀರ್ಘಾರ್ಥ—ಪಿರಿದು + ಆನೆ—ಪೇರಾನೆ; ಪೇರಡವಿ, ಪೇರೊಕ್ಕಲ್, ಪೇರಡಿ, ಪೇರೊಡಲ್ (ಶಮದ. ೧೬೦ ಪ್ರಯೋ). **ಪೇರೊಕ್ಕಲು** : ಎಲ್ಲರೂ ನನ್ನಕ್ಕ ತಂಗಿಯರು . . . ಆ ಕಡೆಗೆ, ಈ ಕಡೆಗೆ ತೂಗುವರು ತೂನೆಯುವರು . . . ಪೇರೊಕ್ಕಲಾಗಿ ಬಾಳುವರು (ಹೊಂಗಳು. ೦೮-೯); ಪೇರೊಕ್ಕಲು ! ಈ ಮಕ್ಕಳು ಬಡವರ ಮೈಸಾಲ (ರೀಕಮ. ೧-೦೭).
[ಪೇರ್$_1$ (< ಪಿರಿದು$_1$) + ಒಕ್ಕಲ್$_2$]

**ಪೇರೊಕ್ಕಲು** 'ಪೇರೊಕ್ಕಲ್' ನೋ.

**ಪೇರೊಡಲ್**, ಪೇರೊಡಲು, ಹೇರೊಡಲ್, ಹೇರೊಡಲು (ನಾ). ದೊಡ್ಡ ದೇಹ; ಭಾರಿಯಾದ ಶರೀರ : ಕಾರಿರುಳ ತಿರುಳ ಬಣ್ಣಂ... ಏಳೆರ್ವುರಿಗೇಸಂ ಪೇರೊಡಲಸದಿರೆ ಪುಟ್ಟಿದನಾರುಮಗುರ್ವಿಸೆ ಮಗಂ ಘಟೋತ್ಕಚನೆಂಬಂ (ಪಂಪಭಾ. ೩-೨೦); ಕಾರೊಸಡಂ ಕಬರ್ಯುಂ ಪೇರೊಡಲುಂ ... ದನುಜಾಕಾರಮನೊಡರಿಸೆ ನಿಶಾಟರರ್ವಿಸಿ ತೋರ್ಪರ್ (ಶಾಮ್ಯಾ.ವ. ೨೨೦); ಪಲರ್ಗೆ ಬಿರಿದಲೆ, ಸುರಿವಾಯ್ ಪಲರ್ಗೆ . . . ಅರೆಬರ್ಗೆ ಪೇರೊಡಲ್ (ಅದ್ಯು.ಕ. ೨೭-೨೭). **ಹೇರೊಡಲು** : ಪೇರೊಡಲ ಧಿಮ್ಮನೆ ತಿರುಗಿಸುತೆ . . . ಅಪ್ಪಳಿಸುತಿಕ್ಕಿದನು (ತೊರಹಶ. ೩೬-೬೦). **ಹೇರೊಡಲ್** : ಮಿಂಚುದಲೆಗಳ ಖಂಡಿಪಲ್ಗಳ . . . ಡೊಳ್ಳುಗಳ ಹೇರೊಡಲ ಮಂಚಕರ . . . ಹಿಂಡು ನೆರೆದು (ಬಸಪು. ೩೦-೫೯). **ಹೇರೊಡಲು** : ಕರೆ ನಿಮ್ಮಯ್ಯನನು ಹೇರೊಡಲ ತೋಟಿಗೆ ಬಲವ ಬೆದಱಿಸಲಗ್ಗಳಿಕೆಯಹುದೇ (ಕುಮ್ಯಾದ್ರೋ. ೦೫-೫೫); ಮಹೋದರನ ಹೇರೊಡಲನೊಡೆದು . . . ಶಕ್ರಜಿತುವನು ಹುಡುಕುನೀರದ್ದಿದನು ನಡೆದು ಸಮುದ್ರಮಧ್ಯದಲಿ (ತೊರರಾ. ೫ ೯-೫); ಪೊಡೆಗೆಡೆದ ಹೇರೊಡಲ ಸೀಳ್ಗಳಿಂ ಪೋಳ್ಗಳಿಂ . . . ಕಡುಭಯಂಕರವಾಗಲು (ಕೃಜಾಭಾ. ೯-೯೭).
[ಪೇರ್$_1$ (< ಪಿರಿದು$_1$) + ಒಡಲ್]

**ಪೇರೊಡಲು** 'ಪೇರೊಡಲ್' ನೋ.

**ಪೇರೊನಕೆ** (ನಾ). ದೊಡ್ಡ ಒನಕೆ : ಇಕ್ಕಡಿವಡೆದ ಕಾರ್ಮುಕವ ನಿವಾರಿಸಿ ತೆಕ್ಕೊಂಡು ಭಾರಿಯ ಹಲವ ಒಕ್ಕಯ್ಯೊಳಾಂತ ಪೇರೊನಕೆಯಿಂದಿಕ್ಕಿದ ಸೂಕ್ಷ್ಮಾನದಲೆಗನ ಮೇಲೆ (ತೊರಹಶ. ೩೬-೫೯).
[ಪೇರ್$_1$ (< ಪಿರಿದು$_1$) + ಒನಕೆ]

**ಪೇರೊರ್ಬೆ** 'ಪೇರೊಟ್ಬೆ' ನೋ.

**ಪೇರೊಸಗೆ** (ನಾ). ದೊಡ್ಡ ಹಬ್ಬ,—ಉತ್ಸವ : 'ಪೇರೊಸಗೆಗೆಯ್' ಪರಾ. [ಪೇರ್$_1$ (< ಪಿರಿದು$_1$) + ಒಸಗೆ]

**ಪೇರೊಸಗೆಗೆಯ್** (ಕ್ರಿ). ದೊಡ್ಡ ಹಬ್ಬವನ್ನು ಆಚರಿಸು; ಭಾರಿ ಉತ್ಸವವೇರ್ಪಡಿಸು : ಕಲಸೋಗರಮಂ ನಲಿದಿಕ್ಕಿ ಭೂಷಣಪ್ರಚಯಮ ನಿಟ್ಟು ಪೇರೊಸಗೆಗೆಯ್ದು ಸಹೀಜನದೊಂದುಗೂಡಿ (ಚಾಚಿಕೀ. ೯-೯೨).
[ಪೇರೊಸಗೆ + ಕೆಯ್$_1$]

**ಪೇರೊಟ್ಬೆ** 'ಪೇರೊಟ್ಬೆ' ನೋ.

**ಪೇರೊಟ್ಬೆ**, ಪೇರೊರ್ಬೆ, ಪೇರೊಟ್ಬೆ, ಪೇಱೊರ್ಪೆ, ಪೇಱೊರ್ಬೆ, ಹೇರೊಬ್ಬೆ (ನಾ). ದೊಡ್ಡ ಮುಳ್ಳುಪೊದರು (?) : ಅಱಿಯನ್ತೆಂಕೆ ನೋಡಿ ನಡದು ಪೇರೊಟ್ಬೆ ಮಗ್ಗನ್ಕೆಱ (ಎಕ. X (೩), ಶಿಡ್ಲ. ೬೬-೨೨; 860); ಸಾಲತ್ತ ಕಾಡೇಱಿನ ಪೇರೊಟ್ಬೆ ಪಗನ್ತಿವಳ್ಳಮ (ಎಕ. IV. ಎಡತೊ. ೬೦-೭೫; ಸು. 890). **ಹೇರೊರ್ಬೆ** : ಪಡುವ ನೋಡಿ ಪರಿದ ಪೇರೊರ್ಬೆಯು (ಎಕ. IX (೩), ಬಂಗಳೂ. ೦೩೦ ೩೭; 828). **ಹೇರೊಟ್ಬೆ** : ಪುಲಿಪದಿಯು ತನ್ಕಣ ಪೇರೊಟ್ಬೆಯೆ (ತಿಅ. XII. ೦೬-೯ (b); 813); ಇಗ್ಗಲಿಜು ಅರಿಪುರ ಮಾಱೂರ ಸನ್ದಿನಲ್ಲಿ ತಣ್ಪಾಲಿಗಾಲ ಮೂಡಣ ಪೇರೊಟ್ಬೆಯಿಂ (ಎಕ. III. ತಿನರ. ೦೩೯-೦೯; 916 ?). **Δಪೇಱೊರ್ಪೆ** : ದಕ್ಷಿಣಸ್ಯಾನ್ದಿಶಿ ಪಡುವ ನೋಡಿ ಪೋದ ಪೇಱೊರ್ಪೆಯು (ಎಕ. XVI. ತಿಪಟೂ. ೧೯೦-೭೬; ಸು. 900). **Δಪೇಱೊರ್ಬೆ** : ಅನ್ತೆ ತುಟ್ಬಿಲ ಪೇಱೊಱ್ಬೆಯು (ಎಕ. XVI. ತಿಪಟೂ. ೦೯೦-೭೬; ಸು. 900). **ಹೇರೊಬ್ಬೆ** : ತೆಂಕಣ ಕಡೆಗೋಡಿ ಏರಿಯ ಮೇಲೆ ಬಂದು ಚಣ್ಡಿಹಿನಲೇದು ಹೇರೊಬ್ಬೆ ಪುಳಿಗಡಬಿನೊಳು ಕೂಡಿ (ಎಕ. XIV. ಎಳಂದೂ. ೦೭೦-೦೩; ಸು. 12ನೆಯ ಶತ); ಚಕ್ರನ ಕೊಡಗೆಯ ಹೊಲದ ಹೇರೊಬ್ಬೆಯಿಂ ಮೂಡಲು (ಮ್ಯಆಂ. ೦೯೩೦, ೫೬-೭೫; 1413). [ಪೇರ್$_1$ (< ಪಿರಿದು$_1$) + ಒಟ್ಬೆ]

**ಪೇರೋಟ** (ನಾ). ವೇಗವಾದ ಓಟ : ಕುದುಕುವರಿಯಲಿ ಪರಿದು ಪೇರೋಟದಲಿ ಪರಿದೋಡುತ್ತವಾಯಾಸದಿ ಬಳಲುತೊಯ್ಯನೆ ನಡೆದು (ಬಸಪು. ೨೭-೩೨). [ಪೇರ್$_1$ (< ಪಿರಿದು$_1$) + ಓಟ]

**ಪೇರೋಣಿ** (ನಾ). ದೊಡ್ಡ ಓಣಿ : ಸಿವಮ ಮೂಡಾಯ್ತ್ರಱ ಎ ತೆಂಕಾಯ್ಬಟಾರನ ಮಾಡಮ ಪೇರೋಣಿ ಎ ಸನ್ದು (ಎಕ. IV. ಎಡತೊ. ೬೦-೭೩; ಸು. 890). [ಪೇರ್$_1$ (< ಪಿರಿದು$_1$) + ಓಣಿ]

**ಪೇರೋಲಗ** (ನಾ). ದೊಡ್ಡ ಸಭೆ; ಮಹಾಸಭೆ : ಪೇರೋಲಗಮಂ ಪರೆಯುವೇಳ್ದಲ್ಲರಂ ಕಳಿಪಿ (ಬಸರ. ೬-೩೭) : ಚಂದ್ರಾಪೀಡನೆಲ್ಲರುಮಂ ಕಳುಹಿ ಪೇರೋಲಗಂ ಪರೆದು (ಬಸಪು. ೦-೫೦).
[ಪೇರ್$_1$ (< ಪಿರಿದು$_1$) + ಓಲಗ$_1$]

**ಪೇರ್ಗೊಳ್** 'ಪೆಸರ್ಗೊಳ್' ನೋ.

**ಪೇಲ್**, ಹೇಲು$_1$ (ಕ್ರಿ). ಹೇತು$_1$ (ಭೂತನ್ಯೂ). ಮಲವಿಸರ್ಜನೆ ಮಾಡು : "ಪೇಲ್—ಮಲವಿಸರ್ಜನೇ, ಪಾಲೇ ಚ" (ಶಬ್ದಾರ್ಥ); ಗುದತಿ=ಪೇಲ್ವಪಂ (ಶಾಕಶ. ೨೩೦). **ಹೇಲು$_1$** : ನೂಲೋ ಹೆಂಡತಿ ಬಿಟ್ಟು ಹೇಲೋ ಮೂಳಿ ತಂದ (ಗಾದೆ); ನಡುಮನೇಲಿ ಹೇತು, ನಾತ ಬರುತ್ತೆ ಎಂದ (ಗಾದೆ).
[ದೇ. ೫ ತಮಿ. ಪೇಲ್, ಪೇಳ್; ಗೊಂಡಿ. ಪೇಲಾನಾ]

**ಪೇಲ್$_2$**, ಪೇಲು, ಹೇಲು$_2$ (ನಾ). ಅಮೇಧ್ಯ; ವಿಷ್ಠೆ; ಮಲ : ಪೇಲಂ ಕಚ್ಚುರಲ್ ತಕ್ಕುದೆ (ಶಬ್ದಶ. ೯-೩೯); ಪಂದಿಗಳೊಡನಾಡಿದ ಕಱುಪಂ ಪಂದಿಯಂತೆ ಪೇಲಂ ತಿಂಗೆಂಬುದು ನಾಣ್ಣುಡಿ (ಧರ್ಮಾಮೃ. ೨-೬೬). **ಪೇಲು** : ಸಾಸನಮಯ್ಯಾರ್ದೆಯುಮಮಂ ಪೇಸದೆಯಿದನಳಿವೆನೆಂಬ ಮಹಪಾತಕನಿಂತೀಸನೆ ಪೇಲಿನ ಕುಳಿಯೊಳ್ಪಾಸಿರಸತವರ್ಷ ಬಾಲವ್ವುಳಿಮ್ವಾಗಿಯಮಂ (ಕಶಾ. I. ೨೯-೫೬; 1148). **ಹೇಲು$_2$** : ಹೇಲೊಳಗಣ ಹುಳುವ ಕೋಳಿ ಕವಱಿದಂತಾ ಯಾತ್ರವನ ಶಿವಪೂಜೆ (ಗಣಶಾ. ೦೯೦-೬); ಯಾ ಧರ್ಮಕೆ ತಪ್ಪಿದವರು ಹೇಲೊಳಗಣ ಹುಳುವಾಗಿಯಿರಲುಳವರು (ಕಾಇಶ. IX-ii. ೫೬೦-೩೨; 1584); ದಂಡಿಗೆ ಮೇಲೆ ನಾಯಿಯಾ ಕುಂದ್ರಿಸಿದರೆ ಹೇಲು ಕಂಡು ಹಾರಿತು (ಗಾದೆ). [< ಪೇಲ್$_1$]

**ಪೇಲವ** (ಗು). ೧. ಕೃಶವಾಗಿರುವ; ತೆಳುವಾದ. ೨. ಕೋಮಲವಾದ; ಸಂಕುಮಾರ. ೩. ಮಸುಕಾದ; ನಿಸ್ತೇಜವಾದ : ಬಿಳಿಚಿ

ಕೊಂಡ : ಅರೆಬಿರಿದ ಸಂಪಿಗೆಯು ಹೂವಿನ ಹಾಗೆ ಪೇಲವವರ್ಣದಾಕೆ ಈಕೆ (ಇಕ್ಷ್ವ. ೪೦೩). ೪. ಸಣ್ಣ ; ಎಳೆಯ. ೫. ವಿರಳವಾದ ; ಬಿಡಿಬಿಡಿಯಾದ. (ನಾ). ೬. ಕೃಶವಾದುದು : "ಕ್ಷಾಮಂ . . . ಪೇಲವಂ, ತಳಿನ(ಮು)ಂ. ತನು—ಈ ೭ ಅಸಿದು" (ಶಬ್ದಮ. ೦೧೯-೩೨). ೭. ವಿರಳವಾದುದು : "ಪೇಲವಂ, ವಿರಳಂ, ತನು—೩ ಎಡೆಬಿಟ್ಟುದು, ವಿರಳವಾದದ್ದು" (ಸಿಕ್ಕಾಟಿ. ೩೪೦). ೮. (ಅಲಂ) ಸತ್ತ್ವವಿಲ್ಲದುದು ; ನೀರಸವಾದುದು : 'ತಾಯಿ' ಯಂಥ ಕಥೆಗಳ ಜೊತೆಗೆ ಬಂದಿರುವುದರಿಂದ ಅವು ಪೇಲವವಾಗಿ ಕಾಣುತ್ತವೆ (ಎಚ್ಚುಕ. XVI, ಮುನ್ನುಡಿ) ; ಪಂಪನ ಆದಿಪುರಾಣದಲ್ಲಿ ಬರುವ ಸನ್ನಿವೇಶದ ಎದುರು ಇದು ತೀರಾ ಪೇಲವವಾಗಿದೆ (ಪಂಪಾ. ೦೩೬). [ಸಂ.]

**ಪೇಲವತೆ** (ನಾ). ಬಿಳಿಚಿಕೊಂಡಿರುವಿಕೆ : ಗರ್ಭಿಣಿಯಾಗಿ ಬಂದಾಗ ಇದ್ದ ಆ ಪೇಲವತೆ ಈಗಿಲ್ಲ (ಅಜಾಕ. ೨೩೩). [ಸಂ. ಪೇಲವತಾ]

**ಪೇಲು** 'ಪೇಲ್₂' ನೋ.

**ಪೇಲೆ, ಪ್ಯಾಲೆ** (ನಾ). ಕುಡಿಯಲು ಬಳಸುವ ಪಾತ್ರೆ ; ಬಟ್ಟಲು : ಬೆಳ್ಳಿಯಿಂದ ತಾಟು, ತಬಕ, ಪೇಲೆ ಮುಂತಾದ ಸಾಮಾನುಗಳನ್ನು . . . ಮಾಡುತ್ತಾರೆ (ಕುಂಬಾರು. ೪-೦೨೦) ; ಚಿನ್ನಾ ಹಾಲಿನ ಪೇಲೆ ಹಿಡಿದು ಅಡಿಗೆ ಮನೆಯ ಹೊಸ್ತಿಲ ಮೇಲೆ ಕುಳಿತ (ಕ್ಷಿತಿ. ೩೩) ; ಪೇಲೆಗಳು ತುಂಬಿದವೆನ್ನುವಷ್ಟರಲ್ಲಿ ಬರಿದಾಗುತ್ತಿದ್ದವು (ಮಾಕಾಸಾ. ೦೨). **ಪ್ಯಾಲೆ** : ಆ ಮುಹೂರ್ತದಲ್ಲಿ ಕಾರ್ಕೋಟಕವಿಷ ತುಂಬಿದ ಪ್ಯಾಲೆ ಕೊಟ್ಟಿದ್ದರೂ ಗುಟುಕರಿಸಿಬಿಡುತ್ತಿದ್ದರು (ಕೃಕೃಪಿ. ೯).
[←ಪಾರ. ಹಿಂ. ಪ್ಯಾಲಾ ; ಮರಾ. ಪೇಲಾ, ಪ್ಯಾಲಾ]

**ಪೇಲೆವರಿಗೆ** (ನಾ). ಒಂದು ಬಗೆಯ ತೆರಿಗೆ (?) : ಬಸವನಹಳ್ಳಿಯ ಪೇಲೆವರಿಗೆ ಹಟ್ಟಿಗೆ ಹುರಿಗೆ ಸಿನ್ನುವಜಲು ದೇವಳಿಗನಾದ ಎಳ್ಳದಿವ್ವರು ಪ್ರಭುಗಳ್ ಆಳ್ವಾಯಲು (ಎಕ. VI, ತಕ್ಕರು. ೦೩-೦೦; 1674 ?). [?]

Δ **ಪೇವಯ್ಸು** 'ಹೇವಯಿಸು' ನೋ.

**ಪೇಶಣ** 'ಪೇಸಣ' ನೋ.

**ಪೇಶಲ, ಪೇಶಳ** (ಗು). ೧. ಕೋಮಲವಾದ; ಮೃದುವಾದ : ಒಸರಿಸಿದಿಂದೆನ್ನ ಬಡಸೇಬೆಯನು ತಾವು ಪೇಶಲ ಸುಭಾವದಿಂ ನೋಡಿ ಕೈಕೊಳಲು (ಕಿಂಶಿಲ. ೦೦-೫೦). ೨. ತೆಳುವಾದ ; ಕೃಶವಾದ. ೩. ಸುಂದರವಾದ ; ಮನೋಹರವಾದ : ದೇವ ದೋಷಹೃದ್ಗರಧರ ವಂದ್ಯ ಪೇಶಲ ಪಿನಾಕ ಸುಪಾಣಿ ಮಹೇಶ ಪಾಲಿಸಾ (ಹಮ್ಮಿಕ. ೧-೨). ೪. ಸಮರ್ಥವಾದ; ದಕ್ಷ. ೫. ಮೋಸದ ; ವಂಚನೆಯ. ೬. ಅಲಂಕಾರ ಮಾಡಿದ ; ಸಿಂಗರಿಸಿದ. (ನಾ). ೭. ಮೃದುತ್ವ ; ಕೋಮಲತೆ : ಪ್ರಯೋಗವರ್ಗದೊಳತಿಪೇಶಲವಾಗೆ (ಶಬ್ದಮ. ೨-೫೫೨); ಮೃದು ಪೇಶಲವಸಾಂತ ನುಡಿಗಳಿಂ ಬಿನ್ನವಿಸಿದು (ಪಂಚಾಶಾ. ೬-೬೩ ೨). ೮. ತೆಳುವು ; ಪಾರದರ್ಶಕವಾದುದು : ನಟಿಯಂತೆ ಪೇಶಲವಾದ ವಸ್ತ್ರಗಳನ್ನು ಧರಿಸಿ . . . ತನ್ನ ವಕ್ಷಸ್ಸನ್ನು ಲೋಕದೆದುರಿಗೆ ಆವಿಷ್ಕಾರ ಮಾಡುತ್ತಾ (ಕಾಕಿತ. ೨೨). ೯. ಶುಭ; ಮಂಗಳ : "ಕವುನಂ ಶುಭಂ ಪೇಶಲಂ ಶೋಭನಂ" (ಮಂಗರಾ. ೦೨೬-೨). ೧೦. ಒಂದು ಬಗೆಯ ಬಣ್ಣ ; ತಿಳಿ ಹಳದಿ : ಪೇಶಲವೆಂಬುವದು ಛತ್ರದ ಗರಿಯ ವರ್ಣವಾಗಿಯಿರುವದು (ಶಾಗಂಧಿ. ೬೬೬-೦೯). ೧೧. ಅಂದ ; ಸೊಬಗು : ಮನೋವಿಕಾಸವಂ ಕನ್ನಡಿಸಿತ್ತು ಸೀತೆಗೆ ಮುಖಾಂಬುರುಹಂ ದರಹಾಸ ಪೇಶಲಂ (ಪಂಚಾಶಾ. ೦೦-೬೬). ೧೨. ದಕ್ಷತೆಯಿಂದ ಕೂಡಿದ ವ್ಯಕ್ತಿ ; ಪರಿಣತ : "ದಕ್ಷಃ, ಚತುರಃ, ಪೇಶಲಃ . . . ಉಷ್ಣಃ—ಆಲಸ್ಯವಿಲ್ಲದವನ ಹೆಸರುಗಳು" (ಸಿಕ್ಕಾಕಿ. ೩೦೨). ೧೩. ಮೋಸದಿಂದ ಕೂಡಿದುದು ; ಕುಟಿಲತನ. ೧೪. ವಿಷ್ಣುವಿನ ಹೆಸರುಗಳಲ್ಲಿ ಒಂದು. **ಪೇಶಳ** : ೩. ಪ್ರವಾಳಜಾಳಕಮನೆ ಕಣ್ಗೊಳಿಸಿದುರ್ದಾ ವಧೂವರರ ಸಲೀಲಪೇಶಳ ಕರಕ್ಕೆ ಪಾಣಿಗ್ರಹಣಂ (ಧರ್ಮಮ. ೩-೯೩). [ಸಂ.]

**ಪೇಶವಾಯಿ** (ನಾ). ಮರಾಠರ ಆಳ್ವಿಕೆಯಲ್ಲಿದ್ದ ಮುಖ್ಯಮಂತ್ರಿಯ ಆಡಳಿತ,—ಅಧಿಕಾರ : ಇದು ಪೇಶವಾಯಿಯಲ್ಲಿ ಕಿತ್ತೂರ ದೇಸಾಯಿಯ ವಶಕ್ಕಿತ್ತು (ಕೀಚ. ೬೨).
[←ಪಾರ. ಹಿಂ. ಪೇಶವಾಈ; ಮರಾ. ಪೇಶವಾಯಿ]

**ಪೇಶವೆ, ಪೇಶ್ವೆ, ಪೇಷ್ವೆ** (ನಾ). ಮರಾಠರ ಆಳ್ವಿಕೆಯಲ್ಲಿದ್ದ ಮುಖ್ಯಮಂತ್ರಿ : ಅವನು . . . ಕೊಂಕಣಸ್ಥ ಬ್ರಾಹ್ಮಣನಿಗೆ ಪೇಶವೆ (ಮುಖ್ಯ ಪ್ರಧಾನಿ) ಎಂಬ ಅಧಿಕಾರ ಕೊಟ್ಟು, ಯಾವತ್ತು ಕಾರಭಾರವನ್ನು ಅವನ ಸ್ವಾಧೀನ ಮಾಡಿದನು (ಕರ್ನಾ. ೬೬). **ಪೇಶ್ವೆ** : ಪೇಶ್ವೆಗಳ ಆಡಳಿತವು ಬಿಗಿತಪ್ಪಿ ಸುಬೇದಾರನು ಪರಾಕ್ರಮವುಳ್ಳವನಾಗಿದ್ದನು (ಧುಂಡಿರಾ. ೦). **ಪೇಷ್ವೆ** : ಎಂಟುಮೂಲೆಗಳಿಂದಲೂ ಮುತ್ತಿದ ಶತ್ರುಗಳನ್ನು ಎದುರಿಸಲು ಅವರು ಪುಣೆಯ ಪೇಷ್ವೆಯ ನಾಯಕತ್ವವನ್ನು ಅಂಗೀಕರಿಸಲಿಲ್ಲ (ಶಾರದ. ೪೨೩). [←ಪಾರ. ಹಿಂ. ಮರಾ. ಪೇಶವಾ, ಪೇಶ್ವಾ]

**ಪೇಶಳ** 'ಪೇಶಲ' ನೋ.

**ಪೇಶಿ** (ನಾ). ೧. ಮಾಂಸ ; ಅಡಗು ; ಬಾಡು : ಹೊಟ್ಟೆಯೊಳು ರಕ್ತ ಪೇಶಿಯು ಬಲಿದ ಗರ್ಭ (ಶೀಕೃಪು. ೨-೩-೦೩). ೨. ಮಾಂಸದ ಮುದ್ದೆ : ವಿವಿಧಭಕ್ಷ್ಯೋಪದಂಶಪ್ರಾಯಮಪ್ಪ ದಿವ್ಯಾಹಾರಮೆತ್ತಲೀ[ನಿ]ತ ಪೂತಿಗಂಧಮಪ್ಪ ಮೃಗಪಿಶಿತಪೇಶಿಯೆತ್ತಲ್ (ವರ್ಧಮಾ. ೬-೪ ವ). ೩. ಮೊಟ್ಟೆ ; ತತ್ತಿ : "ಕೋಶಂ ಪೇಶಿಯಂಡಮೆನೆ ತತ್ತಿಯಕ್ಕುಂ" (ಮಂಗರಾ. ೫೦-೧). ೪. ಗರ್ಭಧಾರಣೆಯ ನಂತರದ ಕೆಲವೇ ದಿನಗಳ ಭ್ರೂಣ. ೫. ಅರಳುವುದರಲ್ಲಿರುವ ಮೊಗ್ಗು. ೬. ಇಂದ್ರನ ವಜ್ರಾಯುಧ. ೭. ಒಂದು ಬಗೆಯ ವಾದ್ಯ. ೮. ಹಣ್ಣಿನ ಓಟೆ. ೯. ಕತ್ತಿಯ ಒರೆ.—ಕೋಶ. ೧೦. ಚೆನ್ನಾಗಿ ಬೇಯಿಸಿದ ಅಕ್ಕಿ. ೧೧. ಸ್ನಾಯು ; ಸ್ನಾಯುರಜ್ಜು : ಶರೀರದ ನಷ್ಟವಾದ ಹಲವೊಂದು ಪೇಶಿ (Tissues)ಗಳು ರಕ್ತವನ್ನು ಸೇರಿ ಯಕೃತ್ತಿಗೆ ಬರುವುವು (ಶಾಂಕ್ತ. I, ೩೦೦). [ಸಂ.]

**ಪೇಶು** (ಕ್ರಿ). ಹೊಗಳು ; ಕೊಂಡಾಡು : ಪೇಶಾದ ದಿನವೆಲ್ಲ ಪೆಜವಾದ ದಿನವಯ್ಯ ಈಶನಂ ನೆನೆಯದ ದಿನಂ ಬಂಜೆದಿನವಯ್ಯ (ವಾಗೀಶ. ದೀ. ೫೬೩-೯); ಪೇಶಾದ ನಾಳೆಲ್ಲ ಪೆಜನಾ[ವಾ]ದ ದಿನ (ಶೀಕೃಪು. ೪-೯-೦೩).
[ದೇ. ? ತಮಿ. ಪೇಚು ; ಮಲ. ಪೇಚು = ಮಾತನಾಡು]

**ಪೇಶ್ವೆ** 'ಪೇಶವೆ' ನೋ.

**ಪೇಷ್‌ಕಷ್, ಪೇಷಕಶಿ** (ನಾ). ಹಿಂದೆ ಜಮೀನುದಾರ ಮುಂತಾದವರು ಸರ್ಕಾರಕ್ಕೆ ತೆರುತ್ತಿದ್ದ ನಿಗದಿಯಾದ ಹಣ ; ಪೊಗದಿ : ಪ್ರಭುಗಳೂ . . . ನಿಯಮಿತವಾದ ಪೇಷ್‌ಕಷ್‌ನ್ನು ಕ್ರಮವಾಗಿ ಸಲ್ಲಿಸುತ . . . ಅವರ ದೇಶಗಳನ್ನೆಲ್ಲಾ ಸರ್ಕಾರಕ್ಕೆ ಸೇರಿಸಿಕೊಂಡರು (ಕುಶಾಇತಿ. II, ೧೩) ; ಇಂಗ್ಲೀಷ್ ಸರ್ಕಾರದವರು . . . ಪೇಷ್‌ಕಷ್ ಎಂಬ ಪೊಗದಿಯನ್ನು ತೆಗೆದುಕೊಳ್ಳುತ್ತಿದ್ದಾರೆ (ಶಾಳಗಾ. ೩೦). **ಪೇಷಕಶಿ** : ಫವುಜಿನ ಖರ್ಚಿಗೆ ಮೊಗಲು ಮುಂಚಿತೀರ ಪೇಷಕಶೀ ಸಹಾ ನವಾಬರೇ ತೀರಿಸಿಕೊಳಬೇಕು (ಹೈದರ. ೫೦). [←ಪಾರ. ಮರಾ. ಪೇಶ್‌ಕಶ್; ಹಿಂ. ಪೇಶಕಷ್]

**ಪೇಷಕಶಿ** 'ಪೇಷ್‌ಕಷ್' ನೋ.

**ಪೇಷಣ₁** 'ಪೇಸಣ' ನೋ.

**ಪೇಷಣ₂** (ನಾ). ೧. ಧಾನ್ಯವನ್ನು ಹಿಟ್ಟು ಮಾಡುವುದು.— ಬೀಸುವುದು. ೨. ಅರೆಯುವುದು : ಪೇಷಣದ ಶಿಲೆಯೊಳಂ ಪೊಸೆದರ್ಕರ್ ಕಂದು (ಕಶ್ಯಪು. ೯೯). ೩. ಬೀಸುವ ಕಲ್ಲು. ೪. ಅರೆಯುವ ಕಲ್ಲು ; ಕಲಬತ್ತು. ೫. ನರಕದ ಶಿಕ್ಷೆಗಳಲ್ಲಿ ಒಂದು : ಪೇಷಣ . . .

ದುರ್ಭೋಗ್ಯ ನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ ಶಿವ ದ್ರೋಹಿಗಳಿಗೆ ನಿಷ್ಕಾರಣ್ಯದಿಾ ವಾಳ್ಪ ಶಿಕ್ಷಾಲೇಶವೆಂದೆನಿಸಿ (ಏವೀ. ೦೬೦).

[ಸಂ.]

**ಪೇಷಣಿ** (ನಾ). ಅರೆಯುವ ಕಲ್ಲು : ಚುಲ್ಲಿ ಪೇಷಣಿ ಕಂಡನಿ ಉಪಸ್ಕರ ಉದಕಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು . . . ಪೇಷಣಿ—ಅಂದರೆ ಅರೆಯುವ, ಬೀಸುವ ಕಲ್ಲುಗಳು (ಅರ್ಥ. ೦೯೬).

[ಸಂ. ಪೇಷಣೀ]

**ಪೇಷುಖಾನೆ** (ನಾ). ಹಿಂದೆ ರಾಜ ಮೊದಲಾದವರು ಪ್ರವಾಸ ಹೊರಡುತ್ತಿದ್ದಾಗ ಅವರ ಮುಂದಿನ ಮೊಕ್ಕಾಮಿಗಾಗಿ ಮೊದಲೇ ರವಾನಿಸುತ್ತಿದ್ದ ಡೇರೆ ಮೊದಲಾದ ಸರಂಜಾಮು: ಮೂರು ಮಂದಿ ಪಾದುಶಹರು ತಮ್ಮ ತಮ್ಮ ಪೇಷುಖಾನೆ ಸಂಗಡ ರ್ಷಾಂಡಾವನ್ನ ಹೊರಗೆ ಹಾಕಿಸಿದರು (ಐಕ್ಯರು. ೩).

[←ಪಾರ. ಪರಾ. ಪೇಶ್‌ಖಾನಾ; ಹಿಂ. ಪೇಶ್‌ಖೇಮಾ]

**ಪೇಷ್ಕಾರ್, ಪೇಷ್ಕಾರ** (ನಾ.) ಕಂದಾಯವನ್ನು ವಸೂಲು ಮಾಡುವ ಒಬ್ಬ ಅಧಿಕಾರಿ : (ಶ್ಯಗಕ IV. ೬೮೨). **ಪೇಷ್ಕಾರ** : ಸಿದ್ಧನಾಯಕ ಬೇಗ ನೀನೋಡು ಪೇಷ್ಕಾರರದ್ದಿದ್ದರುಸುರು (ಅಣ್ಣಾಜಿ. ೩೦-೩೮); ಪ್ರತಿ ತಾಲ್ಲೂಕಿಗೂ ಒಬ್ಬ ಸುಬೇದಾರ, ಒಬ್ಬ ಪೇಷ್ಕಾರ . . . ಗೊತ್ತಾಗಿ (ಮೈಹಾಕಂ. II, ೪೨). [←ಪಾರ. ಹಿಂ. ಮರಾ. ಪೇಶ್‌ಕಾರ್]

**ಪೇಷ್ಕಾರ** 'ಪೇಷ್ಕಾರ್' ನೋ.

**ಪೇಷ್ವೆ** 'ಪೇಶವೆ' ನೋ.

**ಪೇಸಣ, ಪೇಶಣ, ಪೇಷಣ₁, ಪೇಸಣೆ, ಪೇಸಾಣಿ, ಪೇಸಾಳಿ** (ನಾ). ೧. ಕೆಲಸ ; ಕಾರ್ಯ. ೨. ಸ್ವಾಮಿಕಾರ್ಯನಿರ್ವಹಣೆ ; ಒಡೆಯನ ಕೆಲಸ ಮಾಡುವುದು. **ಪೇಶಣ. ಪೇಷಣ₁. ಪೇಸಣಿ. ಪೇಸಾಣಿ. ಪೇಸಾಳಿ.**

**ಪೇಸಣಗರುಡ, ಪೇಷಣಗರುಡ** = ಸ್ವಾಮಿಕಾರ್ಯನಿರ್ವಹಣೆಯಲ್ಲಿ ಗರುಡನಂತಿರುವವನು; ಒಂದು ಬಿರುದು : ಶ್ರೀಮತ್ರಿ × ವನಮಲ್ಲ ದೇವ ಪೇಸಣಗರುಡಂ ಜಯಲಕ್ಷ್ಮೀನಿಳಯಂ (ಕಾಇಶಾ. IX-೬, ೦೪೨-೯; 1079) ; ಶ್ರೀಮತ್ರಿಭುವನಮಲ್ಲದೇವ ಪೇಷಣಗರುಡನಾಮಾದಿ ಸಮಸ್ತ ಪ್ರಸಸ್ತಿಸಹಿತಂ (ಕಾಇಶಾ. VIII, ೩೬೬-೯; 1088). **ಪೇಸಣಹನುಮಂತ, ಪೇಶಣಹಾನ್ಮಂತ, ಪೇಸಣಹನುಮಂತ** = ಸ್ವಾಮಿಕಾರ್ಯನಿರ್ವಹಣೆಯಲ್ಲಿ ಹನುಮಂತನಂತಿರುವವನು ; ಒಂದು ಬಿರುದು: ಜಯಸಿಮ್ಹದೇವ ಪೇಸಣಹನುಮನ್ತ (ಶ್ಯಅ. ೦೪೨, ೬೩-೩೪; 1081); ಸ್ವಸ್ತಿಶ್ರೀಮಚ್ಚಾಳುಕ್ಯಪ್ರತಾಪಚಕ್ರವರ್ತಿ ಜಗದೇಕಮಲದೇವ ಪೇಶಣ ಹಾನ್ಮನ್ತರಪ್ಪ ಶ್ರೀಮಹಪ್ರಧಾನಂ ಕನ್ನಡಸಂನ್ಧಿವಿಗ್ರಹಿ (ಕಇ. IV. ೦೦-೯; ಸು. 12ಶತು ೩೪); ಪೇಸಣ ಹನುಮಂತನೆನಿಪ ನಾಮಿದದಾಸ (ಕಾಇಶಾ. XI-ii, ೦೩೬-೦೮ ; 1087). **ಪೇಸಣ ಹನುಮು, ಪೇಷಣ ಹಣುಮ, ಪೇಸಣಿ ಹನುಮ, ಪೇಸಾಣಿ ಹನುಮ, ಪೇಸಾಳಿ ಹನುಮ** = ಪೇಸಣಹನುಮಂತ : ಪತಿಹಿತ ರಾಯನ್ನ ಸಿಂಹನ ನಚ್ಚಿನಚ್ಚು ಪೇಸಣಹನುಮಂ (ಕಾಇಶಾ. IX—i, ೩೯೩-೦೦; 1226); ಕಡುಗಲಿ ದಣ್ಣನಾಥಮಿತನಾತ್ಮಜ ಪೇಷಣಹಣ್(ನು)ಮ ಬಲ್ಲಿಗನ್ (ಎಕ. V. ಚನ್ನರಾ. ೦೯೬-೬೬; 1223) ; ದಣ್ಣನಾಥ ಪೇಸಣಿಹನುಮ (ಎಕ. VI. ಕಡೂರು. ೯೯-೩೯; 1291); ಪೇಸಾಣಿಹನುಮ ಮೋಹರಮುರಾರಿ (ಎಕ. XI. ಹೊಳಲ್ಕೆ. ೪೦-೦ ; ಸು. 1225 ?) ; ಚಕ್ರೇಶ್ವರ ಪಾವಾದಿ ಕೋಲಾಹಳ ಪೇಸಾಳಿಹನುಮ ಗಜಬೇಣ್ಟೆಕಾರ (ಎಕ. XIV. ಎಳಂದೂ. ೦೩-೩ ; ಸು. 1511). [< ಪ್ರಾ. ಪೇಸಣ. / ಸಂ. ಪ್ರೇಷಣ]

**ಪೇಸಣಿ** 'ಪೇಸಣ' ನೋ.

Δ **ಪೇಸರಗತ್ತೆ** 'ಹೇಸರಗತ್ತೆ' ನೋ.

Δ **ಪೇಸರು** 'ಹೇಸರ' ನೋ.

**ಪೇಸಾಣಿ** 'ಪೇಸಣ' ನೋ.

**ಪೇಸಾಳಿ** 'ಪೇಸಣ' ನೋ.

**ಪೇಸಿಕೆ, ಹೇಸಿಕೆ** (ನಾ). ೧. ಹೊಲಸು ; ಕೊಳಕು : ಬೇಡವಟ್ಟುಮಂ ಕಂಡೆಂ . . . ನರಕದ ನೆಲೆ ಪೇಸಿಕೆಗಳ ಕರು ಮಸಣದ ಪುಟ್ಟು ಪಾಪ ದೇಟ್ ಪಾತಕದಾಗರಮದು (ಕಾದಂಬ. ೬೯೬); ಉದುರಿದುವು ಧರಣಿಯಲಿ ಬಲುಮಾಂಸದ ಸುರಕ್ತದ ಘಟ್ಟಿಗಳು ಖಂಡದ ಸುಧಾಳದ ಜಗಿಯ ಪೇ[ಪಾಠಾಂ. ಹೇ]ಸಿಕೆ ನಿಕರ ನೂಱ್ಱಿಂದು (ಕುಭಾ. ೯-೬೨). ೨. ಅಸಹ್ಯ ; ಜುಗುಪ್ಸೆ : ನೀನಲಬ್ದಸಮ್ಯಗ್ದರ್ಶನೆಯಪ್ಪುದಱಿಂ ಪೇಸಿಕೆಯಂ ತಾಳ್ದದೆ (ಶಾಂತೀಶ್ವ. ೬-೦೩೨ ವ). **ಹೇಸಿಕೆ** : ೧. ಸಂತವೊಂಬತ್ತುಮಾಸಂ ಹೇಸಿಕೆಯು ನಡುವೆ ಕತ್ತಲೆಯು ಕರುಳೊಳಗೆ ಮರುಳಂದದಿಂ ಬೆಳೆದು (ಸಿಂಕೋಳಿ. ಶ. ೩೦೦-೨) ; ರಕುತದ ಹೇಸಿಕೆಯನು . . . ನೆರಹಿದಂ ನಿಳಯದೊಳಗೆ (ಹಕಶಾ. ೦೦-೩೦); ಮುಂದಿಳುಹಿದಳು ಹೇಸಿಕೆ ಹೊನಲಿಡುವ ಹಂದಲೆಯನು (ಕೋಕಿಲಾ. ೩-೬-೨೦) ; ಹೇಸಿಕೆಯು ಕಿಸುಕುಳದ ಕೀವು ತುಂಬಿ ಒಸರುವ ಹಸಿಯ ತೊಗಲಿನ ಹಳೆಯ ಗಾಯದಲ್ಲಿ ವಿಷಯಾತುರದಿಂದ ಬಿದ್ದು (ಅರಿಂಶೀ. ೬-೩). ೨. ಮಾತಿನಲ್ಲಿ ಮಾನ್ಯತನ ಮನದಲ್ಲಿ ಆಶೆ . . . ಇದು ಎನಗೆ ಹೇಸಿಕೆಯಾಯಿತ್ತು (ಕೋಶಶಾ. ೩೯-೦೩೭); ಹಾಸಿಕ್ಕಿಲ್ಲದೆ ಹಾವಿನ ಮೇಲೆ ಒಱಗಿದವ ಹೇಸಿಕ್ಕಿಲ್ಲದೆ ಕರಡಿಯ ಕೂಡಿದ (ಪುರಂದ. ೨-೦೦ ೦) ; ವಿನಾಯಕರಾಯನಿಗೆ ತನ್ನ ಪ್ರಿಯಪತ್ನಿ ಸರಳೆಯನ್ನು ಬಿಟ್ಟು ಪೇಶ್ಯೆಯ ಮನೆಗೆ ಹೋಗಲು ಹೇಸಿಕೆ (ಕಾಂಕುರು. ೬೦). ೩. (ಆಲಂ) ಅವಮಾನ ; ಅಗೌರವ : ತಿರುಗಿ ರುಮೆಯನು ಕೊಟ್ಟು ತಮ್ಮನ ಕರಸಿ ಕೊಂಬೀ ಹೇಸಿಕೆಯ ನಿಜಶಿರದೊಳಾನುಮನಲ್ಲನುತ ನಡೆತಂದನಾಹವಕೆ (ಕೂರಾಂ. ೯-೯-೦೦). [ಪೇಸು₁ + — ಇಕೆ. / ತುಳು. ಪೇಸಿಗೆ, ಪೇಶಿಗೆ]

**ಪೇಸು₁, ಪೇಚು₁, ಹೇಸು₁** (ಕ್ರಿ). ೧. ಅಸಹ್ಯಪಡು ; ಜುಗುಪ್ಸೆಹೊಂದು : ದೋಸಮೇನಾನುಂ ಸ್ವಲ್ಪಮಾದೊಡಂ ಮಾಸಿಸಿರ್ಕುಮಣಂ ಕೃತಿವಧುವಂ ಪೇಸದೆ ದುರ್ಜನದೊಳಾದ ಪರಿಚಯಂ ಮಾಜಿ ಕಿಡಿಸುಪವೊಲೊಪ್ಪುವ ಕುಲವಧುವಂ (ಶಬ್ದಾ. ೦-೦೦೦) ; ಭೀಭತ್ಸಮಂ ಕಂಡಾದಮಾನುಂ ಪೇಸಿ ಶರೀರ ವೈರಾಗ್ಯಮನೊಡೆಯನಾಗಿ (ಚನ್ನಾರಾ. ೬೩-೦೬); ನಾರದಂ ಮನದೊಳೆ ಪೇಸುಗುಂ (ಹಂಶರಾ. ೬-೨೩); ಬೇನೆ ಬದ್ದಿರೆ ಪೇಸದೆ ಬೇಸಱದೆ ಸನ್ಮಾನದೊಳುಪಚರಿಸುವುದು (ಹಂಶಿ. ೯-೦೪); ತನ್ನ ಗಂಡುಸುತನಕೆ ಪೇಸಿದಳ್ ತಾನೆ ಚಿತ್ರಾಂಗನೆ (ಚನ್ನಾಂಗ. ೦೬-೯೩೬). **ಪೇಚು₁**: ೧. ಭಸ್ಮಧಾರಿಯ ಕಂಡು ಪೇಚುತಂ ನಿಂದಿಸುವವಂ ಶೂದ್ರಗೂಗೆದನೆಂದೇ ಚತುರ ರೂಹಿಪುದು (ಶಾಶಶ. ೯-೦೪). **ಹೇಸು₁**: ೧. "ಹೇಸು—ಜುಗುಪ್ಸಾಯಾಂ" (ಶಬ್ದಾ); ಕಾಳುದ್ವೆಳ್ಳಿಜಗಿ ನಾನು ಶಿವಭಕ್ತನೆನಿಸಿಕೊಂಬ ಚಂಡಿನಾಯಿಗಳ ಕಂಡು ಎನ್ನ ಮನ ಹೇಸಿತ್ತು ಕಾಣಾ (ಬಸವ. ೩೬-೪೦). ೨. ಹಿಂಜರಿ ಹಿಂದೆಗೆ; ಅಳುಕು : ಹೇಸುವುದು ಮನ ಬೊಮ್ಮ ಹತಿಗಾಗಿ (ಕೌರವ. ೦೬-೦೨); ಕೌರವ ಹೇಸದೆ ನಿನ್ನನು ಕಟ್ಟಿಸಲು ಸಾಸಿರನಾಮನೆ ವಿಶ್ವರೂಪವ ತೋಱಿ ಪೋಸ ಗೋಳಿಸಿದಾಟವಲ್ಲಿ ಕಲಿತೆಯ್ಯ (ಪುರಂದ. ೦-೯೬-೨೨); ಸೂಸುವ ಮನವನ್ನು ಹೇಸದಲೆ ಹಱಿದೊಗೆದು ಲೇಸಾಗಿ ಇಪ್ಪ ಶಿವಯೋಗಿ ಗುರುವಿನ ಕೂಸು ತಾನಿರುವ (ಸರ್ವಜ್ಞ. ೫೯೩); ಏನೂ ಇಲ್ಲದವ ಯಾವುದಕ್ಕೂ ಹೇಸ (ಗಾದೆ).

**ಹೇಸಿ ಪಡು**—ಇತರರ ಜುಗುಪ್ಸೆಗೆ ಒಳಗಾಗು,—ಅಸಹ್ಯಕ್ಕೆ ಗುರಿಯಾಗು : ವಿನಯಮತಿಯೆಂಬೊಳ್ ಗುಜ್ಜಿ ವಿರಳದಂತೆ ಆದಮಾನು ವಿರೂಪೆ ಪೇಸಪ[ಪಾಠಾಂ. ಪೇಸರ್ಗ]ಡುವಳ್ (ಚನ್ನಾರಾ. ೦೦೬-೨೨).

[ದೇ.೩ ತುಳು. ಪೇಸು]

**ಪೇಸು₂, ಹೇಸು₂** (ನಾ). ಅಸಹ್ಯ; ಜುಗುಪ್ಸೆ: ಪೇಸೇಱ್ ಪಡಾ

**ಹೇಸು$_2$** : ಪರಿಚಯವಿದ್ದವರೊದ್ದರು ಕಡುಹೇಸು . . . ಪರಿಚಯವಿರದವರೊಲಿದರು ಕಡುಹೇಸು (ತಂಕಾಕ. ೭೮–೭೭). [<ಪೇಸು$_1$]

**ಪೇಸುಗೆ** (ನಾ). ಅಸಹ್ಯ; ಜುಗುಪ್ಸೆ: ಮತ್ತಿನ ಪೆಂಡಿರ್ಗೆ ಪೇಸುಗೆಯಂ ಪುಟ್ಟಿಸುವ ನಾಯಕಸ್ತ್ರೀಯಂತಪ್ಪ (ಧರ್ಮಾಮೃ. ೦೨–೨೪); ಪೇಸುಗೆ ಪೆಸರಬಳಿಯ ಹೇಯಂ ಮಾಯವಾಗೆ (ಜಗಾ. ೨–೫೪ ವ); ಜುಗುಪ್ಸೆ ಪೇಸುಗೆಯುಂ ಮಾಟ್ಪುದು (ಕಣಾಕ. ೦೨). [ಪೇಸು$_1$ + –ಗೆ]

**ಪೇಸುಗೆಡು** (ಕ್ರಿ). ಅಸಹ್ಯಭಾವವನ್ನು ಕಳೆದುಕೊಳ್ಳು; ಜುಗುಪ್ಸೆಯಿಲ್ಲದಂತಾಗು: ಸಂಸಾರದೊಳ್ ಪೇಸುಗೆಟ್ಟೀ ನಾಣ ಪುತ್ತುಪ್ಪುಟಿಜಗಳದೊಳೇನಮ್ಮ ತಕ್ಕೂರ್ಮೆಯುಂಟೇ (ಶಾಂತಿಪು. ೬–೯೭). [ಪೇಸುಗೆ+ಕೆಡು$_1$]

**ಪೇಸುತಪ** (ನಾ). ಜುಗುಪ್ಸೆಯನ್ನುಂಟುಮಾಡುವ ತಪಸ್ಸು: ಭಾವಿಸು ವಂದಿಸು ಪೇಸುತಪವಂ ಕಿಱಿಂ (ಧರ್ಮಾಮೃ. ೪–೧೦೭). [ಪೇಸು$_2$ + ತಪ$_2$]

**ಪೇಸುಪತ** ‘ಪೇಸುಪಥ’ ನೋ.

**ಪೇಸುಪಥ, ಪೇಸುಪತ** (ನಾ). ಅಸಹ್ಯ; ಜುಗುಪ್ಸೆ: ರಾಜ್ಯಾಭಿಷಾತೆಯಿಂದಿರ್ದನಪ್ಪೊಡೆ . . . ಸೌಂತೆಯ ತೋಂಟದಂತೆ ಕಡೆಯೊಳ್ ಪೇಸುಪಥವುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೬–೦೨೨); ಕಣ್ಗೆ ಕೊಕ್ಕರಿಕೆ ಮನಕ್ಕೆ ಪೇಸುಪಥಮಾಯ್ತೆನಸುಂ ನೆಗಟ್ದಾ ರಣಾಂಗಣಂ (ಶಾಂತೀಶ್ವ. ೬–೦೨). **ಪೇಸುಪತ** : ತಿಪ್ಪೆಯಂತೆ ಪೇಸುಪತಮಪ್ಪುದು . . . ಬಣಗಿನಂತೆ ನೇಱಿತಲ್ಲದು ಬಗೆವಂದಿ ಶರೀರಂ (ಧರ್ಮಾಮೃ. ೪–೦೭೫); ಪೇಸುಪತಂ ಕರಂ ಕಿಸುಗುಳಂ ಕಾಯಂ ಶುಚಿಪ್ರಾಯಮೇ (ಪುಷ್ಪ. ೦೩–೪೯). [ಪೇಸು$_2$+ಪಥ ?]

**ಪೇಸುವೆ** (ನಾ). ಹೇಳಿದುದಂ; ವಿಷಯ; ಸಂಗತಿ: ಮಾಣಿಗಬಸುಣ್ಣ ಪೇಸುವೆ ಚಲಭೂಷಣನೆಟ್ಟು × ಪರಾಕ್ರಮನ ಪುದಿದ ಕಲ್ಲು ಕೊತ್ತಟಿ ಸುದ್ದೇವದೆಯರಂ ಪಾರ್ಗ್ಗೆಳಂ (ಎಕ. X. ಶಿಡ್ಲ. ೦೨–೨; ಸು. ೮೦೦ ?).

[←ತಮಿ. ಪೇಚ್ಚು]

**ಪೇಸೇಲ್** ‘ಪೇಸೇಟ$_1$’ ನೋ.

**ಪೇಸೇಳು** ‘ಪೇಸೇಟು’ ನೋ.

**ಪೇಸೇಟ್, ಪೇಸೇಲ್, ಪೇಸೇಳು, ಹೇಸೇಲ್** (ಕ್ರಿ). (ಅಜ್ಜಬಜ್ಜಯಾಗಿ) ಅಸಹ್ಯವುಂಟಾಗು; ಜುಗುಪ್ಸೆಯಾಗು: ಪದಿನೆಂಟುಕೋಟಿ ಪದಾತಿಯುಮನಲಸದೆ ಪೇಸೇಟ$^3$ ಕೊಂದು (ಶ.ಶಾ. ೦೦. ೦೯ ವ); ಓಡಿದು ಪೇಸೇಟ$^3$ ಸಿಲ್ಕಿದುದು (ಹರಿಕಾ. ೩–೨೨); ರಣದೊಳ್ ಪೇಸೇಟ$^3$ ಪೊಯ್ದು (ಎಕ. VIII. ಸೊರಬ. ೨೮೦–೯; 1237). **ಪೇಸೇಲ್** : ಸಿಬನ್ದಿಸಿ ಕುಟ್ಟಾಳಿಲಾರದ ನಾವೀ ಅಧಿರಾಜರು ಪಾಲಕರೆನಿಸಿರುವುದು ಪೇಸಲ್ದು, ಪಟ್ಟಣದ ರತ್ನ ಸಿಂಹಾಸನದಡಿಯಲ್ಲಿ ಭೂಕಂಪವಾಗುತ್ತಿರಬೇಕೆಂಬ ಶಂಕೆಯನ್ನುಂಟುಮಾಡಿ ಬಾಧಿಸುತ್ತಿದೆ (ಕಲ್ಕಿ. ೭೯–೦೭). **ಪೇಸೇಳು** : ಉಗ್ರಾಂನ್ವಕನಂನ್ದದಿಂದ ಪಲರಂ ಪೇಸೇಳೆ ಕೊಂದಿಕ್ಕಿ (ಎಕ. VII, ಶಿಕಾ. ೦೬೩–೦೦; 1198 ?). **ಹೇಸೇಲ್** : ಜವನೊಕ್ಕಲಿಕ್ಕಿದಂತಿರದ್ಭುತಮಾಗೆ ಹೇಸೇಳೆ ಕೊಣ್ದು ಬೆನ್ನಟ್ಟಿದಲ್ಲಿ (ಎಕ. VII. ಹೊನ್ನಾಳಿ. ೫೫–೧೦; 1247). [ಪೇಸು$_2$ + ಏಟ$_1$]

**ಪೇಲ್** ‘ಪೇಟ್’ ನೋ.

**ಪೇಳಾಪೇಳಿ** (ನಾ). [ಸಂಗೀತ] ಠಾಯದಲ್ಲಿ ಒಂದು ಪ್ರಕಾರ: ತಾಳಸಾರಿಪರೀತ ಪೇಳಾಪೇಳಿಯುಂ ಸಂಜಾತಜಾಯನುಜಾಯುಚಿತ್ರಮೊಯ್ಯಾರಮೊಡಗೂಡಿ (ಬಸವ. ೦೮–೦೨).

[← ತೆಲು. ಪೆಳ್ಳಾಪೆಳ್ಳಿ. / ಸಂ. ವೇಲಾವಲಿ = ಒಂದು ನಿರ್ದಿಷ್ಟ ಸ್ವರಶ್ರೇಣಿ]

**ಪೇಳಿ** ‘ಪೇಟ್$_2$’ ನೋ.

**ಪೇಳಿಕೆ, ಹೇಳಿಕೆ$_2$** (ನಾ). ೧. [ಕಾವ್ಯಮೀ] ಶಬ್ದಾಲಂಕಾರದಿಂದ ಕೂಡಿದ ಕಾವ್ಯರಚನೆ; ಒಗಟು; ಒಡಪು: ಸುಕವಿಪ್ರಕರಕ್ಕೆ ವಿನೋದಕೇಳಿಗುಪಯೋಗಹೇತುಗಳ್ ಪ್ರಚ್ಛನ್ನಪ್ರಕಟಾರ್ಥಂಗಳನೇಕಪ್ರಕಾರದಿಂದೊಂದಿ ವರ್ತಿಕುಂ ಪೇಳಿಕೆಗಳ್ (ಕಾವ್ಯಾವ. ೫೯೩); ಸುಸುಳಿರ್ದೊರ್ಮುಡಿ ಭಾಮೆಮನಕ್ಕೆಸೆವಸ್ಪಷ್ಟಾರ್ಥಮುಟಿವು ನಾಮಾಂತರಿತಂ ಕುಸುರಿಯ ನುಡಿಯೆಂದಿವು ಭಾವಿಸೆ ಪೇಳಿಕೆಗಳೊಳ್ ಪೇಟ್ವ ಭೇದಮವಕ್ಕುಂ (ಕಾವ್ಯಾವ. ೫೯೪). **ಹೇಳಿಕೆ$_2$**: ೧. ಅನುಗತಂ ಪೂರ್ವಕವಿಗಳ್ ನೆನೆದಿನ್ನುಂ ಪೇಟ್ದಿಂ ದುಷ್ಕರೋಕ್ತಿಯನ್ನನುಗತಕ್ರಮದೆ ಬಗೆದು ಹೇಳಿಕೆಯೊಳ್ ಜನಿತವಿಭೇದಮುಮಂ ಪೇಟ್ವೆಂ (ಶಬ್ದಾ. ೨–೦೪೦). ೨. [ಸಂಗೀತ] ಕೊಳಲನ್ನು ನುಡಿಸುವುದರಲ್ಲಿ ಒಂದು ಪ್ರಕಾರ: ಆಲಾಪ . . . ಹೇಳಿಕೆ . . . ವ್ಯಾಪ್ತಿ ಮುಂತಾದ ಪ್ರತ್ಯಾಲ್ಕು ತೆಱವಲ್ಲಿ . . . ಭೇದವಱಿದಾಲಾಪಿಸಿ (ಅಚ್ಚೀ. ೨೬೩).

[< ಸಂ. ಪ್ರಹೇಲಿಕಾ]

**ಪೇಳಿಗೆ** ‘ಪೆಟ್ಟಿಗೆ’ ನೋ.

**ಪೇಳಿಸು** ‘ಪೇಟಿಸು’ ನೋ.

**ಪೇಳು** ‘ಪೇಟ್’ ನೋ.

**ಪೇಳ್ಕೆ** ‘ಪೇಟ್ಕೆ’ ನೋ.

**ಪೇಳ್ಗೆ** ‘ಪೆಟ್ಟಿಗೆ’ ನೋ.

**ಪೇಱಿಸು, ಪೇರಿಸು$_1$, ಹೇರಿಸು, ಹೇಱಿಸು** (ಕ್ರಿ). ೧. (ಭಾರವನ್ನು) ಹೊರುವಂತೆ ಮಾಡು; ಹೊರಿಸು: ತೀವಿರ್ದ ನಿಖಿಳಭಂಡಾರಮಂ ತೆಗೆಸಿ ನಾನಾವಸ್ತುನಿಚಯಮಂ ಪೇಱಿಸಿ ಸಮಸ್ತಸೇನಾವಿತತಿಸಹಿತ . . . ಪೊಱಮಟ್ಟನು (ಕೃಷ್ಣಾಶಾ. ೪–೭೭). **ಪೇರಿಸು$_1$**: ೨. (ವಸ್ತುಗಳನ್ನು) ಒಂದರ ಮೇಲೊಂದರಂತೆ ಇಡು; ಅಡುಕು: ಮಡಿಕೆಗಳನ್ನು ಪೇರಿಸಿ ಚಟ್ಟಿಕೊಟ್ಟನು (ಕರ್ನಾಮಂ. IV. ೩೭); ಬಲಭಾಗದಲ್ಲಿ ಪೇರಿಸಿದ್ದ ಹಾಸುಗೆಸುರುಳಿಯನ್ನೇರಿ ಕುಳಿತಳು (ಮಾಡಬ. ೫); ಹೀಗೆ ಬೆಳವಣಿಗೆಯ ಪದರಗಳು ಒಂದರ ಮೇಲೊಂದನ್ನು ಪೇರಿಸಿಟ್ಟಂತೆ ಕಾಣುತ್ತವೆ (ಹಸುಹೂ. ೨೬೩). **ಹೇರಿಸು**: ೧. ವಿವಿಧರತ್ನಾಭರಣಕಾಂಚನಸವಮಕೂಲಂಗಳನು ಅವರವರ ತೆರನರಿತು ಹೇರಿಸಿದಳು ವಿಚಿತ್ರದಲಿ (ಕೋಗಮ. ೦೩–೯); ಹೊಗಳಿಕೆಯ ಹೊರೆಯನ್ನೇ ಹೇರಿಸುತ್ತಿದ್ದರು (ಕಂಕ. ೯೨). **ಹೇಱಿಸು** : ೧. ಕೇರಳರ ಸದೆದು ಮಹಾರ್ಘ್ಯರತ್ನಾವಳಿಯ ಹೇಱಿಸಿದನು ಸುಚಿತ್ರಾಂಬರ ವಿಲೇಪನವ (ಕುಮಾವ್ಯಾ. ೫–೨೦); ಅತಿಸುಮ್ಮಾನದಲಿ ಶಿಶುಪಾಲ ಹೇಱಿಸಿದನು ಮಹಾಧನವ (ಕುಮಾವ್ಯಾ. ೪–೩).

[ಪೇಱು$_1$ + –ಇಸು$_2$]

**ಪೇಱು$_1$, ಪೇರು$_1$, ಹೇರು$_1$, ಹೇಱು$_1$** (ಕ್ರಿ). ೧. (ವಸ್ತುಗಳನ್ನು) ಒಂದರ ಮೇಲೊಂದರಂತೆ ಇಡು; ಅಡುಕು: ತಳಿರ್ಗಳಿಱಿಂಬಿನೊಳ್ಪಿರದೆ ಪೇಱಿದ ಕೃಷ್ಣಮೃಗಾಜಿನಂಗಳಿಂ . . . ತೋಱಿದಮಾಗಿಶೋಕ ಭೂರುಹಂ (ಕಾದಂಪೂ. ೨೨೬); ಆ ಜವನಿಕ್ಕುಂ ಕೋಣನಿನ್ದಂ ಪಗೆವರ ಪೆಣನಂ ಪೇಱಲೀ ವಿಷ್ಣುವಂ ಕಾದುವನಾವಂ (ಎಕ. V. ಹಾಸನ. ೬೫–೨೫; 1149). ೨. ಇಡು; ಇರಿಸು: ವಿಜಯಾಗಜಮನೇಱಿ . . . ಬಲದ ಕೋಡ ಮೇಲೆ ಕೆಯ್ಯಂ ಪೇಱಿ (ಪಂಪಭಾ. ೪–೯೩ ವ); ಗಿರಿಜೆಗೆ ಶಿವಲಿಂಗಮಂ . . . ತೋಱಿಲೊಡಂ ಕಣ್ದಱಿದಳ್ ಪೇಱಿಟಳೆರಡುಂ ಕರಂಗಳಂ ನೊಸಲೊಳ್ (೧೦೪. ೩–೫೪). ೩. ತುಂಬಿಕೊಳ್ಳು; ತಾಳು; ಹೊಂದು: ನನೆಯನೆ ಪೇಱಿಕೊಂದಳಿರೊಳೆಯ್ದೆ ಬಚಲ್ದಿಳಿವೂವು (ಆದಿಪು. ೦–೩೫); ಕಾಯ್ದುಂಬುಗಲಂ ಪೇಱಿರ್ದ್ದ ಚೆನ್ನಿಂಗು (ಎಕ. VIII. ಸೊರಬ. ೨೭೫–೮; 1231); ಬೇರಿಂದಂ ಕಾಯ್ಗಳಂ ಪೇಱಿದ ಪಲಸುಗಳೆಲ್ಲಲ್ಲಿಯುಂ (ಕಾದಪು. ೦–೦೦೭); ಮಾಮರಗಳು ತಳಿರ್ಗಳಂ ಪೇಱಿ ವಿರಹಿಗಳ ಬಾಯ್ಗಾಱಿ (ಕಂಪು. ೪೫–೯). ೪. ಹೆಚ್ಚಿಸು; ಅಧಿಕಗೊಳಿಸು: ಮುಂದವವನಂ ಸಂತೋಷವಂ ಪೇಱಿ (ದಶಕು. ೩–೪). **ಪೇರು$_1$**: ೨. ಬೀಳ್ದ ಕಲ್ಗೊತ್ತಲೆಯಮಾರ್ಯರ್ಗಂ ಪೇರಿರಂದೊರೆಯಲು ಕಲ್ಲುಗಳ ನೆಲ್ಲ ಪೇರಲು (ಮುಹಾಂಕೀ. ೨೧–೩೩); ತನ್ನ ಕುಕ್ಕೆಯನ್ನು ನಿಧಾನವಾಗಿ ಮಂಡೆಯ ಮೇಲಿನ ಚುಂಡಿನ ಮೇಲೆ ಪೇರಿಕೊಂಡಳು ಕಾವೇರಿ (ಹೊಸಕ್ಕ ೫೩). **ಹೇರು$_1$**: ೧. ಅವುಗಳ ಮೇಲೆ ಕಟ್ಟಿಗೆಯ ತುಂಡುಗಳನ್ನು ಹೇರಿ

. . . ಒಃಪಾಯಿಯಾನ್ನು ತುಂಬುತ್ತಾರೆ (ತುಂಬಿಯು. ೯-೩೩). ೫. ಭಾರವನ್ನು ತುಂಬು,–ಹೊರುವಂತೆ ಮಾಡು : ಹೇರುವ ಮಾನ್ಯದ ಎತ್ತು ನಡೆ ೫೦ (ಎಕ. VII, ಶಿಕಪೊ. ೨೬-೯೩ ; 1670); ಇಷ್ಟೊಂದು ಪಠ್ಯ ವಿಷಯಗಳನ್ನು ಮಕ್ಕಳ ಮೇಲೆ ಹೇರುವುದೆ ? (ಶಿಕ್ಷರ. ೦೨೭). ೬. (ಆಲಂ) ಹೊಡೆ; ಬಡಿ : ತನ್ನ ಎರಡೂ ಕೈಗಳಿಂದ ಬಲವಾಗಿ ಪಟಾ, ಪಟಾ ಎಂದು ಏಟು ಹೇರುತ್ತಿದ್ದಳು (ಹಳ್ಳಿಹಾ. ೦೦೯); ಆ ಪುಂಡನನ್ನು ಹಿಡಿದು ಚೆನ್ನಾಗಿ ಹೇರಿದರು (ಕಜಿ). ಹೇಱು$_3$: ೧. ಹೇಱಿದರು ಹಿಳುಕು ಗಳ ಮೈಯಲ್ಲಿ (ಕುಮ್ಯಾರಿ. ೬-೦೯). ೨. ಕರಂಗಳ್ ಚೆಲ್ವನಾಂತಿರ್ದೊಡಂ ಮುಱಿದಂತಿರ್ದರ ಮೇಲೆ ಹೇಱಿ ನಡೆಪರ್ (ಸೋಮೇಶ. ೩೩). ೩. ಲೌಕಿಕಧರ್ಮಮಂ ಮೀಱಿ ಕಡುನಿಷ್ಠೆಯಂ ಹೇಱಿ ಪರಮಸುಖದಿಂದಿರ್ಪುದು (ಚಿಕ. ೯-೩೩); ತುದಿ ಮೊದಲ್ವನಕ ಹೇಱಿದ ಕಾವ್ಯರಸಫಲಂಗಳನು ಸವಿಸುವುದು (ಹಕಾ. ೦-೧೯) ; ನೂಱರೊಡನೈವರನು ಧರಿಸಿರಲಾಱದೀ ಪುರಿಯೆನುತ ದುಗುಡವ ಹೇಱಿ ತೊದಕುಳಿಗೊಳುತಲಿರ್ದುದು ಹಸ್ತಿನಾ ನಗರ (ಕುಮ್ಯಾಕ. ೯-೩). ೪. ಹೇ[ಶಾಕಾಂ. ತೋ]ಱಿದವು ಹರುಷವನು ತನು ನಗೆದೋಱಿದವು ಮುಖಕಮಲ (ಸೋರಾ. ೦-೮-೨) ; ಅತಿತ್ವರಿತ ಗಮನದಿಂದೆ ಹೇಱಿದುದು ಭಯಮನಹಿಸಂಕುಲಂ (ಕಲಕ್ರಿ. ೯೦-೯). ೫. ಹುಲ್ಲ ಹೇಱುವೊಡೆ ಬಂದಿರುವ ಕವಾಡದ ರ್‍ಠಿಲ್ಲಿಯು ಕೊಂಬನೆತ್ತುಗಳ ನಿಲ್ಲದೆ ಶಿರುಹಿಕೊಂಡು (ಕುಶಶಿ. ೩-೬೨). ೬. ಹೇಱಿದನು ಶತಬಲಿಯ ಕರುಳನು ಕಾಱಿಸಿದನಂಗದನ (ಕೊಶಿರಾ. ೩೩-೦೭); ಖಳರಾಯ ತ್ರಿಶೂಲದಿ ಹದ್ದೈವವ ಹೇಱಿದನು (ಸೋಹಶ. ೯೦-೬೩). ೭. ತುಂಬಿ ಸಾಗಿಸು : ಇಱಿದಡೆ ದಂಡವಿಲ್ಲ ಹೇಱಿವಡೆ ಸುಂಕವಿಲ್ಲ (ಎಕ. VI, ಕಡೂರು. ೦೩೭-೬೩ ; 1191). ೮. ಮುತ್ತು ; ಕವಿ ; ಆವರಿಸು : ಖಡ್ಗ ತೋಮರ ಸುರಗಿ ಹೊಳೆದವು ಕೈದು ಹೇಱಿದವಖಿಳದೆಸೆಗಳಲಿ (ಕುಮ್ಯಾದ್ರೋ. ೩-೬): ಮೀಱಿದ ಕವ್ಯುಲರ್ಗಳ ದೇವಾರ್ಚನೆಗೇಱಿಸಗೊಡದೆಯೆಂಜಲಿಸಿ ಹೇಱಿದ ಪಱಮೆಎಂಡುಗಳ ಬಂಧಿಸಿವಂತೆ ನೇಱಿಲ ಪಣ್ಗಳೊಪ್ಪಿದುವು (ಸೋಹಶ. ೨೯-೯೩). ೯. ಹೆಚ್ಚಾಗಂ ; ಅಧಿಕಗೊಳ್ಳು : ವೈರಾನುಬಂಧದ ಬೇಗುದಿಯ ದುಮ್ಮಾನ ದಳವೇಱಿದುದು ಹೇಱಿತು ಭೀತಿ ಭೂಪತಿಗೆ (ಕುಮ್ಯಾಗ. ೦-೬೨).

ಹೇಱುವೆತ್ತು, ಹೇರ್ವೆತ್ತು, ಹೇಱುವೆತ್ತು–ಭಾರವನ್ನು ಹೊರುವ ಎತ್ತು: ಸಾಸಿರ ಪೇಱುವೆತ್ತಿಗೆ ಪೆರ್ಜ್ಜುಂಕ . . . [ಪ] ರಿಹಾರಂ ಮಾಡಿ ಬಿಟ್ಟಂ (ಎಇ. XXVIII, ೩೩-೩೦ ; ಸು. 1082); ಅಖಿಳಧಾನ್ಯಂಗಳಾ ಪೇರ್ವೆತ್ತುಗಳ ಮೇಲೆ ಬರೆ (ಕಲಕ್ರಿ. ೯೬-೯೦); "ಸ್ಥಾರೀ, ವೃಷಭವಾಹ್ಯ – ಈ ೨ ಹೇಱುವೆತ್ತು" (ಹಲಾಯುಧ. ೯೯-೦೦೦) ; ನವನಿಧಿಯೊಳಗೊಲಿದು ದುಮಂ ಬ್ಯವಹರಿಸಲುಕೆನ್ದು ಪೇಱುವೆತ್ತ್ವಾಸ್ತ್ಯಂ ಭುವನದೊಳಿತ್ತಲು ನಡೆದಡೆ (ಎಕ. XI, ದಾವಣ. ೩೯-೬೦ ; 1280).

[ದೇ. ೫ ತಮಿ. ಏಱಕ್ಕು ; ಮಲ. ಪೇಱು ; ತುಳು. ಪೇರು ; ತೆಲು. ಪೇರುಚು]

ಪೇಱು$_3$, ಪೇರ್ಮು$_1$, ಹೇರ್$_2$, ಹೇರು$_2$, ಹೇಱ್, ಹೇಱು$_3$ (ನಾ). ೧. ಪೇರಿಸಿಟ್ಟದ್ದು ; ಅಡಕಿಲು : ಬಳೆಯ ಪೇಱನಾನೆ ಮೆಟ್ಟಿದಂತೆ ನುರ್ಚುನೂಱಪ್ಪನಮವುಂಕಿ (ಹಂಕಥಾ. ೬-೬೬ ಕ) ; ಬೆಲ್ಲದ ಪೇಱನಿಲಿ ಪೊಕ್ಕಂತೆ (ಧರ್ಮಾಮೃ. ೨-೬೦) ; ಪತ್ತಿಯ ಪೇಱುಗಳಂ ಕೊಯಿದೆತ್ತುಗಳಾ ಬಿಲ್ಲರಾಜರೊಯ್ದುಡೆ (ಭುಜ್ಯಾಸ್ಕ್ರಿ. ೯-೨೨). ೨. (ಒಂದು ಪ್ರಾಣಿ ಅಥವಾ ಒಬ್ಬ ಆಳು ಹೊರುವಷ್ಟು ತೂಕದ) ಹೊರೆ ; ಭಾರ : ಅಡಕೆಯ ಪೇಱಿಂಗೆ ಮೂಱುಹಱು (ಎಇ. IX. ೨೨-೯ ; 800); ಒಂದು ಪೇಱು ಪೊನ್ನಂ ಕುಡುವಂ (ಕಜ್ಯಾರಾ. ೦೫೭-೨೨) ; ದೇವರಿಗೆ ನನ್ದಾದೀವಿಗೆಗೆ ತಿಂಗಳ್ದಂಗಳಿಗೆ ಬಿಟ್ಟ ಎಲೆಯ ಪೇಱು ೧ (ಕಾಇಇ. IX-i. ೦೯೯-೩ ; 1081). ೩. ಚೀಲ : 'ತೊಗಲ್ವೇಱು' ಪರಾ. ಪೇರ್ಮು$_1$: ೪. ತಕ್ಕಡಿಯನ್ನು ಸಮತೋಲನಗೊಳಿಸಲು ಪರಡೆಗಳಲ್ಲಿ ಹಾಕುವ ಬಟ್ಟು ಇತ್ಯಾದಿ ಭಾರವಾದ ವಸ್ತು: 'ಏರುಪೇರು', 'ಪೇರುಕಟ್ಟು' ಪರಾ. ಹೇರ್$_2$ : ೧. ಇದು ವರಹ ರೂಪಾಯಿ ಹೇರ್ಗಳಿವು ಕನಕಾಭಿಷೇಕದಕ್ಷಿಣೆಗಿದು (ಕೃಕ್ರಂಶ. ೨-೨೩). ಹೇರು$_2$ : ೨. ಉಭಯಮಾರ್ಗದ ಬೇಹಾರಿಗಳ ಹೇರುಗಳಿಗೆ ಕೊಂಬ ಕಟ್ಟಣೆ (ಎಕ. XII. ಶಿರಾ. ೬೬-೭ ; 1379) ; ಹಸುಗಳ ಮೇಲೆ ಹೇರುಗಳನ್ನು ಎತ್ತದೆ . . . ರಕ್ಷಿಸುತ (ಕೃಪಾಶ. ೦೦೯) ; ಉಳುವೆ ನಾ ಭೂಮಿಯನು ; ಹೊರುವೆ ನಾ ಹೇರನ್ನು (ಕೀಚಟ್ಟ. ೦೬೩). ೫. (ಆಲಂ) ಹೊಣೆ ; ಜವಾಬ್ದಾರಿ : ನಾನಿನ್ನೂ ಕಾಲ ಮೇಲೆ ನಿಲ್ಲೋದೇ ಕಷ್ಟವಾಗಿದೆ. ಆಗಲೇ ಬೆನ್ನ ಮೇಲೆ ಹೇರು ಹೊರು ಅಂದರೆ ? (ಹಂಡಶ. ೦೯). ಹೇಱ್ : ೩. ಹೇರ್ಗಳು ಬಿಸಂಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣಡುತೆ ಹೇರ್ಗಳ ಹೊಲಿವತೆ (ಕಂಶ್ರಿ. ೯೭-೯೬). ಹೇಱು$_3$ : ೨. ಉಪ್ಪಿನ ಹೇಱು ಅಯ್ವತ್ತು (ಕೊಂಕಣ. ೦೯೩೬, ಶಾಸನಗಳ್. ೬೩-೨೦ ; 976) ; ಕೋಣನ ಹೇಱಿಂಗೆ ಕುನ್ನಿ ಬಸುಗುತ್ತಬಡೆವಂತೆ ತಾವು ನಂಬರು ನಂಬುವವರ ನಂಬಲೀಯರು (ಬಸವ. ೬೬೩) ; ಹೇಱನೊಪ್ಪಿಸಿದವಂಗೆಲ್ಲಿಯದು ಸುಂಕ (ಹಕಾ. ೬-೩೯) ; ಎತ್ತು ಹೇಱುಗಳಿಂದ ಹೊತ್ತು ಮಾಱುವುದಲ್ಲ (ಭುರಂತ. ೦-೦೨೬-೩).

[ < ಪೇಱು$_1$./ ತಮಿ. ಪೆಱು$_3$ ; ಮಲ. ಪೇಱು; ತೆಲು. ಪೆಱಿಕ ]

Δ ಪೇಱೊರ್ಪೆ 'ಪೇರೊಟ್ಟಿ' ನೋ.

Δ ಪೇಱೊರ್ಬೆ 'ಪೇರೊಟ್ಟಿ' ನೋ.

ಪೇಟ್, ಪೇಳ್, ಪೇಳು, ಹೇಳ್, ಹೇಳು, ಹೇಟ್, ಹೇಟು (ಕ್ರಿ). ಪೇಳ್ದ, ಪೇಟ್ದಿ (ಭೂತಕೃ). ಪೇರ್ದು, ಪೇಳ್ದು, ಪೇಟ್ದು, ಹೇಳ್ದು (ಭೂತನ್ಯೂ). ೧. ತಿಳಿಸು ; ನುಡಿ ; ಅರಿಯುವಂತೆ ಮಾಡು : ಏನೇನಭಿಮತಮಂ ಪೇಟ್ ನೀನಾಸ್ವಾದಿಸಿದೆ ದೇವಿಯರ ಮನೆಯೊಳ್ (ಕಾದಂಬ. ೬೩) ; ನೀವೆನಗೊಂದಪೂರ್ವಮಪ್ಪ ಕಥೆಯಂ ಪೇಟ್ಮೀಟ್ಪುದು (ಹಂಕಥಾ. ೦೦-೦೦) ; ಇಂದು ನೃಪಂಗೆ ಸಂಭವಿಸಿದಂ ಭುಜಶಕ್ತಿ ಸವಿಶಾರನಂದನಂ ನಂದನನೆಂದು ಪೇರ್ದು (ಕುಸುಶ. ೬-೦೦೯). ೨. ನಿರೂಪಿಸು ; ವಿವರಿಸು ; ವಿಶದಪಡಿಸಂ : "ಪೇಟ್ದಂ = ನಿರೂಪಿಸಿದಂ" (ಕಶುತ. ಶು. ೦) ; ಕಟ್ಟಪ್ಪಿನಾ ವಟ್ಟದುಳ್ಗಸಂಗುಗಳ ಪೇಟ್ದ ಸಿದ್ಧಸಮಯನ್ತಪ್ಪಾದೆ ನೋನ್ತು (ಎಕ. II, ೨೭-೦ ; ಸು. 700) ; ನೀವಿರ್ವರುಂ ಬಂದುದ ಮುಮಂ ಮನೆಪಾಟ್ತಿಯುಂ ಪೇಟ್ದಿಂ (ಹಂಕಥಾ. ೯-೦೦ ಕ) ; ಬನ್ನಸರಂಗೋದಂತೆ ಧರ್ಮಶಾಸ್ತ್ರಂಪೇಟ್ವರ್ (ಕಶುಕ. ೩-೬೬). ೩. ಕಾವ್ಯರಚನೆ ಮಾಡು : ಪ್ರಕಟತರವಸ್ತುವಿಸ್ತರವಿಕಲ್ಪವಿದನಲ್ಲದಾಗದಾಗದು ಪೇಟಲ್ (ಕಹಾ. ೦-೨೯) ; ಧಂದಧಂದದಿಂ ಪೇಟ್ದಾಡುವುದಂ ಕಂಡು (ಕಜ್ಯಾರಾ. ೯೯-೦೯) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇಟ್ದ ಕವೀಶ್ವರರಿಲ್ಲ (ಹಂಕಥಾ. ೦-೦೦) : ಕರ್ಣಾಟಕಲಕ್ಷಣಶಬ್ದಶಾಸ್ತ್ರಮಂ ಲಾಕ್ಷಣಿಕರ್ಪೇಟ್ಇಂದು ದೆಸೆ ಬಗೆವುಗೆ ಪೇಟ್ದಿಂ (ಕಶುಕ. ೩). ೪. (ಯಂದ್ದಕ್ಕೆ ಹೋಗುವಂತೆ) ವಿಧಿಸು ; ನಿಯಮಿಸು : ಅಂತು ಭೀಮಸೇನನನಿಂದ್ರನ ಮೇಲೆಪೇಟ್ಮೂತೆ ಪೂರ್ವದಿಗ್ಭಾಗಕ್ಕೆಪೇಟ್ದು (ಹಂಕಥಾ. ೬-೨೯ ಕ). ೫. ನಿರ್ದೇಶಿಸು ; ಸೂಚಿಸು : ಆಕೆ ಪುರೋಹಿತನ ಪೇಟ್ಕೋಜೆಯೊಳ್ ಲಾಜೆಯುಮಗ್ನಿಕುಂಡದೊಳ್ ಸುರಿದು (ಹಂಕಥಾ. ೩-೬೩ ಕ). ಪೇಳ್ : ೧. ಪನ್ನಿರ್ಮ್ಮತ್ತಕ್ರೈಯ್ಯಂ ಮಾನ್ಯಂಗುಡುಗೆನ್ದು ಪೇಳೆ (ಎಕ. XII. ೨೨೩-೩ ; ೯೯೦) : ತತ್ಪುರದ ಮಹಾಜನದ ಮಹಿಮೆಯುಂ ಪೇಳ್ವಡೆ (ಕಾಇಇ. XI-ii. ೦೨೬-೦ ; 1080) : ಸರ್ವಾಭರಣವಲ್ಲಿಗೆ ಕಳಿಪುವುದೆಂದು ನಾರದಮುನಿ ಪೇಳ್ದು ಪೋಗೆ (ಹಂಕಥಾ.೨ ಸುಖಕಾರ) ೩. ರಸಪೂರಿತ ಸುಪ್ರಬಂಧ ವಿಲಕ್ಷಣವೆನಿಸುವಂತೆ ಪೇಳ್ದಪುದನು (ಹಂಕಥಾ. ೦-೨೬). ೫. ಪಾಪಿಸೆಟ್ಟಿ ಪೇಳೆ ಬರೆದಂ (ಭುಜ್ಯಾ. ೦೯೩೬. ೩೩-೩೩ : 1064).

೬. ಹೆಸರಿಟ್ಟು ತಿಳಿಸು; ಗುರುತಿಸು: ಮಂತ್ರೀಶ ಪೇಳ್ದ ಪೇಳ್ಪರಿಗುಡು ಗೊಜೆಯಿತ್ತು ಮನ್ನಿಸಲು (ವೀರೇಶಚ. ೪೦-೩೯). ಹೇಳು : ೧. ಪೊಗಳ್ವಲ್ಲಿಗಾತಳವೆ ಪೇಳು ಸಾಸಿರ್ವರ ಖ್ಯಾತಿಯಂ (ಶಾಸಂ. V, ೬೯೯-೨೦ : 1114); ಎಂತುಸುರದಿರ್ವೆನಿನ್ನೆಂತು ಪೇಳುವೆನಿವಂ (ಶಿಐಅ. ದೇ. ೨೦. ೯); ಮುಂದಗತುನಿ ಇವನಾರ ಪೇಳತ್ಮ (ಭರತೇಶ. ೨-೬೦-೦); ಒಡೆಯನಿರಿಸಿ ದೀಕ್ಷೆವೃದಲ್ಲದೆ ಪೇಳೊಡವೆಗೆ ಬೇಜಾರವೃಂಟೆ (ಹರಿಶ. ೧-೪೪). ೨. ಬಣ್ಣಿಸಿ ಪೇಳುತ್ತಿಪ್ಪುದು (ಶ್ಯ.ಶಾಂ. ೦೯೬೬, ೩೨-೦೩ : 1140). ೩. ಸಕಲ ಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ಮೇದಿನಿ ನಲಿಯೆ ಪೇಳು ವೆನು (ಕಂಪರಾ. ೦-೦೨). ಹೇಳ್ : ೫. ಎಲ್ಲರ ಶಬುಬ ಹರ್ಮ್ಯವ ಹತ್ತಿ ಹೇಳ್ವಳು ಪುಲ್ಲಶರಾತ್ಮಸಂಭವಗೆ (ಮೋಹತ. ೩೩-೩೯); ದೇವಾಲ್ಯವು . . . ಮಾಡೆಂದೊಸೆದು ಹರಿಹರು ಹೇಳ್ದು ತಾಂ ಮಾಡಿಕೊಣ್ಡಾವ್ (ಎಕ. XI. ದಾವ. ೨೩-೮೦ : 1224). ೬. ಶಾಸನದಲ್ಲಿ ಬರೆಸಿ ದಾನ ಮಾಡು : ಗವುಡುಗೆಜೆಯಲ್ಲಿ ತಮ್ಮ ಕೊಡಗಿಯಲು ಖಣ್ಣುಗಗದ್ದೆಯಿಂ ಹೇಳ್ದು (ಎಕ. V. ಹಾಸಕ. ೩೩-೬೨ : 1170). ಹೇಳು : ೧. ಜೀವ ಪರಮನ ಮಧ್ಯದಲ್ಲಿ ನಿಂದು ಅರ್ಥೈಕೆಗೊಂಬರಾರು ಹೇಳಿರಣ್ಣಾ (ಕೋಟಿಶಾಂ. ೪-೯); ಕಡೆಗೆ ಧರ್ಮಜ ಹೇಳು ಕೊಂದವನಾರು ನಂದನನ (ಕುವ್ಯಾದ್ರೋ. ೯-೨೬); ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ ಕಬ್ಬ ಹೇಳಲೆ ಸರಸ್ವತಿಯೆ (ಚಕ. ೦-೬). ೨. ರವಕುಳವ ನಾನೇನ ಹೇಳುವೆನವನಿಪತಿ (ಕುವ್ಯಾ.ಕ. ೦-೬). ೩. ತಿಳಿಯ ಹೇಳುವೆ ಕೃಷ್ಣಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ (ಕುವ್ಯಾ.ಆ. ೦-೦೩). ೪. ಕಾಳಗವ ಮಾಡಲ್ಲದಿದ್ದರೆ ಹೇಳಿದಾ ಕರ್ಣನು ತೆತ್ತೀ ತರೆಯನುಳುಹಿಕೊಳು (ಕುವ್ಯಾಕ. ೦೪-೦೦); ದೊರೆ ಹೇಳಿದನೆಂದರೆ ಮರದ ಕಾಯಿ ಬಿದ್ದೀತೆ ? (ಗಾದೆ). ೮. ಕಥನ ಮಾಡು ; ಕಥಿಸು : ಆ ದೇವರಲ್ಲಿ ಶಾಸ್ತ್ರವ್ಯಾಖ್ಯಾನಮುಂ ಮಾಡಲುಂ ಪುರಾಣಮುಂ ಹೇಳಲುವೊಬ್ಬುವಾಧ್ಯಾಯರ್ಗ್ಗೆ ವರ್ಷವರ್ಷಕ್ಕೆ ಬ:ಗುಳಿ ಯೇಳು ಗದ್ಯಾಣ (ಶಾಸಂ. IX-i. ೨೬೬-೬೨ : 1160); ಹೆ.[ಪಾಠಾಂ. ಪೇ]ಳಿದ ಹರಿಕಥೆಯ ಕೇಳದವ ಹೊಲೆಯ (ಪುರಂದ. ೦-೦೬೨-೦). ೯. ಗಮನಕ್ಕೆ ತರು : ತಾಂ ಹೇಳದೆ ಸೋವಭೂಮಿಪತಿಯುಲ್ಲಿಗೆ ಬಂದಡೆ ರಾಜ್ಯ ವಾಯ್ತು ಸಲ್ಲೀಲೆಯೊಳು (ಶೂಲ್ಯಾ.ಶಾ. ೯-೪೦ : 1147). ೧೦. ಕರೆ ; ಆಮಂತ್ರಿಸು ; ಬರಹೇಳು : ಹೇಳದಾತನಕೆ ಬರ ಹೊಲ್ಲ (ಸರ್ವಜ್ಞ. ೦೯೩೩). ೧೧. ದೂರು ; ಚಾಡಿ ಚುಚ್ಚು : ಮೇಲಧಿಕಾರಿಯೊಂದಿಗೆ ಉಳಿದವರ ಮೇಲೆ ಯಾವಾಗಲೂ ಹೇಳೋದೇ ಅವಳ ಸ್ವಭಾವ (ರೂಢಿ). ೧೨. ಒತ್ತಿ ನಂಡಿ,—ತಿಳಿಸು : ನೀನು ಹಾಗೆ ಹೇಳಬೇಡ (ರೂಢಿ). ೧೩. ಪ್ರಕಟಿಸು ; ತೋರ್ಪಡಿಸು : ಕಾಳಿಕೆಯ ಕೈಕೊಂಡು ಸಿರಿಮೊಗ ಹೇಳುತಿದೆ ಭೀತಿಯನು (ಕುವ್ಯಾದ್ರೋ. ೯-೩೬). ಹೇಟ್ : ೧. ದಾಳಿಂಬ ದೊಳ್ವಣ್ಣನೊಡೆದು ಬಿಮ್ಮಗಿಟ್ಟು ಹೇಟಲಳವಡದ ಸಲ್ಲೀಲೆಯೊಳಗಳ ವಟ್ಟು ಕೊಟೆದಿಚ್ಚು ವಾಯ್ದು ತನಿರಸವನುಂಡು (ಅದ್ಯಪು. ೩-೯೩). ಹೇಟು : ೧. 'ಹೇಟುಹ' ಪರಾ.

ಹೇಳ:ಹೇಳು (ದ್ವಿರುಕ್ತಿ) : ಮುಂಗುಳುಸಗೆ ನಿನಗೇಕೆ ಬಂದಿತ್ತು ಹೇಳುಹೇಳನಲು[ಪಾಠಾಂ. ಪೇಳೆನಲು] (ಬಸವು. ೪೦-೩); ಹೇಳುಹೇಳಿ ನ್ನೊಮ್ಮೆ ನುಡಿನುಡಿ ಕೇಳುವೆನು ಕಿವಿಯಾರೆ (ಕುವ್ಯಾಕ. ೩-೨೦); ಹೇಳು ಹೇಳಭಿಮಾನಭಂಗಭಡಾಳವಾರಿಂವಾಯಿತೆಂಬುದ (ಕೂರಿಭಾ. ೩-೩-೪). ಪೇಟ್ ಪಡು, ಹೇಳಿಪಡು = ಹೇಳಲ್ಪಡು : ಮಹಾಪುರಾಣದೊಳ್ ಪೇಟ್ ಪಟ್ಟುದು (ಕಾವ್ಯಾಂಶು. ೦೬೨); ಪರಮಾಗಮುಂ ಪುಸಿಯೆಂ ದೆಯುಪ್ಪುದೀ ಸಿದ್ಧಾಂತದೊಳ್ ಪೇಟ್ ಪಟ್ಟ ಗಣಿತ ಜೋಯಿಸಂಗಳೇಕೆ ತಪ್ಪುವು (ಧರ್ಮಾಮೃ. ೩-೦೬೬); ಏಳನೆಯದೇ ತುರ್ಯಗಾಮಿನಿ ಹೇಳಿಪಡುಗುಂ (ಪದ್ಮ ೦೬-೨೩). ಹೇಳದೆ ಕೇಳದೆ=ಅಪ್ಪಣೆಯಿಲ್ಲದೆ : ಹೇಳದೆ ಕೇಳದೆ ಅಲ್ಲಿಗೆ ಯಾರೂ ಹೋಗುವಂತಿಲ್ಲ (ರೂಢಿ). ಹೇಳ ಹೆಸರಿಲ್ಲದಂತೆ = ನಿಶ್ಶೇಷವಾಗುವಂತೆ ; ಸಂಪೂರ್ಣವಾಗಿ : ಅರ್ಜುನನ ಶಕ್ತಿಗೆ ಶತ್ರುಸೈನ್ಯ ಹೇಳ ಹೆಸರಿಲ್ಲದಂತೆ ಓಡಿತು (ರೂಢಿ). ಹೇಳಿ ಕಳಿಸು=ಸಂದೇಶ, ವರ್ತಮಾನ, ಅಪ್ಪಣೆ ಮೊಂತಾದು ವನ್ನು ಬೇರೆಯವರ ಮುಖಾಂತರ ತಿಳಿಸು ; ಸುದ್ದಿ ಮುಟ್ಟಿಸು : ಈ ಸಂಜೆ ಅವರ ಮನೆಗೆ ಬರಬೇಕೆಂದು ಹೇಳಿಕಳಿಸಿದ್ದಾರೆ (ರೂಢಿ). ಹೇಳಿ ಕೇಳಿ = ಎಲ್ಲರಿಗೂ ಗೊತ್ತಿರುವಂತೆ ; ತಿಳಿದೂ ತಿಳಿದು : ನೀವೆ ಕರೆಯದಿರುತಿರೆ ಛಂದನೇನು ನೀವೆ ಹೇಳಿ ? ಕೂಸು ನಾನು ಹೇಳಿ ಕೇಳಿ (ಹೃದಶ. ೨೬-೦೬); ಹೇಳಿಕೇಳಿ ಮೊದಲೇ ಅವಳ ಕಲಸ ನಿಧಾನ. ಈಗಂತೂ ಕೇಳುವ ಹಾಗೇ ಇಲ್ಲ (ರೂಢಿ). ಹೇಳಿಕೊಂಡು ಹೋಗು = (ಸುಳ್ಳು) ಸುದ್ದಿ ಹಬ್ಬಿಸು ; ಪ್ರಚಾರ ಮಾಡು: ಅವಳು ಆ ಸಣ್ಣ ವಿಷಯವನ್ನು ಎಲ್ಲರೊಡನೆ ಹೇಳಿಕೊಂಡು ಹೋಗಿದ್ದರಿಂದ ಅದೇ ದೊಡ್ಡ ಹಗರಣವಾಗಿ ಹೋಯಿತು (ರೂಢಿ). ಹೇಳಿಕೊಟ್ಟ ಮಾತು = ಅರ್ಥ ಮಾಡಿಕೊಳ್ಳದೆ ಬೇರೆಯವರು ಆಡಿದುದನ್ನೇ ಆಡುವುದು; ಗಿಳಿಪಾಠ : ಕಟ್ಟಿ ಕೊಟ್ಟ ಬುತ್ತಿ, ಹೇಳಿಕೊಟ್ಟ ಮಾತು ಎಲ್ಲಿವರೆಗೆ ಬಂದೀತು ? (ಗಾದೆ). ಹೇಳಿ ಕೊಡು = ೧. ತಿಳಿಸು : ಇದಕ್ಕೆ ಪೇಚಾಡಬೇಡಿ ಎಂದು ಉಪಾಯ ವನ್ನು ಹೇಳಿಕೊಟ್ಟನು (ಶೀಶಂ. IV. ೬). ೨. ಕಲಿಸು ; ಬೋಧಿಸು : ಹೀಗೆ ಹೇಳಿಕೊಟ್ಟರೆ ಸ್ವಲ್ಪವೂ ಪ್ರಯೋಜನವಿಲ್ಲ (ಕೇತು. ೬೬). ೩. ಚಾಡಿ ಹೇಳು ; ಚುಚ್ಚಿಕೊಡು : ಅಕ್ಕಪಕ್ಕದವರು ಹೇಳಿಕೊಟ್ಟು ಅವಳ ಸಂಸಾರ ಹಾಳುಮಾಡಿದರು (ರೂಢಿ). ಹೇಳಿಕೊ, ಹೇಳಿಕೊಳ್ಳು= ೧. ಬಿನ್ನವಿಸಿ ಕೊಳ್ಳು ; ಕೋರು: ಶಾಸನವ ಬರಸಿಕೊಡಬೇಕೆಂದು ನೀನು ಹೇಳಿಕೊಳುಥಾನೆಂದು ನಿರ್ವಾಣೈಯಮಾವನವರು ಹೇಳಿದರಿಂದ ಬರಸಿ ಕೊಟ್ಟದು (ಶ್ಯ.ಶಾಂ. ೦೯೩೩, ೩೦-೨೦; 1730). ೨. ತಿಳಿಸಂ ; ನುಡಿ : ಜನ್ಮ ಇರುವವರೆಗೂ ತಮ್ಮ ಉಪಕಾರ ನೆನಸುವೆನು ಎಂದು ವಿನಯದಿಂದ ಹೇಳಿಕೊಂಡನು (ಮುಂಶಯು. ೪-೩೦). ೩. ದುಃಖ, ಕಷ್ಟ ಮುಂತಾದು ವನ್ನು ಬೇರೆಯವರಲ್ಲಿ ತೋಡಿಕೊಳ್ಳು : ನಾಲ್ಕು ಜನರ ಹತ್ತಿರ ದುಃಖವನ್ನು ಹೇಳಿಕೊಂಡರೆ ಮನಸ್ಸಿನ ಭಾರ ಎಷ್ಟೋ ಕಡಮೆಯಾಗುತ್ತದೆ (ರೂಢಿ). ೪. ಜಂಬ ಕೊಚ್ಚಿಕೊಳ್ಳು : ಸದಾಕಾಲವೂ ತನ್ನ ವಿಷಯ ಬೇರೆಯವರ ಮುಂದೆ ಹೇಳಿಕೊಳ್ಳೋದೆ ಅವಳ ಜಾಯಮಾನ (ರೂಢಿ). ಹೇಳಿದ್ದು=ಶಾಸ್ತ್ರಸಮ್ಮತವಾದುದು ; ವಿಧಿವತ್ತಾದುದು : ಸ್ವಯಂ ವರದಲ್ಲಿ ಬ್ರಾಹ್ಮಣರಿಗೇನು ಅಧಿಕಾರ ? ಅದು ಕ್ಷತ್ರಿಯರಿಗೆ ಹೇಳಿದ್ದು (ಶಕಥಾ. ೩೩). ಹೇಳಿ ಬರೆಯಿಸು=ಯಾವುದಾದರೊಂದು ವಿಷಯ ವನ್ನು ಮತ್ತೊಬ್ಬರು ಬರೆದುಕೊಳ್ಳಲು ಆಜ್ಞಾಪಿಸು:ಆ ಅಧಿಕಾರಿಯು ಆ ಎರಡು ನಿಯಮಗಳನ್ನು ಹೇಳಿ ಬರೆಯಿಸಿದರು (ರೂಢಿ). ಹೇಳಿ ಮಾಡಿಸಿದ್ದು = ಸಂಪೂರ್ಣವಾಗಿ ಹೊಂದಿಕೊಳ್ಳುವಂತಹುದು ; ತಕ್ಕುದು : ಈ ಕಲಸ ಅವಳಿಗೆ ಹೇಳಿ ಮಾಡಿಸಿದ್ದು (ರೂಢಿ). ಹೇಳುವವ= ಗ್ರಾಮದ ನಿರ್ದಿಷ್ಟ ಮನೆಗಳ ಮುಂದೆ ನಿಂತು ಅವರ ಮನೆತನದ ಬಗೆಗೆ ಹೊಗಳಿ ಜೀವನ ನಡೆಸುವವನು ; ಹೆಳವ : ಹೆಳವ ಎಂಬ ಪದವು ಬಹುಶಃ 'ಹೇಳುವವ' ಎಂಬುದರಿಂದ ಬಂದಿರಬಹುದು (ರೂಢಿ). ಹೇಳುವವರು ಕೇಳುವವರು=ಅಧಿಕಾರಯುಕ್ತವಾಗಿ ಅಪ್ಪಣೆ ಮಾಡು ವವರು : ಹೇಳುವವರು ಕೇಳುವವರು ಇಲ್ಲದಿದ್ದರೂ ಅವರವರ ಕೆಲಸವನ್ನು ಒಪ್ಪವಾಗಿ ಮಾಡಬೇಕು (ರೂಢಿ).

[ದೇ. ‖ ತೆಲು. ಪೇಲು, ಪ್ರೇಲು ; ಮಲ್ಯ. ಪೇಳ್ಕ]

ಹೇಟ್ಟು$_1$ 'ಪೇಡಿ$_1$' ನೋ.

ಹೇಟ್ಟು$_2$, ಹೇಳಿ (ನಾ). ಬುಟ್ಟಿ ; ಗೂಡೆ : ಪಜೆದು ಬಿರ್ದ ಖಚರರ ತಲೆ ಸಂದಣಿಸ ವಿಮಾನಂಗಳ ಪೇರಣ್ಗೆ[ಣ್ಚಿ] ಪೊಲ್ತುದು ತೆಟಿದ ಮೊಗದ

ಪೇಟಿಗೆಲರವಂ (ಚಂದ್ರಪ್ರ. ೬-೩೯). ಹೇಳಿ: ದೇವರ ಪೂಜೆಗಂ ಅಖಿವಂಟಗೆಗಂ ಬಿಟ್ಟು ಧರ್ಮ್ಮವೆಂತೆಂದಡೆ ಪೇಳಿಯಲು ಪಾವಯ್ದು (ಕೌಶಿ. IX-1. ೨೨೩-೯೯ ; 1127). [←ತಮಿ. ಪೇಟ್ಸ್. / ಸಂ. ಪೇಟೀ]

ಪೇಟಿಸು, ಪೇಳಿಸು, ಹೇಳಿಸು, ಹೇಟಿಸು (ಕ್ರಿ). ೧. ಅಭಿಪ್ರಾಯವನ್ನು ವ್ಯಕ್ತಪಡಿಸುವಂತೆ ಮಾಡು ; ಮಾತನಾಡುವಂತೆ ಮಾಡು; ಹೇಳುವಂತೆ ಮಾಡು : ಶುಕನಾಸನಂದನಂ ಬಂದವಸಾತನಿಂದವಾಖಿ ವಂತಿರೆ ಪೇಟಿಸಿ ಮತ್ತಪಂಚಿಮು (ಕಾದಂಬ. ೩೬೩). ೨. ಕಾವ್ಯವನ್ನು ಬರೆಸು ; ಕಾವ್ಯರಚನೆ ಮಾಡಿಸು : ಇಂತು ಪೇಟಿಸಿದ ನರೇಂದ್ರರುಂ ನೆಟಿಯ ಪೇಟ್ದ ಕವೀಂದ್ರರುಮಾರ್ ಧರಿತ್ರಿಯೊಳ್ (ಚಂಪಾ. ೦೧-೩೩) ; ಮಲ್ಲಪಾರ್ಯನುಮುದಾತ್ತಯಶೋನಿಧಿ ಪುನ್ನಮಾರ್ಯನುಂ ಸವಿ ತವ ದಂತು ಪೇಟಿಸಿದರ್ (ಶಾಂತಿಪು. ೦ ೩೭). ೩. (ಕಾವ್ಯವನ್ನು) ಓದಿಸು ; ವ್ಯಾಖ್ಯಾನಿಸು : ಪಿತೃ ಪುತ್ರನು ಕಥೆಯುಂ ಪೇಟಿಸಿದಂ (ಜನ್ನ.ಕು. ೨೦೬ ಪ್ರಪೂ). ಪೇಳಿಸು : ೨. ಪಂಪಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡೆ ಸವಿನುಡಿಗಳಿಂದೀ ಚೆನ್ನಬಸವಪುರಾಣಮಂ ಪೇಳ್ದೆ ಸಧಿಕೋತ್ಸವದೊಳು (ಚಂಪು. ೦-೩೦); ಪೊತಪಿಪ ದಳವಾಯಿ ನಂಜರಾಜೇಂದ್ರ ತನ್ನೊಡೆಯನ ಕಾರ್ಯದೇಳಿಗೆಯ ಗಡನವೆ ಚಿಂತೆಯಾಗೊಲಿದು ಪೇಳಿಸಿದನು (ಕಂಠೀ. ೦-೨೬); ಸಂತಸದಿ . . . ಪುರಂದರವಿಠಲ ವ್ಯಾಸಮುನಿಗಳು ಪೇಳಿಸಿದರು (ಜಗದಾ. ೬೬). ೩. ಕವಿದು ಪಂಯಿ ರಸದೊಗ್ಗಂಪು ಕಮ್ಮನೆ ಕವಿತೆಯೊಂದನು ಪೇಳಿಸು (ಹಂಪ. ೦-೨೬). ಹೇಳಿಸು : ೧. ಗಾಳಿಯಂ ಗಂಟಿಕ್ಕಲುಂ ಕಣ್ಣಾಲಿಗಳೊಳಿಹ ಬಾಲಕರನೊಳು ಸೂಳುಮಾತಂ ಹೇಳಿಸಲು . . . ಬಲ್ಲ ನೆಜ್ ಜಾಣೆ (ರಸಪ್ರ. ೪೨-೬); ಭೀಮಗೆಹೇಳಿಸಿದಳಾ ಫಲುಗುಣನ ಕೈಯಿಂದ (ಕುಮ್ಯಾ. ೬ ೨೨); ಮಂದಬುದ್ಧಿಯ ಬಿಟ್ಟು ಬಾಗಿಲು ತೆಗೆಸ ಹೇಳಿಂದ ನಾಯಕಗೆ ಪೇಳಿಸಿದ (ಮೋಹತ. ೩೩-೬೩). ಹೇಟಿಸು : ೪. ವಿಧಿಸು; ಆಜ್ಞಾಪಿಸು : ಅನುಜ್ಞೆ-ಬೆಸನ ಹೇಟಿಸಿಕೊಳುಹ (ನಾಚಿಕ. ೬).

ಪೇಟಿಸಿಕೊಳ್=ವಿವರಣೆಯನ್ನು ಪಡೆ; ವರ್ಣನೆಯ ವಸ್ತುವಾಗು: ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣಮಪ್ಪಾಯುಷ್ಯಮನುಳ್ಳುದೆಂದು ಪೇಟಿಸಿಕೊಳ್ವುದು (ಅಶ್ವಶಾ. ೦೦-೬೩ ಟೀಕೆ). [ಪೇಟು + —ಇಸು]

ಪೇಟ್ಕೆ, ಪೇಳ್ಕೆ, ಹೇಳಿಕೆ₁ (ನಾ). ೧. ಹೇಳಿದಂದು; ಅಭಿಪ್ರಾಯ ಕಥನ : ಅನ್ನರ ಪೇಟ್ಕೆಯದೆಂಬ ಬಟ್ಟೆಯೊಳ್ಳಡೆಯದಿರ್ (ಕಾದಂಬ. ೧೦೬); ಕೆಮ್ಮನೆ ಮೂರ್ಖರ ಪೇಟ್ಕೆಗೆ ತಮ್ಮ ಮನಂ ಸೋಲ್ವು (ರಮ್ಯಾಕ್ಷ. ೦೦-೩೯); ತತ್ಪ್ರಪಂಚಮುಂ ನಿಜಪ್ರಿಯಸಖಿಯ ಪೇಟ್ಕೆಯಿಂ ಕೇಳ್ದು (ಜಗನ್ನ.೦೩-೭ ಕ); ಏನ್ ಪೇಟ್ಕೆ ಪೇಟ್ದೆ ನೀನ್, ಮುತ್ತಜ್ಜಿ. ಘೋರಂ! (ಅಶ್ವತ್ಥ. ೦೦-೦೯೬). ೨. ಆಜ್ಞೆ; ಅಪ್ಪಣೆ : ಸುರಸಿಂಧುವಾರಿ ನಿರ್ಭರನವರತ್ನಕುಂಭತತಿಗಳ್ . . . ಸುರರಾಜನದೊಂದು ಪೇಟ್ಕೆಯಿಂ ಸುರಪಥದಿಂದೆ ಬಂದುವಭಿಷೇಕಮಹೋತ್ಸವದೊಳ್ ಮುಕುಂದನಾ (ಜಗಪು. ೬-೦೦೩); ಪುರದ ಸಮಸ್ತಚೈತ್ಯನಿಳಯಂಗಳೊಳೆಯ್ದೆ ಜಿನೇಂದ್ರ ಪೂಜೆಯಂ ನಿರುಪಮಭಕ್ತಿಯಿಂ ಹಿತಪುರೋಹಿತನೊಪ್ಪಿರೆ ತನ್ನ ಪೇಟ್ಕೆಯಿಂ ನಿರವಿಸಿ (ಶಾಂತೀಶ್ವ. ೩-೩೩). 'ಪೇಟ್ಕೆಗೇಳ್' ನೋಡಿ. ೩. ವಿವರಣೆ ; ನಿರೂಪಣೆ : ಚಾಮರಾದಿಗಳನಿಕ್ಕಿದ ಗದ್ದುಗೆಯೊಳ್ ಮಹಾಪ್ರತೀಹಾರರ ಪೇಟ್ಕೆಯಿಂದೆಳಸಿ ಮತ್ತವರಂ ಪೆಸರ್ಗೊಂಡು (ಸೂಕ್ತಿಸು.೩-೨೯). ಪೇಳ್ಕೆ : ೪. ಕಾವ್ಯರಚನೆ : ಅಗ್ಗಳದ ಪಳಿಗಬ್ಬಿಗರ[ಪೇಳ್ಕೆಯ]ತೆಜದಿ ವಿರಚಿಸದ (ಸಾಳ್ವಭ. ೦-೯೩). ಹೇಳಿಕೆ : ೧. ನಿಮ್ಮ ಹೇಳಿದ ಹೇಳಿಕೆಯಿಂದ ಪೀಚೇರ ಮೈಲಿಗೆ ಮೇಳವಾಡುತ್ತಿದ್ದ ಕಾಣಾ ತ್ರೈಜಗದೊಳಗೆ (ಬಸವ.೩೬೬); ಈ ಹಳೆಯ ಹೇಳಿಕೆಗೆ ಹೊಸ ಉಸಿರು ತುಂಬಿದ್ದಾರೆ (ದ್ರಾ.ಹಿ. ೬೨) ; ಈ ವಿಷಯದಲ್ಲಿ . . . ಒಬ್ಬರ ಹೇಳಿಕೆಯನ್ನಾಗಲೀ, ನಾವು ನಂಬುವುದಕ್ಕಿಲ್ಲ (ಪ್ರಕಾಶ. ೩೯). ೨. ಎಲ್ಲಾ ಸುಂಕಮಂ ಶ್ರೀಮತು ಭುಜಬಲಚಕ್ರವರ್ತ್ತಿ ಬಿಜ್ಜಲದೇವರಸರ ಹೇಳಿಕೆಯಿಂ ರಾಮೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ (ಕ್ಷ. II. ೨೧-೨೬; 1167); ನಮ್ಮ ಹೇಳಿಕೆ ಯಾವುದದನೀ ತಮ್ಮ ವಿಚಾರಿದು ನಡೆದನಾದಡೆ ನಮ್ಮ ವಾಕ್ಯಿಯ ಬೀಳುಕೊಡುವವು (ಕುಮ್ಯಾ.ಕ. ೬-೩); ಮದನನ ಹೇಳಿಕೆಯೊಳಂಮ ವಿದಿತ ಮಂಗಳವಿವಾಹೋಚಿತಕ್ರಿಯೆಗಳಂ ವಿರಚಿಸಿದರು (ಕೃ.ಬಿಜಾ. ೩೦-೩೯). ೩. ಎನ್ನ ಜನ್ಮಗಳೇಳನೊಳ್ಳದೆ ಬಂದವಾವ್ ಜನ್ಮತ್ರಯಂಗಳಲಿ ಹೇಳಿಕೆಯಲಿನ್ನೊಂದು ಜನ್ಮದ ಬಾಳುವೆಯು ನಮಗುಂಟು (ಕೊರಡ. ೬-೯೬-೨೧). ೫. ಕರೆ ; ಆಹ್ವಾನ ; ಆಮಂತ್ರಣ : ಪ್ರಾಣೇಶಾಚಾರ್ಯರು ಯಾಕೆ ಬರಲಿಲ್ಲ . . . ಏನು ಹೇಳಿಕೆ ತಪ್ಪಲಿಲ್ಲವೆ ಅವರಿಗೆ ? (ಸಂಸ್ಕಾರ. ೯೦) ; ಎರಡೂ ಕಡೆಯ ಹೇಳಿಕೆಗಳು ಶೀನಮಯ್ಯರಿಗೆ ಬಂದಿದ್ದುವು (ಚಂಪು. ೨೬೯). ೬. ಕೋರಿಕೆ ; ಬಿನ್ನಹ : ಹೇಳಿಕೆಯಲಿ ವಿಚಿತ್ರ ಕಳಿತಳು ಕಾಂತಿ ಧಡಾಳಿಪ ಮಣಿಮಂಚದೆಡೆಯ (ಮೋಹತ. ೨೬-೩೩).

ಹೇಳಿಕೆ ಮಾಡು, ಹೇಳಿಕೆಯನ್ನು ಮಾಡು=ಕರೆ; ಆಮಂತ್ರಿಸು: ಬ್ರಾಹ್ಮಣರ ಪ್ರತಿಯೊಬ್ಬರನ್ನು ಕಂಡು 'ನಾಳೆಗೆ ಪೂಜೆ ನಿಶ್ಚಯ ಮಾಡಿದೆ' ಎಂದು ಹೇಳಿಕೆ ಮಾಡಿದ (ಕುಡಿಕೊ. ೦೪೬) ; ತಿಮ್ಮ ಎಲ್ಲರಿಗೂ ಹೇಳಿಕೆಯನ್ನು ಮಾಡಿದ. ಊಟಕ್ಕೆ ಜನರೂ ಬಂದಿದ್ದರು (ಕುಡಿಕೊ. ೨೨೬). ಹೇಳಿಕೆ ಮಾತು=ಚಾಡಿ ; ಪಿಸುಣು : ಹೇಳಿಕೆ ಮಾತು ಕೇಳಿ ಅನೇಕ ಸಂಸಾರಗಳು ಹಾಳಾಗಿವೆ (ಕಚಿ). ಹೇಳಿಕೆಯಾಗು= ೧. ವರದಿಯಾಗು ; ಅಭಿಪ್ರಾಯ ತಿಳಿ : ಕೊರಳ ತೆತ್ತುದು ಚೂಣಿ ದಳಮುಖ್ಯರಿಗೆ ಹೇಳಿಕೆಯಾಯ್ತು (ಕುಮ್ಯಾ.೮೯. ೬-೦೯). ೨. ಅಪ್ಪಣೆ ಮಾಡು ; ಆಜ್ಞಾಪಿಸು : ಹೇಳಿಕೆಯಾಯ್ತು ವರಮಂಚಾಲರಿಗೆ (ಕುಮ್ಯಾ.೮೯. ೩-೦೬) ; ಬರೆಸಿದವು ಬಿಳಿಯೋಲೆ ಮಣಿಹಾರಿಗೆ ಹೇಳಿಕೆಯಾಯ್ತು (ಕೊರಡ. ೦-೭-೯).

[ಪೇಟ್ + —ಇಕೆ]

ಪೇಟ್ಕೆಗೇಳ್ (ಕ್ರಿ). ಆಜ್ಞೆಯನ್ನು ಪಾಲಿಸು : ಗೋವಿಂದಂಗಳಂ ಮೊಲೆತೂರದಾವುಗಳಂ ಪೇಟ್ಕೆಗೇಳ್ದ ತೊಟ್ಟಿರ್ಕಳ ಸದ್ಯಾನಮನೆಮ್ಮೆಯ ಪಿಂಡಂ ಭಾವಿಸಿ ನೋಡಂಬುಜಾಕ್ಷಿ ಚಿತ್ರೋತ್ಸವದಿಂ (ರಮ್ಯಾಕ್ಷ. ೩-೦೦೬ ಅಚ್ಚು). [ಪೇಟ್ಕೆ + ಕೇಳ್]

ಪೈ₁ (ಗು). ೧. ಮೇಲಿನ ; ಹೆಚ್ಚಿನ : 'ಪೈಪೋಟಿ' ನೋಡಿ. ೨. ಹೊರಗಿನ ; ಬಾಹ್ಯ : (೬). (ನಾ). ೩. ಮೇಲುಗಡೆ ; ಮೇಲು ಭಾಗ: (೬). [←ತೆಲು., ಪೈ, ಪಯಿ]

ಪೈ₂ 'ಪಾಯ್ಮ' ನೋ.

ಪೈಂಗಲ, ಪೈಂಗಳ (ನಾ). ಚಾಂದ್ರಮಾನಗಣನೆಯ ಪ್ರಕಾರ ಅರುವತ್ತುಸಂವತ್ಸರಗಳಲ್ಲಿ ಐವತ್ತೊಂದನೆಯ ಸಂವತ್ಸರ; ಪಿಂಗಳ. ಪೈಂಗಳ : ಆ ವರ್ಷವೇ ಪ್ರಭವ ವಿಭವ . . . ನಳ ಪೈಂ[ಜಾಹಾಂ. ಪಿಂ] ಗಳ ಕಾಳಾಯುಕ್ತಿ . . . ಅಕ್ಷಯವೆಂದಱುವತ್ತುತೆಱನಾಗಿಹುದು (ಶಬ್ದಕೆ. ೨೬೩). 'ಪಿಂಗಲ' ನೋಡಿ. [ಸಂ.]

ಪೈಂಗಳ 'ಪೈಂಗಲ' ನೋ.

ಪೈಂಜಣ 'ಪೈಜಣ' ನೋ.

ಪೈಂಟು 'ಪಾಯಿಂಟು' ನೋ.

ಪೈಕ 'ಪಯಿಕ' ನೋ.

ಪೈಕರಿ (ನಾ). ತಾತ್ಕಾಲಿಕ ಬಾಡಿಗೆದಾರ ಅಥವಾ ಒಂದು ಊರಿನಲ್ಲಿ ವಾಸವಾಗಿದ್ದು ಇನ್ನೊಂದು ಊರಿನಲ್ಲಿರುವ ಜಮೀನಿನ ವ್ಯವಸಾಯ ಮಾಡುವವನು : (ಕೈಸಗ. II. ೩೩೮). [?]

ಪೈಕಿ, ಪಯಿಕಿ (ಅ). ಸಂಬಂಧಿಸಿದುದರಲ್ಲಿ ; ಸೇರಿದುದರಲ್ಲಿ : ನೆಲ ಮಂಗಲತಾಲೂಕು ಪೈಕಿ ಹೇಗುಂದ (ಎಪಿಕಾ. ೦೯೯೦, ಹಿರಿ. ೨೬-೮; 1200);

ಬಿಳುಕಾರವ ಪೈಕಿ ಕೈಲಿಗೆರೆ ಗ್ರಾಮದ ಸಾಧನಪ್ರತಿ (ಮೈ.ಆಂ. ೦೯೩೯. ೨೫-೦ ; ೧೭೯೬) ; ರಾಯರ ಶಿಷ್ಯರ ಪೈಕಿ ಯಾರು ಯಾರು ಅನುಭವಸ್ಥರು (ರಾಹು೪. ೬೯). **ಪಯಿಕಿ** : ನಮ್ಮ ಮೊದಲನೇ ಆವೃತಿಯ ರಿವಾಜ ಪುಸ್ತಕ ದೊಳಗಿನ ಪಾನು ೭೩ರ ಪಯಿಕಿ ೭ನೇ ಕಲಮಿನಲ್ಲಿ ಸೂಚನಾ ಪ್ರಸಿದ್ಧ ಮಾಡಿದಾಗ್ಯೂ (ಮುಂಶಾವ್ಯಾ. ೨೦೭). [←ಮರಾ. ಪೈಕೀ]

**ಪೈಗಂಬರ್** 'ಪೈಗಂಬರ' ನೋ.

**ಪೈಗಂಬರ, ಪೈಗಂಬರ್** (ನಾ). ದೇವರ ಸಂದೇಶವನ್ನು ಸಾರು ವವನು; ಪ್ರವಾದಿ: ಮಹಮ್ಮದನು ಪೈಗಂಬರನೆನಿಸಿ ಮಕ್ಕಳ್ಗೆ ಮರಳಿದನು (ಚಾಂಶ್ರ. II. ೯೩೩) ; ಪೈಗಂಬರನು ನೀನೆ, ಮರಿಯಾತ್ಮಜನು ನೀನೆ ಎಂಬ ಸತ್ಯವನೀ ಜಗತ್ತರಿವುದೆಂದು? (ಗೀಶಂ. ೦೯-೯). **ಪೈಗಂಬರ್** : ಇಸ್ಲಾಂಸಂಸ್ಕೃತಿಗೆ ಆದ್ಯಪ್ರವರ್ತಕ ಪೈಗಂಬರ್ ಮಹಮ್ಮದ್ (ಇಶ್ಲಾಂಸಂ. ೦). [←ಪಾರ. ಪೈಗಂಬರ್, ಪೈಗಾಂಬರ್ ; ಹಿಂ. ಪೈಗಂಬರ್ ; ಮರಾ. ಪೈಗಂಬರ್, ಪೇಗಂಬರ್]

**ಪೈಗಸ್ತಿ, ಪೈಗಸ್ತು** (ನಾ). ೧. ಪಹರೆ ; ಗಸ್ತು: ಎರಡು ದಿನಗಳು ಒಂದೇ ಸಮನಾಗಿ ಸರಸ್ವತಿಯ ಮನೆಯ ಬಳಿ ಪೈಗಸ್ತಿ ತಿರುಗಿಸಿ ಗಣೇಶ ಹೊಸ ಸುದ್ದಿಗಳನ್ನು ತಂದು ದಣಿಗೆ ಒಪ್ಪಿಸಿದ (ಕಶಸಂ. ೨೦೦). **ಪೈಗಸ್ತು** : ೨. ಹೆಚ್ಚಿನ ಮೇಲ್ವಿಚಾರಣೆ ಮಾಡುವವನು; ಮೇಲ್ವಿಚಾರಕ : (*). ೩. ಕಾವಲುದಳದವನು; ಗಸ್ತುತಿರುಗುವವನು : (*). ೪. ಸೇವಕ : ರಾಮನಾಥಯ್ಯನವರ ಜತೆ ಬಂದಿದ್ದ ಅವರ ಪೈಗಸ್ತಿಗೆ ಹೊರಗೆ ಎಲೆ ಹಾಕ ಹೇಳಿ, ಅವರೊಂದಿಗೆ ಶಾಸ್ತ್ರಿಗಳು ಊಟಕ್ಕೆ ಕುಳಿತರು. (ಮುಗ್ಧು.ಮು. ೯೩). [←ಹಿಂ. ಪೈಗಶ್ತೀ; ಮರಾ. ಪೈಗಸ್ತ./ತೆಲು. ಪೈಗಸ್ತಿ]

**ಪೈಗಸ್ತು** 'ಪೈಗಸ್ತಿ' ನೋ.

**ಪೈಗು, ಪೈಗೋ** (ನಾ). ೧. ಬರ್ಮಾದ ಸಮೀಪದಲ್ಲಿರುವ, ಕುದುರೆ ಗಳಿಗೆ ಪ್ರಸಿದ್ಧವಾದ ಒಂದು ದೇಶದ ಹೆಸರು : (*). ೨. "ಒಂದು ಜಾತಿಯ ಕುದುರೆ, ತಟ್ಟು" (ಕವಿಶಾಂಂ. ೩೯೬). **ಪೈಗೋ** : (*).

**ಪೈಗೋ ಟಾಂಕ್ಸಾ**=ಪೈಗೋದೇಶದ ಉತ್ತಮಜಾತಿಯ ಕುದುರೆ : ಜವನಃ, ಜವಾಧಿಕಃ—ವೇಗದಿಂದ ಅಧಿಕವಾದ ಕುದುರೆಯ ಹೆಸರು . . . ಅರಬ್ಬೀಟಾಂಕ್ಸಾ, ಪೈಗೋಟಾಂಕ್ಸಾ, ಮುಂತಾದವುಗಳು (ಸಿಶ್ಲಾ.೩೬. ೨೯೯). [←ಮಲಯ. ಪೈಗು / ತಮಿ. ಪೈಕೋವ್ವ]

**ಪೈಗೋ** 'ಪೈಗು' ನೋ.

**ಪೈಚುಕಿ** (ನಾ). ಒಂದು ಬಗೆಯ ಸಸ್ಯ : "ಪೈಚುಕಾ—ಕುರುಟಿಗೆ, ನಾಯಹತ್ತಿ" (೬ಕಂ. ೦೦೩). [?]

**ಪೈಜಣ, ಪೈಂಜಣ, ಪೈಜಣೆ, ಪೈಜಣು** (ನಾ). ೧. ಕಿರುಗೆಜ್ಜೆಗಳಿಂದ ಕೂಡಿದ ಕಾಲಿನ ಆಭರಣ ; ಅಂದುಗೆ ; ನೂಪುರ : ಆಕೆಯ ಕಾಲಲ್ಲಿ ಇನ್ನೂ ಪೈಜಣಗಳಿದ್ದು ಆಕೆಯು ನಡೆಯುವಾಗ ಅವುಗಳ ಸಪ್ಪಳದಿಂದ ಅಲ್ಲಿ ನಿಂತವರ ಎದೆಯು ಝಲ್ಲೆನ್ನುತ್ತಿತು (ಗಾಂಶಾಂಗ. ೦೬೩); ಕಾಲೊಳಗಿನ ಪೈಜಣದ ರತ್ನಪ್ರಭೆಯು ಅವಳ ಮೈಯಲ್ಲಿ ಹಬ್ಬಿರುವುದು (ಮುಂಶಂಬು. ೩-೭೦೦). ೨. ಗೆಜ್ಜೆಯ ನಾದ : ಬೇಸಗೆಯ ನಿಟ್ಟುಸಿರು ಮಳೆಮನಿಯ ಪೈಜಣಕೆ ಕುಣಿದು ಕೊನರುವ ಹಸಿರು (ಸಂಶಮು. ೯೨-೩). **ಪೈಂಜಣ** : ೧. ಬಾಲೆಯರ ಕಾಲಲ್ಲಿ ರುಳಿ ಪೈಂಜಣ ಗಿಲಿಗಿಲಿ ಎಂದು ನುಡಿದಾವ (ಸಿತ್ನ್ಕೃ. ೦೬-೬೦). **ಪೈಜಣೆ**: ೧. ಹುಡುಗಿಯ ರತ್ನಾಭರಣಗಳ ತೊಡಿಗೆಯ ಪೈಜಣಿ ಚಾದರಮಡಿಗೆಯ ತ್ರಿಭುವನ ಮೋಹಿಪ ಬರೆ ಬೆಡಗಿಯ ಕಂಡಾಗ . . ಖಳರು ಸೋಲುತ (ಸಮುಮು. ೨೯). **ಪೈಜಣು** : ೧. ಅವುಗಳ ಕೋಡು ಗಳಲ್ಲಿ ಸೆಟ್ಟರ ಹೆಣ್ಣುಮಕ್ಕಳ ಕಾಲೊಳಗಿನ ಬೆಳ್ಳಿಯ ಸರಪಳಿ, ಪೈಜಣು ಗಳು ಒಪ್ಪುತ್ತಿದ್ದುವು (ಕಾಂ೪. ೨೦೨). [←ಹಿಂ. ಪೈಜನೀ, ಪೈಂಜನಾ ; ಮರಾ. ಪೈಜಣ್, ಪೈಂಜಣ್]

**ಪೈಜಣಿ** 'ಪೈಜಣ' ನೋ.

**ಪೈಜಣು** 'ಪೈಜಣ' ನೋ.

**ಪೈಜಾಮು** 'ಪಾಯಜಾಮು' ನೋ.

**ಪೈಜಾಮಾ** 'ಪಾಯಜಾಮು' ನೋ.

**ಪೈಜಾರ** 'ಪೈಜಾರು' ನೋ.

**ಪೈಜಾರು, ಪೈಜಾರ** (ನಾ). ಜೋಡು ; ಮೆಟ್ಟು ; ಪಾದರಕ್ಷೆ : ಏಕಲವ್ಯನು ರತ್ನಖಚಿತವಾದ ಪೈಜಾರುಗಳನ್ನೂ . . . ಹಿಡಿದು (ಕೃವಾಸ. ೦೨೦). **ಪೈಜಾರ** : ಪೈಜಾರದಿಂದ ಒಂದು ಪೆಟ್ಟು ತಪ್ಪದಿಸಿದ್ದು ನಿಶ್ಚಯವು (ಕಶಾರ. ೩೦). [←ಅರ. ಪಾರ. ಹಿಂ. ಮರಾ. ಪೈಜಾರ್]

**ಪೈಜೆ** (ನಾ). ಶರತ್ತು ; ಕರಾರು ; ಪಣ : ಶಿಳಿಮೆನಾತನ ನಿಜವನಥವಾ ಸೆಳೆದನಾದೊಡೆ ಮುಟ್ಟಿ ಹಿಡಿಕೊಂಡೆಳೆವು ತಹೆ ನಾನೆನುತ ಪೈಜೆಯ ನುಡಿದಳಾ ಮಾಯೆ (ಪ್ರಭುಲಿ. ೨-೧೦) ; ಎಲೆಲೆ ಗರುವೆ ನಿನ್ನಯ ಪೈಜೆಯಂ ಸಲಿಪನಿನ್ನುಮಾತನು ಪೋಗೆ ಮರ್ತ್ಯಕೆ (ಪ್ರಭುಲಿ. ೪-೩೦); ಧೀರಮುನಿ, ಪೈಜೆಯಂ ಪಾಲಿಸುವ ನಿನ್ನ ಧೈರ್ಯಮದೆತ್ತ ಜಾರಿದುದೊ? (ಶತ್ರುಂಗ. ೩೯-೦೦೩೯). [<ಪ್ರಾ. ಪಇಜ್ಜಾ. / ಸಂ. ಪ್ರತಿಜ್ಞಾ./ಹಿಂ. ಮರಾ. ಪೈಜ್]

**ಪೈಜೆಗ** (ನಾ). ಪಣ ತೊಟ್ಟವನು ; ಶಪಥ ಮಾಡಿದವನು : ನಡೆವು ತಿರ್ದುದು ಸಮರವೀಚಿಯ ಕಡೆಯಲ್ಲೆಪರು ರಕ್ಕಸರ ಖಳರೊಡೆಯ ಕಳವಿನ ಕಾಳಗಕೆ ಕಳುಹಿದನು ಪೈಜೆಗರ (ಕೊರಿಶಾ. ೬-೦೩-೩೦). [ಪೈಜೆ + — ಗ]

**ಪೈಜೆಗಾಜಿ** (ನಾ).=ಪೈಜೆಗ : ಅಜಿರಂಗದಲಿಂದು ನಿನ್ನಯ ಭಟಶಿರೋ ಮಣಿಯ ಪೈಜೆಗಾಜಿನ ಗೆಲಿದಡಹುದು ಬಡೌಪಸುತನೆಂಬಗ್ಗಳಿಕೆ (ಕೊರಿಶಾ. ೯-೯-೩). [ಪೈಜೆ + — ಕಾಜಿ]

**ಪೈಟನ** 'ಪೈಠಣಿ' ನೋ.

**ಪೈಟನಿ** 'ಪೈಠಣಿ' ನೋ.

**ಪೈಟಾಣಿ** 'ಪೈಠಣಿ' ನೋ.

**ಪೈಟ** 'ಪಲ್ಲಿ' ನೋ.

**ಪೈಠಣಿ, ಪೇಠಣಿ, ಪೈಟನ, ಪೈಟನಿ, ಪೈಟಾಣಿ, ಪೈಠಣೆ** (ಗು). ೧. 'ಪೈಠಣ' ಎಂಬ ಸ್ಥಳದಲ್ಲಿ ತಯಾರಾದ : ಐದಂಬು ತಿಂಗಳಿಗೆ ಕೊಯ್ದಾ ಮಲ್ಲಿಗೆನಂಡೆ ಹಸಿರು ಪೈಠಣಸೀರಿ ಕುಬ್ಬಸ ಬಗೆಸುವಳ (ಕೊ೪ಗೀ. ೯೯). (ನಾ). ೨. ಪೈಠಣ ಎಂಬ ಸ್ಥಳದಲ್ಲಿ ತಯಾರಾದ ಒಂದು ಬಗೆಯ ಬಟ್ಟೆ ; ಜರಿಯ ನಕಾಸೆಯುಳ್ಳ ರೇಷ್ಮೆವಸ್ತ್ರ ; ☞ 'ಪೈಠಣ' ಎಂಬುದು ಈಗಿನ ಔರಂಗಾಬಾದ್ ಜಿಲ್ಲೆಯ ಹಿಂದಿನ 'ಪ್ರತಿಷ್ಠಾನ ಪುರ' ವೆಂಬುದಕ್ಕೆ ಈಗ ಇರುವ ಹೆಸರು : ಕೀಚಿಚೆಗೊಪ್ಪುವ ಕಾಸಿ ಚಿನ್ನಾಂಬರವ ರಂಜಿಪ ಸಣ್ಣ ಪೈಠಣಿಯ (ದೇಶಾಂಕು. ೬-೨೩೩) ; ಹಸಿರ ಪೈಠಣಿ ಮೇಲೆ ಕುಸಲದ ಹೂಗಳು ಕಸುತಿ ತಗದಾರ ಕುಬಸೀಗೆ ಕನ್ನೆಯರು (ಸಿಶ್ಲಕೃ. ೦೭. ೬೩). ೩. ರೇಷ್ಮೆಯ ಅಂಗಿ : ತೊಟ್ಟ ಮುತ್ತಿನ ಪೈಠಣಿ ಯಿಂದ ಚೆಲುವಿನ ಕಟ್ಟೆಬೀಳದೆ ನಡೆತಂದ (ಕಂಶಶ. ೯-೯೯). **ಪೇಠಣೆ** : ೧. ಪೊನ್ನ ಪೇಠಣಿಯ ಪೂರ್ ಥಳತ್ಥಳಿಸೆ (ರಾಜಕೀ. ೦೩. ೬೨). **ಪೈಟನ** :೪. ಜರತಾರಿ ಬಟ್ಟೆ ; ಜರಿಬಟ್ಟೆ : ಉಟ್ಟ ಎಳೆಗಾವಿಯ ಸುಧೋತ್ರವ ತೊಟ್ಟಗೆಲಸದ ಪೈಟ[ನ]ನಂಗಿಯ ಕಟ್ಟಿದನು ಮಣಿತಾತಿಯಂಗುಲಕಟ್ಟ ಮಾಂದ್ರಿಕೆಯ (ಕಕಿಕ. ೨೨೯-೨). **ಪೈಟನಿ** : ೧. ಹಸರು ಪೈಟನಿಸೀರೆ ನಿರಿವಿಡಿ ದುಟ್ಟು ಪೊಸ ವಜ್ರಗಾವಿಕುಪ್ಪಸವನ್ನು ತೊಟ್ಟು (ಕಂಶ್ರಾವ. ೬). **ಪೈಟಾಣಿ**: ೧. ಉಟ್ಟಾಳು ಪೈಟಾಣಿಶೀರೆಯ ತಾನೂ ತೊಟ್ಟಾಳು ಜರುತಾರಿ ಕುಪ್ಪುಸವನ್ನು (ಕಶಕಾ. ೦೨). **ಪೈಠಣೆ** : ೨. ವರನೂತನವಸ್ತ್ರವನು ಸುರುಚಿರುಪ್ಪ ಪೈಠಣೆ ಮುಂತಾದುವ ದೊರೆಗುಡಲಿತ್ತನಾ ದೇವ

(ಶ್ರೀಕ. ೩-೪೪). ೩. ಪೊಳೆವ ಪಸುರುವಟ್ಟೆಯ ಪೈಠಣೆ ಪೊಸ ಸಣ್ಣ ರುದ್ರಾಕ್ಷಿಗಳ ಕಂಠಮಾಲೆ ರಾಜಿಸಲು ನಂಬ್ಯಣ್ಣನಂದಂಬಡೆದ (ಸೌಂದಕ. ೩-೪). ೪. ಇಳೆಯೊಳೆಳಲುವ ಶೋಣ ಪೈಠಣೆಯ ಪೈರಣೆಯು ಕಳಕಳಿಸೆ ಮೈಯೊಳಂ ದಾಳಿಂಬಪೂವಿನಂತಳವಟ್ಟ ಚಿಂದಿ ಮಸ್ತಕತಟದೊಳಂ ಚುಂಗ ಮೆಱೆವುತಿರೆ ಸೊಬಗಿನಿಂದಂ . . . ನಿಂದು (ಶ್ರೀಕುಕ. ೩-೨೬).

[←ಮರಾ. ಪೈಠಣೀ./ಸಂ. ಪ್ರತಿಷ್ಠಾನ]

ಪೈಠಣೆ ‘ ಪೈಠಣಿ ’ ನೋ.

ಪೈಠರ (ನಾ). ಮಡಕೆಯಲ್ಲಿ ಬೇಯಿಸಿದ ಹಿಟ್ಟು ಮುಂತಾದುವು : “ಉಖ್ಯಂ, ಪೈಠರಂ–೨ ಮಡಕೆಯಲ್ಲಿ ಅಟ್ಟ ಹಿಟ್ಟು” (ಸಿದ್ಧಾಂತಿ. ೨೮೭). [ಸಂ.]

ಪೈಠವ (ನಾ). ಒಂದು ಬಗೆಯ ಸಿಹಿ ಖಾದ್ಯ : ಕಣಿಕದ ಬಟುವ ತೆಗೆದು ವಣಿಕ ಸೂಸಲನಿಕ್ಕಿ ಮಣಿದು ಪೈಠವದ ವರ್ತುಳಭಕ್ಷಣಂಗೈದು (ರಂಗಕ. ೮-೦೦). [ ? ]

ಪೈಣ ‘ ಪಯಣ ’ ನೋ.

ಪೈಣಗತಿ ‘ ಪಯಣಗತಿ ’ ನೋ.

ಪೈಣಿಗ ‘ ಪಯಣಿಗ ’ ನೋ.

ಪೈತಿಕ, ಹೈತಕ, ಹೈತಿಗೆ$_1$ (ನಾ). ೧. ಪಿತ್ತಸಂಬಂಧವಾದುದು : ಲಲನಾಮುಖೇಂದುಲಾವಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದೆ ನಲೆದುದೊ ಪೈತಿಕ[ ಪಾಠಾಂ-ಪೈತಿಗ, ಬಯ್ತುಗ]ದಂತಿರೆ ತಲೆಗೇಱುವ ಕುಸುಮನಿಚಯಮಂ ಕಾಶ್ಮೀರು (ಅನಂಕ. ೦೦-೦೨೪). ಹೈತಕ : ೨. ಮೈಮೇಲೆ ಪಿತ್ತದಿಂದುಂಟಾಗುವ ಗಂದೆ,— ಗಾದರಿ : (೬). ಹೈತಿಗೆ$_1$ : ೨. ಮಗುವಿನ ಮೈಮೇಲೆ ಹೈತಿಗೆ ಎದ್ದಿದೆ (ಉಕ).

[ <ಸಂ. ಪೈತ್ತಿಕ ]

ಪೈತೃಕ (ಗು). ೧. ತಂದೆಗೆ ಸಂಬಂಧಿಸಿದ. ೨. ಪಿತೃಸಂಬಂಧವಾದ ; ಪಿತ್ರಾರ್ಜಿತವಾದ : ದುರ್ಯೋಧನಾದಿಗಳಿಗೆ ಭೀಷ್ಮದ್ರೋಣಾದಿಗಳು ಎಷ್ಟೋ ಬಗೆಯಲ್ಲಿ ಬುದ್ಧಿ ಹೇಳಿ ಪಾಂಡವರಿಗೆ ಅವರ ಪೈತೃಕ ರಾಜ್ಯವನ್ನು ಕೊಡಿರೆಂದು ಎಷ್ಟು ಬೇಡಿದರೂ ಅವರು ಕೇಳಲಿಲ್ಲ (ಶೀಕ್ಷಕ. ೦೩೮) ; ಕಗ್ಗತ್ತಲೆ, ಗುಹೆ, ಕಾಡು ಮತ್ತು ಭಯ ಇತ್ಯಾದಿಗಳ ಸಂಸ್ಕಾರಗಳು, ಗುಣಗಳು ಪೈತೃಕ ಆಸ್ತಿಯಂತೆ ನಮ್ಮನ್ನು ಸಂಬಂಧಿಸಿಕೊಂಡು ಬಂದಿರುವುವುಗಳಾಗಿರುತ್ತವೆ (ಶೀಪಾಕ. ೨೦೭). (ನಾ). ೩. ಪಿತೃಗಳಿಗೆ ಮಾಡುವ ಶ್ರಾದ್ಧ ; ತಿಥಿ : ನಾಳೆ ಪೈತೃಕಮುದಂ ನಾಡಿದಲ್ಲದೆ ಮಾಡೆನು (ಕೃಪಾಕಾ. ೦೦-೨೬) ; ಬೇಗದಿಂ ಪೈತೃಕಕೆ ಕ್ಷಣಿಸಲ್ಪಿರಿಯ ಭಕ್ತನಾಗಿ ಬಂದರ್ಚನೆಯ ಕೈಕೊಂಡು ನಿಜಮುಕ್ತನಾಗೆ ಚಿತ್ರೀಸಪುರವರಸಿ ಕೈಲಾಸಕ್ಕೆ ಸಾಮವೇದಿಯನೊಯ್ದನು (ಶಾಕಶ. ೮-೨೦). [ ಸಂ. ]

ಪೈತೃಕಕರ್ಮ (ನಾ). ಶಾಸ್ತ್ರೋಕ್ತವಾಗಿ ಮಾಡುವ ಶ್ರಾದ್ಧ ; ಪಿತೃಕರ್ಮ : “ಶ್ರಾದ್ಧಂ . . . ಬ್ರಾಹ್ಮಣಭೋಜನ, ಪಿಂಡಪ್ರದಾನಾದಿ ರೂಪವಾದ ಪೈತೃಕಕರ್ಮಕ್ಕೆ ಹೆಸರು” (ಸಿದ್ಧಾಂತಿ. ೨೨೩). [ಸಂ.]

ಪೈತೃಕಧನ (ನಾ). ಪಿತ್ರಾರ್ಜಿತವಾಗಿ ಬಂದ ಸ್ವತ್ತು ; ವಂಶಪಾರಂಪರ್ಯವಾಗಿ ಬಂದ ಐಶ್ವರ್ಯ. [ಸಂ.]

ಪೈತೃಪತಿ (ನಾ). ಪಿತೃಗಳ ಒಡೆಯ ; ಯಮ : ಪೈತೃಪತಿವಿಧ್ವಂಸನ ಸುರನಿಕರಪೋಷಣ ಮಹಾಪೌರುಷಪ್ರಯುತ . . . ತ್ರಿಣೇತ್ರ ದಾನವ ಜೈತ್ರ ಸುಪವಿತ್ರಚಾರಿತ್ರನೆ (ಶಂಪು. ೦೩-೦). [ಸಂ.]

ಪೈತ್ತ (ಗು). ಪಿತ್ತದಿಂದ ಉಂಟಾದ. [ ಸಂ. ]

ಪೈತ್ತಲ (ಗು). ಹಿತ್ತಾಳೆಯಿಂದ ಮಾಡಿದ. [ ಸಂ. ]

ಪೈತ್ತಲಜ (ನಾ). ಹಿತ್ತಾಳೆಯಿಂದ ಹುಟ್ಟಿದುದು ; ಕಂಚು ಮುಂತಾದ ಮಿಶ್ರಲೋಹ : ಪಾದವೆರಡಾ ಸಮಾಂಗುಲವದಂ ಚಿನ್ನದಿಂದಾದಡಾಗಲಿ ಬೆಳ್ಳಿ ತಾಮ್ರ ಪೈತ್ತಲಜ ಲೋಹಾದಿಯಾಗಲಿ ಪಿಷ್ಟರಚಿತವಾಗಲಿ ಪಾತ್ರಯುಂ ರಚಿಸಿ (ಶೀಕ್ಷೆಕ. ೭-೦೦-೩೪). [ ಸಂ. ]

ಪೈತ್ತಿಕ (ಗು). ೧. ಪಿತ್ತಸಂಬಂಧವಾದ ; ಪಿತ್ತದಿಂದುಂಟಾದ : ೩೦ ಕಂಡಂ ಮುಟ್ಟಿಗೆಯಾಟರೂಷಕಂ ಕಕ್ಕೆ ಮುಸ್ತೆ ನಿಂಬಂ ಕೊತ್ತುಂಬರಿಯೆಂಬಿವ ನೆಂಟೊಂದಾಗಿರೆ ಮಱುಗಿಸಿ ಕುಡಿಯೆ ಪೈತ್ತಿಕಜ್ವರಹರಣಂ (ಕೋಶೋಕ. ೪-೦೭) ; ಇಮ ನಿಮಗೆನಿತು ಪೈತ್ತಿಕಜ್ವರಮಾದೊಡಮಿಂತೆನಲಕ್ಕುಮೆ (ಬಂಹಂ. ೮-೩೪ ಪ). (ನಾ). ೨. ಪಿತ್ತದಿಂದ ಉಂಟಾಗುವ ವಿಕಾರ ; ಉನ್ಮಾದ : ನೀತಿಯೆ ತಾಯೆ ಪೈತ್ತಿಕಮದಾದೊಡಮಾಡಲಮೋಘ ಮೆನ್ನೊಳೀ ಮಾತಂ (ಶೀರಾಕ. ೭-೦೪೩). ೩. ಪಿತ್ತಶರೀರಿಯಾದುದು: ವಾತಪ್ರಕೃತಿಯ ಗುಣಂಗಳ್ ಮಾತಾಪಿತೃಗಳ್ಗೆ ಮುನ್ನಮುಳ್ಳೊಡೆ ಮಱಿಯುಂ ವಾತಿಕನಕ್ಕುಂ ಪೈತ್ತಿಕಜಾತಿಕನುಂ ಶ್ಲೇಷ್ಮಕಾಂಗನುಂ ತಜ್ಜಾತಂ (ಅಶ್ವಶಾ. ೬-೫೭). [ ಸಂ. ]

ಪೈತ್ಯ (ಗು). ೧. ಪಿತ್ತದಿಂದುಂಟಾದ ; ಪಿತ್ತಸಂಬಂಧವಾದ : ಅನಿಲ ಕಫ ಪೈತ್ಯದೋಷದಿನನಿಲನ ಕುಂದಿಂದೆ ಪಂಗುಳಾಂಧ ಕೃಶಂ ವಾಮನ ಕುಬ್ಜ ಬಧಿರ ಮೂಕರುಮನೇಕವಿಧದಂಗಹೀನರುಂ ಜನಿಯಿಸುವರ್ (ಸುಜಿ. ೦-೮೩). ‘ ಪೈತ್ಯಜ್ವರ ’ ಪರಾ. (ನಾ). ೨. ಪಿತ್ತಸಂಬಂಧವಾದ ದೋಷ ; ಪಿತ್ತದೋಷ : ಬೇಗದಿ ಹರಿ ಶೀತಳಿಯುಂ ಪೈತ್ಯದ ರೋಗವನುಡುಗ್ಗಾಯಿಯು ಮಧುಸ್ರವ (ಕರ್ಣಾಜೀ. ೩೩) ; ಕಳ್ಳಂಕಡಲೆ ೫೦ ಹಲ . . . ಸಕ್ಕರೆ ೩೦ ಭಾಗ, ಇವಂ ಚೂರ್ಣವಂ ಮಾಡಿ ಸೇವಿಸೆ ಪೈತ್ಯ, ಶ್ವಾಸ, ಕಾಸ ಮಾಣ್ಗುಂ (ಅಶ್ವಶಿ. ೭೪) ; ಬಲುಭೂತ ಸೋಂಕಿತೋ ಗ್ರಹದ ಚೇಷ್ಟೆಯೋ ಪೈತ್ಯ ತಲೆಗಡರ್ದುದೊ ಮಿತ್ರಯೆನಪ್ಪಳೋ (ಶಶಮೋ. ೨೩-೪೪). ೩. ಉನ್ಮಾದ ; ಹುಚ್ಚು : ಪೈತ್ಯದೊಳುಲಿದ ಯತಿನುಡಿ ನಿಶ್ಚಯವೆ (ಶರಾಮೂ. ೨೧೬-೪೩) ; ಪೈತ್ಯವಾದವಗೆ ಸ್ವೈತ್ಯವಾಗದೋ ? (ಗಾದೆ). ‘ ಪೈತ್ಯಗಾರ ’ ಪರಾ. [ < ಸಂ. ಪೈತ್ತ ]

ಪೈತ್ಯಗಾತಿ (ನಾ). ಹುಚ್ಚಿ ; ಉನ್ಮಾದಿನಿ : (೬). [ ಪೈತ್ಯ + – ಕಾತಿ]

ಪೈತ್ಯಗಾರ (ನಾ). ಉನ್ಮತ್ತ ; ಹುಚ್ಚ : ಪಿತ್ತ ಮಗಳಂ ಮಡದಿಯಾಗಿ ಮಾಡಿಕೊಂಡ ಬೊಮ್ಮನಂ ಪಾರ್ವರ್ ಪೈತ್ಯಗಾರರಾಗಿ ಪೊಗಳುತ್ತಿರ್ಪರ್ (ಅರ್ಕಾಶಿ. ೨೬-೨೮ ವ). [ ಪೈತ್ಯ + – ಗಾರ (< – ಕಾಱ) ]

ಪೈತ್ಯಜ್ವರ (ನಾ). ಪಿತ್ತದಿಂದ ಉಂಟಾದ ಜ್ವರ : ಷೋಡಶಬೋಳರಸ . . . ಪೈತ್ಯಜ್ವರಕ್ಕೆ ಜೀರಿಗೆಯಲ್ಲಿ ಕೊಡುವುದು (ಅಶ್ವಶಿ. ೨೬); ಉನ್ಮಾದ ರೋಗದವರು, ಪೈತ್ಯಜ್ವರದವರು . . . ವಿಷದ ರೋಗದವರು, ಇವರಿಷ್ಟೂ ವಮನಯೋಗ್ಯರೆಂದರಿವುದು (ಸಕಲವ್ಯ. ೨೩). [ಸಂ.]

ಪೈತ್ಯಾಧಿಕೆ (ನಾ). ಪಿತ್ತವು ಹೆಚ್ಚಾಗಿರುವವಳು : ಪೈತ್ಯಾಧಿಕೆಗತಿಕೋಪಂ (ಸುದಿ. ೦೦-೭). [ ಸಂ. ಪೈತ್ಯಾಧಿಕಾ ]

ಪೈತ್ರ$_1$ ‘ ಪಯಿತ್ರ ’ ನೋ.

ಪೈತ್ರ$_2$ (ಗು). ೧. ಪಿತೃಗಳಿಗೆ ಸಂಬಂಧಿಸಿದ, –ಸೇರಿದ; ಪಿತೃಸಂಬಂಧವಾದ. (ನಾ). ೨. ಪಿತೃಗಳನ್ನು ಉದ್ದೇಶಿಸಿ, ಅಂಗುಷ್ಠ ಮತ್ತು ತೋರುಬೆರಳುಗಳ ಮಧ್ಯದಿಂದ ಬಿಡುವ ತೀರ್ಥ : “ಪೈತ್ರಂ–ಪಿತೃ ಸಂಬಂಧವಾದ ತೀರ್ಥವು. ಅಂಗುಷ್ಠಾಂಗುಳ್ಯೋಃ –ಹೆಬ್ಬೆರಳಿಗೂ ಅದರ ತರ್ಜನೀ ಬೆರಳಿಗೂ ಮಧ್ಯದಲ್ಲಿರುತ್ತೆ” (ಸಿದ್ಧಾಂತಿ. ೨೩೦). ೩. ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವಿನ ಭಾಗ. [ ಸಂ. ]

ಪೈದಲ್ (ನಾ). ಕಾಲಾಳುಗಳ ಪಡೆ ; ಪದಾತಿಸೈನ್ಯ : ಇವರ ಸಂಗಡ ಭಾರಿ ಫೌಜು, ಕುದುರೆ, ಪೈದಲ್ ಸಹಾ, ಕೊಡಗಿನ ಕಡೆಗೆ ರವಾನೆ ಮಾಡಿದ್ದರಿಂದ (ರಾಜೇಂದ್ರ. ೩೮). [ ← ಹಿಂ. ಪೈದಲ್ ]

ಪೈನೆ ‘ ಬಯಿನೆ ’ ನೋ.

ಪೈಹಾಡು ‘ ಪಯಂಪಾಡು ’ ನೋ.

**ಪೈಪು** (ನಾ). ೧. ನಳಿಕೆ ; ಕೊಳವೆ : ಮಂಡಿಯು ಈಗಿರುವ ಆಕಾರದ ಬದಲು ಮೂರು ಅಂಗುಲದ ಪೈಪಿನ ಹಾಗೆ ಇದ್ದರೆ ಎಷ್ಟೋ ಚೆನ್ನು (ವಾಂಗಿ. ೪೪). ೨. ಕೊಳಾಯಿ ; ನಲ್ಲಿ ; ನಳ : ಪೈಪುಗಳಿದ್ದ ಪಟ್ಟಣಗಳಲ್ಲಿ ಮೊದಲಿನಷ್ಟು ಗಿರಾಕಿ ದೊರೆಯದಿದ್ದರೂ ಒಟ್ಟಿನ ಮೇಲೆ ಆವನ ಪ್ರಾಪ್ತಿ ಚೆನ್ನಾಗಿಯೇ ಇತ್ತು (ದಾಸಹು. ೨೮). [ ← ಇಂ. Pipe ]

**ಪೈಪೋಟಿ** (ನಾ). ಹುರುಡು ; ಸ್ಪರ್ಧೆ ; ಮೇಲಾಟ : ಅವರ ಮನೆಯಲ್ಲಿ ನಡೆದ ಸತ್ಕಾರದಲ್ಲೆಲ್ಲಾ ಒಂದು ಪೈಪೋಟಿ ಮನೋಭಾವ ಕಾಣುತ್ತಿತ್ತು (ಹೊಸಕ್ಕ. ೦೦೫); ಅಲ್ಲಿ ಯಾವಾಗಲೂ ಜನರ ಪೈಪೋಟಿ ನಡೆಯುತ್ತಿರುತ್ತದೆ (ಕೂಪಶೇ. ೨೫೮).

**ಪೈಪೋಟಿ ಹಾಕು** = ಸ್ಪರ್ಧಿಸು ; ಮೇಲಾಟವಾಡು ; ಹುರುಡಿಸು : ಗುರು ಅಜಿತಸೇನನ ಕೀರ್ತಿ ವಲ್ಲಿಗೆಯೊಂದಿಗೆ ಪೈಪೋಟಿ ಹಾಕಿತಂತೆ! (ಚಾಸಗಿ. ೬೯).

[ ಪೈ₁ + ಪೋಟ್ಟಿ₁ . / ತೆಲು. ಪಯಿಪಾಟು, ಪೈಪಾಟು = ವಿಜೃಂಭಣೆ ]

**ಪೈಮಾಯಿಷಿ**, **ಪೈಮಾಷಿ**, **ಪೈಮಾಷೆ**, **ಪೈಮಾಸಿ** (ನಾ). ಭೂಮಿಯನು ಅಳೆಯುವಿಕೆ ; ಮೋಜಣಿ ; ಸರ್ವೆ : ಜಮೀನು ಪೈಮಾಯಿಷಿಯಿಂದ ಬೀಜವರಿಯ ಮೇಲೆ ಬಂದಾಯವನ್ನು ಠರಾವ್ . . . ಮಾಡಿದರು (ಕುಹಾಶಂ. II, ೩೦). **ಪೈಮಾಷಿ** : ಮೋಜಣಿ, ಪೈಮಾಷಿ ( — ಮಾಡುವುದು) (Surveying. ೩೦೫೨). **ಪೈಮಾಷೆ** : ಇದು ಈಗಿನ ಪೈಮಾಷೆಯ ಸಾಕಳಿ ಅಳತೆಯು (ಕೃಷಿಕ್ರ. ೦೩೪). **ಪೈಮಾಸಿ** : ೧೮೦೮ ರಲ್ಲಿ ಸೀಮೆ ಪೈಮಾಸಿಯಂ ಮಾಡಲು ಮಹಂಜೆಸರದಾರಂ ಲಕ್ಷ್ಮೀನಾರಾಯಣವೆರಸು ಕನಕಗಿರಿಗೆ ಬಂದು (ಕಿಶಿ. III, ೦೪೭); ಒಂದು ಸಾಕಳಿ ಅಗಲ ಹಾಗು ಹತ್ತು ಸಾಕಳಿ ಉದ್ದ ಅಳೆದರೆ ಈಗಿನ ಪೈಮಾಸಿ ಪ್ರಕಾರ ಒಂದು ಎಕರೆ ಆಗುವುದು (ಕೃಷಿಕ್ರ. ೦೩೪).

[ ← ಪಾರ. ಪೈಮಾಇಶ್, ಪೈಮಾಯಿಶ್; ಹಿಂ. ಪೈಮಾಇಶ್; ಮರಾ. ಪೈಮಾಯಿಷ್, ಪೈಮಾಶೀ, ಪೈಮಾಷೀ ]

**ಪೈಮಾಷಿ** 'ಪೈಮಾಯಿಷಿ' ನೋ.

**ಪೈಮಾಷೆ** 'ಪೈಮಾಯಿಷಿ' ನೋ.

**ಪೈಮಾಸಿ** 'ಪೈಮಾಯಿಷಿ' ನೋ.

**ಪೈಯಿವಸ್ತಿಕೆ** (ನಾ). ಪತ್ರವು ಬಂದ ತಾರೀಖಿನ ದಾಖಲೆ : ಶ್ರೀಕೃಷ್ಣ ಪೈಯಿವಸ್ತಿಕೆ ಚಿತ್ರಭಾನು ಸಂ॥ ರದ ಉಭಯಾತ್ಮಕ ಪುಷ್ಯ ಬ ೩ ಮಂಗ್ಗಳವಾರ (ಪ್ರಿಲಂ. ೦೪೩೦, ೪೨–೦೭; 1822).

[ ←ಪಾರ. ಪೈವಸ್ತ್; ಉರ್ದು. ಪೈವಸ್ತೀ, ಪೈವಸ್ತ್ ]

**ಪೈರಣ** 'ಪೈರಣೆ' ನೋ.

**ಪೈರಣಿ** 'ಪೈರಣೆ' ನೋ.

**ಪೈರಣು** 'ಪೈರಣೆ' ನೋ.

**ಪೈರಣೆ**, **ಪೈರಣ**, **ಪೈರಣಿ**, **ಪೈರಣು**, **ಪೈರನ**, **ಪೈರಾಣ**, **ಫೇರಣೆ** (ನಾ). ಸಡಿಲವಾದ ಅಂಗಿ : ಇಕ್ಕಿದ ಕುಂಡಲಯುಕ್ತಕಾಯ ಪೈರಣೆ ಸುಕ್ಕುಗುಪ್ಪಸ ಕಿಜುವೆರಲ ಚೊಕ್ಕಮುದ್ರಿಕೆ ಚೆಲ್ವುವೆತ್ತಿರಲಾಸ್ಥಾನ ಪೊಕ್ಕನಾ ಮಂತ್ರಿತಿಲಕನು (ಕೃಹಾಶಾ. ೯–೦೦೭); ಇಳೆಯೊಳೆಳಲುವ ಶೋಣ ಪ್ರಣಕೆಯ ಪೈರಣೆಯು ಕಳಕಳಿಸೆ (ಶ್ರೀಕುಪು. ೩–೨೭) ; ನರಸೇಂದ್ರನ ಪೈರಣೆಯು ಜೋಲ್ಲೆಜಗಾಂತು ಗರುವಮುರಿವರ್ರೈದಿದರು (ಕಂಸಹಿ. ೨೪–೬೩). **ಪೈರಣ** : ಮೈಮೇಲೆ ಬಿಳಿದಾದ ಒಂದು ಪೈರಣ; ಅಂಚು ಇಲ್ಲದ ಧೋತರವನ್ನು ತೀಡಿ ಉಟ್ಟುಕೊಂಡಿದ್ದಾನೆ (ಉಂಜ್ಮ. ೯). **ಪೈರಣಿ** : ಲೋಕೇಶ ಜನನ ಕೊರಳೊಳಿಕ್ಕಿ ಮಾಲೆಯ ಬೇಕಾದ ಪೈರಣಿದೊಡಿಸಿ (ಜ್ಞಾಪಕ. ೬–೮೪). **ಪೈರಣು** : ಬಂದಮಾಧವನು . . . ಪೈರಣನ್ನು ಕಳೆದು ಬರಿಮೈಯಿಂದ ಅಡಿಗೆಮನೆಗೆ ಹೊರಟನು (ಶರ್ಪಗಿ. ೦೪೭); ಕೋಟು ಟೊಪ್ಪಿಗೆ ತೆಗೆದಿಡಿರಿ, ಪೈರಣು ಇರಲಿ (ಹಂಚಿ ೮೦). **ಪೈರನ** : ಮೈಯಲ್ಲಿ ಒಂದು ಉದ್ದನ್ನ ಪೈರನದ ಮೇಲೆ ಜಾಕೀಟು (ಮಂಧಾಕಿ. ೦೪೧). **ಪೈರಾಣ** : ಧೋತ್ರ, ಪೈರಾಣ, ಟೊಪ್ಪಿ—ಎಲ್ಲ ಖಾದಿಬಟ್ಟೆಯದೇ (ಅಳಿ. ೭). **ಫೇರಣೆ** : ತೊಟ್ಟ ಫೇರಣೆ ಪೋಲುಟ್ಟ ದೇವಾಂಗವು ಇಟ್ಟ ಶ್ರೀಭಸಿತ ರುದ್ರಾಕ್ಷಿ (ಬಸವ. ೦–೦೯೩).

[ ←ಪಾರ. ಪೆರಾಹನ್, ಪೀರಾಹನ್ ; ಹಿಂ. ಪೈರಾಹನ್ = ಹೊದಿಕೆ ; ಗುಜ. ಪಹೇರಣ್./ಪ್ರಾ. ಪರಿಹಾಣ./ ಸಂ. ಪರಿಧಾನ]

**ಪೈರನ** 'ಪೈರಣೆ' ನೋ.

**ಪೈರಾಣ** 'ಪೈರಣೆ' ನೋ.

**ಪೈರು** 'ಪಯಿರ್' ನೋ.

**ಪೈರುದಾರ** (ನಾ). ಜಮೀನನ್ನು ಸಾಗುವಳಿ ಮಾಡುವವನು ; ರೈತ ; ಕೃಷಿಕ : ನಾಲ್ವೆಸೆಯೊಳಿರ್ಪ ವರ್ತಕ ಪೈರುದಾರ ಗಂದಿಗ ಕೊಂಕಣಿಗ ಪರ್ಯಂತವಾದ ಮಹಾನಾಡವರಂ ಬರಿಸಿ (ಕಳಕ್ಷ. ೭–೨) ; ಇವನಿಗೆ ಶೇಕದಾರನು, ಸಾಗುವಳಿದಾರನು, ಪೈರುದಾರನು ಎಂಬ ಹೆಸರುಂಟು (ಕಥಾಶಂ. IV, ೩೦). [ಪೈರು (<ಪಯಿರ್) + — ದಾರ್]

**ಪೈರೆ** (ನಾ). ೧. ದಿನಗೂಲಿಯ ಹಣ. ೨. ದಿನಗೂಲಿ ಕರಾರಿನ ಮೇಲೆ ಮಾಡುವ ಕೆಲಸ : ನಮ್ಮ ಕೂಡೆ ಪೈರೆ ಮಾಡ್ರೇನ ಅಂದರ ಕೊಡತೇನಿ (ಅಹೋಳ. ೪೦). [← ಮರಾ. ಪೈರೇ]

**ಪೈರೆತ್ರ** (ನಾ). ಒಂದು ಬಗೆಯ ಸಸ್ಯ : ಪೈರೆತ್ರಂ, ಕ್ರಿಮಿನಾಶಹೂವು (ವ್ಯಕಿಗ. ೬೫–೦೩೨೪). [ ? ]

**ಪೈಲವಾನ**, **ಪಯಿಲ್ವಾನ್**, **ಪಹಿಲವಾನ**, **ಪಹಿಲ್ವಾನ್**, **ಪೆಹೆಲ್ವಾನ್**, **ಪೈಲ್ವಾನ್** (ನಾ). ಕುಸ್ತಿಯಾಳು ; ಜಟ್ಟಿ ; ಮಲ್ಲ : ಮತ್ತೊಂದು ಕಡೆಯಲ್ಲಿ ಟಗರು ಕೋಣ ಮೊದಲಾದವುಗಳ ಕಾಳಗವನ್ನೂ ದೊಂಬರು ಪೈಲವಾನರು ಮುಂತಾದವರ ಆಟಗಳನ್ನೂ ನೋಡಿ (ಮುಹಾಶಂ. I, ೩೩) ; ಅವನು ಪೈಲವಾನನಂತೆ ಹುರಿಕಟ್ಟಾಗದಿದ್ದರೂ ಆರೋಗ್ಯಕ್ಕೆ ಹೊಂದಿಕೊಂಡು ದುಂಡಗೆ ಬೆಳೆದಿದ್ದನು (ಚಮುಂಕ. ೩೦). **ಪಯಿಲ್ವಾನ್** : ಅವನು ಆ ಊರಿನ ಭಾರಿ ಪಯಿಲ್ವಾನ್ ಆಗಿದ್ದಾನೆ (ಕೂಂ). **ಪಹಿಲವಾನ** : ಗ್ರಂಥಕರ್ತನು . . . ೧೫೫೫ ವರ್ಷದ ಒಬ್ಬ ಬಲಿಷ್ಠನಾದ ಅರಬೀ ಪಹಿಲವಾನ (ಜಟ್ಟಿ)ನನ್ನು ಸ್ವತಃ ಕಣ್ಣುಟ್ಟ ನೋಡಿರುವನು (ಶ್ರೀಹ್ಮಃ. ೦೪೬); ದೊಡ್ಡ ದೊಡ್ಡ ಜಟ್ಟಿಗಳು (ಪಹಿಲವಾನರು) ಇಷ್ಟು ನಿರ್ವಿಕಾರಿಗಳೂ ಶಾಂತರೂ . . . ಬಲವಂತರೂ ಆಗುವ ನಿಜವಾದ ರಹಸ್ಯವು ವ್ಯಾಯಾಮವೇ ಸರಿ (ಬ್ರಹ್ಮಃ. ೦೪೭). **ಪಹಿಲ್ವಾನ್** : ಕೆಲವು ಪಹಿಲ್ವಾನ್ ಚಿತ್ರಗಳಲ್ಲಿ ಎದೆಯ ಮೇಲೆ ದೊಡ್ಡ ಎರಡು ಕಾವಲಿಗಳಿರುತ್ತವೆ (ಕಸತ. ೯೫). **ಪೆಹೆಲ್ವಾನ್** : ನಮ್ಮ ತಾಲೀಮಿನಲ್ಲಿಯ ಪೆಹೆಲ್ವಾನ್‌ರನ್ನೆಲ್ಲ ಕೂಡಿಕೊಂಡು, ಒಬ್ಬೊಬ್ಬ ಕಾಫರ್‌ನನ್ನೂ ಹಿಡಿದು, ಗುಟಲನ್ನೊತ್ತಿ ಪಡಚಾ ಮಾಡಿಬಿಡುತ್ತಿದ್ದೆ (ಅಹಂಚಿ. ೦೪೧). **ಪೈಲ್ವಾನ್** : ಪೈಲ್ವಾನ್ ಸುಬ್ಬುವೂ ತೊಡೆ ತಟ್ಟಿ ನಿಂತ (ಶೀಮುಗ. ೩) ; ನಮ್ಮೆಲ್ಲರ ಪೈಲ್ವಾನ್ ಆಗಿದ್ದವನು ಹೀಗಾದೆಯಲ್ಲ (ಅಪ್ಪಾಕ. ೧೮).

[←ಪಾರ. ಹಿಂ. ಪಹಲವಾನ್ ; ಮ.ರಾ. ಪಹಿಲವಾನ್, ಪಹೀಲ್ವಾನ್, ಪೈಲವಾನ್]

**ಪೈಲಾ** 'ಪಯಿಲಾ' ನೋ.

**ಪೈಲಾನಂಬರು** 'ಪಯಿಲಾನಂಬರು' ನೋ.

**ಪೈಲಿಕೆ** (ನಾ). ಒಂದು ಬಗೆಯ ಮೂಲಿಕೆ : "ಪೈಲಿಕಾ—ಅಗುಳುಶುಂಠಿ" (ಓಷಧಿ. ೦೦೩). [ ? ]

**ಪೈಲು** (ನಾ). (ವಿಶೇಷವಾಗಿ ರತ್ನಗಳ) ಪಾರ್ಶ್ವ ; ಮಗ್ಗುಲು : ಒಂದು ನಕ್ಷತ್ರ ನೂರು ಕಡೆಗೆ ಬೆಳಕನ್ನು ಚೆಲ್ಲುತ್ತದೆ. ಹಾಗೆ ಭಗವಂತನ ಸೃಷ್ಟಿಯಲ್ಲಿ ಒಂದೊಂದು ಘಟನೆಗೂ ನೂರೊಂದು ಪೈಲುಗಳಿರುತ್ತವೆ

(ಸಮಾಜ. ೬೩೩): ಕರ್ಮಕುಶಲತೆಯು ಅವನ ವ್ಯಕ್ತಿತ್ವದ ಒಂದು ಪೈಲು (ಶಬ್ದಗಾ. ೨೩). [← ಪಾರ. ಹಿಂ. ಪಹ್ಲೂ; ಮರಾ. ಪೈಲೂ, ಪಹಲೂ]

**ಪೈಲ್ವಾನ್** 'ಪೈಲವಾನ' ನೋ.

**ಪೈವಸ್ತಿ** (ನಾ). ವಾಸ್ತವ್ಯ; ವಸತಿ: ಇದರ ಮುಂದೆ ವಿಜಾಪುರದಲ್ಲಿ ಮುಸಲ್ಮಾನರ ಪೈವಸ್ತಿಯು ಬಿದ್ದದ್ದರ ಪ್ರಮಾಣಗಳು ಇತಿಹಾಸದಲ್ಲಿ ಇರುತ್ತವೆ (ಕರ್ನಾ. ೩೩೯). [← ಪಾರ. ಪೈವಸ್ತ್; ಮರಾ. ಪೈವಸ್ತೀ]

**ಪೈವಸ್ತೆ** (ಗು). ಮೂರು ವರ್ಷಗಳ ಹಿಂದಿನ: (ಮೈಗೆಶಿ. IV, ೬೮೦). [←ಮರಾ. ಪೈವಸ್ತಾ]

**ಪೈಶಂಗಿತ** (ನಾ). ನಸುಹಳದಿಬಣ್ಣ: ಪಿರಿದುಂ ಮಾಡಿತ್ತಮತ್ತ್ಯಪ್ರಕರದ ನಯನಕ್ಕಂ ಮನಕ್ಕಂ ಸುರಸ್ತ್ರೀಯರ . . . ಅಧರಮಯೂಖಾಳಿಯಿಂ ದೆತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತಮರುಣಿತಂ ವ್ಯೋಮರಂಗಂ ಬೆಡಂಗಂ (ಶಂನ್ಸವು-೦೨-೬೭). [ಸಂ.]

**ಪೈಶಾಚ** (ಗು). ೧. ಪಿಶಾಚಿಗೆ ಸಂಬಂಧಿಸಿದ. ೨. ಆಸುರೀಸ್ವಭಾವದ; ಅಮಾನುಷವಾದ. (ನಾ). ೩. ಪಿಶಾಚಿ: ಹಿಂದೆ ರಣದೊಳಭಿಲಾಷೆಯಿಂ ಪೈಶಾಚರಂತೆ ಹೇಸದ ರಕ್ತಪಾನವಂ ಮಾಡಿಯೊಡಲ ಪೋಷಿಸಿದೆ (ಕೈಬಿಶಾ. ೨-೬೦). ೪. ಹಿಂದೂವಿವಾಹಪದ್ಧತಿಯ ಎಂಟು ಪ್ರಕಾರಗಳಲ್ಲಿ ಒಂದು: 'ವಿವಾಹ' ಪರಾ. [ಸಂ.]

**ಪೈಶಾಚಕ** (ನಾ). ೧. = ಪೈಶಾಚಿಕ ೩: ಹರಂ ಗಿರಿಸುತೆಗೆ ಪೇಟ್ದಾ ಕಥೆಗಳಂ ಪೈಶಾಚಕಭಾಷೆಯೊಳ್ ಬೃಹತ್ಕಥೆಗಳಂ ಮಾಡಿ ಪೇಟ್ದೊಡೆ (ಶಂಕಶಂ. ೦೦-೦೩). ೨. ಪಿಶಾಚಿ ಹಿಡಿದವನು; ದೆವ್ವ ಮೆಟ್ಟಿಕೊಂಡವನು: ದಿಗ್ಭ್ರಮೆ ಪದಂಗೆಟ್ಟಂಗೆ ಪೈಶಾಚಕಂಗೆ ದುರಾವೇಶಮಧಾರ್ಮಿಕಂಗೆ ಕುಮತಂ ತತ್ತ್ವಪ್ರಮೂಢಂಗೆ ಬೀಸಿದ ಕಣ್ಣಾಯದ ಕುಂಚ ದಂತಿರೆನಗಾದಶಾಸ್ತ್ರಗಳೇನೆಂಬುದೋ (ಶಾಶಂಪು. ೯೦೩). [ಸಂ.]

**ಪೈಶಾಚಿ** (ನಾ). ೧. ಪಿಶಾಚಿ: ಪುತ್ರಾಭ್ಯುದಯಮೋಹದ ತಮಸ್ಸು ತೀವ್ರರ ಲೋಭಪೈಶಾಚಿಗೀ ಪಿರಿಯ ಬಲಿಯಹುದೆಂದು ಮುನ್ನಮಾನರಿಯಲಾರದೆ ಹೋದೆ (ಶ್ರೀರಾಮಾ. ೦೦೬-೨೨೦). ೨. = ಪೈಶಾಚಿಕ ೩: ಈ ದೃಶ್ಯಕಾವ್ಯದಲ್ಲಿ ರಾಜನು ಮುಂತಾದವರುಗಳಿಗೆ ಸಂಸ್ಕೃತಭಾಷೆಯೂ . . . ರಾಕ್ಷಸ ಪಿಶಾಚಾದಿಗಳಿಗೆ ಪೈಶಾಚೀ ಮತ್ತು ಚೂಳಿಕಾಪೈಶಾಚೀ ಭಾಷೆಯೂ ಚಂಡಾಲಾದಿಗಳಿಗೆ ಅಪಭ್ರಂಶಭಾಷೆಯೂ ವ್ಯವಹಾರಾರ್ಹವಾಗಿ ವಿಹಿತವಾಗಿರುವುವು (ನಾರಕ. ೧೩೩). [ಸಂ. ಪೈಶಾಚೀ]

**ಪೈಶಾಚಿಕ** (ಗು). ೧. ಪಿಶಾಚಿಗೆ ಸಂಬಂಧಿಸಿದ. ೨. ಆಸುರೀಸ್ವಭಾವದ. (ನಾ). ೩. ಪ್ರಾಕೃತ ಭಾಷೆಗಳಲ್ಲಿ ಒಂದು; ಗುಡ್ಡಗಾಡುಜನಾಂಗದ ಭಾಷೆ: ಸಂಸ್ಕೃತಂ ಪ್ರಾಕೃತಂ ಅಪಭ್ರಂಶಂ ಪೈಶಾಚಿಕಮೆಂಬ ಮೂಱು ವರಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೧-೪೬ ವ); ಸಂಸ್ಕೃತ ಪ್ರಾಕೃತ ಪೈಶಾಚಿಕ ಮಾಗಧ . . . ವಿಬ್ಭ್ರಾದಿ ಭಾಷಾಭೇದಗಳಂ ಪೇಳ್ವ ಲಾಕ್ಷಣಿಕರಪ್ಪ ಕವಿಗಳಂ (ವಿವೇಕ. ೨೨೬). [ಸಂ.]

**ಪೈಶುನ್ಯ** (ನಾ). ೧. ಚಾಡಿ ಹೇಳುವಿಕೆ; ಚಾಡಿಕೋರತನ. ೨. ಪಿಸುಣು ಚಾಡಿ; ದೂರು: ಆ ಬಳಿಕ ನೀವು ಮಾಡಿಟ್ಟಿರುವ ಪೈಶುನ್ಯದ ಕುಚೇಷ್ಟಿತವನ್ನು ತಿದ್ದುವುದಾಗಲಿ (ಶಿಗಕ. ೬-೦೩). ೩. ದುಷ್ಟತನ; ದುರ್ಗುಣ. [ಸಂ.]

**ಪೈಶೂನ್ಯ** (ನಾ). ೧. ಚಾಡಿ; ದೂರು; ಪಿಸುಣು: ಪರಿವಾದಂ ಪೈಶೂನ್ಯಂ ಪರಮರಹಸ್ಯಪ್ರಕಾಶಕರಣಂ ಕೂಟಾಕ್ಷರನಿಧಿನಿಕ್ಷೇಪಾದ್ಯಪಹರಣಂ ಸತ್ಯವ್ರತಕ್ಕತಿಕ್ರಮಮಕ್ಕುಂ (ಧರ್ಮಾಮೃ. ೭-೯). ೨. ದುಷ್ಟತನ: 'ಪೈಶೂನ್ಯದೂರ' ಪರಾ. ೩. ಚಾಡಿಕೋರ; ಪಿಸುಣ: ಒಕ್ಕಿ ಬುದ್ಧಿಯ ಪೇಳ್ದಡಲಗನು ಕಿತ್ತು ನಾ ಮರುಳಾದೆನೆಂಟವನೆತ್ತ ಪೋದನೊ ಕೊಲುಗು ಹಗೆ ಪೈಶೂನ್ಯನೆಂದೆನುತ (ಕೌಶಿಕಾ. ೦೩-೦). [<ಸಂ. ಪೈಶುನ್ಯ]

**ಪೈಶೂನ್ಯದೂರ** (ನಾ). ದುಷ್ಟತನವಿಲ್ಲದವನು; ದುರ್ಗುಣವಿಲ್ಲದವನು: ದೇವಾಗ್ರಗಣ್ಯಂ ಶಂಭುಸ್ವಾಮಿಷ್ಟಲಿಂಗಂ ಪ್ರಮಥಪರಿವೃಢಂ ಪಾತು ಪೈಶೂನ್ಯದೂರಂ (ಹರಿಶ್ಚ. ೩-೬೬). [ಪೈಶೂನ್ಯ + ದೂರ]

**ಪೈಷ್ಟಿಕ** (ಗು). ೧. ಹಿಟ್ಟಿನಿಂದ ತಯಾರಿಸಿದ; ಪಿಷ್ಟಸಂಬಂಧವಾದ. (ನಾ). ೨. ಹಿಟ್ಟಿನಿಂದ ಮಾಡಿದ ಮಾದಕಪೇಯ: "ಪೈಷ್ಟಿಕಃ— ಮದ್ಯ" (೬ಶಂ. ೦೦೩). [ಸಂ.]

**ಪೈಸ, ಪೈಸಾ, ಪೈಸೆ** (ನಾ). ೧. ಒಂದು ನಿರ್ದಿಷ್ಟ ಬೆಲೆಯ ತಾಮ್ರದ ನಾಣ್ಯ; ಆಣೆಯ ಮೂರನೆಯ ಒಂದು ಅಂಶ; ಒಂದು ದುಡ್ಡು; ನಾಲ್ಕು ಕಾಸು: ಟೆಂಕಿ ವಿವರ: ಟೆಂಕಿಗೆ ಶೋಡಶ ದುಡ್ಡಂ ಬೆಂಕದಿ ಸಸಿಗಾಣಿ ನಾಲ್ಕು ಪೈಸಗಳೆಂಟಂ ಪಂಕಜಮಿತ್ರನ ಗಣನೆಗೆ ಭೋಂಸಲೆ ತಾಂ ಒರಗಾಣಿ ದುಗ್ಗಾಣೆರಡಂ (ಶಾಸ್ಕ. ೬೬-೯). ೨. ಹಣ; ದುಡ್ಡು: (?). ೩. ಒಂದು ರೂಪಾಯಿಯ ನೂರನೆಯ ಒಂದು ಭಾಗ: (?). ಪೈಸಾ: ೨. ಭಟಾರಜಿ . . . ನಿಮಗ ಪೈಸಾ ಖೂಬ ಕೊಡ್ತಾವ (ಗ್ರಾಕಂ. ೯). ಪೈಸೆ: ೧. ಚಕ್ರವ ಪರರಿಗೆ ವಿಕ್ರಯ ಮಾಡಲು ಹನ್ನೆರಡೇ ಪೈಸೆ (ಕೈಕಾ. ೪೯). ೩. ಈಗಿನ ದಿನಗಳಲ್ಲಿ ಐವತ್ತು ಪೈಸೆ ಕೊಟ್ಟರೂ ಒಂದು ಒಳ್ಳೆಯ ಬಾಳೆಹಣ್ಣು ಸಿಕ್ಕುವುದಿಲ್ಲ (ರೂಢಿ). 'ಪಾಯ್ಸೆ' ಪರಾ. [← ಪಾರ. ಪೈಸ; ಹಿಂ. ಮರಾ. ಪೈಸಾ]

**ಪೈಸರ, ಪಯ್ಸರ, ಪೈಸಾರ** (ನಾ). ೧. ಮಲ್ಲಯುದ್ಧದ ಒಂದು ಪಟ್ಟು; ಕುಸ್ತಿಯ ಒಂದು ವರಸೆ: ಗಳಹತ್ತ ಡೊಕ್ಕರ ತಳಮೇಲು ಪೈಸರ ಸುಳಿವು ವಂಚನೆ ಪತನದಲಿ . . . ಹೋರಿದರು (ಕಂಸವ. ೨೦-೬೨). ೨. ಯುದ್ಧದಲ್ಲಿ ಬಳಸುವ ಒಂದು ಪಟ್ಟು: ಓಸರದ ಪೈಸರದ . . . ಸಮರವಿಲಾಸಿಗಳು ಸರಕಟಿಸಿ ಕಾದಿದರು (ಕೊರಂ. ೬-೧೦-೨೦). ೩. ಕುಗ್ಗುವುದು; ಕುಸಿ ಬೀಳುವುದು; ಜೋಲುವುದು: ಮುರಿದ ಕಂಗಳ ಮಲಗಿನಲಿ ಪೈಸರದ ಗಾತ್ರದ ಗಾಢವೇದನೆಯುರವಣಿಸೆ ಸೊಂಪಡಗಿ ನಿಮಿಷ ಮಹೀಶ ಮೈಮರೆದ (ಕುವ್ಯಾಕ. ೩-೪೩). ೪. ಜಾರುವುದು; ಜಾರುವಿಕೆ: ವ್ಯೋಮದೊಳಿಯ್ದುವ ನಿಮಗೆ ಪೈಸರವುಂಟೆ (ಶರಶ. ೩-೬೯). ೫. ಹಿಂದಕ್ಕೆ ಸರಿಯುವುದು; ಹಿಂಜರಿತ; ಹಿಮ್ಮೆಟ್ಟುವಿಕೆ: ಆಸೆಯ ಪೈಸರಂ ಮೊಳೆತಿವ ಚೆಲ್ವಂ ದೇವ ನೀವೇಱ ನೋಡಿರೆ (ಅನಂಪು. ೨-೩೦); ಇಲ್ಲಿ 'ಪೈಸರಂ' ಎಂಬುದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪವಿರಬಹುದು; ಮನಕೆ ಭೀತಿಯ ಬೆರಕೆಯುಳ್ಳಡೆ ಬಟ್ಟು ಕಳೆ ಪೈಸರಕೆ ಸಮಯವಿದು (ಕುವ್ಯಾಕ. ೦೩-೩೮). ೬. ಹಿಂದುಮುಂದು ನೋಡುವುದು; ಅನುಮಾನ: ಕನ್ನಗಳ್ಳರನಿವರ ಮೊಗದಿ ಪೈಸರವ ಮಾಡದೆ ವಿಚಾರಿಸುವುದು (ಕಪ್ಪುಗಾ. ೨-೯೩). ೭. ತಪ್ಪುವುದು; ನುಣುಚಿಕೊಳ್ಳುವುದು: ಭಾಷೆ ಪೈಸರವಿಲ್ಲ ಓಸರಿಸೆನನ್ನಕ್ಕೆ ಆಸೆಮಾಡೆನು ಮತ್ತೆ ಭಿನ್ನಸುಖಕ್ಕೆ (ಮುಹಾದೇ. ಬ. ೩೦-೬೬). ೮. ನಷ್ಟ; ಹಾನಿ: ಈಸು ಕಳವಳವೇನು . . . ನಿನ್ನ ಹರುಷಕೆ ಪೈಸರವದೇನು (ಕುವ್ಯಾಸ. ೬೦೩. ೦೩-೨೯). 'ಪೈಸರಂಗೊಳ್' ಪರಾ. ೯. ಇಳಿಜಾರಾದ ಪ್ರದೇಶ; ಇಳುಕಲು: ಪಾಂಡುನಂದನರು ಗಾಸಿಯಾದರು ಗುಟ್ಟ ಬೆಟ್ಟದ ಪೈಸರದೊಳು (ಕುವ್ಯಾಕ. ೦೬-೦೬); ಪಾದವೆಚ್ಚಱಿಕೆ ಪೈಸರ ಪರಾವಧಾನವೆನಲು (ಶಕಕ. ೩೯-೩೬), ಅವರು ಒಂದು ಬೆಟ್ಟದ ಶಿಖರದ ಅಂಚಿನ ಸಮಿಪದ ಪೈಸರದಲ್ಲಿ ನಿಂತಿದ್ದರು (ಗಿಂಶಾ. ೬೦). ೧೦. ಸೋಲು; ಭಂಗ: ನೆನಹಿನಭರುಚಿಯ ವಾಸಿಗಳ ಪೈಸರವನೆನ್ನಲಿ ಸೂಸಬಾರದೆ (ಕುವ್ಯಾಸ. ೦೨-೨೮). ೧೧. "ಸೋರಿಕೆ" (ಶಬ್ದಾ): ಪರಿಕಾಲ್ಗಳೀಳ್ಗೆದಪ್ಪಿದೊರ್ಡವಜಾೞೆಯಿಂಭೋಂಕಾಟಮಾ ಪೈಸರಮುಂ ಮುಂದಕಸೂತ್ರಕ್ಕೆ ಹರಿಯಾದೊಡೆ . . . ನೀವೆಲ್ಲರಾರ್ದು ಪೊಗಳ್ವಂ ತೆಸಗದೊಡೆ ಮಹಾದೇವನೇ ದೇವನೆಂದೆನಲಕ್ಕುಮೇ (ಶತ್ಯಾ. ೬-೯೦).

೧೨. ವ್ಯಾಪನೆ; ವಿಸ್ತಾರ; ಹರಹು : ಪೈಸರಿಸು ' ಪರಾ. ೧೩. (ಯಂದ್ದದ ಪಟ್ಟನಿಂದ ಒದಗಂವ) ರಕ್ಷಣೆ (?) : ಅಚಲ ಮೂಅಜ ಪೈಸರದ ಬಲನಿಚಯ ನಮ್ಮದು ವೀರಸುಭಟಪ್ರಚಯಮುಖ್ಯರ ಮಾಡಿ (ಕುಮಾ.ಕ. ೧-೨೦). **ಪಯ್ಸರ :** ೩. ' ಪಯ್ಸರವೋಗು ' ಪರಾ. ೪. 'ಪಯ್ಸರಿಸು' ಪರಾ. ೭. ನುಸುಳು ನೆರೆ ಡಿಳ್ಳಾಯ್ತು ಪಯ್ಸ[ಪಾಠಾಂ. ಪೈಸ]ರ ಬೆಸುಗೆ ಬಿಗುಹುಳುಕೊತ್ತು ಕಲೆಗಳ ರಸದ ಪಸರವ ನಱಿಯುಬಾರದು ವಿಗಡವಿಟರುಗಳ (ಕುಮಾ.ಅ. ೧೩-೨೫). **ಪೈಸಾರ :** ೧೨. ಬಯಲ ಬಿಡಾರ ಪೈಸಾರದಿಂದ ಬಿಟ್ಟಿತು ಬಹುಬಲವಾ (ಸೌಂದಕಾ. ೭-೩).

**ಪೈಸರವಾಗು, ಪಯ್ಸರವಾಗು** = ೧. ಸೋಲುಂಟಾಗು; ಪರಾಭವ ವುಂಟಾಗು : ಬೇದಿಗಲಹದೊಳೊಮ್ಮೆ ಪೈಸರವಾದಡದು ಪರಿಹರಿಸಿದವರೇ ಸೋದರರಲಾ (ಕುಮಾ.ರ. ೨೦-೩೩). ೨. ಇಲ್ಲವಾಗು; ಮರೆಯಾಗು : ಶೌರ್ಯದ ವಾಸಿ ಪೈಸರವಾಯ್ತು ರಣದಾವೇಶವಿಳಿದುದು ಮಗಧಪತಿಗೆ (ಕುಮಾ.ಸ. ೨-೧೦೯); ಉಱೆ ಮನದ ವಾಸಿ ಪಯ್ಸರವಾಯ್ತು ಗೆಲ್ವಾಸೆ ಯಡಗಿತು (ಚಂಪು. ೨೫-೩೩). [ದೇ. ॥ ತೆಲು. ಪೈಸರ, ಪಯಿಸರ]

**ಪೈಸರಂಗೊಳ್, ಪೈಸರಗೊಳ್** (ಕ್ರಿ). ೧. ಹಾಳಾಗು; ಕೆಡು : ' ಪೈಸರಂಗೊಳಿಸು ' ಪರಾ. **ಪೈಸರಗೊಳ್ :** ೨. ಅನುಮಾನಿಸು; ಹಿಂದೇಟು ಹಾಕು; ಹಿಂದುಮುಂದು ನೋಡು : ಕೈಸೇರಿದೊಡವೆ ಯೆನುತ ಕೊಡಬೇಕೆಂದು ಪೈಸರಗೊಳಬೇಡ ಮನದಿ (ಮೋಹತ. ೨೭-೩೯). [ಪೈಸರ + ಕೊಳ್$_1$]

**ಪೈಸರಂಗೊಳಿಸು** (ಕ್ರಿ). ಹಾಳು ಮಾಡು; ಕೆಡಿಸು : ಹಣ್ಣಾನಿಟ್ಟೊಡೆ ಕಾಯಿ ಬಿದ್ದ ತೆಱದಿಂ ನಾನು ಹಣ್ಣಿದಾ ಕಾರ್ಯಮಂ ಪೈಸರಂಗೊಳಿಸಿ ಮಸಿವಣ್ಣಮಂ ಮಾಡಿದೆಯಲಾ ಪಾಟಿದೈವಮೇ ಎಂದು ಬಸಿಱಂ ಹೊಸೆಯುತ (ಸಮ್ಯಕ್. ೩-೩೦). [ಪೈಸರಂಗೊಳ್ + — ಇಸು$_1$]

**ಪೈಸರಂಬೋಗು, ಪಯ್ಸರವೋಗು, ಪೈಸರವೋಗು** (ಕ್ರಿ). ೧. ಜಾರು; ಜಗುಳು : ಗತಿ ಸ್ತಂಭಿಸಿ ಪಾದಂ ಪೈಸರಂಬೋ[ಪಾಠಾಂ.ವೋ]ಗಿ ... ಮೂರ್ಛಿಸುವ ಮಗಳಂ ಪದ್ಮಾವತಿ ಕಂಡು (ಸುಕು. ಚ. ೦೬೯-೦೬). ೨. ಇಲ್ಲವಾಗು; ತೊಲಗು : ಪನ್ನತಿಕೆ ಪೈಸರಂಬೋಗಿ ಪ್ಯಗರದು ದೇವತ್ವಮುಡುಗಿ ಬಲಗೆಟ್ಟು ನಾಣ್ಗೆಟ್ಟು ನಿಂದು (ಅರಾಕ. ೩-೬-೩೩). **ಪಯ್ಸರವೋಗು :** ೩. ಜೋಲು; ಕುಸಿಬೀಳು : ಅಸಮಸಾಹಸಿ ತಿವಿದರಮಮಾ ದೆಸೆಗೆ ಚೆಲ್ಲಿತು ಕರುಳು ಪಯ್ಸರವೋಗಿ ಖಳ ಕೆಡೆದ (ಕೌಶಿಕಾ. ೨೨-೨೦). **ಪೈಸರವೋಗು :** ೧. ಮುಂದೆ ಹೆಜ್ಜೆಯನಿಡುತ ಪೈಸರವೋಗಿ (ಕುಮಾ.ಗ. ೩-೦೩). ೨. ಆಶೆ ಪೈಸರವೋಯ್ತು (ಕುಮಾ.ಅ. ೬-೩೭); ಬಿದಿದರ್ಪದು ಬಿಂಕಂ ಬೀತುದು ಪರಿ ಪೈಸರವೋದುದು ಪಂಪು (ಜಯುಕಾ. ೫-೫೨). ೪. ತಪ್ಪಿಸಿಕೊಳ್ಳು; ನುಣುಚಿಕೊಳ್ಳು : ತಿರುಗಿ ಪೈಸರವೋಗಿ ಪವನಜ ಮುರಳಿ ತಿವಿದನು ಕೀಚಕನ ಪೇರುರವನು (ಕುಮಾ.ಅ. ೩-೯೨). [ಪೈಸರ + ಪೋಗು$_1$ (< ಪೋ$_1$)]

**ಪೈಸರಗೊಡು** (ಕ್ರಿ). ವಿಸ್ತಾರವಾಗಿಡು; ಅಗಲವಾಗಿಡು: ಕಾಲ ಪೈಸರ ಗೊಟ್ಟು ಸರಪಣಿವಿಡಿದು ಹಿಮ್ಮಾರಾಗಿ ಪಡೆ ತೆಗೆವಾಗ ತೋಳ ಸಿಕ್ಕಿಗೆ ರಾಯ ನೀಡಿದನುಱೆ ಹೊಟ್ಟೆಮೇಲಾಗಿ ಕಡೆವರುರ್ವಿಯೊಳು (ಭರತ. ೪೯-೧೦೯). [ಪೈಸರ+ಕೊಡು$_1$]

**ಪೈಸರಗೊಳ್** ' ಪೈಸರಂಗೊಳ್ ' ನೋ.

**ಪೈಸರಗೋಲು** (ನಾ). ದೊಣ್ಣೆವರಸೆಯಲ್ಲಿ ಬಳಸುವ ಕೋಲು : ಉರ ತಗ್ಗಿ ಬಗ್ಗಿ ಕುಪ್ಪಳಿಸಿ ಪ್ಯಸಿರಿಯುಬ್ಬ ಭರತಕೋವಿದರಂತೆ ಹೆಣಗಿ ಸರಿಬವರಿಯೊಳು ಪೈಸರಗೋಲ ತಿರುಗಿ ಶ್ರೀಕರದ ಸಾದೀವ ತೋರಿದರು (ಕವಿಕ. III, ೪೯ ಸೌಂದರಕಾವ್ಯ). [ಪೈಸರ+ಕೋಲು$_1$ (<ಕೋಲ್$_1$)]

**ಪೈಸರವೋಗು** ' ಪೈಸರಂಬೋಗು ' ನೋ.

**ಪೈಸರಿಸು, ಪಯಿಸರಿಸು, ಪಯ್ಸರಿಸು** (ಕ್ರಿ). ೧. ಕೆಳಕ್ಕೆ ಬೀಳು; ಜಾರು; ಜಗುಳು: "ಪೈಸರಿಸಿತೆನಲ್ಕೆ ಜಾಱಿತೆಂದಱಿಗೆ ಬುಧರ್" (ಶಾರಅ. ೩೫); ಸಂಜಯನು ಬರಬರಲು ಕಂಡನು . . . ಕರಿಗಳೊಟ್ಟಿಲನೇಱಿದು ಪೈಸರಿಸಿ ಮಿದುಳಿನ ಜೋಱು ಜೊಂಡಿನ ತೊರಳೆಯಲಿ ದಡದಡಿಸಿ ಜಾಱುತ ಬೀಳುತೇಳುವನ (ಕುಮಾ.ಗ. ೩-೬); ಜೋಲುವ ದೋತ್ರ ಪೈಸರಿಸಿದಕ್ಷಮಾಲೆ (ಸೌಂದಪು. ೩-೦೭); ಪಾದಪಶಾಖೆಯಿಂ ಪೈಸರಿಸಿ ಧೊಪ್ಪನೆ ಕೆಡೆದು ಪವನನ ಕಾಲು ನೊಂದಿರಲು (ತಿಮ್ಮ.ರ. ೭-೨೫). ೨. ಕುಸಿದುಬೀಳು.— ಕೆಡೆ: ಅಧಟ ನವನಿಗೆ ಪೈಸರಿಸಿ ಹರಿವದನವನು ನೋಡುತ್ತ ಬಿಟ್ಟನು ನಿಜಕಳೇವರವ (ತಿರಾಗ. ೩-೬-೩೯). ೩. ಕುಗ್ಗು; ಕುಂದು; ಕಡಮೆಯಾಗು : ಬರಸು ಭಾಷೆಯುನಿಂದು ಕರ್ಣನ ಶಿರವುಳಿದು ತಾವರೆಯು ನಗೆ ಪೈಸರಿಸಿದರೆ . . . ಕಲಿಭೀಮನಯ್ಯನ ಹರಹು ನಿಂದರೆ ಬಳಿಕ ನಿಮ್ಮಯ ತಮ್ಮನಲ್ಲ (ಕುಪ್ಪಾ.ಕ. ೦೬-೭); ಜೀನಸರಂಬೊಂದಿತ್ತು ಮನದೆಸಕಮಾವಗಂ ಪೈಸರಿಸಿತತಿಧೈರ್ಯಂ (ಅರಾಕ. ೨-೫.೭); ಧೃತಿ ಪೈಸರಿಸುತಾ ನೃಪನೊಡನೆ ತದ್ವಿಪ್ರನಿಂತೆಂದು (ತಿಮ್ಮ.ರ. ೩-೬೨). ೪. ಕ್ಷಯಿಸು; ನಾಶವಾಗು : ಇರುತಿರುತ ರವಿಸೂನು ಗಂಧರ್ವರಲಿ ತನ್ನಯ ಕೀರ್ತಿಲತೆ ಪೈಸರಿಸಿದಂದವನ್ನೆದೆ ಚಿಂತಿಸುತಿರಲು ರಜನಿಯಲಿ ತರಣಿ ಕಂದನ ಮೋಹದಿಂದವೆ ಧರೆಗೆ ಬಂದನು (ಕುಮಾ.ರ. ೬೦೩. ೨೩-೩); ಅತ್ಯಂತವಿಷಯಾತುರರಿಗೆ . . . ಬಲ ಪೈಸರಿಸುವುದು (ಜೀವಂಕ ೪-೨); ತೇಜದೇಳಿ ಯುದು ಪೈಸರಿಸಿತ್ತೆ (ಜೀರಾ. ೨೦-೭೫). ೫. ಹಿಂಜರಿ; ಹಿಮ್ಮೆಟ್ಟು : ...ತಿಗೆ ಸಡೆದಾ ನಕುಲ ಪೈಸರಿಸಿದನು (ಕುಮಾ.ಗ. ೨-೩೫); ವೀರಹನುಮನ ಮಱಿಯ ಹೊಕ್ಕುದು ಭೂರಿವಾನರಸೇನೆ ಪೈಸರಿಸಿ (ತೊರರಾ. ೭-೩೨-೯); ಆ ಸುರಾರಿಗಳಿಮ್ಮೆ ದೆಸೆಯಿಂ ಪೈಸರಿಸುವವರಲ್ಲ (ಉರರಾ. ೩-೨೭). ೬. ತೊಲಗು; ದೂರ ಸರಿ: "ಪೈಸರಿಸಿತೆನಲ್ಕೆ ಪೋದುದು" (ಶಶಬ್ದ. ೦೨೭-೦೬೯); ಬೀಸುವ ಗಾಳಿಗೊಯ್ಯನೆ ಪೈಸರಿಸುವ ದಾಸಿಮುಗಿಲ ತೆಱನಂತೆ (ಅಂಜತ. ೦೩-೪೯೯); ಎರಡುಘಳಿಗೆಯು ಪೋಲಾ ಕಾಂತೆ ನಿದ್ರೆ ಪೈಸರಿಸಿ ಪ್ಯಮಱಿದೆದ್ದಳು (ಭರತ. ೪೦-೦೭೭). ೭. ಹಿಂದಿರುಗು; ವಾಪಸ್ಸಾಗು : ಪೈಸರಿಸುವುದು ಬಂದ ಬಳಿವಿಡಿದು (ಕುಮಾ.ಉ. ೩-೦೫); ಪುರತ ಹೊಱಮಂಟುರಗಪತಿ ಪೈಸರಿಸಿದನು ಯವನೇಶನೈತರೆ (ಜೈಮಿ.ಗ. ೪-೦೬-೨೭). ೮. ಮರೆಯಾಗು; ಕಾಣದಾಗು : ಅತುಳಮೋಹಮದೋಸರಿಸಲ್ ಥಳಥಳಿಪ್ಪ ವಿಮಲಾತ್ಮನವೋಲ್ ಪೈಸರಿಸಲಿಂದ್ರಜಾಲಕಮಾ ಸನ್ಮುನಿಯೊರ್ವನೊಪ್ಪಲು (ಅದ್ಭುತ. ೫-೯೭). ೯. ಪಕ್ಕಕ್ಕೆ ಸರಿ; ಓರೆಯಾಗು : ಬಿಗಿದು ತೊಟ್ಟ ಕಂಚುಕಮಿನಿತು ಪೈಸರಿಸೆ ನಿಬಿಡಕುಚವಿಟ್ಟಿ ಸಲ್ ನಸುದೋರೆ . . . ಗಟ್ಟವಾಳ್ತಿಯರೆಸೆದರು (ಶಶಾಕು. ೦-೫-೩೦). ೧೦. ಸಡಿಲವಾಗು; ಅಳ್ಳಕವಾಗು : ನಿಱಿಯ ಬಿಗಿ ಪೈಸರಿಸೆ (ಕೃಷ್ಣರಾ. ೦೦-೦೯). ೧೧. ಬಿಡು; ವರ್ಜಿಸು; ತ್ಯಜಿಸು: ಆ ಸುರುತಾಳನ ಖಾನನ ಕರೆದುಕೊಂಬಾಸುರಕೃತ್ಯ ಬೇಡೆಮಗೆ ಪೈಸರಿಸುವುದದನು (ಕುಮಾಸಾಂ. ೦೬-೦೫೬); ಆದಿಶ್ಯವಾಚರಣೆಯಿಂ ಮುಕ್ತಿವನಿತೆಯೊಳಗಾವರವೆ ಸುಖ ವಿರ್ಪುದಂ ಪೈಸರಿಸಿಯರ್ಪತೋದಿತಾಚಾರದೊಳ್ವರ್ತಿಸುತವಿದ್ಯಾಂಗನಾ ಸಂಗದಿಂದಿರ್ಪುದು ಹಾದರಮದಲ್ಲವೆ: (ಶಾಸೋಪ್ರ. ೯-೦೦೫). ೧೨. ಕೆಡು; ಹಾಳಾಗು : ಹೇಸದರಿಭೂಪಾಲರನು ನಿಶ್ಶೇಷವೆನಿಸುವುದಲ್ಲದಿರ್ದೊಡೆ ಪೈಸರಿಸುವುದು ರಾಜಕಾರ್ಯವಿದು (ಕುಮಾ.ರ. ೬-೪೭). ೧೩. ಸಿಡಿ; ಚಿಮ್ಮು : ಪೊಂಗೇದಗೆಯ ಕಿಱಿಯ ಗಱಿಗಳಿಂ ಪೈಸರಿಸಿದ ಅಲಪ್ಪುಡಿಗಳಿಂ (ರೀವಂ. ೨೭-೨೭); ಪೈಸರಿಸಿ ಭೂತ್ಕರಿಪ ಕಿಡಿ ನಿಶ್ವಾಸದುರಿ ಭುಗಿಭುಗಿಲೆನುತ ಪಡೆಸಾಸಿರವ ಪಸರಿಸುತ ಪವನನ ಕರೆದನಾಹವಕೆ (ಅಷಂರಾ. ೦-೭-೨೩). ೧೪. ಹರಡು; ವಿಶಾಲವಾಗಿಸು; ಹರಹು : ಉಱುಗಿತು ಬ್ರಹ್ಮಾಂಡವೆನೆ ಖಗರಾಜ ಕಿಳ್ಳಱಿಯನೊಯ್ಯನೆ ಪೈಸರಿಸೆ (ಮೋಹತ.

೩೬-೬೨) : ಸದಮಲಸರ್ವಜ್ಞ ನಿಂದು ನಿಟ್ಟಿಸೆ ವಿಶಾರದ ಗಜಿಯಿಸನು ಪೈಸರಿಸೆ ಮದವಕ್ಕಳೀದರು (ಹೋಚಕ. ೧೨-೮೩). ೧೫. ಹರಡಿಕೊಳ್ಳು ; ವಿಸ್ತಾರಗೊಳ್ಳು : ತೆರೆತೆರೆಗೊಂಡು ಜಾರುತ ಪೈಸರಿಸುತ ಸಿರ ಮುಖ ಕಂಠ ವಕ್ಷಕ್ಕೆ ಪರಿದು ಜಠರ ಕಟಿಯೂರುಗಳಿಗಿಳಿತಂದು ಚರಣದಿಂದಂಗಣ ತುಂಬಿ (ಗೂಪ್ತಸ್ಕ. ೭-೨೨೨). ೧೬. (?) : ಆ ಸಮಿಪದ ಸುಂಡಿಲ ಗಳೆಯಲು ಪೈಸರಿಸಿ ಸುಂಡಿಲುಗಳಿಟ್ಟು ವಿಲಾಸದಿಂ ವರ್ತರಿಸಿ ನೂಂಕುತೆ ಬೃಹ್ಮೇತಂಗೈದು ವಾಸದಿಂ ಪೂರ್ವಾನೆಗಳದಿಂ ದೋಸವದೊಪ್ಪಿದುದು ಬರುತಿಹ ಭೂಸುರೋತ್ತಮರುಗಳಿಗಂ ಭಯಮಿವಾಪುತೇಳಿಯಲಿ (ಕಾವೇಮು. ೬೦-೦೧). **ಪಯಿಸರಿಸು** : ೧೭. ತಪ್ಪಿಸಿಕೊಳ್ಳು ; ನುಣಾಚಿಕೊಳ್ಳು : ದೊರೆಗಳ ಹಿಂದೆ ದೊರೆ ಪಯಿ[ ಪಾಠಾಂ. ಪೈ] ಸರಿಸಿತಲ್ಲಿಯದಲ್ಲಿ ಭೀಮನ ಹೊಯ್ಲು ಹೋರಟಿಗೆ (ಕುಮ್ವಾ ಕ. ೦೩-೩೬). **ಪಯ್ಸರಿಸು** : ೧. ಕುಚ ಯುಗಂ ವರನಿತಂಬಂ ಕದಕ್ಕದಿಸೆ ಮೇಲುದ ನಿಜಿಗಳಿರದೆ ಪಯ್ಸರಿಸೆ (ಕಂಪು. ೫-೦೩). ೧೭. ಬಾಹುಗಳಿಂದೆ ಕಂಠಮಂ ತೊಡರೆ ಕುಸುಂಗಿ ಪಯ್ಸರಿಪ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ಕಂಕಂ. ೪-೬೩).

[ಪೈಸರ + — ಇಸು$_3$]

**ಪೈಸಾ** 'ಪೈಸ' ನೋ.

**ಪೈಸಾರ** 'ಪೈಸರ' ನೋ.

**ಪೈಸೆ** 'ಪೈಸ' ನೋ.

**ಪೊಂ** 'ಪೊನ್' ನೋ.

**ಪೊಂಕ** (ನಾ). ೧. ಗರ್ವ ; ಅಹಂಕಾರ : ಅಲರ್ದರೆಗಳಿಗೆಯ ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ ಬಟ್ಟೀವನಾರ್ ತಲೆಯೊಳ್ ಫಾಳ್ದುವರ್ (ಅದಪು. ೦೦-೦೦೬) ; ಪಂಕಜನಂದನ ದಾನವಾರಿ ರುದ್ರುರ್ ಪೊಂಕದ ಬೋಳ ಯರಾದಿಕಾರಣಾಂಗರ್ ಬಿಂಕದ ಮೂಪರಿಪರ್ಗೆ ಬೀಜಮಿಶಂ (ಹಾಲಾಸ್ಯ ೦. ೦೭-೨೬) : ಪೊಂಮಿಟದು ಬಂದು ಎನ್ನ ಕಳೆಯ ನೆರೆದಪನ್ (ಬಿದ್ವಶ್ರ. ೦೨-೨೩೪). ೨. ಉಬ್ಬು ; ಉತ್ಸಾಹ ; ಸಂಭ್ರಮ : ಪಂಕರುಹಸಖಸುಮುದಯಿಸೆ ಪೊಂ[ ಪಾಠಾಂ. ಕೊಂ, ಬಿಂ ]ಕದೆ ಬಂದೊಡ್ಡಿ ನಿಂದುವರೆಡುಂ ಪಡೆಗಳ್ (ನೇಮಿಪು. ೦೨-೦೦೦) ; ಶಂಕೆಯಿಲ್ಲದೆ ಬದಿಯಲಿ ಬಂದು ನಿಂತು ಪೊಂಕದಲಿ ನಲಿದಾಡುವನವ್ವಾ (ಪುಕಂಕ. ೫-೦೩೦-೨) ; ಮುನೀಂದ್ರದೇವತಾಸಂಕುಳಮೊಲ್ದು ಭಕ್ತಿರಸಪೂರಣದಿಂದೆ ಪರಸುತ್ತ ಸೇಸೆಯು ಪೊಂಕಮದಾಗೆ ಸೂಸಿದರ್ (ಹಾಲಾಸ್ಯ. ೦-೦೬-೬೦). ೩. ಸೊಗಸು ; ಶೋಭೆ : ಕಂಕಣಾರ್ಜುಣತ್ಕಾರಕಿಂಕಿಣೀಕಲರವದ ಪೊಂಕ ಮೇರ್ಪಡಲು ಮಿನಾಂಕನೋಜೆಯು ಬೆಡಗ ಸೋಂಕಿಸುತ ವಿಟತತಿಗೆ ಬಾಪನ್ನವನ್ನರೆವ ನಲವು ಚಿಲುಗಾಗಿರ್ದುದು (ಕಂಕಾರು. ೦-೪-೨೮).

[< ಪೊಂಗು$_1$ /ತಮಿ. ಪೊಜ್ಞು, ಪೊಕ್ಕ ; ಮಲ. ಪೊಕ್ಕ ; ತೆಲು. ತೆಲು. ಪೊಂಕ]

**ಪೊಂಕಂಗಿಡಿಸು** (ಕ್ರಿ). ಗರ್ವಭಂಗಮಾಡು : ಶಿತಾಸ್ತ್ರಂಗಳ್ ಪೊಂ[ಕ]ಂಗಿ [ಪಾಠಾಂ. ಪೊಂಖಂಗಿ, ಪೋಗಂಕ]ಡಿಸೆ ಸುಗಿದಂ ಭಾರ್ಗವನಿದೇಂ ಪ್ರತಿಜ್ಞಾ ಗಾಂಗೇಯಂಗಿದಿರದಿರ್ದಿನಿಲ್ಲನ್ನರೊಳರೇ (ಕಂಶಭಾ. ೧-೬೦) ; ಕಿಂಕರ್ವಾಣ ಪ್ರವಣರರೆಬರ್ ಬರ್ಪಿನಂ ಕಾದು ತನ್ನಂ ಬಿಂಕಂ ಪೊಂಕಂಗಿಡಿಸೆ ನನೆವಿಲ್ಲಾತನಂ ತೂಟ್ಟ ದಿವ್ಯಾಲಂಕಾರಗಳ್ ನಯನಸುಖಮಂ ನೀಡೆ (ಕಂಗಾವಪ. ೭-೦೩೦). [ಪೊಂಕಂಗಿಡು (< ಪೊಂಕಂಗೆಡು) + — ಇಸು$_3$]

**ಪೊಂಕಂಗಿಡು** 'ಪೊಂಕಂಗೆಡು' ನೋ.

**ಪೊಂಕಂಗೆಡು, ಪೊಂಕಂಗಿಡು** (ಕ್ರಿ). ಗರ್ವಭಂಗವಾಗು ; ಸೊಕ್ಕಿಳಿ : ಪೊಂಕಮುಳ್ಳವರ್ ಪೊಂಕಂಗೆಟ್ಟಾಡೆ (ದರ್ಪಾಪ್ಶು. ೦೩-೨೩). **ಪೊಂಕಂಗಿಡು** : ಅಂದದ ನರೇಂದ್ರತನಯರು ಪೊಂಕಂಗಿಡೆ ಜನದ ನೆರವಿ ಬಾಯಂ ಬಿಡೆ...ಕೊಂಡುದರ್ಜುನನ ಶರಂ (ಬಿಂಕಂ. ೦೦-೦೫). [ಪೊಂಕ + ಕೆಡು$_1$]

**ಪೊಂಕು$_1$** 'ಪೊಂಗು$_1$' ನೋ.

**ಪೊಂಕು$_2$** 'ಪೊಂಗು$_2$' ನೋ.

**ಪೊಂಕುಂದ, ಪೊಕ್ಕುಂದ, ಹೊಂಕುಂದ** (ನಾ). ಒಂದು ಊರಿನ ಹೆಸರು; ☞ ಈಗಿನ ಕೋಲಾರಜಿಲ್ಲೆಯ ಬೌರಿಂಗ್‌ಪೇಟೆ ತಾಲ್ಲೂಕಿನ ಹನಕುಂಡ : ಶ್ರೀಮಾಧವಮುತ್ತರಸರ್ ... ಆವನ್ನನಾಡು ಮೂವತ್ತುಂ ಪೊಂಕುನ್ದು ಪನ್ನೆರಡುಮಾಳುತ್ತು[ಮಿ]ರೆ (ಎಕ. X. ಬಾಂಿಂಗ್. ೦೩ ೨ ; ಸು. ೩೦೦) ; ☞ ಇದು 'ಪೊಂಕುಂದ' ಎಂಬುದರ ಅಪಲಿಖಿತ ; ಸ್ವಸ್ತಿಶ್ರೀ ದಿಲೀಪಯ್ಯಂ ಪ್ರಿಥುವೀರಾಜ್ಯಂಗೆಯ್ಯುತ್ತಿರೆ ಪೊಂಕುನ್ದದ ತುಱುಗೊಳೆ ... ಕಾದಿ ಸತ್ತು ಸಗ್ಗಿಯಾದನ್ (ಪ್ರಕಂ. ೦೯೩೦, ೯-೨ ; ೯). **ಪೊಕ್ಕುಂದ** : ಪೊಕ್ಕುನ್ದದ ತುಱುಗೊಳೆ ಕೊಂಗವುಂಗಲದ ಮೇಯಯ್ಯ ಕಾದಿ ಸತ್ತು ಸಗ್ಗೆಯ್ದದ (ಎಕ. X. ಬಾಂಿಂಗ್. ೪೦-೨ ; ಸು. ೯೫೦). **ಹೊಂಕುಂದ** : ಸ್ವಸ್ತಿಶ್ರೀಮತು ಪಲ್ಲವಾನ್ವಯಪ್ರದೀಪಕವರ್ ಕುಮಾರವರ್ ಮಾಚಿ ದೇವರಸರುಮವ್ . . . ರಾಜಾಧ್ಯಕ್ಷ ವಾಮನಕ್ರಮಿತ್ತರುಮವ್ ಹೊಳಲ ಕೆಱೆನಾಡುಮುಮವ್ ಹೊಂಕುನ್ದಮೂವತ್ತುಮುಮವ್ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನೆಯಿನಾಳುತ್ತವಿರ್ದ್ದು (ಎಕ. XI. ಚಿತ್ರದು. ೨೩-೨೦ ; 1205).

[ಪೊಂ (< ಪೊನ್) + ಕುಂದ$_3$]

**ಪೊಂಗ$_1$** (ನಾ). ಧೈರ್ಯಶಾಲಿ ; ದಿಟ್ಟ : 'ಚಿನ್ನಪೊಂಗ' ಪರಾ. [ಪೊಂಗು$_2$ + — ಅ$_7$]

**ಪೊಂಗ$_2$** 'ಪೊಂಗಯಿ' ನೋ.

**ಪೊಂಗಂಟೆ, ಹೊಂಗಂಟೆ** (ನಾ). ಚಿನ್ನದ ಗಂಟೆ : ಎಳಸದ್ರುದ್ರಾಕ್ಷಮಾಲಾ ಭರಣದ ಕೊರಲೊಳ್ತಳ್ತ ಪೊಂ[ಪಾಠಾಂ. ಹೊಂ]ಗಂಟೆಯಿಂ . . . ಎಸೆವ ಪೇರೆಳ್ತುಗಳ್ (ಪ್ರಶಕಂ. ೩೯-೩೪) ; ಬಾಳದೊಳ್ ಬಂಧಿಸಿದ ಜಲ್ಲಿ ಪೊಂಗಟ್ಟ [ಂಟೆ]ಗಳ ಮೇಳದಿಂ ಸೊಗಸಾಂತ ಚೆಂಡುವೂವ್ಗಳನು ವಿಗೆ ಢಾಳಿಸುವ ಪುಲಿವಾಲಗಳನಾಂತ ತುಳಿಲಾಳ್ಗಳು (ಶ್ರೀರಂಗ. ೭-೦೦). **ಹೊಂಗಂಟೆ** : ಹಯನಿಕರ . . . ಹೊತ್ತುವು ರ್ಚುಡಿವ ಹೊಂಗಂಟೆಯು ವಿಡಾಯವರೂಥ ವನು (ಕುಮ್ವಾ ೮೮. ೪-೮೨) ; ಹೊಂಗಂಟೆ ಹೊಮ್ಮೇಳದ ಕಠಾರಿಗಳು . . . ಒದವಿತೊಗ್ಗಿನಲಿ (ಮೋಚಕ. ೦೯-೦೦). [ಪೊಂ (< ಪೊನ್) + ಗಂಟೆ$_2$]

**ಪೊಂಗಂಬ** (ನಾ). ಚಿನ್ನದಿಂದ ಮಾಡಿದ ಕಂಬ ; ಬಂಗಾರದ ಕಂಬ : ವರತನು ಪೊಂಗಂಬವಾಗೆ ಪೊಲ್ಲುಟ್ಟಂಬರದ ಸೆಱಗು ಪಟವಾಗೆ ಅರಲ್ಗಣ್ಣು ಮಿನಾಗೆ ಬಂದರು ಪೆಣ್ಗಳು ಸ್ಮರನ ಪತಾಕೆಯಂಬಂತೆ (ಕಂಕ್ರಶಾ. ೦೨-೦೩೪). [ಪೊಂ (< ಪೊನ್) + ಕಂಬ$_1$ (< ಕಂಭ)]

**ಪೊಂಗಜೆ** (ನಾ). ಬಂಗಾರದ ಗೆಜೆ : ಪಾಱುಂಬಳೆ ಸಂಕು ಪೊಂಗಜೆ ಬಿಗುರ್ಪಿನ ಬೀಯುಮುರಲ್ದ ಪೇರುರಂ (ಚಕಪು. ೩-೮೯).

[ಪೊಂ (< ಪೊನ್) + ಗಜೆ]

**ಪೊಂಗಟ್ಟ, ಪೊಂಘಟ್ಟ** (ನಾ). ಬಂಗಾರದ ಗಟ್ಟ,-ತುಂಡು : ಸುರ ಶೈಲಂ ಪುಟ್ಟ ಪೊಂಗಟ್ಟ [ಪಾಠಾಂ. ಬುಟ್ಟ]ವೊಲಿರೆ . . . ಜಗದ್ವ್ಯಾಪಿಯಾ ದತ್ತುಂಯುದ್ದೋದ್ದುರತತ್ಸೇನಾಧ್ವಯಾಭ್ಯುಚ್ಚಲನದಳದಿಳೋತ್ಪಾತಪಾಂಸು ಪ್ರತಾನಂ (ಕಂಪ್ರಪು. ೦೦-೬೬ ; ಕಾವ್ಯಶಾ. ೪೬೦ ನೋ). **ಪೊಂಘಟ್ಟ** : ಕೆಸಱೊಳಗಬ್ಬಂ ಕಲ್ಲೊಳು ವಿಸುಗುವ ಪೊಂಘಟ್ಟ ಪೋಲವಂತಾ ಯೆಡೆಯಂ ಪಸುಧಾಸೇವ್ಯಂ ಕ್ಷೀರಂ ಪಸುವಿನ ತನುವಿನೊಳೆ ಪುಟ್ಟ ಪೋಲದು ತನುವಂ (ಚಕಾರ. ೨೯೬). [ಪೊಂ (< ಪೊನ್) + ಗಟ್ಟ]

**ಪೊಂಗಟ್ಟಿಗೆ, ಹೊಂಗಟ್ಟಿಗೆ** (ನಾ). ಚಿನ್ನದ ಕೋಲು : ಹಡಪ ಕಾಳಾಂಜಿ ಪೊಂಗಟ್ಟಿಗೆ ಕಂಚು ಕನ್ನಡಿ ಗಿಂಡಿ ಬಜ್ಜಣಿಗೆಗಳ ಪಿಡಿವೂಳಿಗೈವ ಬಿಂಕ ಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹರಿಕ. ೦-೦೬). **ಹೊಂಗಟ್ಟಿಗೆ** : ಹರುಷದಲಿ ನೃಪ ಹೊಂಗಟ್ಟಿಗೆಯ ಚರರಿಂದಲಾ ಮನಮುಟ್ಟದಾಪ್ತರ ಕರೆಸಿ (ಕೂರರಾ. ೨-೮-೦೦). [ಪೊಂ (< ಪೊನ್) + ಕಟ್ಟಿಗೆ$_1$]

**ಪೊಂಗಡಗ,** ಹೊಂಗಡಗ (ನಾ). ಬಂಗಾರದ ಕಡಗ : ಬೇಸರಿಂದೆಡಗಯ್ಯೊಳ್ ಒಡಿದಾಂತು ಪೊಂಗಡಗವೊಂದಂ...ರಂಜಿಪನಿವಂ ತೇಜೋನ್ವಿತಂ ಭೂಮಿಪಂ (ಶಾಶಾಂತ. ೬೨-೦೩೭). **ಹೊಂಗಡಗ** : ಹೊಂಗಡಗದ ಲಿಂಗವಂತೆಗೆ ತೋಳಬಂದಿಯ ಬಾಲಕಿಗೆ . . . ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ . . . ಷೋಡಶಸಹಸ್ರವಿಳಾಸಿನಿಯರ್ವೆರಸು (ಗಿರಿಳ. ೩-೯೧ ಕ); ಹೊಂಗಡಗದ ಲಿಂಗವಂತಂ ಉಡೆವಣೆಯ ದಿಗಂಬರಂ ಗೆಜ್ಜೆಗಳ ಸಜ್ಜನನೆನಿಪ ಸಿದ್ಧರಸು . . . ಭೋಂಕನೆದ್ದು (ಚಿರ. ೦೨-೧೦೩).

[ ಪೊಂ (<ಪೊನ್) + ಕಡಗ$_1$ ]

**ಪೊಂಗಡಲು,** ಹೊಂಗಡಲು (ನಾ). ಚಿನ್ನದ ಬಣ್ಣದ ಸಮುದ್ರ ; ಹೊಂಬಣ್ಣದ ಕಡಲು : ಪೊಂಗಡಲ ನುಣ್ದೆರೆಗಳ ಬಣ್ಪಿನ ಮಲ್ದಿರಳ್ಕೆಯ ಗಾಂಭೀರ್ಯದಿಂದ ಚೆಲುವೇಸುತ್ತ (ಕುಂತ್ರಿ. ೬೬-೦೭). **ಹೊಂಗಡಲು :** ಪಡುವಣ ಹೊಂಗಡಲಿನಲ್ಲಿ ಮಾಯಲಿರದಿರುವ ಮುಳುಗುನೇಸರು (ಕರುಕ್ಕ. ೦೨೯) ; ಬಾ ಗೆಳತಿ, ನನ್ನೊಡನೆ ಗಗನದಂಚಿಗೆ ರವಿ ಮೂಡುವ ಹೊಂಗಡಲಿನ ಮಿಂಚು ಹೊಂಟಿಗೆ ! (ಅಂಜೂ. ೯೩).

[ ಪೊಂ (<ಪೊನ್) + ಕಡಲು (<ಕಡಲ್$_2$) ]

**ಪೊಂಗಣೆ** (ನಾ). ಚಿನ್ನದ ಗಣೆ : ಬೆಳಗಿಯ್ಯುಂ ಪೊಂಗಣೆಯುಂ ಘಟಿತರುಮಿದೊಳ್ಪಯಂಗಳಿಂ ಕುಸುಮರಜಾನಿಳನಿಂ ಪಗರೆಯ ಪರಿಯಿಂ ತಳರದ ಬಿರಿಬಲ್ಲುಂದೆನಾಳ್ಕೆಸದಿಕರ್ಗ್ಗಂ (ಶಾಸ. IX-i, ೨೯೯-೦೩ ; 1147).

[ ಪೊಂ (<ಪೊನ್) + ಗಣೆ$_2$ (<ಕಣೆ$_2$) ]

**ಪೊಂಗಣೆ,** ಹೊಂಗಣೆ (ನಾ). ಚಿನ್ನದ ಬಾಣ : ಮಕರಾಂಕಮಂಡಿತ ಪೊಂಗಣೆಗಳ್ಗೆ ಮಹಾಕ್ಷ್ಮೀಮೋಟಿಯ ಸಾರ್ಚಿದಂತೆ ನಖಚಕ್ರದಶದಿಂ ಬೆರಲ್ಗಳೊಪ್ಪಿರ್ದುವು (ಪೋಚಕ. ೨೩-೧೯). **ಹೊಂಗಣೆ :** ಹೊಳಕಿಸಿದ ಹೊಂಗಣೆಯ ಶರಧಿಯು ತುಳುಕಿಸಿದ (ಅಂಬಿಕಾ. ೨೦-೩).

[ ಪೊಂ (<ಪೊನ್) + ಕಣೆ$_1$ ]

**ಪೊಂಗದ** (ನಾ). ಚಿನ್ನದ ಕದ : ಸೋಮೇಶ ನೀಂ ತೆಗಿಸು ಬಾಗಿಲ ಪೊಂಗದಂಗಳನೆನುತ್ತಂದೋಹಿಲಂ ಕೂಗಿದಂ (ಅಪ್ಪಟಿ. ೦೦-೬೦) ; ನವ ಪುಷ್ಪರಾಗಾಳಿಯುಂ ಸಮದ ಬಾಗಿಲ್ ಪೊಂಗದಂಗಳಿಂ ಪೇಳಲಚ್ಚರಿಯಾದುದರಮನೆ (ತಿಂಕ. ೩-೯೮). [ ಪೊಂ (<ಪೊನ್) + ಕದ (<ಕದವು$_1$) ]

**ಪೊಂಗದಳಿ,** ಹೊಂಗದಳಿ (ನಾ). ಒಂದು ಬಗೆಯ ಬಾಳೆ; ಹೊಂಬಾಳೆ: ತಾಮರಸಜನು ನಿರ್ಮಿಸಿದ ಪೊಂಗದಳಿಯೊ ವಾಮಲೋಚನೆಯ ತೊಡೆಗಳೊ (ಶಶೀಕ. ೨-೨೨); ಪೊಂಗದಳಿಸ್ತಂಭಂಗಳು ನೆರೆ ಗೋಲಿಪಾ ಪೋಲಿವ ನುಣ್ದೊಡೆಯುಗಳಂ (ಶಶಪೋ. ೭-೦೩). **ಹೊಂಗದಳಿ :** "ಗೌರೀಕ — ನೀರಿಳ್ಪೆ, ಹೊಂಗದಳಿ" (ಚಿತ್ರ. ೩೨) ; ಹೊಂಗದಳಿಯ ಕೋಮಲಪತ್ರ ವೀಜನದಿಂಗನೆ ಮೆಚಿಪಳೊತ್ತಿನಲಿ (ಕೋಹಕ. ೩-೩೯).

[ ಪೊಂ (<ಪೊನ್) + ಕದಳಿ$_2$ (=ಕದಲಿ) ]

**ಪೊಂಗದಿರ್$_1$** (ನಾ). ಚಿನ್ನದ ಬಣ್ಣದ ತೆನೆ : ಪೊಂಗದಿರಿನೆನೆ ಪೊಂಗದಿರಿಂ ಬಗ್ಗೊಳಿವ ಕೆಯ್ಯೊಲನತ್ತಣಿಂ ಪಕ್ಕಿ ಸೋವ ಕಳ್ಮಸಜವ್ವನೆಯರ ಮೆಲ್ಲುಲಿ ಕೇಳಿವರ್ಪುದು (ಅಮೃಕ್ಕ. ೯-೬). [ಪೊಂ (<ಪೊನ್) + ಕದಿರ್$_1$]

**ಪೊಂಗದಿರ್$_2$, ಪೊಂಗದಿರಂ,** ಹೊಂಗದಿರು (ನಾ). ಚಿನ್ನದ ಬಣ್ಣದ ಕಿರಣ ; ಹೊಂಬಣ್ಣದ ಕಿರಣ : ಪೊಂಗದಿರ್ ಚವರಿಯಂ ಬೀಸಿ ರವಿ ಮೂಡಣದ್ರಿಯನೇರಿ ಬರ್ಪನಿತರೊಳ್ (ಶ್ರೀಚಾಪಟ. ೩೯-೦೨೩). **ಪೊಂಗದಿರು:** ಗಗನಾಂಗಣವನ್ನು ತನ್ನ ಪೊಂಗದಿರುಗಳಿಂದಲೇ ದೀಪ್ತಿಗೊಳಿಸುವ ಸೂರ್ಯ (ಕ್ಕೋಟಿರ. ೦೯೨). **ಹೊಂಗದಿರು :** ಮೇರುಗಿರಿಯೊಂದುದಿನ ಗರ್ವದಿಂ ತಲೆಯೆತ್ತಿ ಕಿಂಗದಿರ ಹೊಂಗದಿರ ಜಿಹ್ವೆಯಲಿ ನುಡಿಯಿತ್ತು (ಕಿಶಿತೋ. ೨೦-೨); ಹೊಂಗದಿರ ಜೀರ್ಕೊಳವಿಯಿಂ ಸಂಜೆ ಜಿರ್‍ರೆದು ರಂಗೆರಚಿ (ಕಿತ್ತಾಂಗ. ೨೦-೩೩೭). [ ಪೊಂ (<ಪೊನ್) + ಕದಿರ್$_2$ ]

**ಪೊಂಗದಿರು** 'ಪೊಂಗದಿರ್$_2$' ನೋ.

**ಪೊಂಗದುಗು** (ನಾ). ಚಿನ್ನದ ಗಜ್ಜುಗ : ಜೂಜಿನಲಿ ಭರವಸದೊಳಾಸಕ್ತಿಯುವಡೆದು ಪೊಂಗದುಗುಗಳ ಕರತಳದೊಳಾಂತು (ಕೌಂಡಕ್ಕು. ೦೭-೩).

[ ಪೊಂ (<ಪೊನ್) + ಗದುಗು$_1$ (<ಗರ್ದುಗು) ]

**ಪೊಂಗದ್ಯಾಣ** (ನಾ). ಚಿನ್ನದ ಗದ್ಯಾಣ : ಅರಸರ ದೆಸೆಗೆ ಸಿದ್ದಾಯಂ ಪೊಂಗದ್ಯಾಣಮೆರಡು (ಎಪ. XIV. ೩೬೯-೦೭; 946); ಎಲಸೆಯ ಮಹಾಜನಕ್ಕೆ ಕೊಟ್ಟ ಪೊಂಗದ್ಯಾಣವಯ್ಯುತ್ತಯ್ದು (ಮೈಸಾ. ೦೯೨೯, ೬೯-೦೩ ; 964) ; ಅಂಕದೊಳಂ ಪೊಂಗದ್ಯಾಣಂ ೧೨೦ (ಎಪ. XIII. ೯೯-೬೩; 1112).

[ಪೊಂ (<ಪೊನ್) + ಗದ್ಯಾಣ]

**ಪೊಂಗನ್ನಡಿ** (ನಾ). ಚಿನ್ನದಿಂದ ಮಾಡಿದ ಕನ್ನಡಿ : ಕಣ್ಮಲರ್ಗಳ್ ಕಡುನಿಡಿದಾದುವು ಪೊಜಿಪುಣ್ಮಿತು ಪೊಂಗನ್ನಡಿಮೊಗದೊಳ್ ಪೊಗರುಣ್ಮಿದುದಂಗಲತಿಕೆಯೊಳು ಕಂಪು (ಶಿಮಕಾ. ೩-೨೩).

[ ಪೊಂ (<ಪೊನ್) + ಕನ್ನಡಿ$_1$ ]

**ಪೊಂಗಯ್** (ನಾ). ಹೊಂಬಣ್ಣದ ಕೈ : ತಲೆಯಲ್ಲಿ ಪೊನ್ನ ಮುಡಿ, ಪದದಲಿ ಪೆಂಪು, ಬೆಳ್ದಾವರೆಯು ಪೊಂಗಯ್ ! (ಹೊಂಗಳು. ೦೭-೦).

[ ಪೊಂ (<ಪೊನ್) + ಕಯ್$_2$ (<ಕೆಯ್$_2$) ]

**ಪೊಂಗಯಿ, ಪೊಂಗ್ಯ$_1$** (ನಾ). ದೋಣಿ ; ನಾವೆ : ದೋಣಿಯಲ್ಲಿ ಅಥವಾ ಪೊಂಗಯಿಯಲ್ಲಿ ಏಕ್ಕ ಹುಡುಗರ ಸಂಗಡವಿದ್ದಾಗ ಸಾಮಾನ್ಯವಾಗಿ ನಾನೇ ಅದನ್ನು ನಡೆಸುವ ಯಜಮಾನನಾಗುತ್ತಿದ್ದೆ (ಕಿಅಪ್. ೦೭). **ಪೊಂಗ್ಯ$_1$** : ಪಂಪನೆಂದರೆ ಎರಡು ಭಾರತಗಳ ದೋಣಿಗಳಲ್ಲಿ ಕಾಲಿಟ್ಟು ತಾನೇ ಮುಳುಗಿಹೋಗುವಂತಾಪನೆಂದು ಭಾವಿಸುವುದಾಗಲಿ, ಆ ಕಾರಣದಿಂದಲೆ ಸುಭದ್ರೆಯನ್ನು ನಾಯಿಕೆಯನ್ನಾಗಿ ಮಾಡಿದ ಪೊಂಗ(ಕಿರುದೋಣಿ)ವನ್ನೇರಬೇಕಾಗಿ ಬಂತೆಂದು ಬಗೆವುದಾಗಲಿ, ಈ ಎರಡರಿಂದಲೂ ಪರಿಣತಿಯೊಂದೇ (ಪಾಪೋಚ. ೦೯೩). [ ← ತುಳು. ಪೊಂಗಾಯಿ ]

**ಪೊಂಗರಗ,** ಹೊಂಗರಗ (ನಾ). ಚಿನ್ನದ ಕರಗ ; ಬಂಗಾರದ ಜಲಪಾತ್ರೆ : ಪೊಂಗರಗದೊಳ್ತೀವಿದ ಘುಸೃಣರಸಂ (ಪಾಗಳು. ೨೦-೩೬ ಕ); ಪನ್ನೀರ ಗಿಂಡಿ ಕುಡಿನೀರ ಪೊಂಗರಗ . . . ಬಹುವಿಧಾಭರಣವಿತತಿಗಳ ನಾಂತ ಕನ್ನೆಯರು . . . ನೆರೆದಿರ್ದರು (ರಾಶಿಚ. ೭-೮೯). **ಹೊಂಗರಗ :** ನೀಡಿಹರು ಪನ್ನೀರ ಹೊಂಗರಗದಲಿ ಸಲಿದಾ ನಾರಿಯರು (ಶ್ರೀಕುಂ. ೯-೩೯). [ ಪೊಂ (<ಪೊನ್) + ಕರಗ ]

**ಪೊಂಗರಡಿಗೆ,** ಹೊಂಗರಡಿಗೆ (ನಾ). ೧. ಚಿನ್ನದ ಸಂಪುಟ,–ಭರಣಿ : ತಂದೆ ಪುಷ್ಪವನೊಂದನಿಂದುಪಪಾಳಿಗೊಂದು ಮುಂಬಿಡೆ ಪೊಂಗರಡಿಗೆಯ (ಕೋಚಕ. ೦.೭೨). **ಹೊಂಗರಡಿಗೆ :** ೧. ಹೊಜಿಡಾಗದಂತೆ ನಾಲ್ಕೊಗ ಜಂತದಲಿ ಹೋಗರಡಿಗೆಗಡದು ಕರ್ಮಣಿಯು ಜಿರುಡೆಯ ಬಿಗಿದಿಟ್ಟನೆಂಬಂತೆ ಬಲ್ಕೊಲೆಯೆರಡಚ ಮೊಗವು ತೋಜುದುವು (ಪೋಹಕ. ೨೩-೨೩). ೨. ವೀರಶೈವರು ಧರಿಸುವ ಚಿನ್ನದ ಕರಡಿಗೆ : ಎದೆಯ ಮೇಲೆ ಸೃಂಗಿಹಾರ, ಹೊಂಗರಡಿಗೆ (ಕುಂಗಳ. ೨).

[ ಪೊಂ (<ಪೊನ್) + ಕರಡಿಗೆ (<ಕರಂಡಿಗೆ) ]

**ಪೊಂಗರಿ** 'ಪೊಂಗಜಿ' ನೋ.

**ಪೊಂಗರು** (ನಾ). ಚಿನ್ನದ ಎರಕ : ಹೃದಯದೊಳೆಸೆವ ಶಾಂತತೆ ಬಹಿರಂಗದೊಳೊದವಿದ ರಾದೃತಯಿಂದ ಸದಮಲಗಿರದೊಪ್ಪಿತು ಪಾದರಸ ನೆಜಿಪುದಿದ ಪೊಂಗರುವಿನಂದದೊಳು (ಕಿಬುಸಂ. ೨೯-೯೭) ; ಕರಮೆಸೆದಳು ಕರುಘಾಡದ ಮೇಲೆ ಪೊಂಗರುವಿನ ಪುತ್ತಳಿಯಂತೆ (ಕಂಪಾಸಾಂ. ೨೦-೬೩) ; ಅರಮನೆಯಕುಳಶಾಲಾಗ್ರದ ಮೆಜಿವ ಪೊಂಗರುವಿನ ತನೆಗಳೊಪ್ಪಿದುವು (ಕಂಪಶ. ೭-೨೨). [ ಪೊಂ (<ಪೊನ್) + ಕರು$_2$ ]

**ಪೊಂಗರುವಪಾಡ** (ನಾ). ಚಿನ್ನದ ಉಪ್ಪರಿಗೆ : ಆ ಪುರವರದ ಪೊಂಗರು

ಮಾಡಗಳೊಳು ಕರಮೆಸೆದಿರ್ಪವು ಕಣ್ಗೆ ದುಕೂಲದ ವರವ್ಯಜಯಂತಿ ಕೋಟಿಗಳು (ಕಬಾಸಂ. ೩-೬೦). [ಪೊಂ (<ಪೊನ್) + ಕರುಮಾಡ]

**ಪೊಂಗರೆ,** ಹೊಂಗರೆ (ನಾ). ಜರತಾರಿ ಅಂಚು; ಜರಿಯಂಚು: ಒಟ್ಟಿರ್ಪ ಕಂಬೊಗರಿ ನೆರೆಯುಡೆಯು ತಲೆಸುತ್ತಿ ನಿಟ್ಟಳದ ಪೊಂಗರೆಯೆ ಕಣ್ಗೋರೆಗಳಿಗೆ ಕಟ್ಟಿರ್ಪ ಕವಲಾಗಂ ನೋಡೆ ಕಣ್ಗೆಸರ್ ಮುಟ್ಟುವುದೆ (ಗಾಜೋ. ೦೭೭-೩೩೨). **ಹೊಂಗರೆ:** ಈ ಪೊಂಗುರ ತೊಂಡಿಲು ಬಂದಿ ಹೊಂಗರೆಯಂಬರವೀ ನಾಲ್ಕು ಹಚ್ಚು ಪೂಣ್ಯಾಂಗನೆಗಿವು ಸಲಲಿ (ಕಕಕ. ೩೬-೬೭). [ಪೊಂ (<ಪೊನ್)+ಕರ್ಗೆ]

**ಪೊಂಗಲ್₁,** ಹೊಂಗಲ್ಲು (ನಾ). ಚಿನ್ನದ ಕಲ್ಲು: ಚಿಪ್ಪಿನ ಮಂದಿರದಲ್ಲಿ ಮುತ್ತು ಬೆಳೆದ ಭೇದದಂತೆ ವ್ಯಕ್ತಿಕೆಯು ಸಾತದಲ್ಲಿ ಹೊಮ್ಮಿದ ಪೊಂಗಲ [ಲ್ಲಿ] ಪರಿಯಂತೆ (ಸೋಕಶಾ. ೧೫-೬೬೭); ಸ್ವರ್ಗೋಪವರ್ಗ ಪೊಂಗಲ್ಲೊಳ್ (ಜಿಜಿಜಂ. ೦೬೭-೨ ೮೮೯). **ಹೊಂಗಲ್ಲು:** ಮಂದರತಳದ ಹೊಂಗಲ್ಲಂತೆ ಬಹಿರಂಗಸಾಮಗ್ರಿಯನೆಂದುಂ ಪಡೆಯದೆ ನಿಗೋದಾವಾಸದೊಳು ನಮೆಯುತ್ತಿರ್ಪರನಭವ್ಯಸಮಾನದ ಭವ್ಯರೆಂದಱಿವುದು (ಕನಾರ. ೧೯೩). [ಪೊಂ (< ಪೊನ್) + ಕಲ್₁]

**ಪೊಂಗಲ್₂,** ಪೊಂಗಲ್ಲು₁ (ನಾ). (ವಿಶೇಷವಾಗಿ ಸಂಕ್ರಾಂತಿಯಂದು) ಅಕ್ಕಿ, ಹೆಸರುಬೇಳೆ, ಬೆಲ್ಲ, ತುಪ್ಪ ಮುಂತಾದುವುಗಳಿಂದ ತಯಾರಿಸುವ ಖಾದ್ಯ; ಹುಗ್ಗಿ: ಈ ದಿನ ನೈವೇದ್ಯಕ್ಕೆ ಪೊಂಗಲ್ ಮಾಡಿದ್ದರು (ರೂ). **ಪೊಂಗಲು₁:** ಜನಕ್ಕೆಲ್ಲ ಪೊಂಗಲು ಹಂಚಿದರು (ಗಾಮಿಗಂ. ೧೬); ಪೊಂಗಲು ಮತ್ತು ಪಕ್ವಾನ್ನಗಳನ್ನು ಮಕ್ಕಳಿಗೆ ಕೊಟ್ಟು ತಿನ್ನಿಸುತ್ತ ಉಪಚರಿಸುತ್ತಿದ್ದರು (ಜಿರದು. ೩೦).

**ಪೊಂಗಲುಹಬ್ಬ** = ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನದಂದು ಸೂರ್ಯನಿಗೆ ಪೊಂಗಲಿನ ನೈವೇದ್ಯವಿಟ್ಟು ಪೂಜಿಸುವ ಹಬ್ಬ; ಮಕರಸಂಕ್ರಾಂತಿ: ನಮ್ಮಲ್ಲಿ ಪೊಂಗಲುಹಬ್ಬದಂದು ಎಳ್ಳು ಬೀರುವ ವಾಡಿಕೆಯಿದೆ (ರೂ).

[ದೇ.॥ ತಮಿ. ಪೊಙ್ಕಲ್; ತೆಲು. ಪೊಂಗಲಿ, ಪೊಂಗಳಿ]

**ಪೊಂಗಲ್ಲು₁** 'ಪೊಂಗಲ್₂' ನೋ.

**ಪೊಂಗಲ್ಲು₂** (ನಾ). ಒಂದು ಬಗೆಯ ಆಭರಣ (?): ಲಾಳಿದಾರ ಕಂಠಿಕೆ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚಿನ್ನಸರವ ಕಠವು (ಕಬಾಸಂ. ೬೩-೨೧). [?]

**ಪೊಂಗವಚ** (ನಾ). ಚಿನ್ನದ ಕವಚ; ಹೊನ್ನಿನ ಮೈಜೋಡು: ಸಂಗರಲಾಭೋತ್ಸವಪುಷ್ಪಾಂಗತೆಯಿಂ ಕಿಱಿಯವಾದೊಡಟ್ಟಿ ಜನಕ್ಕಾ ಪೊಂಗವಚಂಗಳನಿತ್ತರ್ . . . ಮಹಾವೀರಭಟರ್ (ಶಂಪ್ರತಿ. ೧೦-೬೧). [ಪೊಂ (<ಪೊನ್) +ಕವಚ]

**ಪೊಂಗವಡಿಕೆ** (ನಾ). ತಲೆಯಲ್ಲಿ ಧರಿಸುವ ಕವಡೆಯಾಕಾರದ ಒಂದು ಬಗೆಯ ಚಿನ್ನದ ಆಭರಣ: ಎಡೆಗಿಱಿದಿರೆ ಪೊಂಗವಡಿಕೆ ಬಿಡೆ ಫಳ್ಳನೆ ಗೆಜ್ಜೆ (ಜಗಂ. ೩-೪೪); ಮಾಂಗಾಯ್ ಕದಪಂ ಚುಂಬಿಸೆ ಪೊಂಗವಡಿಕೆ ನೊಸಲೊಳಲೆಯೆ (ಶಂಪ್ರತಿ. ೩-೫೬); ಪೊಳೆವ ಪೊಂಗವಡಿಕೆ[ಪಾಠಾಂ. ಗೆ] . . . ಉಲಿವ ಪೊಂಗೆಜ್ಜೆಗಳಿಂದ ಸಿಂಗರವಾಗಿ ನೆಲದೆಱೆಯನ ಸುತನಿಹನು (ಶಂಪ್ರಸಾ. ೯-೬೬). [ಪೊಂ (<ಪೊನ್) +ಕವಡಿಕ್ಕೆ]

**ಪೊಂಗವಳಿಗೆ** (ನಾ). ಚಿನ್ನದ ಕರಂಡಕ; ಹೊನ್ನಿನ ತಾಂಬೂಲದ ಪೆಟ್ಟಿಗೆ: ತಂಬುಲಂದೀವಿವ ಪೊಂಗವಳಿಗೆಯಂ ಪಿಡಿದಂಬೆಗವಟಯ್ಯು ದಳೊರ್ವಳಿಂದ್ರವಧು ತಂಬುಲವಂ (ಶಾಂತಿಪು. ೯-೦೫೦); ಮೆಲ್ಲನೆಯ್ತಂದೊರ್ವಳ್ ಪೊಂಗವಳಿಗೆಯಂ ಪಿಡಿದು ಮನಂಗೊಳೆ ನೃಪಸತಿಗೆ ನೀಡಿದಳ್ ತಂಬುಲವಂ (ಶರಶಜಾ. ೬೮-೯೭). [ ಪೊಂ ( < ಪೊನ್ ) + ಕವಳಿಗ್ಗೆ ]

**ಪೊಂಗಸೆದೇವ** (ನಾ). ಒಬ್ಬಾತನ ಹೆಸರು: ಪೊಂಗಸದೇವನ ಮಗ ಪೊನ್ನಯ್ಯ (ಎಕ. XII. ಚಾಪಗ. ೬೦-೧; ಸು. ೯೭೬). [ಪೊಂಗಸೆ ? + ದೇವ]

**ಪೊಂಗಹಳೆ,** ಪೊಂಗಾಳೆ (ನಾ). ಚಿನ್ನದ ಕಹಳೆ: ಕೋಟುಗಹಳೆ ಪೊಂಗಹ[ಪಾಠಾಂ. ಪೊಂಗಾ]ಳೆಯುತ್ಕಟತಾಳಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯಪಳಿದೆಸೆಯೊಳಾವರಿಸಲು (ಜಂಪು. ೩-೭); ಪಿಡಿನಡುವು ರತುನ ಕೈಪಿಡಿ ಗಂಡಮಂಡಲಗಳೆಡಿವಾವರಯು ಸ್ಮರನ ಪೊಂಗಹಳೆ ಜಂಘೆಗಳೊ ಪೊಡವಿ ಜಘನಂ ತಳೋದರ ಶ್ರೀಫಲೋಪಮಿತ ಕುಚ ಕಂಬುಕಂಠಗಳೊ (ಶಂಗಾಂತ. ೩-೬-೫೧). **ಪೊಂಗಾಳೆ:** ಮೇಲಿನ 'ಜಿಬಪು' ಪ್ರಯೋಗದ ಪಾಠಾಂತರವನ್ನು ನೋಡಿ. [ಪೊಂ (<ಪೊನ್) +ಕಹಳೆ]

**ಪೊಂಗಳಂತಿಗೆ** (ನಾ). ಚಿನ್ನದ ಜಲಪಾತ್ರ: ತಣ್ಣನ ನೀರ್ ಸಜೆಯಾದ ಪೊಂಗಳಂತಿಗೆಯಿರೆ ಸಜ್ಜೆಯೋಪರಿಯಿದೋಪರಿ ಮಾಡಿತು ಕಂತುಗೆಮ್ಮುಮಂ (ಶಂಪ್ರತಿ. ೬-೬೦). [ಪೊಂ (<ಪೊನ್) +ಗಳಂತಿಗೆ₁]

**ಪೊಂಗಳಶ,** ಹೊಂಗಲಶ, ಹೊಂಗಳಶ (ನಾ). ೧. ಚಿನ್ನದ ಕಲಶ: ಸ್ವರ್ಣಕುಂಭ: ಸುಲಲಿತಲಾವಣ್ಯಸುಧೆಯ ಪೊಂಗಳಶಗಳಿ ತುಂಬಿ (ಶಂಕಶಿ. ೯-೨೮). ೨. ಗುಡಿ ಗೋಪುರಗಳ ಮೇಲೆ ಇರಿಸುವ ಚಿನ್ನದ ಕಲಶ: ಅಭ್ಯುದಯಕರಮೆನಿಪ ಕರುಮಾಡದ ಶಿಖರದೊಳೊಪ್ಪಿ ತೋಱುಗುಂ ಪೊಂಗಳಶಂ[ಪಾಠಾಂ. ಸಂ](ಸುಕುಪಶಿ. ೦೦. ೩೦). **ಹೊಂಗಲಶ:** ೧. ಹೊಂಗಲಶ[ಪಾಠಾಂ. ಸ]ಮೊಲೆ ಹೊಗರೊಗುವ ನೆರೆದಿಂಗಳೊಳು ಮೊಗ . . . ಕಣ್ಣಿನವ ಸೋಲಿಸಿದವು ಮನೋಭವನ (ಶಾಕ್ಷ್ಯಗ. ೨೮-೨೬). ೨. ಬಲಿಬಲಿಯ ಸೌಧಾಳಿಗಳ ಹೊಂಗಲಶ[ಪಾಠಾಂ.ಳಸ]ಗಳ ಹೊದಱಿನ ಪತಾಕಾವಳಿಯ ಪಸರದಿನೆಸೆದುದಾ ಪುರ ಮುನಿಯ ಕಣ್ಮನಕೆ (ಕೂಕಂಠ. ೦-೯-೦೫). **ಹೊಂಗಳಶ:** ೧. ಇದು ಭೂದೇವತೆ ಹೊತ್ತ ಹೊಂಗಳಶಮೋ . . . ತಾನೆಂದು × × × ಲೋಕಂ ಮನೋಮುದದಿಂ ಬಣ್ಣಿಸೆ ಬಮ್ಮಿರ್ಸಟ್ಟಿ ಜಿನಚೈತ್ಯಾವಾಸಮಂ ಮಾಡಿದಂ (ಎಕ. VII. ಶಿಕಪೂ. ೩೭-೩೭; 1116); ತರಿಸಿದನು ಹೊಂಗಳಶ[ಪಾಠಾಂ.ಸ]ತತಿಯಲಿ ವರನದೀವಾರಿಗಳನು (ಶುಪ್ಪಾಕ. ೦-೨೮). [ಪೊಂ (<ಪೊನ್) + ಕಳಶ (=ಕಲಶ)]

**ಪೊಂಗಳಸ,** ಹೊಂಗಲಸ, ಹೊಂಗಳಸ (ನಾ). ೧. = ಪೊಂಗಳಶ ೧: ಪೊಂಗಳಸಂಗಳೊರ್ದ ಪುಣ್ಯತೋಯಂಗಳೊಳಟ್ಟಱಿಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟಮಂ (ಶಂಕಶಿ. ೧೦-೦೫); ರಸರಸಾಯನಂಗಳಂ ತೀವಿ ನೇಱಿದ ಪೊಂಗಳಸಂಗಳಂತಪ್ಪ ನವಫಲಂಗಳಿಂ ನೆಱೆದೊಪ್ಪುವ ಮಾತುಲುಂಗದ ಪೊದಱುಗಳುಮಂ (ಶಂಕಶಂ. ೦೦೭-೦೩); ನೀರ್ದುಂಬಿ ಮೆಱೆವ ಪೊಂಗಳ[ಪಾಠಾಂ.ಲ]ಸಂಗಳಂ ಕೊಂಡು ಬಂದರುತ್ಸವದಿಂದೆ (ಕೃಪಿಜ. ೩೯-೯). ೨. = ಪೊಂಗಳಶ ೨: ಮಂಗಳಜಲಕುಂಭದಂತೆ ಕಂಗೊಳಿಸುವ ಕೋಟೆಯ ತೆನೆಗೊಂದೊಂದು ಪೊಂಗಳಸಂಗಳೊಪ್ಪಿದುವು (ಶೂಕಶ. ೨೯-೩). **ಹೊಂಗಲಸ:** ೨. ಬೆಟ್ಟದ ಕಿತ್ತು ತಂದಿರಿಸಿದಂದದಿ ಮುಗಿಲಟ್ಟಣೆ ತನೆಗಳಗ್ರದಲಿ ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಿಟ್ಟಿರ್ದುವೇನ ಬಣ್ಣಿಸುವೆ (ಶೋಕಶ. ೨೦-೮). **ಹೊಂಗಳಸ:** ೧. ಕರುಮತಿಗೆ ಹೊಂಗಳ[ಪಾಠಾಂ.ಲ]ಸ ಹೊಂಗೊಪ್ಪರಿಗೆ . . . ವೈಡೂರಿಯದ ಪಡಿಗವ ಚಿರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ (ಶುಪ್ಪಾಗ. ೬-೦೩); ಮಡಿವಸನವನುಟ್ಟು ಪೂರ್ವದಿಗ್ವನಿತೆಯ ಮುಡಿಯೊಳು ಹೊತ್ತ ಹೊಂಗಳಸ ನಿಡಿನಿಂದ ರಥದ ಮೇಲಡರ್ದ ರನ್ನಗನ್ನಡಿಯಂತೆ ಸೂರ್ಯ ಮೂಡಿದನು (ಶೋಕಶ. ೦೬-೦೦೯). ೨. ತೋಱಿದನುತ್ತಮದ ಹೊಂಗಳಸ ಪೊಂದನು ನಿಮಿಷಮಾತ್ರದಲಿ (ಕೃಕುಂ. ೦೦-೦೬); ಕೋಂಟೆಯ ತೆನೆ ಹೊತ್ತ ಹೊಂಗಳಸಂಗಳಿಂದೆ . . . ರಂಜಿಸಿತು (ಶೋಕಶ. ೨೯-೨೩); ಹೊಂಗಳಸ ಏರಿಂಗುವಡೆ . . . ಸುಳಿವ ಮಾರುತದ ಪಾವಿತ್ರ್ಯದೊಸಗೆಯನು ತಳೆದು (ಕುಕಿದೇ. ೩೯-೦). [ಪೊಂ (< ಪೊನ್) + ಕಳಸ₁ (<ಕಲಸ)]

**ಪೊಂಗಜು**, ಪೊಂಗರಿ, ಪೊಂಗರಿ₁, ಹೊಂಗಜು (ನಾ). (ಬಾಣದ ಹಿಂಭಾಗಕ್ಕೆ ಕಟ್ಟುವ) ಚಿನ್ನದ ಗರಿ : ರವಿಕಿರಣಂಗಳನ್ನವಿಸಿ ಕಟ್ಟಿಲೆ ಕೈವಿಗೆ ಸುತ್ತಿ ಮುತ್ತಿ ದಿಗ್ವಿವರಮುನಾಗಸಂ ಪೊಳೆವ ಪೊಂಗಜುಯಿಂ ೯ವಿಲಾಗೆ ... ಬಾಣಸಂಬಳಂ ಕವಿದುವು (ಕಂರಾಚಿಚ. ೧೩-೯೩). **ಪೊಂಗರಿ** : ಪೊಳೆವ ಪೊವಿಮ್ಮುಡಿಗೆಯ ಪೊಂಗರಿಯ ಬಾಣಗಳ . . . ಸೆಳೆದು (ಪಪರೋ. ೧೨-೩೬). **ಹೊಂಗರಿ₁** : "ಹೊಂಗರಿ=ಚಿನ್ನದ ಗರಿ" (ಸಿಂಕೋ. ೩೩೯). **ಹೊಂಗಜು** : ಹೊಂಗಜುಯ ಬಿಲ್ಲುಕೋಲನೊಂದು ಕೈಯಲಿ ಪಿಡಿದು (ಪಸ್ಪತ. ೪. ೦೧೬-೩೩೬); ಹೊಗರೊಗುವ ಹೊಂಗಜುಯ ಬಲುಸರಳುಗಳ ಹೊದೆಗಳ ನಡೆದುವಡವಿಯ ಬೆಗಡುಗೊಳಿಸುತ ಮುಂದೆಮುಂದೆ ಪುಳಿಂದ ಸಂದೋಹ (ಕುಭಾಅ. ೧೩ ೨೨); ಸರಳ ಹಿಳುಕಿನ ಹೊಂಗಜುಯ ತುದಿ ವೆರಳಳೊಯ್ಯಾರಿಸುತ (ಕೃಭಾರ. ೩-೯-೦೩). [ಪೊ (<ಪೊನ್) + ಗಜು]

**ಪೊಂಗಜುಗೆ** (ನಾ). (?) : ಆ ಪ್ರಾಸಾದಂಗಳ ಚೌಪಳಿಗೆಗಳ ಪೊನ್ನ ಪೊಂಗಜುಗೆ ನೀಳ್ಪಿಂ ಬೆಳ್ಪುಮಂ ತಾಳ್ದಿ ಕರ್ಪಿನೊಳುಪಾಶ್ರಯಂಬಡೆಮ (ಕುಕಶಾ. ೩-೪೦ ಪ). [?]

**ಪೊಂಗಾಜು**, ಹೊಂಗಾಜಂ (ನಾ). ಚಿನ್ನದ ಬಣ್ಣದ ಗಾಜು ; ಹೊಂಬಣ್ಣದ ಗಾಜು : ಮಧುವಂ ವನಲಕ್ಷ್ಮಿ ಹೀರ್ವ ಪೊಂಗಾಜಿನ ಬಟ್ಟಲಂತೆ (ಪುಲ್ವು. ೫-೨೦). **ಹೊಂಗಾಜು** : "ಕಾಚನಭೂಷಣಂ— ಹೊಂಗಾಜು" (ಚಿತಾ. ೪೨). [ಪೊ (< ಪೊನ್) + ಕಾಜು]

**ಪೊಂಗಾರುಕ** (ನಾ). ಚಿನ್ನದ ಕೆಲಸ ಮಾಡುವವನು ; ಅಕ್ಕಸಾಲಿಗ : ಚಾರುವೈದ್ಯರ ಜೋಯಿಸರ ಪೊಂಗಾರುಕರ ಪರಿಹಾಸಕರ . . . ತೇರಂಗಳ ವಾಹಕರ ಜೋದರ ಸೇರುವೆಯ ಸಂಭ್ರಮದೊಳೆಸೆದಿರ್ದಂ ಧರಾಕಾಂತ (ಕಂಳಚಾ. ೧೦.೭). [ಪೊ (< ಪೊನ್) + ಕಾರುಕ₂]

**ಪೊಂಗಾಲಿ** (ನಾ). (ರಥದ) ಚಿನ್ನದ ಚಕ್ರ : ಅರದದ ಪೊಂಗಾಲಿಯ ಜೇರ್ಗರೆವಂದವುಸಂತವೀರ್ಯನೇಜಿಂವ ನಿನಗಂ ಪರಿವೆನಗಮೊಡನೆ ಕೇಡಂ ತರೆ ನಿನ್ನುಮನೆನ್ನುಮಂ ಪೆಜು ಕಾವಪನೇ (ಶಾಂತಿಪು. ೩-೦೦೦); ಪೊಳೆವ ಪೊಂಗಾಲಿಗಳಿಂದೊಪ್ಪುವ ರಥಂಗಳಿಂ . . . ಎಸೆದು (ಧರ್ಮಾಮೃ. ೮-೦೯೬); ಪೊಂಗಾಲಿ ಮಿಜುಗೆ ಪಜಿಯಿಗೆ ಬಾಂಗೆ ಪೆಡಂಮುಗುಬ . . . ರಥಂಗಳ್ ಪರಿದುವು (ಜಗು. ೭-೬೨). [ಪೊ (< ಪೊನ್) + ಗಾಲಿ]

**ಪೊಂಗಾಳೆ** 'ಪೊಂಗಹಳೆ' ನೋ.

**ಪೊಂಗಿಂಡಿ**, ಹೊಂಗಿಂಡಿ (ನಾ). ಕೊಂಬು ಅಥವಾ ಸೊಂಡಿಲಿರುವ ಚಿನ್ನದ ಪಾತ್ರೆ: ವರುಣಂ ಪೊಂಗಿಂಡಿಯ ವಾಸವನೆ ಡವಕೆಯುಂ ಪಾವಕಂ ದೀವಮುಂ . . . ಪಿಡಿದೋಲೈಸಿ ನಿಂದಿರ್ದರಾಗಳ್ (ಲಿಂಜಕೀ. ೦೯-೦೩೩). **ಹೊಂಗಿಂಡಿ** : ಎಲಮುನಿಗಳೋದಿದರು ಕನ್ಯಾವರಣಗಳ ಹೋಗಿಂಡಿಯುದಕ ವನೆರೆದರರಸನ ರಾಣಿಯರು ನಿಜಭಾವ ಶುದ್ಧಿಯಲಿ (ಅಪಂಚಾ. ೧-೨೯-೨೯). [ಪೊ (< ಪೊನ್) + ಗಿಂಡಿ]

**ಪೊಂಗಿರುಗಟೆ** (ನಾ). ಚಿನ್ನದಿಂದ ಮಾಡಿದ ಒಂದು ಬಗೆಯ ವಾದ್ಯ : ಪೊಂಗಿರುಗಟೆಯ ಕೇಳಿಕೆಯ ಜೋಕೆಗಳ ಭೂರಿಯೆನಿಸಿದ ಸೊನ್ನಲಿಗೆಪುರ (ಬಸಪು. ೫-೪೦). [ಪೊ (< ಪೊನ್) + ಗಿರುಗಟೆ]

**ಪೊಂಗಿಸು**, ಹೊಂಗಿಸು (ಕ್ರಿ). ೧. ಹೆಚ್ಚಿಸು ; ಅಧಿಕಗೊಳಿಸು ; ಉತ್ಕರ್ಷಗೊಳಿಸು : ಲಲನಾಸಂಭೋಗರೋಗು ಪಸಿವನುಡು ಗಿಸು ತ್ತಾ ಕಿರ್ಯಂ ಪೊಂಗಿಸುತ್ತುಂ ಬಲಮಂ ಕೈಗುಂದಿಸುತ್ತುಂ . . . ಸಲೆ ಲಜ್ಜಾಭಾವಮಂ ವಿಜಾಸುತುಮಿದೆ (ರಕ್ಷಾಶ. ೨೭). ೨. ಹಿಗ್ಗಿಸು ; ದೊಡ್ಡದು ಮಾಡು : ರೇಚಕ ಪೂರಕಗಳೆಂಬ ವಾಯು ಧಾರಣದಿಂ ಪೊಟ್ಟೆಗಳಂ ಪೊಂಗಿಸಿ ಕುಳ್ಳಿರ್ಪುದುಂ (ಶುಚಾಪ್ರ.೩-೯೯ ಪ). ಅಂಗವಂ ನಡುಗಿಸುತ ಬಸುಜಂ ಪೊಂಗಿಸುತ . . . ಬೆಚ್ಚುತ ಬೆದಜುತಂ (ಬಸಪು. ೦-೯೯). **ಹೊಂಗಿಸು** : ೧. ನಿನ್ನಂ ನುಡಿಯ ತೊಡಂಕಿನ ಬೆಡಂಗಿನಿಂ ಸೋಲಿಸಿ ಸಮಸ್ತರಾಜ್ಯವನು ಒಡಮುನಿ ಕೊಂಡು ಮೇಲೆ ಋಣವ ಹೊಂಗಿಸಿ ತಗುಳ್ವುದಿದು ದೈವಿಕಂ (ಹಕಾ. ೦೦-೦೩). ೩. ಚೆನ್ನಾಗಿ ಕುದಿಸಿ ಮೆದುವಾಗಿಸು ; ಹದವಾಗಿ ಬೇಯಿಸು : ಬೇವಾಗ ಗಂಜಿಯ ಬಸಿದುಕೊಂಡು ಮುಚ್ಚುಳನಿಕ್ಕಿ ಘಟ್ಟಿಪಾವದೆಗಟ್ಟಿ ತಜಿಗಂತ ದೊಳಗೆ ಹೊಂಗಿಸಿಕೊಂಡು ಮೃದುವಾಗಿ ಮಾಡಿದುದು ತಾ ಶುದ್ಧ ಮನ್ನೋದನಂ (ಸೂಶಾ. ೩-೨). [ಪೊಂಗು₁ + — ಇಸು₁]

**ಪೊಂಗು₁**, ಪೊಂಕು₁, ಹೊಂಗು₁ (ಕ್ರಿ). ೧. ಹೆಚ್ಚಾಗು ; ವೃದ್ಧಿಗೊಳ್ಳು ; ಅಧಿಕಗೊಳ್ಳು : ತಿರಿಪುತ್ತುಂ ಜವದಿಂ ಮುಕುಂದನಿಡೆ . . . ತದುತ್ತ ಮಾಂಗದೊಡನುದ್ವಂಪಾಜಿ ಮೃತ್ಸ್ನಾಘಟಂಬೆರಸುದ್ಯದ್ಬುಜದಂಡವರ್ತನ ದಿನುಗ್ರಾಡಂಬರಂ ಪೊಂಗೆ . . . ತಿರಿದುದಾ ಚಕ್ರಂ ವಿಯಚ್ಚಕ್ರದೊಳ್ (ಶಾಂತಿಪು. ೪-೩೪); ಅವಿವೇಕಿಯಾದ ನೃಪನೊಪ್ಪುವ ಪುಣ್ಯಂ ತೀರ್ದು ದೋಷಮುಂ ಪೊಂಗುವವೋಲ್ (ಉದ್ಭಟ. ೪-೨೭); ಗಂಗಾನದೀತಟಕೆ ನಡೆತಪ್ಪ ಷಟ್ಕೃತ್ತಿಕಾಂಗನೆಯರೀ ಮಹಾಜ್ವಾಲೆಯಿತ್ತಣದೆಂದು ಹಿಂಗದೀ ವೀರ್ಯದೆಡೆಗೈತಂದು ನೋಡುತಿರಲಾ ಸ್ತ್ರೀಯರಂ ಕಾಣುತೆ ಪೊಂಗು ತೊಡನೊಡನೆ ಘನಗಾಢದಿಂದವರ ಗರ್ಭಂಗಳಂ ಬಿಡದೆ ಭೇದಿಸಿ ಬಲಿಯ ಲಾಕ್ಷಣಂ (ಕಂಪು. ೩೯-೦೩). ೨. ಉಕ್ಕು ; ಸೂಸು ; ಹೊರಹೊಮ್ಮು : "ಪೊಂಗು-ಸ್ಫುಟನೇ (ಹೊಮ್ಮು, ಉಕ್ಕು)" (ಶಮದ); ಸುಧಾಂಗನಿಂ ಪೊಂಗುವೆಳದಿಂಗಳ ತೊಡರ್ದ ಕಂಗಳ ಬೆಳಗಿನ . . . ಲತಾಂಗಿಯರೆನಿಪ್ಪ ಪಣ್ಯಾಂಗನಾಜನವೆಸೆದುದು (ಹಕಾ. ೪-೪೦). ೩. ಕೆರಳು ; ಉದ್ರೇಕಗೊಳ್ಳು : ಪೊಂಗುವುದು ಗಡಕಿಕೋವದೆ ಕೆಂಗೋಲ್ಲೊಳ್ಳುದು ಗಡಿಂದ್ರ ಜಾಲದ ಸಿಂಗಂ ತಾಂ ಗಡ (ಶುಕಸಂ. ೨೫೨-೨೦). ೪. ವ್ಯಾಪಿಸು ; ಹರಡು : ಮಂಗಳಗೀತವಾದ್ಯನಿನದಂಗಳಶೇಷದಿಶಾತಟಂಗಳೊಳ್ ಪೊಂಗಿರೆ (ಪರ್ಶಪು. ೦೯-೩೯). ೫. ಅರಳು ; ಬಿರಿ ; ವಿಕಸಿಸು : ಮುಗುಮುಗಿಸುವುವು ಪೊಂಗಿ ಪೊಂಗೇದಗೆಗಳ್ (ಲೀಲಾವ. ೬-೦೨೪); ಶೃಂಗಾರವಾರಿ ತೀವಿದ ಮೊಗಗೊಳದೊಳು ಪೊಂಗಿದ ಪುಂಡರೀಕಗಳೊ...ತಿಂಗಳ ಮೊಗದಳಕ್ಷಿಗಳೊ (ಪರ್ಶಕ. ೨-೩೯); ಪೊಂಗುವ ಸಂಪಗೆದಂಡೆಯೊಳಂಗೈಸುವರಷಳಜನರಂ (ಕಕಂ. ೩-೯೬). ೬. ಉಬ್ಬು ; ದೊಡ್ಡದಾಗು ; ದಪ್ಪವಾಗು : ತನುಪಳಿರೇಖೆಗಳ್ ಕಿಡೆಯುಂಮೆಯ್ದೆ ಬೆಡಂಗಿಸದೊಂದು ರೇಖೆಯುಂ ತನಗೆಡೆಮಾಡಿ ಪೊಂಗೆ ನಡು (ಅಂಪು. ೬-೯೬); ಸುದತಿಯು ಗರ್ಭಚಿಹ್ನವುನ ದೇಪೊಗಟ್ಟುಪ್ಪುದೊ ಬಾಸೆ ಕರ್ಪನಾಂತುದು ನಡು ಕೂಡೆ ಪೊಂಗಿದುದು (೭ಗಂ. ೨-೯೩); ಪೊಂಗಿದಧರಂ ಮುಂಗಿದ ಕಣ್ಣಲರ್ವರೆದ ಸುಕ್ಕುಂಗುರುಳ್ (ಸೌಂದರ್ಪು. ೯-೨೦). ೭. ಉತ್ಸಾಹಿಸು; ಹಿಗ್ಗು : ಅಂಗಜನಂಕವಿದೆನೆ ವಿಗೆ ಪೊಂಗುವ ಮಧುವಿಂಗೆ ರಾಗದಿಂ ಕಟ್ಟಿದ ನಾರಂಗದ ಪಟ್ಟೆಯು ತೊಂಗಲ ಭಂಗಿಯನಿಳಿಸಿದುವು ಪೂತ ಮುತ್ತದ ಗೊಂಚಲ್ (ಪರ್ಶಪಡ. ೦೦-೩೭); ಇನಿಪಣ್ಗೊಂಚಲಂ ಕಂಡರಗಿಳಿಯಂತೆ ಪೊಂಗಿ ಪೊರೆಯಂಜು (ಅದ್ಭುತ. ೦೦-೦೦೭ ಪ); ಪೊಂಗಿ ನಾಟ್ಯನಾಡುತಂಗಜಾರಿಗೆ ನಮಿಸಿದಂಗವಜಾದಾ ಗಿರಿಜೆ ತಂಗಕೋಪದಲಿ ತನ್ನಂಗವಂ ತಾರೆನಲು (ಕಂಪು. ೧-೪); ಅಚ್ಚ ! ಪಿಡಿ ನಡೆದಪನೆನುತುಮರಟ್ಟಾಯಿಡಿಯುಡುತೆ ಪೊಂಗಿ ತಾಯು ನಿಡುದೋಳಂ ತಾಂಗಿ (ಅಮೃತ್ಯು. ೦೯-೨೯). ೮. ನವಿರೇಳು ; ರೋಮಾಂಚವಾಗು : ಪೊಂಗಿ ಹಾಡುತ ತಮುತಮಗೆ ವಾದ್ಯಂಗಳುಲಿಯಲ್ಕೆ (ಬಸಪು. ೦೯-೦೯); ಜಡಿದು ನಾಣ್ಗೆಡೆ ನುಡಿಯಲುಬ್ಬುವಂ ಬಿಜುಸಿನಿಂ ಪೊಡೆಯೆ ಪೊಂಗುವಂ (ಕಂಪು. ೦೦-೨೯). ೯. ಸೊಕ್ಕೇಳು ; ಗರ್ವಪಡು ; ಬೀಗು : ಪೊಂಗಿ ಸೊದರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುರದು ಸಿಂಗಂ (ಕಾವ್ಯಸಾ. ೦೦೦೯ ಚೂಡ್ರಕ); ಅನಗಿದವದಿರ್ದೊಡಂ ಚಲದಿನೆನ್ನೊಳೆ ಪೊಂಗಿ ಪೊಡರ್ಪುದೋರ್ಪಂ . . . ಕೊಂದಪನಕಾರಣದಿಂ ಮೊಜೆಯೋ ಮನೋಭವಾ (ಅಂಪು. ೨೨-೩೩); ಪೊಂಗುವ ರಿಪುಕುಳ

ಮದವಮಾತಂಗಮನಱಿಯಟ್ಟಿ (ಶಾಸ. XX. ೬೦-೧೬ ; 1088). ೧೦. ಹೊಳೆ : ಪ್ರಕಾಶಿಸು : ಪೊಂಗುವ ನುಣ್ಮೊಗು ಪೊಳೆದು ಪೊಱಮ ಸಂಚಿನ ನೋಟದಟ್ಟಿಯಿಂದಂಗಜವೀರನಾರುಬಟೆಯಂ ಪಟುಗೆಯ್ಯುತೆ ಬಾಜಿಪೋಜೆಯೊಳ್ (ಶಶಪ. ೬-೨). ೧೧. ಸೋಕು ; ಮುಟ್ಟು : ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾಳಿಜನಂಗಳ್ (ಶೃಶೃ. ೩ ೯೬). ೧೨. ತಟ್ಟು ; ತಾಕು : ಮಹಿಯು ಪೊಂಗಿ ತಲೆಕೆಳಗು ಮಾಡಿದ ಹಿಮದ ಮರ್ಘ ಭಾವು (ಕಾಶಕಂ. ೬-೦೯). ೧೩. ಕೂಗು ; ಅರಚು : ವಾತ ಪೂರಣಂಗಳಿಂ ನೊಂದಂತೆ ದೆಸೆದೆಸೆಗೆ ಪೊಂಗುವ ಗೂಗೆಗಳಿಂ . . . ಉಯ್ಯ ಲಾಡುವ ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಪೂರ್ವ್ವ). ೧೪. ಕಂದಣಿಸಿ ತುಂಬಿರು ; ಮೆಟ್ಟು : ಮುಂಗುರುಳನು ಪಿಡಿದೊಯ್ದೊನ್ನ ನವರತ್ನ ಪೊಂಗಿದ ಮಣಿಮಂಚದಲಿ ಅಂಗಜಕೇಳಿಯ ನಿತ್ಯನ್ನನುಳುಹೊ (ಕಂಪರ. ೯-೦೮೬). ಪೊಂಕು₁ : ೧೧. ಸೊಗಸನಗಲ್ದ ದಾಗಿಸೆ ಲತಾಂಗಮನರ್ತಿಯೆ ಪೊಂಕುವಾಸೆಯುಂ ತೆಗೆದಮರ್ದಪ್ಪುವಾಸೆಯ ನಭೀಕ್ಷಿಸೆ (ಪಂಪಾಶ. ೯-೭೮); ತುಂಗಪಯೋಧರೆ ಪಿಂದು ಸಿಂಗರಗೈದಾಸನ ದೊಳು ನಲ್ಲನರ್ಥಾಂಗವ ಪೊಂಕಿ ಕುಳ್ಳಿರ್ದು (ಶರಶ. ೧೦-೬೬). ಹೊಂಗು₁ : ೧. ಹೂತ ಹರುಷದ ಹೊಂಗಿಮುತ್ಸವದ . . . ಉಬ್ಬಿನಲಿ ಹೊಂಪುಳಿಯೋದನು (ಸಂಶಶ. ೩೩-೫೬). ೨. ಹೊಂಗಿ ಪೈತ್ಯಶ್ಲೇಷ್ಮ ತತಿ ರಂಧ್ರಂಗಳಲಿ ಮುಸುಕಿದಡೆ ತನುರೋಮಂಗಳನಿತುಂ ಕವುಚಿನಾತತೆ . . . ದೃಷ್ಟಿಗಳು ವಿಚ್ಛಿನ್ನವಾದಡೆ ನಿಮ್ಮಯಾಣೆ ಪ್ರಮಥರುಗಳಾಣೆ (ಬಸತ. ೯೯-೨೬). ೪. ಢೋಲ್ಲಾಳ ಢಳಂಕಾರ ಹೊಂಗುತಿದೆ (ಗಿಇಬಂ. ೭೦-೯). ೫. ಹೊಂಗಿದ ಪುಷ್ಪದ ಪರಿಮಳವನುಂಡಳ್ಳು ಅವು ತಮ್ಮಂಗವ ಬಿಟ್ಟು ಹೋಹಾಗ ಕಮ್ಮಣ್ಣಿಯಾಗದಿಪ್ಪುವೆ (ಶನ್ನವ. ೪. ೩೩೫-೭೦೦). ೬. ನವ ನೀಳಕಾಂತಿಯಿಂದಿದಿರೇಱುತಿರೆ ಬಾಸೆ ನಡು ಹೊಂಗಿ ಕಿಳ್ಳೊಡೆಯುದೊಪ್ಪದಿಂ ಹಿಗ್ಗುತಿರೆ (ಶಸರ. ೦-೦೦೯). ೭. ಜನಕಂ ಸಾಮಂತಭೀಮಮವ್ . . . ವಿಶಾಱದಂಗಿ ಹೊಂಗಿ ಮದವೇಱಿ ಚಲಂ ತಲೆದೋರಿ ಬಿಲ್ಲನಾದ್ದರ್ ಱುಸಿ ನೀವಿ ಜೇವೊಡೆದು (ಎಶ. XII. ಶಿಕ್ಯಾ. ೨೦-೯೬ ; 1160) ; ಸಂಗಡ ವಿರ್ದಂಗನೆಯರ್ ಶೃಂಗರಿಸೆ ಮಂಗಳಮುಖಿ ಹೊಂಗಿ ಹೊರೆಯೇಱಿ (ಗಿಂಶ. ೯-೬ ವ) ; ವನಜನಾಭಧ್ಯಾನಸುಧೆಯಲಿ ನನೆದು ಹೊಂಗಿದ ಕರಣ ಹೊರೆಯೇಱಿತ್ತು (ಕುವ್ಯಾದ್ರೋ. ೦-೨೨). ೧೦. ಹೊಂಗಿ ಮಿಡುಕುವ ವಿಮಾನ ಗುಂದಿಗಳಂ . . . ಪೂತಿಬೆಕ್ಕಂ ಹರಿಶ್ಚಂದ್ರರಾಯಂಗೆ ಕಾಣಿಕೆ ಯನಿತ್ತು (ಹಶಗಾ. ೫-೩) ; ಮುಗುಳುನಗೆಗಳ ಹೊಂಗುವಂಗದ ನಗೆ ಮೊಗದೊಳಾನಂದಬಿಂದುಗಳೊಗುವ ಕಂಗಳ . . . ಪಾಂಡವರೆಱಗಿದರು (ಕುವ್ಯಾಶ. ೦೬-೩೦) ; ಅರಸರ ವಿಭವದುತ್ಸವದ ತೆರವ ಕಂಡು ಕುಶಲವ ಪಡೆದ ಕಂಗಳಿವು ಹೊಂಗುವುವು (ಕುರಿಕೀ. ೯೬-೫). ೧೨. ರಂಗ ನಿನ್ನಯ ವಕ್ಷದೊಳಗಿರ್ಪ ಕೌಸ್ತುಭಮಂಗಂಡ ಘನಮಹಿಮರನು ಹೊಂಗದು ಕಿಲ್ಬಿಷವು (ಕಶಶಂ. ೩-೦೩). ೧೫. ಬಾಗು ; ಬಳುಕು : ಅವನ ಭಾರ ತುಂಬ್ದ ಹೊಡೆತಕ್ಕೆ ಚಚ್ಚಿನ ಕೈ ಹೊಂಗಿ, ಬೈಸಿಕಲ್ ಅವನತ್ತ ಬಾಗಿ, ಬೀಳುವುದರಲ್ಲಿತ್ತು (ಮಂಕಿಮ. ೧೯೩). ೧೬. ಹುಟ್ಟು ; ಉಂಟಾಗು ; ಪ್ರಕಟವಾಗು : ತಿಂಗಳಿಗೆ ತಲೆ ಮಾಸವೆರಡಱಲಂಗ . . . ಹೊಂಗುವವು ಧಾತುಗಳು ನಾಲಕುತಿಂಗಳಿಗೆ ಬರೆ ಹಸಿವು ತೃಷೆಗಳು ತಿಂಗಳೈದಱಲಿ (ಶಿಶಾಗ. ೩-೦೯-೨೦).

[ದೇ. ॥ ತಮಿ. ಪೊಙ್ಕು; ಮಲ. ಪೊಂಙು; ತುಳು. ಪೊಂಗು, ಬೊಂಗು ; ತೆಲು. ಪೊಂಗು ; ಕೋತ. ಪೊಂಗ್, ಪೊಗ್ ; ಕೋಲಾ. ನಾಯ್ಕಾ. ಪೊಂಗ್]

ಪೊಂಗು₂, ಪೊಂಕು₂, ಹೊಂಗು₂ (ನಾ). ೧. ಗರ್ವ : ಸೊಕ್ಕು: ಪೊಂಗುಱಿದು ಭರತನೃಪಚರಣಂಗಳ್ಗೆ ಮಾಗಧಾಮರಂ . . . ಬಾಗಿದಂ (ಆದಿಪು. ೦೨-೦೦೦) ; ಮಲೆಪರ ಪೊಂಗಡಂಗಿದುದು ಮನ್ನೆಯರುರ್ಕ್ಕು ಕದಲ್ದುದು (ಎಶ. XV. ೩೦-೯ ; 1028) ; ಅಂತಾ ದೇವತೆಯರ್ ಪೊಂಗುಱಿದು ಪಿಂಗಿ ಪೋಗೆ (ನೇಮಿಪು. ೬-೯೬ ವ). ೨. ಸೊಗಸು : ಅಂದ : ಶೋಭೆ : ಪೊಸದೇಸೆ ಪೊಂಗು ಪಾಂಗೆಸೆವಸಕಂ ಕದುಗಾಡಿ ಗರುಡಿಯೆಂಬಿವಱಿಂದಂ . . . ವಸುದೇವಂ ಧರೆಗೆ ಕಣ್ಣ ಮಾಳ್ಕೆಗಿರ್ದಂ (ಅರ್ಣೇ. ೯-೦೩೯) ; ಅಂಗನೆಯ ಹಸ್ತನಖಮ[ಳ]ದಿಂಗಳ್ ಕೇದಗೆಯ ಸುಟೀಯ ಮಧುವೆಂಬುದನೆತ್ತಂ ಗೆಲ್ದಿರ್ದಪು ತೊಳಗುವ ಪೊಂಗಿನೊಳಾಕೃತಿಯೊಳೆಸೆವ ವರ್ಣಕ್ರಮದೊಳ್ (ಶಾಶಪ. ೭-೩೬). ೩. ಶುಭ ; ಮಂಗಳ : ' ಪೊಂಗುನೂಲ್ ' ಪರಾ. ೪. ವ್ಯಾಪನೆ : ವಿಕಾಸಹೊಂದುವಿಕೆ : (೬). (ಗು). ೫. ವ್ಯಾಪಕ ವಾದ ; ಹೆಚ್ಚಾದ : ಎಸಳುಗಂಗಳ ಪೊಂಗುಶೋಭೆಯಿಂ ರಂಜಿಸುವ ವಿಸುಪ ತುರುಗೆವೆ (ಕುರಂಗ. ೯-೩೦). ಪೊಂಕು₂ : ೨. ಕುಂಕುಮ ಪನ್ನೀರು ಕೂಡಾ ಗೋಡೆಗೆ ಪೂಶಿ ಪೊಂಕಾದ ಚಿತ್ರಪತ್ರಿಗೆಯನ್ನು ಬರದು (ಹುಶಶ. ೩೬). ೬. ಬೆಡಗು ; ಬಿನ್ನಾಣ ; ಬಿಂಕ : ಮಯ್ಗರ ಯಲು ಗಣ್ಣನ ತೊಣ್ಣನಂಕದಧುಟಲ್ ಪೊಂಕಾ(ಕ)ಳ್ತನಂ (ಹೃಆಸಿ. ೦೩-೨೬-೭೩ ; 1090) ; ಸೊಗಯಿಪ ಪೊಂಕು ಲಾಲಿಸುವ ಲಲ್ಲೆ ಮರಲ್ದುವ ಮಾತು (ಚಂದ್ರಪು. ೯-೭೦). ಹೊಂಗು₂ : ೭. ಉತ್ಸಾಹ ; ಹುರುಪು : ನಾರುಡೆಯಿದಾರವಯ್ ? ಹೋಹ ಹೊಂಗಿದಿದಂ ಮರೆದಿರೇಂ ? (ಶ್ರೀರಾಶಾ. ೨೨೯-೯೬). ೮. ಕೊಂಕು ; ಬಾಗು : ಕಂಗಳಲಿ ಕುಡಿಮೇಳ ಹುಬ್ಬಿನ ಹೊಂಗಿನಲಿ ಭಂಜವಣೆ ಭಾವದ ಭಂಗಿಯಲಿ ಪಶಿಕರಣೆ (ಕುವ್ಯಾಶ. ೦೩-೨೫). ೯. ಉತ್ಕರ್ಷ ; ಏಳಿಗೆ : ಬ್ರಾಹ್ಮಣಮತದ ಹೊಂಗು ಹೆಚ್ಚಾಗಿತ್ತು (ಶೀನಾಶ. ೭೨). ೧೦. ತೀವ್ರತೆ ; ಹೆಚ್ಚಳ : ಹಿಂಗ ದಾಸಱು ಮನದ ಬಯಕೆಯ ಹೊಂಗು ಮುಱಿಯದು ಚಿತ್ರದೊಲವಿನ ಹುಂಗು ಹಱಿಯದು (ಶಿಶಾಗ. ೯-೨೩-೨). [< ಪೊಂಗು₁./ತಮಿ. ಪೊಙ್ಕು. ಪೊಙ್ಕು. ಪೊಕ್ಕು ; ಮಲ. ಪೊಕ್ಕ ; ತುಳು. ಬೊಂಗು ; ತೆಲು. ಪೊಂಗು]

ಪೊಂಗುಡುಪು (ನಾ). ಚರ್ಮವಾದ್ಯವನ್ನು ಬಾರಿಸುವ ಚಿನ್ನದ ಕೋಲು ; ಚಿನ್ನದ ವಾದನದಂಡ : ಸಮರಸನ್ನಾಹಭೇರಿಯಂ ಪೊಂಗು ಡುಪಂ ಪಿಡಿದಡಸಿ ಪೊಡೆಯಲ್ (ರಾಶಕೀ. ೬-೩೦ ವ).

[ ಪೊಂ (< ಪೊನ್) + ಕುಡುಪು ]

ಪೊಂಗುನೂಲ್, ಪೊಂಗುನೂಲು, ಹಂಗನೂಲು (ನಾ). ೧. ಮಂಗಳ ಕಾರ್ಯಗಳಲ್ಲಿ ಮುಂಗೈಗೆ ಕಟ್ಟಿಕೊಳ್ಳುವ ಹಾಗೂ ದೇವರು, ಕಲಶ ಮೊದಲಾದುವುಗಳಿಗೆ ಏರಿಸುವ ಅರಿಸಿನದ ದಾರ : ನಾಂದುವ ಬೇವಿನ ಸರಳಿಗೆಗಳುಂ ಕೂಲೊಳ್ ಪೊಂ[ಪಾಠಾಂ. ಪಾಂ]ಗು ನೂಲಂ ಸುತ್ತುವ ಕುಡುಗೋಲ್ಗಳುಂ . . . ಪೂಜಿಸುವ ಕಣಶಂಗಳು ಮೆಸೆಯ (ಅಂಶಾಶ. ೭-೩೬ ವ). ೨. ಎಳೆಯ ಮಕ್ಕಳಿಗೆ ಹಾಕುವ ಒಂದು ಬಗೆಯ ಆಭರಣ : ಅರಳೆಲೆ ಪೊಂಗುನೂಲ್ ಪುಲಿಯುಗುರ್ . . . ಭುವನೈಕಮಂಡನನೊಳೇನೆಸೆದಿರ್ದುದೊ ಬಾಲಮಂಡನಂ (ಆಶಪು. ೫-೭೨). ಪೊಂಗುನೂಲು : ೧. ನನೆಯ ದಂಡೆಗಳನು ಕಟ್ಟಿ ಅನುಮಾಡು ಪೊಂಗುನೂಲನು ಗಂಧವರೆ (ಶಂಶ್ರಸಾಂ. ೦೨-೩೬). ಹಂಗನೂಲು : ೧. ಗಂಧದ ಬೊಟ್ಟು ಗಮಕಿಲೆ ಇಟ್ಟು ಹುಂಗನೂಲು ಹಾಕಿಯೆಮ್ಮ . . . ಆ ಕಲ್ಲೇನೂ ಉಣಲಿಲ್ಲಾ ಎಡೆಮಾಡಿ ನೀನೆ ಉಂಡೆಲ್ಲಾ (ಕಂಪ. ೩೬-೦೫) ; ಈ ದಿನ ಈ ನಾಗಗಳ ಪೂಜೆ ಮಾಡಿ ಹಂಗನೂಲು ಕುಬಸಗಳನ್ನು ಏರಿಸಿ . . . ಬರುತ್ತಿದ್ದರು (ಹಮ್ಮಿ. ೭೯). [ಪೊಂಗು₂ + ನೂಲ್₂]

ಪೊಂಗುನೂಲು ' ಪೊಂಗುನೂಲ್ ' ನೋ.

ಪೊಂಗುಪ್ಪಸ (ನಾ). ಜರತಾರಿ ಎಳೆಗಳಿರುವ ಕುಪ್ಪಸ : ಪೊಂಗುಪ್ಪಸಂ ದೊಟ್ಟೊಡನಿಟ್ಟೋರಂತೆ ಮಾಣಿಕ್ಯದ ಕಿವಿದೊಡವಂ (ರಾಶಕೀ. ೦೩-೭೦).

[ಪೊಂ (< ಪೊನ್) + ಕುಪ್ಪಸ ]

**ಪೊಂಗುಪ್ಪೆ** (ನಾ). ಚಿನ್ನದ ಜಾಡಿ ; ಬಂಗಾರದ ಹೂಜಿ : ಪರಿಮಳಿಪ ಸೀತಳೋದಕವ ಪೊಂಗುಪ್ಪೆಯೊಳು ತುಂಬಿತುತ್ತೆ (ಶಬರೋ. ೧೪-೧೭).

[ಪೊಂ (< ಪೊನ್) + ಕುಪ್ಪೆ$_3$ (< ಕುಪ್ಪಿ$_1$)]

**ಪೊಂಗುಬ್ಬಿ** (ನಾ). ಚಿನ್ನದ ಗುಬುಟು,–ಗುಮಟ : ಅಂಗದೊಳ ಗುಮರ್ದ ಬಣ್ಣಬಗೆಗಳ ಚೆಲ್ವಪೊಂಗುಬ್ಬಿವರಿಗೆಯಂ ತೊಡೆ ಚಾಟು ಗೊಳುತೆ (ಕಂಠೀ. ೪೮. ೩೦). [ಪೊಂ (< ಪೊನ್) + ಗುಬ್ಬಿ$_1$]

**ಪೊಂಗುರು**, ಪಿಂಗುರು, ಪೆಂಗುರು, ಹೆಂಗುರು, ಹೊಂಗರಿ$_2$, ಹೊಂಗುರು (ನಾ). ಕೊಕ್ಕರೆಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ : ಕೋಗಿಲೆ ಚಾದಗೆ ಪೋದಗೆ . . . ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕೆ ಲಾವುಗೆ ಸೇನಂ (ಶಾಕ್ರತಾ. ೧೦೪೪ ಕಂದ್ರ್ಯ). **ಪಿಂಗುರು** : ಪೊಣರ್ವಕ್ಕಿ ಪಿಂಗುರು[ಪಾಠಾಂ. ರಿ] ಗೂಗೆ ಮುಕುಂದ ಬಳಾಹಕ (ಸೂಕ್ತಸು. ೬-೦೪೪). **ಪೆಂಗುರು** : ಗಿಳಿ ಪುರುಳಿ ಪೆಂಗುರು[ಪಾಠಾಂ. ಪಿಂಗುರಿ] ಕುರಂಡವಾಂದೆ ಮೊದಲಾಗೊಡೆಯ ಗಗನಚರಂ ಪಂಚೇಂದ್ರಿಯಂ ಗಳುವಾಗಿ (ಶಬ್ದಮ. ೯೬-೪). **ಹೆಂಗುರು** : ಬಾನಾಡಿ ಪರ್ಬಕ್ಕಿ ಹೆಂ[ಪಾಠಾಂ. ಹಿಂ]ಗುರು ಕಾಕಂ . . . ಇರ್ಕುರ್ಗಿಂ ತದ್ವನಾಗೌಘದೊಳ್ (ರಾಜಶೇ. ೩-೩೯); ಕಾಕಂ ಬಕಂ ಕೊಂಚೆ ಹೆಂಗುರು . . . ಚಾತಕಮುವಿರ್ಕುಗಿಂ ತತ್ತ್ರರು ವ್ರಾತದೊಳ್ (ಹರಿಚಂ. ೪-೯೬); ಪಾರಾವತಂ ಹೆಂಗುರು ಟೀವಂ ಟಿಟ್ಟಿಭಂ . . . ತದ್ವನಾಂತಸ್ಥಮಿರ್ಕುಗಿಂ (ಕುಬಕು. ೬-೬೩). **ಹೊಂಗರಿ$_2$** : ಹೊಂಗು ಚರಣಾಯುಧಂ ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಶಕ್ರತಾ. ೭-೨೦೬). **ಹೊಂಗುರು** : ಹೊಂ[ಪಾಠಾಂ. ಹೆಂ]ಗುರು ಚರಣಾ ಯುಧಂ ಶಕುನಿ . . . ತಿತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯ ಮೊಪ್ಪುಗುಂ (ಗಿರಿ. ೧-೭೪ ; ಶುಲ್ಲಕಾ. ೬-೧೪೦ ನೋ): ಹರಡೆ ಹಸುಬ . . . ಹೊಂಗುರುವಕ್ಕಿಯೆಸೆದವಂದಲ್ಲಿ (ಶ್ರೀತಾಂ. ೭-೦೮).

[<ಪ್ರಾ. ಪೋಕ್ಖರ./ಸಂ. ಪುಷ್ಕರ./ತೆಲು. ಪೆಗ್ಗುರು, ಬೆಗ್ಗುರು]

**ಪೊಂಗುರುಜು** (ನಾ). ಬಂಗಾರದ ಮಂಟಪ : ಕೇರಿಕೇರಿಯಲಿ ಪನ್ನೀರ ಚಳಯ ರನ್ನದೋರಣ ಪೊಂಗುರುಜುಗಳು ಮೇರೆಯಿಲ್ಲದ ಕಾಂತಿ ವಿಡಿದುವು (ಶಂಕರ. ೨೬-೨೬). [ಪೊಂ (< ಪೊನ್) + ಕುರುಜು]

**ಪೊಂಗುಲ** (ನಾ). ೧. ಚಿನ್ನದ ಕೆಲಸ ಮಾಡುವವರ ಕುಲಕ್ಕೆ ಸೇರಿದವನು ; ಅಕ್ಕಸಾಲಿಗ : ಕಡೆಕೊಳಂದ ಮಣ್ಣಿಗಪ್ಪೊಂಗುಲಂ ಕೊಡಲಿಯಂ ಬಲ್ಲಸಿಯು ಕಮ್ಮಾರು ಮುಟ್ಟುಗೆಯಿರೊಡೆಯೊಂ ಓದಲಪೋಲೆಯಂ ಮಾಣ್ಗಳಂ (ಪ್ರಕರ. ೦೯೬೪, ೩೮-೨೨ ; ಸು. 11ನೆಯ ಶತ). ೨. ಒಬ್ಬಾತನ ಹೆಸರು : ಸಾಕ್ಷಿ ಕೂಡಲೂರ್ ಪೊಬ್ಬುಲರು ಎಳ್ಮಡಿಯರು ಬದಿರಿಯರುಮ್ (ಪ್ರಕರ. ೦೯೦೬, ೦೩-೯ ; 726). [ಪೊ (< ಪೊನ್) + ಕುಲ]

**ಪೊಂಗುಲ್ವಟ್ಟಿ** (ನಾ). ಒಂದು ಪ್ರದೇಶದ ಹೆಸರು (?) : ತೆನ್ಕಣ ಕೊಸೆದು ಪೊನ್ನುಲ್ವಟ್ಟಿಯ ತೆನ್ನೊಳ್ವೆ ತೆನ್ಕಣಾಸೀಮೆ (ಪ್ರಕರ. ೦೯೨೭, ೦೨೨-೭೦ ; 808 ?). [ ? ]

**ಪೊಂಗುಳ** (ನಾ). ಚಿನ್ನದ ಕುಳ,–ಗುಳ : ಪೊಂಗುಳಂಗಳಂ ಕಬ್ಬಿನಾದ ಗುಳವೆಂದು ಕೈಯಾಲೀಯೆ (ಶಕುಪು. ೭-೩-೨).

[ ಪೊಂ (< ಪೊನ್) + ಕುಳ$_1$ (< ಕುಬು) ]

**ಪೊಂಗುಳಿಗೆ** (ನಾ). ಚಿನ್ನದ ಗುಳಿಗೆ : ಪೊಂಗುಳಿಗೆಗಳ ಪರಿಯೊಳುಗು ಷ್ಪಂಗಳೊಪ್ಪುಗು ನಿಮಿರ್ದ ಕೋಮಳದಂಗುಳಂಗಳು ಮೆಚ್ಚವುದುಗಣ ದೊಲು ಪದನಖಾಳಿ (ಅಶಪು. ೪-೦೭). [ಪೊ (< ಪೊನ್) + ಗುಳಿಗೆ$_1$]

**ಪೊಂಗುಋವ** (ನಾ). ಚಿನ್ನದ ದ್ವೀಪ : ಪಾಲ್ಗಡಲೊಳಗಣ ಪೊಂಗುಋವಂ ಗಡಮೆನಿಸಿದುದಮರನಗಮಿದೇನಚ್ಚರಿಯೋ (ವರ್ಧಮಾ. ೦೨-೩೩).

[ ಪೊಂ (< ಪೊನ್) + ಕುಋವ$_1$ ]

**ಪೊಂಗೆಜ್ಜೆ**, ಹೊಂಗೆಜ್ಜೆ (ನಾ). ಚಿನ್ನದ ಗೆಜ್ಜೆ : ಮಧುಪಾನದಿಂ ಸೊಕ್ಕಿದ ಮುತ್ತುಂಚಿಯ ಧ್ವನಿಗಳಂತೆ ಜರ್ಝರವಾದ ಪೊಂಗೆಜ್ಜೆಗಳ ಮೆಲ್ಲುಲಿಯೊಳಂ (ಕಾಕಂಪು. ೬೬); ಪೊಂಗೆಜ್ಜೆಯುಲಿವು ನೆಲಸಾಗ್ಗಡಿಸುತ್ತಂದೆಸೆಯ . . . ನಡೆತರುತಿರ್ದಳ್ (ಗಿರಿ. ೬-೧೦೬). ಮೊಹಿಯಲೊಡ್ಯಾಣದ ಪೊಂಗೆಜ್ಜೆಗಳ ದನಿ . . . ಪಾಡುತ ಪಿರಿದು ಸಂಭ್ರಮದ ಬೀಡಿದರು (ಶಂಕರ. ೨೦-೧೦೦). **ಹೊಂಗೆಜ್ಜೆ** : ಹೊಂಗೆಜ್ಜೆಗಳ ಮುಕುರದ ಘಂಟೆಗಳ . . . ವಜ್ರಮಯಧಾರೆಗಳಲೆಸೆದುದು ಭದ್ರಮಂಟಪ (ಕುವ್ಯಾಸ. ೦೨-೦೨); ಪುಟ್ಟಪಾದಗಳ ಹೊಂಗೆಜ್ಜೆಗಳ್ ಘಲಿರೆನೆ ದಟ್ಟಡಿಯಿಡುತೊಡಗಿದನು (ಕೋಹಕ. ೦೭-೭೨); ಸುಗತಿಗುಲಿವ ಹೊಂಗೆಜ್ಜೆಗಳ ರಭಸದಿಂದೆಸೆವ ನಿರ್ಮಲ ವಾಜಿಯಂ ಸುವೇಗಂ ತುದು ನಿಲಿಸಿದಂ (ಕೃಬಿಕಾ. ೩-೦೦).

[ ಪೊ (< ಪೊನ್) + ಗೆಜ್ಜೆ$_1$ ]

**ಪೊಂಗೆಲಸ**, ಹೊಂಗೆಲಸ (ನಾ). ಚಿನ್ನದ ರೇಕಿನ ಕೆಲಸ : ಪೊಸ ಪೊಂಗೆಲಸದ ಯೂಪಸ್ತಂಭಂಗಳ ಭಂಗಿಯನನುಕರಿಸಿದುವುಳ್ಳೊಡೆಯಾ ಕಮಲದಳಾಂಬಕಿಗೆ (ಜಯಸಾ. ೬-೩೦). **ಹೊಂಗೆಲಸ** : ತೀವಿದವು ಹೊಂಗೆಲಸ ಗತಿಯಲಿ ಲೋವೆಗಳು (ಕುವ್ಯಾಸ. ೦೨-೯) ; ಹೊಂಗೆಲಸದ ಪೊಚ್ಚವದುವ ವಿಟ್ಟರದೊಳು ಮಂಗಲಮಜ್ಜನಗೆಯ್ದು (ಪೋಹಕ. ೨೦-೩).

[ ಪೊ.(< ಪೊನ್) + ಕೆಲಸ ]

**ಪೊಂಗೇದಗೆ**, ಹೊಂಗೇದಗೆ (ನಾ). ಒಂದು ಬಗೆಯ ಕೇದಗೆ ; ಹೊಂಬಣ್ಣದ ತಾಳೆಹೂವು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆ ಯೆಂಬ ಪಲವು ಪೂಮಾಲೆಗಳಂ ಬಗೆಯಿಂದೋಲಗಿಪುದು ಮಾಲೆಗಾಜನಂ ಪೋಲ್ತುದಗ್ರಮಾಲ್ಯಮಹೀಜಂ (ಅರಿಪು. ೩-೩೬). ಸೋಮರ್ಮಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಳ್ (ಕುಂದಮಾ. ೨-೦೩ ವ); ವನಮನಾಜ್ ಬಳಸಿ ಕಂಗೊಳಿಪ ಪೊಂಗೇದಗೆಗಳೊಪ್ಪಿದುವು (ಕಂಠೀ. ೪೩-೦೮). **ಹೊಂಗೇದಗೆ** : ಕುರವಕದ ಮಕುಳದೆಳಗೌಂಗಿನ ಹೊಂಗೇದಗೆಯ ಬಳಸಿ ನೊಳಂ . . . ಲತಾಮಂಟಪಂಗಳ್ ಮನಂಗೊಳಿಪುವು (ಕಾದಂಪು. ೯೭) ; ಈಸಿ ಹೊಂಗೇದಗೆಯ ಕಂಚಿಯ . . . ಕಿತ್ತೊರಸಿ ಹುಡಿಹುಡಿ ಮಾಡಿದನು (ಕಾಶಿರಾ. ೦೦-೨೦) ; ಹೊಂಗೇದಗೆಯೆಸಳಂ ಮುಸಿಸಿ (ಜಯಸಾ. ೨-೧೪).

[ಪೊಂ (< ಪೊನ್) + ಕೇದಗೆ]

**ಪೊಂಗೊಡ**, ಹೊಂಗೊಡ (ನಾ). ಚಿನ್ನದ ಕೊಡ ; ಸ್ವರ್ಣಕುಂಭ : ಪೊಂಗೊಡಂ ತಮಾಳಪಲ್ಲವದೊಳೆ ಮುಚ್ಚಿವಂದದೊಳೆ ಚೂಚುಕ ಮಾಂತುದು ಕರ್ಪನಾರಿಯಾ (ಶಂಕರ. ೧-೧೨೩) ; ಬೆಳಿಯ ಸಾಸವೆ ಪೊಂಗೊಡ ನಷ್ಟಶೋಭೆ ಕನ್ನಡಿ . . . ಎಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನುರಾಗಮಂ (ಕಾವ್ಯಾಶ. ೬೩) ; ಕೀಲಾಲಮನಾಜ್ ಸಾಸಿರಸೂಳ್ಪೊಂಗೊಡನಿಂ ತಂದು . . . ಅಭಿಷೇಕಂಗೆಯ್ದಂ (ಕಾವ್ಯರೆ. ೬-೪೩). **ಹೊಂಗೊಡ** : ತೊಳೆದ ಹೊಂಗೊಡದೊಳಗ್ಗಣಿಗಳು ತುಂಬಿ ತಂದಿಳುಹಿದರು ಕಾವಿನಿಯರು (ಹಕಾ. ೬-೩೭) ; ಹೊಂಗೊಡನ ಹಿಡಿದೃತರಲಿ ನಾರಿಯರು (ಕುವ್ಯಾಶ್ರೀ. ೧-೩೭) ; ಮಜ್ಜನಕುಷ್ಣಜಲ ಹೊಂಗೊಡದಲಿಳುಹಿದವು (ಕೊರಟಾ. ೩-೬-೩೪). [ಪೊಂ (<ಪೊನ್) + ಕೊಡ$_2$]

**ಪೊಂಗೊಡೆ** (ನಾ). ಚಿನ್ನದ ಛತ್ರಿ ; ಬಂಗಾರದ ಸತ್ತಿಗೆ : ಶಶ್ರಂಗತ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಗೊಡೆಯೆನಿಸಿವುದು ಶಶಿಬಿಂಬಂ (ಜಗಂ. ೦೭-೦೦೬) ; ಚೈತ್ರನೆತ್ತಿದ ಪಲವುಂ ಪೊಂಗೊಡೆಗಳೆನಿಸಿ ಪೂತು ಮನಂಗೊಳಿಸಿದುವೆಸೆವ ಕರ್ಣಿಕಾರಕುಜಂಗಳ್ (ಶುಸುಜಾ. ೩-೪೦).

[ಪೊಂ (<ಪೊನ್) + ಕೊಡೆ$_2$]

**ಪೊಂಗೊಳಗು** (ನಾ). ಪಶುಗಳ ಗೊರಸಿಗೆ ತೊಡಿಸುವ ಚಿನ್ನದ ಆಭರಣ : ಪೊಂಗೋಡು ಪೊಂಗೊಳಗು ಪೊಂಗೆಜ್ಜೆ ಘಂಟೆಗಳು ಪೊಂಗಲಶ ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಾ. ೩-೦೭).

[ಪೊಂ (<ಪೊನ್) + ಕೊಳಗು]

**ಪೊಂಗೊಳಲು** (ನಾ). ಚಿನ್ನದ ಕೊಳಲು : ಪೊಂಗೊಳಲನೂದುತಿಹ ಯದುಕುಲೋತ್ತುಂಗ (ಪ್ರಿಯಂ. ೩–೫೬ ಪದ್ಯ) ; ಪೊಂಗೊಳಲಾಂತು ನಿಂದು . . . ಬಾಜಿಪೋಜೆಯೊಳ್ (ಅಳಿ. ೬–೨).
[ಪೊಂ (<ಪೊನ್) + ಕೊಳಲು (<ಕೊಟಲ್)]

**ಪೊಂಗೋಂಟೆ, ಹೊಂಗೋಂಟೆ, ಹೊಂಗೋಟೆ** (ನಾ). ಚಿನ್ನದ ಕೋಟೆ : ವರಯೋಜಿಜ್ಜನವುಂ ಪುರಂ ಪುರವುನೊಳ್ಪೊಂಗೋಂಟೆ ಪೊಂಗೋಂಟೆಯುಂ ತರುಷಂಡಂ . . . ತಳ್ತೊಳಕೆಯ್ಯ ಚಿಲ್ವನೊಳ ಕೊಂಡಿರ್ಕುಂ ತದುರ್ವೀತಳಂ (ಪರ್ಶಿಶು. ೦–೩೨) ; ಪ್ರಕಟಂಚಿತ್ತಿರ್ಪ ಪೊಂಗೋಂಟೆಯ ತನೆಯೆಸಟ್ಟಗಲ್ ಕೇಸರಂ . . . ತಾನೆಸಲ್ಪೊಪ್ಪುಗುಂ . . . ತತ್ಕುಸುಮಪುರಿ (ಪಳಿ. ೦–೨೫) ; ಬಗೆಗೊಂಡುದಾ ಪೊಳಲ ಪೊಂಗೋಂಟೆ (ಕುರಾಣಿ. ೩–೬೨). **ಹೊಂಗೋಂಟೆ** : ಪುರದ ಮಧ್ಯದ ಮಣಿಮಯದ ಹೊಂಗೋಂಟೆ ರಂಜಿಸಲು (ಜೈಮಿ. ೨–೩೯) ; ಹೊಂಗೋಂಟೆ ಗಗನಮಂಡಲವ ಮುಟ್ಟಿಹುದು (ಕೇಶಿ. ೬–೯). **ಹೊಂಗೋಟೆ** : ಸುತ್ತಣ ಮಣಿಗಲ್ಲ ಹೊಂಗೋಟೆ ನೋಡಲು ತತ್ತಳ ಗೆಯ್ಯುದ್ದಕ್ಷಿಗಳ (ಹೋಚ. ೩ ೬) ; ದಿನಮಣಿಯ ಮಣಿರಥದ ಗಾಲಿಗಳ ನೇಮಿಗಳ ಪೊಯ್ಲಿಂದೆ ಪುಡಿಪಡೆದಯಿದ್ದ ಸಾಲ ಹೊಂಗೋಟೆದೆನೆಗೊನೆ ಗಳಿಂದೇಳ್ವ ದೂಳಲ್ಲಿಗಲ್ಲಿಗೆ ನಭದೊಳು ಸ್ಥೂಲದಂಡಾಕೃತಿಯನಾಂತವೋಲ್ (ಕೃಬಿಹಾ. ೩–೨೦). [ಪೊಂ (<ಪೊನ್) + ಕೋಂಟೆ]

**ಪೊಂಗೋಡು** (ನಾ). ಪ್ರಾಣಿಗಳ ಕೊಂಬುಗಳಿಗೆ ಹಾಕುವ ಒಂದು ಬಗೆಯ ಚಿನ್ನದ ಒಡವೆ : ಚಿನ್ನದ ಕೋಡಣಸು : ಪೊಂಗೋಡು ಪೊಂಗೊಳಗು . . . ಪೊನ್ನ ಬಾಸಿಗ ತಂದು ವೃಷಭನಂ ಸಿಂಗರಿಸಿ (ಸಿಂಗಾರಾ. ೫–೦೩). [ಪೊಂ (<ಪೊನ್) + ಕೋಡು₁]

**ಪೊಂಗೋಲ್** (ನಾ). ೧. ಚಿನ್ನದ ದಂಡ ; ಬಂಗಾರದ ಕೋಲು : ಮೇಲ್ಗಲೊ . . . ಪಾರ್ವತಿಯ ಚಿತ್ರಮಂ ಸೋಲಿಸುವಾ ಕೀಲ್ಗಲೋ ಸಲ್ಲೀಲೆಯ ಪೊಂಗೋಲ್ಗಲೊ ಕಣಕಾಲ್ಗಲೋ ಲಲಾಟೇಕ್ಷಣನಾ (ಗಿರಿ. ೦೦–೬೦). ೨. ಚಿನ್ನದ ಬಾಣ : ಪೊಂಗೋಲ ಪಿಡಿದವರೊಳಾರಾರ್ಗೆ ನಮ್ಮಳ್ಕೆ ? (ಜಾಲಿ. ೦೪–೩೦೦). [ಪೊಂ (<ಪೊನ್) + ಕೋಲ್₁]

**ಪೊಂಘಟ್ಟ** 'ಪೊಂಗಟ್ಟ' ನೋ.

**ಪೊಂಚು₁, ಹೊಂಚು₁** (ಕ್ರಿ). ೧. ತಕ್ಕ ಸಮಯವನ್ನು ಕಾಯು, — ಎದುರುನೋಡು : ಪೊಂಚುವ ಪಾಯ್ವ ಪೊಯ್ವ ಕೊಯ್ವ . . . ಸಾವ ಬೇವನಿಬರಂ ಪದ್ಮಾಸನಂ ಕಂಡನು (ಶಂಕು. ೯೯–೩೨). ೨. (ಬೇಟೆಯಾಡುವಾಗ) ಗುಟ್ಟಾಗಿ ಅಡಗಿದ್ದು ಬೇಟೆಯ ಮೇಲೆ ಬೀಳಲು ಸಿದ್ಧವಾಗಿರು : ಬೆಸ್ಕಂ ಇರದೆ ಪೊಂಚಿ ಪಿಡಿದು ಹಾವು . . . ನುಂಗಲಾಜಿದಿರಿತಿರಲು (ಚಕ್ರ.ಕ. ೩೭–೩). ೩. ಇತರರ ಚಲನವಲನಗಳನ್ನು ರಹಸ್ಯವಾಗಿ ಗಮನಿಸು ; ಕದ್ದು ನೋಡು; ಬೇಹು ಮಾಡು : ಪೊಂಗುವ ನುಡಿಳ್ಗೆಗಂ ಪೊಗೆದು ಪೊಂಚುವ ಸಂಚಿನ ನೋಟದಟ್ಟಿಯಿಂದಂಗಜ ವೀರನಾರುಬಟಿಯಂ ಪಟುಗೆಯ್ಯುತ ಬಾಜಿಪೋಜೆಯೊಳ್ (ಅಳಿ. ೬–೨). ೪. ಯಾರಿಗೂ ಕಾಣದಂತೆ ಗುಪ್ತವಾಗಿರು ; ಅಡಗಿ ಕುಳಿತಿರು : ಕಾಂತರಾಲಿಂಗನದೊಳು ಪೊಂಚಿರ್ದ ಕಾಮಿನಿಯರೆದೆ ಧಿಗಿಲೆನಲ್ಕೊಗಲುಂಚದೊಳ್ಪೊಳೆಗಳ್ (ಕೃಬಿಹಾ. ೨೬–೨೪). **ಹೊಂಚು₁** : ೧. ಮಿಂಚಿದವು ದೆಸೆಗಳಲಿ ಗಮನಕೆ ಮುಂಚಿದವು ಹಂಸೆಗಳು ನಭದಲಿ ಹೊಂಚಿದುದು ಜೀವನಕೆ ಜೀವನವಿರಹಿಸಿಕರುಂಬ (ಕುಮಾ.ಠ. ೦೯–೨೦) ; ಕತ್ತಲೆಯೊಳು ಮಿಂಚುವ ವಿಭೂಷಣಕೆ ಮುಸುಕಿಟ್ಟು ಸುಳಿವರ್ಗೆ ಹೊಂಚುವ ಚಮತ್ಕೃತಿಯನಳವಡಿಸಿ ನೆನಹಿಂಗೆ ಮುಂಚುವ ಪದನ್ಯಾಸವುಂ ಕಲಿತು ನಡೆವ ಜಾರೆಯರ ಚದುರೆಸೆದಿರ್ದುದು (ಕೃಬಿಹಾ. ೨೬–೦೦) ; ತನಗಾದ ಅಪಮಾನಕ್ಕೆ ಪ್ರತೀಕಾರವನ್ನು ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು ಸಮಯವನ್ನು ಹೊಂಚಲು ಮೊದಲಿಟ್ಟನು (೬೪೪. ೦೩). ೨. ಆ ಪೊಸತಾಗಿ ಸೊರ್ಕಿದಿಭಮಂ ಪದೆದೀಕ್ಷಿಸಿಯೊರ್ವ ಧೀವರಂ ಕೋಪದೊಳೊಯ್ಯನೊಯ್ಯ ನಾಜ್ ಹೊಂಚಿ ನಿಕುಂಜಮನೊತ್ತುಗೊಂಡು ಮೇಣ್ದಾಪಮನಾದಿರ್ದ ನೋಡಿ ತೆಗೆದಂದಿಸೆ (ಉತ್ತ.ರ. ೨–೫೫); ತೊಳ ದಾಡೆಯಲಿರಿಸಿ ಮೆಟ್ಟಿಸಿ ಕಾಲುಗೊರೆಯಲಿ ಸುಂಡಿಲಲಿ ಸಮ್ಮಸೀಳ ತೋಳಿಸಿ ಹಾಜ್ ಹೊಂಚುವ ವೀರವಾನರರು . . . ಜೋದರುಗಳಂತಕನಾಲಯವ ಹೊಗಿಸಿದರು (ತೊರಾ. ೬–೨೦–೦೪) ; ತಲೆಯೆತ್ತುವ ವಿಮಾನಗಳನೋರಂತೆ ಮುಂದಿಕ್ಕಿ ತಳಿಹ ಬಕದಂತೆ ಹೊಂಚುತೆ ಕುಳಿತಿರುವನು ಕಾದು ! (ಕಂಗ. ೬೨.೫). ೫. ಗುಪ್ತವಾಗಿ ಪ್ರಯತ್ನಿಸು ; ರಹಸ್ಯವಾಗಿ ಕಾರ್ಯ ನಡೆಸು : "ಹೊಂಚು–ಸಂಕೇತೋದ್ಯೋಗೇ" (ಶಬ್ದಾ). ೬. ಉಪಾಯ ಮಾಡು; ತಂತ್ರವನ್ನು ಹೂಡು : ನಿನ್ನೀ ನಿಲವು ನೀ ಹೊಂಚಿಹುದು ಸಮರಕೆ ಬಂದ ಸಿಂಗರವೊ (ಅಕ್ಷ.ನಾ. ೩೨–೬೪). ೭. ಸೂಸಂ; ಹೊರಹೊಮ್ಮು : ಹರಿಗೆಗಳ್ ಮೇಘದೊಡ್ಡಣೆ ಕತ್ತಿಗಳ ತೊಳಪದಿರವೆ ಹೊಂಚುವ ಮಿಂಚು ಕವಿದೆಸೆವ ಸಾಯಕದ ಸರಿಯೆ ಸರಿವಳೆ (ಕಂಕೃ. ೩೮–೪೭); ನಳಿತೋಳ್ಗಳೀ ಜಡಿದು ಝುಳಪಿಸುವ ಕೈದುಗಳ ದೀಧಿತಿಗಳು ಹೊಂಚಿದುವು ವಜ್ರಮಣಿ ಭೂಷಣದ ಕಾಂತಿಯಂ (ಕೃಬಿಹಾ. ೦೬–೭); ನಿನ್ನ ನಡೆದಂತಿಹುದ ಮರೆವೆ ನೆಂತು ? . . . ಸಂಜೆಸೂರ್ಯನ ಸೌವರ್ಣರಾಗದ ಕಾಂತಿ ಹೊಂಚಿ ಎಮ್ಮಂಬರನು ಹೊದಿಸಿ ಬೆಳಗಿದುದ (ಬಿಂಗಿ. ೬೪–೦೬). ೮. (ಆಹಾರ, ಹಣ ಮೊದಲಾದುವನ್ನು) ಹೊಂದಿಸಿಕೊಳ್ಳು; ಜೋಡಿಸಿಕೊಳ್ಳು : ಸಾಮಾನ್ಯವಾಗಿ ಎಂಥ ಬಡರಾಷ್ಟ್ರವಾದರೂ ಯುದ್ಧಕಾಲವಲ್ಲಿ ಹಿಮಾಲಯ ದೆತ್ತರಕ್ಕಾದರೂ ಹಣವನ್ನು ಹೊಂಚಲು ಶಕ್ತವಾಗುತ್ತದೆ (ಅಕ್ಷರ. ೬೩೬). ೯. ಅಳವಡಿಸು ; ಹೊಂದಿಸು ; ಜೋಡಿಸು : ವಂಚತತ್ತ್ವದ ಕಾಸೆ ನವರತ್ನಭೂಷಣ ಮಿಂಚುಮುತ್ತಿನ ಮಾಲೆಗಟ್ಟು ಹೊಂಚಿ ರತ್ನದೊಳು ನಿರ್ಮಿಸಿದ ಪುತ್ತಳಿಗಳ ಸಂಚಯದಂತಿದ್ದರಾಗ (ಶಶಿ. ೦೪–೯೯).
[ದೇ.೫ ತುಳು. ಅಂಚು; ತೆಲು. ಪೊಂಚು]

**ಪೊಂಚು₂, ಹೊಂಚು₂** (ನಾ). ೧. ಅಡಗಿಕೊಂಡು ಕಾಯುವಿಕೆ : ಗುಪ್ತವಾಗಿ ನಿರೀಕ್ಷಿಸುವಿಕೆ : ಪದವಮಿತ್ತಮಿಡುಕುತುರ್ವಿಡದೆ ಪೊಂಚೆ [ಚ]ನೊಳ್ ಶಾರ್ದೂಲಮೊಂದು ಮುಂಗಡೆಯ ಮಳೆಯ ಒತ್ತಿನೊಳು ಮೇವ ಮೃಗಕವ್ವಳಿಸುತಾರ್ದು . . . ಮುತ್ತರುಣಜಲವ ಪೀರಿದುದು (ಶಂಕಾ. ೩–೬–೪೭). ೨. ಸೇರಿಕೆ ; ಜೋಡಣೆ ; ಹೊಂದಾಣಿಕೆ : "ಪೊಂಚಿನ ಪೊರ್ದಿದ ಬಗೆ" (ರತ್ನಂ. ೩–೫). **ಹೊಂಚು₂** : ೨. ಈ ಕತೆಗಳಲ್ಲಿ ಸೋದ್ದಿಶ್ಯವಾದ ಆಕಾರರಚನೆಯ ಪ್ರಯತ್ನವಿದೆ. ಇಲ್ಲಿಯೂ ಪಾತ್ರಗಳಿರುತ್ತವೆ, ಸನ್ನಿವೇಶಗಳಿರುತ್ತವೆ ; ಆದರೆ ಅವುಗಳನ್ನು ಜೋಡಿಸಿರುವ ಕ್ರಮದಲ್ಲಿಯೇ ಹೊಸ ಅರ್ಥವೊಂದು ಪ್ರಕಟವಾಗುವಂತೆ ಅವುಗಳ ಹೊಂಚು ಕಾಣುತ್ತದೆ (ಹೊಸಕ್ಕ. ೨೬೩). ೩. ಗೂಢಚರ್ಯೆ ; ಬೇಹು. ೪. ಉಪಾಯ ; ತಂತ್ರ ; ಹಂಚಿಕೆ : ಅಳಿಯ ತ ಆಕರ್ಷಣೆಗೆ ಸುಲಭವಾಗಿ ಬಲಿಯಾಗುತ್ತಾನೆಂದು ಏರ್ಪಡಿಸಿದ ಇಂದ್ರಾಣಿಯ ಹೊಂಚು ವಿಫಲವಾಗಲಿಲ್ಲ (ಹೊಸಕ್ಕ. ೨೫) ; ಅವರ ರಾಜಕೀಯ ಹೊಂಚು-ಸಂಚುಗಳು ಜಗತ್ತಿನಲ್ಲಿ ಯಾವೆಡೆಗಳಲ್ಲಿ ಎಷ್ಟು ಯಶಸ್ವಿಯಾದವು ? (ದೂಜಾರ. ೦೬೦). ೫. ಸಿದ್ಧತೆ ; ಹವಣಿಕೆ : ದಾಯಾದಿಗಳು ದತ್ತಕ ಪುತ್ರನನ್ನು ಕೊಡಲು ನಾ ಮುಂದೆ ನೀ ಮುಂದೆ ಎಂದು ಹೊಂಚಿನಲ್ಲಿಯೇ ಒದ್ದಾಡುತ್ತಿದ್ದರು (ಬಿಚಾಕ. ೦೦೪).

**ಹೊಂಚು ಕಾಯು** = ಸರಿಯಾದ ಸಮಯಕ್ಕಾಗಿ ರಹಸ್ಯವಾಗಿ ಕಾಯು : ಒಬ್ಬ ಹುಡುಗನನ್ನು ಹಿಡಿದು ಅವನ ಸಂಗಡ ಹೊಂಚು ಕಾದು, ಅವಳು ಆನಂದನೊಡನೆ . . . ತಿರುಗಾಡಲು ಹೋಗುವುದನ್ನು ಕಂಡುಹಿಡಿದ (ದೂರಕ. ೨೦೮) ; ಬೆಕ್ಕು, ಏಡಿ ಮುಂತಾದುವು ತಮ್ಮ

ಆಹಾರಕ್ಕಾಗಿ ಹೊಂಚು ಕಾಯುತ್ತವೆ (ಜೀವಾತ್ಮ. ೧೯೯). **ಹೊಂಚು ಕೇಳು**= ರಹಸ್ಯವಾಗಿ ಕೇಳಿಸಿಕೊಳ್ಳು; ಕದ್ದು ಕೇಳು : ಎಲ್ಲರೂ ಅವನಿಗೆ ಕಾಣಿಸದಂತೆ ಹೊಂಚು ಕೇಳುತ್ತಿದ್ದರು (ಗೋಕುಲ. ೩). **ಹೊಂಚು ಜಾಗ**= (ಕಳ್ಳರು ಹಾಗೂ ಬೇಟೆಯಾಡುವ ಪ್ರಾಣಿಗಳು) ಅಡಗಿಕೊಂಡು ಕಾಯುವ ಸ್ಥಳ.– ರಹಸ್ಯವಾದ ಜಾಗ : (೯). **ಹೊಂಚು ನೋಡು**= ಗುಟ್ಟಾಗಿ ನೋಡು ; ಕದ್ದು ನೋಡು : ಗುಬ್ಬಿಗಳ ಮೇಲೆ ಎರಗಲು ಕಾಯುತ್ತಾ ಬೆಕ್ಕು ಹೊಂಚು ನೋಡುತ್ತಿದೆ (೧೭೦). **ಹೊಂಚು ಹಾಕು**= ೧. ಅಡಗಿಕೊಂಡು ಕಾಯು ; ಗುಪ್ತವಾಗಿ ಸಮಯವನ್ನು ನಿರೀಕ್ಷಿಸು : ಅಲ್ಲಲ್ಲಿ ಕಂಡು ಕಾಣದಂತೆ ಹೊಂಚು ಹಾಕುತ್ತಿದ್ದ ಇತರರೂ ಬೆರಗಾಗಿ ನೋಡುತ್ತ ವಿಷಯವೇನೆಂದು ತಿಳಿಯದಿದ್ದರೂ ಏನೋ ಒಂದು ದೊಡ್ಡ ಕಾರ್ಯವನ್ನು ಸಾಧಿಸಿದವರಂತೆ ಸಮಾಧಾನಗೊಂಡರು (ಕರೀಶ. ೬೭); ಹೀರೆಯು ಸ್ವಲ್ಪ ಮುಂಚೆ ಬಂದಿದ್ದು ಕಿಟಕಿಯ ಹತ್ತಿರ ಹೊಂಚು ಹಾಕಿ ಎಲ್ಲವನ್ನೂ ಕೇಳಿ ಹೋಗುತ್ತಿದ್ದಾಗ, ದೇವೇಂದ್ರನ ಕೈಗೆ ಸಿಕ್ಕಿದಳು (ಬಂಕಿಮ. ೩೦). ೨. ಬೇಟೆ ಮೊದಲಾದುವುಗಳಿಗಾಗಿ ಅಡಗಿಕೊಂಡು ಕಾಯು ; ಗುಟ್ಟಿನಿಂದ ಮೇಲೆ ಬೀಳಲು ಸಿದ್ಧವಾಗಿ ನಿರೀಕ್ಷಿಸು : ಒಂದು ದೊಡ್ಡ ಹುಲಿ ಬೆಕ್ಕಿನಂತೆ ಹೊಂಚು ಹಾಕುತ್ತ ಕುಳಿತಿದ್ದುದನ್ನು ಅವರು ನೋಡಿದರು (ಕಳಹು. ೩) ; ದೂರದಿಕ್ಕಿನ ಅಂಚಿಗಿದೆ ಹೊಸಹೊಂಚು ಹಾಕಿದ ಬೇಡವು (ನಂಮು. ೯೭-೦೯). ೩. ಉಪಾಯವನ್ನು ಮಾಡು ; ತಂತ್ರವನ್ನು ಹೂಡು : ಪೋಗದೊತ್ತಾಯದೀ ದನದ ಹಟ್ಟಿಯೊಳಹಳ್ಳಂಡಿ ಭೀತಿ ಲಜ್ಜೆಗಳಿಲ್ಲದೆ ಮತ್ತೇನು ಹೊಂಚು ಹಾಕಿಹಳೊ ಸಂಶಯವಿಹುದು (ಮಲ್ಲಿಕ. ೬-೩೯) ; ಮುಸಲ್ಮಾನರು . . . ಈ ಹಿಂದೂರಾಜ್ಯವನ್ನು ಸಮೂಲ ನಾಶಮಾಡಲು ಹೊಂಚು ಹಾಕಿದ್ದುದೂ ಸುಪ್ರಸಿದ್ಧವಿದೆ (ಹುಕ್ಕಶ್ರ. ೨೦). ೪. ಜೊತೆ ಮಾಡು ; ಹೊಂದಿಸು : ನಿನ್ನ ದೊಡ್ಡಪ್ಪ ನನ್ನ ಮದುವೆಯ ಪ್ರಸ್ತಾಪ ಮಾಡಿದರು. ಅವರು ಯಾರನ್ನೋ ಹೊಂಚುಹಾಕಿಕೊಂಡಿರುವಂತಿದೆ (ವಾತ್ಸಲ್ಯ. ೩೬೯). [ <ಪೊಂಚು$_1$ / ತೆಲು. ಪೊಂಚು ]

**ಪೊಂಜಗಲಿ, ಪೊಂಜಗುಲಿ** (ನಾ). ಚಿನ್ನದ ಕಟ್ಟೆ; ಬಂಗಾರದ ವೇದಿಕೆ: ಪಸೆವಾಸಿನ ಪಟ್ಟವಟಿಯ ದುಗುಲದ ರುಚಿಗಳ್ ಪಸರಿಸೆ ಪೊಂಜಗಲಿ ವಿರಾಜಿಸುತಿರ್ದುದು (ಜಗ೦. ೦೦-೯೫) ; ಬೆಳ್ಮುಗಿಲ ಕೆಳಗಳವಡಿಸಿದ ಸುರಯುವರಲ ಪರಾಗದ ಪೊಂಜಗಲಿಯ ಮೇಲನಾಸುಗೆದಳಿರಲರ್ವಾಸಿನೊಳರಸಿವೆರಸಿ ಕುಳ್ಳಿರ್ದುದ್ (ರಾಜಶೇ. ೧೦-೩೦ ವ). **ಪೊಂಜಗುಲಿ** : ಪೊಂಜಗುಲಿಯೊಳಗೆ ಮನವೊಸೆದು ಮಂಡಿಸಿರಲು (ಕಂಠೀ. ೯೬-೯).
[ ಪೊಂ (<ಪೊನ್) + ಜಗಲಿ]

**ಪೊಂಜಗುಲಿ** 'ಪೊಂಜಗಲಿ' ನೋ.

**ಪೊಂಜರಪಣಿ** (ನಾ). ಚಿನ್ನದ ಸರಪಣಿ : ಪಾಮುಕರದ ಪೊಂಜರಪಣಿಯ ಬೆರಲ ಮಣಿಮುದ್ರಿಕೆಗಳ . . . ಸಂಗರಧೀರರಾಜಸುಕುಮಾರರೊಪ್ಪಿರ್ದರು (ಕಂಠೀ. ೬-೩). [ ಪೊಂ (<ಪೊನ್) +ಸರಪಣಿ ]

**ಪೊಂಜರಿ** (ನಾ). ಚಿನ್ನದ ಮಳೆ; ಸುವರ್ಣವೃಷ್ಟಿ : ತನುವೆಲ್ಲ ವಿಟಾದ ಕನಕವರ್ಣಮದಾಗೆ ಮನ ನೆನೆದನಿತು ಪೊಂಜರಿಯೂ ನೆನೆದಾಗಲುಗುಳ್ವಂ (ಶೃಕಶೀ. ೨-೦೩೩). [ ಪೊಂ (< ಪೊನ್) + ಸರಿ$_1$ ]

**ಪೊಂಜರಿಗೆ** (ನಾ). ೧. ಚಿನ್ನದ ಎಳೆ ; ಬಂಗಾರದ ತಂತಿ : ಕಿವಿಗೆಳೊಳ್ ಪೊಂಜರಿಗೆಯು ಮಿಸುಪ ತ್ರುದಿಯೊಳ್ ರನ್ನಮಾಗಾಯ್ಗುಳೊಲಿದಾಡ (ಕಂಠೀ. ೩-೩೭) ; ಅನಿತುಂ ತಂತ್ರಿಗಳಿಂದಮೊಂದೆ ದನಿಯುಂಮೈತ್ರಂಬಿನಂ ಕೊಡೆ ನುಣ್ಣನೆ ಕಂಬಟ್ಟಿನೋಳೀಟ್ಟ ಪೊಂಜರಿಗೆಯುಂ ಪೋಲ್ಸುಂ (ಕಳ೧. ೯-೦೦೩). ೨. ಬಂಗಾರದ ಕಲಾಬತ್ತು ; ಚಿನ್ನದ ಜರಿ : ಪೊಸಪೊಗುಲದುಡೆಯಿನವರ್ದೊಪ್ಪುವ ಪೊಂಜ[ಶಾಕಾಂ. ಜು]ರಿಗೆಯುಮುಜ್ವಲ ನಾನಾಭರಣಂಗಳುಮೇಂ ವಿಲಾಸಮಂ ಮಾಡಿದುವೋ (ಸುಕುಮಾ. ೧೦.೯೭): ಎಸೆವುವು . . . ಕೊಂಬಿನವರ್ಗೆ ತೋರಿಪ ಬಲ್ಸೆಲೆಯ ಪಟ್ಟಸೀರೆಗಳ ಪೊಂಜರಿಗೆ ಗಳ್ಪೊಸಗರ ಪಸರಪಸರದೊಳಗೆ (ನೇಮಿ. ೦೩-೯).
[ ಪೊಂ (<ಪೊನ್) + ಜರಿಗೆ ]

**ಪೊಂಜಲಗೆ** (ನಾ). ಚಿನ್ನದ ಸಲಾಕೆ: ಪೊಂಜಲಗೆಯಂತೆ ಕಿರ್ಚಿಂದಂ ಜಾನಕಿ ಶುದ್ಧೆಯಾಗೆ (ಕಂಠೀ. ೦೬-೩೦). [ಪೊಂ ( <ಪೊನ್) + ಸಲಗೆ$_2$]

**ಪೊಂಜಳಂಬ** (ನಾ). ಚಿನ್ನದ ಎಳೆಯಿಂದ ಮಾಡಿದ ಮುಸುಕು,– ಹೊದಿಕೆ: ವಿಳಸದ್ ಭವ್ಯರ್ಹಮ್ಯರ್ಪ್ರಭಾವಿಸ್ಫುರಿತಾಭ್ರಂ ಪೊಂಜಳಂಬಂ ಮಿಸುಪವೊಲಿರೆ ಕಾಂಚೀಪುರಂ ಕಣ್ಗೆ ತೋರ್ಕುಂ (ಕೃಷಿ. ೧೦-೩).
[ ಪೊಂ (<ಪೊನ್) + ಜಳಂಬ ]

**ಪೊಂಜಾಜಿ** (ನಾ). ಒಂದು ಬಗೆಯ ಜಾಜಿಹೂವು ; ಹೊಂಬಣ್ಣದ ಜಾಜಿ : "ಚಾರುಮೈದ–ಪೊಂಜಾಜಿ" (ಅಶಾಹ. ೦೦-೨೩).
[ಪೊಂ (<ಪೊನ್) + ಜಾಜಿ$_1$ (<ಜಾದಿ) ]

**ಪೊಂಜಾಮರ** (ನಾ). ಚಿನ್ನದ ಹಿಡಿಕೆಯುಳ್ಳ ಚಾಮರ: ಪೊಂಜಾಮರ ಮುಚಿಚ್ ತೊಳಪಾರಂಜಿಯ ಬೀಸಣಿಗೆ ಗಿಂಡಿ ಹಡಪಂ ಮಣಿಕಾಳಾಂಜಿಯ ನಾಂತೆಸೆವರ್ . . . ಪಲಂಬರ್ ಸತಿಯರ್ (ಉದ್ಭಟ. ೨-೯).
[ ಪೊಂ (<ಪೊನ್) + ಚಾಮರ ]

**ಪೊಂಜಾಳಿಗೆ, ಹೊಂಜಾಳಿಗೆ** (ನಾ). ಚಿನ್ನದ ನಾಣ್ಯಗಳಿರುವ ಚೀಲ, –ಹಮ್ಮಿಣಿ: ಪೊಂಜಾಳಿಗೆಯೆರಡ ವಿನಯದಿಂದಿಬ್ಬರು ಜಂಗಮಕಿತ್ತು (ಸೋಮೇಶ್ವ. ೩-೯೧) ; ಪಣಾಂಗನೆ ಕನಲ್ದು ಪೊಂಜಾಳಿಗೆಯಂ ನೂಂಕಿ ಕಳಿದು (ವೃಷ೦. ೦೭-೧೩ ವ). **ಹೊಂಜಾಳಿಗೆ** : ಮಾರಯ್ಯನವರ ವಚನಗಳು, ಬಸವಣ್ಣ . . . ಹೊಂಜಾಳಿಗೆಯನಿರಿಸಿ ಹೋದ ಸಂಗತಿಯನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಹೇಳುತ್ತಿವೆ (ಸೋಮವಚ. ೯೦ ಶ್ರಾವಣ).
[ ಪೊಂ (<ಪೊನ್)+ಜಾಳಿಗೆ$_1$ ]

**ಪೊಂಜುರಿಗೆ, ಹೊಂಜುರಿಗೆ** (ನಾ). ಚಿನ್ನದ ಕಿರುಗತ್ತಿ ; ಬಂಗಾರದ ಕಠಾರಿ : ಕರೆವೆರಸಿದ ಹೊಸದುಗುಲದ ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೊ (ಅಂಶು. ೪-೩೭) ; ತರತರದಿನೆಸೆವ ಕರೆಗಳ್ವೆರಸಿದ ಪೊಸದುಗುಲದುಡೆಯಿನವರ್ದೊಪ್ಪುವ ಪೊಂಜುರಿಗೆಯುಂ . . . ಏಂ ವಿಲಾಸಮಂ ಮಾಡಿದುವೋ (ಸುಕುಮಾ. ೧೦-೯೭) ; ಬಿಗಿದುಡೆಯೊಳ್ಪೊಂಜುರಿಗೆಯುಂ ಕಟ್ಟಿ (ರಾಜಶೇ. ೬-೦೦ ವ) ; ಪೊಂಜುರಿಗೆಯೆಂದೇ ಏರ್ದಗೊತ್ತಿದೊ (ರಾಮಾಶ್ವ. ೨೯-೨೩). **ಹೊಂಜುರಿಗೆ** : ನಡುವಿನೊಳು ಚೆಲ್ವಂಕಿಗೋಪಸವ ಹೊಂಜುರಿಗೆ (ಶರಶ. ೨೯ ೦೩). [ಪೊಂ (< ಪೊನ್)+ಸುರಿಗೆ$_2$]

**ಪೊಂಜೂಜಿ** (ನಾ). ಚಿನ್ನದ ಸೂಜಿ : ಪೊಂಜೂಜಿ [ಶಾಕಾಂ. ಪೂಜೆ. ಪೂಜಿ]ಯೊಂದೊಂದು ಚೂರ್ವೊನೆಗೊಂಡೊಂದಲರಾಯ್ದು ಕೋದ ತೆಜದಿಂದಿರ್ಪಂತು ಪುಲ್ಲಾಂಬುಜಾನನೆ ಪುಷ್ಪಾಂಜಲಿಗೊಟ್ಟಳ್ (ಅರ್ಧನೇ. ೩-೯೯). [ಪೊಂ (< ಪೊನ್) + ಸೂಜಿ]

**ಪೊಂಜೂಡಗ** (ನಾ). ಚಿನ್ನದ ಕಡಗ ; ಬಂಗಾರದ ಬಳೆ : ರ್ಣದ ಕನನ್ನಣಿಕುಂಡಲಮೊಂದೆ ಕಯ್ಯ ಪೊಂಜೂಡಗಮೊಂದೆ . . . ಒಪ್ಪಿರೆ (ಕಂದ್ರಶ. ೦೦-೭) ; ಪೊಂಜೂಡಗವ ಪಿಡಿದ ಲಯ್ಯುಡಿಯು ನೋಳ್ಪುದೆಸ (ಶಾಲಿಹೋ. ೦೯೮-೩೨೯). [ಪೊಂ (<ಪೊನ್)+ಸೂಡಗ]

**ಪೊಂಜೂಲು** (ನಾ). ಚಿನ್ನದ ಎಳೆಗಳಿಂದ ಮಾಡಿದ ಹೊದಿಕೆ ; ಜರತಾರಿ ಹೊದಿಕೆ : ಅಂತ ರತ್ನಂಗಳೇ ಮಣಿಪೂರಜೆ ಕಳಧೌತಕಾಂತಿ ಪೊಂಜೂಲೆನೆ ವಿರೂಪಾಕ್ಷನಡರೆ ಬೊಮ್ಮಂ ತಿರ್ದಿ ತೋರ್ಪ ಪಟ್ಟದ ದಂತಿಯೆಂದೆಸಲ್ ಕನಕಾಚಲಂ ಮೆಜೆದುದು (ಕಂಪು. ೨-೯). [ಪೊಂ (<ಪೊನ್)+ಜೂಲು$_2$]

**ಪೊಂಜೆಂಡು** (ನಾ). ಚಿನ್ನದ ಚೆಂಡು : ರನ್ನದ ಚೆಂಡು ಮೇಲೆ ಪೊಂಜೆಂಡು

ಮೌಕ್ತಿಕದ ಚೆಂಡಾದಂತನುಕ್ರಮದೊಳಿಂದುಬಿಂಬಂ ಸಾಲಾಗಿಯುರುಣಂ ಪಿಶಂಗಮಾ ಸಿತರುಚಿಗಳೊಲ್ದೆಸೆ . . . ಚೆಲ್ವಾದುದು (ಶಂಪು. ೯-೦೬).

[ ಪೊಂ (< ಪೊನ್) + ಚೆಂಡು (< ಸೆಂಡು) ]

**ಪೊಂಜೆಳೆ, ಹೊಂಜೆಳೆ** (ನಾ). ಚಿನ್ನದ ಕೋಲು ; ಬಂಗಾರದ ಬೆತ್ತ : ಗಂಧಸಿಂಧುರದವೊಲ್ನಡೆಯನಾಂತ ನವಯೌವನೆ . . . ಪೊಂಜೆಳೆಯ ಮೆಯ್ಯ ಪದ್ಮಿನಿ (ಪಂರಾಶಾ. ೭-೦೦). **ಹೊಂಜೆಳೆ**: ಕರತಳದೊಳು ಹೊಂ[ಹಾಠಾಂ. ಪೊ]ಜೆಳೆಯನು ಪಿಡಿದು ತನ್ನರಸಗಂಗಜಲಾಸ್ಯವನು ಭರದಿಂದುಪದೇಶಿಪ ಲಾಸ್ಯಕಿಯೆನೆ ತರುಣಿ ಕಣ್ಗೊಪ್ಪವಡೆದಳು (ಶಂಪ್ರಶಾಂ. ೯-೩೯) ; ಹೊಂಜೆಳೆಯಂದದಿ ಬಳಕುವ ಕಾಯದಿ (ಜ್ಞಾಶತ. ೩-೦೬೦).

**ಪೊಂಜೆಳೆಮೆಯ್, ಹೊಂಜೆಳೆಮೆಯ್, ಹೊಂಜೆಳೆಮೈ**=ಚಿನ್ನದ ಬೆತ್ತದಂತೆ ಹೊಳೆಯುವ ಶರೀರ : ಸುಂದರವಾದ ದೇಹ: ಪೊಂಜೆಳೆಮೆಯ್ಯ. . . ಗೌರೀದೇವಿಯೆಂಬ ತರುಣಿಯಂ ಮದುವೆಯಂ ಮಾಡಿ (ಹುಸ್ಕಾರ. ೨-೩೨ ವ) ; ನೀರಾಟಮನಾಡಿ ಪೋದ ವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೇಳ್ದು (ರಾಜಶೇ. ೦೨-೩೯ ವ); ಅಂಜನದಲರುವಕ್ಕಿಯ ಬಣ್ಣಮನೆ ತೋರ್ವ ಕಂಜಲೋಚನನ ಮೂರುತಿಯ ರಂಜಿಸುವಂತಲರ್ಗಂಗಳಿಂದೊಳಿದುವರು ಹೊಂಜೆಳೆಮೆಯ್ಯ ನೀಚೆಯರು (ಶರಶ. ೯-೨) ; ಮೊಳೆಯೆ ಹೊಂಜೆಳೆಮೈಯೊಳಾಗಳೆ ಪುಳಕಸಸಿ ತನಿನೋಹರಸ ಮನದೊಳಗೆ ಕಾಳ್ಪುರವಾಗೆ ಸಾರ್ದಳು ರೋಹಿಣೀದೇವಿ (ಶಾಳ್ಮಶಾ. ೦೮-೩೭).

[ಪೊಂ (< ಪೊನ್) + ಸೆಳ್ಳೆ]

**ಪೊಂಜೆಳೆಮಂಚ** (ನಾ). ಚಿನ್ನದ ತೂಗುಮಂಚ : ಪೊಂಜೆಳೆಮಂಚದ ಮೇಲೆ ಪೂರೆಯೊಳೇಱುಂಬೌವನೆ ಲಜ್ಜಾತುರೆ ಕಾಂಚನಸಂಜವದನೆ ತಲೆವಾಗಿರೆ (ಜಿಯುಶಾ. ೬-೯೯). [ಪೊಂ (< ಪೊನ್) + ಸೆಳೆಮಂಚ]

**ಪೊಂಜೆಱಂಗು** (ನಾ). ಚಿನ್ನದ ಎಳೆಗಳಿಂದಾದ ಸೆರಗು ; ಜರತಾರಿಯಿರುವ ಸೆರಗು : ವಿಟಜಂಗಮಂ ಬಂದಱುಪೆ ಕರೆಸಿ ನಲ್ಲಳ ಸೀರೆಸೆಱಗು ಪಿಡಿದೆಳೆವುತಿರಲು ಅಂಗಸ್ಥವಸನವಂತಿರ್ದುದದಱೊಳ್ಪೊಂಜೆಱಂಗು ರಂಗೆಸೆವ ಸೀರೆಗಳಪರಿಮಿತಮುದಿಸೆ ಜಂಗಮಾವಳಿ ವಣಿಯಲಿತ್ತು (ರಾಶಶ ೬-೯೦).

[ ಪೊಂ (< ಪೊನ್) + ಸೆಱಂಗು ]

**ಪೊಂಜೊನ್ನಲಿಗೆ** (ನಾ). ಚಿನ್ನದ ಕೊಡ,—ಕಲಶ : ಜಲಜನ್ಮಕೋರಕದ್ವಯ ಸೊಕ್ಕುಮಿಕ್ಕಾನೆದಲೆ ಗಾಲಿವಕ್ಕಿ ಪೊಂಜೊನ್ನಲಿಗೆಗಳ ಚೆಲ್ವನಲೆದು ಮಲೆದು . . . ನೆಲವೊಲೆಗಳ್ . . . ಎಡ್ಡಂಬಡೆದವು (ಉದ್ಧಕೀ. ೯-೩೦).

[ಪೊಂ (< ಪೊನ್) + ಸೊನ್ನಲಿಗೆ]

**ಪೊಂಡವಕೆ** (ನಾ). ಚಿನ್ನದ ಪೀಕದಾನಿ : ಶಕ್ತಿವ್ರಜಮಾನ್ನೆ ಪೊಂಡವಕೆಯಾಂತಿರ್ದಾದಿದೇವಿಸಮುತ್ಕರಮೊಲ್ದಾಂತಿರೆ ರನ್ನವಾಮಗೆಯನೊಪ್ಪಿರ್ದ ಭವಾನೀಧವಂ (ಕಂಶಂ. ೦-೭೪) ; ಪರಮಗಾಯತ್ರಿ ನಿಂದಿರೆ ಶಕ್ತಿಗಳ ವಿತತಿ ಪೊಂಡವಕೆಯೊಲ್ದಾಂತಿರಲ್ (ಕುಮಾಪು. ೦-೭೦).

[ಪೊಂ (< ಪೊನ್) + ಡವಕ್ಕೆ]

Δ**ಪೊಂತಕಾರಿ** 'ಹೊಂತಕಾಱಿ[1]' ನೋ.

Δ**ಪೊಂತಕಾಱಿ** 'ಹೊಂತಕಾಱಿ[1]' ನೋ.

**ಪೊಂತಿವಣೆ** (ನಾ). (?) : ಬಟ್ಟ ಕಣ್ಣುಂ ಬಿಗಿದ ಮೊಗಮುಂ ಮನದ ಮುನಿಸುಂ ಮೆಯ್ಯ ಮುಱುಕಮುಂ ಪ್ರತಿಮಾನದ ಪೆಣನುಮಣಲೊಳಡಿಸಿದಾನೆಯಡಂಗುಂ ಕೊಡ ಕಯ್ಯ ಪೊ[ಶಾಶಾಂ. ಪೊಸಂ]ತಿವಣೆಯ ನೆತ್ತರ ನೊಂದುನಿವಿಷಮುಂ ಕುಂದಿಸದ ಕ್ರೋಧಿನಿಯೆಂಬಯ್ದುನೆಯ ಮದದೊಳ್ (ಆರ್ಜುಶೇ. ೬-೯೯ ವ). [ ? ]

**ಪೊಂದಂಡ** (ನಾ). =ಪೊಂಗೋಲ್ ೧ : ಏಕಾಂಕವದನೆಯರು . . . ವಾಣಿಯುಲಿ ಪೊಂದಂಡವಿಡಿದವರು ಮುನ್ನಡೆಯೆ (ವವಶೋ. ೩೯-೨೭).

[ಪೊ (< ಪೊನ್) + ದಂಡ]

**ಪೊಂದಂಡಿಗೆ, ಹೊಂದಂಡಿಗೆ** (ನಾ). ಚಿನ್ನದ ಪಲ್ಲಕ್ಕಿ ; ಬಂಗಾರದ ಮೇನೆ: ಮಂಗಳಪಾಠಕರು ಸಂಗಡಿಸಿ ಬಿರಿದುಗಳಂ ಪೊಗಳುತಂ ನಡೆಯೆ ಪಿಳ್ಳೆಯನಾಯನಾರ್ ಪೊಂದಂಡಿಗೆಯನೇಱಿ (ಶಶಪು. ೩೦-೦೩). **ಹೊಂದಂಡಿಗೆ** : ನೆಗಹಿದವು ಕೈದೀವಿಗೆಯ ಸಾಲುಗಳು ಹೊಂದಂಡಿಗೆಯ ದೂವಾರಿಗಳು ವೇಟಣಿಸಿದರು (ಕುವ್ಯಾಸ್ಲ್ರೋ. ೬-೩೩).

[ಪೊಂ (< ಪೊನ್) + ದಂಡಿಗೆ]

**ಪೊಂದಗಡು, ಹೊಂದಗಡು** (ನಾ). ಚಿನ್ನದ ತಗಡು ; ಬಂಗಾರದ ವರ್ತಿ : ಪೊಂದಗಡಿನ ಕಡಾರಮಂ ಕಾದಿರ್ಪಂತೆ ಕಂಪು ಪೀರ್ದು (ಲೀಲಾವ. ೬-೭೦ ವ) ; ಮುತ್ತಿನ ಪುಡಿಯಂ ಪೂತಳ್ದೆ ಪೊಸಪೊಂದಗಡಂ ತಱಿದಿಕ್ಕಿದಂತೆ ತೋರ್ಪಿನಿಯನ ಬಾಯ ಕರ್ಪೂರದ ತಂಬುಲಕೊಯ್ಯನೆ ಕೆಯ್ಯನೊಡ್ಡಿದಳ್ (ಅನಂಪು. ೦೨-೬೬) ; ಸ್ಮರನ ಪಸ್ಮದ ಯಂತ್ರವ ಪೊಂದಗಡಲಿ ಬರೆವಂತೆ ಕತ್ತುರಿಯಿಂದ ತರುಣಿಯು ಕದಪಿನಲಿ ಮಕರಿಕಾಪತ್ರವ ವಿರಚಿಸಿದರು (ಶೀವಃಶಾಂ. ೦೦-೦೯). **ಹೊಂದಗಡು** : ಹೊಂದಗಡಿನ ಹೊದಕೆಯ ಮನೆ ಬಹಳ ನೇರಂದವಡೆದ ಪಟ್ಟಶಾಲೆ (ಮೋಹಶ. ೩-೩೯).

[ಪೊಂ (< ಪೊನ್) + ತಗಡು]

**ಪೊಂದಟ್ಟೆ, ಹೊಂದಟ್ಟೆ** (ನಾ). ಚಿನ್ನದ ತಟ್ಟೆ ; ಬಂಗಾರದ ಹರಿವಾಣ : ಕರಯುಗದೊಳಾಂತ ಪೊಂದಟ್ಟೆಯನದಱ ಮೇಲೆ ಪರಪಿರ್ದ ಸಂಪಗೆಯ ಪೂಗಳಂ . . . ಕೊಂಡು ಬಂದು (ಕೃರಾಶಾ. ೦೦-೦೦) ; ಹೊಳೆವ ಪೊಂದಟ್ಟೆಯಾರತಿಗಳ ಪಿಡಿದಾಗ ಲಲಿತಾಂಗಿಯರು ಸಾಲ್ಗೊಂಡು (ಕೆಂಪವಿ. ೭-೧೦೬). **ಹೊಂದಟ್ಟೆ**: ಹೊಂದಟ್ಟೆಯೊಳು ಕುಂಕುಮರಸಪೂರಿತ ಗಂಧಾಕ್ಷತೆಗಳ ಕೊಟ್ಟು ಅಂದವಡೆದ ಕದಳಿಯ ಪರ್ಣದೊನ್ನೆಯ ತಂದಿರಿಸಿದರಲ್ಲರಿಗೆ (ಮೋಹಶ. ೩-೩೦) ; ಮಕರಂದಾಜ್ಯಯೆಂಬೊರ್ವ ನೀಱೆ . . . ಕೆಳದಿಯ ಕೈಯ ಹೊಂದಟ್ಟೆಯ ತಾನೊಯ್ದು . . . ಭಾವಗೆ ಕೊಟ್ಟಳು (ಶರಶ. ೯-೩೦). [ಪೊಂ (< ಪೊನ್) + ತಟ್ಟೆ]

**ಪೊಂದಳಿಗೆ, ಹೊಂದಳಿಗೆ** (ನಾ). = ಪೊಂದಟ್ಟೆ : ಮಂಗಳಭೂಷಣಾವಳಿಯ ಬೆಳ್ಪು . . . ಪೊಂದಳಿಗೆ ಸೂಸಿದ ಸೀಸೆಯ ಬೆಳ್ಪು ತಳ್ತಿರಲ್ (ಜಗಪ. ೦೦-೯೦) ; ಪೊಂದಳಿಗೆವಿಡಿದಾರತಿಯನೆತ್ತಲ್ಕೆದೆಯರು . . . ಕಂಗೊಳಿಸಿತಾ ದಂಪತಿಗಳ ಮದುವೆ (ಕೃರಾಶಾ. ೩೦-೦೬). **ಹೊಂದಳಿಗೆ** : ಸುಳಿದವಾರತಿಯಮಾರಿಯರ ಹೊಂದಳಿಗೆಗಳ ದೀಪಗಳ ಮುಕ್ತಾಫಲದ ಸೇಸಾಕ್ಷತೆಯ ಮಳೆ ಸಿರಿಮುಡಿಯ ಸರಿಸದಲಿ (ಕೊಕಶಾ. ೩-೬-೩೬) ; ಹೊಂದಳಿಗೆಯಲಿ ಸಂಧ್ಯೆಯೋಕುಳಿಯನೆರಚುತ್ತೆ . . . ನಿನ್ನ ಪೂಜಿಸುವಳನುದಿನಂ ! (ಕಶ್ಯಾಂಗ. ೦೭-೯೯೨). [ಪೊಂ (< ಪೊನ್) + ತಳಿಗೆ]

**ಪೊಂದಳಿರ್, ಪೊಂದಳಿರು** (ನಾ). ೧. ಹೊಂಬಣ್ಣದ ಚಿಗುರು : ಪೊಂದಳಿರ್ಗಳ್ ತೋರಣಮನೆ ಕರಮೆಸೆವುವು (ಸುಕುಮಾ. ೯-೬೦). ೨. ಚಿನ್ನದಿಂದ ಮಾಡಿದ ಚಿಗುರಿನಾಕಾರದ ಅಲಂಕಾರವಸ್ತು : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ . . . ನಡುವೆ (ಅಜಿಪು. ೬-೦೩ ವ). **ಪೊಂದಳಿರು** : ೧. ಕುರವಕದ ಕುತ್ತುಂಗಱಿಯುಮಂ ಮಾಂದಳಿರ ಪೊಂದಳಿರುಮಂ . . . ಮನೋಹರಮೆನೆ ಸಮೆದು (ಕಂಪ್ರಶ. ೭-೦೦೯ ವ). [ಪೊಂ (< ಪೊನ್) + ತಳಿರ್]

**ಪೊಂದಳಿರು** 'ಪೊಂದಳಿರ್' ನೋ.

**ಪೊಂದಳೆ** (ನಾ). ಚಿನ್ನದ ಸತ್ತಿಗೆ : ತುಱುಗಿದ ಪೊಂದಳೆಗಳ ಬಳಿನೆಳಲೊಳ್ ನೆಱೆ ಬರ್ಪ ಗಣಂಗಳ್ (ಕೃಶಾ. ೩-೨೨ ವ).

[ಪೊ (< ಪೊನ್) + ತಳ್ಳೆ (< ತಱೆ) ]

**ಪೊಂದಾಮರೆ, ಪೊಂದಾವರೆ, ಹೊಂದಾವರೆ** (ನಾ). ಒಂದು ಬಗೆಯ ತಾವರೆ ; ಹೊಂಬಣ್ಣದ ಕಮಲ : ಭೂಮಿಯ ಮೇಗೆ ಸಿಂಹಾಸನಮಕ್ಕುಂ ಅದಱ ಮೇಗಲರ್ದ ಪೊಂದಾಮರೆಯಕ್ಕುಂ (ಶಶ್ಯಾಶಾ. ೦೫೫-೩) ;

ತಾಮರೆ ಪೊಂದಾಮರೆ ಕಲ್ಪಲತೆಯ ಲತೆಯಿಲ್ಲಂ (ಶಾಂತಿಪು. ೩-೬). **ಪೊಂದಾವರೆ** : ಮಂದರಧರನೀ ಪೊರ್ಕುಳ ಪೊಂದಾವರೆಪೊಲ್ಕು ವೇಣವಂ ಬರ್ದುಕಾವನೇ (ಶಂಕರಾ. ೧೦-೧೨೦), ಸರೋವರವಂ ಪೊರ್ದಟ್ಟ ಪೊಂದಾವರೆ ಬಳ್ಳಿ (ಜಯನೃಪ. ೨-೨೨). **ಹೊಂದಾವರೆ** : ತಾವರೆ ಹೊಂದಾವರೆಗಳ್ ಮಾವಿವಿವ್ಯಾವಳಿಮದಾಳಿ ಗಿಳಿಯರಗಿಳಿಗಳ್ (ಗಿರಿಕ. ೨ ೩೬) : ಕೆಲರು ಹೋದಾವರೆಯ ಹಂತಿಯ ಕೊಳನ ಪೊಕ್ಕರು (ಕುವ್ಯಾ.ಕ. ೦೬-೯), ಶರಧಿಯೊಳೊಗೆದ ಹೊಂದಾವರೆಯಂತಿರ್ಪ ಪುರಮಧ್ಯದಲಿ ಕೃಷ್ಣರಾಯ ಅರಮನೆ . . . ರಂಜಿಸಿತು (ಮೋಹತ. ೩-೬೨). [ಪೊಂ (< ಪೊನ್) + ತಾವರೆ]

**ಪೊಂದಾರ** (ನಾ). ಚಿನ್ನದ ದಾರ ; ಜರತಾರಿ ಎಳೆ : ಪೊಂದಾರಗೆಯ್ಮೆ ಸೆಱಗಿನ ಚೆಂದದ ಚೆಂಗಾವಿಯುಡೆಯುಸುಟ್ಟುನೋರಿಪಳ್ (ಶಶಿಪ. ೬-೦೯೦).

[ಪೊಂ (< ಪೊನ್) + ದಾರ$_1$]

**ಪೊಂದಾಮರೆ** 'ಪೊಂದಾವರೆ' ನೋ.

**ಪೊಂದಾವು** (ನಾ). ಚಿನ್ನದ ಎಳೆಯಿಂದ ಮಾಡಿದ ಹಗ್ಗ : ಕೊರಲೊಳ್ ಕಟ್ಟಿರ್ದ ಪೊಂದಾವುಱ ಪಱಿದದನೀಳುತ್ತ ಬಾಗಿಲ್ಗದಂಗಳ್ ಬಿರಿವಂತೊತ್ತಿತ್ತೆ (ಜಗನ್ನಾಥ. ೨೦-೩೯). [ಪೊಂ (< ಪೊನ್) + ದಾವು]

**ಪೊಂದಾಳ**, **ಹೊಂದಾಳ** (ನಾ). ಚಿನ್ನದ ತಾಳ : ಮಿಗೆಯೊತ್ತುವ ಪೊಂದಾಳದ ಬಗೆಯಂ ಪೊಲ್ದಲರ್ದ ಕರ್ಣಿಕಾರಮದೆಸೆಗುಂ (ಅದ್ಭುತ. ೯-೨೨); ಹರಿಸಿತ್ತು ಪೊಂದಾಳವಂ ನುಡಿಸುತ್ತ ಪಾಡಿದಂ (ಹೊಂರತ್ನ. ೯-೩೦); ಶ್ರೀಗುರವ ಪೊಂದಾಳವಂ ತೆಗೆದು ತಿರುಪಾಡನೇಕವಂ ಪಾಡಲ್ಕೆ (ಬಸವಪು. ೪-೯-೦೨). **ಹೊಂದಾಳ** : ನುಡಿಗೇಳಿ ಹೊಂದಾಳವಂ ಪಿಡಿವುತಂ (ಅಂಗಪು. ೦೯- ೩೬).

[ಪೊಂ (< ಪೊನ್) + ತಾಳ$_2$ (= ತಾಲ)]

**ಪೊಂದಿಕೆ**, ಹೊಂದಿಕೆ (ನಾ). ಹೊಂದಾಣಿಕೆ : ಸಾಮರಸ್ಯ : ಒಂದಿಕೆ. ಒಂದಿಕೆಗಳ್ . . . ಪೊಂದಿಕೆ, ಪೊಂದಿಕೆಗಳ್ (ಶಬ್ದಾನು. ೩೩೬ ವೃತ್ತಿ). **ಹೊಂದಿಕೆ** : ಹೊಂದಿಕೆಯ ಹೊಲಬಲ್ಲವೀ ನುಡಿ (ತೊರವೆ. ೩-೩-೬೬); ಅಪೂರ್ಣವಾದರೂ ಹೊಂದಿಕೆಯುಳ್ಳ ಅರ್ಥವನ್ನು ಕೊಡುವ ಪದಗಳ ಗುಂಪಿಗೆ ಪದಸಮುಚ್ಚಯ ಎಂದು ಹೆಸರು (ಶುದ್ಧಸೂ. ೩). 'ಪೊರ್ದುಗೆ' ಪರಾ. [ಪೊಂದು$_1$ (< ಪೊರ್ದು) + — ಇಕೆ]

**ಪೊಂದಿಗೆ** 'ಪೊರ್ದುಗೆ' ನೋ.

**ಪೊಂದಿಸು** 'ಪೊರ್ದಿಸು' ನೋ.

**ಪೊಂದು$_1$** 'ಪೊರ್ದು' ನೋ.

**ಪೊಂದು$_2$**, ಹೊಂದು$_2$ (ಕ್ರಿ). ಸಾಯು ; ಮರಣ ಹೊಂದು : ನೀಲಸಿನ್ನ ಮನಸಿಜಾನಿಜಾಮ ಒಡಿವು ತಾನ್ಪೊನ್ದಿದಾನ್ (ಪ್ರಿಂಶಂ. ೦೯೪೧. ೨-೯; ಸು. 788); ಕೆಡೆದು ಪೊಂದಿದನಾಮಿಳೆಯಲ್ಲಚೇತನಂ (ಶಾಂತೀಶ. ೩೬೩); ನಿಜಕಾಲಪೂರ್ತಿಯೊಳ್ ಪೊಂದುವರೊಯ್ಯಗೆ (ಚತುಮುಖ. ೦-೯-೦೨೯); ತಂತಮ್ಮ ದುಷ್ಕೃತಂಗಳ ಫಲಂಗಳತ್ತಣಿನಾ ರಕ್ಕಸರ್ ಪೊಂದಿದರ್ (ರಾಮಾಶ್ವ. ೦೨-೦೮). **ಹೊಂದು$_2$** : "ಹೋದು — ಮರಣೇ" (ಶಮಂರ); ಹುಟ್ಟುವಲ್ಲಿ ಭವಿ . . . ಹೊಂದುವಲ್ಲಿ ಭವಿಯಾಗಿ ಹೋಹರ ಮುಟ್ಟಲಾಗದು (ಬಸವ. ೬೬೪); ಹರಣಬರೆ ಹೊಂದಿದನದಾವನು (ಕುವ್ಯಾ.ಕ. ೨೩-೯೯); ಮರಳಿ ಮರಳಿ ಹುಟ್ಟಿ ಹೊಂದಿ ತೊಳಲಿ ಬಳಲಿ ಬಂದೆ ನಾ (ಪುರಂದ. ೧-೦೬೬-೯).

[ದೇ.೩ ತಮಿ. ಪೊನ್ರು ; ಮಲ. ತೆಲು. ಪೊಲಿ]

**ಪೊಂದು$_3$**, ಹೊಂದು$_3$ (ನಾ). ೧. ಸೇರಿಕೆ; ಹೊಂದಿಕೆ: 'ಪೊಂದುಗುಂದು' ಪರಾ. ೨. ಸಮೂಹ ; ಗುಂಪು : ಎಡೆಯೆಡೆಯೊಡಿಕಿಱಿದ ಡೋಣಿಗಳ ಶ್ರೇಣಿಗಳ ಸಿಡಿಸಿಡಿದುರುಳ್ವ ಜಲಬಿಂದುಗಳ ಪೊಂದುಗಳ . . . ಕಡಲೆಸೆದುದು (ಚಂಪು. ೨-೯). **ಹೊಂದು$_3$** : ೩. ಪಕ್ಕ ; ಬದಿ ; **ಸಾಮಿಪ್ಯ** : ಗಂಜೀಯ ಸೀರುಟ್ಟು ಗಂಧದಾ ಬೊಟ್ಟಿಟ್ಟು ನಂದೀಶ ನಿಮ್ಮ ಹೊಂದಿಲಿ ಕೂತಿರುವ ನಾರಿ ಗಂಗವ್ವ ಎಳ ಹೋಗಿ ನೀ ಗಂಡರನಬ್ಬಿಸೇಳ (ಜೋಳಗಿ. ೦೩೩) ; ಬೆಳಗುಜಾವದ ಎಲರು ಬದಿರಿನ ಬದಿಗೆ ನಿರ್ಜರನಲಗುತ ಎಲೆಯ ಸಂದಿಗೆ ಅಲರಿನಂದಿಗೆ ಮರದ ಹೊಂದಿಗೆ ನಲಗುತ (ಹಾಡುಹ. ೩೩-೨೮). [< ಪೊರ್ದು$_1$ / ತಮಿ. ಪೊರುತ್ತು ; ತೆಲು. ಪೊಂದು]

**ಪೊಂದು$_4$**, ಹೊಂದು$_4$ (ನಾ). ಸಾವು ; ಮರಣ : ಪುಟ್ಟು ಪೊಂದಿ ಗೆಡೆಯಲ್ಲದೆ ತೋರ್ಪರ್ (ಚಕಶ. ೯-೬); ಈಪ್ಪಳಿವ ಪೊಂದುಗಳ . . . ನೋಡಿ ನಗುತಲಿಹೆಯೊ (ಪಾಲ್ಗಿಗ. ೬೯-೦೦). **ಹೊಂದು$_4$** : ಹೆಸರಿಲ್ಲದ ಗುಲವಿಲ್ಲದ ಹುಟ್ಟಿಲ್ಲದ ಹೊಂದಿಲ್ಲದ ಅಯೋನಿಸಂಭವ ನೀನಾದ ಕಾರಣ ನಿನ್ನ ನಾನು ನಿಷ್ಕಲಲಿಂಗವೆಂದೆನಯ್ಯ (ಸಿದ್ಧೇಶ. ೬-೨೨); ಭಾವಲಿಂಗದಲ್ಲಿ ಬಯಲನೈದಿದ ಮಹಾಶರಣಂಗೆ ಹುಟ್ಟು ಹೊಂದುಗಳು ನಷ್ಟವಾದುವಯ್ಯ (ಶಾಂತೇ. ೦೦೬-೪೩). [< ಪೊಂದು$_2$]

**ಪೊಂದುಗುಂದು** (ಕ್ರಿ). (ಸಾಂಸಾರಿಕಜೀವನದೊಡನೆ) ಹೊಂದಿಕೆಯನ್ನು ಕಳೆದುಕೊಳ್ಳು,—ಸಂಬಂಧವು ಕಡಿದುಹೋಗು : ಈ ಪಂಬಲಿಂ ಬೆಂಡಾಗಿ ಕಂದುಬಗೆಯಿಂ ಸಂದಿ ಪೊಂದುಗುಂದಿರ್ಪ ಪುರದಧಿರಾಜಂ ಸುರಥರಾಜಂ ತಾನೋಲಗದೊಳಿರ್ಪನ್ನೆಗಂ (ರಾಜಶೇಖ. ೦೩೯-೯).

[ಪೊಂದು$_3$ + ಕುಂದು$_1$]

**ಪೊಂದುಗುಲ** (ನಾ). ಚಿನ್ನದ ಎಳೆಗಳಿರುವ ರೇಷ್ಮೆಬಟ್ಟೆ : ತರೆ ಮಸಗುವ ಪೊಂದುಗುಲದ ಪೊಗರು (ಗೀತಗೋ. ೦೩-೨೬).

[ಪೊಂ (< ಪೊನ್) + ದುಗುಲ$_1$]

**ಪೊಂದುಗೆ** 'ಪೊರ್ದುಗೆ' ನೋ.

**ಪೊಂದುಡಿಗೆ** 'ಪೊಂದೊಡಿಗೆ' ನೋ.

**ಪೊಂದೆನೆ**, ಹೊಂದೆನೆ (ನಾ). ೧. ಚಿನ್ನದ ಬಣ್ಣದ ಧಾನ್ಯದ ಹೊಡೆ: ಹಣ್ಣಾದ ತೆನೆ : ತುಂಬುವುದು ಕಾಡುಗಳನೆಲ್ಲ ಪೊಂದೆನೆಯು ಕಮ್ಮಿತು ಗಾಳಿ (ಶಬ್ದಾಂಗಿ. ೩೩-೦೯೧೦). ೨. ಕೋಟೆಯ ತುದಿಗಿರುವ ಚಿನ್ನದ ಕೊತ್ತಳ : ಕೋಂಟೆಯ ಪೊಂದೆನೆಗಳ್ ವಿರಾಜಿಕುಂ (ಇಂದಿ. ೨-೦೯) ; ಪೊಂದೆನೆಗಳ್ ಖರಕರಕರದಿಂದಂ ಕರಗುಂಗುಂ (ರಾಜಶೇ. ೨-೬೬). **ಹೊಂದೆನೆ** : ೧. ಚಿಲ್ವ ಹಸುರ್ಗೊನೆಯಲ್ಲಿ ನೆಲ್ಲ ಹೊಂದೆನೆಮಲ್ಲಿ ಚಿಲ್ಲೆಹವು ಇಬ್ಬನಿಯ ಮುತ್ತುಗಳವಿಲ್ಲಿ (ಪಾಲ್ಗಿಗ. ೨೬-೦೫). [ಪೊಂ (< ಪೊನ್) + ತೆನೆ$_1$]

**ಪೊಂದೆರೆ$_1$** (ನಾ). ಚಿನ್ನದ ರೂಪದಲ್ಲಿ ಕೊಡಬೇಕಾದ ತೆರಿಗೆ : ಏಪ್ಪದಾ ಸಾಮಂತರೆಲ್ಲ ಪೊಂದೆರೆಯ ತೆರಲೊಲ್ಲರಲ್ಲ! (ಪಾರಿ. ೨೨ ೯೯೬).

[ಪೊಂ (< ಪೊನ್) + ತೆರೆ$_3$ (< ತೆಱೆ$_3$)]

**ಪೊಂದೆರೆ$_2$**, ಹೊಂದೆರೆ (ನಾ). ೧. ಜರತಾರಿಯ ಪರದೆ : ಪೊಂದೆರೆಯ ಪೊರೆಯ ಮಱೆವಿಡಿದು . . . ನಿಂದಳು ವಿಶ್ವಾಸದಿಂದ (ಹೊಂರತ್ನ. ೬-೨) ; ವ್ಯಗ್ರಾಕ್ಷಿಯೊರ್ವಳುಜ್ಜ್ವಲತರಮಾದ ಪೊಂದೆರೆಯನೋಸರಿಸುತ್ತಿರೆ ಕಂಡನಿಂದುಮಂಡಳಮುಖಿಯಂ (ರಾಜಶೇ. ೦೦-೬). **ಹೊಂದೆರೆ** : ೨. ಹೊಂಬಣ್ಣದ ಅಲೆ : ಅಲರ್ದ ತಾವರೆವಂಡನುಮರಿಸಿ ಕೊಳನ ಹೊಂದೆರೆಯುತ್ತಿ ವಿಂದು . . ಸುಳಿದಾಡುತಿಹುದು ಬಾಲಕನವದೊಂದಲರು (ಶ್ರೀಕೃಷ್ಣಛಾ. ೨-೩). [ಪೊಂ (< ಪೊನ್) + ತೆರೆ$_4$]

**ಪೊಂದೇರ್**, ಪೊಂದೇರು, ಹೊಂದೇರ್, ಹೊಂದೇರು (ನಾ). ಚಿನ್ನದ ತೇರು ; ಸ್ವರ್ಣರಥ : ಪೊಂದೇರ ಮೇಲಿರ್ದ ವಸುದೇವನಂದನರ್ಗೆ ಮುಕುಳಿತಾಂಜಲಿಯಾಗಿ (ಜಗ. ೩-೧೦೨ ಶ) ; ಧೀರರ ದೇವ ಮಾಱಿ ನೆಸು ಜಾವದೊಳು ಪೊಂದೇರೇಱಿ ನಡೆವನಬ್ಧಿಯೊಳು (ಚಕ್ರ. ೨೯-೨೬) ; ಪೊಂದೇರನಳವಡಿಸಿ ತುರಗಂಗಳಂ ಪೂಡಿ (ಕೃಷ್ಣಾಭ. ೦೨-೪). **ಪೊಂದೇರು** : ಕರಿತುರಗನಿಚಯದೆಡೆಯಾಟಗಳ ಘಾಟಗಳ ಪೊಂದೇರ ಸಂದಣಿಗಳ . . . ಪಾಳೆಯಂ ಕಣ್ಗೆಸೆದುದು (ಚಂಪು. ೪೨-೦೫). **ಹೊಂದೇರ್** : ಅಭ್ರಮಾರ್ಗದೊಳ್ಸುಳಿವ ಮುಂಗಾರ ಮಿಂಚಂ ತನ್ನ ಹೊಂದೇರ ಚಲಕೆಱಗುವಶನಿಯಂ ತನ್ನ ಘಾತಿ . . . ಶಿರಸ್ಮರಿಸೆ ವೃಷಕೇತು ರಿಪುಸೈನ್ಯಮಂ ಪೊಕ್ಕನು

(ಕೃಪಿಚ. ೧೨-೦೫). ಹೊಂದೇರು : ಹೊಳೆಹೊಳೆದು ಹೊಂದೇರು ಹರಿದವು (ಶಬ್ದ್ಮ.೫೬. ೯-೨) ; ನೇಸರಾಗಳೆ ತಪ್ಪ ಹೊಂದೇರಪುಸ್ಸಗಿರಿವಸ್ಸಕದೊಳೀ ಸುತಿರ್ಪನ್ (ಅನಾಥ. ೬೯-೪). [ಪೊಂ (<ಪೊನ್) + ತೇರ್$_2$]

**ಪೊಂದೇರು** 'ಪೊಂದೇರ್' ನೋ.

**ಪೊಂದೊಟ್ಟಿಲ್**, ಹೊಂದೊಟ್ಟಿಲು (ನಾ). ಚಿನ್ನದ ತೊಟ್ಟಿಲು : ಆ ವಣಿಜನ ಗೇಹದೊಳಿಪ್ಪರದರಿ ಪೊಂದೊಟ್ಟಿಲೊಳಗೆ . . . ಜೀವಂಧರ ನೊಪ್ಪುವ ಲೀಲೆಯಲಿ . . . ಬೆಳೆದನು (ಜೀವಂಧರ. ೬-೨); ಗಿರಿಜೆ ಮಗನಂ . . . ಕೊಂಡಾಡಿ ಹರಸಿ ಪೊಂದೊಟ್ಟಿಲೊಳ್ ತೂಗಿದಳ್ (ಕೆಂಪು. ೩-೨೬). ಹೊಂದೊಟ್ಟಿಲು : ಕಟ್ಟಿ ಹವಳದ ಮಿಣಿಗಳಲಿ ಹೊಂದೊಟ್ಟಿಲನು . . . ರಕ್ಷೆಯ ಕಟ್ಟರಿಸಿ ಹಾಡಿದಳು ಗೋಪಿ ಮುಕುಂದನನು (ಹರಿಭ. ೦೦-೬-೦೫). [ಪೊಂ (< ಪೊನ್) + ತೊಟ್ಟಿಲ್$_1$]

**ಪೊಂದೊಡರ್**, ಹೊಂದೊಡರು (ನಾ). ೧. ಚಿನ್ನದ ಅಂದುಗೆ : ಪೀತಪಟಂ ಕಟಿಯೊಳ್ ಬೆಡಂಗು ಮೆಯ್ಯೊಳ್ಸಿರೆ ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ . . . ಗೋವಳರಾಯನ ಲೀಲೆ ರಂಜಿಸಿಂ (ಜಗ. ೩-೯೩); ಎಡಗಾಲೊಳ್ ಪೊಂದೊಡರ್ ತಳ್ತಿರೆ (ರಾಜಶೇ. ೦೩-೬೦). ಹೊಂದೊಡರು : ೧. ಹೊಂದೊಡರು ಕಿರುಗೆಜ್ಜೆಘಂಟೆಗಳುಂದವಡದರಳೆಲೆ . . ಕಂಠಣಂಗಳ ಗೊಂದಣದ ಭೂಷಣಗಳಲಿ ಗೋವಿಂದ ರಾಮರು ಮೆರೆದರು (ಹರಿಭ. ೦೦-೬-೩). ೨. ಚಿನ್ನದ ಆಭರಣ : ಬಂಗಾರದ ಒಡವೆ : ಹೊಂದೊಡರ ಹಾರಾದಿಗಳಲೊಪ್ಪಂಬಡೆದು ನಸುನಗೆಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು (ಕುಮ್ಹಾಭ್ಯಾ. ೯-೪೪); ಹೊಂದೊಡರು ತೊಡರಲ್ಲವೇ ? (ಕನಸಾ. XXIV. ೬೬೦೯).
[ಪೊಂ (< ಪೊನ್) + ತೊಡರ್$_2$]

**ಪೊಂದೊಡವು**, ಹೊಂದೊಡವು (ನಾ). ಚಿನ್ನದ ಒಡವೆ ; ಬಂಗಾರದ ಆಭರಣ : ಪೊಂದೊಡವಿನೊಳಾದ ನಿಸ್ವನಮೆ ದುಂದುಭಿಯಾಗ (ಕರ್ಣಾಮೃ. ೯-೦೫೯); ಮನದನೆವಂದದಿ ಪೊಂದೊಡವಂ ದೇಟ್ಟಿತ್ತು (ಜಮುಸಾ. ೨-೨೨). ಹೊಂದೊಡವು : ಹೊಂದೊಡವುಗಳನಿತ್ತುವಚರಿಸಿ ಹರುಷವಳು (ಕೊರಾ. ೩-೦-೪); ಕಾಲ್ಗೆಜ್ಜೆ ನೇವುರ ಬಳೆಯ ಹೊಂದೊಡವುಗಳ ಕಿಂಕಿಣಿಗೆ . . . ಹಾರಿದವಪಾಲಿಸಿ ಮರಳಿ ಮರಳಿ ದನಿಯನಾಕರ್ಣಿಸಲ್ಕಟಿಸುತ್ತೆ (ಶ್ರೀಕಾಪು. ೩೩-೯೩). [ಪೊಂ (<ಪೊನ್) + ತೊಡವು]

**ಪೊಂದೊಡಹ** (ನಾ). ಚಿನ್ನದ ಲೇಪನ ; ಬಂಗಾರದ ಗಿಲೀಟು : ಉಡಿರುಳ್ಗಿಲ್ಲಿ ಕಟ್ಟಿದ ಸುರಗಿ ಕೈಪೊಡೆ ಪೊಂದೊಡಹದಂಬಿನ ಬತ್ತಳಿಕೆ (ಸಂಪಾಶಾಂ. ೨೬-೨೬). [ಪೊಂ (< ಪೊನ್) + ತೊಡಹ$_1$ (<ತೊಡವು)]

**ಪೊಂದೊಡಿಗೆ**, ಪೊಂದುಡಿಗೆ, ಹೊಂದುಡಿಗೆ, ಹೊಂದೊಡಿಗೆ (ನಾ). = ಪೊಂದೊಡವು : ಪೊವಟ್ಟ ಪೊಂದೊಡಿಗೆ ಶಕ್ತಿ ವಿರಾಜಿಪ ಶಕ್ತಿ ಶೂಲವೊಪ್ಪಿಡಿದ ಕರಾಸಿ ಗೌರಿ ನಿಜವಲ್ಲಭೆ (ಸಂಕರೋಣಿಬ. ೦-೨); ಪರಿಪರಿಯ ಪೊಂ[ಪಾಠಾಂ.ಹೊಂ]ದೊಡಿಗೆಗಳ ಪರಿಪರಿಗಳುಡುಗೆಯ ದೇಶಿ ಎಗ (ಶಬ್ದ್ಮ.ಅ. ೯-೬); ಇಡೆ ತೊಟ್ಟಲಿಲ್ಲಾಡಿಸುವರಿಲ್ಲ ನಿನಗೆ ಪೊಂದೊಡಿಗೆಯಿಲ್ಲ (ಕೃಪಿಚ. ೨೮-೦೬). ಪೊಂದುಡಿಗೆ : ಎಲೆ ಶಬರರಾಜ ನೋಡಿದೆ ಪಲವುಂ ಪೊಂದುಡಿಗೆದೊಟ್ಟು ಬಂದೊರ್ವಂ ವ್ಯಾಕುಲನಾಗಿರ್ಪಂ (ಸಂಕಶಂ. ೦೦೩-೨೨) ; ಅಳವಡೆ ತೊಟ್ಟ ಪೊಂದುಡಿ[ಪಾಠಾಂ. ದುಡು, ದೊಡಿ]ಗೆಯಿಂ (ಅರ್ಜನೇ.೨-೦೦). ಹೊಂದುಡಿಗೆ: ಅರಿಸಿನವನೆ ಮಿಂದು ಹೊಂದು[ಪಾಠಾಂ. ದೊ]ಡಿಗೆಯನೆ ತೊಟ್ಟು ... ಪುರುಷ ಬಾರಾ (ಜಾನಪದ. ೬. ೦೯೦-೩೨೦). ಹೊಂದೊಡಿಗೆ : ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತಾಗಿರ್ದನಯ್ಯಾ (೧೫ವ. ೨೬೯): ರಾರಾಜಿಸುವ ಹೊಂದೊಡಿಗೆಯ ಕುವರ ನೀನಾರವನು (ಕೋಜಶ. ೦೦-೬೦).
[ಪೊಂ (<ಪೊನ್) + ತೊಡಿಗೆ (<ತೊಡುಗೆ)]

**ಪೊಂಪಲ** 'ಪೊಂಪುಲ' ನೋ.

**ಪೊಂಪಲ್ಲ** 'ಪೊಂಪುಲ' ನೋ.

**ಪೊಂಪು**, ಹೊಂಪು (ನಾ). ೧. ಸೊಗಸು ; ಅಂದ ; ಚಂದ : ಪುರಿಯೀಟ್ ದಶದಿಸೆಯ ಪೊಂಪು ಜೊನ್ನದ ಹೊಂಪು ಮೆರೆದುದಾ ಚಾರುಚಂದ್ರೋದಯದ ಸಮಯದೊಳ್ ಬಗೆದು ಬಣ್ಣಿಸುವರೊಳರೆ (ಸಂಪಾಶಾ. ೦೯-೦೦). ಹೊಂಪು : ೧. ಸೊಂಪಿನಿಂ ಕಂಪಿಡುವ ಸಂಪಗೆಗಳು ಕೊಂಡು ಹೊಂ[ಪಾಠಾಂ.ಹೊ]ಪೆಸೆವ ಹೊಂಗೇದಗೆಯ ಹೂಗಳು ಕೊಂಡು (ಅಸಂ. ೩-೨೪). ೨. ಹೆಚ್ಚಳ ; ಮೇಲ್ಮೆ ; ಅತಿಶಯ : ರಾಣೀವಾಸ ಬಡದೆ ವಸಂತವಾಡಿ ವಿಲಾಸದಲಿ ಶ್ರೀಕಾಂತೆಯೋಲಗ ಕೊಡಗಿತ್ತೆ ಮಾಷ್ಣಸಗಳನು ರಚಿಸಿ ಕಿಂತಿನುಸಿಕೊಂಡಾಭರಣಗಳ ಕಂತುವಿನ ಮದದಾನ ಸಾಲ್ದಿಟ್ಟಂತೆ ಪರಿವುಳೆಜಗುವಳೆಗಳ ಹೊರದಿ ಹೊಂಪಿನಲಿ (ಕೃಷ್ಣಾಕ. ೦೬-೨೪). ೩. ಹಿರಿಮೆ ; ದೊಡ್ಡಸ್ತಿಕೆ : ನಳಸ್ಸಪ ಮುಗುಳುನಗೆಯಿಂದಲ್ಲಿಗಲ್ಲಿಗೆ ಜಗಳವಾಡುವ ಭುಜರ ದಟ್ಟಿಸುತಧಿಕ ಹೊಂಪಿನಲಿ ಒಗುಮಿಗೆಯ ಹರುಷದಲಿ ರಥವಿಳಿದಗದು ಪುಷ್ಕರನಿರ್ಪ ಸಭೆಗೊವೆಯ್ದೆಗದೊಳ್ಪೆದಿದ (ಅಂಡಾ. ೯೯-೬೩). ೪. [ಸಂಗೀತ] ಸ್ವರವಿಸ್ತಾರ (?) : ಗತಿ ಗಮಕ ಗಹಗಹಿಕೆ ತಿರುಪು ಚಾಳಿಯ ಕೊಂಕು ಜತಿ ಜೋಕೆ ಮಾರ್ಗವಣೆ ವಹಣೆ ತರಹರಿಕೆ ಕಂಪಿತ ಹೊಂಪು ಬಾಗು ಡೊಕ್ಕರ ವಿವರ ಕಾಳಾಸ ಕವ್ವುವಣೆ ಲೋಲಂಗಿತ ನುತಶುದ್ಧಸಾಳಂಗಸಂಕೀರ್ಣವಂ ಯಥೋಚಿತ ತಾರ ಮಧುರ ಮಂದ್ರಂ ಗಳಿಂ ಹಾಡಿ (ಚಕಾ. ೬-೩). [<ಪೊಂಗು$_1$. / ತೆಲು. ಪೊಂಪು]

**ಪೊಂಪುಲ**, ಪೊಂಪಲ, ಪೊಂಪಲ್ಲ (ನಾ). ಒಬ್ಬಾತನ ಹೆಸರು : ಸ್ವಸ್ತಿ ಗುವಳಾಲಂ ಗೊಂಗುಂ ವಾನರಸ ಆಳೆ ವೇಗೂರುಂ ಪೊಂಪುಲಂ ಆಳೆ (ಎಕ. X. ಮುಳಬಾ. ೨೬೩-೦ ; ಸು. ೫೦೯). ಪೊಂಪಲ : ರಾಜಾಲ ಪೊವ್ವಲ ಛಿನ್ನಸತ್ಯಮ್ಮ ಮುದ್ದಯ್ಯನುಂ ಎಱೆಯಮ್ಮನೆಸುವರಾದಿತ್ಯಂ ತುಱುವಾನಿಕ್ಕಿಸಿ ಸತ್ತೊಂಗೆ (ಎಕ. X. ಶಿಡ್ಲ್ಪಾ. ೦೯೩-೦೦ ; ೫೫೫?). ಪೊಂಪಲ್ಲ : ಸತ್ಯಶೌಚಶೀಲಾಚಾರಸಮ್ಪನ್ನ ಬೆಂಗುದನಾಥ ಶ್ರೀಮ[ತ್] ಪೊವ್ಪಲ್ಲಮೊಡೆಯಮ್ ಊರ್ಗ್ಗೆ ಪಾಡಿಯೊಳೊಡ್ಡಿ ಬಾಣರಸರುಳ್ಳಾದಿ ... ಬೀರಲೋಕಮುಯ್ದುದ (ಎಕ. X. ಕೋಲಾರ. ೬೯-೦೦ ; ಸು. ೫೦೦). [ ? ]

**ಪೊಂಪುಳಿ** 'ಪೊಂಪುಟ್' ನೋ.

**ಪೊಂಪುಳಿಗೊಳ್** 'ಪೊಂಪುಟ್‌ಗೊಳ್' ನೋ.

**ಪೊಂಪುಳಿಯೋಗು** 'ಪೊಂಪುಟ್‌ವೋಗು' ನೋ.

**ಪೊಂಪುಳಿವಡೆ** 'ಪೊಂಪುಟ್‌ವಡೆ' ನೋ.

**ಪೊಂಪುಳಿವೆಱು** 'ಪೊಂಪುಟ್‌ವೆಱು' ನೋ.

**ಪೊಂಪುಳಿವೋಗು** 'ಪೊಂಪುಟ್‌ವೋಗು' ನೋ.

**ಪೊಂಪುಟ್**, ಪೊಂಪುಳಿ, ಹೊಂಪುಣೆ, ಹೊಂಪುಳಿ (ನಾ). ೧. ಹೆಚ್ಚಳ ; ಆಧಿಕ್ಯ ; ಅತಿಶಯ : "ಪೊಂಪುಟ್ = ಪೆರ್ಚುಗೆ" (ಶಬ್ದಮ. ಸೂ. ೦) ; ಸುತಶೋಕದ ಪೊಂಪುಟ್‌ಯೊಳ್ ಮಯ್ಯುಱಿಯದೆ ನೀರಿಟ್‌ವಂತೆವೊಲಿಟ್‌ದ ನಪರಜಳಧಿಗೆ ದಿನಪಂ (ಸಂಪಾಶಾ.೦೩-೨೨೦); ಕಂಪಿನ ಪೆಂಪು ಪೊಂಪುಟ್‌ಯೆನಲ್ ದೊರೆವತ್ತ ನಮೇರುಮಾಲೆಯುಂಪಂ ಪರಿಚುಂಬಿಸಲ್ ಬಯಸಿ ಬರ್ಪಳಿ ಮಾಳೆಯಂತೆ (ಶಾಂತಿಪು. ೫-೩೩) ; ಸಲೀಲ ಮರಾಳಯೂನೆಯರವಾಂಗ ಮರೀಚಿಚಯಂ ತ್ರಿವರ್ಣವಂ ಗಟ್‌ಯಿಸೆ ಪೆರ್ಮೆ ಮಿಂ ನೆರೆಯ ಬೀತವುಲಿರ್ದ ಲತಾಳಿ ಮತ್ತೆ ಬೆಂಬಟ್‌ಯೊಳ್ ಪಲ್ಲವಪ್ರಸವಭೃಂಗ ಕುಳಂಗಳನಾಂತು ಸೊಂಪು ಪೊಂಪುಟ್‌ಯೆನಿಪಂತೆ ತೋಱಿದುದು (ಸುಕುಮಾ. ೬-೦೦೬). ೨. ಹರವು ; ಪ್ರಸರ : ದಿವಿಜಸೌಂದರಿಯರ್ ಗೊಂದಣಂ ಮಾಡುವಲ್ಲಿ ಕಡೆಗಣ್ಗೊಳ್ ತುಳುಂಕಿಯುಂ ಕದಪಿನೊಳ್ ಪೊಂಪುಟ್ ಯೋಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ . . . ಆಗಳಂಗೋ

ಪಾಂಗದೊಳಿಂತು ನಾಟ್ಯರಸಮ ತೀವಿ ತುಳುಂಕುಗುಟ್ಟಿ (ಅಂಪು. ೬-೧೨೬ ವ); ರಂಜಿತಗೀತವಾದ್ಯನಿನದಂ ಮಾಧುರ್ಯವೀಣಾಲಸನ್ನಿನದಂ ಪೊಂಪುಳಿಯಾದುದಚ್ಚರಿಯೆನಲ್ ವೇಶ್ಯಾಲಯಾನೀಕದೊಳ್ (ಪುಷ್ಪ. ೮-೧೦೯). ೩. ದೊಡ್ಡತನ; ಘನತೆ; ಹಿರಿಮೆ: ದಾನದ ಪೊಂಪುಳಿ ಲೋಭದಾಸೆಯೊಳ್ತೊಡರದು (ಕನುತ. ೬-೨). ೪. ಹಿಗ್ಗು; ಸಂತೋಷ: "ಪೊಂಪುಳಿಯೆನಲ್ ಸಂತಸಂ" (ಸಂಕೀರ್ಣ. ೨); ಧಾರಿಣೀಶ್ವರಂ ತಣಿಯೆ ಮನಂ ವದನಾಬ್ಜಂ ಪೊಂಪುಳಿಯೊಳ್ ಪುದಿದಿರೆ ವರಸುರತಸುಖಮ ನೆಯ್ದಿದನಾಗಳ್ (ಕುಸುಮಾ. ೯-೬೩). ೫. ಮೈ ನವಿರೇಳುವಿಕೆ; ಪುಳಕ; ರೋಮಾಂಚನ: "ಪೊಂಪುಳಿಯೆಂದು ಪುಳಕಂ" (ಕರ್ಣಾ. ೬೯-೧೦೯); ಒದವುವ ಗದ್ಗದಂ ನೆಗೆವ ಪೊಂಪುಳಿಯುಣ್ಮುವ ಸೇದೆಯಿಂದೆ ಯುಂ ಪದವಟ್ಟೋದು ಪೂಚ್ಚಪೊಸದೇಸೆ ಪುದುಂಗೊಳೆ (ಜಗ. ೩-೯೯). **ಪೊಂಪುಳಿ :** ೧. "ಪೊಂಪುಳಿಯೆನಲ್ ಪೆರ್ಚಿನೊಳ್" (ಅಭಿ. ೬೯); ಅಭಿಮಾನದ ಜನ್ಮಭೂಮಿ ಮಾನ್ಯನವ ಮೊದಲ್ದಿಲಾಸನಿಧಿ ರೂಪಿನ ಪೊಂಪುಳಿ (ಶಾಸ. XI-1, ೬೩-೪೯; 1028); ಮನಂಗೊಂಡು ರಮಾಧಾಜನಮೆನೆ ಹಿರಿಯಾರತಿ ರಾಜಸುಪುದು ಸಕಲಸುಖದ ಪೊಂಪುಳಿ ಯಿಂದಂ (ಸೂಕ್ತಿ. ೦-೩). ೪. ನಳಿನನಾಭನ ಕರುಣದಳತೆಯ ತೀಳಿದು ಪೊಂಪುಳಿಯಾಗಿ ಧೌಮ್ಯನ ಬಳಿಗೆ ಬಂದರು ಪರಮಸುಖದಲಿ ಕುಂತಿ ಯಾತ್ಮಜರು (ಸಂಕಥ. ೨೬-೧೫); ತಾಂ ಪೊಂಪುಳಿಯಿತ್ತು ನೋಳ್ಪ ನರರ್ಗೆ ನಲವಾಂತರೊ ಮಾಲೆಗಾರ್ತಿಯರ್ (ಕಬುಸು. ೨-೩೬). ೫. "ಪೊಂಪುಳಿಯೆನಲ್ ರೋಮಾಂಚಮಕ್ಕು" (ಅಭಿ. ೬೦); ಕಾಯಜವೈರಿಯ ದಿವ್ಯ ಮೂರ್ತಿಯಂ ನೆಟ್ಟನೆ ಕಂಡು ಪೊಂಪುಳಿಯನಾಳ್ದು . . . ಸುಭಕ್ತಿಯಿಂದೆಱಗಿದಂ ಹರನಂಘ್ರಿಯೊಳಾ ಹಲಾಯುಧಂ (ಪ್ರಶಪ. ೦೫-೯೩); ತವ ಶೀರ್ಷದೊಳ್ಮೆಗಳಲೀ ರಾಜ್ಯಾಭಿಷೇಕೋತ್ಸವಂ ದೊರೆಗುಂ ಪೊಂಪುಳಿ ತಣ್ಪು ಮಾಡಿದುದು ತಾಂ ಸರ್ವಪ್ರಜಾಂಗಂಗಳೊಳ್ (ಜಕಥ. ೬೩-೦೫೬).
**ಹೊಂಪುಣೆ :** ೧. ಹೊಂಬಟ್ಟೆಗಳ ಹೊಂಪುಣೆಯಿಂದ ಮೆಱೆದಿಹ ಪಂಚ ಘಂಟೆಗಳಿಂದ್ರನೈರಾವತಕೆ ಸರಿಮಿಗಿಲೆಂದುದಖಿಳಜನ (ಸಂಕಥ. ೨೦-೦೦).
**ಹೊಂಪುಳಿ :** ೧. ಹೊಂಗಿದರು ಹೊಂಪುಳಿಯ ಪುಳಕದ ಮುಂಗುಡಿಯ ರೋಮಾಂಚನದ ರಣರಂಗಧೀರರು ತಱುಬಿ ನಿಂದರು ಮತ್ತೆ ಕಾಳೆಗವ (ಕುಮಾ.ಕೃಷ್ಣ. ೦೩-೯೦); ಹೊಂಪುಳಿಯ ಘನಸೌಖ್ಯ ಮಿಕ್ಕೆಳೆಗೆಂಪು ಗಳಲಿಲ್ಲನುತ ತನ್ನೊಳು ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ ಸಂಪಿಗೆಯ ಸಾರ್ವಂತೆ ಬಂದಳಲೂಪಿನಲಿ ಮಹದೇವಿ . . . ಅಲ್ಲಮ ಪ್ರಭುರಾಯನಿದ್ದೆಡೆಗೆ (ಪ್ರಭುಲಿ. ೦೬-೩). ೪. ಇಂದ್ರನು ಪೃಥೆಯ ಮಾತಿಗೆ ನೆನೆದು ಹೊಂಪುಳಿಯಾಗಿ . . . ವನಿತೆಗೆಂದನು (ಸಂಕಥ. ೦೫-೦೯); ಶರಣಾಗತರ ಸೇವೆಯೊಳು ಹೊಂಪುಳಿಯಾಗಿ ಬಾಳುವರೇಸು ಧನ್ಯರೊ (ಹಂಪಾ. ೦೬). ೫. ಒಡನೊಡನೆ ರೊಪ್ಮೊಡುತ ತನುಲತೆ ನಡುಗಿ ಹೊಂಪುಳಿಯಾಗಿ . . . ತಲೆವಾಗಿ ಮೆಲ್ಲಡಿಯಿಡುತ ನಸುಲಜ್ಜೆಯಲಿ ನಡೆತಂದಳು ಧರಾತನುಜೆ (ಅಪಂಚಾ. ೦-೨೩-೩೩).
[ದೇ. ॥ ತಮಿ. ಪೊಮ್ಮಲ್ ; ತೆಲು. ಪೊಂಪಿರಿ]

**ಪೊಂಪುಳಿಗೊಳ್, ಪೊಂಪುಳಿಗೊಳ್** (ಕ್ರಿ). ಸಂತಸಪಡು; ಹಿಗ್ಗು: ಸುಟಿಗುರುಳೊಳ್ ತೊಡಂಕಿ ವದನಾಂಬುಜಸೌರಭದೊಳ್ ಮುಲುಂಗಿ ಪೊಂಪುಳಿಗೊಳುತಿರ್ಪ ಸೋರ್ಮುಡಿಯೊಳೊತ್ತಿದ ಕತ್ತುರಿಯಂ ಕಲಂಕಿ . . . ತೀಡಿದುದು ವಲ್ಲಭನುತಿರೆ ಮಂದಮಾರುತಂ (ನೇಮಿ. ೯-೦೯೦). **ಪೊಂಪುಳಿಗೊಳ್ :** ಮಂ ಪೇಳ್ದ ಬಾಹ್ಯರತಮಂ ಪಿರಿದೆಸಗಿ ರಮಿಸೆ ಪೊಂಪುಳಿಗೊಳುತ್ತವಳ್ ಪುರುಷನೊಡನೆ ತಂಪಿಂ ದ್ರವಿಸಿ (ಜಪವ. ೮-೩೬).
[ಪೊಂಪುಳಿ + ಕೊಳ್$_1$]

**ಪೊಂಪುಳಿಯೇಱು** (ಕ್ರಿ). ಸಂತೋಷವು ಹೆಚ್ಚಾಗು; ಹಿರಿಹಿಗ್ಗು: ರಾಜನ್ಯವನಂದನಂ ಧರೆ ಸೊಂಪೇಱೆ . . . ಮಂಂ ಪೊರ್ದಿದರ್ ಪಿರಿದುಂ ಪೊಂಪುಳಿಯೇಱೆ ಪಟ್ಟವಣೆಯಂ ತಾನೇಱಿದಂ (ಜಿಪ. ೨-೬೫).
[ಪೊಂಪುಳಿ + ಏಱು$_1$ (< ಏಱ್$_1$)]

**ಪೊಂಪುಳಿಯೋಗು** 'ಪೊಂಪುಳಿವೋಗು' ನೋ.

**ಪೊಂಪುಳಿವಡೆ, ಪೊಂಪುಳಿವಡೆ** (ಕ್ರಿ). ೧. ಸಂತೋಷಪಡು; ಹಿಗ್ಗು: ಕಂಕೆಲ್ಲಿಯು ಸೋಂಕಿನೊಳ್ ಚಂಪಕದಣ್ಪಿನೊಳಂ ಪೊಂಪುಳಿವಡದು ವನವಲ್ಲಭೆಯಧರಪಲ್ಲವಕ್ಕೆ ಕುಸುಮವಿಸರದಿಂ ಪಾಟಳರುಚಿಯಂ ಪಾಟಿಸಲ್ ನೆಱೆವ ಪಾಟಳಿಯಂ ಸಹಕಾರನೆಂಬ ನಾಗರಕಂ ನೋಡಿ (ಅಪಂಪು. ೭-೦೦ ವ). **ಪೊಂಪುಳಿವಡೆ :** ೨. ಅಧಿಕ್ಯವನ್ನು ಪಡೆ; ಹೆಚ್ಚಾಗು: ಕಂಪಿಂ ಸೊಂಪಿಂ ಪೆಂಪಿಂ ಪೊಂಪುಳಿವಡೆದಿರ್ದುವೆಲ್ಲಿನೊಡವಿವ ಗುಣದಿಂ ಗುಂಪಿಲ್ಲದೆ ಪಡೆದಳ್ ಪತಿಗಿಂಪಂ ಮಾಳವ್ವೆ ಮಾಲತೀಮಾಲೆಯವೊಳ್ (ಎಕ. ೯, ಅರಸೀ. ೦೨೬-೩೦; 1186; ಶಾಸಸಂ. ೦೦೦೩ ನೋ); ತೊಳಗಿ ಬೆಳಗುವ ವಿಮಳ ವಸತಿಯ ಬಳಿಗೆ ಭಕ್ತಿಯ ರಸಮೆ ಪೊಂಪುಳಿವಡೆಯೆ ನಡೆತಂದ (ಜಾಕ್ಯಾ. ೯-೩೬). ೩. ರೋಮಾಂಚನವನ್ನು ಹೊಂದು; ಪುಳಕಗೊಳ್ಳು: ಒಂದೆಡೆಯೊಳ್ ನಿಲ್ಲದೆ ಗೋವಿಂದಂ ಬಳಸಿರ್ಪ ಗೋಪಿಯರ ಕೈ ಮೈಸೋಂಕಿಂದಂ ಪೊಂಪುಳಿವಡದಾನಂದದಿನಕ್ಷಿಗಳನಲ್ಲಿ ತೇಲಿಸುತಿರ್ದಂ (ಅಪ್ಪು. ೩-೩-೦೬೬). [ಪೊಂಪುಳಿ + ಪಡೆ$_1$]

**ಪೊಂಪುಳಿವೆಱು, ಪೊಂಪುಳಿವೆಱು** (ಕ್ರಿ). ೧. ಸುಖವನ್ನು ಪಡೆ: ದೇವಕಾಂತೆಯರ್ . . . ತನ್ನಿಂಪರುಪಭೋಗದ ಪೊಂಪುಳಿವೆತ್ತಿರಂದು . . . ತಪಃಪ್ರಭಾವದಿಂ (ಶಬ್ದಮ. ೦-೨೬). ೨. ಅತಿಶಯವಾಗು: ರಾಗದಿನಾಡುವೀ ಹರನ ರಾಗಮೆ ಪೊಂಪುಳಿವೆತ್ತಿದೊಂದು ರೂಪಾಗಿಯೆ ನಿಂದುದೆಂಬರುಣವಸ್ತ್ರದಿನುಜ್ಜಲದೇಹವಾದು ಚೆಲ್ವಾಗಿರೆ (ಜಗ. ೦೬-೦೦೦). **ಪೊಂಪುಳಿವೆಱು :** ೩. ಹಿಗ್ಗು; ಸಂತೋಷಿಸು: ಆ ಪ್ರೋಜ್ವಳರಂಗಾಧೀಶವೃತ್ತಾಂತಮನತಿಮುದದಿಂ ಪೇಳೆಯಾ ಗೌತಮಂ ಪೊಂಪುಳಿವೆತ್ತು (ಪ್ರಭು. ೩-೪). ೪. ರೋಮಾಂಚನಗೊಳ್ಳು: ಪೊಂಪುಳಿವೆತ್ತ ಮಯ್ಯ ಪೊರ್ದುಗೆಯಱದಟ್ಟ ಜಾಣಱೆದು ಮುದ್ದಿಸಿ (ಯಾದವ. ೩-೦೯೦). [ಪೊಂಪುಳಿ + ಪೆಱು$_1$]

**ಪೊಂಪುಳಿವೋಗು, ಪೊಂಪುಳಿಯೋಗು, ಪೊಂಪುಳಿವೋಗು, ಪೊಂಪುಳಿಯೋಗು, ಹೊಂಪುಳಿಯೋಗು, ಹೊಂಪುಳಿವೋಗು, ಹೊಂಪುಳಿ ಹೋಗು** (ಕ್ರಿ). ೧. ಹೆಚ್ಚಾಗು; ಅಧಿಕವಾಗು; ವೃದ್ಧಿಹೊಂದು: ಕೇಸರಿಣೀಸ್ತನ್ಯಮನನ್ಯವನ್ಯಗಜಪೋತಾನೀಕಮುಂಡಾಡೆ ಶಾಂತರಸಂ ಪೊಂಪುಳಿವೋದುದಾ ಮುನಿಪನಿಂ ತತ್ಕಾಂತಕಾಂತಾರದೊಳ್ (ಅಜಿತ. ೯-೯೭); ಪೊಂಪುಳಿವೋಯ್ತು ದೀಪ್ತತಪವೆಂಬಿನಮರ್ಕಕರಂಗಳತ್ತ ಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯೆತಿರೆ (ಶಾಂತಿಪು. ೯-೧೦೩); ಕಂಪಿನ ಪೊಂಪುಳಿವೋಪ ನಿಳಿಂಪನ ಮೆಯ್ಯೆಳಗೇಂ ಕರಂ ಮನಂಗೊಳಿಸಿದುದೋ (ಶಬ್ದಶ. ೦೨-೯೪). ೨. ಸೊಗಸಾಗು; ಚೆನ್ನಾಗು: ಪುಷ್ಪವಾಸನೆಯ ಮೆಲ್ಪಿನ ತಣ್ಪಿನ ಕಂಪಿನಲ್ ಪೊಂಪುಳಿವೋಗುತ್ತಿರ್ದ ತಂಡುಲಂಗಳಂ ಕಳದುಕೊಂಡು ಬಾಗಿದೋಗರಮನಾರೋಗಿಸುವಂ (ಸುಕುಮಾ. ೧೦-೩೩ ವ); ಗಾಂಪಿನೊಳನ್ಯಪುಷ್ಪದೊಳು ಮೇಳಿಸಿ ನೀಳ್ದುದಿದೇಕೆ ಕಂಪಿನೊಳ್ ಪೊಂಪುಳಿವೋಗುತಿರ್ದಮಳವಕ್ತ್ರಸರೋಜಮ ಸಾಲ್ದುಮೆಂದು ತಣ್ಣಂಪಸುಣಳ್ಕೆ ಬಂದೆಱಗಿ (ಧರ್ಮಾಮೃ. ೬-೨೦೦). ೩. ವ್ಯಾಪಿಸು; ಹರಡು; ಹಬ್ಬು: ಈ ಬಂದಂ ಧರಾಧೀಶನೆಂಬ ರವಂ ಪೊಂಪುಳಿವೋಗೆ ವಾರಿಧಿತಟಂ ಚೆಲ್ವಾದುದಾ ಸೈನ್ಯದಿಂ (ಅಜಿತ. ೦೨-೦೨೬); ಪೊಂಪುಳಿವೋಗೆ ರಾಗವರದಂ ಕೆಲದೊಳ್ ಮದನಾನುರಾಗಮಂ ಸಿಂಪಿಸುವಂತೆ ಬಾಜಿಸುವ ಬಂಚದ ನುಣ್ದರದೊಳ್ ಪಳಂಚಿ ಗೀತಂ ಪಂಪುಷ್ಟವಾಗೆ (ಪುಷ್ಪ. ೦೦-೦೦೨). ೪. ಹಿಗ್ಗು; ಸಂತೋಷಪಡು:

ವಿದ್ಯಾಧರೀರಮ್ಯ ನರ್ತನರಂಗೋತ್ಥಿತಪಾರಿಹಾರ್ಯರಶನಾಮಂಜೀರಿಕೋದ್ವಾಮನಿಸ್ವನದೊಳ್ ಪೊಂಪುಳಿವೋಗುತಿರ್ಪವರೆಡಂ ವಿದ್ಯಾಧರಶ್ರೇಣಿಗಳ್ (ಅಜಿತ. ೧-೬೦) ; ತವೆ ಮುಂಚಸ್ಥಿತ ಭೂಮಿಭವನಂ ನಡೆನೋಡಿ ಕಾಂತೆ ಪೊಂಪುಳಿವೋದಳ್ (ಉದ್ಭಟ. ೬-೯೯) ; ತನಗೆ ದೊರೆವಡೆದೋದು ಜವ್ವನದ ಪೊಸ ಕುದುರೆಯಂ ನಿಟ್ಟಿಸಿಯುಬ್ಬಿಜಿಂ ಪೊಂಪುಳಿವೋಗಿ (ರಾಜಶೇಖ. ೩೩-೨). **ಪೊಂಪುಳಿಯೋಗು :** ೪. ಮೆಯ್ಯಿಕ್ಕಿ ಪೊಂಪುಳಿಯೋದನಾ ಮುನಿಪನಂದು (ಚೆಂಶಿಂ. ೪೬-೧೩) ; ಸಂಪಗೆ ನಾಗ ಸಂಪಗೆ . . . ಪೊಂಪುಳಿಯೋಗುವೋವರ ಮನ ತನುವಿಗೆ ತಂಪ ಪುಟ್ಟಿಸುವವೇನೆಂಬೆ (ಅಶಂಕ. ೦-೧೧೨). ೫. ರೋಮಾಂಚನ ಹೊಂದು ; ಪುಳಕಗೊಳ್ಳು : ನಳಿನಗಂಧದ ಗಾತ್ರತರಸುಖದೊಳಗೆ ಪೊಂಪುಳಿಯೋಗಿ [ಪಾಠಾಂ. ಹೊಂಪುಳಿವೋಗಿ] ಭೂಪತಿತಿಲಕನಿದ್ದನು ಗಂಧಮಾದನಗಿರಿಯ ತಪ್ಪಲಲಿ (ಕುಮ್ಯಾರ. ೧೧-೩) ; ಮಗುಳೆ ಸೊಂಪಿಡಿದು ಕುಣಿಕುಣಿವುತ್ತೆ ಪೊಂಪುಳಿಯೋಗುತಡಿಗಡಿಗೆ (ಕಾವೇಜು. ೩೩-೦೯). **ಪೊಂಪುಳಿವೋಗು :** ೧. ರಸವಿಸರಂ ಪಸರಿಸೆ ಸೊಂಪು ಪೊಂಪುಳಿವೋಗೆ ರೀತಿ ಕೌತುಕಮನೀಯೆ . . . ಪ್ರಮುಖಪ್ರಬಂಧಂಗಳಂ ಪೇಳ್ವ (ರಾಜಶೇ. ೫-೧೯ ವ). ೪. ಹರಿಯ ದಮಳಾನಂದರಸದಲಿ ಹೊರೆದು ಪೊಂಪುಳಿವೋಗಿ[ಪಾಠಾಂ. ಹೊಂಪುಳಿಯೋಗಿ] ಲಕ್ಷ್ಮೀಧರನ ನೆನೆದನು (ಕುಮ್ಯಾಅ. ೪-೦೨೨); ಪೊಡವಿಯೊಳ್ ಮೆಯ್ಯಿಕ್ಕಿದಗ ರಾಜ ಮೇನೆಯರನೊಡನೆತ್ತಿ ತಾನೆಬಿಗಲುಮೆಯನವರೆತ್ತಿ ಬಿಗಿಯಪ್ಪಿ ಪೊಂಪುಳಿವೋದರು (ಕಂಕೃ. ೩೬-೦೭); ನೀ ಕೇಳಿದ ದನಿಯಿದಕಾಲದ ಪೋಡದ ವೊಳಗೆಲೆ ಮುಗುದೆ ಗಂಡನ ಬಿಲ್ಲಿನ ಸಿಂಜಿನಿದನಿಯೆಯವದೇತಕೆ ಪೊಂಪುಳಿವೋದೆ (ಗಾಥಾಸ. ೦೩-೯). ೫. ಲತಾಂಗಿಯ ಮಲ್ಪುವೆತ್ತ ಸಿರಿಮೆಯ್ಯ ಸೋಂಕಿಗೆ ಮೆಯ್ಮರೆದು ಪೊಂಪುಳಿವೋದ ಮಾರಾಯನ ಕಯ್ದಾವರೆಯಂ ಪಿಡಿದು (ಪುಂಚಾಕ. ೪-೯೨ ವ); ಮಣಿದೆನದ್ವೈತದ ಪೀಠಕೆ ಕೊಂಡಾಡಿ ಕುಣಿದು ನಾ ಪೊಂಪುಳಿವೋದೆ (ಇಂಜಾಕ. ೦೭-೨೫). **ಪೊಂಪುಳಿಯೋಗು :** ೪. ವಿಮಲವಲ್ಲರಿಗಳಿಂ ಪೊಂಗಿ ಪೊಂಪುಳಿಯೋಗಿ ಪೊದಟ್ಟು ನುಣ್ಣಾರವೆತ್ತಿರ್ಪೋಳಕರಿಸುವಳಿಗಳಿಂ (ಕಾರ್ಕ್ಲ. ೩-೯೯). ೫. ಮಹಾದೇವನ ಮೂರ್ತಿಯಂ ಕಂಡು . . . ಪೊಂಗಿ ಪೊರೆಯೇಜಿ ಪೊಂಪುಳಿಯೋಗಿ ಮಹಾನಂದಂಬಡೆದು (ಉದ್ಭಟ. ೦೨-೦೩೬ ವ). **ಹೊಂಪುಳಿಯೋಗು:** ೩. ಬಸವನ ಪುಣ್ಯಕೀರ್ತಿಲತೆ ಜೀವರಾಯಿತ್ತುರಗೇಂದ್ರಲೋಕದೊಳ್ . . . ಕುಸುಮಿತವಾಗಿ ಸೌರಭದಿ ಹೊಂಪುಳಿಯೋಯ್ತಮರೇಂದ್ರಲೋಕದೊಳ್ (ಬಸವ. ೦೨-೦ ಸೂಕಪಾಠದ್ಯ). ೪. ರೋಮಾಂಚನದರಾನಂದಾಶ್ರುಜಲದಲಿ ನನೆದು ಹೊಂಪುಳಿಯೋಗಿ ಚಿಣ್ಣವೆ ಮುಚ್ಚಿ (ಕುಮ್ಯಾರ್ದ್ರೋ. ೦೬-೬೦); ಹೊರೆಯೇಜಿ ಹೊಂಪುಳಿಯೋದಳುಮೆ ಮಹಿಮೆಗೆ ಮಧುದ್ವಿಷನ (ತೊರರಾ. ೪-೯-೩೨). ೫. ತೆಗೆದು ಬಿಗಿಯಪ್ಪಿದನು ಯಮಜಾದಿಗಳ ಮನ್ನಿಸಿ ವೀಳಿಯವನಿತ್ತೊಗುಮಿಗೆಯ ಹರುಷದಲಿ ಹೊಂಪುಳಿಯೋದನಾ ಭೀಷ್ಮ (ಕುಮ್ಯಾಅ. ೭-೦೭); ಉಬ್ಬರದ ಹರುಷದಲಬಲೆ ಹೊಂಪುಳಿಯೋದಳಡಿಗಡಿಗೆ (ತೊರರಾ. ೩-೩-೯೩); ವರ ಮುನೀಶ್ವರ ಮನದೊಳಗಜಾವರನ ಮೂರ್ತಿಯ ಕಂಡು ಹರ್ಷೋತ್ಕರದ ಸುಖಿಮಯನಾಗಿ ಹೊಂಪುಳಿಯೋವನಡಿಗಡಿಗೆ (ಅಂಬರಾ. ೨ ಸೂಕಪಾ). **ಹೊಂಪುಳಿವೋಗು :** ೪. ನಗೆದೊಗವರಳಿ ಹೊಂಪುಳಿವೋ[ಪಾಠಾಂ. ಯೋ]ಗಿ ಕೌರವರರಸ ನುಡಿದನು (ಕುಮ್ಯಾರ್ದ್ರೋ. ೦-೩೯); ಜೋಗದ ಜಲಪಾತದಿ ಧುಮುಕುವ ಮನ, ಮಲೆನಾಡಿಗೆ ಹೊಂಪುಳಿವೋಗುವ ಮನ (ಕೋಗಿಲೆ. ೪೩-೦೬). ೫. ವನಿತೆ ಗುಣಗಳೊಳೊಂದನೊಂದನು ಮನದೊಳಗೆ ಸವಿಮಾಡಿ ತರುಣಿಯ ನೆನನು ಹೊಂಪುಳಿವೋ [ಪಾಠಾಂ. ಯಾ]ಗಿ ವಿರಹದಿ ಮದನಗೀಡಾಗಿ ... ಜನಪ ನಳನಿರೆ (ನಳಕ. ೨-೬). **ಹೊಂಪುಳಿಹೋಗು :** ೪. ಮನದ ಭಾವದ ರಾಗರಸದುಬ್ಬಿನಲಿ ಹೊಂಪುಳಿಹೋದನವರನು ಕಂಡು ಪಾಂಚಾಲ (ಕುಮ್ಯಾಅ. ೦೬-೬೨). [ಪೊಂಪುಳಿ+ಪೋಗು$_1$(<ಪೋ$_1$)]

**ಪೊಂಪುಳಿಸು** (ಕ್ರಿ). ೧. ಅಧಿಕವಾಗು; ಹೆಚ್ಚಾಗು; ಉಕ್ಕು : ಮನೋಹರಿಯರ್ ಬಂದೊಡಲವು ಪೊಂಪುಳಿಸೆ (ಅಶಂಕ. ೩-೬೭); ತುಂಬಿಗಳ್ಗದ ನಱುಗಂಪು ಪೊಂಪುಳಿಸೆ ಪೆಂಪೆಸೆದಿರ್ದುದು ಚಂಪಕವ್ರಜಂ (ಪಶು. ೦-೩೨). ೨. ವ್ಯಾಪಿಸು; ಹರಡು; ಹಬ್ಬು : ಪೊಱಲನಿತುಂ ಪಳಚ್ಚನಮ್ಮೃತಪ್ಲವದಿಂ ತೊಳೆದಂತೆ ಸೊಂಪು ಪೊಂಪುಳಿಸೆ (ಅಶಂಕ. ೭-೯೦).

[ಪೊಂಪುಳಿ+ -ಇಸು$_1$]

**ಪೊಂಬಕ್ಕರಗೆ** 'ಪೊಂಬಕ್ಕರಿಕೆ' ನೋ.

**ಪೊಂಬಕ್ಕರಿಕೆ, ಪೊಂಬಕ್ಕರಗೆ, ಪೊಂಬಕ್ಕರಿಗೆ** (ನಾ). ಆನೆ, ಕುದುರೆಗಳಿಗೆ ಹಾಕುವ ಚಿನ್ನದ ರಕ್ಷಾಕವಚ, —ಪ್ರೈಜೋಡು : ಎರಡುಂ ಬಳಿಗಳ ಪೊಂಬಕ್ಕರಿಕೆಗಳೊಳ್ಸುಱುಗಿ ನಟ್ಟು ಗಜಗಣೆ ಗಜಿಯಂತಿರೆ . . . ತುರಂಗತತಿ ಗರುಡಬಳಮನೇನಿಳಿಸಿದುದೋ (ರಾಜಶೇ. ೬-೩೩). **ಪೊಂಬಕ್ಕರಗೆ:** ಪರಿದುವು . . . ಘೋಟಜಾಯ್ತರ್ ಪರಿಯಿಸೆ ತರದಿಂ ಪೊಂಬಕ್ಕರಗೆಯ ತುರಗಂಗಳಹವಾಂಭೋನಿಧಿಯೊಳ್ (ಕಂಕೃ. ೦೦-೬೬). **ಪೊಂಬಕ್ಕರಿಗೆ :** ಪೊಳೆವ ಪೊಂಬಕ್ಕರಿಗೆಯ ತೇಜಿಗಳು ರಣಜಲನಿಧಿಯಲ್ಲಿ ಪರಿವವು (ಕಂಕೃಸಾಂ. ೨೦-೦೯೬).

[ಪೊಂ (<ಪೊನ್)+ ಪಕ್ಕರಿಕೆ]

**ಪೊಂಬಕ್ಕರಿಗೆ** 'ಪೊಂಬಕ್ಕರಿಕೆ' ನೋ.

**ಪೊಂಬಕ್ಕರೆ** (ನಾ). =ಪೊಂಬಕ್ಕರಿಕೆ : ಹಾಯ್ಕಿದ ಪೊಂಬಕ್ಕರೆ ರುಳ್ಳಿಗಳೆಸೆವ ಮಿಕ್ಕ ಮನದ ಕುದುರೆಯನೇಱಿ ಬಂದನಂದಕ್ಕಸಾಲೆಯ ಚಿಕ್ಕಬೇಗ (ಕುಶಾಸಾಂ. ೦೦-೩೩).

[ಪೊಂ (<ಪೊನ್)+ ಪಕ್ಕರೆ$_1$]

**ಪೊಂಬಕ್ಕಿ** (ನಾ). ಚಿನ್ನದ ಬಣ್ಣದ ರೆಕ್ಕೆಗಳುಳ್ಳ ಹಕ್ಕಿ ; ಗರುಡ : ಇಕ್ಕಿದ ಪಕ್ಕರಕ್ಕೆ . . . ಮೊಗರಂಬವೊಂದು ಪೊಂಬಕ್ಕಿಯ ತೊಟ್ಟು ಮೆಯ್ಗರೆಯೆ ಬಾಸಿಗದಿಂ ಮೆಱೆದತ್ತು ಸಪ್ತಿಗಳ್ (ಶಶಿ. ೨-೯೭).

[ಪೊಂ (<ಪೊನ್) + ಪಕ್ಕಿ]

**ಪೊಂಬಗರಿ** 'ಪೊಂಬೊಗರಿ' ನೋ.

**ಪೊಂಬಚ್ಚ** (ನಾ). ಚಿನ್ನದ ಒಡವೆ ; ಸ್ವರ್ಣಾಭರಣ : ಕೊರಳ ಪೊಂಬಚ್ಚಗಳ ಬೆಳ್ಪಿಯ ಮುರುಹುಗಡಗದ . . . ಪರಮಗೋಪರ ಕಂಡು ನಸುನಗುತಿರ್ದನಕ್ರೂರ (ಅಕ್ರೂಚ. ೨-೯೯) ; ಪೊಂಬಚ್ಚಮಂ ಪಣ್ಣ ಬಣ್ಣಮಂ ಕೇಳ್ದಪ್ಯ್ ? (ರಾಜಶೇ. ೦೨-೨೩).

[ಪೊಂ( < ಪೊನ್) + ಪಚ್ಚ$_2$]

**ಪೊಂಬಚ್ಚಲ್** (ನಾ). ಚಿನ್ನದಿಂದ ನಿರ್ಮಿತವಾದ ಬಚ್ಚಲು,— ಸ್ನಾನದ ಮನೆ : ಲೇಸೆನುತ್ತೆ ತಂದು ಮಗ ಸೊಸೆಗೆಣ್ಣೆಯ ಪೂಸಿ ಪೊಂಬಚ್ಚಲೊಳ್ ನಿಲಿಸಿ ಮಾಸಿದ ಬಳಿಕ ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಮೋಹಕ. ೦೩-೬೯). [ಪೊಂ(<ಪೊನ್)+ಬಚ್ಚಲ್]

**ಪೊಂಬಚ್ಚು** (ನಾ). ಒಂದು ಬಗೆಯ ಹುಳು,—ಕ್ರಿಮಿ : ನಮ್ಮಲ್ಲೂ ಒಮ್ಮೊಮ್ಮೆ ಬತ್ತದ ಪೈರಿನ ಮೇಲೆ ತಲೆದೋರುವ "ಪೊಂಬಚ್ಚು" ಹುಳುವು ಬಯಲಿಗೆ ಬಯಲನ್ನೇ ಕೆಡಿಸಿಬಿಡುವುದು (ಶಾಂಕೃ. III, ೦೩೬೭). [ ? ]

**ಪೊಂಬಟ್ಟ, ಹೊಂಬಟ್ಟ** (ನಾ). ಚಿನ್ನದ ಹಣೆಪಟ್ಟಿ,—ಫಲಕ : ಪೆತ್ತನಗೆ ನೀಂ ಪೊಂಬಟ್ಟಮಂ ಕಟ್ಟಿದೈ (ರಶಾಶಾಸ್ತ್ರ. ೨-೦೦೦) ; ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತವರಾಶ್ರಮಿ ತಡೆಯಲಿ ವಾಜಿಯನೆಂದು ತನ್ನ ಬಿರುದಂ ಬರೆದು ಪೊಂಬಟ್ಟಮಂ ಕಟ್ಟಿ ಬಿಡುವುದಾ ಹಯದ ಪಣೆಗೆ (ಜೈಮಿ. ೨-೨೬). **ಹೊಂಬಟ್ಟ :** ಇದು ಇಂತಹ ರಾಯನ ಕುದುರೆ . . . ಎಂದು ಬರೆದಿರುವ ಹೊಂಬಟ್ಟವನ್ನು ಕಟ್ಟಿ ಬಿಡಬೇಕು (ಜಮುಕೆ. ೪).

[ ಪೊಂ ( < ಪೊನ್ ) + ಪಟ್ಟ$_3$ ]

**ಪೊಂಬಟ್ಟಲ್, ಪೊಂಬಟ್ಟಲು, ಹೊಂಬಟ್ಟಲು** (ನಾ). ೧. ಚಿನ್ನದಿಂದ ಮಾಡಿದ ಬಟ್ಟಲು : ಪೊಂಬಟ್ಟಲೊಳ್ಪಿವಿದಾಸವದ ರುಚಿ ಗಿರ್ವರುಂ ಬಿಡದೆ ಮೊಗಮಿಟ್ಟರಲ್ಲೆ (ಜೈಮಿ. ೦೩-೯೬) ; ಕಪಿಲಾಕ್ಷೀರಮಂ

ಕಮ್ಮಗಿನಿದಪ್ಪಂತೆ ಕಾಸಿ ಬಳ್ದಿನಳೆದು ಪೊಯ್ದು ಪೊಂಬಟ್ಟಲ್ಗಿಂವಿ (ಶೃಶಾ. ೯-೭೦ ಪ). **ಪೊಂಬಟ್ಟಲು**: ೧. ಪೊಂಬಟ್ಟಲೊಳಗಿನ ಹಾಲು ಉಚ್ಛಿಷ್ಟ ಹಾಕಿಸೊ (ಪುಂಠ. ೬೫-೨). ೨. (?) : ತೊಟ್ಟು ವಜ್ರಾಂಗಿಯು ಜೋಡುಸವಗ ಪೊಂಬಟ್ಟಿ [ಪಾಠಾಂ. ಲು] ಚೀನಿಯ ಶೌಳಿ ಕಟ್ಟಿದ ಬಿರಿದು ಮೆಚಿಯ ರಾವುತರು ಬಿಟ್ಟೋಚಿದರು ಕುದುರೆಗಳ (ಕುರಾಣಾಂ. ೦೨-೫೬). **ಹೊಂಬಟ್ಟಲು**: ೧. ಬೀಳಿನಿತು ಪಾಲ್ಗೆಚಿದು ಹೊಂಬಟ್ಟಲೊಳಿರಿಸಿ ತಾಂ ನಿಲಿಸಿ ಬಂದಾ ಮಲಹರನ ಬಳಗದೆ ಯುವತಿ ಜೋದಹಳು ನೋಡೆನಲು (ಶಶಿಕ. ೩೦-೦೨) ; ಹೊಳೆವ ಹೊಂಬಟ್ಟಲಲಿ ಸೂಸಿದ ಸಕ್ಕರೆಜಲವನು ಜನಕನಿದಿರಿನಲಿ (ಜುಕ್ಕ್ಮ. ೬-೦೬) ; ಹೊಂಬಟ್ಟಲಲಿ ಎಳೆಯವ ನಂದನಂಗಿತ್ತು . . . ಬೆಸಸಿದನು ಬಳಿಯಲಿ ಬವರಕನಿಲಜನ (ಕೊಡಕಾ. ೫-೫.೦೦). [ಪೊಂ (<ಪೊನ್) + ಬಟ್ಟಲ್]

**ಪೊಂಬಟ್ಟಲು** 'ಪೊಂಬಟ್ಟಲ್' ನೋ.

**ಪೊಂಬಟ್ಟು** (ನಾ). ಚಿನ್ನದ ದಂಡನೆಯ ವಸ್ತು : ಮುಗಿಲೊಡ್ಡೀಗೆಲೆವಂದ ಕಾಯಭರದಿಂ ಪೊಂಬಟ್ಟನೊಟ್ಟೈಪ ದಿಟ್ಟಗಳಿಂ . . . ಪೆಜೆಯ ಸೌಭಾಗ್ಯಕ್ಕೆ ತೋಡಾದ ಕೋಡುಗಳಿಂದೇಂ ಜನಕಂಗೆ ಹರ್ಷಜನಕಂ ತಾನಾಯ್ತೊ ವನ್ಮದ್ವಿಪಂ (ಜೀಪಾವಾ. ೯-೦೦೯) ; ಭೂತಳಕ್ಕೆ ಪರಿದೇಪಂ ಗೊಂಡು ಬೀಳ್ವಂತ ಭಾಸ್ಕರನಂತಿರ್ದುದು ಸೀಜುಹೊಡನ ಶಿರಂ ಪೊಂಬಟ್ಟ ನಾಳ್ದಟ್ಟನೊಳ್ [ಪಾಠಾಂ. ಕ್ಷಟ್ಟಿಯೊಳ್] (ಅಜಿಕ್ಷು. ೦೦-೬೩).
[ ಪೊಂ (<ಪೊನ್) + ಬಟ್ಟು ]

**ಪೊಂಬಟ್ಟೆ, ಹೊಂಬಟ್ಟೆ** (ನಾ). ಜರತಾರಿಯ ಪೀತಾಂಬರ : ವಕ್ಷಶಾಳೀಣಿಶಾಳೀನಮ್ರುದೊಪ್ಪಿರ್ದದೇಂ ಗೆಲೆವಂದತ್ತೊ ಸುವರ್ಣವರ್ಣದಿನಿಶಾಶ್ರೀಯುಟ್ಟ ಪೊಂಬಟ್ಟೆನೋಲ್ (ಶಗಠ. ೨-೫) ; ಜಾಣವರೆ ಪೊಂಬಟ್ಟೆಯುಟ್ಟು ನೀರಾಬ್ಬಮಂ ಪಾಣಿಯೊಳ್ ಪಿಡಿದು . . . ಒಪ್ಪಿದಳ್ (ಶಬ್ದಣ. ೯-೯೬) ; ತುಜುಗೆವಗ್ಗಾ ನೀರಿಂಗೆ ಹಜಿಗೋಲ ಹಾಯ್ಕಿಸಬೇಡೆಂದು ಪೊಂಬಟ್ಟೆಸೆಜಗಿನಿಂ ತೊಡೆದ ಲೋಚನವ (ಜೋಪಕ. ೯-೯೬). **ಹೊಂಬಟ್ಟೆ**: ತಂದು ಹೊಂಬಟ್ಟೆಗಳ ಹೊಂಪುಣಿಯಿಂದ ಮೆಜೆದಿಹ ಪಂಚಘಂಟೆಗಳಿಂದ್ರೈರಾವತಕೆ ಸರಿವಿಗಿಲೆಂದುದುಬಳಿಜನ (ಶಂಕಶ. ೨೦-೦೦); ಎಡಗೈಯೊಳಾಂತ ಹೊಂಬಟ್ಟೆ ಅಕ್ಷತೆ ಪುಷ್ಪ ಸಿಡುಗಿಂದಿ ಬಲದ ಹಸ್ತದೊಳು ತೊಡಿಗೆಯ ಪ್ರಭೆ ದಿಕ್ಕುದಿಕ್ಕಿಗೆ ಪಸರಿಸಿ ನಡೆಯೆ ನಡೆದನಾ ರಾಯ (ಶಶಶ. ೩-೬).
[ ಪೊಂ (<ಪೊನ್) + ಬಟ್ಟೆ ]

**ಪೊಂಬಡಲಗೆ, ಪೊಂಬಡಲಿಗೆ** (ನಾ). ಚಿನ್ನದಿಂದ ಮಾಡಿದ ಅಗಲವಾದ ತಟ್ಟೆ : ಎಡದ ಕರದೊಳ್ಗೆಧು ಪೂಮಾಲೆ ಸಿರ್ಪಿನ ಸೇಸೆ ಪೊಂಬಡಲ [ಪಾಠಾಂ.ಲಿ]ಗೆಯೊಳೊಂದಂದಂ ಬಲ್ಗಾಗೆ ಗಂಧಜಳಂಗಳಂ ಪಿಡಿದ ಕಳಸಂ ಬಯ್ಕೊಳ್ಳತ್ತೊಂದಜಿಳ್ದಿಗೆ ಶೋಭೆಯಂ ಪಡೆಯೆ ಪದಪಿಂದೊರ್ವಂ ಬಂದಂ ಪ್ರಗಲ್ಭಪುರೋಹಿತಂ (ಅರ್ಥಶ. ೨-೦೯). **ಪೊಂಬಡಲಿಗೆ**: ನಿಜಜನನಿಯ ಮನೋಹರಮಪ್ಪ ಮಣಿದೊಡವುಗಳಂ ಪೊಂಬಡಲಿಗೆ ಯೊಳ್ಪೇಎಯೋರ್ವ ಕೆಳದಿಯ ಕೈಯೊಳ್ಕಾತೆಯಡಗಟ್ಟಿರ್ (ಪಾಗಳ. ೯-೦೦೯ ಪ). [ ಪೊಂ (<ಪೊನ್) + ಪಡಲಗೆ ]

**ಪೊಂಬಡಲಿಗೆ** 'ಪೊಂಬಡಲಗೆ' ನೋ.

**ಪೊಂಬಡಿಗ** (ನಾ). ೧. ಚಿನ್ನದ ಪೀಕದಾನಿ : ಮಿಂದಿಯರ್ ಪೊಂಬಡಿಗವ ಸಾರ್ಚಿ ಬಿಸಿನೀರ ಗಿಂಡಿಯೊಳ್ ತಂದು ಕಾಲ್ದೊಳೆಯ (ಜೋಪಕ. ೦೮-೯೯). ೨. ಚಿನ್ನದ ಪಾತ್ರೆ: ಪಾವನಪಾದ್ಯಮಂ ತಳೆದ ಪೊಂಬಡಿಗಂಬೊಲ ದಾಯ್ತು ಮೇರು (ಜಿಶಂ. ೯-೨). [ ಪೊಂ (<ಪೊನ್) + ಪಡಿಗ ]

**ಪೊಂಬಡೆ** (ಕ್ರಿ). ಹಣವನ್ನು ಗಳಿಸು ; ಐಶ್ವರ್ಯವನ್ನು ಸಂಪಾದಿಸು : ಗಂಡುಗೂಸುವೆತ್ತ ಸಜ್ಜನದಂತೆ ಪೊಂಬಡೆದ ಸೂಳೆಯಂತೆ . . . ಚಿತ್ರದೊಳಾನಂದಂ ಬೆರಸಿರ್ಪುದು (ರಶಜೋಶು. ೯-೩). [ಪೊಂ (<ಪೊನ್) + ಪಡೆ$_1$]

**ಪೊಂಬಣತಿ** (ನಾ). ಚಿನ್ನದ ದೀಪ : ಪಟ್ಟುಸೂತ್ರದಿ ಪೊಸೆದು ಬತ್ತಿಯನಿಟ್ಟು ಪೊಂಬಣತಿಯೊಳು . . . ಮುಂದದಿಂದ ದೀಪ್ತಿಯ ಮುಟ್ಟಿಸೆ (ಶಂಕಶಾ. ೫-೩೩). [ ಪೊಂ (<ಪೊನ್) + ಪಣತಿ (<ಪಣತೆ) ]

**ಪೊಂಬಣ್ಣ, ಹೊಂಬಣ್ಣ** (ನಾ). ೧. ಬಂಗಾರದ ಬಣ್ಣ ; ಚಿನ್ನದ ಬಣ್ಣ : ಕಣ್ಣಾರೆ ಬಿರಯಿಯುಂ ಮೂಪಣ್ಣಂ ಬರಿಸಿದುವರಲ್ಲ ಸುರ ಹೊನ್ನೆಯ ಪೊಂಬಣ್ಣದ ಬೆಳರ್ವಣ್ಣದ ಕೆಂಬಣ್ಣದ ಕೇಸರಮುಮೆಸಟ್ಟಳುಂ ಕರ್ಣಿಕೆಯುಂ (ಜುಕ್ಷು. ೫-೦೬); ಒಲೆದಾಡುವ ಪೊಂಬಣ್ಣಮೆಸೆವ ಕಳವ ಶ್ರೀಯ ಪರಿಚರ್ಯೆಯಂ ಬಿಡದೆ ಮಾಳ್ಪ ಕೆಳದಿಯರನಲ್ಕಿಲೇನಿಕುರುಂಬಮಂ ಸೋವಲೆಂದಲ್ಲಿರ್ದ ಪಾಪಃರಿಯರದ್ಧಗರ ನಡೆಗೆಡಿಪರು (ಶ್ಯಪಾಕ. ೩-೬). ೨. ಕೆಂಪು ಬೆರೆತ ಹಳದಿ ಬಣ್ಣ ; ಮಾಸಲುಕೆಂಪು ; ಕಪಿಲವರ್ಣ : "ಕಪಿಲವಣ್ಣಮೆಂದು ಪೊಂಬಣ್ಣಂ" (ಶಶಾ. ೩೬-೨೨೦) ; ಪೊಂಬಣ್ಣದ ಕೆಂಪಿಡಿದಿರೆ ಸೊಗಯಿಪುವವು ಗಂಧಶಾಲಿವನಂಗಳ್ (ಅಜಿಕ್ಷು. ೦-೭೦) ; ತೋರ ಮಾಯ್ಯುಗಳೊಳಸೆವ ಕುಂಕುಮಂಗಳ ಬಂಬಲ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ ಪೊಂಬಣ್ಣ ವಸಗೆಸೆಯೆಯುಂ (ಗಾರಂಪು. ೬೭). **ಹೊಂಬಣ್ಣ**: ೧. ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪುದು ತಪ್ಪದು (ಬಸಶ. ೪೬೦); ಪೂರ್ವಮಂದರಂ . . . ಅಂಬುಜಜಂ ನಟ್ಟಿರಿಸಿದ ಹೊಂಬಣ್ಣದ ಕಂಭಮೆಂದಿನಂ ರಂಜಿಸುಗುಂ (ಪಾಕಕ್ಷು. ೯-೯); ಹೊಂಬಣ್ಣಮೈಯಳೊರ್ವಳು ...ನಿಂದಳು ಹೊನ್ನ ಬೊಂಬೆಯಂತರಸನೊತ್ತಿನೊಳು (ಭಕಶ. ೫-೨೯). ೨. ಅಣ್ಣಗಳೆ ! ಹೊಂಬಣ್ಣ ತಿರುಮಿಾಸೆಯುಟ್ಟರಕೆ ಮಣ್ಣಿಕ್ಕಿ! (ಕಾಶು. ೪೨-೩).
[ ಪೊಂ (<ಪೊನ್) + ಬಣ್ಣ ]

**ಪೊಂಬಣ್ಣಿಗೆ** (ನಾ). ಚಿನ್ನದ ಅಲಂಕಾರ,-ಶೃಂಗಾರ : ಬಂದತ್ತು ಪೊಂಬಣ್ಣಿಗೆಯ ಪಿಡಿಗಳೊಳ್ ತಂದದಿಂ ಪೆಂಡವಾಸಂ (ಜಗಪು. ೦೫-೬೮).
[ಪೊಂ (<ಪೊನ್) + ವಣ್ಣಿಗೆ (<ವಣ್ಣಗೆ)]

**ಪೊಂಬರಣೆ** (ನಾ). ಬಂಗಾರದ ಕರಂಡಕ; ಚಿನ್ನದ ಡಬ್ಬಿ: ಪೊಂಬರಣೆಯ ಮೇಲೇನಿದು ತುಂಬಿಯ ಕತ್ತುರಿಯ ಬೊಟ್ಟು (ಶಶಂ. ೬-೩೦).
[ಪೊಂ (<ಪೊನ್) + ಬರಣೆ]

**ಪೊಂಬರದ** (ನಾ). ಚಿನ್ನದ ವ್ಯಾಪಾರ ಮಾಡುವವನು ; ಸರಾಫ: "ಸೊನ್ನವರದನೆಂದುಂ ಪೊಂಬರದನೆಂದುಂ ಚಿನ್ನವರದಂ" (ಶಶಾ. ೬೦-೩೩೮) ; ಪೊಂಬರದರ ಪೂವಡಿಗರ ತಂಬುಲಿಗರ . . . ಕದಂಬದಿನಾ ರಾಜವೀಧಿ ಕಣ್ಗೆಸೆದಿರ್ಕುಂ (ಪಾಶ್ವಟ. ೦-೫೦) ; ತಂಬೆಲರೆಂಬ ಪೊಂಬರದ ನಲವೊರ್ನ್ನಂ ಪರ್ಣಕರ್ಪೋಪಲದೊಳೊರೆಯೆ (ಕಂಕಂ. ೨-೯೨ ಪ).
[ಪೊಂ (< ಪೊನ್) + ವರದ$_1$]

**ಪೊಂಬರಹ, ಹೊಂಬರಹ** (ನಾ). ೧. ಚಿನ್ನದ ಎರಕದಲ್ಲಿ ಬರೆದ ಲಿಪಿ,-ಬರವಣಿಗೆ : ಅತನ ಮೇಲೆ ಪೊಂಬರಹಶೋಭಿತಶರವ್ರಾತವನೆಚ್ಚು ಬೊಬ್ಬಿಜಿದ (ಜೋಪಕ. ೩೬-೬). ೨. ಬಂಗಾರದ ಚಿತ್ರ,-ಅಲಂಕಾರ : ಕರುವಾಡ ಕಂಡರಿಸಿದ ಗೋಪುರ ಪೊಂಬರಹದ ಲೋವೆ . . . ಮಣಿವಾಗಿಲೆಸೆಯೆ ಕಣ್ಣರವನೆ ಗಾಡಿವೆತ್ತಿಹುದು (ಕುರಾಣಾಂ. ೫-೯). ೩. ಚಿನ್ನದ ಎಳೆಯ ಕಸೂತಿ ; ಜರತಾರಿ ಹೆಣಿಗೆ : ಪರಚಂದ್ರಿಕೆಯ ಪಾವುಡಕೆ ಶೋಭಿಸುವ ಪೊಂಬರಹದ ಶುಭ್ರರೂಪಟವ ಸ್ಮರಬಾಣಗಜಿಯಂತೆ ನಿಜಿ ವಿಡಿದುದುಡಿಸಿದರ್ ದರಹಾಸಮುಖಿಗೆ (ಜೋಪಕ. ೨೩-೦೩). **ಹೊಂಬರಹ**: ೧. ಹೊಂಬರಹದಂಬಿನ ಮಿಂಚುಗಳಲೆಹೆಳಚಿದವು ಹರಿಹರ ಪುರಂದರರ (ಕುಕ್ಮಾ. ೩೩-೦೦); ಹೊಳೆವ ಹೊಂಬರಹದ ಸುರೇಖೆಯ ತಳಪದಸ್ತ್ರದಲವಳ ಹಸ್ತವ ಕಳಚಲೆಚ್ಚನು ಭೂತಗಣ ಬಿಜಿತೋಡೆ ಭೀತಿಯಲಿ (ಕೊರಕಾ. ೦-೦೦-೦೩). ೨. ಕೀಲಿಸಿದ ಪಟ್ಟಿಗಳ ದಿವ್ಯದುಕೂಲದಲಿ ಹೊಂಬರಹದೆಲೆಗಳ [ಪಾಠಾಂ. ಹೊಂಬಾಳೆತೆಲೆಗಳ] ಚೂಳಿಕೆಯ ಕನ್ನಡಿಯ ತೋರಣವೆರಡುಪಕ್ಕದಲಿ (ಕುಕ್ಮಾ. ೦೨-೦೩); ತೆಗೆದು ವಜ್ರಾಂಗಿಯನು

ವ್ಯುಯಲಿ ಬಿಗಿದು ಹೊಂಬರಹದ ಸುರತ್ರಾಣಗಳ ಬಲುಸೀಸಕವನಳವಡಿಸಿ ದನು ಸಿರಿಪಾಡಿಗೆ (ಶಬ್ದಾ.ಗ. ೩-೪೦).

[ಪೊಂ (< ಪೊನ್) + ಬರಹ (< ಬರಹ)]

**ಪೊಂಬರಿಗೆ** (ನಾ). ಬಂಗಾರದ ಥಾಲು; ಚಿನ್ನದ ಗುರಾಣಿ: ಕಡಿತಲ ದೂಗುತ ಕಯ್ಯ ಪೊಂಬರಿಗೆಯುನೆಡಬಲಗಳಿಗೆ ತೋಱಸುತ ಕಡಿದಾಡಿ ಮಡಿದರು (ಬಸವಾ. ೦೨-೩೯); ದಾಳಂಬಟ್ಟಲ ಹಿಡಿದೊಮ್ಮೊಮ್ಮೆ ಪೊನ್ನ ಕುಗೋಲು ಪೊಂಬರಿಗೆಯಾಂತೊಮ್ಮೆ ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಮಾಸಾಳುಗಳಂತೆ ದಿಟ್ಟೆಯರು (ಚೆಕ. ೦೨-೪೦).

[ಪೊಂ (< ಪೊನ್) + ಪರಿಗೆ]

**ಪೊಂಬರಿಜು** (ನಾ). ಚಿನ್ನದ ವಿಗ್ರಹ; ಬಂಗಾರದ ಪ್ರತಿಮೆ: ಕಿಟ್ಟ ಹಾಱದ ಪೊಂಬರಿಜೊ ನಿಜಾತ್ಮನ ತಿಟ್ಟವೊಯನೆ ನೃಪವರನ ದಿಟ್ಟಗಣ್ಣಾ ನಂದವನೊದವಿಸಿದುದು ದಿಟ್ಟಯೋಗಿಯ ದಿವ್ಯಮೂರ್ತಿ (ಸಂಸ್ಕ್ರ.ಮಂ. ೩-೩೮). [ಪೊಂ (< ಪೊನ್) + ಪರಿಜು]

**ಪೊಂಬರಿಯಣ** 'ಪೊಂಬರಿಯಾಣ' ನೋ.

**ಪೊಂಬರಿಯಾಣ, ಪೊಂಬರಿಯಣ, ಪೊಂಬರಿವಾಣ, ಹೊಂಬರಿಯಣ, ಹೊಂಬರಿವಾಣ** (ನಾ). ಚಿನ್ನದ ತಟ್ಟೆ; ಬಂಗಾರದ ಹರಿವಾಣ: ಬಳಿಕ ಪೊಂಬರಿಯಾಣದೊಳು ವೀರರಾಮನ ಕಳಕಳಿಸುವ ಮವಲೆಯುನು ತಳುವದಿರಿಸಿಕೊಂಡು ತಂದು ತೋಱಸಲು (ಬಸವಾ. ೩೬-೪೦); ಮಿಸುನಿ ಯದ್ದಣಿಗೆಯೊಳ್ಪೊಂಬರಿಯಾಣಮನರ್ಘ (ವೃಕಥಾ. ೩-೬೨ ಟ). **ಪೊಂಬರಿಯಣ**: ನೀಂ ಬಯಸಿದಗ್ರಪೂಜೆಯ ಪೊಂಬರಿಯಣಮಿದೆ ನಿಶಾಟ ಕೊಳ್ಳೆಂದು ಸರೋಜಾಂಬಕನಿದೆ (ಜಗ. ೦೬-೩೦); ಪೊಂಬರಿಯಣದಿ ಪೊಳ್ಮಣಿವಾಯುವಡೆದಿರ್ದ ಸಂಬಳಿಗೆಯ ಪರ್ಣಚೂರ್ಣ ಕೊಂಬ ಕರ್ಪೂರ ಕರಂಡವ ಸ್ಮರನ ತಲೆಗಿಂಬಿನೊಳ್ ತಂದಿರಿಸಿದರು (ಕೋಹಕ. ೦೬-೨೬). **ಪೊಂಬರಿವಾಣ**: ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳಿ ಪೊಂಬರಿವಾಣಗಳ ತುಂಬಿ ಸುಳಿಹೆತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಕೋಹಕ. ೩೦-೩೬); ಮಿನುಮಿನುಗುವ ಪೊಂಬರಿವಾಣಗಳೊಳೆಯ್ದೆ ನೀಡಿದರ್ ಪರಿಪರಿಯ ಪರಿ ಕರವನು (ಕಂಥ. ೩-೩೯). **ಹೊಂಬರಿಯಣ**: ಹೊಂಬರಿಯಣ ದೊಳೊಸೆದು ಬಡಿಸಿದ ಸುಘೃತ ದಿವ್ಯಾನ್ನಮಂ ನಿವೇದ್ಯಂಗೊಟ್ಟು (ಹಕಥಾ. ಕಾ. ೩-೬೭); ಮಿಗೆ ರವಾಯ್ವಡೆದ ಹೊಂಬರಿಯಣ ತಳಿಗೆ ತಂಬಿಗೆ . . . ದೀವಿಗೆಗಂಬಗಳನಿತ್ತನೊಲಿದು (ಕೋಹಕ. ೦೩-೦೯). **ಹೊಂಬರಿವಾಣ**: ಮುತ್ತಿನಾರತಿಯ ಹೊಂಬರಿವಾಣದಿಂ ಬೆಳಗಿಸಿ ಮಂತ್ರಿ ಪೀತಾಂಬರಧರನ ಕೀರ್ತಿಸಿದ (ಕೋಹಕ. ೪೦-೩೩); ಲಾವಣ್ಯ ಧಗಧಗಿಸುವ ಸರಪತಿಯ ಮುಂದೋವಿಟ್ಟ ಹೊಂಬರಿವಾಣ ಭಾವಿಸಲೊಪ್ಪಿತು . . . ಚೆಲ್ವಿನೊಳು (ಚೆಕ. ೪-೬೨). [ಪೊಂ (< ಪೊನ್) + ಪರಿಯಾಣ₁]

**ಪೊಂಬರಿವಾಣ** 'ಪೊಂಬರಿಯಾಣ' ನೋ.

**ಪೊಂಬಲಗೆ** (ನಾ). ಚಿನ್ನದ ಹಲಗೆ; ಬಂಗಾರದ ಫಲಕ: ಕಡಿತಕೆ ಪಾರೆ ಪೊಂಬಲಗೆ ಬೀಳೆ ಶಿರಂ ಸಿಡಿದೇಳೆ ಭೂತಸಂಗಡಣದಿ ನೋಡಿ (ಎಕ. VI. ಕಡೂರು. ೦೩೩-೩೮; 1191); ಮನಸಿಜಮಂತ್ರಾಕ್ಷರಮಂ ಬಳಪದಿನನುರಾಗದಿ ಬರೆಯಲ್ಪೊಂಬಲಗೆಗೆ ಮಿನುಗುವ ಮಸಿಯಿಡು ವಂದದೆ ನೊಸಲೊಳ್ ಮೃಗಮದಮಿಕ್ಕಿದಳು (ಶಮಕಾ. ೨-೩೯).

[ಪೊಂ (< ಪೊನ್) + ಪಲಗೆ]

**ಪೊಂಬಲೆ** (ನಾ). ಜಾಲರಿಯಂತಹ ಚಿನ್ನದ ಆಭರಣ: ದಿಟ್ಟಸರ ಪೊಂಬಲೆಗಳ್ ಮೊಗರಂಬಮೋದು ಪೊಂಬಕ್ಕಿಯ ತೋಳ್ಮ ಮೊಯ್ಗ್ಗರೆಯ ಬಾಸಿಗದಿಂ ಮೊಱದತ್ತು ಸತ್ತಿಗಳ್ (ಚಕಂ. ೨-೪೬).

[ಪೊಂ (< ಪೊನ್) + ಬಲ್ಲೆ]

**ಪೊಂಬಲ್ಲಕಿ** 'ಪೊಂಬಲ್ಲಕ್ಕಿ' ನೋ.

**ಪೊಂಬಲ್ಲಕ್ಕಿ, ಪೊಂಬಲ್ಲಕಿ** (ನಾ). ಚಿನ್ನದ ಅಂದಣ; ಬಂಗಾರದ ಪಲ್ಲಕ್ಕಿ: ನಿಲ್ಲದಾಳಿಯರಂದಣಗಳ ನಡುವೆ ಪೊಂಬಲ್ಲಕ್ಕಿಯೊಳ್ ಲೀಲೆ ಯೊಳು ಮೆಲ್ಲನೆಯ್ತಂದಳಾ ಸುರುತಾಳಸುತೆ (ಬಸವಾ. ೦೩-೪೨); ಸಲ್ಲಲಿತಾಂಗಿಯ ಪರಪಾಣವಿಡಿದು ಪೊಂಬಲ್ಲಕ್ಕಿಯ[illegible]ಂಡಿಸಿದ (ಕೋಹಕ. ೪೦-೩೯). **ಪೊಂಬಲ್ಲಕಿ**: ಅಲ್ಲಿ ತವೆ[illegible] ಬಲವನಿರವೇಳ್ದು ಪೊಂಬಲ್ಲಕಿಯನೀಡು . . . ಒಳಪುಗೆ (ಪ್ರ.ಭಾ. [illegible]೨); ಪೊಂಬಲ್ಲಕಿಯ ಹರಿಸದಿಂದಿಳಿದು . . . ಅರಮನೆಯ ಪೊಕ್ಕು (ಚಕ. ೨-೨೬).

[ಪೊಂ (< ಪೊನ್) + ಪಲ್ಲಕ್ಕಿ₁ (< ಪ[illegible]ಂಗ)]

**ಪೊಂಬಸದಿ** (ನಾ). ಬಂಗಾರದಿಂದ ನಿರ್ಮಿತವಾದ ಬಸದಿ: ಇವ ನೆಮ್ಮಾಳ್ದನನಿಕ್ಕಿ ಸಾಧುವಿನವೋಲ್ ತಾನಲ್ಲದಂತಿಲ್ಲಿ ಪೋ ಕವಿದಿರ್ಪಂ ಜಿನನೆಂದು ಪೊಂಬಸದಿಯಂ ಪುಷ್ಪಾಸ್ತ್ರಸೇನಾಳಿ ಮುತ್ತುವವೋಲ್ ಪೆಂಡಿರ ತಂಡವೊಪ್ಪೆ (ಅರಕಿ. ೨-೪೬). [ಪೊಂ (< ಪೊನ್) + ಬಸದಿ]

**ಪೊಂಬಸಿರ** 'ಪೊಂಬಸಿಱ' ನೋ.

**ಪೊಂಬಸಿಱ, ಪೊಂಬಸಿರ, ಪೊಂಬಸುಱ** (ನಾ). ಬ್ರಹ್ಮ; ಹಿರಣ್ಯ ಗರ್ಭ; ಈ ಚಿನ್ನದ ಮೊಟ್ಟೆಯಿಂದ ಜನಿಸಿದನೆಂಬ ಪ್ರತೀತಿಯಿಂದ ಬ್ರಹ್ಮನಿಗೆ ಈ ಹೆಸರು ಬಂದಿದೆ: "ಅಂಚೆದೇರಂ, ನಾಡಿಮೊಗ್ಗನಿಯಂ, ಪೊಂಬಸಿಱಂ . . . ತಾವರೆಮನೆಯಂ—ಈ ೮ ಬ್ರಹ್ಮಂಗೆ ಪೆಸರ್" (ಆಕಾ. ೪೬-೦೩); ಪೊಂಬಸಿಱನ ಬಾಯ ಬೀಯಗ ಜಯಯೆಂದು ಶಂಬ ರಾರಿಯ ಹೊಗಳಿದರು (ಕೋಹಕ. ೦೬-೩); ಪೊಂಬಸಿಱನ ಗುಂಡಿಗೆಯಂ ಪೊಕ್ಕು ಪೊಱಮಟ್ಟುಂ ಧರೆಗಿೞಿದು ಬಂದು . . . ತ್ರಿಪಥಗೆ ಕಾಣಿಸಿ ಕೊಂಡಳ್ (ರಾಜಶೇ. ೩೦-೦೨). **ಪೊಂಬಸಿರ**: ಪೊಂಬಸಿರನೀ ಪರಿ ಬರೆದನೇತಕೆ ಹಾ ಮಹಾದೇವ (ಶಕುಂತ. ೬ ಶಿವ್ಯಾಚರ ಅನಿಷ್ಠಾನ). **ಪೊಂಬಸುಱ**: ಪೊಂಬಸುಱನ ಪೆಣ್ಣಾಗಂಡಿಂದ ತಕ್ಕನೆ ತುಂಬಿತು ಕಿಱದೆ ಕುಟುಂಬ (ಚಕ. ೬೨-೩೮). [ಪೊಂಬಸಿಱು + — ಅ₇]

**ಪೊಂಬಸಿಱು, ಹೊಂಬಸಿರು** (ನಾ). ೧. ಚಿನ್ನದ ಗರ್ಭ: 'ಪೊಂಬಸಿಱ' ಪರಾ. ೨. ಶ್ರೇಷ್ಠವಾದ ಗರ್ಭ: ಪಂದಲೆ, ಬಿಂದೊವಲ್, ಬೆಂಬಱ, ಪೊಂಬಸಿಱು (ಕಣ್ವ.ಕು. ೬೦ ಪ್ರಾ.ಪ್ರ). **ಹೊಂಬಸಿರು**: ೨. ಬೇಂದ್ರೆಯವರ ಕವಿತೆಯಲ್ಲಿ ಮೇಲೆ ಹೇಳಿದಂತೆ 'ಹೊ' ಎಂದರೆ ಸಮಾಧಿಯಲ್ಲಿದ್ದ ಹೊಂಬಸಿರಿನ ಉಸಿರು (ಕಣ್ಣಾ. ೬೨); ನಮ್ಮ ಕನ್ನಡತಾಯಿ, ತನ್ನ ಹೊಂಬಸಿರಿನಿಂದ ನಮ್ಮನ್ನು ತೇದು . . . ಹಾರೈಸುತಿಹಳು (ಹೊಂಗಳು. ೦೯-೨). [ಪೊಂ (< ಪೊನ್) + ಬಸಿಱು (< ಬಸಿಱ್)]

**ಪೊಂಬಸುಱ** 'ಪೊಂಬಸಿಱ' ನೋ.

**ಪೊಂಬಳಯಿಗೆ, ಹೊಂಬಳಯಿಗೆ** (ನಾ). ಚಿನ್ನದ ಕಾಂತಿಯ ಬಾವುಟ; ಹೊಂಬಣ್ಣದ ಪತಾಕೆ: ಪೊಂಬಳಯಿಗೆ ವಿಂಚು ಮಣಿತೋರಣ ಕಣ್ಗೊಂಬಿಂದ್ರಧನು ಕುಸುಮಾಳಿ ಇಂಬುಗೊಂಡಾಲೀಲ್ಲುಗಲಾ ನಗರಿ ವಿಡಂಬಿಸಿದುದು ಕಾರ ಸಿರಿಯ (ಬಸವಾ. ೬-೬೯). **ಹೊಂಬಳಯಿಗೆ**: ತಳಿತ ಪಲ್ಲವಸತ್ತಿಗೆಯ ಹೊಂಬಳಯಿಗೆಯ ಸೀಗುರಿಯ ಚಮರಾವಳಿಯ ಲಗ್ಗೆಯೊಳ್ಳೆಱವ ಘನವಾದ್ಯರಭಸಗಳ ಒಲವಿನಿಂದಾ ನೃಪತಿ ಚಾತುರ್ಬಲ ಸಹಿತ ಬಂದಾ ಕಿರಾತರನಳವಿಯಲಿ ತಾಗಿದನು (ಕಿಕಂಕ. ೬-೦೦).

[ಪೊಂ (< ಪೊನ್) + ಪಳಯಿಗೆ (< ಪಟಯಿಗ)]

**ಪೊಂಬಳೆ** 'ಪೊಂಬಾಳೆ₁' ನೋ.

**ಪೊಂಬಳೆದೊಂಗಲ್** (ನಾ). ಅಡಕೆ, ತೆಂಗು ಮೊದಲಾದುವುಗಳ ಹೂವಿನ ಗೊಂಚಲು: ಎರಲಲೆಮಿಂ ತಱಂಬೊಳೆದು ಪೊಂಬಳೆದೊಂಗಲ ನಾಂತ [ಪಾಠಾಂ. ಪೂಮುಡಿದೊಂಗಲನಾಂತು] ಕೌಂಗುಗಳ್ (ಜಗ. ೦೯-೩೦).

[ಪೊಂಬಳೆ (< ಪೊಂಬಾಳೆ₁) + ತೊಂಗಲ್]

**ಪೊಂಬಳ್ಳಿ, ಹೊಂಬಳ್ಳಿ** (ನಾ). ೧. ಚಿನ್ನದ ಬಳ್ಳಿ; ಸ್ವರ್ಣಲತೆ:

ಪೊಂಬಳ್ಳಿಯ ಪೊಗರಂ ಗೆಲ್ವಂಗದ ಕಂಬುಲಲಿತಕಂಧರೆ ಮುನ್ನಱಿದ ನವಾಂಬು ಜಲಕ್ಕನೆ ಶೀವಲ್ಲೆ (ಜಯನೃ. ೧-೪೩): ವರನಾರಾಯಣನ ರಾಣಿಯರ ಪಾದದ ಹೊನ್ನ ಸರಪಳಿಯೆಳೆಯುತ್ತ ಬರಲು ವರನೀಲದ ನೆಲಗಟ್ಟಿನ್ಲಿ ಪೊಂಬಳ್ಳಿ ಬರೆದಂತೆ ರೇಖೆದೋಱಿದುವು (ಮೋಹತ. ೧೯-೨೬). ೨. ಹಳದಿಬಣ್ಣದ ಒಂದು ಬಗೆಯ ಲತೆ : ಖರ್ಜೂರ ದ್ರಾಕ್ಷೆಗಳೊಪ್ಪ ಪೊಂಬಳ್ಳಿಗಳ ಫಲವೊಪ್ಪ ಘನತರಾರ್ಘ್ಯಗಳಿಂದ ಶಾಂತಿಧಾರೆಗಳಿಂದ ಜನಪನಂಬಿಕೆಯನಟ್ಟಿಸಿದ (ಜಿಕ. ೧೯-೧೨೦). ಹೊಂಬಳ್ಳಿ: ೧. ಹೊಂಬಿಡಿದ ಹೊಂಬಳ್ಳಿಯೊಳೆಸೆವ[ ಪಾಠಾಂ. ಹೊಂಬಳಿವಾಯ್ಕೊಳೆಸೆವ ] ಕಡುಬಿಣ್ಪಿನ ಜಘನದ ಕಾಮಿನಿಗಿಂದು ಪಡಿಗಟ್ಟು ಪೇಳುವಸೇನ (ಶಿಖಂಶಾಂ. ೧೧-೨೫); ವಿಲಾಸಿನೀಚರಣದ ನಿಗಳವೇಳ್ತರಲು ವರನೀಲಮಣಿಗಟ್ಟಿನ ಮೇಲೆ ಹೊಂಬಳ್ಳಿ ಬರೆದಂತೆ ಕಣ್ಗೆ ರಂಜಿಸಿತು (ಮೋಹತ. ೨೯-೪೬). [ಪೊಂ (<ಪೊನ್)+ಬಳ್ಳಿ]

**ಪೊಂಬಱುಗಲ್** (ನಾ). ಚಿನ್ನದ ದೋಣಿ : ಬಂಗಾರದ ನಾವೆ: ಗಗನತಟಾಕದೊಳೊಗೆದು ಪೊಳೆವ ವಿಮಾನಂಗಳೆಂಬ ವಿಮಾನಂಗಳ್ಗೆ ಬಿಂಬಮೆಂಬ ಪೊಂಬಱುಗಲ ಕಳಂಕಧೀವರನಡರೆ ಬೀಸಿದ ಜಾಲದಂತೆಯುಂ (ಅಜಿತಪು. ೬-೬೦ ವ). [ಪೊಂ (<ಪೊನ್) + ಪಱುಗಲ್ (<ಪಱಿಗೋಲ್)]

**ಪೊಂಬಾಗಿಲ್, ಪೊಂಬಾಗಿಲು** (ನಾ). ಚಿನ್ನದ ಬಾಗಿಲು; ಬಂಗಾರದ ದ್ವಾರ : ಪೊಂಬಾಗಿಲ್ಗೆ ಬಂದನಾ ಕವಿರಾಜು (ಅದ್ಯಪು. ೧೨-೫೫). **ಪೊಂಬಾಗಿಲು :** ಮದಿಲೊಳು ಮಣಿಪಾಡದೊಳು ಪೊಂಬಾಗಿಲ ತುದಿಯೊಳು . . . ಪುರಸುಂದರಿಯರವನ ನೋಡಿದರು (ಶ್ರೀಚಾಂ. ೦೩-೩೯); ಅಂತರಾಂತರದ ಪೊಂಬಾಗಿಲೊಳಗೆ ನೀಲಕುಂತಳೆಯರು ನಸುನಗುತ ಸಂತೋಷದೆ ಮುತ್ತಿನಾರತಿಗಳ ಭೂಕಾಂತನಿಗೊಲಿದೊಪ್ಪಿದರು (ಕಂಪಂ. ೬-೫೦). [ಪೊಂ (<ಪೊನ್) + ಬಾಗಿಲ್]

**ಪೊಂಬಾಗಿಲು** ‘ಪೊಂಬಾಗಿಲ್’ ನೋ.

**ಪೊಂಬಾದರಿ** (ನಾ). ಹೊಂಬಣ್ಣದ ಪಾದರಿಹೂವು ; ಪಾಟಲಪುಷ್ಪ : ಸುರಯಿಯ ಚೊಲ್ಲೆಯವುಂ . . . ಪೊಂಬಾದರಿಯ ಕಿಱುಪುಗುಳ ತೊಡರುಂ ಪರಿವಡೆದಿರೆ ಬಂದನಟ್ಟಿಯಿಂದೆ ಬಸಂತಂ (ಕಬ್ಬಿಗ. ೩೨೫). [ಪೊಂ (<ಪೊನ್) + ಪಾದರಿ$_3$]

**ಪೊಂಬಾರಿಕ** (ನಾ). ಓಲಗದಲ್ಲಿ ಚಿನ್ನದ ದಂಡ ಹಿಡಿದು ಶಿಸ್ತು ಕಾಯುವವನು : ಕುಂಭಾಂಡಮಂತ್ರೀಶ್ವರನ ಚಿತ್ತೈಸೆಂದು ಪೊಂಬಾರಿಕರು ಪೊಗಳಿದರು (ಮೋಹತ. ೨೦ ೫೬). [ಪೊಂ (<ಪೊನ್)+ಬಾರಿಕ]

**ಪೊಂಬಾವಡೆ** ‘ಪೊಂಬಾವುಡೆ’ ನೋ.

**ಪೊಂಬಾವುಗೆ, ಹೊನ್ನುಹಾವಿಗೆ** (ನಾ). ಬಂಗಾರದ ಪಾದುಕೆ : ಮಾಣಿಕವೆತ್ತ ಪೊಂಬಾವುಗೆಮೆರಸಿ . . . ಹಂಸಕನಕ್ಕಂಚರಭೇದಿ ನಡೆವ (ಮೋಹತ. ೧೯-೧೬). **ಹೊನ್ನುಹಾವಿಗೆ :** ಎನ್ನ ಮಾನ ಪ್ರಾಣಗಳು ಹೊನ್ನುಹಾವಿಗೆಯಾಗಿ ನಿನ್ನ ಚರಣಕೆ ಯೋಗ್ಯ ಮೆಟ್ಟಾಗಲಿ (ಸುಶಾಕ. ೧೯-೩). [ಪೊಂ (<ಪೊನ್) + ಪಾವುಗೆ]

**ಪೊಂಬಾವುಟ** (ನಾ). ಹಳದಿಯ ಬಣ್ಣದ ಬಾವುಟ.—ನಿಶಾನೆ : ನೋಡಲ್ಲಿ ಗುಡಿ ತೋರಣಂ ಅಲ್ಲಿ ಪೊಂಬಾವುಟಂ (ಶ್ರೀರಾಮವ. ೫೯-೦೩೯). [ಪೊಂ (<ಪೊನ್) + ಬಾವುಟ]

**ಪೊಂಬಾವುಡೆ, ಪೊಂಬಾವಡೆ** (ನಾ). ಹೊಂಬಣ್ಣದ ವಸ್ತ್ರ; ಪೀತಾಂಬರ: ತಡಿ ಸುಖಾಸನ ಸುಗತಿ ಪೊಂಬಾವು[ಪಾಠಾಂ.ವ]ಡೆ ಜನಾಳಿ . . . ಮಣಲಂಬಳದ ಹಯ ಮಿಗೆ ಗುಡಿಯಿಱಿದು ಮೊಗವೆತ್ತಿ ನರ್ತಿಸಿತು (ಕೂರಾ. ೬-೨೯-೦೨). **ಪೊಂಬಾವಡೆ :** ಬರುದಿನ ಪೊಂಬಾವಡೆ ಸೆಡಕಿನ ವಲ್ಲಿ . . . ಮಿಱುಗುವ ರತ್ನಭೂಷಣಗಳಾಂತಿಹ ಹಯ ಖುರವೆತ್ತಿ ಕುಣಿಯುತ್ತಿದ್ದುವು (ಕಂಪಂ. ೦೫-೦೯). [ ಪೊಂ (<ಪೊನ್) + ಪಾವುಡೆ$_1$ (<ಪಾವುಡ$_1$) ]

**ಪೊಂಬಾಸಿಗ** (ನಾ). ಚಿನ್ನದ ಬಾಸಿಂಗ : ಲಲನೆಯರು ಪೊಂಬಾಸಿಗವನಿಕ್ಕಿದರು ಶಶಿಮುಖಿಗೆ (ಬಸವ. ೯-೯೦). [ಪೊಂ (<ಪೊನ್) + ಬಾಸಿಗ]

**ಪೊಂಬಾಸು** (ನಾ). ಚಿನ್ನದ ಎಳೆಗಳ ಪಾಶ : ಮಾಣಿಕ್ಯರಚಿತ ಕಂಬಟ್ಟೆ ಪೊಂಬಾಸಿನ ನೇಣ ಚತುಷ್ಪಾದಿಗಳ ಪಾಣಿಯೊಳಾಂತ ಪರ್ದಡಿಗಳ ಲುಬ್ಧಕಶ್ರೇಣಿ ಬೊಬ್ಬಿಡುತಲ್ಯೆದಿದುದು (ಮೋಹತ. ೧೯-೯). [ ಪೊಂ (<ಪೊನ್) +ಪಾಸು$_2$ (<ಪಾಸ$_1$) ]

**ಪೊಂಬಾಳೆ$_1$, ಪೊಂಬಳೆ, ಹೊಂಬಾಳೆ$_1$** (ನಾ). ೧. ಅಡಿಕೆ, ತೆಂಗು ಮುಂತಾದ ಮರಗಳಲ್ಲಿ ಹೊರಡುವ ಹೊಡೆಯಾಕಾರದ ಹೂವಿನ ಗೊಂಚಲು ; ಸಿಂಗಾರ ; ಕಂತಳೆ : ಓರೊಂದೆಡೆಯೊಳ್ ವನವಿಲಾಸಿನಿಯ ವಿಲಾಸಭವನದಂತಿರ್ದ ಪೊಂಬಾಳೆಯ ಕುರುಂಬುಗಳೊಳ್ (ಶಬ್ದಪು. ೨-೩೩); ಇಂಬಾಗಿರೆ ವರಹಿಮಕರಬಿಂಬದ ಬೆಂಬಳಿಯೊಳಿವ ತಣ್ಣದಿರ್ಗಳೆನಲ್ ಪೊಂಬಾಳೆಯ ಚಮರಮದಾಲಂಬಿಸೆ ಪಿಡಿದೊರ್ವ ಚಂದ್ರಮುಖಿ ನಡೆತಂದಳ್ (ಗಂಳ. ೭-೯); ಪವಿವ ಕಾಲ್ವೆಗಳಿಂದ ಬಾಳೆಮಿಾನ್ನೆಗೆದು ಬಂಧುರಪೂಗಮುಂ ಮುಟ್ಟಲಲ್ಲಿರ್ದ ಪೊಂಬಾಳೆ ಬಿರಿದು ಮಕರಂದರಸಮುಂ ಸೂಸಲ್ (ಶಾಂತಪು. ೫-೯೨). **ಪೊಂಬಳೆ :** ಅಗ್ಗಲಿಸಿ ಬಿರಿವ ಪೊಂಬಳೆಯ [ಪಾಠಾಂ. ಪೊಂಬೞೆಗಳ, ಪೊಂಬಾೞೆಯ ]ತಣ್ಮಲೆವ ಪೊಸಗುಂಪಿನೊಳ್ ಪುದಿದಲೆವೆಲರಾಱೆಪುದು ಖಚರದಂಪತಿಶತಮುಂ (ಅಂಪು. ೧-೬೮) ; ಕಂಪಿಡಿದ ಪೊಂಬಳೆಗಳಿಂದೆಸೆವ ಅಡಕೆ ಎಸೆದವು ಕಣ್ಗಳಿಗೆ (ಕುಂಅಶಾಂ. ೩-೫೫). **ಹೊಂಬಾಳೆ$_1$ :** ಮಘಮಘಿಪ ಹೊಂಬಾಳೆಗಳ ರಸವೊಗುವ ಮಧುರದ್ರಾಕ್ಷಿಗಳ . . . ಸೊಗಸು ಸೆಳೆದುದು ಮನವನು (ಕುಪ್ಪಾಣಿ. ೬-೨೬); ಗಾಳಿಯೊಲಹಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ (ಕೂರಾ. ೫-೩-೦೩); ಆಗರಳಿದ ಕಸ್ತೂರಿ ಹೋಂಬಾಳೆಯ ಪೂಗವೃಕ್ಷಗಳೊಪ್ಪುತಿಹವು (ಕಂಪಂ. ೨-೮೦). [ ದೇ. ‖ ತಮಿ. ಪೂಮ್ಪಾಳೈ; ತುಳು . ಪೂಂಬೆ; ತೆಲು. ಪೂಂಬಾಳ ]

**ಪೊಂಬಾಳೆ$_2$** ‘ಪೊಂಬಾೞೆ’ ನೋ.

**ಪೊಂಬಾೞೆ, ಪೊಂಬಾಳೆ$_2$, ಹೊಂಬಾಳೆ$_2$, ಹೊಂಬಾೞೆ** (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು : ಶತಪತ್ರದ ಸಿತಾತಪತ್ರದೊಳಂ ಪೊಂಬಾೞೆಯ ಚಾಮರಂಗಳೊಳಮೆಸೆವ ಮಂಟಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನನತಿಪ್ರೀತಿಯಿಂದರ್ಚಿಸಿ (ಕಾದಂಬ. ೭೮೦) ; ಅಂದಚಿತ್ತ ಬಂದುಗೆಯೆಸಟಿಂ ಕತ್ತರಿಸಿ ಪತ್ರಿಸಿದ ಚಿತ್ರಪತ್ರಂಗಳೊಳುಂಬಮಾದ ಪೊಂಬಾೞೆಯ ಕಂಬಂಗಳೊಳಂ (ಚಂದ್ರಪು. ೭-೯೫ ವ) : ಪೊಂಬಾೞೆಯ ಪಣ್ಣ ಬಿಣ್ಗೊನೆಗಳೊತ್ತಂಬಂಕರಂ ಬೀೞುತಿರ್ಪುದು . . . ಅಲಂಪಂ (ಕುಸುಮಪ. ೨-೯೯). **ಪೊಂಬಾಳೆ$_2$:** ಪಳಿಕಿನ ಪಟ್ಟಕೆಯಲ್ಲಿ ಪೊಂಬಾಳೆಯ ಸುಳಿಯಲ್ಲಿ ರತಿಯ ಕಂಳ್ಳಿರಿಸಿ ನಳಿನಾಕ್ಷಿಯರೊಡತಿಯ ಕಾಲೆರಡುಮಾಂದಳಿರನು ಜಲದೊಳದ್ದಿದರು (ಮೋಹತ. ೯-೯೦) ; ತಮಾಲದೆಳೆದಳಿರಂ ಕೊಱೆದು ಚಿತ್ರಪತ್ರಮಪ್ಪಂತೆ ಪತ್ರಿಸಿ ನಟ್ಟ ಪೊಂಬಾಳೆಯ ಬಾಳ್ಗಂಬಂಗಳಿಂ (ರಾಜಶೇ. ೧೧-೩೦ ವ). **ಹೊಂಬಾಳೆ$_2$:** ಹೊಂಬಾಳೆಗಳ ಸುಳಿಯ ಸಫುರನೇತ್ರಂಗಳಂ ಇಂಬಱಿದು ಹಾಸಿ (ಪುಷ್ಪರ. ೯-೨೬) ; ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ಪರ್ಣದ ಪೊಟ್ಟಣಗಟ್ಟಿ . . . ತೋಱಿದರು (ಮೋಹತ. ೨೮-೬೮). **ಹೊಂಬಾೞೆ :** ಇಂತೆಸೆವ ನುಣ್ಪಳಿನತಳದೊಳ್ ಹೊಂಬಾೞೆಯ ಕಂಬಂಗಳಿಂ ಪಚ್ಚೆಯ ಪಲಗೆಗಳಿಂ ಬಾಳದ ಬಿಜ್ಜಣಿಗೆಗಳಿಂ ಬಿತ್ತರಿಸಿ ಚಿಲ್ಮಿನ ನೆಲೆಯುಂ ಕಂಪಿನ ಕಣೆಯುಂ ತಂಪಿನ ತಾಯ್ಮನೆಯುಮೆನಿಪ ಲತಾಮಂಟಪಮಂ ಕಂಡು (ಶಾಂತೀಶ್ವ. ೧೧-೦೦೭ ವ). [ಪೊಂ (<ಪೊನ್) + ಬಾೞೆ]

**ಪೊಂಬಿಸಿಲ್, ಪೊಂಬಿಸಿಲು, ಹೊಂಬಿಸಿಲು** (ನಾ). ಪ್ರಾತಃಕಾಲ ಮತ್ತು ಸಂಧ್ಯಾಕಾಲಗಳಲ್ಲಿ ಕಾಣುವ ಹೊನ್ನಿನ ಬಣ್ಣದ ಬಿಸಿಲು :

ಕಾಸಿದಾವು ಕಿರಣಂಗಳ್ . . . ಅನಂತರಂ ಪೊಂಬಿಸಿಲಾದುದು ಪೂರ್ದೆ ಪಟ್ಟಿಪೆಟ್ಟಮನರ್ಕಂ (ಶಂರಾಶತ. ೧೦-೧೬೭) ; ಪೊಸಸೊದೆ ಕೌಮುದಿಯಂ ಪಸರಿಸೆ ಕನಕದ ಕಳಶವಾಳಿ ಪೊಂಬಿಸಿಲಂ ಪೂರಿಸೆ ತರತರದಿಂದಂ ರಾಜಿಸುತಿರ್ಪುವು ಸೋಮಸೂರ್ಯವೀಥಿಗಳ್ (ಗಿರಿಕ. ೨-೬೨) ; ಪರೆದುದಾಕ್ಷಣ ಮನದ ಸಂದೇಹಮೆಂದೆಂಬ ಪರಮತಿಮಿರಂ ವಿವೇಕವೆನಿಪ್ಪ ಪೊಂಬಿಸಿಲ್ ನಿರುತದಿಂ ಪಸರಿಸಿತು (ತಿಶಪ. ೬-೨೨). **ಪೊಂಬಿಸಿಲು :** ಹಗಲು ಸವೆದುದು ಪೊಂ[ಹಾಕಾಂ. ಹೊಂ]ಬಿಸಿಲು ನೆಟಿ ತೆಗೆದುದದಿವೇಗದಲಿ (ಪಳಕ. ೫-೯೩). **ಹೊಂಬಿಸಿಲು:** ಮುತ್ತಿನ ಥಾಳ ಧವಳಿಸಲಾಯ್ತು ಚಂದ್ರಿಕೆ ತನುವ ಡೊಗ್ಗರಿಸಿ ಮೇಲೆ ಹೊಂಬಿಸಿಲಾಯ್ತು ಮಾಣಿಕದೀಳಿಗೆಯ ಲಹರಿಯಲಿ (ಕುಮ್ಮಾಸ. ೫-೯೯) ; ಬಿಡದೆ ಚಂದ್ರಾತಪವನಪಹರಿಸುವುದು ಹೊಂಬಿಸಿಲು (ಕೊರಂರಾ. ೫-೨-೬೭) ; ಗಿರಿಯುತ್ತಮಾಂಗದಲಿ ಮೈದೋರಿದನು ಅಹ ಹೊಂಬಿಸಿಲಿನೆಳನೇಸರು ! (ಕಣ್ವಾಂಗ. ೬-೧೫೯).

[ಪೊಂ (<ಪೊನ್) + ಬಿಸಿಲ್]

**ಪೊಂಬಿಸಿಲು** 'ಪೊಂಬಿಸಿಲ್' ನೋ.

**ಪೊಂಬಿಸುಗೆ** (ನಾ). ಚಿನ್ನದ ಅಂಬಾರಿ : ಪೊಂಬಿಸುಗೆಯು ಕರಿಗಳ ಚೌಬೋ[ಬ]ಕ್ಕರೆಯಶ್ವಚಯದ ಬಹುವಿಧಮಪ್ಪಾಡಂಬರದ ಪತಾಕೆಯ ಪಲವುಂ ಬಿರುದಿನ ಭಟರ ಬಹಳ ಬಲದರ ನೆಲೆಯೊಳ್ . . . ಅಪರಾಜಿತಕುಮಾರ ನಿರ್ಪುದಂ (ಮಹಾಪೇ. ೫-೩೦). [ಪೊಂ (<ಪೊನ್) + ಬಿಸುಗೆ]

**ಪೊಂಬೀವು** (ನಾ). ಚಿನ್ನದ ತಂತಿಗಳಿಂದ ಮಾಡಿದ ಹಗ್ಗ : ಪೊಂಬಡಲಿಗೆಯೊಳ್ ಪರಪಿದ ಪೊಂಬೀವಿಂ ಕಂಗೊಳಿಪ ಮೋಹನಂಬೆತ್ತ ಕಾಂತೆಯರ್ (ಶಂರಕೊ. ೨೮೩). [ಪೊಂ (<ಪೊನ್) + ಬೀವು]

**ಪೊಂಬುಗುಡಿ** (ನಾ). ಚಿನ್ನದ ಬುಗುಡಿ : ಕೊಪ್ಪು ಪೊಂಬುಗುಡಿ ಬಾವುಲಿ . . . ಪಿಲ್ಲಿ ಮಿಂಚು ಮೊದಲಾದ ಪೊಸಮಿಸುನಿದೊಡವುಗಳಿಂ ತೊಡಿಲ್ಲಲಿಂದಲಂಕೃತೆಯಾದ . . . ಕನ್ನಿಕೆಯಂ . . . ಬಿಜಯಂಗೆಯ್ಸುತಮಿರ್ಪಿನಂ (ಹಾಲಾಸ್ಯ ೪-೯-೬೪ ಪ). [ಪೊಂ (<ಪೊನ್) + ಬುಗುಡಿ]

**ಪೊಂಬುಚ್ಚ** 'ಪೊಂಬುಟ್ಟಿ' ನೋ.

**ಪೊಂಬುಜ್ಜಣಿ** (ನಾ). ಚಿನ್ನದ ಬಣ್ಣದ ಬುದ್ದಲಿ : ಮುಟ್ಟಲಮ್ಮದೆ ಕುಂಕುಮರಸಪನಿನೀರ ಬಟ್ಟಬಲ್ಮೊಲೆಗೆ ಸಿಂಪಿಸಲು ಇಟ್ಟ ಮುಂಡಿಗೆಯ ಪೊಂಬುಜ್ಜಣಿ ತೈಲಸಂಘಟ್ಟದಿಂ ಪೊಗಿದಂತಾಯ್ತು (ಸೋಹಕ. ೨೬-೦೬). [ಪೊಂ (<ಪೊನ್)+ಬುಜ್ಜಣಿ (<ಬುದ್ದಲಿ)]

**ಪೊಂಬುಡಿ** (ನಾ). ಚಿನ್ನದ ಪುಡಿ ; ಬಂಗಾರದ ಹುಡಿ : ತೊಟ್ಟ ಮೈದುಡಿಗೆಗಳ ಮಸೆದ ಪೊಂಬುಡಿಯಂತೆ ಕುಂಕುಮರಜಂಗಳು . . . ಸೂಸುತಿರೆ (ಕೃಶಿಶಿಚ. ೩೬-೨೨) ; ತಂಬೆಲರೇಂಬ ಪೊರ್ಬದರನಲರ್ಪೊನ್ನಂ ಪರ್ಣಕರ್ಪೋಪಬಡೊಳರೆಯ ಸುರಿದು ಪಂದ ಪೊಂಬುಡಿಯಂಬಂ ತಿಂಬುವೆತ್ತ ರಜನೀರಜಃಪಿಂಜರರಜೋಗುಣದಿಂ ಸುರುಚಿರಮಾದ ಸುರಯಿಯುಂ (ಕಶಕಂ. ೨-೯೨ ಪ). [ಪೊಂ (<ಪೊನ್) + ಪುಡಿ]

**ಪೊಂಬುತ್ತಳಿ, ಹೊಂಬುತ್ತಳಿ** (ನಾ). ಚಿನ್ನದ ಬೊಂಬೆ ; ಬಂಗಾರದ ಪ್ರತಿಮೆ,- ವಿಗ್ರಹ : ಭಾವಿಸಲಧಿಕ ಪೊಂಬುತ್ತಳಿಯೆಂಬಂತೆ ಕೋವಿದ ಕೋಮಲಾಂಗಿಯರು ದೇವಕಿಯಾತ್ಮಸಂಭವನೆಡಬಲದಲಿ ತೀವಿರ್ದರೇನ ಬಣ್ಣಿಪೆನು (ಸೋಹಕ. ೯-೯) ; ಬಿಸಜಗಂಧಿನಿಯೆನಿಸಿ ರಾಮರುದ್ರರ ರಾಣಿ ಪೊಂಬುತ್ತಳಿಯೊಲೆಸೆದಳು (ಬಕೋಪು. ೬-೯೦). **ಹೊಂಬುತ್ತಳಿ :** ಅತ್ಯಂತ ರೂಪಯೌವನಸಗಾರ್ತಿಯರು ಹೊಂಬುತ್ತಳಿಯೆಡೆಯಾಡುವಂತೆ . . . ಸತ್ಯಭಾಮೆಯನು ಸಾರಿದರು (ಸೋಹಕ. ೦೪-೬೨).

[ಪೊಂ (<ಪೊನ್) + ಪುತ್ತಳಿ (=ಪುತ್ತಲಿ)]

**ಪೊಂಬುದಿ** (ನಾ). ಬಂಗಾರದ ಬಾಗಿಲುವಾಡ : ಕಾಮುಜಟ್ಟಿಯ ಕಟ್ಟುಕಬ ಕಾಮಗೃಹದ ಪೊಂಬುದಿ[ಹಾಕಾಂ. ಪೊಂದುವೆ, ಪೊಂಬುಡೆ, ಪೊಂವುಡೆ]ಯೆನಲೊಪ್ಪಿದುವಾ ಮುಗ್ಧೆಯಸೆಮೊಳ್ಪೊಡೆಗಳು (ಶ್ರೀಚಾಂ. ೬-೩೧). [ಪೊಂ (<ಪೊನ್) + ಪುದಿ]

**ಪೊಂಬುರ್ಚ** 'ಪೊಂಬುಟ್ಟಿ' ನೋ.

**ಪೊಂಬುಲಿ** (ನಾ). ಹಳದಿಬಣ್ಣದ ಹುಲಿ : ಬಂದುವು ಪೊಂಬುಲಿದೊಲಬಲ್ಲಣಂಗಟ್ಟಿದ ಪಟ್ಟಸಾಹಣದ ವಾಜಿಗಳುದು ಜಯೋತ್ಸವಾದಿಗಳ್ (ಮಲ್ಲಿಪು. ೯-೪) ; ಪೊಂಬು[ಹಾಕಾಂ. ಪೆರ್ಬು]ಲಿಯ ತೊವಲನಾನೆಯ ಕೊಂಬಂ ಕುತ್ತಟಿಸದಡು ಪಿಡಿದುಗಿದೆತ್ತಿದುವಂ ಪತಿಗೆ ಕಾಣ್ಕೆಗೊಟ್ಟುಂತೆಂದಂ (ಅಜಿತಪು. ೧೦-೩೬) ; ಪೊಂಬುಲಿಯ ಚರ್ಮದ ಕಕ್ಷಪಾಳಿಕೆಯೊಳಳವಟ್ಟ ನಿಗ್ಗವದ ಕರಂಡಕದೊಳಗೆ ಮುದ್ರಿಸಿರ್ದನರ್ಘ್ಯಮಣಿಯಂ . . . ತುಡುಂಕಿ ತೆಗೆದು (ರಾಜಶೇ. ೫-೨೫ ಪ). [ಪೊಂ (<ಪೊನ್) + ಪುಲಿ]

**ಪೊಂಬುಲಿಸಮ್ಮ** (ನಾ). ಹಳದಿಬಣ್ಣದ ಹುಲಿಯ ಚರ್ಮ: ಆನೆದೊವಲ್ಪೊಂಬುಲಿಸಮ್ಮಂ ತಾವರೆಗಣ್ಣಂ ಕಣ್ಣೆಯಿಸಿದಡಿದಾವರೆಯಿಂತೀ ಪರಿಸೊಗಯಿಪ ಶೋಭಾಪಹದಿವ್ಯಾಂಗಂ ಲಿಂಗದಿನೆಳ್ದಂದು (ರಾವ್ಯಕೆ. ೬-೩೯) ; ಪೊಂಬುಲಿಸಮ್ಮವಮಾನೆದಲೆಮುತ್ತು . . . ಪೀಲಿಯುಂಬಿವಂ ತುಂಬಿದ ಕಂದಿಯುಂ ತಳೆದದೇಂ ತಳರ್ದತ್ತೊ ಪುಳಿಂದಸಕುಳಂ (ರಾಜಶೇ. ೫-೧೦೯).

[ಪೊಂಬುಲಿ + ಸಮ್ಮ (<ಚಮ್ಮ)]

**ಪೊಂಬುಟ್ಟಿ, ಪುಂಬುಚ್ಚ, ಪೊಂಬುಚ್ಚ, ಪೊಂಬುರ್ಚ, ಪೊನ್ನುಬ್ಬಚ್ಚ, ಹೊಂಬುಚ, ಹೊಂಬುಚ್ಚ, ಹೊಂಬುರ್ಚ, ಹೊಂಬುಟ್ಟಿ** (ನಾ). ೧. ಒಂದು ಊರಿನ ಹೆಸರು ; ☞ ಈಗಿನ ಶಿವಮೊಗ್ಗಜಿಲ್ಲೆಯ ನಗರತಾಲ್ಲೂಕಿನ ಹುಂಚ. ಇದು ಜೈನರ ಪ್ರಸಿದ್ಧವಾದ ತೀರ್ಥಕ್ಷೇತ್ರ : ಉದಯಪುರದ ನಕ(ಗ)ರಸಹಿತಂ ಪೊಂಬುಟ್ಟದ ನಕ(ಗ)ರಕ್ಕೆ ಸುಂಕಕಾದುದು (ಎಇ. IX. ೨೨-೫ ; ಸು. ೮೦೦) ; [ಪೊ]ಮ್ಬುಟ್ಟದ ಮೇಲೆಬ್ಬು ಕೋಟೆಯು ಕೊಳ್ಳನ್ನು (ಸೌಇಇ. XX. ೦೫-೬ ; ೯೦೪). 'ಪಟ್ಟಿಪೊಂಬುಟ್ಟ' ಪರಾ. ೨. ಒಂದು ಊರಿನ ಹೆಸರು ; ☞ ಈಗಿನ ಗದಗು ತಾಲ್ಲೂಕಿನ ಹೊಂಬಳ : ಪೊಂಬುಟ್ಟದ ಮಹಾಜನಂ . . . ಧರ್ಮಾನುಷ್ಠಾನಪರಾಯಣರಾಗಿ ಸುಖದಿನಿರೆ (ಸೌಇಇ. XI-i, ೯೪-೧೧ ; 1049). **ಪುಂಬುಚ್ಚ :** ೧. ತುಂಗಾದ್ರಿಯ ದೊರೆಯ × × × ಭಕ್ತಿಮನದಿಂ ಪುಂಬುಚ್ಚಮಿಮುನೆಗಂ ಪ × × × ಹದಿಲೊಕ್ಕಿಯುಬೆಯುಂ ಜಿನಗೇಹಮಂ ಮಾಡಿದಂ (ಎಕ. VII. ಶಿವಮೊ. ೦೦೪-೧೧ ; 950?). **ಪೊಂಬುಚ್ಚ :** ೧. ಏಕಾಂಗವೀರ ಸಂಗ್ರಾಮಧೀರ ಪೊಂಬುಚ್ಚನಿರ್ದ್ದಾಟಣ ಸಾವಿಮಲೆ ನಿರ್ಲೋಟಣ (ಎಕ. II. ೧೯೩-೩೬ ; 1131) ; ಪೊಂಬುಚ್ಚಪುರವರಾಧೀಶ್ವರ ಮಾರಿಹೊಕ್ಕರೆ ಕಾವ ವಸಂತಾಂತರೆ ವೈರಿ (ಇಇ. V. ೪೦-೬ ; 1586). ೩. ಒಂದು ವಂಶದ ಹೆಸರು (?) : ಸ್ವಸ್ತಿಶ್ರೀಪೊಮ್ಬುಚ್ಚಕುಲ ತಿಲಕಂಬ್ಬಳರ ಹರಿತಿನ್ರಿಪಂ ಲೋಕ್ಕೈಕ (ಎಕ. VIII. ಪಗರ. ೨೨-೦ ; ಸು. ೯೦೦ ?). **ಪೊಂಬುರ್ಚ :** ೧. ಕೊಂಗಳಿಯಬುಚ್ಚಂಗಿ ತಳೆಯೂರ ಪೊಂಬುರ್ಚ . . . ಮೊದಲಾಗನೇಕದುರ್ಗ್ಗತ್ರಯಂಗಳನಶ್ರಮದಿಂ ಕೊಣ್ಡು (ಎಕ. II. ೦೩೨-೨೬ ; 1123). **ಪೊನ್ನುಬ್ಬಚ್ಚ :** ೧. ಸ್ವಸ್ತಿಶ್ರೀ ಮಟ್ಟಿತ್ರಿವಾಹನ ಪೊನ್ನುಬ್ಬಚ್ಚಾಳಿಕೆಳ್ಳಂ ನಾಗಣ್ಣನಧಿಕಾರಿಗಳಾಗೆ (ಎಕ. VI. ಕೊಪ್ಪ. ೩೭-೦ ; ಸು. 675 ?). **ಹೊಂಬುಚ :** ೧. ಇಾತಪ್ಪುದಕ್ಕೆ ಸಾಕ್ಷಿಗಳು ಹೊಂಬುಚನಾಡು ಮೂದುವಂಕನಾಡು ಸಾಕ್ಷಿಗಳು ಪೊಪ್ಪ ಬಿಲ್ಲೇಶ್ವರ ದೇವರು (ಎಕ. VIII. ತೀರ್ಥ. ೨೦೬-೪೦ ; 1378) ; ಹೊಂಬುಚದ ಸೀಮೆಯಿಂದಲು ಪ್ರಾಕು ಸುಂಕದ ಬಸ್ತಿಯ ಸಿದ್ಧಾಪುರದ ಮಠಕೆ ಉತ್ತಾರವಾಗಿಯದ್ದ ಸ್ವಾಸ್ತಿಯು (ಎಕ. VIII. ತೀರ್ಥಹ. ೯೬-೦೩ ; 1664). **ಹೊಂಬುಚ್ಚ :** ೧. ಶ್ರೀಮತು ಹೊಂಬುಚ್ಚದ ಆದಿಬಿಲ್ಲೇಶ್ವರ ದೇವರ ದಿವ್ಯಶ್ರೀಪಾದಪದ್ಮಾರಾಧಕಂ (ಎಕ. VIII, ಸಾಗರ. ೦೨೩-೯ ; 1216) ; ಮಲ್ಲಪ್ಪಗಳ ಮಗ ಹೊಂಬುಚ್ಚದ ಯಿಂ × × ವಾಯಣ್ಣ . . .

ಸ್ವರ್ಗಸ್ಥರಾದರು (ಎಪಿ. VIII, ಸಾಗ. ೫೯-೯ ; 1899). **ಹೊಂಬುರ್ಛ** : ೧. ಹದಿನೆಂಟುಕಂಪಣದೊಳಗಣ ಹೊಂಬುರ್ಛ್ಚನಾಡ × × × ನಾಗರ ಹಳ್ಳಿಯ (ಎಪಿ. VIII, ಸಾಗ. ೬೯-೦೮ ; ೧). **ಹೊಂಬುಟ್ಟು** : 'ಪಟ್ಟಿ ಹೊಂಬುಟ್ಟು' ಪರಾ.

**ಪೊಂಬೆಟ್ಟು**, **ಪೊಂಬೆಟ್ಟು**, **ಪೊನ್ಬೆಟ್ಟು**, **ಹೊಂಬೆಟ್ಟು** (ನಾ). ಚಿನ್ನದ ಬೆಟ್ಟು ; ಮೇರುಪರ್ವತ : "ಪೊಂಬೆಟ್ಟುದೆಂದೆನಲಕ್ಕು ಹೇಮಾದ್ರಿಗೆ" (ಶಬ್ದ. ೬೦) ; ದಿಟ್ಟಿಗೆ ಪೊಲನಾದುದು ಪೊಂಬೆಟ್ಟುಂ ಜನಜನ್ಮಸವನಮಣ ಮಯಮಪ್ಪುಂ (ಜೀಶಾಚ. ೦-೪೯); ಅಂಬುಧಿಮಧ್ಯದ ಧರೆಯೊಳು ಚತುರಾಸ್ಯ ನೆಂಬ ವಿದ್ಯಾಧಿಕನೊಲಿದು ಕಂಭಸೂತ್ರವ ಪ್ರತಿಷ್ಠೆಯ ಮಾಡಿದಂದದಿ ಪೊಂಬೆಟ್ಟು ಕಣ್ಗೆ ರಾಜಿಸಿತು (ಜೀಚರಿ. ೨-೦೦). **ಪೊಂಬೆಟ್ಟು** : "ಸೊಗ ಯಿಸಂ ಪೊಂಬೆಟ್ಟು ರನ್ನದಪ್ಪಲು ಸುರಗಿರಿಗೆ" (ಕನ್ನಿ.ಕುಂ. ೦೦) ; ಭೂವನಿತೆ ಧರ್ಗೆಗೆ ನೆತ್ತಿಯೊಳ್ ಪೊತ್ತ ಸೊಡರೋ ಎಚಾ ರವೊಡನಿಸಿ ಪೊಂಬೆಟ್ಟೆಸೆವುದು (ಕನ್ನಿ.ಆ. ೨-೬) ; ಗಿರಿಯುಗ್ರದ ನಾಲ್ಕುಶಿಖರ ದೊಳು ನಾಲ್ಕುನಾಲ್ಕರೆಯಕೃತ್ರಿಮಜಿನವಾಸ ವರರತ್ನ ರಜತ ಸುವರ್ಣದಿ ಪದಿನಾಲು ಮೆಱೆಯಲಾ ಪೊಂಬೆಟ್ಟನಲಿ (ಜೀಸಂಚಾಂ. ೦-೨೫). **ಪೊನ್ಬೆಟ್ಟು** : ಮಾದೇವನ ಪೊನ್ಬೆಟ್ಟೀಱದರತ್ಯಾದರದಿಂದ ಕರದೊಡೆಳೆಕೆ ಯರ್ಪುರಸರ್ವ ಸಂಹಿತೆ (ರಾಧ್ಯಕೀ. ೬-೬೬). **ಹೊಂಬೆಟ್ಟು** : ಪನ್ನನೆಯ್ದ ಬೊಪ್ಪೆಟ್ಟುಮನಾ ಗಭೀರತೆಯೊಳಮ್ಬುಧಿಯಂ ಗೆಲೆವನ್ನಂ (ಎಪಿ. VIII, ಸೊರಬ. ೩೨೫-೩೦ ; 1178 ?) ; ತುಟ್ಟ ಸಮ್ಮೋಹಸಮುದ್ರಕೆ ಹೊಂಬೆಟ್ಟುದೊಟ್ಟು ಸೇತುವೆಗಟ್ಟು ದಂತೆ ಬಟ್ಟವೊಲೆಗಳೊಡ್ಡು ಮೋಹಿಸಿದಾವು ಮೊಲೆಕಟ್ಟಿನ ಮಱೆಯೊಳು (ಕರಿಷ. ೦೬-೯೨).

**ಪೊಂಬೆಟ್ಟುಬಿಲ್ಲಯ್ಯ** – ಮೇರುಪರ್ವತವನ್ನು ಧನುಸ್ಸಾಗಿ ಉಳ್ಳ ವನು ; ಶಿವ : ಸುಕುಮಾರನಂ ಒಯ್ದು ಪೊಂಬೆಟ್ಟುಬಿಲ್ಲಯ್ಯನೋಲಗದಲ್ಲಿ ನಿಲಿಸಲ್ಕೆ (ತ್ರಿಶಣ. ೦೯-೨೬). **ಪೊಂಬೆಟ್ಟುವಿಲ್ಲ**, **ಪೊಂಬೆಟ್ಟುವಿಲ್ಲ** = ಪೊಂಬೆಟ್ಟುಬಿಲ್ಲಯ್ಯ : "ಎಣ್ಣಯ್ಯಂ . . . ಪೊಂಬೆಟ್ಟುವಿಲ್ಲಂ, ಇಂಗಳಗಣ್ಣಂ . . . ಅಯ್ಯೊಗಂ—ತಾ ೩.೩ ಈಶ್ವರಂಗೆ ಪೆಸರ್" (ಕಶಬ್ದ. ೪೬-೦) ; ವಿರಹಾಗ್ನಿಯ ಕಿಡಿಸು ಪೊಂಬೆಟ್ಟುವಿಲ್ಲನ ಪಟ್ಟದರಸಿ (ಉದಾಶಾಂ. ೨೬-೬೫).

[ಪೊಂ (< ಪೊನ್) + ಬೆಟ್ಟು]

**ಪೊಂಬೆಟ್ಟು** 'ಪೊಂಬೆಟ್ಟು' ನೋ.

**ಪೊಂಬೆತ್ತ** (ನಾ). ಚಿನ್ನದ ಬೆತ್ತ,—ಸೆಳೆ : ಕೆಯ್ಯ ಸೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸೆಳೆಗೆ ತಳಿರ್ಮೂಡಿದಂತಾಗೆ . . . ಬಂದಳ್ ಪ್ರತೀಹಾರಿಯೊರ್ಬಳ್ (ಅಜಿತ. ೯-೬೬) ; ನೆರೆದೊತ್ತರಿಪ ಸುರಸಿದ್ಧ ಸಾಧ್ಯಗಂಧರ್ವಾದಿಗಳ ವಿಸರದರಳವಿಗಳೆದ ಕಳಕಳಮಂ ಪೊಂಬೆತ್ತಮನೆತ್ತಿ ಹೋ ಸಾರ್ ತೊಲಗೆಂದು ನಿವಾರಿಸಿ (ಕಲಾಪ. ೦-೬೯ ಕ).

[ಪೊಂ (< ಪೊನ್) + ಬೆತ್ತ]

**ಪೊಂಬೆಸ**, **ಹೊಂಬೆಸ**, **ಹೊಂಬೆಸೆ** (ನಾ). ಚಿನ್ನದ ಕೆತ್ತನೆಕೆಲಸ ; ಹೊಂಗೆಲಸ : ಕಂಬುಲತಾಸುಲಲಿತಲವಣಾಂಬುಧಿಪರಿಧಾನವಾಗೆ ಚೆಲ್ವಂ ಪಡೆದೀ ಜಂಬೂದ್ವೀಪಪ್ರಭುಗಿದು ಪೊಂಬೆಸದೊಳೆ ಸಮೆದ ಮಕುಟ ಏರ್ವಂತಿರ್ಕುಂ (ಆದಿಪು. ೬-೬೨) ; ಪೊಂಬೆಸದುಪ್ಪರಿಗೆಯ ಬಿಸವಂದ ವಾದ ಚುಂಬುಲೋವೆಗಳೊಳಗೆ ಬಳಸಿ ಸಲಿದುಲಿವ ಪಾರಿವಂಗಳ ಕೊರಲುಲಿಯೊಳಂ (ಚಿನ್ನಾ. ೪೪). **ಹೊಂಬೆಸ** : ಸಿಡಿಲ್ . . . ದಿಟಂ ಹೊಂಬೆಸಕ್ಕಂ ಬಡೆಯಲ್ ಯಕ್ಷೇಶನಂ ನಿರ್ಮಿಸಿ ನಿರುಪಮಸಾಮ್ರಾಜ್ಯ ಪಟ್ಟಾರ್ಹನಂ ಮಾಡಿದೆ . . . ಅದರ್ಕಪ್ಪುದಾ ವಜ್ರಪಾತಂ (ಜಗನ್ನಾಥ. ೫-೬೬) ; ಚಂದ್ರಾತಪವನಪಹರಿಸುವುದು ಹೊಂಬೆಸಿಲು ಕಡೆದ ಕರುಮಾಡದ ಕವಾಟದ ಕಡೆವಿಡಿದು ಹೊಂಬೆಸದಲುಱ ಹೊಗರಿಡುವ ನೀಲದ ಮೌಕ್ತಿಕದ ಮಾಣಿಕದ ಲಹರಿಯಲಿ (ಕೊರಚಾ. ೫-೨-೬೯). **ಹೊಂಬೆಸೆ** : ಅಂಬರ ಏಂಬಿಲ್ಲ ಮುಂಬಲಿ ತುಂಬಿದ ಹೊಂಬೆಸೆಯಾಲಯಪ್ಪುಲಿಗೆ ಜಂಭಾರಿಗಿಂಬಾದ ಕುಂಭಯಂದದ ಮದಸ್ತಂಬೇರಮಗಳ್ಸಿದಿರುವು (ಕಂಶಕ. ೦೬-೨೬).

[ಪೊಂ (< ಪೊನ್) + ಬೆಸ]

**ಪೊಂಬೆಸಗೆಯ್** (ಕ್ರಿ). ಚಿನ್ನದ ಕೆತ್ತನೆಕೆಲಸವನ್ನು ಮಾಡು : ಇರೆ ಚಂದ್ರಂ ತೊಲೆಯೊಳ್ ಹಿಮಕಿರಣಸುತಾದಿ ಗ್ರಹತ್ರಯಂ ನೋಡೆ ಧರಾಮರಪತಿ ಪೊಂಬೆಸಗೆಯ್ವಂ (ಜಾತಕ. ೨೦-೭). [ಪೊಂಬೆಸ + ಕೆಯ್]

**ಪೊಂಬೆಸಱ್**, **ಹೊಂಬೆಸರು**, **ಹೊಂಬೆಸಱ್**, **ಹೊಂಬೆಸಱು** (ನಾ). ಹೊಂಬಣ್ಣದ ಹೆಸರುಕಾಳು : ತಿವುದುಗಳೆದ ಪೊಂಬೆಸಱ ಮಹೋ ಜ್ವಳಮಪ್ಪ ಕಂಪಿನಿಂಪಿನ ನಿಳಯಮುಮೆನಿಸಿರ್ದ ಸವಿಯಿನೊದವಿದ ತೊವೆಯಂ . . . ಉಂಡು (ಧರ್ಮಾಮೃ. ೦-೦೪೯) ; ಪೊಂಬೆಸಱ ಸೂಪದ ನೊಪ್ಪುವ ಮಾದುರಂಗಳಂ ಯುವತಿ ತೆರಳ್ಚಿ ಬಡ್ಡಿಸಿದಳ್ (ಧರ್ಮಾಮೃ. ೦೨-೦೬೦). **ಹೊಂಬೆಸರು** : "ಪೀತಮುದ್ಗಾ — ಹೊಂಬೆಸರು" (ಚನ್ನನಿ. ೯೯). **ಹೊಂಬೆಸಱ್** : ಹೊಂಬೆಸಱ ಸೂಪಮದಱೊಳಗಿಂಬಾದುದು (ಅಭಿನವ. ೦೦-೬೬). **ಹೊಂಬೆಸಱು** : ಸಿಹಿತೊಂಡೆ, ಹೊಂಬೆಸಱು, ಕಳ್ಳಂಗಡಲೆ ಇವಂ ಕಷಾಯವಂ ಕಾಸಿ . . . ಪ್ರತಿಪಾಕ ಹಾಕಿ ಕೊಡುವುದು (ಕಲ್ಯಾ. ೦೩೩).

[ಪೊಂ (< ಪೊನ್) + ಪೆಸಱ್]

**ಪೊಂಬೆಳಗು**, **ಹೊಂಬೆಳಕು**, **ಹೊಂಬೆಳಗು** (ನಾ). ೧. ಹಳದಿಬಣ್ಣದ ಕಾಂತಿ ; ಹೊಂಬಣ್ಣದ ಪ್ರಕಾಶ : ಪೊಂಬೆಳಗುವಂ ಪರಪುತ್ತದು . . . ಸುಟ್ಟಿತು ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆ ಗಣ್ಣಾರಿ ಹಂಪೆಯಾಳ್ದನಾ (ಗಿರಿಜಾ. ೬-೯೬). **ಹೊಂಬೆಳಕು** : ೨. (ಅಲಂ) ಜ್ಞಾನದ ತೇಜಸ್ಸು ; ಅರಿವಿನ ಬೆಳಕು : ತಂಬೆಳಕಾಗಲಿ ನಂಬೆಳಕೆನು ವೊಲು ಹೊಂಬೆಳಕೇ ಹೊರಸೂಸಲಿ (ಕಳಿಕಾ. ೬೦೦-೭) ; ಈಚೆಗೆ ಪಾಶ್ಚಾತ್ಯ ಶಿಕ್ಷಣರಂಗದಲ್ಲಿ ಸಂಶೋಧನೆಯ ಹೊಂಬೆಳಕು ಬಿದ್ದು, ಅಲ್ಲಿನ ಬೋಧನ ಕ್ರಮ ಬಹುವಾಗಿ ಉತ್ತಮಗೊಂಡಿದೆ (ಶಿಕ್ಷಣ. ೨೦೯). **ಹೊಂಬೆಳಗು** : ೧. ಆಸಿಯಳೆ ಕಂಡಪ್ಪಿ ಜ್ಯೋತಿ ಪ್ರಜ್ವಲಿಸಲು ಮಸುಳಿಸದೆ ಜ್ಯೋತಿ ಹೊಂಬೆಳ ಗಾಯಿತಮ್ಮ (ಅಚಕಂ. ೨೯೯-೦೬೦೩). [ಪೊಂ (< ಪೊನ್) + ಬೆಳಗು]

**ಪೊಂಬೊಂಬೆ**, **ಹೊಂಬೊಂಬೆ** (ನಾ). ಚಿನ್ನದ ಗೊಂಬೆ ; ಸ್ವರ್ಣ ಪುತ್ಥಳಿ : ಕಂದರ್ಪನೆಂಬ ಡೊಂಬನ ಚಂದದ ಪೊಂಬೊಂಬೆವಿಂದು ನೆರೆದತ್ತಾಗಳ್ (ಪಂಪಭಾ. ೨-೬೦). **ಹೊಂಬೊಂಬೆ** : ನನ್ನ ಸರಿಹರೆಯದ ರಮಣಿಯರು ಹೊನ್ನ ಸಸಿ ಹೊಂಬೊಂಬೆ ರನ್ನದ ಚೆನ್ನ ನ್ನಡಿಯೆನಿಪ ಮಕ್ಕಳ ನೋಡಿ ಪಾಡುವರು (ಹಾಳ್ಳಶ. ೬-೦೦) ; ಇಟ್ಟ ಕಿರೀಟ ಮೂಡುವ ಸೂರ್ಯನಂತೆ ಪ್ಯಗಟ್ಟು ಹೊಂಬೊಂಬೆಯಂತೆಸೆಯೆ ಚೆಟ್ಟವ ನಡೆಸುವಂತಾ ರಾಯ ಮುಂದಕೆ ಪಟ್ಟದಾನೆಯ ನಡೆಸಿದನು (ಕರಿಷ. ೨೦-೬೨).

[ಪೊಂ (< ಪೊನ್) + ಬೊಂಬೆ]

**ಪೊಂಬೊಗರ್**, **ಹೊಂಬೊಗರು** (ನಾ). ೧. ಚಿನ್ನದ ಕಾಂತಿ,—ಹೊಳಪು. ೨. ಚಿನ್ನದ ಬಣ್ಣದ ಕಾಂತಿ ; ಹೊಂಬಣ್ಣದ ಪ್ರಕಾಶ,—ಹೊಳಪು : ಕೆಂಬೊಗರಿನ ಸಿರಿಯಿಂದಂ ಮೊದಲೊಳ್ ಪೊಂಬೊಗರಿಂದಂ ಸಮನಂತರದೊಳ್ ಅಂಬರಕೇರುತ ಚಂದ್ರಂ ತುದಿಯೊಳ್ ಬೆಳ್ಪೆಗಂ ಮೆರೆದಂ (ಜಾತಕತಿ. ೦೫೯) ; ಒಪ್ಪಿನಿಂ ಕುಣಿವ ಪರಿಜಂ ನೆರೆದು ಜೋಲ್ದುವಿರ ಕಪ್ಪು ಬೆಳ್ಪುಗಳ ಪೊಂಬೊಗರ ನೇವರಿಸಿ . . . ಹಬ್ಬುಲಿಯಂ ಬರುತಿಹುದು (ಕಾಲೂಕ. ೯೯-೦೬೬). ೩. ವಿಶೇಷವಾದ ಕಾಂತಿ,—ತೇಜಸ್ಸು : ನಗೆಮೊಗದ ಪೊಂಬೊಗರ ಮಿಂಚಿನ ಬೊಗಸೆಗಂಗಳ ಸೆಳೆನಡುವ ಸೆಳ್ಳಗುರ ಬೆಡಗಿನ ಕಾಂತ ರಂಜಿಸುತಿರ್ದಳಾ ಪುರದಿ (ಚಳಕ. ೨-೨೪). **ಹೊಂಬೊಗರು** : ೧. ಕವಿಯೊಬ್ಬ ಚಂದ್ರೋದಯವನ್ನು ನೋಡುತ್ತಿದ್ದಾನೆ . . . ಪೂರ್ವ ದಿಶೆಯಲ್ಲಿ ತಣ್ಣನೆಯ ಹೊಂಬೊಗರು ಹಬ್ಬುವುದು ಕಣ್ಣಿಗೆ ಬೀಳುತ್ತದೆ (ಕಾವ್ಯಕಶ. ೦೦).  [ಪೊಂ (< ಪೊನ್) + ಪೊಗರ್]

**ಪೊಂಬೊಗರಿ,** ಪೊಂಬಗರಿ, ಹೊಂಬುಗುರಿ, ಹೊಂಬೊಗರಿ (ನಾ). ಬಂಗಾರದ ಬುಗುರಿ; ಚಿನ್ನದ ಬೊಗರಿ : ಅವಳ ನೆರೆ ಮೊಲೆಗೆ ತಾವರೆಮೊಗ್ಗೆ ಪೊಂಬೊಗರಿಗಳೆಣೆಯೆಂದು ಭಾವಿಪನವನೆಗ್ಗನಲ್ತೆ (ಕುಸುಮಾ. ೩-೨೬); ಪೊಂಬೊಗರಿಯುಂತಿರ್ಪ ಸುಕ್ಕೊಲೆಯ ದ್ಯುಗುಯುಗಳದಿಂ ನೋಡಿ (ಜೋಹಚ. ೧೪-೬೨). **ಪೊಂಬಗರಿ :** ಮೊಳೆತುವು ಮೊರೆ . . . ಪೊಂಬಗರಿಯ ಬೆಳಗಾಯ ಕರಂಡದೆಣೆ ವಕ್ಷಿಯ ಕಳಸದ ದೊರೆಯೆನೆ ಪರಿವಿಡಿಯಿಂ ಸುಕುಮಾರಿ ಸುರೋಚನೆಗೆ (ಜಹುಚ. ೩-೨೯). **ಹೊಂಬುಗುರಿ :** ಪೊಳ್ತರೆ ಬಂದು ನಿಶಿಯ ಬೋಗುಣಿ ಯೊಳಕೆ ಹೊಂಬುಗುರಿಯೆಸೆದು ತಾರೆಯರುಗಳನಲ್ಲಿಂದೆ ಚೆಲ್ಲಾಡಿಹನು (ಅಡಚ. ೧-೧). **ಹೊಂಬೊಗರಿ :** ಹೊಳೆವ ಹೊಂಬೊಗರಿಗೆ ಬೆವಟಕ್ಕೆ ಕೈಯಾರ ಬೆಳಗಿದೊಡೊಪ್ಪುವೆತ್ತಂತೆ ಅಳಲುವ ರತಿಯುರಸ್ಥಳದ ಭಸ್ಮಾಂಕಿತ ಕಳಸಕುಚಂಗಳೊಪ್ಪಿದುವು (ಜೋಚಚ. ೬-೨೨).

[ಪೊಂ (< ಪೊನ್) + ಬೊಗರಿ (< ಬವರಿ)]

**ಪೊಂಬೊಡೆಯ** (ನಾ). =ಪೊಂಬಸಿಱಿ : " ಪೊಂಬೊಡೆಯನಂಚಿದೇರಂ . . . ಬ್ರಹ್ಮಗೆಸವ ನಾಮು " (ಅಭಿಧಾ. ೯); ಸುರಯಾಜನ್ಯತಂದು ಪೊಂಬೊಡೆಯಗಂತೆಂದು ಬಿನ್ನವಿಸಿದಂ (ಕಂಚಾಕಾ. ೨-೦೫-೯೩); ಮಹಾತಪದಿನೊಲಿಸಿ ಪೊಂಬೊಡೆಯನಂ ಪಡೆದನಾ ರಾವಣಂ ತ್ರೈಲೋಕ್ಯರಾಜ್ಯಾಧಿಕ್ಯತಿಪದವನು (ಕೀಚಚ. ೩-೯೩). [ಪೊಂ (<ಪೊನ್) + ಪೊಡ್ಡ + –ಅ]

**ಪೊಂಬೊರಜೆ** (ನಾ). ಚಿನ್ನದ ಹಗ್ಗ : ಬೆಳಗುವ ದಂತ ಪೊಂಬೊರಜೆ . . . ಪೊಕ್ಕುಳ ಘಂಟೆಯಳಸಲೆಯ್ದುದುದಾ ಹಸ್ತಿ (ಕುಸುಮಾ. ೭-೯೯); ಕರದ ಪಟ್ಟೆಯ ಕೊಂಬಿನ ಸೂನಗಿ ಪೊಂಬೊರಜೆ[ಪಾಠಾಂ. ಜ]ಮಜೆಯ . . . ಕರಿ ಏರಿಗಳು ಶಾಗಿದವು (ಕುಸುಮಾ. ೧೨-೧೦೨).

[ಪೊಂ (< ಪೊನ್)+ಪೊರಜೆ]

**ಪೊಂಭಾಂಡ** (ನಾ). ಚಿನ್ನದ ಪಾತ್ರೆ; ಸ್ವರ್ಣಭಾಜನ : ಅದಲೊದ ಚುವ ಪೊಂಭಾಂಡಗಳ ಕರ ಬೋನಗಡಣವ ಕೊಟ್ಟನುತ್ಸವದಿ (ಜೋಹಚ. ೧೫-೦೯). [ಪೊಂ (<ಪೊನ್) + ಭಾಂಡ]

**ಪೊಂಭಿತ್ತಿ** (ನಾ). ಚಿನ್ನದಿಂದ ನಿರ್ಮಿತವಾದ ಗೋಡೆ; ಬಂಗಾರದ ಗೋಡೆ : ಆ ಸಭಾಮಂಟಪದ ಪೊಂಭಿತ್ತಿಗೋಪುರದಿ ರೇಸಿನ ವಿಚಿತ್ರ ಪತ್ರವಾನಿರದೆ ರಚಿಸಿ (ಚಚಚೋ. ೨೦-೦೭). [ಪೊಂ (< ಪೊನ್) + ಭಿತ್ತಿ]

**ಪೊಂಭುಣಶೆ** (ನಾ). ಒಂದು ಬಗೆಯ ಮರ : ಅನ್ತ ತುಟ್ಟಿಲ ಪೇಱೊಟ್ಟಿಯ ಕೆಮ್ಮರೆಯ ಗುಮಿಪುಣಸೆಯ ಅಲೆ ಪೊಮ್ಬುಣಶೆ ಅನ್ತ ಬಳಿಪುಣಶೆಯ (ಎಕ. XVI, ತಿಪಟೂ. ೦೯೦-೬೯ : ಸು. ೯೦೦).

[ಪೊಂ (< ಪೊನ್) + < ಪುಳಿಸೆ]

**ಪೊಕ್ಕ**₁ 'ಪೊಗು' ಪರಾ.

**ಪೊಕ್ಕ**₂ (ನಾ). 'ಲೆಕ್ಕ' ಶಬ್ದದ ಜೊತೆ ಬರುವ ಪ್ರತಿಧ್ವನಿಪದ : ಉಳ್ಳೊಮಗಳೊಳಗೆನಿತಱಿವುಳ್ಳರ್ಗಂ ತಿಳಿಪಲರಿಯದೆನಿಪಡೆಗಳುಮಂ ತಳ್ಳಗಿರೆ ತಿಳಿಪುಗುಂ ಬೆಸಗೊಳ್ಳೆ ಗುಣಾರ್ಣವನ ಲೆಕ್ಕಮು ಪೊಕ್ಕ[ಪಾಠಾಂ. ಬಿಂಕ]ಮುಮಂ (ಕಂಚಾ. ೨-೪೫); " ಪೊಕ್ಕಮುಮಂ = ಲೆಕ್ಕಪಕ್ಕಗಳನ್ನು" (ಕಂಚಾಟೀ. ೬೯). [?]

**ಪೊಕ್ಕರಣಿ** 'ಪೊಕ್ಕರಣೆ' ನೋ.

**ಪೊಕ್ಕರಣೆ,** ಪೊಕ್ಕರಣಿ, ಹೊಕ್ಕರಣಿ, ಹೊಕ್ಕರಣೆ, ಹೊಕ್ಪರಣೆ, ಹೊಖರಣಿ (ನಾ). ೧. (ದೇವಸ್ಥಾನದ ಬಳಿಯಿರುವ ಪವಿತ್ರವಾದ) ಕೊಳ; ಕಲ್ಯಾಣಿ : ತೀವಿದ ಪೊಕ್ಕರಣೆಗಳ ನೆಱೆದ ಕೆಱೆಗಳ ಸರೋವರಂಗಳ ಬೆಡಂಗುಂದಲೆ ಪುರದೊಳ್ (ಸುಕುಮಾ. ೯-೩೦); ಇಕ್ಕೆಲದೊಳಗೊಪ್ಪುವ ಕರಣೀಶಾಲೆ ಪೊಕ್ಕರಣೆಗಳೆರುತಿಹವು (ಅಂಚಚ. ೩-೪೫). **ಪೊಕ್ಕರಣಿ :** ೧. ಮಲ್ಲಿಕಾರ್ಜುನದೇವರ ಗಟ್ಟಿಯಿಂ ಪಡುವಲು ಪೊಕ್ಕರಣಿಯಿಂ ಬಡಗಲು ಬಟ್ಟೆ ಗಟ್ಟಿ (ಎಕ. VII, ಶಿಕಾ. ೦೯-೨೬; 1066). **ಹೊಕ್ಕರಣೆ :** ೧. ವಾಯಬ್ಯ ಬಾಡನಕಳ ಹೊಕ್ಕರಣೆಯ ಬಡಗಣ ದತ (ಎಕ. V, ಹಾಸಚ. ೬೦-೯೩ ; 1218); ಕೆಱೆ ಬಾವಿ ಹೊಕ್ಕರಣೆ ದೀರ್ಘಿಕೆ ಕೊಳಂ ಪಳ್ಳಂಗಳು ತನತನಗೆ ನೇಮಿಸಿರ್ಪವು ಲೆಕ್ಕವಿಲ್ಲ (ಶಂಕ. ೦೨-೨೯); ಬಲುಪುದರವು ನರಕದ ಹೊಕ್ಕರಣೆ (ಶರಾಶೀ. ೩೬-೬). **ಹೊಕ್ಕರಣೆ :** ೧. "ವಾಪಾ, ಪುಷ್ಕರಿಣೀ—ಈ ೨ ಹೊಕ್ಕರಣೆ" (ಕರಾಹು. ೦೦೧-೬೩); ದೇವರ ಹೊಕ್ಕರಣೆಯಿಂದ ಮೂಡಣ ದೆಸೆಯೊಳು . . . ಮತ್ತರೊನ್ದಂ ಬಿಟ್ಟರು (ಕಸಾ. IX–I. ೦೩೩-೫೯ ; 1083); ಗುರುಲಿಂಗಜಂಗಮಕ್ಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ ನಾಲ್ಕು ಪುರುಷಪ್ರಮಾಣದ ಘಾತ (ಕಕ್ಕತ. ೪. ೦೫೩-೩೫೭); ಒರೆದ ವಜ್ರದ ಗಾರೆಗಳ ಹೊಕ್ಕರಣೆಗಳ ಸಾಲುಗಳು ಯೋಜನವೆರಡಱಲಿ ಪ್ರಖ್ಯಾತಕೈಲದುಗ್ಗಾದಿಗಳಿಗೆಡೆಯಾಯ್ತು (ಕೂಕಚ. ೦-೭-೬). ೨. ಕಮಲಗಳಿಂದ ತುಂಬಿರುವ ಕೊಳ; ತಾವರೆಕೊಳ : (೩). **ಹೊಕ್ಪರಣೆ :** ೧. ಹಿರಿಯ ಹೊಕ್ಪರಣೆಯಿಂ ತೆಂಕಣ ಹಗ್ಗೆಱೆಯೊಳಗಣ ಮತ್ತರಾಱು ಕಮ್ಮಂ ನಾಲ್ನೂಱಯ್ವತ್ತು (ಪಾಸಚ. ೯೭-೩೫ ; 1107 ?). **ಹೊಖರಣೆ :** ೧. ಹೆಗ್ಗಡೆ ಶ್ರೀಪದ್ಮನಾರಾಯಣದೇವರ ಮುಂದಣ ಹೊಖರಣೆಯ × × × ಗೆಳ್ಲ ದೇವರ ಪುಪಹಾರಕ್ಕೆ (ಎಕ. XI, ಹೊಳ್ಕೆ. ೦೯-೦೭ ; 1210).

[< ಪ್ರಾ. ಪೋಕ್ಖರಿಣೀ, ಪುಕ್ಖರಿಣೀ./ಸಂ. ಪುಷ್ಕರಿಣೀ]

**ಪೊಕ್ಕಳು** 'ಪೊಕ್ಕುಳ್' ನೋ.

**ಪೊಕ್ಕಟು** 'ಪೊಕ್ಕುಟ್' ನೋ.

**ಪೊಕ್ಕಿ** (ನಾ). ಹಾದರಗಿತ್ತಿ; ಜಾರೆ : 'ನಾನು ಆ ಮಾಸ್ತರನ ಸುದ್ದಿ ತೆಗದ ಕೂಡಲೆ . . . ಒಡಿದಳಲ್ಲ ಹೆಣ್ಣಾನಾಯಿ—ಪೊಕ್ಕಿ (ಮೂರೂರು. ೦೯೩).

[←ತುಳು. ಪೋಕಿ=ವ್ಯಭಿಚಾರಿ]

**ಪೊಕ್ಕು**₁ 'ಪೊಗು' ಪರಾ.

**ಪೊಕ್ಕು**₂, ಹೊಕ್ಕು₂ (ನಾ). ಮಗ್ಗದ ನೆಯ್ಗೆಯಲ್ಲಿ ಅಡ್ಡವಾಗಿ ಹಾಕುವ ಎಳೆ : ಪಾಸಿನ ಪೊಕ್ಕಿನ ಮಾಣಿಕದ ಕಾಂತಿಯು . . . ಕೂಟದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಮುಮತಿಶಯಂ (ರತ್ನಾಕರು. ೩-೦೯೯). **ಹೊಕ್ಕು**₂ : ಒಂದೆ ಕಾಲೊಳ್ ಪಂಪವೆಂಬ ಹೊಕ್ಕಿಲ್ಲದೆ ಸೀರೆಯು ನೆಯ್ವನೆಂಬ . . . ಪೌರ್ವಾಪಿಲನಂ ಪೋಲ್ಕುಂ (ರತ್ನಾಕರು. ೩೨-೦೩ ಅಂತರ); ಅಡ್ಡಕ್ಕೆ ಬೀಳುವ ನೂಲುಗಳು 'ಹೊಕ್ಕು' ಎನಿಸುವುವು (ಪಾಂಕ್ರ. I, ೯೨೦). [< ಪೊಗು]

**ಪೊಕ್ಕುಂದ** 'ಪೊಂಕುಂದ' ನೋ.

**ಪೊಕ್ಕುಳ್** 'ಪೊಕ್ಕುಟ್' ನೋ.

**ಪೊಕ್ಕುಳವಕ್ಕಿ** 'ಪೊರ್ಕುಳಿವಕ್ಕಿ' ನೋ.

**ಪೊಕ್ಕುಳಿ** 'ಪೊರ್ಕುಳಿ' ನೋ.

**ಪೊಕ್ಕುಳಿವಕ್ಕಿ** 'ಪೊರ್ಕುಳಿವಕ್ಕಿ' ನೋ.

**ಪೊಕ್ಕುಳು** 'ಪೊಕ್ಕುಟ್' ನೋ.

**ಪೊಕ್ಕುಳುಘಂಟೆ** (ನಾ). ಮಕ್ಕಳಿಗೆ ಉಡಿದಾರದಂತೆ ಕಟ್ಟುವ, ಘಂಟೆ ಯಾಕಾರದ ಒಂದು ಬಗೆಯ ಆಭರಣ : ಅರಳೆಲೆಯು ಮಾಗಾಯಿ . . . ಪೊಕ್ಕೊ [ಕ್ಕು] ಳುಘಂಟೆ ಪಾಲ್ಗಡಗ ಗೆಜ್ಜೆ ಸಹ ಬಾಲದೊಡಮಾ ಪರಿಪರಿಯ ರತ್ನಖಚಿತಾಭರಣಗಳನಿಟ್ಟು (ಚಚಪೋ. ೦೫-೩೦).

[ಪೊಕ್ಕುಳು (< ಪೊಕ್ಕುಟ್) + ಘಂಟೆ]

**ಪೊಕ್ಕುಳ್ಗೊಯ್** (ಕ್ರಿ). (ಮಗುವು ಹುಟ್ಟಿದ ತಕ್ಷಣ) ಹೊಕ್ಕುಳು ಬಳ್ಳಿಯನ್ನು ಕತ್ತರಿಸು : ಪುಟ್ಟಲೊಡನೆ ಪೊಕ್ಕುಳ್ಗೊಯ್ದು ಬಿನ್ನೀರಟ್ಟಿ . . . ಕೌಂಠಿನ ಹೊಗೆಗೊಟ್ಟೊದವಿದರು ಬಾಲಕನನು (ಶ್ರೀಚಾ. ೨-೬೭).

[ಪೊಕ್ಕುಳ್ (<ಪೊಕ್ಕುಟ್) + ಕೊಯ್]

**ಪೊಕ್ಕುಟಿಲ್**, **ಪೊಕ್ಕಳು**, **ಪೊಕ್ಕಟು**, **ಪೊಕ್ಕುಳ್**, **ಪೊಕ್ಕುಳು**, **ಪೊಕ್ಕುಟು**, **ಪೊರ್ಕುಳ**, **ಪೊರ್ಕುಳ್**, **ಪೊರ್ಕುಟಿಲ್**, **ಹೊಕ್ಕಳು**, **ಹೊಕ್ಕುಳ್**, **ಹೊಕ್ಕುಳ**, **ಹೊಕ್ಕುಳು**, **ಹೊಕ್ಕುಟ**, **ಹೊಕ್ಕುಟು** (ನಾ). ೧. ಹೊಟ್ಟೆಯ ಮೇಲಿರುವ ಸಣ್ಣ ಕುಣಿ ; ನಾಭಿ : ಈಳೆಯ ಪೊಕ್ಕುಟ ಚೆಲ್ವೀ ಲೋಕದೊಳತಿಸೇವ್ಯಂ (ರವರ್ಹಾಕು. ೩-೧೯೭) ; ಅರಿಸಿನ ವಂಟಿಯನಿನಿಸೋಸರಿಸಲುವಿಾಯದೆ ಯಶೋದೆಯಿಾತಂ ಪೀತಾಂಬರನೆಂದು ಧರೆಗೆ ಪೇಟ್ವಂತಿರೆ ಪೊಕ್ಕುಟಿಯೊಳಿಕ್ಕಿದಳ್ ಪಯೋಜೋದರನಾ (ಅರಿಹ. ೬-೩೩) : ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುಟ ಪೆರ್ಚಿನ ಮೇಲೆ ಪೆರ್ಚು . . . ಪಸರಿಸುವಂತಿರಗ್ರಜೆ ತನೂಭವನಂ ಪಡೆದು (ಅಜಿಂತು. ೦೨-೯೦). **ಪೊಕ್ಕಳು**: ೧. ನಿನ್ನ ನಡೆ ಜಗವ ಈರಡಿ ಮಾಡಿತು ನಿನ್ನ ಪೊಕ್ಕಳು ಸರಸಿಜ ನಾಭನ ಪಡೆಯಿತು (ಕುರಂಡ. ೩-೦೬೦-೦೯೨). **ಪೊಕ್ಕಟು** : ೧. "ಪೊಕ್ಕಟು ನಾಭಿಯಕ್ಕು" (ಶಂಗರಾ. ೯೭-೦೩). **ಪೊಕ್ಕುಳ್** : ೧. ಹರಿಯ ಪೊಕ್ಕುಳ ಕನಕಾಂಬುಜದೊಳುದಯಿಸಿದು . . . ಬ್ರಹ್ಮಂ (ನಾಂರೀಲ್. ೨೯-೬ ; 123ನೆಯ ಕ) ; ಅಡಿ ತಳಿರ್ಗಳ್ ಕುರುಳ್ ತುಂಬಿಗಳ್ . . . ಪೊಕ್ಕುಳೇ ಕೊಳಂಗಳ್ (ಕಂಪ್ರ. ೯೫-೩೯). ೨. ಮಧ್ಯಭಾಗ ; ಕೇಂದ್ರ : ಪರಿಗೋಲಲೇರ್ದು ಪೊಳೆಯಂ ಪಾಯ್ದು ಪೋಪವಂ ಪೊನಲ ಪೊಕ್ಕುಳ್ಗೆ ಬರೆ ಕಾಣ್ಬನದೊ ; ರಂಧ್ರದಿಂ ನೀರೊಳ್ಕಿ ನುಗ್ಗುತಿರ್ಪುದು ಬುಗ್ಗೆಯೋಲ್ ! (ಶ್ರೀಂಜಪಾ. ೬೬-೬೦೦). ೩. ಒಳಗು ; ಒಳಭಾಗ : ಪೊಳೆಗಳ ಮೂರರ ಪೊಕ್ಕುಳೊಳಿರ್ಪನ ಮೃತ್ಯುಂಜಯಯಾ ಎನ್ನಿರೊ (ಕಕ್ಕಿಸ. I. ೨-೨). **ಪೊಕ್ಕುಳು** : ೧. ಚಂದ್ರ ಇರದ ಪೊಕ್ಕುಳಲಿ ಬೆಳೆದು ಬಾಸೆನಾಳದ ಸರಸಿಜವನ ಕೃಷ್ಣಗೆಸೆಗು (ವರ್ಧಕ. ೬-೩೦) ; ಎಸೆವ ತಿಲಕದ ನೊಸಲ ನೆಲೆಮೊರೆಯ ನೀಳ್ದ ಬಾಸೆಯಗುಳಿದ ಪೊಕ್ಕುಳಿನ ... ಸೊಬಗಿನ ನಾರಿ ಸಕಲಸೌಖ್ಯಾಧಾರಿ (ಕಂಬಳ. ೬೬-೦೦). ೪. ದ, ಪ, ಬ ಮುಂತಾದ ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ : ಪೊಕ್ಕುಳು ತಲೆಕಟ್ಟುಮನನ್ಯಕ್ಕರದವಯವಮನಱಿದು ಖಣ್ಡಿಸಲುಕೀ ಇಟ್ಟುಡನೆ ಬಲ್ಲನ್ (ಎಳ. XI. ರಾಮಜ. ೦೪೯-೨೫ ; 1113). **ಪೊಕ್ಕುಟು** : ೧. ನಗೆಗಣ್ ನೀಳಸಪಸ್ರ ಪತ್ರದೆಸಟಂ . . . ಪೊಕ್ಕುಟು ನಂದಿವಟ್ಟದರಲಂ ಚೆಲ್ವಿಂದುಗುರ್ಬೊಡೆ ಕೇದಗೆಯಂ . . . ಪುಷ್ಪಾಸ್ತ್ರನ ಪಂಚಬಾಣಮಿವೆಳೆಂಬಾಶಂಕೆಯಂ ಮಾಡಿದಳ್ (ರವರ್ಹಾಕು. ೬-೨೦೭). **ಪೊರ್ಕುಳ**: ೧. ಪುಂಗಯ್ ಮೊಗು ಪೊರ್ಕುಳ ಕಿಬ್ಬೊಡೆ ... ಪುರ್ವಿಳೆ ಪಲ್ ಕೆಕ್ಕೆ ಕಾಲಡಿಯೆಂದಿಂತಿವನುರ್ಚಿ ಪೋದುವಿಸೆ ತತ್ಸಾಜನ್ಯಕಂದಾಂಕುರಂ (ಶಾಂತಿಪು. ೯-೦೭). **ಪೊರ್ಕುಳ್** : ೧. ನಿರುತಂ ಶ್ರೀಯುತಪುರಮೆಂಬಿಂದ್ರಾವರಜನ ಮಧ್ಯದ ಪೊರ್ಕುಳ ಹೋದಾವರೆಯೆನೆ ರಂಜಿಪ ರಾಜಾಲಯಮೆಸೆಯುತ್ತಿರ್ಕುರ್ (ಕಜಿಲ. ೦-೬೬) ; ಪೊರ್ಕುಳೊಳ್ ವೇದಾಗಮಸೃಷ್ಟಿಕರ್ತರ್ ಪುಂದೇವರೂಪ ಚಂದ್ರನ ಕಣ್ಣೊಳಗಾಂತ ಮಾಧವನಿರವ ನೋಡಿದಳು (ಪೋಹಕ. ೨೯-೮೯). ೫. ಚಕ್ರದ ಮಧ್ಯಭಾಗ ; ಗುಂಬ : ದರುಮದ ಚರಕಂ ನನ್ನಿಯ ಪೊರ್ಕುಳುಮರಿವು ಸಮಾಧಿ ಧೃತಿಯುಮಿರೆ ನೇಮಿ ಅರಮನೆ ನಯ ವಿನಯಮುಪಂ ಹಿತಕಾ ಪರಿಷದದೊಳವಂ ನಡೆಯಿಸಿದಂ (ಸೌಜಂದ. ೩-೦೦). **ಪೊರ್ಕುಟಿಲ್** : ೧. "ನಾಭಿ ಪೊರ್ಕುಟಿಂದಱಿವುದು" (ಶಸ್ತ್ರಕೋ. ೬೮-೬) ; ಕೊಂದೆನ್ನ ಮಗನನಿಂ ಭಯದಿಂದಂ ರಸಪೊಕ್ಕುಮಜನ ಗುಂಡಿಗೆಪೊಕ್ಕುಂ ಮಂದರಧರನೀ ಪೊರ್ಕುಟ ಪೊಂದಾವರೆಪೊಕ್ಕು ಮೇಣವಂ ಬರ್ದುಕುವನೇ (ಶಂಕಭಾ. ೦೦-೦೨೦) ; ಆ ಮಹೀಪಾಲನ ಲೋಲಲೋಚನಂಗಳಾಕೆಯ ಲಾವಣ್ಯರಸಕೂಪದಂತೆ ನಿಮ್ನಮಾದ ಪೊರ್ಕುಟಂ ಪೊಕ್ಕಱಿದುಂ . . . ತನುಲತೆಯೊಳ್ಪುಳಕಾಂಕುರಮನೊದವಿಸುತ್ತುಮಿರೆ (ಮಲ್ಲಿಪು. ೩-೮೮) ; ಎಳೆವೆಣ್ಣ ಪೊರ್ಕುಟಲರ್ಗೋಡೆಯುಂತಿರೆ ಪೊಂಬೆಟ್ಟಂ . . . ಕಣ್ಗೊಳಿಕುಂ (ರಾಜಾಕ್ಕ. ೬-೩). ೪. ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟ ಚೆಲ್ವು . . . ಪೋದಿರಲಕ್ಕರಕ್ಕೆ ಬರೆವಂ ಚತುರರ್ ಪರಿವರ್ತಿಸಲ್ ನವಿಲ್ಗುಂದದ ಮಾದಿರಾಜವಿಬುಧಂ (ಕುಶ್ಯಪ್ಪ. ೦೯-೫೪). **ಹೊಕ್ಕಳು** : ೧. "ನಾಭಿಃ . . . ಹೊಕ್ಕಳಿಗೆ ಹೆಸರು" (ಸಿದ್ಧಾಂತಿ. ೯೦೬) ; ಜೀವನು ಹೊಕ್ಕಳ ಕೆಳಗೆ ಹೊದೆದನಲ್ಲಾ . . . ಹೊಕ್ಕಳಿಂದ ಕೆಳಗೆ ಹೊದೆಯಕೂಡದೆಂಬುದು ನಿಯಮವು (ಶತಕ. ೩೦೪). **ಹೊಕ್ಕುಳ್** : ೧. ಹೊಕ್ಕುಳಿಂದ ಕೆಳಗೆಯು ಧರಿಸುವರಿಗೆ ಅಕ್ಕು ನೋಡು ಮಹಪಾತಕವವರಿಗೆ (ರಿಲ್ಣಾಕೋ. ೬೩ ೦೩). ೨. ಅರ್ಚನೆಯ ಮಂಟಪವಂ ನಿಮಿರ್ಚಿ ನಡುವೆ ಕಟ್ಟಿದ ಮೇಲ್ಕಟ್ಟಿನ ಹೊಕ್ಕುಳ ಪುಲ್ಲಿಯ ತೊಂಗಲ್ಗಳಂ (ಕೀಚಕ. ಹ. ೩೦೯-೫). **ಹೊಕ್ಕುಳ** : ೪. ಹೊಕ್ಕುಳ ಎಂಬುದು ಕೆಲವು ಅಕ್ಷರಗಳಿಗೆ ನಡುವೆ ಬರುವ ಒಳಸುಳಿ. ದ, ಪ, ಬ – ಇಂತಹ ಅಕ್ಷರಗಳಲ್ಲಿ ಹೊಕ್ಕುಳವನ್ನು ಕಾಣಬಹುದು . . . ಕೆಲವು ಅಕ್ಷರಗಳಿಗೆ ಹೊಟ್ಟೆ ಹೊಕ್ಕುಳಗಳಿಲ್ಲ (ಸಂಕೋರ. ೧೦). ೬. (ಅಲಂ) ಹೊಟ್ಟೆ ; ಬಸಿರು : ಎಲೆ ಆತ್ಮನೆ ಪಾತಕದ ಹೊಕ್ಕುಳದಲೇಕೆ ಹುಟ್ಟಿದೆ (ಶೋಕಶಜಾ. ೦೦-೩೯). **ಹೊಕ್ಕುಳು** : ೧. ತ್ರಿವಳಿ ಮೈಗರೆಯ ಹೊಕ್ಕುಳ ಗುಣ್ಪು ಹೊಜಸೂಸೆ (ಚಿಕ. ೦-೦೦೬) ; ಪುಷ್ಪವ ತಂದು ನಿನಗರ್ಪಿಸುವೆನೆಂದರೆ ಪುಷ್ಪ ಪಲ್ಲವಿಸಿದೆ ಹೊಕ್ಕುಳಲಿ (ಕುರಂಡ. ೨-೬೬-೨). ೪. ಅನೇಕರು . . . ಹೊಕ್ಕುಳು, ತಲೆಕಟ್ಟು ಮುಂತಾದ ಅಕ್ಷರಗಳ 'ಅವಯವ' ಗಳನ್ನರಿತು ಕೆತ್ತಬಲ್ಲೆವೆಂದೂ ಹೇಳಿಕೊಂಡಿದ್ದಾರೆ (ಕಜಾ. ೬೩). ೬. ಬಿಡದೆ ಪಾಂಡುಕುಮಾರರತಗರಿ ಹರಿಯ ಹೊಕ್ಕುಳಲಿ . . . ರಿಪುಗಳ ಕಡಿದು ತಿನಿಸುವೆನು (ಕುವ್ಯಾಕ. ೬೦೨. ೨೫-೦೩). **ಹೊಕ್ಕುಟ**: ೧. "ತುಂದಿಯೆನೆ ಬುಗುಡು ಹೊಕ್ಕುಟಮೆನಿಕು" (ಮಂಗರಾ. ೦೧೯-೫). **ಹೊಕ್ಕುಟು**: ೧. ಹೊಕ್ಕುಟು ಬುಗುಡುಳ್ಳವನು. ತುಂಡಿಲ, ತುಂಡಿ (ಜಾಂಕರಾ. ೬).

**ಪೊಕ್ಕುಳ ಅರಸುಮಕ್ಕಳು** = ಪರಸ್ಪರ ಸಂಬಂಧವುಳ್ಳ ರಾಜವಂಶ : ಆತ್ರಲಿದ್ದರು ಸೆಟ್ಟಿಮುಮ್ಮರು, ಗುತ್ತಿನಡ್ಕಂತಾಯರು, ಇತ್ತ ಪೊಕ್ಕುಳ ಅರಸುಮಕ್ಕಳ ಒತ್ತಿನಲಿ ಕಳದೆಡದಲಿ (ಕಂಬು. ೩೯-೯). **ಪೊಕ್ಕುಳ ಘಂಟೆ**, **ಪೊರ್ಕುಳ ಗಂಟೆ**, **ಪೊರ್ಕುಳ ಘಂಟೆ**, **ಹೊಕ್ಕುಳ ಗಂಟೆ**, **ಹೊಕ್ಕುಳ ಘಂಟೆ** = ೧. ಆನೆ, ಕುದುರೆ ಮುಂತಾದ ಪ್ರಾಣಿಗಳ ಹೊಟ್ಟೆಗೆ (ಹೊಕ್ಕುಳಿನ ಭಾಗಕ್ಕೆ ಬರುವಂತೆ) ಕಟ್ಟುವ ಘಂಟೆ : ತಳೆದು ಕಾಲ್ಪರಜೆಯ ಪೊಕ್ಕುಳ ಘಂಟೆಯನೆಳಲಿಕ್ಕಿ ಬಿಗಿದು ಗುಳವನು . . . ಕರಿಯನೇಱಿ ಕಲಿಜೋವರೆಸ್ಕೆಂವರಂದು (ಕ.ರಾಜಾಂ. ೦೦-೨೫) ; ಪೊಕ್ಕುಳ ಘಂಟೆ ದೌಡೆ ಜಾಗಟೆರವಂ ಶೀವಿತಕ್ಕೆಸೆಯನಿರದೆ (ಸವಪೋ. ೨೭-೬೦) ; ಪೊರ್ಕುಳ ಗಂಟೆಯ ಮೋಹಿಸುವ ಮೊಗವಡದ . . . ಪರಿದು ಶರಧಿಯನೆಡಗಲಿಪ ಗಗನಮುನಡರ್ವ ಜಾತ್ಯಶ್ವಂಗಳ ವಳಯಮಂ (ಗಂಕ. ೬-೫೫ ವ) ; ಗರ್ಗರವ ಶರಜಗತ್ತ್ರಯಿಯ ಪೊರ್ಕುಳ ಘಂಟೆಯು . . . ತುರಗಸಂಘಾತದಿಂ (ರಾಜಶೇ. ೬-೦೦ ವ) ; ಹೊಕ್ಕುಳ ಗಂಟೆ ಸೂಡಿದ ಸುವರ್ಣಗನ್ನಡಿ ಮೌಕ್ತಿಕಾವಳಿಯ ಜೋಡು (ಶಿಂಗಿರಾ. ೩೫-೬) ; ಕಟ್ಟಿದ ಹೊಕ್ಕುಳ ಗಂಟೆಯ ತೇಜಿಗಳಿಟ್ಟಣಿಸುತಲೈದಿದುವು (ಕಂಪಾ. ೨೭-೯೯) ; ನೊಸಲಬಗನ್ನಡಿ ಢಣರೆಂಬ ಹೊಕ್ಕುಳ ಘಂಟೆ ಮಿಸುನಿಬರಹದ ಹಾವರಣ ಬಸಿವ ಗಲ್ಲದ ಮದಧಾರೆಯಿಂದಾನೆಗಳ್ಪಸಗಿ ಬಂದುವು ರಾಜು ನೆಡೆಗೆ (ಕರಕ. ೨೦-೬೨). ೨. ಮಕ್ಕಳಿಗೆ ಉಡಿದಾರದಂತೆ ಕಟ್ಟುವ, ಗೆಂಟೆಯಾಕಾರವುಳ್ಳ ಒಂದು ಬಗೆಯ ಆಭರಣ : ಪೊಕ್ಕುಳ ಘಂಟೆ ಪುಲಿನಖಂ . . . ಮಣಿಮಯಮುದ್ರೆಗಳ ಬೆರಳ್ಗಳಿಗಮರ್ಚಿ (ಸವಪೋ. ೦೨-೦೬). **ಪೊಕ್ಕುಳ ಪುರಿ**, **ಹೊಕ್ಕಳ ಹುರಿ** = ಭ್ರೂಣ ಮತ್ತು ಗರ್ಭಾಶಯದಲ್ಲಿರುವ ಪೋಷಕಾಂಗವನ್ನು ಸಂಬಂಧಿಸುವ ನಾಳ ; ನಾಭಿನಾಳ : ನೆರೆದಿರ್ದ ವಾರಿಜಾಕ್ಷಿಯರು ಪೊಕ್ಕುಳ ಪುರಿಯ ಕೊಯ್ದು . . . ಉಪಚಾರಮಂ ಮಾಡುತಿರಲು (ಸವಪೋ. ೦೦-೨೦); " ಹೊಕ್ಕಳ ಹುರಿ=

ಭ್ರೂಣವನ್ನೂ ಗರ್ಭಾಶಯದಲ್ಲಿರುವ ಪೋಷಕಾಂಗವನ್ನೂ ಸಂಬಂಧಿಸುವ ನಾಳ; ನಾಭಿನಾಳ" (ಅಪಂಶಾ). **ಪೊಕ್ಕುಳ ಬಳ್ಳಿ, ಹೊಕ್ಕುಳ ಬಳ್ಳಿ**=ಪೊಕ್ಕುಳ ಪುರಿ: ಮಿಡಮಿಡನೆ ಮಿಡುಕಿ ಪೊ[ಪಾಠಾಂ. ಹೊ]ಕ್ಕುಳ ಬಳ್ಳಿಯಂ ಕೊಯ್ವುದ (ಬಂಕೋಕ. ಹ. ೩೦೦-೨೪); ಬೆಳ್ಳಿಯ ಓಡಿಯ ಕತ್ತಿಯ ತಂದು ಹೊಕ್ಕುಳ ಬಳ್ಳಿಯ ಕೊಯ್ದರರ್ಭಕನ (ಕೋಹಕ. ೧೭-೨೦). ಜೀವ ಜೀವವ ಬಂಧಿಸಿದ ಹೊಕ್ಕುಳ ಬಳ್ಳಿಯಯ್ಯಾ ಇದು (ಕುಂರಾಕಾ. ೨೦೬). **ಪೊಕ್ಕುಟಂ ಕೊಯ್** = ನಾಭಿನಾಳವನ್ನು ಕತ್ತರಿಸು: ಮಕ್ಕಳು ಪುಟ್ಟಿದಾಗಳೆ ಪೊಕ್ಕುಟಂ ಕೊಯ್ವುದನೆಲ್ಲರ್ಗಱಿಪಿ ನಾಭಿರಾಜನೆಂಬ ಪೆಸರನ್ವರ್ಥಂ ಮಾಡಿ (ಪುಣ್ಯಾಸ್ರ. ೧೦-೧೪ ಪ). **ಪೊಕ್ಕುಟ ಕುಡಿ, ಹೊಕ್ಕಳ ಕುಡಿ**=ಪೊಕ್ಕುಳ ಪುರಿ: ಪೊಕ್ಕುಟ ಕುಡಿಯಂ ಪೆರ್ಚಿಸಲಿಕ್ಕಿದ ಮಣಿಕನಕಪುಂಜಮೆಸೆದಿರೆ ಮೂಲೋಕಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದುದುಂಟೆನಿಸಿರ್ದಂ (ಅಪಂಪು. ೧೨-೮೨); "ಹೊಕ್ಕಳ ಕುಡಿ=ಭ್ರೂಣವನ್ನೂ ಗರ್ಭಾಶಯದಲ್ಲಿರುವ ಪೋಷಕಾಂಗವನ್ನೂ ಸಂಬಂಧಿಸುವ ನಾಳ; ನಾಭಿನಾಳ" (ಅಪಂಶಾ). **ಪೊಕ್ಕುಟ ಪೂ, ಪೊರ್ಕುಟ ಪೂ** = (ವಿಷ್ಣುವಿನ) ನಾಭಿಯಲ್ಲಿ ಹುಟ್ಟಿದ ಹೂವು: ಲೋಕಂಗಳನಾ ಹರಿ ಬಸುಱೊಳಿಟ್ಟನಂತಾತನ ಪೊಕ್ಕುಟ ಪೂವಿನಲ್ಲಿ ಲೋಕಂಗಳನೆಲ್ಲ ಮಾಡಿದಜನೆ ಪುಟ್ಟಿದನೆಂಬರ್ (ಸಮುಶ. ೧೦-೪೪); ಮೂಲೋಕಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದುದುಂಟೆನಿಸಿರ್ದಂ (ಅಪಂಪು. ೦೨-೮೨); ರಾಜೀವಸಖಂ ಸಜಳಜಳಧರಶ್ಯಾಮಾಭ್ರು ಶ್ರೀವತ್ಸಾಂಕನ ಪೊರ್ಕುಟ ಪೂವೆನೆ ಕೆದಱಿದಪನವಿಳಕರಕೇಸರವಂ (೦ಂಡಾಪ. ೪-೦೪೪). **ಪೊಕ್ಕುಟ ಸುೞಿ, ಹೊಕ್ಕುಳ ಸುಳಿ** = ೧. ನಾಭಿಯ ವರ್ತುಲ: ಅಳಿಪಿಂ ಪೆಂಡಿರ ಪೊಕ್ಕು[ಪಾಠಾಂ. ಪೊರ್ಕು]ಟ ಸುೞಿಯೊಳ್ ಸುೞಿತರ್ಪ ನೃಪನ ಕಣ್ಬೊಣರ್ಗಳನೇನಱಿಸಿದವೊ ನದಿಯೊಳೊದವಿದ ಸುೞಿಗಳ ಬೞಿವಿಡಿದು ಸುೞಿದು ಪೊಳೆವೆಳಮೀಂಗಳ್ (ಪಾರ್ಶ್ವಪು. ೯-೨). ೨. ಪ, ಮ ಮುಂತಾದ ಅಕ್ಷರಗಳ ಅಡಿಯಲ್ಲಿರುವ ಒಳಸುಳಿ: ಪ, ಮ, ವ—ಇಂಥವಕ್ಕೆ ಅಡಿಯಲ್ಲಿ ಅಂದರೆ ಕೆಳಗಡೆ ಒಳಸುಳಿಯಿದೆ. ಈ ಕೆಳಗಡೆ ಇರುವ ಸುಳಿ " ಹೊಕ್ಕುಳ ಸುಳಿ " ಎನಿಸುತ್ತದೆ (ಸಂಕೋಶ. ೨೦೦). **ಹೊಕ್ಕುಳಲಿ ಹೂದುಱುಬಿದಾತ** = ನಾಭಿಯಲ್ಲಿ (ಕಮಲದ) ಹೂವುಳ್ಳವನು; ಪದ್ಮನಾಭ; ವಿಷ್ಣು: ಹೆಱಿಯ ಹೊತ್ತನ ಹೊಕ್ಕುಳಲಿ ಹೂದುಱುಬಿದಾತನ ಮಗಳಿಗಳುಪಿದ ಮೊಱಿಯವನ ಹೆಂಡಿರನು ಬಲ್ಲನು ಕಂಡು ಶಾಪ (ಕೊರಶಾ. ೬-೪-೨೪). **ಹೊಕ್ಕುಳ ಸೀಳು** = ದ, ಪ ಮುಂತಾದ ಅಕ್ಷರಗಳನ್ನು ಮಹಾಪ್ರಾಣಗಳಾಗಿ ಬರೆಯುವಾಗ ಆ ಅಕ್ಷರಗಳ ಹೊಕ್ಕುಳ ಸುಳಿಯಿಂದ ಕೆಳಗೆ ಗೆರೆ ಎಳೆ: ಡ, ದ, ಪ—ಮುಂತಾದುವನ್ನು ಮಹಾಪ್ರಾಣಗಳಾಗಿ ಬರೆವಾಗ 'ಹೊಕ್ಕುಳ ಸುಳಿ 'ಯಿಂದ ಕೆಳಗೆ (ಢ, ಧ, ಫ—ಎಂಬಂತೆ) ಗೆರೆ ಎಳೆಯುವರಷ್ಟೆ. ಇದನ್ನು 'ಹೊಕ್ಕುಳ ಸೀಳು ವುದು' ಎನ್ನುತ್ತಾರೆ (ಸಂಕೋಶ. ೨೦೨). **ಹೊಕ್ಕುಳ ಹೂವ** = ನಾಭಿಯಲ್ಲಿ ಹೂವಿರುವವನು; ವಿಷ್ಣು: ಹೊಕ್ಕುಳ ಹೂವನ ರೂಹ ತೋಱಿದಳು ಪೆಣ್ಮಕ್ಕಳ ಮಂಡವಾಣಕಕೆ (ಪೋಹಕ. ೩೦-೨೪). **ಹೊಕ್ಕುಳಾರದ ಶಿಶು**=ಆದೇ ಹುಟ್ಟಿದ ಕೂಸು; ಹಸುಗೂಸು: ಮಹೀಶೂರರತ್ನಸಿಂಹಾಸನದ ಸಮರಾಂಗಣಧರ್ಮಕ್ಕೆ ಇಂತಹ ವೀರವಿಶ್ವಾಸವನ್ನೊಪ್ಪಿಸಿ, ತವಕದ ಪ್ರತ್ಯಾಶೆಯಿಂದ ಕುದಿಯುತ್ತಿರುವ ಕಯ್ದುಗೊಳ್ಳದ ಮಾರಾಳಿ . . . ಸ್ತ್ರೀ!—ಹೊಕ್ಕುಳಾರದ ಶಿಶು! (ಕಲ್ಪಂ. ೬೩-೦೫). **ಹೊಕ್ಕುಟ ಬಾಗಟು** = ಉಬ್ಬಿರುವ ನಾಭಿ: ವೃದ್ಧನಾಭಿಃ, ತುಂದಿಲಃ, ತುಂಡಿಭಃ—ಈ ೩ ಹೊಕ್ಕುಟ ಬಾಗಟುಳ್ಳವನು (ಪಾಶಕಾ. ೦೨೦). [ದೇ. ‖ ತಮಿ. ಪೊಕ್ಕುಳ್, ಪೋಕಿಲ್; ಮಲ. ಪೊಕ್ಕುಳ್, ಪೊಕ್ಕಿಳ್; ತುಳು. ಪುವಳು, ಪುಪೊಳು, ಪೂಪೊಳು; ಕೊಡ. ಪೊಕ್ಕಿ; ತೆಲು. ಪೊಕ್ಕಿಲಿ; ಕೋಲಾ. ನಾಯ್ಕಿ. ಬೊಗುರ್]

**ಪೊಕ್ಕುಟು** 'ಪೊಕ್ಕುಟ್' ನೋ.

**ಪೊಕ್ಕು** 'ಪುಗಿಲ್₂' ನೋ.

**ಪೊಗಟು** 'ಪಗಟು' ನೋ.

**ಪೊಗಡ, ಪಗಡೆ₁, ಪೊಗಡೆ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ಬಕುಳ; ಕೇಸರ: ಪೊಗಡದ ಪೊಸಪೂವಿನ ತುಡುಗೆಗಳ್ಗಮಧರದ ಪೊದಟ್ಟ ತಣ್ಗಂಪಿಂಗಂ ಮೃಗನಯನೆಯರನೆ ಬಿಡದೋಲಗಿಸಿದುದಳಿನಿಕರಮವರನಾರೋಲಗಿಸರ್ (ಆದಿಪು. ೧೦-೧೦೨). **ಪಗಡೆ₁**: ಸುರಗಿ ಸುರಹೊನ್ನೆ ಸಂಪಿಗೆ ಪಗಡೆ ಪನ್ನೀರು ಪಾರಿಜಾತ ಮೊದಲಾದ ತರುಗಳಲ್ಲಿ (ಸೌಗಂಧಿ. ೪-೦). ನೇರಳೆ, ಪಗಡೆ, ಪಾದರಿ . . . ಮೊದಲಾದ ಪುಷ್ಪಫಲ ಭರಿತವಾದ ವೃಕ್ಷಗಳನ್ನು (ಕೃಶಾಂ. ೨೨೬). **ಪೊಗಡೆ**: ಸೌಗಂಧಿಕಾದೇವಿಗೆ . . . ಪೊಗಡೆಹುವ್ವುಗಳ ಪೋಣಿಸಿದ ಒಡ್ಯಾಣವಂ ನಡುವಿನೊಳ್ ಕಟ್ಟಿದರೆ ನಡೆಯುವದಕೆ ತಡವಾಗಿ ಬಳಲಿ ಅಲ್ಲಲ್ಲಿ ನಿಲ್ಲುವಳು (ಸೌಗಂಧಿ. ೨೦೦-೨೨). [ದೇ. ‖ ತೆಲು. ಪೊಗಡ, ಪೊವಡ]

**ಪೊಗಡೆ** 'ಪೊಗಡ' ನೋ.

**ಪೊಗದಸ್ತು** 'ಪಗದಸ್ತು' ನೋ.

**ಪೊಗದಿ** 'ಪಗುದಿ' ನೋ.

**ಪೊಗರ್, ಪೊಗರು, ಹೊಗರ್, ಹೊಗರು₂** (ನಾ). ೧. ಕಾಂತಿ; ಹೊಳಪು; ಮೆರುಗು; ಪ್ರಕಾಶ: "ತೊಳಗು, ಬೆಳಗು . . . ಪೊಗರ್, ತೊಳಪಂ, ಮಸೆ—ಈ ೧೪ ಕಾಂತಿ" (ಶಶಾ. ೫೫-೨೦೨); ಪೊಗರಳವಟ್ಟು ಪೊನ್ನನೊರೆದಂತೆವೊಲಿರ್ದೊಡೆ . . . ತಾನೆ ವೀರಲಕ್ಷ್ಮಿಗೆ ನೆಲೆಯಕ್ಕುಮಿ ತೆಱದ ಬಾಳ್ದಿಡಿದಂ (ಕೋಕೋಶ. ೧೦-೧೦೦೦); ಅಂಗಜನ ಬಾಳ ಪೊಗರ್ ನಿಜಬಾಹುಮೂಲದಿಂ ತುಳ್ಕಿ ತುಳುಂಕಿದಳ್ ಹರಿಯ ಮೇಲೆ ಪೆಱಳ್ ತರಳಾಕ್ಷಿ ತೋಯಮಂ (ಜಗಂ. ೦೪-೦೦೩); ಪೊಂಬಳ್ಳಿಯ ಪೊಗರಂ ಗೆಲ್ವಂಗದ ಕಂಬುಲಲಿತಕಂಧರೆ ಮುನ್ನೆಱಿದ ನವಾಂಬು ಜಲಕ್ಕನೆ ಕೀವಲ್ಲೆ (ಜಯಕಾ. ೦-೪೩). ೨. ಹರ್ಷ; ಉತ್ಸಾಹ; ಉಬ್ಬು: ಗಮಕಂ ಪ್ರಯೋಗವಾಭೋಗಮಳಂಕಾರಂ ಪೊಗರ್ ನಯಂ ಮಿಱುಗು ಪೊದಟ್ಟಮರೆ ಕೊಳೆ ಪಾಡುವವರಿ ದಲಮಾರ್ದಂ ಮುಕ್ಕುಳಿಸಿಯುಗುಟ್ಟ ತೆಱನಂ ಪೋಲ್ತಳ್ (ಅಂತಿ. ೬-೦೬); ದನಿಯ ಪೊಗರ್ ಮನೋಭವನ ಬಾಳೊಗರಂತಿರೆ . . . ವನಚರಿ ಪಾಡಿದಳ್ ಮಧುರಗೀತಿಗಳು (೦ಂಡಾಪ. ೬-೩೨); ಪೊಗರಿಂಪು ನುಣ್ಪು ಪೆಂಪಿನ ಸೊಗಸಿನ . . . ಚೆಲ್ವ ಕಾವ್ಯದ ಬಗೆಯಱಿಯದ ಪುಚ್ಚುಗನ್ನಿ ಕೂಗಿದೊಡಳ್ಕೆಂ (ಹಮ್ಮಿಕ. ೦-೦೬). **ಪೊಗರು**: ೧. "ಪೊಗರೆನಲ್ಕೆ ಕಾಂತಿಯಕ್ಕುಂ" (ಕಶ. ೬೧); ಧುರದೊಳರುಹದ್ದಾಸರಾಯನ ಪರ ಕೃಪಾಣದ ಪೊಗರು ಪೊಗರಿಲ್ಲರಿನೃಪಾಲರ ಶಿರವನೊಡೆವೊಯಿದೆತ್ತ (ಶಾಶ್ವತ. ೨-೨೩); ಮೊಗವಾಂ ಮಯ್ಯುಂ ಪೊಗರಂ ಮಿಗೆ ಸೊಗಸಂ ಪಡೆಯೆ (ಕಶಂ. ೩-೦೦); ಮೂಡಲಿದೆ ಹೊಸಚಿಗುರು ಮೂಡಲಿದೆ ಹೊಸ ಪೊಗರು (ಅಕಳು. ೪೪೬-೫). ೩. ಬಿಂಕ; ಗರ್ವ; ಸೊಕ್ಕು: ಹೈಹಯಾತ್ಮಜನೈದೆ ನಗರವಂ ಪೊರಮಟ್ಟು ಚತುರಂಗಬಲವೆರಸಿ ಪೊಗರಿನಿಂದೈತರುತಲಿರೆ (ಪಶಶ. ೦೦-೦); ಮುಂದಕೆ ವಿಗಡಿಸುವ ದಾಯವನು ತಿಳಿಯದೆ ಪೊಗರಿನಿಂ ದುರ್ನೀತಿಗೆಳಸಿದ ಪಾರ್ಥನು (ಕೋಗಹು. ೦೬-೬೦). ಮಿತ್ರುವಿನ ಕೋರೆದಾಡೆಯ ಪೊಗರಿಗಂಜದರೆಯು . . . ಕಂಗೆಟ್ಟು ಮುಮ್ಮಲನೆ ಮರುಗುತಿಹುದು! (ಕಂಕಾ. ೨೨-೨). **ಹೊಗರ್**: ೧. ಉರಮಣಿಸಿ ತಮ್ಮನಟ್ಟಿಗುಂ ಧುರದೊಳದಂದಂಜ ಹೊಗರ ನೆವದಿಂ ರಿಪುಭೂಪರ ನೊಸಲಕ್ಕರಮಿರ್ಪುವು ನೆರದು ಶರಣ್ಬೊಕ್ಕಳಾಧಿಪನ ಕೂಂಸಿಯೊಳ್ (ಪರ್ಶಪು. ೬-೩೦); ನಳಿತೋಳ ಮೊದಲು ಹೊಗರಂ ಕಱಿಯ ಕಡೆಗಣ್ಣ ತೊಳಪ ಮಿಂಚುಂ ಕೆದಱಿ (ಹಕಳು. ೩-೫೦); ಹೂಮೊಗ್ಗೆಗಳ ಹೊದಱಿನ ಹೊಗರ ಹೊಸದೇಸಿಯಲಿ ಯಾದ್ಯೋನ್ಮತ್ತನನುವಾದ (ಕೊರಶಾ. ೬-೨೪-೨೩). **ಹೊಗರು₂**: ೧. ಲಲಿತವಿದ್ರುಮಲತಾವಿಭ್ರಮೋಪಮ

ಜಟಾವಲಿ ಹೊಗರನುಗುಳ್ವ ರುದ್ರಾಕ್ಷವಾಲಾಜಾಲ (ಶದ್ಮರಾ. ೨-೫೦); ಹೊಗರನುಗುಳುವ ಹೊಸಮಸೆಯ ಕೋಲುಗಳ ಕವಿಸಿದನು (ಕುಮ್ಮಾ.ಕ. ೪-೦೩); ಕಾಸಿದಂತೆ ಕಾಂಚನದ ಹೊಗರು ಅಧಿಕವಲ್ಲವೆ ? (ಜಿಂದಾಪ. ೭). ೨. ಬಾಹುಸತ್ವದ ಹೊಗರು ಹೋಗದು ಮನದ ಖಾತಿಯು ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಬೇಸಱದೆ (ಕುಮ್ಮಾ.ಕ. ೨-೦೦೦). ೪. ಹೆಚ್ಚಳ; ಆಧಿಕ್ಯ: ಭುಜಪ್ರತಾಪದ ಹೊಗರು ಹೊಸ ಪರಿಯನುತ ರಿಪುಗಳ ಹೊಗಳುತಿರ (ಕುಮ್ಮಾ.ದ್ರೋ. ೫-೩೬); ಜಗದುಸುರು ಪಸರಿಸಿತು ಹರುಷದ ಹೊಗರು ಮಸುಗಿತು ರಿಪುನೃಪರ (ಕುಮ್ಮಾ.ದ್ರೋ. ೦೯-೫೦). ೫. (ಆಲಂ) ಮಂಕು : ಮೇಲುಮುಸುಕಿನ ಹೊತ್ತ ದುಗುಡದ ಹೊಗರ ಹೊಗೆವೊಗದ ತಾಳಿಗೆಯ ನಿರ್ದ್ರವದ . . . ನೃಪಾಲ ಹೊಕ್ಕನು ನಡು ವಿರುಳು ನಿಜರಾಜಮಂದಿರವ (ಕುಮ್ಮಾ.ಕ. ೦೨-೧).

[ದೇ.೫ ತಮಿ. ಮಲ. ಪುಕರ್; ತೆಲು. ಪೊಗರು, ಪೊವರು]

**ಪೊಗರಂಬು**, ಹೊಗರಂಬು (ನಾ). (ಸಾಣೆ ಹಿಡಿದ) ಹೊಳೆಯುವ ಬಾಣ; ಹರಿತವಾದ ಸರಳು : ಹರಿಯರ್ದೆಯೊಳುಮುನಿಯ ನುಡಿಯು ಮಂಗಜನ ಪೊಳಪರಲ ಹೊಸಮಸೆಯ ಪೊ[ಪಾಠಾಂ. ಹೊ]ಗರಂಬುಗಳು ವೊಡನೊಡನೆ ಭರದಿ ನೆರೆಗೊಂಡುವು (ಸಾಳ್ವಭಾ. ೨೯-೨೨). **ಹೊಗರಂಬು** : ತಳತ ಹೊಗರಿನ ಬಾಯಧಾರೆಯ . . . ಹಂಗನ ಗಱಿಯ ಬಿಗುಹಿನ ಹಿಳುಕುಗಳ ಹೊಗರಂಬು ಕವಿದವು (ಕುಮ್ಮಾ.ದ್ರೋ. ೫-೦೩); ಹೊಡಕರಿಸಿ ಹೊಗರಂಬು ಹೊಕ್ಕುವು ಕೊಡಹಿದರು ಕೊಬ್ಬಿದ ವಿರೋಧಿಗಳೊಡಲ ಬಗೆದುವು ಚಿಗಿಯೆ ನೆತ್ತರ ಧಾರೆ ದೆಸೆದೆಸೆಗೆ (ಜಾತ್ರ.ರಾ. ೭-೫೯).

[ಪೊಗರ್ + ಅಂಬು₁]

**ಪೊಗರಲಗು**, ಹೊಗರಲಗು (ನಾ). (ಕತ್ತಿ, ಖಡ್ಗ ಮೊದಲಾದುವುಗಳ) ಹೊಳೆಯುವ ಅಲಗು,-ಬಾಯಿ : ಬಗೆಯ ನಿಜದೇಹದನ್ನರ್ ಮಿಗನಾಜುಕರಟಿದೊಡುರ್ಕುಗೆಟ್ಟನೆ ಮುನ್ನಿಂ ಮಿಗೆ ಆಡುಗೂರ್ಪಂ ತಳೆದಂ ಪೊ[ಪಾಠಾಂ. ಹೊ]ಗರಲಗಂ ಪಱಿಯೆ ಮಸೆದವೋಲ್ ಹಯಕಂಠಂ (ವರ್ಧ. ೬-೫೭). **ಹೊಗರಲಗು** : ಹಿಪ್ಪೆಗರ ಹರೆಗಡಿದು ಹೊಗರಲ ಗೊಪ್ಪಿದವು ಕರುಳುಗಳ ನಿಮಿಷದೊಳೊಪ್ಪಗೆಡಿಸಿದವರಿಕದಂಬವನೀತ ನಂಬುಗಳು (ಕುಮ್ಮಾ.ದ್ರೋ. ೨-೫೩); ಮೈಯೊಳಗೆ ಹೊಚ್ಚಿದವು ಹೊಗರಲಗು ಮುಚ್ಚಿದವು ನೆಣಸಯನು (ಕೃಜಿಶಾ. ೦೩-೦೯). [ಪೊಗರ್ + ಅಲಗು₁]

**ಪೊಗರಳಿ**, ಹೊಗರಳಿ (ಕ್ರಿ). ಕಾಂತಿಗುಂದು; ಕಾಂತಿಹೀನವಾಗು : ಅವನಿಪರ ಮುಖಂ ಪೊಗೆ ಸುತ್ತಿದ ಪೊಂಗನ್ನಡಿಯಂದದಿ ಪೊಗರಳಿದುವು ಪೊಗಸಿನ ಚಂದ್ರಂಬೊಲ್ (ಕಬಃಶಾ. ೬-೦). **ಹೊಗರಳಿ** : ಒಗೆದ ಚಿಂತೆಯ ಹೊಗರಳಿದ ಮೊಗದ ಮಯ್ದೆಗೆದ ಮಾತಿನ ಬಲವೆರಸು ದುಗುಡದಿಂ ಬಂದು ಪೊಕ್ಕನು ಬೀಡ ಒಲ್ಲಾಳ ಬಿಗುವುಗುಂದಿದ ಬಿಂಕದೊಳು (ಕುಜಾಶಾಂ. ೦೩-೦೫೩). [ಪೊಗರ್ + ಅಳಿ₁ (<ಅೞ್₁)]

**ಪೊಗರಾನ್**, ಹೊಗರಾನ್ (ಕ್ರಿ). ಕಾಂತಿಯನ್ನು ಹೊಂದು; ಥಳ ಥಳಿಸು : ಪುಳಿದ ಪೊಳೆವುರ್ವ ಮುಮ್ಮೊನೆಯ ಕಂಗಿಡಿ ಸಾಲಿಡೆ ರೂಢಿ ಸುತ್ತೆ ಒಂಗದೆ ಪೊಗರಾಂತ ಕರ್ಗಣೆಗಳೆಂ ಪರಿತಂದುವು ಪಾಂಡು ಪುತ್ರನಾ (ಕಬಶಂ. ೪-೯೨). **ಹೊಗರಾನ್** : ಹೊಗರಾಂತ ಹೊಸ ಹೊನ್ನ ರಸ ಕಾಯ್ದಿರೆ ಕಂಡು ಸೆಗಣಿಯೊಳೆಱೆವಂತೆ ಮೊಱಿದಿ ಮೃಗಮದ ಗಂಧಿಯರ್ ಗೋಮಯದಿಂ ಮುದ್ದುಮಗನ ದೇಹವ ಸಾರ್ಚಿದರು (ನೇಮಿಶ. ೦೭-೨೦). [ಪೊಗರ್ + ಆನ್₁]

**ಪೊಗರು** (ನಾ). [ಜೈನ] ಮುನಿಗಳ ಒಂದು ಸಂಘದ ಹೆಸರು; ಗಚ್ಛ ಗಳಲ್ಲಿ ಒಂದು: ಗಛ್ಛೇ(ಚ್ಛೇ)ಶು ತುಛ್ಛೇ(ಚ್ಛೇ)ಪಿ ಪೊಗರ್ಯ್ಯಾಭಿಖ್ಯೇ ಸಂಸ್ಥೋಯಮಾನೋ ಮುನಿರಾರ್ಯ್ಯ(ರ್ಯ್ಯ) ಸೇನಃ (ಎಕ. XIX, ೫೩೨-೦೯ ; 1054); ಜಿನಧರ್ಮಕ್ಕೆ ಮೂಲವಾದ ಮೂಲಸಂಘದಲ್ಲಿ ಪ್ರಸಿದ್ಧವಾದುದು ಸೇನಗಣ; ಅದರಲ್ಲಿ ಪ್ರಸಿದ್ಧವಾದುದು ಪೊಗರಿಗಚ್ಛ (ಕಶಾಲ. ೮೭ ಅಹಿ). [?]

**ಪೊಗರಿಗೆಱೆ** (ನಾ). ಒಂದು ಊರಿನ ಹೆಸರು : ತಳವನಪುರದೊಳ್ ತಳ ವಿತ್ತಿಯ ಮಣ್ ಪೊಗರಿಗೆಱೆಯೊಳ್ ವನ್ನಿರ್ಕ್ಕಣ್ಣಾಗಂ ಮನೋಹರಂ ದತ್ತಂ (ಎಕ. I, ೦-೨೦ ; ಸು. ೯೫೫ಹು ೫೫).

[೯ ಇದು 'ಪೊಗರಿಗೆಱೆ' ಎಂಬುದರ ಅಪಲಿಖಿತವಿರಬಹುದು]

**ಪೊಗರಿಡಿ** (ಕ್ರಿ). ಕಾಂತಿಯಿಂದ ತುಂಬಿರು : ಪತೆಯನುಱೆ ಕೊಂದುವು ಶರಧಿಭವಸಭವನ ಪೊಗರಿಡಿದಂಬುಗಳ್ಪಳಯಶತಕೋಟಿ ಶತಕೋಟಿಯಂ ಪೋಲ್ತು ಸಂಗರದೊಳು (ಕೃಜಿಶಾ. ೨೨-೨೦). [ಪೊಗರ್ + ಇಡ್ಕು]

**ಪೊಗರಿಳಿಸು** 'ಪೊಗರಿಱಿಸು' ನೋ.

**ಪೊಗರಿಱಿಸು**, ಪೊಗರಿಳಿಸು (ಕ್ರಿ). ಗರ್ವವನ್ನು ಕುಗ್ಗಿಸು; ಅಹಂಕಾರ ವನ್ನು ಹೋಗಲಾಡಿಸು; ಸೊಕ್ಕಿಳಿಸು : ಜಯಲಕ್ಷ್ಮಿಯ ನಯ ನೋತ್ಪಲವಮಯೂಖಮನೆ ತಾನೆ ಬಂದು ಕರಕಿಸಲಯಕಾಂತಿಯಿನೇಂ ರಾಗಂಬೆತ್ತುದೊ ಜಯಮಾ ಪೊಗರಿಱಿಸೆ ಕಿಸುರ ಮಸಿಯರ್ಕ್ಕರಮಂ (ಶಂಖಶಾ. ೯-೨೦). **ಪೊಗರಿಳಿಸು** : ಯಾರಾದರೂ ಆ ಜಂಬಗಾರನ ಪೊಗರಿಳಿಸಬೇಕು (ಜಾ೨). [ ಪೊಗರ್ + ಇಱಿಸು ]

**ಪೊಗರು** ' ಪೊಗರ್ ' ನೋ.

**ಪೊಗರುಗು**, ಹೊಗರುಗು (ಕ್ರಿ). ಚೆಲುವು ಹೊರಸೂಸು; ಕಾಂತಿಯು ಹೊರಚೆಲ್ಲು : ನಾಡೆ ಕಡುಚೆಲ್ವು ಮಿಕ್ಕು ಪೊಗರುಗುವ ಹೊಂಬಣ್ಣ ವೋಲೆಯಾಯತದ ಸೆಕ್ಕಂದುಜುಂಬಿನ . . . ವೆಣ್ಮಿಕ್ಕಳಿಯ್ತಂದರೊಸೆದು (ಕಶ್ಮಶಾ. ೩-೬೭); ಪಲ್ಲವಾಧರ ದಂತ (ಕುಚ ಪೊಗರುಗುವ) ಧಮ್ಮಿಲ್ಲದ ವೆಱೆವ ಹೆಣ್ಣುಗಳು ಪುಲ್ಲದಳಾಕ್ಷಿಗೆ ಪೊಸವೇಟ ಪುಟ್ಟುವಂತೆಲ್ಲರಿಬ್ಬಗೆ ಯಾದರಾಗ (ಸೋಹಶ. ೦೯-೬೩); ಪೊಗರುಗುವ ಕಣೆಗಳ್ ಸಾರ್ತವುರ್ದಂ ಕಾಣುತೆ ರಾಘವಂ ಪಡಿಸರಳಂ ತುಡುತೆ ಬಿಡದೋರೊಂದು ಪಗೆಗೋಲಂ ನಡುದಾರಿಯೊಳಿ ಇರ್ಕಡಿಗೆಯ್ವಂ (ಅದ್ಮಕ. ೯೯-೨೦). **ಹೊಗರುಗು** : ಹೊಗರು[ಪಾಠಾಂ. ರೊ]ಗುವ ಹೊಸ ಕಣೆಯ ದಡ್ಡಿಯ ಬಿಗಿದನೆಡಬಲ ನಿದಿರಿನಲಿ ಸೆಗಳೆಗೆಯ ಸುಸಿಯಂತಾಯ್ತು ಕೌರವಸೇನೆ ನಿಮಿಷದಲಿ (ಕುಮ್ಮಾ.ಶ. ೭-೫೨); ಹೊಗರುಗುವಂಗೋಪಾಂಗ ವಕ್ಷದೊಳು ಪೊಂಬೊಗರಿಯಂತಿರ್ಪ ನುಣ್ಗೊಲೆಯ ದೃಗುಯುಗಳದಿ ನೋಡಿ ಹೆಱುಂಗಲಾಱದೆ ಮುಗುಳಂಬ ನಮರ್ದಟ್ಟಿದನು (ಸೋಹಶ. ೦೯-೬೨). [ಪೊಗರ್ + ಉಗು₁]

**ಪೊಗರುವೆಱು** (ಕ್ರಿ). ಗರ್ವಪಡು; ಬೀಗು; ಹೆಮ್ಮೆಪಡು : ಗದ್ದೆಯ ಗೊರವನೊಳ್ ಕಡಿದಾಡಿ ಪೊಗರುವೆತ್ತಿರ್ದ್ದ ನೀ ರಷ್ಠರಂಗದೊಳಗೆ ಬಿದ್ದಯ ನನ್ನ ಬಾಧೆಗೆ ಕೃಷ್ಣ ಕರ ನಿನ್ನ ದೊಡ್ಡಯ ನಿಲಲೊಬ್ಬಗರಿದು (ಸೋಹಶ. ೯೦-೦೯). [ಪೊಗರು (<ಪೊಗರ್) + ಪೆಱು₁]

**ಪೊಗರೆ** (ನಾ). ಪೊಟರೆ; ಬಿರುಕು; ಹೋರು : ಕಲ್ಲ ಪೊಗರೆಯೊಳಿಟ್ಟ ಕಾಮುರ್ಗಿಲ ಮೊಟ್ಟೆಗಳ್ ತಾಮನಿಸಿ ಪರ್ಬಿದುವು ಪೆರ್ಜೀನ ಪುಟ್ಟುಗಳ್ . . . ಪೊಕ್ಕು ಕುಕ್ಕಿಱಿಸಿ ಜೋಂಟಿಸಿ ಕಲ್ಲ ಪೊಗರೆಯಂ ನೆಮ್ಮಿ ಪುಲಿ ಸಮುಱಿದುವು ಕಟವಾಯ ಸವಿಗಳಂ (ಅಪಂಶ. ೯-೦೬ ರಗಳೆ).

**ಪೊಗರೇರು** ' ಪೊಗರೇಱು ' ನೋ.

**ಪೊಗರೇಱು**, ಪೊಗರೇರು, ಹೊಗರೇರು, ಹೊಗರೇಱ್, ಹೊಗರೇಱು (ಕ್ರಿ). ೧. ಕಾಂತಿಯೇಱು; ಸೊಬಗು ಹೆಚ್ಚಾಗು : ಪೊಂಗುವ ಪೊಱವಾಱಿನ ಪೊಗರೇಱುವ ಪೊಂಗೊಡವೋಲೆಯ ಸೋರ್ಮುಡಿಯ ಉಂಗುರವಿಡಿನಡುವಿನ ನಿಡುಗಣ್ಣ ಲತಾಂಗಿಯರೆಸೆದರಂದದಲ್ಲಿ (ಶಂಖಶಾ. ೨೯-೫೩); ಅಲಿಗಳರಲ್ದವಸು ಪಸರಿಸಿತೊಡಲೊಳಗೆಸೆದುದಾ ಲಲಿತಮುಖ ಕಾಂತಿ ಪೊಗರೇಱಿತವಯವಂ (ಕೃಜಿಶಾ. ೨೯-೬೬); ಪವನೆಗೆಯೊಪ್ಪೆ ಪುರುಳು ಪೊಗರೇಱಿಯಂಗವಿಸೆಯಲಂಕಾರಗಳು (ಪಂಬ. ೩-೨೬).

೨. ಹರ್ಷಗೊಳ್ಳು; ಉಬ್ಬು; ಉತ್ಸಾಹಪಡು : ಸುರರುಂ, ಕಿನ್ನರರುಂ, ನರರುಂ, ವಾನರರುಂ ಪೊಗರೇಱೆ ಕಳೆವೆರ್ಚಿದರ್ (ಜಗನ್ನಾ. ೧೧೪-೯). **ಪೊಗರೇರು :** ೩. ಗರ್ವವು ಹೆಚ್ಚಾಗು; ಸೊಕ್ಕು : ಈಚೀಚೆಗೆ ತುಂಬಾ ಪೊಗರೇರಿರುವುದರಿಂದಲೇ ಈತ ಹೀಗಾಡುವುದು (ಜನಪ). **ಹೊಗರೇರು :** ೧. ಗಿಡಬಳ್ಳಿ ಚಿಗುರಿಡಲು ಹೊಗರೇರಿ ಹೂಬಿಡಲು ನಕ್ಷತ್ರಿಡಲು ಮುತ್ತಿಡಲು ತುಂಬಿ ಬಹವು (ಶಾಹೀ. ೨೦-೪೦೯); ಉಡಿಗೆ ತೊಡಿಗೆಗಳಿಂದ ಹೊಗರೇರಿದ ರಾವುತನು ಅಂಗಳಕ್ಕಿಳಿಯುತ್ತಿದ್ದನು (ಕಠಾ. I, ೪೪೩). **ಹೊಗರೇಱ್ :** ೧. ಹೊಗರೇರ್ವ ಹೊಂಬಣ್ಣ ಮುಖದೊಳು ಮುಖವಿಟ್ಟ ಸುಗುಣೆ (ತಿಪ್ಪ. ೦೬೯-೮೨೩). **ಹೊಗರೇಱು :** ೧. ವಿಚಾರಿಸಿದ ವಾಪ್ಪನಶನೆಂದವಳಿಗೆ ಮಾಱುತ್ತರಗೊಟ್ಟು ನಗುತ ನೂಱಿಲಗಣ್ಣ ರುಕ್ಮಿಣಿಗೊಡರ್ಚಿದ ಹೊಗರೇಱುವ ಗರ್ಭೋತ್ಸವವ (ಮೋಹತ. ೪-೬೬); ಹೂವಿನ್ನ ಮೊರೆ ಹೊಗರೇಱಿದ ಜೌವನವೊಮ್ಮಾಱು ಜಡೆಯ ಸೊಬಗಿನ ಉಮ್ಮತ್ತೂರು ಗೌರಾಜಿ ಚಿತ್ರಿನಿ ಬಲುಸುಮ್ಮಾನ ದೊಳೈದಿದಳು (ಕಂಠೀ. ೨೦-೬೬). ೨. ಕೇಶವನಾತ್ಮಸಂಭವಸೂನು ವೀರಾವೇಶದಿ ಹೊಗರೇಱುತಿರಲು ಆ ಸಮಯದಿ ಚಿತ್ರಲೇಖೆ ನಿರ್ಮಿಸಿದಳು ಭಾಸುರರರಣಯಂತ್ರಮಣಿಯು (ಮೋಹತ. ೬೬-೩೮). ೪. ಉದ್ದೀಪನ ಹೊಂದು ; ಅಧಿಕವಾಗು ; ಹೆಚ್ಚಾಗು : ಮನದ ಖತಿ ಹೊಗರೇಱೆ ದುಶ್ಯಾಸನನ ಮಗನಿದಿರಾಗಿ ಖಡ್ಗದ ಮೊನೆಯ ಚೂರಿಸಿ . . . ತನಗೆ ಮೃತ್ಯುವ ಕರವಪೋಲರ್ಜುನಕುಮಾರನ ಇರೆದು ಹಳಚಿದನು (ಕುಮಾ.ದ್ರೋ. ೬-೩೭). [ಪೊಗರ್ + ಏಱು$_1$ (<ಏಱ್$_1$) ]

**ಪೊಗರೇಟ್, ಹೊಗರೇಳ್, ಹೊಗರೇಳು** (ಕ್ರಿ). ೧. ಕಾಂತಿಯನ್ನು ಸೂಸು ; ತೇಜಸ್ಸನ್ನು ಬೀರು : ಸಮಸಂದಾ ಮಲಯಜ ಕುಂಕುಮ ಕಸ್ತೂರೀಜಲಾದ್ರ್ರಕನುತತಿಯಿಂ ತತ್ಪ್ರಮದಾಜನಮೆಸೆದುದು ರತಿರಮಣನ ಪೊಗರ್ಪ್ಟ ಕುಸುಮಶರಸವಿತತಿಯವೊಲ್ (ಕುಸುಮಾ. ೩-೦೬೦). **ಹೊಗರೇಳ್ :** ೧. ಅಗುರು ಕುಂಕುಮ ಪಚ್ಚೆಗಪ್ಪುರ ಪನ್ನೀರು ಮೃಗನಾಭಿ ಮುಖ್ಯಲೇಪನದಿ ತಿಗುದಿಕ್ಕಿದರಾಳಿಯರು ಸತ್ಯಮರಿಯ ಹೊಗರೇಳ್ವ ಹೊಂಬಣ್ಣವೆಯ್ದೆ (ಮೋಹತ. ೨೩-೦೨). **ಹೊಗರೇಳು :** ೧. ಮುಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ ಹೊಗರೆದ್ದ ದಸಿ ಮೊನೆ ಶೂಲ ರುಘಗಳನಾಗಿಸುವ ಹೇರಿಟ್ಟ ಮರುಳುಗೈಗಳುಗುಳುತಿರ್ದುವು ಕೆಂಗಿಡಿಗಳ (ಕಂಠೀ. ೦೦-೦೩೦). ೨. ಉಬ್ಬು ; ಸಂತೋಷಪಡು : ನೆಗಹಿ ಪುಳಕಾಂಬುಗಳ ಲೋಚನ ಬಿಗಿದು ಹೊಗರೆದ್ದಾಗ ಹಿಮ್ಮಡಿಗೊಗುವ ಕೇಶದ ಬಾಲೆ ಭಾಮಿನಿ ನೆನೆದಳಚ್ಯುತನ (ಕುಮಾ.ಭ. ೬೦೩. ೦೬-೨೩); ಬಲಸಂಘಾತಕಭಯವನಿತ್ತು ಬಾಣವ್ರಾತವನು ಹೊದೆಗೆದಱೆ ಹೊಸ ಹೊಗರೆದ್ದನಡಿಗಡಿಗೆ (ಕುಮಾ.ಕ. ೦೩-೨೨). ೩. ಉದ್ದೀಪನಗೊಳ್ಳು ; ಹೆಚ್ಚಾಗು : ಅಧಿಕವಾಗು : ಹೃದಯದಲಿ ಹೊಗರೆದ್ದುದುರಿ ಬಳಿಕಾ ದಶಾನನನ (ತೊರರಾ. ೩-೬-೦೩) ; ಬೊಬ್ಬಿರಿಯೆ ವೀರಧ್ವನಿಯಿಂದ ತರುಗಿರಿ ಹಬ್ಬಿ ಮುಂಚೂಣಿ ಉರಿ ಹೊಗರೆದ್ದು ಸುತ್ತೆ (ಶಿವಾ. ೬೭-೫). [ಪೊಗರ್ + ಏೞ್$_1$]

**ಪೊಗರೊಗು, ಹೊಗರೊಗು** (ಕ್ರಿ). ೧. ಕಾಂತಿಯನ್ನು ಹೊರಸೂಸು,—ಚೆಲ್ಲು : ಮುಗುದೆಯೊರ್ವಳು ನೀರನೆಱೆವುತ ಪಥಿಕನ ಪೊಗರೊಗುತಿರ್ದ ಪಲ್ಲುಗಳ ಸೊಗಸುವ ದಾಡಿಮಬಿತ್ತೆಂದು ಶುಕನಿಗೆ ವಿಗೆ ತೋಱೆ ನಗುವರಬಲೆಯು (ಕರ್ಣಾ. ೧-೬೦) ; ಗಗನವಡರ್ದ ಸೌಧಂಗಳ ಮರೀಚಿಯಿಂ ಪೊಗರೊ[ಪಾಠಾಂ. ರು]ಗುವ ಪೊಚ್ಚಪೊಸ ಪೊನ್ನ ಕೋಟೆಗಳ ಕಾಂತಿಗಳ್ಬೆದೆ ಮುಸುಕಿಕೊಂಡೆಸೆದಿರ್ದುದರ್ಜುನನ ಕಣ್ಗೆ ಕೌತುಕವಾಗಲು (ಕೃಷ್ಣ. ೦೬-೬). ೨. ಹೆಚ್ಚಾಗು ; ಅಧಿಕವಾಗು : ಪೊಗರೊಗುವ ಕಟ್ಟಲೆಗೆ ಕಣ್ಗಳಂ ಮುಚ್ಚುತುಂ (ಅದ್ಭುಟ. ೦೦-೦೨೬). **ಹೊಗರೊಗು :** ೧. ಹೊಗರೊಗುವ ಸೂನಿಗೆಯ ಸುಮತಾಳಿಗಳ ಸಿಂಧದ ಹೊಳೆವ ಹೊಂಗಂಬುಗೆಯ . . . ಅಗಿವ ಚೀತ್ಕಾರದ ಥಡಾಳದ ವಿಗಡ ರಥಿಕರ ರಹಿಯ ರಥವಾಜಿಗಳ ನೋಡೈ ಪಾರ್ಥ (ಕುಮಾ.ಭೀ. ೩-೦೯) ; ಹೊಗರೊಗುವ ದಾಡೆಗಳ ದಳ್ಳಿಸುವ ಗದುಮೋಱೆಯ ಕೆಂಪಡರ್ದ ವಿಸಾಸೆಗಳ ಕೆಂಗಣ್ಣುಗಳ ಮುಪ್ಪುರಿಗೊಂಡ ಹುಬ್ಬುಗಳ . . . ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ತೊರಾ. ೬-೦೩-೬). [ಪೊಗರ್ + ಒಗು$_1$]

**ಪೊಗರೊಗೆ** (ಕ್ರಿ). ಕಾಂತಿಯು ಸೂಸು ; ಪ್ರಕಾಶವು ಹೊಮ್ಮು : ಕಾಮಿನಿಯು ನಿಡುಜಡೆ ರಂಜಿಸಿದುದು ಪೊಗರೊಗೆಯೆ ವಿಜೃಂಭಿಸುವಂಗಜ ನೃಪನ ಮಸೆದ ಸುರಗಿಯ ಮಾಗಿಂ (ಅದ್ಭುಟ. ೯-೦೧೩). [ಪೊಗರ್ + ಒಗೆ$_1$]

**ಪೊಗರ್ಗಣ್, ಹೊಗರುಗಣ್ಣು** (ನಾ). ಹೊಳಪಿನಿಂದ ಕೂಡಿದ ಕಣ್ಣು: ಕಾಂತಿಯುಕ್ತವಾದ ಕಣ್ಣು : ಪೊಗರ್ಗಣ್ಗಳ ಪೊಳೆವಲರ್ಗಣ್ಗಳ ಬೆಳತಿಗೆಗಣ್ಗಳ ಬೆಳ್ದಾವರೆಗಣ್ಗಳ ಸೊಗಯಿಪ ಸೊರ್ಕುಂಗಣ್ಗಳ ಸುದತಿಯರೀಕ್ಷಿಸಿದರ್ ನೃಪನ (ಜಯನ. ೦೦-೩೪). **ಹೊಗರುಗಣ್ಣು :** ಹೊಗರುಗಣ್ಣು, ನಿಗುರಿದ ಕಿವಿ ಹಗುರುಮೈಯ್ಯ ಚಿಗುರೆಯು ಎರಡೆ ದಿವಸ ಕೂಡಿ, ಬೇಡಿ ತಿಗುರಳಿದಿತು ಚಿಗುರೊಲು (ಶಾಹೀ. ೨೬-೦). [ಪೊಗರ್ + ಕಣ್]

**ಪೊಗರ್ಗಣೆ, ಹೊಗರುಗಣೆ** (ನಾ). ಕಾಂತಿಯುಕ್ತವಾದ ಬಾಣ : ಹೊಳಪಿನಿಂದ ಕೂಡಿದ ಸರಳು : ಉಬ್ಬಿದುದು ಮೈ ರೋಷದಿಂದೆ ಗಂಟಿಕ್ಕಿದುವು ಪುಬ್ಬುಗಳ್ಪಭ್ರುವಾಹುಗೆ ತೆಗೆತೆಗೆದಿಸುತ ಬೊಬ್ಬಿಱಿದನನು ಸಾಲ್ವನಂ ಮುಸುಕಿದುವು ಕೋಟಸಂಖ್ಯೆಯ ಪೊಗರ್ಗಣೆಗಳು (ಜೈಮಿ. ೨೨-೦೧). **ಹೊಗರುಗಣೆ :** ಘೃತಲೇಪನದ ಬಂಧದ ಹೊಗರುಗಣೆ ಹೂಳಿದುವು ಗುರುಸುತನಬಿನಂಬುಧಿಯ (ಕುಮಾ.ಕ. ೩-೫). [ಪೊಗರ್ + ಕಣೆ$_1$]

**ಪೊಗರ್ತೆ** 'ಪೊಗಟ್ತೆ' ನೋ.

**ಪೊಗರ್ತೆವಡೆ** 'ಪೊಗಟ್ತೆವಡೆ' ನೋ.

**ಪೊಗರ್ತೆವೆಱು** 'ಪೊಗಟ್ತೆವೆಱು' ನೋ.

**ಪೊಗರ್ವಟ್ಟು** (ನಾ). ಕಾಂತಿಯ ವೃತ್ತ,—ಬಿಂಬ; ಶೋಭೆಯ ಮಂಡಲ: ಪೊಗರ್ವಟ್ಟಿನತನುಬಾಣದ ಪೊಗರಂ ನುಣ್ಪುಗರೊಳ್‌ಟಿಸಿ ನೋಡಿದ ಕಣ್ಣಿಣ್ಣುಗುಮೆನಿಪ ನುಣ್ಪಿನಿಂದೇಂ ಸೊಗಯಿಸುವುವೊ ಬಾಹುಮೂಲಮಾ ಕಾಮಿನಿಯಾ (ಜನ್ನಕ. ೩-೬೮); ಸಿಡಿಲ್ದುಗುತುದುವು ಪುಷ್ಪಸಾಯಕಂಗಳ ಪೊಗರ್ವಟ್ಟು ಚಂದ್ರಿಕೆಯ ಬಿಟ್ತಿಳಮಿಂಚಿನ ತತ್ತಿ ತಾರಕಂಗಳ ಮಱಿಯೆಂಬ ವಾರಿಧರವಾರಣವೇಣಾವರಾಹವಹೌತ್ತಿಕಂ (ಜಗ. ೦೬-೨೪). [ಪೊಗರ್ + ಬಟ್ಟು]

**ಪೊಗರ್ವಟ್ಟೆ** (ನಾ). ಹೊಳಪಿನಿಂದ ಕೂಡಿದ ಬಟ್ಟೆ,—ವಸ್ತ್ರ : ರಾಂತಕ್ಕೆ—ಕುಳಿಗಾರ್ಗಳ, ಬೆಳರ್ಗಂಪು . . . ಪೊಗರ್ವಟ್ಟೆ, ಬೆಮರ್ವಣಿ, ಅಲಙ್ಕೊಂಪಂ, ಕದಿಱೊರ್ನ್ನಂ (ಕರಾಜ. ೪೩ ಪ್ರಯೋ); ತಳಿರ್ಗಂಪು, ಬೆಳರ್ಗಂಪು . . . ಪೊಗರ್ವಟ್ಟೆ (ಶಬ್ದಮ. ೬೩ ಪ್ರಯೋ). [ಪೊಗರ್ + ಪಟ್ಟೆ$_1$]

**ಪೊಗರ್ವಡು** (ಕ್ರಿ). ೧. ಪ್ರಕಾಶವನ್ನು ಹೊಂದು,—ಪಡೆ; ಕಾಂತಿಯುಕ್ತವಾಗು : ಸೊಗಯಿಸ ತೋಳ ಮೊತ್ತಮೊದಲೊಳ್ ಪೊಗರ್ವಟ್ಟೆಸೆವೊಂದು ನುಣ್ಪು ಸಾವಗಿಸುವ ಮೇಲಾದಂ ಮೊಲೆಗಳ್ಕೆಱೆಯುತ್ತಿರೆ . . . ಘಟ್ಟಮುಗುಳ್ಚುವ ಘಟ್ಟವಳ್ತಿಯಂ ಭೋಂಕನೆ ಕಂಡು (ಕುಕಥಾ. ೯-೩೯), ಅಗಲದ ರೇಖಾತ್ರಯದಿಂದಗಲದ ಪೊಗರ್ವಟ್ಟ ಬಂಧುರಚ್ಛವಿಯಿಂ ಕಂಬುಗಳಂ ನಗುವಂತಿರೆ ಕಂಬುಗಳಂ ಕರಮೆಸಗುವಮಾ ಮಣಿಕ್ಕತಿಸತಿಯಾ (ಪುಲಿಕಾ. ೯-೯೯). ೨. ಚೆಲುವನ್ನು ಹೊಂದು : ಸೊಗಯಿಸಿ ತೋರ್ಪ

ಸೋಗೆಸೊರಲೊಳ್ ಪೊಗರ್ವಟ್ಟಿಸದಿರ್ಪ ಕರ್ಪು ... ಮನಂಗೊಳೆ ಬೆಳ್ವ ನಾಳ್ದುದೀ ನಗವನರಾಜಿಯೊಳ್ ಸುಬ್ಬಿಯುತಿರ್ಪ ವಿಚಿತ್ರಶಿಖಂಡಿಮಂಡಲಂ (ಶಾಬ್ದ.ಶ. ೬೦೯). [ಪೊಗರ್+ಪಡು$_1$]

**ಪೊಗರ್ವಡೆ** (ಕ್ರಿ). ಕಾಂತಿಯುಕ್ತವಾಗು ; ಪ್ರಕಾಶಮಾನವಾಗು : ತೋರ್ಪ ಕಣಿಯುಲ್ಲ ಪರುಷದ ಕಣಿಗಳಗ್ರದಿ ಪೊಗರ್ವಡೆದ ರತ್ನಂಗಳಿಯ್ದ ಚಿಂತಾರತ್ನಮಾರ್ಪ ಬೆಳೆದಿರ್ಪ ತರುಗಳ್ ಕಲ್ಪತರುಗಳಲ್ಲಿ ಗಿರಿಸಾನುವಿಂದೆ ...ಕೈಲಾಸಪರ್ವತಂ ಕಣ್ಗೆಸೆದುದು (ಶಂಪ. ೨-೦೦) ; ಉಡುರಾಜಮಂಡಲಂ ಶಂಖವರ್ಣಂ ಪೊಗರ್ವಡೆದ ಕೌಮುದಿಯಾಗೆ ರಾತ್ರಿಲಕ್ಷ್ಮಿಯ ಭಾವಮಡಸಿ ಕಣ್ಗೆಸೆದುದು (ಶಂರಕಾ. ೨-೬). [ಪೊಗರ್ + ಪಡೆ$_1$ ]

**ಪೊಗಸು** (ನಾ). ೧. ಬೆಳಗಿನ ಜಾವ ; ಮುಂಜಾವ ; ಪ್ರಾತಃಕಾಲ : ನಿನ್ನ ಮೊಲಗಟ್ಟಿಲೆಗಾಂ ಬೆಱಗಾಡೆನೆಂದು ಪೇೞ್ಗೆಳೊ ಬಯ್ಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ (ಅಂಪ. ೩-೬೩) ; ವಿಮಲ ಪ್ರಗುಣಾನುಪಶಾಂತಕಾಮಂ ಪೊಗಸಿನ ಚಂದ್ರಂಬೊಲಿರ್ದನಾ ಶ್ರೀಚಂದ್ರಂ (ಅರ್ಥಶೀ. ೯-೩೨) ; ನಸುನಗೆ ಮಿಸುಗುವ ಮೊಗಮೋಕ ಪೊಗಸಿನ ಶಶಿಯಂತೆ ಕಳೆಗುಂದಿದುದು (ಶೀಬಾಸಂ. ೮-೭೦). ೨. ಹಗಲು : ನಿನ್ನೊಳಿರುಳುಂ ಪೊಗಸುಮೆಟ್ಟಿ ಪೊಗೆ ಗುಡುಗುಗಳಿನ್ ಆ ಬೇವ ಬೆಂಕೆ ಒಳಗನಿತಿರ್ಕು ಮೆಂಬುದು ! (ಅಕ್ಕ. ೩೨-೭೨೯).

**ಪೊಗಳ್** 'ಪೊಗೞ್$_1$' ನೋ.

**ಪೊಗಳಿಕೆ** ‘ ಪೊಗೞ್ಕೆ ’ ನೋ.

**ಪೊಗಳಿಸು** ‘ ಪೊಗೞಿಸು ’ ನೋ.

**ಪೊಗಳು** ‘ ಪೊಗೞು$_1$ ’ ನೋ.

**ಪೊಗಳ್ಕೆ** ‘ ಪೊಗೞ್ಕೆ ’ ನೋ.

**ಪೊಗಳ್ತೆ** ‘ ಪೊಗೞ್ತೆ ’ ನೋ.

**ಪೊಗಳ್ತೆವಡೆ** ‘ ಪೊಗೞ್ತೆವಡೆ ’ ನೋ.

**ಪೊಗೞ್$_1$**, **ಪೊಗಳ್**, **ಪೊಗಳು**, **ಹೊಗಳ್**, **ಹೊಗಳು$_1$** (ಕ್ರಿ). ೧. ಕೊಂಡಾಡು ; ಬಣ್ಣಿಸು ; ಸ್ತುತಿಸು : " ಪೊಗೞ್–ಸಂಸ್ತವನೇ " (ಶಬ್ದಾನು) ; ಮಾದಕ್ಷಿಣಾಪಥಬಹುಶತಹವನಾಹವದು[ಳ್] ಪಶುಪ್ರದಾನ ಶೌರ್ಯೋರ್ದ್ಯಮಭರಿತೋ[ನ್ನಾನ]ಪಶುಪತಿಯೆನ್ದು ಪೊಗೞ್ಪ್ಪಟ್ಟಣ ಪಶುಪತಿ ನಾಮಧೇಯನಾಸರಕ್ಕೆಲ್ಲಭಟರಿಜಾ ಪ್ರೇಮಾಲಯಸುತನ್ಗೆ (ಪ್ರಕಶಾ. ೦೯೩೬, ೧೬-೮ ; ಶಾ. 450) ; ಪೞಿಗೆ ಮೇಣ್ಪೊಗೞ್ಗೆ ಮೇಣ್ ನೆಪವಿಲ್ಲದೊಡಿಂತು ಕೈಗಟೆಯೆ ಬಗ್ಗಿಸುಗೆ ಮೇಣ ವರೆಲ್ಲರುಮಂತುಮಾನು ಜೀವನಲ್ಲಂ (ಕಂಶಾ. ೦-೦೩೬) ; ನೀನ್ನಿನ್ನ ನೃಪನ ದಿಗ್ವಿಜಯೋನ್ನತಿಯಂ ಪೊಗೞ್ದು ಮಾರ್ಭಿಪೊಪ್ಪೆ ಪೊಗೞ್ದುಂ ನೀನ್ನಿನ್ನ ಮನದೊಳೀಶಿದು ಬನ್ನಮನೆತ್ತುಪಪೊಲಾಯ್ತು ನಿನ್ನಮನಿಪನಾ (ಅಂಪ. ೦೯-೬೬). **ಪೊಗಳ್**: ೧. ತಮ್ಮದೊಂದರ್ಕ(ಬ್ಬ)ಬೀಂದಂ ಪೊಗಳಲ್ (ಎಕ XIII, ೩೩೦-೮; 920); ರಾಜಕುಲದೀಪಕನ ರೂಪು ಸೌಂದರ್ಯಮನೇನೆಂದು ಬಣ್ಣಿಪೆಂ ಎಂತು ಪೊಗಳ್ದಪೆಂ (ಶಂಪರ. ೯-೨೦) ; ಹದಿಬದೆಯರ ಪೆಸರ್ಗೊಂಡು ಪೊಗಳ್ವುದು ವಿದಿತವ್ಯಸಲೆ ವ್ಯದೀಲಗೆ (ಜರಾ. ೨-೧೩). **ಪೊಗಳು** : ೧. ಆ ಸತಿಯ ರೊಲಿದು ಬಲಗೊಂಡಱಗಿ ಪೊಗಳುತಿರ್ಪಾ ಸಮಯದೊಳು . . . ಸಿರಿ ಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೩೬) ; ಸುಜ್ಞಾನ ದಿಂದಱಿದು ಪೊಗಳತೊಡಗಿದನು ಸೌಂದರಕವರನು (ಸೌಂದಪು. ೩-೦೬) ; ಪರಮಪತಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ ಪೊಗಳುವೆನು (ಹರಿ. ೦-೯೬). **ಹೊಗಳ್** : ೧. ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ ಸೊಗಯಿಸುವ ಘನವ್ಯಪಾರೂಢ ಕೂಡಲಸಂಗ (ಬಸವ. ೩-೯೩). **ಹೊಗಳು$_1$** : ೧. ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ ಹೊಗಳಿ (ಬಸವ. ೩೮) ; ತೆಗೆಸು ದಳವನು ಸಾಕು ಬಱದೇ ಹೊಗಳುತಿಹ ನೀ ನಮ್ಮನು (ಕುಮಾರವ್ಯಾ. ೦೩-೯); ಅಗಣಿತವಿದ್ಯಾಧಿಕರು ಬಂದಲಸದೆ ಹೊಗಳಿದರಬುದಾಂಬಕನ (ಶೋಹಶ. ೯-೬೦); ಹೊಗಳಿ ಮಾರಬೇಕು, ತೆಗಳಿ ಕೊಳ್ಳಬೇಕು (ಗಾದೆ). ೨. ನಿರ್ಧಾರವಾಗಿ ಹೇಳು ; ವಿವರವಾಗಿ ಹೇಳು : ಧರ್ಮಜ ಹೊಗಳು ಹೊಣೆಯನು ಮಚನಿಸೊಡ್ಡವನಿದು ವಿನೋದವಲೆ ಟಗೆವಡೊಂದೇ ಹಲಗೆ ಮೇಲಣ ದುಗುಣ ಸಲ್ಲದು (ಕುಮಾ.ಶ. ೦೬-೯೬); ಮನೆಯನ್ನು ಎರಡನೆಯ ಭೋಗ್ಯಕ್ಕೆ ಕೊಟ್ಟಾಗ ಭೋಗ್ಯಪತ್ರದಲ್ಲಿ ಮೊದಲ ಭೋಗ್ಯವನ್ನು ಹೊಗಳಿ ಬರೆಯಬೇಕು (ಕಾಶ).

**ಪೊಗೞ್ ಪಡು** = ಹೊಗಳಿಸಿಕೊಳ್ಳು : ಸುಬ್ರಾಹ್ಮಣನಾಗಿದರ್ಪಂ ಸುಬ್ರಾಹ್ಮಣನಿಂದೆ ಪೊಗೞ್ವಟ್ಟುಂ ಮತ್ತಂ ಸುಬ್ರಾಹ್ಮಣತ್ವಮಾ ನೀಂ ನಿರ್ಬ್ರಹ್ಮಂ ಕಿಡಿಸಿ ಸವಣನಾದ್ಯೆ ಮರುಳೇ (ಧರ್ಮಪ. ೬-೬೬).

[ ದೇ. ॥ ತಮಿ. ಪುಕೞ್ ; ಮಲ. ಪುಗೞು ; ತುಳು: ಪೊಗಳು, ಪುಗಳು ; ತೆಲು. ಪೊಗಡು, ಪೊವಡು ]

**ಪೊಗೞ್$_2$**, **ಹೊಗಳು$_2$** (ನಾ). ಸ್ತುತಿ ; ಕೊಂಡಾಟ ; ಪ್ರಶಂಸೆ : ಱಟಕ್ಕೆ –ಪೋೞ್, ಬೀೞ್ . . . ನೆಗೞ್, ಪೊಗೞ್, ತೆಗೞ್ (ಶಬ್ದಮ. ೯೮ ಸೂ). 'ಪೊಗೞುಲಿ' ಪರಾ. **ಹೊಗಳು$_2$** : ದೂರನ್ನು ಎದುರಿಗಾಡು, ಹೊಗಳನ್ನು ಹಿಂದಾಡು (ಗಾದೆ). [ < ಪೊಗೞ್$_1$ ]

**ಪೊಗೞಿಸು**, **ಪೊಗಳಿಸು**, **ಹೊಗಳಿಸು** (ಕ್ರಿ). ಸ್ತುತಿ ಮಾಡಿಸು ; ಪ್ರಶಂಸೆ ಮಾಡಿಸು : ಮಾನಧನಾ ಪೊಗೞಿಸಲೇಂ ದಾನಿಯ ನೀನುಂತೆ ನಿನ್ನ ಕಸವರಮೊಂದುಂ ದೀನಾನಾಥರ ಕೆಯ್ಯದು ದಾನಿಯದೆಂತೆಂಬುದಿಂತು ಹೇತ್ವಾಕ್ಷೇಪಂ (ಕವಿರಾ. ೩-೦೦೩) ; ಬಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗೞಿಸಿದಂ (ಶಂಕಶಾ. ೩-೯೮); ತುಂಬಿಯಿಂದಂ ಗಿಳಿಯಿಂದಂ ಬೀರಮಂ ಪಾಡಿಸಿ ಪೊಗೞಿಸುವಂ ಚೈತ್ರದೊಳ್ ಚೈತ್ರಮಿತ್ರಂ (ಜಗಪು. ೦೪-೯೦). **ಪೊಗಳಿಸು** : ಮನಮೊಲ್ದಾಗ್ಗಿರೀಯನಾರಿಂ ಪೊಗಳಿಸನವನೀಮಂಡನಂ ವೀರಲಕ್ಷ್ಮೀಸ್ತನಹಾರಂ ವಾಜಿವಂಶಾಂಬರಹಿಮಕಿರಣಂ . . . ನಾಗವರ್ಮ್ಮ (ಕಾಂಧೀಶ್. ೩-೦೭ ; 1047); ಶಿವನಾಜ್ಞೆಯಂ ಸಂಪಾದಿಸಲು ಪಾಲಿಸ ಲಖಿಳರಂ ಭೇದಿಸಲು ಲೋಕಂಗಳಂ ಪೊಗಳಿಸಲು ನೆಗಳಿಸಲು ಈ ಮಣಿಹ ವಾಗಿಳೆಗೆ ಬಂದ ಮಹಾಮಹಿಮ ಹರಮೂರ್ತಿ (ಬಸಪು. ೩೬-೯೨). **ಹೊಗಳಿಸು** : ಅರಸ ಕರ್ಣಚ್ಛೇದವೇ ಜಯಸಿರಿಯ ನಾಸಾಚ್ಛೇದವಿನ್ನ ರವರಿಸದಿರು ಹೊಯ್ದಾಡಿ ಹೊಗಳಿಸು ಬಾಹುವಿಕ್ರಮವ (ಕುಮಾ.ಶ. ೦-೦೬).

[ಪೊಗೞ್$_1$ + — ಇಸು$_2$]

**ಪೊಗೞುಲಿ** (ನಾ). ಹೊಗಳಿಕೆಯ ಮಾತು ; ಕೊಂಡಾಟದ ನುಡಿ : ಮಗಮಗಿಸುತ್ತುಮಿರ್ಪ ನಱುಸುಯ್ಗಲರ್ವಕ್ಕಿ ಜನುಂಗುತಿರ್ಪನಂ ಬಗೆಗೊಳೆ ಬಂದು ನಿಂದು ನೆಱೆದಗ್ಗದ ನೀಱೆಯರೊಲ್ದು ಪರ್ವಾ ಪೊಗೞುಲಿ ಪೊಣ್ಮೆ ಬಿತ್ತರದೆ ಮುತ್ತಿನ ಸೇಸೆಯನಾಗಳಿಕ್ಕಿದರ್ (ಕಬ್ಬಿಗಕಾ. ೩೯೨). [ಪೊಗೞ್$_2$ + ಉಲಿ$_2$]

**ಪೊಗೞ್ಕೆ**, **ಪೊಗಳಿಕೆ**, **ಪೊಗಳ್ಕೆ**, **ಹೊಗಳಿಕೆ**, **ಹೊಗಳ್ಕೆ** (ನಾ). ಕೊಂಡಾಟ ; ಪ್ರಶಂಸೆ : 'ಪೊಗೞ್ಕೆವೆಱು' ಪರಾ. **ಪೊಗಳಿಕೆ** : ಎನ್ನ ಜಿಹ್ವೆಗೆ ಮೊಳಗುವಂದದಿ ನಿನ್ನ ನಾಮಾವಳಿಯ ಪೊಗಳಿಕಯಿತ್ತು ರಕ್ಷಿಸು ನಮ್ಮನನವರತ (ಹಂಪಾ. ೨೦) ; ಪೊಗಳಿಕೆಗೆ ಹಿಗ್ಗಲೊಲ್ಲದೆ, ತೆಗಳಿಕೆಗೆ ಕುಗ್ಗಲಾರದೆ, ಲತೆ ಫಲಕೆ ಸಿಗ್ಗಲೇಕೆ ? (ಗೀಪು. ೦೦೯-೯೦). **ಪೊಗಳ್ಕೆ** : ಮುನಿಗಳ ಪೊಗಳ್ಕೆಯುಡಲೆಗೆ ಕೆಲದವನಿನಂದನೆಯ ಮೊಗ ನೋಡಿ ನಸುನಗುತಾ ರಘೂದ್ವಹಂ . . . ಮುಂ ನೆರೆದ ಸಭೆಗಿಂತೆಂದನು (ಶ್ರೀರಾಕು. ೩-೯೦). **ಹೊಗಳಿಕೆ** : ಹೊಗಳಿಕೆಗೆ ಹೊಱಗಾದರೈವರು ವಿಗಡರ ದರೊಳಗಿಬ್ಬರಳಿದರು ಹಗೆಗಳುೞಿದಿರಿ ಮೂವರೆಂದನು ಭಾನುಸುತ ಮುಳಿದು (ಕುಮಾ.ಳ. ೯-೦೬) ; ನೋಟಕರು ಹೊಗಳಿಕೆಯ ಪರಿಪರಿಯ ಕೈವಾರಿಗಳು ನೆರೆದುದು ನಿಮ್ಮಯೋಧ್ಯಾನಗರದಧಿರಾಜೇಂದ್ರಚಂದ್ರಮನಶ್ವಮೇಧದಲಿ

(ಶೂರಶಾ. ೦-೭-೨೩). ಹೊಗಳ್ಕೆ : ಣೂ—ಸ್ತವನೇ, ಹೊಗಳ್ಕೆಯೊಳ್ (ಶಾಶಕ್ಕ. ೨೩೦). [ಪೊಗಟ್$_1$ + — ಕೆ]

**ಪೊಗಟ್ಕೆವೆಱು** (ಕ್ರಿ). ಪ್ರಶಂಸೆಯನ್ನು ಪಡೆ : ಅಂತು ಪೊಗಟ್ಕೆವೆತ್ತ ಒಡ್ಡಾಯನವುಹಾರಾಜಂಗೆ ಪಟ್ಟದರಸಿ ಪ್ರಭಾವತಿಯೆಂಬಳ್ (ಧರ್ಮಾಮೃ. ೪-೦೩). [ಪೊಗಟ್ಕೆ + ಪೆಱು$_1$]

**ಪೊಗಟ್ತೆ, ಪೊಗರ್ತೆ, ಪೊಗಳ್ತೆ, ಹೊಗರ್ತೆ, ಹೊಗಳತೆ, ಹೊಗಳ್ತೆ** (ನಾ). ಹೊಗಳಿಕೆ ; ಕೊಂಡಾಟ ; ಪ್ರಶಂಸೆ : "ಪೊಗಟ್ತೆಯೆನೆ ಕೀರ್ತನಾಖ್ಯಂ" (ಶಂಶೀಅ. ೭) ; ಗುರುಗಳ ಪೊಗಟ್ತೆಗೆ ರಾಗಿಸಿ ಸಂತೋಸಂಬಟ್ಟರ್ದೊಡೆ (ಚನ್ನಶಾ. ೬೨-೨೪) ; ನೆಗಟ್ತೆವೆತ್ತ ಪತಿಭಕ್ತಿಯ ಮೈವೆಯ ಮಾನಸಿಕ್ಕೆಯುಗ್ಗಲದ ಪೊಗಟ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ (ಅಂಡ. ೦-೭೨) ; ಇನ್ತು ಜನಂ ಪೊಗಳೆ ಪೊಗಟ್ತೆಗಂ ನೆಗರ್ತ್ತೆಗಂ ತಾನೆ ನೆಲೆಯಾಗಿ (ಎಕ. XI, ಚಿತ್ರದು. ೩೪-೨೩ ; 1128) ; ಜನಮನೋಹರಮಾಗಿ ಪೊಗಟ್ತೆಗೊಪ್ಪುವುಪ್ಪರಿಗೆಗಳಿಂ ನೆಗಟ್ತೆವಡೆದಿರ್ದುದು ಸೌಂದರರಾಜ ಮಂದಿರಂ (ರಕಕು. ೮-೨೩೭). **ಪೊಗರ್ತೆ** : ಇನ್ತಾ ಪೊರ್ಗ್ಗಗರ್ತ್ತೆ(ಟ್ತೆ)ಗಡ ಪ್ಪಾರ್ದ ಮಹಾಮಹರ್ (ಎಕ. XIII, ೩೨-೬೨ ; 928) ; ಅಜ್ಞಾನ ಪೊಗರ್ತೆಯಿಂ ಶಾಸ್ತ್ರಜ್ಞ ನೃಪಾಳಿ[ಯು]ಪದೇಶವೆಂಬಾತೆ ಕರಂ ಪ್ರಾಜ್ಞಂಗೆ ಬಗೆದು ನೋಡೆ ಮನೋ[ಜ್ಞ]ಗೆ ಪ್ರಣಯಾನುರಾಗಮಂ ಪುಟ್ಟಿಸುಗುಂ (ವರ್ಧಮಾ. ೦-೦೭) ; ರೂಪಿನ ಪೊಗರ್ತೆಯುಂ ಸಹಜದ ನೆಗರ್ತೆಯುಮಂ ಕೇಳ್ದು (ಬಂಹೂ. ೮-೩೨ ಪ). **ಪೊಗಳ್ತೆ** : ಕಾಳಗಾಮುಣ್ಡನ ಮಗ ಕಲ್ಲಣ . . . ಪೊಗಳ್ತೆಗಂ ನೆಗರ್ತ್ತೆಗಂ ನೆಲೆಯಾಗಿ ಕಾದಿ (ಎಕ. VIII, ಸೊರಬ. ೪೪೩-೬ ; 975 ?) ; ಅನ್ತು ಪೊಗಳ್ತೆಗಂ ನೆಗಳ್ತೆಗಂ ಜನ್ಮಭೂಮಿಯಾಗಿ (ಎಕ. VI. ಕಡೂರು. ೬೯-೪ ; 1160) ; ತ್ರಿಲೋಕಶರಣಂ ಶರಣಾಭರಣಂ ಸಮಸ್ತಮುಕ್ತಾಪರಣಂ ಎಂಬ ಪೊಗಳ್ತೆಗೆ ಮಿಗಿಲೆನಿಸಿ ಸೆಱೆ ಮೆಱೆವ ಶಿವನ ಪುಣ್ಯಾಗಣ್ಯ ಲಾವಣ್ಯಮುಮುಸುಕುಮಾರಾಮಯಮಂಗಳಂ ಕಂಡು (ಗಿರಿಕ. ೦೦-೬೦ ವ). **ಹೊಗರ್ತೆ** : ಹೊಗರ್ತ್ತೆಯಂ ತಳೆದು (ಶೂಂಕಶಾ. ೦೯೩೦. ಶಾಗೀಪಾಡಿ. ೦೦೪-೯೩ ; 1168). **ಹೊಗಳತೆ** : ಕೂಡಲಸಂಗಮದೇವಾ ನೀನೆನಗೊಳ್ಳಿದನಾದರೆ ಎನ್ನ ಹೊಗಳತೆಗಡ್ಡ ಬಾರಾ ಧರ್ಮಿ (ಬಸವ. ೩೮೭) ; ನಿಶ್ಶಬ್ದಂ ಬ್ರಹ್ಮ ಉಚ್ಚರತೆ ಎಂಬ ಘನವು ಹೊಗಳತೆಗೆ ಸಿಕ್ಕುವುದೇ ಎಲೆ ಮರುಳುಗಳಿರಾ (ಅವಕಂ. ೨೩೨-೦೦೪೮). **ಹೊಗಳ್ತೆ** : "ಸ್ತವನಂ, ಸ್ತವನೀಯಂ . . . ಸ್ತುತಂ, ಸ್ತೋತವ್ಯಂ, ಈ ೭ ಹೊಗಳ್ತೆ" (ಶಾಶಕ್ಕ. ೦೭೪) ; ಹೊಗಳ್ತೆಗವಗ್ಗಳವೆನಿಸಿದ (ಶೂಂಕಶಾ. ೬೯೩೩. ರಾಚಶಿಕ್ಷಾರ್. ೨೬-೦೦ ; ?).

[ಪೊಗಟು$_1$ + — ತೆ$_2$]

**ಪೊಗಟ್ತೆವಡೆ, ಪೊಗರ್ತೆವಡೆ, ಪೊಗಳ್ತೆವಡೆ** (ಕ್ರಿ). ಹೊಗಳಿಕೆಯನ್ನು ಗಳಿಸು : ಪ್ರಶಂಸೆಯನ್ನು ಹೊಂದು : ಅಂತು ಪೊಗಟ್ತೆವಡೆದಾ ಮಹಾದೇವಿಯೊಳಾ ಮಹಾನುಭಾವನೇಕಭಾವದೊಳನಂಗಸಾಮ್ರಾಜ್ಯಸುಖಮನನುಭವಿಸಿ (ಆಚಪು. ೨-೪೭ ಕ) ; ಮತ್ತಮೆಲ್ಲರೊಳಂ ಬಲ್ಲರೆನಿಸಿ ಎಲ್ಲಾ ನಾಡೊಳಂ ಪೊಗಟ್ತೆವಡೆದು ಮೆಲ್ನುಡಿಗರ್ ಅಱಿವರ್ (ಕಕವಂ. ೦೪೪-೦). **ಪೊಗರ್ತೆವಡೆ** : ಅಂತು ಪೊಗರ್ತ್ತೆವಡೆದ ಪ್ರಕಾಮಿ ದೇವದಂಡನಾಥ ( ಇಪ. ೦೯೪೭, ಮುಂಡರಗಿಶೀಟಿ. ೩೩೫-೫೭ ; ? ). **ಪೊಗಳ್ತೆವಡೆ** : ಅಂತು ಪೊಗಳ್ತೆವಡೆದೈವತ್ತೊಕ್ಕಲ್ಗಳೀಸ್ವರಾಗಿರ್ದರಂಬರಾಪುರದೀಶಾನದಿಗ್ಭಾಗದೊಳ್ ತೆಲ್ಲಿಗೇಶ್ವರದೇವರ ಪ್ರತಿಷ್ಠೆಯುಂ ತದ್ದೇವಾಯತನಮುಮಂ ಮಾಡಿಸಿದರ್ (ಎಕ. XX. ೦೦೭-೩೭ ; 1167) ; ಆ ಮಹೀಕಾಂತಸುತಂ ಪೊಗಳ್ತೆವಡೆದೊಪ್ಪುತ್ತಮಿರ್ದೊಂದುಶುಭದಿನದಲ್ಲಿ . . . ಪುಗುತಂದ ನಳ್ಕುಱಿಂ (ಶಾಶಿಕಿ. ೪-೦೦೦ ವ). [ಪೊಗಟ್ತೆ + ಪಡೆ$_1$]

**ಪೊಗಟ್ತೆವೆಱು, ಪೊಗರ್ತೆವೆಱು** (ಕ್ರಿ). = ಪೊಗಟ್ತೆವಡೆ : ನಯಮಂ ತಾಳ್ದಿ ಪೊಗಟ್ತೆವೆತ್ತು ಭುವನಕ್ಕಾರಾಧ್ಯಮಾದತ್ತಿಮಬ್ಬೆಯ . . . ಭಕ್ತಿಕ್ರಮಾಕತ್ತಿಮಬ್ಬೆಯ ಗುಣಕ್ಕಾರುಂ ಸಮಂ ಪೋಲ್ವರೇ (ಅಜಿಪು. ೦೨-೦೩) ; ಪೊಗಟ್ತೆವೆತ್ತುಪೊಪ್ಪಂಬಡೆದಯಿರುಪಗದಂಡಾಧೀಶನ ಸತ್ಕೀರ್ತಿಯೆಂತೆಂದೊಡೆ (ಜಿಪಾದ. ೦-೨೯ ವ). **ಪೊಗರ್ತೆವೆಱು** : ಶಿಷ್ಟರು ಪೊರೆವ ಪೊಗರ್ತೆವೆತ್ತ ಬಲಿ ಭಾವಿಪೊಡೀತನೆ ತಾನೆನುತ್ತಮಿಾ ಧರೆ ಮನವೊಲ್ದು ಬಣ್ಣಿಸುವುದೆನ್ತು ಚಮೂಪತಿ [ಸೋ]ವಿದೇವನ (ಎಕ. XX. ೬೪-೦೫ ; 1112) ; ಇನ್ತು ಪೊಗರ್ತ್ತೆವೆತ್ತ ಸುಜನಂಗೆ ಮಹೋತ್ಸವನಾ ಬಸಾತಿಮಯ್ಯಂ ತನಯಂ ಸಮಸ್ತವಿಬುಧಾಶ್ರಯನಾತನ ಧರ್ಮಪತ್ನಿ . . . ಮಾಡಿದ ಪುರಾಕೃತ ಪುಣ್ಯಮನೇಂಪೊಗಳ್ವುದೋ (ಎಕ. IX-i. ೨೦೦-೦೪ ; 1121).

[ಪೊಗಟ್ತೆ + ಪೆಱು$_1$]

**ಪೊಗಿಲ್ಲಿ** (ನಾ). ಒಬ್ಬಾತನ ಹೆಸರು : ಶ್ರೀ ಪೊಗಿಲ್ಲಿ ಸೇನ್ದ್ರಕಮಹಾರಾಜರ್ ನಾಯರ್ಕುಣ್ಡಮುಂ ಜೆಡುಗೂರಾಳ್ಗೆಯಾನಾಳುತ್ತು (ಇಕ. XIX. ೦೪೪-೩ ; ಸು. 680). [ ? ]

**ಪೊಗಿಸು, ಪುಗಿಯಿಸು, ಪುಗಿಸು, ಹುಗಿಸು$_1$, ಹೊಗಿಸು** (ಕ್ರಿ). ೧. ಹೊಗುವಂತೆ ಮಾಡು ; ಪ್ರವೇಶಗೊಳಿಸು ; ಒಳಹೊಗಿಸು : ಈ ಬ್ರಷ್ಟೇತಿಕಾಜಿನನಾರ್ ಪೊಗಿಸಿದರಾರ್ ತಂದರ್ (ವಂಶರ. ೬-೫೩) ; ಹಗೆಯ ಹೆಂಗಳನರಮನೆಗಳೊಳು ಪೊಗಿಸಲಾಗದು (ಕುಮಾರ. ೬-೩೫) ; ಉರಿಗಳೊಳ್ ಪೊಗಿಸುತುಂ ದರಿಗಳೊಳ್ ನೂಂಕುತುಂ (ಶಂಪು. ೫೭-೨೭). **ಪುಗಿಯಿಸು** : ೨. ಒಳಗಿರಿಸು ; ಒಳಗಿಡು : ವಿಪಣಿವೀಧಿಯೊಳ್ ಮಾಲೆಗಾರ್ತಿಯ ರೆತ್ತಿದ ಬೆಲೆವೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕೆದಱಿ ಪರಿಮಳ ಭಂಗಭಯಮನವಳ್ದಿರೊಳ್ ತಗುಳ್ಚಿ ಪಡಲಗೆಯುಂ ಮಗುಱೆ ಪುಗಿಯಿಸಿಯುಂ (ಚಂಪ್ರಪು. ೬-೪ ವ). **ಪುಗಿಸು** : ೧. ಸಮಾಧಿ ಇಲ್ಲಾದೆಱೆ ಪೊನ್ನತ್ತಿಕೊಳೆ ಕೊಟ್ಟ ಒಕ್ಕಲ್ಗೆ ಪೊನ್ನಿಟ್ಟು ಪುಗಿಸಿದಾರ್ (ಎಕ. XIV. ತಿರುಮ. ೨೩೩-೫ ; ಸು. 800) ; ವಿಷಧಿಗಳೊಳಗೊಯ್ದುರ್ದ್ವ ವಿಷಮರಣಾಂಗಣಮನಿರದೆ ಪುಗಿಸುವ . . . ವಿಷಯಸುಖಂಗಳೊಳೆ ತೊಡರ್ದ್ದ ದಿವ್ಯಪುದು ಜಗಂ (ಅಂಪು. ೦೪-೦೨೪) ; ಹುಟ್ಟಿದುದೆಲ್ಲಿ ನೀನುಱೆ ಬೆಳೆದುದು ಬೆಳ್ವೆಟ್ಟ ನೋಡಬಲೆ ಮತ್ತೆವ್ವ ಪಟ್ಟಣದೊಳು ಪುಗಿಸಿತು ಪುಣ್ಯ (ಶರಕ. ೩೩-೦೨೪). ೨. ಎಡದಡಿಯಂ ಪುಗಿಸುವ ಬಲದಡಿಯಂ ಪೊಱಗಿಡುವ ದಂಡೆಯುಂ ನಿಟ್ಟುವ . . . ಬೆಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೭-೯). ೩. ಪ್ರವೇಶಕ್ಕೆ ಅನುಮತಿಯನ್ನು ಕೊಡು : ಅರಸಾಡಿದಂತೆ ನೀನಾಗಿರ ನಿನ್ನಂ ತಂದೆಯೆಂತುಮನೆಯಂ ಪುಗಿಪಂ (ಶಾಕುಂತ. ೭೨-೦೨೭). ೪. ಮುಟ್ಟಿಸು ; ತಲಪಿಸು : ನೀಂ ಪತ್ರಲೇಖೆಯನೊಡಗೊಂಡು ಪೋಗಿ ಕಟಕಮಂ ಪುಗಿಸು (ಕಾದಂಕಾ. ೩೨೪). ೫. ಒಂದುಗೂಡಿಸು ; ಸೇರಿಸು : ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಲಿಗಳನೀ ಬುಧಾಳಿಯೊಳ್ ಪುಗಿಸುವುದೇ (ಕುಸುಮ. ೨-೨೪). ೬. ಹೊಂದಿಸು ; ಅನ್ವಯಿಸು : ವಿಪುಳಯಶೋವಿತಾನಗುಣಮಿಲ್ಲದನಂ ಪ್ರಭು ಮಾಡಿ ಪೂರ್ವಭೂಮಿಪರ ಪದಂಗಳಂ ಪುಗಿಸಿ ಪೋಲಿಪೊಡಿತನುದಾತ್ತ ಪೂರ್ವಭೂಮಿಪರನೊಳ್ಪನೊಳ್ ತಗುಳೆವಂದೊಡೆಯಿಾ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ಟಿಯಾವುದು ಗುಣಾರ್ಣವಭೂಭುಜನಂ ಕಿರೀಟಿಯೊಳ್ (ಶಂಪಶಾ. ೦-೦೪). **ಹುಗಿಸು$_1$** : ೧. ಹುಗಿಸಿದನೆ ಮನೆಗೆತರಪಾಕವನುಗಿಸಿದನೆ ಲಿಂಗಪ್ರಸಾದವನಗಲಿಸಿದನೇ ಕಲಹವಂ ಮಾಡಿಷ್ಟಶಿಷ್ಟರನು (ಬಸಪು. ೪೫-೦೯) ; ನಳಿನನಾಭನು ನಗುತ ಪವಮಂಡಲದ ಶಿಷ್ಟನು ಬರಲಿಯೆನೆ ಬಾಗಿಲಲಿ ಕೈದುವ ಕೊಂಡು ಹು[ಶಾಕಾಂ. ಹೊ]ಗಿಸಿದರಂದು ಸಂಜಯನ (ಕುಮಾರ. ೨-೨೯) ; ಒಳಪುಗಿಸೆ ಹುಗಿಸಿದಳಾ ಸ್ತ್ರೀ ಸಭೆಯಂ ಭರದಿಂದ (ಜಹುಕಾ. ೨-೨೦). **ಹೊಗಿಸು** : ೧. ಅಧ್ಯಶ್ರಮದ ಧಗೆ ಪರಿಹರಿಸೆ ನೀರೊಳು ಹೊಗಿಸಿದನು ಹರಿ ಹಯಚತುಷ್ಟಯವ (ಕುಮಾರದ್ರೋ. ೦೦-೩೪) ; ಬಲುರಕ್ಷಣದ ರಥಾದಿಯನಟ್ಟಿದನು ದೆಸೆದೆಸೆಗೆ ಧಾವಿಸುವ

ನೆಳಲು ಹೊಗಿಸಿದನೆಲ್ಲರನು (ಶಿಶುಗ. ೧೦ ೦೮-೨). ೩. ಸುರರ ಮೆಚ್ಚಿದ ರಾಮ ನೀತನ ಕರೆದು ಗರುಡಿಯ ಮೊಗಿಸಿದನು (ಕುಮಾ.ಕ. ೬-೨); ಗತಸೂನು ವಿಪನೆಂದೆನ್ನ ಹೊಗಿಸರು ಸ್ವರ್ಗವನು ಸುರರು (ಕೊರಣ. ೦-೪-೪). ೪. ತುರಗವರಸನ ಕೊಂಡು ಮಂದರಗಿರಿಯು ಹೊಗಿಸಿತು (ಸಂಕಷ. ೩-೦೭).

**ಪುಗಿಸಿಕೊಳ್** – ಸೇರಿಸಿಕೊಳ್ಳು: ಶರೀರದೊಳ್ ಪುಗಿಸಿಕೊಂಡವನೆಂಬಿನ ವಾದಮುಪ್ಪುತುಂ . . . ಕಾಲ್ಗಳಂ ನೆತ್ತಿಯಲಿಟ್ಟುಕೊಂಡಬುತ್ತಮಿರ್ದಂ (ಶಾರಂಗ. ೭೦೭). [ಪುಗು + – ಇಸು₁]

**ಪೊಗು**, ಪುಗು, ಹುಗು, ಹೊಗು (ಕ್ರಿ). ಪೊಕ್ಕ₁, ಹೊಕ್ಕ (ಭೂತಕೃ). ಪೊಕ್ಕು₁, ಹೊಕ್ಕು₁ (ಭೂತನ್ಯೂ). ೧. ಒಳಸೇರು; ಪ್ರವೇಶಿಸು: ಶ್ವೇತ್ರವಾಹನನ್ ಉದಯಪುರವಾನ್ ಪೊಗುವಲ್ಲಿ ಎಱೆದು ಶ್ವ(ಸ್ವ)ರ್ಗ್ಗ(ರ್ಗ್ಗ)ಲಯಕ್ಕೇಱಿ[ದೊನ್] (ಎ೩. IX. ೦೯-೧೪; ಸು. 800); ಅಯೋಧ್ಯೆಯುನಿದು ಪೊ[ಪಾಠಾಂ. ಪು]ಗದೆ ತಱುಂಬಿ ನಿಂದ ಕಾರಣಮೇನೋ (ಅಂಥ. ೦೪-೭); ತನುವೆರಸಿ ಎಂತು ಪೊಗುವೆಂ ದೇವ ನಿಮ್ಮೊಳಗೆ (ಪಾಂಗಿಲ. ೮೬. ೨೬೮-೦೮); ಕಸ್ಮಾಲಯಕೆ ತಿಂಗಳ ದಿನ ಸವೆಯೆ ಪೊಗಲು (ಸಂಕಷ. ೨೫-೨೮). **ಪುಗು**: ೧. "ಪುಗು–ಪ್ರವೇಶೇ" (ಶಬ್ದಾನು); ಶ್ರೀದಾಸಿ ಅಮ್ಮನ್ ಕಣ್ಪಿಯೊಳ್ಪನ್ನೊಬ್ಬ್ರಱನೆಜಿದು ಸ್ವರ್ಗ್ಗ ಆದನ್ ಭೂತಲ ದೊಳೆಲ್ಲಿಯು ಸ್ವೋನ್ನತಿ ಪುಗೆ (ಶ್ರಸಂ. ೦೯೩೪. ೨೩-೦೪; ಸು. 740); ಎನ್ನ ಪಾತ್ರ ಸಮೆವನ್ನಗಂ ನೀವಿಾ ಪೊಱಲಂ ಪುಗದಿರಿಂ (ಪಮ್ಪಭಾ. ೦೩೪-೦೪); ವಿಗುವಪಥಿ ಬುಧರಱೆಯೆ ನಿನ್ನಿನ ಹಗಲು ನಿನ್ನದು ಪಾಂಡು ತನಯರು ಪು[ಪಾಠಾಂ. ಹೊ]ಗುವೊಡಿಂದಿನ ದಿವಸವಪರದು ಕಂದ (ಕುಮಾ.ಭಿ. ೭-೨೨); ಸೀತೆ ಪೆಂಕಿಯ ಪುಗೆ ಶೀತಳಮಾದುದು (ಹರಿಶ. ೨-೪೭). ೨. ಮುಟ್ಟು; ಸ್ಪರ್ಶಿಸು: ಅಳಿಯೆಱಗದನಿಲನಲುಗದ ರವಿಕರಂ ಪುಗವ . . . ಇರವಂತಿಯಿರೆ ಕಂಡು (ಪುಷ್ಪರ. ೫. ೫೨೩-೨೩). **ಹುಗು**: ೧. ಇದಿರಾಗಿ ಕಾದದೋಡುವರನೆ ದೇವತಾಭವನವಂ ವನವಂ ಹುಗುವಂತು ಮಾಡುವಂ . . . ರಾಯಮುರಾರಿ ಭೂಭುಜಂ (ಕೊಲ್ಹಾ. ೪-೩೫; 1147); ಎನ್ನ ಭಕ್ತಿದ್ವಾರವನು ಹುಗದನ್ಯಮಾರ್ಗದಲಿ . . . ನನ್ನನಱಿವುದು ಹುಸಿ ಕಣಾ (ಪ್ರಭುಲಿ. ೦೮-೫). ೨. ಕಲಿ ಹುಗದ ಹೆಸರಿಂಗದೋಟೆ ಕೊರಗದ ದರ್ಪವುಗದ ಬಗೆ ಹುಸಿ ಹುಗದ ನುಡಿ (ಹರಿಶ. ೦-೪೪). **ಹೊಗು**: ೧. ಮಾಚಮ[ನಾ] ಊರಟಿವಿನೊಳೆ ಹೊಗೆನೆನ್ದು . . . ಸಿಂಗಮದೇವ ಯೆಱಿಪ್ಪನ ಪಾಗ ಪಡಿಗನೊಂಬಾ ದಣ್ಡನೊಳ್ಕಾದಿ ಸತ್ತಾನ್ (ಎ೩೨. IX-i. ೬೦-೧೩; 981); ಬಗಿದು ಹೊಗುವೆನು ನಾ ನಿಮ್ಮ ಮನವನು (ಬಸವ. ೪೯೭); ಅಕಟನ್ನೆಲ್ಲಿ ಹೊಗುವೈ ಕಂದ ಕಾಂತಿಯ ಜಠರವಲ್ಲವಲೇ (ಕುಮಾದ್ರೋ. ೨-೪೭); ಅಜವಿಂಡ ಹೊಕ್ಕ ಹೆಬ್ಬುಲಿಯಂತೆ ಸೊಕ್ಕಿದ ಗಜವಿಂಡ ಸಿಂಹ ಹೊಕ್ಕಂತೆ ... ಕಾಜನರ ಕಾಟ್ಪ ಹಾಯ್ಕಿದನು (ಕೋಹಶ. ೩೫-೨೦). ೨. ಆನು ಗುರುವಾಜ್ಞೆಯಂ ವಿಾಱಿದುದಱಿಂದೆನಗೆ ಹಾನಿ ಹೊಗದಿರದು (ಹರಿಶ. ೭-೪೭); ನಿಂದೆ ಹೊದ್ದದು ನಡೆವಳಿಗಳಲಿ ಕಾಂದು ಹೊಗ[ಪಾಠಾಂ. ಬ]ದು (ಕೊರಣ. ೦-೩-೨೮). ೩. ಮೇಲೆ ಬೀಳು; ಆಕ್ರಮಿಸು: ಉಱುಬಿ ಹೊಕ್ಕನು ದ್ರೋಣ ಪರಬಲವ (ಕುಮಾದ್ರೋ. ೧-೫೩); ಮಂದಮತಿ ಸುತ ಹೊಲ್ಲ ಹಂದೆಯುನು ನಂಬಿ ಹೊಗ ಹೊಲ್ಲ (ಸರ್ವಜ್ಞ. ೭೪೪). ೪. ಸೇರಂ; ಕೂಡಿಕೊಳ್ಳು: ಅತ್ತಡೇನಹುಪೆಲಗೆ ತೊತ್ತಿರ ಹಿಂಡ ಹೊಗು (ಕುಮಾ.ಸ. ೦೪-೬೪).

**ಪೊಗುಪೊಗು**, ಹುಗುಹುಗು, ಹೊಗುಹೊಗು (ದ್ವಿರುಕ್ತಿ): ಅಕ್ಕಱಿಂ ದಾಲೆಂದುಧರನೊಳು ಪೊಕ್ಕುಪೊಕ್ಕಲರ್ದಲರ್ದು ಕೂಡುತ ಸೊಕ್ಕಿ ತಲ್ಲಿಂಗದೊಳಗಿಂತು ವಿಲೀನನಾಗಿರ್ದು (ಬಸವು. ೩೫-೪); ರಕ್ಷಿಸುವೆನೊಲ ವುಣ್ಮೆಯನಿತು ಮನಕ್ಷತಂಗೊಳಲೇಕೆಯನ್ನಯ ವಕ್ಷಮಂ ಕೆಱೆದಪೆನು ಹುಗು ಹುಗು (ಬಸವು. ೫೩-೪೮); ಹೊಗುಹೊಗುತ ಹೊರಬರುವ ಮಾನುಷ್ಯ ವಾಹಿನಿಯ ಕಲ್ಲೋಲಲೀಲೆಯೊಳು ದಿಟ್ಟಿ ಸಲಿಸಿ (ಕುಶರ. ೪೭-೫). **ಪೊಕ್ಕಿಲ್**, **ಹೊಕ್ಕಿಲ್** – ಹೆಣ್ಣು ಮದುವೆಯಾಗಿ ಸೇರುವ ಮನೆ; ಅತ್ತೆಯ ಮನೆ: ತವರುಂ ಪೊಕ್ಕಿಲುಮಾಗಿ ಮುದ್ಗೃಹಮಿವಳ್ಗೆ (ಅಧಿಕಶ. ೭-೦೪); ಅದರ್ಗೆ ತಾಯ್ಮನೆಯುವರ್ಗೆ ತವರ್ಮನೆಯುವರ್ಗೆ ಹೊಕ್ಕಿಲ ಮನೆಯು ಮೇಳುಂ ಗವಿಯ ಬೆಳಗುವನೆಯ್ದೆ ರಕ್ಷಿಪ್ಪರಮನೆಯು ತಾನೆ (ಸಾಕಂಶ. ೪-೦೨). **ಪೊಕ್ಕುಱ್**, **ಹೊಕ್ಕುರಿ**, **ಹೊಕ್ಕುಱ್** – ೧. ಆಕ್ರಮಿಸಿ ಯುದ್ಧ ಮಾಡು: ಆಣಚಿಲ್ಮನಣುಮಪರಾಕ್ರಮನ್ನೀರಮಹಾಮೇರು ಪೊಕ್ಕುಱಿ ಪೊರದೊಗರಾಜನ್ . . . ನಾಯಕರಾಳ್ಕೆಳ್ಗಱಿದೋಡಿಸಿ ಬಟ್ಟನ್ (ಎಕ. X. ಶ್ರೀನಿವಾ. ೬-೫; ಸು. 780); ಪುರುಷವರಂ ಸಮಾಕಟ್ಟುವಮಪ್ಪೊಡೆ ಪೊಕ್ಕುಱಿಯಲಣ್ಮುವರಿಲ್ಲ (ಕಂಶಕಾ. ೭-೭೭ ಕ); ನಿಶ್ಯಂಕೆಯಿಂ ಹೊಕ್ಕುಱಿದು ಬಹ ಸತ್ವಾತಿಶಯ ಬೇಹುದು ರಣಾಗ್ರದಲಿ (ಕುಮಾ.ಕ. ೦೭-೩೩). ೨. ಆಕ್ರಮಿಸಿ ಚುಚ್ಚು,–ತಿವಿ: ಎಕ್ಕಲನ ಹೊಕ್ಕಿರಿದು ಕರಡಿ ಬಾಯ್ದೆರೆಯೆ ಮುಸುಡಂ ಮುರಿಯಲಿಕ್ಕಿ (ಕಕಕೋ. ೦೭-೨೩); ಹೊಳೆವ ಉಣೆ ಹೊಕ್ಕುಱಿದ ದಾರಿಯೊಳಾಳಿದ ಉಣೆ ದಾಂಟಿದವು (ಕುಮಾ.ಕ. ೦೪-೦೮). **ಹೊಕ್ಕ ಅಮಾವಾಸ್ಯೆ**, **ಹೊಕ್ಕಮಾಸೆ**="ಮಧ್ಯಾಹ್ನದ ಮೇಲೆ ಬಂದು ಮಾರನೆ ದಿನವಿರುವ ಅಮಾವಾಸ್ಯೆ ತಿಥಿಯ ಪೂರ್ವಭಾಗ" (ಅಶಂಕಾ). **ಹೊಕ್ಕು ತುಂಬುವ ಬಾವಿ** – ಇಳಿದು ನೀರು ತುಂಬಿಕೊಳ್ಳಬಹುದಾದಂತಹ ಬಾವಿ; ಮೆಟ್ಟಿಲುಗಳಿರುವ ಬಾವಿ: ನಡುಬಾವಿ; ಕಲ್ಯಾಣಿ: ಲಕ್ಕುಂಡಿಯಲ್ಲಿ ಗುಡಿಗಳಂತೆ ಹಲವು ದೊಡ್ಡ ದೊಡ್ಡ ಹೊಕ್ಕು ತುಂಬುವ ಬಾವಿಗಳಿರುತ್ತವೆ (ಕಲಾಗ. ೪೭೮); ಅಕ್ಕತಂಗಿಯರ ಬಾವಿಯೆಂಬ ದೊಡ್ಡ ಹೊಕ್ಕು ತುಂಬುವ ಬಾವಿಯನ್ನು ಇಬ್ಬರು ಪಾತರದವರಾದ ಅಕ್ಕ ತಂಗಿಯರು ಕಟ್ಟಿಸಿದರು (ಕಲಾಗ. ೫೦೪).

[ದ್ರಾ. II ತಮಿ. ಮಲ. ಪುಕು; ತುಳು. ಪೊಗ್ಗು]

**ಪೊಗುಂಡಿ** (ನಾ). ಒಂದು ಸ್ಥಳದ ಹೆಸರು: ಕುಕ್ಕನರೆನಾಡ್ × × × ಬತ್ತ ತಳಪಾತ ಪೊಗುಣ್ಡ ಕಾಳೆಗದುಳ ಎಱಿದು ಸತ್ತ (ಎಕ. IX. ಶಿಂಮು. ೩೪-೪; ಸು. 750 ?). [?]

**ಪೊಗುತರ್**, ಪುಗುತರ್, ಹೊಗುತರು (ಕ್ರಿ). ಒಳಹೊಗು; ಪ್ರವೇಶಿಸು: ಚಪ್ಪರದ ಬಾಗಿಲ್ಗೆ ಬಂದೊಡವರ್ ಪೊಗಲೀಯದಿರ್ದೊಡೆ ಅವಂದಿರಱಿಯು ದಂತೆ ಪೊಗುತಪ್ಪಾಗಳು (ಶಂಖಶ. ೬-೩೦). **ಪುಗುತರ್**: ಆಳುಪೇನ್ದ್ರ . . . [ಉ]ದ[ಯಾ]ಪುರವಾನ್ ಪುಗುತಪ್ಪಲ್ಲಿ . . . ಅಟಿದು ಸುರಲೋಕಕ್ಕೆ ಏಱಿದನ್ (ಎ೩. IX. ೨೦-೫; ಸು. 800); ಸಂಗರಾರ್ಜುನಂ ಸಿದ್ಧನಂತು ಸಿದ್ಧಕ್ಷೇತ್ರಮಂ ಪುಗುತಂದಂ (ಕುಶ್ಯಸಾ. ೫೨೪ ಪೂರ್ವ್ರಕ): ಸಂಚಿತ ಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಕಂಶಕಾ. ೩-೩೭); ಆ ಗೃಹಮಂ ಪುಗುತಂದನಚ್ಯುತಂ (ಜಗಶ. ೦೨-೦೩೧). **ಹೊಗುತರು**; ಹೊಳಲ ಹೊಗುತರುತಮಾಮ ಕಂಡನು . . . ನಿಜಧಾಮದಲಿ ಮುಕ್ಕುಳಿಸಿ ದಮಳಪ್ರಭೆಯಿದೇನೆಂದು ಬೆಱಗಾದ (ಶಿಶುಗ. ೬-೨೦-೨೭). [ಪೊಗು + ತರ್]

**ಪೊಗುತೆ**, ಪುಗುತೆ, ಹುಗುತೆ, ಹೊಗುತೆ (ನಾ). ಹೊಗುವಿಕೆ; ಪ್ರವೇಶ: ಬಗೆ ಭಾವ ಧಾತು ಮಾತುಗಳಿಂವು ಸೊಂಪಿನ ಪೊಗ[ಗು]ತೆ ಯನೆಳ್ಳನಿತನಱಿಯೆ ಅಗಣಿತಮುತಿಗಳಾವವರೀ ಕೃತಿಯನು ವಿಗೆ ತಿರ್ದಿ ಬಣ್ಣಿಪುವದು (ಅಂಕಶ. ೦-೦೦೭). **ಪುಗುತೆ**: ಪೊಗಟ್ತಿ, ನೆಗಟ್ತಿ, ಪುಗುತ (ಕಬುರ. ೨೦೦ ಪ್ರಯೋ); ಪುಗುತೆ, ಪುಗುತೆಗಳ್; ವಿಗುತೆ, ವಿಗುತೆಗಳ್ (ಕಪ್ರಾಸು. ೫೭೦ ಪ್ರಯೋ). **ಹುಗುತೆ**: ಕವಿಯ ಹುಗು[ಪಾಠಾಂ. ಗ]ತೆ ಗಮಕಿಯ ಸಂಚ ವಾದಿಯ ಚೊಕ್ಕಹ ವಾಗ್ಮಿಯ ಚೇತನ ಇಂತೀ ಚತುಷ್ಟಯ ದಲ್ಲಿ ಯುಕ್ತಿವಂತನಾದಡೇನು (ಚಕೊಪು. ೪. ೨೩೦-೪೪). **ಹೊಗುತೆ**: ಕಾರುಕನ ಹೃದಯದ ಕಪಟ ಕಣೆಲೆಂದು ಕೈಯ ಕಲ್ಲು ತನು ಲಟ್ಟೆಳಿಹೀನನ ಹೊಗುತೆ ಸ್ಮರಣೆಯವಳೊಳುಪಿನ ಮಾತು ಇವು ಸಾರದ ವ್ರಸ್ಥದಂತೆ

(ಶಗಟೊ. ೪. ೬೯೯-೭೯) ; ತೆಗೆದು ಗಳಹತ್ತ್ರದಲಿ ಕೊರಳನು ಬಿಗಿಯೆ ಬಿಡಿಸುವ ತೋರಹತ್ತ್ರದ ಹೊಗುತೆಯನು ವಂಚಿಸುವ . . . ಬಿನ್ನಾಣದಲಿ ಹೆಣಗಿದರು (ಕುಮ್ಮಾ.೪. ೧೯-೯೩). [ಪೊಗು + — ತ್ತೆ₁]

**ಪೊಗುಲೂರ್** (ನಾ). ಒಂದು ಊರಿನ ಹೆಸರು : ಪೊಗುಲೂರ ವಾಸ್ತವ್ಯಸ್ಯ ಭಾರದ್ವಾಜಸಗೋತ್ರಸ್ಯ ಭಾರದ್ವಾಜಸೂತ್ರಸ್ಯ (ಇಇ. XIII. ೧೪೬-೧೯ ; ಕು. ೬೬೦). [ ? + ಊರ್]

**ಪೊಗೆ₁, ಹೊಗೆ₁** (ಕ್ರಿ). ೧. ಹೊಗೆಯನ್ನು ಕಾರು ; ಧೂಮವನ್ನು ಉಗುಳು ; ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ (ಕಂಕಶಾ. ೬೦-೦೭) ; ಆ ಪುಲ್ಲು ಪೊತ್ತಿ ಪೊಗೆದುರಿದು ಮಂದುರವಂ ಪೊತ್ತಿದೊಡೆ (ಕಂಕಕಂ. ೭೭೯-೦೨) ; ಪೊಗೆದುದು ಪೊತ್ತಿದತ್ತು . . . ಸುಟ್ಟಿತು ಕಿಡು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿರಿ. ೬-೯೭) ; ಧಗಧಗತ್ಕಾರದಿಂದಂ ಧರಣಿಮಂಡಲಂ ಪೊಗೆವುತಿರ್ದುದು ಸಮುದ್ರಂ ಕುದಿದು ತಳಮಳಲನುಗುಳುತಿರ್ದುದು (ಕಂಠ. ೪೦-೨೦). ೨. (ಪರಿಮಳವುಳ್ಳ) ಹೊಗೆ ಆಡಿಸು ; ಹೊಗೆಕೊಡು : ಮುಡಿಯಂ ಗುಗ್ಗುಳದಿಂ ಪೊಗೆದಾಱಿಸಿ ಪೂವಂ ಸೂಡಿ . . . ಪೊದೊಡವುಗಳಂ ಪಸದನಂಗೊಂಡು ವಿಶಂಬಟಯಾಗೆಯನ ಕುಲದೇವಿಯರೆನೆ ಕಣ್ಗಂಬುದರ್ (ರಾಜಶೇ. ೦೨೯-೪). ೩. (ಅಲಂ) . (ಬಿಸಿಲಿನಿಂದ) ಕಡಿಕಾಗು ; ಸೀಯು : ಪೊಗೆದುದು ಸಸ್ಯಾನೀಕಂ ಮೃಗತೃಷ್ಣಾಂಬುವಿನ ವೀಚಿ ಪೊಂಗಿದುದಿರದಂದುಗುಟ್ಟಿದುದು ಕೆಂಗಿಡಿಯಂ ಬೇಸಿಗೆ ಬಿಸುಪೊಯ್ಲ ನರ್ತಮಣಿಗಣಮಾಗಳ್ (ಉದ್ಭ. ೯-೬೩). ೪. ಕಪ್ಪಾಗು : ಮನೆಮನೆದಪ್ಪದೆ ನೆಗೆದುದು ತನಗಿರ್ಚನೆ ದಹನವಿದ್ಯೆಯಿಂ ಸುಟ್ಟಂ ಪಾವನಿ ಲಂಕೆಯನಸುರಾಧೀಶನ ಮನಮುರಿವನ್ನಮಾನನಂ ಪೊಗೆವನ್ನಂ (ಕುರಾಶ. ೦೦-೦೯೪). ೫. ದುಃಖಿಸು ; ಪರಿತಪಿಸು ; ಮರುಗು : ಆನಿವಿಂದು ದುಃಖದೊಳ್ ಸಮೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು (ಸುಕುಮ. ೩-೦೯); ಸುಮ್ ಬಿಸಿಯುವಾದುವಿದೇಕೆ ಕದಂಪು ಕೆಂಪನಾಳ್ದುಗುಟ್ಟುವುದೇಕೆ ಗಗ್ಗರಿಕೆಯಗ್ಗಳವಾದುದಿದೇಕೆ ನೀಂ ಕರಂ ಪೊಗೆದಪೆಯೇಕೆ ಪೇಟ್ನಗೆ ಪಂಕಜಪತ್ರವಿಶಾಲಲೋಚನೇ (ಅರ್ಗಶೇ. ೭-೦೪). **ಹೊಗೆ₁** : ೧. ಗುಂಡು ಬಿದ್ದೊಡೆ ಹೊತ್ತಿ ಹೊಗೆದು ದಳ್ಳುರಿ ಮಸಗೆ (ಸಿದ್ಧರಾ. ೭-೨೨) ; ತೋರಣದಲುರಿ ತಳಿತು ರಾಜದ್ವಾರ ಹೊಗೆದುದು (ಕುಮ್ಮಾ.ಸ. ೦೩-೪೨) , ಹೊಗೆದು ದಾನವಪಕ್ಷಿ ಕಿಡಿಗಳನುಗುಳಿದವು ಹೊಗೆ ಸುತ್ತಿ ಕುಡಿವಿಾಸೆಗಳು ಕೌಚಿದವಂಗ ಕಾಹೇಚಿದುದು ಕಡುಹಿನಲಿ (ಹೊಕರಾ. ೨-೭-೮). ೬. ಸುಡು ; ದಹಿಸು : ವಿಗಡರುದ್ರನು ಲೋಚನಾಗ್ನಿಯೊಳೊಗುವಿಗೆಯ ಕೋಪದಲಿ ಕಾವನ ಮಿಗೆ ದಹಿಸಿದಂದದಲಿ ರಿಪು ಕಂಠೀಕುಮಾರಕರ ಹೊಗೆದು ೬ಳೆ ಲಾಕ್ಷಾಭವನದಲಿ (ಕುಮ್ಮಾ.ಆ. ೬-೩೦). ೭. ಪ್ರಚಂಡವಾಗು ; ಪ್ರಜ್ವಲಿಸು : ವಿರಹಾಗ್ನಿಯೆತ್ತಿ ಮನಂ ಪೊತ್ತಿ ಬುದ್ಧಿ ಕವರ್ದು ಅಹಂಕಾರು ಹೊಗೆದು ಚಿತ್ತಂ ಬೆಂದು ಹರೆಣಮುರಿದು . . . ಭೋಗದ ವಿಯೋಗಿಯೆನಿಸಿರ್ದ ತರುಣಿಯರ. ವಿರಹಾತಿಶಯಮಪಂ. ಗಿರಿರಾಜಂ ಕರುಣಿಸಿ ನೋಡಿ (ಗಿರಿ. ೯-೦೦೬ ವ) ; ಉರಿಯು ಕರುವಿಟ್ಟಂತೆ ವಿಲಯದ ಹರನ ಖತಿ ಹೊಗೆವಂತೆ ಸಿಡಿಲಿನ ಹೊರಳಿ ಹೊದಚಿದ್ದಂತೆ ನಿಂದವನವ ಘಟೋತ್ಕಚನು (ಕುಮ್ಮಾ.ಭೀ. ೨-೦೨). ೮. ಮಸುಕಾಗು ; ಮಂಕಾಗು ; ಕಾಂತಿಹೀನವಾಗು : ಚಿತ್ತವಿಸು ಧೃತರಾಷ್ಟ್ರ ಕೌರವನಿತ್ತನಿರುಳೋಲಗವ ಮಂಜಿನ ಮುತ್ತಿಗೆಯ ನಭದಂತೆ ಹೊಗೆದುದು ರಾಯನಾಸ್ಥಾನ (ಕುಮ್ಮಾ.ದ್ರೋ. ೪-೯). ೯. ಸಿಟ್ಟಾಗೇಳು ; ಧುಮುಗುಡು : ಅಪ್ರಸನ್ನಾ=ಹೊಗೆವುತ್ತಿರ್ದಳ್ (ಶಿಂತಿವಾ. ೩೦-೦೪) ; ಹೊತ್ತ ಕೋಪದ ಹೊಗೆವ ಮುಖದೌಡೊತ್ತುವಧರದ ವೈರಿಸೇನೆಯ ಕುತ್ತಿ ತೇಗುವ ಮನದ ಮಾರುತಿ ವೊಳಗಿದನು ಮುಂದೆ (ಕುಮ್ಮಾ.೪. ೦೨-೨೦). ೧೦. ದ್ವೇಷಿಸು : ಈ ಅಣ್ಣ ತಂಗಿ ಮೇಲೆ ಮೊದಲಿಂದ ಹೊಗೆದು ಹೊಗೆದು ಹೊಗೀತಾಲೇ ಇದ್ದಿದಾವೆ. ಇವನು ಹೊಗೆದರೆ ನಮಗೇನಾಯ್ತು ? (ಕಕರಾ. ೨೩೯). ೧೧. [ವೈದ್ಯಶಾ] ಚಿಕಿತ್ಸೆಗಾಗಿ ಔಷಧೀಯಂಗುಣವುಳ್ಳ ಹೊಗೆಯನ್ನು ಹಾಕು,—ಹೊಗೆಯೇಳಿಸು : “ಹೊಗೆ—ಧೂಮನಿರೋಧಕ್ರಿಯಾಯಾಂ, ಧೂಮೇ ಚ” (ಕವುಕಾ).

**ಹೊಗೆಹಾಲ ಮೊಸರು** — “ಸೂರ್ಯೋದಯಕ್ಕೆ ಸ್ವಲ್ಪ ಮುಂಚೆ ಹಾಲಿಗೆ ಹೆಪ್ಪುಹಾಕಿ ಮುಚ್ಚಿರಿಸಿ ಅದೇ ದಿವಸ ಮಧ್ಯಾಹ್ನ ತೆಗೆದು ಉಪಯೋಗಿಸುವುದು. ಇವಕ್ಕೆ ಹೊಗೆಹಾಲ ಮೊಸರೆಂದು ಹೆಸರು” (ಸೂಶಕಾ. ೨-೦೦ ಅಡಿ) : ಬಿಸಿಲುವುದಿಸದ ಮುನ್ನ ಹೆಪ್ಪನೆಚಿದಾ ಹಾಲನೊಸೆದು ಹಿಂಬಗಲಿನೊಳು ತೆಗೆಯಲದು ಹೊಗೆಹಾಲ ಮೊಸರೆಂಬ ಹೆಸರಾಯ್ತು (ಸೂಶಕಾ. ೨-೦೦).

[ದೇ.೩ ತಮಿ. ಪುಕೈ ; ಮಲ. ಪುಕ ; ತುಳು. ಪುಗೆ, ಪೊಗೆ ; ತೆಲು. ಪೊಗಯು, ಪೊವಯು]

**ಪೊಗೆ₂, ಹೊಗೆ₂** (ನಾ). ೧. ಧೂಮ : “ಪೊಗೆಯೆಸರ್ ಧೂಮ” (ಶಕರ. ೭೦) ; ಪೊಗೆ ಪರ್ಚೆ ನೆಗೆದ ಕಾಟ್ಕಿರ್ಚುಮಂ . . . ಕಂಡೆಂ (ಪಮ್ಮಾ.ಭಾ. ೬೩-೨೭) ; ಬಳಸೆ ಮುಗಿಲ್ಗಳ್ ಕನಕಾಚಳಮಂ ಬಳಸುವವೊಲಿಕ್ಕಿದಾಹುತಿಗಳ ಗೊಂದಳದಿನೊಡನೊಗೆದ ಪೊಗೆಗಳ್ ಬಳಸಿದುವೆತ್ತಿಡದೆ ಕನಕಯೂಪಮನಾಗಳ್ (ಹಂಕಥಾ. ೬-೩೩); ಪೊಗೆಯಿಂ ಕಿರ್ಚಿಂ ಮೊಟಗಿಂ ಮಟ್ಯಿಯಂ . . . ಜೋಯಿಸರಿಂ ಗ್ರಹಣಮನಚಿವಂತೆ . . . ಅಚಿವುದು (ಧರ್ಮಾಕು. ೯-೩೯); ಕೆಯ್ಯ ಶ್ರೀಗಂಧ ಧೂಪಾರ್ತಿ ಪಾಪಾರಣ್ಯದ ಬೇಗೆವೊಲ್ ಪೊಗೆ ಮುಸುಕಿದುದು (ವೋಹಕ. ೪೨-೩೦). ೨. ಆವಿ; ಹಬೆ : ಗೇರ ಪಣ್ಣನಿದು ಕೆಂಡಮೆನುತ್ತಂ ಸಾರಿ ಮೇಲೆ ಕೃಣಮಿಟ್ಟುದನೂದಲ್ ಸೇರಿ ಬಾಯ ಪೊಗೆ ತಳ್ತಿರೆ ಕಂಡಾ ದೂರಿಗಂ ಮುದದಿನೂದುತಮಿರ್ದಂ (ಕಾಹಕೇ. ೯-೨೩). ೩. (ಅಲಂ) ಅಗ್ನಿ ; ಬೆಂಕಿ : ಜ್ವಾಲೆ : ‘ಪೊಗೆವೊಗ’ ಪರಾ. ೪. ಅಗ್ನಿಯ ದಿಕ್ಕು ; ಆಗ್ನೇಯದಿಕ್ಕು : ಹರನೊಳೊಗೆದು ನೈಋತಿಗೆ ಬರ್ಪೊಡಂ ಪೊಗೆಯೊಳೊಗೆದನಿಲಂಗೆ ಬರ್ಪೊಡಂ . . . ಇವ ನೋಡಿ ಪೇಟ್ ಮಟ್ಯಿಯಧಿಕ ತಾನೆಂಬುದಂ (ಅಭ್ಯಜು. ೨-೦). **ಹೊಗೆ₂** : ೧. “ಧೂಮಮೆನೆ ಹೊಗೆಮುಕ್ಕು” (ಶುಂಗಾ. ೦೪-೬) ; ಒಲೆಮಡಿಯನಾರುಹಿದಡೆ ಹೊಗೆಗೋಳಕನಾಥನ ಕೊರಳ ಸುತ್ತಿತ್ತು ಮಹೀತಳನ ಜೆಡೆ ಸೀಯಿತ್ತು ಮರೀಚಕನ ಸಿರ ಬೆಂದಿತ್ತು (ಬಸವ. ೪೩೦); ಮೊಗದ ಹೊಗರವಗಡಿಸೆ ಸುಯಿಲಲಿ ಹೊಗೆಯು ಹೊದಳಂಕುರಿಸೆ ಬಿಡುಗಣ್ಣುಗಳೊಳೊಕ್ಕುದು ಕೆಂಪು ಸೊಂಪಡಗಿತು ಮುಖಸ್ನೇಹ (ಕುಮ್ಮಾ.ಭೀ. ೭-೨೦); ಹೊಗೆಯೊಳಗೆ ಹೋಗಬೇಕಾದರೆ ಬಾಗಿಕೊಂಡು ಹೋಗಬೇಕು (ಮುಂಬಯಿ. IV. ೬೦). ೨. ಒಂದೆಲಗದ ಸೊಪ್ಪು, ಗಾಂಧಾರಿಸೊಪ್ಪು . . . ಇವುಗಳನ್ನೆಲ್ಲಾ ದಳಿಗೆಯಲ್ಲಿ ಹಾಕಿ ಹತ್ತು ವೊಗೆ ಅಂಬಲಮಂ ಹುಯ್ದು ಕುದಿ ಬರುವ ಹಾಗೆ ಕಾಯಿಸಿ ಆ ಹೊಗೆಯಿಂದುಬ್ಬೆಯ ಕಾಯಿಸಲು ವಾತಜ್ವರಂ ತೀರ್ಗುಂ (ಸಕಪ್ರ. ೬೯). ೩. ಬಾಣದ ಹೊಗೆಯಲಿ ರಿಪುಗಳ ತೂಳಿಸಿಕೊಂಡೇಣಾಂಕವಂಶಸಂಭವನಾಕ್ಷೋಣೀಪ ಬೆಟ್ಟದ ಚಾಮೇಂದ್ರನೊಳಹೊಕ್ಕು ಮಾಣದಿಚಿದ ರಿಪುಬಲವ (ಕಂಪರ. ೩-೭೪). ೫. ಮಂಕು ; ಮ್ಲಾನತೆ : ನಗೆಗೆ ನಗೆ ಕಾಂಟಣೆ ವಿವೇಕದ ತೂಗೆಗೆ ಹೊಗೆ ಸಖಿಯಾದುದಲ್ಲಿಯು ಹಗರಣಿಗ ನಾನಾದೆನದು ನೋಟಕದ ಜನವಾಯ್ತು (ಕುಮ್ಮಾ.ಸ. ೦೨-೪೨); ಇವರ ಹರುಷದ ನಗೆಯುನಾ ಬಲದವರ ಮೋಟಿಯ ಹೊಗೆಯನು . . . ನೀ ಚಿತ್ತವಿಸಿದ್ಯೆ ಧೃತರಾಷ್ಟ್ರ (ಕುಮ್ಮಾ.ಶ. ೦೨-೨). ೬. ಹೊಗೆಸೊಪ್ಪು ; ತಂಬಾಕು : ಆ ಮರುಷ ಮೂರು ಕೊಳಗದಷ್ಟು ತಕ್ಕಲು ಕಿತ್ತು ಹೊಗೆ ಹಾಕಿದ್ದರಿಂದ ಸುಂಕಗಿಂಕ ಕಳೆದು ಅರುವತ್ತು ವರಹ ಬಂತು (ಕೆಂಗಾಳ್ಮೆ. ೩೦೩).

ಹೊಗೆಯ ಬತ್ತಿ = ಹೊಗೆಸೊಪ್ಪಿನಿಂದ ತಯಾರಿಸಿದ ಬೀಡಿ, ಸಿಗರೇಟು ಮುಂತಾದುವು : ಕಾರ್ಖಾನೆಯ ಹೊಗೆಯು ವಾತಾವರಣವನ್ನು ತುಂಬಿರುವುದು ಸಾಲದೆ ಪ್ರತಿಯೊಬ್ಬನೂ ಒಂದೊಂದು ಹೊಗೆಯ ಬತ್ತಿಯನ್ನು ಬಾಯಲ್ಲಿಟ್ಟುಕೊಂಡು ಹೊಟ್ಟೆ ತುಂಬಿಸಿ ಮತ್ತೆ ಹೊಗೆ ಕಾರುತ್ತಿರುವನು.! (ಕೃಲಾಕ. ೩). **ಹೊಗೆಯಾಗು** = ಹೊಗೆಯಿಂದ ಆವೃತವಾಗು ; ಧೂಮವುಂಟಾಗು : ಹಸಿಸೌದೆಯಾದ್ದರಿಂದ ಒಲೆ ಸರಿಯಾಗಿ ಉರಿಯದೆ ಮನೆಯೆಲ್ಲಾ ಹೊಗೆಯಾಯಿತು (ಜಾ). **ಹೊಗೆ ಹಾಕು** = ೧. ಹೊಗೆಯನ್ನು ಉಂಟುಮಾಡು ; ಧೂಮವುಂಟು ಮಾಡು : ಹೋಗು ಅನ್ನಲಾರದೆ ಹೊಗೆ ಹಾಕಿದರು (ಗಾದೆ); ಹೊಗೆ ಹಾಕುವುದರಿಂದ ಸೊಳ್ಳೆಗಳು ಕಡಮೆಯಾಗುತ್ತವೆ (ಜಾ). ೨. (ಶಿಕ್ಷೆಗಾಗಿ) ಮೆಣಸಿನ ಕಾಯಿ ಮುಂತಾದ ಖಾರದ ಹೊಗೆಯನ್ನು ಉಂಟು ಮಾಡು : ಹಿಂದೆ ಮಠದ ವಿದ್ಯಾರ್ಥಿಗಳಿಗೆ ವಿಧಿಸುತ್ತಿದ್ದ ಕಠಿಣಶಿಕ್ಷೆಗಳಲ್ಲಿ ಹೊಗೆ ಹಾಕುವುದೂ ಒಂದು (ಜಾ). ೩. (ಚಿಕಿತ್ಸೆಗಾಗಿ) ಔಷಧೀಯ ಗುಣವುಳ್ಳ ಹೊಗೆಯನ್ನು ಉಂಟುಮಾಡು ; ಧೂಪಹಾಕು : ಹಿಂದಿನವರು ಶೀತ ಕಡಮೆಯಾಗಲು ರಾಗಿಹಿಟ್ಟು, ಅರಿಸಿನದ ಪುಡಿ ಮುಂತಾದುವುಗಳಿಂದ ಹೊಗೆ ಹಾಕುತ್ತಿದ್ದರು (ಜಾ). ೪. ಒಲೆಹಚ್ಚು ; ಅಡುಗೆ ಮಾಡು : ಅವಳಿಗೆ ನಾನು ಶರಣಾಗತನಾದರೆ ನಾನು ಈ ಊರಲ್ಲಿ ಹೊಗೇ ಹಾಕ್ಕೊಂಡು ಇರೋಕಾಯ್ತದಾ ! (ಹುಟ್ಟಿಹ. ೦೩೭); ಹೆಣ ಸಾಗಿಸೋವರೆಗೂ ಊರಲ್ಲಿ ಹೊಗೆ ಹಾಕೋ ಹಾಗಿಲ್ಲ (ಜಾ). ೫. (ಕಾಯಿಗಳನ್ನು ಕೃತ್ರಿಮವಾಗಿ ಹಣ್ಣುಮಾಡಲು) ಕಾವಿಗೆ ಹಾಕು ; ಅಡೆಹಾಕು : ಬಾಳೆಗೊನೆಯನ್ನು ಹೊಗೆ ಹಾಕಿ ತಂದಿದ್ದಾನೆ (ಜಾ).

[ < ಪೊಗೆ$_1$./ತಮಿ. ಪುಕೈ; ಮಲ. ಪುಕ; ತುಳು. ಪುಗೆ, ಪೊಗೆ ; ಕೊಡ. ಪೊಗೆ; ತೆಲು. ಪೊಗ, ಪೊವ; ಕೋಲಾ. ನಾಯ್ಕಿ. ಪೊಗ್ ]

**ಪೊಗೆಗುಡಿ,** ಹೊಗೆಗಡಿ (ನಾ). ಹೊಗೆಯುಗುಳುವ ಕುಡಿ; ಹೊಗೆ ಕಾರುವ ದೀಪದ ತುದಿ : ನೆಗೆವ ಪೊ[ಪಾಠಾಂ. ಹೊ]ಗೆಗುಡಿಗಳಿಂದೇಂ ಸೊಗಯಿಸುತಿರ್ದಪುವೊ ಸುತ್ತಲುಂ ಲಟ್ಟಳೆಯುಂ ಮಿಗೆ ಕಡಿದಟ್ಟುಸಲಾರದೆ ಮಗುಳ್ದುವೆ ಕಾಡದವುವೆನಿಸಿ ಕೆಯ್ದಾವಿಗೆಗಳ್ (ಪಂಪಭಾ. ೩-೬). **ಹೊಗೆಗುಡಿ :** ಮೇಲಿನ 'ಪರ್ವುವು' ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊಗೆ$_2$ + ಕುಡಿ$_3$ ]

**ಪೊಗೆಗೆಱೆ** (ನಾ). ಧೂಮರೇಖೆ : ಪೊಗೆಗೆಱೆಯಂತೆ ಕಣ್ಗೆಸೆದುದಾ ರಾಯನ ವ್ಯಾಗನಯನೆಯ ರೋಮರಾಜಿ (ಕಾಶಾಖಾಂ. ೭-೨೪). [ಪೊಗೆ$_2$ + ಗೆಱೆ$^3$]

**ಪೊಗೆಗೊಳ್** (ಕ್ರಿ). ಹೊಗೆ ಹಿಡಿ : ಹೊಗೆಯಿಂದ ಮಸುಕಾಗು : ಪೊಗೆಗೊಂಡ ಚಿತ್ರಲತೆ ದೂಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಜಿನಿ ಕಾಮರ್ಬುಗಿಲೊಳಕೊಂಡಳಮೆಱೆಯೆನೆ ಮೃಗಲೋಚನೆ ಸೀತೆ ನಾಡೆ ಮಾಡಳಿದಿರ್ದಳ್ (ಕುಂರಾಮಾ. ೦೦-೬೩); ಮಿಗೆ ಕಾತರವ ಪುಟ್ಟಿಸುವ ಸುಗುಣನ ಸೋಂಕದವಳ ಜನ್ಮ ಸೊಗಸಲ್ಲ ಪೊಗೆಗೊಂ[ಪಾಠಾಂ. ಯಾಂ]ಡ ಪುತ್ತಳಿಯಂತೆ (ಕುಂರಾಮಾಂ. ೨೨-೨೫). [ ಪೊಗೆ$_2$ + ಕೊಳ್$_1$ ]

**ಪೊಗೆಗೊಳಿಸು,** ಹೊಗೆಗೊಳಿಸು (ಕ್ರಿ). (ಪರಿಮಳದ) ಹೊಗೆಯಾಡುವಂತೆ ಮಾಡು ; ಧೂಪಹಾಕು : ಕಳೆ ಕರ್ಪೂರದ ಕಸವಂ ತಳೆ ಕತ್ತುರಿನೀರನಿಕ್ಕು ಮುತ್ತಿನ ಕದೆಯಂ ಬೆಳಗು ಮಣಿದೀಪಮಂ ಪೊಗೆಗೊಳಿಸಗರುವನೆಂಬರಲ್ಲಿ ಸೂಳೆವಳಕರ್ಗಳ್ (ಜಗಚ. ೯-೦೦೦) : ಪೂಜಿಸಿ ನಿಳಿಂಪಸಂಕುಲಪೂಜಿತನಂ ಮಗುಳ್ದು ಪೊಗೆಗೊಳಿಸಲೆಂದಾದಂ ರಾಜಿತ ಧೂಪಮನೊಸೆದಾ ರಾಜೋತ್ತಮನೂಹಿಲಾಂಕನೆಂದನಮಾದಂ (ಅದ್ಭುಲ. ೦೦-೬೪). **ಹೊಗೆಗೊಳಿಸು :** ಲಲನೆ ಕಳೆ ಕಪ್ಪುರದ ಕಸವನು ತಳೆ ಸುಗಂಧೋದಕವನಿರಿಸಿ ಪೊಗೆಗೊಳಿಸು (ಕೀಶಂಕ. ೩-೦೩). [ಪೊಗೆಗೊಳ್ + –ಇಸು$_3$]

**ಪೊಗೆಧ್ವಜ** (ನಾ). ಹೊಗೆಯೇ ಧ್ವಜವಾದವನು; ಧೂಮಧ್ವಜ; ಅಗ್ನಿ : ಪೊಗೆಧ್ವಜನ ಬಾವಿಂಗೆ ತೃಣದ ಪರ್ವತವು ಬರ್ಪಂದದಿಂ (ಜಚರಿ. ೬-೩೨). [ಪೊಗೆ$_2$ + ಧ್ವಜ]

**ಪೊಗೆಮೊಗ,** ಹೊಗೆಮೊಗ (ನಾ). ಹೊಗೆ ಕಾರುವ ಮುಖ; ಉರಿಮೊಗ : ಒಗೆದ ಕಾಚಂ ಮೊಗಂಗುಡದೆ ಚೆಲ್ವಿನೊಳೀಗಿಸೆ ತತ್ಸಮೀಪದೊಳ್ ಪೊಗೆಮೊಗವಾದವೋಲ್ ತಳೆದ ಧೂಮಘಟೀಗಳನುಣ್ಮೆ ಪೊಣ್ಮೆ ತಟ್ಟಗರುವ ಧೂಮಲೇಖೆ ಸುರಸುಂದರಿಯರ್ ನಡೆತಂದರೆಂದು (ಕುಂರಾಮಾ. ೦೬-೯೩). **ಹೊಗೆಮೊಗ :** ಹೊಗೆಮೊಗದ ಕಿಡಿಗಣ್ಣ ಕವಿನ್ಯಾಸಗಳ ಗುಜುಟಿನ ಜುಂಜುಗೇಶದ ವಿಗಡನೆದ್ದನು (ಕುಭಾಸ. ೦೪-೦೦೦). [ಪೊಗೆ$_2$ + ಮೊಗ]

**ಪೊಗೆಯಿಡು** (ಕ್ರಿ). ಹೊಗೆಯು ಹೊಮ್ಮು : ಪಡುವೆಡ ಕಿರ್ಚಿಲ್ಲದೆ ಪೊಗೆಯಿಡುವೊಡೆ ಮೇಣ್ ಪಟದ ಸೀರೆಯುರಿದೇಟ್ಟೊಡೆ ಮೇಣ್ ಕಿಡಿಗಳ್ ತಲೆಯಿಂದಂ ಪೊಱಮಡುವೊಡೆ ಯಮಗೃಹಮನೆಯ್ದುವಂ ತಡೆಯದವಂ (ಕೋಕಿಲ. ೪-೯೬). [ಪೊಗೆ$_2$ + ಇಡು$_1$]

**ಪೊಗೆವಂಡಿ,** ಹೊಗೆಬಂಡಿ, ಹೊಗೆಭಂಡಿ (ನಾ). ಹಬೆಯಿಂದ ಚಲಿಸುವ ಗಾಡಿ ; ಉಗಿಬಂಡಿ ; ರೈಲುಗಾಡಿ : ಪೊಗೆವಂಡಿಯ ತಂಗಿನೆಡೆಯೊಳಿರ್ದು (ತುಲಾಕ. ೭-೩). **ಹೊಗೆಬಂಡಿ :** ಹೊಗೆಬಂಡಿ ಹೊರಟಿತು (ಕಶಕ್ತಿ. ೦-೨೪). **ಹೊಗೆಭಂಡಿ :** ಇವರು (ಇಂಗ್ಲೀಷರು) ಮಹಾಬುದ್ಧಿಯಿಂದಾ ಹೊಗೆಭಂಡಿಯನ್ನೂ ಹೊಗೆಹಡಗವನ್ನೂ . . . ದೂರದೃಷ್ಟಿಯಂತ್ರಗಳನ್ನೂ ಹೊಸಹೊಸದಾಗಿ ಮಾಡುತ್ತಾ ಇರುವರು (ಅವಂಶ. ೯೦ ಟೀಕು). [ಪೊಗೆ$_2$ + ಬಂಡಿ$_1$]

**ಪೊಗೆವಣ,** ಹೊಗೆಹಣ (ನಾ). ಹೊಗೆಸೊಪ್ಪಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಪಡವಳದೇವರಸರು ಪೊಗೆವಣವ ಬಟ್ಟರು (ಕೊಂಕಣಾ. ೦೯೯೩, ಬಂಕಾಪುರ. ೯೪-೩೦; ?). **ಹೊಗೆಹಣ :** ಗದ್ದೆ ಬೆದ್ದಲು ತೋಟ ತುಡಿಕೆ ಆಡುವಾಗದೆಱೆ ಹೊಗೆಹಣ × × × ಬೇಡಿಗೆ ದವಸ ಮುಂತಾದ ಸರ್ವಸ್ವಾಮ್ಯ ಸರ್ವಆದಾಯವನು ಆಗುಮಾಡಿಕೊಂಡು (ಕ್ಕುಆಿ. ೦೯೩೦, ೩೩-೦೫; 1668); ಹೊಗೆಹಣ ಹೊಗೆಕಾಣಿಕೆ ಕಾಣದೆಱಗೆ . . . ಆ ಸಕಲಸ್ವಾಮ್ಯವನೂ . . . ಅನುಭವಿಸಿ ಕೊಂಡು ಬಹರು (ಎಕ. XIV. ಮೈಸೂರು. ೦೦೩-೯೦೩; 1674). [ಪೊಗೆ$_2$ + ಪಣ$_3$]

**ಪೊಗೆವರಿ** (ಕ್ರಿ). (ಅಲಂ) ರುಚಿಯನ್ನು ಕುಂದಿಸು, —ಕಡಮೆಮಾಡು; ಹೀಗಳೆ : ಮುಗುದೆಯರ ತಲೆರನ್ನ ಕೇಳು ಮದ್ಯಚನರುಚಿ ಪೊಗೆವರಿಯದೇ ಕಾಯ್ದ ಚಿನಿವಾಲ (ಕವಶೋ. ೨೬-೪). [ಪೊಗೆ$_2$ + ಪರಿ$_3$]

**ಪೊಗೆವಳವಿಗೆಯ** 'ಪೊಗೆವಟಯಿಂಗೆಯು' ನೋ.

**ಪೊಗೆವಟಯಿಗೆಯ,** ಪೊಗೆವಳವಿಗೆಯು, ಪೊಗೆವಟವಿಗೆಯ (ನಾ). ಹೊಗೆಯೇ ಧ್ವಜವಾದವನು ; ಅಗ್ನಿ ; ಬೆಂಕಿ : "ಮರಗೂಟಂ, ಪೊಗೆವಟಯಿಗೆಯಂ, ಕರ್ಬಟ್ಟೆಗಂ . . . ಇಂಗಳಂ, ಎಲರ್ಗೆಳೆಯಂ—ಈ ೧೩ ಅಗ್ನಿ" (ಕಕಸಾ. ೯೯-೩೩). **ಪೊಗೆವಳವಿಗೆಯ :** "ಪೊಗೆವಳವಿಗೆಯನೆನೆ ಧನಂಜಯಗೆ ಪೆಸರು" (ಕಪಾ. ೭೦). **ಪೊಗೆವಟವಿಗೆಯ :** "ಇಂಗಳನೆಲಗೆಳೆಯ ಪೊಗೆವಟವಿಗೆಯನಗ್ನಿ ಹಗ್ಗಿ . . . ಅಗನಿಯೆನೆ ಕಿಚ್ಚು" (ಕಮ್ಮಕೈ. ೨೦). [ಪೊಗೆ$_2$ + ಪಟಯಿಗ + – ಅ$_7$]

**ಪೊಗೆವಟವಿಗೆಯ** 'ಪೊಗೆವಟಯಿಂಗೆಯು' ನೋ.

**ಪೊಗೆವೊಗೆ** (ನಾ). ಒಂದು ಬಗೆಯ ತೆರಿಗೆ, — ಸುಂಕ ( ? ) : ಮಂನೆಯ ಸಾಮ್ಯದೊಳ್ ಬಿಟ್ಟ ಮನ್ನಣೆಯೆನ್ತೆನ್ದೊಡೆ ಮನ್ನೆಯದೆಱೆ ಅಳಿವಸತಾಯ ಪೊ[ಗೆ]ವೊಗೆ ತಳಾಲಿಗೂಲಿ (ಶಾ೨೨. XI-1, ೬೩-೨೦ ; 1042) ; ಪೊಗೆವೊಗೆಯು ಮನೆಗೆ ಪಣವುಂ ಮಾಗದ ತೆಱೆಯುವುಂ . . . ಬಿಟ್ಟರ್ (ಎ೨. XVI. ೯೩-೪೯ ; 1067). [ ? ]

**ಪೊಗೆಸುತ್ತು** (ನಾ). (ಆಲಂ) ಮಂಕಾಗಿರುವಿಕೆ : ಮುಸುಕು ಪೊಗೆ ಸುತ್ತು ಹೊದಕೆಗಳಸದೃಶದೊಲವಿಕೆ ವಿಚಿತ್ರವುಳಕವಿಲಾಸಪ್ರಸರಂ ಸನ್ನಾಹನ ವಿಂತೆಸವಾ ದೇಗೆಶ್ಕೆ ತರದಿನನುಭಾವಂಗಳ್ (ಜಿಹ. ೯-೧೦೨). [ಪೊಗೆ₁+ಸುತ್ತು₁]

**ಪೊಚ್ಚ₁**, ಹೊಚ್ಚ (ನಾ). ೧. ನವೀನವಾದದ್ದು ; ಹೊಸದು : "ಪೊಚ್ಚವೆನಲ್ ಪೊಸತು" (ಶಬ್ದಾಶ. ೩೭) ; ಅಂಗರಾಜನೋರ್ದಿರ್ಕೆದ ಭಾವನೆ ಪೊಚ್ಚವಾಗೆ ಹೇಮಾಂಬುರುಹಾಸ್ಕೆ ಸೋಲ್ತುದೆನೆ ಕನ್ನಿಕೆ ಜನ್ಮಯನೊತ್ತೆ (ಶಾಂತಿಪು. ೫-೦೭೩). (ಗು). ೨. ಹೊಸದಾದ ; ನವೀನವಾದ : ಹೊಂಗಲಸದ ಪೊಚ್ಚ ಪದುಮುವಿಟ್ಟಿರ್ದರೊಳು ಮಂಗಲ ಮಜ್ಜನಗೆಯ್ದು (ಜೀಹತ. ೨೦-೩); ಕೊರಲೊಳೊಪ್ಪುವಚ್ಚ ಪೊಚ್ಚಚ್ಚಸರಂ ಮುಕುತಿವೆಣ್ಣ ಸಿರಿಗೊರಲ ಕರ್ಮಣಿಸರವನಡಿಗೊತ್ತೆ (ಧರ್ಮಾಶ್ವ. ೦೭೯-೦೯). 'ಪೊಚ್ಚ ಮುತ್ತು', 'ಪೊಚ್ಚ ವಚ್ಚ' ಪರಾ. ಹೊಚ್ಚ : ೨. ಕಾಲರಾಯನ ಬೆರಳುಂಗುರದೊಳು ಗಾಡ ಮಿರುಗುವ ಹೊಸ ಹೊಚ್ಚಹರಳು (ಅಜಾತ. ೨೨೦-೯೮). [<ಪೊಸ]

**ಪೊಚ್ಚ₂** (ನಾ). ೧. ತಪ್ಪು ; ದೋಷ : ತಾನೆಚ್ಚಂ ಪೊಚ್ಚಮಲ್ಲದರಿ ವಾಹಿನಿಯಂ (ಶಬುಕ. ೨೨೪ ಕ್ರಹೋ). 'ಪೊಚ್ಚಂಬೋಗು' ಪರಾ. ೨. ಕಳಂಕ ; ಮಾಲಿನ್ಯ : ಪಂಚೇಂದ್ರಿಯಪ್ರಾಣಿಗಳೊಳಂ ಪೊಲ್ಲರಪ್ಪ ತಿರ್ಯಗ್ಮನುಷ್ಯರ್ಕಳ ಆಸಾರವಾಗಿ ಪೊಚ್ಚಮಪ್ಪ ಔದಾರಿಕಪೊಲ್ಲ ಶರೀರಂಗಳುಂ (ಪುರಾಶ. ೯೯). [ದೇ.೫ ತಮಿ. ಪೊಚ್ಚ, ಪೊಚ್ಚ್ಯು, ಪೊಕ್ಕ ; ಮಲ. ಪೊಕ್ಕ ; ತೆಲು. ಪೊಚ್ಚ, ಪೊಚ್ಚೆ]

**ಪೊಚ್ಚ₃** (ನಾ). ಹೊಳೆ ; ತೊರೆ ; ಪ್ರವಾಹ : "ಪೊಚ್ಚಂ=ಪೊಟಿ" (ಕಬುಕ. ಶು. ೨) ; ಕುಳುವೈಷ್ಣವ ರಹಸ್ಯದೊಳು ತಲ್ಲಿಂಗವಂ ಮೇಳೈಸಿ ಕೊಳುತೊಂದು ಪೊಚ್ಚದೊಳು ಹಾಯ್ಕೆಯಾಮೇಲೆ ವೆಟ್ ವೀರನಾರಾಯಣ ನೆನಿಪ್ಪ ಪ್ರತಿಮೆಯನಲ್ಲಿ ನೆಲೆಗೊಳಿಸಲು (ಹಲಸೋಕ್ಷ. ೦೦-೩೯) ; ತಡಿಯೊಳ್ನೀರ್ಗೊಂಬ ಕಾಡಾನೆಗಳಿಂ . . . ಮತ್ಸ್ಯಂಗಳಿಂ ಪಂಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಚ್ಚಂ ಪೊದಳ್ದೊಪ್ಪದಿಂದಂ (ಧಾಮಾ. ೬-೨೩) ; ಇಾತು ಮುಂಗಾರ್ ತರೆದೋಱ ತಿರವೆಣ್ಣೆ ಮುಗಿಲ್ಗೊಂದಿಯೊಳ್ ಬಳ್ಳಿ ಮರಿವ ನೇಹದಿಂ ಬೆಳ್ಳಂಗೆಡವ ಸೊಗದಾಲಿಸೀರೆನೆ ಪೊಚ್ಚಂ ಪೆರ್ಚಿ ಪರಿದುದು (ಧಾಮಾಶ್ವ. ೩-೦೯). 'ಬಾಂಬೊಚ್ಚ' ಪರಾ.

**ಪೊಚ್ಚ₄ ?** (ನಾ). (?) : ಪೆಸರ್ಗಳ್ಕೆತ್ತು ಸಮಸ್ತಪೇಚರಬಲಂ ತೇಜಕ್ಕೆ ಬೆರ್ಚಿತ್ತು ಮುಂ ಪೊಸಪೊಚ್ಚಂ[ಪಾಠಾಂ. ಪೊತ್ತಂ, ಪೊಟ್ಟಂ, ಪೊರ್ತಂ] ಬೆರಸಿರ್ದ ಭೂಚರಬಲಂ . . . ಎಂಬ ಗುಣಸಂಘಾತಂಗಳಂ ತಾಳ್ದಿ ಪಂಪೆಸಕಂಬೆತ್ತಿರೆ ಸಂತಮಿಂತತಿಬಳು ರಾಜ್ಯಂಗೆಯುತ್ತಿರ್ಪಿನಂ (ಅಂಪು. ೦-೭೮). [ ? ]

**ಪೊಚ್ಚಂಬೋಗು** (ಕ್ರಿ). ೧. ದೋಷಯುಕ್ತವಾಗು ; ಕಳಂಕ ಹೊಂದು : ಮಚ್ಚರದಿಂ ಜಿನಮತಮಂತುಚ್ಚಳನಪ್ಪನ್ಯಸಮಯಿ ಪೊಲ್ಲಂದೊಡದೇಂ ಪೊಚ್ಚಂಬೋಕುಮೆ ವಾಯಸ ವೆಚ್ಚಮನಿಕ್ಕಿದೊಡೆ ವಾರ್ಧಿಗಕ್ಕುಮೆ ಭಂಗಂ (ಕಮಕ. ೦೩-೫೦); ಮಚ್ಚಂ ರಾಗದ್ವೇಷಂ ಮೆಚ್ಚವೆಯೆಂದಾಗೆ ಕೆಟ್ಟರೀ ಯೆರಡಱೊಳಂ ನಚ್ಚುವುದಾಸೀನಂ ತಾಂ ಪೊಚ್ಚಂಭೋ[ಬೋ]ಗದೆ ತಗುಳ್ದೊಡಪವಟ್‌ಯದುದೇ (ಜನಸಂ. ೦೭೦ ೦೩). ೨. (ಆಲಂ) ಹುಸಿಯಾಗು : ಪೊಚ್ಚಂ[ಚ್ಚಂ]ಬೋಗದ ಶೌರ್ಯಮದಚ್ಚರಿಯಾಗಿರೆ ವ್ಯಗಾರಿಯಂ ಪೊಕ್ಕಬಲಿಂ ಮಚ್ಚರಿಸಿ ಕೊಂದು ನಚ್ಚಂ ಮೆಚ್ಚೆ ಜಗಂ ತಗುಳೆ ಪೊಗಟ್ ನೆಗಚ್ಚಂ ಕೃಷ್ಣಂ (ಶರ್ಪಪು. ೩-೨೩). [ ಪೊಚ್ಚ₂ + ಪೋಗು₁ (<ಪೋ₁) ]

**ಪೊಚ್ಚಮುತ್ತು** (ನಾ). ಹೊಸದಾದ ಮುತ್ತು ; ಕಾಂತಿಯಿಂದ ಕೂಡಿದ ಮೌಕ್ತಿಕ : ಆಳದೊಳಗೆ ಏನೋ ಒಂದು ಪೊಚ್ಚಮುತ್ತಿನಂತಿದೆ (ಶ್ರರಸ. ೨೩-೦೦). 'ಪೊಸಮುತ್ತು' ಪರಾ. [ಪೊಚ್ಚ₁+ಮುತ್ತು₁]

**ಪೊಚ್ಚರ** 'ಪೊಚ್ಚಱು₂' ನೋ.

**ಪೊಚ್ಚವಚ್ಚ** (ನಾ). ಹೊಸ ಆಭರಣ; ನೂತನವಾದ ಅಲಂಕಾರ : ಪಚ್ಚಮಣಿಭರಣಂ; ಪಾವುವಚ್ಚಂ, ಪೊಚ್ಚವಚ್ಚಮಿತ್ಯಾದಿ (ಶಬ್ದಾಶು. ೪೪೦ ವ್ಯಾ.ಪ್ರಾ.). [ಪೊಚ್ಚ₁+ವಚ್ಚ₁]

**ಪೊಚ್ಚಳ** 'ಪೊಯ್ಸಳ' ನೋ.

**ಪೊಚ್ಚಱ** 'ಪೊಚ್ಚಱು₂' ನೋ.

**ಪೊಚ್ಚಱತನ** (ನಾ). ಅಹಂಕಾರ ; ಹೆಮ್ಮೆ ; ಗರ್ವ : ಮುಱಿದಪ್ಪಡ ಮೆಂದುಂ ನುಡಿದಱಿಯಂ ದಿಟಮಪ್ಪ ನುಡಿಗಳಂ ಮಱದ ಪೊಚ್ಚಱತನದಿ ನುಡಿವನೆನಿಸಿಲ್ಲಱಗುಲಿಗಂ ಮೊಗ್ಗೆ ಸೂನೃತವ್ರತವೆಂತುಂ (ಸಮುಕ. ೫-೪೦). [ ಪೊಚ್ಚಱ (< ಪೊಚ್ಚಱು₂) + -ತನ ]

**ಪೊಚ್ಚಱಿಸು** (ಕ್ರಿ). ೧. ಗೋಚರಿಸು : ಪ್ರಕಟವಾಗು : "ಏಗೆ ಪೊಚ್ಚಱಿಸಿತೆಂದು ಕಣ್ಣಾಲಿದುದೆಂದಿರದ ಪೊಡಕಂಸಿತಕೆ ನಾಮುಮಕ್ಕಂ" (ಕಕ್ಕೈ. ೭೯) ; ತಱಿದು ನಿಶಿತಾಸ್ತ್ರದಿಂದಂ ತೆಱಪಾಗಿರೆ ದಿವ್ಯಬಾಣದಿಂ ನಿಟ್ಟಿಸೆ ಪೊಚ್ಚಱಿಸೆ ಶಿಶುಪಾಳಶಿರಮಂ ಪಱಿಯೆಚ್ಚಂ ಕೃಷ್ಣನುಷ್ಣತೇಜೋ ನಿಳಯಂ (ಶಂಖಪು. ೭-೩೫) ; ಕಱುಪೆಳಗಿಂದ ಧರ್ಮಧ್ಯಾನರೂಪ ಪೊಚ್ಚಱಿಪ ಮಹಾಪ್ರಭೆಯಿಂದ ವಿಱುಪ ಶುಕ್ಲಧ್ಯಾನರೂಪ ನನ್ನದೆಯೊಳರೆಱಿಯ ಚಿದಂಬರಪುರುಷಾ (ಜಕಶ. ೫೯-೦೦೩). ೨. (ಗರ್ವವನ್ನು) ತೋರ್ಪಡಿಸು ; ಪ್ರದರ್ಶಿಸು : ಆಗಳಾನೇಱಪೆನೆಂದು ಪೊಚ್ಚಱಿಸಿ ಬಂದು ಸುಯೋಧನನನುಗ್ರಹಾಪಮಂ ಮಱಱಿಸೂಟ್ ಬಲವಂದು ಪೊಡಮಟ್ಟು (ಶಂಕರಾ. ೩-೩೬) ; ಕೆಲಬರೆಮ್ಮಂ ಮುನ್ನಿಱಿವರಾರೆಂದು ಪೊಚ್ಚಱಿಸಿ ಕೈದುವೆತ್ತಯುಂ (ವರ್ಧಮಾ. ೯-೩೯ ವ). ೩. ಗರ್ವಪಡುವಂತೆ ಮಾಡು; ಹೆಮ್ಮೆಪಡುವಂತೆ ಮಾಡು ; ಉಬ್ಬಿಸು : ಮಱಯದಹೋರಾತ್ರಂ ಕಯ್ಯಱದಿಲ್ಲದ ಗುಣಮನಂತೆ ಬಡದೇಱಿಸಿ ಪೊಚ್ಚಱಿಸುತ್ತಮಿರ್ದ ಪಿಡ್ಗರ್ಗಱುವರಱಿಲ್ಲದವನಿಪಾಲರ್ ಜಗದೊಳ್ (ಕಾರಂಪು. ೫೭೦). ೪. ಎಚ್ಚರವಾಗು ; ಜಾಗೃತಗೊಳ್ಳು : ಕುರುಪತಿಯಂತಿರೆ ಕಂಡಾ ಗುರುತನಯಂ ಮುನಿದು ರೌದ್ರರುದ್ರನ ತೆಱದಿಂ ಪಿರಿದಿರುಳೊಳಿಱಿದು ಕೌಂತೇಯರ ಬೀಡಂ ಕೂಡೆ ಪುಗಿ ಕೊಲ್ವುದುಮಾಗಳ್ ನೆಱದಿರದೆ ಗುರುಜನಂ ಪೊಚ್ಚಱಿಸೆ ಕಱುತ್ತಱದ ತಾಗೆ . . . ತಱದಂ ಭೋಂಕಲ್ (ಶಂಪು. ೦೨-೨೦೭). [ಪೊಚ್ಚಱು₁ + -ಇಸು]

**ಪೊಚ್ಚಱು₁** (ಕ್ರಿ). ೧. ಗೋಚರಿಸು ; ಪ್ರಕಟವಾಗು ; ಕಾಣು : "ಪೊಚ್ಚಱು—ಸ್ಫುರಣೇ (ತೋರ್ಪಡು)" (ಕಮಕ); ಉಱದೆನ್ನಂ ಮಾಯೆಯಿಂ ಬಂಚಿಸಿ ಮಹಿಜೆಯನೆಂತೊಯ್ದನೊಯ್ದಂದದಿಂ ಪೊಚ್ಚಱದಿನ್ನಂ ತೋರ್ಕೆ ಸಂಗ್ರಾಮದೊಳೆದೆಗಡಿದಾ ಕೋಳ್ಗಳಿರ್ಪತ್ತುಮಂ . . . ಮೆಟ್ಟಿ (ಕ್ರಂಗಾರ. ೦-೭೦) ; ಪೆಱತೊಂದು ಸಕ್ಕಲೋಕದ ಪೊಱಪಳೆಯದೊಳಂಡ ಭಿತ್ತಿಯೊಳವಯಲೊಳ್ ಪೊಚ್ಚಱುವುದು ಪರಮೈಕಂತದ ಮಱಯೆನೆ ಕಾನೊಂದುಕೋಟಿಯೋಜನಮಾನಂ (ಕಳಶ. ೫-೦೯೦). ೨. ಬರು ; ಒದಗು : ಪೊಚ್ಚಱುಗುಂ ತೃತೀಯ ಬಂದಂತಱನೊಬ ಪದಕ್ಕಮಾ ಎಕಾರ ಕ್ಕಿತರಂ (ಶಮತ. ೪೦೭).

**ಪೊಚ್ಚಱು₂**, ಪೊಚ್ಚರ, ಪೊಚ್ಚಱ (ನಾ). ೧. ಹೆಮ್ಮೆ ; ಗರ್ವ; ಅಹಂಕಾರ: ಪಾಂಚಾಳಿಯನೆಱವದಟೇನಾದುದೋ ಗಂಡ ಪೇಟ್ ಪೊಚ್ಚಱನಂತಾ ಮಾತುಮಿಂತೀಯರ[ವೆನೆ] ನಗೆಯಂ ಮಾಡಿದ್ದೆ (ಪ್ರಶಕಾ. ೦೩-೭೭) ; ತಳ್ತ ಱಯಲ್ಕುಮುಕರೊಳ್ ಮನೋಭವನೃಪಂ ಮೇಲಿತ್ತಿದಂ ನಾಡೆ ಪೊಚ್ಚಱು ಬೇಡೆಂಬಪೊಲರ್ವ ಕಾಮಿನಿ ಬಸಚ್ಚ್ರಂಗಾರದಿಂದೊಪ್ಪಿದಳ್ (ರಘಾಪು. ೭-೨೦೩) ; ಕಱಯನಿವಂ ಪ್ರಾಯದೊಳೆಂದುಱದೆನ್ನಂ ನುಡಿವುದಳವೆ

ಬಲ್ಪಿನೊಳೆನ್ನೀ ಕಱುಕಣಿಕೆಗೆ ನೆಱೆಯ್ದ ಪೊಚ್ಚಱನೊಳದೇಂ ಪೊಣರ್ದುರ್ ನೋಡಲಾಗದೆ ಕನ್ನಂ (ಶಾಂಪು. ೧೧-೩೪). ೨. ಎಚ್ಚರ: 'ಪೊಚ್ಚಱಸು', 'ಪೊಚ್ಚಱುಗೆಡು' ಪದಾ. ೩. ಪರಾಕ್ರಮ; ಶೌರ್ಯ: ಆತನಂ ಕಾಗ ತಳ್ತಿಱಿಯಲ್ ಕೋಡಗಗಟ್ಟುಗಟ್ಟ ತರಲಿನ್ನಾರಾರ್ಪರಂತಪ್ಪ ಪೊಚ್ಚಱ ಸಾವಂತರೆ ಪೋಗಿಂ (ಶಂಪಾ. ೩-೨೦), ಗುರುವಂ ಪ್ರೋಜ್ಝಿತ ಚಾಪನಂ ಪುಸಿದು ಕೊಂದಾ ಬೀರವಂ ಭೀಷ್ಮರಂ ಶರಶಯ್ಯಾಗತರಂ ಕಱುತ್ತು ಗುಱಿಯೆಚ್ಚಾ ಪೊಚ್ಚಱಂ . . . ಪಾಂಡುಪುತ್ರರ ಬಲ್ಲರ್ (ಗದಾಯು. ೩-೩೩). ೪. ತೇಜಸ್ಸು; ಕಾಂತಿ: ರತಿಯಚಿರೂಪವಂ ಸಿರಿಯ ಪೊಚ್ಚಱನಾ ಮುನಿಪತ್ನಿಯಪ್ಪರುಂಧತಿಯ ಸುಶೀಲವಂ . . . ಎಲ್ಲವನೊಂದುಗೂಡಿ ಪಾರ್ವತಿ ಸಮೆದಂತೆ ಕಣ್ಗೆಸೆವುತಿರ್ದಳವಳ್ಗನಿಂಪ ನೀವುತುಂ (ಶಿಕಾ. ೯-೩). ೫. (ಪ್ರಕಟವಾದ) ತೀವ್ರತೆ; ತೀಕ್ಷ್ಣತೆ: ಪಾತ್ರಾರ್ವಂ ಬಸನದ ಮೊಚ್ಚು ಪೊಚ್ಚಱಾದ ಇಚ್ಛೆಕಾಱನಿಂತೆಂದಂ (ಅಶಂಪು. ೬-೩೩ ಅ). ಪೊಚ್ಚರ: ೬. "ಸ್ಫುರಣ, ಆವೇಶ" (ಕಾಂರ. ಕೋಶ): ಕಡಿದು ಮೋಱ್ ಬೋಳನು ಬಡಿದು ಕಮ್ಮಾರಗಿಕ್ಕ ತೊಡಗಿರ್ಪ ಯೋಂ ಮುದುಮೆ? ಪೊಚ್ಚರೇನೊಪ್ಪಂ (ಕಾಂರ. ೦೩೦-೩೩೯). ಪೊಚ್ಚಱ: ೩. ಏತಱೊಂದು ಪೊಚ್ಚಱದ ಮಾತಿನೊಂದು ನಿಱಿಗೆಯೊ! ಲೋಗರೊಳ್ ಬಲ್ಲರ್ ತಮಸ್ಮಾಳ್ತನದ ಪೆರ್ಚಳಿಕೆಯುಂ ಗಳಪುಪರೆ? (ರಾಮಾಶ್ವ. ೬೩-೨೩); ಕಬ್ಬಿಗರ್ಗೆ ನೀಂ ಕಲ್ಲಾಯ್ತನಕ್ಕಂ ಎಂದುಂ ಕಾಣದರೊಂದು ಪಾಂಗಿನಿಂ ಪೇಟ್ದ ಪೊಚ್ಚಱದ ನಿನ್ನೀ ಬಣ್ಣನೆಯ ನುಡಿಗೇನೆಂಡೆನೊ! (ರಾಮಾಶ್ವ. ೬೭-೨೭). [< ಪೊಚ್ಚಱು$_1$]

**ಪೊಚ್ಚಱುಗಿಡಿಸು** (ಕ್ರಿ). ತೀವ್ರತೆಯನ್ನು ಕಡಮೆಮಾಡು: ಪೊಱಮಟ್ಟು ಕೋಪದಿಂ ಮೆಯ್ಯಱಿಯದೆ ತನ್ಮನಿಯ ತಪಮನೇಗೆಯ್ದುಂ ಪೊಚ್ಚಱುಗಿಡಿಸಿ ತರ್ಪೆಮೆಂಬೊಂದಱಿಕೆಯಿನವರೆಯ್ದೆವಂದರಾ ಗಿರಿವರಮಂ (ರಘುಚರಿತ್ರ. ೬-೭೯). [ಪೊಚ್ಚಱುಗಿಡು (< ಪೊಚ್ಚಱುಗೆಡು) + – ಇಸು$_3$]

**ಪೊಚ್ಚಱುಗಿಡು** 'ಪೊಚ್ಚಱುಗೆಡು' ನೋ.

**ಪೊಚ್ಚಱುಗೆಡು, ಪೊಚ್ಚಱುಗಿಡು** (ಕ್ರಿ). ೧. ಶೌರ್ಯಗುಂದು; ಹೆದರು: ಪೊಱಮಟ್ಟಂ ಲಲಿತಾಂಗನನೊಡವರ್ಬಳ್ಕುತ್ತುಮಳ್ಕುತ್ತೆ ಪೊಚ್ಚಱ(ಱು)ಗೆಟ್ಟೋಡುವರ್ (ರಘುಚರಿತ್ರ. ೨-೬೬). ೨. ಎಚ್ಚರ ತಪ್ಪು: ನಚ್ಚುವುದೊಂದಂಬಂ ತೊಟ್ಟೆಚ್ಚೊಡೆ ನೆಱೆಗೊಂಡ ಸರದೊಳಾಗದೆ ಕರ್ಣಂ ಪೊಚ್ಚಱುಗೆಟ್ಟುಱಿದಾಡಂ ಕಚ್ಚ ಮಹಾರೌದ್ರಭಾವದಿಂದಂ ಕೆಡೆದಂ (ಶಾಂಪು. ೦೨-೯೩). ೩. ಶೋಭೆಗೆಡು; ಅಂದಗೆಡು; ಹಾಳಾಗು: ಪೆಱತೇನೊ ಪಲವುದಿವಸಂ ಪೊಱಗಿರ್ದೊಡೆ ಕಿಡದ ವಸ್ತುಗಳ್ಗನುಮನಿದಂ ನೆಱೆ ಪೊರ್ದಿದನಿತಱೊಳೆ ಪೊಚ್ಚಱುಗೆಟ್ಟು ಮಲಂಗಳೆಂಬ ಪೆಸರಂ ಪಡೆಗುಂ (ರಘುಚರಿತ್ರ. ೭-೦೯೦). ಪೊಚ್ಚಱುಗಿಡು: ೨. ಮನುಷ್ಯಲೋಕ ಸುಖಮಸ್ಥಿರಮೆಂದಱಿಪಿಂದೆ ಸೋಲ್ತು ಪೊಚ್ಚಱುಗಿಡದಮ್ಮ ಜೀಯೆನಿಸಿ ಯಿಪ್ಪೊಡಲಂ ಜಿನದೀಕ್ಷೆಗೊಡ್ಡಿ ಮಿತ್ರಱಿಕೆಯ ಮಱುಮಾಱು ಮುಮನೊರ್ವರೆಯಿ ಬಿಟ್ಟು (ರಘುಚರಿತ್ರ. ೯-೦೬೩). [ಪೊಚ್ಚಱು$_1$ + ಕೆಡು$_1$]

**ಪೊಚ್ಚಱುವಳಿ** (ನಾ). ಹೊಳೆಯುವ ಬಟ್ಟೆ; ಕಾಂತಿಯುಕ್ತವಾದ ವಸ್ತ್ರ: ಮಿಱುಪ ಕುಸುಮಾಯುಧಕೆ ಪೊನ್ನೊರೆಯಂ ಸೇರಿಸುವ ತೆಱದೆ ಪೊಂಬಣ್ಣದ ಪೊಚ್ಚಱುವಳಿಯನುಡಿಸಿದರ್ಕಱುವಱನೊಸಲಂಗನೆಗೆ ಕೋವಿದ ಯುರತಿಮುದದಿಂ (ಶಿಕಾ. ೯-೯೩). [ಪೊಚ್ಚಱು$_2$ + ಪಳಿ$_4$ (< ಪಟ್$_1$)]

**ಪೊಚ್ಚು** 'ಪೊದೆಯಿಸು' ನೋ.

**ಪೊಟ್** (ನಾ). ಒಂದು ಅನುಕರಣಶಬ್ದ: ದಪ್ಪರಿದಟ್ಟಂ ಪೊಟ್ಟನೆ ದೊಪ್ಪದೊಗಪ್ಪನೆ ದಿಧಿಲ್ಲುಧಿಲ್ಲನೆ ಗದೆಗಳ್ ಸೊಪ್ಪುಸೊವಡಪ್ಪನಂ ಸೂಟ್ಟಪ್ಪದೆ ಕಡುಕೆಯ್ದು ಪೊಯ್ದುರೊರ್ವರನೊರ್ವರ್ (ಗದಾಯು. ೮-೦೦).

**ಪೊಟರೆ** 'ಪೊಟ್ಟರೆ' ನೋ.

**ಪೊಟೆವಾಡಿ** (ನಾ). ಒಂದು ಊರಿನ ಹೆಸರು: ತಸ್ಯ ಸೀಮೆ ಮೂಡಾಯ್ಪರ್ವಳ್ಗಮ ಪೊಟೆವಾಡಿಯ ಸೀಮೆಯುಳ್ ಕೂಡಿತ್ತು (ಎಕ. IV. ಹುಣ. ೯-೬: ಕ್ರಿ. 750). [ಪೊಟ್ಟೆ$_3$ + ವಾಡಿ$_2$]

**ಪೊಟ್ಟಗೆ** (ಅ). ಒಂದು ಅನುಕರಣಾವ್ಯಯ; 'ಪೊಟ್' ಎಂಬ ಶಬ್ದದೊಡನೆ: ಘಟ್ಟಿಸಿದ ಕೀಟ ಘಟ್ಟಣೆಯೊಳ್ ಪೊಟ್ಟಗೊಡೆದ ಕಾಳುಗೆಗಳ ರುಧಿರಜಲದೊಳ್ ಬೆರಸಿ (ಶಂಕಶಾ. ೦೨-೮೦ ವ); ಬಡಿವ ಬಡಿಗೆಗಳ ಕೋಳೊಳ್ ತೊಡೆಯುದು ಸಲೆ ಪೊಟ್ಟಗೊಡೆದು ಕಡಿವಡೆದಿತ್ತಂ ಪುಡುಪುಡನೆ ಪುರ್ಗೆ ಜೋಲ್ದಿಟಲ್ಪಡಗಾಗಿ ಸುರುಳ್ದು ಸುರುಳ್ದು ಬಾಯ್ದುಟ್ಟಿರ್ದಂ (ಸಂಕುಮಾ. ೩-೦೩). [ಪೊಟ್ + – ಅಗೆ$_2$]

**ಪೊಟ್ಟಣ** 'ಪೊಟ್ಟಳ' ನೋ.

**ಪೊಟ್ಟಣಂಗಟ್ಟು** 'ಪೊಟ್ಟಳಂಗಟ್ಟು' ನೋ.

**ಪೊಟ್ಟಣಗಟ್ಟು** 'ಪೊಟ್ಟಳಂಗಟ್ಟು' ನೋ.

**ಪೊಟ್ಟಣವಾರಿ** (ನಾ). ಪೊಟ್ಟಣಗಟ್ಟಿದ ನೀರು; ದೊನ್ನೆಯ ನೀರು: ಬನಮೆ ಬನಕ್ಕೆ ಬಾವರಿಗೆ ಬಂದಪೊಲಾದುದು ತಂಡತಂಡದಿಂ ಮುನಿಗಳ ಕೆಯ್ಯ ಉಂಚಣಿಗೆ ಚಾಂದ್ರಮಾಸೀದಳಕಾಂಡಿಕಾಳಿ ತಜ್ಜನಭವನಕ್ಕೆ ದುಗ್ಧನಿಧಿ ಕಟ್ಟಿದ ಪೊಟ್ಟಣವಾರಿಗಟ್ಟದತ್ತನಿಸಿದುದಿಂದು ಸಾಧುಜನಸಂಗ ಸಮಾಗಮನಪ್ರಪಂಚದೊಳ್ (ಅಪು. ೩-೩೦); ನೀರ ತಾರ್ಕೆ ಹೋಗು ನಳಿನ ಸರೋರುಹದ ಪತ್ರದಲಿ ಪೊಟ್ಟಣವಾರಿಯನು ಕಟ್ಟೆಂದು ಕುಂತೀಸೂನು ನೇಮಿಸಿದ (ಕುಮಾ.ಭಾ. ೨೩-೦೨). [ಪೊಟ್ಟಣ (< ಪೊಟ್ಟಳ) + ವಾರಿ$_2$]

**ಪೊಟ್ಟಣಿಸು** 'ಪೊಟ್ಟಳಿಸು' ನೋ.

**ಪೊಟ್ಟನೆ** (ಅ). ಒಂದು ಅನುಕರಣಾವ್ಯಯ; 'ಪೊಟ್' ಎಂಬ ಶಬ್ದದೊಡನೆ: ಪಾರ್ಥನ ದೇವದತ್ತನಿಸ್ವನದೊಳೆ ಕಿವಿ ಪೊಟ್ಟನೊ[ಡೆದ ಶಂಖಂ. ಗೊ]ಡೆವಂತೆವೊಡಾಮದಜಾಂಡಮಂಡಳಂ (ಶಂಕಶಾ. ೧೧-೦೪೩); ಬೀಸಿ ಕರಮೆತ್ತಿ ಪೊಯ್ದಡೆ ಸೂಸೆ ಮಿದುಳ್ ಪೊಟ್ಟನೊಡೆಯೆ ತಲೆ ಕರವಿಂ ತೊಂದಾಸುರಮಾಗಿರೆ ಕೊಂದು ವಿಭಾಸುರತೇಜದೊಳೆ ತಂದೆಯಲ್ಲಿಗೆ ಮಗುಟ್ದಂ (ಶಾಂಪು. ೩-೩೬). [ಪೊಟ್ + – ಅನ್ನೆ$_1$]

**ಪೊಟ್ಟಮುಡುಹ, ಪಟ್ಟಮುಡುಹು** (ನಾ). ಮಲ್ಲಯುದ್ಧದಲ್ಲಿ ಒಂದು ವರಸೆ: ಅಂ ಒಡಿದುದೆ ಕತ್ತರಂ . . . ಪೊಟ್ಟಮುಡುಹಂ ಮುಹಡಂ ದಣಿಪಟ್ಟ ಪಟ್ಟಸಂ (ಅಶಂಪು. ೨-೩೭). ಪಟ್ಟಮುಡುಹು: ಚಿಮ್ಮಿಱುಡಿತಯ ಸೆಳೆದು ಮುಡುಹಿನಲಾಕಿ ಬಿಗಿದರು ಪಟ್ಟಮುಡುಹಿನಲಿ (ಕುಮಾ.ಭಾ. ೨-೯೬). [?]

**ಪೊಟ್ಟರೆ, ಪೊಟರೆ, ಪೊರಟೆ** (ನಾ). (ಮರ, ಕಲ್ಲು ಮುಂತಾದುವುಗಳಲ್ಲಿರುವ) ಡೊಗರು; ಹೋರು; ರಂಧ್ರ: ಕಾಗೆಯು ಆ ಮರದ ಪೊಟ್ಟರೆಯಲ್ಲಿಯಿರುವ ಕೃಷ್ಣಸರ್ಪದಿಂದ ಭಕ್ಷಿಸಲ್ಪಟ್ಟ ತನ್ನ ನೂರಾರು ಮರಿಗಳಂ ತಿಳಿದು (ಸೌಗಂಧಿ. ೩೬೬-೦೯); ನಾರಾಯಣನು ಯಾರಿಗೂ ಕಾಣದಂತೆ ಊರ ಹೊರಗಣ ಒಂದು ದೊಡ್ಡಮರದ ಪೊಟ್ಟರೆಯನ್ನು ಸೇರಿ ಅನ್ನನೀರುಗಳಿಲ್ಲದೆ ಮೂರು ದಿನಗಳಿದ್ದನು (ಕಥಾ.ಕಿ. ೦೩೭). ಪೊಟರೆ: ಪಕ್ಷಿಗಳೆಲ್ಲ ಸಂಚಾರವಂ ಬಿಟ್ಟು ಕಲಕಲಧ್ವನಿಗಳಂ ಮಾಡುತ ಮರಗಳ ಪೊಟರೆಗಳಲ್ಲಿ . . . ಸೇರಿ (ಸೌಗಂಧಿ. ೦೯೯-೦೬): ಮನೆಯ ಹದಿಗೆ ಹಾಕಿರುವ ಕಲ್ಲುಗಳ ಪೊಟರೆಗಳಲ್ಲಿ ಕಿರಿಜೇನು, ದುಂಬಿಗಳು ಒಂದು ವಿಧವಾದ ಜೇನನ್ನು ಶೇಖರಿಸಿಡುತ್ತಿದ್ದವು (ಹುಲ್ಲಿಹ. ೦೩೩). ಪೊರಟೆ: ಆ ಕೋಡಗಿಕಾದಂ ಕೂಡಿ ಕುರುವಿಯಾಗಿರ್ದುದಱ ಪೊರಟೆಯೊಳ್ಪೆತ್ತಗಿಳ್ಪತ್ತು ಪೋತುಗಳಾಗೆ (ಕುಶ್ರು. ೯-೩೩ ವ). [ದೇ. || ತುಳು. ಪೊಟ್ರೆ]

**ಪೊಟ್ಟವಟ್ಟಳೆ** (ನಾ). (?) : ಬಳಸುವೇಱುವ ಸುಟಿಪಗಲ್ಪಿನ್ನಪ್ಪ ಚಾರಣದೋಷಮಲ್ಲದೆ ಪೊಟ್ಟವಟ್ಟಳೆಗೆ ಸಮನಾಗೆ ಗಿರಿಗೆಯ ಕೋಲ್ಮುಟ್ಟ

ಮಿಗಲುಂ ನೆಲಲುಮಣಮಿಾಯದಿನ್ನೊನ್ನಳವಿಯೊಳ್ ಬರೆ (ಎಕ. II, ೦೬೬-೯೦ ; ೪೩೩). [ ? ]

**ಪೊಟ್ಟವಣೆ** (ನಾ). [ಸಂಗೀತ] (?) : ತಾನು ಮೊದಲವು ಮಾನ್ನವವ ಱೊಳು ಗಾನಮೊಪ್ಪುವ ದಂಡಿಗೆಯನವಧಾನಿಸಲ್ಕೆ ಮಿಗೆ ಮೇಘಡಾಳವ ನೊಡನೆಯೌತಾಣಮೂನಿತಂ ನವತಾಣಮುಂ ಸಂಧಾನಮುಮರಂ ತಾಳ ಪಕ್ಕ್ಯಮನೂನಪತ್ರಂ ಪೊಟ್ಟವಣೆ ಸಾರಣಮುಲರ್ದಿರಲು . . . ಬಾಜಿಸುತಾ ವಿಮಳರಾಗದೊಳಿ (ಬಸವ. ೦೯-೮). [ ? ]

**ಪೊಟ್ಟಳ, ಪೊಟ್ಟಣ, ಪೊಟ್ಟ** (ನಾ). ೧. ಕಾಗದ, ಎಲೆ ಮೊದಲಾದುವು ಗಳಿಂದ ಕಟ್ಟಿದ ಪುಡಿಕೆ, ದೊನ್ನೆ ಇತ್ಯಾದಿ : ಜೀವಿತಮರಣಂ ಗಳೆಂಬಿವಱೆಟ್ಟಳಮುಂ ಪುಸಿಯ ಪೊಟ್ಟಳಮುಮಕ್ಕುಂ (ಜಾತ. ೬-೦೩೫); ಕಾಂಚನದ ಪೊಟ್ಟಳ ಜವಾದಿಯ ವಂಕಿ ಪೊಡರ್ವ ಗಂಧದ ಸಿಪ್ಪು ಕರ್ಪುರದ ನಾಳಿಗಳ ಪಿಡಿದೊಡನೆ ನಡೆದರೊಲಿದು (ಚನ್ನ. ೬-೭) : ಸರ ಕಾರದ ಸಾಲದ ಪತ್ರಗಳನ್ನು ಕರಿಯ ಮುದ್ದಿನ ಪೊಟ್ಟಳಗಳನ್ನು ಕಟ್ಟುವ ದಕ್ಕಾಗುವಯೋಗಿ . . . ಸುಟ್ಟು ಬಿಟ್ಟನು (ಗುಣ. ೮೬). **ಪೊಟ್ಟಣ :** ೧. "ಪೊಟ್ಟಣ(ಳ)-ಪುಟ = ಎಲೆ-ಕಾಗದಗಳ ಬುಟ್ಟಿ" (ಅಭಿ. ೨೭) : ಅಭ್ಯರ್ಣಪಾದಪಸ್ಫುಟಿತ ಪಲ್ಲವಂಗಳೊಳಂ ಕಟ್ಟಿದ ಕರ್ಪೂರರಜದ ಪೊಟ್ಟಣಂಗಳೊಳಂ ಸ್ವೇದಪ್ರತೀಕಾರಮನನವರತಂ ಮಾಡಿಯುಂ (ಶಾಂ. ೪೩೩) : ಬಾಳ್ಗನ್ನ ಭಾಳಾಕ್ಷನನುತೆ ಪಿನಾಕಿ ಕೊಟ್ಟ ಪೊಟ್ಟಣಮಂ ಬಿಟ್ಟು ಭಕ್ತಗಿತ್ತು (ಬಸವ. ೬-೦೪); ಕಿಸೆಯಲ್ಲಿ ಅವಿಕೆಯ ಪೊಟ್ಟಣವಿದೆ, ತಂದು ಕೊಡು (ಕೀರ್ತ. ೦೦೬). ೨. (ಹಣ ಮೊದಲಾದುವುಗಳ) ಕಟ್ಟು; ಗಂಟು; ಥೈಲಿ: ತನ್ನ ಕಯ್ಯೊಳಿರ್ದ ಸಾಸಿರಗದ್ಯಾಣದ ಪೊಟ್ಟಣಮಂ ಸುವತಿಯ ಕಯ್ಯೊಳ್ ಕೊಟ್ಟು (ಸುಕುಮಾ. ೭-೨೮ ವ). **ಪೊಟ್ಟ :** ೧. ಅಂಗಡಿಯಿಂದ ತಂದ ಕಾಫಿಪುಡಿಪೊಟ್ಟ ಒಡೆದುಹೋಗಿದೆ (ಆಡು).
[ದೇ.॥ ತಮಿ. ಪೊಟ್ಟಲಿ, ಪೊಟ್ಟಣ, ಪೊಟ್ಟಲ; ತುಳು. ತೆಲು. ಪೊಟ್ಲ, ಪೊಟ್ಟ]

**ಪೊಟ್ಟಳಂಗಟ್ಟು, ಪೊಟ್ಟಣಂಗಟ್ಟು, ಪೊಟ್ಟಣಗಟ್ಟು** (ಕ್ರಿ). ೧. (ಕಾಗದ, ಎಲೆ ಮೊದಲಾದುವುಗಳಿಂದ)ಪೊಟ್ಟಣವನ್ನು ಕಟ್ಟು; ಪುಡಿಕೆಮಾಡು; ದೊನ್ನೆಯಾಗಿಸು: ಪಿರಿದೊಂದು ತಾವರೆಯೆಲೆಯೊಳ್ ನೀರಂ ಮೊಗೆದು ಪೊಟ್ಟಳಂಗಟ್ಟಿ ಕೊಳದಿಂ ಪೊಱಮಟ್ಟು (ಚಂದ್ರ. ೦೪-೩೫ ವ). **ಪೊಟ್ಟಣಂ ಗಟ್ಟು:** ೨. ಉಂಡೆಮಾಡು: ಉಟ್ಟ ಸೀರೆಯ ಪೊಟ್ಟಣಂಗಟ್ಟಿ ಕೂಲಿ ಯಕ್ಕಿಗೆ ಬಾಯ ಶೇಖವನೋಳಿಯಿಂ ನಸು ಹತ್ತಿಸುತ್ತಿರೆ (ಬಸವ. ೦೬-೬೦). **ಪೊಟ್ಟಣಗಟ್ಟು :** ೧. ಆದರಿಸಿ ಸಕಲಪುಷ್ಪವನು ಪೊಟ್ಟಣಗಟ್ಟಿ . . . ಶಿವಲಿಂಗಾರ್ಚನೆಯ ಮಾಡಿ ಪುಳಕಿಸುತೆ (ಶಾಮಾಕ. ೬೮-೧೮) ; ಸಿಡಿಲ ಪೊಟ್ಟಣಗಟ್ಟಿ ಸೇಕವ ಕೊಡುವರೇ (ಶಬ್ದಾಸ. ೦೪-೩೭) : ಬಣ್ಣಬಣ್ಣದ ಪೂಗೊಯ್ದು ಹೊಂಬಾಳೆಯ ಪರ್ಣದ ಪೊಟ್ಟಣಗಟ್ಟಿ (ಮೋಹನ. ೨೪-೬೦).
[ಪೊಟ್ಟಳ + ಕಟ್ಟು₁]

**ಪೊಟ್ಟಳಿಗೆ** (ನಾ). (ಹಣ ಮುಂತಾದುವನ್ನು ಕಟ್ಟಿದ) ಪೊಟ್ಟಣ; ಗಂಟು : ಸಾಸಿರದೀನಾರದ ಪೊಟ್ಟಳಿಗೆಗಳಂ ಪ್ರಾಸಾದದ ಮೇಗಿರ್ದು ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳಿಗೆಯನೀಡಾಡಿದೊಡಾ ಪೊಟ್ಟಳಿ ಗೆಯಂ ಕೋಡು ಕೊಳ್ಳೆನೆಂದು ಪುಸಿದೊಡೆ . . . ಸಾಸಿರದೀನಾರದ ಪೊಟ್ಟ ಳಿಗೆ ಕಟ್ಟುವುದು (ವಡ್ಡಾರಾ. ೦೩-೬); ಸಾಸಿರ ದೀನಾರದ ಸಮಕಟ್ಟಿನ ನಾಲ್ಕು ಪೊಟ್ಟಳಿಗೆಯುನೊಂದೆ ಮಾಡಿ (ಸುಕುಮಾ. ೬-೮ ವ). [<ಪೊಟ್ಟಳ]

**ಪೊಟ್ಟಳಿಸು, ಪೊಟ್ಟಣಿಸು, ಹೊಟ್ಟಳಿಸು** (ಕ್ರಿ). ೧. (ಅಲಂ) (ಪೊಟ್ಟಣ ದಂತೆ) ಉಬ್ಬು; ಊದಿಕೊಳ್ಳು; ಬಾತುಕೊಳ್ಳು: ಕದಂಪು ಬೆಳರ್ತು ಬಾಡಿ ಪೊಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳಲರ್ದಿರುವಂತು ಕಂಪು ಕೈಕೊಳೆ ಬರಿವತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಂತೆಯಂತೆವೊಲ್ (ಅಜಿತ. ೬-೫೪). ೨. ಕೊಬ್ಬು; ಅಹಂಕಾರಪಡು; ಗರ್ವವನ್ನು ಪ್ರದರ್ಶಿಸು: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ . . . ಅರ್ಥದ ಕೇಡನೆ ಪೇಟ್ದು ಬೇಗಿ ಪೊಟ್ಟಳಿಸಿ ನೆಗಟ್ತೆಗಾಟಿಸುವ ದುಷ್ಕವಿಯುಂ ಕವಿ ಯೆಂಬ ಲೆಕ್ಕಮೇ (ಪಂಪಭಾ. ೧-೧೨); ಒರ್ವರಪ್ಪೊಡಮಿದಿರ್ಚುವ ಗಣ್ಡರ ನಾಮ್ಪುವನ್ನು ಪೊಟ್ಟಳಿಸುವ ಬೀರರಂ ನೆಱೆಯ ಕಾಣೆವು (ಎಕ. IV. ಹುಂಸೂ. ೪೦-೦೬; ೪೩೦.; ರಾಜಗರ್ವದಿಂದ ಪೊಟ್ಟಳಿಸುತ್ತಿದ್ದ ಆ ದ್ರುಪದನಿಗೆ ಇದೇ ತಕ್ಕ ಪುರಸ್ಕಾರ (ಗುರುಚ. ೨೩). **ಪೊಟ್ಟಣಿಸು:** ೧. ಬಱಿವಱ ಬತ್ತಿ ತೋಱಿ ಕೆಱುನಾಲಗೆ ಮುಟ್ಟಲೊಡಂ ಶಿರೋರುಹಂ ಪಱಿಯ ಕುವರ್ಣ ಮಾಗೆ ನಖದಂತಚಯಂ ಕಡುದಣ್ಣಸಾಗಿ ಸುಯ್ ಪೊಱಮಡೆ ಪೊಟ್ಟ ಪೊಟ್ಟಣೆ(ಳ)ಸೆ . . . ದಕ್ಷನ ಸಾವು ನಿಶ್ಚಯಂ (ಚೋರಚ. ೦೦-೯) ; ಪತ್ತಿರೆ ಪಲ್ಲು ವಿವರ್ಣತೆವೆತ್ತಿರೆ ನಖನಿಕರಮುಸಿತಮಾಗಿರೆ ದಶನಂ ಕತ್ತಿರೆ ಗಂಟಲ್ ಬಸಿಱೊಳಪೆತ್ತಿರೆ ಪೊಟ್ಟಣಿಸೆ ದಕ್ಷತನುಗಮರಿಪ್ಪಂ (ಚಂದ. ೩-೯೩). **ಹೊಟ್ಟಳಿಸು :** ೨. ನುಡಿವಂತು ನಡೆವನಲ್ಲಂ ಕಡುಖಳ ಸಂಯೋಗಿತನಕೆ ಹೊಟ್ಟಳ[ಳಿ]ಸಿಪ್ಪಂ . . . ತಿಂಬುದಡಗು ನುಡಿವುದು ತತ್ವಂ (ಶೀಲಾ. ೬೩೪). [ಪೊಟ್ಟಳ + -ಇಸು₁]

**ಪೊಟ್ಟೆ** 'ಪೋಟ್ಟೆ' ನೋ.

**ಪೊಟ್ಟು, ಹೊಟ್ಟು₃** (ನಾ). ೧. ಧಾನ್ಯದ ಮೇಲಿನ (ನಿಸ್ಸಾರವಾದ) ಸಿಪ್ಪೆ.- ಕವಚ: ಪೊಟ್ಟಲರಿಂ ಪಾಱುವವೋಲ್ ದಟ್ಟಂ ಪಾಱುಗುಮ (ಚಂದ್ರ. ೬-೩೮); ಇವರೆಲ್ಲರ ಮನದ ದುಃಖಮನಾಱಿಸುವುದು ಬಟ್ಟೆಯಂ ಕರ್ಮದ ಪೊಟ್ಟಂ ಪಾಱಿಸುವುದು (ಜಗನ್ನಾ. ೨೬-೫), ಪೊಟ್ಟುಗಳಂ ಕಳೆದು ಸಾರಂಗಳಂ ಸಂಗ್ರಹಿಸಿ (ಚಿಕ್ಕಹ. ೦೫೬-೦೬). ೨. (ಅಲಂ) ಸತ್ತ್ವವಿಲ್ಲ ದುದು ; ನಿಸ್ಸಾರವಾದುದು : ಪೂರ್ವೋತ್ತರವರಡಱ ಪಕ್ಷಂಗಳೊಳ್ ಯುಕ್ತಿಜಾಲಂಗಳ ಸಾರಾಸಾರಮಂ ಸೋದಿಸಿ ಕಳೆದದಱೊಳ್ಪೊಟ್ಟಸೊಳ್ಗ ಟ್ಟಯಂ ಕೂರ್ತೊಳಕೊಂಡಿರ್ಪೊಳ್ಪಿನಿಂ ತತ್ತ್ವದ ನೆಲೆಯಱಿತು . . . ತರ್ಕಿಕಂ ಚಿಕ್ಕದೇವಂ (ಚಿಕ್ಕ. ೪-೦೦೦). ೩. ಸುಳ್ಳು; ಸಟೆ : "ಧಾವ ನನ್ನ ಮುಂದೆ ಪೊಟ್ಟೇಕೆ ಹೇಳುತ್ತಿ?" . . . "ನಾನೇನು ಪೊಟ್ಟು ಹೇಳಿದೆ?" (ಹುಂಡಾ. ೨೮). **ಹೊಟ್ಟು₃ :** ೧. ಜರಿದುದೀ ಬಲರಾಸಿ ಗಾಳಿಯ ಹೊರಳಿ ಗೊಡ್ಡಿದ ಹೊಟ್ಟು ಹಾಱುವುದರಿಂದ (ಕುಮಾರವ್ಯಾ. ೦೪-೨೭) ; ಗಟ್ಟಿಗೋದು ಮೆಯು ನಾರ್ ಬಳ್ಳಪು ನೆನಹಿ ಕುವಿಸ್ಮ ಹೊಟ್ಟು ಹಾಱುವ ಹೆಱದಿ ಕೇಱಿ (ಸೂಕ್ತಿ. ೦-೪); ಅದಕ್ಕೆ ಹಾಕುವ ಹುಲ್ಲು, ಹೊಟ್ಟು, ಕಾಡು ಮೊದಲಾದ ಆಹಾರವನ್ನು ನೀನೇ ತಿಂದು ಬಿಡು (ಕಮಕ. ೦೨೩). ೪. (ಮರ ಮುಂತಾದುವುಗಳ) ಪುಡಿ ; ಸಣ್ಣ ಸಣ್ಣ ಚೂರು : ಒಲೆಗೆ ಹೊಟ್ಟು ತುಂಬಬೇಕು (ಆಡು). ೫. ತಲೆಯಲ್ಲಿ ಉಂಟಾಗುವ ಹಗರು.— ಹುರುಪು : ಮೆಂತ್ಯವನ್ನು ತಿರುವಿ ತಲೆಗೆ ಹಚ್ಚಿ ಸ್ನಾನ ಮಾಡಿದರೆ ಹೊಟ್ಟು ಕಡಿಮೆಯಾಗುತ್ತದೆ (ಆಡು). ೬. (ಅಲಂ) ನಿಸ್ಸತ್ತ್ವನಾದ ವನು : ಹೊಟ್ಟ ನೂಕಿ ವೃಥಾಹವದ ಜಗಜಟ್ಟಿ ನೀ ಹೊಱಕಾಲುಗೊಂಡರೆ ಬಿಟ್ಟನೇ (ಶಬ್ದಾ. ೦೦-೩೪).

**ಪೊಟ್ಟಾಗು, ಹೊಟ್ಟಾಗು** = ೧. ಪುಡಿಯಾಗು ; ಸಣ್ಣ ಸಣ್ಣ ಚೂರಾಗು : ಸತ್ಸುರಭೂಜಂ ಪೊಟ್ಟಾದುದು (ಎಕ. VII. ಶಿಕಾ. ೨೪೪-೬ ; 1185). ೨. ನಿಷ್ಫಲವಾಗು ; ಹುಸಿಯಾಗು : ಅವರ ನುಡಿ ಸುಳ್ಳಾಗು ವುದಿಲ್ಲ ; ಹೇಳಿದ ಕಣಿ ಹೊಟ್ಟಾಗುವುದಿಲ್ಲ (ಶೀಷಮ. ೪). **ಪೊಟ್ಟುಮಾಡು** = ವ್ಯರ್ಥ ಮಾಡು : ಕಟ್ಟಿದರ್ಥ ಕಱಿವ ಎಮ್ಮೆ ಕೊಟ್ಟ ಕೊಂಡ ಸಾಲ ಕದನು ಪೊಟ್ಟು ಮಾಡಿ ಮಕ್ಕಳೊಡನೆ ಅಪ್ಪು ಹೇಳಿ ಸಾವ ತನಕ ದುಷ್ಟ ಜನರು ಸುಮ್ಮನಿರುವರೆ (ಕಶಳ. ೦೪೬-೩).

[ದೇ.॥ ತಮಿ. ಮಲ. ತುಳು. ತೆಲು. ಪೊಟ್ಟು ; ಕೊಡ. ಪೊಟ್ಟ್; ಕೋತ. ಪೊಟ್ ; ಕೋಲಾ. ಪೊಟ್ಟ]

**ಪೊಟ್ಟುಕತೆ** (ನಾ). ನಿಸ್ಸಾರವಾದ ಕತೆ; ಜಳ್ಳುಕಥೆ; ಪೊಳ್ಳುಕಥೆ: ಅಲ್ಲಿಗೀ ಈ ಪೊಟ್ಟುಕತೆ ಮುಗಿದಂತಾಯಿತು (ಶಾಋಸು. ೩೮). [ ಪೊಟ್ಟು + ಕತೆ ]

**ಪೊಟ್ಟುಕಳೆ** 'ಪೊಟ್ಟುಗಳೆ' ನೋ.

**ಪೊಟ್ಟುಗ, ಹೊಟ್ಟುಗ** (ನಾ). ನಿಷ್ಪ್ರಯೋಜಕನಾದವನು; ಬಲಹೀನ; ಹೇಡಿ: ನೆಟ್ಟನೆ ಚಿಕ್ಕ್ರಭಾಷಿಯುಮಂ ನಿಟ್ಟಿವುದುಂ ನಿಂದ್ಯವೆಮ್ಮವಂದಿಗರಿಂದೀ ಪೊಟ್ಟುಗನಂ ಪೊಟಲೆಂದರೆಯುಟ್ಟುವೆಮೆಂದೊರೆದು ಥಟ್ಟನೊಡನಳವಟ್ಟಂ (ಶಶಾ. ೨-೩೩). **ಹೊಟ್ಟುಗ**: ಬಟ್ಟನಾಹವಕಹಿತ ಬಲಜಗಜಟ್ಟಿ ಕೌರವನ್ನಪತಿ ರಥವನು ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚ ನತಿರಥರ (ಕುಮಾವ್ಯಾ. ೨-೭೦); ಮರುಳೆ ಹೊಟ್ಟುಗರೊಡನೆ ಜಯಿಸಿದ ಪರಿಯ ಮೆರವುದೆ ನನ್ನೊಡನೆ (ಕುಮಾಂತಾ. ೩-೨೮). [ಪೊಟ್ಟು+-ಗ₂]

**ಪೊಟ್ಟುಗಳೆ, ಪೊಟ್ಟುಕಳೆ** (ಕ್ರಿ). ೧. ಸಿಪ್ಪೆಯನ್ನು ಹೋಗಲಾಡಿಸು; ನಿಸ್ಸಾರವಾದುದನ್ನು ತೆಗೆ; ಜಳ್ಳನ್ನು ತೂರು. ೨. (ಅಲಂ) ಹಗುರವಾಗಿ ಕಾಣು; ಅಲ್ಪವೆಂದೆಣಿಸು: ಏವೆನವ್ವ ಏವೆನವ್ವ... ಬಲಂದಟ್ಟುವ ಪೊಟ್ಟುಗಳೆವ ದೀರನವ್ವ (ಗೀತಗೋ. ೦೬-೦೮). **ಪೊಟ್ಟುಕಳೆ**: ೨. ಕಟ್ಟರೇದರಂಬ ಕೀರ್ತಿಗಂಡದ ಚೀಲಟಟ್ಟ ಕೆಳದಿವೆಣ್ಗಳೊಳು ನೆಟ್ಟನೆ ಬಳೆದಿರ್ದ ನೇಹವ ನೆನೆಯದೆ ಪೊಟ್ಟುಕಳೆದು ಪೊಬಿಡಿವುದು (ಹುಂ. ೬-೪೩). [ ಪೊಟ್ಟು + ಕಳೆ₁ ]

**ಪೊಟ್ಟುಗೆಯ್** (ಕ್ರಿ). ಹುರುಳಿಲ್ಲದಂತೆ ಮಾಡು; ನಿಸ್ಸಾರಗೊಳಿಸು; ಶಕ್ತಿಗುಂದಿಸು: ಅಂತಿರ್ದ ಕೂರ್ಪರನೀ ಪಟ್ಟಣದೊಳ್ ಪೊಟ್ಟುಗೆಯ್ದಂ (ಶಶಾಂ. ೩೮-೦೪). [ ಪೊಟ್ಟು + ಕೆಯ್₁ ]

**ಪೊಟ್ಟುಬಾವಿ, ಹೊಟ್ಟುಬಾವಿ** (ನಾ). (ನೀರಿಲ್ಲದೆ) ಹಾಳುಬಿದ್ದ ಬಾವಿ; ಪಾಳುಬಾವಿ: ಅದು ಯಾವುದೊ ಒಂದು ಪೊಟ್ಟುಬಾವಿ. ಅದೀಗ ಮುಚ್ಚಿಹೋಗುತ್ತಾ ಬರಾಬರಿ ಒಂದಾಳು ಆಳದಲ್ಲಿ ನಿಂತಿತ್ತು (ಕೂಸುಗು. ೩೩). **ಹೊಟ್ಟುಬಾವಿ**: ಅವರಲ್ಲಿ ನೀರು ಇರಲಿಲ್ಲ, ಅದು ಹೊಟ್ಟುಬಾವಿ (ಚಿಕಿ. ೯೯). [ ಪೊಟ್ಟು + ಬಾವಿ ]

**ಪೊಟ್ಟುವಡೆ** (ಕ್ರಿ). ಹೊಟ್ಟಾಗು; ವ್ಯರ್ಥವಾದ ವಸ್ತುವಾಗು: ನಿಸ್ಸಾರವಾಗು: ತರ್ಕದೊಳ್ ಬಾದಂ ಬರ್ಕಡಿಗುಟ್ಟಿ ಪೊಟ್ಟುವಡೆದಂ ದುರ್ವಾದದಿಂದಿನ್ನಗಂ ಭೇದಂಬಟ್ಟಿರ್ದಗೆಟ್ಟು ಕಟ್ಟನಿನಿತುಂ ಕಾಲಂಗಳೇಂ ಕರ್ಮಾರ್ಗವೋ (ಸುಕುಮಾ. ೩-೯೩). [ ಪೊಟ್ಟು + ಪಡೆ₁ ]

**ಪೊಟ್ಟುಪಾಯ್** (ಕ್ರಿ). ನಿಸ್ಸತ್ತ್ವಗೊಳ್ಳುವಂತೆ ಮೇಲೆ ಬೀಳು, -ಎರಗು: ಮುಳಿದಿದಿರಾದುದಾದೊಡಿದಿರಂ ಮುಳಿಸುಂದಮನನ್ಯಪಾಳನಾಗಳೆ... ಪೊಟ್ಟುಪಾಯ್ಗುಮಾಗಳೆ ಪಡೆಪೊಯ್ಗುಮಾಗಳೆ ಪೊರಳ್ಗುಮಾಗಳೆ ಕೊಂದು ಕೂಗುಗು (ಶಾ. ೪, ೦೪-೬; ೧೦೦೪). [ಪೊಟ್ಟು + ಪಾಯ್₁]

**ಪೊಟ್ಟುಳಿ** (ನಾ). ಒಂದು ಬಗೆಯ ವಸ್ತ್ರ: ಅಳಿಲ ಬಣ್ಣದ ಅನೆವಾರ್ಗ ಶ್ರೀರಾಮನು ಕಳಸಗಂಟಿಯು ಪದ್ಮಮಿತ್ರ ಎಳೆಯ ಮಾಂದಳಿರು ಪೊಟ್ಟುಳಿ ಮುದ್ದುಕೇಸರಿ ಕಳದೂಟನಣಾಗ ನೇಯುವವನು (ಅಮುಗಾಂ. ೪-೨೩). [< ಪಟ್ಟವಟಿ]

**ಪೊಟ್ಟೆ₁, ಹೊಟ್ಟೆ** (ನಾ). ೧. ದೇಹದ ಒಂದು ಭಾಗ: ಜಠರ; ಉದರ: ಪೊಟ್ಟೆ ಬಟ್ಟಾಗಿರ್ದ ಪೆಚನಟ್ಟ ನಡುವಂ ನೋಡಿ ಪೊಕ್ಕು ಮಿಟ್ಟೊಂದು ಮಿಡುಕಲಣ್ಣದೆ (ಗಂಯು. ೯ ೩೪ ಶ); ನೆಕ್ಕ ಕದಂಪು ಕಂಪಿಪಧರುಂ ಮಿಗೆ ಕೆಂಪಡರ್ದಕ್ಷಿ ಬಟ್ಟ ಬಾಯುಕ್ಕುಳಿಸಿರ್ದ ಪೊಟ್ಟೆ ಪೊಚಾಯ್ದಿರ್ದ... ಮಸದ ಕತ್ತಿಗೆ ಕಣ್ಪೊಲನಾದುವೆತ್ತಲುಂ (ಧರ್ಮಶ. ೦೩-೩೯); ನೀನೆನ್ನ ಪೊರೆ ಪೊಟ್ಟೆಗಶನವನಿಕ್ಕಿ (ಕೃಕವೇ. ೦-೮೩೦). ೨. ಕಣ್ಣಿನ ರೆಪ್ಪೆ; ನಿಮೇಷ: ಚಕ್ಷುರಿಂದ್ರಿಯಕ್ಕೆ ಕರಿಯಾಲಿಯು ಮಧ್ಯಂತರೋಪಕರಣಮೆರಡು ಪೊಟ್ಟೆಯುಮೆಮ ಇವು ಮೊದಲಾದುವೆ ಬಾಹ್ಯೋಪಕರಣಂ (ಕಸೂಕ. ೪೦); ಕಣ್ಣಂ ಮುಚ್ಚಿಹ ಪೊಟ್ಟೆಯ ಸನ್ನುತವರ್ಕ್ಷಣಿಕಮದಚ ಮೇಲಣ ರೇಖಂ ಬಣ್ಣಪೊಡದು ಕ್ಷಣಿಯಕ್ಕುಂ (ಅಕ್ಕಗಾ. ೯-೦೩). **ಹೊಟ್ಟೆ**: ೧. ಒಡನೆ ನುಡಿದಡೆ ಸಿರ ಹೊಟ್ಟೆಯೊಡವುದೆ (ಬಸವ. ೫೯೦); ಕೊರಳಿಗಡರುವ ಹೊಟ್ಟೆಗಳ ಹುಷಿವರರು (ಕುಮಾವ್ಯಾ. ೦೬-೪೦); ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ (ಪುರಂದ. ೪-೩೩ ಕ್ಷೇತ್ರ); ತನ್ನ ಹೊಟ್ಟೆಗೆ ಸಹ ಪೂರಾ ತಿನ್ನುತ್ತಿರಲಿಲ್ಲ (ಕುಂಇಹು. ೪-೩೨). ೨. ಚಕ್ಷುವಿಂಗೆ ಕರಿಯಾಲಿ ಬಿಳಿಯಾಲಿ ಇವೊಳಗುಪಕರಣಂ ಎವೆ ಹೊಟ್ಟೆಯೆಂಬವು ಬಾಹ್ಯೋಪಕರಣಂ (ಕಸಾರ. ೯೩). ೩. ಬಸಿರು; ಗರ್ಭ: ಹೊಟ್ಟೆಯೊಳಗಿನ ಕೂಸು ಹೊಟ್ಟೆಯೊಳಗಿರುವಾಗ ಪುಟ್ಟಪ್ಪ ಅಂತ ಹೆಸರಿಟ್ಟರು (ಗಾರ). ೪. ಡೊಳ್ಳು; ಬೊಜ್ಜು: ಈಚೆಗೆ ಅವನಿಗೆ ಸ್ವಲ್ಪ ಹೊಟ್ಟೆ ಬಂದಿದೆ (ರೂಢಿ). ೫. ಸಂತಾನ; ವಂಶದ ಕುಡಿ: ಕಳೆದ್ಯ ಬಿಟ್ಟು ಮಗನೆ ನಮ್ಮನು ಬಟ್ಟಬಯಲೊಳಗಿರಿಸಿದ್ಯ ಹೊಗುಟ್ಟಿದ್ಯ ಕಾಳ್ಗಿಚ್ಚಿನಲಿ ಕಾಮೋಚ್ಚಿಯಲಿ ಪಡೆದ ಹೊಟ್ಟೆ ಬಯಿದೊಚ್ಚಿಯಾಯಿತೇ (ಕೂಕಾ. ೨-೩-೩೬). 'ಪೊಡ್ಡೆ₃' ಪರಾ.

**ಹೊಟ್ಟೆ ಕಿವಿಚಿಕೊಳ್ಳು** = (ಅಲಂ) ಕರುಬು; ಅಸೂಯೆ ಪಡು: ನಿದ್ರೆ ಬರದಿರಬೇಕಾದರೆ... ಆಸ್ತಿಯನ್ನು ಕಳೆದುಕೊಂಡಿರಬೇಕು, ಕಾಮಾತುರನಾಗಿರಬೇಕು ಅಥವಾ ಕಳ್ಳನಾಗಿರಬೇಕು. ಅನ್ಯರ ಆಸ್ತಿಗೆ ಆಸೆಪಟ್ಟು ಹೊಟ್ಟೆ ಕಿವಿಚಿಕೊಳ್ಳುತ್ತಿರಬೇಕು (ಚಕಾ. ೨೩೬). **ಹೊಟ್ಟೆಗೆ ಹಾಕಿಕೊಳ್ಳು** = ೧. ಆಹಾರವನ್ನು ತೆಗೆದುಕೊಳ್ಳು; ಊಟಮಾಡು: ಹಸಿವು ತಡೆಯಲಾಗುತ್ತಿಲ್ಲ. ಮೊದಲು ಏನಾದರೊಂದಿಷ್ಟು ಹೊಟ್ಟೆಗೆ ಹಾಕಿಕೊಂಡು ಬರುತ್ತೇನೆ (ರೂಢಿ). ೨. (ಅಲಂ) ಕ್ಷಮಿಸು; ಮನ್ನಿಸು: ತಮ್ಮ ಮಗಳು ತಿಳಿಯದೆಮಾಡಿದ ತಪ್ಪನ್ನು ಹೊಟ್ಟೆಗೆಹಾಕಿಕೊಳ್ಳಬೇಕೆಂದು ಅವಳ ತಾಯಿ ಅವರನ್ನು ಕೇಳಿಕೊಂಡಳು (ರೂಢಿ). **ಹೊಟ್ಟೆಗೆ ಹಾಕು** = ೧. ತಿನ್ನಲು ಕೊಡು: ಮೊದಲು ಅವನಿಗೆ ಹೊಟ್ಟೆಗೆ ಹಾಕಿ ಕಳುಹಿಸು (ರೂಢಿ). ೨. ಸಾಯಿಸಲೆಂದು ಔಷಧವಿಡು, -ಮದ್ದಿಡು: ಅವರಿಗೆ ಯಾರೋ ಆಗದವರು ಹೊಟ್ಟೆಗೆ ಹಾಕಿ, ಬದುಕುವುದೇ ಕಷ್ಟವಾಯಿತು (ರೂಢಿ). **ಹೊಟ್ಟೆ ತಣ್ಣಗಾಗು** = (ಅಲಂ) ಸಮಾಧಾನವಾಗು; ತೃಪ್ತಿಯಾಗು: ನಿನ್ನ ಸೇಡು ತೀರಿತು. ಈಗಲಾದರೂ ಹೊಟ್ಟೆ ತಣ್ಣಗಾಯಿತಲ್ಲ (ರೂಢಿ). **ಹೊಟ್ಟೆ ತಣ್ಣಗಿಡು** = (ಅಲಂ) (ಸಂತಾನವನ್ನು) ಸುಖವಾಗಿರಿಸು: ದೇವರು ನಿಮ್ಮ ಹೊಟ್ಟೆ ತಣ್ಣಗಿಡಲಿ (ಕುಮ್ಮಕ. ೦೮). **ಹೊಟ್ಟೆ ತಣ್ಣಗೆ ಮಾಡಿಕೊಳ್ಳು** = (ಅಲಂ) ಸಮಾಧಾನ ಮಾಡಿಕೊಳ್ಳು; ಸಂತೃಪ್ತಿಗೊಳ್ಳು: ಬಿಸಿಲು ಮಳೆ ಗಾಳಿಗೇಗೆ ಸಿಕ್ಕಿ ತಮ್ಮಿನಲ್ಲಿ ನವೆಯುತ್ತಿದ್ದ ನಮ್ಮನ್ನು ಸುಖವಾಗಿದ್ದ ಈ ದುಷ್ಟ ನೋಡಿ ಹೊಟ್ಟೆ ತಣ್ಣಗೆ ಮಾಡಿಕೊಳ್ಳಬೇಕೆಂದು ಬಂದನು (ಚಕಾ. ೦೬೦); ತನ್ನ ಗಂಡನನ್ನು ಕೊಲ್ಲಿಸಿದವನನ್ನು ತಾನು ಕೊಂದು ಮುಯ್ಯಿ ತೀರಿಸಿಕೊಂಡು ಹೊಟ್ಟೆ ತಣ್ಣಗೆ ಮಾಡಿಕೊಂಡ ದ್ರೌಪದಿಗೆ ಅವಳಿಗೆ ಸಮಾಧಾನ! (ಶಂಕಸು. ೦೩೩). **ಹೊಟ್ಟೆ ತಣ್ಣಗೆ ಮಾಡು** = (ಅಲಂ) ತಂಪಾಗಿಸು; ತಂಪು ಮಾಡು: ಹಾದಿಯ ಮರದಿಂದ ಕೋತಿಗಳ ಹಿಂಡು ಬಂದರೆ ಗೊನೆಗೊನೆ ಸೀಯಾಳ ಹಾಳಾಗುತ್ತದೆ. ಅದನ್ನೆಲ್ಲಾ ನೋಡಿದರೆ ನಿಮ್ಮ ಹೊಟ್ಟೆ ತಣ್ಣಗೆ ಮಾಡಿದರೆ ಪುಣ್ಯವಾದರೂ ಬರುತ್ತದೆ (ಕಿಶಹೂ. ೦೬೦). **ಹೊಟ್ಟೆಯ ಮೇಲೆ ಹೊಡೆ** = (ಅಲಂ) ಜೀವನೋಪಾಯಕ್ಕೆ ಅಡ್ಡಬರು: ಭಂಗೀಜನರು ತತ್ತರಿಸಿದರು... ಹೊಟ್ಟೆಯ ಮೇಲೆ ಹೊಡೆಯಬೇಡಿರಿ ಎನ್ನತೊಡಗಿದರು (ಸ್ವ.ತಿಶ. ೩೦೬). **ಹೊಟ್ಟೆ ಸಾಗಿಸು** = (ಅಲಂ) ಹೊಟ್ಟೆಯ ಪಾಡನ್ನು ನೀಗಿಸು; ಬದುಕನ್ನು ನಡೆಸು: ತನ್ನ ಹೊಟ್ಟೆ ಸಾಗಿಸುವ ಎಮ್ಮೆ ಸತ್ತಿದ್ದರಿಂದ ಆ ಗವಳಿಗನು ಎದೆ ಎದೆ ಬಡಕೊಂಡು, ಇನ್ನೇನು ಗತಿಯೆಂದು ಅಳಹತ್ತಿದನು (ಮುಂಐಹು. ೦-೦೯). **ಹೊಟ್ಟೆ ಹಿಡಿ** = (ಅಲಂ) (ದುಃಖವನ್ನು) ತಾಳಿಕೊಳ್ಳು; ಸಹಿಸಿ

ಕೊಳ್ಳು : "ಅಪ್ಸರ ಅಂತಹ ಹುಡುಗೀನ ಮನೇಲಿ ಕೂರಿಸಿ . . . ನಾನು ಹೇಗೆ ಹೊಟ್ಟೆ ಹಿಡಿದು ಬರಲಿ" ಎಂದು ಗೋಳಿಡುತ್ತಿದ್ದರು (ದೂಕಟ್ಟ. ೬೦).
[ದೇ.ಶ ತುಳು. ಕೊಡ. ಪೊಟಿ ; ತೆಲು. ಕೋಲಾ. ನಾಯ್ಕ. ಪರ್ಜಿ. ಪೊಟ್ಟ./ಕ್ವಾ. ಪೋಟ್ಟ, ಪುಟ್ಟ./ಮಾಲ. ಪೋಟ್]

**ಪೊಟ್ಟೆ$_2$** 'ಪೋಟೆ$_1$' ನೋ.

**ಪೊಟ್ಟೆಕಿರ್ಚು**, ಹೊಟ್ಟೆಕಿಚ್ಚು, ಹೊಟ್ಟೆಗಿಚ್ಚು (ನಾ). ೧. ಹೊಟ್ಟೆಯೊಳಗೆ ಆಹಾರ ಜೀರ್ಣವಾಗಲು ಅನುಕೂಲವಾಗುವ ತಾಪ ; ಜಠರಾಗ್ನಿ : ಪಿರಿದುಣ್ಣೆಂದೊತ್ತೆಪಟ್ಟ ಪೊಟ್ಟೆಕಿರ್ಚಲ್ತೆ ಪಂದುಗುಂ ಪಿರಿದುಂ ಸೌದೆ ಕಿಡಿವ ಕಿರಿದಾದುರಿಯಂತೆವೊಲ್ (ಶಬ್ದಮಂ. ೦೪ ೬). 'ಪೊಡೆಗಿಚ್ಚು' ಪಠಾ. **ಹೊಟ್ಟೆಕಿಚ್ಚು** : ೨. (ಆಲಂ) ಅಸೂಯೆ ; ಕರುಬು ; ಮಾತ್ಸರ್ಯ : ಅವರಾಡುವ . . . ಬಯಲಾಟಗಳು ಹೊಟ್ಟೆಕಿಚ್ಚು ಹುಟ್ಟಿಸುವುವು (ಕಲ್ಯಹೂ. ೩); ಜೀವಜೀವನದ ಹೊಟ್ಟೆಕಿಚ್ಚು ಆರಿತು ವಿಷಪ್ರಸಾದ (ಅರಳು ೪೩೪-೦೬). **ಹೊಟ್ಟೆಗಿಚ್ಚು** : ೨. ಈ ಹೊಟ್ಟೆಗಿಚ್ಚಿಗೇನು ಮದ್ದು ? (ಕೂಶಿ).

**ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ** = (ಆಲಂ) ಅತಿಯಾಗಿ ಅಸೂಯೆ ಪಡುವ ವ್ಯಕ್ತಿ: ಕರುಬುವ ವ್ಯಕ್ತಿ: ನೀನು ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ (ಹಾಹುತ್ತ. ೪). **ಹೊಟ್ಟೆಗಿಚ್ಚು ಪಡು, ಹೊಟ್ಟೆಕಿಚ್ಚು ಪಡು** = ಅಸೂಯೆ ಪಡು; ಕರುಬು ; ಮತ್ಸರಿಸು: ತನಗೆ ಸವತಿಯೆಂದು ಅವಳ ಮೇಲೆ ಹೊಟ್ಟೆಗಿಚ್ಚು ಪಡಲಿಲ್ಲ (ದೇಜೀಕಾ. ೦೦); ನೀವೆಲ್ಲ. . .ತಮಾಷೆಯಾಗಿ ಕಾಲ ಕಳೆಯುತ್ತಾ ಇರುವುದನ್ನು ನೆನೆದುಕೊಂಡು ಹೊಟ್ಟೆಕಿಚ್ಚು ಪಡುತ್ತಿದ್ದೆ (ಶಾರಿಕು. ೧೪೦). [ಪೊಟ್ಟೆ$_1$ + ಕಿರ್ಚು (< ಕಿಚ್ಚು)]

**ಪೊಟ್ಟೆಗವಡಿಕೆ** (ನಾ). (ಉಜ್ಜುಗಲ್ಲಾಗಿ ಬಳಸುವ ನುಣುಪಾದ) ದಪ್ಪ ಕವಡೆ : ಪೂರ್ವಾಪರದಿಗ್ಭಾಗದ ಸಮಭೂತಳಪ್ರದೇಶದೊಳ ಪೂರ್ವಶಿಲ್ಪಿಕೃತಮಪ್ಪ ಲೆಕ್ಕವಲಗೆಯಂ ಕಾಡಿಗೆಯೊಳ್ ಪು[ಘ]ಟ್ಟಿಸಿ ಪೊಟ್ಟೆಗವಡಿಕೆಯೊಳೊರಸಿದಾತೆ ಮಿಂಚಿ (ಶಾಂತಿಪು. ೯-೧೪೩ ವ).
[ಪೊಟ್ಟೆ$_1$ + ಕವಡಿಕೆ]

**ಪೊಟ್ಟೆಗುಡುಮ** (ನಾ). ೧. ಹೊಟ್ಟೆ ದಪ್ಪನಾಗಿರುವವನು; ಬೊಜ್ಜು ಬೆಳೆದವನು. ೨. ಹೊಟ್ಟೆಬಾಕ; ತಿಂಡಿಪೋತ : ಪಟ್ಟೆನಾಮವ ಬಳಿದು ಪಾತ್ರೆ ಕೈಯಲಿ ಹಿಡಿದು ಗುಟ್ಟಿನಲಿ ರಹಸ್ಯವ ಗುಣುಗುತಣಿಯದೆ ಕೆಟ್ಟ ರಾಗನು ಕೂಗಿ ಬಗುಳಿ ಬಾಯಾಣುವಂಥ ಪೊಟ್ಟೆಗುಡುಮ ಮೃಗಗಳೆಲ್ಲ ಶ್ರೀವೈಷ್ಣವರೆ (ಕವಿಕ. ೦೨೬-೨). [ಪೊಟ್ಟೆ$_1$ + ಗುಡುಮ + –ಅ$_7$]

**ಪೊಟ್ಟೆಬೇನೆ**, ಹೊಟ್ಟೆಬೇನೆ (ನಾ). ಹೊಟ್ಟೆನೋವು: ಜಠರರೋಗ : ಅಸಾತೋದಯಜನಿತಮಪ್ಪ ತಲೆಬೇನೆ ಪೊಟ್ಟೆಬೇನೆ ಶೂಲೆ . . . ಮೊದಲಾದಯ್ವತ್ತುಕೋಟಿಯುಂ . . . ರೋಗ (ಶ್ರಾವಕಾ. ೬೯-೬). **ಹೊಟ್ಟೆಬೇನೆ** : "ಹೊಟ್ಟೆಬೇನೆಯದು ಗಾದಹಾಸವೆನಿಸಿಕ್ಕು" (ಶುಂಗಶಾ. ೦೦೪-೩); ಹೊಟ್ಟೆಬೇನೆಗೆ :—ಅಟಿನಿ, ಅಳಲೇಕಾಯಿ, ಜಾಯಿಕಾಯಿ, ಗಜ್ಜುಗದ ತಿರುಳು, ಶುಂಠಿ . . . ಕೊಳುವುದು (ಶಿವ್ಯ ಶಿ. ೬೮) ; ರಾಘವಪ್ಪನು ಹೊಟ್ಟೆಬೇನೆ ಹತ್ತಿ ಹಾಸಿಗೆ ಹಿಡಿದನು (ಗಂಟೂಕಾ. ೨೦೦). [ಪೊಟ್ಟೆ$_1$ + ಬೇನೆ]

**ಪೊಟ್ಟೆವಂತ** (ನಾ). ದಪ್ಪಹೊಟ್ಟೆಯನ್ನು ಹೊಂದಿರುವವನು : ಲಂಬೋದರ ; ಗಣಪ : ಪೊಟ್ಟೆವಂತಂ ಬೆನಕಂ (ಕಜ್ಯಾಶು. ೪೦೨ ಶೃಯೋ). [ಪೊಟ್ಟೆ$_1$ + – ವಂತ]

**ಪೊಟ್ಟೆವಾಯ್** (ಕ್ರಿ). ೧. ಹೊಟ್ಟೆಯು ಊದು,–ಉಬ್ಬರಿಸು : ಅಂತು ಪೊಟ್ಟೆವಾಯುತ್ತಿಂದು ಸೂಲೆ ಪುಟ್ಟಿ ಸತ್ತು ಅಗ್ನಿಭೂತಿ ವಾಯುಭೂತಿಗಳಾದಿರ್ (ವಡ್ಡಾಸ್ತ್ರ. ೬-೩೬ ಠ). ೨. (ಕಣ್ಣಿನ) ರೆಪ್ಪೆಯು ಅದುರು ; ಎವೆ ಮಿಡುಕು ; ಇದು ಒಂದು ಶಕುನವೆಂಬ ನಂಬಿಕೆಯಿದೆ : ಅಗಿದಪುದೀಗಳುಂ ಒಡಿದ ಕೆಂದಳಮಿಾಯೆಡದೊಳ್ಗ ಕೆತ್ತುಗಳ್ ತಗುಳ್ದಪುವೆತ್ತುಮೀ ಮಿಡುಕೆ ಮಾಣದೆ ಪಾಯ್ವುದೆ ಪೊಟ್ಟೆವಾಯ್ವು ಚಕ್ಷುಗೆ ಪಿರಿದಾದುದಕ್ಕುಮೆ ಪರಿಸ್ಫುರಿತಂ ಪಟತೇನೊ ದೇವಿಯಾಕೆಗೆ ಮರನಂ ಮನೋಹರನನಿಂದು ಕುಡಲ್ ಕಡುಗೂರ್ತಳಾಗಳೇ (ಆಲಾಪ. ೦೦-೩೩).
[ಪೊಟ್ಟೆ$_1$ + ಪಾಯ್$_1$]

**ಪೊಟ್ಟೆವೋಗು** 'ಪೋಟೆಹೋಗು' ನೋ.

**ಪೊಟ್ಲ** 'ಪೊಟ್ಟಳ' ನೋ.

**ಪೊಡಕರಿಸು**, ಹೊಡಕರಿಸು (ಕ್ರಿ). ೧. ಕಾಣಿಸಿಕೊಳ್ಳು; ತೋರು; ಸ್ಫುಟವಾಗು ; ಪ್ರಕಟವಾಗು : "ಮಿಗೆ ಪೊಚ್ಚಟಿಸಿತೆಂದು ಕಣ್ಣಲೆದು ದೊದಿರದೆ ಪೊಡಕರಿಸಿತಕೆ ನಾಮಂ" (ಕಬ್ಬಿಗ. ೬೪) ; ನುಡಿಯೆ ಬಳಲ್ದ ಪಾಂಥನೆರ್ದೆ ತಣ್ಪಿನ ಸೋನೆಯನಾಂತ ಮಾಳ್ಕೆಯಿಂ ಪೊಡಕರಿಸುತ್ತೆ [ಹಾಕಾಂ. ಪೊಡರಿಸುವಂತೆ] ಪೆರ್ಚೆ (ಗಿಕಿ, ೨-೦೯); ಪೊಡಕರಿಪ ಗುಡಗುಣ ದುಗ್ಗಡಮೆಂತು[ಟೊ] (ಶಾಸ. IV, ೨೬೬-೨೯: 1380); ಗಗನಮಂಡಲವ ಬಗಿದು ಪೊಡಕರಿಸೆ ವೃಷಭಧ್ವಜಾನೀಕ (ಶೌಂಡಪು. ೦೬-೦೪); ರೋಷಶಿಖಿ ಪೊಣ್ಮೆ ಪೊಡಕರಿಸಿ ಪರ್ಬಿದುದನೇನೆಂಬೆನು (ಕಲಪು. ೨೦-೩೪). ೨. ಹೊರ ಹೊಮ್ಮು ; ಹೊರ ಬರು : ಪೊಸಗಾರ ಸಿಡಿಲ ಮಸಕ ಮನಸಕಟಿದು ಕೃತಾಂತಜಿಹ್ವೆ ಪೊಡಕರಿಸುವವೋಲ್ ಬೆಸಸು ಬೆಸಸೆಂದು ಕರಮುರ್ವಿಸಿ ಸನ್ನದಮಾಯ್ತು ಎದ್ದ ರಾವಣನಿದಿರೊಳ್ (ಕಂಠಾಪು. ೦೪-೦೦೩); ಶಿಶು ನಾಲಗೆಗಿತ್ತಳುವಂತೆ ರಂಗಮಂಟಪದೊಳ್ ಪೊರಳ್ದು ಪೊಡಕರಿಸಲಾಟದೆ ಕಿಂಕರ್ವಾಣ ಕೈ ಮಿಗ್ಗ . . . ಮುಟುಗಿ (ಶಂಕರ. ೦೨-೬೨); ಮುನಿದೀ ಶಿಲೆಯನೆತ್ತಿದೊಡಾನುಂಗುಟದಿನೊತ್ತಿದೊಡೆ ಪೊಡಕರಿಸಲಾಟದೆವೊಳಟಿದಂ (ಶಾಂತೀಶ. ೧೩-೧೬ ವ); ಪೊಡಕರಿಪ ದಾರಿಯ ನಿತ್ಯ ನಿರುಕಿಸಾ ದುಃಖದಿ ಪರಿಪಕ್ವವಾದೆ (ಸಂಕಪ. ೨೩-೦೬). ೩. ನಡುಗು; ಕಂಪಿಸು : ಜಡೆಯಿಡುಕುಜಿಡೆಯಡೆಯೊಳಡಿಯಿಡುವ ಕಡಲ ತಡಿವಿಡಿದಡುಗಡಣದೊಡೆಯನೊಡಲೊಡಕು ನಡನಡುಗಿ ಪೊಡಕರಿಸಿ ಮಿಡುಮಿಡುಕಲು (ಹಕಾ. ೧-೨). **ಹೊಡಕರಿಸು**: ೧. ಹಿಡಿ ಧನುವನೆಲೆ ಭೂಪ ಮಿಡುಕು ಧೃಷ್ಟದ್ಯುಮ್ನ ಸಾತ್ಯಕಿ ಹೊಡಕರಿಸು (ಕುವ್ಯಾಗ. ೩-೪೩); ಕಾಳಕೂಟದ ಕಡಲ ಕಟ್ಟೆ ಮಿತಾಳಿಸಿತೊ ಶಿವಯನಲು ಸಲೆ ಹೊಗೆವಾಲಿಗಳ ಹೊಡಕರಿಸುವತಿಶಯವಿಕೃತವಿಗ್ರಹದ ಕಾಳಿಕೆಯ ಕುಡಿಪೆಳಗುಗಳ . . . ರಾಕ್ಷಸವರೂಥಿನಿ ಕಾಳಗಕೆ ಹೊಲಿವಂಟುದು (ಕೊಕರಾ. ೨-೦೩-೦೪); ಕಡೆಯೆನುತ ಕನಲಿ ಕುಶಾಗ್ರದಲಿಡಲು ಬಿದ್ದನು ಸೂತನವನಿಗೆ ಹೊಡಕರಿಸಿ ಹಾಯೆನುತ ವಿಪ್ರಸ್ತೋಮ ಗಜಬಜಿಸೆ (ಶಿಕಾಗ. ೦೦-೪೪-೨೬). ೨. ಸೂರ್ಯಾಂಶುವೆಂಬ ಕಿಚ್ಚಂ ಕಾದು ಕೆಂಗಲಿಸಿ ಚಾರು ಬೆಳಗಾಟಿ ಕಪ್ಪಯ್ತೊ ಹೇಳೆಂಬ ವಿಸ್ತಾರದಿಂ ಕಾಳಗತ್ತಲೆಯಂ ಬಲತೆ ಹಚ್ಚಿ ಹೊಡಕರಿಸಿ ಮಡಲಿಟ್ಟುದು (ಹಕಾ. ೩-೬೬) ; ಹೊಗೆಯೆದ್ದು ಹೊಡಕರಿಸದೆ ಮದನಾಗ್ನಿ ಮೆಯ್ದೆಗೆವುದೆ ಮೃಗಶಾಬನೇತ್ರೆ (ಕುಲಾಸಾಂ. ೨೬-೦೩೪) ; ಹತ್ತಿರಿದ್ದರು ದೂರ ಹೃದಯಗಹ್ವರದಲ್ಲಿ ಮಿಣಿ ಮಿಣಿ ಎನುವ ಪಣತಿ ನಮ್ಮ ಜೀವದ ಗೆಣತಿ ಹೊಮ್ಮಿ ಹೊಡಕರಿಸಿದರೆ ಹೊಸ ಬೆಳಕಿನಾಕೃತಿ (ನಂಪು. ೬೨-೩). ೩. ಉಬ್ಬೇಚಾ ಹೊರ್ಮ್ಮದು ಹೊಡಕರಿಸಲಿಳಿ ವೀರರುಭಯದಲಿ (ಕೊಕರಾ. ೬-೨೧-೦೦). ೪. ವ್ಯಾಪಿಸು ; ಆವರಿಸು : ಹಿಂದೆನ್ನ ಹೆಸರೆಂದಡೋಡುವ ಕತ್ತಲೆ ಹೊಡಕರಿಸುತಿರ್ದುದೆನ್ನಾಳಿಕೆಗೆ ಶಶಿಯ ಮುಂಗುಡಿ ಧಾಳಿ ಬರುತಿದೆಯಿದು ಕಂಡು ಜೀವಿಪೆ ನ್ನೊಡಲಾಸೆಯೇಕೆಂದು ಲಜ್ಜೆಯಿಂದೀವಂತೆ ಬಿದ್ದನಿನನಬುಧಿಯೊಳಗೆ (ಹಕಾ. ೩-೬೪) ; ಗಡಣದಂಬಿನ ಮಸೆಯ ಬೆಳಗಿನೊಳಡಸಿದಾಕ್ಷಣ ಮತ್ತೆ ನಿಮಿಷಕೆ ಹೊಡಕರಿಸಿ ಹಬ್ಬಿದುದು ಮಬ್ಬಿನ ಧಾಳಿ ದೆಸೆದೆಸೆಗೆ (ಕುವ್ಯಾದ್ರೋ. ೦೩-೨೬) ; ಮತ್ತೆ ಹೊಡಕರಿಸಿ ಕೋಪಾಗ್ನಿ ರಕ್ಕಸನ ಮೈ ಪೊತ್ತಿದುದು (ಕಂಪು. ೪೮-೦೩). ೫. ಹೊಳೆ ; ಸ್ಫುರಿಸು ; ಪ್ರಕಾಶಗೊಳ್ಳು : ಮಿಸುನಿ

ಯೋಲೆಗಳೆಸೆಯೆ ಫಲಿಫಲಿಲೆನಲಂದುಗೆ ಪೊಡಕರಿಸೆ ಹಾರವೆಡೆವಿಡದೆ ನರ್ತಿಸೆ ಕುರುಳು ಕಡುನೀಡುಯೋರ್ವಳಾಯ್ಮಲನಾಡುತಿರ್ದಳು (ಶಬಾ. ೬-೨೩) ; ಘುಸುಕಿದ ಸಿಂಗಾಡಿಯಂಬುಗಳೊಳಗೆ ಕಣ್ಗೆಸೆದನು ಬೆತ್ತದಡವಿಯ ಹಸರದೊಳಗೆ ಹೊಕ್ಕು ಹೊಡಕರಿಸುವ ಸಿಂಗಸಿಸುವಿನಂತಾ ವೀರರಾವು (ಕುಮಾರಾ. ೪೩-೯೮) ; ರೋಚನದ ನೋಟದ ಹೊಳಹು ಹೊಡಕರಿಸೆ (ಕೃಬಭಾ. ೨೯-೨೮) ; ಗುಡುಗುಡಿಸುತ್ತ ಉಡಿಮಿಂಚಿಂ ಹೊಡೆದು ಹೊಡಕರಿಸುತೆ ಆಗಸದಲಿ ನೆಗೆದು (ಕಲ್ಯ. ೬೨-೧೯). ೬. ಉರಿ ; ಪ್ರಜ್ವಲಿಸು : ಕೆರಳಿ ರೋಷಾಗ್ನಿ ಹೊಡಕರಿಸೆ ಹೊಗೆ ಸುತ್ತಿ ಮಯ್ಯುರವು ಕಪ್ಪಾಗೆ (ಹಕಾ. ೫೮. ೨೦೪). ೭. ಬೆರೆ ; ಕೂಡು ; ಒಂದಾಗು : "ಹೊಡಕರಿಸಿತೆನಲ್ಕೆ ಬೇಗ ಬೆರಸಿದುದಕ್ಕುಂ" (ಶಾಕಿ. ೨೨) ; ಹರಹಿನಲಿ ಹೊದಜಿದ್ದು ಹರುಷದ ಹೊರಳಿಯಲಿ ಹೊಡಕರಿಸಿ ಚಿತ್ರವ ತಿರುಹಿ ಹಿಡಿದನು (ಕುಮಾ. ೬-೬೯) ; ಹರಶರಾನಲ ಶೀವ್ರಧೂಮಜ್ವಾಲೆಗಳ ರಭಳದ ಹೊರಳಿಯಲಿ ಹೊಡಕರಿಸಿ ಹಾಯೆಂದೊಲಿದುದು ಬಲವೆರಡು (ಕಿರಾಗ. ೧೦-೯೯-೨೬). ೮. ಅಲುಗಾಡು ; ಅಲುಗು : ನುಡಿಸಿದೊಡಿನಿಸಜಿಯದೆ ನೋಡಿ ಮರವಟ್ಟು ಹೊಡಕರಿಸದೆ ಸುಮ್ಮನಿರಲು ನಡುಗಿ ಶೋಕಿಸ ಮಡದಿಯರ ಕಂಗಳ ಜಲ ತಡಹನೊಡೆದ ಮಳೆಯಾಯಿತು (ಅಂಕಶ. ೬-೯೯). ೯. ಹೊರಬೀಳು ; ತಪ್ಪಿಸಿಕೊಳ್ಳು : ಶಿದ್ಧಿಕಾತನ ತಪಸು ಮಾಯೆಯ ಮದ್ದಿನಲಿ ಮರುಳಾಗಿ ಮದನನ ಹೊದ್ದಿದನು ಹೊಡಕರಿಸಲಜಿಯದೆ ಬಳಿಕಲಾ ಮುನಿಪ (ಕೊರಶಾ. ೧-೩-೩೬). ೧೦. ಅಟ್ಟು ; ಓಡಿಸು : ಪೊಡೆದು ಕೆಲವ ಹೊಡಕರಿಸಿ ಕೆಲವ ಕರ್ಚಿ ಕೊಡಹಿ ಕೆಲವನಾಗಳೆಗೆ ಕೆಡಪಿತು ಭರದಿಂದ ಪಕ್ಕಿಗಳನು ಸಾಳ್ವ (ಕುಮಾರಾ. ೨೬-೯೬). ೧೧. (ಗಾಳಿಯು) ಬೀಸು ; ಚಲಿಸು : ತೆಂಕಣ ದಿಶಾಭಾಗದೊಳು ಗಾಳಿ ಹೊಡಕರಿಸೆ ಮನ್ಮಥಭೂಪನು ತಿಳಿದು ಬಲು ಬತ್ತಳಿಕೆಗಳನಜಿಸೆ (ಹಕಾ. ೩-೦೪). ೧೨. ಒಡೆದುಹೋಗು ; ಚೂರಾಗು : ರಕ್ತಮಳೆ ಸುರಿದು ದಭ್ರದಿ ದೇವಪ್ರತಿಮೆಗಳ್ ಕುಕ್ಕರಿಸಿ ಬಿದ್ದು ಹೊಡಕರಿಸಿದುವು ಶಿಖರ ಪೊಂಗಳಸಗಳ್ ನೆಲಕುರುಳಿತು (ತುರಂಗ. ೨೨-೩೯).

[< ಪೊಡರ್$_1$ + – ಇಸು$_3$]

**ಪೊಡಣಗೆ** 'ಪೊಡ್ಡಣಗೆ' ನೋ.

**ಪೊಡಣಗೆಗೊಡು** 'ಪೊಡ್ಡಣಗೆಗೊಡು' ನೋ.

**ಪೊಡಪತ್ರ, ಪೊಡಪತ್ರೆ** (ನಾ). ಒಂದು ಬಗೆಯ ಔಷಧೀಯಗುಣ ವುಳ್ಳ ಮರ : ತಿಗಡೆ, ಹಿಪ್ಪಲಿ, ಬಜೆ . . . ಪೊಡಪತ್ರ, ನೀಲಿಬೇರು . . . ಇವನ್ನು ಸಮಭಾಗ ಕಷಾಯ ಮಾಡಿ ಕೊಡಲು ಭೇದಿಯಾಗುವುದು. ಜ್ವರ ಸಹ ಬಿಡುವುದು (ಸಕಪ್ಪ. ೫೮. ೯೬೮). ಪೊಡಪತ್ರೆ : ಅಳಲೆಕಾಯಿ, ತಾರೆಕಾಯಿ . . ಪೊಡಪತ್ರ, ಬ್ರಹ್ಮಿ—ಇವೆಲ್ಲವಂ ಚೂರ್ಣಿಸಿ ಸಕ್ಕರೆವೆರಸಿ ಸೇವಿಸಲು ಸ್ವರಭಂಗ ಪರಿಹರವಕ್ಕುಂ (ಸಕಪ್ಪ. ೨೬೦). [←ತೆಲು. ಪೊಡಪತ್ರಿ]

**ಪೊಡಪತ್ರೆ** 'ಪೊಡಪತ್ರ' ನೋ.

**ಪೊಡಪು** 'ಪೊಡರ್ಪು' ನೋ.

**ಪೊಡಮಡಿಸು** 'ಪೊಡೆಮಡಿಸು' ನೋ.

**ಪೊಡಮಡು** 'ಪೊಡಮಡು$_1$' ನೋ.

**ಪೊಡಮಡುಹ** (ನಾ). ನಮಸ್ಕರಿಸುವಿಕೆ ; ನಮಂನ : "ನತಂ ವಂದನಂ ಪೊಂಗಿ ಪೊಡಮಡುಹಂ" (ಮಂಗರಾ. ೦೩೬-೩೯).

[ಪೊಡಮಡು (< ಪೊಡೆಮಡು$_2$) + –ಹ$_2$ ( < –ಪ$_3$)]

**ಪೊಡಮಡುಹು** (ಕ್ರಿ). ನೆಲಕ್ಕೆ ಹೊಟ್ಟೆ ತಗುಲುವಂತೆ ಬಾಗು ; ಬಗ್ಗು : ಪೊಡಮಡುಹಿ ನೆಗೆಯಲ್ಕೆ ಕಪಿಗಳು ಪಡುವ ಮೂಡಣ ದಿಕ್ಕು ಮುಟ್ಟುತ್ತಡವಿ ಗಿಡುಮರ ಕುಲನಗಂಗಳ ತೊಳಲಿಯಜಿಸುತಿರೆ (ಶೌರಿಶಾ. ೯-೩೨). [< ಪೊಡೆಮಡು$_3$]

**ಪೊಡರ್** (ಕ್ರಿ). ೧. ಅಲ್ಲಾಡು ; ಅದುರು ; ನಡುಗು ; ಕಂಪಿಸು : "ಪೊಡರ್–ಸ್ಫುರಣೇ (ನಡುಗು)" (ಕಧಾ) ; ನಡು ನಡುಗಲ್ಕೆ ಪುರ್ವು ಪೊಡರಲ್ಕೆ ಕುರುಳ್ ಮಿಳಿರಲ್ಕೆ . . . ತಗುಳ್ದುದು ಕೆಂದನೀಕೆ ಕನ್ನಡಿಪಳೊಪಾಡಿದೀ ನೆವದಿಂ (ಹಂಶಪಾ. ೬-೯೯) ; ಬಟ್ಟೆಯ ದೂರಿದೂಮೆ ಮೊದಲಾದುದು ಪೋದಪೆನೆಂಬ ಮೆಯ್ಮುಮಂಗೆಟ್ಟು ಪಿಪಾಸೆಯುಂ ಪೊಡರ ಲಾರ್ತಪುದಿಲ್ಲ (ಜಾರಂಪು. ೦೯೯) ; ಉಲಿಯೆ ಕಲಕಾಂಚಿ ಮುಡಿಯಿಂದ ಲರ್ಗೆ ಬಡನಡು ಬಳುಂಕೆ ಪೊಡರೆ ನಿತಂಬಂ ನೆಲೆಮೊಲೆಗಳಲುಗೆ ಬಿಡದೇಳ್ವ ಬಿತಾಂಗಿಯ ಕೈಯನೊಯ್ಯನರಸಂ ಪಿಡಿದಂ (ಧಾಕಿ. ೧೦-೬). ೨. ಕಾಣಿಸಿಕೊಳ್ಳು ; ಪ್ರಕಟವಾಗು : ನಿರಂತರಂ ಪೊಳೆವ ಬಾಳಾಡಿಸುಯ್ವ ನವವ್ರಣಂಗಳೊಳ್ ಪೊಡರೆ ಪೊದಟ್ದುದದ್ಭುತಭಯಾನಕಮಾಹವ ರಂಗಭೂಮಿಯೊಳ್ (ಹಂಶಪಾ. ೧೦-೩೮) ; ಪಂದಲೆಯೋಳಿದೋರಣದ ಸೀಯುದರಂ ಪೊಸದೂಮೆದೂಪ ತೂಗುಂದಲೆ ಬಾಟ್ಣಿನಾ ಪೊಡರೆ ಬಳ್ಳುವ ಸಮ್ಮನ ಸೂಲಮಾಲದೊಳ್ ಸಂದಣಿಯಾಗಿ ನೇಲ್ವ ಪೆಣನೊಂದಿರೆ . . . ಮಿಂಚಿದುದಾ ಶ್ಮಶಾನದೊಳ್ (ಶಾಲ್ಯಕ. ೩೬) ; ಮೃಡಭಕ್ತರಾನಂದವಂಕುರಿಸುವಂತೆ . . . ಬಿಡುಬಿಡಂತಿಂತೆಂದು ಪೊಡರ್ವ ನುಡಿಗಡಣಗಳನೆಡೆಮಾತದೇಂ ಷಟ್‌ಸ್ಥಲಸ್ಥಾಪನಾರ್ಥಮಾ ಕಡುಮೆಯ್ಮೆಡೆವ ಷಣ್ಮುಖನಖಿಳಶಕ್ತಿ ಬಂದೊಳಪೊಕ್ಕು ಶೋಭಿಸುತಿರೆ (ಷಟ್ಶಾ. ೯-೨೮). ೩. ಹೊಳೆ ; ಪ್ರಕಾಶಿಸು ; ಮಿರುಗು : ಇಡಿದಿರೆ ಗುಹಾಂಧಕಾರಂ ಪೊಡರ್ದೆಸದಿರೆ ಚಂದ್ರಕಾಂತರುಚಿ ನಗಮೊಂದೊಂದೆಡೆಯೊಳ್ ಪೋಲೆತ್ತುವುದೊಂದೆಡೆಯೊಳ್ ನೆಲಸಿರ್ದ ಕಾಳಮುಂ ಜೊನ್ನಮುಮಂ (ಅಜಿತ. ೯-೨೦) ; ವಿಷಯಾರತಿಯೊಡನೆ ಮೆಯ್ವಿಸುಪಡೆಂಗೆಯುಂ ಪೊಡರದುಡುಗುವ ರೋಚನದೊಡನೆ ನಿಡುಸುಯ್ಗಳುಡುಗೆಯುಂ (ಧರ್ಮಾ. ೯-೬೮ ವ) ; ಪೊಡರ್ವ ಪೂರ್ಣಿಮೆಯ ಬಿಡುವೀಕ್ಷಣದೊಳಲರಂಬು ಮಡದಿಯಿಂದುಟಿಯೊಳಿಲ ಪವಳಲತೆ . . . ತೋಱುತ್ತಿರ್ಪುದು (ಶಾಳ್ಯಶಾ. ೨೯-೧೮). ೪. ಎದುರಿಸು ; ಪ್ರತಿಭಟಿಸು : ಪೊಡರದೆ ಕಪ್ಪಮೀವ ಪರಮಂಡಳಿಕರ್ ಮನೆದೀವಿ ಮಕ್ಕಳಂ ಪಡೆದಬಳಾಜನಂ . . . ವೃದ್ಧರಾಜ್ಯಮುಮದೇನೆಸದತ್ತೊ ನಭಶ್ಚರೇಂದ್ರನಾ (ಅಜಿತ. ೨-೨೯) ; ಪೊಡರ್ವತ್ಯುದ್ಧತರಾಜವಂಶವನಮಂ ನಿರ್ಮೂಲಿಸಲ್ ಪೋಪೆನೆಂಬೊಡದಂ ಮುನ್ನಮೆ ನಿಮ್ಮ ವಿಕ್ರಮದವಾಗ್ನಿಜ್ವಾಲೆ ತಳ್ತಿರ್ದುದು (ಶಾಂತಿ. ೩-೩). ೫. ಚಿಮ್ಮು ; ಹೊಮ್ಮು : ತದ್ವ್ಯಾಘ್ರನ್ಮಿಶಾಟಾಸ್ಯದಿಂ ಪೊಡರ್ದಸ್ರಾಂಬುವಲಾತಡಕ್ರಮೆನೆ ವ್ಯಕ್ತಾಕಾರದಿಂದುಣ್ಮುತುಂ (ಜಗಣ. ೬-೬೯). ೬. ಹುಟ್ಟು ; ಆವಿರ್ಭವಿಸು ; ಉಂಟಾಗು : ಆನುಂ ಮಿಡುಕಲಣಮಜಿಯದಿರ್ದೆಂ ಪೊಡರದ ಗಜಿಯುವನೆ ತನ್ನ ತಂದೆಯ ಕೆಲದೊಳ್ (ಜಾರಂಪು. ೦೩೨) ; ಕಾಂಚೀಕ್ಷುದ್ರಘಂಟಾರವಂ ಪೊಡರುತ್ತಿರ್ಪಿನಮಿಂತು ಕಾಂತೆ ನಡೆತಂದಾ ಚಕ್ರಿಯಂ ನೋಡಿದಳ್ (ಶಾಂತೀಶ್ವ. ೧೩-೪೪).

**ಪೊಡರ್ಕೆ** (ನಾ). ಚಲನೆ ; ಸ್ಫುರಣ : ಒದವಿದ ನಿದ್ರೆ ದೂತಜನಗರ್ಜನದಿಂ ಕಿಡೆ ಹೃದ್ಗುಹಾಂತರಾಳದಿನಾರುಕೋಪಸಿಂಹಮಿರದೆಳ್ದುದು ಮೀಸೆಯ ಕೆತ್ತು ಕೇಸರಂ ಕೆದಱುವ ಭಂಗಿ ಪುರ್ವಿನ ಪೊಡರ್ಕೆಯೆ ಮೆಯ್ಮುರಿಪೋಜೆ ಕಣ್ಗಳಿಂದುದಯಿಪ ಕೆಂಪದಾಗುಜಿವ ವಕ್ತ್ರದ ಕೆಂಪೆನೆ ರಾಜಮೋರುವಾ (ಚಂದ್ರಪ್ರ. ೬-೨೩). [ಪೊಡರ್ + –ಕೆ]

**ಪೊಡರ್ಪು, ಪೊಡಪು** (ನಾ). ೧. ಚಲಿಸುವಿಕೆ ; ಅಲುಗಾಟ ; ಕಂಪನ : ಪತಾಕೆಯೊಂದು ವಿಭ್ರಮಮನೆ ಪೋಲೆ ಪುರ್ವಿನ ಪೊಡರ್ಪೊಳಕೊಂಡುದ ವಳ್ಗೆ ಗರ್ಭಚಿಹ್ನಮೆ ಗಳ ಗರ್ಭದರ್ಭಕನ ಸೂಚಿಪ ಮುಂದಣ ರಾಜ್ಯ ಚಿಹ್ನಮುಂ (ಹಂಶಪಾ. ೧-೩೦) ; ಇನಿಸಪ್ಪೊಡಂ ಪೊಡರ್ವನಪ್ಪುಗೆಯ್ಯುದಿಟಿಯೆ ಪೂದಳಿದುದೆನಿಪ ಪುರ್ಬಿನ ಕುಡಿವೆರಸು ತೂಕಡನೊಳಕೊಂಡ

ಹಾರ್ದ್ಯಮಾಂ (ಕಾದಂಪೂ. ೬೩೯). ೨. ಆಧಿಕ್ಯ : ಅತಿಶಯ : ತುಡುಗೆಯ ಮಣಿದೀಧಿತಿಗಳ ಪೊಡರ್ಪು ಮೇಗೊಗೆವ ಕೊಡೆವೊಲೆಸೆದಪುದೆಂಬೀ ನುಡಿ ನೆಗಳ್ದ ಪಂಚರತ್ನದ ಕೊಡೆಯಂ ಪಿಡಿದಮಾಂಜನದ ಮನದಡಿವಿಡಿದರ್ (ಅಜಿಪು. ೬-೩) : ಕಡುಗಲಿಯಪ್ಪ ವಿಕ್ರಮದ ಗಂಡಿನದೊಂದು ಪೊಡರ್ಪ ನೇನ ಬಣ್ಣಿಸಲಳವಲ್ತೆ (ಸೌಇಇ. IX-1. ೨೬೬-೨೬; 1183) ; ಎಡೆಗುಡದು ಸಿರ್ದೆಗೆವೆಡೆಯೊಳ್ ಪೊಡರಿಸುವುದುಸಿರನಿಕ್ಕುವೆಡೆಯೊಳ್ ಮುಸ್ಸೀರ್ಗಡ ಲೆಂದೊಡೆ ವಡಬಾಗ್ನಿಯ ಪೊಡರ್ಪಿನಿತ್ತೆಂಬ ರಸನೆಗೊಗೆಯದೆ ಪುಗುಳ್ಗಳ್ (ಸುಕುಮಾರಚ. ೨-೨೦). ೩. ತಾಪ ; ಶಾಖ ; ಬಿಸುಪು : ಬಡಬಶಿಖಿಯಲ್ಲಿ ಪರ್ಬುವ ಪೊಡರ್ಪನೊಳಕೊಂಡು ಮೇಲೆಮೇಲ್ವೈತರ್ಪನೊಡಲುರಿಯನವ ಧರಿಸು (ಚಾಚೇ. ೧೩-೦೯೬). ೪. ಶಕ್ತಿ; ಪ್ರತಾಪ; ಸಾಮರ್ಥ್ಯ : ವಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ (ಶಂಕಭಾ. ೦೦-೨೩); ಆ ಮಹಾರೌದ್ರಭದ್ರಾಕಾರನ ಪೊಡರ್ಪಿನಾರ್ಪಿನಳವಿಗಳಿದ ದರ್ಪಮಂ ಪೇಟ್ವೊಡೆ (ಶಂಕಶಂ. ೯೩-೦೬) ; ಧರೆಗೆಸೆದತ್ತು ತಾರಕನ ದುರ್ಗತಿ ತಾರಕ ನೇಳ್ಗೆ ತಾರಕಾಸುರನ ಪೊಡರ್ಪು (ಗಿರಿಕ. ೬-೦೦); ಮಾತಂಗದ ಬಲಂ, ಸಿಡಿಲ ಪೊಡರ್ಪು, ಕಡಲ ಗುಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳ್ತಿರ್ದಂ (ರಾಘುಶ. ೬-೦೬). ೫. ಆವೇಶ ; ಉತ್ಸಾಹ; ಸ್ಫುರಣೆ : ತನ್ನ ಮನದ ಪೊಡರ್ಪುಮಂ ಕೂರ್ಪುಮನುಂಟುಮಾಡಿ ನುಡಿದಂ (ಶಂಕಶಾ. ೦೦-೩೯ ವ) : ಇದಿರ್ಗೆ ಬರೆ ಪುನ್ನಿಗಂ ಕಿಡಿಸದಿರಂ ಕವಿಗಮಕಿವಾದಿವಾಗ್ಮಿಗಳ ಕವಿತ್ವದ ಗಮಕಿತ್ವದ ವಾದಿತ್ವದ ಪೊಡರ್ಪುಮಂ ದರ್ಪಮುಮಂ (ಶಾಂತಿಪು. ೦೨-೬೯) ; ಅರ್ಪುಗಳಳಿಹುದು ಹರಸ್ಸೈನ್ಯಮಿಾ ಪರಿಯೊಳ್ ಪೊಡರ್ಪಿನಿಂದೈ ತರುತಿರ್ದುದು (ಕಂಪು. ೨೬-೦೨). ಪೊಡಪು: ೪. ಸಿಡಿಲ ಪೊಡಪು ಘುಡು ಘುಡಿಸುತ ಮಿಂಚಿನ ಕುಡುಪು ಮೋಡದಿ ಹೊಳೆಹೊಳೆದು ಬಿಡದೆ ಸುರಿವ ಮಳೆಯಲಿ ತರುಮೂಲದಿ ತಡೆದಿರ್ದನಾ ಮುನಿರಾಜ (ಅಮಂಶ. ೯-೩೦) ; ಸುಖ ದುಃಖವಾಯ್ತೇ, ಪೊಡಪು ಪುಡಿಯಾಯ್ತೇ, ಪಾಡೆಲ್ಲ ಗೋಳಾಟ ವಾಯ್ತೇ! (ಹಾರಸಿ. ೦೨-೨೦೬). [ಪೊಡರ್ + –ಪು₂]

**ಪೊಡರ್ಪುಗಿಡು** 'ಪೊಡರ್ಪುಗೆಡು' ನೋ.

**ಪೊಡರ್ಪುಗುಂದಿಸು** (ಕ್ರಿ). ಬಲವನ್ನು ಕುಂದಿಸು; ಶೌರ್ಯಹೀನನನ್ನಾಗಿ ಮಾಡು : ಮನುಜಸುತಂ ಪನ್ನಗಶರದಿನಿಸುವುದುಂ ಜನಕಸುತನನದು ಪೆಣೆದಹಿಬಂಧನದಿಂ ಪೊಡರ್ಪುಗುಂದಿಸೆ (ಶಂರಾಮಾ. ೦೩-೦೯೩).

[ಪೊಡರ್ಪು + ಕುಂದಿಸು]

**ಪೊಡರ್ಪುಗುಂದು** (ಕ್ರಿ). ಬಲಗುಂದು ; ಶಕ್ತಿಯನ್ನು ಕಳೆದುಕೊಳ್ಳು : ಕುತ್ತದೊಳ್ ಪೊರಳುತಿರ್ಪವರನ್ನಲಿಂಗಿಗಳ ರೂಪಂ ಕಂಡು ತದ್ಬಾಧೆ ಯುಬ್ಬರದಿಂ ಪಿಂಗಿ ಪೊಡರ್ಪುಗುಂದದೆ ಮಹಾಸಂತೋಷದಿಂದಿರ್ದರೇ (ರಕ್ಷೋಮ್ಯ. ೯-೯೬). [ಪೊಡರ್ಪು+ಕುಂದು₁]

**ಪೊಡರ್ಪುಗೆಡಿಸು** (ಕ್ರಿ). = ಪೊಡರ್ಪುಗುಂದಿಸು : ಈ ಶರವ ಕೊಂದೆಸೆ ದವನ ಪೊಡ[(ಡ)]ರ್ಪುಗೆಡಿಸಿ ನಾವು ತಂದೊಪ್ಪಿಸುವೆವು ನಿನ್ನಡಿಗೆ (ಗೋಕುಲೀ. ೦೦-೬೬). [ಪೊಡರ್ಪು+ಕೆಡಿಸು₁]

**ಪೊಡರ್ಪುಗೆಡು**, ಪೊಡರ್ಪುಗಿಡು (ಕ್ರಿ). = ಪೊಡರ್ಪುಗುಂದು : ವಿಜಯಾವ ವೆಂಬ ಮಣ್ಡಳಿಕರಿಲ್ಲದಟೆಂದೆ ಬಯಲ್ಗವನ್ನು ಮೆಯ್ಯೋಯುವವೆಂಬ ವಿಕ್ರಮಿ ಗಳಿಲ್ಲ ಕುನುಂಗಿ ಕಳಲ್ದಳಲ್ದು ಕಾಯ್ವಾಯಿ ಪೊಡರ್ಪುಗೆಟ್ಟು ಬೆಸಕೆಯ್ವವ ರಲ್ಲದೆ ಮಿಕ್ಕ ತನ್ನ ಕಾಯ್ಪೇರಿದ ತೇಜದಿಂ ವಿಜಯಪಾಣ್ಡ್ಯಮಹೀಪನಿದೇಂ ಪ್ರತಾಪಿಯೋ (ಎಕ. XI, ದಾವಣ. ೩೨-೦೧, 1171). ಪೊಡರ್ಪುಗಿಡು : ಈ ಸಕಲಧರೆಯನುಗ್ರಭುಜಾಸಿಯೊಳಳವಡಿಸಿ ನಹುಷನಗ್ರಸುತಂ ಸಂವಾಸಂ ರಿಪುದಾರಕರಂ ದಾಸೇರಕರನೆ ಪೊಡರ್ಪುಗಿಡೆ ನಡೆಯಿಸಿದಂ (ಶಂರಾಮಾ. ೨-೬೦); ಕೃಪ ಕೃತವರ್ಮರಿರ್ವರುಮನಂತಿಮಜಾಳದಿನೆಯ್ದೆ ಪೂಟೆ ಸಗ್ಗಪಿತ ಮನರ್ ಪೊಡರ್ಪುಗಿಡೆ[ಪಾಠಾಂ.ಡುಗಿ]ನಿಲ್ವುದುಂ (ಜೀಭಾಪು. ೦೨-೯೦) ; ಪೊಡರ್ಪುಗಿಡೆ ದೈನ್ಯದಿಂ ನಿಜಪದಾಬ್ಜದೊಳ್ಪಿಟ್ಟದ ಬಾಯ್ಬಿಡುತ್ತುಮಿರೆ ನೋಡಿ ಪೇಡಿಯನದೆಂತು ಕೊಂದಪ್ಪೆನೆಂದಡಂಗಿಸಿದನಾತ್ಮಕೋಪಮಂ (ವರ್ಧಪು. ೨-೩೩). [ಪೊಡರ್ಪು + ಕೆಡು₁]

**ಪೊಡರ್ಪುಗೆಯ್** (ಕ್ರಿ). ಬಲವನ್ನು ತೋರಿಸು; ಶಕ್ತಿಯನ್ನು ಪ್ರದರ್ಶಿಸು; ಪೌರುಷವನ್ನು ಪ್ರಕಟಿಸು : ಕೊಲೆ ಪುಸಿ ಪರವಧು ಸಂಗಂ ಕಳವೆಂಬಿವು ಬೇಡ ಬೇಡ ಬೇಡೆಂಬೀ ನಿರ್ಮಳವೀತರಾಗನಾಜ್ಞೆ ಯನುಳಿದಣ್ಣ ಪೊಡರ್ಪುಗೆಯ್ವ ಗಂಡರುಮೊಳರೇ (ರಕ್ಷೋಮ್ಯ. ೯-೯೩); ಮತ್ತನನ್ತನೊಳನನ್ತಪರಾಕ್ರಮನೊಳ್ ಪೊಡರ್ಪುಗೆಯ್ವುದಿರಿಡುವೊಡ್ಡಿ ನಿತ್ತರಿಪ ಕಾದುವ ಮೆಯ್ಗಲಿಯಾರ್ದರಿರ್ತಿಯೊಳ್ (ಸೌಇಇ. XX. ೬೯-೨೩; 1112); ಬಿಸಿಲೊಳೆ ಬಬ್ಬರಂಬರಿದ ಮಸ್ತಕಶಂಕೆಯಿಂದೆ ಮುತ್ತು ಮುಂದೆಸೆ ಕವಿತಂದೊಡೆ . . . ಪೊಡರ್ಪುಗೆಯ್ದು ಪೂರಿಸುವಳಿಪಿಂದೆ ಪುಷ್ಕರಮನೆತ್ತಿದುದೆಂದು ನಭಕ್ಕದೊಂದಿಭಂ (ಚಂದ್ರಪು. ೯-೬೩) [ಪೊಡರ್ಪು + ಕೆಯ್₁]

**ಪೊಡರ್ಪುಡುಗು** (ಕ್ರಿ). ಶಕ್ತಿಯು ಕುಂದಿ ಹೋಗು; ಪರಾಕ್ರಮವು ಅಳಿ; ಬಲಹೀನವಾಗು : ಪೊಡರ್ಪುಡುಗದೆ ಬಿಟ್ಟುವಿರ್ದ ನೆಲೆಯಿಂ ಕಲವುನ್ಮದ ಗಂಧಸಿಂಧುರಂ (ಶಂಕಭಾ. ೦೦-೯೯); ಯಕ್ಷರ್ ಭಗ್ನದಂಷ್ಟ್ರಹರ್ಯಕ್ಷರನಿಸಿ ಪೊಡರ್ಪುಡುಗೆಯುಂ (ಜಗಚಿ. ೧೩-೬೬ ವ); ಪೆಣನಾಡೆಬ್ಬಿಯುಂ ವಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆಯುವನ ಮೆಯ್ಗಂದಿದ ಚೆನ್ನಮಾಂಗಿನಂತೆ ಪೊಡರ್ಪುಡುಗಿದ ಜಾದಿಯಂ ನಗುವಂದದಿನರಲ್ದ ಸುರಹೊನ್ನೆಗಳೊಳು (ಕಬ್ಬಿಕಾ. ೯೯). [ಪೊಡರ್ಪು + ಉಡುಗು₁]

**ಪೊಡರ್ಪುದೋಱ್** 'ಪೊಡರ್ಪುದೋಱು' ನೋ.

**ಪೊಡರ್ಪುದೋಱು**, ಪೊಡರ್ಪುದೋಱ್ (ಕ್ರಿ). ಶಕ್ತಿಯನ್ನು ತೋರಿಸು; ಪರಾಕ್ರಮವನ್ನು ಪ್ರದರ್ಶಿಸು; ಬಲವನ್ನು ತೋರು : ಭುಜಂಗಕಾಂಡಕ್ಕೆ ಖಗೇಶಕಾಂಡಮನಧೋಕ್ಷಜನೆಚ್ಚು ಪೊಡರ್ಪುದೋಱಿದಂ (ಜಗಚಿ. ೦೬-೨೯). ಪೊಡರ್ಪುದೋಱ್ : ಅನಗಿದಱಿದಿರ್ದೊಡಂ ಚಲದಿ ನೆನ್ನೊಳ್ ಪೊಂಗಿ ಪೊಡರ್ಪುದೋರ್ವಂ (ಅಜಿಪು. ೦೨-೩೩); ಬಲ ನಾರಾಯಣರಂ ನಿರೀಕ್ಷಿಸಿ ದಶಗ್ರೀವಂ ರಣಕ್ಷೋಣಿಯೊಳ್ತಳೆಯು ತೂಗಿ ಪೊಡರ್ಪುದೋರ್ಪನೆನುತುಂ ಬಂದೊಡ್ಡಿ (ಶಂರಾಮಾ. ೦೩-೩೨).

[ಪೊಡರ್ಪು + ತೋಱು]

**ಪೊಡರ್ಪುವೆಱು** (ಕ್ರಿ). ಅತಿಶಯವನ್ನು ಪಡೆ; ಆಧಿಕ್ಯವನ್ನು ಹೊಂದು : ಪರಿವ ಪಡಂಗು ಬಲ್ದೆರೆಯ ಸಾಲ ಚೆಡಂಗು . . . ಪೊಡರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಕಬಕಿ. ೦-೩೯).

[ಪೊಡರ್ಪು + ಪೆಱು₁]

**ಪೊಡವಿರ್ಗಸೆ** (ನಾ). ನಡುಗುವ ಮಿಾಸೆ; ಅದುರುವ ಮಿಾಸೆ : ಕೆಂಗಣ್ಣ ಕೆದರ್ದಲೆಯ ತೆರವಾಯ ಪೊಡವಿರ್ಗಸೆ ತುಂಗತರನಾಸಿಕಂ ಹೆದ್ದಂಷ್ಟ್ರ . . . ದುಃಶ್ವಾಸಸಂಕಲಿತಸಂಗಡಿಗರೆಮನಾಳ್ಗಳಂತಮಮ ವ್ಯದೋರಿತವನಿಯುಂ ಗದ್ಗದಿಪೊಲು (ಶಂಕಾರಾ. ೦-೦೩-೯೬).

[ಪೊಡರ್ + ಮಿಾಸೆ]

**ಪೊಡವಡಿಕೆ** (ನಾ). ಅಡ್ಡಬೀಳುವುದು; ನಮಸ್ಕಾರ; ನಮನ :"ನಮಸ್ಕಾ, ವಂದನಾ—ಈ ೨ ಪೊಡವಡಿಕೆ" (ಶಬ್ದಾನು. ೨೬-೯೦) ; ಕಾದಂಬರೀದೇವಿ ಪರಿಜನಂಬೆರಸು ನಿಮಗೆ ತನ್ನ ಪೊಡವಡಿಕೆಯುಂ ಬಿನ್ನವಿಸಲ್ವೇಟ್ಟಪ್ಪದ ಳೆಂಬುದುಂ (ಕಾದಂಉ. ೨೬೦); ದೇವಿ ನಿಮ್ಮ ಸವತಿ ಜಯಂಧರನರಸಿ ವಿಶಾಳನೇತ್ರೆಯೆಂಬುದುಮಂತಾದೊಡೆನ್ನ ಪೊಡವಡಿಕೆಯು ಪಾರುತ್ತಿರ್ದ ಳಾವರ್ಗಳೆಂದಱಿದು (ಶಜ್ಞಾನ್ಕ್ರ. ೬-೯೬ ವ).

[ಪೊಡವಡು (< ಪೊಡೆವಡು₁) + –ಇಕೆ]

**ಪೊಡವಡಿಸು** 'ಪೊಡೆವಡಿಸು' ನೋ.

**ಪೊಡವಡು** 'ಪೊಡೆವಡು₁' ನೋ.

**ಪೊಡವಿ** 'ಪೃಥುವಿ' ನೋ.

**ಪೊಡವಿಕಂಟಕ** (ನಾ). ಭೂಮಿಗೆ ಮುಳ್ಳಿನಂತಿರುವವನು ; ಲೋಕಕ್ಕೆ ತೊಂದರೆಯನ್ನುಂ ಕೊಡುವವನು : ಪೊಡವಿಕಂಟಕರೆನಿಪ ನೃಪಕುಲ ದಡವಿಯನು . . . ತಡೆಗಡಿದನು (ಶಶಿಗ. ೨-೩-೦೦). [ಪೊಡವಿ (<ಪೃಥುವಿ)+ಕಂಟಕ]

**ಪೊಡವಿಜ** (ನಾ). ಭೂಮಿಯ ಮಗ ; ಮಂಗಳ : "ಮಂಗಳನ ಪೆಸರು ...ಪೊಡವಿಜನೆಂದು" (ಕ್ಷ್ಮಾಸಂ. ೦೬). [ಪೊಡವಿ (<ಪೃಥುವಿ) + —ಜ]

**ಪೊಡವಿಜೆ** (ನಾ). ಭೂಮಿಯ ಮಗಳು ; ಸೀತೆ : ಪೊಡವಿಜೆಯು ಬಿಡೆನೆಂಬ ಚಿತ್ತದ ಕಡುಹು ಖರೆಯವೆ ಎನಗೆ ನೇಮವ ಕೊಡಿಸು (ಶೌರಿಚ. ೦೯-೬). [<ಸಂ. ಪೃಥ್ವೀಜಾ]

**ಪೊಡವಿಪ**, ಪುಡವಿಪ (ನಾ). ಭೂಮಿಯ ಒಡೆಯ ; ಅರಸ ; ರಾಜ : ಪೊಡವಿಪಂಗೀ ಹದನನಱಿವಲು ಘುಡುಘುಡಿಸುತಹುಡಹುದು ಭಸ್ಮನು ಕಡುಹುಗೊಡ್ಡಾಟಗಳಂ ಕುಪರಿಗಳನಾಡಿದನು (ರಾಜಶೇ. ೨೯-೪೪) : ಕಡುವುನದ ಕಬಿಬಲದ ಧಾಳಿಗೆ ನಡುಗಿ ಕಂಡುದು ಪೂರ್ವದಿಕ್ಕಿನ ಪೊಡವಿಪರು ಸಾಮಂತ ಮನ್ನೆಯ ಮಂಡಲೇಶ್ವರರು (ಕೊರಟಾ. ೪-೪-೨೨) ; ಪೊಡವಿಪ ಕೇಳು ನಿಮ್ಮೊಡನೆ ಮಚ್ಚರಿಸುವ ಕಡುಗಲಿಗಳನೆಲ್ಲವರನು ಪಿಡಿಯಾಳಾಗಿ ಹಿಡಿದು ನಿಮ್ಮಡಿ[ಗೊಪ್ಪಿಪ] ಸಡಗರವೆನಗಿರುತಿರಲಿ (ಕೃಷ್ಣರಾಂ. ೦೯-೦೩೩). **ಪುಡವಿಪ** : ಕಡಲು ಕದಡಿತು ಭೂರಿಭೇರಿ ವಾದ್ಯಂಗಳಿಂ ಪು[ಶಾಂ. ಪೊ]ಡವಿಪರ ಮಣಿಮಕುಟಮಣಿಯೊಳಗೆ ತರಣಿ ಶಶಿಯಾಡಗಿದುವು (ಕಸಂಗ. ೪೩-೨೩). [ಪೊಡವಿ (<ಪೃಥುವಿ)+—ಪ]

**ಪೊಡವಿಪತಿ**, **ಪಿಟ್ಟುವಿಪತಿ** (ನಾ). = ಪೊಡವಿಪ : ಪೊಡವಿಪತಿ ಗೊರವನೆನೆ ಪೇಟ್ಟಡೆಯದುದುವದೆಕರಿಸಿ ಕಬ್ಬಿಗರ್ವಜಿ‍ಸೆಯುಂ (ಕವಿರಾ. ೦-೯೯) ; ಪೊಡವಿಪತಿ ಕೂರ್ತರ್ . . . ಅನಿರ್ದೆಡೆಗೆಟ್ಟಂದಂ (ರಕಳು. ೦೨-೯೩) ; ಪೊಡವಿಪತಿ ಕೇಳ್ಬಳಿಕ ಕಣ್ಕಂಡದಂತಾಗೆ ಉಡಿಹುಬ್ಬು ಧೂಮಲತೆಯೆಂಬೊಲಿರೆ (ಕೃಷ್ಣರಾ. ೦೩-೬೬). **ಪಿಟ್ಟುವಿಪತಿ** : ಶ್ರೀಮತ್ ಪಿಟ್ಟುವಿಪತಿಯ ಮಗ ನನ್ನಿಯ ಗಂಗನಣ್ಣಿಯೆಂಬ ಗಣ್ಡ ಬೀರನೊಟವ್ವಂ ತಾಗಿ ಶಾನ್ತರನೆಱಿಯರಟ್ಟಿದೊಡೆ (ಎಪಿ. ಕ. ಗೋರಿಬ. ೪-೯ ; ಸು. 920). [ಪೊಡವಿ (<ಪೃಥುವಿ)+ಪತ್ಯಿ]

**ಪೊಡವಿಯಾಣ್ಮ** (ನಾ). =ಪೊಡವಿಪ : ಬಿಜ್ಜಣಿಗಗಳ ಪಿಡಿದೂಳಿಗಗ್ಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹರಿಶ. ೦-೦೬). [ಪೊಡವಿ (<ಪೃಥುವಿ)+ಅಣ್ಮ (<ಆಳ್ಮ)]

**ಪೊಡವಿಯೆಱಿಯ** (ನಾ). = ಪೊಡವಿಪ : ಓವರ ಪೊಡವಿಯೆಱಿಯ ನಣುಗಿನ ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮಂ ನೂಂಕುತ್ತಿಹನು (ಶಬರಾ. ೨-೬೬). [ಪೊಡವಿ (<ಪೃಥುವಿ)+ಎಱಿಯ]

**ಪೊಡವಿಮನೆ** (ನಾ). ಭೂಮಿಯಲ್ಲಿನ ಮನೆ ; ಹುತ್ತ.

**ಪೊಡವಿಮನೆಯರ್** = ಹುತ್ತದಲ್ಲಿ ವಾಸಿಸುವವರು ; ಹಾವುಗಳು; ನಾಗಗಳು : ಪೊಡವಿಮನೆಯರ ದಂಡು ಖಗಪತಿಯ ಮುತ್ತಿದೊಲು (ಶಶಿಪೋ. ೦೨-೪೯). [ಪೊಡವಿ (<ಪೃಥುವಿ) + ಮನೆ]

**ಪೊಡವಿಮೆಣ್** (ನಾ). ಭೂಮಿಯ ಮೇಲಿನ ಹೆಣ್ಣು ; ಮಾನವಸ್ತ್ರೀ : ಪೊಡವಿಮೆಂಗಳ ಬಿಟ್ಟು ಸಗ್ಗಮೆಂಗಳಿಗೊಲ್ಲ ಜಡಬ್ರಹ್ಮಚಾರಿಯೆ ಅವನು (ಶರಶ. ೬-೦೦೬). [ಪೊಡವಿ (<ಪೃಥುವಿ)+ಪೆಣ್]

**ಪೊಡವಿಸು** 'ಪೊಡೆಯಿಸು' ನೋ.

**ಪೊಡವಿಸುತೆ** (ನಾ). =ಪೊಡವಿಜೆ : ಉಡುಗೊಱಿಯನುಚಿತದಲಿ ರಾಘವ ಕೊಡಿಸುತಿರ್ದನುಪೊಬ್ಬರುಳಿಯದೆ ಪೊಡವಿಸುತೆಯೊಲಿದಂತೆ ತಾನೊಲಿದಂತೆ ಮನ್ನಿಸಿದ (ಶೌರಿಚ. ೪೯-೩೪). [ಪೊಡವಿ (< ಪೃಥುವಿ) + ಸುತೆ]

**ಪೊಡವೀಶ** (ನಾ). = ಪೊಡವಿಪ : ಪೊಡವೀಶರ್ಭೂವನ್ಯೆಕವಲ್ಲನುತ ವಾದಾಂಭೋಜರತ್ನೋರ್ಜಿತರ್ ದೃಢಚಿತ್ತರ್ (ರಮರಾಜು. ೦-೨೪) ; ಪೊಡವೀಶ ಬೊಟ್ಟುದೋಱಿಪ ಪೊಡರ್ವದೇಕಜ್ಞಮಂತುಮಿರಿದಿರಪ್ಪಡ ಮೆನ್ನೆಡಗೆಯ್ಮ ಕಿಱುಕುಣಿಕ್ಕೆಯ ಮಡಿಯೊತ್ತಿರೆ ನೋಟಿಪ್ಪೆಮೆಂದು ನೀಡಿದ ಬೆರಲಂ (ಶಂಹರಿ. ೦೩-೨೦) ; ಬಡವನೊಳ್ಳಿಯ ಮಾತ ನುಡಿದರಲ್ಲೆಂಬುವರು ಪೊಡವೀಶ ಪೊಳ್ಳುಗೆಡೆದರೂ ಕೈವಾರಿ ಕಡುನಗುತಲಿಹರು (ಸರ್ವಜ್ಞ. ೦೨೬೬). [ಪೊಡವಿ (< ಪೃಥುವಿ) + ಈಶ]

**ಪೊಡವು** (ನಾ). ಗುರುತು; ಚಿಹ್ನೆ; ಸುಳಿವು : ಶಿರಿಯೊಳಿಹ ಕಲ್ಯಾಣ ಪುರವನಾಳುವ ಬಸವ ಧೂರೆಯ ಮಂದಿರ ಪೊಕ್ಕು ಚರಮಾರ್ಶಿಯಂತೆ ಪೊಡವು ಶಿಕ್ಕದ ತೆರದೊಳಡರಿಯವರೊಳು ನೀನು ಮೃಡನ ರೂಪಿಗಳೊಳಗೆ ಕಡುವಿನೋದದೊಳು (ಹುಚ್ಚೋಗಿ. ೬೬). [?./ತೆಲು. ಪೊಡ]

**ಪೊಡಸೆಂಡು** 'ಪೊಡೆಸೆಂಡು' ನೋ.

**ಪೊಡಿಪ್ಪಾಡಿ** (ನಾ). ಒಬ್ಬಾತನ ಹೆಸರು : ಶ್ರೀಪೊಡಿಪ್ಪಾಡಿಯಾರ್ಗ್ಗ ಯ್ನೊಂಬು ಕಟನಿ ಕೊಟ್ಟರ್ (ಮೈಶಂ. ೦೯೨೬, ೦೦೦-೦೦ ; ೩೩ಹು ೩೩). [ ? ]

**ಪೊಡಿಮಡೆ ?** (?) : ಹಾರವಟ್ ಸೋರಡೆಯು ಕದೆಂಬರ ತೈಲಪನ್ ಇಱಿದು ಪೊಡಿಮಡೆ ಉರ್ಬ್ಬಲ್ ಆ ತುಱು ಪರಿಯೆ ಬೊಪದಲಾಚಿ ಕಾದಿ ಸುರಲೋಕಪ್ರಾಪ್ತನ್ ಆದಡೆ (ಮೈಶಂ. ೦೯೨೩, ೬೨-೦೨ ; ೧). [ ? ]

**ಪೊಡೆ₁**, ಹೊಡೆ₁ (ಕ್ರಿ). ೧. ಏಟುಕೊಡು ; ಪೆಟ್ಟುಹಾಕು : "ಪೊಡೆ-ಪ್ರಹರಣೇ, ಕುಕ್ಷೌಚ (ಹೊಟ್ಟೆ)" (ಕಮಧಾ); ಪೊಡೆವ ಬೀರರ ಪಂಕಿಗೆ ಗೊಂಟನಾನೆಗಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ (ಕಪ್ಪಾಶಾ. ೨೦೩) : ವೇತ್ರದಿಂ ಪೊಡೆದೆರೆಲೆ ಮಗನೆ ಯೇಳೇಳೆನಲ್ಕೆ (ಶಬ್ದ್ಮಶಾ. ೨-೩೨) ; ಪೊಡೆದರೇ ಕಾಮಧೇನುವ ಕಲ್ಪ ವೃಕ್ಷಮಂ ಕಡಿದರೇ ಸೌಂದರ್ಯರಸದ ಕೆಱಿಯಂ ಮಾಣಾದೊಡೆದರೇ (ಶಂಪ್ರ. ೩೩-೨೪). ೨. ಹರೆ, ನಗಾರಿ, ತಮಟೆ ಮೊದಲಾದ ಚರ್ಮ ವಾದ್ಯಗಳನ್ನು ಬಾರಿಸು—ಬಾಜಿಸು : ಪೊಡೆ ಪಱಿಯನೆಂದು ಪಱಿಯಂ ಪೊಯ್ಸಿ (ತತ್ವಾಶಾ. ೦೯೦-೦೩) ; ಪೊಡೆವ ಪಟಹ ಡಕ್ಕೆಗಳ ಬೊಬ್ಬಿಱಿವ . . . ಖೇಚರಿಯರ ತುಮುಳರವದೊಳ್ ತೊಡರ್ದ (ಅರ್ಕಶೀ. ೩-೦೬ ವ); ಪೊಡೆವ ಡಕ್ಕೆಯ ಪಿಡಿದ ಬಿರುದಿನ ಕಾಳೆಯ ಬಲ್ಲುಲಿಯ ಸಡಗರವೆಲ್ಲಾ ದೆಸೆಗಳು ಕಿವುಡುವಡಿಸೆ (ಕಪ್ಪಾಶಾ. ೨೫೦) ; ಪೊಡೆ ಭೇರಿಯನಡರಾನೆಯ ನಡೆಯಿಡು ಕದನಕ್ಕೆ ಬಲವ ನೊತ್ತೆಂಬ ರವಂ ಸಡಗರದಿಂದೆಡೆವಿಡಿದುಗ್ಗಡವಾದುದು (ಹರ್ಷಾಶ. ೩-೩೦). ೩. (ಸಿಡಿಲು ಮೊದಲಾದುವುಗಳು ಪೆಟ್ಟಾಗುವಂತೆ) ತಾಗು ; ಬಡಿ ; ಅಪ್ಪಳಿಸು : ನೆಗಟಿತ್ತಿಯ ಗಾಂಡಿವಮಂ ತಗುಳ್ದು ಜೇವೊಡೆಯೆ ಸಿಡಿಲ್ ಸಿಡಿಲ್ದು ಪೊಡೆವಂತೆವೊಲಾಯ್ತು (ಶಂಕಶಾ. ೯-೦೦೦) ; ಪೊಡೆದತ್ತುರ್ವರೆಯಂ ಯುಗಾಂತರದ ಸಿಡಿಲ್ (ಶಾರಂಪು. ೩೬೩); ದುರಿತಂ ಮತ್ತದ್ವಿಪಂ ಮೂರ್ಖತೆ ಪೊಡೆವ ಸಿಡಿಲ್ ದುರ್ಜನಂ ದುರ್ಮದಂ ತಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದಮೇಂ ಸೋಜಿಗಂ (ರಕ್ಷಾಕ. ೨೯). ೪. (ಗ್ರಹ ಮೊದ ಲಾದುವುಗಳು) ಮೈಮೇಲೆ ಬರು ; ಆವರಿಸು ; ಮೆಟ್ಟಿಕೊಳ್ಳು : ಪೊಡೆದುದು ಗರವಶಿಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಶಾರಂಪು. ೩೬೩); ಕವಿಗಳ್ ಕಾವ್ಯಂಗಳಂ ಮಾಡುವಾಗ್ರಹಮಂ ಮಾಡಿ ದೊಡಾ ಗ್ರಹಂ ಪೊಡೆದವೊಲ್ ಬೆಂಡಾಗಿ ಬೇಳಾಗರೇ (ಅನಂಪು. ೦-೩೬). ೫. (ಗಾಡಿ, ಪ್ರಾಣಿ, ಗಾಣ ಮೊದಲಾದುವುಗಳನ್ನು) ಮುಂದಕ್ಕೆ ಸಾಗಿಸು ; ಚಲಿಸುವಂತೆ ಮಾಡು; ಅಟ್ಟು; ನಡೆಸು : ಗಾಣವಂ ಪೊಡೆ (ಲೀಲಾ. ೩-೩೨). ೬. ಮೂಡು; ಹುಟ್ಟು; ಕಾಣಿಸಿಕೊಳ್ಳು :

ಗಡಿಗೆ ಮಡಿಕೆಯ ಕೊಂಡು ಅಡಿಗೆಯ ವೇಳೆಯೊಳು ಬಿಡದೆ ಮಳೆಮೊಡ ಪೊಡೆಯಲ್ಕೆ ಈರ್ವರಿಗೆ ತಡಬಡಲಾಯ್ತು (ಶರ್ಪ. ೯). ೭. ಸೋಲಿಸಂ; ಮಿಂಗಿಲಾಗು; ಮೀರು : "ಅಲಗಣಸಾದುದು ಮಿಕ್ಕುದು ಗೆಲೆವಂದುದು ಮಸ್ಸಿಸಿದುದುಮೋರಂಡಲಮಂಡರೆದುದು ಪಳಂಚಿದುದು ತಾನಟ್ಟಿಸಿದುದಂ ಪೊಡೆದುಬ್ಬಿದೆ ವಿಜಾಪಿದುದೆಂದುಂ" (ಕಂಕಂ. ೦೩೭). ೮. ಇಲ್ಲದಂತೆ ಮಾಡು; ನಿವಾರಿಸು; ಕಳೆ : "ಕೊರ್ಬು ತೆನೆ ಕಾಡನ ಬಸಿಬು ನಿವಾರಿಪುದೆಂಬವಚೊಳು ಪೊಡೆ" (ಕಾ.ಕುಂ. ೯೦). ೯. (ಆಲಂ) ತಿನ್ನು; ಭಕ್ಷಿಸು : ಕಡೆಗಣ್ಣಿಳೆ ರಕ್ಕಸನಂ ನಡೆ ನೋಡಿ ಕೊಲಲ್ಕೆ ಸತ್ತ್ವಮಪ್ಪಂತಿರೆ ಮಾಂಂ ಪೊಡೆವಂ ಕೂಟಂ ಬಟ್ಟೆಯುಂ ಪೊಡೆವಂ ರಕ್ಕಸನನೆಂದು ಸಾಹಸ ಭೀಮಂ . . . ಸಮೆಯ ತಾತ್ತ್ವವುದಂ ಕಂಡು (ಸಂಕಭಾ. ೩-೨೯). ೧೦. [ಗಣಿತ] ಗುಣಾಕಾರ ಮಾಡು ; ಗುಣಿಸು : ಪೊಡೆ ಪೊಡವಿಸು . . . ಗುಣಿಯಿಸೆಂಬುದು ನಿರತಂ (ವ್ಯಕಾ. ೦೦-೦೦). **ಹೊಡೆ₁** : ೧. ತಿರ್ರನೆ ತಿರುಗಿ ನೆಲದೊಳು ಹೊಡೆವ ಸಮಯಕೆ ಕಂಡು ಪಾರ್ವತಿ ಬಿಡುಬಿಡೆಲೆ ಪವಮಾನನಂದನ ಈತ ಶಿವನು ಕಣಾ (ಸಂಕಕ. ೦೭.೩೭) ; ಕಡೆದರೆ ತಡೆದೊದ್ದರೊದ್ದ ಅಕೆಯೊಳಿಟ್ಟು ಹೊಡೆದರೆ ಹೊಡೆದು ಡೊಕ್ಕರಿಸಿ ಕೆಡೆದರೆ ಕೆಡೆದುಗುರ್ಗಳೊಳೊತ್ತಿ ಭೀಕರವಡೆದು ಹೊಯ್ದಾಡಿದುವೆರಡು (ಷೋಡಕ. ೩೯-೨೯) ; ತಜ್ಜಿಯಾಜಿ ಹೊಡೆ ಕಾಹಿನವರನೆಂಬಬ್ಬರ ಮಡಿದುದು ಚೌದೆಸೆಯೊಳಗೆ (ಕಂಕಂ. ೦೯-೬) ; ನಮ್ಮ ದೇಶದಲ್ಲಿ ಎಷ್ಟೋ ಜನ ಯಜಮಾನರು ತಮ್ಮ ಕೈಕೆಳಗಿನವರನ್ನು ಹೊಡೆಯುತ್ತಾರೆ (ಮುಂಮು.೯-೬೯). ೨. ಸಿಡಿಲ ಕುಡುಹುಗಳಿಂದ ಕಮಲಜ ಹೊಡೆಯಲ ಬಾಜಭವಾಂಡ ಭೇರಿಯ ಕಡುದನಿಗಳೆನೆ ಮೊದಲೆದವು ನಿಸ್ಸಾಳಕೋಟಿಗಳು (ಕುವ್ಯಾಭ್ರ. ೦-೯೭); ಹೊಡೆದುದಮರರ ಭೇರಿ (ತೊರರಾ ೧-೦೦-೦೯): ಆನೆಯ ಮೇಲೆ ಹೊಡೆವ ಡಮಾಮಿಗಳಬ್ಬರ ಗಗನವ ತುಡುಕಿತು (ಕಂವಂ. ೦೦-೨೩). ೩. ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ (ಜಕಾ. ೨-೩೦); ಉರಿ ಹೊಡೆದ ಕೆಂದಾವರೆಯವೊಲ್ ಕರುಕು ವಡೆದುದು ಮುಖ (ಕುವ್ಯಾಕ. ೦೭-೦೩); ಧಗೆ ಹೊಡೆದಳ್ಕೆ ಹೊಯ್ಮುತ ಬಿಸಿಲಿಂಗೆ ನಾಲಗೆ ನೀರು ತಟಗುಟ್ಟ ಸುರಿಯೆ . . . ನಾಯಿಗಳಡಸಿದುವೆಡಬಲದೆ (ಮೋಹತ. ೦೯-೧೯). ೪. ಕಳವಳಿಸುವ ಕಪಿಯ ಭೂತ ಹೊಡೆದು ಚೀರ್ಕುಜಿ ಫಾಳಿಯೊಳು ನಿಂದು ಧೂಳಿಯ ಹೊಯ್ಯುತ್ತಿದೆ (ಅರವ. ೦೩-೩೨). ೫. ಹಾದರಿಯ ನೆಳಲ್ಗೆ ಹರಿಣಂಗಳಂ ಹೊಡೆಯೆಂಬ ಕೆಲಸದ ನೆವದಿಂ ರತಿಪುಂಗಳೆ ಬಂದ ಕೆಳದಿಯರಲ್ಲರುಂ ಮೆಲ್ಲಮೆಲ್ಲನೆ ಕಳುಪಿ (ಸಂಚಿಕ. ೦೯-೩೯); ಹೊಡೆದನೊಬ್ಬನು ಸೂರ್ಯರಥವನು (ಸಂಕಕ. ೩-೯೦). ೬. ಎಡೆಯಲೇ ಭಕ್ಷ್ಯಾದಿಗಳ ಬಜಿ ಹಡಗೆಯಾಳಿದವು ಕೂಳೊರ್ಥವ ಹೊಡೆದು ಸುಜಿದನು ಹಾಲುತುಪ್ಪದ ಹರವಿಯೋಜೆಯಲಿ (ಕುವ್ಯಾಕ. ೦೦-೩೦); ತುಡುಗುಣಿಯು ಗುಂಡನ ಬಡತನವ ಬಲ್ಲಳೆ ಕದನ ತಂದಿಕ್ಕಿ ಕುಡಿಸಿ ತುಪ್ಪವ ಬೆರಸಿ ಹೊಡೆದು ಕುಳ್ಳಿಹಳು (ಸರ್ವಜ್ಞ. ೦೯೩೩). ೧೧. ಕಡಿ; ಕತ್ತರಿಸು : ತಲೆಯಂ ಹೊಡೆದ ಕೊಡಲಿಯಿಂ (ಬಸವ. ರಾ. ೧೦೯-೦೭); ಕಡುಹಿನಲಿ ಸೈಂಧವನ ತಲೆಯನು ಹೊಡೆದು ನಿನ್ನಯ ಕಾಲ ಬಳಿಯಲಿ ಕೆಡಹುವನು (ಕುವ್ಯಾದ್ರೋ. ೯-೩೩); ಅಖಿಳದ್ವೀಪಪತಿಗಳ ತಲೆಗಳನು ಹೊಡೆವಲ್ಲಿ ತನ್ನಗ್ಗಳಿಯ ಭೃತ್ಯರನಿರಿಸಿ ಬಂದನು (ತೊರರಾ. ೦-೯-೩೭). ೧೨. (ಬಾಣ ಮೊದಲಾದುವನ್ನು) ಬಿಡು; ಪ್ರಯೋಗಿಸು; ಎಸೆ : ಕೂರ್ಗಣೆಯ ಗಾಯವ ತಿನ್ನು ಹೋಗೆಂದು ಹೊಡೆದನಂಬುಗಳ (ಮೋಹತ. ೩೯-೭). ೧೩. (ವೇಗದಿಂದ ಗಾಳಿ, ಮಳೆ ಮುಂತಾದುವು) ಬೀಸಂ; ಚಲಿಸು : ಹೊಡೆವ ಬಿರುಗಾಳಿಯಲಿ ಮುಗಿಲೊಡ್ಡೊಡೆದವೊಲು (ಕುವ್ಯಾದ್ರೋ. ೦-೬೯). ೧೪. ತಟ್ಟು; ಆಸ್ಫಾಲನ ಮಾಡು : ಮದಮುಖನೆಡಬಲನ ನೋಡಿದರೆ ರಕ್ಕಸಕೋಟಿ ಜೀಯೆನುತ ಸಿಡಿಲ ಸೆಜಿ ಬಟ್ಟಂತೆ ಭುಜವನು ಹೊಡೆದು ಮುಂಚಿತು (ಕುವ್ಯಾದ್ರೋ. ೦೩-೯೩). ೧೫. ಲಪಟಾಯಿಸಂ; ಕದಿ; ಅಪಹರಿಸು : ಅಂಗಡಿಯಿಂದ ಉತ್ಪನ್ನವಾಗುವ ಹಣದ ಬಹುಭಾಗವನ್ನು ಆದಂಸಾಹೇಬು ಹೊಡೆಯುತ್ತಿದ್ದ (ತಿಸುಕ. ೨೯). ☞'ಹೊಡೆ' ಪದವು ಇತರ ಅನೇಕ ನಾಮಪದಗಳೊಂದಿಗೆ ಸೇರಿ ಬೇರೆ ಬೇರೆ ಅರ್ಥಗಳಲ್ಲಿ ಸಮಾಸವಾಗುತ್ತದೆ. ಉದಾ : ಊಟ ಹೊಡೆ, ದುಡ್ಡು ಹೊಡೆ, ಬಣ್ಣ ಹೊಡೆ, ಹರಟೆಹೊಡೆ— ಇತ್ಯಾದಿ.

**ಪೊಡೆಪೊಡೆ, ಹೊಡೆಹೊಡೆ** (ದ್ವಿರುಕ್ತಿ) : ಬಡಿಬಡಿ ತಿವಿತಿವಿ ಪೊಡೆ ಪೊಡೆ. . . ಎಂದು ನಾನಾಪ್ರಕಾರದಿಂ ನಾರಕರ್ದಂಡಿಸುವರ್ (ರತ್ನಾಕಪ್ಪ. ೬-೦೯೩) ; ಮುಟ್ಟ ಹೊಡೆಹೊಡೆ ನೀಳ್ದ ಪುಷ್ಪಮಾಲೆಗಳಿಂದೆ (ಸಂಚಿಕ. ೦೩-೯೯). **ಹೊಡೆದಾಟ**= ಕಾದಾಟ; ಜಗಳ : ಸ್ವದೇಶಗಳಲ್ಲಿ ವ್ಯಾಜ್ಯ, ಹೊಡೆದಾಟ ಆಗುತ್ತಿದ್ದರೂ, ಸಂಘದವರು ಅಪ್ಪಣೆ ಮಾಡಿರುವಂತೆ. . . ಕೆಲವು ಮಾತುಗಳನ್ನು ಹೇಳುತ್ತೇನೆ (ರಾಜುಕ. ೯೭). **ಹೊಡೆದಾಡು**= ೧. ಕಾದಾಡು; ಹೋರಾಡು : ತರ್ಕಶಾಸ್ತ್ರದೊಳೊಡ್ಡಿ ಕಗರು ತಗರಿನಂತೆ ಮಾರ್ಕೊಂಡು ಹೊಡೆದಾಡಬಹುದು (ಶರಕ. ೨-೯೦) ; ಜೊಂಡುಹುಲ್ಲು ಬೆಳೆದಿತ್ತು. ಅದನ್ನು ಕಿತ್ತುಕೊಂಡು ಹೊಡೆದಾಡಿದರು (ಸೀತಿಕಂ. II, ೬). ೨. ಶ್ರಮಪಡು : ಅದೆಲ್ಲ ಎನ್ನದೆಂದು ಹೊಡೆದಾಡಿ ಬೇಸತ್ತೆನಲ್ಲಾ! (ಕಂತಂಕಂ. ೩). **ಹೊಡೆದು ಕಾಣು** = ಎದ್ದು ತೋರು; ಸ್ಪಷ್ಟವಾಗಿ ಕಾಣು : ಈ ವಿಚಾರದಲ್ಲೂ ಕೇರಳದ ವೇಷಗಳಿಗೂ ನಮ್ಮ ವೇಷಗಳಿಗೂ ಬೇಕಷ್ಟು ಅಂತರ ಹೊಡೆದು ಕಾಣುತ್ತದೆ (ಯಕ್ಷಂ. ೦೩೯). **ಹೊಡೆದುಕೊಳ್ಳು**= ಕದಿ; ಲಪಟಾಯಿಸು : ನನ್ನ ಪರಿಶ್ರಮದಿಂದ ಗಳಿಸಿದ್ದ ಹಿಂಡನ್ನು ನನ್ನ ಅಲಕ್ಷ್ಯದಿಂದ, ಮೋಸಮಾಡಿ ನೀನು ಹೊಡೆದುಕೊಂಡಿದ್ದಿ (ದಂಗಾಹ. ೩೨).

[ದೇ. ೫ ತಮಿ. ಪುಟೈ ; ತುಳು. ಪೊಡೆ, ಪುಡೆ ; ಕೊಡ. ಪೊಡ ; ತೆಲು. ಪೊಡುಚು]

**ಪೊಡೆ₂, ಹೊಡೆ₂** (ನಾ). ಏಟು ; ಪೆಟ್ಟು ; ಹೊಡೆತ : 'ಪೊಡೆವಡು₁' ಪರಿಾ. **ಹೊಡೆ₂** : ಪಕಿ ಬಿಜಿಸಿನಲಿ ಹೊಯ್ವ ಹೊಡೆಗಳು ಸತಿಯ ಮೇಲಣಾಮಾತ್ರದನಿತುಂ ತಾಗವು (ರಸಕ. ೩೨-೯); ಬಿಸಿಲ ಹೊಡೆಯಿಂದ ಕಂಡದೆ ದೋಸೆವದದಿ ಸೊಗಯಿಸುವ ಸಕ್ಕರೆಗಳೆಳನೀರ ಕುಯಿದಿಳುಪಿ (ಸೊಪಕಾ. ೨-೩೦); ಚಬುಕಿನ ಹೊಡೆಗಳಿಜಿಯದ ರಾವುತರುಗಳ ಮಡದ ಸನ್ನೆಗೆ ಸುಳಿವ ದಿವ್ಯಾಶ್ವಂಗಳೊಪ್ಪಿದುವು (ತಿಪ್ಪ.ಅ. ೬-೯೨). [<ಪೊಡೆ₁]

**ಪೊಡೆ₃, ಹೊಡೆ₃** (ನಾ). ೧. ಹೊಟ್ಟೆ ; ಉದರ ; ಒಡಲು : "ಪೊಡೆ_ಪ್ರಹರಣೇ, ಕುಕ್ಷೌಚ (ಹೊಟ್ಟೆ)" (ಶಬ್ದಮ) ; ಸಕ್ಕಿರ್ದನಡ್ವಾಹನಂ ಕಂಡದಟ ಪೊಡೆಯಂ ಡಾಣೆಯಿಂ ಪೊಯ್ಯಲ್ಕೆ (ಶಂಕಕಂ. ೦೯.೦೩) : ಪೊಡೆಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂ ಶುದ್ಧನೇನಪ್ಪನೆ (ಸೋಮೇಶ. ೯೭) : ಉದರದೇಶಮಂ ಪೊಡೆಯೆಂಬರ್ (ಕೈಜಿಹಾ. ೨-೯). ೨. ಬಸಿರು ; ಗರ್ಭ : ನಾಭಿ ಗುಣಪ್ಪಾಯ್ತು ಪೊಡೆ ಪೊಣ್ಮಿದುದು (ಶಬ್ದರಾ. ೯-೨೯) ; ಪೊಡೆಯೊಳಗಿಹ ಬಾಲಕ ಮೂಜುಲೋಕಕ್ಕೆ ಸೆಡೆಯ ನೆಂಬುದ ಜಗಜನಕ ಬಡದೆ ಪೇಳುವವೊಲು ಮಡದಿಯ ತನುಕಾಂತಿ ಮಡ್ಡು ವಿಡುತಿಹುದು (ಕಂಕಕ. ೯-೦೦); ಬಳೆದುದು ಪೊಡೆಯುಂ ಜಘನಾಚಳಮುಂ ಕರ್ಪಿಡಿದುದಳಕಮುಂ ಚೂಚುಕಮುಂ (ರಾಕಂಕ. ೯-೩೯). ೩. ತೆನೆಯ ಮೊದಲಿನ ಸ್ಥಿತಿ ; ಗಬ್ಬ : "ಕೊರ್ಬು ತೆನೆ ತಾಡನ ಬಸಿಬು ನಿವಾರಿಪು ದೆಂಬವಚೊಳ್ ಪೊಡೆಯುದು" (ಕಾ.ಕುಂ. ೯೦) ; ಸಸಿಯಂತೆ ಪೊಡೆಯಂತೆ ಪಾಲ್ದೆನೆಯಂತೆ (ರವಕಪ್ಪ. ೦೨-೨೯) ; ಪೊಡೆಯೆಂಬುದು ಬೆಳೆಗೆಯ್ಯೊಳ್ (ಕಂಕಾ. ೨೩). ೪. ಬಿಲ್ಲಿನ ಹಗ್ಗವು ಕೈಗೆ ತಗುಲದಂತೆ ತೊಡುವ ರಕ್ಷಾಕವಚ ; ಗೋಧೆ : ಪೊಡೆಯ ಝಳ್ಳಿಗಳಡಾಯುಧ ಕೆಯ್ಯ ಪೊಡೆ ಸರಳ ಹೊಡೆಗಳಂ ತತ್ಸ್ಥಳಂಗಳೊಳ್ ಕಟ್ಟಿ (ಕಂಪ್ಪ. ೯೬-೯೯).

'ಕೆಯ್ಪೊಡೆ', 'ಪೊಟ್ಟೆ$_1$' ಪರಾ. **ಹೊಡ್ಕೆ** : ೧. ಏಷ್ಣು ವಿಧಿಪಾಶದಿಂ ಬಗಿಯ ರುದ್ರನ ಹೊಡೆ ನಿಟ್ಟ ಹೊಯ್ಯುತಿದೆಯುವ್ವ (ಶಿಹಾ. ೦೫೯-೬೯೯ ಶ); ಈ ಜಗವನೆಲ್ಲವನೊಂದುಹೊಡೆಯುಲಿ ಹೊತ್ತ ಬಲರಾಮಂಗೆ ಕಡುಮುಳಿದು (ಶಿಹಾಗ. ೦೦-೦೫-೬೦); ನವನೀತಮಂ ಸವಿದು ಹೊಡೆ ಸಿಡಿದು ಹೋಯ್ತು! (ಸಂಕ್ರಸ. ೪೪-೨೦). ೩. ಹೊಡೆಯು ಹುಲ್ಲು ಕರವಾಳ ಹಿಡಿಯು ಕೊಯ್ಯುತ್ತ (ಕಗಕು. ೪. ೪೨೬-೫೬) ; ಮೊಳೆವ ಬೀಜವನು ಕ್ರಿಮಿಕೀಟಕಂಗಳು ಸಸಿಯನೆಳ ಹುಲ್ಲಿಗಳು ಹೊಡೆಯನೆರಳೆಗಳು ಸುಡು . . . ನಾಡೆಲ್ಲಮಂ ಗೋಳಿಡಿಸು ತಿರ್ದುವು (ಶಕಾ. ೩-೬೩) : ಮುಗುಳುಹೊಡೆಗಳೆರೆಹೊಡೆ ನೆಟ್ ಮೇಲಕ್ಕೆ ನಿಗುರುವ ಹೊಡೆ ಪಸುರ್ಪೊಡೆಯ ಒಗುಮಿಗೆಯಲಿ ಹಾಲು ದುಂಬುದನೆಯು ಶಾಲಿ ಸೊಗಸನಿತ್ತುವು (ಸಂಶಿ. ೫-೬೨). ೪. "ಹೊಡೆ(ಡ)–ಪುಟ, ಮುಚ್ಚಳ, ಪೊಡ" (ಕನ್ನಕೋ. ೫೦). 'ಕೈಹೊಡ್ಕೆ' ಪರಾ. ೫. (ಬಾಳೆ, ಕೇದಗೆ ಮುಂತಾದುವುಗಳ) ಮೋತೆ : ಮುಗುಳು ವಾಳೆಯು ಹೊಡೆಯ ನುಚ್ಚಾಗಿ ಕತ್ತರಿಸಿ (ಸೂಶಾ. ೪-೬೦). ೬. ತೆನೆಯ ಪೈರುಗಳ ಬೆಳೆ : ಕೋಟಚಿನ್ನಯರು . . . ಹಿತ್ತಿಲಿಗೆ ಇಳಿದು, ಅಡ್ಕ ವನ್ನು ಅದರಿ, ಹೊಡೆಯಲ್ಲಿ ಹೋಗಿ, ಹೊಳೆಯನ್ನು ಹಾಯ್ದು . . . ಬೆಳ್ಳಿಯ ಕೆಲಶದ ಬೀಯ ಉಪ್ಪರಿಗೆಯನ್ನು ಏರಿದರು (ಕೋಚಿಕ. ೦೫).

**ಪೊಡೆಯಲರಾತ** ಹೊಕ್ಕುಳಲ್ಲಿ ಹೂವನ್ನುಳ್ಳವನು ; ಪದ್ಮನಾಭ; ವಿಷ್ಣು : ಪೊಡೆಯಲರಾತಂ ರಾಗದೆ ತೊಡೆಯಂ ಪೊಯ್ದಾರ್ವ ನೆವದೆ ನೆಟಿನೀತಂಗೀಯೆಡೆಯೆಂದು ಶೋಟ್ ಟಡೆ ಪೊಲಗಿಡದಟ್ದಂ ಪರಮ ಪಾಡಿತಂ ಪವನಸುತಂ (ಗದಾಯು. ೯-೩೫) ; ಪೊಡೆಯಲರಾತನಕ್ಷಿಗಮಗೋಚರಮಾಗಿರೆ . . . ಕೃಷ್ಣನ ತೇರ ಧೂಳಿಯಪ್ಪೊಡವಿರದಾಯ್ತನುತ್ತಬಳೆ ಧೂಳಿವಿಡುತ್ತಿರೆ ಬಾಯ್ಪುಲಂಬಿದರ್ (ಜಗಂ. ೫-೦೪೦). **ಪೊಡೆಮಕ್ಕಳ್** – ಹೊಟ್ಟೆಯ ಮಕ್ಕಳು ; ಸ್ವಂತಮಕ್ಕಳು : ಪೊಡೆಮಕ್ಕಳಂ ಭಕ್ತಿಯಿಂದೆ ಪೆಸರಿಟ್ಟುಯೆಡೆವಿಡದೆ ಗುಡಿಗಟ್ಟಿ ಜಗಮೆಲ್ಲ ಬಂದಡಿಗೆಱಗೆ ಪೊಡಮಿಯಲಲ್ಲಿರಿವ ಕಿಚ್ಚಂ ಪರಿವ ಪಾವ ಸ್ವಾಜ್ಞಾಮಾತ್ರದಿಂದೆ ನಿಲಿಸಿ (ರಾಶಿಶ. ೦೯-೯೮).

**ಪೊಡೆಗಟ್ಟು** (ನಾ). "ಹೊಟ್ಟೆಯ ಮೇಲಣ ಕಟ್ಟು" (ಶ್ರಶಂ) : ಒಳಗಿಡಿದ ಮೂಱುಂ ಜಗದ ಭಾರದಿಂ ಸರಿಯದಂತೆ ರನ್ನದ ಪೊಡೆ[ಪಾಠಾಂ. ಡ]ಗಟ್ಟುಗಟ್ಟಿರ್ಪುದು (ಶಶಮ. ೦೨೯-೦೬). [ಪೊಡ್$_3$ + ಕಟ್ಟು$_3$]

**ಪೊಡೆಗಲ್ಲು**, ಹೊಡೆಗಲ್ಲು (ನಾ). (ತಾಗುವಂತೆ) ಮೇಲೆದ್ದಿರುವ ಕಲ್ಲು ; ಗೂಟಕಲ್ಲು : ಕಡಿದ ಕರಿಗಳ ಬೆಟ್ಟವಳಿಯು ಗುಂಡುಗಳೊಳಗೆ ಪಾಡಿವ ಕುದುರೆಗಳ ಪೊಡೆಗಲ್ಲ ಪೊರಳಿಗಳೊಳಗೆ . . . ರುಧಿರಪ್ರವಾಹು ಪರಿಯು ಸವಟಿದಂ ಪಾರ್ಥಜಂ ಪರಬಲವನು (ಕೃಜೈ. ೨೨-೫೬). **ಹೊಡೆಗಲ್ಲು** : ಹೊಡೆಗಲ್ಲೊಳು ಮುಗ್ಗಿ ಎಡವುತ ಕಾಲನು ತೊಡರುವ ಬಳ್ಳಿಯು ಪಱಿದು ಅಡಗುವೆಡೆಯು ನೋಡಿ ತಳಿತ ಕಾನನದೊಳು ನಡೆ ತಂದನು ಚಿಕ್ಕನೊಲಿದು (ಚಿಶಾಂ. ೦-೬೬). [ಪೊಡೆ$_1$+ಕಲ್ಲು (< ಕಲ್$_3$)]

**ಪೊಡೆಗಿಚ್ಚು** (ನಾ). ಜಠರಾಗ್ನಿ : ಪೊಡೆಗಿಚ್ಚಿಂದವೆ ಜೀರ್ಣನಾದನಸುರಂ ವಾತಾಪಿ (ಕಾಶಂಪು. ೦೨೩). [ಪೊಡ್$_3$ + ಕಿಚ್ಚು]

**ಪೊಡೆಗಿರ್ಚು**, ಹೊಡೆಗಿಚ್ಚು (ನಾ). ದಳ್ಳುರಿ ; ಆವರಿಸುವ ಬೆಂಕಿ : ಧನಮೇಕಾನೇಕಸತ್ತ್ವಾದಿ ಗುಣದ ಪುದಿವಾಳೇದಾನೇಕ ಕಾಮೋತ್ಸವ ವೇಕಾನೇಕ ತಾಪತ್ರಿತಯದ ಪೊಡೆಗಿರ್ಚೇಕದಾನೇಕ (ರಕ್ಷಾಶ. ೫೬). **ಹೊಡೆಗಿಚ್ಚು** : ಸಂಸಾರಕ್ಕೊಳಗಾದವರೆಲ್ಲ ಮಾಯೆಯ ಹೊಡೆಗಿಚ್ಚ ಗೆಲಬಲ್ಲರೇ (ಅಶಕಂ. ೨೬೬-೦೨೬೨); ಒಡಲ ಬಡದಾಪತ್ತು ಕಡಹ ಧರೆಯೊಳು ಕಾಡ ಹೊಡೆಗಿಚ್ಚಿನಂತೆನ್ನ ಸುಟ್ಟು ಸುರುಳಿಪುದು (ಕೃಕಶ. ೦-೦೬-೨) ; ಸನ್ಮತ ಶರಣರ ಮನದಲ್ಲಿ ಕೋಪಾಗ್ನಿಯು ತಾನೆ ಎದ್ದರೆ ನಿಂದಕರ ಗುರಿ ದೇವನೆ ನಿನ್ನ ಹೊಡೆಗಿಚ್ಚಿಗೆ ನಾ ಗುರಿಯಲ್ಲ (ಸಿದ್ಧವ. ೨೨-೮೮). [ಪೊಡೆ$_1$ + ಕಿರ್ಚು (< ಕಿಚ್ಚು)]

**ಪೊಡೆಗೆಡೆ**, ಹೊಡಗೆಡೆ, ಹೊಡೆಕೆಡೆ, ಹೊಡೆಗೆಡೆ (ಕ್ರಿ). ೧. ನೆಲಕ್ಕೆ ಹೊಟ್ಟೆ ತಗುಲುವಂತೆ ಬೋರಲಾಗಿ ಬೀಳು ; ಮುಗುಚಿ ಬೀಳು : ಬಿಡೆ ಕಣೆವ ಮುಂಡದಿಂ ಬೊಬ್ಬಿಡುವ ರುಂಡದಿಂ ಬಿಡುಮಿದುಳ ಜೊಂಡಿನಿಂ ನಡುಕೊಡೆಯ ತುಂಡಿನಿಂ ಪೊಡೆಗೆ[ಪಾಠಾಂ. ಯೊ]ಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು (ಕಹು. ೩೮-೩೯) ; ಭಾಸುರದ ಗಜವದನ ಪೊಡೆಗೆಡೆದು ಪೊಡಕಾತಿರೆ (ಶಶಿಕೋ. ೬-೨). ೨. ನಮಸ್ಕರಿಸು; ಅಡ್ಡಬೀಳು : ಶಿಷ್ಯಸುಜ್ಞಾನಾಮೃತಸ್ವಾದಿಹಂಸ ಶರಣಾಗೆಂದು ಪೊಡೆಗೆಡೆದನು (ಅಶೋಕ. ೦೫-೨೨). **ಹೊಡಗೆಡೆ** : ೨. ಭೂತಳಂ ಬೆಱಗಾಗಿ ಜಯ ಎಂದು ಹೊಡಗೆಡೆದರು ಪ್ರೀತಿಯಿಂ ವಂದಿಸುತ (ಗುಶುಬಿ. ೬-೨೯); ಅವರು ಕಳುಹಿದಂತೆ ಮಾಡೆನಲು ಉರಗರಾಜ ಹೊಡಗೆಡೆದು ವಂದಿಸಿ (ಕೃಚಶ. ೨೬). **ಹೊಡೆಕೆಡೆ** : ೧. ಮಡಕೆ ನಿವಿರ್ದುರ್ಗದ ಜಡೆಗಳ್ ತಡುಕ ಶರೌಘಮುಮನಭವನತಿಕೋಪದೊಳಂ ಅಡಕೆ ಮರುಳ್ಗಳ್ ಪಣನಂ ಹೊಡೆಕೆಡೆದರ್ ದೈತ್ಯರಂದು ತ್ರಿಪುರಸ್ಥಳದೊಳ್ (ಕಪಾಶ. ೫೬). **ಹೊಡೆಗೆಡೆ** : ೧. ಮಹಾರ್ಣವವುರಿದು ಬೇವಲ್ಲಿ ಕರಗುವ ಜಲಕ್ಕೆ ಹೊಡೆಗೆಡುವುದೆ (ಸಶಿಶ. I. ೨೦೫-೦೨೬); ಕುಸುಮಚಾಪಂ ಕಾಲ್ಗೆಱಗುವಂತೆ ಪಂಚಭಾಣಂ ಹೊಡೆಗೆಡೆವಂತೆ . . . ಪೊಡೆಮಟ್ಟು ನಿಂದು (ಗಂಶ. ೫-೪೨ ಶ) ; ಹೊಡೆಗೆಡೆದ ದಂತಿಗಳು ರಕ್ತದ ಕಡಲೊಳೀಸಾಡಿದವು (ಕುಮಾಕ್ರೋ. ೦೦-೦೦). ೨. ಗೊರವರ ಪಡೆ ಬೆದಱಿ ಹೊಡೆಗೆಡೆವರಾತನ ಪಾದಪಂಕಜಕೆ (ಸಂಶದಾ. ೦೩-೬೨) ; ಹೊಡೆಗೆಡೆದ ಮಣಿಮಕುಟಶಿರಗಳಂ ... ನೋಡಿದನು ಕಲಿದ್ರೋಣನು (ಕುಕುಗ. ೫೫-೩೮). [ಪೊಡ್$_3$ + ಕೆಡ$_1$]

**ಪೊಡೆಗೊಳ್**, ಹೊಡೆಗೊಳು (ಕ್ರಿ). ೧. ಒಡಲಲ್ಲಿ ಇಟ್ಟುಕೊಳ್ಳು ; ಒಳಗೊಳ್ಳು. ೨. ಹೊಟ್ಟೆಯಲ್ಲಿರು ; ಗರ್ಭದಲ್ಲಿರು : ನಿನ್ನರವಿಂತು ಬೇಱ ಪಿರಿಯಕ್ಕವಮಂ ಪೊಡೆಗೊಂಡ ದೇಸೆಯಿಂದುನ್ನತವಾದುದು (ಶಶಿ. ೩-೦೦೩) ; ಪೊಱಲಾಱಿರ್ ತೊಡವುಗಳಂ ಪೊಱುವರ್ ಪೊಡೆಗೊಂಡ ವಿಶ್ವಗರ್ಭನನೊಳ್ಪಿಂ (ಶಶಿ.೪-೬). **ಹೊಡೆಗೊಳು** : ೧. 'ಹೊಡೆಗೊಳಿಸು' ಪರಾ. [ಪೊಡ್$_3$ + ಕೊಳ್$_1$]

**ಪೊಡೆಚೆಂಡು** 'ಪೊಡೆಸೆಂಡು' ನೋ.

**ಪೊಡೆಚೆಂಡಾಟ** 'ಪೊಡೆಸೆಂಡಾಟ' ನೋ.

**ಪೊಡೆಚೆಂಡು** 'ಪೊಡೆಸೆಂಡು' ನೋ.

**ಪೊಡೆಜ** (ನಾ). ಹೊಟ್ಟೆಯಲ್ಲಿ ಹುಟ್ಟಿದವನು ; ತನುಜ ; ಮಗ : ದೇವಿ ನಿಮ್ಮಯ ಪೊಡೆಜನು ತನ್ನ ವಲ್ಲಭೆಯಂ ಪೊಡವಿಯೊಳಱಸಿ ಕಾಣದೆ ತನ್ನಸುವನು ಬಿಡದೆ ಮಾಣನು ತಾನೆಂದಂ (ಅಂಜಶ. ೦೦-೦೬೦).

[ಪೊಡ್$_3$ + — ಜ$_0$./P ಸಂಸ್ಕೃತದ 'ಜ' ಪ್ರತ್ಯಯವು ಕನ್ನಡಪದದೊಂದಿಗೆ ಸೇರಿದೆ]

**ಪೊಡೆತ**, ಹೊಡೆತ (ನಾ). ಏಟು ; ಪೆಟ್ಟು : ಬಾಸುಳಂ ತೋರವಂದದಿ ದೆರಳ್ಪೊಡೆತಮಂ ಕೊಡು (ವಂಶಾಶಿ. ೫-೨-೪೦) ; ಕೊಂಬಿನಂಡೆಗಳೊಳ್ ತುಂಬಿದೋಕುಳಿಯ ನೀರ ಪೊಡೆತಗಳಿಂ ಕುಣಿಕುಣಿದಾಡುವ ಬೊಜಗರಿಂ (ಚಿತ್ರಗೋ. ೯-೦೬). **ಹೊಡೆತ** : ಈ ದಿನವೇ ಮೇಷ್ಟರಿಂದ್ಲ ಹೆಚ್ಚಾಗಿ ಹೊಡೆತ ತಿಂದರೆ ಸಾಕಷ್ಟು ಕಾರಣವೂ ಆಯಿತೆಂದು ಬಗೆದು, ನಾನಿ ಶಾಲೆಯೊಳಕ್ಕೆ ಸಾಗಿದನು (ಪಾತಿಗು. ೦೦೯). [ಪೊಡ್$_1$+ — ತ$_3$]

**ಪೊಡೆದುಂಬು** (ಕ್ರಿ). ತೆನೆಯು ತುಂಬಿಕೊಳ್ಳು.–ಪುಷ್ಟವಾಗು : ದೆಸೆಗೆ ಕವಿಲ್ತು ಗಂಟಿಡಿದು ನುಣ್ಬಸಿಱಿಂ ಪೊರೆಯೇಱಿ ಕೊರ್ಬಿಯುರ್ಬಿಸಿ ಪೊಡೆದುಂಬಿ ಪಾಲ್ದನೆಗಳುರ್ಬೆ ಕರಂ ತಲೆವಾಗಿ ಬೆಳ್ಪಿನಿಂದೆಸೆವುವು (ದಶಕು. ೦-೨೬). [ಪೊಡ್$_3$+ತುಂಬು$_1$]

**ಪೊಡೆಮುಗುಚು**, ಹೊಡಮಗುಚು, ಹೊಡೆಮಗುಚು (ಕ್ರಿ). ೧. ಹೊರಳು ; ಹೊಟ್ಟೆ ಕೆಳಗಾಗಿ ಮಲಗು : ಪೊಳೆವುದೋಱುವ ಪೊಡ

ಸದೆ ರುಚಿರತರಮಾದ ಪೊದಕೆಯಂ ನೆಯ್ಸಿಕೊಳ್ವುದೆ ನಿರಂತರದೊರ್ಪ ತ್ತೊಂದನೆಯ ಶೀಲ (ಶಾಸೋಕ. ೨-೬೦). ೩. (ಮನೆ, ಗುಡಿಸಲು ಮೊದಲಾದುವುಗಳ) ಛಾವಣಿ ; ಮೇಲ್ಛಾವಣಿ : ಮಾಳಿಯ ಕಂಭ ವಿಲ್ಲಿ . . . ತಗುಳ್ದೇಳಿದವಪ್ಪ ತೋಲ್ ಪೊದಕೆ ಮಾಂಸಮ ಕೀರ್ಗಳವೋಧ್ಯ ಪೂರ್ಣ ದೇಹಾಳಯ (ಶಬಸಂ. ೧೩೦-೨೨) ; ಬಾಲಸತ್ಪಲ್ಲವದ ಪೊದಕೆ ಯಿಂದಿಕ್ಕುದಂಡುಂಗಳಿಂ ಕಣ್ಗೊಳಿಪಂ ನಾನಾಲತಾಂತಪ್ರಸರಸತಯುತಂಗಳ್ ಪ್ರಪಾಮಂಟಪಂಗಳ್ (ಶಾಶಕೀ. ೨-೨೦) ; ಪಸುರೆಲೆಯ ಸಟ್ಟವನೆ, ಸೆಳೆಗೊಂಬಿನ ಕೇರ್, ಪಣ್ಣೆಲೆಯ ಪೊದಕೆ . . . ಅಲಜೊರ್ಂಪವ ಮೇಲ್ಕಟ್ಟು ಚೆಲ್ವಾಗೆ ಕಣ್ಗಂ ಮನಕಮಿಂಟಾದ ಪರ್ಣಕುಟಿಯನೇರ್ಪಡಿಸಿ (ಗಮಾಕ್ಯ. ೮೯೯-೦೦). ೪. (ವಸ್ತ್ರ ಮೊದಲಾದುವುಗಳ) ಗಂಟು,–ಮೂಟೆ,–ಹೊರೆ : ಅಡಕೆ ೨೫ ಕತ್ತೆಯ ಬರಕಕ್ಕೆ ಪೊಂಗೆ ಅಡಕೆ ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ ಪೊಟ್ಟೆಯ ಸೀರೆಗೆ ಪೊಂಗೆ ಪಣ ೧ (ಶಾಂತೀಶ. ೩-೨೨ ಶ ; 1047). **ಪೊದಟ್ಕೆ₂**: ೨. ಭೋಂಕನೆ ಪಜ್ಜಳಿಪ ತನ್ನ ಸನ್ಮಿತವದನಸುಧಾಕರಬಿಂಬದಿನೊಸೆವ ಚಂದ್ರಿಕಾ ವಿಸ್ತಾರದಂತೆ ತೋರ್ಪಧಿಕಸಿತಧವಳಲೋಳಲೋಚನಂಗಳ ಬೆಳಗಿನ ಬಳಗದಿಂ ನಿಳಯಲಕ್ಷ್ಮಿಗೆ ಬೆಳ್ಪಸವನದ ಪೊದಟ್ಕೆಯನಿತ್ತು (ಶರ್ಣ. ೦೩-೬೩ ವ).
**ಪೊದಿಕೆ** : ೧. ಕಂಡಷ್ಟಾಂಗಪ್ರಣಾಮಂಬೆರಸು ಹಂಸದಿಂ ನಾರದಂ . . . ಹಿಂಡೇಳ್ವಾನಂದರೋಮಾಂಚದ ಪೊದಿ[ಶಾಕಾಂ. ದ]ಕೆಗಳಂ ತಾಳ್ದು ನಿಂದಿರ್ದು . . . ಸ್ತೋತ್ರಮಂ ಮಾಡುತಿರ್ದಂ (ಗಂಳ. ೯-೯೩). ೨. ಗದಗದಿಪ ಕರಕಮಲಮಂ ಕೇಡು ದಾತಿಚರ್ಮದ ಪೊದಿಕೆಯಿಂದದಂ ಮುಚ್ಚಿ (ಕಂಪ. ೩೨-೦). ೩. ಕುಳಿರ್ವ ಕುಳಿರ್ವೆಣ್ಣರ ಕೇರ್ಗಟ್ಟನಿಂ ಅಸುಕೆಯ ಕಿಸುದಳಿರ ಪೊದಿ[ಶಾಕಾಂ. ದ]ಕೆಯಿಂ ಪಜ್ಜಳಿಸುವ ಪನ್ನೀರ ಚಳಿಯದಿಂ . . . ಲೀಲೆವಡೆದ ಲತಾಗೃಹಂ ಲತಾಂತಶರಜನ್ಮಭವನದಂತಿರ್ದುದು (ರಕಳ. ೦೦-೬೨ ವ). **ಹೊದಕೆ₁** : ೧. 'ಮೇಲುಹೊದಕೆ' ಪರಾ. ೨. ಧವಳದ ಕಾಂತಿಯ ನಿಲುವೋ ರುದ್ರಾಕ್ಷಿಯ ಹಂಗು ಬೇಡವೆಂದು ಹೊದ್ದ ಚರ್ಮದ ಹೊದಕೆಯಂ ತೆಗೆದ ಗಟಗಟಜಾತ್ರದ ನಿಲವೊ (ಶೂನ್ಯಸಂ. ೦೦೭-೯) ; ಹಿರಿಯ ಮೆಳೆಯಡಿಯಲ್ಲಿ ಹೊದಕೆಯಂ ಹಾಸಿ ಬಳ್ಳಿರಿಸಿ (ಸಿದ್ಧರಾ. ೨-೩೨) ; ಕಳದರೀ ಚಂಡಾಂಶುವಂಶೋಜ್ವಲರು ಬಳಕಾ ಹಿಮಸಮಯಪನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಕೆಯಲಿ (ಕೊರಣಾ. ೩-೨-೩). ೩. "ಆಚ್ಛಾದನಂ, ವಲಭಿಃ – ಈ ೨ ಮನೆಯ ಹೊ(ದಿ)ದಕೆ" (ಹಲಾಯು. ೩೦-೦೯೩); ಕರಮೆಸೆದವು ಲತೆಗಳನೆಟ್ಟರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್ ಸಿರಿಖಂಡದ ವಳೆಯ ಕಪ್ಪುರವಳುಕಿನ ಜಗಲಿ ಕೇತಕೀರಜದ ಮಟಿಲ್ (ಸೊಕ್ತಸು. ೦೦-೬೦) ; ಹೊಂದಗಡಿನ ಹೊದಕೆಯ ಮನೆ ಬಹಳ ನೇರದವಡೆವ ಪಟ್ಟಶಾಲೆ ಮುಂದೆಸೆಯಲಿ ತುಳಸಿಯ ಮಂಟಪದಿ ಗೋವಿಂದನ ಕೀರ್ತಿಸುತಿಹರು (ಕೋಹಕ. ೩-೩೯). ೪. ಒಂದುದಿನ ಮಡಿವಾಳ ಹೊದಕೆಯ ತಂದ ಕತ್ತೆಗೆ ಲಿಂಗವಿರದಿರೆ ಕೊಂದು ಇಂಸಾಕ್ಷಣದಿ ಅವ ಸಹವಾಗಿ ಕತ್ತೆಯನು (ಚಿತ್ರಕ. ೩೦-೨). **ಹೊದಿಕೆ₁** : ೧. ಏಳು ನೆಲೆಯ ಕರುಮಾಡದುಪ್ಪರಿಗೆಯೊಳಗೆ ಒಂದೆ ಮುತ್ತಿನ ನೆಲಗಟ್ಟಿನ ಮೇಲೆ ಛತ್ರಿ ಇಲ್ಲದ ರತ್ನದ ಹೊದಿಕೆಯ ಮೇಲಿಪ್ಪ ಬಳಸವ ಕಂಡವರನಾರನು ಕಾಣೆ (ಅವಪ. ಮು. ೨೬೦-೩೯೨); ಕಾಮದ ಒಡಲು ಕ್ರೋಧದ ಗೊತ್ತು . . . ಮತ್ಸರದ ಹೊದಿಕೆ ಆ ಭಾವವಡಿತಲ್ಲದೆ ಚೆನ್ನಮಲ್ಲಿಕಾರ್ಜುನನ ಅಱಿವು ದಕ್ಕೆ ಇಂಬಿಲ್ಲ ಕಾಣರಣ್ಣಾ (ಮಹಾದೇ. ಪ. ೯೯-೧೦೯) ; ಎಲುಬು ನಳವ ಮಾಡಿ ನರದ ಬಳ್ಳಿಯಲ್ಲಿ ಬಿಗಿಯುತ . . . ಮಲಿನಚರ್ಮವನ್ನು ಹೊದಿಕೆ ಯಳಿದು ನಿತ್ಯ ಬೆಳೆವ ಈ ಹೊಲೆಯ ಗೂಡಿನೊಳಗೆ ಜನಿಸಲಾಱಿ ಲಕ್ಷ್ಮಿಯ ರಸನೆ (ಪುರಂದ. ೧-೦೭೬-೨). ೨. ನೀರ ಬೊಂಬೆಯ ಬೋಹವ ತೊಟ್ಟು ಅಗ್ನಿಯ ಬಣ್ಣದ ಹೊದಿ[ಶಾಕಾಂ ದ]ಕೆಯ ಹೊದ್ದು ಗಾಳಿಯ ಗತಿಯಲ್ಲಿ

ಸುಳಿದಾಡುವ ಪ್ರಾಣಿಗಳು ದೇವರನೆತ್ತ ಬಲ್ಲರು (ಅವಸಂ. ೨೦೭-೯೩೦; ಶೂನ್ಯಸಂ. ೬-೦೦ ನೋ) ; ತಮತಮಗೆ ನೆರೆದು ಬೆಚ್ಚಬಿಲವ ಕುದುಗೋಲ ಕಪ್ಪಡವನರಳೆಯ ತೈಲವಂ ತಾ ಬೇಗಲೆನುತಲಾತನ ಹೊದಿಕೆಯಂ ತೆಗೆದರು (ಸಿದ್ಧರಾ. ೨-೨) ; ಗಡ್ಡದ ಮುದುಕರು . . . ಕಂಗೆಟ್ಟು ಹಾಯ್ದರು ಹೊದಿ[ಶಾಕಾಂ. ದ]ಕೆ ದಾಡು ಕವುಂಡಲವ ಬಿಸುಟಿಕ್ಕಿಳದೆಸೆದೆಸೆಗೆ (ಕೊರಣಾ. ೦-೦೦-೧೨) ; ಹೊದಿಕೆಯನ್ನು ತೆಗೆದು ದೂರಕ್ಕೆ ಎಸೆದೆನು (ಪಂಚಲು. ೯೯). ೩. "ಪಟಲಂ, ಛದಿಃ–೨ ಮನೆಯ ಮೇಲುಹೊದಿಕೆಯ ಪೆಸರು, ಮನೆಯ ಮೇಲುಮುಚ್ಚಳ" (ಸಿದ್ಧಾಂತಿ. ೦೯೩) ; ಹೊಡಿದೆಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಸಾ. ೬೩), ಒರೆಗಳನ್ನು . . . ಹುಲ್ಲಿನ ಹೊದಿಕೆಯ ಮನೆಗಳಲ್ಲಿ ಸುರಕ್ಷಿತವಾಗಿ ಉಪಯೋಗಿಸಬಹುದೆ? (ಅಧುನಿ. ೨೯). ೫. (ಪುಸ್ತಕ ಮೊದಲಾದುವುಗಳ) ರಕ್ಷಾಕವಚ ; ರಟ್ಟು : "(ಅಂಚೆಯ ಮೂಲಕ ಕಳಿಸುವ ವೃತ್ತಪತ್ರಿಕೆ, ಕಟ್ಟು, ಮೊ.ಗಳ ಮೇಲಿನ) ಆವರಣ, ಸುತ್ತುಹಾಳೆ; (ಪುಸ್ತಕಗಳಿಗೆ ಹಾಕಿರುವ, ಕಳಚಲಾಗುವ) ಕವಚ, ಹೊದಿಕೆ" (Wrapper. ಇಂಕ) ; ಆ ಹೊಸಪುಸ್ತಕದ ಹೊದಿಕೆ ಹರಿದು ಹೋಗಿದೆ (ರೂಪ). **ಹೊದ್ದಿಕೆ₁**: ೧. ಮಾಸವೆರಡಱಲಿ ಶಿರ ಮಾಸ ಮೂಱಱೊಳಂಗ ಮಾಸ ನಾಲ್ಕಱಲಿ ಚರ್ಮದ ಹೊದ್ದಿಕೆ (ಪುರಂದ. ೧-೧೫೨-೩).

[ಪೊದ₁ + –ಕೆ]

**ಪೊದಕೆ₂**, ಪದಿಕೆ, ಹದಿಕೆ₁, ಹದಿಗೆ₁, ಹದ್ದಿಕೆ, ಹೊದಕೆ₃, ಹೊದಿಕೆ₂ (ನಾ). ಒಂದು ಬಗೆಯ ತೆರಿಗೆ : ಬೊಮರಸದೇವನು ಶ್ರೀರಾಯ ಕೇಶವಪುರವಾದ ಮೊರಲೆಯ ಸಿದ್ಧಾಯ ಪೊವಕೆ ಶ್ರೀಕೇಶವದೇವರ ಶ್ರೀ ಸಿದ್ದೇಶ್ವರದೇವರ ನಂದಾದೀವಿಗೆಯ ಸೊಡರೆಣ್ಣೆಯ ನಡಸುವಂತಾಗಿ ಕೊಟ್ಟ ಗ ೫ (ಪ್ರಶಂ. ೦೯೩೨. ೩೬–೨ : 1245). **ಪದಿಕೆ** : ಗೌಡಿಕೆ ಮಾನ್ಯ ಪೇಠೆ ಪದಿಕೆ ಸಿದ್ಧಾಯ ದಾಯ ಕಾರಕ ಕಣ್ಣವಣ ಮೊದಲ ವಿಧ್ಯ × × ಸುಂಟಾದನುಮ ಮಾಡ್ಸಿ ಕೊಣ್ಡ (ಎಕ VIII, ಸೊರಬ. ೨೬೬–೩೪: 1620 ?). **ಹದಿಕೆ₁** : ಉಪಾಧ್ಯಾಯರ್ಗೆ ಮುಂಚಿದ ಹದಿಕೆಯಲ್ಲಿವಿ ತಮು ಕೊಟ್ಟು (ಸೌಇಇ. XI-ii, ೦೭೩-೩೭; 1124) ; ಮೂಱಡಿ ಮಣ್ಣಗೆ ಆಱು ಹೊನ್ನ ತೆತ್ತು ಮಿಱಿ ಹದಿಕೆಯ ಬೇಡ(ಕೊಳ್ಳಿ) ನಂದೀಗ್ರಾಮದವರ ಮುಂದಿಟ್ಟು ವಿಱಲಿಲ್ಲ (ಸರ್ಣಕ. ೦೦೯–೩೬೯); ನಲಿವ್ಮೆಯ ಹದಿಕೆಯ ನೆತ್ತುವ ಹೆಗ್ಗಡೆಗಳಾರು ಬಂದಡಂ ತಂಮ ಧರ್ಮ್ಮವಾಗಿ ಪ್ರತಿಪಾಳಿಸುವರು (ಸೌಇಇ. IX-i, ೩೪೯–೯; 1282); ಮೊಱದೆದ್ದು ಸಕಲ ರಾಣಾವೆಯೊಂದು ಹುರಿಯಾಗಿ ಪುರವರದೊಳೆತ್ತಿ ಹದಿಕೆಯನು (ಸಮ್ಯಕ್. ೨-೩೯). **ಹದಿಗೆ₁** : ಹದಿಗೆಯಾಗಿ ಗ ೭೨ × × ವಲೂ ಉಪ್ಪತ್ತೆರಡನೂ ತೆತ್ತು (ಎಕ. IX (S), ಕುಣಿಗ. ೨೭–೦೫ ; 1563). **ಹದ್ದಿಕೆ** : ಗ್ರಾಮ ವಂದಕ್ಕಂ ಕುಳಗ ೨॥ ೦॥ ೭ ಗುಪಕಿಕುಳ ೧ ಹದ್ದಿಕೆ ೯ (ಪ್ರಶಂ. ೦೯೩೯, ೨೭–೦೯; 1430). **ಹೊದಕೆ₃** : ಆ ಹತ್ತು ವ್ರಿತ್ತಿಯ ಸಿದ್ಧಾಯ ಸೇಸೆ ಅಳಿವು ಅನ್ಯಾಯ ಹೊವಕೆ ಮುಖ್ಯವಾಗಿ ಏನು ತೆಱುಗಡೆ ಬನ್ದಡೆವೂ . . . ನಡಸುವನ್ತಾಗಿ . . . ಧಾರಾ ಪೂರ್ವ್ವಕಂ ಮಾಡಿಕೊಟ್ಟರು (ಎಕ. XII, ಕಕ್ಕಣ. ೨–೨೩ ; 1261) ; ಆವುಗೆ ಅನಾಯ ಹೊವಕೆ ಸಹಿತವಾಗಿ ಏನು ಬಂದದೂ ಸರ್ವ್ವಮಾನ್ಯವಾಗಿ ಅರಸುಗಳು ಯೇನುಬಂದದನೂ ಬಿಳಿಹಿಕೊಟ್ಟ ದರ್ಮ (ಕಇ. III-i, ೩–೯೯; 1348) ; ಆ ಪುರದ ಚತುಃಸೀಮೆಯೊಳಗಣ ಅಕ್ಷೀಣಿ ಆಗಾಮಿ ನಿಧಿ ನಿಕ್ಷೇಪ ಜಲ ಪಾಶಾಣ ಸಿದ್ಧ ಸಾಧ್ಯ ಸಿದ್ಧಾಯ ಹೊವಕೆ ಹದಿಕೆ ಕಾಣಿಕೆ ಕಡ್ದಾಯ . . . ಅಷ್ಟಭೋಗತೇಜಸ್ವಾಮ್ಯವನು (ಎಕ. XI, ಚಿತ್ರದು. ೨–೨೨;1365). **ಹೊದಿಕೆ₂** : ಶಾಂತಿಗ್ರಾಮದ ಅಧಿಕಾರಿಗಳು ಪ್ರತಿವರ್ಷ ಸಲ್ವಂತಾಗಿ ವರದಸರಸಿಂಹದೇವರ್ಗೆ ತಂಮ ಹೊದಕೆಯ ಹೊಂನಿನೊಳಗೆ ಹತ್ತು ಗದ್ಯಾಣ ಹೊನ್ನನು ದೇವರ ಹೊದಿಕೆಯಂ ಧಾರಾಪೂರ್ವ್ವಕಂ

ವಹಾದಿ ಕೊಟ್ಟರು (ಶ್ಮ.ಅಂ. ೦೧೧೦, ೩-೨೯ ; 1216); ಆ ಸೋಮನಾಥಪುರಕ್ಕೆ ಉರುತ್ಸವಾಗಿ ಬನ್ದ ಹದಿಕೆ ಹೊರಣೆ ಹೊದಿಕೆ ಮಳ್ಳುಱುಯವೊಳಗಾಯಿತ್ತು (ಎಕ್. III. ತಿರುಮ. ೧೬-೧೨ : 1300) : ಅರಮನೆಯಿಂದ ಬಂದ ಹದಿಕೆ ಹೊದಿಕೆ ಮಗಮೆ × × × ಸಿದ್ದಾಯ ಮನೆವಾರ್ತೆ ಹಣಕಾಹುಕಾಣಿಕೆ (ಶ್ಮ.ಅಂ.೧೪೫೬. ೩೬-೩೬; 1485).

**ಪೊದವು**, ಹೊದವ್ಪು, ಹೊದೆವು (ನಾ). ಹೊದೆಯುವ ವಸ್ತ್ರ; ಹೊದಿಕೆ; ಮೇಲುವಸ್ತ್ರ : ಚರವೇಷದಿಂ ಶಂಭು ಬಂದು ಪೊದವಂ ಬೇಡೆ ತರಳಾಕ್ಷಿಯುಟ್ಟ ಜೀವೆಯಂ ಕೊಡಲು (ಶಾಶಕ. ೬-೨೩); ಅಂಬುಧ ನಾಥಹಾ ಸಭಾವಂಟಪವನೂಳಿದು ವಣಿವ್ರಜದ ದೀಪ್ತಿಯ ಬೆಳಗಿನಿಂದ ಸ್ವಮಂದಿರಕೆ ಪೋಗಿ ಪೊದವಂ ತೆಗೆಯಲು (ಜಹಚೋ. ೦೭-೦೭). **ಹೊದವ್ಪು** : ಚಿನ್ಮಯ ಚಿದ್ರೂಪ ಚಿತ್ಪ್ರಕಾಶವೇ ತನ್ನ ಹೊದವು (ಕ್ಷಕಾ. II. ೦೩೯-೦); ಮಣಿಯೊಳು ರಮಿಸಿದರನೆ ಸಾಕು ಹೊದಕಿನ ಮಣಿ ಹೋಯ್ತು, ಪುಳಕ ವಾಯ್ತೆಂದು ತುಱುಬೂಳಿದುದು ದೇಹ ಕಂಪಿಸಿತೆಂದದ ಹೊಜಹೊವ್ಪಿ ಸುವುದಾವ ಪ್ರೌಢಿ (ಕಕಕ. ೦೦-೦೦೬); ಹಜಾಮರಿಗೆ ಕೆವ್ಪಿನ ಗಣಗಳಹುವ ಕೆವ್ಪಿನ ಹೊದವು ಸಾಣೆ ಕಟಕಡೆ ದಾಗಲುಯಿದು ಹಜಾಮನಿಗೆ ಸಲುವದು ಯೆನ್ನು . . . ದೇಶನಾಡಿನವರು ಗ್ರಾಮಾಧಿಪತಿಗಳು ಕರಣಿಕರು ಸಹ ಹೇಳಿದರು (ಎಕ್. IX. ಚಾಕಕಾ. ೯೦-೩೬; 1700). **ಹೊದೆವು** : ವಿಶ್ವಭೂತಿ ಯೆಂಬಾ ಪಾರ್ವಂ ... ಒಂದುದಿನ ಪೊದಲು ಹಿಡಿವಂತ ಬಾಯ್ಸುವಿಯಾಗು ವಂದದಿಂ ಕವಸುವಮಸಿನೊಳಂಬುದಂ ಕಾಣನೊಂದುದಿನಮಾಗಿಯುಂ ಮೆಯ್ಸುಂಬ ಹೊದೆ[ಹಾಕಾ. ದ]ವುವಂ ಹೊದೆವುದಂ ಕಂಡಱಿಯನು (ಜಮ್ಮಕೌ. ೬-೪೦). [ಪೊದ್$_1$ + — ವು$_2$]

**ಪೊದಯಿಸು** 'ಪೊದೆಯಿಸು' ನೋ.

**ಪೊದರ್** 'ಪೊದಱ್$^1$' ನೋ.

**ಪೊದರು$_1$** 'ಪೊದಱ್' ನೋ.

**ಪೊದರು$_2$**, ಹೊದರು$_2$ (ನಾ). ೧. (ಮರದ) ಪೊಟರೆ; ಡೊಗರು: ಪೊಳ್ಳು, ಪೊಸ್ರಿ (ಪೊಟ್ಟೆ), ಪೊದರು (ಹೊದರು), ಪದರು, ಡೊಗರು (ಕಂಜುಕು. ೯೫). ೨. (ನೆಲದಲ್ಲಿರುವ) ರಂಧ್ರ; ಕುಳಿ; ಬಿಲ; "ತೂತು" (ಗಂಗಾಜು. ೨೦೬). **ಹೊದರು$_2$** : ೧. ಮರದ ಹೊದರಿನಲ್ಲಿ ಗಂಭೀರವಾದ ಘಟಸರ್ಪವಿರುವುದನ್ನು ಬೋಧರಾಯ ಅರಿತಿರಲಿಲ್ಲ! (ರಶ್ಯಶ್ಯ. ೯೯); ಕಪ್ಪೆಯು ನಿದ್ದೆಯಿಂದ ಇದೇ ಎಚ್ಚತ್ತು ಸಾವಕಾಶವಾಗಿ ಕಾಲಿಡುತ್ತ ಬೆಲಪತ್ರಿಯ ಗಿಡದ ಹೊದರಿನೊಳಗಿಂದ ಹೊರಕ್ಕೆ ಬಂದಿತು (ಕಂಶಹಿಂ. ೬೬). ೨. ಶಹಾವ್ಯಗವು ನೆಲದ ಹೊದರಿನಲ್ಲಿ ಮನೆಮಾಡುತ್ತದೆ (ಶುಂಅಣು. ೯-೮೯೯); ಆಗ ಶಾಕ್ಯಸಂಘಲನು ಅವನ ಶಕ್ತಿಯನ್ನು ಕಂಡು ಅವನೊಬ್ಬನ ಜೊತೆಗೆ ಬಂದು ನೆಲದ ಹೊದರನ್ನು ಹೊಕ್ಕನು (ಕಹ. ೩೦). ೩. (ಅಲಂ) ಬಿರುಕು; ಭಿನ್ನಾಭಿಪ್ರಾಯ : ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರು ಬಿದ್ದಿದೆಯೋ, ಹೊದರು ಕೊರಕಲು ಆಗಿವೆಯೋ ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ಇಶ್ಯಕ. ೨೬೬).

[ದೇ. ೩ ತಮಿ. ಪೊನ್ದರ್, ಪೊನ್ದು; ಮಲ. ಪೊತ್ತು; ತೆಲು. ಬೊಂದ, ಬೊತ್ತ]

**ಪೊದರೊಡೆ** 'ಪೊದಱೊಡೆ' ನೋ.

**ಪೊದರ್ಕೊರ್ದಳ್** (ನಾ). ಅತಿಶಯವಾಗಿ ಸೇರಿರುವ ಮಧುರವಾದ ಮಾತು: ಪದ ಕೊರಲಿಂವನಪ್ಪುಕೆಯ [ಕೊಂಕು ನ]ಯಂ ಗಮಕಂಗಳಂ ಪೊದರ್ಕೊ[ಪಾಕಾಂ. ರ್ಕೊ]ದಳೆಟದಿಕ್ಕಿದಂತೆ ಸುತಿಯೊಳ್ ಸಮವಾಗಿರೆ ಜಾಣನಾಂತು ಮೆಚ್ಚಿದ ತೆಱದಾಸವಟ್ಟಲಸದೆತ್ತಿದವೋಲ್ ದೊರೆವೆತ್ತು ದೂಱಿ ದಾಱಿದ ದನಿಪುಟ್ಟೆ ಮೇಣಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಕಂಪಕಾ. ೬-೮೯). [ಪೊದಱ್ + ಕೊರ್ದಳ್$_2$ (< ಕೊದಱು$_2$)]

**ಪೊದರ್ದಲೆ**, ಹೊದಱುದಲೆ (ನಾ). ೧. ಕೂದಲು ಜಡೆಗಟ್ಟಿ ಪೊದೆ ಯಂತೆ ಆಗಿರುವ ತಲೆ; ಪೊದೆಗಟ್ಟಿದ ಕೂದಲುಳ್ಳ ತಲೆ : ಕಿಮ್ಮೀ ಸೆಯು ಜೋಲ್ವಾಯ ಪೊದರ್ದಲೆಯ ಕರ್ಪೊಗದ . . . ಜವನ ದೂಱು ಗಾಱಿರ ಜಂಗುಳಿ . . . ಸಡಗರದ ದಟವೃಂದಿಂ ಬಂದು ಮುತ್ತಿ ಮುತ್ತಿ ಅಱಿಗುಱಿಚೀವಾತ್ಮನಂ ಸೆಱೆವಿಡಿದತ್ತು (ರಾಜಾಶ್ಯ. ೬೯-೦೯). **ಹೊದಱುದಲೆ**: ೨. ಅನೇಕ ತಲೆಗಳ ಗುಂಪು : ಹೊದಱುದಲೆ ಹೊಕ್ಕಾಳೆ ಬೆರಳಿನ ತುದಿಯ ತುಟಿಯುಲಿ ಬೊಬ್ಬಱಿದಡಿನನದಿರೆ ದಳವೊಳಸಿದುದು ಕೌರವ ಪಾಂಡವರ ಸೇನೆ (ಕುಪ್ರಾ ೬೦. ೯-೯); ಬೆದಱಿದರು ಕಂಡವನ ರೂಪನು ಹೊದಱುದಲೆಗಳ ಹೊತ್ತ ಚೋಹದ ಮದದ ಗರ್ವದ ಗಾಢಗಮನದ ಭೂತ ವಲೆಯೆನುತ ಸುದತಿಯರು ಗಡಗಡನೆ ನಡುಗಿದರು (ಕೊರಂ. ೦-೦೫-೦೨).

[ಪೊದಱ್ + ತಲೆ$_1$]

**ಪೊದರ್ವಡೆ** (ಕ್ರಿ). ದಟ್ಟವಾಗು; ಒತ್ತಾಗು; ನಿಬಿಡವಾಗು : ಪೊದ ರ್ವಡೆದಡವಿಯ ಪಥದೊಳ್ಪಿಡಿದುದೊಂದು ಕೇಸರಿ ತನ್ನ ನಂದನನನು (ಕ್ರಿಶಂಕಾ. ೨೬-೩೩). [ಪೊದಱ್ + ಪಡೆ$_1$]

**ಪೊದರ್ವನೆ**, ಹೊದಱುವನೆ (ನಾ). ಬಳ್ಳಿಮನೆ; ಲತೆಮನೆ; ಪರ್ಣ ಶಾಲೆ : ಕೊಳದೆಡೆಗಯ್ದು ತವಕದಿಂದವಲೋಕನಂಗೆಯ್ದು ಒಡನೊಡನೆ ಮರಳಿದಳ್ ಮಾಱಂದಱಂದರ್ವತರುತಲವ ಪೊದರ್ವನೆಗೆ (ಶಕ್ರಾಂಗ. ೫೨-೦೧೦೯). **ಹೊದಱುವನೆ** : ಕಲುಬಲದಲ್ಲಿ ಅವನನು ಅಱಸುತ್ತ ಕಾಣದೆ ಗಿಡಪಂರಗಳ ಬಳಿಯಲ್ಲಿ ಹೊದಱುವನೆಗಳಲ್ಲಿ ಕೊಳವ ತಡಿಗಳಲ್ಲಿ ನೋಡುತ್ತ ಬಹು ಹೊತ್ತಿನ ಮೇಲೆ ಒಂದು ಹೊದಱುವನೆಯ ಮುಂದುಗಡೆಯಲ್ಲಿ ಕಲ್ಲಱೆಯ ಮೇಲೆ ಕುಳಿತು . . . ಮನ್ಮಥಪರವಶನಾಗಿರುವ ಬಗೆಯನು ಕಂಡು (ಶಕಕಾ. ೨೬). [ಪೊದರ್ (< ಪೊದಱ್) + ಮನೆ]

**ಪೊದಲು** (ನಾ). (?) : [ಮಾನುಕಾ]ಲ ಪೊದಲು ಎರಡುಂ (ಇಎ. ೦೧೯೬. ಹಾಜುಗ. ೨೯೮-೩೯ ; ?). [ ? ]

**ಪೊದಲ್ನಾಡು**, ಹೊದನಾಡು, ಹೊದೆನಾಡು (ನಾ). ಒಂದಂ ನಾಡಿನ ಹೆಸರಂ; ೩ ಈಗಿನ ಕೋಲಾರ ಜಿಲ್ಲೆಯ ಒಂದು ಭಾಗ : ವಲ್ಲಭ ಕುಲತಿಲಕ ಶ್ರೀವಟ್ × × × ರಾಜ ಪ್ರಿಥಿವೀರಾಜ್ಯಂಗೆಯೆ × × × ಭೀಮ × × × ನೆ ನಾಡು ಮೂಱುನೂಱು ಪೊದಲ್ನಾಡಬುವತ್ತು ಮನಾಳೆ (ಎಕ್. X. ಶ್ರೀಆಪಾ. ೩೦-೩, ಸು. 880 ?); × × × ಪೊದಲ್ನಾಡು ದ × × ಬೆಳಜ್ಞಬ್ಬುಗ್ರ × ಕೊನ್ದನ್ ತುಱುಗೊಳೆಯ್ದು ಸತ್ತರ್ (ಎಕ್. X. ಶ್ರೀಆಪಾ. ೦೯೩-೦ ; ?). **ಹೊದನಾಡು**: ಹೊದನಾಡಿನೊಳಗಣ ಗುರ್ಕಹಳ್ಳಿಯ ಮುತ್ತರಸನ ಮಗ ದೇವಣ್ಣನ ಮಗ ಮರಿಯಪ್ಪನು ವಹಾಡಿಸಿದ ದೀಪವಾಳೆಕಂಪ್ಪು (ಎಕ್. X. ಕಂಆಶರು. ೦೯೭-೩ ; 1667 ?). **ಹೊದೆನಾಡು** : ಹೊದೆನಾಡ ಒಳಗೆ ನಮ್ಮ ಮುಳುವಾಯ ನಾಚೀದೇವಿ ಯರಿಗೆ ಸಲುವ ಕತರಿಯ ಹಳಿಹಳಿಯ ಸೀಮೆ ಒಳಗೆ (ಎಕ್. X. ಶುಂಕಶಾ. ೬-೯ ; 1416); ಶ್ರೀವಮತು ಹೊದೆನಾಡ ಉತ್ತನೂರ ಮಾಡವಾಳದ ಕಾವಬ್ಬ ದೇವಿಯರ ಸ್ಥಾನಿಕನಾಯಕ . . . ಬರಸಿ ಕೊಟ ಶಾಸನ (ಎಕ್. X. ಶುಂಕಶಾ. ೦೦೫-೩ ; 1636 ?). [ಪೊದಲ್$_1$ + ನಾಡು]

**ಪೊದಳ್** 'ಪೊದಟ್$^1$' ನೋ.

**ಪೊದಳು** 'ಪೊದಟ್' ನೋ.

**ಪೊದಳ್ಕೆ** 'ಪೊದಟ್ಕೆ$_1$' ನೋ.

**ಪೊದಳ್ಕೆವಡೆ** 'ಪೊದಟ್ಕೆವಡೆ' ನೋ.

**ಪೊದಱ್**, ಪೊದರ್, ಪೊದರು$_1$, ಪೊದಱು, ಹೊದರ್, ಹೊದರು$_1$, ಹೊದಱ್, ಹೊದಱು$_2$ (ನಾ). ೧. ದಟ್ಟವಾಗಿರುವ ಗಿಡಮರಗಳ ಸಮೂಹ; ಪೊದೆ; ಹಿಂಡಲು: "ಕುತ್ತುಱೆಂದು ಪೊದಱ್" (ಕಶಕಾ. ೩೦-೮೦) ; ಆಗಳ್ ದುರ್ಯೋಧನನಾತ್ಮೀಯಸೇನಾನಾಯಕನಪ್ಪ

ಗಾಂಗೇಯಂ ಬದಿರ ಸಿಡಿಂಬಿನ ಪೊದಱೊಳಗೆ ಮಱೆದೊಱಗಿದ ಮೃಗರಾಜನಂತೆ ಶರಶಯನದೊಳೊಱಗಿದಂ (ಶಂಶಕಾ. ೧೦-೩೦ ವ); ಭಟ್ಟನೀಚೋದ್ಯಮಂ ನೋೞ್ಪೆನೆಂದು ಅದಱ ಕೆಲದೊಳ್ ಪರ್ವಿ ಕೊರ್ವಿ ಸುರ್ವುಗೊಂಡ ಮಾಧವಿಯ ಪೊದಱೊಳದಂಗಿರ್ದು ನೋೞ್ಪುದುಂ (ಶಂಶಕಾ. ೨೩೦-೬); ಬಿಡದೆ ಕುತ್ತುಱುಗಳಂ ಸೋವಿದರ್ತಿಱಿವಿದರ್ಗಿಡಗಳ ಪೊದರ್ಗಳಿಂದೆಬ್ಬಿಸಿದರುಬ್ಬಿಸಿದರೊಡನೊಡನೆ ಖಗಮೃಗವ್ರಾತಮಂ ಪಾತಮಂ ಮಾಡಿದರ್ಕೂಡೆ (ಕೃಪಿಚಾ. ೨೯-೯೬). ೨. ಗುಂಪು ; ಸಮೂಹ ; ಸಂದಣಿ : ಭೋರ್ಗರೆದುವನಿತಱೊಳ್ ಸಾಳ್ಲಾಸಾಳವಾ ತೇರ್ಗಳ ಪೊದಱ್ ಪೊದಳ್ದಿದುವು ವೈಬೆವರ್ನೀಗರ್ಗಳೊಗೆಯಲ್ ವಾಜಿರಾಜಿ ನಡೆವುದು (ಕಂಪು. ೩೦-೩೦). **ಪೊದರ್**: ೧. ಹರಿಣೇಂದ್ರನಂ ಕ್ರೂರಕಣಂಗಳಿಂದನಿಬರುಂ ಭರದಿಂದ ಪೊದರ ಬೞ್ಪೇಳ್ಪನಿತರಲ್ಲಿ ತಟ್ಟಿರದ ಲಕ್ಷ್ಯಂ ಬಿಡದಿಸುತ್ತೆ ಬೊಬ್ಬಿಡಲ್ (ಮಹಾಕ. ೬-೩೦); ಗರುವ ತರುವರ ಕುಲಂ ಮೂಲಮಂ ತಿರಿಪಿ ವಿನಾಂಟದ ಪೋಲ್ ನೆಲಕ್ಕುರುಳಿದುವು, ಪೊದರ್ ಗಿಡುಗಳಂ ಪುಡಿಗ್ಗೆದು (ಕಕ್ಕಾಂಗ. ೧೮-೦೩೦೧). **ಪೊದರು**: ೧. "ಪೊದರು ಕುಂಜಃ" (ಕಕಕ. ೬೯); ಸುತ್ತು ಬಲೆಯನ್ನು ಬೀಸಿ ಮತ್ತೆ ಪೊದರುಗಳನರಸಿ ಕುತ್ತಿ ಕಿಡಹಿ ಮಿಗಗಳನ್ನು ಮತ್ತೆ ದೊರೆಗೆ ತೋರಿಸಲು (ಸಕಪಾ. ೧೮-೩); ಅವಳ ಹೊಂಬಣ್ಣದ ಮುಖಮಂಡಲ ಗೈರಿಕವಸನಗಳಿಂದ ಪರ್ವತದ ಸನಿಹಪ್ರದೇಶದಲ್ಲಿ ಒಕ್ಕೊಗಿಡದ ಪೊದರು ಹೂಬಿಟ್ಟದೆಯೋ ಎಂಬಂತೆ ಕುಂಡಲಿತವಾಗಿದ್ದಿತು (ಶಾಚಿಕ. ೯೩); ವಾಯುಪುತ್ರನಾದ ಭೀಮಸೇನನು . . . ಆನೆಯು ಹಾಗೆ ಕಾಡಿನಲ್ಲಿ ಗಿಡಗಳನ್ನೂ ಪೊದರುಗಳನ್ನೂ ದೂರವಮಾಡಿ ದಾರಿ ಮಾಡಿಕೊಂಡು ನಡೆದನು (ವ್ಯಾಸಕಿ. ೬೩). **ಪೊದಱು**: ೧. "ಕುತ್ತುಱ್ಜನೆ ಪೊ[ಶಾಕಾಂ. ಹೊ]ದಱು" (ಕಕಖ. ೯೨); ಇನಿತು ದಿವಸಮಾ ಮರಗಳ ಗಿಡುಗಳ ಪೊದಱುಗಳ ಮಱೆಗಳೊಳೀ ಪೊಬಲಂ ಕಂಡೆವಿಲ್ಲೆಂದು ಮನದೊಳ್ ಬಗೆದು (ಕಶ್ಯಾಗಾ. ೯೯-೨೨); ಪೊದಱು ಮರಂ ಗಿಡು ಪುಲ್ಲೀಬುದು ತಿರ್ಯಗ್ಜಾತಿಯೆಂಬುದಲ್ಲದೆ ನರನೆಂಬುದೆ (ಸಮಕ. ೯-೦೩೦); ಬಗಿದು ಪುಗಲ್ಕರಿದಲ್ಲಿಯುಮೊಗೆದ ಮರಂ ಪೊದಱು ಬಳ್ಳಿ ಗಿಡುವೆಂಬಿವಱಿಂ ಮಿಗಿಲೆನಿಪ ಬಲ್ಲೆ ನಗಸಾನುಗಳೊಳದೆಂತಾವ ಮೆಯ್ಯೊಳಂ ಪುದಿದಿರ್ಕುಂ (ಶಾವ್ಯಾವ. ೯೬); ಅರಳ್ದ ಮಲ್ಲಿಗೆಯ ಪೊದಱೊಳಗೆ ತಿರುಗಿದೊಡ ತೆರಳ ಬಲ್ಲುಲ್ಲದೆ ಸಂಪಗೆಯ ಬನಕೆ ಮಱುದುಂಬಿ (ಕೃಪಚಾ. ೨-೩೬). ೨. ಮದಕರಿಗಳ ಮೊತ್ತ ಕದಳಿಯ ವನಗಳ ಪೊದಱ ಕಿತ್ತೀಡಾಡುವಂತೆ ಕದನಗಲಿಗಳಿಂದ ಮುತ್ತಿದ ತುರುಕರ ಸದೆದೆಬ್ಬಿಸು ನೀನು (ಕಂಪಚ. ೦೯-೩೨). **ಹೊದರ್** : ೧. "ಕುಂಜಃ, ಕುಂಜಃ, ಕುಂಜನಂ, ಈ ೩ ಹೊದರ್" (ಶಾಕಕ್ಕ. ೬೩) ; ರಾಜಕುಮಾರಿ ಬನದೊಳಲ್ಲಲ್ಲಲೆದು . . . ಮೋಣೊರ್ವ ಬಳ್ಳಿಹೊದರನೆ ಕುಟೀರಂಗೆತ್ತು ತಲ್ಲಣಿಸಿ ಮುಂಂ ನಡೆದು, ತಪ್ಪನರಿಯುತೆ ನಾಚಿ, ಸಪ್ಪನಾಚಿಮನರಸುತಿರೆ (ಕಕ್ಕಾಂಗ. ೨೦-೩೯೯). **ಹೊದರು** : ೧. ಉದಕವಂ ಕೊಳಬಂದ ಮೃಗಗಳ ಬೆದರದಂತೆಸೆಯಲ್ಕೆ ತೋಹಿನ ಹೊದರಿನೊಳು ಕಾದಿರ್ದ ಬಾವಾಸ್ತ್ರಗಳ ಕೈಕೊಂಡು (ಅಪಂಗಾ. ೨-೩-೬) ; ಬಿದಿರುಕೊಳ್ಳಕೆ ಹೋಗಿ ಹೊದರೊಳಗೆ ಕೈಹಾಕಿ ಬಿದಿರೆಳೆಯ ಕೊಯ್ದು ನಿತ್ಯದಲಿ ಕಾಯಕವ ಬದಿಕಿಸುತಲಿದ್ದ ಸತಿಯೊಡನೆ (ಶಸ್ವಕಾ. ೨೬೩) ; ಹೊದರೂ ಮುಳ್ಳೂ ತುಂಬಿದ್ದ ಆ ವನ ಹಿಂದೆ ಒಂದು ಕಾಲದಲ್ಲಿ ದೊಡ್ಡ ನಗರವಾಗಿ ಇತ್ತಂತೆ (ವ್ಯಾಸಕಿ. ೯೦). ೩. (ಆಲಂ) ತೊಡಕು ; ಸಿಕ್ಕು ; ತೊಂದರೆ : ಹೇಗೂ ನಾಲ್ಕು ದಿನ ಸಮಾಧಾನವಾಗಿ ನಡಕೊಂಡು ಅವರಿಗೆ ತಿಳಿವಳಿಕೆ ಕೊಟ್ಟು ಅವರನ್ನು ಈಗಿನ ಹೊದರಿಂದ ಬಿಡಿಸಿಕೊಳ್ಳೋದೇ ಸರಿ (ತಕರಾ. ೦೦೩). ೪. ಪೊದೆಯಾಗಿ ಸಸ್ಯಗಳು ಬೆಳೆದಿರುವ ಭೂಮಿ (?): ಚಂದನಕೈಯಿಂದಲೂ ಬೀಜ ಖ ೨ಕೆ ಖ ೮ ಉಂಬಳಿ ಹೊದರಿಂದ ಬೀಜ ಖ ೨ಕೆ ಗಡಿ ಖ ೨೦ (ವ್ಯಕಂ. ೧೯೬೯, ೯೯-೨೬ ; 1632). **ಹೊದಱ್** : ೧. ತಾದಿಕೋಡೊಳ್ ವೇಣಾದಾಲಂಗಳ ಹೊದಱನದರ್ದೆತ್ತುತ್ತುಂ . . . ಕಂಠದ ಬೆಣ್ಣಂ ಜೊಂಪಿಸುತ್ತುಂ ನಡೆದುದಡವಿಯೊಳ್ ದೀರ್ಘದೇಹಂ ವರಾಹಂ (ಸೂಕ್ತಿಸು. ೩-೩೯); ಹೊದಱಂ ಪುಗಿಸಿರ್ದು ನಟ್ಟು ನಿಲ್ಸಲೆಸೆಲಿತ್ತು ಕುತ್ತು . . . ಸಾರನುತಿರ್ವ ಬೇಡ[ರ]ಬ್ಬರಕಿರದೊಂದನೊಂದೆಡ ಪುತಾಕುಳವಾಯ್ತು ಮೃಗೀಮೃಗವ್ರಜಂ (ಮಹಾಪಿ. ೩-೦೩); ಅದಱೊಳ್ ತಾವರೆವಳ್ಳಿಯ ಹೊದಱೊಳ್ ಬಿಸನಾಳಸಾರವಂ ಸವಿದು ಸುಖಾಸ್ಪದದಿಂದಿರ್ದುದು ಜಾಂಬೂನದಹಂಸಂ ಮಱೆದು ತನ್ನ ಮಾನಸಸರವಂ (ಕಕಕಂ. ೦೨೬). **ಹೊದಱು**: ೧. "ಉಲಪಃ, ಸ್ತಂಭಃ, ಗುಲ್ಮಃ, ವೀರುತ್, ವಿಟಪಃ—ಈ ೫ ಹೊದಱು" (ಕಶಾಯು. ೩೦-೩೬); ಇದಿರಿರ್ದ ಹೊದಱ ನೊಳು ಸರಿವಿನೊಳು ಮರಿವಿನೊಳು . . . ಬರುತಿರೆ (ಕಜ್ಞಕ. ದೀ. ೦೨೯-೬); ಅರಣ್ಯಯನು ಮೃಗವೆಳೆದುಕೊಂಡೀ ಹೊದಱ ಹೊಕ್ಕುದು ಬಹಳಕಾನನದ (ಕುವ್ಯಾಕ. ೨೩-೬) : ಹೊಕ್ಕು ಲೀಲಾಸರಸಿಗಳನಿರದೆ ಕಮ್ಮಿಕ್ಕಿ ಹೊದಱುಗಳೆಡೆಯನು ಹೊಕ್ಕಿ ಹೆಮ್ಮೆಳೆಗಳನಱಸಿ ನೋಡಿದೆವದು ಸಿಕ್ಕಿದುದಿಲ್ಲೆಮ್ಮ ಕಣ್ಗೆ (ಕುಕಾಸಾಂ. ೩೨-೨೪). ೨. ಬೆಳೆಗಯ್ಯ ಹೊದಱನೊಳು ಮುನ್ನಾಡಿದೆತೆಗಳೊಳು . . . ಮೇವ ತುಱುಖಿಂಡಿನೊಳು ದಾರಿಯೊಳು ಸುತ್ತಿ ಸುಳಿದಱಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧಕಾ. ೨-೩೬); ಸುಮಹಾರಥರ ಹೊದಱಿಲಿ ಹೊಕ್ಕನುರಿ ಬಲುಮೆಳೆಯ ಹೊಕ್ಕಂತೆ (ಕುವ್ಯಾದ್ರೋ. ೨-೩೦) ; ಹೊದಱ ರಥಾಳ್ಲಿಗಳೆಡಾಯುಧ ಕಯ್ಯ ಪೊಡೆಸರಳ ಹೊದೆಗಳಂ ತತ್ತಸ್ಥಳಂಗಳೊಳ್ ಕಟ್ಟಿ ಬಿರ್ ಹೆದೆಯನಾರ್ಕೆದು . . . ಎಚ್ಚಾಡಿದರ್ ಬಿಲ್ಲ ಬಿನ್ನಣಿಗರಂದು (ಕಂಪು. ೧೮-೯೯).

[ದೇ. II ತಮಿ. ಪುತರ್, ಪುತಲ್; ತುಳು. ಪುದೆರ್; ತೆಲು. ಪೊದರು]

**ಪೊದಱು** 'ಪೊದಱ್' ನೋ.

**ಪೊದಱುಗಟ್ಟು**, ಹೊದಱುಗಟ್ಟು (ಕ್ರಿ). ಗುಂಪುಗೂಡಂ ; ದಟ್ಟೈಸು; ಒಟ್ಟುಗೂಡು : ಕಿದಱ್ ನಾಂದಿ ಪೊದಱುಗಟ್ಟುವ ಕದಳೆಗದಿರನುರದಿನು ರುವಣಿಸಿ ನತ್ತಿಯಿಂ ಪೊತ್ತು ನೆಗೆದು (ಅಪಂಪು. ೬-೬೦ ವ). **ಹೊದಱುಗಟ್ಟು**: ಉದಯವಾಗದ ಮುನ್ನ ಕಳನೊಳು ಹೊದಱುಗಟ್ಟಿದ ವೈರಿಸೇನೆಯು ಹದನಿವರ ಪಾಳಯಕ್ಕೆ ಬಂದುದು (ಕುವ್ಯಾಶೀ. ೫-೬).

[ ಪೊದಱು (<ಪೊದಱ್) + ಕಟ್ಟು[1] ]

**ಪೊದಱುಗೊಳ್**, ಹೊದಱುಗೊಳ್ (ಕ್ರಿ). ದಟ್ಟವಾಗು ; ಒತ್ತಾಗು : ಪುತ್ತುದರ್ದಿರ್ದ ಮೆಯ್ ಪೊದಱುಗೊಂಡ ಜಟಾವಳಿ...ಕಷ್ಟವಮೌನವೊಪ್ಪುತ್ತಿರೆ ಜೀರ್ಣತಾಪಸಕುಲಂ ಮೆಱೆದಿರ್ಪುದು ತನ್ಮಹಾದ್ರಿಯೊಳ್ (ಕಕಕ. ೯-೩೦). **ಹೊದಱುಗೊಳ್** : ಚಲಿಪ ಬಲುಶಾಖಾಸಮೂಹವ ಬಲು ಹೊದಱುಗೊಂಡಿಹ ಪಲಾಶಾವಳಿಗಳನು ಕಾಯ್ಗಳನು ಗೊಂಚಲುಗಳನ ಪ್ಪಲವನು ಇಳುಹಿ ಬೊದರೇ ತಱಿವ ಮರದಂತಳವಡಿಸಿಕೊಂಡಿರಲ್ (ಶಮ್ಮಕಾಂ. ೩-೦೦೯). [ ಪೊದಱು (<ಪೊದಱ್) + ಕೊಳ್[1] ]

**ಪೊದಱುವೆಳಗು**, ಹೊದಱುವೆಳಗು (ನಾ). ದಟ್ಟವಾದ ಪ್ರಕಾಶ : ಗಾಢವಾದ ಕಾಂತಿ : ತ್ರಿದಶಪತಿ ಗಿರಿಗಳಂ ಕಡಿವಂದು ತೆಗೆದಿಡುವನೆಂದು ತಿರಿಪಿದ ಕುಲಿಶದ ಪೊದಱುವೆಳಗಿಳಿಗಿಳಿದು ವಜ್ರಮಯುವಾಗಿ ನಿಂದುದೊ . . . ಪೇಳೆನಲ್ಕೊಟೆ ಕಣ್ಗೆಸೆದುದು (ಕೃಪಚಾ. ೦೦-೩೬). **ಹೊದಱುವೆಳಗು** : ಮುದದಿನವನೀ ರಾಘವೇಂದ್ರನ ಪದಕನುತ ನಾನಾಸುರತ್ನದ ಹೊದಱುವೆಳಗಿನ ಹೊಂದೊಡವುಗಳ ಹೊಱಿಸಿ ಬೀಳ್ಕೊಟ್ಟ (ಕೂಕಕಾ. ೯-೯-೨೦). [ ಪೊದಱು (< ಪೊದಱ್) + ಬೆಳಗು[1] ]

**ಪೊದಱೇಲ್**, ಹೊದಱೇಲ್, ಹೊದಱೇಳು (ಕ್ರಿ). ಗುಂಪುಗೂಡು ; ದಟ್ಟವಾಗು ; ಹೇರಳವಾಗು : ಇದಿರೆರ್ದು ಖಚರೇಶನೆಱಿಗೆ ನಾರದನಿಗೆ ಪೊದಱಿರ್ದು ಮಕುಟರತ್ನಾಂಶು ಕಿದಱಲು ಸುರಧನುವನು ಮುಖ

ಕಳ್ಪಿರೆ ಮೃದುವಚನದೊಳಿಂತೆಂದ (ಧರ್ಮ. ೬-೦೦). **ಹೊದಳ್ಕೇಳ್ :** ಘನವಿಕ್ರಮದ ಸಿರಿ ಹೊದಳ್ಕೇಳೆ ಜಯವಿಕ್ರಮದೊಳಬ್ಬರಿಸಿದನು ನಿಷ್ಠುರಸಿಂಹನಾದಗಲಿ (ಕುಮಾರರಾ. ೦೩-೯೮); ಹೊರೆಳಿಗಿಡಿಗಳು ಹೊದ ಕರಿಸಿ ಹೊದಳ್ದ್ದು ರ್ಝಳಪಲಿ ರ್ಝಡಿವುದಾಶಾಭಿತ್ತಿ (ಕೊಕರಾ. ೬-೨೮-೨೮); ಹೊಂದಾವರೆಗೊಳ ಹೊವಳ್ದ್ದ ತುಲಸಿಯ ನಂದನ ನಾಟ್ಯಕೀರ್ತನದಿ ಸಂದರ್ಶನದೊಳುಬ್ಬುವ ಸ್ವಾಮಿಯ ಕೊರ್ತು ಮುಂದಣ ಕೃತಿವೇಳು ಮುದದಿ (ರೂಹಕ. ೨೦-೦). [ ಪೊದಳ್ + ಏಳ್$_1$ (< ಎಟ್$_1$) ]

**ಪೊದಳ್ಕೊಡೆ, ಪೊದರೊಡೆ, ಹೊದಳ್ಕೊಡೆ** (ಕ್ರಿ). ೧. ಗುಂಪು ಚೆದರು; ದಿಕ್ಕಾಪಾಲಾಗು : ಪೊ[ಪಾಠಾಂ. ಹೊ]ದಳ್ಕೊಡೆದು ಕುರುಸೇನೆ ತೆಗೆ ದೋಡಿದುದು ಭಯಜಲಧಿಯಲಿ ತೇಕಾಡಿದರು ಕೌರವಜನಪರೀ ಭೀಷ್ಮಾವ ಸಾನದಲಿ (ಕುಮಾಭಾ. ೦೦-೦೩). **ಪೊದರೊಡೆ :** ೨. ಗುಂಪುಗುಂಪಾಗಿ ಹರಡು ; ದಟ್ಟವಾಗಿ ವ್ಯಾಪಿಸು : ಕದಳೀಕ್ಷು ನಾರಿಕೇಳ ಚೂತ ದ್ರಾಕ್ಷೆಯಿಂ ಬದರಿ ದಾಡಿಮವು ಖರ್ಜೂರ ಹೇರಳೆ ನಿಂಬೆ ಪೊದರೊಡೆದ ಹುಳಿಸೆ ನೇರಿಲು ನೆಲ್ಲಿ ಹಲಸು ಫಲಭಾರದಿಂದೊಪ್ಪಿರ್ದುದು (ಶಬಷೋ. ೨-೬೨). **ಹೊದಳ್ಕೊಡೆ :** ೧. ಮೇಲಿನ 'ಕುಮಾಭಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ಪೊದಳ್ + ಒಡೆ$_1$ ]

**ಪೊದಟ್, ಪೊದಳ್, ಪೊದಳು, ಹೊದಳು$_1$** (ಕ್ರಿ). ೧. ಹೊರ ಹೊಮ್ಮು ; ಹೊರಸೂಸು : " ಪೊದಟ್ದುದೆನೆ ಪೊಣ್ಮಿದುದಕ್ಕು " (ಶಶಮ. ೭೮); ಮನ್ಮಥಶಿಖಿಜ್ವಾಲಾಳಿ ತಳ್ತೀಟ್ ಬೇಯದೆ ಕಾಯ್ದೋಡಿನ ಪೋಳದಂತಲರ್ದೊಡಾ ಕಂಪುಂ ಮನಸ್ತಾಪಮುಂ ಪುದಿದೆತ್ತಂ ಬರ ಸುಯ್ ಪೊದಟ್ದು ಬಿಸಿದುಂ ಕಮ್ಮಿತ್ತುಮಾಯ್ತೀಪಳಾ (ಕಾವ್ಯಸಾ. ೫೬೬ ಸೂಕ್ತಿ); ಪ್ರತಿದಿನಂ ನೃಪಚಂದ್ರನ ದಿವ್ಯದೇಹದಿಂ ಕಾಂತಿ ಪೊದಟ್ದು ಪರ್ವಿ ಗಗನಾಂತರಮಂ ಪುದಿದಿರ್ಪುದು (ಕಾದಂಸಾ. ೬೬೮); ವಿವಿಧಾತೋದ್ಯರವಂ ಪೊದಟ್ದೆಳೆದಿಕ್ಚಕ್ರಂಬರಂ ಕೂಡೆ ಪೊಣ್ಮುವಿನಂ (ಗದಾಯು. ೯-೬೭). ೨. ಉಂಟಾಗು; ಒದಗು; ಪ್ರಾಪ್ತವಾಗು : ಮುನೀಂದ್ರನ ದಿವ್ಯ ದೃಷ್ಟಿಮಂತ್ರದೊಳೆ ಪೊದಟ್ದುದಾ ಸತಿಯರಿರ್ವರೊಳು ನವಗರ್ಭವಿಭ್ರಮಂ (ಸಂಕಥಾ. ೦-೯೫); ಮನಕ್ಕುಮ್ಮಳಂ ಪೊದಟ್ದುದೆನಗಂ ಸರೋಜದಳನೇತ್ರೆ ನಿನ್ನಿಂದದಿ (ಪುಣ್ಯಶ್ರ. ೯-೨೫); ಮಟ್ ಕಂಬನಿಯುಂ ದನಿಯುಂ ಮೊಳಗೆಜಿಗಿದ ಮಕುಟದಿಂದೆ ಮಿಂಚೊಗೆಯೆ ಪೊದಟ್ದುಬಲಿಂದಂ ಮುನ್ನಡಿಯೊಳ್ ಮಟ್ ಗಾಲಮನಾದು ಸೂನು ತಂದೆಗೆ ತಂದಂ (ಅಶಂಕೃ. ೩-೯೯). ೩. ಎದ್ದು ತೋರು; ಪ್ರಕಟವಾಗು ; ನಿಚ್ಚಳವಾಗಿ ಕಾಣು : ಕಂಜದಳೋಪ ಶೋಭಿತವಿಲೋಚನದೊಳ್ ನಿಟಿಲಾಗ್ರದೊಳ್ ಪೊದಟ್ದಂಜನರೇಖೆ ಸೊಗ್ಗಸೆಯೆ (ಸುಕುಮಾ. ೧೦-೩೮); ಅಡಸಿ ಪೊದಟ್ದ ಪೆರ್ಮೊಲೆಗೆ ಕುಟ್ಮಲ ಹಾರಮನಾಂತಳಬ್ಬಿಯಿಂ (ಲೀಲಾವ. ೦೩-೦೦೦); ಪೊದಟಿದ ಲಜ್ಜೆ ಪಲ್ಲಟಿಸ ದಾಸನಂ . . . ಪಲ್ಲ ಕೊನೆದಾಗದ ಚುಂಬನವೆಂಬಿವಿಚ್ಚೆಯೊಳ್ ಪುದಿದಿರೆ ಮೆಚ್ಚಿದಳ್ ನೆರೆದು ಪೊ:ಪವಳೋಪನ ಜಾಣ ಕೇಣಮಂ (ಸೂಕ್ತಿಸು. ೯-೦೫೯). ೪. ಹರಡು; ವ್ಯಾಪಿಸು; ಆವರಿಸು: ಮಖಂ ತನ್ನರ್ಚಿಗಳ್ ಬಂದು ಮೊಕ್ಕಳಮೆತ್ತಂ ಸುರಿಯುತ್ತುಮಿರ್ಪ ರಸಮಂ ಮಖಂ ಪೀರ್ದುಕೊಂಡಂ ಮನಂಗೊಳೆ ಸಪ್ತಾರ್ಚಿ ಪೊದಟ್ದು ನೀಳ್ದೊಸಗೆಯಿಂದಾಪೋಶನಂಗೊಳ್ವ ಪೋಲ್ (ಸಂಪಹಾ. ೩-೯೬); ಪೊಸಜವ್ವನದೇಟ್ಗಿಯೊಳ್ ತಪಶ್ಚರಣಮಿದೇಂ ಪೊದಟ್ದಿಡಿದ ಕಾನನದೊಳ್ ಬಿಡದೊರ್ಬಳಿರ್ಪುದೇಂ (ಕಾದಂಪೂ. ೬೯೮); ಸಿಂಗರಮೇಟ್ಗಿಯುಂ ಪಡೆಯ ದೇಸೆ ಪೊದಟ್ದಿರೆ ಕೊಂಕು ತೀವೆ . . . ನನವಿಲ್ಲನ ಚೀರಮನೊಲ್ದು ಪೇಟ್ವೆನಾಂ (ಕವಿಶಾ. ೦೭). ೫. ಅಧಿಕ ವಾಗು ; ಹೆಚ್ಚಾಗು ; ವೃದ್ಧಿಯಾಗು : ಕಲಿಯುನೆ ಪಾದೆ ಮುಟ್ಟ ಕಡುವಂದೆಯನೊಳ್ಗಲಿ ಎಯ್ದು . . . . ತವೆ್ಮಳಗ್ಗಲಿಸಿ ಪೊದಟ್ದು ಹರ್ಷದವಿವೇಕತೆಯುಂ ನೃಪಚಿತ್ತವೃತ್ತಿ ಸಂಚಲವುದಳಿಂದಮೋಲಗಿಸಿ ಬಾಟ್ದುದೆ ಕಷ್ಟಪಿಳಾಧಿನಾಥರಂ (ಸಂಕಥಾ. ೦೨-೯೨); ಪುಟ್ಟಿದ ನೂರ್ವರು ಮೆನ್ನೊಡವುಟ್ಟಿದ ನೂರ್ವರುಮಿರ್ದಿರ್ಪ ಸತ್ತೊಡೆ ಕೋಪಂ ಪುಟ್ಟಿ ಪೊದಟ್ದುದು ಸತ್ತರ್ ಪುಟ್ಟರೆ ಪಾಂಡವರೊಳಿಡಾದು ಛಲಮನೆ ಮೆರೆವೆಂ (ಗದಾಯು. ೩-೩೪); ಮದನನ ಬಿಲ್ಲ ಬಲ್ಮೆ ಬಲಿದಿತ್ತು ವಸಂತದ ಮೋಹನಂ ಪೊದಟ್ದುದು ಕಡುಗಾಡಿವೆತ್ತಲೆವ ತೆಂಕಣಗಾಳಿಯ ಸೋಂಕು ಸೊರ್ಕುವೆತ್ತುದು (ರಘುಕಾ. ೦-೬೨). ೬. ದೊಡ್ಡದಾಗು ; ತೋರ ವಾಗು; ಸ್ಥೂಲವಾಗು : ಜಗದ ಬಡತನವನೊರ್ವಳಿಯ ಬಗೆದಂತಿರೆ ಕಿಡಿವ ಚಕ್ರಿ ತನ್ನಿರ್ದೆಡೆಯೊಳ್ ನೆಗಟ್ದ ಬಡತನವನದನೇಕೆ ಗಡಂ ಸೈರಿಸುವನೆನೆ ಪೊದಟ್ದುದು ಮಧ್ಯಂ (ಅರಿಪು. ೯-೩೦): ಬಿಸರುಹನೇತ್ರೆ ಯೊಳ್ನಡು ಪೊದಟ್ದುದು ದಾಂಗುಡಿಯಾಟ್ದು ಬಾಸೆ ನೀಳ್ದಿಸದುದು . . . ಗರ್ಭದೇಟ್ಗಿಯೊಳ್ (ಸಂಕಕಂ. ೧೬೯-೧೧). ೭. ಶೋಭಿಸು ; ಕಾಂತಿ ಯುಕ್ತವಾಗು; ವಿರಾಜಿಸು: ಇದು ನಿನ್ನೀಯುಗಲ್ದಿರದೊಳ್ ಪೊದಟ್ದ ತನತೊಂದು ಜನ್ಮಮಂ ಸಫಲಂ ಮಾಟ್ಪುದಿವೆಂದು ಕುಂವದಲಶಾರದ ನೀರದನಿರ್ಮಲಂ ಭವತ್ಕೀರ್ತಿಯವೋಲ್ (ಅರಿಪು. ೦೨-೦೦೯) : ಪುಸಿ ಮುಳಿಸಿಂದಂ ಬಿರಿದುಂ ಪ್ರಯತ್ನದಿಂದಮ ವಿರಚಿಸೆ ಕಣ್ಗೆಸೆವ ಬೀಷ್ಮ ಭ್ರುಕುಟಿ ಪೊದಟ್ದಿರೆ (ಕಾದಂಪೂ. ೭೮೦); ಭುವನವುನಾವಗಂ ಪುದಿದು ತಿ:ವಿದ ತಣ್ಗದಿರ್ಗಳ್ ಪೊದಟ್ದ ಕೈರವವನಮಾದುವೆಯ್ದೆ ಪೊಸಮಲ್ಲಿಗೆ ಯಾದುವು . . . ಹಿಮಮಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯ ವಾದುದೇ (ಲೀಲಾವ. ೩-೭). ೮. ಪ್ರಸಿದ್ಧವಾಗು; ಕೀರ್ತಿಯನ್ನು ಪಡೆ; ಹೆಸರನ್ನು ಗಳಿಸು: ಜಗತ್ತ್ರಿತಯಂಗಳೊಳ್ ಜಸಕ್ಕಾಗರಮಾದ ಒದ್ದೆಗನಿನಾ ನರಸಿಂಹನಿನತ್ತ ನಾಲ್ವರಲ್ ಮೇಗು ಪೊದಟ್ದ ಬಾಗದೊಳವೊಂದಿದ ಬೀರ ದೊಳಂ ಗುಣಾರ್ಣವಂ (ಸಂಕಥಾ. ೦-೩೦) ; ಪೊದಟ್ದಧಿರಾಜಲಕ್ಷ್ಮಿಯೊಳ್ ನಿಸದಮ ವಿಶ್ವಭೂತಿ ವಸುಧಾಪತಿ ತಾನೊಲವಿಂದಮಿರ್ದು ಭೋಗಿಸಿದನಶೇಷ ಭೋಗಮಂ (ವರ್ಧಪು. ೦-೯೦) ; ಕ್ರಮದಿಂದೆ ಸಂಧಿ ನಾಮಂ ಸಮಾಸಮಾ ತದ್ಧಿತಂ ಪೊದಟ್ದಾಖ್ಯಾತಂ ಪ್ರಮುದಿತಧಾತುಮಪಭ್ರಂಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ (ಶಮದ. ೧). ೯. ಒಂದಾಗು; ಸೇರು; ಕೂಡು : ಎಸೆವ ವಿಮಾನಘಂಟೆಗಳ ಮೊಲ್ಲುಲಿ ಕಿನ್ನರಗೇಯದೊಳ್ ಪೊದಟ್ದಿಸೆಯೆ (ಅರಿಪು. ೨-೯೦); ನುಡಿ ಪುಸಿಯೊಳ್ ಪೊದಟ್ದಿರಪು ದಾನದ ಪೊಂಪುಟ್ ಲೋಭದಾಸೆಯೊಳೊತ್ತಡರದು (ಸಮುಕ. ೬-೨). ೧೦. ಹೊಂದು; ಪಡೆ; ತಾಳು: ಧರಣೇಂದ್ರನೋಲಗಕ್ಕಂ ಸುರಪತಿಯೊಡ್ಡೋಲಗಕ್ಕಮಿದು ಮಿಗಿಲೆಂಬೋಲ್ ಕರಮೊಪ್ಪಿರ್ದುದು ಸಭೆಯಾ ತರಳಾಕ್ಷಿಯರಿಂ ಪೊದಟ್ದ ನೂರ್ಮಡಿ ಚೆಲ್ವಂ (ಧರ್ಮಾಮೃ. ೯-೦೯೬) ; ಮೊದಲೆರಡು ವಿಭಕ್ತಿಯೊಂ ಪೊದಟ್ಗುಮಲ್ ಕಾಲವಾಚಿಯಿಂದೊಂದೆಂಬುದುಮೇಕರೂಪಮಾಗಿರ್ಪುದು ಮೊದಲೆರಡುಂ ವಿಭಕ್ತಿಗಂ ಸಪ್ತಮಿಗಂ (ಶಮತ. ೦೨೦): ಶ್ರೀ ಚಾಮರಾಜೇಂದ್ರನೀ ಬಿರುದೆಲ್ಲಾ ಬಿರುದಂಗಳೊಳ್ಪನಿಟಿಕೆಯ್ದಾರ್ಪಿಂ ಪೊದಟ್ದೊಪ್ಪುಗುಂ (ಶಳಶಿ. ೨-೬). ೧೧. ಅಂಟಿಕೊಳ್ಳು; ಹತ್ತಿಕೊಳ್ಳು: ತರುಣಿಯರಂಮ ಕಂಸನ ವಿಯೋಗದ ಶೋಕದೆ ಬಿಟ್ಟು ಧಾತ್ರಿಯೊಳ್ ಪೊರಳೆ ಪೊದಟ್ದ ಮೆಯ್ಯ ರಜಮಶ್ರುಜಲೌಘದೆ ನಾಂದು ಕರ್ದಮಂ ಬೊರೆದವೊಲಾಗಲ್ (ಜಗಂ. ೬-೯೬). ೧೨. ವಿಶಾಲವಾಗು; ವಿಸ್ತಾರ ವಾಗು : ನಗೆಮೊಗಮಂ ಪೊದಟ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂಬುಗಲೊಡಮಾ ತಳೋದರಿಯ ಸುಯ್ಗಳ ಬೆಂಕೆಯೊಳಿಚ್ಚೆಗೆಟ್ಟು . . . ಪಾಟದುವುನ್ಮದಾಳಿಗಳ್ (ಸಂಕಥಾ. ೩-೧೦). ೧೩. ಚೆದರು; ಚೆಲ್ಲಾ ಪಿಲ್ಲಿಯಾಗು ; ದಿಕ್ಕಾಪಾಲಾಗು : ಆ ಸತಿಯುಕ್ಕಿದ ಕಣ್ಣ ನೀರ ಧಾರೆ ಗಳೊಳೆ ನಾಂದೆಲರ್ಚಿ ಪೊದಟ್ದೊರ್ಮೆಯೆ ಪಾಟದುವುನ್ಮದಾಳಿಗಳ್ (ಸಂಕಥಾ. ೩-೦೦). ೧೪. ಉಬ್ಬು ; ಉತ್ಸಾಹಿಸು ; ಹರ್ಷಿಸು : ವಿತತಕಳಾ ಪ್ರವೀಣತೆಯನೆಯ್ದೆ ಸರಸ್ವತಿ. . . ಪತಿಭಕ್ತಿಯಿಂ ನೆಗಟ್ದರುಂಧತಿಯೆಂದು

ಪೊದಟ್ಟು ಬಣ್ಣಕುಂ ನುತವಿಜಯಾವನೀಶಪತಿಯಂ ಸಲೆ ಪೊನ್ನಲದೇವಿಯುಂ ಜಗಂ (ಶಬರ. ೦-೨೬); ಚಂದಿರನುಂ ರೋಹಿಣಿಯೊತನೊಂದಿ ಪೊದಟ್ಟುದಿಸಿ ಬಂದನಿರುಳರೆಗೆಂದದತ್ಕಂದಿನಪೋಲಟ್ಟಿಯಾನಾನಂದಂ ಪೊಗರೇಜಿ ಭವದೊಳಾವಿರ್ಭವಿಸಾ (ಶಳ೨. ೬-೨೫೦). **ಪೊದಳ್** : ೧. ಪುದಿದ ಹಿಮಮೊಡಲೋಳಿಳತಂದುದರಾಗ್ನಿಯನೆಯ್ದೆ ನುಡಿಪೊಯ್ದುದು ನಿಜವಲ್ಲದೊಡೆಂತು ತೋರ್ಪುದೋ ಪೇಳ್ಕೊದಲಿಲ್ಲದ ಪೊಗೆ ಪೊದಳ್ದು ಜನದಾನನದೊಳ್ (ರಾಜಶೇ. ೯-೦೬). ೨. ವಿಳಸನಮಂ ಪುದುಂಗೊಳಿಪ ನನ್ನನದೋಳಿ ಪೊದಳ್ದಳುಂಬದಿಂ ಬೆಳೆದೆಚಗಿರ್ಪ್ಪ ಪಾಳಿನವಸೌರಭಮಂ ನಯದಿಂ ದೆಸೆ × × × ಸ್ನಿಳಸುವ ಗಾಳಿ (ಕ೩. V. ೨೦-೨೯ ; 1126) ; ಸ್ತ್ರೀಪುನ್ನಾಗವೆರಡು . . . ಪೊದಳ್ದಾತುರದಿಂ ಸಮಸಂಭೋಗಕ್ರೀಡೆಯೊಳಾಲಿಂಗಿಸಿದುವು ಹೂಗಣೆಯಿಂ ಹುರಿಗೂಡಿದ ಸಂಮೋಹನಪಾಶದ ತೆಱದಿ (ಜಗು೫೦. ೦೦-೨೯). ೩. ಪೋಲುದಿನೊಳ್ಪೊದಳ್ದ ಕುಚಭಾರದಿಂ ನಸುವಾಗಿದಂಗಲತ್ತಲಹರಿಗಳ . . . ವಿನುತಾಷ್ಟಮಹಿಷಿಯರ್ಚಾರುಚಾಮರತಾಲವೃಂತಮಂ ಪಿಡಿದಿರ್ದರಚ್ಯುತನ ಕೆಲಬಲದೊಳು (ಕೃಪಾ೩. ೬-೯೬). ೪. ಒಪ್ಪುವ ಪಂಚಮಹಾನಕಂಗಳಿಂ ಬಳಸಿ ಪೊದಳ್ದ ವಾಜದಳದಿಂದಮಗುರ್ವ್ವಿಪ ವೀರಕೋಟಿಯಿಂ (ಸೌ೩೨. XI-1, ೩೨-೬೯; 1007) ; ತೇಜದುರ್ಬ್ಬೆಗೀಳುಸಮುಂ(ಮು)ದ್ರಮುಂಗಳಿಯೆ ಪಬ್ಬಿ ಪೊದಳ್ದುದು (೩೦. V. ೦೬-೦೬ ; 1019) ; ಚತುರಂಭೋನಿಧಿವರೆಗಂ ಚತುರಂಗಬಲಂ ಪೊದಳ್ದು ಬಿಡೆ ಪದ್ಮಜನೀಂ ಚತುರನೊ ತದ್ವ್ಯಾರಮನಹಿಪತಿ ಪೊಜಲೆಂದಂದೊಡರ್ಚಿದಂ ಬಹುಶಿರಮಂ (ರಾಜಶೇ. ೬-೨೩). ೫. ಪದಕಳದೊಳ್ ತೊಡಂಕಿ ಪರಿದಾಡಿ ಪೊವಳ್ದೆಸೆವಂಗದೇಶದೊಳ್ ಪದೆದು . . . ಸರಿತ್ಪುಧಾಂಶಂಗಳ್ ಪುದಿದ ತದೀಯ ಪಾಳಿಯೊಳಿ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ (ಕಶ೫೦. ೩-೦೩). ೬. ನಡು ಪೊದಳ್ದವು ವರವಳಿತ್ರಯುವಡಗಿದವು . . . ಬೆಳ್ಪಡಸಿದವು ಮುಖಮಂಡಲಗಳಾ ಮಾನಿನೀತ್ರಯದ (ತೊರವ. ೦-೯-೩). ೭. ಪೊಸಪೂಗಳೊಳ್ ಪೊದಳ್ದ ನವನನ್ನನಬೃಂದದಿಂ (ಎ೩. XIII. ೩೩೦-೨೬ : 920) ; ಅಡಿದಳದ ಬಲ್ದೊಂಪು ಕೆಂದಳಿರ ಪೆಂಪನ ವಗಡಿಸಿ ಮಾರನೇಱಿಸ ಪೊದಳ್ದುಗುರ್ ಶುಕ್ತಿಜದ ಬೆಡಗಿಂಗೆ ಭಂಗಮಂ ಸಂಗೊಳಿಸೆ . . . ಸೊಗಸನೇವಣ್ಣಿಪೆಂ (ಶಬ್ದ. ೩-೨೬) ; ಸಣ್ಣನಡು ಸ್ಸನಿಮಿರೆ ತೋಳ ಮೊದಲೊಳ್ಪಸೆಯ ಶಿಣ್ಣ ಮೊಲೆಗಳ್ಪೊದಳೆ ... ಪೆಣ್ಣವಿಂಡಾ ಬನದೊಳಲರ್ಗಳಂ ತಮ್ಮ ತನುವಿನ ಕಂಪಿನಿಂ ಪೊರೆದರು (ಕೃಪಾ೩. ೬-೦೬). ೮. ಸಂಗಡಿಸಿದ ಬಡತನದೆ ಕುನುಂಗಿ ಕರಂ ಪೆಸರಿನೊಂದಿರಿದುದೀದಿರ್ದಾ ಸಂಗೀತಂ ದಿನದಿನಕಂ ಪೊಂಗಿ ಪೊದಳ್ದೇಳ್ಗೆವಡೆದುದೀ ಧಾರಿಣಿಯೊಳ್ (ಮಹಾ೩ ೯. ೦೦). ೯. ಮದಗನ್ಧಶಾಳಿವನದಿಂ ಬಿಡದೊಪ್ಪುವ ಕಬ್ಬಿದೋಣ್ಪಿನೊಳ್ಪಳಗೆ ಪೊದಳ್ದ ದೇವಕುಲಸಂಕುಲದಿಂ ದ್ವಿಜಸೌಧಗೇಹದಿನ್ದೆಳೆಗೆಸೆದತ್ತು ಪಲ್ಲವಪುರಂ (ಎ೩. V. ಅರಸೀ. ೦೨೬-೬೦ ; 1185) ; ದಟ್ಟಡಿಯನಿಡೆ ರನ್ನದೆಮಗೆಯಾ ಮೆಱೆವ ದನಿ ತಾವರೆಯ ರಜದಲಿನೆಱೆ ಪೊದಳ್ದೆಳದುಂಬಿವಾಲೆಯ ಕಿಱುದನಿಯನಿಪ್ಪೊಱು ಜನನ ಚರಣಾಂಬುಜದಲೊಪ್ಪಿದವು (ಶಾಕ್ಯ೩. ೩೩-೧೦೩) ; ಮಹೀರಮಣನ ತೇಜಮನೇನೆಂಬೆಂ ಪೊದಳ್ದ ರಪಿಶತರುಚಿಯಿಂದಮರ್ದಾ ಪೊಱವಳಯಮಂ ಹೇಮಮಯಮಿದೆನಿಸಿತ್ತಜಾಂಡಮಂಡಳಮನಿತಂ (ರಾಜಶೇ. ೩-೬). ೧೦. ನಿಮಗೊಪ್ಪುವುದಾವುದದಂ ಪೊದಳ್ದುಕೊಂಬುದು ವಿಪ್ರಾ (ಅಶ್ವ.ಕೃ. ೨-೩-೦೩೦). ೧೧. ಕ್ಷಿತಿವಲ್ಲಭನೀಕಾಂತಸ್ಥಿತಸೌಭರಿಮುನಿಸಮೀಪಾವಮಂ ಸಾರ್ದವನೀಂದತಿಸನ್ಮಾನಿತನಾಗಿಯೆ ಕೃತಾಸನಪರಿಗ್ರಹಂ ಪೊದಳ್ದಂತೆಂದಂ (ಅಶ್ವ.ಕೃ. ೯-೦-೦೮೨). ೧೨. ಬಳಕೆಯಲ್ಲಿರು ; ಉಪಯೋಗದಲ್ಲಿರು : (೬). ೧೩. ಚಾಚು ; ನೀಡು : ಪಸರಂಚೆತ್ತಡೆಯಾದ ನೀಡಡಿ ಪೊದಳ್ದಾಕರ್ಣವಾಕುಂಚಿತಾಸ್ತ್ರಸಮೇತೋಚ್ಚಕರಾಗ್ರಂ...ತಾನಿಸಲೊಂದೊಂದುಕುರಂಗಮಂ ಶಬರನಿಂತಿರ್ದಂ ಮಹಾರಣ್ಯದೊಳ್ (ಗಂ೪. ೦-೮೯). ೧೪. ರಭಸವನ್ನು ಹೊಂದು ; ವೇಗವನ್ನು ಪಡೆ ; ತ್ವರೆಗೊಳ್ಳು : ಕ್ರೂರೋನ್ನತಸ್ಯಂಧನಾ ತ್ರಿದಶಾರಾತಿ ಪೊದಳ್ದು ಪೊಕ್ಕನಿರುಳೊಳ್ ತದ್ಗೋವ್ರಜಸ್ಥಾನಮಂ (ಅಶ್ವ.ಕೃ. ೩-೩-೦೮೨). ೧೫. (?): ವಿತತಮತಿ ಬಾಷ್ಕಳಂ ಸಂಹಿತೆಗಳ್ ಮೂಱುಂ ಪೊದಳ್ದು ಬೇಱೆಸಗಿ ನಿಜಾಶ್ರಿತಶಿಷ್ಯವರ್ಗಕಾ ಸಂಹಿತೆಗಳನೋದಿಸುವವೇಕ್ಷೆಯಿಂದಿರ್ದಾರ್ಗಳ್ (ಅಶ್ವ.ಕೃ. ೩-೦-೦೯೩). **ಪೊದಳು**: ೧. ಹದಿಬದೆಯು ತೋಡಿರುವ ಎದೆಯುದ್ದ ಶಿವಗುಣೆಯು ಪೊದಳಿದಾ ಒರತೆ ಕಲ್ಯಾಣಪುರದೊಳಗೆ ಕದಳಿಬನವೆಂದು ಹೆಸರಾಯ್ತು (ಕನ್ನಶ೩. ೨೩೬).

**ಹೊದಳು₁** : ೧೬. ವದನಮಿರ್ದುದು ಹತ್ತುಯೋಜನ . . . ಹೊದಳುತಿರ್ದುದು ನಡುವೆ ನಾಲಿಗೆಮದಿಯು ತಾ ಹನ್ನೆರಡುಯೋಜನ ರುಧಿರಬೀಜನ ಘೋರತರ ಚೀರಿಸಿತು ಹರಿಹರರ (ಶಂ೬೫೩. ೯೨-೦೦೬).
[ದೇ.॥ ತಮಿ. ಮಲ. ಪೊಶಿರ್ ; ತುಳು. ಪೊದಲು ; ತೆಲು. ಪೊದಲು, ಪೊದುರು]

**ಪೊದಟ್ಕೆ₁**, **ಪೊದಳ್ಕೆ** (ನಾ). ೧. ಹುಟ್ಟು ; ಉದಯ; ಆರಂಭ : ನುಡಿಯ ಪೊದಟ್ಕೆಯೊಳೊಳ್ನುಡಿ ನುಡಿದಂ ನಿಜಸಕಲಚಕ್ರವರ್ತಿತ್ವಕ್ಕೊದವಿಯಿಡುವಂತೆ ನಿರಂತರಮಡಿಯಿಟ್ಟಂ ಪದ್ಮರಾಗಮಣಿಕುಟ್ಟಿಮದೊಳ್ (ಆದಿಪು. ೬-೯೦). ೨. ಹೆಚ್ಚಳ; ಆಧಿಕ್ಯ ; ಅತಿಶಯ : ಸಿರಿಯ ಶರೀರದ ರೂಪಿನ ನಗರೈಶ್ವರ್ಯದ ಪೊದಟ್ಕೆಗಳ್ ಕರಗುವಪೋಲ್ ಶರದಂಬುಧರಂ ಭೋಂಕನೆ ಕರಗಿದೊಡೆರ್ದೆ ಕರಗಿ ಕೊರಗಿದಂ ಧರಣೇಶಂ (ಆದಿಪು. ೯-೬೯): ಪುರುಡಿಸುವಳ್ ವಿಳಾಸದ ಪೊದಟ್ಕೆಗೆ ವಿಭ್ರಮದೇಟ್ಗೆಗಂಬರಚರಿಯರೊಳಿಂದ್ರಲೋಕಲಲಿತಾಂಗಿಯರೊಳ್ . . . ಅವಗಂ ಸೆಣಸುವಳ್ ಸಲೆ ಗಾಡಿಗಮುನ್ನತಿಕ್ಕೆಗಂ (ಧರ್ಮಾಮೃ. ೬-೦೬೬); ಹೃದಯದಲಂಪು ಪೊಗೆಪದೆದೀಂಟದೆ ಮುನ್ನಮೆ ತನ್ನ ಕಂಪಿನಿಂ ಮದದ ಪೊದಟ್ಕೆಯಂ ಮನಕೆ ಮಾಟ್ಟ ವಿನೂತನವ್ಯಕ್ಷಧಾನ್ಯಸಾರದೆ ಮಧುಪಾಳಿಗಳ್ ಸುಟಿಗೊಳುತ್ತಿರಲ್ (ಶಾಂತೀಶ್ವ. ೩-೬೦). ೩. ಕಾಂತಿ; ಶೋಭೆ; ಶ್ಲಾಘ್ಯಕರದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖಶ್ರೀಯಾ ಪೊದಟ್ಕೆಯಂ ಬೆಳಗೆ (ಶಾಂತಿಪು. ೦-೯); ಕೊರಳ ಜನ್ನವರಂ ಪೊದಟ್ಕೆಯನೆಯ್ದೆ ಪಾಂಚುವ ಬೆಳ್ಪಿಯುತ್ತರಿಗೆ ಭಾಸುರಮಪ್ಪ ತೇಜಮಗುರ್ವ್ವ ಪರ್ವಿರೆ (ಧರ್ಮಾಮೃ. ೯-೨೦೬). ೪. ರಾಶಿ ; ಸಮೂಹ ; ಗುಂಪು : ಚದುರ ಪೊದಟ್ಕೆ ಸಂಪದದ ಬೊಂಬುಳಿ ಸತ್ಕದ ಬಿತ್ತರಂ . . . ಕೂಡೆ ಭೋಗದ ಕಣಿಯಾಯ್ತು ತಾಂ ತನಗೆ ಪೌರಜನಂ (ಜಗ೦. ೯-೦೦೬); ನಿಮಿರ್ಕೆವೆತ್ತ ತಣ್ಗದಿರ ಪೊದಟ್ಕೆಯಂ ಕಱೆವ ನವ್ಯಕಲಾವಿಸರಂ ಮುಸುಳ್ದು ಮಾಸಿದ ಮುಕುರಂಬೊಲಂತೆ ವಿಗತಪ್ರಭನಾಯ್ತಮೃತಾಂಶುಮಂಡಲಂ (ಕುಸುಮಾ. ೯-೬೬). ೫. ಹರ್ಷ ; ಉತ್ಸಾಹ : 'ಪೊದಟ್ಕೆವಡೆ' ಪರಾ. **ಪೊದಳ್ಕೆ** : ೨. ರಾಜ್ಯಸಂಪದದ ಪೊದಳ್ಕೆ ತೇಜದ ತೆರಳ್ಕೆ ವಿರೋಧಿಯ ಬಾಳ್ಕೆ ತನ್ನದೆಂಬುದನೆ ಪೆರ್ಮ್ಮೆಯಂ ತಳೆದನೋ ನೃಪರೊಳು ನೃಪತೈಲಶಾಂತರಂ (ಎ೩. VIII. ಸಾಗರ. ೦೫೯-೦೪ ; 1169) ; ತಂನೆಸೆವ ರಾಯಮುರಾರಿವೆಸರು ಪೊದಳ್ಕೆಯಿಂ ನೆಲೆಗೊಳೆ ಸೋವಿದೇವಪೃಥಿವೀಪತಿ ವಿಕ್ರಮಮಂ ನಿಮಿರ್ಚ್ಚಿದಂ (ಎಸಕ. ೩೦-೦೦ ; 1170) ; ಪರಿವ ಪಡಂಗು ಬಲ್ದೆರೆಯ ಸಾಲ ಬೆಡಂಗು ನವೀನವಿದ್ರುಮೋತ್ಕರದ ಪೊದಳ್ಕೆ ಶುಕ್ತಿಜದಳುರ್ಕೆ . . . ಚೆಲ್ವ ಬಿತ್ತರಿಸೆ ಪೊದರ್ಪುವೆತ್ತು ಬಗೆಗೊಂಡುದು ಪೂರ್ಣಗುಣಂ ಮಹಾರ್ಣವಂ (ಕಶ೫೦. ೦-೩೯). ೬. ಎದ್ದು ಕಾಣುವಿಕೆ; ನಿಚ್ಚಳವಾಗಿ ತೋರುವಿಕೆ ; ಪ್ರಕಟವಾಗುವಿಕೆ : (೬). ೭. ರಭಸ; ವೇಗ; ತ್ವರೆ: ಪ್ರಲಂಬಕಂಧರಂ ದುರಾಸದಂ ಪೊದಳ್ಕೆಯಿಂದೆ ಗೋಕುಳಕ್ಕೆ . . . ಬರ್ಪಿನಂ ಭಯಂಗೊಳುತ್ತೆ ಗೋಪಗೋಪಿಯರ್ಕಳಾಕ್ಷಣಂ ಕೊರಲ್ಚಿದರ್ (ಅಶ್ವ.ಕೃ. ೩-೩-೦೬೩). [ಪೊದಟ್ + -ಕೆ]

Δ**ಪೊದಟ್ಕೆ₂** 'ಪೊದಕೆ₁' ನೋ.

**ಪೊದಟ್ಕೆಗುಂದು** (ಕ್ರಿ). ಹೆಚ್ಚಳವು ಕಡಮೆಯಾಗು; ಆಧಿಕ್ಯವು ಕುಗ್ಗು: ಘನಾಘನಸ್ತನಂ ಪೊದಟ್ ಪೊದಟ್ಕೆಗುಂದಿದುದು ವಾಃಕಣ ಸಂತತಿ ಸೋರೆ ಸೋರ್ದಡಂಗಿದುದೆಳಗಾರೊಳಾ ಸಕಳಚಾತಕಪೋತತೃಷಾವಿಷಾದನಂ (ಚಂದ್ರಪ್ರ. ೯-೯೬). [ಪೊದಟ್ಕೆ₁+ಕುಂದು₁]

**ಪೊದಟ್ಕೆವಡೆ, ಪೊದಳ್ಕೆವಡೆ** (ಕ್ರಿ). ೧. ಹೆಚ್ಚಳವನ್ನು ಪಡೆ: ಆಧಿಕ್ಯವನ್ನು ಹೊಂದು; ಸಮೃದ್ಧವಾಗು: ಆ ರಾಜಕುಮಾರನನೇಕಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರವಂ ಕೈಕೊಂಡ ವಕ್ಷಸ್ಥಲಮುಂ ಬಂಧುಜನಮನೋರಥಂಗಳೊಡನೆ ಪೊದಟ್ಕೆವಡೆದ[ಪಾಠಾಂ. ವೆತ್ತ] ವೃತ್ತೋರುಸ್ತಂಭಂಗಳುಂ...ಆತ್ಮೀಯಯೌವನಪ್ರಾದುರ್ಭಾವಮಂ ಪ್ರಕಟಂ ಮಾಡೆ (ಅಂಥಿ. ೩-೯ ಪ); ಪೊದಟ್ಕೆವಡೆದ ಸದ್ದರ್ಮಪೀಯೂಷಮಹಾಪ್ರವಾಹಂ ವಂಗಮಂಡಲದೊಳ್ ತರುಂಗಂಗೊಂಡು ಕಳಿಂಗಮಂಡಲದೊಳ್ ಮಡುಗಟ್ಟಿ ನಿಂದು . . . ಪವೆರ್ಗಾಶೀರ್ವಾದಮಾದುದು (ಅಪುಂಪು. ೦೯-೯೬ ಪ). **ಪೊದಳ್ಕೆವಡೆ**: ೨. ಉತ್ಸಾಹವನ್ನು ಹೊಂದು; ಉಬ್ಬು; ಹರ್ಷಗೊಳ್ಳು: ಜೈನಸಮಯಾಂಬುಧಿಕೀರ್ತಿಸುಧಾಂಶುವಿಂ ಪೊದಳ್ಕೆವಡೆಯೆ ರೇಚಿರಾಜನಸದಂ ಜಸದಿಂ ವಸುಧೈಕಬಾಂಧವಂ (ಎಪಿ. VII, ಶಿಕಾರಿ. ೦೯೭-೩೨; 1182 ?). [ಪೊದಟ್ಕೆ₁+ಪಡೆ₁]

**ಪೊದಟ್ಕೆವೆಱು** (ಕ್ರಿ). ೧. = ಪೊದಟ್ಕೆವಡೆ ೧: ಆ ರಾಜಕುಮಾರನನೇಕಕಲಾಕಲಾಪಪ್ರವೀಣನಾಗಿ ಯುವರಾಜಲಕ್ಷ್ಮಿಯೊಡನೆ ವಿಸ್ತಾರವಂ ಕೈಕೊಂಡ ವಕ್ಷಸ್ಥಲಮುಂ ಬಂಧುಜನಮನೋರಥಂಗಳೊಡನೆ ಪೊದಟ್ಕೆವೆತ್ತ[ಪಾಠಾಂ. ವಡೆದ] ವೃತ್ತೋರುಸ್ತಂಭಗಳುಂ . . . ಆತ್ಮೀಯಯೌವನಪ್ರಾದುರ್ಭಾವಮಂ ಪ್ರಕಟಂ ಮಾಡೆ (ಅಂಥಿ. ೩-೯ ಪ). ೨. ಶೋಭೆಯನ್ನು ಹೊಂದು; ಮನೋಹರತೆಯನ್ನು ಪಡೆ: ಪೊಳೆವಲರ್ಗಣ್ಣ ನೀಳ್ದ ನಿಡುಮುರ್ಗಿನ ಸುಕ್ಕಿದಮರ್ಕಿವೆತ್ತ ಕುಂತಳದ ಪೊದಟ್ಕೆವೆತ್ತಸಿಯ ಬಾಸೆಯ . . . ಅಂಗನಾವಳಿ ನೆರೆದೆಯ್ದು ಬಂದುದು ಮನೋಜನ ತಂತ್ರದವೋಲ್ ವಿಲಾಸದಿಂ (ಧರ್ಮಾಮೃ. ೦೩-೦೬). [ಪೊದಟ್ಕೆ₁ + ಪೆಱು₁]

**ಪೊದಟ್ಸು** (ಕ್ರಿ). ಉಂಟುಮಾಡು; ಒದಗಿಸು: ಶಾ ಮೊಗಂಗುಡ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ಪೆಣಸಂ ಪೊದಟ್ಸೆ ನಾಣ್ಗಡೆ ನೆರೆದೂಳ್ದಯುಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಚಂದ್ರಪ್ರ. ೩-೬೨). [ಪೊದಟ್ + -ಚು₁]

**ಪೊದಟ್ತರ್** (ಕ್ರಿ). ಪೂರ್ಣವಾಗು; ತುಂಬು: ಬೀಗಿ ಬೆನ್ನಿಂ ಬರಿವನ್ನಂ ಕೊರ್ವಿ ಮುಂಗಾರೆ ಗಡಿಯನೆ ಕಡುಗೆಚ್ಚಲ್ ಪೊದಟ್ತಂದು ವತ್ಸೋತ್ಕರಮೆಲ್ಲಂ ಬಾಲವಂಬು ಕಱಿಯೆ(?) ಬಹಳರೋಮಂಥಫೇನಾವಳೀ ಪಾಂಡುರವಕ್ತ್ರಂ ಮಾಹಿಷೀಸಂತತಿ ವಿಪಿನಭವಂ ಕಣ್ಗೆಗುರ್ವಾಯ್ತು ಕಾರೊಳ್ (ಚಂದ್ರಪ್ರ. ೯-೯೮). [ಪೊದಟ್+ತರ್]

**ಪೊದಿಕೆ** 'ಪೊದಕೆ₁' ನೋ.

**ಪೊದಿಸು** 'ಪೊದೆಯಿಸು' ನೋ.

**ಪೊದೆ, ಹೊದಿ, ಹೊದೆ₁** (ಕ್ರಿ). ಪೊದ್ದ, ಹೊದ್ದ (ಭೂತಕೃ). ಪೊದ್ದು₂, ಹೊದ್ದು₂(ಭೂತನ್ಯೂ). ೧. (ವಸ್ತ್ರ ಮೊದಲಾದುವನ್ನು) ಧರಿಸಿಕೊಳ್ಳು: ಆತನ ರತ್ನಕಂಬಳಮಂ ಪೊದೆದು ತನ್ನ ಮನೆಗೆ ಬರ್ಪೊನಂ ಕಂಡು (ವಡ್ಡಾರಾ. ೩೯-೨); ಒಂದಂಚಿಯಂ ಪೊದೆಯೊಂ[ ದೊಂ] ದಂಚಿಯನುಟ್ಟು ನಿನ್ನಿರವಿದೇನಂಭೋಜಪತ್ರೇಕ್ಷಣೇ (ಶಂಶಾ. ೬-೬೩); ಚಂದ್ರಾಪೀಡದೇವಂ . . . ಪಾವಿನೆರೆಯ ದೊರೆಯ ದುಕೂಲಮಂ ಪೊದೆದು (ಕಾದಂಸಾ. ೩೯೦); ಕರ್ಮುಗಿಲಾಗಸಮಂ ಮುಸುಂಕೆ ಕಾಲನೆಂಬ ಕಾಳರಕ್ಕಸಂ ಪೊದೆದ ನೀಲಪಟದೊಂದು ಪಾಂಗಿನೊಳೊಪ್ಪಿದುದು (ಶಾಪುಶ್ಚ. ೩-೯). ೨. ಕವಿ: ಆವರಿಸು; ಮುತ್ತು: ಶ್ರೀದುರಿತಾಪೊದೆವ್ವೆಹವಾಮ್ಯಿಟ್ಟಲಜ್ ಪೊದೆದಜ್ಞಾನಕ್ಕಲೇಂದ್ರಮಾನ್ ಪೋಟ್ಟುದ್ರಮಿಥ್ಯಾತ್ವಪ್ರಮೂಢಪ್ತಿರತರನೃಪನಾನ್ ವೆಟ್ಟಿ (ಎಪಿ. II, ೦೨-೦; ಸು. ೭೦೦). **ಹೊದಿ₁**: ೧. ಒಡಲಿಗ್ಹಾಕುವ ನೀನೆ ಉಡಲು ಹೊದಿಯಲು ವಸ್ತ್ರ ಕೊಡುವವ ನೀನೆ (ಪುಂಪ. ೦-೦೯೬-೨); ನಿವೀತಂ, ಪ್ರಾವೃತಂ_೨ ಹೊದಿಯುವ ಬಟ್ಟೆ (ಸಿಂಗ್ಯಾಅ. ೨೦೩). **ಹೊದೆ₁**: ೧."ಹೊದೆ_ಆಚ್ಛಾದನೇ, ಶರಕೋಶೇ ಚ (ಬತ್ತಳಿಕೆ)" (ಕವಿಪಾ); ಆವನಾದರೇನು ಶ್ರೀಮಹಾದೇವನ ನೆನೆವವನ ಬಾಯ ತಂಬುಲವ ಮೆಲುವೆ ಬೀಸುಡಿಗೆಯ ಹೊದೆವೆ (ಬಸವ. ೩೬೩); ಮುನೀಂದ್ರುನಿವೇದಕಂಗೆ ತಾಂ ಹೊದೆದುದನಿತ್ತು (ಅಪುಂಪು. ೯೮-೪); ಒದೆದನಳಲನು ರೋಮಹರುಷವ ಹೊದೆದು ಹೊರೆ ಹೆಚ್ಚಿದನು (ಕುಮಾರವ್ಯಾ. ೦೯-೦೦); ಮಂಡೆ ಬೋಳಿಸಿಕೊಂಡು ಕೌಂಡುಗಂಬಳಿ ಹೊದೆದು ಹಿಂಡನಗಲಿದ ಗಜದಂತೆ ಇಪ್ಪವರ ಕಂಡು ನಂಬುವದು (ಸರ್ವಜ್ಞ. ೫೦೩).

**ಪೊದ್ದುಕೊಳ್, ಹೊದ್ದುಕೊಳ್**=(ವಸ್ತ್ರ ಮೊದಲಾದುವನ್ನು) ಧರಿಸಿಕೊಳ್ಳು: ಪೊದ್ದು[ಪಾಠಾಂ. ತಾಳ್ದು, ಪೊರ್ವಿ, ಪೊದರ್ದು]ಕೊಳ್ವೊಡೆ ಧವಳೋತ್ತರೀಯಮಂ . . . ಒಲ್ದು ನೋಳ್ವೊಡೆ ರಜತಾದ್ರಿಯೆಂದೆನಿಸಿ ತೋಱಿತು ಮಾಱಿದ ಚಾದ್ರಿಕೋಜ್ವಳಂ (ಗಿರಿಜಾ. ೯-೦೦೬); ಪ್ರಾವಾರಃ-ಹೊದ್ದುಕೊಂಬ ಸೀರೆ (ವಾಜಸಾ. ೬).

[ದೇ. ೮ ತಮಿ. ಪೊತಿ; ಮಲ. ಪೊತಿ, ಪೊತ್ತು, ಪುತ; ತುಳು. ಪೊದೆ, ಪೊದಿ, ಪೊದ್ದಿ, ಪೊದ್ದು; ಕೊಡ. ಪೊದ, ಪೊದಿ, ಪೊದೆ; ತೆಲು. ಪೊದುಗು, ಪೊದುವು]

**ಪೊದೆ₂, ಹೊದೆ₂** (ನಾ). ೧. ಬಾಣಗಳನ್ನಿಡುವ ಕೋಶ; ಮೂಡಿಗೆ; ಬತ್ತಳಿಕೆ: ಪದವಿಲ್ಲಂ ನನೆಯಂಬಿನ ಪೊದೆಯಂ ಒಡಿದಿರದ ಪದದೊಳಾ ನೋರ್ಡಿದೊಡಂ ಮದನಂಗಂ ಮಾನಿನಿ ದಶವದನಂಗಂ ರೂಪಭೇದ ಮೇನಾದಪುದೇ (ಕಂಠಾಪು. ೯-೦೬೬); ಪೊದೆಯೊಳಗಿಂದಮುರ್ಚುವೆಡೆಯಲ್ಲಿ ಸರಲ್ ದಿಟಮೊಂದು . . . ಇರ್ದಿರ್ದರಂ ನಡುವಲ್ಲಿ ಲಕ್ಕಮೆಂಬುದನೆನೆ ಬಿಲ್ಲಬಿನ್ನಣಮನಾ ರಣದೊಳ್ ಪೊಱಿದಂ ಯುವಾಧಿಪಂ (ಚಂದ್ರಪ್ರ. ೬-೬೬); ಬರಯಿಗಳನಿಸಲನಂಗಂಗರಲಂಬಿನ ಪೊದೆಯನಖಿಳವನದೇವತೆಯರ್ ವಿರಚಿಸಿ ನೀಡಲ್ ಬಂದಂತಿರಲೆಸೆವರ್ ಪುಷ್ಪಮಾಲಿಕಾಧಾರಿಣಿಯರ್ (ಧತ್ಯ. ೨-೬೯); ಕಿಲದೊಳಿಸಿದುಬಿನ ಪೊದೆಯ ಸಾರ್ಚಿ ನಿಲಿಸಿದ ಶರಾಸನದ (ರಾಜಶೇ. ೬-೦೦ ಪ). ೨. ಗಿಡಮರಗಳು ಒತ್ತಾಗಿರುವ ಸ್ಥಳ; ಹೊದರು; ಮೆಳೆ: ಮೆಯ್ಮುಱಿದು ಲಜ್ಜೆಯಂ ತೊಱಿದು ಪೊದೆಯೊಳಿರ್ದ ಪೆಣ್ಣರಡಿಯಂ ಕಂಡು ಕಾತರತನದಿಂ ಒಡಿದದಂ ನೆರೆಯಲ್ (ರರ್ಮಪ ೩-೯೩ ಪ); ಕೇಬೂತಂ ಪಾರಿತು ಪೊದೆಯಿಂದಿತ್ತ (ಅಪಕೀ. ೯೯-೬); ಕುಬ್ಜಕ, ಮಲ್ಲಿಗೆ, ಕುರಂಟಕ, ನವಮಾಲಿಕೆ ಮೊದಲಾದವುಗಳ ಪೊದೆಗಳಿದ್ದವು (ಪಾಪಶ.೩೬). ೩. ರಾಶಿ; ಹೊರೆ; ಗುಂಪು: ಕರವಾಳ ಕೂರ್ಪಂ ನೋಡಲೆಂದು ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ ಕೈಯಳವಿದಾರ ಕೈಯಳವಿಯೆನಲ್ ನೆಯ್ದಿಲ ಕಾವಿನ ಪೊದೆಯಂ ಪೊಯ್ದಂತೊರ್ಮೊದಲೆ ಪಱಿದುದಾ ವಂಶವನಂ (ಕಂಠಾಪು. ೯-೨೩); ಸುಮ್ಮಾನದಲಿ ತಲೆಗೆಲೆಯ ಪೊದೆಯೊಳು ಮೌನದಲಿ ಉರಗೇಂದ್ರನಿಪ್ಪನು ಬಲಿದ ನಿದ್ರೆಯಲಿ (ಶಳಕ. ೫-೨೬). ೪. (ಮನೆ ಮುಂತಾದುವುಗಳ) ಹೊದಿಕೆ; ಛಾವಣಿ: (೬). ೫. ಕಟ್ಟು; ಕಂತೆ; ಹೊರೆ: (೬). ೬. (ಅಲಂ) ಗೋಜು; ಸಿಕ್ಕು: ಈ ಪೊದೆಯನ್ನು ಬಿಡಿಸಿದರೆ ಹಿಂದೂಧರ್ಮದ ಮೂಲತತ್ವಗಳು ದೊರೆಯುತ್ತವೆ (ದಂಕಸು. ೯೬೪). **ಹೊದೆ₂**: ೧. "ಹೊದೆ_ಆಚ್ಛಾದನೇ, ಶರಕೋಶೇ ಚ (ಬತ್ತಳಿಕೆ)" (ಕವಿಪಾ); "ದೊಣೆ ಬತ್ತಳಿಕೆ ಮೂಡಿಗೆಯು ಮೆನಲ್ ಹೊದೆಯು" (ಶಬ್ದಮಂ. ೯೯); ಕಯ್ಯ[೦]ಬು ತವಲು ದೇವಂಣಗೆ ಬಿನ್ನಪಂಗೆಯ್ಯಲು ಅವ್ವನ ಹೊದೆಯಂ ಕಾರುಣ್ಯಗೆಯ್ಯಲು ಮಹಾಪ್ರಸಾದ ಎಂನುತ್ತೆ ಕಾಳಗಕ್ಕೆ ಹಱಿದು (ಪ್ರಕಂ. ೦೯೩೨, ೩೨-೩: ಸು. 1125); ಭೀಷ್ಮನಿತ್ತಲು . . . ಬಿಗಿದ ಹೊದೆಗಳ ಹಱಿದು

ಬಲ್ಲಿಂದುಗುಳಿಸಿದನಂಬುಗಳನು (ಕುಮಾ.೮. ೯-೭) : ಎಸುವ ಹೊದೆಯಿಂದೆ ತೆಗೆದೆಸುವ ಬೊಬ್ಬಿಱಿದು ತೊಟ್ಟೆಸುವ . . . ಚಾಪಕಲಾಪ್ರವೀಣರೆಬ್ಬಾಡಿದರ್ (ಕರಾಕು. ೪೦-೭). ೩. ದುಷ್ಕೃತಂಗಳ ಹೊದೆಯಂ ನೆಱೆ ಮುಂದು ಮಾಡಿ ಕೈವಿಡಿದೆಯುಂ . . . ತಿರ್ದುವ ಚದುರಂ ಬಲ್ಲವರೆ ಬಲ್ಲರ್ (ಕಸ್ತ್ರಕಂ. ೯-೬೩). ೪. ಹೊಱಗೆ ಹಾಕಿದ ಹಸಿಯ ತೊಗಲ ಹೊದೆಯ ಮಾಣದೊಱಲಿ ಕೂಗಿಡುವ ನಾನಾಪ್ರಾಣಿವರ್ಗಮು ಕೊಱೆವ ಕೊಚ್ಚುವ ತಱಿವ (ಹರಿಶ. ೧೧-೩೦). [ < ಪೊದ$_1$./ತವಿ. ಪುತ್ಯ, ಪೊತಿ, ಪೊತ್ಯ: ಮಲ. ಪುತ, ಪೊತಿ ; ತೆಲು. ಪೊದ, ಪೊದಿ ]

**ಪೊದೆಗಟ್ಟು** (ಕ್ರಿ). ಬತ್ತಳಿಕೆಯನ್ನು ರಚಿಸು : ಹೊಸ ಪೊ[ ಪಾಠಾಂ. ಹೊ]ದೆಗಟ್ಟುವಂಬುಗಳ ಕುಟ್ಟಿಯುನಾವರಿಪಾರ್ದ್ರಡಾಳಿವಂ ಪಸರಿಪ . . . ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರಪ್ರ. ೫-೩೪).

[ ಪೊದೆ$_2$ + ಕಟ್ಟು$_1$ ]

**ಪೊದೆಗೆದಱು**, ಹೊದೆಗೆದಱು (ಕ್ರಿ). (ದಟ್ಟವಾಗಿರುವುದನ್ನು) ವ್ಯಾಪಿಸುವಂತೆ ಮಾಡು.—ಎಲ್ಲೆಡೆಗೆ ಹರಡು : ಮಾಲೆವೂವಂ ನೆಗಱ ಸೊಗಯಿಸುಂ ನೀಱಿರೊಳ್ ಪುಷ್ಪಚಾಪಂ ಗುಱಿಯೆಸಂ ತೋಱಲಂಬಂ ಪೊದೆಗೆದಱಿದವೋಲ್ ಪುಷ್ಪಲಾವೀಕದಂಬಂ (ಕಂದಕಾ. ೦-೦೨೦) : ಮಾಲೆಗಾರ್ತಿಯರೆತ್ತಿದ ದೆಲೆವೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕೆದಱೆ (ಚಂದ್ರಪ್ರ. ೬-೪ ೫) ; ಪೊದೆಗೆದಱಿರ್ದ ಪೂಗಣೆಯ ಕೆಂಗಱಿಯಂತೆ . . . ಪೂತ ಚೂತದ ಕೆಱುಗೊಂಬಿನೊಳ್ ನಿಱಿದಳಿರ್ ಮೆಱೆದತ್ತು (ಅಜಿತಪು. ೬-೬೨). ಹೊದೆಗೆದಱು : ಸುಶರ್ಮ ಶಲ್ಯರು ಸರಳ ಹೊದೆಗೆದಱೆ ಮೊನೆಗಣೆಯನಳವಡಿಸೆ ಗುರು . . . ಸೇನಾವನಧಿ ಗರ್ಜಿಸಲಾಯ್ತು ಸಂಕುಲಸಮರಸೌರಂಭ (ಕುಮಾ.೮. ೫-೩) ; ದಾಣವ್ರಾತಪನು ಹೊದಗೆದಱೆ ಹೊಸ ಹೊಗರೆದ್ದನಡಿಗಡಿಗೆ (ಕುಮಾ.೪. ೦೩-೨೨).

[ಪೊದೆ$_2$ + ಕೆದಱು$_1$ (< ಕೆದಱ್$_1$)]

**ಪೊದೆದುಂಬು** (ಕ್ರಿ). (ಬಾಣಗಳು) ಬತ್ತಳಿಕೆಯಲ್ಲಿ ತುಂಬಿರು.–ಭರ್ತಿಯಾಗಿರು : ಸೆಕ್ಕಿದ ಖಂಡದಂ ಬಗಿದ ಬಿಲ್ ಪೊದೆದುಂಬಿದ ದೋಳಿಯಂಬು . . . ಬಾಸಿಗದಿಂ ಮೆಱೆದತ್ತು ಸಬ್ಬಿಗಳ್ (ಶಬರ. ೨-೯೩).

[ ಪೊದೆ$_2$ + ತುಂಬು$_1$ ]

**ಪೊದೆಯಿಸು**, ಪೊಚ್ಚು, ಪೊದಯಿಸು, ಪೊದಿಸು, ಪೊದೆಸು, ಹೊಚ್ಚು$_1$, ಹೊದಸು, ಹೊದಿಯಿಸು, ಹೊದಿಸಂ, ಹೊದುಸು, ಹೊದೆಸಂ, ಹೊದ್ದಿಸು$_2$ (ಕ್ರಿ). ೧. ಮುಚ್ಚು ; ಆಚ್ಛಾದಿಸು : "ಪೊದಯಿಸು—ಆಚ್ಛಾದನೇ" (ಶಬ್ದಮ) ; ಬಿಸರುಹದಳಂಗಳಿಂ ಪೊದೆಯಿಸಿರ್ದ ಹಿಮಗೃಹಮನವನಿಪಾಲಂ ಕಂಡಂ (ಕಾದಂಬ. ೨೦೯) ; ಪೊದೆಯಿಸಿದತ್ತೊ ಚಿತ್ರಪಟದಿಂ . . . ಎಂಬಿನಂ ತಳಿರ ಪೂವಿನ ತುಂಬಿಯ ಕಾಯ ಪಣ್ಣ ಬಣ್ಣದಿನೆಸೆದತ್ತು . . . ಬನಂ (ಜಗನ. ೦೦-೫೫) ; ಆ ವಿಷಯದೊಳೊಪ್ಪುವ ಕಳಮಾವಳಿ ನಳನಳಿಸಿ ಬೆಳೆದು ಪಸುರೇಱು ಲಸದ್ಭೂವನಿತೆಗೆ ಧಾತ್ರಂ ಪರಿಭಾವಿಸಿ ಪೊದೆಯಿಸಿದ ಹರಿತಪಟದಂತಿರ್ಕುಂ (ಗಿರಿಜ. ೨-೦೨). ೨. ಮುಸುಕು; ಕವಿ; ಆವರಿಸು : ಮುಕುಂದನ . . . ಹಸ್ತದ ಕಾಂಚನವಾರಿಯಂತ್ರಮಂಕದಱ ನಿವಿರ್ಕವೆತ್ತ ಘುಸೃಣೋದಕಧಾರೆ ನವಾರುಣಾಂಶುವೋಲ್ ಪೊದೆಯಿಸಿತಂಬುಜಾನನೆಯರೆಂಬ ನವಾಂಬುಜಿನೀಕದಂಬಮಂ (ಜಗನ. ೦೪-೦೦೬). ೩. ವ್ಯಾಪಿಸುವಂತೆ ಮಾಡು ; ಹರಡು : ಸುಗುಡುತನಮಂ ಪುದಿದ ಚತುರಂಗದತ್ತ ಚದುರಂ ಪೊದೆಯಿಸುತೆ ಕೊಯ್ಲೆವಿಂಡರಂ ಪಣೆದದಿಂ ಮಣಿಯಿಸುತ್ತೆ (ಹರಿಶಾ. ೯-೯೮).

**ಪೊಚ್ಚು** : ೧. ಗುರುಪಾದೋದಕದಿಂದಲೆರೆದು ವಸ್ತ್ರವ ಪೊಚ್ಚಿ ವರವಿಭೂತಿಯನು ಘಾಲದೊಳಿಟ್ಟು ಮುದದಿ (ಬ್ರಹ್ಮೋತ್ತರ. ೦೩೪-೨). **ಪೊದಯಿಸು** : ೧. ಪೆಱತೊಂದೆಡೆಯೊಳ್ ಸಹಕಾರರಸದಿಂ ತೊಯ್ದರನೇಱಲ ತಳಿರ್ಗಳಿಂ ಪೊದಯಿಸಿದ ಕುಳಿರ್ವ ಕಾವಣಂಗಳುಮಂ . . . ನೋಡುತ್ತಂ ಪೋಗೆ (ಕಾದಂಬ. ೨೦೪) ; ಪೊದಯಿಸುವಂತೆ ಚಿತ್ರಪಟದಿಂ ತನುವಂ ಬಹುರತ್ನಕಾಂತಿಗಳ್ ಪುದಿಯೆ ಲತಾಂಗಿ . . . ತಳೆದಳ್ ಪುಳಕಾಂಕುರಂಗಳಂ (ಪುಷ್ಪದಂ. ೪-೬೪) ; ಪೆರ್ಮರದ ನಟ್ಟೆಗೊಂಬಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳೆವಱಿಗಳ್ಗೆ ಕುಟ್ಟುಂಕನಿಕ್ಕಿ ಕಡುಗಂದಿತನದಿಂ ಕೋಡಗಱಿಯ ತುಱುಗಿರೊರ್ ಪೊದ[ಪಾಠಾಂ. ದೆ]ಯಿಸೆ (ಚಂದ್ರಪ್ರ. ೮-೪ ೫) ; ಸಪುರದಬಿಳಿದಂ ಬಿಗಿದುಡಿಸಿ ಬೆಳಗುವ ದುಕೂಲಮಂ ಪೊದಯಿಸಿ (ಶಂಕರ. ೦೦-೪೬). **ಪೊದಿಸು** : ೧. ಪರಿಮಳೋದಕದಿಂದೆ ಮಹಮಜ್ಜನಕ್ಕೆಱೆವ ವರದುಕೂಲಮನುಡಿಸಿ ಪೊದಿಸುತಂ (ತಿರುಕ. ರೇ. ೬-೨೦) : ಕೋಮಳಸಿತಪಕ್ಷಮಂ ಪೊದಿಸಿ ರಾಜಿಪ ಹಂಸೆಯ ಪುತ್ರಮೋಹಮಂ ಲಳನೆ ಸಮಂತು ಕಂಡು ಮಿಗೆ ಚಿಂತಿಸಿದಳ್ ಸುಕುಮಾರಲಾಭಮಂ (ಧರ್ಮ. ೦-೫೬) ; ವಾಯಸಪ್ರತತಿ ಗಱಿಗಳಂ ಪೊದಿಸಿ ಮಗ್ನರೊಳಿಟ್ಟು ಕೋಗಿಲೆಯ ಮಱಿಗಳಂ ಮೈಯೊಳ್ ಪುದುಗಿಕೊಂಡು ಮಱುಕದಿಂದೈದೆ ಪಾಲಿಸುತಿರ್ದುವು (ಕೃಷ್ಣಚಾ. ೨೮-೪). **ಪೊದೆಸು** : ೧. ಬಿಳಿಯ ಪಟ್ಟಾವಳಿಯ ಪೊಸ ಸಪುತಮಂ ಪೊದೆಸಿ (ತಿರುಕ. ರೇ. ೯೩-೯) ; ದುಗುಲವ ಪೊದೆಸುತ ನಿಱಿಯ ಸುಗಿದನು (ಶರಕ. ೪೦-೬೦). **ಹೊಚ್ಚು$_1$** : ೧. ಶರಪಂಜರವ ಖಳನೆಚ್ಚು ಶರದಲಿ ಕೈಟಭಾರಿಯ ಹೊಚ್ಚಿ ಬೊಬ್ಬಿರಿಯುತ್ತಲಿಂತೆಂದನು ಸರೋಷದಲಿ (ಕೋಗಿಸು. ೦೦-೩೯) ; ಮೈಮೇಲೆ ಮೆತ್ತಗಾಗಿ ಹೊದಕೆಯೊಂದನ್ನು ಹೊಚ್ಚಿ ತಾಯಿ ದೀಪವನ್ನಾರಿಸಿದಳು (ಕಥಾಪ. ೦೦೯) ; ಬಡವರಾದವರು ಮನೆಗಳಿಗೆ ಹುಲ್ಲು ಹೊಚ್ಚುತ್ತಾರೆ (ಕುಂದಾಯು. ೪-೦೦೮). ೨. ಬಚ್ಚಿದವು ಕವಚಮಂ ಕಟ್ಟಿದವು ಖಂಡವಂ . . . ಮೈಯೊಳಗೆ ಹೊಚ್ಚಿದವು ಹೊಗರಲಗು ಮಚ್ಚಿದವು ನೇಣಮಣೆಯನು (ಕೃಷ್ಣಾಭಾ. ೦೩-೦೯) ; ಮುಗಿಲ ಹೊಚ್ಚಿತು ಕಪ್ಪುಕಂಬಳಿಯ ಕತ್ತಲು (ಶಂಕು. ೦೪-೦೫). ೪. (ಕದ ಮುಂತಾದುವನ್ನು) ಮುಚ್ಚು ಆ ಉಷ್ಣದಿವಸದೊಂದಿರುಳು . . . ಪಡಿಯ ಹೊಚ್ಚಿದೊಡುಬ್ಬೆ ತಾಗುವುದೆಂದು ಮಡದಿಯೆಡದ ಕೋಳೂಳೊಱಗಿ ಬಡಗಾಳಿಗೆ ಮೈಯೊಡ್ಡಿ ನೃಪಾತ್ಮಜ ನಡುಸಿದ ನಿದ್ರೆಯೊಳಿರಲು (ಕೀರ್ತಿಸಂ. ೯-೩೬). **ಹೊದಸು** : ೨. ರೋಷಜ್ವಾಲೆ ಹೊದಸಿತು ವದನವನು ಕಣ್ಣಾಲಿ ಕಾಹೇಱಿದವು ಪಾರ್ಥಂಗೆ (ಕುಮಾ.೪. ೦೬-೦). **ಹೊದಿಯಿಸು** : ೧. ಭರದಿಂದ ಹೊದಿಯಿಸಲೊಡನಾ ಪೀತಾಂಬರವೆಳೆದಳಿರಂತಾಗೆ ಸುರಚಿರವಪ್ಪ ತಮಾಲಲತಿಕೆಯೆನೆ ಸುದತಿ ಕಣ್ಗೊಪ್ಪವಡೆದಳು (ಕೀರ್ತಿಸಂ. ೨೫-೦೬೯). **ಹೊದಿಸು** : ೧. ಕಂದನಂ ನೋಡುತ್ತ . . . ತಾಯಿ ಮೋಲ್ಸೆಱಗಿಂದ ಹೊದಿಸುತ ತೆಱೆವುತಂ ಹೊದಿಸುತ್ತ ತೆಱೆವುತ್ತ . . . ಸಲ್ಲಣೆಸುವಳು (ಜನಕ. ೦೫-೨೦) ; ಗುಡಿಲಂ ಹೊದಿಸಿ ಹಸಮಾಡುವ ಕಳನ ಕೆತ್ತುವ . . . ಕುಡಿಯರುಗಳೊಳಗೊಪ್ಪವಂ ಪಡೆಮುದು (ಸಮ್ಯಕ್ತ. ೦-೨೪) ; ಬಿಸಿನೀರಿಂದ ಮೊಯ್ದೊಳೆದು ಪಕ್ಕಿಯೊಳೊಱಗಿಸಿ ವಸ್ತ್ರದಿಂ ಮುಚ್ಚಿ ಹೊದಿಸಿ (ಕೋಹಕ. ೩೦-೪೬) ; ಆನೆಗಳಿಗೆ ಬಟ್ಟೆಯನ್ನು ಹೊದಿಸಿರುತ್ತಾರೆ (ಕೃಷಾಭ. II. ೦೩೬) ; ಹುಲ್ಲುಹೊದಿಸಿದರೆ ಹುಚ್ಚು ಹೋದೀತೇ ? (ಗಾದೆ). ೨. ಆದಿರ್ದ ಖಿಡುಗದ ಕಾಂತಿ ಸೂರ್ಯನ ಹೊದಿಸಿದುದು (ಕುಮಾ.ದ್ರೋ. ೦೨-೬) ; ಸರಳು ಗಗನವ ಹೊದಿಸಿದವು (ಕುಮಾ.೪. ೪-೩೨). ೫. ಆವೃತವಾಗು; ಮುಸುಕಲ್ಪಡು : ದಿಗುಜಾಲವೆಂಬಿನ ಹೊರಳಿಯಲಿ ಹೊದಿಸಿದುದೆನಲು ಕವಿದೆಚ್ಚರಾ ಪಾರ್ಥ (ಕುಮಾ.೪. ೨೦-೨೦). ೬. ಆವರಿಸುವಂತೆ ಮಾಡು; ಕವಿಯಿಸು : ಹಿಳುಕ ಹೊದಿಸಿದನಖಿಲದೆಸೆಗಳ ನಿಲುಕಲರಿದೆನೆ (ಕುಮಾ.ದ್ರೋ. ೦೩-೬೫) : ಪಂಚಪಾಂಡವರಡಸಿವರು ಹೊದಿಸಿದರು ಕಣೆಯಲಿ ರವಿಸುತನ ರಥವ (ಕುಮಾ.೪. ೦೩-೩೬). ೭. ಬಳಸು; ಸುತ್ತುವರಿ: ಆ ಕುತಪ್ರೀಹಪದಱೆಂ ತುದಿಗೆ ತಿರುಗಿಹುದಿಕ್ಷುವಿಕ್ಷುವ ಹೊದಿಸಿಹುದು ತಾ ಕ್ರೌಂಚದ್ವೀಪವದು

(ಸಂಧಿಶ. ೧೧-೮). **ಹೊದುಸು :** ೧. ಛತ್ರದ ಮನೆಯ ಹೊದುಸುವದಕ್ಕೆ ೬ (ಎಕ. VII, ಶಿವಮೊ. ೭೦-೭೨ : 1431). **ಹೊದೆಸು :** ೧. ಕೋಪಾ ಲಂಗಿಯರಿಗೆ ರಾಯ ತಾ ಹೊದೆದಿದ್ದ ಕ್ಷೌಮವಸ್ತ್ರವ ಹೊದೆಸಿದನು (ಭಕ. ೫೦-೧೧೯). ೨. ಹೃದಯ ಕಳವಳಿಸಿದವು ಕಂಗಳ ಹೊದೆಸಿದವು ನಯನಾಂಬು (ಕೊಕರಾ. ೨-೨-೨೮). **ಹೊದ್ದಿಸು$_2$ :** ೧. ಜಪ್ಪೆಯಾಹಾರವ ಜಂಗಮಾವನೂಡಿಸುವ [ತ್ವ]ಚದಾಹಾರವ ಜಂಗಮಕ್ಕೆ ಹೊದ್ದಿಸುವ (ಬಸವ. ೯೨೯) ; ಮಂಚದ ಮೇಲೆ ಮಲಗಿಸಿ ಹೊದ್ದಿಸಿ ಬಾಗಿಲು ಹಾಕಿಕೊಂಡು ಬಾ (ಕಂಗಾಳಿ. ೨೩೯). [ಪೊದೆ$_1$ + — ಇಸು$_3$]

**ಪೊದೆವಡು** (ಕ್ರಿ). ಹೊದಿಸಲ್ಪಡು : ಪೊದೆವಟ್ಟ ಪಟ್ಟಾವಳಿಗಳಾನೆ ದೊವರೆಸೆವ ಪುಲಿಸಮ್ಮವು (ತೀರಪು. ೧-೫೦). [ಪೊದೆ$_1$ + ಪಡು$_1$]

**ಪೊದೆಸೀರೆ** (ನಾ). ವಸ್ತ್ರದ ಹೊದೆಯುವ ಭಾಗ ; ಮೇಲುಸೆರಗು : ಅತಿವೇಗದೆ ಸಾರೆವಂದು ನೀರೇರುಹನೇತ್ರನಿರ್ದಿರವನೀಕ್ಷಿಸಿ ಗದ್ಗದ ಕಂಠನಾಗಿ ಕಣ್ಣೀರೆತ್ತ[ರೂಗೆ]ದುಕ್ಕೆ ಕಣ್ಣಡಗಳಿಂ ಪೊದೆಸೀರೆಯಿನೊತ್ತಿ ತೊಂದು ಕಾಸರವನೆಯ್ದಿದರ್ (ಪಂಪಾಶ. ೦೬-೫೪). [ಪೊದೆ$_1$ + ಸೀರೆ$_2$]

**ಪೊದೆಸು** ‘ ಪೊದೆಯಿಸು ’ ನೋ.

**ಪೊದ್ದ** ‘ ಪೊದ್ದು ’ ಪರಾ.

**ಪೊದ್ದಿಗೆ** ‘ ಪೊರ್ದಿಗೆ ’ ನೋ.

**ಪೊದ್ದಿಸು** ‘ ಪೊರ್ದಿಸು ’ ನೋ.

**ಪೊದ್ದು$_1$** ‘ ಪೊರ್ದು ’ ನೋ.

**ಪೊದ್ದು$_2$** ‘ ಪೊದೆ$_1$ ’ ಪರಾ.

**ಪೊನ್**, ಪೊಂ, ಪೊನ್ನು, ಹೊಂ, ಹೊನ್, ಹೊನ್ನು$_1$ (ನಾ). ೧. ಕಬ್ಬಿಣ, ತಾಮ್ರ, ಚಿನ್ನ ಮುಂತಾದ ಖನಿಜ ; ಲೋಹ : ‘ ಕರ್ವೊನ್ ’, ‘ ಚೆಂಬೊನ್ ’ ಪರಾ. ೨. ಬಂಗಾರ ; ಚಿನ್ನ ; ಸ್ವರ್ಣ : “ ಪೊನ್ ಸ್ವರ್ಣಂ ” (ಕರ್ಣಾಟಶ. ೨) ; ಪಿರಿಯ ಪೊನ್ನ ತಳಿಗೆಯು ಮುಚ್ಚುಮುಪ್ಪಡ್ಡವಣಿಗೆಯುಮನಿಟ್ಟು . . . ತಾನೆ ಬಡ್ಡಿಸಲ್ (ವಡ್ಡಾರಾ. ೭೬-೧೨) : ಇ[ದ] ಕಾದುಡಿದೋ[ಂ]ಗೆ ವಾರಣಾಸಿಯೊಳ್ಸಾಸಿರಕವಿಲೆಯ[ಂ] ಕೋಡುಂ ಕೊಳಗುಮಂ ಪೊನ್ನೊಳ್ಕಟ್ಟಿಸಿ ದಾನಂಗೊಟ್ಟ [ಫ]ಲಮಕ್ಕು (ಸೌಇಇ. XI–I, ೩೯-೦೯ ; 926) ; ಗಗನಗಜಕ್ಕಿಕ್ಕಿದ ಪೊನ್ನ ಗುಂಟಿಯೆರಡೆ ಸಲಮಂಬರಾಂಭೋನಿಧಿಯೊಳ್ ನೆಗೆದುರಿವೌರ್ವಾನಲದುರ್ಬುಗಳೆನಲುಂ ನೆಗೆದುವಹಿಮಹಿಮಕರಬಿಂಬಂ (ಆದಿಪು. ೬-೫೨) : ಉಡಕಂ . . . ಪೊನ್ನ ಬಣ್ಣದ ಮಣ್ಣೊಳ್ ಪರಲಾಗಿ ಕಾಪೆಸೆವ ಮಣ್ಣೊಳ್ ಕೈಪೆಯಪಾಗಿರ್ಪಂ (ಲೋಕೋಪ. ೩-೮) ; ಪೊನ್ನ ನೇಗಿಲಲುತ್ತು ಗುಳ್ಳದ ಬೀಜವಂ ನೆಟ್ಟಿ ಬಿತ್ತುವಂದದಿ . . . ಲಿಂಗಪರಾಙ್ಮುಖರನಾಗಳು ಭಜಿಸಿ ಭವಬಂಧನಕ್ಕೊಳಗಾಗದೆಂಶಿಹನು (ಬಸವಪು. ೬೦-೫೦); ಮಿಸುಪ ಪವಳದ ಪುತ್ಥಳಿ ಪೊನ್ನ ಪೊವಕ ರಂಜಿಸುತಿಹ ಚಾವಡಿಯ ಚೌರಸದೆಡೆಯೊಳು (ಕೃಷ್ಣಾ. ೦೬-೨೩). ೩. (ಹಿಂದೆ ಚಲಾವಣೆಯಲ್ಲಿದ್ದ) ಹತ್ತು ಹಣ ಬೆಲೆಯುಳ್ಳ ಒಂದು ಚಿನ್ನದ ನಾಣ್ಯ ; ಗದ್ಯಾಣ : “ಪತ್ತುಂ ಪಣದಿಂ ಪೊನ್ನಕ್ಕುಂ ” (ವ್ಯವಹಾ. ೯-೨೩) ; ಈ ಪೊನ್ನೆನ್ದು ಕೊಡಗೆಗಾಗಿ ಅಳಿದೊನ್ . . . ಪಞ್ಚಮಹಾಪಾತಕವಕ್ಕು (ಎಕ. III, ತಿರುಮ. ೧೦೩-೬; ಕ್ರಿ. 750); ಕವಿವರರುಂ ಪೆಂಡವಾಸದೊಳ್ಬೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತುಂ ದವ್ಯಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತಮೊಯ್ಯುದಂ . . . ಕಂಡು (ವಡ್ಡಾರಾ. ೯೯-೨); ನಿತ್ಯದಾನಕ್ಕೆ ದೇಹಸಬಳದ ಪದಿನೆಂಟುಕೋಟಿ ಪೊನ್ನುಮನಿತ್ತು (ಕಂಕಥಾ. ೨-೯೯ ಪ). ೪. ಸಂಪತ್ತು ; ಐಶ್ವರ್ಯ ; ನಿಧಿ : ಅರಸರ ದುಣ್ಣಿಗೆವೆರಸಿಟ್ಟ ಪೊನ್ನ ಕಿಯ್ದಿಚ್ಚಿಯಪ್ಪಂಗೊಪ್ಪಿಸಿಮುನ್ದ ತನ್ದ (ಎಕ. III, ತಂಜಾವ. ೩೬-೦೩; ಕ್ರಿ. ೯೦೦); ಸಿಡಿಲೊಡೆದವೊಲಟ್ಟ ಮುಟ್ಟ ಕಡಿದಿಕ್ಕಿದುದಾದೆಡರಂ ನಿರಂತರಂ ಕಡಿಕಡಿದಿತ್ತ ಪೊನ್ನ[ಪಾಠಾಂ. ನ್ನೆ] ಬಾಧಮಾಗಧವಂದಿಜನಕ್ಕೆ ಕೊಟ್ಟ ಕೋ[ವ]ಡದಿದ ಬೇಡಿ[ವೋ]ಡಿಮಿದು ಚಾಗದ ಬೀರದ ಮಾತು ಕರ್ಣನಾ (ಪಂಪಭಾ. ೧-೯೯): ಅರಸನುಂ . . . ಪೂಜಿಸಿ ಬಂಡಾರದ ಪೊನ್ನೆಲ್ಲವುಂ ಮುಂದೆ ರಾಸಿಮಾಡುವುದುಂ (ಧರ್ಮಾಮೃ. ೩-೨೦೫); ನಿನ್ನ ನೀನರಿ ಸಾಕು ಮಾಯೆಯ ಗನ್ನಗತಕವ ಗೆಲುವೆ ಕನಸಿನ ಪೊನ್ನ ಕಾಣದೆ ದುಃಖಪಡುವರೆ (ಕುಮಾರರಾ. ೭-೨೮). ೫. ಹಣ ; ಧನ ; ದುಡ್ಡು : ಈತಂಗೆ ಪೊಲಿಗೆ ನಾಡಿಲ್ಲೊಳಗೆ ಭಂಡಾರಮಿಲ್ಲೀತಂಗೆ ಪೊನ್ನೆತ್ತಣಿಂ ಬರ್ಪುದಿದನಾರಯ್ವಂ (ಧರ್ಮಾಮೃ. ೨-೧೦೬). ೬. (ಚಿನ್ನದ) ಒಡವೆ ; ಆಭರಣ : ತೊಟ್ಟ ಪೊನ್, ಡಿಬ್ಬನಾದ ಮಿಡಿದು, ಪೀಲ್ ವಾಯ್ದು ಪೊನಲಿಟ್ಟು ಪರಿದು . . . ಮಲೆದನ್ (ಅಂತಿಗೂ. ೭-೧೧೧). ೭. ಚಿನ್ನದ ಬಣ್ಣ ; ಹೊಂಬಣ್ಣ ; ಹಳದಿಬಣ್ಣ : ‘ ಪೊಂದಳಿರ್ ’, ‘ ಪೊನ್ನೀರ್ ’ ಪರಾ. **ಪೊಂ :** ೨. ಅರಸುಮಗಂ ಗಡ ಕಲಿ ಗಡ ಪಿರಿದೀವಂ ಗಡ ಬಟ್ಟಿಕ್ಕ ಜೈನಂ ಗಡೆನಲ್ದರಣಿಪತಿ ಕೀರ್ತಿದೇವಂ ನಿರುತಂ ಪೊಂ ಕಮ್ಮಿತಾದುದೆನಿಸಿದನಿಳೆಯೊಳ್ (ಕವಿತಾ. ೧-೪೭). ೩. ಕೋಟಿ ಪೊಂಗೆ ಘಂಟೆಯಲುಗುವ ಕಿಙಿಕಳಬೊಜಂಗರುವುಂ . . . ನೋಡಿ (ಕಂಕಥಾ. ೯-೮೭ ಪ); ಬುಧರಿಗೆ ಸಕಲರಿಗೆ ಪೊಂಗಳನು ಭೂಷಣವಸ್ತ್ರ ರತ್ನವನೊಲಿದು ದಾನವ ಮಾಡಿದನು ಮುಮುಕಾರಭೂಪಾಲ (ಕ್ರಶಲಂ. ೩-೧೨). ೪. ಪೊಂಗೆಬಿಗುವ ದೀಪವರ್ತಿ ಮಣ್ಣಬಿಗುಗುಮ (ಕವಿತಾ. ೯-೨೩). **ಪೊನ್ನು :** ೩. ದಶಪಣದಿಂದಂ ಪೊನ್ನುವೊಂದು ತಪ್ಪದು (ವ್ಯವಹಾ. ಅಮೃಂಂರ. ೮-೩೮). ೫. ‘ ಪೊಂಬಡೆ ’ ಪರಾ. ೭. ‘ ಪೊಂಗೇದಗೆ ’, ‘ ಪೊಂಬುಲಿ ’ ಪರಾ. ೮. ಶ್ರೇಷ್ಠವಾದುದು ; ಅತ್ಯುತ್ತಮವಾದುದು : ‘ ಪೊಂಬಸಿಱು ’ ಪರಾ. **ಹೊಂ :** ೨. ‘ ಹೊಂಗಂಟೆ ’, ‘ ಹೊಂಗಡಗ ’ ಪರಾ. ೩. ಅಕ್ಕಸಾಲೆ ನಾಗೋಜಂ ಹೊಂಗೆ ವೀಸ × × × [ಲೆ]ಕ್ಕದಿಂ ಕೊಟ್ಟ ಪವಣಾಯಮುನಾ ಕೊತ್ತಳಿಗ [ಮಾ]ಡಿಸಿದ ಬಸದಿ ದೇವಾಲ್ಯಕ್ಕೆ . . . ಧಾರಾಪೂರ್ವಕಂ ಮಾಡಿಕೊಟ್ಟ ದಂಡಾಯ ಹೊಂಗೆ ವೀಸ ಲೆಕ್ಕ . . . ಪಚ್ಚುಕುಡುವುದು (ಕೊಂಡ್ಲುಕಾ. ೩೯-೦೩ ; 1153) : ಪಿಂಗದಾಸ್ಥಾನದಲ್ಲಿ ವಿಸುನಿಯ ಹೊಂಗಳೊಡನೊಡ ನುಕ್ಕಿ ಹೊಱವಡಲಂಗಣದಲದ್ಭುತರಸಂ ಮಿಗೆ ಮೂಡುತ್ತಿರೆ (ಬಸವ. ೨೩-೩೫): ನೋಟ ಸವಿಸುಖಿಕೆ ಕೋಟಿ ಹೊಂ ಬೆಲೆಯಲ್ಲ ಕೂಟಕೆ ನೋಟವನು ಸಾರೆ ವ್ಯಸನಕ್ಕೆ ಬೇಟವೆ ಮೊದಲು (ಸರ್ವಜ್ಞ. ೧೬೯೧). ೭. ‘ಹೊಂಗಾಜು’, ‘ಹೊಂಗೇದಗೆ’ ಪರಾ. **ಹೊನ್ :** ೨. ‘‘ಹೇಮ, ಸ್ವರ್ಣಂ . . . ಕರ್ಬುರಂ, ತಪನೀಯಂ–ಈ ೨೫ ಹೊನ್ (ಪೊನ್)” (ಹಲಾಯು. ೨೯-೦೯): ಸಹಸ್ರಕವಿಲೆಯುಂ ಕೋಡುವಂ ಕೊಳಗುವಂ [ಹೊನ್ನ] ಲುಂ ಬೆಳ್ಳಿಯು(ಂ)ಲುಂ ಕಟ್ಟಿಸಿ (ಸೌಇಇ. XI–i, ೬೮-೦೯; 1033); ಕವಡಿಕೆಯುಂ ಕಾಚುಂ ಸಲ್ಲುಗುಮೆ ಹೊನ್ನವೊಲೆಲ್ಲಿಯುಮಾದೊಡಂ (ಕವಿತಾ. ೩-೦೨): ಧರೆಯಱಿಯೆ ಹೊನ್ನ ಮೇಯ್ಮಾಂತಿರುತಿರ್ದುಂ ಲಜ್ಜೆಯಿಲ್ಲ ತನಗೆಂದು ಕರಂ ಸುರುಚಿರಧವಳಿಮದಿಂ ಸುರಗಿರಿಯುಂ ಹಿಮಸಗದ ಚೆಲ್ವ ನಗದೇಕಿರ್ಪುಂ (ಗಂಕ. ೧-೫೭). ೩. ಕೊಠಾರದ ದಿವಾಕರದಂಡನಾಯಕರು ತಮ್ಮ ಕೈಯ ಹೊನ್ನ ಕೊಟ್ಟು (ಇಇ. IV, ೨೭೭-೮೭; 1154). ೭. ‘ಹೊಂದಾವರೆ’ ಪರಾ. ೮. ‘ಹೊನ್ನುಡಿ’ ಪರಾ. **ಹೊನ್ನು$_1$ :** ೨. “ಗೈರಿಕಂ ಕರ್ಬುರಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕು” (ಮಂಗರಾ. ೩೦-೯); ಗಿರಿಯ ಮುಖ್ಯದ ಮಿಂಚುಬುಳುವಿನ ಹೊರಳಿಯಂತಿರೆ ಹೊನ್ನ ಬರಹದ ಸರಳು ಮೆಱೆದವು (ಕುಮಾರರಾ. ೩-೨೮); ಹೊನ್ನಿನ ಹೊಳೆವ ಕಠಾರಿಯ ಮೊನೆಮೊಳೆ ಬೆನ್ನೊಳು ತಲೆದೋಱಿಸಲು (ಮೋಹತ. ೧೨ ೬೮): ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣಜಲವ ಕೊಂಡು . . . ಕನ್ನಿಕೆಯರು ರಾಜಿಸುವರು (ಕಂಪಂ. ೩-೫೫). ೩. ಈ ಗೂಳಿಯು ಕೊಂದ ಪಾತಕಕ್ಕೆ

ಹದಿನೆಂಟು ಲಕ್ಷ ಹೊನ್ನಿನಲ್ಲಿ ಗೂಳಿಯ ಮಾಡಿ . . . ಕೊಟ್ಟಲ್ಲಿ ಈ ಪಾಪ ಹೋಹುದೇ (ಅವತಂ. ೦೫೭–೬೨೦); ಪೂರ್ವ್ವಾಯವ ಪೂರ್ವ್ವಾಯದಿಂ ಬಹಾಯ ಪೊಂನು ಸಹಿತವಾಗಿ . . . ತಾಮ್ರಶಾಸನಮಂ ಕೊಟ್ಟರು (ಮೈಕಂ. ೦೧೯೦, ೦-೬೨ ; 13ಶತಮಾ ಶಕ ೧); ತಾಳಜಂಘನು . . . ಹೊನ್ನ ನೊಂದನು ಭೂಮಿದೇವಿಯ ಕನ್ನೆಯಲಿ ತಾನಿಡದೆ ಭೂಸುರರುನ್ನತಿಯನೆ ಬಯಸುತಿಪ್ಪನು (ಸಂಪೆ. ೨೫-೩೬) ; ಆಲಕಟ್ಟಲಿಗೆ ಬರಸಿ ಕೊಟ್ಟಹ ಪ್ರಮಾಣ ರೇಖೆ ೧೫೫೫ ಹೊಂನಿಗೆ (ಎಕ. VII, ಶಿವಮೊ. ೭೦-೨೭ ; 1431). ೪. ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು ಎಂದು ನೆನೆನೆನೆದು (ಸುಶಾರೀ. ೫. ೦೧-೩೦); ಹೊನ್ನುಳ್ಳ ಹೊರೆಯರುತ್ತಮರು (ಭೂಕಂತ. ೦-೦೧೯-೪); ಮಣ್ಣು ಬಿಟ್ಟವ ದೈವ ಹೊನ್ನು ಬಿಟ್ಟವ ದೈವ (ಸರ್ವಜ್ಞ. ೦೨೬೯). ೫. ಮನೆಯಲ್ಲಿ ಮಂದಿ ಬಹಳ ಹೊನ್ನಿನ ಪೆಟ್ಟ ಘನವೆಂದು (ಕಂಶಿವ. ೬-೦೧೪). ೬. 'ಹೊನ್ನೀರು' ಪರಾ. ೮. 'ಹೊನ್ನುನಡೆ', 'ಹೊನ್ನುನುಡಿ' ಪರಾ. ೯. ಪ್ರೀತಿಪಾತ್ರರಾದವರನ್ನು ಮುದ್ದಿನಿಂದ ಕರೆಯುವ ಮಾತು : ಪುಲ್ಲಶರಾತ್ಮಸಂಭವನ ಕಣ್ಗೆಸಮದು ಹೊಲ್ಲೆಹ ವ್ಯಾಗವೆನ್ನ ಹೊನ್ನೆ (ಶೋಚಕ. ೦೧-೩೩). 'ಚಿನ್ನ₁' ಪರಾ.

**ಪೊನ್ನ ಪೂ, ಹೊನ್ನ ಹೂವು** = ಹೂವಿನ ಆಕಾರದಲ್ಲಿ ಚಿನ್ನದಿಂದ ಮಾಡುವ ಒಂದು ಬಗೆಯ ಕರ್ಣಾಭರಣ : ಆ ಕಿವಿಗಳಲಿ ಪೊನ್ನಪೂ [ಪಾಠಾಂ. ಹೊನ್ನ ಹೂ]ಗಳನಾ ಕಮಳಲೋಚನೆಗೆ ಕೀಲಿಸಲು (ಐಕಕ. ೪-೩೬); ಚೆನ್ನಾಗಿ ಆಲಿಸು ಚೆಲ್ವದರಿದ ನಿನ್ನ ಕರ್ಣಾಂತರದಲಿ ಮೆರೆವ ಹೊನ್ನ ಹೂವಿಗೆ ಪರಿಮಳ ಬರೆ ಪೇಳುವೆ ಬನ್ನಣೆಗಾರ್ತಿ ಚಿತ್ಸ್ಯಸು (ಶೋಚಕ. ೨೯-೨); ವಾಲೆ ಮೂಗುತಿ ಹೊನ್ನ ಹೂವು (ಶರಾಕ್ಷ. ೦೦-೩). 'ಚಿನ್ನ ಪೂ' ಪರಾ. **ಪೊನ್ನ ಬೆಟ್ಟು** = ಚಿನ್ನದ ಪರ್ವತ; ಮೇರು : ಪೊನ್ನ ಬೆಟ್ಟು ಕೈಯಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಲ್ಯಾ. ೦೩೩). **ಪೊನ್ನ ಮಟೆ, ಹೊನ್ನ ಮಳೆ** = ಚಿನ್ನದ ಮಳೆ ; ಸುವರ್ಣವೃಷ್ಟಿ : ವಸುಮತಿಪೆಸರನ್ವರ್ಥಂ ವಸುಧೆಗನಲ್ಪಟೆದು ಪೊನ್ನ ಮಟೆಯಂ ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚಾಲೋಪನಯನಮಹೋತ್ಸವಮಾ (ಶಂರಾಷಾ. ೩-೦೧೨) ; ದಾಸನಂತೆ ತವಸಿಥಿಯ ಬೇಡುವನಲ್ಲ ಚೋಳನಂತೆ ಹೊನ್ನ ಮಳೆಯ ಕರೆಸೆಂಬವನಲ್ಲ (ಬಸವ. ೬೭೦). **ಪೊನ್ನ ಮೈಯವನು** = ಹಿರಣ್ಯಗರ್ಭ; ಬ್ರಹ್ಮ : ಪೊನ್ನ ಮೈಯವನು ನಮ್ಮಿಬ್ಬರಿಗೆ ಪೂರ್ವಾನುಕೂಲಗೈದು ಸೃಜಿಸಲು (ಶಶಿಪೆ. ೨೫-೦೦). **ಪೊನ್ನರ್ಧ** = ಗದ್ಯಾಣದ ಅರ್ಧಭಾಗ : "ಭರಣಂ = ಪೊನ್ನರ್ಧಂ" (ಅಕಕ್ಷ. ೬೩). **ಪೊನ್ನವಣ, ಹೊನ್ನವಣ** = ಚಿನ್ನದ ಒಂದು ಬಗೆಯ ನಾಣ್ಯ : ಗಳಂತಿಗೆಯಲು ಪುಟ್ಟಿದಾಯ ದೊಳಗೆ ಲೊಕ್ಕಿಯು ನವಿಲೂವಾಗಿ ಪೊನ್ನವಣ ಚಿ(೦)ನ್ನವಣಾಯ್ದು ಕಳೆದು (ಸೌಇಇ. IX-1. ೦೬೯-೨೮; 1098); ದೀವಿಗೆಗೆ ಗಾಣ ಒಂದು ಅಶೇಷಪರ ಹೊನ್ನವಣ ಹೇಱಿಂಗೆ ೧೦೦ ಎಲೆಯಂ ಬಿಟ್ಟರು (ಕಇಇ. ೧೩-೬೦-೦೭; 11 ಶತಮಾ ಶಕ). **ಪೊನ್ನುಳ್ಳವಂ, ಹೊನ್ನುಳ್ಳವಂ** = ಧನಿಕ : ಪೊನ್ನುಳ್ಳವನೆ ಕುಲೀನಂ ಚಿನ್ನಂ ಕಲಿ ಸತ್ಯವಾದಿಯೆನಿಸುಗುಂ (ಕಾವ್ಯಾಶ. ೬೨); "ಧನವಾನ್, ಅಸ್ತಿವಾನ್–ಈ ೨ ಹೊನ್ನುಳ್ಳವಂ" (ಕರಾಟಾ. ೬೦-೨೦೯). **ಹೊನ್ನ ಕನಸು** = ಹೊಂಗನಸು ; ಸುಂದರವಾದ ಕಲ್ಪನೆ : ಗುರು ದೇವನ ಹೊನ್ನ ಕನಸನ್ನು ಹುಡಿಗುಟ್ಟಿ . . . ಮೆರೆಯುತ್ತಿರುವ ನೀನು ಪರಮಪಾತಕಿ (ಶಂಗಳ. ೪೨). **ಹೊನ್ನುತಾ ಗುಬ್ಬಿಯಾಟ** = ಕೈಯ ಬೆರಳುಗಳನ್ನು ಮುಚ್ಚಿ, ಬಿಡುವ ಆಟ; ಯಾರಾದರೂ ಏನಾದರೂ ಕೊಟ್ಟರೆ ಅದನ್ನು ಅಂಗೈಯಲ್ಲಿ ಹಿಡಿದುಕೊಳ್ಳುವ ರೀತಿ ಕೈಬೆರಳು ಗಳನ್ನು ಚಲಿಸುವ ಆಟ ; ಐ ತಾ ತಾ ಗುಬ್ಬಿ, ಹೊನ್ನ ತಾ ಗುಬ್ಬಿ, ರನ್ನ ತಾ ಗುಬ್ಬಿ, ತಾ ತಾ ಗುಬ್ಬಿ, ಚಿನ್ನ ತಾ ಗುಬ್ಬಿ, ಹೊನ್ನ ತಾ ಗುಬ್ಬಿ, ತಾ ತಾ ಗುಬ್ಬಿ–ಎಂಬುದು ಮಗುವನ್ನು ಆಡಿಸುವಾಗ ಹೇಳುವ ಮಾತುಗಳು. ಗುಬ್ಬಚ್ಚಿಯು ಚಿನ್ನವನ್ನು ತಂದುಕೊಡ ಬೇಕೆಂಬುದನ್ನು ತಿಳಿಸುವ ಆಟ : ಕೈಸನ್ನೆಯಿಂದಾ ಮುಕ್ತಿಬಾಲೆಯಂ ಕೆಳೆತನಕೆ ಕರೆವಂತೆ ಹೊನ್ನ ತಾ ಗುಬ್ಬಿಯಾಟಂಗಳಾಡಿ (ಶಂಕೃ. ೫-೩೯). **ಹೊನ್ನ ದಾರ** = ಚಿನ್ನದ ಒಡ್ಯಾಣ; ಕಾಂಚೀದಾಮ : ಹೊನ್ನ ದಾರ ಉತ್ತಮ ಪಿಸುನಿಯ ಗಂಟೆಸರಗಳಿಂದ ಮತ್ತೇಭಯಾನೆಯೊಪ್ಪಿದಳು (ಶಂಪಂ. ೯-೭೦). **ಹೊನ್ನ ಹುಳು, ಹೊನ್ನೆಹುಳ** = ಮಿಂಚುಹುಳು ; ಮಿಣಾಕುಹುಳು : ಹೊನ್ನ ಹುಳು[ಪಾಠಾಂ. ಳ]ವ ಕಂಡು ನರಿ ತನ್ನ ಬಾಲವ ಹುಣ್ಣು ಮಾಡಿಕೊಂಡರೆ ಹೋಲಬಹುದೆ (ಬಸವ. ೨೬೭) ; ಹೊನ್ನೆ ಹುಳಗಳು ಹಾರಾಡುತ್ತಿದ್ದಂತೆ ಕಾಣುವವು (ಮುಂಂಬಯಿ. ೬-೦೩೪) ; ಗಿಡ ಗಂಟಿ ಮೈಮನಕೆ ಹೊನ್ನೆಹುಳಗಳ ಮಿಣುಕು ಚಲಿಸುತಿಹ ದೀಪಾವಳಿ (ಕಂಮು. ೪೦-೦೦) ; ಹೊನ್ನೆಹುಳ ! ಹೊನ್ನೆಹುಳ ! ಬೆಳಕೇಕೆ ? ನಿನ್ನ ಬೆಳಕೇಕೆ ? (ಕಕೃಕ. ೬೩).

[ದೇ.॥ ತಮಿ. ಮಲ. ಪೊನ್ ; ತುಳು. ಪೊನ್ನು ; ಕೊಡ. ಪೊನ್ನ್ ; ತೆಲು. ಪೊನ್ನು, ಹೊನ್ನು, ಹೊಂ]

**ಪೊನಲ್**, ಪೊನಲು, ಹೊನಲ್, ಹೊನಲಂ (ನಾ). ೧. (ನದಿಯ) ಪ್ರವಾಹ ; ನೀರೋಟ : ಪರಚಕ್ರಭೂಪರಟ್ಟಿದ ಕರಿಗಳ್ಪಿಡುತಪ್ಪ ಮದದ ಪೊನಲಿಂದೆತ್ತಂ . . . ಕೆಸಱಕ್ಕುಂ (ಕಂಂ. ೩-೦೬೨) ; ಕಡಲ್ ಕಡಲಂ ಮುಟ್ಟಿ ತರಳ್ದ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಶಂಕಕ. ೦೬-೯೦) : ಎಸೆವುದು ಪಳಿತ್ರಯಂಗಳನೆಸೆವಮಿಯಳ ತೆಳ್ಪಿಸಿಟ್ . . . ತೆರೆಮಸಗಿದ ಲಾವಣ್ಯರಸದ ಪೊನಲೆಂಬಿನೆಗಂ (ಮಲ್ಲಿಕೃ. ೩-೬೬) ; ಪಱದು ಗುವ ಕರ್ಬುಗಳ ಕನಿರಸದ ಪೊನಲಿಂದೆ ನೆಱೆಯೆ ಬೆಳೆದಾವು ಪುರದ ಕಳಮಾದಿ ನಯದಿಂದೆ (ಶಂಶಿ. ೯-೦೯). **ಪೊನಲು** : ೧. ಪನ್ನೀರ ಪೊನಲೇ ಪ್ರವಾಹ ಸುದತಿಯರ ಏಡೆಗಣ್ಣ ಬೆಳಗು ಕುಡಿವಿಂಚು (ಶಾಂಂದಕೃ. ೦೫-೩) ; ಅಲರ್ಗುಡಿವೆರಸಿ ನಲವಿನಿಂದ ಪರಿವ ಪರಿಕಾಲ್ಗಳ ಪೊನಲಲ್ಲಿ ಕುಂಕುಮರಸದಿರವಿನಂತಿಹುದು ನೋಳ್ಪರಿಗೆ (ಶಂಚಾಂ. ೨-೨೫). **ಹೊನಲ್** : ೧. "ಹೂರಮೆಂದು ಹೊನಲ್" (ಕಕಮ. ೬೦-೫೬೪) ; "ಹೂರಮೆನಲ್ಕದುವೆ ಹೊನಲಂಕುಕ್ಕುಂ" (ಕಂಕಂ. ೨೩೯). **ಹೊನಲು** : ೧. ವೇದವನೋದಿದ ವಿಪ್ರರು ಹೊನಲ[ಪಾಠಾಂ. ರ]ಲ್ಲಿ ಹೋದ ಕೇಡ ನೋಡಿರೇ (ಬಸವ. ೫೬೭) ; ಉಣ್ಮುವ ಶಿವಾನಂದರಸದ ಹೊನಲೊಳ ಗದ್ದು ಈಸಾಡಿ (ಬಸವ. ೩-೦೧೬) ; ಎರಡು ಗೂಳಿಗಳಲ್ಲಿ ತಮ್ಮೊಳಗುರ ವಣಿಸಿ . . . ಕಾದುತ್ತಿರಲು ನೆತ್ತರ ಹೊನಲು ಪಂಪುತಿರೆ (ಬಸವ. ೬೨-೨೦); ಕಡುಹಿನ ಕಾಳಕೂಟದ ನದಿಗೆ ನಂಜಿನ ಹೊನಲು ಬೆರಸಿದರೆ ಪಾಳೆಯವೆ (ಕುಮ್ಮಾಕ. ೦೧-೬೦). ೨. ತೊರೆ ; ಹೊಳೆ : ಹೊನಲು ನೂರೀ ಬಾಳ ಕಡಲನುಬ್ಬಿಸಲಿ (ಕುಂಕುಳ. ೬೯೪) ; ಆ ದೊಡ್ಡ ಕಂಬದ ಮನೆಯ ಅನತಿ ದೂರದಿಂದ ಒಂದು ಹೊನಲು ನಸುನಗುತ್ತ ಸದಾ ಸರ್ವದಾ ಹರಿಯುತ್ತಿರುತ್ತದೆ (ಕಂಂಕು. ೨).

**ಪೊನಲಾಗು, ಹೊನಲಾಗು** = ಪ್ರವಾಹದಂತೆ ಹರಿ : ಉಕ್ಕು ; ಪ್ರವಹಿಸು : ಇಂದುಪಬಿಂಬದಿಂದಮೃತಬಿಂದುಗಳೊಕ್ಕುಪುವೆಂಬಪೋಲ್ ಮಹಾಕ್ರಂದನವೇಗದಿಂದೆ ಸುಂಪಶ್ರುಜಲಂ ಪೊನಲಾಗೆ (ಧಕಕು. ೬-೩೯) ; ಆ ಭವನಪಂಕ್ತಿಗಳುರಿದು ಕರಗಿದವಪನಿಯಲಿ ಹೊನಲಾಯ್ತು ಪುರಜನಪ್ಪದೆ ಬೆಟಗಾಗೆ (ಕುಮ್ಮಾಕ. ೯-೩೩) ; ಇದಿರಾಂತ ಭಟರ ಗೋಣ್ಗಳ ನರಿಯಲು...ಹೊನಲಾಯ್ತು ರುಧಿರಂ ಪ್ರವಾಹದಂತೆ (ಕೈಬ್ರಹ್ಮ. ೩-೬೩).

[ದೇ.॥ ತಮಿ. ಪುನಲ್ ; ಮಲ. ಪುನಲ್, ಪುಣಲ್ ; ತುಳು. ಪುಣಲ್ = ತೇಲುವುದು ]

**ಪೊನಲಿಡು, ಹೊನಲಿಡು** (ಕ್ರಿ). ೧. ಪ್ರವಾಹವಾಗು : ಉಕ್ಕಿ ಹರಿ ;

ಪ್ರವಹಿಸು : ತಾವ್ರುಧ್ವಜಂ . . . ತೆಗೆದಿಸಲ್ ಬಱಸಿಡಿಲ್ವೊಡೆದು ಗಱಿ ಜರಿವಂತಿರೆ ನಿರ್ಜರೇಂದ್ರನ ಸೂನು ಪೊನಲಿಡಲ್ ಬಸಿಯ ನೆತ್ತರ್ದೊಂಟಿ ಸುತ್ತೆ ಮೈವಱಿದು ಬಿದ್ದನು (ಕೃಋಕಾ. ೨೩-೪೩) ; ತೊಟ್ಟ ಪೊನ್ ಡಿಱಿ ನಾದ ಏಡಿದು, ವೇಲ್ವಾಯ್ದು ಪೊನಲಿಟ್ಟು ಪರಿದು . . . ಪಾಲೆದನ್ (ಅಂತಿಗೊ. ೭-೧೦೨). **ಹೊನಲಿಡು :** ೧. ಏದುಳ ಕೊಳ್ಗಸಱ ಹೊನಲಿಡುವ ರಕುತದ ಕಡಲೊಳಡಿಯಿಡಲು ಬಾರದೆಬಂತೆ ವಿಶ್ವಾಮಿತ್ರನು ಅಡವಿಯೊಳಗೆಯ್ದ ನಾನಾಭಯಂಕರವ ನಾಲಿಡಲು (ಹರಿಶ. ೦೨-೩೮) ; ಬೆಳುನೊರೆ ವಾಸಗಿ ನಸುಬಿಸಿರಕುತ ಹೊನಲಿಡಲು . . . ಹೆಣನ ಮೆದೆ ಹೇರಾಳ ರಂಜಿಸಿತು (ಕುಮಾರ್ವ್ಯ. ೦೦-೬) ; ಹೇಳಲೇನದನವಳು ಮೋಘದ ಜಾಳಿಯಲಿ ಮಳೆಗಱೆದಳತುಣಜಲಾಳಿ ಹೊನಲಿಡಲುಬ್ಬರಿಸುತಾಸುರವಿಕಾರದಲಿ (ಕೊಕರಾ. ೦-೦೦-೦೬). ೨. ವ್ಯಾಪಿಸು ; ಹೊಮ್ಮು . ಘನರವ್ವದ್ರುದ ಘೋರವದನದ ಹೊನಲಿಡುವ ದಾಡೆಗಳ ಹೊಗರಿನ . . . ವಾನದ ಕಡುಹಿನ ದೂತರೆದ್ದುದು (ಅಂಬಿಶ. ೪-೩೨). [ಪೊನಲ್ + ಇಡು₁]

**ಪೊನಲು** 'ಪೊನಲ್' ನೋ.

**ಪೊನಲುವರಿ** 'ಪೊನಲ್ವರಿ₁' ನೋ.

**ಪೊನಲೇಳ್, ಹೊನಲೇಳು** (ಕ್ರಿ). ಪ್ರವಾಹ ಬರು.-ಉಕ್ಕು: ಚಟ್ಟವಂ ಇಱಿಯೆ ವಿರೋಧಿ ಬಿದ್ದ ಸಮರಾಂಗಣದೊಳು ಶ್ರೀ ಗವುಣ್ಡಭೂಮಿಯಿಂದೊಱೆದೊಱೆದ್ದುಕ್ಕುಯಿಂನು ಪೊನಲೇಳ್ವುದು ಭೂತಪಿಶಾಚಕೋಟಿಯುಮಂ ನೆಱೆ ತಣಿಯುಣ್ದು (ಎಕ.XVI, ಶಿಕ್ಕಾ. ೯೮-೨೩ : 1160). **ಹೊನಲೇಳು :** ಅರುಣಜಲ ಹೊನಲೆದ್ದು ಮುಗ್ಗಲಲುನವಣೆಸರಾರಾವ . . . ನೋಡಿದನೆನಗೆ ಕಡುವಮುಳಿದು (ಕುಮಾಶ. ೪-೩೨) ; ಅನಲಾಕ್ಷನಾಣೆ ನಾರದ ಕೇಳು ರೋಹಿತ ಹೊನಲೇಳೆ ಹೊಯ್ದು ಹೊಕ್ಕವನ (ಕೋಹಕ. ೩೩-೨೦). [ಪೊನಲ್ + ಏಳ್₁ (< ಎೞು₁)]

**ಪೊನಲ್ಗೊಳ್** (ಕ್ರಿ). ಪ್ರವಾಹವಾಗು : ಮುಕ್ತಿಸಾರಂ ಪೊನಲ್ಗೊಂಡುದೋ . . . ಶಿವಾಂಗರುಚಿ ನದಿಯುಗವೆತ್ತುದೆನೆ ಸುರಗಂಗೆ ಕಣ್ಗೆ ಮಂಗಳಮಾಗಿ ತೋರ್ದುದು (ಶಂಬಸಾ.೦೦ -೨೪). [ಪೊನಲ್ + ಕೊಳ್₁]

**ಪೊನಲ್ನಾಡು** (ನಾ). ನದಿಗಳಿರುವ ದೇಶ.-ಪ್ರಾಂತ : ಮಲೆನಾಡೆ, ಪೊನಲ್ನಾಡೆ, ಬಯಲ ಪೊನ್ನಾಡೇ, ಪಲಕಾಲವಱಾನಗಲ್ದಿರ್ದಿನ್ (ಅಕ್ಕಮ್ಮ. ೮೭-೪೩೩). [ಪೊನಲ್ + ನಾಡು]

**ಪೊನಲ್ವರಿ₁, ಪೊನಲುವರಿ, ಹೊನಲುವರಿ** (ಕ್ರಿ). ೧. = ಪೊನಲಿಡು ೧ : ಕೊರಪೊಡೆ ಚಟ್ಟುಗಳ್ ಬಿಂಪುವುಣ್ಮುವ ಲಾಳೆಯ ಲೋಳೆಗಳ್ ಪೊನಲ್ವರಿವವು (ಶಂಕರಾ. ೪-೦೦೦): ಅಂತು ತಾಮ್ರಮಯಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೪ ಕ) ; ನವಮಣಿಮರೀಚಿಮಂಜರಿ ಕವಿದು ಪೊನಲ್ವರಿದು ದೆಂಬಿನಂ . . . ಜಲಜಲಿಸಿ ಪರಿವ ಬರಿಪೊನಲೆಸಗುಂ (ಕರ್ಣಪು. ೦೦-೮೪). ೨. ಹರಡು; ವ್ಯಾಪಿಸು; ಹೊಮ್ಮು : ಈ ನಾಟ್ಯರಸಂ ಸಮಸ್ತಸುರವೃಂದಾಧೀಶಾನಂದಂ ಪೊನಲ್ವರಿದತ್ತೆಂಬಿನಮಾಡುವಲ್ಲಿ ಮಕುಟವ್ಯಾಲಗ್ನರತ್ನಪ್ರಭಾಪರಿವೇಷಂ ಲಲಿತೇಂದ್ರಚಾಪರುಚಿಯಂ ಮಾಡಿತ್ತು ದಿಕ್ಚಕ್ರದೊಳ್ (ಆದಿಪು. ೬-೦೨೦). **ಪೊನಲುವರಿ :** ೧. ಆ ಮಾತಿಗೆ ಹರುಷಾಶ್ರುವಿನಿಂದ ಪೊನಲುವರಿಯೆ ಪುಳಕಾಂಬು ವನಿತೆ ಮಂಗಳಮಜ್ಜನವ ಮಾಡಿ ಸಿಂಗಾರಕನುವಾದಳು (ಕಂಕಪು. ೪-೬೮). **ಹೊನಲುವರಿ :** ೧. ವಿನುತಸುಕವಿಯ ಸೂಕ್ತಿ ತಾಗಿದ ಮುನಿಗಳಂತಃಕರಣದಂತಿರೆ ಹೊನಲುವರಿದವು ಚಂದ್ರಕಾಂತದ ಸಾಲಶಿಲೆ ಕರಗಿ (ಕುಮಾರ್ವ್ಯ. ೦೬-೦೬). [ಪೊನಲ್ + ಪರ್₃]

**ಪೊನಲ್ವರಿ₂** (ನಾ). (ನೀರಿನ) ರಭಸವಾದ ಓಟ, - ಹರಿವು : ಪರಿವ ಪರಿಕಾಲ ಪೊನಲ್ವರಿಯೊಳ್ ಪೂರ್ವಪೂರದು ತಪ್ಪೆಬಲಿಕ್ಕಿದ ಮಡಿವರ್ಗದ ದುಗುಲಂಗಳುಂ (ಕರ್ಣಪು. ೩-೬೩ ಕ). [ಪೊನಲ್ + ಪರ್₃]

**ಪೊನಲ್ವರಿಯಿಸು** (ಕ್ರಿ). ಪ್ರವಾಹವನ್ನುಂಟುಮಾಡು ; ರಭಸವಾಗಿ ಹರಿಯುವಂತೆ ಮಾಡು : ಕರಂ ಪೊನಲ್ವರಿಯಿಪ ಬಂಬಲ್ವರಿ ಬಲ್ವರಿ ಕಾಲ್ವರಿ ಸಾಲ್ವರಿ ಸಲೆ ಸುರಿದು ಕಱೆದುವಿರುಳುಂ ಪಗಲುಂ (ರಾಜಶೇ. ೯-೦೦೨). [ಪೊನಲ್ವರಿ₁ + - ಇಸು₃]

**ಪೊನ್ನವಿ** (ನಾ). ಒಂದು ಸ್ಥಳದ ಹೆಸರು : ಪಶ್ಚಿಮಾಯಾನ್ದಿಶಿ ಪೊನ್ನವಿ ತಾಂಟುವಾಯರಾ ಕೆಱೆ (ಎಕ. IV, ನಾಗಮಂ.೯೩-೬೩; 776). [?]

**ಪೊನ್ನೊಳ** (ನಾ). ಒಂದು ಸ್ಥಳದ ಹೆಸರು : ಶ್ರೀಮಾರಸಿಂಘದೇವ ಪೃಥುವೀರಾಜ್ಯಂಗೆಯ್ಯುತ್ತಿರೆ ಪೊನ್ನೊಳದ ಎಮ್ಮೆತುಱುಗಳೊ × × × ಹಾಯ್ದು (ಪ್ರಕಾಶಂ. ೦೯೩೦, ೦೨-೨; ಸು. 961). [? + ಕೊಳ₂]

**ಪೊನ್ತನ** (ನಾ). ಚಿನ್ನದಂತೆ ಹೊಂಬಣ್ಣವಾಗಿರುವಿಕೆ; ಚಿನ್ನದಂತಿರುವಿಕೆ: ಒಯ್ಯನೊಯ್ಯನೆಯೆ ತುಂಬುದಿಂಗಳ ಕನಕಬಿಂಬಕ್ಕೆ ಪೊನ್ತನಂ ಬಾಡಿ, ಮಾಡಿದುದು ಬೆಳ್ಪಿಯ ತನಂ (ಶ್ರೀರಾಮಪು. ೪೮೦-೦೭೩). [ಪೊನ್ + - ತನ]

**ಪೊನ್ನಂಗಲ್** (ನಾ). (?) : ಪೊನ್ನಂಗಲ್ . . . ಕಣ್ಣದೊಟಲಿ, ಕಣ್ಣಂಬಾಳೆ (ಕರ್ಣಾ.ಶು. ೩೩ ಪ್ರಯೋ). [?]

**ಪೊನ್ನಂಡೆ, ಹೊನ್ನಂಡೆ** (ನಾ) . ಚಿನ್ನದ ಜೀರ್ಕೊಳವೆ ; ಬಂಗಾರದ ಪಿಚಕಾರಿ : ಮನ್ಮಥ ರತಿ ಪೊನ್ನಂಡೆಗಳ ತುಡುಕಿದರು (ಮೋಹತ. ೦೪-೬೦) ; ತವಾತವಾಗಿ ಹಸ್ತಕಳವಟ್ಟ ಜಲಯಂತ್ರ ಪೊನ್ನಂಡೆಗಳ ಗಡಣದಿಂ ನೀರಾಟಕನುವಾದರು (ಕಂಪು.೩೭-೩೩); ಕರದೊಳ್ ಪೊನ್ನಂಡೆಯುಂ ಜೀರ್ಕೊಳವಿಯೆಸಯೆ . . . ಕಾಂತಾಳಿ ನೀರ್ವೊರ್ಕ್ಕುದಾಗಳ್ (ರಾಜಶೇ . ೦೦-೬೦). **ಹೊನ್ನಂಡೆ :** ಕೊಂಡು ಕುಂಕುಮವಾರಿಗಳ ಹೊನ್ನಂಡೆ ಜಲಜಂತ್ರಂಗಳಲಿ ಹೊಯ್ದಾಡಿದರುಪ್ಪೋಕುಳಿಯ (ಕೊಕರಾ. ೦-೦೬ ೩೩); ಕುಂಕುಮಜಲವ ಹೊನ್ನಂಡೆಗಳೊಳು ತುಂಬಿ ಮುಂಕೊಂಡು ಹೊಯ್ದಾಡಲು (ಮೋಹತ ೦೪-೬೦); ಗುಂಡಿದುಳ್ಳಾಡಿ ಸರ್ವರು ಹೊಕ್ಕು ಕೂಡೆ ಹೊನ್ನಂಡೆ ಜೀರ್ಕೊಳವೆಯೊಳ್ತೊಗೆದು ಸುಂಡಿಲೊಳ್ಸೂಸುವಾನೆಗಳಂತೆ ಚಲ್ಲಿದರ್ಮಂಡೆ ಮೈನನೆಯಲೆಲ್ಲರಿಗೆ (ಕರಶ. ೪೦-೨೪). [ಪೊನ್ + ಅಂಡೆ₂]

**ಪೊನ್ನಂದಣ** 'ಪೊನ್ನಂದಳ' ನೋ.

**ಪೊನ್ನಂದಳ, ಪೊನ್ನಂದಣ, ಹೊನ್ನಂದಣ** (ನಾ). ಚಿನ್ನದ ಪಲ್ಲಕ್ಕಿ ; ಬಂಗಾರದ ಶಿಬಿಕೆ : ಅಗಣಿತವಿಲಾಸಿನಿಯರುಗ್ಗಡಿಸೆ ಪಾಯವಧಾರೆ ನುತ್ತಲಂದು ಪರವೆ ಪೊನ್ನಂದಳವನಡರೆ (ಸೌಂದರಪು ೭-೩೨). **ಪೊನ್ನಂದಣ :** ಬಳಿಕ ಪೊನ್ನಂದಣದ ಮೇಲೆ ವೈವಾಹಮಂಗಳಮಹೋತ್ಸವಕೆ ವಿರಚಿಸಿದ ಮಂಟವರೆಡೆಗೆ ನಳಿನಪತ್ರಾಕ್ಷಿಯಂ ತಂದರೊಸಗೆಯೊಳು (ಕೃಋಕಾ. ೩೧-೦೩). **ಹೊನ್ನಂದಣ :** ಹಿಂದೆ ಮುಂದಿಕ್ಕೆಲದ ನಾರೀವೃಂದವೆಯ್ತರೆ ನಡುವೆ ತಾ ಹೊನ್ನಂದಣವನೇಱದಳು ಸುರಕರಿಯೆಡೆಗೆ ಗಾಂಧಾರಿ (ಜಂಕಶ. ೨೦-೦೪) ; ಮಣಿಮಯದ ದಡ್ಡಿಗಳು ಹೊನ್ನಂದಣವ ಮುಸುಕಿದವು (ಕೊಕರಾ. ೦-೦೬-೦೩) ; ಸಂದಣಿಸಿದರಣ್ಣಗಳು ದಾದಿಯರು ಹೊನ್ನಂದಣದೆಡದ ಭಾಗದಲಿ (ಕೋಹಕ. ೨೪-೨೩). [ಪೊನ್ + ಅಂದಳ]

**ಪೊನ್ನಂದುಗೆ** (ನಾ). ಚಿನ್ನದ ಕಾಲುಕಡಗ : ಉಂಗುರ ಗೆಜ್ಜೆ ಪೊನ್ನಂದುಗೆ ಪವಳವಂ...ತಂದುಕೊಡುವರು (ಬಸವಪು. ೦೪-೦೩). [ಪೊನ್ + ಅಂದುಗೆ]

**ಪೊನ್ನಂಬರ** 'ಪನ್ನಂಬರ' ನೋ.

**ಪೊನ್ನಂಬು, ಹೊನ್ನಂಬು** (ನಾ). ಚಿನ್ನದ ಬಾಣ : ಇತರ ಕುಮಾತಂಗಳೊಳುತ್ಪನ್ನಮಾತಿ ಮನಂಗೆಯ್ವುದು ಪೊ[ಪಾಠಾಂ. ಹೊ]ನ್ನಂಬಂ ನೀರೊಳೆಚ್ಚು ಕಿಡಿಪಂತಕ್ಕುಂ (ಸಮುಶ. ೩-೩೩) ; ಸನ್ನುತ ಜಿನಧರ್ಮಂ ನೆಱೆ ತನ್ನಿಂದಂ ತಾನೆ ಬಂದೊಡಲ್ಲದೆ ಬಡುವಾತಂ ನೆಱೆ ಪೋಲ್ಕುಂ ಜಗದೊಳ್ ಪೊನ್ನಂಬಂ ನೀರೊಳೆಚ್ಚು ಕಿಡಿಸುವ ಮರುಳಂ (ರತ್ನಾಕರ. ೩-೨೬೧). **ಹೊನ್ನಂಬು :** ಅಱಿತವರ ಮುಂದೆ ತನ್ನಱಿವನ್ನು ಮೆಱೆಯುವುದು ಅಱಿಯದರ ಮುಂದೆ ಹೊನ್ನಂಬ ತೊಱೆಯಲೆಚ್ಚಂತೆ (ಸರ್ವಜ್ಞ. ೦೪೬೪). [ಪೊನ್ + ಅಂಬು₂]

**ಪೊನ್ನಕ್ಕ** (ನಾ). ಒಬ್ಬಾಕೆಯ ಹೆಸರು : × × × ಸೆಟ್ಟಿಯ ಮಗ ಳ್ಪೊನ್ನಕ್ಕನ್ × × × (ಎಕ. XII, ಗುಬ್ಬಿ. ೪೪-೩; ೯೮೬).
[ಪೊನ್ + ಅಕ್ಕ₁]

**ಪೊನ್ನಗಂಟಿ** 'ಪೊನ್ನಗನ್ನೆ' ನೋ.

**ಪೊನ್ನಗನ್ನೆ, ಪೊನ್ನಗಂಟಿ, ಹೊನಗನೆ, ಹೊನಗನ್ನೆ, ಹೊನಗೊನೆ, ಹೊನಗೊನ್ನೆ, ಹೊನ್ನಗನ್ನೆ, ಹೊನ್ನಗೊನ್ನೆ** (ನಾ). ಒಂದು ಬಗೆಯ ತರಕಾರಿ ಗಿಡ ಮತ್ತು ಅದರ ಸೊಪ್ಪು : "ಪಾಂಡುರ- ಕಾಡುದ್ದು, ಕರಿಯ ಹುರುಳಿ, ಪೊನ್ನಗನ್ನೆ" (ಲಿಕಾ. ೯೪) ; ಪೆಸರೆಸೆವ ಪೊನ್ನಗನ್ನೆಯ ರಸಮಂ ಕೋಡಾಡ ಪಾಲೊಳಱೆ ಮಱುಗಿಸಿ ಹಿಂಗು ಸಮೇತಂ ಕುಡಿಯಿಸೆ ಕಿಡ್ವೆಸೆ ದಸೆಗಟ್ಟೋಡಿ ಪೋಗದೇಂ ನಿಂದಪುದೇ (ಕಲ್ಯಾಣಕ. ೯-೦೭೭). **ಪೊನ್ನಗಂಟಿ** : ಸೊಪ್ಪುಗಳು : ಅಗಸೆ . . . ಪೊನ್ನಗಂಟಿ, ಕೀರಕಸಾರೆ (ಪಕ್ಕು. ೨೯೭). **ಹೊನಗನೆ** : ಹೊನಗನೆ ಒಹಳ ತಂಪು (ರಜಾ). **ಹೊನಗನ್ನೆ** : ಯಷ್ಟಿಮಧುಕ, ಹೊನಗನ್ನೆಯ ಬೇರು ಇವಿಷ್ಟನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ (ಶ್ವಶ್ವಸಾ. II, ೫೫). **ಹೊನಗೊನೆ** : "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ೪ ಹೊನಗೊನೇಸೊಪ್ಪು" (ಶಿದ್ಯಾಂಶಿ. ೦೯೪) ; ಹಳೆಅಕ್ಕಿಅನ್ನ, ಹೊನಗೊನೆಸೊಪ್ಪು . . . ಚಿಲಿಕೀರೆಸೊಪ್ಪು ಇವುಗಳೆಲ್ಲವೂ ಜ್ವರದವಂಗೆ ಪಥ್ಯದ್ರವ್ಯಗಳು (ಸಕಲ್ಯ. ೧೦೨). **ಹೊನಗೊನ್ನೆ** : "ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ — ಈ ೪ ಹೊನಗೊನ್ನೆ" (ವಾಕರಾ. ೦೦೦) ; ಹೊನಗೊನ್ನೆ ಸಂಗಡ ಆಪಂಕೆ ಮುಗುಳಂ ಹಾಲಲ್ಲಿ ಅರೆದು ಕುಡಿಯೆ ಹೊಟ್ಟೆಉರಿ ಸಹ ಗುಣ (ಶಿವ್ಯಶಿ. ೯). **ಹೊನ್ನಗನ್ನೆ** : "ಮತ್ಸ್ಯಾಕ್ಷಕಃ — ಹೊನ್ನಗನ್ನೆ" (ಲಿಕಾ. ೦೦೯) ; ಹೊನ್ನಗನ್ನೆಯ ರಸಮುಂ ಕೊಂಡು ಆಡಿನ ಪಾಲೊಳಗೆ ಕೂಡಿ . . . ಕುಡಿಯಲ್ ಕಿಡ್ವೆಸೆಯ ಬೇನೆ ಮಾಣ್ಬುದು (ಕಲ್ಯಾಣಕ. ೯-೦೭೭ ಪಾಠ) : ತೊಟ್ಟ ಮುಸ್ತೆಯನುಱೆ ಚೂರ್ಣವುದುಲಿಗ ಹೊನ್ನಗನ್ನೆ ಸಮೇತಂ (ಅಮದ. ೩-೯೪). **ಹೊನ್ನಗೊನ್ನೆ** : "ವಸುಕಾಂತಿಯೆನೆ ಹೊನ್ನಗೊನ್ನೆ" (ಮಂಗರಾ. ೪೦-೩೩).

[ದೇ. ೫ ತಮಿ. ಪೊನ್ನಾಙ್ಕಣ್ಣಿ, ಪೊನ್ನಾಙ್ಙಾಣಿ ; ತುಳು. ಪೊನ್ನಾಂ ಕಣ್ಣಿ, ಪೊನ್ನಾಂಗಾಣಿ, ಹೊಣ್ಣಾಂಗಣಿ ; ತೆಲು. ಪೊನ್ನಗಂಟಿಕೂರ]

**ಪೊನ್ನಬ್ಬೆ** (ನಾ). ಒಬ್ಬಾಕೆಯ ಹೆಸರು : ಕೋಸಿಗರಾ ಕೋಟಿಯಮ್ಮ ಗೋಸಾಸಿಯ ಪೆಣ್ಣಾತಿ ಪೊನ್ನಬ್ಬೆ (ಮ್ಯಾಆ. ೦೯೨೯, ೭೯-೨; ೯೬೪) ; ತಾಗೆ ರತ್ತಿಯ ಮಹಾಜನಕ್ಕೆ ಪೊನ್ನಬ್ಬೆ ಪೊನ್ನ ಕೊಟ್ಟು ಸಾಲೆ ನೀಡೆನ್ದು ಮುತ್ತಲಂ ಕೊಣ್ದು (ಎಕ. VII, ಶಿಕಾ. ೬೦-೭; 978). [ಪೊನ್ + ಅಬ್ಬೆ₁]

**ಪೊನ್ನಯ್ಯ, ಹೊನ್ನಯ್ಯ** (ನಾ). ಒಬ್ಬಾತನ ಹೆಸರು : ಪೊನ್ನಸದೇವನ ಮಗ ಪೊನ್ನಯ್ಯ (ಎಕ. XII, ಚಾವುಗ. ೯೦-೧ ; ಸು. 926). **ಹೊನ್ನಯ್ಯ** : ಗೊರವರ ಹೊನ್ನಯ್ಯಂ ತುಱುವಂ ಒನ್ನಿಕ್ಕಿ ಪಲರಂ ಕೊನ್ದು ತಳುತ್ತಿಱಿದು ದೇವಲೋಕಕ್ಕೆ ಸನ್ದೊಂ (ಎಕ. VIII, ಸೊರಬ. ೩೪-೦೦ ; 1032).
[ ಪೊನ್ + ಅಯ್ಯ₁ ]

**ಪೊನ್ನಲರ್** (ನಾ). ಬಂಗಾರದ ಹೂವು : ಮಾಣಿಕದ ಸೊಡರ್ಗಳಿಂ ನೀರಾಜನೆಯ ಪೊನ್ನಲರ್ಗಳಿಂ ಗೀರ್ವಾಣಾರ್ಚಿತನಂ ನರೇಂದ್ರವಧುವರ್ಚಿಸಿದಳ್ (ಪುಷ್ಪಪು. ೪-೭೯). [ ಪೊನ್ + ಅಲರ್₂ ]

**ಪೊನ್ನವಾರಗಾವುಂಡ** (ನಾ). ಒಬ್ಬಾತನ ಹೆಸರು : ಮೋಳಿಯನೂರ ದೇವಯ್ಯನುಂ ಪಂಪಯ್ಯನುಂ ಕಳ್ಳಬುಣಾಸಿಯ ಪೊನ್ನವಾರಗಾವುಣ್ಡನುಂ . . . ಧರ್ಮರಾಸಿಭಟಾರರ ಕಾಲಂ ಕಚ್ಚಿ ಕೊಟ್ಟ ಸ್ಥಿತಿ ಯಾವುದೆನ್ದೊಡೆ (ಎಕ. XI, ಚಿತ್ರದು. ೭೬-೨೦ ; 937).
[ ಪೊನ್ನವಾರ್ತ + ಗಾವುಂಡ (< ಗಾಮುಂಡ ) ]

**ಪೊನ್ನಪೂರ್** (ನಾ). ಒಂದು ಸ್ಥಳದ ಹೆಸರು : ಜಿಡಮೂರಾಳ್ಗಟ್ಟಸ್ತ್ರೀಱ ನಾಟ್ಗೂವುಣ್ಡಮಪ್ × × × ಕಲಿಯಿಟ್ಟನೊಳೆ ವಿರೋಧವಾಗಿ ನಾಡಿನ್ದಂ ಗಂಗವಾಡಿಗೆ ಪಶ್ಚಿಮೆನಿಪ್ಪ ಪೊನ್ನಪೂರಲೊಳಿರೆ (ಎಕ. VIII, ಸೊರಬ. ೩೩-೭ ; 912). [ < ಪೊನ್ + ಊರ್ ]

**ಪೊನ್ನಳಱು** (ನಾ). ಒಬ್ಬಾತನ ಹೆಸರು : ಕಂಚುಗರ ಗುಜಯ್ಯಂಗೆ ಪೊನ್ನಳಱು ಒಮ್ಮರ್[ತ್ರ]ಲಂ ಕೊಟ್ಟ (ಎಕ. VIII, ಸೊರಬ. ೪೦೩-೦೯ ; ೯೮೬). [ ? ]

**ಪೊನ್ನಳೂರ್** (ನಾ). ಒಂದು ಸ್ಥಳದ ಹೆಸರು : ಪೊನ್ನಳೂರ್ ಬೋಯಸ್ವ . . . ಸರ್ವ್ವಶರ್ಮ್ಮಣ (ಇಆ. VII, ೦೩೬-೪೨ ; ೯೯೬). [? + ಊರ್]

**ಪೊನ್ನಳ್ಳಿ** (ನಾ). ಒಂದಂ ಸ್ಥಳದ ಹೆಸರು : ಪೊನ್ನಳ್ಳಿ ನಾಮಗ್ರಾಮಃ (ಎಕ. IV, ಹಾಗಡಂ. ೬೩-೬೦ ; 770). [ಪೊನ್ + < ಪಳ್ಳಿ₁]

**ಪೊನ್ನಾಣ್ಮ** (ನಾ). ಸಂಪತ್ತಿನ ಒಡೆಯ ; ಕುಬೇರ : "ಧನಪತಿಯೊಳೆ ಪೊನ್ನಾಣ್ಮಂ" (ಕಶಬ್ದಾ. ೪೦). [ಪೊನ್ + ಆಣ್ಮ (< ಆಳ್ಮ)]

**ಪೊನ್ನಾಯ** (ನಾ). ಒಂದು ಬಗೆಯ ತೆರಿಗೆ : ವೇಳಾಪುರದ ಬೀಡು ಚತುಶ್ಶೀಮ ಸುಂಕ ಪೊಂನಾಯ ಸಹಿತ ದೇವಳಿಗೆನಾಡಂಮ ಸಂದಿ ಹಂನೆರಡು (ಎಕ. V, ಬೇಲೂರು. ೫೯-೬೨ ; 1117). 'ಪನ್ನಾಯ' ಪರಾ.
[ಪೊನ್₁ + ಆಯ₁]

**ಪೊನ್ನಾಯುಗ, ಹೊನ್ನಾಯುಗ** (ನಾ). (ಕತ್ತಿಯ) ಚಿನ್ನದ ಹಿಡಿಕೆ : ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜಿರ ಕಟಿಯೊಳ್ (ಅಪಂಶ್ತ. ೬-೫೦). **ಹೊನ್ನಾಯುಗ** : ಹೊನ್ನಾಯುಗದ ಖಡುಗದ ಗಜಱು . . . ಮೊದಲೆಗಳ ಮಹಾಧ್ವನಿ ಬಗಿದುದ್ಯೆ ತಾವರೆಯ ತನಯನ ಕರ್ಣಕೋಟರವ (ಉಪ್ಪಾಲ. ೨-೪) ; ಹೊನ್ನಾಯುಗದ ಖಡುಗವನಕ್ಷಯದ ಮೂಡಿಗೆಯ ದಕ್ಷಿಣದ ಹೆಗಲಿಗೇಱಿಸಿ . . . ಹೊಱವಂಟನು ರಘುಪ್ರಭವ (ತೊರಾ. ೩-೬-೫). [ಪೊನ್ + ಆಯುಗ (< ಆಯಗ)]

**ಪೊನ್ನಾಯೋಗ** (ನಾ). ಚಿನ್ನದಿಂದ ಮಾಡಿದ ಅಲಂಕಾರವಸ್ತು,— ಆಭರಣ : ನಡೆಯ ತುರಗು ಪೊನ್ನಾಯೋಗಂಗಳಿಂದಮರ್ದಟ್ಟಿಯಿಂ (ಶಂಕರಾ. ೯-೦೦೨). [ಪೊನ್ + ಆಯೋಗ]

**ಪೊನ್ನಾಳ್** (ನಾ). ಶ್ರೇಷ್ಠನಾದ ಯೋಧ,— ಸೈನಿಕ : ಪೋದವರಾ ಪೊನ್ನಾಳ್ಗಳ್ ಬಾರದೆ ಬಗೆ ಬೆದರುತಿಹುದು (ಚಾರಿಸ. ೦-೦೫).
[ಪೊನ್ + ಆಳ್₂]

**ಪೊನ್ನಿಗ, ಹೊನ್ನಿಗ** (ನಾ). ೧. ಒಬ್ಬಾತನ ಹೆಸರು : ಬದಿರೂರಲು ಬೂತುಗನ ತುಮ್ಮವಾಡಿಯ ಗಣ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟಂ (ಎಕ. XII, ಕುಣಿಗಿ. ೨೭-೨೨ ; ಸು. ೯೬೦). ೨. (ಕನ್ನಡದಲ್ಲಿ ಪ್ರಸಿದ್ಧನಾದ ಪೊನ್ನನೆಂಬ) ಒಬ್ಬ ಕವಿಯ ಹೆಸರು : ಪೊನ್ನಿಗ[ನಿಂ] ಮಲ್ಲಪನುಂ ಪೊನ್ನನುಮಾರ್ತಿಯ ಪುರಾಣಚೂಡಾಮಣಿಯಂ ಮುನ್ನಂ ಪೇಟಿಸಿದಂತೆ . . . ಪೇಟಿಸಿದಳ್ (ಅಜಿತ. ೦-೭೭). 'ಅರಿಗ' ಹೋ. **ಹೊನ್ನಿಗ** : ೧. ಹೊನ್ನಿಗ ಪಸುಗವೊನ್ನಮಣ್ಡ ತಮ್ಮ ಚವನಮ ಊರಟಿವನ ಸತ್ತ (ಎಕ. X (೩), ಬಾಗೇಪ. ೯೯-೨ ; 10ನೆಯ ಶ೯).
[ಪೊನ್ + — ಇಗ]

**ಪೊನ್ನಿಡಿಕೆ** (ನಾ). ಒಂದು ಸ್ಥಳದ ಹೆಸರು ; ೨ ಈಗಿನ ತುಮಕೂರು ಜಿಲ್ಲೆಯ ಹೊನ್ನುಡಿಕೆ : × × × ದ ಪೊನ್ನಿಡಿಕೆಯೊಳ್ ತನ್ನ ಅರ್ತ್ತದಟಿವಿನೊಳ್ ಕಾದಿ ನಾಲ್ವರ ಕೊನ್ದು ಸತ್ತನ್ (ಎಕ. XII, ಕುಣಿಗಿ. ೪೦-೩ ; ಸು. ೯೬೦). [ ? ]

**ಪೊನ್ನೀರ್, ಹೊನ್ನೀರು** (ನಾ). ೧. ಹೊಂಬಣ್ಣದ ಕಾಂತಿ : ಒಯ್ಯನೆ ಸುತ್ತಂ ಸೂಸಿದೀಶಾನನ ಜಡೆಗಳಪೊಲ್ ಕಾಯ್ದ ಪೊನ್ನೀರ್ಗವಿಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದಹಿಮರುಚಿಗಳಂ ತಿಗ್ಮರುಚ್ಪ್ರಾಲಿಬಿಂಬಂ (ಕಾದಂಬ

೧೬೪). **ಹೊನ್ನೀರು** : ೨. ಹೊಂಬಣ್ಣದ ನೀರು : ಉದಯೋನ್ಮುಖ ಸೂರ್ಯನ ರಶ್ಮಿ ವಿಕಸನಪುಷ್ಪದ ಮೇಲೆ ಹೊನ್ನೀರನೆರಚಿತ್ತು (ಜೀವಜ. ೨೮); ಹೊಂಗದಿರ ಜೇಕೊರ್ಳವಿಯಿಂ ಸಂಜೆ ಚರ‍್ರೆಂದು ರಂಗೆರಚಿ . . . ಕನ್ನೆಳಲ ಪಸಲೆಯಲಿ ಹೊನ್ನೀರ ಮಳೆ ಹೊಯ್ಯಲು (ಚಿತ್ರಾಂಗ. ೨೦-೩೫೦). [ಪೊನ್ + ನೀರ್]

**ಪೊನ್ನು** 'ಪೊನ್' ನೋ.

**ಪೊನ್ನುಗ** (ನಾ). ಚಿನ್ನದಲ್ಲಿ ವ್ಯವಹರಿಸುವವನು; ಅಕ್ಕಸಾಲಿಗ : ಪಣ್ಣಿಗಂ, ಪೊನ್ನುಗಂ (ಶಬ್ದಾನು. ೬೨೪ ವೃತ್ತಿ). [ಪೊನ್ + –ಉಗ]

**ಪೊನ್ನುಡೆ** (ನಾ). ಜರತಾರಿ ವಸ್ತ್ರ; ಚಿನ್ನದ ಬಣ್ಣದ ದುಕೂಲ : ಪೀತಾಂಬರ : ತನ್ನ ಮನೆಯ ಮದುವೆಯೊಳು ಮಂಗಲದೊಳು ತನ್ನ ಬಾಂಧವರೆಲ್ಲರನು. ಅನ್ನಪಾನಂಗಳಿಂದಾದರಿಪುದು ಮತ್ತೆ ಪೊನ್ನುಡೆಯಿತ್ತು ಪೂಜಿಪುದು (ಜೈಮಿ. ೪-೩೮), ಪೊನ್ನುಡೆಯಿರೆ ತೊವಲಂ ಕೊಳೆಯುವವನೆನ್ನಂ ತಾನಕ್ಕೆ ಪಶುಪನೆಂದೇ ಬಗೆವರ್ (ಲೀಲಾ. ೧-೩೦). [ಪೊನ್ + ಉಡೆ]

**ಪೊನ್ನುಯ್ಯಲ್**, ಹೊನ್ನುಯ್ಯಲ್ (ನಾ). ಚಿನ್ನದ ತೂಗುಮಣೆ,–ಜೋಕಾಲಿ : ಚೂತಮಹೀಜದ ಕೆಳಗಣ ಪೊನ್ನುಯ್ಯಲನೇಱಿ . . . ತರಳಾಕ್ಷಿಯಾಡುತುಮಿರ್ಪನಂ (ರತ್ನಾಕರ. ೩-೨೭). **ಹೊನ್ನುಯ್ಯಲ್** : ಕಾಂಚನಮಾಲೆ . . . ಕೆಳದಿಯರ ಮೇಳದಲಿ ಹೊನ್ನುಯ್ಯಲಾಡುತ ಲೀಲೆಯಿಂದಿರೆ (ಶಾಶ್ವತ. ೨೯-೧). [ಪೊನ್ + ಉಯ್ಯಲ್]

**ಪೊನ್ನೆ**, ಹೊನ್ನೆ (ನಾ). ಒಂದು ಬಗೆಯ ಮರ; ಪುನ್ನಾಗ: ಚಿನ್ನೆ ಪೊನ್ನೆಯರಲಂ ಕೊಯ್ದಳ್ (ಆದಿಪು. ೧೧-೯೯. ಅಡಿಟಿಪ್ಪಣಿ) ; ಪೊನ್ನೆಯ ಮುಗುಳೆ ಕ್ಯಾವಳಿ ತನ್ನ ಕೊರಲ್ಗೆಸೆಯೆ . . . ಕಣ್ಗೆಸದಿರ್ದಳ್ (ಶಾಂತಿಪು. ೬-೧೭) : ಕದಂಬಮಹೀಜದೊಂದು ಶೋಭಾಗುಣಮೊಂದೆ ಪೂತಸಿವ ಪೊನ್ನೆಗೆ ಕಮರ್ಗಿಲೊಡ್ಡು ದೆಳ್ಮಗಿಲ್ಗಾಗಿರೆ ಪೋದುದಿಂತು ಜಳದಾಗಮಮಾದುದು ಶಾರದಾಗಮಂ (ಜಗನ್ನಾ. ೯-೯೭). **ಹೊನ್ನೆ** : "ಪೀತಸಾ(ಲ)ರಃ ಅಸನಃ–ಈ ೨ ಹೊನ್ನೆ" (ಕರ್ಣಾಟ. ೩೩-೯೭) ; ಹೊನ್ನೆ ಕುಟಜಂ ಕಬ್ಬುನ್ನಿ ಸೀವನ್ನಿ ತುಂಬುರುಹಂ ತಾಳಂ (ಅಭಿಸಾ. ೧೧೯೦ ಟಿಪ್ಪಣಿ) ; ಉಱೆ ಬೀಸುವ ಸುರಗಿ ಹೊನ್ನೆ ಮಲ್ಲಿಗೆ ವನದೊಳ್ (ಜಗ. ೯-೩).

[ದೇ.೩ ತಮಿ. ಪುನ್ನೈ, ಪಿನ್ನೈ ; ಮಲ. ಪುನ್ನ ; ತುಳು. ಪೊನ್ನೆ, ಹೊನ್ನೆ ; ತೆಲು. ಪೊನ್ನ]

**ಪೊನ್ನೆಱೆಯ** (ನಾ).=ಪೊನ್ನಾಣ್ಮ : "ಪೊನ್ನೆಱೆಯ ತಿಸುಳಿಗೆಳೆಯಂ ಕಿನ್ನರಪತಿ" (ಅಭಿಧಾ. ೦). [ಪೊನ್ + ಎಱೆಯ]

**ಪೊನ್ನೇಱರಸ** (ನಾ). ಒಬ್ಬಾತನ ಹೆಸರು : ಸಿಙ್ಗಪೋತರಸರು ಪೊನ್ನೇಱರಸರು ಧರ್ಮ್ಮಮಹಾದೇವಿಯರುಮಿಡಿತಿಲ್ದು ಪೊನ್ನೇಱ ದೊಡ್ಡರೆನ್ದು ಕಡುಗವಿಟ್ಟರ್ (ಶಾಸನ. IX-i, ೦೭-೦೨ : ೪೦೦). [ ? + ಅರಸ]

**ಪೊನ್ನೆರಣೆ** (ನಾ). (ಸೌಭಾಗ್ಯಸೂಚಕವಾಗಿ) ಮದುವೆಯಲ್ಲಿ ಚಿತ್ರ ಬರೆದಿಡುವ ಚಿನ್ನದ ಕೊಡ : ಮದನನ ರತಿಯ ಮದುವೆಯೊಳ್ ಸಿರಿ ಸಂಪದದಿಂ ಪೊನ್ನೆರಣೆಯ ಜವಳಿಗಳಸದ ಮೇಲೊಲಿದಿಕ್ಕಿದ ಮಂದಾರದ ಮಾಲೆಯ ಮಾಳ್ಕೆಯೊಳು ಮದಯೌವನೆಯುನ್ನತಕುಚತಟದೊಳ್ ಚದುರೆಯದೊರ್ವಳ್ ನವನವರತ್ನದ ಪದಕಂಗಟ್ಟಿದಳು (ಜಯನೃ. ೩-೧೪).

[ಪೊನ್ + ಐರಣೆ ( < ಅಯ್ರಣೆ)]

**ಪೊನ್ನೊಡೆಯ** (ನಾ). = ಪೊನ್ನಾಣ್ಮ : "ಪೊನ್ನೊಡೆಯಂ, ತಿಸುಳಿಗೆಳೆಯಂ—ಈ ೨ ಕುಬೇರಂ" (ಅಭಿಧಾ. ೪೯-೩೪) ; ಸಸಿಯಂ ಮೆಯ್ವೆಳಗಿಂದ ಪೊನ್ನೊಡೆಯನಂ ಪೆಂಪಿಂದೆ . . . ಉಬ್ಬಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗೆಂ ಬೆಡಂಗಾದರೋ (ಅಭ್ಯಾ. ೦೩೪). [ಪೊನ್ + ಒಡೆಯ₁]

**ಪೊನ್ನೊರೆ₁** (ನಾ). ೧. ಚಿನ್ನದ ಬಣ್ಣ,–ಮೆರುಗು,–ಕಾಂತಿ : ಪೊನ್ನೊರೆಗನ್ನದೀಪಮೆಱಪಂತಿರೆ ಮಾಣಿಕ್ಯಪ್ರದೀಪಮೇನೆಱಗುಗುಮೋ (ಶಂಕರಾಮ. ೪-೦೪೦). ೨. ಚಿನ್ನದ ಗೆರೆ : ಧರಣೀರಕ್ಷಣಮಂತ್ರಾಕ್ಷರಮಂ ವಿದ್ವಿಷ್ಟಸೈನ್ಯಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ಗೊಗರೆಸೆಗುಂ (ಸುಕುಮಾ. ೩-೦೫) ; ಪೊನ್ನ ಬೆಟ್ಟವ ಬಳಸಿದಂ ಸಜ್ಜನಗೊರ್ಂದು ಪೊನ್ನೊರೆಯನಿತ್ತುದಿಲ್ಲ (ಬಸವಪು. ೬-೩೭). [ಪೊನ್ + ಒರೆ₁]

**ಪೊನ್ನೊರೆ₂** 'ಪೊನ್ನೊಱೆ' ನೋ.

**ಪೊನ್ನೊಱೆ**, ಪೊನ್ನೊರೆ₂, ಹೊನ್ನೊಱೆ (ನಾ). ಚಿನ್ನದಿಂದ ಮಾಡಿದ ಶಸ್ತ್ರಕೋಶ; ಕತ್ತಿಯನ್ನಿಡುವ ಚಿನ್ನದ ಕೋಶ : ಪೊಸದುಕುಲಂ ಬೆಡಂಗುಮರ್ದ [ಪ]ಟ್ಟಗೆ ಪೊನ್ನೊಱೆ ಸೇತಮಾಲೆ ಬಣ್ಣಸರಮುದಾತ್ತಹಸ್ತಕಟಕಂ . . . ತಿರುಳೋಲೆ ಕರಂ ತಮಗೊಪ್ಪೆ (ಕರ್ಣಪಾ. ೬-೮೩) ; ಪೊನ್ನೊಱೆ ಚಿಕ್ಕಗೇಣ್ ಪಟ್ಟಿಯ ಟೊಪ್ಪಿಗೆ (ಶ್ರೀಕೃಷ್ಣ. ೬-೪೦). **ಪೊನ್ನೊರೆ₂** : ಎಡಕರದಿ ಪೊನ್ನೊರೆ ಕಠಾರಿಯಮುನಾಂತು (ಕವಿಕೋ. ೦೭-೩೭). **ಹೊನ್ನೊಱೆ** : ನಱೆ ರೂಪುವಡೆದ ಮನ್ಮಥನೆಂಬ ರತ್ನಹೊನ್ನೊಱೆಯಿಂದಲುಗಿದ ಕೂರಸಿಯು ಮಱೆಯಬಾರದು ಮಹಾದೇವ ಸತ್ಯಾವರನ ಹೆಱಿಹಿಂಗಬಹುದೆ ಬಲ್ಲವರು (ಶೋಕಹ. ೨೯-೩೩) ; ಬಲಗೈಯೊಳಾಂತ ಹೊನ್ನೊಱೆಯ ಕಠಾರಿಯ ಕೆಲಕೂಱೆ . . . 'ಕಲಿಗಳ ದೇವನೊಪ್ಪಿದನು (ಚೆಂತ. ೦-೩೨). [ಪೊನ್ + ಒಱೆ₁]

**ಪೊನ್ನೋಲೆ**, ಹೊನ್ನೋಲೆ (ನಾ). ಚಿನ್ನದ ಓಲೆ : ನಿಕ್ಕುವದಿಂ ತಾಳೋಲೆಯನಿಕ್ಕುವವರ್ಪಲರೊ ನೋಡ ಪೊನ್ನೋಲೆಯನಂತಿಕ್ಕುವವರ್ಪಲರೊ (ರತ್ನಾಕರ. ೧-೨೦೦): ನಾಗಕುಂಡಲಂ ಪೊನ್ನೋಲೆಯುಸೆವ ಕಱೆರನ್ನದಾಳಿ (ಹಂಸರಾ. ೦-೬): ಆತನ ಮತ್ತಗಜಗಮನೆಯ ಕಿವಿಯ ಪೊನ್ನೋಲೆಯಂ ಕಂಡು (ಚಿತ್ರಕ. ೧೦-೯೩). **ಹೊನ್ನೋಲೆ** : ಮಾಗಾಯಿಂಗಳ ಮಾಗ್ಗೆ ಹೊನ್ನೋಲೆಯ ಚಿನ್ನ . . . ಪೆಗ್ಗಳ ಪುತ್ಥಾಕಾರೆಯುಮನಿಱಿ ಮನಂಗೊಳಿಸುತ್ತಿದ್ದಳು (ಅಷ್ಟಕ. ೩-೩೩ ವ). [ಪೊನ್ + ಓಲೆ]

**ಪೊನ್ಬುಟ್ಟ** 'ಪೊಂಬುಟ್ಟಿ' ನೋ.

**ಪೊನ್ಬೆಟ್ಟು** 'ಪೊಂಬೆಟ್ಟ' ನೋ.

**ಪೊನ್ಮಗ** 'ಪೊಮ್ಮಗ' ನೋ.

**ಪೊನ್ಮುಡಿ**, ಹೊಮ್ಮುಡಿ (ನಾ). ೧. ಚಿನ್ನದ ಕಿರೀಟ : ಒದೆದೆ ಪೊನ್ಮುಡಿಯನ್, ಒದೆದೆ ಕೌರವನ ಸಿರಿಮುಡಿಯನ್ (ಅಕ್ಷಯಾ. ೪೩-೬೬೭). **ಹೊಮ್ಮುಡಿ** : ೨. (ಆಲಂ) ಶ್ರೇಷ್ಠವಾದುದು; ಘನತೆಯಿಂದ ಕೂಡಿದುದು : ಎನಿತೊಂದು ನಾಡುಗಳನಾಳಿದುದು ಸೂಸ, ಹೊಮ್ಮುಡಿಯ ನಮ್ಮ ಸೂಸ ! (ಕಾಳಿನಿ. ೩೩-೭೩೩). [ಪೊನ್ + ಮುಡಿ₂]

**ಪೊನ್ಮೋದಿರ**, ಪೊನ್ಮೋಯಿರ (ನಾ). ಚಿನ್ನದ ಉಂಗುರ : ಈ ಕಲ್ಲನ್ನೆತ್ತುವವರಿಗೆ ಈ ಪೊನ್ಮೋದಿರವನ್ನು ಕೊಡುವೆವು (ಹುಂಜಾ. ೦೬೬). **ಪೊನ್ಮೋಯಿರ** : ಅಂದು ನಾನು ನಿನ್ನ ಬೆರಳಿಗೆ ತೊಡಿಸಿದ ಪೊನ್ಮೋಯಿರದೊಡನೆ ನನ್ನ ಹೃದಯವನ್ನೂ ನಿನಗೆ ಕೊಟ್ಟೆ (ವಹಿಶಾ. II, ೧೧೩೨)

[ಪೊನ್ + ಮೋದಿರ. / ಕೊಡ. ಪೊಮ್ಮೋದಿರ]

**ಪೊನ್ಮೋಯಿರ** 'ಪೊನ್ಮೋದಿರ' ನೋ.

**ಪೊಪ್ಪಳಿ₁**, ಪವುಳಿ, ಪಪ್ಪಳಿ, ಪಾಪ್ಪಳಿ, ಪೊಪ್ಪುಳಿ (ನಾ). ೧. (ಬೇರೆ ಬೇರೆ ಬಣ್ಣಗಳಿಂದ ಕೂಡಿದ) ಒಂದು ಬಗೆಯ ಬಟ್ಟೆ,–ವಸ್ತ್ರ : ಹಳದಿ ಪೊಪ್ಪಳಿ ಚಂದ್ರಗಾವಿ . . . ಬಿಳುವಟ್ಟೆ ನಾನಾ ವರ್ಣದ ಜವಳಿಯ ಮಳಿಗೆಗಳೆಸೆದುವರ್ತಿಯಲಿ (ಕಂಪರಾ. ೬-೭೦). ೨. ಒಂದು ಬಗೆಯ ಸೀರೆ : ಪೊಪ್ಪಳಿ ಕರ್ಪಾಡಗಳೆಂಬ ಸೀರೆಗಳೊಪ್ಪಿ ಮೆಱೆಯೆ (ಅಭಿನವಾ. ೯-೦೪) ; ಪೊಪ್ಪಳಿಯಾ ನಾಯಕಿ ರಂಗು ಕೊಪ್ಪಣದ ಬಣ್ಣವನುಟ್ಟು ರಾಯಸಂದಣಿಯ ನೋಡುವರು (ಸೌಂದರಾ. ೬-೭೦). 'ಸಾರಪೊಪ್ಪಳಿ' ಪರಾ. ೩. ಚೌಕಳಿಯ ಆಕಾರವನ್ನು ಅಚ್ಚೊತ್ತಿರುವ ಬಟ್ಟೆ ; ಚೌಕಾಕಾರವಾದ ಅಚ್ಚುಗಳುಳ್ಳ ಬಟ್ಟೆ : ಅವಳು

ಉಟ್ಟಿರುವ ಹಸುರು ಪೊಪ್ಪಳಿ ಸೀರೆ ತುಂಬ ಚೆನ್ನಾಗಿದೆ (ಊಊ). **ಪಪ್ಪುಳಿ**: ೧. 'ಪಪ್ಪುಳಿಬಚ್ಚಿಡ' ಪರಾ. **ಪಪ್ಪಳಿ**: ೩. 'ಪಪ್ಪಳಿಬಟ್ಟೆ' ಪರಾ. **ಪಾಪ್ಪಳಿ**: ೨. ಬರಹದ ಪಾಪ್ಪಳಿ ಮಂಜಿಷ್ಟ ಚೌಪಲ್ಲಿ ಮೇಚಿವಸ್ತ್ರಗೊಳ ಚಂದ್ರಗಾವಿ (ಜ್ಞಾಶಕ. ೩೬-೯೭). **ಪೊಪ್ಪುಳಿ**: ೧. ಬಿಳಿದು ಪೊಪ್ಪುಳಿ ಚಂದ್ರಗಾವಿಗಳಿಗೆ ಪೊಸತಹ ಪಂಚಿಟಿಕೆ ಗುಜ್ಜರಿ ದುಕೂಲಗಳ ಅಳವಡಿಸಿ. . . ಶ್ರೀಕೃಷ್ಣನೋಲಗಶಾಲೆ ರಂಜಿಸಿತು (ಕೋಡಗಿಯ. ೩-೩೮). ೨. ಪೀತಾಂಬರ ಪೊಸ ಚಂದ್ರಗಾವಿ ಪೊಪ್ಪುಳಿಯ ಮಿಸುಪ ಶುಭ್ರದ ದಿವ್ಯ ದುಗುಲದ ನಿಜಿಗಳ ಶಶಿಮುಖಿಯರು ರಂಜಿಸಿದರು (ಕಂಶಪ. ೨೯-೯೯); ಪೊಪ್ಪುಳಿಯು ತಿಗುಳಿ ರಾಗಾವಳಿಯ ರತ್ನಾವಳೀ ಧಾವಳಿ ದಿವ್ಯತಾರಾವಳಿಯ . . . ನಾನಾವಿಧದ ಸೀರೆಗಳ ಚಿನ್ನದೆಳೆವೊಗ್ಗ ಕಂಚುಕವ ಬೇಹನಿತ ತೆಗೆದು (ಶಶಪೋ. ೧೭.೭೦). ೩. ಸುಮಂಗಲಿಯರು . . . ಬಣ್ಣಬಣ್ಣದ ಆನೆಪೊಪ್ಪುಳಿ, ಕವಡೇ ಸೀರೆಗಳನ್ನುಟ್ಟು . . . ಹೊರಟರು (ಮುಕವಾಂ. ೩೯).
[ದೇ.₂ ತೆಲು. ಪೊಪ್ಪಳಿ, ಪಪ್ಪಳಿ./ಮರಾ. ಪೋಫಳೀ]

**ಪೊಪ್ಪಳಿ₂** 'ಪೊಪ್ಪಿಳಿ' ನೋ.

**ಪೊಪ್ಪಿಳಿ, ಪೊಪ್ಪಳಿ₂, ಪೊಪ್ಪುಳು** (ನಾ). ೧. ಒಂದು ಬಗೆಯ ಮರ: ಮಡ್ಡೀಹಂಬು, ಪೊಪ್ಪಿಳಿಮರ, ಸುಣಾಮರ (ವೈಶಿಗಿ. ೩೩-೧೯೧೭). ೨. (ಹಳದಿಯ ಬಣ್ಣದ ಪುಡಿಯನ್ನು ಕೊಡುವ) ಒಂದು ಬಗೆಯ ಪೊದೆ: (?). **ಪೊಪ್ಪಳಿ₂**: ೧. "ಮಡ್ಡೀಹಂಬು, ಪೊಪ್ಪಳಿಮರ, ಗುಣಾಮರ, ಮಡ್ಡಿಬನ್ನಿ, ಮಡ್ಡಿಚಕ್ಕೆ" (ಸಸ್ಯ. ೯೦); ಈ ವೃಕ್ಷಗೆ ಸಲ್ಲುವ . . . ಪೊಪ್ಪಳೀಗಿಡಗಾವಲು ಬ್ರಾಹ್ಮಣನಿವೇಶನ ಶೂದ್ರನಿವೇಶನ (ಹುಕ್ಕ. ೩); ಪೊಪ್ಪಳಿ, ಕುರುಡಿ, ಸಣಬು, ನೀಲಿ (ವಸ್ತುಕು. ೨೩೮). **ಪೊಪ್ಪುಳು**: ೧. ಸೇಬು ಅಂಜೂರ ಹಲಸು ಪೊಪ್ಪುಳು ಶೀತಫಲವು ಖರ್ಜೂರದ ಮರನು (ಪಂದಿ. ೯-೨೭). [?]

**ಪೊಪ್ಪು** 'ಪರುಪು' ನೋ.

**ಪೊಪ್ಪುಕ** 'ಪಪ್ಪುಕ₂' ನೋ.

**ಪೊಪ್ಪುಳಿ** 'ಪೊಪ್ಪಳಿ₁' ನೋ.

**ಪೊಪ್ಪುಳು** 'ಪೊಪ್ಪಿಳಿ' ನೋ.

**ಪೊಪ್ಲಿ** 'ಪಪ್ಪುಳಿ' ನೋ.

**ಪೊಮ್ಮ, ಪೊಮ್ಮು₂, ಪೊಮ್ಮೆ** (ನಾ). ೧. ಒಂದು ಬಗೆಯ ತೆರಿಗೆ: ಸನ್ನಿಯವೊಳಗಣ ಕೊಡದೆಣ್ಣೆ ಯಲೆಯ ಹೇರುಗಳ ಪೊಮ್ಮ ಕಿರುಕುಳ ಧಾನ್ಯವರ್ಗ್ಗಂಗಳ ಮೊಟ್ಟೆಯ ಸುಂಕವೊಳಗಾಗಿ (ಎಇ. XIX. ೩೯-೩೦; 1144). **ಪೊಮ್ಮು₂**: ೧. ಪಟ್ಟಿ ಪ್ರತಿಕೊರಕ್ಕೆ ಸಲತಕ್ಕ ಪೊಮಿನ ಹಣವನ್ನು ಕೇಳದೆ (ಪ್ರಕಆ. ೦೧೨೯. ೯೮-೦೦; ಸು. 1711); ಪೊಮ್ಮು ಕೈದುಡುಕುಗಳಂ ಪುಟ್ಟಿಸಿ ಪೊಣರ್ವ ಸೆಟ್ಟಿಗಳಟ್ಟುಳಿಯಂ ನಿಲಿಸಿ ಸುಂಕವಂ ಬಾಳಿಸಿದಂ (ಕೆಸಕ್ಕೆ. ೭-೩೦); ಸುಂಕ್ಕಾ ಪೊಂಮು ಮಾರ್ಗ ಕರಗ ಪಡಿ ಸುಂಕಾ ಹತ್ತಿ ಪೊಂಮು ಅಲೆಸುಂಕಾ ಕಬ್ಬಿಣದ ಪೊಮು (ಪ್ರಕಆ. ೦೯೩೯. ೪೨-೯೩; 1623); ಆ ಸಿದ್ದಾಯ ಈ ಪೊಮ್ಮು . . . ಸತ್ರ ಹಣಕ್ಕೂ ಕೊಸೆ ಮೊದಲಿಲ್ಲದೆ ಹಣ ಹೊನ್ನು ತೆರುತಿರಬೇಕು (ಕಟ್ಟಿಆ. ೦೩೩-೭). ೨. ಹೊಗೆಸೊಪ್ಪಿನ ಮೇಲೆ ಹಾಕುವ ತೆರಿಗೆ: (?). **ಪೊಮ್ಮೆ**: ೧. ಪೋಮ ಸುಂಕ ದೇವಾದಾಯ ಬ್ರಂಹಾದಾಯ ನಟ್ಟ ಕಲ್ಲು ಬಿಟ್ಟ ಬಸವ ಮೊದಲಾದುವುಗಳನು ಈ ಮಠಕೆ . . . ಕೊಡುವುದು (ಪ್ರಕಆ. ೦೯೩೦, ೦೩-೩೬; 1345).

**ಪೊಮ್ಮಿನ ಚಾವಡಿ** = ಪೊಮ್ಮು ಸುಂಕವನ್ನು ವಸೂಲು ಮಾಡುವ ಚಾವಡಿ: ಪೊಮ್ಮಿನ ಚಾವಡಿ – ಇದರಲ್ಲಿ ಸೀಮೆಯಲ್ಲಿರುವ ತ್ಯಾಜಗಾರರು, ಮಾನ್ಯಗಾರರು . . . ತುರುಕರು ಮುಂತಾದ ಜನಗಳು ವ್ಯಾಪಾರವನ್ನು ತರುವಲ್ಲಿಯೂ ಕೊಡುವಲ್ಲಿಯೂ ಸರಕಾರದ ಶೀರ್ವ ಆಗದಿದ್ದ ಪದಾರ್ಥಗಳನ್ನು ತೆಗೆದುಕೊಳ್ಳುವಲ್ಲಿಯೂ ಅರ್ಧಸುಂಕವನ್ನು ತೆಗೆದುಕೊಳ್ಳುವುದೆಂದು ನಿಬಂಧನೆ ಮಾಡಿದರು (ಬುಹಾವಂ. I. ೦೯೮). [?]

**ಪೊಮ್ಮಗಿಲ್** (ನಾ). ಚಿನ್ನದ ಪ್ರಾಕಾರ,–ಗೋಡೆ: ಪರಿಚೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊದಾವರೆಯ ರಜದಂತೆ ನೃಪಮಂದಿರಮಂ ಬಳಸಿರ್ದ ಪೊಮ್ಮಗಿಲ್ ಸೊಗಯಿಸುಗುಂ (ಸುಕ್ತಿಕ. ೨-೬೪); ಸರಸ್ಸಮಿತಿ ಸುತ್ತಿ ಪೊಮ್ಮಗಿಲ ಸುತ್ತಲುಂ ರಂಜಿಕುಂ (ಕಂಠಾಪು. ೪-೦೩೦). [ಪೊ (< ಪೊನ್) + ಮಗಿಲ್]

**ಪೊಮ್ಮಡಿಬೆಳ್ಳಿ** 'ಪೊಮ್ಮಡಿವೆಳ್ಳಿ' ನೋ.

**ಪೊಮ್ಮಡಿವೆಳ್ಳಿ, ಪೊಮ್ಮಡಿಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ; ಚೊಕ್ಕ ಬೆಳ್ಳಿ: ರಾಜಮಂದಿರದ ಮುಂದುಗಡೆ ನೆಡಿಸಿರ್ದ ತೋರಣಸ್ತಂಭಯುಗಳಕ್ಕೆ ಪೊಮ್ಮಡಿವೆಳ್ಳಿದಗಡುಗಳನು ತೊಡಿಸಿದಂದದೊಳ್ಪ ವಾಳ್ಕೆಯಿಂ ಧವ ಳಾಂಶುವಿಡಿಕಿಜಿದ ಪೊಸದೂವಟದ ಕಾಲ ಕುಪ್ಪಸವ ತೊಡಿಸಿದಳದೋರ್ವ ಕಾಮಿನಿ ಪರವೆನಾಚಿಗೆ (ಶಾಂಪಕ. ೭-೨೪). **ಪೊಮ್ಮಡಿಬೆಳ್ಳಿ**: ಶ್ರೀಗಂಧ ಮಂಚ ಪೊಮ್ಮಡಿಬೆಳ್ಳಿಮಂಚ ಪಂಚರತ್ನದ ಮಂಚ ನವರತ್ನಮಂಚ ಗಳಂಚಿತವಾದುವಲ್ಲಲ್ಲಿ (ಕಕಕ. ೦೩-೨೩); ರಂಜಿಪ ಪೊಮ್ಮಡಿಬೆಳ್ಳಿಯ ಪೂವಪರಂಜಿಯ ಪೂಗಳ ತಂದು . . . ಆದಿಜಿನಗೆ ಪುಷ್ಪಾಂಜಲಿ ಮಾಡಿದರು (ಕಕಕ. ೭೦-೦೪).
[ಪೊಮ್ಮಡಿ₂ (p ← ತೆಲು. ಪಮಿಡಿ = ಚಿನ್ನ) + ಬೆಳ್ಳಿ]

**ಪೊಮ್ಮತ್ತಿ** (ನಾ). ಚಿನ್ನದ ಬಣ್ಣದ ಮಚ್ಚೆ,–ಕಲೆ: ಉತ್ತುಂಗಕುಚಾದ್ರಿಯ ಪೊಮ್ಮತ್ತಿಯ ಪೊಳೆ ಪೊಳೆತ ಜರಗಿನಂತಿರೆ ಕಾಣಲ್ಕೆತ್ತ ಸತಿಗಾಯ್ತು ಸುತನಂ ಪೆತ್ತಂತಪ್ಪೊಂದು ಸಂತಸಂ (ಅರಕಿ. ೨-೪).
[ಪೊ (< ಪೊನ್) + ಮತ್ತಿ₃]

**ಪೊಮ್ಮದಿಲ್, ಪೊಮ್ಮದಿಲು** (ನಾ). = ಪೊಮ್ಮಗಿಲ್: ನಿತಾಂತವೋಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ದವುದೆಂಬಿನಂ ಸೊಗಯಿಪ್ಪುದು ಪೊಮ್ಮದಿಲುಗ್ರಾಂಶುದ್ಗತವಾಗಿರೆ ಕೆಮ್ಮುಗಿಲ್ (ಕ್ರಕ್ಕಕು. ೨-೯೦); ವರ್ಗಪಂಚಮಕ್ಕೆ . . . ಪೊಮ್ಮದಿಲ್, ಪೊಮದಿಲ್ (ಕವಿರ. ೦೩೦ ವೃಹೋ). **ಪೊಮ್ಮದಿಲು**: ಇಂಬುವೆತ್ತಿಹ ರಾಜಗೃಹಲಕ್ಷ್ಮಿ ಯುಟ್ಟ ಪೀತಾಂಬರವೆನಿಸಿ ಪೊಮ್ಮದಿಲು ತಾಂ ಬಳಸಿಹುದವಳಿಕ್ಕಿದ ಮಕುಟ ತಾನೆಂಬಿನ ಕರುಮಾಡವಿಹುದು (ಜಾಗಕು. ೩-೬೭).
[ಪೊಂ (< ಪೊನ್) + ಮದಿಲ್]

**ಪೊಮ್ಮದಿಲು** 'ಪೊಮ್ಮದಿಲ್' ನೋ.

**ಪೊಮ್ಮರೆ, ಹೊಮ್ಮರೆ** (ನಾ). ಚಿನ್ನದ ಬಣ್ಣದ ಜಿಂಕೆ; ಸುವರ್ಣ ಮೃಗ: ತತ್ಪರರೂಪಣಕಾರಕಳಂ ಕೊಂದೆಡೆ ಪೋಗಿ ಪೊಮ್ಮರೆಯ ನೆಚ್ಚಿಡೆ ತಪ್ಪದಿದಪ್ಪುದು (ಪಂಪಕಾ. ೪-೦೯); ಮಜಿದು ಗಿರಿತಟದೊಳ್ಲಿಯ ಪೊಱಗಲೊಡಂ ಪೊರೆದು ಪೊನ್ನ ರಜದಿಂ ಮೆಯ್ಗಳ್ ಮಿಱುಮಿಱನೆ ಮಿಱುಗೆ ಪೊಸ ಪೊಮ್ಮರೆಯಂತಿರೆ ಪರೆವುವಲ್ಲಿ ಹರಿಣಗಣಂಗಳ್ (ಅಜಿತಪ. ೯-೯೦): ಪೊಮ್ಮರೆವೋಲ್ ಪೊಳೆದು ಪಾಱಿ ಪೋದಂ ಶ್ವೇತಂ (ಕವಿರ. ೩. ೨೩೩ ವೃಹೋ). **ಹೊಮ್ಮರೆ**: ತಾ ಬಳಿಕ ಭೂಸುರನಾಲಯವ ಸಾರಿದನು ಹೊಮ್ಮರೆಯಾಕೃತಿಯ ತಾಳಿ (ಕುಪ್ರಾಅ. ೬೦೩. ೨೬-೨); ತೋಜಿದನು ತಾ ಬಳಿಕವಗೆ ಹದಿನಾಱುಬಣ್ಣದ ಪುಟದ ಚಿನ್ನಕೆ ನೂಱುಮಡಿಯೆನೆ ಹೊಳೆ ಹೊಳೆವ ಹೊಮ್ಮರೆಯು ರೂಪಕವ (ಕೊರಿಶಾ. ೩-೬-೦೪); ಕಲಿಧನ್ವಿ ಹಳುವ ಹೊಕ್ಕನು ಹೊಮ್ಮರೆಯ ಹಿಂದೆ (ಶ್ರೀರಾಮಾ. ೨೩೩-೦೯೦).
[ಪೊಂ (< ಪೊನ್) + ಮರೆ₃]

**ಪೊಮ್ಮಳೆ** 'ಪೊಮ್ಮಟಿ' ನೋ.

**ಪೊಮ್ಮಟಿ, ಪೊಮ್ಮಳೆ, ಹೊಮ್ಮಳೆ** (ನಾ). ಚಿನ್ನದ ಮಳೆ; ಸುವರ್ಣ ವೃಷ್ಟಿ: ಅಲರ್ವಟಿ ಪೊಮ್ಮಟಿ ಮಂದಾನಿಳನಿಮಿಷ ದುಂದುಭಿಸ್ವನಂ

ದಿವಿಜಮುಕೋಟಪೀಠಾಪೋದಾನಸ್ವನವಿಳಾಸ ಳಾ ಶ್ವರ್ಯಮಾಯ್ತು ಪಂಚಾಶ್ಚರ್ಯಂ (ಚಂದ್ರಪ್ರ. ೧೯-೨೨); ನಿರವಿಸೆ ಮನುಷ್ಯಧರ್ಮಂ ಪರಮಾಹನ ಮೇಘ ಬಂದನವ್ಮಂಗಳದೊಳ್ ಸುರಿಗುಂ ಪೊನ್ಮಳೆ ಭರದಿಂ ಬರವೇಟ್ಟುಂ ಧನದನೆಟ್ಟು ಪೋಗದ ಮುನ್ನಂ (ಕಾಮ. ೬-೨೯೬). **ಪೊನ್ಮಳೆ :** ಲೋಕಮೃತ್ಯುಮೆನೆ ಪೊಂಮಳೆಯುಂ ಕರೆವಂ (ಎಕ. VI, ಕಡೂರು. ೦೩೯-೨೩; 1178); ಪೊನ್ಮಳೆಯನೀವುತ್ತ ಕೈಲಾಸ ಸೂಱೆಗೊಟ್ಟು (ಚಿಕ್ಕೃ. ೮-೦-೮); ವಿಳಸದ್ಭಕ್ತಿಗೆ ಕೂರ್ತು ಸಪ್ತದಿನಪರ್ಯಂತಂ ನೆಲಂದೀವಿ ಪೊನ್ಮಳೆಯುಂ ಪೂಮಳೆಗೂಡಿ ತಾಂ ಕಱಿಯಿಸುತ್ತಾನಂದಮಂ ಬೀಱನೇ (ಕೃಷ. ೩೬-೦೨೬). **ಹೊಮ್ಮಳೆ :** ಮೆಱೆವನೆಱೆಯುಂಗನಾತನ ಕಂಚುಕಿನ ಸುತನೆಱಗಿದವರ್ಗೆ ಮಳೆಯೆಱಗಿದವೊಲ್ ಕಱೆವಂ ಹೊಂಮಳೆಗಳಂ (ಎಕ. XI. ದಾವಣ. ೨೩-೨೦; 1224); ಸಿರಿಯಾಳನಂದದಲಿ ಆ ಸುತನನರ್ತಿಸನು ಹೊಮ್ಮಳೆ ಸೂಸುವೇಳೆನು ಚೋಳನಂತೆ (ಬಸವ. ೯-೩೩); ಸುರವಾಕ್ಯ ಸುರಭೇರಿ ಹೂಮಳೆ ಹೊಮ್ಮಳೆ ಸುರಭೀರವವೆಂದಿಂತು ಸುರಕೃತ ಪಂಚವೈಭವಗಳಾದುವು (ಚಾಕ. ೩-೦೨೦).

[ ಪೊಂ (< ಪೊನ್) + ಮಳೆ$^{3}$ ]

**ಪೊನ್ಮಾಡ** (ನಾ). ಚಿನ್ನದ ಉಪ್ಪರಿಗೆ,—ಮಹಡಿ : ಹರಿಣಾಕ್ಷಿಯಾದರ ದೊಳೀಕ್ಷಿಸುವಿಚ್ಛೆಯಿಂದ ಪೊನ್ಮಾಡಮಂ ಪರಿದೆಯ್ದುವಾಗ (ರಾಜಶೇ. ೦೩-೯೯); ಬಳಸಿದ ಸಾಲದ ತನೆ ದೇವೂಳಗಣ ಪೊನ್ಮಾಡದಮರ್ದ ಕೇರ್ತಿ ಮಣಿಮಂಗಳಕಳಶಕಾಂತಿ ಮಧುವೆನೆ ಜಳರುಹಮನಿಸಿದುದು ಕಮಗೆ ಭೂವರಭವನಂ (ಕೃಷ. ೯-೮೯). [ಪೊಂ (< ಪೊನ್) + ಮಾಡ$_{1}$]

**ಪೊನ್ಮಿಕೆ** (ನಾ). ವ್ಯಾಪ್ತಿ; ವಿಸ್ತಾರ; ಹರಹು : ಸಮುದ್ರದದೊಳ್ಕೈತಂದು ಏಟರಾ ನೆವದಿ ಬೆಲಗೇಳೀ ಪೊನ್ಮಿಕೆಯ ಜಾಣ್ಮೆಯೊಳು ಬಗೆಗಳ ನೆಮ್ಮದಿಯನರಿಯತ್ತೆ (ಕೃಕಾರ. ೯-೩೨). [ಪೊಮ್ಮು$_{1}$ + —ಇಕೆ]

**ಪೊನ್ಮಿಗ, ಪೊನ್ಮಿಗ, ಹೊನ್ಮಿಗ** (ನಾ). = ಪೊನ್ಮರೆ : ಪೊನ್ಮಿಗವಿರ ದೊಯ್ದುದು ಸೀತೆಯನಗಲ್ದು ನಿಲಲೀಯದಲ್ಲಿ ದಶರಥಸುತನಂ (ರಾಮಾಂಕು. ೦೦೨); ಪಿಡಿಯಲ್ ಪೊನ್ಮಿಗವೆಂದು ಪೋಗೆ ರಘುಜಂ ಭೂಪುತ್ರಿ ಸಂನ್ಯಾಸಿ ಯೆಂದಡಿಯಿಟ್ಟಳ್ (ಸೂಕ್ತಿಸು. ೯೩); ರಾವಣಂ ದುರುಳ ಮಾರೀಚಂಗೆ ಪೇಳಲ್ಕವಂ ಮುದದಿಂ ಪೊನ್ಮಿಗಮಾಗಿ ತೋರಿದಲ್ (ದಶಾಕ. ೬-೨೦೬). **ಪೊನ್ನಿಗ:** ಗಮಾಕಿವರ್ಯನ ವೇಣುವಣಿಗೆ . . . ನರ್ತಿಸುವಂತೆ ನಲಿದುದಾ ಪೊನ್ನಿಗಂ (ಶ್ರೀರಾಮ. ೨೬೨-೦೨೬). **ಹೊನ್ಮಿಗ :** ಸುಬುದ್ಧಾ ಹೊನ್ಮಿಗವೆಯ್ದೆ ಸೀತೆಯ ಖಳಂ ಕೊಂಡೊಯ್ದು ತಾಂ ದಾಟ್ಟನೇ (ಸೂಕ್ತಿಸು. ೯೨); ರಾಘವನು ಹೊನ್ಮಿಗವುರುಕಪಟವೆಂದರಿಯನೇ (ಜೈಮಿ. ೯-೦೩); ಇದುವೆ ಹೊನ್ಮಿಗವಧಿಗೆ ಕೋ . . . ಎನುತಸುರ ರಾವಣನನ್ನು ಮೂದಲಿಸಿ (ಕೌಶಿಕ. ೩೩-೩೦).

[ಪೊಂ ( < ಪೊನ್ ) + ಮಿಗ]

**ಪೊನ್ಮಿಣೆ, ಹೊನ್ಮಿಣೆ, ಹೊನ್ಮಿಳೆ** (ನಾ). ಬಂಗಾರದ ಸರಪಣಿ : ಪಿಡಿದು ಪೊನ್ಮಿಣೆಯು ರನ್ನದ ಮಣೆಯ ಮೇಲೆ . . . ಕಡು ನೀಱೆಯೊರ್ವಳಯ್ಯಲನಾಡುತಿರ್ದಳು (ಅಶೋಕ. ೬-೨೩). **ಹೊನ್ಮಿಣೆ :** ಮಡದಿಯರು ಹೊನ್ಮಿಣೆಗಳನು ಕೈದುಡುಕಿ ತೆಗೆವ ಬೆಡಂಗು ಮನ್ಮಥ ಕಡುಗಿ ಬಾಳಿಗಿವಂದದವಾಗೆ . . . ನಲಿದೊಲೆದಾಡಿದರು ಕೋಮಳೆ ಯರುಯ್ಯಲೆಯ (ಜೈಮಿ. ೦೩-೬೦); ಬಿಗಿದ ಬಂಚಿಯ ಹೊನ್ಮಿಣೆಯ ಹೊರಚೆಗಳ . . . ದಂತಿಯ ಹೆಗಲ ಹೊಂಗದ್ದುಗೆಗೆ ಬದಯಂಗೈದನಾ ಭೂಪ (ಕುಮಾರ. ೦೨-೯೬); ಒಗುಮಿಂಗೆಯೊಲವಿಂದುಯ್ಯಲನೇಱಿದ ಮಾಗುದಿಯಲಘುಕಾಚಮಧ್ಯದ ಹೊನ್ಮಿಣೆ ಸೊಗಯಿಸಿದುದು (ಜೈಮಿ. ೦೯-೩೩). **ಹೊನ್ಮಿಳೆ :** ಖಂಡಿಸಿ ಕಳಚಿದನು ಮೊಗರಂಬವನು ಹೊನ್ಮಿಳೆಯು ಕಣೆಂ‌ಪ ಮುಱಿದು ತಱಿದನು ಸುತ್ತ ಬಂಚಿಗಳ (ಕುಮಾರವ್ಯಾ. ೬-೫೨); ಹೊರಚೆ ಹೊನ್ಮಿಳೆ ನಿಗಳ . . . ಕರದ ಹೊಗರಂಬದ ವಿಲಾಸದಿನೆಸೆದುದಾ ದಂತಿ (ಕೂರ್ಮ. ೬-೨೯-೦೯).

[ ಪೊಂ (< ಪೊನ್) + ಮಿಣೆ$_{2}$ (< ಮಿಳೆ$_{2}$) ]

**ಪೊನ್ಮಿನ್** (ನಾ). ಹೊಳೆಯುವ ನಕ್ಷತ್ರ ; ಪ್ರಕಾಶಮಾನವಾದ ತಾರೆ : ಇದು ಬಾನಿಂ ಬರ್ಪ ಪೊನ್ಮಿಂಚೊಣರ ತೆಱನಿದಲ್ತೊಂದ ಮಳ್ಳಿಂಚು ಮಿಂಚಲ್ಲದಿವರ್ಚಂದ್ರಾರ್ಕರೇಂ . . . ಎಂದುರ್ವಿದಲಂಬಿ ನೋಡೆ ಭೂಪಂ ಗಗನದಿನಿೞಿದರ್ಚಾರಣರ್ಚಾರುರೂಪರ್ (ಅರ್ಕಶೇ. ೨-೩೯). [ಪೊಂ (< ಪೊನ್) + ಮಿನ್$_{2}$]

**ಪೊಮ್ಮು$_{1}$, ಹೊಮ್ಮು$_{2}$** (ನಾ). ೧. ಆಧಿಕ್ಯ ; ಹೆಚ್ಚಳ : ತರುಲತಾ ಗುಲ್ಮಂಗಳ ಪೊ[ಪಾಠಾಂ. ಹೊ]ಮ್ಮಿನಿಂ ಪೆರ್ಕಣಂಗಯ್ದು ಸೋಗೆಗಳಿಂದೆ . . . ತಂಬೆಲರಿಂದೆ ತಾಮ್ಮನೋಹರದ ವನಮಾಧ್ಯದೊಳ್ ಸರಸಿ ಮೆಱೆದುದು ಕೂಡೆ ಸೊಗಸುವೆರಸಿ (ಸೌಂದರ. ೬-೦೮). **ಹೊಮ್ಮು$_{2}$ :** ೨. ಹುರುಪು ; ಉತ್ಸಾಹ : ಬಲುಭಟರ ಹೋಳಿಗಳ ಹೊಮ್ಮುಱಿದು ಕೊಟ್ಟನು ನಳನ ವಶಕೆ (ಕೂರ್ಮ. ೬-೩-೦೦) ; ಹೊಸಹರೆಯದ ಹೊನ್ಮಿನ ಬಾಲೆಮಂಗಳು ಜಸವಡೆದಸಿದರೇನೆಂಬೆ (ಕಂಠೀ. ೨೯-೯೦). ೩. ಜಂಬ ; ಗರ್ವ ; ಸೊಕ್ಕು : ಹೊನ್ಮಿನಲಿ ಸಿಂಹಾಸನಾಗ್ರದ ಸೊಮ್ಮಿನಲ್ಲಿರೆ ನೀನು ನಮ್ಮವರೊಮ್ಮದೀ ಮಾತಿದನು ಮಾಡಿದ ನೋಡಿ ಬಳಿಕವಗೆ (ಸಂಕಷ. ೩-೦೦) ; ಕಾಗೆಕೂಟದೊಲೆಲ್ಲ ಕಲಗೆಟ್ಟಾಗಲಾಡಿದ ಹೊಮ್ಮು ನೃಪನೆಡೆಗಾಗುವದೆ (ಚಿಕ್ಕೃ. ೬-೫೯). ೪. ಕಾರ್ಯವ್ಯಾಪ್ತಿ ; ನಡುವಳಿಕೆ ; ವ್ಯವಹಾರ : ಕಮ್ಮಯನ ಚೀಲನ ಹೊಮ್ಮರಡು ಒಂದಯ್ಯ (ಸರ್ವಜ್ಞ. ೦೦೦೯). ೫. ಸತ್ತ್ವ ; ಶಕ್ತಿ : 'ಹೊಮ್ಮಿಱ' ಪರಾ.

**ಪೊಮ್ಮಿದ** = ಮಿಗಿಲಾದವನು : ದಿಮ್ಮಿದರಕ್ಕರಕ್ಕಱೆವರೊಳ್ ನಾಡಿಯೊಳ್ ಕಡುಜಾಣರಂದದರೊಳ್ ಪೊಮ್ಮಿದರೊಂದಿ ನಿಂದ ಸಿರಿಯೊಳ್ (ಉದ್ಭಟ. ೦೦).

[< ಪೂರ್ಣ./ತಮಿ. ಪೊಮ್ಮಲ್ ; ತೆಲು. ಹೊಮ್ಮು, ಒಮ್ಮು]

**ಪೊಮ್ಮು$_{2}$** 'ಪೊಮ್ಮ' ನೋ.

**ಪೊಮ್ಮುಗಿಲ್** (ನಾ). ಹೊನ್ನಿನ ಮಳೆಯನ್ನು ಸುರಿಸುವ ಮೋಡ : ಎಱಗಿದ ಜನಕ್ಕೆ ಪೊಮುಗಿಲೆಱಗಿದವೊಲು ಲೋಕ ಮೃತ್ಯುವೆನೆ ಪೊಂಮಳೆಯುಂ ಕಱೆವಂ (ಎಕ. VI, ಕಡೂರು. ೦೩೯-೨೩ ; 1178).

[ಪೊಂ (< ಪೊನ್) + ಮುಗಿಲ್]

**ಪೊಮ್ಮೂಡಿಗೆ, ಹೊಮ್ಮೂಡಿಗೆ** (ನಾ). ಚಿನ್ನದ ಬತ್ತಳಿಕೆ : ಪೊಳೆವ ಪೊಮ್ಮೂಡಿಗೆಯ ಪೊಂಗರಿಯ ಬಾಣಗಳ ನಲವಿಂದೆ ಸಿಂಜನಿಗೆಯಳವಡಿಸಿ (ಶಶಿಕೋ. ೦೨-೩೬). **ಹೊಮ್ಮೂಡಿಗೆ :** ಉಗಿದನುರಗಾಸ್ತ್ರವನು ಹೊಮ್ಮೂಡಿಗೆಯೊಳಗೆ ಹೊಱಕಯ್ಯ ಗಾಳಿಗೆ ಹೊಗೆಯ ಹೊದಱಿನ ಹೊರಳಿ ಹಬ್ಬಿತು ಕೂಡೆ ಕಿಡಿಯಿಡುತ (ಕುಮಾರ. ೨೩-೯); ಹೊಮ್ಮೂಡಿಗೆಯ ಹೊದಱಿಗಳ ಬಿರುದಿನ ಬೀಡುಕಾಱರು ಬೀದಿವರಿದಟ್ಟಿದರು ಬಲಿ ಮುಖರ (ಕೂರ್ಮ. ೬-೩೩-೦೦). [ಪೊಂ (< ಪೊನ್) + ಮೂಡಿಗೆ]

**ಪೊಮ್ಮೆ** 'ಪೊಮ್ಮ' ನೋ.

**ಪೊಮ್ಮೊಗೆ** (ನಾ). ಚಿನ್ನದ ಪಾತ್ರೆ : ವೃತ್ತಕುಚಾನ್ವಿತೆಯೊಡಲ ಮಾಸಿನ ಬೀಜ ಮತ್ತೊಂದು ಶಿಶುವಾಗಲೆನುತ ಬತ್ತಲಾದೊಳಗಿವ ತೆಱದಿಂದೆ ಪೂರ್ಣರು ಚಿತ್ರಿಯವೆತ್ತ ಪೊಮ್ಮೊಗೆಯು (ಸೋಮಶೇ. ೦೩-೨೨).

[ಪೊಂ (< ಪೊನ್) + ಮೊಗೆ$_{2}$]

**ಪೊಯ್$_{1}$, ಪುಯಿ$_{1}$, ಪೊಯಿ, ಹುಯ್$_{1}$, ಹುಯಿ$_{1}$, ಹುಯ್ಯು$_{1}$, ಹೊಯ್$_{1}$, ಹೊಯಿ$_{1}$, ಹೊಯ್ಯು$_{1}$** (ಕ್ರಿ). ಪೊಯ್ದು$_{1}$, ಹುಯ್ದು$_{1}$, ಹೊಯ್ದು$_{1}$ (ಭೂತಕೃ). ೧. ಹೊಡೆ ; ಬಡಿ ; ಅಪ್ಪಳಿಸು : "ಪೊಯ್—ತಾಡನೇ" (ಶಮದ) ; ಕಡುಗುಣ್ಪುವೆರಸು ದಾಂಟು ಗಡ ಮೇರೆಯನೆಂದು ವಜ್ರವೇದಿಕೆಯುಂ ತಾಂ ತೊಡೆಸಕ್ಕೆ ಪೊಯ್ವವೊಲ್

ಪೊಯ್ದೊಡನೊಡನುಚ್ಚಳಿಪುವಿದಱ ತುಂಗತರಂಗಂ (ಆದಿಪು. ೧೨-೧೨೯): ಕೆಲರಂ ದೆಸೆವಲಿಗೆಯ್ದುಂ ಕೆಲರಂ ಭುಜಬಲದಿನಱೆದು ಶಿಲೆಯೊಳ್ ಪೊಯ್ದುಂ (ಗದಾಯು. ೩-೧೦). ೨. ಕಡಿ; ಕತ್ತರಿಸು: ಇಸುವಿಡುವ ಪೊಯ್ವ ಕುತ್ತುವ ಮಸೆಯಂ ಪತ್ತಿಸುವ ಕೈದುಬಿನ್ನಣವಂ ಈಕ್ಷಿಸಲು (ಪುಷ್ಪ. ೫-೧೨೫); ಛಲದಿಂ ಪೂಣಿಸಿ ತಲೆಯಂ ಸೆರಗಿಲ್ಲದೆ ಪೊಯ್ವ (ರಕ್ಷೋಗಬ್ಬ. ೬-೧೦೬); ಪಶುಗಳನ್ ಪೊಯ್ದು ನೆತ್ತರನ್ ಕೋಡಿ ಕೆಡ ಪಿದಯ್! (ಅಕ್ಕಚಾ. ೦೫-೩೦೯). ೩. ತಾಕು; ತಗಲು: ಸೊವ ದೊಂದೊಯ್ಯನೆ ಬಾದು ಪೊಯ್ಯೆ ಮುನಿಸಿಂದಾರಯ್ದು ... ನಿಂದೋ ರೊಂದಱೊಳ್ ತಾಗಿ ಪೋರ್ವುವು ಕಾಡಾನೆಗಳ್ (ಕಾವ್ಯಾವ. ೩೯): ತಾಂ ಪೊಯ್ಯೆ ನುಣ್ಗದಂಪಂ ಕರ್ಣಕುಂಡಲಂ (ಕಾವ್ಯಲ. ೯-೯೮); ಗಂಡಮನೋ ರಂತಿರೆ ಪೊಯ್ಯೆ ಕುಂಡಲಯುಗಂ (ಕಾವ್ಯಸಾ. ೬೩೬). ೪. ಮಿಡಿ; ಮಿಟಿಂ: ತಂತಿಯುಂ ನೀವಿ ನಿರ್ಮಳಮಂ ಮಾಡಿ ... ಸುಸ್ಥಾನಕಂಗಳನೋರಂತಿರೆ ಪೊಯ್ದು ಪೊಯ್ದು ... ಸುಕಂಠೆ ಬಾಜಿಸಿದಳಾ ಪಾಣಂ ಲಸದ್ವೀಣೆಯಂ (ಕುಸುಮಾ. ೦-೩೬). ೫. ಮೃದಂಗ, ತಬಲ ಮುಂತಾದ ವಾದ್ಯಗಳನ್ನು ಬಾಜಿಸು: "ಸೂಳಯಿಸಿತೆನಲ್ ಪೊಯ್ವುದು" (ಚಾರಿತ. ೯೦); ಅತ್ತಮಿತ್ತಂ ನಿಱುವ ಕರಯುಗಂಗಳ್ ಪೊಯ್ವ ದೇವಾನಕಂಗಳ್ ... ಬೆಡಂಗಂ ಮೆಱೆಯ (ಆದಿಪು. ೬-೫೨); ಆವುಜಮನಳವಡಿಸಿಕೊಂಡು ಝುಂಕಾರಮಂ ಪೊಯ್ದು (ಶಾಂತೀಶ್ವ. ೦೬-೩೬ ವ). ೬. ದಡದಡಿಸು; ಬಡಿದುಕೊಳ್ಳು: ಮಾರಾಧ್ವರಪಾವಕಜ್ವಾಲೆಯೆನಲು ಕುಮಾರತಿಯುಸಿರೊಳು ಪೊಯ್ಯೆ (ಮೋಹತ. ೨೮-೯೦): ಸೂಸುವ ಸುಯ್ ಬೆಮರೇಱಿದಾನನಂ ಪೊಡೆವರ್ದೆ ಪೊಯ್ವ ಕಿರ್ಬರಿ ... ತೋಱೆ ಪುಳಿಂದನೈದುತೆ (ರಾಜಶೇ. ೫-೦೦೬); ಪೊಯ್ವರ್ದೆಗಳ ಸೆರಗ ಮರೆದು ಬಳಿ ವಿಡಿದು (ಕಾಮಂಡ. ೦೩೦-೨೬೯). ೭. ಪೆಟ್ಟನ್ನು ಹೊಂದು; ಹೊಡೆತಕ್ಕೆ ಒಳಗಾಗು: ಈ ಇರುಳ್ ನಡೆದುದೊಂದದ್ಭುತಂ. ಪಟ್ಟ ಪಡೆ ಪಟ್ಟಂತೆ ಪೊಯ್ದತ್ತು (ಅಕ್ಕಚಾ. ೦-೦೨). ೮. (ಭೂತ, ಪಿಶಾಚಿಗಳಂತೆ) ಮೆಟ್ಟಿ ಕೊಳ್ಳು; ಆವರಿಸು: ಆರೋಗಣೆಯು ಸಮಯಮಹಾರ್ಗೆ ಭೂತಂ ಪೊಯ್ದುದಾರನೀ ಮನೆಯೊಳಿಂತೀಗಳೇತಕೆ ಮೌನಂ (ಕೃಷ್ಣಚಾ. ೬-೫೦). ೯. ಕೊರೆ; ಕಡೆ; ಕಂಡರಿಸು: ಕಲ್ಕುಟಿಗ ದೇಯೋಜು ಪೊಯ್ದಕ್ಕರವ್ (ಎಪಿ. XV, ೩೩೨-೩೯; 1029): ಚೆಣ್ಣ ಆಚಾರಿಯ್ಯ ಮಗಂ ಆನಿ × × ಗ × × ಜ್ಞ ಆಚಾರಿ ... ಪೊಯ್ದ ಅಕ್ಕರವ್ (ಎಪಿ. IV, ಗುಂಡ್ಲುಪೇ. ೯೩-೧೫; 1049): ದಾಮರಾಜಂ ಸಾಸನಗಬ್ಬಮಂ ಪೇಳ್ದು ಬರೆದಂ ಪೊಯ್ದಂ ಸಾನೋಜನುಂ ಪದ್ಮನುಂ (ಎಪಿ. VII, ಶಿಕಾರಿ. ೦೦-೫೯; 1085 ?). ೧೦. ನಾಶವಾಗು; ಧ್ವಂಸಗೊಳಿಸು: ಭೀಮಸೇನಂ ... ಬಾಟೆಯು ಚೆಲ್ವನಪ್ಪ ಬನವಂ ಕಾಡಾನೆ ಪೊಯ್ವಂತೆ ಪೊಯ್ದನಿಸಂ ಮಾಣದೆ ನೀಚ ಕೀಚಕನಿಕಾಯಧ್ವಂಸನಂ ಮಾಡಿದಂ (ಪಂಪಭಾ. ೮-೮೦). ೧೧. [ಗಣಿತ] ಗುಣಿಸು: ತಿವಿ, ಪೊಯ್, ಪರ್ಚಿಸು ... ಬೆಳಸಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦-೬). ಪುಯಿ₁: ೧. ಬಯಿದೊಡೆ ಪುಯಿದನೆ ಪುಯಿದೊಡೆ ಯಿಱಿದನೆ (ಕಾವ್ಯಸಾ. ೩೯-೬೩). ಪೊಯಿ: ೧. ಇನ್ನರಿನೆನ್ದು ಸಿಂಗದನ್ತಿರೆ ಹರಿ ಬೀರಲಕ್ಷ್ಮೀ ನೆರವಾಗಿರೆ ಚೋಟನ ಕೋಟೆಯೊಪ್ಪು ಸಿನ್ದುರದ ಶಿರಾಗ್ರವಂ ಬಿರಿಯೆ ಪೊಯಿದು ಕದನೈಕ ಸೂದ್ರಕಂ (ಎಪಿ. III, ಮಂಡ್ಯ. ೯೦-೦೯: 950). ೧೧. ಪೊಯಿ ಗುಣಿಸು ಪರ್ಚಿಸಿನಲಿವು ಗುಣಾಕಾರಭಾಷೆಗಳ್ (ವ್ಯವಹಾ. ೦೦-೦೬). ಹುಯ್₁: ೧. ಚಿಕ್ಕತಂಮಸು ಮೂಡಣಬೆಟ್ಟದಲ್ಲಿ ಅಸಹಾಯಸೂರನಾಗಿ ಕೊಡಲಿಯಲ್ಲಿ ಕಳ್ಳರ ಹುಯ್ದು ಕೆಡಹಿ ತಾನು ಬಿದ್ದ (ಸೌಇಂ. IX-ii, ೯೨೦-೫; 1386): ಹರಿಯೊ ಹರಿಯೋ ಹುಯ್ಯೊ ಕಪಿಗಳ (ಕೌಶಿಕಾ. ೩೨-೦೩): ಕಡುಭರದಿ ಹತ್ತಿ ಕೋಟೆಯ ಮೇಲೆ ಕುದುರೆ ಕಾಲಿಡುವುದಂ ಕಂಡೆಕ್ಕಟ

ಗಳೊಳಗಣಿಂ ಬಂದು ಕೆಡೆವಂತೆ ಹುಯ್ದು (ಸಮ್ಯಕ್. ೬-೩೩). ೫. ಪ್ರಯಾಣಭೇರಿಯ ಹುಯ್ಯ ಹೇಳು (ಶೀಕೃಷ್ಣ. ೩-೨೩-೩೯). ಹುಯಿ₁: ೧. ಇವನು ... ದಾರಿಯನ್ನು ಕಾದು ಬಂದವರನ್ನು ತಲೇ ಹುಯಿದು ಅವರ ಹತ್ತಿರ ಇದ್ದುದನ್ನೆಲ್ಲಾ ಕಸಿದುಕೊಂಡು ಹೊಟ್ಟೆ ಹೊರೆಯುತ್ತಿದ್ದನು (ಶೀಶಿಕಾ. XII. ೦೨). ಹುಯ್ಯು₁: ೧. ಈ ಕೋಲನ್ನು ಹುಯ್ಯುವಾಗ ವೇಗಕ್ಕೆ ಮತ್ತು ಬಿರುಸಿಗೆ ಪ್ರಾಧಾನ್ಯ ಹೆಚ್ಚು (ಕಿಂಕೋ. I, ೭೦೬). ೨. ಆ ದೊರೆಯು ಇವಳ ತಲೆಯನ್ನು ಹುಯ್ಯುವ ಹಾಗೆ ಚಂಡಾಲನಾದ ವೀರಬಾಹುವಿಗೆ ಆಜ್ಞಾಪಿಸಿದನು (ಶೀಶಿಕಾ. IX. ೨೯). ಹೊಯ್₁: ೧. ಬಾಯೆದ್ದು ಬಯ್ಯಲಾಱ ಕಯ್ಯ ಎದ್ದು ಹೊಯ್ಯಲಾಱ (ಬಸವೇಶ್ವ. ೬೨); ಬಸುಱು ಹೊಸೆದು ಹೊಯ್ದು ನೆಲನಂ ತಿರುಗಿ (ಶಬರ. ಶೀ. ೦೯-೪); ಒಲೆದು ಕೇಸರಿ ಹೊಯ್ದುಪೊಲವ್ವಳಿಸಿ ಕರ್ಣನ ಹಯರಥವ ನಪ್ಪಳಿಸಿ ಮರಳುವ ಲಾಗಿನಲಿ ಖಂಡೆಯವ ಖಂಡಿಸಿದ (ಕುಮಾರವ್ಯಾ. ೬-೫೦). ೨. ಮೆಯ್ದೋಱ ಬುದ್ಧಿವೇಳ್ಪರಸು ನಂಟರ್ಕಳಂ ಹೊಯ್ದು ನಿಕ್ಕಡಿಯಾಗೆ (ಶಿಹರ. ಶೀ. ೯೦-೩); ಸಾವಿರಕಾಱಿಯ ಹೊಯ್ದುರು ಪೂಜಿಸಿದರಾ ಚತುರ ಚಾಡಿಕೆಯ (ಸಂಪಿಪ. ೦೬-೦೦೦); ಮದದಂತಿಗಳ ಸೊಂಡಿಲ ಹೊಯ್ದು ಸುಭಟರ ಸದೆದರೇವೇಳ್ವೆನದ್ಭುತವ (ಕುಂಪಿಪ. ೩-೬೮). ೩. ಸತಿಯರು ಭೂಪನಿರವ ಕಂಡುರಿ ಹೊಯ್ದ ಹೂಗಣೆಗಳಂತಿರ್ದರು (ಹಕಗಾ. ೮-೬೯). ೫. ಹೊಯ್ ಡಂಗುರವನವಂ ಹೊಱಗು ಹೊಱಗೀ ಸಭೆಗೆ ಹೊಯ್ ಡಂಗುರವನಾವನಾದೊಡಂ ಹೊಱಗೆಮಗೆ (ಕುಱೆರ. ಶೀ. ೬೯-೯): ಹಲಾಯುಧನು ತಾಳವಂ ಹೊಯ್ದನು (ಚತುರ್. ೩೬-೯೯). ೬. ಹೊಯ್ವಳ್ಳಿಗಳ ಮುನಿಜನವ ಕಂಡರು ಪಾಂಡುನಂದನರು (ಕುಮಾರ. ೨೨-೫೨): ಕಡಲಲ್ಲೆ ಹೊಯ್ವಂತೆ ಸಿಂಧು ಕಂಪಿಸಿತು (ಮೋಹತ. ೨-೬). ೯. ಗಂಗೋಜಂ ಹೊಯ್ದ ಶಾಸನಂ (ಎಪಿ. V. ಹಾಸನ. ೩೯-೩೬; ಸು. 1000 ?); ಆಸ್ಕಂದದೇವರು ಬರೆದ ಶಾಸನ ಕೇತೋಜ ಹೊಯ್ದ (ಸೌಇಂ. IX-i, ೨೦೫-೨೭; 1122). ೧೦. ನಾಳೆ ಹಗೆವನ ಹೊಯ್ವೆನೆಂಬುದ್ಬಾಳುತನ ವಿನ್ನೊಮ್ಮೆ ಭೂಪತಿಯೋಲಗಾತಿಯರಿದಿರಲಾಡಿದ ಭಾಷೆಬಿನ್ನೊಮ್ಮೆ (ಕುಮಾರವ್ಯಾ. ೯-೯೩). ೧೨. ಕಟ್ಟು; ಜಜ್ಜು: ಅಱಿಯದವ ರೊಡನೆ ಸಂಗವ ಮಾಡಿದರೆ ಕಲ್ಲ ಹೊಯ್ದು ಕಿಡಿಯ ತೆಗೆದುಕೊಂಬಂತೆ (ಮುಹಾರೀ. ೫. ೬೬-೦೭೦). ಹೊಯಿ₁: ೧. ಅರಗಿನ ಪುತ್ತಳಿಯನರಿಯ ನಾಲಗೆ ಹೊಯಿದು ಮಾತಾಡುವ ಸರಸ ಬೇಡ (ಷಟಕ. ೬೬೦ ೮); ಮುಂದೆ ತ್ರಿವಿಧಮಲವಿದೆ ಆಸೆಯ ಕಾಳಿ ಆಳವಿದೆ ಎಡ ಬಲದಲ್ಲಿ ರೋಷ ತಾಮಸ ವೆಂಬ ಹೊಯಿಲು ಹೊಯಿವುತ್ತಿದೆ (ಸರ್ವಜ. ೬೦-೯೯೯); ಶಿಶುಗಳನು ಖಳ ದುರಾತ್ಮಕ ಕಂಸ ತಾನಾಗಳು [ಭರದಿ ಬಂ]ದತ್ತಲೊಯಿದತಿಮುಳಿದು ಶಿಲೆ ಯೊಳಗಸಗವೊಯಿಲನು ಹೊಯಿದು ವಿಗೆ ಕೊಂದ (ಶಾಕ್ಯಚಾ. ೨೦-೩). ೫. ಹೊಯಿದ ಹೊಱಗೆ ಕುಣಿದಾಡುವರೆಲ್ಲ ಹಾಡಿದ ಗೀತಕ್ಕೆ ತಲೆ ದೂಗುವರೆಲ್ಲ (ಸಮಾಪ. ೬-೨೩); ಜಡರುಗಳಿರಾ ತೊಲಗಿ ಬೋ ಎನುತಡಿ ಗಡಿಗೆ ಜಯಘಂಟೆಯನು ಹೊಯಿದು (ಬಸವ. ೨೮-೦೦). ೯. ಯಿಾ ಶಾಸನವ ಹೊಯಿದ ಹುಲಿಯೂರ ಸೋಮನಾಥನ ಮಗ ಅಲೋಜಗವುಡಗಳ ಒಪ್ಪ (ಎಪಿ. XII. ಕುಣಿಗ. ೦೦೬-೨೩; 1429); ಶ್ರೀ ಶಾಸನವ ಹೊಯಿದಾತ ಹೊನ್ನ ಹಲಗೆಯ ಮಗ ಕರವೀರಯ್ಯ (ಎಪಿ. XI. ಹಿರಿಯೂ. ೦೫-೨, 1605). ೧೩. ಒಪ್ಪಿಕೊಳ್ಳು; ಅಂಗೀಕರಿಸು; ಸಮ್ಮತಿಸು: ನೀನಿಕ್ಕಿದ ಜೂಜಿಂಗೆ ಹೊಯಿದು ಗೆದ್ದ ಸಿರಿಯಾಳ (ಶಿಸಪ. ೬೬೯). ೧೪. ಕಾಳಗ ಮಾಡು: ಕರೆಕರೆದು ಮೂದಲಿಸಿ ಕಡುಹಿನ ದುರುಳರುಬ್ಬಿನ ಮೇಲೆ ಹೊಕ್ಕುಬ್ಬರಿಸಿ ಹೊಯಿದರು ಕಾದಿ ಕೊಂಡರು ಕಾಲನರಮನೆಯ (ಕುಮಾರವ್ಯಾ. ಶೀ. ೪-೨೮). ಹೊಯ್ಯು₁: ೧. ತಾನೋವಿ ಮಿಾಯುತ್ತಿರಲು ನಿನ್ನಯ ತೀವ್ರ ತೆರಗಳಲಿ ಓವೆನುತ ಹೊಯ್ಯಲಿಕೆ ನಿನಗೆಯು ನಾವು ನುಡಿದೆವು (ಸಂಪಿಪ.

೧೨-೨೯), ಚಿತ್ರಪಾ ಕತ್ತಿಯಾ ಕಿತ್ತುಕೊಂಡತ್ತಿ ಹೊಯ್ಯುತ್ತ ಬರಲು (ಕೈಪಿಡಿ. ೨೬-೩); ಆ ಅಂಗಿಯನ್ನು ದೊಪ್ಪನೆ ಹಾಸುಗಲ್ಲಿಗೆ ಹೊಯ್ಯುತ್ತಾನೆ (ದೇಶಪ್ಪ. ೪೦). ೫. ಹೊಯ್ಕೋ ಡಂಗುರವ ಜಗದಯ್ಯನಯ್ಯ ಶ್ರೀಹರಿಯಲ್ಲದಿಲ್ಲವೆಂದು (ಪುರಂದ. ೨.೨೦ ಪಲ್ಲವಿ); ತಪ್ಪದೆ ಗಳಿಗೆಗೊಮ್ಮೊಮ್ಮೆ ಭೇರಿಯ ಹೊಯ್ಯುತಿಪ್ಪುದದೊಂದು ಬಾಗಿಲೊಳು (ಮೋಹತ. ೨೦-೩೦). ೬. ಧಗೆ ಹೊಡೆದಲ್ಲಿ ಹೊಯ್ಯುತೆ . . . ನಾಯಿಗಳಡಸಿದುವೆಡಬಲದೆ (ಮೋಹತ. ೦೯-೦೪).

[ದೇ.೩ ಮಲ. ಪೊಯ್ಯು; ಕೊಡ. ಪೊಯ್; ಕೋತ. ಪೊಯ್, ಒಯ್]

**ಪೊಯ್$_3$**, ಹುಯ್$_3$, ಹುಯ್ಯಿ$_3$, ಹುಯ್ಕಿ, ಹುಯ್ಯು$_{12}$, ಹೊಯ್$_3$, ಹೊಯ್ಯಿ$_3$, ಹೊಯ್ಕಿ, ಹೊಯ್ಯು$_{12}$ (ಕ್ರಿ). ಪೊಯ್ದು$_3$, ಹುಯ್ದು$_3$, ಹೂದು. ಹೊಯ್ದು$_3$ (ಭೂತಕೃ). ೧. ಸುರಿ; ಎರೆ : ಪೊಸವೂಗಳೊಳ್ ಪೊಯ್ತ ಮಱುಗಾವಿನಂ ಲೋಹವಾರಿಯಾ ಮಱುಗುವಿನಂ (ಕಣ್ಣಾರಾ. ೦೨೭-೩); ಮಣಿಮಯಕುಂಭದಿನಂದು ಪೊಯ್ದುಳೊರ್ವಳ್ ವಿದಳಿತಪಂಕರುಹವದನೆ ಕುಂಕುಮಜಳಮಂ (ಆದಿಪು. ೭೭); ಮದವಶೀಕರಣಶೃಂಗಾರರಸಮಂ ಪೊಯ್ವಂತೆ ಕಸ್ತೂರಿವಾರಿಯಂ ಪೊಯ್ದುಂ (ಶಬ್ದಮ. ೫-೦೫೫ ವ). ೨. ವರ್ಷಿಸು; ಕರೆ : ನೆಲನಱಿದೂಡುವ ಪೊಱನೀರಲಂಪಿನಾ ಪದಕೆ ಪೊಯ್ವ ಮಱನೀರ್ (ಕಣ್ಣಾಸು. ೩೨೭ ವ್ಯಾಖ್ಯಾ). ೩. ನೆಡು; ನಾಟು : ಅಗೆಯಂ ಪೊಯ್ವರ್ ಸೊಡರಂ ಪೊತ್ತಿಸುವರ್ ಸತ್ತೆಡೆಯೊಳ್ ತವಗಂಜಿ ಭೀತಿಯಿಂದ ಮೂಢರ್ (ಸಕಾಶ. ಅಮರು. I. ೩೭೯-೨೯); ಪೊಸಬೆಳ್ದಾವರೆಗಳಾವೆಡೆಯೊಳ್ ನಡೆವಲ್ಲಿ ಪೊಯ್ದ ಪೂಗುಡಿ ಗಡ (ಕಬ್ಬಿಗಾ. ೦೬೩); ಗುಡಿಯಂ ಪೊಯ್ದಾನೆಯ ಪೊಂದೊವಲಿಂ ದುಡಿದ ಪತಾಕಾಪಟಸಂತತಿಯಿಂದೆಡೆವಱಿಯದ ಸರವತಿಯಂ ಬಿಟ್ಟು (ಅಜಿತಪು. ೭-೨೯). ೪. ಅಚ್ಚಿಗೆ ಹಾಕು; ಎರಕಕ್ಕೆ ಹಾಕು : ಸುವರ್ಣಮನೊರೆದುಂ ಕಡಿದುಂ ಕಾಸಿಯುಂ ಪೊಯ್ದುಂ ನೋಡಿ ಪರೀಕ್ಷಿಪಂತೆರ್ ಪರೀಕ್ಷಿಸಿಕೊಳ್ವಂತೆ (ಧರ್ಮಾಮೃ. ೦೦-೩೯ ವ). ೫. ಸೂಸು; ಎರಚು; ಚಿಮುಕಿಸು; ಸಿಂಪಡಿಸು : ಆಗಳಂಗರಾಜಂ . . . ದುಕೂಲಾಂಬರದೊಳಿಂದಾಗಿ ಚಲ್ಲಣಮನುಟ್ಟು ಪುದಿಗತ್ತುರಿಯ ತಲೆಯೊಳ್ ಶೀವೆ ಪೊಯ್ದು (ಪಂಪಭಾ. ೦೨-೦೦೯ ವ); ಕಣ್ಣೊಳ್ ಮಳಲಂ ಪೊಯ್ದುಟ್ಟಿದಂ ಕೊಂಡರೊಬಂತೆ (ಧರ್ಮಾಮೃ. ೬-೨೦೭); ಕೆಮ್ಮನೆ ಕೈಗಾದಿರದೋವಮಪ್ಪನೊಲೆಯೊಳ್ ಪೊಯ್ವಂತೆ ಪಾಱೇಟ ದುರ್ಜನನಂ ಬಯ್ವುದು ಬಯ್ದೊಡಲ್ಲದವನಂ ಪೇಟ್ ಭಾವಿಸಲ್ ಬರ್ಕುಮೇ (ಸೂಕ್ತಿಸು. ೦-೩೨). ೬. ಬೀಸು; ತೀಡು : ಕತ್ತುರಿಯ ತಗುಳ್ದು ಪೊಯ್ವ ಸೊವಡಾ ಸೊವಡೊಳ್ ಕಡುಸೊರ್ಕು ಸೊರ್ಕಿಗಾವರಿಸುವ ತುಂಬಿ ಚೆಲ್ವೆಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ (ಅದಿಪು. ೨-೫). ೭. (ದಾನವಾಗಿ) ಕೊಡು; ನೀಡು: ಪನ್ನಿರ್ವ್ವರಾ ಏಟ್ವರಾ ಪೊಯ್ದು ಧರ್ಮ್ಮಮಿದೊವರ್ ಕೆಡಿಸಿದೊನ್ ಪಞ್ಚಮಹಾಪಾತ[ಕ]ನಪ್ಪೊನ್ (ಎಕ. IV. ಕಾಮರಾ. ೬೩-೦೦; ಸು. 750); ಈ ಎನೆತ್ತುಂ ಜಡಿಯಕ್ಕೆ ಪೊಯ್ದೋದು (ಎಕ. IX. ಚಿಕ್ಕಮ. ೬೦-೦೨೬: 797); ಮನೆ ತುಂಬಿದ ಪೊನ್ನಂ ಪೊಯ್ದು ಮನಂ ತೀವಿದ ಪರಿಣಾಮತೆಯಂ ಕೊಟ್ಟು ಅವರಂ ಕಳುಪಿ (ಕಂಚಿಕ. ೨-೪೯). ೮. ಹೊಮ್ಮಿಸು; ಉಂಟುಮಾಡು: ಮದನನಾಡಿಗಳ್ಳರರ್ ಮೋಹಿಗಳ ಕಾಲಕೆ ಹೊಱಗೆಂದು ನೂಪುರರವದೆ ನಾದಮಂ ಪೊಯ್ವರಂಗನೆಯರಲ್ಲಿ (ಕಪ್ಪರಾ. ೬-೪೦). **ಹುಯ್$_3$** : ೧. ಆಜ್ಯ ಹುಯ್ದರಾಗುವುದಿಲ್ಲ (ಶಾಂತಿಶಾ. ೭). ೨. ವೈಡೂರ್ಯಮಣಿಯ ಬೆಳ್ಳರಿ ಹುಯ್ಯೆ (ಸಪ್ತಶೇ. ೭-೩೯); ದೈವಕೆರಗಳು ತನ್ನ ಪತಿಗೆರಗುತೇಳುವಳು ಅಂಥವಳು ಹುಯ್ಯೆನಲು ಮಳೆ ಹುಯ್ವುದು (ಶಾಂತೇ. ೨೫). ೫. ಅಕ್ಕವ್ವೇ ಗಂಗೇ ದಡದಲ್ಲಿ—ಸರಸತಿಯ ಅಕ್ಕೀ 'ಹೂದ'ವಳಾ ಕರೆತನ್ನೀ (ಹುಬ್ಬಜ. ೦೭೩). **ಹುಯ್ಯಿ$_3$** : ೧. ಒಮ್ಮಾನ ಹಾಲ ಹುಯಿದವನು ಸಟ್ಟುಗದಿ ತೊಳಸಿ (ಸೂಕ್ತಿ. ೦-೪೦). **ಹುಯ್ಕಿ** : ೧. ಆ ಪಾತ್ರೆಯ ತುಂಬ ನೀರನ್ನು ಹುಯ್ಯಿ (ರೂಢಿ). **ಹುಯ್ಯು$_1$** : ೧. ನೀರ ಹುಯ್ಯೋ ಳವಳೆ ಹಣ್ಣು ಮೆಲ್ಲೋಳವಳೆ (ಜಾನಪದ. ೪೩). ೨. ಹಸ್ತೆ ಮಳೆ ಎತ್ತಲಾದರೂ ಹುಯ್ಯುತ್ತೆ (ಗಾದೆ); ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕೆ ನೀರಿಲ್ಲ (ರೂಢಿ). **ಹೊಯ್$_2$** : ೧. ಆವಿಕ್ಷೆ-ಕಾಯ್ದು ಬಿಸಿಯಾಗಿರ್ದ ಹಾಲಿನಲಿ, ಅವುದಾನೊಂದು ಮೊಸರ ಹೊಯ್ದದಱತ್ತಣಿಂದ ಒಡೆದುದು (ವಾಕಾ. ೬); ಬೇವಿನ ಬೀಜವ ಬಿತ್ತಿ . . . ಜೇನುತುಪ್ಪವ ಹೊಯ್ದರೆ ಸಿಹಿಯಾಗಬಲ್ಲುದೆ ಕಹಿಯಹುದಲ್ಲದೆ (ಬಸವ. ೬೨೭); ನೀರ ಹೊಯ್ ನಂದಿಸು (ಕೋರಾ. ೫-೬-೭೩); ಒಡೆದ ಹಾಳಿವಜ್ಜಿಗೆಯ ತಿಳಿಯುಮಂ ಚೆಲ್ಲಿ . . . ಕಡುಗಟ್ಟಿಯಾದುದ ತೆಗೆದು ಮಡಕೆಯೊಳು ಹೊಯ್ದು (ಸೂಪಶಾ. ೨-೦೭). ೨. ಆರುಗಾಲ ಮಳೆ ಹೊಯ್ದರೂ ಮುತ್ತುಗಕ್ಕೆ ಮೂರೇ ಎಲೆ (ಗಾದೆ); ಎಮ್ಮೆ ಮೇಲೆ ಮಳೆ ಹೊಯ್ದ ಹಾಗೆ (ಗಾದೆ). ೩. ಹಾರುವನ ಭಕ್ತಿ ಒಡಿನೊಳಗೆ ಅಗೆಯ ಹೊಯ್ದಂತೆ ಕೆಳಯಿಂಕೆ ಬೇರೂಱದು (ಬಸವ. ೪. ೨೩೭-೫೪೦). ೫. ಗುರು ಲಘುವೆಂಬವರ ಬಾಯಲ್ಲಿ ಮೆಟ್ಟ ಹುಡಿಯ ಹೊಯ್ಯದೆ ಮಾಣ್ಬನೆ (ಬಸವ. ೫೭೭); ಕಳವಳಿಸುವ ಕಪಿಯ ಭೂತ ಹೊಡೆದು ಬೀಳೂಱ ಘಾಳಿಯೊಳು ನಿಂದು ಧೂಳಿಯ ಹೊಯ್ಯುತ್ತಿದೆ (ಅರವ. ೦೫-೩೨). **ಹೊಯ್ಯಿ$_2$** : ೧. ಅವನ ಪುಷ್ಪತೋರಣಂಗಳಿಗೆ ದೇವತಾಸ್ತ್ರೀರು ನೀರ ಹೊಯಿವರು (ಗರುಹು. ೨-೦೨-೧); ಕಾರ್ಬೋಲಿಕ್ ಆಮ್ಲದ ತೀಕ್ಷ್ಣವಾದ ದ್ರವ ಅಥವಾ ಸೀಮೆಎಣ್ಣೆ ಹೊಯಿವರೆ ಇರುವೆಗಳು ಬಾರದಂತೆ ಮಾಡಬಹುದು (ಅತುಜ್ಞಿ. ೫೦). **ಹೊಯ್ಕಿ** : ೧. ಗಿಡಗಳಿಗೆ ನೀರನ್ನು ಚೆನ್ನಾಗಿ ಹೊಯ್ಯಿ (ರೂಢಿ). **ಹೊಯ್ಯು$_1$** : ೧. ಹಿಟ್ಟನ್ನು ಬೆಂಕಿಯಲ್ಲಿ ಸ್ವಲ್ಪ ಕಾಯಿಸಿ, ಅದಕ್ಕೆ ಕುದಿಯುವ ನೀರನ್ನು ಹೊಯ್ಯಬೇಕು (ಅಡುಗೆ. ೪೪); ಧಾರೇ ಹೊಯ್ಯುವಾಗ ಹೇಳುವ ಹಾಡು (ಹುಬ್ಬಜ. ೦೯೨). ೨. ಬೆಳಗ್ಗೆಯಿಂದ ಒಂದೇ ಸಮನೆ ಮಳೆ ಹೊಯ್ಯುತ್ತಿದೆ (ರೂಢಿ). [ದೇ.೩ ತಮಿ. ಮಲ. ಪೊಱ; ತೆಲು. ಪೋಯು]

**ಪೊಯ್$_3$**, ಹೊಯ್$_3$ (ನಾ). ಹೊಡೆತ; ಏಟು; ಪ್ರಹಾರ; ಬಡಿತ : ಒರ್ವಯ ಪೊ[ಸಾಕಂ. ಪಾ]ಯ್ವ ಪೊಯ್ಗಳಿಂ ನೆಗೆದು ಮುಗಿಲ್ಗಳಿಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದ ಜೇನ ಪುಟ್ಟಗಳನೆ ಪೋಲ್ತುವು (ಪಂಪಭಾ. ೬೦-೪೦); ಕುದುರೆಗಳನೊಂದೆ ಪೊಯ್ಯಿಂ ಮದಕರಿಗಳನೆರಡೆ ಪೊಯ್ಗಳ್ ಕರ್ಣಿಡಂ ಮಾಡಿದ ಖಡ್ಗಧರರ ಭುಜಬಲಮದೇಂ ನಿಮಿರ್ಚಿದುದೊ (ಗದಾಯು. ೪-೩೦); ಕೀಱುವ ಕುಱ ಪೊಯ್ದನವನ್; ಪೊಯ್ಕೆಡೆಯೆಡೆ ಬಯ್ಬಯ್ದು ನಲಿದನವನ್ (ಅಕ್ಕಣ್ಣಾ. ೦೦-೨೦೨). **ಹೊಯ್$_3$** : ಬಯ್ದು ಬಯ್ಗಳಂ ಜೇಡುವ ಹೊಯ್ದು ಹೊಯ್ಗೆ ಪುಳಕಾವಳಿ ಮೂಡುವ ಗಂಡು ಹೆಣ್ ತದಂ ಮಾಡುಗುಂ (ಅಶೋಕ. ೮-೫೧); ಪವನಸಂಭವ ಹೊಯ್ದು ಹೊಯ್ಗಳ ನೆನೆದ ನಿಂದಪ್ಪರಿ (ಕೌಶಿಕಾ. ೦೯-೩೨); ಖಾತಿಗೊಳ್ಳದ ಮುನ್ನ ಪವನಜನೋತು ಕೊಟ್ಟನು ತನ್ನ ಹೊಯ್ಗಳನು (ಕುಮಾರ. ೦೦-೩೭). [< ಪೊಯ್$_1$]

**ಪೊಯಲ್**, ಪುಯಲ್, ಪುಯ್ಯಲ್, ಪೊಯ್ಲು, ಹುಯಲು, ಹುಯ್ಯಲ್, ಹುಯ್ಯಲು, ಹುಯ್ಲು, ಹೂಯಲು, ಹೂಲ್ಕಿ, ಹೊಯಲು, ಹೊಯ್ಯಲು, ಹೊಯ್ಲು (ನಾ). ೧. ಏಟು; ಪೆಟ್ಟು; ಹೊಡೆತ : ವಿಷಯಗಳೆಂಬ ಪೊಯಲ್ಗಳಿಂ ಸಾರಲೀಯದೆ . . . ಸಂಸಾರಮೆಂಬ ಮಹಾನದಿಯಂ ದಾಂಟುವುದು (ಧರ್ಮಾಮೃ. ೬-೨೦೯); ವೀಚಿಮ ಪೊಯಲ್ಗಳಿಡೆ ಸಿಲ್ಕುವೆಳವಿಮಾನ್ಗಳಿಂ ವೀಚಿಗಳನೊಡೆದುರ್ಬಿ ಪರಿವ ಬಲ್ಮೀನ್ಗಳಿಂ (ಅದ್ಭುತ. ೩-೮೪). **ಪುಯಲ್** : ೧. ಜನುಗುತ್ತುಂ ಭೋಂಕನೆ ಮಧುಪನಿಕಾಯಂ ಸೋಂಕೆ ತನ್ನನೇಮ್ವಸಿ ಕರಂ ಕೊನೆವಂತಿರ್ದುದು ವನಪವನನ ಪುಯಲಿಂದೊಲೆವ ಕಂಬುಲತೆ ಸೊಗಯಿಸುಗುಂ (ಶಬ್ದಮ. ೪-೨೫). ೨. ಹೊಡೆದಾಟ; ಕದನ; ಕಾಳಗ :

ಶ್ರೀಕಣ್ಣಯ್ಯ ತುಱುಗೊಣ್ದಲ್ಲಿ ಪುಯಲ್ಗಾಗಿ ತುಱು ಅಟ್ಟಿ ಸತ್ತ (ಎಕ. X. ಶ್ರೀನಿವಾ. ೫೦-೦೦; ಸು. ೫೮೦ ?). **ಪುಯ್ಯಲ್**: ೨. ತುಱುಪಿನ ಪುಯ್ಯಲೊಳ್ ದೊಮ್ಮರ ಕಾಡವಂ ಸತ್ತು ಸ್ವರ್ಗಾಲಯಕ್ಕೇಱಿದನ್ (ಎಕ. VI. ೦೬೩-೪ : 780); ದಾವರಂಗದ ದೊದಿವನ್ದಿಗಲಿಯಱು ಕೆಲ್ಲೂರುಂ . . . ಕರ್ಪೂರ ತುಱುವಂ ನೊಬವ್ವನ ಪರಿ ಬನ್ದು ಹೆವರ್ಸ್ಗೆಯ ಪಳ್ಳಿಯೊಳಿಕ್ಕಿ ಕೊಣ್ದು ಪರಿದೈದಿ ಬಲವವ್ವನಂ ಮೂದಲಿಸಿ ಮುನ್ನಣ ಪುಯ್ಯಲ ಪಿನ್ನಿಕ್ಕಿ . . . ಮಗುಟ್ದು ಬರುತಿಟ್ಟೊಡೆ (ಎಕ. XII. ತಿಪಟೂ. ೦೦-೬ ; ಸು. ೯೩೦ ?) ; ಪುಯ್ಯಲ್ಗೆ ವಂದ ಖರ ದೂಷಣರನವರ ಸೇನೆವೆರಸು ಕೊಂದು (ಕಂರಾಪೂ. ೦೦-೨೭ ವ) . ೩. ಸೂರೆ ; ಲೂಟಿ : ನೃಪಬಾಧೆ ಕಳ್ಳರಿಂದಾದ ಪುಯ್ಯಲಗ್ನಿಪ್ರಕೋಪವಮುಬ್ಬರದಿಂದವೃಷ್ಟಿ ಸರ್ಗವೆನಿಪ ವಾರ್ತಾಪ್ರಪಂಚಮಾದಲ್ಲಿ ಕೇಳಬೇಡೊಸಿಱಿಯಂ (ಲೋಕೋಪ. ೧೨-೩೨). ೪. ಆರ್ತನಾದ ; ಆಕ್ರಂದನ ; ಚೀರಾಟ : ಈ ಪುಯ್ಯಲನಾರಪುಯ್ದು ಬರ್ಪನೆಂದು ಭೀಮನನಿರಿಸಿ ಕೊಂತಿ ತಾನೆ ಪೋಗಿ (ಪಂಪಭಾ. ೩-೨೯ ವ) ; ತುಱುವಂ ಕೊಣ್ದು ಪೆಣ್ದರುಡೆಯನುಟ್ಟಿದರೆಂಬ ಪುಯ್ಯಲಂ ಕೇಳ್ದು ಕಡಿಗಣಿಸದೆ ಮಾಚಗಾವುಣ್ಡನಟ್ಟಿ ಮುಟ್ಟಿಂಡೆ . . . ಸಂಗ್ರಾಮಮಂ ಪರಿಚ್ಛೇದಿಯಾಗಿ ಮಾರ್ಬ್ಬಲದಾಳು ಮೂದಲಿಸಿ (ಎಕ. VII. ಶಿಕಾ. ೯೩-೦೬ : 1058) ; ಈ ನೆಲನೆಯ್ದೆ ಕಾಯ್ದು ಮತ್ತಮ್ಮ ಮನಟ್ಟಿ ಮುಟ್ಟಿ ಸುಡುತಿರ್ದಪುದೆಂದಿಡುವಂತೆ ಪುಯ್ಯಲಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಲ್ಗೆ ತೊಟಲ್ದವಾನೆಗಳ್ (ಚಾರಪು. ೯-೮೨). ೫. ಗಲಾಟೆ ; ಗದ್ದಲ : ಬಂದ ಕತುಗುದುರೆ ಪೊಱದೊಳ್ ನಿಂದವರಂ ತಿವಿದುವಕಟ ನೋಡಿರೆ ತಾನಿಂತೆಂದಱಿಯುಬಾರದಿದು ಪೊಸತೆಂದೊರ್ಮೆಯೆ ಪೊಱಗೆ ಪುಯ್ಯಲಾವತ್ತಾಗಳ್ (ಕಬ್ಬಿಗ. ೨೯೬) . ೬. ದೂರು ; ಮನವಿ ; ಅಹವಾಲು : ಏದರ ಪುಯ್ಯಲಂ ಕರೆದಾಲೋಚಿಸಿ ತಿರ್ದಿ ಸಂತಸಂಬಡಿಸದ . . . ಕೆಡಿಸಿದು ನೃಪಸುತನೇ (ರತ್ನಾಕರ. ೨-೬೯) ; ನೀನಾರಯ್ಯಲಾರ್ಪೊಡೆನ್ನ ಪುಯ್ಯಲಂ ಪೇಟ್ಟಿಂ (ಜೀವಸಂ. ೨೦-೨೨) ; ಅನಿತುಂ ಗಿರಿಗಳು ಖಾಂಡವವನಮಂ ಹಸಿವೋಗೆ ದೇರದು ಮೆಲ್ಯೊತ್ತು ತಿರಲ್ ವನಪಾಲನೀಕ್ಷಿಸಿ ಪರಿದನಿಮಿಷಪತಿಯಲ್ಲಿಗೆಯ್ದಿ ಪುಯ್ಯಲನಿಟ್ಟಂ (ರವಂಶ. ೩-೫೨). **ಪೊಯ್ಯು**: ೧. ಅಡಿಯಂ ಮೇಗಣ್ಗೆತ್ತುವ ಕಡುಗಾಳಿಯ ಪೊಯ್ಲೋಳಿದಱ ನೀರೊಗೆದಪುದು (ಅಂಶ. ೦೩-೫೨) ; ಪೊಱಮಡುವ ಸಾಪದಕ್ಕರದ ಪೊಯ್ಲಂಗೆ ನಡುಗುವಂತೆ ಕೆತ್ತುವ ತುಟಿಯುಂ (ಕಬ್ಬಿಗ. ೩೦೦); ಉರಿಯ ಪೊಯ್ಲ್ಗಳೊಳಂದು ಕಾಲುಡುಗಿ ಬೀಳ್ವ ಬಹುದನುಜರಿಂ ಮನುಜರಿಂ . . . ಪಾಳಾದ ಸಕಲಲೋಕಂಗಳಿಂ ಕಂಗಳಿಂ ನೋಡಲುರಿ ಘನಮಾದುದು (ಕಂಶ. ೯೩-೨೬). **ಹುಯಲು** : ೧. ಒಂದು ಹುಯಲಂ ಗಣೇಶ್ವರನೆಯ್ದೆ ಹೊಡೆಯಲು (ಪಾರ್ಶ್ವ. ೨-೯-೫೦). ೨. ಕಂಬಿಯನಾಯ್ಕ ಮಗ ಬೀಂಮಯ್ಯನಾಯ್ಕನು ಪೂರ ಹುಯಲಿಕಾಗಿ ಕಾದಿ . . . ಸುರ ಲೋಕಕೆ ಸಂದಂ (ಎಕ. XVI. ತಿಪಟೂ. ೧೮೦-೦೨ ; 1277) ; ಜನ್ನೆಗುರುಗಳ ಪುರಳಿಬಿ ಹುಯಲ ಹರಿದು ಕಾದಿ ತಳ್ತಿಱಿದು . . . ಸರ್ಗ್ಗಪ್ರಾಪ್ತರಾದರು (ಎಕ. VII, ಶಿಕಾಪು. ೬೦-೭೪ ; 1237) ; ಹೊಂಗಸೂರ ಹುಯಲೊಳಗೆ ಬಿದ್ದನು (ಎಕ. IX. ಚನ್ನಪ. ೦೯೬-೭ ; 1437). **ಹುಯ್ಯಲ್** : ೬. ದಾಳಿ ; ಆಕ್ರಮಣ : ಕಡೆಗಣ್ಣಿಂದಿಸುವಂತೆ ಚಂದ್ರಕರಮಂ ತೆಂಗಾಳಿಯಂ ಜೋಲ್ದ ಪೂಮುಡಿಯಿಂ ರೆಘೋಂಚಿಸುವಂತೆ . . . ಎಲ್ಲರ ಧೈರ್ಯಮಂ ಮೊಲೆಯ ಬಿಣ್ಪಿಂ ನುಗ್ಗಿ ನೂಂಕಲ್ಕೆ ಧೀಂಕಿಡುವಂತಾದಿದಳುಯ್ಯಲಂ ತರುಣಿ ತಂದಳ್ ಕಾಮನಿಂ ಹುಯ್ಯಲಂ (ಪಾರ್ಶ್ವ. ೬-೬). **ಹುಯ್ಯಲು**: ೧. ಇನ್ನಿವನಿಂದಂಗ ಭವನ ಹುಯ್ಯಲು ಬಂದೆನ್ನ ನೋಯಿಸಿ ಕೊಲ್ವುದೆಂದು ಉನ್ನತವಪ್ಪ ಭೀತಿಯೊಳು ನಡುಗುವಂತೆ ಕನ್ನೆಯ ತನು ಕಂಪಿಸಿದುದು (ಶ್ರೀಪಾಲ. ೪-೦೦೫). ೨. ಬೊಂಮಂಣ್ಣನು ದಿವಿಗೆಯು ಹಳಿಯ ಹುಯ್ಯಲಲ್ಲಿ ಸಮರಂಗದಲ್ಲಿ ಕಾದಿ ಸುರಲೋಕಪ್ರಾಪ್ತನಾದ .(ಎಕ. VII. ಶಿಕಾ. ೬೩-೨ ; 1048 ?) : ಮಹಾಗಜವು ಪುಳಯವಹಲ್ಲಿ ಮಣ್ಣ ಮೊರಡಿ ಕದಡಿದುದಿಲ್ಲ . . . ಬಲ್ಲಿದ ರೆಲ್ಲರು ಕಾದಿ ಮಡಿದಲ್ಲಿ ಹೂದೆ ಹುಯ್ಯಲಲ್ಲಿದ್ದು ಅಂಜಿದುದಿಲ್ಲ (ಲೋಕಪಾ. ೫೫೦-೬೦೨) ; ಹೊಳಲು ತಲೆಕೆಳಕಾಯ್ತು ಹುಯ್ಯಲು ತಳತುದೊಳ ಕೋಟೆಯಲಿ (ಕುಮಾರವ್ಯಾ. ೭-೬). ೪. ಧಾರುಣಿಯ ಜನದ ಹುಯ್ಯಲ ನಿಲಿಸಬೇಕೆಂದು ಪಾರಧಿಗೆ ಪೊಱಮಟ್ಟು . . . ಗುರು ವಿರೂಪಾಕ್ಷನಂ ಕಂಡನವನೀಶನು (ಹರಿಶ್ಚ. ೩ ಸೂಕ್ತ) ; ಕೇಳಿದನು ಮುರವೈರಿ ತನ್ನಯ ಮೇಳದೈವರ ಸತಿಯ ಹುಯ್ಯಲ (ಕುಮಾವ್ಯಾ.ಸ. ೦೯-೦೫೦). ೫. ತನ್ನಂಗವ ತಾ ಬಡಿದುಕೊಂಡು ಇದಿರಿನಲಿ ನೋವ ಕೇಳುವನಂತೆ . . . ಹೆಮ್ಮಗೆ ಹುಯ್ಯಲಿ ನಲ್ಲಿ ಸಿಕ್ಕಿ ತನ್ನ ತಾನಱಿಸಿಕೊಂಡಂತಾಯಿತ್ತು (ಲೋಕಪಾ. ೬೨-೦೫೨) ; ಜಗದ ಹುಯ್ಯಲು ಜಡಿಯಲಭ್ರದಲಗಿದು ಕೌರವಸೇನೆ ಹರಹಿದ ಸೊಗಸಿನಲಿ ವ್ಯೆಯಿಱಿಯೆ ಕೃಷ್ಣಾದಿಗಳು ಕೈಮಱಿಯೆ (ಕುಮಾರವ್ಯಾ. ೦೯-೩೩). ೬. ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ (ಬಸವ. ೯೬); ಅಯ್ಯಯ್ಯೋ ನಿಮ್ಮ ಕರುಣದ ಶಿಶು ಎಂದು ಹುಯ್ಯಲ ಲಾಲಿಸಿರೋ (ಶಿವಾನ. ೦೬೨-೧೦೩); ಸುರರು ದಾನವಬಾಧೆಗಾಱದೆ ಹರಿಗೆ ಹುಯ್ಯಲ ನಿಟ್ಟೊಡವರಿಗೆ ಕರುಣದಲಿ ವೈದೋಱ ನರಹರಿಯಭಯವನು ನೆಗಹಿ (ಕಾಶಿ. ೦-೦೬). **ಹುಯ್ಲು**: ೧. ತತ್ಪುರಂಗವನು ತೆಗೆದಂಗಣಕೆ ಹಲ್ಲಣಿಸಿ ಹತ್ತಿ ಹೊಯ್ದಾಡ ಚಮ್ಮಟಿಗೆಯ ಹುಯ್ಲಿಗೆ ಕರುತ್ತು ನಭ ಕುಪ್ಪರಿಸೆ (ಸತ್ಯಹ. ೦೦-೬೦); ಅರ ನೋಡಲು ಸುರುಟಿಯ ಕತ್ತಿಗಳ ಹುಯ್ಲ ಧಾರೆಗಿಕ್ಕಿಡಿಯಾವವರು (ಕಂಶವ. ೦೩-೯೯). ೨. ಸೈನಿಕರೂ ತಮ್ಮ ಕತ್ತಿಗಳನ್ನು ಹಿರಿದು ಹುಯ್ಲಿಗೆ ಸಿದ್ಧರಾದರು (ಶಾಂಕಲಾ. ೦೬೯). ೫. ಸಾರ್ವಭೌಮನ ಮನೆಯ ತುರಗವನೊರ್ವ ತಸ್ಕರ ಕೊಂಡು ಬರಲಿಕೆ ನೀರ್ವಹದಿ ಹುಯ್ಲಾಯ್ತು ಬೇಗದಿ (ಸಂಶಕ. ೦೯-೦೩). **ಹೂಯಲು**: ೫. ಮಾಯಲುಣ್ಣಾಲಿ ಏಳ್ಳ ಕೊಳ್ಳಲಿ ಹೀಯುಲೊಟ್ಟಿಗಲಿ ಕಾಂತೆಯರ ಬಲು ಹೂಯಲನು ಮಾಡಲಿ (ಶಿವಾಗ. ೦೦-೩೯-೨೯). ೬. ಬಂದಿರ್ದ್ದ ಸುರವರರು ಹೂಯಲ ತಂದಿರ್ದ್ದ ತನಗಕಟ (ಶಿವಾಗ. ೬-೩-೦೯). **ಹೂಲಿ** : ೨. ತಗ್ಗಿಸಿವರೆಡಬಲನ ಹೂಲಿಯ (ಕೃಷ್ಣಾ. ೨೧೦). ೫. ಪುರುಷರ ವಿರುದ್ಧ ವ್ಯರ್ಥವಾಗಿ ಹೂಲಿಯನ್ನೆಬ್ಬಿಸಬಾರದು! (ಬ್ರಹ್ಮಕ್ಷ. ೦೬೯); ಹುಲಿ ಯಬ್ಬರವು ನಿಲಲು ಇವನ ಹೂಲಿ ! (ಕಂಶಕ. ೦೯-೬); ಇಕೋ ನೋಡು ನಾನೆ ಹುಲಿ! ಬರಿ ಹೂಲಿ! ವನಮಾಲಿ! (ಶ್ರೀಂಕಥ. ೦೩-೦೩). **ಹೊಯಲು** : ೨. ವರರೂಪ ಶೌರ್ಯಗಳರಸಿ ಅವರ ಹೊಯಲು ಸಾಹಸಗಳನ್ನು ವರಸಿಯಿಂ ಭಜಿಸಿ (ಶಾಗಂಧಿ. ೯೧-೭). **ಹೊಯ್ಯಲು** : ೪. ದೇವತತಿ[ವರಕೆ] ನಾ ದೂತ ಕಳುಹಿದರೆನ್ನ ನಿನ್ನ ಹೊಯ್ಯಲ ಕೇಳ್ದು ಕರುಣದಿಂದ (ಶುಕಂಗ. ೨-೨೯). **ಹೊಯ್ಲು** : ೧. ಕಾಡೆಮ್ಮೆಯ ಹಾಲ ಊರ ಕೋಣ ಕುಡಿದು ಮತ್ಸರನು ಲೆಕ್ಕಿಸದೆ ಬಹುಜನರ ನೋಯಿಸಿ ಬಾಹಲ್ಲಿ ಒಂದಾಡಿನ ಬಾಲದ ಹೊಯ್ಲಿಗಂಜಿ ಓಡಿ ಹೋಯಿತು (ಪೋಲಪಾ. ೦೬೨-೬೮೩) ; ದಟ್ಟೈಸಿದುರಿಯ ಹೊಯ್ಲಿಂಗಾಱದಕಟ ಬಾಯ್ಬಿಟ್ಟು ಪಶುಮೃಗಪಕ್ಷಿ ನೆರೆದೊಱಲುತಿರೆ (ಸಿದ್ಧರಾ. ೬-೫೦) ; ಕೋಮಲೆಯರ ಕಟಾಕ್ಷದ ಹೊಯ್ಲಿಗಳುಕದನೇ ಮಹಾಧೀರ (ಶೀವಂತ. ೫-೬೯) ; ಉರವಣಿಪ ತೇಜಿಗಳ ಕತುಹಿನ ಖುರದ ಹೊಯ್ಲಲಿ ಏಳುವವನನ ಗರಿಯು ಗಾಳಿಯಲಿ ಹರನ ನಯನಜ್ವಾಲೆ ಪಾರ್ಥಿಯ ಸರಳ ಕಿಡಿಯಲಿ ಪಲ್ಲಟಿಸೆ (ಕುಮಾರವ್ಯಾ. ೫-೨). ೨. ಮಱಹ ಪಡೆಯರು ಘಾಯ ಖಂಡಿಗೆ ತೆಱಹುಗಾಣರು ಹೊಯ್ಲ ಹೋರಟೆ ಹೊಱಗೆ ಬದ್ದವು ಕದ್ದ ವಿಬ್ಬರ ದೃಷ್ಟಿ ಮನಮನವ (ಕುಮಾಗ. ೬-೨೭). ೫. ಕೇಣವಿಲ್ಲದೆ ಭಟರ ಹಾಣಾಹಾಣಿ ಮಸಗಿತು ಖಣಿಖಟಿಲ ಹೊಯ್ದಾಣೆಗಳ ಬಿಱುಗಿಡಿಯ ಹಿರಿಯು ಬ್ಬಣದ ಹೊಯ್ಲುಗಳ (ಕುಮಾಕ. ೨-೦೯). ೮. ಮಿಡಿತ ; ತುಡಿತ :

ಲಲನೆ ಮಾೞ್ಗಿನೊಳುಸುರುವಳ್ಳಿಯೊಳು ಹೊಯ್ಲನಗಾರೊಳು ರಜವನೆದೆಯೊಳಲ್ಲಾಟವಂ . . . ರೋಮದೊಳು ಬಲ್ಪನಾರಯ್ಲು ಕಾಣದೆ ನೊಂದಳು (ಶಶಾ. ೦೨-೨೬). ೯. ನಿಃಶ್ವಾಸ : ಮೇಲುದುಗುಡದ ಮುಖದ ಚಿಂತೆಯ ಬಾೞಗೆಯ ಜಡಮನದಲಿದ್ದರು ಸೂಳು ಸುಯ್ಲಿನ ಹೊಯ್ಲ ನಾಸಾಪುಟದ ದೆಸೆಗಳಲಿ (ಕುಭಾ.ಅ. ೦೬-೦). ೧೦. ಬಾಜನೆ : ಹಜೆಯ ಹೊಯ್ಲಿನಲಮರಗಿರಿ ತಱಿತಱಿಸೆ ತಱೀದರಸ್ವಶಸ್ತ್ರದ ಹೊಱಗೆಯಲಿ ಹೂೞಿದರು ಹೊಗಿಉವರಾನೆಕಾದುರೆಗಳ (ಕೊಆಶಾ. ೩-೬-೯) ; ನೆಱೆಯದಂಬರವಿವರ ಗಮನದ ತೆಱಹುಗೆನೆ ತೇರಯ್ಲು ತೊಡೆಗಳ ಹಜೆಯ ಹೊಯ್ಲನಲೀವರಾ ಪ್ರಸ್ರವಣಗಿರಿಗಾಗಿ (ಕೊರಾ. ೩-೯-೦೬). ೧೧. ಚಚ್ಚಿಕೊಳ್ಳುವಿಕೆ ; ಬಡಿದಾಕೊಳ್ಳುವಿಕೆ : ಬಾಯ ಬಸುಱಿನ ನೊಸಲ ಹೊಯ್ಲಿನ ರಾಯನರಸಿಯರರಸನಿದಿರಲಿ ಹಾಯಿದರು (ಕುಭಾ.ಶ. ೦-೩).

ಹುಯ್ಮಲೇಳಸು = ಗೋಳಾಡುವಂತೆ ಮಾಡು : ಜೀಯ ಕಳುಪು ಪಾಳೆಯವನೀಗಳೆ ಹೊಕ್ಕು ಹುಯ್ಮಲೇಳಿಸಿ ಕಾರಾಕರನು ಕಯ್ಯಾರೆ ಕೊಂದು . . . ತೋಱದಪೆವು (ಕುರಾ. ೦೯-೩೬). ಹೂಲಿ ಎಬ್ಬಿಸು = ಗಲಾಟೆ ಮಾಡು ; ಗಲಭೆಯೆಬ್ಬಿಸು : ಕೂಗು ಕೇಕೆಗಳಿಂದ ಹೂಲಿ ಎಬ್ಬಿಸಿಕೊಂಡು ಇವರೆಡೆಗೆ ಬಂದು ನಿಂತ ಕೂಡಲೆ ಅವರಲ್ಲಿಯ ಒಬ್ಬನು ತನ್ನ ಕೈಯಲ್ಲಿಯ ಕೊಡಲಿಯನ್ನೆತ್ತಿ . . . ಬೀಸಿ ಒಗೆದನು (ಬಾಗಾಕ. ೬೦). 'ಪೊಯಿಲ್' ಪರಾ.

[ಪೊಯ್$_1$ + – ಇಲ್$_3$. / ತಮಿ. ಪೂಟಲ್; ಮಲ. ಪೂಯಿಲ್]

**ಪೊಯಶಳ** 'ಪೊಯ್ಸಳ' ನೋ.

**ಪೊಯಸಳ** 'ಪೊಯ್ಸಳ' ನೋ.

**ಪೊಯಿ** 'ಪೊಯ್$_1$' ನೋ.

**ಪೊಯಿನೀರು** 'ಪೊಯ್ನೀರ್' ನೋ.

**ಪೊಯಿಲ್**, ಪುಯಿಲ್, ಪೊಯಿಲು, ಹುಯಿಲು, ಹೊಯಿಲ್, ಹೊಯಿಲು$_1$ (ನಾ). ೧. ಏಟು ; ಪೆಟ್ಟು ; ಹೊಡೆತ: ತೃಣಮುಂ ತೆನೆವೋದ ಬಟಿಕ್ಕೊಣಗುವುದದಱಿಂದೆ ನರರ ಬಾೞ್ ಲಘುಕಾಲಂ ಹಣಿದದ ಪೊಯಿಲ್ಗೆ ಮೊದಲ್ಗಡು ಕಣೆಯನ್ನದಿದೆಳವೆ ಜನ್ಮನಂ ಮುಪ್ಪನ್ನಂ (ಅಸಂಪು. ೩-೭೦) ; ಪೊಯಿಲ್ಗಳು ಸರಕು ಮಾಡದೆ ಮುಗ್ಗಿ ಕವಿದರಾ ತ್ರಿಪುರಮಂ ಸುತ್ತಲಾ ದಿವಿಜಭಟರು (ಕಂಪು. ೧೨-೩೦). ಪುಯಿಲ್ : ೨. ಹೊಡೆದಾಟ ; ಕದನ ; ಕಾಳಗ : ಇರ್ಕೇರಿ ಬಸವಪಟ್ಟಣದುರ್ಕರಸಗೊರ್ಂದು ನೆವದೊಳಂದಿಂಗೆ ಪುಯಿಲ್ ಪೆರ್ಚಳಿಸಿ ಮುಯದಿರೆ ಭೃಶಕರ್ಕಶರಟೆಗೆಯ್ಮೆವಟ್ಟಿಗೊಡನಡಿಯಿಟ್ಟರ್ (ಶಶಾ. ೨-೯೦) ; ಅತ್ತಲಾ ಪುಯಿಲೊಳ್ ನೊಂದು ಪೊಱಲ್ಗಳಂ ಪೊರ್ದಿದ . . . ನೆರದೊರೆಗಳ್ (ಶಶಪಂ. ೯೯-೦೯). ಪೊಯಿಲು : ೩. ದೂರು ; ಮೊರೆ ; ಮನವಿ : ಬೆಳಪಕೆಯ್ಗಳೊಳ್ ತಲೆಗೊಯಿಲು ಮುಳಿದ ಕಡುನಲ್ಲರೊಳೆ ಪೊಯಿಲು (ಶಂಹು. ೦-೦೯). ಹುಯಿಲು : ೧. ಅವ ದೆಶೆಗೋಡಲಲ್ಲಲ್ಲಿಗೆ ಬಂದು ಬೀಳುವವು ಹುಯಿಲುಗಳು (ಶಿಕೃತ. ೨-೯-೩೦). ೨. ದೊರೊಪ್ಪುರಾಗವ್ರಣ್ಣನ್ ಅಜೆಜ್ ಹುಯಿ(ಲೊ)ಳು ಸತ್ತನ್ (ಕ್ರುಅರ. ೦೯೨೬, ೯೦-೯ ; 10ಕಹು ೩೫) ; ನಿಮ್ಮ ತನ್ನ ನಮ್ಮ ಕಾರ್ಯನಿಮಿತ್ತ ಹುಯಿಲಲಿ ಬಿದನಾಗಿ ಈ ಕಾನನು ನೆತ್ತರಕೊಡಿಗೆಯಾಗಿ, ಕೊಟ್ಟನು (ಕ್ರುಅರ. ೦೯೨೬, ೯೯-೩ : ?). ೪. ಗಲಾಟೆ ; ಗದ್ದಲ : ತಿಳಿಯದ ಮೂರ್ಖರು ಎಬ್ಬಿಸುವ ಹುಯಿಲು ವ್ಯರ್ಥಾಲಾಪವಲ್ಲದೆ ಮತ್ತೇನೂ ಅಲ್ಲ (ಕಮ್ಯಾ.ಕ. ೬೩) : ಇದು ಸುಮ್ಮನೆ ಜನಸಾಮಾನ್ಯರನ್ನು ಹುರಿದುಂಬಿಸಲು ಎಬ್ಬಿಸಿದ ಹುಯಿಲು ಆಗಿದ್ದರೆ, ಅದರ ಬಗೆಗೆ ವಿಶೇಷ ಆಕ್ಷೇಪಣೆಯಿಲ್ಲ (ಹುಸ್ವಕ್ರ. ೩೨). ೫. ದಾಳಿ ; ಆಕ್ರಮಣ : ಹಾದರದಲ್ಲಿ ಬಂದಿದ್ದು ಹುಯಿಲಲ್ಲಿ ಹೋಯ್ತು (ಗಾದೆ). ಹೊಯಿಲ್ : ೧. ಹೊದ್ದಿಯು ಹೊದ್ದದ ಹೊಯಿಲೆಸದುವು ಜೋಡರ ಸುಸಿಲೊಳ್ (ಅದ್ಭರಾ. ೯-೦೬). ಹೊಯಿಲು$_1$ : ೧. ದಶಮರುತನ ಹೊಯಿಲಿಲ್ಲದೆ ತಾನೆ ಲಿಂಗದ ಜ್ಞಾನಜ್ಯೋತಿಯ ನಿಲವೋ (ಅಶಸಂ. ೨೨೬-೦೦೩೦) ; ಕೆಲಬರನು ಹೊಱಕೈಯ ಹೊಯಿಲಲಿ ಕೆಲಬರನು ಧನುವಿನಲಿ ಗದೆಯಲಿ ಹೊಯ್ದು ಕೆಲಕೆಲರ ಕಲಕಿದನು ಬಲಜಲಧಿಯನು (ಕುಭಾ.ದ್ರೋ. ೦೬-೩) ; ಕುಂಭಸ್ಥಲ ಬಿರಿಯಲಂಕುಶದ ಹೊಯಿಲಿಂದ ಬರಸುತಿಹರು ಸಾಧನೆಯನಂಕದ ಮದಕರಿಗಳಗಲ್ಲಿ ಕೋವಿದರು (ಕುರಾ. ೯-೩೦). ೨. ವಿನೆಂಬೆನು ಕುಮಾರರ ಹೊಯಿಲ ಬೆಳಸಿರಿಯ (ಕುಭಾ.ದ್ರೋ. ೮: ೨೯). 'ಪೊಯಿಲ್' ಪರಾ.

ಹುಯಿಲು ಎಬ್ಬಿಸು, ಹುಯಿಲೆಬ್ಬಿಸು = ಗಲಾಟೆ ಮಾಡು ; ಗಲಭೆಯೆಬ್ಬಿಸು : ವಿದ್ಯಾರ್ಥಿಗಳು ಅವನ ಭಾಷಣಕ್ಕೆ ಗುಲ್ಲು ಮಾಡಿ ಹುಯಿಲು ಎಬ್ಬಿಸುತ್ತಿರಲಿಲ್ಲ (ಕಾಆಕ. ೦೮೬); ನಿಃಸ್ವಾರ್ಥಹೃದಯಿಯಾಗಿ ದುಡಿಯುತ್ತಿರುವಾಗ ಈಗ ಈ ಸ್ವಾರ್ಥದ ಸೆಳಕು ಹುಯಿಲೆಬ್ಬಿಸಬೇಕೆ ? (ರಶ್ಯ. ೯೩). ಹುಯಿಲು ಕೊಡು = ಮಾಟ ಮಾಡಿ ಕೊಲ್ಲಿಸು : 'ಹುಯಿಲು ಕೊಡುತ್ತೇನೆ' (ಮಾಟ ಮಾಡಿ ದೆವ್ವದ ಸಹಾಯದಿಂದ ವೈರಿಗಳನ್ನು ಕೊಲ್ಲಿಸುವುದು ; ಎಂದರ್ಥ) (ಜಾಕೂರು. ೩೬೩). ಹೊಯಿಲು ಹಿಡಿ = ಜೋಲಿ ತಪ್ಪಿಸಿ ನಿಲ್ಲು ; ಸಮತೂಕದಲ್ಲಿರು : ಕುಂಟೆಯನ್ನು ಹತ್ತಿ, ಎರಡು ಕಾಲುಗಳನ್ನೂ ಮೇಣಿಯ ಆಚೆ ಈಚೆ ಇಟ್ಟು . . . ಬೊಡ್ಡೆತ್ತುಗಳ ಹಗ್ಗದ ಆಧಾರದಿಂದಲೇ ಹೊಯಿಲು ಹಿಡಿದು ನಿಲ್ಲಬೇಕಾಗಿತ್ತು (ಕೆಬಃಹು. ೨೬೮). [ಪೊಯ್$_1$ + – ಇಲ್$_3$. / ಕೊಡ. ಪೊಯಿಲ್]

**ಪೊಯಿಲು** 'ಪೊಯಿಲ್' ನೋ.

**ಪೊಯಿಲ್ವೆಱು** (ಕ್ರಿ). ಏಟು ತಿನ್ನು : ಪೊಯ್ವೊಡೆ ಬಱುಬಂ ಪೊಯಿಲ್ವೆತ್ತಂತೇನುಮನಱಿಯದೆ ಪರಿಭವಾನಿಲನಿಂ ಶೋಕಾನಲನಿರ್ವಾಡಿಸೆ (ಪಂಪರಾ. ೮-೭೦ ವ). [ಪೊಯಿಲ್ + ಪೆಱು$_1$]

**ಪೊಯಿಸು**, ಪೊಯ್ಯಿಸಂ, ಹಾಯಿಸು, ಹೊಯಿಸು$_1$ (ಕ್ರಿ). ೧. ಹೊಡೆಯುವಂತೆ ಮಾಡು ; ಹೊಡೆಯಿಸು : ಎಱಗಲಱಿಯದೆ ಜೊನ್ನಕಮ್ಮಗುಬ್ಬಂ ಬರಲಣಮಱಿಯದೆ ತಪ್ಪಂ ಪಿನ್ದಂ ತೆಱನನಱಿಯದೆ ಭಂಗಮನಿಕ್ಕಿಯುಂ ಮೂಱಿಡೆಗಲ್ಲದೆ ಕಟ್ಪಾಡಿಯುಂ ಮುಱಿಯೆ ಪೊಯಿಸಿದನು (ಎಶ. II. ೦೩೩-೦೯೦ : ೨೮೭). ೨. ವಾದ್ಯವನ್ನು ಬಾಜಿಸುವಂತೆ ಮಾಡು : ಶುಭದಿನಮುಹೂರ್ತದೊಳುತ್ತರಭರತವಿಜಯೋದ್ಯೋಗಮಂ ಭರತರಾಜನಱಿಪಲೆಂದು ವಿಜಯಭೇರಿಯಂ ಪೊಯಿಸಿದಾಗಳ್ (ಆಪು. ೦೩-೯೦ ವ) ; ಗುಡಿಯಂ ಕಟ್ಟಿರೊ ಭೇರಿಯಂ ಪೊಯಿಸಿರೊ . . . ಎನುತ್ತುತ್ಸವಂಬಡೆಯುತ್ತಾಕ್ಷಣಮೊಯ್ದಂ ನೃಪವರಂ ತತ್ಪೂತಿಕಾಗೇಹಮಂ (ವಕಳು. ೨-೩೦). ೩. ಕತ್ತರಿಸುವಂತೆ ಮಾಡು; ಕಡಿಯಿಸಂ : ಬೆಂಡಿನ ನೆವದಿಂದ ಬಂದು ತನ್ನಬಲೆಯ ಕಂಡು ಪಿಡಿದ ರಾವಣನೆಂದು ಕೊಂಡೊಯ್ದು ತಲೆಯ ಪೊಯಿಸಿದನೆಂದವನೆಬೆಗೊಂಡು ರಾಯಗೆ ಪೇಳಿದನು (ಕುರಾ. ೩೬-೩೯). ೪. ಬಲಿ ಕೊಡುವ ಉದ್ದೇಶದಿಂದ ಪ್ರಾಣಿಯ ಆಹುತಿಯನ್ನು ಅರ್ಪಿಸು : ಚೌಷಷ್ಟಿಯೋಗಿನಿಯರ್ಗೆ ಬಲಿಗೊಟ್ಟು ಭೂತಸಂತುಷ್ಟಿಯಪ್ಪಂತೆ ಕುಱಿ ಕೋಣಂಗಳಂ ಪೊಯಿಸಿ . . . ಭೂಪನುತ್ಕೃಷ್ಟಮುಖಮಿನ್ನು ಸಂಪೂರ್ತಿಯಾದವುದೆಂಬ ಹೃಷ್ಟತೆಯೊಳರ್ಥಮಂ ಸಾಗಿಸಿದನು (ಕೃಬಿಶಾ. ೩-೭೨). ಪೊಯ್ಯಿಸು : ೫. ಕೆತ್ತಿಸು ; ಕೊರೆಯಿಸು ; ಕಂಡರಿಸು : ಬೋಳಸಿಟ್ಟ ಎಣ್ಬಸಿರವಿಮ ಪೊಯ್ಯಿಸಿದ ಕಲ್ಲು (ಎಶ. IV. ಹುಣಸೂ. ೦೦-೦೩ ; 1020 ?). ಹುಯಿಸು : ೩. ಆ ಕೃಷ್ಣರಾಯನ ಮೇಲೆ ದೊಡ್ಡ ತಪ್ಪನ್ನು ಹಾಕಿ ಅವನನ್ನು ತಲೆಹುಯಿಸಬೇಕೆಂದು ಗಂಡನೊಡನೆ ಬಾಡಿ ಹೇಳಿದಳು (ಶಿಶಿಶಂ. VII. ೨೦). ಹೊಯಿಸು$_1$ : ೨. ಹಱೆಯ ಹೊಯಿಸಿ ಕುಱಿಹ ಪೂಜಿಸುವರ ಮೆಚ್ಚ (ಬಸವ. ೨೦೬). ೫. ಶಾಸನವ

ಹೊಯಿಸಿದನು (ಶಾಸಂ. ೩೯-೩೬) ; ತಮ್ಮಯಗೌಡನು ನನ್ದನಸಂವತ್ಸರದ ಚಯಿತ್ರ ಶು ೧ಲು ಹೊಯಿಸಿದ ಕಲೊರಳೂ ೧ (ಎಕ. X. ಶಾಂಗ್. ೬೮-೯ ; ?) ; ಹೊಲತೀಪುರಸ್ಥಳದ(ದ) ಗಲುಡ ಅರಿಯಂಣನು ಪಾಲಿಹಿಸಿ ದಂತ್ತ ಶಾಸನ ಹೊಯಿಸಿದರೂ (ಎಕ. VII. ಶಿಕಾರಿ. ೦೦೦-೮ ; ?). 'ಪೊಯ್ಯು' ಪರಾ. [ ಪೊಯ್$_1$ + – ಇಸು ]

**ಪೊಯ್ಯೆಂಡು** 'ಪೊಯ್ಸೆಂಡು' ನೋ.

**ಪೊಯ್ತು ?** (ನಾ). (?) : ಸ್ವಸ್ತಿಶ್ರೀ . . . ವಿಜಯಸಂವತ್ಸರ ಇಪ್ಪದಾ ಎಣ್ಬನೆಯೊಳು ಶಿವವಾರ ಕದವುಬ್ಬೂರ ಆಳೆ ಕದವುಬ್ಬ × ಭೂವೊಟ್ಟ ಯೋನ್ ಕಟುಕಣ್ಬೇಶ್ವರಂಕು ಪೊಯ್ತುವುಮನ್ನ ಕಟನಿಕಣ್ಡುಗಂ ಎಟ್ಟು × × × ವಾಟು ಅಯ್ದುವು ಮೂಸೇ ಪೊನ್ನದಳ ಅಟಿದನ್ನಟ್ಟರ ಕೊಡ ವೆನೂರಂ ಆಳ್ವ ಅರಸನು ಮಾಡಿಸುವೋರ್ (ಎಕ. ೫, ಕೋಲಾರ. ೬-೯ : 768). [ ? ]

**ಪೊಯ್ದು$_1$** 'ಪೊಯ್$_1$' ಪರಾ.

**ಪೊಯ್ದು$_2$** 'ಪೊಯ್$_2$' ಪರಾ.

**ಪೊಯ್ನೀರ್, ಪೊಯಿನೀರು, ಹೊಯ್ನೀರು** (ನಾ). ೧. ವಾಳೆಯ ನೀರಿನಿಂದ ಬೇರೆಯಾದ, ಪಾತ್ರೆಗಳಲ್ಲಿ ತುಂಬಿ ಸಸಿಗಳಿಗೆ ಹಾಕುವ ನೀರು : ಅವರಿರ್ವರ ಬೇಟಮೆಂಬ ಲತೆಯ ಬೆಳಸಿಂಗೆ ಪೊಯ್ನೀರೆಱೆ ವಂತೆ ಕೆಯ್ನೀರೆಱೆದು ಬಯಸುವಂ ಮೆಱೆದು (ಶಂಕರಾ. ೩-೨೩ ವ) ; ಭೂಪಂ ತನ್ನ ಸಂತಾನವೃದ್ಧಿಗೆ ಪೊಯ್ನೀರೆಱೆವಂತೆ . . . ಕೈನೀರೆಱೆದಂ (ಶಂಶಾಚ. ೩ ೦.೯) ; ಮಾಟೆಯಿಲ್ಲದೆ ಪೊಯ್ನೀರಿಂ ಬೆಳೆಗುವ ಧರ (ರಕ್ಷೋಮ್. ೦-೯೯); ಬಾಷ್ಪಬಿಂದುಗಳಂ ಸೂಸಿ ಲತಾಂಗಿ ಭಂಗಿವಡೆದಿರ್ದಳ್ ಬೇಂಟವೇಲೊಂದು ಬಳ್ಳಿಗೆ ಪೊಯ್ನೀರೆಱೆವಂದದಿಂ (ಜಗ. ೦೦-೦೦). ೨. ನೀರು ಹಾಕಿ ಕಡೆದ ಮೊಸರು ; ಮಜ್ಜಿಗೆ : "ದಧಿಮಂಥಂ ಮಸ್ತು ವೆಂಬುದಕ್ಕಂ ಪೊಯ್ನೀರ್" (ವಸ್ತು.ಕೋ. ೯೨-೩). **ಪೊಯಿನೀರು** : ೧. ಸಂತಾನಾಭಿವೃದ್ಧಿಗೆ ಪೊಯಿನೀರೆಱೆವಂತಾ ತುವರಗಂಡವರು ಸಂತಸ ಮಿಗೆ ಕೈಧಾರೆಯೆಱೆದರು (ಶಂಶಾಚಾ. ೬-೦೩೪). **ಹೊಯ್ನೀರು** : ೦. ಬೇವಿನ ಆ ಗಿಡಕ ಬೆಲ್ಲದ ಕಟ್ಟೆ ಕಟ್ಟಿ ಜೇನುತುಪ್ಪದಲ್ಲಿ ಹೊಯ್ನೀರ ಹಣಿಸಿದರ ಬೇವು ತನ್ನಿಸವ ಬಿಡಲಿಲ್ಲ (ಕರ್ನಾಕ. ೩೩೬). [ಪೊಯ್$_2$+ನೀರ್]

**ಪೊಯ್ಸಿಸು** 'ಪೊಯಿಸು' ನೋ.

**ಪೊಯ್ವಡೆ, ಹೊಯ್ವಡೆ** (ಕ್ರಿ). ಏಟನ್ನು ತಿನ್ನು ; ಪೆಟ್ಟು ಹೊಂದು : ಪ್ರಣಯಪ್ರಕೋಪಭರಂದೆಯ್ತಂದು ಕಾಂತಾಜನಂ ಪಿಡಿತಂದೊರ್ಮೆಯೆ ಕಂಕಣಂಗಳಲಿಯಲ್ ಪೂವಮಾಲೆಯಿಂ ಪೊಯ್ವಡೆದಂ ಕೇಸರದಾಮಬದ್ಧ ಚರಣಂ ಶೃಂಗಾರಸಾರೋದಯಂ (ಶಾಂತಿಪು. ೩೨೩) ; ನೃಪಂ ಪೆಱರ ಸೂಟ ದಿನಂ ಮಱೆದಿರ್ದ ಸೂಟ್ಟಡಂ ಬಂದಳ ಸೂಟ್ಗೆ ಬಂದು ಬಿಡೆ ಪೊಯ್ವಡೆವಂ ಬಿಡುತರ್ಪ ಕಣ್ಣ ನೀರ್ತಣ್ಣಂದಲ ಬಳ್ಳಿಮಿಂಚಿನ ಪೆಳಂಚುವ ಲೋಲ ಕಟಾಕ್ಷಮಾಲೆಯಿಂ (ಮಲ್ಲಿಪು. ೩-೯೩) ; ಪೊಡೆಯೆ ಕೃಕವಾಕುನಿನದಂ ಬಿಡದುಣ್ಮುತಿರಲ್ಕೆ ಕಿಯ್ಯ ಬಾಳ್ ಬೀಟ್ಟರೆ ಪೆ[ ಶಾಂತಿ. ಹೊ ]ಯ್ವಡೆ ದಂತೆ ಪಂದೆಯಂ ಪಾವಡರ್ದಂತಾಗಿರೆ ಯಶೋಧರಂ ಬೆಱಗಾದಂ (ಚುಕೋಚ. ೩-೨೬). **ಹೊಯ್ವಡೆ** : ಈ ಐದು ಬಿಕ್ಕಳುಗಳು ಮುಟ್ಟಿನವರಿಗೂ . . . ಹೊಯ್ವಡೆದವರಿಗೂ ಮರಣಕ್ಕೆ ಕಾರಣವಾಗಿ ಕಾಣಿಸಿಕೊಂಬುದು (ಕಕವ. ೨೯೦). [ ಪೊಯ್$_2$ + ಪಡೆ$_1$ ]

**ಪೊಯ್ವೆಱು** (ಕ್ರಿ). = ಪೊಯ್ವಡೆ : ದಶಾನನಂ . . . ಪೊಯ್ವೆತ್ತಿಭ ವೈರಿಯಂತೊಡಱೆ ಕೆಂಗಱೆ ಮಾಡಿದ ಭೃಂಗಮಾಲೆ ನೀಳ್ವೆತ್ತನೆ ನೋಡಿದಂ ಮಯತನೂಜೆಯ ಬಾಡಿದ ವಕ್ತ್ರಪದ್ಮಮಂ (ಶಂಶಾಚ. ೦೯-೦೦೬) ; ಪೊಯ್ವೆತ್ತ ಪಾವಂತೆ ಪೊರೆದು . . . ಪೊಱಪಟ್ಟನ್ (ಅ. ೧೩. ೦೩-೨೩೨). [ ಪೊಯ್$_2$ + ಪೆಱು ]

**ಪೊಯ್ಮಳ** 'ಪೊಯ್ಸಳ' ನೋ.

**ಪೊಯ್ಸಣ** 'ಪೊಯ್ಸಳ' ನೋ.

**ಪೊಯ್ಸಳ, ಪೊಚ್ಚಳ, ಪೊಯಂಶಳ, ಪೊಯಸಳ, ಪೊಯ್ಮಳ, ಪೊಯ್ಸಣ, ಪೋಶಳ, ಪೋಶಟ, ಪೋಸಳ, ಪೋಸಟ, ಹುಯ ಸಲ, ಹೊಯಸಣ, ಹೊಯಸಳ, ಹೊಯಿಸಣ, ಹೊಯಿಸಳ, ಹೊಯ್ಸಣ, ಹೊಯ್ಸಳ, ಹೊವಿಸಳ, ಹೋಸಣ, ಹೋಸಲ, ಹೋಸಳ, ಹೋಸಾಲ** (ನಾ). ಕರ್ನಾಟಕದ ಒಂದು ಪ್ರಸಿದ್ಧ ರಾಜವಂಶ, ಆ ವಂಶದ ಮೂಲಪುರುಷ ಹಾಗೂ ಆ ವಂಶಕ್ಕೆ ಸೇರಿದ ವ್ಯಕ್ತಿ ಮತ್ತು ಅವರ ರಾಜ್ಯದ ಹೆಸರು ; ೯ ಸುಮಾರು ವರ್ಷಗಳ ಹಿಂದೆ ಸಳನೆಂಬ ಒಬ್ಬ ಶೂರಯುವಕನಿದ್ದನು. ಇವನ ಅಧ್ಯಯನಕಾಲದಲ್ಲಿ ಒಮ್ಮೆ ಹುಲಿಯು ಹಾಯ್ದು ಬರಲು 'ಪೊಯ್ ಸಳ' ಎಂದು ಗುರುವು ಸಳೆಯೊಂದನ್ನು ಇವನ ಬಳಿ ಗೆಸೆದು ಆಜ್ಞೆಯನ್ನಿತ್ತನು. ಸಳನು ಹುಲಿಗೆ ಕಿಂಚಿತ್ತೂ ಹೆದರದೆ ಗುರುವಿನ ಆಜ್ಞೆಯನ್ನು ಪಾಲಿಸಿ ಗುರುವು ಕೊಟ್ಟ ಸಳೆಯಿಂದಲೇ ಹುಲಿಯನ್ನು ಹೊಡೆದು ಕೊಂದನು. ಈ ಘಟನೆಯಿಂದ ಅವನಿಗೆ ಮುಂದೆ 'ಪೊಯ್ಸಳ' ಎಂದೇ ಹೆಸರಾಯಿತಲ್ಲದೆ ಇವನು ರಾಜ್ಯ ವೊಂದನ್ನು ಕಟ್ಟಿ ಪ್ರಸಿದ್ಧನಾದ ನಂತರವೂ ಇದೇ ಹೆಸರು ಇವನ ಮನೆತನಕ್ಕೂ ಉಳಿದು ಬಂದಿತೆಂಬ ಪ್ರಸಿದ್ಧವಾದ ಕಥೆಯಂ ಶಾಸನ ಗಳಲ್ಲಿ ಸಿಗುತ್ತದೆ. ಇದಕ್ಕೆ ಚಾರಿತ್ರಿಕ ಆಧಾರಗಳೇನೂ ಇರು ವಂತಿಲ್ಲ. ಬಹುಶಃ ಇದಂ ಕಾಲ್ಪನಿಕವಿದ್ದರೂ ಇರಬಹುದು : ಪೊಯ್ಸಳರಾಜ್ಯದ ಮೂಳಸ್ತಂಭಮಿದೆನಿಸದ . . . ಚೈತ್ಯಾಯತನದ್ವಯಂ ಗಳಂ . . . ಮಾಡಿಸಿ (ಎಕ. IV (R), ಕುಣಿಗಲ. ೦೬-೭೯; 1124) : ಶ್ರೀವಿಷ್ಣುವರ್ಧನ ಪೊಯ್ಸಳ ಶ್ರೀವೀರನಾರಸಿಂಹದೇವರ್ (ಕ್ಯಾಅಂ. ೦೯೯೯, ೨೨-೩ ; 1124). **ಪೊಚ್ಚಳ** : ಭುಜಬಲವೀರಗಜ್ಗ ಪೊಚ್ಚಳ ಜಗದೇಕಮಲ್ಲ ಶ್ರೀನರಸಿಂಹದೇ[ವ] (ಎಕ. IV (R). ಕೊಳ್ಳೇಗಾ. ೬೭-೦೦ ; ಶು. ೧೨ನೆಯ ಶಕ). **ಪೊಯಂಶಳ** : ಶ್ರೀಮನ್ಮಹಾಮಣ್ಡಳೇಶ್ವರ ಪೊಯಶಳ ಬಿಟ್ಟದೇವನ ದಣ್ನಾಯಕ ಬೊಪ್ಪಣನೆತ್ತಿ ಬರಲು . . . ಬಮ್ಮಯ ನಾಯಕಂ ಸುರಲೋಕಪ್ರಾಪ್ತನಾದ (ಎಕ. VII. ಶಿವಮೊ. ೦೨-೩ ; 1120). **ಪೊಯಸಳ** : ಪೊಯಸಳ ಶ್ರೀವೀರಬಲ್ಲಾಳದೇವರಸರು ಪ್ರುಥ್ವೀರಾಜ್ಯಂ ಗೆಯುತ್ತಿರೆ (ಎಕ. IV (R). ಚಾಮರಾ. ೦೫೦-೨ ; 1335). **ಪೊಯ್ಮಳ** : ಪೊಯ್ಮಳ ಶ್ರೀವೀ[ರ]ನಾರಸಿಙ್ಗದೇವನ್ ಪೃಥಿವೀರಾಜ್ಯಮ್ ವಣ್ಡ (ಎಕ. IV (R). ಕೊಳ್ಳೇಗಾ. ೯-೦ ; 1224). **ಪೊಯ್ಸಣ** : ಸಳಿಯಿಂ ಪುಲಿಯಂ ಪೊಯ್ಸಳಯೆನೆ ಪೊಯ್ದುದಱೆಂ ಪೊಯ್ಸಣವೆಸರವನಿಂದ ವಾದುದು (ಕ್ಯಾಅಂ. ೦೯೯೦, ೩೩-೩ ; ಶು. 1110). **ಪೋಶಳ** : [ಶ್ರೀ]ಪ್ರ [ವ]ನ ಪ್ರತಾಪಚಕ್ರ[ಅ]ವ[ತ್ರಿ] [ಪೋಶಳದೇ]ವನ್ (ಎಕ. IV (R), ಚಾಮರಾ. ೦೩೯-೨ ; ಶು. ೧೩ನೆಯ ಶಕ). **Δಪೋಶಟ** : ಪ್ರತಾಪ ಚಕ್ರವತ್ತಿ ಪೋಶಟ ಶ್ರೀವೀರಸೋಮಿಶ್ವರದೇವನ್ (ಎಕ. III (R), ಗುಂಡ್ಲುಪೇ. ೭೦-೯ ; 1224). **ಪೋಸಳ** : ಸ್ವಸ್ತಿಶ್ರೀಪ್ರತಾಪಚಕ್ರವತ್ತಿ ಪೋಸಳ ಶ್ರೀವೀರನಾರಸಿಙ್ಗದೇವನ್ (ಎಕ. IV (R). ಎಳಂದೂ. ೦೩೬-೨ ; ಶು. ೧೩ನೆಯ ಶಕ); ಸ್ವಸ್ತಿಶ್ರೀ ಪೋಸಳ ಸೋಮಿಸುರದೇವನ್ (ಎಕ. IV (R). ಕೊಳ್ಳೇಗಾ. ೯೩-೦ ; 1237). **Δಪೋಸಟ** : ಶ್ರೀ ಪೋಸಟ ವೀರವಲ್ಲಾಳದೇವನ್ (ಎಕ. IV (R). ಚಾಮರಾ. ೨೯೬-೦ ; ೧೩ನೆಯ ಶಕ). **ಹುಯಸಲ** : ಹುಯಸಲ ನಾಡಿಗೆ ಸಲುವ ಕೊತ್ತಾಗಾಲಕೆ ಸಲುವ ಉವಗ್ರಾಮ ಹೊರವಳಲಿವುರ ಗ್ರಾಮವನು . . . ಕೊಟೆವಾಗಿ (ಎಕ. III (R). ಹೆಗ್ಗಡ. ೦೬-೯ : 1669). **ಹೊಯಸಣ** : ಶ್ರೀಮತುಹೊಯಸಣಚಕ್ರವರ್ತ್ತಿವಿನಯಾದಿತ್ಯಾ (ಎಕ. XI. ಚಿತ್ರದು. ೦-೮ ; 1310 ?). **ಹೊಯಸಳ** : ಪ್ರತಾಪಚಕ್ರವರ್ತ್ತಿ

ಹೊಯಸಳ ಶ್ರೀವೀರನಾರಸಿಂಹದೇವರಸರು (ಎಕ. IV (R). ಕಾಮರಾ ೨೨೦-೩ : 1276) : ಹೊಯಸಳರಾಜ್ಯಾಧೀಸ್ವರ ಶ್ರೀವೀರಸಂಜರಾಯ ಒಡೆಯರು (ಎಕ. IV (R). ಕಾಮರಾ. ೨೩೩-೬ : 1492): ಹೊಯಿಸಣ : ಹೊಯಿಸಣ ವೀರನಾರಸಿಂಹದೇವರ ಬೆಸದಿಂ . . . ಈ ಕಾರ್ಯ್ಯಕ್ಕೆ ತಲೆಗೊಟ್ಟಲ್ಲಿಗೆ ಬಿಟ್ಟವೃತ್ತಿ ತನ್ನ ಮಗಂಗೆ ನಿಲ್ಲಿಸಿದ ವೀರಗಲ್ಲು (ಎಕ. V. ಹಾಸನ. ೩೦ ೯ : 1293 ?) ; ಸ್ವಸ್ತಿಶ್ರೀಪ್ರತಾಪಚಕ್ರವರ್ತ್ತಿ ಹೊಯಿಸಣ ಶ್ರೀವೀರಬಲ್ಲಾಳದೇವರ್ಸರು ಸುಖರಾಜ್ಯಂಗೆಯುತ್ತವಿರೆ (ಎಕ. VII. ಶಿವಮೊ. ೬೮-೦ ; 1313). ಹೊಯಿಸಳ : ಸಳನೆಂಬ ಯಾದವಂ ಹೊಯಿಸಳನಾದು . . . ಶಶಕಪುರದ ವಾಸಂತಿಕೆಯೊಳ್ (ಎಕ. VI. ಕಡೂರು. ೦೨-೩ ; 1253) ; ಶ್ರೀಮನುಪ್ರತಾಪ ಹೊಯಿಸಳ × × ಬಳ ಶ್ರೀ ವೀರಬಲ್ಲಾಳರು (ವ್ಯ೩೦. ೧೯೯೬, ೦೦-೨ ; ಸು. 13ನೆಯ ಶತ) : ಹೊಯಿಸಳ ತುಳುವ ಚೋಳ ಚೇರಮ ಪಾಂಡ್ಯ . . . ಕಾಂಬೋಜದೇಶದ ಸಕಲಶರಣರ್ಕೈತರುತಿರ್ದರು (ಕಂಡು. ೬-೯೯). ಹೊಯ್ಸಣ : ಶ್ರೀಮನುಮಹಾಮಂಡಳೇಶ್ವರನೆಣೆಯಂಗ ಹೊಯ್ಸಣದೇವನಳಿಯಂ (ಎಕ. VII. ಶಿವಮೊ. ೬೯-೯೨ : 1112 ?) : ಹೊಯ್ಸಣಶ್ರೀವೀರಭುಜಬಲಬಲ್ಲಾಳದೇವರಸರು (ಎಕ. IV (R). ಹುಣಸೂ. ೦೯-೩ ; 1338) : ಹೊಯ್ಸಣ[ಪಾಠಾಂ. ಯಿಸಣ]ದೊಳಾದಿ ಸಿರಲು ಭೂಮಿಜು (ಶಾಂಗರಾ. ೯೩-೨೦). ಹೊಯ್ಸಳ : ಸಳನೆಂಬ ಶಶಕ ಪ್ರಸಿದ್ಧಪುರದೊಳ್ ವಾಸನ್ತಿಕಾದೇವಿಯಂ ತಳೆದಾರಾಧಿಸುವಾಗಳ್ . . . ಪುಲಿ ಪಾಯೆ ಕಂಡು ಮುನಿನಾಥಂ ಕಂಚಮಂ ಕೊಟ್ಟು ಪೊಯ್ಸಳಯೆಂದಂ ಬಳಿಕಾಯ್ತು ಹೊಯ್ಸಳವೆಸರ್ತ್ತಾಂ ಯಾದವೋರ್ಬ್ಬೀಸರೊಳ್ (ಎಕ. VI. ಕಡೂ. ೯೨-೯ : 1208) ; ಶ್ರೀಮತು ಪ್ರತಾಪಚಕ್ರವರ್ತ್ತಿ ಶ್ರೀಹೊಯ್ಸಳ ವೀರಬಲ್ಲಾಳದೇವರಸರು ಉಣ್ಣಾಮಲೆಪಟ್ಟಣದೊಳು ಪೃಥ್ವೀರಾಜ್ಯಂಗೆಯುತ್ತಿರಲು (ಎಕ. IX. ಬಂಗಳೂ. ೨೦-೯; 1342) ; ಮಾಳವ ಮಗಧ ಕಾಶ್ಮೀರ . . . ಹೊಯ್ಸಳ ಮಲೆಯಾಳದೇಶಂಗಳೊಪ್ಪಿದುವು (ಮೋಹತ. ೨-೦೯). ಹೊವಿಸಳ : ಸ್ವಸ್ತಿಶ್ರೀಪ್ರದಾಪಚಕ್ರವರ್ತಿ ಹೊವಿಸ[ಳ] ಶ್ರೀವೀರಬಲ್ಲಾಳದೇವರಸರು (ಎಕ. IV(R). ಕೊಳ್ಳೇಗಾ. ೦೩-೨ ; 1308). ಹೋಸಣ : ಹೋಸಣ ನ್ನಾಯ ಚಾರದಲಿ ಪೊಕ್ಕು ಹೊಣಮಡುವ ಸಾಮನ್ತರ ಗಣ್ಡ (ಎಕ. XII. ತಿಪಟೂ. ೯೦-೦೯ ; 1169) ; ಹೋಸಣ ಗೋವಿಮಸೆಟ್ಟಿಯ ರಾಯನಗ್ರತನೂಜಂ ಬಲ್ಲಗೌಡಂ (ಎಕ. VII. ಶಿವಮೊ. ೯೩-೬೨ ; 1172 ?) ; ಸ್ವಸ್ತಿಶ್ರೀಮತು ಹೋಸಣ ವೀರಬಲ್ಲಾಳು ದೇವ (ಎಕ. VIII. ಸೊರಬ. ೦೯೩-೦ ; 1204). ಹೋಸಲ : ಕಾವೇರೀ ತೀರಗೇ ರಾಜ್ಯೇ ಮಹಾಹೋಸಲನಾಡಕೇ ಶ್ರೀರಂಗಪಟ್ಟಣಾಖ್ಯಾಯಾಂ ಬಸುರ ಪಾಣಸ್ಥಳೇ ಸ್ಥಿತಂ (ಎಕ. III. ಪಾಂಡ್ಯ. ೩೩-೯೩ ; 1534). ಹೋಸಳ : ವಿಷ್ಣುವರ್ದ್ಧನಪ್ರತಾಪಹೋಸಳವೀರಬಲ್ಲಾಳದೇವರು . . . ಹಿರಿಯ ಬೆಳುಗಲಿಯ ಸರ್ವ್ವಬಾಧೆ ಪರಿಹಾರಂತ್ಥವಾಗಿ ಧಾರಾಪೂರ್ವ್ವಕ ವಾಗಿ ಬಿಟ್ಟರು (ಎಕ V. ಬೇಲೂರು. ೦೦೬-೩೦; 1173); ಶ್ರೀ ಪ್ರತಾಪಚಕ್ರವರ್ತ್ತಿ ಹೋಸಳ ಶ್ರೀವೀರನಾರಸಿಂಹದೇವರಸರು ಪೃಥ್ವೀರಾಜ್ಯಂಗೆಯುತ್ತಿರೆ (ವ್ಯ೩೦. ೦೯೩೬, ೯೭-೯; 1278). ಹೋಸಾಲ: ಹೋಸಾಲಬಲಾಲ ಉತ್ತಾಲಕ್ಷ್ಮೀಕಂದಸಂದೋಹಮರ್ದನಗಜ (ವ್ಯ೩೦. ೦೯೨೯, ೬೯-೦೨; 1276). [?]

**ಪೊಯ್ಸಳವಾರುಗ** (ನಾ). ಒಬ್ಬಾತನ ಹೆಸರು : ಅರಕೆಲ್ಲನ ಮಗ ಅವನ ಮಮ ಪೊಯ್ಸಳ ವಾರುಗಂ (ವ್ಯ೩೦. ೦೯೩೨, ೩೭ ೩; ಸು. 950 ?). [ಪೊಯ್ಸಳ + ವಾರುಗ (< ವಾರಗ) ]

**ಪೊಯ್ಸು$_1$**, ಹುಯ್ಸು$_1$, ಹೊಯ್ಸು$_1$ (ಕ್ರಿ). ೧. ವಾದ್ಯವನ್ನು ಬಾಜಿಸುವಂತೆ ಮಾಡು : ಶುಭದಿನನಕ್ಷತ್ರಮುಹೂರ್ತದೊಳ್ ದಿಗ್ವಿಜಯಭೇರಿಯಂ ಪೊಯ್ಸಿದಾಗಳ್ (ಆದಿಪು. ೦೦-೯ ವ); ಪಲತೆಱದ ಪಟಹಗಳಂ ಪೊಯ್ಸಿಯುಂ . . . ಭೇರಿಗಳಂ ತಾಟಿಸಿಯುಂ (ಗದಾಯು. ೬-೧ ವ): ಪಂಚಮಹಾಶಬ್ದಮನೊಲ್ಲದೆ ಬೇಂಟೆಪಟಹಯಂ ಪೊಯ್ಸಿ (ಧರ್ಮಾಮೃ. ೬-೬೩). ೨. (ಡಂಗುರ ಬಾರಿಸುವುದರ ಮೂಲಕ) ಪ್ರಕಟಿಸು; ಸಾರಿಸಂ : ಗರ್ಭದೊಳಿರ್ದಂತೆ ಅವರ ತಾಯ್ಗೆ ಜೀವಂಗಳಂ ಕೊಲ್ಲದಂತಪ್ಪ ಬಯಕೆಯಾಗಿ ಅಭಯಘೋಷಣೆಯಂ ಪೊಟಲೊಳಂ ನಾಡೊಳಂ ಪೊಯ್ಸಿ ಜೀವಂಗಳ್ಗಭಯದಾನಂಗೊಟ್ಟು ಪುಟ್ಟಿದರಪ್ಪುದಱಿಂದವರ್ಗಭಯಘೋಷರೆಂಬ ಪೆಸರಾದುದು (ವಡ್ಡಾರಾ. ೯೩-೨೦). ಹುಯ್ಸು$_1$ : ೩. ಕೆತ್ತಿಸು ; ಕೊರೆಯಿಸು ; ಕಂಡರಿಸು : ಸಬೆಯೋಜನ ಮಾವ ಜಯಿಸೋಜನು ವೀರಗಲ ಹುಯ್ಸಿ ನಿಲ್ಸಿದ ವೀರಗಲು (ಎಕ. III. ಮಳವ. ೦೩-೯; 1381). ಹೊಯ್ಸು$_1$ : ೧. ಹರುಷಸ್ವಾಂತರದಲಿ ಹೊಯ್ಸಿದನು ಕಮಲಜನಮಲಭೇರಿಗಳ (ಕೊರಟಾ. ೯-೬-೨೬). ೨. ನಂಬಿಗಿಂಬಿಯ ನಂಬಿಗೊಲಿದಿಹ ಶಂಭು ಗಿಂಭು ಸಮಸ್ತಭಕ್ತಾಡಂಬರಕೆ ಹೊಱಹೊಱಗೆನುತ ಹೊಯ್ಸಿದನು ಡಂಗುರವ (ಬಸವಪು. ೨೬-೨೨) ; ಅರಸ ಹದುಳಿಸು ನಿನ್ನ ಸೊಸೆಯರ ಕರೆದು ಸತ್ಕೈಸಕಟ ಹಸ್ತಿನಪುರದ ಗಾವಳಿ ಗಜಬಜಕೆ ಡಂಗುರವ ಹೊಯ್ಸಿಂದ (ಕುಮಾ೯. ೦-೯). ೪. ಪೆಟ್ಟುಕೊಡುವಂತೆ ಮಾಡಂ ; ಹೊಡೆಸು : ಕಷ್ಟವ ಬಗೆದ ಕೈಕೆಯ ಕಾಳುದೊತ್ತಿರ ಜಗಳದಲಿ ಹೊಯ್ಸು[ಪಾಠಾಂ. ಯ್ಯು]ವೆನು ಬಾಯನು (ಕೊರ೦. ೨-೩-೯). 'ಪೊಯಿಸು' ಪರಾ. [ಪೊಯ್$_1$ + --ಸು$_1$]

**ಪೊಯ್ಸು$_2$**, ಪುಯ್ಸು$_2$, ಹೊಯ್ಸು$_2$ (ಕ್ರಿ). ೧. ಹೊಯ್ಯುವಂತೆ ಮಾಡು ; ಸುರಿಸು : ಚನ್ನಿಗರಂ ಮಸ್ಸಿಸಿಮೆಂದು ಬಡಿದು ಬಾಯ್ತಾವೆ ಪುಡಿಯಂ ಪೊಯ್ಸುವಂ (ಧರ್ಮಾಮೃ. ೨-೬೭). ಹುಯ್ಸು$_2$ : ೧. ಮಲದೇಹಿಗಳ ದೂತರಿಂ ಹಿಡಿದು ಕೆಡಹಿಸುತ ಘಳಿಲನವದಿರ ಬಾಯೊಳಂ ಹುಡಿಯಂ ಹುಯ್ಸಿ ಮಡಗಳತೊದೆಸಿ ನರಕದೊಳು ಹಾಯ್ಕಿಸುಪನಂತಕಂ (ಶೀಶೈಪು. ೯-೪-೨೯) ; ನಾನು ಅವರ ಹತ್ತಿರ ಹೋಗಿ ಕೈಗೆ ನೀರು ಹುಯ್ಸಿಕೊಂಡು ಅವರ ಕೈಯಿಂದ ಚಂಬು ತೆಗೆದುಕೊಂಡ ಮೇಲೆ ಅತ್ತೆಯನೇ . . . ಬೀದಿಬಾಗಲಿಗೆ ಹೋದರು (ಶಂಗಾಳ್ಳ. ೦೭೯). ಹೊಯ್ಸು$_2$ : ೨. ನಡಿಸು ; ಸ್ಥಾಪಿಸು : ಧರಣೀಪಾಲ ಸುಮುಹೂರ್ತದಲಿ ಹೊಯ್ಸಿದನಾದು ಹೊಱಗುಡಿಯ (ಕುಮಾಭೀ. ೦-೯೩). [ಪೊಯ್$_2$ + —ಸು$_1$]

**ಪೊಯ್ಸೆಂಡಾಡು**, ಹೊಯ್ಚೆಂಡಾಡು (ಕ್ರಿ). ಹೊಡೆದು ಅಥವಾ ಎಸೆದು ಹಿಡಿಯುವ ಚೆಂಡಿನ ಆಟವನ್ನು ಆಡು : ಸಿಡಿಲಂ ನುರ್ಗುವ . . . ಪೆರ್ಗಡಲಂ ಪೀರ್ವ ಕುಲಾಚಲಂದಳೆದು ಪೊಯ್ಸೆಂಡಾಡುವಾದಿತ್ಯನಂ ಪಿದಿವಾರ್ಪುಳ್ಳ ಗಣಾಧಿನಾಥರೊಡನೇಳ್ತಂದರ್ ಮಹೋತ್ಸಾಹದಿಂ (ಚಂದ್ರಂ. ೩-೦೯). ಹೊಯ್ಚೆಂಡಾಡು : ತಲೆಯ ಹೊಯ್ಚೆಂಡಾಡು ತಿನ್ನಿವನೆಲುವನೆನುತೀಟಿಯಲಿ . . . ಹೊಯ್ದರು ಪವನನಂದನನ (ಕುಮಾಭಾ. ೮೦-೩೦) ; ಕುಣಿಯೆ ಕುರುಳು . . . ಮೇಲುದು ನಸುಜಾಱ ಮಣಿಹಾರವಲೆಯ ಹೊಯ್ಚೆಂಡಾಡುವ ಬಾಲಗಣಿಕೆಯರೊಪ್ಪಿದರಲ್ಲಿ (ಕುರಾಕಾಂ. ೨೬-೩೦). [ಪೊಯ್ಸೆಂಡು + ಆಡು$_1$]

**ಪೊಯ್ಸೆಂಡು**, ಪೊಯ್ಚೆಂಡು, ಹೊಯಿಸೆಂಡು, ಹೊಯ್ಚೆಂಡು (ನಾ). ೧. ಚೆಂಡನ್ನು ಹೊಡೆದು ಅಥವಾ ಎಸೆದು ಹಿಡಿಯುವ ಒಂದು ಬಗೆಯ ಆಟ : (೬). ೨. (ಹೊಡೆದು ಆಡುವ ಅಥವಾ ಎಸೆದು ಹಿಡಿಯುವ ಆಟದಲ್ಲಿ ಬಳಸುವ) ಒಂದು ಬಗೆಯ ಚೆಂಡು : ಮೇಗಣ್ಗೆ ಪಾಱ ಮತ್ತೆ ಬೀೞ್ದಂತು ಪೊಯ್ಸೆಂಡಿನಂತೆ ಪಲವು ಸೂಟ್ಪೆಱು ಬೀೞ್ದಿಬ್ಬಱಲಾಱದೆ ನೆಲನಂ ಕರ್ಚಿ (ಪಂಪಭಾ. ೦೯೯). ಪೊಯ್ಚೆಂಡು : ೨. ಅದೆಲ್ಲ ಹಳೇಗಾಲದ ಹಳಸಿದ ಸಂಪ್ರದಾಯಗಳು ಎಂದವನು ಮತ್ತೆ ಮತ್ತೆ ಗಾಳಿ ಊದಿದ. ಅವರೂ ಅದನ್ನು ಕೇಳಿ 'ಪೊಯ್ಚೆಂಡಿ'ನಂತೆ ಉಬ್ಬಿದರು (ಕೃಹಿಕಾ. ೩೯). ಹೊಯಿಸೆಂಡು : ೨. ಅಂಜನಾದೇವಿ

ನಿಜಸಖಿವೃಂದದ ನಡುವೆ ಹೊಯಿಸಂಡಂ ಚಂದದೆ ಪೊಯ್ಯುತಿರಲು (ಅಂಜಕ. ೯ ೩೧). **ಹೊಯ್ಸೆಂಡು** : ೨. ಗಂಡನಷ್ಟೆಷ್ಟು ಮನ್ನಿಸಿದನಷ್ಟಷ್ಟು ಹೊಯ್ಸೆಂಡಿನಂತುಬ್ಬಿ ಹಾಡುವಳು (ಶಶಿ. ೧೦-೬೯). ' ಪೊಡೆಸೆಂಡು ' ಪರಾ. [ ಪೊಯ್ $_1$ + ಸೆಂಡು ]

**ಪೊರಕಮಲೆಯ** (ನಾ). ಒಬ್ಬಾತನ ಹೆಸರು : ಮಲ್ಲಯಂ ಊರ ತುಱು ಹಿಡಿಯ(ಲೊ)ಲೊಳು ತುಱುವಂ ಕಟ್ಟಿ ಕಾದು ಸತ್ತು ಸಗ್ಗಿಯಾದಂ ಪೊರೇಮಲೆಯ ಕಲ ನಿಲಿಸಿದೊ (ಪ್ಯಾಂ. ೦೯೩೭, ೯೬-೯ ; 10ನೆಯ ಶ). [ ? ]

**ಪೊರಕೆ**, ಪರಕೆ $_2$ (ನಾ). ಕಸ ಗುಡಿಸುವ ಸಾಧನ ; ಬರಲು : ಪ್ರಸನ್ನಳು ಹಠಾತ್ತಾಗಿ ಪೊರಕೆಯನ್ನು ಕೈಯಲ್ಲಿ ಹಿಡಿದಳು ! (ಕಬು. ೦೩೩) ; ಕೈಯಲ್ಲಿದ್ದ ಪೊರಕೆಯನ್ನು ಕೆಳಕ್ಕೆಸೆದು ಆಕೆ ಕೊಠಡಿಯೊಳಕ್ಕೆ ಕಾಲಿಟ್ಟಳು (ಏಕಾಂಗಿ ೨೯). **ಪರಕೆ $_2$** : ಆನೆಯ . . . ಬಾಲದ ತುದಿಯ ಕೂದಲುಕುಚ್ಚು ಕಂಡವರು ' ಆನೆ ಪರಕೆಯ ಹಾಗಿದೆ ' ಎಂದರು (ಬಾಲ್ಯಕ. ೬೩) ; ಈ ಪರಕೆಗಳನ್ನು ಉದ್ದವಾದ ಗಳುಗಳಿಗೆ ಕಟ್ಟಿಕೊಂಡು ಛಾವಣಿಯ ಧೂಳನ್ನೂ ಬಲೆಗಳನ್ನೂ ಗುಡಿಸಬಹುದು (ಗೃಹಂ. ೧೬೯). [ ದೇ. ॥ ತೆಲು. ಪೊರಕ ]

**ಪೊರಗಣ** ' ಪೊಱಗು ' ಪರಾ.

**ಪೊರಗು** ' ಪೊಱಗು ' ನೋ.

**ಪೊರಜಿ** ' ಪೊರಜೆ ' ನೋ.

**ಪೊರಜೆ**, ಪೊರಜಿ, ಹುರಜಿ, ಹುರ್ಜಿ, ಹೊರಜಿ, ಹೊರಜೆ, ಹೊರ್ಜಿ (ನಾ). (ಆನೆಯನ್ನು ಕಟ್ಟುವುದಕ್ಕೂ ರಥವನ್ನೆಳೆಯುವುದಕ್ಕೂ ಬಳಸುವ) ದಪ್ಪವಾದ ಹಗ್ಗ, ಸರಪಣಿ ಮುಂತಾದುವು : ಪೊನ್ನೆಯ ಮುಗುಳೆಣ್ಮಾವಳಿ ತನ್ನ ಕೊರಲ್ಗೆಸೆಯೆ ಮಧುಪರುಚಿ ಮದನವಶಾತ್ಮನ್ನತ ಪೂವಿನ ಪೊರಜೆಯೊಳುನ್ನಂ ಸೊಗಯಿಪಂತೆ ಕಣ್ಗೆಸೆದಿರ್ದಳ್ (ಶಾಂತಿಪು. ೬-೦೭) ; ರನ್ನದ ಪೊರಜೆ ನವಾಂಭೋದಮಾದ್ಯದ್ಗಜಕ್ಕಿಕ್ಕಿದುದೋ ಪೇಱಿಂಬಿನಂ ಕಣ್ಗೆಸೆದುದು ಶಬಲಚ್ಛಾಯೆಯಿಂ ಶಕ್ರಚಾಪಂ (ಶಂಕಪು. ೬-೧೯೩) ; ಸರಸಿಜತಂತು ಕಿಂಶುಕದ ಕುಟ್ಮಲವೇಱಿದ ಕಯ್ಯೊಳಂಕುಶಂ ಪೊರಜೆಗಳಾಗೆ (ಅಜಿಪು. ೬-೦೯). **ಪೊರಜಿ** : ಪೊರಜಿಯೆ ಪರಿವೇಷವೆಂದಂತೆ ಕಿನ್ನೆಯೊಳಿಳಿದ ಮದವೆ ಲಕ್ಷದಂತೆ ಕರದ ತುಷಾರಾಂಬು ಚಂದ್ರಿಕೆಯಂತೆಸೆದಿರೆ ಶಶಿಯಂತಿರ್ದುದಾ ಗಜ (ತ್ರಿಕಂ. ೨೬-೨೦) ; ರನ್ನದ ಪೊಗರುಂಬ ಬೆಳ್ಳಿಯ ಪಕ್ಕರೆ ಚಿನ್ನದ ಪೊರಜಿ ಮೆಱೆಯಲು . . . ಮನ್ನಣೆಯಾನೆಯೆಯ್ದಿದವು (ಕೆರಾಕಾಂ. ೦೦-೨೯). **ಹುರಜಿ** : ಬಸವನ ಆಭರಣದ ಲೆಖ್ಖ . . . ೨ ನೂಲುಹಗ್ಗದ ಹುರಜಿ (ಎಕ. XIV, ಪಂಜಿನ. ೨೪೭-೬ನೇ ಕಂ ; ಸು. 1849). **ಹುರ್ಜಿ** : ಬಸವನ ಆಭರಣದ ಲೆಖ್ಖ . . . ೪ ಕಬ್ಬಿಣದ ಹುರ್ಜಿ ಬಳೆ (ಎಕ. XIV, ಪಂಜಿನ. ೨೪೯-೬ನೇ ಕಂ ; ಸು. 1848). **ಹೊರಜಿ** : ಮನವೆಂಬ ಹೊರಜಿಯು ಗುಣಂಗಳೆಂಬ ಕಾಲಾಳ್ಗಳಿಂ ಹಿಡಿಸಿ ಸುಬುದ್ಧಿಯೆಂಬ ಭೂಮಿಯಲ್ಲಿ ಆನಂದ ಮೆಂಬರಸು ರಥವ ನಡೆಸಿ (ಶಿವತಂ. ೨೬೦-೧೬೭) ; ಹಿಂಡಿ ಹಿಳಿವ ಕೆಡಹುವ ಹೊರಜಿ ಹೊಸೆವ ತಿರುಹುವ . . . ರೌರವಂ ಭಯಂಕರವಾದುದು (ಸಿದ್ಧರಾ. ೬-೨೯). **ಹೊರಜೆ** : ಆ ಸಮರಸಂಭ್ರಮದೊಳ್ ಹೊರಜೆ ಯೊಳ್ ಕಾಲ್ಗೊಳ್ಗೊದು ನಿಂದ . . . ಗಜದ (ಅನಂಪು. ೦೯ ೬ ವ) ; ಹೊರಜೆ ಹೋಣ್ಕಳ ಗಂಟೆ ಡಕ್ಕೆಯ . . . ಸರಿಘಟೆಗಳಿರದೆಯ್ದೆ ತಳರ್ದವು ಕುಲಗಿರಿಗ ಳಂತೆ (ಕುಮಾಂ. ೩-೩೦) ; ಕನಕಘಂಟೆಗಳುಲಿಯೆ ಹೊರಜೆಯ ತನತನಗೆ ಹಿಡಿದಡರಿ ಪೂರ್ವಾಸನವ ವೆಂಠಣಿಸಿದರು ರಾಜಾರೋಹಕವ್ರಾತ (ಕುವ್ಯಾಂ. ೯-೬೦). **ಹೊರ್ಜಿ** : ಜಿನಬಿಂಬಾಂಕಿತ ಅವಹಾಲ್ಕರತ್ನನಿರ್ಮಿತ ೨೪ ಘಂಟೆಗಳಂ ಮಾಡಿಸಿ ಅದಕ್ಕೆ ಚಿನ್ನದ ಹೊರ್ಜಿಯಂ ಕಟ್ಟಿಸಿ (ಭುಬಲಿ ೨೨೩). [ದೇ. ॥ ತಮಿ. ಪುರಚ್ಚೈ, ಪುರೋಚ್ಚೈ]

**ಪೊರಜೆವಿಡಿ** (ಕ್ರಿ). (ಆನೆಗೆ ಕಟ್ಟಿರುವ) ಹಗ್ಗವನ್ನು ಹಿಡಿ : ಮದೇಭಂಗಳನಾರ್ದು ಬಿಟ್ಟೆಗ್ಗಿಪ ನಿಷಾದಿಗ[ಳಲ್]ಯೆ ಪೊರಜೆ[ಕಾಂ. ಬಿ] ವಿಡಿದು ಕೊರಲ ಬಳೆಗಳೊಳೆ ಕಾಲ್ಗೊಳ್ಗೊದು ಪರಿಯಿಸುವ ರಸತ್ತಾರು ಗರುವಂ (ಶಂಕಪು. ೦೨-೬೦ ವ). [ಪೊರಜೆ + ಪಿಡಿ $_1$]

**ಪೊರಟು $_1$** (ನಾ). ಮೋಸ ; ದ್ರೋಹ : ಪುಸಿಗಂ ಪೊಱ[ರ]ಟಿಗಂ ಮಾಯೆಗಂ ಮಱುವೆಗಂ ಕಳವಿಂಗಂ ಕಪಟಕ್ಕಂ . . . ಸೊಱಹಿಂಗಂ ಇಂಬು ಗೊಡದೆ (ಚಿಕಂ. ೬೨-೦೦). [ದೇ. ॥ ತಮಿ. ಪುರಟ್ಟು]

Δ **ಪೊರಟು $_2$** ' ಪೊಟ್ಟರೆ ' ನೋ.

**ಪೊರಡು** ' ಪೊಱಮಡು ' ನೋ.

**ಪೊರಣೆಪೊಗೆ** (ನಾ). ಒಂದು ಊರಿನ ಹೆಸರು : ಮಾರಿಜವೆ ಪೊರಣೆ ಪೊಗೆ ಕಿಟ್ಕೆಱೆ ಗುಡಗತಾಣವನ್ ನೊಕ್ಕಿಗೋಡು (ಪ್ಯಾಂ. ೦೯೦೯, ೦೦ ; 700). [?]

**ಪೊರತು** ' ಪೊಱತು ' ನೋ.

**ಪೊರಪಾಳೆಯ** ' ಪೊಱಪಾಳೆಯ ' ನೋ.

**ಪೊರಪು** ' ಪೊರೆಪು ' ನೋ.

**ಪೊರಪೊಣ್ಮು** ' ಪೊಱಪೊಣ್ಮು ' ನೋ.

**ಪೊರಮಡು** ' ಪೊಱಮಡು ' ನೋ.

**ಪೊರಯಿಂಕೆ** ' ಪೊಱಯಿಂಕೆ ' ನೋ.

**ಪೊರವಕ್ಕ** (ನಾ). ಒಬ್ಬಾಕೆಯ ಹೆಸರು : ಪೊರವಕ್ಕನುಂ ಸೆಮ್ಬಕ್ಕನುಂ ಪಾಱಿಯಕ್ಕನ ಕಳದಿಯೆ ಪುಱಿಯಣ್ಣನೀ ಧರ್ಮ್ಮಂ ನಡಮಿಸು × × × (ಎಕ. VIII, ಸಗರ. ೪೩-೦೪ ; ಸು. ೯೫೦). [? + ಅಕ್ಕ $_1$]

**ಪೊರವಾರ್** ' ಪೊಱಮಾಱು $_1$ ' ನೋ.

**ಪೊರವಾರ** ' ಪೊಱಮಾಱು $_2$ ' ನೋ.

**ಪೊರವಾರು** ' ಪೊಱವಾಱು $_2$ ' ನೋ.

**ಪೊರಸು**, ಹೊರಸು $_4$ (ನಾ). ಹಗ್ಗ ಅಥವಾ ನುಲಿಯಿಂದ ಹೆಣೆದ ಮಂಚ; ನೂಲುಮಂಚ : ಕೂಸಂ ವಿಸಿಸಿ ಮನೆಯ ಮುಂದೊಂದು ಪೊರಸಿನ ಮೇಲೆ ಪಟ್ಟಿರಿಸಿದಾಗಳ್ (ಅಂಹಂ. ೬-೯ ವ). **ಹೊರಸು $_4$** : "ಹೊರಸು ಬಿಟ್ಟವೆನಿಕ್ಕು" (ಕುಂಗನಾ. ೬೦-೦೩); ಲಗ್ನಕ್ಕೆ ಪಟ್ ತ್ರಿನವ ದ್ವಾದಶಾಲಯಂಗಳ್ ಹೊರಸಿಂಗವು ನಾಲ್ಕು ಕಾಲ್ಗಳ್ (ಜಾತಕ. ೯-೦೬) ; ತನಯಂ ಪಡೆತಂದ ವಸ್ತುವ ನೋಟ್ಪೆವೆಂದತಿಸಂಭ್ರಮದಿಂದಿದಿರಂ ಬಂದು ಹೊರಸಿನ ಕಾಲ್ಗಳಂ ಕಂಡು (ಪುಣ್ಯಾಸ್ರ. ೦೨-೦೩ ವ); ಕಂಡಕಂಡವರು ಏಱಲ್ಕೆ ಕೈಲಾಸ ರಂಡೆಗಾ ಹೊರಸೆ (ಸರ್ವಜ್ಞ. ೬೬೦). [ ? ]

**ಪೊರಳ್**, ಪೊರಳು $_1$, ಹೊರಡು $_3$, ಹೊರಳ್, ಹೊರಳು $_1$ (ಕ್ರಿ). ೧. ಉರುಳಾಡು ; ಉರುಳು : "ಪೊರಳ್-ಲುಠನೇ" (ಶಮದ) ; ಪೊರಳೆ ವಾರಿಧಿಗಳ್ ಕಲಂಕಿದುವು[ರ್ದೆ ಮೆ]ಯ್ಯನುದಗ್ರಮಂದರವು ದಂದಲುಗಿತ್ತು . . . ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂಬಿರ[ಸು] ಬಿಟ್ಟುವು ಪೆಂಪಿದೇಂ ಪಿರಿದಾಯ್ತೊ ದೈತ್ಯವರಾಹನಾ (ಶಂಕಪು. ೯-೦೩); ಒಡಗೊಂದೆಯಂತೆ ದಡದಡಿಸುವರ್ ಪಾವಿನಂತೆ ಪೊರಳ್ವರ್ (ಧರ್ಮಾಮೃ. ೩-೯೩). ೨. ತಿರುಗು : ಚಲಿಸು : ಕಸಕಳೆಯಂತೆ ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ (ಅಂಪು. ೨-೦೦) ; ನುಡಿವೊಡೆ ನಾಲಗೆ ಪೊರಳದೆ ಕಿಡುಗುಂ ನೆಱೆ ಮೂಗನಾಗಿ ನಮೆಗುಂ (ಧರ್ಮಾಮೃ. ೬-೦೬೨) ; ಪಲಕಾಲದ ಪುಣಸೆಯ ಪಣ್ಣು ಲೇಹ್ಯಮಂ ಮಾಡೆ ಸನ್ನಿಪಾತಜ್ವರದಿಂ ಸಲೆ ಪೊರಳದಿರ್ದ ನಾಲಗೆಗೆ ಲೇಸಾಗುಂ (ಕಲ್ಯಾಕಾ. ೩-೩೦). ೩. ಜಾರು ; ಸರಿ : ಮುದ್ದುವೊಗಂ ಪೊರಳ್ವ ಮುಂಜೆಱಗು ಕಿವುಟ್ಟು ಪೀರ್ವ ಮೊಲೆ ದಟ್ಟಡಿ ಯೊಳ್ಪರಿದೋಡುವಂಗಣಂ ನೆಱೆ ತನಗೊಪ್ಪುವರ್ಧಕನನೂರ್ವನಾಂ ಪಡೆವಂದಮಾವುದೋ (ಸುಕುಮಾ. ೯-೯೯). ೪. ಬೇರೆ ದಿಕ್ಕಿಗೆ ತಿರುಗು :

ಬೆಟ್ಟದ ಮೇಲ್ ಪೊರಳೆ ಬನ್ದು ಮೂಡಾಯ್ ಸಿ(ಸೀ)ಮೆಯುಳ್ ಕು(ಕೂ)ಡಿತ್ತು (ಎಸಿ. XVIII. ೩೩೯-೨೮ ; ೫೫೪ ೬೩). **ಪೊರಳು₁** : ೧. ರಂಗಮಂಟಪದೊಳಗೆ ಪೊರಳುತಂ ಮುಂದುಗೆಟ್ಟುಬೀಳುವುಗಟ್ಟಲ್ಲಿಯೊಬಿಲುತಂ (ಕಾ.ಕ. ೮೬. ೦೯೭. ೦೯) ; ಮಡವಿಸಿಂ ಪೊಣಿಮುಟ್ಟೆ ಮಣಿಮಿಸಿನುತೆ ಕೆಲಸಿಡಿಸಿಡಿದು ಪೊರಳೆ ಬರುದ ಬೆಂಕೆಯಿಂ ಬೆಂದು ಕಡುಹರವಸಂಬೋದರವಮರಿಯರ್ (ಚಂಪು. ೦೯. ೯೩) : ಸರಸಿಜಗಂಧಿಯ ದಿವ್ಯಾಂಗಲಾವಣ್ಯಸರಧಿಯೊಳ್ಗೆರವಿಗರಕ್ಷಿ ವರಮೀನಗಳು ನೆಟ್ ಪೊರಳುತ ತೆರಳುತ ಮರಳೆ ಮುಳುಗುತೊಪ್ಪಿದುವು (ಸಂಶಾ. ೯. ೯೩). ೨. ಧರೆಯೊಳು ನಟ್ಟ ದಿಟ್ಟಿಯಲರಿತಧರದ ಪೊರಳುವ ತುದಿನಾಲಗೆಯ ಬೆರಳಲೊಕದೊಳಾಂದೋಳಿಪ ಮಸ್ತಕದರಳುಗಣ್ಣುಬಲೆಯೊಪ್ಪಿದಳು (ಶಂಷಾ. ೯-೭೩೯). **ಹೊರಡ್ಡು₁** : ೧. "ಹೊರ[ಹಾಕಾ. ದ]ಡು—ಪರಿಲುಠನೇ (ಹೊರಳು)" (ಶಮಂ). **ಹೊರಳ್** : ೧. ಮುಂದಿವ ಬಿಡಿಸುವ . . . ಹೊರಳ್ದ ತನು ಹೋರಟೆಯು ಸತ್ಯೋತ್ಕರುಷ ಸರಿಯನೆ ಶಂಭುಶಿಷ್ಯಗೆ ಪರಿವಿಡಿಯ ತೋಜೆಸುವುಲಿದ್ದನು (ಕುಮಾ.ಕ. ೬-೩೦) ; ನಾ ಕಿವಿದ ಖಡ್ಗಕೆ ನರನ ಮೈ ಉವಲಮಿಸಲಡಿಮೇಲಾಗಿ ಹೊರಳ್ದರೆ ಧನ್ಯ ತಾನು (ಕುಮಾ.೯. ೬-೯೦). **ಹೊರಳು₁** : ೧. [ಚೆನ್ನಮಲ್ಲಿಕಾರ್ಜುನನಿಜದಲಗು] ಒಡಲಲ್ಲಿ ಮುಜಿದು ಹೊರಳುವೆನ್ನಲಲನು ನೀವೆತ್ತ ಬಲ್ಲಿರೇ ಎಲೆ ತಾಯಗಳಿರಾ (ಕುಹಾದೇ. ಬ. ೧೧೦-೩೦೯) : ಸೆರೆ ಬಿಗಿದು ಗದುಗದಿಸಿ ಬಿಕ್ಕುಕೆ ಬಿದ್ದು ಹೊರಳುತ್ತಳುತ್ತಗಲಲಾಜಿದೆ (ಚಾಕ. ೩-೨೦) ; ಬಂದು ಭೀಷ್ಮನ ಚರಣಸೀಮೆಯಲಂದು ಕಾಯುವ ಕಡಹು ವಿಗತಾನಂದ ಭೂಪತಿ ಹೊರಳಿದನು ಹೇರಾಳಶೋಕದಲಿ (ಕುಮಾ.೮೬. ೦೦-೦೯). ೨. ಪರಕೆ ಬಾಹಿರನಾಗಿ ನಾನಾಯೋನಿಯೊಳು ಸುಳಿದು ಹೊರಳುವವನುವನು ಕೃಷ್ಣದೇವನು ಕರುಣಿಸಿದನೇ (ಕುಮಾ.೮೯. ೩-೨೯). ೩. ಭೀಮ ಬಿದ್ದನು ತೊಡೆಯ ಮೇಲಿಂದೀ ಮಹಿಗೆ ತಚ್ಚೈಲಶಿಲೆ ನಿರ್ನಾಮವಾದುದು ಹಸುಳೆ ಹೊರಳಿದು ಬಿದ್ದ ಭಾರದಲಿ (ಕುಮಾ.೩. ೯-೩೩). ೪. ಹೊರಳಿ ನೋಡು ಮರಮರಳಿ ನೋಡು ಒಳಗರಳಿ ನೋಡು ನೋಟ (ಅರಕು. ೯೦೯-೦೦) : ಇರುಳೇ ಹೊರಳಿತು ಹಗಲೇ ಮರಳಿತು ಚಿಗುರೆಲೆ ಹೂವಿಗೆ ಹಾಸು (ಕಂಮು. ೦೦-೦೦). ೫. ಹಿಂತಿರುಗು ; ಮರಳಿಂ : ನಂಜವ್ವ ಹೊನ್ನ ತಳಿಗೆಯನ್ನು ಎತ್ತಿಕೊಂಡು ಸೆರಮನೆಯಿಂದ ಹೊರಳಿದಳು (ಹಾಕುಕ್ತ. ೯೦).

[ದೇ. ೬ ತಮಿ. ಒರಳ್, ಪುರಳ್ ; ಮಲ. ಒರಳು ; ಪುರಳ, ತುಳು. ಪೊರಲು, ಪೊರಲು, ಪೊರಡು, ಹೊರಳು ; ತೆಲು. ಪೊರಲು, ಪೊರ್ಲು]

**ಪೊರಳನ್ವಯ** (ನಾ). [ಜೈನ] ಯತಿಗಳ ಒಂದು ಶಾಖೆ : ಸ್ವಸ್ತಿಶ್ರೀ ಅರಿಯುರ ಪನ್ನಿರ್ವರು ಮೂ× × × ×ಯ್ಯಸ್ತಲ ಮೊಜಿಮೂನಿನಿಜಿಸಿದಾ ಟಾರೆಯುರಂ ಪೊರಳನ್ವಯರುಂ × × × ಗಣಸಾಗರತಮ್ಮಡಿಗಳ್ಗೆ ಕೊಟ್ಟ × × × (ಎಕ. IV. ಗುಂಡ್ಲುಪೇ. ೬೯-೦೩; ಕು. 760). [?+ಅನ್ವಯ]

**ಪೊರಳಿ**, ಹೊರಳಿ, ಹೊರಳಿ₁ (ನಾ). ೧. ಗುಂಪು; ಸಮೂಹ; ರಾಶಿ : ತಾವರೆಯ ಮೃಣಾಳನಾಳದ ಪೊರಳಿಯಂ ಪೊರಳ್ದು ತರ್ಕಯಿಸಿಯುಂ (ಅರ್ಜ. ೩-೨ ವ); ಕೆಡೆದ ಕರಿಗಳ . . . ಮಡಿದ ಕುದುರೆಗಳ ಪೊಡೆಗಲ್ಲ ಪೊರಳಿಗಳೊಳಗೆ ಕಡಿದ ಕೈಕಾಲ ನರರಟ್ಟೆಗಳ ತುಂಡುಗಳ ಮರಮಟ್ಟೆಗಳನೆಳೆಯುತ (ಸ್ಥ.ಪು.ಚಾ. ೨೨ ೨೬). **ಹೊರಳಿ** : ೧. "ಬಂಬಲ್, ತುಱುಗಲ್ . . . ಹೊರಳಿ . . . ಗೊಂದಣ(ಊದರ್)— ಈ ೪೦ ಸಮೂಹಂ" (೪೩೩೯. ೩೬-೨೨೨); ಇರುಳ ತಿರುಳಿನ ಹೊರಳಿಗಾ ತರಣಿ ಕಿರಣಂತೆ ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ . . . ತರಕಟಿತ್ರದ ಹಂದಿ ಮರಳಿ ಕಾನನಕೆಯ್ದುತು (ಹಕಾ. ೩-೩೦); ಇಂದುಕಳೆಯ ಸಂದಣಿಯಂತೆಯುಂ ಅರಲ ಸರಲ ಹೊರಳಿಯಂತೆಯುಂ . . . ವಿಲಾಸದಿಂ ಬರ್ಪ ವಿಲಾಸಿನೀ ಜನದ ನಡುವೆ (ದೀಕು. ೬-೩೦ ವ) ; ಗಿರಿಯ ಮುತ್ತಿದ ಮಿಂಚುಬುಳುವಿನ ಹೊರಳಿಯಂತಿರೆ ಹೊನ್ನ ಬರಹದ ಸರಳು ಮೆಱೆವುವು (ಕುಮಾ.ದ್ರೋ. ೩-೨೬).

೨. ಆಧಿಕ್ಯ ; ಹೆಚ್ಚಳ : ಪರುಷದ ಹೊರಳಿಯಲಿ ಹೊಡಕರಿಸಿ ಚಿತ್ರವ ತಿರುಹಿ (ಕುಮಾ.೮. ೬-೭೯). **ಹೊರಳಿ₂** : ೧. 'ಹೊರಳಗಡಿ' ಪರಾ. ೩. ಹೊರೆ ; ಮೂಟೆ : ದೇವಾಂಗವಸ್ತ್ರಂಗಳ ಹೊರಳಿಯಂ ಕೈಕೊಳ್ಳಿ (ಚಂಪು. ೩೬-೦೦).

**ಪೊರಳಿಸು**, ಹೊರಳಿಸು (ಕ್ರಿ). ೧. ಉರುಳಾಡುವಂತೆ ಮಾಡು ; ಉರುಳಿಸು : ಪಂಭವರಜದೊಳ್ ಪಗೆಯುಂ ಪೊರಳಿಸಲುಂ . . . ತಕ್ಕುದು ನೀಂ ಪೊರಳಲ್ಕುಕ್ಕುದೆ ಮದೀಶ ಭೂವಾಂಚುವಿನೊಳ್ (ಅಗಾ. ೬-೯೬). **ಹೊರಳಿಸು** : ೧. ಸಕ್ಕರೆಯ ತಳಿಮುದ್ದನು ಅರೆದದಜಿಂಸೀನಿ ಸಕ್ಕಿಮಿಟ್ಟಕೈಕೊಂಡದಂ ಹೊರಳಿಸಿ ಬಳಿಕ್ಕ ತಿಳಿದುಪ್ಪದೊಳು ಕೆಂಪಾಗಿ ಹುರಿದು (ಸೂಶಾ. ೯-೬೦). ೨. ತಿರುಗಿಸಂ ; ಆಡಿಸು : ನಾನು ಕೋಣೆಯೊಳಗೆ ದೃಷ್ಟಿ ಹೊರಳಿಸಿದೆ (ಕಾಂಜಾ. ೦೦) ; ಅವನನ್ನೇ ನಿಟ್ಟಿಸುತ್ತಿದ್ದ ಮಾಲುಗಣ್ಣುಗಳನ್ನು ಅತ್ತಿತ್ತ ಹೊರಳಿಸದೆಯೆ ಆವಳು ಕಲ್ಲಿನಂತೆ ನಿಂತಳು (ಕುಪಲು. ೦೯೦). [ಪೊರಳ್ + —ಇಸು₁]

**ಪೊರಳ್ಕು**, 'ಪೊರಳ್' ನೋ.

**ಪೊರಳ್ಕು₂** 'ಪುರುಳ್' ನೋ.

**ಪೊರಳ್ಚು**, ಹೊರಳಚು, ಹೊರಳ್ಚು (ಕ್ರಿ).—ಪೊರಳಿಸು ೧: "ಪೊರಳ್ಚು—ಲುಠನೇ" (ಶಮಂ) ; ಅಸ್ತ್ರಾನಳಂ ಕಿಡಿಯಿಂ ಕೆಂಡದಿನೇಂ ಪೊರಳ್ಚಿ ದುದೊ ತನ್ನೇಘಾಮರಾನೀಕಮಂ (ಆಂಪು. ೦೯-೬೬), ದುರ್ಯೋಧನ ನೆಃಕ್ಕಲಂ ಪುಡಿಯೊಳ್ ಪೊರಳ್ಚುವಂತೆ ಪಾಸಂಗೆಯುಂ ಪೊರಳ್ಚಿ (ಕುಶಾ. ೬-೩೦ ವ): ದ್ರುಪದಾತ್ಮಜಾತನೋವದೆ ಪುಡಿಯೊಳ್ಪೊರಳ್ಚಿ ತಲೆಯಾ ತಗೆವಲ್ಲಿ ಪಿನಾಕವೆತ್ತಪೋದುದೊ (ಗದಾಯು. ೯-೩೦). **ಹೊರಳಿಚು** : ಹೊಕ್ಕ ವಾನೆಗಳು . . . ಲಾಳವುಂಡಿಗೆಯ ಸರಿಸಗುಂಡಿನೊಳೊಂದನೊಂದಿಟ್ಟೊರಸಿದವು ಕೊಡಹಿದವು ಸೀಳಿದು ಹೊರಳಿಚಿದವೆಜಿಗಿದವು ನಾನಾವಿಧದ ಕೊಲೆಗಳಲಿ (ಕುಮಾ.೮೬. ೯-೬೦) ; ಹೊಡೆದರಿಜಿದರು ಹೊರಳಿಚಿದರದಗೆಡಹಿದರು ಕೋಳಾಹಳದ ಬಲುಗಡಿಯ ಭಟರಬ್ಬರಿಸಿ ಸದೆದರು ಸೂಳುವಾಳಿನಲಿ (ಕೂರಾ. ೩-೬-೨). **ಹೊರಳ್ಚು** : ತೆರಳ್ಚಿ ಮರಳ್ಚಿ ಹೊರಳ್ಚಿಯುಟನಿಜವು ಜೀವ ಹತ್ತುತೆಜಿನೆ ಪ್ರಾಣವೆಂಬರಲ್ಲ ಹುಸಿಯನಂತದೀವ (ಶಾಸಂ. ೬-೬೦). [ಪೊರಳ್ + — ಚು₁]

**ಪೊರಳ್ನುಡಿ** (ನಾ). ದ್ವಂದ್ವಾರ್ಥವುಳ್ಳ ಮಾತು ; ಎರಡರ್ಥ ಬರುವ ಮಾತು : ಆದೊಡಿವು ಅರ್ಥಯಿಸಲಾಗದಸ್ಪಷ್ಟತೆಯ ಪೊರಳ್ನುಡಿಗಳನ್ ಮರಲ್ಬುವಯ್ ಏಗಳುಂ (ಅಭ್ಯಶ್ರ. ೩೬-೬೩೩). [ಪೊರಲ್ + ನುಡಿ₂]

**ಪೊರಿ** 'ಪುರಿ₁' ನೋ.

**ಪೊರಿಗೆಜ್** 'ಪುಲಿಗೆಜ್' ನೋ.

**ಪೊರಿವಯ್ಯ** (ನಾ). ಒಬ್ಬಾತನ ಹೆಸರು : ಕುಪ್ಪೆಸೆಯ ಮಾನವನೆಯರ ಪೊರಿವಯ್ಯ × × × ಕೇಸಿಮಾಣಿ ಕೇಚ್ಚುಗಣ್ಣಾಣುಮದಟನಾಗಿ ನೆಲ ಕುಪ್ಪಿಸೆಯನಿಜಿಯುಮೆನ್ನು ಕೇಚ್ಚಿಗಂ ತನ್ನಾಳ್ ಬೆಸವೋಟ್ (ಎಕ. VIII. ಸೊರಬ. ೬೬-೬ ; 912). [? + ಅಯ್ಯ₁]

**ಪೊರಿಸು** 'ಪೊಱಿಸು' ನೋ.

**ಪೊರು** 'ಪೊಱು' ನೋ.

**ಪೊರುಳ್** 'ಪುರುಳ್' ನೋ.

**ಪೊರುಳಜ್** (ನಾ). ಒಂದು ಊರಿನ ಹೆಸರು : ಅಲಂತೂರ ಪೊರುಳಜ್ ಪೆರ್ನ್ನಗರಾದ್ಯನೇಕ ಸಮರಮುಖಮುಖಾಹುತಪ್ರಹತಶೂರಪುರುಷಪಶುಪ ಹಾರ (ಎಕ. IX. ದೊಡ್ಡ. ೬೬-೩೯ ; 517). [ ? ]

**ಪೊರೆ₁**, ಹೊರೆ₁ (ಕ್ರಿ). ೧. ಕಾಪಾಡು ; ರಕ್ಷಿಸು : "ಪೊರೆ—ಪೋಷಣೇ, ಉಪಸರ್ಗೇ ಚ (ಹತ್ತಿರ)" (ಶಮಂ) ; ರಾಮೇಶ್ವರ ಎಮ್ಬ ತೀರ್ಥದಾ ಮೊದಲೊಳ್ ಮೆಚ್ಚಿಕ್ಕಿ ಪೊರದ ಪನ್ನಿಗಳನಿಜಿಯಾಲ್ ಬನ್ದಲ್ಲೀ(ಲ್ಲಿ)

(ಅಂ. XI. ೦೨೭-೦೦ ; ೩೦೩); ಒಡವಳೆದಂಬರೆಚರರನನ್ವಿತಮಂತ್ರಿ ಸಮೂಹಮಂ ಮನಂ ಬಿಡೆ ಪೊರೆದಿಷ್ಟಬಂಧುಜನಮಂ ಕರೆದು (ಅಜಿತ. ೨-೩೦); ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ ಪೆಣ್ಣಲ್ಲವೆ ಪೊರೆದವಳು (ಹರಿ. ೩-೭). ೨. ಪೋಷಿಸು : ಈತನಂಗಡಿಯುಲವಡಂ ಪೆಜಾಕಿ ತಿಂದು ಪಾಟ್ಸ್ಯೊಂ ಬೈಕಂಗುಳಿ ಬೇಡಿ ಪೊಟಲೆಲ್ಲಮಂ ತೊಟಲ್ದು ಬಸಿಱ ಪೊರೆವೊಂ (ಕಬ್ಬಿ. ೯೬. ೬); ತನ್ನೊಡಲು ಪೊರೆಯಲಱಿಯದವನಾರುಮಿಲ್ಲಂ (ಕಂಠಕಂ. ೩೦-೦೭); ಪೊರೆದೆಂ ಬಾಟವೆ ಪಂದಿ ನಾಯ್ಗುಳೊಡಲಂ (ಸೋಮೇಶ. ೦೮). ಹೊರೆ₁ : ೧. ನೀನು ಹೊರೆವ ಯುಗಜುಗಂಗಳು ಒಂದು ತೃಣಮಾತ್ರವಾದ ಕಾರಣ ನಿನ್ನ ಹಸುಮಕ್ಕಳವರೆನುತ್ತಿದ್ದೆನಮ್ಮ (ಅರಹಿ. ೦೯೯-೧೦೦); ನೀವಿನ್ನಿದಂ ರಕ್ಷಿಪುದು ಹೊರೆವುದಿನಿತಂ ಬೇಡಿ ಪಡೆದ ನಾ ನಿಮ್ಮಲ್ಲಿ ಕರುಣಿಸೆನಗೆ (ಕಜಾ. ೯-೦೯); ನಿನ್ನ ಭೃತ್ಯನ ಹೊರೆವ ಪರಿಯಿದು ಕೃಷ್ಣ ಜಯಜಯ (ಕುಮ್ಮಾಇ. ೭-೦೭). ೨. ದೇಹೊಡಲ ಹೊರೆವುದಕ್ಕೆ ನಾನಾಱ (ಬಜಾಕೀ. ೩. ೦೬-೦೭); ಹಸಿದು ಕೈಯುಲಿ ಸಾಯಲಾಱೆವು . . . ಹೊರೆಯಲಾಪೆವು ಬೆಂದ ಬಸುಱುಗಳ (ಕುಮ್ಮಾ.ಸ. ೦೬ ೦೦); ಪ್ರಜೆಗಳಿಗೆ ಹೊಟ್ಟೆಯನ್ನು ಹೊರೆದುಕೊಳ್ಳುವುದೇ ದೊಡ್ಡ ಸಮಸ್ಯೆಯಾಗಿತ್ತು (೩೦ಪ್ರಾ. ೯೯೭).

[ದೇ.₃ ತಮಿ. ಪುರ; ತೆಲು. ಪ್ರೋಚು; ಕೋಲಾ. ಪುರಾಯ್; ಪರ್ಜಿ. ಪೊರಿವ್; ಗೊಂಡಿ. ಪೊರ್ವನಾ]

**ಪೊರೆ₂. ಹೊರೆ₂ (ಕ್ರಿ).** ೧. ಸೇರು; ಕೂಡು; ಬೆರೆ : ವರಶಬ್ದಾಲಂಕಾರದ ವಿರಚನೆಗಳ್ ನೋಟ್ಪೊಡೊಂದೆ ತೋರ್ಕೆಗಳಿಂತುಂ ಪೊರೆದಿರಲೊಂದೊಂದ ಱೊಳ್ ಪರಮಕವೀಶಪ್ರಯೋಗಗತವರ್ಗಂಗಳ್ (ಕಾಜಾ. ೨-೯೬); ಅವ ಕಾಲಮುಂ ಕಿಡದುದಂ ಪಾಪದಿಂ ಪೊರೆಯದುದು ಸುಖಮನೊಡೆ ತಪ್ಪದಂ ತಪ್ಪಂ ತಾನಾದುದನಂತಪ್ಪ ಮೋಕ್ಷಸುಖಮನೆಯ್ದಿ (ಕಬ್ಬಿ. ೯೯-೬); ಎಡಱೋಡುವಿನಂ ಪೊರೆದೊಳ್ಳಿಗಟ್ಟಿಯೊಳ್ ಕೊರ್ದರೆ ಪ್ರಮ್ನರಾಜ್ಯಮುಮವದೇನೆಸುದತ್ತೊ ನಭಶ್ಚರೇಂದ್ರನಾ (ಅಜಿತ. ೨-೨೯). ೨. ಮೆತ್ತಿಕೊಳ್ಳು ; ಅಂಟು ; ಹತ್ತು : ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ ತನ್ನಧರದ ರಾಗದೊಳ್ ಪೊರೆದುದಂ ಮಧುಮಂ ಬೆಱಗಾಗಿ ನೋಡುತುಂ (ಜಗ. ೦೬-೦೦೭); ಅಡಿಗಡಿಗೆ ಪೊಡವಿಯೊಳ್ ಪೊಡೆದುಕೊಳ್ಳ ರಭಸದೊಳ್ ಪೊರೆದ ಪುಡಿಯನೊಡನೊಡನೆ ಬೆಮರ ಬಿಮಗಳ್ ನಾಂದೆ (ಶಬರ. ೯-೬೦ ಪ). ೩. ಬಳಿ ; ಲೇಪಿಸು ; ತೊಡೆ : ಕರಡಿಯ ತೋಲಂ ಕಜ್ಜಲಪರಾಗದಿಂ ಪೊರೆದು ಪಿಡಿದು ಜೇನೆಯ್ಯೊಳ್ ತಂದಿರಿಸಿದಪೊಲರಸನಂ ಪಚನರಚನೆ ಬಳಸಿದುದರತೀಪತಮಮೊದಮೈವಿನಂ (ಶಾಂತಿ. ೬ ೦೨೭); ಚಂದ್ರಗಾವಿಯ ದುಕೂಲದ ಬೈತಲೆಗೆ ಪೊರೆದ ಚಂದ್ರರಜದೆುಬ್ಬೀಯ ಶೃಂಗಾರಸಾರದಿಂ ಚಂದ್ರಶೇಖರನ ಪಟ್ಟದ ರಾಣಿ ನಮಿತಗೀರ್ವಾಣಿ ರಂಜಿಸುತಿರ್ದಳು (ಶಂಭು. ೩೭-೨೯). ೪. ಧರಿಸು ; ತೊಡು : ಪೊರೆದ ದುಕೂಲಮೊಂದಿನಿಸು ಪಸಾಸಿದೆ ಛಾಳದೊಳಿಟ್ಟ ಚಂದನಂ ತೆರಳದೆ (ಪಚಿ. ೦೦-೨೦). ೫. ನೆನೆಹಾಕು ; ನೆನೆಯಿಸು : ಪೊರೆದಿರ್ಪತ್ತೊಂದುದಿನಂಬರೆಗಂ ಪಾಲೊಳಗೆ ಬೆಳಲ ತಿರುಳಂ ನೆಟಲೊಳ್ ಪರಿತೋಷಿ ಬಯ್ಯಿಟ್ಟಕ್ಷುರಸದೊಳಿಕ್ಕಿದೊಡೆ ಸಮ್ಮಪುದು ಪಾಲಕ್ಕುಂ (ಸೂಪಶಾ.ಶ. ೬-೧೭). ೬. ಬಳಿಯಲ್ಪಡು ; ಲೇಪನವಾಗು : ಚಲಿಯಿಪ ವನದೇವತೆಯರ ಚರಣಾಲಕ್ತಕದೆ ಪೊರೆದುವೆನಿಪುವು···ಚಂದಳಿರ್ದಱುಗಲ್ (ಗಿರಿಜಾ. ೯೭). ೭. ಲೇಪಿಸಿಕೊಳ್ಳು ; ಬಳಿದುಕೊಳ್ಳು : ಕತ್ತುರಿಯನಂಗದೊಳ್ಪೊರೆದು ನೀಲಾಂಬರವನೊತ್ತಿ ಬಿಗಿದುಟ್ಟು (ಶಬ್ದಮ. ೯-೬೨). ೮. ಉಲ್ಲಸಗೊಳ್ಳು ; ಆರಳು : ಶ್ರೀಪಧುಪಿನಬಜಕೋರಕ ಪೊರೆಯೆ (ಕೃಷಿಚಾ. ೦೦-೦). ೯. ಅಗಲವಾಗು ; ಹಿಗ್ಗು : ಅಂತ ನ್ನಿರ್ಘೂರ್ಣಿತಾಪೂರ್ಣಮನ್ನು ವೇಗದೊಳ್ ಬೀಗಿ ಬಾವಂತ ಗಗ್ಗರಿಪ ಕೊರಲೊಳುಬ್ಬರಿಸಿ ಪೊರೆದ ಸರಗಳೊಳಂ (ಶಬರ. ೯-೬೦ ಪ). ೧೦. ಸಿಂಪಡಿಸು; ಚಿಮುಕಿಸು; ತಳಿ : ಸುರಹೊನ್ನೆಯ ಬೀಜಂ . . . ಕಪ್ಪುರ ಮೆಂಬಿವಱಿಂ ಪೂವಂ ಪೊರೆದೊಡೆ ಪುಷ್ಪದ್ರವಂ ಮನೋಹರಮಕ್ಕುಂ (ಲೋಕೋಪ. ೭-೯೭). ಹೊರೆ₂ : ೧. ಅಱಿವು ವಸ್ತುವೆಂದಡೆ ಒಂದು ಕುಱುಹಿನ ಹೊರೆಯಲ್ಲಿ ಹೊರೆಯದು ಇಂತೀ ಹೊರೆಯದೆ ಹೊರೆಯದ ಪರೀಕ್ಷೆ ವಿಧ(ದ)ನಾಗಿ ಗಾರುಡೇಶ್ವರಲಿಂಗವನಱಿದವಂಗಲ್ಲದೆ ಸಾಧ್ಯವಲ್ಲ (ಸವಚ. ೦೦೦-೩೭೬); ತರುಣಿ ನಿಜತನುಪರಿಮಳದಲಾಱ ಹೊರೆದ ಹೂವಿನ ದಂಡೆಯನು ನಿಜವರನ ಕೊರಳಲಿ ಹಾಯ್ಕಿದಳು (ಕುಮ್ಮಾಆ. ೦೩-೩೩); ಪರಿಮಳದ ಪದ್ಮದ ಪರಾಗದಿ ಹೊರೆದ ನಿಱಿದೆರೆಯುಬ್ಬುಗಳ . . . ಸೊಗಸಿನ ಸರಸಿಗಳಿವರು (ಕೊಕಿಲಾ. ೨-೭-೯). ೨. ಹೊರೆದ ರಕುತದ ಧಾರೆಗಳ ತಡಿಕರದೊಳೆಲಲಾವ ತಲೆಗಳುಬ್ಬಿಯೊಳೊರೆದ ನೆಣನಡಗಿನ ಮಹಾಗಜ ಪೊಗೆದುದರಿಬಲವ (ಕುಮ್ಮಾದ್ರೋ. ೩-೨೯). ೩. ಹೊರೆದ ಕತ್ತುರಿಸಾರಣೆಯು ನವಪರಿಮಳದ ಪನ್ನೀರ ಚಳೆಯವ . . . ಧೂಪದ ಧೂಮಗಂಧೋತ್ಕರಸಮುದ್ರದೊಳದ್ದನೊಲ್ಲದೆ ಪಥವ ಪವಮಾನ (ಕೊಕಿಲಾ. ೦-೦೬-೩). ೧೦. ಪರಿಮಳದ ಕುಸುಮ ಪನ್ನೀರ ಧಳೆಯಂಗಳಿಂ ಹೊರೆದ ಮುತ್ತಿನ ರಂಗವಾಲಿ ಕಸ್ತೂರಿಗಳ ಪರಿವಿಡಿಯು ಕುಂಕುಮದ ಕಾರಣೆಗಳು (ಅಶ್ವಂ. ೩೦-೩೮). ೧೧. ಹೊಂದು ; ಪಡೆ ; ತಾಳು : ಹೊರೆದುದಿಳೆ ಸೌರಭ್ಯಕೈತ್ಕೋತ್ಕರವನು (ಕೊಕಿಲಾ. ೦-೦೬-೩೯); ಪರನಾರಿ ಸೋದರನು ಪರಶತ್ರುದಲ್ಲಣನು ಕರ ಪಾಪಭಯವ ಹೊರೆವ ಗುಣಿಯಹ ನೃಪಗೆ ಸ್ತಿರವಿಹಳು ಲಕ್ಷ್ಮಿ (ಸರ್ವಜ್ಞ. ೭೨೭). [ದೇ.₃ ತಮಿ. ಮಲ. ಪೊರು]

**ಪೊರೆ₃. ಹೊರೆ₃ (ನಾ).** ೧. ರಕ್ಷಣೆ ; ಆಶ್ರಯ ; ಆಧಾರ : ಒಂದು ಪೊಡಂಬಡಂ ಪೊರೆಯುಮಿಲ್ಲದರ್ಗಂಬುದನೆಯ್ದೆ ನಂಬಿ ನಾಡಂ ದಯೆಗೆಯ್ದು ನೀಂ ಕುಡುವಿನಂ ಪೆಱತೇ ಪಡೆವಪಾತೊ ಪಳ್ಳಿಯಲ್ಕೊಂದರ್ಗೆಪು ದೊಳ್ಪು ನಿಲೆ . . . ಅಯ್ದುದಾಡಮಂ (ಕಂಠಕಂ. ೯-೯೭); ಸರಗಂ ಬೆಱಗಂ ಬಗೆಯದೆ ಪೊರೆಯಿಲ್ಲದೆ ಕಲಿಯ ದಂಡೆಯಂ ನೂಂಕಿದವೊಲ್ ಪೊರೆದಾಳ್ದನ ಕಾರಣದಿಂ ಪರಿಹರಿಪುದು ಭೃತ್ಯನರ್ಥಮಂ ಪ್ರಾಣಮುಮಂ (ಗದಾಯು. ೨-೨೨). ೨. ಪಾಲನೆ; ಪೋಷಣೆ; 'ಪೊರೆಕೈ' ಪರಾ. ಹೊರೆ₃: ೧. ಕಾಯವಸ್ತುವೆಂದಡೆ ನಾನಾಮಲಗುಣಂಗಳ ಹೊಲೆ(ರೆ)ಯದು ಜೀವವಸ್ತುವೆಂದಡೆ ತ್ರಿವಿಧಮಲದ ಹೊರೆ (ಸವಚ. ೦೦೦-೩೮೭); ಉಳಿದ ಮೂವರ ಕಳುಹಿದನು ೧ರುಪತಿಯ ಹೊರೆಗಾಗಿ (ಕುಮ್ಮಾಗ. ೯-೨೬); ತೋಱ ನಿಜರೂಪವನು ಭೀತಿಯ ಬೀಱ ಕೌರವನೃಪರೊಳಗೆ ಮುರವೈರಿ ಬಿಜಯಂಗೆಯ್ದನಲಾ ಪಾಂಡವರ ಹೊರೆಗಾಗಿ (ಕಜಾಗ. ೩ ೦-೩). [<ಪೊರೆ₁]

**ಪೊರೆ₄. ಹೆರ್ಪೆ, ಹೊರೆ₄ (ನಾ).** ೧. ಹತ್ತಿರ ; ಬಳಿ ; ಸಮೀಪ : "ಪೊರೆ ಸಮೀಪಂ" (ಕರ್ಣಾ. ೩೨); ಬೆಟ್ಟದಾ ಮೂಡಣ್ ಪೊರೆವ ಬಸ್ತು ಕುಟ್ಟಿರ್ದ್ದಾಗಲೊಡ್ಡಿದಿತ್ತು (ಕ್ರುಅ. ೦೯೩೬. ೩೩-೨೯; ಸು. ೫೫೦); ಪೋದಂ ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ (ಯುಶೋಚ. ೨-೬೦). ೨. ಉತ್ಸಾಹ ; ಚೈತನ್ಯ ; ಆನಂದ : 'ಪೊರೆಯೇಱು' ಪರಾ. ೩. ಸಂಬಂಧ ; ನಂಟು : ಕೊರೆಯೊಳ್ ಪೊರೆಯಿಲ್ಲದ ಪರಲಲನೆಗೆ ಬಗೆಗುಡದ ಕಳ್ಪದುಱ ಪುಸಿಯದ ಕಾದಲಿಸಿ ವಿಷಯಂಗಳೊಳ್ ಪಂಬಲಿಸದ ಗುಣಮ್ಮೆದಣುವ್ರತಂ ಜಿನಮತದೊಳ್ (ಶಾಂತಿ. ೦-೫೮). ೪. ಲೇಪನ : ಬಳಿಯುವಿಕೆ : 'ಪೊರೆಯಿಡು' ಪರಾ. ೫. ಬೆರಕೆ ; ಮಿಶ್ರಣ : 'ಪೊರೆಯಿಕ್ಕು' ಪರಾ. ೬. ಹೊಳಪು ; ಕಾಂತಿ : 'ಪೊರೆಯಿಡು' ಪರಾ. ಹೆರ್ಪೆ: ೧. ಅಲ್ಲಿ[೦] ಮೂಡಲು ಶ್ವೇತಪಾಷಾಣಮಂತಿ ಅಲ್ಲಿ[೦] ಬಡಗ್ಣ ಹೆರೆ ಈಶಾನ್ಯದಲಿ ಹುಪನಱ ಅದಱ ತೆಂಕಯಿಣ ಹೊರೆಯಿಂ ಪಡುವ ಪೊಗದ ಜಲಪ್ರವಾಹ(ಶಾಇ. IX-i. ೨೩೯-೯೯: 1148). ೨. 'ಹೆರೆಹೆಚ್ಚು' ಪರಾ. ಹೊರೆ₄: ೧. "ಹತ್ತಿರಕೆ ಹೊರೆಯೆನಿಸ್ಕುಂ" (ಕಜ. ೦೦೭);

ಅವಳ ತೆಂಕಯಿಣ ಹೊರೆಯಿಂ ಪಡುವ ಮೊಗದ ಜಲಪ್ರವಾಹ (ಶಾಸ. IX-1, ೨೫೪-೪೪ ; 1148) ; ಕಿಚ್ಚಿನ ಕಿಂಡದಂತೆ ಹೊರೆಯಲ್ಲಿಪ್ಪೆಯ:ಯ್ಯ (ಅಜಿತ. ೬೦-೨೬೩) : ಅಪ್ಸರಗಣಿಕೆಯರು ಕೋಪಾಳನ ತುದರು ವಾಸವನ ಸಿಂಹಾಸನದ ಹೊರೆಗೆ (ಉತ್ತ್ರ. ೬.೬೩). ೨. 'ಹೊರೆಹೆಚ್ಚು' ಪರಾ. ೪. 'ಹೊರಸು$_1$' ಪರಾ. [<ಪೊರೆ$_1$]

**ಪೊರೆ$_6$, ಪರೆ$_4$, ಪೆರೆ$_3$, ಹರೆ$_4$, ಹೆರೆ$_6$, ಹೊರೆ$_6$** (ನಾ). ೧. ಆವರಣ ; ಹೊದಿಕೆ ; ಆಚ್ಛಾದನ ; ಮುಸುಕು : ಎರಡು ಘಟಿಗೆಯಿಂದೊಳಗೆ ಪಾಸಿನ ಪೊರೆಯೊಳ್ ಪುಟ್ಟಿ ಇಂದ್ರಪ್ರತೀಂದ್ರ . . . ಲೋಕಪಾಲಾಹಮಿಂದ್ರತ್ವಮೆಂದೀ ಮಹರ್ಧಿಕದೇವರಾಗಿ (ಶಬ್ದಾ. ೯೮-೩) ; ದಿವ್ಯತಳ್ಪತಳ್ಪದ ಪೊರೆಯೊಳಗೆ ತೊಳತೊಳತೊಳಗಿ ಪೊಱಮಡುವೆಳನೇಸಱ ಬಳಗದ ಬೆಳಗನೊಳಕೊಂಡು (ಅಜಿ. ೨-೬೦ ವ) ; ನಾರದನಿರದೆ ಗಗನತಳಕ್ಕೊಗೆದು ಮುಗಿಲ ಪೊರೆಯೊಳಡಂಗಿದಂ (ಕಂಕಥಾ. ೬-೨೦ ವ). ೨. ಪದರ: ಮಡಿಕೆ : ಪಾಲ್ಗಡಲ ನೊರೆಯ ಪೊರೆಯ ತೆರೆಯನನುಕರಿಸಿಯುಂ ಮಲ್ಲದಕನಾದಂಶಮಾತ್ರಖಂಡನೀಯ:ಕರಂಗಳನಿಸಿದ ಮಂಡಕಂಗಳುಮಂ . . . ಉಣ್ಣ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಶಶಾಂಕ. ೦೦-೨೯ ವ) ; ನಿಡೋತ್ತರೀಯಪಲ್ಲವದ ಪೊರೆಯಿಂ ತೆಗೆದು . . . ಮಣಿದೊಡವನೊರ್ವಳಂಗನೆಗಿತ್ತಳ್ (ಜಗ್ಗ. ೪-೬೦); ಮೆಯ್ಯ ಪೊರೆಗಳಿಂತು ಮೂಱುಭಾಗಂ ಅಲ್ಲಿ ಪೊಱಗಣ ಭಾಗಂ ಧಾತುಮಲಾದಿ ದೋಷಸಹಿತಂ . . . ಒಳಗಣ ಭಾಗಂ ಜ್ಞಾನಮಯಂ (ಸಮ. ೦೨೯-೦೯ ವ). ೩. ಹಾವು ತನ್ನ ಮೈಮೇಲಿನಿಂದ ಕಳಚುವ ತೆಳುವಾದ ಚರ್ಮದ ಆವರಣ_ಪದರ ; ನಿರ್ಮೋಕ : ದಂಡಕರಿಸಿಯರ ಮೆಯ್ಯ ತೊಗಲ್ ಪಾವಿನ ಪೊ[ಪಾಠಾಂ. ಪೆ]ರೆ ಸುಲಿವಂತೆ ಸುಲಿದು ಪೋಗಿ (ಶಬ್ದಾ. ೦೬೨-೨). ೪. ಕಣ್ಣಿನ ಗುಡ್ಡೆಯ ಮೇಲೆ ಬೆಳೆಯುವ, ನೋಟಕ್ಕೆ ಅಡ್ಡಿ ತರುವ ಒಂದು ಬಗೆಯ ಪದರ ; ಕಣ್ಣಿನ ಒಂದು ದೋಷ : ಕಣ್ಣಿನ ಪೊರೆಯನ್ನು ಶಸ್ತ್ರಚಿಕಿತ್ಸೆ ಮಾಡಿ ತೆಗೆದುಬಿಡಬಹುದು (ಜೂತ). ೫. ಕಣ್ಣಿನಲ್ಲಿ ಇರುವ ಒಂದು ಬಗೆಯ ತೆಳುವಾದ ಚರ್ಮ ; ದೃಷ್ಟಿಪಟಲ : ಅಂತರ್ದ್ರವದ ಚಲನೆಗೆ ಅಡ್ಡಿಯುಂಟಾಗಿ ಪಾಪೆಯ ಪೊರೆಯು ಕಿರಣ ಕಣ್ಣೊಳಗೆ ಅಂತರ್ದ್ರವದ ಒತ್ತಡವು ಹೆಚ್ಚುವುದು (ಕಿಚ್ಚುಕ್ಕ. ೦೬೦). ೬. ಕಿವಿಯೊಳಗಿನ ಪಟಲ: 'ರಾಜ' ಎಂಬ ಶಬ್ದ ಕಿವಿಯಲ್ಲಿನ ಪೊರೆಯನ್ನು ಚುಚ್ಚುವಂತೆ ಭಾಸವಾಗುತ್ತಿತ್ತು (ಕಂಡಜಾ. ೪೯). ೭. ತಪ್ಪು; ದೋಷ; ಕೊಂದು : ಕುಡುವಂ ಗುರು ಪಡೆವರ್ ಪೆಱರೆಡೆಯೊಳ್ ನೀಮಾರ್ಗಮಿದೇಕೆ ಕಿಡನುಡಿದುಟಿಟ್ಟಿಡೆವೆರ್ಗಡೆತನದೋದೇವಡೆವಿರ್ ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ (ಅಜಿತ. ೯-೦೦೬). ೮. ಮುಚ್ಚುಮರೆ ; ವಂಚನೆ : ನಿನ್ನಡಿಯೊಳಗದವರೊಳ್ ನೀಂ ಪೊರೆಯಿಲ್ಲದೊಡವೆಱಿದಿರ್ದುಂ ತಣಿಯದೆ ಅರ್ಜುನಾದಿಗಳೊಳಾಳರಸುತನಮಂ ಪಲ್ಲಟಂಗೆಯ್ದು ನಲಿವ ಸುಶೀಲನೆಂದುಂ . . . ನಿನ್ನ ಕಲ್ಯಾಣಗುಣಂಗಳಂ ಕೇಳ್ದು (ಜಗ. ೬೦). ೯. ಅರಗಿನ ಕೀಟವು ದ್ರವರೂಪದಲ್ಲಿ ವಿಸರ್ಜಿಸುವ ಅರಗಿನ ಕವಚ : ಅರಗಿನ ಲಾರ್ವಾಗಳು ಪ್ರೌಢಸ್ಥಿತಿ ಮುಟ್ಟುವ ಮುನ್ನ ಮೂರು ಬಾರಿ ತಮ್ಮ ಪೊರೆಗಳನ್ನು ಬಿಡುತ್ತವೆ (ಕಕೋಶ. I, ೪೪೫). ೧೦. (ಅಲಂ) ಮಾಯೆ ; ಭ್ರಮೆ : ಸುಬ್ಬುವಿನ ಕಣ್ಣಿನ ಪೊರೆ ಕಿಂಚ ಹಾರಿದಂತಾಯಿತು (ಕಿಸುಗ. ೨೦೫). **ಪರೆ$_4$** : ೨. ಶ್ವಾಸಕೋಶದ ಒಳಮಗ್ಗುಲಲ್ಲಿ ನೂರಾರು ಸೂಕ್ಷ್ಮರಂಧ್ರಗಳೂ ಪರೆಗಳೂ ಇವೆ (ಜಾಲ್ತ್ರ. I, ೩೦೮) ; ಗಾಳಿಯ ಪರೆಗಳೆಂಬ ಹೆಸರನ್ನು ಪಡೆದಿದ್ದ ಚಟ್ಟೆಗಳು ರಚಿತವಾಗಿದ್ದುವು (ಕಾಕಿರ. ೩೯೭). ೩. ಸುದತಿಯ ದಿವ್ಯಗಂಧಕನಕಚಂದನಶಾಟಿಯೊಳಂಗಡಾಹಿಯಿಕ್ಕಿದ ಪ[ಪಾಠಾಂ. ಹೆ]ರೆಯಂತಿರುಟ್ಟ ದುಕೂಲಂ . . . ಒಪ್ಪಿದುದು (ಅರಗಿಜ. ೨-೦೬ ; ಶಬ್ದಸಾ. ೬೯೭ ನೋ) ; ಮಹಾಸರ್ಪವು ಜೀರ್ಣವಾದ ಪರೆಯನ್ನು ಬಿಡುವ ಹಾಗೆ (ಕೃವಾಕ. ೨೬೪) ; ಹಳೆಯ ನೆನಪುಗಳು ಮರುಕಳಿಸಿದವು ಹಾವಿನ ಪರೆಯೊಳು ಜೀವ ನುಸುಳಿದೊಲು (ಸ್ವದರ್ಶ. ೨೬). ೪. ಪರೆ ಪ್ರಾರಂಭವಾಗಿರುವ ವ್ಯಕ್ತಿಯ ಮಾನಸಿಕ ಶಕ್ತಿ ಮತ್ತು ಕಾತುರತೆಗೆ ಭಂಗವಾಗದಂತೆ ಎಚ್ಚರಿಕೆಯಿಂದ ವೈದ್ಯರು ಸಲಹೆ ಕೊಡಬೇಕು (ಕಿಚ್ಚುದ್ಯ. ೧೬೩). 'ಪರೆಗಣ್ಣು' ಪರಾ. ೫. ಆಮೆ (Turtle) ಪಾಪೆಯ ಪರೆಯನ್ನು ಹೊಂದಿರುವ ಮೊದಲ ಜೀವಿ. ಪಾಪೆಯ ಪರೆಯು ಕಣ್ಣೊಳಗೆ ಪ್ರವೇಶಿಸುವ ಬೆಳಕಿನ ಕಿರಣಗಳನ್ನು ಮಿತಿಗೊಳಿಸುವುದು (ಕಿಚ್ಚುಕ್ಕ. ಪ್ರಕೃತಿಯಲ್ಲಿಹ ಕಣ್ಣುಗಳು—ಪರಿಚಯಗಳು). ೧೧. ಭ್ರೂಣವನ್ನು ಆವರಿಸಿರುವ ತೆಳುವಾದ ಹೊದಿಕೆ ; ಭ್ರೂಣದ ಚೀಲ : ಜರಾಯು_ಗರ್ಭದೊಳಗಿನ ಶಿಶುವಿಗೆ ಸುತ್ತಿದ ಪರೆ (ಗಂಗಾಮ. ೦೩೬). ೧೨. ಮಂಡೆಯ ಚರ್ಮವು ಸುಲಿದು ಕೂದಲಿನ ಬುಡದಲ್ಲಿ ಏಳುವ ಹೊಟ್ಟು; ಹಗರು : (೯). **ಪೆರೆ$_3$** : ೩. ಕರ್ಚಿಲ್ಲದ ಕಾಡಿಗೆ ಕಂದರ್ಪನ ಜಸಂ . . . ಸರ್ಪನ ಪೆರೆ ಜಲಕನಾಯ್ತು ಪೊಸಮೆಳ್ದಿಂಗಳ್ (ಜಗ್ಗ. ೬-೪೪) ; ಪೊರೆವಿಡಿದು ಪೊಕ್ಕು ಪಾವಿನ ಪೆರೆಯಂ ಪೊತ್ತೋಂತಿಯೊಂದು ಪರಿತರೆ (ಅರಗಿಜ. ೩-೯೨) : ನವರತ್ನರಾಜಿ ಫಣಮಣಿ ಕವಿದ ಮುಗಿಲ್ ಪೆರೆ ಕರಾಳಪವನಂ ಪೂತ್ಕಾರವೆನಲ್ ಮಂಡಳಿತಮಹಾಹಿವೊಲಿರ್ಪುದು ಸುತ್ತಿ ಮಾನುಷೋತ್ತರಶೈಲಂ (ಕುಶ್ರೀ. ೦-೯೨). **ಹರೆ$_4$**: ೩. ಹಾವಿನ ಹರೆಯ ತಂದು . . . ಹರೆಯನಿಕ್ಕಿ ಕಟ್ಟಲು ಜ್ವರ ಮಾಣ್ಗುಂ (ಕಿಚ್ಚಿ. ೮೦೫). **ಹೆರೆ$_6$**: ೩. "ನಿರ್ಲಯನೀ, ನಿರ್ಮೋಕಂ, ಕಂಚುಕಂ__ಈ ೩ ಹಾವಿನ ಹೆರೆ" (ಕರಾಯು. ೦೦೬-೨೨) ; ಬನ್ನವಿಸು ಮನ್ನಣೆಯ ವನಜಾಕ್ಷ ಕೈಮುಗಿದು ನಿನ್ನ ಹೆಡೆಗಳನುಡುಗಿ ನಿಲ್ಲಹಿಪ ಹೆರೆ ತೆಗೆದು (ಶೀರು. ಹ. ೪೬೩-೩) ; ಹೀಲಿಗಱಿ ಗುಗ್ಗುಳ ಹಾವಿನ ಹೆರೆ ಇವಂ ಕೂಸಿಂಗೆ ಧೂಪವಿಕ್ಕುವುದು (ಬಾಲತ. ೦೨೪-೦೪). **ಹೊರೆ$_6$** : ೧. ಬೆಂದ ಮುಸಿಯ ತೊಳೆದಡೆ ನೊಂದಿತ್ತೇ ಅದು ಎನ್ನ ಹೊರೆಯನತ್ತಿದರೆಂದು (ವೋಣಿಮಾ. ೨೦-೬೯) ; ಕಾರ್ಗಾಲದ ಕರಿಯ ಮುಗಿಲ ಹೊರೆಯೊಳು ಹರಿದಾಡುವ ಕಿಱುಮಿಂಚಿನ ತೆಱದಿ (ಜಯಗಾ. ೩-೨). ೮. ಮಣಿಗಳಱಿಗಳು ವೈಶಿಕಂಗಳು ಬಱಿಯ ಹುಸಿ ನುಸುಳುಗಳು ಕಾಮುಕರಜಿಕಗಳು ಬಹುಭಾಷಣಗಳು ಹೊರೆಗಳಿರವುಗಳು (ಜಿಸಜ. ೪೦-೬೦); ಅರಸನಂಕೆಯ ಮನದ ಬಯಕೆಯ ಹೊರೆಯ ಬಳಕೆಯನೀ ಸಮಂಜಸತರದ ಸಾಕ್ಷಿಕರೆತ್ತ ಬಲ್ಲರು (ಕುಪ್ಪಾಕ. ೬-೬೬); ತಪ್ಪೇನು ನಿನ್ನಯ ಹೇಳಿಕೆಗೆ ಹೊರೆಯಿಲ್ಲ ಹೋಗಲು ಬಹುದು ಬಾಂಧವರ ಆಲಯಕೆ (ಕಿಶಾಗ. ೪-೦-೨೩). ೧೩. ಸಿಪ್ಪೆ; ತೊಗಟೆ : ಹಿರಿದು ಹೊರೆಗಳ ನೊಂದನೊಂದು ತರಳ ಸುಲಿಯಲು ಬಾಳೆಯದು ತಾನೊರೆಯಲಿಲ್ಲದೆ ಮುನ್ನಿನಾಕೃತಿಯಿಲ್ಲದಿಪ್ಪವೊಲು (ಜಿಸಜ. ೩೩-೩೮). ೧೪. ವ್ಯತ್ಯಾಸ ; ಭೇದ : ಕ್ಷೀರ ನೀರಿನಂತೆ ಹೊರೆ ಇಲ್ಲದೆ ವರ್ಣಭೇದವಿಲ್ಲದೆ ಕೂಡಬೇಕು (ಮೋಣಿಶಾ. ೨೮೦-೪೩) ; ತ್ರಿಪುಂಡ್ರವ ಧರಿಪಗೆನ್ನೊಳುಂ ಹೊರೆಯಿಲ್ಲ ನಿಶ್ಚಯವಿದು (ಚಿಕಿಂ. ೪೦-೨೨), ದೇವದೇವಾಧಿಪನ ಹೊರೆಯಿಲ್ಲದೆ ಕೂರ್ತರ್ ಕೃತಿವೇಳು ಖಂಡಶರ್ಕರೆಯಂತೆ ಸವಿಮಾತುಪೆರಸಿ (ಮೋಹಕ. ೧೬-೧). ೧೫. ಶ್ವಾಸನಾಳ : 'ಹೊರೆಯೇರು$_3$' ಪರಾ.

**ಪೊರೆಯ ಲಡ್ಡುಗೆ** = ಒಂದು ಬಗೆಯ ಭಕ್ಷ್ಯ; ಪದರಗಳಿಂದ ಕೂಡಿದ ಲಡ್ಡುಗೆ (?) : ಬೆಳೆಯ ಕಡಲೆಯ ಸಣ್ಣ ಹಿಟ್ಟ ಸೋದಿಸಿ ಹಾಲಿನೊಳಗಿಕ್ಕಿ ಸಂಪಳವ ಮಾಡಿ ತೆಂಗಿನ ಕರಟದೊಳಗೆ ಕಿಱುವೆರಲ ಗಾತ್ರದ ವೆಜ್ಜವಂ ಮಾಡಿ ತುಂಬಿ ತುಪ್ಪವನು ಕಾಸಿ ಇಳಿಯ ಬಿಡೆ ಬುರುಬುರನೆ ಬೆಂದು ಹದನಾದುಂಡೆಗಳಿಗೆ ಸಕ್ಕರೆಯ ಪಾಕವ ಹೊಯ್ದು ನವ್ಯಪರಿಮಳವನಿಕ್ಕಿ ಕಟ್ಟೆ ಪೊರೆಯ [ಪಾಠಾಂ. ಹೊರೆಯ, ಸೊನೆಯ] ಲಡ್ಡುಗೆಗಳೆಂದು ಹೆಸರನೊಲವಿಂ ಕರೆವುದು (ಸೂಶಾ. ೦-೩೬).

[ದೇ. ೮ ತಮಿ. ಪುರೈ; ತುಳು. ಪರೆ; ತೆಲು. ಪೊರ]

**ಪೊರೆ₇** 'ಪೊಱೆ³' ನೋ.

**ಪೊರೆಕಳಚು**, ಪರೆಗಳಚು (ಕ್ರಿ). ೧. (ಹಾವು) ತನ್ನ ಚರ್ಮದ ಆವರಣವನ್ನು ಕಳಚು; ನಿರ್ಮೋಕವನ್ನು ಬಿಡು : ನಿರ್ಮುಕ್ತ₁. ಮುಕ್ತಕಂಚುಕಃ_ ೨ . . . ಪೊರೆ ಕಳಚಿದ ಹಾವು (ಸಿದ್ಧಾಂತ. ೭೩). **ಪರೆಗಳಚು** : ೨. (ಅಲಂ) ಜಾಡ್ಯವನ್ನು ಬಿಡು; ಉತ್ಸಾಹವನ್ನು ಹೊಂದು : ರಷ್ಯಾ ಜಪಾನು ತುರ್ಕಿಗಳೆಲ್ಲ ಪರೆಗಳಚಿ ಹೊರಟಿಹವು ಹೊಸಪಂಯಾಣಕೆ (ಕೋಗಿಲೆ. ೨೮-೬). [ಪೊರೆ₃ + ಕಳಚು (< ಕಟಲ್ಚು₁)]

**ಪೊರೆಕೈ** (ಕ್ರಿ) . ಪೋಷಣೆ ಮಾಡು ; ಪೋಷಿಸು : ಕವಳವನೊಲ್ಲದ ಕೂಡಿಸುವ ರೋಗದವಂ ಪೊರೆಕೈವ . . . ಸೂಕರಾಶ್ವಮಾ ಜವಳಿಯ ಸಿಕ್ಕಿಯೋಡಿಸುವ ವಾರುವವಂ ನಡೆವಾಡಿಸಲ್ಕೆ ನೋಡುವ ವಾಱುಗಳ್ಗೆ ಪಾಲನೆಱವುಡಾಂಗವಂ ತಳೆದಿರ್ಪನಾವಗಂ (ಜಗನ್ನಾ. ೩೬೯) . [ಪೊರೆ₃ + ಕೈ₁ (< ಕೆಯ್₁)]

**ಪೊರೆಗಳೆ** (ಕ್ರಿ) . ಸಾಮೀಪ್ಯವನ್ನು ಕಳೆದುಕೊಳ್ಳು ; ದೂರವಾಗು : ಕೆಲಕೆಲರ್ ಪೊಯ್ಲು ಪೊರೆಗಳೆವುತುಂ ಕಳೆವುತುಂ ಕೆಲಕೆಲರ್ ಪಂಥಗಳನುಡಿವುತುಂ ಜಡಿವುತುಂ ಕೆಲಕೆಲರ್ ಸೊಗಸಿನಿಂದಾಡುತ್ತುಂ ಪಾಡುತ್ತುಂ ಬನ್ನೆಸೆದರಾ ಕೊಳದೊಳು (ಕಂಡೂ. ೩೭-೬೮). [ಪೊರೆ₄ + ಕಳೆ₁]

**ಪೊರೆದೋಱು**, ಹೊರೆದೋಱು (ಕ್ರಿ). ೧. ಪದರವು ತೋರು ; ಪದರು ಬಿಚ್ಚು ; ಅರಳು : ಪರಿಯ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತಂಬೆಲರ್ ಪೊರೆಪೊರೆಯಂ ಸಡಿಲ್ಚೆ ನಡುವೂಗಿರೆ ವಲ್ಲಿಗಳ್ ವಸಂತದೊಳ್ (ಅಂಭೃ. ೦೦-೦೦೬) ; ಕನಗೋನರೆಲ್ಲೆಯಲ್ಲಿ ಮಿಳಿರ್ದಾಡುವ ಮಣ್ಣಡರೆಲ್ಲೆಯಲ್ಲಿ ಬಲ್ಲನೆಗಳವಲ್ಲಿಯಲ್ಲಿ ಪೊರೆದೋಱುವ ಮೊಗ್ಗೆಗಳೆಲ್ಲಿಯಲ್ಲಿ . . . ಎನೆ ಸೋಲಿಸುಗುಂ ಬಿಡದಾವನಂ ಬನಂ (ಆದಿಪು. ೩೨). **ಹೊರೆದೋಱು** : ೨. ಭೇದವು ಕಾಣು ; ವ್ಯತ್ಯಾಸವು ತೋರು : ಹೆಸರಿಗಂ ದೇಹಿಗು ಭಿನ್ನವಿಲ್ಲದ ತೆಱದಿಯೆಸೆವ ಪಂಚಾಕ್ಷರಿಗೆ ಶಿವನೊಳಂ ಹೊರೆದೋಱದು (ಬಸವಂ. ೯೦-೫). [ಪೊರೆ₄ + ತೋಱು]

**ಪೊರೆನೆತ್ತರ್** (ನಾ). ಹತ್ತಿರದ ಸಂಬಂಧ,_ಬಾಂಧವ್ಯ; ರಕ್ತಸಂಬಂಧ: ಪೊರೆನೆತ್ತರಯ್ಯದಿಂಬರ್ ದಾಯಿಗರ ಬೇಂಟವುನ್ ತಪ್ಪಿಸಲ್ಕೋಡಿ, ಒತ್ತಂಬದಿಂದ್ಗಾಸ್ಗೆ ಪಿಂದಿರುಗಿದಪ್ಪರ್ (ರಕ್ಷಕ್ತ್ರ. ೪೫-೯೬೦). [ಪೊರೆ₃ + ನೆತ್ತರ್]

**ಪೊರೆನೆತ್ತರ** (ನಾ). ಹತ್ತಿರದ ಸಂಬಂಧಿ,_ಬಂಧು ; ರಕ್ತಸಂಬಂಧಿ : ಪೊರೆನೆತ್ತರನೋ ಪೊಱಗಿನನೋ ಮೇಣ್ ಏನಾದೊಡಮೇನ್ ಎಲ್ಲವರಿಂದಮ್ ನಿನ್ನನೆ ಮಿಗೆ ನಾನ್ ಮನ್ನಿಸಿದಪ್ಪೆನ್ (ರಕ್ಷಕ್ತ್ರ. ೦೭-೩೯೦). [ಪೊರೆನೆತ್ತರ್ + —ಅ]

**ಪೊರೆಪು₁**, ಹೊರಹು₁ (ನಾ). ೧. ರಕ್ಷಣೆ ; ಆಶ್ರಯ : ಗೋವಳಿಗನ ಮಗನಂ ಪೊರೆಪಾವುದುವಿಲ್ಲೆಕೆ ಮಾಳಿಪನಂತುಂ ಮುಳಿವಂದೇವುದೊ ಚಾತುರ್ದಂತಂ ಕಾವುದೆ ಕಾವದವು ಪುಣ್ಯಮೊಂದೇ ಕಾಗುಂ (ಅಂಜಂ. ೬-೯೭). ೨. ಪಾಲನೆ ; ಪೋಷಣೆ : ದುರಿತಭಯದಿಂ ಕಳತ್ರದ ಪೊರೆಪಂ ಬಸುಟರ್ದ ಮುನಿಗೆ ಪತ್ತುಂ ದೋಷಂ ಪೊರೆವೊಡೆ ಮರ್ದಿಂದಟ್ಟಮ ಕರಮಪ್ಪೊದ್ದದರ್ಕೆ ವಾಗುಟ್ಟ[ಪಾಠಾಂ. ಮರ್ದು] ಬಲ್ಲವರೊಳರೇ? (ಜಗನ್ನಾ. ೦೩೯-೦೯) ; ನಮ್ಮ ಮಹಾರಾಜಾಶ್ರಯದ ಪೊರೆಪಿನಿಂದ ತೇಜವಡೆದರೆ ಆ ಶಿಶುಗಳಿಗೆ ಸದಾಕಾಲದಲ್ಲೂ ದ್ವೇಷ ಹಿಂಸೆ ವ್ರಣ ಸನ್ನೇಹಗಳು ತಪ್ಪದೆ ಅಡಸಲುಳ್ಳುವು (ಕಂತ್ರ.ಕ. ೦೭-೨೩). **ಹೊರಹು₁** : ೨. ಆರುಳಿಡೆಯೊಳಗೆ ಬಲ್ಲಿದರು ಜೊನ್ನದ ಪಾಲ ಹೊರಹಿಂದ ಬೆಳೆದ ರಸಿಕರು ತರುಣಿಯರಾಲಿ ಗಾಯತದ ಚಕೋರಿಯ ದೊರೆಗನ್ನಡಿಗರ ಪಾಜಿದೇಕೊ (ಚರಕ. ೦೦-೦೩೦). [ಪೊರೆ₃ + —ಪು₁]

**ಪೊರೆಪು₂**, **ಪೊರಪು** (ನಾ). ೧. ಸಂಸರ್ಗ ; ಸೋಂಕು : ನೀರಜದ ರಜದ ಪೊರೆಪಾ ನೀರೇಜದ ನೀರ ಪೊರೆಪು ಪೊರೆಪೊರೆ ನೀಂ [ಸಂ]ಸಾರಕ್ಕೆ ನಿನಗವಿಾ ಸಂಸಾರಂ ಪೊರೆಪೊರೆ (ಶಾಂತಿಪು. ೦೦-೯೬). ೨. ಉತ್ಸಾಹ ; ಹುರುಪು : 'ಪೊರೆಪುದೋಱು' ಪರಾ. **ಪೊರಪು** : ೩. ಬಳಿಯುವಿಕೆ ; ಲೇಪನ : ನಾಟಕಶಾಲೆ . . . ಸಿರಿಗಂಪು ಕುಂಕುಮ ಪನ್ನೀರು ಸಾರು ಕಸ್ತೂರಿಯ ಸಾರಣೆ ಚಳೆಯಗಳಾ ಪೊರಪಿಂದ ಸ್ವರ್ಗದ ಕಂಪ ತುಂಬಿದ ಹೊನ್ನ ಕರಡಿಗೆಯಂತೊಪ್ಪುತಿಹುದು (ಅಕ. ೦೨-೦೯). [ಪೊರೆ₄ + —ಪು₂]

**ಪೊರೆಪುದೋಱು** (ಕ್ರಿ). ಉತ್ಸಾಹಗೊಳ್ಳು ; ಹುರುಪಾಗು : ವಿಳಾಸಿನೀ ನಯನಸ್ಫುರವದಿಂ ದೆಸೆ ಕೂಡೆ ಪೂಗೊಳಂದೋಱೆ ವಿಳಾಸದೊಳ್ ಪೊರೆಪು ದೋಱಿದುದಾಗ ಮನಂ ನೃಪೇಂದ್ರನಾ (ಅಜಿತಪು. ೩-೬೫). [ ಪೊರಪು₂ + ತೋಱು ]

**ಪೊರೆಬಿಡು** 'ಪೊರೆವಿಡು' ನೋ.

**ಪೊರೆಯಿಕ್ಕು** (ಕ್ರಿ). ಕೂಡಿಸು ; ಬೆರಸು ; ಮಿಶ್ರಮಾಡು : ನಾರಿದಂಟ ಕತ್ತರಿಸಿ ಪಿರಿದು ಮಘಮಘಿಪ ತಿಳಿದುಪ್ಪವಂ ಹೊಯಿದು . . . ಕಾಯ್ದಾಱಿದಮೃತಪಾಲೊಳಗೆ ಮಾಱಿದಿರಿಸಿ ಹೊಸಸಕ್ಕರೆಯ ಹಾಕಿ ಪಾಮಳಗಳಂ ಪೊರೆಯಿಕ್ಕಿದದುವೆ ತುಪ್ಪದ ಪಾಯಸಂ (ಸೂಪಶಾ. ೬-೨೨). [ ಪೊರೆ₄ + ಇಕ್ಕು ]

**ಪೊರೆಯಿಡು**, ಹೊರೆಯಿಡು (ಕ್ರಿ). ೧. ಬಳಿ ; ಹಚ್ಚು ; ಲೇಪಿಸು : ಅರುಣಾಂಭೋರುಹದಲರ್ಗಲತಗೆಯಂ ಪೊರೆಯಿಟ್ಟು . . . ಕರಂ ಪಸದಿಬದಿ ನಿರ್ಮಿಸಿದಂದದಿನೊಪ್ಪಿದುವವಳಂಘ್ರಿಗಳು (ಜಯುಪು. ೩-೨೬). ೨. ಪುಷ್ಪರಸ, ಗಂಧ ಮೊದಲಾದ ಪರಿಮಳದ್ರವ್ಯಗಳನ್ನು ಬೆರಸಿ ಸುವಾಸನೆಯು ಹೆಚ್ಚುವಂತೆ ಮಾಡು : ಗೊಂದಣದ ಸಂಭಾರಮಂ ಮೆತ್ತಿ ತಿಳಿದುಪ್ಪದಿಂದೋಟಿಯಡಿಯಾಗಿ ಪೊಗ್ಗರಣೆಮಾಡಿ ಹೂವಿಂದ ಪೊರೆಯಿಟ್ಟು ಮಡಕೆಯೊಳಿರಿಸಲದು ತುಂಬುವಾಳೆಗಾಯ್ಗೊಸರಾದವು (ಸೂಪಶಾ. ೯-೭೬). ೩. ಹೊಳಪು ಕೊಡು ; ಒಪ್ಪ ಹಾಕು : ಕೋಳದಮರ್ದಿನ ತಿರುಳ ಮಿಂಚ ಬಾಂಬೇವಳಗಿಂದವೆ ಪೊರೆಯಿಟ್ಟ ತಿಳಿಜೊನ್ನದೊಳು ಭಾವನೆ ಮಾಡಿದಂತೆ ಪಜ್ಜಳಿಸಿದುದಭವನ ಕಾಂತಿ (ಶ್ರೀಚಾಂ. ೬-೩೦). **ಹೊರೆಯಿಡು** : ೨. ಅಪ್ಪಭಾಗವನಷ್ಟಗಂಧದೊಳಗೆ ಹೊರೆಯಿಟ್ಟು ಬಟ್ಟಲುಗಳ ತಿವಿ ಬಟ್ಟರೀರಾಱು ತುಂಡಹ ಬಿಳಿಯೆಲೆಯ ತಂದಿಟ್ಟಣಿಸಿದರಬಲೆಯರು (ಅಂಜಪು. ೬-೫೯). [ಪೊರೆ₄ + ಇಡು₁]

**ಪೊರೆಯಿರ್** (ಕ್ರಿ). ಹತ್ತಿರದಲ್ಲಿರು ; ಸಮಿಪವಿರು : ಕೊನೆಗೆ, ಬಂದಿರ್ಪುದಿನ್ ಇರದೆ ಪೊಡೆದಾಟಕವ್. ತಳವನುಮ್ ಪೊರೆಯಿರ್ದನಿಲ್ಲ (ಅಂತಗಿಪು. ೦೨-೫೫೨). [ಪೊರೆ₄ + ಇರ್₁]

**ಪೊರೆಯಿಸು** (ಕ್ರಿ). ರಕ್ಷಿಸುವಂತೆ ಮಾಡು; ಸಲಹುವಂತೆ ಮಾಡು : ಈ ಧರಣಿಯನಾಳಿಸುವುದೊಂದೇನಂದೆ ನಾ ನಿನ್ನ ನೀರಧಿಯ ಪರಿಯಂತ ಭೂವಿಸ್ತಾರವಂ ಪೊರೆಯಿಸುವೆನು (ಜಪು. ೩-೬೦). [ಪೊರೆ₃ + —ಇಸು₁]

**ಪೊರೆಯುರ್ಚು₁**, ಪರೆಯುಚ್ಚು, ಪೆರೆಯುಚ್ಚು, ಪೆರೆಯುರ್ಚು, ಹೆರೆಯುಚ್ಚು, ಹೆರೆಯುಚರ್ಚು (ಕ್ರಿ). ೧. (ಹಾವು ತನ್ನ) ಹಳೆಯ ಚರ್ಮವನ್ನು ಬಿಡು,_ತ್ಯಜಿಸು : ಹಳೆಚರ್ಮ ಪೊರೆಯುರ್ಚುವ ಮೊದಲು ಈ ಚರ್ಮದ ಜೀವಕಣಗಳು (Hypodermal cells) ಒಳಗಡೆ ಹೊಸಚರ್ಮ ಮತ್ತು ಮೇಲ್ಪದರಗಳನ್ನು ಸೃಷ್ಟಿಸುತ್ತವೆ (ಕಚಿಪ್ರ. ೦೨೯). **ಪರೆಯುಚ್ಚು** : ೨. ಆವರಣವನ್ನು ತ್ಯಜಿಸು,_ಕಳಚು : ಪರೆಯ ಮರೆಯಲ್ಲಿಹ ಲಿಂಗವೇ ನೀ ಪರೆಯುಚ್ಚಿ ಬಹೆಯೆಂದು ಲಿಂಗವೇ (ಅಕ್ಕ. ೪೩೬-೫). **ಪೆರೆಯುಚ್ಚು** : ೧. ರಥಕರ್ದರ್ಭೆಚ್ಚನೆರದಂಬನಿಂದೀತನ ಕಿರೀಟಮಂ ಕವಚಮಂ ಮುಱಿಱಿಱಿಂದೆ ಕೊಚ್ಚಿ ಕೆಡಹಿದನಾಗ ಜಾನಕಿಯ ಸೂನು ಪೆರೆಯುಚ್ಚಿದಹಿಪತಿಯ ಶೌರ್ಯವಿಮ್ಮಡಿಸೆ (ಕೃಟಶಾ. ೨೦-೫೧). **ಹೆರೆಯುರ್ಚು** : ೧. ಪೆರೆಯುರ್ಚಿ ದಾಂಟಿ ಕೋಳ್ಪ(ಲ್ಪ)ಪ್ಪಿರೆ ಪಣಿಗೊಳೆ

ಸೊರ್ಕೆ ಶಂಕೆ ದೊರೆಕೊಳೆ . . . ಪಾವು ಕೊಳ್ಗಂ ನವನಂ (ಚೋಳಪಾಲ. ೦೦-೨) ; ಜಾನಕಿಯನುಳಿದು ಪೆರೆಯುರ್ಚಿದುರಗನಂತಿರ್ದಪೆಂ (ಕೃಪಾಮಾ. ೦೬-೩೭). ಪೆರೆಯುಚ್ಚು : ೧. ಪೆರೆಯುಚ್ಚಿದ ಸರ್ಪದಂತೆ (ಶಾಗಂಬಿ. ೯೦೩-೨). ಹೆರೆಯುರ್ಚು : ೧. ಪಾವುಗಳ್ಗೆ ಹೆರೆಯುರ್ಚುವಾಗಳ್, ಮಂಡಲಂಗೊಂಡಿರ್ದಲ್ಲಿ ದಾಂಟಿ ಪೋಗಲ್, ಕೋಲಿನಲ್ಲಿ ಪೊಯ್ದು ನೋಯೆ ಪಗೆಗೊಂಡಿರ್ದಲ್ಲಿ . . . ಆ ಹಾವು ಮನುಷ್ಯರಂ ಕರ್ಚುವುದು (ಚೋಳಪಾಲ. ೦೦-೨ ಟೀಕು) ; ನಿರ್ಮುಕ್ತಃ, ಮುಕ್ತಕಂಚುಕಃ – ಈ ೨ ಹೆರೆಯುರ್ಚಿದ ಹಾವಿನ ಹೆಸರು (ಅಭಿಧಾ. ೯೬). [ಪೊರ್ಕೆ+ಉರ್ಚು]

**ಪೊರೆಯುರ್ಚು₂** (ನಾ). (ಕೀಟ ಮುಂತಾದುವು ಹಳೆಯ) ಚರ್ಮವನ್ನು ಬಿಡುವಿಕೆ, –ತ್ಯಜಿಸುವಿಕೆ : ಹೊರಗಡುಸು ಚರ್ಮದ ಕೆಳಗೆ ಒಳಚರ್ಮ ಬಂದು ಪೊರೆಯುರ್ಚು ಪೂರೈಸುತ್ತದೆ (ಕೀಟಕ. ೦೨೪); ಪೊರೆಯುರ್ಚುಗಳ ಸಂಖ್ಯೆ ನಿರ್ದಿಷ್ಟವಲ್ಲ (ಕೀಟಕ. ೦೨೩). [<ಪೊರೆಯುರ್ಚು₁]

**ಪೊರೆಯೆತ್ತು₁** (ಕ್ರಿ). ಕೂಡಿಸು ; ಬೆರಸು ; ಮಿಶ್ರಮಾಡು : ತೊಳೆದ ಗೋಧುವೆಗೆ ಜೀರಿಗೆಯೆರಡ ಪೊರೆಯ[ಶಾಕಾಂ.ಯೊ]ತ್ತಿ (ಸೂಪಶಾ. ೩-೯೦). [ಪೊರ್ಕೆ + ಎತ್ತು₁]

**ಪೊರೆಯೆತ್ತು₂**, ಹೊರೆಯೆತ್ತು (ಕ್ರಿ). ಪದರವನ್ನು ತೆಗೆ : ಪೊರೆಯುತ್ತಿದ ಬೆಳ್ದಿಂಗಳ ಪೊರೆ ಗಂಗೆಯ ಪೊನಲೊಳೊಗೆದ ತೆರೆ ಶೇಷನ ಮಯ್ಯೊರೆಯೆನಿಪ ನವದುಗ್ಧಾಂಬರಕ್ಕೆ ಪರಭಾಗವಾಯ್ತು ದೇಹಪ್ರಭೆಯಿಂ (ಶಬರಶಂ. ೯-೦೨೧); ಖಚರಿಯರ್ ನೀರಡಸಲೊಡಂ ಕದಿಯ ಕಿಡಿಯ ಮುಗಿಲಂ ಖಚರರ್ ಪಿಡಿದು ಪೊರೆಯುತ್ತಿ ಮಿಂಚಿನ ಪುಡಿಕೆಗಳಂ ತಿಡಿದ ತೆಜದ ತೋರ್ಪುವು ನಗೆಗಳ್ (ಅರಣಪು. ೨-೭೪); ಉಚ್ಚವೆಳ್ದಿಂಗಳನೀಂಗಳ್ಪೊರೆಯುತ್ತಿದರೇಂಬಂತಲ್ಪಂ ಗಡಗೊಂಡು ಸೊಗಯಿಸುವ ಮಂಡಗೆಯಂ . . . ಬಟ್ಟಲೊಳಿಟ್ಟರ್ (ಶಾರ್ಧಪು. ೬-೫೦). **ಹೊರೆಯೆತ್ತು** : ಮಾಡುವ ಭಕ್ತನ ಕಾಮು ಬಾಳೆಯ ಕಂಭದಂತಿರಬೇಕು ಮೆಲ್ಲಮೆಲ್ಲನೆ ಹೊರೆಯುತ್ತಿ ನೋಡಿದರೆ ಒಳಗೆ ಕಿಚ್ಚಿಲ್ಲದಿರಬೇಕು (ಶಿವಶ. ೩೨೩). [ಪೊರ್ಕೆ+ಎತ್ತು₁]

**ಪೊರೆಯೇರು** ' ಪೊರೆಯೇಱು ' ನೋ.

**ಪೊರೆಯೇಱಿಸು** (ಕ್ರಿ). ೧. ಲೇಪಿಸು ; ಬಳಿ : ಕೆಂಪಡರಿದ ಅರಲ್ತೀವಿದಸುಕದೊಂಗಲು ತಿಱಿದರು ಕೈಗರಳ್ಗಿಂಪ ಪೊರೆಯೇಱಿಸಲೆಂದು (ಸೂಕ್ತಿಸು. ೩-೩೯). ೨. ಸಂತೋಷಪಡಿಸು : ತನ್ನಂ ಪೊತ್ತು ಮನ್ನಣೆಯಿಂ ಮುನ್ನಂ ಪೊರೆಯೇಱಿಸಿ ಪೊರೆದ ಮಣಿಗರ್ಭಗಣಿಯರಂ ಬಾಗಿ ಬಳ್ಕೆ ಪಣಿತ ಮಾಳ್ಕೆಯಿಂ . . . ಎಬಿಗಿ ನಿಂದ ರಾಜಕದೇಗಳಂ (ಕಬಕಂ. ೨-೯೨ ವ). ೩. ಚಿಗುರಿಸು ; ಪಲ್ಲವಿಸುವಂತೆ ಮಾಡು : ಅಶೋಕೆಯನೊದೆದಂಕುರವಂ ಪುಟ್ಟಿಪ ಪದ್ಮಮುಖಿಯುಂ ಕುರುವಕವಂ ಪರಿರಂಭಣದಿಂ ಪೊರೆಯೇಱಿಸುವ ತರುಣಿಯುಂ (ಗಿರಿಜಾ. ೬-೦೦ ವ). [ಪೊರೆಯೇಱು+– ಇಸು₁]

**ಪೊರೆಯೇಱು**, ಪೊರೆಯೇರು, ಹೊರೆಯೇರು₁, ಹೊರೆಯೇಱು (ಕ್ರಿ). ೧. ಸಂತೋಷಪಡು ; ಆನಂದಿಸು ; ಉತ್ಸಾಹಗೊಳ್ಳು : ಬಡಿದೊಡೆ ಪೊಗಿ ಪಂದೊವಲಪೊರ್ಪೊರೆಯೇಱುವ . . . ಬದಂಗನಂ ಬೆಸನಿಯಲ್ಲದಳಾತನನೊಟ್ಟೆ ಸುಟ್ಟುಪಳ್ (ಅಂಜನಾ. ೨-೭೬) ; ಕೃತಕೃತ್ಯನಾದೆನೆನುತ್ತ ಪೊಗುತುಂ ಪೊರೆಯೇಱುತುಂ ನುತಿಸಿ (ಶಬ್ದಮ. ೩-೩೯); ತರಳನಯನದೊಳು ನಡೆನೋಡುತ್ತ ಪಾಡುತ್ತ ಪೊರೆಯೇಱಿ ನಲಿದಾಡುತ (ಸೌಂದರ. ೩-೨೦). ೨. ಪ್ರಖರವಾಗು ; ಉಜ್ವಲವಾಗು : ಪರೆವುದು ದುರಿತತಮಿಸ್ರಂ ಪೊರೆಯೇಱುವುದವಳದೃಷ್ಟಿ (ಧರ್ಮಾಮೃ. ೦-೨೬); ಮೆಲ್ಲಮೆಲ್ಲನೆ ಪಿಮಂ ಸರಿಯೆ ಪೊಸವಿಸಿಲ್ಪೊರೆಯೇಱೆ ಮೆಯ್ಯೆ ಬಿಱಬು ಗಳಡಂಗಿ . . . ಮೆಱೆದುದು ಪೂಗಿಯಪಾಜಯಂ ಪಾಧುವಿನ ಜಯಂ (ಶಬ್ದಮ. ೮-೨). ೩. ದೊಡ್ಡದಾಗು ; ತೆಳುವಸುಱು ಪೊರೆಯೇಱದಾ ಹೊಂಗಳಸವೊಲೆತುದಿ ಕಂದದು (ಶಾಸ್ತ್ರಸಾ. ೬೨-೫೯). ೪. ಉಬ್ಬು : ಕೂಡುವ ಪಾರಿವಂಗಳುಲಿ ಕೇಳನಗಂಗಳೊಳಸ್ತೆ ಕೇಳ್ದಲಪೋದ ಕೊಳಂಗಳೊಳ್ ನೆರೆದು ಕಣ್ಗೆಯರಾಟಿವ ಹಂಸಯುಗ್ಮವಂ ನೋಡಿ ನಪೋದ ಬಿಂದುಭರವಂಭರದೃಷ್ಟಿ ಮರಳ್ದು ನಲ್ಲನಂ ನೋಡಿದಳರ್ಪಿ ನೋಡೆ ಪೊರೆಯೇಱಿದ ತನ್ನಯ ಮುಯ್ಯನಂಗಜಂ (ಶಬರಶಂ. ೬-೨೪); ಕುಸುಮೋಲ್ಲಸತ್ಪರಿಮಳೋತ್ಕರದಿಂ ಪೊರೆಯೇಱಿ . . . ಸುಳಿವುದು ಸಂತತಂ ಪುರಬಹಿರ್ವನಸಾಹಾಣನಾ ಸಮೀರಣಂ (ಕುಸುಮಶಾ. ೨-೬೦). ೫. ಕಾಂತಿಯನ್ನು ಹೊಂದು,–ಪಡೆ : ಶಶಿತಿಲಕಮವಳ ನೇತ್ರಾಂಶುವಿಂದೆ ಪೊರೆಯೇಱಿ . . . ಉಯ್ಯಲಾಟವಾಡಿದಳೊರ್ವ ಬಾಲೆಯಂಬರದ ಮಿಂಚಾಡುವಂತೆ (ಶಬರಶಂ. ೦೦-೦೪). ೬. ಪುಳಕಗೊಳ್ಳು ; ರೋಮಾಂಚನಹೊಂದು : ಹರ್ಷದ ಶರನಿಧಿಯೊಳ್ ಪೊಕ್ಕು ಲೀಲೆ ಮಿಕ್ಕೋಲಾಡುತ್ತಿರಲುತ್ತೀಸಾಡುತ್ತುಂ ಪೊರೆಯೇಱುತೆ ಜವದ ಪಿಪುಳೆ ತವವಂ ಬಿಟ್ಟಳ್ (ಗಿರಿಜಾ. ೩-೬೭). **ಪೊರೆಯೇರು** : ೧. ಪೂರ್ಣದಿಂ ಪೂರ್ಣವನೆ ತೆಗೆದರೂ ಪೂರ್ಣವೇ ಉಳಿವುದೆಂದು ಪೂರ್ಣಾನುಭೂತಿಯನು ಪಡೆಮ ಪೊರೆಯೇರಿದರು ಶಿಷ್ಯಸಂತತಿ ಡಿಂಭದಿದಿರು ನಿಂದು (ಕುಟಿಲೆ. ೩೭-೯). ೫. ಎಷ್ಟು ದೊಡ್ಡವನಾಗಿ ಬಳೆದು ಮೆಯ್ದೂಗಿ ಪೊರೆಯೇರಿಕೊಂಡಿರುವೆ ! (ಜಟ್ಟಿಕ. ೦೬-೨೨). **ಹೊರೆಯೇರು₁** : ೧. ಇಂತಹ ಜಂಗಮದಿಂದಲೇ ಜಗತ್ತು ಪಾವನವೆಂದು ಹಿಗ್ಗಿ ಹೊರೆಯೇರಿದ್ದಾರೆ (ಪಾಲ್ಕುರಿಶಾ. ೦೦೯ ಕ್ಷಿಪ್ತಾ ಪಠ); ತಂಗಾಳಿಯು ಕೊಳಲೂದಲಿ ಸಾಗಲಿ ಸ್ವರಸಮ್ಮೇಳನ ಹೊರೆಯೇರಿ ! (ಕಡಕು. ೬-೦೯೯). **ಹೊರೆಯೇಱು** : ೧. ಪೋಗಲಾಱದೆ ತಿರಿಗಿ ತಿರಿಗಿ ನೋಡವಡುವುಕುಂ ರಾಗದಿಂದಗ್ಗಿಸುತ ಹಿಗ್ಗಿ ಹೊರೆಯೇಱುತಂ (ಶಿವತ. ದೀ. ೫-೨೨); ಆಹವವಿಜಯವಾರ್ತೆಯ ಹರಹಿನಲಿ ಹೊರೆಯೇಱಿ ಹೊಂಪುಳಿಯೋದರಡಿಗಡಿಗೆ (ಕುಮಾರಾ. ೬-೪೯). ೬. ತನು ಹೊರೆಯೇಱಿ ಸರ್ವಾಂಗ ಕರಗಿ ಕೊರಗಿ ನೆರೆವ ಭರದುರವಣೆಯು ಕಪಕದಿಂ ಲಿಂಗದೊಳು ಪರವಶೀಭಾವ ತಲ್ಲೀಯವಾಗಿ (ಶಿವಗೀ. ೨೬-೦೨೪). ೭. ಹೆಮ್ಮೆ ಪಡು ; ಗರ್ವಹೊಂದು ; ಬೀಗು : ಎಲವೂ ಕರ್ಣಾರ್ತ್ತಜನ ಹೊಯ್ದಗ್ಗಳಿಕೆಯುಳಿ ಹೊರೆಯೇಱದಿರು ಪಡಿಬಲಕೆ ಅರಸಾ ಕೃಷ್ಣ ಪಾರ್ಥರ ನಿನ್ನಲೇನಹುದು (ಕುಮಾರ. ೦೦-೯೪). [ ಪೊರ್ಕೆ+ಏಱು₁ (<ಏಱ್₁) ]

**ಪೊರೆಯೊತ್ತು** (ಕ್ರಿ). ೧. ಕೂಡಿಸು ; ಬೆರಸು ; ಮಿಶ್ರಮಾಡು : ಹಿರಿದು ಮೃದುವಾಗಿ ನನೆದಕ್ಕಿಯೊಳಗರಿಸಿನವ ಪೊರೆಯೊತ್ತಿ ಮುಂಗುಳ್ಳದರಿ ಬೆಂದ ವಿದಳಗಳನೊಡವೆರಸಿ (ಸೂಪಶಾ. ೩-೫). ೨. ನೆನಸಿ ಇಡು ; ನೆನೆಹಾಕು : ಎರಡು ಸೂಳ್ ಪೊಸ ಬೆಣ್ಣೆಯಿಂ ಹಸಿಯ ಹಾಲಿನಿಂ ಪೊರೆಯೊತ್ತಿ ದುದ್ದಿನ ಬಿಳಿಯ ಬೇಳೆಯಂ ಕಲ್ಲೊಳರೆದು . . . ಸಂಪಳೆ ಮಾಳ್ಪುದು (ಸೂಪಶಾ. ೦-೬೦). [ಪೊರ್ಕೆ+ಒತ್ತು₁]

**ಪೊರೆವತ್ತಿಸು** (ಕ್ರಿ). ಪದರಗಳನ್ನು ಕೂಡಿಸು : ಪೊರೆವತ್ತಿಸಿದನೊ ಪಳೆಯಂಬರಮಿದು ನೆಱೆ ಪಱಿಸಂದು ಬಿದಿ ನವನೀಲಾಂಬರದಿನೆನೆ ತೀವಿ ಕವಿವಂಬರಮನದಂ ನೀಲಜಲದಮೇಂ ರಂಜಿಸಿತೋ (ಪ್ರಭುಶಂ. ೦೪-೦೩). [ಪೊರ್ಕೆ+ಪತ್ತಿಸು]

**ಪೊರೆವಿಡಿ** (ಕ್ರಿ). ಸೇರು ; ಸಮೀಪಿಸು ; ಹತ್ತಿರವಿರು : ಪಿರಿಯ ಕೆಱೆಯೊಳಗೆ ಬೆಟ್ಟದ ಪೊರೆವಿಡಿದನ್ನೆಯ್ದು ತೋಂಟಗಾಣಮುಂ ಮಠದೇಹರ ಮಲ್ಲಿಕಾರ್ಜುನದೇವರ ತೋಂಟ (ಶಾಇಇ. XI-i, ೬೫-೨೬ : 1049). [ಪೊರ್ಕೆ+ಪಿಡಿ₁]

**ಪೊರೆವಿಡು**, ಪರೆಬಿಡು, ಪೊರೆಬಿಡು, ಹೊರೆಬಿಡು (ಕ್ರಿ). ೧. ಪದರವನ್ನು ಕಳಚು ; ಬಿರಿ : ಪೊರೆವಿಡ ಸೋಂಕೆ ತೆಂಕಣೆಲರೂದಲೊಡು ಸ್ಮರದಗ್ಧಭೂಜ ಮಂಕುರಿಸಿರೆ (ಅಂಜನಾ. ೯-೭೩). **ಪರೆಬಿಡು** : ೨. (ಹಾವು) ತನ್ನ ಹಳೆಯ ಚರ್ಮವನ್ನು ಕಳಚಿಕೊಳ್ಳು ; ನಿರ್ಮೋಕವನ್ನು ಬಿಡು ; ಪರೆ ಬಿಟ್ಟ

ಹಾವಿನಂತೆ ತಾನು ಹೊಸಬಾಳನ್ನು ಹೊಗುತ್ತಿದ್ದಂತೆ ಅವನಿಗೆ ಭಾಸವಾಯಿತು (ಮುಜಿಚು. ೨೬). **ಪೊರೆಬಿಡು** : ೨. ಉದಕವು ಪೊರೆಯನು ಕಳಚುವುದಾದರೆ ಉರಗವು ಪೊರೆಬಿಡುವ ಹಾಗೆ ಬೆಳ್ಳುಡೆಯಾಗುತಲಿದ್ದವು ಸತಿಯರ ನೀರಾಟ ವಾಡುವ ಮೈಗೆ (ಜಂತಾಚ. ೦೪೪–೮) ; ಪೊರೆ ಬಿಟ್ಟ ಹಾವಿನಂತೆ ದೇಹವನ್ನು ತ್ಯಜಿಸಿ ಹೊರಟುಹೋದನೆಂದರೆ ಮತ್ತೆ ಅವನಿಗೆ ಪುನರ್ಜನ್ಮವಿಲ್ಲ(ಜಗಚಾ. ೩೬). ೩. (?) : ತನಿವಣ್ಣಂ ಪೊರೆಬಿಟ್ಟು ಕುತ್ತೆಸಟ್ಟಲೊತ್ತಿದೋಡಿ ನಿಂದೂಡೆ ವಬ್ಬನಿಯೊಳ್ನೋಸಗೆಯುಂಡು ವಾಡುವಳಿಯಂ ಬಿಂಡಾಳಚಾಳಾಕಳದ್ಧನಿ ಯೊಳ್ ಮಂದ್ರತೆಯಂ ತಗುಳ್ಚಿ ಕಿವಿಯೊಕ್ಕೀ ಸಂಗದಿಂ ಸೌಖ್ಯಸಾಯನಿಕಂ ತಾನೆನಿಸಿತ್ತೊ ಸಜ್ಜವನೆಯೊಳ್ ಸುಪ್ರಾತಗೀತಾನಿಲಂ (ಅಜಿತ. ೮–೬೪). **ಹೊರೆಬಿಡು** : ೨. ಹೊಡೆಯ ವಜ್ರಾ ಹಚಾವುವೇ ಕೀಸೆ ನೆಳಲು ಹೊರೆ ಬಿ [ಹೆಕಾ. ೧]ಡುವುದೇ (ಸಿದ್ಧರಾ. ೬–೪). [ಪೊರ್ $_4$ + ಬಿಡು $_1$]

**ಪೊರೆವೋಗು** (ಕ್ರಿ). ಉತ್ಸಾಹವು ಕಡವೆಯಾಗು : ಪೊರೆವೋಗದ ಕಟ್ಟಾಯ ಮುವಂ ಒರೆವೋಗದ ಚಲವುಮುವಂ . . . ನೋಟಕರಪ್ಪಿನವಪ್ಪವರಿಂ ಪೊಗಟಿಸುವೆನೆಂದು ತಳಿಸಂದು (ಕಾಂತಿ. ೪–೩೬ ಕ).

[ಪೊರ್ $_4$ + ಪೋಗು $_1$ (< ಪೋ $_1$)]

**ಪೊರೆಸಾರ್** (ಕ್ರಿ). ಹತ್ತಿರಕ್ಕೆ ಬರು; ಸಮೀಪಿಸು: ಚಿರಕಾಲ ಬೇಟವ ಮಾಡಿ ಮುಳ್ಳಂಗನೆ ಕರೆಯಟ್ಟಿದಾ ದೂತಿ ಬಂದು ಪೊರೆಸಾರ್ದು ಪೇಳ್ವಂತೆ ನೃಪನ ಕಿನ್ನರಿಯೊಳೊಂದು ನರೆಯಿದ್ದುದು (ಚಕ. ೬೬–೦೪). [ಪೊರ್ $_4$ + ಸಾರ್ $_1$]

**ಪೊರೆಹುಲ್ಲು** (ನಾ). ಒಂದು ಬಗೆಯ ಹುಲ್ಲು: ಹಂಬುಹಾವಕಹುಲ್ಲು, ಪೊರೆಹುಲ್ಲು (ಪ್ರಾ ಶಿಗ. ೦೪–೨೪೦). [ಪೊರೆ $_1$ + ಹುಲ್ಲು (< ಪುಲ್)]

**ಪೊರ್ಕುರ್** 'ಪೊಕ್ಕುಟು' ನೋ.

**ಪೊರ್ಕುಳ್** 'ಪೊಕ್ಕುಟು' ನೋ.

**ಪೊರ್ಕುಳಿ** 'ಪೋರ್ಕುಳಿ' ನೋ.

**ಪೊರ್ಕುಳಿಗೊಳ್** 'ಪೋರ್ಕುಳಿಗೊಳ್' ನೋ.

**ಪೊರ್ಕುಳಿಯಿಕ್ಕು** 'ಪೋರ್ಕುಳಿಯಿಕ್ಕು' ನೋ.

**ಪೊರ್ಕುಳಿವಕ್ಕಿ** 'ಪೋರ್ಕುಳಿವಕ್ಕಿ' ನೋ.

**ಪೊರ್ಕುಳಿವುಗು** (ಕ್ರಿ). ಕದನಕ್ಕೆ ಇಳಿ; ಯುದ್ಧಕ್ಕೆ ತೊಡಗು : ಎಕ್ಕೆಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ವಿಗಲ್ಕೆಕ್ಕತುಳಾ ಪೊರ್ಕುಳಿವೊಕ್ಕು ಕರಂ ಪಾಡಾಪಾಡಿಯೊಳುಬಿದಿಬಿದರ್ ಕವ್ವೊಳಗೆ (ಜಪುಚ. ೬–೨೦).

[ಪೊರ್ಕುಳಿ (<ಪೋರ್ಕುಳಿ) + ಪುಗು (<ಪೊಗು)]

**ಪೊರ್ಕುಟ್** 'ಪೊಕ್ಕುಟ್' ನೋ.

**ಪೊರ್ತು** 'ಪೊತ್ತು' ನೋ.

**ಪೊರ್ತುಗೀಜ** 'ಪೋರ್ಚುಗೀಸ್' ನೋ.

**ಪೊರ್ದಿಗೆ** 'ಪೊರ್ದುಗೆ' ನೋ.

**ಪೊರ್ದಿಸು**, ಪೊಂದಿಸು, ಪೊದ್ದಿಸು, ಹೊಂದಿಸು, ಹೊದ್ದಿಸು (ಕ್ರಿ). ೧. ಸೇರುವಂತೆ ಮಾಡು; ಸೇರಿಸು; ಕೂಡಿಸು : ನಿನ್ನಂ ರಸಾತಲಮಂ ಪೊರ್ದಿಸದಿರ್ದುಯ್ವುದೇಕಿಳೆ ಮರುತ್ತ್ರೀಕದೊಯ್ಯದಾಯ್ತು (ಶಾರಂಗ. ೩೬೩); ಕಿಸುವಂ ಮೂಲಿಕೆಯಂ ಪೊರ್ದಿಸೆ ನಗೆಯೊಳೆ ಹೇಮಮಪ್ಪ ತೆಬಿದಿ.ದ ಸಂಕಿಸದೆ ವರಧರ್ಮದೊಳ್ ಕೂರ್ತಸಗುವನರನುಂ ವಿಶೇಷಸುಖಿಯಾಗಿರ್ಕುಂ (ಧರ್ಮಾಮೃ. ೪–೩೫). ೨. ಉಂಟುಮಾಡು : ಮೊದಲೊಳ್ ರಾಜ್ಯಾಭಿಷೇಕ ಪ್ರಬಲಜಲಮೆ ೞಲ್ಚಿತ್ತು ದಾಕ್ಷಿಣ್ಯಮಂ ಹೋಮದ ಧೂಮಂ ಚಿತ್ತದೊಳೊಟ್ಟನೆ ಮಲಿನತೆಯಂ ಪೊರ್ದಿಸಿತ್ತು . . . ಎನಲ್ ದುಷ್ಟರಪ್ಪರ್ ನೃಪಾಲರ್ (ಶಾರಂಪು. ೩೩೪). **ಪೊಂದಿಸು** : ೧. ರಘುಪುರಂ . . . ಮಿತ್ರ ಸದ್ಭಾವದಿಂದವರವರ ನೋಡಿ ಸೌಮಿತ್ರಿಸಹತಾಪವಂ ಪರಿಹರಿಸಿ ಶಾತಗುರ ಮಿತ್ರವಂಶೋತ್ತಮರ ಸಂಸ್ಕಾರವಿಧಿಯಿಂದ ಪೊಂದಿಸಿದನೊಂದುಗೂಡಿ (ಹಿಕು. ೨–೪೪). ೩. ಅಳವಡಿಸು ; ಹಚ್ಚು : ಒಂದೆಡೆಯೊಳಗೊರ್ವ ಗಟ್ಟಿವಳಿಶಿ ಸಿರಿಗಂಧವ ವಿಟನುರದೆಡೆಗೆ ಪೊಂದಿಸಿ (ಕಂಕಶಾ. ೨–೩೪). **ಪೊದ್ದಿಸು** : ೨. ನಿರ್ಮಲತವಸ್ವಿಗಳ ನಿಶ್ಚಲಹೃದಯಮಧ್ಯಪಂಕೇಜಾತದ ಗದ್ದುಗೆಯೊಳಿಸವ ಚಿದ್ರೂಪವನಂ ಜಗದಜಾಯೆ ದೊದ್ದಯೊಳ್ಳೂಡಿ ತೀರ್ಗು ದುರೆಯಂ ಪೊಡವುದಂ ಪೊದ್ದಿಸಿದ ಪಾರ್ಥನಾರಿದರಠೊಳೆನಲು (ಕೃಪಚಾ. ೩–೯). **ಹೊಂದಿಸು** : ೧. ಅಸಮಸದುಭಕ್ತಾಂಘ್ರಿಗಳನರ್ಚಿಸಿ ಸಮಸ್ತಾಂಗಂಗಳಂ ಹೊಂದಿಸಿ ನಮಿಸಿ . . . ಬಸವರಾಜನು ಮುನ್ನ ತಾಂ ಮುದ್ರಿಸಿದ ಮುಸುಕಂ ತೆಗೆಯಲು (ಬಸಪು. ೩೬–೩೬) ; ಹಳೆಯದರ ಅಂದವನ್ನು, ಹೊಸದರ ಚಂದವನ್ನು ಹೇಗೆ ಹೊಂದಿಸುವುದು (ಕಟ್ಟುಕು. ೩೦೮). ೪. ಅಣಿಮಾಡಿಕೊಳ್ಳು ; ಜೊತೆಗೂಡಿಸಿಕೊಳ್ಳು : ಅವಳು . . . ಎರಡು ದೋಣಿಗಳನ್ನು ಹೊಂದಿಸಿಕೊಂಡು ಅವನನ್ನು ಸುಯಾದ ಸ್ಥಳಕ್ಕೆ ಕರೆದುಕೊಂಡು ಹೋಗಿ ಉಪಚರಿಸಿದಳು (ಬಂಕಿಕು. ೨೨೦) ; ಸರಸಮ್ಮ ಸಗಣಿ ಹೊಂದಿಸಿ ಅಡಿಗೆಮನೆ ಮೊದಲು ಸಾರಿಸತೊಡಗಿದಳು (ಕುಸುಕಂ. ೪೦) ; ನಾಳೆಯ ಕೆಲಸಕ್ಕೆ ನಾನು ದುಡ್ಡು ಹೊಂದಿಸಿಕೊಳ್ಳಬೇಕು (ಅದೇ). ೫. (ವ್ಯವಹಾರ, ಅಭಿಪ್ರಾಯಭೇದ ಮೊದಲಾದುವನ್ನು) ಇತ್ಯರ್ಥ ಮಾಡು ; ತೀರ್ಮಾನಿಸು ; ನಿರ್ಣಯಿಸು : ಈ ವ್ಯಾಪಾರವನ್ನು ನೀವೇ ಹೊಂದಿಸಿ ಕೊಡಬೇಕು (ಅದೇ). ೬. (ಧಾರಣೆ ಮೊದಲಾದುವುಗಳನ್ನು) ಅನುವು ಮಾಡಿಕೊಡು ; ಕುದುರಿಸು : (ಠ). ೭. ಸರಿದೂಗಿಸು : ಭೂಪತಿಯು . . . ರೇಖಾಪತ್ರವನ್ನು ಹೊಂದಿಸಿ ಹೋಲಿಸಿ ನೋಡುತ್ತ ಕುಳಿತು ಬಿಟ್ಟನು (ಇಶ್ಯಕ. ೨೬೪). ೮. ಒಪ್ಪಮಾಡು ; ಅಣಿಗೊಳಿಸು : ಅವರು ಗೂಡಿನಲ್ಲಿ ದಬ್ಬಿಗಳನ್ನು ಅಂದವಾಗಿ ಹೊಂದಿಸಿ ಇಟ್ಟಿದ್ದಾರೆ (ಅದೇ). **ಹೊದ್ದಿಸು** : ೧. ಬಿದ್ದನು ಭವಾಂಬುಧಿಯೊಳುದ್ಧರಿಸುವರ ಕಾಣೆ ಹೊದ್ದಿಸುವರಿಲ್ಲಾದಿರಿದ್ರನು ನಿಮ್ಮಾಣೆ (ಲಾಕ್ಷಾರೋ. ೬–೦೪) ; ಇದ್ದರೆಯು ರಣವಿಜಯಮನಿತೆಗೆ ಹೊದ್ದಿಗರು ದ್ರುಪದಾದಿರಾಯರ ಹೊದ್ದಿಸಲು ಬೇಡವರಿಗಂಜುವವೆನುತ ನೂಕಿದರು (ಕುಪ್ರಾ,ಕಿ. ೬–೨೦). ೯. ಧರಿಸುವಂತೆ ಮಾಡು ; ಧಾರಣೆ ಮಾಡಿಸು : ಇಂತಿವರು ಮುಟ್ಟಲಟಿಯರು ತತ್ವದ ನಿಜಾನಜಿಯರು ಇಂತವರಿಗಿಷ್ಟಲಿಂಗವನು ಹೊದ್ದಿಸಲೇಕೆ (ಸೋಲವಚಾ. ೦೬–೬೦). ೧೦. ಸ್ಪರ್ಶಿಸುವಂತೆ ಮಾಡು : ನಯನದಾಹಾರವ ಜಂಗಮದ ನೋಡಿಸುವೆ . . . ಜಿಹ್ವೆಯಾಹಾರವ ಜಂಗಮವನೂಡಿಸುವೆ [ತ್ವ]ಚದಾಹಾರವ ಜಂಗಮಕ್ಕೆ ಹೊದ್ದಿಸುವೆ (ಬಸವ. ೪೨೪). [ಪೊರ್ದು + — ಇಸು $_3$]

**ಪೊರ್ದು**, ಪೊಂದು $_1$, ಪೊದ್ದು $_1$, ಪೊಟ್ಟು, ಹೊಂದು $_1$, ಹೊದ್ದು $_1$ (ಕ್ರಿ). ೧. ಕೂಡು ; ಸೇರು : ರವಿ ಪೊರ್ದಿದನಸ್ತಶೈಲಮಂ (ಕಂಕಶಾ. ೪–೪೬) ; ಆತಂ ಕೈಕೋಡುದಬಿಂ ಖಾಟಿವೇಷಕ್ಕಗ್ರಾಮ್ಯತೆಯುಂ ಆತನಂ ಪೊರ್ದಿದ ಜವ್ವನಕ್ಕೆ ಸೌಂದರ್ಯಮುಂ... ಆದುದೆಂದು ಬಗೆಯುತ್ತುಂ(ಕಾದಂಪೂ.೬೬೦), ಒಡವುಟ್ಟಿದರೇ ಕೊಂದವರಡಗಂ ತಿಂದವರ ನೆತ್ತರಂ ಬೆಸಲಗೆಯೊಳ್ ಕುಡಿವೀ ನಿಸ್ತ್ರಿಂಶತೆಯಂ ಹಿಡುಬಿಯುಂ ಪೊರ್ದಿ ಕಲ್ಪನಾಗನೆ ಭೀಮಂ (ಗದಾಯು. ೬–೩೬). ೨. ಹೊಂದಿಕೊಳ್ಳು ; ಸರಿಯಾಗು ; ಜೋಡಿಯಾಗು : ಬೇಜ್‌ವೀಜ್ ನಿಲೆ ಕಾರಣದೊಳ್ ಕ್ರಿಯೆ ತಳ್ತು ಮುಂ ತೋಜ್ ಪೆಂಟ್ಟವಗುಣಂ ಗುಣರೂಪದೆ ಪೊರ್ದುಗುಂ (ಕಶಾಂ. ೦–೦೩೪) ; ಪರಮಾರ್ಥಂ ಪೇಟಿವಟ್ಟಿರ್ದಧಿಕರಣವಿವಿಕ್ತಂಶಯ್ದಬ್ಜೊಳ್ ಶಬ್ದಸಿದ್ಧಿ ಸ್ಫರಣಕ್ಕಾದ್ಯಕ್ಕೃದಾತ್ತಪ್ರಕರಣಗುಣಾವ್ಯಕ್ತಿಯಿಂ ಪೊರ್ದಿ ನಿಲ್ಕುಂ (ಶಾಶ್ಯಾಶ. ೦–೬). ೩. ಹತ್ತಿರಕ್ಕೆ ಬರು; ಸಮೀಪಿಸು; ಬಳಿ ಸಾರು : "ಪೊರ್ದು-ಸಮೀಪೇ (ಹತ್ತಿರಕ್ಕೆ ಹೋಗು)" (ಶಮದ); ಪಸರಿಸಿದ ಪದ್ಮರಾಗದ ಪೊಸಗೆಂಪು ಮಾಂಸಮೆಂದು ಮುಂ ಕರ್ದುಕಲ್ಮಾಟಸಿಯುಂ ಬಟಿಕದನುರಿಯೆಂಬ ಸಂಕೆಯಿಂ ಪೊರ್ದದಿರ್ದುವೀ ಮತ್ಸ್ಯಂಗಳ್ (ಅಂಕಿ. ೦೨–೦೨೨); ಕಿರ್ಚಿನಂತೆ ಪೊರ್ದಿದತಂ ಕಿಡಿಸುವುದು (ಧರ್ಮಾಮೃ. ೪ ೦೬೩). ೪. ತಾಕು ; ತಟ್ಟು;

ತಗ್ಗೊಲು : ಹೀನಬಲನನಧಿಕಬಲಂ ತೊತ್ತುಟದುಟ್ಟಿದನೆಂಬ ಲೋಕದ ಪಟ್ ಪೊರ್ದವೆ ಮಾಣ್ಗೆ ಧರ್ಮಯುದ್ಧದೋಳೆನಗಿಂ (ಅಂಶ. ೦೯-೦೦೨) ; ಶೀಲಾಲಂಕೃತೆಯಂ ಗುಣವಾಲಾಲಂಕೃತೆಯುನಾ ಮಹಾಸತಿಯಂ . . . ಪೆಸರ್ಗೊಳೆ ಬಾಲೆಯರಂ ಖಿಳಕಲಂಕವೋಂ ಪೊರ್ದುಗುವೋ (ಅಹಿ. ೦-೬೯); [ವ]ಲ್ಮೀೀಕಪುರವೆಂಬುದಾದಿಯ ಪೆಸರ್ ತನಗೆ ಕಲ್ಪಿತದ ಯುಗಧರ್ಮವೆಯ್ದೆ ಪೊರ್ದದು ತನಗೆ (ಶಂಅಕ. ೯-೪). ೫. ಅಂಟು; ಹತ್ತು : ತಾವರೆ ನೀರಂ ಪೊರ್ದದಂತೆ (ಧರ್ಮಾಮೃ. ೩-೦೬೯). ೬. ಹೋಗಿ ಸೇರು ; ತಲಪು : ಅದು ಸಂಧ್ಯೋಪಾಸ್ತಿಗೆ ಪೊರ್ದಿದಪುದು ಮಾನಸಸರಕ್ಕೆಮಿಾಗಳಿದೆಂಬಃದದಿನುತ್ಕಂಠೆಯಿಂ ಪೊರ್ದಿದತ್ತು ಸಪ್ತರ್ಷಿ ಮಂಡಲಂ ಕ್ರಮದಿಂದಂ (ಕಾದಂಪೂ. ೦೬೯). ೭. ಪ್ರವೇಶಿಸು : ವಾರಿಜಷಂಡವಮಂ ಪಡೆದು ಪೊರ್ದುವವೋಲ್ ಕಳಹಂಸೆ ಕಿಪ್ಪೆಯಿಂ ಸಾರದಿ ದೆಂದು ಪೊರ್ದುಗುವೆ (ಧರ್ಮಾಮೃ. ೯-೨೦೨) ; ಎಳಸಿ ಪಿಪಾಸೆಯಿಂ ಮೃಗ ಚಯಂ . . . ಕಚ್ಛರಜ್ಜುಲಿವಿಹಗಂಗಳೊಳ್ಪರಿವುಗೇಳ್ದಿರದೊಯ್ಯನೆ ಪೊರ್ದಿ ಪೀರ್ವುವಾ ಸಲಿಲಮನೆಂದೊಡೇವೊಗಟ್ಟಿನಾ ವಿಪುಳಾತಟನೀಜಲಾ ಚ್ಛವಮಂ (ಸುಕುಮಾ. ೦-೫೦) ; ಕಾಮಜ ನಿಜಪುಷ್ಪಸಾಯಕದಿಂದೆಸಲಾಯತ ಗಿಡದಾ ಸರವ ಕಾಯವ ಪೊರ್ದಲೀಯದೆ ಚರಣದೋಳಂತ ಶ್ರೇಯಾಂಸ ಜನರ ವಂದಿಪನು (ಅಂಶ. ೦-೦೦). ೮. ಆಶ್ರಯಿಸು ; ಅವಲಂಬಿಸು : ಚಂದ್ರನೊಡೆದುದಂ ಕಂಡುದಜಿಂ ಸದ್ಧರ್ಮದ ಮೊದಲ ಪೊರ್ದಿದ ಪರ್ಮದಿಂ ಬೆಳೆಯೊಳ್ ಪುಲ್ಗಳ್ ಪಲವಕ್ಕುಂ (ಧರ್ಮಾಮೃ. ೬೬-೦೩); ಆನೆಂತು ತತ್ತ್ವಜ್ಞನಾದೆನ್ನೆ ಪೊರ್ದಿದ ಜನಂಗಳುಮಿಂತೆ ತತ್ತ್ವಜ್ಞರಕ್ಕೆಂದು . . . ತತ್ತ್ವೋಪದೇಶಂಗೆಯ್ವುಂ (ಕಾವ್ಯಪ್ರ. ೩) ; ಅಲ್ಪಬುದ್ಧಿಗಳ್ ರಾಗಿಸಿ ಪೊರ್ದಲೇಂ ಗಳ ಕುದ್ಯೆವದೊಳಂ ಫಲಮಾಗಲಾರ್ಪುದೇ (ಧರ್ಮಾಮೃ. ೬-೬೪). ೯. ಪಡೆ ; ಗಳಿಸು : ಪಡಿಪಣ್ಣೋ—ಪೊರ್ದಿ [ಪಾಠಾಂ. ಳ್ದ] ದೊಂ (ಪಂಪಭಾ. ೬೩-೯) ; ಪಂಗಳೇ ನೀನಿಂತಿವಂ ನಂಬನುಕ್ರಮದಿಂದಂ ದೊರೆವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವೆ (ಅಂಶ. ೩-೬೩); ಅನಂತಚತುಷ್ಟಯಮಂ ಪೊರ್ದಾ ಪೊರ್ದದಿರು ಸಂಸ್ಕೃತಿಯಂ (ಅಹಿ. ೩ ೬೩). ೧೦. ಉಂಟಾಗು; ಪ್ರಾಪ್ತವಾಗು; ಒದಗು : ನೆರೆಯುತ್ಕೈನ್ನು ದಯಪ್ರಭಾವವಮನೆ ಪಾರ್ದೋರೆಂದದಿಂ ಜೀಮಿರ್ಪ ರಥಾಂಗವ್ರಚಯಕ್ಕೆ ಪೊರ್ದುವ ವಿಯೋಗಾವಸ್ಥೆಯಂ ವೇಗದಿಂ ಪಿರಿವಂ ಬಾರಿಸದೆನ್ನ ತೇಜದೊದವಿನ್ನೇ ಬಾರ್ತೆಯೆಂದೆಯ್ದೆ ತನ್ನುರು ತೀವ್ರಾಂಶುವನೀತಂ ಬಟ್ಟನೆನೆ ತಣ್ಣಂ ತಾಳ್ದನಾ ಭಾಸ್ಕರಂ (ಸುಕುಮಾ. ೪-೩೨). ಪೊಂದು$_1$ : ೧. ಅಶುಚಿದೇಹಮನಿದನಿನ್ನನುಪವಮಪೊಂದೆನಲಾಗದು ಜನಮಾತ ದೊಳ್ಪೊಂದಿಯುಪಾವಿನೊಳ್ಗೆಗಟ್ಟ ನರಂ (ಧರ್ಮಾಮೃ. ೪-೬೭೪). ೨. ಪೆರ್ಚುಗೆ ಯೋಳ್ ಬಲಮೇದು ಪೊಂದುಗುಂ (ಕಬ್ಬಿಗ. ೬೭); ಕಲಿದವಂ ಬಂದಿಲ್ಲ ಬಂದವನು ಪೊಂದಿಲ್ಲ (ಕಾಂಚಿ. ೩೩-೩೩). ೯. ಸುಖಮಂ ಪೊಂದೆಂದು ಪಾಟಿಸು ತಿರ್ಪನುಂ (ಧರ್ಮಾಮೃ. ೬-೬೦); ಹರಿಯ ಪಾದಜೆಯಳೆಕದಿಂ ಪಾವನ ಪೊಂದಿ (ಕಕು ೬-೩); ಪುರೋಹಿತರ ಸಂಗಡ ಬ್ರಹ್ಮಾರ್ಚನೆಯಂ ಮಾಡಿಸಿ ಆಶೀರ್ವಾದಮಂ ಪೊಂದಿ (ಕ್ರುಅಂ. ೦೯೬೩, ೯೬-೯; 1824). ೧೦. ಕಂದರ್ಪ ನರ್ಧಾಂಗಿಯ ಮೇಲೆ ವೈಧವ್ಯ ಪೊಂದದೊಲ್ ಮಾಡು (ಮೋಹಕ. ೯-೩೯); ಒಂದೆಡೆಯೊಳಗೋರ್ವ ನೀಳಿ ವಿಟನ ಮೇಲ್ಪೊಂದಿದ ಮೋಹವ ಬಡದೆ ಕಂದರ್ಪಕೇಳಿಯೊಳೋಲಾಡುತಿರೆ (ಶಂಕು ೬-೭೪೦). ೧೧. ಸಂಭೋಗಿಸು: ದೇಟದ ಲಲ್ಲೆಯ ಬಲ್ಮೆ ಪಕ್ಕಿ ಸುತ್ತಿಸೆ ಪುರುಡಿಟಬ್ಬಿಸೆ ಬಿಯಮಾಟಬ್ಬಿ ಪೊಂದದವಂ ಬೊಜಂಗನೇ (ಅಂಪು. ೦೨-೦೬). ಪೊದ್ದು$_1$: ೧. ವಿದ್ಯದ ಮನುಜರ ಕರೆಸೋದು ರೊಕ್ಕ ಪೋ[ಪಾಠಾಂ. ಹೊ]ದ್ದಿದ ಜನರನು ಬಿಡಿ ಸೋದು ರೊಕ್ಕ (ಭೀಲಂತ. ೨-೯೮-೩); ಬಿರಿಪಾತಿನಲ್ಲಿ ನೆರೆಯಲ್ಕೆಳಸಿ ಬಹ ಕಪಟವಿಟಂಗಳ ನಿಷ್ಪಣಮನುಸ್ಪವರಿದು ಲಲ್ಲೆಯಂ ಬಿಸಿಲಿಗರಿಸಿನ ತೊಲ

ದಂತವರನೆಲ್ಲಿಯುಂ ಪೊದ್ದದ ವಿದಗ್ಧೆಯರ ಮಂದಿರಗಳಲಿ ಸಿಂಜಪ್ಪನಗ ಳೊಪ್ಪಿರವೆ (ಕಂಕಾಣ. ೩-೩-೪೩). ೩. ಕಳವು ಹಾದರಮೆಂಬಿವೆಮ್ಮ ಶಿವ ಭಕ್ತಸಂಕುಳದೊಳಗೆ ಪೊದ್ದಲರಿಯವು (ಶಿಂಪು. ೬-೨೯); ಹಡವ ಕಾಳಾಂಜಿ ಪೊಗಟ್ಟಿಗೆ. . .ಬಜ್ಜಣಿಗೆಗಳ ಒಡಿದೂಗಿಗ್ಯೆದ ಬಿಂಕಗಾತಿಯರಾ ಪೊಡವಿ ಯಾಣ್ಮನ ಪೊದ್ದಿಹರು (ಕಂಅಂ. ೦-೦೩); ಕಣಗಳ ಕಾಳ ಟವೆಗದ ಗುರು ಲಘುತ್ವಗಳಳಿದ ತ್ರಿಗುಣಗಳರುಬೆ ಪೊದ್ದದ ಮಾಯೆ (ಗಗನ. ೦೩-೩). ೪. ಒಳಗೆ ಭಾಳೇಕ್ಷಣನ ನೆನಹು ತೀವಿರೆ ಕರಂ ಚಳಿ ಪೊದ್ದದವರನೆಂತಿ ದೊರ್ದಡಂ ಭಕ್ತರಂ (ಷಟ್‍. ರೇ. ೩೨-೦೩). ೬. ಹೊಳಲ ಬಳಿಯ ಪೊದ್ದಿರ್ದ ತುರುಕರ . . . ಸಾಸಿರವಮೊಗರಿದಾಕ್ಷಣ ದಳಪತಿಯಡಿಗೊಪ್ಪಿಸಿದರು (ಕಂಪ. ೧೩-೩೩). ೮. ಎಲೆ ಮುನಿನಾಥ ನಾನಿನಿತು ಕಾಲವಲ್ಲದ ಸಮ ಯವಾ ಮುಂದಜ್ಯಿರದೆ ಪೊದ್ದಿ ಗತಿಗೆಟ್ಟು ಪೋದೆನು (ಸಮ್ಯಕ್ತ್ವ. ೯-೦೯). ೧೨. ತಳೆ; ಧರಿಸು: ರುದ್ರಾಕ್ಷಭಸಿತವನು ಹೊದ್ದಿರಲು ದೇಹದೊಳ ಗಿದ್ದ ಪಾಪಗಳು ಬಯಲಾಗಿ ಶಿವನು ತಾನಿದ್ದಲ್ಲಿ ಬರುವ (ಸರ್ವಜ್ಞ. ೦೨೦). ಪೊಟ್ಟು : ೧೦. ವಿಶದಗುಣಪದ [ವು]ದಿದೊಡಂ [ವೀ]ತಿ [ಸಾ] × [ರ್ತ್ಯ] ದೊಳ್ ಪೊಟ್ಟುದಿನ್ನಪ್ಪಸಕಂ ತ್ರ್ಯಗವಿರ್ಗ್ನ ಸನ್ವರ್ತ್ಯ [ಪಾ]ಚಮಹಿಮೆಯಿಂ (ಹಿಸ್ಟ್ರೀ. XI-I,೬೦-೩; 1026). ಹೊಂದು$_1$ : ೨. ತಮ್ಮ ತಮ್ಮೊಳಗೆ ಹೊಂದಿದರೆ ಸಂತೋಷದಿಂದ ವ್ಯವಹಾರ ಮಾಡಬೇಕು (ಮುಂಜಿಯ.೩-೬೩) ; ಗತಿಯು ತನ್ನ ಧಂದದಲ್ಲಿ ಭಾವ ತನ್ನ ಬಂಧದಲ್ಲಿ ಹರಿವನಿಲ್ಲ ಹೊಂದದಲ್ಲಿ ಬಲ್ಲೆ ಎಲ್ಲು ಒಂದರಲ್ಲಿ (ಅರಳು. ೦೬೯-೦೦). ೪. ಭೂವ ಹೊಂದದು ಪಾಪ ವೆಮ್ಮಂ (ಶಕ್ತಿ. ೩೩-೬). ೯. ಹೊಂದುತಿಪರಾ ಪುರುಷತತ್ತ್ವದಿ ನಿಂದು ತೋರುತಲಿರ್ಪ ಭುವನವ (ಗಗನ. ೯-೬೩); ಕಾಲಕ್ರಮದಲ್ಲಿ ಅದು ವಿಜಯ ನಗರವೆಂಬುದಾಗಿ ಬವಲಾವಣೆ ಹೊಂದಿತು (ಕೃ.ದೇ.ಚ. ೨). ೧೩. ಕುದುರು; ವ್ಯವಸ್ಥೆಯಾಗು: ದುಡ್ಡು ಹೊಂದಿರಲಿಲ್ಲಪ್ಪ . . . ಇವೊತ್ತು ಹಣ ಕೈಗೆ ಬಂತು (ದೂರಚ.೦೩೨).ಹೊದ್ದು$_1$: ೧. ಇತ್ತ ಬಾ ಎನ್ನದವನ ಹತ್ತ ಹೊದ್ದಲು ಬೇಡ (ದೇದಾಕ. ೨೮-೯೪) ; ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ಧರ್ಮ (ಸುಹಾರೀ. ೬. ೦೯-೦೩); ಅರವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ (ಕುಮಾರವ್ಯಾ. ೦೯-೩೩). ೨. ಸದ್ಯ ಫೃತದಲಿ ಕ್ಷೀರವಾದೊಡೆ ಹೊದ್ದುವುದು . . . ಶುದ್ಧರಾಕ್ಷಸರನ್ನವಿದ ತಾ ಶುದ್ಧಭೂಸುರರುಂಬರೇ (ಸಂಕಚ. ೨೮-೦೬); ಹೊದ್ದಿ ನಿಲುವುದ ದರ್ಪಣದ ಮೇಲುದ್ದುರುಳಿ ಬೀಳ್ವಂತೆ ನಿಮಿಷದಿ ಬಿದ್ದು ಹೋಗುವ ಕಾಯವು (ಜಂಗಾ. ೬೬). ೩. ನೋಡುವರೆ ಕಾಣ ಬರುತ್ತಿದೆ ಮುಟ್ಟುವರೆ ಕೈಗೆ ಸಿಲುಕದು ಹೊದ್ದುವದೆ [ಪಾಠಾಂ. ಹೊದ್ದಿದರೆ] ಸವಿಪಾವ ಹತ್ತಸುರಿದದತ್ತ್ವತ್ತ ತೋಱುತ್ತಿದೆ (ಶಿವತಂ. ೦೬೬-೬೬೦) ; ಸರಳ ಮಂಚವ ಹೊದ್ದಿ ಭೀಷ್ಮನ ಚರಣಕಮಲವ ಹಿಡಿದು ನೊಸಲಿನೊಳೊರಸಿಕೊಂಡನು ನಾದಿದನು ಕಂಬನಿ ಯೊಳಂಘ್ರಿಗಳ (ಕುಮಾರವ್ಯಾ. ೦-೨೦) ; ಹೊದ್ದಲೀಯದೆ ಬಾಣಂಗಳ ತಱಿದನಿರುದ್ಧ ಮಹಾಬಲನ ಕೊಂಡಾಡಿ . . . ಎಚ್ಚನು ಸುಭಟ ಪ್ರಸಿದ್ಧ ಬಾಣಾಸುರನೆದೆಯ (ಮೋಹತ. ೩೩-೪೦). ೪. ದೇಶವೆಲ್ಲವನನೃತ ಹೊದ್ದದಂದದಿ ಕೊಟ್ಟು ಕಾಶಿಯ ನಿವಾಸದೊಳು ಸತಿ ಸುತರ ಮಾಱಿ . . . ಋಣವನುತ್ತರಿಸಿದ (ಹರಿಶ್ಚಾ. ೦೦ ಸಂಧಿ); ಕಕ್ಕುಲಿತೆ ಕುಂದಿದರು ಬಡತನ ಸಿಕ್ಕು ರೋಗಾದಿಗಳು ಹೊದ್ದದ ಉತ್ಕಟದ ವರವೀಯಬೇಕೆನೆ ಕೊಟ್ಟನಾ ಮಾಸಿಪ (ಶೌರಿಂಅ. ೪೪-೩೪); ಜನನ ಮರಣಾದಿಗಳು ಹೊದ್ದದ ತೋಱಿ ತೋಱದ ಜಗದ ದೇವರ ದೇವನಿದ್ದನು ರಜತಶಿಖರಿಯಲಿ (ಕೊರಂ. ೦-೨-೦) . ೫. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು ಜಲಪದ್ಮಪತ್ರ ದಂತೆ ಹೊದ್ದಿಯೂ ಹೊದ್ದದಂತಿಹನು (ಸ್ವತಂ. ೬) ; ಮನ ವಚನ ಕಾಯ ದೊಳಗೊಮ್ಮೆಯುಂ ಹುಸಿ ಹೊದ್ದ[ಪಾಠಾಂ. ರ್ದ]ವಂತೆ ನಡೆವ ಕಲಿಗಳಾ ರಯ್ಯ (ಹಕಾ. ೨-೩) ; ವ ರಿನ್ನಿಸಿ ಚುಬುಕಾಗ್ರವಿಡಿದದ ಬೆರಲ್ಗಳ ಹೊದ್ದಿ

ದಾವುರಿಂದೊಕ್ಕೆಗೆಯ್ಯು ಬದ್ದಿಸಿ ಬಿಡದೆ ಕಾಲುವೆಯ ತಣ್ಣೀರೊಳಗದ್ದಿದರವಳ ಹಸ್ತವನು (ಭೋಜಕ. ೨೮-೦೯). ೬. ಎದ್ದು ನಡೆವ ಬಲುಜಲಧಿಯು ಕಡೆಯನು ಹೊದ್ದಲಾಜದೆ ಖಗನಿವಹ ಎದ್ದವು ಕೆಲವು ಪಕ್ಷಾಗ್ರದೊಳಗ್ಗಿ ಬದ್ದವು ಕೆಲವು ನೆಲದೊಳು (ಕುಮಾರರಾ. ೩೭-೬೦). ೭. ದೊಡ್ಡ ಕೆಗೆಯಲಿ ಪಾರ್ಥ ವವನಜರಿನ್ದರಾದರೆ ಬರಲಿ ಸವುರವ ಹೊದ್ದಲಾವರ ಹೊಗಳಿ ಹರಿ ತೋಜಲಿ ಸಹಾಯತೆಯ (ಕುಮ್ಮಾರ. ೬-೨೦) ; ಹೊದ್ದಿ ಗೊಲ್ಲರ ಮನೆಯಲ್ಲಿ ದ್ದಪ್ಪು ಬೆಣ್ಣೆಯನು ಉದ್ದು ಮೆದ್ದುದಕ್ಕೆ ಹೊಟ್ಟೆ ತುಂಬಿತೆ (ಪುರಂತ. ೦-೯೯-೨). ೮. ನೀನೇಕೆ ಈ ನುಡಿಯೇಕೆ ಹೊದ್ದಿದರಂ ಹೋಗೆಂಬರೆ (ಬಸವ. ೯-೩೯) ; ಸಾಲ ಸಾವಿರದೀವಿಗೆಯ ಹರಿದಾಳಿಗಳಲಕದೆ ನೃಪರ ವೋಜಿ ಗಳೋಳಿಗಳ ನೆಜಿ ಹೊದ್ದಿ ಕತ್ತರೆ ನಿಂದುದಲ್ಲಲ್ಲಿ (ಕುಮ್ಮಾರ. ೦-೦೯) ; ಅಸುರರೀತನ ಹೊದ್ದಿ ಜಗದಲಿ ಹೆಸರು ಪಡೆದವರಿಲ್ಲವೇ ಭಾವಿಸದೀಯನೆ ಲೋಕಪಾಲತ್ವವನು ನೈರುತಿಗೆ (ತೊರವೆ. ೬-೯-೩೨). ೯. ಚತುರ್ವಿಧ ಪದವಿಯಂ ಹೊದ್ದದೆ ಫಲಭೋಗಂಗಳಂ ಮುಟ್ಟದೆ (ಅದಚ. ೩೦-೮೭) ; ಗದ್ದುಗೆಯೇಜಿ ಸತ್ಕಥೆಗೆಳ್ ಮುಕ್ತಿಯು ಹೊದ್ದುವರಾರು ನಿನ್ನಂತೆ (ಶರಕ. ೨ ೩೪). ೧೦. ಇವರಿಂದ ಪಲವು ಲೇಸೆಸಗೆ ಮಿಗೆ ಹೊದ್ದಿದವು (ತೀರಕಿ. ೭೮. ೦೬೩-೯) ; ಹೊದ್ದಿದುತ್ಪಾತಗಳನೀಕ್ಷಿಸುತ್ತಿದ್ದನಾ ಮುನಿನಾಥನು (ಅಕ್ರ್ತ. ೪-೯). ೧೧. ಪರಿಣಮಿಸು ; ಫಲ ಕೊಡು : ಯುಕ್ತಿ ಹೊದ್ದದ ಶಿವ ಸ್ನೇಹಿಗಳ್ ಬರುತವಿರೆ (ತಿರು. ೮೮. ೦೯-೦೨).

**ಹೊಂದಿಕೊಳ್ಳು**= ೧. ಸೇರಿದಂತಿರು ; ಕೂಡಿಕೊಂಡಿರು : ಪದ್ಮಬ್ಬ ರಸಿಯು ತಾನು ಕಟ್ಟಿಸಿದ ಬಸದಿಗೆ ಹೊಂದಿಕೊಂಡಂತೆ ಒಂದು ದಾನಶಾಲೆ ಯನ್ನು ಕಟ್ಟಿಸಿದಳು (ಕರ್ನಾ. ೪೫೦) : ಅವರ ಮನೆ ನಮ್ಮ ಮನೆಗೆ ಹೊಂದಿಕೊಂಡಿದೆ (ರೂಢಿ). ೨. ಒಗ್ಗು ; ಹೊಂದಾಣಿಕೆಯಾಗು : ನಾರಾಯಣನಿಗೆ ಅನುಕೂಲವಾದ ಮನೆಯು ಅವಾಗಿದ್ದು ತುಂಬ ಹೊಂದಿ ಕೊಂಡಿತ್ತು (ಕಂಠು. ೦೨೩) ; ಎದುರುಮನೆಯ ಮಗು ನನಗೆ ತುಂಬಾ ಹೊಂದಿಕೊಂಡಿದೆ (ರೂಢಿ).

[ದೇ.॥ ತಮಿ. ಪೊರುನ್ದು, ಪೊರುತ್ತು ; ಮಲ. ಪೊರುತ್ತು ; ತುಳು. ಪೊರ್ದು, ಪೊದು, ಹೊಂದು ; ಕೋತ. ಪೊತ್]

**ಪೊರ್ದುಗೆ**, ಪೊಂದಿಗೆ, ಪೊಂದುಗೆ, ಪೊದ್ದಿಗೆ, ಪೊರ್ದಿಗೆ, ಪೊಟ್ಟುಗೆ, ಹೊಂದಿಗೆ, ಹೊಂದುಗೆ, ಹೊದ್ದಿಗೆ, ಹೊದ್ದುಗೆ (ನಾ). ೧. ಸಹವಾಸ ; ಸಂಬಂಧ: ಅರಮ್ಮ ನೋಡೆ ತೊಜೆಗಳ ನೀರುಂ ಪರಿ ಧಿಯ ನೀರ ಪೊರ್ದುಗೆಯಿಂದಂ ಸಾರಂಗಟ್ಟುಪ್ಪವಪ್ಪುದು (ಧರ್ಮಾಮೃ. ೨-೬೬) ; ಸಂಬಂಧಮೆಂದು ಪೊರ್ದುಗೆ (ಕರುಡ. ೫೬೩. ೬ ವೃತ್ತಿ) ; ವರವತ್ಸ ದೇಶಮೆಂಬುದ್ದುರವಸ್ಥದ ನಿಬಿಡನಾದ ಪೊರ್ದುಗೆಯಿಂದಂ ಧರೆಯೆಂಬ ಸುರಭಿಸುಖಿಮೆಂಬ ಪರಮಾಮೃತಮನೆಯ್ದೆ ಕಜೆಯುತ್ತಿರ್ಕುಂ (ಚಾರಪು. ೪ ೨೩). ೨. ಬಳಿ; ಹತ್ತಿರ; ಸಮೀಪ : "ಪೊರ್ದುಗೆ, ಪೊರೆ, ಪಕ್ಕಂ, ಸಹಂ, ಕೆಲಂ—ಈ ೫ ಸವಿಾಪಂ" (ಕ.ಶಾ. ೬೯-೩೬೪) ; ಮೃಗವೂರ ಪೊರ್ದುಗೆಯ ಬಟ್ಟೆಗೆ ಪೋಟಿನ ಕಾಟನಿಂ ಮರಳ್ದವು ದಿನನಾಯಕಂ ವರುಣದಿಙ್ಮಗಮಂ ಮಜೆಗೊಳ್ವ ಕಾಲದೊಳ್ (ಸೂಕ್ತಿಸು. ೬-೨೦). ೩. ಅಧೀನವಾದುವಂ : ಅಪ್ರಧಾನವಾದುದು : "ಉಪಾಗ್ರಂ, ಉಪ ಸರ್ಜನಂ—ಈ ೨ ಪೊ(ಹೊ)ರ್ದುಗೆ" (ಕರಾಮು ೦೨೬-೬೮). ೪. ಆಶ್ರಯ; ನೆಲೆ : 'ಪೊರ್ದುಗೆವಡೆ' ಪರಾ. **ಪೊಂದಿಗೆ** : ೨. ಮಾವನ ವಾಕ್ಯ ಗಳಿಗಾನಂದಪುಳಕಿತನಾಗಿ ಖಳಪತಿ ಪೊಂದಿಗೆಯ ಹೊಂಬಟ್ಟಲಲಿ ಕರ್ಪುರದ ವೀಳೆಯವ . . . ಇತ್ತು (ಅಂಬಿಕ. ೦೬-೨೧). **ಪೊಂದುಗೆ** : ೧. ರಂಗ ಯೆಂದೆಂಬ ನೀಜಿಯ ಪೊಂದುಗೆಯೆಂದು ವಂದಪುದೊ (ಕರಾಮಾ. ೨೯-೩೦). ೫. ಹೊಂದಾಣಿಕೆ ; ಸೇರಿಕೆ ; ಸರಿಹೊಂದಿರುವಿಕೆ : ಚಂದನಾಗರು ಏಲೇಪಕ್ಕಂಗಸೌರಭ್ಯಪೊಂದುಗೆಯಂ ಮಾಟ್ಪುದಪೂರ್ವಗಂಧವಮಂ (ತ್ರಿಷ್ಟ.

೩-೩೦). **ಪೊದ್ದಿಗೆ** : ೧. ಪಲವು ಪೊದ್ದಿಗೆಗಳನಾಳಿದಾಸೆಯೆಂಬೆಳವಲೆಯ ಪಗ್ಗವ ಪಜಿಯಿಟ್ಟು ನೆಲದೊಳೊಂದಿಕೆ ಕೈವಶವಾಗದೆ ಬೀಸುವೆಲರಂತೆ ತೊಡ ಕಿಲ್ಲದಿಹನು (ಕರ್ಣಾ. ೦೦-೫೪). **ಪೊರ್ದಿಗೆ** : ೨. ಆ ನೆಲದ ಪೊರ್ದಿಗೆ ಯಲು ಸಿರಿಯೂರದಲು ಕರಿಯ ಕೆಯ ಮ[ತ್ತ] × × ಪದಿನೈಯ್ದು (ಶಾಸ. IX-I. ೦೫೯-೦೯; 1001). **ಪೊಟ್ಟುಗೆ**: ೨. ದೇವರ ಕೆಯ್ಯ ಪೊಟ್ಟುಗೆಯಲು ದಿಟ್ಟ ಕೆಯ ಮತ್ತರು ನಾಲ್ಕು (ಕಶ. ೬೯-೭೩-೩೭; 1088). **ಹೊಂದಿಗೆ** : ೫. ಆದುದಿನ ಹೆಂದಿ[ಪಾಠಾ. ಹೊದ್ದಿ]ಗೆಯ . . . ಕೆಡಿ ಸಲಜಿಯದ ಅಂಧಕರ ನೋಡಾ (ಬಸವ. ೬೬೨) ; ಒಂದು ಸಾವಿರವೊಂದು ಶತ ಹನ್ನೊಂದು ಪದವೆಂಬ ಪರುಷದ ಸಂದ ಸಿಲೆಯನು ಬಳಸಿದಿಪ್ಪತ್ತೈದು ಗತಿಯೆಂಬ ಹೊಂದಿಗೆಯ ಸೋಪಾನಗಳ ಬಲಿದಂದವಿಸಿಯಲ್ಲಮನ ಕರವಸಾ ನಂದಲೀಲಾಮೃತಸರೋವರವಾಯ್ತು ಜಗದೊಳಗೆ (ಪ್ರಭುಲಿಂ. ೨೫-೨೫) ; ಹೊಂದೀಗಿ ಮನಿಯಾಗ ಇರವೂಳ ಆ ರಮಣಿ ಚಂದ ಚಂದ ಪಂತ ನಡಸೂಳ (ಜೋಕುಮಾ. ೨೨). **ಹೊಂದುಗೆ** : ೫. ಅಗರೆ=ತೊಂದುಗೆಯಾಗದಿರಿ (ಕರುಡ. ೬. ೦೯೭ ಟೀಕು). **ಹೊದ್ದಿಗೆ** : ೧. ರುದ್ರನ ಕಪಾಲ ತುಂಬಿ ಬುದ್ಧಿವಂತರಲ್ಲರು ಕಪಾಲದ ಕೂಳನುಂಡು ಬುದ್ಧಿವಂತರಾಗಿ ಏನಗಾ ಹೊದ್ದಿಗೆ ಬೇಡ (ಅಕ್ಕನ ೪. ೦೯೯-೦೬೬); ಇದ್ದ ನೆಲೆಗಳೆಡವುವ ಭಕ್ತಿಯ ಶ್ರದ್ಧೆಯಲಿ ಎತ್ನಾನುಸಾರವ ಹೊದ್ದಿಗೆಯನಜಿದೀದು . . . ಅಳವಟ್ಟೊಡಾತನೆ ಶುದ್ಧಭಕ್ತಿಯನಜಿವನ್ನೆ (ಪ್ರಭುಲಿಂ. ೦೬-೬೦). ೩. "ಉಪಸರ್ಜನಮುಪಾಗ್ರವೆನೆ ಹೊದ್ದಿ[ಪಾಠಾ. ದ್ದು]ಗೆಗೆ ನಾಮವುಕ್ಕುಂ" (ಚುಂಗಿರಾ. ೦೬೩ ೨೯). ೫. ಮುದ್ದಿಸಿ ಮುಂಡಾಡುತೊಲೆದರಳೆಲೆಯನು ತಿದ್ದುವ ಕೊರಳ ದಂಡೆಯನು ಹೊದ್ದಿಗೆ ಮಾಳ್ಪನು ಮಾಗಾಯ ಮುಟ್ಟುತ ಮುದ್ದಾಡುತಿರ್ದನಾ ಮಗನ (ಕರ್ಣ. ೨೬-೨೯). **ಹೊದ್ದುಗೆ** : ೧. ಕಿಗ್ಗಯ್ಯ ನೀರು ತಟಾಕಕ್ಕೆ ಹೊದ್ದಿದುದುಂಟೆ ಅಜಿದು ಮಜಿದವಂಗೆ ಸಮಯದ ಹೊದ್ದುಗೆ ಏನು (ಶೂನ್ಯಸಂ. ೨೬೭-೨೨). ೬. ಸಮೀಪದಲ್ಲಿರುವ ಪ್ರದೇಶ; ನೆರೆಹೊರೆ: "ಹೊದ್ದುಗೆಯೊಳುಮುಪಹ್ವರವೆಂದೆನಿಸಿರ್ಪುದು " (ಚುಂಗಿರಾ. ೦೬೮-೩). [ ಪೊರ್ದು + ೦ ಗೆ ]

**ಪೊರ್ದುಗೆವಡೆ** (ಕ್ರಿ). ೧. ಸೇರು : ಕೂಡು ; ಬೆರೆ : ಜಗದಬಳಾ ಜನಕ್ಕೆ ಮಿಗೆ ವರ್ತಿಪ ಗರ್ಭದ ಚಿಹ್ನಜಾಳದೊಳ್ ಬಗೆವಡದೊಂದುಮಾ ಸತಿಯ ಭಾಸುರಮಪ್ಪ ಲತಾಂಗದಲ್ಲಿ ಪೊರ್ದುಗೆವಡದಿರ್ದುದಿಲ್ಲ (ಧರ್ಮಾಮೃ. ೧೩-೬೬) ; ಪುಂಡವೆಣ್ಗಳೊಳು ಪೊರ್ದುಗೆವಡೆಯದೆ ನರ್ಲ್ಯಂಡಿರೊಡನೆ ಬೆರ ಸುವುದು (ಶಬ್ದ. ೬-೯೬). ೨. ಆಶ್ರಯವನ್ನು ಹೊಂದು, ೦ಪಡೆ : ಎಮ್ಮಯ ಜನ್ಮಭೂಮಿಯೀಂತಿಲ್ಲಿ ಪೊರ್ದುಗೆವಡೆದು ಬಾಳ್ವೆವೆಂದೆನುತ (ಶಾಂತೀಶ. ೭-೨೬). [ ಪೊರ್ದುಗೆ + ಪಡೆ ]

**ಪೊರ್ದುಗೆವೆಱು** (ಕ್ರಿ). ಹತ್ತಿರವಾಗು ; ಸಮೀಪಗತವಾಗು ; ಸನಿಹ ದಲ್ಲಿರು : ಕರ್ಣಾಗ್ರದೊಳ್ ಪೊರ್ದುಗೆವೆತ್ತು ಮುಷ್ಟಿಯುಂ ಮಂಡಳಿಸಿದ ಧನುವುಂ ದಿಟ್ಟಿಪಾಲೋಕಮುಂ ನೆಟ್ಟಗೆ ತೋಱುತಿರ್ದುವೆಂಬಂತಗೆವರನಿಸು ತಿರ್ದಂ (ಜನಪ. ೬-೩೧). [ ಪೊರ್ದುಗೆ + ಪೆಱು ]

**ಪೊರ್**, ಪೊಲಿ$_1$, ಹೊಲಿ$_1$ (ಕ್ರಿ). ೧. ಹೊಲಿಗೆ ಹಾಕು : "ಪೊರ್-ಸ್ಯೂತೇ (ಹೊಲಿ)" (ಕಪಾರಾ) ; ಅಡಿಯೊಳ್ ಪಾಸಿದ ಚರ್ಮರತ್ನಪಟಮುಂ ತಚ್ಛತ್ರರತ್ನಂ ಬಿಡಂಗಿಡಿದೋಲಂತಿರೆ ಮುಟ್ಟೆ ಪೊರ್ದ್ದ ತೆಱದಿಂದಿಂಬಾಗೆ ತನ್ಮಧ್ಯದೊಳ್ ಸೂಡರಿರ್ಪಂತಿರೆ ಚಕ್ರರತ್ನಮುದಜೊಳ್ ನಿರ್ಬಾಧ ವಿಂದಿರ್ದತ್ತು (ಆದಿಪು. ೧೩-೬೦) ; ಸೆರೆದೆಗೆಯೆ ಸೂಜಿಯಿಂ ಪೊರ್ದಿರ್ದ ಟಯ್ಯಳಿಂ (ಕಾದಂಬ. ೨೬೦). **ಪೊಲಿ$_1$** : ೧. ಉಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್ ಸಿಪ್ಪಿಗನಂತೆ ಪೊಲಿವರ್ (ಧರ್ಮಾಮೃ. ೩-೬೩); ಬಾಯಂ ತೆಜದಿಕ್ಕಿ ಕಾಯ್ದ ಲೋಹದ ಕೆಱುಪೂಂಗಳನಡಸಿ ಪಿಡಿದು ಪೊಲಿವರ್ ಬಾಯಂ (ಶಾಂತೀಶ. ೯-೯೯). **ಹೊಲಿ$_1$** : ೧. ದಂಡಿಯೊಳ್ ಪ್ರಚ್ಛನ್ನವೇಷದ

ಖಂಡಪರಶುವನೆರ್ ಮುಟ್ದು ಕೈಕೊಂಡು ಕೌದಿಗಳಂ ಹೊಲಿವ ಕಾಯಕವೆ ತನಗಾಗಿ (ಬಸವ. ೨೩-೩); ಬಸುಱಿ ಹೊಲಿದ ಹೊಲಿಗೆಯ ದಡಿಗ ರಕ್ಕಸರಾಯರಿಂದದ್ದುದು ಕೋಟಿಸಂಖ್ಯೆಯಲಿ (ತೊರವೆ. ೩-೬-೮): ನೆಲವನ್ನು ಮಾಗಿಲಸ್ಸು ಹೊಲಿವರುಂಟೆಂದರವ ಹೊಲಿವರು ಹೊಲಿವರೆನದೇಕು ಮೂರ್ಖನಲಿ ಕಲಹ ಬೇಡೆಂದ (ಸರ್ವಜ್ಞ. ೦೦೩೬); ಹೊಲಿಯುವವನ ಬಲ್ಕೈರಬೇಡ, ಅಳುವವನ ಎಡಕ್ಕೆರಬೇಡ (ಗಾದೆ). ೨. ಹೆಣೆ : ಉದ್ದುಳು ತರೆ ಕಾಲ್ಬೆರಳ ಕೊನೆಯಲಿ ಮರಳ ಹೊಲಿದಳು ಜಡೆಯನು (ಕುಮಾ. ೩೯-೦೯). [ದ್ರಾ.೩ ತಮಿ. ಪೊಲ್ಲವ್ = ಹೊಲಿಯುವುದು; ಮಲ. ಪೊಲ್ಲು; ತುಳು. ಪೊಲ್ಲು. ಪೊಲ್ಲಿಯು ; ಕೊಡ. ಪೊಲಿ. ಪೊಲ್]

**ಪೊಲ, ಹೊಲ** (ನಾ). ೧. ಬೆಳೆ ಬೆಳೆಯುವ ಭೂಮಿ ; ಜಮೀನು: ಪೂರ್ವಾಪರ್ಯಂತಲ ನೆಲ್ಲು ಪಾನ್ನಯುವಳೆವರು ಸರ್ವಪರಿಹಾರಕ್ಕೊಟ್ಟೊಪ್ಪ [ರ°] (ಕ್ಷು.ಶಾ. ೮೯೩೦. ೩೬-೬: ೩೦೦); ದೇವಮಾತೃಕಮನಿಪ್ಪ ಪೊಲಂ ಪವಗಂಧ ಶಾಳಿಯಂ ಬೆಳೆವುದು (ಶಬ್ದಮ. ೦-೫೯); ಪೊಲಂ ಪಸುರೇಱ ಕಾಡ ಮಲ್ಲಿಗೆ ಸನೆಯೇಱ (ಆಗಂ. ೪-೪). ೨. ಸ್ಥಳ ; ಪ್ರದೇಶ ; ಎಡೆ : ಊರ ಪೊಱಪೊ[ಲ] ಪೊಲದೊಳ್ ಬಟ್ಟದು ಕಣ್ಣೊಳ್ ರಾತ್ರಿಪ್ರತಿಮೆ ನಿಂದೊರ್ (ಕಪ್ಪ.ಶಾ. ೦೫೨-೦೨). ೩. ಆಶ್ರಯ; ಆಸರೆ: ಪೂ ಪೊಲನಲ್ಲ ನಾಲಗೆಗೆ ಪಂದೆತನಂ ಪೊಱಯಲ್ಲ ಕೈಯ ಕೊರಸಿಗೆ (ಜಗನ್ನಾ. ೬-೦೦೯). 'ಅಡುಂಬೊಲ' ಪರಾ. ೪. ಕ್ಷೇತ್ರ : ಜಿನರ ಪದಸೇವೆಯಿಂದಂ . . . ಈ ವಿಧವಂ ಜನಿಯಿಸಿದಾದೀಗಳಲ್ಲದೊಡನವುವುಸುರವಿಭವಮೆನಗೆ ವಿಷಯಮೆ ಪೊಲನೋ (ಜಗನ್ನಾ. ೬-೨೮). ೫. ವಿಷಯ ; ಸಂಗತಿ : ಸಕಳವಿದ್ಯಾಧರವಲ್ಲಭಸಭೆಯೊಳದು ಪೊಗೞ್ತೆಗೆ ಪೊಲನೇ (ಜಗನ್ನಾ. ೩-೨೨); ವಿಳಂಗೆ ಪೊಲನಲ್ತೆ ಕೃತಿಯೊಲ್ಲವ ದೋಷಂ (ಶಕ್ತಿ. ೦-೯೬). ೬. ಗೋಚರ; ಕಾಣಿಸುವಿಕೆ : ದಿಟ್ಟಿಗೆ ಪೊಲನಾದುದು ಪೊಂದೆಟ್ಟಂ (ಜಗನ್ನಾ. ೦-೫೯); ಆಲೋಚನಗೋಚರೇ= ಕಣ್ಗೆ ಪೊಲನಲ್ಲದ(ಶಬ್ದಮ. ೩-೨೬); ತೊಟ್ಟನೆ ಒಟ್ಟಿದಿರೊಳ್ ಪೊಂಬೆಟ್ಟಂ . . . ದಿಟ್ಟಿಗೆ ಪೊಲನಾದುದು (ಅಃಪು. ೬-೦೨೮). ೭. ವ್ಯಾಪ್ತಿ ; ಪರಿಮಿತಿ : ನೆಲನಂ ಪೊಟ್ಟಂ ಪೊಲನು ಮುನಿಜ್ದು ಒಟ್ಟಿಯೊಳ್ ಪೊಸತಂ ಪಟುಮನಜ್ದು ಪರಿಯಿಸಲ್ ಏನೆ ಬಲ್ಲಯ್ (ಕುಶರ. ೩-೯೬ ಪ). **ಹೊಲ** : ೧. ಸಿರಿಗಾ(ಂ)ವುಂಡನ ಹೊಲ ದೊಳಗೊಂದು ತೋಟಕ್ಕಂ ಹೊಲಗೇರಿಯ ಪಡುವಣ ಕರುವಗೆಯ್ಯಂದಂ ತೆಂಕಲಾಱುಮತ್ತರು ಕೆಯಿಂಗವಱುವಣಮುಯ್ದು ಗದ್ದೆಣಮಂ ತಿಱುವರು (ಶಾಸನ. XI-i, ೩೦-೦೪; 1005); ಹೊಲದಲ್ಲಿ ಅವಿಲ್ಲ ಮನೆಯಲ್ಲಿ ಕಱುವಿಲ್ಲ ನೆಲಹಿಸ ಮೇಲಣ ಬೆಣ್ಣೆಯಿದು ದಿಟವೋ (ಅಕ್ಕ. ೦೩೬-೩೬೨): ಧರೆ ಬಿಜಂಗನ ನುಂಗಿ ಬೇಲಿ ಸೊಲನೆಲ್ಲಂ ಮೇದೊಡಂ (ಸೋಮೇಶ. ೫೯); ಕಡಲೆಯು ತನಗೆ ಬೇಕಾದ ಅಂಶಗಳನ್ನು ಮಾತ್ರ ಹೊಲದಿಂದ ಹಿರುತ್ತದೆ (ಕೃಷಿಕ. ೨೨೬). ೨. ಗಹನವಲ್ಲಿ ಸಿಕ್ಕಿದ ಶಿಶುವಿನಂತೆ ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ ಹೊಲದ ಹೊಲಬ ಹೇಳು (ಕಾಲಜ್ಞಾ. ೦೩-೬೦) ; ಬರುತಿರ್ದನವ್ರತಿಮಶಿವಭಕ್ತನುರವಣಿಸಿ ಪುರದ ಹೊಲನಂ ದಾಂಟಿ (ಶಿವ. ಕಿ. ೫೯-೨). ೮. ನಿವಾಸ ; ವಾಸಸ್ಥಾನ : ಸಿಂಹದ ಹೊಲನ ಹೊಗಃವಿಧದಂತೆ ಹೊಱಕಾಲ್ಗೊಳುತಲಿರೆ ಕಂಡು (ಉತ್ತರರಾ. ೦೨-೬೦) ; ಹಾಸ್ಯದ ಹೊಲಂ ವಂರುಳಾಟದ ಮಂದಿರಂ . . . ಗಣಿಕಾಪ್ರತೋಳಿ ತಾಂ (ಶಬ್ದಾಕ. ೨-೯೨) ; ಕರಿವಿಂಡುಗಳು ಸಿಂಹದ ಹೊಲದಲಿ ಬಂದು ನೆಲೆ ಮೇಲ ಕೊಂಡು ಜಿವಿಪುವೆ (ಶಂಕರ. ೩-೯೬). ೯. ಕೇವಲ ಮಳೆಯ ನೀರಿನಿಂದ ಬೆಳೆಯುವ ಭೂಮಿ ; ಖುಷ್ಕಿ : ಕೇವಲ ಮಳೆನೀರಿನ ಆಧಾರದಲ್ಲಿ ಆಗಬಹುದಾದ ಬೆಳೆಯುಡುವಂತಾ ಭೂಮಿಯನ್ನು ಖುಷ್ಕಿ ಅಥವಾ ಹೊಲವೆಂದು ಹೇಳುವುದು(ಕೃಷಿಶಾ. ೩೩).

**ಪೊಲವೊಲ** (ದ್ವಿರುಕ್ತಿ): ಪಲವಂದದ ವರ್ದುಗಳಂ ಪೊಲವೊಲದೊಳ ಮಱಸಲೇಕೆ (ಗಿರಿಜ. ೦೩-೫೬). **ಪೊಲನಾಗು**=ಆಶ್ರಯವಾಗು: ಪೊಗೞ್ಬ ಮಹಾತ್ಮರುಜ್ಜಲಮೆನಿಪ್ಪ ಗುಣಾಂಗಳನುಜ್ವಲಪ್ರಸಿದ್ಧಿಗೆ ಪೊಲನಾಗದ... ಪೊಗೞ್ಬ ದುರ್ಹಾತ್ಮರಂ ಪೊಗದೊಳದುರ್ಗುಣಂ ಪೊಱಗಿಕ್ಕಲಾದ ನಾಲಗೆ ಯುವನೆತ್ತಾನಾಲಗೆಯೊಳೋದಿದವಂ ಕೃತಿಯೇ ಕೃತಾರ್ಥನೇ (ಜಂಂಗಪು. ೦-೩೩). **ಹೊಲಹಾಕು**=ಪ್ರದೇಶದಲ್ಲಿ ಓಡಾಡು : ನಾಡೊಳಗೆ ತಾಱಬಟ್ಟೆಯಲಿ ಹೊಲನಾಡಿ ಹಬ್ಬಿದ ಗೋಕವಂಬವ ನೋಡುವುದು ನೆವ (ಉತ್ತರ. ೦೬-೨೦). **ಹೊಲಮನೆ**=ಹೊಲ ಮತ್ತು ಮನೆ ; ಜಮೀನು ಮತ್ತು ಮನೆ : ಯಾ ಸ್ವಾಮಿಯ ಹೊಲಮನೆಯ ಮಾತಯುತ್ತಿ ಆಡಿದವರು ಜಾತಿವಂತನಲ್ಲ (ಎಕ. XII, ತಿಪಟೂ. ೬೬-೩ ; 1776) : ಹೊಲಮನೆಯೊಳೊಲವುಗಳ ಕಣಕಣಸಿ ಹೂ ಕೊಯ್ದು ಬೆಳ್ಳಿಯ ಬೆರಲಿಂದ ಮುಡಿಯುವಳ್ ನೇವು (ಕಾಂತಾಶ. ೩೩-೩೨). **ಹೊಲ ಮಾಡು**=ವ್ಯವಸಾಯ ಮಾಡು ; ಬೇಸಾಯ ಮಾಡು : ಅವನು ಹೊಲ ಮಾಡಿಕೊಂಡು ಜೀವನ ನಡೆಸುತ್ತಾನೆ (ಆಧು). [ದ್ರಾ.೩ ತಮಿ. ಪುಲ, ಪುಲವು; ಮಲ. ಪುಲವ್; ತುಳು. ಪುಲ; ತೆಲು. ಪೊಲ ; ಕೋರಾ. ಪೊಲವ್]

**ಪೊಲಂಗೊಳ್** (ಕ್ರಿ). ಎಲ್ಲ ಕಡೆಗೂ ಚೆದರು ; ದಿಕ್ಕಾಪಾಲಾಗಂ : ನೃಪರಾರುಂ ವೀರಬಲ್ಲಾಳನೊಳಿದಿರದ ಮಾಱಾಂಪರೇ. . .ಪುಲ್ಲೆವಿಂಡಂತೆ ಪೊಲಂಗೊಂಡೋಡುವರ್ (ಎಕ. V, ಬೇಲೂರು. ೦೦೨-೫೪ ; ಸು. 1220 ?).

[ ಪೊಲ + ಕೊಳ್₁ ]

Δ **ಪೊಲಂತಿ** ' ಪೊಲತಿ ' ನೋ.

**ಪೊಲಂಬಿಗ, ಪೊಲಬಿಗ, ಹೊಲಬಿಗ** (ನಾ). ೧. ದಾರಿ ತೋರಿಸು ವವನು ; ಮಾರ್ಗದರ್ಶಿ : ಕುರುಡನಪ್ಪ ಪೊಲಂಬಿಗನಂ ನಂಬಿ ಗಟ್ಟಿ ದಿಟ್ಟಿಡೆಯೊಳಿರಲ್ ದೂರದೇಶಕ್ಕೆ ಪಯಣಂಬೋಪನೇಂದಾತನುಂ . . . ಬುದ್ಧಿವಂತರಲ್ಲರ್ (ಧರ್ಮಾಮೃ. ೬-೫೩). ೨. ನೆರೆಯನ್ನು ಅರಿತವನು: ಜೋಯಿಸಿಗಂ, ಲೆಕ್ಕಿಗಂ, ಪೊಲಂಬಿಗಂ (ಶಬ್ದಮ. ೦೯೬ ವೃತ್ತಿ). **ಪೊಲಬಿಗ** : ೧. ವಿಱನವುಹುಸಿ ಕಾಲ್ಗೊಳ್ ಕೆರೆವ ಗುಳಿಗಳವೆಯಿಂದು ಪೊಲಬಿಗ ಪೊಂದಾಳಿಗಳ್ ತೋಱದರ್ (ಚಂದ್ರಪ್ರ. ೦೦-೫೪). **ಹೊಲಬಿಗ**: ೧. ಎಲೆ ಯಿಲ್ಲದ ಮರದಿ ಒಂಭತ್ತು ತಲೆಗಳು ನಡುವಿಡೆ ಕಲಿಗಳ ಕ್ಕಗಳ ನೋಡಿದರೆ ಉಳುವಿಗೆ ಹೊಲಬಿಗರಾದವರು (ಶರಣ. ೦೩೩-೯೦೬) ; ಶಿವ ಕೇಶವ ಬ್ರಹ್ಮರುಗಳಂತು ಹೊಸ ಹೊಲಬಿಗರು ರೂಪಾಗಿ ಭೂಮಿಯೊಳಗಿಂತು ಬಸವೇಶನಾದನು (ಅಕ್ಕಪು. ೩೩-೬೦); ಹೊಲಬಿಗರು ಹರಿದರು ಸುರೇಂದ್ರನ ದಳದ ಮಾನ್ಯರು (ಉತ್ತರ. ೦೨-೦೨). ೨. ಹೊರೆಯ ಹೊಲದಿಗ ನಾದರೆ ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯ (ಅಕ್ಕ. ೦೩೮) ; ಆ ಹೊಱಗಣ ಹೊಲಬ ಕಂಡು ಆ ಹೊಲಬಿಗನ ಹೊಲನ ನೋಡಿ (ತೋಂಟಪು. ೦೩೨-೩೦೦) ; ಯೋಗಾವಸ್ಥೆಯಲಿ ಹೊಂದಿ ಚೆನ್ನಸಿದು ತಾನೆಂಬ ಹೊಲಬಿಗನನ್ನರಾವ ಕಳಂಕವಿಲ್ಲದೆ ತನ್ನೊಳದು ತಾನಾಗಿ ತಾನಿಪ್ಪಂದವೋ ಮತ್ತ (ಅಕ್ಕ. ೩೩-೩೩). ೩. ದಾರಿಗ; ಪ್ರಯಾಣಿಕ: ಶಿಲೆ ಹಲವು ತಿಱದಲ್ಲಿ ಹೊಲಬಿಗರಿಂಗೆ ಹೊನ್ನಾಗಿ ಒಲವರವಿಲ್ಲದೆ ಅವರ ಭಾವದಲ್ಲಿ ನಿಲ್ಲುವುದು ಶಿಲೆಯೋ ಮನವೋ (ಸರ್ವಶ. ೬೬-೬೩೩).

[ ಪೊಲಂಬು + –ಇಗ ]

**ಪೊಲಂಬು, ಪೊಲಬು, ಹೊಲಬು** (ನಾ). ೧. ದಾರಿ ; ಮಾರ್ಗ : ನಿಮಗಾ ಧರ್ಮದ ಪೋದ ಪೊಲಂಬದು ತಾ ನರ್ಮದೆಯಿಂ ಗೆಟದೇಕೆ ಕೇಳ್ದಪೆಯಮ್ಮಂ (ಜಗನ್ನಾ. ೦-೩೪); ನಿನ್ನ ಚರ್ಮರತ್ನಂ ಪೋದ ಪೊಲಂಬುಂ ಬಲ್ಲೊಡೆ ಪೇೞ್ಬುದುಂ (ಚಾವು. ೬-೦೮೦ ಪ). ೨. ರೀತಿ ; ಬಗೆ : ಎಲೆ ನೃಪ ಜೀವತತ್ತ್ವದ ಪೊಲಂಬದು (ಜಾತಕ. ೫-೬೩) . ೩. ಸುದ್ದಿ ; ಸಮಾಚಾರ : ಸಂಗತಿ : ನಾವದಱ ಪೊಲಂಬಂ ಬಲ್ಲುದಿಲ್ಲ ನೀವು ಬಲ್ಲಡೆ

ಪೇಟ್ಗಿಂ (ಸುಕ್ಮಾ.ಸ್ರ. ೬-೩೩ ಪ). ೪. ಪರಿಚಯಂ; ಗುರುತುಂ: ಜಿನಗಣದೊಳು ಮುನ್ನ ತನಗೆ ಪೊಲಬುಳ್ಳ ಜನರ ಕಂಡವರ ಪೂರ್ವವನು ಅನುಜ ರಜಿಯಲೆಂದು ಪೆಸರುಗೊಂಡೆವಿಗುತ (ಜಿಕ. ೬೦-೭೯). ಪೊಲಬು : ೧. ನಡೆದು ಭರದಿಂ ಪುಷ್ಕರಿಕೆ ಪೇಟ್ಟ ಪೊಲಬಿಂಗಾಗಳ್ (ಚಕಳು. ೦೦-೭೦); ಬಲ ಕೇಶವರ ಚಿನ್ನ ತಗುಳ್ದುಮುವರು ಪೋದ ಪೊಲಬಜಿಯದೆ ಮುಂದೆ ಪೋಗಿ (ಕಾಂಡಕ. ೩-೯೩). ೩. ಜಟಾಯುವಂ ಕಂಡು ಪೊಲಬಂ ಕೇಳ್ದು ಸೌಮಿತ್ರಿಸಹಿತ ನಡೆದಂ ಮುಂದೆ ರಘುನಾಥನು (ಕೃ.ಬಿಕಾ. ೦೯.೪): ಸುಲಭಮು ಪೊಲಬನೆಲ್ಲ ಪರಿಂಗರಿಪಲ್ (ಕೃ.ಪ್ಪ.ಕೋ. ೨೬೪). ೫. ಮರ್ಮ; ರಹಸ್ಯ: ನಿಗಮವಜಿಯದು ಬೊಮ್ಮ ಚಿಂತಿಪ ನಗನಿಲಯ ಪೊಲಬಜಿಯ (ಕೃ.ಕರ್ಣ. ೦-೨೯). ಹೊಲಬು : ೧. ಲಿಂಗದ ಸಂಪೂರ್ಣವ ಕಾಣದಿಹ ಅಂಗಹೀನನುಗೇಕೆ ವ್ರತಾಚಾರದ ಹೊಲಬು (ತರ್ಕ. ೭-೨೬): ಹೋಗುತಿರ್ದಳು ಹೊಲಬ ಕೇಳುತ (ಪ್ರಭುಲಿ. ೬-೯೨): ಲಂಕಾಪುರದ ಸರಣಿಯ ಹೊಲಬ ತೋಜಿಸಿ ಬೀಳುಕೊಂಡನು (ತೊರಲಾ. ೪-೦೦-೨೨). ೨. ಅಕೃತಾ ಪುಣ್ಯ ಪಾಪದ ಹೊಲಬನಜಿಯಿರೇ (ತಿರುಕ. ೮೯. ೦೯-೩); ಎಲೆ ಮಹಾತ್ಮನೆ ನಿನ್ನ ಸೂತ್ರದ ಹೊಲಬಿದಲ್ಲದೆ ಸುಮ್ಮನೀ ಮರ ಸಿಲುಕಬಲ್ಲುದೆ (ಪ್ರಭುಲಿ. ೦೦-೩೦); ವಾಯೂವಿದ್ಯದೇಳ್ಗೆಯ ಹೊಲಬ ತೋಜಿದಳಾಳ್ದನಿಗೆ (ಸೋಹಕ. ೦೩-೯೯). ೩. ನಳನೃಪತಿಗೆ ಮುನ್ನಂ ಕಂಗೊಳಿ ಸಾರಥಿಯಾದ ಹೊಲಬನಜಿವಂ (ಕಳಶಂ. ೬೭೦); ಸತ್ಪುರುಷರ ಕಥೆಯಲ್ಲ ಜನನದ ಉತ್ಪಾದಿ ಕಾದಿಕಾದಿದು ಕರ್ಮದ ಕತ್ತಲೆಗೆ ಸಿಲ್ಕುವರ ಸೀಮೆಯ ಹೊಲಬು [ಶಾಶಂ. ಮಾತು]ತಾನಲ್ಲ (ಪ್ರಭುಲಿ. ೦-೦೩); ತರುಣಿ ನೀನಜಿದುದಿಲ್ಲವೆ ನಮ್ಮ ಪಾದರಕ್ಷೆಯ ಹೋದ ಹೊಲಬನು (ಸಮ್ಯಕ್. ೯-೩೫). ೪. ತರಣಿಲು ಪೊರೆಯೋ ಎನುತ್ತಿರೆ ಹಿಂದು ಶಂಕಿಸಿ ಕೇಳಿದರು ಹೊಲಬುಂಟೆ ನಿನಗೆಂದು (ಜೈಮಿನಿ.೦೯-೯೭); ನೆಲನಾವು ದಾಗಸವಾವುದೆಣ್ದೆಸೆಗಳ ಹೊಲಬಾವುದೆಂದು ತೋಜಿಸದೆ . . . ಬಾಣಾಬ್ಧಿ ಬಲಗೂಡಿ ಹರಿಯ ನುಂಗಿದುವು (ಸೋಹಕ. ೪೦-೩೬); ನಾಲ್ಕುಮಂದಿಗಳಿಯುರಾವ ಮಂತ್ರಿಗಳು ಅವನಂತರಂಗವೇ ಆಗಿದ್ದರೆನ್ನಬಹುದು. ಅವರ ಯೋಗ್ಯತೆಯನ್ನರಿತಲ್ಲಿ ಅರಸನ ಅಂತರಂಗದಾಳಿಕೆಯ ಹೊಲಬು ಮಾಚೇರಿಗಾಗಬಹುದು (ಶಾಕೋಶ. ೩೬೬). ೫. ಅಂಗದೊಳಗೆ ದೆರಸಿಪ್ಪ ಲಿಂಗದ ಹೊಲಬನಾರೂ ಅಜಿಯರು (ಅತಕ. ೨೨-೩೯); ಎಲೆ ಕಿತವ ಚರ್ಮರತ್ನವ ನೊಲವಿಂದು ಕಾಮವ.ಂಜರಿಗೆ ಕೊಟ್ಟೆನ್ನೊಳ್ ಹೊಲಬು ಪೇಟದೆ ನೀಂ ಸಾಲೆಯೊಳ್ ಬೀಟಲ್ಕೆ ಬಿಡುವೆನೆ (ದಕಳು. ೬-೨೦೦); ನೀನಿತ್ತಲಕ್ಷಣದ ಹೊಲಬ ಬಲ್ಲೆ (ತೊರಲಾ. ೩-೨-೨೦); ಮಾವನ ಮಾತಿನ ಹೊಲಬು ದಾಬಣ್ಣನಿಗೆ ಹೊಳೆಯಿತು (ಅಕೋಳ. ೨೬). ೬. "ಸರಹದ್ದು" (ಕನ್ನಶಾ. ಅಸುಖಂಧ. ೨): ವೀರಪೊಡಕೆರೆಪುರದ ಹೊಲಮೇರೆಯಿಂದಾ ಹಾಯಿಕಲ್ಲು ಹೊಲಬಿಸಲು (ಎಕ. XI. ಚಿತ್ರದು. ೬೦-೩ ; ಕು. 1800 ?); ಈ ದಳವಾಯಿ ಮುದ್ದಣ್ಣನು ಬಿದರಕೆರೇ ಹೊಲಬಿನಲ್ಲಿ ಸಂತೇಮುದ್ದಾಪುರದ ಗ್ರಾಮವನ್ನೂ ಅಲ್ಲಿ ಆ ಹನುಮಂತರಾಯನ ದೇವಸ್ಥಾನ, ಕೆರೆಗಳನ್ನೂ . . . ಸ್ಥಾಪನೆ ಮಾಡಿದನು (ಚಿತ್ರಶಾ. ೩೩).

ಹೊಲಬಾಗು=೧. ದಾರಿಯಾಗು; ದಿಕ್ಕುತೋರು : ಆ ಅರುಣನ ನೆಲೆ ಒಂದೆ ಹಲವು ಜಗಕ್ಕೆ ಹೊಲಬಾದಂತೆ ಸ್ಥಲಜ್ಞನಾದೆಯಲ್ಲಾ ಸ್ಥಲದ ನೆಲೆ ಒಂದೆಂನಜಿತಲ್ಲಿ ಏಕಸ್ಥಲಮೂರ್ತಿ ನೀನೆ (ಸೋಳಮೂ. ೨೦೦-೬೯೩). ೨. (ಪರಿಸ್ಥಿತಿಯು) ಅರಿವಾಗು; ಪರಿಚಯವಾಗು: ಚೀನದಲ್ಲಿ ಅಂಸಿದ ೧೬೭೮ ಸ್ಥಳಗಳ ಜನರಿಗೆ ತಲಾ ಒಂದರ ೧,೪೦೦ ಕಿಲೋಗ್ರಾಂ ಉತ್ಪನ್ನವನ್ನು ಉತ್ತರಅಮೇರಿಕದ ೨೦,೦೦೦ ಕಿಲೋಗ್ರಾಂ ಉತ್ಪನ್ನದೊಡನೆ ಹೋಲಿಸಿದರೆ ಏಶಿಯದ ಜೀವನದ ಮಟ್ಟದ ಹೀನಸ್ಥಿತಿಯ ಹೊಲಬಾಗುವುದಿಲ್ಲವೆ? (ಏಶಿಸಂ. ೩೩).

[ದೇ. ॥ ತುಳು. ಪೊಲಬು, ಪುಲಬು, ಪುಲಮೆ; ತೆಲು. ಪೊಲುಪು]

ಪೊಲಂಬುಗಿಡಿಸು. ಹೊಲಬುಗೆಡಿಸು (ಕ್ರಿ). ೧. ದಾರಿತಪ್ಪಿಸು; ಮಾರ್ಗ ತಪ್ಪಿಸು : ತೇಜಿಗಳ ಕಾಲ ದೂಳಿ ನೆಗೆದು ಕೊಳಂಗುಳದೊಳ್ ಪಸರಿಸಿ ದೀರರನಱಸುವಚ್ಚರಸಿಯರುಮಂ ಪೊಲಂಬುಗಿಡಿಸಿಯುಂ (ಕಾವ್ಯಾ. ೨೬೬). ಹೊಲಬುಗೆಡಿಸು: ೧. ನಿನ್ನಾಳ್ದನನು ಹೊಲಬುಗೆಡಿಸಿ. . .ಎಳೆದೊಯ್ದನು (ತ್ರಿಪುರಾ. ೨೦-೨೩೩); ಹೆಬ್ಬುಲ ಸಘಾಡದಲ್ಕೆ ಕರ್ಣನ ಹೊಲಬುಗೆಡಿಸಿದುದಂಬುಗಳ ಸಾರಾಯ ಸೋನೆಯಲಿ (ಕುಮ್ಮಾಕ. ೦೦-೨೦); ನಾನವನ ಹೊಲಬುಗೆಡಿಸಿ ಹೋರಿ ಹೊಣವಡಿಸುವೆನು (ರಾಜಶೇ. ೯-೩೯). ೨. ದಿಗ್ಭ್ರಮೆಯುಂಟುಮಾಡು; ಗೊಂದಲಗೊಳಿಸು: ಚಾತುರ್ಬಲವ ಸವಜಿ . . . ಹೊಲಬುಗೆಡಿಸಿ ಮಹೀಪತಿಯ ಪಡಿಮುಖಕೆ ಮಾಱಾಂತ (ಕುಮ್ಮಾಕ. ೩-೩೬). [ಪೊಲಂಬುಗಿಡು (<ಪೊಲಂಬುಗೆಡು) + -ಇಸು]

ಪೊಲಂಬುಗಿಡು 'ಪೊಲಂಬುಗೆಡು' ನೋ.

ಪೊಲಂಬುಗೆಡು. ಪೊಲಂಬುಗಿಡು. ಪೊಲಬುಗೆಡು, ಹೊಲಬುಕೆಡು, ಹೊಲಬುಗಿಡು, ಹೊಲಬುಗೆಡು (ಕ್ರಿ). ೧. ದಾರಿ ತಪ್ಪಿಸಿಕೊಳ್ಳು: ಮಾರ್ಗ ಕಾಣದಾಗು : ಒಂದೊಟ್ಟೆ ಪೊಲಂಬುಗೆಟ್ಟು ಬಂದಾಡು ತ್ರಿದುರ್ಗದಂ. . . ಕಂಡು (ಕುಚಕಂ. ೦೯೦-೮); ಕಾಂತಾರದೊಳ್ ಪೊಲಂಬು [ಪಾಠಾಂ. ಪೊಲ, ಪೊರೆ]ಗೆಟ್ಟು ಸೇದವಟ್ಟು (ಜಾಣಾಂ. ೭೯-೦೬), ಸಂಸರಣಕಾನನದಲ್ಲಿ ಪೊಲಂಬುಗೆಟ್ಟೆ (ಚಾರಿತ್ರ. ೬-೦೩೯); ಒರಿದಜ್ಞಾನಾಟವಿಯೊಳ್ ಮರುಳಾಗಿ ಪೊಲಂಬುಗೆಟ್ಟು ತಿರುಗುವ ನಮಾಗಾದರದಿಂ ಪಥಮಂ ತೋಜಿಲ್ ಭರದಿಂ ಬಂದೈ (ಕರ್ಣಕ. ೦೦-೯೩). ೨. ದಿಗ್ಭ್ರಮೆಯಾಗು; ಏನೂ ತೋಚದಂತಾಗು : ರಾಜವೀಧಿಯೊಳ್ ಸುಳಿವ ಜವ್ವನಾಗರಂ ಕಂಡು ಪೊಲಂಬುಗೆಟ್ಟು ಪಲ್ಲೆಯಂತೆ ದೆಸೆದೆಸೆಗೆ ದೆಘಾವ (ಗಂಕ. ೨-೦೦೩ ಪ). ಪೊಲಂಬುಗಿಡು : ೨. 'ಪೊಲಂಬುಗಿಡಿಸು' ಪರಾ. ಪೊಲಬುಗೆಡು : ೧. ನೆಲನಾಗಸಮಾವುದೆಂಬುದನಜಿಯದೆ ಪೊಲಬುಗೆಟ್ಟನು (ಅಂಜಕ. ೬-೦೩೯). ಹೊಲಬುಕೆಡು : ೧. ಮಾಯಾಪಾಶದಿ ಸಿಕ್ಕಿ ಕಡುನೊಂದೆ ಹೊಲಬುಕೆಟ್ಟೆನು ಜಗದೊಳಗೆ (ಧೀಕು. ೦-೦೦). ಹೊಲಬುಗಿಡು: ೨. "ಹೊಲಬುಗಿಡು (ಹೊಲಬು+ಕಿಡು)-ದಿಗ್ಭ್ರಮಣೇ" (ಕಶುರಾ), ಜಠರದೊಳಿವು ತದ್ಬ್ರಹ್ಮಾಂಡಶತದೊಳು ಹೊಲಬುಗಿಡೆ (ಕುಮ್ಮಾಉ. ೬೦೨. ೦೦-೦೯). ಹೊಲಬುಗೆಡು : ೧. ಹೊಲಬುಗೆಟ್ಟೆನು ಬಟ್ಟೆಯ ತೋಱಯ್ಯಾ (ಐಶ. ೬೩); ಅಡವಿಯೊಳು ಹೊಲಬುಗೆಟ್ಟೆನೋ (ಶಕಾ. ೦೨-೮೩); ಕಾನನದ ಕಾಡಾನೆಗಳವೊಲು ಪಥದನುವ ಕಾಣದೆ ಹೊಲಬುಗೆಟ್ಟವು (ತೊರಲಾ. ೬-೨೬-೩೩). ೨. ನೆನೆವ ಮನಂ ಹೊಲಬುಗೆಟ್ಟುವುದು (ಶಂಕ. ೦೯ ೩). [ಪೊಲಂಬು+ಕಿಡು]

ಪೊಲಂಬುದಪ್ಪು. ಹೊಲಬುತಪ್ಪು. ಹೊಲಬುದಪ್ಪು (ಕ್ರಿ). ೧. ದಾರಿ ತಪ್ಪು; ಮಾರ್ಗ ಕಾಣಿಸದಂತಾಗು : ರವಿರಥದ ಕುದುರೆಯೊಳೊಂದು ಪೊಲಂಬುದಪ್ಪಿ ನೆಲಕ್ಕಿಟ್ಟಿದುದೆಂಬಂತೆ ಚೆಲ್ವನಪ್ಪ ವಾಜಿಯ ರೂಪನಳವಡಿಸಿ (ಸುಕ್ಮಾಸ್ರ. ೩-೬೨ ಪ); ಪೊಲಂಬುದಪ್ಪಿದ ಮಜಿಯಂ ನೆನೆದು . . . ಪಾಯ್ದುಗುತರ್ಪ ವನಮಹಿಷಿಗಳ ಪಾಲ ಧಾರೆಯಂ ಮಿಕ್ಕು ನಿಮ್ನತೂಡ ವರ್ಪ ಕಾನನಬಿಡಾಲಂಗಳಿಂ . . . ವಿಜೃಂಭಿಸಿ (ರಾಜಶೇ. ೩-೩೩ ಪ). ೨. ರೀತಿ ತಪ್ಪು; ಕ್ರಮ ತಪ್ಪು : ಪೊಲಂಬುದಪ್ಪಿ ಕೋಟಲೆಗೊಳಗಪ್ಪ ಪಾಪ್ಯನದ ಮಾನಸರಂ ಸುಡು ಸಂದ ಗೊಡ್ಡರಂ (ಸಂಪ್ರತಿ. ೬-೮೦). ಹೊಲಬುತಪ್ಪು: ೧. ಸಂಸಾರಘೋರಾರಣ್ಯದಲ್ಲಿ ಹೊಲಬುತಪ್ಪಿ ಬಳಲುತ್ತಿಹೆ (ಶಕರ.೯೨). ೩. ದಿಗ್ಭ್ರಾಂತವಾಗು; ದಿಕ್ಕುತೋಚದಂತಾಗು : ಪದವಿಯ ಫಲವ ಕಾಣದೆ ಹೊಲಬುತಪ್ಪಿದೆನು (ಹಂಶಾ. ೩೯). ಹೊಲಬುದಪ್ಪು : ೧. ಗಹನದಲ್ಲಿ ಸಿಕ್ಕಿದ ಶಿಶುವಿನಂತೆ ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ (ಕೋಲಶಾಂ. ೦೩-೬೦); ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನ್ನೈ (ಕುಮ್ಮಾಕ. ೧೩-೦೨೩): ನಿಜವಿರಕ್ತಿಯ ಹೊಲಬುದಪ್ಪದೆ

. . .ಅರ್ತಿಯಿಂದಾಚರಿಸುವರಯ್ಯ ನಿಮ್ಮ ಶರಣರು (ಶಿಶಿ. ೬೦-೩೬). ೨. ಒಂದು ದ್ವಾರದಲ್ಲಿ ಬಂದ ಆತ್ಮಂಗೆ ಹಲವು ದ್ವಾರ ಉಂಟೆಂದು ಹೊಲಬುದಪ್ಪಿ ನುಡಿವವರ ನೋಡಾ (ಚೀಂವಚ. ೦-೦). ೩. ಹೊಲಬು ದಪ್ಪಿದ ಮನದ ಸತಿಯರು ಸುಳಿಯೆ ನಗನ್ನಪ ಬಂದನಿದೆಯೆಂದೆನುತ ಕಳವಳಿಸಿ ನಿಲುಕಿ ನೋಡುವಳು (ಶಕ್ತ. ೩-೨). ೪. ಮಾರ್ಗವು ಕಠಿಣವಾಗು ; ಗಹನವಾಗು ; ಅಗಮ್ಯವಾಗು : ಹೊಲಮೇರೆಯಿಂ ಮೇರೆ ಹೊಲಬುದಪ್ಪಿದ ನಾದಕಳೆಗಳ ಮೀಱಿರ್ದ ತುರ್ಯಂಗಳ ಗುರುವಿನ ಕರುಣದ ಅನಿಮಿಷದ ಮನೆಯಲ್ಲಿ ಹೊಲಬುದಪ್ಪಿದ ಕಂಡೆ ಮಧ್ಯವ ವನು (ಸಿದ್ಧಕೃ. ೪. ೬೪೦-೦೦೦೨). [ಪೊಲಂಬು + ತಪ್ಪು$_1$]

**ಪೊಲಂಬುದೋಱು** (ಕ್ರಿ). ಮಾರ್ಗ ಕಾಣು ; ಸಂಳಿವು ತೋರು : ನಂಬಿರೇ ತತ್ತ್ವವ ವ್ರತದೊಳಾಚರಿಸಿ ಪೊಲಂಬುದೋಱುವುದಾತ್ಮಸಿದ್ಧಿ (ಶಿಶಿ. ೬೯-೯). [ಪೊಲಂಬು + ತೋಱು]

**ಪೊಲಂಪೊಗು** (ಕ್ರಿ). ಕ್ಷೇತ್ರವನ್ನು ಪ್ರವೇಶಿಸು : ಭೇದವಿಲ್ಲದ ತಾನೆಯಪ್ಪಂತೆ ಸವಿಕಾರ್ಯವಾದ ವಿದ್ಯೆಯ ಪೊಲಂಪೊಗಲು ತತ್ಕ್ಷಣಕಂಗಳಾದ ವಂಶಾತ್ಮಕೈತನ್ಯದ ಪ್ರತಿಫಲದ ರೂಪವಹ ವಿದ್ಯಂಗಳಾ (ಶಿಕ್ಕೃ.೩-೯-೨೬). [ಪೊಲ + ಪೊಗು]

**ಪೊಲಕೇಶಿ** 'ಪುಲಿಕೇಶಿ' ನೋ.

**ಪೊಲಗ, ಪೊಲಿಗ** (ನಾ). ಒಬ್ಬಾತನ ಹೆಸರು : ಬನವಾಸಿನಾಡಂ ಛಲದಂಕರಾಮ ಸಾಸ್ತ್ರರನಾಳೆ ರಟ್ಟಪಳ್ಳಿಯ ಪೊಲಗನು (ಎಕ. VIII. ಹೊನ್ನಾ.೪. ೨೯-೩ ; ೯೩೪). **ಪೊಲಿಗ** : ಪಿರಿಯಮಾಗುಣ್ಣಿಯ ಪೊಲಿಗ ಊರ್ಗ್ಗಾರ್ಗಮುಣ್ಣುಗೆಯ್ಯುತ್ತಿರೆ (ಎಕ. VIII, ಸೊರಬ. ೯೦೩-೦೬; ೯೬೦) ; ಎಱಕನ ವರ ಪುತ್ರಂ ಪೊಲಿಗನೀ ಮಹೀಮಣ್ಡಳದೊಳ್ ಸ್ಥಿರಮಾಗಿರೆ (ಶಾಇ. XI-I, ೬೩ ೩೬ ; ೧೦೨೦). [?]

**ಪೊಲಗಾ** (ಕ್ರಿ). ಹೊಲದ ಬೆಳೆಯನ್ನು ಕಾಯು,- ರಕ್ಷಿಸು : ಪೊಲಗಾವ ಪಾಮರಿಯರ್ರೋಳಿಗಳ ಮೃಗಂಪ . . . ಸುಳಿವ ತಂಗಾಳಿಗಳ ಕಡುಗಂಪ ಸೇವಿಸುತೆ ಪಥಿಕರಾಸರ್ಗಳೆವರಾ ನಾಡೊಳು (ಕೃಬಂಶಾ. ೩-೬). [ಪೊಲ + ಕಾ$_1$]

**ಪೊಲಗಾಪು** (ನಾ). ಪ್ರದೇಶದ ರಕ್ಷಣೆ,-ಕಾವಲು : ಆ ಬಿಡಿನ ಪೊಲಗಾಪಿನವರ್ ಕಾಣುತೆ ಪಲರುಂ ಪರಿತಂದು (ಶಂಚಂ. ೩೬-೩೯). [ಪೊಲ + ಕಾಪು]

**ಪೊಲಗಾಹಿ, ಹೊಲಗಾಹಿ** (ನಾ). ಹೊಲದ ಬೆಳೆಯನ್ನು ರಕ್ಷಿಸುವ ವ್ಯಕ್ತಿ : ಪೊಲಗಾಹಿಯುಬ್ಬರಿಸಿ ದೀವ್ಗದಿಕ ಬೊಕ್ಕು ತಾನೆಳ್ಪಿರಿರಿದ . . . ಪೆರತೊಂದೆಡೆಗೆ ಪಾರಿ ಮಂಡಿಸುತೆ (ಕಕ್ಕಾಂಗ. ೩೩-೦೪೪೪). **ಹೊಲಗಾಹಿ** : ಹೊಲಗಾಹಿಗಳಲ್ಲ ಗುಡಿಸಲುಗಳಲ್ಲಿ . . . ಸೇರಿಕೊಂಡಿದ್ದರ (ಕಲುಷು. ೨-೬). [ಪೊಲ+ಕಾಹಿ]

**ಪೊಲಗಿಡಿಸು** 'ಪೊಲಗೆಡಿಸು' ನೋ.

**ಪೊಲಗಿಡು** 'ಪೊಲಗೆಡು' ನೋ.

**ಪೊಲಗೆಡಿಸು, ಪೊಲಗಿಡಿಸು** (ಕ್ರಿ). ೧. ದಿಕ್ಕು ತಪ್ಪಿಸು ; ದಿಗ್ಭ್ರಮೆಯುಂಟುಮಾಡು : ಪಚ್ಚೆಯು ಕಂಬಂಗಳ ಬೆಳಗುಂ ಪೊಲಗೆಡಿಸಿವತ್ತು ಸುರರೀಕ್ಷಣಮಾ (ಶಾರಕೃ. ೬-೯೩). **ಪೊಲಗಿಡಿಸು** : ೧. ನೀನಂತು ಪಲವೊದನೋದಿ ಎನ್ನಂ ಪೊಲಗಿ[ಪಾಠಾಂ. ಗೆ]ಡಿಸದೆ ಉಳ್ಳುದನುಳ್ಳಂತೆ ಪೇಱು (ಶಂಶಶಂ. ೦೬೯-೯). ೨. ರೀತಿಗೆಡಿಸು ; ಕ್ರಮತಪ್ಪಿಸು : ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಡಗನ್ನಡವಂ ಪೊಲ(ಗಿ) [ಪಾಠಾಂ. ಗೆ]ಡಿಸಿ ನುಡಿವರಾಗಮಬಲಹೀನರ್ (ಶಬ್ದಾ. ೦-೯೬) ; ಪೇಱವಿಶಿಯಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲೆಂ (ಶಾಂತಿಪು. ೩-೨೩ ವ). [ಪೊಲ + ಕೆಡಿಸು$_1$]

**ಪೊಲಗೆಡು, ಪೊಲಗಿಡು, ಹೊಲಗೆಡು** (ಕ್ರಿ). ೧. ದಾರಿ ತಪ್ಪು : ಮಾರ್ಗ ತಿಳಿಯದಂತಾಗು : ಅವಧಿವಿಬೋಧದ ಬರೆ ಮನಕ್ಕೆ ಬಗೆಯೊಳ್ ಕಂಡಂ ದಿವಿಜಪತಿ ತನ್ನ ಮುನ್ನಿನ ಭವಮಂ ಪೊಲಗೆಟ್ಟು ಬಟ್ಟೆಗಾಣ್ಬಂತಾಗಳ್ (ಶಾಂತಿಪು. ೬-೦೯); ಇರುಳ್ ನಡೆವಂ ಪೊಲಗೆಟ್ಟಲ್ಲಿಯ ನೇಸಱ್ಮೂಗಿವ ಪೊರ್ (ಶಂಕ್ಕೃತ್ತ. ೯-೬೩); ಪೆಱುವಿನೊಳ್ ಪೊಲಗೆಟ್ಟು ತೊಳಲುತ್ತುಂ ಬಾದು ನಿಮ್ಮಂ ಕಂಡೆಂ (ಶಾಚಂ. ೦೬೬-೩೦). ೨. ಭ್ರಾಂತಿಗೊಳ್ಳು; ದಿಗ್ಭ್ರಮೆಯನ್ನು ಹೊಂದು; ದಿಕ್ಕು ತೋಚದಂತಾಗು : ಶಿಶುಶ್ರೇಣಿಗಳ್ ಪಿಡಿಮುಱಿಂ ಪೊಲಗೆಟ್ಟು ಪೊಕ್ಕು ಮೃಗಶಾಬಾನೀಕಮಂ ಕೊಂಡು (ಅರ್ಜುನ. ೩-೩೦); ಬಳೆಕೊಳಿಳಕದಿಂ ವಿಯಚ್ಚರಗಣಂ ಶೇಷಂ ದಿಶಾಪಾಲಕರ್ ಪೊಲಗೆಟ್ಟೋದ (ಶಗಂ. ೬-೯೦). **ಪೊಲಗಿಡು**: ೨. ನೆಲನೀಕಂಗೀ ಯೆಡೆಯೆಂದು ತೋಱಿ ಕಡೆ ಪೊಲಗಿಡದಱಿಂ ಪರಮಪಂಡಿತಂ ಪವನಸುತಂ (ಗದಾಯು. ೮-೩೩); ಕಾದಲನೆಡೆಗೆಯ್ದೆ ಬರ್ಪ ಖಚರೀನಿಚಯ ಕೃದಿರ್ಪೋಗಿ ದಿಟ್ಟಿಗಳ್ ಪೊಲಗಿಡೆ ಚಿತ್ರದುಜ್ಜುಗಮುಮಂ ಪಱಿ ದಿರ್ದಪೊಲಿರ್ದ ನಲ್ಲಳಂ . . . ನರಪತಿ ಭಾವಿಸಿ (ಪರ್ಶ್ವ. ೯-೬೬): ಸವನಕ್ಷೀರಂ . . . ಪರಿದುದು ದಿವಿಜರ್ ಮೇರುಮಹೀಧರಮಲ್ಲದು ತಾರ ಮಹೀಧರವಿದೆಂದು ಪೊಲಗಿಡುವಿನೆಗಂ (ಅಜಿಂತ. ೩-೬೬). **ಹೊಲಗೆಡು**: ೧. ಮುನಿಗಳೊಳಱಿದರು ಮಾಮಸಕರಿ ಪುರಜನಂ ಭೂವನಂ ಹೊಲಗೆಟ್ಟ ಕಱು ತಾಯನಱಸುವಂತೆ (ಹರಿಶ. ೮-೬೦): ಕೆಟ್ಟೆನಿನ್ನೇವೆನ್ನಱುಗ ನಡವಿಯೊಳು ಹೊಲಗೆಟ್ಟನೋ (ಸಿದ್ಧರಾ. ೨-೪೩). [ಪೊಲ + ಕೆಡು$_1$]

**ಪೊಲಗೆಱೆ** (ನಾ). ಹೊಲಸು ತುಂಬಿದ ಕೆರೆ : ಪಾಪದ ಪುಂಜಂ ತೋಯಿಲ ಕುಟಿ ಪೊಲಗೆಱೆಯೆಂದಾಯತಿಯಂ ಬಗೆವರುಟ್ಟವರಾ ಸೂಳೆಯರಂ (ಶಬರ. ೨೯೯). [< ಪೊಲೆ + ಕೆಱೆ]

**ಪೊಲಗೇರಿ** 'ಪೊಲೆಗೇರಿ' ನೋ.

**ಪೊಲತಪ್ಪು** (ಕ್ರಿ). ದಾರಿ ಸಿಕ್ಕದಾಗು; ಹಾದಿ ತಪ್ಪು : ಪೊಲತಪ್ಪಿದ ಹುಲ್ಲೆಯಂತಾ ಸಖಿಯರು ಪಲುಬಿ ಪಂಬಲಿಸಿ (ಅಂಶಕ. ೯-೬೨). [ಪೊಲ + ತಪ್ಪು$_1$]

**ಪೊಲತಿ, ಪೊಲಂತಿ, ಹೊಲತಿ** (ನಾ). ೧. ಹೊಲೆಯರ ಹೆಣ್ಣು : ನೀಳನೆಂಬ ಮಾದಿಗಂಗು ಕೇಶಿಯೆಂಬ ಮಾದಿಗಿಗಂ ಮಗಳ್ . . . ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೬); ಬಿಡುವಂತುಟದೊಂದವಳ್ಗೆ ಪೇಱಿ ದೊರೆಕೊಳಲಾರ್ಗಮೇಂ ಪೊಲತಿಗೆ (ಕಾದಂಬ. ೬೯೬); ಪೊಲತಿಯಿನ್ನಾಳಿಕೆ ಶುನಕನ ಕಳೆವರಮಂ ಪೊಕ್ಕು ಪೇಸದುಂಡಾ ಪಾಪನಿ ನಿರ್ಮಾಳನಾಗಿ ಮುಕ್ತಿ ರಮೆಯೊಳ್ಳಲಿದಂ (ಸಚಿತ. ೦೦-೦೦೯). **Δಪೊಲಂತಿ**: ೧. ಪೊಲಂತಿಯರೊಳೀ ಜನಮೋಹನಮಪ್ಪ ರೂಪು ತಾಂ ನೆಲಸುಗುಮೇ (ಪ್ರಶಾಶ. ೮-೬೦). **ಹೊಲತಿ**: ೧. ಬಡ ಹೊಲತಿ ಮೈಗೆಟ್ಟವಳು ನೀನು . . . ಬಾರದಿರತ್ತ ನಿಲ್ಲು (ಐಕಪು. ೩೬-೩೩); ಹೊಲಗೇರಿಲಿ ಹೊರೆಯ ಹೊಲತಿಲ್ಲ (ಶುಶಂಶ. ೦-೦೦೭ ಅಕುಶಲ್ಲಾ). ೨. "ಹೊಲೆಯುಳ್ಳವಳು. ರಜಸ್ವಲೆಯಾದವಳು" (ಶಬ್ದ. ಕೋಶ): ಹೊಲತಿ ಶುದ್ಧನೀರ ಮಿಂದಂತಾಯಿತ್ಯಯ್ಯಾ (ಶಿಶ. ೬೨೯): ಹೊಲತಿ ತನ್ನ ಹೊಲೆಯ ಮಱಿದು ಶುದ್ಧನೀರ ಮಿಂದೆನೆಂದು ಕೆಲವರ ಮುಟ್ಟುವಂತೆ . . . ತ್ರಿಕರಣಶುದ್ಧವಿಲ್ಲದ ಪೂಜೆ (ಚೀಂವಚ. ೩೯-೦೬೨). [< ಪೊಲೆ + — ತಿ$_1$ (< — ಇತ್ತಿ)./ತಮಿ. ಪುಲೈತ್ತಿ; ಕೊಡ. ಪೊಲತಿ]

**ಪೊಲದಿ** (ನಾ). ಕಾಮುಕ; ವ್ಯಭಿಚಾರಿ : "ಸಿತಗನುಂ ಪೊಲದಿಯಂ [ಪಾಠಾಂ. ಪೊಲೆಯನೆಂ]ದಕ್ಕು"(ಶಬ್ದ್ಕೃ. ೮೩); "ಪೊಲದಿಯೆನೆ ಸಿತಗ" (ಗ್ರಿಪು. ೩೬). [ದೇ. ∥ ಮಲ. ಪುಲಯಾಟಿ]

**ಪೊಲದಿಗಣ್ಣು** (ನಾ). ಕಾಮುಕ ಕಣ್ಣು; ವಿಟದೃಷ್ಟಿ : ನಿನಗೆ ಪೊಲದಿಗಣ್ಣು ಕೊಟ್ಟಾಗ, ನಿನ್ನ ಅದ್ಭುತ ರೂಪ ಸೌನ್ದರ್ಯಗಳ ಕಿರುಜಪ್ಪನದ

ಅಂಗೋಪಾಂಗಪ್ರದರ್ಶನಗಳ ಹಾವಭಾವವಿಲಾಸವಿಭ್ರಮಗಳ ಪ್ರಯೋಗ ದಿಂದ ಬಗೆಗಲಂಕಿ ಅವನನ್ನು ಮುಂದರಲಿಪಿಡಿಯದೆ (ಮುಂಶ್ರಿ. ೫೬-೧೦).

[ಪೊಲದ+ಕಣ್ಣು (< ಕಣ್)]

**ಪೊಲಬಿಗ** 'ಪೊಲಂಬಿಗ' ನೋ.

**ಪೊಲಬು** 'ಪೊಲಂಬು' ನೋ.

**ಪೊಲಬುಗೆಡು** 'ಪೊಲಂಬುಗೆಡು' ನೋ.

**ಪೊಲಮಚ್ಚು** 'ಪೊಲಮೆಚ್ಚು' ನೋ.

**ಪೊಲಮೆಚ್ಚು**, ಪೊಲಮಚ್ಚು (ನಾ). ತನ್ನ ನೆಲೆಯ ಮೇಲಿರುವ ಪ್ರೀತಿ,-ಸೆಳೆತ; ಸ್ವಸ್ಥಾನದ ಆಕರ್ಷಣೆ: ಅದಟರ ಚೆನ್ನಪೊಗರ ಸಬಂಗಳ ತೊಟ್ಟುಸುರ್ಯೊಳ್ ತೊಡಂಕಿ ನಿಲ್ಲದೆ ಪೊಲಮೆಚ್ಚು[ಪಾಠಾಂ. ಪೊಲಿಮಚ್ಚು] ತಮ್ಮ ಮನದೊಳ್ ಮಿಗೆ ಬೆಟ್ಟಿಸಿದಂತೆ ತೋಱುವ . . . ಅರ್ಬಸುಗಳ್ ಪರಿಗೊಂಡುಮಾಱಿಯೊಳ್ (ಶಂಕರಾ. ೬-೦೦೯). **ಪೊಲಮಚ್ಚು**: ನಿಲೆ ಪೊಲಮಚ್ಚು ತಮ್ಮ ಮನದೊಳ್ ಸಲೆ ಕಟ್ಟಿಸು ಪರ್ವಿದುರ್ವಿಯೊಳ್ ಚಲದಿಜಿದಾಂತು ಬಿಟ್ಟ ಭಟರಂತ್ರದ ಪೊಂಕುಳಿಯೊಳ್ . . . ಪರಿ ತಂದುವು ಯುದ್ಧಭೂಮಿಯೊಳ್ (ಜಿಐಚ. ೦೦-೦೫೩). [ಪೊಲ+ಮೆಚ್ಚು₂]

**ಪೊಲಮೇರೆ**, ಪೊಲಮೇರೆ, ಹೊಲಮೇರೆ, ಹೊಲವೆರೆ, ಹೊಲವೇರಿ, ಹೊಲವೇರೆ (ನಾ). (ಪ್ರದೇಶದ) ಗಡಿ; ಸೀಮೆ; ಸರಹದ್ದು: ಪೊಲಮೇರೆ ತಟ್ಟಗ್ಗಲಿಯ ಕಿಟ್ಟಿಯ ಪೋಗಿ (ಎಕ. II, ೩-೫೫; ಸು. ೮೦೦); ಇನಿತುಮಂ ಪೊಲಮೇರೆ ಸಹಿತಂ ಇತ್ತನ್ (ಎಕ. IX. ಕಂಗಳೂ. ೯೩-೦೬; ಸು. ೮೯೦); ಅನಾಲಿನೆಯೂರ ಮುಂಧಣ ಪೊಲಮೇರೆಯ ಪಳ್ಳದ ತಡಿಯಾಲು (ಶಾಂಕೇಕ್. ೬-೩೮; 1070). **ಪೊಲೆಮೇರೆ**: ಪೂವಿನ ಬಪ್ಪರಗೆ[ಯ] ನಾಲ್ಕುದೆಸೆಯ ಪೊಲೆಮೇರೆಯುಂ [ನ]ಡು ಸರಿಯಾಗಿ ನಡದು[ಂ] (ಶಾಇ. XI-1, ೬-೨೯; 862). **ಹೊಲಮೇರೆ**: "ಅವಧಿ, ಮರ್ಯಾದಾ, ಆಘಾಟ, ಸೀಮಾ, ಸೀಮಾ—ಈ ೫ ಹೊಲಮೇರೆ" (ಶಬ್ದಮ. ೪೩-೦೦೯); ನಮ್ಮ ಕೂಡಲಸಂಗನ ಶರಣರ ಅನುಭಾವವಿಲ್ಲದವರ ಹೊಲಮೇರೆಯ ಹೊಂದೆ ಹೊಲನ ಬಿಟ್ಟೋಡುವೆ (ಬಸವ. ೪೪೬); ಹೊಲಮೇರೆಯುಂ ಮೆಟ್ಟಲೊಲ್ಲದ ಚಲಂ ಮಿಕ್ಕು ಕಲಿಕಾಮನಲ್ಲಿ ತಿರುಗಿದನುಮ್ಮಳಂ ಮಿಕ್ಕು (ಕಂಠ. ರ. ೩೦೬-೯). **ಹೊಲವೆರೆ**: ಮೂಡಣ ಮೇರೆ ಮಂಗಳೂರ ಹೊಲವೆರ ಯೊಡವಿನ ಕೊತ್ತುರ ಹೊರೆಯಾಣ ಕವಿಲೆಯ ಕಲ್ (ಕಕ. ೭೬-೦೨-೫೨; 1170). **ಹೊಲವೇರಿ**: ಹೊನ್ನವುರದ ನಿರಗುನ್ನದ ಹೊಲವೇರಿಯ ಅಳಗಡಲು . . . ಕಾದಿ ಸುರಲೋಕಪ್ರಾಪ್ತನಾದಲ್ಲಿ (ಎಕ. V. ಹಾಸನ. ೬೮-೯ ; 1174 ?); ಈಶ್ವರಪುರದ ಹೊಲವೇರಿಯ ಚಿಕ್ಕಕಂಟೆ (ಎಕ. VII. ಶಿವಮೊ. ೨೩-೨೫೧; 1624). **ಹೊಲವೇರೆ**: ಶ್ರೀಮ[ತ್]ತ್ರಿಭುವನೇಶ್ವರ ದೇವರ ನಿವೇದ್ಯಕ್ಕೆ ದೇವಗೇರಿಯ ಹೊಲವೇರೆಯುಂ ತೆಂಕ . . . ಬಟ್ಟ ಯರೆ ಮತ್ತರಯ್ದು (ಎಇ. XIX. ೦೬೨-೨೮; 1121); ಬಡಗಪೊಲದ ಹೊಲವೇರೆಯ . . . ಕೆಯ ಘಳೆಯ ಮತ್ತರು ೪ (ಶಾಂಕೇಕ್. ೩೨-೦೦; 1149); ಅಲ್ಲಿಂ ಪಡುವಲು ತೆಂಕಣ ಮೇರೆ ಸಿರಿಯೂರ ಹೊಲವೇರೆ ಯೊಡವಿನ ಕೊತ್ತುರ (ಹಾಸನ. ೭೮-೦೯; 1170). [ಪೊಲ + ಮೇರೆ₁]

**ಪೊಲಮಾನಸೆ** (ನಾ). = ಪೊಲತಿ ೧: ಚರಿಗೆವೋಗುತ್ತುಂ ನಾನಾನೂನ ದುಃಖಪೀಡಿತಮಾನಸೆಯಾಗುತ್ತಮಿರ್ದ ಪೊಲಮಾನಸೆಯಂ ಕರುಣಾ ಕೃಮಿಗೆ ಕಂಡು (ಸುಕುಮಾ. ೫-೨). [< ಪೊಲೆ + ಮಾನಸೆ]

**ಪೊಲವಿಡಿ** (ಕ್ರಿ). ನೆಲೆ ಮುಟ್ಟು: ಪೊಲವಿಡಿದುದು . ಬಗೆಯುಮಮಾ ಬಲೆಯೊಳ್ ಕಣ್ಬಾಲಿ ತೊಡರೆ ಪಿಡುಕುವುದಮಮಾ (ಶಶಿ. ೩-೦೭೯).

[ಪೊಲ + ಪಿಡಿ₁]

**ಪೊಲಸಂದು** (ನಾ). ಬೇರೆಬೇರೆ ಹೊಲಗಳು ಕೂಡುವ ಸ್ಥಳ: ಅನ್ನೆ ಬನ್ನಿ ಬೆಳ್ಗಲಿಯ ಇಗ್ಗಲಿಯ ಕಲ್ಸನ್ದಿನ ಮಾಱೂರ ಪೊಲಸನ್ದಿನ ಕಟಿಕೊಡಿಯನ ಕಿಟಿಯಿಂ (ಎಕ. III, ಕಂಕಡ. ೦೩೯-೨೩; ೨೧೬ ?).

[ ಪೊಲ + ಸಂದು₁ ]

**ಪೊಲಸೀಮೆ** (ನಾ). = ಪೊಲಮೇರೆ: ಮಾಱೂರ ಮುಕ್ಕೂಡಲಲ್ಲಿ ಪೊಲಸೀಮೆ ಕೂಡಿತ್ತುಂ (ತ್ರೈಅ. ೦೯೩೯, ೩೬-೨೦; 11ನೆಯ ಶ).

[ ಪೊಲ + ಸೀಮೆ ]

**ಪೊಲಸು₁**, ಹೊಲಸು₁ (ನಾ). ೧. ಕೊಳೆ; ಕೊಳಕು; ಮಾಲಿನ್ಯ: ಅದ್ರಿಯುನಗೆಯತ್ತುವುರ್ವಿಯನಡಂಗಿಪ ಭಂಗಿಯೊಳಿಲ್ಲ ಭೇದಮಾ ಕ್ಷಯ ಪವನಂಗಮಾತನ ಗದಾಪವನಂಗಮದೊಂದೆ ರಸ್ತರ್ಚೆಯ ಪೊಲಸುಂಟೆ ದೈತ್ಯನ ಗದಾನಿಳನಲ್ಲದೊಡಾ ಕ್ಷಯಾನಿಳಂ (ಜಗ. ೬-೬೪); ಪೊಲಸಿನ ನೆರೆ ರುಧಿರದ ಕುಳಿ ಎಲಿಎಲಿಸುವ ಪುಣಗಳೊಗೆವ ಪುತ್ತು ಪುರೀಷಂ ನೆಲಸಿದ ದರಿ ಕಾಮಾಹಿಯ ಬಿಲಮಂಗಜಗೃಹಮನಂಗದುರ್ಜಲಕೂಪಂ (ಶೃಶ. ೨೬-೬೦). ೨. ಅಮೇಧ್ಯ: ಮಲ: ಪೊಲಸಿನಂತಶುಚಿಯಪ್ಪ . . . ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕಿಡಿಸುವುದೆಗ್ಗಿಕೆ (ಧರ್ಮಾಮೃ. ೩-೦೫೬). ೩. ಕಳಂಕ; ದೋಷ: 'ಪೊಲಸುಗೊಳ್' ನೋ. **ಹೊಲಸು₁**: ೧. ಹೊಲಸಜಿಯಟ್ಟ ನಾರ್ವ ನಿಜದೇಹದ ರಾಜತನೂಜ ನರ್ತಿಯಿಂ ತಳೆದುಪವಾಸದೊಂದು ಫಲದಿಂ ರತಿವಲ್ಲಭರೂಪನಾಗಿ ಕಣ್ಗೊಳಿಸಿ . . . ಅಮೃತೇಶನಾದಂ (ಪುಣ್ಯಾಸ್ರ. ೬-೦೬); ಬಾತ ಹೆಣ ನುಬ್ಬರದ ಹೊಲಸಿನ ಗವಲು ಕವಿದುದು ಕೂಡೆ ವನದೊಳಗೆ (ಕುಮಾ.ಭ. ೦೦-೦೨); ಮೈಮೇಲೆ ಹೊಲಸು ಇದ್ದರೆ ಅದು ರೋಮರಂಧ್ರಗಳ ಬಾಯಿಗೆ ಕೂತು, ಬೆವರಿಗೆ ಅಡ್ಡಿ ಮಾಡುತ್ತದೆ (ಕುಟುಂಬಯ. ೯-೨೪). ೨. ಹೊಲಸು ಮಾಂಸದ ಹುತ್ತ ಎಲುವಿನ ಹಂದರವು ಹೊಲೆ ಬಳಿದ ತನುವಿ ನೊಳಗಿರ್ದುಮದಜಿೊಳಗೆ ಕುಲವನಱಸುವರೆ (ಸರ್ವಜ್ಞ. ೨೦). ೪. ಕಸ: ಗಲೀಜು: ಮ್ಯುನಿಸಿಪಾಲಿಟಿಯ ಆರೋಗ್ಯಖಾತೆಯ ಟ್ರಕ್ಕೊಂದು ರಸ್ತೆಯ ಮೇಲೆ ಕೂಡಿ ಹಾಕಿದ ಹೊಲಸಿನ ರಾಶಿಯನ್ನು ತೆಗೆಯಲು ಬಂದು ನಿಂತಿತ್ತು (ಅಪೂರ್ಣ. ೦೦೨). ೫. (ಆಲಂ) ಹೀನವಾದ ಕಾರ್ಯ; ಕೆಟ್ಟ ಕೆಲಸ; ನೀಚಕಾರ್ಯ: ಇಂತಹ ಹೊಲಸಿನೊಳಗೆ ನಾನು ಕೈಹಾಕುವುದಿಲ್ಲ. ನನ್ನನ್ನು ಹಿಡಿದರೆ ನೀವು ಸಂಸ್ಥಾನದಿಂದ ಉಳಿಸಲು ಬಲ್ಲಿರಾ ? (ಕೂಶಶಾ. ೬೦). ೬. ಅನಾಗರಿಕತೆ; ಅಸಭ್ಯತೆ: ಮಾತು ಹೊಲಸಿನ ಗಂಧವಾಗಿದೆ ಭೀತಿರಸದಲಿ ಮನ ಮುಳುಗಿತೀ ಪ್ರೀತಿ ಮಾಡಿಯ ಮುಸುಕನಾಗಿವುದನಾರು ಕಲಿಸಿದರು (ಕುಮಾ.ಸ. ೦೨-೬೩). (ಗು). ೭. ಕೊಳಕಾದ; ಅಶುದ್ಧವಾದ; ಮಲಿನವಾದ: ಹೊಲಸುಮೈಯಿದಗೇಕೆ ಹೊಸಕಸ್ತೂರಿವಾಟ ತಲೆದೋಱುವವಗೇಕೆ ದಟ್ಟ ಪುನುಗು (ಪುರಂದ. ೦-೦೦೦-೦); ನೆಲೆ ಇಲ್ಲದ ಕಾಯ . . . ಮಲಮೂತ್ರಂಗಳು ಕೀವು ಕ್ರಿಮಿಗಳುಳ್ಳ ಹೊಲಸು ತೊಗಲ ಮುಟ್ಟಿ ಕೆಡಬೇಡಿರೊ (ಪುರಂದ. ೨-೦೦-೨).

ಪೊಲಸಟ್ಟಿ ನಾಱು, ಹೊಲಸಟ್ಟಿ ನಾಱು=ವಿಪರೀತವಾದ ದುರ್ನಾತ ದಿಂದ ತುಂಬಿರು: ಕಾಡ ಪಂದಿಗಳ ಬಲ್ನೆಣದಿಂ ಪೊಲಸಟ್ಟಿ ನಾರ್ವ . . . ನೆತ್ತರ ಕೆಯ್ ನಡುಗಲ್ಕೆ (ಲಾಲಂತೂ. ೦೫೩); ಮೆಯ್ಯ ವ್ರಣಮುಂ ಕೀವುಂ ಪೊಲಸಟ್ಟಿ ನಾಱ್ತಿ (ಪುಣ್ಯಾಸ್ರ. ೬-೨೬ ಪ); ಮುಂದೆ ನೋಡದೆ ಹೊಲಸಟ್ಟಿ ನಾರ್ತಪುದು ಪೆರ್ಬುಲಿಯಿರ್ದುದಕ್ಕೆನುತ್ತ ಪೆರ್ಚಿದ ಪನದಲ್ಲಿ ಪಜ್ಜೆವಟ್ಟಿಯಿಂ ನಡೆಗೊಂಡುದು ಭಿಲ್ಲಸಂಕುಳಂ (ರಕ್ಷಕು. ೨-೨೦೦). **ಹೊಲಸಾಗು** = ಕೊಳಕಾಗು; ಗಲೀಜಾಗು: ಮೊದಲಿಗಿಂತ ನಾಲ್ಕುಪಾಲು ಹುಲ್ಲಾಗಿ ಸೀನು ಬಂದಿತು; ಮೂಗು ಇನ್ನಷ್ಟು ಹೊಲಸಾಯಿತು ! (ಕುಟುಕು. ೩೬); ಮಗುವಿನ ಬಟ್ಟೆ ಹೊಲಸಾಗಿದೆ (ಲೂ). **ಹೊಲಸು ಮಾಡು**=೧. ಕೊಳಕು ಮಾಡು; ಮಲಿನಗೊಳಿಸು: ಅವನು ಕಸ ಚೆಲ್ಲಿ ಮನೆಯನ್ನೆಲ್ಲ ಹೊಲಸು ಮಾಡಿದ್ದಾನೆ (ಲೂ). ೨. ಮಲವನ್ನು ವಿಸರ್ಜಿಸು; ಹೇಸಿಗೆ ಮಾಡು: ಮನೆಯ ಬಾಗಿಲಿನಲ್ಲಿ ನಾಯಿ ಹೊಲಸು ಮಾಡಿದೆ

(ಜಾ೦). ೩. ಕಳಂಕಗೊಳಿಸು ; ದೋಷಯುಕ್ತವನ್ನಾಗಿ ಮಾಡು : ನಿನಗೆ ಅಕ್ಕ ತಂಗಿ ಇಲ್ಲವೆ ? ಅವರ ಹೆಸರನ್ನು ಹೀಗೆ ಹೊಲಸು ಮಾಡಿದ್ದರೆ ನಿನಗೆ ಹೇಗೆ ಅನಿಸುತ್ತಿತ್ತು (ಕಂಗಕೋ. ೯೯).

[ಪೊಲೆ + — ಸು$_2$. / ತುಳು. ಪೊಲಸ್, ಹೊಲಸ್ ]

**ಪೊಲಸು$_2$**, ಹೊಲಸು$_2$ (ನಾ). ಮಾಂಸ ; ಬಾಡು : ಮತ್ತಮಾನುಷ ಪೋಗೆವೋಗೆ ಪೊಲಸಿನ ಗಂಧಮಂ ಪೊತ್ತು ಕಿಱುಕವ್ವರೆಗೊಳ್ಳ ಕೌರ ಪೆಣ್ಗೆಯಾನಱಿಯರಾದ ಬೇಡವಟ್ಟವಂ ಕಂಡಂ (ಕಾದಂಗಾ. ೬೯೩) ; ಇವರವರ್ಗೆ ಕಪಟದಿಂದಂ ಸವಿನಯದಿಂದೆಱಿಯೆ ಕಳ್ಳನಾದರದಿಂ ಮತ್ತ ಐರಿವರ್ಗೆ ತಂದು ಪೊಲಸಂ ಸವಿನಯದಿಂದಿಕ್ಕಿ ಕುಡಿದು ತಿಂದಂದಾಗಳ್ ಸಾವುದುಂ (ಧರ್ಮಾಮೃ. ೨-೨೦೯). **ಹೊಲಸು$_2$** : ಕೊಲುವನೇ ಮಾದಿಗ ಹೊಲಸ ತಿಂಬವನೇ ಹೊಲೆಯ ಕುಲವೇನೋ ಅವಂದಿರ ಕುಲವೇನೊ (ಬಸವ. ೩೯೨) : ಅವನ ಕಯ್ಯೊಳು ಹೊಲಸು ವಸಿದೊಳವ್ಯತು (ಕವ್ಯ.ಕ. ಈ. ೦೯೯-೦೩). [ದೇ. ೧ ತಮಿ. ಪುಲೈಚು ; ತೆಲು. ಪೊಲುಸು]

**ಪೊಲಸುಗೊಳ್** (ಕ್ರಿ). ಕಳಂಕಿತವಾಗು ; ದೂಷಿತವಾಗು : ಕಾಯಿ ವಾಡಿದವನ ಕೊಲೆಯಿಂದ ಪೊಲಸುಗೊಂಡೆಲ್ಲವನು (ಮುಖುಪಾ. ೦೦೬-೩೩೯).

[ ಪೊಲಸು$_1$ + ಕೊಳ್$_1$ ]

**ಪೊಲಸುನಾಱು**, ಹೊಲಸುನಾರು, ಹೊಲಸುನಾಱು (ಕ್ರಿ). ಗಬ್ಬುನಾತ ಬರು ; ದುರ್ವಾಸನೆ ಬರು : ನೆತ್ತರೊಳ್ ಪೊರೆದು ನಿರಂತರಂ ಪೊಲಸು ನಾಱುವ ಮೆಯ್ಯನೆ ಕರ್ಚಲೆಂದು ಚಿಚ್ಚರವಂಪರಾಂಬುರಾಶಿಗಿೞ್ವಂತಿ ೞ್ದಂ ಕಮಳೈಕಬಾಂಧವಂ (ಪಂಪಭಾ. ೦೦-೩೦) : ದೈತ್ಯನಂ ಪೊಲಸು ನಾರ್ಪನೆಗಂ ತ್ರಿಶೂಲದಿನೊತ್ತಿ ಕೊಂದ ಕುಮಾರಿ ಕೊರ್ತಲಸದಿರ್ಕೆ ಧುಕಾಸಿಧಾರೆಯೊಳಂಕಮುಳ್ಳರ ದೇವನಾ (ಕಾವ್ಯಾವ. ೨೦೨). **ಹೊಲಸು ನಾರು** : ಕುಣಪ= ಹೊಲಸುನಾರುವ ಹೆಣ (ಗಂನಾಮ. ೯೯). **ಹೊಲಸು ನಾಱು** : ಹೊಲಸುನಾರ್ವಗಳಜಲಚರಂಗಳು ಬೆಳವು ನೆಱೆಯದ ಕಿಱುವೆಸಳ ನೆಯ್ದಿಲುಗಳೀ ವಾಡದಿಯ ಕುಡಿತೆಗುಂಗಳಿಗೆ ಪಡಿಯಲ್ಲ (ಶಸಕೃ. ೯-೨೩).

[ ಪೊಲಸು$_1$ + ನಾಱು$_1$ ]

**ಪೊಲಸೇಳು**, ಹೊಲಸೇಳ್, ಹೊಲಸೇಳು (ಕ್ರಿ). ೧. ದುರ್ಗಂಧ ವ್ಯಾಪಿಸು.—ಹರಡು : ಶಿವಶಿವ ಇದೆಲ್ಲಿಯದ್ಭುತವೆನುತೆ ಪೊಲಸೇಳೆ ತಿರುಗಿ ಬಂದಗ್ಗಣಿಯನೊಂದು ಠಾವಿನೊಳಿರಿಸಿ (ಕವ್ಯ.ಕ. ಕೀ. ೦೩೩-೨೦). **ಹೊಲಸೇಳ್** : ೧. ಮೇಲೆ ಮುಸುಕಿರ್ದ ಮಾಂಸದ ಸುಲಿಯ ಹೊಲಸೇಳ್ವ (ಬಿ:ಕೋಟ. ಹ. ೩೦೦-೨೨). **ಹೊಲಸೇಳು** : ೨. ಕಸವು ತುಂಬಿರು ; ಗಲೀಜಾಗು : ಮನೆಯಲ್ಲ ಹೊಲಸೆದ್ದು ಹೋಗಿದೆ (ಜಾ೦).

[ ಪೊಲಸು$_1$ + ಏಳು$_1$ (<ಎೞ್$_1$)]

**ಪೊಲಿ$_1$** 'ಪೊಲ್' ನೋ.

**ಪೊಲಿ$_2$**, ಹುಲಿ$_2$, ಹೊಲಿ$_2$ (ನಾ). (ಕರಾ) ಧಾನ್ಯರೂಪದ ಬಡ್ಡಿ ; ತಲವಾಸಿ : ನೂರ್ಗೆನ್ನಾಗ ಭಕ್ತ ಪೊಲಿಯಿ ಕೊಣ್ಡುಟ್ಟುವೊದು (ಎಕ. X. ಕೋಲಾರ. ೬-೯ ; 758) ; ಮುಡಿಗೆ ಬಂದು ಕಳಸಿಗೆ 'ಪೊಲಿ' (ಜಟು೨. ೩೯). **ಹುಲಿ$_2$** : ಗದ್ದೆ ಕೊಯ್ಲಾದ ನಂತರ ಹುಲಿ (ಬಡ್ಡಿ) ಸೇರಿಸಿ ಒಂದಕ್ಕೆ ಎರಡರಷ್ಟು ಭತ್ತವನ್ನು ಹಿಂದಕ್ಕೆ ಕೊಡಬೇಕಾಗಿತ್ತು (ಜಾಪಹೊ. ೮). **ಹೊಲಿ$_2$** : ಅಕ್ಕಿ ವಾಳೆಗಾಬದಲ್ಲಿರಿಸಿಕೊಂಡು ಹೊಲಿಗೆ ಕೊಟ್ಟರೆ ಪ್ರಯೋಜನವಿದೆ (ಮುಗಿಯು. ೬೬) ; ಎಷ್ಟೋ ಮಂದಿ ಅವರಿಂದ ಹೊಲಿಗೆ ಬತ್ತ ಹೊಂದಿಕೊಂಡಿದ್ದರು (ಜಾಸಕೊ. ೫).

[ದೇ. ೧ ತಮಿ. ಮಲ. ತುಳು. ತೆಲು. ಪೊಲಿ]

**ಪೊಲಿಕೇಶಿ** 'ಪುಲಿಕೇಶಿ' ನೋ.

**ಪೊಲಿಗೆ** 'ಪೊಲ್ಗೆ' ನೋ.

**ಪೊಲಿಸು**, ಹೊಲಿಸು (ಕ್ರಿ). (ಹರಿದುದನ್ನು ಜೋಡಿಸಿ) ಹೊಲಿಗೆ ಹಾಕಿಸು : ಹಾಸನಟ್ಟದು ಕಂಥೆಯಂ ಪೊಲಿಸುವ (ರಘುಕೃ. ೩-೨೦) : ಸಂಜೆಗೆಂಪಿನ ತೆಳ್ಪಮರ್ದಿರೆ ಪೊರೆಯನೆತ್ತಿ ಪೊಲಿಸಿದ ತೆರದಿಂದೊಳ್ಪಿನ ಪೊಸಟೊಪ್ಪರಂ . . . ಎಸೆದುದು (ಶಾಂತಿಪು. ೯-೬೩). **ಹೊಲಿಸು** : ಹೋಳಾದ ಕವಚವ ಹೊಲಿಸಿದರು (ಕುಮಾರ. ೫-೩೬) ; ದೀನಸುಗಳ ದಾಗಗಳನ್ನು ಹೊಲಿಸಿ ತಯಾರ ಇಡೋಣ (ಮುಂಬಯಿ. ೨೬೯).

[ಪೊಲ್ + — ಇಸು$_2$]

**ಪೊಲುಕೇಸಿ** (ನಾ). ಒಬ್ಬಾತನ ಹೆಸರು : ಪೊಲುಕೇಸಿಯು ಬೂದಿಗನ ಕಾಳಿಗ ದೊಳ್ ಪೊಲುಕೇಸಿಯೊಡತಿಹದು ಕೊಕಾಳಿನ ಕೊನ್ದು ಸತ್ತ (ಎಕ. III. ಟ್ನಸೂರು. ೯೯-೬ ; ಸು. ೯೦೦ ?). 'ಪುಲಿಕೇಶಿ' ಪರಾ. [?]

**ಪೊಲೆ**, ಹೊಲೆ (ನಾ). ೧. ಮೈಲಿಗೆ ; ಸೂತಕ : ಮಾನವರ ಮಱಿಯೂಡನಂ ಪೊಲೆ ಸುರಗರ್ಭಚಿತವಲ್ಲ (ಕೃಷ್ಣ. ೫-೨೫). ೨. ಮುಟ್ಟು ; ರಜಸ್ಸು : "ಮುಟ್ಟವೆಯುನೆ ಮಾಣಿಕವೆನೆ ಮುಟ್ಟನೆ ಪೊಲೆ ಸೂತಕಾಭಿಧಾನಂ" (ಚಿಚ. ೫೦) ; ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾಳಿಜನಂಗಳ್ (ಶೃಂಗಾ. ೩-೮೩). ೩. ಕೆಟ್ಟದು ; ಒಳ್ಳೆಯದಲ್ಲದುದು : ಪೊಲೆ ಮುಳಿಸಿಂಱುವ ಮುಳಿಸು ಪುಟ್ಟಿದ ಪೊಟ್ಟಱೊಳಾವನಾದೊಡಂ ಪೊಲೆಯನೆ (ಪಂಪಭಾ. ೦೦-೯೯). ೪. ಪಾಪ ; ದೋಷ ; ಕಳಂಕ : ಪೊಲೆ ಮಸಗಿ ದಿಕ್ಕುವರೆ ಗಂತಲಸದೆ ಭಾರತಮನೆಯ್ದೆ ಕಿಡೆ ವೇಟ್ಟುದಱಿಂ ಪೊಲೆಯರ ಬಸಿಱೊಳ್ಪಂ ದಮ್ಮಳಿನಾತ್ಮಂ ವ್ಯಾಸನೆಂಬರಿವಾನಿದನಱಿಯರ್ (ಪಂಪಭಾ. ೦೦-೦೭೯) ; ನುಡಿ ಯಲ್ಲುಂ ಪೊಲೆ ಸೂರುಳೊಳ್ ನಿಱಿ (ಶಾಂತಿಪು. ೨-೦೦೨) ; ಪೊಲೆ ಪೊರ್ದಲ್ ಪೇಸಿ ದೇಸರದಿ (ಎಕ. VII, ಶಿಕಾರಿ. ೫-೬ ; 1218) ; ಮರ್ದಲ್ತು ಪೊಲೆಗೆ ಪೊಲೆ (ಅಕ್ಷಯ. ೦೫-೬೦೨). **ಹೊಲೆ** : ೧. ಹೊಲತಿ ತನ್ನ ಹೊಲೆಯ ಮಱೆದು ಶುದ್ಧನೀರ ಮಿಂದೆನೆಂದು ಕೆಲವರ ಮುಟ್ಟುವಂತೆ . . . ತ್ರಿಕರಣ ಶುದ್ಧವಿಲ್ಲದ ಪೂಜೆ (ಬೋಳಬಸ. ೩೯-೦೬೨) ; ಸೂರ್ಯನ ಕಿರಣ ಹೊಲೆಯನ ಚಾಸಿದರೆ ಹೊಲೆ ಹೊಱುವುದೇ (ಕುಮಾರ. ೬-೯೯) ; ಈ ದೇಹದೊಳು ನೀ ನೆನೆಸಿರಲು ಹೊಲೆಯುಂಟೆ (ಹಂಸ. ೯೯). ೨. ಜನನ ಮರಣದ ಸೂತಕಂ ಕೆಡುವ ತೆಱದಿ ಕೆಟ್ಟವು ಹೊಲೆಗಳಾ ದಿವಸಕೆ (ಸಿದ್ಧರಾ. ೦-೩೯). ೪. ಹುಸಿ ಯೆಂಬುದೇ ಹೊಲೆ (ಮುಕ್ತಾಯ. ೩. ೫೬-೦೯೦) ; ಮುನಿಗೆ ಹೊಲೆಯಾವುದತಿ ಕೋಪ ಬದ್ಧದ್ವೇಷ (ಹರಿಶ್ಚಂ. ೬-೨) ; ನಿನಗಿನ್ನಪದೆಸೆಯ ಹೊಲೆ ಹೋಯ್ತು (ಕುಮಾರ. ೦೯-೬೨). ೫. ಕೊಳಕು ; ಮಲ ; ಹೇಸಿಗೆ : ಹೊಲಸು ಮಾಂಸದ ಹುತ್ತ . . . ಹೊಲೆ ಬಲಿದ ತನುವಿನೊಳಗಿರ್ದು ಮಮತೆಯೊಳಗೆ ಗಲವನಱಿಸುವರೆ (ಸರಗ್ಯ. ೬೦). ೬. ಮೊಸಱು : ಮೂತ್ರದ ಕುಳಿಯು ಹೊಱುವಡುವಾಗ ಹೊಲೆ ಮುಂತಾಗಿ ಮುದುಡಿ ಬಿದ್ದಲ್ಲಿ ಹೆತ್ತವಳು ಹೊಲತಿ ಮುಟ್ಟಿದ ಮಗುವು ಹೊಲೆಯನೆಂದು ನಿಮ್ಮ ಕುಲಗೋತ್ರ ಮುಟ್ಟಲಮ್ಮದೆ (ಸರಕ. ೦೬೫-೬೨೯).

**ಹೊಲೆಯಾಗಿರು**=(ಸ್ತ್ರೀಯು) ರಜಸ್ವಲೆಯಾಗಿರು ; ಮುಟ್ಟಾಗಿರು : (೭). **ಹೊಲೆಯಾಗು**=ಅಪವಿತ್ರವೆನಿಸು ; ಅಮಂಗಳವಾಗು : ಒಳ್ಳೆ ಕೆಲಸದ ಅರಿವು ಇರದ್ದರಿಂದ ಅವರ ಆಯುಷ್ಯವೆಂಬುದು ಹೊಲೆಯಾಗಿತ್ತು (ಗೌರಾಂಗ. ೯೬).

[ದೇ. ೧ ತಮಿ. ಪುಲೈ ; ಮಲ. ಪುಲ ; ತುಳು. ಪೊಲೆ, ಪಿಲೆ, ಹೊಲೆ ; ಕೊಡ. ಪೊಲೆ]

**ಪೊಲೆಕೇಶಿ** 'ಪುಲಿಕೇಶಿ' ನೋ.

**ಪೊಲೆಕೇಸಿ** 'ಪುಲಿಕೇಶಿ' ನೋ.

**ಪೊಲೆಗ** 'ಪೊಲಗ' ನೋ.

**ಪೊಲೆಗಲಸು$_1$**, ಹೊಲೆಗಲಸು (ಕ್ರಿ). ೧. ಅಪವಿತ್ರಗೊಳಿಸು ; ಮೈಲಿಗೆ ಯುಂಟುಮಾಡು : ಕಲ್ಲಂ ಮರನಂ ಕುಲದೈವಮೆಂದು ಪೂಜಿಸಿ ಪೊಲೆಗಲಸುವ ಪೆಂಡಿರಿಂದ ಬೆಳಗದು ಧರ್ಮಂ (ಸಮಯ ೫-೯೩) ;

ಇಂದೀ ಗಳಿಗೆಯೊಳು ಹೊಲಗೇರಿಯೊಳೊರ್ವ . . . ಭಕ್ತನ ಮನೆಯೊಳ ಗುಂಡುದಲ್ಲದ ನಿನ್ನೋಲಗದೊಳು ಪೊಲೆಗಲಸಲುಂ ಬಂದವಂ (ಬಸರ. ೧೦-೩೦) : ಕುಲಹೀನನೋರ್ವನಂ . . . ನಿಲಯಕ್ಕೆ ತಂದು ಕಾಲ್ತೊಳೆದು ತಜ್ಜಲವೀಂಟಿಯುಣಲಿಕ್ಕಿ ಏಕಾಕ್ಮುದುಂಡು ಪೊಲೆಗಲಸಿದಂ (ಹಸ್ತಿಂ. ೯-೯೦). ೨. ಮೈಲಿಗೆಯಾಗು ; ಅಪವಿತ್ರವಾಗು : ಪೊಲಲ ಬೇಳ್‌ಕಟ್ಟಿಗಳ್, ಮನೆಯ ಬೇಳ್‌ಕಟ್ಟಿಗಳ್, ಎಲ್ಲಮುಮವ್ ಪೊಲೆಗಲಸಿಯಿರ್ದತ್ತು, ಕೊಲೆವಿಟ್ಟ ದುರ್‌ವಿಧಿಯ ಒಯ್ಪುಪೌಸ್ ಮಗನ ಪೆಣದಿನ್ ಪರ್ದುಗಳ್ ನಾಯ್ಗಳುವ್ ಪಿಕ್ಕಿದೆರೆಯಿನ್ (ವಡ್ಡಾರಾ. ೯೩-೯೬). **ಹೊಲೆಗಲಸು :** ೧. ನಿಮ್ಮೂರ ಭೋಗಣ್ಣನೆಂಬ ಭಕ್ತಂ ವಿಜಾಬ ತನ್ನ ಭಕ್ತಾಚಾರವೆಗ್ಗಳಂ ತಲೆಗೇಟ ಹೊಲೆಗಲಸಿ ನೆಲೆಗೆಟ್ಟು ಭಲವುದುಗಿ ಕುಲವಳಿದು ಹೊಲೆಯನೆನ್ನದೆ ಹಿರಿಯ ಭಕ್ತನೆಂದಬುದಜುದು (ಶೀಲಗಲ. ಹ. ೨೬೯-೯) ; ನೀನು ದೇಶಭ್ರಷ್ಟ ನಾಗಿದ್ದು, ಹಿಂತಿರುಗಿ ಬಂದುದಕ್ಕಾಗಿಯೂ ನಿನ್ನ ತಂದೆಯ ಏಕಾಂತ ಭವನವನ್ನು ಪ್ರವೇಶಿಸಿ ಹೊಲೆಗಲಸಿದುದಕ್ಕಾಗಿಯೂ ತಕ್ಕ ಫಲವನ್ನು ಅನುಭವಿಸುವೆ (ಶಾರಶಾ. ೦೦೦). ೨. ಬಲ್ಲಹನ ಕಲ್ಯಾಣಕಟಕವದೆಲ್ಲವು ಹೊಲೆಗಲಸಿ ಹೋಯಿತು (ಬಸವ. ೩೩-೬) ; ಅಗ್ರಹಾರಂ ಹೊಲೆಗಲಸಿತೆನು ತಾಗ್ರಹಿಸಿ ವಿಪ್ರರು ನುಡಿವುತಿರೆ (ಬಸವ. ೩೩-೩೯). ೩. ಕೆಡಿಸು ; ಹಾಳು ಮಾಡು : ಹೊಲೆಗಲಸದ ಯೋಗಿ ಹೊಲೆಗಲಸದುಳಿವನೇ ಹೊಲೆಗಲಸದಿಪ್ಪ ಕಡುಮೂರ್ಖ ಶಿವಯೋಗಿ ಹೊಲೆಗಲಸಿ ಹೋಹ (ಸರ್ವಜ್ಞ. ೫೫೬). ೪. ಜಾತಿಸಂಕರ ಮಾಡು ; ವರ್ಣಸಂಕರ ಮಾಡು : ಸಲುವದಷ್ಟಾದಶ ವಿವರ ವರ್ಣಂಗಳಾದಿಯಲಿ ಇಳಿಯೊಳಿವು ತಾನೀಗಲಾದವೆ ಹೊಲೆಗಲಸಿ ಕುಲಸಂಕರವನಗ್ಗಲಿಸಿ ಈ ಕಲ್ಯಾಣಕಟಕವನಿಂತು ಕೆಡಿಸುವರೇ (ಬಸವ. ೩೩-೧೨). [ಪೊಲೆ + ಕಲಸು₁]

**ಪೊಲೆಗಲಸು₂** (ನಾ). ಜಾತಿಸಂಕರ ; ವರ್ಣಸಂಕರ : ಯುಧಿಷ್ಠಿರನಾಳ್ವ ದೇಶದೊಳ್ಕಳವು ಕೊಲೆ ಪಾದರಂ . . . ಪೊಲೆಗಲಸು . . . ಮೊಳೆ ದೋಷವು (ಕೃಷ್ಣಶಾ. ೨-೩). [< ಪೊಲೆಗಲಸು₁]

**ಪೊಲೆಗಿಡಿಸು** ' ಪೊಲೆಗೆಡಿಸು ' ನೋ.

**ಪೊಲೆಗೆಡಿಸು**, ಪೊಲೆಗಿಡಿಸು, ಹೊಲೆಗೆಡಿಸು (ಕ್ರಿ). ಮಲಿನಗೊಳಿಸು ; ಅಪವಿತ್ರಗೊಳಿಸು : ಒಲವರದಿಂದಲ್ಲದುದಂ ಸಲೆ ನುಡಿದವರಿದುವೆ ಚೋದ್ಯ ಮವರೊಳ್ಸರ್ವಂ ಪೊಲೆಗೆಡಿಕುಂ ಪೊಲೆವಡಿಕುಂ ತೊಲಗಿಕುಮಪವರ್ಗ ಮಾರ್ಗದಿಂ ಭವ್ಯನುಮಂ (ಜಿನಾರ. ೩೦೩). **ಪೊಲೆಗಿಡಿಸು :** ಪೊಲೆಯನಂ ಕಿಟ್ಟುವ ದೇವರುಂಟೆ . . . ನೀಂ ಬಜಿದೆ ಕೊಂಡುಯ್ದು ವೈಕುಂಠವಮಂ ಪೊಲೆಗಿಡಿಸದಿರಿ (ರಾಘವಾಂಕ. ೮೦-೦೦). **ಹೊಲೆಗೆಡಿಸು :** ಒಂದು ಮಾತನು ಲೋಕ ಹೊಲೆಗೆಡಿಸಿಕೊಂಡಿಹುದು, ಹೊಲೆಗೆಡಿಸೆನದನು ನಾನು (ಶಂಗೀತ. ೩೩-೦). [ಪೊಲೆಗೆಡು + — ಇಸು₁]

**ಪೊಲೆಗೆಡು**, ಹೊಲೆಗೆಡು (ಕ್ರಿ). ೧. ಹೀನಸ್ಥಿತಿಗೆ ಇಳಿ ; ಕೀಳಾಗು : ಕೊಟ್ಟೊಡವೇಂ ಕನ್ನಿಕೆಯಂ ಕೊಟ್ಟಿಂಗಮಿದಾಗದೆಂದು ಕುಡೆ ಕೊಂಡೆ ನಗೇಗೆಟ್ಟವುದೆಂದು ಮಾನಂ ಪೊಲೆಗೆಟ್ಟರೆ ಕೊಂಡಂಗಮೆನಗಮುಱಯಲ್ಕಕ್ಕುಂ (ಶಾಂತಿಪು. ೩-೯೯) ; ಕಾಳ್ಪುಟ್ಟವಮಂ ಕಟ್ಟಿ ಕೋಟಲೆಗೊಂಡುರ್ಧ್ವನೊರ್ವ ನೊಲ್ವವರ ಚಾತುರ್ಯಕ್ಕೆ ಕೈವಾರಮಂ ಪೊಲೆಗೆಟ್ಟೀವವನೊರ್ವಂ (ಲೀಲಾವ. ೦-೯೦). **ಹೊಲೆಗೆಡು :** ೧. ಕುಲ ಜಾತಿಗೆಟ್ಟು ಕುಳುನಲುಡ ಹಡೆಯದೆ ಹೊಲೆಗೆಟ್ಟು ಹುಟ್ಟು ಹೊಂದಳಿದು ನೆಲಹೊರದಾ ಮಯ್ಗೆಟ್ಟು ಸಿದ್ಧರ ಪಾದ-ಲಘುಭಕ್ತಿಯೊಳಿಂಬಗುವೆನು (ಶ್ರೀಕಂ. ೩-೨). ೨. ಮುಟ್ಟಾ ಗುವುದು ನಿಲ್ಲು : ಎನ್ನ ಹರೆಯಂ ಬಟ್ಟು ಜರೆವಟ್ಟು ಹೊಲೆಗೆಟ್ಟು . . . ಧಾತುಗಳು ಪಲ್ಲಟವಾದವು ಇನ್ನು ನಾನೆತ್ತ ಮಗನಂ ಹಡವುದು (ಸಿದ್ಧರಾ. ೦-೯೦) ; ಹೊಲೆಗೆಟ್ಟು ಹೊಸಬೇಟಗೆಯ್ದು ಪಾತಕಿ ಮೊಗ್ಗೆಮೊಲೆವೆಂಗಳಗೆ ಪೇಳ್ವವರೇ (ಮೋಹತ. ೦೬-೭೮). [ಪೊಲೆ + ಕೆಡು₁]

**ಪೊಲೆಗೆಯ್** (ಕ್ರಿ). ಅಪವಿತ್ರಗೊಳಿಸು ; ಕಲುಷಿತ ಮಾಡು : ಕೆಡಿಸು : ನೆನೆಯ ಮತ್ತವನ ತಾಯ್-ಪೆಂಡತಿಯನ್ . . . ಪುನೀನೇಣಸುರ್ದ್ವಿಂಟಿ ಪೊಲೆಗೆಯ್ದು ಬಾಟನೀಡಾಡಿದಳ್ (ಅಂತಿಗೂ. ೩-೯೯). [ಪೊಲೆ + ಕೆಯ್₁]

**ಪೊಲೆಗೆಳೆ** (ನಾ). ಕೆಟ್ಟ ಸ್ನೇಹಿತ : ಆ ಪಾಪಕರ್ಮಂ ಪೊಲೆಗೆಳೆಯುತೆಯುಂ . . . ರಾಜ್ಯಕ್ಕಾಸವಟ್ಟು ನಿನ್ನಂ ಕೊಂದವಂ (ಕಂಶಕಂ. ೯೨-೧೦). [ಪೊಲೆ + ಕೆಳೆ]

**ಪೊಲೆಗೇರಿ**, ಪೊಲಗೇರಿ, ಹೊಲಗೇರಿ, ಹೊಲೆಗೇರಿ (ನಾ). ಹೊಲೆಯರು ವಾಸಿಸುವ ಓಣಿ : ಪೂಮೋಟ ಮತ್ತರೊನ್ನು [ಪೊ]ಲೆಗೇರಿಯ ಪಾಳರೆಮುತ್ತರು (ಐಾಲೀಡ್. ೯-೨೦ ; 1049); ಪಟ್ಟಣವಂ ಬಟ್ಟು ಪೊಲೆ ಗೇರಿಯೊಳ್ ಪಡುವಂತೆ (ವರ್ಧಾಪು. ೦೦-೦೬೨); ಪೊಲೆಗೇರಿಯೊಳುರಿ ನೆಗೆದೊದವೆ (ಬಂಹೂ. ೦೯-೨೬ ಕಗಳ). **ಪೊಲಗೇರಿ :** ಆ ಪೊಸಳ ತನುವನು ಟಿದು ಬಜಿಕ್ಕಾ ಪೊಲಗೇರಿಯಾಡಿನುದರದೆ ನೆಲಸಿ (ಹುಟೋಕ. ೩-೯೯). **ಹೊಲಗೇರಿ :** ಹೊಲಗೇರಿಯ ಪಡುವಣ ಕರುವಗೆಯ್ಯಂದು ತೆಂಕಲಾಜು ಮತ್ತರು (ಕ್ರೌಶ. IX-1, ೩೦-೦೬; 1005); ಹೊಲಗೇರಿಯೊಳೊರ್ವಂ . . . ಹಿರಿಯ ಭಕ್ತನ ಮನೆಯೊಳಗುಂಡುದಲ್ಲದ ನಿನ್ನೋಲಗದೊಳು ಪೊಲೆಗಲ ಸಲುಂ ಬಂದವಂ (ಬಸರ. ೦೦-೨೯); ಹೊಲಗೇರಿಲಿ ಹೊಲೆಯ ಹೊಲಶಿಲ್ಲ (ಪುರಂದ. ೦-೦೦೭ ಅನುಕ್ರಮ). **ಹೊಲೆಗೇರಿ :** ನೆಲನೊಂದೆ ಹೊಲೆಗೇರಿ ಶಿವಾಲಯಕ್ಕೆ ಜಲವೊಂದೆ ಶೌಚ ಮಜ್ಜನಕ್ಕೆ (ಬಸವ. ೩೭೦); ಶಿರಿಯೊಳುಂಟೇ ಮೃದುವಜಸಲಂಬಲದೊಳುಂಟೇ ಬೆಣ್ಣೆ ಕರುಣಾಸುಲಭ ಹೊಲೆಗೇರಿಯೊಳ ಗುಂಟೇ ವೇದಘೋಷಣವು (ಬಸವು. ೩೦-೨೦). [< ಪೊಲೆಯ + ಕೇರಿ]

**ಪೊಲೆತಾಳ್ವ** (ನಾ). ಒಬ್ಬಾತನ ಹೆಸರು : × × ಸತ್ತ ಪೊಲೆತಾಳ್ವನ ಮನೆವಗತಿ ಆಡಿಶರಧ × × × (ಪ್ರಮೂ. ೦೯೯೨, ೨-೬ ; 973). 'ಪೊಲೆ ತ್ತಾಳ್ವ' ಪರಾ. [ ? ]

**ಪೊಲೆತೆಱೆ³**, ಹೊಲೆದೆಱೆ³ (ನಾ). ಒಂದು ಬಗೆಯ ತೆರಿಗೆ : ತೆಱೆಯಂ ಕಿಱುದೆಱೆಯಂ ಪೊಲೆತೆಱೆಯಂ ಮಾನ್ಯಕ್ಕೆ ಬಂದ ತೆಱೆಯಂ ದೇವತ್ರಿಐ ವೇಳ್ಕುಮೆಂಬ ಪಾತಕನೞಿದೀಗಳೊಳಡಿಗುಂ (ಕೊಂಡ್ರಾ. ೩-೯೩; 1110). **ಹೊಲೆದೆಱೆ³ :** ಬಡಗಿಕೂಂಟೆಯ ಮನೆದೆಱೆ ಹೊಲೆದೆಱೆ³ ಸಾದಂ ಬಣ್ಣಿಗ ಬಳಂಜೆಯ ತೆಱೆ³ ತಳಸೆರಿಗೆ ಕಾಣಿಕೆ ಕವಣಾಯ ದಣ್ಣಾದಾಯ ವಿನ್ನಿನಿತುಮಂ . . . ಕೊಟ್ಟರ್ (ಕ್ರೌಶ. IX — 1, ೦೬೨-೦೮ ; 1109) ; ಶ್ರೀವೈಜನಾಥದೇವರಿಗೆ ಶಿವಪುರದ ಹಲುಗೂರ ಸುಂಕ ಆಗಂತುಕ ಹೊಲೆ ದೆಱೆ³ ಗಾಣದ ತೆಱೆ³ . . . ಕೈಯಾರ ಧಾರಾಪೂರ್ವ್ವಕಂ ಮಾಡಿ ಕೊಟ್ಟ ದತಿ (ಎಪ. XIV, ಮುಂಡ್ಕ. ೦೯೦-೩ ; ?). [ಪೊಲ್, + ತೆಱೆ₃]

**ಪೊಲೆತ್ತಾಳ್ವ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಮತ್ ಶ್ರೀಪುರುಷ ಮಹಾರಾಜಂ ಪೃಥ್ವೀರಾಜ್ಯಂಗೆಯ್ಯೆ ಪೊಲೆತ್ತಾಳ್ವೊರನ್ನ ಕಂಕನಾಡ ಬಿದಿ ರ್ಕ್ಕಲ್ಲಾರ್ದ ಕಾರ್ಕ್ಕರ ಪಾಳಿಕ್ಕಾಱಿನಾಡಿಯುರ್ ತುರಿದು (ಎಪ. IX, ಕಂಗಳೂ. ೩೬-೨ ; ಸು. 750). [?]

**ಪೊಲೆನುಡಿ** (ನಾ). ಹೊಲಸುಮಾತು ; ಕೀಳುನುಡಿ : ಐವರೊಡ ವ್ವಟ್ಟಿದರು ಸನ್ನುತರು ಲಲನೆಯೋರ್ವಳನಾಳ್ದರೆಂಬೀ ಪೊಲೆನುಡಿಗೆ ಕಿವಿಗುಡದ (ಜಾಕೃತಾ. ೦-೯೩). [ಪೊಲೆ + ನುಡಿ₁]

**ಪೊಲೆಬೂತು** (ನಾ). (ಆಲಂ) ಕ್ಷುದ್ರವ್ಯಕ್ತಿ : ಪಾಷ್ಟಯುಪ್ಪ ಸಜ್ಜನೆ ಯಂತ ಸಿಡಿವಿಡಿಗೊಳ್ಳದೆ ಪೊಲೆಬೂತಿನಂತೆ ಕಿಡಿನುಡಿಯದೆ . . . . ನಿಂದು ಸುವ್ರತಂಗಳಂ ತಾಳ್ದಿ (ವರ್ಧಾಪು. ೦೦-೩೭). [ಪೊಲೆ + ಬೂತು₁]

**ಪೊಲೆಮನೆ**, ಹೊಲೆಮನೆ, ಹೊಲೆವನೆ (ನಾ). ೧. ಸಾಮಾಜಿಕವಾಗಿ ಚಾತುರ್ವರ್ಣಗಳಿಂದ ಬೇರೆಯಾಗಿರುವವರ ಮನೆ (?) : ಅಲ್ಲಿ ಬೆಸಗೆಯ್ವ ಕಲ್ಕುಟಿಗರ ಮನೆ ೧ ಸಾವಗರಿರ್ಪ್ಪ ಪೊಲೆಮನೆ ೧ (ಶಾ. XIX, ೨೬೩-೯೦; 1054). **ಹೊಲೆಮನೆ:** ೨. ಹೆಂಗಸರಂ ಮುಟ್ಟಾದಾಗ

ಉಳಿದುಕೊಳ್ಳುವ ಮನೆ: (೪). ೩. ಹೆರಿಗೆಮನೆ : ಸೂತಿಕಾಗೃಹ : ಅವರಿಗೆ ಒಂದು ಗಂಡುಮಗುವೂ ಆಗಿತ್ತು . . . ಹೊಲೆಮನೆಯಲ್ಲಿಯೇ ಸತ್ತು ಹೋಯಿತು (ಐಂಕಿಪು. ೬೫): ಕೃಷ್ಣನು ಹೊಲೆಮನೆಗೆ ಹೋಗಿ ನಿಕ್ಷೇತನವಾಗಿ ಬಿದ್ದಿದ್ದ ಮಗುವನ್ನು ನೋಡಿ . . . ಕೈಯಾಡಿಸಿದನು (ಕಕಕಾ. ೩೬೬). **ಹೊಲೆಮನೆ :** ೪. ಹೊಲೆಯನ ಮನೆ (?): ಹೊಲೆಮನೆಯಿಂದಂ ಕಷ್ಟಂ ಮಲಲಮಯಂ ದೇಹಮಿದಱಿಂ ಕೊಲ್ಲಿರ್ಪೆನ್ನಿಂ ಹೊಲೆಯಂ ಕಷ್ಟನಪಾಪಂ (ಶಾಸಾರ. ೪೦-೨೪೬).

[ಪೊಲೆ + ಮನೆ]

**ಪೊಲೆಮುಡಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀಪರಿಗರ ಪೊಲೆಮುಡಿ ಕೊಟ್ಟದು ಸೊಡರು ಆಚನ್ದ್ರತಾರಕಂ (ಎಕ. VII. ಶಿಕಾಂ. ೯೫-೬೪; ಸು. ೬೯೦ ?). [ಪೊಲ್₁ + ಮುಡಿ₂]

**ಪೊಲೆಮೇರೆ** 'ಪೊಲಮೇರೆ' ನೋ.

**ಪೊಲೆಯ, ಹೊಲೆಯ** (ನಾ). ೧. ಪಂಚಮವರ್ಣಕ್ಕೆ ಸೇರಿದವನು; ಚಾಂಡಾಲ : ಎಯ್ದಿದಂ ಪೊಲೆಯನಾ ಪೊಲೆವಟ್ಟನೊಳಿರ್ದ ಕನ್ನೆಯಂ ಕಂಡು ಗೆಟ್ಟಱಿಗೊಳೆ ಪೊಡೆವಟ್ಟು (ಕಾದಂಕಾ. ೬೪೭); ಪೊಲೆಯರ್ತಮ್ಮಯ ಕೇರಿಗೆ ಪೊಲೆಯರ್ಬರೆ ತುಪ್ಪಿ ಮಾಬ್ಬರ್ (ಸಮುಪು. ೪-೬೭); ಪಿತ್ತಳೆಯ ತೊಡವು ಪೊಲೆಯರ್ಗುತ್ತಮಮೆನಿಸಿರ್ದ ಪೊನ್ನ ತೊಡವೆನಿಸುವವೊಲ್ (ರಘುಚ. ೪-೩೬). ೨. ನೀಚ ; ಕೆಟ್ಟವನು : "ಸಿತಗನುಂ ಪೊಲೆಯನೆಂದಕ್ಕು" (ಕನ್ನೈ. ೬೬); ನಿನ್ನಿಂದ ಬಿಟ್ಟು ಪೊಲೆಯರ್ಯಿನ್ನುಮ್ಮುನ್ನಾ ದೊಡೊಳರೆಯಿಂತೀ ಪುರದೊಳ್ (ಪುಶಾಸ್ತ್ರ. ೬-೨೨). ೩. ಕುಲಹೀನನಾದವನು : ಕಲಿಯನೆ ಪಂದೆ ಮಾಬ್ಬ ಕಡುವಂದೆಯನೊಳ್ಗಲಿ ಮಾಬ್ಬ ತಕ್ಕನು ಪೊಲೆಯನೆ ಮಾಬ್ಬ ಮುಂ ಪೊಲೆಯನಂ ನೆಱೆ ತಕ್ಕನೆ ಮಾಬ್ಬ ತಮ್ಮೊಳಗ್ಗಲಿಸಿ ಪೊಮಟ್ಟು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಮದಱಿಂದಮೋಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ (ಪಂಪಭಾ. ೦೨-೯೨). **ಹೊಲೆಯ :** ೧. "ಅಂತಾವಸಾಯಿ ಚಂಡಾಳಂ ತಾ ಪೊಲೆಯಂ ಜನಂಗಮಂ ಮಾತಂಗಃ" (ಚಸ್ತುಕೋ. ೬೬-೯೭); ಹೊಲಸ ತಿಂಬವನೇ ಹೊಲೆಯ (ಬಸವ. ೩೯೨); ಅತಿ ಹುಸಿವ ಯತಿ ಹೊಲೆಯ (ಹಕಣ. ೦೪.೦೦): ಹೊಲೆಯ ಹೊಱಗಿಹನೆ ಊರೊಳಗಿಲ್ಲವೆ . . . ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ (ಕೃಕಂಡ. ೦-೦೭೮ ಕಲ್ಲಿಕ). ೨. ಹೊಲೆಯ ಹೋಗೇದ ಒಲೆ ಮುಖದಿರುಹಿದಳು ಖಾತಿಯಲಿ (ಕೊರಕಾ. ೩-೩. ೩೩).

[ಪೊಲೆ + —ಅ₁./ತಮಿ. ಪುಲ್ಯೆಯ ; ಮಲ. ಪುಲಯ ; ಕೊಡ. ಪೊಲೆಯ]

**ಪೊಲೆಯಣ್ಣ** (ನಾ). ಒಬ್ಬಾತನ ಹೆಸರು : ಪುಂಗೆಱಿಯಿಂ ಬನ್ದ ಪೊಲೆಯಣ್ಣನ ಶಿಲಾಕರ್ಮ್ಮ (ಕೌಇ. XI-I, ೦೦-೨೬; 865). [ಪೊಲ್₁ + ಅಣ್ಣ₁]

**ಪೊಲೆಯಮ್ಮ, ಹೊಲೆಯಮ** (ನಾ). ಒಬ್ಬಾತನ ಹೆಸರು : ಪೊಲೆಯಮ್ಮ × × × ಲ್ಲರನೆಱಿದು ಕೊನ್ದು ಗೆಲ್ದು ಪೊನ್ದಿ ಸ್ವರ್ಗ್ಗಾಲಯಮೇಱಿದನ್ (ಎಕ. VIII, ಸೊರಬ. ೦-೬ ; 797); ಶ್ರೀ ಬೇದಿಗೆ ಮುತ್ತರಸರ ಮಗನು ಪೊಲೆಯಮ್ಮನ್ಮದಕರಿಕಲ್ಲನಾಳುತ್ತುಮಿರೆ (ಎಕ. XI, ಚಳ್ಳಕೆ. ೩೩-೨೦; ಸು. 815). **ಹೊಲೆಯಮ :** ಹೊಲೆಯಮನೆಂಬ ಗೋತ್ರನಿಧಿಗಂ ಗುಣಭೂಷಣೆ ಚಂಡಿಕಬ್ಬೆಗು ಕುಲತಿಲಕಂ ಗುಣಾಂಬುನಿಧಿ ಪುಟ್ಟಿದಂ . . . ನೆಗಳ್ದ ಜಕ್ಕಣಂ (ಕಇ. IV, ೦೦-೩೪ ; 1121). [ಪೊಲ್₁ + ಅಮ್ಮ₁]

**ಪೊಲೆಯ್ಗಬ್ಬೆ** (ನಾ). ಒಬ್ಬಾಕೆಯ ಹೆಸರು : ಶ್ರೀಮಾತ್ ಕನ್ನಯನಬ್ಬೆಗಳ್ ಪೊಲೆಯ್ಗಬ್ಬೆ (ಎಕ. XI, ಹೊಳಲ್ಕೆ. ೩೩-೦೪ ; 965). [ ? + ಅಬ್ಬೆ₁ ]

**ಪೊಲೆವಗೆ** (ನಾ). ಕೆಟ್ಟಬುದ್ಧಿ ; ನೀಚಬುದ್ಧಿ : ಮಂದಾಂಗಾರಕರಿರ್ವರು ಮೊಂದೆಡೆಯೊಳ್ ನಿಂದು ವಕ್ರಿಸಲ್ ಪಶು ಕಱಿಗುಂ ತಂದು ಪೊಲೆವನೆ(ಗೆ) ಯೊಳರಸುಗಳಂದೊರ್ವರನೊರ್ವರಿಱಿದು ಸಾ(ವರ್)ವುಗೆ ಜಗದೊಳ್ (ಅಚ್ಚಪು. ೬-೦೦೪). [ ಪೊಲೆ + ಬಗೆ₂ ]

**ಪೊಲೆವಟ್ಟು** (ನಾ). ಹೊಲೆಯರ ಬೀಡು ; ಚಾಂಡಾಲರ ಕೇರಿ : ಇರದೆಯ್ದಿದಂ ಪೊಲೆಯನಾ ಪೊಲೆವಟ್ಟನೊಳಿರ್ದ ಕನ್ನೆಯಂ ಕಂಡು ಗೆಂಟಱಿಗೊಳೆ ಪೊಡೆವಟ್ಟು (ಕಾದಂಕಾ. ೬೪೭). 'ಪೊಲೆಗೇರಿ' ಮರಾ.

[ <ಪೊಲೆಯ + ಪಟ್ಟು₄ ]

**ಪೊಲೆವಡು** (ಕ್ರಿ). ಕಳಂಕವನ್ನು ಹೊರು : ಈ ಪರಮಜಿನಾಲಯಂಗಳಂ ಪೊಲೆವಟ್ಟಿರ್ದ್ದಾರ್ ಪಾಂಡ್ಯಚೋಳನೆಂಬ ಮಹಾಪಾತಕ ತಿವುಳನಳಿದಧೋಗತಿ ಗಿಳಿದ (ಎಇ. XV, ೪೮೦-೪೦; 1071); ಪೊಲೆವಟ್ಟು ಪೊಳಲಿಂ ಪೊಱಮಡಿಸಿ ಕೊಂಡಲಸದೊಂದಡವಿಯೊಳಿರ್ಪ ಕುಲಗೆಟ್ಟು ಬೇಡವಳ್ಳಿಯ ಪೊಕ್ಕಿರ್ದಾಖಳನೊಂದಾನೊಂದು ಪಗಲು . . . ಜೀವದನವ ಕಳ್ವೊಯ್ಯುತಮಿರಲು (ಸೀಬಸಂ. ೬-೫೦). [ ಪೊಲೆ + ಪಡು₁ ]

**ಪೊಲೆಮಾತು, ಹೊಲೆಮಾತು** (ನಾ). ಕೀಳುಮಾತು ; ಕೆಟ್ಟನುಡಿ : ಎಲೆ ಮೂಢ ಲಿಂಗಮಂ ನೀಂ ಪೊಲೆವಾತಿಂ ಬಳ್ಯಮೆಂಬುದಕ್ಕುಮೆ (ಪ್ರಭುಚ. ೬-೦೪). **ಹೊಲೆಮಾತು :** ಹೊಲಬಱಿಯದೆ ತಾನು ರಾಯನೆಂದೆಂಬೀ ಹೊಲೆಮಾತಿಗುತ್ತರವುಂಟೆ (ಕುಠಾಣಾಂ. ೦೦-೨೬); ಇಂಥ ಹೊಲೆಮಾತಾಡಿದವರ ಬಾಯಲ್ಲಿ ಹುಳು ಸುರಿಯದಿರುತ್ತದೆಯೆ (ಗೃಹಕಿ. ೬೬); ಇದನ್ನು ಕಂಡು ಅವನು ಕಿಡಿಕಿಡಿಯಾಗುತ್ತಿದ್ದ, ಶಪಿಸುತ್ತಿದ್ದ, ಹೊಲೆಮಾತಾಡುತ್ತಿದ್ದ (ಕೀಚಕಾ. ೬೦೦). [ ಪೊಲೆ + ಮಾತು₁ ]

**ಪೊಲೆವೆಣ್, ಹೊಲೆವೆಣ್** (ನಾ). ಕೆಟ್ಟಹೆಣ್ಣು ; ನೀಚಸ್ತ್ರೀ : ಪೊಲೆವೆಣ್ಣೆನಿಪನಗೆಂದುಂ ನಿಲಲೊಲ್ಲದೆ ತೊಲಗಿ ಪೋಪ ಗಂಡಮಿಮುಕ್ತರ್ ಮಲಧಾರಿಸ್ವಾಮಿಗಳು ನಿಲಿಸುವ ಸತ್ಪುತ್ರನೆನಗದೆಂದಾದಪನೋ (ಅರ್ಥಪೀ. ೦-೦೦೩). **ಹೊಲೆವೆಣ್ :** ಹೊಱಮಿಂಚಿಂ ಹೊಲೆವೆಣ್ಗೆ ಸೋಲ್ವ ಕೆಱದಿಂ . . . ವಿಟವೇಶ್ಯಾಕಾವ್ಯಮಂ ಕೇಳ್ದು ಮೆಯ್ ಮಱೆವರ್ (ರತ್ನಾಕ. ೬೬).

[ ಪೊಲೆ + ಪೆಣ್ ]

**ಪೊಲೆಸೂರುಳ್** (ನಾ). ಹೀನವಾದ ಪ್ರತಿಜ್ಞೆ ; ನೀಚವಾದ ಶಪಥ : ಸುಡಿಯೆಲ್ಲಂ ಪೊ[ಶಾಕಾಂ. ಹೊ]ಲೆಸೂರುಳ್ (ಶಬ್ದಾವ. ೨-೦೯೨); ಮಾತೆಲ್ಲಂ ಪೊಲೆಸೂರುಳ್ (ಲವುರ. ೩೩ ಪ್ರಯೋ). [ ಪೊಲೆ + ಸೂರುಳ್₁ ]

**ಪೊಲ್ಗೆ, ಪೊಲಿಗೆ, ಹೊಲಿಗೆ** (ನಾ). ೧. ಹೊಲಿಯುವಿಕೆ : ಗೆಾರಕ್ಕೆ ಉಡಗೆ, ಪಸುಗೆ, ಪೊಲ್ಗೆ (ಶಬ್ದಮ. ೨೦೦ ಪ್ರಯೋ). **ಪೊಲಿಗೆ :** ೧. "ಸೇವನಂ, ಸೀವನಂ, ಸ್ಯೂತಿ--ಈ ೩ ಪೊಲಿಗೆ" (ಶಾಶಾಶ. ೪). ೨. ಹೊಲಿದುದು : ತಾಱಗೆ, ಮಾಱಗೆ, ಪೊಲಿಗೆ (ಶಬ್ದಾನು. ೩೬೩ ಪ್ರಯೋ). **ಹೊಲಿಗೆ :** ೧. "ಧಕ್, ದೇಹನಂ, ಈ ೨ ಹೊಲಿಗೆ" (ಕಾಕಕ್ಕ. ೬೬); ಜೋಡು ಪೈಶಣಗಳ ಹೊಲಿಗೆಯು ಗರುವ ಚಿಪ್ಪಿಗಗೇರಿಯಹವು (ಶಂಕಕ. ೬-೩೩). ೨. "ಊತ ಸ್ಯೂತ ಎಂಬಿವು ನೂಲ ನೆಯ್ಗೆಯಲ್ಲಿಯೂ ಹೊಲಿಗೆಯಲ್ಲಿಯೂ ವರ್ತಿಸುಗು" (ನಾಚಿರಾ. ೪); ಹಱಿಗವಿಗಳ ಕಬ್ಬಂಗಳ ಹೊಱಗಳೆಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ . . . ಎಕ್ಕಸಕ್ಕಮಸ್ತಂಬ್ಬಸ್ತಂ (ಗಿಂಕ. ೦-೨೬); ಕಲ್ಪಮೇಘದ ಹೊಲಿಗೆ ಹಱಿದವೊಲಾಯ್ತು ಮಾದ್ರೇಶ್ವರನ ಶರಜಾಲ (ಕುವ್ಯಾಕ. ೨-೬೭); ಬಸುಱಿಲಿ ಹೊಲಿದ ಹೊಲಿಗೆಯ ದಡಿಗರಕ್ಕಸಂಬಾಯ ರಿದ್ದುದು ಕೋಟಿಸಂಖ್ಯೆಯಲಿ (ಕೊರಕಾ. ೬-೬-೩). ೩. ಸಂಬಂಧ ; ಹೊಂದಾಣಿಕೆ : ಕಾಯದ ಜೀವದ ಹೊಲಿಗೆಯನಱಿದವಂಗಲ್ಲದೆ ಲಿಂಗೈಕ್ಯವಿಲ್ಲ (ಪೋಳಬಸಾ. ೨೩೮-೬೦೪); ಕಾಯ ಜೀವದ ಹೊಲಿಗೆಯು ಅಳಿದ ಭೇದವ ತಿಳಿಯಬಲ್ಲಡೆ ನಮ್ಮ ಗುಹೇಶ್ವರಲಿಂಗದ ಅಱಿವು ಸಾಧ್ಯವಪ್ಪುದು (ಅವಚಂ. ೨೭೩-೧೨೩೭). [ಪೊಲ್ + —ಗೆ./ತುಳು. ಪೊಲಿಕೆ, ಪೊಲಿಗೆ, ಪೊಲ್ಲಿಗೆ]

**ಪೊಲ್ಲ, ಹೊಲ್ಲ** (ನಾ). ೧. ಕೆಟ್ಟುದು ; ಹೀನವಾದುದುಂ : ಪಾಪಕರ್ಮಂ ಪೊಲ್ಲಂ (ಕಬಾರ. ೦-೬೪); ಪಗೆ ಪೊಲ್ಲ ಪಾಂಡುನಂದನರೊಳ್ (ಪಂಪಭಾ. ೬-೬೫). ೨. ಕೇಡು ; ಅಪತ್ತು : ಅವನು ನಂಬಿದಂದು ಪೊಲ್ಲಮಕ್ಕುಂ (ಪಂಪಭಾ. ೦೭೬-೩); ಗುರು ಪರಿವೇಷದೊಳ್ ನೆಲಸೆ ವಿಪ್ರಜನಕ್ಕದು ನಾಡೆ

ಪೊಲ್ಲ (ಅಭಿಪು. ೩-೧೬). ೩. ಕೀಳುತನ : (೬). ೪. ಕೆಟ್ಟಗುಣವುಳ್ಳವನು ; ಹೀನನಾದವನು : ಪೊಲ್ಲರಲ್ಲದರಂ ಪೊಲ್ಲರೆಂದು ನುಡಿದೊಡೀಬಾಹಾದುದು (ಶಂರಾಷಾ. ೧೬-೩೯ ವ) ; ಕಳ್ಳುಡಿವವರಂ ಪೊಲ್ಲರೆಂಬಂತೆ ಪಾಲ್ಗುಡಿವವರನೇಕೆ ಪೊಲ್ಲರನ್ನರ್ (ರಕ್ಷಾಕು. ೬-೯೩). ೫. ಕೇಡುಂಟುಮಾಡುವವನು ; ಅನಿಷ್ಟಕಾರಕ : ಹಿಮಧಾಮಂ . . . ಕ್ರೂರಂಧ್ರುಂಗಳೊಳತಿಶುಭಮಂ ಶೇಷದೊಳ್ ಪೊಲ್ಲನಕ್ಕುಂ (ಜಾತಕ. ೧೦-೪). (ಗು). ೬. ಒಳ್ಳೆಯದಲ್ಲದ ; ಕೆಟ್ಟದಾದ : ಪದಿನಾಱು ಪೊಲ್ಲ ಕನಸುಗಳಂ ಕಂಡಂ (ಪಞ್ಚಾಶಾ. ೬೩-೨೦) ; ಸಂಜೆಯಂತೆ ಪೊಲ್ಲ ವಸ್ತುವಿನೊಳ್ ರಾಗಿಯಾಗದೆ (ರಕ್ಷಾಕು. ೩-೯೯) ; ಪೊಲ್ಲ ಕೆಯ್ಮೆಯುಂ ದುರ್ಭಗತ್ವಮುಂ ಕಿವಿಗೆ ಸೊಗಯಿಸಿದ ಪೊಲ್ಲ ಸ್ವರಂಗಳುಂ . . . ಎದಿವೆಲ್ಲಮಶುಭನಾಮಕರ್ಮಫಲಂಗಳುಂ (ಕರ್ಣಾ. ೩೦) ; ಪೊಲ್ಲ ಸುದ್ದಿಗಳನೊರೆತರ್ಪ್ಪೊನನ್ ಒಲ್ವನೊರ್ವನುಮಿಲ್ಲ (ಅಂತಗೂ. ೧೩-೨೬೦). ಹೊಲ್ಲ : ೧. ಬೇಡ ಬೇಡ ಅನ್ಯದೈವದ ಸಂಗ ಹೊಲ್ಲ (ಏಕಪ. ೬೦೪) ; ಬಱಿಯ ವಿಚಾರ ಹೊಲ್ಲ (ಹಕಶಾ. ೮-೬೦) ; ನೆರೆ ಹೊಲ್ಲ ದುರಾಚಾರಿಗಳ (ಅಂಬಿಗ. ೧೨೬-೯೨) ; ಹೇಳಿ ಮಾಡುವುದು ಹೊಲ್ಲ, ಅದು ಆತ್ಮಪ್ರಶಂಸೆ (ಶಾಂತಶಾ. ೩೬). ೪. ಪೆಲ್ಲವನನಲ್ಲೆಂದು ಪೆಲ್ಲನಂ ಹೊಲ್ಲೆಂದು (ಜಗಂ. ೦೭-೦೦೬ ಕಗಳ) ; ಗ್ಲಲ್ದಿಹ ಕಾಲಕ್ಕೆ ತಾ ಹೊಲ್ಲನವ[ಪಾಠಾಂ. ಹೊಲ್ಲಹನು]ಜನರಿಂಗೆ ಅಲ್ಲದ ಗುಣದ ಅರಸಿಂಗೆ ಸಾಲಕ್ಕೆ ಕಲ್ಲಿದೆಯು ಬೇಕು (ಸರ್ವಜ್ಞ. ೦೯೧೭). ೭. ಅಪರಾಧ ; ತಪ್ಪು : ಹಗೆ ಹೊಲ್ಲ ದೈವದರಿ (ಭಜ್ಞಾರತ್ನೀ. ೧-೯). (ಗು). ೮. ಕೆಟ್ಟ ಸ್ವಭಾವದ ; ದುಷ್ಟ : ಕಲ್ಲಿನಲ್ಲಿ ವಲ್ಲಭನ ಕಂಡೆವೆಂದು ಬಡಿದಾಡುತ್ತಾರೆ ನೋಡಾ ಅಲ್ಲಯ್ಯಾ ಈ ಹೊಲ್ಲ ಮನುಜರು (ಸಿದ್ಧಪ. ೪. ೨೦೩-೬೬೦) ; ಹೊಲ್ಲ ದೈವವನಿನಿತು ನೀ ನೋಡುವೆನದೆಂದರೆ ಕರವ ನಾನೀಗ (ಸಂಶಕ, ೮-೯೬) ; ಹೊಲ್ಲ ಜೋಗಿಯು ಮಾತ ಕೇಳಿದರು (ಸಿದ್ಧಕೃ. ೨-೩೩).

**ಪೊಲ್ಲಾಗು, ಹೊಲ್ಲಾಗು** = ೧. ಕೆಡುಕಾಗು ; ಅನಿಷ್ಟವಾಗು : ಅದು ಲೇಸಾದೊಡಂ ಪೊಲ್ಲಾದೊಡಮೇನ್ನ ಪುಣ್ಯಂ (ಅರ್ಜನ. ೩-೭೯ ವ) ; ಕಲ್ಲಾಗಲೇನು ಹೊಲ್ಲಾಗಲೇನು ಅದು ಬಲ್ಲತನಕೆ ಸಲ್ಲ ಆ ನಲ್ಲ ತಾನು ಇರುವಲ್ಲೆ ನಿತ್ಯ ಇರುತಿಹನು ಒಬ್ಬ ನಲ್ಲ (ಅರಳು. ೩೩-೦೩). ೨. ಕೇಡು ಬಗೆ ; ಕೆಟ್ಟುದನ್ನು ಎಣಿಸು : ಇದಕ್ಕಾವನಾನುಂ ಹೊಲ್ಲಾಗಿರೆ × × × ಕುರುಕ್ಷೇತ್ರ ವಾರಣಾಸಿ ಸಾಯಿರಕವಿಲೆಯುಮಂ . . . ಕೊಂದ ಪಂಚ ಮಹಾಪಾತಕನಕ್ಕು (ಶಿಶ. IV. ೨೦-೦೩ ; ೪).

[ದೇ. ಕ್ಕ ತಮಿ. ಪೊಲವ್, ಪೊಲ್ಲಾ ; ಮಲ. ಪೊಲ್ಲಾ]

**ಪೊಲ್ಲಕೆಯ್** 'ಪೊಲ್ಲಗೆಯ್' ನೋ.

**ಪೊಲ್ಲಗೆಯ್, ಪೊಲ್ಲಕೆಯ್** (ಕ್ರಿ). ೧. ಕೆಡುಕುಮಾಡು : ಕೇಡುಂಟುಮಾಡು : ವನಜಾಕ್ಷಿ ದೋಷಿಯಲ್ಲದ ನಿನಗೆ ಕರಂ ಪೊಲ್ಲಗೆಯ್ದಂ (ಶಂಕಕಂ. ೭೭-೨೦) ; ಇದಾವುದು ಪೊಲ್ಲಗೆಯ್ದನೀ ಮುನಿಸವಿವೇಕವೆಂದು ನುಡಿದಳ್ (ಶಂರಾಷಾ. ೦೦-೬೪). ೨. ತಪ್ಪು ಮಾಡು : ವಲ್ಲಭೆಯರ್ ಪೊಲ್ಲಗೆಯ್ದರಂತುಸಿರದೆ ಕುಳ್ಳಿರೆ (ರಕ್ಷಾಕು. ೪-೦೩೯). **ಪೊಲ್ಲಕೆಯ್** : ೧. ಎನಿತಾದೊಡಮೇಂ ಪ್ರಭು ಪೊಲ್ಲಕೆಯ್ಯಮೇ (ಶಂಕಕಾ. ೦೦-೩೩) ; ಕಳವಂ ಮಿಥ್ಯೆಯನೇಱಿಸಿ ಕಳತ್ರದೊಳ್ ಪೊಲ್ಲಕೆಯ್ದರೆಂದಿಲ್ಲದುದಂ ಗಟಪಿದೊಡೆ (ಶಂರಾಷಾ. ೯-೪) ; ಇವರ ಕೊಲ್ವುದುಂ ಪುರುಷಾರ್ಥಮಲ್ಲ ಚೀ ಪೊಲ್ಲಕೆಯ್ದರಿ (ನೇಮಿಪು. ೬-೦೦೩ ವ). ೩. ಹಾದರ ಮಾಡು ; ವ್ಯಭಿಚರಿಸು : ಬ್ರಹ್ಮ ಘಾತಿಪೋದನೆಂಬುದೇಕೆ . . . ತನ್ನ ಸುತೆ ಪದ್ಮೆಯೊಳು ಪೊಲ್ಲಕೆಯ್ದನೆಂಬುದೇಕೆ (ಶಬರ. ೯೬೪). [ ಪೊಲ್ಲ + ಕೆಯ್$_1$ ]

**ಪೊಲ್ಲಗೆಯ್ಮೆ** (ನಾ). ಅಯೋಗ್ಯವಾದ ಕೆಲಸ ; ಕೆಟ್ಟ ಕಾರ್ಯ : ಇಲ್ಲದಿರೆ, ಎಂತಕ್ಕುಮಮ್ ಈ ಪೊಲ್ಲಗೆಯ್ಮೆ? (ಅಕ್ಷರಾ. ೬-೦೩೪).

[ ಪೊಲ್ಲ + ಗೆಯ್ಮೆ (< ಕೈಮ್ಮೆ) ]

**ಪೊಲ್ಲದು, ಹೊಲ್ಲದು** (ನಾ). ೧. ಕೆಟ್ಟುದು ; ಹೀನವಾದುದು : ಒಳ್ಳಿತ್ತಾ ಕೆಯ್ವೊರಾರ್ಪೊಲ್ಲದುಮಪದಱಿನ್ನೆ (ಶಿಲ. X. ೬೧-೬ ; ೭ನೆಯ ಶತ) ; ಇದು ಪೊಲ್ಲದೊ ತಾನಿದೊಳ್ಳಿತೋ ಪೇಱೆಂದೆಂಬುದಂ ಬಗೆಯರ್ಪಾರ್ತೆ ನಿಲ್ಲಾಕ್ಷಣದೊಳ್ (ಕಾರಂಪೂ. ೬೬೬) ; ಒಳ್ಳಿತ್ತು ಪೊ[ಪಾಠಾಂ. ಹೊ]ಲ್ಲದೆಂಬುದನೊಳ್ಳಿತ್ತಾಗಱಿಪವಂಗೆ ಜನವಚನಂ ತಾನೊಳ್ಳಿತ್ತು (ಸಮಪ. ೩-೬೦). ೨. ಅಹಿತವಾದುದು ; ಅಸಹ್ಯವಾದುದು : ಪೊಲ್ಲದಂ ನುಡಿದೊಡೆ ಕೇಳ್ದುಮುನ್ನರೆ ಸದಾಚರಿತರ್ಜನಭಕ್ತರಲ್ಲಿಯುಂ (ಸಮಪ. ೬-೨೩) ; ಮನದೊಳ್ ಪೊಲ್ಲವನೆಂತುಂ ನೆನೆಯುಂ (ಶಬ್ದಾ.ಪ. ೨೩೫). ೩. ಅಯೋಗ್ಯವಾದಂದು ; ಅನುಚಿತವಾದುದು : ಸರಿಯಲ್ಲದುದು : ಈ ನೆರೆದ ಗುರುಜನಂಗಳ್ ಮಾನಿನಿಯರ ಮುಂದೆ ಕರ್ಣ ಪೊಲ್ಲದಂ ನುಡಿದೈ (ಶಂಕಶಾ. ೨-೬೦) ; ಪೊಲ್ಲದಂ ನುಡಿದನಾತನಂ ಬಿಸುಟಂ ತಕ್ಕಿದ ನುಡಿಯನುಡಿವನೇ (ಗದಾಯು. ೨-೨೦) ; ಸಲ್ಲದು ವಿಪ್ರಾಗಿಂತಿದು ಪೊಲ್ಲದು (ಸಮಪ. ೨-೩೬). ೪. ಅನಿಷ್ಟವಾದುದು ; ಕೇಡು ; ಕೆಡುಕು : ರಿಸಿಯರೊಂದಿಱುವೆಗಪ್ಪುದು ಪೊಲ್ಲದುಂ ಬಗೆಯದವರೆನಗಹಿತವುಂ ಬಗೆವರೆ (ಪಞ್ಚಾಶಾ. ೦೩೬-೨೬) ; ಎನ್ನ ಪುಣ್ಯೊಳಗೆ ನಿನ್ನ ರೋಮಂ ಪುಗೆ ಪೊಲ್ಲದಪ್ಪುದು (ಶಂಕಕಂ. ೦೯೩-೦೨) ; ನಿಮ್ಮಾಶ್ರುಪದತ್ತಲ್ತ್ರ್ಯೋಗಿಮಿರ್ದಂದ ರಸರ ದೆಸೆಯಿಂ ನಿಕ್ಕುಮಂ ಪೊಲ್ಲದಕ್ಕುಂ (ಸುಕುಮಾ. ೭-೪೦) ; ಭುವನಜನಕ್ಕೆ ಗೋನಿವಹಕ್ಕೆ ಪೊಲ್ಲ[ದು ಸವನಿ]ಕ್ಕು (ಅಭಿಪು. ೭-೦೭). **ಹೊಲ್ಲದು** : ೩. ಕೋಲ ಬಲುಹುಂಟಾಗೆ ನಾಲಗೆ ಹೋಲ ನುಡಿಯದು ಹೊಲ್ಲದೇನಿದು ಮೂಳೆ ಆಟಕಿಯು ಮಾತು ಬೇಡಂಬಿನಲಿ ಮಾತಾಡು (ಕುಪ್ಪಾಕ. ೪-೬೦).

[<ಪೊಲ್ಲ./ತಮಿ. ಪೊಲ್ಲತು, ಪೊಲ್ಲಾತು]

**ಪೊಲ್ಲದುಗೆಯ್, ಪೊಲ್ಲದುಗ್ಗೈ** (ಕ್ರಿ). ೧. ಕೆಡುಕು ಮಾಡು ; ಕೇಡು ಮಾಡು : ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರಸುತರ್ಕಳೊಂದೆ ಗರ್ಭದೊಳೆನೆ ಕೆಮ್ಮನಿಂತು ಪೊಸೆದಿಕ್ಕಿದೆ ಪೊಲ್ಲದುಗೆಯ್ದೆಯ್ (ಶಂಕಶಾ. ೦-೦೩೦) ; ಪೊಲ್ಲದುಗೆಯ್ದನೆಂದು ನಹುಷಾಜಗರಂ ಏರಿದಪ್ಪ ದೈನ್ಯದಿಂ ಬಲ್ಲಿದನಪ್ಪಗಸ್ತ್ಯಮುನಿಯೊಳ್ ದಯೆಯಂ ಪಡೆಯಲ್ಕೆ ಬಂದಪೋಲ್ (ಕಾರಂಪೂ. ೦೦೩) ; ಕರವಿಂತೊಂದವಿವೇಕವಂ ನೆಗಟ್ಟಿದರಂದೇಕಿಂತುಟಂ ಪೇಟದಿರ್ದಿರೆ . . . ಪೊಲ್ಲದುಗೆಯ್ದಿರೆಂದು ಜಡಿದರ್ ಕುಂತೀಸುತರ್ಕೊಂತಿಯಂ (ಗದಾಯು. ೦೦-೨೦). ೨. ಹೀನಕಾರ್ಯವನ್ನು ಮಾಡು ; ಪಾಪ ಮಾಡು : ಭೋಗೋಪಭೋಗಂಗಳ್ಗೆ ಪೊಲ್ಲದುಗೆಯ್ವಲ್ಲದ ಪೆಂಡತಿಗೆ ಪೇಸಿದಂತೆ ಪೇಸಿ (ರಕ್ಷಾಕು. ೩-೨೦). **ಪೊಲ್ಲದುಗೈ** : ೧. ಹಿಂದು ಮುಂದರಿಯದೆ ಪೊಲ್ಲದುಗೈವನು ನರಕದ ಭಯವಿಸಿಲ್ಲ (ಸಂಕಾಶ. ೦೬೯-೮೨). [ ಪೊಲ್ಲದು + ಕೆಯ್$_1$ ]

**ಪೊಲ್ಲದುಗೈ** 'ಪೊಲ್ಲದುಗೆಯ್' ನೋ.

**ಪೊಲ್ಲನುಡಿ, ಹೊಲ್ಲನುಡಿ** (ನಾ). ಕೆಟ್ಟ ಮಾತು ; ಅಹಿತವಾದ ನುಡಿ : ಶಿಶುಪಾಲನ ಪೊಲ್ಲನುಡಿಗೆ ಸೈರಿಪುದು (ಜಗು. ೦೭-೯೭). **ಹೊಲ್ಲನುಡಿ** : ಅಲಿಪುದುಮಾ ಹೊಲ್ಲನುಡಿಯ ಕಿಡಿಕಿಡಿವೋಗಿ (ಕೇತರಾ. ೩-೩೪) ; ಬಿಲ್ಲೇಶನ ಬಾಯಿಂದ ಹೊಲ್ಲನುಡಿಗಳ ಕೇಳಿ ಎಲ್ಲರು ಬೆರಗುಗೊಂಡರು (ಸಿದ್ಧಕೃ. ೦೩-೯೬). [ ಪೊಲ್ಲ + ನುಡಿ$_2$ ]

**ಪೊಲ್ಲಬ್ಬೆ** (ನಾ). ಒಬ್ಬಾಕೆಯ ಹೆಸರು : ನಾಗುಳರ ಪೊಲ್ಲಬ್ಬೆ ಮಾಡಿಸಿದ ಬಸದಿ (ಕೊಂಕಶಾ. ೦೯೪೯, ರಾಜಕರ್ಪೂರ್. ೦೦೩-೨೦ ; 781).

[ಪೊಲ್ಲ$_1$ + ಅಬ್ಬೆ$_1$]

**ಪೊಲ್ಲಮಾತು** 'ಪೊಲ್ಲವಾತು' ನೋ.

**ಪೊಲ್ಲಮಾನಸ, ಪೊಲ್ಲಮಾನಿಸ** (ನಾ). ಕೆಟ್ಟ ಮನುಷ್ಯ ; ದುರ್ಬುದ್ಧಿಯುಳ್ಳವನು : ಅಧಮರ ಪೊಲ್ಲಮಾನಸರ ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪಯೋಗ್ಯಮಂಗೆಯ್ದರ್ (ಪಞ್ಚಾಶಾ. ೬-೦೯) ;

ದುರ್ಯೋಧನನಪ್ಪೊಡೆ ಪೊಲ್ಲಮಾನಸನಾತನುಂ ನೀಮುಮೊಂದೆಡೆಯೊಳಿರೆ ಕಿಸುಣುಂ ಕಲಹಮುಮೊಂದುಂ ಕುಂದದು (ಶಂಕಶಾ. ೨-೯೨ ವ). **ಪೊಲ್ಲಮಾನಿಸ :** ಪೊಲ್ಲಮಾನಿಸರ ಪೊಲ್ಲವೋಗಂಗಳ್ (ಕವಿರ. ೦೬೬ ಕ್ರಯೋ).

[ಪೊಲ್ಲ + ಮಾನಸ₁ (< ಮಾನುಸ)]

**ಪೊಲ್ಲಮಾನಸಿ** (ನಾ). ದುಷ್ಟಹೆಣ್ಣು : ನೀಂ ಪೊಲ್ಲಮಾನಸಿಯೆ ಎಂದು ಮನದೊಳೆ ಬಗೆದು (ವಡ್ಡಾರಾ. ೦೬-೨೬). [ಪೊಲ್ಲ + ಮಾನಸಿ]

**ಪೊಲ್ಲಮಾನಿಸ** 'ಪೊಲ್ಲಮಾನಸ' ನೋ.

**ಪೊಲ್ಲಮೆ, ಹೊಲ್ಲಮೆ** (ನಾ). ೧. ದುಷ್ಟತನ ; ಕೆಟ್ಟತನ : ಪೊಲ್ಲಮೆಯುಂ ಗುಣಮುಂ ತಮಗಲ್ಲದೆ ಪುದುವಲ್ಲ (ಶಂರಾ. ೩-೦೬೪); ಅವನೀನಾಥನ ಗೆಯ್ದ ಪೊಲ್ಲಮೆಯಿನೊಳ್ಪಿಂಗಮಿಂ ಸಕ್ಕಯಾಗು (ಶಂಶಶಾ. ೯-೨೬); ಪೊಲ್ಲಮೆಯೊಳೊಂದದೆ ಚಾರಿತ್ರದೊಳ್ ಕೂಡಿ ನೆಗೞ್ದ ಧರ್ಮಮೆ ಸದ್ಧರ್ಮಂ (ರಕ್ಷಾಣಮ್ಮ. ೯-೧೬). ೨. ಕೆಡುಕು; ಅಹಿತ; ಕೇಡು : ಕಂಸಕೃತಾಪಚಾರದಿಂ ನಿರ್ವಿಚಾರಮ ಪೊಲ್ಲಮೆಯಾದುದು (ಜಗಾ. ೨-೬೦ ವ); ಆ ನಿನಗೆ ಮಾಡಿದ ಪೊಲ್ಲಮೆಯುಂಟೆ (ದಕಶ. ೦೦-೬೩) ; ಈಗಳೋ ತಾನ ಗೆಯ್ದು ಪೊಲ್ಲಮೆಗೆ ದೇವರ್ಗೆ ತೆತ್ತಪನ್ ಈ ದಂಡಮನ್ (ರಶ್ರ. ೦.೦೦). ೩. ದೋಷ; ತಪ್ಪು : ಸಂಸಾರದ ಪೊಲ್ಲಮೆಯುಂ ಮನನಿತ್ಯತೆಯುಮಂ ಬಗೆದು ವೈರಾಗ್ಯಪರರಾಗಿ (ವಡ್ಡಾರಾ. ೧೪-೬) ; ಏನಾನುಮೊಂದು ಪೊಲ್ಲಮೆಯನಿಲ್ಲದುದನುಮ್ಮವಿಸಿ (ಶರೀ. ೦೫-೫೪ ವ); ಮರುಳೇ ಪೊಲ್ಲಮೆಯ ಲೇಸು ನಲ್ಲರ ಮೆಯ್ಯೊಳ್ (ಮಾಕೋಕ. ೨-೯೨). ೪. ಕಳಂಕ ; ಅಪವಾದ : ಇನ್ನುಮೊಂದು ಕಥೆಯಂ ಪೇೞ್ದಿನ್ನ ಮೇಗಣ ಪೊಲ್ಲಮೆಯಂ ಪಿಂಗಿಸಿಕೊಳ್ವೆಂ (ರಕ್ಷಾಣಮ್ಮ. ೦೨-೦೩೭). ೫. ಪಾಪ : ಆದಂ ಪೊಲ್ಲಮೆಯೊಳ್ ಸಲೆ ನಡೆಪರ್ ದುಷ್ಟಮುಮೆಂಬಯ್ದನೆಯ ಕಾಲದೊಳ್ (ಅರಪು. ೦೫.೩೩). **ಹೊಲ್ಲಮೆ :** ೧. ಅಗಲ್ಕೆಯಲ್ಲಿಯುಂ ಹೊಲ್ಲಮೆಯಲ್ಲಿಯುಂ ಪ್ರತ್ಯವಾಯಮೆಂಬುದು (ಹಲಾಯು. ೦೩೭-೩೬) ; ಸ್ತ್ರೀಜೀವನದ ಹೊಲ್ಲಮೆ ಸಹ ನಯಸೇನನ ತೀಕ್ಷ್ಣವಾದ ನೋಟಕ್ಕೆ ಸಿಲುಕದೆ ಹೋಗಿಲ್ಲ (ಕವಿ. ೯೩). ೨. ವಲ್ಲಭ ನಿನಗೇಗೆಯ್ದಂ ಹೊಲ್ಲಮೆಯಂ (ಪಶಕಂ. ೩೯೪). ೩. ಒಸಗೆ ತಮ್ಮದೆನೆ ಪೆರ್ಮೆಯೊಡನಾಡಿ ಹೊಲ್ಲಮೆಯು ಕಳಗಿಕ್ಕಿ ತಿಳಿದೆಲ್ಬರ್ಪವ ಬಾಳ್ಗೆ ಸೊಲ್ಲೇನು ? (ಕಾಂಪಿರ. ೭೫-೦೩೭). ೬. ಕೆಟ್ಟ ಮಾತು ; ನಿಂದೆ : ಈ ಕಡೆಯ ಬಾಯಿಂದ ಒಳ್ಳೆಯ ಮಾತಾಡುತಿದೆ ಆ ಕಡೆಯ ಬಾಯಿಂದ ಬರಿಯ ಹೊಲ್ಲಮೆಯ ಹೊರಹೊಮ್ಮುತಿದೆ (ಜಗೀ. ೫೦). [ಪೊಲ್ಲ + -ಮೆ₁]

**ಪೊಲ್ಲಮೆಗಾಣ್** (ಕ್ರಿ). ದೋಷವನ್ನು ಕಾಣು ; ತಪ್ಪನ್ನು ಕಾಣು : ಮನಮನಗಲ್ದಲೊಂದೆಡೆಯ ಪೊಲ್ಲಮೆಗಾಣೆನೆ ಬೇಡಿದೊಂದು ರೂಪಿನ ನಿಧಿ ಬೇಡಿದೊಂದು ಕಡುಗಾಡಿಯ ಸನ್ನಿಧಿ (ಶಾಂತಿಪು. ೬-೬೯); ಪೊಲ್ಲಮೆಗಂಡದ ನಱುದಿಂ ಮೆಲ್ಲನೆ ಸಯ್ತಾಗೆ ತಿರ್ದುವರ್ಸುಕವೀಶರ್ (ರಕ್ಷಾಣಮ್ಮ. ೦-೯೩) ; ಪೊಲ್ಲಮೆಗಂಡಮರ್ಮರಿದು ತಮ್ಮಯ ತೊಟ್ಟಿರನಂತು ಮಾಟ್ಕೊಡಂ ಸಲ್ಲದೆ (ಶೃಂಗಾರ. ೩-೫೦). [ಪೊಲ್ಲಮೆ + ಕಾಣ್]

**ಪೊಲ್ಲಮೆಗೆಯ್** (ಕ್ರಿ). ಕೆಟ್ಟುದನ್ನು ಮಾಡು ; ಕೇಡುಂಟುಮಾಡು : ಸಂಜೀವಕಂಗೆ ನೀ ಕೂರ್ಪೆಯಪ್ಪ ಕಾರಣದಿಂದಾತನೆನಿತು ಪೊಲ್ಲಮೆಗೆಯ್ದು ನಾಡೊಡಮೊಳ್ಪೆದನೆಂದು ನುಡಿದಪೆ (ಶಂಕಕಂ. ೦೦೧-೬); ಪೊಲ್ಲಮೆಗೆಯ್ಕಾಜಿದಿದು (೬ಜುಶ. ೦೯-೬೦) ; ಪೊಲ್ಲಮೆಗೆಯ್ಕಲ್ಬಟ್ಟಡೆಡೆಗೆ ನೆಲನೆಲ್ಲ ಮನುಜರಳಱುವ ಖಳ ನೀ ನನೆವಿಲ್ಲಂ (ಉದ್ಭರೀ. ೯-೩೩).

[ಪೊಲ್ಲಮೆ + ಕೆಯ್₁]

**ಪೊಲ್ಲಯ್ಯ** (ನಾ). ಒಬ್ಬಾತನ ಹೆಸರು : ಮಟ್ಟೂರ ಸಾಯಿರ ಒಟ್ಟುಬ್ಬರುಂ ಪೊಲ್ಲಯ್ಯನ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ (ಅಕ. IV. ಎಳಂದೂ. ೯೦-೩; 982). [ಪೊಲ್ಲ ? + ಅಯ್ಯ₁]

**ಪೊಲ್ಲಲಿಂಗಿ** (ನಾ). (ಅನ್ಯಪಂಥದ) ಹೀನಯತಿ : ಸಂನ್ಯಾಸಿ : ಪೊನ್ನ ತಳಿಗೆಯೊಳ್ ನಾಯ್ ತಾಯ್ಯಲನುಣ್ಬುದಂ ಕಂಡುದಱಿಂ ಪೊಲ್ಲಲಿಂಗಿಗಳರ ಸರ್ಕಳಿಂದಂ ಪೂಜಿಸೆ ಪಡುವರ್ (ವಡ್ಡಾರಾ. ೦೬-೨೬). [ಪೊಲ್ಲ + ಲಿಂಗಿ₁]

**ಪೊಲ್ಲಮಾತು, ಪೊಲ್ಲಮಾತು** (ನಾ). = ಪೊಲ್ಲನುಡಿ : ಎಲ್ಲಿಯದೀ ಸುದ್ದಿ ರಾಮ ಮಡಿದನೆಂಬ ಪೊಲ್ಲಮಾತಿದ ತಂದರಾರು (ಕುಂರಾಕಂ. ೩೬-೦೦೯). **ಪೊಲ್ಲಮಾತು :** ನಿಮ್ಮಿಂದಿಗರ್ವಿಂಶದ ಕೇಡಂ ನೋಡದೊಳ್ಪಂ ಬಗೆಯದೆ ಪಟ್ಟಂಗಂ ಪಾತಕಕ್ಕಂ ಭಯಂಗೊಳ್ಳದೆ ಪೇೞರ್ ಪೊಲ್ಲಮಾತಂ ನುಡಿಯಲಿದು ಮನಂ ನೋಲ್ಪ ಸಂಕಲ್ಪಜಲ್ಪಂ (ಶಂರಾಶತಿ. ೯-೦೬೯).

[ಪೊಲ್ಲ + ಮಾತು₁]

**ಪೊಸ, ಹೊಸ** (ಗು). ೧. ನೂತನ; ನವೀನ : ಒರ್ವಳ್ ಪೊಸ ಶಾಪವಕಿ . . . ಕಟ್ಟಿಲೆಯೊಳ್ ನಿರ್ಗ್ರಂಥಮಪ್ಪ ರೂಪು ಕಂಡು ಬೆರ್ಚಿದೊಡೆ (ವಡ್ಡಾರಾ. ೯೨-೧೧) ; ತಾವರೆಯ ರಜಂಗಳೆಂಬ ಪೊಸ ಸುಣ್ಣಗಳಿಂದೆ ಪುಟಲ್ಗಳಂ ಮನೋಹರಕೃತಕಪ್ರವಾಹಿನಿಯೊಳಂಗನೆ ಮಾಡಿಸು ತಿರ್ದಳರ್ಥಿಯಿಂ (ಕಾದಂಶಾ. ೨೪) ; ಪೊಸ ಪೊನ್ನ ಪರಿಯಾಣದೊಳೆಸೆವ ಅಮೃತಾನ್ನಮನು ನಾಯ್ಸಿಂಬುದಂ . . . ನೃಪಾಳಂ ಕಂಡಂ (ಶ್ರೀಕೃಷ್ಣಸ್ರ. ೯-೦೯); ಪೊಸ ಜೊನ್ನಂ ತನ್ನ ಕೀರ್ತಿಪ್ರಭೆ ಪಸರಿಸಿತೆಂಬಂತೆ ಸೊಂಪೇಱಿ (ವೃಕಶ. ೨೬.೦೦). ೨. ಚೆಲುವಾದ; ಮನೋಹರವಾದ : 'ಪೊಸವೆಳ್ದಿಂಗಳ್', 'ಪೊಸಸಂಜೆ' ಪರಾ. ೩. ಶುಭ್ರವಾದ; ಸ್ವಚ್ಛವಾದ; ನಿರ್ಮಲವಾದ : 'ಪೊಸದಳಿಂಬ', 'ಪೊಸನೀರ್' ಪರಾ. ೪. ಚಿಕ್ಕದಾದ ; ಎಳೆಯ ವಯಸ್ಸಿನ : 'ಪೊಸನವಿಲ್' ಪರಾ. ೫. ಪಕ್ವವಾದ ; ಮಾಗಿದ: 'ಪೊಸವಣ್' ಪರಾ. ೬. ಬಿಸಿಯಾದ : 'ಪೊಸನೆತ್ತರ್', 'ಪೊಸಪಾಕ' ಪರಾ. ೭. ಮಾಸದಿರುವ ; ಅಳಿಸದಿರುವ: 'ಪೊಸಪಜ್ಜೆ' ಪರಾ. ೮. ಬೇರೆಯ ; ಮತ್ತೊಂದು: 'ಪೊಸವೆಸರ್' ಪರಾ. ೯. ಮೊದಲನೆಯ ; ಪ್ರಥಮ : 'ಪೊಸಗಾರ್' ಪರಾ. ೧೦. ಅಧಿಕವಾದ ; ಅತಿಶಯವಾದ: 'ಪೊಸಸಿರಿ' ಪರಾ. **ಹೊಸ:** ೧. ಆವರಿಸಿದುದು ಮತ್ತೆ ಹೊಸ ಮೇಳಾಪದಲಿ ಕುರುಸೇನೆ (ಕುಮ್ಮಾಕ. ೦೯-೨೬); ಹೊಳಲು ಹೊಸ ರೀತಿಯಲಿ ವಿಂಗೆ ಕಂಗೊಳಿ ಸುತಿರ್ದುದು (ತೊರರಾ. ೦-೯.೦೦); ಈ ಹಳೆಯ ಹೇಳಿಕೆಗೆ ಹೊಸ ಉಸಿರು ತುಂಬಿದ್ದಾರೆ (ಡ್ರಾಪಿಂ. ೯೨). ☞ 'ಪೊಸ' ಮತ್ತು 'ಹೊಸ' ಎಂಬ ಈ ಶಬ್ದಗಳು ಇತರ ಅನೇಕ ನಾಮಪದಗಳೊಡನೆ ಸೇರಿ ಸಮಾಸವಾದಾಗ ಬೇರೆ ಬೇರೆ ಅರ್ಥಗಳನ್ನು ಕೊಡುತ್ತವೆ.

**ಪೊಚ್ಚಪೊಸ, ಪೊಸಪೊಸ, ಹೊಚ್ಚಹೊಸ, ಹೊಸಹೊಸ** (ದ್ವಿರುಕ್ತಿ): ಪೊಚ್ಚಪೊಸ ಮಲ್ಲಿಗೆಯಂ ಮುದದಿಂ ತುಱುಂಬಿ (ರಕ್ಷಾಣಮ್ಮ. ೭-೦೬೪); ತನಿಗಂಪು ತೀವಿರ್ದ ಪೊಚ್ಚಪೊಸ ಪೂಗಳಂ ಕೊಂಡು (ಕೃಷ್ಣರ.ಹ. ೫೨೩-೨೮); ಪರಿಯಾಣದಲಿ ಪೊಸಪೊಸ ಪದಾರ್ಥಶ್ರೇಣಿಯುಂ ಲೇಸಾಗಿ ಗಡಣಿಸಿ (ಬಿಕಥ. ೩೩-೦೦): ಹೊಚ್ಚಹೊಸ ಬೆಣ್ಣೆಗಾಸಿದ ತುಪ್ಪ (ಸಮ್ಮಿಳಿ. ೭-೨೯); ಹೊಚ್ಚಹೊಸ ಹೊಂಗರಂಬಿನಲಿ ತೆಗೆದೆಚ್ಚನು (ದೇವಃಮ. ೩-೨೭); ಆ ಅಂಗಡಿಗೆ ಹೊಸ ಹೊಸ ಬಗೆಯ ಸೀರೆಗಳು ಬಂದಿವೆ (ರೂಢಿ). **ಪೊಸವು** (ಬಹುವ): ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮುಮಂ (ಅರಪು. ೯-೨೩).

[ದೇ.॥ತಮಿ. ಪುತಿಯ, ಪುತು ; ಮಲ. ಪುದು; ತುಳು. ಪೊಸ, ಹೊಸ; ಕೊಡ. ಪುದಿಯದ್; ಕೋತ. ಪುವ್]

**ಪೊಸಅಡಕೆ** (ನಾ). ತಾಜಾಅಡಕೆ ; ಹಸಿಯಡಕೆ : ಪೊಸಸುಗ್ಗಿ. ಪೊಸ ಅಡಕೆ (ಬಾಶಾಶಾ. ೦೯೯ ಕಾದಾ); ಪೊಱಅಡಿ, ಒಳಅಟ್ಟಂ, ಪೊಸಅಡಕೆ (ಕಮತ. ೫೬ ಪ್ರಯೋ). [ಪೊಸ + ಅಡಕೆ₁]

**ಪೊಸಎಲರು** (ನಾ). ಸ್ವಚ್ಛವಾದ ಗಾಳಿ; ನಿರ್ಮಲವಾದ ವಾಯು: ಪಳವಾನೇ! ಪೊಸಎಲರೇ! (ಹೊಂಗಳು. ಹಾಸ್ಕಿ. ೧೭).
[ಪೊಸ + ಎಲರು (< ಎಲರ್)]

**ಪೊಸಒಲುಮೆ** (ನಾ). ನವೀನವಾದ ಪ್ರೇಮ,–ಭಕ್ತಿ: ಭಕ್ತರ ಚರಿತೆಗಳನಾನಂದದಿಂ ತಿರುಪಾಟ ರೀತಿಯೊಳೊಂದಿ ಪಾಡುತ ಪೊಸ ಒಲುಮೆ ಸಲೆ ಪೊಣ್ಮೆ [ಪಾಠಾಂ. ಪೊಡವಡುತವೊಲವುಣ್ಮೆ] ಕೀರ್ತಿಸುತ (ಚಿತ್ರ. ೨೭-೬೦).
[ಪೊಸ + ಒಲುಮೆ (< ಒಲ್ಮೆ)]

**ಪೊಸಂತಿಲ್**, ಪೊಸಂತಿಲು, ಪೊಸತಿಲ್, ಪೊಸತಿಲು, ಹೊಚ್ಚಲ, ಹೊಸಂತಿಲ್, ಹೊಸಂತಿಲು, ಹೊಸತಿಲ್, ಹೊಸತಿಲು, ಹೊಸಲು, ಹೊಸಿಲು, ಹೊಸ್ತಲು, ಹೊಸ್ತಿಲ್, ಹೊಸ್ತಿಲ, ಹೊಸ್ತಿಲು (ನಾ). ೧. ಬಾಗಿಲ ಚೌಕಟ್ಟಿನ ಕೆಳಭಾಗ; ಉತ್ತರಾಸ; ದೇಹಳಿ: "ಗೃಹಾವಗ್ರಹಣೀ ದೇಹಳೀ–ಈ ೨ ಪೊ(ಹೊ)ಸಂತಿಲ್" (ಹಲಾಯು. ೩೦-೦೯೭); ಮೇರು ಪೊಸಂತಿಲ್ ಕುಡಿತಿಯ ನೀರಂಬುಧಿ ಗಗನತಳಮೆ ಕೈ ದಿವಿಜಗಣಂ ಕಾರೊಕ್ಕಲೆಂದೊಡುಬಿದವರಾರಾತನ ಮಸಪ ಮಸಕದೆಸಕಮನಿಬಿಪರ್ (ಕಾಕ್ಕಿ. ೨೧೯ ಪೂರ್ವ); ಎನಗೆ ಪೊಸಂತಿಲೀ ನೆಗೆದ ವಜ್ರದ ವೇದಿಕೆ ಗೋಷ್ಪದಂದಲೀ ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಲ್ಲಿ (ಅಜಿಪು. ೦೨-೬೦); ನಿತ್ಯಬಂಧುಗಂ—ಬೆಡಂಗು. . .ಪೊಸಂತಿಲ್, ಗಳಂತಿಗೆ (ಕವಿರ. ೩೭ ವೃತ್ತ). **ಪೊಸಂತಿಲು**: ೧. "ಪೊಸಂತಿಲು ದೇಹಳಿಯುಯುಮಕ್ಕು" (ಅಭಿ. ಪಂ. ೩೬). **ಪೊಸತಿಲ್**: ೧. ಪೊಸತಿಲ ಮೇಲನೊಕ್ಕಿಬಿದು ಮಿಾಸಲ ತುಯ್ಯಲನಟ್ಟು ಬಾಗಿಲ್ಚರ್ಚಿಸಿ (ಚಂದ್ರ. ೩೨೬); ಪುರದೋಂಟಕ್ಕೆ ಪೋಗಿ ನಿಚ್ಚಲುಂ ಪೂಗಳು ಕೊಯ್ದುಕೊಂಡು ಮನೆಗೆ ಬರುತ್ತಾ ಮಾರ್ಗದ ಬಸದಿಯ ಪೊಸತಿಲೊಳೊಂದೊಂದು ಪೂವನರ್ಚಿಸುತ್ತಂ (ವಡ್ಡಾರಾ. ೦-೯೨ ವ). **ಪೊಸತಿಲು**: ೧. ಆಸುಮೊರಲೊನಕೆ ಗೂಟಂ ಪೊಸತಿಲು ಮನೆಮನೆಯ ಕಥ . . . ದೆಯ್ವ ಮಿಂತಿವೆಂಬಮರ್ರ್ಥರ್ (ಸಮಚ. ೯-೬೨); ಬಸವಿಯರೊಳು ಪಾತಕಿನಿಯರೊಳು ಮತ್ತಸತಿಯರೊಳು ಕೆಳೆಗೊಳದೆ ಪೊಸತಿಲ ಪೊಜಗಡಿಯಿಡದೊಳ್ಪೆಂಡಿರ ಜಸವಳ್ಳಿ ಜಗವ ಪರ್ಬುವುದು (ಹರಿಂ. ೯-೯೭). **ಹೊಚ್ಚಲ**: ೧. ಬೆಚ್ಚನ ಮನೆಯಾ ಹೊಚ್ಚಲದೊಳಗೆ ನಿಂತರು ಭಟ್ಟರು ಹಣಕುತ ಹೊರಗೆ (ಗು. ೯೯-೭); ನೀ ಹೊಚ್ಚಲವಾಗ ಚಾಲಿಟ್ಟೀದಿ, ಹಿತ್ತಲದಾಗಿನ ತುಲಸೀಗಿಡ ಕಮರಿ ಹೋತು (ನಡುಜೀ. ೭೪). **ಹೊಸಂತಿಲ್**: ೧. "ಗೃಹಾವಗ್ರಹಣೀ, ದೇಹಳೀ—ಈ ೨ ಪೊ(ಹೊ)ಸಂತಿಲ್" (ಹಲಾಯು. ೩೦-೦೯೭); ನುಡಿಯಲ್ಲಂ ಹೊರೆ ಸೂರುಳೊಳ್ನಿಬಿ ಹೊ[ಪಾಠಾಂ. ಪೊ]ಸಂತಿಲ್ ಪೊಂಗೊಳಲ್ ಪುತ್ತಪಾಯ್ಯುಡಿನೀರೊರ್ವೆಗೆ ಕಮ್ಮನಪ್ಪ ಬಟ್ಟನೀರೂರ ದೈವಂಗಳುಂ ಪಡಿಗೆತ್ತೋಡಿದುವೀಕೆಗಂಜಿ (ರೀಲಾವ. ೨-೧೦೨). **ಹೊಸಂತಿಲು**: ೧. ಒಂದು ಹೊಸಂತಿಲನ್ನು ದಾಟುವುದರೊಳಗಾಗಿ ಬಿಟ್ಟದೇವನೂ ಬಂದನು (ಸಶತ. ೨೪೯). **ಹೊಸತಿಲ್**: ೧. "ದೇಹಳಿಯದೊಗೆದ ಹೊಸತಿಲೆನಿಕ್ಕುಂ" (ಮಂಗರಾ. ೩೯-೦೨). **ಹೊಸತಿಲು**: ೧. ಹೊಸತಿಲ ಪೂಜಿಸಿ ಹೊಡಿವಟ್ಟು ಹೋದ ಒಕ್ಕಲಿತಿಯಂ ತಾಯಿತ್ತನ್ನ ಭಕ್ತಿ (ಶಿಶರ. ೩೨೨); ಈ ಜನದ ಬದುಕಿನ ಸೊಗಸು ಸಂಸ್ಕೃತಿಯರಳಿ ಪರಿಮಳಿಸಲೆಂದು ಹೊಸತಿಲಲಿ ಹಚ್ಚಿಟ್ಟ ಹಣತೆ ಒಳಗು ಹೊರಗೂ ಕೂಡಿ ಬೆಳಗಲೆಂದು (ಶಂಪು. ೯-೬); ಹೊಸತಿಲಲ್ಲಿ ಅಡಿಯಿಂಸುತ್ತಿದ್ದ ಹಾಗೆಯೇ ಮುಕ್ತಾ ಆನಂದಭರಿತಳಾದಳು (ಆಕ್ರಮು. ೦೨೭). **ಹೊಸಲು**: ೧. ಹೋಮಶಾಲೆಯ ಹೊಸಲು, ಹೊಸದಾಗಿ ಮಾಡಿರುವ ಸಮ್ಮಾರ್ಜನೆಯಿಂದ ಶೋಭಿಸುತ್ತಿರುವುದು (ಶಾಕುಂತ. ೬೬-೦೭); ರೈತರಲ್ಲ ಮನೆಯ ಹೊಸಲಿಗೆ ಕಾಯಿ ಒಡೆದಿಟ್ಟು ಧೂಪ ಹಾಕಿ ಪೂಜಿಸುತ್ತಿದ್ದರು (ಹುಟ್ಟಿ. ೮೨). **ಹೊಸಿಲು**: ೧. ಪೋಜಾ ನಸ್ರುದ್ದೀನ್ . . . ಹೊಸಿಲನ್ನು ದಾಟಿದನು (ನಗಹೊ. ೨೨೯). ೨. (ಆಲಂ) ಅಂಚು; ಗಡಿ: ನನ್ನ ಬಾಳು ಸಾವಿನ ಹೊಸಿಲನ್ನು ಮೆಟ್ಟಿತ್ತು (ಉಪಶಾ. ೬೦); ಹದಿನೆಂಟರ ಹೊಸಿಲನ್ನು ದಾಟಿದರೂ ವಿಲಾಸಜೀವನವೇನೆಂಬುದನ್ನೇ ಅವಳು ಅರಿಯದವಳಾಗಿದ್ದಳು (ರೂಕಪ. ೨೪). **ಹೊಸ್ತಲು**: ೧. ನರಸಿಂಹರೂಪದಿಂ ದೈತ್ಯನಂ ಪಿಡಿತಂದು ಹೊಸ್ತಿಲೊಳಗೆ ಸಂಜೆಯೊಳ್ ತನ್ನ ತೊಡೆಯೊಳ್ ಕೆಡಪುತುಗುರ್ಗೊನೆಗಳಿಂ ಜಠರಮಂ ಬಗಿದು (ಕಲಕ್ರ. ೩೩-೩); ಮುಂದಣಂ ಗುಣಮನೆಲ್ಲವನುಡುಗಿ ಸಲೆ ಹೊಸ್ತಿಲೊಳಗೆಳಗೆ ಸಾರಣೆಯನೇ ಹಾಕಿ (ಪುಶ್ರೀಪ. ೨-೦೨). **ಹೊಸ್ತಿಲ್**: ೧. "ಗೃಹಾವಗ್ರಹಣೀ, ದೇಹಲೀ—ಈ ೨ ಹೊಸ್ತಿಲ ಪೆಸರು" (ನಾಚಿರಾ. ೦೦೪). **ಹೊಸ್ತಿಲ**: ೨. ಬಳ್ಳಾರಿ ಕನ್ನಡ ನಾಡಿನ ಹೊಸ್ತಿಲದಂತೆ (ಪುಂಗಾಪು. ೨೭). **ಹೊಸ್ತಿಲು**: ೧. ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ ಮನೆಯೊಳಗೆ ಮನೆಯೊಡೆಯ ನಿದ್ದಾನೊ ಇಲ್ಲವೊ (ಬಶವ. ೯೭); ನಡುಹೊಸ್ತಿಲನು ಮೆಲ್ಲನೆ ದಾಟಿ (ಸಂಶಕ. ೦೪-೪೦); ಬಾಪೂಜಿಯ ಚಿತ್ರವೊಂದು ಮಾತ್ರ ಅವರ ಅರಮನೆಯ ಹೊಸ್ತಿಲನ್ನು ದಾಟಿ ಒಳಗೆ ಕಾಲಿಡುವುದು ಅಸಾಧ್ಯವಾಗಿತ್ತು (ಶಂಬಕು. ೯೯).

ಹೊಸತಿಲ ಹುಣ್ಣಿವೆ, ಹೊಸ್ತಿಲ ಹುಣ್ಣಿವೆ = ಮಾರ್ಗಶೀರ್ಷಮಾಸದ ಹುಣ್ಣಿಮೆ; ೮ ದೇವತೆಗಳ ಆಗಮನಕ್ಕಾಗಿ ಹೊಸ್ತಿಲನ್ನು ಪೂಜೆ ಮಾಡುವ ದಿನ: ಮಾರ್ಗಶೀರ್ಷ ಶುದ್ಧ ೧೫ನೆಯ ತಿಥಿ ಹೊಸತಿಲ ಹುಣ್ಣಿವೆ (ಕಾಪ್ಯ. ೦೬೪); ಹೊಸ್ತಿಲ ಹುಣ್ಣಿವೆಗೆ ಹೊಸ್ತಿಲ ನಡುಗಿತ್ತು ಬನದ ಹುಣ್ಣಿವೆಗೆಲ್ಲ ಬನ ನಡುಗಿದೆ (ಸಹಗೀ. ೨೩-೬೪೩). **ಹೊಸತಿಲು ದಾಟು, ಹೊಸಲು ದಾಟು** = ೧. ಮನೆಯ ಹೊಸ್ತಿಲನ್ನು ದಾಟು; ಹೊರಗೆ ಹೋಗು: ಮನೆಯ ಹೊಸತಿಲು ದಾಟುವ ಮುನ್ನ, ಅವರು ಹಿತ್ತಲ ಕಡೆಗೆ ಹೋಗಿ, ತಮ್ಮ ಮೂಕಜೀವಗಳನ್ನು ಮಾತನಾಡಿಸಿ ಬರುವರು (ಶಂಪ್ರಹಾ. ೬೨). ೨. (ಆಲಂ) ಹದ್ದು ಮೀರು; ಅಂಕೆತಪ್ಪು: ಬೀದಿಯವರ ಮುಂದೆ ನಾಟ್ಯವಾಡಲು ಸರಿಯಾದ ಹೊಸಲು ದಾಟಿದ ಹೆಣ್ಣು ಇವಳು (ಗೋಪುರ. ೫೦). [< ಪೊಸತು ? + ಇರ್ಕೆ]

**ಪೊಸಂತಿಲು** 'ಪೊಸಂತಿಲ್' ನೋ.

**ಪೊಸಂಬ**, ಪೊಸಬ, ಹೊಸಬ (ನಾ). ಗುರುತಿಲ್ಲದವನು; ಅಪರಿಚಿತ: ಒಂದೆಡೆಗೆ ಪಬೆಯನಿಂ ಪೊಸಂಬನೆ ಲೇಸು (ಶಂಕಶಂ. ೦೦೬-೪); ವಿಚಾರಿಸದುಂತೆ ಪೊಸಂಬರೆಚತ್ತ್ರಯಂ ಕೊಳ್ವುದು ತಕ್ಕುದಲ್ತು (ಕವಿರ. ೦೩೭ ವೃತ್ತ); ಅವನಾನೊರ್ವನಾಗಲಿ ಪೊಸಂಬಂ ಬರಲ್ [ಪಾಠಾಂ. ಪೊಸಬನೆಯ್ತರಲ್] ಭಾವಜ್ಞರಾದವರ್ ವತ್ಸೆಂಟು ವಗಲವನ ಭಾವಮಂ ನೋಡಿಯೊಳ್ಪಿದನಾದೊಡಂಗಳಕೊಳ್ಳಬೇಕು (ಪದ್ಮುಳ್. ೦೦-೫೦). **ಪೊಸಬ**: ಪೊಸಬರ್ಗೆ ದೇಶದಳಬಳವನಜಿಯರಿ (ಶಾಂಡಪ್ರ. ೯-೩೭); ಪಿಸುನಿವಣ್ಣದ ಮೆಯ್ಯ ಗವಾಧಿಪ ಕಂಧರವು ಮೆಜೆವ ಪೊಸಬನಿವನಬಗನೆನಿಸನೀಕ್ಷಿಸಲು (ಹಾಸ್ಕರಾ. ೦೯-೩). **ಹೊಸಬ**: ಹೊಸಬರಪ್ಪ ಕೊಯ್ಲಾಳಿಗಳು ಬನ್ನೀಯೂರೊಳ್ . . . ಎರಡು ಪಣಮಂ ಕೊಟ್ಟು ಕೊಯ್ಸೂರ್ (ಶಾಶಾ. XI-11, ೭೬೦-೬೦; 1094); ಸಂವರ್ತರುದ್ರನೊ ಹೊಸಬನಿವನಾರೆಂದು ತಲ್ಲಣಿಸಿತ್ತು ರಿಪುಸೇನೆ (ಶುಭ್ರಾದ್ರೋ. ೦೨-೨೦); ವರ್ತಕನೊಬ್ಬನು ಹೊಸಬ ಗಿರಾಕಿಗೆ ಉಪದೇಶವಿತ್ತನು (ಶಂಶಾಕ. ೦೨೦-೯೦). [< ಪೊಸ + — ಬ್ಯ. / ತುಳು. ಪೊಸಬೆ]

**ಪೊಸಕಂಪು** 'ಪೊಸಗಂಪು' ನೋ.

**ಪೊಸಕನ್ನಡ** 'ಪೊಸಗನ್ನಡ' ನೋ.

**ಪೊಸಕಲ್ಲೆ** 'ಪೊಸಗಲ್ಲೆ' ನೋ.

**ಪೊಸಕಿಟ್ಟಳ** (ನಾ). ತಾರುಣ್ಯದ ಹೊಸಮದ,–ಸೊಕ್ಕು: ಅಸಿಯ ಸೆಳೆ ತಳದೊಳಿಕಿ ರಂಜಿಸೆ ಪೂರ್ವಪ್ಪಳಿಸೆ ಪತ್ರಸಾರ್ವವರಂ ಶರ್ಚಿತಿಕಾಮಿನ ಪಡಿಯಬೆತಿಪೊಲೆಸದಳ್ ಪೊಸದೆಸೆಕಾರ್ತಿ ಪೊಸಕಿಟ್ಟ [ಪಾಠಾಂ. ಳ] ಳದೊಳ್ (ಅಭಿರ್ಪ. ೨-೦೩). [ಪೊಸ + ಕಿಟ್ಟಳ್]

**ಪೊಸಕೆಂದಳಿರ್** 'ಪೊಸಗೆಂದಳಿರ್' ನೋ.

**ಪೊಸಗಂಪು**, ಪೊಸಕಂಪು (ನಾ). ಆಗ ತಾನೆ ಹುಟ್ಟಿರುವ ಸುಗಂಧ; ಹೊಸದಾದ ಸುವಾಸನೆ: ಮಲರ್ದಲರ್ದ ನಾಗಸಂಪಗೆಯಲರ್ಗಳೊಳ ಗ್ಗಲಿಸಿ ಬರಿವ ಪೊಂಬಾಳೆಯ ತಣ್ಮಲರ ಪೊಸಗಂಪಿನೊಳ್ ಪುದಿದಲೆವೆಲ ರಾಜಿಪುದು ಖಚರದಂಪತಿಶ್ರಮವಂ (ಅಂಕೃ. ೦-೬೮); ಕಪ್ಪುರದ ಕಂಪುಮಂ ಸೂಡಿದ ಬಾಸಿಗದ ಪೊಸಗಂಪನಂಬಾಗೊಗೆದಿರೆ ಮಾಡಿದುದು ಚಮರರುಹ ಗಂಧವಹಂ (ಶಂಕರಾ. ೦೯-೨೩). **ಪೊಸಕಂಪು**: ಬಂದು ಮನೆಗೆಯ್ದೆ ಪೊಸಕಂಪು ಕವಿದಿರೆ ಕಂಡು ಎಂದಿನಂತಲ್ಲದೆ ನವೀನವಾಗಿರೆ ಕಂಡು (ಶಿರುಶ. ೮೮. ೬-೯). [ಪೊಸ + ಕಂಪು]

**ಪೊಸಗನ್ನಡ**, ಪೊಸಕನ್ನಡ, ಹೊಸಗನ್ನಡ (ನಾ). ೧. ಹೊಸ ಬಗೆಯ ಕನ್ನಡ; ನವೀನತೆಯುಳ್ಳ ಕನ್ನಡ: ಪೊಸಗನ್ನಡದಿಂ ವ್ಯಾವರ್ಣಿಸುವೆ ಸತ್ಕೃತಿಯನೆಂದು ಕನ್ನಡವಮಂ ಚಿಂತಿಸಿ ಕೊಡಲಾಱದಕ್ಕಟ ಮಿಸುಕದ ಸಕ್ಕದ ವಾನಿಕ್ಕುವವನುಂ ೯ವಿಯೇ (ರರ್ಪಾಸ್ಕ. ೦-೫೦); ವಾಸುಂವಂತಿ ವರ್ಣಿಸಿದಂ ಶ್ರೀಸಜ್ಜನತಿಳಕನೊಸೆದು ಪೊಸಗನ್ನಡದಿಂ (ಕೂರ್ಮ್ಮಶಾ. ೦೩-೧೦೦; 1186); 'ಪೊಸಗನ್ನಡ' ಎಂಬ ಪದಪ್ರಯೋಗ ಪ್ರಾಚೀನಕನ್ನಡಸಾಹಿತ್ಯ ದಲ್ಲಿಯೂ ಆಗಾಗ ಬರುತ್ತಿದೆ (ಶಾಸಮಾ. ೦). **ಪೊಸಕನ್ನಡ**: ೧. ಮಹಾ ಮುನಿಮತ ಮಿಗೆ ಪೇಳ್ವೆನೆಸೆಯೆ ಪೊಸಕನ್ನಡದಿಂ (ಜಿನೇಶ. ೦-೩೩). **ಹೊಸಗನ್ನಡ**: ೨. ಹಳಗನ್ನಡ, ನಡುಗನ್ನಡಗಳಿಂದ ಭಿನ್ನವಾದ ಈಗಿನ ಕನ್ನಡ: ಈಗ ನಾವು ಬಳಸುತ್ತಿರುವ ಭಾಷೆ 'ಹೊಸಗನ್ನಡ' (ಕ್ರಿತಿ. ೦): ಕನ್ನಡವಮಾತೆಷ್ಟು ವಿಧವಾಗಿರುವದು?. ಹೊಸಗನ್ನಡ ವೆಂತಲೂ ಹಳಗನ್ನಡವೆಂತಲೂ ಎರಡು ವಿಧವಾಗಿರುವದು (ಹೊಪುಗ. ೦). [ಪೊಸ + ಕನ್ನಡ$_1$]

**ಪೊಸಗಬ್ಬ** (ನಾ). ನವೀನರೀತಿಯ ಕಾವ್ಯ: ಈಗಡೀಗಡಿನ ಕಥಾನ್ವಯಕ್ಕೆ ರಸವುಂ ಪೊಸಗಬ್ಬಮಪೂರ್ವಮಾವುವಲ್ಲೊಡವುವು ಪೇಳ್ವುದು ಸಾಧಿಸಿದ ಬ್ಬಮೆ ದಲ್ ಕವಿಚಕ್ರವರ್ತಿಯಾ (ಶಾಂತಿಪು. ೦೨-೬೯). [ಪೊಸ + ಕಬ್ಬ$_1$]

**ಪೊಸಗವಲು**, ಹೊಸಗವಲು (ನಾ). ಹೊಸಬಗೆಯ ವಾಸನೆ,— ಕಂಪು: ಪೊಸಗವಲು ನಾರುತಿದೆ ಬಂದು (ಕಂಶ. ೫೦). **ಹೊಸಗವಲು**: ನಿಬುಗೋಲಲನೊತ್ತಿಂದ ದಕ್ಷಿಣಗಿರಿಂದಾಗಿ ಮಜಿಯರಳೆಗಳೊಡಿ ಬಂದು ದುಬುದುಬುಱಿಸಿ ಹೊಸಗವಲಿಗೆ ಬೆಚ್ಚಿ ಬಿಱಿತೊಡಿದುವು ಕಂಡ ಕಡೆಗೆ (ಶಶಿ. ೯೬-೬೨). [ಪೊಸ + ಗವಲು (<ಗವುಲು)]

**ಪೊಸಗಳ್ತಲೆ**, ಪೊಸಕಳ್ತಲೆ (ನಾ). ಆಗ ತಾನೆ ಆವರಿಸುತ್ತಿರುವ ಅಂಧಕಾರ: ಪೊದಳ್ದ ಪೆರ್ಗಳ್ತಲೆ ನಾಲ್ದೆಸೆಗಳ್ತಲೆ ಪೊಸಗಳ್ತಲೆ ರಸೆಗಳ್ತಲೆಯೆನಿಸಿ ಕೂಡಿ ತೀವಿತು ತಿಮಿರಂ (೧೦೯. ೯-೬೩). **ಪೊಸಕಳ್ತಲೆ**: ಪೊಸಕಳ್ತಲೆಯದು ತನುವಂ ಮುಸುಂಕೆ ಕರ್ಬಿಕ್ಕಿ ಗೆತ್ತಗಲ್ದುದು ಚಕ್ರವಸರಂ (ರಾಜಶೇ. ೦೦-೦೮). [ಪೊಸ + ಕಳ್ತಲೆ (<ಕಟ್ತಲೆ)]

**ಪೊಸಗಟಿಮೆ** (ನಾ). ಆಗತಾನೆ ಬೆಳೆಬಂದ ಬತ್ತ: ಪೊಸಜಾದಿಯ ಬೆಳೆ ದೊಱಗಿದ ಪೊಸಗಟಮೆಯ ಪೊಸತರಲ್ದ ತಾವರೆಗಳ ಕಂಪಸದಳಮೆಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ (ಅಂಕೃ. ೦೦-೬). [ಪೊಸ + ಕಟಮೆ (<ಕಟವೆ)]

**ಪೊಸಗಾಡಿ** (ನಾ). ನವೀನವಾದ ಸೌಂದರ್ಯ; ಹೊಸಸೊಬಗು: ಅವರಿರ್ವರ ರೂಪವಡೆದ ಪೊಸಗಾಡಿಯುಮಂತವರಿರ್ವರ ಬೇಟಮುಮಂತ ವರಿರ್ವರೊಳಲ್ಲದಿಲ್ಲ ಪಚಿತೊರ್ವರೊಳಂ (ಕಶ್ಯ. ೦೨೯); ಮದನಮಹಿಷಿ ಮೆಯ್ಗುಣ್ಣನ ಪಟ್ಟದ ಸುದತಿಯರ್ಗಿವ್ಮಡಿಯಾದ್ಯೆಸಿರಿ ಪೊಸಗಾಡಿ ಚದುರು ಚೆಲ್ವು ವಿದಿತವಿಭವಮುಂಟೇಕೆಗೆ (ಜಿನಶಾ. ೬-೯೬). [ಪೊಸ + ಗಾಡಿ$_1$]

**ಪೊಸಗಾರ್**, ಪೊಸಗಾರು (ನಾ). ವರ್ಷಾರಂಭದ ಮಳೆಗಾಲ ಮತ್ತು ಆಗ ಸುರಿಯುವ ಮಳೆ; ಮುಂಗಾರು: ಕರಮುಚ್ಚಮಪ್ಪ ಬೆಟ್ಟುಗಳ ತಟಂಗಳಿಂ ಸುರಿವ ನಿರ್ಝರಮುಂ ಪೊಸಗಾ[ಶಾಂತಿ. ಕಾ]ರೊಳೀತು ಬೆಳ್ಪಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱೆ ಸುತ್ತಲುಂ (ಶಂಕಾ. ೦-೦೨೯): ವಿದಗ್ಧ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆಸವಿರಾಟಮಂ ತೋಱಿದರ್ (ಅಂಕೃ. ೦೨-೦೯); ಪಸುರ್ವುಲ್ಲು ಮೇದು... ಪೊಸಗಾರೊಳ್ಪಾರಲೊಳ್ ಕಣ್ಣರಿಮುಗಿದಿರೆ ಸೃಕ್ಕಂಗಳಿಂ ಸೂಸೆ ಫೇನಪ್ರಸರು ಮೆಲ್ಕೊಂತ್ತುತ್ತುಂ ನಿಂದುದು ವನಮಹಿಷೀವೃಂದ ಮಾನಂದದಿಂದಂ (ಶಂರಾಮ. ೬-೦೫೬). **ಪೊಸಗಾರು**: ಪೊಸಗಾರೆನಿಸುತಕ್ಷನು ಗರವಪುಪಚರದಲ್ಲಿ ಜಾನಕಿವೆರಸು ಲಕ್ಷ್ಮಣಸಹಿತಲ್ಕೆತರಲಾಗ ಘನಕಾಲ (ಶಶಾಮಾ. ೦೯೬-೪೯). [ಪೊಸ + ಕಾರ್$_1$]

**ಪೊಸಗಾರು** 'ಪೊಸಗಾರ್' ನೋ.

**ಪೊಸಗಾವರ** (ನಾ). ಹೊಸದಾದ ಸ್ವರ; ನವ್ಯಧ್ವನಿ: ನುಣ್ಚಿಸಿದ ಮಾಮರ ನೋರ್ವೊಡಲಲ್ಲದುಣ್ಮುವುಯ್ಯಲ ಪೊಸಗಾವರಂ ಪುಗಿಲೊಳೀನಸೆದತ್ತೊ ಬಸಂತಮಾಸದೊಳ್ (ಶಂಕಶಾ. ೨-೦೨). [ಪೊಸ + ಗಾವರ]

**ಪೊಸಗು** (ಕ್ರಿ). ಲಭಿಸು; ದಕ್ಕು: ವಸುಧೆಯೊಳುಂ ಯಾ ತನುವು ಯಾರು ನಂಬುವರು ಪೊಸಗಿದಯಾ ರಾಜ್ಯಭೋಗಗಳು ನಿವಿಷ್ಯಾಕೆ (ಹುಶಿ. ೦೬). [← ತೆಲು. ಪೊಸಂಗು, ಪೊಸಗು]

**ಪೊಸಗೆಂದಳಿರ್**, ಪೊಸಕೆಂದಳಿರ್ (ನಾ). ಎಳೆಯ ಚಿಗುರು,-ಕುಡಿ; ನವಪಲ್ಲವ: ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳಬಳೆದೆಳದೆಲಸುವ ಪೊಸಗೆಂ[ಶಾಂತಿ. ಕೆಂ]ದಳಿರ ಗೊಂದಳ ದೊಳ್ (ಅಂಕೃ. ೦೦-೬೦ ವ). **ಪೊಸಕೆಂದಳಿರ್**: ಪೊಸಕೆಂದಳಿರ್ಗಳ ದಾಳಿಂಬ ಸಾರವಂ ಕಟ್ಟಿ ತನ್ನ ಬಣ್ಣದೊಳದು ರಂಜಿಸೆ (ಶಾಂತಿಪು. ೯-೦೬). [ಪೊಸ + ಕೆಂದಳಿರ್]

**ಪೊಸಗೆಂಪು** (ನಾ). ಮನೋಹರವಾದ ಕೆಂಪುಬಣ್ಣ: ಪಸರಿಸಿದ ಪದ್ಮರಾಗದ ಪೊಸಗೆಂಪಂ ಮಾಂಸವೆಂದು ಮುಂ ಕರ್ದುಕಲ್ಕಾಟಿಸಿಯುಂ (ಅಂಕೃ. ೦೨-೦೨೨): ಪೊಸಗೆಂಪೇಱಿದ ಬಿಂಬಫಲವ ಗಿಳಿ ಮಸಗಿ ಸಂತಸದೆ ಪೀರ್ವಂತೆ (ಕಂಶಮಾ. ೦೦-೯೦). [ಪೊಸ + ಕೆಂಪು$_1$]

**ಪೊಸಗೆಲ್ಲ** (ನಾ). ನೂತನ ವಿಜಯ: ಸಾರಿಯಂ ನಲಿದಿಡುವಂದು ಪಲ್ಲಟಿಸ ಪುಟ್ಟದಂದೋ ಪೊಸಗೆಲ್ಲವಮಾಂಪನೀ ಲಲನೆಯೊಳೆಂಬ ಸಂಭ್ರಮದಿ ನುಣ್ಣಿದುದೋ ನಗೆ ನಿನ್ನ ವಕ್ತ್ರದೊಳ್ (ಕೃಷ್ಣಜ. ೨೯-೩೩). [ಪೊಸ + ಗೆಲ್ಲ]

**ಪೊಸಗೆಱೆ**, ಹೊಸಕೆರೆ, ಹೊಸಕೆಱೆ, ಹೊಸಗೆಱೆ (ನಾ). ಹೊಸದಾಗಿ ಕಟ್ಟಿಸಿದ ಕೆರೆ; ನೂತನತಟಾಕ: ಇದಕ್ಕೆ . . . ಆತ್ಕೂರ ಪೊಸಗೆಱೆಯುಂ ಬೆಲತೂರ ಇನಿಬರೆ ಸನ್ನಥ ಬರದೊಂ ಶ್ರೀಧರಮ್ಮನ್ (ಎಕ. III, ಮಂಡ್ಯ. ೦೯-೦೩; 907); ವಿದ್ಯಾದಾನಕ್ಕೆ ಪೊಸಗೆಱೆಯ ಬಟ್ಟೆಯಿಂ ಬಡಗಮಣೆಯ ವೀಸಕದಯ್ದು ಮತ್ತರ್ (ಇಇ. XIII, ೯೩-೨೮; 1084). **ಹೊಸಕೆರೆ**: ನಡಮ ಹೊಸಕೆರೆಯ ದಂಡಿನ ಹಾದಿಯಿಂ ತೆಂಕಲು ಪಡುವಮುಖವಾದ ಲಿಂಗಮುದ್ರೆಯ ಕಲ್ಲು (ಎಕ. IV (R). ಕೃಷ್ಣರಾ. ೬-೨೦; 1612). **ಹೊಸಕೆಱೆ**: ಮಿಣ್ಣುಂಗಲ್ಲಲ್ ಪಲ್ಲವಕಟ್ಟೆನ್ನು ಹೊಸಕೆಱೆಯ[೦] ಒಟ್ಟಿಸಿ (ಎಇ. V, ೨೦೬-೯; 1047); ಈಶಾನ್ಯಕ್ಕೆ ನಡದು ಹೊಸಕೆಱೆಯ ಮೂಡಣ ಮುಱಿಯ ಮಡುವಿನ ಹೆಬ್ಬಳ್ಳಿಮೆ (ಎಕ. III(R). ಗುಂಡ್ಲುಪೇ. ೯೦-೬೩; 1320). **ಹೊಸಗೆಱೆ**: ಹೊಸಗೆಱೆಯ ಕೆಳಗೆ ಗದ್ದೆ . . . ಖ × × × ಪೂಕೆಱೆ ಕೆಳಗೆ ಖಂ (ಎಕ. IV(R). ಹುಣಸೂ. ೨೬೪-೬೨; 1484). [ಪೊಸ + ಕೆಱೆ$_1$]

**ಪೊಸಜವ್ವನ**, ಪೊಸಜೌವನ, ಹೊಸಜವ್ವನ (ನಾ). ನವಯೌವನ; ಹೊಸ ಪ್ರಾಯ; ಏರುಂಜವ್ವನ: ಪೊಸಜವ್ವನದ ಮುಂಬಣ್ಣದಂತೆ ಕರ್ವಂ ಕೈಕೊಂಡು ಕತ್ತುರಿಯಲಿ ಬರೆದಂತಪ್ಪ ವಿಕ್ರಾಂತತುಂಗನ ವಿಜಾಸೆಗಳಾತನ ಶೀಘ್ರಪ್ರತಾಪಾನಳಧೂಮಲೇಖೆಯಂತಾದುವು (ಶಂಕಶಾ. ೨-೪೯ ವ); ಸಿರಿ ಸುರಚಾಪದಂತೆ ಪೊಸಜವ್ವನವಿದ್ದಿಲ ಬೂದಿಯಂತೆ . . .

ಕಿಡಲಲ್ಲದೆ ತಾಂ ಸ್ಥಿರಮಾಗಲಾರ್ಕುಮೇ (ಧರ್ಮಾಮೃ. ೩-೧೬) : ಸೌಂದರ ಮಹೀಪತಿಗೆ ಪೊಸಜವ್ವನವನಂತವಿಭವದೊಳೊಪ್ಪುತಿರೆ (ಶೌಂದರ. ೪-೭). **ಪೊಸಜೌವನ :** ವಸುವಂ ದ್ವಿಜನ್ಮದಾನದೆ ಪೊಸಜೌವನವಂ ಸ್ವದಾರ ಸಂತೋಷದೆ ನಿನ್ನಸುವಂ ಪತಿಕಾರ್ಯದೆ ವರ್ಜಿಸಿದೈ (ಗದಾಯು. ೩-೨೨). **ಹೊಸಜವ್ವನ :** ಚಳಗತ್ತಿಯ ನಿರ್ವಾಣಂಸಜಂಘೆಯ ಲುಳಿಯ ಲಾಗಿನ ಲಂಘನೆಯಲವ್ವಳಿಪ ಹೊಸಜವ್ವನದ ಹೊಮ್ಮರೆ ಹೊಳಹಿಕಿದಿರಿನಲಿ (ಕೌರವ. ೩-೮-೦೩). [ ಪೊಸ + ಜವ್ವನ ]

**ಪೊಸಜವ್ವನೆ, ಪೊಸಜೌವನೆ** (ನಾ). ನವಯೌವನವನ್ನು ಹೊಂದಿದವಳು : ನೋಡಿದರ್ ಭಾಮಿಮ ಸಗರನನಸಿಯ ಮಸಿಯ ಪೊಸಜವ್ವನೆಯರ್ (ಅಜಿತ. ೯-೭೬) ; ಸುಧಾಮರೀಚಿಮಣಿವೇದಿಕಾಗ್ರದೊಳ್ತಮ್ಮ ವಿನಿಯಂ ಪಟ್ಟರಿಸಿ ಶಿರೋಪಚಾರವುನಸವಸದಿಂದಾ ಪೊಸಜವ್ವನೆಯರೆಸಗುತ್ತಮಿರೆ (ಧಾರ್ಮ. ೬-೩೩ ವ). **ಪೊಸಜೌವನೆ :** ಪೊಸಜೌವನೆ ನಿನ್ನೀ ದೀರ್ಘಾಂಬಕ ದೇಶದ ಸಂಪತ್ತಿಗೆ ಮಿಗೆ ಸೋಲ್ತೀಯಂಸಿತೋತ್ಪಲ ದುರದಳಿತಂ ತನ್ನ ವರಾಗವ ಲಪ್ಪವನು ಒಸೆದೀಯಲ್ಬಂದಿದೆ (ಅಡಾಕಾ. ೨-೧೭). [ಪೊಸ+ಜವ್ವನೆ]

**ಪೊಸಜಾಗ** (ನಾ). ಮನೋಹರವಾದ ಮರಕತಮಣಿ : ಪೊಸಜಾಗಂ ಪೂರ್ಣಕುಂಭಂ ದಧಿ ಮಧು ಸುಧೆ . . . ಮಿಸುಗಿಗೆ ಬಗೆಗೆ ಚೆಲ್ವಾದುದುದ್ವಾಹಗೇಹಂ (ಕೃತಿ. ೩-೪). [ ಪೊಸ+ಜಾಗ$_1$ (<ಜಾಗ$_1$) ]

**ಪೊಸಜಾದಿ** (ನಾ). ಆದೇ ತಾನೆ ಅರಳಿರುವ ಜಾಜಿ : ಪೊಸಜಾದಿಯ ಬೆಳೆದೊಜಗಿದ ಪೊಸಗಟಮೆಯ ಪೊಸತರಲ್ದ ತಾವರೆಗಳ ಕಂಪಸದಳಮಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ (ಅಂಕಿ. ೧೧-೬) ; ಪೊಸಜಾದಿ ಚೆಲ್ವನೀಯುತ್ತಿರೆ ದೇಸಿಯಿಂ ನಿವಿರ್ದ ಸೋರ್ಮುಡಿಯೊಳ್ (ಧರ್ಮಾಮೃ. ೯-೦೭೭). [ಪೊಸ + ಜಾದಿ]

**ಪೊಸಜೌವನ** 'ಪೊಸಜವ್ವನ' ನೋ.

**ಪೊಸಜೌವನೆ** 'ಪೊಸಜವ್ವನೆ' ನೋ.

**ಪೊಸತಳಿರ್** 'ಪೊಸದಳಿರ್' ನೋ.

**ಪೊಸತಿಕ್ಕು** (ಕ್ರಿ) ಪ್ರಥಮಬಲಿಯನ್ನು ಕೊಡು; P"ಪೊಸತಂ+ಇಕ್ಕು= ಪೊಸತಿಕ್ಕು : ಒಕ್ಕಣೆ ಆದ ಮೇಲೆ ಅನ್ನವನ್ನು ದಿಕ್ಕುದಿಕ್ಕಿಗೆ ಚೆಲ್ಲಿ ಬಲಿಕೊಡುವುದಕ್ಕೆ ಪೊಸತು ಎಂದು ಹೆಸರು, ಮಲೆನಾಡಿನಲ್ಲಿ ಇದು ರೂಢಿಯಾಗಿದೆಯಂತೆ" (ಶಂಶಪ. ೩೭೭) : ಉತ್ತರನಂ ಜವಂಗೆ ಪೊಸತಿಕ್ಕುವಂತಿಕ್ಕಿ (ಶಂಶಪ. ೧೧-೦೦೨ ವ) ; ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ . . . ಪುಟ್ಟಿದವರೇಂ ಸಾಮಾನ್ಯರೇ (ಶಂಶಪ. ೩-೦೬೦) ; ಟಕ್ಕಿಪನಂ ಸುಟಿ ಮೇಕುದೋರ್ವನಂ ಮಾಳಿಗಿಕ್ಕು ಪೊಟ್ ಪುಸಿವನಂ ಪೊಸತಿಕ್ಕು[ಪಾಠಾಂ. ಪೊಸದಿಕ್ಕು]ಗೆ ಪಚ್ಚಿಗಾಜನಂ (ಸೂಕ್ತಿಸು. ೮-೪೩೬; ೮೧೦ಶ. ೨-೦೦೭ ನೋ). [ಪೊಸತು+ಇಕ್ಕು]

**ಪೊಸತಿಲ್** 'ಪೊಸಂತಿಲ್' ನೋ.

**ಪೊಸತಿಲು** 'ಪೊಸಂತಿಲ್' ನೋ.

**ಪೊಸತು, ಹೊಸತು, ಹೊಸದ್ದು, ಹೊಸ್ತು** (ನಾ). ೧. ನೂತನವಾದುದು ; ನವೀನವಾದುದು : "ನವ್ಯಂ, ನವಂ, ನವೀನಂ, ನೂತನಂ, ಅಭಿನವಂ, ನೂತ್ನಂ—ಈ ೬ ಪೊ(ಹೊ)ಸತು" (ಹಲಾಯು. ೦೦೬-೨೭) ; ನೆಲನಂ ಪೊಟ್ಟುಂ ಪೊಲನಪ್ಪವುನಜಿದು ಬಟ್ಟೆಯೊಳ್ ಪೊಸತುಂ ಪಟಿದುಮನಜಿದು ಪೆಯಿಸಲ್ ನೀನೆ ಬಲ್ಲೆಯ್ (ಕುಕಥಾ. ೩-೪೬ ವ) ; ಮುಂತೆ ಪರಿದರು ಕೇರಿಕೇರಿಗಿದು ಪೊಸತೆನುತೆ ಬಸವನ ಪ್ರಾಣವಂ ಪರಿದಬಿಸುವದರಿಂ (ಬಸ. ೪-೦೭೭) ; ವರಲಾಸ್ಯತಾಂಡವವೆಸೆದುದ್ಯ ರಂಭಾದಿ ನರ್ತಕಿಯರಲಿ ಪೊಸತೆನಿಸಿ (ಕುಮಾರ. ೭-೯೩). ೨. (ಅಲಂ) ಅಸಾಮಾನ್ಯವಾದುದು ; ಅಪರೂಪವಾದುದು : ಪೆಸರೇನಾರ್ಗಿತನೀ ಜವ್ವನಿಗ ತವಸಿ ತೊಟ್ಟಿರ್ಪ ಕರ್ಣಾವತಂಸು ಪೊಸತೀ ಲೋಕಕ್ಕೆ (ಕಾದಂಬ. ೬೬೦) : ಲೋಕದೊಳ್ವಿಧಿಲಿಖಿತಮನ್ನಿವಾರಿಪರುಂಟೆ ಶಿವಶಿವಾ ಪೊಸತೆಂದು ಬಿಸುಸುಯ್ಯು ಬೆಱಗಾದನು (ಕೃಷ್ಣಚ. ೩೦-೩೩). ೩. ಮೊದಲನೆಯ ಬಲಿ,—ನೈವೇದ್ಯ : 'ಪೊಸತಿಕ್ಕು' ಪರಾ. **ಹೊಸತು:** ೧. ಹೊಸತನು ಹಾಡುವುದನ್ನಿಂದಲಾಗದು ಹೊಸತಾವುದಿರುವುದು ಹೇಳು ಈ ಜಗದೊಳಗಿಹುದೆಲ್ಲವು ಹಳೆಯದು ನನ್ನ ಸುಭಾಷಿತ ಕೇಳು (ಇಂಗ್ಲಿಕ. ೬೬-೨೭). ೨. ಒಸದಿಂಸ ಬಾರದಿಂಸದೆ ತೆಗೆಯಬಾರದೀ ಹಸುಳೆಯಿಂದಂ ಹೊಸತು (ಸಿದ್ಧರಾ. ೨-೩) ; ಮೇದಿನಿಗೆ ಹೊಸತೆನಿಸಿ ವಜ್ರವ ಕೊಂಡು ಕಾದಿದನು (ಸಂಶಕ. ಹ. ೨-೨೫). **ಹೊಸದ್ದು :** ೧. ಆ ವರ್ಣನಾವೈಖರಿಯನ್ನು ಕೇಳಿದವರು ಹೊಸದರಲ್ಲಿ ಸಂತಸಪಡದೇ ಇರುವುದಿಲ್ಲ (ಕಾಯಕ. ೯೯) ; ಹೊಸದರಲ್ಲಿ ಅಗಸ ಗೋಣಿಯನ್ನು ಎತ್ತಿ ಎತ್ತಿ ಒಗೆದ (ಗಾದೆ). **ಹೊಸ್ತು :** ೧. ಕಾಣಿಕೆ ಕಡ್ಡಾಯ ಬೀಡಗೊಳು ಹೊಸ್ತು ಹಳದು ಎರಡು ಎತ್ತಿನ ಹೇಜು ಮಾನ್ಯ (ಎಕ. X, ಮುಳಬಾ. ೨೦-೩ ; 1468).

**ಪೊಸತುಪೊಸತು, ಪೊಚ್ಚಪೊಸತು, ಪೊಸಪೊಸತು, ಹೊಚ್ಚಹೊಸತು, ಹೊಚ್ಚಹೊಸದು, ಹೊಸತುಹೊಸತು, ಹೊಸಹೊಸದು** (ದ್ವಿರುಕ್ತಿ): ಪೊಸತುಪೊಸತೀ ಪರಿಯನಲ್ಕೆ . . . ಆರೋಗಿಸುತ್ತಿರಲು (ಬಸಪು. ೬-೯೩) ; ಸಭೆ ಮೆಚ್ಚೆ ಪೊಚ್ಚಪೊಸತಾಯ್ತು ರಸಂ (ಅಜಿತ. ೩-೩೩) ; ಪೊಸಪೊಸತಿಂತಿದೆಂದುಮೆಮೆಯಾಟಕೆ ಸೈರಿಸದಿಂತಿದೆಂದು ಬಣ್ಣಿಸಲರಿದಪ್ಪ ಮೆಯ್ಸಿರಿ (ಕಕಶ. ೬-೨೫೧): 'ಕಬ್ಬಿಗರ ಕಾವ' ಎಂಬ ಹೆಸರು ಕನ್ನಡ ಕೃತಿನಾಮಗಳಲ್ಲಿ ಹೊಚ್ಚಹೊಸತಾಗಿ ಕವಿಯ ವೀರವ್ಯಕ್ತಿತ್ವದ ಗುರುತಾಗಿ ನಿಂತಿದೆ (ಕವಕಾ. ೦೫೪); ನಿನ್ನೆ ಮೊನ್ನೆಯೊ ಏನೊ ನಿನ್ನ ನೋಡಿದ ಪೊಲಿಹುದು ಒಲುಮೆ ಹೊಚ್ಚಹೊಸದಾಗಿರಲು ಇಂದು ! (ಚಿತ್ರ. ೪೦-೪); ಹೊಸವರುಷಕೆ ಹೊಸಹರುಷವ ಹೊಸತು ಹೊಸತು ತರುತಿದೆ (ಗಂ. ೦೦೬-೦೦) ; ಅದನ್ನನುಸರಿಸುವ ರೀತಿಯೂ ಹೊಸಹೊಸದಾಗಿ ಕಂಡಲಿತವಾಗಬೇಕು (ನಾಕಲಿ. ೨೨೬). **ಪೊಸತಾಗು, ಹೊಸವಾಗು, ಹೊಸ್ಸಾಗು =** ನವ್ಯವಾಗು; ಹೊಸಪರಿಯಾಗು: ಪಸಂಬಿದಾ ಬಗ ಮನವಮಂ ಪೊಸತಾಗೆ ನೆಗಟ್ಟಲಜಾಯನಾ ರಚನೆಯೊಳೇಂಬಸನಂ ತನಗೆ (ಕೇರಾ. ೦-೦೨); ಪೊಸತಪ್ಪ ಕಡಲಿದೆಂಬಂತೆಸೆದೊಪ್ಪಿರೆ ತಿಸುಳ ಬೇಗದಿಂ ಪುಟ್ಟಿಸಿದಂ ಪುಸಿವಡೆಯುಂ (ಕವ್ಯಾ. ೨೫೯); ಮತ್ತೆ ಮೂರನೆಯ ದಿನವೊಮ್ಮೆ ಅಳಲು ಹೊಸದಾಯಿತು (ಕಾಡಿನ. ೦೯ ಕಥಾಸಾರ); ಹೊಸ್ಸಾಗಿ ದೇವಾಲ್ಯವ ಮಾಡಿದ ಸಂಮಂಧ (ಪ್ರಶಂ. ೧೮೩೬, ೪-೯: 1369) ; ಗೆಲುಡಗೆ ಹೊಸ್ಸಾಗಿ ಉರ ಕಟ್ಟಿ (ಎಕ. IX. ಕನ್ನಕ. ೦೬೯-೯ ; 1416) ; ಕಾಲುವೆನೂ ಹೊಸ್ಸಾಗಿ ತೆಗಸಿ (ಎಕ.XV. ಅರಸೀ. ೨-೨೩; 1515). **ಪೊಸತು ಮಾಡು =** ನವೀಕರಣಗೊಳಿಸು; ಹೊಸದನ್ನಾಗಿ ಮಾಡು : ಸತ್ಕವಿಯೊಳ್ ಸಮನಾಗಿ ಮಾರ್ಗವಂ ಪೊಸಯಿಸಿ ದೇಸಿಯಂ ಪೊಸತು ಮಾಡಿದಕೊರ್ವಳಪೂರ್ವರೂಪದಿಂ (ಶಂಶಪ. ೩-೩೯). **ಹೊಸತನಿಕ್ಕು =** ಮೊದಲನೆಯ ನೈವೇದ್ಯ ಮಾಡು : ನಾಗಂಗೆ ಹೊಸತನಿಕ್ಕಿಹೆವೆಂಬರು ನಾಗ ಬಂದರೆ ಕೋಲ ಕಳೆದುಕೊಂಬರು (ಬಸವ. ೦೯೩).

[ದೇ.II ತಮಿ. ಪುತಿಚು, ಪುತಿತು ; ತುಳು. ಪೊಸತು]

**ಪೊಸತುಪ್ಪ, ಹೊಸತುಪ್ಪ** (ನಾ). ಆಗ ತಾನೆ ಬೆಣ್ಣೆ ಕಾಯಿಸಿದ ತುಪ್ಪ : ಪಸುವಿನ ಪೊಸತುಪ್ಪಂ ಜಾಜಿಯ ಪೂ ಅತ್ತಿ ಅಲ ಅರಳಿ ಬಸಿರಿ ಗೋಣಿ ಈ ಮರಂಗಳ ಎಳೆಯ ತಳಿರ್ ಯಷ್ಟಿಮಧುಕಂ ಇವಂ ಬಿಸುನೀರಲ್ಲಿ ಅರೆದು ಪೂಸಲ್ ಸ್ತ್ರೀಯರ ಯೋನಿಯ ದುರ್ಗಂಧಂ ಮಾಣ್ಬುದು (ಲೋಕೋಪ. ೯-೦೭೨ ಟೀಕು) ; ಬಾಳೆಯ ಕಾಯ ಕಹಿದೆಗೆದದಕೆ ಪೊಸತುಪ್ಪ ನೀರುಳ್ಳಿ ಕೊತ್ತುಂಬರಿಯನಿಕ್ಕಿ ಕೆಂಪಾಗಿ ಹುರಿದು . . . ಪರಿಮಳಂಗಳನಿಡುವುದು (ಸೂಪಶಾ. ೪-೬೦) ; ಪೊಸತುಪ್ಪದಿಂದ ತಲೆ ಕಾಲ್ಗಳೊಳ್ ಸೊಡರಿಕ್ಕಿ (ಬಾಲಗ್ರ. ೦೫೩-೪೦೩). **ಹೊಸತುಪ್ಪ :** "ಹಯ್ಯಂಗವೀನಂ, ಆಜ್ಯಂ—ಈ ೨ ಹೊಸತುಪ್ಪಂ" (ಹಲಾಯು. ೯೬-೦೦೯) :

ಅಣ್ಣವಾಲೊಳು ಸೂಜ್ಜಿಗೆಯುಂ ನನೆಹಿಕ್ಕಿ ಬಳಿಕ ಸಣ್ಣನ[ಪ್ಪ]ಂತೆ ಕಣಕವ ಮಾಡಿಯದಱ ಸರಿಬೆಣ್ಣೆ ನಸುಗೆನೆಯಿಕ್ಕಿ . . . ಗಾರಿಗೆಯ ಮಾಡಿ ಹೊಸ ತುಪ್ಪದೊಳು ಬೇಯಿಸಿದೊಡೆ . . . ಸಮುದ್ರಫೇನ (ಸೂಶಾ. ೦-೨೪).

[ಪೊಸ+ತುಪ್ಪ]

**ಪೊಸತೇರ್** (ನಾ). ಹಳೆಯದಲ್ಲದ ತೇರು : ನೂತನವಾದ ರಥ : ಪೊಸತೇರ್ ಪಡಗಂ ನೆಗಟ್ಟೆ ಪೆರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಗ. ೨೦೬). [ಪೊಸ+ತೇರ್$_2$]

**ಪೊಸತ್ತಿಗಲ್ಲು** (ನಾ). ಒಂದು ಪ್ರದೇಶದ ಹೆಸರು : ಬಡಗಣ ದೆಸೆ ಪೊಣಪ್ಪುಳಿ ಬಡಗಣ ಪಡುವಣ ಕೊಣೊದು ಪೊಸತ್ತಿಗಲ್ಲು ಪಡುವಣ ಸೀಮೆ ಕಡಂಬಗೆಱೆಯ ಪೆಪ್ಪಾಗಂ (ಎಕ. III (R). ತಂಜಾವ. ೨೬೮-೬೦; ೩೦೪). [ ? + ಕಲ್ಲು (< ಕಲ್$_3$) ]

**ಪೊಸದಳಿಂಬ** (ನಾ). ಶುಭ್ರವಾದ ಬಟ್ಟೆ,—ವಸ್ತ್ರ : ಕಪ್ಪುರವಳಿಕಿನ ಜಗುಲಿಯ ಮೇಗಣ ಕುಸುಮಮಾದೆಸಱ ವಿಸುಗುವ ಪೊಸದಳಿಂ[ಪಾಠಾಂ. ಣಿಂ]ಬದ ಮೇಗೆ ಕಿಱಿದುಬೇಗಂ ವಿಶ್ರಮಿಸಿ (ಅದಿಪು. ೧೦-೬೦ ವ).

[ಪೊಸ + ದಳಿಂಬ]

**ಪೊಸದಳಿರ್**, ಪೊಸತಳಿರ್, ಹೊಸತಳಿರು (ನಾ). ಕುಡಿಯಿಡುತ್ತಿರುವ ಚಿಗುರು ; ನವಪಲ್ಲವ : ಕುಸುಮಮಾಸಱಯುವ್ಯಸನಾಸಕ್ತ ಸುರಯುವತಿ ಪಾಣಿಪಲ್ಲವರಾಗಂ ಮುಸುಕಿದುದೆನಿಸಿದುದಸುಗೆಯ ಪೊಸದಳಿರ್ಗಳೊಳಿಸೆವ ಕೆಂಪು ನಂದನವನದೊಳ್ (ಆದಿಪು. ೬-೯೬) ; ತುಂಬಿಯ ಬಂಬಲಂ ಮರುಳ್ಪೊಸದಳಿರ್ದಮಂ ಕರತಳು ದನಿ ಕೋಗಿಲೆಯುಂ . . . ನೆಱೆ ಪೋಲ್ತು (ಧರ್ಮಾಮೃ. ೯-೦೯೦). **ಪೊಸತಳಿರ್** : ಪೊಸತ[ಪಾಠಾಂ. ದ]ಳಿರ್ಗಳ ಬಿಣ್ಣಗೆಯನೆಸೆವಲರ್ಗಳಿನೊಗೆವ ಘರ್ಮಜಲಮಂ ಕೀದರ್ಱಸಿದುವು ಕುಸುಮರಜಂಗಳ್ ಪೊಸಯಿಸಿದುವು ಬಣ್ಣಮಂ ಲತಾಂಗಿಯರ್ಗಳ್ (ಆದಿಪು. ೧೦-೬೭) : ಪೊಸತಳಿರಿಂದೆ ಬೀಸಿ ಕಳೆದಂತಿರೆ ಕಾಂತೆಯ ಕಾಯ ಕಾಂತಿಯಂ (ಲೀಲಾವ. ೯-೦೨೩). **ಹೊಸತಳಿರು** : ಮೂದಲದ ಹೊಸತಳಿರು ಕರಿಬೇವು ಕೊತ್ತುಂಬರಿಯ ಸೊಪ್ಪು ಶುಂಠಿ ನೀರುಳ್ಳಿಗಳ ಚಿತ್ರಳಿಸಿ ತುಪ್ಪದೊಳು ಹುರಿದು ಪರಿಮಳಗೊಳಿಸಿ ಪೊಡ್ಡಣಗೆಯನು ಮಾಡುತ (ಸೂಶಾ. ೩-೦೯). [ಪೊಸ+ತಳಿರ್$_2$]

**ಪೊಸದಾಂಗುಡಿ** (ನಾ). =ಪೊಸದಳಿರ್ : ಗುಡಿ ತುಱುಗಿ ಲತೆಯ ಪೊಸ ದಾಂಗುಡಿಯೆನಿಸಿದುದು (ಶಾಂತಿಪು. ೧೦-೬೯).

[ಪೊಸ + ದಾಂಗುಡಿ(< ದಾಂಟುಂಗುಡಿ)]

**ಪೊಸದಾವರೆ** (ನಾ). ಆಗ ತಾನೆ ಅರಳಿರುವ ತಾವರೆ ; ನಳನಳಿಸುತ್ತಿರುವ ಕಮಲ : ತಳಿರ್ತೆಸೆವಳವಾವು ತುಂಬಿ ಪೊಸದಾವರೆ ಮಲ್ಲಿಗೆಯೆಂಬಿವಾಂತರಂ ದೆಸೆವಲಿಗೆಯ್ವ ಪಾಳಿ ಮೊನೆಯೊಳ್ ನೆಗಟ್ದಿರ್ದ ಬಸಂತಂ (ಕಬ್ಬಿಗ. ೦೬೯). [ಪೊಸ+ತಾವರೆ (<ತಾಮರೆ)]

**ಪೊಸದು** 'ಪೊಸ್ಸೆ' ಪರಾ.

**ಪೊಸದುಗುಲ** (ನಾ). =ಪೊಸದಳಿಂಬ : ಕರೆವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ ಹುಟತ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೋ (ಆದಿಪು. ೯-೩೬) ; ಮೆಲ್ಲನುಡಿ ವೀಣಾನಾದಮಂಗಪ್ರಭೆ ಪೊಸದುಗುಲಂ ಪಕ್ಷಬಿಂಬೋಪ್ಟರಾಗಂ ಕಡುಚಿತ್ರಾಂದಂಗರಾಗಂ (ಗಿರುಪು. ೦೦೦೨) : ಪೊಸದುಗುಲಮನೊಲವಿಂದೆ ಪೊದೆದು (ಕಬ್ಬಿಗ. ೩೩೯). [ಪೊಸ+ದುಗುಲ$_1$]

**ಪೊಸದೂವಟ** (ನಾ). ಹಳೆಯದಲ್ಲದ ವಸ್ತ್ರ; ಹೊಸಬಟ್ಟೆ : ಧವಳಾಂಶು ವಿಡಿಕಿಱಿದ ಪೊಸದೂವಟದ ಕಾಲ ಕುಪ್ಪಸವ ತೊಡಿಸಿದಳದೋರ್ವ ಕಾಮಿನಿ ಪರವೆನಾಱಗಳವಡಿಸಿ ಚಾತುರ್ಯದಿಂದ (ಶಾಂರಪು. ೬-೨೯) ; ಪೊಸದೂವಟದ ಕೋಧೆಯಂ ಮನೋಹರದಿ ಮೋಹಿಸುವ ಭದ್ರಾಸನ ಸುಖಾಸೀನನಾಗಿರ್ದ ಶಶಿಧರ ಶ್ರೀನಂದಿನಾಥಂ (ಶಾಂಪು. ೯-೩೩).

[ಪೊಸ + ದೂವಟ(< ದುಪ್ಪಟ)]

**ಪೊಸದೂವೆ** (ನಾ). ಹೊಸದಾದ ಚಿತೆ : ಪಂದಲೆಯೋಳಿದೋರಣದ ಸೀಯದರಂ ಪೊಸದೂವೆ ದೂಪ [ಪಾಠಾಂ.ದಂಬೆತೂಪ] ತೂಗುವದಲೆ ಚಾಟ್ವಿಣಂ ಪೊಡರೆ ಬಳ್ಳುವ ಸಮ್ಮನ ಸೂಲಂ (ಕಾವ್ಯಾಶ. ೩೬) ; ಪರೇತವನದೊಳಗೆ ಪೊಸದೂವೆಯ ಕಿಲದೊಳ್ ಕಳೆದೊಟ್ಟಿದ ತೊಡವು ಗಳುಮಂ ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪು ದೆಂದು . . . ಬಿನ್ನವಿಸಿ (ಅರ್ಜುಪು. ೩-೯೦ ವ). [ಪೊಸ + ದೂವೆ$_1$]

**ಪೊಸದೇಶಿ** (ನಾ). ಹಿಂದೆ ಇಲ್ಲದೆ ಇದ್ದ ಬೆಡಗು,—ವಿಲಾಸ ; ನೂತನವಾದ ಬೆಡಗು : ಪೊಸದೇಶಿ[ಪಾಠಾಂ. ಸಿ] ಪೊಂಗು ಪೊಂಗೆಸೆವೆಸಕಂ ಕಡುಗಾಡಿ ರೂಢಿಯೆಂಬಿವಱಿಂದಂ ವಸುಧೇಶನಣುಗದಪ್ಪಂ ವಸುದೇವಂ ಧರೆಗೆ ಕಣ್ಣುಮಾಳ್ಕೆಗಿರ್ದಂ (ಅರ್ಜುಪು. ೯-೦೩೦). [ಪೊಸ + ದೇಶಿ$_2$]

**ಪೊಸದೇಸಿ**, ಪೊಸದೇಸೆ, ಹೊಸದೇಸೆ (ನಾ). =ಪೊಸದೇಶಿ : ಸಾಗೆನಿಸಲ್ಕೆ ಸಾಲ್ವ ಸಗ್ಗದ ಪೊಸದೇಸಿಯೋಳಿಗಳನೊರ್ವಳೊಱಲ್ದು ನೆಱಲ್ದುಪಾಡಿದಳ್ (ಶಂಕಶಾ. ೬-೯೦). **ಪೊಸದೇಸೆ** : ಕವಿಮಾರ್ಗದೊಳಂ ಪೊಸದೇಸೆಯ ನುಡಿಗಳೊಳಂ ಪೊಸೆಯುವ ಬಲ್ಮೆಗೆ ಚತುರ್ಮುಖಂ ಕವಿರನ್ನಂ (ಗದಾಯು. ೦-೩೯) : ನೆಲೆಮಾಡದ ಪೊಸದೇಸೆಯ ನೆಲೆಮಾಡದ ಸುರವಿಮಾನ ಮೆಯ್ವುಲಣಂ ಕಿಟ್ಕಿಲೆಯಾದುವಿವಱ ತೆಱದಿಂ ನೆಲೆಯಾದುವೆ ಸಕಲಜನದ ಕಣ್ಗಂ ಮನಕಂ (ಪುಷ್ಪದ. ೨-೬೮). **ಹೊಸದೇಸೆ** : ಹೊನ್ನನ ಹೊಸದೇಸೆಯ ನುಡಿ ನೇಮಿಯ ಕನ್ನಡದೊಳ್ಪಭಿನವಪಂಪನ ಬಗೆಯೊನ್ನೀ ಪೇಳ್ದ ಕೃತಿಗೆ ಒರಿದುಂ ಸೇರುಗೆ ನಿರ್ವಿಘ್ನತೆಯಂ (ಜಗುಕಾ. ೦-೦೦). [ಪೊಸ + ದೇಸಿ]

**ಪೊಸದೇಸೆ** 'ಪೊಸದೇಸಿ' ನೋ.

**ಪೊಸದೇಸೆಕಾರ್ತಿ** (ನಾ). ತಾರುಣ್ಯವತಿಯಾದ ಸುಂದರಿ,—ಚೆಲುವೆ : ಪತ್ರಸಾರ್ವವರಂತರ್ಜಿಸಿ ಕಾಮನ ಪಡಿಯಱಿವೊಲೆಸೆದಳ್ ಪೊಸದೇಸೆ ಕಾರ್ತಿ ಪೊಸಕಿಟ್ಟಳದೊಳ್ (ಅರ್ಜುಪು. ೨-೦೩).

[ಪೊಸ + ದೇಸೆಕಾರ್ತಿ (< ದೇಸಿಗಾರ್ತಿ) ]

**ಪೊಸದೋಂಟ** (ನಾ). ಹೊಸದಾಗಿ ಬೆಳೆಸಿದ ತೋಟ : ಬಸದಿಯ ಪಡುವಣ ಎಳೆದೋಣ್ಣಮುಂ ಪಡುವಣ ತೊಱೆಯ ಮೂಡಗಣೆಯ ಪೊಸ ದೋಣ್ಣಮುಂ (ಎಕ. X. ಕೋಲಾರ. ೯೦-೯೬ : ೨೦೩). [ಪೊಸ + ತೋಂಟ]

**ಪೊಸನನೆ** (ನಾ). ಎಳೆಯ ಮೊಗ್ಗು ; ಹೂಮೊಗ್ಗು : ಪೊಸನನೆಯೊಳ್ ಪಸುರ್ಪಲರೊಳಂ ಚಿರಮಲ್ಲದ ಬೆಳ್ಪು ಪಲ್ಲವಪ್ರಸರದೊಳೆಯ್ದೆ ಕಣ್ಗೆ ಪಸರಱಡೆದೊಪ್ಪುವ ಕೆಂಪು . . . ಬಗೆಗೊಳ್ವಿನಂ ಬಸಂತದೊಳ್ ಬಸದಿಯ ಬಾಗಿಲಂ ತೆಱೆದ ಮಾಟ್ಕೆಯೊಳಿರ್ದುವು ಬಂದ ಮಾವುಗಳ್ (ಆದಿಪು. ೦-೬೬) ; ಪೊಸನನೆಯ ಬರಿಮುಗುಳ ಕುಸುಮಬಾಣಂಗಳಿಂ . . . ಎಸೆವುಮಂ (ಧರ್ಮಾಮೃ. ೧೦-೩೦). [ಪೊಸ + ನನೆ$_3$]

**ಪೊಸನವಿಲ್** (ನಾ). ಎಳೆಯ ವಯಸ್ಸಿನ ನವಿಲು ; ಮರಿನವಿಲು : ಸುತ್ತಲುಂ ಪರಿವ ಜರಿಪೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಶಂಕಶಾ. ೩. ೨೨ ರಗಳೆ). [ಪೊಸ + ನವಿಲ್]

**ಪೊಸನಸೆ** (ನಾ). ೧. ಉಂಟಾದ ಬೆದೆ : ಪೊಸನಸೆಯಿಂ ಮೃಗಂ ಮೃಗಿಯ ಮಾಗ್ಗುಲಿಸುತ್ತಿರೆ (ಸೂಕ್ತಿಸು. ೩-೨೨೯). ೨. ಕಾಮೋದ್ರೇಕದಿಂದ ಆಗ ತಾನೆ ಸೂಸಿದ ಸುರತದ್ರವ : ಪೊಸನಸೆಯ ಸೊವಡನಾಘ್ರಾಣಿಸಿ ಪಣೆಕದ ಮಿಡುಕುಗಚ್ಚೆಯೊಳ್ ಮೊಗವೆತ್ತುತ್ತೆಸೆಮುಮ ವೃಷಮುಮರರನೇಡಿಸುವವೊಲೇನುಂಟೆ ನಿಮಗವಿಾ ಸಂಭ್ರಮೆಸುತ್ತುಂ (ಲೀಲಾವ. ೩-೯೩). [ಪೊಸ + ನಸೆ$_1$]

**ಪೊಸನಾರ್** (ನಾ). ೧. ಒಣಗದಿರುವ ನಾರು ; ಹಸಿಯಾದ ಕತ್ತ : ಬಿದಿರುದಿರ್ವಕ್ಕಿ ಪಕ್ಕಿವೊಱೆ . . . ಹೂತಿಯ ಬೆಕ್ಕು ಸೀಳ್ದ ಮುತ್ತದ

ಪೊಸನಾರ್ ಸೀಂಬು ಪಲವುಂ ಮೃಗಪಕ್ಷಿಗಳಿಂದವೊಪ್ಪಿ ಕಟ್ಟಿದ ಮರಗಂಬಿ ಜೀರ್ಗರೆವಿನಂ ಗುದುಕಿಂ ಮಗುಟ್ದುರ್ ವನೇಚರರ್ (ಸೂಕ್ತಿಸು. ೩-೦೬೯) : ಪೊಸನಾರಂ ಕಲ್ಲೊಳೆತ್ತಲ್ಲಿಬಿಯುಲರಲನಾಕಾಶದೊಳ್ . . . ಆ ಬರ್ದ ಬಲ್ಲಳ್ (ಚೈತಪು. ೨೯-೯). ೨. ಹೊಳೆಯುವ ನಾರುಮಡಿ,–ವಲ್ಕಲ : ಒರಿಯ ಮಡುಗಳೆ ಮಜ್ಜನಮಾಗೆ ಪೊಸನಾರ ದೇವಾಂಗವಸ್ತ್ರವಾಗೆ (ಶಂಕರಾ. ೬-೨೮). [ಪೊಸ + ನಾರ್]

**ಪೊಸನೀರ್**, ಪೊಸನೀರು, ಹೊಸನೀರು (ನಾ). ೧. ಶುದ್ಧವಾದ ನೀರು ; ನಿರ್ಮಲಜಲ : ಪೊಸನೀರಿಂ ಪೊಸಗಂಪಿನಿಂ ಪೊಸತು ಬೆಳ್ಪಾದಕ್ಕಿಯಿಂ ದೇವನಂ . . . ಅರ್ಚಿಸಿ (ಅನಂತಪು. ೩-೯೩). **ಪೊಸನೀರು** : ೧. ಶಶಿಕಾಂತಕಲಶದೆ ಚಂದ್ರಮುಖಿಯರಾಗ ಪೊಸನೀರ ಪಥಿಕರಿಗೆಱೆಯೆ (ಕಂಪಿಂ. ೬-೬೬). ೨. ಮಳೆಯಿಂದ ಹೊಸದಾಗಿ ಬಂದ ನೀರು : ಪೊಸನೀರ ಹೂರದೊಳಗೆ ಮಱಿವಿಾನ್ಗಳು ಮಸಗಿ ಮುಂ ಪೊಳೆದಾಡುವಂತ (ಕಂಪಿಂ. ೦೦-೩೮). **ಹೊಸನೀರು** : ೨. ಹೊಸನೀರು ಬಂದು ಹಳೆನೀರು ಕೊಚ್ಚಿಕೊಂಡು ಹೋಯಿತು (ಗಾದೆ). ೩. ಸಿಹಿನೀರು : ಗೋದಾವರಿ–ಕೃಷ್ಣ–ಈ ನದಿಗಳ ಮಧ್ಯೆ ಕೊಲೇರ್ ಸರೋವರವಿದೆ. ಇದು ಇಂಡಿಯಾದಲ್ಲಿ ಮುಖ್ಯವಾದ ಹೊಸನೀರಿನ ಸರೋವರ (ಕೂಗೋಳ. ೫೦). [ಪೊಸ + ನೀರ್]

**ಪೊಸನೀರು** 'ಪೊಸನೀರ್' ನೋ.

**ಪೊಸನುಡಿ** (ನಾ). ಅಪೂರ್ವವಾದ ಮಾತು ; ನೂತನವಾದ ಮಾತು : ಕಿವಿಯಿಂ ಬಗೆವುಗುವೊಡೆ ಕೊಂಕುವೆತ್ತ ಪೊಸನುಡಿಯೆ ಪೊಗುಗುಂ (ಅಂಕು. ೦.೦೬) ; ರಸಭಾವಂ ಗಮಕಂ ಕಾಣಿಸೆ ನಾನ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ ಕುಸುರಿಯ ಬಗೆಯಿಂದಿನಿತಱಿಂಳಿಸೆಯದ ಕೃತಿ ಕೃತಿಯೆ ಬಗೆದು ನೋಟ್ಪೊಡೆ ಜಗದೊಳ್ (ರಘಾಂಕು. ೦-೯೦) ; ನೀಳ್ಕೊಳೆಯ ಪೊಸ ನುಡಿಯ ಕಾಳು ಕೊರಗರ್ಗೆ ಕೀಳಿಲಿನೋಳ್ವರ್ ತಳವೆಳಗಿನಿಂ ನುಡಿಯೆ (ಶಾಂಪುರ. ೦೦೬-೨೦೮). [ಪೊಸ + ನುಡಿ₁]

**ಪೊಸನೂಲ್** (ನಾ). ಹಸಿಯ ದಾರ ; ಹೊಸೆಯದ ದಾರ : ವಿಸುಗುವ ಶಶಿ ರೋಹಿಣಿಯರನೆಸೆವ ಶರನ್ಮೇಘಮಾಲೆ ಬಳಸಿದವೋಲ್ಮೊಳಸಲಾ ಮದುಮಕ್ಕಳನುಱೆ ಪೊಸನೂಲಿಂ ಸುತ್ತಿದರ್ ಮಹೀಸುರರಾಗಳ್ (ಆದ್ಮಿಟಿ. ೮-೬೩). [ಪೊಸ + ನೂಲ್₂]

**ಪೊಸನೆತ್ತರ್** (ನಾ). (ದೇಹದಿಂದ ಆದೇ ತಾನೆ ಹೊರಬಂದ) ಬಿಸಿರಕ್ತ : ಕಿಸುಳದೊಳಚ್ಚಲಿಪ ಪೊಸನೆತ್ತರೆ ಕೆಂದಳಿರಾಗೆ (ಶಂಕರಾ. ೦-೬) ; ಚಲದಿಂ ಮಲೆವ ಮಱುವರಸರ ಪೊಸನೆತ್ತರೊಳ್ ಪೊದೆದ ನಿನ್ನ ಬಾಳಂತೆ ಕೆಂದ ಳರ್ಗಳಿಂ ಒಳ್ಪುವಡೆದ ವಿಸುಗುವ ಅಸುಗೆಗಳೊಳಂ (ಕಬ್ಬಿಗಾ. ೯೯). [ಪೊಸ + ನೆತ್ತರ್]

**ಪೊಸನೆಯ್** (ನಾ). = ಪೊಸತುಪ್ಪ : ಇಂತೊಂದು ಪೂಸ್ಕೆ ಎಮ್ಮನ್ನರ್ಗೆ ದಳ್ಳಿಸುವ ಬಲ್ಗಿಚ್ಚಿನೊಳೆಱೆದ ಪೊಸನೆಯ್ಗೆ ಪಾಸಟಿವಾರದೇಂ ಪೋಕುಂ (ರಾಮಾಶ್ವ. ೬೩-೩೦). [ಪೊಸ + ನೆಯ್₂]

**ಪೊಸನೆಲ್** (ನಾ). ಹೊಸ ನೆಲ್ಲು,–ಬತ್ತ : ಬೇಱೆವೇಱೆ ವಿಕಲ್ಪ ಸಮುಚ್ಚಯಯುಗ್ಮದೊಳ್ ತೋಱುವಂ ಕೃಪಾವಿಕಲ್ಪನೆಯಿಂ ಗುಣ ದೋಷಮಂ ಕೀಱಿಕೊಂಡು ಗುಣಮಂ ಕಳೆಗಲ್ಲಿಯ ದೋಷಮಂ ತೋಱೆ ಪಿಂಗಿಸುವವೊಲ್ ಪೊಸನೆಲ್ಲಿರೆ (ಪೊಳ್ಗ)ಳಂ (ಕವಿರಾ. ೧-೦೫೦). [ಪೊಸ+ನೆಲ್]

**ಪೊಸನೇಹ್** (ನಾ). ಹಳೆಯದಲ್ಲದ ಹಗ್ಗ ; ಹೊಸಹಗ್ಗ : ತೆಂಗಿನ ಪೊಸನೇಣಿಂದದುದಿರ್ಗಳ್ಮರವಡಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ರಘಾಂಕು. ೨-೬೩) ; ಮಾತೆಲ್ಲಮಂ ಬರೆದು ಅರದ ಪೊಸನೇಣ್ಗಳಗೆ ಪೊಸೆಯಿಸಿಯುದವರಿರವ ರೋಡಾಡುತಿಹುದು (ಶಾಂಪುರ. ೨೮-೦೪). [ಪೊಸ + ನೇಹ್₁]

**ಪೊಸನೇರಾಣಿ** (ನಾ). ಮಿರುಗುವ ಚಿನ್ನ,–ಅಪರಂಜಿ : ರಾಣಿಯ ವಾಸದ ಪೊಸನೇರಾಣಿಯ ಮಾಡಂಗಳೊಳಗೆ ಕೆಯ್ಗೆಯ್ದಿರೆ ರುದ್ರಾಣಿ ವರುಣಾನಿ ನೆಗಟ್ವಿಂದ್ರಾಣಿಯೆನಲ್ಕಕ್ಕು ಮಿಕ್ಕ ಮಹಿಷೀಬೃಂದಂ (ಶಾಂತಿಪು. ೦೦-೬೦). [ಪೊಸ + ನೇರಾಣಿ]

**ಪೊಸನೋಟ**, ಹೊಸನೋಟ (ನಾ). ನೂತನದೃಶ್ಯ ; ಹೊಸದಾದ ನೋಟ : ಹರಹರ ಎನ್ನ ಕೈಯ ಹಸಿವೋಡಲಣಂ ತನುವಿಂದೆ ಪೂಜೆಯಂ ವಿರಚಿಪೆನೆಂದೊ ಕಣ್ಗಳ ಬಱು ತಿಳಿಯಲ್ ಪೊಸನೋಟದಿಂದೆ ಕೆಂಕರಿಸುವೆ ನೆಂದೊ (ಶಂಪಾಶ. ೯). **ಹೊಸನೋಟ** : ಎಂದಿನದೊ ಹಳೆತೋಟ ಹೊಸಬಗೆಗೆ ಹೊಸನೋಟ (ಕಾಮೂರ. ೬೬-೦೦೬). [ಪೊಸ+ನೋಟ]

**ಪೊಸಪಚ್ಚ** (ನಾ). ಉಜ್ವಲಕಾಂತಿಯಿಂದ ಕೂಡಿದ ಆಭರಣ : ರನ್ನದ ಪೊನ್ನ ಚಿತ್ರವಸ್ತ್ರದ ಪೊಸಪಚ್ಚದೊಟ್ಟಲನೆ ಕೋಶಗೃಹಂ ಬಱಿದಾಗೆ ಕೊಟ್ಟು ಮಾಣದೆ ಮಗುಟಾನೆಯಂ ಕುದುರೆಯಂ ಧರಣೀಪತಿ ಸಾಱೆ ಬೀಱಿದಂ (ಚಂದ್ರಪ್ರಭ. ೬-೯೦) ; ನಿನಗೆ ವಸಂತದಋತುವೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱೆ ಸೂಚಿಸಿ . . . ಇತ್ತ ವಸಾಯದಚ್ಚಮುತ್ತಿನ ಪೊಸಪಚ್ಚಮಂ ತಳೆದವೋಲದಿರ್ಮುತ್ತೆ ಮುಗುಳ್ತು ದತ್ತಲುಂ (ಚಂದ್ರಪ್ರಭ. ೬-೯೧). [ಪೊಸ + ಪಚ್ಚ₂]

**ಪೊಸಪಜ್ಜೆ** (ನಾ). ಅಳಿಸಿ ಹೋಗಿರದ ಹೆಜ್ಜೆಯ ಗುರುತು ; ಮಾಸದಿರುವ ಹೆಜ್ಜೆಯ ಗುರುತು : ಕುಂಜರಗುರುಕುಂಭಮಂಡಳ ದಿನಲ್ಲುಗುತಂದು ಕುಳುಂಪೆಗೊಂಡ ನೆತ್ತರ ಪೊಸಪಜ್ಜೆ [ಪಾಠಾಂ. ಹೊಸವಜ್ಜೆ] ಯೊಳ್ಮದಱೆ ಕಣ್ಗೆಸೆದಿರ್ದುವು . . . ಮುತ್ತುಗಳ್ (ಪಂಪಭಾ. ೧೧-೯೪ ; ಸೂಕ್ತಿಸು. ೩.೬೦ (ನೋ)) ; ಅಗಲ್ದ ಪೆಣ್ಣಂಚೆಯ ಪುಳಿನಸ್ಥಳದ ಕುಸುಮಮರಜದ ಪೊಸಪಜ್ಜೆವಿಡಿದಱಸಿ ಪೋಗಿ (ಗಂಗ. ೩-೦೦೩ ಪ). [ಪೊಸ+ಪಜ್ಜೆ]

**ಪೊಸಪನ್ನೀರ್** (ನಾ). ಶುಭ್ರವಾಗಿರುವ ಪರಿಮಳದ ನೀರು : ಪೊಸ ಪನ್ನೀರೊಳ್ ಲತಾಂತಸ್ತಬಕಮನೊಲವಿಂ ತೊಯ್ದು ಭರ್ತಾರನಾದಬ್ಜ ಸಖಂ (ಆದ್ಮಿಟಿ. ೪-೨೮). [ಪೊಸ + ಪನ್ನೀರ್ (< ಪನಿನ್:ರ್)]

**ಪೊಸಪರಿಮಳ**, ಹೊಸಪರಿಮಳ (ನಾ). ಆಹ್ಲಾದಕರವಾದ ವಾಸನೆ ; ನರುಗಂಪು : ಪೊಸಪರಿಮಳವಿಡಿದಹ ಕರ್ಪುರದ ಸವಿರಸದಂಬುಲದ ಕುಟುಕಿತ್ತು ನೊಸಲೆಡೆಯನು ಚುಂಬಿಸಿ ತಕ್ಕಿಸುತ ವರವಶೆಯಾದಳೇನ ಬಣ್ಣಿಸುವೆ (ಕಂಪಿ. ೯-೦೬೬). **ಹೊಸಪರಿಮಳ** : ಹಸನಾಗಿ ಸವಿಯಾದ ಸಂಭಾರವಿಕ್ಕಿಯವು ಮಾಸೇದಂದದಿ ನೇತ್ರವಂ ಟಟ್ಟಿ ವೊಗ್ಗರಿಸಿ ಹೊಸ ಪರಿಮಳವನಿಕ್ಕಲವು ತಾನೆ ಭಿನ್ನರುಚಿವ್ಯಂತಾಕಮೆಸರಾಮವು (ಸೂಪಶಾ. ೪-೯). [ಪೊಸ + ಪರಿಮಳ (= ಪರಿಮಲ)]

**ಪೊಸಪರೆಯ** 'ಪೊಸವರೆಯ' ನೋ.

**ಪೊಸಪಸಲೆ** (ನಾ). ಹಚ್ಚಹಸುರಾಗಿರುವ ಹುಲ್ಲು ; ಎಳೆಯ ಗರಿಕೆ : ನಳನಳಿಸಿ ಬೆಳೆದ ಪೊಸಪಸಲೆಯ ಮೇಲೆ ಕದಳೀದಳಂಗಳು ಕಮಲ ಪತ್ರಂಗಳಂ . . . ಪಾಸುತ್ತುಂ (ಗಂಗ. ೩-೬೬ ಪ). [ಪೊಸ + ಪಸಲೆ]

**ಪೊಸಪಸೆ** 'ಪೊಸವಸೆ' ನೋ.

**ಪೊಸಪಳುಕು** 'ಪೊಸವಳಿಕು' ನೋ.

**ಪೊಸಪಾಕ**, ಹೊಸಪಾಕ (ನಾ). ಆಗತಾನೆ ತಯಾರಿಸಿದ (ಸಕ್ಕರೆ ಅಥವಾ ಬೆಲ್ಲದ) ಬಿಸಿಯಾಗಿರುವ ಪಾಕ : ಕಳಿತ ಬಾಳೆಯ ಹಣ್ಣು ಸಕ್ಕರೆಯ ಪೊಸಪಾಕದೊಳಗೆ . . . ಇಳಿಹುವುದು (ಸೂಪಶಾ. ೪-೯೦). **ಹೊಸಪಾಕ** : ಕುಂಬಳದ ಕಾಯ ಕೈಸೇವಗೆಯ ಸಮವಾಗಿ ಸಂಬಳಿಸಿಕೊಂಡೊಣಗಲಿಕ್ಕಿ ತುಪ್ಪದೊಳಗಿಳಿಯಂ ಬಟ್ಟು ಹುರಿದು ಸಕ್ಕರೆಯ ಹೊಸಪಾಕದೊಳು ಕಟ್ಟುವುದು ಲಡ್ಡುಗೆಯನು (ಸೂಪಶಾ. ೦-೩೩). [ಪೊಸ+ಪಾಕ₁]

**ಪೊಸಪುಟ್ಟು**, ಹೊಸಹುಟ್ಟು (ನಾ). ಹಳೆಯ ಬಾಳಿನಿಂದ ಬೇರೆಯಾದ ಬಾಳು ; ಮತ್ತೊಂದು ಜನ್ಮ : ಎಳೆಯ ಕರ್ನಾಟಕಂ ಪೊಸಪುಟ್ಟು ಪುಟ್ಟುಗೆ! (ಹೊಂಗಳು. ೪೦-೦೩). **ಹೊಸಹುಟ್ಟು** : ಹೊಸಹುಟ್ಟು ಬರುವದಿದೆ ಇನ್ನು ಮುಂದೆ ಆಗೋಣ ಆ ಜಗದ ತಾಯಿತಂದೆ (ನಾದಲೀ. ೬೬-೦೯). [ಪೊಸ+ಪುಟ್ಟು₁]

**ಪೊಸಪುಲ್** 'ಪೊಸವುಲ್' ನೋ.

**ಪೊಸಪೂ** 'ಪೊಸವೂ' ನೋ.

**ಪೊಸಪೊಡೆ**, ಹೊಸಪೊಡೆ (ನಾ). ಎಳೆಯ ತೆನೆ, – **ಹೊಡೆ** : ತೋಳಪ ಪಸುರ್ವಣಿಯ ಬೆಳಗುಚ್ಚಳಿಸಲ್ಕನ್ನಧ್ಯದೊಳ್ವಿಜೃಂಭಿಪ ಸೂತ್ರೋಜ್ವಳ ರೇಖೆಯಂತೆ ಪೊಸಪೊಡೆಯುಳವಟ್ಟಿರಲಸೆದುದವರ್ದ ಕಳಮಕ್ಷೇತ್ರಂ (ಆದ್ಯಪು. ೩-೯೬). **ಹೊಸಪೊಡೆ** : ಉತ್ತಮದ ಹೂವು ಕಾಯ್ ಗೊನಸುಗಳ ಹೊಸಪೊಡೆ [ಪಾಠಾಂ. ಪುಡಿ]ಯ ಮತ್ತುಳಿದವಕ್ಕೆ ಹಸವಾಡಿ ಬಟ್ಟಿತ್ರಿಪದ ನಿತ್ತು ಒಗ್ಗರಿಸಿಕೊಂಡವಲವಲ ಹಸರ ಹೂರಣಬದನೆಗಾಯೆಂಬುದು (ಸೂಶಾ. ೪-೨೦). [ಪೊಸ+ಪೊಡೆ₃]

**ಪೊಸಪೊನ್** 'ಪೊಸವೊನ್' ನೋ.

**ಪೊಸಪೊನಲ್** 'ಪೊಸವೊನಲ್' ನೋ.

**ಪೊಸಪೊಟ್ಟಿಱ್** (ನಾ). ಯೌವನದ ಕಾಲ ; ತಾರುಣ್ಯ : ಪಾಂಡವರನ ಕಾರಣಂ ಕಣಕಿದೀ ಪೊಸಪೊಟ್ಟುಱೊಳಾದ ಕಿರ್ಚುರ್ ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ತು ಪೋಕುಮೇ (ಪಂಭಾ. ೨-೯೬). [ಪೊಸ + ಪೊಟ್ಟುಱ್]

**ಪೊಸಬ** 'ಪೊಸಂಬ' ನೋ.

**ಪೊಸಬಗೆ** 'ಪೊಸವಗೆ' ನೋ.

**ಪೊಸಬಣ್ಣ**, ಹೊಸಬಣ್ಣ (ನಾ). ೧. ಉಜ್ವಲವಾದ ಬಣ್ಣ ; ಸ್ವಚ್ಛ ವರ್ಣ : ಪೊಸಬಣ್ಣದೊಳೊಂದಿದ ಪಾರಿಜಾತಮುಗ್ಗಳಮೆಸೆದೊಪ್ಪುವಂತೆ ತಳಿರಿಂ ಮುಗುಳಿಂ ನವಯೌವನಂ ಮನಂಗೊಳೆ (ಪಂಭಾ. ೨-೩೮). **ಹೊಸಬಣ್ಣ** : ೨. ಹೊಸ ಬಗೆ ; ನವೀನ ರೀತಿ : ಇಂದ್ರಚಾಪದ ಮಳೆಗಾಲದ ದಿನದಂತೆ ಬಾಳಿಗೆ ಹೊಸಬಣ್ಣವಾಗೆ ಸಂಸಾರವೆನುವುದು ಸುಖಮಯ ವೆನಿಸುತೆ ಕಳೆಯಿತು ಕಾಲವು (ಇಂಚಾಪ. ೪೨-೦೦೦). [ಪೊಸ+ಬಣ್ಣ]

**ಪೊಸಬಾಸಿಗ** 'ಪೊಸವಾಸಿಗ' ನೋ.

**ಪೊಸಬಾಸೆ** (ನಾ). (ಎದೆಯ ಮಧ್ಯಭಾಗದಿಂದ ಹೊಕ್ಕುಳ ಮೇಲು ಭಾಗದವರೆಗೆ ಇರುವ) ಮನೋಹರವಾದ ಕೂದಲ ಸಾಲಂ : ಪೊಸಬಾಸೆಯ ಚೆಲ್ವಂ ನಿಟ್ಟಿಸಲಾಂ ಮೊಲೆ ಕಾಣಲೀಯವೆಂದುಱ್ ಸುಯ್ವಂತುಸುರಂ ಪಸರಿಸಿಯುಲರೇಱಿಸಿದಳ್ ಸಿಂಧುವಾತದಲರನ ದೊರ್ವಳ್ (ಆತ್ಮಪು. ೯-೪೩). [ಪೊಸ+ಬಾಸೆ₁]

**ಪೊಸಬಿಜ್ಜಣಿಗೆ** (ನಾ). ಮಿರುಗುವ ಬೀಸಣಿಗೆ : ಬಿಸಿಲೆಸಕದಿಂದ ಕೊರಗಿದ ದೆಸೆವೆಣ್ಗಳ ಬಿಸುಪನಾಱಿಪಂತಿರೆ ಗಿಳಿಗಳ್ ಪಸುರೆಱಕೆಯೆಂಬ ಬಾಟಿಯ ಪೊಸಬಿಜ್ಜಣಿಗೆಗಳಿನೆಸಗಿಪುವು ತಣ್ಣೆಲರಂ (ಆದಿಪು. ೦೩೦).
[ಪೊಸ + ಬಿಜ್ಜಣಿಗೆ]

**ಪೊಸಬಿಜ್ಜೆ** (ನಾ). ಹೊಸಬಗೆಯ ಮಾಯಾವಿದ್ಯೆ : 'ಪೊಸಬಿಜ್ಜೆವಳ' ಪರಾ. [ಪೊಸ+ಬಿಜ್ಜೆ]

**ಪೊಸಬಿಜ್ಜೆವಳ** (ನಾ). (ಇಂದ್ರಜಾಲವೆಂಬ) ವಿದ್ಯೆಯನ್ನು ತಿಳಿದವನು; ಮಾಯಗಾರ : ಸಿಸುವಾಗಿ ತಾನಾಲದೆಲೆಯೊಳೊಱಗಿ ತನ್ನ ಬಸಿಱೊಳೀರೇಳುಲೋಕಗಳ ಪಸರವ ತೋಱಿ ಬಗೆಗೊಳಿಸುವ ಪೊಸಬಿಜ್ಜೆ ವಳಗೆಱಗುವೆನು (ಕರ್ಣಕ. ೦-೦೦). [ಪೊಸಬಿಜ್ಜೆ+-ವಳ]

**ಪೊಸಬಿಸಿಲ್** 'ಪೊಸವಿಸಿಲ್' ನೋ.

**ಪೊಸಬೀಡಾರ** (ನಾ). ನೂತನ ವಸತಿ ; ಹೊಸ ನೆಲೆ : ಪೊಸಬೀಡಾರ ದೊಳಿರ್ದ ಬಟ್ಟಗನವೊಲ್ ಮೋಹಾಭಿವೇಶೋದಯಂ ವಸುಧಾಧೀಶನ ಚಿತ್ತದಲ್ಲಿ ಕಿಱಿದುಂ ಮೆಯ್ದೋಱಿತಿಲ್ಲ (ಪಾಠಕ. ೦೨-೬೨).
[ಪೊಸ+ಬೀಡಾರ]

**ಪೊಸಬು** (ನಾ). (?) : ಮುಕ್ಕಾಲು ದೀವಿಟಗೆ ಮೂರೆಳೆ ಜಾವರ ತುದಿಕಲಪ ಪೊಸಬು ಚಕ್ರದ ಕೊಡೆ ಅಳ × × × ಬಲುಚೀತಕಡಿದೆಡ ತಕಡಿ (ಎಇ. XVI. ಗುಬ್ಬಿ. ೬೯-೨೮ ; ೪). [< ಪೊಸತು ?]

**ಪೊಸಬೆ** (ನಾ). ಅಪರಿಚಿತೆ ; **ಹೊಸಬಿ** : ಎಳನಾಭಿಯೆಳೆಯಳ್ ಎಸೆವು ಡಿಯ ಪೊಸಬೆ ನುಣ್ದನಿಯ ನೂತನೆ ಧಾಳದ ಭಾಮಿನಿ ಕರ್ಣಪಾಲಿಕೆಯ ಕಾಮಿನಿ . . . ಪೆಣ್ಗಳ ಪುಣ್ಯಾಕಾರೆಯುಮೆನಿಸಿ ಮನಂಗೊಳಿಸುತ್ತಿದ್ದಳು (ಆದ್ಯಪು. ೫-೩೩ ವ). 'ಹೊಸಬಿ' ಪರಾ.
[ಪೊಸಬ (< ಪೊಸಂಬ) + – ಎ₁]

**ಪೊಸಬೆಣ್ಣೆ**, ಹೊಸಬೆಣ್ಣೆ (ನಾ). ಆಗತಾನೆ ತೆಗೆದ ಬೆಣ್ಣೆ ; ನವನೀತ : ರಾಹುಗೆ . . . ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ (ಕಾವ್ಯಸಾ. ೯೬೮ ಚೂಡ್ತಳ) ; ನನೆದ ಸೊಜ್ಜಿಗೆಯೊಳಗೆ ಪೊಸಬೆಣ್ಣೆ ಸಿಹಿಮೊಸರ ಕೆನೆ ಹಾಲ ಕೆನೆಯುಪ್ಪನಿಕ್ಕಿ ಕಣಿಕವ ಕುಟ್ಟಿಯನುವಾಗಿ ರೊಟ್ಟಿಯಂ ಮಾಡಿ ಬಟ್ಟೆಯ ಹಲ್ಲೆಗಳ ನಡುವೆಯಿರಿಸಿ ಹದುಗಿ (ಸೂಶಾ. ೦-೦೨). **ಹೊಸಬೆಣ್ಣೆ** : ನೆಲಕೆ ಗಗನಕೆ ಸೂತ್ರವಿಡಲಂಬಿಲದೊಳಗೆ ಹೊಸಬೆಣ್ಣೆಯಂ ತೆಗೆಯಲು . . . ಬಲ್ಲ ನೆಱ ಜಾಣೆ (ಬಸಪು. ೪೨-೨) ; ಕುಟ್ಟ ಕಣಿಕವನು ಹಬ್ಬಿಟ್ಟಂತೆ ಹೊಸೆದು ಮೂವಟ್ಟಗಲದೊಳಗೊತ್ತಿಯಂತದಕೆ ಹೊಸಬೆಣ್ಣೆ ಮಿಟ್ಟುವಂ ತೊಡೆದು (ಸೂಶಾ. ೦-೩೦). [ಪೊಸ + ಬೆಣ್ಣೆ]

**ಪೊಸಬೇಟ** 'ಪೊಸವೇಟ' ನೋ.

**ಪೊಸಬೇಸಗೆ** (ನಾ). ಆಗತಾನೆ ಪ್ರಾರಂಭವಾದ ವೈಶಾಖಮಾಸ : ಮುಂಬೇಸಗೆ : ಪೊಸಬೇಸಗೆಯೊಳ್ ಮೃಗತತಿಯುಸುವೆರಸಿರವೇಳ್ಕು ಮೆಂದು ಕರಜ್ಞಿಸಿ ಮಿತ್ರಂ ಬಿಸಿಲಂ ಪೀದೊಡೆ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ (ಗಂಆ. ೯-೦೮). [ಪೊಸ + ಬೇಸಗೆ]

**ಪೊಸಬೋನ** (ನಾ). ಹೊಸದಾಗಿ ಮಾಡಿದ ಅನ್ನ : ಜಂಗಮಕೆ ಮಾಡಿ ದನ್ನವ ಪುತ್ರನುಣುತಿರಲು ಲಿಂಗದಪನಂ ಕೊಂದು ಮುಚ್ಚಿ ಪೊಸ ಬೋನಮಂ ಸಾಂಗವಾಗಿಯೆ ಮಾಡಿ ತಜ್ಜಂಗಮಕೆ ನೀಡೆ (ಚಾಶಿಕ. ೬-೦೨).
[ಪೊಸ + ಬೋನ]

**ಪೊಸಮಂಜು** (ನಾ). ಶುಭ್ರವಾದ ಮಂಜು,–ಹಿಮ : ಜೊನ್ನದ ವೊಲ್ ಪೊಸಮಂಜು ಪರ್ವಿ ಪೆರ್ಚುಗೆಯನಮರ್ಚೆ ತಾಳ್ದನಂದಿಕೋದ ಯಮಂ ಹಿಮಕಾಲಚಂದ್ರಮಂ (ರಾಜಶೇ. ೯-೪). [ಪೊಸ + ಮಂಜು₁]

**ಪೊಸಮಕರಂದ** (ನಾ). ಆಗತಾನೆ ಅರಳಿರುವ ಹೂವಿನ ಬಂಡು : ಪೊಸಮಕರಂದದ ಮಾಂದದ ರಸಕ್ಕೆ ಮಂದಲರೊಳೆಱಗಿದಳಿ ರಚನೆಯ ಕರ್ವಸೆಮತೆಸೆವಿನಮೇಂ ಸೊಗಯಿಸಿದುದೊ ವನಯುವತಿವದನತಿಲಕಂ ತಿಲಕಂ (ಶಾಂತಿಪು. ೬-೧೩ಅ). [ಪೊಸ + ಮಕರಂದ]

**ಪೊಸಮದ**, ಹೊಸಮದ (ನಾ). ೧. ತಾರುಣ್ಯದ ಸೊಕ್ಕು. ೨. ತಾರುಣ್ಯದ ಸೊಕ್ಕಿನಿಂದ ಸುರಿಯುವ (ಆನೆಯ) ಮದಧಾರೆ : ಪೊಸಮದದಾನೆಯಂ ನಸೆಯ ಪೆರ್ಬಿಡಿ ಜಂಗಮಕಲ್ಪವೃಕ್ಷಮಂ ಮಿಸುಗುವ ನಲ್ಪುಕಲ್ಪಲತೆ ನೀರದಮಂ ಕುಡುಮಿಂಚು ಪೊರ್ದಿ ಶೋಭಿಸುವವೊಲ್ (ಶಾಂತಿಪು. ೬-೨೯). **ಹೊಸಮದ** : ೨. ಹೊಸಮದದ ಮದದಂತಿ ಕದಳಿಯ ಕುಸುರಿದಱಿದಂದದಲಿ ಘನಪೌರುಷವ ಮಾಡಿದನೆಂದವನವನೀಪಾಲಸನುಜಂಗೆ (ಶಾವ್ಯದ್ರೋ. ೯-೨೨). [ಪೊಸ + ಮದ]

**ಪೊಸಮದವಣಿಗ** (ನಾ). ಹೊಸದಾಗಿ ಮದುವೆಯಾದವನು : ಪೊಸ ಮದವಣಿಗಂ ದೇವೇಂದ್ರನ ಶಚಿಯ ವಿಳಾಸಾವಿಷ್ಕೃತವಿವಿಧವಿಭವಮಂ ಮಸುಳಿಸಿದಂ (ಶಾಂತಿಪು. ೬-೦೨೦). [ಪೊಸ+ಮದವಣಿಗ(< ಮದುವಳಿಗ)]

**ಪೊಸಮದವಳಿಗೆ** (ನಾ). ಹೊಸದಾಗಿ ಮದುವೆಯಾದವಳು; ನವವಧು : ಆತನ [ಮನೆಗೆ ವಂದು ಪೊಸಮದವಳಿಗೆಯ ಕಿಲದೋರ್ದ ಪುಷ್ಪದಾಡನಂ ಕಂಡು] (ರಜೀಶ್ಯ. ೬-೧೨೭). [ಪೊಸ + ಮದವಳಿಗೆ (<ಮದುವಳಿಗೆ)]

**ಪೊಸಮನೆ, ಹೊಸಮನೆ** (ನಾ). ಹೊಸದಾಗಿ ಕಟ್ಟಿದ ಮನೆ; ನೂತನ ಗೃಹ : ಕಿಸುರ ಕಸಗಳೆದುಮತ್ತಿಸಿ ಪೊಸಬಗೆಯುಂ ಪೂಸಿ ರಾಗರಸದಿಂ ಪೊಕ್ಕಂ ಪುಸಿದಬ್ಬೆಂಡಿರ ಬೇಟಂ ಬಿಸುಟಿರ್ದೆಯುಂ ಸ್ಮರನೆ ಪುಗುವವೋಲ್ ಪೊಸಮನೆ [ಶಾಂತಿ. ಪಾಟ್ಯನೆ]ಯಂ (ಅರ್ಧನೇ. ೪-೧೪೪) ; ಮಾಡಿದ ತೋರಣಮಟ್ಟುಗಳ್ ಪೊಸಮನೆ ಸುತ್ತಲುಂ ಬಳಸಿ ಪರ್ವಿದ ಕೇದಗೆ ಪಚ್ಚವಾಗಿಲ್ (ಕಬ್ಬಿಗ. ೦೦೦). **ಹೊಸಮನೆ:** ಹೊಸಮನೆಯು ಕಟ್ಟಿದೆನು ಗೃಹಶಾಂತಿ ಮನೆಯೊಳಗೆ (ಭ್ರರಂ. ೨-೬೦-೭) ; ಹೊಸ ಊರು ಹೊಸಮನೆಯೆನೆ ಹೊಸತಾಯಿತು ನಮ್ಮ ಜೀವನ ಸುಖವಾಗಿ (ಹಂಪಾಶ. ೩೯-೬೬). [ಪೊಸ + ಮನೆ]

**ಪೊಸಮಲ್ಲಿಗೆ** (ನಾ). ಆಗತಾನೆ ಅರಳಿರುವ ಮಲ್ಲಿಗೆ; ನಳನಳಿಸುತ್ತಿರುವ ಮಲ್ಲಿಗೆ : ಸೊಡರ್ಗುಡಿಯೊಯ್ಯನಾಗೆ ಪೊಸಮಲ್ಲಿಗೆ ಮೆಲ್ಲಗೆ ಕಂಪು ನಾಱೆ (ಕಂಕಣ. ೪-೦೦೦) ; ಪೊಸಮಲ್ಲಿಗೆಗಮೊಲ್ಲಾಮಿಂಗಂ ಮದುವೆಮಾಡಿ ದಳ್ಳನದೊಳ್ (ಶರಶ್ರೀ. ೯-೩೯). [ಪೊಸ + ಮಲ್ಲಿಗೆ]

**ಪೊಸಮಸೆ, ಹೊಸಮಸೆ** (ನಾ). (ಮಸೆದು) ಹೊಳೆಯುವಂತೆ ಹರಿತಗೊಳಿಸಿರುವುದು : ಗಗನಮಂಡನೆಜಯಮಂತಿರೆ ಗಗನೇಚರಸೈನ್ಯಮಿಸುವ ಪೊಸಮಸೆಯ ಸರಲ್ಗಂಧರನ ಮೇಲೆ ಪಾಯ್ದುವು (ಕಂಬರೂ. ೯-೬೦) ; ದಮನನಂ ಪೊಸಮಸೆಯ ಕೂರ್ಗಣೆಗಳಿನಿಸುತಂ (ಚಾಮುಂ. ೧೦-೦೦). **ಹೊಸಮಸೆ:** ಹೊಸಮಸೆಯ ಹೊಗರಂಬುಗಳನೆಬ್ಬಿಸಿದನು (ಉದ್ಯೋ. ೦೩-೬೦). [ಪೊಸ + ಮಸೆ]

**ಪೊಸಮಾವು** (ನಾ). ಚಿಗುರಿದ ಮಾವಿನ ಮರ : ಮುಸುಕಿದ ತಳಿರಂ ಪೇಱದ ಪೊಸಮಾವುಗಳಂ ಬಸಂತಮಿಸದವುದು (ಅಂತಿ. ೦೦-೮೩) ; ತಣಿವುವುದು ಪೊಸಮಾವಿಳಸಿದ ಪಾಂಥಪ್ರತಾನಪಂಚೇಂದ್ರಿಯಮಂ (ಗಂಳ. ೨-೯೩). [ಪೊಸ + ಮಾವು]

**ಪೊಸಮಿಸುನಿ, ಹೊಸಮಿಸುನಿ** (ನಾ). = ಪೊಸನೇರಾಣೆ : ಪೊಸ ಮಿಸುನಿವೆಸದ ತೊಡೆಗುಪ್ಪಸಮೆಸೆದುದು ಪೊನಾರಲೆಂದು ಪೊಂಬಾಳೆಯೊಳಂದಸಿಯಳ ನುಣ್ದೊಡೆ ತೊಳ್ದಪೂಲಸದೃಶರುಚಿ ಕನಕಕಪಟಮಂ ಕವಟಿಂದಂ (ಅಂತಿ. ೦೨-೬೦). **ಹೊಸಮಿಸುನಿ:** ಹೊಸಮಿಸುನಿಯ ಚಿನ್ನದಿ ಕರುವಿಟ್ಟು ನಿರ್ಮಿಸಿದ ಪುತ್ಥಳಿಯುಂದದಲಿ (ಶಬರಂಕಾ. ೦-೦೬). [ಪೊಸ + ಮಿಸುನಿ]

**ಪೊಸಮಿಾನ್** (ನಾ). ಹೊಳೆಯುವ ಮಿಾನು ; ನನೆಗಣೆಯನ ಮೆಯ್ಯೆಳಗೆಂಟಿನಿಗೊಳದೊಳ್ ಮೊದಲೆ ಮಿಳಿರ್ದು ನೆಗೆದಾಡುವಂದೆಸಿಸಂ ಕಡು ನೀಱಿಯ ಚೆಲ್ವನೆ ತೊಳಗುವ ಕಣ್ಗಳೆಂಬ ಪೊಸಮಿಾಬೊಣರ್ಗಳ್ (ಕಬ್ಬಿಗ. ೩೩೦). [ಪೊಸ + ಮಿಾನ್₂]

**ಪೊಸಮುತ್ತು, ಹೊಸಮುತ್ತು** (ನಾ). ನೂತನವಾಗಿರುವ ಮುತ್ತು : ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದಂತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳಮ್ಯುತಕಿರಣನ ಕಾಂತಿಗಳನೀಸುವಂತಾದುವು (ಕಂಕಣ. ೨-೩೯ ಪ) ; ಮತ್ತಗಜಮಸ್ತಕದ ಪೊಸಮುತ್ತಂ ಬಲ್ಪಿಂದೆ ತಂದೆಂ (ಗಂಳ. ೦-೦೦೩) ; ಪಲಬಸುರ್ದೋರಣ ಪಳಿ ಗುಡಿ ಸಂತಸವಜ ಪೊಸಮುತ್ತಿನ ಬಣ್ಣವುರಂ ಮನೆಮನೆದಪ್ಪದೆ ಶೋಭಿಸಿತು (ಜಯಂಕಾ. ೨-೩೯). **ಹೊಸಮುತ್ತು:** ಹೊಸಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು (ಅವಶಂ. ೧೩೬-೬೨೪); ಎತ್ತಿದರು ಬಳಿಕಾರತಿಯ ಹೊಸಮುತ್ತುಗಳ ಸೇಸೆಯನು ಪರಿಕಲಿಸುತ್ತ ಹರುಸಿದರಖಿಳವಿಪ್ರಸುವಾಸಿನೀನಿಕರ (ಕೂರಿಂ. ೦-೦೪-೨೦). [ಪೊಸ + ಮುತ್ತು₂]

**ಪೊಸಮೃಣಾಳ** (ನಾ). ತಾವರೆಯ ಎಳೆಯ ದಂಟು : ಎಳದೆಸಿರ್ದ ಪಾವಸೆಯ ತಣ್ಣಿಟಿಯಿಂದಮ ನೆಯ್ದ ಸೀರೆ ಶೀತಳಿಕೆಯ ಚಾಮರಂ ಪೊಸಮೃಣಾಳದ ತೋಳ್ವಳೆ (ಶಾತಂಣ. ೪೩೯). [ಪೊಸ + ಮೃಣಾಳ (= ಮೃಣಾಲ)]

**ಪೊಸಮೆಂಡಿ** (ನಾ). ಒಬ್ಬಾತನ ಹೆಸರು (?) : ಸಿರಿಸಗರನ್ × × × ಯನ್ ಪೊಸಮೆಣ್ಡಿ ಸಗ್ಗಮೇಱಿದ (ಎಳ. IX. ಹೊಹಳಿಹು. ೯-೪ ; ಸು. 870). [?]

**ಪೊಸಯಿಸು₁** (ಕ್ರಿ). ೧. ಹೊಸದನ್ನಾಗಿ ಮಾಡು ; ಹೊಸತುಗೊಳಿಸು : ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಅಂತಿ. ೯-೨೩) ; ಅಸಮಾನಮೆನಿಪ್ಪ ಲಾಸ್ಯಲೀಲೆಯುಮಂ ನಿರ್ಮಿಸಿ ತೋಱಿದನೊರ್ವೊರ್ದಲೆನೆ ಪೊಸಯಿಸಿದಂ ನಾಟ್ಯವಿದ್ಯೆಯಂ ಪುರುಹೂತಂ (ಶಂಶಿತು. ೯-೦೬೪). ೨. ಜೀರ್ಣೋದ್ಧಾರ ಮಾಡು : ಗಂಗವಾಡಿಯ ಬಸದಿಗಳೆನಿತೊಳವನಿತಂ ತಾನೆಯ್ದೆ ಪೊಸಯಿಸಿದಂ (ಎಳ. II. ೬೩-೩೩ ; 1118). ೩. ಅತಿಶಯವಾಗು; ಅಧಿಕವಾಗು; ಹೆಚ್ಚಾಗು : ಸರಸಿರುಹದ ಮೇಗಾಡುವ ಸುರಸುಂದರಿಯರಾಟದಂದಮೆಂತೆನೆ ಸಿರಿಯಂ ಪರಿಭವಿಸಿ ತಂದು ಪೊಸಯಿಪ ಸಿರಿಮಂತಿಕೆಯಿಂದೆ ಕಾಲೊಳೊದೆದಪರೆನಿಕುಂ (ಶಾಂತಿ. ೦೦-೦೬) ; ಈ ಸಮಸ್ತವಸುಧಾತಳರಾಜ್ಯವಿಭೂತಿ ನಿಮ್ಮದೊಂದಸದೃಶಮಂತ್ರದತುಳತಂತ್ರಬಳಪ್ರಥಿತಪ್ರತಾಪದಿಂ ಪೊಸಯಿಸಿ ಸಂದುದಿಂದುವರಂ (ಶಬುತಿ. ೨-೩೪). ೪. ಅಧಿಕಗೊಳಿಸು ; ಹೆಚ್ಚುಮಾಡು : ಎಡೆಬಿಡುವ ಹಿತರಂ ಚಕ್ರಮ ಸಾಧಿಸಿದಪ್ಪುದು ನವನಿಧಿಗಳ್ ಪೊಸಯಿಸಿದಪ್ಪುವು ವಿಭೂತಿಯಂ ಪುರುಸುತನಾ (ಅಂತಿ. ೦೪-೬೦). [ಪೊಸ + — ಇಸು₁]

**ಪೊಸಯಿಸು₂** 'ಪೊಸೆಯಿಸು' ನೋ.

**ಪೊಸರಂಗ** (ನಾ). ನೂತನವಾಗಿ ನಿರ್ಮಿಸಿದ ರಂಗಮಂಟಪ : ಪೊಸರಂಗದ ಪರಿಯುಂಕಂ ಮಿಸುಕುವ ಕೌಳಿಡೆ ಮರಾಳತಳ್ಪಂ ಸಿತಸದ್ವಸನದಿ ಪಚ್ಚವಡಿಸಿ ರಾಜಿಸುತಿರೆ ಕುಳ್ಳಿರ್ದನಬಲೆವೆರಸಾ ಕುವರಂ (ಕೃಪಿಕು. ೦೪-೬). [ಪೊಸ + ರಂಗ]

**ಪೊಸರಕ್ತ, ಹೊಸರಕ್ತ** (ನಾ). ೧. = ಪೊಸನೆತ್ತರ್ : ಧಾತ್ರಿಗೆ ಪೊಸರಕ್ತ ಪೂರಮಸಗಿದತ್ತು (ರಾಜಶೇ. ೩-೦೦೬). **ಹೊಸರಕ್ತ :** ೨. (ಆಲಂ) ನವಯೌವನ : ಉತ್ತಮವಾದವು ಹರೆಯದ ದಿನಗಳು ಹೊಸರಕ್ತ ಹೊಸ ಅನುರಕ್ತಿ (ಹಂಪಾಶ. ೨೦೨-೪೪). [ಪೊಸ + ರಕ್ತ]

**ಪೊಸರಜ್ಜು** (ನಾ). = ಪೊಸನೇಣ್ : ಪೊಸರಜ್ಜುಗಳಿಂ ಲಿಂಗಮನಸವಸದಿಂ ಸುತ್ತಿ ಮಾಱಿಬು ಘಟಿಯಾನೆಗಳಂ ಮಸಗಿ ಕಲಿ ಚೋಳವಿಭು ತೆಗೆಯಿಸೆ ದಿಟದಿಟಯೆನುತ ಪಱಿದು ಮುಗ್ಗಿದುವಾಗಳ್ (ಕೃಪಿಕು. ೨೦-೦೦). [ಪೊಸ + ರಜ್ಜು]

**ಪೊಸರತ್ನ** (ನಾ). ನೂತನವಾದ ರತ್ನ : ಸಾಲ ಮುತ್ತಿನ ಕುಚ್ಚಿನ ಪೊಸರತ್ನದ ಮೇಲುಪ್ಪರಿಗೆಗೆನ್ನನೊಯ್ದು ಕಾಲೋಚಿತದ ಕಲೆಗಳಿಂದ ಸೋಲಿಸಿ (ಕಂಪಂ. ೯-೦೪೦). [ಪೊಸ + ರತ್ನ]

**ಪೊಸರನ್ನ** (ನಾ). = ಪೊಸರತ್ನ : ಪೊಸರನ್ನದ ಪೊನ್ನ ಪೊದಟ್ಟಿ ಸೋಣೆ ಮಂದಾನಿಳನಿಚ್ಚಿ ಬೆರ್ಚಿಯೊಳಗಟ್ಟಿಱಿದಂತಿರೆ ದೇವರಾರ್ವ ಹೋಲ್ಪಾನನಿನಾದಮೊಪ್ಪಿದುದು ರಾಜಿತರಾಜಗೃಹಾಂತರಾಳದೊಳ್ (ಚಂಶಿತು. ೬-೬೪); ಮಿಸುಗುವ ಕಣ್ಣ ನುಣ್ಚೆಳಗು ಜೊನ್ನದೊಳೊರಗೆಯಾಗೆ ಸೊಂಪು ಸಂದಿಸೆ ಪೊಸರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್ (ಕಬ್ಬಿಗ. ೩೪೩). [ಪೊಸ + ರನ್ನ (<ರತುನ)]

**ಪೊಸರೂಪು, ಪೊಸರೂವು** (ನಾ). ಹೊಸದಾದ ಚೆಲುವು ; ನವೀನ ರೂಪ : ಪೂಗಳಂ ತನ್ನುಮಂ ಮಱಿದಂ ನಿರೀಕ್ಷಿಸುತೆ ಮಱಿದಿರ್ದನಂ ಸಖಿಪುರಂಮ ಭೋಂಕನೆ ಕಂಡು ಬೆಱಗಾಗಿ ಸೋಲ್ಲು ಪೊಸರೂಪು

ವನಂಗೊಂಡು (ಶಬರ. ೦-೪೪). **ಪೊಸರೂಪು :** ನೊಸಲ ಕತ್ತುರಿ ಬಾಗಿದ ಪುರ್ಬು ತಾವರೆಯೆಸಳನೇಳಿಪ ನಿಡುಗಣ್ಣು ಪಸರಿಪ ಶಿಲಪುಷ್ಪ ನಾಸಿಕ ಸತ್ಕರ್ಣ ಪೊಸರೂಪ ನೋಡಿ ಹಿಗ್ಗಿದರು (ಪೋಜಿಚ. ೦೪-೬೨).
[ಪೊಸ+ರೂಪು]

**ಪೊಸರೂಪು** 'ಪೊಸರೂಪು' ನೋ.

**ಪೊಸಲತೆ** (ನಾ). ಹೊಸದಾಗಿ ಚಿಗುರಿದ ಬಳ್ಳಿ : ಪೊಸಲತೆಯುಕ್ಕುವಲ್ಲ ಲತೆಗೆತ್ತಣದೀ ಸವಿವಾತು ನೀಟ್ಟ ರನ್ನಸರವುದಕ್ಕುವಲ್ಲ ಸರಕೆತ್ತಣವೀ ನವಘರ್ಮರ್ಬಿಂದುಗಳ್ . . . ಎಂದೊಸೆದು ಸರ್ವಜನಂ ಪೊಗಟ್ಟುದಾ ಸತಿಯಂ (ಅಭ್ಯಚಿ. ೬-೮೦). [ಪೊಸ+ಲತೆ]

**ಪೊಸವಂದರ್** (ನಾ). ಹೊಸದಾಗಿ ಹಾಕಿದ ಚಪ್ಪರ : ಪರಿವೇಷದ ತೆಱದಿಂದನವರತಂ ಕರ್ಪೂರರಸದ ಪರಿಕಣಿ ಸುತ್ತಂ ಪರಿಯಲ್ ಮೃಣಾಳ ಪೊಸವಂದರ ನಡುವಣ ಪೂವಿನಸಟ ಪಾಸಿನೊಳಿರ್ದಳ್ (ಕಾದಂಸಾ. ೨೨೩).
[ಪೊಸ+ಪಂದರ್]

**ಪೊಸವಗೆ**, **ಪೊಸಬಗೆ**, **ಹೊಸಬಗೆ** (ನಾ). ನವೀನರೀತಿ ; ನೂತನ ಕ್ರಮ : ಅಳಿಯರಗಿಳಿಯರಸಂಚಿಯುಮಿಳಿಯೊಳ್ ಭಾವುಕರ ಕಿವಿಗೆ ಸವಿಯಂ ಪಡೆಗುಂ ಕಳಕಂಠಕಂಠನಾಳೋದ್ಗಳಿತಸುಧಾಸಾರದಿಂದ ಪೊಸವಗೆಯಲ್ಲೇ (ಶಶಿ. ೦-೦೬). **ಪೊಸಬಗೆ :** ಪೊಸಬಗೆ ದೇಸೆವೆತ್ತು ಚಿತವಂ ಪ್ರತಿಪಾಲಿಸುವರ್ಥದೊಳ್ಪು ರಂಜಿಸೆ ರಸಭಾವದೊಳ್ ನೆಗಟ್ದಲಂಕೃತಿ ಕೈವಿಗೆ ಪೇಟ್ದು ಕಾವ್ಯಮಂ (ಪುಣ್ಯಾಸ್ರ. ೦-೨೦). **ಹೊಸಬಗೆ :** ಈ ಹೊಸಬಗೆ ಎಂದರೆ ಕಾವ್ಯದ ವಿಶಿಷ್ಟಧರ್ಮವೆಂಬಲ್ಲಿ ಸಂಶಯವಿಲ್ಲ (ಕಾ.ಓೀಕ. ೨೨೬); ಕಂದೆರೆಯ ಮರೆಚಿಲ್ಲು ತಂಗಾಳಿ ಪೊರೆಯೆ ಎಂದಿನದೊ ಹರಿತೋಟ ಹೊಸಬಗೆಗೆ ಹೊಸನೋಟ ತಂದು ತೋರ್ಪುದು ಪಸಂಬಾಗಿಲಂ ತೆರೆಯ (ಕಾಓಕ. ೬೬-೧೦೭). [ಪೊಸ+ಬಗೆ]

**ಪೊಸವಟ್ಟ** (ನಾ). ೧. ಹೊಸ ಗದ್ದುಗೆ.–ಪೀಠ : ಅದು ಚಿತ್ರಜಂಗೆ ಕುಲದೈವವದುಂಗಜಚಕ್ರವರ್ತಿಗೆಸ್ತಿದ ಪೊಸವಟ್ಟಮಂತದು ಮನೋಜನ ಕೈಪಿಡಿಯೆಂದು ಮಾಣ್ದನಾ ಸುದತಿಯ ರೂಪಿನಿಂ ಪೆಟಿತನೆಂದೊಡೆ ಚಿಃ ಕರಮುಗ್ಗನಾಗನೇ (ಅಂಚೆ. ೨-೬೪). ೨. ಹೊಸದಾದ ಹಣೆಪಟ್ಟಿ : ಧವಳವಿಲೋಚನಂ ಧವಳಚಾಮರಮಾಗೆ ಲಲಾಟಪಟ್ಟಮೊಪ್ಪುವ ಪೊಸವ[ಪಾಠಾಂ. ಪ]ಟ್ಟಮಾಗೆ . . . ಪೋಲ್ತು ತೋಱುವುದಸಿತೋತ್ಪಲೇಕ್ಷಣೆಯ ಯೌವನಲಕ್ಷ್ಮಿಯ ರಾಜ್ಯಲಕ್ಷ್ಮಿಯಂ (ಅಜಪು. ೨-೨೫). [ಪೊಸ + ಪಟ್ಟ]

**ಪೊಸವಟ್ಟೆ**, **ಹೊಸಬಟ್ಟೆ** (ನಾ). ಹಳೆಯದಲ್ಲದ ಬಟ್ಟೆ ; ನೂತನವಸ್ತ್ರ : ಮಿಸುನಿಯ ಹಡಪ ಚಾಮರ ಕಳಂಚ ಕಾಳಾಂಜಿ ಪೊಸವಟ್ಟೆಯ ಪಾವಡೆಯ ಜಸವಟ್ಟೋಳಿಗವದವರ ಮೇಳದೊಳಾಗ ವಸುಧೇಶ ಸಾರಿಗೈದಿದನು (ಕಂಚಿ. ೨೨ ೬೬). **ಹೊಸಬಟ್ಟೆ :** "ಅನಾಹತಂ, ನಿಷ್ಪವಾಣಿ, ತಂತ್ರಕಂ_ಷ ನವಾಂಬರ, ಹೊಸಬಟ್ಟೆ" (ಶಿವ್ಯಾಂತಿ. ೨೦೭) ; ಸಾಧಾರಣವಾಗಿ ಎಲ್ಲರೂ ಹಬ್ಬಗಳಲ್ಲಿ ಮಕ್ಕಳಿಗೆ ಹೊಸಬಟ್ಟೆ ತರುತ್ತಾರೆ (ರೂಢಿ).
[ ಪೊಸ + ಬಟ್ಟೆ ]

**ಪೊಸವಣ್** (ನಾ). ಮಾಗಿದ ಹಣ್ಣು ; ಪಕ್ವಫಲ : ಎಸಗುವೆಲರಿನೊಡೆ ದೊಸರ್ವ ಪೊಸವಣ್ಣು ಪಸರದಿನೆಸೆವಮಿಯ ಕೊಂಬನಿಂಬು ಮಾಡಿ ಸುಬಿದು ಗಟಪುವೆಳಗಿಳಿಯ ಬಳಗಕ್ಕೆ ತಮರ್ಚನೆಯಾದಿವಮ್ಮಾವಿನ ಪೊದಱೊಳಂ (ಕಬ್ಬಿಗಾ. ೩೦). [ಪೊಸ+ಪಣ್]

**ಪೊಸವರೆಯ**, **ಪೊಸಪರೆಯ**, **ಹೊಸಹರೆಯ** (ನಾ). ನವಯೌವನ : ನಱುಗ್ಗುರುಳ ಪೊಸವರೆಯದಂಬುಜಾಸ್ಯದ ಸೊಳೆವೆಣ್ಣಳೊಡನೈದಲುಜ್ಜುಗಿಸೆ ಪಡೆ ದೋಹಳಪ ಜಾಣ್ಗೆ ಸಂತೋಷಿಸುತ ವಂದಿಗಳು ಜಯ ಜೀಯ ಧಳಿರೆ ಭಾಪೆಂದುಲಿಯಲು (ಧಾಶಂ. ೬-೪) ; ಬಸಿಱೊಳು ಬಂದ ಕುವರನಾದೊಡಮೇನು ಪೊಸವರೆಯದ ಪುರುಷನನು ಬಿಡೆ ನಟ್ಟಿಸಿ . . . ಬಣ್ಣಿಸಲಾಗದು ಭಾವೆಯರು (ಕಂಠಿ. ೪-೨೨). **ಪೊಸಪರೆಯ :** ಈ ಮೂರುಲೋಕದೊಳಗಿಂತ ಚೆನ್ನಿಗ ಚಲ್ವ ಪೊಸಪರೆಯದಾ ಗಂಡುಸರ ನಾ ಕಾಣಲಿಲ್ಲ (ಶಶಪೊ. ೨೬-೨೪). **ಹೊಸಹರೆಯ :** ಅಲಘುಕಬರಿಯ ಕಮಲ ನಿಭವದನದ ಕಳಕಂಠಾಳಿಯಿದ ಹೊಸಹರೆಯದ ಲಲನೆಯರ ವಿಲಾಸಂ ನೃಪನಱಿತಮನೆಳಕುಳಿಗೊಳಿಸಿದುದು (ಕಯಾ. ೨-೩); ದೊರೆರಾಯನ ಸಮ್ಮುಖದೆ ಹೊಸಹರೆಯದ ತರುಣಿಯರುಗಳ ಹಸ್ತದಲಿ ಮಿಱುವ ಮಿಸುನಿಯ ಬೊಂಬಾಳದೀವಟಿಗೆಗಳ್ಸುರುಚಿರಪ್ರಭೆಯ ಸೂಸಿದುವು (ಕಂಠಿ. ೬-೨೩). [ಪೊಸ + ಪರೆಯ (< ಪರಯ)]

**ಪೊಸವಸೆ**, **ಪೊಸಪಸೆ**, **ಹೊಸಹಸೆ** (ನಾ). (ಅರಳಿದ ಹೂವಿನಿಂದ ರಚಿಸಿದ) ಮೃದುವಾದ ಹಾಸುಗೆ : ಮಿಸುಗುವ ಪೊಸವಸೆಯೊಳಸದಳ ಪೊಸೆಯ ಬಯಸಿ ಪೊಸಯಿಸಿದ ಪೊಸಸುಸಿಲ ವಸಕದ ಬಸದೊಳ್ ಬಸದಾಗಿಯುಮಸಿಯಳೆನಗಸವಸದೊಳಿ ಬೆಸಿದು ಪೋಗಿ (ಅಂಚೆ. ೪-೦೨ ೬). **ಪೊಸಪಸೆ :** ಮಿಸುಪಪೆಸಟ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯನೀಡಾಡಿ ಪೊಳೆವುಸಡದ ಪಾಲ್ಗಡಲ ತೆರೆದುಬಾಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ದಳ್ (ಕಬ್ಬಿಗಾ. ೩೦೭). **ಹೊಸಹಸೆ :** ಹಂಸತೂಲಸ್ಥಲದೊಳ್ ತಾಂ ಬೈತೊಡು ಮುಳ್ಗಳ ಹೊಸಹಸೆಯೊಳ್ ಬೈತೊಡಂ . . . ಸರ್ವವೊಂದಂದಮೆಂದಾಂ ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ಕಶ್ಮಶ. ೬೩). [ಪೊಸ + ಪಸೆ]

**ಪೊಸವಳಿಕು**, **ಪೊಸವಳುಕು** (ನಾ). ನೂತನಸ್ಫಟಿಕ : ಪೊಸವಳಿನ ಸೆರೆಯೊಳ್ ನೆಟಿಲಸೆಯ ಮೊಗಂಬೊಕ್ಕು ಪಾಯ್ದು ಕರಿಯುಂ ಹರಿಯುಂ ಪೊಸಪೋರ್ಜಮನಱಿಮಮೆ ಪುಟ್ಟಿಸೆ ನೆಟಿಲೊಳ್ ಪೋರ್ದು ಸೀದೆಗಿಡುವವು ನಗದೊಳ್ (ಶಾಂತಿಪು. ೨-೦೦೩). **ಪೊಸಪಳಿಕು :** ಪೊಸವಳಿಕಿನ ಗಂಧಾಶ್ಮದಿನೆಸೆವ ಸುವರ್ಣಾದ್ರಿಯಂತೆ ಪಾಸಿದ ಸಿತಸದ್ವಸನದಿನೊಪ್ಪುವ ವಜ್ರದ ಪಸಪಣೆಯಿಂ ಪೊನ್ನ ಜಗುಲಿ ಕಣ್ಗೆಸದಿರ್ದಂ (ತ್ರಿಪು. ೦೬-೩೬).
[ಪೊಸ + ಪಳಿಕು (< ಪಟಿಕ)]

**ಪೊಸವಳ್ಳಿ**, **ಹೊಸವಳಿ**, **ಹೊಸವಳ್ಳಿ**, **ಹೊಸಹಳಿ**, **ಹೊಸಹಳ್ಳಿ**, **ಹೊಸಳ್ಳಿ** (ನಾ). ಒಂದು ಊರಿನ ಹೆಸರು : ವಳ್ಳಾವಿಷಯ ವಳ್ಳಾಗ್ರಾಮೇ ಕಱಿಗಾಲಉಪೊಸವಳ್ಳಿ ವಿಷಾದುಂಣ್ಣಾವಳ್ಳಿ (ಮೈ.ಅ. ೦೯೩೦. ೩-೦೯; ಸು. 476); ಪುಂನಾಡಱಸಾಸಿರಮಂ ತಟಿಕಾಡು ಮಾಯ್ದಿಂಲೆಗೆಯಿಂ ಪೊಸವಳ್ಳಿಯುಂ (ಎಕ. IV (R). ಕಾಮಂಡ. ೦೦೫-೩ ; ಸು. 10ನೆಯ ಶ) ; ವೀರಸಿದ್ದೇಶ್ವರಮಹಾದೇ[ವ]ಗ್ಗೆ ಪೊಸವಳ್ಳಿಯ ನೀರಗಾವುಣ್ಡನ ಕೆಯ್ಯಲ್ಲೊನ್ನಱಿ ಕೊಟ್ಟು ಮಣ್ಣಾಱಿ ಕೊಣ್ಡು (ಎಕ. I. ೪೪-೬; 1070). **ಹೊಸವಳಿ :** ಸರಗೂರು ಉಗುನಿಯ ಹೊಸವಳಿ[ಸಿವನ] ಹಳಿ . . ಚತುಸ್ಸೀಮಾಸಮನ್ವಿತವಾದ ಕಾಲುವಳಿಗಳು ಸಹಿತವಾಗಿಟ್ಟ (ಎಕ. IV (R), ಕೊಳ್ಳೇಗಾ. ೩೦-೩೬ : 1321). **ಹೊಸವಳ್ಳಿ :** ಅಶೇಷಮಹಾಜನಂ[ಗ]ಳು ತಮ್ಮ ಶ್ರೀಹರದ ಕಾಲುವಳ್ಳಿ ಹೊಸವಳ್ಳಿ ಶ್ರೀರ ×× ದೇವರ ಖಣ್ಣಸ್ಫುಟಿತಜೀರ್ನ್ನೋಧಾರಕ್ಕಂ ದೇವರ ನಿತ್ಯನಿವೇದ್ಯಕ್ಕಂ . . . ಮಾಡಿ ಬಿಟ್ಟ ಎರೆ (ಎಕ. VII. ಹೊನ್ನಾ. ೧೦೫-೦೪ ; ಸು. 1250 ೪). **ಹೊಸಹಳಿ :** ಚಿರುಕನ ಹಳಿಯ ಗ್ರಾಮವೊಂದಕೆ ಎಂಭತ್ತು ವರಹ ಹೊಸಹಳಿ ಗ್ರಾಮವೊಂದಕೆ ಐವತ್ತಐದುವರಹ (ಎಕ. III (R). ಗುಂಡ್ಲುಪೇ. ೦೫೦-೩೬ ; 1521) ; ಹೊಸಹಳಿಯ ರಾಯಂಣ ಪಟಿಯಂಣ . . . ಯಿವರು ಮುಂತ್ತದ ಸಮಸ್ತರು . . . ಯಿಾ ಸಾಲವನು ಧಾರಾ ಪೂರ್ವಕವಾಗಿ ಕೊಟ್ಟೆವು (ಎಕ. II (R). ೩೩೨-೦೯; 1634); ಪಾರ್ಶ್ವಪಕಯಲ ಪವಿತ್ರನುಂ ಕ್ರಿಷ್ಣರಾಜಪುಂಗವನುಂ ಬೆಳುಗುಳದ ಜಿನಧರ್ಮಕ್ಕೆ ಬಿಟ್ಟಂಥ ಗ್ರಾಮಾದಿಗ್ರಾಮಭೂಮಿಗಳ್ ಅರ್ಹನಹಳಿಯಿಂ ಹೊಸಹಳಿಯಿಂ ಜಿನನಾಥಪುರಂ (ಎಕ. II (R). ೩೫೦-೨೦; 1723). **ಹೊಸಹಳ್ಳಿ :** ಹೊಸಹಳ್ಳಿಯ

ಗ್ರಾಮವನು ಕಲ್ಲ ನೆಟ್ಟು ಕೊಟ್ಟೆವು (ಎಕ. IV (R). ಹಂಹೂ. ೦೯೦-೦೬ : 1580) ; ಮಹಿಶೂರ ಶ್ರೀಕೃಷ್ಣರಾಜವಡೆಯರ್ಯ್ಯನವರು ವೆಂಕಟರಾಮ್ಮಗೆ ಬರೆಸಿಕೊಟ್ಟ ಕ್ರಯ ಭೂದಾನ ತಾಮ್ರಶಾಸನದ ಕ್ರಮವೆಂತೆಂದರೆ . . . ಉಪಗ್ರಾಮ ಹರಯೂರ ಗ್ರಾಮ ೧ ಹೊಸಹಳ್ಳಿಗ್ರಾಮ ೧ (ಎಕ. III (R). ತಂಕಕ. ೦೧೯-೦೦; 1761). **ಹೊಸಳ್ಳಿ:** ಸಿಂಗಸಮುದ್ರವಂ ಕೂಡಿದ ಕೆಂಬರಲಯ ಹಳ್ಳವೆ ಹೊಸಳ್ಳಿಗೆ ಆ ಕಲ್ಲಿಗೆಬ್‌ಗೆ ಆ ಸೀಮೆ ಆ ಕೆಬ್ ಹೊರಗಣ ಹಳ್ಳದಲು ಸೀಮೆ (ಎಕ. IV (R). ಹಾಹುಹಾ. ೩೦೬-೪೨; 1318). [ಪೊಸ + ಪಳ್ಳಿ₁]

**ಪೊಸವಾಣತಿ** (ನಾ). ಆಗತಾನೆ ಹಡೆದವಳು : ಹಸಿ ಬಾಣಂತಿ : ಒಡನೆಯ ಚಕ್ರವಾಕಿ ಪೊಸವಾಣತಿ ಕೋಗಿಲೆಯಾಳಿಲಿಂದು ಕೇಳ್ಗಡ ಗಿಳಿವೆಣ್ಗ ಪೊತ್ತಿನೊಳಗೆಯ್ದೆ ನವಿಲ್ ಮನೆದೇವಿ ಮಕ್ಕಳಂ ಪಡೆದುದು (ಅರ್ಜುಚ. ೦-೯೯) ; ಅಂತು ಮನಂಗೊಳೆ ನೋಟ್ಟಿನಮದಟ ಕಲನೆಲದ ಪಸುರ್ವುಲ್ಲಂ ಮೇವುತಿರ್ದ ಪೊಸವಾಣ[ಣ]ತಿವುಲ್ಲೆ ಮುನ್ನ ತನ್ನ ನಡಪಿ ದುದಪ್ಪುದಟಿಂ ಪಂಚಿಯಕ್ಕೆಳಸಿ (ಶ್ರೀಕೃಷ್ಣ. ೩-೬೬ ಕ). [ ಪೊಸ + ಬಾಣತಿ ( < ಬಾಳಂತಿ) ]

**ಪೊಸವಾದಗ** (ನಾ). ಒಂದು ಊರಿನ ಹೆಸರು : ಶ್ರೀಮತ್ ಅನನ್ತ ವೀರ್ಯ್ಯಯ್ಯಂಗಳ್ಗಿಗ್ಗದೂರುಂ ಪೊಸವಾದಗಮುಮುಮನಭ್ಯನ್ತರಸಿದ್ಧಿಯಾಗೆ ಪಡೆದರ್ (ಎಕ. I (R). ೯೮-೦೦; 978). [ ಪೊಸ + ? ]

**ಪೊಸವಾವುಗೆ** (ನಾ). ಹೊಸತಾದ ಚಪ್ಪಲಿ, – ಪಾದರಕ್ಷೆ : ಆಗಳಂಗ ರಾಜಂ . . . ಪಂಚರತ್ನಗರ್ಭಂಗಳಪ್ಪ ಮಂಗಳಜಳಂಗಳಂ ಮಿಂದು ಮೆಯ್ಯಮಾಱಿಸಿ ದುಕೂಲಾಂಬರಮನುಟ್ಟು ಪೊಸವಾವುಗೆಯಂ ಮೆಟ್ಟಿ (ಶಂಶಕಾ. ೦೨-೦೦೬ ವ). [ ಪೊಸ+ಪಾವುಗೆ ]

**ಪೊಸವಾಸಣಿಗೆ** (ನಾ). ಹೊಳೆಯುವ ಮುಸುಕು: ಬಾಸಣಿಸಿದ ಚಿನ್ನದ ಪೊಸ ವಾಸಣಿಗೆಯ ಪೊನ್ನ ಸಿವಿಗೆ ಪಣಿಮಯಳಕಳಶೋದ್ಭಾಸಿ ದೆಸೆದೆಸೆಯೊಳೆಸೆಯೆ ವಿಳಾಸಂಬೆರಸಣುಗಭೋಗಿಯರ್ ಕೆಲರೆಸೆದರ್ (ಅಂಕ್ಷಿ. ೦೦-೯೦). [ಪೊಸ+ಬಾಸಣಿಗೆ₂]

**ಪೊಸವಾಸಿ** (ನಾ). ಅಂತಃಪುರದವರ ರಕ್ಷಣೆಗಾಗಿ ನಿಯುಕ್ತನಾಗಿರುವ ವೃದ್ಧ: "ಅಜ್ಜಂದು ಪೊಸವಾಸಿ (ಸಾವಾಸಿ)" (ಶಷುಕ. ಕ. ಹು); "ಅಜ್ಜಂಬುದು ಪೊಸವಾಸಿ" (ಶಕುಶ. ೦೯೦). [?]

**ಪೊಸವಾಸಿಗ, ಪೊಸಬಾಸಿಗ** (ನಾ). ನಳನಳಿಸುತ್ತಿರುವ ಹೂಮಾಲೆ.– ಸರ ; ಬಾಡಿರದ ಹೂವಿನ ದಂಡೆ : ಸುರಕುಸುಮದ ಪೊಸವಾಸಿಗ ಮೆರದುಂ ಕರತಳದೊಳೆಸೆದು ತನ್ನಯ ತೋಳೊಳೆ ದೊರೆಯೆನೆ ಬಂದತ್ತು ಸೊಪೋಂಬರಕ್ಕೆ ಬರ್ಪಂತೆ ದೇವಗಣಿಕಾನಿಕರಂ (ಅಂಕ್ಷಿ. ೦೦-೨೦) ; ಪೊಸ ವಾಸಿಗವಂಗಜಚಕ್ರವರ್ತಿಗಂದೆತ್ತಿದ ವಿಜಯಕೇತನಮನೊತ್ತರಿಸುತ್ತಿರೆ ಚಲ್ಲ ವಾಡಿ ಪೂವೆತ್ತುವ ಮಾಲೆಗಾರ್ತಿಯರನಂದರಿಕೇಸರಿ ನಿಂದು ನೋಡಿದಂ (ಶಂಶಕಾ. ೯-೬೦) ; ಪೊಗಟ್ಟೆಕೆ ಪಾಣೆ ನಾಣಿನಿಸಗಲೆ ನಯಂ ಬೀಱಿ ದಿಟ್ಟ ನೆಯ್ದಿಲ ಪೊಸವಾಸಿಗದೊಳೆನೆಯೆನೆ ಕುಮಾರನ ಪೆಗಲೊಳ್ ನೆಲೆ ನೆರೆಯ ಮಾಲೆ ಮೂಡಿದ ತೆಱದಿಂ (ಹಾಂಶಿಕ್ಷಿ. ೩-೦೩೬). **ಪೊಸಬಾಸಿಗ :** ಕಟ್ಟಿಯ ಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಲ್ಲದೆ ಬಾಡ ಪೋಗದೇ (ಅಶಂಕ್ಷಿ. ೦-೯೩) ; ಪೊಸಬಾಸಿಗವಂ ಬಿಸುಡುತೆ ಮಿಸುನಿಯ ಭೃಂಗಾರಿಗಳ ಘಟಂಗಳನೊಡೆವುತ್ಸವಸದ ಕರ್ಮವಂ ತಾಪಸನಾರುಮುಮುಂ ಸಿಂದೆ ಮಾಡುತಿರಲಂತಾಗಳ್ (ಶ್ರೀಕೃಷ್ಣ. ೨-೬೩). [ಪೊಸ + ಬಾಸಿಗ]

**ಪೊಸವಾಳೆ** (ನಾ). ಎಳೆಯದಾದ ಬಾಳೆ: ಪಳಗಪ್ಪುರಮನನೀರ್ ಪೊಸವಾಳೆಯ ಸುಳಿ ಕಮ್ಮಿದುವಾದಲರೆಳೆಯಸುಗೆಯ ತಳಿರ್ . . . ಬಳಿರ್ವಣ್ಣನ ಬಾವನ್ನದಿನಾಳಿಯರೆಳಸಿ ಕರಂ ಸತ್ಕರಿಸಲು (ಜಹುಶಾ. ೯-೪೦). [ಪೊಸ + ಬಾಳೆ₁ (<ಬಾಟ³) ]

**ಪೊಸವಿಲ್** (ನಾ). ಹೊಳೆಯುವ ಬಿಲ್ಲು : ಇಸಲೊಡರಿಸುವಿಂಗೋಲನ ಮಿಸುಗುವ ಪೊಸವಿಲ್ಲ ಜೇವೊಡೆಯ ದನಿಯವೊಲೆಣ್ದೆಸೆಯೊಳ್ ನೇವುರದುಲಿ ಪಸರಿಸೆ ಮೆಲ್ಲನೆ ಚೆಲ್ಲಗಾರ್ತಿಯರ್ ನಡೆತಂದರ್ (ಕ್ಷ್ಮಾ. ೯೬) ; ಪೊಸವಿಲ್ಲಂ ತೋಳ್ಪಲದಿಂ ಪಸರಿಪುದಾಳಲ್ಲ ಪತ್ತಿ ಬಳಸುತೆ ಬೆನ್ನೊಳ್ ಮಿಸುಗುವ ಸಿಂಪುಗಳಂ ತಾಳ್ದಿಸೆವುದು ಪುಳುವಲ್ಲ ತೀರದು ಪೇಳ್ ಲಲಿತಾಂಗೀ (ಶ್ರೀಕೃಷ್ಣ. ೨೯-೦೭೩). [ಪೊಸ + ಬಿಲ್₁]

**ಪೊಸವಿಸಿಲ್, ಪೊಸಬಿಸಿಲ್** (ನಾ). ಎಳೆಯ ಬಿಸಿಲು ; ಹೊಂಬಿಸಿಲು : ತೆಕ್ಕನೆ ತೀವಿದ ತಮಾಲತರುಗಳುಮಂ ಪೊಸವಿಸಿಲ ಪೊಳೆಪಿನಿಂ ನುಣ್ಣ ನುಜ್ಜ್ವಳಿಪ ರನ್ನದೆಳವೆಳಗಿನ ಬಳಗದಿಂ ಬಣ್ಣಿಸಿ (ಕಾಶಂಕು. ೩೩೬): ಪೊಸ ವಿಸಿಲೊಳ್ ಮುಗುಳ್ಗಳ್ ಸಡಿಲ್ದಿರ್ಪಂತೆ . . . ಬೆಳಪ್ಪನೀಗೆ ಪರಂಗಳು (ಕಾಕ್ಷ್ಮಕ. ೯೦೬). **ಪೊಸಬಿಸಿಲ್ :** ಪೊಸಬಿಸಿಲುಮ ಪೆಱದೆಗೆದಿರೆ ಕುಸುಮಸಂಜೆಯು ಮುಡುಸಮೂಹಮುಂ ಮಿಸುಪವೊಲೇನೆಸೆದುದೊ ಪವಳಂ ಮುಕ್ತಾವಿಸರಂ ಜಾಂಬವಜಳಂ ಪೆಡಂಮೆಟ್ಟಲೊಡಂ (ಶಶಕಕ. ೬-೦೦೯). [ಪೊಸ+ಬಿಸಿಲ್]

**ಪೊಸವುಟ್ಟಿ** (ನಾ). ಹೊಸದಾಗಿ ರಸ ತುಂಬಿದ ಜೇನುಹುಟ್ಟು : ಮುಸುಱಿತು ಕೋಂಟೆಯುಂ ಮಸಗಿ ಜೇಂಬುಟುಗಳ್ ಪೊಸವುಟ್ಟಿಯಂತೆ (ಜಶಂ. ೨-೦೦೬). [ಪೊಸ + ಪುಟ್ಟಿ₃]

**ಪೊಸವುಣ್** (ನಾ). ಆಗತಾನೆ ಉಂಟಾದ ಗಾಯ : ಹಸಿಯಾಗಿರುವ ಗಾಯ : ಇಱಿ ಕಿಱಿವನೊಡಱ ಕೈರಂದಱ ಮುಱಿ ನಿಟ್ಟೆಲ್ವನಿದು ನೆಱ[ನೆ]ಡೆಗಳ್ ಬಾಯ್ದೆಱೆಯೆ ಪೊಸವುಣ್ಗಳೊಳ್ ಪೊಯಲ್ ಮುಱುಗುವಿನಂ ಲೋಹಮಾರಿಯುಂ ಮುಱುಗುವಿನಂ (ಚಕ್ಷ್ಮಾ. ೦೨೬-೩) ; ಹರಿ ಶಸ್ತ್ರ [ಹತಿಯಿಂ]ದಪ್ಪಾವ ಪೊಸವುಣ್ಣೆತಂಗೆ ಮೆಯ್ಯೊಳ್ ನವಾಭರಣ ಶೋಭಿಸುವಂತೆ ಶೋಭಿಸುವುದು (ಕಾಂಶಕ್ಷಿ. ೯-೬೯). [ಪೊಸ + ಪುಣ್]

**ಪೊಸವುರ, ಹೊಸಪುರ** (ನಾ). ಒಂದು ಊರಿನ ಹೆಸರು : ಶ್ರೀಮತುಷಾ ಮಹಾರಾಜರ್ ಪ್ರೀತಮಿರಾಜ್ಯಂಗೆಯೆ ಲೋಕಗಾಳ್ಪೊಸವುರಂ ಬ್ರಮ್ಮದೆಂ ಕೊಟ್ಟು (ಕ್ಷುಕಾ. ೦೯೭೩. ೦೦-೩; ಹು. 788). **ಹೊಸಪುರ :** ಈ ಕಲ್ಲಿಗೆ ಬಡಗಲು ಹೊಸಪುರಕ್ಕೆ ವಾಯವ್ಯಮೂಲೆ ಬಸವನ ಕಿಟ್ಟನ ಹೊಲದಲ್ಲಿ ನೆಟ್ಟ ಕಲ್ಲು ೧ (ಎಕ. IV (R). ಹಾಂಶಕ. ೯೯-೬೯೦; 1722). [ಪೊಸ + ಪುರ₁]

**ಪೊಸವುಲ್, ಪೊಸಪುಲ್** (ನಾ). ನಳನಳಿಸುವ ಹುಲ್ಲು ; ಎಳೆಯ ಹುಲ್ಲು : ಪಳಿಗೊಂದೆ ಬಳ್ದ ಪೊಸವುಲ್ಗಳ ಪೊದಱೊಳ್ನನೆತ್ತುವವರಿಲ್ಲದೆ ಮೇಣ್ಪಳಲುತ್ತಿರ್ದಪುದು (ಕ್ಷಕಂ. ೦೦-೭). **ಪೊಸಪುಲ್ :** ಪೊಸ ಪುಲ್ಲೊಳ್ ಕಿಚ್ಚನಿಟ್ಟೊಡಿದಿದೊಡಱಿದಱಿ ಕೂರ್ಪಾಗ್ರಮಂ ಪತ್ತೆ . . . ನಂದಿಸಲೇತಂ ಪಾಂಥನುದಾಜದೆ ನಡುಮುಡುಮಂ ಪೋಗಿ ಬರ್ದ್ಕಿಲಿಂ ಕಂಪಿಸುತಿರ್ದಂ (ಶಃಕಾಕ. ೯-೨೦). [ಪೊಸ + ಪುಲ್]

**ಪೊಸವೂ, ಪೊಸಪೂ, ಹೊಸಹೂ** (ನಾ). ಬಾಡದೆ ಇರುವ ಹೂವು ; ನಳನಳಿಸುತ್ತಿರುವ ಹೂವು: ಜಲಜಲನೊ[ಟ್ಟು]ತಿರ್ಪ ಪರಿಕಾಲ್ ಪರಿಕಾಲೊಳಳರ್ಕೆಗೊಂಡ ನೆಯ್ದಿಲ ಪೊಸವೂ (ಶಂಶಕಾ. ೦-೩೨) ; ತನಗನು ರೂಪವೆಂಬಿನೆಗವೊರ್ವ ಕುಮಾರತಪಸ್ವಿ ದೇವತಾರ್ಚನೆಗೆ ಪನಕ್ಕೆ ಬಂದು ಪೊಸವೂಗಳನರ್ತಿಯೊಳಾಯ್ದು ಕೊಯ್ದು ಬೆನ್ನನೆ ಬರಲ್ (ಕಾಶಂಕ್ಷು. ೬೯೦). **ಪೊಸಪೂ :** ಪೊಸಪೂಪುಬ್ಬಿನಿಯೊಂದಱಿಳ್ ಸೊಗಯಿಸುಕುಂ (ಅಂಕ್ಷಿ. ೭ ೫೯). **ಹೊಸಹೂ :** ಸಿರಿಮುಡಿಗೆ ಹೊಸಹೂಗಳಂ ತಂದು ಸೂಡುತುಂ (ಶಂಶಕ. ೦-೩೬). [ ಪೊಸ + ಪೂ₂ ]

**ಪೊಸವೂರ್, ಹೊಸವೂರು, ಹೊಸೂರು** (ನಾ). ಒಂದು ಊರಿನ ಹೆಸರು : ಇಂತಿದಕ್ಕೆ ಕಾಕಂಬಾಟ ಕಂಭಯ್ಯನುಂ ಆಸಾಗೊರ ಕನ್ನನುಂ ಪೊಸವೂರ ಬೇದಮ್ಮನುಂ . . . ಸಾಕ್ಷಿ (ಎಕ. XI. ಚಿತ್ರದು. ೬೯-೨೭; 968); ಆಯ × ಪೊಸವೂರ ತುಱುವಂ ಮಗುಟ್ಟು × × × ಐದ

ಕೊಳ್ಳಿಯಾ[ಣ್ಣ] ಸತ್ತು ಸುರಗತಿಗೆ ಸನ್ದಂ (ಎಕ. III (R). ಗುಂಡ್ಲುಪೇ. ೩೦-೬ ; ೧೦೩೪ಯ ೩೪). **ಹೊಸವೂರು :** ಹೊಸ[ವೂರು] ಆಲಗಿಕೊಂಡನ ಹಳ್ಳಿ . . . ಮುಂತಾಗಿ × × ವಱ ಚತುಸ್ಸೀಮಾಸಮನ್ವಿತವಹ ಕಾಲು ವಳಿಗಳು ಸಹಿತವಾಗಿ (ಎಕ. IV (R). ಕೊಳ್ಳೇಗಾ. ೩೦-೩೬ ; 1321). **ಹೊಸೂರು :** ಪುನರ್ವಸುನಕ್ಷತ್ರದಲು ಹೊಸೂರಾದ ಯಳಚಲ ಹೊದ ವಿಚಲು ಬೈರಮಂಗಲದ ಅಶೇಷ ಮಹಾಜನಂಗಳು . . . ಬಿಟ್ಟು ಕೊಡಂಗೆ (ಎಕ.IV (R). ಎಳಂದೂ. ೦೩-೬ ; 1283); ಬೊಮ್ಮಿದೇವವೊಡೆಯಂಗೆ ಹಱಿಹ ಹೊಸೂರ ನಾಡೊಳಗನ ಮಾಱವಕಗೊಂಕನು ಬಲಾಳಪುರವಾಗಿ ಆಚಂದ್ರಾರ್ಕಉಊ ಸರ್ವಮಾನ್ಯವಾಗಿ ಧಾರಾಪೂರ್ವಕವಾಗಿ ಕೊಟ್ಟೆಊ (ಎಕ. X. ಗೌರಿಬಿ. ೦೬-೦೮; 1383); ಊರಿನ ಹೆಸರು 'ಹೊಸೂರು' ಆದರೂ ಜನರಲ್ಲಿ ಮಾತ್ರ ಹಳೆಯ ಸಂಪ್ರದಾಯದ ಕೊಳೆ ನುಱಿಪಾಂತವಾಗಿ ತುಂಬಿ ಕೊಂಡಿತ್ತು (ಹೊಸೂಶ. ೦೬). [ಪೊಸ + ಊರ್]

**ಪೊಸವೆಣ್**, ಹೊಸವೆಣ್ (ನಾ). ನವಯುವತಿ : ಕಡುಚೆಲುವೊಪ್ಪೆ ಸಾರ್ದ ಪೊಸವೆಣ್ಣದನಾರಯಿ ಮುನ್ನಮೇಂ ಕರಂದಿಡಿದೆನೊ ಮೇಣ್ ಕರುಬಿಡಿಯೆನೋ ಎನುತಂ ಮನದಲ್ಲಿ ನಿರ್ಣಯಂಬಡೆಯದೆ (ಶಾಕುಂತ. ೬೬-೦೦೪). **ಹೊಸವೆಣ್.**

**ಪೊಸವೆಂಡಿರ್**, **ಹೊಸವೆಂಡಿರ್** (ಬಹುವ) : ಶ್ರೀಮದೆಱೆಯಪ್ಪರಸನ್ ಸಮಸ್ತರಾಜ್ಯಂಗೆಯುತ್ತಮಿರೆ ಅವರ ಸಾಮನ್ತಂ ಶ್ರೀಮುತ್ತರ ಅತಿ ರಥಗಣ್ಡ ಪೊಸವೆಣ್ಡಿರಟ್ಟಿ ಬೀಸಿ ತಪ್ಪದೊನ್ . . . ಆಸನ್ದಿನಾಡನಾಳು ತಿರೆ (ಎಕ. XV. ಅರಸೀ. ೨೦೩-೯ ; ಸು. ೩೯೦); ಕಳಸಂ ಕನ್ನಡಿ ಗುಡಿ ಪಜ್ಜಳಿಸುವ ಮಾಂದಳಿರ ತೋರಣಂ ದೆಸೆದೆಸೆಯಂ ಬಳಸಿರೆ . . . ಪೊಱಮಟ್ಟರೊಸಗೆಯಿಂ ಪೊಸವೆಂಡಿರ್ (ಕಬ್ಬಿಗಾ. ೩೨೬) ; ಆಧುನಿಕಕವಿತೆಯೂ ಹಸು ಮಕ್ಕಳಂತಾಡುವದು. ಹೊಸವೆಂಡಿರಂತೆ ನಗುವುದು (ಸಾಹಿತಿ. ೯೬).

[ಪೊಸ + ಪೆಣ್]

**ಪೊಸವೆಸರ್** (ನಾ). ಬೇರೆಯ ಹೆಸರು : ಪೊಸ – ಪೆಸರ್, ಪೊಸವೆಸರ್ ; ಎಳ್–ಬಿದಿರ್, ಎಳೆವಿದಿರ್ (ಶಬ್ದಮಣಿ. ೩೦ ಸೂತ್ರ ವೃತ್ತಿ). [ಪೊಸ + ಪೆಸರ್]

**ಪೊಸವೆಸಲ್** (ನಾ). ಮೊದಲನೆಯ ಹೆರಿಗೆ ; ಪ್ರಥಮಪ್ರಸೂತಿ : ಪೊಸ ಪೆಸಱಾದ ಪೆಣ್ಗಳ ಜನ್ಮನದ ಬಿಗುರ್ಪಿಟ್ಟದು ತಿಳಿವಂತೆ ತೊಱೆವೆಂಡಿರ್ಗರ್ಭಿನಬ್ಬರಮಡಂಗಿ ತಿಳಿದುದು (ಅನಂತನಾಥ. ೯೬-೩). [ಪೊಸ + ಪೆಸಲ್]

**ಪೊಸವೆಳ್ದಿಂಗಳ್** (ನಾ). ಚೆಲುವಾದ ಬೆಳುದಿಂಗಳು ; ಮನೋಹರವಾದ ಬೆಳುದಿಂಗಳು : ಪೊಸವೆಳ್ದಿಂಗಳ್ ದೆಸೆದೆಸೆಗೆಸೆದುದು ಕುಮುದವನಮಾಲದರ್ಪದಿಂ ಬಂತಿಗದೇನೆಸೆದುದೊ ಕಟಾಕ್ಷಮಾಲಾಪ್ರಸರಂ ಭ್ರೂಲಾಸ್ಯಸೌಂದರಂ ನರ್ತಕಿಯಾ (ಆದಿಪು. ೯-೩೯); ಪೊಸವೆಳ್ದಿಂಗಳ್ ಪಗಲೊಳಮೆಸೆವಂತಿರೆ ದಂತ ಕಾಂತಿಗಳ್ ಎಭು ನುಡಿದಂ (ಶಾಂತಿಪು. ೯-೦೩೬); ಪೊಸವೆಳ್ದಿಂಗಳ್ಸುಸುಕಿದ ಮಿಸುಪ ಕುಳಾದ್ರಿಗಳ ತೆಱದಿ ಪೆಗ್ಗಳಿನ ಭವನಪ್ರಸರದೊಳತಿಲೀಲೆಗಳಿಂ ದೆಸೆದಿರ್ದುವು ಸಪ್ರಮದರ ಭದ್ರಗಜಂಗಳ್ (ತ್ರಿಷಷ್ಟಿ. ೦೬-೩೯).

[ಪೊಸ + ಬೆಳ್ದಿಂಗಳ್]

**ಪೊಸವೆಳ್ಪು** (ನಾ). ಅತಿಶಯವಾದ ಬಿಳುಪು : ಪಸರಿಸಿದ ಪಯಃಪೂರದ ಪೊಸವೆಳ್ಪು ನಿಡಾಂಗರುಚಿಯ ಪೊಱಪೊಱಗೆ ಪೊದಟ್ದಿಸೆದಿರೆ ದೆಳ್ಮುಗಿಲಿಂದಂ ಮುಸುಕಿದ ಬಾಲಾರ್ಕಬಿಂಬವಿವರ್ತಿರ್ದಂ (ಆದಿಪು. ೬-೯೨); ಒಳಗೆಸೆವ ವೃಷಭಸಂಗದ ಬೆಳರ್ವಣ್ಣಂ ಪೊಗೆ ತೀವಿತೆನೆ ಪೊಸವೆಳ್ಪುಜ್ಜಳಿಸಿದುದು ತನು ವಿನೊಳ್ಮೋಮಳಿಗೆ (ವೃಷಭ ೬-೩). [ಪೊಸ + ಬೆಳ್ಪು$_1$]

**ಪೊಸವೇಟ**, ಪೊಸಬೇಟ. ಹೊಸಬೇಟ (ನಾ). ಮೊದಲ ಪ್ರಣಯ: ಪೊಸವೇಟಮೆಂಬ ಚಿಪ್ಪಿಡಿದೆಳಮಾಮರಂ ಪುಳಕಮೆಂಬ ನವಾಂಕುರದಿಂ ವಿಳಾಸಮಂ ಪಡೆದು . . . ಸುಸಿಲೆಂಬ ಬಸಂತದೊಳೇಂ ಪೊಮಟ್ಟುವೊ (ಆದಿಪು ೦೨-೨೮) ; ಪಲ್ಲವಾಧರ ದಾತ (ಕುಚ ಪೊಗರಾಗುವ) ಧಮ್ಮಿಲ್ಲದೆ ಮೆಱೆವ ಹೆಣ್ಣುಗಳು ಪುಲ್ಲದಳಾಕ್ಷಗೆ ಪೊಸವೇಟ ಪುಟ್ಟುವಂತೆಲ್ಲರಿಬ್ಬಗೆಯಾದರಾಗ (ಮೋಹನ. ೦೯-೩೩); ಪೊಂಗುವ ಪೊಸವೇಟದ ಗೋಪಾಂಗನೆ ತನ್ನಳವುಗಿಡಿಸಿ ಪೊಮ್ಮುಱಿದುಸಿದಾ ಮಂಗಳಮೂರ್ತಿಯ ಸಿಂಗರದಿಂಗಿತಮಂ ಕೆಳದಿಗಿಂತು ಬಗೆವುಗೆ ಪೇಟ್ದಳ್ (ರುಕ್ಮಗೋ. ೦೦-೨೯). **ಪೊಸಬೇಟ :** ಪಾತ್ರ ಮೊಂದೆಡೆಯೊಳೊರ್ವಳ್ ತನ್ನನುಱಿದ ಪೊಸಬೇಟದಾಣ್ಮನನೇಗೆಯ್ದುಂ ಪೋಗಲೀಯದೆ ತನ್ನೀವನೆ ತೋಱಿ (ಪಂಚತಂ. ೯-೯೬ ಪ). **ಹೊಸಬೇಟ :** ತಲೆಯಲಿ ಏರಿದು ಕೊಂದಲುಗಳೌಷಧಿಗಿಲ್ಲ ಸಲೆ ಕುಚಯುಗಕ್ಕಿಂಗಿದವು ಹೊಲೆಗೆಟ್ಟು ಹೊಸಬೇಟಗಯ್ದು ಪಾತಕಿ ಮೊಗ್ಗಮೊಲೆವೆಂಗಳಿಗೆ ಪೇಳ್ದಪರೇ (ಮೋಹನ. ೦೯-೬೮). [ ಪೊಸ + ಬೇಟ (< ಬೇಂಟ) ]

**ಪೊಸವೇಟಕಾರ್ತಿ** (ನಾ). ಯುವಪ್ರೇಮಿಯಾದವಳು: ಬೆಳಗಾಯ್ತೆಂಬೊಂದಱಲಗ್ಗಳಿಸಲ್ ಪೊಸವೇಟಕಾರ್ತಿಯರ ಬಿಸುಸುಯ್ಲ್ಗಳ್ ಬೆಳಗಿದು ದೆಂಬಿನಮಾಗಳದೆಂ ಕೊರಗಿದುದೊ ಕುಮುದಿನೀವಿಸ್ತಾರಂ (ಕಾದಂಬ. ೦೬೩); ಪೊಸವೇಟಕಾರ್ತಿಯರ್ತಮ್ಮ ಕನ್ನೆವೇಟಮವನೊಳಾಗದೆ ಕೆಟ್ಟೆವೆಂದು ಕಟ್ಟುಗೆಡೆಯೆಯುಂ (ಅರ್ಜುನ. ೩-೨ ಪ).

[ ಪೊಸವೇಟಕಾಱ + – ತಿ$_1$ (< —ಇತ್ತಿ) ]

**ಪೊಸವೇಟಕಾಱ** (ನಾ). ಯುವಪ್ರೇಮಿಯಾದವನು: ಪಾತ್ರವೊಂದೆಡೆಯೊಳಂದೆ ಪೊಸಯಿಸಿದ ಪೊಸವೇಟಕಾಱರಪ್ಪ ಕಡುನಲ್ಲರಿರ್ವರಿರೆ (ಪಂಚತ. ೦೨-೨೬ ಪ). [ಪೊಸವೇಟ + –ಕಾಱ]

**ಪೊಸವೊಗರ್**, ಪೊಸವೊಗರು, ಹೊಸಹೊಗರು (ನಾ). ಉಜ್ವಲವಾದ ಕಾಂತಿ: ನೇಸರೇಂ ನಗುನಗುತ ನಲ್ಮೆಗಳ ತೊಡವೆನಲ್ ಸೂಸುವಂ ಕದಿರ್ಗಳಂ ಕಳ್ತಲೆಯ ಸುಡುವಂ ಪೊಸವೊಗರ್ ಕೋದಿರ್ದ ಪೊಳ್ತೆಳೆಯನೆಳೆ ಬಿಡುವ ಪೊಸಮು ನೆಲದೊಳ್ಪುಗಳ ಬಿಳ್ವೆಳ್ಪ ತೊಡೆವಂ (ಕಾವ್ಯಾರ. ೬೦-೦೨೯). **ಪೊಸವೊಗರು:** ಹಸುರು ಹೊಲದುಸಿರಾಗಿ ಬೀಸುತಿರೆ ತಂಗಾಳಿ ಸುಸಿಲು ಮೈವಡೆಯುತಿದೆ ಪೊಸವೊಗರ ಪೆಂಪು (ಕಾವ್ಯಾರ. ೬೬-೦೦೬). **ಹೊಸಹೊಗರು :** ಹೊಸಹೊಗರ ಜವ್ವನ ಸಿರಿಯ ಜೋತಣೆ ಜನಮನವನಾವರಿಸಿದುದು ನಿಪ್ಪಸರದಲಿ ಪಾಂಚಾಲನಂದನೆಯ (ಕುಮಾರ. ೦೩-೨೬) ; ಬಂಬಲುಗುರುಳ ಹೊಸಹೊಗರ ಕಲಿತ ಮದದುಬ್ಬುಗಳ . . . ಪುಳಿನಜಘನಸ್ಥಳದ ದಾನವಸತಿಯರಿರ್ವರದೊಂದು ತಾಣದಲಿ (ಕೃಷ್ಣ. ೩-೨-೬೯).

[ಪೊಸ + ಪೊಗರ್]

**ಪೊಸವೊಗರು** ' ಪೊಸವೊಗರ್ ' ನೋ.

**ಪೊಸವೊನ್**, ಪೊಸಪೊನ್, ಹೊಸಹೊನ್ನು (ನಾ). ೧. ಹೊಳೆಯುವ ಚಿನ್ನದ ನಾಣ್ಯ,— ವರಹ : ಇನ್ನಿವಕೆ ಬಡ್ಡಿಯೊಳೇತವುನೆನ್ದು ಪತ್ತುಗದ್ದಿನ ಪೊಸವೊನ್ನನಿತ್ತನು (ಸೌಇಇ. XX. ೩೩-೨೯; 1082). **ಪೊಸವೊನ್ :** ೨. ಹೊಳೆಯುವ ಚಿನ್ನ,— ಬಂಗಾರ : ಪೊಸವೊನ್ನ ವೇದಿ ನಾಲ್ಕುಂ ದೆಸೆಗಳೊಳಂ ಬೆಳ್ಳಿವೆಸದ ಬಾಗಿಲ್ವಾಡಂ ಪಸರಿಸಿದ ಸಕಳಮಂಗಳವಿಸರಂ ನಿಧಿಸಮಿತಿ ಯಕ್ಷರಕ್ಷಕರೆಸೆಗುಂ (ಚಂದ್ರಪ್ರ. ೧೩-೩೩) ; ಲಾವಣ್ಯಾಮೃತ ರಸದೊಳ್ ತೀವಿದ ಪೊಸಪೊನ್ನ ಮಿಸುಪ ಶುಕ್ತಿಕೆಗಳೆನಲ್ ದೇವಿಯ ತಾಂಬೂಲಚ್ಛಾಯಾವಿಷ್ಕೃತಮಾದ ತೆಳ್ಗದಂಪುಗಳೆಸೆಗುಂ (ಪುಷ್ಪದಂ. ೩-೯೮). **ಹೊಸಹೊನ್ನು :** ೨. ಹೊಗರಾಂತ ಹೊಸಹೊನ್ನ ರಸ ಕಾಯ್ದಿರೆ ಕಂಡು ಸೆಗಣಿಯೊಳೆಱೆವಂತೆ ಪೊಱದಿ ಮೃಗಮದಗಂಧಿಯರ್ ಗೋಮಯದಿಂ ಮುದ್ದುಮಾಗನ ದೇಹವ ಸಾರ್ಚಿದರು (ಮೋಹನ. ೦೬-೨೦) ; ಕಿವಿಯೊಳೊಪ್ಪುವ ನಾಗರ ಪಣೆ ಹೊಸಹೊನ್ನ ಸವಡಿದಾರದ ಕೊರಳುಗಳ ನವರತ್ನಭೂಷಣದಾಳ್ಗಳ ಮೇಳದೆ ಭುವನೇಶ್ವರನೈತಂದ (ಕಂಪಿಲ. ೦೨-೩೩). [ಪೊಸ + ಪೊನ್]

**ಪೊಸವೊನಲ್**, ಪೊಸಪೊನಲ್ (ನಾ). (ಕಾಗ್ರ್ರಾಲದಲ್ಲಿ) ಹೊಸದಾಗಿ ಉಂಟಾದ ಪ್ರವಾಹ, –ಹೊಳೆ : ಮಡದಿ ನಡೆದಳ್ ಮನಃಪ್ರಿಯ

ನೆಡುವರಮವರವರ ನಯನರುಚಿ ತನುರುಚಿಯೊಳ್ ತೊಡರ್ದು ಬರೆ ಪೊಸಪೊನಲ್ಗಳ ಗಡಣದಿನಪ್ಪತಿಯನೆಯ್ದುವಮಾರ್ಗವೆಗೆವೋಲ್ (ಪಂಪಭಾ. ೯-೯೩). **ಪೊಸಪೊನಲ್:** ಪೊಸಪೊನಲೊತ್ತಿ ಬಂದು ಪುಗೆ ಪುತ್ರದ ದಾಯೊಳವಲ್ಲಿ ಪಾವುಗಳ್ ಬಸವಂಟಿದು . . . ಪೊಱಮಟ್ಟು ಬಂದು ಸಲೆ . . . ಪೆಡೆಯೆತ್ತಿ ದಲಾಡುತುವಿರ್ದವರ್ಧಿಯಿಂ (ಚಾರಿತ್ರ. ೦೨-೫೬). [ಪೊಸ + ಪೊನಲ್]

**ಪೊಸಪೋರ್ತ** (ನಾ). ಹೊಸಬಗೆಯ ಹೋರಾಟ,— ಕಾಳಗ: ಪೊಸವಳಿಕಿನ ಸೆಲೆಯೊಳ್ ನೆಟಲೆಸೆಯೆ ಮೊಗಂಬೊಕ್ಕು ಪಾಯ್ದು ಕರಿಯುಂ ಹರಿಯುಂ ಪೊಸಪೋರ್ತಮನಱಿಯಮೆ ಪುಟ್ಟಿಸೆ ನೆಟಲೊಳ್ ಪೋರ್ದರ್ ಸೇದೆಗಿಡುವುವು ನಗದೊಳ್ (ಚಾಂತಿಪು. ೨-೧೦೪); ನೀಪಕುಲನಾಗಿ ನೃಪ ತಿಲಕೋಪಮನೀತನನೆ ಸಾರ್ದು ಗುಣಗಣವುಂಟಿದತ್ತು ಪೊಸಪೋರ್ತ ಮನಘಕುಲಲೋಪಕನಂ ಪೊರ್ದಿ ಪಗೆಯುನಟಿದಂತೆ ಜಗಂ (ಚಾಂತಿಪು. ೩-೧೨೬). [ಪೊಸ + ಪೋರ್ತ]

**ಪೊಸಸಂಜೆ** (ನಾ). ಮನೋಹರವಾದ ಸಾಯಂಕಾಲ: ಪೊಸಸಂಜೆ ಮುಗಿಲ ತುಱುಗಳ್ ಮುಸುಕಿದುದು ಪಯೋಧಿಯೆಲ್ಲಮನೇಂ ತಸದೇಮೆಸೆದುದು ಪೊಗೆವುದ್ದೆಸದೊಳೆ ತಳತಳಿಸಿ ಪೊನ್ನ ಪೊಸಕಳಸಂಗಳ್ (ಅಂಕಪು. ೭-೬೩); ಪೊಸಸಂಜೆಗೆಂಪಿನೆಡೆಯೊಳ್ ನಸುತೋರ್ಪ ಶಶಾಂಕಲೇಖೆ ಯೆಂದೆನೆಗಂ ರಂಜಿಸಿದಳರುಣಾಂಬರವನುಟ್ಟಸಿತಾಂಬುಜವಕ್ತ್ರನೇತ್ರ (ಅಧ್ಯಾಪ. ೩-೩೨). [ಪೊಸ + ಸಂಜೆ]

**ಪೊಸಸಂಪಗೆ** (ನಾ). ಆಗತಾನೆ ಅರಳಿರುವ ಸಂಪಿಗೆ; ನಳನಳಿಸುತ್ತಿರುವ ಸಂಪಿಗೆ: ಸುರಗಿ ಪೊರ್ಲೆ ಪೊಸಸಂಪಗೆಯಾ ಅರಲಿಂ ಭಕ್ತಿಯಿನಾತಂ ಪರಮಜಿನೇಶ್ವರನ ಪಾದಮಂ ಪೂಜಿಸಿದಂ (ಧರ್ಮಾಮೃ. ೩-೫೭): ಪೊಗವೆತ್ತಿ ನಿಳ್ಕಿ ಪೊಸಸಂಪಗೆಗೊಂಬಂ ಪಿಡಿದು ಪೂಗಳಂ ತಿಱಿವಾ ಪೆಣ್ಣಾಗುಗೊಂಡಳ್ಪಡೆ ಬಲ್ಪಿಗೆ ಪಡಿಮಗಜನ ಪೊಗಿನಿಂಗೋಲ್ವಿಲ್ಲೋಲ್ (ಅಧ್ಯಾಪ. ೯-೬೦). [ಪೊಸ + ಸಂಪಗೆ]

**ಪೊಸಸಕ್ಕರೆ, ಹೊಸಸಕ್ಕರೆ** (ನಾ). ಆಗತಾನೆ ತಯಾರಿಸಿದ ಸಕ್ಕರೆ; ತಾಜಾ ಸಕ್ಕರೆ: ಪೊಸಸಕ್ಕರೆ, ಮನಸರಕು (ಕರ್ಣಾಟಸ. ೯೯ ಕ್ರಿಯೋ); ಪೊಸಸಕ್ಕ[ಪಾಠಾಂ. ರ್ಕ]ರೆಯಂ ನವಮಧುರಸಮಂ ಸಱುನೆಯ್ಯನೆಸೆವ ಕದಳೀಫಲಮಂ ರಸನೆಯೆಳಸಿದುದನೆನ್ನೊಳ್ಪೆಸಸೀಗಳೆ ನಿನಗೆ ತಂದಮೆಂ ಶಶಿವಪೋಲೀ (ಶೃಚಂ. ೯-೭೬). **ಹೊಸಸಕ್ಕರೆ:** ಕಾಯ್ದಾಱಿದೆಮ್ಮೆವಾಲೊಳಗೆ ಮಾಱಿದಿರಿ ಹೊಸಸಕ್ಕ[ಪಾಠಾಂ. ರ್ಕ]ರೆಯು ಹಾಕಿ ಪರಿಮಳಗಳಂ ಪೊರೆಯಿಕ್ಕಿದದುವೆ ತುಪ್ಪದ ಪಾಯಸಂ (ಸೂಪಶಾ. ೩-೦೨). [ಪೊಸ + ಸಕ್ಕರೆ]

**ಪೊಸಸರ** (ನಾ). ಹೊಸ ರಾಗ: ಪೊಸಸರದಲ್ಲಿ ಪಾಡು ಬಿರಿದೀವನ ಕೇಳಿಯೊಳೋಟದು ಸದ್ವ್ರತಂ ವಿಸುಗಿರೆ ಕಾಮಧರ್ಮಗುಣವೃತ್ತಿಯನಾಳ್ದಿರು (ಶೃಚಂ. ೯-೯). [ಪೊಸ + ಸರ್ರ]

**ಪೊಸಸಿರಿ** (ನಾ). ೧. ಹೊಸತಾದ ಚೆಲುವು,—ಸೌಂದರ್ಯ: ಕಟ್ಟುಪ್ಪದ ಮನಾಂತು ವಿಸುವ ಕೊಸಗಿನ ಚೆಲ್ವಿಂ ಪುಟ್ಟಿಸಿದುದೊ ಪೊಸಸಿರಿಗೆ ಜನಿಪ್ಪನೆ ಪೂಗಳೆಯನಿರ್ಪ ನೆರೆಪಾಡದ ಪೋಲ್ (ಕಬ್ಬಿಗ. ೦೦೭). ೨. ಅಧಿಕವಾದ ಐಶ್ವರ್ಯ,—ಸಂಪತ್ತು: ಪುಸಿನುಡಿಯು ವಿಷ ವಿಪಾಕದ ಮಸದೆ ಮುಖರೋಗಮಾದವೋಲಿನಿತಾನುಂ ಬಸಮಲ್ಲದುಸಿರ್ವ ರೆಂದುಂ ಪೊಸಸಿರಿಯಿಂ ಪ್ರೇಮವೆತ್ತ ಮಾಯ್ದು ಮನುಷ್ಯರ್ (ಕಾವ್ಯಪು. ೫೬೨); ಅರರ ಸುಭದ್ರೆಯ ಕಣ್ಗಳ ಪೊಸಸಿರಿಯೆಯೆಂದವಳು ಚುಂಬಿಪಳು (ಶಶಿ. ೪೦-೧೩೪). [ಪೊಸ + ಸಿರಿ]

**ಪೊಸಸುಗ್ಗಿ** (ನಾ). ಮನೋಹರವಾದ ವಸಂತಕಾಲ: ಇಲ್ಲಿ ಪುಟ್ಟಿ ಪೋಗದು ಪೊಸಸುಗ್ಗಿ ಮೂಗುವಡದಿಲ್ಲಿಯು ಕೋಗಿಲೆ ಬಂದ ಮಾವು ಬೀಯದು ಕುಸುಮಾಸ್ತ್ರನಾಜ್ಞೆ ತವದೆಲ್ಲಿಯುಮಿಲ್ಲಿಯು ನಂದನಂಗಳೊಳ್ (ಕಂಚಕಾ. ೯-೨೦); ಅನಂಗನ ಬೇಂಟೆಯ ಬಿಂದದಂದದಿಂ ಬರೆ ಪೊಸಸುಗ್ಗಿ ಕೆಯ್ಗಟಿಯೆ ಕಣ್ಸೆದಿರ್ದವು ನಂದನಾಳಿಗಳ್ (ಶಾಂತಿಪು. ೬-೦೨೯); ಒಸಗೆಗಳ ಪ್ಪೆಮಟ್ಟಿ ಕಣ್ ಬಾಯ್ಗಳಿಂ ಕರೆವ ಪೊಸಸುಗ್ಗಿ ಕಾಲ್ಕಟ್ಟಿ ಸುಯಿಲಿಟ್ಟು ಕರೆಯೆ (ಶಾಂತೀಶ. ೦೨೨-೫೫೭). [ಪೊಸ + ಸುಗ್ಗಿ]

**ಪೊಸಸುಣ್ಣ, ಹೊಸಸುಣ್ಣ** (ನಾ). ಹಳೆಯದಲ್ಲದ ಸುಣ್ಣ: ಉಪ್ಪಿಲ್ಲ ದೆಂಗು ಸಾಸವೆ ತಪ್ಪಿಲ್ಲವೆ ಪುಣಸು ಸುಂಟಿ ಪೊಸಸುಣ್ಣಮಿವಂ ಚಪ್ಪರಿಸಿ ಬಿಡಿದು ಮೆಯ್ಯಂ ಸೊಪ್ಪಾಗಿರೆ ಮೋದಿ ಪುಸುವರ್ ನಿರ್ದಯಿಯುಂ (ರಸರತ್ನಾ. ೩-೬೧); ಪೊಸಸುಣ್ಣ ಸೂಡುಬಾಡಿರೆ ಬಸವಂಟಿದು ಬಟಲ್ದು ನೆಲು ಕಳವಳದಿಂ ಪೊಕ್ಕಿಸಿಪತ್ರಮನದ ಕೂರೆಲೆ ಬಸುಮದ ಕೊನೆ ಕೊಯ್ದು ಕೊಟಿದು ಕುಱುವಱುಯಪ್ಪರ್ (ಅಂಕಪು. ೯-೫೫). **ಹೊಸಸುಣ್ಣ:** ಹೊಸಸುಣ್ಣದುದಕದೊಳು ಮಾವಲದ ತನಿಪಣ್ಣ ಕುಸುಂಗಳನಿರುಳಿರಿಸಿ (ಸೂಪಶಾ. ೩-೯). [ಪೊಸ + ಸುಣ್ಣ]

**ಪೊಸಸುಸಿಲ್** (ನಾ). ನೂತನ ರತಿಕ್ರೀಡೆ: ಪಿಸುಗುವ ಪೊಸಪಸೆ ಯೊಳಸದಳಮೆಸೆಯ ಬಯಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳ್ ಬಸದಾಗಿಯುಂಮಸಿಯಳೆನಗಸವಸದೊಳೆ ಬೆಸೆದು ಪೋಗಿ (ಅಂಕಪು. ೯-೦೩ ಪ); ಪೊಸಸುಸಿಲೊಳಸಗೆ ರಮಣಂ ಪಿಸುಗುವ ನೆರೆಪೊಲೆಯೊಳೆಸೆವ ನುಣುಪತಿಯನದಂ ಮುಸುಕುದೆಱೆದೆಱಿ ನೋಡುತ್ತ ಸವಸದಿಂ ದಾರಿದಪ್ಪುವರ್ಪೆಚೆರಿಯರ್ (ರಾಜಶೇ. ೦-೦೨೯); ಇಂತಿರೆ ಪೊಸಸುಸಿಲೊಳ್ ತಮ್ಮೊಂದು ಗೆಯ್ತಕ್ಕೆ ಬಸಪಟಿದು ಮೆಯ್ಯೋಲ್ಪ ಜಪ್ಪನಿಗರಿರಮಂತಿರೆ ಬಿಱರಿರಪ್ಪುದುಂ (ಚಾಮತ್ಕ. ೦೫೭-೦೨). [ಪೊಸ + ಸುಸಿಲ್₁]

**ಪೊಸಾಲ್ ?** (?). (?): ಪಟ್ಟಿದೋನ್ ಪಟ್ಟಪತಾಪಾತಕಸಂಯುಕ್ತ ನಕ್ಕೆ ಪೊಸಾಲ್ಗೋಗೆ ವೃತ್ತಿ ಬ್ರಹ್ಮಕಾಮದು ಏಕಂಚಿತ್ತಿ ದೊಶಾಮೂಪಿರ ಕನ್ನಾಪುಲನ್ತರುಟಿದ ಪಸಲಾನ್ಗಿಡಿಸಿದೋರ್ ದರಾ ದಾನ (ಎಕ. VI. ಶೃಂಗಸು. ೯೩-೬; ಸು. ೧೦೦೯). [?]

**ಪೊಸೆ₁, ಹೊಸೆ** (ಕ್ರಿ). ಪೊಸದು, ಪೊಸೆದು, ಹೊಸದು, ಹೊಸೆದು (ಭೂತಕೃ). ೧. (ಹಾಲು, ಮೊಸರು ಮೊದಲಾದುವನ್ನು) ಕಡೆ; ಮಥಿಸು: ಪೊಸೆದೊಡೆ ಪಾಲ್ಗಡಲಂ ಮಾಟ್ಟುಸುರರ್ ಪೊಸೆದಲ್ಲಿ ಕಾಳ ಕೂಟಂಕುರಮಂದಸದಳಪೊಗೆದಂತೊಗೆದಾವು ಬಸಿಱಿಂ ನೂಱೊಂದು ಪಿಂಡಮರಾಣಾಕೀರ್ಣಂ (ಕಂಚಕಾ. ೦-೦೫೦); ನೀರಂ ಪೊಸೆದುಂ ಬೆಣ್ಣೆಯನಾರಾನುಂ ಪಡೆವರೊಳರೆ (ಸಮುಕ. ೯-೦೨೯); ಕನೆಯು ತೆಗೆಯದೆ ಕಡೆವ ಕಳಲು ಗೋಳಕವಾಯ್ತು ಕನೆದೆಗೆದು ನೀರಿಡದೆ ಪೊ[ಪಾಠಾಂ. ಪಾ]ಸೆದುದೇ ಮಥಿತವೆಂದೆನಿಸಿತ್ತು (ಸೂಪಶಾ. ೨-೦೫). ೨. ಕಲಕು; ಕದಡು; ಅಲೋಡಿಸು: (೪). ೩. (ಹೊಟ್ಟೆಯನ್ನು) ಕಿವಿಚು; ಹಿಸುಕು: ಸಂತತಿಗೆ ಬಿರಿಯ ಮಕ್ಕಳ ನಾಂ ತಡೆಯದೆ ಪಡೆವನೆಂದೊಡೆನ್ನಿಂ ಮುನ್ನಂ ಕೊಂತಿಯೆ ಪಡೆದಳ್ ಗರ್ಭದ ಚಿಂತೆಯದಿನ್ನೇವುದೆಂದು ಬಸಿಱಂ ಪೊಸೆದಳ್ (ಕಂಚಕಾ. ೦-೧೨೯); ಬಿಸಿಲ ಕಡುಗಾಯ್ಪು ಭೋಂಕನೆ ಪಸರಿಸೆ ಬಿದಿರೊಡೆದು ಸುರಿವ ಬಿಸಿಮುತ್ತುಗಳು ಪೊಸನೀರ್ವನಿಗಳೆಪೆಂದುದೊಸೆದೀಂಬಲ್ ವಿಗಿಡುಕಿ ಸೋಗೆ ಪೊಸೆದುದು ಬಸಿಱಂ (ಚಾರಿತ್ರ. ೯-೬೫); ಪೊಸೆದಳೊಡಲಂ ಕೂಡೆಕೂಡೆ ಸುತಮೋಹವಿಂದಸಪಳಿದು . . . ಹಲುಬಿದಳಂಬುಜಾಕ್ಷಿ (ಕೃಷ್ಣಾ. ೨೦-೨೦). ೪. ತಿಕ್ಕು; ಉಜ್ಜು; ತೀಡು: ಕರತಳದಿಂ ಕಣ್ಣಂ ಪೊಸೆಯುತ್ತಮೆಟ್ಟಿ ತಂತಮ್ಮ ತಲೆವೆಸೆಯೊಳಿರ್ದ ಕರವಾಳು ಕೊಂಡು (ಗದಾಯು. ೯-೫೨ ಕ); ಜಮದಗ್ನಿಮುನಿ ಮಾನಿದು ಪಕ್ಕಿಗಳಂ ಕರತಳದೊಳ್ಪೊಸದು ಕೊಲಲುದ್ಯೋಗಿಸುಪುದುಂ (ಧರ್ಮಾಮೃ. ೨-೨೨೪); ಹಾ ಪುತ್ರಯನುತತ್ತಿಕೊಂಡು ಮುಂಡಾಡಿ ಪಣೆಗಾ

ವಣೆಯನೊಂದಿಸಿ ಪೊಸೆದು ಚೀರ್ದು ಬಹಳವ್ರಲಾಪದಿನಲ್ಲಂ (ಕೃಜಿಶಾ. ೦೪-೩೩). ೫. ಉಜ್ಜಿ ಬೆಂಕಿಯನ್ನು ಉತ್ಪತ್ತಿಮಾಡು.—ಉಂಟು ಮಾಡು : ಪೊಸೆವಗ್ನಿಯಿನುಗಿರ್ದಗಂಕುಸದಿಂದಂಜನದಿನಾ ಪ್ರಲೇಪದಿನಿದ ನಂಜಿಸಲಿಕ್ಕಿದ ಧೂಪದಿನಳ್ಕಿಸುವಾತಂ ಬೆನ್ನ ತಕ್ಕನಾತನ ನೃಪತೀ (ಶಾಂತಿಪು. ೩-೨೩). ೬. (ಹಗ್ಗ, ನೂಲು ಮೊದಲಾದುವುಗಳನ್ನು) ತಿರಿಚು; ಹುರಿಮಾಡು : "ಪೊಸ-ರಜ್ಜು ಕ್ರಿಯಾಯಾಂ (ಹಗ್ಗ ಹೊಸ), ಮಂಥ ದಂಡೇ ಚ (ಕಡೆಗೋಲು)" (ಶಮಿಧಾ); ಪುಲ್ಲ ಬೆಂಟಿಯುಂ ಪೊಸೆದು ಕಿಚ್ಚು ಪೊಣ್ಣಿಯ ಕೊಡನುಂ ಬೆಂಟೆಯುವುಮಂ ಕೊಂಡು ಪೋಗಿ ಭಟಾರರ ಮುಂದಿಟ್ಟು (ಕರ್ಣಾ. ೦೩೩-೦೦) : ಪರಿವ ಭಂಡಿಯಂ ಕಾಲಿಂ ಕೋವರು ಮಣಲಂ ಸರವಿ ಪೊಸೆವರು ಬೆಟ್ಟಿಱಿ ಮಿತ್ತುಗರವರು ಜವನ ಮಿಸೆಯುಂ ಕೀಳುವರು (ಶಾಸಂ. IX-1, ೩೯೬-೦೬ ; 1190) ; ಪೊಸವೊಗರ್ ಕೋದಿರ್ದ ಪೊಳ್ಕಳೆಯನೆಳೆಬಿಡುವ . ಪೊಸೆದು ನೆಲದೊಳ್ಪುಗಳ ಬಾಳ್ಪೆಳ್ಪ ತೊಡವಂ (ಗಾಂಗುಂ. ೭೦-೦೨೪). ೭. (ತಲೆಗೂದಲು) ತೆಕ್ಕೆಗಟ್ಟಿರು ; ನುಲಿದು ಕೊಂಡಿರು : ನೆತ್ತಿಯೊಳೆಱೆದೆಱೆದಿನಿಸಱಿಯೊತ್ತಿ ಬಟಿಕ್ಕಿಟಿಯ ಪೊಸೆದು ಜಡೆಗೊಂಡಿರ್ದುದ್ವಕ್ತ್ರ ಕುಚಯುಗೆಯ ಕೇಶಪಾನೆತ್ರಂ ಪಸರಿಸಿದ ನೆಯ್ದಿ ಪಸರಿಸಿದದಟಿಂ (ಶಂಕಶಾ. ೦೨-೦೩೪) ; ಪೊಸೆದ ಕೆಂಜೆಡೆಯುಂ ಪುಲಿದೋಲ ಕಚ್ಚೆಯುಂ (ಕಾವಿಜಾಕ. ೪೪). ೮. (ತಲೆಗೂದಲು ಮೊದಲಾದುವನ್ನು) ನುಲಿ ; ಸುತ್ತು : ಮಂದಾರಮುಖ್ಯ ಮಾದ ಅಲರ್ಗಳಂ ಮುಡಿವ ಕುರುಳಂ ಪೊಸೆದು ಜಡೆಯನಂತಳವಡಿಪರೇ ರತಿಸುಖಂಬಡೆವ ಕಾಲದೊಳ್ ಕೆಳೆಗೊಂಬರೇ ತಪವನು (ಶಬಪು. ೩೩-೮). ೯. ಸೇರಿರು ; ಕೂಡಿರು ; ಹೊಂದಿರು : ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳಕ್ಷಮಾಲೆಯೊಳೆಸೆವಂತಿರೆ ಪೊಸೆಯೆ ಮುತ್ತು ಪವಳಂಬೆರಸಿದ ಪೋರಾಯ್ತು ಚೆನ್ನತಪಸಿಯ ಕೆಯ್ಯೊಳ್ (ಶಂಕಶಾ. ೬-೧೦). ೧೦. ಕೂಡಿಸು; ಸೇರಿಸು ; ಬೆರಸು : ಪೊಸೆದಾತ್ಮಜಳದೆ ಬೇಳೆಯ ರಸಮಂ ಕಿವಿಯೊಳಗೆ ಪಿಜಿಗೆ ಮೇಣ್ ಕಟ್ಟುಗೆ ವಾಯಸಜಂಘೆಯ ಬೇಳೆಯ ಕಿಱುಕುಸಾಲೆ ಬೇರೊಂದನಲ್ತೆ ಸೂಟ್ ಜ್ವರಮಟಿಗುಂ (ಲೋಕೋಪ. ೯-೨೪). ೧೧. ಹೆಣೆ ; ಕಟ್ಟು ; ರಚಿಸು : ರಘುವಂಶರಾಮಕೃತಿಯೊಳ್ ಪತ್ರಂತು ಪದ್ಯಂಗಳಂ ಪೊಸೆಪಂ (ಶಂಗಿಃಪಪ. ೦-೩೩). ೧೨. ಉಂಟುಮಾಡು; ಉಂಟಾಗಿಸು ; ಶೋಭೆಯುಂ ಪೊಸೆಯುತ್ತಿರ್ದುದು ಮೂಡಲುಂ ಪಡುವಲುಂ ಚಂದ್ರಾರ್ಕಸನ್ಮಂಡಲಂ (ಜಾರಪು. ೩-೭). ೧೩. ಹರಿ ; ಕತ್ತರಿಸು : ತೊಡರಂ ಪೊಸೆದು ಪಱಿಪ ಮದಕರಿಯಂತೆ ಪೊಸೆದು ನೋಡಲೊಡಂ (ಶಾಂತಿಪು. ೬-೩೦ ವ); ಆ ನಾಗಪಾಶಮಂ ಜಗತೀನಾಥಂ ಪೊಸೆಯ ಕಟ್ಟುಗಳ್ ಬಟ್ಟಿರೆ (ಶಾಂತಿಪು. ೬-೩೪). ೧೪. (ಹೆಜ್ಜೆಯನ್ನು) ಕೀಳು ; ತೆಗೆದಿಡು : ಪೊಸಯುದೆ ಪಜ್ಜೆಗಳಂ ನಾಲ್ದೆಸೆಯೊಳಮುಂಟಂಟು ದೆವಸವಿರುಳುಂ ಪಗಲುಂ ಮಿಸುಕದೆ ನಿಲೆ (ಶಪುಶ. ೧-೦೬). ೧೫. ಹೊಡೆ ; ಬಡಿ : ಇರುಳ್ ಮೊದಲ ಜಾವಮಪ್ಪನ್ನೆಗಂ ಪೊಸೆಯ ಸಸ್ಯಕ್ಕೆ ನಟ್ಟರುಳ್ವರಿಗಮಾ ಪಿಶಾಚನಿವಹಕ್ಕೆ . . . ಅಶುಭಮಂಗೆ ನಿರ್ಘಾತಮಂ (ಲೋಕೋಪ. ೪-೦೭); ಚಾಟಿಯೊಳ್ ಬಡಿವುತುಂ ಸರಳಿನಿಂ ಪೊಸೆವುತುಂ ಭೂತದಿಂ ಪೊಯ್ಯುತುಂ . . . ಬಳಲಿಸುವರೇನೆಂಬೆನು (ಶಬಪು. ೩೬-೨೩). ೧೬. ಹೊಸಕು; ನಾಶಮಾಡು; ಹಾಳುಮಾಡು : ಆ[ಚಾ]ರ್ಜ್ಯ ಪುರುಷ ಇಱಿದು ಬಸಪುಬ[ಯದೆ] ಬೀಟಿಪ್ಪೊರನ್ ತೆಱಿ[ಜ]ನ ಮೆಚ್ಚದೊಂ ಪಿಸುಣರ ಪೊಸೆವೊ (ಎಐ. XXIV, ೦೪೪-೦೨; ಸು. 885); ಎಲ್ಲರಂಪುಮುಸುತನುಂ ಸುರೇಂದ್ರಸುತನುಂ ಪೊಸದೀಗಳೇ ಮುಕ್ಕಿ ತೋಱಿರೇ (ಶಂಕಶಾ. ೪-೭); ಪೆರ್ಮಾರಿಯನಾವಗಂ ಪೊಸೆಮ ನೀಂ ಮುಕ್ಕೆಂಬುದೇಂ . . . ಬೀರಮೋ (ಕರ್ಣಾ. ೨೪೦). ೧೭. ಕೊರೆ ; ತೂತು ಮಾಡು : ರಸಮಯಮಂ ಕೃತಿಯಂ ಸೇವಿಸಿ ಏರಸಮನೆಯ್ದೆ ಜೋಡುಮಾಡುವ ವಿಬುಧಪ್ರಸರಂ

ಪೊಸವಾಪಾವಂ ಸೇವಿಸಿ ಬದಿರಂ ಪೊಸೆವ ತುಂಬಿಯೊಡನಾಡಿದರೇಂ (ಕಿಕೃಶ. ೦-೫೭). ಹೊಸೆ : ೧. ವಸುಧೆಯ್ಲಿಲ್ಲದ ಬೆಳಸು ರಾಜಾನ್ನದ ಹಸಿಲ್ಲದ ಓಗರ ವೃಷಭ ಮುಟ್ಟದ ಹಯನು ಬೆಣ್ಣೆಯ ಹೊಸೆವರಿಲ್ಲದೆ ಕಂಡುಂಡೆ (ಅಶಕಂ. ೧೪೩-೬೬೦); ಹೊಸೆದರ್ಗೈ ಧರೆ ಗಗನ ನಡುಗಲು ಮುಸಗಿ ಮಂದರದಿಂದ ದುಗ್ಧದ ರಸಗಡಲನಾ ದೇವದಾನವರಂದು (ಶಂಭಶ. ೩-೦೦೩); ಸಸಿಯನೊಕ್ಕಲಿಗನು ಹೊಸೆವಾಕೆ ಬೆಣ್ಣೆಯನು ಅಸಗ ಸೀರೆಯನು ಅಱಿವಂತೆ ಸೂಳೆ ತಾ ಹುಸಿವರಱಿ ದಿಹಳು (ಸರ್ವಜ್ಞ. ೧೪೦೦). ೨. ಮಿಸುಗುವ ಸುಗಂಧವಾಳೆಯ ಹಣ್ಣ ಕತ್ತರಿಸಿ ಹೊಸತುಪ್ಪವುಂ ಕೂಡಿ ಮತ್ತವಾ ಹಾಲೊಳಗೆ ಹೊಸೆದದಂ ಹಾಕೆ ಕದಳೀ [ಪಾಠಾಂ. ನೊಸೆದದಂ ಹಾಕಿ ಕದಳಿಯ, ವಸೆದದಂ ಹಾಕಿ ಕದಳಿಯ, ಪೊಸೆದು ಹಾಕಿದೊಡೆ ಕದಳಿಯ] ಪಕ್ವಫಲಸಾರಪಾಯಸವೆನಿಸಿಕೊಂಬುದು (ಸೂಪಶಾ. ೩-೦೪). ೩. ಸಕಳಸುಖವಿರಹಿತೆಯಪ್ಪ ರತಿದೇವಿ ನಿಂದಿರ್ದು ಬಿಸುಸುಯ್ದು ಬಸಿಱಂ ಹೊಸೆದು ಕೆಯ್ಮಿತ್ತಿ ದೆಸೆದೆಸೆಯಂ ನೋಡಿ (೧೬೪. ೬-೬೯ ವ); ಕಾಳುಮಾಡಿದನೆನಗೆ ಮುನಿಪತಿ ಕೌಶಿಕಾಜಿನಲಾ ಸುಡೀ ಗರ್ಭಾಗಿಗಳನೆಂದಬಲೆ ಹೊಸೆವಳು ಬಸುಱಿನೊಡೆಮುಱಿದು (ಕುವ್ಯಾಂ. ೪-೪೦); ಪುತ್ರನ[ರ]ಳಿದಪರೆಂದು ದೇವಕಿ ಹೆತ್ತ ಹೊಟ್ಟೆಯ ಹೊಸದು ಶೋಕಿಸಿ ಬಿದ್ದು ಹೊರಳಿದಳು (ಜಾಗ್ಕಶಾ. ೨೧-೪); ಅಯ್ಯೋ ಎಂದು ಭೋರೆಂದು ಗೋಳಿಟ್ಟು ಹೊಟ್ಟೆ ಹೊಸೆದು ಹುಚ್ಚಿದ್ದು ಹೌಹಾರಿ ಹುಯ್ಯಲಿಟ್ಟಳು (ಶಬೀಗಿ. ೪೩-೨೨). ೪. ವಾಸನೆಯ ಉಸುಮುವ ಹೊಸೆದು ವಾಸನೆ ಹೋಗಿ ಆ ಸುವಾಸನೆಯಿಲ್ಲದಗಿತ್ತೆಂಬುದನಱಿದಲ್ಲಿ ಶರಣನ ಶರಣಸ್ಥಲ (ಮೋಕ್ಷಪು. ೦೪೩-೩೪೬); ವಿಷದ ಕ್ರೂರತೆ ಲೋಕವೆಲ್ಲವ ಘಸಣಿಸುತ ಬರಲಾ ಸಮೀರಣ ಹೊಸೆವನಂಗೈತಳದಿ ಕೋವದಿ ನೋಡಿ ಪಡಿಸಣವ (ಶಂಭಶ. ೬-೧೯) ; ನಾಗ ಕೈ ಹೊಸೆದ (ವಚನ. II, ೦೦೨೬). ೫. ಕಾಷ್ಠ ದೊಳಿಹುವಗ್ನಿ ಹೊಸೆದರೆ ತಾನಿರ್ದ ಕಾಷ್ಠವ ತಾನೆ ಸುಡುವುದು (ಶರಶ. ೬೪-೩೨); ಹಸಿಯ ಸಮಿಧೆಯ ತಂದು ಹೊಸೆದರುಂಟೇ ಕಿಚ್ಚು (ಸರ್ವಜ್ಞ. ೯೬). ೬. ಮಳಲ ಹೊಸೆದರೆ ಹೊಸೆದಂತಲ್ಲದೆ ಸರವಿಯ ಹಡೆಯಲು ಬಾರದು (ಬಸವ. ೩೩೪); ಹೂರಜಿ ಹೊಸೆವ ತಿರುಹುವ . . . ನೆಱಿ ಸುಲಿವ ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೮); ತಿಣ್ಣವಲೆ ಜೋಡುವಲೆ ಹೊಸೆದಿಕ್ಕಣ್ಣವಲೆ ಚಕ್ರವಲೆ . . . ಪೊಱಿಗಳು ಮಿಂಧ್ಕನ ಕೂಡೆ (ಜಾಕ್ಕಶಾ. ೩-೦೬); ಪುನಃಪುನಃ ನೀರಿನಲ್ಲಿ ಅದ್ದಿ, ಒಣಗಿಸಿ ಅತ್ಯಂತ ತಾಳಿಕೆಯುಳ್ಳದ್ದಾಗುವಂತೆ ಆ ಚರ್ಮವನ್ನು ಹೊಸೆದನು (ಬಂಗಾಹ. ೨೨). ೧೦. ಲೋಕವನು ನಾಕಕ್ಕೆ ಬೆಸೆಯೆ ನಾಕವನು ಲೋಕಕ್ಕೆ ಹೊಸೆಯೆ ಏತಂದೆ ನಾ ಭಕ್ತಿದೇವಿ! (ಕಂದ್ರಸ. ೩೦-೦). ೧೧. ಕನ್ನಡದ ಆದಿಕವಿ ಪಂಪ ತನ್ನ ಪೋಷಕನಾದ ಅರಿಕೇಸರಿಯನ್ನು ಅರ್ಜುನ ನಿಗೆ ಅಭಿನ್ನವಾಗಿ ಮಾಡಿ, ನೂತನರೀತಿಯಲ್ಲಿ ಕಾವ್ಯವನ್ನು ಹೊಸೆದುದು ಆತನ ಸಂಶೋಧನೆಯ ಪ್ರಜ್ಞಾಫಲವೆನ್ನಬಹುದು (ಸಂಶೋರ. ೦೬೭). ೧೨. ಕೊಂಕುಸರಳಂ ಹೊಸೆವ ಚಕ್ರದಿಂದಿಡುವ ಕುರುಪಿಂ ಕೆರೆವ . . . ಕರಗಸದಿ ಕೊಱಿವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೬-೨೬). ೧೮. ನೆರಿಗೆ ಹಿಡಿ ; ಜೋಡಿಸು : ಹೊಸೆದು ಕಟ್ಟಿದ ಮುನ್ನ ಕಚ್ಚೆಯ ಬೆಸುಗೆ ಶಿಖಿಗಳ ಗಂಟು ಮಿಗೆ ಶೋಭಿಸುವ ಜನಿವಾರವು . . . ಎಸೆವ ಹೊಂಬಣ್ಣದ ಶರೀರದಿ ಮಿಸುಪ ವಾಮನರೂಪನಾಂತಾ ವಿಷ್ಣುಮುನಿ ಬಂದ (ಜಾಕ್ಕಶಾ. ೦೬-೨೩). ೧೯. ಕೋಡಬಳೆ, ಸೇವಗೆ ಮುಂತಾದುವು ಗಳ ಹಿಟ್ಟನ್ನು ಬೆರಳುಗಳಿಂದ ಹೊರಳಿಸಿ ಎಳೆಯಾಗಿ ಮಾಡು : ಹದನಾಗಿ ನಾರು ಹಱಿವಂತೆ ಕಣಿಕವ ಕುಟ್ಟಿ . . . ಸೇವಗೆಯಂತೆ ಹೊಸೆದು ಸಣ್ಣಕ್ಕಿವಿಟ್ಟನೊಳು ಬೆಣ್ಣೆಯನು ಕಲಸಿ ಅದಕಿಕ್ಕಿ (ಸೂಪಶಾ. ೦-೪೬). ೨೦. (ಆಲಂ) ವ್ಯರ್ಥವಾಗಿಸಂ ; ಪೋಲುಮಾಡು : ನಾಸೇ ಸೃನ್ಯ ತೆಗದುಕೊಂಡುಹೋಗಿ ಮೂರೇ ದಿನಗಳಲ್ಲಿ ಮುಸದು ಬರುತ್ತೇನೆಂದು

. . . ಒಂದು ವರ್ಷವೆಲ್ಲ ಹೊಸೆಯುತ್ತ ಕುಳಿತೇನು (ಶಾಂತಲಾ. ೧೪೩). ೨. ದುಡಿ; ಶ್ರಮಿಸು : ಹೊಸೆಯದ ಕೈಯಿಂದ ಕುಸಿದು ಹೋಹುದು ಲೇಸು ಅಸವಮಾನದವಳ ಬದುಕಿಂದ ತಿಂಗಳಲಿ ಹಸಿದಿಹುದೆ ಲೇಸು (ಸರ್ವಜ್ಞ. ೧೬೬೬).

**ಪೊಸೆದು ಮುಕ್ಕು, ಹೊಸೆದು ಮುಕ್ಕು=ಹೊಸಕಿ ಹಾಕು ; ನಾಶ ಮಾಡು :** ಈ ಮಾಱಲುಂದಿದರನೆಲ್ಲಿನಿಬರುಮನೊರ್ವರ್ಯೆ ಪೊಸೆದು ಮುಕ್ಕುವಂ (ಶಂಕಶಾ. ೩-೧೬ ವ) ; ಅಂಘ್ರಿಯುಗ್ಮದಿಂದೊರಸುವ ಕೈಗಳಿಂ ಪೊಸೆದು ಮುಕ್ಕುವಗುರ್ವಿನ ಕುಂಭಕರ್ಣನೀ ಧರಣೆಗೆ ದುತ ವಕ್ರನೆನಿಸಿರ್ದ(ರ್ಪ)ದನಾನಱೆವೆಂ (ಜಗ. ೧-೬೦) ; ಅನುಜರನಿತ್ತ್ರುವಂ ಹೊಸೆದು ಮುಕ್ಕಿದೊ ವೃಕಕುಕ್ಷಿ ನಿಂದು ಮತ್ತೆನಗಿದಿರಾಗಿ ಬಲ್ಲಿದಿಗೆಯಂ ಪಿಡಿದಿರ್ದವನು (ಕುಮಾರ. ೦೩-೧೮) ; ದೆಸೆಯ ನುಣ್ಣನೆ ನುಂಗಿ ಸೂರ್ಯನ ಹೊಸೆದು ಮುಕ್ಕಿತೋ ರಾಹು (ಹಾಳ್ಯಶಾ. ೩-೨).

[ದೇ.॥ ತಮಿ. ಪೊಚುಱ್ಟು ; ತುಳು. ಪೊಯಿ ; ತೆಲು. ಪೊಸಗು]

**ಪೊಸೆ₂ (ನಾ). ಕಡೆಗೋಲು ; ಮಂತು :** "ಪೊಸೆ_ರಜ್ಜುಕ್ರಿಯಾಯಾಂ (ಹಗ್ಗ ಹೊಸೆ), ಮಂಥದಂಡೇ ಚ (ಕಡೆಗೋಲು)" (ಶಕುಶಾ) ; "ಪೊಸೆ ಯೊಂದಿಂ ಕಡೆಯೇಮವಂ ಮಂಥಾನಂ" (ಶಶಾ. ೩೩-೧೧೧೦). [< ಪೊಸೆ₁]

**ಪೊಸೆದು** 'ಪೊಸೆ₁' ಪರಾ.

**ಪೊಸೆಯಿಸು, ಪೊಸಯಿಸು₂ (ಕ್ರಿ). ೧. ಕೂಡು ; ಸೇರು ; ಹೊಂದು :** ಪೊಸೆಯಿಸಿ ನಸುಬಿಸುಪೇಱಿದ ಬಿಸಿಲಬೆಱಿಯೆ ಬೆಮರ್ತರ್ ಬಂದು ಬಿಡುವವೊಲೆನಸುಂ ಪೊಸಮುಗುಳಂ ಪೊತ್ತಿಸಿದುದು ವಸಂತದೂತಿಕೆ (ಲೀಲಾವ. ೯-೬೮). ೨. ರಚಿಸು ; ನಿರ್ಮಿಸು : "ವಿಮಾರ್ಗದೊಳಂ ಪೊಸದೇಸೆಯ ನುಡಿಗಳೊಳಂ ಪೊಸ [ಪಾಠಾಂ. ಸ]ಯಿಪ ಬಲ್ಮೆಗೆ ಚತುರಾನ್ವಯಂ ಕವಿರನ್ನಂ (ಗದಾಯು. ೦-೩೯) ; ಪುಷ್ಪಮಾಲಿಕೆಯೇಬಲ್ ಪಲತೆಱದಲರ ಪಸವನಂಗಳಂ ಪೊಸೆಯಿಸಿಯುಂ (ಶಾಂತೀಶ್ವ. ೦೩-೨೨೯ ವ). ೩. ಉಂಟುಮಾಡು ; ಒದಗಿಸು : ಯುವತಿಗೆ ನಿಜವಿಡಿದು ದುಕೂಲವ ನುಡಿಸುವ ದಿವಿಜ ಕನಕನಗಪೇಖಳೆಯಂ ಧವಳಾಭ್ರಮಾಲೆಯಂ ಸುತ್ತುವ ವಾರಿದಲಕ್ಷ್ಮಿಯೆಸಕಮಂ ಪೊಸೆಯಿಸಿದಳ್ (ಕುಕ್ಕಪು. ೯-೭೨). ೪. ಮಾಡು ; ನೆರವೇರಿಸು : ಶಿಶುಗೆ ನಯನಾಂಶುದುಗ್ಧಪ್ರಸರದೆ ಜನ್ಮಾಭಿಷೇಕಮಂ ಮುನ್ನೋದಂ ಪೊಸೆಯಿಸಿ ಸರೋಜದಿಂದರ್ಚಿಸುವಂತಿಂ ದ್ರಾಣಿ ನೆಗಪಿದಳ್ ಕಂದಳದಿಂ (ಚಂದ್ರಪು. ೦೨-೩೩). ೫. ಪ್ರಕಟಪಡಿಸು ; ತೋರಿಸು ; ಕಾಣಿಸು : ಏನಂ ಪೇೞ್ವೆಂ ತನ್ನೃಪಸೂನುವ ಪುಣ್ಯ ಪ್ರಭಾವಮಂ ಗ್ರಹಮಹಾಮಾನಕುಳೀರಾಹಿಗಳಂದೇನುಂ ಪೊಸಯಿಸಿದು ವಿಲ್ಲ ನಿಜವಿಷಮತೆಯಂ (ಚಂದ್ರಪು. ೩-೯೩). **ಪೊಸಯಿಸು₁ :** ೧. ವಿಚಿತ್ರ ಪಾತ್ರಪರಿವರ್ತನಮುಣ್ಮುವ ತೂರ್ಯನಾದದೊಳ್ ಪೊಸಯಿಸೆ . . . ಲೀಲೆ ಕಣ್ಗೆಸವಳಮಾಗೆ ಪಾಱುವ ಮಹೀಧರನೇಱ ವಿಯಚ್ಚರೇಂದ್ರನಂ ಭೋಂಕನೆ ಕಂಡು (ಅಂಜ..೨-೯೧). ೨. ಎಸೆದರ್ದಯೊಳ್ ಪಳಂಚುವ ಟಲಧ್ವನಿಯಿಂ ಪೊಸತೊಂದು ರಾಗಮಂ ಪೊಸಯಿಸಿ (ಅಂಜ. ೨-೭೭) ; ಸತ್ಕವಿಯೊಳ್ ಸಮನಾಗಿ ಮಾರ್ಗಮಂ ಪೊಸಯಿಸಿ ದೇಸಿಯಂ ಪೊಸತು ಮಾಡಿದಳೊರ್ವಳಪೂರ್ವರೂಪದಿಂ (ಶಂಕಶಾ. ೩-೬೯) ; ಮೇಪುಗಾಡಿಂ ಹಕ್ಕಿದಲಗೆ ಹರಿಯಿಡುವ ಹರಿಣೀಗಣದ ಕಡಮಯೊಳರೆಮೆಲ್ದುಟಾದೆಲೆಗಱಿಂಕೆ ಯೆಸಟ್ಟಗಳಂ ಸೆಳಿದು ತಂದು ಬಯಲೊಳ್ ಬಳ್ಳಿವಸಲೆಯಾ ಪೊಸಯಿಸಿಯುಂ (ಚಂದ್ರಪು. ೬-೯ ವ). ೩. ಪೊಸತರ್ಳಗಳ ಬಿಜ್ಜಣಿಗೆಯಿನೆಸೆವೆಲರ್ಗಳಿನೊಗೆವ ಘರ್ಮಜಲಮಂ ಪೀರ್ದಾಱಿಸಿದುದು ಕುಸುಮರಜಂಗಳ್ ಪೊಸ[ಪಾಠಾಂ. ಸೊಗ]ಯಿಸಿದುವು ಬಣ್ಣಮಂ ಲತಾಂಗಿಯರ್ಗಳ್ (ಅಂಜ. ೧೦-೬೩) ; ರಸಮೊಸರ್ವನ್ನೆಗಂ ತಗುಳೆ ಪಾಡುವ ಗಾಣರ ಗೇಯಮುಬ್ಬಿಱಿಂ ಪೊಸಯಿಸೆ (ಶಂಕಶಾ. ೦೦-೯) ; ಎಸೆವ ಜಿನೇಂದ್ರಚಂದ್ರನ ಸದಸ್ಯತನುಚ್ಛವಿ ಸಾಂದ್ರ ಚಂದ್ರಿಕಾಪ್ರಸರಮದೀಕ್ಷಣೋತ್ಪಳಕಮುತ್ಸವವಾರ್ಧಿಗಮಂದಮಂದಮಂ ಪೊಸಯಿಸೆ ಹರ್ಷಸಂಪದಮಂ (ಧರ್ಮಪು. ೦೩-೯೮). ೪. ಪತಿಂವರೆಗೆ ಸೊಯಂಬರಮಂ ಪೊಸಯಿಸಿದಂ ನಿಖಿಲರಾಜಕಂ ನೆರೆಯೆ ಸಾನುಜಂ ಬಲದೇವಂ (ಶಾಂತಿಪು. ೯-೬೯) ; ದಾನಮ್ಮಸನಿ ದಶರಥನದೇಂ ಪೊಸಯಿಸಿದನೊ ಚೌಲೋಪನಯನಮಹಿಮೋತ್ಸವಮಂ (ಶಂಪಾರಾ. ೩-೦೯೨) ; ಶಿಶುಗಳು ಕಾಡೆ ತೋಱೆ ಶಶಿಯಂ ಜಳಕೇಳಿಗಳಂ ವಿನೋದದಿಂ ಪೊಸಯಿಸಿ (ಪುಣ್ಯಾಸ್ರ. ೧೦-೦೨). ೫. ಧೃತವಿಷಮಬಾಣನಂ ಜನಪತಿ ಗೆಲ್ದವೊಲಾತನಂ ಪ್ರಜಾಪತಿ ಧರಣೀಪತಿ ಕಾಮದೇವನಂ ಗೆಲ್ದು ತಳರದನಿವಾರ್ಯವೀರ್ಯಮಂ ಪೊಸಯಿಸಿದಂ (ಶಾಂತಿಪು. ೩-೩೭) ; ಬೇಗಂ ಕೂರ್ತಂತೆ ಭಕ್ತಿಯಂ ಪೊಸಯಿಪರ್ಕಾಲಮಂ ಕಜ್ಜಮಂ ಬಗೆಯುತಿರ್ಪರ್ (ಪುರಾಣ. ೦೦-೬೫) ; ದೂರದೊಳೆಯ್ತರೆ ತುಂಬುಮೊಗವ ತೋಱೆ ಭೂರಿಲೀಲೆಗಳ ಪೊಸಯಿಸಿ (ಶಿವ. ೬-೦೪ ಸಾಂಗತ್ಯ). ೬. ಹೊಂದಿಸು ; ಕೂಡಿಸು ; ಸೇರಿಸು : ಈ ದೂದವರೆಂಬ[ರ್] ಬೇಟಕಾಱರ ಬೇಟಮೆಂಬ ಲತೆಗಳದರ್ಪಿರ್ಪಂತಿರ್ದರೆಂತಪ್ಪ ಬೇಟಂಗಳುಮವರ್ ಪೊಸ[ಯಿ]ಸೆ ಪೊಸತಪ್ಪುದು ಕಿಡಿಸೆ ಕಿಡುವುದು (ಶಂಕಶಾ. ೯-೦೦೩ ವ) ; ಅಲ್ಲಿಯ ಪಯೋಧಿಸರೀಗಳುಮಾಗಳುಮಾಱಿವರಾದೊಡಮಿನಿಸೆಡೆಯಾಗಿರ್ದ ಸಂಬಂಧಮಂ ನೀನಿರ್ದು ಪೊಸಯಿಸುವುದು (ಶಾಂತಿಪು. ೨-೭೭ ವ). ೭. ಕಡೆ ; "ಮಥಿಸು" : (ಕಕುಶಾ. ೯. I. ೬೮). ೮. ಹೂಡು ; ಬಳಸು : ಅಸತ್ಯವಾದವಂ ಪೊಸಯಿಸಿ ಜೀವನಿಲ್ಲ ಮೊಱೆಯಿಲ್ಲಱಿನಿಲ್ಲ ಪರತ್ರಯಿಲ್ಲೆ ನಲ್ಮಸಕಳಿಯಂತೆ ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ (ಅಂಜ. ೨-೦೦). [ಪೊಸೆ₁ + — ಇಸು₂]

**ಪೊಸ್ತಕ** 'ಪೊತ್ತಗೆ' ನೋ.

**ಪೊಸ್ತಕಗಚ್ಛ, ಪೊಸ್ತಕಗಛ (ನಾ). [ಜೈನ] ಮುನಿಗಳ ಒಂದು ವರ್ಗ :** ಸ್ವಸ್ತಿಶ್ರೀ ಮೂಲಸಂಘದೇಶಿಯಗಣ ಪೊಸ್ತಕಗಚ್ಛದ ಕೊಣ್ಡಕುನ್ದಾನ್ವಯ ಕೊಲ್ಲಾಪುರದ ಸಾಮನ್ತನ ಬಸದಿಯ ಪ್ರತಿಬದ್ಧದ ಶ್ರೀಮಾಘನನ್ದಿಸಿದ್ಧಾನ್ತದೇವರ ಶಿಷ್ಯರು . . . ಕೊಟ್ಟರು (ಎಕ. II. ೩೬೦-೧ ; ಸು. 1200). **ಪೊಸ್ತಕಗಛ :** ಶ್ರೀಮೂಲಸಂಘದೇಸಿಯಗಣ ಪೊಸ್ತಕಗಛ ಕೊಂಡಕುಂದಾನ್ವಯದ ಹೆರಗಿನ ಹರಿಶ್ಚಂದ್ರದೇವರ ಪ್ರಿಯಗುಡ್ಡುಗಳಪ್ಪ ಶಾತಂಗಿಯ ಪಟ್ಟಣದ ನಖರಂಗಳು ಮಾಡಿಸಿದ ಶ್ರೀಶಾಂತಿನಾಥದೇವರು (ಎಕ. I (R). ೬-೨ ; 12ನೆಯ ಶತ). [< ಸಂ. ಪುಸ್ತಕ ಗಚ್ಛ]

**ಪೊಸ್ತಕಗಛ** 'ಪೊಸ್ತಕಗಚ್ಛ' ನೋ.

**ಪೊಹಚಿ** 'ಪೌಂಚಿ' ನೋ.

**ಪೊಳ್ (ಸಪೂರೂ).** 'ಪೊಳ್ಳು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಪೊಳ್ಮಡಿ', 'ಪೊಳ್ಮರ' ಪರಾ. [<ಪೊಳ್ಳು]

**ಪೊಳಂಕು, ಪೊಳಕು₁, ಹೊಣಕು, ಹೊಳಕು₁ (ಕ್ರಿ). ೧. ಪ್ರಕಾಶಿಸು ; ಮಿಂಚು ; ಹೊಳೆ :** ನದಿ ಕಣ್ದೆಱೆದಂತೆ ಪೊಳಂಕಿದ ಮಿಸಾನ ಮೊಸಳೆ ಪಾಯೆ ನರಪತಿಯ ವಿನೋದದ ಗುಜ್ಜು ಸಿಕ್ಕಿ ಪಿಡಿದತ್ತದನಧಿಪತಿ ಜಾಲಗಾಱರಿಂ ತೆಗೆಯಿಸಿದಂ (ಮುಕುಂದ. ೩-೯೮). ೨. ಅಗಿದು ತಿನ್ನು ; ಜಗಿ : "ಪೊಳಕು, ಪೊಳಂಕು_ಚರ್ವಣಕ್ರಿಯಾಯಾಂ (ಅಗಿಯು)" (ಶಕುಶಾ). **ಪೊಳಕು₁ :** ೨. ಅರೆಮುಗಿದಿರ್ದ ಕಣ್ ಮುಱಿದ ಮೀಸೆ. . .ಸುಲಿಪಲ್ ತಳತ್ತಳಿಸಿ ತಂಬುಲಮಂ ಪೊಳಕುತ್ತೆ ರಾಗದಿಂ ಪ್ರತಕೆಗೆ ಕೊಟ್ಟ ಮಂದಲೆಯು ಗುಂದಲೆಯಾದುದು ಬೀರನನ್ಗೆನಾ (ಅರ್ಧನೇ. ೩-೬೦). ೩. ಚಪ್ಪರಿಸು : ಪನಸಾಮ್ರಾತಕ . . . ದಾಡಿಮಫಲಪ್ರಾತಂಗಳಿಂದಾಗಳುಂ ತನಿಗಂಪಂ ಮೊಗೆದತ್ತಿ ತೀಡುಮೆಲರೊಂದಿಂಪಿಂಗೆ ಪೊಂಗೂರ್ತು ಮೆಲ್ಲನೆ ಬಾಯಂ ಪೊಳಕುತ್ತೆ ನೋಟ್ಬರಮರರ್ ತಾರಾಚಳೋದ್ಯಾನದೊಳ್ (ಅರ್ಧನೇ. ೨-೭೦). ೪. ಬಾಯಾಡಿಸು ; ನಾಲಗೆ ಹೊರಳಿಸು : ಮತ್ತಂ ಕಾಯೋತ್ಸರ್ಗಕ್ಕೆ ಮೂವತ್ತೆರಡುದೋಷಂಗಳಪ್ಪುವವಾವುವೆಂದೊಡೆ ಕುದುರೆಗಾಲಿಕ್ಕೆ

ನಿಲ್ವುದುಂ . . . ಬಾಯುಂ ಪೊಳಕುತ್ತುಂ ನಿಲ್ವುದುಂ ಎರಡು ಕಯ್ಯುಂ ಒಡಿಕಿಸಿ ನಿಲ್ವುದುಂ (ಶಬಾರ. ೪೯೨). ೫. ಚಿಮ್ಮು; ಪುಟಿ : ತಿರುವಿಂ ಪೊಳೆದ ಕಾಮನ ಸರಲಂತಿರೆ ಬಂದಲ್ (ಛಶ್ಯತ್. ೯.೦೦೬) ; ಆವಗಡಿಸಿ ಪೊಕ್ಕು ಪೊಯ್ದಾಡಿದರ್ ಕೋಡಿದರ್ ನವರುಧಿರಧಾರೆಯೊಳ್ ಮುಳುಂಕಿದರ್ ಪೊಳೆಕಿದರ್ (ಚಂಶ್. ೨೬-೦೮). ೬. ಸೇರು ; ಕೂಡಿ ಕೊಳ್ಳು : ಕರ್ಪೂರದ ಬೇರ ಹಣ್ಣಿದರೆ ಪೊಳಕನೀ ಸಂಸಾರಚಿತ್ರಕೆ (ಹಳಗ. ೦೦.೨-೦೦). ೭. ನಾಶಮಾಡು ; ಧ್ವಂಸಗೊಳಿಸು : ಪಟುನುಡಿ ಸೆತ್ತು ಪೊತ್ತು ಧರಣಿ ತಿರೆಯುಂ ಪದೆದೆತ್ತಿ ದೈತ್ಯನಂ ಪೊಳಕಿ ಏಲೀಂದ್ರನಂ ತಗುಳ್ದು ಮಟ್ಟಿಸಿ ದುಷ್ಟನೃಪಾಲವಂಶಮಂ (ಶಶಿ. ೩-೧೯೩). ಹೊಣಕು : ೮. ಸುಟ್ಟುಹಾಕು ; ಭಸ್ಮಮಾಡು : ಕ್ಷಣಕೆ ಕರ್ಪೂರವ ಸುಟ್ಟ ಶಾಂತಿ ಶ್ರೀ ಜಿನರಾಜ ಹೊಣಕಿನ್ನ ಪಾಪೇಂಧನವ (ಜ್ಞಾನ. ೯೩-೧). ೯. ಹೊಡೆ: ಬಡಿ : ಪಾರಳಿಸಿದನಾ ರಥವ ಪಾಂಚಾಲರೆಂಟುಸಾವಿರರಥಿಕರೈತರಲ್ಲವರ ದೆಸೆಗಾಗಿ ಹೊಕ್ಕುರವಣಿಸಿ ಪೊಣಕಿದಂ ಪೇರಾಳದಂಬಿನಿಂ ದೆಸೆದೆಸೆಗೆ ಪರಿವಂದದಿ (ಲಕ್ಷ್ಮೀಶಾ. ೦.೯೦). ಹೊಳಕು₁ : ೧. ಬೆಳಗು ಹೊಳೆಕಿದ ಬಳೆಕದಗಿತ್ತಲ್ಲಿ ಕತ್ತಲೆ (ಬಸವೇಶ. ೯-೨೯); ಮುಂಗಾರ ಗಗನಾಂಗಣದ ನಾಟ್ಯಕೆ ಏದ ಮಿಂಚಿನ ಭಣಿತೆಯುವೊಲಸುರೇಂದ್ರರಥ ಪೊಳಕಿದುದು ಕಣನೊಳಗೆ (ಕೂಶರಾ. ೬-೨೦-೩೦). ೫. ನೊರೆಯನುಬ್ಬಿಸುತೇಳ್ವ ರಣದುಬ್ಬರದ ರಕುತದ ಹೊನಲು ಹೊಳಕಿತು [ಶಾಕಂ. ಮಸಗಿತು] ಹೊಳಕಿ ಹೊರಳಿದವು ಪೇರಾಳ ಹೆಣದುಂಡುಗಳು ಕಪಿಬಲದ (ಕೂಶರಾ. ೬-೪೦-೦೯). ೭. ಕುಲಗಿರಿಗಳೆಲ್ಲವನೊಂದು ನಿಮಿಷದಿ ಹೊಳಕಿ ಹೊಳಕಿ ಬಿಡುವೆನ್ನ ಕುಲಿಶದಂಡವ ಒಡಿದೀ ಸಗ್ಗಿಗರ ಜಂಗುಳಿಸುತವೆ ಬಲಿದೊತ್ತ (ಶ್ರೀಕಾಂ. ೭-೩). ೯. ಭೀಮನ ತ್ರೊಡಕಿದರು ಹೊಳಕಿದರು ತವಕಿಗರು ತಲ್ಲಣಿಸದೆ (ತುರಂಗ. ೬೯-೨೨). ೧೦. ಝುಂಕಿಸು; ಗದರಿಸು : ಅವದಿರ ನಾಡಿನೊಳಗರ್ಗಮಂ ಕೊಟ್ಟು ಬಾಳಿಂದು ಧೃತರಾಷ್ಟ್ರ ಹೊಳಕಿ ಸುಡಿದನು (ತುರಂಗ. ೯೦.೦೬). ೧೧. ಜಲಿಸು ; ಅಲುಗಾಡು : ವ್ಯತ್ಯುವಿನಲ ಹೋಲಿಯೊಳಗೆ ಹೊಳಕಬಹುದಹಿಪನ ಫಣಾಮಂಡಲ ದೋಳ್ದಲಬಹುದು ಕಾಣೆನು ಗೆಲುವ ಹದನನು ಮಗನೆ ಪದ್ಮವ್ಯೂಹ ದೊಡ್ಡಣೆಯ (ಬಾಣ್ಯಕ್ರ್ಯೋ. ೯.೪೬). ೧೨. ಅಲುಗುವಂತೆ ಮಾಡು ; ಅಲುಗಾಡಿಸು: ಕೃತ್ರಿಮದ ಸರ್ಪನ ತೊಲಗಿಸಲು ದುಂದುಭಿಯ ಹೊಯ್ದರೆ ಹೊಳಕಲಕ್ಕುದೇ (ಕನ್ನುರು. ೬-೦೨). ೧೩. ಅತಿಶಯವಾಗು ; ಹೆಚ್ಚು: ಮೆಲುವ ಭೂಪರ ಮನಕೆ ಹೊಸಜಕ್ಕುಲಿತ ಹುಟ್ಟಲು ಬಾಯಿ ಹಪ್ಪವು ಹೊಳಕಲಮ್ಯುತವಿದೆಂಬ ಹಾಲುಂಡೆಗಳನೋರಣದಿ ತೆಲುಗ ನಾರಿ ಯರ್ಕಿದ ಬಡಿಸಿತು (ಕೌಶಿಕ. ೨-೬೨). ೧೪. ರಭಸದಿಂದ ಮುಂದುವರಿ; ಮುನ್ನುಗ್ಗು : ಉಲಿವಲಮ್ಮುವರಿಲ್ಲ ಬವರಕೆ ನಿಲುವ ಚೂಣಿಗರಿಲ್ಲ ಮುಂಬಿಗೆ ಹೊಳಕಬಲ್ಲವರಿಲ್ಲ ನಮ್ಮಿಯ ಬಲದ ನಾಯಕರು (ಬಾಣ್ಯಕ್ರ್ಯೋ. ೫೦. ೨೯೦) ; ಅಲ್ಲಿಯ ಗಲಭೆಕಾರರು ಕವಿಯೆ ಗೋಪುರಪಂಕವೀಥಿಯಲಿ ಹೊಳಕುವೀ ಕಪಿನಾಯಕರ ಗಾವಳಿಯ ಗುಮ್ಮಿದರಸ್ತ್ರಶಸ್ತ್ರಾವಳಿಯಲಿ (ಕೂಶರಾ. ೯-೯ ೨೦) ; ನಳಿನಮಿತ್ರನ ಮೊಮ್ಮಗಂ ಭೀಮನೋಳ್ಮಾದಿ ಗೆಲಿದು ಮಾದ್ರೀಸುತರನೊಟ್ಟೈಸಿ ಮುಂದಕಂ ಹೊಳಕುತಿರಲರ್ಜುನಂ ಕೊಲಲು (ಜೈಮಿನಿ. ೬೬ ೩೫ಕನ) . ೧೫. ಎರಗು ; ಮೇಲೆ ಬೀಳು : ಹಳಚಿದನು ಕರ್ಬೊಗೆಯ ತೆರದಲಿ ಹೊಳಕಿದನು ಭೇರುಂಡರೂಪಿನಲಿ . . . ಮುಳಿದು ಕೊಂದನು ಕಲಿಘಟೋತ್ಕಚನವಿತಸ್ಯನಿಕವ (ಕರ್ಣಾಟ. ೨೩-೬೩). [< ಪೊಳ್₁]

Δ **ಪೊಳಂಪು** 'ಪೊಳಪು' ನೋ.

**ಪೊಳಕಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಗುಳ್ಳಕೆ ಪೊಳ ಕಾಯಿ . . . ಮಹಕಂಚಿ ಮಾತಂಗಿ ಬಿಕ್ಕಾಯಿ ಎಲ್ಲ ನಾನಾಕದಾ ಕಳ್ಳ ದೇವತೆಗಳನ್ನಿಲ್ಲದೆ ಒಲಿಸಿವರು (ಬಸವ. ೩೯-೨). [ ? ]

**ಪೊಳಕಿ** (ನಾ). ಒಂದು ಬಗೆಯ ಸಸ್ಯ : ಪೊಳಕಿ_ಸನ್ನಾಗಿದ; ಬೈಲು ಶೀಮೆಯ ಅಡವಿಯಲ್ಲಿ ಬಹಳ (ಕರಾಗ. ೪೩). [ ? ]

**ಪೊಳಕಿಸು**, ಹೊಳಕಿಸು (ಕ್ರಿ). ೧. ಅಲುಗಾಡಿಸು ; ಹೊರಳಾಡಿಸು : ಕಾಗೆಯಂತೆ ಕಡೆಗಣ್ಣೊಳ್ಳೆ ನೋಡುತ್ತುಂ ಕೀಟಟ್ಟಿ ಕುದುರೆಯಂತೆ ಬಾಯುಂ ಪೊಳಕಿಸುತ್ತುಂ (ರಚಿಸಿಶ್ರು. ೩-೧೩೬). **ಹೊಳಕಿಸು :** ೨. ಮುನ್ನುಗ್ಗುವಂತೆ ಮಾಡು : ಜವದಿಂದೆ ತದ್ವರೂಥಮನಿರದೆ ಸೌಭರಿಯು ಸುವಿರಾಜದಿಂ ಹೊಳಕಿಸಲ್ ಮೇಘುವರ್ಗಾದೊಳ್ (ಶೀಕಾಂ. ೨೩-೩೩). ೩. ಹೊಳೆ ; ಪ್ರಕಾಶಿಸು : ದಿನಕರನ ಪ್ರಭೆಯಂತೆ ಹೊಳಕಿಸು ತಸಮಕೋವದಲಿ . . . ಕರಗಳ ಮುಗಿದನಾ ದ್ವಿಜನು (ಕುರುಮ. ೩-೦೩).

[ಪೊಳಕು₁ ( < ಪೊಳಂಕು) + — ಇಸು₁]

**ಪೊಳಕು₁** 'ಪೊಳಂಕು' ನೋ.

**ಪೊಳಕು₂** 'ಪೊಟಕು' ನೋ.

**ಪೊಳಚು**, ಹೊಳಚು (ಕ್ರಿ). ೧. ಕತ್ತರಿಸು ; ತುಂಡರಿಸು : ಚಳೆದ ರದಂ ಕಡಿದಿಕ್ಕಿದ ಸೊಂಡಿಲು ಪೊಳಚಿದ ಕಿವಿ ಕತ್ತರಿಸಿದ ಬಾಲಂ ಗಳಿನಾ ಬಲ್ಲಾನೆಯ ಬವರದ ನೆಲನತಿ ವಿಭ್ರಾಜಿಸಿತು (ಶಮ. ೬-೯೦). **ಹೊಳಚು :** ೧. ಮಮ್ಮಳಿಪ ಮಲಯುರುಹವೃಕ್ಷಂಗಳಂ ಕಂಡು ಹೊಳಚಿ ತಂದಾ ಸೆಕ್ಕೆಗಳನೊಳಗೊಳಗೆ ಶೋಧಿಸಿ ತನ್ನ ಕಂಬಿಯ ಸೆಲಹನಿತ್ತರದಲ್ಲಿ ಸುತ್ತಲು ಸೆಕ್ಕೆ ಬಿಗಿಬಿಗಿದು (ಚಕ್ರ. ೪೩-೨೩) ; ಬಿಳಿಯುಳ್ಳಿಯು ಸುಲಿದು ಹೀಂದು ಮುಂದಂ ಚಿವುಟಿ ಹೊಳಚಿ ನಡುವಣ ದಿಂಡ ತೆಗೆದು (ಸೂಪಶಾ. ೩.೬). ೨. ಒಡೆ; ಸೀಳು : ಸ್ಫಟಿಕದ ಘಟವ ಹೊಳಚಿದಂತೆ ಒಳಹೊಡಿ ಗೆನ್ನದೆ ನಿರ್ಮಲ ತೋರುವಂತೆ ಅದಬಿರವು ಸುಚಿತ್ತನಾಗಿ ನಿಂದುದು ನಿರ್ಮಾಯ (ಅಕಾಮೂ.೪. ೦೩೯-೦೬೬) ; ಸತಿಸಹಿತ ವಿರಕರಾಘಾತಗೈದಪುವು ಕರಿತತಿಗಳಿದ ಮರ್ದಿಸಲ್ವೇಳ್ಕೆನುತ ಕರವಿದ್ದ ಹತಿಯಿಂದ ಮಸ್ತಕವ ಹೊಳಚು ವನೊ ಭಾಸ್ಕರನೆಸಲ್ಕೆ ವಿರಕಿರಣದಿಂದೆ (ವಂಕಾರಾ. ೩-೬-೨೦). ೩. ಒದೆ: ಆ ರಾಮನಟ್ಟಿಯುಂ ನಲವಿನಿಂಮುಂಗುಷ್ಟದಿಂ ಕುಟ್ಟಿ ಹೊಳಚ ಲದು ಪಲವು ದಶಯೋಜನಂ ಪಾರಿ ಪೋಗಲ್ಕೆ (ತುರಂಗ. ೪೯-೩೬). [ ? ]

**ಪೊಳಪು**, ಪೊಳಂಪು, ಪೊಳೆಪು, ಹೊಳಪು, ಹೊಳಹು (ನಾ). ೧. ಪೆರುಗು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು . . . ಹಬೆ, ಪೊಳಪು, ಪೊಣರ್ . . . ಮಸೆ _ ಈ ೧೪ ಕಾಂತಿ" (ಳಕಾ. ೩೩-೨೦೨); ಮಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡುತೆ ನಸುನೇಲ್ದ ಕರ್ಣಾಟೇಕರ್ಣಪೂರನ ಪಾಲಿಗಳುಂ (ಶಂಪಜಾ. ೨-೪೯ ವ) ; ಪೊಸವಿಸಿಲ ಪೊಳಪಿನಿಂ ನುಣ್ಣನುಜ್ಜಳಿಪ ರನ್ನದೆಳ ವೆಳಗಿನ ಬಳಗದಿಂ ಬಣ್ಣಿಸಿ ಸುರಶರಾಸನಂಗಳನೆಟಲಿಕ್ಕಿನಂತ ನಿಮಿರ್ಪ ನಿರ್ಝರಂಗಳುಮನಪ್ಪುಕೆಯ್ದು ಕೇಳೀಪರ್ವತನಿತಂಬಂಗಳೊಳಂ (ಕಾದಂಬ. ೩೩೬) ; ಸುಲಿಪಲ್ಲ ಬೆಳಗುಂ ಕಣ್ಗಳ ಕಾಂತಿಯುಂ ಮುಖದ ಶಾಂತಿಯು ಪೊಳಪುಂ . . . ದಟ್ಟೈಸಿ ಮೆಱೆಯೆ (ಶಿಸ. ೯-೭೩). ೨. ನಡುಗುವಿಕೆ ; ಅಲ್ಲಾಡುವಿಕೆ: (೬). ೩. ಉಯ್ಯಾಲೆ; ಜೋಕಾಲಿ; ತೂಗುಮಣೆ:(೬). ೪. ಕುದುರೆಯ ಓಟದಲ್ಲಿ ಒಂದು ಬಗೆ : ಪೊಳಪು ಗತಿ ವೇಡೆ ಜೋಡತಿ ಚಳಕಂ ದೂವಾಳಿಬಡಿಪುದಾಳಿಯರ ಮನಂಗೊಳಿಸಿರೆ ತುರಂಗಗಳ ವಾಹಳಿ ವಾಹಕರಿಂದೆ ಮೆಱೆದುದಾ ಪೊಜವೊಳಲೊಳ್ (ಶ್ರೀಶೈಲ. ೦೭-೦೬).

Δ **ಪೊಳಂಪು :** ೧. ಬೀಜರೂಪದ ಪೂದುಟಂಗಲ ಪೊಳಂಪಿನಿಂ (ಜಗನ್ನಾಶೇ. ೩-೨೦ ವ). **ಪೊಳೆಪು :** ೧. " ತೊಳಗೆನೆ ಮಿನುಗೆನೆ . . . ಪೊಳೆಪು ಪೊಣರು ಮಸಯೆನೆ ತಳಪಮೆನಲ್ ಕವಿಗಳಿಂದ ಕಾಂತಿಯೆನಿಕ್ಕುಂ " (ಶಬ್ದಮ. ೦೦೦) ; ತಲದೊಳ್ ತಂಬುಲದೆಲೆಗಳ ಪೊಳಪಮರ್ದಿರೆ ದೇವಕನ್ನೆ ಪಾತ್ರೊರ್ವಳ್ ಕೋಮಲಲತೆಯ ನಿಮಿರ್ದ ಕುಡಿಯೊಳ್ ೧೪ ಪಾಯ್ವುದ್ದನಿಸಿ ಸತಿಗೆ ತಂಬುಲಮಿತ್ತಳ್ (ಅಂಶ್ರ. ೭-೧೨) ; ಮೇಲೆ ಬೀಳ್ವ ಸಿಡಿಲಂತೆ ಬಂದೆಜಗುವ

ದುರ್ನಿರೀಕ್ಷತೀಕ್ಷ್ಣಾಯುಧಂಗಳ ಪೊಳಪುಗಳುಂ ಚಕ್ಷುರಿಂದ್ರಿಯಮನನವರತ ಮುಗಿಬಗಿ ಮಾಡುತ್ತಿರೆಯುಂ (ಧರ್ಮ. ೧೧-೯೭ ವ). ಹೊಳಪು : ೧. ಪುರಹರಪ್ರಸಾದದಿಂದ ರಂಜಿಸಲ್ಕೆ ಗಂಜಿಯಟ್ಟು ಶರಣಸಂಗದಿಂದೆ ಘಟ್ಟಿ ಸುತ್ತೆ ಹೊಳಪ[ಶಾಣಂ ಹ]ನೊಪ್ಪವಿಟ್ಟು (ತಿರುಕೊಂ. ೮೧. ೨೩೩-೦೪); ಬೆಳ್ಳಿಯು ಅಂದವಾದ ಬಿಳೀ ಬಣ್ಣದ ಧಾತು. ಅದಕ್ಕೆ ಹೊಳಪು ಜಾಹ (ಮುಂಜಿಯು. ೪-೧೨೦); ಗಾಜನ್ನು ತಯಾರಿಸುವುದು ಹಾಗೂ ಹೊಳಪನ್ನು ಕೊಡುವುದು ಒಂದು ಕೈಗಾರಿಕೆಯಾಗಿತ್ತು (ಕಶ್ಮಸ್ತ್ಯ. ೩೦೦). ಹೊಳಹು : ೧. ಅಪ್ಪುವಿನ ಮಱೆಯ ಪಡುವರ್ಣದ ಟಿಪ್ಪಣದಂತೆ ತೇಜದ ಮಱೆಯ ನವಗುಣದ ಹೊಳಹಿನಂತೆ (ಕೋಲಶಬ. ೧೧-೪೦); ಕಂಗಳಿನ ಮಿಂಚಿನ ಹೊಳಹಿನಲಿ ನಡೆಗೆಟ್ಟು ನಿಂದರು ಚಿತ್ರವಿಹ್ವಲರು (ಕುಮ್ಹಾರ. ೦-೨೫); ಹಳದಿಯ ಹೆಡೆಯನು ಬಚ್ಚಿಟ್ಟೋ ಬೇಗಾ ಹೊಳಹಿನ ಹೊಂದಲೆ ತೂಗೋ ನಾಗಾ (ಕಪಿಳ. ೨-೩೦). ೪. ದಾಟುದೀಟು ಹೊಳಹು ಹೊಮ್ಮುಚ್ಚುವಡೆ ಮೋಡಿ . . . ವರತರಹಮುಂಬ ನವೀನಗತಿಗಳೊಳು ತನ್ನ ಮನಸಮೆ ಹಯದ ತನುಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಱುತ (ಭುಜಾ್ಸ್ರ. ೬-೩೦ ವ); ಹೊಳಹು ದೂವಾಳಿಯುಲಿ ಪಾರ್ಥನ ಕೆಲಕೆ ಬಿಟ್ಟನು ರಥವ (ಕುಮ್ಹಾ್ಭ. ೦೪-೩೫). ೫. ಚೆಲುವು ; ಸೊಗಸು : ಸುಳದು ಸುಖದಲಿ ತನ್ನ ಲೀಲೆಯ ಬೆಳೆಸಬೇಕೆಂದೊಂದು ವೇಷದ ಹೊಳಹಿನಲಿ ಬರುತಿರಲು (ಶ್ರಕುಂ. ೧೧-೩). ೬. ಸ್ವರೂಪ ; ಲಕ್ಷಣ : ಮೆಯ್ದುಗೆದಂದದಱೊಳಗೆ ಹಸರೆನಗೆಯ್ದು ಬೇಕಿನ್ನುಸಲೇಯೆಂದಯ್ದುಬಾಣವ ಕೋಡು ಯಂತ್ರದ ಹೊಳಹೋಕ್ಷಿಸಿದ (ಸಂಶಶ. ೩೦-೩೨); ಪಂಡಿತನು ಪ್ರಹುಡ ತಾನೆಂಬ ಭಾಷಗಳಂತೆ ಕುಂಡಲಿಯ ಹೊಳಹ ಕೇಳ್ದರೆ ಕುದಿವನಂತೆ (ಕಶ್ಯಶ. ೨೫-೪). ೭. ರೂಪರೇಷೆ ; ಯೋಜನೆ : ಕನ್ನಡನಾಡಿನ ಚರಿತ್ರೆಯ ಚಿತ್ರಕ್ಕೆ ಅವು ಹೊಳಹನ್ನು ಹಾಕಿ ಕೊಟ್ಟಿವೆ (ಕಶಾಕ. ೩೮); ಹೊಳಲ ಹೊಳಹನು ಹಾಕುವವರಿಗಿದು ತಿಳಿದಿತ್ತೋ ಇಲ್ಲವೋ ನಾನರಿಯೆ. ಕವಿ ಕುಡನಿಂತು (ಕನುಣ್ಣ. ೭೬-೦೩); ವೃಕ್ಷದ ಚೆಲುವಿನಲ್ಲಿ ಅವ್ಯಕ್ತದ ಹೊಳಹನ್ನು ಐಹುಸುಲಭವಾಗಿ ಗುರುತಿಸುತ್ತದೆ (ತಿಂಡ. ೨೧೦). ೮. [ನಾಟ್ಯ] ಕರಣಗಳಲ್ಲಿ ಒಂದು : ಮತ್ತಂ ದೀಡುಮುಂಡಾಸನಂ ದಪ್ಪ ಸರಣ ಒಳಗಭವರಿ ಹೊಳಹು ತಿರಿವು ಸಮಾಗಾಟಿ . . . ಲಂಕಾದಹನಮೆಂಬ ಪಲವುಂ ತೆಱದ ಕರಣಂ ಗಳಿಂ ವಿಚಿತ್ರಮಪ್ಪ ಚಿತ್ರವಿದ್ಯೆಯಿಂ ಲಾಸ್ಯ ತಾಂಡವಮೆಂಬೆರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಶ. ೨-೨೬ ವ).

ಹೊಳಪಾಗು = ಮಳೆ ನಿಂತ ನಂತರ ಬೆಳಕುಂಟಾಗು ; ಮಳೆಯ ಮೋಡವಿಲ್ಲದಾಗು ; ಹೊರವಾಗು : ಹವೆಯ ಸ್ಥಿತಿಯನ್ನೂ ಮಳೆ ಬರುವದನ್ನೂ ಹೊಳವಾಗುವುದನ್ನೂ ಮುಂದಾಗಿ ತಿಳುಕೊಳ್ಳುತ್ತಾರೆ (ಮುಂಜಿಯು. ೩-೬೦). ಹೊಳಹು ಹಾಕು = ೧. ಮಿಂಚಿನಂತೆ ಸುಳಿ ; ಸ್ಫುರಿಸು : ತಿರುಗಿ ತಲೆಯಲ್ಲಿ ಹೊಳಹು ಹಾಕಿದ ಸಂಶಯ ಬಾಯಿ ಬಿಡದಾಯಿತು (ಹುಕುಣ. ೯೬). ೨. ರೂಪರೇಷೆ ಹಾಕು ; ಯೋಜನೆ ಹೂಡು : ಏನಾದರೂ ಮಾಡಿ ಗುಂಡನನ್ನು ಮತ್ತೆ ಹುರಿದುಂಬಿಸಬೇಕೆಂದು ಅವನು ಹೊಳಹು ಹಾಕಿ . . . ಕೇಳಿದನು (ಕಂಗಕೊ. ೩೦); ಇಬ್ಬರೂ . . . ಹೊಳಹು ಹಾಕಿ ಅತ್ಯಂತ ಉತ್ಸಾಹದಿಂದ ಈ ತುಣುಕುನೆಲದ ಮೇಲೆ ಒಂದು ಉದ್ಯಾನದ ಕಲ್ಪನೆಯನ್ನು ಹಬ್ಬಿಸಿ ಬಿಟ್ಟಿದ್ದಾರೆ (ಭಕ್ಯ. ೨೨೬). [ಪೊಳೆ$_1$ + — ಪು. / ಮಲ. ಪುಳಪ್ಪು]

ಪೊಳಪೇಱು, ಹೊಳಪೇರು (ಕ್ರಿ). ಕಾಂತಿ ಹೆಚ್ಚಾಗು ; ಕಳೆಯೇರು : ವದನಸುಧಾಮರೀಚಿಯೊಳಣಂ ಪೊಳಪೇಱೆ ವಿಲೋಚನಂಗಳೊಳ್ ಪುದಿದ ವಿಳಾಸವೇಱೆ . . . ನವಯೌವನವೇಱಿದುದಾ ಕುಮಾರನೊಳ್ (ಕಸುಚು. ೩-೦೦೪); ಪೊಸನೀರ ಹೂರದೊಳಗೆ ಮಱುಮೀನ್ಗಳು ಮಸಗಿ ಮುಂ ಪೊಳೆದಾಡುವಂತೆ ವಿಸುಗುವ ವರಲಾವಣ್ಯಾಂಬುಧಿಯಲಿ ಕಣ್ಣೆಸೆದುವು ಪೊಳಪೇಱೆ ನಗುತ (೪೦ಶಬ. ೧೧-೩೯). ಹೊಳಪೇರು : ಅವನನ್ನು ನೋಡಿದ ಕೂಡಲೆ ಅವಳ ಕಣ್ಣುಗಳು ಹೊಳಪೇರಿದುವು (ಕೂಖ).

[ಪೊಳಪು + ಏಱು$_1$ (< ಏಱ್$_1$)]

ಪೊಳಯಿಸು 'ಪೊಳೆಯಿಸು' ನೋ.

ಪೊಳಲ್ ' ಪೊಟಲ್$_2$ ' ನೋ.

ಪೊಳಲಿಚ ' ಪೊಟಲಿಚ ' ನೋ.

ಪೊಳಲು ' ಪೊಟಲ್ ' ನೋ.

ಪೊಳವಳಿಗೆ ' ಪಳವಳಿಗೆ ' ನೋ.

ಪೊಳವೆ (ನಾ). ಬಿದಿರಿನ ಸೀಳು; ದೆಬ್ಬೆ : ಒಂದುದಿನ ವಿಪಿನಕ್ಕೆ ಹೊರಟ ಕೇತಯ್ಯ ಚದದಿಂ ಬಿದಿರನುಂ ಸೋಸಿ ತರುವುದಕೆ ಹೋಗಿ ದಟ್ಟಿಸು ತರಿದು ಪೊಳವೆ ಸೀಳುತಿರೆ ನಾಗಭೂಷಣ ಗಿರಿಜೆ ನಂದಿಯನ್ನೇರಿ . . . ಬರಲು (ಚರಿ. ೦೭೨-೦೦).

[?. / ತಮಿ. ಪೋಲ್ = ಬಿದಿರು ; ಮಲ. ಪೊಳ್ಳ = ಬಿದಿರು]

ಪೊಳಸು (ನಾ). ಸಂಬಂಧ ; ಸಂಗ ; ಕೂಟ : ಪೊಳೆವನಿದಾಟಿದು ವೈಯಾರಿ ಮೆಪುದಳೆದ ಪಲ್ಲವಿಸಿಯ ಮೋಹನಾಕಾರ ಗಿಳಿದೇರನ ಕೈಕಠಾರಿ ನಿನ್ನ ಪೊಳಸಿಗೆ ಪೊಡಚಿಕೊಂಡಿಹಳಾ ನಾರಿ (ಕುವಿಕ್ಯ. VI. ೦೬೭೬ ಶೃಂಗಾರ ಸತಕ್ರೋಡಾಹರಣ). [?]

ಪೊಳಿ (ನಾ). (?) : ಆ ಸ್ಥಾನಮುಮಂ ಭಳರಿಯೂರಂ ಬನ್ದ ಸಿಳ ಕೆಬ್ಬಾಯುಂ ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಬಳಿಕೆಱೆಯ ಕೀಟಱೆರಿಯ ಬೇರುಂಗಾಲಲಂ ಒಕ್ಕಲೊಳೊನ್ದು ಪೊಱೆಯುಂ ಕಯುಂ ವದಿಕೆರ್ಳಂ ಭತ್ತಮುಂ ಏಸಲು ಬಳಿವತ್ತಮುಂ ಸಲ್ವುದು (ಎಕ. III. ಶಂಜಕ. ೦೬೩-೦೦ ;977). [?]

ಪೊಳಿಪೊನ್ ? (ನಾ). (?) : ಸುರಿಗೆ ಸಪನ್ನುಂ ಪೊಳಿ ಪೊನ್ನೆವಿ ಕೊಟ್ಟ ಪುನ್ನಿಣಲ್ಕಟನಿ ಕೊಟ್ಟತ್ತು ಕೆಡಿಪೊನ್ನಪ್ಪುವಹಾಪಾತಕ (ಎಕ. XIV. ತಿರುಮ ೨೩೩-೦೨ ; ಸು. ೪೦೦). [?]

ಪೊಳೆ$_1$, ಹೊಳೆ$_1$ (ಕ್ರಿ). ೧. ಪ್ರಕಾಶಿಸು ; ಥಳಥಳಿಸು : ತುಂಗಗಿರಿಶಿಖರ ದಿಂದಂ ಲಂಗಿಸಿ ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ ಪೊಂಗಿ ಸೂದರ್ಗುಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಶಾಶ್ವಶಾ. ೦೦೦೪ ಕೂತ್ರ೪); ಓರಿಯ ಮಾರ್ಗಂಗಳೆ ಮಾಡವಾಗೆ ಪೊಳೆವೆಳ ದೀರ್ಗಳೆ ಸೆಜ್ಜೆಯಾಗೆ . . . ಪಣ್ಪಾಲಮೊತ್ತಿದ ಬೋನಮಾಗೆ ಸಿರಿಯ ಮಹಿಮೆಯಂ ಮೆಱೆಯಲೇನಾರ್ತುದೊ ಬನವೊಳ್ಪಿರ್ದರವಾ ಪಾಂಡವರಾ (ಪಂಪಭಾ. ೬-೨೬); ಮದುದಾತ್ಮಜ ನಿಜರಿಪು ತಲೆಗರೆದಿರ್ದಪನಿಲ್ಲಿ ನೋಡು ಕೊಳದೊಳಗೆಂಬಿತರೆ ಪೊಳೆದು ತೋರ್ಪ ಜಲಚರಪರಿಕರಮಱೆಪುವು ಶಾಮೆ ದುರ್ಯೋಧನನಂ (ಗದಾಯು. ೬-೯೬); ಪೊಳೆಯುತಿರ್ದುದು ಬಿಸಿಲ್; ಕಂಡಕೆಲ್ಲದನಾಕೆ (ಕಣ್ಣಂಗ. ೩೨-೦೩೪). ೨. ಕಳೆಯೇರು; ಶೋಭಿಸು; ವಿಜೃಂಭಿಸು : ಬಾಗುತೆ ಬಲಿಯುತೆ ಪೊಳೆದಿನಿದಾಗುತೆ ದಳವೇಱುತಿದಿದಿದು ಹಿಗ್ಗುತೆ ಪೂವಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (೧೦೪. ೨-೩೦). ೩. ಪ್ರತಿಬಿಂಬಿಸು; ಪ್ರತಿಫಲಿಸು : ಸುರುಚಿರ ಸಾಲಭಂಜಿಕೆ ಬೆಮತುರ್ರದೊಳ್ ಪೊಳೆಯುತ್ತಿರಲ್ಕೆ ಮತ್ಸರಿಸಿದಳ್ . . . ಮನೋಹರನನೀಕ್ಷಿಸಲಿತ್ತುವಿಲ್ಲ ಹರ್ಷದಿಂದಿರದುಗುತರ್ಪ ಬಾಷ್ಪಮೆನೆ ಗೆಂದು ಲತಾಂಗಿಯಬಲ್ಲು ಬ್ಬಾಡದಳ್ (ಶಾದಂಕ. ೩೨). ೪. ಹೊಯ್ದಾಡು; ಅಲುಗಾಡು ; ಚಲಿಸು : "ಪೊಳ್—ಲುಠನೇ (ಹೊರಳು), ನವ್ಯರ್ಥೇ ಚ ಪೊಳಂ (ಪೊಱ್)" (ಕಸುರಾ); ಉನ್ಮತ್ತಬೇಷ್ಮೆಯಿಂದೆರೆಯಂ ತಿಂದ ಮೀನಂತೆ ಪೊಳೆಯುತ್ತುಂ (ಧರ್ಮಾಮೃ. ೩-೦೩೬) ; ನಿಮಿರ್ದುವು ಪೊಳೆದುವಳುಂಕಿದುವು ಮರ್ದುವು ಚುಂಬಿಸಿದುವಪ್ಪಿದುವು ಸಂಭ್ರಮದಿಂ ಸಮದೃಷ್ಟಿಯಾಗಿ ಸಿಲ್ಕಿದುವಮೆಯಿಕ್ಕಲ್ಕಱಿದುವವಳ ಧವಳಕಟಾಕ್ಷಂ (ಕಮುಕ. ೨೫೫ ಶ್ರಯೋ) ;

ಮೂಸಿದೊಡೆ ನಾಸಾಗ್ರಮನುರ್ಚುವ ನಕ್ಕಿದೊಡೆ ನಾಲಗೆಯೊಳ್ನಡುವ ಪೊಳೆದೊಡೆ ಬೆನ್ನೊಳ್ಮೂಡುವ್ವೂರಸಿದೊಡೆ ಬರಿಯಂ ಕೊಱೆವ . . . ಪಲವುಂ ಬಗೆಯ ಗಾಣಂಗಳಂ . . . ಬರ್ಚಿ ಬೀಸಿದಾಗಳ್ (ರಾಜಶೇ. ೩-೦೦೯೪). ೫. ಅಸ್ಥಿರವಾಗು; ಚಂಚಲವಾಗು: ದಂತಿವಾಹನಂ ದಂತಿವಾಹನನೆಂಬ ಪೆಸರನನ್ವರ್ಥನಂ ಮಾಡಿ ಪೊಳೆಯದೆ ಕಳವಳಿಸದೆ ಪಱುವಿನೊಳ್ ಪೋಗುತ್ತಂ (ಪುಣ್ಯಾಸ್ರ. ೨೪-೯ ವ). ಹೊಳೆ₁: ೧. ಹೊಳೆವ ಕೆಂಜಡೆಗಳ ಮಣಿ ಮುಕುಟದ ಒಪ್ಪುವ ಸುಲಿಪಲ್ಲ ನಗೆಮೊಗದ . . . ದಿವ್ಯಸ್ವರೂಪವನು ಕಂಡೆನಾನು (ಹರಿಶ್ಚಂ. ೬. ೩೨-೬೮); ಎಳೆಯ ರವಿರಶ್ಮಿಗಳು ರಕ್ತೋತ್ಪಲದೊಳಗೆ ಹೊಳೆವಂತೆ ಹೊನ್ನರ ಬಳಿದ ಹಿಳುಕನೆ ಕಾಣಲಾದುದು ಭಟನ ಕಾಯದಲಿ (ಕುಮಾ.ರಾಮ. ೬-೫೦): ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರ ನೆಳಲಲ್ಲಿ ಮೊಗವ ನೋಳ್ಪಂತೆ (ಪ್ರಭು. ೦-೦೦೪); ಧಾತುಗಳು ಕಾಜಿನಂತೆ ಹೊಳೆಯುತ್ತಿವೆ (ಕನ್ನಡಿಯು ೯-೯೨). ೨. ಇಂತು ನವಮಾಸವಾಕೆಯೊಳಾಗೆ ಸನ್ನುತಂ ಅಂತಃಸ್ಥಳದೆ ಪುಣ್ಯಶಿಶು ತೊಳಗಿ ಹೊಳೆವುತಂ (ಬಸವ. ೦-೧೨೦). ೪. ಹೊಳೆವ ಸಿಂಧುದ ಜಡಿವ ಕಹಳಾವಳಿಯ ಲಗ್ಗೆಯ ವಿವಿಧವಾದ್ಯದ ಕಳಕಳದ ಕಾಲಾಳ ಬೊಬ್ಬೆಯ ಬಹಳರಭಸದಲಿ . . . ಸಂದಣಿಸಿತತಿರಥರು (ಕುಮಾ.ರಾಮ. ೬-೨). ೬. (ಮಾತಿಗೆ) ತಪ್ಪು; ನುಣುಚಿಕೊಳ್ಳು: ಕವಟವನು ಬಿಡರಾತ್ಮಬುದ್ಧಿಯೊಳುಪಮೆಗಾಣದೆ ನುಡಿದು ಹೊಳೆವರು ಚಪಲಚಿತ್ತದಿ ಮನವ ಮೆಚ್ಚಿಸಿ ಮಾತನಾಡುವರು (ಪಳಕ. ೩-೨೯): ಬೊಮ್ಮನೆಮ್ಮೊಡನಾಡಿ ಹೊಳೆದನೇ ಅಟಕಟ ತಮ್ಮ ಭಾಗ್ಯದ ಶರಧಿ ಬತ್ತಿ ಬಯಲಾದುದು (ಕಬಪು. ೯೯-೨೬); ಉದ್ರೇಕದಿಂ ಮುನಿಪರನೊಳಾಡಿ ತಪ್ಪಿದ ಗುರುದ್ರೋಹವೊಂದಚ್ಯುತನೊಳಾಡಿ ಹೊಳೆದ ದೈವದ್ರೋಹಮೆರಡು (ಕೃಷ್ಣಾ. ೯-೨). ೭. ಬೇರೆಯ ಕಡೆಗೆ ತಿರುಗು; ಪಕ್ಕಕ್ಕೆ ಹೊರಳು: ತಳೆದನು ಬಲಭದ್ರರಾಮನ ಗದೆಯುರತಳದ [ಗದೆಯೇಱ ತಳೆದ] ಭೈರವನುಪಟಳಕೆ ಹೊಳೆದು ನೀಲಾಂಬರ ನೇಗಿಲ ಕೊರಲ್ಗಿಕ್ಕಿ ಸೆಳೆದವರ್ ಪೊಯ್ದಾಡಿದರು (ಮೋಹತ. ೪೯-೦೯). ೮. ವೇಗವಾಗಿ ಹೋಗು; ಮುನ್ನುಗ್ಗು: ಕೆಲಕೆ ಹೊಳೆದವು ಕಡುಗುವರೆ ನೆಲನಳುಕೆ ನಡೆದವು ದಂತಿ (ಕುಮಾ.ರಾಮ. ೦೨-೮). ೯. ತೋರು; ಕಾಣು; ಪ್ರಕಟವಾಗು: ಮನದೊಳಗೆ ವಿಸ್ಮಯರಸಂ ತುಳುಕುತಿದೆ ಮನ್ನ ನೆನಹಿನೊಳು ಶಿವರೂಪು ಹೊಳೆವುತಿದೆ (ಕಬಪು. ೯-೬). ೧೦. ಸ್ಫುರಿಸು; ಸ್ಫುಟವಾಗು: ಮೂಡಿದನೆಂಬುದು ಮನದಲ್ಲಿ ಹೊಳೆವರೆ ವಿಡಿಸಿ ಕಾಡಿತಪ್ಪ ಶಿವನ ಡಂಗುರ (ಬಸವ. ೨೪೯); ಈ ವೇಳೆಗಾಗಲೆ ಮನದೊಳು ಹೊಳೆದಂತೆ ಕನ್ನಡಕವಿತೆಯ ರಚಿಸಿ ತೋರಿದ (ಶಂಕರಾ. ೨೪-೫); ಇಂತಹ ಒಂದು ಸನ್ನಿವೇಶ ಆ ಹೊತ್ತಿನಲ್ಲಿ ನಡೆಯುವುದು ಹೇಗೆ ಸಾಧ್ಯ? ಎಂಬುದೂ ಅವನ ವಿವೇಕಕ್ಕೆ ಹೊಳೆಯದೆ ಹೋಯಿತು (ಶತ್ಯಸ. ೦-೯).

[ದೇ.॥ ತಮಿ. ಪೊಲಿ; ಮಲ. ಪುಳಿ, ಪುಳಯು; ತೆಲು. ಪೊಲಯು]

**ಪೊಳೆ₂, ಹೊಳೆ₂** (ನಾ). ಕಾಂತಿ; ಹೊಳಪು: "ಬೆಳಗಿನೊಳ್ ಪೊಳೆಯ ನಿಕ್ಕಂ" (ಶಂಬರ. ೨೬). **ಹೊಳೆ₂:** ವಜ್ರದಲ್ಲಿ ಬಟುವಾಗಿ ಕೆಂಪಾಗಿ ಹೊಳೆಯುತೆಯಿರುವ ಬಿಂದುವು (ಶಾಸಂ. ೩೬೯-೮). [< ಪೊಳೆ₁]

**ಪೊಳೆ₃** 'ಪೊಱೆ³' ನೋ.

**ಪೊಳೆಯಿಡು** (ಕ್ರಿ). ಪ್ರಕಾಶಿಸುವಂತೆ ಮಾಡು; ಹೊಳಪು ಕೊಡು: ವಿಳಸಿತಪುಷ್ಪದೊಂದು ಪೊಳೆಪು ತಳೆದಿರ್ದುದನಿಂದುಲೇಖೆಯುಂ ಪೊಳೆಯಿಡ ವೇಟ್ಟುದೇ (ಕಗು. ೦೦-೦೦೨). [ಪೊಳೆವು (< ಪೊಳಪು) + ಇಡು₁]

**ಪೊಳೆವು** 'ಪೊಳಪು₁' ನೋ.

**ಪೊಳೆವುವಡೆ** (ಕ್ರಿ). ಕಾಂತಿಯನ್ನು ಹೊಂದು; ತೇಜಸ್ಸನ್ನು ಪಡೆ: ಮುತ್ತುಮೊರ್ಮೆ ಮಿಸುಪೆಸಟ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯನೀಡಾಡಿ ಪೊಳೆಪುವಡೆದ ಪಲ್ಲಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ದಳ್ (ಚಾಣಾ. ೩೦೫). [ಪೊಳೆವು (< ಪೊಳಪು) + ಪಡೆ₁]

**ಪೊಳೆಯಿಸು, ಪೊಳಯಿಸು, ಹೊಳಸು, ಹೊಳೆಯಿಸು, ಹೊಳೆಸು** (ಕ್ರಿ). ೧. (ನಾಲಗೆಯು ಮಿಂಚುವಂತೆ) ಹೊರಳಿಸು; ಆಡಿಸು: ನೀವಿಾಗಳ್ ಪೊಱಲ್ಗೆ ಪೋಪಾಗಳ್ ನಿಮಗೆರಟ್ಟುಕಿಂಗನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀಮೊದಱಿಯವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋಕುಂ (ವಡ್ಡಾರಾ. ೦೦೦-೮). ೨. (ಮಿಂಚಿನ ಹಾಗೆ) ತಿರುಗುವಂತೆ ಮಾಡು, -ಸುತ್ತಿಸು: ಘೋಟಾಯ್ಲರ್ ಪೊಳೆಯಿಸೆ ಬಿಸಿಲ್ಗದಿರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ (ಶಂಶಪು. ೦೦-೫೦ ವ). ೩. (ಆಯುಧ ಮೊದಲಾದುವನ್ನು ಮಿಂಚುವ ಹಾಗೆ) ಬೀಸು; ಝಳಪಿಸು: ಪಲಗೆಗಳಂ ಪೊಳೆಯಿಸಿ ಕಡಿತಲೆಯುಂ ಜಡಿದೆಯ್ದುವಣೆಯ ವೀರರನೆಚ್ಚಂ ಪಲಗೆಯುಮುರಮುಂ ತೆತ್ತಿಸೆ ತಲೆಯುಂ ಕಡಿತಲೆಯುಮೊಡನೆ ಪಱಿಯೆ ಮುಕುಂದಂ (ಕಗು. ೧೨-೧೭); ಇಭಪನಣೆದು ಬಿಟ್ಟಿಕ್ಕಲೆಂದಿರ್ಪ ವಜ್ರಾಂಕುಶಮುಂ ನಾನಾಪ್ರಕಾರಂ ಪೊಳೆಯೆ ಪೊಳೆ[ಪಾಠಾಂ. ಳೆ]ಯಿಸುತ್ತಿರ್ಪವಂ ದೇವರಾಜಂ (ಜಗದ. ೦೪-೬೬). **ಪೊಳಯಿಸು:** ೨. ಚಮ್ಮಟಿಗೆಗಳಿನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ ಕಡಂಗಿ ನಡೆಯುವ ಪೊಳಯಿಪ ದೂವಾಳಿಪ ಪೊಱವಡಿಪದಿರೇಱುವಡ್ಡಂಬರಿಯಿಪ ವಾಘೆಯೊಳ್ಸರಿಸಂಗೊಂಡು . . . ಶಾಳಿಹೋತ್ರನನಾಳಿಗೊಳ್ವ ಘೋಟಾಯಿಲರ್ ನೆರೆದು (ರಾಜಶೇ. ೬-೦೦ ವ); ಸುಳಿಸುಳಿದಶ್ವಮನೇಱುತೆ ಪೊಳಯಿಸಿ ಮಿಗೆ ದಂಡೆಗಾಡುತಿರ್ದುತೆ ಪೆಱಕಾಲ್ಗೊಳಿಸಿ ಪೆಡಂಮೆಟ್ಟುತ್ತಮವ್ವಳಿಸುತ್ತೆ ಪಳಂಚಿದ ತುರಂಗಿಗಳದಱೊಳ್ (ರಾಜಶೇ. ೦೪-೮೫). ೩. ತ್ರಿಜಗದ್ಭೂಷಣಮಾದ್ಯದ್ಗಜಮಂ ಬಂದೇಱಿ ಪೊಳ[ಪಾಠಾಂ. ಳೆ]ಯಿಸುತ್ತಂಕುಶಮಂ ವಿಜಿಗೀಷು ಲಕ್ಷ್ಮಣಂ ಮದಗಜದಡಕಿಲಿದೆನಿಸಿ ಪೊಕ್ಕನೊಡನರಮನೆಯಂ (ಶಂಶಾಮಾ. ೦೫-೯). **ಹೊಳಸು:** ೨. ತುರಗಪ್ರಸರವನು ಬೋಳೈಸಿ ರಥವನು ದೆಸೆದೆಸೆಗೆ ಹೊಳಸಿದನು ಲಾಳಿವಡಿಸಿದ ಮಹಾರಥವ (ಕುಮಾ.ಕ. ೭-೦೯). ೪. (ಮಿಂಚಿನಂತೆ) ತಿರುಗು: ಹೊರಳು: ಹೊಳಸಿದನು ದಿನನಾಥನಾಗಳೆ ಹೊಳೆಯಲಿಟ್ಟಳು ಜನನಿಯಿದ ನೀ ತಿಳಿದ ಕೆಲಸವೆನುತ್ತಲಪ್ಪಿದ ನೆವಡು ಕೈ ದಣಿಯೆ (ಕೃಷ್ಣಾಕ. ೦೨-೨೬). **ಹೊಳೆಯಿಸು:** ೫. ಪ್ರಕಾಶಗೊಳಿಸು; ಸ್ಪಷ್ಟಪಡಿಸು: ಆ ತರದ ಕ್ರಮಾಲಂಕಾರವನ್ನು ತೊಡಿಸಿದರೆ ಆ ರಾಣಿಯರ ಕುರೂಪವನ್ನು ಹೊಳೆಯಿಸಿದಂತಾಗುವುದು (ಶಾಕೋಶ. ೯೩); ಅವು ಕಥಾನಕದ ಸ್ಥೂಲಸ್ವರೂಪವನ್ನು ಮಿಂಚಿನಂತೆ ಹೊಳೆಯಿಸಿ ತೋರಿಸಬಹುದಾಗಿತ್ತು (ಕಪು. ೫೫). **ಹೊಳೆಸು:** ೫. ಗವಿಯುಳಿದ ಹೊನಲಿನಂತಿವರೆನಗೆ ಹೊಳೆಸುವರು ಗುಡಿಯಲ್ಲಿಯನು ತಳೆದ ದೇವಳೆಯು (ಮಲೆಯ. ೯೯-೭). ೬. ತೋರು; ಸ್ಫುರಿಸು: ತಿಳಿದ ಮಾತೆ ಹೊಳೆಸಿದಂತೆ ಎದೆಯ ಬೀಜ ಬೆಳೆಸಿದಂತೆ (ಅರಳು. ೯೯೭-೬). [ಪೊಳೆ₁ + -ಇಸು₃]

**ಪೊಳೆವಲ್** (ನಾ). ಕಾಂತಿಯುತವಾದ ಹಲ್ಲು; ಮಿನುಗುವ ಹಲ್ಲು: ನಿಟ್ಟಿಸಳುಗಂಗಳ ಸಂನಾಸಿಕದ ಪೊಳೆವಲ್ಲ ನಸುದೋಱುವ ಕಿಱುನಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನನಂ . . . ಕಂಡನವನೀಪಾಲನು (ಕೃಷ್ಣಾ. ೨-೪೮). [ಪೊಳೆ₁ + ಪಲ್]

**ಪೊಳೆವಾಳ್** (ನಾ). ಹೊಳೆಯುವ ಕತ್ತಿ, -ಖಡ್ಗ: ಬಳೆದುದು ಕೆಂದೂಳಿ ಖುರಾವಳಿಯಿನೆನಲ್ ನೆಗೆದ ತಮ್ಮ ರಜಮಂಬರದೊಳ್ ಬೆಳಗುವ ಕಿಸುಸಂಜೆಮುಗಿಲ್ ಪೊಳೆವಾಳ್[ಪಾಠಾಂ. ಪೊಳೆವಳೆ] ಮಿಂಚೆನಿಸೆ ಕಾದಿದರ್ ಘೋಟಾಯ್ಲರ್ (ಜಗದ. ೭-೫೮). [ಪೊಳೆ₁ + ಬಾಳ್₃]

**ಪೊಳ್ತಡ** 'ಪೊಟ್ತಱ್' ನೋ.

**ಪೊಳ್ತಡೆ** 'ಪೊಟ್ತಱ್' ನೋ.

**ಪೊಳ್ತರೆ** 'ಪೊಟ್ತಱ್' ನೋ.

**ಪೊಳ್ತಱ್** 'ಪೊಟ್ತಱ್' ನೋ.

**ಪೊಳ್ಳುಗಳೆ**, ಪೊಳ್ಳುಗಳೆ (ಕ್ರಿ). ೧. ವ್ಯರ್ಥವಾಗಿಸು; ಸತ್ತ್ವಗುಂದಿಸು: ಅಮಲಧರ್ಮಜನ ಕೀರ್ತಿ . . . ನಾಗೇಂದ್ರ ವರದಾಯುಧವ ಪೊಳ್ಳುಗಳೆದು ಮಥನಾಗೇಂದ್ರಧರನ ದಾತೆಯ ನಿಲವುಗೆಡಿಸಿ ನೆಱೆ ರಾಜಿಸಿತು ಮೂಜಗದೊಳು (ಕೃ.ಪಿ.ಕಾ. ೨.೦೨). ೨. ತುಚ್ಛವಾಗಿ ಕಾಣು; ಜರಿ; ಮೂದಲಿಸು: ಸುಧನ್ವ ಮತ್ತೆ ಅವನ ಅಗ್ಗಳಿಕೆಯನ್ನು ಪೊಳ್ಳುಗಳೆದುಡಿದ (ಐರಾಕ. ೩೮). **ಹೊಳ್ಳುಗಳೆ**: ೧. ಮಗುಳೆಚ್ಚು ಪುನರಪಿಯೆಚ್ಚು ಕರ್ಣನ ಹೊಳ್ಳುಗಳೆದನು ಪಾರ್ಥ ನಿಮಿಷದಲಿ (ಕುಭಾ.ಕ. ೨೩-೨೫); ಹಗೆಗೆ ಹೊಳ್ಳುಗಳೆವುದು ಹೃದಯವುಂ! (ಶ್ರೀಭಾಕೃ. ೩೩೯-೦೯೬). ೨. ಹೊಗಳಿ ಕೆಲವರ ಹೊಳ್ಳುಗಳೆವುತ ನಗುತ ಕೆಲವರನವರ ಮೋಹರ ತೆಗೆದು ಹೋಯಿತು (ಕುಭಾ.ಕ. ೫-೨); ಎಲ್ಲರನು ನೀ ಜಱಿದು ರವಾಡಿಸಿ ಹೊಳ್ಳುಗಳೆದೊಡೆ ನಿನ್ನಲೆನ್ನಲಿ ಹೊಲ್ಲಹೊಳ್ಳಿತನಱಿವ ಮಾತಂತಿರಲಿ ಹೇಳೊಂದ ಬಲ್ಲೆಯಾದೊಡೆ ನೀನು (ತ್ರಿಕುಂ. ೬-೬೦). ೩. ಸುಳ್ಳುಮಾಡು: ಸುಳ್ಳಾಗಿಸು: ನರನ ನುಡಿಯನು ಹೊಳ್ಳುಗಳೆವರೆ ಚರಣದಲಿ ಬೀಳುವೆವು ನಡೆಯೆಂದಿರುಳು ದ್ರೋಣನ ಮನೆಗೆ ಬಂದನು ಕೌರವರ ರಾಯ (ಕುಭಾದ್ರೋ. ೮-೩೪). [ಪೊಳ್ಳು + ಕಳೆ₁]

**ಪೊಳ್ಳುಗುಂಭ** (ನಾ). ಬರಿದಾದ ಮಡಕೆ; ಖಾಲಿಯು ಗಡಿಗೆ: ಬಸಿರು ಬಸಲು ಪೊಳ್ಳುಗುಂಭ ಬೇಡಗಾಳಿ ಅದರ ತುಂಬ (ಹ್ವರಸ. ೬೪-೯). [ಪೊಳ್ಳು + ಗುಂಭ₂ (< ಗುಂಬ₃)]

**ಪೊಳ್ಳುಗೆಡೆ** (ಕ್ರಿ). ಹುರುಳಿಲ್ಲದ ಮಾತನಾಡು; ಜಳ್ಳು ಮಾತನಾಡು: ಬಡವನೊಳ್ಪಿಯ ಮಾತ ನುಡಿದರಲ್ಲೆಂಬುವರು ಪೊಡವೀಶ ಪೊಳ್ಳುಗೆಡೆದರೂ ಕೈವಾರಿ ಕಡುನಗುತಲಿಹರು (ಸರ್ವಜ್ಞ. ೦೨೬೬). [ಪೊಳ್ಳು + ಕೆಡೆ₂]

**ಪೊಳ್ಳುನುಡಿ**, ಹೊಳ್ಳುನುಡಿ (ನಾ). ಹುರುಳಿಲ್ಲದ ಮಾತು; ಕೆಲಸಕ್ಕೆ ಬಾರದ ಮಾತು; ವ್ಯರ್ಥಾಲಾಪ: ಒಳ್ಳಿತೊಳ್ಳಿತು ವಾದವಾರಣದೊಳಗಾಡು ಕೊಳ್ಳಕೊಡೆಯು ಮಾಳ್ಪುದೆಂದು ಪೊಳ್ಳುನುಡಿಯಿಂದೇಕೆ ಪೋಗು (ಶೇಬಸಂ. ೧೭-೦೦೮); ಈ ಪೊಳ್ಳುನುಡಿಗೆ ಮೊದಲ ಮನಸು ನಗುತ್ತಿತ್ತು (ಎಕಸ. ೦೦೭). **ಹೊಳ್ಳುನುಡಿ**: ಸಾಕಿದೇತಕೆ ಹೊಳ್ಳುನುಡಿಗೆ ವಿವೇಕಿಗಳು ಮೆಚ್ಚುವರೆ (ಕುಭಾ.ಸ. ೨-೯೪); ಹೊಳ್ಳುನುಡಿಗಳನಾಡುತ್ತ ವೃಥಾ ಹೊತ್ತು ಕಳೆಯದೆ ಸಾಮರ್ಥ್ಯವಿದ್ದರೆ ಯುದ್ಧ ಮಾಡಬೇಕು (ರಾಜಸ.ಪ. ೨೨). [ಪೊಳ್ಳು + ನುಡಿ₂]

**ಪೊಳ್ಳುಬೆದರಿಕೆ** (ನಾ). ಸತ್ತ್ವವಿಲ್ಲದ ಬೆದರಿಕೆ; ಸುಳ್ಳುಬೆದರಿಕೆ: ನಿಮ್ಮ ಈ ತವಕು ಕಾಟ್ರೊ ಮಾತು, ಪೊಳ್ಳುಬೆದರಿಕೆ ಕೇಳಲಿಕ್ಕಂತೂ ಎನಗ ಸುತರಾಂ ಅವಕಾಶ ಇಲ್ಲ (ಹೂಸಂಗಾ. ೩೩). [ಪೊಳ್ಳು + ಬೆದರಿಕೆ (< ಬೆದಱಿಕೆ)]

**ಪೊಳ್ಳುಮರ** (ನಾ). ಒಳಗೆ ದಿಂಡಿಲ್ಲದ ಮರ; ಟೊಳ್ಳಾದ ಮರ: ಆಗಳ್ ದುರ್ಯೋಧನಂ . . . ತನ್ನೆರ್ದೆಯುಂ ಪೊಳ್ಳುಮರನಂ ಕಿರ್ಚು ಕಾರ್ಪಂತೊಳಗೊಳಗಳುರೆ (ಹಾಕಣಾ. ೨-೮೮ ವ). [ಪೊಳ್ಳು + ಮರ₁]

**ಪೊಳ್ಳುಮಾತು**, ಹೊಳ್ಳುಮಾತು (ನಾ). ಸುಳ್ಳಾದ ಮತ್ತು ನಂಬಿಕೆಗೆ ಯೋಗ್ಯವಲ್ಲದ ಮಾತು; ಹುರುಳಿಲ್ಲದ ಮಾತು: ದ್ರೋಹ, ವಂಚನೆ, ಸುಳ್ಳು, ಸೋಗನು ಕಂಡು ಕಂಡೂ ಹಿಡಿದಿದೆ. ಪೊಳ್ಳುಮಾತಿನ ಬುರುಗು ಬಿರಗನು ಕೇಳಿ ಕೇಳಿ ಕುಸಿದಿದೆ (ಬಿಐಕ. ೫೪-೯); ಅದು ಬರಿಯ ಪೊಳ್ಳುಮಾತೆಂಬುದು ಲಲಿತಳಿಗೂ ಗೊತ್ತು (ಹುಂಕುಳು. ೩೦). **ಹೊಳ್ಳುಮಾತು**: ಹೊಳ್ಳುಮಾತಿದು ಸೀತೆಯೋ (ಕುಭಾ.ಶಿ. ೯-೩೩); ಹೊಳ್ಳುಮಾತಲ್ಲ ಕೇಳಬಲೆ (ಕುಭಾತಿಂ. ೨೫-೩೩); ಅಳ್ಳೆರ್ದೆಗರನಂಜಿಸುವೊಲು ರಕ್ಕಸ ಹೊಳ್ಳುಮಾತುಗಳಾಡವೇಡ (ಸಂಕ್ರಾಂ. ೬-೦೨೯). [ಪೊಳ್ಳು + ಮಾತು₁]

**ಪೊಳ್ಳುಪಂದಿ** (ನಾ). ಗಾಯಗೊಂಡ ಹಂದಿ (?); "ಓಡುವ ಹಂದಿ" (ಅಜಿಪು. ೬೦೧೧): ದಂತ್ರುದ ಪಂದಿಯು ಬಾಯಂತೆ ಬಿಚ್ಚಿಟಲ್ಲ ಬಾಯುಂ ಬೆರಸು ನಾಲ್ಕುಂ ತಳಮಂ ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪೊಳ್ಳಿಪಂದಿಯುಂ ಕಂಡು (೦೬ಚಾಪ. ೬-೦೬ ವ). [? + ಪಂದಿ]

**ಪೊಱ**, ಹೊರ₁, ಹೊಱ (ಸಪೂರೂ). 'ಪೊಱಗು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ: 'ಪೊಱಗೋಟೆ', 'ಪೊಱದಡಿ' ಪರಾ. **ಹೊರ₁**: 'ಹೊರದೆಗೆ', 'ಹೊರಗಂಡಿ' ಪರಾ. **ಹೊಱ**: 'ಹೊಱದೆಗೆ', 'ಹೊಱವಳಸು' ಪರಾ. [< ಪೊಱಗು]

**ಪೊಱಅಡಿ** (ನಾ). ೧. ಹೆಜ್ಜೆಯ ಮೇಲುಭಾಗ: ಮನುಜಮಾಂಧಾತನ ಪೊಱಅಡಿಗಳ್ ವಿರೋಧಿಭೂಪಾಳರನಡಿಗೆಱಗಿಸಿ ಸಂತೋಷದೊಳುನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು (ಹಂಕರಾ. ೨-೩೯ ಕ); ಅಳವಿಗಟಿದುರುನಿತಂಬಸ್ಥಳಭಾರಮನೀಂತ ಕಾಲ್ಗೆ ಪೊಱಅಡಿಗಳೊಳ್ ಲಳಿತತಾಳಾಕೋಟಗಳಂ ತಳೆವುದದೇವಿಂದೊ ಮದಗಜಾಲಸಗತಿಯಾ (ಕಾವ್ಯಾ.ಕ. ೨೪೩); ಪೊಱಅಡಿ, ಒಳಅಟ್ಟಂ, ಪೊಸತಿಡಕೆ (ಕಶಬ್ದ. ಕ. ೬೮ ವೃತ್ತಿ). ೨. (ಕಾರ್ಯೋನ್ಮುಖವಾಗಿ) ಮುಂದಕ್ಕೆ ಇಟ್ಟಿರುವ ಹೆಜ್ಜೆ,-ಮುಂದಿಟ್ಟ ಅಡಿ: ಆಗಳ್ ಮದನು ತಳ್ವದೆ ಕೋಲ್ಬಿಲ್ಲಗಳು ಕೊಂಡು ಪೊಱಅಡಿಯೊಳ್ . . . ತನ್ನ ಪುಸಿವಡೆವೆರಸು ತಪೋವನದತ್ತಣ್ಗಯ್ತರುತುಮಿರ್ದಂ (ಕಾಕೂಕ್ಯ. ೩೬.೮). [ಪೊಱ (< ಪೊಱಗು) + ಅಡಿ₁]

**ಪೊಱಂಗುಟ್ಟು**, ಪೊಱಕುಟ್ಟು (ಕ್ರಿ). ಬಹಿರಂಗವಾಗಿ ಹಿಂಸಿಸು, -ನೋಯಿಸು: ಪೆಱಗೆ ಕೇಡುಮಾತತ್ತ್ವಮುಬ್ಬುವುಮಂ ಮಾಡದುದುಂ ಪೊಱಂಗುಟ್ಟದುದುಂ ನೊಂದು ನುಡಿಯದುದುಂ . . . ಸಾತಾವೇದನೀಯದಾಸ್ರವಮಕ್ಕುಂ (ಕಸಾರ. ೪೩). **ಪೊಱಕುಟ್ಟು**: ರಾಗದ್ವೇಷಂಗಳಿಂ ಪೊಱಕುಟ್ಟಿ ನುಡಿಯೆ ತನ್ನ ಮರುಳಂ ಮುಟ್ಟಿ ಕಳೆವುದು (ಕಸಾರ. ೪೦೨). [ಪೊಱ (< ಪೊಱಗು) + ಕುಟ್ಟು₁]

**ಪೊಱಂಡ**, ಪೊಱಡ (ನಾ). ಬೆನ್ನಿನ ಮೇಲೆ ಗುಬುಟೆದ್ದು ಬಾಗಿರುವವನು; ಗೂನ: ಗುಜ್ಜನುಂ ಪೊಱಂಡನುಂ ಮರುಳನುಮಾಗಿ ಬರೆ ಕಂಡವರ್ ನಗೆ (ಬಂಹಂ. ೯-೨೩ ವ). **ಪೊಱಡ**: ಹರಭಕ್ತನಿಂದಕಂ . . . ಕುರುಡನಾಗುವ ಕೋಟಜನ್ಮದೊಳ್ಬಳಿಕಲವ ಪೊಱಡನಾಗುವ ಸಪ್ತಜನ್ಮದೊಳ್ಬಳಿವನಾಗಿರುವ ಶತಜನ್ಮದೊಳ್ (ಕಶಿಂ. ೦೬-೮). [ಪೊಱಂಡು₂ + -ಅ₇]

**ಪೊಱಂಡಿ** (ನಾ). ಬೆನ್ನಿನ ಮೇಲೆ ಗುಬುಟೆದ್ದು ಬಾಗಿರುವವಳು; ಗೂನಿ: ಕಣ್ಗುರುಡಿಯುಂ ಪೊಱಂಡಿಯುಂ ಕೊಂಟಿಯುಂ ಪೆಟವೆಯುಂ ಕುಷ್ಠಿನಿಯುಂ ಕುಬ್ಜೆಯುಮಪ್ಪ ಪಾಗಳ್ದಿರಬಾರರ್ (ಶಾಂತಿಪು. ४-६६ ವ). [ಪೊಱಂಡ + -ಇ₂]

**ಪೊಱಂಡು₁** 'ಪೊಱವಂಡು' ನೋ.

**ಪೊಱಂಡು₂**, ಪೊಱಡು₂, ಹೊಱಟು, ಹೊಱಡು₂ (ನಾ). ಉಬ್ಬಿನಿಂದ ದೇಹದ ಬೆನ್ನು ಮೊದಲಾದ ಭಾಗಗಳಲ್ಲಿ ಉಂಟಾದ ಬಾಗು,-ವಕ್ರತೆ: ಕುಱಿಯೆ ಪೊಱಂಡಾಗಿರೆಯುಂ ಕುಱಿದಿರೆಯುಂ ಬೆನ್ನನಿಪ್ಪಮುಪಾಟ್ಟಿಂ (ಲೋಕೋಪ. ೧೨-೩೬). **ಪೊಱಡು₂**: 'ಮುಪ್ಪೊಱಡು' ಪರಾ. **ಹೊಱಟು**: ಹೊಱಟು ಪಾಂಡ್ಯನ ಬೆಲುವಳಿದು ನೆಱೆ ಹೊಱಟು ನೆಲೆಗೊಂಡಿದ್ದ ಬೆನ್ನಿನ ಹೊಱಟು ಹೋಗಲು ಮಿಥ್ಯೆಯಾಯಿತು ಸಾಯದಿರ್ಬಹುದೆ ಹೊಱಟ ಬೆನ್ನಿಂತೆಂಬ ನುಡಿಯದು ಧರಗೆ ಕೂನನೆನಿಪ್ಪುದು ಮಹಾಸಿ ಸೌಂದರಪಾಂಡ್ಯರಾಯನೆನಲು ಪೆಸರ್ವಡೆದ (ಚಸಪು. ೩೦-೩೦). **ಹೊಱಡು₂**: "ಗಡು ಎಂದೊಡೆ ಕುಬ್ಜ, ಬೆನ್ನ ಹೊಱಡುಂ" (ಶಾಶಶಾ. ೬); ಮುಂದೆಯಲಿ ಕೈಯಿಟ್ಟು ಹೊಱಡೆದೆಗೊಂಡುದೆಂದಿಂದಿತ್ತ ವೈದ್ಯರ ಕಂಡು ಬಲ್ಲರು ತನ್ನ ಪೂರ್ವಜರೆಂದನಸುರಾರಿ (ಹಿ.ಗ. ೦೨-೩೭-೩೮); ಹೊಱಡಾಗದಂತೆ ನಾಲ್ಕೊಗ ಜಂತದಲಿ ಹೊಂಗರಡಿಗೆ

ಗೆಡೆದು ಕರ್ವಣಿಯು ಬಿರುಡೆಯು ಬಿಗಿದಿಟ್ಟನೆಂಬಂತೆ ಬಲ್ಮೊಲೆಯೆರಡಱ ಮೊಗವು ತೋಱಿದುವು (ಶೋಕಶ. ೨೩-೨೩).

[ < ಪೊಱಮಡು./ತೆಲು. ಪೊಱಡು]

**ಪೊಱಂಬೇಱು** (ಕ್ರಿ). (?) : ಕಾನರುಮೆ ವೆಚ್ಚುವೊನ್ನನ್ನ ವೆಚ್ಚದೆ ಪೊಱಮ್ಬೇಱು ಬೊಜಙ್ಗರ (ಶಾಶಾ. IX-i, ೦೩-೯೩ ; ೯೩ರ ಈ). [?]

**ಪೊಱಗಣ್, ಹೊರಗಣ್ಣು** (ನಾ). ಹೊರಗಿನ ಕಣ್ಣು ; ಬಹಿರ್ಚಕ್ಷು : ಪೊಱಗಣ್ಣಂ [ಪಾಠಾಂ. ಮಡಗಣ್ಣಳ್] ಮುನ್ನಂ ತಾಂ ಮಱಸಿದ ನೊಸಲೊಂದು ಕಣ್ಣುವಾಗಳ್ ನೊಸಲಿಂ ಪೊಱಮಟ್ಟಂತಿರೆ (ಶಂಕರಾ. ೮-೨೩). **ಹೊರಗಣ್ಣು** : ಹೊರಗಣ್ಣಿಗೆ ಕಾಣುವ ಸೃಷ್ಟಿಯು ಮೂಕವಾಗಿದ (ಶಾಪಿ. ೦೯೯). 'ಒಳಗಣ್' ಪರಾ. [ಪೊಱ (< ಪೊಱಗು) + ಕಣ್]

**ಪೊಱಕತ್ತರ, ಹೊಱಕತ್ತರ** (ನಾ). [ಸಂಗೀತ] ವಾದ್ಯಗಳನ್ನು ಬಾರಿಸುವ ಒಂದು ಕ್ರಮ,-ಗತ್ತು: ಹೆಬ್ಬೆರಳನ್ನುಳಿದು ಇತರ ಬೆರಳುಗಳನ್ನು ವಿರಳವಾಗಿ ಚಾಚಿ ಅಂಗೈಯನ್ನು ಹೊರಮುಖವಾಗಿ ವೇಗವಾಗಿ ತಿರುಗಿಸುತ್ತ, ಒಂದಾದ ಮೇಲೊಂದರಂತೆ ಬೆರಳುಗಳಿಂದ ವಾದ್ಯಮುಖವನ್ನು ಹೊಡೆದು ಶಬ್ದಗಳನ್ನು ಉತ್ಪತ್ತಿಮಾಡುವುದಕ್ಕೆ 'ಕರ್ತರೀ' ಎಂದು ಹೆಸರು. ಒಳಕರ್ತರಿ, ಹೊರಕರ್ತರಿಗಳು ಸಂಗೀತಶಾಸ್ತ್ರಗ್ರಂಥಗಳಲ್ಲಿ ವರ್ಣಿತವಾಗಿಲ್ಲ. ಕನ್ನಡಿಗ ಮದ್ದಳೆಕಾರರು ವಾದನತಂತ್ರದ ಸ್ವಸಮಯದಲ್ಲಿ ಅವುಗಳನ್ನು ನಿರ್ಮಿಸಿಕೊಂಡು ಹೆಸರಿಸಿರಬಹುದು. ಮೇಲೆ ಹೇಳಿರುವ ಕರ್ತರೀವ್ಯಾಪಾರವನ್ನು ಹೆಬ್ಬೆರಳು ಒಳಮುಖವಾಗಿ (ವಾದ್ಯಮುಖದೆಡೆಗೆ) ಚಲಿಸುವಂತೆ ನಡೆಸಿದರೆ ಒಳಕರ್ತರಿ. ಇದಕ್ಕೆ ವಿರುದ್ಧವಾಗಿ ಹೆಬ್ಬೆರಳು ಹೊರಮುಖವಾಗಿ (ವಾದ್ಯಮುಖಕ್ಕೆ ವಿಮುಖವಾಗಿ ಆಚೆಗೆ) ಚಲಿಸುವಂತೆ ಏರ್ಪಡಿಸಿದರೆ ಹೊರಕರ್ತರೀ ಎಂದು ಅರ್ಥ ಮಾಡಬಹುದು : ಅಳಗಂ ಸುಳಿಯಳಗಂ ದೊಟ್ಟಳವೊಳಕತ್ತರವುಮೆಸೆವ ಪೊಱ [ಪಾಠಾಂ. ಹೊಱ]ಕತ್ತರವಗ್ಗಳಿಸಿರೆ ನಾನಾಭೇದಂಗಳ ವಹರಣೆ ತುಡುಕಾ ಮೋಡಿಯಿಂ ಬಾಜಿಸಿದಂ (ಧರ್ಮಾಕ. ೨-೨೩). **ಹೊಱಕತ್ತರ** : ಅವುಜದ ನಾವುಜಮುನಲವಡಿಸಿಕೊಂಡು ಝಂಕಾರವಂ ಪೊಯ್ದುಳಗ ಸುಳಿಯಳಗ ಬೊಟ್ಟಾಳಂ ಒಳಕತ್ತರ ಹೊಱಕತ್ತರ ವಿಷಮಕತ್ತರಮೆಂಬ ವಿಚಿತ್ರ ವಾದನದ ಬಹುಳಿಕೆಯೊಳ್ಪಲನೆನಿಸಿ...ಬಾಜಿಸುತ್ತಿರೆಯುಂ (ಶಾಂತೀಶ್. ೦೩-೭೭ ಕ). 'ಒಳಕತ್ತರ' ಪರಾ. [ಪೊಱ (< ಪೊಱಗು) + ಕತ್ತರ್]

**ಪೊಱಕಾಲ್, ಹೊರಕಾಲು, ಹೊಱಕಾಲ್, ಹೊಱಕಾಲು** (ನಾ). ೧. ಕಾಲಿನ ಹೊರಭಾಗ,- ಹೊರಗು : ಕಾಲ ಪೊಱಗು, ಪೊಱಕಾಲ್ (ಶಬ್ದಾ. ೩೯೬). **ಹೊರಕಾಲು** : ೨. ಅಡ್ಡವಾಗಿ ಇಡುವ ಕಾಲು ; ತೊಡರುಗಾಲು : ಓಡುತ್ತಿರುವಾಗ ಕೆಂಚನು 'ಹೊರಕಾಲು' ಕೊಟ್ಟುದರಿಂದ ಶಿವಗ ನೆಲಕ್ಕೆ ಧೊಪ್ಪನೆ ಕೆಡೆದು (ಸುಚಿಂ. ೦೦೩). **ಹೊಱಕಾಲ್** : ೩. ಓಡಲು ಸಿದ್ಧವಾದ ಕಾಲು ; ಪಲಾಯನಕ್ಕೆ ಸಿದ್ಧವಾದ ಕಾಲು : 'ಹೊಱಕಾಲ್ಗೊಳು' ಪರಾ. **ಹೊಱಕಾಲು** : ೩. ಹೊಱಕಾಲುಗಳ ಹೋರಟೆ ಕಾಣಲಾದುದು ಪರರ ಥಟ್ಟಿನಲಿ (ಕುಮಾವ್ಯಾ. ೩-೯೨). 'ಒಳಕಾಲು' ಪರಾ.

[ಪೊಱ (< ಪೊಱಗು) + ಕಾಲ್[1]]

**ಪೊಱಕಾಲ್ಗೊಳ್, ಹೊಱಕಾಲುಗೊಳ್, ಹೊಱಕಾಲ್ಗೊಳು** (ಕ್ರಿ). ೧. ಕಾಲನ್ನು ಎತ್ತಿ ಮುಂದಿಡು : ಮುಂಗಾಲ್ಗಳಂ ನೆಗಪಿ ನಿಲ್ವ ಪಿಂಗಾಲ್ಗಳಂ ಕೀಳ್ವ ದಾಂಟುವ ಪೊಱಕಾಲ್ಗೊಳ್ವ ಮಱಿ ಪೆಟ್ಟುವ . . . ಅಶ್ವಂಗಳ್ (ರಾಜಶೇ. ೬-೦೦ ಕ). **ಹೊಱಕಾಲುಗೊಳ್** : ೨. (ಹೆದರಿಕೆಯಿಂದ) ಪಲಾಯನ ಮಾಡು; ಓಡಲು ಸಿದ್ಧವಾಗು : ಹೊಟ್ಟ ನೂಕಿ ವೃಥಾಹವದ ಜಗಜಟ್ಟಿ ನೀ ಹೊಱಕಾಲುಗೊಂಡರೆ ಬಿಟ್ಟನೇ (ಕುಮಾವ್ಯಾ. ೦೦-೩೯). **ಹೊಱಕಾಲ್ಗೊಳು** : ಬಲುಂದೆಗಹಿನಾ ಕರ್ಣಪೂರದ ಹಿಳುಕಿನಸಲಿಜನಿರಲು ಸಿಂಹದ ಹೊಲನ ಹೊಗುವಿಭದಂತೆ ಪೊಱ ಕಾಲ್ಗೊಳುತಲಿರೆ ಕಂಡು ತೊಲಗದಿರಿ ತಮ್ಮಂದಿರ . . . ಸುಭಟರು ನೀವೆನುತ ತೆಗೆದೆಚ್ಚನು (ಕುಮಾವ್ಯಾ. ೦೨-೫೦). [ಪೊಱಕಾಲ್ + ಕೊಳ್[1]]

**ಪೊಱಕುಳಿ, ಹೊಱಕುಳಿ** (ನಾ). ಬೇರೆಯವರ ಆಶ್ರಯದಲ್ಲಿ ವಾಸಿಸುವ ಸ್ವಭಾವವವನು : ಪೊಱಕುಳಿ [ಪಾಠಾಂ. ಪೊರ್ಕುಳಿ], ಒಡುಕುಳಿ (ಕಬುತ. ೩. ೨೦೧ ಕ್ರ ಹೋ). **ಹೊಱಕುಳಿ** : "ವರಜಾತಃ, ಪರ್ಯಧಿತಃ—ಈ ೨ ಹೊಱಕುಳಿ" (ಕರಾಯು. ೫೬-೦೧೬).

[ಪೊಱ (< ಪೊಱಗು) + —ಕುಳಿ[1]]

**ಪೊಱಕೆಯ್, ಪೊಱಕ್ಕೈ, ಪೊಱಗಯ್, ಹೊಱಕಯ್, ಹೊಱಕೆಯ್, ಹೊಱಕ್ಕೈ** (ನಾ). ೧. ಕೈಯ ಹೊರಭಾಗ ; ಮಣಿಕಟ್ಟಿನಿಂದ ಕಿರುಬೆರಳಿನವರೆಗಿರುವ ಕೈಯ ಹೊರಪಾರ್ಶ್ವ : "ಮಣಿಬಂಧನದಿಂದು ಕಿಱುಕುಣಿಕೆವರಂ ಕರಭಮೆಂಬುದಕ್ಕಂ ಪೊಱಕೆಯ್" (ವಸ್ತುಕೋ. ೬೬-೯) : ಸಂಡೆಯ್ಮುರಲ್ ನಲವಿಂದು ಪೊಱಕೆಯ್ಯೊಳಾತು ಮಗುಳ್ವಾರ್ಪಿಂ . . . ಪೊಯ್ವು (ಲಕಸ. ೦೨-೬೯). **ಪೊಱಕ್ಕೈ** : ೧. ಕೈದುಡುಕಿ ಪಿಡಿದನಂ ನೋಡವಂತಿರ್ದ ಪಾಂಗಿಂ ಪೊಱಕ್ಕೈಯೊಳ್ ಮೋದಿ ಕಂಸಾನುಜನಧಿಕನ ಕೊಂದು (ಜಗಂ. ೬-೯೯). **ಪೊಱಗಯ್** : ೧. ಮಲವಂ ಪಿಡಿಕಿಸಿ ಪೊಱಗಯ್ಯನೊರಸಿ ಕರ್ಚಿದ ತೆಱದಿಂ (ಸವುಶ. ೦೩-೨೬). **ಹೊಱಕಯ್** : ೧. ಸೂತನ ಬಾಯ ಹೊಱಕಯ್ಯಿಂದ ಹೊಯ್ದನು ಹಡವದವರನು . . . ತಿವಿದು ಮುಱಿದನು (ಕುಮಾವ್ಯಾ. ೦೯-೯). **ಹೊಱಕೆಯ್** : ೧. ವೀ.. ಹೊಱಕೆಯ್ಯಿಂದ ತಟ್ಟಿ ಮದಗೇಶ್ವರನನಿಡೆ ನಗುತ (ಕಂಪು. ೩೭-೬೩). ೨. ಬೇರೆಯ ಕೈ ; ಇನ್ನೊಂದು ಹಸ್ತ : ಬಾಯೊಳುದಕವೊಗದ ಹಾಗೆಂಹಕ್ಕಯ್ಯನಡ್ಡಂ ಬಾಚಿ ಮೇಣ್ ಹೊಱಕೆಯ್ಯ [ಪಾಠಾಂ. ಪೊಱಕೆಮ್ಮ]ಲುಂದಕವನೊಯ್ಯನೊಯ್ಯನವುಂಕಿ ತಿರುಹುವಳು (ಅಕಪು. ೧೩-೦೦). ೩. ಹೊರಗಡೆಗೆ (ಬೀಸಿ) ತೆಗೆದ ಕೈ : ಉಗಿದನುರಗಾಸ್ತ್ರವನು ಹೊಮ್ಮೂಡಿಗೆಯೊಳಗೆ ಹೊಱಕೆ[ಪಾಠಾಂ. ಕ]ಯ್ಯ ಗಾಳಿಗೆ ಹೊಗೆಯ ಹೊದಱಿನ ಹೊರಳಿ ಹಬ್ಬಿತು ಕೂಡೆ ಕಿಡಿಯಿಡುತ (ಕುಮಾವ್ಯಾ. ೨೩-೯). **ಹೊಱಕ್ಕೈ** : ೧. ಭರದೊಳೊಳಕ್ಕೆಯಿಂದೆ ಹೊಱಕ್ಕೈಯಿಂದೆ[ಪಾಠಾಂ. ಕೆಯ್ಯಿಂದೆ] ಹೊಡೆಹೊಡೆದು (ಅಕಪು. ೨೨-೯೩); ಗದೆಯ ಕೊಂಡವ್ವಳಿಸಿದನು ಹೊಱಕ್ಕೈಯುಲರೆದಿಟ್ಟಳಿಸಿದರನೆಡಗಾಲಲೊದೆದನು (ಕುಮಾವ್ಯಾ. ೦೩-೦೬) : ಸಿಲ್ಲೆನುತ ಹದರಿಕ್ಕಿ ಹೆಡಕನು ಘಲ್ಲಿಸಲು ಹೊಱಕ್ಕೈಯ[ಪಾಠಾಂ. ಕಯ್ಯ]ಲಾಟಿಯ ಹಲ್ಲುದುರೆ ಹೊಯ್ದೊಡದ ಮುಷ್ಟಿಯಲೆಱಗಿದನು ಬದಿಯ (ಕಹರಾ. ೩-೧-೨). 'ಒಳಕೆಯ್' ಪರಾ. [ಪೊಱ (< ಪೊಱಗು) + ಕೆಯ್[1]]

**ಪೊಱಕ್ಕೈ** 'ಪೊಱಕೆಯ್' ನೋ.

**ಪೊಱಗಡೆ, ಹೊರಕಡೆ, ಹೊರಗಡೆ ಹೊಱಗಡೆ** (ನಾ). ೧. ಹೊರಭಾಗ; ಹೊರಪ್ರದೇಶ : ಅಱಗುಲಿಯಂ ಮುನ್ನಮ್ಮ ಗಱಗಳ ತಱದಿಂದ್ರುನನಾ ಸಗ್ಗಮನನ್ನೀ ಸಱದಲೆಯಿಂ ಪೊತ್ತಬುಜಜನ್ನಾಂಡದ ಪೊಱಗಡೆಗಾಗಿ ನುಱಯುವಪ್ಪಂದದಿ ಹಾಕದೊಡನಗೇತಱ ದೊಡ್ಡಿತ್ತು (ಜಯಾಕ. ೦-೩೩). **ಹೊರಕಡೆ** : ೨. ಕಕ್ಕಸು ; ಬಹಿರ್ದೇಶ : (೬). ೩. ಮಲವಿಸರ್ಜನೆ : ಮಗುವಿಗೆ ಹೊರಕಡೆಯಾಗದಿದ್ದರೆ—ಅರ್ಧದಿಂದ ಒಂದು ಚಮಚೆವರೆಗೆ ತುಲಸೀಎಲೆಯ ರಸ ಕುಡಿಸುವುದು (ಮಕಪು. ೬). ೪. ಭೇದಿ; ವಿರೇಚನ : ಹೊರಕಡೆ ಹೋಗುವುದು ಕಡಿಮೆಯಾಗಲು ಔಷಧಿ ಕೊಟ್ಟಾಯ್ತು (ಕುಂಗಾಕು. ೦೦೩). **ಹೊರಗಡೆ** : ೧. ಹುಡುಗರೆಲ್ಲ ತರಗತಿಯ ಹೊರಗಡೆಯಲ್ಲೇ ಇದ್ದಾರೆ (ಉಪ್ರ). ೫. ಹೆಂಗಸಿನ ಮುಟ್ಟು,- ರಜೋದರ್ಶನ : ಅವಳು ಹೊರಗಡೆಯಾದ್ದರಿಂದ ಅವಳು ಪೂಜೆಗೆ ಬರಲಿಲ್ಲ (ಉಪ್ರ). (ಗು). ೬. ಹೊರಭಾಗದ: ಹೊರಗಡೆ ಕೋಣೆ

ಯಲ್ಲಿ . . . ಚರ್ಚೆ ನಡೆಯಿತು (ಜಾಮಾ. ೦೬೦). ೭. ಪರಸ್ಥಳದ ; ಬೇರೆ ಕಡೆಯ : ಹೊರಗಡೆ ಸಂಚಾರ ಹೊರಟರೆ ದೇಶ್ಯತಟ್ಟೆ, ಕ್ರಿಯಾಭ್ರಷ್ಟಪಟ್ಟಿ ಇತ್ಯಾದಿಯೊಂದಿಗೇ ಹೊರಡಬೇಕು (ಋಗ್ವ.ಜಾ. ೦೩). **ಹೊಱಗಡೆ :** ೧. ಮಂದಿರದ ಹೊಱಗ[ಹಾಗೂ, ಕ]ಡೆಯಾಲಾಪಿಸುತ್ತಿರಲು (ಸಂಶಕ. ೬-೨೫ ಅಂಶಿಕಾ. ೪) 'ಒಳಗಡ್ಡೆ' ವರಾ. [ಪೊಱ (<ಪೊಱಗು) + ಕಡೆ]

**ಪೊಱಗಣ್** 'ಪೊಱಗು' ವರಾ.

**ಪೊಱಗಣ** 'ಪೊಱಗು' ವರಾ.

**ಪೊಱಗಯ್** 'ಪೊಱಕೆಯ್' ನೋ.

**ಪೊಱಗು**, ಪೊರಗು, ಹೊರಗು, ಹೊಱಗು (ನಾ). ೧. ಹೊರಗಡೆ : ಹೊರಭಾಗ : ಪೊಸತ ಪೊಳೆತ ಧಾನ್ಯಂಗಳನಾ ಧರಣೀಶಂ ಕೆದಱಿಸಿದಂ ನಿರಂತರಂ ರಾಜಗೇಹದೊಳಗಂ ಪೊಱಗಂ (ಆದಿಪು. ೦೫-೬) ; ಪೊಸತು ಪಟುದೆಳದು ಪೊಱಗೊಳಗು ಸಮಮಮನಿಪ್ಪವಱೊಳ್ (ಶಾಬ್ದಮ. ೩೬೪). ೨. ಹೊರತಾದುದು : ಇನಿತುಂ ಪರಮೇಪ್ಪದೊ ಪೌದನಪುರಮನಾಳ್ಕೆ ಗಿಂತು ಪೊಱಗೆನಿಪಾಗಳ್ (ಆದಿಪು.೦೪-೨೮) ; ಕೆಟ್ಟಿಯಗ್ಗರ್ಗಂ ಪನ್ನಿಸಿಗಗ್ಗರ್ಗಂ ಗಾವುಣ್ಡಗಳ್ಗಂ ಬಿಟ್ಟ ಕೊಟ್ಟಣಂ ಬೀಡುದೆಸಂ ಪೊಱಗು (ಶಾಶಾ. IX-೧, ೬೬-೫೬ ; ೯೫೭). ೩. ಬಹಿರಂಗ ; ಬಾಹ್ಯ : ಒಳಗಂ ಭೇದಿಸದನ್ನಂ ಚಳಬುದ್ಧಿಗೆ ಪೊಱಗು ಬಿಟ್ಟಿತಾಗಿರ್ಕುಂ . . . ಜಿನವಚನಂ (ಕಬುಕ. ೫-೨೬). ೪. ಹೊರತಾದ ವ್ಯಕ್ತಿ : ಇದಂ ಮಹಾಜನಂಗಳ್ ಕಂಡರಪ್ಪೊಡೆ ಸಭಾಜನಕ್ಕಂ ಸಹಪಂಕ್ತಿಗಂ ಪೊಱಗೆಂದು ಸಮಯಬಾಹ್ಯಮಂ ಮಾಟ್ಪರ್ (ಜಂಕಂ. ೦೪೬-೦೮) : ಈ ನೆಲದೊಳ್ ಪೊಱಗಾರುಮಿಲ್ಲೆನಲ್ ಮನ್ನಿಸಿ (ಬುಕ್ಕಿಕ. ೪-೦೦೪). ೫. ಉಳಿದಿರುವುದು ; ಅವಶಿಷ್ಟ : ಅಪರಾಜಿತ ನಿತ್ತ ಪರಂತಪನ ತಪಶ್ಚರಣಮೊಂದೆ ಪೊಱಗೆನೆ ನಿರ್ವೇಗಪರಾಯಣಂ ಮನಂಗೊಂಡು ಪವಿತ್ರಶ್ರಾವಕವ್ರತಂಗಳೊಳೊಣರ್ದಂ (ಶಾಂತಿಪು. ೦-೮೬). **ಪೊರಗು :** ೧. ಒಳ್ಪತಂ ಸುಡುವ ಕಿಚ್ಚಂ ಪೊರಗಿನಿಂ ತಣಿಸ ಒಳ್ಪದರ ನೆಚ್ಚಱಿಸಿ ಪಿಡಿದು ಪಡುಗಿಸುಗುಂ (ಶಾಬಂ. ೬೬೦೪೦). **ಹೊರಗು :** ೧. ಹೊರಗಿನ ಕಳ್ಳನನ್ನು ಹಿಡಿಯಬಹುದು, ಒಳಗಿನ ಕಳ್ಳನನ್ನು ಹಿಡಿಯಲಾಗದು (ಗಾದೆ). **ಹೊಱಗು :** ೧. ಹೇಸುತ ಮಾಂಸಮಂ ಹೊಱಗತ್ತ ನೂಂಕಿ ಶಿವಾಲಯವಿದಪವಿತ್ರವಾಯ್ತೆನುತ ಮತ್ತೆ ಮಿಂದು (ಅಕಪು.೦೮-೩೪). ೨. ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱ . . . ನಿನ್ನ ಲೋಚನಕ್ಕೆಳಮಿಂಚು ಹೊಱಗು (ಚಂಕಕ. ೦೪-೦೪). ೩. ಅಭೇದ್ಯಚಿತ್ತಕಾಪಟಗೆ ಒಳಗು ಹೊ[ಱ]ಗಿಲ್ಲ (ಅಂಚು. ೪೪-೦೦೬) : ಹೊಱಗನೆ ಕೊಯ್ದು ಹೊಱಗನೆ ಪೂಜಿಸುವವರ ಕಂಡು ನಾಚಿದೆನಯ್ಯ (ಬಕಶಂ. ೯೩-೪೦೩). ೪. ಹೊಯ್ ಡಂಗುರವನವಂ ಹೊಱಗು ಹೊಱಗೀ ಸಭೆಗೆ ಹೊಯ್ ಡಂಗುರವನಾವನಾದೊಡಂ ಹೊಱಗೆಮಗೆ (ಜಾಣಕ. ೮೪, ೬೪-೪) : ಐದು ಪಾಪಾಚರಣೆಯನು ಬಳಸಿದು ಪರವನಿತಾವ್ಯಸನಿಗಳಾದ ಗತಿಯನು ಹೊಱುವ ಪಾಪಕ ಹೊಱಗು ತಾವೆಂದ (ಕೊರಾ. ೩-೮-೦೩).

**ಪೊಱಗಣ್** = ಹೊರಗಡೆ : ಪೊಱಗಣ್ಗೆ ಸಯ್ದುರೆನೆ ತಾಪೊಳಗಂ ತವೆ ಕೋಡಿ ತಿಂದು ರಕ್ಕಸಿಯರ ಕಂಡ ಕಂಬಳದ ಮಾಟ್ಕೆವೊಲಾಗಿರೆ (ಜಂಕಪ. ೪-೪೮) ; ಎಲೆಲೆ ಭಕ್ತ ಪೊಱಗಣ್ಗೆ ಟೊಂದಂಡೆಯದೇ ಬದಿರಲುದ್ದಂಡನಿವಂ ಮೊಂಕಿನುತ್ತೆ ಪಿಡಿದರ್ ಕರಮಂ (ಉದ್ಭಟ. ೦೦-೩೬). **ಪೊಱಗಣ, ಪೊಱಗಣ, ಹೊರಗಣ, ಹೊಱಗಣ** = ೧. ಹೊರಭಾಗದ ; ಹೊರಗಡೆಯ : ಒಳಗಂ ದಕ್ಷಿಣಸುತರದುಷ್ಕರಮಂ ಪೊಱಗಣ ಸುಕರದುಷ್ಕರಭೇದಮಂ . . . ಎಱೆಯೊಳೊರ್ವನೆ ಚಾರಿಸಲ್ ಬಲ್ಲಂ (ಎಕ. II, ೦೩೩-೬೬ ; ೯೮೭) ; ಊರಿಂದಂ ಪೊಱಗಣ ಮಯ್ಯೊಕೊಲ್ಡು ಧರ್ಮಕ್ಕಾರಾನುಂ ಪುರಜನವಿಟ್ಟ ಧೊಱಂಪರಂ (ಪಟ್ಟಶಾ. ೬೨-೦೪) ; ಬಸದಿಯ ಪೊರಗಣ ಪಿಟ್ಟಿಲ್ಲೊಳ್ ಬ್ಬನುಂ ಕೆಮ್ಮಾಲದೊಳು ಎಣ್ಣೋಣವಡ ಎಳೆನೊವ್ಯದಿವ್ಯಯ ಮಗಂ . . . ಕೊಟ್ಟ ಮಣ್ಣು (ಎಕ. X. ಕೋಲಾರ. ೪೦-೪೦ : ೯೦೩) : ದರಿಯಾ ಬೀಬಿಯು . . . ಹೊರಗಣ ವರ್ತಮಾನವನ್ನು ಕೇಳುತ್ತ ಇದ್ದಳು (ಅಂಕಿತು. ೨೦೬) : ಊರ ಹೊಱಗಣ ಮಸಣವಟ್ಟಿಗೆಯೊಳಿರಲೆಂದು ಹಾರ್ಯಸು ತೆಮ್ಮ ಮಯ್ಯುಡನನೊಲ್ಲದೆ ನಗುತೆಂದು (ಜಂಕಕ. ೬-೫೫) ; ನಱುಗಬ್ಬಿನೊಳಗಣ ರಸವ ಕಾಣದೆ ಪಶು ಹೊಱಗಣೆಲೆಯ ಸವಿವಂತೆ (ಕಕಕ. ೦-೦೦೫). ೨. ಬಾಹ್ಯದ; ಬಹಿರಂಗದ : ಇವೆಲ್ಲ ಹೊಱಗಣ ಮಾತು (ಜಕಕ. ೬೮೦). **ಪೊಱಗಣಂ** = ಹೊರಗಿನವನಂ ; ಅನ್ಯ ; ಪರಕೀಯ : ಒಳಗಣಂ, ಪೊಱಗಣಂ, ಮುಂತಣಂ (ಶಬ್ದ. ೦೦೦ ಪ್ರ ಸೂ.) ; ಅರಿಷಡ್ವರ್ಗವನವನೀಶ್ವರನಾಟಲೆಯ ಪೊಱಗಣಾರಿಗೆ ಜಯಾಂಗನೆ ಪಲ್ಮೊರೆದವಳೆನೆ ಪರಿಮುಪ್ತ . . . ರಥಗಳ್ (ಶಾಂತಿಪು. ೦೦-೧೩೪). **ಪೊಱಗಾಗು, ಹೊರಗಾಗು, ಹೊಱಗಾಗು** = ೧. ಬೇರೆಯಾಗು ; ಹೊರತಾಗು ; ಎರವಾಗು : ಕುವಳಯ ಬಾಂಧವನೆಸವನೆ ಕುವಳಯಮಂ ಬೆಳಗಿ ಕುವಳಯಂ ಪೊಱಗೆನೆ ಪಾಡವರೆ ಪೊಱಗಾಗೆ ನಿನಗೀ ಕುವಳಯಪತಿಯೆಂಬ ಪೆಂಪೊತಂಬಡೆ ನೃಪತೀ (ಜಂಕಕಾ. ೪-೩೬) ; ಜೀವಂ ಪೊಱಗಾಗಿ ಪತ್ಸ್ಯ ಹಮುಮಾರಯ್ಯಂದು ನಿರ್ವೀರ್ಯವಾಗಿರೆ (ಆಕಕ. ೨೩-೨೮) ; ಕೊಟ್ಟ ಹೆಣ್ಣು ಕುಲಕ್ಕೆ ಹೊರಗಾದರೂ ಹೆತ್ತೊಡಲಿಗೆ ಅವಳ ಚಿಂತನೆ ತಪ್ಪಿದ್ದೆಂದು ? (ಹೊಕ್ಕಿ. ೦೬) : ಮಲ್ಲೇಶ್ವರ ದೇವರಿಗೆ ಸಿನ್ನಿಪೇಡದಲು ಬಿಟ್ಟ ಭೂಮಿ ಹೊಱಗಾಗಿ ಮೇಲಾದ ಭೂಮಿಯ ಹಡವಪಳು ದಂಡನಾಯಕಂ (ಕಶಾ. II, ೦೩-೦೩ ; ೧೧೫೫) : ಹೊಗಳಿಕೆಗೆ ಹೊಱಗಾದರ್ಕವರು ವಿಗಡರದಱೊಳಗಿಪ್ಪರೇದಿಂ ಹಗೆಗಳಲ್ಲದರು ಮೂವರೆಂದನು ಭಾನುಸುತ (ಕುಮಾವ್ಯ. ೪-೦೬). ೨. ಮಾಡದೆ ಉಳಿದಿರು,—ಹೊರಗಾಗಿರು : ಪಾರಲ್ಕೆಂ ಜೀವಿತಸಂಧಾರಣಕಂ ಗಮನವೊಂದೆ ಪೊಱಗಾಗಿರೆ . . . ನಮಗಿದು ಕಾರ್ಯಂ (ಕಾದಂಬ. ೬೫೬). ೩. ಮುಟ್ಟಾಗು; ಋತುವಾಗು ; ಬಹಿಷ್ಠೆಯಾಗು : ಈ ದಿನ ಅವಳು ದೇವಸ್ಥಾನಕ್ಕೆ ಬರುವಂತಿಲ್ಲ, ಹೊರಗಾಗಿದ್ದಾಳೆ (ಜಾನ). **ಹೊರಗಲ್ಲು** = ಹೊರಗಿನ ಕೆಲಸಗಳಿಗೆ ಬಳಸುವಂಥದು ; ಮಡಿಯಲ್ಲದುದು : ಆ ಚೊಂಬನ್ನು ಅಡಿಗೆಯವನಿಗೆ ತರಬೇಡ, ಅದು ಹೊರಗಲು (ಜಾನ). **ಹೊಱಗಾಲಿಸು** = ಹೊರಗಡೆಯ ಶಬ್ದವನ್ನು ಆಲಿಸು,—ಕೇಳು : ತಱಗೆಲೆ ಗಱಕೆಂದೊಡೆ ಹೊಱಗಾಲಿಸುವ (ಅಕಕ. ೩೬೪) ; ಅಡಿಗಡಿಗೆ ಹೊಱಗಾಲಿಸಿ ಮತ್ತೆ ಮನೆಯೊಡತಿಗಂಜಿ ಕೆಲಸವನು ಮಾಡುತ್ತಿಪ್ಪ ವನಿತೆಗಾದಾಪತ್ತನಾಲಿಸದೆ ಕಿವ್ಚು ದಟ್ಟಿಸುರು (ಕತಾ. ೦೨-೦೦).

[ದೇ. ೫ ತಮಿ. ಪುಱ, ಪುಱಮ್, ಪುಱತ್ತು ; ಮಲ. ಪುಱ ; ಕೊಡ. ಪೊರಮೆ. ಕೋತ. ಪೊರಂಜಿ]

**ಪೊಱಗುಂಡ**, ಹೊಱಗುಂಡ (ನಾ). ಹೊರಗಿನ ಕೆಲಸವನ್ನು ಮಾಡುವ ಆಳು, —ಸೇವಕ : ಖಂಡಿತಸ್ಮರಭಕ್ತನಳವಿಂಗೆ ಮೆಚ್ಚಿ ಕಶಿಮಂಡಲಾನನೆ ಭಕ್ತಿಯಿಂದೆಱಗಿ ಪಶುಪತಿಗೆ ಗುಂಡುದರೊಳ್ಗಾಗಿ ನೀನಿರ್ಪುದಾಂ ನಿನಗೆ ಪೊಱಗುಂಡನಾಗಿರ್ಪೆನೆನುತ (ಕಶ್ಯಕಾ. ೫-೩೩) ; ನಿನಗೆ ನಾನು ಪೊಱಗುಂಡನಾಗಿರುವೆನೆಂದು ಶಿವದೀಕ್ಷೆಯಂ ಪಡೆದು (ಶೈಕಸಂ. I, ೫೬). **ಹೊಱಗುಂಡ :** ಈ ವಿಶ್ವಮಂ ಸೃಜಿಸುವಲಿ ಶಂಭುವಿನ ಲೀಲಾವಿಡಂಬನದ ಹೊಱಗುಂಡನಾಗಿರ್ಪುದಱಿನಾ ವಿಷ್ಣುಗಾದುದು ಕಲಶಾಕೃತಿ (ಕಶ್ಯಕಾ. ೦೦ ೫೬).

[ಪೊಱ (<ಪೊಱಗು) + ಗುಂಡ (p ← ತೆಲು. ಗಂಡ = ಸೇವಕ)]

**ಪೊಱಗೆ**, ಹೊರಗೆ, ಹೊಱಗೆ (ಅ). ೧. ಹೊರಗಡೆಗೆ ; ಆಚೆಗೆ : ದುರ್ಯೋಧನಂಗಿಂ ಪುಗಲ್ಕೆಡೆ ತ್ರಿಭುವನಂಗಳಿಂ ಪೊಱಗೆ ಮತ್ತೆಲ್ಲಿತ್ತೊ ಬಾಣಾಂತಕಾ (ಜಂಕಾ. ೦೩-೬೬) : ಒಳಗೆ ದೆಳಗು, ಪೊಱಗೆ ಕಟ್ಟಿಲೆ (ಹಾಲುಕಂ. ೫೪ ಕಾಂಡ.) ; ಮಹಾವಿಭವದಿಂದಿರುತೆ ಬ್ರಹ್ಮಾಂಡದಿಂ ಪೊಱಗೆ ಶಿವಲೋಕವಂ ನೆನೆದ ಮಾತ್ರದೊಳಾಗಿಸ (ಜಂಪು. ೦೩-೨೦). ೨. ಬೇರೆಯಾಗಿ ; ವ್ಯತಿರಿಕ್ತವಾಗಿ : ಅವಱಂ ಪೊಱಗೆ ಮಾಳಾವೃತ್ತ

ದಂಡಕಂಗಳ್ ಮಾತ್ರಾನಿಯಮಸ್ಕಂಧಕಾದಿಜಾತಿಗಳೆಂಬಿವಕ್ಕುಂ (ಛಂದೋಂಬು. ೦-೯೬ ಶ). ೩. ಬಹಿರಂಗಪಡಿಸು ಬ್ರಾಹ್ಮದಲ್ಲಿ: ಅತ್ರಿಯ ವಣ್ಗಳಂತೊಳಗಸುದ್ದನುಂ ವಟಫಲದಂತೆ ಪೊಱಗೆ ಸೇವ್ಯನುಂ (ಪಂಪಭಾ. ೬-೩೨); ಪೊಱಗತಳಿರ್ದ್ಯತಿಯನಾಂತಂ ನೆಱೆ ಮನದೊಳ್ ತಳ್ತಿವ ಕುಸುಮಮಾ ಪಳಿಯಂ (ಕುಸುಮಾ. ೦೦-೦೦೪); ಮನೋಜನೆಚ್ಚ ಪಿರಿದೊಳ ನಟ್ಟಿರಲ್ ಪೊಱಗೆ ತೋಱುವ ನುಣ್ಗಾಱಿಯಂತಿರೊಪ್ಪುಗುಂ (ಕಾವ್ಯಾಶಿ. ೩೯೩). ೪. ಬಳಿಕ; ಅನಂತರ: ಅಂತು ಪೊಱವಟ್ಟು ಪೊಱಗೆ ಅವರೋಧ ಪ್ರಮದಾಕದಂಬವಿಗಳತ್ಕಾಶ್ಮೀರಸಾರಂ . . . ತೀಂಗೆ ತರಂಗಮಪಾರೆ ರತಿ ಕಂದರ್ಪಂಗೆ ತೀವಿಟ್ಟ ಬಣ್ಣಾಪುರಂ ತಾನೆನೆ ಕಣ್ಗೆ ಮಾಡಿದುದು ಕುಸಾರಂ ಸುಜಾಸಾರವಮಂ (ಅಜಿತಪು. ೬-೩೦ ಶ). **ಹೊರಗೆ** : ೧. ಹೀನಾಮಾನವಾಗಿ ಬೈದು, ಹೊರಗೆ ಕಳುಹಿಸಿದರು (ಪಾಪುಕ. ೬೨); ಅವು ಹಣ್ಣಾದ ವೆಂದರೆ ಬಿಸಲಿಗೂ ಗಾಳಿಗೂ ಅರಳಿ ಒಳಗಿನ ಹತ್ತಿ ಹೊರಗೆ ಬರುತ್ತದೆ (ಕುಂಜಾಯ. ೯-೩೭). ೩. ಈ ವರ್ತಮಾನವನ್ನು ಹೊರಗೆ ಹಬ್ಬಿಸದೆ (ಕುಮಾಕಂ. I. ೨೩೨). **ಹೊಱಗೆ** : ೧. ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಕೆಯ ಹೊಱಗೆ ತೊಳೆದಂತೆ (ಬಸವ. ೧೦೪); ಇಱಿದು ಚಕ್ರವ್ಯೂಹವನು ಲಂಡಿಱಿದಱಿಯ ಮಾಡಿ ಕಿರೀಟಿಯದಱಂ ಹೊಱಗೆ ಹಂಸವ್ಯೂಹದಲಿ ಕೆಣಕಿದನು ಕಾಳೆಗವ (ಕುಮಾವ್ಯಾ. ೦೦-೦೯); ಹೊಲೆಯ ಹೊಱಗಿಹನೆ ಊರೊಳಗಿಲ್ಲವೆ (ಪುರಂದ. ೦-೦೬೬ ಪಲ್ಲ). ೩. ಒಳಗೆ ಕುಟಿಲ ಹೊಱಗೆ ವಿನಯವಾಗಿ ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯಾ ಲಿಂಗವು (ಬಸವ. ೯೬); ಹೊಱಗೆ ಶಶಿಧರನಿತ್ರ ಹಸಿದೆನೆಂದೆನುತಿರಲು (ಶಿವತ. ೩೯-೦೬); ಒಳಗೆ ಕಂಜನರು ಹೊಱಗೆ ಧರಣೀಪಳೆಯ ಮಾನ್ಯರು (ಕುಮಾವ್ಯಾ. ೦-೩೯). 'ಒಳಗೆ' ಪರಾ.

**ಪೊಱಪೊಱಗೆ, ಹೊಱಹೊಱಗೆ** (ದ್ವಿರುಕ್ತಿ) : ಪಸರಿಸಿದ ಪಯಃಪೂರದ ಪೊಸವೆಳ್ಳ ನಿಜಾಂಗರುಚಿಯ ಪೊಱಪೊಱಗೆ ಪೊದಟ್ಟಿಸಿದಿರೆ (ಅಜಿಪು. ೬-೯೨); ಅಡ್ಡಾದಿಯುಧನಿಹತಿಯಿಂ ಹಱಿದಲೆಯವನ ದೇಗುಲದ ಹೊಱಹೊಱಗ ಬಿದ್ದುದು ಖಳನ ತಲೆ (ಜಪು. ೨೮-೨೬). **ಪೊಱಗಿಕ್ಕು, ಹೊಱಗಿಕ್ಕು** = ೧. ಹೊರಗಡೆ ಇಡು : ತರುಣಿಮುರಾ ವಿಲಾಸಕುಸುಮಾಸ್ತ್ರನನೀಕ್ಷಿಸೆ ಕಾಮತಾಪದಿಂ ತರುಣಮೃಣಾಳವಮಂ ತೆಗೆದು ಪೂಗೊಳದಿಂ ಪೊಱಗಿಕ್ಕಿ ದಲದಿಂ ಕೊರಗಿ (ಪುಲ್ಲಪು. ೩-೨೬); ಕಡೆದು ಕಲಂಕಿ ಮುನ್ನಮಬಳವನ್ನಗಳಂ ಪೊಱಗಿಕ್ಕಿ ಸಂಪದಂಗಿಡಿಸಿದ ಮೇರು ದೈವದಿನಿಂದೊಳಗಾಯ್ತೆನಗೆಂದು ಬಂದು ಪಾಲ್ಗಡಲಮಂದ್ರಿಯಂ ಮಱಿದು ಮುತ್ತಿದುದೆಂಬಿನಂ (ಪುಷ್ಪ. ೦೦-೩೩). ೨. ದೂರೀಕರಿಸು ; ಬಹಿಷ್ಕರಿಸು ; ತ್ಯಜಿಸು : ಮುನ್ನಂ ಪಟ್ಟಿಯುರುಮನಾಪ್ತರುಮಂ ಪೊಱಗಿಕ್ಕಿ ಪತಿಗೆ ಹಿತೋಪದೇಶಂಗೆಯ್ಯರ್ (ಶಂಕರಾ. ೦೬೯-೨೦) ; ಆ ಗುರುಗಳೇದೈದುಮಂತ್ರವನಾಗಜಿಱಿಸುತೆ ಚಿತ್ತದೊಳು ಲೇಸಾಗಿ ಜಿನಮದಭಕ್ತಿಯಿಲ್ಲದೆ ಪೆಱವ ಪೊಱಗಿಕ್ಕಿ (ಜ್ಞಾನಾ. ೩-೩೩) ; ಕುಲದ ಬೇರಿಗೆ ನೀನೆ ಗುದ್ದಲಿಗೊಳಲದೇಕೆ ಸುಪುತ್ರನಾಗಿದನಲಘುಪುಪ್ಪರು ಕೇಳದಡೆ ಹೊಱಗಿಕ್ಕರೇ ನಿನ್ನ (ಜಪು. ೩-೩೬). ೩. ಮೇಲಕ್ಕೆ ತಳ್ಳು; ಮೇಲುಂ ಮುಖವಾಗಿ ದೂಡು: ನೀರು ಹೊಱಗಿಕ್ಕುವುದು ಮಱಿಜೀ ಬಾರಿ (ಕುಮಾ. ೩-೨೬). **ಪೊಱಗಿಡು, ಹೊರಗಿಡು, ಹೊಱಗಿಡು** = ೧. ಹೊರಗಡೆಯಲ್ಲಿ ಇರಿಸು : ಅದಗಟ್ಟ ಮಡಕೆಯಂ ಪೊಱಗಿಡುವಂತೆ ಕೊಟನಟ್ಟ ಮಡಕೆಯನೇಕೆ ಹೊಱಗಿಡರ್ (ಧರ್ಮಾ. ೬-೯೩) ; ತಮ್ಮಾಯುಷ್ಯ ಭಾಷೆಗಳಂ ಪೊಱಗಿಡುವಂತೆ ಚಪ್ಪರದ ಪೊಱಗೆ ಪೊಲ್ಲನಿಱುಪಿ (ಶಂಕರ. ೩-೩೩) ; ಮಳೆಯಲ್ಲಿ ಕೊಡೆ ನೆನೆದು ಒದ್ದೆಯಾಗಿದೆ, ಬಿಡಿಸಿ ಹೊರಗಿಡು (ರೂಢಿ) ; ತಂದು ಹೊಱಗಿಟ್ಟ ಕಬ್ಬಿಲರ ಕೈವಿಡಿವನೀವೆಂದ ಪ್ರಸಾದವಿದೆ ಕೊಳ್ಳಿಯೆನಲು (ಸಿದ್ಧರಾ. ೩-೦೩). ೨. ದೂರೀಕರಿಸು : ಮುದಿಯನುಮನ್, ಮಡಯನುಮನ್ ನೀನ್ ಎಂಬುದೊರ್ಮೆಯೇ ಪೊಱಗಿಡದ ಮಱನ್ನಮನ್ (ಉಂತಿಗಿ. ೦೩-೨೬೯) ; ಬೇಡ, ತಡೆಯದಿರು, ಪೊಱಗಿಡಯ್ ಎನ್ನ ಮುಂದಿನ ಪಾಡುಮನ್ (ಬಕ್ಕತ್ತ. ೩೩-೭೦೬).

[<ಪೊಱಗು]

**ಪೊಱಗೋಟೆ, ಹೊರಕೋಟೆ, ಹೊಱಕೋಟೆ** (ನಾ). ೧. ಒಳಕೋಟೆಗೆ ಬೇರೆಯಾವ ಸುತ್ತಣ ಕೋಟೆ; ಹೊರಗಿನ ಕೋಟೆ. ೨. ಕೋಟೆಯ ಹೊರಭಾಗ : ನೊಳಂಬಿ ದಡಿಗ ರಾಚಮಲ್ಲ ಮಯ್ಯಾಡಿ ಗುಣ್ಡಿಗೆ × × ವಾಗಿ ಬರುಬಳಿಸಿ ಬಿಟ್ಟಡೆ ಪೊಱಗೋಟೆಯಿಟ್ಟುಬಿಟ್ಟವಲ್ಲಿ ಪಲರಾ ಪಯಣದ ಮಱು[ವ]ಕಸೂರಮಾಳ್ಪಡಿರಕಸ ಮನುಜರಾ ದೇವನಱಿದು ಬಿಟ್ಟ (ಎಪಿಕ. IX-i. ೦೩-೭; ೯೦೦). **ಹೊರಕೋಟೆ** : ೧. ಮುತ್ತಿನ ಒಳಕೋಟೆ ಮುತ್ತಿನ ಹೊರಕೋಟೆ ಮುತ್ತ ಬಿಗಿಸ್ಯಾರ ಹುಲಿಮುಖ (ಜಾನಪದ. ೬೪). **ಹೊಱಕೋಟೆ** : ೧. ಮುಱಿಯಲಿಱಿದು ಹೊಱಕೋಟೆಯ ಕೊಂಡು ಮತ್ತುಱುಬಿದರೊಳಗೋಟೆಗೆಂದು (ಶಂಕರ. ೦೬-೦೩೯). 'ಒಳಕೋಂಟೆ' ಪರಾ. [ಪೊಱ (<ಪೊಱಗು) + ಕೋಟೆ (<ಕೋಂಟೆ)]

**ಪೊಱಡ** 'ಪೊಱಡಂಡ' ನೋ.

**ಪೊಱಡು₁** 'ಪೊಱಮಡು' ನೋ.

**ಪೊಱಡು₂** 'ಪೊಱಡಂಡು₁' ನೋ.

**ಪೊಱತು, ಪೊರತು, ಹೊರತು₁, ಹೊಱತು** (ನಾ). ಹೊರಗೆ ಉಳಿದುದು; ಬೇರೆಯಾದುದು ; ಪ್ರತ್ಯೇಕವಾದುದು : ಬರತೆಗೆದುದೊ ನೃಪನ ಗುಣೋತ್ಕರಮನೆ ಕಳುಪಲ್ಕೆ ಕಡೆಯ ಬಾಗಿಲ್ವಾಡಂಬರೆಗಂ ಬಂದುದು ಕಾದಂಬರಿ ಪೊಱತಾಗಕುಳಕನ್ಯಕಾನಿಕುರುಂಬಂ (ಕಾದಂಬ. ೦೬೯). **ಪೊರತು** : ತಮ್ಮ ಜನಕಸುತೆ ಪೊರತಾಗಿ ಲಂಕಾನಗರಿಯನ್ನು ಕಿನಿಸಿಂದ ಭಸ್ಮಸಾತ್ಕೃತಗೈದನೀಂ ಪ್ರೌಢನೆನುತೂರೆದರಾಗಸದೊಳು (ಶಂಕಾರಾ. ೩-೭೯-೩೮) ; ಸಂತಾಪವನೀವ ಘೋರತರಕೊಪದಿ ಕೀಲ್ ಪೊರತಾದೆ (ಅರುಕ. ೩೭). **ಹೊರತು₁** : ಹೊಳೆಯ ತೀರದ ಹಸಿರುಹುಲ್ಲುಹಾಸಿಗೆಯು ಎದೆಯ ಸೆಳೆಯುವುದು ಮನವು ಹೊರತಿಹುದು (ಶಿಶಾಕ. ೦೨-೬) ; ಕಾಲ ದೇಶದ ಪ್ರಭಾವದಿಂದ ಎಂಥ ಮಹಾವಿಯಾದರೂ ಹೊರತಾಗಲಾರನು (ಕಮ. ೬೪). **ಹೊಱತು** : ತಂಮ್ಮ ಹಳಿ ಕೆಂಪಿಟ್ಟಿಯನು ದೇವಾಸ ಹೊಱತಾಗಿ (ಎಪಿ. VII. ಶಿಕಾ. ೯೭-೩ ; 1218); ಹರಹರಾ ಇನ್ನಾರೊ ತಂಗಿಗೆ ವರನು ಮಂಧಿ ಪಲಯದಮನೀಶ್ವರರು ನೆರೆದಿದೆ ರೂಪು ವಿಕ್ರಮವೆರಡು ಹೊಱತಾಗಿ (ಕುಮಾ. ೦೯-೩೩); ತನಗೆ ನಿರ್ಮಲವೆಂಬ ಭಾಗ್ಯದ ಘನತೆಯುಳ್ಳಡೆ ಸಾಕು ಹೊಱತನು ನೆನೆಯಲಾಗದು (ಶೌರಿಕ. ೩-೨೯).

**ಹೊರತು ಪಡಿಸು** = ಬೇರೆ ಮಾಡು ; ಪ್ರತ್ಯೇಕಿಸು : ಹಿಂದಿನ ಪೀಳಿಗೆಯ ಕತೆಗಳಲ್ಲಿಯ ಸೋಲನ್ನು ಪಡಿಸ್ತಿಯವರ ಕತೆಗಳನ್ನು ಹೊರತುಪಡಿಸಿಯೇ ಹುಡುಕಬೇಕಾಗುತ್ತದೆ (ಹುಡ್ಕಿ. ೨೭೬).

[ದೇ.॥ ತಮಿ. ಪುಱತ್ತು]

**ಪೊಱತೆಗೆ, ಹೊರತೆಗೆ, ಹೊರದೆಗೆ, ಹೊಱವೆಗೆ** (ಕ್ರಿ). ೧. ಇರುವ ಕಡೆಯಿಂದ ಬೇರೆ ಕಡೆಗೆ ಒಯ್ಯು,—ಸಾಗಿಸು : ಸುತರ್ ಚಿತಾರೂಢನಾಗಿರ್ದ ಶ್ರೀವಿಜಯಸುಮಂ ಕಂಡು ಬೇಗಮಗ್ನಿಕುಂಡದಿನುರ್ವೀಶ್ವರನಂ ಪೊಱತೆಗೆದು (ಶಾಂತಿಪು. ೬-೩೯ ಶ). **ಹೊರತೆಗೆ** : ೨. ಬಹಿರಂಗ ಪಡಿಸು; ಪ್ರಕಾಶಪಡಿಸು : ಅರೆಯೊಳು ಬೈತೊಂದು ಚಾರುವಿಗ್ರಹವನು ಪರಶಿಲ್ಪಿ ಪರಿಭಾವಿಸುತ್ತ . . . ಹೊರತೆಗೆದನು ಮತ್ತೆ (ಶಂಕಾಶ. ೦೬೯-೬೬). **ಹೊರದೆಗೆ** : ೧. ನೆಕ್ಲದೋವ್ ಚರ್ಮದ ಚೀಲವನ್ನು ಹೊರದೆಗೆದು . . . ನೋಟೊಂದನ್ನು ಕೊಟ್ಟನು (ಪುಶರು. ೨೯೬). **ಹೊಱದೆಗೆ** : ೩. ಬೇರೆಯಾಗು ; ಹೊರತಾಗು : ಉನ್ನತದ ಸುಖದುಃಖದಲಿ ಸಂಪನ್ನನಾಗದೆ ಹೊಱದೆಗದು ತಾನೇಕನಾಗಿಹುದು . . . ಈ ಭವದ ದಾಟುವರೆ (ಶಿವಾಗ. ೦೦-೩-೦೬). 'ಒಳದೆಗೆ' ಪರಾ. [ಪೊಱ (<ಪೊಱಗು) + ತೆಗೆ₁]

**ಪೊಱತೊಲಗು** (ಕ್ರಿ). ೧. ಹೊರಕ್ಕೆ ಹೋಗು. ೨. ಮುಟ್ಟಾಗು; ಬಹಿಷ್ಠೆಯಾಗು : ಕಾಂತೆಯರು ಪೊಱತೊಲಗೆ ಋತುಮನಿಕು (ಶಬ್ದಗಾ. ೧೬೭-೪). [ಪೊಱ (<ಪೊಱಗು) + ತೊಲಗ್ಯ್]

**ಪೊಱದಡಿ** (ನಾ). ಜಲಾಶಯದ ಆಚೆಯ ದಡ : ತೊಱೆಯ ಪೊಱದಡಿಯ ಕರಂಜಕುಂಜದೊಳ್ ಸಂದಣಿಸಿ ನಿಂದು ರೋಮಂಥ ಲೀಲಾತತ್ಪರತೆಯಿಂದರನಿಮೀಲಿತಾಕ್ಷಂಗಳಾದ ಕಾಡೆರ್ಮೆಯ ಮೊಗದಿನುಗುವ ನೊರೆಯನುರುಳಿಗೊಂಡು ತಂದಡವಿಯ ಗಿಡುಗಳೊಳ್ ಗುಡಿಗಟ್ಟಿದಂತೆ ತೊಡರ್ಚಿಯುಂ (ಚಂದ್ರಪ್ರ. ೬-೪ ವ). [ಪೊಱ (<ಪೊಱಗು) + ತಡಿ]

**ಪೊಱದೋಂಟ** (ನಾ). (ಊರು, ನಗರ ಮೊದಲಾದುವುಗಳ) ಹೊರಗಡೆಯಿರುವ ತೋಟ,—ಉದ್ಯಾನವನ; ಹೊರಭಾಗದ ತೋಟ: ಕೋಂಟೆಗಳನೇಱೆದು ಪರಿಪೆಯ ಜಲಂಗಳಂ ದಾಂಟಿ ಕತ್ತಲೆಯೊಳೊರ್ವನೆ ಮಂತ್ರಿ ಪೊಲಲ ಪೊಱದೋಂಟದೆಡೆಯೊಳ್ಳಲಸಿ ದಂಬಿಕಾಭವನಮಂ ಸಾರ್ದನು (ಕೈರಾತಾ. ೪೦-೩೭).
[ಪೊಱ (<ಪೊಱಗು) + ತೋಂಟ]

**ಪೊಱನೋಟ**, ಹೊರನೋಟ (ನಾ). ಹೊರಗಿನ ನೋಟ; ಬಾಹ್ಯ ದೃಷ್ಟಿ : ಅಱಿತು ನಿಟ್ಟಿಸ ಗಂಡುಮಕ್ಕಳಿಂದತಿಶಯದೆಱಕದೊಳಿಸವ ಪೆಣ್ಗಳನು ಪೊಱನೋಟದಿಂದ ನೋಡದೆ ಪೋಲನಿಸದೆ ಮಱುಕಮರು ಮನ್ನಿಪುದು(ಹಂಪ. ೩-೧೭). **ಹೊರನೋಟ** : ಹೊರನೋಟಕ್ಕೆ ಕಾಣುವ, ಪುನರಾವರ್ತನೆಯಿಂದು ತೋರುವ ಇಲ್ಲಿನ ಕೆಲವು ಭಾಗಗಳಿಗೂ . . . ಭಿನ್ನಾಭಿಪ್ರಾಯಗಳಿವೆ (ಜಗಾ. ೨). 'ಒಳನೋಟ' ಪರಾ.
[ಪೊಱ (<ಪೊಱಗು) +ನೋಟ]

**ಪೊಱಪಚ್ಚ**, ಹೊಱಹಚ್ಚ (ನಾ). ೧. ಮೇಲುಹೊದಿಕೆ: ನಿಚ್ಚಂ ಕಾರಿರುಳೊಳ್ ಪೊಱಪಚ್ಚವನುಟ್ಟಿರ್ದಱಂ ಕಿ ಕಳ್ಳರೂಳಾ ಪಾಟಚ್ಚರಭಯ ದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದಂಗಣದೊಳ್ (ಕಾಂತಿಪ್ರ. ೬-೪೩). ೨. ಹೊರಗಿನ ವೇಷ; ಬಾಹ್ಯವೇಷ: ಅಂತಾದೊಡಾಂ ಪುರುಷ ನಲ್ಲ ನಪುಂಸಕನುಮಱಿಯದವರ್ಗೆ ಪೊಱಪೂ[ಪ]ಚ್ಚಿದ ಶೃಂಗಾರಮಂ ಮೆಱೆವ ಪುರುಷಾಕಾರದೊರ್ವಂ (ಪುಣ್ಯಾಸ್ರ. ೩-೨೩ ವ). **ಹೊಱಹಚ್ಚ** : ೨. ಎನ್ನ ಭಕ್ತನೆಂದೆಂಬರು ಎನ್ನ ಹೊಱಹಂಚ[ಹಚ್ಚ]ಒಳಬೊಳ್ಳೆತನವನ ಱಿಯರಾಗಿ (ಬಸವ. ೩೦೩); ನಿಮ್ಮ ನಿಜವನಱಿಯದ ಶರಣರು ಹೊಱ ಹಚ್ಚ ಒಳಬೊಳ್ಳೆಪ್ಪರು ಲಿಂಗೈಕ್ಯರು (ಶತಾಧ.ಶ. ೩೧೦-೬); ಇದಱ ವಿಶೇಷಮೇನಿದಱ ದೊಡ್ಡಿತದೇನೊಳಬೊಳ್ಳೆಯಾದ ವೇಷದ ಬಲುಹೇನಿದಕ್ಕೆ ಹೊಱಹಚಿಯ[ಹಚ್ಚದ]ಲೇನಹುದು (ಶಶಿ. ೪೩); ಶ್ರುತಿಗಳ ಮಾರ್ಗ ಮೊಂದು ನಡೆಯೊಂದು . . . ನಾಡೆ ಹೊಱಹಚ್ಚದ ಭಕ್ತಿಯೊಳಿರ್ಪನಾ ದ್ವಿಜಂ (ಪ್ರಭು. ೨೬-೦೫). [ಪೊಱ (<ಪೊಱಗು) +ಪಚ್ಚ]

**ಪೊಱಪಾಯ್** 'ಪೊರವಾಯ್' ನೋ.

**ಪೊಱಪಾಳೆಯ**, ಪೊರವಾಳೆಯ, ಹೊಱಪಾಳೆಯ (ನಾ). ಊರ ಹೊರಗಿನ ಸೈನ್ಯದ ಪಾಳೆಯ,—ಬೀಡು: ಕೋಂಟೆಯುಂ ಪತ್ತಿ ಪೊಱಪಾಳೆಯಮನಿಕ್ಕಿಸುತ್ತಿರ್ಪಿನಂ (ಚಂಪು. ೧೨-೦೬). **ಪೊರಪಾಳೆಯ** : ಬಿದಿರಿದನಗಸ್ತ್ಯಂ ತ್ರಿಶಂಕು ತಲ್ಲಣಗೊಂಡ ಚದರಿ ಪೊರಪಾಳೆಯಂ ಪಾಳಾಯ್ತು (ಶಂಕಾಶಾ. ೩-೦-೨೬). **ಹೊಱಪಾಳೆಯ** : ಕಾಲಾವೀಧಿಯೊಳಗೆ ಸಂದಣಿಪ ಕಾಲಾಳುಗಳೊಯುಧದೆಳೆಗು ಪೇಳಲಳವೆ ಹೊಱಪಾಳೆಯದರ ಬಣ್ಣ ಕೇಳಿಸಿ ಕದೂರಿದಿಱಿದುದು (ಶಂಕಶ. ೦೬-೬೨).
[ಪೊಱ (<ಪೊಱಗು) +ಪಾಳೆಯ]

**ಪೊಱಪುರ್ವು** (ನಾ). ಹುಬ್ಬಿನ ಹೊರಭಾಗ; ಭ್ರೂಮಧ್ಯ: ಕಣ್ಣ ಪೊಱಪುರ್ವು[ಹಾಗಾ. ಬುರ್ಬ]ಗಳ್ಗಂ ನಣ್ಣನೆ ಭ್ರೂಮಧ್ಯಮೆಸರ ಹಯಶಾಸ್ತ್ರ ದೊಳಂ (ಅಶ್ವಶಾ. ೪-೦೭). [ಪೊಱ (<ಪೊಱಗು) +ಪುರ್ವು]

**ಪೊಱಪೊಣ್ಮು**, ಪೊರಪೊಣ್ಮು, ಹೊರಹೊಮ್ಮು, ಹೊಱಹೊಮ್ಮು(ಕ್ರಿ). ೧. ಹೊರಗೆ ಹರಿ : ಹೊರಸೂಸು : ಅಂತು ಮನದೊಳಾದ ಮೋಹ ರಸಮೆ ಕಣ್ಣಿಂ ತುಳುಂಕುವಂತೆ ಪೊಱಪೊಣ್ಮುವ ನಯನಜಲಂಗಳ ನುತ್ತರೀಯವಲ್ಕಲವಸನೋಪಾಂತದೊಳೊತ್ತುತ್ತುಂ (ಶಂಕಶಾ. ೬-೨ ವ); ನದಿಯಿಂ ಸ್ರವಣಂ ಪೊಱಪೊಣ್ಮೆ ಮಿಕ್ಕುಪೊಕ್ಕರಣೆಯ ನಿರ್ಗಳಕರ್ಕಿ ಪೊಱಪೊಣ್ಮೆ ಫಣಾಗಮದೊಳ್ ವಿನಿಂದಿತಂ (ಶಂಕಶಾ. ೪-೭೪). ೨. ಕಾಣಿಸಿಕೊಳ್ಳು; ಪ್ರಕಟವಾಗು; ವ್ಯಕ್ತವಾಗು: ಗುರುಕರುಣಾ ರಸಮುದು ಮನದಿಂ ಪೊಱಪೊಣ್ಮೆ (ಶಂಕಶಾ. ೧೧-೦೨೮); ಮನೋನು ರಾಗಮ ತನುವಿಂ ಪೊಱಪೊಣ್ಮುವಂತೆ ಪುಳಕಗಳಂ ಭೋಂಕನೆ ನೆಗೆಯೆ (ಶಾಂತಿಪು. ೬-೩೭): ಏದೆ ಪಿಡಿದದಂ ಮನವಾರೆ ತಾಳ್ದನವರತಿರುಗ್ರಾಣವ ನಂತಮುಖದೆ ಪೊಱಪೊಣ್ಮದಾತೆ (ಶಬ್ದಮ. ೦೨-೦೧). ೩. ಹೊರಗೆಲ್ಲ ಹರಡಂ,–ಆವರಿಸು,–ವ್ಯಾಪಿಸು: ಆಕೆಯ ವಿಲಾಸಹಾಸಮೆ ಪೊಱಪೊಣ್ಮಿದಂತೆ ಬೀದಿಬೀದಿಗಳೊಳೆಡೆಗಿಱಿದು ಕೆದಱಿದ ಕುಸುಮರಜಂಗಳುಂ (ಅಂಪು. ೬-೪೭ ವ); ಮುನೀಶನ ಹೃದಾತ್ಮಜ್ಯೋತಿ ಮಯ್ಯಿರ್ಚಿ ಪಜ್ಜಳಿಸುತ್ತಂ ಪೊಱಪೊಣ್ಮುತಿಂಬ ತೆಱದಿಂ (ಶುಕುಶು. ೦-೦೨೦); ಮಂಜೀರಕಧ್ವನಿ ಪಂಚ ಬಾಣಶರಾಸನಧ್ವನಿಯಂತೆ ವಿಸ್ತಾರದಿಂ ಪೊಱಪೊಣ್ಮಲ್ (ಶಶಿ. ೦೨-೩೦). ೪. ವ್ಯಾಪಕವಾಗಿ ನೆರವೇರು : ರಾಜ್ಯಾಭಿಷೇಕೋತ್ಸವಂ ಪೊಱಪೊಣ್ಮು ತ್ತಿರೆ ರಾಜ್ಯಮಂ ಕುಡೆ (ಅಂಪು. ೬-೨೬). ೫. ಹುಟ್ಟು; ಆವಿರ್ಭವಿಸು: ತತ್ಸ್ಥಳಸ್ಥೂಲಭುಜಂಗನಿಶ್ವಸಿತಮಾ ನಗದಿಂ ಪೊಱಪೊಣ್ಮೆ ಲೋಲಕಲ್ಲೋಲ ಪರಂಪರಾಪರಿಗತಂ ಮುದತ್ತು ನಗೋಪಕಂಠದೊಳ್ (ಅಂಪು. ೪-೬೩); ತುಂಬುವೆಱೆಯಿಂ ಪೊಱಪೊಣ್ಮುವ ಪೊನ್ನದಂತೆ (ರಾಜಶೇ. ೦-೯೪). ೬. ಮೇಲಕ್ಕೆ ಚಿಮ್ಮು; ಪುಟಿ: ಚಟುಳತರಂಗಸಂಘಹತಿಯಿಂ ಪೊಱ ಪೊಣ್ಮುವ ಮುತ್ತು ದಿಗ್ವಧೂನಿಕರದ ತೊಟ್ಟ ಮುತ್ತಿನೊಳೊಡಂಬಡೆ (ಜಗ. ೦-೯೪). **ಪೊರಪೊಣ್ಮು** : ೨. ನಲ್ಲೆಯ ಹೃದಯಮಂದಿರದೊಳು ನಲ್ಲನು ಎನಿತನಿತೊಳಪೊಗುತಿಹನು ಪೊರಪೊಣ್ಮುತನಿತನಿತಾಕೆಯ ಕೊಡಮೊಲೆ ಸಂಕೋಚದಿಂದೆಂಬಪೋಲಿ (ಶಂಶಾಕ. ೦೬೬-೨). **ಹೊರಹೊಮ್ಮು** : ೧. ಹೃದಯವು ಅಲೆ ಪ್ರೇಮಪ್ರವಾಹಮೇ ಹೊರಹೊಮ್ಮಿರುವ ಸಂದರ್ಭವು ರಾಮಾಯಣದಲ್ಲಿ ವರ್ಣಿತವಾಗಿರುವುದು(ಶಿಲ್ಪಪ್ಪು. ೨೭). ೨. ಯಾವಾಗಲೂ ನಗು ಅವರ ಮುಖದಲ್ಲಿ ಹೊರಹೊಮ್ಮುತ್ತಿತ್ತು (ಶುಕುಶು. ೨೪), ಅವರ . . . ತತ್ತ್ವದರ್ಶನಗಳು ವಿಶಿಷ್ಟ ಗದ್ಯದ ವಚನವಾಗಿ ಹೊರಹೊಮ್ಮಿ ಕನ್ನಡಕ್ಕೆ ಸ್ವಾನುಭವಸಾಹಿತ್ಯದ ಸಂಪತ್ತಿಯನ್ನು ಒದಗಿಸಿದುವು (ಶಶಿ. ೪೦). **ಹೊಱಹೊಮ್ಮು** : ೨. ನುಡಿವಲ್ಲಿ ಗದ್ಗದಂಗಳು ಹೊಱಹೊಮ್ಮದಿದ್ದರೆ . . . ಆನು ಡಂಭಕ ಕಾಣಿರೇ (ಬಸವ. ೩:೬); ಕಾಮಾಗ್ನಿಯಿಂದಿ ಕಾದ ಹೃದಯಸ್ಥಗಳ ದ್ವಾರೆ ರೋಮಕೂಪದೆ ಹೊಱಹೊಮ್ಮಿ ಧೂಮ ತಳ್ತುದು ಚಿತ್ರಲೇಖೆಯ ವರಮುಖಿಸೋಮಂಗೆ ಸ್ವರ್ಭಾನುವೆನಿಸಿ (ಸೋಶಕ. ೨೬-೬೦). ೩. ಹರಿಯುದರದೊಳಿಹ ಹದಿನಾಲ್ಕುಜಗಗಳ ಪರಿಪರಿಯತುಳವಿಸ್ತಾರ ಹೊಱಹೊಮ್ಮಿ ತೋರ್ಪಂತಿರೆ ಬಹುಬಗೆ ಪುತ್ಥಳಿ ಮೆಱೆವಪೊಳಪ್ರಾಕಾರ ದಲಿ (ಶಂಕಶ. ೭-೯೬). ೬. ಮುಂದೆ ಬರು; ಹೊರಚಾಚು : ಹುಟ್ಟು ದರಿದ್ರಗೆ ಬಹಳಸಂಪದ ಪರೆ ನೆಟ್ಟನೆ ಕೊರ್ವುವಂದದಲಿ ಕಟ್ಟಾಯತಿ ಪೆತ್ತ ಸತಿಮು ತಳೋದರ ನೆಟ್ಟನೆ ಹೊಱಹೊಮ್ಮಿತಾಗ (ಶಂಕಶ. ೦೬-೩).
[ಪೊಱ (<ಪೊಱಗು) + ಪೊಣ್ಮು]

**ಪೊಱಪೊಸಂತಿಲ್** (ನಾ). ಹೊರಬಾಗಿಲಿನ ಹೊಸ್ತಿಲು; ಹೊರಗಿನ ಹೊಸ್ತಿಲು: ತುಂಬಿದ ಗುಂಬಮಂ ಪೊಱಪೊಸಂತಿಲ ಪಕ್ಕದೊಳಿಟ್ಟು (ಶಕಶಿ. ೪-೪೩). [ಪೊಱ (<ಪೊಱಗು) + ಪೊಸಂತಿಲ್]

**ಪೊಱಬಳಸು**, ಹೊಱವಳಸು (ನಾ). (ಕೋಟೆಯ) ಹೊರವಲಯ: ಸುತ್ತುಮುತ್ತು : ಲಗ್ಗೆವಱಿ ಮೊಳಗಿದುವು ಕೂಗಿದುವು ತಮತಮಗೆ

ಬೊಗ್ಗು ಹೆಗ್ಗಾಳೆಗಳ್ ಬಿಡದೆ ನಡೆಗೋಂಟೆಗಳ ಮೊಗ್ಗರಂ ನೂಂಕಿದುವು ಪುರದ ಪೊಱಬಳಸಿನೊಳ್ ಪಡಿಯಟ್ಟಣೆಗಳಿದ್ದುವು (ಶಂಪು ೯೩–೨೯). **ಹೊಱವಳಸು :** ಹೊಱವಳಸಿನಿಂ ಕುದುರೆ ಅದಱಿಂ ಹೊಱವಳಸಿನಲಿ ಆನೆ ನಿಂದವು (ಪಾಳ್ಕು. ೨೨–೬೭). [ ಪೊಱ (< ಪೊಱಗು) + ಬಳಸು$_{2}$ ]

**ಪೊಱಬಿಗ, ಹೊರಬಿಗ, ಹೊಱಬಿಗ$_{1}$** (ನಾ). ಹೊರಗಿನವನು; ಸಂಬಂಧ ಪಡದವನು ; ಅನ್ಯ ; ಪರಕೀಯ : ನಂದಿತಾದುದಿನಕುಲದೇಳ್ಗೆ ಭೂವಲಯದೊಳ್ ತನ್ನ ಬಾಣಮಂ ಬಂಡೆಗೈದವರ ಪೊಱ[ಪಾಠಾಂ. ಲ]ಬಿಗ ರೆಂದನು (ಕೃಬಿಚ. ೨೦–೮೯); ಖಿತಕನೆ, ತಾವವರ್ ಕ್ರೂರಿಗಳ್. ಪೊಱ ಬಿಗರನುಜದವರ್ (ಅದ್ಭಕೃ. ೪೬–೬೦೯). **ಹೊರಬಿಗ :** ನನ್ನ ಬಾಣವನ್ನು ಬಂಡೆಗೈಯುವುದು ಹೊರಬಿಗರಿಂದ ಸಾಧ್ಯವೇ ? (ಅಮಿ. ೨೨೮). **ಹೊಱಬಿಗ$_{1}$ :** ಜಾತಿವೃತ್ತಿಗೆ ಹೊಱಬಿಗನು ತಾನಾದೆನಿನ್ನಾದರೆ ಸಲಹ ಬೇಕೆಂಬ ವಿಟರ ನೃಪಾಲನೀಕ್ಷಿಸಿದ (ಶೀಶಂಕ. ೦೬–೬೦) ; ಅರಗಿನ ವಜ್ರ ಪಂಜರದೊಳಗಿರ್ದ ಬಳಿಕ ಅಂಜಲಿಕೇನು ಕಾರಣ ಹೊಱಬಿಗರೆಂಬ ಮಂಜರ ಕೈದುಡುಕುವುದೆ (ಮೋಹತ. ೪೦–೫೯).

[ಪೊಱಬ್ಬು (೯೬–ತವಿ. ಪುಱಮ್ಬು) + — ಇಗ]

**ಪೊಱಬೀಡು** 'ಪೊಱವೀಡು' ನೋ.

**ಪೊಱಮಟ್ಟು** 'ಪೊಱಮಡು' ಪರಾ.

**ಪೊಱಮಡಿಸು, ಹೊರಡಿಸು, ಹೊಱಡಿಸು, ಹೊಱಮಡಿಸು, ಹೊಱ ವಂಡಿಸು, ಹೊಱವಡಿಸು** (ಕ್ರಿ). ೧. ಹೊರಗೆ ಬರುವಂತೆ ಅಥವಾ ಹೋಗುವಂತೆ ಮಾಡು : ಈಗಳೆ ಪೋಗಿ ಪೂಗೊಳನಂ ಮುತ್ತಿ ದುರ್ಯೋಧನನಂ ಪೊಱಮಡಿಸಿ ಪಗೆಯಂ ಪಱಿಪಡಿಪುದು (ಗದಾಯು. ೬–೩೬ ವ) ; ಪೊಟಲೊಳಗೆ ಪೊಗೆಯನಿಕ್ಕಿ ಪಾವಂ ಪೊಱಮಡಿಸಿ ಕಳ್ತುಕೊಂ ಡೊಡವೆಯಂ ಕಾಡುವಂ (ಶಂಶಶಂ. ೦೭೬–೦೭) ; ಒಡಲೊಳಗಣ ವಾಯು ವಸಲ್ಲೀದವೆ ಪೊಱಮಡಿಸಿದ ಮಾಳ್ಕೆಯೊಳರವಿಂದವಿಶಾಲವಿಲೋಚನೆಯಾ ನಿಡುಸುಯ್ಯುರವೊಪ್ಪಿದುದು (ಕಡುಶಾ. ೯–೫೦). ೨. ಪಾರುಗಾಣಿಸು ; ಪಾರುಮಾಡು : ಸಂಸರಣಾಂಭೋರಾಶಿಯಿಂದಂ ಪೊಱಮಡಿಸನಗಂ ನೀನೆ ಹಸ್ತಾವಲಂಬ (ಅಂಕ.೨–೯೯): ದುಸ್ತರಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮನಿಃಪ್ರಾರ್ಯರೆಂದುಂ (ಶುಕುಸೂ. ೦–೩). ೩. ಅಟ್ಟು ; ತಳ್ಳು ; ದೂರೀಕರಿಸು : ಪಡಿಯಱನಿಂದವೊಱಿಯಾಸಿ ಪೆಡತಲೆಯಂ ಪಿಡಿದು ನೂಂಕುತ್ತರಮನೆಯಿಂದಂ ಪೊಱಮಡಿಸಿಯಟ್ಟೆ ಕಳೆದು (ಶಬ್ದಾ. ೦೫೬–೩); ಒರ್ವ ಬೆಲೆವೆಣ್ ಕುಟಿಲತ್ವದಿಂದುಳ್ಳೊಡಮೆಯನೋಂದೊಂದು ನೆವ ವಿಟ್ಟೆಲ್ಲವಂ ಕವರ್ದುತಿದರಿದ್ರನಂ ಮಾಡಿ ಪೊಱಮಡಿಸಲ್ (ಅಾಲ್ಕಟಿ. ೧೧–೬೬ ವ). ೪. ಹೊರಕ್ಕೆ ಬರಲು ಸಹಾಯ ಮಾಡು : ಮತ್ತಂ ಮುತ್ತ ಕುರುಡ ತವಸಿಗಳ ಕೈಯಂ ಪಿಡಿದುಯ್ದುವರ ಗುಹೆಗಳಂ ಪೊಸ ಪೊಱಮಡಿವ ಚ ವ ಳ ಕ ಪಿ ಗ ಳು ಮ ೦ . . . ನೋಡಿ (ಶಂಕಥಾ. ೦–೦೦೬ ವ). ೫. ಬೀಳ್ಕೊಡು : ದೂತನಂ ಪೊಱಮಡಿಸಲಾತಂ ಬಂದು . . : ಪೇಟ್ (ಚಿತ್ರಾಕ್ಷ. ೩·೩೩ ವ). **ಹೊರಡಿಸು :** ೧. ಸೇಕಪಾತ್ರಂ, ಸೇಚನಂ—೨ ಹಡಗಿನೊಳಹೊಕ್ಕು ಬರುವ ನೀರನ್ನು ಹೊರಕ್ಕೆ ಹೊರಡಿಸುವ ಪಾತ್ರಕ್ಕೆ ಹೆಸರುಗಳು (ಸಿದ್ದಾಂತಿ. ೬೦); ಆಗ ಅಮ್ಮನು . . . ಸುಪ್ರಭೆಯನ್ನು ಗದರಿಸಿ ಕೊಠಡಿಯಿಂದ ಹೊರಗೆ ಹೊರಡಿಸಿದಳು (ಕೂಗ್ನು. ೬೨). **ಹೊಱಡಿಸು :** ೩. ಘನವಾದೊಡವೆ ಕೈಸೇರುವ ಪರಿಯಂತ ಮನೆ ದೇವರೆಂದುಪಚರಿಸು ಅನಂಗೆಡಲಾತನ ಹೊಱಡಿಸಿ ಮತ್ತೊಬ್ಬ ಧನವುಳ್ಳ ಪುರುಷನ ಕರೆಕೊ (ಕಂಪಶ. ೬–೦೫೦); ಸೆಟ್ಟಿ ಕಂಡು ಹಾದರವಾಡಿದಳೆಂದು ಹೆಂಡತಿಯ ಹೊಱಡಿಸಿ ಬಿಟ್ಟನು (ಕೃಕಸೂ. I. ೦೬೨). **ಹೊಱಮಡಿಸು :** ೩.ಛೀ ಛೀ ಛೀ ಹೋಗೆಂದು ಹೊಱಮಡಿಸುವನಮ್ಮ (ಶಿಶಗಂ. ೦೩೩–೬೭೬ ವ). **ಹೊಱವಂಡಿಸು :** ೧. ಹೊಯ್ಲುಣ ಮಣ್ಡಳಿಕ ಬಲ್ಪಿಂಗೆ ಹೋಗದಿರ ಲುಪಾಯದಿಂ ಹೊಱಪಣ್ಡಿಸಿದ ಸಮಯದೊಳ್ (ಎಕ. IV, ೦೬–೩ ; ೧೧೬೬): ಪೌರಜನವೈತರಲು ಬಂಡಿಯನೂರ ಹೊಱವಂಡಿ[ಪಾಠಾಂ. ಟ]ಸಿದನು (ಶುಕ್ತಾ. ೦೦–೨೯) ; ಬಲ್ಲಿದ ವೀರಭಟರೊತ್ತಾಗಿ ಹೊಱವಂಡಿಸಿದರನಿಲಜನ (ಕೊರಚಾ. ೩–೮–೨೯). **ಹೊಱವಡಿಸು :** ೧. ತೋಪಿನೊಳಿದ್ದವರ ಹೊಱವಡಿಸಿ ಮುಱಿದು ತಳಿಗಳ ಬಲಿದು ಬಾಗಿಲ ಹೊಱಗೆ ನಿಂದರು (ಶುಕ್ತಾ. ೦೬–೫೦) ; ಕೈಕೋಳಿಸಿ ಕಾದಿ ಕುಬೇರನನು ಹೊಱವಡಿಸಿದರು ಪುರದ (ಕೊರಚಾ. ೦–೮–೨೬).

**ಪೊಱಮಡಿಸಿ ಕಳೆ** = ಹೊರಕ್ಕೆ ಹಾಕು ; ದೂರಮಾಡು ; ಬಹಿಷ್ಕರಿಸು : ಇನ್ನೀ ಧರ್ಮ್ಮವಂ ನಗರಂ ಪ್ರತಿಪಾಳಿಸುವುದು ನೈಷ್ಠಿಕ ರಲ್ಲದರ ಪೊಱಮಡಿಸಿ ಕಳೆವುದು (ಎಕ. VII, ಶಿಕಾ ೦೨೬–೪೨ ; ೧೦೩೬) ; ಅಂತವರನರಮನೆಯಿಂ ಪೊಱಮಡಿಸಿ ಕಳೆದು ಪರುವಾದಿಯಂ ದಾನ ಸನ್ಮಾನಾದಿಗಳಿಂ ಸಂತೋಷಂಬಡಿಸಿ (ಸುಕು:ಸೂ. ೨–೨೯ ವ).

[ಪೊಱಮಡು + — ಇಸು$_{2}$]

**ಪೊಱಮಡು, ಪೊರಡು, ಪೊರಮಡು, ಪೊಱಂಡು$_{1}$, ಪೊಱಡು$_{1}$, ಪೊಱ ವಂಡು, ಪೊಱವಡು, ಹೊರಡು$_{1}$, ಹೊರಮಡು, ಹೊರವಡು, ಹೊರಹೊಂಡು, ಹೊಱಂಡು, ಹೊಱಡು$_{1}$, ಹೊಱವಂಡು, ಹೊಱವಡು** (ಕ್ರಿ). ಪೊಱಮಟ್ಟು, ಹೊಂಟು, ಹೊರಟು$_{1}$, ಹೊರ ವಟ್ಟು (ಭೂತಕೃ). ೧. ಒಂದೆಡೆಯಿಂದ ಬೇರೆಡೆಗೆ ಹೋಗು ;— ಚಲಿಸು ;— ತೆರಳು : ಎರಡುವ್ವಲದ ವೀರಭಟರ್ಕ್ಕಳೊಟ್ಟು ಪೊಱ ಮಟ್ಟು (ಎಕ. VIII. ಸೊರಂ. ೦೦–೩; ಸು. ೬೦೦); ಅಕ್ಷಯದಾನಮುಮಕ್ಕೆಂದು ಪತಸಿ ಪೊಱವಟ್ಟು ಬಸದಿಗೆ ಪೋಪಾಗಳ್ (ಶಬ್ದಾಶ. ೬೬–೨೬) ; ರಾಜ ಮಂದಿರದಿಂ ಪೊಱಮಟ್ಟು ಬರೆ (ಶಂಕಥಾ. ೯–೬೮ ವ) ; ಕಾಮದೇವರ್ಗಳ ಕೆಳೆಗುಳಕ್ಕೆ ಪೊಱಮಡಲಕ್ಕುಂ (ರಾಜಶೇ. ೯೩–೨೨). ೨. ಹೊರಕ್ಕೆ ಬರು ; ಹೊರಬರು : ಅಱಿಪಿದಂ ಗುರುಭಾರ್ಗವನಿಂತೀಯೊಡ್ಡನಿದಂ ಗೆಲ ಲಾವನುಂ ನೆಱಿಯನರ್ಕಿನಳಕಿಯನೊರ್ವಂ ಪೊಕ್ಕೊಡೆ ಪೊಕ್ಕನೆ ಮತ್ತಣು ಪೊಱಮಡಂ (ಶಂಕಥಾ. ೦೦–೬೬) ; ಒಟಿಯುದುರ್ಚದೆ ನಡುಗುಮ ನೆಱಿದೆಡೆಯಂ ಖಿಚ್ಚವಸ್ತ್ರಕೋಶದಿನಿಸಿಸಂ ಪೊಱಮಡದೆ ಕೊಂದು ಕೂಗಲ್ ನೆಱಿದುದು ದುರ್ಜನನ ನಿಶಿತರಸನಾಖಡ್ಗಂ (ಸೂಕ್ತಿಸು. ೦–೫೦); ಅರೆದೆಱಿವಬ್ಬಿದೊಳರುತಿರ್ದ ಮುಱಿದುಂಬಿ ಸ್ವರ ಮಾಡಿ ಪೊಱಮಡು ವಂತೆ (ಚಕ. ೩–೩೭). ೩. ಹೊರಹೊಮ್ಮು ; ಹೊರಸೂಸು : ಪೊಱ ಮಟ್ಟಪೊಲಾದುದಾಪ್ಪದೀರ್ಘೋಚ್ಛ್ವಾಸಂ (ಅಂತ. ೦೩–೩೬) : ಬಿಣ್ಪಲರ್ ಸಟ್ಟು ಸುಯ್ಗಳ್ ಪೊಱಮಟ್ಟೊಂದೊಂದರಸಟ್ಟುತ್ತಿರೆ (ಕಾಡಂಪು. ೦೯೨). ೪. (ಮಾತು) ಹೊರಬರು ; (ಧ್ವನಿಯು) ಕೇಳಿ ಬರು ; ಕಿವಿಗೆ ಬೀಳು : ಕನಸಿನೊಳವಿಾ ಕಪೋಲವುನಿವದನದೊಳನ್ಯಶಭಾಷೆ ಪೊಱ ಮಡದು (ಕಾಡಂಪು. ೬೬೬) ; ತಣ್ಗೇಱಿದ ಪಱಿಯಂತೆ ದನಿ ಪೊಱಮಡದ (ರಕಾರಕ್ಸು. ೦–೦೬೮) ; ಪೊಱಮಡುವ ಸಾಮರ್ಗ್ಯದ ಪೊಯ್ಲಿಂಗೆ ನಡುಗು ವಂತೆ ಕೆತ್ತುವ ತುಟಿಯುಂ (ಅಭ್ಯಾ. ೪೦೦). ೫. ಹೊರಗೆ ಕಾಣಿಸಿ ಕೊಳ್ಳು ; ಗೋಚರವಾಗು ; ಆವಿರ್ಭವಿಸು : ಪೊಱಕಣ್ಣಂ ಪುಟ್ಟಿ ತಾಂ ಮುಚಿಸಿದ ನೊಸಲೊಂದು ಕಣ್ಣುವಾಗಳ್ ನೊಸಲಿಂ ಪೊಱವಟ್ಟಂತಿರ ತೋಱಿದನೆಚಕನೆ ಹರಿಗೆಗೆ ರುದ್ರನಗ್ಗಳಗಣ್ಣಂ (ಶಂಪು. ೬–೨೩). ದೇಶಿ ಕೇಂದ್ರಾಕಾರದಿಂದ ಲೀಗಮಧ್ಯದೊಳಭವ ಪೊಱವಟ್ಟನು (ಶ್ರೀಂಶಪು. ೬–೨೬) ; ಪೆಣ್ಮೀನ ಬಸಿಱ ಬಗಿವನೆ-ದೆನುತ ಅಸಿಧಾರೆಯಲಿ ಮೆಲ್ಲರ್ದೆಯ ಬಗಿಯಲಾ ಶಿಶು ಪೊಱಮಟ್ಟುದಾಶ್ಚರ್ಯ (ಕೋಹಕ. ೦೦–೯೦). ೬. (ಸಭೆ, ಸ್ಥಳ, ದೇಶ ಮುಂತಾದುವನ್ನು) ಬಿಟ್ಟು ನಡೆ ; ತೊಲಗು : ಬಾಳ ದಿನೇಶಬಿಂಬದೊಂದೆಸಕದಿನಾ ದ್ವಿಜನ್ಮಸಭೆಯಂ ಪೊಱಮಟ್ಟೊಡೆ ಮಾಱ ದಂದದಮುಂ ಪಸದಸದುತ ಕಣ್ಗೆಸದು ತೋಱಿದುದಾ ಕದನತ್ರಿನೇತ್ರನಾ

(ಪಂಪಭಾ. ೩-೬೦) : ಇನ್ನೆನ್ನಾಳ್ವ ದೇಶದೊಳಿರದೆ ಪೊಱಮಟ್ಟು ಪೋಗೆಂದು ಜಱಿದು ನುಡಿದೊಡೆ (ಧರ್ಮಾಮೃ. ೨-೯೯). ೭. ಬಿಡುಗಡೆ ಹೊಂದು ; ಪಾರಾಗು : ನಿಮ್ಮಡಿ ನೀವಮ್ಮನೀಯುಪಾಯಸ್ಥಳದಿಂ ಪೊಱಮಡುವು ಪಾಯಮಂ ಮಾಡಿದಿರಪ್ಪೊಡೆ ನಿಮ್ಮ ಧರ್ಮದಿಂ ಸುಖಂಬಾೞ್ವೆವೆಂಬುದುಂ (ಪುಣ್ಯಾಸ್ರ. ೮೯-೯) ; ಪಾಪದಲಿ ಸಂಸಾರಕೂಪದಲಿ ಬಿದ್ದವರು ಅವಪ್ಪನಳಿದು ಪೊಱಮಡಲು ಗುರುಪದ ಸೋಪಾನವಯ್ಯ (ಶರಣ್ಯ. ೯೭). ಪೊಱರಡು : ೧. ನಿಲ್ಲದಲ್ಲಿಂದ ರಾಘವ ಪೊಱಟು ಮುನಿಯೊಡನೆ . . . ಶರಳಿದಂ ಮಿಥಿಲಾಪುರಿಗೆ (ಪಂಪರಾ. ೨-೯) ; ಅಲ್ಲಿಂದ ಪೊಱಟು . . . ಪಾರ್ಶ್ವನಾಥ ಶತವಿಶತಿಜಿನಾಲಯಂಗಳಂ ಶೋಧಿಸಿದನು (ಪಂಪಾಶ. ೮-೩-೪೨) ; ಕೆಳವರುಂ ಕೋಲೂರಿ ಪೊಱಟುರೆಂ ಪರ್ವಿ (ಶಾಂತೀಶ. ೦೯೯-೩೨೬). ಪೊಱಮಡು : ೧. ಕಣ್ವನಾರಾಯಣನ್ ತನ್ನ ಮನೆಯನ್ನೆನ್ನವಿಟ್ಟು ಪುಗುತನ್ನೊಡೆ ಅಱಿದು ಪೊಱಮಟ್ಟು ಪೋತ(ಂ)ನ್ನು ಕದಿ ತಲೆಯನ್ನಟ್ಟ ನಾಲ್ವರಾನಿಱಿದೊನ್ (ಶಾಶಾ. IX-1, ೩-೮೦ ; ೪ನೆಯ ಶಶ) ; ರಣಾವಧೂ ವಲ್ಲಭಂ ವಿಜಯಂ ವಿಜಯಾಕೆದು ಪೊಱಮಟ್ಟು (ಪ್ರಾಂಗ. ೬೦-೦೯೯೯) ; ಪಡೆಯಿಂ ಪೊಱಮಡಲ್ ಕಾಲೂರ ಕಣ್ಗಳಿಂ ಪುದಿದ ಬಳಿವಿಡಿದ ಮುದುಮಗನ ಮೆರವಣಿಗೆ (ಶಾಂತೀಶ. ೦೫೦-೩೨೯). ಪೊಱಯಂಡು$_1$ : ೮. ಹೊರಕ್ಕೆ ಚಾಚು ; ಉಬ್ಬು : ಕಮಿಗೊರಲಿಟ್ಟುದೆರ್ದೆ ಪೊಱಂಟ ಬೆನ್ ಬಾಶ ಬೂಱಡಂಗಿದ ಜಘನಂ (ಚಂದ್ರಕೇ. ೨-೩೯). ಪೊಱಡು$_1$ : ೧. ಗಮಿಸಿದನು ಮುನಿಯೊಡನೆ ಹರುಷೋದ್ಗಮದಲಾತನ ಬೆಂಬಳಿಯಲಾ ಕ್ರಮದಿನಾ ಸೌಮಿತ್ರಿ ಸರಾಗದಿ ತ್ವರಿತದಿಂ ಪೊಱಟ[ಪಾಠಾಂ. ಕಳಹಿಸಿಕೊಂಡ ನಾ ನೃಪನ] (ಕೋಶಾ. ೦-೯-೪೨). ೬. ಧೂಕಾಂತ ದಿಜ್ಜಳನ್ನಪಾಲಂ ಪುರವಿಹಾರಚಿತ್ತಂ ತನಗೆ ಪುಟ್ಟಲರಮನೆಯನೊಲವಿಂ ಪೊಱಡೆ (ಶಂಕ. ೦೦-೨). ಪೊಱವಂಡು : ೨. ಮುಳ್ಳುಂ ಸಿವುರುಗಳಂ ನಟ್ಟಲ್ಲಿಯೆ ಪೊಱವಂಡದಿರ್ದು ದಾಕೊಡೆ ಮತ್ತಂ ಕಲೊಲ್ಲತ್ರಿಗರ್ಕದಾಗ್ರವ ಮಳ್ಳಿಸಿ ಯೊಲೆಗಲ್ಲ ಸೇಕಗೆಯ್ಯಲ್ ಮಾಣ್ಗಂ (ಕೋಶಾಶ. ೯-೦೬೩). ಪೊಱವಡು : ೨. ಒಡಲಿಂದಲಸು ಪೊಱವಡುವವೊಲು ಪೊಱಮಟ್ಟನಲ್ಲಿಂದ (ಪಾಳ್ಶಾ. ೮೬-೨). ೬. ಕಳೆದ ಮಣಿಭೂಷಾಗಳೆಲ್ಲವ ಕಳಚಿ ದುಪಟನು ಗುರುವಿ ವಂಶ್ಯಗೆ ನೀವ ಸುಖಿ ಸಹಿತೆಱಗಿ ಪೊ[ಪಾಠಾಂ. ಹೊ]ಱವಟ್ಟನು ನಿಜಾಲಯವ (ಶಳಶ. ೯-೯೦). ಹೊರಡು$_1$ : ೧. ಹಿಂದೆ ಆಪವೇರಿ ಹನುಮಂತದೇವರು ಹೊರಟು (ಎಕ. VII, ಶಿಕಾ. ೦೦೭-೨೪ ; 1576 ?) ; ಗರ್ವಕ್ಕೆ ತಕ್ಕ ಫಲವನ್ನು ಉಣ್ಣಲು ಸಿದ್ಧನಾಗು. ಹೊರಡು (ಪಾಂಚ. ೯). ೨. ಒಳಗಿನಿಂದ ಹೊಗೆ ಹೊರಡುತ್ತಿದೆ. ಜನ ವಾಸವಾಗಿಲ್ಲ ಎನ್ನುತ್ತೀ ಯುಲ್ಲ (ಕೂಶ). ೪. ಶಕ್ತಿಯಿಲ್ಲದ ಶಬ್ದ ಕಾಶನ ಬಾಯಿಂದ ಹೊರಡವು (ಪಾಕಿಜ. ೦೦೦). ೫. ಬಿತ್ತಿರುವ ಕಾಳಿನ ಮೊಳಕೆ ಹೊರಡಲು ಒಂದು ವಾರ ಬೇಕಾಗುತ್ತದೆ (ಕೂಶ). ೯. (ಕಾರ್ಯ ಮಾಡಲು) ತೊಡಗು,— ಪ್ರಾರಂಭಿಸು : ಮೊದಲು ಹೊರಟುದ್ದು ಕನ್ನಡಕಾವ್ಯದಲ್ಲಿ ಸೌಂದರ್ಯ ಸಮೀಕ್ಷೆಗಾಗಿ (ಶಾಂಚಸ. I, ಕೊಪ್ಪ ಕುಶು). ಹೊರಮಡು : ೧. ಪಡಿವೇಳದಾ ಕಿರಿಯನಣ್ಣನ ಹಿಂದೆ ಹೊರಮಟ್ಟನೆಂತಾದೊಡಂ ಕೋಸಲದ ರಾಣಿಯುನರಸಲೆಂದು (ಭ್ರಮಶು. ೫೩೬-೬೯೯). ಹೊರವಡು : ೧. ರಾಮದೇವನು ಬೇಟೆಗೆ ಹೊರವಟ್ಟು ಹಿರಿಯ ಹನ್ದಿಗೆ . . . ಶಾಗಿ ಕೊನ್ದು (ಎಕ. IX, ಶಂಗಳಹ. ೩೨-೩ ; ಹು. 1080). ಹೊರಹೊಂಡು : ೧. ಆ ದೂತರು ತಮ್ಮೊಡೆಯನಿಗೆ ಅಭಿವಂದನೆಯಂಗೈದು ಹಸಾದವೆಂದು ಹೊರ ಹೊಂಟು (ಚಂದ್ರಕೇ. ೩೯). ಹೊಱಂಡು : ೨. ಕೊಳದಿಂ ಹೊಱಂಟು ಪುರ್ವರೆಯಣ್ಣನುತ್ತಮ ಷಡಕ್ಷರಿಯ ಮಂತ್ರಮಂ ಸ್ಮರಿಸುತ್ತ . . . ಮಹಾಂದೀರ ಮಂಟಪದಲಿ ಕುಳಿತು (ಷಡಕ್ಷ. ೬-೨೬). ಹೊಱಡು$_1$ : ೧. ಎಂತು ಪಾಪಿಲ್ಲಿಂದ ಹೊಱಡುವ ಯತ್ನವೆಂದಾತದ ಯೋಚನೆಗೈದು (ಶಂಕ. ೩-೦೩)

೨. ಮಿಕ್ಕ ಕಂಗಳುಗೋಲ್ಗಳೊಡಲ ಹೊಕ್ಕ ಮಾತ್ರದಿ ಹೊಱಟಿದೆಯಲ್ಲಿ ರಕುತವ ಮುಕ್ಕುಳಿಸಿತು (ಕೋಶಹ. ೩೩-೩೬). ೪. ಪುರುಷರ ನುಡಿ ಹೊಱಡದ ಮುನ್ನ ಸ್ತ್ರೀಯರು ಹರಿಸದೆ ಮೇಲಿಕ್ಕುವರು (ಕೋಶಹ. ೦೦-೦೩). ೮. ಕಾಸಿದ ನಡುವಿನ ಹೊಱಟ ಬೆನ್ನಿನ ಬೀಸುಗೈಗಳ ಡೊಂಕಕಾಲುಗಳ (ಬಸವ. ೨೦-೦೦). ಹೊಱವಂಡು : ೧. ಹೃದಯ ದೊಳಹನ್ನಕ್ಕರ ಲಿಂಗಪ್ರಾಣ ಹೃದಯದಿಂದ ಹೊಱಯಂಕೆ ಹೊಱವಂಟರೆ ಭವಿ (ಅಜಕ. ೦೦-೦೯) ; ಫಲುಗುಣನ ಶಕ್ತಿಗಾವನು ಹೊಯ್ ಹೊಯ್ಯೆನುತ ಹೊಱವಂಟರತಿರಥರು (ಕುಮ್ಮಕ್ರೋ. ೦೦-೦೬) ; ಮುಱಿದು ಮುಲಗಿದ ದಾಲಿಕೆಯ ಬಿಟ್ಟಡವಿಯಲಿ ಹೊಱವಂಟನಾ ವನವ (ಕಳಶ. ೬-೦). ೪. ಸಿಕ್ಕಿದಳಿ ಹೊಱವಂಟುಮಟ್ಟಂಗಳ ಬಸುಱೊಳಿರ್ದು (ಬಸವ. ೦೨-೯೯). ಹೊಱವಡು : ೧. ಹೊಸತಿಲ ಪೂಜಿಸಿ ಹೊಱವ[ಪಾಠಾಂ. ಹೊಡವಂ, ಹೊರವಂ]ಟ್ಟು ಹೋದ ಒಕ್ಕಲಿತಿಯಂತಾಯಿತ್ತೆನ್ನ ಭಕ್ತಿ (ಬಸವ. ೯೨೨) ; ಕೋಟಿರಥಗಳು ರಣಕೆ ಹೊಱವಡಲು (ಶಾಶಾ. ೨೦-೬) ; ವಿಲಸಿತರತ್ನ ಭೂಷಿತನಾಗಿ ಹೊಱಪಟ್ಟ ಕಲಿಗಳ ದೇವ ಕಾಳೆಗಕೆ (ಪೂಶಹ. ೯೦-೯). ೪. ಜೀವಿತ × × × ಮಾಱ ಹೊಱಮಟ್ಟು ಹೋಹ ಸುಂಕ ಸಹಿತ ಧಾರೆಯನೆಱೆದು ಬಿಟ್ಟರು (ಶಾಶಾ. IX-1, ೦೯೩-೯೫ ; 1079) ; ಜನವು ಹೊಱವಡುತಿರಲು ಪದ್ಮಾವತಿ ನಿರೀಕ್ಷಿಸುತಿರ್ದಳಾ ವಿಟನ (ಶಿಶಂಶ. ೩-೨೬). ೭. ಹಿಂದೆ ಪರಸತಿಗಾಗಿ ಹಿಡಿವಡೆದಂದು ಭಂಗಿಸುವಲ್ಲಿ ದೃಗುಜಲಬಿಂದು ಪೊಂದುಂ ಹೊಱಪಡದು (ಬಸವ. ೦೫-೩೩).

[ದೇ. ೩ ತಮಿ. ಪುಱಪ್ಪಟು; ಮಲ. ಪುಱಪ್ಪೆಡು]

ಪೊಱಮದಿಲ್ (ನಾ). ಹೊರಗೋಡೆ : ಭೂಗಧಿಪತ ಗೃಹಗಳ ಪೊಱಮದಿ ಲಂಗಣದ ಮರದ ಕೊನೆಯ ಮೇಗೆ ... ನೋಡಿದರಾ ಪೂಗಣಗೊಳೆಯುಲಿವ ಕುಮಾರನನು (ಶಬರಾ. ೦೦-೫೦). [ಪೊಱ (< ಪೊಱಗು)+ಮದಿಲ್]

ಪೊಱಮಾಱು$_1$ (ಕ್ರಿ). ಓಡಿ ಹೋಗು ; ಹಿಮ್ಮೆಟ್ಟು ; ಪಲಾಯನ ಮಾಡು : "ಪೊಱಮಾಱು—ಪಲಾಯನೇ" (ಶಬ್ದಮ) ; ನಗೆ ಪಗೆವಾಡ ಗೋಗ್ರಹಣದೊಳ್ ಪೊಱಮಾಱಿದ ಬನ್ನಮೊಂದು ನೆಟ್ಟಗೆ ಮನಮಂ ಪಳಂಚಲೆಯೆ (ಪಂಪಭಾ. ೦೦-೦೦೦) ; ಜಯಂತಕುಮಾರಮುಖ್ಯರೆಲ್ಲಂದು . . . ಕಾದೆ ಸಸ್ಪಂದಿತಚಿತ್ತನಾಗಿ ಪೊಱಮಾಱಿದನಾರೆಯುದಗ್ರಸೈನಿಕಂ (ಶಬ್ದಮ . ೦೨-೨೦೩) ; ಪೊಱಮಾಱದೆ ನಿಂದಿಱಿದು ಸತ್ಪೊಡಾತನೆ ಬರ್ದಂ (ಪಂಚತಂ. ೦೨-೯೦).

[ದೇ. ೩ ತಮಿ. ಪುಱಮಾಱು = ಬಲವನ್ನು ಕಳೆದುಕೊಳ್ಳು]

ಪೊಱಮಾಱು$_2$, ಪೊಱವಾರ್, ಪೊಱವಾರ, ಪೊಱವಾರು, ಪೊಱ ವಾಱ್, ಪೊಱವಾಱು, ಹೊಱವಾಱ್ (ನಾ). ೧. ಬೆನ್ನು ತೋರಿಸುವುದು ; ಸೋತು ಓಡುವುದು ; ಪಲಾಯನ : "ಪೊಱ ಮಾಱೆಂದು ಬೆನ್ನೀವುದಕ್ಕೆ ಬಡದಿರ್ಪ ನಾಮಂ" (ಶಬ್ದ. ೬೮). ೨. ನಿತಂಬ; ಜಘನ. ೧, ೨ : "ಪೊಱ(ರ)ಮಾಱು[ಪಾಠಾಂ. ಱ್]ಯೆಂಬೀ (ಎರಡು) ಶಬ್ದಂ=ಬೆಂಗೊಡುವಲ್ಲಿಯುಂ, ಸ್ತ್ರೀಯರ ಪರಭಾಗದಲ್ಲಿಯುಂ" (ಶಬ್ದ. ಕಾ. ೫೦) ; ಆ ನೃಪೋತ್ತಮನೊಳ್ ರಾಗೋತ್ಕಂಠವೆಂಬುದು ತಳಂಗಳೊಳ್ [ವೃ]ತಿಯೆಂಬುದೂರುಸ್ತಂಭದೊಳ್ ಪೊಱಮಾಱೆಂಬುದು ನಿತಂಬಸ್ಥಳದೊಳ್ . . . ಕಾಣಲ್ಕಕ್ಕುಮದಲ್ಲದೆ ಪೆಱವು[ಯ]ಱದು ಪಾತ್ರವಿಲ್ಲ (ಧರ್ಮಾ. ೯-೨೯ ಕ). ಪೊಱವಾರ್ : ೨. ಚಲನಾಲಸೆ ಯರ್ ಪೊಱವಾರ್ಗಳಿನೀ ಕಾಮಿನಿಯರಾರ ಸೋಲಿಸದಿರ್ಪರ್ (ರ್ವ್ಯಾಕೋ. ೨೯೦), ಪೊಱವಾರ್ಗಳಂ ಪಿಡಿವ ಹೂಮುಡಿಯ ಬಿಡಿಯಲೆನೆ ಸೆರಗು ದಡದಡಿಸುತಿರೆ ಬೆಲ್ಲೆಯರ್ ಮೆರೆದು (ಶಾಂತೀಶ. ೦೨೯-೨೬೦). ಪೊಱವಾರ : ೨. ಸ್ಮೇತರಾಸಿಯಂತೆಸೆವ ಪೊಱವಾರದ ಪೊಂಬಾಳೆಗಂಬದಂತೆ ತೋರ್ಪ ಬಟ್ಟದೊಡೆಯ . . . ಕೆಂದಾವರೆಗಳಂತೆ ವಿರಾಜಿಪ ಪಾಣಿತಳಂಗಳಂ

ಶೋಭಿಸೆ (ಹಾಅಕ್ಕ. ೦-೩-೨೮ ಕ): ನೀಟವಾದ ಕಣ್ಣುಗಳುಳ್ಳವಳಾಗಿ ಒಳ್ಳೇ ಪೊರವಾರಗಳುಳ್ಳವಳಾಗಿ . . . ದ್ರೌಪದಿಯು ಹುಟ್ಟಿದಳು (ಕೃಹಾಕ. ೦೦೨). **ಪೊರವಾರು**: ೨. ಹುಬ್ಬುಲಿ, ಕಿರುಬುಲಿ, ಸುರುಸುರಿಗೆ ಈ ಸೊಪ್ಪುಗಳ ರಸ . . . ಪೊರವಾರಿಗೂ ಹಿಮ್ಮಡಿವರ್ಯಂತವೂ ತೊಡಿಯಲು ಮೂಱುದಿನಕ್ಕೆ ಶೀತಜ್ವರಂ ಗುಣವಕ್ಕುಂ (ಸಕಕ್ಕಿ. ೬೦); ಸೋಮರ್ಯಾದಿ ಕುಚದ್ವಂದ್ವಮೆಸೆವ ಪೊರವಾರುಗಳ ಪರ್ಯಗೆ ಕೊರಲ್ ಮಧ್ಯಮೂರುಗಳ್ ದಡದಡಿಸೆ (ಕುಶ್ಯಂಗ. ೨-೦೭). **ಪೊಱವಾಱ್**: ೨. ಕಡುಮಾಡಿದುವೆವ ಪೊಱವಾಱ ಶಿಕ್ಷೆನಿಂ (ಅಂಕ್ಷ. ೪-೬ ಜಳ); ನೇಸಱ್, ಎಬ್ಬೆಱ್, ಪೊಱವಾಱ್ (ಜಮಶ. ೧೮ ಪ್ರತೂ); ಚೆಲ್ವಿನೊಪ್ಪುವ ದಾಸಿಗೆ ಹಿಂದಾದವೊಂದದಿರುವಂತೆಸೆವ ಪೊಱವಾರ್ಗಳಿಂದೊಪ್ಪುವಾ ಸತಿಯರಾನಂದದಿಂದಲೆಯ್ದಂದರು (ಹಾಪಕಾ. ೯-೨೨). **ಪೊಱವಾಱು**: ೨. ನಿತಂಬ ಮುಸುಕಿದ ವಿಪುಳಪೊಱವಾಱು ಮಱದಗಿತಿ ಮುಸುಕಿದ ಪದಂ (ಜಕಳಾ. ೪-೩೪); ಬಿಗಿದ ಮೊಲೆಗಳ ಮೆಱೆವ ಪೊಱವಾಱುಗಳ ಬಿಂಬಾಧರದ . . . ಪದ್ಮಿನಿಯರುಗಳಿಸೆದರು ರಾಜಸಭೆಯೊಳಗೆ (ಕುಮ್ಯಾಂ. ೬೦೩. ೬-೪೬): ಕೊಡವೊಱಮಾಱ ಭರಕೆ ಪೊಂಬಾಳೆದೊಡೆ ದಡದಡಿಸೆ (ಹಂಕೃ. ೦೯-೨೬). **ಹೊಱವಾಱ್**: ೨. ಹೊಱವಾಱಿ ಇದ್ದ ಕಟಿಕೆಗಳೆರಡು ಕುಕಂದರ (ಜಾಕಾ. ೬).

[< ಪೊಱಮಾಱು₁./ತಮಿ. ಪುಱಮ್ರುರು = ದೇಹದ ಒಂದು ಅಂಗ]

**ಪೊಱಮಾಱು₂**, ಹೊರಮಾರು, ಹೊರವಾಱು, ಹೊಱವಾಱು (ನಾ). ೧. ಹೊರಗಿನ ಮಾರಾಟ: ಹೊರಗೆ ಮಾರುವಿಕೆ: ಎಳ ಅಂಚಿ. ಪೊಱವಾಱು, ಪೊಱಅಡಿ (ಶಾಸಾಜೂ. ೦೯೯ ಉರಾ). **ಹೊರಮಾರು**: ೧. ಒಳಮಾರು (ಆಮದು) ಹೊರಮಾರು (ರಫ್ತು) ಸರಕುಗಳ ಮೇಲೂ ತೆರಿಗೆ ಹಾಕಿತು (೨ಕ್ಕಾಂಸಂ. ೯೨). **ಹೊರವಾಱು**: ೨. ಹೊರನಾಡಿನಲ್ಲಿ ಮಾರುಟವಾಗುವ ಸರಕುಗಳ ಮೇಲೆ ಹಾಕುವ ಸುಂಕ: ಮಗ್ಗ ಮುದ್ರೆ, ಒಳವಾಱು ಹೊರವಾಱು ಮದುವೆ . . . ಮುಂತಾದ ಏನುಳ್ಳ ಸುಂಕ ತಳವಾರಿಕೆಗೆ ಸಲುವ ಅಂಬಲಿ (ಎಕ. VII. ಶಿಕಮೊ. ೬೦-೩೦; 1431): ಸುಂಕ ಪೊಳವಾಱು ಹೊರವಾಱು ಕಂಮಾಜಿದೆಱ್ . . . ಮಾದಜಿಕೆ ಮುಂತಾದ ಏನುಳ್ಳ ಸಕಲ ಸ್ವಾಮ್ಯವನು ಆಗುಮಡಿ (ಕ್ಕುಕಂ. ೦೯೩೬. ೬೮-೩; 1507). **ಹೊಱವಾಱು**: ೨. ಹೊಱವಾಱು ಉಭಯಮಾರ್ಗ ಒಳವಾಱು ಸ್ಥಲ ಕುಳವಿಸಂಚವಿಲ್ಲಾ ಎಂದು ಕೊಟ್ಟ ಚೀಟು ನಿಮ್ಮ ಕೈಹಾಳೆಯಲ್ಲಿ ಅದೆ (ಸುಂಕಂ. ೪. ೬೯೯-೩); ಒಳವಾಱು ಹೊಱವಾಱು ತಳಸಾರಿಕೆ ಆಲೆದೆಱ್ (ಎಕ. VIII. ತೀಕಹ. ೦೩೦-೯೯; 1404). 'ಒಳವಾಱು' ನರಾ. [ಪೊಱ (< ಪೊಱಗು) + ಮಾಱು]

**ಪೊಱಮಿಂಚು**, ಹೊಱಮಿಂಚು (ನಾ). ೧. ಹೊರಗಿನ ಬೆಳಕು.–ಪ್ರಕಾಶ. ೨. ಹೊರಗಿನ ಥಳುಕು.–ಆಕರ್ಷಣೆ.–ಸೌಂದರ್ಯ. ೩. (ಅಲಂ) ಬೂಟಾಟಿಕೆ: 'ಪೊಱಮಿಂಚುಗೆಯ್' ನರಾ. **ಹೊಱಮಿಂಚು**: ೨. ಜವ್ವನದ ಹೊಱಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋಱುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ (ಜುಹಾಂ. ೨. ೬೦-೦೬೩); ಹೊಱಮಿಂಚು ಹೊಲೆವೆಣ್ಣ ಸೋಲ್ವ ತೆಱದಿಂ (ರಕ್ಕಾಕ. ೪೬). [ಪೊಱ (< ಪೊಱಗು) + ಮಿಂಚು₂]

**ಪೊಱಮಿಂಚುಗೆಯ್** (ಕ್ರಿ). ೧. ಹೊರಗಡೆ ಬೆಳಕನ್ನು ತೋರಿಸು: ಹೊರಗೆ ಪ್ರಕಾಶವನ್ನುಂಟುಮಾಡು. ೨. (ಅಲಂ) ಬೂಟಾಟಿಕೆ ಮಾಡು: ಪೊಱಮಿಂಚುಗೆಯ್ವನ ಬಱುವಾತುಗಾಱನಂ ಕಱುಬನಂ . . . ತೋಱೆಯುಮುದೆಗ್ಗತನವಲ್ತೆ (ರಾಚಕ. ೦೦-೯೨).

[ಪೊಱಮಿಂಚು + ಕೆಯ್₁]

**ಪೊಱಮುಯ್ಯು** (ನಾ). ಭುಜದ ಹೊರಭಾಗ; ಹೊರಭುಜ: ತಳ್ಪವೆರ್ಗೊಳೆ ಪೊಱಮುಯ್ಯು ಬೆನ್ನಿನಿತುಮೊರ್ಮೆಯ ನಾ[ಂದಿ]ನವು ನಕ್ಕ ಪೊಣ್ಮೆ ಕಣ್ಮಲರ್ಗಳಿನೆಚ್ಚು ಪಾಯ್ದುವರಲಂಬುಗಳಂತೆ ವಿರೋಧಿನಾಂಬುಗಳ್ (ಕುಜಾ. ೯-೦೦೩); ಬಳೆದು ಪೊಱಮುಯ್ಯುವರೆಗಂ ತಳೆದು ಕನತ್ಕನಕಪೀಗರುಚಿಯುಂ (ಶಾಂಪು. ೨೦೯); ಪೊಱಮುಯ್ಯುಂ ತಾಗೆ ಬಿಲ್ಲಂ ತೆಗೆದೆಚ್ಚುದು ಸರೋಜಾಕ್ಷನೆಚ್ಚಗ್ನಿಬಾಣಂ . . . ಉರಿಪಿದತ್ತಾ ಪುರಂಚಕ್ರಮುಂ (ಜಜ. ೦೯-೦೦೩). 'ಒಳಮುಯ್ಯು' ನರಾ.

[ಪೊಱ (< ಪೊಱಗು) + ಮುಯ್ಯು₂ (< ಮುಯ್ಯು)]

**ಪೊಱಮೆಯ್**, ಹೊರಮೈ, ಹೊಱಮೈ (ನಾ). ೧. ಹೊರಭಾಗ; ಹೊರಗಡೆ: ಪೊಱಮುಮಾಡ್ಕೂ ವೇಷದಿರವೇತೆಜನಾದೊಡಮೇನೊ (ಕಂಕ. ೨-೬೪). **ಹೊರಮೈ**: ೧. ಭೂಮಿಯ ಹೊರಮೈಯ ಬಿರುಕಲುಗಳಲ್ಲಿ ನೀರು ಸೇರಿಕೊಳ್ಳುವುದಷ್ಟೆ (ಶಾಂಕ್ರ. I. ೦೯೩). ೨. ಪುಸ್ತಕ ಮುಂತಾದುವುಗಳ ಮೇಲುಹೊದಿಕೆ; ರಟ್ಟು: ಪುಸ್ತಕದ ಹೊರಮೈ ವರ್ಣರಹಿತವಾಗಿರುವುದರಿಂದ, ಗ್ರಂಥದ ಸರಳತೆಯು ಎತ್ತಿ ತೋರಿಸಲ್ಪಡುವುದು (ಕೂಕಸಂ. ೦೯). **ಹೊಱಮೈ**: ೧. ಅದಱ ಬಿಮ್ಮಡಿ ಪ್ಲಕ್ಷದ್ವೀಪವು ಯದಱ ಹೊಱಮೈ ಸ್ವಾದುಜಲವು (ಸಂಕಪ. ೦೦-೬). 'ಒಳಮೆಯ್' ನರಾ. [ಪೊಱ (< ಪೊಱಗು) + ಮೆಯ್₂]

**ಪೊಱಯಿಂಕೆ**, ಪೊರಯಿಂಕೆ, ಹೊರಯಿಂಕೆ, ಹೊರಯಿಕೆ, ಹೊಱಯಿಂಕೆ, ಹೊಱಯಿಕೆ (ಅ). ಹೊರಗಡೆಗೆ; ಹೊರಕ್ಕೆ: ಕಱುವಿನಡಗಂ ಕುದಿಸಿ ತಿಂದುಳಿದ ದೇಹಮಂ ಪೊರೆಯಕ್ಕೆ [ಪೊಱಯಿಂಕೆ] ಬಿಸುಟು (ಜಾಂಕ. ೦೦-೩೬). **ಪೊರಯಿಂಕೆ**: ಈಕೆ ಮುಖಮುಜ್ವನಂಗೈದು ಧುಂಡಿಮ ಪೊರಯಿಂಕೆ ಬರುತಿರ್ದಳು (ಶಾಂಕಕ. ೪೦-೦೨). **ಹೊರಯಿಂಕೆ**: ಶಿರಃಪೋಲಾನಿ = ತಲೆಯಂ ಕಿವಿಯ ಕೆಳಗಣ ಗಲ್ಲದ ಕೀಲಂ, ಧಾರಯಿತ್ವಾ = ಹಿಡಿದು, ವಿಸರ್ಜಯೇತ್ = ಹೊರಯಿಂಕೆ ಎಳೆಯಬೇಕು (ಶಾಕಶಿ. ೨-೨-೩೬ ಪ). **ಹೊರಯಿಕೆ**: ಮನೆಯ ಐದುಕುಗಳನೊಂದೊಂದ ಹೊರಯ[ಯಿಂ]ಕೆ ತೆಗೆಯೆ ಮನೆಯೊಳಗೆ ಬಯಲೊಂದೆ ಕಿಡದೆ ನಿಲುವಂತೆ (ಕೃಕಶ. ೩-೦೬-೯). **ಹೊಱಯಿಂಕೆ**: ಹೃದಯದೊಳಗಿಹಷ್ಷಕ್ಕರ ಲಿಂಗಪ್ರಾಣ ಹೃದಯದಿಂದ ಹೊಱಯಿಂಕೆ ಹೊಱವಂಟರೆ ಭವಿ (ಅಚಕ. ೦೦-೦೬); ಪಟ್ಟಿಗೆಯ ನೀಕ್ಷಿಸುತಂದು ಬೀಸಾಟನೆತ್ತಿ ಹೊಱಯಿಂಕೆ ಕೋಪಿಸುತೀದು (ಕಕಶ. ೮೮. ೦೩-೬); ಭವಿ ನಮ್ಮ ಮನೆಗೇಕೆ ಬಂದೆ ತೊಲತೊಲಗೆಂದು . . . ಮುಂದಿ ಮಕ್ಕಳುಗಳುಂ ಹೊಱಯಿಂಕೆ ನೂಕಲು (ಗುಸುಕಾ. ೬-೪೭). **ಹೊಱಯಿಕೆ**: ತಟ್ಟುಮುಟ್ಟು ಹೊಱಯಿಕೆ ಬಿಸಾಡೆಯಮ್ಮ (ಶಿರಗ. ೦೩೯-೬೯೯ ಕ); ಆ ತಟ್ಟಿಯಂ ದೇಗುಲದ ಹೊಱಯಿಕೆ ಹಾಯಿಕಿದಂ (ಜಕ್ಕೃ. ೩೪-೦೩); ಕಡು ಸುಖವ ಮುಚ್ಚಿರ್ದ್ದ ಮನ ಹೊಱವಡಿಸಿ ಹೊಱಯಿಂಕೆ ಧೈರ್ಯದಲಿ ಸುಖಗಡಲೆನಿಪ ಶ್ರೀಕೃಷ್ಣಚರಣಾಬ್ಜದಲಿ ಮನವಿರಿಸಿ ಮಡಿದನು (ಕಜಾಸ. ೦೦-೩೭-೨೬). 'ಒಳಯಿಂಕೆ' ನರಾ. [ಪೊಱ (< ಪೊಱಗು) + ಇಂಕೆ₂]

**ಪೊಱವಂದು** 'ಪೊಱಮಡು' ನೋ.

**ಪೊಱವಡು** 'ಪೊಱಮಡು' ನೋ.

**ಪೊಱವರ್**, ಹೊರಬರು (ಕ್ರಿ). ೧. ಹೊರಕ್ಕೆ ಬರು: ಪೊಱವಂದು ನಿಂದು ಕೆಳೆಯರ್ಕಳೊಂದಿ ತಾಂ ಕಿಱುಮಾಡವೇಱ್ (ಕಳ. ೬-೦೯೩). **ಹೊರಬರು**: ೧. ಅವರಾಗಿ ಹೋಗೆಂದು ಹೇಳುವುದಕ್ಕಿಂತ ತಾವಾಗಿಯೇ ಹೊರಬರುವುದು ಮರ್ಯಾದೆಯೆಂದೆಣಿಸಿ . . . ತನ್ನ ಲೆಕ್ಕಪತ್ರಗಳನ್ನು ತೀರಿಸಿಕೊಂಡು ಹೊರಬಂದನು (ಮುಜಾಕ. ೦೯೬). ೨. ಪ್ರಕಟವಾಗು; ಪ್ರಕಾಶಗೊಳ್ಳು: ಪತ್ರಿಕಾಪುಸ್ತಕವಾಲೆಯಲ್ಲಿ ಹೊರಬರುತ್ತಿರುವ ಮತ್ತೊಂದು ಪುಸ್ತಕ ಈ ಗೃಹವಿಜ್ಞಾನ (ಗೃಹೂ. IV. ಮುಖ್ಯು೩).

[ಪೊಱ (< ಪೊಱಗು) + ಬರ್ (< ವರ್)]

**ಪೊಱವಲಯ**, ಪೊಱವಳಯ, ಹೊರವಲಯ, ಹೊರವಳಯ,

**ಹೊಱವಳಯ** (ನಾ). ಹೊರಗಿನ ಪ್ರದೇಶ : ಹೊರಭಾಗ ; ಹೊರಗಡೆ : ಪೊಳಲ ಪೊಱವಲಯದಲಿ ನಂದನಲಕ್ಷ್ಮಿ ಶೋಭಿಪಳು (ಶಾಶ್ವತಾ. ೨-೨). **ಪೊಱವಳಯ**: ಇತ್ತ ವಿಶಾಖಭೂತಿಯರಸುಗೆಯ್ಯುತ್ತಿರೆ ಪೊಱಲ ಪೊಱವಳಯದೊಳ್ [ಪಾಠಾಂ. ಪೊಱವೊಟಲೊಳ್] . . . ವಿಶ್ವನಂದಿ ಮಾಡಿಸಿದನಂದೊಂದು ನಂದನಮಂ (ಶಾಂತಿಪು. ೬-೩೨ ವ); ಇಂತೆಸೆವ ಪಟ್ಟಣದ ಪೊಱವಳಯದೊಳ್ ಲತಾಸಂತತಿಗಳಿಂ ಕುಸುಮಶೋಭೆಯಿಂ ತರುಗಲದ ತಿಂತಿಣಿಗಳಿಂ ಫಲಾನೀಕದಿಂ . . . ಆ ವನಂ ಕಣ್ಗೆಸೆದುದು (ಕಂಪು. ೧೦-೨೦); ಅರ್ಜುನನ ಕಟೀರವಿರ್ದುದು ಮಹಾಂಭೋನಿಧಿಯ ಮಸಣದಿಂ ಪೊಳಲ ಪೊಱವಳಯದುದ್ಯಾನವೀಧಿಗಳೊಳು (ಕೃಷಿಶಾ. ೫೬-೨೨). **ಹೊರವಲಯ** : ನಗರದ ಹೊರವಲಯ (suburb. ಇಂಕಿ). **ಹೊರವಳಯ** : ವೆಂಕಮ್ಮನ ಸಂಸಾರ ಸಂಕಾಪುರದ ಹೊರವಳಯದ ಮಾರುತೀದೇವಾಲಯದಲ್ಲಿ ಬಹುಕಾಲ ನಡೆಯಿತು ! (ಜನಕಾ. ೧೫೭); ಅವರ ಎದುರುಗಡೆ, ಕಟ್ಟಿಗೆಯು ಕಟಕಟಿಯಿಂದ ಅವ್ಯಕ್ತವಾದ ಹೊರವಳಯದ ಒಂದು ಮೂಲೆಯಲ್ಲಿ ಹೈಮವತಿ (ಎಚ್‌. ೮೨). **ಹೊಱವಳಯ** : ಪುರದ ಹೊಱವಳಯದೊಳು ಧರಣಿಪಂ ಪೋಗುತಂ ಸುರೆಯ ಹರವಿಯ ಮೇಲೆ ಧಸಿತವಿರೆ ಕಂಡು (ಅಶಾಂ. ೬೨-೩೯) ; ನಿಲಿಸಿದರು ಕೈದುಗಳ ಕರಿ ಸಂಕುಲವ . . . ಊರ ಹೊಱವಳಯದಲಿ (ಕೋರಿಗಾ. ೬-೧೪-೩).

[ಪೊಱ (< ಪೊಱಗು) + ವಲಯ]

**ಪೊಱವಳಯ** 'ಪೊಱವಲಯ' ನೋ.

**ಪೊಱವಾಯ್**, ಪೊಱಪಾಯ್, ಹೊರಹಾಯು (ಕ್ರಿ). ೧. ಹೊರಕ್ಕೆ ಚಾಚು ; ಹೊರಬರು : ಕಣ್ಗಾಳ್ ಪೊಱವಾಯ್ವುದು ಕೋಪಶಿಖಿ ಪೊಣ್ಮೆ ಶ್ರುಂದಿನಂ ಕೆಂಕವಾದುವು (ಹರಿವಂಶ. ೯-೧೮); ಬಟ್ಟ ಬಾಯಕ್ಕುಳಿಸಿರ್ದ ಪೊಣ್ಮಿ ಪೊಱವಾಯ್ವುದೇಯಂರ್ವಿಪ ಪರ್ವ (ಪರಾಕೃ. ೧೫-೩೯); ಮರಣವೇ ಶರಣೆನುತ್ತೊಂದೇ ಕಠಾರಿಯಿಂ ಚರಿತದೀದಿತ್ತಿದಂ ನಿಷ್ಕಗುವಕಾರಿಯಂ ಇಱಿದುಕೊಂಡಂ ಕರುಳು ಪೊಱವಾಯಲು[ಪಾಠಾಂ. ಪಾಡಲು] (ಕಅಶ. ಊ. ೫೦೨-೧೪). **ಪೊಱಪಾಯ್** : ೧. ಕಣ್ಣುಬ್ಬೆಯು ಗುಳ್ಳೆಯಂತೆ ಪೊಱಪಾಯ್ವನಮಟ್ಟಳೆವೊಯ್ದೊಡೊರ್ವನಂ (ಸುಕುಚಶಾ. ೬-೩); ಗಣ್ಡಲ ನೆಟಿಯೆ ಕಣ್ಪೊಱಪಾಯ್ವನವೊತ್ತಿ ಮುತ್ತಿ ಬಾಯ್ಪುಡಿಸದೆ ಮಡಾಣ್ಪನೆ ಸಮರದೊಳ್ಕಲಿ ಬಿಜ್ಜಳದೇವಭೂಭುಜಂ (ಎಚ್‌. XI, ದಾವಣ. ೬೩-೨೮ : ಕ್ರಿ. 1160). ೨. ಹೊರಗೆ ಹರಡು,—ವ್ಯಾಪಿಸು : ತನ್ನ ಹೀಗಂಜಾ ಪಿಪಹರಿನನ್ನ ಪೊಣ್ಮೆ ಪೊಱಪಾಯ್ದುರದಾಗಳೆ ನೋಡಿ ನೋಡಿ (ಕಸುಚಶಾ. ೦-೦೬). **ಹೊರಹಾಯು** : ೩. ಹಾದುಹೋಗು : ಭೂಭಾಗದ ಮೇಲೆ, ಬಂಗಾಳಾ, ಅಸ್ಸಾಂ, ಮಣಿಪುರ ಮಾರ್ಗವಾಗಿ ಹೊರಹಾಯುವ ಕಾಲುದಾರಿಗಳು ಅನೇಕ ಇದ್ದವು (ಜಾಕಿಕ. ೩೩೯).

[ ಪೊಱ (< ಪೊಱಗು) + ಪಾಯ್₁ ]

**ಪೊಱವಾಱ್** ' ಪೊಱಮಾಱು₂ ' ನೋ.

**ಪೊಱವಾಱು** ' ಪೊಱಮಾಱು₂ ' ನೋ.

**ಪೊಱವೀಡು**, ಪೊಱಬೀಡು, ಹೊಱಬೀಡು (ನಾ). ಪಟ್ಟಣದ ಹೊರಗಡೆ ಹೂಡುವ ಬಿಡಾರ, —ಶಿಬಿರ, —ಠಾಣ್ಯ : ಅತಿಮನೋಹರವಾದ ವನಪತಿಯ ಭವನನಿವೇಶದಿಂದಮುಂದಂಬಡದ ಪೊಱವೀಡಂ ಸೋಮಮಾನ್ಯಯ ಪ್ರದೀಪಂ ಪುಗುವಾಗಳ್ (ಶಾಂತಿಪು. ೧೦-೧೪೭ ವ) ; ಗೊಂದವಾಡಿಯ ಪೊಱವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ (ಎಚ್‌. IV. ೨೦೯-೬; 1072): ಪೊಱವೀಡ ಮಂದಿ ಇರ್ದ್ದೆಡೆಗಳೊಳೆ ಬಿಟ್ಟನ್ (ಅಕೃಷ್ಣಾ. ೩-೯೩). ಪೊಱಬೀಡು : ಅಂಧಕಾಸುರಂ ಪೊಱಮಟ್ಟು ಪೊಱಬೀಡನುಱೆ ಬಿಟ್ಟನು (ಕಶಿವು. ೯೭-೩೨). **ಹೊಱಬೀಡು** : ಮುಂದಣ ಪಯಣವ ನಿರ್ಧರಗೈದಾಗ ಬಾದು ಬಿಟ್ಟನು ಹೊಱಬೀಡ (ಕಂಶಾ. ೦೦-೩೯).

**ಪೊಱವೀಡಂ ಬಿಡು, ಹೊಱಬೀಡ ಬಿಡು** = (ಕೋಟೆ, ಪಟ್ಟಣ ಮುಂತಾದುವುಗಳ) ಹೊರಭಾಗದ ಆವರಣದಲ್ಲಿ ಶಿಬಿರವನ್ನು ಹಾಕು,—ಪಾಳೆಯವನ್ನು ಹೂಡು : ಬೆಸವೆಟ್ಟಂ ಭುವನೈಕಮಲ್ಲನು ದಂಡನಾಥಿತ್ಯಂಗೆ ಕೈಕೊಣ್ಡು ಬನ್ದ ಸಹಾಯಂ ಬನವಾಸೆಯುತ್ತ ಪೊಱವೀಡಂ [ಬಿಟ್ಟು] (ಶಾಇ. XX. ೯೯-೧೬ ; 1076 ?) ; ಜಿನೇಂದ್ರಭಕ್ತಸೆಟ್ಟಿ . . . ಜಿನಮಹಾಪೂಜೆಗಳುಮಂ ಮಾಡಿಸಿ ಪೊಱವೀಡಂ ಬಿಟ್ಟು ತನ್ನ ದೇಹಾರದೊಳಿರ್ದ ಬ್ರಹ್ಮಚಾರಿಗೆ ಬಂದು (ಧರ್ಮಾಮೃ. ೬-೬೯) ; ಕೂಡೆ ಹೊಱ ವಂಟುದು ಸವಂತ್ರಕಗೂಡಿ ಸಚಿವ ಪಸಾಯಿತರು ಹೊಱಬೀಡ ಬಿಟ್ಟುದು ಮುಂದೆ ಮನ್ನೆಯ ಮಂಡಲೇಶ್ವರರು (ಕೋರಿಗಾ. ೨-೩-೩೦) ; ನಱುಸೆಯಿ ಗೇಣಿಗೆಳು ತುಂಬಿಗಳು ಬಾದು ಹೊಱಬೀಡ ಬಿಟ್ಟವೆ (ಕವಾಶಾಂ. ೨೪-೬೦).

[ ಪೊಱ (< ಪೊಱಗು) + ಬೀಡು₁ ]

**ಪೊಱವೇಱು** (ನಾ). (ಊರಿನ) ಹೊರಗಿನಿಂದ ಬಂದ ಹೇರು : ಪೊಱವೇಱುಂಗೆರೆ ನೂಱುಮಂ ಮೆಣಸುಮನ್ನೀಲಕ್ಕಿ ಮುಖ್ಯಂಗಳಂ ನೆಱ ಶ್ರಾಂ ಸೊಲ್ಲಗೆಯಮ್ಕಟ್ಟನ್ನಡಕೆಯುಂ ಮತ್ತಿಲ್ಲಿ ಮಾಱಾಡದಂ ತೆಱುಗೆ (ಎಚ್‌. XI. ಚಾಶಾ. ೫೯-೮೨ : 1280). [< ಪೊಱ³ + ವೇಱು₁]

**ಪೊಱವೊಳಲ್** 'ಪೊಱವೊಟಲ್' ನೋ.

**ಪೊಱವೊಱಸು** (ನಾ). ೧. ಮನೆಯ ಒಳಗೆ ಬರಲು ಅನರ್ಹವೆಂದು ನಂಬಲಾದ ಪಕ್ಷಿ : ಪಾರಿವಾಳ. ೨. (ಅಲಂ) ತಿರಸ್ಕಾರಯೋಗ್ಯವಾದುದು : ವಾತ್ಸ್ಯಾಯನನಂ ಪೊಱವೊಱಸು ಮಾಟ್ಟಿ ಕಂಡವರಂ ಮೂಱುವಣ್ಣಂಬರಿವ ನವವಾರವಿಳಾಸಿನಿಯರಿರುತಿರ್ಪ ನೆಲೆವನೆಗಳನೊಪ್ಪುವ ಸೂಳೆಗೇರಿ ಸೊಗಯಿಸುತಿರೆ (ಜಗಂ. ೨-೧೯ ವಚ).

[ಪೊಱ (< ಪೊಱಗು) + ಪೊಱಸು]

**ಪೊಱವೊಟಲ್**, ಪೊಱವೊಳಲ್, ಹೊಱವೊಳಲು (ನಾ). ಪಟ್ಟಣದ ಹೊರಭಾಗ : ಮಾಣಿಗಳ್ವೆರಸು ಪೊಱವೊಟಲೊಳ್ ಬಟ್ಟಾಡುತ್ತಿರೆ (ಶಶಾಸ್ತ್ರಾ. ೬೩-೨೨); ಅದಱ ಪೊಱವೊಟಲ ವಿಶಾಳಸಕಲ್ಕಶಗಿರಿಗಳಿಂ ಫಳ ಪ್ರಕೀರ್ಣತರುಗಳಿಂ (ಕಂಚಶಾ. ೦-೨೮ ರಗಳೆ); ಆ ಪುರದ ಪೊಱವೊಟಲ ವೈಹಾಳಿಯ ಬಯಲೀಡೊಳಗೆ (೧೧ಕ. ೨-೬೩ ವ). **ಪೊಱವೊಳಲ್** : ಪೊಱ ವೊಳಲೊಳ್ಪೊದಳ್ದ ನವವನ್ನನಬ್ಬನ್ದದಿಂ (ಎಚ್‌. XIII, ೩೩೦-೨೬ ; 929) ; ಅಲ್ಲಲ್ಲಿಗೆ ತಿಳಿಗೊಳನುಂ ಮಲ್ಲಿಗೆಯ ಬಂ . . . ನೋಡಪ್ರತ್ಯಲಂ ಪೊಱವೊಳಲೊಳ್ (ಶಾಇ. IX-1. ೫೯೭-೧೬; 1177); ಯಾದವರ ವೃಂದವೊಲವಿಂ ದ್ವಾರಕಾಪುರದ ಪೊಱವೊಳಲೆನಿರುತ ದೂರ್ವಾಸ ಬರಲು (ಶಾಂಡಪು. ೯-೩೯) ; ವಾದ್ಯರವದುಬ್ಬರದನೂನಸಂಭ್ರಮದಿಂದ ಕಲ್ಯಾಣಪಟ್ಟಣದ ಪೊಱವೊಳಲ್ ನೆಱೆ ಮೆಱೆದುದು (ಚೂಪು. ೦೦-೩೦). **ಹೊಱವೊಳಲು** : ಹೊಳಲು ಹೊಸ ರೀತಿಯಲಿ ವಿಗೆ ಕಂಗೊಳಿಸುತಿರ್ದುದು ಮುನಿಪತಿಗೆ ಹೊಱವ [ವೊ]ಳಲ ರಮ್ಯೋದ್ಯಾನವೆಸೆದುದು ಚೈತ್ರರಥವಂತೆ (ಕೋರಿಗಾ. ೦-೯-೦೦). [ಪೊಱ (< ಪೊಱಗು) + ಪೊಟಲ್]

**ಪೊಱಸಾರು** (ಕ್ರಿ). ಹೊರಗೆ ಹೋಗು ; ಹೊರಗಡೆಗೆ ನಡೆ : ತೆಱವ ಬಿಡಿ ಪೊಱಸಾರೆನುತ ಪಡಿಯಱ ಸುರರು ಹೊಂಗಟ್ಟಿಗೆಯ ಓಡಿದುಱೆ [ಕರದ ಕೋಲ್ಗಳ] ಬಡಿದು ಸಮ್ಮುಖ ಬಿಡಿಸಿ ನಡಸಿದರು (ಶಾಶ್ವತಾ. ೩೬-೩೬). 'ಒಳಸಾರ್' ಪರಾ. [ಪೊಱ (< ಪೊಱಗು) + ಸಾರು₁ (< ಸಾರ್)]

**ಪೊಱಸು**, ಹೊರಸ್ಸು, ಹೊಱಸು (ನಾ). ೧. ಒಂದು ಬಗೆಯ ಪಾರಿವಾಳ ; ಈ ಅಶುಭಸೂಚಕವೆಂದು ನಂಬಲಾದ ಪಕ್ಷಿ. ಇದು ಮನೆಯ ಒಳಗೆ ಬಂದರೆ ಅಮಂಗಳವೆಂಬ ನಂಬಿಕೆಯಿದೆ : ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರಭಟಾರರ್ ಪ್ರತಿಮಾಯೋಗು ನಿಂದೊಡೆ ದೇವತೆ ಮುಳಿದು ಪೊಱಸುಗಳನಿರಿಯವು ದಂಸಮಸಕಂಗಳು ಏಗುರ್ವಿಸೆ (ವಡ್ಡಾರಾ. ೦೫೯-೦೪); ಜಾವದಿನೊಳ್ ಪೊಱಸಟ್

ವಂತೆ ತಮ್ಮುರಸುಗೆಟ್ಟು ಕಟಲ್ದಿರ್ದಗಟ್ಟು (ಪಂಪಭಾ. ೬-೮೩) : ಕ "ಪೊಱಸಟಿವಂತೆ-ಪಾರಿವಾಳವು ನಾಶ ಮಾಡುವಂತೆ . . . ಈ ಪದ್ಯದಲ್ಲಿ ರೇಫ ಱಕಾರಗಳ ಮಿಶ್ರಪ್ರಾಸವಿದೆ. ಪಾರಿವಾಳವು ವಿನಾಶ ಕಾರಕಪಕ್ಷಿ ಎಂಬ ನಂಬಿಕೆ ಇತ್ತು; 'ಭರತಾನ್ವಯರಾಜಭವನರಾಜ ಕಪೋತಂ' ಎಂಬ ರನ್ನನ ಪ್ರಯೋಗವನ್ನು ನೋಡಿ" (ಪಂಪಭಾ. ೨೯೯) ; ಪಿಂಗಲಿ ಪೋದಗೆ ಪೊಱಸು ಬಕಂ ಗಿಡಿಗಂ ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಕ್ಕುಂ (ಲೋಕೋಪ. ೯-೬೩). **ಹೊರಸು₁** : ೧. ಗುಬ್ಬಳಿಸಿ ಪಟಪಟನೆ ಹಾರಿ ಬಹ ಹೊರಸುಗಳ ಸಮುದಯಂ (ಶಬರ್‌ಶಂ. ೩೩-೧೯೯೬) : ವಾರ್ಧಕ್ಯದ ಹೊರಸು ಅವನ ದೇಹದ ಗೂಡನ್ನು ಹೊಕ್ಕುತ್ತಿದೆ (ನಾಗರಾ. ೧೧). **ಹೊಱಸು** : ೧. ಹಂಸೆಯೊಳಗೆ ಹೊಱಸು ಬಂದಿರ್ಪಂತೆ ಬರ್ಪುದುಂ (ಕಬ್ಬಿಗಕೈ. ೬-೨೨೩) ; ನರೆಯೆಂಬ ಹೊಱಸು ಮೊಗವೆಂಬರಮನೆಯಂ ಪೊಕ್ಕೊಡಂಗನಾಲೋಕನಮೆಂಬರಸಂತಿರ್ದಪಂ (ಚಂದ್ರಪ್ರ. ೨-೮೨) ; ಹರಡೆ ಚಿಲುಮಿಲಿಗನು ಚಿಲುವೆ ಗಿಜುಗಿರಳೆ ಕಮ್ಮರ್‌ಸಗ ಕೊಟ್ಟಿಳೆ ಹೊಱಸು ಹೊಡೆಗಳೆಂಬ ಪಕ್ಕಿಗಳವಱೊಳೊಪ್ಪಿದವು (ಶಾಕ್ಯಶಾ. ೩-೨೦). ೨. ಮದನಪಕ್ಷಿ. ೩. ತಿತ್ತಿರಿಪಕ್ಷಿ. ೪. ಚಕೋರಪಕ್ಷಿ. ೫. ಹಸುಬನ ಪಕ್ಷಿ. ೬. ಮಂಜುಳವೆಂಬ ಹಕ್ಕಿ: "ಜೀವಂಜೀವಃ, ಕಪಿಂಜಳಃ, ಚಕೋರಃ, ಹಾರೀತಃ, ವಂಜುಳಃ, ಕಪೋತಃ — ಈ ೬ ಹೊಱಸು" (ಹಲಾಯು. ೪೨-೧೧೧). ೭. (ಅಲಂ) ಕ್ಷುದ್ರನಾದವನು ; ಅಲ್ಪ : ಘಡ ಹೊಱಸೆ ಕೇಳೆಲವೊ ರಾವಣ . . . ನಿನಗಾಂ ಬೊಮ್ಮರಕ್ಕಸನು (ತೊರವೆರಾ. ೧೧-೪೮): ಹೊಱಸೆ ಬೆಳ್ಳಿಯ ಗುಂಡನೆತ್ತಿದ ಗರುವ ಬೇಡವು ನಾನು ಶಿವಿದರೆ ಅಱಿಸಿಯೆಲುಗಳನಾಯ್ದು ಸುಡುವಂತಹುದು ನಿನ್ನವರು (ತೊರವೆರಾ. ೨೨-೧೬).

[ದೇ. ತಮಿ. ಪುಱ, ಪುಱಾ, ಪುಱವ, ಪುಱವು; ಮಲ. ಪಿಱಾವು, ಪ್ರಾವು; ತುಳು. ಪುರ; ಗೊಂಡಿ. ಪುರಾರ್; ಕೊಂಡ. ಪೊರ್‌ರ್ರ್ರಿ; ಕುರುಖ್. ಪುರ್ರಾ : ಮಾಲ್ತೊ. ಪುರೆ]

**ಪೊಱಸುಗೆ** (ನಾ). ( ? ) : ಕಿಱುನೆಲ್ಲಿಯುಪ್ಪು ನೆಣವುಲಿ ತೊಱೆನಾಯ್ ಸತ್ತಿಡೆಯ ಮೞ್ ಶುಕಾಸ್ಯಂ ಮದ್ಯಂ ಮುಱುದೊಂಡೆಯೆಂಬಿವಂ ಪೆಸರ ಱಿಯದ ಬಾಹುಗಳೊಳೊರಸಿ ಪೊಱಸಿ(ಸು)ಗೆ ಪೋಕುಂ (ಲೋಕೋಪ. ೯-೨೦೨). [ ? ]

**ಪೊಱಸುತ್ತು** (ಕ್ರಿ). ಹೊರಭಾಗದಿಂದ ಆವರಿಸು ; ಹೊರಗಿನಿಂದ ಸುತ್ತುಗಟ್ಟು : ಉರಿವ ಭಾಸ್ಕರಕೋಟಿತೇಜದೆ ಪೊಱಸುತ್ತಿ ಪರಿವ ಚಕ್ರವ ನುತಿಗೆಯ್ದು ತುರಿಯದಿಂದೊಳಪೊಕ್ಕು ಕಾಮದೇವನ ಮಗನಿರುವ ಶಯ್ಯಾಗೃಹದೆಡೆಗೆ (ಕೋಹಕ. ೩೦-೧೩).

[ ಪೊಱ (< ಪೊಱಗು) + ಸುತ್ತು₁ ]

**ಪೊಱಸೂಸು**, ಹೊರಸೂಸು, ಹೊಱಸೂಸು (ಕ್ರಿ). ೧. ಹೊರಕ್ಕೆ ತುಳುಕು ; ಹೊರಚೆಲ್ಲು : ಹಾಲ ಹಳ್ಳವೋಲಗದ ನಡುವೆ ಮಡುಗಟ್ಟಿ ಪರಿದು ಪೊಱಸೂಸೆ ಕಂಡು ಬಿಜ್ಜಳಂ ಕೌತುಕಂಗೊಂಡು (ಬಸವ. ೧೦-೬೩); ಬಾಹುಮೂಲದೆಡೆಗೆ ದಿಟ್ಟಿ ಪರಿಪರಿದು ಮೊಗವೊರ್ಗುಡಿಸೆ ಸರಿಸಕಳವಟ್ಟ ಜಲಧಾರೆ ಪೊಱಸೂಸೆ ಬಯಲಿಗೆ ಬಾಯ ಬಿಟ್ಟು ನಗಿಸುವರಲ್ಲಿ ತೃಷೆಯಿಂದೆ ಬಂದ ಪಥಿಕರ್ಕಳಾ ಬಾಲೆಯರನು (ಕೃಷ್ಣರಾಜಾ. ೩-೯). ೨. ಹರಡು; ವ್ಯಾಪಿಸು : ಚಿತ್ರದೊಳ್ ಪಡೆದವ್ಯತಾಂಶುರೋಚಿ ಪೊಱಸೂಸಿ ಪೊಗಟ್ಟಿಗೆ ಪಂದ ಚಂದವುಂ ಪಡೆದುದು (ಶಬರ. ೪-೭). ೩. ವ್ಯಕ್ತವಾಗು ; ಪ್ರಕಟವಾಗು ; ಕಾಣಿಸಿಕೊಳ್ಳು: ವಿಸಾಸನ್ವಯನ್ನಱ ನಗೆ ಪೊಱಸೂಸದ ಕಣ್ . . . ಮಾಸರವಹಾಯ್ತುವರೊಳಡರ್ದ ಕೊಡಗೂಸುತನಂ (ಚಂದ್ರಪ್ರ. ೮-೪೯). ೪. ಪ್ರಕಟಗೊಳಿಸು ; ವ್ಯಕ್ತಪಡಿಸು : ಬಗೆ ಪೊಱಸೂಸದೆ ಕೈಯಂ ಮುಗಿದೊಲವಿಂ ನೋಡಿ ಪೆರ್ಚುತಂ ತಿರಿಸುಳಿಯಂ ಪೊಗಟ್ಟುತ್ತ (೯೬ಗಾ. ೦೬೨). **ಹೊರಸೂಸು** : ೧. ಕನಕದಾಸರ ಭಕ್ತಿ ತರಂಗಿಣಿ ಅವರ ಕೀರ್ತನೆಗಳಲ್ಲಿ ಹೊರಸೂಸಿ ಹರಿದಿದ್ದಾಳೆ (ಕನಕ. ೧೬೬). ೨. ಅವು ತಮ್ಮ ಬೆಳಕನ್ನು ಎಲ್ಲಾ ಕಡೆಗಳಲ್ಲೂ ಹೊರಸೂಸುತ್ತಿರುವುವು (ಅಕಾಶ. ೪೯); ಸೌಂದರ್ಯ ಸೌರಭ್ಯಗಳನ್ನು ಅನಂತಕಾಲ ದಿಕ್ಕುದಿಕ್ಕಿಗೆ ಹೊರಸೂಸಬೇಕು (ಕುಸುಗಶ. ೬). ೪. ಹರಿದಾಸರು ಮೆತ್ತನೆಯ ಧ್ವನಿಯಿಂದ ಮಮತೆಯನ್ನು ಹೊರಸೂಸುತ್ತಾ ಕರೆದರು (ಕಾಪೇಂ. ೨೦) ; ಮಾತಿನಿಂದ ಹೊರಬಂದ ನಿಟ್ಟುಸಿರು ಅವನ ಹೃದಯದಲ್ಲಾಗುತ್ತಿದ್ದ ಅಸಹ್ಯವೇದನೆಯನ್ನು ಹೊರಸೂಸುತ್ತಿತ್ತು (ಜುರೆ. ೧೬೦). **ಹೊಱಸೂಸು** : ೧. ಗಂಗೆಯುಂ ಹೊತ್ತ ಹರನೊಳ್ ಪುರುಡಿಸಿ ಶಿರೋಮಧ್ಯದೊಳಿರಿಸಿದ ಕುಂತಳ ಕಾಳಿಂದೀನದಿ ಹೊಱಸೂಸುಗುಮೆಂಬ (ಬಸವ. ೨-೨೦); ಪೂಸಿದ ಸೀರೆ ಮಸಿಯ ತಿಲಕದ ಹೊಱಸೂಸುವ ಬಾಯ ಜೊಲ್ಲಿಂದ . . . ಮುದಿವೇಶಿಯ್ರೆಡೆಯಾಡುತಿಹರು (ಕಾವರ. ೬-೧೯೦). ೨. ಆಸುರದ ಕಬ್ಬೊಗೆಯ ಕವಚದ ಕೇಸುರಿಗಳೊಳಬಿದ್ದುದುರಿ ಹೊಱಸೂಸಿ ಹಿಡಿದವು ಹಾವುಗಳ ಬಲು ಹೊಮಱ ಹೊರಳಿಗಳ (ಕುವ್ಯಾಕ. ೨೦-೬೦). ೩. ತ್ರಿವಳಿ ಮ್ಯಗರೆಯ ಹೊಕ್ಕುಳ ಗುಣ್ಪು ಹೊಱಸೂಸೆ (ಬಸವ. ೦-೦೦೭). ೫. ಹರಡುವಂತೆ ಮಾಡು ; ವ್ಯಾಪ್ತಗೊಳಿಸು : ಸಣ್ಣ ನನೆಯೊಳಗಣ ಪರಿಮಳವ ಹೊಱಸೂಸಿ ಇಮ್ಮಡಿಗೊಳಿಸಬಲ್ಲುದೆ ವಾಯು (ರೇವಾಶ. ೬೩-೦೨೮).

[ಪೊಱ (< ಪೊಱಗು) + ಸೂಸು₁]

**ಪೊಱಿಗೆ**, ಹೊರಿಗೆ, ಹೊಱಿಗೆ₁ (ನಾ). ೧. ತಲೆಯ ಮೇಲೆ ಭಾರವನ್ನು ಹೊತ್ತುಕೊಳ್ಳುವಿಕೆ. ೨. ಭಾರ ; ತಲೆಹೊರೆ. ೩. ಹೊಣೆಗಾರಿಕೆ ; ಬಾಧ್ಯತೆ ; ಜವಾಬ್ದಾರಿ : ಮುಂದೆ ನಮಗುರ್ವ ಕೆಲಸದ ಪೊಱಿಗೆಯುಂಟು ನೀನಿಂದುಹಾಸನಸಿಲ್ಲಿಗೀಗಳೊಡಗೊಂಡು ಬಾ (ಕೃಷ್ಣರಾಜಾ. ೩೦-೪೨). ೪. ಕೆಲಸ ; ಕಾರ್ಯ ; ವ್ಯವಹಾರ : (?). ೫. ಅಧಿಕವಾದ ಪ್ರಯತ್ನ; ಪ್ರಯಾಸ: ಮುಱಿವುದಸುರರ ಸೇನೆಯೊರ್ಮೆ ದಿವಿಜರ ದಳಂ ಪೆಱದೆಗೆವುದೊರ್ಮೆ ಪಡಿಬಲಿಸಿ ನೂಂಕುವುದೊರ್ಮೆ ಪೊಱಿಗೆಯಿಂ (ಕಂಪು. ೨೬-೦೯). **ಹೊರಿಗೆ** : ೧. "ವಹಃ, ವಾಹಃ, ವಹನಂ . . . ಊಢವ್ಯಂ — ಈ ೯ ಹೊರಿಗೆ" (ಶಾಕ್ಯ. ೦೬೦). ೨. ಯಾ ಹೊನ್ನಗೆಯೆರಡು ಬೆಳೆಯಲು ಸಹ ಪರ್ಷ ೧ಕ್ಕೆ ಬಹ ಅಕ್ಕಿ ಅಂಗಡಿಯ ಹೊರಿಗೆಯ ಬಳ್ಳ ಅಯ್ವತ್ತರ ಲೆಕ್ಕದ ಅಕ್ಕಿ ಮೂಡೆ ೨ (ಎಕ. XX, ೯೯ ೪೪ ; 1556); ಹೊತ್ತಿರಗರಿವ ಹೊರಿಗೆಯನು ಬಿಡದೆತ್ತಿಕೊಂಡಾ ಪಸ್ತುಗಳಿಗಂ . . . ಸಂಭೇದವೆಂಬುದು ತೋರದಂತಿಹುದು (ಭವೇಶ. ೯-೨೪). ೩. ಪರಿಜನ ಸಾಮಂತ ತಳತಂತ್ರ ಮಾರ್ಬಲದ ಹೊರಿಗೆ ಸಿನ್ನದು (ಕುಮಾರಾಂಗ. ೯-೪) ; ಹೊರಿಗೆಯನು ನೋಡುವರೆ ರಾಯರಿಗೆರೆಯನೆಂಬೀ ಬಿರುದು ದುರ್ಗದ ಪಾರೆಯ ಕಾಳಗವೇಕೆ ಗಂಡ ಸೂರ್ಪನೆಂಬವಗೆ (ಕೊಡ್ಯಾಕ. ೨೪೬). ೫. ಎಡಬಲದೊಳೊಬ್ಬರಂ ನಿಲಗೊಡದೆ ಹೊರಿಗೆಯಿಂದಿರ್ವರೆಬ್ಬಾಡಿದರು ಖಾತಿಯಿಂದ (ತುರಂಗ. ೬೨-೦೪). **ಹೊಱಿಗೆ₁** : ೨. ಹಱಿಯ ಹೊಯ್ಲಿನಲಮಾರಗಿಱ ತಱತಱಿಸೆ ತೂಳಿದರಸ್ತ್ರಶಸ್ತ್ರದ ಹೊಱಿಗೆಯಲಿ ಹೂಳಿದರು ಹೊಗಿಸಿದರಾನೆಕುದುರೆಗಳ (ಕೊರಾ. ೩-೬-೮) ; ಹೊಱಿಗೆಯ ಶಬದಿನದ್ಭುತಕ್ಷಮಾತ್ಯದಿ ಶಾಂತ ಮೆಱೆಯೆ (ಅಶ್ವತ್ಥ ೩-೪೨). ೩. ಹೊಱಿಗೆಯಸಮಡ್ಡೀಯಮಲ್ಲಿಯೆ ಕಾಱುಹತಂಗಿರಲಱಿವ ತಾ ತನ್ನಱಿವು ಮಱೆದಱಿದೊಡನು ಶಿವಮಗ್ನತೆಯೊಳಿರ್ದಹನೊ (ಬಸವ. ೩೫-೨೨); ಕದನದ ಹೊಱಿಗೆ ದೊರೆಗಳ ಮೇಲೆ ಬಿದ್ದುದು (ತೊರವೆರಾ. ೨೦-೦೮); ಮಱುಗಿ ಮಾಡುವುದೇನು ಮುಂದಃ ತೆಱನ ಕಾಬುದೆ ಪೌರುಷಾಂಗದ ಹೊಱಿಗೆ (ಕೊರಾ. ೬-೨೪-೪೩). ೫. ಹೊಱಿಗೆಯಿಂ ಹೊಱಿಯ ಹೊತ್ತುಂ ನಡೆದು ಬೇಸತ್ತು (ಚಿಕಾಂ. ೩೭-೦೬೯) : ಹಱಿಯದರ್ಜುನನಿಂದ ಭೀಮನ ನೆಱವಣಿಗೆ ನೋಯಿಸದು ನಕುಲನ ಹೊಱಿಗೆ

ಯೊರಗದು ಸೈರಿಸದು ಸಹದೇವನಾಟೋಪ ಇಱಿವಡಾ ಮಾದ್ರೇಶನನು (ಶಾಭಾ.ಶ. ೧-೩೦). ೬. ರೀತಿ ; ಕ್ರಮ ; ವಿಧಾನ : ಮಲೆತರನೆಱಗಿಸಿ ಕೊಂಬ ಬಲುಮಂತ್ರದ ಹೊಱಿಗೆಗಳನಱಿದು ಭೂವಲಯವನಾಳು ನೀನು (ಜೈಮಿಭಾ. ೨೦-೩೭) ; ಮುಂದಣ ರಾಜಕಾರ್ಯಕ್ಕೆ ಹೊಱಿಗೆ ಯಾವುದು ಪೇೞಿಂ (ಜಾಮೃ. ೦೩-೭). ೭. ಹೆಚ್ಚಳ ; ಆಧಿಕ್ಯ ; ಅತಿಶಯ : ಹೊಱಿಸುವಡೆ ದುಷ್ಕೀರ್ತಿ ನಮ್ಮಲಿ ಹೊಱಿಗೆಯಾಯಿತು ನಾಥಯಿಂ ಕೆಳಗೆಱಗುವುದು ಗದೆಯಿಂದ ಸಲ್ಲದು ಶಸ್ತ್ರವಿದ್ಯೆಯಲಿ (ಶಾಭಾ.ಗ. ೦೦-೩೯); ಮುಱಿದುದಗ್ಗದ ಮಹಿಮೆ ಶೋಕದ ಹೊಱಿಗೆಯಲಿ ಕಾತರಿಸಿ ನಡೆವನು ನೃಪತಿ (ಕಳಿಕ. ೩-೦೯). ೮. ಫಲ ; ಪರಿಣಾಮ : ಕರೆದು ನುಡಿ ಪಂಬರದ ವಾಣಿಯ ಹೊಱಿಗೆಯನು ನಿಶ್ಚೈಸಿ (ಗೌತಾ. ೨೯-೨೩); ಇದಱ ಹೊಱಿಗೆಯನಱಿತು ಭೂವರು ವಧಿಸುವರು ಸತ್ತ್ವರನಲ್ಲದಡದೆ ಪರಿಹಾರಾರ್ಥವನು ನಿಶ್ಚಿತಿಯಿಂದ ನಡಿಸಲಿಕೆ (ಜೂಂತಾ. ೬-೨೯). ೯. ಶೀಕ್ಷ್ಣವಾದುದು ; ಕಠೋರವಾದುದು ; ಕಠಿನವಾದುದು : ಮಂಜಿನ ನೆರವಿಯುಂತೆಳವವ ಹೊಱಿಗೆಯ ತಪಕಭುವವರ (ಕಾಷು. ೨೦-೦೪೦). ೧೦. ನಂಬಿಕೆ ; ವಿಶ್ವಾಸ : ಅಱಿತು ದಾನಕಿಯರ್ದ ಸೆಱೆವನೆಯನದೋರ್ವರಱಾಯದುಂದದೊಳಾನು ಪೊಕ್ಕು ಮಱಿಯೇನು ನೋಡಿ ಬಂದಪೆನೆಂದವನೊಳು ಹೊಱಿಗೆಯ ಮಾತನಾಡಿದನು (ಶಾಮಾ. ೦೪-೬೪). ೧೧. ಕ್ಲೇಶ ; ಸಂಕಟ : ನರಕಗಳ ಪರಿವಿಡಿಯು ನೋಡುತಂ ಸಾನಂದ ಬರುತಿರಲು ನುಡಿದ ಯಮನೊಂದು ಮಾತ ನರರೊಳತ್ಯಧಮಂ ಪಾಪಿಷ್ಠ ಜೀವಿಗಳು ಹೊಱಿಗೆಯಿಂ ಮುಕ್ತಿಯಾಹರಾವ ತೆಱದಿಂದೆನಲು (ಅಶಾ. ೪೦-೩೩). ೧೨. ಅಂಚು ; ಎಲ್ಲೆ ; ತುದಿ : ಚಂಬಕ ಪಟಹ ಮವುರಿ ಕೊಂಬು ಕೊಳಲಿನಾಡಂಬರ ಬುರುಗು ನಪಿರಿಯ ಇಂಬಿನ ರವ ಪೆಂಟುದಿಕ್ಕಿನ ಹೊಱಿಗೆಯ ಮುಂಬರಿದೊಡನೆ ಪರಿದುದು (ಕೆಂಸಂ. ೦೦-೨೪). ೧೩. (?): ನಾಯಿಂದರಿಗೆ ತೆಱಿಗೆ ಹೊಱಿಗೆ ಕಾಣಿಕೆ ಕಪ್ಪ ಬಿಟ್ಟಿ ಬಿರಾಡ ಆವುದೂ ಯಿಲ್ಲಯೆಂದು ಕೊಟ್ಟ ನಾಯಿಂದರ ಶಾಸನ (ಸೌಇಇ. IX-ii, ೬೨೩-೦೨ ; 1647). [< ಪೊಱು]

**ಪೊಱಿಸು**, ಪೊರಿಸು, ಹೊರಿಸು₁, ಹೊಱಿಸು (ಕ್ರಿ). ೧. ಭಾರವನ್ನು ಹೊರುವಂತೆ ಮಾಡು ; ಭಾರವನ್ನು ಹೇರು : ಬಲಭದ್ರಂ ದಾಸಿಯನೊರ್ಬಳಂ ನಿತಾಂತಪ್ರಿಯಮಾಗಲ್ ಕೊಂಡು ಪೊಱಿಸಿದಂ ಬಲ್ಪೊಱೆಯಂ (ರಮಾ. ೦೨-೦೪೪) ; ಒತ್ತರಿಪ ದನಿಗೇಳುತು ಪುರುಷೋತ್ತಮನು ನಂದನು ಬೆರಸಿ ಬರುತೊತ್ತಿನಲಿ ಮಡಿವಳನು ಪೊಱಿಸಿದ ಮಡಿಗಳನು ಕಂಡ (ಸಾಳ್ವಭಾ. ೨೨-೩೬). **ಪೊರಿಸು** : ೨. (ಅಪವಾದ ಮೊದಲಾದುವನ್ನು) ಹೇರು ; ಆರೋಪಿಸು : ನೀನು ವರನ ತಂದಪಕೀರ್ತಿ ಪೊರಿಸಿದರೆ ಮಾಗಳೇ (ಕಂಕ. ೩೨-೧). **ಹೊರಿಸು₁** : ೧. ಋಷಿಯು . . . ಮಣಿನಿಕರವ ತಿಮ್ಮನ ಕೈಯೊಳು ಹೊರಿಸಿಕೊಂಡು (ಸೌಗಂಧಿ. ೩೦೨-೩) : ಗೂಡೆಗಳನ್ನು . . . ಕೆಲವರಿಗೆ ತಿಮ್ಮನು ಹೊರಿಸಿಕೊಟ್ಟನು (ಕೆಂಗಾಳ್ಯ. ೮೦). ೨. ಇಲ್ಲದ ತಪ್ಪುಗಳನ್ನು ಮೇಲೆ ಹೊರಿಸಿ ಹೇಳುವುದು (ಸಿದ್ಧಾಂತಿ. ೩೨) ; ಇಲ್ಲದ ಸಲ್ಲದ ಆರೋಪವನ್ನೆಲ್ಲಾ ಅವರ ಮೇಲೆ ಹೊರಿಸುವುದು (ಅಂಹೂ. ೪೩) ; ತಪ್ಪು ಹೊರಿಸಿದರೆ ಒಪ್ಪುವವನ್ಯಾರು ? (ಗಾದೆ) . **ಹೊಱಿಸು** : ೧. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊಱೆಯು ಹೊಱಿಸದಿರಯ್ಯಾ (ಬಸವ. ೩೪೩) ; ಹೊಳಲ ಜನದ ಸಮಸ್ತಭುವನಾವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ (ಕೊರಟಾ. ೩-೬-೩೩) : ಸೂಳೆಯುಂದದಿ ಸಡೆವವಳ ತಲೆ ಬೋಳಿಸಿ ಕಸಹೆಡಿಗೆ ಹೊಱಿಸಬೇಕವಳ (ಪುರಂದ. ೨-೦೪-೨). ೨. ಭಂಗವಿಲ್ಲದೆ ಬಿದ್ದ ನಿಮ್ಮಯ್ಯಂಗೆ ಹಳಿವನು ಹೊಱಿಸದಿಹ ಮನದಂಗವಣೆಯುಂಟಾಗೆ ಮೆಚ್ಚುವೆನು (ಶಾಭಾದ್ರೋ. ೭೬-೦೪) : ನಿಮಾಗೂಣಯಾವ ಹೊಱಿಸುವನೊ ಕೊಱತೆಯ ಹಾಯ್ಯವನೊ ತನಗೆ (ಕೊರಟಾ. ೩-೩ ೦೨೦). ೩. ನಿರ್ವಹಿಸುವಂತೆ ಮಾಡು ; ವಹಿಸು : ಅರಸಂ ತನ್ನ ಮಗನಲ್ಲಿಯಾದೊಡಂ ತನ್ನ ಕುಲದಲ್ಲಿಯಾದೊಡಂ ಆವನೊರ್ವನ ಮೇಲೆ ರಾಜ್ಯಭಾರವಂ ಹೊಱಿಸಿಯುಹಂ ತಾನವನೈಶ್ವರ್ಯವನಪಹರಿಸಬೇಕಾಗಿ ಮಾಡಿದವಂ (ಶಾಚತಂ. ೪೬-೧೨). [ಪೊಱು + — ಇಸು₃]

**ಪೊಱು**, ಪೊರು, ಹೊರು, ಹೊಱು (ಕ್ರಿ). ಪೊತ್ತು₁, ಹೊತ್ತ (ಭೂತಕೃ). ಪೊತ್ತು₂, ಹೊತ್ತು₂ (ಭೂತನ್ಯೂ). ೧. ಭಾರವಾದ ವಸ್ತುವನ್ನು ತಲೆಯ ಮೇಲೆ ಅಥವಾ ಹೆಗಲಿನ ಮೇಲೆ ಇಟ್ಟುಕೊಳ್ಳು.–ಹೊತ್ತುಕೊಳ್ಳು : "ಪೊಱು — ಶಿರೋಧಾರಣೇ" (ಶಬ್ದಾ), ಬಲದೇವನಂತೆ ಪೆಣನಂ ಪೊತ್ತು ತೊೞಲ್ವ ಕ್ಷೇತ್ರಪಾಲರಿಂ (ಶಾವ್ಯಸಾ. ೩೨೯ ಕೂಶ್ರುಕ) ; ಒಡನಂದಯ್ವರುಮಂ ನಿಜಾಂಸಯುಗದೊಳ್ ಪೊತ್ತಿತ್ತು ತಳ್ಪೊಳ್ವ ಸೀಱುಡುವಿಂದದುತ್ತರದು ಹಿಡಿಂಬವನವಂ ಪೊಕ್ಕಂ ಮರುನ್ನಂದನಂ (ಪಂಪಭಾ. ೩-೯) ; ಬೆಟ್ಟಂಗಳಂ ಕಿತ್ತು ಪೊತ್ತಿವರನಿಟ್ಟು ಬೆನ್ನಟ್ಟಿದಪೆವು (ಕಂಪು. ೨೦-೨೩). ೨. ತಳೆ; ಧರಿಸು : "ಪೊತ್ತನೆಸುತ್ತುಂ ಆಂತನೆನೆ ಧರಿಸಿದರ್ಥಂ" (ಶಬ್ದಸಾ. ೦೩೪); ಸತ್ತ ಪೊತ್ತ ಕಣ್ಣಱಿಯದ ಬೆಳ್ಪನಲ್ಲೆನಱಿದಂ ಧವಳಾಕ್ಷಿಯ ನೋಟದಂದದವು (ಪಂಪಭಾ. ೪-೬೬) ; ಪೊತ್ತ ಪೂತಳಿರ್ ಬಾಡಿ ಕಱಂಗಿ ಬಯ್ಯನುತುವಿರ್ದುವು (ಕಬ್ಬಿಗಕಾ. ೩೦೪) ; ಎಳೆ ಪೆಱೆಯ ಪೊತ್ತನ ಕುಮಾರನಂ ತಿನ್ನೆನುತ್ತುರಗಾಸ್ತ್ರದಿಂದೆಚ್ಚನು (ಕಂಪು. ೪೩-೨೨). ೩. ಪಡೆ ; ಹೊಂದು ; ತಾಳು : ಶಿಲೆಯೊಳ್ ತಾಟಿಸಿ ತನ್ನಯ ತಲೆಯುಂ ಜರ್ಜರಿತಮಸ್ತಕಂ ಮಡಿದತ್ಯಾಕುಲನೀ ಮಹಾಹದೇಹ ಮಾನಲಸದೆ ಪೊತ್ತಿರ್ದು ನಮೊದಮಂ ಧರಣಿಪತೀ (ಅಂಪು. ೩-೦೭); ಕರೆಯುಂ ನೆರಮಂ ಪಂಶಾ ಕಱಿಯಂ ಪೊತ್ತವುದೆಂದು ಸಂಗರಮುಖದೊಳ್ (ಜಾಪ. ೧೯ ಕ್ರಪೋ). ೪. ಕೈಗೊಳ್ಳು ; ಪರಿಗ್ರಹಿಸು : ಭವವಾರಾಶಿ ನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂಬಿವೆ ಮೆಯ್ಯಾಗಿರೆ ಸಂಧರ್ಮಮೆ ಮಲು ಪೊತ್ತುತ್ತಗುಂ (ಅಂಪು. ೨ ೭): ಅರೆನಂ ಪೇಳ್ದೊಡಂ ಕೈಮಾಗಿದು ಸುಗಿದು ಪೆರ್ಬಟ್ಟೆಯುಂ [ಪಾಠಾಂ. ಕೈಂಕರ್ಯಮಂ] ಪೊತ್ತು ಸಂಸಾರಾರಂಭಂಗೆಯ್ದು (ಕಲ್ಯಾಕ. ೦೬). ೫. ಸಹಿಸು ; ಅನುಭವಿಸು : ಇನಿವಿರಿದು ಪರಾಭವಂ ಪ್ರಾಕೃತಪುರುಷಂಗಂ ಕಾಪುರುಷಂಗಂ ಪೊತ್ತು ನಿಲ್ವುದರಿದು (ಶಾಂತಿಪು. ೩-೬೬ ವ). ೬. ವಹಿಸಿಕೊಳ್ಳು : ಸಿಂಗಪೊತ್ತರಕಲಿ ನೊಂಬವ್ವದಿ ಅರಸರಾ ಪೆರ್ಮನಡಿಗಳ್ಗೆಸಗೆ ಬೆಸಂಬೆತ್ತು ಪೊತ್ತನ್ನು ಮೇಗೆಟ್ಟನ್ನು ಕಾದಿದೊ (ಎಕ. XI, ಹಳ್ಳಿ. ೬-೨ ; ಸು. 810 ?): ತಂಗೆವಿತ ಭರಭಾರಕ್ಕಮಡಸಿದ ಬಡತನಕ್ಕಮಡರ್ಗಮುಳ್ಳದೆ ನೀಂ ಪೊತ್ತು ನಿತ್ತರಿಸುತ್ತುಮಿರೆ (ಶಾಂತಿಪು. ೪-೬೬ ವ). **ಪೊರು** : ೧. ದೊಡ್ಡನೊಬಗೆಗುದುರೆ ನಲ್ಮೆಹೇರಂ ಪೊತ್ತು ಗೊಡ್ಡದಿಂದಳ್ಕಲದಿ ನಡೆಯುತ್ತಿಯುತಿತ್ತು (ಶಾಬೂಕ. ೩೨-೬೪) ; ಡೆಂಕಣಿಯ ಸಾಲ್ಗಳಂ ಪೊತ್ತು ನೆತ್ತಿಯೊಳೆಸೆವ ಕೊತ್ತಳಗಳಿಂದೆ (ಶಶ್ರಾಂಗ. ೩೭-೩೩೭). ೨. ಪರ್ವತೋಘಂ ರಮ್ಯಸುರಚಾಪಮಂ ಪೊತ್ತು ನಭದೊಳ್ ನಡೆಯುತಂತೆ ! (ಶಶ್ರಾಂಗ. ೩೩_೦೪೩). ೪. ಪಡಿನೆಲ ಪೊತ್ತು ತಾಂ ಧನ್ಯನೆಂದು ಕೊಳು ಜುವ್ವಂದು ಪುಳಕಿಸುವ ಮಾಳ್ಕಿಂ ಬಿಸಿದಪ್ಪ (ಶಶ್ರಾಂಗ. ೩೪-೪೧೩) : ಒಯ್ಯ ಕೇಡಂ ಪೊತ್ತ ಪೆರ್ಶ್ರೆಳ್ಕೆಯು ತೆರಳೆ (ಶಾಬೂಕ. ೦೩೦-೨೭೯). ೬. ಸತ್ತ್ವರ ಪೊಲೊಲ್ಪಿಯೊಂದೊಡೇಂ ಬಾಳ್ದಪರ್ ಪೊತ್ತು ಬೆಪ್ಪಿನೊಳಿರ ಬಿಡೆಗೆಯ್ದು ಮಾಗಿಸಿ ಮತ್ತವರ ಬದಿಗಲರ ನಾಡಿಗನೆ ಕಳುಹುವುದು (ಶಾಬೂಕ. ೦೯೦-೪೦೦). **ಹೊರು** : ೧. ವಿನೀತಃ. ಸಾಧುವಾಹಿನಃ — ಎಳೆಯಂದಾಪ್ರಾಯ ಕುದುರೆಗಳಿಗೂ ಚೆನ್ನಾಗಿ ಹೊರಲುಳ್ಳ ಕುದುರೆಗಳಿಗೂ ಹೆಸರುಗಳು (ಸಿದ್ಧಾಂತಿ. ೨೪೯); ತನ್ನ ಬೆನ್ನಿನಲಿ ತನ್ನಳ್ಕರೆಯ ಹೊರೆಯ ಹೊತ್ತ ಹೆಮ್ಮೆಗೆ ಹಿಗ್ಗಿ (ಶಶ್ರಾಂಗ. ೦೭-೪೩೩): ಹೊರಬಲ್ಲವನಿಗೆ ಆಳು ಬೇಡ, ಆಡಬಲ್ಲವನಿಗೆ ಹೆಂಡತಿಬೇಡ (ಗಾದೆ). ೫. ಹೊರಬೇಕ್ಕೆ ಕಷ್ಟವ

ಸಹಿಸುವ ತನುವು; ಪರದುಃಖಕೆ ಕೊರಗುವ ಮನವು (ಕಂಪ. ೭-೫). ೭. (ಪಕ್ಷ) ವಹಿಸು : ಏನೇನು ಆಗಬೇಕೆಂದಿದೆಯೋ ಅದು ಹಾಗೇ ಆಗಬೇಕಾದದ್ದು ವಿಧಿನಿಯಮ ಎಂಬುದು ಅವರ ಲೆಕ್ಕ. ಅದರಿಂದ ಗಣಪತಿಯನ್ನು ಹೊತ್ತು ಮತ್ತೆ ಹೆಂಡತಿಯಲ್ಲಿ ಅವರು ಮಾತು ಎತ್ತಲಿಲ್ಲ (ಹೊಸಸ. ೪೦).

**ಹೊಱು** : ೧. ಜಂಗಮಮನ್ನವರೆನ್ನವರೆನ್ನವರೆಂಬವರ ಕೆರಹ ಹೊತ್ತಿರ್ಪೆನ್ನನು (ಬಸವ. ೪೬೨); ಪೃಥಿವಿ ನೆಗ್ಗಿತು ಪೊತ್ತ ಕಮಠನ ವ್ಯಥೆಯನಾರು ಸುರುವರು (ಕುವ್ಯಾದ್ರೋ. ೨-೪೦); ಅಗಣಿತಲೋಕಾದಿ ಲೋಕಂಗಳುದರದಿ ಸೊಗಯಿಪ ನಾರಾಯಣನ ಹೆಗಲೊಳು ಹೊತ್ತು ಖೇಚರದೆ ಸಂಚರಿಸುವ ಖಗರಾಜ ಕರುಣಿಪುದೆಮಗೆ (ಮೋಹತ. ೧-೧೪). ೨. ಕಕ್ಷಪುಟದಲ್ಲಿ ಕಸ್ತೂರಿಯ ಹೊಗರೆತ್ತುತಿರೆ ಅಕ್ಷಿಗಳು ಕರುಣಾರಸವಂ ಹೊತ್ತು ಬಳಲುತಿರೆ (ಬಸವ ೧-೧೦೪); ಮಹಾಪ್ರಮಥೋತ್ತಮಪುರಾತನಗಣಾಂಘ್ರಿಗಳಂ ಹೃದಯದಲ್ಲಿ ಹೊತ್ತು (ಬಸವು. ೪೬-೪೦); ಹೊತ್ತ ಜೋಹದ ಜಾಳಿ ಲೇಸಾಯಿತ್ತು ನಿನಗುಪದೇಶಮಂತ್ರವನಿತ್ತಪನ ವರ್ತನವದೆಂತಾಟೊ (ಕೊರಡಾ. ೪-೪-೪೦). ೩. ತ್ರಿಣಯನನ ಬೆಸನನಾಂ ಪಡೆದೆನೆಂದುಬ್ಬರ್ತಂ ಪರವಶೀಭೂತನಾಗುತ್ತೆ ಮಜಹಂ ಹೊತ್ತು ಹರುಷದಿಂ ದೇವಿಯರ್ಗಿತ್ತು (ಬಸವ. ೧-೪೯); ಹರಿಹರ ನೆನಿಪ ಪೆಸರ ಹೊತ್ತ ಹರನಂತಕಮದಹರಂ (ಬಸವು. ೩೪-೪೫); ಎತ್ತಿದೆನು ನಾನಾಶರೀರವ ಹೊತ್ತು ಹೊತ್ತಳಲಿದೆನು ಸಲೆ ಬೇಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು (ಹಂಸಾ. ೬೦). ೫. ಧನು ಮುರಿಯೆ ದಿಟ್ಟಾಯ್ಲುತನವೀತನಲಿ ಸಾಕಿನ್ನೆನುತ ಗುರುನಂದನನು ಮುರಿದನು ಹೊಗರು ಮೋರೆಯ ಹೊತ್ತ ದುಗುಡದಲಿ (ಕುವ್ಯಾಕ. ೧೪-೪೦); ಕಂದು ಕೊರತೆಯ ಹೊಱುವ ಹೆಣ್ಣೆ ನೀನು (ಕಂಪಾ. ೬-೧೮೪). ೮. ಭಾರವಾಗಿರು ; ಹೊರೆಯಾಗಿರು : ಈ ನಾಲಗೆಯ ಸಾಲವನೀಗ ಕೈಯಲಿ ತಿದ್ದಿಕೊಡುವರೆ ಹೋಗದೇ ಹೊತ್ತಿಹವೆ ಹೇಳೆನುತೆಚ್ಚನಾ ಭೀಮ (ಕುವ್ಯಾಕ. ೨-೧೯). ೯. ಹೇರಿಕೊಳ್ಳು ; ಆರೋಪಿತಗೊಳ್ಳು : ಅದಱಿಂದಾದ ತಪ್ಪನದೆಂತು ಹೊಱುವೆನು (ಬಸವು. ೪೯-೩೨); ಮನ್ನಣೆಯ ಬಿಲ್ಲ ಗುರುವಿನ ಬಿಂಕ ಬಯಲಾಯ್ತಲ್ಲಿಯೆಂಬಪಕೀರ್ತಿ ಹೊಱುವುದು ಬಲ್ಲೆನು (ಕುವ್ಯಾಕ್ರೋ. ೧೪-೦೦). ೧೦. ಗರ್ಭದಲ್ಲಿ ಧರಿಸು : ಸತ್ತಮಂಗಳಲೇಕೆ ತನ್ನನು ಹೊತ್ತವರು ಹೆತ್ತವರುಗಳು ತಾ ಸತ್ತುಹೋಗುವರಲ್ಲದುಳಿವರೆ (ಹಂಸಾ. ೯೨); ಒಂಭತ್ತು ತಿಂಗಳು ಹೊತ್ತ ಮಾತೃಕೆಯ ಪಾದಾಂಭೋರುಹಕಲಗರ್ಜಿದು (ಮೋಹತ. ೨೪-೪೦). ೧೧. (ಋಣವನ್ನು) ಹೊಂದು : ಮಾಱಿದ ತಲೆಯ ಭಂಡವ ಹೊತ್ತಿರದೆ ಕೈಕೊಳಲಿ ಕರ್ಣಾದಿಗಳು (ಕುವ್ಯಾಕ್ರೋ. ೫-೪). ೧೨. ಸಂಕಲ್ಪ ಮಾಡು ; ಪ್ರತಿಜ್ಞೆ ಮಾಡು : ಹೊತ್ತ ಭಾಷೆಯೊಳಿಂ ಪರಿಯೊಳೆಂಬತ್ತುವರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸವು. ೨೬-೬೨).

**ಪೊಱುಪೊಱು, ಹೊಱುಹೊಱು** (ದ್ವಿರುಕ್ತಿ) : ಪಾತ್ರೆ ಪಿಟ್ಟವ್ವೆಯ ಸುಭಕ್ತಿ ನಿಮಿತ್ತದಿಂ ಚೋಳಂಗೆ ಮಣ್ಣಂ ಪೊತ್ತು ಪೊತ್ತೊತ್ತಿದ ತಲೆಯ ಕಿಱುಕುಣಿಗಳಂಪಲಿ (ಬಸವು. ೪೯-೫೬); ಎತ್ತಿದೆನು ನಾನಾಶರೀರವ ಪೊತ್ತು ಹೊತ್ತಳಸಿದೆನು (ಹಂಸಾ. ೬೦). **ಪೊತ್ತುಕೊಳ್, ಹೊತ್ತುಕೊಳ್ಳು** = ತಲೆಯ ಮೇಲೆ ಹೊರು,-ಧರಿಸು : ನಿನ್ನಂ ಪೊತ್ತುಕೊಂಡು ಪೋಪೆನೆನೆ (ಶಾಪುಂಪು. ೭೬); ನಲ್ಲಳ ಪಾದವಂ ತಲೆಯೊಳ್ ಪೊತ್ತುಕೊಂಡು (ರಮಣಿಮ. ೨-೧೨೪); ಹೊತ್ತುಕೊಂಡೊಯ್ದಿಳುಹಿದನು ನದಿಯೊತ್ತಿನಲಿ ತಾಂಡವನ ಬಳಿಯಲಿ (ಕೊರಡಾ. ೨-೫-೨೬); ನೀನು ಭೂಮಿಯನ್ನು ಸ್ವಲ್ಪಕಾಲ ಹೊತ್ತುಕೊಂಡರೆ ಅವನೇ ಹೋಗಿ ಚಿನ್ನದ ಸೇಬುಗಳನ್ನು ತಂದುಕೊಡುವನು (ಮಹಸ. ೧೦೦). **ಪೊತ್ತು ತರ್, ಹೊತ್ತುತರು**=ಹೊತ್ತುಕೊಂಡು ಬರು : ತಮ್ಮ ಪೊತ್ತುತಂದಿಪ್ಪೆಯ ಪೂವುಮಂ ಬೇಳದ ಪಣ್ಣುಮಂ ಕನ್ನೆಯ ಮುಂದೆ ಪೊಯ್ದು (ರಮಣಿಮ. ೪-೯೬); ಅಮಳಾಂಬುವಂ ತಾಂ ಪೊತ್ತುತಂದು ಸುಗೋಮಯದಿ ಬೆರಸುತ್ತ (ಬಸವು. ೧೮-೪೪); ಹೊರಗೆ ಇರುವ ಕಟ್ಟಿಗೆ ಹೊರೆಯನ್ನು ಹೊತ್ತುತಂದು ಒಳಗೆ ಹಾಕು (ಜಾನ). **ಹೊತ್ತಾಡು** = ಪುರಸ್ಕರಿಸು (?) : ವಸ್ತುತ್ರೀವಿಧನಾಗಿ ನಿತ್ಯಾನಿತ್ಯವ ಹೊತ್ತಾಡಿ . . . ಮುಕ್ತಿ ನಿಶ್ಚಯವಾದಲ್ಲಿ ಪ್ರಾಣಲಿಂಗಸಂಬಂಧ (ಪ್ರೋಳಶಾ. ೧೨೦-೪೮೦). **ಹೊತ್ತು ಹಾಕು** = ೧. ಕಳುಹಿಸು ; ರವಾನಿಸು : ಈ ಕಾಗದ ಪತ್ರಗಳನ್ನು ಬೇಗ ಹೊತ್ತುಹಾಕಬಾರದೇ ? (ಜಾನ). ೨. (ಶವವನ್ನು ಶ್ಮಶಾನಕ್ಕೆ) ಒಯ್ಯು ; ಸಾಗಿಸು : ಹೊತ್ತು ಹಾಕಲು ಜನ ಸಿಗುವುದಿಲ್ಲ, ಮ್ಯಾನಿಗೆ ಹೇಳಿ ಕಳುಹಿಸು (ಜಾನ). [ದೇ. ತಮಿ. ಮಲ. ಪೊಱು ; ಕೊಡ. ಪೊರ್ ; ಕೋತ. ಪೊರ್ ; ತೊದ. ಪೀಱ್]

**ಪೊಱುಕೆ** (ನಾ). ಹೊರುವಿಕೆ ; ಧರಿಸುವಿಕೆ : ಕಿಱುಕೆ, ತಿಱುಕೆ, ಪೊಱುಕೆ (ಶಬ್ದಾಸು. ೩೫೭ ವೃತ್ತಿ). [ ಪೊಱು + — ಕೆ ]

**ಪೊಱೆ³, ಪೊರ್ಕೆ, ಹೊರ್ಕೆ, ಹೊಱೆ³** (ನಾ). ೧. ಒಜ್ಜೆ ; ತೂಕ ; ಭಾರ : ತುಱುಗೆಮೆ ನೀಳ್ದ ಪುರ್ವು ನಿಡುಗಣ್ ಪೊಱೆಯಲ್ಲದೆ ಬಟ್ಟತಪ್ಪ ಬಾಯ್ದೆಱೆ (ಶಂಕಶಾ. ೧-೧೦೬); ಆಭರಣದ ಪೊಱೆಯಂ ತಳೆವಾಭರಣಪ್ರಿಯರ ತೆಱದೆ . . . ನಿಮ್ಮೊಂದಿಗರಾಭರಣದ ಪೊಱೆಯನೇಕದಂ ಪೊತ್ತಿರ್ಪರ್ (ಕಾದಂಬ. ೧೦೬); ಅಲಸಪದಕ್ಕಲಕ್ತಕರಸಂ ಪೊಱೆಯೆಂಬಿನಿತೊಂದು ಚಿತ್ರಮಾ ಲಲನೆಗೆ ದೇವಕೀವನಿತೆಗಾದುದು ನಿರ್ಭರಪೂರ್ಣಗರ್ಭದೊಳ್ (ಜಗನ. ೨-೯೪). ೨. ತಲೆ, ಹೆಗಲು, ಗಾಡಿ ಮೊದಲಾದುವುಗಳ ಮೇಲೆ ಇಟ್ಟುಕೊಂಡು ಸಾಗಿಸುವ ಸೌದೆ, ಹುಲ್ಲು ಮೊದಲಾದುವುಗಳ ಕಂತೆ,—ಗಂಟು; ತಲೆಭಾರ : ಪುಳ್ಳಿಯ ಪೊಱೆಯಂ ಪೊತ್ತು (ವಡ್ಡಾರಾ. ೭೭-೨೪); ಅಂತು ಪೊತ್ತು ಪುಲುಪುಳ್ಳಿಯ ಪೊಱೆಯನಿಳುಪಿ ಭೇರಿಯಂ ಪೊಯ್ದು (ರಮಣಿಶ. ೨-೪೪ ವ); ಪುಲಿದೊಗಲ ಪೊಱೆ ಜೇನು ತುಪ್ಪ ಸಳಿಗೆ ಮೇಣದ ಮುದ್ದೆ (ಸಾಳ್ವಭಾ. ೧೭-೬). ೩. ದೊಡ್ಡ ಆಕಾರವುಳ್ಳದು ; ಭಾರವಾದುದು : ಒಂದು ಪೊಱೆ ಜಡೆಯುಮಂ ಪಲಪಂವವ ಮುದ್ರೆಯುಮನೆಯ್ದೆ ಪೊತ್ತಿನ್ನಂ ಬಾಯೆಂದು . . . ಕರೆಯುರೆಮ್ಮ ಭಳಾರರ್ (ಶಿವತ. ೪-೭೯). ೪. ಹೊಣೆ ; ಜವಾಬ್ದಾರಿ : ಎನ್ನನೋವ ಕಾವ ಪೊಱೆ ತಮ್ಮಡಿಯೊಳೆಂದು ಕಣ್ಣೀರಿಡುವುದುಂ (ರಾಮಾಶ್ವ. ೬೫-೧೦). ೫. (ಹಣದ) ಗಂಟು : ನಿನ್ನ ಪೊಱೆಗಾರ್ಪವರಿಲ್ಲಾದೊಡಮೆನ್ನ ವಿನಯಕ್ಕಲ್ಲಿವರಂ ಪಿಡಿದು ತರಲ್ವೇಟ್ಟುಂ ತನ್ನಿಮೆಂದು ಪೊಱೆಯಂ ಕಳೆದುಕೊಳೆ ಕೊಟ್ಟು ನಡೆದು (ಶಂಹರಿ. ೪-೧೦ ವ). ೬. ಆಧಿಕ್ಯ; ಹೆಚ್ಚಳ : ಮಭವದ ಪೊಱೆಯನಾಂತಿರ್ದರಾತಿಗಳ್ಗೆ ತನ್ನ ಕುಲಮುಮಂ ಚಲಮುಮಂ ದೊರೆಯುಮಂ ಕಿಡೆ (ಆದಿಪು. ೧೨-೯೬). ೭. ಹೊರೆಯಂತಿರುವ ಮುಡಿ,—ತಲೆಗೂದಲು; ಕೇಶಭಾರ : ಮುಳಿದಾಟದೋಪರಳ್ಕಿರ್ದ ಮುಗುಳ್ತುರಿವಂತೆ ಮುಗುಳ್ತು ನಾಣ ಪಾಱೊಳಗು ಸಡಿಲ್ದಿನಂ ಪೊಱೆ ಸಡಿಲ್ದು ಕದಂಪು ಬೆಳರ್ತು ಬಾಡೆ (ಗಿರಿಜಾ. ೬೨೫). **ಪೊರ್ಕೆ** : ೧. ಉಡೆಯ ಪೊರೆಯೊಡಲ ಪೊರೆಯಾಗಿ ಬೆಮರೇರೆ (ಕಾವ್ಯಕ. ೧೫೦-೪೪೦). ೨. ಕಿಟ್ಟಲಿವ ಕಾಡಿನುರುವಲ್ಗಳಂ ಪೊರೆಯರಡ ಕಟ್ಟಿಕೊಂಡೊಯ್ದರೇಂ ಪೊಱೆಯ್ತ ಕಾಡುಂದಂ (ಕಾವ್ಯಕ. ೧೨೬-೨೬೪). **ಹೊರ್ಕೆ** : ೧. ಧರಣಿಯ ಹೊರೆಯೊಳು ತಿಣುಕುವ ಫಣಿ ಮೇಲೆ ಹಾಯಾಗಿ ಹರಿ ಮಲಗಿಹನು (ಜಂಜಾತ. ೧೦೪-೬); ಅಂತರಾಳದ ರಸಗಳು ನಮ್ಮ ಮನಸ್ಸು ಮತ್ತು ಜೀವನವನ್ನು ಪ್ರಚೋದಿಸಲಾರದೆ ಹೋದರೆ ಆ ಜ್ಞಾನ ನಮಗೊಂದು ಹೊರೆ (ಕಿಸ್ಗರ. ೨೫೬). ೨. ಯಾದನು ಬಾಣರಾಮ ಕಸಬೇಗ್ರಾಮವಾನು ಗ್ರಾಮಗಳ ಆಯ ಬೆಳಸಿ ಮದೆ ಹೊರೆ ಸೊಪೆ ಅಳಿತ್ತಿ ಕಾಳು ಹಳಿಗಳ ವಳಗೆ ಯಿದನ್ತ ಮಾನ್ಯಗಳು (ಎಕ. XI, ಚೋಳಗು. ೨೫-೧೨೭; 1665); ಬ್ರಹ್ಮ ಋಷಿಗಳು . . . ಕುಶಾಸನಗಳಲ್ಲಿ ಕಟ್ಟಿರುವ ಅರಣಿ ಮೊದಲಾದ ಯಜ್ಞ

ಪಾತ್ರೆಗಳ ಹೊರೆಗಳಂ ಪೊತ್ತು (ಶ್ರೀಗಂ. ೩೦೨-೧೧). ೪. ನಾನು ಋಣ ತೀರಿಸುವ ಹೊರೆಯನ್ನು ನಿರ್ವಹಿಸುತ್ತಿರುವೆನು (ಜಾಹುಶ್. ೬೦); ಈ ಕೂಸಿನ ಹೊರೆಯೆಲ್ಲಾ ನಿಮ್ಮ ಪ್ಯಾಲ ಒಪ್ಪಿಸೀನಿ (ಕಂಐಡು. ೬); ಬರೀ ಮಾತಿನವ ಹೊರೆ ಹೊತ್ತಾನೇ? (ಗಾದೆ). ೮. ಗುಂಪು; ರಾಶಿ: ಕರದ ಶೂಲದ ಪೆಣನ ಹೊರೆಗಳ ಸುರೆಯ ಘಟಿಗಳು ಮುಕ್ಕುಳಿಸಿ ಜೋಂಪಿಸಿರುವ ಕಂಗಳ . . . ನರಕಪಾಲದ ಮಾಲೆಗಳ ಸಂಗರದ ತಾಟಕಿಯೆನಿಪ ರಕ್ಕಸಿ ಬಂದಳಾಹವಕೆ (ಅಕಂಕಾ. ೧-೨೦-೨); ಅವರು ನಮಗೆ ಒಂದು ಹೊರೆ ಪುಸ್ತಕ ಗಳನ್ನು ಕೊಟ್ಟರು (ಆಧುಕಥ. ೨೦೨). ೯. (ಅಲಂ) ಬೇಡವಾದ ಹೊಣೆ ಅಥವಾ ವ್ಯಕ್ತಿ: ಅವ್ಯಕ್ತ ರೀತಿಯಲ್ಲಿ ತನ್ನನ್ನು ಹೊರೆಯಾಗಿ ಕಾಣುತ್ತಿರುವಂತೆ ಅವನಿಗೆ ತೋರುತ್ತಿತ್ತು (ಖಡಕ. ೩೦). **ಹೊಱೆ**: ೧. ನಾಗರಾಜನುತ್ತಮಾಂಗಮಸ್ತಕಕ್ಕೆ ಹೊಱೆ ಹಿಂಗಿದುದು (ಎಕ. XVI. ೯೬-೦೪; 1147); ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ ನಿನ್ನ ಮುಖಮಂಡಲಕ್ಕೆ ಶಶಿಮಂಡಲಮುಪ್ಪರಿಶಿಯ ಪಾತ್ರ (ನಂಚರ. ೦೯-೦೭); ಹಸುಳೆಗಮರಾ ಚಲದ ಹೊಱೆ ಸ್ವೈರಿಸುವುದೇ ಮಱಿಹುಲ್ಲೆ ಸಿಂಹದ ಮಸಕದಿರೇ (ಕುಮ್ಮಾರಾ. ೩-೮೪); ಕ್ಷಿತಿಗೆ ಬಲುಹೊಱೆಯಾಯ್ತು ಬದುಕುವ ಗತಿಯ ಕಾಣದೆ ಸಕಲದೇವಪ್ರತತಿ ನೆರೆದೈತಂದು ಕಂಡುದು ಕಮಲಸಂಭವನ (ಶೌರಿಚ. ೦-೬-೯೩). ೨. ಸಾಸಿರ್ಪರಿಂ ಬಿಟ್ಟ ಧರ್ಮ್ಮ ಎಲೆಯ ಹೇಱ್ಗೆ ಬೇಳೆ ಹೊಱೆಗೆ ಬೇಳೆ ಹೊತ್ತಳಕ್ಕೆ (ಎಕ್ಷಾ. XI-ii, ೦೨೨-೦೨; 1072); ಮಣಿಮಯದ ಮೋಹಳದ ಹಿರಿಯುಬ್ಬಣದ ಸಬಳದ ಶೂಲ ಸುರಗಿಯ ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ (ಕುಮ್ಮಾಭ್ರೋ. ೦೫-೦೯); ಕರಿಯು ಮದ್ದಿನ ಪೊಟ್ಟಣ ಕಟ್ಟಿದಂಬಿನ ಹೊಱೆ ಹುರಿಮರಳಿನ ರಾಶಿ ಅರೆದ ಸಾಸವೆಗೂಡ ಕಾದಡವಿಯು ಬಹುಹರವಿಗಳೊಪ್ಪಿದುವಾಗ (ಕಂಪಿಖ. ೦೦-೦೩೩). ೭. 'ಹೊಱೆದಲೆ' ಪರಾ.

**ಪೊಱೆಪೊಱೆ** (ದ್ವಿರುಕ್ತಿ): ನಿನ್ನೀ ಪೊಱೆಪೊಱೆಯುಟಲ್ಗಳ ಭಾರಕೆ ನಡುಗಿದಪೆನೆ (ಅದ್ಯಕ್ರ. ೨೬-೬೦೭). [ದೇ.II ತಮಿ. ಪೊಱೈ; ತುಳು. ಪುದೆ, ಹೊರೆ; ಕೊಡ. ಪೊರೆ; ತೊದ. ಪಱ್]

**ಪೊಱೆಕಾಱ**, ಹೊರೆಕಾರ, ಹೊಱೆಕಾಱ, ಹೊಱೆಗಾಱ (ನಾ). ೧. ಹೊರೆಯನ್ನು ಹೊತ್ತಿರುವವನು: ಪೊಱೆಕಾಱನ ಪೊಱೆಯೆಂತಂತೆ (ಜೀಚಿತಾ. ೩-೩); ಗುಲ್ಮದಂತೊತ್ತುವರ್ ಪೊಱೆಕಾಱನಂತೆ ಬಿಗಿದು ಕಟ್ಟುವರ್ (ರತ್ನಾಕಸ್ಟ್. ೩-೭೩); ಸಿಸಿಯೆಂಬ ಗಜದ ಪುರದ ಪೊಱೆಕಾಱ ನಂದೆಸೆದು ಮಱಿಯ ಸಾರೆ ಸೂರ್ಯ್ಯ ವಿಷಮಕೋಪದಿ ಚಾರಿವರಿದಂತಾ ತಮ ದಶದಿಕ್ಕು ತುಂಬಿತೇನೆಂಬೆ (ಅಕಂಕ. ೩-೦೦೩). **ಹೊರೆಕಾರ**: ೧. ದಾರಿಯಲ್ಲಿ ಹೋಗುವ ಒಬ್ಬ ಸೌದೆ ಹೊರೆಕಾರನ ಜೀವನ ಇಷ್ಟು ದುರಂತ ವಾಗಿರಬಹುದೆಂದು ಯಾರಿಗೆ ತೋರಬೇಕು? (ಕಪ್ಪಿ. VII. ೪೮). **ಹೊಱೆಕಾಱ**: ೧. "ಭಾರವಾಹ. ಭಾರಿಕ—ಹೊಱೆಕಾಱ" (ಶಾಕಟಾ. ೬). ೨. ಹೊಣೆಯನ್ನು ಹೊತ್ತಿರುವವನು,—ವಹಿಸಿಕೊಂಡಿರುವವನು: ಮತ್ತೀಕೆ ಹುಸಿಯು ಹೊರೆ ಹೊಱೆಕಾಱ ಕರೆದಯೆನೆ ತೆತ್ತ ಸಾಲವ ಭರದೊಳಱಿಯದಾಡಿದ ನುಡಿಗೆ ಹೊತ್ತ ಹುಸಿಯಳಿಯಬೇಕೆಂದೆನಲು ನಿನ್ನ ಕುಲವೇದಲ್ಲದಳಿಯದೆನಲು (ಹಕಾಳ. ೧೧-೨೪); ಕ್ಷಿತಿಯ ಹೊಱೆಕಾಱಂಗೆ ಸೌಖ್ಯಸ್ಥಿತಿಯ ಮಾಡುವೆನಿನ್ನು ಕುರುಭೂಪತಿ ವಿರೋಧಿಯ ವಿಧಿಯನೀಗಳೆ ತೋಱಸುವೆನು (ಕುಮ್ಮಾದಿ. ೯-೪). **ಹೊಱೆಗಾಱ**: ೨. ಮೇದಿನಿಯ ಹೊಱೆಗಾಱರೆಲ್ಲರೂ ವೇದಿಸುತ ಚಂಡಾಗುತಿರ್ದರು (ಸಂಕಕ. ೯-೬).

[ ಪೊಱೆ + — ಕಾಱ ]

**ಪೊಱೆಗಟ್ಟು**, ಹೊರೆಕಟ್ಟು, ಹೊಱೆಗಟ್ಟು (ಕ್ರಿ). ಹೊರೆಯಾಗಿ ಕಟ್ಟು; ಗಂಟುಕಟ್ಟು: ಅಂತು ಪೊನ್ನಂ ಪೊಱೆಗಟ್ಟಿಕೊಂಡು ಪಾತ್ರಮಾ ಪೊಸೆಯ ಮರದೊಳ್ ಪೊಕ್ಕಡಂಗಿರ್ಪುದುಂ (ಸಂಕಕಂ. ೦೩೩-೮೬); ಪೆರ್ಬುಲಿ ಬಿಡುವಾರುಗೋಡುವಲೆಯೆಂಬನಿತಂ ಪೊಱೆಗಟ್ಟಿ ಕಾನನಸ್ಥಲದೊಳಗಲ್ದು ತೋಱಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ದಕಳ. ೨-೦೦೩). **ಹೊರೆಕಟ್ಟು**: ತೋಟಕ್ಕೆ ಹೋಗಿ ಸೋಗೆಗಳನ್ನು ಆರಿಸಿ ಹೊರೆಕಟ್ಟಿ ಕೊಂಡು ಬೇಗನೆ ಬಂದುಬಿಡು (ಜೂಶಿ). **ಹೊಱೆಗಟ್ಟು**: ಆ ಹುಲ್ಲ ಒಕ್ಕಿ ಮೆಟ್ಟಿಸಿ ತೂಱುವಾಗ ಹೊಟ್ಟು ಕಳೆದು ಭತ್ತ ನಿಂದು ಹುಲ್ಲು ಹೊಱೆ ಗಟ್ಟುತ್ತು (ಕೋಳಿಚಾ. ೦೪೩-೩೩೩); ಬೆಳೆದ ಧೀಮಾಟವಿಯೆಡೆಯೊಳುಜ್ವಳ ಸುಗಂಧದ್ರವ್ಯಮೂಲಿಕೆಗಳನಱಸಿ ಹೊಱೆಗಟ್ಟಿ ಹೊತ್ತು ವಠಾಸಪುರವೆಯ್ದಿ (ಶಾಸ್ತ್ರಕ. ೦೬-೪೦). [ ಪೊಱೆ + ಕಟ್ಟು$_1$ ]

**ಪೊಱೆಯಾಳ್**, ಪೊಱೆಯಾಳು, ಹೊರೆಯಾಳ್, ಹೊಱೆಯಾಳು (ನಾ). ಹೊರೆಯನ್ನು ಹೊರುವ ಆಳು, —ಸೇವಕ: ಪೊಱೆಯಾಳ್ಗೆ ಳೊಟ್ಟೆ ವೇಸರಮೊತ್ತು ಬಂಡಿಗಳ್ಗೆಱೆ ಕನಕಭಾರದಿಂದ್ಯೆದಿದುವು (ಕ್ಕಶಿಚ. ೩-೭೩). **ಪೊಱೆಯಾಳು**: ಆಣಿಮುತ್ತಿನ ಕಂಠಮಾಲೆ ಚೌಕುಳಿ ಪೊನ್ನ ಕಾಣಿಕೆ ಪೊಱೆಯಾಳು ಸಹಿತ ಕ್ಷೋಣಿಪ ಮಧುರೆಯ ತಿರುಮಲೇಂದ್ರನ ಸುಪ್ರವೀಣಮಂತ್ರೀಶನೈತಂದ (ಕಂಪಿಖ. ೨೦-೬೬). **ಹೊರೆಯಾಳ್**: ನಿಯೋಗಿ ಹೂವಯ್ಯ—ಕೆಳದಿ ಶಿವಪ್ಪನಾಯಕನ ರಾಯಭಾರಿ ಹೂವಯ್ಯನ ಪರಿವಾರದವರು ಹೊರೆಯಾಳ್ಗಳು (ಮಂಕ್ರಕ. ೬-೭). **ಹೊಱೆಯಾಳು**: ಆಗಣಿತದ ಪೆಟ್ಟಿಗೆಯ ಹೊಱೆಯಾಳುಗಳ ಸಂದಣಿ ನೂಕಿದುದು ಸರಕುಗಳ ಸದಳದ ಭಂಡಿಗಳು ಭಾರಿಸಿವವಿಳಿ ಠಘುಡಿಯ (ತೂರಚ. ೦-೧೩-೦೦).

[ ಪೊಱೆ + ಆಳ್$_3$ ]

**ಪೊಱೆಯಾಳು** 'ಪೊಱೆಯಾಳ್' ನೋ.

**ಪೊಱೆಪೊರಕ** (ನಾ). (?): ಸುರಯಿಯ ಬಿರಿಮುಗುಳ್ಗಳ ಪೊರೆಪೊರೆಯೊಳ್ ಪೊಱೆಪೊರಕ[ಪಾಠಾಂ. ಪೊರೆಪೊರ, ಪೊರೆಪೊರೆ]ನಲ್ಲದಲ್ಲಾಗುವ ರಜಂಬೊರೆದು ಪರಕಲಿಸಿದಳಿಕುಳಪರಿಕರಮುಮಮನತನುಶಿಖಿಯ ಕಿಡಿಗಳೆ ಗೆತ್ತಳ್ (ಕಂಕಶಾ. ೩-೩); "ಭಾರವನ್ನು ವಹಿಸುವುದು" (ಕಂಕಶಾ. ಶಬ್ದಕೋಶ): "ಭಾರದ ವ್ಯಾಪ್ತಿ" (ಕಂಕಶಃ. ೦೬೯). [ ? ]

**ಪೊಟಕು**, ಪೊಳಕು$_2$ (ನಾ). ಸಾಮಾನ್ಯವಾದ ಆಕಾರ; ಸಹಜವಾದ ರೂಪು: "ಪೊಟಕು = ಸಾಮಾನ್ಯಾಕೃತಿ" (ಕಪರ: ಶಂ. ೦); "ಪೊಟಕೆಂದು ಸಾಮಾನ್ಯಾಕೃತಿ" (ಕಕಶಾ. ೩೯-೨೯೨); "ಪೊಟಕೆನೆ ಸಾಮಾನ್ಯಾಕೃತಿ" (ಕಶಕಂ. ೦೯೦): ನೋಟಪ್ಪೊಡಿಂದಿನ ಮುಂದಿನ ಖಲನ ಪೊಟಕು ಪೆಟಕಪ್ಪೆನಗಂ, ತುರಿಪದೆ ಕಾದಿ ಗೆಲ್ದು ಹಯಮಂ ತಾರದುದಾಡೆನಾದೊಡೆ (ರಾಜೂಶ್ಯ. ೦೦೦-೦೬). **ಪೊಳಕು$_2$**: ಕೀಲೊರೆಯೊಳಿರ್ದೊಡಂ ಪೊಳಸೆಯ ದಿಹುದೇ (ಕಾಂಪುರ. ೦೨೮-೨೬೦); ಮಂಜಿನೊಟ್ಟಿಲದೊಂದು ಸುಳಿಸುಳಿಗಳಾಗಿ ಪೆಣಪೆಣದುಕೊಳುತ್ತದರ್ದೇರಿ ಪಲಪಲವು ವಿಷಮಾಕೃತಿಗಳೀದೆ ಧುಮ್ಮಿ ಕ್ಕುತೆಲ್ಲ ಪೊಳಕುಗಳಳ್ಗಿ (ಸಂಕಕ. ೩೨-೦೯೩). [ ? ]

**ಪೊಟತ್ರೊನ್?** (ನಾ). ಒಬ್ಬಾತನ ಹೆಸರು (?): ಮನ್ನಿರಾವನ್ನನ್ನಿ ಕೃಟ್ಟ ಪೊಟಲತ್ರದು ಕಣ್ಣಗಪ್ಪೆದ ಕಟನಿಯುಂ ಪಾಟಿಯುಂ ಮಗೆತ್ತಾಣಮುಂ ಸರ್ವ್ವಪರಿಹಾರಂ ಕನ್ದಪಕ್ಕೊಡುದೊರ್ಪ್ಪಣ್ಣಿ ಮಹಾಪಾತಕಪ್ಪಾಪ್ಪರ್ ಪೊಟ ತ್ರೊನ್ಪತ್ರದು (ಎಕ. IX (ಕ). ಹೊಸಕೋ. ೩-೦೫; ೯೦೦). [ ? ]

**ಪೊಟರವ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ರಾಚಮಲ್ಲಪೆರ್ಮ್ಮಾನಡಿ ಪ್ರಿಥುವೀರಾಜ್ಯಂಗೆಯೆ ಪೊಟರವ ಬೆಸಗೆಯ್ ಎನೆ (ಎಕ. XII. ತಿಪಟೂ. ೯೭-೦; ಸು. 880). [ ? ]

**ಪೊಟಲ್**, ಪೊಳಲ್, ಪೊಳಲು, ಹೊಳಲ್ಕು (ನಾ). ೧. (ಹೆಚ್ಚು ಜನರು ವಾಸಮಾಡುವ) ಊರು; ಪಟ್ಟಣ; ನಗರ: "ಪೊಟಲೆಂದು ನಗರಂ" (ಕಕಶಾ. ೩೯-೨೯೭): ಪೊಟಲ ನಿಗ್ಗರ್ಡಿ ಆಚದೊಳ್ ಎರಡು ದ್ರಮ್ಮ (ಪ್ಪಕಂ. ೦೯೩೩, ೨೬-೨೦; 872); ಜಲನಿಧಿಯಂ ಪಾಯ್ದೊರ್ವನೆ ನಿಲಿಕಿ ದಶಾನನನ ಪೊಟಲನಾ ಲಂಕೆಯನಾ ಕುಲವಿಲ್ಲದಿಱದು ನಿಂದಂ

(ಶಬಾ. ೩-೦೯೧) ; ಪಾಟಲೀಪುತ್ರಮೆಂಬ **ಪೊಟಲ್** (ಸುಕುಮಾ. ೬-೦೬ ವ) ; ಈಗಳೆನ್ ಪಿಂದಾಗಿ ದೇಶ್ಶಿವೆನ್. ಪೊಟಲ್ಗೆಲ್ಲ ಸಾಜ್ ವೇಟ್ ಪೋಗು (ಅಂಕಿಗೊ. ೯-೬೨). **ಪೊಳಲ್** : ಪೊಳಲ್ ಕುವಳಾಲಯಮಾಗೆ (ಎಕ. VII, ಶಿಕಮೊ. ೯-೩೩ ; 1133). **ಪೊಳಲು** : ಸ್ವಸ್ತಿ ಶ್ರೀಮತು ನಾಲ್ಕುಯುಗದ ಪೊಳಲು ಕೋಗಳಿ (ಸೌಇಇ. XI-i, ೬೬-೩೦ ; 1050) ; ಯತಿಪನಾಜ್ಞೆಯಿಂದ ವದಿರೆಯ್ದುಂದು ಪೊಳಲಂ ಸಾರ್ದರು (ಶಕಣ. ೦೨-೩೬) ; ಸರ್ವಸಂಭ್ರಮದ ಬೀಬುತ್ರಲಾ ಪೊಳಲೊಳು ಮೆಱೆಯುತ್ತೆತಂದ (ಕಂಶಂ. ೯-೩೯) ; ನಾವು . . . ದೂರದ ಪೊಳಲಿಗೆ ಯಾತ್ರೆ ಹೊರಟಿದ್ದೇವೆ (ಹಾಹುಕ್ತ. ೯೦). **ಹೊಳಲ್ಕು** : ಹೊಳಲ ಸುಂಕಿಗನಂತೆ ತೊಳಲುತ್ತಿದ್ದನವ್ವ (ಮಹಾದೇ. ೭. ೯೩-೦೦೦) ; ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ಕೊರಚಾ. ೦-೯-೦೦) ; ಹೊಳಲುಗಳ ಕಟ್ಟ ದೊರೆಯಾಗು ಸೊನ್ನಲಿಗೆ ಕಳ ಸಾಗಿ ಬೆಳಗಿ ಹೊಸಮತಕೆ (ಕಶ್ನಾ. ೩೦೯).

[ದೇ.೫ ತಮಿ. ಪುೞಲ್ ; ತೆಲು. ಪ್ರೋಲು]

**ಪೊಟಲಬ್ಬೆ** (ನಾ). ಒಬ್ಬಾಕೆಯ ಹೆಸರು : ಪೊಟಲಬ್ಬೆಯ ಕೊಟ್ಟ ಮಣ್ಣಯ್ಗೊಳ (ಎಕ. IV, ಎಳಂದೂ. ೨೩-೦೨ ; ಸು. 925?).

[ಪೊಟಲ್ + ಅಬ್ಬೆ$_1$]

**ಪೊಟಲಮ್ಮ** (ನಾ). ಒಬ್ಬಾತನ ಹೆಸರು : ಮತ್ತರಸರಾ ಪೊಟಲಮ್ಮನಾ ಮೇಗಟ್ಟು (ಎಕ. X, ಶ್ರೀನಿವಾ. ೯೦-೨; ಸು. 900). [ಪೊಟಲ್ + ಅಮ್ಮ$_1$]

**ಪೊಟಲಿಗ** (ನಾ). =ಪೊಟಲಿಚ : ಪೊಟಲಿಗಂ, ಕಾಲೂರಿಗಮಿತ್ಯಾದಿ (ಶಾಕಾಹ. ೦೬೩ ಪ್ರಯೋ). [ಪೊಟಲ್ + —ಇಗ]

**ಪೊಟಲಿಚ, ಪೊಳಲಿಚ** (ನಾ). ನಗರದಲ್ಲಿ ಹಂಟ್ಟಿದವನು; ಪಟ್ಟಣಿಗ; ನಾಗರಿಕ : "ಪೊಟಲಿಚರ್ ಪೌರಾಭಿಧಾನಂಗಳೊಳ್" (ಶಬ್ದಾರ. ೯೩); ಪೊಟಲಿಂದ್ರಪುರಂ ಕಾಲೂರ್ ಪೊಟಲಿಂದ್ರರ್ ಪೊಟಲ ಮಾನಸರ್ ಕಾಲುರಿಚರ್ ಪೊಟಲ್ಚರೆನೆ ಸೊಗಯಿಸುವುದು ಪೊಟಲಿಂ ಕಾಲೂರ್ಗ ಳಿಂದಮಂತಾ ವಿಷಯಂ (ಕಾವ್ಯಾವ. ೩೩೫); ಈ ಪೊಟಲ ಪೆಂಡಿರೆಲ್ಲರಂ ಮಱೆದು . . . ಪೊಟಲಿಚರೆಲ್ಲರುಮೊಲ್ಲನುಲಿದು ಮೊಱೆಯಿಟ್ಟು (ಅರ್ಜನೇ. ೫-೬ ವ). **ಪೊಳಲಿಚ** : ಮಡಿವಳರ ಕಾಲುರಿಚ ಪೊಳಲಿಚ ದಡಿಗ . . . ಕಂಚುಗಾಱರ ಕೇರಿ ಮೆಱೆದಿಹವು (ಸಾಶ್ಶಣ. ೨-೯).

[ಪೊಟಲ್ + — ಇಚ]

**ಪೊಟಲೊಡೆಯ** (ನಾ). ಊರಿನ ಯಜಮಾನ ; ನಗರಪತಿ : ತೊಟಲಾಜದಟಲನೆಯ್ದಿದ ಪೊಟಲೊಡೆಯನ ಮಗಂ (ವರ್ಧಕ. ೨-೯೯ ವ).

[ಪೊಟಲ್ + ಒಡೆಯ$_1$]

**ಪೊಟಲ್ಗಾಪು** (ನಾ). ಊರಿನ ಕಾವಲು; ನಗರರಕ್ಷಣೆ.

**ಪೊಟಲ್ಗಾಪಿನವರ್** = ಊರಿನ ಕಾವಲುಗಾರರು; ನಗರರಕ್ಷಕರು; ತಳವಾರರು : ಪೊಟಲ್ಗಾಪಿನವರ್ ಪೊಡಮಟ್ಟು ಪೇಟ್ದರ್ (ಅರ್ಕ್ಯಕ. ೯೨-೨೦). [ಪೊಟಲ್ + ಕಾಪು]

**ಪೊಟಲ್ಚೋರ, ಪೊಳಲ್ಚೋರ, ಪೋಟಲ್ಚೋರ** (ನಾ). ನೊಳಂಬ ರಾಜರಲ್ಲಿ ಒಬ್ಬಾತನ ಹೆಸರು : ಆತನ ಮಗಂ ಪೊಟಲ್ಚೋರದೇವಂ (ಮೈಎಂ. ೦೯೩೨, ೯೬-೩; ಸು. 960); ನೊಟಮ್ಬರ ಭೀಮಂ ಪುಸಿಗೆಯ್ಗೊಂ ರಾಜರಾಜಾಶ್ರಯಂ ಶ್ರೀಮತ್ಪೊಟಲ್ಚೋರದೇವಂ (ಸೌಇಇ. IX-i, ೩೦-೩೯; 965). **ಪೋಳಲ್ಚೋರ** : ಪೊಳಲ್ಚೋರನೆಮ ನೊಟಮ್ಬ ಮಹಾಸಾಮನ್ತನ್ (ಎಕ. XII, ಶಿಕಪೂ. ೯೭-೬; 880). **ಪೋಟಲ್ಚೋರ** : ಶ್ರೀಪೃಥುವಿ ಪೋಟಲ್ಚೋರಾವನಿಪಂಗಗ್ರಮಹಿಷಿ ಭುವನಾಮ್ಬಿಕೆ (ಎಕ. X, ಮುಳಬಾ. ೩೫-೩; ಸು. 890). ☞ ಈ ಎರಡು ರೂಪಗಳೂ 'ಪೊಟಲ್ಚೋರ' ಎಂಬುದರ ಅಪಲಿಖಿತವಿರಬಹುದು.

[ಪೊಟಲ್$_1$ + ಚೋರ]

**ಪೊಟಲ್ವೀದಿ** (ನಾ). ಊರಿನ ಕೇರಿ ; ನಗರದ ರಸ್ತೆ ; ಪಟ್ಟಣದ ಬೀದಿ : ಪೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುವವನ ಬೀರಮುಂ ಗಾಡಿಯುಮಾವಗಮಡಸಿ ತಾಗೆ ಕಣೆಯುಂ ಮುಗುಳ್ಗಣೆಯುಂ ಮೊನೆ ಯೊಳಂ ಪೊಟಲ್ವೀದಿಯೊಳಂ (ಕನ್ನಿಣಾ. ೯೬).

[ಪೊಟಲ್ + ಬೀದಿ]

**ಪೊಟವು** (ನಾ). (?) : ಪೊಟವನ ಭಾವಿಸದೇಱಿಯುಮಿಟಿಯಿಯುಮಾಗಳ್ ನಖಾಗ್ರವಾಲಾಗ್ರದಿನೊಂದುಟಿಯದದವಯವಮನವಯವಮುಟಿಯದು ಮನಿಸದೆ ಕುಮಾರಿ ನೋಡಿದಳನಿಸಂ (ಶಾಂತಿಶ್ವ. ೫-೦೦೦).

[ ? ]

**ಪೊಟಿಯೂರ್** (ನಾ). ಒಂದು ಊರಿನ ಹೆಸರು : ಪಡುವಲು ತೂಕ್ನಾಲದ ಪೊಟಿಯೂರ ಸಂದಿ (ಮೈಎಂ. ೦೯೨೫, ೦೦೫-೯೯; 634).

[ಪೊಟ್ಟಿ$_1$ + ಊರ್]

**ಪೊಟೆ, ಪೊಳೆ, ಹೊಳೆ** (ನಾ). ೧. ನದಿ ; ತೊರೆ ; ಹಳ್ಳ : "ತೊಱೆ ಯೊಳ್ ಪೊಟೆಯೇದು" (ಶಬ್ದಾರ. ೬೨); ನೀರ ಪೊಟೆ ಪಾಡುವೆಡೆ ಹೊಲಗೇರಿ . . . ಎಂಬೆಡೆಗಳಂಚಿತವೊಸಜಾಗೆಳಲ್ (ರೋಕಚಿ. ೦೨-೩೩). ೨. ದಾರಿ; ಹಾದಿ; ಮಾರ್ಗ : "ಪೊಟೆ= ಬಟ್ಟೆ, ತೊರ (ಹೊಳೆ)" (ಕರುದ. ಶು. ೦) : "ಪಥ ನದಿಗಳೊಳ್ ಪೊಟೆ" (ಕಬ್ಬಿಸುಂ. ೦೦೫) ; ಆ ನಂ . . . ಜಗಸರ ಪೊಟೆಯೊಳಾಡುತಿರ್ಪ ಕಟ್ರಿಯಂ ಕಂಡು (ಶಂಕರಂ. ೨೫೨-೨೦), ಕೊಳದ ತಡಿಯೊಳ್ ಕಾಲ್ಗೊಗಂದೊಳೆವ ಮಾನಸರಂ ಸರೋವರ ಮಂ ಪಾಯ್ವ ಪೊಟೆ ಯಾವುದೆನೆ (ಅರ್ಜನೇ. ೬-೧೪ ವ). **ಪೊಳೆ** : ೧. "ಪೊಳೆಯನಲ್ ಹೊಳೆ" (ಕಜ. ೩೯) ; ಸಂಗವದ ಸಂಗವೇಶ್ವರ × × × ಯ ಪೊಳೆಗೆ ನೂಱು ಮತ್ತ (ಸೌಇಇ. XI-i, ೦೦೩-೩೬; 1070); ಬಾವಿ ಕೆಱೆ ತೊಱೆ ಕಟ್ಟೆ ಪೊಳೆಗಳಿಂದ . . . ಸೊಗಸ ಬೀಱುವುದು (ಸೌಂದರ್ಕ. ೨-೩), ಉದಕಂ ಪೊಳೆಯಂತೆ ಪರಿಯಲಾದುದು (ಮಹಾಶಾ. ೯-೦೬). **ಹೊಳೆ** : ೧. ಹೊಳೆಯುಂ ನಡುವಣ ಹುದುವಿನ ಹೊರದ ಮಣ್ಣು (ಮೈಎಂ. ೦೯೩೩, ೩-೦೩; 1160); ಹೊಳೆಗಳಱೆ ಬತ್ತಿದುವು ನಿರ್ಜರ ಜಲಮಡಂಗಿದವು (ತೊರೆಚಾ. ೦-೫-೦೬); ಪೂವಲ ಹನುಮ ಘೊಲನೆ ಖಾಸನ ನೇವದದೆ ತಂಕಣ ಹೊಳೆಯ ತಡಿಯ ಬೀಡ ಬಟ್ಟ (ಕಂಶಂ. ೦೨-೦೩); ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದ ಹಾಗೆ (ಗಾದೆ).

[ದೇ.೫ ತಮಿ. ಪುೞೈ; ಮಲ. ಪುೞ; ತುಳು. ಹೊಳೆ; ಕೊಡ. ಪೊಳೆ]

**ಪೊಟೆಗಟ್ಟು** (ಕ್ರಿ). ನದಿಯಾಗಿರುವಂತೆ ಮಾಡು : ಗಟಯಿಸುವ ತಮಂ ಮೂಡರ್ ಪೊಟೆಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡಟಲೆ ಧರೆಗರ್ಧನಾರಿಯ ತಟವಿಡಿದಂತಾಯ್ತು ಗಗನಮಂಡಲಮಿನಿಸುಂ (ಅಜಿತಪು. ೬-೭೨).

[ ಪೊಟೆ + ಕಟ್ಟು$_1$ ]

**ಪೊಟೆದುಂಗೆ** (ನಾ). ಸುವಾಸನೆಯ ಹುಲ್ಲಿನ ಗೆಡ್ಡೆ ; ಪರಿಮಳ ಯುಕ್ತವಾದ ಹುಲ್ಲುಗಡ್ಡೆ : ಪಚ್ಚನೆ ಬೆಳೆದ ಹರಿತ ಶಾಡ್ವಲಮುಂ ಸುತ್ತುಂ ನೀಳ್ದ ಪೊಟೆದುಂಗೆಯ ಜೊಂಪಮುಂ ವಿರಾಜಿಸೆ (ರಾಜಶೇಖ. ೩೦-೨೦).

[ ಪೊಟೆ ? + ತುಂಗೆ ( < ತುಂಗ$_1$ ) ]

**ಪೊಟೆಮೆಟ್ಟು, ಹೊಳೆಮೆಟ್ಟು** (ಕ್ರಿ). ಹೊಳೆಯ ನೀರನ್ನು ಪೂಜಿಸು ವುದಕ್ಕಾಗಿ ನೀರಿನಲ್ಲಿ ಇಳಿ; ☞ ಬಾಣಂತಿಯು ಸೂತಿಕಾಗೃಹದಿಂದ ಈಚೆಗೆ ಬರುವ ದಿನ ಹೊಳೆಯ ನೀರಿನ ಬಳಿ ಸ್ನಾನಮಾಡಿ ಗಂಗೆ ಯನ್ನು ಪೂಜಿಸಿ ಬರುವ ಪದ್ಧತಿಯಿತ್ತು, ಹಾಗೂ ಇದೊಂದು ಪವಿತ್ರೀಕರಣವಿಧಿಯಾಗಿತ್ತು : ಇಟಿದೊಡೆ ಕೂರದ ಪೆಂಡಿರ ಕಿಟಗಾದಪೆಂದು ರತ್ನಸೋಪಾನಕದೊಳ್ ಗಟಗಟನಿಟಿಯದೆ ಬಾಣತಿ ಪೊಟೆಮೆಟ್ಟುವ ತೆಱದೆ ಗುಜ್ಜುಮೆಟ್ಟಿದರೆರಬರ್ (ಅಜಿತಪು. ೬-೩೯). **ಹೊಳೆಮೆಟ್ಟು** : ಗಾಳಿಯೆಂಬ ಸುಕುಮಾರನಂ ಪಡೆದು ಸಂಧ್ಯಾವನಿತೆ

ತಿನ್ಗಳು ೧ಕ್ಕೆ ಸವ್ವುಳ ಎರಡು ವರಹ . . . ಸಲೂದು (ಎಕ. XIV. ಶ್ರೀರಂಗ. ೨೬೯-೦೨ ; ಸು. 1585). **ಪೊತ್ತು₄** : ೧. "ಪ್ರಭಾರನೊಳಂ ಪೊತ್ತೆಂದು" (ಕರ್ಣಾಕ. ೬೫). ೨. ಆಕೆ ನಿರುತ್ತರೆಯಾಗಿ ಎನ್ನ ದೆಸೆಯು ಮುಳಿಸನುೞಿದಂದಿಂದಿತ್ತಂಗೆ ನಿಂದು ಪೊತ್ತು ಕಾಯ್ದು ಬೇಸಱಿಸಿ ನಿರ್ವಂದ ದಿನಟ್ಟಿ ಕಳೆಯೆ (ಶಾಂತಿಪು. ೬-೬೯ ವ) ; ಮುಗಿಲಂತೆ ಪೊತ್ತಿಗೊಂದು ಬಣ್ಣ ಮಾಗದೆ (ರಹರ್ಣಕ್ಷು. ೬-೯೯) ; ಈಸು ಪೊತ್ತೇಕೆ ಪವಡಿಸಿವನೆಂದೆಬ್ಬಿಸಲ್ (ಕಲಕ. ೬-೨೩). ೩. ಒಡನೆಯೆ ಚಕ್ರವಾಕಿ ಪೊಸವಾಣತಿ ಕೋಗಿಲೆ ಯಾೞಿಲಿಂದು ಕೇಳ್ಗಡ ಗಿಳಿವೆಣ್ಗೆ ಪೊತ್ತಿನೊಳೆಯ್ದೆ ನವಿಲ್ ಮನೆದೀವಿ ಮಕ್ಕಳಂ ಮಡೆದುದ ನೋಡ (ಅರ್ಜನ್. ೦-೯೯). **ಪೊತ್ತುರ್** : ೨. ಆ ಪೊತ್ತುರ್ಗಂ ಕೋಕಿಲಂಗಳುಲಿಗುಂ ಬನದೊಳು (ಎಕ. XVI. ೩-೦೩ ; ೯೮೦); ಮೂಱು ಪೊತ್ತುರ್ಗಂ ವರಕಾನ್ನಾಸಂಕುಳಂ ಬಂದಿರದೆ (ಎಕ. XV. ೯೦-೯೯; 1080). **ಪೊಳ್ತು** : ೧. "ಪೊಳ್ತಿನಲ್ ಸೂರ್ಯನಕ್ಕು" (ಕಕರ. ೬೦); ತೀಡಿತ್ತಲೆವ ತಂಗಾಳಿ . . . ಏರ್ದುದು ಪೊಳ್ತು (ಕಕ್ರಾಂಗ. ೩೬-೦೫೨); ಪೊಳ್ತಿಗೆ ಕಯ್ಯ ಮುಗಿದು (ಕಾಬರ. ೦೦೬-೨೯೨). ೨. ಮದ ದಿಂದಂ ಪೊಳ್ತು[ಪಾಠಾಂ. ತ್ತು] ಪೋಗುತ್ತಿದೆ (ರಕ್ಷಾಕ. ೩೫) ; ಇನಿಸು ಪೊಳ್ತಾದೊಡಂ ಸುಖನಿದ್ರೆಗೆಯ್ವೆನೆಂಬೆನೆ (ಕಕ್ಕರಾ. ೬-೬೮) ; ಇಂದೇನೊ ನಿಶಿಪೊಳ್ತಿನೊಳಗಿಂತು ಈ ಕಾಳಿಯವತಾರ ! (ಪಕರಾ. I. ೯೫೦). **ಹೊತ್ತು₆** : ೧. ಬಾನಿನ ನೆತ್ತಿಯನೇರಿತು ಹೊತ್ತು (ಕಾಂದಳ. ೦೨-೦೬); ನಿದ್ದೆ ತಿಳಿದಾಗ ಹೊತ್ತು ಏರಿತ್ತು (ಶಾಕಾಕ. ೨೧೫); ಹೊತ್ತತ್ತು ಬಂದತ್ತ ಕೊಡೆ ಹಿಡಿ (ಗಾದೆ). ೨. ಅರಸಿಂಗೆ ಎಲ್ಲಾ ಹೊತ್ತು ಹಿತವಂ ನುಡಿವ ಮನುಷ್ಯರ್ ಹಲವರುಂಟು (ಶಂಕಶಂ. ೦೦೨-೦೩); ಹೊತ್ತು ಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ ತೊತ್ತುಗೆಲಸವ ಮಾಡು (ಬಸವ. ೦೬೨): ಸಾಕು ಹೆಱತೆಗೆ ಘಾಯವಡೆದವಿವೇಕಿ ಮೈಮಱೆದಿದ್ದ ಹೊತ್ತಿದು (ಕುವ್ಯಾಕ. ೮೨-೩೦); ಹೊತ್ತಲ್ಲದ ಹೊತ್ತಿನಲ್ಲಿ ತೊತ್ತು ಮೈ ನೆರೆದಳು (ಗಾದೆ).

**ಪೊತ್ತುಪೊತ್ತು. ಹೊತ್ತುಹೊತ್ತು ಹೊತ್ತೊತ್ತು** (ದ್ವಿರುಕ್ತಿ) : ಪೊತ್ತುಪೊತ್ತಿಗೆ ಪೋಗಿ ಪೂಡಮುಟ್ಟಿ ನಸು ತಲೆಗುತ್ತಿ ನಾಣ್ಚುತ ನಲವಿನೊಳು (ಹಂಬ.೯-೮); ಹೊತ್ತುಹೊತ್ತಿಗೆ ಉಣ್ಣಬೇಕು (ಮುಂಬಯಿ. ೯-೩೩): ಹೊತ್ತುಹೊತ್ತಿಗೆ ಅನ್ನ ನೀರನು ಹವಣಿಸಿ ಮಕ್ಕಳ ಗಿಣಿಯಂತೆ ಸಾಕಿ (ಇಂಪಾಕ. ೦೬-೬೬); ಅವುಗಳನ್ನು ಹೊತ್ತೊತ್ತಿಗೆ ಆಡಿಸಿಕೊಂಡು ಬರುತ್ತಿದ್ದನು (ಕುಂಬಯ. ೨-೫೯). **ಹೊತ್ತಾಗು**=ತಡವಾಗು ; ವಿಳಂಬವಾಗು : ತುಂಬಾ `ಹೊತ್ತಾಯಿತಲ್ಲವೇ! (ಕಟ್ಟಿಕ. ೯೫). **ಹೊತ್ತಿಗೆ ಮುಂಚೆ**=ಸಮಯವಾಗುವುದಕ್ಕೆ ಮೊದಲೆ : ಬೇಗನೆ : ಅವರು ಹೊತ್ತಿಗೆ ಮುಂಚೆ ಊರು ಸೇರಬೇಕೆಂದು ಬೇಗ ಹೊರಟರು (ರೂಢಿ). **ಹೊತ್ತಿನರಸ** = ಸಮಯದ ಒಡೆಯ ; ಸೂರ್ಯ : ಹೊತ್ತಿನರಸ ನೆತ್ತಿಯ ಮೇಲೆ ಬಂದಾಗ ಕಟ್ಟಿಗೆಯ ಹೊರೆ ಹೊತ್ತು ಮಾರಯ್ಯ ಮನೆಗೆ ಬಂದ (ಶರಣ. ೩೯೯). **ಹೊತ್ತಿನುಲಿ** = ಸಮಯವಾಯಿತೆಂದು ಸೂಚಿಸುವ ಧ್ವನಿ : ಹೊತ್ತಿನುಲಿಯಾಗದೊಡೆ ಆಟ ಮೊದಲಾಗುವುದೆ ಹೊತ್ತೆತ್ತೋರ್ಪುದು ಸಾವಿನಾಟಗಳ ಕೊನೆಯು (ಕಾಬರ. ೮೫-೦೬೩). **ಹೊತ್ತು ಕಂತು** = ಸೂರ್ಯ ಮುಳುಗು ; ಸೂರ್ಯಾಸ್ತವಾಗು : ಹೊತ್ತುಕಂತಿ ಎರಡು ಗಳಿಗೆ ಕಳೆದಿತ್ತು (ಕದ್ಮಸ. ೦೯) ; ಹೊತ್ತು ಕಂತಿ ಎರಡುಗಳಿಗೆ ಕೂಡ ಆಗಲಿಲ್ಲವಂತೆ (ಕಟ್ಟಿಕ. ೯೯). **ಹೊತ್ತುಗೊತ್ತು** = ವೇಳೆ ಮತ್ತು ಸ್ಥಳ : ಹೊತ್ತಿದ್ದಂತೆ . ಹೊತ್ತಿಲ್ಲ. ಹೊತ್ತು ಗೊತ್ತು — ಒಂದೇ ಆಗಿರುವುದೂ ಇಲ್ಲ (ಬಿಡ್ರವೂ. ೨೨೫) ; ನಾವಿರಲು ಹೊಳೆವುದು ಹೊತ್ತು ಗೊತ್ತಿನ ಗತ್ತು ನಾ ಮೈಯು ಎನಲು ದಿಕ್ಕಾಲ ಕಡೆ (ಮುಳ್ತಕಂ. ೯-೧೮). **ಹೊತ್ತು ತುಂಬು** = ಹೆರಿಗೆಯ ಸಮಯವಾಗು ; ಪ್ರಸವಕಾಲ ಬರು : ಹೊತ್ತು ತುಂಬಿದವಳು ತನ್ನ ನಿತ್ತರಿಸುವ ಬೇನೆಯನಱಿವಳು (ಪೋಗಿಪೂ. ೧೯-೬೫). **ಹೊತ್ತು ನೆತ್ತಿಗೇರು** = ಸೂರ್ಯ ನಟ್ಟನಡುವಿಗೆ ಬರು: ಮಧ್ಯಾಹ್ನವಾಗು : ಹೊತ್ತು ನೆತ್ತಿಗೇರಿದೆ. ಬಿಸಿಲು ಉರಿಯುತ್ತಿದೆ (ಕಳುವು. ೨೩೯) ; ನಾವು . . . ಮರಳಿ ಬರುವ ವೇಳೆಗೆ ಹೊತ್ತು ನೆತ್ತಿಗೇರಿತ್ತು (ಕಟ್ಟಿಕ. ೦೫೦). **ಹೊತ್ತು ಬರು** = (ಸಾವು, ಕೇಡು ಇತ್ಯಾದಿಗಳ) ಸಮಯ ಸನ್ನಿಹಿತವಾಗು, ಸಮೀಪಿಸು : ಕೌರವರಿಗೆ ಹೊತ್ತು ಬಂದಿದೆ ; ಅವರು ನಾಯಿನರಿಗಳ ಪಾಲಾಗಿ ಒರಗುತ್ತಾರೆ (ಪಕಥಾ. ೨೯೬). **ಹೊತ್ತು ಮಾಡು** = ತಡಮಾಡು ; ವಿಳಂಬಿಸು : ಹೊತ್ತು ಮಾಡಿ ಆಗಬೇಕಾದುದೇನು? ಬಹಳ ದೂರ ಹೋಗಬೇಕು (ದೀಪಿಕಾ. ೩) ; ಹೊಳೆಯಲ್ಲಿ ಬಹಳ ಹೊತ್ತು ಮಾಡಬೇಡಿ (ಕಟ್ಟಿಕ. ೩೯). **ಹೊತ್ತು ಮೀರು** = ಅವಧಿ ತೀರು ; ತಡವಾಗು : ಹೊತ್ತು ಮೀರಿದೆ (ಕಳುವು. ೦೯೨) ; ಹೊತ್ತು ಮೀರಿದರೆ ತೊತ್ತು ಹೆತ್ತವಳಾದಾಳೇ ? (ಗಾದೆ). **ಹೊತ್ತು ಮುಣುಗು**, **ಹೊತ್ತು ಮುಳುಗು** = ಹೊತ್ತು ಕಂತು : ಹೊತ್ತು ಮುಣುಗುತ ಬಂತು ಬತ್ತಲೆಯು ಜಗಕೆಲ್ಲ (ಕಪ್ಪಕಾ. ೨೯೯) ; ಸೂಳೆಪ್ಪ ಅವ. ಹೊತ್ತು ಮುಳುಗುವಾಗ ಕಳ್ಳು ಕುಡಿದು ಮಲಗಿವರೆ ಹೊತ್ತು ಮೂಡುವಾಗಲೇ ಏಳುವವ (ಮಕವು. ೩೯). **ಹೊತ್ತು ಮೂಡು** = ಬೆಳಗಾಗು ; ಸೂರ್ಯೋದಯವಾಗು : ಸೂರಪ್ಪ . . . ಹೊತ್ತು ಮೂಡುವಾಗಲೇ ಏಳುವವ (ಮಕವು. ೩೯). **ಹೊತ್ತು ಸಾಧಿಸು**=ಸಮಯ ಕಾಯು ; ಸಮಯ ಸಾಧಿಸು : ಅವನು ಹೊತ್ತು ಸಾಧಿಸಿಕೊಂಡಿದ್ದು ತನ್ನ ಸೇಡು ತೀರಿಸಿಕೊಂಡ (ರೂಢಿ). **ಹೊತ್ತು ಹಾರು** = (ವೇಗವಾಗಿ) ಸಮಯ ಕಳೆ : ಕನಸಿನ ಭ್ರಮೆಯಲ್ಲಿ ಹೊತ್ತು ಹಾರಿಹೋಗುವುದನ್ನು ಮರೆಯುತ್ತೇನೆ (ಕನ್ನೇರ್ಮಿ. ೨). **ಹೊತ್ತು ಹುಟ್ಟು** = ಬೆಳಗಾಗು ; ಸೂರ್ಯೋದಯವಾಗು : ಹೊತ್ತು ಹುಟ್ಟುವುದಕ್ಕೆ ಮುನ್ನವೆ ಮಾದಣ್ಣ 'ಸ್ವಂತಮನೆ' ಯ ಮೇಲಿನಂವ ಹೆಂಚುಗಳನ್ನು ಕೊಡಹಿ . . . ಹಾಕುತ್ತಿದ್ದ (ಕಳುವು. ೦೫೨).

[ದೇ. ೬ತಮಿ. ಪೊೞುತು, ಪೋಟ್ಟು, ಪೋತು ; ಮಲ. ಪೞುತು. ಪೊೞುತು, ಪೋತು, ಪೋಳ್ ; ತುಳು. ಪೊತ್ತುರ್ ; ಕೊಡ. ಪೋದೀ. ಪೊದೀ ; ತೆಲು. ಪೊದ್ದು, ಪೊದ್ದು ; ಕೋಲಾ. ಪೊದ್ ; ನಾಯ್ಕಿ. ಪೊದ್ದ್ ; ಗೊಂಡಿ. ಪೊದ್ರ್]

**ಪೊಟ್ಟುಗಳೆ, ಪೊತ್ತುಗಳೆ, ಹೊತ್ತುಕಳೆ, ಹೊತ್ತುಗಳೆ** (ಕ್ರಿ). ಕಾಲ ಕಳೆ ; ಸಮಯಹರಣಮಾಡು : ತದ್ರಾಜಹಂಸಂ ನಿರಾಕುಳಮಿಮಾಟಕ್ಕೆಗಳಿಂದೆ ಪೊಟ್ಟುಗಳೆವಂ ಸಂಸಾರಸಾರೋದಯಂ (ಆದಿಪು. ೦-೮೯); ಮುನ್ನಮೊಳ್ಪಿನಿಂ ನೆಗಟ್ದ ಮಹಾಪುರುಷರ ಕಥೆಗಳುಮಂ ತಾ ಸ್ಮರಿಸುತ್ತುಂ ಪೊಟ್ಟುಗಳೆಯುತೀ ತೆಱದಿಂದಂ (ರಹರ್ಣಕ್ಷು. ೩-೨೬೫); ೯ವಿ ಸಂಗೋಷ್ಠಿಯಿನೊರ್ವ ... ಶಸ್ತ್ರವರಾಭ್ಯಾಸದಿನೊರ್ವ ಪೊಟ್ಟುಗಳೆವಂ ವಿಶ್ವಂಭರೋರ್ವೀಶ್ವರಂ (ಕುಸುಮಾ. ೩-೨೯). **ಪೊತ್ತುಗಳೆ** : ಒರ್ವ ಲೀಲಾವಿಲೋಕನದಿಂ ಮಾಣದೆ ಪೋಗಿ ಪೊತ್ತು[ಪಾಠಾಂ. ಟ್ಟು]ಗಳೆವಂ ನಿಚ್ಚಂ (ಸುಕುಮಾ. ೯-೪೦): ಪೊತ್ತುಗ[ಪಾಠಾಂ. ಕ]ಳೆಯದೆ ತನ್ನ ತನುವನೆರಡಾಗಿ ಮಸೆವೆತ್ತ ಕರಪತ್ರದಿಂ ಸೀಳ್ವುದೆಂದಾಡಾಡ್ಳಪಿಸಿ (ಕೃಪಾಳು. ೨೬-೫೫). **ಹೊತ್ತುಕಳೆ** : ಹೊತ್ತುಕಳೆಯಲಾರದೆ . . . ಬಟ್ಟೆಯನ್ನು ನೀರಲ್ಲಿ ಅದ್ದಿ ಒಗೆಯಲಾರಂಭಿಸಿದೆ (ಕಟ್ಟಿಕ. ೩೫). **ಹೊತ್ತುಗಳೆ** : ಒಬ್ಬನ ಮನೆಯಲ್ಲುಂಡು ಹೊತ್ತುಗಳೆವೆ ಒಬ್ಬನ ಮನೆಯಾಲಾಡಲೊಂದು ಗಳಿಸಿದೆ (ಜಕಕ. ೬೪೧); ಹೊತ್ತುಗಳೆಯದೆ ಎನ್ನ ಕಳುಹೆಂದ (ಕುಹ್ಯಾಕ್ರೋ. ೯-೯೫); ಆ ವೆಣ್ಗಳೊಡನೆ ಹೊತ್ತುಗಳೆಯಲೋಸುಗ ಕೇಳಿದಳಱುವತ್ತುನಾಲ್ಕು ವಿದ್ಯೆಗಳ (ಮೋಹಕ. ೨೬-೩೬). [ಪೊಟ್ಟು + ಕಳೆ₁]

**ಪೊಟ್ಟುಪೋಗು** (ನಾ). ಕಾಲ ಕಳೆಯುವಿಕೆ ; **ಹೊತ್ತು ಹೋಗುವಿಕೆ** : ಪೊಟ್ಟುಪೋಗಿಂಗಮುಟ್ಟಿಗಮಾಡುವ ತಮ್ಮುತಿರ್ವರುಂ **ಪಲಗೆ ಸಾಯಿರ**

ಗದ್ಯಾಣದ ಪೊನ್ನೀ ಸಾಲ್ಗೆವುಗ್ಗಳಂ ಬೇಡೆಂದು ದುರ್ಯೋಧನಂ . . . ಪಾಸಂಗೆಯುಂ ಪೊರಳ್ದು (ಪಂಪಭಾ. ೬-೭೦ ವ) ; [ಪೊಟ್ಟುವೋಗಿಂಗೆ . . . ಪೊನ್ನು]ಯ್ಯಲನೇಬಿ . . . ತರಳಾಕ್ಷಿಯಾಡುತುವಿರ್ಪನಂ (ರಘುಪು. ೬-೨೬). [ಪೊಟ್ಟು + ಪೋಗು₁]

**ಪೊಟ್ಟುದ** 'ಪೊದರ್ದ' ನೋ.

**ಪೊಟ್ಟುಗೆ** 'ಪೊದರ್ಗೆ' ನೋ.

**ಪೊಟ್ಟು** (ನಾ). ಒಂದು ಸ್ಥಳದ ಹೆಸರು : ಪೊಟ್ಟು ವಿನೀತೀಶ್ವರರ್ಗ್ಗಂ ಸರ್ವ್ವ ಪರಿಹಾರಂ ಕೊಟ್ಟರ್ (ಎಕ. IV. ಹುಣಸೂ. ೬೩-೩ ; 750); ಕವುಂಗಳಿ ಕಸ್ತಿಯರ್ಗ್ಗೆ ಪೊಟ್ಟುದ ಹಡದೆನನ್ನಾಕರ ವಾಗನಯ್ಯಮ್ಮದೆನನ್ನಾಕರ ವಾಗಂ . . . ಕೊಟ್ಟ ವಣ್ಣು (ಎಕ. X. ಕೋಲಾರ. ೯೦-೯೯ ; 903). [?]

**ಪೋ₁, ಪೋಗು₁, ಹೋಗು₁** (ಕ್ರಿ). ಪೋದ, ಹೋದ (ಭೂತಕೃ). ಪೋಪ, ಹೋಪ (ಭವಿಕೃ). ೧. ಇರುವ ಕಡೆಯಿಂದ ಬೇರೆಯ ಕಡೆಗೆ ಚಲಿಸು ; ತೆರಳು ; ಮುಂದೆ ನಡೆ ; ಗಮಿಸು : ಎಲೆ ಪಿಱಿಕಿ ಪೋ ಪಿಟ್ಟುದೆ ತೊಲಗು (ಪಂಪಭಾ. ೯-೪೩) ; ಮಾರ್ಕೊಳ್ಳದೆ ಪೋ ನೀನ್ (ರಘುಪು. ೨-೧೬೯) ; ನಾಗರಹಾವೆ . . . ಎರಗುವೆ ನಿನಗೆ, ಈಗಲೆ ಹೊರಗೆ ಪೋ ಪೋ ಪೋ (ಪಂಪಭ. ೦೩೨). **ಪೋಗು₁** : ೧. "ಪೋಗು—ಗಮನೇ" (ಶಮದಾ); ಅನ್ನೆ ಸಯ್ಯನೆ ಪೋಗಿ (ಇಐ. XII, ೦೬-೪೮ : 813) ; ಅರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಸಾ. ೦೬೯ ಕೂದ್ರ್ವ) ; ನೀಂ ಬಾ ಪೋಪಂ (ಪಂಪಭಾ. ೦.೭೦) ; ಬೇಲೂರ್ಗೆ ಪೋದ ನಲ್ಲರ ನೆನೆದು ದೂಱುಸುವ ನೀಱೆಯರ (ಕಮ್ಮಕಾ. ೩೯). ೨. ಸಾಗು ; ಕಳೆ; ದಾಟು : ವರಿಷಪ್ಪೋ[ಗ] × × × ನೆಯ ವರಿಷ (ಸೌಇಇ. XI-i, ೭-೩ ; 837) ; ಪೋದ ಭವಂಗಳಂ ನೆನೆಪಿನಂ (ಆದಿಪು. ೩ ೪೬) ; ಎನಗೀ ಜನ್ಮವಿದಿಂತೆ ಬಂಜೆತನದಿಂದಂ ಪೋಕುಮೋ (ಸುಕುಮಾ. ೯-೦೦೯). ೩. ನಿವಾರಣೆಯಾಗು ; ಪರಿಹಾರವಾಗು : ಆ ದೀನಾನಾಥರ್ಗೆ ವೃದ್ಧ ದ್ವಿಜಮುನಿನಿಕರಕ್ಕಂದೆಡರ್ ಪೋಪಿನಂ ಕಃ ಕೇನಾರ್ಥೀ ಕೋ ದರಿದ್ರಃ ಎನ್ನುತುಮನಿತುಮಂ ಧರ್ಮಜಂ ಸೂಱೆಗೊಟ್ಟಂ (ಪಂಪಭಾ. ೬-೪೦) ; ಎನಿತೆನಿತು ಚಳಿ ಪೋಗಲನಿತನಿತು ಪಸಿವಡಸೆ (ಇಳೆರ. ದೀ. ೩೩-೦೩). ೪. ನಾಶವಾಗು ; ಸಾಯು : "ಬೀತುದು ಸವೆದುದೆನಲ್ ಪೋದ್ದ ದೆಂಬರು" (ಶಶಬ. ೦೭೦): ಈಗಲೋ ಇನ್ನಾವಾಗಲೋ ಈ ತನುವು ಪೋಗದಿರದು (ಜಗದಾ. ೯೯). ೫. ಕಾಣದಾಗು : ಉದಿಸಿದ ದಶದಿವಸದ ಶಿಶು ಪೋಪಾಗ ವಿಧಿ ವಿಧಿಯನು ವಿಚಾಱಬಹುದೇ (ಮೋಹತ. ೪ ೬೩). **ಹೋಗು₁** : ೧. ನನ್ನಿಯ ಗಂಗನ ಪರಿ ಬನ್ದು ಬೆಳ್ಗೆಱೆಯಂ ಕಾನೂರ್ದು ಮನಿಱಿದು ಹೊ ಗೆ (ಎಕ. XII, ತಿಪಟೂ. ೩೩-೨ ; ಸು. 880); ಇದಱಿಂದವೊಂದು ಜನನಾ ನಿನಗೆದೊರಕಿತ್ತು ಮಾದದಿಂದ ಹೋಗಯ್ಯ ಜನನವಂ ನೀ ಹೊತ್ತು (ಬಸವ. ೦-೬೪); ಒಗತನ ಬಿಟ್ಟು ಹೋಹಾಗ ಹಾಲಿಗೆ ಹೆಪ್ಪ ಪೊಗೆದಿಕ್ಕದವರಾರುಂಟು (ವೋಹತ. ೯-೦೯); ಹೋಗು ಎನ್ನಲಾರದೆ ಹೊಗೆ ಹಾಕಿದರು (ಗಾದೆ). ೨. ಆಯಿತ್ತ ಉದಯುವಾನ ಹೋಯಿತ್ತ ಅಸ್ತಮಾನ (ಅಪಶಂ. ೦೦-೪೦); ವರಿಷ ಹೋದಿಬಳಿಕ ವಿರೋಧಿಸಂವತ್ಸರದ ಕನ್ನೆಮಾಸ (ಶ್ಯಾಶಾ. ೦೯೩೩, ೪೧-೦೪ ; 1177): ಹೋದ ದಿಪಸಂಗಳಲಿ ಕಾಳೆಗವಾದು ದಂಡಿನ ಭೀಷ್ಮರೊಡನೆ ವಿವಾದಕಾರಣ ಬೇಡಿಕೊಳಬೇಕುದು ನದೀಸುತನ (ಕುಮಾರವ್ಯಾ. ೦-೦೬). ೩. ಇಂದ್ರಿಯದ ಪೂರ್ವಾಶ್ರಯವು ಗುರುವಿನಿಂದ ಹೋಗದು ಅಂಗದಿಂದ ಹೋಗದು ತನ್ನಿಂದಹುದು ತನ್ನಿಂದ ಹೋಹುದು (ಶರಣಶ. ೪-೦೪); ಕಾಱುವುದ್ದಿಗೆ ಹೋಹುದೇ ಕ್ಷಮೆಸ ವವನಿಪನ (ಕುಮಾರವ. ೦-೬): ಹೋದುದು ಮನದುಮ್ಮಳವು ಮಧುಸೂದನಗೆ (ಜೈಮಿಭಾ. ೩೬-೬೪). ೪. ಹಗೆಯರಲಿ ಹತವಾದನೆ ಹಾ . . . ಮೊಗವ ಕಾಣದೆ ಹೋದನೇ ಎನಗೇನು ಗತಿಯೆಂದ (ಕುಮಾರವ್ಯಾ. ೯-೨೦); ಪುನರಪಿ ಕಾದ ಕಳುಹುವುದು . . . ರಣದಲಿ ನಿನ್ನ ಹಿರಿಯ ಮಗ ಹೋದನೆನಿಸುವನು (ಜೈಮಿಭಾ. ೩೬-೨). ೬. ಮರಳು ; ಹಿಮ್ಮೆಟ್ಟು ; ಹಿಂತಿರುಗು ; ಬಿಟ್ಟನು . . . ಕೌರವನೃಪತಿ ರಥವನು ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚನತಿರಥರ (ಕುಮಾರವ್ಯಾ. ೨-೭೦) ; ಕೆಲರು ಹಾಯಿತು ಕೆಲರು ಹೋಯಿತು ಕೆಲವರೋಡಿತು ಕೆಲವರರ್ದತು (ಜೈಮಿಭಾ. ೩೨-೨೩), ಹೊಸ ದೋಣಿ ಯೇದಾಜೆ ಹೋಹೆದು ಬೇಡಿಗೆ ಒಮ್ಮೆ ಸಾಹಸವನು ಮಾಡು (ಇಂಶಾಶ. ೭೨-೩೦). ೭. ನಂದು ; ಆರು : ಮಳೆ ಬಂದಾಗ ಹೋಗಿದ್ದ ದೀಪ ಈಗ ಬಂತು (ಆಡು). ೮. ಆಗು ; ಜರುಗು ; ನಡೆ : ನಡ[ವ]ಹಾಲ ಧಾರೆಗು ಸಹ ಅಕ್ಕಿ ಮೂಡೆ ೧೦ ತಿಂಗಳು ತಿಂಗಳು ತಪ್ಪದೆ ತಿಂಗಳಲ್ಲಿ ೧೭ ಹೋಹಾಗ ನಡವ ವಾರ ೧ ಮತ್ತಂ ಇಪ್ಪತ್ತಯಿದು ೨೫ ಹೋಹಾಗ ನಡವ ವಾರ ೧ ಅಂತು ತಿಂಗಳಲ್ಲಿ ಯೆರಡುವಾರ ಸಮುದಾಯ ನಡವುದಕ್ಕೆ ಅಕ್ಕಿ ಮೂಡೆವು ೧೨ (ಎಇ. XX, ೯೪-೪೯ : 1556). ೯. ನೆರೆ ; ಕೂಡು ; ಸಂಭೋಗಿಸು : ದಾಸಿಯನು ಹೋಗುವಗೆ ವೀಸ ಹತ್ತದು ಕೈಗೆ (ಸರ್ವಜ್ಞ. ೧೬೦೭).

**ಪೋಪೋಗು, ಪೋವೋಗು, ಹೋಗಹೋಗು, ಹೋಗುಹೋಗು** (ದ್ವಿರುಕ್ತಿ): ಪುಲಿಪುಲಿ ಪಂಪಾ ಪೋಪೋಗು (ಕಬಿರಾ. ೨-೨೬) ; ಕೈವಲ್ಯಂ ಕವಿಗೆಂದೆ ಶಿವ ಬಂದ ಪರಮಾನನ್ದಂ ದಲತ್ತಣ್ಗೆವಂ ಪೋವೋಗರ್ ಹಾ ! (ಸಂಗತ. ೩೦-೦೦೨); ಹೋಗಹೋಗಲು ಕಾಣ್ಬೆ ಮುಂದಣ ಭಾಗದಲಿ ಲಿಂಗವಂ (ಬಸವಪು. ೦೯.೪) ; ಹೋಗುಹೋಗ್ಯ ನೀನೆಮಗೆ ಬರಲಾಗದಲ್ಲಿಗೆ (ಬಸವ. ೩೭-೧೩). **ಪೋಬರವು** = ಹೋಗಿ ಬರುವುದು : ಅರಸನ ಪುಟ್ಟಿದಿಂಬಟೀಯಮಿಾ ದಿವಿಜಾಳಿಗೆ ಮಾಣ್ದುದಿಲ್ಲ ಪೋಬರವು (ಅನಂತ. ೯-೭೪). **ಹೋಗಗೊಡು** = ಹೋಗಲು ಅನುಮತಿಯನ್ನು ಕೊಡು ; ಹೋಗಬಿಡು : ನನಗೆ ಹೇಳದೆ ಹೋಹಿರಾದರೆ ಹೋಗಗೊ[ಡೆಂ. ಗು]ಡನು (ಸಾಳ್ವಭಾ. ೨೦-೦೦) ; ಬೀಳ್ಕೊಡು, ಕಳುಹು, ಅಪ್ಪಣೆ ಕೊಡು, ಹೋಗಗೊಡು (ಶಂಮುಹು. ೯೯). 'ಪೋಗೊಡು' ಪರಾ. **ಹೋಗಬಿಡು** = ಹೋಗಗೊಡು : ಹೋಗಬಿಟ್ಟು ಜಾಗವುವ ಹಿಂದೆಯಾಡುವನ ಬಾಯಲಿ ಮೆಟ್ಟಿ ಹುಡಿ ಹೊಯ್ಯದೆ ಮಾಣ್ಬನೆ (ಬಸವ. ೪೧೯) ; ಈಗಳೆರ್ದಂತೀ ಪಶುಗಳು ಹೋಗಬಿಡಿ ನೀವು (ಬಸವ. ೬೦-೨೩) ; ಅರರೆ ನರ ಪೈಸರಿಸಿದನೊ ಪೈಸರಿಸಿದನೊ ಘಡ ಹೋಗಬಿಡದಿರಿ (ಕುಮಾರವ್ಯಾ. ೦೪-೦೩). **ಹೋಗಲಾಡಿಸು** = ೧. ಇಲ್ಲದಂತೆ ಮಾಡು ; ಹೋಗುವಂತೆ ಮಾಡು : ಪರಿಕರ್ಮನ್, ಅಂಗಸಂಸ್ಕಾರಃ—೨ ಶರೀರದ ಕೊಳೆ ಹೋಗಲಾಡಿಸಿ ಸೊಗಸು ಮಾಡುವಿಕೆ (ಸಿದ್ಧಾಂತ. ೨೦೩) ; ಎಣ್ಣೆಪಸೆಯಿದ್ದರೆ ಅದನ್ನು ಹೋಗಲಾಡಿಸಲು ಸಾಬೂನನ್ನುಪಯೋಗಿಸಬೇಕು (ಅಡುಗೆ. ೪೩). ೨. ಪರಿಹರಿಸು ; ನಿವಾರಿಸು ; ಕಳೆ : ಅವರವರ ಹೊಡಬಾಳು ಅವರವರೇ ಹೋಗಲಾಡಿಸಿಕೊಳ್ಳಬೇಕು (ಶಂಗಾಳ್ವ. ೨೦೯). ೩. ನಾಶಮಾಡು ; ಹಾಳುಮಾಡು : ತಲತಲಾಂತರದಿಂದ ಬಂದಿದ್ದ ಆಸ್ತಿಯನ್ನು ಆತ ಅಲ್ಪಕಾಲದಲ್ಲೇ ಹೋಗಲಾಡಿಸಿಬಿಟ್ಟ (ಆಡು). ೪. ಕೊಲ್ಲು ; ಸಾಯಿಸು : (ಆ). **ಹೋಗಲಾಡು** = ೧. ಹೋಗಗೊಡು : (ಆ). ೨. ಕಳೆದುಕೊಳ್ಳು ; ನೀಗು : (ಆ). ೩. ನಿರರ್ಥಕಗೊಳಿಸು ; ಹುಸಿಮಾಡು : ನಾರದಮುನಿ ಮಹಾರಾಯ ಹೋಗಲಾಡುವನಲ್ಲ ಮಾತ (ಮೋಹತ. ೩೩-೨೯). **ಹೋಗಲೀಯು** = ಹೋಗಗೊಡು : ಬಂದ ಮನವ ನಾನೆಂತು ನಂಬುವೆನಯ್ಯಾ . . . ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯಾ (ಬಸವ. ೩೩). **ಹೋಗಲೀಸು, ಹೋಗಲಿಸು** = ಹೋಗಗೊಡು : ಹೋವಹೆನೆಂದರೆ ಒಳಕಾವಲವರು ಹೊಱಕಾವಲವರು ಹೋಗಲೀಸರು (ಚಿಪವ. ೪-೨); ಭೀಮಸೇನನು ನಮಗೆದುರಾಗಿ ಬರುತಲಿದಾನೆ ; ಹೋಗಲೀಸದೆ ತಬ್ಬ

ಹಿಡಿದು ಸಂಹರಿಸೋಣ (ಕೃವಾಲಿ. ೧೦೭) ; ದುರ್ಯೋಧನನನ್ನು ಯುದ್ಧಕ್ಕೆ ಹೋಗಲಿಸಬೇಡ (ಭೀಷ್ಮಕ. ೧೨೨). **ಹೋಗಿಬರು, ಹೋಬರು**=೧. ತೆರಳು ; ಹೊರಡು ; ಬೀಳ್ಕೊಳ್ಳು : ವನಚರವೆ ನಾ ಹೋಗಿಬಹನೇ ನಿಮ್ಮನುಜ್ಞೆಯಲಿ (ಕುಮಾರ. ೭-೧೭) ; ನನಗೆ ಅನುಜ್ಞೆಯನ್ನು ಕೊಡು ; ಹೋಗಿ ಬರುವೆನು (ಕಂಳ. ೯೯). ೨. ಹೋಗು ಮತ್ತು ಬರು : ಶ್ರೀಮಂತರ ಹರ್ಮ್ಯಕ್ಕೆ ಇರುವೆಯೂ ಹೋಬರಲಾರದಂತೆ ಮುತ್ತಿಗೆಯಿಟ್ಟು ಏತಕ್ಕಾದರೂ ಸನ್ನದ್ಧನಾಗಿರು (ಛತ್ರ. ೧೭೯-೦೨). **ಹೋಗಿಬಿಡು**=೧. ಇಲ್ಲವಾಗು : ಮೃಣಾಳಿನಿಯ ಮೇಲೆ ಪ್ರೀತಿ ಹೋಗಿ ಬಿಟ್ಟಿತೆಂದೂ ತಿಳಿದು ಕೊಂಡಳು (ದುರ್ಗೇಶ. ೧೬೦). ೨. ಸಾಯು ; ಮರಣ ಹೊಂದು : ಗಂಡನ ಕಣ್ಣುಮುಂದೆ ಹೋಗಿಬಿಡುವುದು ಹೆಂಗಸಿಗೆ ಪರಮಭಾಗ್ಯ (ಕಕಶಾ. ೯೩) ; ನಮ್ಮ ಚಿಕ್ಕಪ್ಪ ಹೋಗಿ ಬಿಟ್ಟರು (ಮುರುಳಿ. ೧೭). **ಹೋದ ಜೀವ ಬರು**=ಹೊರಟು ಹೋದ ಪ್ರಾಣ ಮರಳಿ ಬಂದಷ್ಟು ಸಂತೋಷವಾಗು,— ಸಮಾಧಾನವಾಗು : ಕಾಳು ಬಂದು ಎಲ್ಲವನ್ನೂ ಹೇಳಿದ ಮೇಲೆ ಹೋದ ಜೀವ ಬಂದಂತಾಯಿತು (ಗಾಂಧಿ. ೬ ಕಥಾಸಾರ) ; ಬಿಸಿಲಿನಲ್ಲಿ ನಡೆದು ಬಂದು ಎಳನೀರು ಕುಡಿದ ಮೇಲೆ ಹೋದ ಜೀವ ಬಂತು (ರೂಢಿ). **ಹೋದ ಹೊಲಬು**=ನಡೆದು ಬಂದ ದಾರಿ ; ಸಂಪ್ರದಾಯ ; ಪರಂಪರೆ : ಹೋದ ಹೊಲಬಲ್ಲದಱೊಳಗೆ ದುರ್ಭೇದತಪವೇ ಹೊಗೆವುತದೆ ಹೊಳ್ವಾದವೆಮ್ಮ ಸಮಾಧಿ ಸ್ಮರಣೆ ಶಮದಮಾದಿಗಳು (ಕುಮಾರ. ೩-೨೦). ☞ ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ.

[ದೇ.೩ ತಮಿ. ಪೋ, ಪೋಕು, ಪೋಕ್ಕು ; ಮಲ. ಪೋಕ ; ತೆಲು. ಪೋವು]

**ಪೋ$_3$, ಹೋಗ್ರು$_3$** (ಅ). ಛೀ, ತೆಗೆ, ಬಿಡು ಎಂಬರ್ಥದ ಉದ್ಗಾರ ವಾಚಕಪದ : ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆನಾನ್ (ಶಂಶಾ. ೯-೩೬) ; ಪೋ ಮಾಣ ಧರ್ಮಜಂ ಗಡ ಭೀಮಂ ಗಡ (ಗದಾಯು. ೯-೧೩) ; ಸತ್ಪಾತ್ರದೊಳ್ ಧನಮಂ ಪೋ ನಲಿವಂದದಿಂ ನಲಿವನೇ ಧನ್ಯಂ ಧನಪ್ರಾಪ್ತಿಯೊಳ್ (ಶಂಪಾಮ. ೬-೧೦೭). **ಹೋಗ್ರು$_3$** : ಜನಪತಿಯ ಕಟ್ಟಳೆವಿಯಲಿ ರವಿತನುಜನಡ್ಡೈಸಿದನು ಫಡ ಹೋಗೆನುತ ನಾರಾಚದಲಿ ಮುಸುಕಿದನರ್ಜುನಾತ್ಮಜನ (ಕುಮಾರದ್ರೋ. ೬-೯೯) ; ನಿನ್ನಯ ಜೋಡಿಗಾರುಂಟವರ ಕರೆ ಮಾತಾಡುವೆವು ಹೋಗೆನುತ ಗಹಗಹಿಸಿದನು ಕೈ ಹೊಯಿದು (ಅವಂಶಾ. ೧-೯-೨೨). [< ಪೋ$_1$]

**ಪೋಂಚಿ** 'ಪೌಂಚಿ' ನೋ.

**ಪೋಂಛಾವಣೆ** (ನಾ). ಸೇರಿಸುವಿಕೆ ; ಕೂಡಿಸುವಿಕೆ; ಜೋಡಣೆ : ಒಂದಕ್ಕೆ ನಾಲ್ಕುಮಾತುಗಳನ್ನು ಪೋಂಛಾವಣೆ ಮಾಡಿ ತಾನೂ ಅಳುತ್ತ ಕುಳಿತಳು (ಮುಹಾಗ. ೨೯೦). [< ಪೌಂಚಾಯಿಸು + — ಅಣೆ$_4$]

**ಪೋಂತು,** ಪೊತ್ತ$_1$, ಪೋತು, ಹೋತ$_2$, ಹೋತು$_2$ (ನಾ). ಗಂಡು ಮೇಕೆ; ಗಂಡಾಡು : ಪೋಂತಿನ ಮೂತ್ರದೊಳಳ್ಳಿಯನರೆದು ನಸ್ಯಮಂ ಮಾಡೆ ಪಿಂಗುಗುಂ ಗ್ರಹನಿವಹು (ಲೋಕೋಪ. ೧೧-೯೬); ಮುನ್ನೊಗೆದಾಡಿನ ಬಸಿಱೊಳ್ ಬಂದುದು ಪೋಂತಿನ ರೂಪಿಂ ಬೆಳೆದು ಬಲಿಕ ಮದೋನ್ಮತ್ತಂ (ಜುಕೋಶ. ೩-೩೩); ಸೂಕರದ . . . ಪೋಂತ್ರಿನ ವಿಗಂಧಬಂಧುರವಿಣ್ಮೂತ್ರಪ್ರಕಾರ ಗಂಧದ ಶ್ವಾನೀಕಂ ಭಯಹಾನಿಶೋಕ ರುಷ್ಮರಣಕರಂ (ಅಕ್ಕಶಾ. ೩-೨೦). **ಪೋತ$_1$** : 'ತಿಂಡಿಪೋತ' ಪರಾ. **ಪೋತು** : ಪೋತಿನ ಮೂತ್ರದೊಳಂ ಪರಿಮರ್ದಿಸಿ ಕುಡಿಸಲುರಗಕ್ಷತಿವಿಷಮಂಟಗುಂ (ಖಕುದ. ೩-೬೨); ಪೋತು ಮಂಗಂ ಮೊಲಂ . . . ನೀಡುಂ ಮೇಗಂಗಳು ತಾಳ್ದಪವು (ಹಾರಾಸ್ಮ. ೯-೧೧-೩೩). **ಹೋತ$_2$** : ಹೋತನ ಕೊಂದು ಹೋಮವ ಬೇಳ ಚಾಂಡಾಲರಾಗ ಹೇಳಿತ್ತೇ ವೇದ (ಗಣಶಾ. ೧೩೬-೧); ಯಾತದ ಮೇಲೆ ಹೋತ ಮೇವುದ ಕಂಡೆ (ಪುರಂದ. ೨-೧೨-೨); ಮಾರಿಯ ಕಣ್ಣು ಹೋತನ ಮೇಲೆ (ಗಾದೆ). **ಹೋತು$_2$** : "ಅಜಃ . . . ಛಾಗಃ, ಛಗಲಕಃ, ಛಗಃ — ಈ ೬ ಹೋತು" (ಹಲಾಯು. ೯೩-೧೨೨); ತಲೆ ಬೋಳಿಸಿ ಹೋತಂ [ಪಾಠಾಂ. ಹೋಂತಂ] ಸಿಡಿದಲೆಗುಡುವರ್ (ಸಮಶ. ೯-೨೨೦); ವೇದಪುರಾಣ ಹೋತಿಂಗೆ ಮಾರಿ (ಬಸವ. ೩೭೨); ಹೋತಿನ ಕೊರಳೊಳಗೆ ಮೊಲೆ ಇದ್ದರೇನು (ಪುರಂದ. ೧-೧೩೯ ಪಲ್ಲವಿ).

**ಪೊತ್ತಿಮಕ್ಕಳ್, ಪೊತ್ತಿನ್ಮಕ್ಕಳ್, ಪೊತ್ತಿರ್ಮಕ್ಕಳ್, ಪೊತ್ತಿರ್ಮಕ್ಕಳು**= ಗಂಡು ಮಕ್ಕಳು (?) : ಇದೊನ್ಕಡಿಸಿದೊನ್ಪಂಚಮಹಾಪಾತಕನಕ್ಕು ತನ್ನೊಕ್ಕಲುಳ್ ಪೊತ್ತಿಮಕ್ಕಳ್ಪುಟ್ಟದೆ ಕಿಡುಗ (ಎಕ. III, ಮೈಸೂರು. ೩೩-೨೦ ; ಸು. 740) ; ಇದಾನಳಿತ್ತೊನ್ಪಂಚಮಹಾಪಾತಕನಾಗಿ ದಿಟ್ಟಗಲುಣ್ಣು ಕೊಟ್ಟತೇದು ಆಟ್ಟುವೆಣ್ಣತ್ರಲವೂಸುವೋನಕ್ಕು ಒಕ್ಕಲುಳೊತ್ತಿಮಕ್ಕಳ್ಪುಟ್ಟದೆ ಕಿಡುಗ (ಎಕ. III, ಟಿನರಸೀ. ೨೬-೮ ; ಸು. 810) ; ಅದಾನ್ ಅಳಿತ್ತೊನ್ . . . ಸಾಸಿರಕವಿಲೆಯುಮಾನ್ ಕೊನ್ದೋನ್ ಅವೊನೆ ಒಕ್ಕಲುಳ್ ಪೊತ್ತಿನ್ಮಕ್ಕಳ್ ಪುಟ್ಟಲ್ಕವ್ ಪುಟ್ಟದೊವುವ್ ಪಂಗಂ (ಎಕ. IV, ಹುಣಸೂ. ೮೭-೦೨ ; ಸು. 700) ; ಇವಾನ್ ಕಿಡಿಸಿದೋನುಂ ದೆತ್ತೊನ್ನವ್ ಪೊತ್ತಿರ್ಮಕ್ಕಳ್ ಪುಟ್ಟಗು ವಾರಣಾಸಿಯು ಸಾಸಿರ್ವರ ಪಾರ್ವರ ಕೊನ್ದ ಕೊಲೆ ಎಯ್ದಿ × × ಪಂಚಮಹಾಪಾತಕನಕ್ಕು (ಎಕ. III, ತಿರುಮ. ೧೦೩-೭ ; ಸು. 900) ; ಪರಿಯಾರಮನ್ಕಿಡಿಸಿದೊನ್ಪಂಚಮಹಾಪಾತಕನಕ್ಕೆ ಬಾರಣಾಸಿಯನಳಿದ ಪಾಪಮಕ್ಕೆ ಎಟಂದೆಱ ಎತ್ತುವೊನ್ಗೆ ಬಿತ್ತುಂ ಪೊತ್ತಿರ್ಮಕ್ಕಳು ಪುಟ್ಟಾದೆ ಕಿಡುವೊನ್ (ಎಕ. XIV, ತಿರುಮ. ೨೩೩-೧೧ ; ಸು. ೯೦೦). ☞ ಕನ್ನಡದ 'ಪೋಂತು' ಪದವು ಒಂದು ಪ್ರಾಣಿಯ ಗಂಡನ್ನು ಸೂಚಿಸುವ ಹಾಗೆಯೇ ತಮಿ. ಮಲ. 'ಪೋತ್ತು', ತೆಲು. 'ಪೋತು' ಪದಗಳು ಪ್ರಾಣಿ, ಪಕ್ಷಿಗಳ ಗಂಡನ್ನು ಸೂಚಿಸುತ್ತವೆ. ಆದುದರಿಂದ 'ಪೊತ್ತಿಮಕ್ಕಳ್'— ಮುಂತಾದ ರೂಪಗಳು 'ಪೋಂತು' ಪದಕ್ಕೆ ಸಂಬಂಧಪಟ್ಟಿರಬಹುದು. **ಪೋಂತಾನೆಯಂತರ**=ಅಜಗಜಾಂತರ: ಕೇಳ್ದ ಆ ಬಣ್ಣನೆಗೆ ಕಾಣ್ಬ ಈ ಕಾಣಿಕೆಗೆ, ಸಮತೆಯೇಂ ? ಪೋಂತಾನೆಯಂತರಂ (ಶ್ರೀರಾಮ. ೯೨೦-೪೦).

[ದೇ.೩ ತಮಿ. ಮಲ. ಪೋತ್ತು; ಕೊತ. ಪೋತು ; ತೆಲು. ಪೋತು= ಪ್ರಾಣಿ ಅಥವಾ ಪಕ್ಷಿಗಳಲ್ಲಿ ಗಂಡು ; ಕೋಲಾ. ಪೊತ್=ಹುಂಜ ; ನಾಯ್ಕಿ. ಪೋತ್; ಪರ್ಜಿ. ಪೋತ್=ಗಂಡುಪಕ್ಷಿ; ಕೊಂಡ. ಪೋತ್=ಗಂಡುಪ್ರಾಣಿ; ಕುವಿ. ಪೋತೂ=ಕೆಲವು ಪ್ರಾಣಿಪಕ್ಷಿಗಳಲ್ಲಿ ಗಂಡು]

**ಪೋಕ, ಹೋಕ** (ನಾ). ೧. ತಿರುಗಾಡುವವನು; ಅಲೆದಾಡುವವನು; ಅಲೆಮಾರಿ : ಕಾಪಿಲರ ಮುಟ್ಟಿ ಕಾಲ್ಗೆಡಿಸಿ ಪೋಕರ ಮಾಡಿ (ಕಚೂ. ೯-೧೯-೧೩). ೨. (ಸಮಯವನ್ನು) ಕಳೆಯುವವನು : 'ಪೊತ್ತುಪೋಕ' ಪರಾ. ೩. ನೀಚ ; ದುಷ್ಟ : "ಅವಿವೃತ್ತನೆನೆ ಪೋಕನಕ್ಕು" (ಮುಂಗರಾ. ೭೩-೨೩); ಪೋಕನಿವನಿವನ ನುಡಿ ಪುಸಿ (ಶಂಕ. ೯-೧೭): ಕಾಕರಾಗಲವರು ವಿಷಯ ನೀಕರಾದಲವರು ಬಹಳ ಪೋಕರಾಗಲವರು (ಸಂಸಾರ. ೬೭-೯); ಪೋಕನಿಗೆ ನಾಕ ಸಲ್ಲ ಮೂಕನಿಗೆ ಸ್ವಪ್ನ ಸಲ್ಲ (ಗಾದೆ). ೪. ಪೋಲಿ; ತುಂಟ : "ಪೋಕನೆನೆ ತುಂಟಗಭಿಧಾನವು" (ಕಕಠ. ೦೨೭); ತಂದೆಯಿದಿರೊಳು ಪುಂಡರ ಪೋಕರ ನಡೆಯೋ (ಛಂಕ. ೨೬-೧೦೯): ಮದುವೆ ಯಾಕಾದನಿವನೂ ಪೋಕ ಪುಂಡನು (ಕಂಳ. ೯೩-೨). **ಹೋಕ** : ೧. 'ದಾರಿಹೋಕ' ಪರಾ. [ಪೋ$_1$ + —ಕ$_3$]

**ಪೋಕತನ** (ನಾ). ದುಷ್ಟತನ ; ನೀಚತನ : ಎಲೆ ಮರುಳೆ ಪೋಕತನವಿಲ್ಲಿ ಮೆರೆಯದು ಮರಳು (ತುರಂಗ. ೩೨-೭). [ಪೋಕ + —ತನ]

**ಪೋಕರಿ, ಪೋಕ್ರಿ** (ನಾ). ೧. ದುಷ್ಟನಡತೆಯುಳ್ಳ ವ್ಯಕ್ತಿ: ನೀಚ ಸ್ವಭಾವದ ವ್ಯಕ್ತಿ : ಆತನು ಆವ ಕೆಟ್ಟ ಕೆಲಸವನ್ನು ಮಾಡುವುದಕ್ಕೂ

ಹೇಸರ ಪೋಕರಿ ಹುಡುಗ (ಶಿಶುಕ. ೬೦) ; ಪೋಕರಿ ಇವರಲ್ಲೊಬ್ಬಳು (ದುಃಖಿ. ೦೩೦). ೨. ತುಂಟ ವ್ಯಕ್ತಿ ; ಉಡಾಳ : ಪೋಲಿ : ನಾನು ಮೊದಲಿನಿಂದಲೂ ಪೋಕರಿಯೆಂಬುದು ಸರಿಯೇ ಸರಿ (ಚಾತಕ. ೦೦); ನಿಮ್ಮ ತಂಗಿಯ ಮಗ ಶುದ್ಧ ಪೋಕರಿ (ಕುಹಾಗ. ೯೬). **ಪೋಕ್ರಿ** : ೧. ಬಹಳ ಪೋಕ್ರಿಯಮ್ಮ. ಪಕ್ಕಾ ಹೆಣ್ಣುಮರುಳ ! (ಕು. ೯೩). ೨. ಅಜ್ಜಿ ಯಾವಾಗಲೂ ನನ್ನನ್ನು ಪೋಕ್ರಿ ಎಂದು ಬೈಯುತ್ತಾಳೆ (ಕತಂಗ. ೪೬) ; ನಿನ್ನನ್ನು ಕಂತ್ರಿಗಳ ಕಣ್ಣುತಪ್ಪಿಸಿ ಸಾಬೀತಿನಲ್ಲಿಟ್ಟುಕೊಳ್ಳುವುದು ತೋಮನಿಗೆ ತುಂಬ ಸುಲಭವಲ್ಲ ಈ ಪೋಕ್ರಿಗಳ ಪಟಲಾಂನಲ್ಲಿ (ಹೂಸಕ್ಕಿ. ೩೦).
[ದೇ. ॥ ತಮಿ. ಪೋಕ್ಕಿರಿ, ಪೋಕ್ಕಿಲಿ ; ಮಲ. ಪೋಕ್ಕಿರಿ ; ತುಳು. ಪೋಕಿ, ಪೋಕಿರಿ, ಪೋಕುರಿ; ತೆಲು. ಪೋಕಿರಿ]

**ಪೋಕರಿತನ** (ನಾ). ತುಂಟತನ ; ಉಡಾಳತನ : ಅಫಜಲಖಾನನು ಕ್ರೋಧದಿಂದ, ರಹಿಮನ ಪೋಕರಿತನಕ್ಕೆ ತಕ್ಕ ಶಿಕ್ಷೆ ಮಾಡಬೇಕೆಂದು ಕತ್ತಿಯನ್ನೆತ್ತಿದನು (ಕೋಹಿಪೂ. ೦೬). [ಪೋಕರಿ + — ತನ]

**ಪೋಕವಿದ್ಯೆ** (ನಾ). ದುಷ್ಟವಿದ್ಯೆ ; ನೀಚವಿದ್ಯೆ : ಕುಕುಮಾತು ಆಡಬೇಡ ಪೋಕವಿದ್ಯೆಗೆ ಹೋಗಬೇಡ (ಗಾದೆ). [ಪೋಕ + ವಿದ್ಯೆ]

**ಪೋಕವೃತ್ತಿ** (ನಾ). ಕೆಟ್ಟಸ್ವಭಾವ ; ನೀಚವೃತ್ತಿ : ಏಕಾದಶಿಯ ಮಾಡಿ ಯತಿಗಳನೊಡನಾಡಿ ಪೋಕವೃತ್ತಿಗಳನೀಡಾಡಿ (ದಾಪದ. ೦೪೬.೦೦).
[ಪೋಕ + ವೃತ್ತಿ]

**ಪೋಕಳೆ** (ನಾ). ನಿಜವಲ್ಲದುದು ; ತೋರಿಕೆ ; ಸುಳ್ಳಾದುದು : ಸುಳ್ಳು ನಾಟಕ–ಕಂಪನಿ ತಗೀತೇನಿ, ಅಂತ ಪೋಕಳೆ ಹುರುಪಿನ್ಯಾಗ ಬೇಡಿದರ ಏನು ಕೆಲಸ ಆಗಬೇಕು? (ಗಂಪೂಯು. ೨೯೩). [← ಮರಾ. ಪೋಕಳ್]

**ಪೋಕಾಟ** (ನಾ). = ಪೋಕತನ : ಮಾನಿನಿಯರೊಳಗೆ ಪೋಕಾಟವೇನಿದು (ಕಪಕ. ೦೯೯-೦). [ಪೋಕ + ಆಟ]

**ಪೋಕಾಟಿಕೆ** (ನಾ). ತುಂಟಾಟ ; ಪುಂಡಾಟಿಕೆ : ನೀತಿಶೀಲನಾದ ವಿಮರ್ಶಾಧಿಕಾರಿಯ ಮೇಲೆ . . . ಅಪವಾದವನ್ನು ಹಾಕುವುದು ತೀರಾ ಪೋಕಾಟಿಕೆಯೆನ್ನಬೇಕು (ಬಾಗ್ಯೆಲಿ. ೨೯೬). [ಪೋಕಾಟ + — ಇಕೆ]

**ಪೋಕ್ತ** (ನಾ). ೧. (ಉಕ) ಟಾಕುಟೀಕು ; ಶಿಸ್ತು ; ಠೀವಿ. ೨. ಟಾಕುಟೀಕಾದ ವ್ಯಕ್ತಿ ; ಶಿಸ್ತಾಗಿರುವ ವ್ಯಕ್ತಿ : ಎರಡು ಪೋಲಿಗಳನ್ನು ಬಾಡಿಗೆಗೆ ಹಿಡಿದಿದ್ದಾನೆ. ದೊಡ್ಡ ಪೋಕ್ತನಾಗಿ ತಿರುಗುತ್ತಾನೆ (ಮೂಕಜ್ಜಿ. ೦೩೪) ; ಆಫೀಸರ ಆದ. ಇನ್ನರ ಪೋಕ್ತ ಆಗಬೇಕು ಅನ್ನೂ ಖಬರೇ ಇಲ್ಲಾ (ದೀಕಹ. II, ೨೦೯).

**ಪೋಕ್ತಾಗಿ** = ಆಡಂಬರದಿಂದ ಕೂಡಿ; ಠೀವಿಯಿಂದ; ಟಾಕುಟೀಕಾಗಿ : ಪಾಸ್ ' ಎಂದು ಪೋಕ್ತಾಗಿ ಎದೆ ತಟ್ಟಿಕೊಳ್ಳುತ್ತ ಗದ್ದಲದಲ್ಲಿ ನುಗ್ಗಿಬಿಡುತ್ತಿದ್ದೆ (ವೃಹಿ. ೯೦೬), ಆಕೆ ದಿಟ್ಟತನದಿಂದ ಎದ್ದುನಿಂತು ' ಪೋಕ್ತಾಗಿ ' ಮಾತನಾಡಿದಳು (ಸಪಜೀ. ೬೩೩).
[← ಪಾರ. ಪುಖ್ತ್ ; ಮರಾ. ಪೋಕ್ತ್]

**ಪೋಕ್ತತನ** (ನಾ), ಗಾಂಭೀರ್ಯ ; ದೊಡ್ಡತನ : ಒಂದು ಪ್ರಸಂಗವು ಮಾತ್ರ . . . ಆಕೆಯ ಹುಡುಗತನವನ್ನು ಕಳೆದು ಪೋಕ್ತತನವನ್ನು ಕಲಿಸಿಕೊಟ್ಟಿತು (ಗಂಪೂಯು. ೨೨೯). [ಪೋಕ್ತ + — ತನ]

**ಪೋಕ್ರಿ** ' ಪೋಕರಿ ' ನೋ.

**ಪೋಗಂಡ** (ನಾ). ೧. ಅಂಗಹೀನ ; ಅಂಗವಿಕಲ : " ವಿಕಲಾಂಗಃ, ಪೋಗಂಡಃ—ಈ ೨ ಅಂಗಹೀನಂ " (ಹಲಾಯು. ೬೯-೨೩೩) ; ಆ ಗಂಡನ ನಚ್ಚಿದ ತೋಳ್ ಪೋಗಂಡನನಪ್ಪುವಂತೆ ಮಾಡಿದ ಬದಿಯಂ ಮಾೞ್ಗಂ ಕೊಯ್ಮೆಟ್ಟಿಗೆಯೊಳ್ ಪೋಗೊರಸದೆ ಕಂಡನಾದೊಡೇಂ ಬಿಟ್ಟಪನೇ (ಧುಕೋಶ. ೨-೬೦). ೨. ವಯಸ್ಸಾಗದ ಬಾಲಕ ; ಪ್ರೌಢನಲ್ಲದವನು. '
[ ಸಂ. ]

**ಪೋಗಂಡಿಕೆ** (ನಾ). ತೋರಿಕೆಯ ಶೌರ್ಯ : ಕಳೆದುಹೋದ ಪರಾಕ್ರಮ : ' ನಲ್ಲವೋಗಂಡಿಕೆ ' ಪರಾ. [ಪೋಗಂಡ + — ಇಕೆ]

**ಪೋಗಟ್ಟು** (ಕ್ರಿ). ಓಡಿಸಂ : ನೆಲೆಯೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ . . . ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಾ (ಸೋಮೇಶ. ೩೦). [ಪೋಗು$_1$ (< ಪೋ$_1$) + ಅಟ್ಟು$_1$]

**ಪೋಗತೊಱ್ ?** (ಕ್ರಿ). (?): ಚಿದ್ದಯ್ಯನು ಜಕ್ಕಯ್ಯನುಮೆಂಬ ಪೆಸರುವರು ಗುಣ್ಣಮಯ್ಯಂದೋಜಿ ಎಡೆಯಾಯ್ಲತನದಿಂ ರಾಜಗಾಮಿತಂಗೆಯ್ದು ಮೆಣ್ಣೆಯತನದಲೂರನೆನ್ನದೆನ್ನು ಮೂಱುಪರಿಷದುಣ್ಪೞಿಯ ಪೋಗತೊಱ್ದುಣಾತಮಿಪ್ಪರ್ದಂ (ಶಾಇ. IX — 1, ೦೨೩-೦೬ ; 1059). [?]

**ಪೋಗಾಗು** (ನಾ). ಆಗುಹೋಗು ; ಲಾಭ ನಷ್ಟ : ಆತವೞ ಪೋಗಾಗುಗಳನೊರೆದೊರೆದು ಸುಸೂತ್ರಂ ತಪ್ಪದಂತೆ ಸೇತುವೆಗಿಕ್ಕಿ ಬರೆಯಿಸಿ (ಶಕ್ಕರಾ. ೯-೨೯). [ಪೋಗು$_2$ + ಆಗು$_2$]

**ಪೋಗಾಡು, ಹೋಗಾಡು** (ಕ್ರಿ). ೧. ಕಳೆದುಕೊಳ್ಳು; ನಷ್ಟಹೊಂದು ; ನೀಗು : ರಾಜ್ಯವನಿತಂ ಪೋಗಾಡಿದಂ ರಾಕ್ಷಸಂ (ಸೋಮೇಶ. ೯೩) ; ತನ್ನಿರ್ದ ಮನೆಯಂ ಮಾಱುವಳ್ಗೆ ಪೋಗಾಡಿ ತದನಂತರಂ ತನ್ನ ತಾಯಲ್ಲಿರ್ದಂತಪ್ಪ ವಸ್ತುಗಳಂ ಕಱುಪುವುದೆಂದು ಪೇೞ್ದಟ್ಟಲ್ (ಪುಣ್ಯಾಸ್ರ. ೯-೦೬ ಪ) : ತಂತಮ್ಮ ತಂದೆಗಳಾರ್ಜಿಸಿದ ಧನಧಾನ್ಯಂಗಳೆಲ್ಲಮಂ ಪೋಗಾಡಿ ಪರಿಕ್ಷೀಣವಾಗಿ (ಧರ್ಮಾ. ೦೬೨). **ಹೋಗಾಡು** : ೧. "ಹೋಗಾಡು (ಹೋಗು + ಆಡು) __ ಪ್ರಮಾದತ್ಯಜನೇ" (ಕಶಬ್ದ) ; ನುಡಿಯಂ ಲಱಿಯದೆ ಸಲರಾಜ್ಯಮಂ ಹೋಗಾಡಿ . . . ನಗೆಗೆಡೆಯಾದ ಪಾತಕ ಹರಿಶ್ಚಂದ್ರ (ಹಕಾ. ೦೨-೯೩) ; ಕದನದಲಿ ಸುತನಿಧಿಯ ಹೋಗಾಡಿದ ನಿಜಾನ್ವಯಕಲ್ಪತರುವನು (ಕುವ್ಯಾಕ. ೦-೯) ; ಇದ್ದುದನು ಹೋಗಾಡಿ . . . ಉದ್ದನ ಮರನ ತುದಿಗೇಱಿ ತಲೆಯೂಱಿ ಬಿದ್ದು ಸತ್ತಂತೆ (ಸರ್ವಜ್ಞ. ೯೩೩). ೨. (ಮಾತಿಗೆ) ತಪ್ಪು; ಮೀರು : ಒಡಲ ಹಿಡಿದಾಡದಿರು ನುಡಿಯ ಹೋಗಾಡದಿರು (ಸರ್ವಜ್ಞ. ೩೦೦) ; ಮಾತ ಹೋಗಾಡಿ ಬಳಿಕಾ ನೆನೆನೆನೆದು ಕಡೆಯಲ್ಲಿ ಹುಡುಕಾಡುವನೆ ಮೂರ್ಖ (ಎಶಕ.೯೦). ೩. ಬಿಡು ; ತ್ಯಜಿಸು : ಆಡುವುದು ತತ್ವಜ್ಞರೊಡನೆಡೆಯಾಡುವುದು ತತ್ಸನ್ನಿಧಿಗೆ ಹೋಗಾಡುವುದು ದುಷ್ಕೃತವನು (ಶಿತಾಗ. ೬-೩-೯೯). ೪. ಇಲ್ಲವಾಗಿಸು ; ನಿವಾರಿಸು : ಮಾಡಿದೆನು ಮಖಶತವನದು ಹೋಗಾಡಿ ಶಿಂದ್ರುನನಲ್ಲಿ ತನಗೆಡೆಮಾಡಿತರವಾನೆ (ಕುವ್ಯಾಶ. ೦೩-೩೯). ೫. ನೆರವೇರಿಸು ; ತೀರಿಸು ; ಪೂರೈಸು : ಬಾಣಹತಿಗೆಯ್ಕಡಿಸಿ ರಾಜ್ಯಶ್ರೇಣಿ ಜರುಗಿತು ಶೌರ್ಯನಗರದ ವಾಣಿಯರು ಪೊಕ್ಕಱಿದು ಹೋಗಾಡಿದರು ಪರಿಣತ (ಕುವ್ಯಾಕ. ೨೯-೯೨). [ಪೋಗು$_1$ (< ಪೋ$_1$) + ಆಡು$_1$]

**ಪೋಗಿಸು, ಹೋಗಿಸು** (ಕ್ರಿ). ಹೋಗುವಂತೆ ಮಾಡು ; ತೊಲಗಿಸಂ : ಆ ಗಿರಿತಟದಿಂದವನಂ ಪೋಗಿಸಿ (ಕಲಕಂ. ೨-೦೦೨). **ಹೋಗಿಸು** : " ಜಲಯತಿ = ಬಾಯಾರಿಕೆಯಂ ಹೋಗಿಸಿದಪುದು " (ಶಾಶ್ಕ. ೨೩೯).
[ಪೋಗು$_1$ ( < ಪೋ$_1$) + — ಇಸು$_3$]

**ಪೋಗು$_1$** ' ಪೋ$_1$ ' ನೋ.

**ಪೋಗು$_2$, ಹೋಗು$_3$** (ನಾ). ೧. ತೆರಳುವಿಕೆ ; ನಿರ್ಗಮನ : ಆನೆ ಕುದುರೆಗಳುಂ ಮಾನಸರ ಬರುವುವುಂ ಪೋಗುವುಂ ಕಂಡು (ವಡ್ಡಾರಾ. ೯೯-೨೨) ; ಪುರಜನಗಳೆಲ್ಲಂ ನೆರೆದವರ ಪೋಗಿಂಗೆ ಸೈರಿಸಲಾಱದೆ (ಶಂಶಪು. ೬-೦೬ ಪ); ನಿಮ್ಮ ಪೋಗಂ ಪುರಜನಂ ಪೇೞೆ ಕೇಳ್ದು (ಧರ್ಮಾಮೃ. ೦-೯೬). ೨. ಕಳೆದುಹೋಗುವಿಕೆ : ಕೈತಪ್ಪಿಹೋಗುವಿಕೆ : ತನ್ನೊಡವೆಯ ಪೋಗಿಂಗಮವಳ ಪೋಗಿಂಗಂ ನಿಗ್ಗಡಿ ಬೆನ್ನನಱಿಸಿ ಪೋದಂ (ಶಂಶಪು. ೬-೩೩). ೩. (ಮಲಮೂತ್ರಾದಿಗಳ) ವಿಸರ್ಜನೆ : ಮಲಮೂತ್ರದ ಪೋಗಂ ಪಾಳ್ಕುಮದುವೆ ಜಡತೆಯನೀಗುಂ (ಕರ್ಣಾಕಾ. ೨-೦೬). ೪.

ಕಸ್ತ್ರಿಯ ಒಂದು ವರಸೆ,—ಪಟ್ಟು : ಕೊಂತವಾರವು ಲಾಟ ಡೊಕ್ಕರ ಪೋಗು ಬಾಣಾ[ಗು]ಗಳೂ . . . ತಳಹತ್ತ ಗಳಹತ್ತಂ ತಾಳಿಲ ಏಂದಾಣದಲಿ ಹರಿ ಕಾದಿ ಬಳಲಿಸಿದ (ಗಿಳ್ವಿಣ. ೨೨-೬೩). **ಹೋಗು₂:** ೫. ಅಳಿವು ; ನಾಶ : ಸಂಸಾರದಾಗುಂ ಬೋ ಸಂಸಾರದ ಹೋಗುಂ ಬೋ (ಬಸವ. ೦೬೯). 'ಆಗುಹೋಗು', 'ಹೋಕು' ಪರಾ.

[<ಪೋ₁./ತಮಿ. ಪೋಕ್ಕು ; ಮಲ. ಪೋಕ್ಕು ; ತುಳು. ಪೋಕು ; ಕೊಡ. ಪೋಕ್ =ಮಾರ್ಗ, ರಹಸ್ಯ ; ತೆಲು. ಪೋಕ, ಪೋಕು]

**ಪೋಗುಡು** ' ಪೋಗೊಡು ' ನೋ.

**ಪೋಗುಹ** (ನಾ). ಹೊರಟುಹೋಗುವಿಕೆ ; ಕಳೆದುಹೋಗುವಿಕೆ : ' ಹರೆಯಬೋಗುಹ ' ಪರಾ.

[ಪೋಗು₁ (<ಪೋ₁) + — ಹ₂ (< — ವ₂)]

**ಪೋಗೊಡು, ಪೋಗುಡು** (ಕ್ರಿ). ೧. ಹೋಗಲು ಅವಕಾಶ ನೀಡು : ಸಾರಿದರೆ ನೂರಾಗಿ ಹರಿದೋಡುತಿಹನು, ಸೇರಿದರೆ ಸೆರೆವಿಡಿದು ಮರಳಿ ಪೋಗೊಡನು (ಕಂಪು. ೦೦-೬). **ಪೋಗುಡು :** ೨. ಕಳೆದುಕೊಳ್ಳು ; ನೀಗಿಕೊಳ್ಳು : ಎಳನೆತ್ತರ ಕೊರ್ವಿಂ ತಲೆಯಂ ಪೋಗುಡುವೀ ನೀಂ ಮರುಳಾಗಾ ! (ಕಾಮನ್ಕ. ೯೨-೨೬). [ಪೋಗು₁ (<ಪೋ₁)+ಕೊಡು₁]

**ಪೋಗೊದೆ** (ಕ್ರಿ). ದೂರ ಹೋಗುವಂತೆ ಕಾಲಿನಿಂದ ನೂಕು,-ಒದೆ : ಮಂದಸಿನ ಮುಚ್ಚುಳನಂಗುಟದಿಂದ ಮಿಾಂಟ ಪೋಗೊದೆದು (ಜಗಪ. ೬-೩೦).

[ಪೋಗು₁ (<ಪೋ₁) + ಒದೆ₁]

**ಪೋಗೊಳಿಸು, ಹೋಗೊಳಿಸಂ** (ಕ್ರಿ). ಹೋಗಲು ಬಿಡು ; ಬೀಳ್ಕೊಳ್ಳು; ಕಳುಹಿಸಿ ಕೊಡಂ : ಒಮ್ಮೆಗೆನ್ನಂ ಪೋಗೊಳಿಸು ಮರಳಿ ನವ್ಮಾ ! (ಕಂಪು. ೩೨-೨). **ಹೋಗೊಳಿಸು :** ಕೆಳದಿಯರನ್ನು ಮಾಲಿಸುತ್ತಿದ್ದು, ಶಿರಸ್ಸಂಜ್ಞೆಯಿಂದ ಹೋಗೊಳಿಸಿ . . . ಆತನಿಗೆ ಮುಗ್ಧಾಯತ ಪ್ರಾಢಿಯು ಇದಿರ್ನೋಟವನ್ನೊಡ್ಡಿರುವಳು (ಶುಂಕ್ರ ಕ. ೦೯೦-೩).

[ ಪೋಗು₁ (< ಪೋ₁) + ಕೊಳ್₁ + — ಇಸು₃ ]

**ಪೋಚ** (ನಾ). ಒಬ್ಬಾತನ ಹೆಸರು : ಚಿಂಗಯ್ಯನ ಚಾವಬ್ಬೆಯ ಮಗಂ ಪೋಚನ ಕಲ್ಲ × × × (ವ್ಯ ಅಂ. ೦೯೯೨. ೨-೬: 973). [?]

**ಪೋಚಬುಕ್ಕು** (ನಾ). ರಸೀತಿ ಪುಸ್ತಕ : ಜೀನಸಗಳು ಬಂದು ದಾಖಲಾದ ಪೋಚಬುಕ್ಕಿನ ಮೇಲಿಂದ ತಪಾಸ ಮಾಡೋಣದರಲ್ಲಿ ಬಹಳೀ ಅಡಚಣಿಯು ಬೀಳುವದು (ಮುಂಬ್ಯಾ. ೯೨).

[ ಪೋಚ್₆ (p ← ಮರಾ. ಪೋಂಚ್) + ಬುಕ್ಕು ]

**ಪೋಚಯ್ಯ** (ನಾ). ಒಬ್ಬಾತನ ಹೆಸರು : ದುಗ್ಗಮಾಯ್ಯನ ಮಗ ಪೋಚಯ್ಯ ಬೆಸಗೆಯ್ದಗಲ್ಲ ನಿಱಿಸಿ (ಎಕ. IV. ಹುಣಸೂ. ೬೯-೧೯: 976).

[ ಪೋಚ + ಅಯ್ಯ₁ ]

**ಪೋಚಿಗಾಮುಂಡ** (ನಾ). ಒಬ್ಬಾತನ ಹೆಸರು : ಉಪ್ಪವಳ್ಳಿಯ ಪೋಚಿಗಾಮುಂಡ್ಡ ವಳಿಯೆಱೆ ಮುದ್ದ ಮಾಗುಣ್ಡಿಯೆಱೆಗ (ಎಕ. XV. ಶೀಂಊರು. ೩೦೮-೦೨ ; 971). [ < ಪೋಚ + ಗಾಮುಂಡ ]

**ಪೋಚು₁** ' ಪೌಂಚಿ ' ನೋ.

**ಪೋಚು₂** ' ಪೋಚೆ₂ ' ನೋ.

**ಪೋಚು₃** (ನಾ). ಮುಂದೇನಾಗುವುದೆಂದು ಕಾದಿರುವಿಕೆ ; ನಿರೀಕ್ಷೆ : ನೀ ಉಲಕೋಚಿತನ ಮಾಡಿ ನಡುವ ಬಾಯಿ ಹಾಕೀ !. . . ಒಳ್ಳೇ ಪೋಚಿಲೆ ಕೂತಿರಬೇಕು ನೋಡು (ತಿಡಗು. ೬೩). [←ಮರಾ. ಪೋಂಚ್ =ದೂರದೃಷ್ಟಿ]

**ಪೋಚೆ₁** ' ಪೌಂಚಿ ' ನೋ.

**ಪೋಚೆ₂, ಪೋಚು₂** (ಗು). ಅಲ್ಪವಾದ ; ತುಚ್ಛವಾದ : ಪಾಚಿ ತೆರನಾದ ಪೋಚೆ ಸಂಸಾರದಾಲೋಚನೆ ತೋರುವದು (ಏಕಾಸು. ೫೦-೨). **ಪೋಚು₂ :** ನೀಚಮಾರ್ಗವ ಬಿಡು ಮೋಹಕವಾಗಿದ್ದ ಪೋಚುಮತವ ಸುಡು ನಲಿ ನಲಿದಾಡು (ಏಕಾಸು. ೩೬-೯). [←ಪಾರ. ಪೂಚ್ ; ಹಿಂ. ಪೋಚ್ ; ಮರಾ. ಪೋಚಟ್ ; ಗುಜ. ಪೋಚಾ]

**ಪೋಟ₁** (ನಾ). ೧. ಶರೀರದ ಯಾವುದಾದರೂ ಒಂದು ಭಾಗ ಊನವಾದವನು ; ಪೋಟು ಬಿದ್ದವನು : ಆತಂ ಶಸ್ತ್ರದಿಂ ಗಲ್ಲಮಂ ಪಾಳಿಸಿ ವ್ರಣವೆರಸಿದಕ್ಕಿಯಂ ತೆಗೆದು ಕತ್ತಿಯಿಂದೆತ್ತಿ ತೋಱಿಯುದಂ ತಂಡುಲವ್ಯಾಧಿಯೆಂದು ಪೆಸರಿಟ್ಟು . . . ಆ ತಂಡುಲಮಂ ಹೊಣಕೆ ನುಂಗಿ ಕಳೆದನಂದದಿಂದೆನ್ನನೆಲ್ಲರುಂ ಗಲ್ಲಪೋಟನೆಂದು ಪೆಸರನಿಟ್ಟರ್ (ಕರ್ಣಾಕ. ೯-೨೮ ಪ) ; ಅಂದಿನಿಂದ ನನ್ನನ್ನು ಎಲ್ಲರೂ ಗಲ್ಲಪೋಟ ಎಂದು ಕರೆಯುತ್ತಾರೆ (ನಗಗ. ೫). ೨. (ಅಲಂ) ಪುಂಡ ; ಪೋಕರಿ ; ಸ್ವೇಚ್ಛಾಚಾರಿ : ದ್ಯೂತವನಾಡುತ್ತಿಹ ಪೋಟ ಸೂಳೆಯರೊಳೊಲ್ದಿರ್ಪ್ಪಾಟವಿಂತೆಲ್ಲ ಮುಂ ಸವಿಯಾಗಂತ್ಯದಿ ಕಷ್ಟವೈ (ಸೋಮಶೀಕ. ೨೯). ಭಂಡರಿಗೆ ಬಹುಭಾಷಿಗಳಿಗೆ ಪ್ರಚಂಡರಿಗೆ ಪರಸತಿಯ ಬೇಟೆಯ ಪುಂಡತನದಲಿ ಹೇಡಿರನು ಬಿಟ್ಟಿರ್ಪ ಪೋಟರಿಗೆ . . . ಹೇಳದಿರು ಮಱೆದೀ ಅನುಭವಾಮೃತವ (ಅಪ್ಪ್ರಕ. ೨-೨) ; ಲೀಲೆಯ ನಾಟಕವಲ್ಲ ಮಾಟಕೂಟವಿದಲ್ಲ ಪೋಟರ ಮಾತಲ್ಲ (ಹಮಕ. ೩). [ಪೋಟು (<ಪೋಟ₁) + — ಅ₇]

**ಪೋಟ₂** (ನಾ). ಅಂಜುಕುಳಿ ; ಹೇಡಿ ; ಭೀರು : " ಆ ಪೋಟನೆನೆ ಧುರದೊಳೋಡಿ ಬಹನಕ್ಕು" (ಮುಂಗಬಾ. ೬೦-೮) ; ಪೋಟರಪ್ಪಜ ಹರಿಸುರೇಂದ್ರರಿಗಾಟವಿಕ ದಿತಿಸುತವಿತತಿಗೀ ಕೋಟೆಯಂ ಸಾಧಿಸುವುದವಗಡಂ (ಬಸವು. ೦೬-೦೫). 'ಪೋಡಿ₁' ಹೋ. [ಸಂ. ಪೋಟಾ]

**ಪೋಟಕ** (ನಾ). =ಪೋಟ₁ ೨ : ಪೋಟಕರು ವೇಶ್ಯಾಂಗನೆಯರೊಡನಾಟದೊಳು ಪಗಲಿರುಳು ಬಾಳುವ (ಹುಕೋಶ. ೬). [<ಪೋಟ₁]

**ಪೋಟಖರಾಬು** (ನಾ). ಸಾಗುವಳಿ ಮಾಡಲಾಗದ ಜಮಿಾನು : ರಸ್ತೆಗಳು ಮತ್ತು ಕಾಲುವೆಗಳ ಮಗ್ಗುಲುಗಳಲ್ಲಿರುವಂಥಾ ಭೂಮಿಯನ್ನು ಬೇರೆ ನಂಬರು ಮಾಡಬೇಕೆಂದು ಹುಕುಂ ಆದಾಗ ಹಾಗೆ ಮಾಡತಕ್ಕದ್ದು. ಹಾಗಿಲ್ಲದೆಯಿದ್ದರೆ ಪೋಟಖರಾಬಿನಲ್ಲಿ ಸೇರಿಸಬೇಕು (ಕೂಯಿಅ. ೩೨).

[←ಮರಾ. ಪೋಟ್‌ಖರಾಬ್]

**ಪೋಟಗಲ, ಪೋಟಗಳ** (ನಾ). ೧. ಒಂದು ಬಗೆಯ ಲಾಳದ ಕಡ್ಡಿ. ೨. ಒಂದು ಬಗೆಯ ಹುಲ್ಲು ; ಜಂಬುಹುಲ್ಲು ; ಕಾಶತೃಣ. **ಪೋಟಗಳ :** ೧. "ನಡಃ, ಧಮನಃ, ಪೋಟಗಳಃ—೩ ದೇವನಾಳದ ಹೆಸರುಗಳು. ದೇವಲಾಲೀಕಡ್ಡಿಗಳಿಗೂ ಹೆಸರುಗಳು" (ಸಿದ್ಧಾಂತ. ೧೫೦). ೨. " ಕಾಶಂ, ಇಕ್ಷುಗಂಧಾ, ಪೋಟಗಳಃ—೩ ಜಂಬುಹುಲ್ಲು " (ಸಿದ್ಧಾಂತ. ೧೫೦). [ ಸಂ. ]

**ಪೋಟಗಳ** ' ಪೋಟಗಲ ' ನೋ.

**ಪೋಟಗಿ** ' ಪೋಟಿಗೆ ' ನೋ.

**ಪೋಟತನ** (ನಾ). ಪುಂಡಾಟ ; ಪೋಕರಿತನ : ಮುರಾರಿ ಗೋಪಿಯರಲ್ಲಿ ಹಾದರವಾಡಿ ಸಿಕ್ಕನೆ ಪೋಟತನದಿಂದ (ಬಸವು. ೫೯-೯೦) ; ಪೋಟತನ ನಮ್ಮಲ್ಲಿ ಕೊಂಬುದೆ ಎನುತ ಹರಿಯೆಬ್ಬ (ಕೋಗಡು. ೨೨-೯೦). [ಪೋಟ₁ + —ತನ]

**ಪೋಟತೆ** (ನಾ). =ಪೋಟತನ : ಹುಸಿ ಕೊಲೆ ಕಳವು . . . ನುಸುಳು ಘಾತಕವನ್ಯಾಯ ಪೋಟತೆಗಳು ಮಸುಳಿಹವಾ ನಾಡೊಳಗೆ (ಸೋಮಕು. ೦-೩೯).

[ ಪೋಟ₁ + — ತೆ₂ ]

**ಪೋಟಲೀಸು** 'ಪೋಲ್ಪೀಸು' ನೋ.

**ಪೋಟಾಧ್ಯಾಯ** (ನಾ). (ಅಲಂ) ಸೂಳೆಗಾರಿಕೆ ; ಕಾಮಕ್ರೀಡೆಯ ಪ್ರಕರಣ : ಅಹಹ ಶಿವನೀ ಸೂಳೆಯೊಳ್ನಿರವುದೆಂತೆನಗೆ ಸಹಜಮೆಂತೆವಾಗೆ ಪೋಟಾಧ್ಯಾಯಮೆಂದೆನಲು (ಶೀಕ್ಷು. ೯-೦೦-೨೬); ಶಿವಗೃಹದೊಳು ಆವ ಪೋಟಾಧ್ಯಾಯವೆರ ಮುಂಡೆಯೆನೆ (ಶೀಕ್ಷು. ೯-೦-೩೮).

[ಪೋಟ₁ + ಅಧ್ಯಾಯ]

**ಪೋಟಾಪೋಟ** (ನಾ). ಸ್ಪರ್ಧೆ ; ಮೇಲಾಟ ; ಪೈಪೋಟಿ : ಮಹಾರಾಜರವರು ಅಧಿಕಾರವನ್ನು ವಹಿಸಿದ ಮೇಲೆ ಪೋಟಾಪೋಟಿಗೆ ಪ್ರಾರಂಭವಾಯಿತು (ಶಾಖಚ. ೩೬೯); ಇಬ್ಬರಿಗೂ ಸಂಗೀತದ ಪೋಟಾಪೋಟ ಬಿತ್ತು (ಪಟಿಸಾ. ೦೯೭); ಬುದ್ಧಿಬಲಕ್ಕೂ ಬಾಹುಬಲಕ್ಕೂ ನಡೆದ ಪೋಟಾಪೋಟಿಯಲ್ಲಿ ಬಾಹುಬಲಕ್ಕೆ ಪರಾಜಯವುಂಟಾಯಿತು (ಶಾಕಕ್ರ. ೭೯).

[<ಪೋಟ್ಟಿ./ತುಳು. ಪೋಟಾಪೋಟ]

**ಪೋಟಿ₁, ಹೋಟಿ** (ನಾ). ೧. ಈಡು; ಸಮಾನ; ಎಣೆ : ಸಿಲುದೆಮೋಳಿಗಳ ಉಳಿಯ, ಪೆಟ್ಟಿ ಇದಕೆ ಸಾಟಿಯೆ? ಪೋಟಿಯೆ? (ಬ್ರ್ಯಕೀಾ. ೩೯-೨). ೨. ಸ್ಪರ್ಧೆ; ಮೇಲಾಟ ; ಹುರುಡು : ಒಂದು ದಿನ ನಗರದ ಜನಗಳನ್ನೆಲ್ಲ ಕರೆದು ಆಯುಧಾಭ್ಯಾಸದ ಪರೀಕ್ಷೆಯನ್ನೂ ಪೋಟಿಯನ್ನೂ ಏರ್ಪಾಡು ಮಾಡಿದರು (ಬ್ರಾಸಶಿ. ೪೮); ಯಾವ ಗರಡಿಯೋರು ಪೋಟಿ ಹಾಕ್ತಾರೋ! (ಚಿಹ್ನಾಸು. ೧೫). ೩. ಕೂಡಿಸುವುದು ; ಸೇರಿಸುವುದು : (೬). ೪. (ಎರಡು ಭಾಗಗಳು ಸಮವಾಗುವಂತೆ) ಸೇರಿಸುವ ತುಂಡು.— ಚೂರು : ಅದು ಕತ್ತರಿಸಿ ಹೋಗಿತ್ತು. ಪೋಟಿ ಹಾಕಿ ಜೋಡಿಸಿದ್ದಾರೆ (ಓಖ). **ಹೋಟಿ** : ೧. "ಸರಿ, ದೊರೆ . . . ಹೋಟಿ, ಸಂಗಡ — ಈ ೧೮ ಸಮಸಾನಕ್ಕೆ ಪೆಸರ್" (ಕಶಸಾ. ೩೯-೨೯೦) ; ದುರ್ವಾರಂಗೆ ಸುಬಾಹು ಪಾಟಿ, ಹರ್ಯಕ್ಷಂಗೆ ನೀಲರತ್ನಂ ಹೋಟಿ(ರಾಚಚಾಕ್ಕ. ೦೯೪-೨). 'ಹೋದು' ಪರಾ. [ದೇ.॥ ತಮಿ. ಪೋಟಿ, ಪೋಟ್ಟಿ; ತುಳು. ತೆಲು. ಪೋಟಿ]

**ಪೋಟಿ₂** 'ಪೋಟ್ಟಿ' ನೋ.

**ಪೋಟಿ₃** 'ಪೊದ್ದಿ' ನೋ.

**ಪೋಟಿಕೆ** 'ಪೋಟಿಗೆ' ನೋ.

**ಪೋಟಿಗಾರ** (ನಾ). ಪೈಪೋಟಿಗೆ ನಿಂತವನು; ಸ್ಪರ್ಧಾಳು : ಪೋಟಿಗಾರ ಎಂದರೆ ಹೋರಾಟಗಾರ, ಸ್ಪರ್ಧಿ ಎಂದರ್ಥ (ಕಶಕ. ೦೦೬).

[ ಪೋಟಿ₁ + — ಗಾರ (< — ಕಾಱ) ]

**ಪೋಟಿಗೆ, ಪೋಟಗಿ, ಪೋಟಿಕೆ** (ನಾ). (ಉಕ) ಜೀವನಾಂಶ; ವರ್ಷಾಶನ: ಎರಡುನೂರುರೂಪಾಯಿಗಳ ಪೋಟಿಗೆಯನ್ನು ಗೊತ್ತುಮಾಡಿ ಈ ತಾಯಿ ಮಕ್ಕಳನ್ನು ಸಾಗಹಾಕಿದ್ದರು (ಕಂಗಕೋ. ೦೪); ನಿನಗೆ ಪೋಟಿಗೆ ಕೊಡುವುದು ಕಂದಾಯವನ್ನು ಪೂರ್ತಿಯಾಗಿ ವಸೂಲ್ ಮಾಡುವುದಕ್ಕೆ (ಸಾಂಕ್ರ. ೭೦). **ಪೋಟಗಿ** : ನನ್ನ ಪೋಟಗಿ ನನಗ ಚೆಲ್ಲು. ನಿನ್ನ ಮನ್ಯಾಗ ನಾ ನಿಲ್ಲೋದಿಲ್ಲ (ಗಂಪತಾಯಿ. ೨೫೦); ನಿಮಗೆ ಮುಂದೆ ಪೋಟಿಗೇ ಸಿಕ್ಕೀತು (ಕಪಕ. ೦೦೦). **ಪೋಟಿಕೆ** : ಊರ ಕಂದಾಯ ಹೆಚ್ಚಿಸುವುದು ಶ್ಯಾನುಭೋಗನಿಗೆ ಲಾಭಕರವಾಗಿತ್ತು. ಅದರಿಂದ ಅವನ ಪೋಟಿಕೆ ಏರುತ್ತಿದ್ದಿತು (ಗರುಚಾ. ೧೧೨).

[←ಮರಾ. 'ಪೋಟಗೀ, ಪೋಟಗೇ]

**ಪೋಟಿಗೆದಾವೆ** (ನಾ). ಜೀವನಾಂಶಕ್ಕಾಗಿ ಮಾಡುವ ದಾವೆ : ಸರಕಾರದ ಮೇಲೆ ಪೋಟಿಗೆದಾವೆ ಮಾಡ್ರಿ (ತಿಚುಗು. ೬).

[ಪೋಟಿಗೆ + ದಾವೆ₁ (<ದಾವಾ)]

**ಪೋಟಿಬೀಳು** 'ಪೋಟೆಬೀಳು' ನೋ.

**ಪೋಟು** 'ಪೋಟ್ಟೆ' ನೋ.

**ಪೋಟುಗಾರಿಕೆ** (ನಾ). ತುಂಟಾಟ (?) : ನಿಮ್ಮ ಪೋಟುಗಾರಿಕೆಯನ್ನು ಹಾರಿಸಿಬಿಟ್ಟೇನು . . . ಸುಮ್ಮನೆ ಹೋಗಿರಿ (ಕಶಾಶಂ. IV. ೦೪).

[ ? ]

**ಪೋಟುಬೀಳು** 'ಪೋಟೆಬೀಳು' ನೋ.

**ಪೋಟೆ₁, ಪೊಟ್ಟೆ, ಪೊಟ್ಟೆ₂, ಪೋಟ್ಟೆ, ಪೋಟು, ಹೊಟ್ಟೆ, ಹೋಟೆ** (ನಾ). ೧. (ಮರದ) ಪೊಟರೆ; ಡೊಗರು: "ಮರದ ಪೋಟೆಯ ಪೊಟಲ್" (ಸಂಕೀಶ. ೦೨); ಹುಣಸೆಮರದ ಪೋಟೆಯಲ್ಲಿ ದೇಹ ಬೆಂದು ಬೇಯುದುದಕ್ಕೆಳಲೊ (ಶಿಕ್ಷ್ಯಸ. ೯೬). ೨. ತೂತು ; ರಂಧ್ರ : 'ಪೋಟೆಬೀಳು' ಪರಾ. ೩. ಪೊಳ್ಳು; ಜಳ್ಳು : ಒಡು ಒಡಕು ಹುರುಳಿ ಪೋಟೆ ಹುರಿಪಾಕೆಯ ಕೈಸೊತ್ತು (ಖಕಪ. ೩೩-೩೨೬). 'ಪೋಟೆಗೊಂಬು' ಪರಾ. **ಪೊಟ್ಟೆ** : ೧. ನಮ್ಮ ಪೊರೆವರಾರೆಂದು ಬರಕಂಜಿ ಪೊರಮಡಲಮ್ಮದೆ ಪನ್ನೆರಡುವರುಷಂಬರಂ ಪೊಟ್ಟೆಯೊಳಿರ್ದೆವು (ರಘುನಾ. ೬-೦೩೬). **ಪೊಟ್ಟೆ₂** : ೧. "ಪೊಟಲ್=ಮರದ ಪೊಟ್ಟೆ ; ಪುರಂ" (ಕಮತ. ಶಂ. ೦); ಪೊಳ್ಳು. ಪೊಟ್ಟೆ (ಹೊಟ್ಟೆ), ಪೊದರು (ಹೊದರು), ಪದರು, ಡೊಗರು (ಕಂಪುಶು. ೯೯).' ಪೊಟ್ಟೆವೋಗು' ಪರಾ. ೩. ಪೊಟ್ಟೆಯು ನುಡಿಗಳಂತಿರಲಿ ನಾರದ (ಕೋಶಕ. ೦೨-೩೩). **ಪೋಟ್ಟೆ** : ೨. ' ಪೋಟೆಬೀಳು ' ಪರಾ. **ಪೋಟು** : ೧. ವನಪಾಲಕರು. . .ಎಲ್ಲವನು ಮಾಮರನ ಪೋಟೊಳಿಯೊಳ್[ ೪ ]ಹಾಕಲು (ಪಪಹೋ. ೨೨-೦೯). ೨. 'ಪೋಟುಬೀಳು' ಪರಾ. ೪. (ಕರಾ) ಮೈಥುನಕ್ರಿಯೆ. **ಹೊಟ್ಟೆ** : ೨. 'ಹೊಟ್ಟೆ ಹೋಗು' ಪರಾ. **ಹೋಟೆ** : ೧. "ಹೋಟೆ[ಶಾಕಾಂ. ಕೋಟರಂ] ಪತ್ರರೇಬಿನಿತುಂ ನಿಷ್ಕುಟಮುಕ್ಕುಂ" (ನಾನಾಕ. ೦೯೩) ; ವಟವೃಕ್ಷದ ಘಟದ ಹೋಟೆಯಲ್ಲಿ ತತ್ತಿಯನಿಕ್ಕಿತ್ತೊಂದು ಗಿಣಿ (ಪುಪುಗಂ. ೪. ೨೩೬-೯೬) ; ತೋಟದ ಕಬ್ಬಿಂದ ಹೋಟೆಯು ಜೇನಿಂದ. . .ಬಲ್ಲವಳ ಕೂಟವೇ ಲೇಸು (ಸರ್ವಜ್ಞ. ೦೬೦೦). ೨. ಮಣ್ಣ ಹೋ[ಶಾಕಾಂ. ಹೊ]ಟೆ ಮಳೆಗೆ ಮುಚ್ಚುವುದಲ್ಲದೆ ಕಲ್ಲ ಹೋ[ಶಾಕಾಂ. ಹೊ]ಟೆ ಮುಚ್ಚುವುದೆ (ಗುಶಕ್ತಸಂ.೪. ೨೧೬-೩೬): ಅನಲನ ಸತಿಯ ಬಲದ ಮೂಗಿನ ಹೋಟೆಯಂ. . .ಕೊಯ್ಯುತ್ತ (ಏಅರ. ೦೨-೬೦). ೩. ಹೊರಗೆ ನೋಡಿದರೆ ಕೋಟೆ ಒಳಗೆ ನೋಡಿದರೆ ಹೋಟೆ (ಗಾದೆ).

[ದೇ.॥ ತಮಿ. ಪೋಟು ; ಮಲ. ಪೋಡು ; ಕೊಡ. ಪೋಟೆ ; ಕೋಲಾ. ಬೋಟ್]

**ಪೋಟೆ₂** (ನಾ). ೧. ಮೀಸೆ, ದಾಡಿ ಮುಂತಾದ ಪುರುಷಲಕ್ಷಣಗಳುಳ್ಳ ಹೆಂಗಸು ; ಖೋಜಾ : "ಪೋಟಾ—ಸ್ತ್ರೀಪುಂಸಲಕ್ಷಣಾ—ಸ್ತ್ರೀಲಕ್ಷಣವೂ ಪುರುಷಲಕ್ಷಣವೂವುಳ್ಳ ಶಿಖಂಡಿಯಂಥಾವಳ ಹೆಸರು" (ಸಿದ್ಧಾಂಚಿ. ೦೬೧). ೨. ನೀರು ಹೊರುವ ಚೇಟಿ.—ಸೇವಕಿ ; ಕುಂಭದಾಸಿ : "ಪೋಟಾ . . . ದಾಸೀ. ಕುಟಹಾರಿಕಾ—ಈ ೫ ತೊಟ್ಟು" (ಹಲಾಯು. ೫೦-೩೩೪) ; "ನೀರಡಿಕೆ ಪೋಟೆಯನಿಕ್ಕು" (ಮಂಗರಾ. ೯೦-೪). [ಸಂ. ಪೋಟಾ]

**ಪೋಟೆಗೊಂಬು** (ನಾ). ಟೊಳ್ಳು ಕೊಂಬೆ ; ಪೊಳ್ಳಾದ ಟೊಂಗೆ : ಪೋಟೆಗೊಂಬುಗಳ ಪಳಮರದಂತೆ ತಿರುಳಿಲ್ಲದೋಟೆಗಳ ತಿಂತ್ರಿಣೀಫಲದಂತೆ ಗುಂಗಿಕ ಕರ್ಕೋಟಕಾದಿಗಳೊಡಲ್ವೊಳ್ಳಾದುವು (ಕೃಪಚಾ. ೨೪-೩೩).

[ಪೋಟೆ₁ + ಕೊಂಬು₁]

**ಪೋಟೆಬೀಳು, ಪೋಟಬೀಳು, ಪೋಟುಬೀಳು** (ಕ್ರಿ). ತೂತು ಬೀಳು; ರಂಧ್ರವುಂಟಾಗು : ಆಕಾಶ ನೋಡಿ ನೋಡಿ ಅವನ ಕಣ್ಣು ಪೋಟೆಬಿದ್ದು ಹೋಗುತ್ತದೆ (ಹಳಚಾ. ೩೦). **ಪೋಟಬೀಳು** : ಅವನ ತಲೆಯು ಅದರ ಏನಿನ ಸಲಾಕಿಗಳಿಗೆ ಬಲವಾಗಿ ಬಡಿಯಲು, ಪೋಟಬಿದ್ದು ರಕ್ತಸುರಿಯಲಾರಂಭಿಸಿತು (ಅಂಬಕ. ೫೦). **ಪೋಟುಬೀಳು** : ಕೆಳಕ್ಕೆ ಬಿದ್ದ ರಭಸಕ್ಕೆ ಅವನ ತಲೆ ಪೋಟುಬಿದ್ದಿದೆ (ಕಖ).

[ ಪೋಟೆ₁ + ಬೀಳು₁ (<ಬೀೞ್₁) ]

**ಪೋಟೆಹೋಗು, ಪೊಟ್ಟೆವೋಗು, ಹೊಟ್ಟೆಹೋಗು** (ಕ್ರಿ). ೧.= ಪೋಟೆಬೀಳು : ಕಣ್ಣು ಪೋಟೆಹೋದ ಜಡನಂತೆ (ಕಳ್ತಸ. III. ೪). **ಪೊಟ್ಟೆವೋಗು** : ೧. ಕೊಂಬೊಣಗಿರ್ದ ಪೊಟ್ಟೆವೋದೊಣಗಿದ ವೃಕ್ಷದಿಂದಜಾವುದಾಯೆಡೆಯೊಳ್ ಜಳವಾಗದೆಂಬುದಂ (ಕೋಕೋಶ. ೩-೪) ; ಪೊಟ್ಟೆ[ಶಾಕಾಂ. ಪೋದೆ]ವೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜರ್ಮುಱದಿಕ್ಕರೊ ಮೋಹಮಲ್ಲನಂ (ಪುಟ್ಟಕ. ೧೩-೯೪). ೨. ಹೊಪ್ಪಳೆಯುಂಟಾಗು ; ಬೊಬ್ಬೆಯೇಳು ;

ವುಟ್ಟಿದ ದಿನ ಮೊದಲಾಗಿ ಧರೆಯೊಳಡಿಯಿಟ್ಟಿಜಾಯರು ಬಾಲೆಯರು ಬಟ್ಟೆಯೊಳಗೆ ನಡೆಯಲು ಪಾದತಳಗಳು ಪೊಟ್ಟೆಪೋಪುದು ತಾನಂದೆ (ಅಂಜಿಕ. ೬-೬೩). **ಹೊಟ್ಟೆಹೋಗು** : ೧. ಮಂಜುನಾಥಯ್ಯನವರ ಶಿವಿ ಮರದ್ದಾಗಿದ್ದರೆ ಎಂದೇನೆ ಹೊಟ್ಟೆಹೋಗುತ್ತಿತ್ತು (ಸಠಸ. ೦೦). [ ಪೋಟ್ಟೆ$_1$ + ಹೋಗು$_1$ (< ಪೋ$_1$) ]

**ಪೋಟ್ಲೀಸು** 'ಪೊಲ್ಸೀಸು' ನೋ.

**ಪೋಡಣೆ** 'ಪೊಡ್ಡಣ' ನೋ.

**ಪೋಡಿ$_1$** (ನಾ). ಭಯ ; ಹೆದರಿಕೆ : ಪೂವಿ ಏನು ಮಾಡಿಕೊಳ್ಳುವಳೋ ಎಂದು ನನಗೆ ಪೋಡಿ ಆಗುತ್ತೆ (ಪುಂಚಾ. ೦೯೩) : ಥೂತ್, ಪೋಡಿ ಪುಕ್ಕಲಗಳೇ, ಹುಟ್ಟಿದ ಮನುಷ್ಯ ಸಾಯದೇ ಕೂಡುತ್ತಾನೆಯೇ? (ಪಠಾಠ. ೬೦). [ದೇ. ; ತುಳು. ಪೋಡಿಗೆ ; ಕೊಡ. ಪೋಡಿ]

**ಪೋಡಿ$_2$** (ನಾ). ೧. ಹಣ್ಣು ಮುಂತಾದುವುಗಳ ಚೂರು, -ತುಂಡು : (೪). ೨. ಅಡಕೆಯ ಚೂರು ; ಚೂರಡಿಕೆ : ಪೋಡಿಭಾಗದ ಬೆಳ್ಳೆಲೆಯ ಮೆಲ್ಲುತ ಸಖಿಗೂಡಿ ಬಂದಳು ದಿವಾಣಕ್ಕೆ (ಮೋಹಕ. ೨೬-೭) ; ಹವರ್ಣಾಗ್ರವನಡರ್ದು ಪೋಡಿಯ ಭಾಗ ಬೆಳ್ಳೆಲೆಯು ಸ್ವೀಕರಿಸಿ ಮಾತಾಡಿ ದಳ್ ಮಂತ್ರಿಜೆಯೊಡನೆ (ಮೋಹಕ. ೨೯-೩೩). ೩. "ಪಟ್ಟೇದಾರನ ಅರಿಕೆಯಿಂದ ಅಥವ ಕೋರ್ಟಿನ ಅಪ್ಪಣೆ ಪ್ರಕಾರ ಮತ್ತ್ಯಾವ ದಾದರೂ ಕಾರಣದಿಂದ ನಂಬರುವೊಡೆಯಬೇಕೆಂದು ಅಪ್ಪಣೆ ಯಾದರೆ ಹಾಗೆ ಪೊಡೆಯಬೇಕು. ಇದಕ್ಕೆ ಪೋಡಿಯೆಂದು ಹೆಸರು" (ಕೂಖಾಠ. ೩೬). 'ಪೋಡು' ಪರಾ. [< ಪ್ರಾ. ಪೋಡಿ. ಪೋಡೀ]

**ಪೋಡು** (ನಾ). ೧. ಸೀಳುವಿಕೆ; ಕತ್ತರಿಸುವಿಕೆ: 'ಪೋಡುಂಗಾಱ' ಪರಾ. ೨. ಪಾಲು; ವಿಭಾಗ: ಜಮೀನಿನ ಪೋಡು ಮಾಡಿಸಲು ತಾಲ್ಲೂಕುಕಚೇರಿಗೆ ಹೋಗಬೇಕು (ಉಂ). 'ಪೋಡ್' ಪರಾ. [<ಪ್ರಾ. ಪೋಡ್=ಸೀಳು./ತೆಲು. ಪೋಡು=ಜಮೀನಿನ ತುಂಡು]

**ಪೋಡುಂಗಾಱ, ಪೋಡುಗಾಱ** (ನಾ). ಸೌದೆ ಕಡಿಯುವವನು; ಮರ ಕತ್ತರಿಸುವವನು : ನೀಂ ಕೊಂಕಣನಾಡೊಳ್ ತುಂಗಭದ್ರನೆಂಬ ಪೋಡುಂಗಾಱನಯ್ ನೀಂ ಕುಮ್ಮರಿಯಂ ಸುಟ್ಟು ಪೋಗಿ ಪೊಱಡೆ ಬಂದು ನೋಡುವನ್ನೆಗಂ (ವಡ್ಡಾರಾ. ೧೬೦-೦) ; ಬಳಿದು ಪುದುಂಗೊಳಿಸಿದ ಬದಿರ ಸಿಡುಂಬನೆಡೆಗೊಳೆ ಕಡಿವ ಪೋಡುಂಗಾಱನಂತೆ (ಪಂಪಭಾ. ೦೨-೦೬೭ ವ). **ಪೋಡುಗಾಱ** : ಒಂದೇ ಕುಠಾರದಿಂದಡವಿಯಂ ಕಡಿವಂತಿರೆ ಪೋಡು ಗಾಱನನ್ನೊಂದೆ ಭುಜಾಸಿಯಿಂ ಶಬರಕೋಟಿಯನಿಕ್ಕಿ ಪಿಶಾಚಕೋಟಿಗಾ ನಂದಮನುಂಟುಮಾಡ್ಪಿಂ (ಪಂಪಾಷಾ. ೪-೯೦). [ಪೋಡು + -ಕಾಱ]

**ಪೋಡುಗಾಱ** 'ಪೋಡುಂಗಾಱ' ನೋ.

**ಪೋಣಪಟ್ಟು** 'ಪೌಣಪಟ' ನೋ.

**ಪೋಣಿಕೆ** 'ಪವಣಿಕೆ' ನೋ.

**ಪೋಣಿಗೆ** 'ಪವಣಿಗೆ' ನೋ.

**ಪೋಣಿಸು** 'ಪವಣಿಸು' ನೋ.

**ಪೋತ$_1$** 'ಪೋಂತು' ನೋ.

**ಪೋತ$_2$** (ನಾ). ೧. ಯಾವುದಾದರೂ ಪ್ರಾಣಿಯ ಮರಿ ; ಶಾಬ : ವಿಯೋಗಿಗಣಾಕೂತ ಕುರಂಗಪೋತ ಭಯಕೃತ್ಕಂಠೀರವಂ (ಅಜಿತ. ೬-೪೨); ಪಕ್ಷಂಗಳೊಳ್ ಪಟ್ಟನಿತುಂ ಪೋತಂ[ಪಾಠಾಂ. ಪೊತ್ತಂ]ಗಳಂ ವಿಕ್ಷಿಸುತೆ (ಶಾಂತೀಶ. ೧೧-೯೩); ಕಲ್ಲಿಯಂ ಚಿಕ್ಕನೆ ತೂತುಗೆಯ್ದು ಗಿಳಿಗಳ್ಕರತಂದವು ತಮ್ಮ ಪೋತಮಂ (ಹಮ್ಮಿರ. ೪-೬೨). ೨. ಶಿಶು; ಮಗು : "ಬಾಲಃ, ಪಾಕಃ, ಅರ್ಭಕಃ, ಗರ್ಭಃ, ಪೋತಃ . . . ಡಿಂಬಃ - ಈ ೯ ಮಗುವು" (ಹಲಾಯು. ೦೩-೩೯೮): ಉರುವೈರಾಗ್ಯಂ ಸಾತಿಶಯಮೆನಿಸಿ ಬಳೆಯಬ್ ಪೋತಂ ತದ್ವಾಲನೈದೆ ಬಳೆಯುತ್ತಿಸೆದಂ (ಅಭ್ಯಾಲ. ೦೦-೩೩). ೩. ಚಿಕ್ಕ ಹಡಗು; ದೋಣಿ; ನಾವೆ : "ಪೋತವಹಣಂ ಪ್ರವಹಣಂ ಭೈತ್ರಮನೆ ಹಡಗಕ್ಕೆ" (ಮಂಗಣಾ. ೧೨೦-೪) ; ಪರಬರರಸುಗಳ್ . . . ಧರ್ಮ ಪೋತಮ್ಮ ತರನವಧಿಸಂಸಾರವಾರಾಶಿಮಧ್ಯಾಸ್ಥ ದಸರ್ವಗ್ರಾಸಿಭೀಮಾಂತಕ ವದನಮಹಾಗರ್ತದೊಳ್ ಮಗ್ನರಾದರ್ (ಅಜಿತ. ೯-೩೮); ಆ ತಡಿಗಿರ ದೊಯ್ಯಿಕ್ಕುವ ಪೋತದವೋಲ್ (ಸಮತ. ೬-೩೮); ಪೋತಯಾತ್ರಿಕ ಜನಂ ಪುಗಲೊಲ್ಲದೆ ವಾರ್ಧಿಮಧ್ಯಮಂ (ಎಕ. XI. ದಾವಣ. ೪೩-೩೩; 1164). ೪. ಹತ್ತು ವರ್ಷ ವಯಸ್ಸಿನ ಆನೆಯ ಮರಿ : ಎಸೆದುದು ಬಳಸಿರೆ ಪೋತಕಲಾಪವಲ್ಲಿ ಯೂಥನಾಥಂ (ಕೃಷ್ಣಕೃ. ೩-೬೩). ೫. ಚಿಗುರು. ೬. ಮನೆಯ ನಿವೇಶನ ಅಥವಾ ತಳಪಾಯ. [ಸಂ.]

**ಪೋತಕ** (ನಾ). ೧. ಯಾವುದಾದರೂ ಪ್ರಾಣಿಯ ಮರಿ : ಮನಂ ಬೆರ್ಚದೆ ಸಿಂಹಪೋತಕಮನೋವಲುಮಾಱಿಯ ದೋಃಹಳಂ ಕರಂ ಪೆರ್ಚಿ ದುದು (ಪಂಪಭಾ. ೦-೦೯೨) , ಮುತ್ತಿನ ಸೂಸಕಂಗಳಂ ಬಾಳವ್ಯಾಘ್ರಕಮೆಂದು ಕರ್ದುಕಲ್ ಬಗೆಗುಂ ಕಲಹಂಸಪೋತಕಂ (ಪಂಪಾಷಾ. ೦-೦೨೬). ೨. ಎಳೆಯ ಗಿಡ; ಸಸಿ : ಚೂತಪೋತಕಂ ನನೆಯಿಂ ರಂಜಿಸುವಂತಿರೆ ತನಯುಂ ರಂಜಿಸಿದಂ (ಜಗಂ. ೩-೩೪). [ಸಂ.]

**ಪೋತಕಿ** (ನಾ). ಒಂದು ಬಗೆಯ ಸಸ್ಯ; ಬಸಲೆ : "ಪೋತಕಿ ಮುಂಥಗಾಳಿ ಯೆನೆ ಬಸಲೆಯಕ್ಕು" (ಮಂಗಣಾ. ೪೪-೯೩). [ಸಂ. ಪೋತಕೀ]

**ಪೋತಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಚವಡಿಕೆ ಮಾರಿ ಮಸಣಿ . . . ಕೊಲ್ಲುವ ಪೋತಗನು ಕಟ್ಟಿನ ಗಡಿಗೆಮ್ಮ (ವಿಶಾಖ. ೩೬-೨). [ ? ]

**ಪೋತರ್** (ಕ್ರಿ). ೧. ಹೋಗು ; ಗಮಿಸು ; ಸಾಗು : ಅರ್ಕೋದಯ ಭಯವಶದಿಂ ಪಾಱೆ ಪೋತಂದಳೊರ್ವಳ್ (೧೬ಠಾವ. ೩-೦೪) ; ಹರಿ ಪೋತಂದಡವಜ್ಜೆಗಳ್ ಬಯಲೊಳಿಲ್ಲಿಂದಿತ್ತವಿನ್ನಿಲ್ಲ (ಜಗಂ. ೩-೩೦); ಕಲಿ ಅಜ್ಜನ್ನಣ್ಣ ನಾರಾಯಣನ್ ತನ್ನ ಮನೆಯನ್ನನ್ನವಿಟ್ಟು ಪುಗುತನ್ನೊಡೆ ಅಱಿವು ಪೊರಮಟ್ಟು ಪೋತ(ಂ)ನ್ದು ಕಡಿತಲೆಯಿನ್ದಟ್ಟ ನಾಲ್ವರಾನಿಱಿ ದೊನ್ (ಕ್ಶಾಇ. IX-೧. ೩-೦೨ ; ೯). ೨. ಹೊರಗೆ ಬರು; ಹೊರಟು ಕೊಳ್ಳು ; ಮೂಂಬರು : ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಪಂಪಭಾ. ೦೨-೦೫೦); ಇಡೆ ಕಾಲಂ ಬಲಿ ಸಿಲ್ಕಿ ಪಲ್ಗಿರಿದು ಕಣ್ಪೋತಂದು ಸುಯ್ಯೆಟ್ಟು ಸೀರ್ವಡಿಸುತ್ತಿರ್ದ ಧರಾಮ ರರ್ ನಡುಗೆ ಬೆಟ್ಟಿಲ್ಲಂ ಶರಣ್ ದೇವ ನಿಮ್ಮಡಿಯೊಂದಿರ್ಪುದಾಂ (ಪಂಪಾಷಾ. ೩-೩೪). [ಪೋ$_1$ + ತರ್]

**ಪೋತವಣಿಜ** (ನಾ). ೧. ಹಡಗಿನ ಮೂಲಕ (ದೇಶವಿದೇಶ ಗಳೊಡನೆ) ವ್ಯಾಪಾರ ಮಾಡುವವನಂ ; ಸಮುದ್ರವ್ಯಾಪಾರಿ : "ಸಾಂಯಾತ್ರಿಕಃ, ಪೋತವಣಿಕ್-ಈ ೨ ಭೈತ್ರದ ವ್ಯವಹಾರಿ" (ಹಲಾಯು. ೦೦೯-೩೩) ; ಪೋತವಣಿಜರ್ತಡಿಗೆಯ್ದು ತೃಷಾವಿಷಾದಮಂ ಕೊಟಜೆಯ ನೀರೊಳೀಕೆಳೆಗುಮೆಂದೊಡೆ (ಜಳಂ. ೦-೩೭). ೨. ಹಡಗಿನ ವ್ಯಾಪಾರ ಮಾಡುವವನು. [ಸಂ. ಪೋತವಣಿಜ್]

**ಪೋತವಾಹ** (ನಾ). ಹಡಗನ್ನು ನಡೆಸುವವನು ; ನಾವಿಕ ; ಕಲಾಸಿ : "ನಿಯಾಮಕಾಃ, ಪೋತವಾಹಾಃ, ೨ ಹಡಗಿನ ಕಂಭದ ಮೇಲೆಯಿದ್ದು ಹಡಗು ನಡಿಸತಕ್ಕ ಉಪಾಯಗಳನ್ನು ಹೇಳುವವರ ಪೆಸರುಗಳು" (ಸಿದ್ಧಾಂ. ೭೪). [ಸಂ.]

**ಪೋತವಾಹಿ** (ನಾ). = ಪೋತವಾಹ : "ತತ್ಪೋತವಾಹಿ ನಾವಿಕನಕ್ಕುಂ" (ವಸ್ತುಕೋ. ೨೩-೦೦). [ಸಂ. ಪೋತವಾಹಿನ್]

**ಪೋತಾಧಾನ** (ನಾ). ಮರಿಮೀನುಗಳ ಮೊತ್ತ : "ಕ್ಷುದ್ರಾಂಡಃ, ಮತ್ಸ್ಯಸಂಘಾತಃ, ಪೋತಾಧಾನಂ - ಈ ೩ ಕಿಱಿಯ ಮೀನ ಮೊತ್ತಂ" (ಹಲಾಯು. ೦೦೯-೩೯). [ಸಂ.]

**ಪೋತಿ** 'ಪೌತಿ' ನೋ.

**ಪೋತು** 'ಪೋಂತು' ನೋ.

**ಪೋತುಂಗಲ್ಲು** (ನಾ). ಒಂದು ಸ್ಥಳದ ಹೆಸರು: ತೆಂಙ್ಕಣದೆಸೆ ಗುಡ್ಡೆಗಲ್ಲು . . . ಪಡುವಣದೆಸೆ ಪೋತುಂಗಲ್ಲು ಕೊಮರುಲ ಪಱ್ರು ಕಾಮ್ಮರ್ರಿಗಿಲ ಪುಣಾಸೆ (ಎಕ. XII. ಸಿರಾ. ೩೬-೩೭ : 878). [ ? ]

**ಪೋತ್ರ** (ನಾ). ೧. ಹಂದಿಯ ಮೂತಿ,—ಮುಸುಡಿ: ದಬ್ಬಣದಂತೆ ನಿಬ್ಬಣವಾದ ಕೂದಲ್ಗಳೊಳ್ ಕೋದ ಪೆಣಂಗಳಿಂ ಪೋತ್ರಮೆಯ್ದುದೆ ಪಡೆಯುಂ ಪಿಡಿದು ಪೊಡೆಯೊಳ್ತೋಱುವಂತೆಯುಂ . . . ಮೊಗಮನೆತ್ತಿ ಮೆಯ್ಯುಂ ನಿಮಿರ್ದು ಅದಿರದಿದಿರೇಱುವೆಕ್ಕಲವಂದಿಯಂ ಕಂಡು (ಆದಿಪು. ೬-೦೯ ವ) ; ಪೋತ್ರಮನೆತ್ತುತಮತ್ತಲಿತ್ತಲುಂ ಕೆಂದದೆ ನೋಡುತಾಲಿಸುತೆ ಮತ್ತಿನ ಕಾಯದ ಸೊಕ್ಕಿದೆಕ್ಕಲಂ ಗೊಂದಣದೊಳ್ ವಿರಾಜಿಸಲ್ (ಜಗನ್ನಾ. ೩-೦೩-೨೩). ೨. ನೇಗಿಲಿನ ತುದಿ; ರಂಟೆಯ ಗುಳ: "ಹಂದಿ ನೇಗಿಲ ಮುಖಗಳೊಳ್ ಪೋತ್ರವೆಂಬುದು" (ರಸ್ವರಿ. ೦೯೩-೨೩); ಕಡುಗಾಯ್ದು ನೆಲದೊಳಬ್ಬಂದೆಡೆವಡೆಯದೆ ಮೇಲೆ ಮೇಲೆ ಪರಿವುದು ಪೋತ್ರಂ (ಶಬ್ದಮಂ. ೮-೨೦೦). ೧, ೨: ಆ ಮಹಾವನಂ . . . ಕ್ಷೇತ್ರೋತ್ಕರ್ಷದಂತೆ ಪೋತ್ರಿಪೋತ್ರಾಹತಧರಣೀತಳಮುಂ ಗೃಹೀತಗೋಲಾಂಗೂಲಮುಂ . . . ಆಗಿಯುಂ (ಚಂದ್ರಪ್ರ. ೩-೩೨ ವ). ೩. ಓಕರಿಸಿ; ಗುದ್ದಲಿ. ೪. ಸಿಡಿಲು. ೫. ಹಡಗು; ನೌಕೆ. ೬. ವಸ್ತ್ರ; ಉಡುಪು. [ಸಂ.]

**ಪೋತ್ರಿ** (ನಾ). ೧. ಹಂದಿ; ವರಾಹ: "ಕೋಲಃ, ಕ್ರೋಡಃ, ಸೂಕರಃ, ವರಾಹಃ, ಪೋತ್ರೀ . . . ಕಿರಿಃ—ಈ ೭ ಹಂದಿ" (ಹಲಾಯು. ೩೬-೩೭); ಒಂದು ಪಲ್ವಲಪ್ರಾಂತದೊಳ್ ಕಾಂತಾರಕಳಭಪ್ರಾಯಪೋತ್ರಿಸಂತಾನದೊಳಗೆ . . . ಸೊಗಯಿಸುತ್ತುತ್ಕೇಕರಂ ಸೂಕರಂ (ಚಂದ್ರಪ್ರ. ೩-೩೯ ವ); ಆ ಮಾಯಾಪೋತ್ರಿ ಧಾತ್ರೀಭರಮನಲಸಿ ತುಳ್ಕಾಡಿದಂದು (ಶಾಸ. IV. ೨೩೩-೦೦ ; 1380); ಕೌಶಿಕಂ ನಿರ್ಮಿಸಿದ ಪೋತ್ರಿಯಂ ಕಂಡು ಭಟರುಱ ಕೆರಳುತೆ . . . ಬೆಂಬತ್ತಿ ಸಿಕ್ಕದೆ ಬಂದು ಮುನಿಯ ಮಱಬಿದ್ದುದಾ ಪಂದಿ (ಹರಿಶ್ಚ. ೩-೨೧). ೨. ನೇಗಿಲು; ರಂಟೆ. ೧, ೨: ಆ ಮಹಾವನಂ . . . ಕ್ಷೇತ್ರೋತ್ಕರ್ಷದಂತೆ ಪೋತ್ರಿಪೋತ್ರಾಹತಧರಣೀತಳಮುಂ ಗೃಹೀತಗೋಲಾಂಗೂಲಮುಂ . . . ಆಗಿಯುಂ (ಚಂದ್ರಪ್ರ. ೩-೩೨ ವ). [ಸಂ. ಪೋತ್ರಿನ್]

**ಪೋತ್ರಿಪ** (ನಾ). ಹಂದಿಗಳ ಸಮೂಹದ ಮುಂದಾಳು: ಭೂವರನಂದು ತೇರನಡರಲ್ಕೋರ್ಚಿತ್ತದಂ ಪೋತ್ರಿಪಂ (ಜಗನ್ನಾ. ೩-೦೩-೯೭). [ಸಂ.]

**ಪೋಥಿ** (ನಾ). ೧. ಪುಸ್ತಕ; ಗ್ರಂಥ. ೨. ಪವಿತ್ರಗ್ರಂಥ; ಧಾರ್ಮಿಕ ಗ್ರಂಥ: ನನ್ನ ಕಾದಂಬರಿ ಏನು, ತುಕಾರಾಮನ ಪೋಥೀ ಅಲ್ಲ (ಜೀವನ. II. ೫); ಒಂದುದಿವಸ ಗಂಗವ್ವ ದೇವರ ಮುಂದೆ ಪೋಥಿ ಹಿಡಿದುಕೊಂಡು ಕುಳಿತಾಗ (ಗಂಗವ್ವಮು. ೨೫೦).

[←ಹಿಂ. ಮರಾ. ಗುಜ. ಪೋಥೀ; ಬಂಗಾಲಿ. ಪುಥೀ; ಸಿಂಧಿ. ಪೋಥೀ, ಪೋಥು./ಪ್ರಾ. ಪೋತ್ಥಯ]

**ಪೋಥೀಭಕ್ತಿ** (ನಾ). ೧. ಪವಿತ್ರಗ್ರಂಥದ ಮೇಲಿರುವ ಶ್ರದ್ಧೆ,—ವಿಶ್ವಾಸ: 'ಪೋಥೀಭಕ್ತಿ'ಯಿಂದಾಗಿ ಉಂಟಾಗುವ ಅ—ಪ್ರಮಾಣಿತ ಶ್ರದ್ಧೆಯು, ಮುಖ್ಯವಾಗಿ, ನಮ್ಮಲ್ಲಿ ಬೆಳೆದು ಬಂದಿರುವ ದ್ವಿಧಾಭಾವದ ಮೂಲಕಾರಣವಾಗಿದೆ (ಕರ್ಣಾಟ. XV. ಮುಮ್ಮು೩). ೨. (ಅಲಂ) ಮುದ್ರಿತವಿಷಯಗಳ ಮೇಲಿರುವ ಅತಿಶ್ರದ್ಧೆ. [ಪೋಥಿ+ಭಕ್ತಿ]

**ಪೋದ** 'ಪೋ₁' ಪರಾ.

**ಪೋದಗೆ₁** (ನಾ). (ಶುಭಾಶುಭಫಲಗಳನ್ನು ಸೂಚಿಸುವುದೆಂದು ನಂಬಲಾದ) ಒಂದು ಬಗೆಯ ಪಕ್ಷಿ: "ಪೋದಗೆ—ಪೋತಕ" (ಶಬ್ದಕೋ. ೨೭); ಕೋಗಿಲೆ ಚಾದಗೆ ಪೋದಗೆ . . . ಬಲಾಕ ಲಾವುಗೆ ಸೇನಂ (ಕಾವ್ಯಸಾ. ೦೦೯೯ ಶಬ್ದ೯); ಪಿಂಗಲಿ ಪೋದಗೆ . . . ಗೂಗೆಯಾದಿಯಾದ ಖಗಂ ರಾಜಾಂಗಣದೊಳ್ ಚರಿಸುವೊಡೆ ಸರಂಗೆಯ್ವೊಡೆ ತಡೆಯದಾ ಗೃಹಂ ಪಾಟಕ್ಕುಂ (ಲೋಕೋಪ. ೯-೬೩); ನಲವಿಂ ಪೋದಗೆಗಳ ಪಿಂಗಲೆಗಳ . . . ದನಿಯಿಂ ಲುಬ್ಧಕರುಲಿಯಲ್ ಖಗವಿತತಿ ಬೆರ್ಚಿ ಪಾಱದುವಾಗಳ್ (ಶ್ರೀಪು. ೨೮-೯೯). [<ಸಂ. ಪೋತಕ]

**ಪೋದಗೆ₂** (ನಾ). ಒಂದು ಬಗೆಯ ಸಸ್ಯ; "ಬಸಲೆಗಿಡ" (ಕಕಮ. ೯. II. ೬). [ ಸಂ. ಪೋತಕೀ ]

**ಪೋದಿಯಮ್ಮ** (ನಾ). ಒಬ್ಬಾತನ ಹೆಸರು: ಈ ಕಲ್ಲಂ ಚಿಕ(ಂ)ಣ್ಣ × × × ಯಂ ಪೋದಿಯಮ್ಮ ಮಾಡಿಸಿದೋನ್ (ತಾಶಾಇ. XI—೧. ೦೦-೩೪ ; ೩೬೬). [ ಪೋದಿ₀ + ಅಮ್ಮ₁ ]

**ಪೋದೆ, ಬೋದು₁** (ನಾ). ೧. ಟೊಳ್ಳು; ಪೊಳ್ಳು: 'ಪೋದೆವೋಗು' ಪರಾ. ಬೋದು₁: ೨. ಕಂಡಿ; ತೂತು; ರಂಧ್ರ: ಕೀಟಕವು ಸಣ್ಣದಿದ್ದಾಗ ಎಲೆಗಳಲ್ಲಿ ಬೋದು ಮಾಡುತ್ತದೆ (ಕೀಟಶಾ. ೯೯). ೩. ಸಣ್ಣ ತಗ್ಗು,—ಹಳ್ಳ: ತೋಟದಲ್ಲಿ ಮೆಣಸಿನ ಗಿಡಗಳನ್ನು ಹಚ್ಚುವದಕ್ಕೆ ಬೋದುಮಾಡಿ . . . ಆ ಬೋದಿನ ತಳದಲ್ಲಿ . . . ಅರಿಷಿಣದ ಬೀಜವನ್ನು ಊರಿ ನೀರು ಬಿಡಬೇಕು ಮತ್ತು ಬೋದು ನೆನೆದು ಹಸಿಯಾದ ಮೇಲೆ ಬೋದಿನ ತಲೆಯ ಮೇಲೆ ಒಂದೂವರಮೊಳ ಅಂತರವಾಗಿ ಎರಡೆರಡು ಮೆಣಸಿನ ಅಗಿಗಳನ್ನು ಹಚ್ಚಬೇಕು (ಕೃಷಿಶಾ. ೦೫೬). 'ಪೋಟೆ₁' ಪರಾ. [ದೇ. ೫ ತಮಿ. ಪೋತ್ತು, ಪೊತ್ತು]

**ಪೋದೆವೋಗು** (ಕ್ರಿ). (ಒಣಗಿ) ಟೊಳ್ಳಾಗು; ಪೊಳ್ಳುಬೀಳು: ಕೋಡಗದಂತೆ ಶಾಖೆಯೊಳ್ ನಡೆಯದೆ ಪೋದೆ[ ಪಾಠಾಂ. ಪೊಟ್ಟೆ ]ವೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇ ಕೆ ಮನುಜ ಮೂರ್ಜಱದಿಕ್ಕರೊ ಮೋಹಮಲ್ಲನಂ (ಮಲ್ಲಿಪು. ೦೩-೯೯).

[ ಪೋದೆ + ಪೋಗು₁ ( < ಪೋ₁ ) ]

**ಪೋದೆಸೆ** (ನಾ). ಹೋಗುವ ದಿಕ್ಕು: ನೃಪಾಲಕಳವಂ ನಾವಿನ್ನು[ಟೆ]ನ್ದೆಯ್ದು ಬಾಯ್ವಲದಿಂ ಬಣ್ಣಿಸದಿರ್ದೆ[ಳ]ಣ್ಣ ಚಲಮಂ ಕೊಣ್ಡಾಡಿ ಮಾಟಾಂತು ಮುಂ ತಲೆಸುತ್ತಲ್ನೆಲೆವೋಗಿ ಪೊರ್ದಲ್ಪಱೇ ಕಾಲೂಱಲ್ನೆಲಂ ಱಂಬು[ದೋ]ಗಲಣಂ ಪೋದೆಸೆ ಇಲ್ಲೆನಲ್ಕಳಿದರಾತಿವ್ರಾತಮೇಂ ಪೇಳದೇ (ಕಶಾಇ. ೨-೨-೯೩; 1058). [ ಪೋ₁ + ದೆಸೆ₂ ]

**ಪೋದೊಱು** (ಕ್ರಿ). ಹೋಗಲು ಬಿಡಂ; ಹೋಗಬಿಡಂ: ಈ ಪೊಬ್ಬು ಪೋದೊಱದ ಯಜ್ಞೀಯಾಶ್ವದ ಬೆಂಬಱವೋಗಿ ನೆರಂಗೊಡುವ ನಾಡಱಯರ ಕೊಟ್ಟಜವನೊಟ್ಟಯಿಸಿಯುಂ (ರಾಮಾಶ್ವ. ೯೭-೧).

[ ಪೋ₁ + ತೊಱು₁ ]

**ಪೋನಿ** (ನಾ). ಸಣ್ಣ ತಳಿಯ ಕುದುರೆ: ತನ್ನ ತಂದೆಯವರು ಐದನೆಯ ವರ್ಷದಲ್ಲಿಯೇ ಒಂದು ಪೋನಿಯನ್ನು ತಂದುಕೊಟ್ಟದ್ದರಷ್ಟೆ (ಜಗತ್ತಂ. ೦೦). [ ←ಇಂ. Pony ]

**ಪೋಪ್** (ನಾ). ಕ್ರೈಸ್ತಮತದ ಮಹಾಧ್ಯಕ್ಷನಾದ ರೋಮಿನ ಧರ್ಮಗುರು: ಫ್ರಾನ್ಸಿನ ದೊರೆಯಾದ ಫಿಲಿಪ್ಪನು ಒಂದು ಬಾರಿ ಒಬ್ಬ ಫ್ರೆಂಚನನ್ನು ಪೋಪ್ ಪದವಿಗೆ ಏರಿಸಿದನು (ಪಾಲಶ್ರ. III. ೦೦೬೨).

[ ← ಇಂ. Pop ]

**ಪೋಪ** 'ಪೋ₁' ಪರಾ.

**ಪೋಪು₁, ಹೋಹು₁** (ಕ್ರಿ). (ಹತ್ತಿರ) ಹೋಗು: "ಪೋಪು—ಆಸನ್ನಗಮನೇ" (ಶಮದ್ವಾ). ಹೋಹು₁: ಪರಿಸರ್ಯ—ಹತ್ತಿರಿಂದ ಹೋಹದೆ ಇರುಹಂ (ನಾಚಿರಾ. ೬). [ ಪೋ₁ + —ಪು₁ ]

**ಪೋಪು₂, ಹೋಹು₂** (ನಾ). ರೀತಿ; ಮಾರ್ಗ: ಆದಾ[ ಪಾಠಾಂ. ವಾ]

ಗಲೆನ್ನನನುಭವಿಸುವುದಲ್ಲದೆ ಹೇಳಬಾರದಾರಿಗೆಯೂ ನೋಡಮ್ಮಾ ಕಾಣಬಾರದಾತಂಗೆ ಸವಿದೋಱಬಾರದ ಪೋ[ಪಾಠಾಂ. ಫಾ]ವು ನೋಡಯ್ಯಾ (ಉಂಶ. ೨೯-೦೩). ಹೋಹು$_2$ : ಮೊಲೆ ಮುಡಿಯಿದ್ದುದೇ ಹೆಣ್ಣೆಂದು ಪ್ರಮಾಣಿಸಲಿಲ್ಲ. ಕಾಸೆ-ಮೀಸೆ ಕಠಾರಿಯಿದ್ದುದೇ ಗಂಡೆಂದು ಪ್ರಮಾಣಿಸಲಿಲ್ಲ. ಅದು ಜಗದ ಹೋಹು; ಬಲ್ಲವರ ನೀತಿಯಲ್ಲ (ಕಶಾಕಶ. ೦೬೦).

[ ಪೋ$_1$ + –ಪು$_2$ ]

**ಪೋಫಳಿ** (ನಾ). ಅಡಕೆ; ಕ್ರಮುಕ : ಅಡಿಕೆ (ಪೋಫಳಿ)–ಪ್ರಸಿದ್ಧ . . . ಕಾಯಿಯ ಮೇಲಿನ ತೋಟೆಯನ್ನು ಸುಲಿದು ಚಲ್ಲಿ, ಅಡಿಕೆಗಳನ್ನು ಕುದಿಸಿ ಮಾರಾಟಕ್ಕೆ ಒಯ್ಯುವರು (ಕಶಾಗ. ೩೩).

[ ← ಮರಾ. ಪೋಫಳೀ, ಪೋಫಳ್./ಪ್ರಾ. ಪೋಪ್ಫಲ, ಪೋಪ್ಫಲೀ./ಸಂ. ಪೂಗಫಲ ]

**ಪೋಬಟ್ಟೆ, ಹೋಬಳಿ$_1$** (ನಾ). ೧. ಹೋದ ದಾರಿ,—ಮಾರ್ಗ : ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬಟ್ಟೆಯುಂ ದೊರೆಕೊಳಿಸಲಾಗದದಱಿಂ ಶರತತಿಯಲ್ತೆಂಬುದಿಂತು ,,ಧರ್ಮಾಪೋಹಂ (ಕಶಿಶಾ. ೩-೦೯೬); ನೆಱೆದಾಯುಷ್ಯಮೆ ಮಿಟ್ಟುವನಱಸುವ ತೆಱದಿಂದಮಾವರ ಪೋಬಟ್ಟೆಯನೆ ಬಂದಱಿಸಿ (ಶಾಂತಿಪು. ೩-೬೪) ; ಮುನಿದಂತಿರೊರ್ಮೆದಲೆ ಲೋಕಾಂತರಕ್ಕೆ ಪೋದ ನಿಜಜೀವಿತೇಶ್ವರನ ಬಟ್ಟೆಸಲ್ವ ಬವಸೆಯಿಂ ಪೋಬಟ್ಟೆಯಸಱಿಸಿ ಪರಿವಂತೆ ನಿಮಿರ್ವ ಬಿಸುಸುಯ್ಗಳೊಳಂ (ಪರ್ಶಪು. ೯-೬೦ ವ). **ಹೋಬಳಿ$_1$** : ೧. ತಾಯ ಹೋ[ಪಾಠಾಂ. ಹೊ]ಬಳಿಯನಾ ವತ್ಸನಱಿವಂದದಿಂ ಆಯೆಡೆಯೊಳಱಿಸಿಕೊಳುತಂ ಬಂದು (ವಂಚಿಠ. ೦೦-೬೦); ಮನವಮುಮಂ ಕಣ್ಣುಮಂ ಮೃಗದ ಹೋಬಳಿಗಿತ್ತು . . . ಬರುತಿರೆ (ಕಡ್ರಿ. ದೇ. ೦೨೯-೦೩). ೨. ನಡೆವಳಿಕೆ ; ಆಚರಣೆ ; ವ್ಯವಹಾರ : ಬ್ರಹ್ಮ ಅವ್ವೆಯ ಗಂಡನಾದ ವಿಷ್ಣು ಅಕ್ಕನ ಗಂಡನಾದ ರುದ್ರ ಕಿಱುತಂಗಿಯ ಗಂಡನಾದ ಮೂವರ ಹೋ[ಪಾಠಾಂ. ಹೊಲ]ಬಳಿಯೇದೇನು ಚೋದ್ಯ (ವಗಮಾ. ೪. ೯೩೯-೯೯). [ಪೋ$_1$ + ಬಟ್ಟೆ$_3$]

**ಪೋರ್$_1$, ಪೋರು$_1$, ಹೋರ್$_1$, ಹೋರು$_1$** (ಕ್ರಿ). ೧. ಸೆಣಸು ; ಕಾದಾಡು ; ಹೊಡೆದಾಡು : ಕಡುಗಡಿಯವಪ್ಪೆರಡಾನೆಗಳ್ ತಮ್ಮೊಳ್ ಪೋರಲ್[ಪಾಠಾಂ. ಪೆಱ]ಸಾರ್ದು ಪೆಱಪಿಂಗಿ ಪೋದುದುಮಾ . . . ಕಂಡಂ (ವಡ್ಡಾರಾ. ೯೩-೨೩) ; ಇದು ಭೀಮಂ ದೇವಧಾತ್ರೀಸುತನಿಭದೊಳಭಂ ಪೋರ್ವವೊಲ್ಪೋರ್ದ ಕಾಣಂ (ಗದಾಯು. ೩-೨) ; ಎನ್ನೊಳ್ ಪೋರ್ದುದಿ ಧಿಂದ್ರುಸಿಂಧುರದ ಕೋಡಿಂದಾದ ಪಲ್ಯಂಕದೊಳ್ . . . ಕೇಳೀತಲ್ಪದೊಳ್ ನಿದ್ರೆಗೆಯ್ (ಶಂಕಾಮಾ. ೯-೧೬೬). ೨. ಜಗಳವಾಡು ; ಕಚ್ಚಾಡು : ಪುರುಡಿಸಿ ಪೋರದೆ ಪೆಣ್ಗಾತ್ರಾರಿಸದೆ ಒಸಿತಕ್ಕೆ ಪಂದು ಕೊಲ್ಲದೆ . . . ಸುಟ್ಟಿವುವು ಕರಿ ಕೇಸರಿಯೆರಳೆ ಪುಲ್ಲೆ ಮರೆ ಸಾರಂಗು (ಅಸಂಪು. ೩-೩೬) ; ಬೇವ ಪೆಣಕ್ಕೆ ಕೋಪದಿಂ ಪೋರ್ವ ಮಾರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೩೩೯). ೩. ಘರ್ಷಿಸು ; ಮಸೆ ; ತಿಕ್ಕಾಡು : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚಿ ಮಾರ್ಕೊಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಶಂಪರಾ. ೧೦-೯೨). ೪. ಸ್ಪರ್ಧಿಸು ; ಪೈಪೋಟಿ ಮಾಡು ; ಹುರುಡಿಸು : ಈಶ್ವರ ನೆಟ್ಟಂದಿದಱಗ್ರದೊಳ್ ನೆಲಸಿ ಚೆಲ್ವಂ ಕಂಡು ತತ್ಕೌತುಕೋದ್ಧುರ ನಾಂದೋಳಿಸೆ ಮೌಳಿಯಿಂದುಗುವ ಗಂಗಾವಾರಿಯೊಳ್ ಪೋರ್ವ ನಿರ್ಝರ ಧಾರಾತತಿಪಾಂಡುವಿಂ ಸೊಗಯಿಸಿತ್ತಾ ಚಿತ್ರಕೂಟಾಚಲಂ (ಕುಸುವಾ. ೧-೬೮). ೫. ತಿವಿ ; ಹಾಯು : ಸೀರುಣ್ಬ ಕನಲ್ವ ಪೋರ್ವ ಮೆಲ್ಯೊತ್ತುವ . . . ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ (ಚಂದ್ರಪು. ೨-೨೬) ; ನೊಸಲ ಕೀಂಟೆ ಕೀರದೆ ಕೊಣಕಿಟ್ಟು ಮುರಿದು ಪರಿದು ಒರಿದಪ್ಪ ಪುತ್ತಿನೊಳೊತ್ತಿ ಪೋದುರ್ . . . ಪೂಜಮಟ್ಟ ಕಾಳರಕ್ಕಸರಂತಿರ್ಪ ಕಾಳ್ಕೋಣಂಗಳಿಂ (೧೧೦೪. ೧-೦೨೯ ವ) ; ತೋರ ಹೋರಿಗಳ ದುರಾಕಾರವಂ . . . ಮಾರ್ಮಲೆತು ಪೋರ್ವ ಘನವೃಷಭಶೃಂಗಾರವಂಗೂಡಿ ನಾನಾರವಂ ಕಿವಿಗಳಂ ಪೂರೈಸಿತೇವೇಳ್ವೆನು (ಕಪಿಪು. ೦೦-೦೬). **ಪೋರು$_1$** : ೧. ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಶಂಕಕಂ. ೬೨-೧೯) ; ಓರಿದು ರೋಷದಿ ಕಾದಿ ಸತ್ತು ಕೋಳಿಗಳಾಗಿ ಭರದಿಂ ಪೋರುತಲಿರ್ಪವೀಗ (ಶಾಂತೀಶ. ೩-೦೬) ; ತೊಟ್ಟು ನಿರಹಂಕೃತಿಯ ಕವಚವನು ನೀಂ ಪೋರು ಮುಟ್ಟದಿಳೆಯುಸಿ ನಿನ್ನ (ಮಾಂಕಾಳ. ೬೦೩). ೨. ತತ್ತ್ರಬಳ[ಪಾಠಾಂ. ಳಿ]ತಾಳಗೊಟ್ಟೆಯೆನುತ್ತಾದಂ ರುಷ್ಟಿಯರೊಡನೆ ಜಡಮತಿಗಳು ಪೋರುತ್ತಿಪ್ಪರ್ (ಸಮಶ. ೦೯-೦೬) ; ಅರುಣವರ್ಣದ ನೀಲವಸನದ ಕಾಂತೆ ಪೋರುತ್ತ ಮರಳಿ ಕಚ್ಚುತ ತನ್ನನೆಳವುದ ನರನು ಕಂಡಡೆ ಕನಸಿನಲಿ ಅವನಿರನು ಬೇಗದಲಳಿವನೈ (ತಿಮ್ಮಕ. ೬-೨೬); ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ ದಿಟ್ಟ ಗುಂಡುಗಳಂತಿರಲಿ ಕೊಟ್ಟುದಱಿಂದ ತಣಿವ ಕುವರಿಗೆ ಮನವಮುಟ್ಟಿ ಕೊಡುವುದು ಕೋವಿದರು (ಹರಿಕ. ೩-೧೧). **ಹೋರ್$_1$** : ೧. ಕೊಣಕಿಟ್ಟು ಮಹಾರವದಿಂದೆ ಪೋರಲೆಟ್ಟಿಟ್ಟುವ ಸೊಕ್ಕಿದಾನೆಮಕರಂಗಳನೀಕ್ಷಿಸಿದಂ ಸಮುದ್ರದೊಳ್ (ಸೂಕ್ತಿಸು. ೨-೨೩). ೬. ವಾದಮಾಡು ; ವಾದಿಸಂ ; ಚರ್ಚೆಮಾಡು : ಹಿಂದಿರ್ವರು ನಾವೆಕ್ಕೆಯೊಳಗೆ ಹೋರ್ವಂದದೆ ಸೋಮಪ್ರಭನೃಪಃಭಿನವ ಕಂದರ್ಪಂ ಜನಿಸಿದನಾದೊಡೆ (ಜಯುಕಾ. ೦-೬೬). **ಹೋರು$_1$**: ೧. ಕೋಣನೆರಡುಂ ಹೋರಿ ಗಿಡುವಿಗೆ ವಿತ್ತು (ಹಕಕಾ. ೨-೦೨) ; ಹೋರಿದರೆ ಹುರುಳಿಲ್ಲೆನುತ ಪರಿವಾರವೊಜಲಿತು (ಕುವ್ಯಾಕ. ೩-೦೩) ; ಹೋರುವವು ಮಲ್ಲರೊಲು ಕಾಲದೊಡನೆ ಕಾಲನೆಮ್ಮಯದಾಗಿ ಆಗುವನಕ (ಪಿಸೀಗೀ. x, ೦). ೨. ಮುಳಿದು ಸ್ವ.. ಸುರಿಬ್ಬರುಂ ಜೆಡೆಗಳಿಗೆಯೊಡಲಿಗೆ ಹೋ[ಪಾಠಾಂ. ಪೋ]ರಲ್ (ಬಸಪು .೬-೦೦) ; ತನತನಗೆ ನೃಪತನಕೆ ಹೋರಲಿಕಾಗ ಮಂತ್ರಿಗಳು ವಿಸಯದಲಿ ಗಜಬಜವ ಮಾಣಿಸಿ (ಸಂಠಶ. ೦೬-೬೩); ಹರಿ ವಿರಂಚಿಗಳು ತಂತಮ್ಮ ಪೆಂಪಿಗೆ ಹೋರಿ ಹರನಡಿ ಮುಡಿಗಾಣಲೆಂದು ಇರದಿಟ್ಟ ಬಟ್ಟೆಗಳಿನಲಿಹವಾ ಪುರ ಉರುಖಾತಿಪ್ರಾಕಾರ (ತ್ರೀಶಾರ. ೦-೭೦). ೪. ವೇದಕ್ಕೆ ಹೋರುವರೆ ವೇದಕ್ಕತೀತ ಶಾಸ್ತ್ರಕ್ಕೆ ಹೋರುವರೆ ಬಳಸಿನವನಲ್ಲ ಪುರಾಣವಲ್ಲಿ ಹೋರುವರೆ ರೂಪಿನವನಲ್ಲ (ಪೋಶವಾ. ೬-೨೦) ; ಶಾರದೆ ನಿನ್ನೊಳು ವಿದ್ಯಾಕಲೆಗಳಿಂ ಹೋರಿ ಸೋತಂಜಿ ಬಸತಿಯ ಸಾರಿದಳೆನೆ ನಿನ್ನ ಜಾಣ್ಮೆಗೆ ಸೋಲದರಾರವನಿಯೊಳು (ಕುಂಠಾಸಾಂ. ೨೯-೬೬). ೬. ಹೋರದಿರು ಹೊಗು ಬವರಕೆನಲಸುರಾರಿಯಂಘ್ರಿಯೊಳೆಜಗೆ . . . ತಡುಕಿದನು ಧನುವ (ಕುವ್ಯಾರೂಪಿ. ೩-೬೩); ಶಾರದೆ ಜಡರತ್ತ ಸಾರದೆ . . . ಇನ್ನು ನೀ ಜಾಱದೆ ಹೋರದೆ ನೇರದಿ ಮಾಡೀ ಕೃತಿಯ (ವಾಗಕು. ೩ೀಠಿಕಾಸಂಧಿ. ೦೯). ೭. ಕಾಡು ; ಪೀಡಿಸು : ಹಾಲುತುಪ್ಪವನು ಕುಡಿದು ಮಱುದಿನ ಯಾಪನಾಳದ ಪುಡಿಪು ಕದಡನು ಕುಡಿಯಲೊಲ್ಲದೆ ಕೆಡಹಿ ಕಳೆವನು ಯಾಳಿಯಾಡುತವಳುತ ಹೋರುತಿರೆ (ಸಂಠಶ. ೦೬-೯೩); ಶ್ರಮ ಪರಿಹರಿಸೆಂದು ಹೋರರೋ ಹೋರರೋ . . . ನಮ್ಮ ಪುರಂದರವಿಠಲನ ಸೇರರೋ ಸೇರರೋ (ಪುರಂದ. ೦-೧೩೯-೩) ; ಕ್ರೂರರ್ಪೈವರ ಬಾಧೆ ಹೋರುತಲಿದೆಕೊ ಆರಿಂದ ನಿರ್ವಾಹವಾಗದು (ಜಗದಾ. ೯೯). ೮. ಕಷ್ಟಪಡು ; ಬವಣೆಗೊಳಗಾಗು : ಧರೆ ಧನ ವನಿತೆಯರು ಎನ್ನವರು ತನ್ನವರೆಂದು ಹೋರಿ ಹೋರಿ ಸಾವುತ್ತಿದೆ ಜೀವ (ಬಸಹ. ೩೯-೦೬೪).

[ದೇ.॥ ತಮಿ. ಮಲ. ಪೊರು ; ತುಳು. ಪೋರಿ ; ಕೊಡ. ಪೋರ್ ; ತೆಲು. ಪೋರು ; ಗದಬ. ಪೋರ್; ಕುಇ. ಪ್ರೂಹ್ಪ]

**ಪೋರ್$_2$, ಪೋರು$_2$, ಹೋರು$_2$** (ನಾ). ೧. ಕಾಳಗ ; ಹೋರಾಟ ; ಸೆಣಸಾಟ : ವೈರಿಯೊಳರ್ದಿಕೊಳ್ವರಣ್ಯವಾರಣಂಗಳೊಡನೆ ಭರದಿ ಪೋರ್ಗಂ ಮೊಗಂಬುಗುವ ವೀರ ಪೇರಾನೆಗಳ ತೊಳವಿಗಗಳೊಳಂ (ಚಂದ್ರಪು. ೩-೯೦ ವ);

ಸ್ವಸ್ತಿಶ್ರೀನಿರ್ಗುರ್ನ್ನಗಾವುಣ್ಡ ತಪಸಿಯ ಪೋರಿಲ್ ಇಭದೆ ಕಾದಿ ಸತ್ತೊಡೆ (ಪ್ಕ.ಶಾ. ೦೯೫೩. ೦೦೩-೦೨ ; ೯); ಪೋರನ್ ತಿರಿಪಿದ ಸ್ವಾಸಿಗೆ ಬಟ್ಟರ್, ಕಂಟಿನ ಪೋರನ್ ಕಾಣ್ಕೆಯ ಬಟ್ಟರ್ (ಅಂತಿಗೂ. ೬-೦೨೮). ೨. ಜಗಳ ; ಕಲಹ ; ಕಾದಾಟ : 'ಪೋರಂಗೈ', 'ಪೋರ್ನುಡಿ' ಪರಾ. ಪೋರ್ು₂ : ೧. "ಕಾಳಗದೊಳಂ ಬಲದೊಳಂ ಪೋರು" (ಕಬ್ಬಿಸಂ. ೦೦೩). ಹೋರ್ು₂: ೨. ತಾಯಿ ಮಕ್ಕಳ ಜಗಳ—ಕೊಟ್ಟು ಕೊಂಡವರ ವಾಗ್ವಾದ—ನಂಟರಿಷ್ಟರ—ಹೋರು ಮುಂತಾದ್ದೇನಾದರು ಉಂಟೆಂದು . . . ವಿತಿಮಿಾರಿದ ದಂಡಗಳು ತೆರಿಸುವನು (ಕಶಾಸಂ. IV, ೦೨೦).

[< ಪೋರ್₁ . /ತಮಿ. ಮಲ. ಕೋತ. ಪೋರ್ ; ತುಳು. ಪೊರ್ದು ; ತೆಲು. ಕುವಿ. ಪೋರು]

**ಪೋರ್₃, ಪೋರ್ು₃, ಹೋರ್₃, ಹೋರ್ು₃** (ನಾ). ೧. ತೂತು ; ಬಿಲ; ರಂಧ್ರ: ಮುನಿಪಂ ಚರ್ಯೆಗೆ ಪೋಗುತಿರ್ಪ ಪದದೊಳ್ ವೃಕ್ಷಯಲ್ಲಿ ಪತ್ತಿರ್ದ ವೃಕ್ಷದ ಪೋರಿಂ ಪೊಱಮಟ್ಟು ಪೋದ ಮಧುಪ ತನ್ನಿಂದೆ ತಾನಾಗಿ ಬರ್ಪನಂ (ಅರ್ಜನ. ೦-೯೦) : ಹುಲಿ ಹೊಯ್ದು ಜರಿದ ಹೆಗಲ ಪದೆದು ಕೋಣಂ ಹೊಯ್ದು ಹೋರ[ಪಾಠಾಂ. ಹೊಡೆದ ಹೋರೆ] ಭೇರುಂಡ ನೆಱಗಿದ ಗಂಟುಗಳ...ಚಿಹ್ನದ ಬೇಡನಾಯಕರು ನೆರೆದರು (ಪಕಶಾ. ೩-೩); ನೇರ್ಗೋಲ ಪೋರ್ಗಳಾ ನೃಪನಂಗದೊಳ್ಕಾಣಿಸಿದುವು ಜಾಳಂದ್ರದಂತೆ (ಕೃಷಶಾ. ೯-೩೩). ಪೋರ್ು₃ : ೧. "ಕಾಳಗದೊಳಂ ಬಲದೊಳಂ ಪೋರು" (ಕಬ್ಬಿಸಂ. ೦೦೩). ಹೋರ್₃ : ೧. "ಬಿಲಂ=ಹೋರ್" (ಶಾಶಕ. ೯೭). ಹೋರ್ು₃ : ೧. ಕಲ್ಲ ಹೋರಿನೊಳಗೊಂದು ಕಿಚ್ಚು ಹುಟ್ಟಿತ್ತ ಕಂಡೆ (ಅಶಕಂ. ೨೭-೦೦೯) ; ಉಪ್ಪು ಮಣಸುಗಳ ಹಿರಿಯ ಮೂಗಿನ ಹೋರು ತುಂಬಲು ಭರದಿ ಬಱಸಿಂದವನು ಸೀತರೆ ಗಿರಿಯ ತೋರದ ಭಟರು ತಱಗೆರೆಯುತೆ ಹುಱದರು (ಕೌಶಾ. ೨೯-೩) : ಹೆಗ್ಗಣಗಳ ಹೋರುಗಳು ಅಲ್ಲಲ್ಲಿ ಮುಚ್ಚಿಕೊಂಡಿದ್ದು, ಅವು ಪಕ್ಕನೆ ಬಾಯ್ದೆರೆದಾಗ ಮನೆಯವರೆಲ್ಲ ಅದರಲ್ಲಿ ಮಾಯವಾಗುವ ಹೆದರಿಕೆಯೂ ಹಲವೆಡೆ ಉಂಟಾಗಿದೆ (ಹುಕ್ಷಕ್ರ. ೦೩).

[ದೇ.॥ ತಮಿ. ಪೋರ್, ಪೋಟ್ಟೈ; ತೆಲು. ಬೊರಿಯ, ಬೊಱಿಯ, ಬೊರ್ರ; ಕೊಂಡ. ಬೊಱಿಗ್ಲ]

**ಪೋರ** (ನಾ). (ತುಂಟ) ಹುಡುಗ ; ಬಾಲಕ : ಪೋರಂ ನಾಂ ಗೆಯ್ದ ತಪ್ಪೇಂ (ಪ್ರಭುಲಿಪು. ೨-೬೦); ಪೋರ ನಾನೆಂದು ಬಗೆಯದಿರಸುರ (ಕುಮ್ಮಾರ. ೬-೨೮) ; ಈ ಪೋರನ ಹಣೆಯಲ್ಲಿ ಏನು ಬರೆದಿದೆಯೋ ಹಾಗೆ ಆಗಲೇ ಬೇಕಲ್ಲ (ಹೊಕ್ಕ. ೨೮).

[ದೇ. ॥ ಮಲ. ಪೋಱ = ದಡ್ಡ ; ತುಳು. ಪೋರ, ಪೋರೆ ; ತೆಲು. ಪೋರಡು. /ಮರಾ. ಪೊ.ರ]

**ಪೋರಗ** (ನಾ). ೧. ಒಂದು ಬಗೆಯ ಆಯುಧ : ಪೊಯೆ ಕಾಳಿಪ್ಪುದಿಂ ಪೋರಗದಿಂದೆ ಪೊಯ್ದುನೆರದುಂ ಸರಿಪೋದವು ಲಾಗುಬೇಗದೊಳ್ (ಅನಂಪು. ೦೦-೩೦) ; ಬಾಹುಪೋರಗದೆ ಪೊಯ್ದಂ ಭೂಪನಾ ವೀರನಂ (ಅನಂಪು. ೦೦-೬೨). ೨. ಖಡ್ಗಯುದ್ಧದ ಒಂದು ವರಸೆ,—ಪಟ್ಟು : ಚಂಕತಟ ವದ್ದಳಂ ಪೋರಗಂ [ಪಾಠಾಂ. ಪೊವಗಂ, ಪಾದಂಗಂ, ಪಾರಗಂ]ಗಳೆಂಬಡ್ಡ ವೊಯಿಲಿಂ ನಿವಾರಿಸುತಿರ್ದರು (ಸೋಮಚ. ೩-೦೩). [?]

**ಪೋರಗಿ** (ನಾ). (ತುಂಟ) ಹುಡುಗಿ ; ಪೋರಿ : ತೋರಣಬಾಗಿಲ, ಸುಮ್ಮನೆ ತೆರೆಯೆ ಪೋರಗಿ (ಕೊಂಚಿಮೂ. ೦೦೨). [←ಮರಾ. ಪೋರಗೀ]

**ಪೋರಟೆ, ಹೋರಟೆ** (ನಾ). ೧. ಹೋರಾಟ ; ಕಾಳಗ ; ಯುದ್ಧ : ಇಳೆಯೊಡೆತನ ಪೋರಟೆಗಳಿಂ ತಣಿಯದೆ ಪಿತೃದೇವತೆಗಳ ಋಣವನುತ್ತರಿಸದೆ ರಾಯಕುವರರೆಲ್ಲ ರಣಭೂಮಿಯೊಳಡಗಿದರು (ಕರ್ಣಪ್ಕ. ೬-೨೦). ೨. ಜಗಳ ; ಕಚ್ಚಾಟ : ಕೃಷ್ಣಗಜಂಗಳ ಪೋರಟೆಯಿಂದಭಿಳಸಿತವೃಕ್ಷಿಯಾಗದುದಂ . . . ಸೂಚಿಸುಗುಂ (ಪುಣ್ಯಾಸ್ರ. ೯-೦೬ ಪ) : ಪುಸಿಗೆ ಪಿಸುಣ್ಗೆ ಪೋರಟೆಗೆ ಮಾಯೆಗೆ ಹಿಂಸೆಗೆ . . . ಪುಗದಂತಿರಲ್ಲರಂ ಪೊಸಯಿಸಿ ಕಾರ್ತವೀರ್ಯನೆಸಕಂಬಡೆದಂ (ಶಕಾ. ೩-೦೩). ೩. ಪೈಪೋಟಿ ; ಹುರುಡು ; ಸ್ಪರ್ಧೆ : 'ಪೋರಟೆವೆಱು' ಪರಾ. ಹೋರಟೆ : ೧. "ಹೋರಟೆಯನೆ ಪೋರ್ಕೆಯು" (ಶಾರತ. ೩೯) ; ಹೋರಟೆಗೆ ಬರಹೇಳು ಭರ್ಗನನಿವನ ಪಾಡೇನು (ಕುಮ್ಮಾರ. ೯-೯೨) ; ಹೋರಿದರು ಹರಿ ಜಂಭರಿಬ್ಬರ ಹೋರಟೆಗೆ ಹದಿನೆಂಟುಮಡಿಯನೆ (ಕೊರಶಾ. ೬-೩೨-೯೬) ; ಎನಗೆ ತನಗೆಂದಮರದಾನವಜಗಕೆ ಹೋರಟೆಯಾಯ್ತು (ಶಿಶಾಗ. ೬-೯-೩). ೨. ಪುರಾಣವೆಂಬುದು ಪುಂಡರ ಗೋಷ್ಠಿ ತರ್ಕವೆಂಬುದು ತಗರ ಹೋರಟೆ (ಅಶಕಂ. ೦೦೩-೯೬೩) . ೪. ತಿಕ್ಕಾಟ ; ತಾಕಲಾಟ ; ಘರ್ಷಣೆ : ಕಂಬಿಯ ಕಡಿಯಣದ ಕೀಲಣದ ಹೋರಟೆಯ ಧಾರಾ ಧಾರಿಯೊಳ್ ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯಂಗುಡೆ (ಗಂಶ. ೬-೩೩ ಪ) ; ಅಳುವ ಶಿಶುವನು ತೆಗೆದು ತೆಕ್ಕೆಯ ಪುಳಿಜಲದಲಿ ನಾದಿ ಹರುಷದ ಬಳಿಯ ಲಜ್ಜೆಯ ಭಯದ ಹೋರಟೆಗಳಲಿ . . . ಗಂಗಾಜಲದೋಳಗೆ ಹಾಯ್ಕಿದಳು ಜನದಪವಾದಭೀತಿಯಲಿ (ಕುಮ್ಮಾರ. ೩-೨೦) ; ಪೊಯ್ದಾಡಿ ತರಿಯಂ ನಿವಾಳಿಸಿದರಾಳ್ದಂಗೆ ಕೈದುಗಳ ಹೋರಟೆಯ ಖಣಿಲಿಟಲ ರಭಸದಿಂದ (ಕೃಶಾಶಾ. ೨೨-೬). ೫. ವಿವಾದ ; ಚರ್ಚೆ : ಕುಱುಹಿನ ಮಱವೆಯೊಳಗಿಪ್ಪ ವಸ್ತುವ ಕಾಬ ತೆಱನಿನ್ನಾವುದೊ ಇಲ್ಲವು ಮಱವೆಯ ಮಾತಲ್ಲದೆ ಬಱಿಯ ಹೋರಟೆಗೆ ಇವರು ಬಲ್ಲವರಲ್ಲವೆಂದೆ (ಪಶೀಲಶಾ. ೬೯-೨೬೦) ; ಆಱು ಬೆಟ್ಟವನೊಬ್ಬ ಹಾಱಬಹುದೆಂದಿಹರೆ ಹಾಱ ಬಹುದೆಂದು ಎನಬೇಕು ಮೂರ್ಖನೊಡ ಹೋರಟೆಯ ಸಲ್ಲ (ಸರ್ವಜ್ಞ. ೦೦೩೨). ೬. ಹೊಡೆತ ; ಪೆಟ್ಟು ; ಆಘಾತ : ಪೂಗಣೆಯ ಹೋರಟೆಗೆ ತರಹರಿಸದಬಲೆ ನೀನೀಗ ನೋಟದ ಹಂಬಲಂ ಬಿಟ್ಟು ಹೃನ್ಮಧ್ಯಕೀ ಗಾಡಿ ಕಾಱನಂ ತಂದು ನೆರೆದಪೆನೆಂದು ಕಣ್ಮುಚ್ಚಿ ಜಾನಿಸಿದೊಡೆ ಈ ಗಲಭೆಯೊಳ ಗಪ್ಪುದೇ (ಕಂಪು. ೦೯-೯೦) ; ಅಯ್ಯೊ ನಾನಾಱಿ ವಿಷಯದ ಹುಯ್ಯಲ ಹೋರಟೆಯು ಹೊಚ್ಚಹೊಸ ಕಮ್ಮರಿಯೊಳು ಕಯ್ದೂಱಿ ಬಿದ್ದೆ (ಕಂಕಕಂ. ೦೦-೩೯). ೭. ಬಿರುಬು ; ರಭಸ ; ವೇಗ : ಅಳಿಕುಲಾಳಕಿ ಬಂದಳೊಬ್ಬಳೆ ಮಳೆಗೆ ಕೈಯೊಡ್ಡಿ ಬಲಿದು ಮೈ ನಡನಡುಗಿ ಹಲುಹಲು ಹಳಚಿ ನೆನೆದಳು ವಾರಿಯಲಿ ತನು ಹಳಹಳಿಸೆ ಬಳಲಿದಳು ಚರಣದ ಹೊನಲ ಹೋರಟೆಗೆ (ಕುಮ್ಮಾರ. ೯-೨೩) ; ಬಿರಿದುದಬುಜಭವಾಂಡವಬ್ಬರ ಧುರದ ಹೋರಟೆಗೆ (ಕೊರಶಾ. ೯-೨-೩೬). ೮. ಶ್ರಮ ; ಪ್ರಯಾಸ : ಮಿಗ್ಗ ಬೇಸಾಯವನು ಮಾಡುವ ಹೆಸ್ಗಳದ ಹೋರಟೆಯ ಕಾಣುತಲಕ್ಕ ಱಿಂದಲಿ ನೋಡಿ (ಕೃಶಾಂ. ೦೦-೩). ೯. ಪೀಡೆ ; ಜಂಜಾಟ ; ಹಿಂಸೆ : ಹೊಕ್ಕು ಹೋರಟೆಯಲ್ಲವನು ಹೊಯ್ದಿಕ್ಕಿ ಸುಖಸಂಪೂರಂತು ನಿಜಪದದಿಕ್ಕೆ ನಿನಗಹುದು (ಕೃಶಾಂ. ೦೨-೦೬); ಅಯ್ಯಯ್ಯೊ ಧ್ಯಾನದ ತುಯ್ಯಲುಂಡಾತ್ಮನೊಳುಯ್ಯಲನಾಡಿ ಸುಖಿಸದೆ ಗುಯ್ಯಲೆತ್ತುವರುತೆ ಮುಯ್ಯ ಹೋರಟೆಯೊಳು ಹುಯ್ಯಲನುಂಡೆ ನಾನು (ಶರಕ. ೬೬-೨೬).

[ಪೋರ್₁ + — ಅಟೆ]

**ಪೋರಟೆವೆಱು** (ಕ್ರಿ). ಸ್ಪರ್ಧೆಹೂಡು ; ಪೈಪೋಟಿ ನಡೆಸು : ಪುರುಡು ಪೋರಟೆವೆತ್ತು ಜೊತ್ತು ಗತಕಂ ಗನ್ನಂ ಕಚಾಕರ್ಷಣಂ . . . ಪಿರಿದುಣ್ಮಲ್ ವಧು ನಲ್ಲನೊಳ್ ನೆರೆವುತಿರ್ದಳ್ಕಾಮಸಾರಂಭದಿಂ (ಕೃಶಾಂ. ೨೯-೦೬೦).

[ಪೋರಟೆ + ಪೆಱು]

**ಪೋರತನ** (ನಾ). ಹುಡುಗುತನ ; ಹುಡುಗುಬುದ್ಧಿ : ಇಂತಾ ಪೋರತನ ನಾನರಿಯೆ ಬೇಕೆಂದಾ ನನಪನುತಡವಿ ಬೆನ್ನಿಗೆ ತರಿಸುವುದು ಗುಣವೆ (ರೀವಪು. ೬-೨೨೩). [ಪೋರ + — ತನ]

**ಪೋರಾಟ, ಹೋರಾಟ** (ನಾ). ೧. ಕಾಳಗ ; ಯುದ್ಧ ; ಕದನ :

ಘನವೇತರಿಂತು ಭಾವಿಸಿದರು ತಮ್ಮಯ ಮನದೊಳಿಂತಿವರ ಪೋರಾಟ ಘನದುಃಖಹೇತು ತವೆಗ್ಗಳು ಪರಸ್ಪರ ನೋಳ್ಪ ಜನಕೆ ಪಾಪಾಸ್ಪದವೆಂದು (ಶಾಂತೀಶ. ೩-೧೨). **ಹೋರಾಟ :** ೧. ಅದು ಎಲ್ಲ ರೀತಿಯಿಂದಲೂ ಅಂತಿಮಹೋರಾಟಕ್ಕೆ ಸಿದ್ಧವಾಯಿತು (ಅಶ್ವತ್ಥ. ೦೯೩). ೨. ಜಗಳ ; ಕಚ್ಚಾಟ : ಧಾರಿಣೀಶನ ವಾಣಿಯೊಳು ನಿನ್ನ ವಾಣಿಯ ಸೇರಿಸಿ ಪಿತನ ಕೈಯಿಂದ ಧಾರೆಯೆಱಸುವವನು ನಿಮಗಿಬ್ಬರಿಗೆ ಬಂದ ಹೋರಾಟ ಹೋಲಿದು ಹೋಹಂತೆ (ಭರತ. ೯-೦೨೯). ೩. ವಾದ ; ಚರ್ಚೆ : ಮಾತಿನ ಮಾಲೆಯ ಹೆಚ್ಚು ಕುಂದಿನ ಹೋರಾಟವುಳ್ಳನ್ನಕ್ಕರ ಅದ್ವೈತಿಯಲ್ಲ (ಅರಣ. ೩೩-೯೭). ೪. ಒದ್ದಾಟ ; ಶ್ರಮ ; ಹೆಣಗಾಟ : ಪೇರೇರುಗಳ ಕಿಚ್ಚು ಸಿಡಿತದಿಂ ತಣರುತಿರೆ ಹೋರಾಟ ಬಾಳ್ವೆಯಂ ಬೇಡನ್ನುತಿತ್ತು (ಶಾಂತಿರ. ೦೦೩-೨೦೩) ; ಆ ಮುಗ್ಧಪ್ರಶ್ನೆಯಲ್ಲಿ ಅವನ ಬದುಕಿನ ಸಮಸ್ಯೆಯೇ ಹುದುಗಿತ್ತು . . . ಈ ವಯಸ್ಸಿಗೇ ಇಂಥ ಹೋರಾಟವೇ (ಹೂಸಕ್ಕಿ. ೩೯).

[ಪೋರ್$_1$ + ಆಟ./ತಮಿ. ಮಲ. ಪೋರಾಟ್ಟಮ್ ; ತೆಲು. ಪೋರಾಟ]

**ಪೋರಾಣ್ಮ** (ನಾ). ದಂಡನಾಯಕ ; ದಳವಾಯಿ : ಪೋದವನಾ ಪೋರಾಣ್ಮನ್. ಪೋದವರಾ ಪೊಣ್ಮಾಳ್ಗಳೆ ಬಾರದೆ ಬಗೆ ಬೆದರುತಿಹುದು (ಶಾರಸಿ. ೦.೦೯). [ಪೋರ್$_1$ + ಆಣ್ಮ (<ಆಳ್ಮ)]

**ಪೋರಾಳ್**, ಹೋರಾಳು (ನಾ). ಯುದ್ಧ ಮಾಡುವವನು ; ಶೂರ : ಏಷಿಯದ ಸಾಮ್ರಾಜ್ಯಕೇಂದ್ರವೇ ! ಓ ಪರ್ಸ್ ! ಐಶ್ವರ್ಯಭೂಮಿಯೇ, ಪೋರಾಳ ತಾಯ್ ತವರೆ ! (ಶಾರಸಿ. ೦೦-೨೬೨). **ಹೋರಾಳು :** ನಿರ್ಧರವಾದ ದಿನ ಹೋರಾಳುಗಳು ಬರೀ ಚಡ್ಡಿ ಧರಿಸಿ ನಗುಮುಖದಿಂದ ಅಖಾಡಕ್ಕೆ ಇಳಿಯುತ್ತಾರೆ . . . ಹೋರಾಳುಗಳು ತಮ್ಮ ಇಷ್ಟ ದೇವರನ್ನು ಪ್ರಾರ್ಥಿಸಿದ ಮೇಲೆ, ಕತ್ತಿಗಳನ್ನು ತಾಗಿಸುತ್ತಾರೆ (ಶ್ರಮಣ. II. ೨೮೩). [ಪೋರ್$_1$ + ಆಳ್$_3$]

**ಪೋರಿ$_1$** (ನಾ). (ತುಂಟ) ಹುಡುಗಿ ; ಬಾಲಕಿ : ಊರಿಗುಕ್ಕಿಯ ಚಿಂತೆ ಪೋರಿಗೆ ಮದುವೆಯ ತೋರ ಚಿಂತೆ (ಜ್ಞಾನತ. ೦೯-೮೮) ; ನಿನ್ನೆ ಹುಟ್ಟಿ ಇಂದು ಕಣ್ಣು ತೆಗೆದ ಪೋರಿ ನೀನು (ಜೀವಕ್ರ. ೦೦೦) ; ಹಾಡು ಮುಗಿಸಿದ ತಾಯಿಯ ಮುಖವನ್ನೇ ನೋಡಿ ಆ ಪೋರಿ ನಕ್ಕಳು (ರಂಗಣ. ೦೯೭).

[ಪೋರ + – ಇ$_2$./ ತುಳು. ಪೋರಿ ; ತೆಲು. ಪೋರಿ, ಪೋಱು]

**ಪೋರಿ$_2$**, ಹೋರಿ (ನಾ). ೧. ಎಳೆಯ ಪ್ರಾಯದ ಬೀಜದ ದನ ; ಗಂಡು ಕರು : "ಕಱವೆಳಗಱು ವತ್ಸ ಶಕ್ರತ್ಕರಿನಾಮಂ ತಿರ್ದಲಾ[ಪ] ಪೋರಿಯಿ ದಮ್ಮಂ" (ಚಮ್ಮಕೋ. ೬೯-೩) ; ಗೋಮಂಡಳದೊಳೊರ್ವ ಪೋರಿಗಳಾಗಿ ರಾಜಮಂದಿರದ ಸೀಯದಾರದೊಳ್ ಪೊಣರ್ದು (ಶಾಂತಿಪು. ೯-೯೭ ಪ) : ಆದೊಡವಂ ಕೊಟ್ಟು ಪಯನಾಪಂ ಕೊಳ್ವೆಂ ಅವರ್ಕೆ ಪುಟ್ಟಿದ ಪೋರಿಗಳಂ ಕಿರ್ದಿಯಾರಂಬಂಗೆಯ್ವ (ಶಂಕಶಂ. ೦೯೬-೬) ; ಬಾಲವೃಷಭಯುಗದೊಳ್ ಪೂಡಿರ್ದ ರಥವನೆಳೆಯ ಪೋ[ಶಾಶಾಂ. ಪಾ]ರಿಯನೇಱಿದ ನೃಪಪುತ್ರನಂ ನೃಪಾಳಂ ಕಂಡು (ಪುಣ್ಯಾಶ್ರ. ೯-೧೩). ೨. ಆಡು, ಎಮ್ಮೆ ಮೊದಲಾದವುಗಳ ಗಂಡುಕರು : ತನ್ನಿಂದಂ ತಾನೋರಂತೆ ಕುದಿದು ಪಾಱುಗುಪ ಸಾರಂಗದ ಪೋರಿಯಂದವಂ ನೆಱ ಪೊಲ್ತಂ (ಶಬ್ದಮ. ೧-೦೩೯) ; ಜನಕಂ ಯಶೋಧರಂ . . . ವಿನಾಪಾಡಿನ ಪೋರಿ [ಶಾಶಾಂ. ಪೋಂತು] ಪೋಂತು ಕುಕ್ಕುಟವೆನೆ ಪುಟ್ಟಿಯುವಿಗಳಭಯರುಚಿಯಾಗಿರ್ದಂ (ಜಕೋಶ. ೪-೩೭). **ಹೋರಿ :** ೧. "ತರ್ಣಕಃ, ವತ್ಸಃ – ಈ ೨ ಹೋ(ಱ)ರಿ" (ಹಲಾಯು. ೪೪-೦೦೯) ; ಸ್ಫಟಿಕದ ಮಧ್ಯದಲ್ಲಿ ಬಹುವರ್ಣದ ಹೋರಿಯ ತೋಱ ಪಿಡಿವವನಂತೆ (ಪೋಣವಾ. ೧೬೦-೧೦೦) ; ಆ ಪಶುಗಳು ಕಾಮಧೇನುಗಳಾ ಪುರದ ಹೋರಿಗಳು ನಂದಿಯ ರೂಪಿನಂತಹವು (ಬಸವ. ೪-೩೩) : ತರಿಸಿ ಹೋರಿಯು ಗವಿಯು ಗೂಳಿಯ ಬರಿಸಿದನು ಕೆಲಕೆಲವ ಕೃಷಿಕರಿಗಿರಿಸಿದನು ಗೋಲಕ್ಷವಿತ್ತನು ವಿಪ್ರಸಂಕುಲಕೆ (ಕುಮಾರ. ೦೬-೩೭). ೩. ಎತ್ತು ; ಬಸವ : ತಳಾರಿರಕ್ಷಕನಂ ಕನಲಪೋರಿಗಳ್ ಪೂಡಿ ಪೆಟ್ಟ ಮೆಟ್ಟಿವಪರ್ (ಸುಕುಮಾ. ೬-೩ ಪ) ; ಹಿಡಿ ಹಿಡಿ ಬಂಡಿಎತ್ತುಗಳ ಬಗಿದ ಬಲುಹೋರಿಯ ಕೊರಳ ಜೊತ್ತಗೆಗಳಂ ಪಱ ಪಱ (ಬಸವ. ೩೬-೨೮) ; ಭಂಡಿಯ ಹರಿದು ಸೆಳೆದೆರಿದನು ತಾ ಬಲುಹುರಿಯ ಹಗ್ಗವ ಹಿಡಿದು ಜಡಿದನು ಹೋರಿ ಕೋಣಗಳ (ಸಂಶಕ. ೨೩-೬೦) ; ಹೋರಿ ನಡೆಯುದಿದ್ದರೆ ದಾರಿ ಉದ್ದ ಅಂದ ಹಾಗೆ (ಗಾದೆ).

**ಹೋರಿಗರು** = ಗಂಡುಕರು : "ದಮ್ಯಃ, ವತ್ಸತರಃ—೨ ಹೊರುವ ದಕ್ಕೂ ಯೆಳೆಯುವದಕ್ಕೂ ಉಳುವದಕ್ಕೂ ತಿದ್ದಲ್ಪಟ್ಟ ಹೋರಿಗರು" (ಸಿದ್ಧಾಂತಿ. ೨೯೨).

[ದೇ.॥ ತುಳು. ಬೋರಿ, ಹೋರಿ ; ಕೊಡ. ಪೋರಿ ; ಕೋತ. ಪೋರ್ಯ್‌]

**ಪೋರಿಸು**, ಹೋರಿಸು (ಕ್ರಿ). ೧. ಹೋರಾಡಿಸು ; ಯುದ್ಧ ಮಾಡಿಸು : ನೆಗಟ್ದ ಮಲ್ಲರುಮಂ ಪಿಡಿದೊತ್ತಿ ಗೆಲ್ದ ಜೆಟ್ಟಿಗರೆನೆ ಸಂದ ಮಲ್ಲರನೆ ಪೋರಿಸಲುಂ ಪಿರಿದೊಂದು ದೋಹಳಂ ನೆಗಟ್ದುದು ಗರ್ಭದರ್ಭಕನ ದೋರ್ಬಲಗರ್ವಮನಂದು ಪೇಟ್ವಪೋಲ್ (ಆದಿಪು. ೬-೯೩) ; ಭೀಮನೆಮ್ಮಿ ಭರದಿಂದಂ ಯುದ್ಧಮಂ ಬೇಡಿ ಮಾಗಧನೊಳ್ ಪೋರಿಸುವಲ್ಲಿ ಶಕ್ತಿಕಳೆಯಂ ಭೀಮಂಗೆ ಕೊಟ್ಟುದ್ಭುತಪ್ರಧನಾಟೋಪದೆ ಭೀಮನಿಂ ಕೊಲಿಸಿದಂ ಕೃಷ್ಣಂ ಜರಾಸಂಧನಂ (ಜಗ. ೦೬-೯೦). ೨. ಕಾದಾಡಿಸು ; ಜಗಳವಾಡಿಸು : ತಗರಂ ಪೋರಿಪ ಬಗೆಯಿಂ ತಗರಂ ವಿನೋದದಿಂದಂ ಪೊರೆವಂ (ಶಂಕಶಂ. ೦೬೯-೦) ; ಪಟುವೈರಿನಿರ್ಧೂತರೆನಿಪ ಜೋದರ್ಕಳುಕುಶವಿಕ್ಕಿ ಪೋರಿಸಿದರಾನೆಗಳನು (ಕಂಪು. ೨೪-೯). ೩. ಹಿಂಸೆಗೆ ಒಳಪಡಿಸು ; ಒದ್ದಾಡಿಸಂ ; ಹೆಣಗಿಸು : ಚಾರುಸುರಾಂಗನಾರತಿಸುಖಾಮೃತಸೇಚನೆಗೊಂದು ಕಾಯಮಂ ಪೋರಿಸಿ ನೋಟದೊಳ್ತೊಡರ್ದು ಶಬ್ದಮನಾಲಿಸಿ ಬೇವ ಬೇವಸಂ ಪೋ ರುಚಿಯಲ್ಲಂ (ಸುಕುಮಾ. ೪-೩೬). **ಹೋರಿಸು :** ೧. ಮಲ್ಲರ ಹೋರಿಸುತ್ತಿಹ ಪಗಡೆ ನೆತ್ತಗಳಾಡಿ ನಲಿವ . . . ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂಪಾ. ೨-೬೬) ; ಶ್ರೀರಾಮ ರಾವಣನ ಹೋರಿಸುತ ಲಂಕೆಯನು ಸೂರೆ ಮಾಡಿಸಿದಂತ ಶೂರ್ಪನಖಿಯಂದು . . . ನರಿಯು ನೀನೆಂದು (ಕಂಪ. ೬೩-೪) ; ಕಂಡವರೆದೆ ನಡುಗುವಂತೆ ಅವರನ್ನು ಹೋರಿಸುವನು (ಕನಾಜ. ೯೬). ೨. ನಿಮ್ಮ ಮಹಿಪನೊಬ್ಬನೆ ಹಿತವಲ್ಲ ವಹಿಸಿಬಿಟ್ಟೆವಮ್ಮ ಹೋರಿಸುತ ತಾ ನೋಡುತುತ್ಸಹದೊಳಿದ್ದವನೆಂದಳೊಡನೆ (ಕರಕ. ೦೯-೯೬). ೩. ಅವರವರ ಕೃತಕರ್ಮಸಂಸ್ಕಾರ ಹೋರಿಸುವುದಲಿಸುವುದು ಸಾಕ್ಷಿಕ ಸೇರಿಸುವುದು (ಕುಮಾರ. ೨೦-೦೬). [ಪೋರ್$_1$ + – ಇಸು$_3$]

**ಪೋರು$_1$** 'ಪೋರ್$_1$' ನೋ.

**ಪೋರು$_2$** 'ಪೋರ್$_2$' ನೋ.

**ಪೋರು$_3$** 'ಪೋರ್$_3$' ನೋ.

**ಪೋರುಗೈ** (ಕ್ರಿ). ಜಗಳವಾಡು ; ಕಲಹಮಾಡು : ನೆರೆಯೊಳ್ ಸೇರಲು ಪೋರುಗೈದು ಸತಿ ತಾಂ ಪೋಗಟ್ಟುವಳ್ ಸಾಲಿಗರ್ ಕಲುಗುಂಡಂ ತಲೆಗೇಱಪರ್ ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಂ (ಸೋಮೇಶ. ೩೦).

[ಪೋರು$_2$ (< ಪೋರ್$_2$) + ಗೈ (< ಕೆಯ್$_1$)]

**ಪೋರುಗೊಳ್** (ಕ್ರಿ). = ಪೋರುಗೈ : ಪಳಿವವರೊಳು ಪೋರುಗೊಳದೆ ಮುಳುಗಿಯೆಬ್ಬಿಪರೊಳು ಮೂದಲೆಯನಗದೆ ಒಳುಮೆಂದಿರೊಳ್ಳಿವಡೆವುದು (ಹರಿಚ. ೪-೯೦). [ಪೋರು$_2$ (<ಪೋರ್$_2$) + ಕೊಳ್$_1$]

**ಪೋರೆ**, ಬೋರು$_1$, ಬೋರೆ$_1$ (ನಾ). ೧. ಸಣ್ಣಗುಡ್ಡ ; ಮೊರಡಿ : ದಿಬ್ಬ : ಉರಿಗಳಿಂದೋರೆಯಿಂ ಪೋರೆಯಿಂ[ಶಾಶಾಂ. ಉರಿಗಳಿಂದೊರೆಗಳಿಂ ಪೊರೆಗಳಿಂ, ಜರಿಗಳಿಂದುರಿಗಳಿಂ ಪೋರೆಯಿಂ]ದಿಡಿದ ಕಮ್ಮರಿಗಳಿಂ ಕಱಿವ ಕೆಂಡದ ಮಳೆಗಳಿಂ ಗಜರ್ವ ಮರುಳ್ಗಳಿಂ ಶಾಕಿನಿಯರಿಂ ದಾಕಿ. ಯರಿಂದವಮಾ ವಧು ಬೆವಱಸುವುದು (ಕಂಪು. ೩೬-೨೩) : ಲಲಿಸಸಿತ

ತೆರಳಿದರು ಮುಂದಕಂ ಗಂಧಮಾದನನೆಂಬ ಗಿರಿಯನ್ನಡರ್ದೊರೆಪೋರೆಗಳ ಮುರಿಗಳಂ ಜರಿಗಳಂ ಕಳಿದು (ತುರಂಗ. ೯೪-೨೩). **ಬೋರು₁ :** ೨. ಏಟು ತಗುಲಿದುದರಿಂದ ಉಂಟಾದ ಬುಗುಟೆ,–ಊತ : ಕಿಟಕಿ ಬಾಗಿಲು ತಾಗಿ ಮಗುವಿನ ಹಣೆ ಮೇಲೆ ಬೋರು ಬಂದಿದೆ (ಲೋಕ). **ಬೋರೆ₁ :** ೧. ಕುರುಬನ ಕಟ್ಟೆಗೆ ಮೂಡದಿಕ್ಕಿನ ಬೋರೆ ಮೇಲೆ ಹುಟುಗಲ್ಲು ೧ (ಎಕ. XII, ಶ್ರೀರಂಗ. ೦೪-೦೩೪ ; 1686) ; ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ತಿಟ್ಟು, ಮರಡಿ, ಬೋರೆ, ತೆಂಬ, ತೆವರು ಎಂಬ ಹೆಸರುಗಳು ಬರುತ್ತವೆ (ಕೊಗೋಳ. ೦೧); ರಜವಿದ್ದ ದಿನ ಮಧ್ಯಾಹ್ನ ದನಕಾಯಲು ಬೋರೆಗೆ ಹೋಗುತ್ತಿದ್ದೆ (ಧರ್ಮಶ್ರೀ. ೦೪). ೨. ಕಬ್ಬಂ ಪೊತ್ತಡೆ ಶಿರೋಭಾಗವೂಱಿದ ಬೋರೆಗಳವೊಲು ಹೊಡದು ರಾವುಗಳು ತಾಗಿದೊರಸಿದ ಮಸಗಿದೊತ್ತಿನ ಮೇಗಣೆಡೆಗಳು (ಚಸಕೃ. ೩೯-೩೯); ಮಕ್ಕಳ ಮಂಡೆ ಬೋರೆ ಹೋಹಂದದಿ ಹೆಟ್ಟಿ (ಶೇಖಸಂ. ೦೩-೦೦೬); ಹೊತ್ತ ಹೊಱೆಗಳಿಂದ ನೆತ್ತಿ ಬೋರೆಯಾ (ಅಮು.ಸಾಂ. ೬-೩).

[ದೇ॥. ತಮಿ. ಪೊಱ್ಱು. ಪೊಱ್ಱು; ಮಲ. ಪೊಱ್ಱ; ತುಳು. ಬೋರೆ=ಬೆಟ್ಟದ ತುದಿ]

**ಪೋರ್ಕಳ** (ನಾ). ಯುದ್ಧರಂಗ ; ರಣರಂಗ : ಕಾಳಗದ ಪುಲಿ ತಾನ್, ಕಾಳಗದ ಪುಲಿಗಳನ್ ಪೋರ್ಕಳದೆ ಕಳೆಯಾನ್, ಸಾವಿಗೀಯಾನ್ (ಶಾರಸಿ. ೨೩-೨). [ಪೋರ್₂ + ಕಳ₁]

**ಪೋರ್ಕಳಿ** (ನಾ). ಯುದ್ಧ ; ಕಾಳಗ ; ಹೋರಾಟ : ಈ ಬಗೆಯಲ್ಲಿ ಪೋರ್ಕಳಿ ಮುಂದುವರಿದರೆ ನಾವು ಕಾಳಗದಲ್ಲಿ ಗೆಲುವು ಗಳಿಸುವುದು ಪ್ರಯಾಸ (ಹುಂಹಾ. ೩೩೬). [< ಪೋರ್ಕಳ]

**ಪೋರ್ಕುಳಿ, ಪೊರ್ಕ್ಕುಳಿ, ಪೊರ್ಕುಳಿ, ಹೊರ್ಕ್ಕುಳಿ, ಹೊರ್ಕುಳಿ, ಹೋಕುಳಿ** (ನಾ). ೧. ಯುದ್ಧ ಮಾಡುವವನು; ಹೋರಾಡುವವನು : ಕುಳಿ ಪ್ರತ್ಯಯಕ್ಕೆ–ಪೋರ್ಕುಳಿ[ಪಾಠಾಂ. ಪೊರ್ಕುಳಿ, ಪೊಱಕುಳಿ, ಹೋರುಕುಳಿ] ಓಡುಕುಳಿ (ಶಮದ. ೨೦೩ ಪ್ರಯೋ); ಮಾಱುಪ್ಪುದು ಶೀಲವಿಘಾತಂ ಮಾಱುಂಕುಳಿ, ಏವಂ ಅಟ್ಟುಂಕುಳಿ, ಪೋರ್ಕುಳಿ (ಶಬ್ದಾಮ. ೩೪೩ ಪ್ರಯೋ). ೨. ಕಾಳಗ ; ಯುದ್ಧ; ಹೋರಾಟ : ಪೂವಿನೊಳಂ ಪೋರ್ಕುಳಿ ನಮಗೇವುದೊ (ಶಂಕರಾ. ೧೨-೬೦). ೩. ಜಗಳ; ಕಚ್ಚಾಟ : ಆಗಳಾ ಗಜದ ಪೋರ್ಕುಳಿ[ಪಾಠಾಂ. ಪೊರ್ಕುಟು]ಯಿನವಯವದೊಳಲ್ಲಲ್ಲಿಗಳವಟ್ಟ ರದನವಿಘಟ್ಟನರೇಖಾನಿಕಾಯಮುಂ . . . ಬೇಱೊಂದು ಚೆಲ್ವನವಟ್ಟಿಸಿ ವೀರರಸಕ್ಕಾಗರಮಾಗೆ (ಜಗಂ. ೬-೩೩ ವ); ಕಡೆಯೊಳ್ ಕೋಣನ ಪೋರ್ಕುಳಿ ಗಿಡುವಿಗೆ ಮಿತ್ತೆಂಬ ತೆಱದೆ (ಹುಕೋಶ. ೩-೬೨). 'ಪೋರ್ಕುಳಿವಕ್ಕಿ' ಪರಾ. ೪. ಪ್ರತಿಭಟನೆ; ವಿರೋಧ ; ಅಡ್ಡಿ : "ತಳ್ಪೊಯ್, ತಡಂಬರೆ, ಪೋರ್ಕುಳಿ . . . ಈ ೨೬ ಪ್ರತಿಹತಕ್ಕೆ ಪೆಸರ್" (ಕಕಾ. ೩೯-೨೯೬). ೫. [ಕಾಮಶಾ] (ರತಿಕ್ರೀಡೆಯಲ್ಲಿಯ) ಸೆಣಸಾಟ; ಪ್ರಣಯ ಕಲಹ : ವಸುಧಾವಲ್ಲಭ ಮೇಘಕಾಲವಿಟನೊಳ್ ಸಂಭೋಗವಂ ಮಾಡೆ ಬಣ್ಣಸರಂ ಪೋರ್ಕು[ಪಾಠಾಂ. ಪೊಕ್ಕು]ಳಿಯಿಂದಲೇ ಪಱಿದು ಸೂಸಿತ್ತಲ್ಲದಂದೆ ತೃಣಂ ಪೊಸಮುತ್ತಂ ಕಿಸುಗಲ್ಗಳಂ ಕಿದಱ ಕಣ್ಗಂಬಾದುವೆಂಬಂತ ದೇನೆಸೆದೊಪ್ಪಿದುರ್ವಿ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ (ಶಂಕರಾ. ೭ ೧೯೬); ಪೋರ್ಕುಳಿ[ಪಾಠಾಂ. ಪೊರ್ಕುಟು]ಯಿಂದಮೆ ಹಂತಿದಪ್ಪಿ ಕಾಱುಂಬಱಿಯಂ ತೆರಳ್ದ ಕುರುಳ್ ... ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಚಂದ್ರಕೃ. ೬-೭೨). (ಗು). ೬. ಜಗಳವಾಡುವ ಸ್ವಭಾವದ ; ಕಲಹಶೀಲ : ಸುಣ್ಣದೆಲೆಯನೊತ್ತಯಿಟ್ಟು ಮದದಾನೆಯುಮಂ ಮಾಣಿಕಮುಮನೊತ್ತವಿಡಿಸಲುಟ್ಟುವ ಚಿಕ್ಕ ಪೋರ್ಕುಳಿ ಬೋಜಂಗರುಮಂ . . . ನೋಡಿ (ಶಂಕರಾ. ೪-೬೭ ವ). **ಪೊಕ್ಕುಳಿ :** ೨. ಪೂವಿನೊಳಂ ಪೊಕ್ಕುಳಿ ಕೇಳಾವಂಗಂ ಪೊಲ್ಲದು (ಉಪಾರ. ೧೨-೬೬). ೩. 'ಪೊಕ್ಕುಳಿವಕ್ಕಿ' ಪರಾ. ೫. ಆಲಿಂಗನಂ ಪಿರಿದುಂ ಪೊಕ್ಕುಳಿ ಚುಂಬನಂ . . . ಸತ್ಕಾಮಿನೀಸುರತಕ್ರೀಡೆಯೊಳೊಪ್ಪೆ ಸೌಖ್ಯದೊದವಿಂದಿರ್ದಂ ಮಹೀವಲ್ಲಭಂ (ಶ್ರೀಕೃಪ. ೦೬-೬೬). ೬. ಜಗಳವಾಡುವ ಸ್ವಭಾವದ ಹಕ್ಕಿ; ಕೋಗಿಲೆ : ವರಫಲವನುಂಬ ಪೊಕ್ಕುಳಿಗಳಿಂ ಗಿಳಿಗಳಿಂ . . . ವನವನಂಗಳ್ ಮೆಱೆದುವು (ಕಬಿಕೃ. ೯೩-೨೩). **ಪೊರ್ಕುಳಿ :** ೨. ಪೊಣರ್ದು ಕುರುಶ್ರೇಷ್ಠನೊಳ್ ಕಾದುವಾ ಯುದ್ಧದಗುರ್ವುಂ ಪೂವಿನೊಳ್ ಪೊರ್ಕು[ಪಾಠಾಂ. ಪೊಕ್ಕು]ಳಿ ನೆಗಟ್ದವೊಲಾಯ್ತು ಮುರಧ್ವಂಸಿಗಾಗಳ್ (ಜಗಂ. ೬-೯೨). ೩. 'ಪೊರ್ಕುಳಿವಕ್ಕಿ' ಪರಾ. ೪. "ಪೊರ್ಕುಳಿಯು ತಳ್ಪೊಯ್ಯುಂ" (ಕವಿಕಂ. ೦೩೮). ೫. ಆ ತಂತುವಾಯಂ ಮುನ್ನಮೆ ತನ್ನ ಪೆಂಡತಿ ಜೋಡೆಯೆಂದು ಸಂದೇಹಂಬಡುವಾತನವಳ ವಿಪರೀತವೇಷಂ ತನಗೆ ರೋಷಮನೀಯೆ ಸಾಯೆ ಸದೆಬಡಿದು . . . ಕಳ್ಳ ಸೂಳೆನೊಳವಮವಳ ಪೊರ್ಕುಳಿಯೊಳಂ ಬಱಲ್ದು ನಿದ್ರಿತನಪ್ಪುದುಂ (ಶಂಕಕಂ. ೬೩-೦). ೮. ಪೆಟ್ಟು; ಹೊಡೆತ : ಸೀರಾಟವಾಡುವ ಗಾಡಿಕಾರ್ತಿಯರ ಘನಜಘನಂಗಳ ಪೆರ್ಮೊಲೆಯ ಪೊರ್ಕುಳಿಯಿಂ ಪಱಿವಱಿಯಾದ ಪೆರ್ದೆಱೆಗಳುಮಂ ತಳೆದ ಪೂಗೊಳಂಗಳೊಳಂ (ಕಾದಂಬ. ೩೨೬). **ಹೊಕ್ಕುಳಿ :** ೨. ಎಲೆ ಪಾತಕಿ ಕಡುಹಂದೆಯು ಕೊಂದು ಹೊಕ್ಕುಳಿಯು ಗೊಂದಣದೊಳು ಹೊಕ್ಕು ಬಹುದುಃಖವಡೆವುವಂದಪಹುದೇ ಕಲಿಗಳಿಗೆ (ಶ್ರೀಪಾಂ. ೬-೬೬). 'ಹೊಕ್ಕುಳಿಗೊಳ್' ಪರಾ. **ಹೊರ್ಕುಳಿ :** ೨. 'ಹೊರ್ಕುಳಿಸಂ' ಪರಾ. **ಹೋಕುಳಿ :** ೨. 'ಹೋಕುಳಿಸು' ಪರಾ.

**ಪೋರ್ಕುಳಿಯಾಗು, ಪೊರ್ಕುಳಿಯಾಗು** = ೧. ಯುದ್ಧವಾಗು; ಹೋರಾಟವಾಗು : ಪೋರ್ಕುಳಿಯಾದಡೆ[ಪಾಠಾಂ. ಯಾಡದೆ, ಯೇದಡೆ]ಹರಿಯಂ ಮಾರ್ಕೊಳ್ಳದೆ ತಗೆದ ಕಯ್ಯ ಬಱಿಯಾನೆ ಬಂದಂ ಸೂರ್ಕಿದಿಭಪತಿಯ ಕಯ್ಯೊಳ್ ಸಿಕ್ಕಿ ತೊಗಲ್ವಾವೆಯಂದದಿಂ ಚಾಣೂರಂ (ಅರ್ಧನೇ. ೮-೦೦೩). ೨. ಪ್ರಣಯಕಲಹವುಂಟಾಗು : ಒಡನಲಿವ ನಲ್ಲಳಚ್ಯುತನಡಿಪದ್ಮಗಳಲ್ಲಿ ಕೇಳಿಗೆಳಸಿದಳವನೀಯಡಿಯೊಳ್ ಪೋರ್ಕುಳಿ[ಪಾಠಾಂ. ದನವನೀಯೆಡೆಯೊಳ್ ಪೊರ್ಕುಳಿ]ಯಾಯ್ತೆಂದಡಿಗಡಿಗಾಯೆಡೆಯನೊರ್ವಳೀಕ್ಷಿಸುತಿರ್ದಳ್ (ಜಗಂ. ೩-೨೮); ಒಡವಿದಲಂಪು ಪೋಪಿನವನಂಕದ ಬೀಕದ ಪೆರ್ಚು ಪೊಚ್ಚಱಂಗದ ಸಱಿಮಂಡಿಯೊಳ್ ಪೊರಳಿ ಪೊರ್ಕುಳಿಯಾದೊಡೆ (ಸೂಕ್ತಿಸು. ೮ ೪೩೪).

**ಪೋರ್ಕುಳಿಯಾಡು** = ಯುದ್ಧಮಾಡು; ಹೋರಾಡು : ಅಂತು ನೆಟಲೊಳ್ ಪೋರ್ಕುಳಿಯಾಡುವಂತೊರ್ವರೊರ್ವರಂ ಗೆಲಲ್ನೆಱೆಯದಿರೆ ದುರ್ಯೋಧನಂ ಕರಂ ಮುಳಿದು (ಗದಾಯು. ೮-೨೩ ವ); ಕಳದೊಳಪರಿರ್ವರುಂ ಪೋರ್ಕುಳಿಯಾಡಲ್ ಧರ್ಮಯುದ್ಧದಿಂದವನಟ್ಟಿಯಲ್ (ನೇಮಿಪು. ೦೦-೦೨೬). [ಪೋರ್₁ + –ಕುಳಿ₃]

**ಪೋರ್ಕುಳಿಗೊಳ್, ಪೊರ್ಕುಳಿಗೊಳ್, ಹೊಕ್ಕುಳಿಗೊಳ್** (ಕ್ರಿ). ಹೋರಾಡು ; ಯುದ್ಧಮಾಡು : ಬಂಧುರಭಟರ್ಕಳ್ ಭೂಪನೊಡನೆ ವೈರಂದೆಗೆದು ಭರದೆ ಪೋರ್ಕುಳಿಗೊಳಲ್ ತೊಡಗಿದರ್ (ಅಜಿತ. ೪-೩-೧೬). **ಪೊರ್ಕುಳಿಗೊಳ್ :** ಎನ್ನೊಳು ಪೊರ್ಕುಳಿಗೊಳ್ವುದೆನುತ ವಿಕ್ರಮೋನ್ನತನಿದಿರ್ವಂದು ನಿಲಲು (ನೇಮಿಸಂ. ೩೦-೯೬). **ಹೊಕ್ಕುಳಿಗೊಳ್ :** ತನ್ನೊಳು ಹೊಕ್ಕುಳಿಗೊಂಡ ಉನ್ನತಮಪ್ಪ ಗಜರತ್ನಮಾಯ್ದ್ವತು ತನ್ನ ತಾನಾ ನೃಪನೆಡೆಗೆ (ಶ್ರೀಪಾಂ. ೧೩-೦೦) ; ಅಂತಕನೊಳಗೆಕ್ಕಯೊಳಂ ಹೊಕ್ಕುಳಿಗೊಳ್ವೆನೆನಿಪ್ಪೆಕ್ಕತುಳದ ಭಟನಿವಹಂ ನಡೆದುದಿಳಾಧಿಪನಂ ಬಳಸಿ (ಜಯಕಾ. ೬-೦೮). [ಪೋರ್ಕುಳಿ + ಕೊಳ್₁]

**ಪೋರ್ಕುಳಿಯಿಕ್ಕು, ಪೊರ್ಕುಳಿಯಿಕ್ಕು** (ಕ್ರಿ). ೧. ಹುರುಡಿಸು ; ಸ್ಪರ್ಧಿಸಂ : ಮುಡಿವೂಱಿಯ ವಿಷಯದೆ ಮಱಿಗೆ ವಂದಂಧತಮಸಮಂ ಪೆಱಗಿಕ್ಕಿ ತನ್ನೊಳ್ ಮಲೆವ ಲಲನೆಯರ ವದನವಿಧುಬಿಂಬದೊಳ್ ಕಪೋಳಸಂಭೃತಪ್ರತಿಕೃತಿಚ್ಛದ್ಮದಿಂ ಪೊಯ್ಕ ಪೊರ್ಕು[ಪಾಠಾಂ. ಪೊಕ್ಕು]ಳಿ

ಯಕ್ಕಿಯುಂ (ಕರ್ಣಾ. ೬-೯೩ ಪ). ಪೊರ್ಕುಳಿಯಿಕ್ಕು : ೨. ಜಗಳ ವಾಡು ; ಕಲಹಮಾಡು : ಪೆಱರೊಳು ಪೊರ್ಕುಳಿಯಿಕ್ಕುತ್ತುಂ ಮೆಯ್ಯೊರಿಸುತ್ತುಂ ಬೊಟ್ಟುವರಿಸುತ್ತುಮಿವು ಮೊದಲಾದ ಪೆಱವುಂ ರಾಗದ್ವೇಷಹೇತುಗಳಪ್ಪುವಂ ಮಾಡುತ್ತಿರ್ಪುದಂ (ಶಬ್ದಾ. ೭೦೩).
[ಪೋರ್ಕುಳಿ + ಇಕ್ಕು]

**ಪೋರ್ಕುಳಿವಕ್ಕಿ**, ಪೊಕ್ಕುಳವಕ್ಕಿ, ಪೊಕ್ಕುಳಿವಕ್ಕಿ, ಪೊರ್ಕುಳಿವಕ್ಕಿ (ನಾ). ಜಗಳವಾಡುವ ಸ್ವಭಾವದ ಹಕ್ಕಿ; ಕೋಗಿಲೆ : "ಪೋರ್ಕುಳಿ[ಪಾಠಾಂ. ಪೊರ್ಕುಳಿ, ಪೊಕ್ಕುಳ]ವಕ್ಕಿಯೆಂದು ಕೋಗಿಲೆ" (ಶಬ್ದ. ಶ. ೩೦); "ಪಡಿಯಱವಕ್ಕಿ, ಪೋರ್ಕುಳಿವಕ್ಕಿ[ಪಾಠಾಂ. ಯವಕ್ಕಿ] . . . ಪರಪುಟ್ಟಂ — ಈ ೫ ಪಿಕಂ" (ಕಶಾ. ೩೩–೨೦೩). ಪೊಕ್ಕುಳ ವಕ್ಕಿ : "ಪೊಕ್ಕುಳವಕ್ಕಿ[ಪಾಠಾಂ. ಪೊಕ್ಕುಟ್ಟಕ್ಕಿ] . . . ಪಡಿಯಱವಕ್ಕಿ ಕೋಗಿಲೆಯೆನಿಕ್ಕು" (ಕ್ಷಾಮಂ. ೨೪) ; ಮಧುಸಮಯದೊಳಗೆ ಮಾವಿನ ಚಿಗುರಲೆಳದಳಿರ ಕರ್ದುಕಿ ಪೊಕ್ಕುಳವಕ್ಕಿ ಕೊರಳಿಂಚರವಮುದಿಸೆ (ಆಂಶ. II. ೯೭. ಕಮಲಾಕಾರ್ಯಕ್ರಮ). ಪೊಕ್ಕುಳಿವಕ್ಕಿ : (೧). ಪೊರ್ಕುಳಿವಕ್ಕಿ : ಮೇಲಿನ 'ಪೋರ್ಕುಳಿವಕ್ಕಿ' ಉಲ್ಲೇಖದ 'ಶಬ್ದದ' ಪ್ರಯೋಗದ ಪಾಠಾಂತರವನ್ನು ನೋಡಿ. [ಪೋರ್ಕುಳಿ + ಪಕ್ಕಿ]

**ಪೋರ್ಕೆ**, ಹೋರ್ಕೆ (ನಾ). ಹೋರಾಟ ; ಕಾಳಗ : "ಹೋರಟಿಯನೆ ಪೋರ್ಕೆಯು" (ಶಾಕಿ. ೪೪). ಹೋರ್ಕೆ : (೧). [ಪೋರ್$_1$ + — ಕೆ]

**ಪೋರ್ಚುಗೀಸ್**, ಪೊರ್ತುಗೀಜ, ಪೋರ್ಚುಗೀಸ (ನಾ). ೧. ಪೋರ್ಚು ಗಲ್ಲಿಗೆ ಸೇರಿದ ವ್ಯಕ್ತಿ ; ಪೋರ್ಚುಗಲ್ಲಿನವನು. ೨. ಪೋರ್ಚುಗಲ್ಲಿನ ಭಾಷೆ : ಪೋರ್ಚುಗಲ್ಲಿನ ಭಾಷೆ ಪೋರ್ಚುಗೀಸ್. ಅದು . . . ಅನೇಕ ಜರ್ಮನ್ ಮತ್ತು ಸಮಟ್ ಶಬ್ದಗಳನ್ನೊಳಗೊಂಡಿದೆ (ಕಶಿಕೋ. XI. ೨೫೨). (ಗು). ೩. ಪೋರ್ಚುಗಲ್ಲಿಗೆ ಸೇರಿದ : ಈ ಪೋರ್ಚುಗೀಸ್ ಜನರು ಅನುಮಾನವಾಗದ ರೀತಿಯಲ್ಲಿ ಅವರೊಡನೆ ವರ್ತಿಸಿದರು (ಕ್ರಶಾ. II. ೦೯೯). ಪೊರ್ತುಗೀಜ : ೧. ಫ್ರೆಂಚರವೂ ಪೊರ್ತು ಗೀಜರವೂ ಕೆಲವು ಪ್ರದೇಶಗಳು ಹಿಂದುಸ್ತಾನದಲ್ಲಿ ಉಂಟು (ಮುಂಬಯಿ. ೪-೦೦೩). ಪೋರ್ಚುಗೀಸ : ೧. ಒಬ್ಬೊಬ್ಬ ಪೋರ್ಚುಗೀಸ ಐದು ಆರು ಹೆಂಗಸರನ್ನು ಇಟ್ಟುಕೊಳ್ಳುತ್ತಿದ್ದ (ಕ್ರಶಾ. II. ೨೪೦). 'ಪುಡುತ ಕೇಶ' ಪರಾ. [← ಇಂ. Portuguese. / ತೆಲು. ಬುಡುತಕೀಜು]

**ಪೋರ್ಚುಗೀಸ** 'ಪೋರ್ಚುಗೀಸ್' ನೋ.

**ಪೋರ್ತ** (ನಾ). ಹೋರಾಟ ; ಕಾದಾಟ : ವ್ಯಾಳವನಗಜದ ಪೋರ್ತದ ಕೇಳಿಗೆ ವಿಜಯಾರ್ಧಶೈಲವತಿ ಸವಿಯಿಸಿ ತಂದೋಲಿಯ ನಿಜಿಸಿದ ಬೆಳ್ಳಿಯ ಲಾಳಾವಿಂಡಿಗೆಪೊಲಿರ್ಪುವಿದಱ ಮಡಲ್ಗಳ್ (ಶಾಂತಿಪು. ೨-೦೦೪) : ಭಾವಿ ಪೊಡಾಂ ಜಟ್ಟಿಯವಂ ಗೋವಳನೆಂದಂದು ದೇವ ಪೋರ್ತದೊ[ಳ] [ಪಾಠಾಂ. ಪೋರ್ತದೊಡ, ಪಾರ್ದೊಡವ,[ಪೋ]ರ್ದೊಡಮ]ವನೆಸ್ಸಾವೆಡೆಗೆ ವರ್ಪಂ (ಅರ್ಜಿಪು. ೬-೬೦). 'ಪೋರ್ತಂಗೊಳ್' ಪರಾ.
[ಪೋರ್$_1$ + — ತ$_4$]

**ಪೋರ್ತಂಗೊಳ್** (ಕ್ರಿ). ಹೋರಾಡು : ಕಾದು : ಆ ಗಜಮಲ್ಲ ನೋಳ್ಪೋರ್ತಂಗೊಂಡುದೆ ಮಲ್ಲಸಿಂಗರಂಗೆಯ್ದಂತಾಗೆ (ಅರ್ಜಿಪು. ೬-೩೩ ಪ).
[ಪೋರ್ತ + ಕೊಳ್$_1$]

**ಪೋರ್ನುಡಿ** (ನಾ). ಜಗಳದ ಮಾತು ; ಬಯ್ಗುಳ ; ಮೂದಲಿಕೆ : ಪೆಣ್ಣಾಲಗೆಯು ನೋಡ ಮಸೆಗಣೆಯ ಮೊನೆಯಲ್ಲಿ . . . ಮಣ್ಣಾರಿದ ಪೋರ್ನುಡಿಯ ಮಳೆಗರೆದುದೂರ್ಮೆ (ಕಾಯಿರ. ೦೨೪-೨೭೩).
[ಪೋರ್$_1$ + ನುಡಿ$_2$]

**ಪೋರ್ಮೆ** (ನಾ). ಪ್ರೇಮಕಲಹ : ಅಗಲ್ಪುದ ಕೂರ್ಮೆ ಪೋರ್ಮೆ ಪೊರ್ದುಗೆಯೊಗೆವಿಚ್ಚಿ ಮಚ್ಚು ಏಟರಂ ಕೊಱಚಾಡುವ ಪಾಡು ಗಾವಡಿ ಯೆಂಬಗಣಿತಚೇಷ್ಟೆಗಳ್ ಮೆಱೆದಿರಲ್ ತಱಿಸಲ್ಪುದು ಸೂಳೆವಿದ್ಯೆಯೊಳ್ (ಪಶಶು. ೬-೨೨).
[ಪೋರ್$_1$ + — ಮೆ$_1$]

**ಪೋಲ್$_1$**, ಪೋಲು$_1$, ಹೋಲ್, ಹೋಲು$_1$ (ಕ್ರಿ). ಹೋತ$_1$ (ಭೂತಕೃ). ಹೋತು (ಭೂತನಕ್ಕೃ). ಎಣೆಯಾಗು ; ಸಾಟಿ ಯಾಗು ; ಸದೃಶವಾಗು : "ಪೋಲ್-ಸಾದೃಶ್ಯೇ" (ಶಮದ) ; ಕಳ್ಳ ಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲ್ಕೆಬಿದ ರಾಹುವಂ ನೆಱೆ ಪೋಲ್ದಳ್ (ಕಾವ್ಯಾ. ೯೩೩ ಕೂಪ್ರ); ಶಚಿಮಹಾದೇವಿ ಯನೆ ಪೋಲ್ವ ಧಾರಿಣಿಮಹಾದೇವಿಯೆನ್ನ ಕಾಲ್ಗೆಱಗಿ ಪೊಡೆವಟ್ಟಿರ್ದಳ್ (ಪಚ್ಚಾ. ೬೦-೬); ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನಂ ಪೋಲ್ಪುದಗ್ರವಾಲ್ಮಮಹೀಜಂ (ಅಂಪು. ೩-೩೬) : ಪ್ರತಿ ಬಿಮ್ಮಂ ರೂಪಿನೊಳ್ ಪೋಲ್ಕೆಮ (ಎಕ. VIII. ತಗ ೩೮-೬ ; 1077). ಪೋಲು$_1$ : ಈ ನೆಲದೊಳಾರುವಂ ಪೋಲದವರಿಂತಿವರು (ಕುಹ. ಕ. ೨೬-೦೩); ಕಾಮನ ಪೋಲುವ ಸೋಮವದನನನು ಕೋಮಲಾಂಗಿಯ ಕರತಲು ಪ್ರೇಮದಿಂ ಮುತ್ತಿನ ಹಾರವನೀವನು (ಕಂಪು. ೬-೯೨); ಭುವನ ಮೂಱರೊ ಳರಸಿದೊಡೆ ನಿನ್ನವನು ಪೋಲುವರಿಲ್ಲ (ಅಂಶಾ. ೦-೩-೦೩). ಹೋಲ್ : ಗುರುಕುಚಭಾರ ನೀಳರತ್ನಂ ನಗೆ ಮಾಣಿಕವಾಗೆ ಹೋಲ್ವತೀ ನಿರುಪಮಕಾನ್ತ ಸಾನ್ತಲೆ ಶುಧಾಂಶುಕಳಾಶ್ರಿತದುಗ್ಧವಾರ್ಧಿಯಂ (ಎಕ. XVI. ಕಕ್ಕಾ. ೯೬-೩೬, 1160). ಹೋಲು$_1$ : ಶದ್ಧಿಯಾದಾತ ತರುಗಳ ಹೋತ ನಿಶ್ಶಬ್ದಿಯಾದಾತ ಪಾಷಾಣದ ಹೋತ (ಅಶಂ. ೦೦೪-೪೬೦); ಎಲವೋ ನಿನ್ನ ಹೋಲುವರಾರು ಬಾಹಿರ ಭುಂಡರವನಿಯಲಿ (ಕುಶ್ಮಾಕ್ರೋ. ೦೯-೨೮): ಒಂದೂವರೆವರ್ಷದ ಚೆಲು ತನ್ನ ತಂದೆಯ ಮೈಕಟ್ಟು ಮುಖಭಾವಗಳನ್ನು ಹೋತು ಹುಟ್ಟಿತ್ತು (ಪಂಚಕ. ೯೬). [ದೇ.೩ ತಮಿ. ಪೋಲ್; ಮಲ. ತೆಲು. ಪೋಲು]

**ಪೋಲ್$_2$** ? (ನಾ). (?) : ಬಲ್ಗಿಚ್ಚ ಪಱಿವ ಲಿಂಗಂ ಮೂಡದೆ ಕಣ್ಣಟ್ಟು ಕಾಲ್ಗಾಣದಾದನಾ ಕಾಳ್ಗೆ ತಕಳ್ಗೆ ತುಟಿಲ್ಗುಂದಿ ನಾಲ್ಗೊಗಂ ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು (ಶಾಪಾಂ. ೩-೨೬). [?]

**ಪೋಲ್$_3$** '—ಪೋಲ್' ನೋ.

**ಪೋಲಕ**, ಪೋಲಕಾ, ಪೋಲ್ಕ (ನಾ). ಒಂದು ಬಗೆಯ ಕುಪ್ಪಸ ; — ರವಿಕೆ : ವತ್ಸಲೆ ಆ ದಿನದ ಪೋಲಕ ಪರಕಾರಗಳನ್ನೇ ಧರಿಸಿದ್ದಳು (ಕ್ರ.ಶ. ೩೪) ; ಉಪಾನ ತಾಯಿ . . . ಒಗೆದ ಪರಕಾರ — ಪೋಲಕಗಳನ್ನು ತೊಡಿಸಿದ್ದರು (ಕ್ರೀಜು. ೩೦). ಪೋಲಕಾ : ನನ್ನ ಪೋಲಕಾದ್ದೇ ಒರಸು (ಜಾಪಿ. ೨೦) ; ನೀ ಮುಂದಿನ ಜನ್ಮಕ್ಕ ಬರೋದರೊಳಗ ಪೋಲಕಾ, ಝುಗಾ ಬಂದಿರತಾವೇಳು. ಕುಬಸದ ಹಂಗ್ಯಾಕ ? (ಜಾಪಾ. ೬೦). ಪೋಲ್ಕ : ಪೋಲ್ಕ . . . (ಹೆಂಗಸಿನ) ಗುತ್ತನಾದ (ಸಾ, ಹೊಸಗೆಯ) ನಡುವಂಗಿ (polka. ೨೦೪೩). [← ಇಂ. Polka. / ಮರಾ. ಪೋಲಕೇ]

**ಪೋಲಕಾ** 'ಪೋಲಕ' ನೋ.

**ಪೋಲಗಟ್ಟು** (ನಾ). (?) : ಕಡೆಯ ಪೆಂಡೆಯ ಗೆಜ್ಜೆ ಕಣಕಾಲ ಬಾಸಿಂಗ ಮಡೆಯ ಬದ್ದುಗೆಯು ಕಿಗ್ಗಟ್ಟು ಬಿಡೆಯವಿಲ್ಲದೆ ಪೋಲಗಟ್ಟಿನ ಬಿಲ್ಲಾಳ ಪಡೆ ನಡೆಯಿತು ದಾಣನೊಡನೆ (ಕೋಚಕ. ೪೦-೦೪). [?]

**ಪೋಲಿ$_1$** (ನಾ). ೧. ಉಡಾಳ ; ಪೋಕರಿ : ಊರಿನ ಹಿರಿಯರು ಇವರಿಬ್ಬರು ಶುದ್ಧ ಪೋಲಿಗಳೆಂದು ಭಾವಿಸಿಬಿಟ್ಟರು (ಹೊಸಹ. ೨೦) ; ನಿನ್ನ ಸಲಿಗೆ, ಬೇಬಿಯ ಪ್ರೀತಿ — ಇವು ಅವನನ್ನು ಪೋಲಿಯನ್ನಾಗಿ ಮಾಡಿದ್ದವು (ಮುಂಗಾರು. ೬) ; ಪೋಲೀಮುಂಡೇದಕ್ಕೆ ತಾಲೀ ಕಟ್ಟಿದರೆ ತಾಲಿ ತಾಲಿ ಪೋಲಿ ಪೋಲಿ (ಗಾದೆ) . 'ಅಪಾಪೋಲಿ' ಪರಾ. ೨. ದುರ್ಮಾರ್ಗದಲ್ಲಿ ವರ್ತಿಸುವವನು ; ನೀತಿಗೆಟ್ಟವನು : ಅವನು ಪೋಲಿ. ಅವನ ಗೆಳೆತನ ಮಾರ್ಗ ಸನ್ಮಾರ್ಗವಲ್ಲ (ಕಳ್ಳಕು. ೪೩); ಪೋಲಿಸರೆ, ನಿಮ್ಮ ಹೆಸರಿನಂತೆ ಪೋಲಿಗಳಾಗಿ ವರ್ತಿಸಬೇಡಿರಿ (ಲೀಕು. ೪೩).

೩. ಅಸಭ್ಯ ; ಲಂಪಟ : ಆ ಪೋಲಿ ನನ್ನ ಕೈಯನ್ನೇ ಒಡಿದುಕೊಂಡು (ಋಜು. ೦೬೩). ೪. ಇಷ್ಟ ಬಂದಂತೆ ವರ್ತಿಸುವಿಕೆ ; ಸ್ವೇಚ್ಛಾಚಾರ: ನಿನ್ನ ಹಾಗೆ ನಾವು ಪೋಲಿಪೋಲಿಯಾಗಿ ಅಲೆದುಕೊಂಡಿದ್ದರೆ ಹೇಗಾದೀತು? (೦೦ಕಿ. ೨೦). ೫. ವ್ಯರ್ಥ : ಹಾಳು : 'ಪೋಲಿಗೈ' ಪರಾ. ೬. ಹಾದರ ; "ವ್ಯಭಿಚಾರ" (ಅಸಂವಾ). ೭. ಹೊಣೆಗೇಡಿಯಾದ ಹೆಂಗಸು : "ಪೋಲೀ .... ಕೆಲಸಗಳ್ಳಿ" (ಕಾಕಕ್ಕ. ೪೬). (ಗು). ೮. ಹೊಣೆಗೇಡಿಯಾದ ; ಜವಾಬ್ದಾರಿಯಿಲ್ಲದ : ಅವಳ ಚಿಕ್ಕಮ್ಮ . . . ಹೇಗೋ ಕಷ್ಟಪಟ್ಟುಕೊಂಡು ತನ್ನ ಮಕ್ಕಳನ್ನು ಮತ್ತು ಪೋಲಿ ಗಂಡನನ್ನು ಸಾಕುತ್ತಿದ್ದಳು (ಭುಜ. ೯).

**ಪೋಲಿದನ** = ತೊಂಡುದನ ; ತುಡುಗುದನ : ಅವನ ತೋಟಕ್ಕೆ ಪೋಲಿದನ ನುಗ್ಗಿ ಗಿಡಗಳನ್ನೆಲ್ಲಾ ಹಾಳುಮಾಡಿತು (ಜಾ). **ಪೋಲಿಪಟಾಲಂ** = ಉಡಾಳರ ಗುಂಪು ; ಪೋಕರಿಗಳ ತಂಡ : ಬಯಲಾಟ, ಪೋಲಿ ಪಟಾಲಂ ಎಂದುಕೊಂಡು ವೀರಭದ್ರ ಬಾಲ್ಯದಲ್ಲೇ ಬೀದಿಬಸವನಾದ (ಬಕ್ಕ.ಷಾ. ೦೪೩). **ಪೋಲಿ ಬೀಳು** = ಹೊಣೆಗೇಡಿಯಾಗಂ : ಗಂಡು ಹುಡುಗರು ಪೋಲಿ ಬೀಳದೆ ಅವರವರ ಪಾಡಿಗೆ ಓದಿ ಪ್ಯಾಸ್ ಮಾಡಿ ಸಂಪಾದನೆ ಮಾಡುತ್ತಿದ್ದರೆ ನಮ್ಮ ಜವಾಬ್ದಾರಿ ಇಳಿಯುತಪ್ಪ (ಜುಹಾಗ. ೪೬). **ಪೋಲೀ ತಿರುಗು** = ಸ್ವೇಚ್ಛೆಯಿಂದ ಅಲೆದಾಡು ; ಮನಬಂದಂತೆ ತಿರುಗು : ಸೌರಕುಟುಂಬದಲ್ಲಿ ಅನೇಕವೇಳೆ ಅತಿವೇಗದೊಡನೆ ಸಂಚರಿಸುತ್ತ ಪೋಲೀ ತಿರುಗುವ ವಿಷಮಗತಿಯುಳ್ಳ ಮಂಡಲಗಳೂ ಉಂಟು (ಜ್ಯೋತಿ. ೦೦೪); ನೀನು ಪೋಲೀ ತಿರುಗುವುದನ್ನು ಬಿಟ್ಟು ಯಾವಾಗ ಜವಾಬ್ದಾರಿ ವಹಿಸಿಕೊಳ್ಳುತ್ತಿ ? (ಜಾ). [ದೇ. ॥ ತಮಿ. ಕೊಡ. ಪೋಲಿ; ತುಳು. ಪೋಲಿ= ಸೂರೆಮಾಡುವ, ಅಸಂಬದ್ಧ ; ತೆಲು. ಪೋಲಿ]

**ಪೋಲಿ₂** (ನಾ). ಗೋಧಿಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ: ಫೇಣಿ ಗಾರಿಗೆ ಪೋಲಿ ವಡೆ ಕರಜಿಗಾಯಿ . . . ಮೊದಲಾದ ಬಲು ಸೊಗಸುಳ್ಳ ಪಾಕಂಗಳಂ . . . ದೇವ ನೀನಾರೋಗಿಸೈ (ಜುಗ್ಗಕ. ೩-೬).

[ಸಂ. ಪೋಲೀ]

**ಪೋಲಿಕಾಜಿ** 'ಪೋಲಿಗಾಜಿ' ನೋ.

**ಪೋಲಿಗಾರ** 'ಪೋಲಿಗಾಜಿ' ನೋ.

**ಪೋಲಿಗಾಜಿ**, ಪೋಲಿಕಾಜಿ, ಪೋಲಿಗಾರ (ನಾ). ಪೋಕರಿ ; ಉಡಾಳ : ಜಾಲಗಾಜಿನ ಕೈಯ ದೀಹದಂತೆ ಬಾಲೆಯರ ಮನದ ಸೋಲುವೆಯಂತೆ ಇಂತಿವರನಳವಾಡಿ ಸಿಕ್ಕಿಸುವ ಪೋಲಿಗಾಜಿ[ಪಾಠಾಂ. ಪೊಲೆಗಾರ, ಪೊಲ್ಲಗಾರ, ಸೋಲುಗಾಜಿ]ರಿಗೆಲ್ಲಿಯದೋ ಸತ್ಯ (ಸೋಕಷ. ೬೩-೨೬೪). **ಪೋಲಿಕಾಜಿ** : ಕ್ಷಯಕಾರಣವೆಂಬ ಪಟ್ಟಣಕ್ಕೆ ಲಯಕಾರಣವೆಂಬ ಅರಸು ಪೋಲಿಕಾಜಿ ಪ್ರಧಾನ ಮದೋನ್ಮತ್ತ ತಳವಾಜಿ (ಸಂಕಂ. ೪. ೬೬೩-೫೩). **ಪೋಲಿಗಾರ**: ಶೀಲರುತ್ತಮರು ನೀವಹುದು ಪೋಲಿಗಾರರಾವು (ಸಮುಜು. ೦೬).

[ಪೋಲಿ₁ + -ಕಾಜಿ]

**ಪೋಲಿಗೈ** (ಕ್ರಿ). ನಾಶಮಾಡು ; ವ್ಯರ್ಥಗೊಳಿಸು : ಖೂಳಬಲಿಯು ಬಿಟ್ಟ ಸರಳ ಜಾಲವೆಲ್ಲವಾ ಶೀಲ ನಿರ್ಜರೇಂದ್ರನದನು ಪೋಲಿಗೈದನು (ಸಮುಜು. ೩೪). [ಪೋಲಿ₁ + ಗೈ ( < ಕಯ್₁)]

**ಪೋಲಿತನ** (ನಾ). ೧. ಪೋಕರಿತನ ; ಪುಂಡಾಟಿಕೆ : ದೇವಯ್ಯನ ಪೋಲಿತನಕ್ಕಿಂತ ಇದು ಸಹಸ್ರಪಾಲು ಮೇಲು (ಕಂಗಳ. ೨೦೩). ೨. ಹೊಣೆಗೇಡಿತನ ; ಜವಾಬ್ದಾರಿಯಿಲ್ಲದಿರುವಿಕೆ : ಅವನ ಪೋಲಿ ತನದಿಂದ ಅದಕ್ಕೆ ಪೋಷಣೆಯೇ ಇರಲಿಲ್ಲ (೦೦ಕಿ. ೧೩೦).

[ಪೋಲಿ₁ + -ತನ]

**ಪೋಲಿಮೆ** 'ಪೋಲ್ಮೆ' ನೋ.

**ಪೋಲಿಯೋ** (ನಾ). ಮಿದುಳುಬಳ್ಳಿಯೊಳಗಿನ ಬೂದುದ್ರವ್ಯದ ಉರಿಯೂತ : ಪೋಲಿಯೋ ತಡೆಗಟ್ಟಲು ಲಸಿಕೆಗಳು ದೊರೆಯುತ್ತಿವೆ (೦೦೦. ೬). [P ಇದು ಇಂಗ್ಲಿಷಿನ 'Poliomyelitis' ಎಂಬ ಶಬ್ದದ ಸಂಕ್ಷಿಪ್ತರೂಪ]

**ಪೋಲಿಸು**, ಹೋಲಿಸಂ (ಕ್ರಿ). ಒಂದರೊಡನೊಂದನ್ನು ತಾಳಿನೋಡು,- ತುಲನೆಮಾಡು : ಪೋಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯಿನಾ ಸುರತ ಪ್ರವೀಣೆಯಂ (ಅಂಕ. ೩-೬೬) ; ಪೆಜರಾರುಮನಾ ಸತಿಯ ಪೆಮ್ಪಿನೊಳ್ ಪೋಲಿಪುದೇ (ಎಕ. II. ...; ಸು. ೩೬೦) ; ಸತ್ಯಾಶ್ರಯದೇವನೆ ಪೃಥ್ವೀ ವಲ್ಲಭಂ ಕಥಾನಾಯಕನಾಗನಿಲಜನೊಳ್ಪೋಲಿಸಿ ಪೇಟ್ದನೀ ಗದಾಯುದ್ಧಮಂ ಮಹಾಕವಿ ರನ್ನಂ (ಗದಾಯು. ೦-೩೦) ; ಸಿರಿಸದ ಬಾಸಿಗವನೆಂತು ಪೋಲಿಸುವಂ ಸುಂದರಿಯ ಮನೋಜನ ಪಾಶದೊಳೆರಡೆರಡೆ ಪರಲ್ಕೆ ಸಾಲ್ದ ಭುಜವಲ್ಲರಿಯಂ (ಜುಗ್ಗಕ. ೩-೬೪). **ಹೋಲಿಸು** : ಆ ಕರಿಯಾಕೃತಿಯ ಸೂಕರನ ಹೋಲಿಸಿದರೆ ಆ ಕರಿಯಾಗಲರಿವುದೆ ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ ವ್ಯಾಳೇಶನಾಗಲರಿವುದೆ (ಬಸವ. ೬೦೪); ಹೋಲಿಸು ವಡೊಪ್ಪುವ ಪಸುರ್ವಟ್ಟಾಲವಟ್ಟಂಗಳೊ ಚೆಲುವನಪ ಬಾಳೆಯೆಲೆಗಳೊ (ಅಕಪು. ೨೬-೪೦); ಪಾರ್ಥಿವಜಾತಿಯಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು (ಕುಮಾರವ್ಯಾ. ೪-೦೦) ; ಹೋಲಿಸಿ ನುಡಿದೆ ಸುರವ ಫಲ್ಗುಣರ ಸಮರವಂ (ಕೈಪಿಯ. ೦೬-೫೪).

[ಪೋಲ್₁ + -ಇಸು₃]

**ಪೋಲೀಸ್** 'ಪೋಲೀಸು' ನೋ.

**ಪೋಲೀಸು**, ಪೋಲೀಸ್ (ನಾ). ೧. ಸಾರ್ವಜನಿಕರಿಗೆ ಸಂಬಂಧ ಪಟ್ಟಂತೆ ಶಾಂತಿಪಾಲನೆ, ರಕ್ಷಣೆಗಳನ್ನು ಕೈಗೊಳ್ಳುವ ಸರ್ಕಾರದ ಒಂದು ಖಾತೆ ; ರಕ್ಷಣಾಇಲಾಖೆ : ಇವನು . . . ಗ್ರಾಮದ ಪೋಲೀಸಿನ ಮೇಲಧಿಕಾರಿಯಾಗಿಯೂ ಇರುವನು (ಗ್ರಾಮಾ. ೨) ; ಅಂತೂ ಪೋಲೀಸು ನಗರಕ್ಕೊಂದು ನಯನ (ನಿನಾ. ೩). **ಪೋಲೀಸ್** : ೧. ಪೋಲೀಸ್ ಅಧಿಕಾರಿಗಳಿಗೆ ನಾನು ಸಲ್ಲಿಸಿದ್ದ ಪ್ರಪ್ರಥಮ ಸಲಾಂ ಅದು (ಪಾಪೋಲೀ. ೨೬). ೨. ರಕ್ಷಣಾಇಲಾಖೆಯಲ್ಲಿ ದುಡಿಯುವವನು ; ಪ್ಯಾದೆ : ನೀನು ಮಾತ್ರ ಪ್ರಾಣ ಹೋಗುವ ಪ್ರಸಂಗ ಬಂದರೂ ಪೋಲೀಸ್ ಮಾತ್ರ ಆಗಬ್ಯಾಡ (ಪಾಪೋಲೀ. ೦೬).

**ಪೋಲೀಸರು, ಪೋಲೀಸಿನವರು** = ರಕ್ಷಣಾಇಲಾಖೆಗೆ ಸೇರಿದವರು : ನನಗೆ ಶಿಕ್ಷೆಯಾಗುವುದು ಖಂಡಿತವೆಂದೇ ಎಲ್ಲ ಪೋಲೀಸರೂ ಅಭಿಪ್ರಾಯ ಪಡುತ್ತಿದ್ದರು (ಪಾಪೋಲೀ. ೪೪) ; ಪೋಲೀಸಿನವರು ತಕ್ಷಣ ಅಲ್ಲಿಗೆ ಹೋಗಿ ಕಳ್ಳನನ್ನು ಹಿಡಿಯುತ್ತಾರೆ (ಜನಪ್ರ. ೩೦). [← ಇಂ. Police]

**ಪೋಲು₁** 'ಪೋಲ್₁' ನೋ.

**ಪೋಲು₂**, ಹೋಲು₂ (ನಾ). ೧. ಅಪವ್ಯಯ ; ದುಂದುವೆಚ್ಚ : ಜನಕ್ಕೆ ದೇಶಭಾಷೆಯಲ್ಲಿ ಅಭ್ಯಾಸ ನಡೆಯದ ಅಸಹಜತೆ ಪೋಲುಗಳನ್ನು ಪ್ರಧಾನ ವಾಗಿಯೂ ಆನುಷಂಗಿಕವಾಗಿಯೂ ಠಾಕೂರರು ಕಾಣಿಸಿದ್ದಾರೆ (ಠಾಕೂರ. I, XII ಮುನ್ನುಡಿ). ೨. ನಾಶ ; ಹಾಳು : ನಾಲ್ವತ್ತುಎಂಟುಯೋಜನವ ಗ್ರಾಮವ ಪೋಲನ್ನು ಕೇಳು ನಿಸ್ಸೀಮ ಮೇಲೆ ನೀ ಗಳಿಸಿರ್ದ ಹೇಮ ಮುಂದೆ ಪಾಲಿಸುವರಿಲ್ಲ ಕಲಿಭೀಮ (ಕಕಿ. ೪೨೩-೪) ; ಪೋಲು ಆದ ವಸ್ತು ಹಾಲಿನ ಹಾಗಿದ್ದರೇನು ? (ಗಾದೆ). **ಹೋಲು₂**: ೩. ವ್ಯರ್ಥವಾದುದು ; ಉಪಯೋಗವಿಲ್ಲದುದು ; ಪೊಳ್ಳು: ಕೋಲ ಬಲುಹುಂಟಾಗೆ ನಾಲಗೆ ಹೋಲ ನುಡಿಯದು [ಪಾಠಾಂ. ಹೋಲುಬಾಜಿವುದು, ಹೋಲ ನುಡಿವುದು, ಹೊಲ್ಲ ದೇನಿದು] ಖೂಳ ಕಟಕಿಯ ಮಾತು ಬೇಡಂಬಿನಲಿ ಮಾತಾಡು (ಕುಮಾರವ್ಯಾ. ೪. ೪-೩೦).

**ಪೋಲಾಗು** = ೧. ಅಪವ್ಯಯವಾಗು ; ದುಂದುವೆಚ್ಚವಾಗು : ರಾಜ್ಯಕೋಶದ ಅಪಾರದ್ರವ್ಯ ಜೋಗಿ ಜಂಗಮರನ್ನು ಪೋಷಿಸುವುದಕ್ಕಾಗಿ ಪೋಲಾಗುತ್ತಿದೆ (ತುಂಗಳ. ೦೬) ; ಸೊಸೈಟಿಯ ಹಣ ಪೋಲಾದ ಬಗ್ಗೆ

ಧೈರಕ್ಕರುಗಳಲ್ಲಿ ಕೆಲವರು ಬಿರುಸಾಗಿ ಚರ್ಚಿಸಿದರು (ಕುರಿ. ೦೬೦). ೨. ವ್ಯರ್ಥವಾಗು ; ನಿರರ್ಥಕವಾಗು : ಸರಣಾಯಾತರ್ಕ್ಕಳಂ ತಾಳ್ದಿ × × ಧಾತ್ರಿಯಮನ್ಯನೃಪಾಚಾರಕ್ಕೆ ಪೋಲಾಗೆ ವಿಸ್ತರದಿಂ ಪಾಳಿಸಿ ಕೀರ್ತಿಯಂ ಭುವನದೊಳು ಪ್ರಕಾಶನಂ ಮಾಡಿದಂ (ಶಾಸ. XI-i. ೯೬-೦೬ ; 1062) ; ಬಾಲೆ ನೀನಾರೆಂದ ನಾನೀಗ ಕೇಳ್ವಾತನೂಳಿಗದವಳೆಂದರವಳು ಪೋಲಾದ ಮಾತು ನೀನೀಗ ಕೇಳ್ವನ ಪ್ರಾಣಪಾಲಕಿಯಲ್ಲವೆಯೆಂದಾ (ಕಕಿ. ೯೨-೯೦); ಉದಾತ್ತವಾದ ಕಾವ್ಯಗುಣಗಳನ್ನು ಅರಿತು ಮೆಚ್ಚಿಕೊಂಡಿರುವ ನನಗೆ ಅವು ಎಲ್ಲಿ ಪೋಲಾಗಿಬಿಡುತ್ತವೆಯೋ ಎಂಬ ಹೆದರಿಕೆ ತುಂಬಿದೆ (ಅಕುಳ. ೦೯೯).

**ಪೋಲುಮಾಡು** = ೧. ಅಪವ್ಯಯಮಾಡು ; ದುಂದುವೆಚ್ಚಮಾಡು : ಕಿಸೆಯ ಚಿಲ್ಲರೆಯನು ಪೋಲುಮಾಡುವುದಕೆ ಯಾರಿಗಾದರೂ ಗುರು ಬೇಕೆ (ಬಂಆಶ. ೨೩೨-೯೬). ೨. ವ್ಯರ್ಥವಾಗಿಸು ; ನಿರರ್ಥಕಗೊಳಿಸು ; ಹಾಳು ಮಾಡು : ಒಡವೇಲಿ ಅರ್ಧಾನ ಇವರು ಅರಮನೇಲೆ ಇಟ್ಟುಕೊಂಡಿದ್ದಾರೆ . . . ನಮ್ಮ ಅರಮನೆಗೆ ಬರಬೇಕು ಅಂದರೆ ನಾವು ಪೋಲು ಮಾಡಕೇವನ್ನ ತಾರೆ (ಕಳಾ. ೨೩೬) ; ಸಂಸಾರ ನಡೆಸುವುದರಲ್ಲಿ ನೀವು ಯಾವಾಗಲೂ ಹಿಡಿತ. ಒಂದು ಅಕ್ಕಿಕಾಳು ಪೋಲು ಮಾಡುವುದಿಲ್ಲ (ಕುಹಾಗ. ೦೯೨).

**ಪೋಲುಗ** (ನಾ). ದುಂದಂವೆಚ್ಚ ಮಾಡುವವನು ; ದುಂದುಗಾರ : ಆನು ಭಕ್ತನಲ್ಲಯ್ಯಾ ಆನು ವೇಷಧಾರಿಯಯ್ಯಾ ಕಾಟುಗ ಕೆತ್ತುಗ ಪೋಲುಗ[ಪಾಠಾಂ. ಹುಲ್ಲುಗ, ಪೊಲ್ಲುಗ]ನೆಂಬುದು ಎನ್ನ ಹೆಸರು (ಬಸವ. ೩೩೩).

[ಪೋಲು$_2$ + — ಗ$_2$]

**ಪೋಲುಮೆ** ‘ ಪೋಲ್ಮೆ ’ ನೋ.

**ಪೋಲೋ** (ನಾ). (ಪೂರ್ವದೇಶಗಳಲ್ಲಿ ಮೊದಲು ಬಳಕೆಗೆ ಬಂದ) ಕುದುರೆಯ ಮೇಲೆ ಸವಾರಿ ಮಾಡುತ್ತಾ ಆಡುವ, ‘ ಹಾಕಿ ’ ಆಟದಂಥ ಒಂದು ಬಗೆಯ ಚೆಂಡಿನ ಆಟ : ಬ್ರಿಟನಿನ ತರುಣರು, ಮುಂದುಕರು ದೋಣಿಯ ಓಟ, ಪೋಲೋ . . . ರಗ್ಬಿ ಮೊದಲಾದ ಹಲವು ಆಟ ಪಂದ್ಯಾಟಗಳಲ್ಲಿ ಮುಂದೊತ್ತಿ ಹೋಗಿರುವರು (ಜಾಂಶ. II. ೦೦೯೯). [← ಇಂ. Polo]

**ಪೋಲ್ಕ** ‘ ಪೋಲಕ ’ ನೋ.

**ಪೋಲ್ಕೆ** (ನಾ). ಸಾದೃಶ್ಯ ; ಸಾಮ್ಯ : ಶೀರ್ಣನಾಳಿಕೇರಪರ್ಣಂಗಳೊಳಂ ಅವಾರ್ಕೆಯುಂ ಪೋಲ್ಕೆಯುಂ ಒಲ್ವಂ ಚೆಲ್ವುಮಾಗೆ ಗೊಜ್ಜಗೆಯ ಮುಗುಳ ಗೆಜ್ಜೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ವಸದನಂಗೊಂಡು (ಕಂದ್ರಪ್ರ. ೬-೦೦೩ ವ) ; ಬಿದಿರಂ ಕರ್ಬಿನ ಪೋಲ್ಕೆಗೆಂದು ಸವಿವಂತಾಯ್ತೆನ್ನ ಪುಣ್ಯೋದಯಂ (ಕಾವ್ಯಸಾ. ೩೬೬). ‘ ಹೋಲಿಕೆ$_1$ ’ ಪರಾ. [ಪೋಲ್$^{*}_1$ + — ಕೆ. / ತೆಲು. ಪೋಲಿಕ, ಪೋಲಿಕೆ, ಪೋಲ್ಕಿ]

**ಪೋಲ್ಕೆಗೊಳ್** (ಕ್ರಿ). ಸಾದೃಶ್ಯವನ್ನು ಹೊಂದು : ಧರಿಸಿ ಕನಕಾಂಬರ ಮನಾ ವರವಧುವಾವಾಮೂಲಶಿಖರಪರಿಫುಲ್ಲಸುಮೋತ್ಕರದಿಂದೆ ಪುದಿದ ನವ ಕೇಸರಲತೆಯಂ ಪೋಲ್ಕೆಗೊಂಡದೇನೊಪ್ಪಿದಳೊ (ಕುಕಾಕ. ೩-೬೩) .

[ಪೋಲ್ಕೆ + ಕೊಳ್$^{*}_1$]

**ಪೋಲ್ಟೀಸು**, ಪೋಟಲೀಸು, ಪೋಟ್ಲೀಸಂ (ನಾ). “ಮೆತುರೊಟ್ಟಿ, ಸೀಮೆಯಗಸೆ, ಹಿಟ್ಟು, ಮೊ.ನ್ನು ಸಾ. ಕುದಿಯುವ ನೀರಿನಲ್ಲಿ ಹಾಕಿ ಮೆತು ಮಾಡಿ ಮಸ್ಲಿನ್ ಬಟ್ಟೆ, ಮೊ.ಗಳ ಮೇಲೆ ಹರಡಿ ಹುಣ್ಣು ಅಥವಾ ಉರಿಯೂತದ ಮೇಲಿಟ್ಟು ಕಟ್ಟುವಂಥದು” (Poultice. ಇಂಕ) : ಹೊಟ್ಟೆಗೆ ಪೋಲ್ಟೀಸು ಕಟ್ಟಿಸಿಕೊಂಡು ರಾಮು ಹಾಸಿಗೆಯ ಮೇಲೆ ಮಲಗಿದ್ದ (ಶಾಂಸ. ೨೬). **ಪೋಟಲೀಸು** : ಅವನಿಗೆ . . . ಕಟ್ಟುವುದಕ್ಕೆ ಪೋಟಲೀಸು ಬೇಯಿಸಿ, ನನ್ನ ಕೈಗೆ ಆಗಿರುವ ಗತಿ ನೋಡು (ಕಲ್ಲಣ. ೩೯). **ಪೋಟ್ಲೀಸು** : ಹುಣ್ಣಾದ ಕಾಲಿಗೆ ಜೇಡಿಮಣ್ಣಿನ್ನಾಗಲೀ ಅಥವಾ ರಾಗಿಹಿಟ್ಟಿನ ಪೋಟ್ಲೀಸನ್ನಾಗಲೀ ೪–೫ ದಿವಸಗಳು ಕಟ್ಟಿದರೆ ನೋವು ಕಡಿಮೆಯಾಗುವುದು (ಗ್ರಾಕುಳ. ೦೯೩).

[← ಇಂ. Poultice]

**ಪೋಲ್ಮೆ**, ಪೋಲಿಮೆ, ಪೋಲುಮೆ (ನಾ). ೧. ಸಾದೃಶ್ಯ ; ಸಾಮ್ಯ : ರಾಹು ರವಿಯಂ ತುಡುಕುವಂತದರ ಪೋಲ್ಮೆಯಿಂದರಸ ನಿನ್ನಂ ಒಡಿವೆ (ಕುಹಂಗ. ೯೯-೦೯). **ಪೋಲಿಮೆ** : ೨. ಒಪ್ಪವಾದುದು ; ಚೊಕ್ಕಟವಾದುದು : ಸಾರಸ್ವತರ . . . ಉಡಿಗೆಗಳು ಶೇಣವೀಜನರಿಗಿಂತ ಪೋಲಿಮೆಯಾಗಿರುತ್ತವೆ (ಕೊಂಗ. ೬೬). **ಪೋಲುಮೆ** : ೧. ಅವುದು ಪೋಲುಮೆಯಾಯು ಕೊಡಲ್ಪಡುತ್ತದೆಯೊ ಅದು ಉಪಮಾನಂ (ಶುಮಂ. ೬). ‘ಪೋಲ್ವೆ’ ಪರಾ. [ಪೋಲ್$^{*}_1$ + — ಮೆ$_1$ . / ತಮಿ. ಪೋಲಿಮ್ಮೆ]

**ಪೋಲ್ವೆ**, ಹೋಲುವೆ, ಹೋಲ್ವೆ (ನಾ). ೧. ಸಾಮ್ಯ ; ಸಾದೃಶ್ಯ ; ಹೋಲಿಕೆ : “ಪಾಟ ಪೋಲ್ವೆ . . . ಸಾಟ ಪಾಸಟಿಯೆನಲ್ಕೆ ಪತ್ತುಗುಂ” (ಕಶಾರ. ೦೯) ; ತದ್ವಿದೇಹಜನಕಾಸ್ವಾಂತಾರ್ಪಿತೋದ್ಯತ್ತ್ವಮೋದೆಯಃ ಸೀತೋದೆಯ ಪೋಲ್ವೆಗಿಲ್ಲ ತೂಜಿಗಳ್ ವಿಶ್ವಂಭರಾಭಾಗದೊಳ್ (ಅಂತ. ೦-೩೯) ; ಮುತ್ತಿನ ತೋರಣಂ ಗಜದ ನೆತ್ತಿಯ ಮುತ್ತುಗಳೆಲ್ಲ ಪಲ್ಗಳೊಳ್ ಪತ್ತಿದ ಪೋಲ್ವೆಯಂ ಪಡೆದ ಗೋಪುರಪಯಕವಾಸ್ಯವಾಗ (ಅರ್ಜಪ. ೦-೬೬) ; ನಿನ್ನೊಂದು ಪೆಸರ ಪೋಲ್ವೆಯೊಳಂದಜಾಮಿಳಂ ತನ್ನ ಪಾತಕಕೋಟಿಯಂ ಪರಿಹರಿಸಿಕೊಂಡಂ (ಕೃಖಚ. ೦೩-೪೬). ೨. ಸೊಗಸಂ; ಸೌಂದರ್ಯ : “ಸೊಗಸುಮುಲಂಪುಂ ವಿಭವಮುದೊಗೆಗುಂ ತಾಮೆಂದಚಂದ ಮನೆ ಪೋಲ್ವೆಯೊಳಂ” (ಕಂಕಂ. ೦೩೯). ೩. ಸ್ವರೂಪ ; ಆಕಾರ : ಅಯ್ದುಮಂತ್ರಾಕ್ಷರಂಗಳನಾಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೆ (ಕಂಕಹಾ. ೦-೮೯ ವ). **ಹೋಲುವೆ**: ೧. ಕೃತಾಂತನ ಹೋಲುವೆಯ ಹೊಸಬಿಗನು ಹೊಕ್ಕನು ಭೀಮನುರವಣೆ (ಕುಣ್ಣಸ್ತ್ರೀ. ೨-೬೯); ವಜ್ರಮಾಣಿಕ್ಯದ ಹೋಲುವೆಯ ದಂತಪಂಕ್ತಿಯ . . . ಪೆಣ್ಣಗೊಪ್ಪಿದರು ನವರತ್ನಮಾಲೆಗಳ ಪಾಂಗಿನಿಂದ (ಜಾಕಹ. ೩-೨೯); ಗಡ್ಡ ವಿರಲಿಲ್ಲ, ಗೆರೆಹೋಲುವೆಯ ಮೀಸೆಯಿತ್ತು (ಪ್ರಕರು. ೦೬೯). **ಹೋಲ್ವೆ** : ೧. ರಕ್ಕಸನು . . . ಎಲವೊ ಗೌರಿಜ ಜನಿಸಿದೀವರಿಗೆ ಹೊಕ್ಕ ಸಮರವ ನಿನಗೆ ಕಾಣಿಕೆ ಚಕ್ಕುಲಿಗಳಿಲ್ಲದರೆ ಹೋ[ ಹೋ ]ಲ್ವೆಯ ಚಕ್ರಮಿದೆ ನೋಡಿದರ ಸವಿಯನುತ್ತ ತೆಗೆದೆಚ್ಚ (ಅಂಂತಾ. ೨೮-೩೩) ‘ಪೋಲ್ಮೆ’ ಪರಾ. [ಪೋಲ್$^{*}_1$ + — ವೆ]

**ಪೋಲ್ವೆವಡೆ** (ಕ್ರಿ). ಸಾದೃಶ್ಯವನ್ನು ಪಡೆ ; ಸಾಟಿಯಾಗು : ಖರಕರಬಿಂಬದಿಂ ಕಿರಣಸಂತತಿಗಳ್ ಪೊಣಪೊಣ್ಮಿದಪ್ಪುವೆಂಬರ ನುಡಿ ಪೋಲ್[ಪಾಠಾಂ. ಲ್ಕೆ]ವೆತ್ತುದೆನೆ ಬಾಣಧಿಯಿಂದಿರದುರ್ಚಿಕೊಂಡು ವಿಸ್ಫುರಿತಶರಂಗಳೆಟನವಜಿಟ್ಟೊಳ್ ಪೊಳೆವಯ್ದುಶರಂಗಳಂ ಸುರುಳ್ದುರುಳ್ವಿನಮೆಚ್ಚ (ಕಂಕಹಾ. ೦೨-೬೩). [ಪೋಲ್ವೆ + ಪಡು$_1$]

**ಪೋವಣಿಕೆ** ‘ ಪವಣಿಕೆ ’ ನೋ.

**ಪೋವಿಡು** (ಕ್ರಿ). ಹೋಗಲು ಬಿಡು : ಅರಿಗಳ್ಗಳಿವಾಗದ ಮುನ್ನವೆ ಕಟ್ಟಿದ ಹಯಮಂ ಪೋವಿಟ್ಟು ಮನೆಗೆ ಪೋಪಂ (ರಾಜಾಕ್ಕ. ೦೩೩-೬)

[ ಪೋ$_1$ + ಬಿಡು$_1$ ]

**ಪೋಶಳ** ‘ ಪೊಯ್ಸಳ ’ ನೋ.

Δ**ಪೋಶಟ** ‘ ಪೊಯ್ಸಳ ’ ನೋ.

**ಪೋಷ$_1$** ‘ ಪುಷ್ಯ ’ ನೋ.

**ಪೋಷ$_2$** (ನಾ). ೧. ಪರಿಪೋಷಣೆ ; ಸಾಕುವುದು. ೨. ಬೆಳವಣಿಗೆ ಅಭಿವೃದ್ಧಿ. [ಸಂ.]

**ಪೋಷಕ** (ಗು). ೧. ಸಲಹುವ ; ಕಾಪಾಡುವ : ಈ ಪ್ರಕಾಶನಕೆ ದೊರೆಯಬಹುದಾದ ವಾರ್ಷಿಕ, ಪ್ರೇರಕ, ಪೋಷಕ ಸದಸ್ಯರ ಸಹಾಯವೆ ಕರಾವಲಂಬನ (ಸಂಹೋರ. VI. ೫೦೪); ಊಬಾರ ಕಮ್ಮಾರ ಕಾಯಕಗ

ಪೋಷಕ ದೈವತ ಅಭಿಮಾನಿದೇವತೆ ' ಪ್ರಮಿಯಾತ್ಯೂಸ್ ' ಅನ್ನು ಸ್ಥಳೀಯ ಅಧೀನಿಯರು ಹಿಂದಿನಿಂದ ಪೂಜಿಸುತ್ತಿದ್ದರು (ಜ್ಞಕೃ. I. ೩೮೬೪). (ನಾ). ೨. ಪೂರಕವಾದುದು ; ಪಾಲನೆ ಮಾಡುವಂಥದು : ಅವನ ಸಂದೇಶ ಆರ್ಯಸಂಸ್ಕೃತಿಯ ಪೋಷಕ ಎಂಬುದು ಇತಿಹಾಸಕಾರರ ಬಹು ಮತ (ಹುಣ್ಣ.ರ. ೦೦೫ ೩೮೬೪); ಈ ಮೂರು ಜಾತಿಯ ದ್ರವ್ಯಗಳನ್ನು ರಾಮಾನುಜಗೀತಾಭಾಷ್ಯದಲ್ಲಿ ಧಾರಕ, ಪೋಷಕ, ಭೋಗ್ಯಕ ಎಂದು ಕರೆದಿದೆ (ಹರಿದ. ೩೫೫). ೩. ರಕ್ಷಿಸುವವನು ; ಕಾಪಾಡುವವನು : " ಭರ್ತಾ—ಪೋಷಕಃ " (ಕಾಕ್ಕ. ೦೬೪) ; ಈ ಅಂಶವನ್ನು ಶಿಕ್ಷಣಚಿತಂತರರು ಪ್ರತಿಪಾದಿಸಿದಂತೆಲ್ಲ ಪೋಷಕರಲ್ಲೂ ಆ ಬಗ್ಗೆ ಆಸಕ್ತಿ ಹೆಚ್ಚುತ್ತಿದೆ (೩೪೮. ೦೬೪). ೪. ಬೆಳೆಸುವವನು; ವೃದ್ಧಿಗೊಳಿಸುವವನು. [ಸಂ.]

**ಪೋಷಕಿ** (ನಾ). ಸಲಹುವವಳು ; ಪಾಲನೆ ಮಾಡುವವಳು : ಅವಳ ಅಜ್ಜಿಯೇ ಅವಳ ಪೋಷಕಿಯಾಗಿದ್ದಳು (ಕೃಹಕ. ೦೦೨).

[ ಪೋಷಕ + — ಇ ]

**ಪೋಷಣ** (ನಾ). ೧. ರಕ್ಷಣೆ; ಪಾಲನೆ : "ತುಷ, ಹೃಷ—ಪುಷ್ಟೌ, ಪೋಷಣ ದೊಳ್" (ಶಾಕ್ಕ. ೦೪೪); "ಇನ್ನರ ವಿಶಿಷ್ಟರ ತೋಷಣ ಪೋಷಣಂಗಳೊಳ್ಳು ಗರಮನ್ನು ಬಣ್ಣಿ(ಣಿ)ಸುವುದೀ ಧರೆ ಪಂಡಿತಪಾರಿಜಾತನಂ ನಾಗನಂ (ಎ. XXI. ೦೩-೩೩; ೧೫೩೦). ೨. ವಿಸ್ತಾರ; ವ್ಯಾಪ್ತಿ : ಸಂಗೀತದ ಸಾಧನ, ನಿರೂಪಣ, ಪೋಷಣ ಎಲ್ಲಿಲಾಗಿ ಅಭಿರುಚಿ ಮತ್ತು ಪ್ರವೃತ್ತಿಗಳಲ್ಲಿ ಆಗಿರುವ ಬದಲಾವಣೆಗಳು ಗಮನಾರ್ಹ (ಹಾರದ. ೩೪೩). [ಸಂ.]

**ಪೋಷಣೆ** (ನಾ). ರಕ್ಷಣೆ; ಪೋಷಿಸುವಿಕೆ : ಸರಿಯಾದ ಪೋಷಣೆಗೆ ದೇಕಾದ ಮುಖ್ಯ ವಸ್ತುಗಳು ಜೀವಸತ್ವಗಳು (ಕಂಕೋ. XI. ೩೬೪).[ಸಂ. ಪೋಷಣ]

**ಪೋಷಾಕ** ' ಪೋಷಾಕು ' ನೋ.

**ಪೋಷಾಕು, ಪೋಷಾಕ** (ನಾ). ಉಡುಪು; ಉಡುಗೆ; ತೊಡುಗೆ : ಸ್ವಯಂಸೇವಕನ ಪೋಷಾಕಿನಲ್ಲಿಯೇ ಇರುವುದರಿಂದ ಇವರ ಬಟ್ಟೆಬರೆಗಳಿಗೆ ಹೆಚ್ಚು ವೆಚ್ಚವಿಲ್ಲ (ಸೀಹಾ. ೯೬); ಅವರು ಪೋಷಾಕನ್ನು ಗುರುತಿಸುತ್ತಾರೆ, ಮನುಷ್ಯರನ್ನು ಗುರುತಿಸುವುದಿಲ್ಲ (ಕಂಠ. II. ೨೬೩). **ಪೋಷಾಕ** : ಆತನು ತನ್ನ ಸೂಪರಿಂಟೆಂಡೆಂಟ ಪದವಿಯ ಪೋಷಾಕವನ್ನೇ ಧರಿಸಿದ್ದ ನೆಂದು ಬೇರೆ ಹೇಳಬೇಕಾದ್ದಿಲ್ಲ (ಹಿರಿಕ್ಕ. ೯೩).

[← ಪಾರ. ಹಿಂ. ಪೋಶಾಕ್; ಮರಾ. ಪೋಷಾಕ್, ಪೋಷಾಖ್, ಪೋಷಾಗ್, ಪೋಶಾಕ್, ಪೋಶಾಖ್, ಪೋಶಾಗ್]

**ಪೋಷಿತ** (ಗು). ೧. ಸಲಹಿದ; ಕಾಪಾಡಿದ. ೨. ಬೆಳೆಸಿದ ; ವೃದ್ಧಿ ಪಡಿಸಿದ. [ಸಂ.]

**ಪೋಷಿಸು** (ಕ್ರಿ). ೧. ಸಲಹು ; ಕಾಪಾಡು ; ಸಾಕು : ಭಾವಶಿವದೇವ ಕೀರ್ತಿಯ ಮಾಣಿಯಂ ಕೈಕೊಣ್ಡು ಪೋಷಿಸಿ (ತಶಾ. XI—I. ೬೪-೦೭; ೧೦೫೨) ; ವಿಷವೃಕ್ಷದವಗೆ ಷಡ್ರಸವನುಣಿಸಲುಬೇಕು ದ್ವೇಷ ಮಾಡಿದವನ ಪೋಷಿಸಲು ಬೇಕು (ಪುರಂದ. ೨-೬೩-೦) ; ಗಿಳಿಯ ಮರಿಯನು ತಂದು ಪಂಜರದೊಳಗೆ ಪೋಷಿಸಿ ಕಲಿಸಿ ಮೃದುನುಡಿಗಳನು ಲಾಲಿಸಿ ಕೇಳ್ವ ಪರಿಣತ ರಂತೆ (ಕಂಹ. ೨೦). ೨. ಪುಷ್ಟೀಕರಿಸು ; ಸಮರ್ಥನೆ ಮಾಡು : ಜಗತ್ತಿನ ಇನ್ನೂ ಇತರ ಒಂದೆರಡು ಭಾಷೆಗಳಲ್ಲಿ ಈ ಪರಿವರ್ತನೆಯನ್ನು ಪೋಷಿಸುವ ಆಧಾರಗಳು ಇವೆ (ಕ್ಭಾಪಿ. ೩೩೩); ಒಂದೊಂದು ಸಂಪ್ರದಾಯ ದವರೂ ವೇದ ಪುರಾಣಗಳಿಗೆ ತಮ್ಮ ತಮ್ಮ ಧರ್ಮಕ್ಕೆ ಅನುಕೂಲವಾಗು ವಂತೆ ವ್ಯಾಖ್ಯಾನ ಮಾಡಿ ತಮ್ಮ ತಮ್ಮ ವಾದಗಳನ್ನು ಪೋಷಿಸಿಕೊಂಡಿ ದ್ದಾರೆ (ಹಾಕದ. ೨೬೪). ೩. ಅಭಿವೃದ್ಧಿ ಮಾಡು ; ಬೆಳೆಸು : ಮೂಳರಂ ಪಾಳಿಸಿಯುಂ ಕೋಶವಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ ನಿಷ್ಕಂ ಟಕಮುಂ ನಿರಾತಂಕಮುಮಂ ನಿಜಾಯತ್ತಮುಮಮನಿಸಿದು (ಕಂಕ್ರಪು. ೨-೬೦) ; ಕಾವ್ಯದಲ್ಲಿ ವರ್ಣನೆ ಯಾವ ರೀತಿಯಲ್ಲಿ ಬಂದರೆ ತನ್ನ ಸೊಗಸನ್ನೂ ಕಾವ್ಯದ ಸೊಗಸನ್ನೂ ಒಟ್ಟಿಗೆ ಪೋಷಿಸುವುದೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ (ಸಶಾಸೋ. ೦೦೨). [ಪೋಷಣ + — ಇಸು]

**ಪೋಷ್ಯ** (ಗು). ೧. ಪಾಲಿಸಬೇಕಾದ : ಸಲಹಬೇಕಾದ : ಸಾಕಲು ಅರ್ಹವಾದ : 'ಪೋಷ್ಯವರ್ಗ' ಪರಾ. (ನಾ). ೨. ಪಾಲಿಸುವಿಕೆ; ಪೋಷಣೆ : "ಪೌಷಣಂ . . . ಪೋಷ್ಯಂ, ಪೌಷ್ಯಂ, ಪೋಷಿತವ್ಯಂ — ಈ ೭ ಹೊರೆತಂ" (ಶಾಕ್ಕ. ೦೬೬). [ಸಂ.]

**ಪೋಷ್ಯವರ್ಗ** (ನಾ). ರಕ್ಷಿಸಬೇಕಾದ ಬಂಧುಜನರು ; P ತಾಯಿ, ತಂದೆ, ಗಂಡ, ಪತ್ನಿ, ಆಶ್ರಯದಲ್ಲಿರುವವನು, ಮಕ್ಕಳು, ಅಭ್ಯಾಗತ, ಅತಿಥಿ ಮತ್ತು ಅಗ್ನಿ—ಈ ಒಂಬತ್ತು ಜನ ಪೋಷ್ಯ ವರ್ಗಕ್ಕೆ ಸೇರಿದವರು. ಇಲ್ಲಿಯ ಹೆಸರುಗಳು ಮತ್ತು ಸಂಖ್ಯೆಗಳ ಬಗ್ಗೆ ಭಿನ್ನಾಭಿಪ್ರಾಯಗಳಿವೆ : ಕಡಲ ತಡಿಯೆಯ್ದೆ ನೆಲನಂ ಪಡೆದರ್ ಭವದೀಯ ಪುತ್ರರುಳ್ಳಕವಿಗೆಳೊಳ್ ಪಡೆದುದು ಬಂಧುಜನಂ ನಿಮ್ಮಿಂ ಗಾವೆಂ ಪೋಷ್ಯವರ್ಗದಿಂದಂ ಪೊಱಗೇ (ಆದಿಪು. ೯-೯೪) ; ಶಾಮಂದರವರ ಪೋಷ್ಯವರ್ಗಕ್ಕೂ ಬಂಧುವರ್ಗಕ್ಕೂ ಸೇರಿದ ಜನರು ಹೊರತು ಉಳಿದ ಇಲಾಖೆಗಳ ನೌಕರರು ೯೬೮೭ ಮಂದಿ ಇದ್ದರು (ಜಾಪಾಕಂ. II. ೦೬೬).

[ಸಂ.]

**ಪೋಸ, ಪಾಸ್ಸ, ಹೋಸ, ಹೌಸ**$_1$ (ನಾ). [ಜೈನ]ಕತ್ತಲೆಯಾಗುವುದಕ್ಕೆ ಮೊದಲು ಆಹಾರ ಸ್ವೀಕಾರ ಮಾಡುವ ವ್ರತ, — ನಿಯಮ : ಅಚ್ಯುತ. . . ಅವರ ಮನೆಗೆ ಊಟಕ್ಕೆ ಹೋದ. ನಾಗರಾಜನಿಗೆ ' ಪೋಸ ' ವಲ್ಲವೇ ! (ಹುಗಿಹು. ೯೦). **ಪಾಸ್ಸ** : ನಾವು ಜೈನರು. ಕತ್ತಲೆಗೆ ಮುಂಚೆ ಊಟ ; ನಾವು ಪಾಸದವರು (ಜನುಕ. ೩೬). **ಹೋಸ** : ಸ್ಥೂಳಸೂಕ್ಷ್ಮಂ ಗಳಪ್ಪ ಪ್ರಾಣಿಗಳು ರಾತ್ರಿಯೊಳನ್ನಪಾನಾದಿಗಳಂ ಪೊರ್ದಿದೊಡೆ ಪಿಂಗಿಸ ಲ್ಬಾರದಪ್ಪುದರಿಂದನ್ನಪಾನಖಾದ್ಯಲೇಹ್ಯಂಗಳಪ್ಪ ಚತುರ್ವಿಧಾಹಾರಮಂ ರಾತ್ರಿಯೊಳು ನವಶುದ್ಧಿಯಿಂ ಪರಿಹರಿಸುವುದು ಹೋಸಮೆಂಬಾಜಿನೆಯಣು ವ್ರತಮಕ್ಕುಂ (ಕಶಾರ. ೩೦೭) ; ಉತ್ತಮಗೋಷ್ಠಿಯೊಳಿರುತಿರೆ ಹೋಸದ ಹೊತ್ತಾಗಲೂಟವಾಯ್ತೊಡನೆ (ಧರ್ಮ. ೩೬-೯೦) ; ಶರಧಿಗೆ ರವಿ ಸಾರುತಿರೆ ಕಂಡು ಹೋಸಕೆ ಸರಸಿಜಮುಖಿ ಪೋಪೆನೆನಲು (ಜನಕ. ೯-೬೦). **ಹೌಸ**$_1$ : ಶಾಂ ಹೌಸಕ್ಕೆ ಬೇಗಳ್ದುವರಮನೆಯ ಪುಗಲಿತ್ತ ಸೂರ್ಯಂ. . . ಪಶ್ಚಿಮಾಂ ಬುಧಿಯ ಸಾರಿದಂ (ಕೃಕಪು. ೯-೦೫೪).

[←ತುಳು. ಪೋಸ = ಸೂರ್ಯಾಸ್ತ , ಸಂಜೆ ; ಪೋಸದಾಯೆ = ಸೂರ್ಯಾಸ್ತಕ್ಕೆ ಮೊದಲು ಆಹಾರವನ್ನು ಸ್ವೀಕರಿಸುವ ವ್ರತ]

**ಪೋಸಳ** ' ಪೊಯ್ಸಳ ' ನೋ.

Δ**ಪೋಸಟ** ' ಪೊಯ್ಸಳ ' ನೋ.

**ಪೋಸ್ಟ** ' ಪೋಸ್ಟು ' ನೋ.

**ಪೋಸ್ಟು, ಪೋಸ್ಟ** (ನಾ). ೧. ಅಂಚೆವ್ಯವಹಾರವನ್ನು ನಡೆಸುವ ಕಚೇರಿ ; ಟಪಾಲುಕಚೇರಿ : ಕಾಗದಗಳನ್ನು ತಂದು ಹಂಚುವುದು ಪೋಸ್ಟಿನ ಕೆಲಸ (ಜೀವನಕೃ. ೬೦). ೨. ಅಂಚೆಯ ಮೂಲಕ ಬಂದಿರುವ ಅಥವಾ ಕಳುಹಿಸಲಿರುವ ಪತ್ರ ಮುಂತಾದುವು ; ಟಪಾಲು : ಆ ದಿನ ಪೋಸ್ಟಿನಲ್ಲಿ ವಾಚೊಂದು ನನಗೆ ಧರ್ಮಾರ್ಥವಾಗಿ ಪಾರ್ಸಲ್ ಆಗಿ ಬಂದಿತ್ತು (ಹುಂಗಿಸು. ೦೪). **ಪೋಸ್ಟ** : ೨. ಅಂಚೆಯವನು 'ಪೋಸ್ಟ' ಎಂದ ಕೂಡಲೇ ಬಾಗಿಲಿನ ಕಡೆಗೆ ಓಡಿದ (ಕೂಶ).

**ಪೋಸ್ಟ್‌ಕಾರ್ಡು**=(ಅಂಚೆಯ ಮೂಲಕ ರವಾನಿಸುವ, ಗೊತ್ತಾದ ಅಳತೆಯ) ರಟ್ಟುಕಾಗದ : ಪೋಸ್ಟ್‌ಕಾರ್ಡನ್ನು ಮರೆಯದಂತೆ ಟಪಾಲಿಗೆ ಹಾಕು (ಕೂಶ). **ಪೋಸ್ಟ್‌ಬಾಕ್ಸು**=ಅಂಚೆಯನ್ನು ಹಾಕುವ ಡಬ್ಬಿ ; ಟಪಾಲುಪೆಟ್ಟಿಗೆ : ಪೋಸ್ಟ್‌ಮ್ಯಾನ್ ಬಂದು ಪೋಸ್ಟ್‌ಬಾಕ್ಸಿನಲ್ಲಿದ್ದ ಕಾಗದಗಳನ್ನೆಲ್ಲಾ ತೆಗೆದುಕೊಂಡು ಪೊರಟನು (ಕೂಶ). ಪೋಸ್ಟ್

ಮಾಸ್ತರು = ಅಂಚೆಕಚೇರಿಯ ಯಜಮಾನ : ಅವರು ಈ ವಿಭಾಗಕ್ಕೆ ಹೊಸ ಪೋಸ್ಟ್‌ಮಾಸ್ತರರಾಗಿ ಬಂದಿದ್ದಾರೆ (ಆಡು). ಪೋಸ್ಟಾಫೀಸು = ಅಂಚೆಯ ವ್ಯವಹಾರಗಳನ್ನು ನಡೆಸುವ ಕಚೇರಿ; ಟಪಾಲು ಕಚೇರಿ : ಪೋಸ್ಟಾಫೀಸಿನ ಹತ್ತಿರವೇ ನಮ್ಮ ಮನೆ ಇದೆ (ಆಡು). [←ಇಂ. Post]

**ಪೋಸ್ತು** (ನಾ). ಗಸಗಸೆ; ಅಫೀಮಿನ ಕಾಳು : ಖುರಾಸಾನಿಪೋಮ, ಪೋಸ್ತು, ಸೈಂಧವಲವಣ . . . ಇಷ್ಟನ್ನೂ ಸಮಚೂರ್ಣ ಮಾಡಿ . . . ಒಂದು ಗುಳಿಗೆಯನ್ನು ಅನುಪಾನವರಿತು ತೆಗೆದುಕೊಂಡರೆ ರಕ್ತಗ್ರಹಣೀ, ಹೊಟ್ಟೆನುಲಿ, ಸಂಗ್ರಹಣಿ ಸಹ ನಿಲ್ಲುವುವು (ಸಕವೈ. ೩೮. ೪೬೪).
[← ಪಾರ. ಪೋಸ್ತ್ ; ಹಿಂ. ಪೋಸ್ತ್, ಪೋಸ್ತಾ]

**ಪೋಹಚಿ** ‘ ಪೌಂಚಿ ’ ನೋ.

**ಪೋಹಣಿಗೆ** ‘ ಪವಣಿಗೆ ’ ನೋ.

**ಪೋಹಣಿಸು** ‘ ಪವಣಿಸು ’ ನೋ.

**ಪೋಳ್$_1$** ‘ ಪೊೞ್$_1$ ’ ನೋ.

**ಪೋಳ್$_2$** ‘ ಪೊೞ್$_2$ ’ ನೋ.

**ಪೋಳ** (ನಾ). ಯೋಧ; ಸೈನಿಕ (?) : ಪೋಳರ್ ಪೂಣ[ರ್ದಾಮ] ಟ್ಯಾಚಿ ಸೂ[ಳೀ]ಜುಜುವಲ್ಲಿ ಸಿಡಿದ ದಾಳುಡಿ ದಾನೊಳ್ ಕೀಲಿಸಿರೆ ಬಳ್ಳಿ ಮಿಂಚುಗಳಾಳಿ[ಗ]ವಾಡರಿ ಪೊಳೆವ ತಳಿನಂ ಪೋಲ್ಕುಂ (ಧರ್ಮಾಮೃ. ೪-೬೩).
[ ? ]

**ಪೋಳರೆ** (ನಾ). ಬಿರುಕು ಬಿಟ್ಟಿರುವ ಬಂಡೆ ; ಸೀಳಿದ ಬಂಡೆ : ಪೋಳರೆಗೆ ಒರಿಯೋಡ ತಾಟಿ ಪೊಳ್ತಲ್ಲದಾ ಬೋಳ ಕೈಗಾಯ್ದನೆನಲೀ ಬೋಳನಾಳಿದಂ (ಕಾಬೊ. ೦೩೬-೨೪೬).
[ ಪೋಳ್$_2$ (< ಪೊೞ್$_2$) + ಅರೆ$_2$ (< ಅಜ಼್$_4$) ]

**ಪೋಳಲ್** ‘ ಪೊೞಲ್ ’ ನೋ.

**ಪೋಳಲ್ಗೋರ** ‘ ಪೊೞಲ್ಗೋರ ’ ನೋ.

**ಪೋಳಿ** (ನಾ). ಗುಂಪು; ಪಂಗಡ; ಬಣ : ಅವನ ದಾಯಾದಿಮಾತ್ಸರವನ್ನು ತೀರಿಸಿಕೊಳ್ಳಲು ದಾರಿಯೊಂದನ್ನು ಹುಡುಕುತ್ತಿದ್ದ. ಊರಿನಲ್ಲಿ ಅವನು ಒಂದು ಪೋಳಿಯನ್ನು ಕಟ್ಟಿದ (ಮುಳ್ಳುಹಾ. ೦೯೩). [<ಸಂ. ಪೋಲ]

**ಪೋಳಿಗೆ$_1$, ಹೋಳಿಗೆ$_1$** (ನಾ). ೧. ಕಣಕವನ್ನು ಹಪ್ಪಳದಂತೆ ಲಟ್ಟಿಸಿ ಹೂರಣವನ್ನಿಟ್ಟು ಮತ್ತೆ ಲಟ್ಟಿಸಿ ಹಂಚಿನ ಮೇಲೆ ಎಣ್ಣೆ ಸವರಿ ಬೇಯಿಸುವ ಒಂದು ಬಗೆಯ ಸಿಹಿತಿಂಡಿ ; ಒಬ್ಬಟ್ಟು : “ಪೋಳಿಗೆ— ಪೋಲಿಕಾ = ಹೋಳಿಗೆ” (ಕನ್ನಕೋ. ೨೭); ಪೂರಿಗೆಯಿಡ್ಡಲಿಗೆ ಪೋಳಿಗೆ [ಪಾಠಾಂ. ಸೋದಿಗೆ, ಸೊಂಡಿಗೆ] . . . ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿ (ವಡ್ಡಾರಾ. ೬೮-೦೬); ಡಾಕಿನಿಯರ ಕೈಯ ಪೋಳಿಗೆ ಯಂತೆ ರಕ್ಕಸಿಯರ ಮನೆಯ ಬೆಲ್ಲದಂತೆ (ಕರ್ಣಾಟಕ್ಕು. ೦೩-೦೬೫). ೨. (ಹೋಳಿಗೆ ಮುಂತಾದ ಭಕ್ಷ್ಯಗಳನ್ನು ತಯಾರಿಸಲು ಬಳಸುವ) ಕಣಕವನ್ನು ಲಟ್ಟಿಸಿ ಮಾಡಿದ ಹಪ್ಪಳ : ಅರೆದಿಂಬಾಗಿರೆ ಬೆಂದ ಪೋಳಿಗೆಗಳಂ ತಚ್ಚೂರ್ಣಪಂಚಾಂಶಮಾಗಿರೆ ಖರ್ಜೂರಮನಲ್ಲದಂದೆಱದ ಪಣ್ಣಂ ದ್ರಾಕ್ಷೆಯುಂ ಮತ್ತೆ ಶರ್ಕರೆಯಂ ಪೊಯ್ದು . . . ಖಂಡಲಡ್ಡುಗೆಗಳಂ ಮಾಟ್ಕೆಂದುಮಿಾ ಮಾಟ್ಕೆಯಿಂ (ಸೂಪಶಾ. ೮-೦೪). **ಹೋಳಿಗೆ$_1$** : ೧. ಸೊಗಯಿಪ ಘೃತಪೂರಂ ಹೋಳಿಗೆ ಮಂಡಗೆ . . . ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ಆಜ್ಯಯುತಮಪ್ಪವಂ ಮೆಲ್ದು (ಕರ್ಣಾಟಕ್ಕು. ೦-೦೪೬); ಸೊರ್ಕನೆದಿಂಬಂಗಾಡೆ ಹೋಳಿಗೆಯೆಂಬಂತೆ (ಅರ್ಥಸಿ. ೬-೬೩ ಪ); ಸಮಸ್ತ ಬ್ರಾಹ್ಮಣಸಮಾದವು ಹೋಳಿಗೆಯುಂಡಿತು (ಹಲ್ಯಬ. ೦೩); ನೆರೆಮನೇ ಹೋಳಿಗೆಗೆ ತುಪ್ಪಾ ಕಾಯಿಸಿದ ಹಾಗೆ (ಗಾದೆ). ೨. ಬೆಂದ ಕಳಿಲೆಯ ಹಿಟ್ಟನಿಳಿಹಿಯಾಱಿಸಿ ಹಲವು ಚೀದದ ಹಸುರು ಗಾಯ ತೆಱದಿನಾತ್ತರಿಸಿಕೊಂಡು . . . ಧೂಪವನಿಡುವುದು ಅದಱೊಳಗೆ ಬೆಂದ ಕಳಿಲೆಯ ಹೋಳಿಗೆಯ ಹೋಳನೊದವಿಸಿದ ಬಳಿಕ ಪೊಗ್ಗರಣೆಯಂ ಮಾಡುವುದು (ಸೂಪಶಾ. ೬-೯). ‘ಪುಲ್ಲಿಗೆ$_2$’ ಪರಾ.

**ಹೋಳಿಗೆ ತುಪ್ಪದಾಗ ಬೀಳು** = (ಅಲಂ) ಕೆಲಸವು ಕೈಗೂಡು : ಹೋಚು ಗಿಂಚು ಎಲ್ಲಾ ಮುಗಿದು ಹೋಳಿಗೆ ತುಪ್ಪದಾಗ ಬೀಳುವ ಹೊತ್ತು ಬಂದಿದೆ (ಬಾಳ್ಗೋಂಬೆ. ೨೩೨). **ಹೋಳಿಗೆಯ ನೈವೇದ್ಯ** = (ಅಲಂ) ಹೊಡೆತ ; ಪೆಟ್ಟು : ಕೊಡುತ್ತೀರೋ ಇಲ್ಲವೇ ಎಲ್ಲರಿಗೂ ಹೋಳಿಗೆಯ ನೈವೇದ್ಯವಾಗಬೇಕೋ ? (ರಂಗಕಥೆ. ೫). [< ಸಂ. ಪೋಲಿಕಾ]

**ಪೋಳಿಗೆ$_2$, ಹೋಳಿಗೆ$_2$** (ನಾ). ಹೊಪ್ಪಳೆ ; ಬೊಕ್ಕೆ : ಸ್ಫೋಟಕ, ಪೋಳಿಗೆ, ಸ್ಫುಟಿಕ, ಪಳಿಕು (ಕಬ್ಬಸು. ೦೩೦ ಪ್ರಹೋ). **ಹೋಳಿಗೆ$_2$** : “ಹೋಳಿಗೆಯೆಂದು ಸ್ಫೋಟಕಂ” (ಶಬ್ದಾ. ೬೫-೪೫೪); ಸ್ಫೋಟಕ ಶಬ್ದಕ್ಕಾದ ಹೋಳಿಗೆಯೆಂಬುದುಂ, ಲಾಪಟ ಶಬ್ದಕ್ಕಾದ ಲಂಬಳವೆಂಬುದುಂ ಜಟಿಕ್ಕೆ ಸಂದೇಹಂ (ಶಬ್ದ. ೨೨ ವೃತ್ತಿ), ಬಸವಳಿದಂಗ ಹೋಳಿಗೆ ಮೂ[ಪಾಠಾಂ. ಮಾ]ಡುವ ಕಾಲ್ಪೀಸುವಾಂತು ತೀಡುವ ಸುಯ್ಯುಬ್ಬೆ ಗೊಂಡೊಡಲಿಂದವೆ ಪಾಡಳಿದನು ಸುಕುಮಾರ (ಸ್ರೀಹಾಂ. ೪-೩೩). ‘ಹೋಳಿಗೆವಡೆ ’ ಪರಾ. [ < ಸಂ. ಪೋಟಕ, ಸ್ಫೋಟಕ ]

**ಪೋಳಿಸು** ‘ ಪೊೞಿಸು ’ ನೋ.

**ಪೋಳ್ಸು$_1$** ‘ ಪೊೞ್$_1$ ’ ನೋ.

**ಪೋಳ್ಸು$_2$** ‘ ಪೊೞ್$_2$ ’ ನೋ.

**ಪೋಳ್ಗಳೆ, ಹೋಳುಗಳೆ** (ಕ್ರಿ). ೧. ತುಂಡುಮಾಡು ; ಕತ್ತರಿಸಿ ಹಾಕು ; ಕಡಿ : ಹರಿಗಳು . . . ಏಗೆ ಪೋಳ್ಗಳೆಯಲೆರಗಿದವಮಾ ಮಸ್ತಕವ (ಅಂಬಿಗ. ೪೨-೬೪). **ಹೋಳುಗಳೆ** : ೧. ಹೋಳುಗಳೆದನು ಸುಭಟ ನಿಟ್ಟೆಲು ಮೂಳೆಯನು (ಕುಮಾರವ್ಯಾ. ೦೩-೪೦) ; ಕರಾಳಕುಜವನು ಮುಸಲ ಹತಿಯಲಿ ಹೋಳುಗಳೆದನು (ತಿಹಾಗ. ೦೦-೩೩-೦೪). ೨. ನಾಶಮಾಡು ; ಧ್ವಂಸಗೊಳಿಸು : ಆಯುಷ್ಯವನು ರವಿ ಹೋಳುಗಳೆಯನೆ ಹುಪರಾಙ್ಮುಖರಾದವರನು (ತಿಹಾಗ. ೨-೨-೫). ೩. ನಾಶವಾಗು ; ಧ್ವಂಸವಾಗು : ಕಾಳಗದೊಳಿರಡುದಳದಲ್ಲಿ ವಂದಕ್ಷೋಣಿ ಹೋಳುಗಳೆದುದು ಮೂರುಸಂಜೆಯೊಳು (ತುರಂಗ. ೩೭-೦). ೪. ಛಿದ್ರವಾಗು ; ತುಂಡಾಗು : ಸೀಳಿ ಬಿದ್ದುದು ಮದೇಭಘಟಾಳಿ ಘೋಟಕನಿಕರ ನೆಲದಲಿ ಹೋಳುಗಳೆದಿರ್ದುವು (ತೊರವೆ. ೩-೬-೦೩). [ಪೋಳ್$_2$ (<ಪೊೞ್$_2$) + ಕಳೆ$_1$]

**ಪೋಳ್ಗುಟ್ಟು, ಹೋಳುಗುಟ್ಟು** (ಕ್ರಿ) . ತುಂಡಾಗುವಂತೆ ಹೊಡೆ ; ಸೀಳು : ಇದು ತವಮ್ಸ್ಯೇಬ ಪರ್ವತವ ಪೋಳ್ಗುಟ್ಟುವಶಿಭದಾರಂ (ಕಾಪ್ರ. II. ೪೬೫ ಕಟುರಾಜಾರ್ಯ್ಯವ್ರತಾ). **ಹೋಳುಗುಟ್ಟು** : ಬೆಟ್ಟಿಯ ಪಪ್ರಕವಾಟವ ನೃಪ ಹೋಳುಗುಟ್ಟಿದಟ್ಟನು ನಿಮಿಷದೊಳು (ಜೈಮಿ. ೨೯-೬೨).
[ಪೋಳ್$_2$ (< ಪೊೞ್$_2$) + ಕುಟ್ಟು$_1$]

**ಪೋಳ್ಗೆಯ್** (ಕ್ರಿ). ಸೀಳು : ಹೋಳುಮಾಡು : ನಿಮ್ಮುವಂ ಸೀಳಿ ಪೋಳ್ಗೆಯ್ದು ಕಾದಿಸುತ್ತಿಹರು (ಶಶಕೋ. ೪-೩೦).
[ಪೋಳ್$_2$ (< ಪೊೞ್$_2$) + ಕೆಯ್$_1$]

**ಪೋಳ್ದಟ್ಟೆ** (ನಾ). (ವೀಳ್ಯದೆಲೆ ಹಾಗೂ) ಚೂರಡಕೆಯನ್ನು ಇಟ್ಟಿರುವ ತಟ್ಟೆ : ಫಣವಳ್ಳಿಯ ಪರ್ಣ ಸ್ವರ್ಣವರ್ಣದಿ ಕೇವಣಿಸಿರ್ದ ಕತ್ತಿ ಕತ್ತರಿಯ ಮಣಿಯೆನಲುರ್ದಿದ ಪೋಳ್ದಟ್ಟೆಯ ನಿಟ್ಟೆಸೆದರ್ ತಳೆಗೊಂಡಿ ವರಿ (ರಾಜಶೇ. ೩೦-೩೩). [ಪೋಳ್$_2$ (< ಪೊೞ್$_2$) + ತಟ್ಟೆ]

**ಪೋಳ್ದುಂಬು** (ಕ್ರಿ). ಅಡಕೆಯ ಹೋಳನ್ನು ತುಂಬು : ಕೋಮಲವಡೆದ ಬಂದುಗವಾಯ್ದ್ಗ ಪೋಳ್ದುಂಬಿ ಧ್ರಾಮುಕವಡೆದು ಚುಂಬಿಸಿದ (ಸೊಬಗಿ. ೦೬-೩೮). [ಪೋಳ್$_2$ (< ಪೊೞ್$_2$) + ತುಂಬು$_1$]

**ಪೋಟ್$_1$, ಪೋಳ್$_1$, ಪೋಳ್ಸು$_1$, ಹೋಳ್, ಹೋಳ್ಸು$_1$** (ಕ್ರಿ). ೧.

ಕತ್ತರಿಸು ; ತುಂಡುಮಾಡು : "ಪೋಟ್—ವಿದಾರಣೇ. ಖಂಡೇ ಚ. ವಿರಚನಾರ್ಥೇ ಚ (ಏರ್ಪಡಿಸು)" (ಶಮಂದ) ; ಅಚ್ಚಗೊಂಡದೊಳಗುರ್ವಿಸೆ ಸೀಳಿಸಿ ಮೂಣದಿಕ್ಕೆ ಪೋಟ್ಟುರ್ವಗಿ ಮಾಡಿ ತಾಳಿಸೆ ಸುರುಳ್ಗಿನೆಗಂ ನೆಜ಼ ಸಾಯಂ (ಶಾಂತಿಪು. ೬-೯೩) ; ಎನ್ನನೊದೆದ ನಿನ್ನ ಕಾಲ್ಗಳನೆನ್ನ ಮಕ್ಕಳು ಮಾನುವೊಂದಾಗಿಯುಮೇನಾಗಿಯುಂ ಸೀಳ್ದು ಪೋಟ್ದು ತಿಂಬೆವು (ಸುಕುಮಾಚ. ೫-೬೫) ; ಎಟ್ಟಟ್ಟಿ ಪೆಣ್ಗಳನ್ ಪೋಟ್ದುನ್ (ಅಜಿತಪು. ೩-೯೫). ೨. ಎರಡು ಭಾಗ ಮಾಡು; ಸೀಳು : ಪುಲಿ ಬಂದು ಬಾಯ್ದು ಬಸಿಜು ಪೋಟ್ದು ನೆತ್ತರಂ ಕುಡಿದು ತೆಗೆಲೆಯಂ ಪೊಟ್ದು ತಿಂಬಾಗಳ್ (ಜಗನ್ನಾಥ. ೯೯-೧೯); ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂದಾದಬಲ್ ನಿನ್ನುರಸ್ಥಲಮಂ ಪೋಟದೆ ಪೋಪುದಲ್ತು (ಶಂಶಕಾ. ೧೨-೦೯೬); ನಸುನೆನೆದೊಯ್ಯನುಳ್ಳಲರೆ ಪೋಟ್ದಿಲೆ ಕಂಡದೆ ಕೂಡೆ ಕಂಪಿನಿಂ ರಸಮೊಸರ್ವಂತಿರೊಕ್ಕ ನಱುದಂಬು ಲಕಂ ಕುರುಳಿಂ ಕಟಲ್ದು ಬಿರ್ದಸವಲರ್ಗಂ ಮದಾಳಿ ಮೊರೆದೆರ್ದೆಜುಗುತ್ತಿರೆ (ಅಜಿತಾಪ. ೩-೦೬). ೩. ಸೀಳಿಹೋಗು ; ಬಿರಿ : ನಡುವೆನೆಳ್ದೊಡೆವಿರ್ಬಗಿ ಯಾಗಿ ಪೋಟ್ದು ನೀರೇಜುದ ನಾಳಿಪುಣ್ಣೊಡದು ಸೌಳಿನೆ ಸೀಳ್ದುದು ದೋಣಿವೋಪಿನಂ (ಸುಕುಮಾ. ೫-೦೬); ಬಱಿಕಯ್ಯಂ ನೆತ್ತಿ ಪೋಟ್ದಂತಿರೆ ಪೊಡೆಯಲ್ (ಧಜಕು. ೯-೨೮) ; ಪೋಟ್ದುಂ ಬಲ್ಗಿರಿಗಳಂದು ಪಜ್ರಹತಿಯಿಂ (ಕರ್ಣಾಟಕು. ೯೬೩ ಕ್ರಿಯೋ). ೪. ಒಡೆ : ಪುಡಿಮಾಡು ; ಹುಡಿಗುಟ್ಟು : ಪೊದೆದಜ್ಞಾನಶೈಲೇನ್ದ್ರಪಾನ್ಪೋಟ್ದು (ಎಕ. II, ೦೨೦ : ಜು. 700); ತಿರ್ಜಿಲ್ದಾಡುವೆನೋ ಕುಲಾದ್ರಿಚಯಮಂ . . . ಬ್ರಹ್ಮಾಂಡದಮಂ ಪೋಟ್ವೆನೋ (ಕಸಂ. ೬-೩೫). ೫. ನಾಶಮಾಡು ; ಧ್ವಂಸಮಾಡು : ನಿಜಾಯುದ್ಧಜಾಬಲದಿಂದಿಟ್ಟನನೇಕದುರ್ಗಚಯಮಂ ಪೋಟ್ದಂ ರಿಪು ವ್ರಾತಮಂ (ಶಕಂ. ೩-೯). ಪೋಳ್$_1$: ೧. ಬಡೆನೀಶಾ ನಿಮ್ಮ ಪಾದಾಬ್ಜಮ ನೆಲೆಲೆ ಬಿಡಂ ಸೀಳ್ದಾಡಂ ಪೋಳ್ದಾಡಂ (ಶಬ್ದಾಕ. ೯೮) ; ಓರಂತೆ ಹರ ನೊಲಿದು ತನ್ನ ಫಾಳಾಕ್ಷಿಯಿಂ ಕೋಲರಪಿಡಿಯಂ ಬಡಲಾಕ್ಷಣಂ ರುಧಿರಮಂ ಪೀರಿ ಮುರಿದಜನ ಶಿರಮಂ ಪೋಳ್ದುದು (ಕಪು. ೧೬-೧೨) ; ಪರಿಯು ಪಾವಂ ಪಿಡಿದ ಕರಿಯುಂ ಸೀಳ್ದ ಸಿಂಹಮಂ ಪೋಳ್ದ ಶರಭಮಂ ಮಾಲಾ ಕಾರದಿಂ ಸಾಲ್ಗೊಂಡೆತ್ತಿ ನಭೋಮಂಡಳಕೆ ಜಿಗಿದೊಗೆದು ನೆಗೆದ ಭೇರುಂಡಂ ಗಳಿಂ (ಶಾಜಿಕ. ೫-೫೫ ಪ). ೨. ವೈರಿವೀರಾವನೀಶ್ವರವಕ್ಷಸ್ಥಳಮಂ ಸ್ವಖಿಳ್ಗ ನಖರವ್ಯಾಘಾತದಿಂ ಪೋಳ್ದು (ಜ್ಞಾನ. ೦೯೩೯, ೦.೦೬ ; 1174) ; ಜಾತಿಜಾಯಿಲಂಗಳಂ . . . ಉಂಗುಟದಿಂ ಭಾಳಾಗ್ರಂಬರಂ ಪೋಳ್ದೆತ್ತಿ ತನಗಿದಿರಂ ಕಾಣದೆ ಹೆಕ್ಕಳದಿಂ ಕೆಕ್ಕಳಿಸಿ ನೋಡುವಕ್ಕೆಲಂಗಳುಮಂ (ಶಂಶಕ. ೦೯-೦೯). ೪. ಸೀಳ್ದಿನಿಳೆಯಂ ಕೀಳ್ದಿನದ್ರಿಗಳನರ್ಣವಂ ತೋಳ್ದಿನೇಳಬ್ಧಿಯಂ ಪೋಳ್ದಿನಿದಿರಾದರಂ . . . ಬ್ರಹ್ಮಾಂಡಮಂ ಪೋಳ್ವೆಂ (ಕಪು. ೩೦-೦೦). ಪೋಳು$_1$ : ೨. ಸುರಹೊನ್ನೆಯ ಜನನಂ ಸೀಳುತ್ತಂ ಅರುಹ ಪ್ರತಿಮೆಯನುಜ಼ ಪೋ[ಶಾಂ. ಹೋ]ಳುತ್ತಂ (ಅಕಠ. ಹ. ೯೩೯-೨೯) ; ಮೃತ್ಯುಂಜಯಂ ಗಜಾಸುರನ ಪೋಳುವ ತೆಱದಿ ನೆತ್ತಿಯಂ ಸೀಳ್ದು (ಶಾಶಕ. ೦೬-೬೯). ಹೋಳ್ : ೧. ಬಳೆಗಳೆವ ಹೋಳ್ವ ಸೀಳ್ವಾಱಸುವ ನೆಜ಼ ಸುಲಿವ ಖಳರ ಕಳಕಳದ ಕೋಲಾಹಳದೊಳು ರೌರವಂ ಭಯಂಕರವಾದುದು (ಸಿದ್ಧರಾ. ೮-೨೯). ಹೋಳು$_1$ : ೧. " ಹೋಳು . . . ತುಂಡುಮಾಡು " (ಗಣಶಕು. ೩೫೯). ೪. ಎಳುಕಡಲೊಡಲೆಡೆಯಲಿಪರ್ಗಿರ್ದ ಶೈಲಮು ಹೋಳು ವರು ವಡಬಶಿಖಿ ತಣ್ಣನೆನೆ ಕೋಪಮಂ ತಾಳುವರು (ಸಿದ್ಧರಾ. ೦-೨೦); ಅದರ 'ರೂಕ್ಷಶಿಖರಾಗ್ರಮನ್ . . . ಮಿಂಚುರಿಯ ಪೊಯ್ಲಿಂದೆ' ಹೋಳುವಾಗ ತೂರುವಾಗ ಅದು ಭೂಗರ್ಭದಾಳಕ್ಕೆ ಉರುಳುವುದು (ಬದ್ರಕೃ IV, ಶಾಲಿಕತ ಷಟ್ಕ). ೫. ಎನ್ನ ಜನ್ಮದ ಕೋಳಮಂ ಹೋಳಿದನೆನುತ ಸಲ್ಲೀಲೆ ಸದ್ಭಾವ ದಲಿ ನುತಿಸಿದ ದೇಶಿಕೋತ್ತಮನು (ಸಪ್ಪುಕು. ೨-೨೩) ; ಸಚರಾಚರಂಗಳ ಜಾಲವನು . . . ಅವನಾಜ್ಞೆಯಲಿ ಹೋಳುವನು ಹಣಗಿಚ್ಚನಲಿ ಹರನು (ಶಾಗ. ೬-೩-೨೩). ೬. ನಾಶವಾಗು ; ಹಾಳಾಗು : ಅಳು ನಗುವನು ಸಪಜ ನೆಚ್ಚಿ ಬಾಳುವೆಯ ಹೋಳುವೆಮು ? (ಕಶಾಕ. ೯೦-೦೦).

[ದೇ. ॥ತಮಿ. ಪೋಟ್; ತೆಲು. ಪೋಂಚು; ಪರ್ಜಿ. ಪೋಟ್]

ಪೋಟ್$_2$, ಪೋಳ್$_2$, ಪೋಳು$_2$, ಹೋಳು$_2$ (ನಾ). ೧. ತುಂಡರಿಸಿದ ಭಾಗ ; ಚೂರು ; ತುಂಡು : ಕರ್ಪೂರಸಮ್ಮಿಶ್ರಮಪ್ಪ ನೆಲವತ್ತಿಯಡಕೆಯ ಪೋಟ್ಗಳುಮಂ . . . ಬ್ರಹ್ಮಯ್ಯಂಗೆ ಕೊಟ್ಟು (ವಡ್ಡಾರಾ. ೬೮-೨೩) ; ನೀ [ಶಾಶಂ. ಸೀ]ಳ್ದ ಮಾವಿನ ಪೋಟಂದದ ಕಣ್ಗೆ ಬಾಷ್ಪಜಲಮುಂ ಚಿತ್ತಕ್ಕೆ ಸಂತಾಪಮುಂ ನಿಸಗಂ ಮಾಡಿದನಾವನಾತನೆ ವಲಂ ಗಂಧೇಭವಿದ್ಯಾಧರಂ (ಶಂಶಕಾ. ೯-೬೦); ಒಂದು ಪೋಟನಿತಱಿಳಿರ್ದುದ್ದೊಂದು ೯ಡಿ ಪೀಠ ದೊಳಿರ್ದಪುದು (ಸಮತ. ೯-೮). ಪೋಳ್$_2$: ೧. ಸಿರವೊಡೆದೊಡೇ ನಾಯ್ತು ಸರಸಿರುಹಸಂಭವಂ ಧುರವರಿವ್ರನೆ ಬಿರಿದ ಮಸ್ತಕದ ಪೋಳ್ಗಳಂ ವರಚತುರ್ವದನಂಗಳಂ ಮಾಡಿಕೊಂಡು . . . ಹರಿಗೆ ಮಾಱಾಂತು (ಕಪು. ೦೬-೯೦); ಆ ಕುಮುದ್ವತಿ ನರೇಂದ್ರಮಸ್ತದ ಪೋಳ್ಗಳನೊಂದು ಗೂಡಿ ಪಿಡಿದು (ಕ್ಕಂಣ. ೨೬-೬೬); ಪರಿಮಳವರದ ಪೂಗೀಫಲದ ಪೋಳ್ಗಳ . . . ಸರಸವಾಡುತಲೀಯಲು (ಅಪಂಣ. ೦-೩-೩೦). ೨. ಬಿರುಕು ; ಸೀಳು : 'ಪೋಳರೆ' ಪರಾ. ೩. ಅಡಕೆಯ ಚೂರು : ಚುಂಬಿಸ ಲಾಣ್ಮನ ಬಾಯೊಳು ಪೋಳ್ಗಳ ತುಂಬಿದಳರೆಗಳಿಗೆಯೊಳು (ಪೋಶಕ. ೩೨-೦೦). 'ಪೋಳ್ದಂಬು' ಪರಾ. ಪೋಳು$_2$ : ೧. ಉಡಿದು ಬಿದ್ದಿದೆ ಮಣಿಮೇಖಲೆ ಸಿಡಿಲುಱಿ ಹೊಡೆದ ರೋಹಣಪರ್ವತದ ನಿಡುಗಲ್ಲ ಪೋಳಂತೆ (ಶುದಾಶಾಂ. ೩೯-೯೨). ಹೋಳು$_2$ : ೧. ಎತ್ತಿದಮಭುತ ಕೋಪದಲಿ ಪಿಡಿಮೊತ್ತಿ ಸೀಳಲು ಹೋಳು ನಿಮಿಷಕೆ ಹತ್ತಿ ಮೂಱಲಿಸುತ್ತ ಬರುತಿರೆ ಭೀಮ ಬೆಱಗಾದ (ಕುಮ್ಹಾಸ. ೬೦೩. ೨-೦೩೦); ರಕುತದ ಜಗಿಯ ಜೋರಿನಲೆಸೆದವು ಹೋಳೆರಡು ರಕ್ಕಸಿಯ (ಕೊಶರಣ. ೫-೦ ೨೩); ವೈರಿ ಸುಭಟನ ಗದೆಯು ಗದೆಯಲಿ ಹೊಯ್ದು ನುಗ್ಗೊತ್ತಿದನು ಸಾವಿರಹೋಳೆನಲು ಬಿದ್ದುದು ಧರಿತ್ರಿಯಲಿ (ಶಾಗ. ೦೦-೩೯-೦೬). ೩. ಹೋಳು ಬೆಳ್ಳಿಲೆ ಕರ್ಪೂರಗಳ ತಿಂಬ ಗಯ್ಯಾಳರ ತಹುದಿಚ್ಚರಿಯ (ಕುದಾಶಾಂ. ೨೯-೯೯) ; ತಿಳಿದು ನೋಡಲು ಮಧ್ಯರಾತ್ರಿಯನೊಂದರಗಳಿಗೆಯ ಮಾಡಿ ಕತ್ತುರಿಯ ಗುಳಿಗೆ ಸೇರಿದ ಹೋಳ ಕಾಂತನ ವರಹಸ್ತನಳಿನಕ್ಕೆ ಕೊಟ್ಟಳಿತ್ತಿಯಲಿ (ಕೋಶಕ. ೦೬-೩೬).

ಪೋಳ್ಮಾಡು, ಹೋಳು ಮಾಡು, ಹೋಳ್ಮಾಡು = ೧. ಸೀಳು ; ಸಿಗಿ : ಇಡುಗಟ್ಟಿಗೆಯೊಳಿಟ್ಟು ಬಿಡದೆ ಗರಗಸದಲ್ಲಿ ನಡುನೆತ್ತಿಗಳನಂದು ಪೋಳ್ಮಾಡುವಾಗಳದರ್ ಬಿಡಿಸುವರೆ ಸತಿಸುತರು (ಗುಬುಶೋ. ೦-೯೦) ; ಹುಡುಗನು ಕೋಪದಿಂದ ಗೊಂಬೆಯನ್ನು ಎಸೆದು ಎರಡಾಗಿ ಹೋಳು ಮಾಡಿ ಬಿಟ್ಟನು (ಬೂ). ೨. ಒಡೆದು ಹಾಕು ; ಪುಡಿ ಮಾಡು : ವಿಜಯಾರ್ಧಶೈಲದೊಳಿಕ್ಕಿದ ವಡಿಯೂ ನಾಳೆ ಹೋಳ್ಮಾಡಿ ಬಿಡುವೆನೊಣಗಿದ ಬರಹಾಳೆಯನೊಡೆಯ ಹೊಯ್ದಂತೆ (ಶಕಕ. ೨೯-೫). ಪೋಟಾಗು, ಹೋಳಾಗು = ೧. ಸೀಳಂ ; ಬಿರಿ : ಪೋಟಾದತ್ತನ್ನ ಹೃದಯಮಾದು ಲಲಿತಾಂಗಿ (ಉಕೃಟಿ. ೬-೯೯) ; ನಾಗನಿವಾಸಮಾಲತೆ ಮಾರಂ ಶಶಕಂ ಮೃಗವೇದನೆನುತ್ತೆ ಪೋಟಾಗಿರುತಿರ್ಪುದೇನದು ವಿಚಾರಿಸಿ ನೋಡು ಮಡಿಂದುಮಂಡಲಂ (ಕಕಾಸಕ. ೦-೩೬); ಹಿಳಿದ ಲೋಹದ ಸೀಸಕಂಗಳ ಬಲಿಸಿದರು ಹೋಳಾದ ಕವಚವ ಹೊಲಿಸಿದರು (ಕುಮ್ಹಾಶಾ. ೫-೩೬). ೨. ಚೂರಾಗು ; ತುಂಡಾಗು : ಇಳೆಗವನ ತಲೆಯನು ಬಿಳಿಕ್ಕಿದನ ಕವಾಲ ಸಾವಿರಹೋಳಹುದು (ಕುಮ್ಹಾದ್ರೋ. ೦೯-೯೦) ; ಎರಡು ಹೋಳಾಗಿ ಬಾಳೆಯ ಕಾಯ ಸಂಬಳಿಸಿ . . . ಸಂಭಾರಮಂ ತುಂಬಿ (ಸೂಶಕಾ. ೯-೬೨). ಹೋಳಡಕೆ = ತುಂಡುಮಾಡಿದ ಅಡಕೆ; ಅಡಿಕೆಯ ಚೂರು: ಹೋಳಡಕೆ ಬಿಾ ಎಲೆ ನೀವ ಕೊಳ್ಳಿರಿ ಕೊಳ್ಳಿರಿ (ಶಾಶತ. ೦೬೩)

[ < ಪೋಟ್೧ . / ತಮಿ. ಪೋಟ್ ; ಮಲ. ಪೊಳ್, ಪೊಳುಕ್ಕ; ತುಳು. ಪೂಳು ]

**ಪೋಟ್೩**, ಹೋಟ್ (ನಾ). ೧. ಮರದ ಪೊಟರೆ ; ಡೊಗರು : ಕಳ್ಳರಂತೆಗೆಯ್ವೆಮೆಂದೊಡಂಬಟ್ಟು ಕಳ್ಳಲ್ಲಿಯೆಲ್ಲಮೆಂಟನೆಯ ಭಾಗಮಂ ಮರದ ಪೋಟಿಂ[ಪಾಠಾಂ. ಪೊಟಲೊ, ಪೊಳೊ]ಳಿಟ್ಟು ದಿವಸಕ್ಕಂ ಪೋಪರ್ (ವಡ್ಡಾ. ೨೦-೬); ಪರ್ಮರಂಗಳ ಪೋಟ್ಗಳೊಳಗಣಿಂದಮೊಗೆದ ಕೇಸುರಿಗಳ ಬಳಗದಂತೆ (ಹಂಕಚ. ೦೦-೭೦ ವ): ಪೋಟ್ಗಳೆಡೆಯಲ್ಲಿ ಕವಲ್ಗಳ ಯಲ್ಲಿ ಸುತ್ತಲುಂ ಗಿಳಿಗಿಳ ಹಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಮುಂ ನಿರಾಕುಳಮನುರಾಗದಿಂ ಪಲವುದೇಶದೊಳಿರ್ಪುವು ಬಂದು ಭೂಪತೀ (ಜಾದಂಪೂ. ೦೨೬). ೨. ಪೊಳ್ಳು; ಜಳ್ಳು: 'ಪೋಟ್ಮರ' ಪರಾ. **ಹೋಟ್**: ೧. "ಕೋಟರಮಾಗಿ ಕೂಟಮೆನೆ ಹೋಟಕ್ಕು [ಪಾಠಾಂ. ಪೊಟಲಕ್ಕು]" (ಚುಂಗರಾ. ೪೨-೩). 'ಪೋಟ್೨' ಪರಾ.

[ದೇ.೫ ತಮಿ. ಪುಟ್ಕ್, ಪೊಳ್ಳ್]

**ಪೋಟಿಲ್**, ಪೋಳಲ್, ಹೊಳಲು೧ (ನಾ). ಮರದ ಡೊಗರು; ಪೊಟರೆ; ಕೋಟರ: "ಕೋಟರಂಷ್ಟಯಂ ತಾಂ ಪೋಟಲ್" (ಪಡ್ಕುಕೋ. ೩೦-೬); ಪೋಟಲ ಪಾವಡರೆ . . . ಮರದ ಮೊದಲೊಳ್ ಬೇಟಿಲ್ ನಿಲ್ವಂತೆ ನಿಶ್ಚಲಂ ಮುನಿ ನಿಂದಂ (ಶಾಂತಿಪು. ೯-೦೦೬); ಬಸಿಜನಪ್ಪಿದ ಮಾಡಿಗಳಂ ಹೊತ್ತು ಸಾಲ್ಗೊಂಡು ಮರದ ಪೋಟಲ್ಗೆ ಸಾರ್ದುವು ಕೋಡಗದ ಹಿಂಡು (ಅವಂಪು. ೯-೦೬ ರಗಳೆ); ಪೋಟಲೊಳಗಿರ್ದ ದುಷ್ಟ ವ್ಯಾಳಂ ಮುಳಿದೆನ್ನ ಕೈಯನೌಡಲ್ (ವಡಳು. ೨ ೦೦೦). **ಪೋಳಲ್**: ಪೋಳಲೊಳಗಣ ಬಾಲವಿಹಂಗಂಗಳನೆಬಿಂಕಯೋಳಿಬಿಂಕಿಕೊಂಡು ಮಾಜಿ ಲನುವಾಗಿ ತೂಬಿಲ್ಗೊಂಬಿನೊಳಿರ್ಪ ವಿಹಂಗಸಂಕುಳದಿಂದತಿಸೌಂದರ್ಯಮಂ . . . ಒಳಕೊಂಡಿರ್ಪುದು (೧೦೯. ೦-೦೨೬ ವ). **ಹೊಳಲು೧**: ಪ್ರಳಯ ಫಣಿಮುಣಲ ಹೊಳಲೊಳಗೆ ಕೈಯ ನೀಡಿ ದಾಡೆಮಂ ಮುಡಿಯ ಬಡಿವಂತೆ (ಹಚಚ. ೯-೦೦): ಬೆರಣಿಯ ಶಿಖಿಯುಂ ಹುಣಸೆಯ ಹೊಳ ಲೊಳಗಿಕ್ಕುತ ಕ್ಷಣದೊಳ್ಸುಕ್ಕಳಿದನಸುವನಾ ಮಹರಾಜಂ (ಪದ್ಮಚ. ೫-೩೬).

[ಪೋಟ್೩ + — ಅಲ್೨./ತಮಿ. ಪೊಳ್ಳಲ್, ಪುಟಲ್]

**ಪೋಟಲ್ಗೋರ** 'ಪೊಟಲ್ಗೋರ' ನೋ.

**ಪೋಟಿಸು**, ಪೋಳಿಸು, ಹೋಳಿಸು (ಕ್ರಿ). ೧. ಚೂರಂ ಮಾಡು; ತುಂಡು ಮಾಡಂ : ಈಗಳೆ ಕೊಂದು ಪೋಟಿಸಿ ತಾಳಿಸಿ ಗಮ್ಮನೆ ನಿಮ್ಮ ನೆಮ್ಮ ಮಾಲಿನಿಯರ್ಗೆ ಬಲಿಗೀಡುವೆಂ (ರಾಘವಾಂ. ೦೦೨-೯). **ಪೋಳಿಸು**: ೧. ಕಂಡನಾ ಸಮಯದೊಳ್ ಕಮಲಜಂ ಪರಕರದೆ ಖಂಡಿಸಿದ ತನ್ನುತ್ತ ಮಾಂಗಮಂ ರುಧಿರಜಲಮುಂಡು ಪೋಳಿಸಿದ ನಯನಾಗ್ನಿಯಂ ಪೊಗಳುತಿಹ ಸಕಲಬೃಂದಾರಕರನು (ಕಂಪು. ೦೬-೦೬). **ಹೋಳಿಸು**: ೨. ಎರಡಾಗಿ ಭಾಗಮಾಡು : ಸೀಳು : ನರಗೆ ಕೊಟ್ಟನು ಹೋಳಿಸಿದ ಕರ್ಪುರದ ವೀಳೆಯವ (ಉತ್ತರಕ್ಕಾ. ೦೦-೬೭) ; ನಾರು ಬಲಿಯದ ಹುಣಸೆಕಾಯಿ ಮಾವಿನಕಾಯುನಾರ್ಕದು ಕತ್ತಿ ಕಿಡಿದಾಗಿ ಹೋಳಿಸಿ (ಸೂಕಚ. ೬-೦೦). ೩. ಮುರಿಯುವಂತೆ ಮಾಡು ; ಒಡೆಯುವಂತೆ ಮಾಡು : ರದನದಿ ಹೋಳಿಸುವ ಖಾತಿಯಲಿ ನಾನಾವಿಧದ ಕೊಲೆಗಳಲಿ ಕಾಲನೊಗಡಿಸಿ ಕೊಲುವ ಮದಗಜಜಾಲಗಳೊಳಾರೋಹಕರು ಕೆಂಗೋಲ ಮಳೆಗಜಿ ದಾರಿದರು ನೃಪಸೇನೆಯೆರಡಳಿ (ಉತ್ತರ. ೪-೩೬).

[ಪೋಟ್೩ + — ಇಸು೨]

**ಪೋಟ್ಗಡಿ**, ಹೋಳುಗಡಿ (ಕ್ರಿ). ಚೂರಾಗುವಂತೆ ಕತ್ತರಿಸು.— ತುಂಡರಿಸು : 'ಪೋಟ್ಗಡಿವೋಗು' ಪರಾ. **ಹೋಳುಗಡಿ** : ಹೋಳುಗಡಿದನು ಹತ್ತುಶಿಖಿಧಿ ಜೋಲುತಿರ್ದುದು ಕರುಳು ಪನಸಗೆ (ಕಾವಿನ. ೨೮-೯೯). [ಪೋಟ್೩ + ಕಡಿ೨]

**ಪೋಟ್ಗಡಿವೋಗು** (ಕ್ರಿ). ಚೂರಾಗುವಂತೆ ಕತ್ತರಿಸಿ ಹೋಗು ; ಛಿದ್ರ ವಾಗು : ಅಂದು ಚಂಡಿಕೆಯ ಕೂರ್ವಾಳಿಂ ಪೋಟ್ಗಡಿವೋದ ಮಹಿಷಾಸುರನ ಬಿರಿವೊಡೆಯಿಂ ಸುರಿದ ದಂಡೆಗರುಳ್ಗೆ ಪಾಸಟಿಯಪ್ಪ ಅರಿಜರಿದ ಜಾದಿನ ಕೋಡುಮಪಟ್ಟನೊತ್ತಗೊಂಡು ಸಿಂಧೂರವಿಲಿಪ್ತಮುದಸಿಂಧುರಗಂಡಮಂಡಲ ದೊಂದು ಪಾಂಗಿನಿಂ ತೋರ್ಪ ತಟ್ಟಲಿಂ (ರಾಘವಾಂ. ೬೨-೦೧).

[ಪೋಟ್ಗಡಿ + ಪೋಗು೧ (< ಪೋ೧)]

**ಪೋಟ್ಗೆದಜ್** (ಕ್ರಿ). ಹೋಳಾಗು ; ಬಿರಿ : ಬೇಗಿ ಬೆಳೆಮ ಕೀಬಿತ್ತು ಗಳಿಂ ಪೋಟ್ಗೆದರ್ದಿರೆ ದಾಳಿಂಬದ ತಾಟ್ಗಳ್ ನಿಟ್ಟಪರ ದಿಟ್ಟಿಗಿಟ್ಟಳ ಮೆಸೆಗುಂ (ವಡ್ಡಾಪು. ೦೯೩ ವ್ಯಾಖ್ಯಾ). [ಪೋಟ್೩ + ಕೆದಜ್]

**ಪೋಟ್ಮರ** (ನಾ). ಟೊಳ್ಳಾದ ಮರ ; ಜಳ್ಳಾಗಿರುವ ಮರ : ಅಲ್ಲಿ ತನ್ನಂ ಕಾಣಲೊಡನಿರ್ಮಾಡಿಸಿದ ಶೋಕದಾವಾನಲನಿರ್ದೆಯೊಳ್ ಪೋಟ್ಮರದ ಕಿರ್ಚಿನಂತಳುರೆ ತಳಮಳಗಾಗಿ (ಶಾಂತಿಪು. ೦-೯೪ ವ); ಪಟುಗಟ್ಟಿದಜಲ ಕಿರ್ಚ ಪೋಟ್ಮ [ಪಾಠಾಂ. ಪೊಳ್ಮ]ರದ ಕಿರ್ಚಿನಂತೊಳಗೊಳಗಳುರೆ (ಅರ್ಜನಾ. ೬-೦೨ ವ). [ಪೋಟ್೩ + ಮರ್೧]

**ಪೌಂಚಾಯಿಸು** (ಕ್ರಿ). ೧. ಸೇರುವಂತೆ ಮಾಡು ; ತಲುಪಿಸು : ವೀರ ರಾಜೇಂದ್ರವಡೆಯರವರು ಸರಕಾರದ ಫೌಜಿಗೆ ರಸದು ವಗೈರೆ ಸಾಮಾನು ಪೌಂಚಾಯಿಸಿ ಕುಂಪನಿ ಕೆಲಸಕ್ಕಾಗಿ ಮೆಹನತ್ತು ಮಾಡಿದರಿಂದಾ (ರಾಜೇಂಕಥ. ೨೬೦). ೨. ನ್ಯಾಯವಿರುದ್ಧವಾದ ಬೋಧನೆಯನ್ನು ಮಾಡು : (*).

[ಪೌಂಚ್೦ (p ← ಹಿಂ. ಪಹುಂಚಾನಾ) + — ಇಸು೨]

**ಪೌಂಚಿ**, ಪವುಂಚಿ, ಪೊಹಚಿ, ಪೋಂಚಿ, ಪೋಚು೧, ಪೋಚಿ೧, ಪೋಹಚಿ, ಪೌಚಿ (ನಾ). ಮುಂಗೈಗೆ ತೊಡುವ ಒಂದು ಬಗೆಯ ಆಭರಣ : "ಆವಾಪಕಃ, ಪಾರಿಹಾರ್ಯಃ— ೨ ಸೂಡಗವೆಂಬ ಕಡಗ. ಚೂಡಾಲುಂ, ಪೌಂಚಿ . . . ಮುಂಗಿಶಾದ ಹಸ್ತಾಭರಣ" (ಸಿದ್ಧಾಂತ. ೨೦೦); ಓಲೆ ಮೂಗುತಿ ಕೊಪ್ಪು ಮೇಲೆ ರನ್ನದ ಕುಸುಮ ಕೀಲು ಬಿಂತಾ ಪೌಂಚಿ ಕಡಗ ಹೊನ್ನಬಳೆಯು (ಕಠೋ. ೦೩೯-೯); ಮುಂಗೈಯಲ್ಲಿರುವ ರತ್ನ ಖಚಿತವಾದ ಪಟ್ಟೆಕಡಗ, ಅದರ ಮೇಲೆ ಮುದ್ದಾದ ಪೌಂಚಿ (ಕುಸ್ತ. ೯೦). **ಪವುಂಚಿ** : (*). **ಪೊಹಚಿ** : ಕೈಯೊಳಗಿನ ಆರುತೊಲೆಯ ಪೊಹಚಿ ಕಳೆದನು (ಕುಮಾರಾಮ. ೯-೦೯೬). **ಪೋಂಚಿ** : "ಪಾರಿಹಾರ್ಯ—ಮುಂಗೈ ಆಭರಣ; ಪೋಂಚಿ" (ಗೂಡಾಶ. ೨೦೬). **ಪೋಚು೧** : ಮುಂಗೈಗೆ ಕಟ್ಟಿದ ಪೋಚು, ಬೆರಳಿಗೆ ಹಾಕಿದ ಉಂಗುರಗಳು (ಅಜ್ಞಾತ. ೯). **ಪೋಚಿ೧** : ಮುತ್ತಿನ ಪೋಚಿಯು ಕೈಯ್ಯಾಗ . . . ಹೂವಿನ ಜರದಂಗಿ ರವಿಶಂಕರ ತೊಟ್ಟಿಹನು (ಸಿದ್ಧಪು. ೦೯-೯೨); ಒಂದು ಕೈಯ ಮುಂಗೈಯಲ್ಲಿ ರಿಸ್ಟ್‌ವಾಚು, ಇನ್ನೊಂದು ಕೈಯಲ್ಲಿ ಪೋಚಿ . . . ಧರಿಸಿದ್ದನು (ಸಡಾಚ. ೯೩). **ಪೋಹಚಿ**: ಕೈಯೊಳಗಿದ್ದ ರತ್ನಜಡಿತ ಪೋಹಚಿಯನ್ನು ಕೊಟ್ಟು ಅವರನ್ನು ಹಾದಿಗೆ ಹಚ್ಚಿದನು (ಕುಮಾರ. ೦೦೩). **ಪೌಚಿ** : ಕೈಗಳಿಗೆ ಹಾಕಿದ ಚಿನ್ನದ ಪೌಚಿ ತಿರುವುತ್ತಾ ಅತ್ತಿಗೆ ನರಸಮ್ಮ ' . . . ಬೇಗ್ಗೆ ಬಜಾನಿ ಅಂತ ಹೇಳೂ ಅಂದ್ರು' ಎಂದಳು (ಸರ್ವಮೂ. ೦೫).

[←ಹಿಂ. ಪಹುಂಚಿ ; ಮರಾ. ಪೋಹಂಚೀ, ಪೋಂಚೀ, ಪೌಂಚೀ./ ತಮಿ. ಪೋಸ್ಚಿ ; ತುಳು. ಪೌಂಚಿ, ಪವುಚಿ ; ತೆಲು. ಪೋಂಚಿ]

**ಪೌಂಡರೀಕ** (ಗು). ೧. ಕಮಲಗಳಿಗೆ ಸಂಬಂಧಿಸಿದ. ೨. ಕಮಲ ಗಳಿಂದ ರಚಿತವಾದ. (ನಾ). ೩. ಒಂದು ಬಗೆಯ ಕುಷ್ಠರೋಗ. ೪. ಹನ್ನೊಂದು ದಿನಗಳವರೆಗೆ ಮಾಡುವ ಸೋಮಯಾಗ : ವಾಜಪೇಯ ಪೌಂಡರೀಕಾದಿ ಮಹಾಕ್ರತುಗಳಂ ನಿತ್ಯೇಷ್ಟಿ ಕಾಮ್ಯೇಷ್ಟಿ ಮೊದಲಾದವುಗಳಂ . . . ಕ್ಷತ್ರಿಯನಾದೊಡೆ ಅಧಿಕೃತನಾಗಿ ಮಾಳ್ಪುದು (ಪ್ರಾಯ. ೧೯೦). [ಸಂ.]

**ಪೌಂಡರ್ಯ** (ನಾ). (ಕಣ್ಣಿನ ರೋಗಗಳಿಗೆ ಔಷಧಿಯಾಗಿ ಬಳಸುವ)

ಬಿಳಿನೈದಿಲೆಯ ಗಡ್ಡೆ: "ಪ್ರಪೌಂಡರೀಕಂ, ಪೌಂಡರ್ಯಂ—೨ ಪುಂಡರೀಕ ನೆಂಬುವ ಗ್ರಂಥದ್ರವ್ಯದ ಹೆಸರುಗಳು . . . ಇದು ಬಿಳೀನೈದಿಲೆಗಡ್ಡೆ" (ಸಿದ್ಧೌಷಿ. ೦೧೦). [ಸಂ.]

**ಪೌಂಡಿಮನೆ** (ನಾ). ತೊಂಡುದನಗಳನ್ನು ಹಿಡಿದು ಕೂಡುವ ಸ್ಥಳ; ಕೊಂಡವಾಡ : ರಾಮಯ್ಯನು ತನ್ನ ತೋಟದಲ್ಲಿ ಮೇಯುತ್ತಿದ್ದ ತೊಂಡುದನವನ್ನು ಹಿಡಿದು ಪೌಂಡಿಮನೆಗೆ ಹಾಕಿದನು (ಊತಿ). [< ಪೌಂಡು + ಮನೆ]

**ಪೌಂಡು** (ನಾ). ೧. ರೋಮನ್ ಪದ್ಧತಿಯ ತೂಕದ ಒಂದು ಏಕಮಾನ : ಒಂದುದಿನಕ್ಕೆ ೨೦ ಪೌಂಡು ಒಣಮೇವಿನ ಈಡುಣಿಸು ತಿನ್ನುವುದಕ್ಕೆ ೮೦ ಪೌಂಡು ನೀರು ಬೇಕೆಂದು ತಿಳಿದುಬಂದಿದೆ (ಗೋಣ್ಣ್ಣಿ. ೬೮). ೨. ಇಪ್ಪತ್ತು ಷಿಲಿಂಗುಗಳ ಬೆಲೆಯುಳ್ಳ ಒಂದು ನಾಣ್ಯ: ಬ್ರಿಟಿಷರ ಒಂದು ಬೆಳ್ಳಿಯ ನಾಣ್ಯ (= $\frac{1}{20}$ ಪೌಂಡು) (Shilling-೫೦೬೮); ಮೊದಲಿನ ನಾಲ್ಕು ವರುಷಗಳಲ್ಲಿ ಒಂಬೈನೂರು ಪೌಂಡುಗಳ ಸಾಲವು ನಮ್ಮ ಆಫೀಸಿಗೆ ಬಿದ್ದಿತು (ಕಂಖಪ. ೨೦೯). ೩. = ಪೌಂಡಿಮನೆ: ಸದರಿ ಡಿಸ್ಟ್ರಿಕ್ಟ್‌ಮ್ಯಾಜಿಸ್ಟ್ರೇಟರುಗಳು ಪೌಂಡಿನಲ್ಲಿ ಕೂಡುವ ದನ ಕರುಗಳಿಗೆ ನೀರು, ಮೇವು ಕೊಡುವ ಏರ್ಪಾಟನ್ನು ಮಾಡುವರು (ಗ್ರಾಮಾಕ. ೦೦೯). [← ಇಂ. Pound]

**ಪೌಂಡ್ರ** (ನಾ). ೧. ಒಂದು ಬಗೆಯ ಕಬ್ಬು; ಪಟ್ಟೆಗಳಿರುವ ಬಿಳಿಯ ಕಬ್ಬು. ೨. ಭೀಮನ ಶಂಖ. ೩. ಆಯಾ ಮತೀಯ ಲಾಂಛನವಾಗಿ ಧರಿಸುವ ತಿಲಕ, ಬೊಟ್ಟು ಮುಂತಾದ ಗುರುತು. ೪. ಒಂದು ದೇಶ ಮತ್ತು ಆ ದೇಶದ ಜನ. [ಸಂ.]

**ಪೌಂಡ್ರಕ** (ನಾ). ೧. ಒಂದು ಬಗೆಯ ಕಬ್ಬು. ೨. ಭೀಮನ ಶಂಖ: ಹಳಚಲನುವಾಯುಭಯಸೇನಾಜಲಧಿ ಕಳಕಳ ಮಿಗಲು ಮಾರುತಿ ಮೊಳಗಿದನು ಪೌಂಡ್ರಕವ ಭೂಪನನಂತವಿಜಯವನು (ಕುಮ್ಮಾರ. ೬-೦). ೩. ಪುಂಡ್ರವಂಶದ ವಸುದೇವನೆಂಬ ರಾಜನ ಮಗ : ಪೌಂಡ್ರಕನನಂದೀತ ಕೊಂದನು ಹಂಸ ಡಿಬ ರನೀತನೊರಸಿದನರಸ ಚಿತ್ತೈಸು (ಕುಮ್ಮಾಉ. ೯-೩೪). P ಪುಂಡ್ರವಂಶದ ವಸುದೇವನೆಂಬ ರಾಜನ ಮಗನಾದ ಇವನು ವಸುದೇವಪುತ್ರ ಶ್ರೀಕೃಷ್ಣನಂತೆಯೇ ಕೀರ್ತಿವಂತನಾಗಬೇಕೆಂಬ ದುರಾಸೆಯಿಂದ ಶ್ರೀಕೃಷ್ಣನಂತೆಯೇ ಶಂಖಚಕ್ರಗಳನ್ನು ಧರಿಸಿದ್ದು, ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ಹೋಗಿ ಸೋತು ಹತನಾದನು. ೪. ಪೌಂಡ್ರಕದೇಶದ ಜನ. [ಸಂ.]

**ಪೌಗಂಡ** (ಗುಂ). ೧. ಹುಡುಗುತನದ; ಬಾಲಿಶ. (ನಾ). ೨. ಐದರಿಂದ ಹದಿನಾರುವರ್ಷಗಳೊಳಗಿನ ವಯಸ್ಸು ; ಬಾಲ್ಯ. ೩. ಹುಡುಗ; ಬಾಲಕ : ಕಷ್ಟಿಸಿದಿರಲ್ಲ ನಾವು ಹುಟ್ಟಿದಂದಿಂದಿಗೆ ನೀವು ದುಃಖಸಂಸಕ್ತವಾಗಿ ಹೋದ ಕಷ್ಟಬಡಿಸಿದನು ನಿಮ್ಮ ದಿವ್ಯಾಂಗ ಹತನಾದ ನಮ್ಮ ಪುಟ್ಟ ಪೌಗಂಡ ಕೃಶೋದರತನದಿ (ಕೃಸಖಾ. ೬೪-೨೬). [ಸಂ.]

**ಪೌಚಿ** 'ಪೌಂಚಿ' ನೋ.

**ಪೌಜಿಕ್ಕು** (ಕ್ರಿ). ಸೇನೆಯನ್ನು ಸಿದ್ಧಪಡಿಸು; ದಂಡನ್ನು ಸಜ್ಜುಗೊಳಿಸು: ಮುಂತಿಡಬಲದಿ ಪೌಜಿಕ್ಕಿದ ಚಂದ್ರವಸಂತಮುಂದಾನಿಲಾದಿಗಳು ಪಂತದ ಬಿನ್ನಹವನು ಮಾಡಿದರು ರತಿಕಾಂತಂಗೆ ಕೈ ಮುಗಿದೊಡನೆ (ಕೋಹಕ. ೬-೨೦). [ಪೌಜು (<ಫೌಜು) + ಇಕ್ಕು]

**ಪೌಜು** 'ಫೌಜು' ನೋ.

**ಪೌಜುಗಂದಾಯ** (ನಾ). ಸೇನೆಯ ಸಲುವಾಗಿ ಹಾಕುವ ತೆರಿಗೆ,—ಕರ : ಪೂರ್ವದಿಂದ ನಡೆದುಬರುತ್ತಿರುವ ದೇವದಾಯ ಬ್ರಹ್ಮದಾಯ . . . ರಕ್ತಕೊಡಗೆ ಮುಂತಾದುವೇನೂ ಹೆಚ್ಚು ಕಡಿಮೆಯಾಗದಂತೆಯೂ ಆವೊಂದು ಈ ಪೌಜುಗಂದಾಯಕ್ಕೆ ಒಳಸೇರದಂತೆಯೂ ನಮ್ಮ ಕರಣಿಕರು ಎಚ್ಚತ್ತಿರಬೇಕು (ಐಶಾಗಂ. ೬೬-೨೩). [ಪೌಜು (<ಫೌಜು) + ಕಂದಾಯ]

**ಪೌಜುದಾರ** 'ಫೌಜುದಾರ' ನೋ.

**ಪೌಜುದಾರಿ** 'ಫೌಜುದಾರಿ' ನೋ.

**ಪೌಜೊಡೆ** (ಕ್ರಿ). ಸೈನ್ಯವನ್ನು ಭೇದಿಸು,—ಚೆದರಿಸು: ಪೌಜೊಡೆಯದೆ ಪೊಱಗೆ ನಿಂದು ಪುಯಿಲೊಳ್ ಪೊಲಂಬುಗೆಟ್ಟುದಂ ನಟ್ಟಿಸಿಯೋಡಿಪೋದರ ಪೆಂಡಿರೋಲೆಯುಟ್ಟಿದುದು (ಕಳಶಂ. ೯೨-೦೬). [ಪೌಜು(<ಫೌಜು) + ಒಡೆ$_1$]

**ಪೌಜೊಡ್ಡು** (ಕ್ರಿ). ಪಡೆಯನ್ನು ಎದುರಿಸು ; ಸೇನೆಯನ್ನು ಒಡ್ಡು: ದುರುಳರಕ್ಕಸ ಜಂಭನಾಜ್ಞೆಯಿಂ ದಾನವರ ಬಲವಿರದೆ ಪೌಜೊಡ್ಡಿತು (ಕಂಕ್ಕ. ೯೬-೩). [ಪೌಜು (<ಫೌಜು) + ಒಡ್ಡು$_1$]

**ಪೌಡರ್** 'ಪೌಡರು' ನೋ.

**ಪೌಡರು, ಪೌಡರ್** (ನಾ). ಮುಖ ಮತ್ತು ದೇಹಕಾಂತಿಯನ್ನು ಹೆಚ್ಚಿಸಿ ಆಹ್ಲಾದಕರವಾಗಿರುವಂತೆ ಮಾಡುವ ಸುಗಂಧಯುಕ್ತವಾದ ಪುಡಿ: ನಿನಗೇಕೆ ಬಣ್ಣ ಪೌಡರುಗಳ ಅಳಿಯಾಸೆ ಸಹಜಾಭರಣವು ನೀನೆಸೆ (ಕಂಶ್ರ.೬೦. ೪೬-೬೨); ಒಳಗಡೆ ಕನ್ನಡಿ, ಪೌಡರು, ತುಟಿಯ ಕೆಂಬಣ್ಣ . . . ಇವಿಷ್ಟಿವೆ (ಕೃಂಣಿ. ೦೨). **ಪೌಡರ್** : ಸ್ನೋ, ಪೌಡರ್ ಬಳಿದುಕೊಂಡು . . . ರೇಸ್ ಕುದುರೆಯಂತೆ ನಡೆಯುವುದು ಅವಳಿಗಿನ್ನೂ ಬಂದಿರಲಿಲ್ಲ (ಮುಂಣಾಪ. ೯). [← ಇಂ. Powder]

**ಪೌಣಪಟ, ಪೋಣಪಟ್ಟು** (ನಾ). ನಾಲ್ಕನೆಯ ಮೂರು ಭಾಗ; ಮುಕ್ಕಾಲು ಭಾಗ : ಎಷ್ಟು ಕಿಮ್ಮತ್ತಿಯ ಮಾಲು ರವಾನೆ ಮಾಡಲ್ಪಟ್ಟಿದೆಯೋ ಅದಕ್ಕಿಂತ ಕಡಿಮೆ ಬೆಲೆಯು ಅಂದರೆ ಪೌಣಪಟ್ಟು (?) ಅಥವಾ ಅದಕ್ಕೂ ಕಡಿಮೆ ಬೆಲೆಯ ಹುಂಡಿಗಳು ಇರಬೇಕಾಗುತ್ತವೆ (ಮುಂಬಿಪ್ಪಾ. ೨೬೨). **ಪೋಣಪಟ್ಟು** : ಯಾವದು ಕಥೆ ವಜನ ಇದ್ದೀತು ಅದರ ಸೂಶೀ ಮುಣಾ ಮಾಡಬೇಕು, ಅಂದರೆ ಅದರ ಪೋಣಪಟ್ಟು ಮಾಡಬೇಕು (ಮುಂಬಿಪ್ಪಾ. ೦೬೨). [← ಮರಾ. ಪಾಊಣ್‌ಪಾಟಾ]

**ಪೌಣೆಗೆ** 'ಪವಣೆಗೆ' ನೋ.

**ಪೌಣೆ** 'ಪಾವುಣ' ನೋ.

**ಪೌತವ** (ನಾ). ಒಂದು ಬಗೆಯ ಅಳತೆ : "ಪೌತವ_ವಲ ಕರ್ಷಾದಿಗಳಿಂದಳೆವ ಅಳತೆ" (ಶಾಶರಂ. ೩). [ಸಂ.]

**ಪೌತಿ, ಪವುತಿ, ಪೋತಿ, ಪೋತಿ** (ನಾ). ಸಾವು ; ಮರಣ : ಪೌತಿಯಾದ ಒಬ್ಬ ಮನುಷ್ಯನಿಗೆ ಉಂಟುಮಾಡಿದ ಕೆಡಕುಗಳಿಗೋಸ್ಕರ ದಾವಾಮಾಡುವುದಕ್ಕೂ ಮಾಡಲ್ಪಡುವುದಕ್ಕೂ . . . ಒಂದು ವರ್ಷ (ಗ್ರಾಮಾಕ. ೦೬೨). **ಪವುತಿ** : (?). **ಪೋತಿ** : ಪುತಳಾಬಾಯಿ ಕಾಲರಾ ಬಂದು ಪೋತಿ ಆದಳು (ಗ್ರಾಮಾಹು. ೦೬೦). **ಪೋತಿ** : ಎದೀ ಬಡಕೊಂಡು ನಾನಾ ಪೋತಿ ಆದಾ ಅಂತ ಶಪ್ಪತ್ ಮಾಡಿ ಹೇಳತೀನಿ ರಾವಸಾಹೇಬ (ಗ್ರಾಮಾಹು. ೦೨೬). [← ಅರ. ಹಿಂ. ಮರಾ. ಫೌತ್]

**ಪೌತಿತಃಖ್ತೆ** (ನಾ). ಸತ್ತ ವ್ಯಕ್ತಿಯ ವಾರಸುದಾರರು ಮತ್ತು ಅವರ ಹಕ್ಕಿನ ವಿವರಣೆಗಳನ್ನು ಒಳಗೊಂಡ ಪಟ್ಟಿ : ಪೌತಿತಃಖ್ತೆ ಕೊಡದಿರುವುದು, ಕೊಟ್ಟರೂ ಅದನ್ನು ಯಾರು ಬಂದು ವಿಚಾರಿಸಿದರೂ, ಪೌತಿ ಆದವರನ್ನು ಬಿಟ್ಟು ಬೇರೆ ಯಾರನ್ನು ಕೇಳಿದರೂ, ಅದು ಪತ್ತೆ ಆಗದಿರುವುದು — ಇವು ನನ್ನೂರ ಶಾನುಭೋಗರ ಕಿತಾಪತಿಗಳು (ನನ್ನೂರು. ೦೯೬). [ಪೌತಿ + ತಃಖ್ತೆ (<ತಖ್ತೆ)]

**ಪೌತ್ರ** (ಗುಂ). ೧. ಮಕ್ಕಳಿಗೆ ಸಂಬಂಧಿಸಿದ. (ನಾ). ೨. ಮಗನ ಅಥವಾ ಮಗಳ ಮಗ ; ಮೊಮ್ಮಗ : "ದೌಹಿತ್ರಃ, ನಪ್ತಾ —ಈ ೨ (ಮ)ಗಳ ಮಗಂ ; ಪೌತ್ರನುಂ ಅಹು" (ಕರಾಮು. ೬೩-೩೬೦) ; ಅಂಗಮನ ಧನ ರಾಜ್ಯ ಪುತ್ರ ಪೌತ್ರ ಕಳತ್ರ ಮುಖ್ಯಸ್ವಸ್ವೈಶ್ವರ್ಯವ ಹಿಂಗದೇ ಕೊಡದೆ ಹಿಮ್ಮೆಟ್ಟಿದಡೆ ಎನ್ನ ವ್ರತ ಭಂಗವಾದೀತು (ಶ್ರೀಕಥಾ. ೦೯-೪) ;

ಅರ್ಜುನನು ಆ ಸೈನ್ಯಗಳಲ್ಲಿ ಪಿತೃಗಳು, ಪಿತಾಮಹರು . . . ಪೌತ್ರರು, ಸ್ನೇಹಿತರು, ಶ್ವಶುರರು, ಆಪ್ತರು ಇವರನ್ನು ನೋಡಿದನು (ಭಾಕಕ್ಕ. ೦೦೨). [ಸಂ.]

**ಪೌತ್ರಕ** (ನಾ). = ಪೌತ್ರ ೨: ಎಲ್ಲಿ ಪೌತ್ರಕ, ಎಲ್ಲಿಗೆ ಹೊರಟು ಹೋದೆ? (ಶಾಸಣ. ೩೯). [ಸಂ.]

**ಪೌತ್ರಿ** (ನಾ). ಮಗನ ಅಥವಾ ಮಗಳ ಮಗಳು; ಮೊಮ್ಮಗಳಂ: "ನಪ್ತ್ರೀ, ಪೌತ್ರೀ—೨ ಸುತಾತ್ಮಜಾ—ಮಗನ ಮಗಳ ಹೆಸರುಗಳು. ಮಗಳ ಮಗಳಿಗೂ ಹೆಸರು. ಮೊಮ್ಮಗಳು, ಮೊಮ್ಮಗನು" (ಸಿದ್ಧಾಂತಿ. ೦೩೩). [ಸಂ. ಪೌತ್ರೀ]

**ಪೌತ್ರಿಕ** (ಗು). ೧. ಮಗ ಅಥವಾ ಮೊಮ್ಮಗನಿಗೆ ಸಂಬಂಧಿಸಿದ. (ನಾ). ೨. ಮಗಳ ಮಗ. [ಸಂ.]

**ಪೌದ್ಗಲಿಕ** (ಗು). ೧. ಭೌತವಸ್ತುವಿಗೆ ಸಂಬಂಧಿಸಿದ; ಭೌತಿಕ ವಿಷಯಂದ. ೨. ಸ್ವಾರ್ಥ: ದ. (ನಾ). ೩. [ಜೈನ] ಅಜೀವತತ್ತ್ವಗಳಲ್ಲಿ ಒಂದಾದ ಪುದ್ಗಲದಿಂದ ಜನ್ಯವಾದುದು; ಪುದ್ಗಲಕ್ಕೆ ಸಂಬಂಧಿಸಿದುದು: ನೆಳಲು ಕತ್ತಲೆಗಳು ಪೌದ್ಗಲಿಕಗಳೆಂದು ಹೇಳಿದುದು ನ್ಯಾಯಮತಕ್ಕೆ ವಿರೋಧವಾದುದು (ಕೃಶರ. ೦). [ಸಂ.]

**ಪೌನಃಪುನ್ಯ** (ನಾ). ಮತ್ತೆ ಮತ್ತೆ ಆಗುವಿಕೆ; ಪುನರಾವರ್ತನೆ. [ಸಂ.]

**ಪೌನರುಕ್ತ್ಯ** (ನಾ). [ಕಾವ್ಯಮೀ] ವಾಕ್ಯದೋಷಗಳಲ್ಲಿ ಒಂದು; ಹೇಳಿದಂದನ್ನೇ ಹೇಳುವುದು; ಪುನರುಕ್ತಿ: ಕರಿಕಳಭಮನೆ ಶಿರಶ್ಶೇಖರಮನೆ ನವಪುಷ್ಪಮಾಲೆಯನೆ . . . ಪೌನರುಕ್ತ್ಯಮಾಗದು ವಿಶೇಷಸಂಭಾವನೆಯೊಳ್ (ಕಾವ್ಯಾವ. ೯೬೨). [ಸಂ.]

**ಪೌನರ್ಭವ** (ನಾ). ಪುನರ್ವಿವಾಹಿತೆಯಲ್ಲಿ ಹುಟ್ಟಿದವನು; ಎರಡನೆಯ ಮದುವೆಯಾದವಳಲ್ಲಿ ಹುಟ್ಟಿದವನು. [ಸಂ.]

**ಪೌನು** 'ಪವನು' ನೋ.

**ಪೌಮುದ್ದಿಬೋಯ** (ನಾ). ಒಬ್ಬಾತನ ಹೆಸರು: ಪೌಮುದ್ದಿಬೋಯಕ್ಕ ಕೌಣ್ಡಲ್ಯಗೋತ್ರ ದೇವಶರ್ಮ್ಮಣ (ಎಪಿ. VII, ೦೩೩-೩೬; ೦೩೩). [?]

**ಪೌರ** (ಗು). ೧. ನಗರಕ್ಕೆ ಸಂಬಂಧಿಸಿದ: 'ಪೌರಕಾರ್ಯ', 'ಪೌರಜನ' ಪರಾ. ೨. ಪೂರ್ವದಿಕ್ಕಿನಲ್ಲಿರುವ. ೩. ಪೂರ್ವದೇಶದ. ೪. ಪೂರ್ವಕಾಲದ. (ನಾ). ೫. ನಗರದಲ್ಲಿ ವಾಸಿಸುವವನು; ಪಟ್ಟಣಿಗ. ೬. ನಾಗರಿಕನ ಹಕ್ಕುಬಾಧ್ಯತೆಗಳನ್ನು ಪಡೆದವನು; ನಾಗರಿಕ: ಗುರುಶ್ರೇಣಿಯವರಿಗೆ, ವಿಪ್ರರಿಗೆ, ಪೌರರಿಗೆ . . . ಆಯಾವರ ಅಂತಸ್ತು, ಅಧಿಕಾರ, ಗೌರವಗಳಿಗೆ ತಕ್ಕಂತೆ ಸುಖಾಸನಗಳನ್ನು ಹಾಕಲಾಗಿತ್ತು (ಶಾಂತಲಾ. ೦೬). ೭. ಪುರ; ಪಟ್ಟಣ; ನಗರ: ಪೌರನಿರ್ಗತೆಯಾಗಿ ಮನೋರಥಪನೆ ಕಣ್ಬ ತೆಜದಿನಿದಿರೊಳ್ ಕಂಡಳ್ ನಾರದನಂ (ಜಗಪು. ೦೦-೨೮). ೮. ಒಂದು ಬಗೆಯ ಸಂಮಾಸನೆಯ ಹುಲ್ಲು: "ಕತೃಣಂ, ಪೌರಂ . . . ರೌಹಿಷಂ—೬ ಕಾಚೀಹುಲ್ಲು" (ಸಿದ್ಧಾಂತಿ. ೦೫೦). [ಸಂ.]

**ಪೌರಂದರ** (ಗು). ೧. ಇಂದ್ರನಿಗೆ ಸಂಬಂಧಿಸಿದ,–ಸೇರಿದ. (ನಾ). ೨. ಇಂದ್ರ: ಭೈರವರಾಜನ ಧೈರ್ಯವ ನೋಡಲೆಂದಾರ್ಯಮರಾಜಾಗ್ನಿನೇತ್ರ ಪೌರಂದರರಿಗೆ ಪೇಳೆ (ಕೃಶಿಕೆ. ೩-೦೬೬). ೩. ಇಂದ್ರಾಸ್ತ್ರ: ಎನಗೆ ವಿದ್ಯಾಧನವೆ ಧನಮಪ್ಪುದರಿಂ ದಿವ್ಯಾಸ್ತ್ರಂಗಳುಂ ದಯೆಗೆಯ್ವುದನೆ ವಾರುಣ ವಾಯವ್ಯಾಗ್ನೇಯ ಪೌ[ಶಾಂತಾಂ. ಪು]ರಂದರಾದಿ ಪ್ರಧಾನಾಸ್ತ್ರಂಗಳುಂ ಕುಡೆ ಕೊಂಡು (ಸಂಕರಾ. ೨-೯೬ ವ). [ಸಂ.]

**ಪೌರಕ** (ನಾ). ನಾಗರಿಕ: ಅಬ್ಬಾಸಿ ಖಲೀಫರೆಲ್ಲರೂ ಪೌರಕ (ಪುಂಲ್ಯ) ಮತ್ತು ಸೈನಿಕ ಮುಖ್ಯಾಧಿಕಾರಗಳಿಗೆಲ್ಲಾ ಪಾರಸೀರನ್ನೇ ನೇಮಿಸುತ್ತಿದ್ದರು (ಇಸ್ಲಾಂಸಂ. ೪೬). [< ಸಂ. ಪೌರಿಕ]

**ಪೌರಕಾರ್ಯ** (ನಾ). ಪ್ರಜೆಗಳ ಕೆಲಸ; ಸಾರ್ವಜನಿಕ ಕಾರ್ಯ: ಎಲೆ ವೇತ್ರವತಿ . . . ನಡಿಸಿದ ಪೌರಕಾರ್ಯವನ್ನು ಪತ್ರಿಕಾಮುಖದಿಂದ ತಿಳಿಸುವಂತೆ ನಾವು ಹೇಳಿದವೆಂದು ಮಂತ್ರಿಗೆ ತಿಳಿಸು (ಶಾಕುಂತ. ೬೩-೦೦). [ಸಂ.]

**ಪೌರಜನ** (ನಾ). ಪುರದ ಜನ; ನಾಗರಿಕ ವರ್ಗ; ಜನತೆ: ವಿಸ್ಮಿತಾಶೇಷಪೌರಜನವಿಲೋಕ್ಯಮಾನಾನೂನನಯನನಾಗಿರ್ದು (ಚಂದ್ರಪ್ರ. ೬-೦೮ ವ); ನೆಱೆ ನಿನ್ನ ನಂಬಿ ನಟ್ಟಿರ್ದ ಪರಿವಾರಮುಂ ಮಱೆದಯೋ . . . ಪೇಳು ಪೇಸಱುಗುಲಜ ಎಂದೆಂದು ನುಡಿನುಡಿದು ಮಿಡುಮಿಡನೆ ಮಿಡುಕಿತ್ತು ಪೌರಜನವು (ಹಕಣ. ೯-೩); ಪೌರಜನವೈತರಲು ಬೀಡಿಯನೂರ ಹೊಱ ಮಂಡಿಸಿದನು (ಕುಮ್ಯಾ. ೦೦-೨೯). [ಸಂ.]

**ಪೌರತ್ವ** (ನಾ). ಪಟ್ಟಣಿಗನ ಸ್ಥಾನಮಾನ: ಪೌರತ್ವ, ಸರ್ಕಾರ, ಸಂವಿಧಾನ ಮುಂತಾದ ವಿಷಯಗಳನ್ನು ಕುರಿತ ಅಧ್ಯಯನಕ್ಷೇತ್ರ (ಸಿವಿಕ್ಸ್) (ಕುಕೋಶ. XI. ೨೯೩). [ಸಂ.]

**ಪೌರಧರ್ಮ** (ನಾ). ೧. ಪ್ರಜೆಯು ಪಾಲಿಸಬೇಕಾದ ಕರ್ತವ್ಯ; ಪ್ರಜಾನೀತಿ. ೨. ಪ್ರಜೆಯ ಹಕ್ಕುಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ: ಪೌರಧರ್ಮವನ್ನು ಕಲಿತರೂ ಸತ್ಪ್ರಜಾಜೀವನವನ್ನು ಅವರಲ್ಲಿ ಅಭ್ಯಾಸಕ್ಕೆ ತರುತ್ತಿಲ್ಲ (ಶಿಕ್ಷಣ. ೦೩೦). [ಸಂ.]

**ಪೌರನೀತಿ** (ನಾ). ೧. ನಾಗರಿಕನು ಪಾಲಿಸಬೇಕಾದ ಕಟ್ಟಳೆ. ೨. ಪೌರರ ಹಕ್ಕುಬಾಧ್ಯತೆ, ಕರ್ತವ್ಯ ಮೊದಲಾದುವನ್ನು ವಿವರಿಸುವ ಶಾಸ್ತ್ರ: ಈಚೆಗೆ ಪ್ರಜಾಧರ್ಮ, ಪೌರನೀತಿ ಮುಂತಾದ ಹೆಸರುಗಳಿಂದ ಇದನ್ನೊಂದು ವ್ಯಾಸಂಗವಿಷಯವಾಗಿ ಪಠ್ಯಕ್ರಮದಲ್ಲೂ ಸೇರಿಸಲಾಗಿದೆ (ಕುಕೋಶ. XI. ೨೯೩). [ಸಂ.]

**ಪೌರಲೋಕ** (ನಾ). ಪೌರಜನ; ಪ್ರಜಾಸಮೂಹ: ಪೃಥುವಿಂ ಮತ್ತಾಸ್ವಮಿ ತಾಮಲ್ಲದೆ ಪೆಱರೆನುತುಂ ನೋಡೆ ತತ್ಪೌರಲೋಕಂ ವಿಭುಸದ್ಮಂಗಂಡು ಬಂದಂ ಜಿನಸಮಯಸರಸ್ಸಾರಕೇಳೀಮರಾಳಂ (ಚಂದ್ರಪ್ರ. ೬-೦೩೯). [ಸಂ.]

**ಪೌರವ** (ಗು). ೧. ಪುರುವಿಗೆ ಸಂಬಂಧಿಸಿದ. (ನಾ). ೨. ಉತ್ತರಭಾರತದ ಒಂದು ದೇಶ ಮತ್ತು ಅಲ್ಲಿಯ ಜನತೆ. ೩. ಪುರುವಂಶದವನಂ; ಕ್ಷತ್ರಿಯಂ: ಉತ್ಕೃಷ್ಟಮಪ್ಪ ಸರ್ವಾರ್ಥಸಿದ್ಧಿಯಿಂ ಬಂದುದಱಿಂ ಪೌರವನುಂ . . . ವಿಶ್ವಕರ್ಮವಿಧಾನದಿಂ ಶ್ರೇಷ್ಠನುಮೆನಿಸಿ (ಶಾಂತಿಪು. ೩೬). ೪. ಪುರುರಾಜನ ಮಗ. [ಸಂ.]

**ಪೌರವಧು** (ನಾ). ಪಟ್ಟಣದ ಹೆಂಗಸು: ಸೌರಭಕುಸುಮವಿಹಾರಂ ಪೌರವಧೂಶ್ವಸಿತ ಪದ್ಮಗಂಧವಿಚಾರಂ . . . ಸುಟ್ಟುದಲ್ಲಿ ಚಾರುಸಮೀರಂ (ಜಗಪು. ೨-೨೩). [ಸಂ. ಪೌರವಧೂ]

**ಪೌರಸಂಸ್ಥೆ** (ನಾ). ಸ್ಥಳೀಯ ಆಡಳಿತಾಧಿಕಾರವುಳ್ಳ ಸಂಸ್ಥೆ; ನಗರಸಭೆ; ಮುನಿಸಿಪಾಲಿಟಿ: ಪೌರಸಂಸ್ಥೆಯ ಒಡೆತನಕ್ಕೆ, ಆಡಳಿತಕ್ಕೆ, ಒಳಪಡಿಸು (Municipalize. ೩೦೪೩). [ಪೌರ + ಸಂಸ್ಥೆ]

**ಪೌರಸಭೆ** (ನಾ). = ಪೌರಸಂಸ್ಥೆ: ಆ ಹಿರಿಯ ಕಲಾವಿದನನ್ನು ನಗರದ ಜನತೆಯ ಪರವಾಗಿ ಪೌರಸಭೆಯು ಸನ್ಮಾನಿಸಿತು (ಕಿಪ). [ಪೌರ + ಸಭೆ]

**ಪೌರಸ್ತ್ಯ** (ಗು). ೧. ಪೂರ್ವದಿಕ್ಕಿನಲ್ಲಿ ಇರುವ: ಪೂರ್ವಭಾಗಕ್ಕೆ ಸೇರಿದ: ಆ ದಂಡನಾಯಕಂ ಪೌರಸ್ತ್ಯರಾಜನ್ಯಕಸಾಧನಪನಾಗಿ ಮುಂದಂ ನಡೆಯೆ (ಶಾಂತಿಪು. ೦೦-೦೫೯ ವ); ಪಾಶ್ಚಾತ್ಯಸಂಸ್ಕೃತಿಯು ಭಾರತವರ್ಷದಲ್ಲಿ ತೋರಿಕೊಂಡ ಕಾಲದಿಂದ, ಪೌರಸ್ತ್ಯ ಪಾಶ್ಚಾತ್ಯ ಸಂಸ್ಕೃತಿಗಳ ಪರಸ್ಪರ ಘರ್ಷಣೆಯು ಆರಂಭವಾಯಿತು (ಶಾಕದ. ೩೬೩). ೨. ಪೂರ್ವ

ದೇಶದಲ್ಲಿ ಹುಟ್ಟಿದ. ೩. ಎಲ್ಲಕ್ಕೂ ಮುಂದಿರುವ; ಮುಂಭಾಗದಲ್ಲಿರುವ. ೪. ಮೊದಲನೆಯ. (ನಾ). ೫. ಮೊದಲನೆಯದು: "ಆದಿಃ, ಪೂರ್ವಃ, ಪೌರಸ್ತ್ಯಃ, ಪ್ರಥಮಃ, ಆದ್ಯಃ —ಈ ಮೊದಲನೇದರ ಹೆಸರುಗಳು" (ಶಬ್ದಾಂಶ. ೩೯೯). [ಸಂ.]

**ಪೌರಸ್ತ್ರೀ** (ನಾ). = ಪೌರವಧು: ಪೌರಸ್ತ್ರೀನಯನಪ್ರಭಾಸಹಚರಂ ಹಾರಾಂಶುಮಿಶ್ರೀರ್ಣವಕ್ಷೋರಂಗಸ್ಥಲದೊಳ್ ರಸಾಭಿನಯಮಂ ತೋರ್ಪ ನೈಗಂ . . . ಬರ್ಪೀ ಮಹಾಧೀರರ್ ಕಾಲ್ನಡೆಯೊಳ್ ನೃಪಾವಸಥದಿಂ ಬರ್ಪಂದಮಾವಂದಮೋ (ಶಂಗಾಶಾ. ೬-೧೬೦). [ಸಂ.]

**ಪೌರಾಂಗನೆ** (ನಾ). = ಪೌರವಧು: ಪೌರಾಂಗನಾವಶೀಕರಣಚೂರ್ಣ ಮಾದುದು ಬಳೆಳಿಘಳೀಚಯಂ (ಅಂಪು. ೧೦-೦೩). [ಸಂ. ಪೌರಾಂಗನಾ]

**ಪೌರಾಣ** (ಗು). ೧. ಹಿಂದಿನ; ಪೂರ್ವ: ತಾಯೆ ಬಾ ಗಾಂಧಾರಿ ಮನದಲಿ ನೋಯದಿರು ಪೌರಾಣಜನ್ಮದ ದಾಯಭಾಗದ ಭೋಗ ಭಂಗಿಸ ಲಳಲಲೇಕಿನ್ನು (ಕುಮ್ಯಾ. ೧೨-೩). ೨. ಪುರಾಣಗಳಿಗೆ ಸಂಬಂಧಿಸಿದ. (ನಾ). ೩. ಹಳೆಯದು; ಪ್ರಾಚೀನವಾದುದು: "ವಿಲಸತ್ಪೌರಾಣ ಮೆಂದಿಂ ದ್ವಿತಯ ಚಿರಪ್ತನಿಕ್ಕಂ" (ಶಬ್ದ. ೦೬೩). ೪. ಹದಿನೆಂಟು ಮಹಾಪುರಾಣ ಹಾಗೂ ಉಪಪುರಾಣಗಳಲ್ಲಿ ಒಂದು: "ಕಡು ದೀರ್ಘಂ ಬರೆಸಂಗಳೆಬಿಕಥೆಯುಂ ಪೌರಾಣ ಶಬ್ದಂ" (ಶಬ್ದ. ೦೬೪); ಪೌರಾಣಮಂ ಕಲಿವ ಜಪಸಮಾಧಿಯೊಳಿಪ್ಪ . . . ಕಂದಮೂಲಫಲಮಂ ತಪ್ಪ ಚಾರುಮುನಿಪುತ್ರರ್ಗೆ ವಂದಿಸುತ ಬಂದಿದಿರೊಳೊಂದು ಕೊಳನಂ ಕಂಡನು (ಕಕಶಾ. ೩-೩೩); ಜ್ಞಾನವೃದ್ಧರು ವಿಪ್ರರಲ್ಲಿ ಸನ್ಮಾನನೀಯರ್ವ್ರು ಶೌರ್ಯವೃದ್ಧರು ಮಾನವೇಂದ್ರರೊಳಧಿಕವಿದು ಪೌರಾಣಸಿದ್ಧವಲೆ (ಕುಮ್ಯಾ. ೬-೩೦). ೫. ಪ್ರಾಚೀನವಾದ ಚರಿತ್ರೆಯನ್ನು ಹೊಂದಿದ ಕಾವ್ಯಪ್ರಕಾರ: ಮಹಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿದೊಡ ಸವಿನುಡಿಗಳಿಂದೀ ಚೆನ್ನಬಸವಪೌರಾಣಮಂ ಪೇಳ್ವೆನಧಿಕೋತ್ಸವದೊಳು (ಚಬಪು. ೦-೧೦). [ಸಂ.]

**ಪೌರಾಣಿ** (ನಾ). ಪುರಾಣವನ್ನು ಹೇಳುವವನು; ಪೌರಾಣಿಕ: ಬಸವನ ಕರುಣದೊಳಿಂತಾತ ಮುಕ್ತಿಸಂತಸನಾದನಿದು ಪುಸಿಯಲ್ಲ ಐಸುಧೀಶ ಮಹಾದೇವರಾಯ ಕೇಳೆನುತಲಂದುಸುರಿದ ಪರಮಪೌರಾಣಿ (ಪೋಲಿಚ. ೨-೬೧); ಇರಲು ಶ್ರೀಕೃಷ್ಣರಾಯನು ಬಂದು ಪೌರಾಣಿ ಪರಿ ಯೋಗ್ಯಾಸನದಿ ಕುಳ್ಳಿರಿಸಲು (ಜಜಮೊ. ೦೦-೭). [ಸಂ. ಪೌರಾಣೀ]

**ಪೌರಾಣಿಕ** (ಗು). ೧. ಹಳೆಯ ಕಾಲಕ್ಕೆ ಸೇರಿದ; ಹಿಂದಿನ ಕಾಲದ: ವಸ್ತುತಃ ತಂದೆಯವರು ಒಂದು ವೇಳೆ ತುಂಟ ರೇಗಿ ಹೋಗಿ ಜರ್ಪ ಮಾಡದೆ ಬಿಟ್ಟಿದ್ದರೆ . . . ಈ ಪೌರಾಣಿಕ ಪುತ್ರಿಯ ಜೊತೆಗೆ ನನ್ನ ಮದುವೆ ಆಗಿಹೋಗುತ್ತಿತ್ತು (ತಕೃಕ. ೪೭೩). ೨. ಪುರಾಣಗಳಿಗೆ ಸಂಬಂಧಿಸಿದ. (ನಾ). ೩. ಪುರಾಣಗಳಿಗೆ ಸಂಬಂಧಿಸಿದುದು: ಆಂಡಯ್ಯನ ಕಾವ್ಯದ ಕಥೆ ಪೌರಾಣಿಕ, ತಿಮ್ಮಪ್ಪಯ್ಯನವರ 'ಸೊಬಗಿನ ಬಳ್ಳಿ'ಯ ಕಥೆಯೂ ಪೌರಾಣಿಕ (ಕಾಂಚಿ. ಮುಮ್ಮು. ೪); ನಾಟಕದ ವಸ್ತು ಪೌರಾಣಿಕವಾಗಿದ್ದರೆ ನಮ್ಮ ಹಿಂದಿನವರ ಜೀವನವನ್ನು ಚಿತ್ರಿಸಿ ನಮ್ಮ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ ಇವುಗಳಲ್ಲಿ ಅಭಿಮಾನ ಹುಟ್ಟಿಸುತ್ತವೆ (ಕನ್ನಡ. ೫೪). ೪. ಪುರಾಣಗಳನ್ನು ಓದಿ ಚೆನ್ನಾಗಿ ತಿಳಿದು ಕೊಂಡಿರುವವನು; ಪುರಾಣಿಕ: ಪೌರಾಣಿಕರ್ಕೆಂತೆಂದು ಮಹಾರಾಜಂ ಗುಂದು ಬಿನ್ನವಿಸಿದರ್ ಕುವರರು ಸುರಪುರಾಣಾರ್ಥಂಗಳನಾರಯ್ದು ಮಧರ್ಪ ವಿಮಲವೋಧಾಬಲಮಂ (ಚಕಿಂ. ೪-೦೦೪). [ಸಂ.]

**ಪೌರಾತನ** (ಗು). ಪ್ರಾಚೀನವಾದುದಕ್ಕೆ ಸಂಬಂಧಿಸಿದ: ಕಾಲನಸು ವಿಾಜುವವರಾರು ಪೌರಾತನಕೃತದುಷ್ಕೃತ್ಯವನು ಗೆಲುವಾತನಿಲ್ಲ (ಕುಮ್ಯಾ. ೬-೩೩). [ಸಂ.]

**ಪೌರುಷ** (ಗು). ೧. ಪುರುಷನಿಗೆ ಸಂಬಂಧಿಸಿದ. ೨. ವೀರ್ಯವತ್ತಾದ; ಗಂಡುತನದ. (ನಾ). ೩. ಪೌರುಷತ್ವ; ಗಂಡುಸುತನ. ೪. ಶೌರ್ಯ; ಕೆಚ್ಚು; ಪರಾಕ್ರಮ: "ಪ್ರತಾಪಃ, ಪೌರುಷಂ . . . ಪರಾಕ್ರಮಃ —ಈ ೫ ಪರಾಕ್ರಮಂ" (ಕರಾಜು. ೦೨೦-೩೮); ಆ ನೃಪನ ಪೌರುಷವೇಂ ಪೊಗಟಲ್ಕೆವೇಟ್ಪುವೇ (ಶಾಭಂಕು. ೦೩); ಆರಾದೊಡಮೇಚೆವರಸ್ನಾರತ್ನಮನೆಚೆದೊಡೆಯಮೆಂಬರೆ ಕುಡುವೆಂಕಾರಾಮನೊಳೇಗಂಡೈ ಪೌರುಷಮಂ ತಕ್ಕುದಳಿದು ನೆಗಟಲ್ವೇಡಾ (ಶಂಗಾಶಾ. ೩-೩೦); ಕೋಪಪ್ರದರ್ಶನಂ ಪೌರುಷಕೆ ಕುರುಹೆಂದು ಬೆದರಿ ಕಂಬನಿಗರೆದು, ಸೋಲ್ತೊವ್ವೆ ಗೆಲ್ವಳಾಕೆ! (ಶಶ್ಯಾಂಗ. ೨೩-೬೬೩). ೫. ಮನುಷ್ಯಪ್ರಯತ್ನ;—ಸಾಹಸ: ದೈವಬಲವೇ ಬಲವು ಪೌರುಷವೇವುದು (ಕೌಶಿಕಾ. ೨೬-೯); ದೈವದ ಹಾಗು ಪೌರುಷದ ಅತ್ಯುಕ್ತ್ರಿಯ ಸಿದ್ಧಾಂತದಿಂದ ಸಮಾಜವು ದೂಷಿತವಾದಷ್ಟು ಮತ್ತಾವುದರಿಂದಲೂ ದೂಷಿತವಾಗಲಾರದು (ಕೃಂಂಆ. ೩೨). 'ಪೌರುಷವಾದಿ' ಪರಾ. ೬. ಒಬ್ಬ ಮನುಷ್ಯನು ಹೊರಬಹುದಾದಷ್ಟು ಹೊರೆ, —ಭಾರ. ೭. ಸುಮಾರು ಐದರಿಂದ ಆರು ಅಡಿಯವರೆಗಿನ ಎತ್ತರ; ಒಂದಾಳೆತ್ತರ; ಪುರುಷಪ್ರಮಾಣ: "ಆಳತೆಯಲ್ಲಿಯುಂ ಪೌರುಷಮುಂಬುದು" (ಕರಾಜು. ೦೩೯-೦೯). [ಸಂ.]

**ಪೌರುಷವಂತ** (ನಾ). ಶಕ್ತಿವಂತ; ಪರಾಕ್ರಮಿ: ಆ ಸ್ಫುರದ್ರೂಪಿಯೂ ಪೌರುಷವಂತನೂ ಆದ ರಾಜಕುಮಾರನನ್ನು ನೋಡಿ ಅರಸನ ಸಿಟ್ಟು ಇಳಿಯಿತು (ಬುಚು. ೪೭). [ಸಂ. ಪೌರುಷವತ್]

**ಪೌರುಷವಾದಿ** (ನಾ). ಪುರುಷಪ್ರಯತ್ನವನ್ನು ಸಮರ್ಥಿಸುವವನು: ಪೌರುಷದ ಯಾವುದೇ ಸಿದ್ಧಾಂತವು ದೈವವನ್ನು ಸುಳ್ಳೆಂದು ಸಿದ್ಧಮಾಡಿದರೆ, ಪೌರುಷವೂ ಕೂಡ ಕಳೆಗುಂದುತ್ತದೆ ಎಂಬುದು ಎಷ್ಟೋ ಪೌರುಷವಾದಿಗಳಿಗೆ ಲಕ್ಷ್ಯಕ್ಕೆ ಬರುವುದಿಲ್ಲ (ಕೃಂಂಆ. ೩೦). [ಸಂ. ಪೌರುಷವಾದಿನ್]

**ಪೌರುಷಾಂಗ** (ನಾ). ಶೌರ್ಯದಿಂದ ಕೂಡಿದುದು: ಧೀತಿ ಮನದಲಿ ಪೌರುಷಾಂಗದ ಮಾತು ಮುಖದಲಿ ಮುರಿವು ಕಾಲಲಿ (ಕುಮ್ಯಾಕೃ. ೦೩-೨೩). [ಸಂ.]

**ಪೌರುಷೇಯ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. ೨. ಮನುಷ್ಯನಿಂದ ಮಾಡಲ್ಪಟ್ಟ; ಪುರುಷಕೃತವಾದ: 'ಜೀವನ' ಶಬ್ದವನ್ನು ನಾನು ಮೂರು ತೆರನಾಗಿ ಕಾಣುತ್ತಿರುವೆನು. ಅದು ಹೀಗೆ: (೧). ಪ್ರಾಕೃತಿಕ ಜೀವನ. (೨). ಪೌರುಷೇಯ ಜೀವನ. (೩). ಸಿದ್ಧ ದೈವೀ ಜೀವನ (ಕೃಂಂಕ. ೦. ಕೀಲಿಕವಿ ಪಿಲುಳು). (ನಾ). ೩. ಮನುಷ್ಯನಿಂದ ನಿರ್ಮಾಣವಾದುದು; ಮನುಷ್ಯ ಕಾರ್ಯ: ಪುರುಷಕೃತವಾಕ್ಯಾರ್ಥ ಸಾಕ್ಷಾತ್ಕಾರವೇ ಆಪ್ತಿ, ವಾಕ್ಯಾರ್ಥವನ್ನು ನೋಡದೆ ಇರುವವನು ಆಪ್ತನಲ್ಲ. ಹಾಗಾದರೆ ವೇದ ಪೌರುಷೇಯವಾಗುವುದು (ಹಿಂಂಜಾ. ೦೧೪). ೪. ಜನಸಮೂಹ; ಜನರ ಗುಂಪು. ೫. ಪುರುಷವಧೆ. [ಸಂ.]

**ಪೌರುಸ** (ನಾ). ಶಕ್ತಿ; ಪೌರುಷ: "ಪೌರುಸ—ಪೌರುಷ" (ಕದ್ಯಕೋ. ೨೭); ಷಕಾರಕ್ಕೆ ಆಮಿಷ—ಆಮಿಸ . . . ಪೌರುಷ—ಪೌರುಸ (ಕಮುಡ. ೨೩೬ ಕೃಷೀ); ಕಂಠೀರವನರಸೇಂದ್ರನ ಮತ ಪೌರುಸವ ಪೊಗಳುತ ಸಂತೋಷದ ದೆಸೆದೆಸೆಯ ಜನರು ಯಾತ್ರೆಗೆಂತರಿಸದೆ ತೆರಳಿದರು (ಕಂಕಶ. ೦೩-೬೯). [< ಸಂ. ಪೌರುಷ]

**ಪೌರುಳಚ್** (ನಾ). ಒಂದು ಊರಿನ ಹೆಸರು: ಅನ್ದರಿಯ ಆಲನ್ಸೂರ ಪೌರುಳಚ್ ಆ ವೆನ್ನಗರಾದ್ಯನೇಕಸಮರಮುಖಮುಖಾಹುತ . . . ಪೂರ್ಬ್ಬದತ್ತು ಈಶಾನ್ಯದಿಶಾ ಅಪಕ್ಷೇತ್ರಮ್ (ಎಂ. V. ೦೩೯-೩: ೬೧೨). [?]

**ಪೌರೋಗವ** (ನಾ). ಅರಮನೆಯ (ವಿಶೇಷವಾಗಿ ಪಾಕಶಾಲೆಯ)

ಮೇಲ್ವಿಚಾರಕ, — ಅಧಿಕಾರಿ: "ಪೌರೋಗವಃ, ಸೂದಾಧ್ಯಕ್ಷಃ — ಈ ೨ ಬಾಣಸುವೆಗ್ಗಡೆ" (ಹಲಾಯು. ೬೦-೨೬೬); "ಪೌರೋಗವಂ ಸೂಪಕಾರರ ಕರ್ತನಕ್ಕುಂ" (ಮಂಗರಾ. ೫೦-೬). [ಸಂ.]

**ಪೌರೋಭಾಗ್ಯ** (ನಾ). ದೋಷವನ್ನು ಎತ್ತಿ ಹೇಳುವುದು; ಛಿದ್ರಾನ್ವೇಷಣ: ಪೌರೋಭಾಗ್ಯವ್ಯಪೇತಮನಸ್ಕರಕ್ಕರಿಗರಧಿಕಪ್ರಜ್ಞರ್ ಕೆಯ್ಕೊಂಡು ತಿರ್ದಗೆ ದೋಷವಂ (ಕಾವ್ಯಾ.ಕ. ೯೬೩). [ಸಂ.]

**ಪೌರೋಹಿತ** (ಗು). ೧. ಪುರೋಹಿತನಿಗೆ ಸಂಬಂಧಿಸಿದ. (ನಾ). ೨. ವೇದೋಕ್ತ ವಿಧಿಗಳನ್ನು ಮಾಡಿಸುವವನು; ಪುರೋಹಿತ: "ಪೌರೋಹಿತಂ ದಂಡನಾಥಂ . . . ತಳವಾಜಿನೇಬವರು ಭೂರಮಣರಲ್ಲಿ ವಿನಿಯೋಗಮಂ ತಾಳ್ದು ಪದಿನೆಣ್ಬರ್ ಪ್ರಧಾನರನಿಕುಂ" (ಮಂಗರಾ. ೬೦-೧೧); ಚಂಡದೈವಜ್ಞನನಧೀಗುಣಮಂಡನನ ಬಹುಶಾಸ್ತ್ರವಿಚಾರನ ಪಂಡಿತನ ಪೌರೋಹಿತನ ಮಾಡುವುದು (ಕಾವ್ಯಾ.ಉ. ೩-೬೬). [ಸಂ.]

**ಪೌರೋಹಿತ್ಯ** (ನಾ). ೧. ಪುರೋಹಿತನ ಕೆಲಸ, — ವೃತ್ತಿ: ಹರಿ ಪೌರೋಹಿತ್ಯಮಂ ತಾಳ್ದೆ ರಾಗಿಸಿ ಶಕ್ರಾಂಗನೆ ದಾದಿಯಾಗೆ... ಜನಂಗಳೆದು ದಂತಾ ನಾಮಕರ್ಮೋತ್ಸವಂ (ಕಾಂತಿಪು. ೧೦-೬೯); ಪೌರೋಹಿತ್ಯಾಧಿಕಾರ ಪ್ರಮುಖರಿರದೆ ಬಂದುಂ . . . ದೋಷಂ ಪಾರುತ್ತಂ ಪೋಕುಮೆಂದಾಡುತಂ (ಜಗನ್ನಾ. ೩-೬-೨೯): ಸಾಧ್ಯಪ್ಪು ಆದಾಯ . . . ಕಳೆದ ಹದಿನೆಂಟು ವರ್ಷಗಳಿಂದ ಪೌರೋಹಿತ್ಯದ ಮೂಲಕ ಅವನಿಗೊದಗುತ್ತಿತ್ತು (ಪ್ರಶಸ್ತಿ. ೦೯೦). ೨. (ಅಲಂ) ಮುಂದಾಳುತನ: ವ್ಯರ್ಥಪ್ರೇಮದ ವೇದನೆಯ ಪೌರೋಹಿತ್ಯವನ್ನೇ ಶರಶ್ಚಂದ್ರರು ವಹಿಸಿದ್ದಾರೆ (ಶರಶ. ೧); ಯಾವುದೇ ಒಂದು ಶಾಸ್ತ್ರದ ಅಭ್ಯಾಸದ ವಿಷಯವಾಗಿ ಯಾರೂ ಪೌರೋಹಿತ್ಯ ವಹಿಸುವ ಕಾರಣವಿಲ್ಲ (ಶಾಕಾಶಾ. ೦೯). [ಸಂ.]

**ಪೌರ್ಣಮಾಸ** (ನಾ). ೧. ಹುಣ್ಣಿಮೆಗೆ ಸಂಬಂಧಿಸಿದುದು. ೨. ಹುಣ್ಣಿಮೆ. ೩. ಹುಣ್ಣಿಮೆಯ ದಿನ ಆಚರಿಸುವ ಒಂದು ವ್ರತ. [ಸಂ.]

**ಪೌರ್ಣಮಾಸಿ** (ನಾ). ಪೂರ್ಣಚಂದ್ರನಿರುವ ದಿನ; ಹುಣ್ಣಿಮೆ: "ಚಂದ್ರಂ ನೆಟ್ಟನೆ ನೆಟಿದು ಬಂಬದಿಂ ಪೂರ್ಣನಾಗೆ ರಾಕಾಖ್ಯೆ ಪೌರ್ಣಮಾಸಿಯದಕ್ಕುಂ" (ಶಬ್ದಮಣಿ. ೦೬-೯), ಅನ್ನೆಗಮಾಷಾಢಪೌರ್ಣಮಾಸೀವಾಸರ ಸಾಯಂತನಸಮಯದೊಳ್ ಪರಭಾಗಂಬಡೆದು (ಅಂಪು. ೬-೩೦).
[ಸಂ. ಪೌರ್ಣಮಾಸೀ]

**ಪೌರ್ಣಮಾಸೆ** (ನಾ). = ಪೌರ್ಣಮಾಸಿ: ಸಕವರುಸಂ ಸಾಸಿರದ ನೂಱಯಪ್ಪತ್ತನೆಯ ಕೀಲಕಸಂವತ್ಸರದ ಜೇಷ್ಠಸುಧಪೌರ್ಣಮಾಸೆ ಸೋಮವಾರ ಸೋಮಗ್ರಹಣದಂದು (ಶಾಸನ. XX. ೨೦೩-೦೬; 1248).
[<ಸಂ. ಪೌರ್ಣಮಾಸೀ]

**ಪೌರ್ಣಮಿ** (ನಾ). = ಪೌರ್ಣಮಾಸಿ: ಪಾಡಿಯ ಮೊದಲು ಪೌರ್ಣಮಿಯು ದಮಾವಾಸ್ಯೆ ಕಡೆ ಮಾಡಿ ರವಿಯಾದಿವಾರಂಗಳಕ್ಕುಮಶ್ವಿನಿಯದಾದಿನಕ್ಷತ್ರ ಮಕ್ಕುಂ (ಮಂಗರಾ. ೨೦-೯); ಕಂದದೆಂದುಂ ದಿನದಿನಕೆ ಕಳೆಗುಂದದೆಂದುಂ ರಾಹುಬಾಧೆಯೊಳೊಂದದೆಂದುಂ ಪೌರ್ಣಮಿಯು ದಿನದಂದು ಶರದಿಂದು (ಅಕಪು. ೯-೨೬); ಸುತನೆ ನೀ ಪೌರ್ಣಮಿಯು ದಿನದಲಿ ಸತಿಯು ಹೊದ್ದಲು ಬೇಡ (ಜೀವಂಧ. ೩-೧೧). [ಸಂ. ಪೌರ್ಣಮಿ]

**ಪೌರ್ಣಮಿಯದಿನ** (ನಾ). ಹುಣ್ಣಿಮೆಯ ದಿನ, — ತಿಥಿ: ಕೈಲಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮಿಯದಿನದಂದು ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ (ಅದಿಪು. ೧೬-೯೦ವ); ಕಾರ್ತಿಕಮಾಸದ ಪೌರ್ಣಮಿಯದಿನದೊಳ್ ಸುಕುಮಾರನ ಮೋಹಬಂಧದ ಬಳ್ಳಿವಳ್ಳಿಯು ತೊಡರ್ಪಂ ಪಱಿಪಡೆ ಬಿಡಿಸುವಂತೆ ಯೋಗವಿಡಿಸಿ (ಸುಕು:ಚ. ೦೦-೩೮ ವ). [ಸಂ.]

**ಪೌರ್ಣಮ** (ನಾ). ಔದುಂಬರ, ವೈಪಾಸಕ, ಪ್ರಕ್ಷಾಳಿಕ ಮತ್ತು ಪೌರ್ಣಮ ಎಂಬ ನಾಲ್ಕು ಪ್ರಕಾರದ ಮುನಿಗಳಲ್ಲಿ ಒಬ್ಬ: ಪಂಚಾಗ್ನಿಮಧ್ಯದಲ್ಲಿ ಏಕಪಾದಸ್ಥಿತಿ ಮೊದಲಾದವಱಿಂದುಗ್ರತಪಸ್ಸನಾಚರಿಸುವಾತನಾಗಿ ಔದುಂಬರ ವೈಪಾಸಕ ಪ್ರಕ್ಷಾಳಿಕ [ಪಾಠಾಂ. ಲಿ] ಪೌರ್ಣ [ಪಾಠಾಂ. ರ್ಣ] ಮನೆಂದು ಚತುರ್ವಿಧಮಾಗಿರ್ಪಾತನೇ ವಾನಪ್ರಸ್ಥನಪ್ಪಂ (ಅವೀಚ. ೦೨೬). [ಸಂ.]

**ಪೌರ್ಣಮೆ** (ನಾ). ಪೂರ್ಣಚಂದ್ರನು ಮೂಡುವ ದಿನ; ಹುಣ್ಣಿಮೆ: ಆ ಪಕ್ಷಂಗಳೊಳಗೆ . . . ಚಂದ್ರನಧಿದೇವತೆಯಾದ ಪೌರ್ಣಮೆ [ಪಾಠಾಂ. ರ್ಣಮಿ] ಎಂಬ ಶುಭಾಶುಭರೂಪಮಾದ ಹದಿನೈದು ತಿಥಿಗಳುಳ್ಳುದೇ ಶುದ್ಧವೆನಿಪ ಶುಕ್ಲಪಕ್ಷ (ಅವೀಚ. ೨೬೨). [ಸಂ. ಪೌರ್ಣಮಾ]

**ಪೌರ್ವಾತ್ಯ** (ಗು). ೧. ಪೂರ್ವಭಾಗಕ್ಕೆ ಸೇರಿದ; ಪೂರ್ವದಿಕ್ಕಿನ: 'ದಾಕ್ಷಿಣಾತ್ಯ' ಎಂಬುದನ್ನು ಅನುಕರಿಸಿ, 'ಪೌರ್ವಾತ್ಯ', 'ಪಾಶ್ಚಿಮಾತ್ಯ' ಎಂಬ ಶಬ್ದಗಳು ರೂಢಿಗೆ ಬಂದಿದೆ (ಸಂಕೋಶ. ೯೬). (ನಾ). ೨. ಪೂರ್ವದೇಶದ ನಿವಾಸಿ: ಅವಳು ಗಂಡನ ವಿಷಯದಲ್ಲಿ ಪೌರ್ವಾತ್ಯರಂತೆ ವಿಧೇಯಳಾದ ಕೂಲಿಯಾಗಿರಬೇಕು (ಶುಕಚ. ೨೨). ▷ ಇದಂ 'ದಾಕ್ಷಿಣಾತ್ಯ' ಮುಂತಾದ ದಿಕ್ಸೂಚಕಶಬ್ದಗಳ ರೂಪಸಾಮ್ಯದಿಂದ ಆಗಿದೆ.
[<ಸಂ. ಪೂರ್ವ]

**ಪೌರ್ವಾಪರ್ಯ** (ನಾ). ಅನುಕ್ರಮ; ಆನುಪೂರ್ವಿ; ಪರಿವಿಡಿ: ಕದಂಬರಾಜರ ಪೌರ್ವಾಪರ್ಯ (order of succession) ಆಳಿಕೆಯ ಕಾಲಗಳನ್ನು ತೋರಿಸುವ ವಂಶವೃಕ್ಷವನ್ನು ವಾಚಕರ ಸೌಕರ್ಯಕ್ಕಾಗಿ ಕೊಟ್ಟಿದೆ (ಕದಾಇ. ೦೫). [ಸಂ.]

**ಪೌರ್ವಾಹ್ಣಿಕ** (ಗು). ೧. ಪೂರ್ವಾಹ್ಣದಲ್ಲಿ ಮಾಡಬೇಕಾದ. ೨. ಮಧ್ಯಾಹ್ನಕ್ಕೆ ಮುಂಚಿನ. (ನಾ). ೩. ಮಧ್ಯಾಹ್ನಪೂರ್ವದಲ್ಲಿ ಮಾಡುವ ನಿತ್ಯವಿಧಿ: ಆಚಾರ್ಯರು ಊರಿಗೆ ಹೋಗಬೇಕಾಗಿದ್ದುದರಿಂದ ಪೌರ್ವಾಹ್ಣಿಕಗಳನ್ನು ದಿನಕ್ಕಿಂತ ಬೇಗನೆ ಮುಗಿಸಿದರು (ಕೂ). [ಸಂ.]

**ಪೌಲಸ್ತ್ಯ** (ಗು). ೧. ಪುಲಸ್ತ್ಯಮುನಿಗೆ ಸಂಬಂಧಿಸಿದ. (ನಾ). ೨. ಪುಲಸ್ತ್ಯವಂಶದವನು. ೩. ಕುಬೇರ: "ಏಳಬಿಳಃ, ಪೌಲಸ್ತ್ಯಃ . . . ಪುಣ್ಯಜನೇಶ್ವರಃ — ಈ ೧೭ ಕುಬೇರನ ಪೆಸರ್" (ಹಲಾಯು. ೦೯-೬೮); ಇವ ನಿರುತಿ ಉದಕಪತಿಯುವನನಿಲ ಪೌಲಸ್ತ್ಯನೀಶಾನ್ಯನೀ ಸಮಸ್ತರನು ನೋಡು (ಜೈಶಭಾ. ೦೦-೯೬). ೪. ರಾವಣ: ಪೌಲಸ್ತ್ಯನ ಲಂಕಾಪುರ ಮನುರಿಪಿದಂ . . . ಹನುಮಂತಂ (ಶಂಶಾಕಾ. ೦೦-೬೦); ಪೌಲಸ್ತ್ಯ! ಆಲಿಸು, ಬಲ್ಲೆನದೆ. ಇಂದು ಮೊದಲ್ಗೊಂಡು ತಪಸಂ ತಪಿಸ್ಯೆ (ಶರ್ಮ.ಕ. ೨೯-೯). [ಸಂ.]

**ಪೌಳಿ, ಪೌಳ್ಳಿ** (ನಾ). ೧. ಒಂದು ಬಗೆಯ ಹೋಳಿಗೆ. ೨. ರೊಟ್ಟಿ: "ಪೌಳಿ = ಹೋಳಿಗೆ, ೨. ರೊಟ್ಟಿ" (ಗಂಗಾಕು. ೨೦೬). **ಪೌಳ್ಳಿ**: ೩. ಉಸಲಿ; ಗುಗ್ಗರಿ: "ಆಪಕ್ವಂ, ಪೌಳಿ, ಅಭ್ಯೂಷಃ — ೩ ಉಸಲಿಯ ಹೆಸರುಗಳು, ಗುಗ್ಗರಿ" (ಸಿದ್ಧಾಂತಿ. ೨೬೬). [ಸಂ. ಪೌಲಿ, ಪೌಲೀ]

**ಪೌಲೋಮ** (ನಾ). ೧. ಪುಲೋಮೆಯ ಮಕ್ಕಳು; ಒಂದು ರಾಕ್ಷಸ ವರ್ಗ: ನಿವಾತಕವಚ ಕಾಳಕೇಯ ಪೌಲೋಮ ತಳ ತಾಲುಕರೆಂಬಱುವತ್ತು ಕೋಟಿರಕ್ಕಸರನೆನಗೆ ಗೆಲ್ದೀಯಲ್ವೇಟ್ಕುಂ (ಶಂಪಾ. ೬-೨೭ ವ). ೨. ಇಂದ್ರ. [ಸಂ.]

**ಪೌಲೋಮಿ, ಪೌಳೋಮಿ** (ನಾ). ೧. ಪುಲೋಮನೆಂಬ ಅಸುರನ ಮಗಳು; ಇಂದ್ರನ ಪತ್ನಿ; ಶಚೀದೇವಿ: "ಇಂದ್ರಾಣೀ, ಪೌಲೋಮಿ, ಶಚೀ — ಈ ೩ ಇಂದ್ರನ ಸ್ತ್ರೀಯ ಪೆಸರ್" (ಹಲಾಯು. ೦೦-೩೫): ಮುನ್ನೊಂದು ಸಮಯದೊಳ್ ಪೌಲೋಮಿ ತಾಳಮಧುವಂ ಬಯಸಿ . . . ಪುರಂದರಪುರಸ್ಸರಂ ಬಂದು ಹೃದ್ಯಮಪ್ಪ ಮದ್ಯಮಂ ಕೇಳಿವಟ್ಟ ಲೋಳಿಟಿದು ಉಡಿಯಲುಜ್ಜುಗಂಗೈವುದುಂ (ಶಗಪು. ೯-೫೯ ವ). ೨. ಭೃಗು

ಋಷಿಯ ಹೆಂಡತಿ. **ಪೌಲೋಮಿ :** ೧. ನೇಮಿನಾಥಂಗೆ ಸುರಯೂಥ ನಾಥಂ ಸರ್ವಾಂಗಪ್ರಣತನಾಗಿ . . . ಪೌಲೋಮಿದತ್ತ ದಿವ್ಯಾರ್ಚನಾ ನಿಚಯದಿನರ್ಚಿಸಿ (ನೇಮಿಪು. ೦೩–೯೯ ಕ). [ಸಂ. ಪೌಲೋಮೀ]

**ಪೌಲೋಮೀಪತಿ, ಪೌಲೋಮಿಪತಿ** (ನಾ). ಶಚೀದೇವಿಯ ಗಂಡ ; ಇಂದ್ರ : ಶ್ರೀಮಜ್ಜಿನಮಜ್ಜನದ ಮಹಾಮಹಿಮಾತಿಶಯಮನದಳಂ ಪೊಗಟಲ್ ಪೌಲೋಮೀಪತಿಗಲ್ಲದೆ ಪೆರ್ಗೇಮಾತದು (ಆಪು. ೩–೦).

**ಪೌಲೋಮಿಪತಿ :** ಪೌಲೋಮಿಪತಿ ತನ್ನ ದಿವ್ಯಜ್ಞಾನದೊಳ್ ನೋಡಿ ಚಕ್ರಿಯುಮ ವಿಕ್ರಮಾರ್ಜುನನುಮಪ್ಪುದನಱಿದು (ಪಂಪಭಾ. ೩–೯೩ ವ). [ಸಂ.]

**ಪೌವಗೆ** 'ಪವ್ವಗೆ' ನೋ.

**ಪೌವನೆ** 'ಪವ್ವನೆ' ನೋ.

**ಪೌವನೆವೋಗು** (ಕ್ರಿ). ಬೆದರು ; ಭಯಪಡು : ತನ್ನ ನಮ್ಬಿದ ಸುದತೀ ಕದಮ್ಬದರ್ದೆ ಪೌವನೆವೋಗಿರೆ (ಎಕ. II, ೨೪೦–೨೧ ; ಸು. 1176).

[ಪೌವನೆ (<ಪವ್ವನೆ) + ಪೋಗು₁ (<ಪೋ₁) ]

**ಪೌಷ** (ನಾ). ೧. ಪುಷ್ಯಮಾಸ : "ಪೌಷಃ, ತೃಷಃ, ಸಹಸ್ಯಃ—ಇ ಪುಷ್ಯಮಾಸದ ಹೆಸರುಗಳು" (ಸಿದ್ಧಾಂತಿ. ೩೯). ೨. ಹಬ್ಬ ; ಉತ್ಸವ. ೩. ಕಾಳಗ ; ಯುದ್ಧ. [ಸಂ.]

**ಪೌಷಿ** (ನಾ). ೧. ಪುಷ್ಯನಕ್ಷತ್ರದಿಂದೊಡಗೂಡಿದ ಹುಣ್ಣಿಮೆಯ ರಾತ್ರಿ : "ಪೌಷೀ, ಪುಷ್ಯಯುಕ್ತಾ—ಪುಷ್ಯನಕ್ಷತ್ರದಿಂದೊಡಗೂಡಿದ ಪೌರ್ಣಮಾಸೀ ಹುಣ್ಣಿಮೆಯ ಹೆಸರು" (ಸಿದ್ಧಾಂತಿ. ೩೯). ೨. ಪುಷ್ಯಮಾಸದ ಹುಣ್ಣಿಮೆ. [ಸಂ. ಪೌಷೀ]

**ಪೌಷ್ಕರ** (ನಾ). ನೈದಿಲೆಗೆಡ್ಡೆ : "ಪೌಷ್ಕರಂ, ಕಾಶ್ಮೀರಂ, ಪದ್ಮಪತ್ರಂ . . . ತಾವರೇಗಡ್ಡೆ" (ಸಿದ್ಧಾಂತಿ. ೧೧೩). [ಸಂ.]

**ಪೌಷ್ಟಿಕ** (ಗು). ೧. ಶಕ್ತಿಯನ್ನು ಕೊಡುವ ; ಪುಷ್ಟಿದಾಯಕವಾದ : ಅಡುಗೆಯು ಕಲೆಯಲ್ಲಿ ಅವಳು ಪರಿಣತಳಾಗಿದ್ದು ದೊರೆಯುವ ವಸ್ತುಗಳಿಂದಷ್ಟೇ ರುಚಿಕರವಾದ ಮತ್ತು ಪೌಷ್ಟಿಕ ಅಡುಗೆಯನ್ನು ಮಾಡಲು ಬಲ್ಲವಳಿರಬೇಕು (ಅಕುಶಾ. ೩೬). (ನಾ). ೨. ಶಕ್ತಿಯನ್ನು ಕೊಡುವಂಥದು ; ಪುಷ್ಟಿದಾಯಕವಾದ ವಸ್ತು : ಶ್ರೀಖಂಡವು ಪೌಷ್ಟಿಕ. ವೀರ್ಯವರ್ಧಕ (ಅಕ್ಕಾಂಗ. ೧೨೦–೩೩); ಫಲಹಾರವಸ್ತುಗಳು ಕಟ್ಟಲು ಸುಲಭವಾಗಿಯೂ ಪೌಷ್ಟಿಕ ಹಾಗೂ ರುಚಿಕರವಾಗಿಯೂ ಇರಬೇಕು (ಅಕುಶಾ. ೩೦); ಸತ್ವಹೀನರನ್ನು ಸತ್ವಸಂಪುಷ್ಟರನ್ನಾಗಿ ಮಾರ್ಪಡಿಸಬಲ್ಲುದು ಈ ಆಧ್ಯಾತ್ಮ ಪೌಷ್ಟಿಕ (ಕಾವ್ಯಕು. ೨೯). ೩. ವ್ಯವಹಾರದಲ್ಲಿ ಜಯವೇ ಮೊದಲಾದ ಇಷ್ಟಪ್ರಾಪ್ತಿಗಾಗಿ ಮಾಡುವ ಒಂದು ಕರ್ಮ : ಶಾಂತಿಕ ಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯಾದಿಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ (ಆಪು. ೧೧–೩ ವ). ೪. ನೀರಿನ ಧಾರೆಯೆರೆದು ಮಾಡುವ ದಾನ. [ಸಂ.]

**ಪೌಷ್ಟಿಕಕರ್ಮ** (ನಾ). = ಪೌಷ್ಟಿಕ ೩ : ಪಂಡಿತಪ್ರಿಯ ಶಾಂತಿಪೌಷ್ಟಿಕ ಕರ್ಮದೀಕ್ಷಿತನ ಚಂಡದೈವಜ್ಞನ . . . ಪುರೋಹಿತನ ಮಾಡುವುದು (ಲಂಬ್ಯಾ. ೩–೮೬) ; ರೋಗ ಪಾಶಿಯಾಗುವುದಕ್ಕೆ ಮಾಡುವ ಭೇಷಜಕರ್ಮಗಳು . . . ಪ್ರಾಯಶ್ಚಿತ್ತರೂಪವಾದ ಶಾಂತಿಕರ್ಮಗಳು, ಕೆಲಸ ಕಾರ್ಯಗಳಲ್ಲಿ ಜಯವಾಗಲೆಂದು ಪೌಷ್ಟಿಕಕರ್ಮಗಳು (ಭಾರತ. ೨೭).

[ಸಂ. ಪೌಷ್ಟಿಕಕರ್ಮನ್]

**ಪೌಷ್ಟಿಕತೆ** (ನಾ). ಪುಷ್ಟಿಯನ್ನುಂಟುಮಾಡುವ ಅಂಶ; ಪುಷ್ಟಿದಾಯಕತ್ವ : ತರಕಾರಿಗಳಲ್ಲಿರುವ ಜೀವಾತುಗಳು ಮತ್ತು ಪೌಷ್ಟಿಕತೆಯು ನಷ್ಟವಾಗದಂತೆ ಅವುಗಳನ್ನು ಎಷ್ಟು ಬೇಗನೆ ಬೇಯಿಸಿ ತೆಗೆಯುತೋ ಅಷ್ಟು ಒಳ್ಳೆಯದು (ಅಕುಶಾ. ೨೮). [ಸಂ. ಪೌಷ್ಟಿಕತಾ]

**ಪೌಷ್ಪಕ** (ನಾ). ಹಿತ್ತಾಳೆಯ ಭಸ್ಮದಿಂದ ತಯಾರಿಸಿದ ಒಂದು ಬಗೆಯ ಕಣ್ಣುಕಪ್ಪು ; ಕುಸುಮಾಂಜನ : "ರೀತಿಪುಷ್ಪಂ, ಪುಷ್ಪಕೇತುಃ, ಪೌಷ್ಪಕಂ, ಕುಸುಮಾಂಜನಂ—ಇ ಕುಸುಮಾಂಜನದ ಹೆಸರು" (ಸಿದ್ಧಾಂತಿ. ೧೦೩). [ಸಂ.]

**ಪೌಷ್ಯ** (ಗು). ೧. ಪುಷ್ಯಮಾಸಕ್ಕೆ ಸಂಬಂಧಿಸಿದ. (ನಾ). ೨. ಪುಷ್ಯಮಾಸ. [ಸಂ.]

**ಪೌಷ್ಯಮಾಸ** (ನಾ). ಪುಷ್ಯಮಾಸ : ಕೈಲಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮಾದಿನದಂದು ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ (ಆಪು. ೦೬–೯೦ ವ). [ಸಂ.]

**ಪೌಸರ** (ನಾ). ಗುಂಪು; ಸಮೂಹ : ಸಿಡಿಲಿನಿಂ ನೋಡಿ ಪಕ್ಷಿಯ ಬಿದಿರ್ದು ದೆದಳುತ್ತೆ ನಡುಗೊಂಬನೇಱ ಸುಸ್ವರಗಳಿಂ ಧ್ವನಿಗೆಯ್ದು ಪಡಿಯಾಯುಂಕಿತ ಪಕ್ಕಿ ಪೌಸರದೊಳಿರ್ದಿಂತು ಸಂತಸದೊಳುಂ ವನದೊಳು (ಶೃಕುಪು. ೩–೦೯).

[<ಪಸರ]

**ಪೌಳಿ₁**, ಪಳುಳಿ, ಪವಲ್ಯ, ಪವಳಿ, ಪವುಳಿ (ನಾ). ೧. ಸುತ್ತು ಗೋಡೆ ; ಪ್ರಾಕಾರ : ಭಕ್ತನ ದೇಹವೇ ತ್ರಿಕೂಟದ ಶಿವಾಲಯ . . . ಶಿವಾಚಾರವೆ ಪೌಳಿ (ಬಸವ. ೬. ೦೯೯–೩೯೦) ; ನಿಂದು ನಿಂದು ನಿಲುಕಿ ನಿಲುಕಿ ಕೈಗುಂದಿ ನೋಡುತ ದೆಸೆದೆಸೆಯನಾನುದದಿದುಳಿದು ಪೌಳಿಯ ಎಡೆಗೆ ನಸುಸಾರ್ದು (ಚಿಕ್ಕ. ೨೬–೪೦) ; ರಾಯನ ರಾಣಿಯ ಪೌಳಿಯ ಹಿಂದದೆ ಬಲು ಬಟ್ಟಬಯಲು (ಕುಮಾರಾ. ೪೦–೦); ಸುತ್ತೇಳ ಪೌಳಿ ಮನೆಯುಮಳೆ ನನ ಚೆಲುವೆ ಸುತ್ತಿ ಬರತೀನಿ ದನಿ ತೋರೆ (ಜಾಕ. ೦೦೦); ಶಾಲೆಯ ಸಮೀಪದ ದೇವಸ್ಥಾನದ ಪೌಳಿಯಲ್ಲಿ ಕಟ್ಟಿದ ಚಿಕ್ಕ ಕೋಣೆಯೊಂದನ್ನು ಹಿಡಿದು ತಾವೇ ಕೈ ಬಾಯಿ ಸುಟ್ಟುಕೊಂಡಿದ್ದರು (ಪಾಠಗ. ೩). ೨. ಅಂಕಣ; ಆವಾರ; ಆವರಣ : ಬ್ರಹ್ಮಪುರಿಯ [ದೇವಾಲ್ಯದ]ಪೌಳಿಯ ವಿ(ೞಿ)ಳದ ೨೫ ಹಸ್ತದಗಲದ ನಿವೇಶನವಂ ಪೌಳಿವಿಡಿದು ತೆಙ್ಕದೆಸೆಯ[ಲು? ಕೊ]ಟ್ಟರು (ಎಕ. XIX. ೨೫–೩೫; 1245): ಮಧ್ಯದ ಪೌಳಿಯೊಳಿಸುವುದಾ ನೃಪಗೆ ತರ್ಕಧ್ಯಯನದ ದೀರ್ಘಶಾಲೆ (ಚಕಶ. ೦೬–೩); ಅಪ್ಪರವರಿಗೆ ದೇವಾಲಯದ ಪೌಳಿಯಲ್ಲಿ ವಿಶ್ರಮಿಸಿಕೊಳ್ಳುವ ಕೃಪೆ ಮಾಡಬೇಕು (ಹುಂಚಾ. ೦೨೩). **ಪಳುಳಿ :** ೧. ಮಡು [ವಲು]ಉ[ಪ್ಪ]ರಿಗ[ೞಾ]ಗಿಲು ತೆಂಕಲು ದೇವರ ಗು[ಡಿ ಪ]ಳುಳಿ ಮೇರೆ (ಶೌಇಅ. IV. ೨೪೭–೨೨ ; 1557). **ಪವಲ್ಯ :** ೧. ಸ್ವಯಂಭುದೇವರಿಗೆ ಶಪಃಬಟ್ಟು ಈ ಪವಲ್ಯವ ಮಾಡಿಸಿದಂ (ಎಕ. III, ಶ್ರೀರಂಗ. ೩೯–೭; 1126). **ಪವಳಿ :** ೧. ದೇವಸ್ಥಾನದ ಸುತ್ತಲೂ ನಾಲ್ಕುಕಡೆಗೆ ದೊಡ್ಡ ಪವಳಿಯಿದೆ (ಗಂಗಾಶಾ. ೩); ಕೌಶಲ್ಯದ ಕಲ್ಲು ಪವಳಿ ಕುಸುರಿನ ಮಹಾದ್ವಾರ್ಯದು (ಸಿದ್ಧಕ. ೨೬–೩). ೨. ಅರಮನೆಗೆ ಹೊಂದಿ ಇದ್ದ 'ಪವಳಿ' ಯಲ್ಲಿ ಒಂದು ಸಣ್ಣ ಉದ್ಯಾನವನ್ನು ಮಾಡಿಕೊಂಡಿದ್ದಾಳೆ (ಶಾಂತಲಾ. ೯೯). **ಪವುಳಿ :** ೧. ಯಾದೇವರ ದೇವಾಲ್ಯದ ಕಳಸ ನಿಬ್ಬಾಣ ಪವುಳಿ ಬಾಗಿಲುವಾಡ . . . ಯಾ ಕಟಿದ ಮರಿಯಾದೆಯ ಪಡಿ ನಡವುದು (ಎಕ. VI. ಕಡೂರು. ೯೯–೬೮: 1201); ಪುಂಡರೆಲ್ಲರ ಕೂಡಿಕೊಂಡು . . . ಪವಳಿಯ ಹೊಱಗೆ ಮುಂಕೊಂಡಾಡು ತಿರ್ದನುಬ್ಬಿನೊಳು (ಕುಮಾರಾ. ೩೯–೩೦) : ಪವುಳಿ ಉಪ್ಪರಿಗೆ ಚಿನ್ನದ ಪಂಚಕಳಸವು ವಿವರ ಚಿತ್ರದ ಚಂದ್ರಶಾಲೆ (ಐಕಹ. ೦–೩೩).

[<ಪ್ರಾ. ಪಉಲಿ=ರಾಜಮಾರ್ಗ; ಹೆಬ್ಬಾಗಿಲು./ಹಿಂ. ಪೌಲೀ, ಪೌರೀ; ಮರಾ. ಪೌಳೀ]

**ಪೌಳಿ₂** 'ಪೌಲಿ' ನೋ.

**ಪೌಳಿಂದಿನಿ** (ನಾ). ಬೇಡರ ಹೆಂಗಸು; ಶಬರಿ : ಚಂದನದಿಂದೆ ಮಾಡಿ ದೊರಲೊಳ್ ಬಿದಿರಕ್ಕಿಯನೆಯ್ದೆ ಪೊಯ್ದು ಚಿಲ್ಲೊಂದಿದ ದಂತದೊಂದೊನಕೆಯಂ ಪಿಡಿದೊಲ್ದಳಿಸುತ್ತುಮಿರ್ದ ಪೌಳಿಂದಿನಿ . . . ಬಲ್ಲ

ಬಲ್ಲಹನೆ ಸೂವಿಯ ಸೂವಿ ದಲೇದು ಪಾಡಿದಳ್ (ಶಾರಕ್ಷ. ೦೦-೦೦೨).

[< ಸಂ. ಪುಲಿಂದೀ]

**ಪೌಳಿಗವಾಕ್ಷಿ** (ನಾ). ಗೋಡೆಯ ಮೇಲ್ಭಾಗದಲ್ಲಿ ಕೊರೆದ ಕಿಂಡಿ,– ಗವಾಕ್ಷಿ: ಪಶ್ಚಿಮದ್ವಾರವೆಂಬ ನಿಜದ್ವಾರವಟ್ಟವಂ ಮಾಡಿ ಸಪ್ತವ್ಯಸನ ಪಂಚೇಂದ್ರಿಯಂಗಳೆಂಬ ಪೌಳಿಗವಾಕ್ಷಿಯನಿಕ್ಕಿ (ಶೂನ್ಯಸಂ. ೩೦೬-೨೬).

[ಪೌಳಿ₁ + ಗವಾಕ್ಷಿ₁]

**ಪೌಳಿಗೋಡೆ** (ನಾ). ಪ್ರಾಕಾರದ ಗೋಡೆ; ಸುತ್ತುಗೋಡೆ: ವೃಕ್ಷಗಳ ಸಹಾಯದಿಂದ ಪೌಳಿಗೋಡೆಯನ್ನು ಹಾರಿ ಹೋಗು (ಶಾಜ. ೯೬): ಗರ್ಭಗುಡಿಯ ಸುತ್ತ ಕಲ್ಲಿನ ಪೌಳಿಗೋಡೆ ಇರುತ್ತದೆ (ಕೃಶಾಇ. II. ೩೦೬); ದೂರದಲ್ಲಿ ಒಂದು ದೇವಸ್ಥಾನದ ಪೌಳಿಗೋಡೆಗಳು ಕಾಣಿಸಿದುವು (ಕಂಗಾಳ್. ೫೦೬).

[ಪೌಳಿ₁ + ಗೋಡೆ]

**ಪೌಳೋಮಿ** ‘ ಪೌಲೋಮಿ ’ ನೋ.

**ಪೌಳೋಮೀಪತಿ** ‘ ಪೌಲೋಮೀಪತಿ ’ ನೋ.

**ಪ್ಯಾದೆ, ಪೇದೆ** (ನಾ). ೧. ಕಾಲಾಳು; ಕಾಲ್ನಡೆಯ ಭಟ: ಕುದುರೆ ೫೦೦ ಪ್ಯಾದೆ ೬೫೦ ಸಹಾ ಭರ್ತಿ ಮಾಡಿ (ಹೈದ. ೨೦); ಟೀಪುಸುಲ್ತಾನರು ತಮ್ಮ ಕಡೆ ಆಹಶಾಂ ಪ್ಯಾದೇರಿಗೆ ತಯಾರುಮಾಡಿ . . . ಕಳುಹಿದಲ್ಲಿ (ಕಾಶೀಂತ್ರ. ೯೨). ೨. ಪೋಲೀಸು ದಳದ ಕೆಳದರ್ಜೆಯ ಸೇವಕ: ಅವನು ನಮ್ಮೂರಿನ ಪೋಲೀಸ್ ಠಾಣೆಯಲ್ಲಿ ಪ್ಯಾದೆಯಾಗಿದ್ದಾನೆ (ರೂಢಿ). ೩. ಸೇವಕ; ಆಳು; ಜವಾನ: ನಿನ್ನೆ ಏನೇ ಎನಿಸಿಕೊಂಡಪಳು ಇಂದೊಡತಿ, ತಾನೆಂದಿನಂತೆಯೇ ಪ್ಯಾದೆ (ಗೌತುಲ್ಲ. ೦೯); ಕಾಲದ ಪ್ಯಾದೆ ಅವನ ಖ್ಯಾತಿಯ ಎಲ್ಲೆಯ ಗೂಟಗಳನ್ನು ಕೀಳುವುದಕ್ಕೆ ಬಂದಾಗ ಸಮಾಲೋಚಕನು ಈ ತಮಾಷೆಯನ್ನು ನೋಡಲು ಶಾಯಲಾಗುವುದಿಲ್ಲ (ಶಿಂರ. II. ೨೯೩). ೪. ಚದುರಂಗದಾಟದಲ್ಲಿ ಕನಿಷ್ಠ ನಡೆಯ ಕಾಯಿ: ಸ್ವಲ್ಪ ತಾಳು ಅವಲ್ಲ ಆಟ, ಧೊರೆಗೆ ಷಹ ಕೊಟ್ಟರೆ ಆ ಪ್ಯಾದೇಗೆ ದೇವರೇ ಗತಿ (ದುಂಡಿ. ೪); ಪ್ಯಾದೆಯನ್ನು ತೆಗೆದು ದೊರೆಗೆ ಶಹಾ ಕೊಡು (ರೂಢಿ). **ಪೇದೆ**: ೧. ರಾಣಿಯು ಕೋಟೆಯ ಮಹಲ್ಲಿನಲ್ಲಿಯೇ ತನ್ನ ಸಖಿಯರು, ಸಿಪಾಯಿಗಳು ಮತ್ತು ಪೇದೆಗಳೊಂದಿಗೆ ವಾಸಿಸುತ್ತಿದ್ದಳು (ಝಾರಾಶಿ. ೦೨೯) ೨. ಎಕ್ಸೈಜ್‌ಇನ್ಸ್‌ಪೆಕ್ಟರು ನಾಲ್ವರು ಪೇದೆಗಳೊಡನೆ ಹಠಾತ್ತನೆ ಪಟೇಲ ತಿಮ್ಮೇಗೌಡನ ತೋಟಕ್ಕೆ ಪೂರ್ವಭಾವಿಯಾಗಿ ಸುದ್ದಿ ಕೊಡದೆ ದಾಳಿ ಇಟ್ಟಾಗ . . . ಆ ಭಂಗಿಯ ಗಿಡವನ್ನು ಅವರಿಗೆ ತೋರಿಸಿದ (ಊರುಳ. ೬೩), ಪೇದೆಯ ಕೆಲಸದಿಂದ ಮುಕ್ತನಾದರೆ ಸಾಕಾಗಿತ್ತು ನನಗೆ (ಪಾಪೋಲಿ. ೦೦೨). ೩. ಏನು ಶಾಲೆಯ ಮಾಸ್ತರನೂ ನಾನೇ ಪೇದೆಯೂ ನಾನೇ ಎಂದು ತಿಳಿದಿರಾ? (ಶಿರಾಣ. ೦೩೬); ಒಬ್ಬ ಸಭ್ಯಗೃಹಸ್ಥನು ಪೇದೆಗಳ ಮುಂದಾಳುವಿನೊಟ್ಟಿಗೆ ದ್ರಾಕ್ಷಾರಸ ಕುಡಿಯುವುದು! ನಾಚಿಕೆಗೇಡು! (ಯೋಧರು. ೯೦).

[← ಪಾರ. ಪಿಯಾದಾ; ಹಿಂ. ಮರಾ. ಪ್ಯಾದಾ]

**ಪ್ಯಾದೆಮಾತು, ಪೇದೆಮಾತ್** (ನಾ). ೧. “(ಚದುರಂಗದಲ್ಲಿ ಎದುರಾಳಿಯ ದೊರೆಯ ಚಲನೆಗೆ ಅವಕಾಶವಿಲ್ಲವೆಂದು ಹೇಳುವ ಮಾತು) . . . ಪ್ಯಾದೆ ಮಾತು” (Check-mate ಇಂಗ್ಲಿ). ೨. (ಅಲಂ) ಸಂಪೂರ್ಣ ಪರಾಭವ; ಪೂರಾ ಸೋಲು: ಇದು ಒಳ್ಳೇ ‘ ಪ್ಯಾದೆ ಮಾತು ’ ಆಯಿತೆಂದು ಮರುದಿನ ಪುನಃ ಯಾತ್ರೆ ಹೊರಟದ್ದೇ! (ಶ್ರೀಳಿಕ. ೦೦೪); ಸುಬೇದಾರರ ಪ್ಯಾದೇಮಾತಿನ ಕಥೆಯನ್ನು . . . ಹೇಳುತ್ತೇನೆ (ಸಣ್ಣಕ. V. ೦೩). **ಪೇದೆಮಾತು**: ೧. ಇದು ಪಾರ್ಥನ ವೀರತ್ವಕ್ಕೆ ಚದುರಂಗದಾಟದೊಳಗಿನ ಕೊನೆಯ ಶಹ – ಪೇದೆಮಾತೇ – ಅಲ್ಲವೇ? (ಶರಾರ. ೬ ಕೃಷ್ಣಾರ್ಜುನ).

**ಪ್ಯಾದೆಮಾತು ಮಾಡು** = ಸೋಲಿಸು; ಪರಾಭವಗೊಳಿಸು: ನಿರ್ಮಲೆಯು ಖಂಡಿತವಾಗಿಯೂ ಔರಂಗಜೇಬನನ್ನು ಸೋಲಿಸಿದಳು; ಪ್ಯಾದೆಮಾತು ಮಾಡಿ ಕೂರಿಸಿದಳು (ಬಂಕಿಮು. ೨೩೯).

[← ಮರಾ. ಪ್ಯಾದಮಾತ್, ಪ್ಯಾದೇಮಾತ್]

**ಪ್ಯಾರಾ** (ನಾ). ಗ್ರಂಥ, ಲೇಖನ ಮೊದಲಾದುವುಗಳಲ್ಲಿ ಮೊದಲನೆಯ ಪಂಕ್ತಿಯನ್ನು ಒಳಚಾಚಿ ಪ್ರಾರಂಭಿಸುವ ವಾಕ್ಯವೃಂದ: ರಿಜಿಸ್ಟರಿಗೆ ದಾಖಲ್ಮಾಡಲ್ಪಟ್ಟಿರುವವರ್ಯಾರಾದರೂ ಕಾಣದೆ ಗೈರ್‌ಹಾಜರಾದರೆ ೬ನೇ ಪ್ಯಾರಾದಲ್ಲಿರುವ ಮೆಮೊರಾಂಡಂನ ಮೂಲಕ ಸ್ಟೇಷನ್‌ಹೌಸ್ ಆಫೀಸರವರಿಗೆ ತಿಳಿಸತಕ್ಕದ್ದು (ಗ್ರಾಕೂಳ. ೯೬); ಬಾಹ್ಯಪರೀಕ್ಷೆಯ ವರದಿ ನಾಲ್ಕು ಪುಟಗಳಷ್ಟಿದ್ದು, ಇಪ್ಪತ್ತೇಳು ಪ್ಯಾರಾಗಳನ್ನೊಳಗೊಂಡಿತ್ತು (ಪುಹರು. ೯೯).

[P ಇದು ಇಂಗ್ಲಿಷಿನ ‘Paragraph’ ಎಂಬುದರ ಸಂಕ್ಷಿಪ್ತರೂಪ]

**ಪ್ಯಾಲೆ** ‘ ಪೇಲೆ ’ ನೋ.

**ಪ್ರ**—(ಉಪ). ೧. ಮುಂಭಾಗದ, ಮುಂದಿನ, ಮುಂದೆ ಇರುವ ಎಂಬರ್ಥಗಳಲ್ಲಿ ಸಂಸ್ಕೃತಧಾತುಗಳಿಗೆ ಸೇರುವ ಒಂದು ಉಪಸರ್ಗ. ೨. ಬಹಳ, ತುಂಬ, ಅತಿಶಯವಾದ ಎಂಬರ್ಥಗಳಲ್ಲಿ ಸಂಸ್ಕೃತ ಗುಣವಾಚಕಗಳಿಗೆ ಸೇರುವ ಒಂದು ಉಪಸರ್ಗ. ೩. ಪ್ರಾರಂಭ, ಆಧಿಕ್ಯ, ಸೌಂದರ್ಯ, ಶ್ರೇಷ್ಠತೆ ಎಂಬಂಥ ಅನೇಕ ವಿಶೇಷಾರ್ಥಗಳಲ್ಲಿ ಸಂಸ್ಕೃತನಾಮಪದಗಳಿಗೆ ಸೇರುವ ಒಂದು ಉಪಸರ್ಗ.

[ಸಂ.]

**ಪ್ರಕಂದ** (ನಾ). ದೊಡ್ಡಗಾತ್ರದ ಗಡ್ಡೆ: ಆನೆಹುಲ್ಲು ಅಥವಾ ದಪ್ಪ ನೇಪಿಯರ್‌ಹುಲ್ಲು . . . ಇದಕ್ಕೆ ತೆವಳು ಆಕಾರದ ಪ್ರಕಂದಗಳಿವೆ (ಕಾಲೀಜ. I, ೬೯೩).

[ಸಂ.]

**ಪ್ರಕಂಪ** (ನಾ). ೧. ಅತಿಯಾಗಿ ನಡುಗುವಿಕೆ, – ಅದುರುವಿಕೆ. ೨. ಹೆಚ್ಚಾದ ನಡುಕ, –ಕಂಪನ: ರಮಣೀಹೃದಯದಲ್ಲಿ ನಾಯಕ ಸಂಸ್ಪರ್ಶಜನಿತ ಪ್ರಕಂಪದಂತೆ, ನದೀವಕ್ಷದಲ್ಲಿ ತರಂಗ ಏಳಲು ಮೊದಲಾಯಿತು (ಬಂಕಿಮು. ೦೯೮). ೩. ಒಂದು ನರಕದ ಹೆಸರು: ವಿಕರಾಳ ಪ್ರಕಂಪ ಪದ್ಮ ಸುವಕ್ತ್ರ ಕಾಲವೆಂಬೈದು ಮಾತ್ರಿನರಕಂಗಳಿಂ ಕೂಡಿ ಅಘೋರವೆಂಬರಸುನರಕವಿಹುದು (ತಿಲೋಕ. ೦೩೨). ೪. [ನಾಟ್ಯ] ಐದು ವಕ್ಷೋಭೇದಗಳಲ್ಲಿ ಒಂದು; P “ಎಡೆಬಿಡದೆ ನಿಟ್ಟುಸಿರು ಬಿಡುವುದು. [ಎಡೆಬಿಡದೆ ಎದೆಯನ್ನು ಮೇಲಕ್ಕೆ ಚಲಿಸುವುದು.] ಹೆದರಿಕೆ, ನಗುವುದು, ಶ್ರಮ, ಶ್ವಾಸ, ಕಾಸರೋಗ, ತಿಕ್ಕಲು, ಅಳುವುದು ಇವುಗಳನ್ನು ಅಭಿನಯಿಸುವಾಗ” (ಶಾಸ್ತ್ರಂ. ೨೩೬ ಗದ್ಯಾನುವಾದ): ಸಮಮಾಭುಗ್ನಂ ನಿರ್ಭುಗ್ನಮುಮತಿವಿಲಸತ್ಪ್ರಕಂಪಮುದ್ವಾಹಿತಮುಂ ಕ್ರಮದಿಂ ವಕ್ಷೋಭೇದಂ ಸಮನಿಸುಗುಂ ನೃತ್ತದಲ್ಲಿ (ಶಾಸ್ತ್ರಂ. ೨. ೬೩).

[ಸಂ.]

**ಪ್ರಕಂಪನ** (ಗು). ೧. ರಭಸವಾಗಿ ನಡುಗುತ್ತಿರುವ. (ನಾ). ೨. ಅತಿಯಾದ ನಡುಕ. ೩. ಗಾಳಿ; ವಾಯು. ೪. ನಡುಗಿಸುವವನು. ೩, ೪: ಪ್ರಕಂಪನಜೀವಪ್ರಕಂಪನನಪ್ಪನಗೆ ಗೋಪಾಲಯುಕ್ತನೊಳ್ ಭೇದಮಯುಕ್ತಮುಂ . . . ಅಪ್ಪುದು (ಜಗಚ. ೫-೬೦ ವ). ೫. ಒಂದು ನರಕದ ಹೆಸರು. ೬. [ಕಾವ್ಯಮೀ] ಎಂಟು ಬಗೆಯ ಸಾತ್ವಿಕಭಾವಗಳಲ್ಲಿ ಒಂದು; ನಡುಗುವುದು: ಸ್ವೇದಂ ವೈವರ್ಣ್ಯಂ ಸ್ವರಭೇದಂ ರೋಮಾಂಚನಂ ಪ್ರಕಂಪನಮಶ್ರೂದ್ಭೇದಂ ಸ್ತಂಭಂ ಲಯಮೆಂದಾದುವಿವೆಂಟುಂ ರಸಕ್ಕೆ ಸಾತ್ವಿಕಭಾವಂ (ಕಾವ್ಯಾಶ. ೬೯೬).

[ಸಂ.]

**ಪ್ರಕಂಪಿತ** (ಗು). ೧. ಹೆಚ್ಚಾಗಿ ನಡುಗಿಸಲ್ಪಟ್ಟ: ಅತುಳೋತ್ತಾಲತಿಮಿಂಗಿಳಪ್ರಬಳಪಕ್ಷೋದ್ಭೂತವಾತ ಪ್ರಕಂಪಿತಕುತ್ಕೀಲಸಮಗ್ರದುರ್ಗ್ರಹಘನಗ್ರಾಸಗ್ರಹವ್ಯಗ್ರ . . . ಕೋಲಾಹಲಕಲ್ಪಕಾಲಪ್ರಸ್ಪರ್ಧಿಯಂ ವಾರ್ಧಿಯಂ (ಕಾವ್ಯಸಾ. ೬೩). ೨. ನಡುಗಿದ; ಅಲ್ಲಾಡಿದ: ನಿಬಿಡಪ್ರಕಂಪಿತಕುಚಚ್ಯುತಕಂಚುಕಮರೇಣು ತಮ್ಮ ಕೇಸಡಿಗಳ ಕೆಂಪು ಕೆಂದಳಿರ

ಸಾಲಿಡೆ ಸಂಚರಿಪರ್ಲತಾಂಗಿಯರ್ (ರಾಜಶೇ. ೯-೯). [ಸಂ.]

**ಪ್ರಕಟ** (ಗು). ೧. ವ್ಯಕ್ತವಾದ ; ಹೊರಹೊಮ್ಮಿದ ; ಸ್ಪಷ್ಟವಾದ: ಪ್ರಕಟಾಟೋಪದೆ ಪೊಯ್ದು ಪೊಯ್ದು ಶಿಲೆಯೊಳ್ ವೃಕ್ಷಂಗಳೊಳ್ ಮೋದಿ ಮೋದಿ (ಗದಾಯು. ೩-೦೩) ; ಪ್ರಕಟಯಶರ್ಗುಣನಿಧಿಗಳ್ . . . ಗುಣಧರಭಟ್ಟಾರಕರೆ . . . ಎಮಗಭಿವಂದ್ಯರ್ (ಧರ್ಮಾಮೃ. ೦-೦೦) ; ಪ್ರಕಟಾನೇಕವಿಚಿತ್ರವಸ್ತುಗಳ ಜನ್ಮಸ್ಥಾನಕಂ ತಾಂ ವಸಂತಕಮೆಂಬಾ ವಿಷಯಂ ಪದೆಯಿಪ ವಿಷಯಂ (ಕುಸುಮಾ. ೦೫-೬೬). ೨. ಪ್ರಸಿದ್ಧವಾದ: ಪ್ರಕಟಾಂಗಿಕ ವಾಚಿಕ ಸಾತ್ವಿಕ ಮಹಾರ್ಯಂಗಳೆಂಬ ನಾಲ್ಕಭಿನಯಮುಮಂ ಸಕಲಪರೀಷಹಮೆನೆ ರಂಜಕಮಾದುವು ರಂಗಮಧ್ಯದೊಳ್ (ಆದಿಪು. ೩-೯). ೩. ಕಣ್ಣಿಗೆ ಕಾಣುವ ; ಪ್ರತ್ಯಕ್ಷ. (ನಾ). ೪. ಸ್ಪಷ್ಟತೆ ; ನಿಚ್ಚಳತೆ: "ವಿಶದಂ, ಪ್ರಕಟಂ, ಸ್ಫುಷ್ಟಂ, ಪ್ರಕಾಶಂ, ಸ್ಫುಟಂ — ಈ ೫ ಅಱಿಯಲ್ಪರ್ಪು(ಹು)ದು" (ಹಲಾಯು. ೦೨೪-೬೭). ೫. ಬಹಿರಂಗವಾದುದು ; ಸರ್ವವಿದಿತವಾದುದು : ಪ್ರಕಟಮುಮಪ್ಪಂತಿರೆ ಜಾತಕರ್ಮದೊಸಗೆಯುಮನೊಸೆದು ಮಾಡಿಸೆ (ಶಾಂತಿಪು. ೦೦-೬೭). ೬. ಪ್ರಸಿದ್ಧನಾದವನು; ಕೀರ್ತಿಶಾಲಿ : ಪ್ರಕಟರ್ ನೀತಿವಿದರ್ ನೃಪರ್ (ಕೃಷ್ಣ. ೦೩-೯೯). ೭. ಬಹಿರಂಗವಾದ ಸ್ಥಳ ; ಸಾರ್ವಜನಿಕ ಪ್ರದೇಶ : ಅರಸಿದರು ಸೀತೆಯಂ . . . ಸೋವಿದರ್ ಗೂಢಮಂ ; ಸೋವಿದರ್ ಪ್ರಕಟಮಂ (ಶ್ರೀರಾಮಾ. ೩೬೩-೦೦೩). ೮. ವಿಚಾರ ; ವಿವರ ; ಸಂಗತಿ : ಸಕಲಲೋಕಾತ್ಮಾಭಿರಾಮ ನೀನರಿಯದಿಹ ಪ್ರಕಟವೊಂದಿಲ್ಲ (ಶಶಿಶೋ. ೪-೦೪).

**ಪ್ರಕಟಂ ಮಾಡು** = ಸ್ಪಷ್ಟಪಡಿಸು: ವ್ಯಕ್ತಗೊಳಿಸು: ಪರಭಾಗಭಾವ ವಿಲಸದ್ವರ್ಣಕ್ರಮಾವೃತ್ತಿಯುಂ ಪ್ರಕಟಂ ಮಾಡಿರೆ (ಶಬ್ದಾ. ೦-೦೩೦) ; ಘ್ರಾಣೇಂದ್ರಿಯಕೌತುಕ್ಯಮಂ ಪ್ರಕಟಂ ಮಾಡಿ ನೃಪಂಗಲಂಪುಮಡದತ್ತಂ ಭೋಜಗಂಧಾಸವಂ (ಆದಿಪು. ೪-೬೯). **ಪ್ರಕಟವಾಗು** = ೧. ಹೊರಕ್ಕೆ ಬರು : ಗೋಚರಿಸು ; ಮೈದೋರು : ಒಂದು ಅರಳಿಮರವಾಗಿಯೂ ಮತ್ತೊಂದು ಆಲದ ಮರವಾಗಿಯೂ ಪ್ರಕಟವಾಗುತ್ತವೆ (ಜೀವಾತ್ಮ. ೦೬೪). ೨. ವ್ಯಕ್ತವಾಗು ; ಅರಿವಿಗೆ ಬರು : ನಾವು ಮೌನದಿಂದಿದ್ದರೆ ನಮ್ಮ ದಡ್ಡತನವು ಒಂದು ವೇಳೆ ಜನರಲ್ಲಿ ಪ್ರಕಟವಾಗದೆ ಇರಬಹುದು (ಮುಂಬಯಿ. ೪-೪೯); ಪ್ರಕಟವಾದರೂ ಅಗಡುತನ ಬಿಡಲಿಲ್ಲ (ಗಾದೆ). ೩. (ಲೇಖನ, ಪುಸ್ತಕ ಮುಂತಾದುವು) ಮುದ್ರಣ ಹೊಂದಿ ಹೊರಬರು ; ಪ್ರಕಾಶಗೊಳ್ಳು ; ಅಚ್ಚಾಗು : ಭಗವದ್ಗೀತೆಯನ್ನು ಕುರಿತು ಬರೆದ ದಿವಂಗತ ಆರ್. ಡಿ. ರಾನಡೆಯವರ ಗ್ರಂಥ ಇತ್ತೀಚೆಗೆ ಪ್ರಕಟವಾಗಿದೆ (ಧರ್ಮಗಾ. ೦೯೪). [ಸಂ.]

**ಪ್ರಕಟಂ** (ಅ). ಎಲ್ಲರಿಗೂ ತಿಳಿದಿರುವಂತೆ ; ಬಹಿರಂಗವಾಗಿ : ಪ್ರಕಟಂ ಲೋಕೋತ್ತರಲೌಕಿಕಪರಿಣತಿ ಪುನ್ನಿಗಂಗೆ ಶಾಂತೀಶ್ವರರಾಮಕಥಾ ಪ್ರಶಸ್ತಿಯಿಂದಾದ ಕೃತಿಗಳಿಂ [ಕೃತಿಯುಗಂಗಳ]ನ್ನವುಮೊಳವೇ (ಶಾಂತಿಪು. ೦೨-೬೩) ; ಪ್ರಕಟಂ ವಾರಿಧಿವೇಳೆ ಮಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ ನಿಲ್ವ ತೆಱದಿಂದೆ (ಜಗನ್ನಾ. ೦-೭೦) ; ಪ್ರಕಟಂ ತಾಂ ಹಾಸ್ಯರಸಪ್ರಕಾರಮದು ಮಾಱುತೆಱದಿನೆಸೆಗುಂ (ಶೃಂಗಾರ. ೦-೬೪). [ಸಂ.]

**ಪ್ರಕಟಂಬೆಱು** (ಕ್ರಿ). ೧. ಸ್ಪಷ್ಟವಾಗು : ಪ್ರಕಟಂಬೆತ್ತಭಿಘಾತಂಬಡೆದು ಬಿಡದೆ ತಮ್ಮಂ ಕ್ಷಮಾವೃತ್ತಿಯಿಂ ತಾಳ್ದಿ (ಕುಸುಮಾ. ೦-೯೩). ೨. ಹೆಸರುವಾಸಿಯಾಗು ; ಪ್ರಸಿದ್ಧವಾಗು : ಪ್ರಕಟಂಬೆತ್ತಿರ್ಪ ಪೊಂಗೋಂಟೆಯು ತೆನೆಯೆಸಟ್ಟಿಗಳ್ . . . ತಾನೆನಲ್ಕೊಪ್ಪುಗುಂ (ಧರ್ಮ. ೦-೨೩). [ಪ್ರಕಟ + ಪೆಱು$_1$]

**ಪ್ರಕಟಿಗೈ** (ಕ್ರಿ). ಸ್ಪಷ್ಟಪಡಿಸು; ವ್ಯಕ್ತಗೊಳಿಸು: ಅಲ್ಪವಿವ ಸಾಮಾನ್ಯವೆನೆ ಪ್ರಕಟಗೈಯುತ್ತ ತಮ್ಮತುಲಸುಖದುಃಖವೀಪ ಶಕ್ತಿ (ಮುರಲೀ. ೪೯-೩). [ಪ್ರಕಟ + ಕೈ$_1$ (< ಕೆಯ್$_1$)]

**ಪ್ರಕಟಗೊಳಿಸು** (ಕ್ರಿ). = ಪ್ರಕಟಿಗೈ : "ಆಕಾರಃ, ಇಂಗಃ, ಇಂಗಿತಂ_ಇ ಅಭಿಪ್ರಾಯವನ್ನು ಪ್ರಕಟಗೊಳಿಸುವ ಚೇಷ್ಟೆಯ ಹೆಸರುಗಳು" (ಸಿದ್ಧಾಂತ. ೩೬೦). [ಪ್ರಕಟ + ಕೊಳ್$_1$ + — ಇಸು$_3$]

**ಪ್ರಕಟಗೊಳ್ಳು** (ಕ್ರಿ). ಸ್ಪಷ್ಟವಾಗು ; ವ್ಯಕ್ತವಾಗು : ಈ ದುಷ್ಟರು ಮಾಡಿದ್ದ ಭ್ರಷ್ಟಾಚಾರಗಳೆಲ್ಲ ಈಗ ಒಂದೊಂದಾಗಿ ಪ್ರಕಟಗೊಳ್ಳುತ್ತಿವೆ (ರೂಢಿ). [ಪ್ರಕಟ + ಕೊಳ್ಳು$_1$ (< ಕೊಳ್$_1$)]

**ಪ್ರಕಟಣಾಲಯ** (ನಾ). ಪುಸ್ತಕ ಮುಂತಾದುವುಗಳನ್ನು ಮುದ್ರಿಸಿ ಪ್ರಕಾಶಪಡಿಸುವ ಕಾರ್ಯಾಲಯ : ಇಂದು ವಿವಿಧ ಪ್ರಕಟಣಾಲಯಗಳಲ್ಲಿ ಮುದ್ರಣವಾಗಿರುವ ರಾಮಾಯಣದ ಎಲ್ಲ ಪ್ರತಿಗಳಲ್ಲಿಯೂ . . . ೨೪ ಸಾವಿರ ಶ್ಲೋಕಗಳೇ ಕಾಣಬರುತ್ತವೆ (ಹಾರಾಸ್ಯ. ೬). [< ಸಂ. ಪ್ರಕಟನಾಲಯ]

**ಪ್ರಕಟಣೆ** (ನಾ). ೧. ಗ್ರಂಥ ಮುಂತಾದುವುಗಳನ್ನು ಮುದ್ರಿಸುವುದು.- ಪ್ರಕಾಶಪಡಿಸುವುದು : ಎಲ್ಲಕ್ಕಿಂತ ಮೊದಲು ಆಗಬೇಕಾಗಿರುವುದು ನಾಲ್ಕೂ ಶೂನ್ಯಸಂಪಾದನೆಗಳ ಪ್ರಕಟಣೆ (ಶೂನ್ಯಸಂ. ೦೪೯). ೨. ಯಾವುದಾದರೊಂದು ವಿಷಯವನ್ನು ಸಾರ್ವಜನಿಕರಿಗೆ ತಿಳಿಯಪಡಿಸಲು ಸರ್ಕಾರ ಅಥವಾ ಸಂಘಸಂಸ್ಥೆಗಳು ಹೊರಡಿಸುವ ತಿಳಿವಳಿಕೆಯ ಪತ್ರ ; ಘೋಷಣೆ : ಭೂಮಿಯ ಹಿಡುವಳಿಯ ಬಗ್ಗೆ ಸರ್ಕಾರವು ಒಂದು ಪ್ರಕಟಣೆಯನ್ನು ಹೊರಡಿಸಿದೆ (ರೂಢಿ). [< ಸಂ. ಪ್ರಕಟನ]

**ಪ್ರಕಟನ** (ನಾ). ೧. = ಪ್ರಕಟಣೆ ೧ : ನನ್ನ ಕಾವ್ಯ ಸದ್ಯದಲ್ಲೆ ಪ್ರಕಟನಕ್ಕೆ ಸಿದ್ಧವಾಗುತ್ತದೆ (ರೂಢಿ). ೨. = ಪ್ರಕಟಣೆ ೨ : ಮನೆಗಂದಾಯದ ವಿಷಯದಲ್ಲಿ ಸರ್ಕಾರಿ ಪ್ರಕಟನವೊಂದು ಇಂದು ಹೊರಬಿದ್ದಿದೆ (ರೂಢಿ). [ಸಂ.]

**ಪ್ರಕಟನೆ** (ನಾ). ೧. = ಪ್ರಕಟಣೆ ೧ : ಕನ್ನಡಸಾಹಿತ್ಯಪರಿಷತ್ತು ಉತ್ತಮಗ್ರಂಥಗಳ ಪ್ರಕಟನೆಯನ್ನು ಕೈಗೊಂಡಿದೆ (ರೂಢಿ). ೨. = ಪ್ರಕಟಣೆ ೨ : ರದ್ದಾದ ಸ್ಥಳಗಳಿಗೆ ಪುನರ್ ಚುನಾವಣೆ ನಡೆಯಲಿದೆ ಎಂದು ನಗರಸಭೆಯ ಅಧ್ಯಕ್ಷ ಶಿವಾಜಿರಾವರ ಪ್ರಕಟನೆ ಹೊರಬಿದ್ದಿತ್ತು (ಅಶನಾ. ೨೬೧) ; ಮಕ್ಕಳ ಜೀವನದಲ್ಲಿ ಪರಿಣಾಮಕಾರಿಯಾಗುವಂತೆ ಶಿಕ್ಷಣ ನೀಡುವ ಸಂಘಸಂಸ್ಥೆಗಳಲ್ಲಿ . . . ಜಾಹೀರಾತು, ಪ್ರಕಟನೆ, ವಸ್ತುಪ್ರದರ್ಶನ . . . ಮುಂತಾದುವು ಪ್ರಧಾನವಾದವು (ಶಿಕ್ಷಣ. ೩೩). [ಸಂ. ಪ್ರಕಟನ]

**ಪ್ರಕಟಿತ** (ಗು). ೧. ಗೋಚರವಾದ ; ವ್ಯಕ್ತಗೊಂಡ : ಪ್ರಕಟಿತವಿಳಾಸನಧಿರಾಜಕುಮಾರಂ ನಳಿನಕೇತು ಕಂಡವರಂ (ಶಾಂತಿಪು. ೯-೦೦). ೨. ಪ್ರಸಿದ್ಧವಾದ ; ಜನಜನಿತವಾದ : ಪ್ರಕಟಿತಜಿನಪ್ರವಚನಪ್ರಕಾರದೊಳ್ ಸಾರಘೋರಸಂಸಾರಂ . . . ಪಂಚವಿಧಂ (ಸುಕುಮಾ. ೬-೬). (ನಾ). ೩. ಪ್ರಕಟಗೊಳ್ಳುವಂಥದು ; ಬಹಿರಂಗವಾಗುವಂಥದು : ಕರುಳ ಕಲೆ ಪ್ರಕಟಿತವುಂಟೆ . . . ದೇವಾ (ಬಸವ. ೬೨೩). ೪. ಪ್ರಸಿದ್ಧವಾದುದು : ಸುಕುಮಾರತರಾಕ್ಷರಪದನಿಕರವಿಶಿಷ್ಟಪ್ರಯೋಗಗತಮಪ್ಪುದದಾ ಸುಕುಮಾರಮೆಂಬುದಕ್ಕುಂ ಪ್ರಕಟಿತಮದಱಾ ಪ್ರಯೋಗಮಿಾ ತೆಱನಕ್ಕುಂ (ಶಬ್ದಾ. ೨-೭೦). [ಸಂ.]

**ಪ್ರಕಟಿತೋಕ್ತಿ** (ನಾ). ಸ್ಪಷ್ಟಪಡಿಸಲ್ಪಟ್ಟ ಮಾತು.-ವಚನ : ಪ್ರಕಟಿತೋಕ್ತಿ ವಿವಿಕ್ತಕಳಾಕಳಾಪಕ[ನು]ಪಾಹಿತಸಾಹಿತ್ಯಪದ್ಯೆಯೊಳ್ (ಶಬ್ದಾ. ೩ ೨೦೯). [ಸಂ.]

**ಪ್ರಕಟಿಸು** (ಕ್ರಿ). ೧. ಪ್ರದರ್ಶಿಸು; ತೋರ್ಪಡಿಸು: ಇವಱಿಂ ಸಮ್ಯಗ್ದರ್ಶನಮುಮಶ್ಯಮುಜ್ವಳಕುಂ . . . ಅಂತದು ಕವಲ್ತು ಸಮ್ಯಕ್ಚಾರಿತ್ರಮುಂ

ಪ್ರಕಟಿಸುಗುಂ (ಆದಿಪು. ೩-೩೯) ; ಸಕಲಸಾಮರ್ಥ್ಯಮಂ ಪ್ರಕಟಿಸುವ ಸಭೆಯೊಳಗೆ ಕುಳ್ಳಿರ್ದ ಸೌಂದರನ ಯೌವನಮುಮಂ ಕಂಡು (ಕಂಚರಿ. ೩-೬೮); ಭೂಷಣಖಚಿತಮೌಕ್ತಿಕಮರೀಚಿ ಪಗಲೊಳು ಜೊನ್ನಮಂ ಪ್ರಕಟಿಸೆ (ಶಂಖ. ೬-೪). ೨. ಗ್ರಂಥ ಮೊದಲಾದುವನ್ನು ಪ್ರಕಾಶಿಸು.—ಹೊರತರು: ಕೆಲವು ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ತನ್ನ ಲೇಖನಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಕಾ. ೧೦) ; ಪತ್ರಪುಸ್ತಕವನ್ನು ಸರ್ಕಾರವೇ ಪ್ರಕಟಿಸಲಿ (ತಿಸ್ತರ. ೬೯೯). ೩. ಸರ್ವವಿದಿತವಾಗುವಂತೆ ಮಾಡು : ತಿಳಿಯಪಡಿಸು : ಅತ್ತಿಮಬ್ಬೆ . . . ದಾನಂ ಪೂಜೆ ಶೀಲಮುಪವಾಸಮೆಂಬಿವಂ ಪ್ರಕಟಿಸಿದಳ್ (ಅಜಿಪು. ೧-೩೨). ೪. ಉಂಟಾಗು; ಹುಟ್ಟು; ಉದ್ಭವಿಸು: ಪಾತಕವ ನೆನೆದನೊ ಪತಿಯೊಳಕಟಾ ಪ್ರಕಟಿಸಿತೆ ದುಷ್ಕರ್ಮಫಲವೆನಗೆ (ಕೊಕರಾ. ೩-೩-೬೪). [ಪ್ರಕಟನ + — ಇಸು₁]

**ಪ್ರಕಟೀಕರಣ** (ನಾ). ಪ್ರಕಾಶಪಡಿಸುವುದು ; ವ್ಯಕ್ತಪಡಿಸುವುದು : ತೀರ್ಥಾಖ್ಯಾನಮೆಂಬುದು ದುರಿತವಿನಾಶಕಾಂಕ್ಷಿಗಳ್ ಸಂಸಾರಸಮುದ್ರಮಂ ನೀಸಲೆಂದು ಜಿನಪತಿಮುಖಕಮಲವಿನಿರ್ಗತಧರ್ಮಸಂತತಿಯಂ ಪ್ರಕಟೀಕರಣಂಗೆಯ್ವುದು (ಶಾಪುಂಪು. ೧೩). [ಸಂ.]

**ಪ್ರಕಟೀಕೃತ** (ಗು). ಪ್ರಸಿದ್ಧವಾದ: ಪರಿಗೃಹೀತ ಸಮ್ಯಗ್ದರ್ಶನ ಪ್ರಕಟೀಕೃತ ಕ್ಷಾಯಿಕ ಸಮ್ಯಗ್ದೃಷ್ಟಿಗಳುಮಾಗಿ ಬಂದು (ಶಾಪುಂಪು. ೦೦) ; ಪ್ರಕಟೀಕೃತ ನಿರ್ಮಲವಿನುತಕೀರ್ತಿಯುಂ ಪುಣ್ಯಮೂರ್ತಿಯುಂ ಬಾಲಕನಂ ಸುಕುಮಾರನೆಂದು ಪೆಸರಿಟ್ಟು ಕಾಂತೆ ತನಯಂಗೆ ಪಾಮಕರಣಂಗೆಯ್ದಳ್ (ಸುಕುಚ. ೦೦-೩೬) : ಅದು . . . ಪ್ರಕಟೀಕೃತ ರಾಜಲೀಲೆ ದಯಾಮಲ್ತು (ಚಂದ್ರಪ್ರ. ೪-೪೨ ವ). [ಸಂ.]

**ಪ್ರಕರ** (ನಾ). ೧. ಗುಂಪು ; ಸಮೂಹ : "ನಿಕರಂ . . . ಪ್ರಕರಮನೀಕಂ ಗಣಂ ಸಮಿತಿ ಸಮುದಯಂ ಪ್ರತತಿ ಸಂತತಿ ಸಮೂಹಂ" (ಶಬ್ದಗಣ. ೦೨೬-೦) ; ಶುಕ ಶಾರಿಕಾದಿ ವಿಹಗಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು (ಕಾದಂಪೂ. ೬೪) : ಪ್ರಕರಾಂದೋಳಕಿರೀಟಪ್ರಕರಂ . . . ಆಗಿಂತು ಕರಂ ಮೆಚ್ಚುತ್ತಿರ್ದುದು ಸಕಲಸಭಾಜನಮುದಾ ಕುಮಾರನ ಮತಿಯಂ (ಕುಸುಚ. ೬-೩೨); ವಿಕಳ ದುರ್ಯೋಧನನು ನಿಗಮಪ್ರಕರಮೌಳಿಯ ಮೌಳಿಯತ್ತಲು ಸಾರ್ದು ಮಂಡಿಸಿದ (ಕುವ್ಯಾಉ. ೦-೨೪). ೨. ಹೂಗೊಂಚಲು; ಪುಷ್ಪಗುಚ್ಛ. ೩. ಒಂದು ಬಗೆಯ ಸುಗಂಧವಸ್ತು; ಅಗುರು. ೪. ನೆರವು; ಸಹಾಯ. ೫. ಬಳಕೆ; ಉಪಯೋಗ. ೬. ಗೌರವ. [ಸಂ.]

**ಪ್ರಕರಣ** (ನಾ). ೧. ಚೆನ್ನಾಗಿ ಮಾಡುವುದು. ೨. ಚೆನ್ನಾಗಿ ನಡೆಸಿಕೊಡುವುದು. ೩. ವಿವರಣೆ : ವ್ಯಾಖ್ಯಾನ. ೪. ಪ್ರಸ್ತಾವ: ಉಲ್ಲೇಖ : ಗಾಂಧೀಜಿಯವರ ಆತ್ಮಚರಿತ್ರೆಯಲ್ಲಿ ಅಗಸನ ಪ್ರಕರಣವೂ ಇದೆ (ಬೇಕಪ್ಪ. ೩೮). ೫. ಸಂದರ್ಭ ; ಸನ್ನಿವೇಶ : ದಯಮಾಡಿಟ್ಟು ಪ್ರಕರಣಕ್ಕೆ ಸಂಬಂಧಪಟ್ಟ ವಿಷಯವನ್ನು ಮಾತ್ರ ಕುರಿತು ಚರ್ಚೆಮಾಡಬೇಕಾಗಿ ವಿನಂತಿ (ರೂಢಿ). ೬. ಯಾವುದಾದರೊಂದು ನಿರ್ದಿಷ್ಟ ವಿಷಯವನ್ನು ಪ್ರತಿಪಾದಿಸುವ ಅಥವಾ ವಿವರಿಸುವ ಗ್ರಂಥಭಾಗ; ಅಧ್ಯಾಯ : ಆತನ ರಾಜನೀತಿಯೂ ಅಷ್ಟಾಗಿ ಯಶಸ್ವಿಯಾಗಲಿಲ್ಲವೆಂದೂ ಹಿಂದಿನ ಪ್ರಕರಣದಲ್ಲಿ ತಿಳಿಸಲಾಗಿದೆಯಷ್ಟೆ (ಕ್ಷರಾಜ. ೦೦); ಭಗವದ್ಗೀತೆಯನ್ನು ಕುರಿತು ಬರೆದ . . . ಗ್ರಂಥ ಇತ್ತೀಚೆಗೆ ಪ್ರಕಟವಾಗಿದೆ. 'ಟಿಳಕರ ಗೀತಾರ್ಥ'ವನ್ನು ಕುರಿತು ಒಂದು ಪ್ರಕರಣ ಅದರಲ್ಲಿದೆ (ರಮ್ಯಗಾ. ೦೯೪). ೭. (ಅಹಿತಕರವಾದ) ಘಟನೆ ; ಹಗರಣ : ರಮಾಸ ಹಿಂದೂ ಮುಂದೂ ಓಡಾಡುತ್ತಿದ್ದವರಿಗೆ ಕಡಮೆ ಇರಲಿಲ್ಲ. ಪ್ರಕರಣಗಳಾದುವು. ರಮಾ ಬೇಸತ್ತು ಅಧ್ಯಯನವನ್ನೇ ಬಿಟ್ಟು ಕೊಟ್ಟಳು (ಅಶ್ವಘೋ. ೩೪) : ಊರಿನ ಘಟಿಂಗರ ಸಂಗಡ "ಪ್ರಕರಣ" ಮಾಡಿ ಇವಳು ಮನೆಗೆ ಬಂದು ಇಲ್ಲದ ಹಗರಣ ಮಾಡಿದರೆ ನಾವು ಹೆದರಿ ಮಲಗಲಿಕ್ಕೆ ರಾತ್ರಿ ಹೆರವರ ಮನೆಗೆ ಹೋಗಬೇಕು (ಶಾಂತಕುಮಾ. ೬೨). ೮. ಅವಕಾಶ; ಆಸ್ಪದ : ಯಾವುದೋ ಪ್ರಕರಣ ಬಂತು. ದಬಾಯಿಸಿಬಿಟ್ಟೆ (ರೂಢಿ). ೯. ಪೀಠಿಕೆ : ಮುನ್ನುಡಿ ; ಉಪಕ್ರಮ. ೧೦. [ಕಾವ್ಯಮೀ] ದಶರೂಪಕಗಳಲ್ಲಿ ಒಂದು ; ಕಾಲ್ಪನಿಕಕಥಾಂಶವನ್ನು ಹೊಂದಿರುವ, ಧೀರಶಾಂತನಾಯಕನುಳ್ಳ, ಇತರ ಲಕ್ಷಣಗಳಲ್ಲಿ ನಾಟಕವನ್ನು ಹೋಲುವ (ಮೃಚ್ಛಕಟಿಕ, ಮಾಲತೀಮಾಧವ ಮುಂತಾದ) ದೃಶ್ಯಕಾವ್ಯ : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರವೀಥಿ, ಅಂಕ, ಈಹಾಮೃಗ ಎಂದು ರೂಪಕಗಳು ಹತ್ತು ವಿಧ (ಸಂನಾಟ. ೨೯) : ಪ್ರಕರಣ. ಉದಾ:—ಮೃಚ್ಛಕಟಿಕಾ, ಮಾಲತೀಮಾಧವ (ಕ್ರಿಪಾಪ. ೨೦೪). ೧೧. [ತತ್ತ್ವಶಾ] ಪ್ರಮೇಯವನ್ನು ವಿಮರ್ಶಿಸುವ ವಾಕ್ಯಸಮೂಹ: ಪ್ರಕರಣವೆಂದರೆ ಯಾವುದಾದರೂ ಒಂದು ಪ್ರಮೇಯವನ್ನು ನಿರೂಪಿಸಲು ಹೊರಟ ವಾಕ್ಯಸಮೂಹ (ಭಾಕತ್ತ್ವ. ೨೬). ೧೨. [ನ್ಯಾಯಶಾ] ಒಂದು ನಾನಾರ್ಥವಾಚಕವಾದ ಪದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಗೊತ್ತುಮಾಡಲು ಇರುವ ಸಂದರ್ಭ : 'ಸೈಂಧವ ಬೇಕು' ಎಂದು ಊಟಮಾಡುವ ಸಂದರ್ಭದಲ್ಲಿ ಹೇಳಿದರೆ 'ಉಪ್ಪು, ಕುದುರೆ' ಎಂಬ ಎರಡು ಅರ್ಥವುಳ್ಳ 'ಸೈಂಧವ' ಪದವು ಸಂದರ್ಭದಿಂದ 'ಉಪ್ಪು' ಎಂಬ ಅರ್ಥವನ್ನು ಮಾತ್ರ ಕೊಡುತ್ತದೆ: ಆತ್ಮಶಬ್ದವು . . . ಪ್ರಕರಣ, ಉಪಪದ ಮುಂತಾದ ಯಾವುದಾದರೊಂದು ಕಾರಣವಿದ್ದ ಹೊರತು ಅದು ಇಂಥ ಅರ್ಥದಲ್ಲಿಯೇ ಪ್ರಯುಕ್ತವಾಗಿದೆಯೆಂದು ತೀರ್ಮಾನ ಮಾಡುವುದಾಗಲಾರದು (ಬ್ರಿಹ್ಯಶಾ. ೯೩). [ಸಂ.]

**ಪ್ರಕರಣಿ** (ನಾ). = ಪ್ರಕರಣ ೧೦ : ನಾಟಕೆಯಲ್ಲಿ ವರ್ತಕಾದಿಗಳು ನಾಯಕರಾಗಿಯೂ ನಾಯಕನ ವಂಶದಲ್ಲಿ ಹುಟ್ಟಿದವಳೇ ನಾಯಿಕೆಯಾಗಿಯೂ ಇದ್ದರೆ ಅದೇ ಪ್ರಕರಣಿ (ಸಂನಾಟ. ೩೩). [ಸಂ. ಪ್ರಕರಣೀ]

**ಪ್ರಕರಿ** (ನಾ). [ಕಾವ್ಯಮೀ] ದೃಶ್ಯಕಾವ್ಯಗಳಲ್ಲಿ ಬರುವ ದೃಶ್ಯವನ್ನು ರಮಣೀಯವನ್ನಾಗಿ ಮಾಡಲು ಸಾಧಕವಾದ ಐದು ಅರ್ಥಪ್ರಕೃತಿಗಳಲ್ಲಿ ನಾಲ್ಕನೆಯದು ; ಮುಂದೆ ಬರುವ ಘಟನೆಗೆ ಪೂರಕವಾಗಿರುವಂತೆ ನಾಟಕದಲ್ಲಿ ಅಳವಡಿಸಿರುವ ಪ್ರಾಸಂಗಿಕವೃತ್ತಾಂತ : ಪ್ರಾಸಂಗಿಕವೆಂದರೆ, ಮುಖ್ಯಕಥೆಗೆ ಅಂಗವಾಗಿ ಮಧ್ಯೆ ಬರತಕ್ಕ ಕಥೆ . . . ಪ್ರಾಸಂಗಿಕವು ದೊಡ್ಡದಾಗಿದ್ದರೆ ಅದಕ್ಕೆ 'ಪತಾಕಾ' ಎಂದೂ ಸ್ವಲ್ಪವಾಗಿದ್ದರೆ . . . 'ಪ್ರಕರೀ'ಯೆಂದೂ ಹೆಸರು (ಕ್ರಿಪಾಪ. ೨೦೩). [ಸಂ. ಪ್ರಕರೀ]

**ಪ್ರಕರೀನಾಯಕ** (ನಾ). [ಕಾವ್ಯಮೀ] ನಾಟಕಾದಿಗಳ ಮಧ್ಯೆ ಬರುವ ಪ್ರಸಂಗದ ಪ್ರಧಾನವ್ಯಕ್ತಿ : ನಾಯಕ, ಪ್ರತಿನಾಯಕ, ಪತಾಕಾನಾಯಕ, ಪ್ರಕರೀನಾಯಕ, ಹೀಗೆ ಬೇರೆಬೇರೆ ಪಾತ್ರಗಳಲ್ಲಿ ಬೇರೆಬೇರೆ ರಸಗಳಿರುವಂತೆ (ಕ್ರಿಪಾಕೋ. ೧೬೩ ಅಡಿ). [ಸಂ.]

**ಪ್ರಕರ್ಷ** (ಗು). ೧. ಶ್ರೇಷ್ಠವಾದ : ಅದು . . . ಪ್ರಕರ್ಷಾನೇಕ ಪರ್ಷನುಗತಮಾಗಿಯುಂ ಅಚಪಳಾಚರಣಪರಿಣತಮಲ್ತು (ಚಂದ್ರಪ್ರ. ೪-೪೨ ವ). (ನಾ). ೨. ಶ್ರೇಷ್ಠತೆ: ಅತಿಶಯತೆ. ೩. ಉತ್ಕರ್ಷ : ಆಧಿಕ್ಯ : ಹೆಚ್ಚಳ : ಸತ್ಯಮೆಂಬುದು ಅತ್ಯಂತ ಪ್ರಕರ್ಷದಿಂ ಲೋಭನಸ್ವಭಾವವಮಂ ನಿವೃತ್ತಿಗೆಯ್ದು ನಡೆವುದು (ಧರ್ಮಾಮೃ. ೬-೨೩); ಕರಮೊಸೆದು ನೋಡಿ ದಶಕಂಧರನಂ ಹರ್ಷಪ್ರಕರ್ಷದಿಂದೆನ್ನಂ ಖೇಚರಪತಿಗೆ ಕೊಟ್ಟನಾಂ ದಶಶಿರನ ಬೆಸಂಬಿಡದು ತಾಗಿದೆಂ ಲಕ್ಷ್ಮಣನಂ (ಪಂಪರಾಮಾ. ೦೪-೬೬): ಎಲೆ ಕೃಷ್ಣ ನಿನ್ನ ರೂಪಮಂ ಸ್ವಭಾವಪ್ರತಿಷ್ಠೆಯುಂ ಪ್ರಭಾವಪ್ರಕರ್ಷಮಂ

. . . ನೋಡಲ್ ನೀಂ ಪರದ್ವೈತತಳಿಸ್ವರೂಪನಾಗಿ ತೋರ್ಪೆ (ಜಗ. ೪-೬೬ ಪ): ೯ ಅಧ್ಯಾಯಿಕೆಯಲ್ಲಿ ವಿಕಟಬಂಧದ ಪ್ರಕರ್ಷವೂ ಉಂಟು (ಕೃಷ್ಣಾ.ಕೋ. ೦೯೭). ೪. ಶಕ್ತಿ; ಬಲ. [ಸಂ.]

**ಪ್ರಕಲಿತ, ಪ್ರಕಳಿತ** (ಗು). ೧. ಚೆನ್ನಾಗಿ ಸೇರಿಕೊಂಡಿರುವ, –ಕೂಡಿಕೊಂಡಿರುವ: ಪರಮಮಹೇಶ್ವರಚರಣವಾರಿರುಹರೇಣುಪ್ರಕಲಿತವಿಭಾಸ್ವರಲಲಾಟನಭವಭಕ್ತಿಸ್ಥಳಕಿರೀಟನನು ... ಕೊಂಡಾಡಿ (ಶಸಪ. ೭೬–೬೭). ೨. ಜೋಡಿಸಿದ; ಸೇರಿಸಿದ. **ಪ್ರಕಳಿತ:** (ನಾ). ೩. ವಾಸಕ್ಕೆ ಉಪಯುಕ್ತವಾದ ಸಾಮಗ್ರಿಗಳಿಂದ ಸುಸಜ್ಜಿತವಾದುದು: ಪೂರೊಳಗೆ ಗುರುಗಳಿಗಿರಲು ಪ್ರಕಳಿತವಪ್ಪ ಮನೆ ೧ ಯನ್ನಿನಿತುಮಂ ಸರ್ವ್ವಬಾಧ ಪರಿಹಾರವಾಗಿ ಬಿಟ್ಟರು (ಎಕ. IX-1, ೨೪೭–೨೬ ; 1147). [ಸಂ.]

**ಪ್ರಕಳಿತ** 'ಪ್ರಕಲಿತ' ನೋ.

**ಪ್ರಕಾಂಡ** (ಗು). ೧. ದೊಡ್ಡದಾದ; ಭಾರಿಯಾದ; ಬೃಹದಾಕಾರವುಳ್ಳ: ಅವುಗಳ ಹಿಂದೆ ಐನೂರು ಪ್ರಕಾಂಡ ದೇಹವುಳ್ಳ ಮಹಾಬಲವುಳ್ಳ ಆನೆಗಳು ಗಂಭೀರವಾದ ನಡಿಗೆಯಿಂದ ಬಂದು ಪ್ರಾಸಾದಕ್ಕೆ ಎಳಭಾಗದಲ್ಲಿ ನಿಂತವು (ಕೋಚಿಪ. ೯೩); ಅವರಿಬ್ಬರಿಗೂ ಹಿಂಬದಿಯು ರಕ್ಷೆಯಾಗಿಸ್ತು ಆ ಪ್ರಕಾಂಡ ವೃಕ್ಷದ ದಿಂಡು (ಕುಶಿಪು. ೨೯೯). ೨. ಶ್ರೇಷ್ಠವಾದ; ಉತ್ತಮವಾದ; ಅತಿಶಯವಾದ. (ನಾ). ೩. ದೊಡ್ಡದು; ಬೃಹತ್ತಾದುದು: ಸ್ನಾನ, ವ್ರತ, ಉಪವಾಸಗಳ ಆಕರ್ಮಕಾಂಡವು ಪ್ರಕಾಂಡವಾಗಿ ಬೆಳೆಯುದಿದ್ದರೆ ಅವರು ಬದುಕುವ ಬಗೆ ಹೇಗೆ! (೨ತ್ತ್ವ. ೬೬೬) ೪. ಉತ್ತಮವಾದುದು: ಒಳ್ಳೆಯದು. ೫. ಒಳ್ಳೆಯವನು; ಉತ್ತಮನಾದವನು: "ಪ್ರಕಾಂಡಃ, ಉದ್ಘಃ—ಈ ೨ ಒಳ್ಳಿದಂ" (ಹಲಾಯು. ೩೨–೨೨೩). ೬. (ಉತ್ತರಪದವಾಗಿ ಬಂದಾಗ) ತನ್ನ ಜಾತಿಯಲ್ಲಿ ಅಥವಾ ವರ್ಗದಲ್ಲಿ ಬಹಳ ಮೇಲಾದವನು, —ಶ್ರೇಷ್ಠನಾದವನು: ಪರ್ವತಶರಮುಂ ಖಂಡಿಸಿದನಕಾಂಡತಟಿತ್ಕಾಂಡಾಭವಿಪ್ರಕಾಂಡಕಾಂಡದೆ ಕೃಷ್ಣಂ (ಜಗಂ. ೦೩–೬೭); ಸರ್ವಜ್ಞನು ಕನ್ನಡಿಗರ 'ತಿರುವಳ್ಳುವರ್' ಎಂದರು ಪಂಡಿತಪ್ರಕಾಂಡ ಎ. ಆರ್. ಕೃಷ್ಣಶಾಸ್ತ್ರಿಗಳು (ಕಕಕ. ೬೭೦). ೭. ಮರದಲ್ಲಿ ಬೇರಿನಿಂದ ಕೊಂಬೆಯವರೆಗೆ ಇರುವ ಭಾಗ; ಕಾಂಡ: "ಮರದ ಹನೆ (ಪಣೆ?)ಯಿಂ ಕೆಟಗೆ ಪ್ರಕಾಂಡಮೆಂಬುದು" (ಹಲಾಯು. ೩೦–೨೪). ೮. ಕೊಂಬೆ; ಗೆಲ್ಲು; ರೆಂಬೆ: "ಆ ಮರನ ಕವಲೊತ್ತು ಪ್ರಕಾಂಡಮೆನಿಸಿಕ್ಕು" (ಶುಂಗಾ. ೩೨–೩). ೯. ಒಂದು ಬಗೆಯ ಸರ. ೧೦. ಮೊಳಕೈಯ ಮೇಲುಭಾಗ: "ಪ್ರಕಾಂಡಮೆಂಬುದು ಮೊ(ಟ)ಣಕೈಯಿಂದ ಮೇಗಣ ಭಾಗ" (ಹಲಾಯು. ೬೬–೬೬೯); "ಆ ಮೊಟಕೈಯ ಮೇಲು ಪ್ರಕಾಂಡಮೆನಿಸಿಕ್ಕು" (ಶುಂಗಾ. ೯೩–೯). ೧೧. ತಾವರೆಯ ದಂಟು; ಮೃಣಾಳ. ೧೨. ಕೈಬೆರಳು. ೧೩. ಕಾಲದ ಒಂದು ಗಣನೆ. ೧೪. ಕಿರಣ. ೧೫. ಒಂದು ಬಗೆಯ ಮರ: "ಕಿರಣ ಮೃಣಾಳ ಕಾಲ ತರುಭೇದ ಕರಾಂಗುಳಿಗಳ್ ಪ್ರಕಾಂಡಮಕ್ಕು" (ಅಭಿಧಾ. ೬೦). [ಸಂ.]

**ಪ್ರಕಾಂಡಕ** (ಗು). ೧. ಶ್ರೇಷ್ಠವಾದ. (ನಾ). ೨. ರೆಂಬೆ; ಟೊಂಗೆ. ೩. ಒಂದು ಬಗೆಯ ಸರ; "ಮಧ್ಯದಲ್ಲಿ ಕ್ರಮವಾಗಿ ದೊಡ್ಡ ಐದು ಮುತ್ತುಗಳಿರುವ ಹಾರ" (ಅಂತ. ೬೦೨೪): ಪ್ರತ್ಯೇಕಶೀರ್ಷಕೋಪಶೀರ್ಷಕಾವಘಾಟಕಪ್ರಕಾಂಡಕತರಲತರಬಂಧೋಪವದವಾಚಕಸಮೋತಂಗಳಾಗಿ (ಅಂತ. ೬–೩೪ ಪ). [ಸಂ.]

**ಪ್ರಕಾಮ** (ನಾ). ೧. ಹೆಚ್ಚಾದ ಅಪೇಕ್ಷೆ; ಅತ್ಯಾಸೆ. ೨. ಹೆಚ್ಚಾದ ವಿಷಯಾಭಿಲಾಷೆ; ಭೋಗಾಸಕ್ತಿ. ೩. ಆನಂದ; ಹಿಗ್ಗು. [ಸಂ.]

**ಪ್ರಕಾಮಂ** (ಅ). ೧. ಅಧಿಕವಾಗಿ; ಹೇರಳವಾಗಿ; ಯಥೇಚ್ಛವಾಗಿ: "ಕಾಮಂ, ಪ್ರಕಾಮಂ, ಪರ್ಯಾಪ್ತಂ, ನಿಕಾಂತಂ, ಭೃಶಂ, ಅತ್ಯರ್ಥಂ, ಅತಿಮಾರ್ಯಾದಂ, ಅತಿವೇಳಂ—ಈ ೮ ಹಿರಿದಾಗಿರ್ದುದು" (ಹಲಾಯು. ೦೦೯–೩೩); ಸಂತಮಿರೆಂದು ಪೂಣ್ದು ಕಾಮಂ ಪ್ರಕಾಮಂ ತನ್ನ ಪುಸಿವಡೆ ಬೆರಸು ತಪೋವನದತ್ತ ಕ್ಕೈತರುತುಮಿರ್ದಂ (ರಾಮಾಶ್ವ. ೩೩–೦೯). ೨. ಇಷ್ಟಬಂದಂತೆ; ಸ್ವೇಚ್ಛೆಯಾಗಿ. ೩. ಸಂತೋಷವಾಗಿ. ೪. ತೃಪ್ತಿಯಾಗುವಂತೆ. [ಸಂ.]

**ಪ್ರಕಾರ** (ನಾ). ೧. ರೀತಿ; ವಿಧಾನ; ಬಗೆ: ಸುಕುಮಾರನೆಂಬ ಪೆಸರೀ ಸುಕುಮಾರಂಗೀ ಸಮಸ್ತಧಾರಿಣಿಯೊಳ್ ಸಾರ್ಥಕಮಾದುದೆಂದು ನಾನಾಪ್ರಕಾರದಿಂದಂ ಪ್ರಶಂಸೆಗೆಯ್ವಂ ಭೂಪಂ (ಸುಕುಚ. ೦೦–೩೬); ಲ್ಯೂಸಿ ಭಾರತದಲ್ಲಿ ಕಾಣದ ಒಂದು ನವೀನಪ್ರಕಾರವನ್ನು ವಿವರಿಸುತ್ತಾಳೆ (ಸಮಜೀ. ೦೬ ೬೦೪). ೨. ಸಮಾನತೆ; ಸಾಮ್ಯ; ಸಾದೃಶ್ಯ: "ಪ್ರಕಾರಃ—೧. ಬೇರೆಯಾಗಿರುವಿಕೆ. ೨. ಹೋಲ್ಕೆ" (ಸಿದ್ಧಾಂ. ೪೦೨); ಅಂತಿಂತುಂತೆಂತೆಂಬಿವು ತಾಂ ಪ್ರಕಾರಕಾರ್ಥಂಗಳ್ (ಶಬ್ದ. ೩೨೦). ೩. ವಿಶಿಷ್ಟತೆ; ವೈಶಿಷ್ಟ್ಯ. ೪. ಭೇದ; ವ್ಯತ್ಯಾಸ. ೫. [ತತ್ತ್ವಶಾ] ಗುಣವಿಶಿಷ್ಟವಾದ ವಸ್ತುವಿನ ಗುಣ,—ಧರ್ಮ: ಈ ಜಗತ್ತು, ಪರಮಾತ್ಮನಿಗೆ ಶರೀರವಾಗಿ ಅಥವಾ ಪ್ರಕಾರವಾಗಿರುವುದರಿಂದ ಉಬ್ಬರ–ಇಳಿತಗಳು, ಸುಖ–ದುಃಖಗಳು . . . ನಡೆಯುತ್ತ ಇದ್ದರೂ ಪರಮಾತ್ಮನಿಗೆ ಲೇಪವಿಲ್ಲ (ಭಾರತ. ೨೬೦). [ಸಂ.]

**ಪ್ರಕಾರವಾಚಕ** (ನಾ). [ವ್ಯಾಕ] ನಾಮಪದದ ಬಗೆಗಳಲ್ಲಿ ಒಂದು: ಇಂಥದು ಇಂಥವನು ಎಂಬ ಶಬ್ದಗಳು ನಾವು ಹೆಸರು ಹೇಳುವ ವಸ್ತುವಿನ ಗುಣ ಯಾವುದೇ ಆಗಿರಲಿ, ಅದರ ಪ್ರಕಾರವನ್ನು (ಎಂದರೆ ರೀತಿಯನ್ನು) ಹೇಳುತ್ತವೆ. ಅಂಥದು ಎಂಬ ಶಬ್ದವೂ ಇದೇ ಬಗೆಯ ಗುಣವಾಚಕ. (ಇವನ್ನು ಪ್ರಕಾರವಾಚಕಗಳೆಂದು ಕರೆಯುವುದುಂಟು) (ಹೊಸಗ. ೨೬). [ಸಂ.]

**ಪ್ರಕಾರಾಂತರ** (ನಾ). ೧. ಬೇರೆ ರೀತಿ; ಬೇರೆ ವಿಧಾನ: "ಆವರೆ ನಿಮಗೆ ಮನಸ್ಸಿಲ್ಲದಿದ್ದರೆ ತೋಂದರೆ ತೆಗೆದುಕೊಳ್ಳಬೇಕಾಗಿಲ್ಲ" ಎಂದವಳು ಪ್ರಕಾರಾಂತರವಾಗಿ ಮಾತು ಕೂಡಿಸಿದಳು (ಭುವನ. ೨೨೦). ೨. ಪ್ರತ್ಯೇಕ; ಅನ್ಯ: ಆಂಜನೇಯನೂ ಅವನ ಕಡೆಯ ಲಕ್ಷಗಟ್ಟಲೆ ವಾನರರೆಲ್ಲರೂ . . . ಮಾನವರೆ ಹೊರತು ಪ್ರಕಾರಾಂತರವಾಗಿರಲಾರರು (ಭಾರತ. ೮೯). [ಸಂ.]

**ಪ್ರಕಾರ್ಯ** (ನಾ). ಕೆಲಸ; ಕೃತ್ಯ: ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದಾದರೂ ವಿಧಿಯಿಂದ . . . ಯಾವುವಾದರೂ ಪ್ರಕಾರ್ಯಗಳನ್ನು ರಾಷ್ಟ್ರಪತಿಯವರಿಗೆ ವರ್ಗಾಯಿಸುವಂತೆ ಭಾವಿಸತಕ್ಕದ್ದಲ್ಲ (ಭಾರಾಸ. ೨೬). [ಸಂ.]

**ಪ್ರಕಾಶ** (ಗು). ೧. ಹೊಳೆಯುವ; ಪ್ರಕಾಶಿಸುವ. ೨. ಕಣ್ಣಿಗೆ ಕಾಣುವ; ತೋರುವ. ೩. ಸ್ಫುಟವಾದ; ನಿಚ್ಚಳವಾದ. ೪. ಹೆಸರುವಾಸಿಯಾದ; ಪ್ರಸಿದ್ಧವಾದ. ೫. ಬಹಿರಂಗವಾದ. ೬. ಅರಳಿದ. (ನಾ). ೭. ಬೆಳಕು; ಹೊಳಪು; ಕಾಂತಿ: ದೇವಿ ನೀಂ . . . ಪ್ರಕಾಶ ಗರ್ಭಪ್ರಭೆಯಂತೆಯುಂ . . . ಮಹತ್ತ್ವಮಂ ಪಡೆದೆ (ಜಗಂ. ೨–೯೬೪). ೮. ಬಿಸಿಲು; ಸೂರ್ಯಾತಪ: "ಪ್ರಕಾಶಃ, ದ್ಯೋತಃ, ಆತಪಃ—೩ ಬಿಸಿಲಿನ ಹೆಸರು" (ಸಿದ್ಧಾಂ. ೩೩). ೯. ಕಣ್ಣಿಗೆ ಕಾಣುವುದು; ತೋರುವುದು: "ವಿಶದಃ, ಪ್ರಕಟಂ, ಸ್ಪಷ್ಟಂ, ಪ್ರಕಾಶಂ, ಸ್ಫುಟಂ—೫ ಅಖಿಯಲ್ಪರ್ಪು(ಹು)ದು" (ಹಲಾಯು. ೦೨೯–೬೬); ಲೋಕದಲ್ಲಿ ಸಕಲವಸ್ತುಗಳಲ್ಲೂ ಅಸ್ತಿತ್ವ, ಪ್ರಕಾಶ, ಇಷ್ಟತ್ವ, ನಾಮ, ರೂಪ—ಈ ೫ ಅಂಶಗಳು ವ್ಯವಹರಿಸಲ್ಪಡುವುವು (ಹಿಂದವಸಾ. ೨೨೨); ಅನಂತರ ನವೀನ ನಾಗರಿಕತೆಯೊಂದರ ಇರವು ಪ್ರಕಾಶಕ್ಕೆ ಬಂದಿತು

(ಪ್ರಾಚೀ. ೨೨). ೧೦. ಕೀರ್ತಿ: ಪ್ರಸಿದ್ಧಿ. ೧೧. ಸಾಟಿ: ಸಮಾನ: "ಸದೃಕ್ . . . ಪ್ರಕಾಶಂ, ಪ್ರತಿಮಂ, ಪ್ರಕಾರಂ, ತುಲ್ಯಂ, ಸಮಂ, ಸನ್ನಿಭಂ—ಈ ೧೧ ಸರಿ" (ಕರಾಯು. ೧೦೩-೪). ೧೨. ಬಯಲು. ೧೩. ಗ್ರಂಥದ ಪರಿಚ್ಛೇದ. ೧೪. ಅರಿವು; ಜ್ಞಾನ. ೧೫. ಒಂದು ಬಗೆಯ ಲೋಹ; ಕಂಚು. ೧೬. [ನಾಟ್ಯ] ಎಲ್ಲರಿಗೂ ಕೇಳಿಸು ವಂತೆ ಪಾತ್ರಗಳು ಹೇಳುವ ಮಾತು: ೫ ಅಭಿನಯಕಾಲದಲ್ಲಿ ಪಾತ್ರಗಳು ಮನಸ್ಸಿನಲ್ಲಿ ಹೇಳುವ ಮಾತು (ಸ್ವಗತ. ಆತ್ಮಗತ), ಎಲ್ಲರಿಗೂ ಕೇಳುವಂಥದು (ಸರ್ವಶ್ರಾವ್ಯ, ಪ್ರಕಾಶ), ಕೆಲವರಿಗೆ ಮಾತ್ರ ಕೇಳಿಸಬೇಕಾದುದು (ನಿಯತಶ್ರಾವ್ಯ)—ಎಂಬ ಮೂರು ಬಗೆಯ ಕಥಾಂಶ(ವಾಕ್ಯ)ಗಳಿವೆ: ದೇವಿ . . . (ಪ್ರಕಾಶವಾಗಿ, ವಾಸುದೇವನಂ ನೋಡಿ) . . . ಆಲ್ಲಿಂದು ಪೋಪೆಂ (ಏಕ್ರಗೋ. ೩೬); ರಾಜಂ . . . (ಪ್ರಕಾಶವಾಗಿ) ಎಲೌ ಪೂಜ್ಯಳೆ . . . ನಾನು ಆಶ್ರಮ ವಾಸಿಗಳ ನಿರ್ವಿಘ್ನವಾದ ಕ್ರಿಯೆಯನ್ನು ತಿಳಿಯುವುದಕ್ಕೆ ಈ ಧರ್ಮಾ ರಣ್ಯಕ್ಕೆ ಬಂದಿರುವೆನು (ಶಾಕುಂತ. ೦೩-೦೪); ಪ್ರಕಾಶ—ಎಲ್ಲರೂ ಕೇಳಬಹು ದಾದದ್ದು (ಶ್ರಾವ್ಯ) (ಸಂಶಾಟ. ೦೩). ೧೭. [ಜೈನ] ಭಿನ್ನವಾದ ಬಾಹ್ಯಪದಾರ್ಥಗಳ ಜ್ಞಾನ,-ಅರಿವು: ಪ್ರಕಾಶವೆಂದರೆ ವ್ಯವಹಾರಕ್ಕೆ ಬೇಕಾದ ಯೋಗ್ಯತೆ . . . ಜ್ಞಾನಕ್ಕೆ ವಿಚಿತ್ರಶಕ್ತಿಯೂ ವಿಚಿತ್ರವೇಗವೂ ಇರುವುದರಿಂದ ಅಂತರ ಬಾಹ್ಯವಸ್ತುಗಳ ಸಂಬಂಧವೇ ಪ್ರಕಾಶವೆಂದು ತಿಳಿಯಬೇಕು (ಹಿಂದಸಾ. ೯೩). ೧೮. [ಶೈವ] ಪರಮಶಿವನಲ್ಲಿರುವ ಒಂದು ಅಸಾಧಾರಣಧರ್ಮ: ಪರಮಶಿವನೇ ಎಲ್ಲಾ ಸೃಷ್ಟಿಗೂ ಕಾರಣ ನಾದವನು . . . ಪ್ರಕಾಶ ವಿಮರ್ಶಮಯನು. ಪ್ರಕಾಶವೆಂದರೆ ತನ್ನ ಶಕ್ತಿಪ್ರಸಾರ (ಕಾಶಿದ. ೨೦೦). [ಸಂ.]

**ಪ್ರಕಾಶಕ** (ಗು). ೧. ಬೆಳಕು ಬೀರುವ; ಹೊಳೆಯುವ: ದೀಪದ ಪ್ರಕಾಶಕಶಕ್ತಿಯನ್ನು (illuminating Power) ತಿಳಿಯಬೇಕಾದರೆ . . . ಅವುಗಳಿಂದುಂಟಾದ ಪ್ರಕಾಶಸಾಂದ್ರತೆಗಳನ್ನು ಹೋಲಿಸಬೇಕು (ಭೌತಿ. ೦೩೬). ೨. ಬಹಿರಂಗಗೊಳಿಸುವ; ಹೊರಗೆಡಹುವ. ೩. ವ್ಯಕ್ತ ಪಡಿಸುವ. ೪. ವಿಶದೀಕರಿಸುವ. ೫. ಹೆಸರುವಾಸಿಯಾದ; ಪ್ರಸಿದ್ಧ ವಾದ. (ನಾ). ೬. ಸೂರ್ಯ. ೭. ಗ್ರಂಥಗಳನ್ನು ಪ್ರಕಟಿಸುವ ವನು: ಕ್ರಮೇಣ ಪ್ರಕಾಶನೋದ್ಯಮದ ಮೂರು ಮುಖಗಳಾದ ಮುದ್ರಕ, ಪ್ರಕಾಶಕ, ಪುಸ್ತಕವ್ಯಾಪಾರಿ ಬೇರೆ ಬೇರೆಯಾದರು (ಕಕೋ. XI. ೩೦೬). ೮. ವ್ಯಾಖ್ಯಾನಕಾರ. ೯. ಸಂಶೋಧಕ. ೧೦. ಒಂದು ಬಗೆಯ ಖನಿಜ; ರಂಜಕ: ಸುಣ್ಣ, ಕಬ್ಬಿಣ, ಪ್ರಕಾಶಕ ಮುಂತಾದ ಖನಿಜಗಳು . . . ಎಲುಬು, ಕೂದಲು ಮುಂತಾದ ಅವಯವಗಳನ್ನು ಪೋಷಿಸುತ್ತದೆ (ಋುಂಶಾಹು. ೫-೦೭೩). [ಸಂ.]

**ಪ್ರಕಾಶಗೊಳಿಸು** (ಕ್ರಿ). ೧. ಬೆಳಕುಂಟಾಗುವಂತೆ ಮಾಡು: ಅವಳು ದೀಪದ ಕುಡಿಯನ್ನು ಮುಂದೂಡಿ ಪ್ರಕಾಶಗೊಳಿಸಿದಳು (ಕೂ೩). ೨. ಹೊರಹೊಮ್ಮಿಸು: ಪ್ರಬೋಧನಂ. ಅನುಬೋಧಃ—೨ ಸುಗಂಧ ದ್ರವ್ಯಗಳಲ್ಲಿ ಅಡಗಿಕೊಂಡಿರುವ ಪರಿಮಳಾದಿಗಳನ್ನು ಪ್ರಕಾಶಗೊಳಿಸುವ ತೈಲಾದ್ಯುತ್ತೇಜಕ ಸಾಮಗ್ರಿಯ ಹೆಸರು (ಸಿದ್ಧಾಂತಿ. ೨೦೬).

[ಪ್ರಕಾಶ + ಕೊಳ್$_1$ + — ಇಸು$_3$]

**ಪ್ರಕಾಶಗೊಳ್ಳು** (ಕ್ರಿ). ೧. ಬೆಳಕಾಗು: ಹಿಂದೆ ಮೈಸೂರು ಮಹಾರಾಜರು ಸಿಂಹಾಸನವನ್ನು ಏರುತ್ತಿದ್ದಂತೆಯೇ ಇಡೀ ಅರಮನೆಯು ವಿದ್ಯುದ್ದೀಪ ಗಳಿಂದ ಪ್ರಕಾಶಗೊಳ್ಳುತ್ತಿತ್ತು (ಲೂ೩). ೨. ಬಹಿರಂಗವಾಗು; ಎಲ್ಲ ರಿಗೂ ತಿಳಿಯುವಂತಾಗು: ಅವನ ಭ್ರಷ್ಟಾಚಾರಗಳೆಲ್ಲ ಈಗ ಪ್ರಕಾಶ ಗೊಳ್ಳುತ್ತಿವೆ (ಲೂ೩). [ಪ್ರಕಾಶ + ಕೊಳ್ಳು$_1$ (<ಕೊಳ್$_1$)]

**ಪ್ರಕಾಶನ** (ನಾ). ೧. ಹೊಳೆಯುವಿಕೆ; ಪ್ರಕಾಶಿಸುವಿಕೆ: ಆದಿತ್ಯನು ಸಕಲ ಜಗತ್ತನ್ನೂ ತನ್ನ ಪ್ರಕಾಶನಾದಿಕರ್ಮಗಳಿಂದ ಸರ್ವತ್ರ ನೋಡುತ್ತಾನೆ (ಋುಗ್ಭಾ. ೨೩೬). ೨. ಗ್ರಂಥ, ಪತ್ರಿಕೆ ಮುಂತಾದುವುಗಳ ಪ್ರಕಟನೆ: ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ತನ್ನದೇ ಆದ ಪ್ರಕಾಶನ ಉದ್ಯಮವನ್ನು ನಿರ್ವಹಿಸುತ್ತಿದೆ (ಕಕೋ. XI. ೩೦೪); ಈ ಸುಲಭಸಾಹಿತ್ಯದ ದಿನಗಳಲ್ಲಿ, ಪ್ರಕಾಶನಕಾರ್ಯದಲ್ಲಿ ಧ್ಯೇಯವಾದಿತ್ವವೆಂದರೆ ಅದೊಂದು ಮರೀಚಿಕೆಯಾಗಿದೆ (ಬೀಸೀ. VI. ಪ್ರಕಾಶಕರ ಹು೩). ೩. ಪುಸ್ತಕ ಮೊದಲಾದುವನ್ನು ಪ್ರಕಟಿಸುವ ಸಂಸ್ಥೆ: ಭಾರತೀಯಜ್ಞಾನಪೀಠ ಪ್ರಕಾಶನವು ಅನೇಕ ಪಾಂಡಿತ್ಯಪೂರ್ಣಗ್ರಂಥಗಳನ್ನು ಪ್ರಕಟಿಸಿದೆ (ಕೂ೩). [ಸಂ.]

**ಪ್ರಕಾಶಪಡಿಸು** (ಕ್ರಿ). ಹೊರಗೆಡಹು; ಬಹಿರಂಗಗೊಳಿಸು: ಭಾರತದ ಇತಿಹಾಸ ಮಹಾಪುರುಷರ ಆವಿರ್ಭಾವವನ್ನು ಪ್ರಕಾಶಪಡಿಸುತ್ತಿದೆ (ಹುಕ್ಕಾರ. ೦೦೫ ೩೬೦೪); ಅಗತ್ಯಕಾಲ ಪ್ರಾಪ್ತವಾದಾಗ ದೇವತೆಗಳು ತಮ್ಮಿಂದ ರಕ್ಷಿತವಾದ ರಹಸ್ಯವನ್ನು ಲೋಕಕ್ಕೆ ಪ್ರಕಾಶಪಡಿಸುತ್ತಾರೆ (ಕಹಂಶಾ. ೯).

[ಪ್ರಕಾಶ + ಪಡಿಸು]

**ಪ್ರಕಾಶಿತ** (ಗು). ೧. ಪ್ರಕಾಶಗೊಳಿಸಿದ; ಬೆಳಗಿಸಿದ. ೨. ಪ್ರಸಿದ್ಧ ಪಡಿಸಿದ. ೩. ಪ್ರಕಾಶಗೊಂಡ. ೪. ಬಹಿರಂಗವಾದ; ಎಲ್ಲರಿಗೂ ತಿಳಿದ. ೫. ತೋರಿಸಿದ; ಪ್ರದರ್ಶಿಸಿದ. [ಸಂ.]

**ಪ್ರಕಾಶಿಸು** (ಕ್ರಿ). ೧. ಹೊಳೆ; ಬೆಳಗು: ಕನೋತಿ, ಕನುತೇ= ಪ್ರಕಾಶಿಸಿದಪು (ಶಾಕಶ. ೨೯೦). ೨. ವ್ಯಕ್ತವಾಗು; ಪ್ರಕಟವಾಗು: ಸ್ಫುರತ್=ಪ್ರಕಾಶಿಸುವ. ಅನುಕೃತಿಗಂ—ಅನುಕರಣಶಬ್ದಕ್ಕೆಯುಂ (ಕಜಾಚ. ೬೦ ೩೬೪); ನಿನ್ನಲ್ಲಿ ಪ್ರಶ್ನಾರೂಪವಾಗಿ, ನನ್ನಲ್ಲಿ ಉತ್ತರ ರೂಪವಾಗಿ ಪ್ರಕಾಶಿಸುವುದೆಲ್ಲವೂ ಒಂದೇ ಶಕ್ತಿಯ ಕ್ರಿಯೆ (ಕಹಂಶಾ. ೪೪).

[ಪ್ರಕಾಶನ + — ಇಸು$_1$]

**ಪ್ರಕೀರ್ಣ** (ಗು). ೧. ತುಂಬಿದ; ಕಿಕ್ಕಿರಿದ: ಅದಟ ಪೊಟಪೊಟಲ ವಿತಾನ ಕನಕಕೃತಕಗಿರಿಗಳಿಂ ಫಳಪ್ರಕೀರ್ಣತರುಗಳಿಂ (ಶಂಶಭಾ.೦-೫೯ ೯೧೪); ಮರುದುದ್ಧೂತಪಯಃಪ್ರಕೀರ್ಣಕಣಲಾಜಂ ಮೇಲೆ ಸಾಲಿಟ್ಟು (ಶಾಶೀ. ೦೦-೬೨). ೨. ಹರಡಿಕೊಂಡಿರುವ; ಕ್ರಮವಾಗಿರದ; ಅಸ್ತವ್ಯಸ್ತಗೊಂಡ. ೩. ಮಿಶ್ರಗೊಳಿಸಿದ; ಬೆರಸಿದ. ೪. ನಾನಾವಿಷಯಗಳನ್ನು ಸೇರಿಸಿ ರಚಿಸಿದ. ೫. ಎಸೆದ. ೬. ಸಂಬಂಧವಿಲ್ಲದ; ಅಸಂಗತವಾದ. ೭. ಸಡಿಲವಾದ; ವಿರಳವಾದ. ೮. ಅಲ್ಲಾಡುತ್ತಿರುವ; ಅಲುಗಾಡುತ್ತಿರುವ. (ನಾ). ೯. ತುಂಬಿ ರುವಿಕೆ; ಭರ್ತಿಯಾಗಿರುವಿಕೆ: ಎಸೆವ ಕೇತನಾನೀಕಪ್ರಕೀರ್ಣದೊಳಾತು ತೋಱುವ (ಶಶಕ. ೬-೨೦). ೧೦. (ವಸ್ತುವು) ತುಂಬಿಕೊಂಡಿರುವುದು; ವ್ಯಾಪ್ತವಾಗಿರುವುದು: ವಿಚಿತ್ರಜಿನೇಂದ್ರಪ್ರತಿಕೃತಿಪ್ರಕೀರ್ಣಮುಂ . . . ಆಗಿ . . . ಪೊಬಂದಗುಂದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ (ಆದಿಪು. ೦-೪೯ ವ). ೧೧. ಹೊಂದಾಣಿಕೆಯಿಲ್ಲದ ವಿವಿಧ ವಿಷಯಗಳಿಂದ ಕೂಡಿದ ಗ್ರಂಥಭಾಗ: ವ್ಯವಹಾರಕಾಂಡದಲ್ಲಿ . . . ಸ್ತ್ರೀಸಂಗ್ರಹಣ, ಪ್ರಕೀರ್ಣ ಎಂಬ ೨೫ ಪ್ರಕರಣಗಳಿವೆ (ಶಾರದ. ೬೨); ೧೯ನೆಯ ಭಾಗ. ಪ್ರಕೀರ್ಣ (ಶಾಶಾಶ. ೨೦೪). [ಸಂ.]

**ಪ್ರಕೀರ್ಣಕ** (ಗು). ೧. ಹರಡಿಕೊಂಡಿರುವ; ಚೆಲ್ಲಾಪಿಲ್ಲಿಯಾಗಿರುವ. (ನಾ). ೨. ಮುಖ್ಯವಿಷಯಗಳನ್ನು ಹೇಳಿದ ಮೇಲೆ ಉಳಿದಿರುವ ಭಿನ್ನವಾದ ಸಣ್ಣಸಣ್ಣ ವಿಷಯಗಳು ಮತ್ತು ಅವುಗಳನ್ನು ವಿವರಿ ಸುವ ಗ್ರಂಥಭಾಗ; ಸಂಕೀರ್ಣಪ್ರಕರಣ: ಮುನ್ನ ಪೇಟದೆಯುಂ ಪೇಟ್ದರ್ಥಂಗಳಂ ವಿಶ್ಲೇಷಿಸಿ ಪೇಟ್ವುದು ಪ್ರಕೀರ್ಣಕಮೆಂಬುದು ತಾತ್ಪರ್ಯಂ (ಶಿಚಿವಾ. ೬೨-೦). ೩. (ದೇವರು, ರಾಜ ಮೊದಲಾದವರಿಗೆ ಬೀಸುವ) ಚಾಮರ: "ಚಾಮರಂ, ಪ್ರಕೀರ್ಣಕಂ—ಈ ೨ ಸೀಗುರಿ" (ಹಣಾಯು.

೬೦-೨೬೯). "ಸುತ್ತ ಕೆದಱುವ ಚಾಮರಂ ಪ್ರಕೀರ್ಣಕವಾಕ್ಕುಂ" (ಶಬಂಗಶಾ. ೬೯-೪). ೪. [ಜೈನ] ಪ್ರಮಾಣಗಳಲ್ಲಿ ಒಂದು: ಭಾಗಂಬೋಗದೆ ಉಬ್ಬಿದಕ್ಕರಂಗಳೆಲ್ಲಂ ಪ್ರಕೀರ್ಣಕ ಪ್ರಮಾಣಮಕ್ಕುಂ (ಕಕ್ಷ್ಕ್ರಿ. ೬೬). ೫. ಪ್ರಮಾಣಗ್ರಂಥಭಾಗಗಳಲ್ಲಿ ಒಂದು: ಕೇವಲ ಒಂದೇ ಸಭೆಯಲ್ಲಿ ಬರೆಯಲ್ಪಟ್ಟ—ಇನ್ನೊಂದು ಸಭೆಯಿಂದ ಆ ವಿಷಯಕ್ಕೆ ಉಲ್ಲೇಖ ಸಿಕ್ಕದೆ ಹೋಗುವ—ಸಿದ್ಧಾಂತಗಳನ್ನು 'ಪ್ರಕೀರ್ಣಕ'ಗಳಲ್ಲಿ ಉಲ್ಲೇಖಿಸಿದರು (ಕೃವಶ. ೧೬೬). ೬. ಒಂದು ನರಕದ ಹೆಸರು: ಆ ಬಿಲಂಗಳುಮಿಂದ್ರಕ ಶ್ರೇಢೀಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ (ಅಜಿಪು. ೩-೬೩ ವ); ಆ ನರಕಬಿಲಂಗಳೆಲ್ಲಮೆಣ್ಬತ್ತುನಾಲ್ಕುಲಕ್ಷಪರಿಪ್ರಮಾಣಮಾಗಿಯುಮಿಂದ್ರಕ ಶ್ರೇಣೀಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ (ಸುಕುಮಾ. ೦೦-೪೦ ವ). ೭. ಮೂರುಬಗೆಯ ವಿಮಾನಗಳಲ್ಲಿ ಒಂದು; ಶ್ರೇಣೀಬದ್ಧ ವಿಮಾನಗಳ ಮಧ್ಯದಲ್ಲಿ, ಹೂವನ್ನು ಎರಚಿದಂತೆ ಚೆಲ್ಲಾಪಿಲ್ಲಿಯಾಗಿರುವ ವಿಮಾನ: ಅಲ್ಲಿ ಸ್ವರ್ಗಮೆಂಬನಂ ಸೌಧರ್ಮೇಶಾನಾದಿಗಳ ವರವಿಮಾನಂಗಳಿಂದ್ರಕಶ್ರೇಣೀಬದ್ಧಪ್ರಕೀರ್ಣಕಂಗಳೆಂದು ಮೂದೆಱ (ಚಂದ್ರಪ್ರ. ೩-೩೨ ವ). ೮. ದೇವತೆಗಳ ಒಂದು ವರ್ಗ; ಗ್ರಾಮಾಂತರ ಹಾಗೂ ಪಟ್ಟಣಗಳಲ್ಲಿ ಪ್ರಜೆಗಳಂತೆ ವಾಸಿಸುವ ವರ್ಗ: ಸೈನಿಕ ದೇವತೆಗಳು ಅನೀಕರೆನಿಸುವರು. ಪ್ರಜೆಗಳಂತಿರುವವರು ಪ್ರಕೀರ್ಣಕರು (ಕೃವಶ. ೪೪). ೯. ಜ್ಯೋತಿರ್ಲೋಕದ ಜ್ಯೋತಿಗಳಲ್ಲಿ ಒಂದು ಭೇದ: ಮಧ್ಯಮಲೋಕಪ್ರತಿಬದ್ಧಮಪ್ಪ ಚಂದ್ರಾದಿತ್ಯಗ್ರಹನಕ್ಷತ್ರ ತಾರಕಾ ಪ್ರಕೀರ್ಣಕವಿಕಲ್ಪಜ್ಯೋತಿರ್ಗಣಾಲಂಕೃತಮಾಗಿರ್ದ ದಶೋತ್ತರಶತ ಯೋಜನವಿಸ್ತಾರಬಹಳತೆಯೊಳಂ (ಅಜಿಪು. ೦೦-೨೨ ವ). [ಸಂ.]

**ಪ್ರಕೀರ್ತನ** (ನಾ). ೧. ಸಾರುವುದು; ತಿಳಿಯಪಡಿಸುವುದು. ೨. ಹೊಗಳಿಕೆ; ಕೊಂಡಾಟ. [ಸಂ.]

**ಪ್ರಕೀರ್ತಿತ** (ಗು). ೧. ಸಾರಿದ: ಘೋಷಿಸಿದ. ೨. ಪ್ರಸಿದ್ಧಪಡಿಸಿದ. (ನಾ). ೩. ಹೊಗಳಿಕೆಗೆ ಪಾತ್ರವಾದುದು: ಖ್ಯಾತಿಹೊಂದಿದುದು: ನಾನಾಹೆಸರುಗಳಿಂದ ಪ್ರಕೀರ್ತಿತವಾಗಿರುವ ಎರಡನೆಯ ಯುಗವು ಅತ್ಯಂತ ಚೇತೋಹಾರಿಯಾಗಿರುತ್ತದೆ (ಕೂಶ್ಕಳು. ೦ ಹಿಕ್ಕಳ). [ಸಂ.]

**ಪ್ರಕೀರ್ಯ** (ಗು). ೧. ಎರಚಿದ; ಚೆಲ್ಲಾಪಿಲ್ಲಿಯಾಗಿರುವ. (ನಾ). ೨. ಒಂದು ಬಗೆಯ ಗಿಡ; ತಮಸಿ: "ಪ್ರಕೀರ್ಯಃ, ಪೂತಿಕರಜಃ, ಪೂತಿಕಃ, ಕಲಿಕಾರಕಃ—೪ ತಪಸೀಗಿಡದ ಹೆಸರುಗಳು" (ಸಿದ್ಧಾಂತಿ. ೭೨೩). [ಸಂ.]

**ಪ್ರಕುಪಿತ** (ಗು). ೧. ಹೆಚ್ಚಾಗಿ ಕೋಪಗೊಂಡ; ಕೆರಳಿದ: ಪ್ರಕುಪಿತ ಮೃಗಪತಿ ಶಿಶುಸನ್ನಿಕಾಶರತಿವಿಕಟಭೀಷಣಭ್ರೂಭಂಗರ್ ನಕುಲ ಸಹದೇವರ್ (ಪಂಭಾ. ೬-೮); ಅಟಕಟ ನೊಂದಳೆತ್ತಿರೆ ಸುಕುಮಾರಿಯನೆನುತಮಿನಿತು ಕೋಂಕಿಂ ನುಡಿದಂ ಪ್ರಕುಪಿತ [ಪಾಠಾಂ. ಪ್ರಕಟಿತ, ಪ್ರಕುಟಿಲ] ಚಿತ್ತಂ ಭೂನಾಯಕಂ (ಪುಶೂಜ. ೨-೬೮). (ನಾ). ೨. ಹೆಚ್ಚಾದ ಕೋಪ: ಪ್ರಕುಪಿತದಿಂ ತೆಗೆದಿಸೆ ಮಸ್ತಕವಂ ಕರಿ ನೊಂದು ತಿರುಗೆ (ಗಂಳ. ೦-೦೦೦). [ಸಂ.]

**ಪ್ರಕೃತ** (ಗು). ೧. ಚೆನ್ನಾಗಿ ಮಾಡಿದ,—ನೆರವೇರಿಸಿದ. ೨. ಪ್ರಾರಂಭಿಸಿದ; ಉಪಕ್ರಮಿಸಿದ; ತೊಡಗಿದ. ೩. ಪ್ರಕರಣಕ್ಕೆ ಸಂಬಂಧಿಸಿದ; ಸಂದರ್ಭಾನುಸಾರವಾದ; ಪ್ರಸ್ತುತ: ಪ್ರಕೃತ ಸ್ವದ್ರವ್ಯಕ್ಷೇತ್ರಕಾಲ ಭಾವಾಶ್ರಯಂಗಳಿಂ ಪುದ್ಗಲವೃತ್ತಕಮಂ ಮರ್ಯಾದಾಪೂರ್ವಕಮಾಗಿ ಪುದದವಧಿಯೆಂಬ ಪೆಸರ್ವಡೆದಿರ್ಕುಂ (ಚಂದ್ರಪ್ರ. ೦೪-೩೬). ೪. ಮುಖ್ಯವಾದ: ಪ್ರಧಾನವಾದ. ೫. ಬದಲಾವಣೆ ಹೊಂದದಿರುವ: ನೈಜವಾದ. (ನಾ). ೬. ಈಗಿನ ಪ್ರಕರಣ: ಸದ್ಯದ ವಿಷಯ: ಈಗ ಪ್ರಕೃತಕ್ಕೆ ಸಂಬಂಧಿಸಿದಂತೆ ಮಾತನಾಡೋಣ (ಬೂ). ೭. ನಿಜ: ಸತ್ಯ. ೮. [ಕಾವ್ಯಮೀ] ಉಪಮಾಲಂಕಾರದಲ್ಲಿ ಹೋಲಿಸಲ್ಪಡುವ ವಸ್ತು: ಮುಖ, ರಾಜ ಮೊದಲಾದುವು: ವರ್ಣ್ಯ: ಉಪಮೇಯ. [ಸಂ.]

**ಪ್ರಕೃತತ** (ಅ). ಸದ್ಯಕ್ಕೆ: ಈಗ್ಗೆ ಸಂಬಂಧಿಸಿದಂತೆ: ವಿವಿಧದೇಶಗಳ ನಾಣ್ಯಗಳ ಪರಸ್ಪರಬಾಂಧವ್ಯ 'ಪ್ರಕೃತ' ಹೇಗಿದೆಯೆಂದು ಈ ಕೆಳಗೆ ಕೊಟ್ಟಿದೆ (ಶಾಅಶ್ರ. III. ೦೩೩೩). [ಸಂ.]

**ಪ್ರಕೃತತುಲ್ಯಯೋಗಿತೆ** (ನಾ). [ಕಾವ್ಯಮೀ] ವರ್ಣಿತವಾದ ಹಲವಾರು ವಸ್ತುಗಳಿಗೆ ಗುಣರೂಪವಾದ ಅಥವಾ ಕ್ರಿಯಾರೂಪವಾದ ಒಂದೇ ಧರ್ಮವನ್ನು ಅನ್ವಯಿಸಿ ವರ್ಣಿಸುವುದು: ವರ್ಣ್ಯಂಗಳಾದನೇಕ ವಸ್ತುಗಳೊಳ್ ಗುಣಕ್ರಿಯಾರೂಪೈಕಧರ್ಮಾನ್ವಯಮಂ ಪೇಳೆ ಪ್ರಕೃತ ತುಲ್ಯಯೋಗಿತೆಯೆಂದುಂ ಅವರ್ಣ್ಯಂಗಳಾದನೇಕವಸ್ತುಗಳೊಳ್ ಅದಂ ಪೇಳೆ ಅಪ್ರಕೃತತುಲ್ಯಯೋಗಿತೆಯೆಂದುಂ ತುಲ್ಯಯೋಗಿತಾಲಂಕಾರ ಮಿರ್ತೆರಂ (ಶಶಕ. ೬೮ ವೃತ್ತಿ). [ಸಂ. ಪ್ರಕೃತತುಲ್ಯಯೋಗಿತಾ]

**ಪ್ರಕೃತಿ** (ನಾ). ೧. ಯಾವುದಾದರೂ ಒಂದು ವಸ್ತುವಿನ ಅಥವಾ ಪ್ರಾಣಿಯ ನಿಜಸ್ವರೂಪ,—ಮೂಲಸ್ವರೂಪ: ಅರಸನಾತನ ಮನುಷ್ಯಾತೀತಮಪ್ಪ ಪ್ರಕೃತಿಯಂ ಕಂಡು (ಚಾಂಪು. ೯-೦೨೬ ವ); ಧರಣಿಯಿಂದುದ್ಭವಿಸಿತೋಷಧಿಯೋಷಧಿಗಳಿಂದವತರಣಮನ್ನಾದಿಪುರುಷ ಪ್ರಕೃತಿ ವಿಕೃತಿಗಳ್ (ಸುಜ್ಯಾಉ. ೬೦೨. ೪-೬); ಪ್ರಕೃತಿ ವಿಕೃತಿಗಳಿಲ್ಲದಂದು . . . ಅಖಂಡೇಶ್ವರಾ ನಿಮ್ಮ ನೀಪಱಿಯದೆ ಅನಂತಕಾಲವಿರ್ದಿರಂದು (ಅಖಂಡೇ. ೨-೪). ೨. ಪ್ರತಿಯೊಬ್ಬ ವ್ಯಕ್ತಿ ಅಥವಾ ಪ್ರತಿಯೊಂದು ವಸ್ತುವಿನ ಸಹಜಗುಣ,—ಸ್ವಭಾವ,—ಮನೋಧರ್ಮ: ಇರದೊಯ್ಯದಾ ತನ್ನಿಚ್ಛೆಗೆ ವರೆಯುವ್ವಸದಂದು ಪುರುಷನಂ ಪ್ರಕೃತಿ (ಶಾರಂಪು. ೩೩೩); ಪ್ರಕೃತಿ ಪ್ರೋದ್ಭವಮಲ್ತು ಜೈನರುಸಿರ್ವಂತಾರಯ್ಯೆ ಲೋಕಂ ಸಕರ್ತೃಕಮೆಂಬಾ ಮತಮಂ ನಿರಾಕರಿಪರ್ಪೋರ್ (ಶಾಕ್ಯಶು. ೪-೬೬): ಈ ದೃಷ್ಟಿಯಿಂದ ನನ್ನ ಮತ್ತು ಅವರ ಪ್ರಕೃತಿಗಳು ಭಿನ್ನಭಿನ್ನವಾಗಿರಬಹುದು (ಜೀವಾಕ್ಕ. ೪೮). ೩. ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರುಬಗೆಯ ಮೂಲಗುಣಗಳು. ೪. ಪಂಚಭೂತಗಳು. ೫. ಮಾನವನಿಂದ ನಿರ್ಮಿತವಾಗದ ಸೃಷ್ಟಿ; ನೈಸರ್ಗಿಕಸೃಷ್ಟಿ: ಪ್ರಕೃತಿಯ ಪ್ರಭಾವವನ್ನೂ ಅದು ಎಷ್ಟು ಮುಖ್ಯವೆಂಬುದನ್ನೂ ಮೇಲೆ ಕೊಟ್ಟ ಉದಾಹರಣೆಗಳು ನಿಮಗೆ ತಿಳಿಸುತ್ತವೆ (ಕೂಚ. ೦೪೦): ವಿಶ್ವದ ಚಟುವಟಿಕೆಗಳೆಲ್ಲ ಪ್ರಕೃತಿಯ ಆಜ್ಞೆಯ ಮೇರೆಗೆ ಸಾಗುತ್ತವೆ (ಧರ್ಮಗಾ. ೦೩೨). ೬. ಜನನೇಂದ್ರಿಯ: "ಪ್ರಕೃತಿಯೊಳು ಶೈವಮೂರ್ತಿಯೊಳು ಲಿಂಗವುಕ್ಕುಂ" (ಶಬಂಗಶಾ. ೦೫೦-೫೦). ೭. ಮಂತ್ರಿ; ಸಚಿವ: ಅರಸನನುಮತದಿನೊಂದು ಯಕ್ಷಪ್ರತಿಮೆಯಂ ಮಾಡಿ ಪೌರುಷಪುರಾಧಿಪತ್ಯಮಂ ಪ್ರಕೃತಿಗಳೆಲ್ಲಮಿರ್ದು ಕೊಟ್ಟೊಡೆ (ಶಾಪುಕ್ಕ. ೦೬೮). ೮. ಪುರಜನ: ಪ್ರಜಾವರ್ಗ: ಆಗಳಾ ಕಂಸಕೃತವಿಕೃತಿಯಿಂ ಪ್ರಕೃತಿಕ್ಷೋಭಮಾಗೆ (ಜಗಪು. ೬-೭೦ ವ); ನೀವ್ ಕೇಳಿ ಪೌರಪ್ರಕೃತಿಗಳು ಕರಿತುರಗವಾಹಕರು (ಶಿಶಬಸ. ೦೦-೩೦.೨೬); ಪ್ರಕೃತಿಹಿತಾರ್ಥಂ ಕ್ಷಿತಿಪಾಲಕರುದ್ಯೋಗಿಸುಗೆ (ಶಾಸಂಪ. ೦೦೬-೦೯೮). ೯. ಹೆಂಗಸು; ಸ್ತ್ರೀ. ೧೦. ಕಾರ್ಯ. ೧೧. ಕಾರಣ: "ಪತ್ತನಜನಂಗಳೊಳು ಕಾರ್ಯದೊಳು ಕಾರಣದೊಳುತ್ತಮದ ಸಚಿವನೊಳು ಸತ್ವಾದಿ ಗುಣವಿಪ್ಪ ಚಿತ್ತದೊಳು ನಿಜದೊಳು ಸ್ವರೂಪದೊಳು ಪ್ರಕೃತಿಯೆಂದೆಂಬಾಭಿಧಾನಮಕ್ಕುಂ" (ಶಬಂಗಶಾ. ೦೪೬.೩೬). ೧೨. ಶಿಲ್ಪಿ ಮೊದಲಾದ ಕುಶಲಕರ್ಮಿಗಳು: "ಶಿಲ್ಪೀ, ಕಾರುಃ, ಪ್ರಕೃತಿಃ, —ಈ ೩ ಪಂಚಕಾರುಕರ್" (ಹಲಾಯು. ೯೬-೪೩೯). ೧೩. ನಿಜ: ಸತ್ಯ. ೧೪. ನಿಯಮ: ನಿಬಂಧನೆ; ಕಟ್ಟಳೆ. ೧೫. ಕೋಪ, ದುಃಖ ಮೊದಲಾದ ಮನೋಭಾವನೆಗಳನ್ನು ಹತೋಟಿಯಲ್ಲಿಟ್ಟು

ಕೊಳ್ಳುವುದು. ೧೬. ಕಂದಾಯ ; ತೆರಿಗೆ : (?). ೧೭. ಮುಖ್ಯವಾದುದು ; ಶ್ರೇಷ್ಠವಾದುದು : "ಪ್ರಕೃತಿಯಲ್ಲಿಯುಂ ಪ್ರಧಾನಮೆಂಬುದು" (ಶಬ್ದಮ. ೦೪೩-೦೬). ೧೮. ಆದಿ ಮತ್ತು ಅಂತ್ಯ. ೧೯. ಬಿಡುವುದು ; ತ್ಯಾಗ. ೨೦. ನಡತೆ : ನಡವಳಿಕೆ. ೨೧. ಸಮೂಹ : "ನಿಜದೊಳ್ ಕಾರಣದೊಳ್ ಗುಣತ್ರಯದೊಳುಂ ಸಪ್ತಾಂಗದೊಳ್ ಚಿತ್ತದೊಳ್ ಪ್ರಜದೊಳ್ ಕಾರ್ಯದೊಳಾದಿಯಂತ್ಯದೊಳ್ ಛಂದೋಭೇದದೊಳ್ ಸ್ತ್ರೀಯರೊಳ್ ಶ್ವಜದೊಳ್ ತನ್ನ ಸ್ವರೂಪದೊಳ್ ಜನರೊಳುಂ ಚಾರಿತ್ರದೊಳ್ ಮುಖ್ಯದೊಳ್ ರಜದೊಳ್ಕ್ರಾಂ ಪ್ರಕೃತ್ಯಾಖ್ಯೆ" (ನಾನಾರ. ೧೦೨). ೨೨. [ವೈದ್ಯಶಾ] ಶರೀರಸ್ಥಿತಿ ; ದೇಹಧರ್ಮ : ಪ್ರಕೃತಿಯಂತೆಂದೊಡೆ — ವಾತಪ್ರಕೃತಿ, ಪಿತ್ತಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂದು ಪ್ರಕೃತಿಯು ನಾಲ್ಕು ತೆರನಾಗಿರುವುದು (ಸಲ್ಯ. ೦೬) ; ಜೋಳದ ನುಚ್ಚು ತಿಂದರೆ ಪ್ರಕೃತಿ ಮತ್ತಷ್ಟು ಕೆಡುತ್ತದೆ (ತ್ರಿ. ೬) ; ಸಾಹೇಬರ ಪ್ರಕೃತಿ ಮಂದಭೂತ ಇದ್ದರೂ ಸೊರಗಿರುವರೆಂಬ ಸುಳ್ಳು ಸಾಂತ್ವನವನ್ನು ಕೊತರೆ ನಿಂತರೆ ಗಾಯತ್ರಿ ಮಾಡಿಕೊಂಡವು (ದೀಕಹ. II. ೨೩೯). ೨೩. [ವ್ಯಾಕ] ನಾಮಪದ ಕ್ರಿಯಾಪದಗಳಲ್ಲಿ ಪ್ರತ್ಯಯಾಂಶವನ್ನು ಬೇರ್ಪಡಿಸಿದರೆ ಉಳಿಯುವ ಮೂಲರೂಪ ; ಪ್ರಾತಿಪದಿಕ: ಪ್ರಕೃತಿಗಳಂ ಧಾತ್ವರ್ಥದ ವಿಕಲ್ಪದಿಂದ ಬಿದು ಸಮಬೆಕೊಳ್ವುದು (ಶಾಬ್ದ್ಯ. ೯೨೦) ; ಪದದರ್ಥಮಂ ವಿಭಾಗಿಸುವುದರಿಂದೆ ವಿಭಕ್ತಿಯಂತದಂ ಪ್ರತ್ಯಯಮೆಂಬುದು ತತ್ಪ್ರತ್ಯಯದಿಂ ಪೂರ್ವದೊಳಿರ್ಪುದಂ ಪ್ರಕೃತಿ (ಶಬ್ದ. ೩೮) ; ಒಂದು ಶಬ್ದದ ಮೂಲರೂಪಕ್ಕೆ 'ಪ್ರಕೃತಿ' ಎಂದು ಹೆಸರು (ಕೃಶಬ್ದ. ೦೯). ೨೪. [ಛಂದ] ಇಪ್ಪತ್ತಾರು ಬಗೆಯ ವರ್ಣಛಂದಸ್ಸುಗಳಲ್ಲಿ ಇಪ್ಪತ್ತೊಂದನೆಯದು ; ಪ್ರತಿಸಾಲಿನಲ್ಲಿಯೂ ಇಪ್ಪತ್ತೊಂದು ಅಕ್ಷರಗಳಿರುವ ಒಂದು ಛಂದಸ್ಸು : "ಅತಿಧೃತಿ ಕೃತಿ ಪ್ರಕೃತಿಯಾಕೃತಿ ವಿಕೃತಿ . . . ಉತ್ಕೃತಿಗಳೆಂದಿನಿವುಪ್ಪತ್ತಾಱು ಛಂದಂಗಳಕ್ಕುಂ" (ಛಂದೋಂ. ೦೦೬-೦೯) ; ಅಲ್ಲಿ ಉಕ್ತ ಅತ್ಯುಕ್ತ . . . ಪ್ರಕೃತಿ ಆಕೃತಿ ವಿಕೃತಿ ಸಂಕೃತಿ ಅತಿಕೃತಿ ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೦-೯೬ ವ). ೨೫. [ತತ್ತ್ವಶಾ] ಸಾಂಖ್ಯಮತದಂತೆ ಪ್ರಪಂಚಕ್ಕೆ ಮೂಲಕಾರಣವಾದ, ಸತ್ತ್ವ, ರಜಸ್ಸು ಮತ್ತು ತಮೋಗುಣಗಳ ಸಾಮ್ಯಾವಸ್ಥೆ ; ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಮೊದಲನೆಯದು ; ಪುರುಷನಿಂದ ಭಿನ್ನವಾದುದು : ಆ ಪ್ರಕೃತಿ ಪುರುಷರ ವರ್ಗವೊಂದೆಡೆಯೊಳುಂ ಸ್ವಾತಂತ್ರ್ಯಮುಂ ಕಾರಣತ್ವಮುಮಿಲ್ಲೆಂದು ಪೇಳಲ್ಪಡುಗುಂ (ಚಾರಕ. ೬-೨೦ ವ) ; ಪ್ರಕೃತಿಯು ಇನ್ನೊಂದನ್ನು ಹುಟ್ಟಿಸುತ್ತದೆಯೇ ಹೊರತು ತಾನು ಯಾವುದರಿಂದಲೂ ಹುಟ್ಟಿದ್ದಲ್ಲ . . . ಈ ಪ್ರಕೃತಿಯ ಮೇಲೆ ಪ್ರಭುವಾದ ಈಶ್ವರನೊಬ್ಬನಿಲ್ಲ (ಕಾರಕ.೦೨೬). ೨೬. [ವೇದಾಂತ] ಭಗವಂತನ ಮಾಯಾಶಕ್ತಿ ; ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳುವ ಪ್ರಪಂಚದ ಪೂರ್ವಸ್ಥಿತಿ : ಇಹದಲ್ಲಿ ಸುಖಿ ಪರದಲ್ಲಿ ಪರಿಣಾಮಿ ಎಂಬರು ಅದು ಹುಸಿ ನಿಲ್ಲು ಇಹದಲ್ಲಿ ದುಃಖಿ ಪರದಲ್ಲಿ ಪ್ರಕೃತಿ ಎಂದೆ (ಶೋಲಕು. ೦೯-೬೯) ; ಮೂಲಪ್ರಕೃತಿ ಒಂದರಲಿ ವಿಸ್ತರಿಸೆ ಬ್ರಹ್ಮಾಂಡತಂಡಗಳೆತ್ತಲೆತ್ತಲು ತೋರುತಿಹವು (ಜ್ಞಾಸಿಂ. ೨೬-೩) ; ಈ ಶಕ್ತಿ ಶಿವನಿಗಧೀನವಾಗಿ ಅವನಲ್ಲಿ ಗುಣವನೀರುವುದು. ಅವನ ಇಚ್ಛೆಯಂತೆ ಪ್ರಪಂಚಾಕಾರವಾಗಿ ಪರಿಣಮಿಸಿದಾಗ ಅದೇ ಶಕ್ತಿ ಸ್ವತಂತ್ರದ್ರವ್ಯವಾಗಿ ಪ್ರಕೃತಿಯೆನಿಸುವುದು (ಶಿ.ಸಿ. ೩೬). ೨೭. [ದ್ವೈತ] ಜೀವನನ್ನೂ ಪರಮಾತ್ಮನನ್ನೂ ಮುಚ್ಚಿಕೊಂಡಿರುವ ಆವರಣ : ಮೇಲೆ ಹೇಳಿದ ಷೋಡಶಕಳೆಗಳುಳ್ಳ ಲಿಂಗಶರೀರಕ್ಕೂ ಅನಿರುದ್ಧಶರೀರಕ್ಕೂ ಮಧ್ಯದಲ್ಲಿ ಜೀವಾಚ್ಛಾದಿಕವೆಂತಲೂ ಪರಮಾಚ್ಛಾದಿಕವೆಂತಲೂ . . . ದುಷ್ಟವಾದ ಎರಡು ಪ್ರಕೃತಿಗಳು ಸೇರಿಕೊಂಡಿರುವುವು (ಹರಿ. ೯-೦೯ ತಾತ್ಪರ್ಯ). ೨೮. [ಜೈನ] ಆತ್ಮನಿಗೆ ಅಜ್ಞಾನ ಮುಂತಾದ ಫಲವನ್ನು ಉಂಟುಮಾಡಿಕೊಡುವುದು ; ಜೀವನಿಗೆ ವರ್ತಮಾನ ಮತ್ತು ಭವಿಷ್ಯತ್ಕಾಲಗಳಲ್ಲಿ ಫಲವನ್ನು ಕೊಡುವ ಕರ್ಮಸ್ಕಂಧ : ತದುಪಾಂತಸಮಯದೊಳನ್ಯತರವೇದನೀಯ . . . ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಶಂಕಾತು. ೦೬-೮೦ ವ) ; ಪ್ರಕೃತಿಗಳೊಳ್ ಸಮ್ಯಕ್ತ್ವಪ್ರಕೃತಿಯ ತಲೆದೋಱೆ . . . ಉದಯಿಸಿತಾಗಜೇಂದ್ರನೊಳ್ ಸಮ್ಯಕ್ತ್ವಂ (ಪಾರ್ಶ್ವ. ೩-೯೬). ೨೯. ಆತ್ಮನ ಗುಣಕ್ಕೆ ಘಾತಕವಾದ ಕರ್ಮ ; ಘಾತಿಕರ್ಮ : ಜ್ಞಾನಾವರಣಮುಂ ದರ್ಶನಾವರಣಮುಂ ಮೋಹನೀಯಮುಮಂತರಾಯಮುಮೆಂಬೀ ನಾಲ್ಕುಂ ಪ್ರಕೃತಿಗಳು ಘಾತಿಗಳಪ್ಪುವು (ಗೊಮ್ಮಟ. ೩-೨). ೩೦. [ರಾಜನೀ] ಸ್ವಾಮಿ, ಅಮಾತ್ಯ, ಸುಹೃತ್ತು, ಕೋಶ, ಬಲ, ರಾಷ್ಟ್ರ ಮತ್ತು ದುರ್ಗ ಎಂಬ ರಾಜನ ಏಳುಬಗೆಯ ರಾಜ್ಯಾಂಗಗಳು : ಈ ರಾಜ್ಯಾಂಗಗಳೇ ಪ್ರಕೃತಿಗಳು (ಸಿದ್ಧಾಂತಿ. ೨೩೯). ೩೧. [ಸಂಗೀತ] ಧ್ವನಿವ್ಯತ್ಯಾಸಹೊಂದದಿರುವ ಸ್ವರ ; ಮೂಲಸ್ವರ : ಪ್ರಕೃತಿ ಮತ್ತು ವಿಕೃತಿಸ್ವರಸ್ಥಾನಗಳ ಮತ್ತು ಅವುಗಳ ಧ್ವನಿಭೇದಗಳನ್ನು ವೀಣಾವಾದ್ಯದ ಮೊದಲ ಹನ್ನೆರಡು ಮೆಟ್ಟಿಲುಗಳು . . . ಪರಿಚಯ ಮಾಡಿಕೊಡುತ್ತವೆ (ಸಂಗೀತ. ೦೬). [ಸಂ.]

**ಪ್ರಕೃತಿಚಿಕಿತ್ಸೆ** (ನಾ). ಗಾಳಿ, ನೀರು, ಬೆಳಕು, ಮಣ್ಣು ಮೊದಲಾದ ನೈಸರ್ಗಿಕ ವಸ್ತುಗಳಿಂದ ರೋಗಗಳಿಗೆ ಮಾಡುವ ಚಿಕಿತ್ಸೆ : ಬೆಳಕಿಗೆ ಸಂಬಂಧಪಟ್ಟ ಈ ಚಿಕಿತ್ಸೆಯು ಪ್ರಕೃತಿಚಿಕಿತ್ಸೆ (Naturo Therapy)ಯ ಒಂದು ಶಾಖೆ (ಅಕೆ. X. ಮುಖ್ಯ). [ಸಂ. ಪ್ರಕೃತಿಚಿಕಿತ್ಸಾ]

**ಪ್ರಕೃತಿಬಂಧ** (ನಾ). [ಜೈನ] ಜ್ಞಾನಾವರಣಾದಿ ಅಷ್ಟವಿಧಕರ್ಮಗಳಂ ತಮಗೆ ಅನುಗುಣವಾದ ಪುದ್ಗಲದ್ರವ್ಯವನ್ನು ಸ್ವೀಕರಿಸುವುದು ; ಕರ್ಮಸಂಬಂಧವೆಂಬ ಬಂಧದಲ್ಲಿ ಒಂದು : ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟು ವಿಕಲ್ಪಮಾದುತ್ತರಪ್ರಕೃತಿಗಳುಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ (ಧರ್ಮಾಮೃ. ೬-೨೬ ವ); ಕರ್ಮಸಂಬಂಧವೆಂಬ ಬಂಧವು ಪ್ರಕೃತಿ, ಸ್ಥಿತಿ, ಅನುಭಾಗ, ಪ್ರದೇಶವೆಂದು ನಾಲ್ಕುವಿಧ. ಕರ್ಮಾಣುಗಳ ಸ್ವಭಾವದಿಂದ ಉಂಟಾಗುವ ಬಂಧವು ಪ್ರಕೃತಿಬಂಧ (ಜೈನತಾ. ೯೯). [ಸಂ.]

**ಪ್ರಕೃತಿಭಾವ** (ನಾ). ೧. ಯಾವುದಾದರೊಂದು ವಸ್ತುವಿನ ಸ್ವಾಭಾವಿಕ ಸ್ಥಿತಿ,—ಸ್ವರೂಪ : ಲಿಂಗದೇಹಿಯ ಅಂಗದಲ್ಲಿ ತೋಱುವ ತೋಱಿಕೆ ಬೇಱೊಂದು ಪ್ರಕೃತಿಭಾವದಲ್ಲಿ ಕಂಡರೆ ಲಿಂಗದಂಗವಾದುದಕ್ಕೆ ಅದೆ ದೂರ (ಕಪಿಗೋ. ೦೨-೯೯). ೨. [ವ್ಯಾಕ] ಸ್ವರಕ್ಕೆ ಸ್ವರ ಪರವಾದ ಸಂದರ್ಭವಿದ್ದೂ ಸಂಧಿಯಾಗದೆ ಇರುವುದು : ಸ್ವರಕ್ಕೆ ಸ್ವರ ಪರವಾದಾಗ ಕೆಲವು ವೇಳೆ ಸಂಧಿಯಾಗುವುದಿಲ್ಲ. ಇದಕ್ಕೆ ಪ್ರಕೃತಿಭಾವವೆಂದು ಹೆಸರು (ಕೃಶಬ್ದ. ೯). [ಸಂ.]

**ಪ್ರಕೃತಿಶಾಸ್ತ್ರ** (ನಾ). ಪ್ರಕೃತಿಯ ರಹಸ್ಯ, ನಿಯಮ ಮೊದಲಾದುವುಗಳನ್ನು ನಿರೂಪಿಸುವ ಶಾಸ್ತ್ರ ; ಭೌತಿಕಶಾಸ್ತ್ರ : ಪ್ರಕೃತಿಶಾಸ್ತ್ರವೆಂದರೆ ಕೇವಲ ಯಾಂತ್ರಾತ್ಮಕವಾದ ಪ್ರಕೃತಿನಿಯಮಜ್ಞಾನವಲ್ಲ (ಮುಕ್ತ್ಯ. ೩೯ ಜೀವ). [ಸಂ.]

**ಪ್ರಕೃತಿಸೌಂದರ್ಯ** (ನಾ). ನಿಸರ್ಗದ ಚೆಲುವು; ನೈಸರ್ಗಿಕ ಸೌಂದರ್ಯ: ರೊಮ್ಯಾಂಟಿಕ್ ಕವಿಗಳೇ ಪ್ರಕೃತಿಸೌಂದರ್ಯವನ್ನನುಭವಿಸುವ ಭಾವುಕಶಕ್ತಿಯ ಮಹತ್ವವನ್ನು ತೋರಿಸಿಕೊಟ್ಟರು (ಮುಕ್ತ್ಯ ೩೨ ಜೀವ). [ಸಂ.]

**ಪ್ರಕೃತಿಸ್ಥ** (ನಾ). ಮೊದಲಿನ ಪರಿಸ್ಥಿತಿಗೆ ಹೊಂದಿಕೊಂಡಿರುವಂಥದು : ಒಂದು ಪಕ್ಷದ ಸರ್ವಾಧಿಕಾರದಿಂದ ಜನತೆ ಪ್ರಕೃತಿಸ್ಥವಾಗಿರಲು ಆಗಲಾರದು (ಏಂಂರ. I. ೦೦೦). [ಸಂ.]

**ಪ್ರಕೃತಿಸ್ವರ** (ನಾ). ೧. [ವ್ಯಾಕ] ಶಬ್ದದ ಮೂಲರೂಪಕ್ಕೆ ಸಂಬಂಧಿಸಿದ ಅಂತ್ಯದ ಸ್ವರಾಕ್ಷರ : ಸ್ವರಮಿದಿರೊಳಿರೆ ವಿಭಕ್ತಿಸ್ವರಕೆ ಪ್ರಕೃತಿಸ್ವರಕ್ಕ ಮಕ್ಕುಂ ಲೋಪಂ (ಶಮದ. ೩೨). ೨. ಅ, ಇ, ಉ, ಎ ಎಂಬ ಹ್ರಸ್ವ ಸ್ವರಗಳು : ಕ್ರಿ. ಶ. ೧೬೩೫ರಲ್ಲಿದ್ದ ಸಿದ್ಧನಂಜೇಶನೆಂಬ ವೀರಶೈವಕವಿ . . . ಹ್ರಸ್ವಸ್ವರಗಳನ್ನು "ಪ್ರಕೃತಿಸ್ವರ"ಗಳೆಂದೂ ದೀರ್ಘಸ್ವರಗಳನ್ನು "ವಿಕೃತಿಸ್ವರ"ಗಳೆಂದೂ ಹೆಸರಿಸಿದ್ದಾನೆ (ಸಂಕೋರ. ೦೬). ೩. [ಸಂಗೀತ] ಸಪ್ತಸ್ವರಗಳಲ್ಲಿ ಯಾವ ಧ್ವನಿಭೇದವನ್ನೂ ಹೊಂದದೆ ಇರುವ ಷಡ್ಜ ಮತ್ತು ಪಂಚಮ : ಷಡ್ಜ ಮತ್ತು ಪಂಚಮಗಳು ಯಾವಾಗಲೂ ನಿರ್ದಿಷ್ಟ ಶ್ರುತಿಗಳನ್ನೇ ಪಡೆದು ಮತ್ತಾವ ಧ್ವನಿಭೇದವನ್ನೂ ಹೊಂದದೆ ಇರುವುದರಿಂದ ಇವೆರಡೂ ಪ್ರಕೃತಿಸ್ವರಗಳೆನಿಸಿಕೊಂಡಿವೆ (ಸಂಗೀತಂ. ೦೩). [ಸಂ.]

**ಪ್ರಕೃಷ್ಟ** (ಗು). ೧. ಹೆಚ್ಚಾಗಿ ಎಳೆದ,—ಸೆಳೆದ. ೨. ದೀರ್ಘವಾದ; ನೀಳವಾದ. ೩. ಶ್ರೇಷ್ಠವಾದ ; ಉತ್ಕೃಷ್ಟವಾದ : ಸಕಲಸುಹೃದ್ವರ್ಗಂಬೆರಸನುಭವಿಸುಗೆ ದುರ್ಗಂ ವರ್ಗತ್ರಯಪ್ರಕೃಷ್ಟೋದಯಮಂ (ಶಂತಶಂ. ೬೦೦-೨೩). ೪. ಪ್ರಧಾನವಾದ ; ಮುಖ್ಯವಾದ. ೫. ಹೆಚ್ಚಾದ; ಅಧಿಕವಾದ : ಅಪಾಕೃತಪ್ರಕೃಷ್ಟಾಷ್ಟಲೋಕಪಾಲಪರಿಪಾಲಿತ ಸಾಹಸನುಂ . . . ಅಪ್ರಸ್ತಿಮಿತಸಾಗರವಹೀವಲ್ಲಭಂಗೆ (ಶಾಂತಿಪು. ೦-೬೦ ಪ). ೬. ಬಲವಾದ ; ಶಕ್ತಿಯುತವಾದ. (ನಾ). ೭. ಶ್ರೇಷ್ಠವಾದುದು ; ಉತ್ಕೃಷ್ಟವಾದುದು : ಅಪ್ರಿಯವಾದದ್ದನ್ನು ತಪ್ಪಿಸಿಕೊಂಡು ಹೋದರೆ ನಡೆಯುವುದಿಲ್ಲ ; ಅದನ್ನು ತಳ್ಳಿ ಹೋಗುವುದೇ ಪ್ರಕೃಷ್ಟವಾದ ದಾರಿ (ಏಂಂರ. II. ೦೩೩). ೮. ಮುಖ್ಯವಾದುದು : ಪ್ರಕೃತಿ ಶಬ್ದಕ್ಕೆ ಅರ್ಥ ಪ್ರಕೃಷ್ಟವಾದ ಕೃತಿಯೆಂದು (ಕಾರದ. ೦೦೩). [ಸಂ.]

**ಪ್ರಕೋಪ** (ನಾ). ೧. ಕೋಪಾಟೋಪ ; ರೋಷಾವೇಶ : ರಾಹು ತಾಂ ದಿನಕರನಂ ಪ್ರತಾಪಭರನಂ ವಿಳಸತ್ಕರನಂ ಪ್ರಕೋಪದುರ್ವಿನೊಳಿ ನುಂಗುವಂ (ಜೀತಸಂ. ೩೨-೯) ; ಕಣ್ಣೀರ ಪೆರ್ವೊನಲಿಂ ನಂದಿಸಿದಳ್ಳಕೋಪ ಶಿಖಿಯುಂ ಪಾಪ್ನುಪ್ಪದಳ್ಳಲನಂ (ಡಾಚಕೀ. ೦೦-೦೩೩). ೨. [ವೈದ್ಯಶಾ] ಆಧಿಕ್ಯ ; ಅತಿರೇಕ : ವಾತಾದಿಗಳಿಗೆ ಸಂಚಯವೂ ಪ್ರಕೋಪವೂ ಶಾಂತಿಯೂ ಇರುವುವು (ಸಳಪ್ಪ. ೦೩). [ಸಂ.]

**ಪ್ರಕೋಪಿಸು** (ಕ್ರಿ). ೧. ಹೆಚ್ಚಿಸು ; ಉತ್ತೇಜಿಸು ; ಅಧಿಕಗೊಳಿಸು : ಅವನ ಮನಸ್ಸಿನಲ್ಲಿ ಸುಳಿದಾಡುತ್ತಿದ್ದ ಅವನ ಆಸೆಯನ್ನು ಪ್ರಕೋಪಿಸುತ್ತಿದ್ದ ವ್ಯಕ್ತಿಯೆಂದರೆ ಶಾಂತಾಳೊಬ್ಬಳೇ (ಶೃಶಾಪ. ೯೬). ೨. [ವೈದ್ಯಶಾ] ಹೆಚ್ಚಾಗು ; ಉಲ್ಬಣವಾಗು : ಪ್ರಕೋಪಿಸಿದ ವಾತಾದಿ ದೋಷಗಳಿಂದ . . . ಮೂಲವ್ಯಾಧಿ ಮೂರು ಪ್ರಕಾರವಾಗಿ ಅಪಾನದ್ವಾರದ ಮೂರು ನರಗಳ ಮೂಲದಲ್ಲಿ ಕಾಣಿಸಿಕೊಂಬುದು (ಸಳಪ್ಪ. ೨೯೬).

[ಪ್ರಕೋಪ + — ಇಸು]

**ಪ್ರಕೋಷ್ಠ** (ನಾ). ೧. ಮೊಳಕೈಯಿಂದ ಮಣಿಕಟ್ಟಿನ ವರೆಗಿನ ಭಾಗ: "ಪ್ರಕೋಷ್ಠಮೆಂಬುದು ಮುಂಗೆಯ್" (ಶಲಾಯು. ೯೮-೬೭೯) ; ವೃತ್ತಘನಪ್ರಕೋಷ್ಠಯುಗಳಂ ಮೇಲಾದ ಮಾಣಿಕ್ಯಕಂಕಣದಿಂ . . . ಅಲಂಕೃತನಾಗಿಯುಂ (ಶಾಂತಿಪು. ೦೦-೩೩) ; ಸರಸೀರುಹನಾಳಮನಾವರಿಸಿದ ಶೈವಾಲಮನೆ ಹರಿದ್ರತ್ನಮಯಸ್ಫುರಿತಕಟಕಂ ಪ್ರಕೋಷ್ಠದೊಳರುಣಾಧರೆ ತೊಳಗಿ ಬೆಳಗದಿರ್ಪುದಿದೇನೋ (ಶಂದ್ರಪ್ರಿ. ೩-೩೮). ೨. ನಾಲ್ಕು ಪಕ್ಕಗಳಲ್ಲಿಯೂ ಪಟ್ಟಡಗಳಿಂದ ಸುತ್ತುವರಿದ ಅಂಗಳ ; ಹಜಾರ ; ತೊಟ್ಟಿ : "ಕಕ್ಷಾಂತರಂ, ಪ್ರಕೋಷ್ಠಂ—ಈ ೨ ನೆಲೆ" (ಶಲಾಯು. ೩೦-೨೬೯) ; "ಕಕ್ಷಾಂತರಂ ಪ್ರಕೋಷ್ಠಂ ಮನೆಯ ನಿಲುವದು" (ಶುಂಗಂಶ. ೬೦-೦೯). [ಸಂ.]

**ಪ್ರಕ್ರಮ** (ನಾ). ೧. ಮುಂದೆ ಹೆಜ್ಜೆಯಿಡುವುದು ; ಮುಂದಕ್ಕೆ ಹೋಗುವಿಕೆ. ೨. ಹೆಜ್ಜೆ. ೩. ಒಂದು ಹೆಜ್ಜೆಯಷ್ಟು ದೂರ; ದಾಪು. ೪. (ಕಾರ್ಯದ) ಪ್ರಾರಂಭ ; ಉಪಕ್ರಮ : "ಪ್ರಕ್ರಮಃ, ಉಪಕ್ರಮಃ—೨ ಕೆಲಸಕ್ಕೆ ಮೊದಲುಮಾಡುವಿಕೆ" (ಸಿದ್ಧಾಂತಿ. ೩೬೯) ; ಜನ್ಮೋತ್ಸವಪ್ರಕ್ರಮಮೆಂದಾನಂದನೃತ್ಯಪ್ರಮದಮನಧಿಕಂ ಮಾಡಿ (ಅಂತ್ರು. ೬-೦೨೬) ; ಅಮಿತಗುಣವರ್ಣನಪ್ರಕ್ರಮಕ್ಕೆ ಸಲೆ ನಾಣ್ಚಿ ತಲೆಯನೆಱಗಿದ ಸುಜನೋತ್ತಮರಂತೆ ಭರದಿನೆಱಗಿದುವಮೇಯಪರಿಪಕ್ವಗಂಧಶಾಲಿವನಂಗಳ್ (ಶಾಂತಿಪು. ೧-೩೯). ೫. ವಿಧಾನ ; ಕ್ರಮ : ರೀತಿ : ಪುರಾಣಗಳಿಗೆ ಯಾವೊಂದು ತರ್ಕಪ್ರತಿಷ್ಠಿತವಾದ ದಾರ್ಶನಿಕಪ್ರಕ್ರಮದೊಡನಾಗಲಿ ಅಥವಾ ಯಾವೊಂದು ಪಾಂಥಿಕಧರ್ಮದೊಡನಾಗಲಿ ತಾದಾತ್ಮ್ಯವಿಲ್ಲ (ತತ್ವಪ್ರಾ. ೦೨೧). [ಸಂ.]

**ಪ್ರಕ್ರಯ** (ನಾ). ಬೆಲೆ : "ಪ್ರಕ್ರಯಃ, ಕ್ಲಿಪ್ತಕಃ—ಈ ೨ ಬೆಲೆ" (ಶಲಾಯು. ೯೯-೪೦೯). [ಸಂ.]

**ಪ್ರಕ್ರಿಯೆ** (ನಾ). ೧. ಪ್ರಕಾರ ; ವಿಧಾನ ; ರೀತಿ : ಇದುವರೆಗೆ ತೋರಿಸಲಾದ 'ಧ್ವನಿ' ಮತ್ತು 'ಗುಣೀಭೂತವ್ಯಂಗ್ಯ' ಇವುಗಳ ಪ್ರಕ್ರಿಯೆಗೆ ಇನ್ನೂ ಒಂದು ಫಲವಿದೆ (ಧ್ವನ್ಯಾಲೋ. ೨೩೯). ೨. ಕಾರ್ಯವಿಧಾನ : ವಿಧಿದ್ವಾರಾ ಏರ್ಪಟ್ಟಿರತಕ್ಕ ಪ್ರಕ್ರಿಯೆಯನ್ನು ಬಿಟ್ಟು ಮತ್ತಾವ ರೀತಿಯಲ್ಲಿಯೂ ಯಾವನೊಬ್ಬನಿಗೂ ಪ್ರಾಣಹಾನಿಯಾಗುವಂತೆ ಅಥವಾ ದೈಹಿಕಸ್ವಾಧೀನತೆಯಿಲ್ಲದಂತೆ ಮಾಡತಕ್ಕುದಲ್ಲ (ಭಾರಾಸ. ೦೨). ೩. ಬದಲಾವಣೆ ; ಪರಿವರ್ತನೆ : ಏಕಕಾಲಿಕವಾಗಿ ಒಂದೇ ರೀತಿ ಪ್ರಕ್ರಿಯೆಯನ್ನು ತೋರಿಸುವ ಮನಸ್ಸುಗಳಿಗೆ ಏನೆನ್ನಬೇಕು ? (ರೂರಸ. ೩೬). ೪. ಶಾಸ್ತ್ರೋಕ್ತವಾದ ಕರ್ಮಾಚರಣೆ ; ವಿಧಿ : ಸಾಂಖ್ಯಶಾಸ್ತ್ರದ ಕೆಲವು ಪ್ರಕ್ರಿಯೆಗಳು ವೇದಗಳಲ್ಲಿ ದೃಗ್ಗೋಚರಿಸುವುದರಿಂದ ಅದು ಸಿದ್ಧವಾಗುತ್ತದೆ (ಕಾರದ. ೦೨೩). ೫. ಉನ್ನತಸ್ಥಾನ : "ಪ್ರಕ್ರಿಯಾ, ಅಧಿಕಾರಃ—೨ ಅಧಿಕಾರದ ಹೆಸರು. ನಿರ್ವಹಿಸತಕ್ಕ ಕೆಲಸಕ್ಕೂ ಪ್ರಜೆಗಳ ಕಾರ್ಯನಿರ್ವಾಹಕ್ಕೂ ಅಧಿಕಾರನಿರ್ವಾಹಕ್ಕೂ ಹೆಸರು" (ಸಿದ್ಧಾಂತಿ. ೨೪೪). ೬. ಪುಸ್ತಕದ ಒಂದು ಪರಿಚ್ಛೇದ. ೭. ಹಕ್ಕು ; ಸ್ವಾಮ್ಯ. ೮. ಸೌಕರ್ಯ. ೯. [ವ್ಯಾಕ] ಶಬ್ದನಿಷ್ಪತ್ತಿಯಲ್ಲಿ ನಡೆಯುವ ಶಾಸ್ತ್ರೋಕ್ತವಾದ ಕ್ರಮ : ಕೊಂದಂ, ಬೆಂದಂ ಎಂಬ ಕ್ರಿಯಾಪದಗಳ ಪ್ರಕ್ರಿಯೆಯನ್ನು ಬರೆಯಿರಿ (ಕೂಶ). [ಸಂ. ಪ್ರಕ್ರಿಯಾ]

**ಪ್ರಕ್ವಾಣ** (ನಾ). ವೀಣೆಯ ಧ್ವನಿ : "ಪ್ರಕ್ವಾಣಃ, ಪ್ರಕ್ವಣಃ, ಅನುಕ್ವಣಃ ಇತ್ಯಾದಿಗಳು ವೀಣೆಯ ಧ್ವನಿಗೆ ಹೆಸರುಗಳು" (ಸಿದ್ಧಾಂತಿ. ೫೬). [ಸಂ.]

**ಪ್ರಕ್ಷಾಲನ, ಪ್ರಕ್ಷಾಳನ** (ನಾ). ೧. ನೀರಿನಿಂದ ತೊಳೆಯುವುದು,—ಶುದ್ಧಿಗೊಳಿಸುವುದು : ಉಚ್ಚಾಸನಮಂ ಕೊಟ್ಟು ಪ್ರಾಸುಕೋದಕಂಗಳಿಂ ಪಾದಪ್ರಕ್ಷಾಲನಂಗೆಯ್ದು (ಶಶಾಕ. ೪೦೮). ೨. ಚೊಕ್ಕಟಗೊಳಿಸುವುದು; ಶುದ್ಧಮಾಡುವುದು. ೩. ಸ್ನಾನಮಾಡುವುದು. ೪. ತೊಳೆಯಲು ಉಪಯೋಗಿಸುವ ನೀರು. **ಪ್ರಕ್ಷಾಳನ** : ೧. ಅಂತು ನೃಪತಿ ವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡವಿಯೊಳಂಜಲಿಯಿಂ ಜಲಮಂ ತಂದು (ಕಾದಂಪೂ. ೬೦೧) ; ಕೆಳಗಿಳಿದು, ತಣ್ಣನೆಯ ನೀರಿನಲ್ಲಿ ಮುಖಪ್ರಕ್ಷಾಳನ, ಪಾದಪ್ರಕ್ಷಾಳನಗಳನ್ನು ಮಾಡಿ (ಶಾಂಕಲ. ೨೯೬). 'ಪ್ರಕ್ಷಾಲನಂಗೆಯ್' ಪರಾ. [ಸಂ.]

**ಪ್ರಕ್ಷಾಲನಂಗೆಯ್, ಪ್ರಕ್ಷಾಳನಂಗೆಯ್** (ಕ್ರಿ). ನೀರಿನಿಂದ ತೊಳೆ,—ಶುದ್ಧಿಗೊಳಿಸು : ಸ್ತುತಿಸುತಂ ಸಾಷ್ಟಾಂಗದಲಿ ನಮಿಸುತ ಗುರುಶ್ರೀ ಚರಣಯುಗಮಂ ರತಿ ವಿಗಲ್ ಪ್ರಕ್ಷಾಲನಂಗೆಯ್ದು (ಜಶಪು. ೩೯-೩).

**ಪ್ರಕ್ಷಾಳನಂಗೆಯ್** : ಇದಿರ್ಗೊಂಡುದ್ದದೊಳ್‌ಅಲಿಕ್ಕಿ ಚರಣಪ್ರಕ್ಷಾಳನಂಗೆಯ್ದು ಸನ್ಮುದದಿಂದರ್ಚಿಸಿ ಭಕ್ತಿಯಿಂದೆ ಪೊಡೆವಟ್ಟಾಗಳ್ (ಸುಕುಮಾ. ೯-೨೨) ; ಮುದದೊಳಿದ್ದು ಶರೀರಧರ್ಮವಮಂ ಚರಿಸಿ ಕರಪದಮುಖಪ್ರಕ್ಷಾಳನಂಗೆಯ್ದು (ಹರಿಶ. ೪-೫೯). [ಪ್ರಕ್ಷಾಲನ + ಕೆಯ್$_1$]

**ಪ್ರಕ್ಷಾಲಿತ**, ಪ್ರಕ್ಷಾಳಿತ (ಗು). ೧. ನೀರಿನಿಂದ ತೊಳೆದ,–ಶುದ್ಧಿಗೊಳಿಸಿದ : ಆ ಮರುದೇವಿಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮಮದುಕೂಲವಸನೆಯುಮಾರ್ಜಿತ ದಶನವಮಯೂಖಜಲಪ್ರಕ್ಷಾಲಿ[ತಾಕಾಂ. ೪]ತ ದಶನವಸನೆಯುಂ . . . ಆಗಿ (ಆಪು. ೬-೨೬ ವ). (ನಾ). ೨. ನೀರಿನಿಂದ ತೊಳೆದುದು,–ಶುದ್ಧಿಗೊಳಿಸಿದುದು. **ಪ್ರಕ್ಷಾಳಿತ** : ೨. "ನಿರ್ಣಿಕ್ತಂ, ಪ್ರಕ್ಷಾಳಿತಂ, ಧೌತಂ—ಈ ೩ ತೊಳೆಯಲ್ಪಟ್ಟುದು" (ಶಬ್ದಮ. ೬೮-೨೫೯). ೩. ತೊಳೆದುಬಿಡುವಿಕೆ ; ತಳ್ಳಿಹಾಕುವಿಕೆ ; ಕೊಚ್ಚಿಸಿ ಬಿಡುವಿಕೆ : ಮಜ್ಜಿದೀ ಕುಲಕ್ರಮಮನಾನಿಂತಿರ್ದು ಸನ್ಮಾರ್ಗಪದ್ಧತಿಯಂ ಹಾಸ್ಯರಸಪ್ರವಾಹಭರದಿಂ ಪ್ರಕ್ಷಾಳಿತಂ ಮಾಟ್ಪೆನೇ (ಕಂಠೀರವ. ೬-೯೧). [ಸಂ.]

**ಪ್ರಕ್ಷಾಲಿಸು**, ಪ್ರಕ್ಷಾಳಿಸು (ಕ್ರಿ). ೧. ನೀರಿನಿಂದ ತೊಳೆ,–ಶುದ್ಧಿಗೊಳಿಸು: ಸೂಕ್ಷ್ಮಪರಮಾರ್ಥತತ್ತ್ವಭಾವನಾಜಲದಿಂ ಪ್ರಕ್ಷಾಲಿಸಿ ಕಟ್ಟಿದ ಸೆರೆಯೊಳು ನಸುಗಂಪಿನಂತೆ (ಬಸವಪು. ೦೦೩-೯) ; ಅಳಿಯರ್ ಗಂಧೋದಕಹೂಜೆಯಿಂದೆ ಪ್ರಕ್ಷಾಲಿಸಿದರ್ ಪದಯುಗವ (ಮೋಹತ. ೨೭-೩೩). **ಪ್ರಕ್ಷಾಳಿಸು** : ೧. ಭಟಾರರ ಕಾಲಂ ಮಹಾದೇವಿ ನೀರ್ವೊಯ್ಯೆ ಅರಸು ತಾನೆ ಪ್ರಕ್ಷಾಳಿಸಿ [ಶಾಕಾಂ. ೮ಚ್ಚಿದ] (ವಡ್ಡಾರಾ. ೭೮-೯) ; ಪುಣ್ಯಜಲದಿಂ ಪ್ರಕ್ಷಾಳಿಸುವಂತೆ ಶಾಂತದೃಷ್ಟಿಗಳಿಂದೆನ್ನಂ ಮುನ್ನಂ ಕಂಡಜೀವನೂತೆ . . . ನೋಡಿ (ಕಾದಂಪೂ. ೨೬೨) ; ಜನಮುನಿಗಳ್ಗೆ ಆಹಾರಮಂ ಕುಡುವುದುಂ . . . ಪಾದಯುಗಳಮಂ ಗುಣಾನುರಾಗದಿಂ ತನ್ನೆರಡುತೊಡೆಯ ಮೇಲಿಟ್ಟೊತ್ತುತ್ತುವುದುಂ ಒರಸುವುದುಂ ಪ್ರಕ್ಷಾಳಿಸುವುದುಂ ಮತ್ತಂ ಪೆಱವು ವ್ಯಾಪಾರಂಗಳಂ ವೈಯಾವೃತ್ಯಮೆಂಬುದು (ಶಬಾಕ. ೩೦೪). ೨. (ಅಲಂ) ಅವಮಾನ ಮಾಡು ; ಹೀನಾಯಗೊಳಿಸು : ಅವರ ಹತ್ತಿರ ಹೋದರೆ ಚೆನ್ನಾಗಿ ಪ್ರಕ್ಷಾಳಿಸಿ ಕಳುಹಿಸುತ್ತಾರೆ (ಲೋಕ). [ಪ್ರಕ್ಷಾಲನ + — ಇಸು$_1$]

**ಪ್ರಕ್ಷಾಳನ** 'ಪ್ರಕ್ಷಾಲನ' ನೋ.

**ಪ್ರಕ್ಷಾಳನಂಗೆಯ್** 'ಪ್ರಕ್ಷಾಲನಂಗೆಯ್' ನೋ.

**ಪ್ರಕ್ಷಾಳನೆ** (ನಾ). ೧. = ಪ್ರಕ್ಷಾಲನ ೧. ೨. (ಅಲಂ) ಅವಮಾನ ; ಮಾನಹಾನಿ : ಆತ ಅಲ್ಲಿಗೆ ಹೋಗಿ ಚೆನ್ನಾಗಿ ಪ್ರಕ್ಷಾಳನೆ ಮಾಡಿಸಿಕೊಂಡು ಬಂದ (ಲೋಕ). [ಸಂ. ಪ್ರಕ್ಷಾಲನ]

**ಪ್ರಕ್ಷಾಳಿತ** 'ಪ್ರಕ್ಷಾಲಿತ' ನೋ.

**ಪ್ರಕ್ಷಾಳಿಸು** 'ಪ್ರಕ್ಷಾಲಿಸು' ನೋ.

**ಪ್ರಕ್ಷಿಪ್ತ** (ಗು). ೧. ಎಸೆದ; ತೂರಿದ. ೨. ಒಳಕ್ಕೆ ಹಾಕಿದ; ಒಳಗೆ ಸೇರಿಸಿದ. (ನಾ). ೩. ಗ್ರಂಥದಲ್ಲಿ ಕವಿಯು ಬರೆಯದೆ ಇದ್ದುದನ್ನು ಇತರರು ಅನಂತರ ಸೇರಿಸಿದ ಭಾಗ : ಈ ಕೊನೆಯ ಮಾತು ಪ್ರಕ್ಷಿಪ್ತವೆಂದು ಸಿದ್ಧವಾದರೆ ಮಾತು ಬೇರೆ (ಕಹಾಕ. ೩೩) ; ಜಯದ್ರಥನು ದ್ರೌಪದಿಯನ್ನು ಹೊತ್ತುಕೊಂಡು ಹೋದ ವೃತ್ತಾಂತವೇ ಪ್ರಕ್ಷಿಪ್ತ (ಕಕಥಾ. ೯೦೩). [ಸಂ.]

**ಪ್ರಕ್ಷಿಪ್ತಪಾಠ** (ನಾ). = ಪ್ರಕ್ಷಿಪ್ತ ೩ : ಗಂಗನ ಪ್ರತಿಗಳಲ್ಲಿ . . . ಸಂಕ್ಷಿಪ್ತ ಮತ್ತು ಪ್ರಕ್ಷಿಪ್ತಪಾಠಗಳೆರಡೂ ವಿದಿತವಾಗುತ್ತವೆ (ಉಪಾಹಾಂ. ೯೦). [ಸಂ.]

**ಪ್ರಕ್ಷೀಣ** (ಗು). ೧. ತುಂಬ ಕುಗ್ಗಿದ,—ಕಡಮೆಯಾದ. ೨. ಸೊರಗಿದ; ಕೃಶವಾದ. ೩. ನಷ್ಟವಾದ ; ನಾಶವಾದ : ತಮೋವಪ್ರಾಪ್ರಕ್ಷಯೋಪಶಮಂ ಪ್ರಕ್ಷೀಣಾವರಣಂ ಮಾ ಪ್ರತಿನಿಯತಂ ಪ್ರತ್ಯಕ್ಷಮೆಂಬೀ ವ್ಯುತ್ಪತ್ತಿಯಿಂ ಪರಾಯತ್ತಮಲ್ತೆಂಬುದರ್ಥಂ (ಶಬ್ದಸ್ಮೃ. ೫೧). [ಸಂ.]

**ಪ್ರಕ್ಷುಬ್ಧ** (ಗು). ೧. ಅಲ್ಲೋಲಕಲ್ಲೋಲವಾದ ; ಕದಡಿದ : ವಿಸ್ತೃತ ವಕ್ರೋದರಭಾಗಘೂರ್ಣಿತಮತಪ್ರಕ್ಷುಬ್ಧಕಲ್ಲೋಲಕಲ್ಪಿತಕೋಲಾಹಲಕಲ್ಪಕಾಲರಭಸಪ್ರಸ್ಪರ್ಧಿಯಂ ವಾರ್ಧಿಯಂ (ರಾಕ್ಷಸಾ. ೬೮). ೨. ನೆಮ್ಮದಿಯಿಲ್ಲದ ; ಶಾಂತಿಯನ್ನು ಕಳೆದುಕೊಂಡ : ಆಕೆಯ ಬುದ್ಧಿಯ ಶಕಲವೊಂದು . . . ಆಕೆಯ ಪ್ರಕ್ಷುಬ್ಧಚಿತ್ತಕ್ಕೆ ಸಮಾಧಾನ ಹೇಳಿತು (ಶಕುಂತಾ. ೦೨). ೩. ಗೊಂದಲಗೊಂಡಿರುವ : ದೇಶದಲ್ಲಿ ಪ್ರಕ್ಷುಬ್ಧಪರಿಸ್ಥಿತಿಯುಂಟಾದಾಗ ಜನರು ಭೇದಭಾವ ಮರೆತು ಒಂದಾಗಬೇಕು (ಲೋಕ). [ಸಂ.]

**ಪ್ರಕ್ಷುಭಿತ** (ಗು). ೧. = ಪ್ರಕ್ಷುಬ್ಧ ೧ : ನಾನಾಜಲಚರನಿಕರಾಸ್ಫಾಳನ ಪ್ರೋಚ್ಛಲತ್ತುಚ್ಛದನಚ್ಛನ್ನಚ್ಛಟಾಪ್ರಕ್ಷುಭಿತಲಹರಿಕಾಸ್ಫಾರರೌದ್ರಂ ಸಮುದ್ರಂ (ರಾಜ್ಯಾಸಾ. ೭೯). ೨. = ಪ್ರಕ್ಷುಬ್ಧ ೨: ಶಂಬರನಾಗಸ್ಥಾನಮಂ ಪ್ರಕ್ಷುಭಿತ ಬಹುಜನಧ್ವಾನಮಂ ಪೊಕ್ಕಂ . . . ರಾಜಹಂಸಂ (ಸುಕುಮಾ. ೩-೬೨). [ಸಂ.]

**ಪ್ರಕ್ಷೇಪ** (ನಾ). ೧. ಎಸೆಯುವುದು ; ತೂರುವುದು. ೨. ಇಡುವುದು; ಇರಿಸುವುದು. ೩. ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸುವಿಕೆ ಮತ್ತು ಹಾಗೆ ಸೇರಿಸಿದ ಅಂಶ : ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು (ಕಸಚ. VII ಮುನ್ನುಡಿ) ; ಕುಮಾರವ್ಯಾಸಭಾರತವು ವ್ಯಾಸಭಾರತವನ್ನು ಎಷ್ಟು ಮಟ್ಟಿಗೆ ಅನುಸರಿಸಿದೆ . . . ಎರಡೂ ಭಾರತಗಳಲ್ಲಿ ಅನೇಕ ಪ್ರಕ್ಷೇಪಗಳಾಗಿವೆ (ಕಹಾಕ. ೨೧೪). [ಸಂ.]

**ಪ್ರಕ್ಷೇಪಕ** (ನಾ). ೧. ಎಸೆಯುವವನು. ೨. ಇರಿಸುವವನು. ೩. ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸುವವನು: ಒಂದು ವೇಳೆ ವಾಸ್ತವವಾಗಿ ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲವನ್ನು ತೀರಿಸಿಕೊಂಡದ್ದೂ ಸತ್ಯ ! (ಕಸಚ. VII ಮುನ್ನುಡಿ). ೪. ದೂರವಾಣಿ ಅಥವಾ ದೂರಲೇಖಕ ಸಲಕರಣೆಗಳಲ್ಲಿ ಸುದ್ದಿಗಳನ್ನು ಬಿತ್ತರಿಸುವ ಸಾಧನ ; ರೇಡಿಯೋ ನಿಸ್ತಂತುತರಂಗಗಳನ್ನು ಕಳುಹಿಸುವ ಯಂತ್ರಸಲಕರಣೆ : ೧೯೩೩ರಲ್ಲಿ ಮುಂಬಯಿ ಬೊಂಬಾಯಿ ಮತ್ತು ಕಲ್ಕತ್ತನಗರಗಳಲ್ಲಿ ೧೫ ಕಿಲೋವ್ಯಾಟ್ ಸಾಮರ್ಥ್ಯದ ಎರಡು ಪ್ರಕ್ಷೇಪಕಗಳು (Transmitters) ಇದ್ದುವು (ಕಿರಿವಿಶ್ವ. ೩೦೨). [ಸಂ.]

**ಪ್ರಕ್ಷೇಪಕಾರ** (ನಾ). ಮೂಲಗ್ರಂಥದಲ್ಲಿ ಮೊದಲು ಇಲ್ಲದ ಅಂಶವನ್ನು ಹೊಸದಾಗಿ ಸೇರಿಸುವವನು : ಈ ಒಂದು ಪ್ರಸಂಗವನ್ನು ಕುರಿತು ಪ್ರಕ್ಷೇಪಕಾರರ ಬುದ್ಧಿ ಎಷ್ಟು ವೈವಿಧ್ಯಮಯವಾಗಿ ಕೆಲಸ ಮಾಡಿದೆ (ಕಂಶೀ. ೦೯೨). [ಸಂ.]

**ಪ್ರಕ್ಷೇಪಣ** (ನಾ). ಸರಿಸುವುದು : ಭೂಪಾಲಂಗವಟಯಿಸಿದುದಾ ಪೂಗೋಲದೊಳ್ಪಿಚಿತ್ರಕಾಂಡಪಟೀಪ್ರಕ್ಷೇಪಣವಿಳಾಸಮಂ ತತ್ಕ್ಷೋಪಾನೋತ್ಥಾನಮಣಿ ಮಯೂಖವಿತಾನಂ (ಸುಕುಮಾ. ೬-೦೦೯). [ಸಂ.]

**ಪ್ರಕ್ಷೇಪಿತ** (ನಾ). ೧. ಎಸೆದುದು ; ಬಿಸಾಡಿದುದು. ೨. ಇಟ್ಟುದು; ಇರಿಸಿದುದು. [ಸಂ.]

**ಪ್ರಕ್ಷೇಪಿಸು** (ಕ್ರಿ). ಮೂಲಗ್ರಂಥದಲ್ಲಿ ಇಲ್ಲದುದನ್ನು ಹೊಸದಾಗಿ ಸೇರಿಸು : ಅರ್ಥಸೌಲಭ್ಯಕ್ಕಾಗಿ ಅರ್ಥವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗ ಬರದಂತೆ ತಮ್ಮ ಸ್ವಂತರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು (ಕಸಚ. VII ಮುನ್ನುಡಿ). [ಪ್ರಕ್ಷೇಪ + — ಇಸು$_1$]

**ಪ್ರಕ್ಷೋಭ** (ನಾ). ೧. ಆಲೋಲಕಲ್ಲೋಲ ; ಪ್ರಕ್ಷುಬ್ಧತೆ : ಅಗುರ್ವುವೆತ್ತುದಂ ತ್ರೈಲೋಕ್ಯಕಂಟಕವೆಂಬಾನೆಯನೇಱೆ ಪ್ರಳಯಪ್ರಕ್ಷೋಭಮಾದಂತೆ ಮಾಳಿದು ಬರೆ (ಶಂಪಾಪ್ರ. ೦೩-೦೩೬ ಪ). ೨. ಗೊಂದಲ ; ತಳಮಳ : ಆಕಾಶಂ ಮೇಗೆ ಕವಿದಪ್ಪುದು ಗಾಳಿಯೆ ನಂದಾದುದು ಎಂಬ ಸಕಲಪ್ರಕ್ಷೋಭದೊಳ್ ವಿಹ್ವಳರಾಗಿರ್ದ ನಿರಯಜರಸೆಯ್ದು (ಶಾಂತಿಪು. ೬-೯೯ ಪ) ; ಬನ್ನಿಮಿನ್ನುಮಾಜಿಸುವವೆಂದು ಪುರಪ್ರ[ಕ್ಷೋ]ಭಮಾಗೆ ಪುರದೊಳಗೆ ತೊಟ್ಟುಲ್ದು ಬಿಸುತ್ತುಂ (ಸುಕುಮಾ. ೦೨-೨೦ ಪ). [ಸಂ.]

**ಪ್ರಕ್ಷೋಭಿಸು** (ಕ್ರಿ). ಆಲೋಲಕಲ್ಲೋಲವುಂಟಾಗು ; ಪ್ರಕ್ಷುಬ್ಧಗೊಳ್ಳು : ಬಾಹಾಗದಾಯುಧವಿಕ್ಷೇಪವಿಜೃಂಭಣಭ್ರಮಣದಿಂ ಪ್ರಕ್ಷೋಭಿಸಲ್ ಯುದ್ಧಕೇಳಿಧುರೀಣರ್ . . . ಪೊಯ್ದರ್ ಗದಾದಂಡದಿಂ (ಜಗಂ. ೯-೭೩).
[ಪ್ರಕ್ಷೋಭ + — ಇಸು]

**ಪ್ರಕ್ಷ್ವೇಡನ** (ನಾ). ೧. ಗದ್ದಲ ; ಗಜಿಬಿಜಿ. ೨. ಕಬ್ಬಿಣದ ಬಾಣ : "ಪ್ರಕ್ಷ್ವೇಡನಃ, ನಾರಾಚಃ—೨ ನಾರಸದ ಹೆಸರುಗಳು" (ಸಿದ್ಧಾಂತಿ. ೨೬೯).
[ಸಂ.]

**ಪ್ರಖರ** (ಗು). ೧. ಬಹಳ ಬಿಸಿಯಾದ ; ಚುರುಕಾದ. ೨. ತೀಕ್ಷ್ಣವಾದ ; ಕಟುವಾದ. (ನಾ). ೩. ಬಹಳ ಬಿಸಿಯಾದಂದು; ಚುರುಕಾದುದು : ಸೂರ್ಯನ ಪ್ರಖರವಾದ ಕಿರಣಗಳು ಒಳಗೆ ತೂರಿಬರದಂತೆ ತಕ್ಕ ಪ್ರಮಾಣದ ಗಾಜಿನ ಕಿಟಕಿಗಳು . . . ಹಚ್ಚಿರಬೇಕು (ಗ್ರಂಶಾಂ. ೬) ; ಸೂರ್ಯನು ಒಳ್ಳೆ ಪ್ರಖರವಾಗಿ . . . ಬಿಸಿಯಾದ ಕಿರಣಗಳನ್ನು ಅವನ ಮೇಲೆ ಬಿಡುತ್ತಿದ್ದನು (ಮಲಿಪಾ. ೦೦೦). ೪. ನಾಯಿ. ೫. ಹೇಸರಗತ್ತೆ.
[ಸಂ.]

**ಪ್ರಖರತೆ** (ನಾ). ೧. ತೀಕ್ಷ್ಣತೆ : ಮಾಯಾದೇವಿಯು ಆ ಭೇದಕಕಣ್ಣುಗಳ ಪ್ರಖರತೆಯನ್ನು ಸಹಿಸಲಾರದಾದಳು (ಪ್ರಶಾಂ. ೯). ೨. ಕಾವು; ಬಿಸುಪು : ಅವನ ಆತ್ಮವಿಶ್ವಾಸದಲ್ಲಿ ಒಂದು ಪ್ರಖರತೆಯಿತ್ತು (ಸಪಜು. ೪೦೯). [ಸಂ. ಪ್ರಖರತಾ]

**ಪ್ರಖೇಣ** (ನಾ). ಒಂದು ಬಗೆಯ ಮರ ; ಕದಂಬವೃಕ್ಷ : ಪಟ್ಟವೇಷ್ಟ . . . ಪ್ರಖೇಣ . . . ನೀರುಕಡವಾಲ (ಹಸುಹೂ. ೪೬). [ಸಂ.]

**ಪ್ರಖ್ಯ** (ಗು). ೧. ಕಾಣುವ ; ಸ್ಫುಟವಾದ. ೨. ಹೋಲುವ ; ಸಮಾನವಾದ : ಪರಮೇಷ್ಠಿಪ್ರಖ್ಯವಿಪ್ರಪ್ರತತಿಗಳಿಳಾಪ್ರಖ್ಯಶೂದ್ರಾಳಿಯಿಂ ಶೀತಕರಕಾಂತಪ್ರಖ್ಯರಪ್ಪ ವಣಿಜರಿಂ ಇನಜಪ್ರಖ್ಯ ಕೊಯ್ಯಾಳ್ಗಳಿಂ . . . ಅರಸಿಯ ಕಿರೆ ಭೂಭಾಗದೊಳ್ ಶೋಭಿಸಿಕರ್ಕ್ಯಂ (ಪ್ರಾಶಾ. ೦೯೨೩, ೦೦-೯೩ ; 1189). ೩. ಪ್ರಖ್ಯಾತ ; ಶ್ರೇಷ್ಠ : ಇಳಾಪ್ರಖ್ಯಶೂದ್ರಾಳಿಯಿಂ . . . ಶೋಭಿಸಿಕರ್ಕ್ಯಂ (ಪ್ರಾಶಾ ೦೯೨೩. ೦೦-೯೩ ; 1189). (ನಾ). ೪. ಸಮಾನವಾದುದು : "ಸದೃಕ್, ಸವಾಸಂ, ಸದೃಶಂ, ಸದೃಕ್ಷಂ, ಪ್ರಖ್ಯಂ . . . ಸನ್ನಿಭಂ—ಈ ೧೧ ಸರಿ" (ಶಬ್ದಾ. ೦೦೫-೯). [ಸಂ. ಪ್ರಖ್ಯಾ]

**ಪ್ರಖ್ಯಾತ** (ಗು). ೧. ಹೆಸರುವಾಸಿಯಾದ ; ಪ್ರಸಿದ್ಧವಾದ : ಪ್ರಖ್ಯಾತ ಕವಿಯಾದ ಮುದ್ದಣನ ಬರವಣಿಗೆ ಬಹು ರಮ್ಯವಾಗಿದೆ (ಜಾಪ್ರ). ೨. ಮಾನ್ಯತೆಯುಳ್ಳ ; ಅಂಗೀಕೃತವಾದ. (ನಾ). ೩. ಹೆಸರುವಾಸಿಯಾದುದು ; ಪ್ರಸಿದ್ಧವಾದುದು : ಕನ್ನಡಸಾಹಿತ್ಯದಲ್ಲಿ ಕುಮಾರವ್ಯಾಸಭಾರತವು ಪ್ರಖ್ಯಾತವಾಗಿದೆ (ಜಾಪ್ರ). ೪. ಪ್ರಸಿದ್ಧನಾದವನು ; ಕೀರ್ತಿವಂತ. ೫. ಎಲ್ಲರಿಗೂ ತಿಳಿದುದು ; ಸರ್ವವಿದಿತ ; ಬಹಿರಂಗ : ಲೆಕ್ಕದಲ್ಲಿ ಲೀಪಿತವಾಹರಿಗೇಕೆ ಅಜಾತನ ಸುದ್ದಿ ಪ್ರಖ್ಯಾತದಲ್ಲಿ ನೀತಿಯ ಹೇಳಿಹೆನೆಂದು ದೇಶವಲ್ಲಿ ಸುಳಿವವರಿಗೇಕೆ ಪರದೋಷನಾಶನದ ಸುದ್ದಿ (ಬೋಳಿಮಾ. ೦೨-೯೯). ೬. [ಕಾವ್ಯಮೀ] ರೂಪಕಗಳಲ್ಲಿನ ಮೂರು ಬಗೆಯ ಕಥಾಂಶಗಳಲ್ಲಿ ಒಂದು ; ರಾಮಾಯಣ, ಭಾರತ ಮೊದಲಾದ ಪ್ರಾಚೀನಗ್ರಂಥಗಳಲ್ಲಿ ನಿರೂಪಿಸಿರುವ ಕಥೆ : ಈ ಮೂರು ವಿಧವಾದ ವಸ್ತುವೂ "ಪ್ರಖ್ಯಾತ" ಎಂದರೆ—ರಾಮಾಯಣ, ಭಾರತ, ಕಥಾಸರಿತ್ಸಾಗರ ಮುಂತಾದ ಗ್ರಂಥಗಳಲ್ಲಿ ಬಂದು—ಪ್ರಸಿದ್ಧವಾಗಿರಬಹುದು (ಕೃಶಿಚಿ. ೨೦೩) ; ನಾಟಕ—ಇದರ ವಸ್ತು ಪ್ರಖ್ಯಾತ (ಸಂಪ್ರಾಟಿ. ೨೯).
[ಸಂ.]

**ಪ್ರಖ್ಯಾತಿ** (ನಾ). ೧. ಯಶಸ್ಸು ; ಕೀರ್ತಿ : ಪ್ರಖ್ಯಾತಿ ಹೊಂದಿ ಅಪಖ್ಯಾತಿ ಪಡೆ (ಗಾದೆ). 'ಪ್ರಖ್ಯಾತಿವೆಱು' ಪರಾ. ೨. ಹೊಗಳಿಕೆ ; ಸ್ತುತಿ. ೩. ಅರಿವು ; ತಿಳಿವಳಿಕೆ. [ಸಂ.]

**ಪ್ರಖ್ಯಾತಿವೆಱು** (ಕ್ರಿ). ಹೆಸರುವಾಸಿಯಾಗು ; ಪ್ರಸಿದ್ಧಿ ಹೊಂದು : ಸಂತತಜನಸವನೋದ್ಯಕ್ರಿಯೋಧಾರೆಯಿಂ ಮಾಡಿ ಕರಂ ಪ್ರಖ್ಯಾತಿವೆತ್ತಂ ನೃಪತತಿಯೊಳನೇಕಾಂತವಿದ್ಯಾವಿನೋದಂ (ಶಂಕ್ರಶಿ. ೯-೮೯).
[ಪ್ರಖ್ಯಾತಿ + ಪೆಱು$_1$]

**ಪ್ರಖ್ಯಾಪನ** (ನಾ). ಪ್ರಸಿದ್ಧಪಡಿಸುವುದು ; ಎಲ್ಲರಿಗೂ ತಿಳಿಯಪಡಿಸುವುದು : ಅದನ್ನು ರಾಷ್ಟ್ರಪತಿಯವರು ಪ್ರಖ್ಯಾಪನ ಮಾಡಿದಾಗ, ಅದು ಅಂಥ ರಾಜ್ಯಕ್ಷೇತ್ರಕ್ಕೆ ಅನ್ವಯಿಸುವಂಥ ಸಂಸತ್ತಿನ ಒಂದು ಅಧಿನಿಯಮವೆಂದಂತೆಯೇ . . . ಪ್ರಭಾವ ಉಳ್ಳದ್ದಾಗಿ ಇರತಕ್ಕದ್ದು (ಭಾರಾಶ. ೦೩೬). [ಸಂ.]

**ಪ್ರಖ್ಯೆ** (ನಾ). ೧. ಗ್ರಹಣಶಕ್ತಿ : ವಿಪನು . . . ಮಹಾವಿಪ್ರತಿಭೆಗೆ ಮಾತ್ರ ಸಹಜವಾದ ಪ್ರಖ್ಯೆಯಿಂದ ಕತೆಯನ್ನು ನಡೆಸಿಕೊಂಡು ಹೋಗುತ್ತಾನೆ (ಕಪಾಶ. ೯೬). ೨. ಕೀರ್ತಿ ; ಪ್ರಸಿದ್ಧಿ ; ಪ್ರಖ್ಯಾತಿ.
[ಸಂ. ಪ್ರಖ್ಯಾ]

**ಪ್ರಗಂಡ** (ನಾ). ಮೊಳಕೈಯಿಂದ ಹೆಗಲಿನ ವರೆಗಿನ ತೋಳಿನ ಭಾಗ : "ಪ್ರಗಂಡಃ . . . ಅಸ್ಕೋಪರಿ, ಮೊಳಕೈಗಿಂತಲೂ ಮೇಲೆ ಕಂಕಳವರೆಗೂ ಮೇಲುತೋಳಿನ ಪೆಸರು" (ಸಿದ್ಧಾಂತಿ. ೦೯೨). [ಸಂ.]

**ಪ್ರಗಣಿತ** (ಗು). ೧. ಎಣಿಸಿದ : ಗುಣಿಸಿದ. ೨. ಗಮನಿಸಿದ : ಬಗೆದು ಮೇಣ್ ಪರಮಧರ್ಮಮನರ್ಥಿಯನನ್ವಯಪ್ರಗ(ಣಿ)ತಾಭ್ಯುದಯಮೋಕ್ಷಸುಖಾಶ್ರಯಹೇತುವಂ ನೆಗಟ್ಟಿ (ಶಶಾ. ೩-೨೨೩) ; ನಿಗುರ್ವ ಚೌಕಾಳವೆಂಬ ಶಾರಿರ ಸುಗುತಿಯಿಂದನುಬದ್ಧಗೂಡಿ ಪ್ರಗಣಿಶಾಳತಿಯಸಿಯೆ ಸಂಧಿಸಿ ಗವಾಕ್ಷಸಪ್ರಕ್ಯವು (ಜಸಕೃ. ೦೯-೦೦). (ನಾ). ೩. ಅತಿಶಯತೆ : ಕನಕಕಾಂಚೀನಿನದಪ್ರಗಣಿತಮಗಲ್ದ ನಲ್ಲಳ ಜಗನಮಿದೆನ್ನೆರ್ದೆಯನೆಂತು ಪೊಕ್ಕೀಪುವುದೋ (ಶಂಶಶಾ. ೯-೭೩). [ಸಂ.]

**ಪ್ರಗತ** (ಗು). ೧. ಮುಂದುವರಿದ : ಇಂದಿನ ಪ್ರಗತ ದೇಶಗಳು ಬಟ್ಟೆಯನ್ನೂ ಅರಿಯದ ಕಾಲದಲ್ಲಿ ಭರತಖಂಡವು ಜ್ಞಾನವಿಜ್ಞಾನದ ಶಿಖರದಲ್ಲಿ ಇದ್ದಿತು (ಕರ್ನಾಟ. XIV ಮುನ್ನುಡಿ). ೨. ಅಪರೂಪವಾದ ; ವಿರಳವಾದ : ಲೋಕೋತ್ತರವಾದ : ಸಕಲಜನವಿನುತನಂ . . . ಪ್ರಗತಗುಣಗಣನನರಿಬಲವಿಘಟನನಂ ಕಂಡನನುಪವಾ ರಾಘವನಂ (ಶಶಾ. ೨-೨೬). ೩. ಹೆಚ್ಚಾಗಿ ಬಳಕೆಯಲ್ಲಿರುವ,—ವ್ಯವಹಾರದಲ್ಲಿರುವ : ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳಿಮಮೆಂದೊಗೆಕರ್ಕಂ (ಶಮದ. ೨೨೪). [ಸಂ.]

**ಪ್ರಗತಿ** (ನಾ). ಏಳಿಗೆ ; ಮುನ್ನಡೆ ; ಪುರೋಭಿವೃದ್ಧಿ : ಇತರ ಕಾರ್ಯಕ್ಷೇತ್ರಗಳಲ್ಲಿಯೂ ದೇಶವು ಪ್ರಗತಿಯನ್ನು ಹೊಂದಿತು (ಪ್ರಮಾಸ್ತ್ರ. ೨೦); ಅಡಿಗೆಯು ಅನಾಗರಿಕಸ್ಥಿತಿಯಿಂದ ಮನುಷ್ಯನು ಹೊಂದಿದ ಪ್ರಗತಿಯ ಸೂಚಿಕೆ (ಅಡುಶಾ. ೬೬). [ಸಂ.]

**ಪ್ರಗತಿಪಥ** (ನಾ). ಏಳಿಗೆಯ ಹಾದಿ ; ಅಭಿವೃದ್ಧಿಯ ಮಾರ್ಗ : ಜೀವನ ಹಿಂದಿನದಕ್ಕಿಂತ ನವೀನವೂ ಉತ್ತಮವೂ ಆಗಿ ಪ್ರಗತಿಪಥದಲ್ಲಿ ಸಾಗುತ್ತಿದೆ (ಕನ್ನಡ. ೧). [ಸಂ.]

**ಪ್ರಗತಿಪರ** (ಗು). ೧. ಏಳಿಗೆಯಲ್ಲಿ ಆಸಕ್ತಿಯುಳ್ಳ : ಪ್ರಗತಿಶೀಲ :

ಅದು ಪ್ರಗತಿಪರ ವಿಚಾರಶೀಲರ ಸಂಘವಾಗಿತ್ತು (ಕಂಕೋ. I. ೦೩೬). (ನಾ). ೨. ಏಳಿಗೆಯಲ್ಲಿ ಆಸಕ್ತಿಯುಳ್ಳವನು : ಬೇ ಪ್ರಗತಿಪರನಾದ ವ್ಯಕ್ತಿ. ಪ್ರಕೃತಶತಮಾನದ ಉತ್ತರಾರ್ಧದ ಪ್ರಾರಂಭದಲ್ಲಿ ಪ್ರಚಾರ ದಲ್ಲಿದ್ದ ಪ್ರಗತಿಪರಸಂಪ್ರದಾಯ ಅತ್ಯಂತ ಪವಿತ್ರವಾದದ್ದೆಂದು ಅವನು ಪರಿಗಣಿಸಿದ್ದನು (ಪ್ರಜು. ೩೩೩). [ಸಂ.]

**ಪ್ರಗತಿವಾದಿ** (ನಾ). (ಹಳೆಯ ಕಂದಾಚಾರಕ್ಕೆ ಶರಣಾಗದೆ) ಯಾವು ದಾದರೊಂದು ಕ್ಷೇತ್ರದಲ್ಲಿ ಸುಧಾರಣೆಯನ್ನು ಮಾಡಬೇಕೆಂದು ವಾದಿಸುವ ವ್ಯಕ್ತಿ : ನಾನು ಪ್ರಗತಿವಾದಿಯೋ ಅಲ್ಲವೋ ನನಗೆ ಗೊತ್ತಿಲ್ಲ (ಪ್ರಸಂ. ೩೩೭) ; ಅಶಿಸ್ತರಿತದಲ್ಲಿ ಸುಧಾರಣೆಯನ್ನು ಬಯಸುವ ಪ್ರಗತಿ ವಾದಿಗಳನ್ನು ಗುರುತಿಸಬಹುದು (ಶಾಕತ. ೨೩). [ಸಂ. ಪ್ರಗತಿವಾದಿನ್]

**ಪ್ರಗತಿಶೀಲ** (ಗು). ೧. = ಪ್ರಗತಿಪರ ೧ : ಭಾರತದ ಇತರ ಭಾಷೆಗಳಲ್ಲಿ ನವ್ಯಕವಿಗಳು ಹಾಗು ಪ್ರಗತಿಶೀಲಪಂಥಗಳವರು ನಡೆಸುತ್ತಿರುವ ಚಳವಳಿ ಗಳನ್ನು ಗಮನಿಸಬೇಕಾದುದು ಅಗತ್ಯ (ಕಂಕೋ. I, ೦೬೩). (ನಾ). ೨. ದೀನದಲಿತರನ್ನು ಕುರಿತು ಕೃತಿರಚನೆ ಮಾಡಬೇಕೆಂಬ ತತ್ತ್ವವನ್ನು ಅನುಸರಿಸಿ ಬರೆದ ಸಾಹಿತ್ಯ : ಪ್ರಗತಿಶೀಲಲೇಖಕರು ಸಾಹಿತ್ಯಕ್ಕೆ ಹೆಚ್ಚಿನ ವಸ್ತುವೈವಿಧ್ಯ, ವಿಸ್ತಾರಗಳನ್ನು ತಂದರು (ಕಂಕೋ. XI. ೩೦೬) ; ಇತರ ಸಾಹಿತಿಗಳ ಸಾಹಿತ್ಯಸೃಷ್ಟಿಯನ್ನು ೧. ಅನುಭಾವಿಸಾಹಿತ್ಯ—ರಹಸ್ಯವಾದ . . . ೩. ಪ್ರಗತಿಶೀಲ, ೪. ನವ್ಯಕಾವ್ಯ ಅಥವಾ ಪ್ರಯೋಗ ವಾದ ಎಂದು ವಿಭಾಗಿಸಬಹುದಾಗಿದೆ (ಶಾಕತ. ೯೭೩). ೩. ದೀನದಲಿತ ರನ್ನು ಕುರಿತು ಕೃತಿರಚನೆ ಮಾಡಬೇಕೆಂದು ಹುಟ್ಟಿಕೊಂಡ ಲೇಖಕರ ಒಳಗದ ಸದಸ್ಯ : ಬಡವರು, ಕಾರ್ಮಿಕರು, ಕೂಲಿಕಾರರು ಮೊದಲಾದ ವರ ಬದುಕಿನ ನೋವುನಲಿವುಗಳಿಗೆ ಅಭಿವ್ಯಕ್ತಿ ನೀಡಿ ಪ್ರಗತಿಶೀಲರು ಕನ್ನಡಸಾಹಿತ್ಯಕ್ಕೆ ಹೊಸ ಆಯಾಮಗಳನ್ನಿತ್ತರು (ಕಂಕೋ. XI. ೩೦೬). [ಸಂ.]

**ಪ್ರಗಲ್ಭ** (ಗು). ೧. ಪ್ರತಿಭೆಯಿಂದ ಕೂಡಿದ. ೨. ಧೈರ್ಯದಿಂದ ಕೂಡಿದ ; ಕೆಚ್ಚುಳ್ಳ. ೩. ಚೆನ್ನಾಗಿ ಬೆಳೆದಿರುವ. ೪. ಪಾಂಡಿತ್ಯ ಪೂರ್ಣವಾದ ; ಪ್ರೌಢವಾದ : ನೃಪನಂ ಜಾಣ್ಣೊಂಡ ನಿಜಪ್ರಗಲ್ಭ ವಚನದೆ ನುಡಿದರ್ (ಶಾದಂಗಾ. ೬೬೦). (ನಾ). ೫. ಧೈರ್ಯಶಾಲಿ ; ದಿಟ್ಟ. ೬. ಪ್ರೌಢ ; ಪ್ರವೀಣ ; ನಿಪುಣ : "ಪ್ರಗಲ್ಭಃ, ಪ್ರೌಢಃ—ಈ ೨ ಪ್ರೌಢಂ" (ಕಂಅಭಿ. ೬೯-೨೬೩) ; ನೆಗಟ್ದಾರೆ ಪುಣ್ಯಾಹ ಸ್ವರಂ . . . ಪುಗಲೆಟ್ದಂ ವಿವಿಧಾಸ್ತ್ರಪ್ರಗಲ್ಭರಂ ತನ್ನ ಚಟ್ಟರಂ ಕಳಶಭವಂ (ಶಂಕಜಾ. ೨-೬೯) ; ಬಹುಶ್ರುತನುಂ ಅತಿಪ್ರಗಲ್ಭನುಂ . . . ಆಚಾರ್ಯನಕ್ಕುಂ (ಅಾತ್ರಿ. ೦೦-೨ ಅ). ೭. ಚುರುಕಾದ ಬುದ್ಧಿಯುಳ್ಳ ವನು ; ಪ್ರತಿಭಾವಂತ : "ಪ್ರಗಲ್ಭಃ, ಪ್ರತಿಭಾನ್ವಿತಃ—೨ ಆಗಾಗ್ಗೆ ಹೊಸಹೊಸದಾಗಿ ಪ್ರಕಾಶಿಸುವ ಪ್ರಜ್ಞೆಯುಳ್ಳವನ ಪೆಸರು" (ಸಿದ್ಧಾಂತಿ. ೩೨೯). [ಸಂ.]

**ಪ್ರಗಲ್ಭತೆ** (ನಾ). ೧. ಧೈರ್ಯ ; ಕೆಚ್ಚು. ೨. ಆಳವಾದ ತಿಳಿವಳಿಕೆ ; ಪಾಂಡಿತ್ಯ : "ಪ್ರತಿಪತ್ತಿಃ, ಪ್ರಗಲ್ಭತಾ — ಈ ೨ ಅಱಿವುದು" (ಕಂಅಭಿ. ೦೨೯-೯೯) ; ಪ್ರಗಲ್ಭತೆಯುನಾಯ್ದುವೋಲ್ ಬೆಳಗುವುಗಳಂ ಗಾಳಿ ದುಂಬಿಗಳ್ ಬಗೆದು ಪೊಲ್ಲೆ ಮಲ್ಲಿಗೆಯ ಮಾಲೆ ಮಲ್ಲಿಂಗೆ ವಾಯ್ತ್ರಗೆತ್ತೆಱಗೆ (ಅಂಚಾತ. ೦೪-೯೬). ೩. ಪ್ರೌಢಿಮೆ ; ನೈಪುಣ್ಯ : ಆ ಕೃತಿ ಮುನ್ನಂ ಚಿನ್ನಿಂಗಾಕರಮೆನಿಸಿರ್ದು ಮತ್ತೆ ಕನ್ನಡಿಸಿತ್ತಿನ್ನೀ ಕವಿತೆಯಿಂ ಪ್ರಗಲ್ಭತೆಯಿಂ ಕಾದಂಬರಿಯ ಸೊಬಗದೇನಚ್ಚರಿಯೋ (ಕಾದಂಪೂ. ೬). [ಸಂ. ಪ್ರಗಲ್ಭತಾ]

**ಪ್ರಗಲ್ಭೆ** (ನಾ). ೧. ದಿಟ್ಟ ಹೆಂಗಸು. ೨. ಪ್ರೌಢವಯಸ್ಸಿನ ಮಹಿಳೆ. ೩. ಗಯ್ಯಾಳಿ : ಗಟವಾಣಿ. ೪. [ಕಾವ್ಯಮೀ] ಯೌವನದ ಅನುಭವದ ಪರಿಣಾಮವಾಗಿ ಭಾವಪರವಶತೆಯುಳ್ಳವಳು : ಅನುರಕ್ತೆ ಸರಸತರವಾನಿನಿ ಪರಿಚಿತೆಯಖಿಳವಿಷಯನಿಶ್ಚಿತಮತಿ ಕಾಮಿನಿಯೆನಿಸಿದಾಕೆ ಕವಿಕಾಮನ ಮತದಿಂ ಪ್ರಗಲ್ಭೆಯೆನೆ ಪೆಸರ್ವಡೆಗುಂ (ಶೃಂಗಾರ. ೩-೩೩) : ಮತಿಯನುಳ್ಳ ವೈಶಿಕಕ್ಕೆ ಗತಿಯೆನಿಸುವ ಮಾತಿನಿಂದೆ ರತಿಗೆ ತಪ್ಪದಂತೆ ರತಿಯನ್ನೆದೆ ಬೆಳೆಯುವ ಚತುರಂಚ್ಚಿಗೆಯ್ಯು ಠಕ್ಕರತಿಶಯವನೆ ಗೆಲ್ವ ಪಲವು ಕೃತಕವಜಿಪವಳೇ ಪ್ರಗಲ್ಭೆ (೩೩೮. ೩-೦೨). [ಸಂ. ಪ್ರಗಲ್ಭಾ]

**ಪ್ರಗಾಢ** (ಗು). ತೀವ್ರವಾದ ; ಗಾಢವಾದ : ಇತರರ ಮೇಲೆ ಕೂಡ ಪ್ರಗಾಢ ಪ್ರಭಾವವನ್ನು ಬೀರುವ ದುಷ್ಟಪ್ರವೃತ್ತಿ ನೆಗೂಗಿ ಇದೆ (ದಂಶಸ್ಯ. ೦೯). [ಸಂ.]

**ಪ್ರಗಾಥ** (ನಾ). ೧. [ಛಂದ] ಮಿಶ್ರಛಂದಸ್ಸುಗಳಿಂದಾದ ಒಂದು ಬಗೆಯ ವೈದಿಕಛಂದಸ್ಸು : ೮ ಮತ್ತು ೧೨ ಅಕ್ಷರಗಳ ಪಾದಗಳನ್ನು ಬೆರಸಿ ನಾಲ್ಕುಪಾದದ ವೃತ್ತವನ್ನು ಏಳರ ವರೆಗೆ ವಿಸ್ತರಿಸಿ ಪ್ರಗಾಥಗಳನ್ನು ವೈದಿಕಕವಿಗಳು ರಚಿಸಿರುತ್ತಾರೆ (ಕ್ಕಿಚಿ. ೦೦೯) ; ವೈದಿಕಛಂದಸ್ಸಿನಲ್ಲಿ ಗಾಯತ್ರಿ, ಅನುಷ್ಟುಭ್, ತ್ರಿಷ್ಟುಭ್, ಜಗತೀ, ಪ್ರಗಾಥ ಹೀಗೆ ಐದು ಮುಖ್ಯ ಪ್ರಕಾರಗಳೆಂದು ತೋರುತ್ತದೆ (ಕಂಛೋಂ. ೯೭). ೨. ಆಧುನಿಕ ಕವಿಗಳು ರಚಿಸುವ, ಸಾಮಾನ್ಯವಾಗಿ ದೀರ್ಘವಾದಗಳಿರುವ, ಘನವಾದ ವಸ್ತುವನ್ನು ಕುರಿತು ಸಂಭೋಧನಪರವಾದ ಒಂದು ಕವಿತೆಯ ಪ್ರಕಾರ : ಇಂಗ್ಲೀಷಿನ ಮುಖಾಂತರ ಕನ್ನಡಕಾವ್ಯಕ್ಷೇತ್ರದಲ್ಲಿ ಸುಳಿದು ಬಂದ ಛಂದೋರೂಪಗಳಲ್ಲಿ ಪ್ರಗಾಥವು ಒಂದು . . . ಪ್ರಗಾಥವು ಭಾವಗೀತದ ಒಂದು ಪ್ರಕಾರ (ಧಂಛೋಂ. ೩೦೬) ; ಕನ್ನಡದಲ್ಲಿ ಅನೇಕ ಕವಿಗಳು ಪ್ರಗಾಥಗಳನ್ನು ಬರೆದಿದ್ದಾರೆ (ಕಂಕೋ. XI. ೩೦೬). [ಸಂ.]

**ಪ್ರಗೀತ** (ಗು). ೧. ಹಾಡಿದ. (ನಾ). ೨. ಹಾಡು: ಗೀತೆ. ೩. ಕೊಂಡಾಟಕ್ಕೆ ಪಾತ್ರನಾದವನು ; ಪ್ರಸಿದ್ಧ : ಪೆಱನಗಾಜರು ಪ್ರಗೀತರನಿಂಬಾಗಿರೆ ಚೌಪಳಿಗೆಗಳೊಳ್ ಕುಳ್ಳಿರಿಸಿದರೊಡನೆಸೆಯೆ ನೆರೆದ ಪುರಜನಸಹಿತಂ (ಶಂಕಜಾ. ೨-೬೬). ೪. ಹ್ರಸ್ವಸ್ವರವನ್ನು ದೀರ್ಘಸ್ವರ ದಂತೆ ಹೇಳುವುದು : ಸಾಮಗಾನದಂತೆ ಎಳೆದು ಹೇಳುವುದು "ಪ್ರಗೀತ" ಪೆಸರುವುದು (ಶಂಕೀಅರ. ೦೨೦). [ಸಂ.]

**ಪ್ರಗೀತಿ** (ನಾ). ೧. ಪ್ರಶಂಸೆಯ ಉಲ್ಲೇಖ : ಮಿಗೆ ಕನ್ನಡಗಬ್ಬಂಗ ಳೊಳಗಣಿತಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ಗದ್ಯಕಥಾಪ್ರಗೀತಿ ಯಿಂ ತಚ್ಚಿರಂತನಾಚಾರ್ಯರ್ಕಳ್ (ಕಶಾ. ೦-೨೬). ೨. [ಛಂದ] ಸಂಸ್ಕೃತದ ಒಂದು ಬಗೆಯ ಛಂದಸ್ಸು. [ಸಂ.]

**ಪ್ರಗುಣ** (ಗು). ೧. ಪ್ರಶಸ್ತವಾದ ಗುಣಗಳಿಂದ ಪರಿಪೂರ್ಣವಾದ.— ಶ್ರೇಷ್ಠವಾದ : ಬಗೆದು ಮಾರ್ಗದ್ವಿತಯಗತಿಗಳಂ ಪ್ರಗುಣಗುಣಗಣೋ ದಯರ್ಕಳಿ . . . ಬೆರಸಿ ಪೇಟ್ಗೆ ರಸವಿಶೇಷದೊಳ್ (ಕಶಾ. ೨-೯೮) ; ತರವೇಟ್ ಕೇಯೂರಹಾರಪ್ರಗುಣಮಣಿವಿಭೂಷಾವಿಶೇಷಂಗಳಂ (ಅಾತ್ರಿ. ೩-೬೯). ೨. ನೇರವಾಗಿರುವ ; ವಕ್ರವಲ್ಲದ : "ಪ್ರಗುಣಮಱೆಯಿಲು ಋಜು ಸರಲಂ" (ಕನ್ನಕೋ. ೦೦೯-೩೬). [ಸಂ.]

**ಪ್ರಗ್ರಹ** (ನಾ). ೧. ಬಿಗಿಯಾಗಿ ಹಿಡಿದುಕೊಳ್ಳುವಿಕೆ. ೨. ತೆಗೆದು ಕೊಳ್ಳುವಿಕೆ ; ಸ್ವೀಕರಿಸುವಿಕೆ. ೩. (ಇಂದ್ರಿಯಗಳ) ಹತೋಟಿ ; ನಿಗ್ರಹ. ೪. ಹಗ್ಗ ; ರಜ್ಜು : "ಆ ಹಗ್ಗದಲ್ಲಿಯುಂ ಪ್ರಗ್ರಹ ಮೆಂಬುದು" (ಕಂಅಭಿ. ೦೩೯-೦೯). ೫. ಕುದುರೆಯ ಕಡಿವಾಣ : ನಾನಾರತ್ನಕೂಟಾಂಶುಜಾಲದಿನಾಶಾವಧುಗಿತ್ತು ಚಿತ್ರಪಟಮಂ ಚೈತ್ರಾ ಲಯಮಂ ಮತ್ತಮಿತ್ತುದು ಸಪ್ತಾಶ್ವನ ಸಪ್ತಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯಿಂ (ಶಂಕಾಪು. ೯-೦೨೯). ೬. ಸೆರೆ ಸಿಕ್ಕವನು ; ಬಂದಿ ; ಸೆರೆಯಾಳು : "ಪ್ರಗ್ರಹಃ, ಗ್ರಾಹಕಃ, ವಂದೀ—ಈ ೩ ಬಂದಿ"

(ಹಲಾಯು. ೬೩-೬೪). ೭. ಸೆರೆಹಿಡಿಯುವಿಕೆ : ದಸ್ತಗಿರಿ ಮಾಡುವುದು : "ಗ್ರಾಹಕಂ ಪ್ರಗ್ರಹವೆನಲ್ಬಂದಿವಿಡಿಹವಕ್ಕು" (ಶಬ್ದಮ. ೧೬೬-೯೦). ೮. ಕಿರಣ : ಕದಿರು : "ಉಸ್ರಃ . . . ಪ್ರಗ್ರಹಃ, ಉಪಧೃತಿಃ . . . ಗೌಃ—ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬-೩೪) : "ಪ್ರಗ್ರಹಂ ದೀಪ್ತಿ . . . ಪ್ರದ್ಯೋತವಮಾ ರಶ್ಮಿ" (ಶಬ್ದಮ. ೦೦-೩). ೯. ತೂಕವು ಏರುಪೇರಾಗದಿರಲು ತಕ್ಕಡಿಯ ಮಧ್ಯದಲ್ಲಿ ಕಟ್ಟಿರುವ ದಾರ: "ಪ್ರಗ್ರಾಹಃ, ಪ್ರಗ್ರಹಃ—೨ ತ್ರಾಸಿನ ದಾರ, ಕುದುರೆ ಮುಂತಾದುವನ್ನು ಕಟ್ಟುವ ಹಗ್ಗ" (ಶಿಘ್ರಾಂತ. ೯೨೮). ೧೦. ಮುಖಂಡ ; ನಾಯಕ : ಅಂತು ಪ್ರಥಮನಾಕನಾಯಕ ಪ್ರಗ್ರಹಾಮರರ್ ಬಂದು ಪೋಡಶತೀರ್ಥಕರಪಾದಪಯೋಜಂಗಳ್ಗವನತವಣಿಮಕುಟರಾಗಿ ಪರಿಚಾರಕಕೃತ್ಯದೊಳ್ ನೆಗಟೆ (ಶಾಂತಿಪು. ೦೦-೯೯ ವ). ೧೧. ತೋಳು ; ಭುಜ. ೧೨. ದಯೆ ; ಅನುಗ್ರಹ. ೧೩. ವಿಷ್ಣು. ೧೪. ಚಿನ್ನ. [ಸಂ.]

**ಪ್ರಗ್ರಾಹ** (ನಾ). ೧. ತೆಗೆದುಕೊಳ್ಳುವುದು. ೨. ತಕ್ಕಡಿಯ ಮಧ್ಯದಲ್ಲಿರುವ ದಾರ. ೩. ಕುದುರೆಯ ಕಡಿವಾಣ. ೪. ಕುದುರೆಯನ್ನು ಕಟ್ಟುವ ಹಗ್ಗ : "ಪ್ರಗ್ರಾಹಃ, ಪ್ರಗ್ರಹಃ—೨ ತ್ರಾಸಿನ ದಾರ, ಕುದುರೆ ಮುಂತಾದುವನ್ನು ಕಟ್ಟುವ ಹಗ್ಗ" (ಶಿಘ್ರಾಂತ. ೯೨೮). [ಸಂ.]

**ಪ್ರಘಟ್ಟ** (ನಾ). ೧. ಸಂದರ್ಭ ; ಸನ್ನಿವೇಶ ; ಪ್ರಸಂಗ : ಅನಿತೊಂದು ಮಹಾಪ್ರಘಟ್ಟದೊಳಗ್ರಪೂಜೆಯಂ ನಾರಾಯಣಂಗೆ ಕೊಟ್ಟು (ಪಂಪಭಾ. ೬-೬೩ ವ). ೨. ಸಂಗತಿ ; ವಿಷಯ : ಕಟಿತ್ತತರುವಂ ನೆಲದೊಳಿಕ್ಕಿ ಮಗುಳ್ದು ಬಪ್ಪುದುಮಾ ಪ್ರಘಟ್ಟಮಂ ವಿಶಾಖಭೂತಿಭೂಪಾಳಂ ಕೇಳ್ದು (ವರ್ಧಮಾ. ೨-೩೩ ವ). [ಸಂ.]

**ಪ್ರಘಟ್ಟಕ** (ನಾ). ೧. = ಪ್ರಘಟ್ಟ ೧ : ಇನಿತೊಂದುಗ್ರರಣಪ್ರಘಟ್ಟಕದೊಳ್ ಭಾರಾಪಹಾರಂ ಧರಾಂಗನೆಗೀಯರ್ವರಿನಾದುದಾಯ್ತು (ಪಂಪಭಾ. ೦೪-೦೦); ಚೋಳಕರ ಪ್ರಘಟ್ಟಕದಿಂ ಕೆಟ್ಟ ಸಮ್ಯಕ್ಸ್ಥಿಯಂ ಪುನರ್ಭರಣಂ ಮಾಡಿ (ಎಇ. XV, ೬೪-೦೬; 1060) ; ನಲ್ಲನೊಲ್ಲದೆ ಪೋದೀ ವಿರಹಪ್ರಘಟ್ಟಕದೊಳ್ ನೃಪಥ್ಯಮುಮಂ ಪಥ್ಯಮೇ (ಪಂಪ್ರಶು. ೮-೬೫). ೨. ವಿಧಿ ; ಆಜ್ಞೆ ; ನಿಯಮ ೩. ಬೋಧನೆ; ಉಪದೇಶ. [ಸಂ.]

**ಪ್ರಘಟ್ಟನ** (ನಾ). ೧. = ಪ್ರಘಟ್ಟ ೧ : ಐವರ್ ಮಂತ್ರಿಗಳುಂ ಬರಿಸಿ ಮೇಘವರ್ಣಂ ಈ ಪ್ರಘಟ್ಟನಕ್ಕೇಗೆಯ್ವಮೆಂದು ಪೇಟ್ ಮಂತ್ರಿಗಳಿಂತೆಂದರ್ (ಪಂಪಶಂ. ೨೦೪-೨) ; ಅಂತು ಮೂವರುಂ ಪ್ರೀತಿಮಾತಿಕನ್ಯಾಸ್ವಯಂವರ ಪ್ರಘಟ್ಟನದೆ ಜಿನರೂಪಮಂ ತಳೆದು (ಶಬಚ. ೨-೬ ವ). ೨. ವಿಧಿ ; ನಿಯಮ. [ಸಂ.]

**ಪ್ರಘಣ** (ನಾ). ೧. ಮನೆಯ ಮುಂದಿನ ಅಂಗಳ : ಮೊಗಸಾಲೆ : "ಪ್ರಘಣಃ, ಪ್ರಘಾಣಃ, ಅಳಿಂದಕಃ—ಈ ೩ ಮೊಗಸಾಲೆ" (ಹಲಾಯು. ೩೦-೦೪೪); ಆ ಪದಿನಾಱುಂ ನಾಟ್ಯಗೃಹದ ಪ್ರಘಣಂಗಳೊಳಿರ್ಕುಂ ದೂಪಘಟಂಗಳ್ (ಪುಣ್ಯಶು. ೦೪-೦೯೯). ೨. ನೆಲಗಟ್ಟು : ಅಂತು ನಿಜಮುಖ ಪ್ರತಿಬಿಂಬಕದಂಬದೀ ಮರಕತಪ್ರಘಣದೊಳ್ ಪದ್ಮಪುಷ್ಪೋಪಹಾರಮಂ ವಿರಚಿಸಿ (ಪಂಪ್ರಶು. ೦೦-೦೨೪ ವ) ; ತಾರಾತತಿ ಮಾರ್ಪೊಳೆಯೆ ಮನಂಗೊಳಿಪ ತಿಳಿಗೊಳಂಗಳ ತೆಱನಂ ತಳೆದುವು ಬಲಿಗೆದಱಿದ ವಿಚಕಿಳದಲರಿಂ ನೀಲಮಣಿಮಯಪ್ರಘಣಂಗಳ್ (ಪುಷ್ಪಶು. ೪-೩೪). ೩. ಕಬ್ಬಿಣದ ಹಾರೆ. ೪. ತಾಮ್ರದ ಪಾತ್ರೆ. [ಸಂ.]

**ಪ್ರಘಾಟ** (ನಾ). ಗುಂಪು ; ಸಮೂಹ : ಆದಡೆಲೆ ಪವಮಾನಸುತ ನೀನಾದರಿಸು ನಡೆ ನೃಪತಿಯನು ನಾ ಕಾದುವೆನು ಕೌರವರ ಸಕಲಬಲ ಪ್ರಘಾಟದಲಿ (ಕುಭಾ. ೦೪-೩೪). [<ಸಂ. ಪ್ರಘಟಾ]

**ಪ್ರಘಾಣ** (ನಾ) ೧. = ಪ್ರಘಣ ೧ : "ಪ್ರಘಣಃ, ಪ್ರಘಾಣಃ, ಅಳಿಂದಕಃ—ಈ ೩ ಮೊಗಸಾಲೆ" (ಹಲಾಯು. ೩೦-೦೪೪). ೨. ಮರದ ಕವಲು : "ಪ್ರಘಾಣಃ, ಸ್ಕಂಧಂ—ಈ ೨ ಮರದ ಪಣೆ" (ಹಲಾಯು. ೩೦-೨೮); "ಮರದ ಕವಲು ಪ್ರಘಾಣಂ ಸ್ಕಂಧಮಕ್ಕುಂ" (ಶಬ್ದಮ. ೩೨-೩). [ಸಂ.]

**ಪ್ರಘಾತ** (ನಾ.) ೧. ಕಾಳಗ; ಯುದ್ಧ : "ಸಂಗ್ರಾಮಃ . . . ಪ್ರಘಾತಃ, ಜನ್ಯಂ, ಅಭಿಸಂಪಾತಃ, ಸಮ್ಮರ್ದಃ, ವಿಗ್ರಹಃ—ಈ ೩೫ ಕಾಳೆಗಂ" (ಹಲಾಯು. ೬೩-೩೦೦). ೨. ಕೊಲೆ : ವಧೆ. ೩. ಕಡಿಯುವುದು; ಭೇದ: ಸಮ್ಯಕ್ತ್ವಂ . . . ಸಾವದ್ಯೋರ್ವೀಜಪ್ರಘಾತಂ ರಜನಿಚರತರಾಗಂ ಮಹದ್ಬ್ರಹ್ಮಚರ್ಯಂ (ಶಾಂತಿಪು. ೬-೩೦) . ೪. ಕೇಡು; ಅಪಾಯ: ಜಾನಕಿಬಾಯಿಯರು ತಮ್ಮ ಸತೀತ್ವವನ್ನು ನಿಧಿಯನ್ನು ಕಾಯುವ ಘಟಸರ್ಪದಂತೆ ಕಾಯ್ದುಕೊಂಡು ಬಂದಿದ್ದರು. ಈ ಸತೀತ್ವದ ಮೇಲೆ ಪ್ರಘಾತ ಬರುವ ಸನ್ನಿವೇಶಗಳು ಸಂಭವಿಸಿದ್ದಿಲ್ಲ ನಿಜ (ಸಖು. ೨೨೬). [ಸಂ.]

**ಪ್ರಘೋಷಣ** (ನಾ). ದೊಡ್ಡ ಧ್ವನಿ; ಉದ್ಘೋಷಣೆ : ವಿನುತಶಿವವಿದ್ಯಾಗಮದಿ ಸಂಜನಿತ ಸಾನುಭವಪ್ರಘೋಷಾನವರತಮುಂ ಬಸವರಸನ ಮನೆಯೊಳೇಂ ಪೇಳ್ವೆ (ಬಸಪು. ೩೬-೬೪). [ಸಂ.]

**ಪ್ರಚಂಡ** (ಗು). ೧. ಬಹಳ ಉಗ್ರವಾದ; ತೀಕ್ಷ್ಣವಾದ. ೨. ಕ್ರೂರವಾದ ; ಭಯಂಕರವಾದ : ಮತ್ತೇಭವಧಪ್ರಚಂಡಯಮದಂಡಮದೇಂ ಮಾಣ್ಬುದೆ ಪಿಪೀಲಿಕಾವಧವಿಧಿಯಂ (ಜಗು. ೨-೩೪). ೩. ಶಕ್ತಿಯುತವಾದ; ಬಲದಿಂದ ಕೂಡಿದ : ಮಹಾಸಾಮನ್ತಪ್ರಚಣ್ಡದಣ್ಡ[ನಾ]ಥ ಶ್ರೀಮತು ಬಯ್ಸರೊಳ್ಗಣ್ಡರೆಬ್ಬರಸರ್ (ಸೌಇಇ. XX, ೨೨-೦೨; 1027) ; ಸಕಳರಾಜ್ಯಕಂಟಕೋತ್ಪಾಟನಪ್ರಚಣ್ಡದೋರ್ದಣ್ಡನುಂ (ಕಇ. ೩-೨-೦೪೪; 1058). (ನಾ). ೪. ಭಯಂಕರವಾದುದು : ಸಿಂಹವು . . . ಪ್ರಚಂಡವಾದ ಗರ್ಜನೆ ಮಾಡುವುದು (ಶುಂಠಿಯು. ೪-೨೦೬) ; ಬಹುಶಃ ಬಹು ಪ್ರಚಂಡವಾದ ಮತ್ತು ಅಪೂರ್ವವಾದ ಪದ್ಧತಿಯಲ್ಲಿ ನಾನು ಆರಂಭಿಸಿದ್ದೇನೆಂದು ತೋರುತ್ತದೆ (ಕೀಕ. ೩೪). ೫. ನಿಪುಣ ; ಪ್ರಗಲ್ಭ : ಅಜಂತಾ ಚಿತ್ರಗಳನ್ನು ನಿರ್ಮಿಸಿದ ಕಲಾವಿದರು ಕಲಾಕೌಶಲ್ಯದಲ್ಲಿ ಪ್ರಚಂಡರಾಗಿದ್ದರು (ಶಾಕದ. ೩೨೩). ೬. ಪರಾಕ್ರಮಿ : ಈ ಪದ್ರಾವರ್ತಕೋದಂಡಮನವಯವದಿಂದೇಱಿಸಲ್ ಸಾಲ್ವ ದೋರ್ದಂಡಾವಷ್ಟಂಭಪ್ರಚಂಡಂ ಜನಕಜೆಗೆ ವರಂ ಬರ್ಪುದು (ಕುರಾಜ. ೩-೬೬). ೭. ಅಸಾಮಾನ್ಯನಾದವನು ; ಅಸಾಧಾರಣ ವ್ಯಕ್ತಿ : ಅವರ ಕಡೆಯ ಮಗ ಬಲು ಪ್ರಚಂಡ, ಎಲ್ಲ ತರಗತಿಗಳಲ್ಲೂ ಅವನೇ ಮೊದಲಿಗ (ಕೂಶ). ೮. ಒಂದು ನರಕದ ಹೆಸರು : ಉಗ್ರ ಮೃಕಾಸ್ಯ ಗ್ರಾಹ ಕುಂಭಿ ನಕ್ರವೆಂಬ್ಬದು ಮುಂತ್ರು ನರಕಂಗಳಿಂದೊಡಗೂಡಿ ಪ್ರಚಂಡವೆಂಬರಘುನರಕವಿಹುದು (ಅಜೀಕ. ೦೮೦).

**ಪ್ರಚಂಡದಂಡನಾಯಕ**=ಒಂದು ಬಿರುದು : ಮಹಾಪ್ರಚಣ್ಡದಣ್ಡನಾಯಕಂ . . . ಶಂಕರಕಿಂಕರಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ ಶ್ರೀಮದ್ದಣ್ಡನಾಯಕರೀಶ್ವರ ಭಟ್ಟರ್ಗ್ಗೆ (ಸೌಇಇ. XX, ೪೬-೨೦; 1072). [ ಸಂ. ]

**ಪ್ರಚಂಡಿ** (ನಾ). ಬೆದೆ ಬಂದ ಹಸು, —ಆವು "ಪ್ರ[ಶಾಶ. ಅ]ಚಂಡೀ, ಸುರತಾ—ಈ ೨ ಬೆದೆಯಾವು" (ಹಲಾಯು. ೪೩-೦೦೩) ; "ಪ್ರಚಂಡಿಯೆನೆ ಬೆದೆಯಾಕಳೆಂದೆನಿಕ್ಕುಂ" (ಶಬ್ದಮ. ೩೩-೩). [ಸಂ. ಪ್ರಚಂಡೀ]

**ಪ್ರಚಂಡೆ** (ನಾ). ೧. ಬುದ್ಧಿವಂತೆ ; ನಿಪುಣೆ : ನೀನು ಬಿಡಮ್ಮ. ಕೆಲವು ವಿಷಯಗಳಲ್ಲಿ ಪ್ರಚಂಡೆ (ದೂಕಟ್ಟ. ೬). ೨. ಮೊಂಡುಸ್ವಭಾವದವಳು : ಹಟಮಾರಿ : ಅವರೇನೆಂದೊಡಮೇಗೆಯ್ದೊಡಮಾಸಿರದಿರಲಾರ್ಪರಪ್ಪೊಡೆ ಪೋಗಿಮಲ್ಲದಾಗಳ್ ಪೋಗಲ್ವೇಡೆಂದೊಡಾ ಪ್ರಚಂಡೆ ಇಂತೆಂದಳ್ (ಪಂಪಶಂ. ೦೩೬-೬). [ಸಂ. ಪ್ರಚಂಡಾ]

**ಪ್ರಚಕ್ರ**(ನಾ). ೧. ಆಕ್ರಮಣಕ್ಕಾಗಿ ಸೈನ್ಯವು ಪಾಳೆಯದಿಂದ ಹೊರಡು

ವುದು : "ಪ್ರಚಕ್ರಂ, ಚಲತಾರ್ಥಕಂ—ದಂಡು ಅಣ್ಣದ ಸ್ಥಲ ಬಿಟ್ಟು ಹೊರಟದ್ದಕ್ಕೆ ಹೆಸರು" (ಸಿದ್ಧಾಂತಿ. ೨೬೬). ೨. ಚಲನೆಯಲ್ಲಿರುವ ಸೈನ್ಯ. [ಸಂ.]

**ಪ್ರಚಯ** (ನಾ). ೧. ಒಟ್ಟುಗೂಡಿಸುವಿಕೆ ; ಕಲೆಹಾಕುವಿಕೆ. ೨. ಗುಂಪು ; ಸಮೂಹ : ಸಕಲಬಂಧುವ್ರಾತಪ್ರಚಯಮೆಂಬ ಪಿಕಾವಳಿಯಿಂಬ ಸದ್ಭಕ್ತಶುಕಕುಳಮೆಂಬ ವೇಷ್ಟಿಸಿದ ಗಾಯಕ ಸತ್ಪಾತ್ರಿಹಾರವ್ರಾತ್ಯಪಾಠಕ ತತಿಗಿತ್ತು . . . ಜೀವಿತಮಂ ಮದನಂ ಬಸಂತದೊಳ್ (ಶಾಂತಿಪು. ೬-೧೨೯) : ಕೊಳಲ್ಕುಚಿತಮದಲ್ಲು [ ಲ್ಲು ] ವಿನೇಯಪ್ರಚಯಕ್ಕುಪಭೋಗ ಭೋಗಪರಿಮಿತಗತಿಯೊಳ್ (ಧರ್ಮಪು. ೬-೧೬) ; ಉಮೇಶನ ಮುಂದೆ ಮಲುಹಣನೀಕ್ಷಿಸುತ ಕಾಂತಾಕಚಪ್ರಚಯ ಎಂದೆನುತಲಿ (ಬಸವ. ೪೨-೩೬). ೩. ವೃದ್ಧಿ; ಅಭ್ಯುದಯ; ಏಳಿಗೆ: ದಿನವೇಂದುಪ್ರಚಯಾದ್ರಿಯಿಂದೆ . . . ಮೇರೆಯಾಗೆ ತಳೆದಂ ಭೂಚಕ್ರಮಂ ಭೂಭುಜಂ (ರಾಜಶೇ. ೪೦೦). ೪. ವೇದಗಳ ಉಚ್ಚಾರಣೆಯಲ್ಲಿ ಒಂದು ಬಗೆಯ ಸ್ವರವಿಶೇಷ : ಆ ಬ್ರಾಹ್ಮಣ ಬ್ರಹ್ಮಸಭೆಯು ಮುಂದೆ ಉದಾತ್ತಅನುದಾತ್ತಸ್ವರಿತ ಪ್ರಚಯಮೆಂಬ ಚತುಸ್ಸ್ವರಂಗಳಿಂ . . . ನಾಲ್ಕು ವೇದಂಗಳಿಂ ಮಂತ್ರ ಮನುಚ್ಚರಿಸೆ (ಶಶ್ವಪು. ೨-೧೪೦ ವ); ಹರಿಯೆ ಪಂಚಾಶದ್ವರ್ಣಸುಸ್ವರ ಉದಾತ್ತಾನುದಾತ್ತಪ್ರಚಯಸ್ವರಿತಸಂಧಿವಿಸರ್ಗಬಿಂದುಗಳೊಳಗೆ ತದ್ವಾಚ್ಯ (ಕಣಾರ. ೯-೦) ; ವೇದದಲ್ಲಿ ಹೇಳಲ್ಪಡುವ ಉದಾತ್ತಾನುದಾತ್ತಸ್ವರಿತ ಪ್ರಚಯಗಳೆಂಬ ಸ್ವರಗಳು . . . ಅರ್ಥಜ್ಞಾನಕ್ಕೆ ಉಪಯೋಗವಿಲ್ಲವೆಂದು ನಿರ್ಣಯಿಸಿದ್ದಾರೆ (ಹಿಂದಶಾ. ೦೯೯). ೫. [ತತ್ವಶಾ] ಪರಿಮಾಣ ವನ್ನುಂಟುಮಾಡುವ ಒಂದು ಸಂಯೋಗ ; ಶಿಥಿಲಸಂಯೋಗ : ಅನಿತ್ಯವಸ್ತುವಿನ ಪರಿಮಾಣವು ಸಂಖ್ಯೆಯಿಂದಲೂ ಪರಿಮಾಣದಿಂದಲೂ ಪ್ರಚಯದಿಂದಲೂ ಹುಟ್ಟುವುದು . . . ಶಿಥಿಲವಾದ ಸಂಯೋಗಕ್ಕೆ ಪ್ರಚಯ ಎಂದು ಹೆಸರು. ಉದಾ. ಹತ್ತಿ (ಶಾಕಕ್ಯ. ೨೯೯). [ಸಂ.]

**ಪ್ರಚರ** (ನಾ). ೧. ಹೋಗುವಿಕೆ; ಗಮನ: ಕುಪ್ರತರ್ಕಗನಾವನಾದಡ ಭೂಪ್ರಚರನಾಗೆಯ್ದೆ ತಿರಿತಿಂಬ ಪ್ರಸಿದ್ಧನಪುದ್ಧನಲ್ಲದೆ ಭಕ್ತನೆಂತಹನು (ಬಸವ. ೪೩-೬೨). ೨. ಜಡವಲ್ಲದುದು ; ಚೈತನ್ಯವುಳ್ಳ ಪ್ರಾಣಿ : ಹರಿಯ ನಾಭಿಸರೋಜದೊಳಗವತರಿಸಿಯಚರಪ್ರಚರಗಳ ವಿಸ್ತರಿಸಿ . . . ರಾಜಿಪ ವರಚತುರ್ಮುಖ ಪಾಲಿಪುದು (ಅಕಂಠ. ೦-೦-೩). ೩. ಆಚರಣೆ ; ನಡವಳಿಕೆ ; ಪದ್ಧತಿ. ೪. ದಾರಿ ; ಮಾರ್ಗ. [ಸಂ.]

**ಪ್ರಚರಿಸು** (ಕ್ರಿ). ಸಂಚರಿಸು ; ಪ್ರಯಾಣ ಮಾಡು: ಭರತಖಂಡವನು ಪ್ರಚರಿಸಿ ಕೀರ್ತಿ ಪಡೆದು (ಶಿವಾಕ್ಷ. ೬೬-೩). [ಪ್ರಚರ + —ಇಸು]

**ಪ್ರಚರ್ಯ** (ನಾ). ಹೋಗುವುದು; ಗಮನ: ಮಹಿತವೀರೋದಗ್ರಭಕ್ತಿ ಸ್ಫುಹದಿನೊಮ್ಮೆ ಪ್ರಾಣಮಂ ಕುಡಬಹುದು ಜಂಗಮದೊಳು ನಿಜಪ್ರಾಣ ಪ್ರಚರ್ಯ[ಶಾಶಂ. ರಿಯ]ದಲಿ ಸಹಜವಾಗಲೆಹಂಗೆ ಸಂಧಿಸಬಹುದು (ಬಸವ. ೩೬-೩೭). [ಸಂ. ಪ್ರಚರ್ಯಾ]

**ಪ್ರಚಲ**, ಪ್ರಚಳ (ಗು). ೧. ಅಲುಗಾಡುವ ; ನಡುಗುವ. ೨. ಬಳಕೆಯ ; ರೂಢಿಯ. (ನಾ). ೩. ಚಂಚಲವಾದುದು ; ಸ್ಥಿರವಲ್ಲ ದುದು ; ಅಸ್ಥಿರ. **ಪ್ರಚಳ** : ೩. "ಲೋಲಂ, ಚಪಳಂ, ಚಟುಳಂ, ಪ್ರಚಳಂ, ತರಳಂ . . . ಸಂಚಳಂ—ಈ ೧೦ ಸಂಚಳಂ" (ಶಬ್ದಮಣಿ. ೧೦೩-೦೦). [ಸಂ.]

**ಪ್ರಚಲನ** (ನಾ). ೧. ಹೆಚ್ಚಾಗಿ ನಡುಗುವುದು. — ಕಂಪಿಸುವುದು. ೨. ಬಳಕೆ ; ಚಲಾವಣೆ. ೩. ಹಿಂಜರಿತ; ಪಲಾಯನ. ೪. [ವಿಜ್ಞಾನ] "(ಕಣಗಳ ಚಲನೆಯಿಂದಾಗುವ) ಶಾಖದ ಅಥವಾ ವಿದ್ಯುತ್ತಿನ ಪ್ರಸರಣ ; ಪ್ರಚಲನ" (Convection. ಶಂಕೋ). [ಸಂ.]

**ಪ್ರಚಲಾಕ**, ಪ್ರಚಳಾಕ (ನಾ). ನವಿಲುಗರಿ ; ಪಿಂಛ : "ಪ್ರಚಲಾಕಂ ಬರ್ಹಂ" (ಚತ್ತುಕೋ. ೯೨-೦೨). **ಪ್ರಚಳಾಕ** : "ಪ್ರಚಳಾಕಂ, ಶಿಖಂಡಃ —ಈ ೨ ಪೀಲಿ" (ಶಬ್ದಮಣಿ. ೯೦-೬೦); "ಪ್ರಚಳಾಕಂ ಶಿಖಂಡಮೆನೆ ಪೀಲಿ" (ಮಂಗರಾ. ೫೦-೩). [ಸಂ.]

**ಪ್ರಚಲಾಕಿ** (ನಾ). ಪಿಂಛವನ್ನುಳ್ಳದು ; ನವಿಲು : "ಪ್ರಚಲಾಕಿ ಮಯೂರಂ" (ಚತ್ತುಕೋ. ೯೨-೧೨) ; "ಕೇಕೀ, ಶಿಖೀ, ಶಿಖಂಡೀ, ಪ್ರಚಲಾಕೀ . . . ಶ್ಯಾಮಕಂಠ(ಃ)—ಈ ೧೦ ನವಿಲ್" (ಶಬ್ದಮಣಿ. ೯೦-೬೬). [ಸಂ. ಪ್ರಚಲಾಕಿನ್]

**ಪ್ರಚಲಾಪ್ರಚಲೆ**, ಪ್ರಚಳಾಪ್ರಚಳೆ (ನಾ). [ಜೈನ] ನಿದ್ರೆಯ ಒಂದು ಭೇದ; ಪದೇಪದೇ ತೂಕಡಿಸುವುದು, ಜೊಲ್ಲು ಸುರಿಸುವುದು ಮೊದಲಾದ ಲಕ್ಷಣಗಳುಳ್ಳ ನಿದ್ರಾಭೇದ : ಪೂರ್ವೋಕ್ತ ವಿಧಾನ ದಿನಂತಮುಹೂರ್ತದಿಂ ನಿದ್ರಾನಿದ್ರಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿ ನರಕಗತಿ . . . ಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮಪ್ರಕೃತಿಗಳಂ ನಿರವ ಶೇಷಂ ಕಿಡಿಸಿ (ಆದಿಪು. ೦೦-೦೯ ವ); ಕೇವಲದರ್ಶನಾವರಣೀಯಂ ನಿದ್ರಾ ನಿದ್ರಾ ನಿದ್ರಾಪ್ರಚಲಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧ ಭೇದಮಪ್ಪ ದರ್ಶನಾವರಣೀಯಮುಮಂ (ಸುಕುಮಾಚ. ೩-೩೯ ವ). **ಪ್ರಚಳಾಪ್ರಚಳೆ** : ಅಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಳಾ ಪ್ರಚಳಾಸ್ತ್ಯಾನಗೃದ್ಧಿನರಕಗತಿ . . . ಸೂಕ್ಷ್ಮಂ[ಗಳೆಂಬ]ಪೋಡಶಕರ್ಮ ಪ್ರಕೃತಿಗೆ ವಿಳಯಂ ಮಾಡಿ (ಶಾಂತಿಪು. ೦೦-೦೦೦ ವ). [ಸಂ. ಪ್ರಚಲಾಪ್ರಚಲಾ]

**ಪ್ರಚಲಾಯಿತ** (ನಾ). ತೂಕಡಿಸುವವನು: "ಘೂರ್ಣಿತಃ, ಪ್ರಚಲಾಯಿತಃ — ೨ ತೂಕಡಿಕೆಯಿಂದ ತಲೆತಿರುಗಿ ಬೀಳುವವನ ಹೆಸರು" (ಸಿದ್ಧಾಂತಿ. ೩೩೦). [ಸಂ.]

**ಪ್ರಚಲಿತ**, ಪ್ರಚಳಿತ (ಗು). ೧. ಅಲುಗಾಡಿದ; ಕ್ಷೋಭೆಗೊಂಡ. ೨. ಚಲಿಸುವ. ೩. ಅಲೆದಾಡುತ್ತಿರುವ. ೪. ಮುಂದುವರಿದ; ಮುನ್ನಡೆದ. ೫. ಇಂದಿನ; ಪ್ರಸಕ್ತ; ಸದ್ಯದ: ಪ್ರಸಿದ್ಧವಿಜ್ಞಾನಿಗಳ ಅಭಿಪ್ರಾಯಗಳನ್ನು ಉಲ್ಲೇಖಿಸುವುದರ ಮೂಲಕ ಪ್ರಚಲಿತ ಸಮಸ್ಯೆಗಳಿಗೆ ಪರಿಹಾರ ಸೂಚಿಸಿದೆ (ಪ್ರಾಚಿ. ೪. ಮುನ್ನುಡಿ). ೬. ಬಳಕೆಯಲ್ಲಿರುವ. (ನಾ). ೭. ಆಚರಣೆಯಲ್ಲಿರುವುದು ; ಚಾಲ್ತಿ ; ಬಳಕೆ : ಎಲ್ಲರಿಗೂ ತಿಳಿದಿರುವಂತೆ ಮೂಷಕನಿಯಂತ್ರಣಕ್ಕೆ ಪ್ರಚಲಿತವಾದ ವಿಧಾನ ಮೂರು (ಜೀಕಕ್ಷ. ೪೬); ತಮ್ಮ ಭಾಗದಲ್ಲಿ ಪ್ರಚಲಿತವಿಲ್ಲದ ಹೊಸ ಅಡುಗೆಗಳನ್ನು ಮಾಡಲು ಪ್ರಯತ್ನಿಸುವ ಗೃಹಿಣಿಯರು ಕಡಿಮೆ (ಅಡುಗೆ. ೯೦). **ಪ್ರಚಳಿತ** : ೪. ಮತ್ತಂ ಸಸಂಭ್ರಮಪ್ರಚಳಿತ ಸಮದ ಗಜಘಟಾ ಘಂಟಾರವಂಗಳಿಂದಂ . . . ಅಗುರ್ವಾಗೆ (ಶಂಶಕಾ. ೯-೦೦೯ವ). [ಸಂ.]

**ಪ್ರಚಲೆ** (ನಾ). [ಜೈನ] ಒಂಬತ್ತು ವಿಧವಾದ ದರ್ಶನಾವರಣೀಯ ಕರ್ಮಗಳಲ್ಲಿ ಒಂದು ; ನಿದ್ರೆ, ನಿದ್ರಾನಿದ್ರೆ, ಪ್ರಚಲೆ, ಪ್ರಚಲಾ ಪ್ರಚಲೆ, ಸ್ತ್ಯಾನಗೃದ್ಧಿ ಎಂಬ ಐದು ಬಗೆಯ ನಿದ್ರೆಗಳಲ್ಲಿ ಒಂದು; ಶೋಕ, ಶ್ರಮ, ಮದ ಮೊದಲಾದ ಕಾರಣಗಳಿಂದ ಉಂಟಾಗಿ ಕುಳಿತುಕೊಂಡೇ ಕಣ್ಣು ಮತ್ತು ದೇಹಗಳಲ್ಲಿ ವಿಕ್ರಿಯೆಯನ್ನು ಉಂಟುಮಾಡುವ ಹಾಗೂ ದೇಹವನ್ನು ತೂಗಾಡುವಂತೆ ಮಾಡುವ ನಿದ್ರೆ : ಚಕ್ಷುರ್ದರ್ಶನಾವರಣೀಯಮಚಕ್ಷುರ್ದರ್ಶನಾವರಣೀಯಮವಧಿ ದರ್ಶನಾವರಣೀಯಂ ಕೇವಲದರ್ಶನಾವರಣೀಯಂ ನಿದ್ರಾನಿದ್ರಾನಿದ್ರಾ ಪ್ರಚಲಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧಭೇದಮಪ್ಪ ದರ್ಶನಾವರಣೀಯಮುಮಂ (ಸುಕುಮಾಚ. ೩-೩೯ ವ) ; ಅಳಿಯಲುಳಿದ ಕರ್ಮ ಜರಿವುತಿರಲು ಬಾಣ ಕೊಳಲು ನಿದ್ರಾಪ್ರಚಲೆಗಳು (ಧರ್ಮಪು. ೦೨-೩೭). [ ಸಂ. ಪ್ರಚಲ ]

**ಪ್ರಚಳ** 'ಪ್ರಚಲ' ನೋ.

**ಪ್ರಚಳಾಕ** 'ಪ್ರಚಲಾಕ' ನೋ.

**ಪ್ರಚಳಾಪ್ರಚಳೆ** 'ಪ್ರಚಲಾಪ್ರಚಲೆ' ನೋ.

**ಪ್ರಚಳಿತ** 'ಪ್ರಚಲಿತ' ನೋ.

**ಪ್ರಚಾರ** (ನಾ). ೧. ಎಲ್ಲ ಕಡೆಗಳಲ್ಲೂ ಇರುವಂಥದು ; ಬಳಕೆಯಲ್ಲಿರುವಂಥದು: ಯೋಗಂಗಳು ಜಗತ್ತಿನೊಳಗಣಿತಗಳುಂಟದರಿನೊಳ್ಳೆವೆಯ ಯೋಗಂಗಳೆ ಪ್ರಚಾರವು ಮುಖ್ಯುವೆನಿಸುವುವು (ಗಗಶಾ. ೦೦-೦೮). ೨. ಸಾರ್ವಜನಿಕರ ಗಮನವನ್ನು ಸೆಳೆಯಲು ಮಾಡುವ ಬಹಿರಂಗ ಪ್ರಕಟಣೆ : ಹೆಚ್ಚು ಪ್ರಚಾರವಿಲ್ಲದುದರಿಂದ ಅಂದಿನ ಕಾರ್ಯಕ್ರಮಕ್ಕೆ ತುಂಬಾ ಜನ ಬಂದಿರಲಿಲ್ಲ (ಬೂ). ೩. ಜನಬಳಕೆ ; ವ್ಯವಹಾರ ; ಚಾಲ್ತಿ : ಯಹೂದ್ಯರು ಮುಸಲ್ಮಾನರು ಮತ್ತು ಕ್ರಿಸ್ತರು ಇವರ ವಿನಹ ಉಳಿದ ಎಲ್ಲಾ ಜನಾಂಗದವರಲ್ಲೂ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಟಚಾಕ್. ೦೯೯) ; ಅಕ್ಷರವೆಂದರೆ ವರ್ಣ ಎಂಬ ಅರ್ಥವೇ ಇಂದಿಗೂ ಪ್ರಚಾರದಲ್ಲಿ ನಿಂತಿತು (ಕ್ರಾಹಿ. ೯೩). ೪. ಚಲಾವಣೆ ; ಬಳಕೆ : ಆಣೆ ಕಾಸುಗಳ ಪ್ರಚಾರ ಈಗ ಇಲ್ಲ (ಬೂ) ; ದಕ್ಷಿಣಭಾರತದಲ್ಲಿ ರಾಗಿ ಹೆಚ್ಚು ಪ್ರಚಾರದಲ್ಲಿದೆ (ಬೂ). ೫. ಪದ್ಧತಿ ; ರೂಢಿ ; ಸಂಪ್ರದಾಯ. ೬. ನಡತೆ ; ವರ್ತನೆ ; ಚರ್ಯೆ. ೭. ನಡೆಯುವುದು ; ತಿರುಗಾಟ ; ಸಂಚಾರ: ವಿಮಾನಧ್ವಜವನಿಳವಡಿಸಿ ವಿದ್ಯುತ್ಪ್ರಚಾರಮಂ ಗೆಲ್ವ ಹಯಮಂ ಪೂಡಿ . . . ಬಂದನಾಹವಕೆ ನಲಿದು (ಕೃಶಿಚಾ. ೬-೩೬) ; ಮುಳ್ಗಳಂಘ್ರಿಯಂ ಬಾರಿಪುದೆಂದು ಬಟ್ಟುದೆ ಮದದ್ವಿರದಂ ಗಹನಪ್ರಚಾರಮಂ (ಠಾಚೀ. ೦೩-೦೮).

**ಪ್ರಚಾರ ಮಾಡು**=ಎಲ್ಲರಿಗೂ ತಿಳಿಯಪಡಿಸು ; ಪ್ರಸಿದ್ಧಪಡಿಸು : ಬುದ್ಧನ ತತ್ವಗಳನ್ನು ಪ್ರಚಾರ ಮಾಡಲು ಆತನ ಅನುಯಾಯಿಗಳು ದೇಶ ವಿದೇಶಗಳಲ್ಲೆಲ್ಲಾ ಸಂಚಾರ ಮಾಡಿದರು (ಬೂ). [ಸಂ.]

**ಪ್ರಚಾರಕ** (ನಾ). ಎಲ್ಲರಿಗೂ ತಿಳಿಯುವಂತೆ ಮಾಡುವವನು ; ಪ್ರಚಾರ ಮಾಡುವವನು : ಜೈಮಿನೀಯಮೀಮಾಂಸಾಶಾಸ್ತ್ರಕ್ಕೆ ಪ್ರಮುಖ ಪ್ರಚಾರಕನು ಕುಮಾರಿಲಭಟ್ಟ (ಶಾಕಿಂ. ೦೨೯) ; ಫ್ರಾನ್ಸಿಸ್ ಜೇವಿಯರ್ ಎಂಬಾತ ಭಾರತಕ್ಕೆ ಬಂದ ಜೆಸ್ಯೂಟ್ ಪ್ರಚಾರಕರಲ್ಲಿ ಮೊದಲನೆಯವ (ಕಚಕೋ. V, ೬೦೩). [ಸಂ.]

**ಪ್ರಚಾರಕಾರ್ಯ** (ನಾ). ಯಾವುದಾದರೊಂದು ವಿಷಯವನ್ನು ಸಾರ್ವಜನಿಕವಾಗಿ ತಿಳಿಯಪಡಿಸುವುದು : ಅವರು ಘೋಷಣೆಗಳನ್ನು ಪ್ರಕಟಿಸಿದರು ; ಗಿರಣಿಗಳಲ್ಲಿ ಪ್ರಚಾರಕಾರ್ಯ ಕೈಗೊಂಡರು (ಪ್ರಶಟು. ೨೯೦) ; ದಕ್ಷಿಣಭಾರತದಲ್ಲಿ ಕ್ರೈಸ್ತಧರ್ಮದ ಪ್ರಚಾರಕಾರ್ಯ ಮೂರೂ ಸಮುದ್ರ ತೀರಗಳ ರೇವುಗಳಲ್ಲಿ ಆರಂಭವಾಯಿತು (ಕಚಕೋ. V, ೬೦೯). [ಸಂ.]

**ಪ್ರಚಾರಗೊಳಿಸು** (ಕ್ರಿ). ಎಲ್ಲರಿಗೂ ತಿಳಿಯುವಂತೆ ಮಾಡು : ಪ್ರಸಿದ್ಧಪಡಿಸು: ಭಿಕ್ಷುಗಳು . . . ಬುದ್ಧನ ತರುವಾಯವೂ ಅವನ ಉಪದೇಶವನ್ನು ಪ್ರಚಾರಗೊಳಿಸುತ್ತ ನಡೆದರು (ಶಾಂಕೃ. I, ೫೦೬).

[ ಪ್ರಚಾರ + ಕೊಳ್$_1$ + — ಇಸು$_3$ ]

**ಪ್ರಚಾರತೆ** (ನಾ). ಹರಡುವಿಕೆ ; ವಿಸ್ತರಿಸುವಿಕೆ : ಆಸ್ಯಬಿಂಬಿಲ್ಲ ಭಾಸುರನೇತ್ರದ್ವಿತಯವುಪ್ರಚಾರತೆಗೆ ಬೆನ್ನಿಂಬಲ್ಲ ಧಮ್ಮಿಲ್ಲಬಂಧುರಸೀಮಾ ವಳಯಕ್ಕೆ (ಗಿಂಶ. ೪-೩೬). [ ಸಂ. ಪ್ರಚಾರತಾ ]

**ಪ್ರಚಾರಮಾಧ್ಯಮ** (ನಾ). ದೇಶದ ರಾಜಕೀಯ, ಕಲೆ, ಕ್ರೀಡೆ ಮುಂತಾದುವುಗಳ ಬಗ್ಗೆ ಸಾರ್ವಜನಿಕರಲ್ಲಿ ಅರಿವನ್ನು ಮೂಡಿಸಲು ಬಳಸುವ ರೇಡಿಯೋ, ದೂರದರ್ಶನ, ಚಲನಚಿತ್ರ ಮುಂತಾದ ಸಾಧನ : ಇಪ್ಪತ್ತನೆಯ ಶತಮಾನದ ಅಗಾಧವೈಜ್ಞಾನಿಕ ತಾಂತ್ರಿಕ ಬೆಳವಣಿಗೆಯ ಫಲವಾಗಿ ಪ್ರಚಾರಮಾಧ್ಯಮಗಳು ವೈವಿಧ್ಯಮಯವೂ . . . ವಿಶ್ವರೂಪಿಗಳೂ ಆಗಿವೆ (ಕಚಕೋ. XI, ೬೦೯). [ಸಂ.]

**ಪ್ರಚಾರಸಾಧನ** (ನಾ). = ಪ್ರಚಾರಮಾಧ್ಯಮ : ಅತ್ಯಂತಸಂಕೀರ್ಣವಾದ, ಅಗಾಧಪ್ರಚಾರಸಾಧನಗಳಿಂದ ಕೂಡಿದ ಇಂದಿನ ಸಮಾಜದಲ್ಲಿ ಈ ವ್ಯತ್ಯಾಸವನ್ನು ಗುರುತಿಸುವುದು ಕಷ್ಟವಾಗುತ್ತದೆ (ಕಚಕೋ. XI, ೬೦೯). [ಸಂ.]

**ಪ್ರಚಿಂತೆ** (ನಾ). ಆಲೋಚನೆ ; ವಿಮರ್ಶೆ : ಆಚಂದ್ರಾರ್ಕಸ್ಥಾಯಿಯಾಗಿ × × × ಸಲ್ವನ್ನಿರೆ ಪ್ರಚಿಂತೆಯಂ ಮಾಡಿ ಪರಿರಕ್ಷಿಸಲುವೇಳ್ಕುಂ (ಶಾಇ. XX. ೦೦೦-೪೮ ; 1140). [ಸಂ. ಪ್ರಚಿಂತಾ]

**ಪ್ರಚುರ** (ಗು). ೧. ಹೆಚ್ಚಾದ ; ಅತಿಶಯವಾದ ; ಮಹತ್ತರವಾದ : ಪ್ರಚುರಕಲಾನ್ವಿತರ್ . . . ದೋಷಾಪಚಯಪ್ರಕಾಶರೆನೆ ಬಾಲಚಂದ್ರದೇವಪ್ರಭಾವಮೇನಚ್ಚರಿಯೋ (ಪಂಭಕ್ತಿ. ೦-೨೦) ; ಸ್ತುತಿಗೆಯ್ವಂ . . . ಚತುರೋಕ್ತಿಪ್ರಚುರಾರ್ಥಗಾವ್ಯಜನಿತೋರ್ವೀಹರ್ಷನಂ ಹರ್ಷನಂ (ಹಪು. ೦-೬). ೨. ಹೆಸರುವಾಸಿಯಾದ ; ಪ್ರಸಿದ್ಧವಾದ : ಎಸೆಗುಂ ವೃಂದಾವನಂ ಕೀರಕೇಕೀಮರಾಳವ್ರಜದಾ ವನಂ ಪ್ರಚುರಕಾಳಿಂದೀವನಂ ಪಾವನಂ (ಜಗಪ. ೬-೬೩). (ನಾ). ೩. ಹೆಚ್ಚಳ ; ಆಧಿಕ್ಯ ; ಹೇರಳ : "ಪ್ರಾಜ್ಯಂ, ಭೂರಿ, ಪ್ರಭೂತಂ, ಪ್ರಚುರಂ . . . ಅದಭ್ರಂ—ಈ ೧೮ ಪೊಲ್ಕಳೆಂ" (ಹಲಾಯು. ೦೦೬-೦೬). ೪. ಗಾಢವಾದುದು ; ತೀವ್ರವಾದುದು : ಕವಿಯಲ್ಲಿ ಪ್ರಚುರವಾಗಿರುವುದು ಮುಕ್ತಿಯ ಆಸೆ (ಕಾಕ್ಯಕು. ೦). ೫. ಪ್ರಚಾರದಲ್ಲಿರುವುದು ; ವ್ಯವಹಾರದಲ್ಲಿರುವುದು ; ಚಾಲ್ತಿಯಲ್ಲಿರುವುದು ; ಸಿಲ್ವಿಯಸ್-ಫೀಬಿಯರ ಪ್ರಣಯ ಇಂಗ್ಲೆಂಡಿನಲ್ಲಿ ಆಗ ಪ್ರಚುರವಾಗಿದ್ದ ಪಾಸ್ಟೊರಲ್ ಕವನಗಳಲ್ಲಿ ಕಾಣುವಂಥ ಪ್ರೇಮ (ಶೇಕ್ಸ್ಪಿ. ೩೩೦) ; ಭಾರತದಲ್ಲಿ ಪ್ರಚುರವಾದ ಜೈನ ಮತ್ತು ಬೌದ್ಧಧರ್ಮಗಳೆರಡು ಈ ಲೋಕಸೌಂದರ್ಯಕ್ಕಾಗಲೀ ಆ ಕೇವಲ ಪರಮತತ್ತ್ವ ಸೌಂದರ್ಯರೂಪಿ ಎಂಬ ಭಾವನೆಗಾಗಲೀ ಗಮನಕೊಟ್ಟಂತೆ ತೋರುವುದಿಲ್ಲ (ಕಾಂಶ. ೦೦೬). ೬. ಕಳ್ಳ ; ಚೋರ. [ಸಂ.]

**ಪ್ರಚುರಂ** (ಅ). ಹೆಚ್ಚಾಗಿ ; ಬಹಳ ಮಟ್ಟಿಗೆ : ಪ್ರಚುರಂ ಪತ್ತೊಳಗಾಗೆ ರಂಧ್ರವನೆ ಕೈಗೊಂಡೆಂಟನೀಗೇಟ ಬಟ್ಟು . . . ಬಂದಟಿಕೊಳ್ ನಿಲ್ಲದಾ ವಚನಬ್ರಹ್ಮದೆ ಮುಕ್ತಿಯೇ (ಕೋಪಮೇಶ. ೦೦೦) ; ಪ್ರಮಿಲೋಮಕ್ರಿಯೆಗದು ವೆಂದವೆಂದು ಬಂದಿರ್ದುಮುದುಗಮುವುಗಂ ಪ್ರಚುರಂ (ಕಮುದ. ೨೯೯). [ < ಪ್ರಚುರ ]

**ಪ್ರಚುರಗೊಳಿಸು** (ಕ್ರಿ). ಪ್ರಸಾರ ಮಾಡು ; ಬಿತ್ತರಿಸು : ಆಕಾಶವಾಣಿ ಯವರು ಈ ಕೃತಿಯನ್ನು . . . ತಜ್ಞಕಲಾವಿದರ ಮೂಲಕ ಬಾನುಲಿ ಯಲ್ಲಿ ಪ್ರಚುರಗೊಳಿಸಿದ್ದಾರೆ (ಗೋಕಸಂ. X, ೬೦೯).

[ ಪ್ರಚುರ + ಕೊಳು ( < ಕೊಳ್$_1$) + — ಇಸು$_3$ ]

**ಪ್ರಚುರಗೊಳ್ಳು** (ಕ್ರಿ). ಹರಡು ; ವ್ಯಾಪಿಸು ; ಪ್ರಚಾರವಾಗು : ಭಾರತೀಯ ವೇದಾಂತ ಮತ್ತು ಅದರ ಪರಿಣಾಮವಾಗಿ ಪ್ರಚುರಗೊಂಡ ಧರ್ಮಗಳೆಲ್ಲವೂ . . . ಒಂದು ಅಂತರಿಕಸೂತ್ರವನ್ನು ರಚಿಸಿವೆ (ಕಾಂಶ. ೦೦೬). [ ಪ್ರಚುರ + ಕೊಳ್ಳು$_1$ ( < ಕೊಳ್$_1$) ]

**ಪ್ರಚುರತೆ** (ನಾ). ಹೆಚ್ಚಳ ; ಆಧಿಕ್ಯ ; ಅತಿಶಯ : ವಾಚ್ಯವಾಚಕ ವಿಶೇಷ್ಯವಿಶೇಷಣಲಕ್ಷ್ಯಲಕ್ಷಣಪ್ರಚುರತೆ ಕಾಳಿದಾಸನುಮನೇಳಿಸಿಹ ಕೃತಿ ನಾಗವರ್ಮನಾ (ರಾರಕೋಣಾ. ೦-೬) ; ಉಪವಾಸಪ್ರಚುರತೆಯಿಂ ವಪು ಗಿಡಿಗಿಡಿಜಂತ್ರಮಾದುದು (ಸುಕುಮಾ. ೯-೪) ; ವಾತ್ಸವಚಿ ವಿಪರ್ಯಾಯ ವೃತ್ತಿಯೆ ಬವರಿಸುಗುಮುಂದೀಚ್ಯಮಾರ್ಗದೊಳ್ ಪ್ರಚುರತೆಯಿಂ (ಕಾವ್ಯಾ. ೩೨೦). [ ಸಂ. ಪ್ರಚುರತಾ ]

**ಪ್ರಚುರದುಗ್ಧೆ** (ನಾ). ಹೆಚ್ಚಾಗಿ ಹಾಲು ಕರೆಯುವ ಹಸು : "ದ್ರೋಣದುಘಾ, ಪ್ರಚುರದುಗ್ಧಾ—ಈ ೨ ಕೊಡವಾಲ್ ಕಱವಾವು" (ಹಲಾಯು. ೪೩-೦೦೬). [ ಸಂ. ಪ್ರಚುರದುಗ್ಧಾ ]

**ಪ್ರಚುರಪಡಿಸು** (ಕ್ರಿ). ಪ್ರಚಾರ ಮಾಡು ; ಹರಡುವಂತೆ ಮಾಡು ; ಪ್ರಸಿದ್ಧಪಡಿಸು : ಅಲೆಕ್ಸಾಂಡ್ರಿಯನ್ ಟ್ರೆಡ್ಸ್ ಎಂಬುವನು ಭೂಮಿ ಮತ್ತಿತರ ಗ್ರಹಗಳ ಮೂಲದ ವಿಷಯವಾಗಿ ಒಂದು ಸಿದ್ಧಾಂತವನ್ನು ಪ್ರಚುರಪಡಿಸಲು ಆರಂಭಿಸಿದನು (ಭೂಹುಟ್ಟು. ೩೨); ಒಳ್ಳೆಯ ರಸರೂಪಕಗಳನ್ನು ಬರೆದು ಬರೆಸಿ ಆಡಿ ಆಡಿಸಿ ಪ್ರಚುರಪಡಿಸಬೇಕು (ಶಾಹಿಕಃ. ೬೮). [ ಪ್ರಚುರ+ಪಡಿಸು]

**ಪ್ರಚೇತ** (ನಾ). ಎಂಟುಜನ ದಿಕ್ಪಾಲಕರಲ್ಲಿ ಒಬ್ಬ; ಪಶ್ಚಿಮದಿಕ್ಕಿನ ಅಧಿಪತಿ ; ವರುಣ : "ವರುಣಃ, ಯಾದಸಾಂನಾಥಃ, ಪಾಶಪಾಣಿಃ, ಪ್ರಚೇ(ತಸ್)ತಾಃ, ಜಲಾಧಿದೈವತಂ, ಪ್ರತ್ಯಗಾಶಾಪತಿಃ — ಈ ೬ (ಪ್ರಾಹುರ್ಬುಧಾ) ವರುಣನ ಪೆಸರ್" (ಕಣಾಪು. ೦೩–೭೪) ; ತನ್ನೊಳ್ ಸಮುದ್ರಾಧಿಪತಿತ್ವಂ ಸಂದ ಪಾಶಾನ್ವಿತನುರುಮಕರಾರೂಢನೀತಂ ಪ್ರಚೇತಂ (ಜಗ. ೦೩–೬೦). [ ಸಂ. ಪ್ರಚೇತಸ್ ]

**ಪ್ರಚೇತಸ** (ನಾ). ೧. = ಪ್ರಚೇತ : " ವರುಣಂ ಪಶ್ಚಿಮದಿಕ್ಪತಿ . . . [ವಾರಿರಾಶಿ]ನಿಳಯಂ ಪ್ರಚೇತಸಂ ಪೆಸರಿಂದಂ " (ವಸ್ತುಕೋ. ೬–೯೩). ೨. ವಾಲ್ಮೀಕಿಯ ತಂದೆ : ವೇದಗಳು . . . ಪ್ರಚೇತಸನ ಮಗನಾದ ವಾಲ್ಮೀಕಿಯಿಂದ ರಾಮಾಯಣದ ರೂಪದಲ್ಲಿ . . . ಅವತರಿಸಿದವು (೬೦ಕಥ. ೬೩). [ಸಂ. ಪ್ರಚೇತಸ್]

**ಪ್ರಚೋದಕ** (ಗು). ೧. ಪ್ರೇರಿಸುವ; ಪ್ರೇರಣೆ ಮಾಡುವ : ಇದಕ್ಕೆ ಪ್ರಚೋದಕಶಕ್ತಿ ಆ ಹುಟ್ಟುಗುಣದಲ್ಲೇ ಇದೆ (೩ಶ್ಲಪ. ೪೨೩). (ನಾ). ೨. ಪ್ರೇರಿಸುವುದು ; ಪ್ರೇರಣೆ ಮಾಡುವುದು : ನಮ್ಮ ಮುನ್ನಡೆಗೆ ಜೀವನದ ಚೇತೋರಶ್ಮಿಗಳು ಪ್ರಚೋದಕಗಳಾದರೆ ತತ್ತ್ವದೃಷ್ಟಿ ಮಾರ್ಗದರ್ಶನ ನೀಡುತ್ತದೆ (೩ಶ್ಲಪ. ೬೬೬). [ಸಂ.]

**ಪ್ರಚೋದನ** (ನಾ). ೧. ಪ್ರೇರಿಸುವುದು ; ಪ್ರೇರಣೆ : 'ಪ್ರಚೋದನಗೊಳಿಸು' ಪರಾ. ೨. ಹೇಳುವುದು. ೩. ಕಳುಹಿಸುವುದು. ೪. ವಿಧಿಸುವುದು ; ನಿಯಮಿಸುವುದು. [ಸಂ.]

**ಪ್ರಚೋದನಗೊಳಿಸು** (ಕ್ರಿ). ಪ್ರೇರಿಸು ; ಉತ್ತೇಜನಗೊಳಿಸು ; ಹುರಿದುಂಬಿಸು : ನಮ್ಮ ಬುದ್ಧಿಯನ್ನು ಪ್ರಚೋದನಗೊಳಿಸು — ಎಂಬುದೇ ಇವರ ಬೇಡಿಕೆ. ಪ್ರಾರ್ಥನೆ (ಭಾರತ. ೪೬೦). [ಪ್ರಚೋದನ + ಕೊಳು (< ಕೊಳ್$_1$) + — ಇಸು$_3$]

**ಪ್ರಚೋದನಿ** (ನಾ). ಒಂದು ಬಗೆಯ ಗಿಡ ; ಹೆಗ್ಗುಳ್ಳ : " ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರೀ, ಬೃಹತೀ, ಕಂಟಕಾರಿಕಾ, ಪ್ರಚೋದನೀ . . . ರಾಷ್ಟ್ರಿಕಾ — ೧೦ ಹೆಗ್ಗುಳ್ಳದ ಹೆಸರು " (ಸಿದ್ಧಾಂತಿ. ೦೩೩). [ಸಂ. ಪ್ರಚೋದನೀ]

**ಪ್ರಚೋದನೆ** (ನಾ). = ಪ್ರಚೋದನ ೧ : ಪ್ರತಿಯೊಂದು ಮನೋವ್ಯಾಪಾರಕ್ಕೂ ಒಂದೊಂದು ಪ್ರಚೋದನೆ ಅಗತ್ಯ (೩ಶ್ಲಪ. ೪೦೪) ; 'ಬೇಕು' ಎನ್ನುವುದು ಪ್ರಯತ್ನಕ್ಕೆ ಪ್ರಚೋದನೆ (ಕಕಂಣಾ. ೩೩). [ ಸಂ. ಪ್ರಚೋದನ ]

**ಪ್ರಚೋದಿತ** (ಗು). ೧. ಪ್ರೇರಣೆ ಹೊಂದಿದ. (ನಾ). ೨. ಪ್ರೇರಣೆ ಹೊಂದಿದುದು : ಕಲೋಪಾಸನೆ ಪ್ರಚೋದಿತವಾಗಿ ಕಲಾವಿದರೂ ಆಗಬಹುದು (೩ಶ್ಲಪ. ೨೩೭). ೩. ಮುಂದಕ್ಕೆ ಅಟ್ಟಿದುದು,— ಹೊಡೆದುದು. ೪. ಚಿತಾವಣೆ ಹೊಂದಿದುದು. [ಸಂ.]

**ಪ್ರಚೋದಿಸು** (ಕ್ರಿ). ೧. ಪ್ರೇರಣೆ ಮಾಡು ; ಪ್ರೇರಿಸು : ಗಾಯತ್ರಿಯನೆ ಪರಮಮಂತ್ರವೆಂದಾರ್ಯರ್ ಧೀಯಂ ಪ್ರಚೋದಿಸೆಂದನುದಿನದಿ ಬೇಡಿದರು (ಪಂಚಃಕ. ೩೪೬) ; ಎಲ್ಲ ತರಂಗಮಾನಗಳು . . . ಸಮನಾಗಿ ಪ್ರಚೋದಿಸುವುದಿಲ್ಲ (೬೦ಟಿಕ. ೩೪) ; ಸೌಂದರ್ಯ ಪ್ರಚೋದಿಸುವುದು ಒಂದು ನಿರ್ದಿಷ್ಟವಾದ ಭಾವವನ್ನು (ಸೌಂದಕ. ೭೪). ೨. ಹೆಚ್ಚಿಸು ; ಅಭಿವೃದ್ಧಿಗೊಳಿಸು ; ಉದ್ಬೋಧಿಸು : ಅವರ ವಿವೇಚನೆಯನ್ನು ಪ್ರಚೋದಿಸಿ ಉಚಿತವೆನಿಸುವ ಮಾರ್ಗ ಅರಿವಾಗುವಂತೆ ಮಾಡಬೇಕು (೩ಶ್ಲಪ. ೦೦೪). [ ಪ್ರಚೋದನ + — ಇಸು$_3$ ]

**ಪ್ರಚ್ಛದ** (ನಾ). ೧. ಹೊದಿಕೆ; ಮೇಲುಹೊದಿಕೆ. ೨. ಹಾಸುಗೆ ಮೊದಲಾದುವುಗಳ ಮೇಲೆ ಹಾಸುವ ಬಟ್ಟೆ; ಹಾಸುಗೆಯ ಹೊದಿಕೆ : " ಪ್ರಚ್ಛದಃ, ಉತ್ತರಚ್ಛದಃ — ಈ ೨ ಹಚ್ಚಡದಿಗೆ " (ಕಣಾಪು. ೩೦–೦೫೩); ಶಯ್ಯಾಶ್ರಿತಸಿತಮೃದುಲಪ್ರಚ್ಛದಚ್ಛನ್ನಶಯ್ಯಾತಲದೊಳ್ . . . ಶೂದ್ರಕನೃಪತಿ ಸುಖಾಸೀನನಾಗಿರ್ದನಾಗಳ್ (ಕಾದಂಪೂ. ೯೦) ; ಹಂಸಾಂಸೋಪಧಾನಪ್ರಧಾನಮೃದುಪ್ರಚ್ಛದತಲ್ಪದೊಳ್ ನೆಲಸಿದಂ ಸಾಹಿತ್ಯವಿದ್ಯಾಧರಂ (ಪಂಪ್ರಭ. ೯–೦೩೪). [ ಸಂ. ]

**ಪ್ರಚ್ಛದಪಟ** (ನಾ). ೧. = ಪ್ರಚ್ಛದ ೧. ೨. = ಪ್ರಚ್ಛದ ೨ : "ನಿಚೋಳಃ, ಪ್ರಚ್ಛದಪಟಃ — ೨ ಮೇಲುಹಾಸಿಗೆ. ಹಾಸಿಗೆ ಮೇಲೆ ಹಾಸುವ ನೌರುಬಟ್ಟೆ" (ಸಿದ್ಧಾಂತಿ. ೨೦೪). [ಸಂ.]

**ಪ್ರಚ್ಛನೆ** (ನಾ). ೧. ಪ್ರಶ್ನೆಯನ್ನು ಕೇಳುವುದು; ಪ್ರಶ್ನಿಸುವುದು. ೨. [ಜೈನ] ವಾಚನೆ, ಪ್ರಚ್ಛನೆ, ಅನುಪ್ರೇಕ್ಷೆ, ಚಿಂತನೆ ಮತ್ತು ಧರ್ಮೋಪದೇಶಗಳೆಂಬ ಸ್ವಾಧ್ಯಾಯದ ಐದು ಭೇದಗಳಲ್ಲಿ ಎರಡನೆಯದು ; (ತಿಳಿಯಬೇಕಾದ ವಿಷಯದಲ್ಲಿ ಸಂಶಯವನ್ನು ಪರಿಹರಿಸಿಕೊಳ್ಳಲು ಹಾಗೂ ನಿಷ್ಕೃಷ್ಟಜ್ಞಾನವನ್ನು ಪಡೆಯಲು) ತಿಳಿದವರನ್ನು ಕೇಳುವುದು : ತನಗೆ ಸಂದೇಹಮಾದುದಂ ಪೆಱರ ಬೆಸಗೊಳ್ವುದುಂ ಪ್ರಚ್ಛನೆಯೆಂಬುದು (ಪ್ರಾವಕಾ. ೬೮). [ಸಂ. ಪ್ರಚ್ಛನಾ]

**ಪ್ರಚ್ಛನ್ನ** (ಗು). ೧. ಮುಚ್ಚಿರುವ; ಹೊದಿಸಿರುವ : ನೀಲವಸನಪ್ರಚ್ಛನ್ನಪರ್ಯಂಕಮಂಡಳದೊಳ್ . . . ಕುಳ್ಳಿರ್ದ ಕೋಮಳೆಯಂ ದೂರದೆ ನೋಡಿ ಕಡನರಸಂ ಕಾದಂಬರೀದೇವಿಯಂ (ಕಾದಂಪೂ. ೦೦೦೩). ೨. ವೇಷಾಂತರದ ; ಛದ್ಮವೇಷದ : ವಿವಿಧವೇಷವಿಶಾರದಪ್ರಚ್ಛನ್ನಪ್ರಣಿಧಿಗಳಂ ಪ್ರಯೋಗಿಸಿಯುಂ (ಪಂಪ್ರಭ. ೨–೬೧) ; ಕಲಿಯುಗದ ಪ್ರಚ್ಛನ್ನ ಲಕ್ಷ್ಮಿ ಸತ್ಯಾಗ್ರಹಿ ! (ಕಾಂಚಜ. ೨೦–೦೬). (ನಾ). ೩. ಗೋಪ್ಯ; ರಹಸ್ಯ; ಗುಟ್ಟು : "ರಹಃ, ಪ್ರಚ್ಛನ್ನಂ . . . ರಹಸ್ಯಂ, ಗುಹ್ಯಂ — ಈ ೯ ಏಕಾಂತಂ" (ಕಣಾಪು. ೦೦೬–೨೩) ; ಪ್ರಚ್ಛನ್ನಮಪ್ಪೆಡೆಯೊಳ್ ವ್ಯಾತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು (ವಡ್ಡಾರಾ. ೨೯೦) ; ಬೆನ್ನೊಳ್ ಪೋದಂ . . . ಅರಸಂ ಪ್ರಚ್ಛನ್ನದಿಂ (ಧುಕೋಶ. ೨–೯೮). ೪. ಕಣ್ಣಿಗೆ ಕಾಣದಿರುವವನು; ಅಗೋಚರ; ಪರಮಾತ್ಮ : ಸ್ವೇಚ್ಛಾಶೀಲನ ಪ್ರಚ್ಛನ್ನನ. . .ನುತಿಪೆಂ (ಉದ್ಭಟೀ. ೬–೦). ೫. ರಹಸ್ಯವಾದ ದ್ವಾರ; ಒಳಬಾಗಿಲು : "ಪ್ರಚ್ಛನ್ನಂ, ಅಂತರ್ದ್ವಾರಂ — ೨ ಒಳಬಾಗಿಲ ಹೆಸರು, ರಹಸ್ಯವಾದ ಬಾಗಿಲು" (ಸಿದ್ಧಾಂತಿ. ೦೦೨). ೬. ನಡುನಡುವೆ ಕಂಡಿಗಳುಳ್ಳ ಅಡ್ಡಪಟ್ಟಿಗಳ ಚೌಕಟ್ಟು; ಜಾಲಂದ್ರ. ೭. ಬಂದೂಕು ಮೊದಲಾದುವುಗಳಿಂದ ಹೊಡೆಯುವುದಕ್ಕಾಗಿ ಅಥವಾ ಗಾಳಿ ಬೆಳಕು ಬರುವುದಕ್ಕಾಗಿ ಗೋಡೆಯಲ್ಲಿ ಮಾಡಿರುವ ಕಿರಿದಾದ ಉದ್ದ ಕಂಡಿ. ೮. ತಪ್ಪಿಸಿಕೊಂಡು ಹೋಗಲು ಅನುಕೂಲವಾಗುವಂತೆ ಕೋಟೆ ಮೊದಲಾದುವುಗಳಲ್ಲಿ ಮಾಡಿರುವ ಕಂಡಿ. [ಸಂ.]

**ಪ್ರಚ್ಛನ್ನತೆ** (ನಾ). ಮುಚ್ಚುವುದು ; ಮರೆಮಾಚುವುದು : ಸಂಭಾಷಣೆಯ ವಿಮರ್ಶಾತ್ಮಕಪರಿಶೀಲನೆಯಲ್ಲಿ ಸಹಜವಾದ ಮತ್ತು ಒಮ್ಮೊಮ್ಮೆ ಉದ್ದೇಶಪೂರ್ವಕ ಪ್ರಚ್ಛನ್ನತೆಯ ಅಗತ್ಯಗಳಿಗೆ ಅವಕಾಶ ಕೊಡಬೇಕಾಗುವುದು (ಸಾಹಿತ್ಯ. ೧೯೩). [ಸಂ. ಪ್ರಚ್ಛನ್ನತಾ]

**ಪ್ರಚ್ಛನ್ನವೇಷ** (ನಾ). ವೇಷಾಂತರ ; ಮಾರುವೇಷ : ಕದ್ದೋಡಿ ಬಂದು ಪ್ರಚ್ಛನ್ನವೇಷದಿ ಕಳ್ಳರಲ್ಲಿರಲು ಭೂತಿಲಕನೃಪತಿ ಒಡಿತರಿಸಿ ಕೇಳೆ (ಗುರುಕಾ. ೯–೬೨). [ಸಂ.]

**ಪ್ರಚ್ಛರ್ದಿಕೆ** (ನಾ). ೧. ವಾಂತಿ; ಕಾರಿಕೆ ; ವಮನ: "ಪ್ರಚ್ಛರ್ದಿಕಾ, ವಮಿಃ, ವಮಥುಃ —೩ ಕಕ್ಕುರೋಗ, ವಾಂತಿ, ವಮನ" (ಸಿದ್ಧಾಂತಿ. ೦೬೯). ೨. ವಾಂತಿ ಮಾಡಿಸುವ ಔಷಧಿ. [ಸಂ. ಪ್ರಚ್ಛರ್ದಿಕಾ]

**ಪ್ರಚ್ಛಾದನ** (ನಾ). ೧. ಮುಚ್ಚಿಡುವುದು; ಕಾಣದಂತೆ ಮಾಡುವುದು : ಸ್ವಗುಣಪ್ರಚ್ಛಾದನಮನ್ಯಗುಣಾವಿಷ್ಕರಣಂ . . . ಉಚ್ಚಗೋತ್ರದಾಸ್ರವ ಮಕ್ಕುಂ (ಸುಕುಮಾ. ೬–೨೫). ೨. ಹೊದೆಯುವ ವಸ್ತ್ರ; ಉತ್ತರೀಯ. [ಸಂ.]

**ಪ್ರಚ್ಛಾದಿತ** (ಗು). ೧. ಹೊದಿಸಿದ; ಆಚ್ಛಾದಿಸಿದ. ೨. ಬಚ್ಚಿಟ್ಟ; ಮರೆಮಾಡಿದ. [ಸಂ.]

**ಪ್ರಚ್ಛಾದಿಸು** (ಕ್ರಿ). ಮುಚ್ಚು; ಮರೆಮಾಡು : ರಾಹುವಿನ ವಿಮಾನಂ . . . ಚಂದ್ರವಿಮಾನಮಂ ಪ್ರಚ್ಛಾದಿಸಿ ಷಣ್ಮಾಸಕ್ಕೊಮ್ಮೆ ಪುಣ್ಣಮಿಯ ಕಡೆಯೊಳು ಸೋಮಗ್ರಹಣಮಕ್ಕುಂ (ತ್ರಿಕಣ. ೯೦). [ಪ್ರಚ್ಛಾದನ + –ಇಸು]

**ಪ್ರಜ** (ನಾ). ೧. ಹುಟ್ಟು; ಜನ್ಮ; ಉತ್ಪತ್ತಿ. ೨. ಸಂತತಿ; ಸಂತಾನ. ೩. ಒಂದು ಸಂತತಿಗೆ ಸೇರಿದ ವ್ಯಕ್ತಿ; ವಂಶಜ. ೪. ಮನುಷ್ಯ ಜಾತಿ; ಮಾನವಕುಲ. ೫. ಸೃಷ್ಟಿಯಾದ ಯಾವುದೇ ಜೀವಿ. ೬. ಒಂದು ದೇಶದಲ್ಲಿ ವಾಸಿಸುವ ಜನ; ಪ್ರಜೆ : ಸೃಜಿಸಿದಳು ಭೂವನಿತೆ ರಾಜನ ಪ್ರಜರ ಹಿತ ಸಾಧಿಸಲು ವಿಧವಿಧರಜತಮೌಕ್ತಿಕ ಹೇಮರತ್ನಗಳನ್ನು ಮೋದದಲಿ (ಕಶುಮಂ. ೬–೨೭); ನಾನು ನಾಳೆ ನಿಮ್ಮ ಕಚೇರಿಯಲ್ಲಿ ಬಂದು ಕುಳಿತುಕೊಳ್ಳುವೆ . . . ಎಲ್ಲ ಪ್ರಜರಿಗೂ ತಿಳಿಸು (ಕೋಡಿ. ೪). ೭. ವೀರ್ಯ; ರೇತಸ್ಸು. [ಸಂ. ಪ್ರಜಾ]

**ಪ್ರಜನ** (ಗು). ೧. ಸೃಷ್ಟಿಸುವ ; ಉತ್ಪತ್ತಿಮಾಡುವ. (ನಾ). ೨. ಹುಟ್ಟುವುದು ; ಜನಿಸುವುದು. ೩. ಹುಟ್ಟಿಸುವುದು ; ಉತ್ಪತ್ತಿ ಮಾಡುವುದು. ೪. ಗರ್ಭಧಾರಣೆ ಮಾಡುವುದು. ೫. ಪಶುಗಳಿಗೆ ಗರ್ಭಧಾರಣೆ ಮಾಡಿಸುವುದು,—ಹೋರಿ ಕೊಡುವುದು: "ಪ್ರಜನಃ, ಉಪಸರಃ — ೨ ದನಗಳ ಮೇಲೆ ಗೂಳಿಗಳು ಹಾರುವ ಸಮಯ" (ಸಿದ್ಧಾಂತಿ. ೩೬೪). 'ಉಪಸರ' ಹೋ. ೬. ಉತ್ಪತ್ತಿಗೆ ಕಾರಣವಾದುದು; ಜನನಹೇತು. ೭. ಜನನೇಂದ್ರಿಯ. [ಸಂ.]

**ಪ್ರಜನನ** (ಗು). ೧. ಹುಟ್ಟಿಸುವ ; ಸೃಷ್ಟಿಮಾಡುವ : ಭೂಮಿತಾಯ್ಗೆ ಪ್ರಜನನಚಾಪಲ್ಯ (ಶ್ರೀಂಹರ್ಷ. ೯೯–೮); ನಿರ್ಜೀವಿಗಳಲ್ಲಿ ಪ್ರಜನನಕ್ರಿಯೆ ಇಲ್ಲ (ಕಹಿಕೋ. XI, ೩೨೦). (ನಾ). ೨. ಹುಟ್ಟುವಿಕೆ ; ಜನನ. ೩. ಹುಟ್ಟಿಸುವುದು ; ಉತ್ಪತ್ತಿಮಾಡುವುದು : ಜೀವಿಗಳು ನಿರ್ಜೀವಿಗಳಿಗಿಂತ ಭಿನ್ನವಾಗಿರುವುದಕ್ಕೆ ಪ್ರಜನನ ಕೂಡ ಒಂದು ಕಾರಣ (ಕಹಿಕೋ. XI, ೩೨೦). ೪. ಗರ್ಭಧಾರಣೆ ಮಾಡುವುದು. ೫. ಪಶುಗಳ ಗರ್ಭಧಾರಣೆ. ೬. ಹೆರುವುದು; ಹಡೆಯುವುದು. ೭. ಸಂತಾನ; ಸಂತತಿ. ೮. ಜನನೇಂದ್ರಿಯ. ೯. ವೀರ್ಯ ; ರೇತಸ್ಸು. [ಸಂ.].

**ಪ್ರಜವ** (ನಾ). ಹೆಚ್ಚಾದ ವೇಗ,—ಚುರುಕು: ನಿಜರಾಜ್ಯದೊಳುತ್ಪತ್ತಿಯ ನಿಜಮಂ ಕಾಣಲ್ಕೆ ಭೂಪ ಮನಮಂ ಮಾಡಲ್ ಪ್ರಜವದೆ ಲೇಖಕಜನ ಕಾಗಜಮಂ ಬಟ್ಟೆಯಲಿ ಕಟ್ಟಿ ಪೊತ್ತರ್ ಪೆಗಲೊಳ್ (ಕರ್ಣಾಕ. ೩೪). [ಸಂ.]

**ಪ್ರಜಾತ** (ಗು). ಹುಟ್ಟಿದ; ಜನಿಸಿದ ; ಉತ್ಪನ್ನವಾದ : ಪಾತಕವ್ರಾತ ಪ್ರಜಾತನಿಕೇತನಂಗಳು ತುಡುಗುಣಿಗಳು ನಿಘಾತಕರ್ಮಕ್ರಿಯೆಗಳವಿಚಾರಿಗಳು ಕೋಪಿಗಳು (ಬಸವ. ೪೦–೩೫). [ಸಂ.]

**ಪ್ರಜಾತಂತ್ರ** (ನಾ). ಪ್ರಜೆಗಳೇ ಪರಮಾಧಿಕಾರವನ್ನು ಹೊಂದಿರುವ ಆಡಳಿತ ; ಪ್ರಜಾಪ್ರಭುತ್ವ: ಪ್ಯಾಕರಣವು ನಿರಂಕುಶಪ್ರಭುವಿನ ಶಾಸನವಲ್ಲ. ಅದು ಧರ್ಮನಿಷ್ಠ ಪ್ರಜಾತಂತ್ರ ಜನತೆಯ ರಾಜ್ಯಸಂವಿಧಾನ (ಸಂಕೋಲ. ೮೫). [ಸಂ.]

**ಪ್ರಜಾತೆ** (ನಾ). ಬಾಣಂತಿ ; ಪ್ರಸೂತೆ : "ಜಾತಂ ಪ್ರಜಾತಂ ಪ್ರಸೂತೆಯೆನೆ ಬಾಣಂತಿಯಕ್ಕು" (ಮಂಗರಾ. ೯೦–೪). [ಸಂ. ಪ್ರಜಾತಾ]

**ಪ್ರಜಾಧರ್ಮ** (ನಾ). ೧. ಒಂದು ದೇಶದ ಪ್ರಜೆಗಳು ಅನುಸರಿಸಬೇಕಾದ ನಡವಳಿಕೆ,—ಕರ್ತವ್ಯ : ಕುಲಧರ್ಮವೆಂದರೆ ಒಂದು ಕುಲದವರು ಮಾತ್ರ ಅನುಸರಿಸುವ ಸಂಪ್ರದಾಯವು ಅಥವಾ ಪದ್ಧತಿಯು. ರಾಜಧರ್ಮ ಪ್ರಜಾಧರ್ಮ ಇತ್ಯಾದಿಗಳಲ್ಲಿ ಕರ್ತವ್ಯವೆಂದರ್ಥವು (ಅಡಿಗೆಕ. ೦೦). ೨. ಪ್ರಜೆಗಳಿಗೆ ಸಂಬಂಧಿಸಿದ ಹಕ್ಕು, ಕರ್ತವ್ಯ ಮೊದಲಾದ ವಿಷಯಗಳನ್ನು ಒಳಗೊಂಡಿರುವ ಶಾಸ್ತ್ರ; ಪೌರನೀತಿ : "ಪ್ರಜೆಯ ಹಕ್ಕು–ಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ; ಪ್ರಜಾಧರ್ಮ; ಪ್ರಜಾನೀತಿ" (civics. ೩೦೪೩). [ಸಂ.]

**ಪ್ರಜಾಧಿಪ** (ನಾ). ಪ್ರಜೆಗಳ ಒಡೆಯ ; ಅರಸಂ ; ರಾಜ : "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿವಂ ಭೂಪತಿ ಮೂರ್ಧಾಭಿಷಿಕ್ತಂ ಕ್ಷತ್ರಿಯಂ ಪ್ರಜಾಧಿಪನೆನಲ್ಕರಸಕ್ಕು" (ಮಂಗರಾ. ೭೪–೧). [ಸಂ.]

**ಪ್ರಜಾಧಿಪತ್ಯ** (ನಾ). ಪ್ರಜೆಗಳ ಪರಮಾಧಿಕಾರದಿಂದ ನಡೆಯುವ ಆಡಳಿತ ; ಪ್ರಜಾಪ್ರಭುತ್ವ: ಪ್ರಪಂಚದ ಅತ್ಯಂತ ಪುರಾತನ ಚಕ್ರಾಧಿಪತ್ಯಗಳಲ್ಲಿ ಒಂದಾದ ಚೀನಾ ೧೯೧೨ರಲ್ಲಿ ಪ್ರಜಾಧಿಪತ್ಯವಾಯಿತು (ಶೂಪವ. ೪೦೬). [ಸಂ.]

**ಪ್ರಜಾನೀತಿ** (ನಾ). = ಪ್ರಜಾಧರ್ಮ ೨: "ಪ್ರಜೆಯ ಹಕ್ಕುಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತ ಶಾಸ್ತ್ರ : ಪ್ರಜಾಧರ್ಮ; ಪ್ರಜಾನೀತಿ" (civics. ೩೦೪೩). [ಸಂ.]

**ಪ್ರಜಾನುರಾಗ** (ನಾ). ಪ್ರಜೆಗಳ ಪ್ರೀತಿಗೆ ಪಾತ್ರನಾದವನು : ಅತಿಪ್ರವರ್ಧನಪ್ರಜಾನುರಾಗನುಮತಿಪ್ರಬಲರಣರಾಮನುಮೆನಿಸಿದ ರಣರಂಗಸಿಂಹನುಂ . . . ಪುಟ್ಟಿದಂ (ನರಾಮು. ೨–೭ ಪ). [ಸಂ.]

**ಪ್ರಜಾಪಕ್ಷೀಯ** (ನಾ). ಪ್ರಜಾಪಕ್ಷಪಾತಿಯಾದ ವ್ಯಕ್ತಿ ; ಪ್ರಜೆಗಳ ಹಿತಚಿಂತಕನಾದವನು : ಮಂತ್ರಿಯಾದವನು ನಿಜವಾಗಿ ಪ್ರಜಾಪಕ್ಷೀಯನಾಗಿದ್ದಲ್ಲಿ ಅವನ ಮೇಲುಸ್ತುವಾರಿ ಒಹುಮಟ್ಟಿಗೆ ಸಹಾಯಕಾರಿಯಾಗುತ್ತದೆ (ರಾಜ್ಯಶಾ. ೩೪೭). [ಸಂ].

**ಪ್ರಜಾಪತಿ** (ನಾ). ೧. ಪ್ರಜೆಗಳನ್ನು ಸೃಷ್ಟಿಮಾಡುವವನು ; ಸೃಷ್ಟಿಕರ್ತ ; ಪರಮಾತ್ಮ. ೨. ಬ್ರಹ್ಮ : "ಬ್ರಹ್ಮಾ . . . ಪ್ರಜಾಪತಿಃ, ಪಿತಾಮಹಃ, ಜಗತ್ಕರ್ತಾ, ವಿಶ್ವಾತ್ಮಾ, ಕಮಲಾಸನಃ — ಈ ೨೦ ಬ್ರಹ್ಮನ ಪೆಸರ್" (ಹಲಾಯು. ೨–೭); ಪ್ರಜಾಪತಿಯ ರೂಪನಿರ್ಮಾಣಕೌಶಲಮುಮಂ . . . ನೀನುಂ ಕಾಣ್ಬೆಯೆಂದೆಂತಾನುಮಿಲ್ಲಿಗೊಡಗೊಂಡು ಬಂದೆಂ (ಕಾದಂಬ. ೯೧); ಅಪ್ರತಿಮಪ್ರಜಾಪತಿಸಮಾನನೆನೆನ್ನ ಮಗಳ್ಗೇನಾನುಮುಪಾಯದ ಮಾಯೆಯಿಂ ಮೃತಮಾನಾಗ್ರಹದಿಂದಮೆ ನೀಮಿಂತೀವುದಿದಾವುದು ಸಮ್ಮದಂ. (ಸುಕುಮಾ. ೭–೩೯). ೩. ವಿಷ್ಣು. ೪. ಪ್ರಜಾಸೃಷ್ಟಿಗಾಗಿ ಬ್ರಹ್ಮನಿಂದ ಮೊದಲು ಸೃಷ್ಟಿ ಹೊಂದಿದ ಹತ್ತುಜನ ಸೃಷ್ಟಿಕರ್ತರು ; ಬ್ರಹ್ಮನ ಮಾನಸಪುತ್ರರು ; ೯ ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತಸ, ವಸಿಷ್ಠ, ಭೃಗು ಮತ್ತು ನಾರದ—ಇವರು ದಶಪ್ರಜಾಪತಿಗಳು. ಈ ವಿವರಣೆಯ ಬಗೆಗೆ ಭಿನ್ನಾಭಿಪ್ರಾಯವೂ ಇದೆ. ಬ್ರಹ್ಮ, ಸ್ಥಾಣು, ಮನು, ದಕ್ಷ, ಭೃಗು, ಧರ್ಮ, ಯಮ, ಮರೀಚಿ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಪರಮೇಷ್ಠಿ, ವಿವಸ್ವಾನ್, ಸೋಮ, ಕರ್ದಮ, ಕ್ರೋಧ, ಅರ್ವಾಕ್ ಮತ್ತು ಪ್ರೀತ—ಈ ಇಪ್ಪತ್ತೊಂದು ಜನ ಪ್ರಜಾಪತಿಗಳೆಂದು ಮಹಾಭಾರತದ ಮೋಕ್ಷಧರ್ಮಪ್ರಕರಣದಲ್ಲಿ ಹೇಳಿದೆ. ೫. ವಿಶ್ವಕರ್ಮ. ೬. ಸೂರ್ಯ. ೭. ಅಗ್ನಿ.

೮. ಇಂದ್ರ. ೯. ಮನಂ. ೧೦. ಪ್ರಜೆಗಳ ಒಡೆಯ; ಅರಸ; ರಾಜ: "ರಾಜಾ, ರಾಜನ್ಯಃ, ರಾಟ್, ಪ್ರಜಾಪತಿಃ . . . ಲೋಕಪಾಲಃ—ಈ ೧೨ ಅರಸು" (ಹಲಾಯು. ೬೯-೨೬೭). ೧೧. ಅಳಿಯ; ಜಾಮಾತ. ೧೨. ತಂದೆ; ಜನಕ. ೧೩. ಒಂದು ಯಾಗದ ಹೆಸರು. ೧೪. ಹಿಂದೂಕಾಲಮಾನದ ಅರುವತ್ತು ಸಂವತ್ಸರಗಳಲ್ಲಿ ಒಂದು. ೧೫. ಪುರುಷನ ಜನನೇಂದ್ರಿಯ; ಶಿಶ್ನ: ಯಿ ದರ್ಮಕೆ ಅಳುಪಿದವ ಕತ್ತೆ ಪ್ರಜಾಪತಿಗೆ ಅಳುಪಿದಾಗೆ (ಶ್ಯಂ. ೧೯೩೦. ೨೩-೨೦; ೧೬೬೬). [ಸಂ.]

**ಪ್ರಜಾಪತಿತ್ವ** (ನಾ). ಅರಸುತನ; ರಾಜತ್ವ: ಕುಲಧ್ವಜ ಬೆಸಸು ನಿನ್ನವೋಲೀ ಪ್ರಜಾಪತಿತ್ವಕ್ಕೆ ಮುನ್ನ ನೋಂತರುಮೊಳರೇ (ಅಂಕ್ರ. ೬-೬೬). [ಸಂ.]

**ಪ್ರಜಾಪತಿಯೋಗ** (ನಾ). [ಜ್ಯೋತಿ] ಶುಭಕಾರ್ಯಗಳಿಗೆ ಪ್ರಶಸ್ತವಾದ ಇಪ್ಪತ್ತೇಳುಯೋಗಗಳಲ್ಲಿ ಇಪ್ಪತ್ತೈದನೆಯ ಬ್ರಹ್ಮವೆಂಬ ಯೋಗ; ಬ್ರಹ್ಮಜ್ಞಾನೋತ್ಪತ್ತಿಗೆ ಸೂಕ್ತವಾದ ಕಾಲ: ಕೃತ ಭವ್ಯೋತ್ಸವ ಮಾಘಶುದ್ಧದಶಮಿಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು ... ಆದುದಂದಜಿತತೀರ್ಥೇಶಾಬ್ದುಮಿತ್ರೋದಯಂ (ಅಜಿತ. ೩-೨೨). [ಸಂ.]

**ಪ್ರಜಾಪತಿವ್ರತ** (ನಾ). ಪ್ರಾಜಾಪತ್ಯ, ಸೌಮ್ಯ, ಆಗ್ನೇಯ ಮತ್ತು ವೈಶ್ವದೇವ ಎಂಬ ನಾಲ್ಕು ವೇದವ್ರತಗಳಲ್ಲಿ ಒಂದು; ಪ್ರಾಜಾಪತ್ಯವ್ರತ: ಪ್ರಜಾಪತಿವ್ರತವೇ ಮುಂತಾದವುಗಳನ್ನು ಬಿಟ್ಟರೆ ಏಕ್ಕ ಕಡೆಗಳಲ್ಲಿಲ್ಲ ಪ್ರತಿಷೇಧಕ್ಕೆ ಇದೇ ಅರ್ಥವು ಎಂದು ನಮ್ಮ ಅಭಿಪ್ರಾಯ (ಬ್ರಹ್ಮಾ. ೮೩). [ಸಂ.]

**ಪ್ರಜಾಪಾಲನ** (ನಾ). ಪ್ರಜೆಗಳನ್ನು ಕಾಪಾಡುವುದು: ಕ್ಷತ್ರಿಯಜಾತಿಗೆ ಸತ್ಯತ್ಯಾಗಪ್ರಜಾಪಾಲನಶರಣಾಗತರಕ್ಷಣಪ್ರಹರಣಕ್ಷಮಾದಿಗುಣಾಚರಣಮುಮಂ . . . ನಿಜಿಸಿ (ಅಂಕ್ರ. ೬-೬೩ ವ). [ಸಂ.]

**ಪ್ರಜಾಪಾಲನೆ** (ನಾ). = ಪ್ರಜಾಪಾಲನ: ಹಿಂದಿನ ಕಾಲದಲ್ಲಿ ಪ್ರಜಾಪಾಲನೆಯೇ ರಾಜನ ಮುಖ್ಯಕರ್ತವ್ಯವಾಗಿದ್ದಿತು (ಊಂ).

[ಸಂ. ಪ್ರಜಾಪಾಲನ]

**ಪ್ರಜಾಪ್ರತಿನಿಧಿ** (ನಾ). ಪ್ರಜೆಗಳಿರುವ ಆಡಳಿತಾಧಿಕಾರವನ್ನು ನಿರ್ವಹಿಸುವುದಕ್ಕಾಗಿ ಮತದಾನದ ಮೂಲಕ ಆರಿಸಿ ಬಂದ ಮುಂದಾಳು: ಪ್ರಜಾಪ್ರತಿನಿಧಿಗಳಾದ ದೇಶಪ್ರಮುಖರು ಸಮರ್ಥರೂ ಯೋಗ್ಯರೂ ಆಗಿರಬೇಕೆಂಬುದು ಸ್ವತಃ ಸಿದ್ಧವಾದ ಸಂಗತಿ (ರಾಜ್ಯಶಾ. ೨೬೦). [ಸಂ.]

**ಪ್ರಜಾಪ್ರತಿನಿಧಿಸಭೆ** (ನಾ). (ರಾಜ್ಯದ ಆಡಳಿತವಿಚಾರಗಳಲ್ಲಿ ಸಲಹೆ ಕೊಡಲು ನೇಮಿತರಾದ) ಚುನಾಯಿತ ಪ್ರತಿನಿಧಿಗಳ ಸಭೆ: ಪ್ರಜಾಪ್ರತಿನಿಧಿಸಭೆ, ನ್ಯಾಯವಿಧಾಯಕಸಭೆ ಮುಂತಾದ ಸಂಸ್ಥೆಗಳಲ್ಲಿ 'ಮೆಂಬರು' ಗಳಾಗಿರುವವರು ಮತ್ತು ಹಾಗೆ ಸದಸ್ಯರುಗಳಾಗಲು ಬಯಸುವವರು (ಸಾಹಿತ. ೯೬). [ಪ್ರಜಾಪ್ರತಿನಿಧಿ + ಸಭೆ]

**ಪ್ರಜಾಪ್ರಭುತ್ವ** (ನಾ). = ಪ್ರಜಾಧಿಪತ್ಯ: ಆಧುನಿಕ ಪ್ರಜಾಪ್ರಭುತ್ವವು, ರಾಜ್ಯದ ವಿಶಾಲತೆಯ ಕಾರಣದಿಂದ, ಪ್ರತಿನಿಧಿಪ್ರಭುತ್ವವನ್ನು ಒಪ್ಪಲೇಬೇಕಾಯಿತು (ರಾಜಕ. ೯): ಪ್ರಜಾಪ್ರಭುತ್ವವು ಇಂದಿನ ಜಗತ್ತಿನಲ್ಲಿ ಪ್ರಚಲಿತವಾದ ಒಂದು ನಿಯಂತ್ರಣ ಪದ್ಧತಿಯಾಗಿದೆ (ಪಶ್ಚಿಮಾ. ೦೮).

[ಸಂ.]

**ಪ್ರಜಾವತಿ** (ನಾ). ೧. ಮಕ್ಕಳುಳ್ಳವಳು. ೨. ತಾಯಿ; ಜನನಿ. ೩. ಸಹೋದರನ ಹೆಂಡತಿ; ನಾದಿನಿ: "ಪ್ರಜಾವತೀ, ಭ್ರಾತೃವಧೂಃ—ಈ ೨ ನಾಮ[ದಿ]ನಿ" (ಹಲಾಯು. ೬೩-೩೩೦); "ನಾದಿನಿ ಪ್ರಜಾಪತಿಯುಕ್ಕು" (ಮಂಗರಾ. ೬೨-೦೨). [ಸಂ. ಪ್ರಜಾವತೀ]

**ಪ್ರಜಾಲ** (ನಾ). ದೊಡ್ಡ ಗುಂಪು,—ಸಮೂಹ: ಭಾಳಾಕ್ಷನಂ ಸ್ತುತಿಸಿ ಯೊಲಿಸನ್ಯಸಮಯಪ್ರಜಾಲಮಂ ಗೆಲಿದ ಹಂಪೆಯ ಹರೀಶ್ವರಂ (ರಾಘಶ. ೦-೦೩). [ಸಂ.]

**ಪ್ರಜಾಸಂಬಂಧಾಂತರ** (ನಾ). [ಜೈನ] ಜೈನಬ್ರಾಹ್ಮಣನಿಗಿರಬೇಕಾದ ಹತ್ತು ಬಗೆಯ ಅಧಿಕಾರಗಳಲ್ಲಿ ಒಂದು; ಜೈನಗ್ರಂಥವಾದ ಉಪಾಸನಾಧ್ಯಯನ ಸೂತ್ರದಲ್ಲೂ ಸಂಸ್ಕೃತ ಭಾಷೆಯಲ್ಲಿರುವ ಆದಿಪುರಾಣದಲ್ಲೂ ಹತ್ತುಬಗೆಯ ಅಧಿಕಾರಗಳನ್ನು ಜೈನಬ್ರಾಹ್ಮಣನಿಗೆ ಉಪದೇಶ ಮಾಡಲಾಗಿದೆ. ೧. ಅತಿಬಾಲವಿದ್ಯೆ—ಬ್ರಾಹ್ಮಣನು ಬಾಲ್ಯದಿಂದಲೆ ಯಾವ ವಿದ್ಯೆಯನ್ನು ಕಲಿಯಲು ಪ್ರಯತ್ನ ಮಾಡಿ ಸಾಧಿಸಿದನೊ ಆ ವಿದ್ಯೆ. ೨. ಕುಲಾವಧಿ—ಕುಲಾಚಾರವನ್ನು ರಕ್ಷಿಸುವುದು. ೩. ವರ್ಣೋತ್ತಮತ್ವ—ಇತರ ವರ್ಣದವರಿಗಿಂತ ತಾನು ಮೇಲೆನಿಸಿರುವುದು. ೪. ಪಾತ್ರತ್ವ—ಗುಣಾಧಿಕನಾಗಿರುವುದರಿಂದ ದಾನಮಾನಾದಿಗಳಿಗೆ ಸತ್ಪಾತ್ರನಾಗಿರುವಿಕೆ. ೫. ಸೃಷ್ಟ್ಯಧಿಕಾರಿತೆ—ತೀರ್ಥಂಕರರಿಂದ ಜನ್ಮ ತಾಳಿ ಪ್ರಾಚೀನಕಾಲದಿಂದಲೂ ಬಂದಿರುವ ಧರ್ಮವನ್ನೇ ಪ್ರಚಾರ ಮಾಡುವುದು. ೬. ವ್ಯವಹಾರೇಶಿತ್ವ—ಜೈನಧರ್ಮಾವಲಂಬಿಗಳಾದವರಿಗೆ ಪ್ರಾಯಶ್ಚಿತ್ತ ಮೊದಲಾದ ವ್ಯವಹಾರಗಳನ್ನು ಜೈನಸಂಪ್ರದಾಯಾನುಸಾರವಾಗಿ ನಿರ್ವಹಿಸುವ ಹೊಣೆಗಾರಿಕೆ,—ಸ್ವಾತಂತ್ರ್ಯ. ೭. ಅವಧ್ಯತ್ವ—ಸಾಮಾನ್ಯವಾಗಿ ಯಾವ ಪ್ರಾಣಿಗಳನ್ನೂ ಕೊಲ್ಲಬಾರದು. ವಿಶೇಷವಾಗಿ ಬ್ರಾಹ್ಮಣನನ್ನಂತೂ ಕೊಲ್ಲಲೇಬಾರದು. ಅವನು ವಧೆಗೆ ಯೋಗ್ಯನಲ್ಲ, ಅವಧ್ಯ. ೮. ಅದಂಡ್ಯತ್ವ—ಬ್ರಾಹ್ಮಣನು ದಂಡನೆಗೆ ಅರ್ಹನಲ್ಲ, ಶಿಕ್ಷಾರ್ಹನಲ್ಲ. ೯. ಮಾನಾರ್ಹತೆ—ಬ್ರಾಹ್ಮಣನು ಎಲ್ಲರ ಮನ್ನಣೆಗೂ ಪಾತ್ರನಾದವನು. ಎಲ್ಲರೂ ಅವನನ್ನು ಗೌರವಿಸಬೇಕು. ೧೦. ಪ್ರಜಾಸಂಬಂಧಾಂತರ—ಹೇಗೆ ಸಿದ್ಧರಸವು ತನ್ನೊಡನೆ ಸಂಬಂಧ ಹೊಂದಿದ ಲೋಹಗಳನ್ನೆಲ್ಲಾ ಚಿನ್ನವನ್ನಾಗಿ ಮಾಡುವುದೋ ಹಾಗೆ ತನ್ನ ಸಂಗವನ್ನು ಮಾಡಲು ಬಂದ ಎಲ್ಲರನ್ನೂ ತನ್ನಂತೆಯೇ ಒಳ್ಳೆಯವರನ್ನಾಗಿ ಮಾಡಿ, ತಾನು ಮಾತ್ರ ತನ್ನತನವನ್ನು ಉಳಿಸಿಕೊಂಡಿರುವಿಕೆ: ಅತಿಬಾಲವಿದ್ಯಾಕುಲಾವಧಿವರ್ಣೋತ್ತಮತ್ವ ಪಾತ್ರತ್ವ ಸೃಷ್ಟ್ಯಧಿಕಾರ ವ್ಯವಹಾರೇಶಿತ್ವಾವಧ್ಯತ್ವಾದಂಡ್ಯತ್ವ ಮಾನಾರ್ಹತ್ವ ಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಜಿಸಿ (ಅಂಕ್ರ. ೦೩-೦೬೩); ದಶಾಧಿಕಾರಮುಪಾಸಕಾಧ್ಯಯನದೊಳ್ಪೇಳ್ದುದವಾವುವೆಂದಡೆ ಅತಿಬಾಳವಿದ್ಯೆಯುಂ . . . ಪ್ರಜಾಸಂಬಂಧಾಂತರ [ಪಾಠಾಂ. ಪ್ರಜಾಸಂಬಂಧತ್ವ]ಮುಮೆಂದು ದಶವಿಧಮುಮಕ್ಕುಂ (ಚಾವುಂಪು. ೨೩೬). [ಸಂ.]

**ಪ್ರಜಾಸತ್ತೆ** (ನಾ). = ಪ್ರಜಾಧಿಪತ್ಯ: ಪಟೇಲಸಾಹೇಬರು . . . ಪ್ರಜಾಸತ್ತೆಯ ಈ ಕಾಲದಲ್ಲಿ ಪ್ರಜರ ಬೇಡಿಕೆಗೆ ಗೌರವ ಕೊಟ್ಟು . . . ನಮ್ಮ ಪ್ರಾಂತವನ್ನು ಕೊಡಬೇಕು (ಹಮ್ಮೊಂದ. ೦೦೨); ನಿಜವಾದ ಪ್ರಜಾಸತ್ತೆಯ (Democratic) ಸಮಾಜವು ಏರ್ಪಡಬೇಕಾದರೆ . . . ಸಹಕಾರಬುದ್ಧಿಯಿಂದ ವರ್ತಿಸುವುದು ಹೆಚ್ಚಬೇಕು (ಬ್ರಹಾಶಿ. ೦೧೨). [ಸಂ. ಪ್ರಜಾಸತ್ತಾ]

**ಪ್ರಜಾಸರ್ಕಾರ** (ನಾ). = ಪ್ರಜಾಧಿಪತ್ಯ: ಭಾರತವು . . . ಪ್ರಜಾಸರ್ಕಾರಪದ್ಧತಿಯನ್ನೂ ಗ್ರಾಮಾಡಳಿತವ್ಯವಸ್ಥೆಯ ಮೂಲಕ ನಮಗೆ ಕೃಪೆ ಮಾಡಿದ ನಮ್ಮ ತಾಯಿ (ಶಾರದ. ೩೬೩). [ಸಂ. (ಪ್ರಜಾ+ಸರ್ಕಾರ)]

**ಪ್ರಜಾಸ್ವಾತಂತ್ರ್ಯ** (ನಾ). ಮಾನವನ ಆಜನ್ಮಸಿದ್ಧವಾದ ಹಾಗೂ ಮೂಲಭೂತವಾದ ಸ್ವಾತಂತ್ರ್ಯ: ಒಂದು ಸ್ವತಂತ್ರರಾಷ್ಟ್ರದಲ್ಲಿ ಜನರಿಗಿರುವ ಪರಮಾಧಿಕಾರ: ಒಂದು ದೇಶದ ಪ್ರಜಾಸ್ವಾತಂತ್ರ್ಯಗಳ ನಿರಾಕರಣೆಯೆಂದರೆ ಅಲ್ಲಿ ನಿರಂಕುಶಆಡಳಿತವಿದೆಯೆಂದೇ ಪರಿಗಣಿಸಲಾಗುತ್ತದೆ (ಕರ್ಣಾಟ. XI. ೩೩೦). [ಸಂ.]

**ಪ್ರಜಾಹಿತ** (ನಾ). ಜನರ ಕ್ಷೇಮ,—ಸೌಖ್ಯ : ಪ್ರಜಾಹಿತವೂ ಮತ್ತು ಧರ್ಮಸಹಿಷ್ಣುತೆಯೂ ಈತನಲ್ಲಿ ನೆಲೆಸಿತ್ತು (ಕೋಶಂಬ. ೨೯) ; ಪತ್ರಿಕೆ . . . ಪ್ರಜಾಹಿತಸಾಧನಾಧ್ಯೇಯದಿಂದ ಸಮಾಜದಲ್ಲೊಂದು ಅಪೂರ್ವಸ್ಥಾನಮರ್ಯಾದೆಯನ್ನು ಕಲ್ಪಿಸಿಕೊಂಡಿರುತ್ತದೆ (ಕಂಕೋ. ೧. ೦೬೩). [ಸಂ.]

**ಪ್ರಜೆ** (ನಾ). ೧. ಹುಟ್ಟು ; ಜನ್ಮ ; ಉತ್ಪತ್ತಿ. ೨. ಸಂತತಿ : ಸಂತಾನ. ೩. ಒಂದು ಸಂತತಿಗೆ ಸೇರಿದ ವ್ಯಕ್ತಿ ; ವಂಶಜ. ೪. ಮನುಷ್ಯ ಜಾತಿ : ಮಾನವಕುಲ. ೫. ಸೃಷ್ಟಿಯಾದ ಯಾವುದೇ ಜೀವಿ. ೬. ಒಂದು ದೇಶದಲ್ಲಿರುವ ಜನ ; ಒಂದು ಆಧಿಪತ್ಯಕ್ಕೆ ಸೇರಿದ ಜನವರ್ಗ : “ಲೋಕಂ ಜಹುತ್ವಂ ಜನಂ ಪ್ರಜೆಗೆ ಪೆಸರಕ್ಕು” (ಪಂಗಣ. ೩೬-೨) ; ಪ್ರಜೆಯೆಲ್ಲಂ ಕ್ಷೇಮದಿಂದಿರ್ದುದು (ಶಾರಂಣ. ೨೩೯) ; ರಾಜ್ಯ ವೆಂದರೆ ಕೆಲವು ಮೂಲನಿಬಂಧನೆಗಳಿಗೆ ಅನುಸಾರವಾಗಿ ಒಟ್ಟುಗೂಡಿಕೊಂಡು ಬದುಕಲು ಒಡಂಬಟ್ಟಿರುವ ಜನರ ಸಂಘ . . . ಹಾಗೆ ಒಡಂಬಟ್ಟಿರುವ ಜನಕ್ಕೆ ರಾಜ್ಯಭಾಷೆಯಲ್ಲಿ “ಪ್ರಜೆ” ಎಂದು ಹೆಸರು (ರಾಜ್ಯಶಾ. ೪೩). ೭. ವೀರ್ಯ ; ರೇತಸ್ಸು. [ಸಂ. ಪ್ರಜಾ]

**ಪ್ರಜೇಶ** (ನಾ). ೧. = ಪ್ರಜಾಪತಿ ೪: ‘ನವಪ್ರಜೇಶ’ ಪರಾ. ೨. ರಾಜ ; ದೊರೆ. [ಸಂ.]

**ಪ್ರಜೇಶ್ವರ** (ನಾ). ೧. ಪ್ರಜೆಗಳ ಒಡೆಯ ; ರಾಜ. ೨.=ಪ್ರಜಾಪತಿ ೪: ಇಂದು ಕಮಳಭವ ಪ್ರಜೇಶ್ವರರೊಂದು ಮೂರುತಿ ವಿಷ್ಣು ಮನುಗಳು ಸಂದ ಪಾರ್ಥಿವಲೋಕಪಾಲಕರೊಂದು ಮೂರ್ತಿಯದು (ಜಯ್ಯಾಭ್ಯು. ೩-೬೮). ೩. ಮರೀಚಿಪುತ್ರನಾದ ಕಶ್ಯಪಪ್ರಜಾಪತಿ ; ೯ ಪ್ರಜಾ ಪತಿಗಳ ಸಾಲಿನಲ್ಲಿ ಕಶ್ಯಪನಿಗೆ ಗಣನೆಯಿಲ್ಲವಾದರೂ ದೇವತೆಗಳು ರಾಕ್ಷಸರೇ ಮೊದಲಾದ ದೇವಯೋನಿಗಳ ಜನಕನಾದುದರಿಂದ ಇವನಿಗೂ ಈ ಹೆಸರು ಸಲ್ಲುತ್ತದೆ : ಸರಸಿಜಭವನಿಂ ಪುಟ್ಟಿದ ಮರೀಚಿ ಗಣುಗಂ ಪ್ರಜೇಶ್ವರಂ . . . ಚೆಂಪಂ ಸಚಿವೆರಸು ತಪವನೀ ಪರ್ವತ ದೊಳ್ (ಕಾಶಂತ. ೦೦೮-೦೬೨). [ಸಂ.]

**ಪ್ರಜೈತ್ರ** (ನಾ). ಹೆಚ್ಚಾದ ಗೆಲುವನ್ನು ಪಡೆದವನು; ಅತಿಪರಾಕ್ರಮಿ: ವಿನುತನಿಸ್ಪೃಹನಿರಾತಂಕ ಸಂಸ್ತುತಿಲಕಾಸಂಕುಲಗುಣಪ್ರಜೈತ್ರಂ (ರಾಜಶೇ. ೦೯-೪೦). [ಸಂ.]

**ಪ್ರಜೋತ್ಪತ್ತಿ** (ನಾ). ಹಿಂದೂಕಾಲಮಾನದ ಅರುವತ್ತು ಸಂವತ್ಸರ ಗಳಲ್ಲಿ ಐದನೆಯದು : ಶ್ರೀಮತು ಪ್ರಜೋತ್ಪತ್ತಿಸಂವತ್ಸರದ ಮಾರ್ಗಸಿರ ಬ ೭ ಸೋ (ಎಶಿ. V. ಕೇಅರು. ೦೯೨-೦ ; 1211 ?). [ಸಂ.]

**ಪ್ರಜ್ಞ** (ಗು). ೧. ಬಹಳ ವಿಷಯಗಳನ್ನು ತಿಳಿದುಕೊಂಡಿರುವ ; ವಿದ್ವಾಂಸನಾದ: ಮಾತಿಗಾರ್ಯನು ನೆನಹುಗಳಿಗೆಯುತೀತನಪ್ಪ ಮಹಾನು ಭಾವ ಪ್ರಜ್ಞಮಾನಸನು (ಜಶಪು. ೮-೦೨). ೨. ಬುದ್ಧಿವಂತನಾದ ; ತಿಳಿವಳಿಕೆಯುಳ್ಳ. (ನಾ). ೩. ಬಹಳ ವಿಷಯಗಳನ್ನು ತಿಳಿದು ಕೊಂಡಿರುವವನು ; ವಿದ್ವಾಂಸ ; ಪಂಡಿತ : ಬಹುಶ್ರುತನ ಮಂತ್ರ ನಿಶ್ಚಯಮುಮಂ ... ಪ್ರಜ್ಞರುಂ ನಿರ್ಮತ್ಸರರುಂ ... ಸಚಿವ ಸಮೂಹಂ ಮೆಚ್ಚಿ (ಶಾಂತಿಪು. ೨-೬೦ ವ); ಪ್ರಜ್ಞಾಗ್ರಗಮುಮಂ ಲೋಕಜ್ಞಗ್ರಜ ವನಿತನುಸಿರ್ಪುದೆಗ್ನು (ಅಜಪು. ೩-೨). ೪. ಬುದ್ಧಿವಂತ. [ಸಂ.]

**ಪ್ರಜ್ಞಪ್ತ** (ಗು). ೧. ಗೊತ್ತುಪಡಿಸಿದ ; ವಿಧಿಸಿದ. (ನಾ). ೨. ಚೆನ್ನಾಗಿ ಬೋಧಿಸುವುದು ; ತಿಳಿವಳಿಕೆಯನ್ನು ನೀಡುವುದು. ೩. [ಬೌದ್ಧ] ಕ್ರಮವಾಗಿರುವುದು ; ಕ್ರಮಬದ್ಧವಾಗಿರುವುದು : ಮಿಲಿಂದ ಪ್ರಶ್ನೆಯು ಪಿಟಕಗಳಷ್ಟೇ ಪ್ರಜ್ಞಪ್ತವಾದ ಪ್ರಮಾಣಗ್ರಂಥವಾಗಿತ್ತು (ಬುದ್ಧಕ. ಬಂಂತ. ೦೦). [ಸಂ.]

**ಪ್ರಜ್ಞಪ್ತಿ** (ನಾ). ೧. ಅರಿವು ; ಜ್ಞಾನ ; ಪ್ರಜ್ಞೆ. ೨. ಬುದ್ಧಿ. ೩. ತಿಳಿಸುವುದು ; ಕಲಿಸುವುದು. ೪. [ಜೈನ] ಒಬ್ಬ ದೇವತೆಯ ಹೆಸರು : ವಿದ್ಯಾದೇವಿ. [ಸಂ.]

**ಪ್ರಜ್ಞಪ್ತಿವಿದ್ಯೆ** (ನಾ). [ಜೈನ] ಒಂದು ಬಗೆಯ ವಿದ್ಯೆ : ಅವರ್ಗಂ ಪ್ರಜ್ಞಪ್ತಿವಿದ್ಯೆ ಮೊದಲಾಗಿ ಕುಲಜಾತಿಸಾಧಿತಮ್ಮಿದ್ಯೆಗಳ್ ಪಲವುಂ ಬೆಸಕೆಯ್ವುವು (ಆದಿಪು. ೯-೦೨೦ ವ) ; ಅಂತು ಪ್ರಜ್ಞಪ್ತಿವಿದ್ಯಾಲಾಭಾಂತ ರಾಯಮುಮಂ ಮಾಡಲ್ (ಶಾಂತಿಪು. ೯-೩ ವ) ; ಅಂತು ನಡನಡ ನಡಗು ತ್ತುಮಾಂ ವಿಜಯಯೆಂಬೆಂ ಪ್ರಜ್ಞಪ್ತಿವಿದ್ಯೆಯಿಂ ಕಿಱಿಯಳೆಂ (ಕಂಠಾಕಮ. ೦೯-೩೬ ವ). [ ಸಂ. ಪ್ರಜ್ಞಪ್ತಿ ವಿದ್ಯಾ ]

**ಪ್ರಜ್ಞಾಗ್ರಾಹಿತ್ವ** (ನಾ). ಸಂಪೂರ್ಣಾರ್ಥವನ್ನು ಸ್ವೋಪಜ್ಞವಾಗಿ (ಅಂತರಂಗದ ಚೇತನದಿಂದ) ಕಂಡುಕೊಳ್ಳುವುದು : ಒಂದು ಉತ್ತಮರೂಪಕವು ಭಿನ್ನವಸ್ತುಗಳಲ್ಲಿರುವ ಸಾದೃಶ್ಯದ ಪ್ರಜ್ಞಾಗ್ರಾಹಿತ್ವ (Intutive Perception)ವನ್ನು ಸೂಚಿಸುತ್ತದೆ (ಅಂಕಾ. ೧೨೬). [ಸಂ.]

**ಪ್ರಜ್ಞಾತೀತ** (ನಾ). ಬುದ್ಧಿಗೆ ಮೀರಿದುದು ; ಊಹೆಗೆ ನಿಲುಕದಿ ರುವುದು : ಅಂಥ ಪ್ರೇಮ ಪ್ರಜ್ಞಾತೀತವಾಗಿ ಅಂತರ್ಜ್ಞಾನಪ್ರೇರಿತ ವಾಗಿರುತ್ತದೆ (ಕೃಪಕು. ೭೩). [ಸಂ.]

**ಪ್ರಜ್ಞಾನ** (ನಾ). ೧. ಹೆಚ್ಚಾದ ತಿಳಿವಳಿಕೆ ; ಅಧಿಕವಾದ ಜ್ಞಾನ : ಈ ಪ್ರಜ್ಞಾನಕ್ಕಾಗಿ, ವಿಶುದ್ಧಬುದ್ಧಿಗಾಗಿ ಮೂಲತಃ ಬೇರಾದದ್ದು ಅಂತರಂಗದ ಒಂದು ಸುಸಂಬದ್ಧತೆ. (ಎಕಾವ. ೨೦) ; ದುರಾಚಾರದಿಂದ ನಿವೃತ್ತನಾಗದವನೂ ಶಾಂತನಲ್ಲದವನೂ ಸಮಾಹಿತನಲ್ಲದವನೂ ಮನ ಶ್ಶಾಂತಿಯಿಲ್ಲದವನೂ ಪ್ರಜ್ಞಾನದಿಂದ ಇವನನ್ನು ಪಡೆಯಲಾರರು (ಕಠೋಪ. ೬೩). ೨. ವಿಚಾರ ಮಾಡುವ ಶಕ್ತಿ ; ವಿವೇಚನೆ. ೩. ಚೈತನ್ಯ. ೪. ತಿಳಿದವನು ; ಬುದ್ಧಿವಂತ. ೫. ಗುರುತು ; ಅಭಿಜ್ಞಾನ : “ಪ್ರಜ್ಞಾನಂ—೧. ಶುದ್ಧಬುದ್ಧಿ, ಗುರ್ತು ೨” (ಸಿದ್ಧಾಂತಿ. ೪೦೩). [ ಸಂ. ]

**ಪ್ರಜ್ಞಾನಿ** (ಗು). ೧. ಬಹಳ ಬುದ್ಧಿವಂತನಾದ. ೨. ವಿಶೇಷ ಜ್ಞಾನಿ ಯಾದ : ಪ್ರಜ್ಞಾನಿ ರಾಮಚಂದ್ರಂ . . . ನಿಂದನಚಲಂ ಧನುಷ್ಪಾಣಿ ಬಾಣಧಿ ನಿಮಿರೆ ಬೆನ್ನಿನಲಿ ! (ಶ್ರೀರಾಮಾ.೬೬೦—೩೯೩). [ಸಂ. ಪ್ರಜ್ಞಾನಿನ್]

**ಪ್ರಜ್ಞಾಪಾರಮಿತೆ** (ನಾ). [ಬೌದ್ಧ] ಅತ್ಯಂತ ಶ್ರೇಷ್ಠವಾದ ಜ್ಞಾನ,— ತಿಳಿವಳಿಕೆ : ಈ ಸಾಕ್ಷಾತ್ಕಾರವೆಂಬ ಭಾವನೆಯು ವೇದಾಂತಿಗಳ ಶ್ರವಣ, ಮನನ, ನಿದಿಧ್ಯಾಸಗಳಂತೆ ಶ್ರುತಿಮಯೀ, ಚಿಂತಾಮಯೀ, ಭಾವನಾಮಯೀ ಎಂಬ ಕ್ರಮದಿಂದ ಪ್ರಜ್ಞಾಪಾರಮಿತಾ ಎಂಬ ನಾಮಧೇಯದಿಂದ ಪ್ರಸಿದ್ಧವಾಗಿರುವುದು (ಹಿಂತಾ. ೪೦). [ಸಂ. ಪ್ರಜ್ಞಾಪಾರಮಿತಾ]

**ಪ್ರಜ್ಞಾವಂತ** (ನಾ). ಅರಿವುಳ್ಳವನು ; ಜ್ಞಾನಿ : ಅಶಾಶ್ವತಸುಖವನ್ನು ಕೊಡುವ ಈ ಯಾವ ವರವೂ ಆ ಪ್ರಜ್ಞಾವಂತನಾದ ಬಾಲಕನಿಗೆ ಬೇಡ ವಾಯಿತು (ಪುಣ್ಯಕ. ೨ ಭಾ:೩೪); ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿ ರುವ ಆಧ್ಯಾತ್ಮಿಕವಿಚಾರಗಳು . . . ಸರ್ವಕಾಲದ ಪ್ರಜ್ಞಾವಂತರಾದ ಮಾನವರ ಧ್ಯಾನಸಚಿಂತನೆಗಳಿಗೆ ಮುಗಿಯದ ತತ್ತ್ವಸಂಪತ್ತನ್ನು ಒದಗಿಸಿ ಕೊಡುತ್ತಿವೆ (ಕಾಠವ. ೬೩). [ ಸಂ. ಪ್ರಜ್ಞಾವತ್ ]

**ಪ್ರಜ್ಞಾವಾದ** (ನಾ). (ಆಲಂ) ತಾನು ಬುದ್ಧಿವಂತನೆಂದು ಭಾವಿಸಿ ಆಡುವ ಮಾತು : ‘ಪ್ರಜ್ಞಾವಾದವನ್ನೇ ಆಡುತ್ತೀರದೆ, ಜಿಜ್ಞಾಸೆ ಮಾಡಿ . . . ಇಲ್ಲಿಯೇ ಮುಕ್ತಿಯನ್ನು ಪಡೆಯಬೇಕು (ಶಿವಶಾ. ೦೯೪). [ ಸಂ. ]

**ಪ್ರಜ್ಞಾವಾದಿ** (ನಾ). (ಆಲಂ) ತಾನು ಬುದ್ಧಿವಂತನೆಂದು ಭಾವಿಸಿ ಮಾತುಗಳನ್ನಾಡುವವನು : ಅಲ್ಲದ ಕೆಲಸದಲ್ಲಿ ಅವರು ಸಲ್ಲದ ರೀತಿ

ಯಲ್ಲಿ ಕೈಯಿಕ್ಕುತ್ತಿರುವರೆಂದು ಗೋಣಗುಟ್ಟುವ ಪ್ರಜ್ಞಾವಾದಿಗಳೂ ವಿಪುಲರಾಗಿದ್ದಾರೆ (ಜಿಜಾಪು. ೩೬); ಪ್ರಜ್ಞಾವಾದಿಯಾಗಿದ್ದೀಯಾಗಲಿ ಪ್ರಜ್ಞಾವಿದನಾಗಿಲ್ಲ (ಛಾಕಥ. ೦೦೩). [ಸಂ. ಪ್ರಜ್ಞಾವಾದಿನ್]

**ಪ್ರಜ್ಞಾಶೂನ್ಯ** (ನಾ). ೧. ಬುದ್ಧಿಗೇಡಿ; ಅಜ್ಞ. ೨. ಮೈಮನಸ್ಸುಗಳ ಮೇಲೆ ಅರಿವು ಇಲ್ಲದ ವ್ಯಕ್ತಿ; ಮೂರ್ಛಾವಸ್ಥೆಯಲ್ಲಿರುವವನು: ರಸ್ತೆಯ ಅಪಘಾತದಲ್ಲಿ ಪ್ರಜ್ಞಾಶೂನ್ಯನಾದವನನ್ನು ಆಸ್ಪತ್ರೆಗೆ ಸಾಗಿಸಿದರು (ಜೂ). [ಸಂ.]

**ಪ್ರಜ್ಞಾಸ್ತ್ರ** (ನಾ). ಮೂರ್ಛೆಗೊಂಡವರನ್ನು ಎಚ್ಚರಗೊಳಿಸುವ ಒಂದು ಬಗೆಯ ಮಂತ್ರಾಸ್ತ್ರ: ವಿಭೀಷಣನು ಬಂದು ಅವರನ್ನು ಪ್ರಜ್ಞಾಸ್ತ್ರದಿಂದ ಎಚ್ಚರಗೊಳಿಸಿದನು (ಚಕಥ. ೪೦೦). [ಸಂ].

**ಪ್ರಜ್ಞಾಹೀನ** (ನಾ). ೧.=ಪ್ರಜ್ಞಾಶೂನ್ಯ ೧. ೨.=ಪ್ರಜ್ಞಾಶೂನ್ಯ ೨: ತೀವ್ರವಾದ ಜ್ವರದಿಂದ ಅವನು ಪ್ರಜ್ಞಾಹೀನನಾಗಿದ್ದಾನೆ (ಜೂ). [ಸಂ.]

**ಪ್ರಜ್ಞಾಹೀನತೆ** (ನಾ). ೧. ಬುದ್ಧಿಯಿಲ್ಲದಿರುವಿಕೆ; ದಡ್ಡತನ; ಅಜ್ಞತೆ: ಪ್ರಜ್ಞಾಹೀನತೆಯಿಂದ ಮೇಜಿಸಿದ ಸಂಬಂಧ ನೀ[ಉ] ಮಾಡಿದ ಶಿಕ್ಷೆಗಳಿಗೊಳಗಾಗಿ . . . ನಾಲು ನಂಮ ಜನಸಮಯಕ್ಕೆ . . . ಸಲ್ಲವೆಂದು ಕೊಟ್ಟ ಜಯಪತ್ರಿಕೆ (ಶಿಇ. XX. ೩೯೦-೯ : 1588). ೨. ಮೈಮನಸ್ಸುಗಳ ಮೇಲೆ ಅರಿವು ಇಲ್ಲದ ಸ್ಥಿತಿ; ಮೂರ್ಛಾವಸ್ಥೆ. [ಸಂ. ಪ್ರಜ್ಞಾಹೀನತಾ]

**ಪ್ರಜ್ಞು** (ನಾ). ಕಿಸುಗಾಲು ಹಾಕುವವನು: "ಪ್ರಜ್ಞುಃ, ಪ್ರಗತ ಜಾನುಕಃ, ಒಂದಕ್ಕೊಂದು ದೂರವಾಗಿ ಅಗಲವಾದ ಮೊಳಕಾಲುಗಳುಳ್ಳವನ ಹೆಸರು, ಕಿಸುಗಾಲವನು" (ಸಿದ್ಧಾಂತ. ೦೮೦). [ಸಂ.]

**ಪ್ರಜ್ಞೆ** (ನಾ). ೧. ತಿಳಿವಳಿಕೆ; ಅರಿವು; ಬುದ್ಧಿ: "ಸಂಖ್ಯಾರುಚಿಮತಿ ಪ್ರಜ್ಞೆ ಮೇಧೆ ಸಂವಿತ್ತು ಮುಪಲಬ್ಧಿಯೆನೆ ಬುದ್ಧಿಯಕ್ಕುಂ" (ಮಂಗರಾ. ೬೬-೨); ಮಾಯವಾದತ್ತುಳಿದುದನಿತುಮಂ ಪ್ರಜ್ಞೆಯಿಂ ಜಗುಳ್ದು ಬಯಪೊಂದಿ (ಶ್ರೀಣಾಪು. ೦೬-೯೩೩); ಓದುಗನ ಪ್ರಜ್ಞೆಯಲ್ಲಿ ಮೂಲದರ್ಶನವನ್ನು ಸ್ಫುರಿಸಲೆಂದೇ ಕಲಾಕೃತಿಯಲ್ಲಿ ಇಂತಹ ಬಗೆಬಗೆಯ ಹೊಂಚನ್ನು ಹಾಕಿರುತ್ತದೆ (ಸಪುಶೀ. ೦ ೩೬೩). ೨. ಪ್ರತಿಭೆ. ೩. ವಿವೇಕ; ವಿವೇಚನೆ. ೪. ಪೂರ್ವಸಂಸ್ಕಾರ; ವಾಸನೆ. ೫. ಭಾವನೆ; ಚಿತ್ತವೃತ್ತಿ. ೬. ಮೈ, ಮನಸ್ಸುಗಳ ಮೇಲಿನ ಎಚ್ಚರ.– ಅರಿವು: ಅಪಘಾತದಲ್ಲಿ ತಲೆಗೆ ಏಟು ಬಿದ್ದು ಅವನಿಗೆ ಪ್ರಜ್ಞೆ ತಪ್ಪಿದೆ (ಜೂ). ೭. ಒಂದು ನಿರ್ದಿಷ್ಟವಾದ ಶಕ್ತಿ. ೮. ಸರಸ್ವತಿ. ೯. ತಿಳಿವಳಿಕೆಯುಳ್ಳ ಹೆಂಗಸು. ೧೦. [ಬೌದ್ಧ] ಬೌದ್ಧರ ಪ್ರಧಾನದೇವತೆ; ತಾರಾದೇವಿ: ಈ ಶಾಸನದಲ್ಲಿ ತಾರಾಭಗವತಿಯನ್ನು 'ಪ್ರಜ್ಞಾ' ಎಂದೂ 'ಬೋಧಿಸ್ವರೂಪ' ಎಂದೂ ಕರೆದಿರುವುದರ ಔಚಿತ್ಯವನ್ನು ಕಾಣಬಹುದು (ಕಶಾಅ. ೩೨೨). ೧೧. ಪಾರಮಾರ್ಥಿಕವಾದ ಜ್ಞಾನ. [ಸಂ. ಪ್ರಜ್ಞಾ]

**ಪ್ರಜ್ವಲ, ಪ್ರಜ್ವಳ** (ಗು). ೧. ಚೆನ್ನಾಗಿ ಉರಿಯುವ; ಧಗಧಗಿಸುವ. ೨. ಹೆಚ್ಚಾಗಿ ಪ್ರಕಾಶಿಸುವ. (ನಾ). ೩. ಚೆನ್ನಾಗಿ ಉರಿಯುವುದು; ಧಗಧಗಿಸುವುದು. ೪. ಹೆಚ್ಚಾಗಿ ಪ್ರಕಾಶಿಸುವುದು; ಉಜ್ವಲವಾಗಿರುವುದು. ೫. ಬೆಳಕು; ಪ್ರಕಾಶ; ದೀಪ್ತಿ. ೬. [ಜೈನ] ಒಂದು ನರಕಬಿಲದ ಹೆಸರು: ವಾಲುಕಾಪ್ರಭೆಯೊಳ್ ತಪ್ತತಪಿತ ತಪನ ತಾಪನ ವಿತಾನ ಉಜ್ವಲ ಪ್ರಜ್ವಲ . . . ಪ್ರಕೀರ್ಣಕವಿಕಲ್ಪದಿಂ ಪಂಚದಶಲಕ್ಷಬಿಲಂಗಳಪ್ಪುವು (ತತ್ತ್ವಸೂ. ೦೨೦). **ಪ್ರಜ್ವಳ**: ೩. ಪ್ರಜ್ವಳಮಾಯ್ತು ವಹ್ನಿ ಹಿಮಗಂಧೋದ್ಗಾರಿಯಾಯ್ತೆಂದು ಗಾಳಿ (ಪುಶಪು. ೦೦-೩). [ಸಂ.]

**ಪ್ರಜ್ವಲನ** (ನಾ). ೧. ಚೆನ್ನಾಗಿ ಉರಿಯುವುದು, – ಜ್ವಲಿಸುವುದು. ೨. ಪ್ರಕಾಶಿಸುವುದು. [ಸಂ.]

**ಪ್ರಜ್ವಲಿತ** (ಗು). ೧. ಹೆಚ್ಚಾಗಿ ಉರಿಯುವ,– ಜ್ವಲಿಸುವ. ೨. ಪ್ರಕಾಶಿಸುವ; ಉಜ್ವಲವಾದ: ಪರಮಜ್ಞಾನ ಪ್ರಕಾಶಜ್ಞಾನ ಪ್ರಜ್ವಲಿತಜ್ಞಾನ ಪ್ರಭಾಜ್ಞಾನ (ಅಅಶಪ.೪. ೦೩೬-೨೦೦). (ನಾ). ೩. ಪ್ರಕಾಶಿಸುವುದು; ಉಜ್ವಲವಾಗಿರುವುದು: ಸವಿತೃವಿನ ತೇಜಸ್ಸು ಪ್ರಜ್ವಲಿತವಾಗಿದೆ (ಹುಚನ್ನಾಕ. ೨೬೯). [ಸಂ.]

**ಪ್ರಜ್ವಲಿಸು, ಪ್ರಜ್ವಳಿಸು** (ಕ್ರಿ). ೧. (ಬೆಂಕಿಯು) ಚೆನ್ನಾಗಿ ಉರಿ; ಧಗಧಗಿಸು: ಆ ಅಸ್ತ್ರವು ಖಾಂಡವವನಮಂ ದಹಿಸುವ ಅಗ್ನಿಯಂತೆ ಪ್ರಜ್ವಲಿಸುತ ಬಾಯಿವದಿಂ ಹೊರಡುತ್ತಿರಲು (ಶಿವಾಂ೦.೨೯೬-೬); ಕಳೆದ ನೆನಪಿನ ಒಡಲು ಅಗ್ನಿಕುಂಡವದಿಹುದು ಪ್ರಜ್ವಲಿಸಬಹುದೊಮ್ಮೆ ಬೂದಿ ಹಾರಿ (ಬಿಜಾತಿ. ೩೪-೯); ಘೃತದ ಧಾರೆಗಳು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತವೆ (ಹುಚನ್ನಾಕ. ೨೦೦). ೨. ಹೊಳೆ; ಪ್ರಕಾಶಿಸು: ಬಾಲಾರ್ಕನಂತೆ ಪ್ರಜ್ವಲಿಸುವ ರತ್ನದ ಬೆಳಗಂ ಕಂಡು ಕಳಕಳರವಮಂ ಮಾಡುವುದುಂ (ಕರ್ಣಾಮೃ. ೬-೮೬); ನಾಸಿಕಾಗ್ರಭ್ರೂನಿಟಿಲಮಧ್ಯದೊಳ್ಪ್ರಜ್ವಲಿಸಿ ಬೆಳಗುವ ಸ್ವಯಂಪ್ರಕಾಶಲಿಂಗಕ್ಕೆ . . . ಅಷ್ಟವಿಧಾರ್ಚನೆಯಿಂದರ್ಚಿಸಿ (ಅರಕ. ೨೯-೩೪); ಪ್ರಜ್ವಲಿಸುತ್ತಿರುವ ಆ ನೀಲೀವರ್ಣಜಾಲದಲ್ಲಿ ಪವಪಕಳಾದಲು ಆ ಊರ್ಮಿಳೆ (ಪೂಗು. ೪೩). ೩. (ದೀಪವು) ಹೆಚ್ಚು ಬೆಳಕನ್ನು ಬೀರುತ್ತಾ ಉರಿ,— ಪ್ರಕಾಶಮಾನವಾಗಿ ಬೆಳಗು: ಕಲಬಲದ ದೀವಿಗೆಗಳುಂ ಪ್ರಜ್ವಲಿಸದಿದ್ದುವೊ (ಶಶಿ. ೪೬-೦೭). ೪. ಕಳೆಯೇರು; ಕಾಂತಿಯುಕ್ತವಾಗು: ಹುಸಿನಗೆಯಿಂದ ವದನವು ಪ್ರಜ್ವಲಿಸಿತು (ಕಂಗಾಳ. ೦೨೨). ೫. (ಅಲಂ) ಉಲ್ಬಣವಾಗು; ಕ್ಷೋಭೆಗೊಳಗಾಗು: ಜನರಲ್ಲಿ ಕ್ರಾಂತಿಯ ಬೇಗೆ ಕುದಿಯುತ್ತಿತ್ತು. ಅದು ಯಾವ ಗಳಿಗೆಯಲ್ಲಿ ಯಾವ ರೂಪದಿಂದ ಹೊರಬಿದ್ದು ಪ್ರಜ್ವಲಿಸುವುದೋ ಎಂಬ ಭೀತಿ ಎಲ್ಲರಲ್ಲಿಯೂ ಇದ್ದಿತು (ರಾಜಪ. ೪೪). **ಪ್ರಜ್ವಳಿಸು**: ೬. ಪ್ರಕಾಶಗೊಳಿಸು; ಪ್ರಸಿದ್ಧಪಡಿಸು: ವೀರಲಕ್ಷ್ಮೀನಿವಾಸಂ ಧರಣೀಸಂಕೀರ್ತ್ಯಯಂ ಪ್ರಜ್ವಳಿಸಿದ ವಿನಯಾದಿತ್ಯನಾದಿತ್ಯತೇಜಂ (ಎಕ. V. ಅರಸೀ. ೦೩೬-೪; ಕ್ರಿ. 1060). [ಪ್ರಜ್ವಲನ+—ಇಸು]

**ಪ್ರಜ್ವಲ್ಯ** (ನಾ). ಹೊಳಪು; ಕಾಂತಿ; ಪ್ರಕಾಶ: ವಿಚಿತ್ರಕನಕಪ್ರಜ್ವಲ್ಯ ದಿಸ್ಸಿಕ್ಕುದಾನ್ ಸಾಸಿರ್ವರ್ವ್ವರಪೂಜೆದನ್ನುಯೆ ಅವರ್ ಸ್ವರ್ಗ್ಗಾಗ್ರಮಾನೇಱಿದಾರ್ (ಎಕ. II. ೨೬-೨ ; ಕ್ರಿ. 700). [ಸಂ.]

**ಪ್ರಜ್ವಳ** 'ಪ್ರಜ್ವಲ' ನೋ.

**ಪ್ರಜ್ವಳಿಸು** 'ಪ್ರಜ್ವಲಿಸು' ನೋ.

**ಪ್ರಡೀನ** (ನಾ). (ಪಕ್ಷಿ ಮುಂತಾದುವು) ಹಾರುವಿಕೆ: "ಉಡ್ಡೀನಂ ಪ್ರಡೀನಂ ಪಕ್ಷಿಗಳ ಗತಿಯಕ್ಕು" (ಮಂಗರಾ. ೫೦-೨). [ಸಂ.]

**ಪ್ರಣತ** (ಗು). ೧. ಬಾಗಿರುವ; ಬಗ್ಗಿರುವ. ೨. ಎರಗುತ್ತಿರುವ; ನಮಸ್ಕರಿಸುತ್ತಿರುವ: ಪ್ರಣತರಿಪುನೃಪತಿಚೂಡಾಮಣಿರಂಜಿತಪಾದನಧಿಕಸತ್ವಗುಣೈಕಾಗ್ರಣಿಗಾ ನೃಪಂಗೆ ಮನದೊಳ್ ತೃಣವಲ್ಲಭುವಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೦೯); ಪ್ರಣತಕ್ಷತ್ರಿಯಪುತ್ರರಂ ಸಚಿವರಂ . . . ರಾಗದಿಂ ಕಟಾಪಿದಂ ಶ್ರೀರಾಜಕಂಠೀರವಂ (ಪುಶಪು. ೬-೨೦). ೩. ವಿಧೇಯವಾದ; ವಿನೀತವಾದ. ೪. ಚಾತುರ್ಯದಿಂದ ಕೂಡಿದ; ಬುದ್ಧಿಯುಳ್ಳ. (ನಾ). ೫. ನಮಸ್ಕರಿಸಿದವನು: ರಾಜೇಂದ್ರಚಂದ್ರ . . . ಮಾತಾಪಿತೃಗಳಲ್ಲಿಗೆ ವಂದು ತತ್ಪಾದಪ್ರಣತನಾಗಿ ತದೀಯಾಶೀರ್ವಾದಶತಸಹಸ್ರಂಗಳಂ ತಲೆಯೊಳಾಂತು (ಕಾದಂಬ. ೬೦೩). ೬. ವಿನೀತ; ವಿಧೇಯ: ಪ್ರಣತನಿಚಯಚೇತಶ್ಚಾತಕಕ್ಕೀಗೆ ಬೇಗಂ ತಣಿಪಂ. . .ಗಣಧರವಿಭುದತ್ತಂ (ಕಂತ್ರಪು. ೦-೬); ಪ್ರಣತನಿಕುರುಂಬ

ರಕ್ಷಾಮಣಿಯೆನಿಪಾ ನಾಯನಾರವಮಾಹೇಶಂಗಂ ಗಣವದವನಿತ್ತು ಮೆರ್ಚಿದತಿ ಗುಣನಿಧಿ ಸೋಮೇಶನೊಲ್ದು ಪಾಲಿಕೆ ನಮ್ಮಂ (ಶ್ರೀಶೈ. ೦೩-೧). ೭. ಚತುರ ; ಬುದ್ಧಿವಂತ. [ಸಂ.]

**ಪ್ರಣತಾರಾತಿ** (ನಾ). ನಮಸ್ಕರಿಸುತ್ತಿರುವ ಶತ್ರುರಾಜರನ್ನುಳ್ಳವನಂ; ಪರಾಕ್ರಮಿ : ಪ್ರಣತಾರಾತಿ ಧ ನು ಗ ೯ ಣ ಕಣೀಕೃತೋದ್ಯತ್ಪ್ರಕೋಷ್ಠ ನನುಪಮಧೈರ್ಯಂ . . . ಎನೆ ನೆಗಟ್ದ ನೃಪಂ (ಕೂಶಶಂ. ೩೦೮-೩೦೨). [ ಸಂ. ]

**ಪ್ರಣತಾರಿ** (ನಾ). = ಪ್ರಣತಾರಾತಿ: ಪ್ರಣತಾರಿ[ಘ]ಟಿತಮಕುಟ [ಮಣಿಗಣಮು]ತ್ತಂಸದಿಂ ಕಟಬ್ದುದರೆ ಸಭಾಂಗಣಮೊಪ್ಪೆ (ಕಬಿಶಾ. ೩-೦೮೦); ಈಯೊಳ್ಗುಣಮುಂ ಕಲಿತನಮುಮಿವೇಂ ಪ್ರಣತಾರೀ ಸೂತಸುತನೊಳೊಡವುಟ್ಟುಗುಮೋ (ಪಂಪಭಾ. ೦೨-೯೬). [ಸಂ.]

**ಪ್ರಣತಿ** 'ಪಣತೆ' ನೋ.

**ಪ್ರಣತಿ** (ನಾ). ೧. ಬಗ್ಗುವಿಕೆ ; ಬಾಗುವಿಕೆ. ೨. ನಮಸ್ಕಾರ; ವಂದನೆ : "ಪ್ರಣಿಪಾತಮನುನಯಂ ಪ್ರಣತಿಯೆಂದೆನೆ ಸಂತವಣೆಯಕ್ಕುಂ" (ಷಂಗಣಾ. ೦೩೯-೩೩) ; ಕಲಶೋದ್ಧಾರಮಂತ್ರಪೂರ್ವಕಂ ಪ್ರಣತಿ [ಶಾಶಾಂ. ವ.ಯ]ಪ್ರಸ್ತಾವನಾಪುರಸ್ಸರಂ ಮಾಡಿ ಪ್ರಥಮಕಲ್ಪೇಶ್ವರನುಮೀಶಾನೇಂದ್ರ ನುಮತ್ರಿಕೊಳೆ (ಆದಿಪು. ೬-೬೦ ವ); ವೃದ್ಧಸೇವೆ ಯಾನಂ ತ್ರಿಜಗದ್ಗುರು ಪ್ರಣತಿಯೆಂಬಿವನಾಗಳುಮೊಂದೆ ಕೀಲೆ ದರ್ ಜಂತ್ರದ ಪಾವೆಯಂತೊಡ ನೊಡರ್ಚುವನಿಂದ್ರನುಮಾ ಪ್ರತೀಂದ್ರನುಂ (ಶಾಂತಿಪು. ೬-೦೦೦); ನೆರೆದ ಶರಣ ಗಣಂಗಳ ಶ್ರೀಪಾದಂಗಳಿಗೆ ಪ್ರಣತಿಗಳನ್ನು ಸಮರ್ಪಿಸಿ ಶರಣದಂಪತಿಗಳು . . . ನಿರ್ವಯಲನೈದಿದರು (ಪೋಲತಾ. ೬೩ ಶ್ರೀಸ್ಥಲ). ೩. ವಿನಯ : ನಮ್ರತೆ. [ ಸಂ. ]

**ಪ್ರಣತೆ** ' ಪಣತೆ ' ನೋ.

**ಪ್ರಣವ** (ನಾ). ವೇದಮಂತ್ರಗಳ ಆರಂಭದಲ್ಲಿ ಸೇರಿಸುವ ಪವಿತ್ರವಾದ ಬೀಜಾಕ್ಷರ; ಓಂಕಾರ · ಪ್ರಣವ : ಇಂತಪ್ಪ ಮಹಾಪ್ರಣಮಂ ಗಳೇ ಬಸವಣ್ಣನಾಗಿ ಆ ಬಸವಣ್ಣನೆ ಮಹಾಪ್ರಣವಮಂಗಳಾಗಿ ತನ್ನ ಮಂಠಕ್ಕೆ ತಾನೆ ಬಂದು ಭಕ್ತಿವಸ್ತುವನಿತ್ತಡೆ (ಪೋಲಕಾ. ೨೦-೮೦); ಪ್ರಣವೋಚಿತಕಲಶೋದ್ಧಾರಣಮಂತ್ರದಿನಿದಿರ್ರಿರ್ವರುಂ ಕಲಶೋದ್ಧಾರಣಮಂ ಸ್ವಚಿತ್ತವಸತಿಗೆ ಮಣಿಕಲಶಮನಿಡುವ ತೆಜದೆ ಮಾಡಿದರೊಲವಿಂ (ಶಾರ್ಕ್ಕರ್ಪು. ೦೯-೬೩); ಆ ಸಿಂಹಾಸನದಗ್ರದಲ್ಲಿ ಗುಣತ್ರಯಾತೀತನಾದ ಪ್ರಣವದರ್ಥವಾದ . . . ಮಹೇಶ್ವರನೊಪ್ಪುತ್ತಿರಲಾಗಿ (ಕೃರಸೂ. I. ೦೭). [ < ಸಂ. ಪ್ರಣವ ]

**ಪ್ರಣಮನ** (ನಾ). ನಮಸ್ಕಾರ; ವಂದನೆ: ಗಣಧರಾದಿ ಮುನಿ ಸಮುದಾಯಕ್ಕೆ ಅಭ್ಯುತ್ಥಾನಮುಂ ಅಭಿಮುಖಗಮನಮುಂ ಅಂಜಲಿ ಕರಣಮುಂ ಪ್ರಣಮನಮುಂ . . . ಪರೋಕ್ಷೋಪಚಾರವಿನಯಮಕ್ಕುಂ (ಕತ್ನಶ್ರ. ೩೯೩). [ ಸಂ. ]

**ಪ್ರಣಮಪಂಚಾಕ್ಷರಿ** (ನಾ). ಓಂಕಾರವೆಂಬ ಬೀಜಾಕ್ಷರದಿಂದ ಕೂಡಿದ ಪಂಚಾಕ್ಷರೀಮಂತ್ರ; ಓನಮಃಶಿವಾಯ ಎಂಬ ಮಂತ್ರ: ಪ್ರಣಮ[ಶಾಶಾಂ. ವ] ಪಂಚಾಕ್ಷರಿಯ ಜಪಿಸಿಹೆನೆಂದು ತನುವ ಮಜೆದು ನಿಜಮುಗ್ಧಳಾದೆನಯ್ಯ (ಬಂಗಪ. ೪. ೭೬-೬೩). [ಪ್ರಣಮ + ಪಂಚಾಕ್ಷರಿ ]

**ಪ್ರಣಮಮೂಲ** (ನಾ). ಓಂಕಾರವನ್ನೆ ತಳಪದಿಯಾಗಿ ಹೊಂದಿ ಪ್ರತಿಪಾದಿತನಾಗುವವನು ; ಪರಮಾತ್ಮ : ಶ್ರಿಪುರಕೋಲಾಹಲ ಪ್ರಣಮಮೂಲ (ಶೀಶೈಪು. ೬-೦೩-೧). [ಪ್ರಣವ + ಮೂಲ]

**ಪ್ರಣಯ** (ನಾ). ೧. ಸ್ತ್ರೀಪುರುಷರಲ್ಲಿ ಪರಸ್ಪರವಾಗಿರುವ ನಲ್ಮೆ ; ಗಂಡು ಹೆಣ್ಣಿನ ಅನುರಾಗ : ಅವತಂಸೋತ್ಪಲತಾಡನಂ . . . ತರಳಿತ ತಾಮ್ರಾಧರಂ ಚಕ್ರಿಗಿತ್ತುಮಲಂಪಂ ಪ್ರಣಯಪ್ರಕೋಪಸುರತಪ್ರಾರಂಭ ದೊಳ್ ಕಾಂತೆಯಾ (ಆದಿಪು. ೦೨-೯೭); ಪ್ರಣಯದಿನಾದ ಹೋರಟಿಯೆ ಹೋರಟೆ ಮಾಣ್ದೊಡೆ ಕೂಟದೊಳ್ ಮನಂ ತಣಿಯದದೊಂದು ಕೋಟಲೆಯೆ (ಚಂದ್ರಪ್ರ. ೬-೩೪); ಸೆಣಸುವ ಮಹೀಶರವೌಳಿಮಣಿಕಿರಣ ಓಲಗಿಸಿತು ಪ್ರಣಯದಮರೀಬಾಲೆಯರ ಪದನಖವನು (ಕುಮ್ಯಾಇ. ೪-೩). ೨. ವಿನಯ; ವಿಧೇಯತೆ: ದೇವಿ ನೀಂ . . . ಪ್ರಣಯಗರ್ಭಭಕ್ತಿ ಯುತೆಯುಂ . . . ಮಹತ್ತ್ವಮಂ ಪಡೆದೆಯೆಂದಮರಸಮುದಯಂ . . . ಸ್ತುತಿಗೆಯ್ದು ಪೋಗೆ (ಜಗು. ೨-೯೩ ವ). ೩. ದಯೆ; ಕರುಣೆ; ಕನಿಕರ. ೪. ಬೇಡಿಕೆ: "ಪ್ರಣಯಃ . . . ನಂಬಿಕೆ, ಯಾಚನೆ, ಪ್ರೇಮ" (ಸಿದ್ಧಾಂತಿ. ೯೦೯). ೫. ಸಂತೋಷ ; ಆನಂದ : ಕಳಿರ್ದಂದುಗ್ರರಣಾಗ್ರಹಪ್ರಣಯ ದಿಂದಾಗಳ್ ಕುರುಕ್ಷೇತ್ರಮಂ ಕಳವೇಟ್ಟು (ಪಂಪಭಾ. ೧-೬೯) ; ಘಪವತಿಗಮ ಮರಪಟಂ ಪ್ರಣಯಪ್ರದಮಪ್ಪ ಪಿರಿಯ ಸಿರಿಯಂ ದೇವರ್ ತೃಣಮಾತ್ರವಾಗಿ ಬಗೆಪೊಡಮಣುಗುಣರಿದನೆಮ್ಮವಂದಿಗರ್ತಾಳ್ದುವರೇ (ಪಾರ್ಶ್ವಪು. ೯-೯೧); ಪ್ರಣಯಾಲಂಬವಿಧಾಯನರ್ತನವಿಧಂ ಶರ್ಾಮೃತಂ ಘರ್ಘರೀ ಕ್ವಣಿತಂ (ಅನಂಪು. ೩-೯೬). ೬. ಗಾಢವಾದ ಆಪ್ತತೆ, -ಸ್ನೇಹ: ಗುಣಮಿದು ದೋಷಮಿದೆಂಬೀ ಗಣನೆಯನೆತ್ತಱಿಗುಮಶ್ರುತಪ್ರಕೃತಿಜನಂ ತೃಣಸಸ್ಯಘಾಸವಿಷಯಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಣದೊಳ್ (ಕಬಿಶಾ. ೦-೯); ಪ್ರಣಯಮಿದನನ್ಯಸಾಧಾರಣಮೆನಿಪ ಭವತ್ಪ್ರಸಾದ ಮೆಂಬ ಮೃತದಿನಾಂ ತಣಿದೆಂ (ಆದಿಪು.೯-೩೦). ೭. ವಾತ್ಸಲ್ಯ; ಮಮತೆ: ಪ್ರಣಯಪಚೋವಿಲಾಸಮಣಪುಲ್ಕು ದಿಟಕ್ಕೆ ಮಿಱಿಂಪಂದು ದಕ್ಷಿಣ ಭುಜಮಲ್ತೆ ನೀನೆನಗೆ (ಚಂದ್ರಪ್ರ. ೯-೦೯); ತರುಣಿ ಕುರಂದೀಶ್ವರಂ ಪಾತ್ರೆಯಂ ಪ್ರಣಯದಿನೀಳ್ಕೊಳ್ಳುತ್ತುಂ ಫಣಿಕಟಕಂ ಸವಿದು ಪುಲ್ಗಿಯಂ ಬಟ್ಟಲನಂಗಣಕಿಟ್ಟಂ (ನೃಶಂ. ೨೨-೦೯). ೮. ದೇವರು, ಗುರುಹಿರಿಯರಲ್ಲಿ ತೋರುವ ಅತಿಶಯವಾದ ಗೌರವ ; ಭಕ್ತಿ : ಪ್ರಣಯಂ ಕೈಮಿಗೆ . . . ಪೊಡೆವಟ್ಟಂ ರಾಜರಾಜಚ್ಛಿರೋಮಣಿ ವಿಶ್ವಂಭರನಾ ತ್ರಿಲೋಕವಿಭು ವಿಶ್ವೇಶಂಗೆ ಸದ್ಭಕ್ತಿಯಿಂ (ಕುಸುಮಾ. ೦೩-೦೮೯); ಪ್ರಣಯಂ ಕೆಯ್ಯಣ್ಮಿರಲ್ ಕಣ್ಮಲರೊಳಲಸದಾನಂದವಾರ್ಬಿಂದುಗಳ್ ಸಂದಣಿಸಲ್ ಸೌರಂಭದಿಂ ವಂದಿಸಿ ಮುನಿಪತಿಯಂ (ರ್ಪಾವ. ೯-೦೨೨). ೯. ಮನಸ್ಸು ನಿರ್ಮಲವಾಗಿರುವುದು: '' ಪ್ರಸಾದಂ ಪ್ರಣಯಂ '' (ಚನ್ನಕೋ. ೦೦೩-೦೭); ''ಪ್ರಣಯಂ ಪ್ರಸಾದವೆನೆ ತಿಳಿಪಕ್ಕು'' (ಷಂಗಣಾ. ೮೩೯-೩೩). ೧೦. ಮುಂದಾಳು; ಮುಖಂಡ; ನಾಯಕ. ೧೧. ಮಾರ್ಗದರ್ಶನ ; ನೇತೃತ್ವ. ೧೨. ಮುಕ್ತಿ : ಮೋಕ್ಷ. [ಸಂ.]

**ಪ್ರಣಯಕಲಹ** (ನಾ). (ಪ್ರೇಮಿಗಳು) ಪ್ರೀತಿಗಾಗಿ ಮಾಡುವ ಹುಸಿಜಗಳ : ಒಂದೆಡೆಯೊಳೊರ್ವಂ ಪ್ರಣಯಕಲಹಕಲುಷಿತೆಯಾದ ವಲ್ಲಭೆಯ ನಿರ್ಭರಪ್ರೇಮಭರದಿನೆಱಗಿದ ನಿಜಸಖನ ಸೌಭಾಗ್ಯಮನೆ ಕೊಂಡು ಕೊನೆದು (ಪಾರ್ಶ್ವಪು. ೬-೯೩); ಪರವೆಗೆ ನಂಬಿಗೆ ಪಲವುಕಾಲದಗಲ್ಕೆ ಪಯನಾಗಿ ಪ್ರಣಯಕಲಹಂ ಕಾಲೂಱಿ (ಪಂಪರ. ೦೩-೯೩). [ಸಂ.]

**ಪ್ರಣಯಕೇಲಿ, ಪ್ರಣಯಕೇಳಿ** (ನಾ). ಶೃಂಗಾರದ ಕ್ರೀಡೆ ; ಸುರತ ; ಸಂಭೋಗ: ಅದು ಪ್ರಣಯಕೇಲಿಯಲ್ಲ ಪ್ರಾಣಕಲಹ! (ಪುಂಪಮು. ೯೭). **ಪ್ರಣಯಕೇಳಿ:** ದೇವಕೀದೇವಿ . . . ಬಹುವಿಧಪ್ರಣಯಕೇಳೀಕಳಾವಿಡಂಬ ಸಂಭೋಗಸುಖಸುಧಾರಸತೃಪ್ತಿಯಿಂ ಸುಖಸುಪ್ರೆಯಾಗಿರ್ಪನಂ (ಜಗು. ೨-೩೯ ವ). [ಸಂ.]

**ಪ್ರಣಯಕೇಳಿ** 'ಪ್ರಣಯಕೇಲಿ' ನೋ.

**ಪ್ರಣಯಚೇಷ್ಟೆ** (ನಾ). (ಪ್ರೇಮಿಗಳು) ಪ್ರೀತಿಯಲ್ಲಿ ಮಾಡುವ ಆಂಗಿಕವಾದ ಚಲನವಲನ ಮುಂತಾದುವು: ಅವನ ವಿದ್ಯುತ್ಪ್ರಕಾಶನವೂ, ವಿಧವೆಯೂ ದಾಸಿಯೂ ಆದ ಅಶ್ಮನಿಯೊಡನೆ ಪ್ರಣಯಚೇಷ್ಟೆಯೂ ತುಂಬ ಆಭಾಸವಾಗಿವೆ ( ಬಂಪಮು. ೦೩೩ ); ಆಗಾಗ್ಗೆ ತನ್ನ ದೃಷ್ಟಿಪಥಕ್ಕೆ

ಬೀಳುತ್ತಿದ್ದ ಪುರುಷರ ಪ್ರಣಯಚೇಷ್ಟೆಗಳಿಂದ ಅವಳ ಹೃದಯ ತಲ್ಲಣಿಸುತ್ತಿತ್ತು (ಕೃಶು. ೯೯೨). [ಸಂ. ಪ್ರಣಯ ಚೇಷ್ಟಾ]

**ಪ್ರಣಯದೌತ್ಯ** (ನಾ). ಒಬ್ಬರ ಅನುರಾಗವನ್ನು ಮತ್ತೊಬ್ಬರಿಗೆ ತಿಳಿಸುವ ಮಧ್ಯಸ್ಥಿಕೆ,–ದೂತಭಾವ : ದಮಯಂತಿಯ ಬಗೆಗೆ ತನಗಿದ್ದ ಪ್ರೀತಿಯನ್ನೂ ಅವರಿಗಾಗಿ ಬದಿಗೊತ್ತಿ ಅವರ ಪರವಾಗಿ ಪ್ರಣಯದೌತ್ಯವನ್ನು ವಹಿಸುವಂಥ ಮನಃಸ್ಥೈರ್ಯ ಅವನಲ್ಲಿದೆ (ಕಂಡಿ. ೦೦೮). [ಸಂ.]

**ಪ್ರಣಯಪ್ರಸಂಗ** (ನಾ). ಪ್ರೇಮದ ಘಟನೆ : ಕತ್ತಲೆಯಲ್ಲಿ ಹಳ್ಳಿಯ ದಾರಿಯಲ್ಲಿ ಪ್ರಣಯಪ್ರಸಂಗ ನಡೆಯುತ್ತದೆ ಎಂಬ ಕಲ್ಪನೆಯೂ ಅವರಿಗಿರಲಿಲ್ಲ (ಚಕ್ರ. ೦೬೮). [ಸಂ.]

**ಪ್ರಣಯಭಿಕ್ಷೆ** (ನಾ). ಪ್ರೇಮವನ್ನು ನೀಡುವುದು : ಪ್ರೀತಿಯ ದಾನ : ವೀರ ಅರ್ಜುನದೇವ, ಅವಂಚಿತೆಯಾದಡಂ ನಿನ್ನ ಪ್ರೇಯಸಿ ನಾನು ಪ್ರಣಯಭಿಕ್ಷೆಯ ಬೇಡಿ ಬಂದೆ ನಾಂ (ಚಿತ್ರಾಂಗ. ೨೮-೬೩೦). [ಸಂ. ಪ್ರಣಯಭಿಕ್ಷಾ]

**ಪ್ರಣಯಾಲಂಬಿನಿ** (ನಾ). ವಾತ್ಸಲ್ಯವನ್ನು ಹೊಂದಿರುವವಳು; ಮಮತೆಯುಳ್ಳವಳು : ಪ್ರಣಯಾಲಂಬಿನಿಯಂತೆ ಪುತ್ರನಿ ಯಶೋದಾ ಕಾರದಿಂ ಬಂದು (ಜಗ. ೩-೨೪). [ಸಂ. ಪ್ರಣಯಾಲಂಬಿನೀ]

**ಪ್ರಣಯಿ** (ಗು). ೧. ಪ್ರೀತಿಯಿಂದಿರುವ ; ಅನುರಕ್ತನಾದ : ಪ್ರಣಯಿ ಜನಕ್ಕೆ ಕಾಮನಸಿತೋತ್ಪಲವರ್ಣ್ನನವನ್ (ಎಕ. XI, ಚಿತ್ರದು. ೯೩-೩; ಸು. ೩೦೦ ?). ೨. ವಿಶ್ವಾಸಪಾತ್ರನಾದ. ೩. ಮಮತೆಯುಳ್ಳ. (ನಾ). ೪. ಪ್ರೀತಿಯುಳ್ಳವನು ; ನಲ್ಲ ; ಕಾಂತ : ಉಪಮೆಗಳಲ್ಲಿ ಸುಂದರವಾದ ಯುವಕ. ಸುಂದರಳಾದ ಯುವತಿ. ಪ್ರಣಯಿ. ಪ್ರಣಯಿನಿ–ಇತ್ಯಾದಿ ಮಾತುಗಳು ಬರುತ್ತವೆ (ಸೌಂದಸ. ೦೦೦). ೫. ಗಂಡ : ಪತಿ : "ಪ್ರಭು ಪಂಪ್ರವೃಢನೇಶಂ . . . ವಲ್ಲಭಂ ಪ್ರಿಯಂ ಪ್ರಣಯಿ ಕಾಂತನಿಷ್ಟಂ ದಯಿತಂ" (ಚಸ್ತುಕೋ. ೯೯-೯). [ಸಂ. ಪ್ರಣಯಿನ್]

**ಪ್ರಣಯಿನಿ** (ನಾ). ಪ್ರೀತಿಯುಳ್ಳವಳು ; ನಲ್ಲೆ ; ಕಾಂತೆ : ಪ್ರಣಯನ್ಯಾಸಕ್ತಿಯುಕ್ತಂ ಗಗನಗಹನಸದ್ಯುಕ್ತಿಯವ್ಯಕ್ತವಲ್ಲೀ (ಚಂದ್ರಶ. ೦-೬೪) ; ತನ್ನ ಪ್ರಣಯಿನಿಯ ವಿಷಯದಲ್ಲಿ 'ಈತಿಯು ಯೋಗ್ಯನಾದ ವರನಿಲ್ಲದೆ ಶೋಚನೀಯಳಾಗಿರುವಳು' ಎಂದು ಹೇಳುವುದು ಅಸಂಭವ (ಕೃಷ್ಣಾಕೋ. ೨೨೨) ; ಉಪಮೆಗಳಲ್ಲಿ . . . ಪ್ರಣಯಿ. ಪ್ರಣಯಿನಿ ಇತ್ಯಾದಿ ಮಾತುಗಳು ಬರುತ್ತವೆ (ಸೌಂದಸ. ೦೦೦). ೨. ಹೆಂಡತಿ ; ಪತ್ನಿ. [ಸಂ. ಪ್ರಣಯಿನೀ]

**ಪ್ರಣವ** (ನಾ). ೧. ವೇದಮಂತ್ರಗಳ ಪ್ರಾರಂಭದಲ್ಲಿ ಸೇರಿಸುವ ಪವಿತ್ರವಾದ ಬೀಜಾಕ್ಷರ : ಓಂಕಾರ ; ಈ ಓಂಕಾರಕ್ಕೆ ಪ್ರಣವ ಅಥವಾ ಏಕಾಕ್ಷರ ಎಂಬ ಹೆಸರೂ ಇದೆ. ಓಂಕಾರದಲ್ಲಿ 'ಅ' 'ಉ' ಮತ್ತು 'ಮ್' ಎಂಬ ಮೂರು ಅಕ್ಷರಗಳ ಸಮ್ಮಿಲನವಿದೆ. 'ಅ' ಎನ್ನುವುದು ವೈಶ್ವಾನರ, 'ಉ' ಎನ್ನುವುದು ತೈಜಸ, 'ಮ್' ಎಂಬುದು ಪ್ರಜ್ಞ–ಇವುಗಳ ಸಮ್ಮಿಲನದಿಂದ ಓಂಕಾರ ಉಂಟಾಗುತ್ತದೆ ಎಂದು ನಂಬಲಾಗಿದೆ. ಬರಬರುತ್ತ ಇದು ಬ್ರಹ್ಮ, ವಿಷ್ಣು, ಮಹೇಶ್ವರರ ಕೂಟವನ್ನು ತಿಳಿಸುತ್ತದೆ: "ಓಂಕಾರಃ, ಪ್ರಣವಃ (ಪ್ಲುತಃ)—ಈ ೨ ಓಂಕಾರಕ್ಕೆ ಪೆಸರ್" (ಚಂದಯು. ೬-೮) ; ಪ್ರಣವೋಚ್ಚಾರಣಪೂರ್ವಪ್ರಣೀತನಾಂದೀಸ್ತವಂಗಳಿಂ . . . ಗಂಭೀರಪ್ರಣಾದದಿಂದೊದಿದರ್ ಪುರುದ್ಗನರಮಣರ್ (ಚರಚೂ. ೦೯-೨೨); ಅಕಾರವೇ ನಾದ ಉಕಾರವೇ ಬಿಂದು ಮಕಾರವೇ ಕಳೆ ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು ಇಂತೀ ನಾಲ್ಕು ಒಂದಾದಲ್ಲಿ ಓಂಕಾರವೆಂಬ ಪ್ರಣವ ಉತ್ಪತ್ತಿಯಾಯಿತ್ತು ಆ ಓಂಕಾರವೆಂಬ ಪ್ರಣವವೇ ಅಖಂಡಪರಿಪೂರ್ಣಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ (ಸಿದ್ಧೇಶ. ೦೦-೩೬); ಅಣುರೇಣುವಂದ್ಯರ ಪ್ರಣವದ ಬೀಜವನು ಅಣುವಿನೊಳಗಣುವೆಂದರಿದ ಮಹಾತ್ಮನು ಪ್ರಣಯ ತಾನಕ್ಕು (ಸರ್ವಜ್ಞ. ೩೦೩). ೨. ಒಂದುಂ ಬಗೆಯ ವಾದ್ಯ. ೩. ಪರಮಾತ್ಮ : ಭಗವಂತ. ೪. ನವೀನವಾದುದು : 'ಪ್ರಣವೋತ್ಥ' ಪರಾ. [ಸಂ.]

**ಪ್ರಣವನ್ಯಾಸ** (ನಾ). ವೈದಿಕಮಂತ್ರಗಳನ್ನು ಪಠನಮಾಡುವುದಕ್ಕೆ ಮುಂಚೆ ಓಂಕಾರವನ್ನು ಉಚ್ಚರಿಸುವುದು : ಪ್ರತ್ಯೇಕಾಂಗುಳಿಗಳಲ್ಲಿಯೂ ಸಮುಚ್ಚೀಕರಿಸಿ ಪ್ರಣವನ್ಯಾಸಮಂ ಮಾಡುವುದು (ಚಂದ್ರಶ. ೫೬). [ಸಂ.]

**ಪ್ರಣವಬೀಜ** (ನಾ). ಪ್ರಣವವೆಂಬ ಬೀಜಾಕ್ಷರ : ಓಂಕಾರ : ವಿಶ್ವಮಯನಾಗಿ ವಿಶ್ವಾಸಕ್ಕೆ ಒಡಲಾಗಿ ಪ್ರಣವಬೀಜವಾಗಿ ಉತ್ಪತ್ತಿ ಸ್ಥಿತಿ ಲಯಕ್ಕೆ ಕರ್ತರ ಕೊಟ್ಟು . . . ನಿನ್ನ ಲೀಲೆಗೆ ನೀನೇ ಹುಗಾದೆಯಲ್ಲಾ (ಕೋಟಿಚೂ. ೩೦-೨೦೦). [ಸಂ.]

**ಪ್ರಣವಮಂತ್ರ** (ನಾ). ಓಂಕಾರರೂಪವಾದ ಮಂತ್ರ : ಪಂಚಬ್ರಹ್ಮವ ಕೆಡಿಸಿತ್ತು ಪ್ರಣವಮಂತ್ರವನೀಡಾಡಿತ್ತಲ್ಲಾ . . . ಕೂಡಲಸಂಗಯ್ಯನ ಭಕ್ತಿಗಜ ಹೋ (ಬಸವ. ೬೪೪). [ಸಂ.]

**ಪ್ರಣವಸ್ವರೂಪ** (ನಾ). ಓಂಕಾರಸ್ವರೂಪನಾದವನು : ಪರಮಾತ್ಮ: ನಿಮ್ಮ ಮಹಿಮೆಯ ಪ್ರಣವಸ್ವರೂಪಂಗಲ್ಲದೆ ಕಾಣಲಾರಿಗೆಯೂ ಬಾರದಯ್ಯಾ (ಬಸವ. ೬೧೬) ; ಎಲೆ ಅಯ್ಯಾ ಎಲೆ ಅಯ್ಯಾ ಪ್ರಣವಸ್ವರೂಪ ಬಸವಾ (ಶಿಂಅಚ. ೪. ೯-೦೬). [ಸಂ.]

**ಪ್ರಣವೋತ್ಥ** (ಗು). ೧. ಓಂಕಾರದಿಂದ ಹೊರಟ. ೨. ನವೀನತೆಯಿಂದ ಉಂಟಾದ. ೧, ೨ : ಪ್ರಣವೋತ್ಥ ಶ್ರುತಿಮಧುರಕ್ವಣಿತಂ ದ್ವಿಜಮುಖ್ಯವೃತ್ತಿ ಕೃಷ್ಣರುಚಿಷ್ಣಂ ಪೆಣೆದಿರೆ ಪುರೋಹಿತಬ್ರಾಹ್ಮಣನನಿಸಿದುದತನು ನೃಪತಿಗೀ ಪರಪುಷ್ಟಂ (ಚಂದ್ರಶ. ೬-೮೮). [ಸಂ.]

**ಪ್ರಣಷ್ಟ** (ಗು). ೧. ನಾಶಮಾಡಿದ: ಪರಿಹರಿಸಿದ: ಪ್ರಣಷ್ಟಪ್ರಮಾದಪ್ರಕೃಷ್ಟಪ್ರಮೋದ ಪ್ರಧೃಷ್ಟದ್ವಿಧಸ್ತೇ ನಮಸ್ತೇ ನಮಸ್ತೇ (ಅಜಿತ. ೬-೦೩ ಚ). ೨. ನಾಶಹೊಂದಿದ. [ಸಂ.]

**ಪ್ರಣಾದ** (ನಾ). ೧. ದೊಡ್ಡ ನಾದ, –ಶಬ್ದ: ಪಟಹಪ್ರಣಾದದಿಂ ಘನರವದಿಂದೆ ನರ್ತಿಸುವ ಕೇಕಿಗಳಿಂ ಕಡುರಮ್ಯಮಪ್ಪ ಹಸ್ತಿನಪುರಮಂ ಜಿತೇಂದ್ರಪುರಮಂ ಪರಮೇಶ್ವರರಾಗಳೆಯ್ದಿದರ್ (ಶಂಚಚ. ೯-೩); ಆಗಡೆ ಪೊಣ್ಮತ್ತಲ್ಲಿ ಮಧ್ಯಂದಿನಸಮಯಸಮುದ್ಭೂತಶಂಖಪ್ರಣಾದಂ (ಗಾದಂಭ. ೩೩); ಘಟಿಕಾಭೇರೀಃ ಭೂರಿಪ್ರಣಾದಮೊಗೆದತ್ತಾದಂ (ಚಂದ್ರಶ. ೯-೦೬). ೨. ಗಟ್ಟಿಯಾದ ಕೂಗು ; ಗರ್ಜನೆ. ೩. ಆರ್ತನಾದ. ೪. [ಕಾಮಶಾ] ಸಂಭೋಗಸಮಯದ ಸೀತ್ಕಾರ: ಮಣಿತ: "ಪ್ರಣಾದಃ—೧—ಅನುರಾಗಜಃ—ಅನುರಾಗದ ದೆಸೆಯಿಂದ ಹುಟ್ಟಿದ ಶಬ್ದ" (ಸಿದ್ಧಾಂತಿ. ೩೨). [ಸಂ.]

**ಪ್ರಣಾಮ** (ನಾ). ೧. ಬಗ್ಗುವುದು: ಬಾಗುವುದು. ೨. ನಮಸ್ಕಾರ; ವಂದನೆ : ಕಾಯದಿಗ್ಬಂಧ ಪ್ರಣಾಮ ವಿಧೇಯವರ್ತನೆ ಯೋಗಸಿದ್ಧಿ ನಿಕಾಯ ನಾಲ್ಕಜ ಇಂದ್ರಿಯಸ್ಥಿತಿಗತಿಯನಾರ್ಯರು . . . ನಿಶ್ಚಯಿಸಬೇಹುದು (ಶಂಕ್ರಾ. ೯-೩೮)); ಮನೆಯವರಿಗೆಲ್ಲ ನನ್ನ ಪ್ರಣಾಮಗಳು (ಕಂಡಿ. ೦೨೮). ೩. ಸಾಷ್ಟಾಂಗನಮಸ್ಕಾರ. [ಸಂ.]

**ಪ್ರಣಾಯ್ಯ** (ನಾ). ೧. ಪ್ರೀತಿಪಾತ್ರನಾದವನು ; ಪ್ರಿಯ. ೨. ಪ್ರಾಮಾಣಿಕ : ಋಜುಬುದ್ಧಿಯುಳ್ಳವನು. ೩. ಯೋಗ್ಯನಾದವನು; ಅರ್ಹನಾದವನು. ೪. ಇಷ್ಟವಾಗದವನು; ಬೇಡವಾಗಿರುವವನು: "ಅಕ್ಷಿಗತಃ, ದ್ವೇಷ್ಯಃ, ಪ್ರಣಾಯ್ಯಃ, ಅಸಮ್ಮತಃ—ಈ ೪ ಅನಿಷ್ಟಂ" (ಚಂದಯು. ೬೦-೨೦೦). ೫. ಐಹಿಕವಿಷಯಗಳಲ್ಲಿ

ಆಸಕ್ತಿಯಿಲ್ಲದವನು; ವಿರಕ್ತ. ೬. ಬಿಡಬೇಕಾದುದು; ತ್ಯಾಜ್ಯ. [ಸಂ.]

**ಪ್ರಣಾಲ**, ಪ್ರಣಾಳ (ನಾ). ನೀರಂ ಮುಂತಾದುವು ಹರಿಯುವ ಮಾರ್ಗ; ನೀರಿನ ದೋಣಿ: 'ಜಲಪ್ರಣಾಲ' ವರಾ. **ಪ್ರಣಾಳ**: ತ್ರಿಭುವನಪ್ರಾಸಾದರಮ್ಯಪ್ರಣಾಳದವೋಲ್ ಕಣ್ಗೆಸೆವಿಂದುಮಂಡಲದಿನೇಂ ಗಂಗಾಪ್ರವಾಹಂಗಳಟ್ಟಿದುವೋ (ಶಾಂತಿಪು. ೫೯೯): ಸುಟಿಳವೆಂಡಿರ ಕಡೆಗಣ್ಣಟಿಯುಂ ಪಸರಿಸುವ ಬೆಳಗು ಬೆಳದಿಂಗಳ ಪೊಂಪುಟಿಯೆಂದು ಸುರಿವುವದಱೊಳ್ ಮಟಿಯಿಲ್ಲದೆಯುಂ ಪ್ರಣಾಳಶಶಿಕಾಂತಂಗಳ್ (ಚಂದ್ರಪ್ರ. ೬-೯೭). [ಸಂ.]

**ಪ್ರಣಾಲಿ**, ಪ್ರಣಾಳಿ (ನಾ). ೧. = ಪ್ರಣಾಲ. ೨. ಅವಿಚ್ಛಿನ್ನವಾಗಿ ಮುಂದುವರಿಯುವುದು; ಅನುಕ್ರಮ; ಸರಣಿ: ತನ್ನ ಹೃದಯೇಶ್ವರಿಯನನ್ಯಕಾಮುಕರಿಂ ಪೊರೆವ ಹರಕ್ಕೆವಾರೂಪಿಯೇಂ ಚಾಪವಮಾತ್ರವೆ ಪೇಳಾ? ಶಿವೇಚ್ಛಾಪ್ರಣಾಲಿಯೆ ದಿಟಂ! (ಶ್ರೀರಾಮಾ. ೪೫-೨೦೪); ಈ ವರೆಗೆ ನಾವು ಪಾಶ್ಚಾತ್ಯಶಾಸ್ತ್ರಗಳನ್ನೆಲ್ಲ ಹೇಗೆ ವೈಜ್ಞಾನಿಕ, ಐತಿಹಾಸಿಕ ಮತ್ತು ಯುಕ್ತಿ ಮೂಲಕ ಪ್ರಣಾಲಿಗಳ ಮೂಲಕ ಪರಿಶೀಲಿಸುತ್ತಾ ಬರುವೆವೊ ಹಾಗೆ ನಮ್ಮ ಶಾಸ್ತ್ರಗಳನ್ನು ಮಾಡುತ್ತಿಲ್ಲ (ಹಿಂದೂ. I. ೩೬೦). **ಪ್ರಣಾಳಿ**: ೧. "ಪ್ರಣಾಳೀ, ಜಲಪದ್ಧತಿ—ಈ ೨ ಹೊನಾಳಿ" (ಚೆನ್ನಾಮು. ೧೦೩-೬೩); ಎರಡುಂ ತಟವಾಳಿವಿಳಿತು ಸರೋವರಂ ಸುರಿವ ಮಾದಜಲುಂ ನದಿಯನೆ ಪುಷ್ಕರ ವರಕರಪ್ರಣಾಳೀಪರಿಕಳಿತಂ ಸೀಳಗಿರಿಗೆ ಕರಿ ದೊರೆಯನಿಕುಂ (ಕಾವ್ಯಾವ. ೪-೦೨೪). [ಸಂ. ಪ್ರಣಾಲೀ]

**ಪ್ರಣಾಲಿಕೆ**, ಪ್ರಣಾಳಿಕೆ (ನಾ). ೧. = ಪ್ರಣಾಲ. ೨. = ಪ್ರಣಾಲಿ ೨. ೩. ಅಭಿಪ್ರಾಯಗಳನ್ನು ಪ್ರಚುರಪಡಿಸಲು ಉಪಯೋಗಿಸುವ ಮಾಧ್ಯಮ: ಸಾಹಿತ್ಯದ ವಿವಿಧಪ್ರಕಾರಗಳು ತನ್ನ ಸಾಮಾಜಿಕತೆಯ ಹೊರಹೊಮ್ಮುವಿಕೆಗಾಗಿ ಅವನು ತೆರೆದ ಹಲವು ಪ್ರಣಾಲಿಕೆಗಳೆಂದೂ . . . ಪರಿಗಣಿಸಬೇಕು (ಸಾಹಿತ್ಯ. ೬). **ಪ್ರಣಾಳಿಕೆ**: ೩. ಈ ದಿವ್ಯ ಸಂದೇಶ ಉಪನಿಷತ್ತು, ಗೀತಾ, ಬ್ರಹ್ಮಸೂತ್ರ . . . ಇತ್ಯಾದಿ ನಾನಾ ಪ್ರಣಾಳಿಕೆಗಳ ಮೂಲಕ ಅವಿಚ್ಛಿನ್ನವಾಗಿ ಪ್ರವಹಿಸಿ . . . ತನ್ನ ಪ್ರಭಾವವನ್ನು ಬೀರಿದೆ (ಜುಕ್ಕಾಕ. ೫ ೩೩೩). ೪. ತತ್ತ್ವ, ರಾಜನೀತಿ, ಸಾಹಿತ್ಯ ಮುಂತಾದುವುಗಳಲ್ಲಿ ಯಾವುದೊಂದರ ರೀತಿನೀತಿಗಳನ್ನು ಪಟ್ಟಿಮಾಡಿ ಪ್ರಚುರಪಡಿಸುವ ಘೋಷಣೆಯ ಬರಹ.—ಹೇಳಿಕೆ: ವಿಶ್ವಸಂಸ್ಥೆಯು ಸರ್ವತೋಮುಖ ಉದ್ದೇಶಗಳನ್ನೂ ಮೂಲಭೂತತತ್ತ್ವಗಳನ್ನೂ ಪ್ರಣಾಳಿಕೆಯಲ್ಲಿ (Charter) ವಿವರಿಸಲಾಗಿದೆ (ಅಂತಃ. ೦೩); ಶಾಲೆಯ ಕಾರ್ಯಕ್ರಮಗಳ ಪ್ರಣಾಳಿಕೆ, ಶಾಲೆಯ ವಾರ್ಷಿಕ ವರದಿ, ಶಾಲೆಯ ಪತ್ರಿಕೆ—ಮುಂತಾದುವನ್ನು ಪೋಷಕರಿಗೂ ಬೋಧಕರಿಗೂ ಹಂಚುವುದು ಅಗತ್ಯ (ಶಿಕ್ಷಣ. ೩೭೦). [ಸಂ. ಪ್ರಣಾಲಿಕಾ]

**ಪ್ರಣಾಶ** (ನಾ). ೧. ಹಾಳಾಗುವುದು; ಇಲ್ಲದಂತಾಗುವುದು: ಈ ಪ್ರಣಾಶದಿಂದ ಪಾರಾದ ಒಂದೇ ಒಂದು ಗ್ರಂಥವೆಂದರೆ ಈಶ್ವರಕೃಷ್ಣನ "ಸಾಂಖ್ಯಕಾರಿಕೆ" (ಕನ್ನಡ. ೨೫೯). ೨. ಸಾವು; ಮರಣ: ಅದು ಬುದ್ಧಿನಾಶದವರೆಗೂ ಹೋಯಿತು. ಆದರೆ ಅದಕ್ಕೆ ಸಕಾಲದಲ್ಲಿ ತಕ್ಕ ಪ್ರತೀಕಾರ, ಚಿಕಿತ್ಸೆ ನಡೆದದ್ದರಿಂದ ಅದು ಅವಳ ಪ್ರಣಾಶದಲ್ಲಿ ಪರಿಣಮಿಸಲಿಲ್ಲ (ಬಿಂಕು. ೨೦೯). [ಸಂ.]

**ಪ್ರಣಾಳ** 'ಪ್ರಣಾಲ' ನೋ.

**ಪ್ರಣಾಳಿ** 'ಪ್ರಣಾಲಿ' ನೋ.

**ಪ್ರಣಾಳಿಕೆ** 'ಪ್ರಣಾಲಿಕೆ' ನೋ.

**ಪ್ರಣಿತೆ** 'ಪಣತೆ' ನೋ.

**ಪ್ರಣಿಧಾನ** (ನಾ). ೧. ಸರಿಯಾಗಿ ಇಡುವುದು.—ಇರಿಸುವುದು. ೨. ಅಧಿಕವಾದ ಪ್ರಯತ್ನ.—ಸಾಹಸ. ೩. ಕಣ್ಣು ಅಥವಾ ಬುದ್ಧಿಯನ್ನು ಒಂದು ಕಡೆ ನೆಲೆಗೊಳಿಸುವುದು. ೪. ತಪಸ್ಸು; ಧ್ಯಾನ; ಸಮಾಧಿ: "ಪ್ರಣಿಧಾನಂ, ಸಮಾಧಾನಂ, ಸಮಾಧಿಃ—ಈ ೩ ಸಮಾಧಿಯ ಪೆಸರ್" (ಚೆನ್ನಾಮು. ೨೦-೦೨೬); ಪತಂಜಲಿಯ ಪುನರ್ಜನ್ಮಗಳ ಬಂಧದಿಂದ ಮುಕ್ತಿಗೆ ಒಯ್ಯುವ ಧ್ಯಾನಕ್ಕೆ ಭಕ್ತಿಪೂರ್ವಕವಾದ ಈಶ್ವರಪ್ರಣಿಧಾನವೊಂದೇ ಮಾರ್ಗವೆಂದು ಹೇಳುವುದಿಲ್ಲ (ಕನ್ನಡ. ೨೬೯). ೫. (ದೇವರಿಗಾಗಿ) ಎಲ್ಲ ಕರ್ಮಫಲಗಳನ್ನು ತ್ಯಾಗ ಮಾಡುವಿಕೆ: ಪ್ರಣಿಧಾನವೆಂದರೆ ಈಶ್ವರನನ್ನು ಕುರಿತು ನಿರಪೇಕ್ಷವಾದ, ನಿಷ್ಕಲಂಕವಾದ ಪೂಜೆ (ಕರ್ಮ. ೨೨). ೬. ಭಕ್ತಿ. [ಸಂ.]

**ಪ್ರಣಿಧಿ** (ನಾ). ೧. ಗೂಢಚಾರನಾಗಿರುವಿಕೆ; ಬೇಹುಗಾರಿಕೆ. ೨. ಬೇಹುಗಾರ; ಗುಪ್ತಚಾರ; ಗೂಢಚಾರ: "ಪ್ರಣಿಧಿ, ಗುಪ್ತಪುರುಷಃ—ಈ ೨ ಗುಪ್ತಪೇರಿಗೆಗಳ್" (ಚೆನ್ನಾಮು. ೬೦-೨೬೦); ಇತ್ತ ದುರ್ಯೋಧನನ ಗೂಢಪ್ರಣಿಧಿಗಳಾ ಮಾತಂ ಜಲಕ್ಕನೆಱಿದು (ಪಂಪಭಾ. ೯-೮೨ ವ); ವಿವಿಧವೇಷವಿದ್ಯಾವಿಶಾರದಪ್ರಚ್ಛನ್ನಪ್ರಣಿಧಿಗಳಂ ಪ್ರಯೋಗಿಸಿಯುಂ . . . ಸಾಮ್ರಾಜ್ಯಮುಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿದಂ (ಚಂದ್ರಪ್ರ. ೨-೬೦). ೩. ರಾಯಭಾರಿ: "ಒಂದು ದೇಶದ ರಾಜನಿಗಾಗಲಿ ರಾಜ್ಯಕ್ಕಾಗಲಿ ಪ್ರತಿನಿಧಿಯಾಗಿ ಪರರಾಜ್ಯದಲ್ಲಿ ಸಾರ್ವಕಾಲಿಕವಾಗಿರುವ ನಿಯೋಗಿ; ಪ್ರಣಿಧಿ; ರಾಜದೂತ; ನಿಯೋಗಿ" (Ambassador. ಇಂಕ). ೪. ಬೇಡಿಕೆ; ಪ್ರಾರ್ಥನೆ: "ಪ್ರಣಿಧಿಃ—ಪ್ರಾರ್ಥನೆ, ಬೇಹಿನ ಗೂಢಚಾರ" (ಸಿದ್ಧಾಂತ. ೩೯೬). ೫. ಅನೆಸು ಅನುಚರ: ಆನೆಯನ್ನು ಪಳಗಿಸಿ ಹತೋಟಿ ಮಾಡುವವನು: ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರಪುಂದವ್ಯಾಗ ಸಂಕೀರ್ಣಾನ್ವಯದ ನೃಪಕರಿಗಳಂ ಪ್ರಣಿಧಿಯೊಡಂಬಡಬೆ ಸಕಳಶಿಕ್ಷೆ ಕಣ್ಬೋಜುಮಿನಂ (ಪುಷ್ಪದ. ೨-೩೬). ೬. ಗಮನ; ಎಚ್ಚರಿಕೆ; ಅವಧಾನ. [ಸಂ.]

**ಪ್ರಣಿಪತ್ತಿ** (ನಾ). = ಪ್ರಣಿಪಾತ ೧: ಇತ್ತಲೀ ಬಸವಣ್ಣನಿಂ ಪ್ರಣಿಪತ್ತಿಯುಂ ಕೈಗೊಳುತ ಕೊರ್ತರ್ (ಬಸವ. ೨೨-೬). [ಸಂ.]

**ಪ್ರಣಿಪಾತ** (ನಾ). ೧. ನಮಸ್ಕರಿಸುವುದು; ನಮಸ್ಕಾರ: ಬರ್ದುಂಕಿದೊರುಂ ಪಿರಿಯನ ಮುನಿಸೆಂಬುದು ಪ್ರಣಿಪಾತಪ್ರತೀಕಾರಮೆಂದಱಿದರಸನ ದಂಡನಾಯಕಂಗೆ ಶರಣಾಗತರಾಗಿ ನಿಜಶಿರಸ್ತ್ರಾಣಪರಾಯಣರಾದರ್ (ಶಾಂತಿಪು. ೦೦-೨೪ ವ); ತಮ್ಮ ಮಗನಂತಿರುವ ನನಗೆ ಸಾಷ್ಟಾಂಗಪ್ರಣಿಪಾತ ಮಾಡುವುದುಂಟೇ ಎಲ್ಲಿಯಾದರು! (ಗ್ರಾಮಾಗ. ೩೨). ೨. ಕಾಲಿಗೆ ಬಿದ್ದು ಶರಣಾಗತನಾಗುವುದು. [ಸಂ.]

**ಪ್ರಣಿಹಿತ** (ಗು). ೧. ಇರಿಸಿದ; ಸ್ಥಾಪಿಸಿದ: ಪ್ರಣಿಹಿತಕಲಶಾವಳಿ ಕಿಂಕಿಣಿಯೊಳ್ ಪೊಱಮಡುವ ಪುಗುವ ಜನದುಲಿಯುಲಿಯೊಳ್ ತೊಡೆಯಾಗೆ . . . ಗೋಪುರಂ ಸೊಗಯಿಸುಗುಂ (ಪುಷ್ಪದ. ೨-೬೬). ೨. ಕೊಟ್ಟ; ನೀಡಿದ. ೩. ಸೇರಿಸಿದ; ಕೂಡಿಸಿದ: ಗುಣದೋಷಾದಿಗಳಿಂದನುಗುಣಮಾಗಿರೆ ಪೇಟ್ದು ತದನುಸದೃಶದಿನೋದಂ ಪ್ರಣಿಹಿತನಿದರ್ಶನ ಕ್ರಮದೆಣಿಸುವುದಕ್ಕುಂ ನಿದರ್ಶನಾಲಂಕಾರಂ (ಕಾವ್ಯಾ. ೨-೦೯೦). ೪. ಪಡೆದ; ಹೊಂದಿದ. ೫. ಒದಗಿದ; ಪ್ರಾಪ್ತವಾದ. ೬. ಸಾವಧಾನವಾದ ಮನಸ್ಸುಳ್ಳ. (ನಾ). ೭. ಇರಿಸಿದುದು. ೮. ಕೊಟ್ಟುದು; ನೀಡಿದುದು. ೯. ಒದಗಿದುದು; ಪ್ರಾಪ್ತವಾದುದು: "ಪ್ರಾಪ್ತಂ, ಪ್ರಣಿಹಿತಂ—೨ ಹೊಂದಲ್ಪಟ್ಟುದು" (ಸಿದ್ಧಾಂತ. ೪೪೬). ೧೦. ಒಂದು ವಿಷಯದ ಮೇಲೆ ಚಿತ್ತೈಕಾಗ್ರತೆಯನ್ನು ಹೊಂದಿರುವುದು.—ಅವಧಾನವನ್ನು ಹೊಂದಿರುವುದು. [ಸಂ.]

**ಪ್ರಣೇತ** (ಗು). ೧. ಮುಂದಕ್ಕೆ ಒಯ್ದ. ೨. ಮಾರ್ಗದರ್ಶನ

ಮಾಡಿದ ; ನಿರ್ದೇಶಿಸಿದ : ಆ ರಾಮಾಯತಿಪತಿ ಪರಮಾಗಮಪ್ರಣೀತ ಮಾರ್ಗದಿಂ . . . ಗುಪ್ತಿಗಳಂ ಪಾಲಿಸಿ ಪಂಚಮಹಾವ್ರತಲೀಲೆಯಿನೆಸೆವಂ (ಶಂರಾಶಾ. ೦೬-೩೬ ಪ); ಪ್ರಣೀತವೇದಾಗಮಶಾಸ್ತ್ರಸಂಕುಳೇ . . . ಗುಣಾಭರಾಮೋ ಜಯ ಸರ್ವಮಂಗಳೇ (ಕ್ರಸಂ. ೨೦-೩೬). ೩. ಕೊಟ್ಟ; ನೀಡಿದ. ೪. ಆಗುಮಾಡಿದ; ನೆರವೇರಿಸಿದ; ಸಾಧಿಸಿದ. ೫. ರಚಿತವಾದ: ನಿರ್ಮಿತವಾದ: ಮಹಾಕವೀಶ್ವರಕೃತಿ ಶಾಸ್ತ್ರಾಂತರಸ್ಮಾರತೆ ನಿಲ್ಕೆ ನಿರಂತರಮಸ್ಮತ್ಪ್ರಣೀತ ಜಾತಕಕೃತಿಯೊಳ್ (ಜಾತಿ. ೦-೩). (ನಾ). ೬. ಹೇಳಿದುದು ; ನಿರ್ದೇಶಿಸಿದುದು : ಇಂಡಿಯಾದೇಶದಲ್ಲಿರುವ ಹಲವಾರು ಗಮನಾರ್ಹವಾದ ಪದ್ಧತಿಗಳಲ್ಲಿ ಪುರಾತನ ಋಷಿಗಳಿಂದ ಪ್ರಣೀತವಾದ ಒಂದು ಪದ್ಧತಿ ಇದೆ (ಕ್ರಶಾ. I. ೪೬); ಟಿಳಕರ ಪೌರುಷ-ಪ್ರಕೃತಿ . . . ಸರ್ವರಿಗೆ ಉಪದೇಶಿಸಲು ಯೋಗ್ಯವಾದ ಕರ್ಮಯೋಗರೂಪವನ್ನು ತಾಳಿ ಅವರ ಮುಖದಿಂದ ಪ್ರಣೀತವಾಯಿತು (ಕರ್ಮಗೀ. ೦೪೨). ೭. ಬರೆದುದು; ರಚಿತವಾದುದು : ಬಹುಕಾಲದ ಹಿಂದೆ ಪ್ರಣೀತವಾಗಿ ಈಗಲೂ ನಮ್ಮಿಂದ ಆದರಿಸಲ್ಪಡುತ್ತಿರುವ ಕಾವ್ಯಗಳೆಲ್ಲವೂ ಈ ಅಲೌಕಿಕ ಆಲೋಕದಿಂದ ತುಂಬಿವೆ (ಕಾಶ್ಯಸ. ೬೪). ೮. ರುಚಿಯಾಗಿ ತಯಾರಿಸಿದ ಅಡುಗೆ; ರಸಪಾಕ : "ಪ್ರಣೀತಂ, ಉಪಸಂಪನ್ನಂ-೨ ಪಾಕದಿಂದಲೂ ರಸದಿಂದಲೂ ಯುಕ್ತವಾಗಿ ಶಾಕಾದಿ ಸಮಗ್ರವಾದ ಅಡಿಗೆ ; ರುಚಿಯಾಗಿ ಅಟ್ಟಲ್ಪಟ್ಟ ಅಡಿಗೆ" (ಸಿದ್ಧಾಂಕೌ. ೨೬೮). ೯. ಮಂತ್ರಸಂಸ್ಕಾರವನ್ನು ಹೊಂದಿದ ಅಗ್ನಿ : "ಕಿಚ್ಚುಂ ಪ್ರಣೀತಮಕ್ಕುಂ" (ಶಬ್ದಗಣ. ೬೬-೦೩) ; "ಪ್ರಣೀತಃ, ಸಂಸ್ಕೃತಃ—ಮಂತ್ರದಿಂದ ಸಂಸ್ಕರಿಸಲ್ಪಟ್ಟು ಹುತನಾದ ಅಗ್ನಿಗೆ ಹೆಸರು" (ಸಿದ್ಧಾಂಕೌ. ೨೦೯). [ಸಂ.]

**ಪ್ರಣೀತೆ** (ನಾ). ಯಜ್ಞ, ಯಾಗ, ಹೋಮಗಳಲ್ಲಿ ಬಳಸುವ ಒಂದು ಬಗೆಯ ಪಾತ್ರೆ; ಯಜ್ಞಪಾತ್ರೆ. [ಸಂ. ಪ್ರಣೀತಾ]

**ಪ್ರಣುತ** (ಗು). ೧. ಹೊಗಳಿದ; ಕೊಂಡಾಡಿದ. ೨. ಹೆಸರಾಂತ; ಪ್ರಸಿದ್ಧವಾದ : ಪ್ರಣುತಪದಾಂತರಿಕರಣಮಂತದೆ ತಾಣದೊಳಾದೊಡಂ ಮಹಾಗುಣಮನೆ ತರ್ಕಗಂ (ಕಜಾ. ೦-೦೨೨) ; ಪ್ರಣುತಜನಚರಿತಮಂ ಲಕ್ಷಣಮಿಲ್ಲದೆ ಕುಕವಿ ಕಬ್ಬದೊಳ್ಕಟ್ಟೆ . . . ಅಪ್ಪುದೆ ಶುಭದಂ (ಅರ್ಕಶೇ. ೦-೩೦); ಪ್ರಣುತ ಶ್ರುತಿಗಳ್ ನಾಲ್ಕು (ಚಿನ್ನಕು. ೩-೦-೧೦೯). [ಸಂ.]

**ಪ್ರಣುತಿ** (ನಾ). ಅತಿಶಯವಾದ ಹೊಗಳಿಕೆ; ವಿಶೇಷವಾದ ಸ್ತೋತ್ರ: ಶಿವಶರಣರಂ ಕಂಡುಕಂಡುಬ್ಬಿ ವಿನತನಾಗಿ ಪ್ರಣುತಿಯಂ ಪುಗೆ ಮನಮೊಸೆದೊಸೆದು ಹಾಡಿಹಾಡಿ (ಬಸವ. ೩೫-೩). [ಸಂ.]

**ಪ್ರಣುತಿಸು** (ಕ್ರಿ). ಅತಿಶಯವಾಗಿ ಹೊಗಳು ; ಬಹಳವಾಗಿ ಸ್ತೋತ್ರ ಮಾಡು : ಪ್ರಣವಮಂತ್ರಾಗಮದ ಕಳೆಗಳೊ ಪ್ರಣುತಿಸಲ್ಕಿಂತೊಪ್ಪುವಾ ಕಲಧೌತಶೈಲದಲಿ (ಚಾಕು. ೦-೩೯); ಭಕ್ತಿಯಲಿ ಪ್ರಣುತಿಸಲು ಶರ್ವಾಣಿ ರತಿಯರಿಗೆಣೆಯೆನಿಪ ಸುಂದರಿಗೆ ಮಿಕ್ಕಿನ ಬಣಗುಸತಿಯರು ಸರಿಯೆ ಲೋಕದೊಳು (ಶಶಿಶ. ೦-೩೯) [ಪ್ರಣುತಿ+-ಸು]

**ಪ್ರಣುತೆ** 'ಪಣೆತೆ' ನೋ.

**ಪ್ರಣೂತ** (ಗು) ೧. ವಿಶೇಷವಾಗಿ ಹೊಗಳಿದ.—ಪ್ರಶಂಸೆ ಮಾಡಿದ. ೨. ಪ್ರಸಿದ್ಧವಾದ ; ಹೆಸರುವಾಸಿಯಾದ : ವ್ಯಾಸಮುನಿಪ್ರಣೂ[ತಾಂ. ಣೀ]ತಕೃತಿಯಂ ಸಲೆ ಪೇಟ್ದು . . . ನಾಡೊಳಜನಾದನೊ ಪೇಟ್ ಕವಿತಾಗುಣಾರ್ಣವಂ (ಕಂಪಾ. ೦೯-೩೨) ; ಮನ್ವಾದಿಪುರಾಣಮುನಿಗಣಪ್ರಣೂತಶ್ರುತಿವಿಹಿತ ವಿಶುದ್ಧಮಾರ್ಗನುಂ . . . ಧರಾಮರಾಗ್ರಗಣ್ಯನುಮಾಗಿ . . . ದುರ್ಗಮಯ್ಯಂ ನೆಗಟ್ದಂ (ಕಂಶಕಂ. ೬-೦೦); ಪರಮಾನಂತಗುಣಪ್ರಣೂತಪರಿನಿರ್ವಾಣೋರ್ವಿಯಂ . . . ಭಕ್ತಿಯಿಂ ನಂದು ವಂದಿಸಲ್ (ಸುಕುಮಾ. ೮-೬೩). (ನಾ). ೩. ಹೆಚ್ಚಾಗಿ ಹೊಗಳಿದುದು ; ವಿಶೇಷವಾಗಿ ಪ್ರಶಂಸಿತವಾದುದು. ೪. ಪ್ರಸಿದ್ಧವಾದುದು; ಹೆಸರುವಾಸಿಯಾದುದು : ಆ ಮಹಾವನಂ . . . ನಾಕನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಮತರ್ಕ್ಯಗೋಚರಮುಂ (ಕಂಪ್ರಕು. ೩-೨೨ ಪ). ೫. ವಿಶೇಷವಾಗಿ ಹೊಗಳಿಕೆಯನ್ನು ಹೊಂದಿದವನು,— ಪ್ರಶಂಸಿತನಾದವನು : ಈತನತ್ಯಂತವಿದ್ವಜ್ಜನಸಂದೋಹಪ್ರಣೂತಂ ಪರಮಜಿನಮತಾಂಭೋಜಿನೀರಾಜಹಂಸಂ (ಸುಕುಮಾ. ೦-೪೯). [ಸಂ.]

**ಪ್ರಣೇತಾರ** (ನಾ). ೧. (ಉತ್ತಮನಾದ) ನಾಯಕ,—ಮುಂದಾಳು: ಪ್ರಣೇತಾರನು ಇಲ್ಲದಿದ್ದರೆ ಮಹತ್ತ್ವವಾದ ಸೈನ್ಯವಾದರೂ ಯುದ್ಧದಲ್ಲಿ ಭಗ್ನವಾಗುವುದು (ಕೌಟ್ಯಕ. ೦೬೩). ೨. (ಗ್ರಂಥವನ್ನು) ರಚಿಸುವವನು; ಕರ್ತೃ. [ಸಂ. ಪ್ರಣೇತೃ]

**ಪ್ರಣೇತೃ** (ನಾ). ೧. ನಾಯಕ; ಮುಂದಾಳು. ೨. ಬೋಧಿಸುವವನು; ಗುರು. ೩. =ಪ್ರಣೇತಾರ ೨ : ನಮಗೆ ಈಗ ಉಪಲಬ್ಧವಾಗಿರುವ ವೇದಾಗಮಗಳಲ್ಲಿಯ ಪ್ರವರ್ತಕರಾಗಲಿ ಅನುವಾದಕರಾಗಲಿ ಪ್ರಣೇತೃಗಳಲ್ಲ (ಕಾಕರ. ೬೨). [ಸಂ.]

**ಪ್ರಣೇಯ** (ನಾ). ೧. ವಿನಯವಂತ; ವಿನೀತ. ೨. ವಶೀಕರಣವಿಧಾನದಿಂದ ವಶವರ್ತಿಯಾಗಿರುವವನು : "ವಶ್ಯಃ, ಪ್ರಣೇಯಃ, ೨ ಔಷಧಾದಿಗಳಿಂದ ವಶ್ಯನಾದವನ ಹೆಸರು" (ಸಿದ್ಧಾಂಕೌ. ೩೨೯). [ಸಂ.]

**ಪ್ರತತ** (ಗು). ಹರಡಿರುವ; ವಿಸ್ತಾರವಾದ; ವ್ಯಾಪ್ತವಾದ. [ಸಂ.]

**ಪ್ರತತಿ** (ನಾ). ೧. ಗುಂಪು ; ಸಮೂಹ : ನಾಗವಿಭೂಷಣಪ್ರತತಿ ನಾಗರಖಂಡಮಪೂರ್ವಮಪ್ಪ ಪುನ್ನಾಗದ ಬಾಸಿಗಂ (ಶಂಕಪಾ. ೯-೦೬) ; ಭುವನದೊಳು ಧರ್ಮಗುಣಪ್ರತತಿಗೆ ನೆಲೆಯಾಗಿ ಮಹಾಸತಿ ಮೇಚಲದೇವಿ ಸನ್ನುತಂ ಸೊಗಯಿಸುಗುಂ (ಎಕ. V, ಶಂಚಜಾ. ೦೯-೩೯; 1096); ಅವದಿರ ನಿಬರು ಕ್ಷಿತಿಸುರರ ಕೊಂದಮಳಭೂಷಪ್ರತತಿಯನು ಕೊಂಡೊಯ್ದರು (ಶಂಪ್ರಾಕ. ೦೬-೦೩). ೨. ಬಳ್ಳಿ; ಲತೆ: "ಲತೆ ಪ್ರತಾನನಿ ಪ್ರತತಿ ವಲ್ಲರಿ ವಲ್ಲಿ ವೀರುದೆನೆ ಬಳ್ಳಿಯೆನಿಕುಂ" (ಶಬ್ದಗಣ. ೩೨-೪). [ಸಂ.]

**ಪ್ರತನ** (ನಾ). ಹಳೆಯದು ; ಪ್ರಾಚೀನವಾದುದು : "ಪುರಾಣಃ, ಪ್ರತನಃ, ಪ್ರತ್ನಃ, ಪುರಾತನಃ, ಚಿರಂತನಃ—೫ ಹಳೇದು, ಬಹುಕಾಲದ್ದು" (ಸಿದ್ಧಾಂಕೌ. ೩೪೩). [ಸಂ.]

**ಪ್ರತಪನ** (ನಾ). ೧. ಹೆಚ್ಚಾಗಿ ಬಿಸಿಮಾಡುವುದು,—ಕಾಯಿಸುವುದು. ೨. (ಅಲಂ) ಕ್ಲೇಶಕ್ಕೀಡುಮಾಡುವುದು ; ಸಂಕಟಪಡಿಸುವುದು : ಸ್ವರೂಪಪ್ರತಪನಲಕ್ಷಣನಿಶ್ಚಯತಪಶ್ಚರಣಹೇತುಭೂತಾನಶನಾದಿ ದ್ವಾದಶವಿಧಾನುಷ್ಠಾನಂ ತಪಮೆಂಬುದಕ್ಕುಂ (ಕಶ್ಚಕ್ರ. ೨೬೬). [ಸಂ.]

**ಪ್ರತರ** (ಗು). ೧. ಹೆಚ್ಚಾದ; ಅಧಿಕವಾದ: ಅತಿತೂರ್ಯಚ್ಚಕ್ರರೋಚಿರ್ವಳಯವಿಳಸನಂ ನನ್ನ[ಮೋ]ನ್ಮೇರತ್ನಪ್ರತರಾಭೀಷುಪ್ರಕಾಶಂ ಬೆಳಗೆ (ಶರ್ಮಕಾ. ೯-೩೩). ೨. ವಿಸ್ತಾರವಾದ: ದಂಡಕವಾಟ ಪ್ರತರಲೋಕಪೂರಣಕ್ರಿಯೆಗಳಂ ಪ್ರತಿಸಮಯಂ ಪ್ರಯೋಗಿಸಿ (ಶಂಕಾಸು. ೦೩-೬೯ ಪ). 'ಪ್ರತರಕ್ರಿಯೆ' ಪರಾ. [ಸಂ.]

**ಪ್ರತರಕ್ರಿಯೆ** (ನಾ). [ ಜೈನ ] ಪರಿನಿರ್ವಾಣಕಾಲದಲ್ಲಿ ಒದಗುವ ಅವಸ್ಥಾವಿಶೇಷ; ಆತ್ಮವು ವಿಸ್ತಾರವಾಗಿ ವ್ಯಾಪಿಸುವುದು : ಲೋಕಾಕಾಶವ್ಯಾಪಕಕವಾಟಕ್ರಿಯೆಯುಂ ನೆಗಟಿ ತದನಂತರಸಮಯದೊಳ್ ವಾತವಲಯಮುಂಬಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ಚಿ ನಿರ್ವರ್ತಿತ ಪ್ರತರಕ್ರಿಯಾವಿಶೇಷಂ (ಅಂತಿ. ೦೬-೯೯ ಪ) ; "ಪ್ರತರಕ್ರಿಯೆ— ಪ್ರತರಾವಸ್ಥೆಯಲ್ಲಿ ಲೋಕದ ಅಸಂಖ್ಯಾತಭಾಗಗಳು ಕೇವಲಿಯ ಪ್ರತರಾಕಾರದ ಆತ್ಮಪ್ರದೇಶಗಳಿಂದ ವ್ಯಾಪ್ತವಾಗುತ್ತವೆ" (ಅಂತಿ. ೩೪೩ ಪಾಠಾಂತರ ಕಥಾಕೋಶ). [ಸಂ. ಪ್ರತರಕ್ರಿಯಾ]

**ಪ್ರತರಾಂಗುಲ** (ನಾ). [ಜೈನ] ಒಂದು ಚದರಳತೆ; ಸೂಚ್ಯಂಗುಲದ ವರ್ಗ : ತದ್ಭಾಗಹಾರಮುಂ ಯಥಾಕ್ರಮದಿಂ ಪ್ರತರಾಂಗುಲಸಂಖ್ಯೇಯ ಭಾಗಮುಮಕ್ಕುಂ (ತತ್ತ್ವಪ್ರ. ೨೦); ಕಾಲಪ್ರಮಾಣದಲ್ಲಿ ವಿವರಿಸಿದ ಆದ್ಧಾಪಲ್ಯದಲ್ಲಿ ಬರುವ ಸಂಖ್ಯೆಯೊಳಗೆ ಅರ್ಧಮಾಡಿ, ಒಂದರಿಂದ ಇನ್ನೊಂದು ಗುಣಿಸಿದರೆ ಸೂಚ್ಯಂಗುಲದ ಪ್ರಮಾಣ ಬರುತ್ತದೆ. ಸೂಚ್ಯಂಗುಲದ ವರ್ಗಕ್ಕೆ ಪ್ರತರಾಂಗುಲವೆಂದೂ ಘನಕ್ಕೆ ಘನಾಂಗುಲ ವೆಂದೂ ಹೇಳುವರು (ತ್ರಿಸಾ. ೩೦೮). [ಸಂ.]

**ಪ್ರತರೆ** (ನಾ).—ಪ್ರತರಕ್ರಿಯೆಂ : ನೀರು ಪಸಿವಂತೆ ಪ್ರತರೆಯು ಪರಮನು ಮಾಡಲು ಘನತರ್ವರ್ಗಪಿಂಡವಾಱುದುದು (ತ್ರಿಸಾ. ೯೩-೯೬). [ಸಂ. ಪ್ರತರ]

**ಪ್ರತಲ**, ಪ್ರತಳ (ನಾ). ೧. ಬೆರಳುಗಳನ್ನು ನೀಡಿ ಅಗಲಿಸಿರುವ ಅಂಗೈ : "ಚಪೇಟಃ, ಪ್ರತಲಃ, ಪ್ರಹಸ್ತಃ—೩ ವಿಸ್ತೃತಾಂಗುಳೌ— ಚಾಚಲ್ಪಟ್ಟ ಬೆರಳುಗಳುಳ್ಳ ಅಂಗೈ ಹೆಸರುಗಳು" (ಸಿದ್ಧಾಂತಿ. ೦೭೩). ೨. ಸಪ್ತಪಾತಾಳಲೋಕಗಳಲ್ಲಿ ಒಂದು. ಪ್ರತಳ : ೧. ಬೆರಲುಂ ತಳಮುಂ ಬೆರಸಿದೊಡೆ ಪ್ರತಳಮೆಂಬುದು ಅದನೆ ತಳಮುಮೆಂಬುದು (ಶಬ್ದಾನು. ೯೯-೪೯೩). [ಸಂ.]

**ಪ್ರತಳ** 'ಪ್ರತಲ' ನೋ.

**ಪ್ರತಾನ** (ನಾ). ೧. ಕವಲುಕವಲಾಗಿ ಹರಡುವುದು; ಶಾಖೋಪ ಶಾಖೆಗಳಾಗಿ ವಿಸ್ತರಿಸುವುದು. ೨. ಗುಂಪು; ಸಮೂಹ : ಮಣಿಗಣಾತ್ತ ಮರೀಚಿಲತಾಪ್ರತಾನಸಂವಲಯಿತ ವಿದ್ರುಮದ್ರುಮವಿಳಾಸ ವಿಶೇಷಿತಬಾಡವಾನಳಾವಿಳಜಳಮಂ ಮನಂ ಬಯಸಿ ನೋಡಿದರ್ಣವಮಂ ಗುಣಾರ್ಣವಂ (ಪಂಪಭಾ. ೪-೨೫); ಲಸದುವ್ಯಕ್ತೀರಪಾದಾಮತಶಿಖರಿಣೀ ಹಂಸಶಾರೀಪ್ರತಾನಂ (ಜಗನ್ನಾ. ೬-೪೦). ೩. ಬಳ್ಳಿಯ ಕುಡಿ; ಸಣ್ಣ ಹಂಬು : 'ಪ್ರತಾನಿನಿ' ಪರಾ. ೪. (ನೆಲದಲ್ಲಿಯೇ ಹಬ್ಬುವ) ಬಳ್ಳಿ; ಹಂಬು. [ಸಂ.]

**ಪ್ರತಾನಿನಿ** (ನಾ). ಬಳ್ಳಿ; ಹಂಬು; ಲತೆ : "ಲತಾ, ಪ್ರತಾನಿನೀ, ವಲ್ಲೀ, ಪ್ರತತೀ, ಪ್ರತತಿಃ— ಈ ೫ ಬಳ್ಳಿ" (ಶಬ್ದಾನು. ೩೦-೨೬). [ಸಂ. ಪ್ರತಾನಿನೀ]

**ಪ್ರತಾಪ** (ನಾ). ೧. ಬಿಸುಪು; ಕಾವು; ಉಷ್ಣ : ದಿವಸ್ಪತಿಗೆ ಪ್ರತಾಪಮಂ . . . ಕೊಟ್ಟ ಗುರುಮೂರ್ತಿ ಪಂಪಾಪತಿವಿರೂಪಾಕ್ಷ ನೆಮಗಿಷ್ಟಸಿದ್ಧಿಯಂ ಮಾಳ್ಕೆ (ಹರಿಶ. ೦-೨). ೨. ಬಿಸಿಲು. ೩. ಬೆಳಕು; ಪ್ರಕಾಶ. ೪. ಶಕ್ತಿ; ಬಲ; ಪರಾಕ್ರಮ :"ಪ್ರತಾಪಃ, ಪೌರುಷಂ, ತೇಜಃ, ವಿಕ್ರಮಃ, ಪರಾಕ್ರಮಃ— ಈ ೫ ಪರಾಕ್ರಮಂ" (ಶಬ್ದಾನು. ೦೨೭-೩೬); ಪತಿವಿಯೋಗ [ಜಿದ್ದಿನ್ನಾ] ಹೃದಯಂಗಳೊಳಾವಗಮುರಿವುದು ಕಡುಪಿ ನೊಳಾ ನೃಪಪ್ರತಾಪಜ್ವಲಸಂ (ಕಾದಂಪೂ. ೦೯); ರಣರಂಗಭೈರವನುಭಯ ಬಳಘುಘುಟಕೀರ್ತಿರ್ತಪ್ರತಾಪಂ ವೈರಿಸಂತಾಪಂ (ಶಾಸನ. XX,೯೬-೭೯; 1072). ೧, ೪: ಉಚ್ಚಂಡಪ್ರತಾಪೋದಯಮರಿಕುಮುದಾಭೋಗವಿಧ್ವಂಸಿಯಾಗಿ ರ್ಪಿನಂ . . . ಒಳ್ಪಂ ಪೆತ್ತುದಾತ್ತಂ ಬೆಳಗುಗೆ ಜಗಮಂ ಗೋಪ ಮಾರ್ತಾಂಡದೇವಂ (ಜಗಂ. ೦-೪). ೫. ತೇಜಸ್ಸು; ಪ್ರಭಾವ; ವರ್ಚಸ್ಸು : "ಪ್ರತಾಪಃ, ಪ್ರಭಾವಃ—೨ . . . ಪ್ರಭುಶಕ್ತಿ ಯಾವದೋ ಅದರ ಹೆಸರು" (ಸಿದ್ಧಾಂತಿ. ೨೯೦). ೬. ಕೀರ್ತಿ; ಯಶಸ್ಸು. ೭. ಹಿಂದಿನ ಕಾಲದಲ್ಲಿ ಚಲಾವಣೆಯಲ್ಲಿದ್ದ ಒಂದು ನಾಣ್ಯ; ಪ್ರತಾಪದ ಲೆಕ್ಕ . . . ಪ್ರತಾಪಕೆ ಪಣವು ಬಾಣಂ ಪ್ರತಾಪಕಂ ಧರಣಿವೆರಡು ಬೌಲ ನಾಲ್ಕುಂ (ಕೃಷ್ಣರಾ. ಅಂಕ. I, ೩); ಆರು ವರುಷಾವಧಿಯ ಪಂಚಪರ್ವಗಳ ಮಹೋ ತ್ಸವಕ್ಕೆ ಪ್ರತಾಪ ಇಪತ್ತುಂ ಬೆಲ್ಲಪತ್ರ ಹುವ ತಹದಕೆ ಪ್ರತಾಪ ಹನೆರಡು (ಎಕ. XI. ಹೊಳಲ. ೩೦-೦೭; 1386); ರಾಮಟಂಕೀನಾಣ್ಯವು ಕಟ್ಟೋಟ ನಾಲ್ಕು ತೊಲಿ ಇರುತ್ತಿತ್ತು. ಅದರ ಅರ್ಧದ ನಾಣ್ಯಕ್ಕೆ ಪ್ರತಾಪವೆನ್ನುವರು (ಕೆಶಾಸಿ. ೨೬೦). ೨ ಸಂಸ್ಕೃತಕೋಶಗಳಲ್ಲಿ ಈ ಅರ್ಥವಿಲ್ಲ. ಆದರೆ ಮರಾಠಿಕೋಶದಲ್ಲಿ, ಧಾರವಾಡದ ಕಡೆ ಪ್ರಚಾರದಲ್ಲಿರುವ ಎರಡು ರೂಪಾಯಿ ಬೆಲೆಯ ಒಂದು ನಾಣ್ಯ, ಅರ್ಧಹೊನ್ನು ಎಂಬರ್ಥದ ಸಂಸ್ಕೃತಶಬ್ದ ಎಂದು ಹೇಳಿದೆ.

**ಪ್ರತಾಪಗದ್ಯಾಣ**—ಪ್ರತಾಪ ೭ : ಸೀಮೆ ಸಂಣ ಪ್ರತಾಪಗದ್ಯಾಣ ೧೦ (ಶಾಸನ. IX – II. ೯೬೦-೦೯; 1665). **ಪ್ರತಾಪಚಕ್ರವರ್ತಿ** = ಪರಾಕ್ರಮಿ ಯಾದ ಹಾಗೂ ಪ್ರಭಾವಶಾಲಿಯಾದ ಸಾರ್ವಭೌಮ; ಹೊಯ್ಸಳ ವೀರಬಲ್ಲಾಳನ ಒಂದು ಬಿರುದು : ಸಮಸ್ತಭುವನಾಶ್ರಯಂ ಯಾದವನಾರಾಯಣಂ ಪ್ರತಾಪಚಕ್ರವರ್ತಿ ವೀರಬಲ್ಲಾಳದೇವರ ಬೆಸ (ಕ. IV. ೬-೦; 1204). **ಪ್ರತಾಪಜನಾರ್ದನ** = ಪರಾಕ್ರಮದಲ್ಲಿ ಹಾಗೂ ಪ್ರಭಾವದಲ್ಲಿ ನಾರಾಯಣನಂತೆ ಇರುವವನು; ಚಾಲುಕ್ಯ ವಿಜಯಾದಿತ್ಯದೇವನ ಒಂದು ಬಿರುದು : ವೈರಿಮದಮರ್ದ್ದನ ಪ್ರತಾಪ ಜನಾರ್ದ್ದನನುಚಿತವಾಕ್ಯ ವಿಷ್ಣುವರ್ಧನಮಹಾರಾಜವಿಜಯಾದಿತ್ಯದೇವರ್ . . . ಆಳುತ್ತಮಿರೆ (ಎಕ. XI. ಚನ್ನರು. ೯೭-೬; 1067). **ಪ್ರತಾಪಲಂಕೇಶ್ವರ** = ೧. ಪರಾಕ್ರಮದಲ್ಲಿ ರಾವಣನಂತಿರುವವನು; ಶತ್ರುಗಳಿಗೆ ಭಯ ವನ್ನುಂಟುಮಾಡುವ ಪರಾಕ್ರಮವುಳ್ಳವನು; ಕಳಚುರ್ಯವಂಶದ ರಾಜರ ಒಂದು ಬಿರುದು : ಕಲಿಗಳಂಕುಶಂ ಗಜಸಾಮಂತಶರಣಾಗತ ವಜ್ರಪಂಜರಂ ಪ್ರತಾಪಲಂಕೇಶ್ವರಂ (ಕ. II. ೦೦-೦೦ ; 1092); ಮಾರ್ತಂಡಪ್ರತಾಪಲಂಕೇಶ್ವರ ರಿಪುಮದನಮಹೇಶ್ವರ (ಕಶಾ. ೬೯-೦೨-೦೯; 1170). ೨. [ವೈದ್ಯಶಾ] ಒಂದು ಬಗೆಯ ಗುಳಿಗೆ, —ಮಾತ್ರೆ : ಪ್ರತಾಪಲಂಕೇಶ್ವರ-ಶಂಖಪಾಷಾಣ . . . ಸಾಸಿವೆಪ್ರಮಾಣ ಗುಳಿಗೆಯಂ ಮಾಡಿ ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು (ವೈದ್ಯಸಾ. ೩೯). [ಸಂ.]

**ಪ್ರತಾಪವಂತ** (ನಾ). ಪ್ರಭಾವಶಾಲಿ; ತೇಜಸ್ವಿ : ಪ್ರತಾಪವಂತಂ ಕಲಿಗೀತ ತಕ್ಕವಂ (ಗೋಮ್ಮಟ. ೦೬-೦೨). [ಸಂ. ಪ್ರತಾಪವತ್]

**ಪ್ರತಾಪವರಾಳಿ** (ನಾ). [ಸಂಗೀತ] ಒಂದು ರಾಗದ ಹೆಸರು : ಶೋಕವರಾಳಿ . . . ಪ್ರತಾಪವರಾಳಿ . . . ನಾಗವರಾಳಿಯೆಂಬ ವರಾಳೀ ಸಪ್ತಕವೇ ಶುದ್ಧವರಾಳಿಗೆ ವಿಶ್ರಂಗಳು (ಸಂಗೀ. ೨೪೩). [ಸಂ. ಪ್ರತಾಪವರಾಲೀ]

**ಪ್ರತಾಪಶಾಲಿ** (ಗು). ೧. ಪರಾಕ್ರಮವುಳ್ಳವ; ಶೂರ : ಮಹೇಂದ್ರನು ನೊಳಂಬವಂಶದಲ್ಲೇ ಅತೀಪ್ರತಾಪಶಾಲಿ ರಾಜನಾಗಿ ಮೆರೆದಿದ್ದಾನೆ (ನೊಳಂಬ. ೪೩). (ನಾ). ೨. ಶೂರನಾದವನು; ವೀರ. [ಸಂ. ಪ್ರತಾಪಶಾಲಿನ್]

**ಪ್ರತಾಪಸ** (ನಾ). ಬಿಳಿ ಎಕ್ಕದ ಗಿಡ : "ಅಲರ್ಕಃ, ಪ್ರತಾಪಸಃ— ೨ . . . ಶ್ವೇತಾರ್ಕ—ಬೆಳ್ಳಕನ ಯಕ್ಕೆ" (ಸಿದ್ಧಾಂತಿ. ೩೩೦). [ಸಂ.]

**ಪ್ರತಾಪಿ** (ನಾ). = ಪ್ರತಾಪಶಾಲಿ ೨ : ದಾರುಣಕೋಪಂ ಪ್ರತಾಪಿ ಸಾಹಸಭೀಮಂ (ಗದಾಯು. ೬-೩). [ಸಂ. ಪ್ರತಾಪಿನ್]

**ಪ್ರತಾಪೋದಯ** (ನಾ). ೧. ಪರಾಕ್ರಮದ ಏಳಿಗೆ; ಶೌರ್ಯೋ ನ್ನತಿ : ವೀರನಾರಾಯಣನಪ್ರತಿಶಯಭುಜಬಳಂ ನಮಗೀಗತರ್ಕಿತೋಪಸ್ಥಿತ ಪ್ರತಾಪೋದಯಮಂ (ಪಂಪಭಾ. ೦-೨). ೨. ಶೌರ್ಯೋನ್ನತಿಯನ್ನು ಹೊಂದಿದವನು; ಅತಿಪರಾಕ್ರಮಿ : ಪದ್ಮರಾಜನರಿದುಪ್ಪಾಪ್ರತಾಪೋದಯಂ (ಕುಶ್ಯಕೃ. ೩-೦೮). [ಸಂ.]

**ಪ್ರತಾಪೋಷ್ಣ** (ನಾ). ಪರಾಕ್ರಮದ ಕಾವು; ಶೌರ್ಯದ ತೀಕ್ಷ್ಣತೆ: ಉಲುಕವಾಯಾತ ಪ್ರತಾಪೋಷ್ಣಮಂ ಪತ್ತುವಿಡುವರಾತಿಗಳ ಸಂಖ್ಯೆಯೊಳಂ (ಅಂಕು. ೦೯-೦೯ ವ). [ಸಂ.]

**ಪ್ರತಾರಕ** (ನಾ). ಮೋಸಗಾರ; ವಂಚಕ : ಈ ವಿಷಯದಲ್ಲಿ ನನಗೆ ಪುತ್ರಪ್ರತಾರಕನೆಂದರೂ ಸರಿ. ಮಗನ ಅವಿವೇಕಕ್ಕೆ ತಡೆ ಹಾಕಲೇಬೇಕು (ಶೂದ್ರ. ೯೦). [ ಸಂ. ]

**ಪ್ರತಾರಣ** (ನಾ). ೧. ಮೋಸ; ವಂಚನೆ : ವಾರಣಾವತಂ ಸಂದ ಸಭಾಪ್ರತಾರಣಕ ಕಾರಣಮೆಂದಱಿಪಲ್ಕೆ ಬೇಡಿದರ್ ಸಂಧಿಗೆಯಲ್ಕೆ ಬೇಡಿದರೆ ಪಾಂಡುತನೂಭವರಯ್ದುಬಾಡಮಂ (ಗದಾಯು. ೩-೨೦). ೨. ಮೋಸಗೊಳಿಸುವಂಥದು; ವಂಚಿಸುವಂಥದು: ಕೋಪಮೆಂಬುದೆ ಸಾಧು ಸಂಗಪ್ರತಾರಣಂ ಕೋಪಮೆಂಬುದೆ ಸಕಲಸನ್ಮಾರ್ಗದಾರಣಂ ಚಿತ್ತ ವೈಕಲ್ಯಕರಣಂ (ಶಂಕರಾ. ೨-೯-೧೬). ೩. ಹೊಳೆ ದಾಟಿಸುವುದು. ೧, ೩ : ಪ್ರತಾರಣಂ ನಾವೆಯೊಳ್ . . . ಮಹಾಮಾತ್ರವರ್ತನಂ ಸ್ಮರಣೆಯೊಳಲ್ಲದಿಲ್ಲಮಲ್ಲಿಯುಂ (ಸಂಕ್ರಷ. ೩-೯ ಟ). [ ಸಂ. ]

**ಪ್ರತಾರಿಸು** (ಕ್ರಿ). ಮೋಸಗೊಳಿಸು ; ವಂಚನೆ ಮಾಡು : ಕಾಮಿನೀತತಿ ವಿಲಾಸಾಪಾಂಗದಿಂದಂ ಪ್ರತಾರಿಸದೆಃಹಾಗಿರಲಾತ್ಮವಂತನೆನಿಸೆಂದುಂ ರಾಜ್ಯ ವಿದ್ಯಾಧರಾ (ಶಾಂತಿಪು. ೩೬೯). [ಪ್ರತಾರಣ+—ಇಸು]

**ಪ್ರತಿ** (ನಾ). ೧. ಸರಿ; ಸಾಟಿ; ಸಮಾನ : "ಸದೃಶಂ ಸರಿ ಪ್ರತಿ ಸದೃಕ್ಷಂ ಪ್ರಕಾಶಂ ಸಮಾನಮೆನೆ ಪಾಸಟಿಗೆ ನಾಮಮಕ್ಕುಂ" (ಶಬ್ದಗರ. ೦೨೭-೩). ೨. ಸಮಾನವಾದುದು ; ಸಾಟಿಯಾದುದು : ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ ಕೂಡಲಸಂಗಮದೇವಾ (ಬಸವ. ೩೮೨); ಬೊಮ್ಮನ ಸತಿಯು ಸೊಬಗಂತಿರಲಿಯೂ ಬಾಲಕಿಯ ರೂಪಿಂಗೆ ಪ್ರತಿಯು ಕಾಣೆನು (ಕುಮಾ೯. ೨-೧೧). ೩. ಸಮಾನನಾದ ವ್ಯಕ್ತಿ; ಸರಿಸಾಟಿಯಾದ ವ್ಯಕ್ತಿ : ಪ್ರತಿ ತನಗಿಲ್ಲ ಸಲ್ಲಲಿತರೂಪದಿನೀ ತ್ರಿಜಗಂಗಳಂಗನಾತತಿಯೊಳಿದೊಂದೆ ತಾಂ ಪ್ರತಿ ನಿಜಪ್ರತಿಮಾನಂ (ಶಾಂತೀಶ್ವ. ೯-೨೯೩). ೪. ಎದುರು; ವಿರೋಧ : ನನ್ನಿಂದ ಏನಾದರೂ ಆಗತಕ್ಕ ಕಾರ್ಯವಿದ್ದರೆ ನಾನು ಸಿದ್ಧನಾಗಿದ್ದೇನೆ. ನಿಮ್ಮ ಮಾತಿಗೆ ಪ್ರತಿಯುಂಟೆ ? (ಶ್ರೀಶಾಕು. ೦೦೯). ೫. ಒಂದಕ್ಕೆ ಬದಲಾಗಿ ಇನ್ನೊಂದನ್ನು ಕೊಡುವುದು; ಮುಯ್ಯಿ : "ಪ್ರತಿಯಾತನಂ ಪ್ರತ ಪ್ರತಿಕೃತಿಯೆಸಲ್ಕೆ ಮುಯ್ಯಿ" (ಶಬ್ದಗರ. ೦೬೫-೩೬). ೬. ಎದುರಾದುದು; ವಿರುದ್ಧವಾದುದು : ಅವನ ತೀರ್ಮಾನಕ್ಕೆ ಪ್ರತಿ ಯಾವುದೂ ಇಲ್ಲ (ಜೂ). ೭. ಒಂದಕ್ಕೆ ಬದಲಾಗಿ ಇರುವ ಇನ್ನೊಂದು: 'ಪ್ರತಿನಿಧಾನ', 'ಪ್ರತಿನಿಧಿ' ಮರಾ. ೮. ಒಂದೊಂದು: ಪ್ರತಿಗೃಹಕಾಂಚನಮಚ್ಚೆಟಿಗೆಗಳಿಂ ಪ್ರತಿಮಂದಿರರಂಗವಲ್ಲಿಯಿಂ ಪ್ರತಿನಿಲಯ ಪ್ರರೂಢಮಣಿತೋರಣದಿಂ ಪ್ರತಿಸದ್ಮವಾದ್ಯದಿಂ ಪ್ರತಿಭವನೋತ್ಸವ ಧ್ವಜದಿನಾ ಪೊಬಲೊಪ್ಪಿರೆ (ಜಗ. ೦೨-೩೯); ವರ್ಷಕ್ಕೆ ಮೂರರಿಂದ ಆರು ಸಲ ಇಲಿ ಬಾಣಂತಿಯಾಗುತ್ತದೆ. ಪ್ರತಿ ಹೆರಿಗೆಯಲ್ಲಿ ಆರರಿಂದ ಹತ್ತು ಮಕ್ಕಳು (ಜೀವಶ್ಯ. ೯೩). ೯. ಒಬ್ಬೊಬ್ಬ : ಪ್ರತಿ ಮಾನುಷ್ಯನಿಗೂ ತನ್ನ ಕರ್ತವ್ಯ, ಜವಾಬ್ದಾರಿಗಳ ಅರಿವಿರಬೇಕು (ಜೂ). ೧೦. ದರ್ಜೆ; ಮಟ್ಟ : ಕೂಲಿಕಾರರು ಕಡಿಮೆ ಪ್ರತಿಯ ಒಕ್ಕಲಿಗರಿಗಿಂತ ಮಾಡಿಕೆಯಾಗಿ ಹೆಚ್ಚು ಸುಖದಿಂದ ಇದ್ದಾರೆಂದು ಹೇಳಬಹುದು (ಕಹಾಗ. ೨೬೬); ಭೌತಿಕಶಾಸ್ತ್ರಗಳಿಗಿಂತ ಆಧ್ಯಾತ್ಮಿಕಶಾಸ್ತ್ರಗಳು ಗೂಢವೆನಿಸುವುವೆಂಬುದು ನಿಜ. ಆದರೆ ಅಷ್ಟು ಮಾತ್ರದಿಂದಲೇ ಅವು ಕಡಿಮೆ ಪ್ರತಿಯವು ಎಂದು ನಿರ್ಧರಿಸಲಾಗುವುದಿಲ್ಲ (ತ್ರಿಶಂಕ. ೦೦೬). ೧೧. ಒಂದು ಮೂಲಗ್ರಂಥದ ನಕಲು : ವರಾಹಮಿಹಿರನ ಬೃಹತ್ಸಂಹಿತೆಯಲ್ಲಿ, ಅದರ ಕೆಲವು ಪ್ರತಿಗಳಲ್ಲಿ ಮಾತ್ರ—ದ್ರವಿಡ ಪದಕ್ಕೆ ಬದಲು ದ್ರಮಿಡ ಎಂಬ ಅನುನಾಸಿಕದ ಉಚ್ಚಾರ ಪಡೆದ ಪದವಿದೆ.(ದ್ರಾವಿಶಿ. ೦೦೯); ನಾಡಿದ್ದಿನ ಹೊತ್ತಿಗೆ ನನಗೆ ಇದರ ಪ್ರತಿ ಬೇಕು (ಜಾತಿ. ೯).

**ಪ್ರತಿ ನಿಲ್ಲು**=ವಿರುದ್ಧವಾಗಿ ನಿಲ್ಲು : ಆ ದುಷ್ಟನಿಗೆ ಪ್ರತಿನಿಲ್ಲುವವರು ಆ ಊರಿನಲ್ಲಿ ಯಾರೂ ಇಲ್ಲ (ಜೂ). **ಪ್ರತಿ ಮಾಡಿಸು**=ಮೂಲಕೃತಿಯನ್ನು ಯಥಾವತ್ತಾಗಿ ಬರೆಸು,—ನಕಲು ಮಾಡಿಸು : ಅತ್ತಿಮಬ್ಬೆ . . . ಅಚ್ಚಕನ್ನಡಕೃತಿಗಳಲ್ಲಿ ಒಂದೊಂದನ್ನೂ ಸಹಸ್ರಸಹಸ್ರವಾಗಿ ಪ್ರತಿ ಮಾಡಿಸಿದಳು (ದಾನಚಿಂ. ೦೬೯). **ಪ್ರತಿ ಮಾಡು**=ಮೂಲಕೃತಿಯನ್ನು ಯಥಾವತ್ತಾಗಿ ಬರೆ,— ನಕಲು ಮಾಡು : ಹರಿಶಂಕರಾಖ್ಯನು ಶಿಷ್ಯ ಸನ್ಮಿತ್ರನು ಪ್ರತಿ ಮಾಡಿದನು ಕೃತಿಯಿದನು (ಶಂಕರಾಕ. ೨೯೯-೩೦೯). **ಪ್ರತಿಯಿಡು**=ಸಮಾನನಾದ ವ್ಯಕ್ತಿಯನ್ನು ಹುಡುಕು: ಪ್ರತಿಯಿಡಲು ಬಾರದ ಮಹಾಗರ್ವಿತಹೃದಯನು ಕಪಟನು . . . ಸ್ವೈರಿಸಿ (ಬಸಪು. ೨೩-೯೦). **ಪ್ರತಿಯೆತ್ತು**=ಪ್ರತಿ ಮಾಡು : ಪುಸ್ತಕಭಂಡಾರಕ್ಕೆ ಹೋಗಿ ಈ ಪುಸ್ತಕದ ಭಾಗವನ್ನು ಪ್ರತಿಯೆತ್ತಿಕೊಂಡು ಬಂದೆ (ಜೂ).

[ಪ್ರ ಸಂಸ್ಕೃತದಲ್ಲಿ ಇದೊಂದು ಉಪಸರ್ಗಾವ್ಯಯ. 'ಪ್ರತಿಗಾಣು', 'ಪ್ರತಿಮಾತು', 'ಪ್ರತಿಯೊಂದು', 'ಪ್ರತಿಯೊಬ್ಬ' ಮುಂತಾದುವುಗಳಲ್ಲಿ ಯಂತೆ ನಾಮಪ್ರಕೃತಿ ಮತ್ತು ಧಾತುಗಳೊಡನೆ ಸೇರಿದಾಗ ಬೇರೆಬೇರೆ ಅರ್ಥಗಳನ್ನು ಕೊಡುತ್ತದೆ]

**ಪ್ರತಿಕಂಟ** (ನಾ). ಪ್ರತಿಯೊಂದು ಬರಹ,–ಬರವಣಿಗೆ : ನಿರತಿಶಯೋನ್ನತಮತಿ ಭಾಸ್ಕರ ಸರಸಕವೀಂದ್ರರಚಿತಶಾಸನಮಂ ಚಿತ್ರರದಿ ಪ್ರತಿಕಂಟಂ ಸಾಕ್ಷರನಿಳಯಂ ತಿರ್ದಿ ಭಾಸ್ಕರಯ್ಯಂ ಬರೆದಂ (ಕಶಾ. ೦೯-೦-೯೨ : 1127). [ ಸಂ. ]

**ಪ್ರತಿಕಕ್ಷಿ** (ನಾ). ಎದುರಾಳಿ; ಪ್ರತಿಸ್ಪರ್ಧಿ; ವಿರೋಧಿ : ಮಣಿಗೆ ಒಬ್ಬ ಪ್ರತಿಕಕ್ಷಿ ಸಿಕ್ಕಿದ (ಸ್ವಾಭಿಸ್ಮೀ. ೦೬) ; ನಮ್ಮ ದಿನಗಳು ಕಳೆದ ಮೇಲೆ ಲಕ್ಷ್ಮಿಯ ಸಂತಾನ ತನ್ನದೆಂದು ಸಿಂಹಾಸನಕ್ಕೆ ಹೊಡೆದಾಡಿದರೆ ? ದೇಶದಲ್ಲಿ ಕಕ್ಷಿ ಪ್ರತಿಕಕ್ಷಿಗಳು ಎದ್ದರೆ ? (ಶಾಂತಲಾ. ೨೯೦). [ಪ್ರತಿ+ಕಕ್ಷಿ]

**ಪ್ರತಿಕರ್ಮ** (ನಾ). ೧. ಪ್ರತ್ಯುಪಕಾರ ಮಾಡುವುದು; ಪ್ರತಿಫಲ ನೀಡುವುದು. ೨. ಸೇಡು ತೀರಿಸಿಕೊಳ್ಳುವಿಕೆ ; ಪ್ರತೀಕಾರ. ೩. ವಿರೋಧ; ಪ್ರತಿಭಟನೆ. ೪. ಅಲಂಕಾರ ಮಾಡಿಕೊಳ್ಳುವುದು; ಸಿಂಗರಿಸಿಕೊಳ್ಳುವುದು : "ಆಕಲ್ಪಃ, ಮಂಡನಂ, ವೇಷಃ, ಪ್ರತಿಕರ್ಮ, ಪ್ರಸಾಧನಂ—ಈ ೫ ಶೃಂಗಾರಂಗೆಯ್ಯುದು" (ಕರಾಯು. ೯೯-೩೯೩). [ಸಂ. ಪ್ರತಿಕರ್ಮನ್]

**ಪ್ರತಿಕಾಯ** (ನಾ). (ಒಂದು ವಸ್ತು ಅಥವಾ ವ್ಯಕ್ತಿಯನ್ನು ಹೋಲುವ ಲೋಹ, ಶಿಲೆ ಮುಂತಾದುವುಗಳ) ಪ್ರತಿಮೆ ; ಪ್ರತಿರೂಪ : "ಪ್ರತಿಬಿಂಬಂ, ಪ್ರತಿರೂಪಂ . . . ಪ್ರತಿಕಾಯಂ . . . ಪ್ರತಿಚ್ಛಾಯಂ—ಈ ೯ ಪ್ರತಿಬಿಂಬದ ಪೆಸರ್" (ಕರಾಯು. ೨೦-೦೬೦). [ಸಂ.]

**ಪ್ರತಿಕಾರ₁** (ನಾ). ಗ್ರಂಥದ ಪ್ರತಿಗಳನ್ನು ಬರೆದು ಸಿದ್ಧಪಡಿಸುವವನು : ಪ್ರತಿಕಾರರ ಮತ್ತು ತಿದ್ದುಗಾರರ ಹೆಸರುಗಳೂ ಇಂದಿಗೂ ಇರುವುದನ್ನು ನೋಡಬಹುದು (ಕಶ್ಯಸಂ. ೨೦) ; ಓಲೆಗರಿಯ ಪ್ರತಿಕಾರರಿಗೆ ಬರಹಗಾರರೆಂದು ಕರೆಯುತ್ತಿದ್ದರು (ದ್ರಾವಿಶಿ. ೩೯). [ ಪ್ರತಿ+—ಕಾರ₁ (< —ಕಾರ) ]

**ಪ್ರತಿಕಾರ₂** (ನಾ). ೧. ಮಾಡಿದಂದಕ್ಕೆ ಪ್ರತಿಯಾಗಿ ಮಾಡುವುದು ; ಪ್ರತಿಕ್ರಿಯೆ : ಹತದೇಹ ಹತಭುಜದ್ವಯ . . . ಹತಕೃತ್ಯಪ್ರತಿಕಾರಮೆಂಬುದಂಟೇ ಗತಿಯಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ (ಗದಾಯು. ೯-೨೬) ; ಪ್ರತಿಕಾರೋಪಾಯಮೇನಿಲ್ಲಿಗೆ ನುಡಿಯಿಂ (ಜಗ. ೯-೬೭). ೨. ಪರಿಹಾರ; ನಿವಾರಣೆ. ೩. [ವೈದ್ಯಶಾ] ರೋಗಪರಿಹಾರಕ್ಕೆ ಮಾಡುವ ಚಿಕಿತ್ಸೆ : 'ಪ್ರತೀಕಾರ' ಮರಾ. [ಸಂ.]

**ಪ್ರತಿಕೂಲ** (ಗು). ೧. ದಡಕ್ಕೆ ಎದುರಾದ. ೨. ಅನುಕೂಲವಲ್ಲದ ; ವ್ಯತಿರಿಕ್ತವಾದ ; ವಿರುದ್ಧವಾದ : ಪ್ರತಿಕೂಲಾನಿಲದಿಂ ಪತಾಕೆ ಮಗುಟೆಂಬಂತಾಗೆ ಕೈಸನ್ನೆಯಿಂ . . . ಸಾರ್ತಂದುದು . . . ಪುಷ್ಪಕವಿಮಾನಂ

ದಂಡಕಾರಣ್ಯಮಂ (ಶಂರಾಚ. ೯-೭೩) ; ಪ್ರತಿಕೂಲಕವರ್ಮೇಘಂ ಪ್ರತಿಸವಯಪಾನಂತಗುಣವಿಶೋಧಿಮಹಾವಾರುತನಿಂ ಕಿಡೆ (ಧರ್ಮಾ. ೩-೯೧) ; ಭಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳಿ ಫಲವೇನು (ಉತ್ತ್ಮಗ. ೩-೨೮). (ನಾ). ೩. ಎದುರಂ ದಡ ; ಆಚೆಯ ದಡ. ೪. ಅನುಕೂಲವಲ್ಲದುದು ; ವ್ಯತಿರಿಕ್ತವಾದುದು ; ವಿರುದ್ಧವಾದುದು : "ಪ್ರತಿಕೂಲಂ, ಪ್ರತಿಲೋಮಂ, ಪ್ರತೀಪಂ, ಪ್ರಸವ್ಯಂ—ಈ ೪ ಪ್ರತಿಕೂಲಂ" (ಕರಾಡು. ೦೨೨-೩೮) ; ಇಲ್ಲಿ ಕೊಟ್ಟ ಸಂಗತಿಗಳು ಇತಿಹಾಸಕ್ಕೆ ಪ್ರತಿಕೂಲವಲ್ಲ (ಕಶಾಣ. ೫೦). ೩, ೪ : ನಿಟ್ಟಿಸೆ ಕುಮುದ ವೇಟಾಗಿಯುಂ ಕುಮುದವಿಲ್ಲಲ್ಲಿ ಪ್ರತಿಕೂಲವುಂಟಾಗಿಯುಂ ಹೆಸರಿಡಲು ಪ್ರತಿಕೂಲವಿಲ್ಲಲ್ಲಿ (ಜಲಶಾ. ೩-೯೨). [ಸಂ.]

**ಪ್ರತಿಕೂಲತೆ** (ನಾ). ವ್ಯತಿರಿಕ್ತವಾಗಿರುವಿಕೆ ; ವಿರುದ್ಧವಾಗಿರುವಿಕೆ: ಅವಳ ಪ್ರತಿಕೂಲತೆಯನು ಅಂತರಿಸದೆಲ್ಲವಂ ಪೇಳ್ವೊಡೆ (ಕೃಟಶಾ. ೦೦-೨೮). [ಸಂ. ಪ್ರತಿಕೂಲತಾ]

**ಪ್ರತಿಕೂಲದೈವ** (ನಾ). ೧. ವಿರುದ್ಧವಾದ ವಿಧಿ ; ದುರದೃಷ್ಟ : ಆಕೆಯ ಪ್ರತಿಕೂಲದೈವವಶವವಾರ್ಥವಾಗಿ ಸೋಮತೀರ್ಥಕ್ಕೆ ಈಗ ತಾನೆ ಹೋಗಿರುವರು (ಶಾಕುಂತ. ೩-೦೦). ೨. ದುರದೃಷ್ಟಶಾಲಿ ; ದುರ್ದೈವಿ : ಪ್ರತಿಕೂಲದೈವನ್ನ ನೀಂ ಪ್ರತಿನ್ನಪರನುಕೂಲದೈವರ್ (ಗದಾಯು. ೩-೯೩): ಪ್ರತಿಕೂಲದೈವಮಾಗಾರು ಸಹಾಯಕರು ತಂದೆಯು ತಾಯಿಯು ಮಗನೆ (ಶಂಶಾಕ. ೦೬೬-೩). [ಸಂ.]

**ಪ್ರತಿಕೂಲವರ್ಣ** (ನಾ). [ಕಾವ್ಯಮೀ] ಕಾವ್ಯಗಳಲ್ಲಿ ಬರಬಹುದಾದ ವಾಕ್ಯದೋಷಗಳಲ್ಲಿ ಒಂದು ; ರಸೋಚಿತವಲ್ಲದ ಅಕ್ಷರಗಳಿಂದ ಕೂಡಿರುವುದು ; ☞ ಶೃಂಗಾರ, ಕರುಣ, ಶಾಂತರಸಗಳನ್ನು ಪ್ರತಿಪಾದಿಸುವಾಗ ಮೃದುವಾದ ವರ್ಣಗಳೂ ರೌದ್ರ, ವೀರ, ಬೀಭತ್ಸರಸಗಳನ್ನು ಪ್ರತಿಪಾದಿಸುವಾಗ ಕಠೋರವಾದ ಅಕ್ಷರಗಳೂ ದೀರ್ಘಸಮಾಸವೂ ಇರಬೇಕೆಂಬ ನಿಯಮವಿದೆ. ಇದಕ್ಕೆ ವಿರುದ್ಧವಾಗಿರುವ ವರ್ಣಗಳಿಂದ ಕೂಡಿದ ವಾಕ್ಯವು ಪ್ರತಿಕೂಲವರ್ಣದೋಷವುಳ್ಳುದಾಗುವುದು : ಪ್ರತಿಕೂಲವರ್ಣ—ಪ್ರಸಕ್ತವಾದ ರಸಕ್ಕೆ ಅನುಗುಣವಲ್ಲದ ಅಕ್ಷರಗಳಿರುವದು (ಕೃಶಾ. ೨೨೪). [ಸಂ.]

**ಪ್ರತಿಕೂಲೋಕ್ತಿ** (ನಾ). ಅನುಕೂಲವಲ್ಲದ ನುಡಿ ; ವಿರುದ್ಧವಾದ ಮಾತು,—ವಚನ : ಪ್ರತಿಕೂಲೋಕ್ತಿಗಳೆನ್ನ ಮಾತುಗಳಿವಜ್ಞಗ್ರಂ ವಿವೇಕಾನ್ವಿತರ್ಗಾತಿಪಥ್ಯಂಗಳೆನಿಕ್ಕುಂ (ಧರ್ಮಾ. ೨-೯೧). [ಸಂ.]

**ಪ್ರತಿಕೃತ** (ಗು). ೧. ಪ್ರತಿಯಾಗಿ ಮಾಡಿದ ; ಪ್ರತಿಫಲ ನೀಡಿದ. ೨. ಪ್ರತೀಕಾರ ಮಾಡಿದ ; ಸೇಡು ತೀರಿಸಿದ. ೩. ಪರಿಹರಿಸಿದ ; ನಿವಾರಿಸಿದ. ೪. [ವೈದ್ಯಶಾ] (ರೋಗ ಮುಂತಾದುವುಗಳಲ್ಲಿ) ಚಿಕಿತ್ಸೆ ಮಾಡಿದ. (ನಾ). ೫. ಅಡ್ಡಿ ; ಅಡಚಣೆ ; ವಿರೋಧ. ೬. ಪ್ರತಿಬಿಂಬ ; ಪ್ರತಿರೂಪ : "ಪ್ರತಿಬಿಂಬಂ, ಪ್ರತಿರೂಪಂ, ಪ್ರತಿಮಾನಂ, ಪ್ರತಿಕೃತಂ . . . ಪ್ರತಿಚ್ಛಾಯಂ—ಈ ೯ ಪ್ರತಿಬಿಂಬದ ಪೆಸರ್" (ಕರಾಡು. ೨೦-೦೪೦). [ಸಂ.]

**ಪ್ರತಿಕೃತಿ** (ನಾ). ೧. ಪ್ರತಿಮೆ ; ವಿಗ್ರಹ : ಅಂತು ತನ್ನ ಮಾಡಿಸಿದ ಚೈತ್ಯಾಲಯಂಗಳೊಳ್ ಆದಿಭಟ್ಟಾರಕರಾದಿಯಾಗಿ ಭವಿಷ್ಯತ್ತೀರ್ಥಕರ ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ (ಆಪು. ೦೬-೦ ವ) : ಅತಿಶಯ ಪಂಚರೂಪಪ್ರತಿಕೃತಿಪರಿತಂ ತಾವುಲ್ಕೃಷ್ಣಪೀಠಸಿತಶ್ರೀಧೃತಮಾಗಿ ಸೂರ್ಯಯಾನದ ವಿಮಾನವಮಂ ಪೋಲ್ತುದು (ಶಾಂತಿಪು. ೦೦-೨೨). ೨. ಪ್ರತಿಬಿಂಬ ; ಪ್ರತಿಚಿತ್ರ : "ಆ ಪ್ರತಿಕೃತಿ ಪ್ರತಿಕಾಯಮಾ ಪ್ರತಿಪ್ರಾಣಮೆಂದೆನಲುಮಂ ಪ್ರತಿಯಪ್ಪ ರೂಪೆನಿಕ್ಕುಂ" (ಶುಂಗನಾ. ೬-೨೮) ; ಕುರ್ಗಾದ ನೀಂ ಪ್ರತಿಕೃತಿಯ ವಲಂ ಪೊನ್ನೊಡವೆ ನನ್ನ ಸೀತಾಸ್ಥಿತಿಗೆ! (ಶ್ರೀರಾಮ. ೨೯೩-೨೪೦) : ಸುಭಾಷಿಣಿಯೂ ಅವಳ ಗಂಡ ರಮಣಬಾಬುವೂ ವಿಷವೃಕ್ಷದ ಕವಲವಾಣಿ ಶ್ರೀಕರ ಪ್ರತಿಕೃತಿಗಳು (ಅಂಕಪು. ೦೨೩). ೩. ಸದೃಶವಾದುದು ; ಸಮಾನವಾದುದು. ೪. ಒಂದಂ ಕೆಲಸದಿಂದ ಉಂಟಾಗುವ ಪರಿಣಾಮ.— ಪ್ರತಿಕ್ರಿಯೆ : ಸ್ವಪ್ರತಿಕ್ರಿಯು ಸಾಲುಸಾಲಾಗಿ ನೆನಹುಗಳನ್ನೂ ಮಾನಸಿಕ ಪ್ರತಿಕೃತಿಗಳನ್ನೂ ತಂದೊದಗಿಸುತ್ತದೆ (ಜನ್ಮಗ. ೦೨೦). ೫. ಪ್ರತಿಭಟನೆ ; ವಿರೋಧ. ೬. ಒಂದು ಕಾರ್ಯಕ್ಕೆ ಪ್ರತಿಯಾಗಿ ಮಾಡುವ ಕಾರ್ಯ ; ಮುಯ್ಯಿ : "ಪ್ರತಿಯಾತನಂ ಪ್ರತಿ ಪ್ರತಿಕೃತಿಯೆನಿಪ್ಪ ಮುಯಿ" (ಜ್ವಂಗನಾ. ೦೬೩-೩೩). [ಸಂ.]

**ಪ್ರತಿಕೃತಿಸು** (ಕ್ರಿ). ಪ್ರತಿಬಿಂಬಿಸು ; ಪ್ರತಿಫಲಿಸು : ಅದೊ ನದಿಯ ನೀರ್ ಮಿಡುಗುತ್ತಿದ ಪಾದರಸದೊಲ್, ಪ್ರತಿಕೃತಿಸಿ ದಿವಾಕೀರ್ತಿಯಂ ! (ಶ್ರೀರಾಮ. ೨೦೨-೨೨೦). [ಪ್ರತಿಕೃತಿ+—ಇಸು]

**ಪ್ರತಿಕೃಷ್ಟ** (ನಾ). ೧. ಹಿಂದಕ್ಕೆ ಎಳೆದುದು ; ಹಿಮ್ಮೆಟ್ಟಿಸಿದುದು. ೨. ಕಡೆಗಣಿಸಿದುದು ; ತಿರಸ್ಕೃತವಾದುದು. ೩. ನೀಚ ; ಅಧಮ : "ನಿಕೃಷ್ಟಃ, ಪ್ರತಿಕೃಷ್ಟಃ . . . ಗರ್ಹ್ಯಃ ಅಣಕಃ, ೧೩ ಜಾತ್ಯಾಚಾರಗುಣಾದಿಗಳಿಂದ ಕಡಿಮೆಯಾದಂಥಾ ಅಧಮನ ಪೆಸರುಗಳು" (ಸಿದ್ಧಾಂತ. ೩೩೭). [ಸಂ.]

**ಪ್ರತಿಕ್ರಮಣ** : (ನಾ). ೧. ಮುಂದಕ್ಕೆ ಹೋಗುವುದು. ೨. [ಜೈನ] ಸಾಧುಗಳಿಗೆ ಹೇಳಿರುವ ಇಪ್ಪತ್ತೆಂಟು ಮೂಲಗುಣಗಳಲ್ಲಿ ಒಂದು ; ಪ್ರಮಾದದಿಂದ ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಗುರುಗಳ ಸನ್ನಿಧಿಗೆ ಬಂದು ಪಶ್ಚಾತ್ತಾಪಪೂರ್ವಕವಾಗಿ ಒಪ್ಪಿಕೊಳ್ಳುವುದು : ಪರಮಾಲೋಚನದೊಳ್ ಪ್ರತಿಕ್ರಮಣದೊಳ್ . . . ಶುದ್ಧಿ ತಳ್ತಿರೆ ದೋಷಪ್ರತೀಕಾರಸಾರತಪಮಂ ತತ್ತ್ವಾಪಸಂ ತಾಳ್ದಿದಂ (ಸುಕುಮಾ. ೯-೦೫). 'ಪಡಿಕಮಣ' ನೋಡಿ. ☞ ಬೌದ್ಧರಲ್ಲೂ ಈ ತಪ್ಪೊಪ್ಪಿಗೆಯ ಪ್ರಾಯಶ್ಚಿತ್ತವಿದೆ. [ಸಂ.]

**ಪ್ರತಿಕ್ರಿಯೆ** (ನಾ). ೧. ಒಂದು ಕ್ರಿಯೆಯಿಂದ ಉಂಟಾಗುವ (ಒಳ್ಳೆಯ ಅಥವಾ ಕೆಟ್ಟ) ಪರಿಣಾಮ : ಅವನ ಈ ಹೆದರಿಕೆಯು ಆ ಹತ್ತೆಂಟು ದಿನಗಳು ಮಾತ್ರ ಸ್ವಲ್ಪ ಪ್ರತಿಕ್ರಿಯೆಯನ್ನುಂಟು ಮಾಡಿದ್ದರೂ ಅದರಿಂದ ಶಾಶ್ವತವಾದ ಯಾವ ಉಪಯೋಗವೂ ಉಂಟಾಗಲಿಲ್ಲ (ಜಕಸ. ೦೦೭). ೨. ವಿರುದ್ಧವಾದ ಕಾರ್ಯ,— ಕೆಲಸ : ಓದುವುದನ್ನು ಮಾಡಲೇಕೂಡದೆಂದು ಡಾಕ್ಟರರು ವಿಧಿಸಿದ್ದರು. ಅದರ ಪ್ರತಿಕ್ರಿಯೆಯೆಂದು ಆಕೆ ಆ ಅವಧಿಯಲ್ಲಿ . . . ಒಂದು ನಾಟಕವನ್ನೂ ಬರೆದಿದ್ದಳು (ಪ್ರಜಾಂಕ.೬೯); ಮೋನಪ್ಪನಾಯ್ಕರು ಅಂಗಡಿ ಬಿಟ್ಟು ಹೋದದ್ದೇ ಅವರೊಡನೆ ಆದ ಚರ್ಚೆಗೆ ಪ್ರತಿಕ್ರಿಯೆ ಸುರುವಾಗಿತ್ತು (ಜುಗುಳು. ೨೬೦). ೩. ಸೇಡು ತೀರಿಸಿಕೊಳ್ಳುವಿಕೆ; ಪ್ರತೀಕಾರ. ೪. ವಿರೋಧ; ಪ್ರತಿಭಟನೆ. ೫. [ವೈದ್ಯಶಾ] ರೋಗನಿವಾರಣೋಪಾಯ ; ಚಿಕಿತ್ಸೆ : "ಚಿಕಿತ್ಸಾ, ರುಕ್ಪ್ರತಿಕ್ರಿಯಾ—ರೋಗಕ್ಕೆ ಶಾಮಕವಾಗಿ ಔಷಧಾದಿ ಪ್ರತಿಕ್ರಿಯೆಗಳನ್ನು ಮಾಡುವಿಕೆ" (ಸಿದ್ಧಾಂತ. ೦೬೨); ರಾಜಕೀಯದ ಸಹಜವಿಷಕ್ಕೆ ಸತ್ಯಾಗ್ರಹದ ಸಹಜ ಅಮೃತವನ್ನು ಬಿಟ್ಟರೆ ಬೇರೆ ಪ್ರತಿಕ್ರಿಯೆ ಇಲ್ಲವೆಂದು ಹೇಳುತ್ತಾರೆ (ಜಾಶಿಕ. ೦೯). [ಸಂ. ಪ್ರತಿಕ್ರಿಯಾ]

**ಪ್ರತಿಕ್ಷಣಂ** (ಅ). ಪ್ರತಿಯೊಂದು ಕ್ಷಣದಲ್ಲೂ ; ಕ್ಷಣಕ್ಷಣದಲ್ಲೂ ; ಮತ್ತೆ ಮತ್ತೆ : "ಪ್ರತಿಕ್ಷಣಂ, ಅಭೀಕ್ಷ್ಣಂ, ಭೂಯಃ, ಅಸಕೃತ್, ಮುಹುಃ — ಈ ೫ ಮಗುಟೆ ಮಗುಟೆ" (ಕರಾಡು. ೬೨೦-೪೯) ; ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ ಪೂರ್ವಾಪೂರ್ವಚಿತ್ತವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು. ೬-೦೯೨ ವ). [ಸಂ.]

**ಪ್ರತಿಕ್ಷಿಪ್ತ** (ಗು). ೧. ತಿರಸ್ಕಾರ ಹೊಂದಿದ ; ನಿರಾಕೃತವಾದ.

೨. ಆಕ್ಷೇಪಣೆಯನ್ನು ಹೊಂದಿದ; ನಿಂದಿತವಾದ. ೩. ವಿರೋಧಕ್ಕೆ ಒಳಗಾದ; ಪ್ರತಿಭಟನೆ ಹೊಂದಿದ. ೪. ಪರಿಹಾರವಾದ; ನಿವಾರಣೆಯಾದ. ೫. ಕಳುಹಿಸಿದ; ರವಾನಿಸಿದ. (ನ). ೬. ತಿರಸ್ಕರಿಸಿದುದು; ನಿರಾಕೃತವಾದುದು: "ಪ್ರ(ತ್ಯಾ)ಖ್ಯಾತಂ. ಪ್ರತಿಕ್ಷಿಪ್ತಂ. ಪ್ರತ್ಯಾದಿಷ್ಟ, ನಿರಾಕೃತಂ . . . ಪರಿಹೃತಂ — ಈ ೭ ಪರಿಹರಿಸಲ್ಪಟ್ಟುದು" (ಹಲಾಯು. ೦೦೬-೮೯). ೭. ಆಕ್ಷೇಪಣೆಯನ್ನು ಹೊಂದಿದವನು; ನಿಂದಿತನಾದವನು: "ಅಧಿಕ್ಷಿಪ್ತಃ, ಪ್ರತಿಕ್ಷಿಪ್ತಃ — ೨ ಆಕ್ಷೇಪಿಸಲ್ಪಟ್ಟವನ ಪೆಸರುಗಳು" (ಸಿದ್ಧಾಂ.ತಿ. ೩೩೪). ೮. (ಇನ್ನೊಬ್ಬರು) ಕಳುಹಿಸಿದವನು; ಪ್ರೇಷಿತ. ೯. ನಿರಾಕರಣೆ: "ನಿರಾಕೃತಿ ಪ್ರತಿಕ್ಷಿಪ್ತವೆನಲು" (ಚುಂಗಣ. ೩೯-೯). [ಸಂ.]

**ಪ್ರತಿಕ್ಷೇತ್ರ** (ನಾ). ಒಂದಂ ಭೂಮಿಯನ್ನು ಕೊಟ್ಟು ಅದರ ಬದಲಾಗಿ ತೆಗದುಕೊಂಡ ಭೂಮಿ, ಹೊಲ, ಗದ್ದೆ ಮೊದಲಾದಂವು: ವಿನಿಮಯವಾಗಿ ತೆಗೆದುಕೊಂಡ ಭೂಮಿ: ಆಚಾರ್ಯ್ಯ ಅಪ್ಪಯ್ಯನು ಮಗ ರಂಗಯ್ಯನು ಅಳಿಯ ಕಸವದೇವನು ತಂಮ ಇತಿಕೆಱೆಯಂ ಕೊಟು ಹಿರಿಯಕೆಱೆಯ ಕೆಳಗಣ ೯ಡೆಯ ಗದ್ದೆ ನಾಗಸಲಗೆಯಂ ಪ್ರತಿಕ್ಷೇತ್ರವಂ ಕೊಂಡರು (ಎಕ. ೪, ನಾಗಕ-೦೫೦-೩೨ : 1156 ?). [ಸಂ.]

**ಪ್ರತಿಗಾಣು** (ಕ್ರಿ). ಬೇರೊಬ್ಬರನ್ನು ಕಾಣು: ಮತ್ತೊಬ್ಬರನ್ನು ನೋಡು: ಯತಿಗಳೊಳು ನಿನ್ನಂಥವರುಗಳ ಪ್ರತಿಗಾಣೆನು ಈ ಕ್ಷಿತಿಯೊಳಗೆ ಯತಿರಾಯ (ಜಗಣ. ೯೩). [ಪ್ರತಿ + ಕಾಣು (< ಕಾಣ್)]

**ಪ್ರತಿಗಾಮಿ** (ಗು). ೧. ಎದುರಾಗಿ ಹೋಗುವ; ವಿರುದ್ಧವಾಗಿ ಹೋಗುವ. ೨. (ಸಂಘ, ಸರ್ಕಾರ, ರಾಜಕೀಯಪಕ್ಷ ಮೊದಲಾದುವುಗಳಲ್ಲಿ) ವಿರುದ್ಧಾಭಿಪ್ರಾಯವನ್ನು ಹೊಂದಿರುವ: ಆಡಳಿತ ಕ್ರಮದ ರೀತಿನೀತಿಗಳನ್ನು ವಿರೋಧಿಸುವ: ೧೯೧೧ರಲ್ಲಿ ವಿದೇಶೀಯ ಬ್ಯಾಂಕರ ಜನ ಪ್ರತಿಗಾಮಿ ನಾಯಕನಾದ ಯುವಾನ್-ಶಿ-ಕೈ ಎಂಬವನಿಗೆ ೨೫೦ ಲಕ್ಷ ಪವನಿನ ಸಾಲ ಕೊಟ್ಟಿತು (ಚೀಸಂ. ೦೪). (ನಾ). ೩. ದೇಶದ ಪ್ರಗತಿಗೆ ವಿರುದ್ಧವಾದುದು; ರಾಷ್ಟ್ರದ ಕಲ್ಯಾಣಕ್ಕೆ ವ್ಯತಿರಿಕ್ತವಾದುದು: ವಿಜ್ಞಾನ ಯಾವಾಗಲೂ ಪ್ರಗತಿಮುಖವಾದುದು. ಧರ್ಮ ವಾಲಶಾಹಿ ಪ್ರತಿಗಾಮಿಯಾದುದು (ಗಾಂಯು. ೩೯); ತನ್ನ ಹಿತವನ್ನೇ ಸ್ವಾರ್ಥವನ್ನೇ ಅದು ಮೊದಲು ಗಮನಿಸತೊಡಗುತ್ತದೆ. ಅಂದಿನಿಂದ ಅದೇ ವರ್ಗವು ಪ್ರಗತಿವಿರೋಧಿಯಾಗುತ್ತದೆ, ಪ್ರತಿಗಾಮಿಯಾಗುತ್ತದೆ (ಜೀವಿತ. ೯೪). ೪. ವಿರುದ್ಧಪಕ್ಷಕ್ಕೆ ಸೇರಿದವನು; ಪ್ರತಿಪಕ್ಷಕ್ಕೆ ಸೇರಿದವನು: ಕೈಲಾಸದಲ್ಲಿ ಕಮೂಕ್ಕನಿಷ್ಠರನ್ನು ಕಂಡು ಪುರೋಗಾಮಿಗಳಂತೆಯೇ ಪ್ರತಿಗಾಮಿಗಳೂ ಹೌಹಾರಬಹುದು (ಕೈಲಾಸ ೦ ಚುಟುಕ). [ಸಂ. ಪ್ರತಿಗಾಮಿನ್]

**ಪ್ರತಿಗಾಮಿಪಕ್ಷ** (ನಾ). ಒಂದು ಪಕ್ಷವು ಪ್ರಗತಿಪರವೆಂದು ಭಾವಿಸಿರುವ ತತ್ತ್ವಕ್ಕೆ ವಿರುದ್ಧವಾದ ಪಕ್ಷ; ವಿರೋಧ ಪಕ್ಷ: ಸಂಪ್ರದಾಯಬದ್ಧವಾದ ಪ್ರತಿಗಾಮಿಪಕ್ಷದ ಪತ್ರಿಕೆಯೊಂದರಲ್ಲಿ ಕಳೆದ ಹನ್ನೆರಡು ತಿಂಗಳಿಂದ ಪ್ರಕಟವಾಗುತ್ತಿದ್ದ ಅಭಿಪ್ರಾಯವನ್ನವನು ಓದಿದ್ದನು (ಕುಕಟು. ೨೨೪). [< ಸಂ. ಪ್ರತಿಗಾಮಿಪಕ್ಷ]

**ಪ್ರತಿಗೈ** (ಕ್ರಿ). ಪ್ರತಿಕ್ರಿಯೆಯನ್ನು ತೋರಿಸು. — ವ್ಯಕ್ತಪಡಿಸು: ಮೇಳೈಸಿ ನಾನಾರವಕ್ಕೆ ಪ್ರತಿಗೈವವಂ ಚರ್ಮಣಂ ವಾಗ್ಮಿಯಕ್ಕುಂ (ಚುಂಗಣ. ೦೦೬-೦೬). [ಪ್ರತಿ + ಗೈ (< ಕೆಯ್$_1$)]

**ಪ್ರತಿಗ್ರಹ** (ನಾ). ೧. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಮತ್ತು ಪ್ರತಿಗ್ರಹಗಳೆಂಬ ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದು; ದಾನವನ್ನು ತೆಗೆದುಕೊಳ್ಳುವುದು. — ಸ್ವೀಕರಿಸುವುದು: ಅಂತು ಭವಿಷ್ಯದ್ವಿಜನ್ಮವರ್ಗಕ್ಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ . . . ನಿಱಿಸಿ (ಆಪು. ೯-೬೩೪): ಎಮಗಂ ಪ್ರತಿಗ್ರಹ ಸಲ್ಲದು (ಹಕಣ. ೯-೬೬); ಕ್ಷತ್ರವೈಶ್ಯಾದಿಗಳು ಕೊಡುವರು ತತ್ಪ್ರತಿಗ್ರಹ ಯೋಗ್ಯವಲ (ಕುಮಾ.ಭಿ. ೭-೦೬). ೨. ಮತ್ತೊಬ್ಬರು ಕೊಟ್ಟುದನ್ನು ತೆಗೆದುಕೊಳ್ಳುವುದು. — ಸ್ವೀಕರಿಸುವುದು: ಪ್ರಾಚೀನ ಕಾಲದಲ್ಲಿ . . . ಪ್ರತಿಗ್ರಹಕ್ಕೇ ಪ್ರಾಶಸ್ತ್ಯವಿರಲಿಲ್ಲ (ಆರ್ಯ. ೮೩). ೩. ದಾನ; ಕೊಡುಗೆ. ೪. ದಾನವನ್ನು ಸ್ವೀಕರಿಸುವವನು. ೫. (ಒಬ್ಬ ವ್ಯಕ್ತಿಯನ್ನು) ಸ್ನೇಹಪೂರ್ವಕವಾಗಿ ಅಥವಾ ಕನಿಕರದಿಂದ ಬರಮಾಡಿಕೊಳ್ಳುವುದು. ೬. ಸೈನ್ಯದ ಹಿಂಭಾಗ: "ಪಡೆಯ ಹಿಂದಣ ಮಯ್ಯಲ್ಲಿಯುಂ ಪ್ರತಿಗ್ರಹವೆಂಬುದು" (ಹಲಾಯು. ೦೩೨-೬). ೭. ಉಗುಳುವ ಪಾತ್ರೆ; ಪೀಕದಾನಿ: 'ಪ್ರತಿಗ್ರಾಹ' ನೋಡಿ. [ಸಂ.]

**ಪ್ರತಿಗ್ರಹಿಸು** (ಕ್ರಿ). ೧. ದಾನವಾಗಿ ತೆಗೆದುಕೊಳ್ಳು: ಜಾತ್ಯಜರೆಲ್ಲರ್ ಕೊಳಗ ಮತ್ತವಿರ್ಬಳ್ಳ ರನ್ನವುಂ ಪೊನ್ನ ಹೇಱಂ ಚಿನ್ನಾಕಳಂ ಪ್ರತಿಗ್ರಹಿಸಿ ರಾವಣನಂ ಪರಸಿ ಬೀಳ್ಕೊಂಡರ್ (ರಾಮಾಕ. ೦೬೬-೦೩). ೨. ಒಪ್ಪಿಕೊಳ್ಳು; ಅಂಗೀಕರಿಸು: ಆ ರಾಜ ಋಷಿವಾಕ್ಯವಂ ಕೇಳಿ ಹಾಗೆ ಆಗಲಿ ಎಂದು ಪ್ರತಿಗ್ರಹಿಸಿದನು (ಕೆಲಸಮ. ೨೯೨-೬). ೩. ಬರಮಾಡಿಕೊಳ್ಳು; ಸ್ವೀಕರಿಸು: ಗರ್ಭಿಣಿಯಾದ ಸೀತೆಯನ್ನು ಧರ್ಮಾಚರಣಾರ್ಥವಾಗಿ ಪ್ರತಿಗ್ರಹಿಸುವುದು (ಶಾಸಂಕ. ೬೬-೯). [ಸಂ. ಪ್ರತಿಗ್ರಹಣ + —ಇಸು$_1$]

**ಪ್ರತಿಗ್ರಾಹ** (ನಾ). ಉಗುಳುವ ಪಾತ್ರೆ; ಪಡಿಗ; ಪೀಕದಾನಿ: "ಪ್ರತಿಗ್ರಾಹಃ, ಪತದ್ಗ್ರಹಃ — ೨ ಪಡಿಗದ ಪೆಸರು" (ಸಿದ್ಧಾಂ.ತಿ. ೨೦೦). [ಸಂ.]

**ಪ್ರತಿಗ್ರಾಹಕ** (ನಾ). ಅಂಗೀಕರಿಸುವವನು: ಪ್ರಾಣಲಿಂಗಪ್ರತಿಗ್ರಾಹಕನಾದ ಬಳಿಕ ಲಿಂಗವಿರಹಿತವಾಗಿ ನಡೆವ ಪರಿಯನ್ನೆಂತೊ (ಶಿತತ. ೭೯೬). [ಸಂ.]

**ಪ್ರತಿಘ** (ನಾ) ೧. ನಿರಾಕರಣೆ: ತಿರಸ್ಕಾರ. ೨. ಪ್ರತಿಭಟನೆ; ವಿರೋಧ. ೩. ಪರಸ್ಪರ ಹೊಡೆದಾಟ, — ಕದನ. ೪. ಸಿಟ್ಟು; ಕೋಪ; ಕ್ರೋಧ: "ಕೋಪ, ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ — ಈ ೫ ಮುನಿಸು" (ಹಲಾಯು. ೫೯-೨೦೬); ಆಸ್ಯದಿಂ ಪ್ರತಿಘದೊಳೊತ್ತಿ ಬೀಸುವುದದೊಂದು ಮದದ್ವಿರದಂ ಮಹಾಹಿಯಂ (ಜಗಣ. ೦೬-೬). ೫. ಶತ್ರು; ವೈರಿ. [ಸಂ.]

**ಪ್ರತಿಘಾತ** (ನಾ). ೧. ನಿರಾಕರಣೆ; ತಿರಸ್ಕಾರ. ೨. ವಿರೋಧ; ಪ್ರತಿಭಟನೆ. ೩. ಹೊಡೆತಕ್ಕೆ ಪ್ರತಿಯಾಗಿ ಹೊಡೆಯುವುದು: "ಪ್ರತಿಘಾತೇ — ಮಗುಳ್ಚಿ ಹೊಡೆವಲ್ಲಿ" (ಗಾಲ್ಯ. ೦೩೦); ಪ್ರತಿಘಾತ ಪ್ರಕಟಾಸ್ತ್ರಶಸ್ತ್ರಚಯದಿಂ ದೈತೇಯಸಾಮಂತರದ್ಭುತಮಾಯಾಮಯ ಶಕ್ತಿಯಂ ಕೆಡಿಸಿ ಧೂಮಮಾನಕ್ಕೆ ಬಂದಾಹವಪ್ರತಿಮಲ್ಲಂ . . . ಕ್ರೋಧಾನಳಂಗಿತ್ತನಾಹುತಿಯಂ (ಅಜಿಪು. ೦೪-೦೦); ಪ್ರತಿಘಾತಾಯತರೋಲಂಬಿಗಣ ರಣಜಂಕಾರಚಂಡಸ್ಯ ತಾತತಿ . . . ರಮ್ಯಮಾಯ್ತು (ಸೂಕ್ತಿಸು. ೦೪-೩೦). ೪. ಸಂಘರ್ಷ; ತಿಕ್ಕಾಟ: ಸಾವಿರಾರು ವರ್ಷಗಳಿಂದ ಭಾರತಕ್ಕೆ ನಾನಾ ಸಂಸ್ಕೃತಿಗಳು ಹರಿಯುತ್ತಿವೆ. ಕೆಲವು ತೀಕ್ಷ್ಣವಾದ ಪ್ರತಿಘಾತವನ್ನೂ ಉಂಟುಮಾಡಲು ಯತ್ನಿಸಿದವು (ಮುನ್ನುಡಿ. ೦೨೨ ಶಿ.೦೪). ೫. ಹೊಡೆತ; ಏಟು: ನಡುಗೆ ಧರಾತಲಂ ಕದಳಿಕಾಪರಿಘಪ್ರತಿಘಾತದಿಂ (ಹರಿಚ. ೦೩-೬೩). ೬. ಹೊಡೆತದಿಂದ ತಪ್ಪಿಸಿಕೊಳ್ಳುವುದು. ೭. ಹಾಳುಮಾಡುವುದು; ನಾಶಪಡಿಸುವುದು. ೮. [ಗಣಿತ] ಒಂದು ಬಗೆಯ ಗಣನಾಪದ್ಧತಿ; ಲಘುಗಣಕ: ಲೆಕ್ಕಾಚಾರ ಮಾಡುವುದನ್ನು ಸುಲಭಗೊಳಿಸಲು ಗುಣಾಕಾರ ಭಾಗಾಕಾರಗಳಿಗೆ ಬದಲಾಗಿ ಸಂಕಲನ ವ್ಯವಕಲನವನ್ನೂ, ಸಂಖ್ಯಾಘಾತ ಮತ್ತು ಘಾತಮೂಲವನ್ನೂ ಕಂಡುಹಿಡಿ

ಯುವುದಕ್ಕೆ ಬದಲಾಗಿ ಗುಣಾಕಾರ ಭಾಗಾಕಾರಗಳನ್ನೂ ಉಪಯೋಗಿಸುವಂತೆ ಕೋಷ್ಟಕವನ್ನು ರಚಿಸಿರುವ ಗಣನಾಸೌಲಭ್ಯ ಪದ್ಧತಿ : ಎರಡು ಬಹುಮುಖ್ಯವಾದ ಹೊಸ ಭಾವನೆಗಳು ಮೂಡಿದುವು . . . ಎರಡನೆಯದು, ಅಂಕಗಣಿತ ಬೀಜಗಣಿತಗಳೆರಡಕ್ಕೂ ವಿಶೇಷ ಉಪಯೋಗವಾದ Logarithms ("ಪ್ರತಿಘಾತಗಳು") ಎಂಬ ಭಾವನೆ (ಗಣಿತ. ೦೦೩). [ಸಂ.]

**ಪ್ರತಿಘಾತಕೋಷ್ಟಕ** (ನಾ). [ಗಣಿತ] ಲಘುಗಣಕದ ಪಟ್ಟಿ : ಪ್ರತಿಘಾತಕೋಷ್ಟಕಗಳೂ (tables of logarithms), ಕೊಟ್ಟ ಪ್ರತಿಘಾತವುಳ್ಳ ಸಂಖ್ಯೆಯ ಕೋಷ್ಟಕಗಳೂ . . . ಇದ್ದರೆ, ಇವುಗಳ ಸಹಾಯದಿಂದ ಅಂಕಗಣಿತದ ಪರಿಕರ್ಮಗಳು ಎಷ್ಟು ಸುಲಭವಾಗುತ್ತವೆ ಎಂಬುದನ್ನು ಉದಾಹರಿಸೋಣ (ಗಣಿತ. ೦೦೩). [ಪ್ರತಿಘಾತ+ಕೋಷ್ಟಕ]

**ಪ್ರತಿಘಾತನ** (ನಾ). ಕೊಲ್ಲುವಿಕೆ ; ವಧೆ : ''ಪ್ರಮಾಪಣಂ, ನಿಬರ್ಹಣಂ . . . ವಿಶಸನಂ, ಮಾರಣಂ, ಪ್ರತಿಘಾತನಂ . . . ವಧಃ—ಈ ೩೦ ಕೊಲ್ಲುವುದಕ್ಕೆ ಹೆಸರುಗಳು ; ಸಂಹಾರ ಮಾಡುವಿಕೆ" (ಅಭಿಧಾ. ೨೬೩). [ಸಂ.]

**ಪ್ರತಿಘೋಷ** (ನಾ). ಮಾರ್ದನಿ ; ಪ್ರತಿಧ್ವನಿ : ಕುವರನ ಬಾಹಾಸ್ಫಾಲನರವಮುರ್ದಿಸೆಯಗಿದು ಪಾಡಿ ಬಿಡದೊದದುತ್ತಿರ್ದವೊಲಾದುದು ತದ್ಗಹ್ವರನಿಪಹಪ್ರಭವಾತಿಭೀಷಣಂ ಪ್ರತಿಘೋಷಂ (ಶಂಖ್ಯ. ೩-೬೬). [ಸಂ.]

**ಪ್ರತಿಚಿತ್ರ** (ನಾ). ಮೂಲಚಿತ್ರದ ಪ್ರತಿಕೃತಿ : ಅವರು ರ್‍ಯಾಫೇಲ್, ಮೈಕೇಲ್‌ಏಂಜಲೊ . . . ಅವರ ಪ್ರತಿಬಿಂಬಗಳಾಗಿದ್ದರೆ ಜಗತ್ತು ಮೂಲಕೃತಿಗಳಿಗೆ ಗೌರವವೀಯುತ್ತಿತ್ತೇ ವಿನಾ ಪ್ರತಿಚಿತ್ರಗಳಿಗಲ್ಲ (ಕಾವ್ಯ. ೩೬೦). [ಸಂ.]

**ಪ್ರತಿಚ್ಛಂದ** (ನಾ). ೧. ಒಂದರಂತೆ ಮತ್ತೊಂದು ಇರುವುದು; ಪ್ರತಿಬಿಂಬ : "ಪ್ರತಿಬಿಂಬಂ, ಪ್ರತಿರೂಪಂ, ಪ್ರತಿಮಾನಂ, ಪ್ರತಿಕೃತಂ, ಪ್ರತಿಚ್ಛಂದಂ . . . ಪ್ರತಿಚ್ಛಾಯಂ—ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೫೦) ; ಶ್ರೀಮತಿಯಂ ಒರಸಿಯೊಳ್ ಕಳಾಭಿನೂತಚಂದ್ರಪ್ರತಿಚ್ಛಂದಂ ಚಂದ್ರನೆಂಬೊಂ ಮಗನಂ ಪಡೆದು ಸಂತಸದಿಂದಿರ್ಪಿನಂ (ಶಾಂತಿಪು. ೬-೩೦ ವ). ೨. ವಿಗ್ರಹ; ಪ್ರತಿಮೆ. ೩. ಪ್ರತಿನಿಧಿ. [ಸಂ.]

**ಪ್ರತಿಚ್ಛಂದತೆ** (ನಾ). ಸಮಾನವಾಗಿರುವಿಕೆ; ಪ್ರತಿರೂಪವಾಗಿರುವಿಕೆ: ಮುನೀಂದ್ರಕಳಾಪಕ್ಕೆ ನಿರ್ಮಿಚಿದಂ ಪ್ರತಿಚ್ಛಂದತೆಯಂ (ಶಾಂತಿಪು. ೯-೦೦೪). [ಸಂ. ಪ್ರತಿಚ್ಛಂದತಾ]

**ಪ್ರತಿಚ್ಛನ್ನ** (ಗು). ೧. ಮುಚ್ಚಿದ; ಹೊದಿಸಿದ. ೨. ಮುಚ್ಚಿಟ್ಟ; ಅಡಗಿಸಿದ ; ಮರೆಮಾಡಿದ. ೩. ಆವರಿಸಿದ ; ಆಕ್ರಮಿಸಿದ. ೪. (ಉಡುಪನ್ನು) ಧರಿಸಿದ; ತೊಟ್ಟ. [ಸಂ.]

**ಪ್ರತಿಚ್ಛಾಯ** (ನಾ). ೧.=ಪ್ರತಿಚ್ಛಾಯೆ ೧ : "ಪ್ರತಿಬಿಂಬಂ, ಪ್ರತಿರೂಪಂ . . . ಪ್ರತಿಯಾತನಂ, ಪ್ರತಿಚ್ಛಾಯಂ — ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೫೦). ೨.=ಪ್ರತಿಚ್ಛಾಯೆ ೨: "ಪ್ರತಿಬಿಂಬಮುಂ ಪ್ರತಿಚ್ಛಾಯಮುಂ ಪ್ರತಿನಿಧಿ . . . ಪ್ರತಿಪ್ರಣಮೋದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಶಬ್ದಮ. ೬-೩೬). [ಸಂ. ಪ್ರತಿಚ್ಛಾಯಾ]

**ಪ್ರತಿಚ್ಛಾಯೆ** (ನಾ). ೧.=ಪ್ರತಿಬಿಂಬ ೧: ಮಂಗಳಮಯಂ ನೋಡಿದಂ ವಿಷದ ವರಳವಂ ನೋಡಲದರೊಳ್ ಪ್ರತಿಚ್ಛಾಯೆ ತೋಱುತ್ತುಮಿರೆ (ಶಂಖ. ೦-೨೯). ೨. ಒಂದರಂತೆಯೇ ಒಂದು ಇರುವ ಆಕೃತಿ ; ಪ್ರತಿರೂಪ. ೩. ವಿಗ್ರಹ ; ಪ್ರತಿಮೆ : "ಪ್ರತಿಮಾನಂ . . . ಪ್ರತಿಚ್ಛಾಯಾ, ಪ್ರತಿಕೃತಿ, ಅರ್ಚಾ, ಪ್ರತಿನಿಧಿ—೮ ವಿಷ್ಣು ಮೊದಲಾದವರ ಆಕಾರಗಳಿಗೆ ಸಮನಾಗಿ ಶಿಲಾದಿಗಳಿಂದ ಮಾಡಿದ ಪ್ರತಿಮೆ ಹೆಸರು" (ಅಭಿಧಾ. ೩೦೭). [ಸಂ. ಪ್ರತಿಚ್ಛಾಯಾ]

**ಪ್ರತಿಜಾಗರ** (ನಾ). ಎಚ್ಚರಿಕೆಯಿಂದ ಇರುವುದು ; ಗಮನವಿಟ್ಟಿರುವುದು : "ಅವೇಕ್ಷಾ, ಪ್ರತಿಜಾಗರಃ—ಈ ಎರಡು ಎಚ್ಚತ್ತಿರ್ಪುದು" (ಹಲಾಯು. ೦೨೯-೯೬). [ಸಂ.]

**ಪ್ರತಿಜ್ಞಾಜಯ** (ನಾ). ಶಪಥವನ್ನು ಈಡೇರಿಸಿಕೊಳ್ಳುವುದು,—ಸಾಧಿಸುವುದು : ನಯನಿಕ್ಷೇಪಪ್ರಮಾಣಂಗಳೊಳೆ ಪಡೆದನೈಕಾಂತಸಿದ್ಧಿ ಪ್ರತಿಜ್ಞಾಜಯಮಂ (ಶಂಖ್ಯ. ೦-೪). [ಸಂ].

**ಪ್ರತಿಜ್ಞಾತ** (ನಾ). ೧. ಒಪ್ಪಿಕೊಂಡುದು ; ಅಂಗೀಕರಿಸಿದುದು. ೨. ವಾಗ್ದಾನ; ಭಾಷೆ. ೩. ಪ್ರತಿಜ್ಞೆ; ಶಪಥ. ೪. ಶಪಥ ಮಾಡಿದಂದು ; ಪ್ರತಿಜ್ಞೆ ಮಾಡಿದಂದು : "ಊರೀಕೃತಂ, ಉರರೀಕೃತಂ, ಅಂಗೀಕೃತಂ, ಆಶ್ರುತಂ,ಪ್ರತಿಜ್ಞಾತಂ . . . ಉಪಗತಂ—ಈ ೧೧ ಅಂಗೀಕರಿಸಲ್ಪಟ್ಟದ್ದು, ಒಪ್ಪಿಕೊಳ್ಳಲ್ಪಟ್ಟದ್ದು, ಪ್ರತಿಜ್ಞೆ ಮಾಡಿ ನುಡಿಯಲ್ಪಟ್ಟದ್ದು" (ಅಭಿಧಾ. ೩೬೨). [ಸಂ.]

**ಪ್ರತಿಜ್ಞಾನ** (ನಾ). ೧. ಒಪ್ಪಿಕೊಳ್ಳುವುದು; ಒಪ್ಪಿಗೆ ; ಅಂಗೀಕಾರ: "ಸಂವಿತ್, ಆಗೂಃ, ಪ್ರತಿಜ್ಞಾನಂ . . . ಸಮಾಧಿಃ—೧೦ ಅಂಗೀಕಾರದ ಹೆಸರುಗಳು" (ಅಭಿಧಾ. ೪೩). ೨. ಭರವಸೆ ; ವಾಗ್ದಾನ. ೩. ಪ್ರತಿಜ್ಞೆ; ಶಪಥ. [ಸಂ.]

**ಪ್ರತಿಜ್ಞಾಪತ್ರಿಕೆ** (ನಾ). [ರಾಜನೀ] ಚುನಾವಣೆಯ ಸಮಯದಲ್ಲಿ ರಾಜಕೀಯಪಕ್ಷಗಳು ತಾವು ಅಧಿಕಾರಕ್ಕೆ ಬಂದರೆ ಈಡೇರಿಸುವುದಾಗಿ ತಿಳಿಸುವ ಸೌಕರ್ಯಗಳ ಭರವಸೆಯ ಪಟ್ಟಿ : ಅನೇಕ ಮಂದಿ ಅಭ್ಯರ್ಥಿಗಳ ವಾಗ್ದತ್ತಗಳಲ್ಲಿ ಸಮಾನವಾಗಿರುವ ಅಂಶಗಳನ್ನು ಕಲೆಹಾಕಿದರೆ ಅದು ಒಂದು ನೂತನ ರಾಜಕೀಯಪಕ್ಷಕ್ಕೆ ಮೂಲಸೂತ್ರಸಂಗ್ರಹವಾಗುತ್ತದೆ. ಇಂಥ ಆದರ್ಶನಿರೂಪಣೆಯೇ (ಮ್ಯಾನಿಫೆಸ್ಟೊ) ಪಕ್ಷದ ಪ್ರತಿಜ್ಞಾಪತ್ರಿಕೆ (ರಾಜ್ಯಶಾ. ೬೩). [ಸಂ. ಪ್ರತಿಜ್ಞಾಪತ್ರಿಕಾ]

**ಪ್ರತಿಜ್ಞಾಭಾರ** (ನಾ). ಶಪಥದ ಹೊಣೆಗಾರಿಕೆಯನ್ನು ಹೊತ್ತವನು; ಪ್ರತಿಜ್ಞೆ ಮಾಡಿದವನು : ಕುರುರಾಜನಿರ್ವ್ಯಾಜನಿಬಿಡೋರುದ್ವಯಭಂಗಪ್ರತಿಜ್ಞಾಭಾರನುಂ . . . ಸಾಹಸಾಂಕನುಮೆನಿಸಿದ ಭೀಮಸೇನಂ (ಗದಾಯು. ೨-೦ ವ). [ಸಂ.]

**ಪ್ರತಿಜ್ಞಾರೂಢ** (ನಾ). ಶಪಥವನ್ನು ಕೈಗೊಂಡವನು ; ಪ್ರತಿಜ್ಞೆ ಮಾಡಿದವನು : ಅಚಲಿತಪ್ರತಿಜ್ಞಾರೂಢನಾದ ಗಾಂಗೇಯನನೇಗೆಯ್ದುಂ ಮೊಡಂಬಡಿಸಲಾಱದೆ (ಶಂಖಪು. ೦-೫೯ ವ) ; ಭೀಮಸೇನನಂತು ಆರೂಢಕೋಪನುಂ ಪ್ರತಿಜ್ಞಾರೂಢನುಮಾಗಿ (ಗದಾಯು. ೨-೦ ವ) ; ಅತಿಪ್ರತಿಜ್ಞಾರೂಢನುಂ ರಥಾರೂಢನುಮಾಗಿ . . . ವಂದಂ . . . ಸುವರ್ಣನಾಭಂ (ಶಂಖ್ಯ. ೦೦-೯೦ ವ). [ಸಂ.]

**ಪ್ರತಿಜ್ಞಾವಚನ** (ನಾ). ೧. ಶಪಥದ ಮಾತು. ೨. [ರಾಜನೀ] ರಾಷ್ಟ್ರಪತಿ, ಮುಖ್ಯಮಂತ್ರಿ ಮೊದಲಾದವರು ತಮ್ಮ ಹುದ್ದೆಯನ್ನು ವಹಿಸಿಕೊಳ್ಳುವುದಕ್ಕೆ ಪೂರ್ವಭಾವಿಯಾಗಿ ನಿಯಮಪೂರ್ವಕವಾಗಿ ಮಾಡಬೇಕಾದ ಪ್ರತಿಜ್ಞೆ : ಪ್ರತಿಯೊಬ್ಬರೂ ರಾಷ್ಟ್ರಪತಿಯವರೂ . . . ತಮ್ಮ ಪದಗ್ರಹಣ ಮಾಡುವುದಕ್ಕೆ ಪೂರ್ವಭಾವಿಯಾಗಿ . . . ಕೆಳಗೆ ಕಂಡ ಪ್ರಪತ್ರದ ಮೇರೆಗೆ ಪ್ರಮಾಣವಚನ ಅಥವಾ ಪ್ರತಿಜ್ಞಾವಚನ ಸ್ವೀಕಾರ ಮಾಡತಕ್ಕುದು (ಶಾಂತಿಕ. ೩೦). [ಸಂ.]

**ಪ್ರತಿಜ್ಞಾವಾಕ್ಯ** (ನಾ.) [ತರ್ಕಶಾ] ಶಾಸ್ತ್ರಗಳಲ್ಲಿ ವಾದ ಮಾಡುವಾಗ ಸ್ವಸಿದ್ಧಾಂತವನ್ನು ಪ್ರತಿಪಾದಿಸುವ ವಾಕ್ಯ,—ಮಾತು : ಬಳಿಕ ಆಯನುಮಾನಪ್ರಮಾಣಕ್ಕೆ ಪ್ರತಿಜ್ಞೆ ಹೇತು ದೃಷ್ಟಾಂತಗಳೆಂಬ ಅಂಗತ್ರಯ ಮುಂಟದರೊಳು ಪರ ಪ್ರತಿಪತ್ಯರ್ಥವಾಗಿ ಪ್ರಯೋಗಿಸುವಾಗ ಪರ್ವತ ವಗ್ನಿವುಳ್ಳದ್ದೆಂಬುವುದೇ ಪ್ರತಿಜ್ಞಾವಾಕ್ಯವು (ಚಿಕ. ೦೪). [ಸಂ.]

**ಪ್ರತಿಜ್ಞಾಸ್ಥಾಪನ** (ನಾ). ಮಾಡಿದ ಶಪಥವನ್ನು ಈಡೇರಿಸುವಿಕೆ :

ಕೋಪ ಕುಡಿಯಿಡಲೀ ವೃಕೋದರನಾವನಿತ ನುಡಿದನು ಪ್ರತಿಜ್ಞಾಸ್ಥಾಪನಕೆ ಬಳಿಕೀನ ಮಾಡುವುದೆಂದನಸುರಾರಿ (ಕುಭಾ.ಗ. ೯-೩೪). [ಸಂ.]

**ಪ್ರತಿಜ್ಞೆ** (ನಾ). ೧. ಒಪ್ಪಿಗೆ ; ಅಂಗೀಕಾರ ; ಸಮ್ಮತಿ. ೨. ಕ್ರಮಬದ್ಧವಾದ ಘೋಷಣೆ. ೩. (ವಿವಾಹ ಮುಂತಾದ ಸಂದರ್ಭಗಳಲ್ಲಿ) ಮಾಡುವ ವಾಗ್ದಾನ; ನಿಶ್ಚಿತಾರ್ಥ. ೪. ಶಪಥ; ಪಣ್ಕೆ: "ಆಗೂಃ, ಸಂಗರಃ, ಸಂಧಾ, ಪ್ರತಿಶ್ರವಃ, ಸಂಶ್ರವಃ, ಪ್ರತಿಜ್ಞಾ–ಈ ೬ ಪ್ರತಿಜ್ಞೆ" (ಕಶಾಉ. ೦೦೮–೩೦) ; ಪಣ್ದ ಪ್ರತಿಜ್ಞೆಯಂ ನೆನೆವಯೊ ನೆನೆಯೆಯೊ (ಕಶ್ಯಾಗಾ. ೦೨೩–೬) ; ನೀನಂ ನಿನ್ನ ಪ್ರತಿಜ್ಞೆಯಂ ನೆಱಪಿದೆಯಾನುಮೆನ್ನ ಪ್ರತಿಜ್ಞೆಯಂ ನೆಱಪುವೆಂ (ಹಂಕಶಾ. ೦೨–೦೫೬ ಪ). ೫. [ನ್ಯಾಯಶಾ] ಹಿಂದಿನ ಕಾಲದಲ್ಲಿ ನ್ಯಾಯಾಲಯಂಗಳಲ್ಲಿ ಫಿರ್ಯಾದಿಯು ನ್ಯಾಯ ಪಡೆಯಲು ನ್ಯಾಯಾಲಯಕ್ಕೆ ಸಲ್ಲಿಸುತ್ತಿದ್ದ ದೂರು; ಫಿರ್ಯಾದು: ಪ್ರತಿಯೊಂದು ವ್ಯವಹಾರವೂ ನಾಲ್ಕು ಹಂತಗಳನ್ನು ಹೊಂದಬೇಕಾಗಿತ್ತು. ಅವು ಕ್ರಮವಾಗಿ ಪ್ರತಿಜ್ಞಾ (Complaint), ಉತ್ತರ (Written Statement), ಸಂಶಯಹೇತುಪರಾಮರ್ಶ (Weighing of evidence) ಮತ್ತು ನಿರ್ಣಯಪ್ರಮಾಣ (Final Conclusion) ಎಂದು ವಿಭಾಗಿಸಲ್ಪಟ್ಟಿದ್ದವು (ಭಾರಅ. ೩೬). ೬. [ತರ್ಕಶಾ] ಅನುಮಾನಪ್ರಮಾಣದಲ್ಲಿ ಪ್ರಯೋಗಿಸುವ ಪ್ರತಿಜ್ಞಾ, ಹೇತು, ಉದಾಹರಣ, ಉಪನಯ ಮತ್ತು ನಿರ್ಗಮನ ಎಂಬ ಪಂಚಾವಯವಗಳಲ್ಲಿ ಮೊದಲನೆಯದು ; ಸಾಧಿಸಬೇಕೆಂದಿರುವ ವಿಷಯವನ್ನು ತಿಳಿಸುವುದು; ಸಾಧ್ಯನಿರ್ದೇಶ: ನ್ಯಾಯವಾಕ್ಯಗಳಾದ ಪ್ರತಿಜ್ಞಾಹೇತೂದಾಹರಣೋಪನಯನಿಗಮನಗಳಲ್ಲಿ ಐದೂ ಅವಶ್ಯಕವಿಲ್ಲ (ಹಿಂದಶಾ. ೨೦೨) ; ಪರಾರ್ಥಾನುಮಾನವು ಪ್ರತಿಜ್ಞಾ . . . ನಿಗಮನ ಎಂಬ ಐದು ಅಂಗವುಳ್ಳದ್ದು (ಭಾತತ್ತ್ವ. ೨೬೩). [ಸಂ. ಪ್ರತಿಜ್ಞಾ]

**ಪ್ರತಿಜ್ಞೆಗೆಯ್**, ಪ್ರತಿಜ್ಞೆಗೈ (ಕ್ರಿ). ಶಪಥ ಮಾಡು ; ಪ್ರತಿಜ್ಞೆ ಮಾಡು: ಇರ್ವರುಮೋರೊರ್ವರಂ ಮೊದಲಿಸಿ ಪ್ರತಿಜ್ಞೆಗೆಯ್ದು (ಕಶ್ಯಾಗಾ. ೦೨೯–೦೨); ಗಂಗಾಸುತಂ ಪೃಥಾಸುತರಂ ಗೆಲ್ದೊಡೆ ತಪಕೆ ಪೋಪೆಂ . . . ಎಂದು ಕರ್ಣಂ ಪ್ರತಿಜ್ಞೆಗೆಯ್ದುದುಂ (ಹಂಕಶಾ. ೦೦–೨೨ ಪ). **ಪ್ರತಿಜ್ಞೆಗೈ** : ಹಯಮೇಧವಿಧಿಯಂ ತನಗೆ ಸೂಚಿಸೆ ಪ್ರತಿಜ್ಞೆಗೈದಂ ಭೀಮನದಕಶ್ವಮಂ ತಾದು ಕುಡುವೆನೆಂದು (ಕೃಜಾಶ. ೨–೩೩). [ಪ್ರತಿಜ್ಞೆ + ಕೆಯ್$_1$]

**ಪ್ರತಿಜ್ಞೆಗೈ** 'ಪ್ರತಿಜ್ಞೆಗೆಯ್' ನೋ.

**ಪ್ರತಿಜ್ಯೋತಿ** (ನಾ). ಒಂದು ದೀಪದಿಂದ ಹತ್ತಿಸಿದ ಮತ್ತೊಂದು ದೀಪ : ದೀಪ ಒಂದಱಲ್ಲಿ ಉದ್ಭಸಿ ಪ್ರತಿಜ್ಯೋತಿ ಪ್ರಮಾಣಿಸಿದಾಗವೇ ಪ್ರಾಣಲಿಂಗಿಯ ಪ್ರಾಣಲಿಂಗಸ್ಥಲ (ಶೂಲಶಶಾ. ೦೪೬–೩೬೦). [ಸಂ. ಪ್ರತಿಜ್ಯೋತಿಸ್]

**ಪ್ರತಿಟ್ಟೆ** 'ಪದಿಟೆ' ನೋ.

**ಪ್ರತಿಟ್ಟೆಗೆಯ್** 'ಪದಿಟೆಗೆಯ್' ನೋ.

**ಪ್ರತಿಟ್ಟೆಗೆಯಿಸು** 'ಪದಿಪ್ಪೆಗೆಯ್ಸು' ನೋ.

**ಪ್ರತಿತೂನಿ** (ನಾ). ಒಂದು ಬಗೆಯ ವಾಯುರೋಗ : ಅಪಾನಪ್ರದೇಶದಿಂದ ಪಕ್ವಾಶಯಕ್ಕೆ ಮೇಲು ಮುಖವಾಗಿ ಹಾಯುವ ವೇದನೆಯನ್ನುಂಟು ಮಾಡುವ ವಾಯು ಪ್ರತಿತೂನಿ ಎನಿಸಿಕೊಂಬುದು (ಕೃದ್ಯಶಾ. I, ೩೨೩). 'ತೂನಿ' ಪರಾ. [< ಸಂ. ಪ್ರತಿತೂಣಿ./ತೆಲು. ಪ್ರತಿತೂಣಿ]

**ಪ್ರತಿದಿನ** (ನಾ). ೧. ಪ್ರತಿನಿತ್ಯ : ಪ್ರತಿದಿವಸ : ಆತ್ಮಪತಿಸೇವೆಯುಂ ಪ್ರತಿದಿನದೊಳಲಸದೆ ನೆಗಳ್ದೊಡೆ ಸತಿಯರ್ಗೆ ಕೀರ್ತಿ ಸುಗತಿಗಳಪ್ಪುವಿಹಪರದೊಳು (ಕೃಜಾಶ. ೩–೬೨) ; ಪ್ರತಿದಿನದೊಳವಿಾ ಮರಿಯೆಸಗುತಿರೆ ಯುಪಕ್ರಾಂತಮೇಕಮುಪಸಂಹೃತಿಯಾಗಿ ಪೂರ್ತಿಯಿಲ್ಲದನಿತಱಿಂ ಪೂಸಲೆ ವೇಳ್ಕುಮಿನ್ನೆಂತಾನುಂ (ಐಕ್ಯಶ. ೯–೨೬). [ಸಂ.]

**ಪ್ರತಿದಿನಂ** (ಅ). ಪ್ರತಿನಿತ್ಯದಲ್ಲೂ ; ನಿತ್ಯವೂ : ಪ್ರತಿದಿನಮಭ್ಯಾಸಚಮತ್ಕೃತಿಯಂ . . . ಮಾಡುತ್ತುಮಿರ್ಪನಾ ಕಂದರ್ಪಂ (ಕುಸುಶಾ. ೬–೬೩) : ಪ್ರತಿದಿನಮಿಾ ತೆಱದಿಂ ಸನ್ನುತಮಹಿಮಂ . . . ಮೃಗಯಾವಿನೋದಮಂ ತಳೆದೆಸೆದಂ (ಕೃಶಃ. ೨೨–೪೦). [ಸಂ.]

**ಪ್ರತಿದಿವಸ** (ನಾ).–ಪ್ರತಿದಿನ : ಅವನು ಪ್ರತಿದಿವಸವೂ ಒಂದೊಂದು ಮೈಲಿ ದೂರವನ್ನು ನಡೆಯುತ್ತಾನೆ (ಕಹಿ). [ಸಂ.]

**ಪ್ರತಿದಿವಸಂ** (ಅ).–ಪ್ರತಿದಿನಂ : ಆ ಕೂಟಾಷ್ಟಕದೊಳ್ ಪ್ರತಿದಿವಸಂ ರಮಿಯಿಪ ದೇವತೆಗಳ್ ಸುಪ್ರಣಿಧಿ . . . ಸುತಸುಸ್ಥಿತೆ ಸುಪ್ರಬುದ್ಧೆ ಚಿತ್ರಿಕೆಯೆಂಬಳ್ (ಶಾಂತಿಪು. ೯–೦೬೬). [ಸಂ.]

**ಪ್ರತಿದೇಯ** (ನಾ). ೧. ಹಿಂದಕ್ಕೆ ಕೊಡಬೇಕಾದುದು ; ಮರುಪಾವತಿ ಮಾಡಬೇಕಾದುದು. ೨. ಒತ್ತೆಯಿಟ್ಟ ವಸ್ತು ; ಗಿರವಿಯಿಟ್ಟ ಪದಾರ್ಥ. ೩. ಕೊಂಡ ಮೇಲೆ ಪುನಃ ಹಿಂತಿರುಗಿಸಿದ ವಸ್ತು. [ಸಂ.]

**ಪ್ರತಿದೋಱು** (ಕ್ರಿ). ೧. (ಮಾಡಿದ ಉಪಕಾರ ಅಥವಾ ಅಪಕಾರಕ್ಕೆ) ಪ್ರತಿಯಾಗಿ ಮಾಡಿ ತೋರಿಸು : ದುರುಳನರನ ಕೊಲುವುದಿಂತೇನದಿದ ಮೂದಲಿಸಿದ ಬಳಿಕ್ಕೀ ಧರಣಿಯೊಳ್ ಪ್ರತಿದೋಱದಿದ್ದಡೆ ಪಥವಿದಲ್ಲಲ್ಲ (ಜಕಪು. ೯೯–೦೩). ೨. ಹೋಲಿಸು; ಪಡಿಯಿಡು : ರತಿಯೂರ್ವಶಿ ರಂಭೆ ಮೇನಕೆಯರ ನೆಱ ಪ್ರತಿದೋಱಲಿವಳ ಚೆಲ್ವಿಕೆಗೆ ಮತಿಗೆ ಮಾಗಲ್ಕೆ ಚದುರತೆಗೆಣೆಯಲ್ಲ (ಹಂಶಕ. ೯–೦೭). [ಪ್ರತಿ + ತೋಱು]

**ಪ್ರತಿದ್ವಂದ್ವಿ** (ನಾ). ಹಗೆ ; ವಿರೋಧಿ; ಶತ್ರು : ಇಂತಹ ಪ್ರಬಲಪ್ರತಿದ್ವಂದ್ವಿಯನ್ನು ಜಯಿಸಿದರಲ್ಲವೇ ನನ್ನ ಹೆಸರು ಉಳಿಯುವುದು (ರಾಜಶ. ೩೨). [ಸಂ. ಪ್ರತಿದ್ವಂದ್ವಿನ್]

**ಪ್ರತಿಧ್ವನಿ** (ನಾ). ಶಬ್ದ ತರಂಗಗಳ ಪ್ರತಿಫಲನದಿಂದ ಉಂಟಾಗುವ ಮರುದನಿ.–ಪಡಿನುಡಿ.–ಹೊಳಲು : ನೃಪನೀತಿಶಾಸ್ತ್ರಮಂ ನೀನ ಪೂರ್ವಮಂ ನುಡಿಯೆ ನುಡಿಯೆ ಮತ್ತದನನುವರ್ತಿಪನ ನುಡಿಗಳ್ ಪ್ರತಿಧ್ವನಿಯ ಪೋಲ್ವೆಗಳ್ ನಿನ್ನ ನುಡಿಗೆ ಸಮನಾದವುವೇ (ಶಾಂತಿಪು. ೨–೩೬); ನಿಧಾನವಾಗಿ ಕಾಡಿನಲ್ಲಿ ಧ್ವನಿಯಾಗುತ್ತಾ ಮತ್ತೆ ಪ್ರತಿಧ್ವನಿಯಾಗುತ್ತಾ ದೂರದೂರದಲ್ಲಿ ಆ ಧ್ವನಿ ಸುರುಳಿಸುರುಳಿಯಾಗಿ ಕೇಳಿಸಿತು (ಸುಲಿಶಾ. ೦೦೦); ಪ್ರತಿಫಲಿತವಾದ ಶಬ್ದವು ಮೂಲದಿಂದ ಬಂದ ಶಬ್ದದಿಂದ ಪ್ರತ್ಯೇಕವಾಗಿ ಕೇಳಿದರೆ ಅದಕ್ಕೆ ಪ್ರತಿಧ್ವನಿ (Echo) ಯೆಂದು ಹೆಸರು (ಭೌತಶ. ೦೪೬). [ಸಂ.]

**ಪ್ರತಿಧ್ವನಿತ** (ಗು). ೧. ಮೊರ್ದನಿಗೊಂಡ. ೨. ಮಾರ್ದನಿಯಂತಿರುವ: ಪಾಶ್ಚಾತ್ಯರ ಎಷ್ಟೋ ಪ್ರತಿಧ್ವನಿತ ಅಭಿಪ್ರಾಯಗಳಂತೆ ಈ ಅಭಿಪ್ರಾಯವೂ ತಪ್ಪಾದುದು (ಹಿಂದಶಾ. ೩೬೦). [ಸಂ.]

**ಪ್ರತಿಧ್ವನಿಸು** (ಕ್ರಿ). ೧. ಪ್ರತಿಧ್ವನಿಯನ್ನುಂಟುಮಾಡು ; ಮಾರ್ದನಿಯನ್ನು ಕೊಡು; ಹೊಳಲುಕೊಡು: ಕಾಲೇಜಿನ ಕುರಿತಾದ ಮಾತುಕತೆ ಇಡೀ ಮನೆಯಲ್ಲಿ ಪ್ರತಿಧ್ವನಿಸಿತೋ ಎಂಬಂತೆ ಶ್ರೀಧರನಿಗೆ ವಸಂತರಾಯರಿಂದ ಕರೆ ಬಂತು (ಭಾಕ್ಯ. ೯೩); ಕೇರಿಯ ಗೋಡೆಗೋಡೆಯಲ್ಲೂ ಆ ಮನೆಯ ಬಗ್ಗೆ ಪಿಸುಮಾತಿನ ಗುಲ್ಲು ಪ್ರತಿಧ್ವನಿಸುತ್ತಿದೆ (ಕಕೃಶ. ೦೩೪). ೨. ಮೂಡು ; ಉಂಟಾಗು : ಮಕ್ಕಳ ಸಂತೋಷ ತಾಯಿಯ ಎದೆಯಲ್ಲೂ ಅಸ್ಪಷ್ಟವಾಗಿ ಪ್ರತಿಧ್ವನಿಸದಿರಲಿಲ್ಲ (ಹಂಗಶ. ೦೩೬). ೩. ಇನ್ನೊಬ್ಬರು ಹೇಳಿದುದನ್ನು ಮತ್ತೊಮ್ಮೆ ಹೇಳು ; ಇನ್ನೊಬ್ಬರ ಮಾತನ್ನು ಪುನರುಚ್ಚರಿಸು : 'ಗ್ರೀನ'ರು ಪುನರ್ಜನ್ಮವನ್ನು ಕುರಿತು ಬೈಬಲ್ಲಿನ ಒಂದು ಮಾತನ್ನು ಒದಲು . . . ಜನಕ್ಕೆ ಹೇಳಿದರು. ಈ ಸಂಗತಿ ಭಗವದ್ಗೀತೆಯ ಕೆಳಗಿನ ಮಾತನ್ನು ಪ್ರತಿಧ್ವನಿಸುತ್ತದೆ (ರರ್ಜಾಶಾ. ೦೪೬). [ಪ್ರತಿಧ್ವನಿ + — ಇಸು$_1$]

**ಪ್ರತಿಧ್ವಾನ** (ನಾ). = ಪ್ರತಿಧ್ವನಿ : ಯುವತಿಯರೋರೊರ್ವರ ತಲೆನವಿರಂ ತಲೆನವಿರೊಳಡಸಿ ಕಟ್ಟುತ್ತಂ ಮೋದುವುದುಂ ದ್ವಿಗುಣಿಸಿದುದು ಹಾರವಂ ಪ್ರತಿಧ್ವಾನದಿಂ ಜಿನೇಂದ್ರಾಲಯದೊಳ್ (ಶಂರಾಚ. ೦೪-೦೦೦). [ಸಂ.]

**ಪ್ರತಿನಾದ** (ನಾ). = ಪ್ರತಿಧ್ವನಿ : ಭೂಚರಖೇಚರವಂದನಾಸಂದರರವ ಪ್ರತಿನಾದಮುಂ. . . ಕರಮೊಪ್ಪೆ (ಶಾಂತಿಪು. ೦೩-೦೪ ಗ). [ಸಂ.]

**ಪ್ರತಿನಾದಿತ** (ನಾ). ಪ್ರತಿಧ್ವನಿಯುಳ್ಳದು ; ಮಾರ್ದನಿಗೊಂಡಿರುವುದು : ದುಮುಕುತಿದೆ ಆ ತಪೋವನದ ಸೀಮೆಯೊಳೊಂದು ನಿರ್ಝರಿಣಿ . . . ಘೋಷದೋಂಕೃತಿಗೆ ಪರ್ವತಾರಣ್ಯಮುಂ ಪ್ರತಿನಾದಿತಂ ಮಾಡಿ (ಶ್ರೀರಾಚ.೦೩೨-೫೦೭). [ಸಂ.]

**ಪ್ರತಿನಾಮ** (ನಾ). ಒಂದು ಊರು ಅಥವಾ ಒಬ್ಬ ವ್ಯಕ್ತಿಗೆ ಇಟ್ಟಿರುವ ಮತ್ತೊಂದು ಹೆಸರು ; ಅಡ್ಡಹೆಸರು : ವರದನದೀತೀರದ ಪದಿರಾಪುರ ಗ್ರಾಮ ೧ಕ್ಕೆ ಪ್ರತಿನಾಮವಾದ ನಾರಸಿಂಹಪುರವೆಂಬ ಸರ್ವಮಾ(ಂ)ನ್ಯದ ಅಗ್ರಹಾರದಲ್ಲಿ (ಶಾಇ. XX. ೨೪೦-೨೦; 1671); ಎಚಿಗಂಗನ ಶಿವಮಾರನ ಮಾಂಡಲಿಕನೋ ಆ ಪ್ರತಿನಾಮವುಳ್ಳ ಶಿವಮಾರನೋ ಎಂಬುದಾದರೂ ಸ್ಪಷ್ಟವಿಲ್ಲ (ಕರ್ನಾಟ. ೦೩೩). [ಸಂ. ಪ್ರತಿನಾಮನ್]

**ಪ್ರತಿನಾಯಕ** (ನಾ). [ಕಾವ್ಯಮೀ] ಕಾವ್ಯ ನಾಟಕಾದಿಗಳಲ್ಲಿ ಕಥಾನಾಯಕನನ್ನು ವಿರೋಧಿಸುವ ಅಥವಾ ನಾಯಕನು ಪಡೆಯಲಿರುವ ಫಲಪ್ರಾಪ್ತಿಗಾಗಿ ಸ್ಪರ್ಧಿಸುವ ಪುರುಷಪಾತ್ರ : ದುರ್ಯೋಧನನು ಮಹಾಭಾರತದಲ್ಲಿ ಪ್ರತಿನಾಯಕ (ಜೂ). [ಸಂ.]

**ಪ್ರತಿನಾಯಿಕೆ** (ನಾ). [ಕಾವ್ಯಮೀ] ಕಾವ್ಯ ನಾಟಕಾದಿಗಳಲ್ಲಿ ಕಥಾನಾಯಿಕೆಯನ್ನು ವಿರೋಧಿಸುವ ಅಥವಾ ನಾಯಿಕೆಯು ಪಡೆಯಲಿರುವ ಫಲಪ್ರಾಪ್ತಿಗಾಗಿ ಸ್ಪರ್ಧಿಸುವ ಸ್ತ್ರೀಪಾತ್ರ : ನಾಯಿಕೆ ಅಸಿಲತೆ ನಾಯಕ ಭೂಪತಿ ಧುರವೆ ಅಂತಃಪುರ ಕೇಳು ಸಮ್ಮುಖಿಯಾದರು ವೈರಿವಾಹಿನಿ ಪ್ರತಿನಾಯಿಕೆ ಮೊಗದಿರುಹಿದಳು (ಜೈಮಿನಿ. ೦೪೨-೦೦). [ಸಂ. ಪ್ರತಿನಾಯಿಕಾ]

**ಪ್ರತಿನಾರಾಯಣ** (ನಾ). [ಜೈನ] ಅರುವತ್ತುಮೂವರು ಶಲಾಕಾಪುರುಷರಲ್ಲಿ ಒಂದು ವರ್ಗಕ್ಕೆ ಸೇರಿದವನು; ನಾರಾಯಣನ ಪ್ರತಿನಾಯಕ; ಪ್ರತಿವಾಸುದೇವ; ☞ ಅಶ್ವಗ್ರೀವ, ತಾರಕ, ಮೇರಕ, ನಿಶುಂಭ, ಮಧುಕೈಟಭ, ಬಲಿ, ಪ್ರಹರಣ, ರಾವಣ ಮತ್ತು ಜರಾಸಂಧ ಎಂದು ಇವರು ಒಂಬತ್ತು ಜನ ಇರುವವರು. [ಸಂ.]

**ಪ್ರತಿನಿತ್ಯ₁** (ನಾ). ಪ್ರತಿದಿವಸ; ಎಲ್ಲಾ ದಿವಸ : ಸುತ್ತಮುತ್ತ ಎಲ್ಲಿ ನೋಡಿದರೂ ಪ್ರತಿನಿತ್ಯವೂ ಯಾವುದೋ ಒಂದು ಅಕ್ರಮ. . . ಅವರ ಕಣ್ಣಿಗೆ ಬೀಳುತ್ತಿರುತ್ತದೆ (ಅಕ್ಕಗ. ೨೪೩). [ಸಂ.]

**ಪ್ರತಿನಿತ್ಯ₂** (ಅ). ಪ್ರತಿದಿನವೂ; ಎಲ್ಲಾ ದಿವಸವೂ : ಅವರು ಪ್ರತಿನಿತ್ಯ ನಮ್ಮ ಮನೆಗೆ ಬರುತ್ತಾರೆ (ಜೂ). [ಸಂ. ಪ್ರತಿನಿತ್ಯಂ]

**ಪ್ರತಿನಿಧಾನ** (ನಾ). ಒಂದಕ್ಕೆ ಬದಲಾಗಿ ಮತ್ತೊಂದನ್ನು ಇರಿಸುವುದು : ಸುತಸಂಪ್ರದಾನರೂಢಂ ಚತುರ್ಥಿಯದು . . . ಪ್ರತಿನಿಧಾನದೊಳವಿಷ್ಟದೊಳಂ (ಶಬ್ದ. ೦೩೦) ; ಪ್ರತಿನಿಧಾನದೊಳಂ=ಪ್ರತಿನಿಧಿಯಲ್ಲಿಯುಂ (ಶಬ್ದ. ೦೩೦ ಟೀಕು). [ಸಂ.]

**ಪ್ರತಿನಿಧಿ** (ನಾ) .೧. ಪ್ರತಿಬಿಂಬ; ಪ್ರತಿರೂಪ : "ಪ್ರತಿಬಿಂಬಂ. ಪ್ರತಿರೂಪಂ . . . ಪ್ರತಿನಿಧಿಃ, ಪ್ರತಿಯಾತನಂ, ಪ್ರತಿಚ್ಛಾಯಂ - ಈ ೯ ಪ್ರತಿಬಿಂಬದ ಪೆಸರ್" (ಹಲಾಯು. ೨೦-೦೩೦). ೨. ಒಂದಕ್ಕೆ ಬದಲಾಗಿರುವಂಥದು. ೩. ಒಂದು ರಾಷ್ಟ್ರದ ಅಥವಾ ರಾಜನ ಪರವಾಗಿ ಅಧಿಕಾರವನ್ನು ನಿರ್ವಹಿಸುವ ಅಧಿಕಾರಿ : ಆವೇದನ ಪತ್ರವನ್ನು ತತ್ಕಾಲದಲ್ಲಿ ತಾನು ವಾಸ ಮಾಡುತ್ತಿರುವ ದೇಶದಲ್ಲಿರುವ ಭಾರತದ ರಾಜ್ಯವ್ಯವಹಾರ ಅಥವಾ ವಾಣಿಜ್ಯವ್ಯವಹಾರ ಪ್ರತಿನಿಧಿಗೆ . . . ಕೊಟ್ಟು ಆ ಪ್ರತಿನಿಧಿಯಿಂದ ತನ್ನ ಹೆಸರನ್ನು ರಿಜಿಸ್ಟರು ಮಾಡಿಸಿಕೊಂಡಿದ್ದ ಪಕ್ಷದಲ್ಲಿ ಆತನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕುದು (ಭಾಸಂ. ೬). ೪. ಒಂದು ಸಂಸ್ಥೆ ಅಥವಾ ವ್ಯಕ್ತಿಯ ಪರವಾಗಿ ವ್ಯವಹಾರ ನಡೆಸುವವನು : ತಾವು ತಯಾರು ಮಾಡಿದ ಪದಾರ್ಥಗಳನ್ನೆಲ್ಲ . . . ಸ್ವತಂತ್ರವಾಗಿಯೂ ತಮ್ಮ ಪ್ರತಿನಿಧಿಗಳ ಮೂಲಕವೂ ಮಾರಿಸಿ, ಬಂದ ಲಾಭವನ್ನು ತಾವೇ ಹಂಚಿಕೊಳ್ಳುವುದು (ಅರ್ಥ.೦೩೩). ೫. ಜಾಮೀನು. [ಸಂ.]

**ಪ್ರತಿನಿಧಿತ್ವ** (ನಾ). (ವಿಧಾನಸಭೆ ಮೊದಲಾದುವುಗಳ) ಪ್ರತಿನಿಧಿಯಾಗಿರುವಿಕೆ ; ಚುನಾಯಿತ ಸದಸ್ಯತ್ವ : ವಿಧಾನಮಂಡಲಗಳಲ್ಲಿಯ ಅಥವಾ ಸಂಸತ್ತಿನಲ್ಲಿಯ ಪ್ರತಿನಿಧಿತ್ವದ ವಿಚಾರವಾದ ಉಪಬಂಧಗಳೂ ಸೇರಿ . . . ಅಡಕವಾಗಿರಬಹುದು (ಭಾಸಂ.೪). [ಸಂ.]

**ಪ್ರತಿನಿಧಿಸು** (ಕ್ರಿ). ೧. (ವ್ಯಕ್ತಿ, ಭಾವನೆ, ನಿರೂಪಣೆ ಮುಂತಾದ ವಿಚಾರಗಳಲ್ಲಿ) ಒಂದರ ಬದಲು ಮತ್ತೊಂದು ಇರು : ವಿಭೀಷಣ, ಆಂಜನೇಯ - ಮೊದಲಾದ ಪಾತ್ರಗಳನ್ನು ಪ್ರತಿನಿಧಿಸುವವರ ವಾಕ್ಚಾತುರ್ಯ, ಕುಣಿತಲ್ಲೇ ಅವರು ಮಾಡುವ ಅಭಿನಯ . . . ಇವುಗಳನ್ನು ನೋಡಿ, ಕೇಳಿ ಮೋಹಗೊಂಡು (ಯಕ್ಷಗಾ. ೦೬); ಚೌಗಾಲದಲ್ಲಿ ಈ ಜಟಿಯು ನೃತ್ಯವನ್ನಾಡುತ್ತಾರೆ. ಪ್ರೇಮವನ್ನು ಪ್ರತಿನಿಧಿಸುವುದೇ ಇದರ ತತ್ವ (ಭಾರಣ. ೬೬); ಮೋಳದವರು . . . ಪ್ರಕೃತಿಯ ಪರಿತಾಪವನ್ನು ಪ್ರತಿನಿಧಿಸುತ್ತಾರೆ, ಪ್ರತಿಧ್ವನಿಸುತ್ತಾರೆ (ಅತ್ರಿ.XXXI ಶಾಲಿಕ ಶಬ್ದ). ೨. ತಿಳಿಸು; ಸ್ಪಷ್ಟಪಡಿಸು; ಅಭಿವ್ಯಕ್ತಗೊಳಿಸು: ಅನುಭವ, ಭಾವನೆ, ಸನ್ನಿವೇಶ, ಸಂಬಂಧ, ಅನುಮೇಯ, ನಿರ್ಣಯ ಇತ್ಯಾದಿ ಅಂಶಗಳನ್ನು ಸರಿಯಾದ ಪಾರಿಭಾಷಿಕಪದಗಳಿಂದ ಪ್ರತಿನಿಧಿಸಬೇಕು (ಶಿಕ್ಷಣ. VI. ಜುಬ್ಲು). ೩. ಒಬ್ಬರ ಪರವಾಗಿ ಕಾರ್ಯವನ್ನು ನಿರ್ವಹಿಸು ; ಪ್ರತಿನಿಧಿಯಾಗಿರು : ನಾನು ಮನವಿದಾರನನ್ನು ಪ್ರತಿನಿಧಿಸುತ್ತೇನೆ (ಜೂ). [ಪ್ರತಿನಿಧಿ + -ಇಸು]

**ಪ್ರತಿನಿಯತ** (ಗು). ೧. ಮೊದಲೇ ಗೊತ್ತು ಮಾಡಿದ,-ತೀರ್ಮಾನಿಸಿದ. ೨. ವ್ಯತ್ಯಾಸವಾಗದಿರುವ ; ಬದಲಾಗದ : ನಿಗೂಢಚತುರ್ಥಂ ಪ್ರತಿನಿಯತಗತಪ್ರತ್ಯಾಗತಂ ದಲೆಂದಿಂತು ಪೆಜಿವುಮಷ್ಟಂ ಚಿತ್ರಂ (ಕಾವ್ಯಾ. ೩೬೭); ಪ್ರತಿನಿಯತಸ್ಥಾಯಿಭಾವವಿವು ತಾಮಕ್ಕುಂ (ಕಾವ್ಯಾ. ೬೪೪). [ಸಂ.]

**ಪ್ರತಿನಿರ್ಯಾತನ** (ನಾ). ೧. ನ್ಯಾಸವನ್ನು ಅದರ ಯಜಮಾನನಿಗೆ ಮರಳಿ ಒಪ್ಪಿಸುವುದು. ೨. ಸೇಡು ತೀರಿಸಿಕೊಳ್ಳುವುದು : "ಪ್ರತಿನಿರ್ಯಾತನವೆಂಬುದು ಮುಯ್ಯಂ ಮಗುಟ್ಟುವುದು" (ಹಲಾಯು. ೦೨೬-೮೦). ೩. ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು.[ಸಂ.]

**ಪ್ರತಿನೃಪ** (ನಾ). ಎದುರಾಳಿಯಾದ ಅರಸು; ಶತ್ರುರಾಜ : ಪ್ರತಿಕೂಲದೈವನ್ನೆ ನೀಂ ಪ್ರತಿನೃಪರನುಕೂಲದೈವರ್ (ಗದಾಯು. ೩-೪೫). [ಸಂ.]

**ಪ್ರತಿಪಕ್ಷ** (ನಾ). ೧. ಶತ್ರುಪಕ್ಷ: ವೈರಿವರ್ಗ : ಪ್ರತಿಪಕ್ಷಕ್ಷೋಣಿಪಾಳಪ್ರಕರಹೃದಯಶೂಲೋಪಮಸ್ಥೂಳಶಾತಾಯತಕುಂತನ್ಯಸ್ತಹಸ್ತಂ . . . ಈ ಸೈನ್ಯಮಾಂಧ್ರಾ (ಚಾವುಂಡ. ೦೦-೩೩); ಪ್ರತಿಪಕ್ಷೋರ್ವೀಶವಂಶಕ್ಷಿತಿರುಹತತಿಯಂ ಕಿಟ್ಟು ಬೇರಿಂದೆ (ಕೃಷ್ಣ.೭-೨೪); ಪ್ರತಿಪಕ್ಷಕ್ಷತ್ರಿಯ ಪ್ರಾಕ್ತನನಿಖಿಳಧರಾಕೋಶಸೇನಾಚಯಸ್ವೀಕೃತನುದ್ಯದ್ಧಾರ್ಮಿಕಂ . . . ಋತುಪರ್ಣಂ (ಪಳಂ. ೬೩೭). ೨. ಹಗೆ; ಶತ್ರು : "ಅಭಿಯಾತಿಃ, ಅರಾತಿಃ, ಅಮಿತ್ರಂ, ರಿಪುಃ, ಪ್ರತಿಪಕ್ಷಃ . . . ದ್ವಿಷತ್ — ಈ ೨೪ ಹಗೆ" (ಹಲಾಯು. ೬೩-೩೦೦) : ಪ್ರತಿಪಕ್ಷಮುಂಟೆ ಲಂಕಾಪತಿಗಣುಮಂ ರಾವಣಂಗಿದಿರ್ಚುವನೆ (ಶಂರಾಚ. ೦೦-೦೩೮) ; ಕೋಪನಪ್ರತಿಪಕ್ಷಗುಲನಿರ್ವಾಪಣೈಕಸಮರ್ಥ ಎನುತಭಿರೂಪನನು ಹೊಗ

ಳಿದರು ವಂದಿಗಳು (ಶುಭ್ಯಾಗ. ೬-೨೯). ೩. ವಿಧಾನಸಭೆ, ಚುನಾವಣೆ, ಚರ್ಚಾಕೂಟ, ಮೊದಲಾದಂವುಗಳಲ್ಲಿ ಇರುವ ವಿರೋಧ ಪಕ್ಷ; ಒಂದು ಪಕ್ಷದವರು ಹೇಳಿದ ಅಭಿಪ್ರಾಯವನ್ನು ಖಂಡಿಸುವ ಮತ್ತೊಂದು ಪಕ್ಷ: ಪ್ರತಿಪಕ್ಷದಲ್ಲಿ ಆವನು ಬಹಳ ಚೆನ್ನಾಗಿ ಮಾತನಾಡಿದನು (ಊಹೆ). [ಸಂ.]

**ಪ್ರತಿಪಕ್ಷಿ** (ನಾ). ವಿರೋಧಪಕ್ಷದವನು; ವೈರಿ; ಶತ್ರು: ಇಬ್ಬರೂ ಪ್ರತಿಪಕ್ಷಿಗಳು ಈ ವಿಚಾರದಲ್ಲಿ ತಾಕಲಾಟದಲ್ಲಿದ್ದಾರೆ (ಜಯಾ. ೦೧೯); ಅರ್ಜುನನಿಗೆ ಕರ್ಣನು ಪ್ರತಿಪಕ್ಷಿಯರಬಹುದು (ಸಾಹಿ. ೩೦). [ಸಂ. ಪ್ರತಿಪಕ್ಷಿನ್]

**ಪ್ರತಿಪತ್ತಿ** (ನಾ). ೧. ಪಡೆಯುವುದು; ಪ್ರಾಪ್ತಿ. ೨. ಅರಿವು; ಜ್ಞಾನ; ತಿಳಿವಳಿಕೆ: ಬಹುತ್ವನಿರ್ದೇಶಂ ವ್ಯಾಖ್ಯಾತೃಭೇದಪ್ರತಿಪತ್ತ್ಯರ್ಥ ಮಾಡುದು (ಶಶಶ. ೨೩೨). ೩. ನಿರ್ಣಯ; ನಿರ್ಧಾರ. ೪. ಜಾಣ್ಮೆ; ಬುದ್ಧಿಮತ್ತೆ: "ಪ್ರತಿಪತ್ತಿಃ, ಪ್ರಗಲ್ಭತಾ — ಈ ೨ ಅಜಾಯುವುದು" (ಹಹಾಯು. ೧೨೬-೯೯). ೫. ಪ್ರತಿಭೆ. ೬. ಒಪ್ಪಿಗೆ; ಸಮ್ಮತಿ. ೭. ಕಾರ್ಯವನ್ನು ಕೈಗೊಳ್ಳುವುದು; ಕಾರ್ಯ ನಿರ್ವಹಣೆ. ೮. ನಡವಳಿಕೆ; ಪ್ರವೃತ್ತಿ. ೯. ಗೌರವ; ಮನ್ನಣೆ; ಮರ್ಯಾದೆ: ಅವರ ದಾಯಿಗಂ ಶಾಸ್ತ್ರಂಗಳಂ ಬಲ್ಲೊಂಗಂ ಮಂತ್ರಿಪದವಿಯಂ ಬಾಬುಮಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ದವರು ಮುಬ್ಬೆಗಂಬಟ್ಟು (ವಡ್ಡಾರಾ. ೨-೨೩): ಸದೀತನೂಜ ಭಾರದ್ವಾಜ ಕೃಪಾದಿಗಳ್ವೆರಸಿರ್ದಂದು ಯಥೋಚಿತಪ್ರತಿಪತ್ತಿಗಳಿಂದಯ್ವರುಮಂ ಸಬಿಡಾಲಿಂಗನಂಗೆಯ್ದು (ಪಂಪಭಾ. ೪-೩೫); ನಿತ್ಯ ಪರೀಕ್ಷಣಸ್ಥಳವಿಪರ್ಯಾಯ ಪ್ರತಿಪತ್ತಿ ದಾನಂಗಳಿಂ ನಿಯೋಗಿಗಳಂ ಕಾಪುದುಘಳ್ ಮಾಡಿಯುಂ (ಶಂಪ್ರಶ. ೨-೬೧). ೧೦. ಸ್ಥಾನ; ಅಧಿಕಾರ: ಪ್ರತಿಪತ್ತಿಯ ವೈಮೆಯು ನಾನಾತಿಶಯಿಸಲು ಕರೆಯೆ ಕೇಳಿ ಸಿಂಹಾಸನದೌಸ್ತಿತಿಯುಬೇಯು ರೇಜಗಾತ್ರ ಪ್ರತಿಪತ್ತಿಯನಿತ್ತನೊಸೆದು ಜಯಸಿಂಹನೃಪಂ (ಶುದೆ. ೦-೯); ಭೂಮಂಡಲದಲ್ಲಿ ಸಮಸ್ತ ರಾಜಕುಲಗಳೊಳಗೆ ಧನ ಮಾನ ಪ್ರತಿಪತ್ತಿಗಳಲ್ಲಿ ನಮ್ಮ ಕುಲವು ಶ್ರೇಷ್ಠವಾಗಿರುವುದು (ಆಶ್ವ. ೨೫). ೧೧. ಕೀರ್ತಿ; ಯಶಸ್ಸು. ೧೨. ದಿಟ್ಟತನ; ಧೈರ್ಯ. ೧೩. ಉಪಾಯ; ಯುಕ್ತಿ. ೧೪. "ಯಜ್ಞದಲ್ಲಿ ಉಳಿದಿರುವುದನ್ನೆಲ್ಲ ವಿನಿಯೋಗಿಸುವುದು" (ವಚಾಶಾ. ೧೦೬ ಅಡಿ). ಪ್ರತಿಪತ್ತಿಕರ್ಮ ಪರಾ. [ಸಂ.]

**ಪ್ರತಿಪತ್ತಿಕರ್ಮ** (ನಾ). ಯಜ್ಞ ಯಾಗಾದಿಗಳಲ್ಲಿ ಮಾಡುವ ಒಂದು ಕ್ರಿಯೆ; ಹೋಮ ಮಾಡಿದ ಮೇಲೆ ಉಳಿದಿರುವ ದ್ರವ್ಯವನ್ನು ಯಾತ್ರಾವ ವಿಧದಿಂದಲೂ ಅಪವಿತ್ರವಾಗದಂತೆ ಅಗ್ನಿಗೆ ಹಾಕುವುದು, ಪೂಜೆ ಮಾಡಿ ವಿಸರ್ಜನೆ ಮಾಡಿದ ಗಣಪತಿಪ್ರತಿಮೆ ಮೊದಲಾದುವನ್ನು ಜಲದಲ್ಲಿ ವಿಸರ್ಜಿಸುವುದು ಮುಂತಾದುವು ಪ್ರತಿಪತ್ತಿಕರ್ಮವೆನಿಸಿಕೊಳ್ಳುತ್ತವೆ: ವಿಶ್ವಾಮಿತ್ರನು ವಿಶ್ವಜಿದ್ಯಜ್ಞವನ್ನು ಸಂಕಲ್ಪ ಮಾಡಿ, ತ್ರಿಶಂಕುವಿನ ಸೋಮಯಾಗದ ಅವಭೃತವನ್ನು ನೆರವೇರಿಸಿದನು. ಪ್ರತಿಪತ್ತಿಕರ್ಮವೂ ನಡೆಯಿತು (ಕುಹಾಶಿ. ೦೦೭). [ಸಂ. ಪ್ರತಿಪತ್ತಿಕರ್ಮನ್]

**ಪ್ರತಿಪತ್ತಿಮೂಢೆ** (ನಾ). ಏನಂ ಮಾಡಬೇಕೆಂದು ತಿಳಿಯಲಾರದವಳು; ದಿಕ್ಕು ತೋಚದಿರುವವಳು; ದಿಙ್ಮೂಢೆ: ಪ್ರತಿಪತ್ತಿಮೂಢೆಯೆನಿಸಿರ್ದ ತರುಣಿಯುಂ ಗುರುಜನಕ್ಕೆ ಪೊಡವಡಿಪುದಂ (ಕಾದಂಬ. ೬೯೧). [ಸಂ. ಪ್ರತಿಪತ್ತಿಮೂಢಾ (ಪ್ರತಿಪತ್ತಿ + ಮೂಢ + —)]

**ಪ್ರತಿಪತ್ತಿವಿಧಿ** (ನಾ). [ಅದ್ವೈತ] ಮೋಕ್ಷಕ್ಕಾಗಿ ಜ್ಞಾನವನ್ನು ಸಂಪಾದಿಸು ಎಂದು ನೇಮಿಸುವುದು: ಇದರಲ್ಲಿ ಧ್ಯಾನನಿಯೋಗವಾದ, ನಿಷ್ಪ್ರಪಂಚೀಕರಣನಿಯೋಗವಾದ ಇವೇ ಮೊದಲಾದ ಪ್ರಭೇದಗಳಿರುವುವು. ಇವುಗಳಿಗೆಲ್ಲಾ ಒಟ್ಟು ಪ್ರತಿಪತ್ತಿವಿಧಿಯೆಂದು ಹೆಸರು (ಸಿಂದೂ. ೨೩೩). [ಸಂ.]

**ಪ್ರತಿಪತ್ತಿಶಾಲಿ** (ನಾ). ಗೌರವಾರ್ಹನಾದವನು; ಸನ್ಮಾನ್ಯ: ನಮ್ಮ ನಡುವೆ ಇದ್ದ ವಿಪುಲಸಂಪತ್ತಿಶಾಲಿಯಾದ ಮತ್ತು ಪ್ರತಿಪತ್ತಿಶಾಲಿಯಾದ ಒಬ್ಬ ಗೃಹಸ್ಥರು ವರ್ತಮಾನಪತ್ರ ಓದುತ್ತಿದ್ದರು (ಇತಳ. ೯೩೦). [ಸಂ. ಪ್ರತಿಪತ್ತಿಶಾಲಿನ್]

**ಪ್ರತಿಪತ್ತು** (ನಾ). ೧. ಚಾಂದ್ರಮಾನದ ತಿಂಗಳುಗಳಲ್ಲಿ ಬರುವ ಎರಡು ಪಕ್ಷಗಳ ಮೊದಲನೆಯ ದಿನ; ಪಾಡ್ಯ: "ಪಕ್ಷತಿಃ, ಪ್ರತಿಪತ್ — ೨ ಪಾಡ್ಯದ ಹೆಸರುಗಳು" (ಶಿದ್ಯಾಂಕಿ. ೩೯). ೨. ಬುದ್ಧಿ: "ಬುದ್ಧಿಃ, ಮನೀಷಾ . . . ಪ್ರತಿಪತ್, ಜ್ಞಪ್ತಿಃ, ಚೇತನಾ — ೧೪ ಬುದ್ಧಿಯ ಹೆಸರುಗಳು" (ಶಿದ್ಯಾಂಕಿ. ೯೯). ೩. ಮುಂದಕ್ಕೆ ಹೋಗುವುದು; ಮುಂದುವರಿಯುವುದು. ೪. ಹತ್ತಿರಕ್ಕೆ ಹೋಗುವುದು; ಸಮೀಪಿಸುವುದು. ೫. ಒಳಹೊಗುವಿಕೆ; ಪ್ರವೇಶ. ೬. ಮೊದಲು ಮಾಡುವುದು; ಪ್ರಾರಂಭ. ೭. ಅಂತಸ್ತು; ಪದವಿ; ಸ್ಥಾನ. ೮. ಒಳ್ಳೆಯ ಹೆಂಗಸರ ಗುಂಪು: "ಆಸನ್ನಮುಂ ಪಾಡ್ಯ ಸದ್ವನಿತಾ ಸಂಚಯಃಮೆಂತಿವೆಯ್ದೆ ಪ್ರತಿಪದ್ವ್ಯಾಖ್ಯಾನಮುಂ" (ಹಾಕಿ. ೦೬೩). [ಸಂ. ಪ್ರತಿಪದ್]

**ಪ್ರತಿಪತ್ನಿ** (ನಾ). ಸವತಿ; ಸವತ್ನಿ: ಕ್ಷಿತಿನಾಥಾಪಾಂಗವಿಲೋಕಿತೆಯರ್ ಶ್ರೀಯೊರ್ವಳಾ ಜಯಶ್ರೀಯೊರ್ವಳ್ ಪ್ರತಿಪತ್ನಿಯರ್ರೊಳರೆನಿಸಲ್ಕಶರ್ಕ್ಷ ನೇಪಥ್ಯಮಂವರ್ಗದೀಂ ಸೊಗಯಿಸಿತೋ (ಹಾಂತಿಶ. ೦-೭೪). [ಸಂ.]

**ಪ್ರತಿಪತ್ರ** (ನಾ). ಒಂದು ಪತ್ರದ ಪ್ರತಿ,—ನಕಲು: ವಿನಿಮಯ ಪತ್ರಗಳು ಚೆಕ್ಕುಗಳು . . . ಋಣಪತ್ರಗಳು ಪ್ರತಿಪತ್ರಗಳು ಮತ್ತು ಸಲಿಕೆಗಳು ಇವುಗಳ ವಿಷಯದಲ್ಲಿ ಮುದ್ರಾಂಕಶುಲ್ಕದ ದರಗಳು (ಕಾಲಾಶ. ೨೩೬). [ಸಂ.]

**ಪ್ರತಿಪದ** (ನಾ). ೧. ಒಂದು ಪದದ ಸಮಾನಾರ್ಥಕವಾದ ಪದ; ಪರ್ಯಾಯಪದ: ಅಗ್ನಿ, ವಾಯು, ಸೂರ್ಯ ಎಂಬ ಪದಗಳಿಗೆ ಪ್ರತಿಪದಗಳನ್ನು ಬರೆಯಿರಿ (ಊಹೆ). ೨. ಪ್ರತಿಯೊಂದು ಪದ: ಇಲ್ಲಿ ಕೊಟ್ಟಿರುವ ಪ್ರತಿಪದಕ್ಕೂ ಅರ್ಥ ಬರೆಯಿರಿ (ಊಹೆ). [ಸಂ.]

**ಪ್ರತಿಪದಿ** (ನಾ). ೧. ಪಾಡ್ಯ; ಪ್ರತಿಪದೆ. ೨. ಮನ್ನಣೆ; ಗೌರವ. ೩. ವಿರೋಧವಾಗಿ ಹೋಗುವಿಕೆ. ೪. ಕೆಳವಂಟ್ಟ; ಅವನತಿ: "ಪಾಡ್ಯಮುಂ ಮನ್ನಣೆಯುಂ ಕೀಟಂಬಿವೊಂ ತಾಂ ಪ್ರತಿಪದಿಯೆನಿಕು" (ಶಾಪಾಕ. ೦೩೬). [ಸಂ. ಪ್ರತಿಪದೀ]

**ಪ್ರತಿಪದೆ** (ನಾ). =ಪ್ರತಿಪತ್ತು ೧: ದೀಪಾವಳಿಯಲ್ಲಿ ಬಲಿಪ್ರತಿಪದೆಯಿಂದ (ಕಾಶಾಕಾ. ೭೩); ಶಾಲಿವಾಹನಶಕದ ವರ್ಷ ಚೈತ್ರಶುದ್ಧಪ್ರತಿಪದೆಯಿಂದ ಆರಂಭವಾಗುತ್ತಿದೆ (ಗ್ರಾಹಶ್ಯ. ೫೭). [ಸಂ. ಪ್ರತಿಪದಾ]

**ಪ್ರತಿಪದ್ದಿನ** (ನಾ). ಪಾಡ್ಯ: ವಿಶಾಖಾಹದ ಬಹುಲಪ್ರತಿಪದ್ದಿನದಂದು ಕೀರ್ತಿ ನೆಗಟ್ಟಿರೆ (ಅಜಿತ. ೬-೬೬); ನುತಮಾರ್ಗಶಿರದ ಶುದ್ಧಪ್ರತಿಪದ್ದಿನದ ಪರಮಯಾಮದೊಳ್ (ಪುಶ್ವಾಕು. ೦೩-೨೦೩). [ಸಂ.]

**ಪ್ರತಿಪನ್ನ** (ಗು). ೧. ಸಮೀಪಿಸಿದ; ಹತ್ತಿರಕ್ಕೆ ಬಂದ. ೨. ಪಡೆದ; ಹೊಂದಿದ. ೩. ಮಾಡಿದ; ನಿರ್ವಹಿಸಿದ; ನೆರವೇರಿಸಿದ: ಪ್ರತಿಪನ್ನಯಜ್ಞವಿಳಾಸನೊಪ್ಪಿದನಿಂದ್ರವಿಭವದಲಿ (ಶುಭ್ಯಾಶ. ೦೦-೬). ೪. ಒಪ್ಪಿದ; ಸ್ವೀಕೃತವಾದ. ೫. ತಿಳಿದ; ಅರಿತ. ೬. ಪ್ರಾರಂಭಿಸಿದ; ತೊಡಗಿದ. ೭. ಗೆದ್ದ; ಜಯಿಸಿದ. (ನಾ). ೮. ಒಪ್ಪಿಗೆಯಾದುದು; ಸ್ವೀಕೃತವಾದುದು: ಎನಗಂ ತಾಂ ಪ್ರತಿಪನ್ನಮೆಂಬ ಬಗೆಯುಂ ಕಾನಂತುಪಾದೇಯಮೋ (ಶಂಪ್ರಶ. ೮-೬೯). ೯. ತಿಳಿದುದು; ಅರಿತುದು: "ಬುದ್ಧಂ, ಬುಧಿತಂ, ಮನಿತಂ, ವಿದಿತಂ, ಪ್ರತಿಪನ್ನಂ,

ಅವಸಿತಂ, ಅವಗತಂ—ಎ ತಿಳಿಯಲ್ಪಟ್ಟುದು (ಶಬ್ದಾಂಶಿ. ೪೭೨). ೧೧. ಗೆದ್ದುದು ; ಜಯಿಸಿದುದಂ.

**ಪ್ರತಿಪನ್ನಮಂದರ** = (ದೃಢತೆಯಲ್ಲಿ) ಮಂದರಪರ್ವತವನ್ನು ಮೀರಿದವನು ; ಒಂದು ಬಿರುದು : ಗಣ್ಡರ ಗಣ್ಡಂ ವೈರಿಭೇರುಣ್ಡಂ ಪ್ರತಿಪನ್ನಮಂದರಂ ಶರಣಾಗತವಜ್ರಪಂಜರಂ ಶ್ರೀಮತ್ಶಾನ್ತಿವರ್ಮ್ಮರಸರ ವಂಶಾವತಾರಮೆಂತೆಂದೊಡೆ (ಎಶಾಇ. XX. ೦೬–೯ ; ೪೬೦) ; ವಿಬುಧವರ ದಾಯಕಂ × × × ಪ್ರತಿಪನ್ನಮಂದರಂ ವಾಣಸ್ಯನ್ವಯಪುರಂದರಂ . . . ಮಧುವಪರಸಂ (ಕಇಇ. ೬–೩–೨೬೨ ; ೧೦೬೨). **ಪ್ರತಿಪನ್ನಮೇರು** = (ದೃಢತೆಯಲ್ಲಿ) ಮೇರುಪರ್ವತವನ್ನು ಜಯಿಸಿದವನು ; ಒಂದು ಬಿರುದು : ಶರಣಾಗತವಜ್ರಪಂಜರಂ ಪ್ರತಿಪನ್ನಮೇರು ನಾಮಾದಿ ಸಮಸ್ತ ಪ್ರಶಸ್ತಿಸಹಿತಂ (ಎಶಾಇ. XX. ೩೬–೯ ; ೧೦೬೬). [ಸಂ.]

**ಪ್ರತಿಪನ್ನತೆ** (ನಾ). ವಿವೇಕ ; ವಿವೇಚನೆ : ಇನ್ನು ಧೃತರಾಷ್ಟ್ರಾವನೀಶನು ತನ್ನ ಮಕ್ಕಳ ಬಾಂಧವಪ್ರತಿಪನ್ನತೆಯ ನೆಚಿ ಕಾಬನೆಂದನು ಧರ್ಮಸುತ ನಗುತ (ಕುಭಾ, ಉ. ೨–೩೬). [ಸಂ. ಪ್ರತಿಪನ್ನತಾ]

**ಪ್ರತಿಪನ್ನಿಕೆ** (ನಾ). =ಪ್ರತಿಪನ್ನತೆ: 'ಪ್ರತಿಪನ್ನಿಕೆಗಿಡು' ಪರಾ. [ಪ್ರತಿಪನ್ನ + — ಇಕೆ]

**ಪ್ರತಿಪನ್ನಿಕೆಗಿಡು** (ಕ್ರಿ). ವಿವೇಚನೆಯನ್ನು ಕಳೆದುಕೊಳ್ಳು; ವಿವೇಕ ಶೂನ್ಯವಾಗು : ಮುಳಿಗುಂ ಪ್ರತಿಪನ್ನಿಕೆಗಿಡೆ ದಶರಥಸುತನಾ ವಿಭು ಮುಳಿದವಂಗೆ ಜವನುಂ ಮುಳಿಗುಂ (ಪಂಪಾಪು. ೧೧–೯೬).

[ಪ್ರತಿಪನ್ನಿಕೆ+ಕಿಡು (<ಕೆಡು₁)]

**ಪ್ರತಿಪಾಕ** (ನಾ). [ವೈದ್ಯಶಾ] ಬೇಯಿಸದ ಹಸಿರಸಗಳ ಮಿಶ್ರಣ: "ಔಷಧಂ ಬೇಯಲು ಕಷಾಯಮಾಸಿಕ್ಕು ಹಸಿ ಬೆರಸೆ ಪ್ರತಿಪಾಕಮಕ್ಕುಂ" (ಸುಂಗಶಾ. ೦೦೭–೬); ಕಿರುಗಡಸಿಗೆ ಸಮೂಲವಂ ಕಷಾಯವಿಕ್ಕಿ ಶುಂಠಿ ೪ ವರಹ ತೂಕ ಪ್ರತಿಪಾಕವಂ ಕೂಡಿ ಕೊಡಲು ಗ್ರಹಿಣೀರೋಗಂ ಗುಣಮಕ್ಕುಂ (ಶಕಶ್ಯ. ೩೬೬). [ಸಂ.]

**ಪ್ರತಿಪಾತಿ** (ನಾ). ಎದುರು ಬೀಳುವವನು; ವಿರೋಧಿ: ಸ್ವಾಮಿಗಳ್ ಕಷಾಯೋದಯದಿಂ ಎಲ್ಲಿಯಾನುಂ ಹೀಯಮಾನಚಾರಿತ್ರೋದಯರಪ್ಪುದಱಿಂ ಋಜುಮತಿಮನಃಪರ್ಯಾಯಂ ಪ್ರತಿಪಾತಿಯಕ್ಕುಂ (ಚಿತ್ರಸ್ತ್ರ. ೬೦).

[ಸಂ. ಪ್ರತಿಪಾತಿನ್]

**ಪ್ರತಿಪಾದಕ** (ಗು). ೧. ಹೇಳುವ; ವಿವರಿಸುವ. ೨. ಬೋಧಿಸುವ; ತಿಳಿಸುವ. ೩. ಸಮರ್ಥಿಸುವ; ದೃಢಪಡಿಸುವ. (ನಾ). ೪. ಹೇಳುವವನು; ವಿವರಿಸುವವನು. ೫. ಬೋಧಿಸುವವನು; ಬೋಧಕ. ೬. ಸಮರ್ಥಿಸುವವನು; ಸಾಧಿಸುವವನು: ಕಾಶ್ಮೀರ ದೇಶದ ಅಭಿನವಗುಪ್ತನೆ (ಹತ್ತನೆಯ ಶತಮಾನ) ಕಾಶ್ಮೀರದೇಶದ ಪ್ರಖ್ಯಾತವಿದ್ವಾಂಸ ಮತ್ತು ತತ್ತ್ವಜ್ಞಾನಿ. ಅವನೇ ಈ ಸಿದ್ಧಾಂತದ ಪ್ರಮುಖಪ್ರತಿಪಾದಕ (ಕಕ್ಕಶ್ವಾ. ೪೦೬). [ಸಂ.]

**ಪ್ರತಿಪಾದನ** (ನಾ). ೧. ನೀಡುವಿಕೆ; ದಾನ: "ತ್ಯಾಗಃ, ವಿಹಾಪಿತಂ, ದಾನಂ . . . ಪ್ರತಿಪಾದನಂ . . . ಸತ್ಪಾತ್ರದಲ್ಲಿ ಶಾಸ್ತ್ರೋಕ್ತಪ್ರಕಾರ ತಾನಾಗಿ ಕೊಡುವಿಕೆ, ತನ್ನ ಒಡವೆಯನ್ನು ಪುಣ್ಯಕ್ಕಾಗಿ ಮತ್ತೊಬ್ಬರಿಗೆ ಕೊಟ್ಟು ತನ್ನ ಸ್ವತ್ವಸಂಬಂಧವನ್ನು ಬಿಡುವಿಕೆ" (ಶಬ್ದಾಂಶಿ. ೨೨೨). ೨. ಹೇಳುವುದು ; ವಿವರಿಸುವುದು. ೩. ಉಪದೇಶಿಸುವುದು; ಬೋಧಿಸುವುದು. ೪. ಪ್ರಚುರಪಡಿಸುವುದು ; ಪ್ರಸಿದ್ಧಪಡಿಸುವುದು. ೫. ಪ್ರಮಾಣಗಳಿಂದ ಸಿದ್ಧಪಡಿಸುವುದು. ದೃಢಪಡಿಸುವುದು; ೬. ಉತ್ಪಾದಿಸುವುದು. [ಸಂ.]

**ಪ್ರತಿಪಾದನೆ** (ನಾ). ೧. ವಿವರಣೆ; ನಿರ್ವಚನ: ಅದರ ನಿರೂಪಣೆಯು ಕೆಲವು ಪ್ರಸಿದ್ಧವಾದ ಅಲಂಕಾರವಿಶೇಷಗಳ ಪ್ರತಿಪಾದನೆಗೆ ಯಾವ ಬಗೆಯಿಂದಲೂ ಸಮಾನವಲ್ಲವೆಂಬುದೂ ಮನದಟ್ಟಾಗುವುದು (ಧ್ವನ್ಯಾಲೋ. ೩೯): ಈ ಪ್ರತಿಪಾದನೆ ಕನ್ನಡನುಡಿಯ ಅಭಿಮಾನಿಗಳಿಗೆ ಸಮ್ಮೋಹನವಾಗಿ ತೋರಿದರೂ . . . ಇನ್ನೂ ನಿಷ್ಕರ್ಷೆ ಮಾಡಬೇಕಾಗಿದೆ (ಪ್ರಾಶಾ. ೨೩); ಗಹನವಾದ ವಿಷಯದ ಪ್ರತಿಪಾದನೆಯಾಗಬೇಕಾಗಿದ್ದರೂ ಸರಳವೂ ಆಕರ್ಷಣೀಯವೂ ಆದ ಶೈಲಿ ಮಕ್ಕಳ ಬೇಸರವನ್ನು ಕಡಮೆ ಮಾಡೀತು (ಶಿಕ್ಷದ. ೩೬೯). ೨. ಪ್ರಮಾಣಗಳಿಂದ ಸಿದ್ಧಪಡಿಸಿದುದು; ಸಿದ್ಧಾಂತ: ಇವನ ಪ್ರತಿಪಾದನೆಯಂತೆ ಜಗತ್ತಿನ ಉಪಾದಾನ ಕಾರಣ (Material Cause) "ಅಪ್" ತತ್ತ್ವ (ಪುರಾತ್ವರ. ೬ ೩೮೦೪).

[ಸಂ. ಪ್ರತಿಪಾದನ]

**ಪ್ರತಿಪಾದಿತ** (ಗು). ೧. ವಿವರಣೆಯನ್ನು ಹೊಂದಿದ,–ಒಳಗೊಂಡ. ೨. ತಿಳಿಸಿದ; ಹೇಳಿದ. ೩. ಸ್ಥಿರಪಡಿಸಿದ; ಸಮರ್ಥನೆಯನ್ನು ಹೊಂದಿದ. (ನಾ). ೪. ಹೇಳಿದುದು; ವಿವರಿಸಿದುದು: ಪ್ರತಿಪಾದಿತವಾಗಿರುವ ವಿಷಯ ಮಕ್ಕಳಿಗೆ ಆಸಕ್ತಿ ಹುಟ್ಟಿಸುವಂತಿರಬೇಕು (ಶಿಕ್ಷದ. ೬೪೯). [ಸಂ.]

**ಪ್ರತಿಪಾದಿಸು** (ಕ್ರಿ). ೧. ವಿವರಿಸು; ಹೇಳು: ಬೃಹದಾರಣ್ಯಕಶ್ರುತಿಯು ಪರಶಿವನ ಮೂರ್ತ, ಅಮೂರ್ತರೂಪಗಳೆರಡನ್ನೂ ಪ್ರತಿಪಾದಿಸುತ್ತದೆ (ಶಕ್ತಿ೦. ೨೩); ವಿಷಯವನ್ನು ಪ್ರತಿಪಾದಿಸುವಾಗ ಲೇಖಕರ ವೈಯಕ್ತಿಕ ಅಭಿಪ್ರಾಯಗಳನ್ನು . . . ಸ್ಪಷ್ಟಪಡುವಂತೆ ಮಾಡಬೇಕು (ಶಿಕ್ಷದ. ೨೬೦). ೨. ಬೋಧಿಸು; ಉಪದೇಶಿಸು: ಧರ್ಮಾನುಧರ್ಮವಂ ಪ್ರತಿಪಾದಿಪ . . . ತಥಾಗತಂ(ಕೃಶಾಂ. ೬೩–೪೦೩); ಪುರಾಣಗಳು ಕೂಡ ಭಕ್ತಿಮಾರ್ಗವನ್ನೇ ಪ್ರತಿಪಾದಿಸಿರುವುವು (ಹಸಂ. ೧೧); ಚೈತನ್ಯರು ಪ್ರತಿಪಾದಿಸಿದ ತತ್ತ್ವಗಳ ಮೇಲೆ ನಿಂತ ವೈಷ್ಣವಸಂಪ್ರದಾಯವೇ ಇಂದು ಮಣಿಪುರದಲ್ಲಿ ಸಜೀವತ್ವವನ್ನು ಪಡೆದಿದೆ ಎನ್ನಬಹುದು (ಚಾಂಕಾ. ೯೩). ೩. ಪ್ರಚಾರ ಮಾಡು; ಪ್ರಸಿದ್ಧಪಡಿಸು: ಪ್ರೌಢವಿವಾಹ, ವಿಧವಾವಿವಾಹ . . . ಮೊದಲಾದ ವಿಷಯಗಳನ್ನು ಪ್ರತಿಪಾದಿಸುವ ಈ ಧರ್ಮವು ಬಂಗಾಲದ ಈ ವಿಚಾರವಂತರನ್ನು ಆಕರ್ಷಿಸಿತು (ರಭಿಗಶಾ. ೬೩). ೪. ದೃಢಪಡಿಸು; ಸಮರ್ಥಿಸು; ಸಾಧಿಸು : ವಿಮರ್ಶೆ ಮಾಡುವ ಅಧಿಕಾರ ಎಲ್ಲರಿಗೂ ಇದೆಯೆಂದು ನಾನು ಮೊದಲಿಂದ ಪ್ರತಿಪಾದಿಸಿದ್ದೇನೆ (ಸಹಬೀ. ೦೨೩೩).

[ಪ್ರತಿಪಾದನ + —ಇಸು₁]

**ಪ್ರತಿಪಾದುಕ** (ನಾ). ಮಂಚ ಮೊದಲಾದುವನ್ನು ಇಡುವುದಕ್ಕಾಗಿ ಮಾಡಿದ ಎತ್ತರದ ಪೀಠ,–ವೇದಿಕೆ: ಅನೇಕರತ್ನರಚಿತಪ್ರತಿಪಾದುಕ ವಿನ್ಯಸ್ತಕಾಂಚನಮಂಚೋಪಶೋಭಿತದೊಳ್ . . . ನಿದ್ರಾರಸವಶಗತ ರಾಗಿರ್ದರ್ (ಅರಿಶ್ಚ. ೫–೨೨ ಪ). [ಸಂ. ಪ್ರತಿಪಾದುಕಂ]

**ಪ್ರತಿಪಾದ್ಯ** (ಗು). ೧. ವಿವರಣೆ ಹೊಂದುವ,—ಹೇಳುವ : ಗ್ರಂಥಾರಂಭದಲ್ಲಿ ಮಂಗಳಾಚರಣಾದಿಗಳು ಮಾಡಬೇಕಾದರೆ ಅದಕ್ಕೆ ಅರ್ಹರಾದ ದೇವತೆಗಳು ಎರಡು ವಿಧ. ಗ್ರಂಥ ಪ್ರತಿಪಾದ್ಯದೇವತೆ; ಇಷ್ಟದೇವತೆ (ಕಶಾರ. ೦.೦ ಒಕೀಕಾಶಕ). ೨. ಸಮರ್ಥನೆ ಹೊಂದುವ. (ನಾ). ೩. ಉಪಯೋಗಿಸಲು ಅರ್ಹವಾದುದು ; ಪ್ರಯೋಗಿಸಲು ಯೋಗ್ಯವಾದುದು : ಪ್ರತಿಪಾದ್ಯಮುತ್ತಮಿತ್ವಂ ಮತಿವಂತರಿನೆಯ್ದೆ ಪೂರ್ವಕಾಲಕ್ರಿಯೆಗೆ (ಶಬ್ದ. ೨೩೬). ೪. ವರ್ಣನೆ ಹೊಂದುವಂಥದು; ವಿವರಿಸುವಂಥದು : ಸಕಲಜ್ಞ ಪ್ರತಿಪಾದ್ಯಮಪ್ಪ ಭುವನಂ ದೇಶಂ . . . ಇವೆಂಟೆನಿಸಿಕ್ಕುಂ (ಪುಣ್ಯಾ. ೦. ೩೯). ೫. [ಕಾವ್ಯಮೀ] ವ್ಯಕ್ತಿಯು ಮಾತಿನಿಂದ ಹೇಳಬೇಕೆಂದಿರುವ ಅರ್ಥ : 'ಪ್ರತಿಪಾದ್ಯ' ವಾದರೋ ಹೇಳುವವನ ಅರ್ಥಪ್ರತಿಪಾದನೇಚ್ಛೆಗೆ ಲಕ್ಷ್ಯವಾದ ಅರ್ಥ; (ಶಬ್ದವಲ್ಲ). ಆ ಅರ್ಥವೂ ಎರಡು ವಿಧ : (೧) 'ವಾಚ್ಯ' ವಸ್ತು (೨) 'ವ್ಯಂಗ್ಯ' (ಧ್ವನ್ಯಾಲೋ. ೨೦೩). [ಸಂ.]

**ಪ್ರತಿಪಾನ** (ನಾ). ೧. ಕುಡಿಯುವುದು. ೨. ಕುಡಿಯುವ ನೀರು. ೩. [ಅಶ್ವಶಾ] ಕುದುರೆಗಳಿಗೆ ಕುಡಿಸುವ ಬಲವರ್ಧಕಪಾನೀಯ : ಪ್ರತಿಪಾನಮೆಂಬುದಾಱುಂ ಋತುಗಳೊಳಂ ಬೇಱೆವೇಱೆ ದಿವ್ಯೌಷಧಸಂಯುತ ದೊಳ್ ಕುಡುಗುಂ (ಅಶ್ವಶಾ. ೬-೬೮): ಮಾಗಧತೈಲಂ ಸೈಂಧವನಾಗರ ಸುರದಾರುಗಳ್ ಸುರಾಪಾನದ ಸಂಯೋಗದೊಳಶ್ವಂಗಳ್ಗೆ ಘನಾಗಮ ದೊಳ್ ಕೊಡೆ ಮನೋಹರಂ ಪ್ರತಿಪಾನಂ (ಅಶ್ವಶಾ. ೬–೬೬). [ಸಂ.]

**ಪ್ರತಿಪಾನಕ** (ನಾ). = ಪ್ರತಿಪಾನ ೩ : ಒಪ್ಪಲಿ ಸಿಂಧೂತ್ಥಂ ಸದಗುಪ್ಪೆ [ಯು] ಮುಂಚಾಗ್ನಿ ನಾಗರಂ ವಾಸಿತದಿಂದೊಪ್ಪುವ ಕಳ್ ಪ್ರತಿಪಾನಕ ಮಪ್ಪುದು ತುರಗಕ್ಕೆ ವರುಷಋತುವರ್ತಕದೊಳ್ (ಅಶ್ವಶಾ. ೬-೬೭). [ಸಂ.]

**ಪ್ರತಿಪಾಪ** (ನಾ). ಒಂದು ಪಾಪಕ್ಕೆ ಬದಲಾಗಿ ಮಾಡುವ ಅಥವಾ ಮಾಡಿಸುವ ಮತ್ತೊಂದು ಪಾಪ : ಅವನ ತೊಡೆಯಡಗನೆ ತಳ್ತಿಲ್ಲದ ಮಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿಪು. ೬-೯೬). [ಸಂ.]

**ಪ್ರತಿಪಾಲ** (ನಾ). ಕಾಪಾಡುವವನು ; ಸಂರಕ್ಷಿಸುವವನು ; ರಕ್ಷಕ : ಪುರಾರಿಯ ದೇಗುಲಕ್ಕವರೆಯ್ದಿ ತಚ್ಚರಣಾಗತಪ್ರತಿಪಾಲನು ಕಾಣುತ್ತ ಪೊಡವಂಟು (ಬಸಪು. ೨೮-೩೬). [ಸಂ.]

**ಪ್ರತಿಪಾಲನ** (ನಾ). ೧. ಕಾಪಾಡುವುದು ; ರಕ್ಷಿಸುವುದು. ೨. ಪೋಷಿಸುವುದು ; ಪೋಷಣೆ. [ಸಂ.]

**ಪ್ರತಿಪಾಲನೆ** (ನಾ). = ಪ್ರತಿಪಾಲನ ೧ : ಕೋಲಾರಜಿಲ್ಲೆಯ ಎರಡು ಶಾಸನಗಳಲ್ಲಿ . . . ಬಿರನೊಳಂಬ ಅಣ್ಣಿಗನು 'ದುಷ್ಟನಿಗ್ರಹಶಿಷ್ಟಪ್ರತಿ ಪಾಲನೆ'ಯನ್ನು ಮಾಡಿ ರಾಜ್ಯವನ್ನು ಆಳುತ್ತಿದ್ದನೆಂದು ಹೇಳಿದೆ (ನೊಳಂಬ. ೪೦). [ಸಂ. ಪ್ರತಿಪಾಲನ]

**ಪ್ರತಿಪಾಲಿತ** (ಗು). ಕಾಪಾಡಿದ ; ರಕ್ಷಿತವಾದ : ಅನಂತಭೋಗನಿಲಯಂ ಪ್ರತಿಪಾಲಿತಧರ್ಮಚಕ್ರನಬ್ಜಾಯತನೇತ್ರನಾದಿಪುರುಷಂ . . . ಈಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೧-೧). [ಸಂ.]

**ಪ್ರತಿಪಾಲಿಸು**. ಪ್ರತಿಪಾಳಿಸು (ಕ್ರಿ) ೧. ಕಾಪಾಡು ; ರಕ್ಷಿಸು : ಎಲ್ಲಾ ಋಷಿಸಮುದಾಯಮುಮಂ ಪ್ರತಿಪಾಲಿಸಲ್ಕೆ ಸಮರ್ಥರಾಗಿರ್ಪನ್ನೆಗಂ ಗೋವರ್ಧನಭಟ್ಟಾರರ್ ಸಮಾಧಿಮರಣದಿಂದಂ . . . ದೇವಲೋಕಕ್ಕೆ ಪೋದರ್ (ವಡ್ಡಾರಾ. ೬೪-೨೬) ; ನೆಲನಂ ಪ್ರತಿಪಾಲಿಸಿ ಧರ್ಮಸೂನು ಸುಖ ವಿರ್ದಂ ರಿಪುಬಳತಿಮಿರಭಾನು (ಪಂಪಭಾ. ೪-೧೧) ; ಮಹಾಮಂಡಳೇಶ್ವರ ಪದವಿಯನಲಂಕರಿಸಿ ಮಹೀಮಂಡಲಮಂ ಪ್ರತಿಪಾಲಿಸಿ . . . ಸಾಮ್ರಾಜ್ಯ ಲಕ್ಷ್ಮಿಯಂ ತಾಳ್ದಿ (ಅಜಿಪು. ೪-೬ ವ). ೨. ನಡೆಸು ; ನೆರವೇರಿಸು : ಅರಸುಗಳವಿಚಾರದಿಂದಾರಾನುಮಂ ಕೊಲಲುಂ ಕಿಡಿಸಲುಮೆಂದಿರ್ದರಲ್ಲದೆ ಮಂತ್ರಿಗಳಿಚ್ಛೆಯಂ ಪ್ರತಿಪಾಲಿಸರ್ (ಶಬ್ದಮ. ೧೩೮-೩); ಪೊಲ್ಲರೊಳ್ಕೆಳೆ ಗೊಳ್ಳದಿರ್ಪುದು ಶಿಷ್ಟರೊಳ್ವಿನಯಮಂ ಪ್ರತಿಪಾಲಿಸಿರ್ಪುದು (ಧರ್ಮಾಮೃ. ೩-೧೧೧). ೩. ಯಥಾಸ್ಥಿತಿಯಾಗಿರುವಂತೆ ನೋಡಿಕೊಳ್ಳು ; ಲೋಪ ಬರದಂತೆ ಆಸಕ್ತಿವಹಿಸು : ಸೋದರರಣ್ಣರುಂ ಪಸುಗೆಯಂ ಪ್ರತಿ ಪಾಲಿಸಿ ಲೋಕಪಾಲರೇತಾದರದಿಂದೆ ಬೆಚ್ಚು ಬೆಸಕೆಯ್ಯೆ (ಅರ್ಜುನ. ೪-೧೩೦); ಈ ಧರ್ಮ್ಮಮಂ ಸಾಸಿರ್ವ್ವರು ತಪ್ಪದೆ ಪ್ರತಿಪಾಲಿಸುವದು (ಇಐ. IV. ೨೬೬-೬೮ : 1184). **ಪ್ರತಿಪಾಳಿಸು** : ೧. ಪಲವುಂ ಋದ್ಧಿಗಳಿಂ ಕೂಡಿ ದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ (ವಡ್ಡಾರಾ. ೬೩-೩): ಕ್ಷಿತಿಯಂ ನಯವಿಕ್ರಮದಿಂ ಪ್ರತಿಪಾಳಿಸಿ ಪಡೆದು ಗೋತ್ರನಿಸ್ತಾರಕನಂ ಸುತನಂ (ವರ್ಧಮಾ. ೨-೩೯). ೩. ಮೇಂಟೆ ಋಣ್ಬಗ ದೇವರ್ಗ್ಗೆ ಇನ್ತೀ ಧರ್ಮ್ಮಮಂ ಪ್ರತಿಪಾಳಿಸಿದವರ್ . . . ಪತ್ತು [ಸಾ]ಸಿರಕಪಿಳೆಯುಂ ದಾನಂಗೊಟ್ಟ ಫಳಮಕ್ಕುಂ (ಸೌಇಇ. XI - I. ೨೨-೪೦ : 897) ; ಆ ನೆಲನ ದೇವರ್ಗ್ಗೆ ಧಾರೆಯೆಱೆದು ಕೊಟ್ಟು ತಮ್ಮ ಧರ್ಮ್ಮಂ ಮಾಡಿ ಪ್ರತಿ ಪಾಳಿಸಿದರ್ (ಸೌಇಇ. XX. ೨೦-೬೩ ; 1019) ; ಇನ್ತು ಬಿಟ್ಟ ದತ್ತಿಯಂ ಪ್ರತಿಪಾಳಿಸಿದ ಮಹಾಪುರುಷಂಗೆ . . . ದಾನಂಗೊಟ್ಟ ಫಳಮನೆಯ್ದುವಂ (ಎಕ. VIII. ಶಿಕಾಪು. ೫೬-೬೪ : 1115). [ಪ್ರತಿಪಾಲನ + – ಇಸು₁]

**ಪ್ರತಿಪಾಳಿಸು** 'ಪ್ರತಿಪಾಲಿಸು' ನೋ.

**ಪ್ರತಿಪೂಜೆ** (ನಾ). ಗೌರವ ; ಮರ್ಯಾದೆ : ವಸುಧೆಯೊಳು ಮುನ್ನ ಪ್ರತಿಷ್ಠಿಸಿದ ಲಿಂಗಗಳಿಗೆಸಗದಿರು ಪ್ರತಿಪೂಜೆಯನ್ನು ಶ್ರೀವೀರಶೈವಾಚಾರಕದು ಹಾನಿಯು (ಚನಪು. ೧೪-೪೧). [ಸಂ. ಪ್ರತಿಪೂಜಾ]

**ಪ್ರತಿಪ್ರಾಣ** (ನಾ). ಪ್ರತಿಬಿಂಬ: "ಪ್ರತಿಬಿಂಬಂ...ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪೆನಿಕ್ಕುಂ" (ಸುಂಗಶಾ. ೮-೨೮). [ಸಂ.]

**ಪ್ರತಿಫಲ** (ನಾ). ೧. ಮಾಡಿದ ಕೆಲಸಕ್ಕೆ ಪ್ರತಿಯಾಗಿ ದೊರಕುವ ಫಲ, -ಪ್ರಯೋಜನ : ಸಾಮಾನುಗಳನ್ನು ಕೊಂಡುಕೊಳ್ಳುವಾಗ ನೀವು ಕೊಡುವ ಬೆಲೆಗೆ ಸರಿಯಾದ ಪ್ರತಿಫಲ ಸಿಗಬೇಕಾದರೆ . . . ದೂರದೃಷ್ಟಿ ಯಿರಬೇಕು (ಅಷುಗ. ೧೬೪); ಯಾವ ಕೆಲಸಕ್ಕೂ ಪ್ರತಿಫಲವನ್ನು ಅಪೇಕ್ಷಿಸು ತ್ತೇವೆ. ಪ್ರತಿಫಲ ಬಾರದಿದ್ದಲ್ಲಿ ಮರುಗುತ್ತೇವೆ (ಧರ್ಮಾ. ೧೬೩); ತೋಟಗಾರರಿಗೆ ಸಲ್ಲುತ್ತಿದ್ದ ಪ್ರತಿಫಲ ವಿಧವಿಧವಾದುವು (ಕಾಸಗ. ೩೬). ೨. ಪ್ರತಿಬಿಂಬ ; ಪಡಿನೆಳಲು. ೩. ಪ್ರತ್ಯುಪಕಾರ. [ಸಂ.]

**ಪ್ರತಿಫಲನ** (ನಾ). ೧. ಪ್ರತಿಬಿಂಬ; ಪಡಿನೆಳಲು : ಪರಶಿವನು . . . ಅಧಿಕಭಾವವನ್ನು ಹೊಂದಿದ ಸ್ವಪ್ರಕಾಶತ್ವದಲ್ಲಿ ಪ್ರತಿಫಲನರೂಪದಿಂದ ಸ್ಫುರಿಸಿ ಲಿಂಗವೆನಿಸಿದನು (ಶಾರತ. ೨೬೩); ಮಯೂರದ ಗರಿಗಳ ಪ್ರತಿ ಫಲನವು ಅವನ ಮೇಲೆ ಬಿದ್ದುದರಿಂದ ಮಯೂರವರ್ಮನೆಂದೂ ಬಿರುದಾಂಕಿತನಾದನು (ಕುಳವಾ. ೬೦೪). ೨. ಪ್ರತಿಬಿಂಬಿಸುವುದು. ೩. ಪ್ರತಿಫಲ. [ಸಂ.]

**ಪ್ರತಿಫಲಿತ**, ಪ್ರತಿಫಳಿತ (ಗು). ೧. ಪ್ರತಿಫಲಿಸಿದ ; ಪ್ರತಿಬಿಂಬಿತವಾದ. ೨. ಪ್ರತಿಫಲವನ್ನುಂಟುಮಾಡಿದ ; ಪರಿಣಾಮ ಬೀರಿದ: ಜಲಧಿಯುಲಿ ಘೋಷದನದಲಿ . . . ಸಿಲುಕಿವಡೆ ಬಡಿಸುವವಲೇ ಪ್ರತಿಫಲಿತ ಪೂರ್ವಾದತ್ತಪುಣ್ಯಾವಳಿಗಳೆಂಬುದು ತನ್ನೊಳಾದುದು (ಕುಮ್ಯಾಗ. ೪-೨೩). (ನಾ). ೩. ಪ್ರತಿಬಿಂಬಿತವಾದುದು : ಕನ್ನಡಿಯಂತಹ ಪ್ರತಿಫಲನ ಕಾರಕವಾದ ಮೇಲ್ಮೈಯಿಂದ ಒಂದು ನಿಯಮವನ್ನನುಸರಿಸಿ ಪ್ರತಿಫಲಿತ ವಾದರೆ ಅಂತಹ ಮೇಲ್ಮೈಯು ನಮಗೆ ಗೋಚರವಾಗುವುದಿಲ್ಲ (ಶೌಕಪ. ೧೩೪). **ಪ್ರತಿಫಳಿತ** : ೧. ಲಲನಾನಿಕಾಯನಿವಳಿತ ನೀರಾಜನ ದೀಪಕಳಿಕಾಪ್ರತಿಫಳಿತಮೌಳಿಮಾಣಿಕ್ಯನುಂ (ಚಂದ್ರಪ್ರ. ೮-೨೪ ವ). [ಸಂ.]

**ಪ್ರತಿಫಲಿಸು** (ಕ್ರಿ). ೧. ಪ್ರತಿಬಿಂಬಿಸು : ನಲಕೂಬರನು. . . ದೂರದರ್ಶಕ ವೆಂಬ ಕನ್ನಡಿಯೊಳ್ ಪ್ರತಿಫಲಿಸಿದ ದಿಕ್ಪಾಲಕಪುರಗಳನೀಕ್ಷಿಸುತ್ತಲು (ಸೌಗಂಧಿ. ೩೦೮-೮); ಈ ಎಲ್ಲ ವಸ್ತುಗಳಲ್ಲಿ ಬೆಳಕನ್ನು ಕೊಡುವ ಶಕ್ತಿ ಇಲ್ಲವಿದ್ದರೂ ಬೆಳಕನ್ನು ಪ್ರತಿಫಲಿಸುವ ಶಕ್ತಿ ಇದೆಯಷ್ಟೆ (ಶಾಂಪ್ರ. II. ೮೬೩). ೨. ಪರಿಣಾಮವಾಗಿ ಬರು,–ಆವಿರ್ಭವಿಸು : ಅತಿಮಥನಿಸಿದರೆ ಶ್ರೀಗಂಧದೊಳು ಕಿಚ್ಚು ಪ್ರತಿಫಲಿಸುವುದಲ್ತೆ (ಶರಶ. ೧೪-೯೬); ಅವನ ಧ್ವನಿಯಲ್ಲಿ ಅಷ್ಟೊಂದು ಹೊತ್ತಿನವರೆವಿಗೂ ಮನೆಗೆ ಹೋಗದೆ ಇರಬೇಕಲ್ಲಾ ಎಂಬ ಜುಗುಪ್ಸೆಯು ಪ್ರತಿಫಲಿಸಿತು (ಮೂಗ್ನು. ೩೪).
[ಪ್ರತಿಫಲ್ + – ಇಸು₁]

**ಪ್ರತಿಫಳಿತ** 'ಪ್ರತಿಫಲಿತ' ನೋ.

**ಪ್ರತಿಬಂದಿ₁** (ನಾ). ವಿರೋಧವಾದುದು ; ಪ್ರತಿಯಾದುದು : ನಾನು ಹೇಳಿದ್ದಕ್ಕೆಲ್ಲ ಪ್ರತಿಬಂದಿಯಾಗಿಯೇ ಉತ್ತರ ಕೊಡುತ್ತೀಯಲ್ಲ (ರೂಢಿ).
[ಸಂ. ಪ್ರತಿಬಂದೀ]

**ಪ್ರತಿಬಂದಿ₂** (ನಾ). ಮೋಜಣಿ ; ಸರ್ವೆ; ಚಕ್ಕುಬಂದಿ : ಯಾವತ್ತು

ಧೂಮಿಯಷ್ಟು ಅಲ್ಲದು ಪ್ರತಿಬಂದಿಯ ದರಗಳನ್ನು ಗೊತ್ತುಮಾಡಿದ ಬಳಿಕ ಪುಟ್ಟು ಸರಕಾರಿ ಈದಾಯದಲ್ಲಿ ಶೇಕಡಾ ಮೂವತ್ತರಂತೆ ಸರಕಾರಕ್ಕೆ ಹುಕಸಾಕು ಬಂತು (ಈಹಗ. ೩೩). [ಪ್ರತಿ + < ಬಂದು]

**ಪ್ರತಿಬಂಧ** (ನಾ). ೧. ತಡೆ; ಅಡಚಣೆ; ಅಡ್ಡಿ: "ವಿಷ್ಕಂಭಃ ಪ್ರತಿಬಂಧಃ— ಈ ೨ ತಗುವುದು" (ಹಾಹ. ೦೩೬–೪೧). ೨. ಸಂಬಂಧವನ್ನು ಹೊಂದುವುದು. [ಸಂ.]

**ಪ್ರತಿಬಂಧಕ** (ಗು). ೧. ಅಡ್ಡಿಯನ್ನುಂಟುಮಾಡುವ; ಅಡಚಣೆಯನ್ನುಂಟುಮಾಡುವ: ದೇವತಾಕಾರ್ಯಕ್ಕೆ ಪ್ರತಿಬಂಧಕವಾಕ್ಯಗಳನ್ನು ಹೇಳಬೇಡಿ (೩೩೨). (ನಾ). ೨. ಅಡ್ಡಿಯಾಗಿರುವುದು; ಅಡಚಣೆಯಾಗಿರುವುದು: ಸುತಜನ್ಮಕ್ಕಂ ಹಿಂದುಂ ಪ್ರತಿಬಂ[ಧಕಂ. ಬೋ] ಧಮೊಂದು ಪೂರ್ವಜನ್ಮಾಂತರಸಂಗತಮುಂಟು (ಜಿನ್ನಕೃ. ೩-೭೭). ೩. ಅಡ್ಡಿ; ಅಡಚಣೆ; ತಡೆ: ಧರ್ಮಚಿಂತನೆಗೆ ಪ್ರಬಲವಾದ ಪ್ರತಿಬಂಧಕಗಳಷ್ಟು ಇವೆ (ಅಧ್ಯಾತ್ಮ. ೩): ಈ ಅಹಂಕಾರ ವಿಶ್ವಸಾಮರಸ್ಯ ದರ್ಶನಕ್ಕೆ ಪ್ರತಿಬಂಧಕವಾಯಿತು (ಹುಣ್ಕಾ. ೬೨ ೩೬೫). ೪. ಅಡ್ಡಿಪಡಿಸುವವನು; ತಡೆಗಟ್ಟುವವನು: ಅಂಥತೆಯುಮನೇನೆಂದೆನ್ನೆ ಪ್ರತಿಬಂಧಕರು ಪೇಳಲು ಪಯದಭುಸಂಧಿಯಲಿ ಓವರಿಸಿ ಸಂವರಿಸಿದನು ಸೈನಿಕವ (ಜೈಮಿ. ೨೨–೨). ೫. [ನ್ಯಾಯಶಾ] ಕಾರ್ಯವು ನಿಂತುಹೋಗುವುದಕ್ಕೆ ಕಾರಣವಾದುದು: ಪ್ರತಿಬಂಧಕವೆಂದರೆ ಸಾಮಗ್ರಿಯೆಂಬ ಕಾರಣಸಮುದಾಯಕ್ಕೆ ನ್ಯೂನತೆಯನ್ನುಂಟುಮಾಡುವುದು. ಅದೇ ಸಾಮಗ್ರಿಕವೈಕಲ್ಯವು. ಅದನ್ನುಂಟುಮಾಡುವುದು ಪ್ರತಿಬಂಧಕ (ಸಿದ್ಧಾಂ. ೦೪೦). [ಸಂ.]

**ಪ್ರತಿಬಂಧಕಾಜ್ಞೆ** (ನಾ). [ರಾಜನೀ] ಜನರು ಗುಂಪುಗೂಡುವುದರಿಂದ ಶಾಂತಿಭಂಗವಾಗುವುದೆಂದು ನಿರ್ಧಾರವಾದಾಗ (ನಾಲ್ಕು ಜನರಿಗೀತ ಹೆಚ್ಚು ಜನರು ಒಟ್ಟಿಗೆ ಸೇರಬಾರದು, ಮೆರವಣಿಗೆ ನಡೆಸಬಾರದು ಮೊದಲಾದ) ನಿರ್ಬಂಧಗಳನ್ನು ವಿಧಿಸಂಪ ರಕ್ಷಣಾಧಿಕಾರಿಗಳ ಅಪ್ಪಣೆ; ಭಾರತಶಾಸನದ ೫೬, ೧೪೪ ಮೊದಲಾದ ವಿಧಿಗಳ ಚಲಾವಣೆ: ತುರ್ತುಪರಿಸ್ಥಿತಿಯಲ್ಲಿ ಜಾರಿಗೊಳಿಸಿದ ಪ್ರತಿಬಂಧಕಾಜ್ಞೆಯನ್ನು ಮೀರಿ ನಡೆದವರನ್ನು ದಸ್ತಗಿರಿ ಮಾಡಲಾಗುವುದು (೩೩೨). 'ನಿಷೇಧಾಜ್ಞೆ' ಪರಾ. [ಪ್ರತಿಬಂಧಕ + ಆಜ್ಞೆ]

**ಪ್ರತಿಬಂಧನ** (ನಾ). ೧. ಕಟ್ಟಿ ಹಾಕುವುದು. ೨. ತಡೆಯುವುದು; ಅಡ್ಡಿಪಡಿಸುವುದು. ೩. ಸೆರೆ; ಬಂಧನ. [ಸಂ.]

**ಪ್ರತಿಬಂಧಪಡಿಸು** (ಕ್ರಿ). ಅಡ್ಡಿಪಡಿಸು; ತಡೆ: ಎಲ್ಲ ಸೂಚನೆ, ಎಲ್ಲವನ್ನೂ ಕ್ರಮವಾಗಿ ಹೇಳಲಿ, ಅಷ್ಟರೊಳಗೆ ಇವನನ್ನು ಪ್ರತಿಬಂಧಪಡಿಸಬೇಡ (ಗಿರಿಜಾಕ. ೩೩–೦೩). [ಪ್ರತಿಬಂಧ + ಪಡಿಸು]

**ಪ್ರತಿಬಂಧಿನಿ** (ನಾ). ಪ್ರತಿಸ್ಪರ್ಧಿಯಾದಂದು: ಕಟ್ಟಿದ ಕಂಠಿಕಗ ಪೆತ್ತಿದಯ್ಯುಗೊಡೆಗಂ ದಯೆಗೆಯ್ದು ಯುವರಾಜಲಕ್ಷ್ಮಿಗಂ ಪ್ರತಿಬಂಧಿ[ಜಾಜಂ. ಬದ್ಧಿ]ನಿಯೆನಿಪ ಮಧುಂಮಹೀಪಾಲನ ವಕ್ಷಲಮುಕುಲದ ಕಂಠಿಕೆಯುಂ . . . ಮಾಧವೀಲಕ್ಷ್ಮಿಯುಂ ತನಗಮರೆ (ಕಾಂತಿಪು. ೬–೨೩ ಪ). [ಸಂ. ಪ್ರತಿಬಂಧಿನೀ]

**ಪ್ರತಿಬಂಧಿಸು** (ಕ್ರಿ). = ಪ್ರತಿಬಂಧಪಡಿಸು: ಅವನ ಈ ಸುಕ್ಕಾಟವನ್ನು . . . ಅವಳು ಎಂದೂ ಪ್ರತಿಬಂಧಿಸುತ್ತಿರಲಿಲ್ಲ (ಕಂಗಿಲ. ೩೩); ನಿನ್ನ ದೀರ್ಘಜೀವನದ ಗುಟ್ಟೇನು ? ನೆಗಡಿಯನ್ನು ಹೇಗೆ ಪ್ರತಿಬಂಧಿಸಿದಿ ? (ಕಟಕ್ಕ. ೦೦). [ಪ್ರತಿಬಂಧನ + -ಇಸು]

**ಪ್ರತಿಬದ್ಧ** (ಗು). ೧. ಕೂಡಿಕೊಂಡಿರುವ; ಸೇರಿದ: ಪೂರ್ವವಿದೇಹದ . . . ವತ್ಸಕಾವತೀವಿಷಯಪ್ರತಿಬದ್ಧಪ್ರಭಾವತೀಪುರಿಯೊಳ್ (ಅಂತಿ. ೩–೨೬ ಪ); ಹಾ ಮನಃಪ್ರಿಯ ಪುಂಡರೀಕ ಜನ್ಮಾಂತರಾವಿಸ್ಮೃತಮದನಾನುರಾಗ . . . ಎಂದುದ್ಗತಶೋಕೆಯಾಗಿ (ಕಾದಂಬ. ೬೦೯). (ನಾ). ೨. ಕೂಡಿಕೊಂಡಿರುವುದು; ಸೇರಿರುವುದು; ಸಂಬಂಧಿಸಿದುದು: ಇಂತೀ ಕಥೆಗೆಲ್ಲಂ ಗುರುದತ್ತಭಟಾರರ ಕಥೆಗೆ ಪ್ರತಿಬದ್ಧಂಗಳ್ (ವಡ್ಡಾರಾ. ೦೬೨–೨೦); ಹಾರಲತೆಯಂತೆ ಕಂಠಯೋಗ್ಯಮುಂ ಗ್ರಹಪಂಕ್ತಿಯಂತೆ ಧ್ರುವಪ್ರತಿಬದ್ಧಮುಂ . . . ಅಪ್ಪ ಗೀತೆಯಂ ವೀಣೆಯಂ ಬಾಜಿಸುತ್ತಿರ್ದಳ್ (ಕಾದಂಬ. ೬೬೯); ಈ ಮಧ್ಯಮಲೋಕದ ಪ್ರತಿಬದ್ಧಮಾಗಿ ಚಿತ್ರೆಯೆಂಬ ನೆಲದಿಂ ಮೇಗೆ . . . ತಾರಾಗಣವಿಮಾನಂಗಳಿರ್ಕುಂ (ಸುಕುಮಾ. ೦೦–೫೯). ೩. ಅಡ್ಡಿಪಡಿಸಿದುದು; ಪ್ರತಿಭಟನೆಯನ್ನು ಹೊಂದಿದುದು. ೪. ಬಂಧಿಸಿದುದು; ಬಂಧನಕ್ಕೊಳಗಾದುದು. ೫. ಚಿನ್ನ ಮೊದಲಾದ ಲೋಹಗಳಲ್ಲಿ ಕುಂದಣಿಸಿರುವುದು,—ಮೆಟ್ಟಿರುವುದು. ೬. ನಿರಾಶೆಗೊಂಡವನು; ಹತಾಶ: "ಮನೋಹತಃ ಪ್ರತಿಹತಃ ಪ್ರತಿಬದ್ಧಃ, ಹತಃ—೪ ಮನಸ್ಸಿನ ಉತ್ಸಾಹವು ತಪ್ಪಿದವನ ಹೆಸರು" (ಸಿದ್ಧಾಂತಿ. ೩೩೪). [ಸಂ.]

**ಪ್ರತಿಬಲ** (ನಾ). ೧. ಶತ್ರುವಿಗೆ ಸಮಾನವಾದ ಬಲವುಳ್ಳವನು,—ಸಾಮರ್ಥ್ಯವುಳ್ಳವನು. ೨. ಸಮರ್ಥ; ಶಕ್ತ. ೩. ಶತ್ರುಸೈನ್ಯ; ಪರಬಲ. ೪. ಹಗೆ; ಅರಿ; ಶತ್ರು: ಅಸಹಾಯನೆ ನಿಂ ಪ್ರತಿನೃಪರ ಸಹಾಯರ್ವಿಂ ಪ್ರತಿಬಲನದರ್ಲಿಂದನರ್ಥಕಂ ವಾಕ್ಯಾರ್ಥಂ (ಗದಾಯು. ೩–೯೩). [ಸಂ.]

**ಪ್ರತಿಬಿಂಬ** (ನಾ). ೧. ನೀರು, ಕನ್ನಡಿ ಮೊದಲಾದುವುಗಳಲ್ಲಿ ತೋರುವ ವಸ್ತುವಿನ ಪಡಿನೆಳಲು,—ಪ್ರತಿಚ್ಛಾಯೆ: "ಮಾರ್ಪೊಳೆದುದು ಪಡಿನೆಳಲೆಂಗಕ್ಕುಂ ಬುಧರಿಂ ಪ್ರತಿಬಿಂಬ" (ಕಬಿಕಂ. ೨೩೩); ರತ್ನಸ್ತೀ ಪ್ರತಿಕೃತಿಯೊಳರ್ಕಬಿಂಬಪ್ರತಿಬಿಂಬಂ ನೆಲಸಿ ಪೀಡೆಯಂ ಮಾಡಲುಗುಮೇ (ಕಾಂತಿಪು. ೬–೨೦೯); ಪ್ರತಿಬಿಂಬದ ನೆವದಿಂ ವನತಶಿಶೈಲಗ್ರಹನಿಕಾಯತಾರಾಂಕ ಜಗತ್ಕೃತಿಯಮನಬ್ಜೋದರನಾಕೃತಿಯಂ ತನ್ನೊಳಗೆ ತಳೆದು ಶಿಗೊಳ ನೆಸಗುಂ (ಕಾದಂಬ. ೩೩೪). ೨. ಮೂಲಾಕೃತಿಗೆ ಸದೃಶವಾದ ರೂಪ, ವಿಗ್ರಹ, ಪ್ರತಿಮೆ, ಚಿತ್ರ ಮುಂತಾದುವು: "ಪ್ರತಿಬಿಂಬಮಾ ಪ್ರತಿಚ್ಛಾಯಂ . . . ಪ್ರತಿಪ್ರಾಣಮೆಂದೆನಲದುಂ ಪ್ರತಿಯಪ್ಪ ರೂಪಕ್ಕಂ" (ಶಬ್ದಂಗಸಾ. ೬–೨೬); ನಿರ್ಮಲಪ್ರತಿಬಿಂಬ ಕಾಣಿಸುತಾದಿನಾರಾಯಣನ ಮೂರುತಿಯ ಅಂಬುಜಾಸನೆ ಕೌಸಲೆಯ ಗರ್ಭಾಂಬುನಿಧಿಯಲಿ (ತೊರವೆ. ೬–೯); ಪರಮಾತ್ಮನ ಪ್ರತಿಬಿಂಬ ಅಥವಾ ಸಾದೃಶ್ಯಕ್ಕೆ "ಪ್ರತಿಮಾ" ಎಂಬ ಶಬ್ದವನ್ನು ಭಾರತೀಯರು ಉಪಯೋಗಿಸುತ್ತಾರೆ (ಭಾರತದ. ೩೦೯). ೩. [ದ್ವೈತ] ಇಪ್ಪತ್ತು ಬಗೆಯ ದ್ರವ್ಯಗಳಲ್ಲಿ ಒಂದು; ಉಪಾದಾನ ಕಾರಣವಾಗಿರುವುದು: ಪರಮಾತ್ಮ, ಲಕ್ಷ್ಮಿ . . . ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಸಾ. ೧೬೩). [ಸಂ.]

**ಪ್ರತಿಬಿಂಬಕಲ್ಪ** (ನಾ). [ಕಾವ್ಯಮೀ] ಪೂರ್ವಕವಿಗಳು ಹೇಳಿರುವ ವಿಷಯವನ್ನು ತನ್ನ ಕೃತಿಯಲ್ಲಿ ಅಳವಡಿಸಿಕೊಳ್ಳುವ ಮೂರು ಬಗೆಗಳಲ್ಲಿ ಒಂದು; ಹಿಂದಿನ ಕವಿಗಳ ಕಾವ್ಯಾರ್ಥವನ್ನು ಬೇರೆ ಮಾತುಗಳಲ್ಲಿ ತನ್ನ ಕೃತಿಯಲ್ಲಿ ವರ್ಣಿಸುವುದು: ಹೋಲಿಕೆಗಳನ್ನು ಆನಂದವರ್ಧನನು "ಪ್ರತಿಬಿಂಬಕಲ್ಪ", "ಆಲೇಖ್ಯಪ್ರಖ್ಯ", "ಸಮಾನದೇಹಿಕಲ್ಪ" ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾನೆ... "ಪ್ರತಿಬಿಂಬಕಲ್ಪ" ಎಂಬುದರ ಹೆಸರೇ ಸೂಚಿಸಿರುವಂತೆ, ಅದರ ತಿರುಳೆಲ್ಲವೂ ಪರರವಿಯದು. ಮಾತಿನ ಹೊದಿಕೆ ಮಾತ್ರ ಇವನದು (ಭಾರತೀಯ. ೦೯೭). [ಸಂ.]

**ಪ್ರತಿಬಿಂಬಚೈತನ್ಯ** (ನಾ). [ಅದ್ವೈತ] ಜೀವಿಯ ಅಂತಃಕರಣದಲ್ಲಿ ಮೂಡಿರುವ ಪರಮಾತ್ಮ; ಶುದ್ಧಚೈತನ್ಯ: ಅಧಿಷ್ಠಾನಚೈತನ್ಯವು ಪ್ರತಿಬಿಂಬಚೈತನ್ಯವೂ ಇವೆರಡು ಕೂಡಿ ಜೀವೇಶ್ವರನು (ಅಕ್ಕಸ್ಯ. ೨–೬). [ಸಂ.]

**ಪ್ರತಿಬಿಂಬನ** (ನಾ). ೧. =ಪ್ರತಿಬಿಂಬ ೧. ೨. ಹೋಲಿಕೆ ; ಸಾದೃಶ್ಯ: ಎಣೆ: ಎಲ್ಲಕ್ಕೂ ಹೆಚ್ಚಿನ ಪ್ರತಿಬಿಂಬನ ಸ್ವಾಮಿ ವಿವೇಕಾನಂದರ ಹಿಮಾಲಯ ಯಾತ್ರೆಯನ್ನು ವರ್ಣಿಸುವ ೧೪ನೆಯ ಪ್ರಕರಣದಲ್ಲಿ ದೊರೆಯುತ್ತದೆ (ಸವಿಜೀ. ೩೩ ಶೀ೧೪). [ಸಂ.]

**ಪ್ರತಿಬಿಂಬಿತ** (ಗು). ೧. ಪಡಿಮೂಡಿದ; ಪ್ರತಿಫಲಿತವಾಗಿರುವ : ಅನರ್ಘರತ್ನಮಣಿಮಕುಟಕಿರೀಟಮಯೂಖಮಾಲಿಕಾಪರಿಚಿತಪ್ರಭಾಕದಂಬಕ ಪ್ರತಿಬಿಂಬಿತವಿಮಾನಭಿತ್ತಿವಿತಾನಂ (ಶಾಂತಿಪು. ೬-೧೩ ವ). (ನಾ). ೨. ಪಡಿಮೂಡಿದುದು; ಪ್ರಕಾಶಿತವಾದುದು: ಭರತನು . . . ನುಡಿಯುವ ಮಾತುಗಳಲ್ಲಿ ಸನಾತನಹಿಂದೂಧರ್ಮದ ಸಾರವೇ ಪ್ರತಿಬಿಂಬಿತವಾಗಿದೆ (ಭಾರತ. ೪೪೭). [ಸಂ.]

**ಪ್ರತಿಬಿಂಬಿಸು** (ಕ್ರಿ). ೧. ಪಡಿಮೂಡು ; ಪ್ರತಿಫಲಿತವಾಗು : ಚಂದ್ರಾಪೀಡನಂ . . . ಅಂಗನಾಜನಘನಸ್ತನದೊಳ್ ಪ್ರತಿಬಿಂಬಿಸುತ್ತಿರಲ್ ಪುರುಡಿಸಿದಳ್ (ಕಾದಂಬ. ೩೨); ಅಂಬುವನೆಚ್ಚಾಗಳ್ ಪ್ರತಿಬಿಂಬಿಸೆ ಕೆಯ್ನೀರೊಳವಳ ವದನಂ ಪಥಿಕಂ ನಂಬಿ ನಲಿದೀಂಟಿದಂ (೧೧೪. ೭-೨೬); ಪೊಂಬಣ್ಣದಿಹ ಜಡೆಯು ಬಿಂಬರೊಳ್ ಥಳಥಳಿಸುವಂಬರಾಪಗೆಯು ವಿಮಲಾಂಬುವೊಳ್ ನೋಡೆ ಪ್ರತಿಬಿಂಬಿಸುವ ಚೆಲ್ವುವಡೆದಂಬು ಜಾರಿಯ ಕಲೆಯ ತುಂಬಿ (ಶಂಕರ. ೦೮-೦). ೨. ಪಡಿಮೂಡಿಸು; ಪ್ರತಿಫಲಿತವಾಗುವಂತೆ ಮಾಡು: ಎಂದೋ ನಿರ್ಮಿಸಿದ ಪಠ್ಯವಸ್ತು ಪ್ರಗತಿಪಥದಲ್ಲಿ ಮುಂದುವರಿಯುತ್ತಿರುವ ಜೀವನವನ್ನು ಪ್ರತಿಬಿಂಬಿಸಲಾರದು (ಶಿಕ್ಷಣ. ೦೩೩). [ಪ್ರತಿಬಿಂಬನ + -ಇಸು₂]

**ಪ್ರತಿಬುದ್ಧ** (ಗು). ೧. ಎಚ್ಚತ್ತಿರುವ; ಎಚ್ಚರಗೊಂಡಿರುವ. ೨. ಪ್ರಜ್ಞೆಯಿಂದ ಕೂಡಿದ; ಜ್ಞಾನೋದಯವಾದ. ೩. ಅರಳಿದ; ವಿಕಸಿತವಾದ. ೪. ಪ್ರಕಾಶಪಡಿಸಿದ; ಪ್ರಸಿದ್ಧಪಡಿಸಿದ. (ನಾ). ೫. ಅರಳಿದುದು; ವಿಕಸಿತವಾದುದು: ಪ್ರತಿಬುದ್ಧಂ ತ್ವನ್ಮುಖಮುಚಿತ ತಾರಕಂ ತುಂಬಿವೆರಸಿದಂಬುಜಮೆಂಬೀ ದ್ವಿತಯಮುಮೊರೊಂದು ಪೋಲ್ವು ತೋಱೆ ಗತನಿದ್ರನಾಗು ನೀಂ ಜನಚಂದ್ರಾ (ಶಾಂತಿಪು. ೩-೯೭). ೬. ಗಮನಿಸಿದುದು; ಗುರುತಿಸಿದುದು. ೭. ಪ್ರಸಿದ್ಧವಾದುದು; ಹೆಸರಾದುದು. ೮. ಮಹೋರ್ಮಿಯಿಂದ ಎಚ್ಚತ್ತಿರುವವನು; ಪ್ರಜ್ಞೆಯಿಂದ ಕೂಡಿದವನು. ೯. ಪ್ರಜ್ಞಾವಂತ; ಬುದ್ಧಿವಂತ: ಪ್ರತಿಬುದ್ಧರಂ ಕುಱಿತ್ತೀ ಸ್ಥಿತಿಯಿಂದಂ ಕಿಱಿದು ಮಾರ್ಗಸೂಚನೆಗೆಯ್ದಂ ಮತಿವಂತರಱಿದು ಪೇಳ್ವುದು ವಿತರ್ಕದಿಂ ಮತ್ತಮುಕ್ತಶೇಷಮನಿದಱೊಳ್ (ಕಾವ್ಯಾವ. ೪೦೨). [ಸಂ.]

**ಪ್ರತಿಬೋಧಕ** (ನಾ). ೧. ನಿದ್ದೆಯಿಂದ ಎಚ್ಚರಗೊಳಿಸುವವನು. ೨. ಬೋಧಿಸುವವನು ; ಉಪದೇಶಿಸುವವನು : ಇಂದ್ರಕದಂಬ ಪ್ರತಿಬೋಧಕರ್ . . . ತಮ್ಮ ನೆಲೆಯಿಂ ಲೋಕಾಂತಿಕರ್ ಬರ್ಪುದುಂ (ಶಾಂತಿಪು. ೦೦-೯೨). [ಸಂ.]

**ಪ್ರತಿಬೋಧನ** (ನಾ). ೧. ಬೋಧಿಸುವಿಕೆ ; ತಿಳಿಸುವಿಕೆ; ಅರಿವುಂಟುಮಾಡುವಿಕೆ: ಮುನಿಪತಿ ನಿಮ್ಮಿಂ ಪ್ರತಿಬೋಧನಮಿಂದಾದತ್ತು (ಸುಕುಮಾ. ೧೨-೦೪). ೨. ಅರಿವು; ಜ್ಞಾನ. [ಸಂ.]

**ಪ್ರತಿಬೋಧಿಸು** (ಕ್ರಿ). ತಿಳಿವಳಿಕೆಯನ್ನುಂಟುಮಾಡು; ಜ್ಞಾನೋದಯವಾಗುವಂತೆ ಮಾಡು : ಅವರ್ಪ್ರತಿಬೋಧಿಸಿ ಪೊಗಲೊಡಂ ಪರಿನಿಷ್ಕ್ರಮಣಕಲ್ಯಾಣೋತ್ಸವೋತ್ಸುಕರಾಗಿರಲ್ (ಆಂಪು. ೯-೬೩ ವ); ಅವರ್ ತನ್ನಂ ಪ್ರತಿಬೋಧಿಸಿ ಮೂದಲಿಸಿ ನುಡಿಯಲೊಡಂ (ಆಪು. ೬-೪೯ ವ); ಮುನ್ನಿನ ಭವದೊಳ್ ತನ್ನಂ ಪ್ರತಿಬೋಧಿಸಿ ಮಹಾಪುರುಷನಪ್ಪುದನಱಿದು (ಸುಕುಮಾ. ೬-೨ ವ). [ಪ್ರತಿಬೋಧನ + -ಇಸು₂]

**ಪ್ರತಿಭಟ** (ನಾ). ೧. ಹುರುಡಿಸುವವನು; ಪ್ರತಿಸ್ಪರ್ಧಿ. ೨. ಶತ್ರುಪಕ್ಷದ ಸೈನಿಕ; ಎದುರಾಳಿ : ಎಲವೊ ಸಾರಥಿಯಹಾಗು ನಡೆ . . . ಕೊಲುವೆನೀ ಪ್ರತಿಭಟನಿಕಾಯವ ನಿನ್ನ ಸಾಕ್ಷಿಯಲಿ (ಕುಮಾ. ೬-೪೦); ಬೇಗದಿಂ ಪ್ರತಿಭಟನ ಶಿರವನಿಳುಹ (ಕೃಷ್ಣಪಾ. ೬೩-೩೭). [ಸಂ.]

**ಪ್ರತಿಭಟನೆ** (ನಾ). ಎದುರಿಸುವಿಕೆ ; ವಿರೋಧಿಸುವಿಕೆ : ಇದು ತನ್ನ ಮಗನಾದವನಿಗೂ ಆಗಬಾರದೆಂದು ಅವನು ಯೋಚಿಸುತ್ತಿರುವುದೇ ಅವನ ಪ್ರತಿಭಟನೆಗೆ ಕಾರಣವಾಗಿತ್ತು (ಕಂಗೋ. ೧೯೬); ರಚನೆ, ಪ್ರತಿಭಟನೆ, ಹೋರಾಟ, ಪರಾಜಯ, ಸಂಗ್ರಹಾಸಕ್ತಿ-ಇವು ಸನ್ನಿವೇಶಗಳಿಗೆ ಪ್ರತಿಕ್ರಿಯಾತ್ಮಕವಾದವು (ಶಿಕ್ಷಣ. ೬೬). [ಸಂ. ಪ್ರತಿಭಟನ]

**ಪ್ರತಿಭಟಿಸು** (ಕ್ರಿ). ಎದುರಿಸು ; ವಿರೋಧಿಸು : ಮುಂದೆ ನಿಂತ ಕಾಮನನ್ನು ಪ್ರತಿಭಟಿಸುವ ಧೈರ್ಯ ಈಶ್ವರನಿಗಿಲ್ಲ (ಶಾಹಿಸ. ೦೪೪); ಘಟ್ಟಿವಾಳಯ್ಯ . . . ಸಂಪ್ರದಾಯವನ್ನು ಪ್ರತಿಭಟಿಸಿ ನಿಂತ ವ್ಯಕ್ತಿ (ಕೂಕ್ಯಕು. ೦೨೬). [ಸಂ. ಪ್ರತಿಭಟನ + -ಇಸು₂]

**ಪ್ರತಿಭಾನ** (ನಾ). ೧. ಬೆಳಕು ; ಕಾಂತಿ; ಪ್ರಕಾಶ. ೨. ಅರಿವು; ಜ್ಞಾನ; ತಿಳಿವಳಿಕೆ. ೩. ಹೊಸಹೊಸ ವಿಷಯಗಳು ಹೊಳೆಯುವಂತೆ ಮಾಡುವ ಚೈತನ್ಯ ; ಪ್ರತಿಭೆ : ಪ್ರತಿಭಾನಂ ಕಾವ್ಯವಿದ್ಯಾಪ್ರಚಯವಿಚಯಂ . . . ಕವಿತೆಗೆ ನಿಯತಂ ಕಾರಣಂ (ಕಾವ್ಯಾವ. ೪೦೪); ಹಳೆಯ ಶಬ್ದಗಳೆಂದು ಮೂಲೆಗಿಟ್ಟು ನಮ್ಮ ಪ್ರತಿಭಾನಶಕ್ತಿಯನ್ನು ಮಂಕುಗೊಳಿಸುವುದೇಕೆ ? (ಹೋಕಾಮ. ೦೫೦ ಪ್ರಸ್ತಾವನೆ). ೪. ಸಮಯಸ್ಫೂರ್ತಿ. ೫. ದಿಟ್ಟತನ; ಧೈರ್ಯ. [ಸಂ.]

**ಪ್ರತಿಭಾನ್ವಿತ** (ಗು). ೧. ಪ್ರಕಾಶದಿಂದ ಕೂಡಿದ. ೨. ತಿಳಿವಳಿಕೆಯುಳ್ಳ. ೩. ಹೊಸಹೊಸ ವಿಷಯಗಳು ಸ್ಫುರಿಸುವ ಚೈತನ್ಯವುಳ್ಳ; ಪ್ರತಿಭೆಯಿಂದ ಕೂಡಿದ : ಪ್ರತಿಭಾನ್ವಿತವ್ಯಕ್ತಿಗಳಿಗೆ ಸರಿಯಾದ ಅವಕಾಶ ಸಿಕ್ಕಿದರೆ ಒಳ್ಳೆಯ ಕಾರ್ಯಗಳಾಗುತ್ತವೆ (ಋಷಿ). (ನಾ). ೪. ಹೊಸಹೊಸ ವಿಷಯಗಳು ಸ್ಫುರಿಸುವ ಚೈತನ್ಯವುಳ್ಳವನು ; ಪ್ರತಿಭಾವಂತ; ಧೀಮಂತ: "ಪ್ರಗಲ್ಭಃ, ಪ್ರತಿಭಾನ್ವಿತಃ- ೨ ಆಗಾಗ್ಗೆ ಹೊಸ ಹೊಸದಾಗಿ ಪ್ರಕಾಶಿಸುವ ಪ್ರಜ್ಞೆಯುಳ್ಳವನ ಪೆಸರು" (ಸಿದ್ಧಾಂತ. ೩೦೯). ೫. ಧೈರ್ಯಶಾಲಿ. [ಸಂ.]

**ಪ್ರತಿಭಾವಂತ** (ಗು). ೧. =ಪ್ರತಿಭಾನ್ವಿತ ೩ : ನೀನು ಶಿಶ್ಯನನ್ನು ಅನುಸರಿಸಲು ಅವನೇನಂಥ ಪ್ರತಿಭಾವಂತವಿದ್ಯಾರ್ಥಿಯೇ ? (ಶಾಕು. ೯೨); ಪಾಶ್ಚಾತ್ಯವೈಜ್ಞಾನಿಕಸಂಸಿದ್ಧಿಗಳು . . . ಭಾರತೀಯ ಪ್ರತಿಭಾವಂತ ತರುಣರನ್ನು ಆಕರ್ಷಿಸಿದವು (ಪುಕ್ಕಾಪ. ೦೦೭ ಶೀ೧೪). (ನಾ). ೨. =ಪ್ರತಿಭಾನ್ವಿತ ೪ : ನಿಜವಾದ ಪ್ರತಿಭಾವಂತನ ಸೃಷ್ಟಿ ಎಲ್ಲವೂ ಸೌಂದರ್ಯವಾಗುತ್ತದೆ (ಶಾಂತಿ. ೬೦). [ಸಂ. ಪ್ರತಿಭಾವತ್]

**ಪ್ರತಿಭಾವತ್ವ** (ನಾ). ಪ್ರತಿಭೆಯನ್ನು ಹೊಂದಿರುವಿಕೆ : ಪ್ರತಿಭಾವತ್ವಮುಮಕೃತಕಚತುರತೆಯುಂ . . . ತರ್ಕಂ ಪ್ರತೀತಿಯುಂ ವಾಗ್ಮಿದಗ್ಧತಾನಿಪುಣತೆಯೊಳ್ (ಕವಿರಾ. ೦-೦೦). [ಸಂ.]

**ಪ್ರತಿಭಾವನೆ** (ನಾ). ಬೇರೆಯ ಭಾವನೆ, ಅಭಿಪ್ರಾಯ : ನೆವದ ತಪವಲ್ಲದಲೆ ಮತ್ತಿನ್ನವಗೆ ಪ್ರತಿಭಾವನೆಗಳಿಲ್ಲವೆ ತವಗೆ ತಾ ದೇವಾಗಿ ಪಡೆದನು ಕೇವಲಜ್ಞಾನ (ಜೀ.ಕೃ. ೦೨-೩೦). [ಸಂ. ಪ್ರತಿಭಾವನ]

**ಪ್ರತಿಭಾಶಾಲಿ** (ನಾ). = ಪ್ರತಿಭಾನ್ವಿತ ೪: ಸ್ಕಾಟ್ ಎಡಿಸನ್ ಇವರು ಬಾಲ್ಯದಲ್ಲಿ ಮಂಕುದಿಣ್ಣೆಗಳಾಗಿದ್ದರು. ಅನಂತರ ಪ್ರತಿಭಾಶಾಲಿಗಳೆನಿಸಿದರು (ಶಿಕ್ಷಣ. ೬೦೩); ಪ್ರತಿಭಾಶಾಲಿಯಾದ ಈ ಲೇಖಕ ಆ ವೇಳೆಗಾಗಲೇ ಕೆಲವು ಧ್ವನಿತತ್ತ್ವಗಳನ್ನು ಕುರಿತು ಪ್ರಸ್ತಾಪಿಸುತ್ತಾನೆ (ಧ್ವಾಪಿ. ೦೪ ಟಿಪ್ಪಣಿ). [ಸಂ. ಪ್ರತಿಭಾಶಾಲಿನ್]

**ಪ್ರತಿಭೂ** (ನಾ). ಹೊಣೆಗಾರ ; ಜಾಮೀನುದಾರ :"ಪ್ರತಿಭೂಃ, ಲಗ್ನಕಃ – ಈ ೨ ಹೊಣೆ(ಗಾಱ)" (ಅಭಿಧಾನ. ೬೨-೨೨೩); ವ್ರತವು

ಅಂತು ಕನಕಶಾಂತಿಮುನಿರಾಜು ಕೇವಲಬೋಧಪ್ರದ್ಯೋತಕ್ಕಾದಿತ್ಯನಾಗೆ (ಶಾಂತಿಕ. ೯.೨೩ ಪ); ವಿಕ್ರಮಾಂಕಂ ಸೋಮಪ್ರದ್ಯೋತಕೀರ್ತಿ ಪ್ರಕಟಿತದಶದಿಗ್ಭಿತ್ತಿ (ಎಕ. VIII, ಸೊರಬ. ೨೬೩-೬೭; 1070). ೨. ಕಾಂತಿ; ಪ್ರಕಾಶ; ತೇಜಸ್ಸು: ದಿನಲಕ್ಷ್ಮೀಕಾಂತೆ . . . ಎಯ್ದುವಗ್ಗಲ್ಲಿ ಕಾಲಿಂ ನವಮಣಿಮಯಮಂಜೀರಕಂ ನುಣ್ಚುತಂ ಶೀವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿಶಿರೋಭಾಗದೊಳ್ ಬಿಟ್ಟುದೆಂಬಂತಿನಬಿಂಬಂ ರಂಜಿಸಿತ್ತಸ್ತಮಯಸಮಯದೊಳ್ ಮುಕ್ತಪಾದಾವಲಂಬಂ (ಕಾದಂಪೂ. ೩೦೬); ಕಾಂತಾಕಪೋಲೆಂದು ನವಪ್ರದ್ಯೋತಮಂ ಮುಂ ತಳೆಯೆ ಹಿಮಕರಂ ಪಿಂತೆ (ರಾಜಶೇ. ೯-೪೪). [ಸಂ.]

**ಪ್ರದ್ಯೋತನ** (ನಾ). ಸೂರ್ಯ; ರವಿ : "ಆದಿತ್ಯಃ, ಸವಿತಾ, ಸಹಸ್ರಕಿರಣಃ, ಪ್ರದ್ಯೋತನಃ . . . ತ್ರಯಿಯಾತನುಃ -ಈ ೪೭ ಆದಿತ್ಯನ ಪೆಸರ್" (ಕರಾಯು. ೬-೬೩). [ಸಂ.]

**ಪ್ರದ್ಯೋತಿ** (ನಾ). ಬೆಳಕು; ಕಾಂತಿ; ಪ್ರಕಾಶ : ತಳಿರ್ದೊಂಗಲ್ ಪುದಿದಂದದಿಂದಿರೆ ತಳಪ್ರದ್ಯೋತಿಯಿಂದುದ್ಗಮೋಜ್ವಳದಾಮಂ ತದುದಾರಸೌರಭಚಯಂ ಸುಯ್ಗಂಪಿನಿಂದಾವಗಂ ದಳವೆ ಜುತ್ತಿರೆ (ಚಂದ್ರಪ್ರ. ೧-೧೩೭). [ಸಂ. ಪ್ರದ್ಯೋತಿಸ್]

**ಪ್ರದ್ರಾವ** (ನಾ). ೧. ಓಡುವುದು; ವೇಗವಾದ ಚಲನೆ. ೨. ಹಿಂಜರಿದು ಓಡಿಹೋಗುವಿಕೆ; ಪಲಾಯನ : "ಪ್ರದ್ರಾವಃ . . . ಅಪಯಾನಂ-ರ ಪಲಾಯನವಾಗುವುದಕ್ಕೆ ಹೆಸರು, ತಪ್ಪಿಸಿಕೊಂಡು ಓಡಿ ಹೋಗುವಿಕೆ" (ಸಿದ್ಧಾಂತಿ. ೨೮೦). [ಸಂ.]

**ಪ್ರಧನ** (ನಾ). ೧. ಕಾಳಗ; ಯುದ್ಧ; ಸಮರ : ಸಮುಧೀರಸ್ತ್ರಶಸ್ತ್ರಬಲದೊಳ್ ದೃಢಕಾಯದೊಳತ್ಯುದಗ್ರವಿಕ್ರಮದೊಳನಂತವೀರ್ಯದೊಳನೇಕವಿಧಪ್ರಧನಂಗಳೊಳ್ (ಸಂತಾಪ. ೦೪-೦೩೬). ೨. ಯುದ್ಧದಲ್ಲಿ ಸೂರೆ ಮಾಡಿದ ಲೂಟಿ.-ಕೊಳ್ಳೆ. ೩. ಹರಿದು ಹಾಕುವುದು. ೪. ಹಾಳು ಮಾಡುವುದು; ನಾಶಮಾಡುವುದು. ೫. ಧನವಂತ; ಐಶ್ವರ್ಯವಂತ. ೬. ಒಂದು ನರಕದ ಹೆಸರು : ಪ್ರಧ(ಧ್)ನ. . . ಬಾಧೆಯುಂ ಬೈದು ಮಂತ್ರಿನರಕಂಗಳಿಂ ಕೂಡಿ ಅಘೋರಮೆಂಬರಸುನರಕವಿಹುದು (ವಿವೇಕ.೦೭೪). [ಸಂ.]

**ಪ್ರಧಾನ** (ಗು). ೧. ಪ್ರಮುಖವಾದ; ಮುಖ್ಯವಾದ : ಪ್ರಧಾನಪುರುಷಾರ್ಥಾಕಿತಂಗಳಪ್ಪ ಪುರಂಗಳುಮಂ (ಆದಿಪು. ೬-೬೩ ವ). ೨. ಶ್ರೇಷ್ಠವಾದ; ಉತ್ಕೃಷ್ಟವಾದ: (೬). (ನಾ). ೩. ಮುಖ್ಯವಾದುದು; ಪ್ರಮುಖವಾದುದು : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ. . . ಅಗ್ರಣೀಃ _ ಈ ೧೩ ಮುಖ್ಯಂ" (ಕರಾಯು. ೦೦೩-೩); ಅಖಿಲಮಂತ್ರಿಮಂಡಳಿಕಪ್ರಧಾನನುಮಪ್ಪ ಕುಮಾರಪಾಲಿತನೆಂಬ ಮಂತ್ರಿಮುಖ್ಯನನಿಂತೆಂದಂ (ಕಾದಂಪೂ. ೬೨); ಮಾನವಇತಿಹಾಸದಲ್ಲಿ ನದಿಗಳ ಪಾತ್ರ ಬಹು ಪ್ರಧಾನವಾದುದು (ಸವರ. ೦೮). ೪. ಮುಖ್ಯವಾದ ನಿಯಮ : ವಚನಗಳನ್ನು ವಿಧಿನಿಷೇಧ ಅರ್ಥವಾದಗಳೆಂದೂ ಪ್ರಧಾನಲಿಂಗಗಳೆಂದೂ, ಮುಖ್ಯ ಗೌಣಗಳೆಂದೂ, ಗುರುಲಘುಗಳೆಂದೂ ಸಾಮಾನ್ಯವಿಶೇಷಗಳೆಂದೂ, ವಿಂಗಡಿಸಿಕೊಂಡು ನಡೆಯಬೇಕು (ಆರ್ಯರ. ೩೪). ೫. [ವೇದಾಂತ] ಜಗತ್ತಿಗೆ ಮೂಲಕಾರಣವೆಂದು ಹೇಳಲಾಗಿರುವ ಪ್ರಕೃತಿ ; ಮೂಲಪ್ರಕೃತಿ ; ಸತ್ತ್ವ, ರಜಸ್ಸು ಮತ್ತು ತಮಸ್ಸು— ಮೂರು ಗುಣಗಳುಳ್ಳ ಪ್ರಕೃತಿ ; ೭ ಸಾಂಖ್ಯರೇ ಮೊದಲಾದ ಅನೇಕ ದಾರ್ಶನಿಕರು ಪ್ರಧಾನ ಅಥವಾ ಪ್ರಕೃತಿಯನ್ನು ತಾವು ಗಣಿಸಿರುವ ಇಪ್ಪತ್ತೈದು ತತ್ತ್ವಗಳಲ್ಲಿ ಮೊದಲನೆಯದು ಹಾಗೂ ಮುಖ್ಯವಾದುದು ಎಂದು ಹೇಳಿದ್ದಾರೆ. ಪ್ರಧಾನ ೧, ಮಹತ್ತತ್ತ್ವ ೧, ಅಹಂಕಾರತತ್ತ್ವ ೧, ಭೂತತನ್ಮಾತ್ರೆಗಳು ೫, ಮಹಾಭೂತಗಳು ೫, ಇಂದ್ರಿಯಗಳು ೧೧, ಪುರುಷ ೧—ಹೀಗೆ ಇಪ್ಪತ್ತೈದು ತತ್ತ್ವಗಳು ಉಕ್ತವಾಗಿವೆ : "ಪ್ರಕೃತಿಯಲ್ಲಿಯುಂ ಪ್ರಧಾನವೆಂಬುದು" (ಕರಾಯು. ೦೩೩-೧೩) ; ಅಚೇತನವಾದ ಪ್ರಧಾನದಿಂದಾಗಲಿ, ಅಣುಗಳಿಂದಾಗಲಿ ... ಜಗತ್ತಿನ ಉತ್ಪತ್ತಿಯೇ ಮುಂತಾದದ್ದು ಆಗಿರಬಹುದೆಂದಿಟ್ಟುಕೊಳ್ಳುವುದಕ್ಕೆ ಆಗಲಾರದು (ಬ್ರಹ್ಮಸೂ. ೨೦). ೬. ಪರಮಾತ್ಮ ; ದೇವರು. ೭. ಬುದ್ಧಿ ; ಪ್ರಜ್ಞೆ : "ಪ್ರಧಾನಂ, ಪರಮಾತ್ಮ, ಬುದ್ಧಿ, ಮೂಲಪ್ರಕೃತಿ, ಪ್ರಧಾನಿ, ಮುಖ್ಯನಾದವನು, ಸಾಂಖ್ಯ ಜಗತ್ಕಾರಣ" (ಸಿದ್ಧಾಂತಿ. ೪೦೩). ೮. ರಾಜನಿಗೆ ಮುಖ್ಯಸಹಾಯಕನಾದ ಹಿರಿಯ ಅಧಿಕಾರಿ ; ಮಹಾಮಾತ್ರ : "ಮಹಾಮಾತ್ರಃ, ಪ್ರಧಾನಂ-೨ ಅರಸನ ಬಳಿಯಲ್ಲಿ ಅಧಿಕಾರಿಗಳಾದ 'ದೊಡ್ಡಮನುಷ್ಯರಿಗೆ ಹೆಸರುಗಳು, ದಳವಾಯಿ ಮುಂತಾದವರಿಗೂ ಹೆಸರುಗಳು" (ಸಿದ್ಧಾಂತಿ. ೨೩೩); ಮಂಡಲಿಕಮಹಾಸಾಮಂತ ಮಂತ್ರಿಪ್ರಧಾನಪುರೋಹಿತಾಂತರ್ವಂಶಿಕಾದಿ ಪರಿವಾರಪರಿವೃತಂ (ಆದಿಪು. ೨-೨ ವ); ಪಿರಿಯರಸಿ ಕಂಚಲಮಹಾದೇವಿಯರ ಸವಿಷಾಪದಲ್ . . . ಸಮಸ್ತಪ್ರಧಾನವೆಲ್ಲರುಭಿರೆ (ಸೌತ್ಇಂ. XX, ೪೬-೫೦ ; 1072). 'ಅಷ್ಟಾದಶಪ್ರಧಾನ' ಪರಾ. ೯. ಒಂದು ಬಗೆಯ ಆಭರಣ : ಅಶ್ವರತ್ನದ ಆಭರಣದ ಲೆಖ್ಖ . . . ೫ ಹಡಕಿ ೪ ಪ್ರಧಾನ ೧ ಭಾಲೆ (ಎಕ. XIV, ಪಂಜಿನ. ೨೯೩, ಪುಟ ೦೯೩ ; 1847). ೧೦. ಒಳ್ಳೆಯ ಕುಲದಲ್ಲಿ ಹುಟ್ಟಿದವನು ; ಸದ್ವಂಶಜ. ೧೧. ಒಳ್ಳೆಯ ನಡತೆ : "ಮಂತ್ರಿ ಸತ್ಕುಲಜಂ ಸಚ್ಚರಿತಂಗಳೆಂಬಿವು ಪ್ರಧಾನಾಖ್ಯಂ" (ನಾನಾರ. ೦೬೦). ೧೨. [ವ್ಯಾಕ] ಸಮಾಸದಲ್ಲಿ ಪ್ರಧಾನವಾದ ಅರ್ಥವನ್ನು ಕೊಡುವ ಪದ. [ಸಂ.]

**ಪ್ರಧಾನಕ್ರಿಯೆ** (ನಾ). [ವ್ಯಾಕ] ವಾಕ್ಯದಲ್ಲಿರುವ ಮುಖ್ಯವಾದ ಕ್ರಿಯಾಪದ : ಕಾದುತ್ತುಂ ಬಂದಂ . . . ಕಡೆದೊಡೆ ಪಾಲ್ಗಡಲ್ ವಿವಿಧವಸ್ತುವನೀಯದೆ . . . ಮೊದಲನೆಯ ವಾಕ್ಯದಲ್ಲಿ 'ಬರುವುದೂ' ಎರಡನೆಯ ವಾಕ್ಯದಲ್ಲಿ 'ಈವುದೂ' ಪ್ರಧಾನಕ್ರಿಯೆಗಳು (ಕೃಶಿಪ. ೪೪). [ಸಂ. ಪ್ರಧಾನಕ್ರಿಯಾ]

**ಪ್ರಧಾನತೆ** (ನಾ). ಪ್ರಾಮುಖ್ಯತೆ : ಹೊನ್ನಿನ ಪ್ರಧಾನತೆಯಿಂದ ಹಂಚೀರು ಅಥವಾ ಹೇಮಾವತಿ ಎಂಬ ಹೆಸರು ಈ ಪಟ್ಟಣಕ್ಕೆ ಬಂದಿರಬಹುದೆಂಬುದು ಊಹೆ (ಪೋಳಂಬ. ೬೬). [ಸಂ. ಪ್ರಧಾನತಾ]

**ಪ್ರಧಾನಮಂತ್ರಿ** (ನಾ). ೧. ಮುಖ್ಯಸಚಿವ ; ಮೊದಲ ಸಚಿವ ; ಪ್ರಧಾನ ಅಮಾತ್ಯ : ನಿಜಪ್ರಿಯಪ್ರಧಾನಮಂತ್ರಿಮತಿವರನೊಳಂ . . . ಆಲೋಚಿಸಿ (ಆದಿಪು. ೪-೬೯ ವ) : ಅರಸು ಪ್ರಧಾನಮಂತ್ರಿ ಆನೆ ಸೇನೆ ಪ್ರಜೆ ಪರಿವಾರವೆಲ್ಲವೂ ಸತ್ತು ಅರಸಿನ ಅರಸುತನ ಕೆಟ್ಟಿತ್ತು ನೋಡು (ಸಿದ್ಧೇಪ. ೧೯೯-೧೭೦). ೨. ಸಂಸದೀಯವ್ಯವಸ್ಥೆಯುಳ್ಳ ದೇಶಗಳ ಸರ್ಕಾರದ ಕಾರ್ಯಾಂಗದ ಪ್ರಮುಖವ್ಯಕ್ತಿ ; ರಾಷ್ಟ್ರದ ಮುಖ್ಯಮಂತ್ರಿ : ಜವಹರಲಾಲರು ಭಾರತದೇಶದ ಪ್ರಧಾನಮಂತ್ರಿಗಳು ಆದರು (ಕಕಪ. ೩-೪೪). [ಸಂ. ಪ್ರಧಾನಮಂತ್ರಿನ್]

**ಪ್ರಧಾನಶ್ರೇಷ್ಠಿ** (ನಾ). ಪ್ರಮುಖನಾದ ವರ್ತಕ ; ಮುಖ್ಯ ವ್ಯಾಪಾರಿ: ಪ್ರಧಾನಶ್ರೇಷ್ಠಿ ಧನಮಿತ್ರನೊಳಮಾಲೋಚಿಸಿ (ಆದಿಪು. ೪-೬೯ ವ). [ಸಂ. ಪ್ರಧಾನಶ್ರೇಷ್ಠಿನ್]

**ಪ್ರಧಾನಿ** (ನಾ). ೧. = ಪ್ರಧಾನಮಂತ್ರಿ ೧ : ಜೈನಪಂಡಿತನಿಗೆ ಪ್ರಧಾನೀ ಕೆಲಸ ಕೊಟ್ಟು (ಶುಬಂಬಯ. ೪-೯೦). ೨. = ಪ್ರಧಾನಮಂತ್ರಿ ೨ : ಆ ಸಮಾರಂಭದ ಉದ್ಘಾಟನೆಯನ್ನು ಪ್ರಧಾನಿಯವರು ನೆರವೇರಿಸಿದವರು (ಕಪಪ). [ಪ್ರಧಾನ + — ಇ]

**ಪ್ರಧಾನಿಕೆ** (ನಾ). ಪ್ರಧಾನಮಂತ್ರಿಯ ಪದವಿ ; ಪ್ರಧಾನಿಯ ಅಧಿಕಾರ : ತಪ್ಪದೊಪ್ಪಿಸಿ ಹೋಗು ಸಾಕಿನ್ನೊಪ್ಪದಿಂ ಭಂಡಾರದೊಡೆ

ತನವುಮಂ ಪ್ರಧಾನಿಕೆಯುಮಂ (ಚಿಕವ. ೦೦-೭). [ಪ್ರಧಾನ + — ಇಕೆ]

**ಪ್ರಧಾನಿತಿ** (ನಾ). ಪ್ರಧಾನನ‌ಮಂತ್ರಿಯ ಹೆಂಡತಿ : ಅರಸನ ಪೆಂಡತಿ, ಅರಸಿತಿ. ಏವಂ ಪ್ರಧಾನಿತಿ, ತಳವಱಿತಿ (ಕಬ್ಬಿಗ. ೦೧೦ ಪ್ರಯೋ).
[ಪ್ರಧಾನ + — ಇತ್ತಿ (< — ಇತ್ತಿ)]

**ಪ್ರಧಿ** (ನಾ). ೧. ಚಕ್ರದ ಅಂಚು ; ಗಾಲಿಯ ಸಂತ್ತು,-ಪರಿಧಿ : "ಚಕ್ರಧಾರಾ, ಪ್ರಧೀಃ, ನೇಮಿಃ — ಈ ೩ ನೆತ್ತಿವಟ್ಟಗೆ" (ಹಲಾಯು. ೬೩-೨೯೩). ೨. ಬಾವಿಯ ರಾಟೆ : "ಅಂಧುಃ, ಕೂಪಃ — ಈ ೨ ಬಾವಿ, ಪ್ರಧೀಃ, ನೇಮಿಃ (ಅದಱ ಱಾಟ)" (ಹಲಾಯು. ೦೦೩-೬೨).
[ಸಂ.]

**ಪ್ರಧ್ವಂಸ** (ನಾ). ಸಂಪೂರ್ಣ ನಾಶ : ನೃಸಿಂಹನೆನಿಪ್ಪಾಕೃತಿಯಿಂ ಹಿರಣ್ಯಕಶಿಪು ಪ್ರಧ್ವಂಸವಂ ಮಾಡಿದ್ದೆ (ಜಗಪು. ೦-೩೯); ಖಳಕರ್ವಸ್ವನಿಧೋಗ್ರ ಕಟಕಕಳಪ್ರಧ್ವಂಸದಿಂದಂ ನಿರಾಸ್ಯಳರುಂ . . . ತಾವಾಗಿ (ಚಿವಸಂ. ೨-೨).
[ಸಂ.]

**ಪ್ರಧ್ವಂಸನ** (ನಾ). ೧. ಸಂಪೂರ್ಣನಾಶ ಮಾಡುವಿಕೆ ; ಪೂರ್ತಿ ಹಾಳುಮಾಡುವಿಕೆ: ಅಘಕುಲಪ್ರಧ್ವಂಸನೋಪಾಯುಮಂ ಬಗೆಯುತ್ತುಂ (ಸುಕುಮಾ. ೦-೩); ಆಚಾರ್ಯರ್ ತಾಮೆಮಗೀವರಕ್ಕೆ ದುರಿತಪ್ರಧ್ವಂಸನೋಪಾಯವಂ (ಚಿವಸಂ. ೧-೩). ೨. ಹಾಳು ಮಾಡುವವನು.
[ಸಂ.]

**ಪ್ರಧ್ವಂಸಾಭಾವ** (ನಾ.) [ದ್ವೈತ] ನಾಲ್ಕು ಬಗೆಯ ಅಭಾವಗಳಲ್ಲಿ ಒಂದು; ವಿನಾಶ ಹೊಂದುವ ಅಭಾವ : ಪುಟ್ಟದ ಘಟನೊಡದ ಬಳಿಕನ್ನಿಲ್ಲವೆಂಬುದೇ ಪ್ರಧ್ವಂಸಾಭಾವವೆನಿಸುವುದು (ವಿವೇ. ೨೩); ಈ ಅಭಾವವೆಂಬುದು ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ, ಅನ್ಯೋನ್ಯಾಭಾವವೆಂದು ನಾಲ್ಕು ಪ್ರಕಾರ (ಹಿಂದಶಾ. ೦೧೯). [ಸಂ.]

**ಪ್ರಧ್ವಾನ** (ನಾ). ದೊಡ್ಡ ಶಬ್ದ,-ಧ್ವನಿ,-ಮೊಳಗು: ವನಧಿಪ್ರಧ್ವಾನದಿಂ ಮಂಗಳಪಟಹರವಂ ಪೆರ್ಚೆ (ಶಂಕರಾ. ೦೯-೦೮); ನಿನ್ನೊಳ್ಗುಣಂಗಳ ನಾಲೋಳವುದಾಳಿ ಮಂದ್ರಮಧುರಪ್ರಧ್ವಾನದಿಂ ಪಾಡಿದಳ್ (ಎಕ. VIII, ಸಾಗರ. ೦೦೯-೯೦ : 1042); ಪಟುಪ್ರಧ್ವಾನವಮಂ ಬೀಱಿದುವು ಕಹಳೆಗಳ್ (ರಾಜಶೇ. ೬-೦೭). [ಸಂ.]

**ಪ್ರನವ** (ಗು). ತೀರ ಹೊಸ ; ಬಹಳ ನವೀನವಾದ : ಮನುಸಿನ ಮಾತಿದು ಮನದಂತಾದರೆ ಪ್ರನವಸುಮಂಗಲೆಯಾಗುವೆನು (ಶಕಪ್ಲ. ೩೦-೩). [ಸಂ. (ಪ್ರ+ನವ). / ℙ ವ್ಯಾಕರಣದ ನಿಯಮದ ಪ್ರಕಾರ ಇದು ಅಶುದ್ಧ ರೂಪ]

**ಪ್ರನಾಳ** (ನಾ). ರಾಸಾಯನಿಕಪರೀಕ್ಷೆಯ ಪ್ರಯೋಗ ಮುಂತಾದುವುಗಳಲ್ಲಿ ಬಳಸುವ ಗಾಜಿನ ಕೊಳವೆ : ಹೀಲಿಯಂ ತುಂಬಿದ ಪ್ರನಾಳವನ್ನು ಹೀಲಿಯಂ ಪಾತ್ರೆಯ ಮೇಲೆ ಹಿಡಿದಾಗ ಪ್ರನಾಳದ ಹೀಲಿಯಂ ಗೋಡೆಯ ಅಂಚಿನಲ್ಲಿ ಹರಿದು ಪಾತ್ರೆಗೆ ಬೀಳುತ್ತದೆ (ಕರಕೋ. I. ೨೩೩).
[ಸಂ. ಪ್ರನಾಲ]

**ಪ್ರನಾಳಶಿಶು** (ನಾ). ಭ್ರೂಣವನ್ನು ವೈಜ್ಞಾನಿಕವಾಗಿ ಗಾಜಿನ ಪಾತ್ರೆಯಲ್ಲಿ ಮೊದಲು ವೃದ್ಧಿ ಪಡಿಸಿ, ನಂತರ ತಾಯಿಯ ಗರ್ಭದ ಮೂಲಕ ಜನಿಸುವಂತೆ ಮಾಡುವ ಶಿಶು, [ಸಂ. ಪ್ರನಾಲಶಿಶು. / ℙ ಇದು ಇಂಗ್ಲಿಷಿನ 'Test-tube baby' ಎನ್ನುವುದರ ಅನುವಾದ]

**ಪ್ರಪಂಚ** (ನಾ). ೧. ಹರವು ; ವಿಸ್ತಾರ : "ವ್ಯಾಸಃ, ಪ್ರಪಂಚಃ, ವಿಸ್ತಾರಃ—ಈ ೩ ಹಿಂದಿದು ಮಾತುಹ" (ಹಲಾಯು. ೦೨೬-೯೧); ಪ್ರಪಂಚವೇದರ ವಿಸ್ತಾರ (ಕಿಲ್ಸ್ರಿ. ೩೩). ೨. ಜಗತ್ತು ; ವಿಶ್ವ; ಲೋಕ : ಪ್ರಪಂಚವು ಮುಳುಗಿಹೋದರೂ ಅದನ್ನು ಮತ್ತೊಬ್ಬರಿಗೆ ಕೊಟ್ಟಾನೇ ? (ಕಿಶೀ. ೨೩) ; ಕಲಿಯ ಪ್ರಪಂಚದೊಳಿಂತೆನಗವರಾದಿಗುರುವಾಗಿ ತೆರದರು ಹಾದಿ (ಶಿಂಶಾಶ. ೦೦-೯೧). ೩. ಲೌಕಿಕವಾದ ಬಾಳು; ಸಂಸಾರ: ಬಿಡೆಯಲಾ ನಿನ್ನ ಪ್ರಪಂಚವ ನಾನು ನನ್ನೊಡಹುಟ್ಟಿದವರೆಂದ ಮೇಲೆ ಕಡುಬೇಗ ಕರೆಸುವೆನೆನ್ನದೆ ನೀನಿದ ನುಡಿವರೆ (ಧಶಕ. ೩೯-೦೨೯); ತಿಂಗಳಿಗೆ ಒಟ್ಟು ನೂರಾ ಐವತ್ತು ಸಂಬಳ, ಪ್ರಪಂಚ ಸಾಗುವುದು ಬಿಗಿ (ಕುಂಹಿಂ. ೨೭) : ಪ್ರಪಂಚ ಬಿಡುತ್ತೇನೆಂದು ಪಂಚಮಹಾಪಾಪ ಹೊಂದಿಕೊಂಡ (ಗಾದೆ). ೪. ಮೋಸ ; ವಂಚನೆ. ೫. ಸಮೂಹ ; ಮೊತ್ತ ; ಗುಂಪು : ಅದೇ ವಾನರಪ್ರಪಂಚ. ಆ ಪ್ರಪಂಚದಿಂದ ಪ್ರಾರಂಭವಾಗುವ ದೃಶ್ಯಗಳು ವೀರ ರಸಕ್ಕೆ ಎಡೆಗೊಡುತ್ತವೆ (ಭಾರತ. ೯೯). ೬. ವರ್ತಮಾನ ; ಸಂಗತಿ : ಅಬ್ಜದಳಾಕ್ಷಿ ಪೇಟ ಸಾಮಾನ್ಯಮೆ ಬಗೆಯ ಭವತ್ಕ್ಲೇಶಪಾಶಪ್ರಪಂಚಂ (ಶಂಕರಾ. ೦೨-೧೫೭); ನಾಗಶರ್ಮನಾ ಪ್ರಪಂಚಮೆಲ್ಲಮಂ ತಳಾಱನಂ ಬೆಸಗೊಂಡು (ಸುಕುಮಾ. ೬-೩೩ವ) ; ಕಂಸಕೃತಾಪಚಾರಮಂ ತತ್ಪ್ರಪಂಚಮನಱಿಪೆ (ಜಗಪು. ೩-೩ ವ) . ೭. ವಿವಿಧತೆ; ವೈವಿಧ್ಯ; ಭಿನ್ನತೆ; ವೈಚಿತ್ರ್ಯ. ೮. ವಿಭಜನೆ ; ವಿಶ್ಲೇಷಣೆ. ೯. ಅವಿರ್ಭಾವ; ತೋರಿಕೆ. [ಸಂ.]

**ಪ್ರಪಂಚಜ್ಞಾನ** (ನಾ) . ಲೌಕಿಕಜ್ಞಾನ ; ವ್ಯವಹಾರಜ್ಞಾನ : ದೇವರು ನಿಮಗೆ ವಿವೇಕ ಕೊಟ್ಟಿದ್ದಾನೆ. ಪ್ರಪಂಚಜ್ಞಾನವಿದೆ (ದೇವಹಂ. ೬೨).
[ಸಂ.]

**ಪ್ರಪಂಚತೆ** (ನಾ). ಮೋಸ ; ವಂಚನೆ : ಸತಿಯರಲ್ಲಿಯ ಪ್ರಪಂಚತೆಯ ನೆಲ್ಲವನು ಕಾಣುತ . . . ಕ್ಷಿತಿಯೊಡೆತನವ ಬಿಟ್ಟತಿವೇಗದಿಂದ ವಿರತಿವಾಳಿ ಪೋದೊಲಿದಲ್ಲ (ಮೋಕ್ಷಮಾ. ೩-೦೯). [ಸಂ. ಪ್ರಪಂಚತಾ]

**ಪ್ರಪಂಚನ** (ನಾ). ಹರಡುವುದು ; ವಿಸ್ತರಿಸುವುದು ; ಅರಳುವುದು : ಅವಿತತಪ್ರಪಂಚನಾಕುಂಚನಾವರ್ತನಕ್ರಮವೆ ವಿಶ್ವಚರಿತ್ರ (ಮುಂಕುಶ. ೯೦).
[ಸಂ.]

**ಪ್ರಪಂಚಿ** (ನಾ). ೧. ಸಂಸಾರದಲ್ಲಿ ಆಸಕ್ತನಾದವನು ; ಲೌಕಿಕವ್ಯಕ್ತಿ. ೨. ಮೋಸಗಾರ ; ವಂಚಕ : ತನು ಮನ ಧನದಲ್ಲಿ ವಂಚನೆಯುಳ್ಳ ಪ್ರಪಂಚಿಯ ಮನೆಯ ಕೂಳು ಶುನಕನ ಬಾಯ ಎಲುವ ಪ್ರತಿಶುನಕ ತಿಂದಂತೆ (ದೇವಾವ. ೩೦-೫೩); ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯ ನೊಲ್ಲ ಕೂಡಲಸಂಗಮದೇವ (ಬಸವ. ೨೩೭). ೩. ವ್ಯವಹಾರಕುಶಲನಾದವನು. [ಸಂ. ಪ್ರಪಂಚಿನ್]

**ಪ್ರಪಂಚಿಸು** (ಕ್ರಿ). ವಿವರಿಸು ; ವಿಸ್ತಾರವಾಗಿ ತಿಳಿಸು : ಕ್ರಿಯಾಕರ್ಮಮೆಂಬುದು ಅರ್ಹತ್ಸಿದ್ಧಾಚಾರ್ಯಬಹುಶ್ರುತಸಾಧುಪೂಜಾಕ್ರಿಯೆಯುಂ ಪ್ರಪಂಚಿಸುಗುಂ (ಕತ್ತ್ವಶ್ರ. ೬೩); ಇಂತು ಪಂಚಾಶ್ಚರ್ಯಮಂ ಪ್ರಪಂಚಿಸುತ್ತುಮಿರೆ (ಶಾಂತಿ. ೬-೨೦೪) ; ಸಂಧಿ . . . ಅವ್ಯಯಮೆಂಬಷ್ಟು ಪ್ರಕಾರಮಂ ಪ್ರಪಂಚಿಸುವ ವ್ಯಾಕರಣದೋಷಮಿಲ್ಲದೆ (ಚಿಶೇ. ೨೨೬).
[ಪ್ರಪಂಚ+ — ಇಸ್ಸು]

**ಪ್ರಪಂಚು** (ನಾ). ೧. ವ್ಯಾಪ್ತಿ; ವಿಸ್ತಾರ: ಸಂಚುವ ಸತೀಜನದೊಳಂಗಭವಕೇಳೀಪ್ರಪಂಚುವರನೊಳ್ಪಮನಿಸಿ (ಕೃಪಿಂಚಾ. ೨೬-೦೦). ೨. ಲೌಕಿಕವಾದ ಬದುಕಂ ; ಸಂಸಾರ : ಪ್ರಪಂಚಿನ ಡಂಬಿನಲಿ ಎನ್ನನೊಂದು ರೂಹು ಮಾಡಿ ನೀವಿರಿಸಿದಿರಿ (ಬಸವ.೨೯). 'ಪ್ರಪಂಚುಜೀವಿ' ಪರಾ. ೩. ಮೋಸ; ವಂಚನೆ : ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡಸಯ್ಯಾ ಲಿಂಗತಂದೆ (ಬಸವ. ೧೦) ; ಪ್ರಪಂಚಿಲ್ಲದುಱಿ ತೂಗಿದಾ ಬಯಲ ಲಿಂಗಣನ ಚರಣಾಂಬುಜಕ್ಕೆ ಶರಣು (ಚಿಶಿಕಂ. ೩೯-೬೬) ; ಸವಿನೋಟದೊಳ್ಪೆಂಚು ನಗೆಯೊಳ್ ಪ್ರಪಂಚು . . . ಗಣಿಕೆಯರ ತಂಡಮಾ ತೆಱದೆ ಚೆಲ್ವಂ ಪಡೆದುದು (ಕೃಪಿಂಚಾ. ೬-೩೯). ೪. ಮಾಯೆ ; ಮೋಹ : ಮಣ್ಣು ದೇಹ ಹೊನ್ನು ಪ್ರಾಣ ಹೆಣ್ಣು ಸರ್ವಪ್ರಪಂಚು (ನೋಲಿಮಾ. ೪೩-೦೮೮) ; ಪ್ರಾಣಲಿಂಗವಾದ ಶರಣಂಗೆ ಪ್ರಪಂಚಿನ ಕಾಟುಹಿಲ್ಲ (ಅಖಂಡೇ.

೦೦೬-೪೪). ೫. ಜೀವಿ ; ಬದುಕುವ ವ್ಯಕ್ತಿ (?) : ಕುಸುಮಬಾಣ ಪ್ರಪಂಚುಗಳಶಿರಹಸ್ಯದಿಂದೊಸೆದು ತಮ್ಮುಪವಲ್ಲಭರನಗಲ್ದು ಮನೆಗೆಯ್ದಿ ಪೋಪ ಜಾರೆಯರೆಸೆದರು (ಅಕಲೋಕ. ೯-೬೬). 'ಪರಪಂಚ' ಪರಾ. [<ಸಂ. ಪ್ರಪಂಚಿ]

**ಪ್ರಪಂಚುಜೀವಿ** (ನಾ). ಲೌಕಿಕಜಗತ್ತಿನಲ್ಲಿ ಆಸಕ್ತಿ ಇರುವವನು ; ಲೌಕಿಕವ್ಯಕ್ತಿ : ಜೀವನೋಪಾಯಕ್ಕೆ ಪರಮಾರ್ಥವನು ಅಲ್ಲ ಎಂಬ ಪ್ರಪಂಚುಜೀವಿಗಳ ಮೆಚ್ಚನು ಕಾಣಾ (ಸಿದ್ಧೇವ. ೩೬-೦೬೩). [ಪ್ರಪಂಚು + ಜೀವಿ]

**ಪ್ರಪಂಚುಭಾವ** (ನಾ). ಇಹಲೋಕದ ಆಸಕ್ತಿ ; ಲೌಕಿಕಭಾವ : ಈ ಹೊನ್ನು ಹೆಣ್ಣು ಮಣ್ಣು ಎಂಬವು ಪ್ರಾಣಂಗೆ ಪ್ರಪಂಚುಭಾವವೆಂದೆಣಿದು (ಸಿದ್ಧೇವ. ೧೯-೨೬೩). [ಪ್ರಪಂಚು + ಭಾವ]

**ಪ್ರಪತ್ತಿ** (ನಾ). ೧. ಮರೆಹೊಗುವಿಕೆ ; ಆಶ್ರಯಿಸುವುದು : ರಿಪುಜಯ ಕಾರಣಶರಮಂ ಪ್ರಪತ್ತಿಯಿಂ ಪಡೆಮೆಂ (ಕಲಶಂ. ೨-೦೦೭). ೨. [ವಿಶಿಷ್ಟಾ] ಮೋಕ್ಷಸಾಧನೆಯ ಮಾರ್ಗಗಳಲ್ಲಿ ಒಂದು ಬಗೆ ; ಶರಣಾಗತಿ ; ಆಳ್ವಾರರ ಕಾಲದಲ್ಲಿ ಆರಂಭವಾದ ಈ ಸಂಪ್ರದಾಯಕ್ಕೆ ಶ್ರೀವೈಷ್ಣವರಲ್ಲಿ ಒಂದು ವಿಶಿಷ್ಟಸ್ಥಾನವಿದೆ : ಜೀವಸಾಮಾನ್ಯವೂ ಪ್ರಪತ್ತಿ ಎಂಬ ಮಾರ್ಗದಿಂದ ಆಯಾ ಜನ್ಮದಲ್ಲೇ ಮೋಕ್ಷವನ್ನು ಹೊಂದ ಬಹುದು (ಹಿಂದಸಾ. ೨೬೦) ; ಈ ಪ್ರಪತ್ತಿಯು ಆರ್ತಪ್ರಪತ್ತಿ, ದೃಪ್ತ ಪ್ರಪತ್ತಿ ಎಂದು ಎರಡು ಬಗೆಯಾಗಿರುತ್ತದೆ (ಶಾರರ. ೨೬೪). [ಸಂ.]

**ಪ್ರಪತ್ತಿಮಾರ್ಗ** (ನಾ). ಶರಣಾಗತಿಯ ಮಾರ್ಗ : ರಾಮಾನುಜರಿಂದ ಪ್ರಪತ್ತಿಮಾರ್ಗಕ್ಕೆ (ಭಕ್ತಿಪಂಥಕ್ಕೆ) ದೊರೆತ ಪುರಸ್ಕಾರದಿಂದಾಗಿ ಹಾಗೂ . . . ರಾಜಾಶ್ರಯದಿಂದಾಗಿ, ಅನೇಕರು ಈ ಭಕ್ತಿಪಥವನ್ನು ಹಿಡಿದರು (ಕರ್ನಾಳ. ೬೩) ; ಇವೆಲ್ಲಕ್ಕಿಂತಲೂ ಪ್ರಪತ್ತಿಮಾರ್ಗವು ಶ್ರೇಷ್ಠತಮವಾದ ಮಾರ್ಗವೆಂಬುದನ್ನೂ ಶ್ರೀಚಿಕ್ಕದೇವರಾಜರ ಬಿನ್ನಪದಲ್ಲಿ ಹೀಗೆ ವರ್ಣಿಸಿದ್ದಾರೆ (ಕಾಂಕಜಾ. ೩೬). [ಸಂ.]

**ಪ್ರಪತ್ರ** (ನಾ). ಅರ್ಜಿಯ ನಮೂನೆ ; ಅಭ್ಯರ್ಥಿಪತ್ರದ ನಮೂನೆ : ಭಾರತಸರ್ಕಾರದಿಂದ ವಿಧಾಯಕವಾದ ಪ್ರಪತ್ರದಲ್ಲಿ ಅಥವಾ ರೀತಿಯಲ್ಲಿ ಆವೇದನಪತ್ರವನ್ನು. . .ರಿಜಿಸ್ಟರು ಮಾಡಿಸಿಕೊಂಡಿದ್ದ ಪಕ್ಷದಲ್ಲಿ ಆತನು ಭಾರತದ ನಾಗರಿಕನೆಂಬುದಾಗಿ ಭಾವಿಸತಕ್ಕುದು (ಭಾರಾಸ. ೬). [ಸಂ.]

**ಪ್ರಪದ** (ನಾ). ೧. ಪಾದದ ಅಗ್ರಭಾಗ,—ಮುಂಭಾಗ ; ಕಾಲಿನ ತುದಿ : "ಪಾದಾಗ್ರಮಂತದಕ್ಕು ಪ್ರಪದಂ" (ಅಭ್ಯಕೋ. ೬೬-೩) : ವಸುಧೆ ಪದತಳದಲ್ಲಿ ಪ್ರಪದದಲಿ ಶಕ್ರನಜನೆಸೆವ ಜಂಘೆಯಲಿ (ಶೀಕೃಕೃ. ೦-೬-೦೨) ; ಪೋಗಿ ಚರಣಂಗಳಿಗೆ ನಮಿಸಿ ಬರುವೆನಗ್ರಜವೆರಸಿ ಪ್ರಪದಾಲಂಕನೆನಿಸಿ ಪರಿಪೂರ್ಣದಯೆಯಿಂದ ಪಾಲಿಸುವುದು (ಜಂಕಾರಾ. ೨-೨೯-೨೬). ೨. ಹೆಬ್ಬೆರಳಿನ ತುದಿ. [ಸಂ.]

**ಪ್ರಪದ್ಯ** (ನಾ). ಉತ್ಕೃಷ್ಟವಾದ ಕಾವ್ಯ : ಸಕಲವಿಬುಧಹೃದ್ಯಂ ಸಮಂತೀ ಪ್ರಪದ್ಯಂ (ಜಗಂ. ೦-೨೨). [ಸಂ.]

**ಪ್ರಪನ್ನ** (ನಾ). ಮರೆಹೊಕ್ಕವನು ; ಶರಣಾಗತನಾದವನು : ಪ್ರಪನ್ನ ರಪ್ಪವರ್ಗೆ ಸಕಲಸಾಂಸಾರಿಕದುಃಖನಿವೃತ್ತಿ (ಗೀತಗೋ. ೩೯-೩ ಪ) ; ಪ್ರಪನ್ನನು ಸರ್ವಸಂಗಪರಿತ್ಯಾಗ ಮಾಡಿ ಅನನ್ಯಗತಿಕನಾಗಿ, ಭಗವಂತನನ್ನು ಆಶ್ರಯಿಸಿದವನು (ಶಾಶಕ್ಕ. ೬೬೦). [ಸಂ.]

**ಪ್ರಪನ್ನತ್ವ** (ನಾ). ಶರಣಾಗತಿ. [ಸಂ.]

**ಪ್ರಪನ್ನೆ** (ನಾ). ಹೊಂದಿದವಳು ; ಪಡೆದವಳು : ಅಪರಾಜಿತಪ್ರಸಾದ ಪ್ರಪನ್ನೆಯಾ ಕನ್ನೆ (ಶಾಂತಿಪು. ೯-೬೩) ; ಬಾಯುಟಿದು ಪಳವಿಸುತ್ತಂ ಮೂರ್ಛಾಪ್ರಪನ್ನೆಯಾಗಿ (ಕಾದಂಕಾ. ೬೯೦). [ಸಂ. ಪ್ರಪನ್ನಾ]

**ಪ್ರಪಾಂಗನೆ** (ನಾ). ಪಥಿಕರಿಗೆ ನೀರು ಕೊಡುವ ಅರವಟ್ಟಿಗೆಯಲ್ಲಿರುವ ಹೆಂಗಸು : ಲಾವಣ್ಯತೋಯಮನಾಲೋಕನಮಾತ್ರದಿಂ ಮಾಱಿದು ಪಾಂಥಶ್ರೇಣಿ ನೀರಡಿಕೆಯುಂ ಶ್ರಮಮಂ ತೀರಮೆಯ್ದು ಪ್ರಪಾಂಗನೆಯರಂ ಕಣ್ಣಾಱುವಾ ದೇಶದೊಳ್ (ಶಾಂತಿಪು. ೦-೦೦೩). [ಸಂ. ಪ್ರಪಾಂಗನಾ]

**ಪ್ರಪಾಂಥ** (ನಾ). ಪ್ರಯಾಣಿಕ ; ದಾರಿಹೋಕ : ಪುಷ್ಪಚಾಪಾಸ್ತ್ರಟಂಕಾರ ರವೋದ್ಭಿನ್ನಪ್ರಪಾಂಥಪ್ರಕರಹೃದಯರಕ್ತಾಂಬುಗಳ್ ಕೂಡೆ ಮಾರ್ಗಾಂತರ ದೊಳ್ ಸೂಸುತ್ತಿರಲ್ ಬಂದುದು ಶಿಶಿರನೃಪೋದ್ಯತ್ಕೃತಾಂತಂ ವಸಂತಂ (ಕಾದಂಪೂ. ೬೨೦). [ಸಂ.]

**ಪ್ರಪಾಕಲಾಪ** (ನಾ). ಅರವಟ್ಟಿಗೆಯ ಕೆಲಸ : ನಿರುಪಮ ಪ್ರಪಾಕಲಾಪ ಪ್ರಕಾಂಡಮಂಡಪಂಗಳಲ್ಲಿ (ಜಾರಪು. ೦-೬೯ ಪ). [ಸಂ. ಪ್ರಪಾಕಲಾಪ]

**ಪ್ರಪಾಠಕ** (ನಾ). ಗ್ರಂಥದ ಒಂದು ಭಾಗ ; ಅಧ್ಯಾಯ, ಪ್ರಕರಣ, ಸಂಧಿ ಇತ್ಯಾದಿ : ಛಾಂದೋಗ್ಯದ ಆಡೆಯ ಪ್ರಪಾಠಕದಲ್ಲಿ ಇಂದ್ರ ವಿರೋಚನನ ಉಪಾಖ್ಯಾನವು ಬಂದಿದೆ (ಛಾಪಂ. ೪೦). [ಸಂ.]

**ಪ್ರಪಾಣ** (ನಾ). ಕುದುರೆಯ ಮೇಲ್ತುಟಿಯ ಒಳಭಾಗ : ಮೇಗಣ ತುಟಿಯ ಮುಂದುಗಡೆ ಪ್ರಪಾಣ (ಅಶ್ವಶಾ. ೩೬-೦೨). [<ಸಂ. ಪ್ರಪಾನ]

**ಪ್ರಪಾತ** (ನಾ). ೧. ಕಡಿದಾದ ಕೊರಕಲು ; ಕಣಿವೆ : ವಿಜಯಾರ್ಧ ಪರ್ವತದ ಕಾಂಡಕಪ್ರಪಾತಗುಹೆಗಭಿಮುಖನಾಗಿ (ಶಾಂತಿಪು. ೦೦-೬೬ ಪ). ೨. ತಡಸಲು ; ಜಲಪಾತ. ೩. ಆಕ್ರಮಣ ; ಮುತ್ತಿಗೆ ; ದಾಳಿ : "ಅವಸ್ಕಂದಃ, ಪ್ರಪಾತಃ—ಈ ಎರಡು ದಾಟ್" (ಕರಾಯು. ೬೯-೨೯೯) ; ಪವನಪ್ರಪಾತಚಲಿತಕಲ್ಲೋಲಮಾಲೆಯಿಂ (ರಾಜಶೇ. ೨-೯ ಪ). ೪. ದಂಡೆ : ತೀರ ; ದಡ : "ತೀರಂ, ಕೂಲಂ, ತಟಂ, ಕಚ್ಛಃ, ಪ್ರಪಾತಃ, ರೋಧಃ—ಈ ಆಱು ತೊಱೆಯ ತಡಿ" (ಕರಾಯು. ೦೦೦-೯೩) ; ಹಿಮ ವತ್ಪರ್ವತದ ಸಿಂಧುಪ್ರಪಾತಮನೆಯ್ದಿ (ಅಂತಿಪು. ೦೩-೬೬ ಪ). [ಸಂ.]

**ಪ್ರಪಾನ** (ನಾ). ೧. ಕುಡಿಯುವುದು. ೨. = ಪ್ರಪಾಣ : ಉತ್ತರದೋಷ್ಠದ ನಡುವದು ಬಿತ್ತರಿಪ ಪ್ರಪಾನವೆಂಬ ಪೆಸರಾ ಪ್ರಪಾನ ದುತ್ತರಪೂರ್ಥವಾದಕ್ಕುಂ (ಅಶ್ವಶಾ. ೯-೦೨). [ಸಂ.]

**ಪ್ರಪಾಪಾಲಿಕೆ** (ನಾ). ನೀರನ್ನು ಒದಗಿಸುವವಳು ; ಅರವಟ್ಟಿಗೆಯನ್ನು ನಡೆಸುವವಳು : ಕೆಯ್ಯೊಲಗಾವ ಪಾಮರಿಯರುಂ ಮಾರ್ಗಪ್ರಪಾಪಾಲಿಕಾ ಜನಮುಂ . . . ಪುರವರವ್ಯಾವರ್ಣನಕ್ಕಾಸ್ಪದು (ಸೂಕ್ತಿಸು. ೯-೦) ; ಅಪ್ಸರಲ್ಲಿ ಸವಿನಾಪದ ಅರವಂಟಿಗೆಯ ಪ್ರಪಾಪಾಲಿಕೆ ಅಲ್ಲಿಗೆ ಬಂದು . . . ಹರಿವಾಣವನ್ನು ಎದುರಿಗಿಟ್ಟಳು (ದೂರೇಟಾ. ೦೨೯). [ಸಂ. ಪ್ರಪಾಪಾಲಿಕಾ]

**ಪ್ರಪಾಪ್ರಣಯಿನಿ** (ನಾ). = ಪ್ರಪಾಂಗನೆ : ಪಾಂಥರ್ . . . ದಿಟ್ಟಿ ಗಳಿಂದೀಂಟುವರಾ ಪ್ರಪಾಪ್ರಣಯಿನೀಲಾವಣ್ಯನೀರಂಗಳು (ಮಲ್ಲಿಪು. ೨-೨೯) ; ಜಳಪಾನಚ್ಛಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಣಳಿನೀಂಟಿ (ಕಂದ್ರಪು. ೦-೯೯). [ಸಂ. ಪ್ರಪಾಪ್ರಣಯಿನೀ]

**ಪ್ರಪಾಪ್ರಮದೆ** (ನಾ). = ಪ್ರಪಾಂಗನೆ : ಕುಡಿನೀರೆತ್ತುವವೊಲ್ ಪ್ರಪಾ ಪ್ರಮದೆಯರ್ ಸತ್ರಂಗಳೊಳ್ (ಅಪಂಪು. ೦-೬೯). [ಸಂ. ಪ್ರಪಾಪ್ರಮದಾ]

**ಪ್ರಪಾಮಂಟಪ** (ನಾ). ಪಥಿಕರಿಗೆ ನೀರನ್ನು ಒದಗಿಸುವ ಸ್ಥಳ ; ಅರವಟ್ಟಿಗೆ : ಕಣ್ಗೊಳಿಕುಂ ನಾನಾಲತಾಂತಪ್ರಸರಸರಯುತಂಗಳ್ ಪ್ರಪಾಮಂಟಪಂಗಳ್ (ರಾಜಶೇ. ೨-೨೦). [<ಸಂ. ಪ್ರಪಾಮಂಡಪ]

**ಪ್ರಪಾವಧು** (ನಾ). = ಪ್ರಪಾಂಗನೆ : ಏಂ ವ್ಯಾಧವಧುಗಳೋ ಮೇಣ್ ಪ್ರಪಾವಧುಗಳೋ (ಶಬ್ದಮಾ. ೬-೯). [ಸಂ.]

**ಪ್ರಪಾಶಾಲೆ** (ನಾ). = ಪ್ರಪಾಮಂಟಪ : ಜಳಧಾರೆ ಕಂಗೊಳಿಸು ತಿರ್ಪುದಧ್ವಶ್ರಮಗಳನಾಂತು ಬಂದ ಪಥಿಕರ್ಕಳೀಂಟುವ ಸಮಯ ದೊಳ್ಪ್ರಪಾಶಾಲೆಗಳೊಳು (ಕೃಬಂಕಾ. ೩-೦೦). [ಸಂ. ಪ್ರಪಾಶಾಲಾ]

**ಪ್ರಪಾಸದನ** (ನಾ). = ಪ್ರಪಾಮಂಟಪ : ಇದು ಕಾಮೋನ್ಮಾದ ಪಾನ ಪ್ರಪಾಸದನಂ . . . ಎನೆ ಚೆಲ್ವಾದತ್ತು ಚಂದ್ರಾತಪಂ (ಪುಷ್ಪಪು. ೬-೬೩). [ಸಂ.]

**ಪ್ರಪಿತಾಮಹ** (ನಾ). ತಂದೆಯ ತಂದೆಯ ತಂದೆ ; ತಾತನ ತಂದೆ ; ಮುತ್ತಜ್ಜ : ಭಕ್ತಾಂಗನೆಯ ಸುತಸಹ ಸದ್ಭಕ್ತಂಗೆ ಪಿತನು ಗುರು ಪಿತಾಮಹನ ಜಂಗಮ ಪ್ರಪಿತಾಮಹನು ಮಹಾಲಿಂಗ ಉಂಟು ಕೇಳಿರಣ್ಣಾ (ಉಂತಿ.ಶ. ೩೨-೩೮) ; ಪಿತೃ, ಪಿತಾಮಹ, ಪ್ರಪಿತಾಮಹ ರೆಂಬ ಮೂರು ವಿಧ ಪಿತೃಗಳಿಗೆ ಅಧಿಪತಿಗಳು ವಸುಗುಣ, ರುದ್ರಗಣ, ಆದಿತ್ಯಗಣ ಎಂಬ ಮೂರು ಗಣಗಳು (ಚಕಾಶ. ೧೯-೦ ತಾತ್ಪರ್ಯ). [ಸಂ.]

**ಪ್ರಪಿತಾಮಹಿ** (ನಾ). ತಂದೆಯ ತಂದೆಯ ತಾಯಿ ; ತಾತನ ತಾಯಿ ; ಮುತ್ತಜ್ಜಿ. [ಸಂ. ಪ್ರಪಿತಾಮಹೀ]

**ಪ್ರಪುನಾಟ** (ನಾ). ಒಂದು ಬಗೆಯ ಸಸ್ಯ ; ಚಗಚೆ : "ಏಡಗಜಃ, ಪ್ರಪುನಾಟಃ, ದದ್ರುಘ್ನಃ, ಚಕ್ರಮರ್ದನಃ - ಈ ೪ ತಗ(ಚೆ)ಟೆ" (ಕಲಾಪು. ೦೦೦-೯೬೩). [ಸಂ.]

**ಪ್ರಪುನ್ನಾಟ** (ನಾ). = ಪ್ರಪುನಾಟ : "ಪ್ರಪುನ್ನಾಟಮದೇಡಗಜಂ" (ಶಸ್ತ್ರಕೋ. ೩೬-೨೦). [ಸಂ.]

**ಪ್ರಪುನ್ನಾಡ** (ನಾ). = ಪ್ರಪುನ್ನಾಟ.

**ಪ್ರಪೂರ** (ನಾ). ಅತಿಶಯವಾದ ಪ್ರವಾಹ ; ದೊಡ್ಡ ಪ್ರವಾಹ : ಚಕೋರವ್ರಜಕೆ ಶಾಂತಿರಸದ ಪ್ರವಾಹಪ್ರಪೂರವೆನೆ ನವರಸೋದಯಮಯ ಮೆನಿಸಿದ ಹಿಮಕರನೆಸೆದಿರುತ್ತಿರ್ದನು (ಚತಕಾ. ೩-೦೩). [ಸಂ.]

**ಪ್ರಪೂರಿತ** (ಗು). ತುಂಬಿದ ; ಭರ್ತಿಯಾದ : ಅಖಿಳಕಳಾಪ್ರಪೂರಿತ ಹೃದಯ ಭೀಮಕವಿ ಪ್ರಣೀತಾಭ್ಯುದಯ ಬಸವಪುರಾಣಕಥೆಯೊಳು ನಾಲ್ಕನೆಯ ಕಾಂಡ (ಬಪು. ೨೬-೬೦). [ಸಂ.]

**ಪ್ರಪೂರ್ಣ** (ಗು). ೧. ತುಂಬಿದ ; ಭರ್ತಿಯಾದ ; ಇಡಿಕಿರಿದ : ಪ್ರಪೂರ್ಣಸಪ್ರಸುರಲೋಚಿಕನದಂಕುಶಕೃತದೀರ್ಘ ಪ್ರ ಣೂ ತ ಕೋ ಪ ನಂ (ಶಾಂತಿಪು. ೦೦-೯೯೩); ಪರಿಗ್ರಹಸಂಗತಿಯಾ ಸುಧಾಮಯಮ್ವಾಪ್ಯತಿಯಾ ಪ್ರಪೂರ್ಣವಲಯಾಕೃತಿಯಾಗಳದೆತ್ತವೋದುದು (ಶಂಪ್ರಪು. ೯-೬). ೨. ಪೂರ್ತಿಯಾದ ; ಪೂರ್ಣಗೊಂಡ. (ನಾ). ೩. ಪೂರ್ತಿಯಾದುದು ; ತುಂಬಿದುದು : "ಭರಿತಂ ಪ್ರಪೂರ್ಣಮಾಚಿತನಿಚಿತಮಾಕುಳಂ ಪರಿಕೀರ್ಣ ಮಾಚ್ಛದನಮೆನಲು ಸಂದಣೆಯಕ್ಕು" (ಮಂಗರಾ. ೦೨೬-೯). [ಸಂ.]

**ಪ್ರಪೂರ್ತಿ** (ನಾ). ತುಂಬಿರುವಿಕೆ ; ಭರ್ತಿಯಾಗಿರುವಿಕೆ : ಅವಿರಳಿತ ತೇಜಃಪ್ರಪೂರ್ತಿ ಸಮಸ್ತ ವಿಸ್ಫೂರ್ತಿ (ಚಕಕ್ಕ. ೯೬-೦೦). [ಸಂ.]

**ಪ್ರಪೆ** (ನಾ). ಪಥಿಕರಿಗೆ ನೀರು, ಪಾನಕ ಮೊದಲಾದುವನ್ನು ಕೊಡುವ ಗೃಹ ; ಅರವಟ್ಟಿಗೆ : "ಪ್ರಪೆಯೆಂಬುದಱಿಗೆ ಪಾನೀಯ ಶಾಲೆ" (ಶಸ್ತ್ರಕೋ. ೯೬-೨೦): ಉಪವನತಟಾಕಪ್ರತಿಷ್ಠೆ ದೇವಾಲಯ ಪ್ರಪೆಗಳ . . . ಸುಕೃತಂಗಳಾದವುವು ಜೈಮಿನಿಭಾರತದೊಳೊಂದು ವರ್ಣಮಂ ಪ್ರೀತಿಯಿಂ ಕೇಳ್ದವರ್ಗೆ (ಜೈಮಿಭಾ. ೩೯-೯೩). [ಸಂ. ಪ್ರಪಾ]

**ಪ್ರಪೌಂಡರೀಕ** (ನಾ). ಒಂದು ಬಗೆಯ ಔಷಧೀಸಸ್ಯ; ಬಿಳಿನೈದಿಲೆಗಡ್ಡೆ : ಪ್ರಪೌಂಡರೀಕ . . . ಚೆಂಗಲನೀರಕೋಷ್ಠ, ಇವಿಷ್ಟನು ಸಮಾಂಶವಾಗಿ ನೀರಲ್ಲಿ ಅರೆದು ಲೇಪನಂಗೈಯಲು ವಾತದಿಂದ ಉಂಟಾದ ಉಪದಂಶ ಶಮನವಹುದು (ವೈದ್ಯಸಾ. II. ೦೬೬). [ಸಂ.]

**ಪ್ರಪೌತ್ರ** (ನಾ). ಮಗನ ಮಗನ ಮಗ; ಮೊಮ್ಮಗನ ಮಗ ; ಮರಿಮಗ. [ಸಂ.].

**ಪ್ರಪ್ರಥಮ** (ಗು). ಮೊತ್ತ ಮೊದಲ ; ಅತ್ಯಂತ ಆದಿಯ : ಕೇವಲ ಮಾರ್ಗದರ್ಶಕವಾಗಿ ತೋರಿದರೂ, ಅದಕ್ಕೆ ಪ್ರಪ್ರಥಮ ಪ್ರಾಮುಖ್ಯತೆ ಯನ್ನು ನೀಡಬೇಕೆಂಬುದಾಗಿ ... ಪ್ರತಿಪಾದಿಸಿದೆ (ಪುಕರು. ೨೦೩). [ಸಂ.]

**ಪ್ರಫುಲ್ಲ** (ಗು). ೧. ಅರಳಿದ ; ವಿಕಸಿತವಾದ. ೨. ಪ್ರಸನ್ನವಾದ : ಎಲ್ಲರೂ ಪ್ರಫುಲ್ಲ ಮಾನಸರಾಗಿದ್ದರು (ಕಪಸಂ. ೦೩೩) ; ಗಂಗರಾಜರು ಪ್ರಫುಲ್ಲವದನರಾಗಿ . . . ವೀರಪ್ರತಿಜ್ಞೆ ಮಾಡಿದರು (ಶಾಂತಲಾ. ೦೯೬). (ನಾ). ೩. ಅರಳಿದುದು : "ಪ್ರಫುಲ್ಲಂ ಫುಲ್ಲಃ" (ಶಸ್ತ್ರಕೋ. ೦೦೩-೯೦). ೪. ಪ್ರಸನ್ನವಾದುದು : ಜವಾನನೊಬ್ಬ ಮೂರು ರೂಬಲ್ ಹಣ ತಂದಾಗ ಅವಳ ಮುಖ ಪ್ರಫುಲ್ಲವಾಯಿತು (ಪುಕರು. ೦೩೬). [ಸಂ.]

**ಪ್ರಫುಲ್ಲಿಸು** (ಕ್ರಿ). ಅರಳಿಸು ; ವಿಕಾಸವಾಗುವಂತೆ ಮಾಡು : ನಡೆ, ವಿನಾಯಕ, ಪ್ರಫುಲ್ಲಿಸು ರಘೂತ್ತಮಮನೋಂಬುಜದಿ ಅಭವಸಂಜ್ಞಾನ ಮಹದಿಚ್ಛೆಯಂ (ಶಪಚಾರೋ. ೨೦೪). [ಪ್ರಫುಲ್ಲ + -ಇಸು]

**ಪ್ರಬಂಧ** (ನಾ). ೧. ಬಾಂಧವ್ಯ ; ಕಟ್ಟು. ೨. ವ್ಯವಸ್ಥೆ ; ಏರ್ಪಾಡು: ಸಂಸ್ಥಾನದ ಪ್ರಬಂಧವನ್ನು ಮಾಡಿದಳು (ಚಮಚ. ೬೩). ೩. ನಿರಂತರತೆ; ಎಡೆಬಿಡದಿರುವಿಕೆ : ಪರಂಪರೆ : ಪೂರ್ವಾಪೂರ್ವ ಚಿತ್ರವಿಶೇಷ ಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು. ೯-೧೯೨ ವ) ; ಈ ಮಹೋತ್ಪಾತ ಪ್ರಬಂಧ ವಿರಾಮಕರ್ಮವ ಬೆಸಸಿಯೆನೆ (ಶಂವ್ಯಾಕ. ೦೦-೨೮). ೪. ಕಾವ್ಯ ಗ್ರಂಥ : ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಟಿಸ್ಕೊಡೆ ಪಂಪನೆ ಪೇಟ್ಗುಮೆಂದು ಪಂಡಿತರೆ ತಗುಳ್ದು ಬಿಚ್ಚಟಿಸೆ ಪೇೞಲೊಡರ್ಚಿದನೀ ಪ್ರಬಂಧಮಂ (ಪಂಭಾ. ೦-೦೦) ; ಕವಿಗಿನಿದಾಗೆ ನಿಚ್ಚ ಪೊಸತಾಗೆ . . . ಪೇೞಲೊಡರ್ಚಿದನೀ ಪ್ರಬಂಧಮಂ (ರಂರೋಂಬು. ೦-೦೦). ೫. ಆಧುನಿಕ ಗದ್ಯಸಾಹಿತ್ಯದ ಒಂದು ಪ್ರಕಾರ ; ನಿಬಂಧ ; ಇದು ಇಂಗ್ಲಿಷಿನ 'Essay' ಎಂಬ ಶಬ್ದಕ್ಕೆ ಸಮಾನಾರ್ಥಕವಾದ ಶಬ್ದ : ಈ ಸಂಕಲನದೊಳಗಿನ ಕೆಲವು ಪ್ರಬಂಧಗಳು ಸ್ವತಂತ್ರ ಹಾಗೂ ಕೆಲವು ಅನುವಾದಗಳಾಗಿರುವುವು (ಶ್ರಿಂರ. ಹೃದ್ಗತ. ೪). ೬. ಸಂಗೀತಕ್ಕೆ ಅಳವಟ್ಟ (ಆಧ್ಯಾತ್ಮಿಕ ವಿಚಾರವುಳ್ಳ) ಸಾಹಿತ್ಯರಚನೆ : ಸ್ವರ, ರಾಗ ಮತ್ತು ತಾಳಯುಕ್ತವಾಗಿ, ಅನೇಕ ಭಾಗಗಳನ್ನೊಳಗೊಂಡ ಭಗವದ್ವಿಷಯಃಸಾಹಿತ್ಯವುಳ್ಳ ಯಾವ ರಚನೆಗೂ ಪ್ರಬಂಧವೆಂಬ ಹೆಸರು ಅನ್ವಯಿಸುತ್ತದೆ . . . ಅಷ್ಟಪದಿಗಳು ಪ್ರಬಂಧವೂ ಹೌದು (ಸಂಗೀಕಂ. ೬೩). ೭. (ತಮಿಳುದೇಶದ ವೈಷ್ಣವಭಕ್ತರು ರಚಿಸಿದ, ವೇದಾಂತ ತತ್ತ್ವಗಳನ್ನೊಳಗೊಂಡ) ಕೃತಿ ; ಆಳ್ವಾರುಗಳ ರಚನೆ : ಶ್ರೀವೈಷ್ಣವ ಪ್ರಬಂಧಗಳಿಗೆ ದ್ರಾವಿಡವೇದವೆಂಬ ಪೂಜ್ಯನಾಮಕರಣವಾದ್ದು (ಕಶಂ. ೨೩) ; ಆಳ್ವಾರುಗಳು ಮುಖ್ಯವಾಗಿ ಹನ್ನೆರಡು ಜನರು. ಇವರುಗಳ ತಮಿಳುಪ್ರಬಂಧಗಳು ನಾಲ್ಕು ಸಾವಿರ ಪದ್ಯಗಳನ್ನೊಳ ಗೊಂಡಿವೆ (ಚಾರಪ. ೨೩೬). 'ದ್ರಾವಿಡಪ್ರಬಂಧ', 'ದ್ರಾವಿಡವೇದ' ಪರಾ. [ಸಂ.]

**ಪ್ರಬಂಧಧ್ವನಿ** (ನಾ). [ಕಾವ್ಯಮೀ] ಸುಲಭವಾಗಿ ಅರ್ಥಮಾಡಿಕೊಳ್ಳ ಬಹುದಾದ ಒಟ್ಟು ಕಾವ್ಯದ ಧ್ವನಿವಿಶೇಷ : ಸುಲಭವಾಗಿ ಗ್ರಹಿಸುವುದಕ್ಕಾಗಿ ಕ್ಲೇಶವಿಲ್ಲದೆ ವಿಚಾರ ಮಾಡುವುದಕ್ಕಾಗಿ . . . ಕಾವ್ಯದಿಂದ ಒಂದು ಧ್ವನಿ ಹೊರಡುತ್ತದೆ ; ಇದನ್ನೇ ಪ್ರಬಂಧಧ್ವನಿಯೆಂದು ಕರೆಯುವುದು (ಕಾರಮೀ. ೩೦೩). [ಸಂ.]

**ಪ್ರಬಂಧಲಿಪಿ** (ನಾ). ಒಂದು ಬಗೆಯ ಲಿಪಿ : ವ್ಯಾಗಲಿಪಿ ಪ್ರಬಂಧಲಿಪಿ ರಗಣಲಿಪಿ . . . ಯಿಾ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೬೬-೬). [ಸಂ.]

**ಪ್ರಬರ್ಹ** (ಗು). ೧. ಉತ್ಕೃಷ್ಟವಾದ ; ಶ್ರೇಷ್ಠವಾದ. (ನಾ). ೨. ಮುಖ್ಯವಾದುದು ; ಪ್ರಧಾನವಾದದು ; ಉತ್ತಮವಾದುದು ; "ಪ್ರಮುಖಂ ಪ್ರಬರ್ಹಂ" (ಶಸ್ತ್ರಕೋ. ೯೬ ೨) ; "ಅಗ್ರೇಸರಂ ಪ್ರಬರ್ಹಂ ಪ್ರಮುಖಮಾ ಪ್ರವರಮುಗ್ರಗಣ್ಯ ಮುತ್ತಮಂ ಸತ್ತಮಂ

ಗ್ರಾಮಣೀಯೆನಲು ಮುಖ್ಯಕ್ಕೆ ನಾಮಂ" (ಶಬ್ದಮಣಿ. ೦೨೭-೪). [ಸಂ.]

**ಪ್ರಬಲ**, ಪ್ರಬಳ (ಗು). ೧. ಹೆಚ್ಚು ಶಕ್ತಿಯುತವಾದ ; ಬಹಳ ಬಲವಾದ : ಪ್ರಬಲಶುಂಡಾಲವಿಭುವಂ ತನ್ನ (ಚಂಪು. ೩೮-೬೩); ಅಂತಃಕರಣದ ಪ್ರಬಲ ಸ್ವಭಾವದಂತೆ ವಸ್ತುಸ್ವಭಾವವೂ ವ್ಯಕ್ತವಾಗುವುದು (ಹೀರಾ. ೬). ೨. ತೀವ್ರವಾದ ; ತೀಕ್ಷ್ಣವಾದ. ೩. ಮುಖ್ಯವಾದ ; ಪ್ರಧಾನವಾದ. ೪. ವಿನಾಶಕಾರಕ ; ಹಾನಿಕರವಾದ. ೫. ತುಂಬಿದ ; ಸಮೃದ್ಧಿಯಾದ. (ನಾ). ೬. ಬಹಳ ಶಕ್ತಿಶಾಲಿ; ಗಟ್ಟಿಗ : ಪ್ರಬಲನಬಲನವೊಲಂತಾ ಶಬರು ಬೀಟಿಕ್ಕೊಂಡು (ಕಂಠೀರವ. ೪-೩೫). ೭. ಚಿಗುರು ; ಪಲ್ಲವ. ಪ್ರಬಳ : ೧. ಅತುಳೋತ್ಕಾಲತಿಮಿಂಗಿಳಪ್ರಬಳಪಕ್ಷೋದ್ಧೂತವಾತಪ್ರಕಂಪಿತ . . . ವಾರ್ಧಿಯಂ (ಕಾವ್ಯಾವ. ೬೫). ೬. ಅದಿರ್ಪುದೆಂ ಪ್ರಬಳಂ ಬಳನಂ (ಜಗಂ. ೦೬-೩೩). [ಸಂ.]

**ಪ್ರಬಲಿ** (ನಾ). ಪ್ರಬಲನಾದವನು ; ಹೆಚ್ಚು ಶಕ್ತಿಶಾಲಿ ; ಗಟ್ಟಿಗ : ಯಾವ ಬಲ್ಲಿಯೋಳುವನೋ, ಎಂತು ತುಳಿಯಲು ಬೇಕೋ ಯಾವನೋ ಪ್ರಬಲಿ (ಬ್ರಹ್ಮೋ. ೨೨-೩). [ಸಂ. ಪ್ರಬಲಿನ್]

**ಪ್ರಬಲಿತ** (ಗು). ಬಲಗೊಂಡ ; ಶಕ್ತಿಶಾಲಿಯಾದ : ನಿನ್ನ ಮಹಿಮೆಯು ಪ್ರಬಲಿತೋತ್ಪನ್ನ ನಿಜಗುರುಭಕ್ತಿಯುತ ಮಹಿಮೋನ್ನತಿಕೆಯನದಾರು ಬಲ್ಲರು (ಚಕ್ರೆ. ೬೯-೬೭). [ಸಂ.]

**ಪ್ರಬಲಿಸು** (ಕ್ರಿ). ಬೆಳೆ ; ವೃದ್ಧಿಯಾಗು ; ಹೆಚ್ಚಾಗು : ಇನ್ನು ಮುಂದೆ ಕಾವ್ಯಗಳಲ್ಲಿ ಹೊಸಗನ್ನಡವು ಇನ್ನೂ ಪ್ರಬಲಿಸುವ ಚಿಹ್ನೆಗಳಿವೆ (ಕವಿರಾಜೋ. ೦೭೨) ; ನೆಗಡಿ ಅಜೀರ್ಣದಿಂದ ಪ್ರಬಲಿಸುತ್ತದೆ (ಶಂಟರು. ೩೮). [ಪ್ರಬಲ + — ಇಸು]

**ಪ್ರಬಲೆ** (ನಾ). ಶಕ್ತಿವಂತೆ ; ಸಮರ್ಥೆ : ಶ್ರೀಪಾದಪ್ರಕ್ಷಾಳನಂ ಮಾಡಿ ವಾದೋದಕದಿಂ ಪ್ರಬಲೆಯಾಗಿ . . . ಬಬ್ಬನೆ ಬಂಧಿರಲ್ವ ಶಿವದೇವಿಯರು ಕಂಡು (ಶಂಚರಿ. ೦೨-೦೦೪). [ಸಂ. ಪ್ರಬಲಾ]

**ಪ್ರಬಳ** 'ಪ್ರಬಲ' ನೋ.

**ಪ್ರಬಾಲ** (ನಾ). ೧. ಮರ ಗಿಡ ಬಳ್ಳಿಗಳಲ್ಲಿ ಹೊಸದಾಗಿ ಹುಟ್ಟಿದ ಎಲೆ ; ಚಿಗುರು. ೨. ಹವಳ. ೩. ಕೊಳಲಿನ ತುದಿ. [ಸಂ.]

**ಪ್ರಬುದ್ಧ** (ಗು). ೧. ಎಚ್ಚರಗೊಂಡ ; ಎದ್ದ. ೨. ಅರಿವಿಗೆ ಬಂದ ; ತಿಳಿದ. ೩. ಸಂಪೂರ್ಣವಾಗಿ ಅರಳಿದ, — ವಿಕಾಸವಾದ. ೪. ಪ್ರೌಢವಾದ : ಪ್ರಬುದ್ಧ ಭಾಷಣಗಳಿಂದ ಮಕ್ಕಳು ವಿಷಯುವರಂಪರೆಯನ್ನಾಗಲಿ . . . ಅರಿತುಕೊಳ್ಳಲಾರರು (ಶಿಕ್ಷಕ. ೨೬೬). (ನಾ). ೫. ಜ್ಞಾನಿ ; ವಿದ್ವಾಂಸ ; ಪ್ರೌಢ : "ಧೀರಃ . . . ಪ್ರಬುದ್ಧಃ . . . ಮತಿಮಾನ್ — ಈ ೨೮ ವಿದ್ವಾಂಸರ್" (ಹಲಾಯು. ೩೫-೦೬೬) ; ಅವರು ವಿಷಯವನ್ನು ಪ್ರಬುದ್ಧರ ವಿಚಾರದೃಷ್ಟಿಯಿಂದ ತರ್ಕಸಮ್ಮತವಾಗಿ ಬರೆದಿರುತ್ತಾರೆ (ಶಿಕ್ಷಕ. ೨೬೬). [ಸಂ.]

**ಪ್ರಬೋಧ** (ನಾ). ೧. ಎಚ್ಚರಗೊಳ್ಳುವುದು ; ಜಾಗೃತವಾಗುವುದು : ಚೇಷ್ಟಿಸಲೀಯವು ನಿದ್ರೆಯವೋಲ್ ನಿಸದಂ ನರರಂ ಪ್ರಬೋಧಮಪ್ಪನ್ನೆವರಂ (ಶಂಪ್ರಪು. ೨-೩೪). ೨. ಅನುಗ್ರಹ : ಪ್ರಬೋಧವೆಂದರೆ ಅನುಗ್ರಹ (ಹೀರಾ. ೬೦). ೩. ಜ್ಞಾನ ; ತಿಳಿವು ; ಪಾಂಡಿತ್ಯ : ಇನಿತಾಗಮಾರ್ಥವಿಲ್ಲಿನಿತುಪರಂ ಪ್ರಬೋಧಮಣಮಿಲ್ಲ (ಅಜಿತಪು. ೦೨-೩೫). ೪. ಎಚ್ಚರಿಸುವವನು : "ಕೀರ್ತಿಪ ನರಂ ವಂದಿ ವೈತಾಳಿಕಂ ಮಾಗಧಂ ಸೂತಂ ಪ್ರಬೋಧನಕ್ಕುಂ" (ಶಬ್ದಮಣಿ. ೮೦-೪). [ಸಂ.]

**ಪ್ರಬೋಧಕ** (ಗು). ೧. ಜಾಗೃತಿಯನ್ನುಂಟುಮಾಡುವ ; ತಿಳಿವಳಿಕೆಯನ್ನುಂಟುಮಾಡುವ : ಶ್ರೀ ಕೃಷ್ಣಶಾಸ್ತ್ರಿಗಳು ಈಗ ನಾಲ್ಕು ಐದು ದಶಕಗಳಿಂದಲೂ ಕನ್ನಡದ ಪ್ರಬೋಧಶಕ್ತಿಗಳಲ್ಲಿ ಪ್ರಮುಖವಾದ ಪ್ರಬೋಧಕಶಕ್ತಿಯಾಗಿ ಕೆಲಸ ಮಾಡಿದರು (ಶಂಕಮು. x ಮುನ್ನುಡಿ). (ನಾ). ೨. ತಿಳಿವಳಿಕೆಯನ್ನುಂಟುಮಾಡುವವನು. ೩. = ಪ್ರಬೋಧಳ : "ವೈತಾಳಿಕ ಪ್ರಬೋಧಕ ಸೂತ ಸ್ತುತಿಪಾಠಕಾಖ್ಯೆ ವಂದಿಯೊಳಕ್ಕು" (ಪಚ್ಛನಿಘಂ. ೬೩-೬೮). [ಸಂ.]

**ಪ್ರಬೋಧನ** (ನಾ). ೧. ಎಚ್ಚರಗೊಳ್ಳುವಿಕೆ ; ಜಾಗೃತಿ : ಮುಕುಳನನಿವಿಳನಂಗಳ್ ವಿಕಾಸಹಾಸಪ್ರಬೋಧನೋನ್ಮೇಷಂಗಳ್ ಪ್ರಕಟಿಸುಗುಮ್ಮೈಕ್ಯಮಂ (ಕಾವ್ಯಾವ. ೯೦೪). ೨. ತಿಳಿವು ; ಜ್ಞಾನ. ೩. ಬೋಧಿಸುವುದು. ೪. ಸುವಾಸನೆಯನ್ನು ಉದ್ದೀಪನಗೊಳಿಸುವುದು : "ಸ್ಥಾಪಕಂ ಪ್ರಬೋಧನಮಕ್ಕುಂ" (ಪಚ್ಛನಿಘಂ. ೬೬-೯). [ಸಂ.]

**ಪ್ರಬೋಧಿತ** (ಗು). ೧. ಜಾಗೃತಗೊಂಡ : ನಿಜಪ್ರಮೋದಪ್ರಬೋಧಿತನಿಜದಿವ್ಯಪರಿಮಳಾಮೋದಿತ ದಿಗಂಗನಾಮುಖಂಗಳಪ್ಪ ಸುಗಂಧದ್ರವ್ಯಗಳಂ ಪೂಸಿ (ಆದಿಪು. ೬-೦೦೬ ವ) ; ಪ್ರಥಮಕಲ್ಪಾಮರೇಂದ್ರಂ ಸಾಂದ್ರಭಕ್ತಿಪ್ರಬೋಧಿತಾಶಯಕುಶೇಶಯನಾ ಗುಣಗಣಮಣಿಭೂಷಣಾಂಗೆ ದಿವಿಜೇಂದ್ರಲೋಕೋತ್ತಮಭೂಷಣಂಗಳಂ ತುಡಿಸೆ (ಶಾಂತಿಪು. ೧೦-೫೬ ವ). (ನಾ). ೨. [ಕಾಮಶಾ] ಒಂದು ಬಗೆಯ ರತಿಬಂಧ : ಪುರುಷನ ತಿಕದ ಕೆಳಗೆ ಮೊಳಕಾಲನಿಕ್ಕಿ ಒತ್ತಿ ಪುರುಷಾಯಿತಂಗೈದು ಅಲ್ಲಾ ಪುರುಷನ ಕಟಿಯನ್ನು ವಿತತಭಾವದಿಂ ಕುಳ್ಳಿರ್ದು ಕಾಲ ನೀಡಿ ಕೀಲ ತಪ್ಪದ ಹಾಗೆ ಕೊಡಿದಡೆ ಪ್ರಬೋಧಿತಮೆಂಬ ಕರಣಂ (ಕಾಮಶಾ. ೨೩೪). [ಸಂ.]

**ಪ್ರಭಂಜನ** (ನಾ). ೧. ಚೂರು ಮಾಡುವುದು ; ಪುಡಿ ಮಾಡುವುದು. ೨. ಗಾಳಿ ; ವಾಯು : "ಪವನಃ . . . ಪ್ರಭಂಜನಃ . . . ಮಹಾಬಲಃ — ಈ ೨೦ ಗಾಳಿಯ ಪೆಸರ್" (ಹಲಾಯು. ೦೪-೬೩) ; ನಿಜರಾಜಸದನಸರಸೀಸರೋಜರಜಮನಟ್ಟಿಕೊಂಡು ಸುಳಿವ ಸುಪ್ರಭಾತಪ್ರಭಂಜನನುಂ (ಕಂಠೀರವ. ೩-೮೦ ವ) ; ಬೀಡಿದುದಸದೃಶಸೋಷ್ಮಪ್ರಭಂಜನಂ ಬೇಸಗೆಯೊಳ್ (ರಾಜಶೇ. ೫-೩೨). ೩. ಗಾಳಿಯ ಅಧಿದೇವತೆ ; ವಾಯುದೇವ; ಮೃಗವಾಹನಂ ಪ್ರಭಂಜನಂ (ಜಗಂ. ೦೪-೬೦) ; ನೀನೆ ಅನಂತಂ, ನೀನೆ ಹವ್ಯವಾಹಂ, ಪ್ರಭಂಜನಂ ನೀನೆ (ಅದ್ಭುತ. ೬-೨೩). 'ಪ್ರಭಂಜನ ಸಂತ' ಪರಾ. ೪. ನಾಲ್ಕು ಬಗೆಯ ಜೀವಸಂಬಂಧವಾಯುಗಳಲ್ಲಿ ಒಂದು : ವೈರಂಭ ಮುಖ್ಯ ಪ್ರಭಂಜನ ಅಂತರ್ಯಾಮಿಸಂಜ್ಞೆಯುಳ್ಳ ನಾಲ್ಕು ಜೀವಸಂಬಂಧವಾದ ವಾಯುಗಳೇ ಮಾನಸಾದ್ಯಂತಃಕರಣ ಚೇಷ್ಟಾಕಾರಣಂಗಳಾಗಿರ್ಕುಂ (ಶಬ್ದಶಾ. ೩೪). ೫. ಬಿರುಸಾಗಿ ಬೀಸುವ ಗಾಳಿ ; ಬಿರುಗಾಳಿ : ಯುಗಾಂತಪ್ರಭಂಜನನೀರಾವತಚಕ್ರದಂತೆ ತಿರಿವಂತಾಳ್ಗಂ (ಆದಿಪು. ೨-೩) ; ಶ್ರೀಮಹಿತನಹಿತಸಕಲ ಮಹೀಮಹಿತಪಯೋಧರಪ್ರಭಂಜನನಂ (ಸುಕುಮಾ. ೨-೧). ೬. ಧ್ವಂಸಮಾಡಿದವನು ; ನಾಶಕ: ಪ್ರಭಂಜನಸಖಪ್ರಭಾವಪ್ರಭಂಜನನಪ್ಪನಗೆ ಕುಲಹೀನವನಿತಾಸ್ತನ್ಯೋಪಪುಷ್ಪನೊಳನುಬಂಧಿಕೆಯಾತಿಕಪ್ಪಮುಂ (ಜಗಂ. ೫-೬೧ ವ). [ಸಂ.]

**ಪ್ರಭಂಜನಪ್ರದರ** (ನಾ). ಒಂದು ಬಗೆಯ ಅಸ್ತ್ರ ; ವಾಯುವ್ಯಾಸ್ತ್ರ : ಆ ಪ್ರಭಂಜನಪ್ರದರಂ ಮೇಘಮಾರ್ಗದೊಳೆ ಮೇಘಬಾಣಮಂ ಪ್ರತಿಹತಂ ಮಾಡೆ (ಜಗಂ. ೦೪-೦೦೩ ವ). [ಸಂ.]

**ಪ್ರಭಂಜನಪ್ರಿಯ** (ನಾ). ಗಾಳಿಯನ್ನು ಪ್ರೀತಿಸುವವನು ; ಅಗ್ನಿ : ಪ್ರಭಂಜನಪ್ರಿಯನತಿನಿಷ್ಠುರಜಿಹ್ವಂ (ಶಂಪ್ರಪು. ೦-೪೨). [ಸಂ.]

**ಪ್ರಭಂಜನಸಖ** (ನಾ). = ಪ್ರಭಂಜನಪ್ರಿಯ : ಪ್ರಭಂಜನಸಖಪ್ರಭಾವಪ್ರಭಂಜನನಪ್ಪನಗೆ ಕುಲಹೀನವನಿತಾಸ್ತನ್ಯೋಪಪುಷ್ಪನೊಳನುಬಂಧಿಕೆಯಾತಿಕಪ್ಪಮುಂ (ಜಗಂ. ೫-೬೧ ವ). [ಸಂ.]

**ಪ್ರಭಂಜನಸುತ** (ನಾ). ವಾಯುಪುತ್ರ ; ಭೀಮ : ಕುರುರಾಜಾನುಜರಂ ಪ್ರಭಂಜನಸುತಂ ಕೊಂದಿಕ್ಕುಗುಂ (ಗದಾಯು. ೫-೩೮). [ಸಂ.]

**ಪ್ರಭಗ್ನ** (ಗು). ಹೆಚ್ಚಾಗಿ ಮುರಿದ ; ಚೂರುಚೂರಾದ : ಗಜದಂತಾಕಾರಂಗಳ್ ಗಜದಂತಾದ್ರಿಗಳಿವಲ್ತೆ ತೋರ್ಪುವು ಮಧುಮಪ್ರಜವರಿವಾರಿತ

ಮಾದ್ಯದ್ಗ ಜಕಟಕರ್ವಣಪ್ರಭಗ್ನಚಂದನತರುಗಳ್ (ಆಂಕ್ರ. ೨-೨೬). [ಸಂ.]

**ಪ್ರಭವ** (ಗು). ೧. ಉತ್ತಮವಾದ; ವೈಶಿಷ್ಟ್ಯಪೂರ್ಣವಾದ. ೨. ಉಂಟಾದ; ಹುಟ್ಟಿದ: ಎಸೆಗುಂ...ಮತ್ತಾಳಿಪರಭೃತಪ್ರಭವ ರವಂ (ಅಜಿತ. ೬-೧೧); ಸಂಗಳಿಸದೆ ತನಯನ ಲೀಲಾವಿಳೋಕನಪ್ರಭವ ಸೌಖ್ಯಮಾ ದಂಪತಿಯೊಳ್ (ಚಂದ್ರಪ್ರ. ೩-೯೦). ೩. ಉತ್ಪತ್ತಿ ಸ್ಥಾನ; ಉಗಮಸ್ಥಾನ: ಅನೇಕಲಕ್ಷಣಗುಣಪ್ರಭವಂ ಮೃದಪಾದವಾದ ವಾಕ್ಯ...ಸುಭಗಂ ಕಳಾಕಳಿತವೆಂಬ ನೆಗಟ್ತೆಯನಾಳ್ದ ಕಬ್ಬವಂ... ಈವುದು (ಶಂಶಬ್ದ. ೧-೯). ೪. ಹುಟ್ಟು; ಉತ್ಪತ್ತಿ: ಅಭಿಮತಕ್ರೀಡಾ ವಿನೋದದ ರಭಸದಲಿ ದಿನ ಸವೆಯೆ ಗರ್ಭಪ್ರಭವವಾಯ್ತು (ಕುಮಾರ. ೦೯-೦೦). ೫. ಮೂಲಕಾರಣ; ಮುಖ್ಯ ಕಾರಣ. ೬. ಬಲ; ಪರಾಕ್ರಮ. ೭. ಅರುವತ್ತು ಸಂವತ್ಸರಗಳಲ್ಲಿ ಮೊದಲನೆಯದು: ಆ ವರುಷವೇ ಪ್ರಭವ ... ಅಕ್ಷಯವೆಂದಱವತ್ತು ತೆಱನಾಗಿಹುದು (ಏಕೋ. ೬೨೦); ನಿನ್ನ ಹೆಸರಳಿದು ನೀರಾದುದಾ ಪ್ರಭವಂ (ಗಿರಿಜಾ. ೫೬-೦). ೮. ನದಿಯ ಉಗಮಸ್ಥಾನ. ೯. ವಿಷ್ಣುವಿನ ಹೆಸರು. ೧೦. ಏಳಿಗೆ; ಅಭಿವೃದ್ಧಿ. ೧೧. (?): ಪ್ರಭವಂ ನೀಳಘನಾಘನಂ ಸಮವಸೃತ್ಯುರ್ವೀತಳಂ . . . ನವಮೇಘಕಾಲಮೆನೆ ಬಂದಂ ದೇವದೇವಂ ಸ್ವಯಂಪ್ರಭನುದ್ಯನ್ಮನಿಜಾತಕಂ ಕಱಿಯುತುಂ ಧರ್ಮಾಮೃತಾಸಾರಮಂ (ಚಂದ್ರಪ್ರ. ೬-೩). [ಸಂ.]

**ಪ್ರಭವಿಷ್ಣು** (ಗು). ೧. ಸರ್ವೋತ್ಕೃಷ್ಟವಾದ. ೨. ಬಲಿಷ್ಠವಾದ; ಬಲಶಾಲಿಯಾದ. (ನಾ). ೩. ಒಡೆಯ; ಸ್ವಾಮಿ: ಭೂಪರ್ ಕಪ್ಪಮಂ ತರ್ಪರುದ್ಧತವೃತ್ತಪ್ರಭವಿಷ್ಣುಸಿಂಹಳನದೆಂದುಂ ತೆತ್ತನಲ್ತು (ರಾಜಶೇ. ೬-೩೩). [ಸಂ.]

**ಪ್ರಭವಿಸು** (ಕ್ರಿ). ೧. ಹುಟ್ಟು; ಜನಿಸು: ಅಭಯಕರವರವಪುತ್ರಂ ಪ್ರಭವಿಸಲೊಡನೀಶಭಕ್ತಿಪಂಕಜಮಿತ್ರಂ ಶುಭಮಯವಾದುದು ಭೂಮಿ (ಹರಿಶ್ಚಂ. ೨-೩೩); ರೂಪಿಸಿದ ಷಟ್ಖಂಡಗಳ ಶುಕರೂಪ ತದನಂತರದಿ ಜಂಬೂದ್ವೀಪದೊಳು ಪ್ರಭವಿಸಲು ಉತ್ತರಕಾಂಡಕಥನವನು ಶ್ರೀಪತಿಯು ತಾ ಪೇಳ್ವೆನೆಂದು ನಿರೂಪಿಸಲು (ರಾಕ್ಷಸ. ೦-೦೯). ೨. ಉಂಟಾಗು; ಸಮನಿಸು; ಘಟಿಸು: ಪ್ರಭವಿಸಿದುದು ಭಾನುಗೆ ಚಿತ್ರಭಾನುವೆಸರೀ ಗಳೆನಿಸಿ...ನಭದೊಳೆಸೆದಂ ಕೃಷ್ಣಂ (ಜಗ. ೦೩-೯೯); ಸಭೆಯೊಳು ಕುಳಿತಾಗ ನಾಲ್ಕೆಂಟು ವಚನ ದುರ್ಲಭವಾಗಿಹವು ಭಾವ ನಿನಗೆ ಅಭಿಮುಖವಡೆದೀಗ ವಚನಸುಲಭನಾಗಿ ಪ್ರಭವಿಸಿದಂದವಿದೇನು (ಕಕಕ. ೯-೦೦೯); ಮುಂತಿವರ್ಗಾ ಕ್ರೂರಾಸದ್ರಾಜನಿಂದೇಂ ಪ್ರಭವಿಕುಮೊ (ದಿವ್ಯಕ. ೦೯-೦೬). ೩. ರಚಿಸು; ಉಂಟುಮಾಡು: ದೇವಿಯು ರೂಪವಿದ್ದವಂ ಪ್ರಭವಿಸುವಲ್ಲಿ ಬಿಟ್ಟ ವರಮಾಣಾಗಳಿಂ ಸಮೆದಂ ಸುಧಾಬ್ಧಿಯಂ (ಶಶಕ್ರ. ೨-೩೦); ಶುಭಲಗ್ನವಱಿದು ಮಂಗಲವ ಪ್ರಭವಿಸಿದನು (ಚಕಕ. ೯೩-೦೦೬). [ಪ್ರಭವ + –ಇಸು]

**ಪ್ರಭಾಕರ** (ನಾ). ೧. ಬೆಳಕನ್ನುಂಟುಮಾಡುವವನು: ಅಹಿತತಮೋಪಹಂ ದನುಜಸಂಹೃತಿಶಕ್ತಿಧರಂ ಪ್ರಭಾಕರಂ (ರಾಜಶೇ. ೧-೬). ೨. ಇನ; ಸೂರ್ಯ: "ಆದಿತ್ಯಃ, ಸವಿತಾ...ಪ್ರಭಾಕರಃ...ತ್ರಯಿಯಾತನುಃ—ಈ ೪೭ ಆದಿತ್ಯನ ಪೆಸರ್" (ಕರ್ಣಾಟಕ. ೭-೩೬). ೩. ಚಂದ್ರ. ೪. ಅಗ್ನಿ. ೫. ಸಮುದ್ರ. [ಸಂ.]

**ಪ್ರಭಾಕರದಾಸ** (ನಾ). ಒಬ್ಬಾತನ ಹೆಸರು: ಶ್ರೀ ಪ್ರಭಾಕರದಾಸನ್ (ಮ್ಯಾ.ಆಂ. ೦೯೩೯, ೨೧-೦; ಸು. ೩೨೫೪. ೬೪). [ಸಂ.]

**ಪ್ರಭಾಗ** (ನಾ). ವಿಭಾಗ: ದ್ವೀಪ ಸಮುದ್ರಂಗಳ್ ಕಲ್ಪವೃಕ್ಷವನಾಕೀರ್ಣಂ ಭಾಗಿಗಳಾಗಿ ಪುಟ್ಟ ಜಘನ್ಯಭೋಗಭೂಮಿಪ್ರಭಾಗಂಗಳಾಗಿರ್ಕುಂ (ಸುಕುಮಾ. ೦೦-೩೯ ಪ). [ಸಂ.]

**ಪ್ರಭಾಚಕ್ರ** (ನಾ). ಬೆಳಕಿನ ವರ್ತುಲ; ಪ್ರಕಾಶದ ವೃತ್ತ: ಚಕ್ರರತ್ನಮೊದೆಯಲ್ತು ಚಕ್ರಿಗಾನುಮಲ್ತೆ ದೋಷ್ಟಕ್ರಮೆಂದು ಬಂದು ಮುಂದೆ ನಿಲ್ವ ಮಾಟ್ಕೆಯಿಂ ಪ್ರಭಾಚಕ್ರಮೆಸೆಯೆ (ಆದಿಪು. ೦೨-೩೩). [ಸಂ.]

**ಪ್ರಭಾತ್‍ಫೇರಿ** 'ಪ್ರಭಾತಫೇರಿ' ನೋ.

**ಪ್ರಭಾತ** (ನಾ). ೧. ಬೆಳಗು; ಪ್ರಾತಃಕಾಲ; ಉದಯಕಾಲ: "ಕಾಲ್ಯಂ . . .ಪ್ರಭಾತಂ. . .ವ್ಯುಷ್ಟಂ—ಈ ೧೦ ಸಮಟ್ಟೆ(ಡೆ)ಱ" (ಕರ್ಣಾಟಕ. ೦೯-೦೦೦); ಪ್ರಭಾತಪಟಹಧ್ವನಿಗಳ್ ದೆಸೆದೆಸೆಯೊಳೆಸೆಯೆಯುಂ (ಆದಿಪು. ೬-೨೬ ಪ); ಪುಷ್ಪಪ್ರಭಾತದೊಳ್ ಕ್ರೌಂಚಪಕ್ಷಿಯ ಪಂಕ್ತಿ ನೆರೆದು...ದನಿಸಂತೆಗೈವಂತೆ ಪೋಲ್! (ಶ್ರೀರಾಮಾ. ೧೦-೩೩೯). ೨. [ಛಂದ] ಒಂದು ವೃತ್ತದ ಹೆಸರು; ಹದಿಮೂರು ಅಕ್ಷರಗಳ ಒಂದು ವೃತ್ತ: ನ ಜ ಜ ರ ಗಂ ಮಱ ಯ ಲ್ ಪ್ರಭಾತವೃತ್ತಂ (ಛಂದೋ. ೬೨). [ಸಂ.]

**ಪ್ರಭಾತಕಾಲ** (ನಾ). ಬೆಳಗಿನ ಹೊತ್ತು; ಉದಯಕಾಲ: "ಪೊಟ್ರಱ ಯೆಂದೆನಲ್ ಪ್ರಭಾತಕಾಲಂ" (ಅಭಿನ್ನ. ೯೯). [ಸಂ.]

**ಪ್ರಭಾತಫೇರಿ, ಪ್ರಭಾತ್‍ಫೇರಿ** (ನಾ). ೧. ಯಾವುದಾದರೂ ಧಾರ್ಮಿಕ ಅಥವಾ ಅನ್ಯ ಉತ್ಸವಗಳ ಆಚರಣೆಯ ಅಂಗವಾಗಿ ಮಾಡುವ ಪ್ರಾತಃಕಾಲದ ಸಾಮೂಹಿಕಮೆರವಣಿಗೆ: ಮುಂಜಾವಿನ ನಾಲ್ಕು ಗಂಟೆಯಿಂದಲೇ ಪ್ರಭಾತಫೇರಿಗೆ ಪ್ರಾರಂಭ (ಕ್ರಾಂತಿ. ೯೬); ಪ್ರಭಾತಫೇರಿಯನ್ನು ಪೋಲೀಸರು ಲಾಠಿಪ್ರಯೋಗ ಮಾಡಿ ಚದುರಿಸಿದರು (ಕರ್ನಾ. ೦೩೯). **ಪ್ರಭಾತ್‍ಫೇರಿ**: ೨. ಬೆಳಗಿನ ಜಾವದಲ್ಲಿ ಮಾಡುವ ತಿರುಗಾಟ,—ಸುತ್ತಾಟ: ಪ್ರಭಾತ್‍ಫೇರಿ—ಉದಯಕಾಲದಲ್ಲಿ ಹಾಕುವ ಸುತ್ತು (ಪದ್ಮಸು. ೦೨೬). [←ಹಿಂ. ಪ್ರಭಾತ್‍ಫೇರೀ]

**ಪ್ರಭಾತವಿಧಿ** (ನಾ). ಬೆಳಗಿನ ಹೊತ್ತು ಆಚರಿಸುವ ನಿಯಮ: ಪ್ರಾತರ್ವಿಧಿ: ವಾಸರೆಯ ತುದಿಗೈದಿ, ಪ್ರಭಾತವಿಧಿಗಳಂ ಪೂರಯಿಸಿ . . .ಕುಳಿತರ್ಕೆ (ಶ್ರೀರಾಮಾ. ೨೬೩-೦೨). [ಸಂ.]

**ಪ್ರಭಾಮಂಡಲ, ಪ್ರಭಾಮಂಡಳ** (ನಾ). ೧. ಬೆಳಕಿನ ವರ್ತುಲ; ತೇಜೋವಲಯ. ೨. [ಜೈನ] ಜನಕರಾಜನ ಮಗ: ಸೀತೆಯ ಸೋದರ. ೧. ೨: ಪ್ರಭಾಮಂಡಲನ ಮಂಡಲಾಗ್ರಮಂ ಚಂದ್ರಹಾಸ ಪ್ರಭಾಮಂಡಲದಿ ಹತಪ್ರಭಾಮಂಡಲಂ ಮಾಡಲುಂ ನಳನ ಕೋಪಾ ನಲನಂ ಖಡ್ಗಧಾರಾಜಲದಿಂ ನಂದಿಸಲುಂ. . .ಉತ್ಕಂಠನಾಗಿ (ಪಂಪರಾಮಾ. ೦೩-೦೩೬ ಪ). ೩. ಪರಿವೇಷ; ಪ್ರಭಾವಳಿ: ರಾಜವಂಶೀಯರ ಚಿತ್ರಗಳನ್ನು ಪ್ರಭಾಮಂಡಲ (Halo) ಮತ್ತಿತರ ಅರಸೊತ್ತಿಗೆಯ ಕುರುಹುಗಳ ಸಹಿತವಾಗಿ ಬರೆಯುತ್ತಿದ್ದರು (ಚಿತ್ರಕ. ೩೦). **ಪ್ರಭಾಮಂಡಳ**: ೧. ಇಂಬಾದುದು ಕಯ್ಯ ಚಾಮರ ಚಳತ್ಪಾಂಡುಪ್ರಭಾಮಂಡಳಂ (ಶಬ್ದ. ೧೦-೨೯). [ಸಂ.]

**ಪ್ರಭಾಮಂಡಳ** 'ಪ್ರಭಾಮಂಡಲ' ನೋ.

**ಪ್ರಭಾವ** (ನಾ). ೧. ಬಲ; ಪರಾಕ್ರಮ: ಪ್ರಭಾವಪ್ರಕಟೀಕೃತ ಕದಂಬಕುಳಾಂಬರಪ್ರಚಣ್ಡಮಾರ್ತ್ತಣ್ಡಂ (ಶಾಸನ. XX. ೯೦-೩; 1068). ೨. ಘನತೆ; ಹಿರಿಮೆ: ಸಿದ್ಧಪುರುಷರ ಆತ್ಮಪ್ರಭಾವದಿಂದ ಅವರ ವಾಕ್ಕಿಗೆ ಅನಂತವಾದ ಪ್ರಭಾವವಿದೆ (ಶಾಕಟ. ೦೩೯). ೩. ಪ್ರಾಬಲ್ಯ; ಮಾಹಾತ್ಮ್ಯ; ಮಹಿಮೆ: ಮಾನವನು ಮಹಾದೇವನ ಅಂಶನೇ ಆಗಿದ್ದರೂ, ಮಾಯಾಶಕ್ತಿಯ ಪ್ರಭಾವದಿಂದ ತನ್ನ ಜ್ಞಾನಕ್ರಿಯೆಗಳ ಪ್ರಾಬಲ್ಯವನ್ನು ಕಳೆದುಕೊಂಡಿರುವನು (ಶಿವ.ಶಿ. ೦). ೪. ಅತಿಮಾನುಷಶಕ್ತಿ: ಶ್ರೀಮಾಸೇನಪ್ಪರಮಪ್ರಭಾವರಿಷಿಯರ್ ಕಟ್ಟಪ್ಪಿನಾಮಿಟ್ಟದುಳ್ಳಿ...ಸಂಗಂಗಳ ಪೇಟ್ಟ ಸಿದ್ಧಸಮಯಮನ್ನಪ್ಪಾದೆ ನೋನ್ತು (ಎಪ. II. ೨೭-೦; ಸು. 700). ೫. ತೇಜಸ್ಸು;

ವರ್ಚಸ್ಸು : ದೇವಿ ನೀಂ ... ಪ್ರಭಾವಗರ್ಭಶಕ್ತಿಯಂತೆಯುಂ . . . ಮಹತ್ವಮಂ ಪಡೆದೆ (ಜಗ. ೨-೯೬ ವ); ದೇಶದ ಪ್ರತಿಷ್ಠೆ ಪ್ರಭಾವಗಳನ್ನು ಹೆಚ್ಚಿಸಲಿಕ್ಕಾಗಿ ಹೊಡೆದಾಡಿದ ಆ ನಾಯಕರಿಗೆ ಕಾವು ಎಷ್ಟು ಋಣಗಳೋ! (ಸಂಗೀತ. III, ೮ ಮುಖ).

ಪ್ರಭಾವ ಬೀರು = ಪರಿಣಾಮವನ್ನುಂಟುಮಾಡು : ಸರಸಮ್ಮ ಪಕ್ಕದ ಮನೆಗೆ ಬಂದ ಮೇಲೆ . . . ನನ್ನ ಮೇಲೆ ತುಂಬಾ ಪ್ರಭಾವ ಬೀರಿ ಬಿಟ್ಟಿದ್ದಾರೆ (ಕಪ್ಪುಸ್. ೮೬). [ಸಂ.]

**ಪ್ರಭಾವಕಾರಿ** (ನಾ). ವರ್ಚಸ್ಸನ್ನುಂಟು ಮಾಡುವಂಥದು ; ಪರಿಣಾಮ ಕಾರಿಯಾದುದು : ಭೂಮ್ಯಾತ್ಮಸಂಬಂಧವಾದ ಸ್ಪೆನ್ಸರ್‌ನ ಅಭಿಪ್ರಾಯ ಗಳು ಅವನ ಮನಸ್ಸಿನ ಮೇಲೆ ತುಂಬ ಪ್ರಭಾವಕಾರಿಯಾದುವು (ಪ್ರಕರು. ೩೯). [ಸಂ. ಪ್ರಭಾವಕಾರಿನ್]

**ಪ್ರಭಾವತೆ** (ನಾ). ಘನತೆ ; ಹಿರಿಮೆ : ಕವಿಕಾವ್ಯಪ್ರಕಟಪ್ರಭಾವವು ನದಂ ಕೀಳ್ಗಬ್ಬಿಗಂ ಗುಪ್ತಿಗೈದವರಾತ್ಮೀಯಕೃತಿಪ್ರಭಾವತೆಯನಾದಂ ತೋರ್ಪವೋಲ್ (ರಾಜಶೇ. ೬-೯೯). [ಸಂ. ಪ್ರಭಾವತಾ]

**ಪ್ರಭಾವನೆ** (ನಾ). ೧. ಭಾವನೆ: ಆ ಪ್ರವರರಿಗೆ ಬಿನ್ನವಿಸಿಯವರ ಪ್ರಸನ್ನವನಾ ಜ್ಞೆಯಂ ಕರುಣಾಪ್ರಭಾವನೆಯಂ ಪಡೆದು ತಾ ಮತ್ತೆ ವಂದಿಸುತ (ಜಕಥೆ. ೯೬-೬೩). ೨. [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು : ೮ "ಜೈನಧರ್ಮದ ಪ್ರಭಾವವನ್ನು ಬೆಳಗುವುದು" (ಕೃಪಕೋ. ೦೭೭) : ಸಮ್ಯಗ್ದರ್ಶನಜ್ಞಾನಚಾರಿತ್ರರತ್ನತ್ರಯಪ್ರಭಾವ ದಿಂದಾತ್ಮಪ್ರಕಾಶಂಗೆಯ್ವುದು ಪ್ರಭಾವನೆ (ಜಾವುಂಕ. ೨೯೦) : ಪುಣ್ಯ ಕಥಾಶ್ರವಣಸಂಭಾವನೆಯೊಳಂ ಜಿನಪೂಜಾಪ್ರಭಾವನೆಯೊಳಂ (ಶಂಕ್ರಪು. ೯-೭೭ ವ). 'ಮಾರ್ಗಪ್ರಭಾವನೆ' ಪರಾ. [ಸಂ. ಪ್ರಭಾವನಾ]

**ಪ್ರಭಾವಮುದ್ರೆ** (ನಾ). ವರ್ಚಸ್ಸಿನ ಮುದ್ರೆ, – ಪರಿಣಾಮ : ಪ್ರತಿ ಯೊಬ್ಬರಲ್ಲಿಯೂ ಸ್ವಪ್ರತಿಷ್ಠೆಯ ಮತ್ತು ಶ್ರೀಮಂತಿಕೆಯ ಪ್ರಭಾವ ಮುದ್ರೆ ಎದ್ದು ಕಾಣುತ್ತಿತ್ತು (ಪ್ರಕರು. ೯೭೭). [ಸಂ. ಪ್ರಭಾವಮುದ್ರಾ]

**ಪ್ರಭಾವಲಯ** (ನಾ). ೧. ಬೆಳಕಿನ ವರ್ತುಲ ; ವೃತ್ತಾಕಾರವಾದ ಬೆಳಕು : (ಸೂರ್ಯನ ಅಥವಾ ಚಂದ್ರನ ಸುತ್ತಲೂ ಕಾಣುವ ಕಿರಿದಾದ) ಪ್ರಭಾವಲಯ (Corona. ೩೦೪೩). ೨. (ಆಲಂ) ತೇಜೋವಲಯ ; ಸೊಗಸಂ : ನಾಯಕಪಾತ್ರಕ್ಕೆ ರಸಭಾವಗಳ ಪ್ರಭಾವಲಯವನ್ನು ಕಟ್ಟುವವು. (ಸಹಿಗಾ. ೨ ಖಾದಂಬರಿ). [ಸಂ.]

**ಪ್ರಭಾವಲ್ಲಭ** (ನಾ). ಬೆಳಕಿನ ಒಡೆಯ ; ಸೂರ್ಯ : ಸುಕವಿವೃಂದ ಸ್ತೋತ್ರಪಾತ್ರಂ ಪಡಕ್ಷರಿದೇವಂ ಸರಸಪ್ರಬಂಧಸುಭಗಾಂಭೋಜಪ್ರಭಾ ವಲ್ಲಭಂ (ರಾಜಶೇ. ೦-೬೩). [ಸಂ.]

**ಪ್ರಭಾವಶಾಲಿ** (ಗು). ೧. ವರ್ಚಸ್ವಿಯಾದ : ಪ್ರಭಾವವನ್ನು ಬೀರುವ : ಅರ್ಜಿಸಮಿತಿಯ ಪ್ರಭಾವಶಾಲೀ ವ್ಯಕ್ತಿಯೊಬ್ಬನ ಹೆಸರಿಗೆ ಮತ್ತೊಂದು ಪತ್ರ ಬರೆದು . . . ಕೊಟ್ಟನು (ಪ್ರಕರು ೩೩೯). (ನಾ). ೨. ಶಕ್ತಿಯುತವಾದುದು; ಪರಿಣಾಮಕಾರಿಯಾದುದು : ಬರೆಹ ಕ್ಕಿಂತ ಮಾತೇ ಹೆಚ್ಚು ಪ್ರಭಾವಶಾಲಿಯಾದುದಲ್ಲವೇ ? (ವಾಕ್ಶರ್ಮ. ೨೩೭): ಕೊಪರ್ನಿಕಸ್ ಮತ್ತು ನ್ಯೂಟನ್ನರ ಕಾಲಗಳಲ್ಲಿ ನಡೆದ ಸಂಶೋಧನೆಗಳಷ್ಟು ಪ್ರಭಾವಶಾಲಿಗಳಾಗಲಿಲ್ಲ (ಪುಸ್ತಕ. ೩೩ ಶೀರ್ಷಿಕೆ). ೩. ವರ್ಚಸ್ವಿಯಾದ ವ್ಯಕ್ತಿ; ಪ್ರಭಾವವನ್ನು ಬೀರುವವನು : ಆತ ತುಂಬಾ ಪ್ರಭಾವಶಾಲಿ. ನಮ್ಮ ಕೆಲಸಕ್ಕೆ ಅವನು ಸಹಾಯ ಮಾಡಬಹುದು (ರೂಢಿ).

[ಸಂ. ಪ್ರಭಾವಶಾಲಿನ್]

**ಪ್ರಭಾವಳಿ** (ನಾ). ವಿಗ್ರಹದ ಶಿರೋಭಾಗದಲ್ಲಿ ಅಳವಡಿಸುವ ವರ್ತುಲಾಕಾರದ ಒಂದು ಅಲಂಕಾರಸಾಧನ : ಶ್ರೀಆದಿತೀರ್ಥೇಶ್ವರ ರಿಂಗೆ ಮಾಡಿಸ್ದ ಲೋಹದ ಪ್ರಭಾವಳಿಗೆ ಆ ಸಮಸ್ತಜನಂಗಳಿಗೆ ಮಂಗಳ ಮಹಾಶ್ರೀ (ಕ್ಷುಶಾಂ. ೦೯೯೯, ೯೯-೨; 1583); ಉಮಾಮಹೇಶ್ವರನ ಮೇಲೆ ಕೆತ್ತಿರುವ ಪ್ರಭಾವಳಿಯು ಅತ್ಯಂತ ಸುಂದರವಾದ ಬಳ್ಳಿಯಿಂದ ಕೂಡಿದಂತೆ ಕೆತ್ತಲ್ಪಟ್ಟಿದೆ (ಕಾಕರ. ೩೦೨). [ಸಂ. ಪ್ರಭಾವಲಿ]

**ಪ್ರಭಾವಳೆ, ಪ್ರಭಾಳಿ** (ನಾ). = ಪ್ರಭಾವಳಿ : ಇದರಲ್ಲಿ ತರಹೇವಾರಿ ಉತ್ಸವಗಳಿರುತ್ತವೆ. ಪ್ರಭಾವಳೆ, ಶೇಷ, ಗರುಡ, ಪುಷ್ಪಮಂಟಪ ಇತ್ಯಾದಿ (ಗುರುಚಾ. ೩೩). **ಪ್ರಭಾಳಿ** : ನವರತ್ನ [ಖಚಿತ]ವಾದ ಚಿಂನದ ಪ್ರಭಾಳಿಯನೂ ಸಮರ್ಪಿಸಿ (ಎಕ್ಕ. IX – ii, ೯೮೯-೩೭; 1513).

[<ಪ್ರಭಾವಳಿ./ ಮರಾ. ಪ್ರಭಾವಳ, ಪ್ರಭಾಳ]

**ಪ್ರಭಾವಿ** (ಗು). ೧. ವರ್ಚಸ್ಸಿನಿಂದ ಕೂಡಿದ: ಪರಿಣಾಮಕಾರಿಯಾದ: ತನ್ನ ಲೇಖನಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿ ಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಶಾಂ. ೦೦). (ನಾ). ೨. ವರ್ಚಸ್ವಿಯಾದಂದು : ಅಷ್ಟು ಪ್ರಭಾವಿಯಾಗಿತ್ತು ಮಹಾದೇವಯ್ಯನವರ ಉಜ್ವಲವ್ಯಕ್ತಿತ್ವ (ರಂಗಕೋ. ೦೭೦). ೩. ಪ್ರಭಾವ ಬೀರಬಲ್ಲವನು : ಎಲ್ಲ ಅಂಗಗಳಲ್ಲಿಯೂ ಜೈನರೇ ಪ್ರಭಾವಿ ಗಳಾಗಿದ್ದ ಕಾಲವು ಮುಗಿದುಹೋಗಿತ್ತು (ಶಾಚಿತ. ೦೩೩).

[ಸಂ. ಪ್ರಭಾವಿನ್]

**ಪ್ರಭಾವಿತ** (ನಾ). ವರ್ಚಸ್ಸಿಗೊಳಗಾದವನು: ಅವರ ಮುಗ್ಧ ನಡೆನುಡಿ ಗಳಿಂದ ಪ್ರಭಾವಿತರಾದವರು . . . ನಿಜವಾಗಿ ಧನ್ಯರು (ಶಿಕ್ಷದ. ೩೭೬) ; ಅವಳ ಸೊಬಗಿನಿಂದ ಅವನು ಪ್ರಭಾವಿತನಾದನು (ಯೋಧರು. ೦೦).

[ ಸಂ. ]

**ಪ್ರಭಾವಿಸು** (ಕ್ರಿ). ೧. ಬೆಳಗಂ ; ಪ್ರಕಾಶಪಡಿಸಂ : ಮನೋರಥಮ ಪುಟ್ಟುವ ಮಾಳ್ಕೆಯಿನೊಲ್ದು ಪುಟ್ಟಿ ವಂಶಾಂಬರಮಂ ಪ್ರಭಾವಿಸಿದನ ಪ್ರತಿಮಪ್ರಬಲಪ್ರತಾಪವೀರಾಂಬುಧಿ ಪದ್ಮದೇವನ್ (ಎಕ್ಕ. IX-i. ೨೭೭-೩೦; 1184). ೨. ಹೊಮ್ಮಿಸು ; ಪ್ರಕಟಪಡಿಸಂ : ಸಾಕ್ಷಾತ್ಸರಸ್ವತಿ ತಾನೆಂಬಿನಮೇಂ ಪ್ರಭಾವಿಸಿದಳೋ ನಾನಾಕಳಾಳಾಪಮಂ (ಸುಕುಮಾ. ೬-೩೩); ನೋಂಪಿಯೊಳಾದ ಮಹಾಮಹಿಮೆಯಂ ಪ್ರಭಾವಿಸುತ್ತಂ ನಾನಾಜನ ಜಾಲಂಗಳಂ (ಸೇವೆ) ಮಾಡುತ್ತಂ (ಜುಶಿಕ್ಕ. III, ೫೮೦ ನಪುಂಶಿಕಂಶಾರದ ಕೋಂಚಿ). [ಪ್ರಭಾವ + – ಇಸು]

**ಪ್ರಭಾಳಿ** 'ಪ್ರಭಾವಳಿ' ನೋ.

**ಪ್ರಭಿನ್ನ** (ಗು). ೧. ಒಡೆದ; ಚೂರುಚೂರಾದ : ನೆಟಿದ ಚಾತುರ್ದಂತ ಬಲಜಲಧರರಭಸಂ ಪ್ರಭಿನ್ನ ಬ್ರಹ್ಮಾಂಡಾಖಂಡಶಂಕೆಯಂ ಪುಟ್ಟಿಸೆ (ಚಾಂತಿಪು. ೩-೦೦೦ ವ) : ಕುತೀರ್ಥಧ್ವಾನ್ತಸಂಘಾತಪ್ರಭಿನ್ನಘನಭಾನವೇ (ಎಕ್ಕ. XX. ೯೬-೨; 1072). ೨. ಅರಳಿದ : ಬಾಸಣಿಸಿದುದುತ್ಕಟ ಕುಸುಮಾಸವಸೌರಭದೆ ದೆಸೆಗಳೊಡನಳೀಂಳವಂ ವಾಸವವನಿತಾವದನಾ ಬ್ಜಾಸವಸೇಕಪ್ರಭಿನ್ನಮುಕುಲಂ ವಕುಲಂ (ಅಂಪು. ೬-೯೭). (ನಾ). ೩. ಮದವೇರಿದ ಆನೆ ; ಮದ್ದಾನೆ : "ಲಗ್ನಃ, ಪ್ರಭಿನ್ನಃ, ಮತ್ತಃ —ಈ ೩ ಮದದಾನೆ" (ಹರಿಹುಷು. ೩೭-೭೭). [ ಸಂ. ]

**ಪ್ರಭು** (ನಾ). ೧. ರಾಜ; ಅರಸು; ಒಡೆಯ: "ಆರ್ಯಃ, ಪರಿವೃಢಃ, ಸ್ವಾಮೀ, ಪ್ರಭುಃ . . . ಅಧಿಪತಿಃ- ಈ ೧೦ ಒಡೆಯಂ" (ಹರಿಹುಷು. ೫೭-೦೯೯); ಪ್ರಭುಗಳ್ ಭಯದೊಡನೆ ಕೂಡಿ ಚಿಂತಿಪರಾಗಳ್ (ಹರಿಷ್ಕರ. ೨-೨೫); ವೈದ್ಯಗ್ರಂಥವನ್ನು ಬರೆದಾತನು ಕಳಲೆಯ ಪ್ರಭುವಾದ ವೀರ ರಾಜನು (ಕಕವ್ಚ. V. ಕೃಷ್ಣರಾಜ). ೨. ಬಸವಣ್ಣನ ಸಮಕಾಲೀನ ನಾಗಿದ್ದ ಶರಣನೊಬ್ಬನ ಹೆಸರು ; ಅಲ್ಲಮ : ಸಿದ್ಧರಾಮನ ಪುರಕೆ ಪ್ರಭು ಬಾದ (ಪ್ರಶುಂಗ. ೧೧-೩). ೩. ಒಬ್ಬಾತನ ಹೆಸರು : ಇದಱ ಮುನ್ದೆ ಕೊಣ್ಡಶರ್ಮಕುಪ್ಪ ಕೀರ್ತಿವರ್ಮ ಗೋಸಾಸಿಯ ನಿಱಿಸಿದು ಕೀರ್ತ್ತನ ದಿಶಾಪಾಲಸ್ಕಲಿಖಿತಂ ಪ್ರಭುನಾಮಮಂ (ಎಇ. XXI, ೩೯-೦೯; 761).

**ಪ್ರಭುಗಳಂಬಳಿ** = ರಾಜನು ಬಿಟ್ಟ ಮಾನ್ಯ : ಮಹಾಜನಂ ಪ್ರಭುಗಳಂಬಳಿಯುಮಂ ದೇವರುಂಬಳಿಯುಮಂ ಸರ್ವ್ವಬಾಧಾಪರಿಹಾರವಾಗಿ ಕಾದೂಡುವರು (ಶಾಂರೇಡ್. ೩-೨೨: 1047). [ಸಂ.]

**ಪ್ರಭುಗೊಡಗೆ** (ನಾ). ರಾಜನು ಕೊಟ್ಟ ಕೊಡುಗೆಯ ಭೂಮಿ : ಪ್ರಭುಗೊಡಗೆ ಗಲುಡುಗಳೂ ಗ್ರಾಮದ ಸೇನಬೋವನ ಕೊಡಗಿ ಮುನ್ನಾದ ಮಾನ್ಯಗಳನೂ ಸರ್ವಮಾನ್ಯವಾಗಿ ಬಿಟ್ಟು (ಎಕ್. XIV. ಶ್ರೀರಂಗ. ೦೯೯-೨೦; 1563). [ಪ್ರಭು + ಕೊಡಗೆ (<ಕೊಡಂಗೆಯ್ಯ್)]

**ಪ್ರಭುತೆ** (ನಾ). ಪ್ರಭುವಾಗಿರುವಿಕೆ; ರಾಜನ ಅಧಿಕಾರ; ಪ್ರಭುತ್ವ: ಗಭೀರದೊಳ್ ಗರಿಮೆಯೊಳೂರ್ಜಿತಪ್ರಭುತೆಯೊಳ್ . . . ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಧರ್ಮ. ೧-೮೦); ಪ್ರಭುತೆಯ ತೆರನಂತೆ ಜನರನು ಸೆಳೆವಳು (ಶಂಕಾಶ. ೦೦೬-೨೦). [ಸಂ. ಪ್ರಭುತಾ]

**ಪ್ರಭುತ್ರಿಕೆ** (ನಾ). = ಪ್ರಭುತ್ವ : ಅಸಗೋಡ ಪಲ್ಲವಸಾಮಂತನು ಉಟ್ಟಂಗಿ ಮೂಮಾತ್ರಟಿಳೊಳು ತಂನ ಪ್ರಭುತ್ರಿಕೆಯ ಕೂಟಿಗೋಳದ ಮೂಲಸ್ಥಾನ ಕಲಿದೇವ × × × ನಿವೇದ್ಯಕ್ಕಂ . . . ಬಿಟ್ಟ ದತ್ತಿ (ಶಾಇಇ. IX-i. ೩೩೯-೨೨; 1222). [< ಪ್ರಭುತ್ವ + — ಇಕೆ]

**ಪ್ರಭುತ್ವ** (ನಾ). ಒಡೆತನ; ಅಧಿಕಾರ : ಆರ ನೆಗಟ್ತೆಯುಂ ಬಲಮುಂ ಮಾಯತಿಯುಂ ಚಲಮುಂ ಪ್ರಭುತ್ವಮುಂ ದೂರದೊಳಿರ್ದು ನೋಡೆ ಸೊಗಯಿಪ್ಪುದು ಬೆಟ್ಟದ ನುಣ್ಪಿನಂತೆ (ಕಾವ್ಯಸಾ. ೪೩೩); ಪ್ರಭುತ್ವಗಳು —ಇವು . . . ರಾಜಾಧೀನಪ್ರಭುತ್ವವೆಂತಲೂ . . . ಪ್ರಜಾಧೀನ ಪ್ರಭುತ್ವವೆಂತಲೂ ಎರಡು ವಿಧವು (ಹೂಗೋಳ. ೦೯). [ಸಂ.]

**ಪ್ರಭುಮಾಣಿ** (ನಾ). ಒಬ್ಬಾತನ ಹೆಸರು : ಶ್ರೀಪ್ರಭುಮಾಣಿ ಪರಮಸುಭಗನ್ ಪಗೆವರ ಗಂಧಾಸ್ತಿ ಪಾರ್ಶ್ವರ ಇಟ್ಟಿ (ಎಕ್. XVI. ಹುಣ್ಸೂ. ೦೦೩-೦: ೩೫೫ಮ ೩೩)· [ಪ್ರಭು + ಮಾಣ್ಕ]

**ಪ್ರಭುವಳಿತ** (ನಾ). ಅರಸನ ಅಂಕಿತಕ್ಕೆ ಒಳಪಟ್ಟುದು ; ರಾಜನ ಅಧೀನಕ್ಕೊಳಗಾದಂದು : ನಾವು ಎಲ್ಲರನ್ನೂ ಜಯಿಸಿ ರಾಜ್ಯಗಳನ್ನು ಕಟ್ಟಿಕೊಂಡು ಕಳಲೆಯನ್ನು ಮಾತ್ರ ಅವನಿಗೆ ಪ್ರಭುವಳಿತವಾಗಿ ಕೊಟ್ಟು ಇದ್ದೆವು (ಕಾಮವಂ· ೯೬); 'ಪ್ರಭುವಳಿತವಾದ ಕಟ್ಟುಂಬಳಿ' ಎಂಬ ಒಕ್ಕಣೆಯಿದೆ (ಮಂಕ್ರಕ.೦೬-೨). [ಸಂ. ಪ್ರಭುವಲಿತ]

**ಪ್ರಭುಶಕ್ತಿ** (ನಾ). [ರಾಜನೀ] ಮಂತ್ರಶಕ್ತಿ, ಪ್ರಭುಶಕ್ತಿ ಮತ್ತು ಉತ್ಸಾಹಶಕ್ತಿಗಳೆಂಬ ಮೂರು ಶಕ್ತಿಗಳಲ್ಲಿ ಒಂದು ; ರಾಜನ ಅಧಿಕಾರದಿಂದ ಬರುವ ಶಕ್ತಿ; ಕೋಶಬಲ ಮತ್ತು ದಂಡಿಸುವ ಶಕ್ತಿ— ಇವುಗಳಿಂದ ಬರುವ ತೇಜಸ್ಸು—ವರ್ಚಸ್ಸು ; ಆಳುವ ಶಕ್ತಿ: ಉತ್ತಮಪ್ರಭುಶಕ್ತಿಯುಕ್ತ ಜಿನೇಂದ್ರಶಾಸನಭಕ್ತ (ಎಕ್. VII. ಶಿಕಾ. ೨೦೯-೮೯; 918) ; ಪ್ರಭುಶಕ್ತಿ ಶಕ್ತಿ ನಿರ್ಮಳ ಮಣಿಭೂಷಣಂ ಫಣಿವಿಭೂಷಣಮಾಗೆ ನೆಗಟ್ತೆಯಂ ಪುದುಗೊಳಿಸಿದನೀಶ್ವರಂ ನೆಗಟ್ದುದಾರಮಹೇಶ್ವರನೀಗೆ ಭೋಗಮಂ (ಶಂಶಿಶಾ. ೦-೨); ರಾಜಕೀಯವ್ಯವಸ್ಥೆಗಳು ಪ್ರಭುಶಕ್ತಿ ಇರುವವರ ಅಭಿಪ್ರಾಯಗಳಿಗೆ ಸರಿಯಾಗಿ ರೂಪಾಂತರಗಳನ್ನು ಪಡೆಯುತ್ತವೆ (ಭಾರತ·೨೨೦). 'ಉತ್ಸಾಹಶಕ್ತಿ' ಪರಾ. [ಸಂ.]

**ಪ್ರಭುಸಮ್ಮಿತ** (ನಾ). [ಕಾವ್ಯಮೀ] ಪ್ರಭುಸಮ್ಮಿತ, ಮಿತ್ರಸಮ್ಮಿತ ಮತ್ತು ಕಾಂತಾಸಮ್ಮಿತವೆಂಬ ಮೂರು ಬಗೆಯ ಸಮ್ಮಿತಗಳಲ್ಲಿ ಒಂದು ; ನಮಗೆ ಪ್ರಿಯವಾಗಿರಲಿ ಇಲ್ಲದಿರಲಿ ರಾಜಶಾಸನದಂತೆ ಅವುಗಳನ್ನು ಅನುಸರಿಸಿ ನಡೆಯಬೇಕಾದುದು : ಆಲಂಕಾರಿಕರು ಗ್ರಂಥರಾಶಿಯನ್ನು ಉಪದೇಶದೃಷ್ಟಿಯಿಂದ ಪ್ರಭುಸಮ್ಮಿತ, ಮಿತ್ರಸಮ್ಮಿತ, ಕಾಂತಾಸಮ್ಮಿತ ಎಂದು ಮತ್ತೊಂದು ಪ್ರಕಾರವಾಗಿ ಮೂರು ಭಾಗ ಮಾಡುವರು. "ಹೀಗೆ ಮಾಡಬೇಕು, ಹೀಗೆ ಮಾಡಕೂಡದು" ಎಂದು ಕರ್ತವ್ಯಾಕರ್ತವ್ಯಗಳನ್ನು ವಿಧಿಸುವ ಮತ್ತು ನಿಷೇಧಿಸುವ ವೇದಶಾಸ್ತ್ರಾದಿಗಳು ಪ್ರಭುಸಮ್ಮಿತ (ಕೃಶಿ. ೦೬೯ ೩೨೦) ; ವಿಧಿ-ನಿಷೇಧಗಳನ್ನು ಪ್ರಭುಸಮ್ಮಿತವಾಗಿ ನಿರೂಪಿಸುವ ವೇದಗಳಲ್ಲಿ ಶ್ರದ್ಧೆಯಿಟ್ಟು ಪ್ರವರ್ತಿಸುವುದೇ ಪ್ರಸ್ತುತವಾಗಿತ್ತು (ಭಾರತ. ೦೨೦). [ಸಂ.]

**ಪ್ರಭೂತ** (ಗು). ೧. ಸಮೃದ್ಧವಾದ ; ಹೆಚ್ಚಾದ ; ಅಧಿಕವಾದ : ಆ ವಿವಿಧಪ್ರಭೂತಭುವನಸ್ತುತಸಾರಸಮಸ್ತವಸ್ತುಮಂ ತೀವಿದ ಭಂಡಿಯೊಳ್ . . . ಸಂಜೀವಕ ನಂದಕಾಖ್ಯ ವೃಷಭಂಗಳನಿಂಬೆನೆ ಪೂಡಿ (ಪಂಚತಂ. ೨೩ ೪). ೨. ಹುಟ್ಟಿದ ; ಉಂಟಾದ : ಪುರಾಣಕವಿಪ್ರಭುಪ್ರಯೋಗಾವಿಳಸದ್ಗುಣೋದಯಮನಾಯ್ದು ವಜೀಂ ಸಮೆದೊಂದು ಕಾವ್ಯದಿಂ ಶ್ರೀವಿಜಯಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ (ಕವಿರಾ. ೨-೦೩೩); ಅಭಿಮನ್ಯುಮರಣವಾರ್ತಾಪ್ರಭೂತಶೋಕಾಗ್ನಿ ಧರ್ಮತನಯನನಿರದಂದಳಿಭವಿಸಿ ತನ್ನನಳುರ್ದಂತೆ ಭಾಸ್ಕರಂ ಕಂಕಮಾದನಸ್ತಾಚಲದೊಳ್ (ಪಂಪಭಾ. ೦೦-೦೦೬). ೩. ಪಕ್ವವಾದ ; ಬಲಿತ. (ನಾ). ೪. ಹೆಚ್ಚಳ ; ಆಧಿಕ್ಯ: "ಪ್ರಾಜ್ಯಂ, ಭೂರಿ, ಪ್ರಭೂತಂ . . . ಅದಭ್ರಂ-ಈ ೧೮ ಮೊಕ್ಕಳಂ" (ಶಬ್ದಮಣಿ. ೦೦೬-೦೬) ; ಜನಸಾಧಾರಣವೆಂದರೆ, ಒಂದು ದೊಡ್ಡ ಜೀವವನ್ನು ಸೂಚಿಸುತ್ತದೆ ; ಸ್ವಭಾವವಾಗಿ ಅದರ ಅವಶ್ಯಕತೆ ಪ್ರಬಲ ಮತ್ತು ಪ್ರಭೂತ (ಪಿಂಂಕ. II, ೦೯೬). ೫. ಶ್ರೇಷ್ಠವಾದುದು. ೬. ಒಬ್ಬ ವ್ಯಕ್ತಿಯು ಸತ್ತ ನಂತರದ ಹತ್ತನೆಯ ದಿನ ಕೊಡಲಾಗುವ ಮೊಸರನ್ನದ ಬಲಿ : (ಶ). [ಸಂ.]

**ಪ್ರಭೂತಿ** (ನಾ). ಸಮೃದ್ಧವಾದುದು ; ವಿಪುಲವಾಗಿರುವಿಕೆ : "ಬಹುಳಂ ಪ್ರಭೂತಂ ಪ್ರಭೂತಿ [ಶಾಕಂ. ೮] ಬಹುಪುಷ್ಕಳಂ ಪುಷ್ಕಮೆನೆ ಮೊತ್ತಮುಕ್ಕುಂ" (ಮಂಗರಾ. ೦೨೯-೬); ಶೈಲಸಾಗರಧರಾಶಶಾಂಕರವಿಾವಾಲಾಂಬರಂ ಪರಮಶ್ರೀವಿಜಯ ಪ್ರಭೂತಿಜಯಶ [೦] . . . ಪರಮಾನಂದಿತ ಲೋಕಮೊಪ್ಪೆ ನೆಲೆಗೊಳ್ಗಾಚಂದ್ರತಾರಂಬರಂ (ಕವಿರಾ. ೩-೨೫೦). [ಸಂ.]

**ಪ್ರಭೃತಿ₁** (ನಾ). ೧. ತೂಕವುಳ್ಳುದು ; ಶ್ರೇಷ್ಠವಾದುದು ; ಉತ್ತಮವಾದಂದು : ಭಾಸ್ವದ್ಗುಣಯುತಕಪಿಲಾದ್ಯ ಪ್ರಭೂತಾವನೀಪಾವನರೂಪಶ್ರೀವಿಭೂತಿಪ್ರಭೃತಿಯನುಟಿ ಪತ್ರೂರ್ವಕಂ ಲೇಪನಂಗೈದು (ರಾಜಶೇ. ೦೩-೯೬). ೨. ತೂಕದ ವ್ಯಕ್ತಿ; ಶ್ರೇಷ್ಠಪುರುಷ ; ಶ್ರೇಷ್ಠವ್ಯಕ್ತಿ : ಕೊಳಗಾಲದ ವೀರಣ್ಣಶೆಟ್ಟಿ, ಅಣ್ಣಯ್ಯಶಾಸ್ತ್ರಿ ಪ್ರಭೃತಿಗಳಲ್ಲಾ ಯೋಚಿಸಿ (ಹೈಆರ. ೯೬); ಆಧಾರಗ್ರಂಥಗಳಲ್ಲಿ ನಮೂದಿಸಲ್ಪಟ್ಟ ಕೆಲವು ಹೆಸರುಗಳನ್ನು . . . ನಮ್ಮ ತುಳುನಾಡಿಗೆ ಹೊಂದಿಸಿಕೊಳ್ಳುವ ಪ್ರಯತ್ನವನ್ನು ನಮ್ಮ ನಾಡಿನ ಪ್ರಭೃತಿಗಳು ಮಾಡಿದ್ದಾರೆ (ತುಳುಇತಿ·೦೬). [<ಸಂ. ಭೃತಿ=ಭಾರವಾದುದನ್ನು ಹೊತ್ತುಕೊಂಡಿರುವುದು]

**ಪ್ರಭೃತಿ₂** (ಅ). ಮೊದಲಾಗಿ; ಮೊದಲುಗೊಂಡು ; ಪ್ರಾರಂಭಿಸಿ : ಸಿದ್ಧಾಯತನ ಪ್ರಭೃತಿ ನವಕೂಟಂಗಳೊಳಂ ನೆಱೆದು (ಆದಿಪು. ೧-೬೨ ವ) ; ಯಾಚಕ ವಾಚಕ ನರ್ತನ ಕಥಕ ಪುಣ್ಯಪಾಠಕ ಪ್ರಭೃತಿ ಸಮಸ್ತಜನಕ್ಕಂ ಬೇಡಿದುದಂ ಕೊಟ್ಟು (ಸುಕುಮಾ. ೬-೨೫ ವ). [ಸಂ.]

**ಪ್ರಭೆ** (ನಾ). ೧. ಕಾಂತಿ; ಪ್ರಕಾಶ : "ವರ್ಚಃ . . . ಪ್ರಭಾ, ರಶ್ಮಿಃ —ಈ ೧೧ ದೀಪ್ತಿ" (ಶಬ್ದಮಣಿ.೦೨-೬೫); ಪ್ರಭೆಯಿಂ ಚಿಂತಾಮಣಿ ಕಲ್ಪಭೂರುಹಂ ಪುಷ್ಪಮಂಜರಿಯಿನೆಸೆವಪೊಲಾ ತ್ರಿಭುವನಭೂಷಣನೆಸೆದಂ (ಅರ್ಜುನಸೇ· ೯-೩೯) ; ಆ ಚಿತ್ರಿನ ಪ್ರಭೆಯಲ್ಲಿ ಶರಣನುದಯಿಸಿದನು (ಸಿದ್ಧೇಶ. ೦೬-೯೩). ೨. ರಶ್ಮಿ ; ಕಿರಣ . "ರೋಚಿಃ . . . ದ್ಯುತಿಃ, ಪ್ರಭಾ ...ಗೌಃ — ಈ ೩೨ ರಶ್ಮಿಗಳ ಪೆಸರ್" (ಚಂಪಭಾವು.೬-೩೬).

**ಪ್ರಭಾಪ್ರಭಾವನ್ಯಾಯ**=ದೀಪ ಮತ್ತು ಅದರ ಪ್ರಕಾಶ ಎರಡೂ ಒಂದೇ ಎಂಬ ನ್ಯಾಯ: ಪ್ರಭಾಪ್ರಭಾವನ್ಯಾಯದಂತೆ ಈ ವಿಶ್ವವು ಈಶ್ವರನಿಗೆ ಶರೀರವಾಗಿದೆ (ಶಾರದ· ೨೬೬). [ಸಂ. ಪ್ರಭಾ]

**ಪ್ರಭೆವೆಱು** (ಕ್ರಿ). ಪ್ರಕಾಶವನ್ನು ಹೊಂದು; ತೇಜಸ್ಸನ್ನು ಪಡೆ;

ಅತುಳಿತಪ್ರಭುವೆತ್ತು ಸುತನೀ ಗತಿಯೊಳೀಶಧ್ಯಾನತತ್ಪರಮತಿಯೊಳಿರ್ದನಃ ತಾಯ ಬಸುಱಲಿ ವತ್ಸರತ್ರಯವು (ಬಸವ. ೩-೦೨). [ಪ್ರಭು+ಪೆಱು₁]

**ಪ್ರಭೇದ** (ನಾ). ೧. ಒಡೆಯುವಿಕೆ; ಮುರಿಯುವಿಕೆ. ೨. ವಿಭಾಗ. ೩. ಪ್ರಕಾರ; ರೀತಿ; ವಿಧ: ರಘಟೆಗಳ (ತೆಲುಗು–ರಗಡ) ಪ್ರಭೇದಗಳನ್ನು ತಿಳಿಸುವ . . . ಈ ಎರಡು ಪದ್ಯಗಳು ಪ್ರಕ್ಷಿಪ್ತಗಳಾಗಿ ಕಾಣುತ್ತವೆ (ಕ್ರಶಾ. ೦೩೬). ೪. ವ್ಯತ್ಯಾಸ; ಭೇದ: ಇಂತೀ ಅಂಗ ಪ್ರಾಣಂಗಳಲ್ಲಿಯೂ ಲಿಂಗವೇ ಎಡೆಕಡೆ ಇಲ್ಲದಿರ್ದ ಪ್ರಭೇದ [ಪಾಠಾಂ. ಭೇಧ]ವನು ಅಱಿದಾತನೇ ಸರ್ವಾಂಗಲಿಂಗಿ (ಸಿದ್ಧೇಶ. ೦೦೬-೩೩೩). [ಸಂ.]

**ಪ್ರಭೇದಕ** (ನಾ). ಭೇದಿಸುವವನು; (ಇಂಗಿತವನ್ನು) ಅರಿಯುವವನು: ಪರರಿಂಗಿತಾಕಾರಪ್ರಭೇದಕನ ಮನ್ನಣೆಗೆ ಬೆಱಿಯದನನು . . . ಪಡಿಹಾಱಕನ ಮಾಡುವುದು (ಶಬ್ದಾನು. ೩-೮೯). [ಸಂ.]

**ಪ್ರಭ್ರಷ್ಟಕ** (ನಾ). ತಲೆಯಲ್ಲಿ ಧರಿಸಿದ ಹೂಮಾಲೆ: "ಚಂಡಿಕೆಯಲ್ಲಿ ಮುಡಿದ ಹೂ ಪ್ರಭ್ರಷ್ಟಕವೆಂಬುದು" (ಹಲಾಯು. ೯೦-೩೯೯). [ಸಂ.]

**ಪ್ರಮಂಥ** (ನಾ). ಅಗ್ನಿಯನ್ನುಂಟುಮಾಡಲು ಬಳಸುವ ಮರದ ತುಂಡು; ಅರಣಿ: ಮನುಷ್ಯ ಬಿದಿರುಜಾತಿಯ ಕಾಷ್ಠದ ಮತ್ತನೆ ಮರದಲ್ಲಿ 'ಪ್ರಮಂಥ'ದಿಂದ (ಅರಣಿಯಿಂದ) . . . ಮಥಿಸಿದಾಗ ಬೆಂಕಿಯಡಗಿದೆ ಯೆಂದು ತಿಳಿಯುತ್ತಾನೆ (ಕರ್ನಕ್ರ. V ಶೀಲ೯). [ಸಂ.]

**ಪ್ರಮತ್ತ** (ಗು). ೧. ಸೊಕ್ಕುವ; ಮದವೇರುವ: ಸೌಂದರ್ಯದಿಂದ ಪ್ರಮತ್ತವಾಗುವ ಚೇತನ ಶಿವದ ನೆನಹಿನಲ್ಲಿ ನಾಂದು ಹಗುರವಾಗಲಿ (ಶಾಂಡಿಶ. ೧೦೮). ೨. ಅಜಾಗರೂಕವಾದ; ಎಚ್ಚರಗೇಡಿಯಾದ. (ನಾ). ೩. [ಜೈನ] ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು; P "ಅಶುದ್ಧಾತ್ಮನಲ್ಲಿ ಕೆಳತರಗತಿಯ ಆರು ಗುಣಸ್ಥಾನಗಳಲ್ಲಿ ಕಾಣ ಬರುವ ಪರಿಣಾಮ" (ಕ್ರಪಕೋ. ೦೫೭): ಅಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತಪರಾವರ್ತನಸಹಸ್ರಂಗೆಯ್ದು (ಆಂತ. ೦೦-೦೯ ಪ); [ಮತ್ತಂ]ಮಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತ ಪರಿವೃತ್ತಿ . . . ಪ್ರವೃತ್ತಕರಣಕ್ಷಪಕನಾಗಿ (ಶಾಂತಿಪು. ೦೦-೦೦೦ ವ). 'ಅಪ್ರಮತ್ತ'ಪರಾ. [ಸಂ.]

**ಪ್ರಮತ್ತತೆ** (ನಾ). ಸೊಕ್ಕುವಿಕೆ; ಅಮಲೇರುವಿಕೆ: ಈ ಲಲನೆಯರ ಸೌಂದರ್ಯಾನುಭವದಲ್ಲಿ ಒಂದು ರೀತಿಯ ಪ್ರಮತ್ತತೆ ಮೊದಮೊದಲಿಗೆ ಕಂಡುಬಂದರೂ (ಪುಕೀ. ೮). [ಸಂ. ಪ್ರಮತ್ತತಾ]

**ಪ್ರಮತ್ತಯೋಗ** (ನಾ). [ಜೈನ] "ಕಷಾಯಕ್ಕೆ ಅಧೀನವಾಗಿ ಅಸತ್ಕವನ್ನಾಡುವುದು" (ಕ್ರಪಕೋ. ೦೬೬): ಉಮಾಸ್ವಾಮಿಯವರು 'ತತ್ತ್ವಾರ್ಥ ಸೂತ್ರ'ದಲ್ಲಿ 'ಪ್ರಮತ್ತಯೋಗದಿಂದ ಪ್ರಾಣದ ನಾಶವಾಗುವುದೇ ಹಿಂಸೆ' ಎಂದು ಪ್ರತಿಪಾದಿಸುತ್ತಾರೆ (ಕ್ರಪಶ. ೨೩೦). [ಸಂ.]

**ಪ್ರಮತ್ತಸಂಯುತ** (ನಾ). [ಜೈನ]ಪ್ರಮತ್ತಗುಣಗಳಿಂದ ಕೂಡಿದವನು: ಸಂಜ್ವಲನಕಷಾಯ . . . ದುಃಸ್ವಪ್ನಾದಿ ವ್ಯಕ್ತಾವ್ಯಕ್ತ ಪ್ರಮಾದಂಗಳೊಳು ವರ್ತಿಸುವ ತಪಸ್ವಿಯಾರನೆಯ ಗುಣಸ್ಥಾನವರ್ತಿ ಪ್ರಮತ್ತಸಂಯುತನಕ್ಕುಂ (ಶ್ರಾಕಠಾ. ೬೭-೦೯). [ಸಂ.]

**ಪ್ರಮುತ್ತಿ** (ನಾ). =ಪ್ರಮಾದಿ ೨: × × × ವಹಳನ ಪ್ರಮುತ್ತಿ ಸಂವತ್ಸರದ ಕಾರ್ತಿಕ ಬಹಿ ಸೋಲುದೊಡ ತಂಮಣ್ಣಗೆ ನಿಂದ ವೀರಗಲ್ಲು (ಎಪಿ.ಕಂ. ೦೯೯೬, ೦೬-೨; 1399). [< ಪ್ರಮಾದಿ ?]

**ಪ್ರಮಥ** (ನಾ). ಶಿವನ ಪರಿವಾರವರ್ಗದಲ್ಲಿ ಒಬ್ಬ: "ಆತನ ಗಣಂಗಳಂ ಪ್ರಮಥರೆಂಬುದು" (ಹಲಾಯು. ೯-೦೯); ಎಲ್ಲಿ ನೋಡಿದಡಲ್ಲಿ ಮನವಳಸಿದರ ಆಣೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ (ಬಸವ. ೯೯೩); ಜ್ಯೋತಿಯಿಂದ ಜ್ಯೋತಿ ಉದಯಿಸಿದಂತೆ ಉದಯಿಸಿದ ಶುದ್ಧಚಿದ್ರೂಪರಪ್ಪ ಪ್ರಮಥರು (ಸಿದ್ಧೇಶ. ೨೦. ೩೩). [ಸಂ.]

**ಪ್ರಮಥಗಣ** (ನಾ). ಶಿವನ ಪರಿವಾರ; ಶಿವಗಣ; ಪ್ರಮಥರ ಸಮೂಹ: ಕಲ್ಯಾಣಕ್ಕೆ ಪ್ರಮಥಗಣಂಗಳ ರುದ್ರಗಣಂಗಳ ಅಮರಗಣಂಗಳ . . . ತಂದು ನರಹಿದಾತ ನಮ್ಮ ಬಸವಯ್ಯನು (ಶೀಲಶ. ೪. ೩-೯); ಘನತರ ಪ್ರಮಥಗಣರೊಡನೆ ತಾಂಡವಮನೆಸಗುವನು (ಏಕ್ಕೆಶ. ೨-೦-೩೭). [ಸಂ.]

**ಪ್ರಮಥತ್ವ** (ನಾ). ಶಿವಗಣದ ಪದವಿ: ಕಾಲಕಾಲಂ ಮೆಚ್ಚಿ ಕರುಣಾಲೋಲದಿಂ ಪ್ರಮಥತ್ವಮುಂ ಕೊಡೆ (ಬಸವ. ೨೭-೯೭). [ಸಂ.]

**ಪ್ರಮಥನ** (ನಾ). ೧. ಕಡೆಯುವಿಕೆ; ಮಥಿಸುವಿಕೆ: ಸುಪ್ರಸನ್ನರು ನೀವು ನಿಮ್ಮುಭಯಪ್ರಕಟತರ ವಚನಪೀಯೂಷಪ್ರಮಥನಾಭಾವದಿಂದೀ ಶಿವಗಣಾವಳಿಯು . . . ವರ್ಧಿಸಿತು (ಬಸವ. ೩೭-೯೬). ೨. ಪೀಡಿಸುವಿಕೆ; ಹಿಂಸಿಸುವುದು. ೩. ಕೊಲೆ; ವಧೆ. [ಸಂ.]

**ಪ್ರಮಥನಾಥ** (ನಾ). ೧. ಪ್ರಮಥರ ಒಡೆಯ; ಈಶ್ವರ: ಬರುತಿರ್ದನಾ ಪ್ರಮಥನಾಥಂ (ಏಕ್ಕೆಶ. ೨-೩-೦೬). ೨. ಗಣಪತಿ: (೩). [ಸಂ.]

**ಪ್ರಮದ** (ಗು). ೧. ಮತ್ತೇರಿದ ; ಸೊಕ್ಕಿದ : 'ಪ್ರಮದಾಳಿ' ಪರಾ. ೨. ಎಚ್ಚರಗೇಡಿಯಾದ. (ನಾ). ೩. ಸಂತೋಷ ; ಆನಂದ : "ಪ್ರಮೋದಃ, ಪ್ರಮದಃ . . . ಸುಖಂ—ಈ ೧೩ ಸುಖದ ಪೆಸರ್" (ಹಲಾಯು. ೨೦-೦೨೩) ; ಆನಂದನೃತ್ತಪ್ರಮದಮನಧಿಕಂ ಮಾಡಿ (ಆಪು. ೬-೦೨೮) ; ಧರ್ಮಾರ್ಜನಕಂ ಸನ್ಮಾರ್ಗವಿದ್ಯೋತನಂ ಪ್ರಮದಾಪೂರಿತ ಮಿತ್ರಚಕ್ರನಜಡಂ ನಿತ್ಯೋದಯಭ್ರಾಜಿ ಲೋಕಮನೆಲ್ಲಂ ಬೆಳಗುತ್ತು ಮಿರ್ಕೈ (ಎಕ. VI. ಕಡೂರು. ೬೬-೩೮,1172). ೪. ದತ್ತೂರ. ೫. ಕಾಲಿನ ಹರಡು. [ಸಂ.]

**ಪ್ರಮದಂಬೆಱು** (ಕ್ರಿ). ಆನಂದವನ್ನು ಹೊಂದು : ಪ್ರಮದಂಬೆತ್ತ ಚಕೋರದಂಪತಿಯ ಪೋಲ್ (ಶಬರಶ. ೯. ೩೯). [ಪ್ರಮದ+ಪೆಱು₁]

**ಪ್ರಮದವನ** (ನಾ). ರಾಜನ ಅಂತಃಪುರದ ಸ್ತ್ರೀಯರ ವಿಹಾರಕ್ಕಾಗಿರುವ ಉದ್ಯಾನವನ: "ಅರಸರುಂ ಅರಸಿಯರುಂ ಕೂಡಿಹ ಬನಮಂ ಪ್ರಮದವನಮೆಂಬುದು" (ಹಲಾಯು. ೩೬-೭೦); ಅಂತಃಪುರಪ್ರಮದವನ ಪ್ರವಿಷ್ಟನಾಗಿ (ಆಪು. ೬-೧೦೫); ತರಳೆಕೆವೆರಸು ಪ್ರಮದವನಪಕ್ಷದ್ವಾರದಿಂ ಪೊಱಮಟ್ಟು ಪೋಗುತ್ತಂ (ಕಾದಂಪೂ. ೯೯೨). [ಸಂ.]

**ಪ್ರಮದಾಳಿ** (ನಾ). ೧. ಮದಿಸಿದ ದುಂಬಿ ; ಸೊಕ್ಕಿದ ಭ್ರಮರ. ೨. ಸ್ತ್ರೀಯರ ಸಮೂಹ; ಹೆಂಗಸರ ಗುಂಪು: ೧, ೨: ಆ ಮಂಟಪಂ ಮಧುಸಮಯದಂತೆ ಪೋಲ್ತುಮದಾಳಿ ಸಂಮನೋಜ್ಞಮುಂ (ಧರ್ಮಪ. ೬-೬೫). [ಸಂ. ಪ್ರಮದಾಲಿ (ಪ್ರಮದಾ+ಆಳಿ (=ಆಲಿ) ; ಪ್ರಮದ+ಆಳಿ (=ಆಲಿ)]

**ಪ್ರಮದೆ** (ನಾ). ೧.ಹೆಂಗಸು ; ಸ್ತ್ರೀ: "ರಾಮಾ . . . ಪ್ರಮದಾ, ರಮಣಿ . . . ಯುವತಿಃ —ಈ ೨೮ ಸ್ತ್ರೀಯರ್" (ಹಲಾಯು. ೭೯ ೩೨೮). ೨. ತರುಣಿ ; ಯುವತಿ ವಿಳಾಸವಿಭ್ರಮಸಿಂಹಾಸನಾಸೀನನುಂ ಪ್ರಮದಾ ಹಸ್ತವಿನ್ಯಸ್ತಚಾಮರಕ್ರಮಕಮಳನುಂ (ಶಂಕರಾ. ೯-೨೮೫) ; ಪ್ರಮದೆಯರಂ ಮನೋಭವನೆ ಸೂಱೆಗೊಟ್ಟಪನಗ್ನಿಬಾಣದಿಂ (ಶಂಪು. ೬-೦೩೩). ೩. ಸುಂದರಿ. ೪. ಹೆಂಡತಿ; ಪತ್ನಿ. [ಸಂ. ಪ್ರಮದಾ]

**ಪ್ರಮದೋದ್ಯಾನ** (ನಾ). =ಪ್ರಮದವನ ; ಪ್ರಮದೋದ್ಯಾನದೊಳಾವ ನಿರ್ಜನವನಂ ಕೊಂದಿಕ್ಕಿಂ (ಶಂಪಾಮ. ೦೦-೦೦೬). [ಸಂ.]

**ಪ್ರಮದೋನ್ಮತ್ತ** (ನಾ). ಅತಿಶಯವಾಗಿ ಮತ್ತೇರಿದವನು ; ಮದೋನ್ಮತ್ತನಾದವನು : ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿ ಕುಪಿತಾನನನು . . . ಇಂತೀ ಹತ್ತುಜನವಾಗ ಧರ್ಮದ ತತ್ತ್ವವಱಿಗಳ ನಱುಯರ್ (ಶಬ್ದಾನು. ೩-೬೬). [ಸಂ.]

**ಪ್ರಮಾಯೆ** (ನಾ). ೧. ಮರಣ ; ಸಾವು. ೨. ಕೊಲ್ಲುವುದು ; ಕೊಲೆ:

"ಮಾರಣಂ . . . ಪ್ರಮಯಾ, ಹಿಂಸಾ . . . ಸಂಜ್ಞಪನಂ—ಈ ೨೧ ಕೊಲೆ" (ಶಬ್ದಾನು. ೬೯-೩೨೯). ೩. ನಾಶ ; ಅಳಿವು. [ಸಂ. ಪ್ರಮಯ]

**ಪ್ರಮಾಣ** (ನಾ). ೧. (ಎತ್ತರ, ಉದ್ದ ಮತ್ತು ಅಗಲ ಇತ್ಯಾದಿಗಳ) ಅಳತೆ : "ಪ್ರಮಾಣ ಪವಣೆಂದಕ್ಕುಂ" (ಕಶಬ್ದ. ೨೪೦) ; ಪ್ರಾನ್ಯದ ಭೂಮಿಯ ನಿವೇಶನದ ಪ್ರಮಾಣವನ್ನೆನೆ (ಎಪಿ. XX. ೬-೦೬; 1012); ತಾರಕಾಯ ಪ್ರಮಾಣ ಗುಳಿಗೆಯಂ ಮಾಡಿ (ಶಶಕ್ಕ. ೩೯೩). ೨. ಎರಡು ಮೊತ್ತಗಳಿಗಿರುವ ಪರಸ್ಪರ ಭಾಜ್ಯ, ಭಾಜಕಸಂಬಂಧ: ಗಾತ್ರವು ಯಾವ ಪ್ರಮಾಣ (Ratio)ದಲ್ಲಿ ಹೆಚ್ಚುವುದೋ . . . ಒತ್ತಡವು ಅದೇ ಪ್ರಮಾಣದಲ್ಲಿ ಹೆಚ್ಚುತ್ತದೆ(ಭೌತಶಾ. ೨೧೪). ೩. ಮರ್ಯಾದೆ. ೪. ಯಥಾರ್ಥಜ್ಞಾನ ; ಸತ್ಯ : ಪ್ರಮಾಣಮಂ ಜ್ಞಾನಮೆಂಬುದು (ಕಸೂತ್ರ. ೩೦); ದೂರತ್ವ ಸೂಕ್ಷ್ಮತ್ವ ಮೊದಲಾದ ವಿಷಯದೋಷಗಳು, ಕಾಚಕಾಮಲ ಅನವಧಾನ ನಿದ್ರಾ ಮೊದಲಾದ ಕರಣದೋಷಗಳು ಇಲ್ಲದಿರುವಾಗ, ಬರುವಂಥ ಜ್ಞಾನವು ಪ್ರಮಾಣವು (ಹಿಂದಶಾ. ೦೬೩). ೫. ವಿಧಿ; ನಿಯಮ. ೬. ಕಾರಣ ; ಹೇತು : ಜ್ಞಾನೋತ್ಪತ್ತಿ, ವ್ಯಾಪಾರಾಶ್ರಯದ ಅಸಾಧಾರಣ ಹೇತುವೇ ಪ್ರಮಾಣವೆನ್ನಿಸಿಕೊಂಬುದು (ಏವೇಳ. ೦೬). ೭. ವಸ್ತುವಿನ ಯಥಾರ್ಥಜ್ಞಾನವನ್ನು ಕೊಡುವ ಸಾಧನ ; ಆಧಾರ ; ಸಾಕ್ಷಿ ; ರುಜುವಾತು : ಸದ್ಗುರುವಿನ ವಚನ ಪ್ರಮಾಣವೇ ಅಲ್ಲ (ಸಿದ್ಧೇಶ. ೨೦-೩೩); ಪರಮಾತ್ಮಸ್ವರೂಪವನ್ನು ತಿಳಿಸಲು ಶ್ರುತಿಗಿಂತಲೂ ಅಧಿಕವಾದ ಪ್ರಮಾಣವನ್ನು ನಾವು ಕಾಣಲಾರೆವು (ಶಕ್ತಿಂ. ೨೩). ೮. ಶಾಸ್ತ್ರ; ಆಗಮ. ೯. ಅಧಿಕೃತವಾಗಿ ತೀರ್ಮಾನ ಹೇಳುವವನು ; ತೀರ್ಪುಗಾರ. ೧೦. ಅವಧಿ; ಗಡುವು: ಯಶೋಭದ್ರೆಯ ಬೇಡಿದ ಮೋನದ ದಿವಸದ ಪ್ರಮಾಣಾವಸಾನದೊಳ್ . . . ಸುಕುಮಾರಸ್ವಾಮಿ ಕೇಳ್ದು ಜಾತಿಸ್ಮರನಾಗಿ (ವಡ್ಡಾರಾ. ೨೬-೬). ೧೧. [ಯೋಗ] ಐದು ಬಗೆಯ ಚಿತ್ತವೃತ್ತಿಗಳಲ್ಲಿ ಒಂದು : ಪ್ರಮಾಣ, ವಿಪರ್ಯಯ ವಿಕಲ್ಪ, ನಿದ್ರೆ ಸ್ಮೃತಿ—ಈ ಐದೂ ಅಂತಃಕರಣ ವೃತ್ತಿಗಳು (ಭಾರದ. ೦೨೭); ಅಬಾಧಿತವಾದ ಚಿತ್ತವೃತ್ತಿಗೆ ಪ್ರಮಾಣವೆಂದು ಹೆಸರು (ಹಿಂದಶಾ. ೦೦೩). ೧೨. [ನ್ಯಾಯಶಾ] ಹದಿನಾರು ಪದಾರ್ಥಗಳಲ್ಲಿ ಒಂದು : ನ್ಯಾಯದರ್ಶನದಲ್ಲಿ ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ . . . ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಶಾ. ೧೦೨). 'ಪ್ರಮಾಣಶಾಸ್ತ್ರ' ಪರಾ. ೧೩. ಸನ್ನಿಧಿ ; ಸವಿಾಪ : "ಸಮಸ್ಥಾನ ಮಂಜುಳಮುಮಂ ಕಾರಣ ನಿತ್ಯಶಾಸ್ತ್ರ ತಟ ಸತ್ಯಂ ಕೊಟಿಮುಮಂ ಧರ್ಮಮುಮಂ ವಿಮಳನುಂ ಸನ್ನಿಧಿಯುಮಂ ಪ್ರಮಾಣಮೆನಿಕುಂ" (ಪಾಪಾರ. ೧೯೦).

**ಪ್ರಮಾಣ ಮಾಡು** = (ಸಾಕ್ಷಿಯ ಎದುರು) ಆಣೆ ಮಾಡು : ಪ್ರಮಾಣ ಮಾಡಿಸಬೇಕಾದರೆ ಇದನ್ನು ಮುಟ್ಟಿ ಪ್ರಮಾಣ ಮಾಡಬೇಕು (ವಸ್ತುರು. ೦೦); ಅವರು ದೇವಸ್ಥಾನಕ್ಕೆ ಹೋಗಿ ಅಲ್ಲಿ ಪ್ರಮಾಣ ಮಾಡಬೇಕು (ಕ್ರಪಾಇ. II. ೯೭೯). **ಪ್ರಮಾಣವಾಗಿ ಹೇಳು** = ಆಣೆ ಮಾಡಿ ಹೇಳು: ಸುಳ್ಳು ಹೇಳಬೇಡ, ಪ್ರಮಾಣವಾಗಿ ಹೇಳು (ರೂಢಿ). [ಸಂ.]

**ಪ್ರಮಾಣಗ್ರಂಥ** (ನಾ). ಆಧಾರಗ್ರಂಥ; ಅಧಿಕೃತವಾದ ಗ್ರಂಥ : ಕೆಲವೊಂದು ಪ್ರಮಾಣಗ್ರಂಥಗಳ ಕೊರತೆಯನ್ನು ಇಂದು ನಾವು ಅನುಭವಿಸುತ್ತಿದ್ದೇವೆ (ವಚ್ಚನಾ. ೬) ; ಈ ದಿಶೆಯಲ್ಲಿ ನಾವು ಅನೇಕ ಪ್ರಮಾಣ ಗ್ರಂಥಗಳನ್ನು ನಿರೀಕ್ಷಿಸಬಹುದು (ಪ್ರಾಶಿಶಿ. ೩ ಹಿನ್ನೆಲೆ). [ಸಂ.]

**ಪ್ರಮಾಣತೆ** (ನಾ). ಅಧಿಕಾರ ; ಪ್ರಭುತ್ವ : ಸರ್ವಜ್ಞಪ್ರಮಾಣತೆಯಿಂ ತತ್ಪ್ರಮಾಣಕಾಗಮದೊಳ್ ಪೇಟ್ದುದೆಲ್ಲಂ ಅವಶ್ಯಂ ತಪ್ಪುವುದಲ್ಲೆಂದು (ಆಪು. ೬-೨೦ ವ). [ಸಂ. ಪ್ರಮಾಣತಾ]

**ಪ್ರಮಾಣನ** (ನಾ). ೧. ದೃಢೀಕರಿಸುವಿಕೆ; ಸಮರ್ಥನೆ : ರಚಿತವಾದ ರಾಜ್ಯದ ಯಾವುದಾದರೂ ವಿಧಿಯನ್ನು . . . ಅವರು ಅದನ್ನು ಪ್ರಮಾಣನ ಮಾಡುವುದಕ್ಕಾಗಿ ಒಪ್ಪಿಸಬಹುದು (ಭಾರಾಸ. ೧೯). ೨. = ಪ್ರಮಾಣಪತ್ರ ೧ : ಅದರ ಮೇಲೆ ಲೋಕಸಭೆಯ ಅಧ್ಯಕ್ಷರವರ ಹಸ್ತಾಕ್ಷರ ಸಹಿತವಾಗಿ ಪ್ರಮಾಣನವು ಲಿಖಿತವಾಗಿರತಕ್ಕುದು (ಭಾರಾಸ. ೩೬). [ಸಂ.]

**ಪ್ರಮಾಣನಿರ್ಮಾಣ** (ನಾ). [ಜೈನ] ಸ್ಥಾನನಿರ್ಮಾಣ, ಪ್ರಮಾಣನಿರ್ಮಾಣವೆಂಬ ಎರಡು ಬಗೆಯ ನಿರ್ಮಾಣನಾಮಕರ್ಮಗಳಲ್ಲಿ ಒಂದು; ಯೋಗ್ಯಪ್ರಮಾಣದಲ್ಲಿ ಇಂದ್ರಿಯಗಳನ್ನು ರಚಿಸುವಂಥದು : ನಿರ್ಮಾಣಂ ತದ್ವಿವಿಧಂ ಸ್ಥಾನನಿರ್ಮಾಣಂ ಪ್ರಮಾಣನಿರ್ಮಾಣಂ (ಗೊಮ್ಮಸಾ. ೬-೯). [ಸಂ.]

**ಪ್ರಮಾಣಪತ್ರ** (ನಾ). ೧. ವಿಷಯವನ್ನು ರುಜುವಾತು ಪಡಿಸಲು ಲಿಖಿತದ ಮೂಲಕ ಸಮರ್ಥಿಸಿಕೊಳ್ಳುವ ಪತ್ರ ; ದೃಢೀಕರಣಪತ್ರ; ಆಧಾರಪತ್ರ : ಕಮಂಡಲಮುಮಂ ಪ್ರಮಾಣಪತ್ರಮುಮಂ ಸಹಿತ ಬಂದು ನಂಬಿಯಣ್ಣನ ಸಿಂಹಾಸನದ ಮುಂದೆ ನಿಲೆ (ಶಂಶರ. ೬-೮೬); ಆಸ್ಪತ್ರೆಯಿಂದ ಪ್ರಮಾಣಪತ್ರವನ್ನು ಪಡೆದು ಹೆಂಡತಿಯ ಪರವಾಗಿ ತಾನೇ ಅರ್ಜಿಯನ್ನು ಬರೆದು (ಶಂಶಕ್ಕ. ೩೦೦). ೨. ಅರ್ಹತಾಪತ್ರ; ಯೋಗ್ಯತಾಪತ್ರ : ಅವನ ಪ್ರತಿಭೆಗೆ ಪಾಂಡಿತ್ಯಕ್ಕೆ ದೊರೆತ ಬಹುಮಾನ, ಪ್ರಮಾಣಪತ್ರಗಳಿಗಂತೂ ಲೆಕ್ಕವಿಲ್ಲ (ಹೊಸಕ್ಕ. ೩೭). [ಸಂ.]

**ಪ್ರಮಾಣಪುರುಷ** (ನಾ). ೧. ಯಾರ ನಿರ್ಧಾರದಲ್ಲಿ ನಂಬಿಕೆಯುಂಟಾಗುವುದೊ ಅಂಥ ಪಾಂಡಿತ್ಯದ ಅಧಿಕಾರವುಳ್ಳ ವ್ಯಕ್ತಿ; ಆಧಾರವಾಗಿರಬಲ್ಲ ವ್ಯಕ್ತಿ : ಕೇಶಿರಾಜನು ತನ್ನ ವ್ಯಾಕರಣಗ್ರಂಥದಲ್ಲಿ 'ಸುಮಾರ್ಗಮಿದಱೊಳೆ ಲಕ್ಷ್ಯಂ' ಎಂದು ಹೇಳಿದ ಪ್ರಮಾಣಪುರುಷರಲ್ಲಿ ಗುಣನಂದಿಯನ್ನು ಹೆಸರಿಸಿದ್ದಾನೆ (ಕಶಾಕ. ೧೮). ೨. ನ್ಯಾಯಾಧಿಕಾರಿ; ನ್ಯಾಯಾಧೀಶ; ತೀರ್ಪುಗಾರ. [ಸಂ.]

**ಪ್ರಮಾಣಪೂರಣ** (ನಾ). ಪರಿಮಾಣವನ್ನು ಸೂಚಿಸುವಿಕೆ; ವರ್ಗೀಕರಣ : ಅನಿಯ ಪ್ರತ್ಯಯಮನಿತಿನಿತೆನಿತೆಂಬ ಲಸತ್ಪ್ರಮಾಣಪೂರಣದೊಳ್ ನೆಟ್ಟನೆ ಸಂಖ್ಯಾಪೂರಣದೊಳ್ ಜನಿಯಿಪುದು ಮಯೆಂಬುದಿಟ್ಟುಮೆಣಿಸುವ ಸೂಟಿಗೊಳ್ (ಶಮದ. ೨೦೭). [ಸಂ.]

**ಪ್ರಮಾಣವಚನ** (ನಾ). (ಅಧಿಕಾರ ಸ್ವೀಕಾರದ ಪ್ರಾರಂಭದಲ್ಲಿ ಮಾಡುವ) ಪ್ರತಿಜ್ಞೆ ;ಆಣೆ : ಈ ಕೆಳಗೆ ಕಂಡ ಪ್ರಪತ್ರದ ಮೇರೆಗೆ ಪ್ರಮಾಣವಚನ ಅಥವಾ ಪ್ರತಿಜ್ಞಾವಚನ ಸ್ವೀಕಾರ ಮಾಡತಕ್ಕುದು (ಭಾರಾಸ.೩೦); ವಧುಗಳಿಬ್ಬರೂ ಹೆಚ್ಚೆ ಹೆಜ್ಜೆಗೂ ನಿಂತು ಅಗ್ನಿ, ಸದಸ್ಸುಗಳ ಎದುರಿಗೆ ಪ್ರಮಾಣವಚನಗಳನ್ನಿತ್ತರು (ಶಾಂತಲಾ. ೧೦೪). [ಸಂ.]

**ಪ್ರಮಾಣವಾಕ್ಯ** (ನಾ). ಆಧಾರಸಹಿತವಾದ ವಾಕ್ಯ; ಅಧಿಕಾರವಾಣಿ: ತಾನಾಡಿದುದು ಪ್ರಮಾಣವಾಕ್ಯ. ಅದಕ್ಕೆ ಯಾರೂ ಇದಿರಾಡಬಾರದು (ಶತಂಪ. ೯೦). [ಸಂ.]

**ಪ್ರಮಾಣವಾಚಕ** (ನಾ). [ವ್ಯಾಕ] ಅನಿತು, ಇನಿತು, ಎನಿತು ಇತ್ಯಾದಿ ಪರಿಮಾಣವನ್ನು ಸೂಚಿಸುವ ಶಬ್ದ : 'ಪ್ರಮಾಣ ಸೂಚಕ' ಪರಾ. [ಸಂ.]

**ಪ್ರಮಾಣಶಾಸ್ತ್ರ** (ನಾ). ಸಾಕ್ಷಿ, ಆಧಾರಗಳಿಂದ ಪರೀಕ್ಷೆ ಮಾಡುವ ಶಾಸ್ತ್ರ; ನ್ಯಾಯಶಾಸ್ತ್ರ : ವೈಶೇಷಿಕವನ್ನು ಪ್ರಮೇಯಶಾಸ್ತ್ರವೆಂದೂ ನ್ಯಾಯವನ್ನು ಪ್ರಮಾಣಶಾಸ್ತ್ರವೆಂದೂ ಪರಿಗ್ರಹಿಸಿ ಒಂದು ಶಾಸ್ತ್ರವಾಗಿ ಪರಿಷ್ಕರಿಸಿರುವರು (ಹಿಂದಶಾ. ೦೦೦). [ಸಂ.]

**ಪ್ರಮಾಣಶ್ರುತಿ** (ನಾ). [ಸಂಗೀತ] ಶ್ರುತಿಯ ಪರಿಕೆಯ ಮೂರು ಹಂತಗಳಲ್ಲಿ ಒಂದು; ಶ್ರುತಿಯಲ್ಲಿರುವ ಪ್ರಮಾಣಶ್ರುತಿ, ನ್ಯೂನ ಶ್ರುತಿ ಮತ್ತು ಪೂರ್ಣಶ್ರುತಿ ಎಂಬ ಮೂರು ಬಗೆಯ

ಪ್ರಮಾಣಾಂತರಗಳಲ್ಲಿ ಒಂದು : ಈ ಪ್ರಮಾಣಾಂತರಗಳು ಕ್ರಮವಾಗಿ ಏರಿಕೆಯ ಕ್ರಮದಲ್ಲಿವೆ. ಇವುಗಳಲ್ಲಿ ಮೊದಲ ಹಂತ 'ಪ್ರಮಾಣಶ್ರುತಿ' (ಸಂಗೀತಂ.೬). [ಸಂ.]

**ಪ್ರಮಾಣಸಪ್ತಭಂಗಿ** (ನಾ). [ಜೈನ] ಪ್ರಮಾಣಸಪ್ತಭಂಗಿ ಮತ್ತು ನಯಸಪ್ತಭಂಗಿ ಎಂಬ ಎರಡು ಬಗೆಯ ಸಪ್ತಭಂಗಿಗಳಲ್ಲಿ ಒಂದು : "ಪ್ರಮಾಣಸಪ್ತಭಂಗಿಯೆಂದರೆ—ಒಂದು ಧರ್ಮವನ್ನು ತಿಳಿಸುವುದರ ಮೂಲಕ ನಿಯಮವಾಗಿ ಆ ಧರ್ಮದೊಡನೆ ಎಲ್ಲ ಧರ್ಮ ಸ್ವರೂಪವಾದ ವಸ್ತುವನ್ನು ಬೋಧಿಸತಕ್ಕ ವಾಕ್ಯ ಎಂದರ್ಥ" (ಶಾತತ್ತ್ವ. ೨೯೬). 'ನಯಸಪ್ತಭಂಗಿ' ಪರಾ. [ಸಂ.]

**ಪ್ರಮಾಣಸಿದ್ಧ** (ನಾ). ಆಧಾರಗಳಿಂದ ಸಾಧಿಸಿದುದು ; ದೃಢೀಕರಿಸಿದುದು : ಅದಱಿಂದಮಾತ್ಮವಚನಂ ಪ್ರಮಾಣಸಿದ್ಧಂಗಳಾಗಿ ಪದಾರ್ಥಂಗಳೆಲ್ಲಂ ಪ್ರತ್ಯಕ್ಷಂಗಳಲ್ಲದುವಿಲ್ಲ (ಶಾಂತಿಪು. ೧೬-೯೦ವ). [ಸಂ.]

**ಪ್ರಮಾಣಸೂಚಕ** (ನಾ). ಪರಿಮಾಣವನ್ನು ಸೂಚಿಸುವಂಥದು ; ಅಳತೆಯನ್ನು ತೋರಿಸುವಂಥದು : ಅನಿತಿನಿತುಮೆನಿತೆನೆ ಪ್ರಮಾಣ ಸೂಚಕವಾಕ್ಯಂ (ಶಬ್ದಸ್ಮೃ. ೬೦). [ಸಂ.]

**ಪ್ರಮಾಣಸ್ವೀಕಾರ** (ನಾ). (ಅಧಿಕಾರಸ್ವೀಕಾರದ ಪ್ರಾರಂಭದಲ್ಲಿ) ಪ್ರತಿಜ್ಞೆಯನ್ನು ಕೈಗೊಳ್ಳುವುದು : ಈ ದಿನ ಮಂತ್ರಿಗಳ ಪ್ರಮಾಣ ಸ್ವೀಕಾರ ಕಾರ್ಯಕ್ರಮವಿದೆ (ರೂಢಿ). [ಸಂ.]

**ಪ್ರಮಾಣಾಲಂಕಾರ** (ನಾ). [ಕಾವ್ಯಮೀ] ಅನುಮಾನ, ಪ್ರತ್ಯಕ್ಷ ಮೊದಲಾದುವುಗಳನ್ನು ಬಳಸಿ ಮಾಡಿದ ಕಾವ್ಯಾಲಂಕಾರ : ರಸವದಾದಿ ಏಳು ಅಲಂಕಾರಗಳೂ, ಪ್ರತ್ಯಕ್ಷಾದಿ ಎಂಟು 'ಪ್ರಮಾಣಾಲಂಕಾರ'ಗಳೂ ವಸ್ತುತಃ ಅಲಂಕಾರಗಳೇ ಅಲ್ಲ (ಕ್ರಿಶಿಉ. ೨೩೦). [ಸಂ.]

**ಪ್ರಮಾಣಿಕ$_1$** (ನಾ). [ಛಂದ] ಅನುಷ್ಟುಪ್ಪ ಛಂದಸ್ಸಿನ ಒಂದು ವೃತ್ತದ ಹೆಸರು : ಜರಂಲಗಂ 'ಪ್ರಮಾಣಿಕಂ (ಕ್ರಿಶಿಉ. ೬೯). [ಸಂ. ಪ್ರಮಾಣಿಕಾ]

**ಪ್ರಮಾಣಿಕ$_2$** (ನಾ). ೧. ಅಳತೆಯಾಗಿರುವಿಕೆ. ೨. ಆಧಾರವನ್ನೊದಗಿಸುವಿಕೆ. ೩. ಒಂದು ಅಳತೆ; ಮೊಳ : "ಅಳೆವ ಮೊಟನು ಪ್ರಮಾಣಿಕವೆನಿಕ್ಕುಂ" (ಮಂಗರಾ.೯೩-೯). [ಸಂ.]

**ಪ್ರಮಾಣಿಸು** (ಕ್ರಿ). ೧. ಅಳೆ ; ತೂಕ ಮಾಡು : ಎಲ್ಲಾ ಲೋಕವುಂ ಪದಿನಾಲ್ಕು ರಜ್ಜುವೆಂದು ಪ್ರಮಾಣಿಸುವುದಾಗದು (ಶಾಸ್ತ್ರಸಾ. ೧೦೦-೩). ೨. ಆಧಾರಸಮೇತವಾಗಿ ಪರೀಕ್ಷಿಸು; ಪರಿಶೀಲಿಸು : ಪ್ರತ್ಯಕ್ಷವಿರೆ ಪ್ರಮಾಣಿಸಿ ನೋಡಬೇಕೆಂಬುದತ್ಯಧಿಕ ನೀತಿಶಾಸ್ತ್ರಮದು (ತರಪು. ೯-೨೬); ಇದನ್ನು ಪ್ರಯೋಗಪರೀಕ್ಷೆಯಿಂದ ಪ್ರಮಾಣಿಸಿ ನೋಡಿರುವೆನು (ವಿಕಾಸ. ೨೯) ; ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡು (ಗಾದೆ). ೩. ಅರಿ ; ತಿಳಿ : ಕೃಷಿಯ ಮಾಡುವಾಗ ಪಶುಪತಿಗೆಂದೇ ಪ್ರಮಾಣಿಸಿ . . . ಮಾಡುತಿಪ್ಪ ಭಕ್ತನ ಅಂಗಳವೇ ವಾರಣಾಸಿ (ಸೋಣಮಾ. ೦೩-೩೭). ೪. ರುಜುವಾತು ಮಾಡು : ಶಿವಂ ಶಿವಂಕರನೆಂಬುದಂ ಪ್ರಮಾಣಿಸಿ ತನ್ನಿಗಮಭಕ್ತಿಯುಂ ಉರ್ವಿಯೊಳ್ ಪ್ರಕಟೀಕರಿಪೆನು (ಶಬ್ದರಾ. ೧-೬) ; ಈ ಮಾತನ್ನು ಅವಳು ಪ್ರಮಾಣಿಸಿ ಕೊಡದೆ ಬಿಡತಕ್ಕವಳಲ್ಲ (ಇಕ್ಕೇ. ೨೩೦). [ಪ್ರಮಾಣ + — ಇಸು$_3$]

**ಪ್ರಮಾಣು** (ನಾ). ೧. ಅಳತೆ ; ಪ್ರಮಾಣ : ನಾಯಕವಾಡಿಗಳು ಪೂರ್ವ ಭೊ × ಹಾನುಭವಿಸಿ ಬಹ ಹುಟ್ಟುವಳಿ × ಕು ಪ್ರಮಾಣು ಹೊಂನು (ಎಕ. VII. ಶಿಕಮೊ. ೬೧-೨೬ ; 1431) ; ಯಿ ಪ್ರಮಾಣಿನ ಉಂಬಳಿಯ ಸರ್ವಮಾನ್ಯದ ಗ್ರಾಮವನೂ ನಡಸಿ ಬಾರದೆ ಆರೊಬ್ಬರು ಆಳುಪಿದರೆ ವಾರಣಾಸಿಯಲಿ ತಮ್ಮ ತನ್ನ ತಾಯಿನೂ ಗೋವು ಬ್ರಾಂಹ್ಮರನು ಕೊಂನ್ದ ಪಾಪಕೆ ಹೋಹರು (ಎಕ. XIV. ಗುಂಡ್ಲುಪೇ. ೦೩೨-೧೪ : 1540). ೨. ಸಾಕ್ಷಿ ; ಆಧಾರ : ಆಚಾರವೇ ಸ್ವರ್ಗ ಅನಾಚಾರವೇ ನರಕ ಕೂಡಲಸಂಗಮದೇವಾ ನೀವೆ ಪ್ರಮಾಣು (ಬಸವ. ೨೩೯) : ಭೃತ್ಯಾಪರಾಧ ಸ್ವಾಮಿನೋ ದಂಡ ಕೂಡಲಸಂಗಮದೇವಾ ನೀವೇ ಪ್ರಮಾಣು (ಬಸವ. ೩೯೦). [<ಸಂ. ಪ್ರಮಾಣ]

**ಪ್ರಮಾತ** (ನಾ). [ತರ್ಕಶಾ] ಯಥಾರ್ಥಜ್ಞಾನವನ್ನು ಉಂಟು ಮಾಡುವವನು ; ನಿಶ್ಚಿತಜ್ಞಾನವನ್ನು ಕೊಡುವವನು : ಪ್ರಮಾಣವೆಂದರೆ ಪ್ರಮೆಗೆ ಸಾಧನ, ಪ್ರಮೆಯೆಂದರೆ ಯಥಾರ್ಥಜ್ಞಾನ, ಇದಕ್ಕೆ ಆಶ್ರಯನಾಗಿರುವವನು ಪ್ರಮಾತ (ಹಿಂದೂಧ. ೦೩೨). [ಸಂ. ಪ್ರಮಾತೃ]

**ಪ್ರಮಾತೃ** (ನಾ). = ಪ್ರಮಾತ: ಅಱಿಯಲ್ಪಡುವದೆ ನೀನಱಿ ಸುಪ್ರಮೇಯಾಖ್ಯಮಱಿವಾತನಾ ಪ್ರಮಾತೃವೆನಿಕ್ಕುಂ (ಶರಕೋ. ೩-೦೭-೪ ); ಪ್ರಮಾತೃ ಎಂದರೆ ಸರಿಯಾದ ತಿಳಿವಳಿಕೆಯನ್ನು ಸಂಪಾದಿಸುವುದಕ್ಕೆ ಪ್ರಮಾಣಗಳನ್ನು ಉಪಯೋಗಿಸುವವನು (ಶ್ರೀಭಾ. ೨-೨೩). [ಸಂ.]

**ಪ್ರಮಾತೃತ್ವ** (ನಾ). ಯಥಾರ್ಥಜ್ಞಾನದ ಅರಿವನ್ನು ಹೊಂದಿರುವ ಸ್ಥಿತಿ : ಇದಿಷ್ಟೂ ಆಗದಿದ್ದರೆ ಯಾವುದರ ಸೋಂಕೂ ಇಲ್ಲದ [ಅಸಂಗಸ್ಯ] ಆತ್ಮನಿಗೆ ಪ್ರಮಾತೃತ್ವವು ಕೂಡುವುದಿಲ್ಲ (ಶ್ರೀಭಾ. ೩). [ಸಂ.]

**ಪ್ರಮಾಥಿ** (ಗು). ೧. ಕಲಕುವ ; ಕದಡುವ. ೨. ಒಡೆಯುವ ; ಸೀಳುವ. ೩. ದುಃಖ ಕೊಡುವ ; ಸಂಕಟವನ್ನುಂಟು ಮಾಡುವ. ೪. ಕೊಲ್ಲುವ; ವಧಿಸುವ. (ನಾ). ೫. ಕೊಲ್ಲುವವನು; ನಾಶಪಡಿಸುವವನು. [ಸಂ. ಪ್ರಮಾಥಿನ್]

**ಪ್ರಮಾದ** (ನಾ). ೧. ಅಲಕ್ಷ್ಯ; ಅನಾದರ. ೨. ಗಮನವಿಲ್ಲದಿರುವಿಕೆ; ಅಜಾಗರೂಕತೆ; ಎಚ್ಚರಗೇಡಿತನ : "ಪ್ರಮಾದಃ, ಅನವಧಾನಂ— ಈ ೨ ಮಱಹು" (ಹರಿಃಯು. ೦೨೯-೬೯); "ಅನವಧಾನಮಾ ಪ್ರಮಾದ ಮೆನಲ್ಕೆ ಮೈಮಱಹು" (ಮಂಗರಾ. ೦೩೩-೩೯). ೩. ಹುಚ್ಚು ; ಉನ್ಮಾದ. ೪. ತಪ್ಪು ; ದೋಷ ; ಅಪರಾಧ : ಧರ್ಮಾರ್ಥಂಗಳಿಂಗೆ ಕಾಮಂ ಪ್ರತಿಕೂಲಮಾ ಕಾಮಮಂ ನಿಲಿಸುವಡೆ ಪಿರಿದುಂ ಪ್ರಮಾದಮುಗ್ರಾಹ್ಯಮ ವಿಶ್ವಾಸಂ (ಮುದ್ರಾ. ೦-೩೮ ವ); ಆ ರಾಮಯತಿಪತಿ... ಗುಪ್ತಿಗಳಂ ಪಾಲಿಸಿ ಪಂಚಮಹಾವ್ರತಲೀಲೆಯಿನೆಸೆದಂ ಪ್ರಮಾದಮಿಲ್ಲೆಂಬಿನೆಗಂ (ಸಂಧರ್ಮಾ. ೦೬-೩೯); ಏನೋ ಪ್ರಮಾದವಾಯಿತು ನನ್ನಿಂದ ಎಂಬ ಭಯವಾಗಿ ನೆಟ್ಟಗೆ ಮನೆಗೆ ಹೋದೆ (ಮೂಕಜ್ಜಿ. ೦೦). ೫. ಕೇಡು; ಅಪಾಯ; ಆಪತ್ತು : ರಾಮಲಕ್ಷ್ಮಣರ ದೆಸೆಯಿಂ ಕೂಸುಗಳ್ಗೆ ಪ್ರಮಾದವಕ್ಕುಂ (ಶಂರಾಮಾ. ೦೬-೬ ವ); ಪರಮ ಪರಮಾ ನಂಬಲಾಱೆನು ಕೊರಳ ಗರಳವದಿನಿತಿನಿತು ಪೊತ್ತರಿಸಿ ನಿಮ್ಮುದರದರದೊಳಗಿಳಿದಡತಿಪ್ರಮಾದವಲ (ಜೈಪು. ೦೩-೦೩); ಉಚ್ಚಬೃಂಹಿತನಾದಮುಮರಪ್ರಮಾದಮುನ್ನತಕರಂ ಭೀಕರಂ . . . ಎನಲ್ಕಾ ಮುಷ್ಪಗಜದದ್ಭುತಾಕೃತಿಯ ಬಣ್ಣಿಸುವೊಡಹಿಪತಿಗೆ ಸಾಧ್ಯಮಲ್ತು (ಶಬ್ದಿಪು. ೨೬-೬). ೬. [ಜೈನ] ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ, ಅವನೀಪಾಲಕಥೆ ಎಂಬ ನಾಲ್ಕು ವಿಕಥೆಗಳು, ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು, ಸ್ಪರ್ಶೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ, ಚಕ್ಷುರಿಂದ್ರಿಯ, ಕರ್ಣೇಂದ್ರಿಯ ಎಂಬ ಐದು ಇಂದ್ರಿಯಗಳು, ನಿದ್ರೆ ಮತ್ತು ಸ್ನೇಹ—ಹೀಗೆ ಹದಿನೈದು ಬಗೆಯ ದೋಷಗಳು: ಹದಿನೈದುತೆಱದ ಪ್ರಮಾದದಿಂ ಚಲ್ವಾದ ವಿದಿತ ಹುಲಿಯ ಮುಖಗಳನು ತುದಿಮೊದಲಾಗಿ ಬಣ್ಣಿಸುವೊತೆಮಗೆ ತೋಱದಧಮಮತಿಗೆ ಗೋಚರವೆ (ಶ್ರೀಶುಸಾ. ೯-೯೩). 'ಪಂಚದಶಪ್ರಮಾದ' ಪರಾ. ೭. ಜೀವನಿಗೆ ಉಂಟಾಗುವ ಮಿಥ್ಯಾದರ್ಶನ, ಅವಿರತಿ, ಪ್ರಮಾದ, ಕಷಾಯ

ಮತ್ತು ಯೋಗಗಳೆಂಬ ಐದು ವಿಧವಾದ ಸಂಸಾರಸ್ವರೂಪ ಭೇದಕ್ಕೆ ಬಂಧಹೇತುವಾಗಿರುವಂಥದ್ದರಲ್ಲಿ ಒಂದು : ಭಾವಶುದ್ಧಿ ಮೊದಲಾದ ಎಂಟು ಶುದ್ಧಿಗಳು ಹಾಗೂ ದಶಧರ್ಮಗಳಲ್ಲಿ ಉಂಟಾಗುವ ಉತ್ಸಾಹರಾಹಿತ್ಯ : ಮಿಥ್ಯಾದರ್ಶನಾವಿರತಿಪ್ರಮಾದ ಕಷಾಯಯೋಗೋಪಾರ್ಜಿತಜ್ಞಾನಾವರಣೀಯಾದಿ ಕರ್ಮಂಗಳ್ ಸಂಸಾರಕಾರಣಂಗಳಪ್ಪುದು ಬಂಧನಬದ್ಧದ್ರವ್ಯಭಾವಕರ್ಮವಿಗಮದಿನನಂತ ಜ್ಞಾನಾದಿ ನಿಜರೂಪಮಂ ಪಡೆವುದು ಮುಕ್ತಿ (ಅಂಪು. ೦೦-೬೩ ವ) ; ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗಂಗಳೆಂಬ ಬಂಧಹೇತುಗಳಂ ಪರಿಹರಿಸುತ್ತಂ (ಅಪು. ೬-೬ ವ) ; ಮಿಥ್ಯಾದರ್ಶನ ಅವಿರತಿಪ್ರಮಾದ ಕಷಾಯ ಯೋಗಗಳು ಬಂಧಹೇತುಗಳು (ಹಿಂಪು. ೯೯). ೮. ಆತ್ಮಾಕಾರವಾಗದೆ ಸ್ತಬ್ಧವಾಗಿದ್ದ ಮನಸ್ಸನ್ನು ಆತ್ಮಾಕಾರವಾಗಿ ಮಾಡುವುದಕ್ಕೆ ಉಂಟಾಗುವ ಹತ್ತುಬಗೆಯ ವಿಘ್ನಗಳಲ್ಲಿ ಒಂದು ; ಆಲಸ್ಯ, ರೋಗ, ದುಃಖತ್ರಯಗಳು (ಶರೀರದಲ್ಲಿ ಹುಟ್ಟಿದ ಆಧ್ಯಾತ್ಮಿಕ, ಇತರ ಪ್ರಾಣಿಗಳಿಂದುಂಟಾಗುವ ಆಧಿಭೌತಿಕ, ಪಂಚಭೂತಗಳಿಂದುಂಟಾಗುವ ಆಧಿದೈವಿಕ) ಸಂಶಯ, ಪ್ರಮಾದ (ತಪ್ಪು), ಅನವಸ್ಥೆ (ದೃಢವಾಗಿಲ್ಲದಿರುವಿಕೆ ಅಥವಾ ಒಂದಕ್ಕೊಂದು ಕಾರಣವಾಗುತ್ತ ಕೊನೆಯಿಲ್ಲದಿರುವಿಕೆ), ಅದು ಎಂದರೆ ತನಗಿಂತ ಭಿನ್ನವಾದುದು ತತ್ತ್ವವೆನ್ನುವುದು, ಒಂದೇ ಮನಸ್ಸಿನಿಂದ ವಿಷಯಚಿಂತನೆ, ದರ್ಶನಭ್ರಾಂತಿ (ಭ್ರಾಂತಿದರ್ಶನ ಎಂದರೆ ಬೇರೆ ತಿಳಿಯುವುದು), ಅಶ್ರದ್ಧೆ—ಹೀಗೆ ಹತ್ತು ಬಗೆಯ ವಿಘ್ನಗಳಿವೆ : ತನಯ ಕೀಳಾಲಸ್ಯರೋಗಗಳನುಗಡ ದುಃಖತ್ರಯಂಗಳು ಮನದಲುದಿಸಿದ ಸಂಶಯಪ್ರಮಾದಗಳು . . . ದರುಶನಭ್ರಾಂತಿಯಶ್ರದ್ಧೆಗಳು ವಿಘ್ನಗಳು (ಅಧ್ಯಾ. ೬-೬೮). [ಸಂ.]

**ಪ್ರಮಾದಚರಿತ** (ನಾ). [ಜೈನ] ಅಪಧ್ಯಾನ, ಪಾಪೋಪದೇಶ, ಪ್ರಮಾದಚರಿತ, ಹಿಂಸಾಪ್ರದಾನ ಮತ್ತು ಅಶುಭಶ್ರುತಿ ಎಂಬ ಐದು ಬಗೆಯ ಅನರ್ಥದಂಡಗಳಲ್ಲಿ ಒಂದು; ಅವಶ್ಯವಿಲ್ಲದೆ ನೆಲವನ್ನು ಅಗೆಯುವುದು, ಗಿಡಗಳನ್ನು ಕಡಿಯುವುದು ಇವೇ ಮುಂತಾದ ಅನ್ಯರಿಗೆ ಹಾನಿಯನ್ನು ಉಂಟುಮಾಡುವಂಥ ಕಾರ್ಯ : ಅಪಧ್ಯಾನಂ ಪಾಪೋಪದೇಶಂ ಪ್ರಮಾದಚರಿತಂ ಹಿಂಸಾಪ್ರದಾನಮಶುಭಶ್ರುತಿಯೆಂದು ನಿರರ್ಥಕಪಾಪಹೇತುಭೂತಾನರ್ಥದಂಡಂ ಐದುತೆರಂ (ಕನ್ನಕ್ರಿ. ೨೬೬). [ಸಂ.]

**ಪ್ರಮಾದಚರ್ಯೆ** (ನಾ). = ಪ್ರಮಾದಚರಿತ : ಪಾಪೋಪದೇಶ, ಹಿಂಸಾದಾನ, ಅಪಧ್ಯಾನ, ದುಃಶ್ರುತಿ ಮತ್ತು ಪ್ರಮಾದಚರ್ಯಾ—ಹೀಗೆ ಐದು ಅನರ್ಥದಂಡದ ಭೇದಗಳೆಂದು ಗಣಧರ ಮೊದಲಾದವರು ಹೇಳಿದ್ದಾರೆ (ಶ್ರಾವಕಾ. ೦೦೩-೬೩ ಅರ್ಥ); ಪ್ರಮಾದಚರ್ಯೆ:—ಅವಶ್ಯವಿಲ್ಲದೆ ನೆಲವನ್ನು ಅಗೆಯುವುದು . . . ಬೆಂಕಿಯನ್ನು ಉರಿಸುವುದು ಮೊದಲಾದ ಕೆಲಸಗಳನ್ನು ಮಾಡಬಾರದು (ಕ್ಷತ್ರ. ೪೬೬). [ಸಂ. ಪ್ರಮಾದಚರ್ಯಾ]

**ಪ್ರಮಾದಫಲಕ** (ನಾ). ಜಲಪ್ರಯಾಣದಲ್ಲಿ ಅಪಾಯ ಸಂಭವಿಸಿದಾಗ ಜೀವವನ್ನು ರಕ್ಷಿಸುವಂಥ ಹಲಗೆ; "ಹಡಗಿನಲ್ಲಿ ಸಮುದ್ರ ಪ್ರಯಾಣ ಮಾಡುವಾಗ ಯಾವುದಾದರೂ 'ಪ್ರಮಾದ' ಸಂಭವಿಸಿ, ಹಡಗು ಒಡೆದು, ಪ್ರಯಾಣಿಕರು ನೀರುಪಾಲಾಗಬೇಕಾದ ಅಪಾಯಸಂಭವವು ಒದಗಿದಾಗ, ಜೀವವನ್ನು ಸಂರಕ್ಷಿಸಿಕೊಳ್ಳಲು ಉಪಯೋಗಿಸುವ ಫಲಕ (ಹಲಗೆ)" (ಶಬಾಂ. ೨-೩೬ ಟಿಪ್ಪಣಿ): ಪತ್ತಿ ಪ್ರಮಾದಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕಯನೆ ಬಟ್ಟಿಂತು ದಾಟ್ಟುದೆ ಚೋದ್ಯಂ (ಶಬಾಂ. ೨-೩೬). 'ಪ್ರಮಾದವಲಗೆ' ನೋಡಿ. [ಸಂ.]

**ಪ್ರಮಾದವಲಗೆ** (ನಾ). = ಪ್ರಮಾದಫಲಕ : ಯಮನೆಂಬ ಸೋರೆ ಮೊಗಂ ಬುಡು ಮುಳುಗಿಸಲ್ಪನ್ನಜಳಧಿಯೊಳ್ ದೇಹಬಹಿತ್ರಮದೊಡೆಯೆ ಜೈನಮೆಂಬಾ ಪ್ರಮಾದವಲಗೆಯನೆ ಪಿಡಿಯದವನದಿಗಿಟಿಗುಂ (ಸಮುಶ. ೦೩-೬೩); ಕಂಡಿದೇನಸದುದ್ಯಮಂ ನಿಲ್ಲಿಮೆಂದಲ್ಲಿ ಸಜೀಗೆಯ್ದು ಪ್ರಮಾದವಲಗೆಯನಕಿವೇಗದಿಂ ತಂದು ಸಾರ್ಚಿ ಚಿತ್ತರಂದತ್ತನೇಜಿ ನೂಂಕುವುದುಂ (ಕಂಬು. ೯-೬೯ ವ). [ಪ್ರಮಾದ + ಪಲಗೆ]

**ಪ್ರಮಾದಿ** (ಗು). ೧. ಅಲಕ್ಷ್ಯದಿಂದ ಕೂಡಿರುವ; ಗಮನವಿಲ್ಲದ. ೨. ಪಾನಮತ್ತನಾದ; ಅಮಲೇರಿದ. (ನಾ). ೩. ಮರುಳ; ಹುಚ್ಚ : ಅಮರಗುರುವಾಣಿ ಮದಿರಾಪ್ರಮತ್ತ ವಾಣೀಸಮಾನಮುನ್ಮತ್ತವಚಃಸಮಮುಂತಲ್ಲದೊಡೆಂತೀ ಪ್ರಮಾದಿ ಚಾರ್ವಾಕನೆಂಬ ಪೆಸರಂ ಪಡೆಗುಂ (ಶಾಂತಿಪು. ೬-೦೬೭); ಭೈತ್ರಮನೇಜಿದರ್ ಸಡಿಲ್ದ ಬಂಧಂಗಳಂ ಬಿಗಿಯದಿರ್ದೊಡಂ ಅಜೀವನೊಳಕೊಂಡವರ್ ಪ್ರಮಾದಿಗಳಾಗದಿರ್ದೊಡಂ ಅವರ್ ಸಮುದ್ರದೊಳಗಬ್ಬ(ದೇವ)ರ್ ಇವರ್ ಸಂಸಾರಸಮುದ್ರದೊಳಗೆಬ್ಬರ್ ಎಂಬುದೇ ವಿಸ್ಮಯಮೆ (ಕಬಸಂ.೦೩೩-೦೦೫). ೪. ಅರುವತ್ತು ಸಂವತ್ಸರಗಳಲ್ಲಿ ಹದಿಮೂರನೆಯ ಸಂವತ್ಸರದ ಹೆಸರು : ಅ. ಪರಾಭವ ಪ್ರಭವ ವಿಭವ ಶುಕ್ಲ ಪ್ರಮೋದೂತ . . . ಪ್ರಮಾದಿ [ಶಾಪಾಂ. ೮] ವಿಕ್ರಮ ... ಕ್ರೋಧನ ಅಕ್ಷಯವೆಂದಱವತ್ತುತೆಱನಾಗಿಹುದು (ಜಿಪ್ರಕ. ೩೨೨). ಆ. ೪ : ಮನೆ ಸಲೆ ಹೇವಿಳಂಬಿ . . . ವೈದುನನೆ ಕರಂ ಪ್ರಮಾಥ [ದಿ] ನಿಜವಲ್ಲಭೆ ದುರ್ಮುಖಿಯೆಂದೊಡನ್ನ ಪಂಪಿನ ವಿಭವಂ ಪ್ಲವಂಗದ ಪೊಲಱದು ಮನ್ಮಥಚಿತ್ರಭಾನುವಿಂ (ಸೂಕ್ತಿಸು. ೯-೯೩೬). [ಸಂ. ಪ್ರಮಾದಿನ್]

**ಪ್ರಮಾಪಣ** (ನಾ). ಕೊಲೆ; ವಧೆ: "ಮಾರಣಂ, ನಿಶರಣಂ . . . ಪ್ರಶಮನಂ, ಪ್ರಮಾಪಣಂ, ವರ್ಜನಂ . . . ಹಿಂಸಾ, ಸಂಜ್ಞಪನಂ—ಈ ೨೧ ಕೊಲೆ" (ಪದಾಹಬು. ೬೮-೩೨೩); "ವಿಶಸನಂ ಸೂದನಂ ಮಾರಣಂ ಘಾತನಂ . . . ಪ್ರಮಾಪಣಂ ಕೊಲೆಗೆ ನಾಮಂ" (ಪಂಗಣಾ. ೮೮-೬೯). [ಸಂ.]

**ಪ್ರಮಾರ್ಜನ** (ನಾ). ೧. ತೊಳೆಯುವಿಕೆ; ಶುಚಿಗೊಳಿಸುವಿಕೆ. ೨. ಒರಸುವುದು; ತೊಡೆಯುವಿಕೆ. ೩. ನಿವಾರಣೆ; ಪ್ರಾಯಶ್ಚಿತ್ತ : "ಪ್ರಾಯಶ್ಚಿತ್ತ, ಪ್ರಮಾರ್ಜನ" (Atonement. ಶಾಂಪಾ. ೬). [ಸಂ.]

**ಪ್ರಮಾರ್ಜಿತ** (ಗು). ೧. ಒರಸಿದ. ೨. ನಿವಾರಿಸಿದ; ಹೋಗಲಾಡಿಸಿದ: "ವ್ಯಸ್ತಂ ಪ್ರಮಾರ್ಜಿತಂ" (ಚಮ್ಮಕೋ. ೦೦೬-೩೦). [ಸಂ.]

**ಪ್ರಮಾಳೆ** (ನಾ). (?) : ಯಿ ಧರ್ಮ್ಮ ಪ್ರಮಾಳೆ ಹಲಡಣ ಹರಿಮಾಳ ಯಿ ಧರ್ಮ್ಮವಂನು ಆರು ವೂಂಬರು ಲರಿ ಎಂದರೆ ದಕ್ಷಿಣವಾರಣಾಸಿಯಲಿ ಕಪಿಲೆಯ ಕೊಂದ್ದ ಪಾಪಕೆ ಹೋಹರು (ಎಕ XIV. ತಿರುಕು. ೫೩-೬: ?). [?]

**ಪ್ರಮಿತ** (ಗು). ೧. ಪ್ರಮಾಣಕ್ಕೆ ತಕ್ಕ; ಅಳತೆಗೆ ಒಳಪಟ್ಟ : ಸಪ್ತಸಾಗರಪ್ರಮಿತಜೀವಿತನುಂ ಲಬ್ಧಾವಧಿಲೋಚನನುಮಾಗಿ (ಆಪು. ೨-೦೯ ವ). ೨. ಚೆನ್ನಾಗಿ ತಿಳಿದ, — ಗ್ರಹಿಸಿದ. ೩. ಮಿತಿಗೆ ಒಳಪಟ್ಟ; ಪರಿಮಿತವಾದ : ಅಡಗಿತೀತನ ಕೋಪಮನು ಪಿಡಿದೊಡಲಿನ ಸುರನ ಕಾಣುತಡೆಯಲಿ ಮಿಡುಕಿನಂಶಾಂಶು [ಶಾಪಾಂ. ೫] ಪ್ರಮಿತದಮಿಸುವಜೀ ಗುಡದಂತೆ (ಕೊಡಪಾ. ೬-೨೯-೩೨). ೪. ಎಲ್ಲರಿಗೂ ತಿಳಿದಿರುವ; ಪ್ರಸಿದ್ಧವಾದ : ಭಕ್ತೋಪದಂಶಫೃತಸಿತಾಸಿತಯಹೃದ್ಯದಿಂ ವರ್ತಿತಾರಕ್ಷ ಪ್ರಮಿತದೀಪ್ರದೀಪದಿಂ (ಚಂದ್ರಪ್ರ. ೬-೦೦೦ ಕಗಳ). (ನಾ). ೫. ಅಳತೆಯುಳ್ಳದು : ನಿವಿರ್ದ ಚತುರ್ದಶರಜ್ಜುಪ್ರಮಾಣಮಿರ್ದಪುದು ಸಪ್ತಧೋಲೋಕಂ ಮಧ್ಯಮಲೋಕಮೂರ್ಧ್ವಲೋಕಂ ಕ್ರಮದಿಂ ತ್ರಸನಾಳಿ ಪೇಳರಜ್ಜುಪ್ರಮಿತಂ (ಆಪು. ೬-೩೩). ೬. ಮಿತಿಗೆ ಒಳಪಟ್ಟುದು; ಪರಿಮಿತವಾದುದು : ಅದೆಂದರೆ—ಜೀವನ, ವಿಷಯ ಮತ್ತು ಭಾವ

ಗಳೊಡನೆ ಸ್ಫುಟವೂ ಪ್ರಮಿತವೂ ಆದ ರೀತಿಯಿಂದ ವ್ಯವಹರಿಸುವುದು (ಶಬ್ದಾನು. ೦೦೭). ೭. [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ ಪ್ರಮಿತ ದೀರ್ಘ. . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲಂ (ಸವೀಳ. ೨೫೨)· 'ಶ್ರುತಿ' ಪರಾ· [ಸಂ.]

**ಪ್ರಮಿತಾಕ್ಷರ1** (ನಾ). [ಛಂದ] ಜಗತೀಛಂದಸ್ಸಿನಲ್ಲಿ ಪ್ರತಿಯೊಂದು ಸಾಲಿನಲ್ಲಿಯೂ ಹತ್ತು ಅಕ್ಷರಗಳಿರುವ ಒಂದು ಅಕ್ಷರವೃತ್ತದ ಹೆಸರು: ೧೨ನೆಯ ಜಗತಿಯಲ್ಲಿ . . . ಪ್ರಮಿತಾಕ್ಷರಂ ಸಜಸಸಂಗಳಿರಲ್ (ಛಂದೋ. ೮೦). [ಸಂ. ಪ್ರಮಿತಾಕ್ಷರಾ]

**ಪ್ರಮಿತಾಕ್ಷರ2** (ನಾ). ಮಿತವಾದ ಮಾತು ; ಮಿತಭಾಷಣ: ಕಮನೀಯವಿಭ್ರಮಗುಣಾನ್ವಿತೆಯರ್ ಪ್ರಮಿತಾಕ್ಷರಾಭರಣಭೂಷಿತೆಯರ್ ತಮರೂರ್ಗೆವೋಪ ಬಾಲಜಾಂಗನೆಯರ್ ಕಮಲೋದರಂಗೆ ಪಡೆದರ್ ಮುದಮಂ (ಅನಂತ.ಪ. ೬೨). [ಸಂ.]

**ಪ್ರಮಿತಿ** (ನಾ). ೧. ಅಳತೆ; ಪ್ರಮಾಣ : ಒಸೆದಜಬಿಂದುಗಳ್ಪರೆ ಪಂಚರತ್ನೋತ್ಕರದಿಂ ಸಾರ್ಧ ತ್ರಿಕೋಟಿಪ್ರಮಿತಿಯ ಮಾಣಿಯಂ ಪಣ್ಣಿದಂ ಲೋಕಪಾಳಂ (ಶಾಂತಿಪು. ೯-೦೬೩). ೨. [ವೇದಾಂತ] (ಪ್ರತ್ಯಕ್ಷಾದಿ ಪ್ರಮಾಣಗಳಿಂದ ಉಂಟಾದ) ನಿಶ್ಚಿತಜ್ಞಾನ ; ಸರಿಯಾದ ತಿಳಿವು ; ಯಥಾರ್ಥಜ್ಞಾನ : "ಪ್ರಮಿತಿಃ, ಪ್ರಮಾ—೨ ನಿಜವಾಗಿ ತಿಳಿಯುವಿಕೆ : ಯಥಾರ್ಥಜ್ಞಾನ, ಪ್ರಮಾಣಜನ್ಯಜ್ಞಾನ, ಯಥಾರ್ಥಾನುಭವ" (ಸಿದ್ಧಾಂತ. ೩೩೮); ಪ್ರಮೆ ಎಂದರೆ ಸರಿಯಾದ ಅನುಭವ. ಇದನ್ನು ಪ್ರಮಿತಿ ಎಂದೂ ಕರೆಯುವರು (ಬ್ರಹ್ಮಸೂ. ೨-೨೫). ೩. ಯಥಾರ್ಥಜ್ಞಾನವನ್ನುಂಟು ಮಾಡುವ ಉಪಾಯ; ಪ್ರಮಾಣ. [ಸಂ.]

**ಪ್ರಮಿತ್ರ** (ಗು). ೧. ಮರಣ ಹೊಂದಿದ ; ಸತ್ತ. (ನಾ). ೨. ಯಜ್ಞದಲ್ಲಿ ಬಲಿ ಕೊಟ್ಟ ಪಶು : "ಪ್ರಮಿತಃ, ಉಪಸಂಪನ್ನಃ, ಪ್ರೋಕ್ಷಿತಃ—ಇವನ್ನು, ಹತೇ_ಯಜ್ಞದಲ್ಲಿ ಕೊಲ್ಲಲ್ಪಟ್ಟ ಪಶು ಮುಂತಾದವುಗಳ ಹೆಸರುಗಳು" (ಸಿದ್ಧಾಂತ. ೨೨೦). ೩. ಸತ್ತವನು ; ಮರಣ ಹೊಂದಿದವನು: "ಪರಾಸುಃ, ಉಪಸಂಪನ್ನಃ, ಪ್ರಮಿತಃ, ಸಂಸ್ಥಿತಃ, ಮೃತಃ—ಈ ೫ ಸತ್ತಾತಂ" (ಹಲಾಯು. ೦೦೯-೭). [ಸಂ.]

**ಪ್ರಮೀಳೆ,** ಪ್ರಮೀಳೆ (ನಾ). ೧. ಯಾವ ಕೆಲಸದಲ್ಲೂ ಉತ್ಸಾಹವಿಲ್ಲದಿರುವುದು ; ಆಲಸ್ಯ ; ಜಡತೆ. ೨. (ಆಲಸ್ಯದಿಂದುಂಟಾಗುವ) ತೂಕಡಿಕೆ; ಮಂಪರು; ನಿದ್ರಾಪರತೆ : "ತಂದ್ರೀ, ಪ್ರಮೀಲಾ—೨ ಆಲಸ್ಯದಿಂದ ಕಣ್ಣು ಮುಚ್ಚಿ ಮೈಮರೆತು ಗುರುಕಿಡುತ ಬರುವ ಗಾಢನಿದ್ರೆಗೆ ಹೆಸರುಗಳು. ತೂಕಡಿಕೆ ಎಂದು ಕೆಲವರನ್ನುವರು" (ಸಿದ್ಧಾಂತ. ೭೦). ೩. ಒಂದು ಸ್ತ್ರೀರಾಜ್ಯದ ರಾಣಿಯ ಹೆಸರು ; ಯುಧಿಷ್ಠಿರನ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿಹಾಕಿ, ಅರ್ಜುನನೊಡನೆ 'ಯುದ್ಧ ಮಾಡು ಇಲ್ಲವೇ ವರಿಸು' ಎಂದು ಪಂಥ ಹೂಡಿ ಅರ್ಜುನನನ್ನು ವರಿಸಿದವಳು : ಆ ಪ್ರಮೀಳೆ ಪಾರ್ಥನ ಮೇಲೆ ಕಣೆಗಱೆದಳು (ಜೈಮಿನಿ. ೦೬-೦೪). ಪ್ರಮೀಳೆ : ೩. ಎಸೆವ ಛತ್ರಾಸನವನೀಡು ಸಂಗ್ರಾಮಕ್ಕೆ ಪೊಱಮಟ್ಟಳಾ ಪ್ರಮೀಳೆ (ಜೈಮಿನಿ. ೦೬-೨); ಪೆಣ್ದಳವೆಡೆದೆ ಜೋಡಿಸಿತು ಪಾರ್ಥನ ಸಮರಕಾ ಪ್ರಮೀಳೆಯ ಸುತ್ತಲು (ಜೈಮಿನಿ. ೦೬-೩). ೪. (ಆಲಂ) ಗಂಡುಬೀರಿ; ದಿಟ್ಟೆ : "ಸ್ಥಿತಿಯಾದೇಶದಲ್ಲಿದ್ದರೆಂದು ಪ್ರಸಿದ್ಧಿಯಾಗಿರುವ ಸ್ತ್ರೀಯೋಧಜಾತಿ. ವೀರಸ್ತ್ರೀ, ವೀರಕನ್ಯೆ; ರಣಶೂರಳಾದ ಹೆಂಗಸು; ಪ್ರಮೀಳೆ. ಗಂಡುಬೀರಿ" (Amazon. ಇಂಕಿ).

**ಪ್ರಮೀಳಾರಾಜ್ಯ**—೧. ಹೆಂಗಸರೇ ಆಡಳಿತವನ್ನು ನಡೆಸುವಂಥ ಪ್ರದೇಶ. ೨. ಕೇವಲ ಹೆಂಗಸರು ಮಾತ್ರ ಇರುವ ಪ್ರದೇಶ. [ಸಂ. ಪ್ರಮೀಲಾ]

**ಪ್ರಮೀಳೆ** 'ಪ್ರಮೀಲೆ' ನೋ.

**ಪ್ರಮುಕ್ತ** (ಗು). ೧. ಅಳ್ಳಕಗೊಳಿಸಿದ; ಸಡಿಲಮಾಡಿದ. ೨. ಬಂಧನದಿಂದ ಬಿಡುಗಡೆಹೊಂದಿದ. ೩. (ಬಾಣದಂತೆ) ಎಸೆದ; ಪ್ರಯೋಗಿಸಿದ : ಹೂಂಕೃತಿ ಬಿಲ್ಲಾಳರ ಗುಣಠಂಕೃತಿ ಚಾಪಪ್ರಮು[ಕ್ತಶಂ. ಯು]ಕ್ತಶರನಿಕರಮಹಾಝೇಂಕೃತಿ ನೋಳ್ಪವರರ್ಗೆ ಭಯಂಕೃತಿ ಗೆಯ್ವುದು ತದೀಯ ರಣಭೂತಳದೊಳ್ (ರಾಜಶೇ. ೬-೯೬). [ಸಂ.]

**ಪ್ರಮುಖ** (ಗು). ೧. ಮುಂಭಾಗದಲ್ಲಿರುವ; ಸಮ್ಮುಖದ; ಎದುರಿನ. ೨. ಮುಖ್ಯವಾದ; ಪ್ರಧಾನವಾದ : ಬಡಗಭಾಷೆ ಕನ್ನಡದ ಒಂದು ಪ್ರಮುಖ ಶಾಖೆ (ದ್ರಾ.ಭಾ. ೦೯೩). ೩. ಮೊದಲಾದ; ಮುಂತಾದ : ಸಿದ್ದಿಸೆಟ್ಟಿ ಸೋಭನಯ್ಯ ಮಲ್ಲಯ್ಯಸೆಟ್ಟಿ ಅಣ್ಣಮ್ಮನಿನ್ನಿವರ್ಪ್ರಮುಖವಾಗಿ ತಂಬುಲಿಗ ಸಾಸಿರ್ವ್ವರುಂ ಅಯ್ವ್ನೂರ್ವ್ವರುಂ ಪೋಗಿ (ಶಾಸನ. IX-i, ೬೬-೦೦ ; ೨೨೧) ; ಮತ್ತಮನೇಕಪನಸಜಂಬೀರನಾರಿಕೇಳಸಹಕಾರಕದಳೀಪ್ರಮುಖಫಲಿತಭೂಜರಾಜಿಗಳ್ (ಪುಷ್ಪದ. ೩-೯೭ ವ). (ನಾ). ೪. ಶ್ರೇಷ್ಠನಾದುದು; ಮುಖ್ಯವಾದುದು; ಪ್ರಧಾನವಾದುದು : "ಅಗ್ರಿಂ ಪ್ರಧಾನಂ . . . ಪ್ರಮುಖಮಾ ಪ್ರವರಂ . . . ಗ್ರಾಮಣೀಯೆನಲು ಮುಖ್ಯಕ್ಕೆ ನಾಮಂ" (ಚುಂಗನಾ. ೦೨೭-೯). ೫. ಮುಖಂಡ ; ಮುಖ್ಯಸ್ಥ : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ . . . ಅಗ್ರಣೀ—ಈ ೧೩ ಮುಖ್ಯಂ" (ಹಲಾಯು. ೦೩೩-೩). ೬. ಒಂದು ನರಕದ ಹೆಸರು : ಕುಂಭೀಪಾಕ ಸುಪಾಕ ಪ್ರಮುಖದಾರುಣ ಅಂಗಾರಕವೆಂಬೈದು ಮಂತ್ರಿನರಕಂಗಳಿಂ ಸೇರಿ ತರಳತರವೆಂಬರಸುನರಕವಿಹುದು(ಸವೀಳ. ೦೬೦). ೭. ಗುಂಪು ; ಸಮೂಹ. [ಸಂ.]

**ಪ್ರಮುಖಕರಣ** (ನಾ). ಲೆಕ್ಕದ ಮುಖ್ಯಾಧಿಕಾರಿ; ಪ್ರಧಾನಕರಣಿಕ : ಪ್ರಭುಮಂತ್ರೋತ್ಸಾಹಸಕ್ತಿತ್ರಯಸಂಪನ್ನರಪ್ಪ ಶ್ರೀಮತ್ಪೆರ್ಗ್ಗಡೆ ನಾರಣಯ್ಯ ಪ್ರಮುಖಕರಣಂ ಬನವಾಸಿ ಪನ್ನಿರ್ಚ್ಛಾಸಿರಕ್ಕಂ ಪೆರ್ಗ್ಗಡೆತನಗೆಯ್ಯೆ (ಶಾಸನ. XX, ೩೬-೭; 1055). [ಸಂ.]

**ಪ್ರಮುಗ್ಧ** (ಗು). ೧. ಮೈಮೇಲೆ ಪ್ರಜ್ಞೆ ಇಲ್ಲದ ; ಎಚ್ಚರವಿಲ್ಲದ. ೨. ಮನೋಹರವಾದ. [ಸಂ.]

**ಪ್ರಮುದ** (ನಾ). ಅತಿಯಾದ ಸಂತೋಷ,—ಆನಂದ : ಕರಮಸೆವಾದಿ ನಂದಿಯನು ಪ್ರಮುದ[ಶಂ. ಮಧ]ಚಿತ್ತದಿ ನೋಡಿ (ಬಸವ. ೨-೭). [ಸಂ. ಪ್ರಮುದ್]

**ಪ್ರಮುದಿತ** (ಗು). ೧. ಸಂತೋಷ ಹೊಂದಿದ ; ಆನಂದಪಟ್ಟ : ಅಮರನದೀಪ್ರವಾಹದೊಳಗಿಂದೊಗೆತರ್ಪ ವಿಶಾಲಪುಣ್ಯಮೋ ಪ್ರಮುದಿತ ಶೈವಕೀರ್ತಿ ಬರುತಿರ್ಪುದೋ ಎನೆ ಬಂದನಳ್ಕಱಿಂ (ಗಿರಿಜಾ. ೪-೩೭). ೨. ಆನಂದವನ್ನುಂಟುಮಾಡುವ ; ಸಂತೋಷದಾಯಕವಾದ : ಪ್ರಮುದಿತಭವ್ಯಮಂ ಸುಕವಿಸಂಕುಳಸೇವ್ಯಮಂ . . . ಜಿನಾನ್ವಯಕ್ರಮಯುತಕಾವ್ಯಮಂ ನೆಱೆಯೆ ನಿರ್ಮಿಸಿ(ಚಂದ್ರಪ್ರ. ೦೬-೬೨). ೩. (ಆಲಂ) ಅರಳಿದ ; ಬಿರಿದ : ಪ್ರಮುದಿತ ಕಂಕೇಲ್ಲಿಯವೋಲ್ ಪ್ರಮದಾಪದ ಜತುರಸಾಂಕಿತಂ ಸರಸೀವಿಭ್ರಮದಂತೆ ನೀರಜಸ್ತೋಮವಾಗಿ ರಾಜಿಪುದು ಪುರದ ವೀಧಿಯಾಧಂ (ಸುಕುಮಾ. ೨-೯೯). ೪. ವ್ಯಾಪ್ತವಾದ : ಅಮರಗಣಯುಗ್ಮದಿಂ ಮುಂದಮರ್ದೆಟುಂ ಶಿಖಿಗಣಂ ಬರಲ್ ದಂಡಕದಾಪ್ರಮುದಿತಲಕ್ಷಣಮಕ್ಕುಂ (ಛಂದೋಂಬು. ೩-೨೯); ಕ್ರಮದಿಂದೆ ಸಂಧಿ ನಾಮಂ ಸಮಾಸಮಾ ತದ್ಧಿತಂ ಪೊದಬ್ಯಾಖ್ಯಾತಂ ಪ್ರಮುದಿತಧಾತು ವಪಭ್ರಂಶಮಮವ್ಯಯಂ ಸಂಧಿ ಶಬ್ದ ಮಣಿದರ್ಪಣದೊಳ್(ಶಮದ. ೦). (ನಾ). ೫. ಸಂತೋಷಪಟ್ಟವನು ; ಆನಂದಪಟ್ಟವನು: "ಹೃಷ್ಟಃ, ಮತ್ತಃ ತೃಪ್ತಃ, ಪ್ರಹ್ಲನಃ, ಪ್ರಮುದಿತಃ, ಪ್ರೀತಃ—೬ ಸಂತೋಷಪಟ್ಟವನು" (ಸಿದ್ಧಾಂತ. ೩೩೦). [ಸಂ.]

**ಪ್ರಮುಷ್ಟ** (ಗು). ೧. ಉಜ್ಜಿದ ; ತಿಕ್ಕಿದ. ೨. ಲೇಪಿಸಿದ ; ಬಳಿದ : ಘನಸಾರಚಂದನಸಾರಪ್ರಮುಷ್ಟ ಕರತಳನುಮಂಗೀಕೃತಕಸ್ತೂರಿಕಾವಿಲೇಪನನುಂ (ಅನಪು. ೧೦-೨೭ ವ). ೩. ಸಾಣೆ ಹಿಡಿದ ; ಮೆರುಗು ಕೊಟ್ಟ. [ಸಂ.]

**ಪ್ರಮೆ** (ನಾ). ೧. ಅಳತೆ ; ಪರಿಮಾಣ ; ಪ್ರಮಾಣ. ೨. [ತರ್ಕಶಾ] ಸರಿಯಾದ ತಿಳಿವಳಿಕೆ ; ನಿಶ್ಚಿತಜ್ಞಾನ ; ಪ್ರಮಿತಿ ; ☞ ಇದರಲ್ಲಿ ಸಾಕ್ಷಾತ್ಕಾರ, ಅನುಮತಿ, ಉಪಮಿತಿ ಮತ್ತು ಶಾಬ್ದಬೋಧವೆಂಬುದಾಗಿ ನಾಲ್ಕು ಪ್ರಕಾರಗಳು ಇವೆ : "ಪ್ರಮಿತಿಃ, ಪ್ರಮಾ—೨ ನಿಜವಾಗಿ ತಿಳಿಯುವಿಕೆ, ಯಥಾರ್ಥಜ್ಞಾನ" (ಸಿದ್ಧಾಂತ. ೩೩೬); ಪ್ರಮೆ ಎಂದರೆ ಸರಿಯಾದ ಅನುಭವ. ಇದನ್ನು ಪ್ರಮಿತಿ ಎಂದೂ ಕರೆಯುವರು (ಭ್ರಕ್ತಾ. ೨-೨೫); ಪ್ರಮೆ, ಬುದ್ಧಿ ಉಪಲಬ್ಧಿ ಮೊದಲಾದ ಪದಗಳಿಂದ ಹೇಳಲ್ಪಡುವ ಜ್ಞಾನವೆಂಬುದು ಸೂಕ್ಷ್ಮವಾದ ಅತೀಂದ್ರಿಯವಾದ ಕ್ರಿಯೆ (ಹಿಂದಶಾ. ೦೭೬). [ಸಂ. ಪ್ರಮಾಣ]

**ಪ್ರಮೇಯ** (ಗು). ೧. ಅಳೆಯಬಹುದಾದ ; ಅಳೆಯಲು ಶಕ್ಯವಾದ. ೨. ಸೂಕ್ಷ್ಮವಾಗಿ ಪರೀಕ್ಷಿಸಬೇಕಾದ ; ವಿವೇಚಿಸಬೇಕಾದ. (ನಾ). ೩. ಪ್ರಸಂಗ ; ಸನ್ನಿವೇಶ ; ಸಂದರ್ಭ : ನೀನು ದಿನಾ ಸಕಾಲದಲ್ಲಿ ಊಟ ತಿಂಡಿ ಇಲ್ಲದೆ ರೈಲಿನಲ್ಲಿ ತಿರುಗಿ ಹೋಗಿ ಓಡೋ ಪ್ರಮೇಯ ವೇನು ? (ಶಂಕನ್ನ. ೬೯); ಇವರು ನಮ್ಮ ಗುಂಪನ್ನು ಬಿಟ್ಟು ಬೇರೆಯಾಗ ಬೇಕಾಗಿದ್ದ ಪ್ರಮೇಯವೇನಿತ್ತು? (ಹಸುಹೂ. ೦೬೩); ನಿಮ್ಮನ್ನೆಲ್ಲ ಇಲ್ಲಿಗೆ ಬರಮಾಡಿಕೊಳ್ಳುವ ಪ್ರಮೇಯವಾದರೂ ಏನಿದ್ದಿತು ? (ಕಾಂಕಲ. ೦೯). ೪. [ತರ್ಕಶಾ] (ಮುಖ್ಯವಾದ) ವಿಷಯ ; ತತ್ತ್ವ; ಸಿದ್ಧಾಂತ : ಮಂತ್ರ, ಬ್ರಾಹ್ಮಣ ಮುಂತಾದವುಗಳ ಕರ್ಮಸಿದ್ಧಾಂತವನ್ನೇ ಆಧಾರ ವಾಗಿಟ್ಟುಕೊಂಡು ಕರ್ಮದಿಂದ ಜ್ಞಾನಪ್ರಾಪ್ತಿಯೆಂಬ ಪ್ರಮೇಯದ ಮೇಲೆ ಉಂಟಾದದ್ದು ಪೂರ್ವಮೀಮಾಂಸೆ (ಭಾರತ. ೦೬೦); ಈ ಬಗೆಯ ಹೇರಳವಾದ ದೃಷ್ಟಾಂತಗಳಿಂದ ಅತ್ಯಂತಗಹನವಾದ ಪ್ರಮೇಯವನ್ನೂ ತಿಳಿಹೇಳುವುದರಲ್ಲಿ ರಂಗನಾಥಕವಿ ಬಹುಮಟ್ಟಿಗೆ ಯಶಸ್ವಿಯಾಗಿದ್ದಾನೆ (ಕಸಾತ. ೩೦೨). ೫. [ರೇಖಾಗ] ತರ್ಕಸರಣಿಯ ಮೂಲಕ ಸಿದ್ಧಪಡಿಸಬೇಕಾದ ವಿಷಯ ; ರೇಖಾಗಣಿತದಲ್ಲಿ ಸಾಧನೀಯ ತತ್ತ್ವ.—ನಿಯಮ : ಯೂಕ್ಲಿಡ್ (Euclid)ಬರೆದ ರೇಖಾಗಣಿತವಲ್ಲಿನ ಪ್ರಮೇಯಗಳನ್ನೂ ಸಾಧನೆಗಳನ್ನೂ ನೋಡಿದರೆ ಅವುಗಳನ್ನು ಕಂಡುಹಿಡಿದವರು ಯಾರು, ಈ ಪ್ರಮೇಯಗಳನ್ನು ಊಹಿಸಿದುದು ಹೇಗೆ ಎಂಬುದು ಸ್ವಲ್ಪವೂ ತಿಳಿಯುವುದಿಲ್ಲ (ಕಾತಿಂ. ೬೬); ರೇಖಾಗಣಿತದಲ್ಲಿ ಹೆಚ್ಚಿನ ಪರಿಜ್ಞಾನವೂ ಅಭ್ಯಾಸವೂ ಆಗುವಂತೆ ಪ್ರಮೇಯಗಳನ್ನೂ ರಚನೆಗಳನ್ನೂ ಸೇರಿಸಬೇಕು (ಶಿಕ್ಷರ. ೦೬೩). ೬. [ತತ್ತ್ವಶಾ] ಯಥಾರ್ಥಜ್ಞಾನದಿಂದ ತಿಳಿಯಲಾಗುವ ವಸ್ತು ; ನಿಶ್ಚಿತಜ್ಞಾನದಿಂದ ಗ್ರಹಿಸುವ ವಿಷಯ.—ತತ್ತ್ವವಿಚಾರ: ಪ್ರಮಾಣವೆಂದರೆ ಪ್ರಮೆಗೆ ಸಾಧನ. ಪ್ರಮೆಯೆಂದರೆ ಯಥಾರ್ಥಜ್ಞಾನ. ಇದಕ್ಕೆ ಆಶ್ರಯನಾಗಿರುವವನು ಪ್ರಮಾತ. ವಿಷಯವಾಗಿರುವುದು ಪ್ರಮೇಯ (ಹಿಂದಶಾ. ೦೬೨); ಪ್ರಮೇಯ:—ಯಥಾರ್ಥಜ್ಞಾನದಿಂದ ತಿಳಿಯಲ್ಪಡುವ ವಸ್ತು (ಭಾತತ್ತ್ವ. ೧೬೬). ೭. [ನ್ಯಾಯಶಾ] ಆತ್ಮ, ಶರೀರ, ಇಂದ್ರಿಯ, ಅರ್ಥ, ಬುದ್ಧಿ, ಮನಸ್ಸು, ಪ್ರವೃತ್ತಿ, ದೋಷ, ಪ್ರೇತ್ಯಭಾವ, ಫಲ, ದುಃಖ ಮತ್ತು ಅಪವರ್ಗವೆಂಬ ಹನ್ನೆರಡು ವಿಧವಾದ ವಿಷಯ : ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ —ಆತ್ಮ ಶರೀರ . . . ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು (ಹಿಂದಶಾ. ೦೧೩). ೮. ಆತ್ಮಾನಾತ್ಮ ವಿವೇಕಕ್ಕೆ ಬೇಕಾದ ಪ್ರಮಾಣ, ಪ್ರಮೇಯಂ, ಸಂಶಯಂ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡಾ, ಹೇತ್ವಾಭಾಸ, ಛಲ, ಜಾತಿ ಮತ್ತು ನಿಗ್ರಹಸ್ಥಾನ ಎಂಬ ಹದಿನಾರು ಬಗೆಯ ಪದಾರ್ಥಗಳಲ್ಲಿ ಒಂದು: ಗೌತಮೋಕ್ತನ್ಯಾಯವು ಪ್ರಮಾಣ ಪ್ರಮೇಯ ಸಂಶಯ . . . ನಿಗ್ರಹಸ್ಥಾನಗಳೆಂಬ ಷೋಡಶಪದಾರ್ಥಂಗಳಂ ನಿರೂಪಿಸುತ್ತಲೀ ಪ್ರಪಂಚಕ್ಕೆ ಪರಮೇಶ್ವರಕರ್ತೃಕಮಂ ನಿಶ್ಚಯಿಸುವುದು (ಅವೀಳ.೧೮) ; ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ . . . ನಿಗ್ರಹಸ್ಥಾನ ಎಂದು ಹದಿನಾರುಪದಾರ್ಥಗಳನ್ನು ನಿರೂಪಿಸಿರುವರು (ಹಿಂದಶಾ. ೧೧೨). [ಸಂ.]

**ಪ್ರಮೇಹ** (ನಾ). ೧. ಮೂತ್ರಕೋಶದಲ್ಲಿ ಕಲ್ಲು ಉಂಟಾಗುವ ಒಂದು ಬಗೆಯ ರೋಗ ; ಶಿಲಾಮೇಹ : "ಅಶ್ಮರಿಯೆನೆ ಪ್ರಮೇಹ ಮಕ್ಕು" (ಹುಂಗನಿ. ೦೦೧-೪); ಎಲೆಹುರಿಯ ಬೇರು ಹಳೇನೀರಿಂ ಕುಡಿಯೆ ಪ್ರಮೇಹಂ ತಿಗ್ಗುಂ. ಕಲ್ಲು ಒಡೆದು ಬೀಳ್ಗುಂ (ಅಪ್ಸಿ. ೦೪೪) ; ಚಿಲ್ಲದ ಬೀಜದ ಗಂಧವನ್ನು ತೆಗೆದು ಅದಕ್ಕ ಸ್ವಲ್ಪ ಶ್ರೀಗಂಧ ಹಾಕಿ ತೆಗೆದುಕೊಂಡರೆ ಪ್ರಮೇಹದ ಕಲ್ಲು ಬೀಳುತ್ತದೆ (ಸತನ್ನ. ಶಂ. ೪೪೩). ೨. (ಶುಕ್ರಧಾತುವು ಯಾವಾಗಲೂ ಸ್ರವಿಸುವುದು ಮತ್ತು ಮಧುಮೇಹ ಇತ್ಯಾದಿ ಯಾವುದಾದರೂ) ಮೂತ್ರರೋಗ. ೩. ಗುಹ್ಯಪ್ರದೇಶದಲ್ಲಿ ಉಂಟಾಗುವ ವ್ರಣರೋಗ ; ಭಗಂದರ. [ಸಂ].

**ಪ್ರಮೋದ** (ನಾ). ೧. ಸಂತೋಷ ; ಆನಂದ: "ಪ್ರಮೋದಃ, ಪ್ರಮದಃ, ಹರ್ಷಃ . . . ಶಂ, ಸುಖಂ—ಈ ೧೩ ಸುಖದ ಪೆಸರ್" (ಹಲಾಯು. ೨೦-೦೨೩); ಜಲಪಾಲಂಗೆ ಪ್ರಮೋದಮಾಗೆ ರಾಗಿಸಿ ಪಲಕಾಲಕ್ಕನ್ನ ಪಗೆಯೊಳಗಾದಂ ಬನ್ನಿಮೆಂಬುದುಂ (ಶಂಕಶಂ. ೨೭೦-೪): ಮೇದಿನೀದೇವಿಗತಿಪ್ರಮೋದಮಂ ಪಡೆದು ಕಟಿಪಿ (ಜಗಂ. ೦-೩೪ ವ). ೨. ಸುಗಂಧ ; ಸುವಾಸನೆ. ೩. ಅರುವತ್ತು ಸಂವತ್ಸರಗಳಲ್ಲಿ ನಾಲ್ಕನೆಯ ಸಂವತ್ಸರದ ಹೆಸರು : ಆ ವರುಷವೇ ಪ್ರಭವ ವಿಭವ ಶುಕ್ಲ ಪ್ರಮೋದ [ಪಾಠಾಂ. ಪ್ರಮಾದಿತ, ಪ್ರಮಾದೌತ, ಪ್ರಮೋದೂತ] . . . ಕ್ರೋಧನ ಅಕ್ಷಯವೆಂದಱುವತ್ತು ತೆಱನಾಗಿಹುದು (ಅಪೀಳ. ೩೨೦). ೪. [ಯೋಗ] ಸಾಂಖ್ಯದರ್ಶನದ ಶಾಸ್ತ್ರಾಭ್ಯಾಸ, ಶಾಸ್ತ್ರಜ್ಞಾನವಿಚಾರ, ಗುರುಶಿಷ್ಯಸಹವಾಸ, ಸದಾಮುದಿತ, ವಿವೇಕಖ್ಯಾತಿ, ಪ್ರಮೋದ, ಮುದಿತ ಮತ್ತು ಮೋದಮಾನಗಳೆಂಬ ಎಂಟು ಸಿದ್ಧಿಗಳಲ್ಲಿ ಒಂದು; ಪ್ರತ್ಯಯಸರ್ಗದ ಒಂದು ಭಾಗ : ಶಾಸ್ತ್ರಾಭ್ಯಾಸ . . . ಪ್ರಮೋದ ಮುದಿತ ಮೋದ ಮಾನಗಳೆಂಬುವು ಅಷ್ಟಸಿದ್ಧಿಗಳು(ಹಿಂದಶಾ. ೬೯). [ ಸಂ. ]

**ಪ್ರಮೋದಿತ** (ಗು). ೧. ಸಂತೋಷಗೊಂಡ ; ಹರ್ಷ ಹೊಂದಿದ. ೨. ಸುಗಂಧಗೊಳಿಸಿದ ; ಪರಿಮಳವುಂಟುಮಾಡಿದ. [ಸಂ.]

**ಪ್ರಮೋದೂತ** (ನಾ). = ಪ್ರಮೋದ ೩ : ಪ್ರಮೋದೂತ ಸಂವತ್ಸರದ ಮಾರ್ಗಶಿರ ಬ ೧ ಲೂ ಶ್ರೀಮತು ಕೆಳದಿ ಚೆಂನ್ನಮಾಜಿಯವರು ದೊಡ್ಡ ಚೆಂನಪ್ಪಯಗೆ ಬರಶಿ ಕಳುಹಿದ ಪ್ರಯೋಜನ (ವೃಶಿಂ. ೦೪೩೪, ೬-೦; 1690). [☞'ಪ್ರಮೋದ' ಎಂಬ ಹೆಸರಿನ ಸಂವತ್ಸರದ ರೂಪಾಂತರವಾಗಿ ಈ ಶಬ್ದರೂಪವು ಪ್ರಚಾರದಲ್ಲಿದೆ]

**ಪ್ರಯತ** (ಗು). ೧. ಶುದ್ಧವಾದ; ಪವಿತ್ರವಾದ. ೨. ನಮ್ರವಾದ ; ವಿನೀತವಾದ. ೩. ಇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಂಡ ; ಜಿತೇಂದ್ರಿಯನಾದ. (ನಾ). ೪. ಶುದ್ಧವಾದುದು ; ಶುಚಿ ; ಪವಿತ್ರತೆ : " ಪ್ರಯತಃ, ಅನುಚ್ಛಿಷ್ಟಃ - ಈ ೨ ಶುಚಿ ". (ಹಲಾಯು. ೬೬-೨೪೬); ಕ್ಷಯವ್ಯಜನಂ ಜನಸಪಯಂ ಸ್ವಯರಹಿತಂ ಹಿತವಚಃ ಪ್ರಿಯಂ ಪ್ರಿಯಧರ್ಮಂ ಪ್ರಯತಯುತಂ ಸದ್ವಿನಯಂ ನಯವಾಕ್ಯಸರಂ

ಸರಸ್ವತೀಮುಖಮುಕುರಂ (ಶಬ್ದಮ. ೦-೩೦). ೫. ಪವಿತ್ರನಾದವನು ; ಪರಿಶುದ್ಧನಾದವನು : "ಪವಿತ್ರಃ, ಪ್ರಯತಃ, ಪೂತಃ_ಪವಿತ್ರನಾದವನ ಹೆಸರುಗಳು. ಪರಿಶುದ್ಧನು " (ಅಮ್ಮ೦ಕೆ. ೨೨೯). [ಸಂ.]

**ಪ್ರಯತ್ನ** (ನಾ). ೧. ಉದ್ಯಮ ; ಉದ್ದೇಶ ; ಯತ್ನ : ಪ್ರಯತ್ನ ಮಲ್ಲದ ಗುರುತ್ವಶಕ್ತಿ- ಎಮ್ಮ ತಂದೆಗಳ್ (ಶಬ್ದ. ೦೦೨ ಶ್ರ.ಶೋ); ಚಂದ್ರವಿಗೊ ಮಂಗಳಗ್ರಹಕ್ಕೊ ವಲಸೆ ಹೋಗುವ ಪ್ರಯತ್ನ . . . ಕಾಣುತ್ತದೆ (ಜಲಕ್ಕ. ೯೬) ; ಸಮಂಜಸವಾದ ಉತ್ತರ ಹೇಳುವ ಹತ್ತಾರು ಪ್ರಯತ್ನಗಳು ನಡೆದಿವೆ (ಜ್ಞಾಜಾ. ೨೦). ೨. ಹೆಚ್ಚು ಶ್ರಮ ; ಬಹುಶ್ರಮ : ಪತ್ನಿಯರ ದೆಸೆಯಿಂದೆ ಮುಡಿದಿರ್ದ ಪಾರ್ಥಂ ಪ್ರಯತ್ನದಿಂ ವಿಜಸುತಂ ತಂದ ಸಂಜೀವಕದ ರತ್ನದಿಂ ಕೃಷ್ಣಪ್ರಸಾದದಿಂ ಜೀವಿಸಿದನು (ಕೃಬಾಹ. ೨೯ ಶೋಕ). ೩. ತೊಂದರೆ ; ಕಷ್ಟ. ೪. "ಒಂದು ಭಾಗವು ಇನ್ನೊಂದರ ಮೇಲೆ ಪ್ರಯೋಗಿಸುವ ಬಲವನ್ನು ಆ ಭಾಗದ ಖಂಡವಿಸ್ತಾರದಿಂದ (Area of cross section) ಭಾಗಿಸಿದರೆ ಬರುವ ಲಬ್ಧಕ್ಕೆ ಪ್ರಯತ್ನವೆಂದು ಹೆಸರು" (ಭೌತ. ೦೦೬).

**ಪ್ರಯತ್ನಪಡು**— ಯತ್ನ ಮಾಡು : ಎಷ್ಟು ಪ್ರಯತ್ನಪಟ್ಟರೂ ನಮ್ಮಿಂದ ಅವುಗಳನ್ನು ತೆರೆಯಲಾಗಲಿಲ್ಲ (ಕೃಕಕ್ಕ. ೯೯); ಮುಂದೆ ನಡೆಯ ಬೇಕೆಂದು ಎಷ್ಟು ಹೆಚ್ಚಾಗಿ ಪ್ರಯತ್ನ ಪಟ್ಟರೆ, ಅವು ಅಷ್ಟು . . . ಹಿಂದಕ್ಕೆ ಎಳೆಯಲು ಪ್ರಾರಂಭ ಮಾಡುವುವು (ಸಂಜೂತ್ರ. ೯೬). **ಪ್ರಯತ್ನ ಮಾಡು**— ಯತ್ನ ಮಾಡು ; ಉದ್ಯೋಗಿಸು : ತಾವು ಅಭ್ಯಾಸ ಮಾಡಿದ ಪುಸ್ತಕ ಯಾವುದೆಂದಾಗಲಿ, ಅದರ ವಿವರಗಳನ್ನಾಗಲಿ ಅವರು ತಿಳಿಸುವ ಪ್ರಯತ್ನ ಮಾಡಿಲ್ಲ (ಕಲಕ್ಕ. ೩೬) ; ಮುಂದೆ ಪ್ರಯತ್ನ ಮಾಡುವುದಾದರೂ ಏಕೆ (ಕೃಕಕ್ಕ. ೩೭). [ಸಂ.]

**ಪ್ರಯತ್ನಿಸು** (ಕ್ರಿ). ಯತ್ನ ಮಾಡು : ರತ್ನಪರೀಕ್ಷೆ ಗಜಾಶ್ವಪರೀಕ್ಷೆ ಪ್ರಯತ್ನಿಸೆ ಬಾಹ್ಯವಿಜ್ಞಾನ ರತ್ನತ್ರಯರೂಪವಾತ್ಮನೆಂದಱಿವುದು ಸೂಕ್ಷ್ಮಾಂತರಂಗವಿಜ್ಞಾನ (ಶಜ. ೨-೦೯): ಭಾರತದೇಶವು ಬಡಜನರ ಜೀವನಸ್ಥಿತಿಗಳನ್ನು ಸುಧಾರಿಸುವುದಕ್ಕಾಗಿ ಪ್ರಯತ್ನಿಸುತ್ತಿದೆ (ಅಜಾ. ೫೦); ಅವಳಾದರೂ ಮಾಧವಿಯ ಪಾಲಿನ ನೃತ್ಯಗಾನಗಳನ್ನು ಕಲಿಸೋಣವೆಂದು ಎಣಿಸಿ ಪ್ರಯತ್ನಿಸಿದಳು (ಪೊಸ್ತು. ೯೬). [ಪ್ರಯತ್ನ + —ಇಸು]

**ಪ್ರಯಸ್ತ** (ನಾ). ಸಂಬಾರ ಪದಾರ್ಥ, ಒಗ್ಗರಣೆ ಮುಂತಾದಂವುಗಳನ್ನು ಹಾಕಿ ಸಂಸ್ಕರಿಸಿದ ವ್ಯಂಜನ, ಅಡುಗೆ : "ಪ್ರಯಸ್ತಂ, ಸುಸಂಸ್ಕೃತಂ- ಉದ್ದಿನಬೇಳೆ, ಕಡಲೆ, ಸಾಸುವೆ, ಜೀರಿಗೆ, ಮೆಣಸಿನಕಾಯಿ, ತುಪ್ಪ ಮುಂತಾದವುಗಳಿಂದ ವಗ್ಗರಿಸಿ ಹಿಂಗು, ಕಱಿಬೇವು ಮುಂತಾದ ಪರಿಮಳ ಗಳಿಂ ಕಲ್ಪಿಸಿದ ರುಚಿಯಾದ ಪದಾರ್ಥಗಳು" (ಅಮ್ಮ೦ಕೆ. ೨೯೬). [ಸಂ.]

**ಪ್ರಯಾಗ** (ನಾ). ೧. ಯಜ್ಞ; ಯಾಗ. ೨. ಯಜ್ಞ ಮಾಡುವ ಸ್ಥಳ; ಯಾಗಭೂಮಿ. ೩. ಈಗಿನ ಅಲಹಾಬಾದ್ ಬಳಿಯ ಒಂದು ಪುಣ್ಯ ಕ್ಷೇತ್ರ : ಗಂಗೆ, ಯಮುನೆ ಮತ್ತು (ಗುಪ್ತಗಾಮಿನಿಯಾದ) ಸರಸ್ವತಿ ನದಿಗಳ ಸಂಗಮ ಸ್ಥಳ ; ಬ್ರಹ್ಮನು ಈ ಪ್ರದೇಶದಲ್ಲಿ ಅನೇಕ ಯಾಗಗಳನ್ನು ಮಾಡಿದ ಕಾರಣ ಇದಕ್ಕೆ ಪ್ರಯಾಗವೆಂಬ ಹೆಸರು ಬಂದಿತೆಂಬ ನಂಬಿಕೆಯಿದೆ : ಅಸುರವುರ್ದನನ ಬೆಸದಿಂ ಪ್ರಯಾಗದೊಳ್ಪಿಡುವವೀ ಶಿರವಂ ಬಱಿದೆ ಗಾಸಿಯಾಗದಿರು (ಕೃಬಾಹ. ೬೮-೨೦) ; ಇನ್ನು ಮೂರು ದಿನಗಳಲ್ಲಿ ಕಾಶಿ, ಹರಿದ್ವಾರ, ಗಯಾ, ಪ್ರಯಾಗ ಮೊದಲಾದ ಮಹಾಮಹಾಕ್ಷೇತ್ರಗಳಿಗೆ ಹೊರಡಬೇಕಾದೀತು! (ಅಪಕ. ೯೮). ೪. ಇಂದ್ರ. ೫. ಕುದುರೆ. [ಸಂ.]

**ಪ್ರಯಾಗ** (ನಾ). = ಪ್ರಪಯಾಗ ೩ : ಶ್ರೀಪರ್ವತದೊಳಂ ಪ್ರಯಾಗೆ ಯೊಳಂ ವಾಣಾರಾಸಿಯೊಳಂ ಕುರುಕ್ಷೇತ್ರದೊಳಂ ಹತ್ತು ಸಾಸಿರ ಕವಿಲೆಯುಮಂ ಹತ್ತು ಸಾವಿರ ವೇದಪಾರಗರುಮಂ ಕೊಂದ ಬ್ರಹ್ಮಹತಿ ಯಕ್ಕು (ಕಶಾ. ೦೦೯-೨೨-೬೨ ; 1079), ಇನ್ನೀ ಧರ್ಮ್ಮಮನಾವ ನೋರ್ವ್ವ ಪ್ರತಿಪಾಳಿಸಿದಂಗೆ ಗಂಗೆ ವಾರಣಾಸಿ ಗುರುಕ್ಷೇತ್ರ ಪ್ರಯಾಗೆ ಯಲು ಸಾಸಿರ್ವ್ವ ಬ್ರಾಹ್ಮಣರ್ಗ್ಗೆ ಸಾಸಿರ ಕವಿಲೆಯ ದಾನಂಗೆಯ್ದ ಫಲವಕ್ಕು (ಎಕ. XII, ಚಿನಾ. ೬೦-೯೮ ; 1162). [ಸಂ.]

**ಪ್ರಯಾಣ** (ನಾ). ೧. ಪಯಣ ; ಸಂಚಾರ ; ಯಾತ್ರೆ : "ಯಾತ್ರಾ, ಪ್ರಯಾಣಂ, ಪ್ರಸ್ಥಾನಂ-ಈ ೩ ಪಯಣಂ" (ಕಣಾಮ. ೬೯-೨೯೬) ; ನಂದಗೋಪಂ . . . ಕತಿಪಯಪ್ರಯಾಣಂಗಳಿಂ ಪೋಗಿ (ಜಗ. ೬-೬೫ ವ); ಪ್ರಯಾಣ ಅಲೆದಾಟ ಮೊದಲಾದುವುಗಳ ಆಯಾಸದಿಂದ ನಿದ್ರೆಯೇನೋ ತಡವಿಲ್ಲದೆ ಬಂದಿತು (ಹಂಚು. ೯೯). ೩. ಯುದ್ಧಕ್ಕೆ ಹೊರಡುವಿಕೆ ; ಆಕ್ರಮಣ ; ಧಾಳಿ. ೪. (ಪ್ರಪಂಚದಿಂದ) ನಿರ್ಗಮನ ; ಸಾವು. ೫. [ಸಂಗೀತ]ಗಾಯಕನು ಹಾಡುವಾಗ ಅದಕ್ಕನುಗುಣವಾಗಿ ಮಾಡುವ ಮೈಯ ಚಲನವಲನ ; ಒಂದು ಬಗೆಯ ದೋಷ : ಕಂಪಿತ . . . ಪ್ರಯಾಣ [ಹಾಕಲ. ಣು] . . . ತಾಳವಿಹೀನವೆಂಬ ಪದಿನೈದು ಸ್ವರದೂಷಣಂ ಪೊರ್ದದೆ ಪಾಡಿ ಮೋಹಿಸುವ ಗಾಯಕರಿಂ (ಅಚೀಳ. ೦೯೦). 'ಪ್ರಸಾರ' ಪಠಾ.

**ಪ್ರಯಾಣ ಮಾಡು**— ೧. ಸಂಚಾರ ಮಾಡು : ಆಗುಂಬೆಯಲ್ಲಿ ಎರಡು ದಿನ ತಂಗಿದ್ದು ಮುಂದಕ್ಕೆ ಪ್ರಯಾಣ ಮಾಡುತ್ತಾರೆ (ಹಸುಹೂ. ೨೯೬). ೨. ಸಾಯು ; ಮರಣ ಹೊಂದು. [ಸಂ.]

**ಪ್ರಯಾಣಿಕ** (ನಾ). ಸಂಚಾರ ಮಾಡುವವನು; ಪಯಣಿಗ ; ಪ್ರವಾಸಿ: ನನಗಂತೂ, ಬಹುದೂರ ಎಲ್ಲೋ ಹೋಗಿ ಊರಿಗೆ ಹಿಂತಿರುಗಿದ ಪ್ರಯಾಣಿಕನಂತೆ ಆಗಿತ್ತು (ಜಾಕಿವಾ. ೨) ; ಸೋಮೇಶ್ವರದ ಮೂಲಕ ಹಾದು ಹೋಗುವ ಪ್ರಯಾಣಿಕರ ಸಂಖ್ಯೆ ಹೆಚ್ಚು (ಹಸುಹೂ. ೨೯೦). [ಸಂ.]

**ಪ್ರಯಾತ** (ಗು). ೧. ಹೊರಟಿರುವ : ಹೋಗುವ. ಆಯಾತಪ್ರಯಾ ತಾಂಗನಾನಿಕರೋದ್ಯಚ್ಚರಣಾಂಶುಪಲ್ಲವಿತಂ . . . ರಾಜಗೇಹಾಜಿರಂ (ಸಂದ್ರಕೃ. ೦-೩೦). ೨. ಹೊಂದಿರುವ. ಪಡೆದಿರುವ : (ನಾ). ೩. ಪ್ರಯಾಣ ; ಸಂಚಾರ. ೪. ಪ್ರಪಾತ ; ಕೊಳ್ಳ. [ಸಂ.]

**ಪ್ರಯಾಮ** (ನಾ). ೧. (ಆಹಾರಧಾನ್ಯ, ನೀರು ಮೊದಲಾದುವುಗಳ) ಕೊರತೆ. ೨. ಆಹಾರಧಾನ್ಯಗಳ ಕೊರತೆಯಿಂದಾಗಿ ಕೊಳ್ಳುವವ ರಲ್ಲಿ ಉಂಟಾಗುವ ಪೈಪೋಟಿ. ೩. ಕ್ಷಾಮ ; ಬರ. [ಸಂ.]

**ಪ್ರಯಾಸ** (ನಾ). ೧. ಶ್ರಮ; ಆಯಾಸ: ಕಾದಂಬರಿಯುಂ ಪ್ರಯಾಸದಿಂದ ನಾಲ್ಕಡಿಯಿಟ್ಟು . . . ಮಹಾಶ್ವೇತೆಯನ್ನು ಕಂಠಾಲಿಂಗನ ಮಾಡಿಕೊಳ್ಳ ಲಾಗಿ (ಕಕಳ. ೩೬). ೨. ಕಷ್ಟ ; ತೊಂದರೆ : ಅಕ್ಷರ ಕಲಿಯುವುದು ಹೆಚ್ಚಿನ ಪ್ರಯಾಸವಾಗಬಾರದು (ಜ್ಞಾಕಿ. ೬೩). ೩. ಅನುಭವ ; ಪರಿಶ್ರಮ : ಧನುರ್ವಿದ್ಯಾಪ್ರಯಾಸಗಳಲ್ಲಿ ಕೃತಯುಗದಲ್ಲಿ ತಾನು ಸಮರ್ಥನು (ಅಕ್ಕಜ. ೦-೬೯-೬).

**ಪ್ರಯಾಸ ಪಡು**— ಕಷ್ಟಪಡು; ಶ್ರಮಪಡು : ಆ ವಿವಾಹವನ್ನು ನಿಲ್ಲಿಸಲು ನನ್ನ ತಾಯಿ ಎಷ್ಟೋ ಪ್ರಯಾಸ ಪಟ್ಟಳು (ಕೃಶಾಕ. ೨೬) ; ಪ್ರಯಾಸ ಪಟ್ಟು ಮೇಲೆದ್ದರು (ಹಸುಹೂ. ೩೩೬). [ಸಂ.]

**ಪ್ರಯುಕ್ತ1** (ಗು). ೧. ಕೂಡಿದ ; ಹೊಂದಿಕೊಂಡ ; ಸೇರಿದ. ೨. ಜೋಡಿಸಿದ ; ಸೇರಿಸಿದ. (ನಾ). ೩. ಕೂಡಿದುದು ; ಹೊಂದಿಕೆ : "ಯುಂತವಸ್ನಿತಂ ಸಂಹಿತಂ ಸಮನ್ವಿತಮುಚಿತಮಾ ಪ್ರಯುಕ್ತಂ . . . ಕೂಡಲೈ ನಾಮಂ" (ಶಬ್ದಗರಾ. ೦೩೦-೦೬). ೪. ಕಾರಣ ; ಹೇತು ; ನಿಮಿತ್ತ : ಈ ಪರಿಯೊಳತ್ಯಂತಧರ್ಮಕಳಾಪರೂಪವಿಳಾಸದಿಂ ಲೋಕೋಪಕಾರಾರ್ಥಪ್ರಯುಕ್ತನಿರೂಢಿಯಲಿ ಮೆಱೆದು (ಅಶಕ್ಕ. ೨-೬);

ಅದರ ಪ್ರಯುಕ್ತವಾಗಿ ಕೆಲವು ವಾಸಸ್ಥಳಗಳು ನೀರಿನಲ್ಲಿ ಮುಳುಗಡೆ ಆಗುವ ಸಂಭವವಿದ್ದಿತು (ಛಾಗ್ಯ.೩. ೬೬). [ಸಂ.]

**ಪ್ರಯುಕ್ತ್ಯ** (ಅ). ಕಾರಣದಿಂದ ; ಸಂಬಂಧವಾಗಿ ; ಸಲುವಾಗಿ : ಈ ಪ್ರಯುಕ್ತ ನಂದವನಕ್ಕಾಗಿ ಭೂಮಿಯನ್ನು ದಾನ ಮಾಡಿದ ಸಂಗತಿಯನ್ನು ಕೊಂಗುನಾಡಿನ ಶಾಸನವೊಂದು ತಿಳಿಸುತ್ತದೆ (ಜಾಶಿ. ೩೩). [ <ಪ್ರಯುಕ್ತ್ಯ ]

**ಪ್ರಯುಕ್ತಿ** (ನಾ). ೧. ಬಳಕೆ ; ಪ್ರಯೋಗ ; ಉಪಯೋಗ : ಇಂತು ವರ್ತಿಸುತಿರ್ಪುದರಿಂದು ನಿಶ್ಚಿಂತಗುರುಭಕ್ತಿಪ್ರಯುಕ್ತಿಯದಂತುಮಲ್ಲದು ದರನಿಮಿತ್ತಕ್ಕೆ ಭಾಷೆಯಂ ನೀಗಿ (ಬಸ. ೩೯-೦೭) ೨. ಕಾರಣ ; ಹೇತು ; ನಿಮಿತ್ತ ; ಉದ್ದೇಶ : ಧಾತ್ರಿಯೊಳಗಾ ಅಯ್ಯನ ಮಳೆಚರಿತ್ರವಂ ಕೇಳಲ್ಕೆ ತಾನತಿಚಿತ್ರವತಿಶಯಶೀಲಸಂಬಂಧಪ್ರಯುಕ್ತಿಯಲಿ . . . ಗೃಹಚರರನೆಲ್ಲಂ ಶಿವಸಹಿತರಂ ಮಾಡಿ (ಬಸ.೬೦-೦೩). [ಸಂ.]

**ಪ್ರಯುತ** (ಗು). ೧. ಕೂಡಿದ ; ಸೇರಿದ ; ಹೊಂದಿಕೊಂಡ : ಮಡಿವಾಳ ಮಾಚಯ್ಯಂ ಶಿವಗಣಾಳೋಲನಶಿವೀರವ್ರತಾಚಾರ ಪ್ರಯುತಚ [ಪಾಠಂ. ತಾನು]ರ್ಯ ಕಾಲಕರ್ಮವಿರಹಿತನು (ಬಸ. ೨೦-೩). ೨. ಕೂಡಿಲ್ಲದ ; ಸೇರಿಲ್ಲದ ; ಬೇರೆಯಾದ. (ನಾ). ೩. ಒಂದು ಸಂಖ್ಯೆ ; ಹತ್ತು ಲಕ್ಷ : ಅಂಕಿಗಳ ಶ್ರೇಣಿ ಹದಿನೆಂಟರ ವರೆಗೂ ಹೋಗುತ್ತದೆ . . . ಸಹಸ್ರಂ, ಅಯುತ, ಲಕ್ಷ, ಪ್ರಯುತ, ಕೋಟಿ (ಶ್ರ.ವಾ. I, ೩೩೭). [ಸಂ.]

**ಪ್ರಯೋಕ್ತೃ** (ನಾ). ೧. ಉಪಯೋಗಿಸುವವನು ; ಬಳಸುವವನು. ೨. ನಡೆಸುವವನು ; ನಿರ್ದೇಶಿಸುವವನು : ಭೇದೋಪಾಯದ ಸಾಧನೆಯಲ್ಲಿ ಮುಖ್ಯವಾಗಿ ಬೇಕಾದವು ಪ್ರಯೋಕ್ತೃವಿನ ಬುದ್ಧಿ, ಕಾರ್ಯನಿರ್ವಾಹದಲ್ಲಿನ ಗುಟ್ಟು (ಸಂಪಾಠಿ. ೦೭೩). ೩. ಬಡ್ಡಿಯ ಮೇಲೆ ಹಣ ಸಾಲ ಕೊಡುವವನು. ೪. ಬಾಣ ಹೊಡೆಯುವವನು ; ಬಾಣಪ್ರಯೋಗ ಮಾಡುವವನು. [ಸಂ.]

**ಪ್ರಯೋಗ** (ನಾ). ೧. ಒಂದಾಗಿ ಸೇರುವುದು ; ಜೊತೆಯಾಗಿರುವಿಕೆ ; ಒಟ್ಟಿಗೆ ಸೇರುವುದು. ೨. (ಶಬ್ದ, ವಾಕ್ಯ ಇತ್ಯಾದಿಗಳ) ಬಳಕೆ ; ಉಪಯೋಗ : ತಮಿಳು ಮತ್ತು ಕನ್ನಡ ಭಾಷೆಯಲ್ಲಿ ಈ ಪದದ ಪ್ರಯೋಗಗಳು ಇಂತಿವೆ (ದ್ರಾ. ೩೩) ; ಭಾಷೆಯ ಪ್ರಯೋಗದಿಂದ ಅಭಿವ್ಯಕ್ತವಾಗುವ ಅಥವಾ ಜನಿಸುವ ಎಲ್ಲಾ ವಿಷಯಗಳು (೦೦ಶಾ. ೦೦೪). ೩. ಉದಾಹರಣೆ ; ನಿದರ್ಶನ ; ದೃಷ್ಟಾಂತ : ಡಕಾರಕ್ಕಾದೇಶವಮಾದ ಜಟಕ್ಕೆ ಪ್ರಯೋಗಂ, ಕಾಡುಬ್ಬು – ಕಾಟ್ಬ್ಬು (ಶಬ್ದ. ೦೯ ಪ್ರಯೋ). ೪. ಆರಂಭ ; ಪ್ರಾರಂಭ. ೫. ಅಪ್ಪಣೆ ; ಆಜ್ಞೆ : " ಆ ಪ್ರಯೋಗಂ ಶಾಸನಂ ಪೇಟ್ಟುವದಕೆ ಪೆಸರೆನಿಕ್ಕುಂ" (ಕುಂಗಶಾ. ೦೭೦-೦೬). ೬. ಹಂಚಿಕೆ ; ಯೋಜನೆ. ೭. ಕಾರ್ಯ ; ಕೆಲಸ : ಮಿಂಚು ಮಿಂಚಿದಡೆ ಮಿಂಚಿನಲುಳ್ಳ ಪ್ರಯೋಗವನಾಕ್ಷಣವೆ ಪ್ರಯೋಗಿಸಬೇಕು (ಕಕ್ಕ.ಕ. ೪. ೩೬೬-೦೨೯೬). ೮. ಧಾರ್ಮಿಕಕರ್ಮಗಳನ್ನು ಮಾಡಿಸುವ ಕ್ರಮ.— ನಿಯಮಾಚರಣೆಯ ರೀತಿ ; ಕರ್ಮಕಾರ್ಯವಿಧಾನ. ೯. ಬಿಡುವುದು ; ಎಸೆಯುವುದು ; ಹೊಡೆತ : 'ಬಾಣಪ್ರಯೋಗ' ಪದ. ೧೦. ನಾಟಕ ಅಥವಾ ನೃತ್ಯ ಇತ್ಯಾದಿ ಪ್ರದರ್ಶನ : ನೃತ್ಯ— ಸಂಗೀತಗಳಿಂದೊಡಗೂಡಿದ ಪ್ರಯೋಗವೇ ನಾಟಕದ ಕೊನೆಯ ಹೂವ ಎಂದು ನಾವು ತಿಳಿಯಬಹುದು (ನಾಕಿದ. ೩೭೩). ೧೧. ಪರೀಕ್ಷೆ ಮಾಡಿ ನೋಡುವಿಕೆ ; ಪರಿಶೀಲನಾಕಾರ್ಯ : ಅದು ಸಾಧನ ದೂಷಣ ಪ್ರಯೋಗಾನ್ಯಥಾನುಪತ್ತಿಯಿಂ ಬಹಿರ್ಥಸಿದ್ಧಿಯಕ್ಕುಂ (ಅಷ್ಟ. ೨-೦೦ ಕ) ; ಬೇರೆಬೇರೆ ವಿಜ್ಞಾನಶಾಖೆಗಳು ತಮ್ಮದೇ ಆದ ದಾರಿಗಳನ್ನು ಹಿಡಿದು ಬೆಳೆಯುತ್ತಿದ್ದರೂ ಅವುಗಳಿಗೆಲ್ಲಾ ಸಾಮಾನ್ಯವಾದ ಒಂದು ಮಾರ್ಗವುಂಟು. ಊಹೆ, ಪ್ರಯೋಗ, ಸಾಧನೆ, ನಿದರ್ಶನ ಇವುಗಳೇ ಈ ಮಾರ್ಗದ ಬೇರೆ ಬೇರೆ ಘಟ್ಟಗಳು (ಭೌತ. ೬). ೧೨. ಫಲ ; ಪರಿಣಾಮ. ೧೩. ಉಪಕರಣ ; ಸಾಧನ. ೧೪. ಬಡ್ಡಿಗೆ ಸಾಲ ಕೊಡುವಿಕೆ. [ಸಂ.]

**ಪ್ರಯೋಗಶಾಲೆ** (ನಾ). ತತ್ತ್ವಗಳ ಸತ್ಯವನ್ನು ಅರಿಯಲು ನಡೆಸುವ ಪರಿಶೀಲನಾಕಾರ್ಯದ ಮಂದಿರ,—ಶಾಲೆ : ಪ್ರಯೋಗಶಾಲೆಯಲ್ಲಿ ಆಹಾರದಿಂದ ರಂಜಕವನ್ನು ಬೇರ್ಪಡಿಸಿ ಅದನ್ನು ಇಲಿಗಳಿಗೆ ಕೊಟ್ಟರೆ, ಆಹಾರದಲ್ಲಿ ರಂಜಕದ ನ್ಯೂನತೆ ಕಂಡುಬರುತ್ತದೆ (ಗೃಹ. ೨೦). [ಸಂ. ಪ್ರಯೋಗಶಾಲಾ]

**ಪ್ರಯೋಗಸಿದ್ಧಿ** (ನಾ). ಪ್ರದರ್ಶನದಿಂದ ಬರುವ ಅನುಭವ,— ಪಡೆಯುವ ಸಿದ್ಧಿ : ಇಂಥ ನಾಟಕಗೃಹದೊಳಗೆ ಪ್ರಯೋಗಸಿದ್ಧಿಯನ್ನು ಪಡೆದ ನಾಟಕವು ರಂಗಭೂಮಿಯ ಮೇಲೆ ರಸದ ಸುರಿಮಳೆಯನ್ನು ಸುರಿಸೀತು (ಶ್ರಹಂ. ೩೯). [ಸಂ.]

**ಪ್ರಯೋಗಿಸು** (ಕ್ರಿ). ೧. ಬಳಸು ; ಉಪಯೋಗಿಸು : ವಿದಿತಾರ್ಥವಿಪರ್ಯಾಸಾಸ್ಪದಮೆ ದಲಾಕ್ಷೇಪವೆಂಬಲಂಕಾರಂ ಮತ್ತದಱ ವಿಶೇಷ ವಿಭಾಗಮನುದಾಹರಣಮಾರ್ಗದಿಂ ಪ್ರಯೋಗಿಸಿ ತೋರ್ಪೆಂ (ಕವಿರಾ. ೩-೯೯) ; ಧುಟ್ಟಾಪರರವಧಿಷ್ಠಾನಮಂ ಪ್ರಯೋಗಿಸಿ ಇಂತೆಂದು ಪೇೞ್ದರ್ (ಶಬ್ದಾ.ಶಾ. ೦೨-೨೮) ; ಕಾರ್ಯವನಜಾವಾತನು ಮೊದಲಲ್ಲಿ ಸಾಮವನೆ ಪ್ರಯೋಗಿಸುವುದು (ಹಂಶಕಂ. ೦೬೪-೦೩) ; ಮಾರ್ಗವಿದರ್ ಸಂಸ್ಕೃತೆಯೊಳಂ ಭೋಗಗರೆವನುಕ್ಕತಿಯೊಳಂ ಪ್ರಯೋಗಿಸುತಿರ್ಪರ್ (ಶಬ್ದ. ೦೯). ೨. (ಅಸ್ತ್ರ ಶಸ್ತ್ರಾದಿಗಳನ್ನು) ಬಿಡು ; ಎಸೆ ; ಹೊಡೆ : ಕಾಲದೇಶವನ್ನರಿತು ಶತ್ರುಗಳ ಮೇಲೆ ಪ್ರಯೋಗಿಸುತ . . . ಯಶೋವಂತನಾಗು (ಕಗಂ. ೩೬೦-೦೩) ; ಕಾಮನು ಪ್ರಯೋಗಿಸಿದ ಕುಸುಮ ಬಾಣಗಳಿಂದ ಈಶ್ವರನು ಅರವೆಣ್ಣಾಗುವನು (ಪಾಟಿಕ. ೦೩೨). ೩. ಹರಿಸಂ; ಹಾಯಿಸು ; ಪ್ರವಹಿಸುವಂತೆ ಮಾಡು : ಬಿತ್ತುವ ಮುನ್ನ ಬೀಜಗಳ ಮೇಲೆ ವಿದ್ಯುತ್ತನ್ನು ಪ್ರಯೋಗಿಸುತ್ತೇವೆ (ಸಂಡು. ೦೦೦). [ಪ್ರಯೋಗ + — ಇಸು]

**ಪ್ರಯೋಜಕ** (ಗು). ೧. ಉಪಯುಕ್ತವಾದ ; ಅಗತ್ಯವಾದ : ಪ್ರಯೋಜನಕಾರಿಯಾದ : ನಿರ್ಮಾಪಕಶಾಸ್ತ್ರಗಳಾದರೋ ಜ್ಞಾನವನ್ನು ಪ್ರಯೋಜಕ ಮತ್ತು ಸುಂದರ ವಸ್ತುಗಳ ನಿರ್ಮಾಣಕ್ಕೆ ಉಪಯೋಗಿಸುತ್ತವೆ (ಅಂಶಾ. ೦೦ ೩೦೪). (ನಾ). ೨. ಉಪಯುಕ್ತವಾದುದು : ರಾಜಕೀಯದೃಷ್ಟಿಯಿಂದ ಮಾತ್ರ ಪ್ರಾಧಾನ್ಯತಕ ಅದರಲ್ಲೂ ಆಂಗ್ಲರ ರಾಜ್ಯಸ್ಥಾಪನೆ ಭರತಖಂಡಕ್ಕೆ ಬಹಳ ಪ್ರಯೋಜಕವಾಯಿತು (ಮುಕ್ತ.ಕ. ೩೦೬ ೩೦೪). ೩. ಉಪಯುಕ್ತನಾದವನು : (೬). [ಸಂ.]

**ಪ್ರಯೋಜನ** (ನಾ). ೧. ಬಳಕೆ ; ಉಪಯೋಗ ; ಪ್ರಯೋಗ : ಸಂಧಿವಿಷಯಂ—ಸಂಧಿಪ್ರಯೋಜನಂ (ಶಬ್ದ ೬. ೩೦ ೩೬೬). ೨. ಬೇಕಾಗಿರುವಿಕೆ ; ಅಗತ್ಯ ; ಆವಶ್ಯಕತೆ : ಹಸಿರಾದ ಕರೆಭೂಮಿಯಲ್ಲಿ ವರ್ಷವರ್ಷ ಕಟಿ ಹೊಡೆಯುವ ಪ್ರಯೋಜನವಿಲ್ಲ (ಕೃಷಿ. ೩೩೩). ೩. ಲಾಭ; ನಫೆ : ಲೋಕದಲ್ಲಿ ಯಾರಿಗೆ ಯಾವುದು ಇಷ್ಟವೋ ಅದೇ ಅವರಿಗೆ ಪ್ರಯೋಜನ (ಬುಕ್ಕ. ೭೯); ಮಾತಲಿಯು ಈ ನನ್ನ ಪ್ರಯೋಜನವು ಇಂದ್ರನಿಗೆ ತಿಳಿಯಲಿಲ್ಲವಲ್ಲಾ (ಶಾಕುಂ. ೩೦೦-೦೩). ೪. ಉದ್ದೇಶ: ಗುರಿ : ಕೆಳದಿ ಚೆಂಸ್ನಮ್ಮಾಜಿಯವರು ದೊಡ್ಡ ಚೆಂನಪ್ಪಯಗೆ ಬರೆಸಿ ಕಳುಹಿಸಿದ ಪ್ರಯೋಜನ (ಕ್ಮಾಂ. ೦೩೯೧; ೯-೨; ೧೦೦೦). ೫. ಸಮಾರಾಧನೆ; ಅನ್ನಸಂತರ್ಪಣೆ : ಒಂದಾನೊಂದು ದಿವಸ ಊರೊಳಗೆ ಲಿಂಗವಂತರು ದೊಡ್ಡ ಪ್ರಯೋಜನವನ್ನು ಮಾಡಿರಲಾಗಿ (ಕಳಾಗಿ. ೬೬೦).

೬. [ನ್ಯಾಯಶಾ]ಪದಿನಾರು ಬಗೆಯ ಪದಾರ್ಥಗಳಲ್ಲಿ ಒಂದು : ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ. . . ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವರು (ಹಿಂದಣಾ· ೧೦೨). [ಸಂ.]

**ಪ್ರಯೋಜನಕಾರಿ** (ಗು)· ೧. ಉಪಯೋಗಕರವಾದ. (ನಾ)· ೨. ಉಪಯೋಗಕರವಾದುದು ; ಉಪಯುಕ್ತವಾದುದು : ಸಲಕರಣೆಗಳು ಸರಳರೀತಿಯವುಗಳಾಗಿದ್ದು ಪ್ರಯೋಜನಕಾರಿಯೂ ಆಗಿರಬೇಕು (ಅಡುಗೆ· ೩೨): ಈ ಪೀಠಿಕೆ ಅನುಬಂಧಗಳು ಅತ್ಯಂತ ಆವಶ್ಯಕವಾದುವೂ ಪ್ರಯೋಜನಕಾರಿಗಳೂ ಆಗಿವೆ (ಅಂಕಾ· X ಮುನ್ನುಡಿ)· [ಸಂ. ಪ್ರಯೋಜನಕಾರಿನ್]

**ಪ್ರಯೋಜನವಸ್ತು** (ನಾ)· ಬಳಕೆಯ ವಸ್ತು; ಉಪಯೋಗಿಸುವ ಪದಾರ್ಥ : ಪ್ರಯೋಜನವಸ್ತುವಿನೊಳ್ ಕರ್ತೃವಿವಕ್ಷೆಯಾಗೆ ಇಸುವಕ್ಕುಂ (ಶಮದ. ೨೩೦ ವೃತ್ತಿ)· [ಸಂ.]

**ಪ್ರಯೋಜ್ಯ** (ಗು)· ೧. ಬಳಸಬಹುದಾದ ; ಉಪಯೋಗಿಸಲರ್ಹವಾದ. ೨. ಬಿಟ್ಟ ; ಪ್ರಯೋಗಿಸಿದ ; ಎಸೆದ. (ನಾ)· ೩. ಬಳಸಬಹುದಾದಂದು ; ಉಪಯುಕ್ತವಾದುದಂ : ವಿದ್ಯಾಧರಶ್ರೇಣಿಯ ಪರಿಭಾಷೆಗಳ್ ನಿನ್ನವಾಗದೆ ಸಾವಂ ಪ್ರಿಯಜನಪ್ರಯೋಜ್ಯಂ ಅಲ್ಲದೆಡೆಯೊಳನ್ಯತ್ರವಿಳಸಿತಂ (ಶಾಂತಿಪು. ೩-೯೬ ವ)· ೪. ಆಳಂ ; ಸೇವಕ. ೫. ಬಡ್ಡಿಗೆ ಕೊಟ್ಟ ಹಣ ; ಮೂಲಧನ ; ಅಸಲು. [ಸಂ.]

**ಪ್ರರತ್ನ** (ನಾ). ಶ್ರೇಷ್ಠವಾದ ರತ್ನ : ಭೂಭುಜನಿಕರಕಿರೀಟಪ್ರರತ್ನಪ್ರಭೂಪಾತತಾಂತಪ್ರದ್ಯೋತ ನೂತ್ನೋದಕಜನಿತಪದಾಂಭೋಜಂ (ಗಿಂಕ. ೩-೨). [ಸಂ.]

**ಪ್ರರೂಢ** (ಗು)· ೧. ಪೂರ್ತಿಯಾಗಿ ಬೆಳೆದ; ಚೆನ್ನಾಗಿ ವೃದ್ಧಿಯಾದ : ಆ ಶೈಶವಪ್ರಭೃತಿಪ್ರರೂಢನಿರ್ಭರಪ್ರೇಮರಸರುಮನೇಕಾರ್ಥಶಾಸ್ತ್ರಪ್ರಯೋಗಕುಶಲರುಂ (ಆಂತಿ. ೦-೮೦ ವ); ಪ್ರರೂಢಯೌವನಮನೋಹರನುಂ ಕವಚಹರನುಂ ಆದ ನಿಜತನೂಜನಂ ನೋಡಿ (ತಂತ್ರಪು. ೨-೬೭). ೨. ಹೆಚ್ಚಾದ; ಅಧಿಕವಾದ : ಬಿರಿಸಿ ಕ್ಷಿತಿಪತಿಯಂ ಸಯ್ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು ಸ್ಥಿರಮಿರ್ದು ಪ್ರಭು ನುಡಿಯೆ ಪ್ರರೂಢಮುದನಾದನಾತನೆಂಬುದು ದೂಷ್ಯಂ (ಶಬಶಾ. ೨-೭). (ನಾ). ೩. ಹೊಟ್ಟೆ; ಜಠರ. [ಸಂ.]

**ಪ್ರರೂಪಣ** (ನಾ). ಚೆನ್ನಾಗಿ ರೂಪಿಸುವಿಕೆ; ಉತ್ತಮವಾದ ನಿರೂಪಣೆ: ನಿರೂಪಿತಾವನಿ ಮನುಷ್ಯಸ್ಥಿತಿ ಪ್ರರೂಪಣಾರ್ಥಂ ಉತ್ತರಸೂತ್ರಾವತಾರಂ (ಶಕ್ತ್ಯಸ್ತ್ರ. ೧೬೩)· [ಸಂ.]

**ಪ್ರರೂಪಿತ** (ನಾ)· ಹೇಳಿಕೆ; ನಿರೂಪಿತವಾದುದು : ನಿರತಿಶಯಾಲಂಕಾರಪ್ರರೂಪಿತಂಗಳ್ಪುರಾಣಕವಿವಿದಿತಂಗಳ್ (ಶಬಶಾ. ೨-೦); ಕರ್ಮಕಾಂಡಬಂಧೋದಯ ಸತ್ವಯುಕ್ತಸ್ತವಂ ಮಹಾಧಿಕಾರಂ ಪ್ರರೂಪಿತವಾದುದು (ಗೊಮ್ಮಟಸಾ. ೯೭-೦೦). [ಸಂ.]

**ಪ್ರರೂಪಿಸು** (ಕ್ರಿ). ಹೇಳಂ; ನಿರೂಪಿಸು : ಸ್ಥಾನಸಮುತ್ಕೀರ್ತನಮೇನು ನಿಮಿತ್ತಂ ಬಂದುದೆಂದೊಡೆ ಮುನ್ನಂ ಪ್ರಕೃತಿ ಸಮುತ್ಕೀರ್ತನದಿಂದ ಮಾವುವು ಕೆಲವು ಪ್ರಕೃತಿಗಳು ಪ್ರರೂಪಿಸಲ್ಪಟ್ಟುವವಕ್ಕೆ ಬಂಧಮೇನು ಕ್ರಮದಿಂದಮಕ್ಕುಮೋ ಮೇಣಕ್ರಮದಿಂದಮಕ್ಕುಮೋಯೆಂದಿಂತು ಪ್ರಶ್ನೆ ಮಾಗುತ್ತವಿರಲು (ಗೊಮ್ಮಟಸಾ. ೦೦೩-೮). [ಪ್ರರೂಪಣ + —ಇಸು]

**ಪ್ರರೋಚನ** (ನಾ). ೧. ರುಚಿ ಹುಟ್ಟಿಸುವುದುಂ; ಪ್ರೋತ್ಸಾಹಿಸುವುದು. ೨. [ನಾಟ್ಯ] (ನರ್ತಕಿಯ ರಂಗಪ್ರವೇಶದ ಮೂಲಕ ಪ್ರೇಕ್ಷಕರಲ್ಲಿ) ಅಭಿರುಚಿಯನ್ನುಂಟು ಮಾಡುವುದು.- ಆಸಕ್ತಿಯನ್ನು ಕೆರಳಿಸುವುದು: ವಿಚಿತ್ರಸುರಸೂತ್ರಧಾರನಪ್ಸರಃಪಾತ್ರೀ ಪ್ರವೇಶಪ್ರದೇಶಪ್ರರೋಚನಾನಂತರಂ ಪುಷ್ಪಾಂಜಲಿವಿಕ್ಷೇಪಂಗೆಯ್ಕೆ (ಶಾಂತಿಪು. ೬-೩೦ ವ). [ಸಂ.]

**ಪ್ರರೋಚನೆ** (ನಾ)· = ಪ್ರರೋಚನ ೨ : ಸಚಿವೋತ್ತಮರೊಳ್ ರಾಜನೀತಿಶಾಸ್ತ್ರನಾಟಕಪ್ರಾರಂಭಕ್ಕೆ ಸೂತ್ರಧಾರನಾಗಿ ತತ್ಪೂರ್ವರಂಗಪ್ರಸಂಗಕ್ಕೆ ಪ್ರರೋಚನೆಯಪ್ಪ ಪ್ರಥಮಪಾತನಿಕೆಯಂ ಪ್ರಸ್ತುತಂ ಮಾಡಿ (ಶಾಂತಿಪು. ೨-೩೦ ವ). [ಸಂ. ಪ್ರರೋಚನ]

**ಪ್ರರೋಹ** (ನಾ). ೧. ಮೊಳೆಯುವಿಕೆ ; ಅಂಕುರಿಸುವಿಕೆ. ೨. ಮೊಳಕೆ ; ಅಂಕುರ : ಬಲದೇವ ವಾಸುದೇವರ್ . . . ಸುಖದ್ರುಮಪ್ರರೋಹದಂತೆಯುಂ . . .ಪ್ರವರ್ಧಮಾನರಾಗೆ ಸುಖಮಿರ್ಪನ್ನೆಗಂ (ಶಾಂತಿಪು. ೦-೮೦ ವ) ; ಪೆಜತೇಂ ಸತ್ಯಪ್ರರೋಹಂ ತುಜುಗಿದಪ್ಪುದು (ಶಾರಂಭು. ೨೩೪) ; ಕಣ್ಮರಲರೆಮುಚ್ಚಿ ಕಂಡು ಕೊಣಕಿಟ್ಟಪ್ಪುದಲ್ಲಿಗೆ ಗೋರಿಗೊಂಡದೊಂದೆರಳೆಯನಲ್ಲಿರುಳ್ ಶಶಿ ತೊಡರ್ಚುವನಾತ್ಮವಟಪ್ರರೋಹದೊಳ್ (ಶಂಕ್ರಪು. ೦-೧೨೪)· [ಸಂ.]

**ಪ್ರರೋಹಣ** (ನಾ) = ಪ್ರರೋಹ ೧ : ನಿಖಿಲಶರೀರಪ್ರರೋಹಣಬೀಜಭೂತಕಾರ್ಮಣಶರೀರಂ ಕರ್ಮಮೆನೆ ಪಡುಗುಂ (ಶಕ್ತ್ಯಸ್ತ್ರ. ೯೯). [ಸಂ.]

**ಪ್ರಲಂಪಟ** (ನಾ). ಅತಿ ಲಂಪಟ ; ಬಹಳ ಕಾಮುಕನಾದವನು : ದೇವಪರನಾರಿಪ್ರಲಂಪಟ ದನುಜಪಾಲಕನೆ . . . ಬಾಲೆಂದಸುರಪಾತಕರೋವಿಕೈವಾರಿಸಲು ಮುಂದೆಯ್ತಂದ ದಶಕಂಠ (ಶೌರಿಚ. ೨೦-೨೨). [ಸಂ.]

**ಪ್ರಲಂಬ, ಪ್ರಳಂಬ** (ಗು). ೧. ತೂಗುಬಿದ್ದ ; ಇಳಿಬಿದ್ದ ; ಜೋತಾಡುವ : ಪ್ರಲಂಬಕರ್ಣಾಭರಣಮಕರಿಕಾವಿತಾಡ್ಯಮಾನ ಕಪೋಲಫಲಕಂ (ಶಾಂತಿಪು. ೬-೦೩ ವ); ನೀಲದ ನೆಲಗಟ್ಟಂ ಮಣಿಧೂಲೀಸಾಳಂ ಪ್ರಲಂಬಪಲ್ಲವಮೆಸೆಗುಂ (ಅರ್ಜನ. ೨-೮೨). ೨. ಉದ್ದವಾದ; ದೊಡ್ಡದಾದ : ಕಂಬಳಿಹುಳು . . .ಹೊಟ್ಟೆಯ ಕೆಳಗೆ ೨-೮ ಜೊತೆ ಹೊಟ್ಟೆಯ ಪ್ರಲಂಬ ಮಾಂಸಲ ಕೀಲುಗಳಿಲ್ಲದ ಬದಲುಕಾಲುಗಳಿವೆ (ಕೀಟಜೀ. ೦೫). (ನಾ). ೩. ಇಳಿಬಿದ್ದಿರುವ ಸರ; ಜೋಮಾಲೆ: ಅತಿತರಲಮುಕ್ತಾಮಣಿಪ್ರಲಂಬಂಗಳಿಂದಂ . . . ಅಸುಕ್ರಮಂದಪ್ಪದರ್ಶಿಸಿ(ಆಂತಿ. ೨-೩೨ ವ) ೪. ಕೊಂಬೆ; ರೆಂಬೆ. ೫. ಹಾರ; ಮಾಲೆ. ೬. ಸೌತೆಕಾಯಿ. ೭. ಒಂದು ಬಗೆಯ ಲೋಹ; ತವರ. ೮. ಪದ್ಯ; ಗಾಥೆ. ೯. ಸ್ತನ. ೧೦. ಬಲರಾಮನು ಕೊಂದ ಒಬ್ಬ ರಾಕ್ಷಸನ ಹೆಸರು : 'ಪ್ರಲಂಬಘ್ನ' ಪರಾ. **ಪ್ರಳಂಬ** : ೧೧. ಆಧಿಕ್ಯ; ಅತಿಶಯ. ೧೦, ೧೧: ನಿಸ್ಸೀಮ ನಿಕಾಮಬಾಹುಸಾಹಸಾಡಂಬರಪ್ರಲಂಬನೆಂಬ ಪ್ರಳಂಬನುಮಂ . . . ಕರೆದು (ಜಗಂ. ೩-೨೨ ವ). [ಸಂ.]

**ಪ್ರಲಂಬಘ್ನ** (ನಾ). ಪ್ರಲಂಬನೆಂಬ ರಾಕ್ಷಸನನ್ನು ಕೊಂದವನಂ; ಬಲರಾಮ : "ಬಲದೇವಃ . . . ಪ್ರಲಂಬಘ್ನಃ . . . ಹಲಾಯುಧಃ- ಈ ೧೮ ಬಲದೇವನ ಪೆಸರ್" (ಹಲಾಯುಧ· ೬-೨೪); ವಿಘ್ನದಾಯಕ ಶ್ರೇಷ್ಠನೆರ್ದೆಗೇಡಿಯ ಪ್ರಲಂಬಘ್ನ ತಾನೊಡಗೊಂಡು ಬಂದು ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು ಲಗ್ನವ ಪೇಳ್ದನಸುಜಗೆ (ಮೋಹತ. ೦೫-೦೩). [ಸಂ.]

**ಪ್ರಲಗ್ನಕ** (ನಾ). ಜವಾಬ್ದಾರಿಯನ್ನು ಹೊತ್ತವನು; ಹೊಣೆಗಾರ: "ಪ್ರತಿಭೂ ಪ್ರಲಗ್ನಂ ಹೊಣೆಗಾಜಸಕ್ಕು" (ಶಂಗರಾ. ೭೦-೦೭). [ಸಂ.]

**ಪ್ರಲಪನ**(ನಾ). ೧. ಮಾತನಾಡುವುದು; ಸಂಭಾಷಣೆ. ೨. ಪ್ರಯೋಜನವಿಲ್ಲದ ಮಾತು; ಅಸಂಬದ್ಧಪ್ರಲಾಪ. ೩. ಅಳುವಿಕೆ ; ರೋದನ. [ಸಂ.]

**ಪ್ರಲಪಿತ** (ಗು). ೧. ಮಾತನಾಡಿದ; ಹೇಳಿದ. ೨. ಗಳಹಿದ: ಹರಟಿದ. (ನಾ). ೩. ಮಾತನಾಡುವುದು. ೪. ಪ್ರಯೋಜನವಿಲ್ಲದ ಮಾತು; ಹರಟೆ. ೫. ಅಳು; ರೋದನ. [ಸಂ.]

**ಪ್ರಲಪಿಸು** (ಕ್ರಿ). ೧. ಮಾತನಾಡು. ೨. ಗಳಹು; ಹರಟೆ ಹೊಡೆ. ೩. ಅಳು; ರೋದಿಸು: ಇಂತು ಪ್ರಲಪಿಸುವ ರಾಘವಸರ್ಧಾಂಗಿಯಿರವಂ ಕಂಡು (ರಾಮಾಶ್ವ. ೩೯-೦೩); ಅವಳು ಯಾವ ಮೂಲೆಯಲ್ಲಿ ಕುಳಿತು ನಾದಿನಿಗಾಗಿ ಪ್ರಲಪಿಸುತ್ತಿದ್ದಾಳೋ (ಮುಳಿಸಾನ. ೨೦೮). [ಪ್ರಲಪನ + — ಇಸ್ಸು]

**ಪ್ರಲಯ, ಪ್ರಳಯ** (ನಾ). ೧. ನಾಶ; ನಿರ್ಮೂಲನ: ಸುಭಟಜನಚಮತ್ಕಾರಿ ತೇಜೋಮಹಾರ್ವಾನಲಮುಗ್ರಾರಾತಿವರ್ಗಪ್ರಲಯಕರವು ದೊಂದೆಯ್ದು ತಾಳ್ದಿತ್ತಗುರ್ವಂ (ಅಂತ್ರಿ. ೧೪-೯೩). ೨. ಕಲ್ಪದ ಕೊನೆಯಲ್ಲಿ ಉಂಟಾಗುವ ಪ್ರಪಂಚದ ನಾಶ,-ಅಳಿವು; ☞ ಇದರಲ್ಲಿ ನಿತ್ಯಪ್ರಲಯ, ಪ್ರಾಕೃತಪ್ರಲಯ, ನೈಮಿತ್ತಿಕ ಪ್ರಲಯ ಮತ್ತು ಆತ್ಯಂತಿಕಪ್ರಲಯ ಎಂಬ ನಾಲ್ಕು ವಿಧಗಳಿವೆ. (೧) ನಿತ್ಯಪ್ರಲಯ–ಸುಷುಪ್ತಿ (ನಿದ್ರೆ). ಆಗ ಪ್ರಾಣಿಗಳ ಸಮಸ್ತ ಶಕ್ತಿಯೂ ಅಡಗಿ ಹೋಗಿರುತ್ತದೆ. (೨) ಪ್ರಾಕೃತಪ್ರಲಯ–ಈಗಿರುವ ಬ್ರಹ್ಮನ ಅವಧಿ ಮುಗಿದ ನಂತರ ಪ್ರಕೃತಿಯೆಂಬ ಮಾಯೆಯಲ್ಲಿ ಆ ಬ್ರಹ್ಮನೊಡನೆ ಆಗುವ ಇಡೀ ಬ್ರಹ್ಮಾಂಡವಿನಾಶ. (೩) ನೈಮಿತ್ತಿಕ ಪ್ರಲಯ–ಚತುರ್ಯುಗಸಹಸ್ರಪರಿಮಿತವಾದ ಕಾಲವು ಬ್ರಹ್ಮನಿಗೆ ಒಂದು ದಿನವಾಗುತ್ತದೆ. ಆ ಕಾಲಮಾನದ ಕೊನೆಯಲ್ಲಿ ಮೂರು ಲೋಕಗಳೂ ನಾಶವಾಗುತ್ತವೆ. (೪) ಆತ್ಯಂತಿಕಪ್ರಲಯ–ಪ್ರತಿ ಜೀವನಿಗೂ ಬ್ರಹ್ಮಜ್ಞಾನದಿಂದ ಉಂಟಾಗುವ ಪರಬ್ರಹ್ಮೈಕ್ಯ: ಪ್ರಲಯೋಗ್ರಜ್ವಾಲೆಯಂ ತಾಳನೆ ಗಣವರನೊರ್ವಂ ಲಲಾಟಾಕ್ಷಿಯೊಳ್ (ವೃತಹ. ೨೯-೦೬೨); ಪ್ರಪಂಚದ ಸಂಹಾರವೇ ಪ್ರಲಯ (ಹಿಂದಸಾ. ೨೬೯). ೩. ಸಾವು; ಮರಣ. ೪. ಮೂರ್ಛೆ; ವಿಸ್ಮೃತಿ. ೫. ಓಂ ಎಂಬ ಮಂತ್ರಾಕ್ಷರ; ಓಂಕಾರ. ೬. ಲಯ; ಐಕ್ಯ. ೭. [ಕಾವ್ಯಮೀ] ಸ್ತಂಭ, ಸ್ವೇದ, ರೋಮಾಂಚ, ಸ್ವರಭಂಗ, ವೇಪಥು, ವೈವರ್ಣ್ಯ, ಅಶ್ರು ಮತ್ತು ಪ್ರಲಯಗಳೆಂಬ ಎಂಟು ವಿಧವಾದ ಸಾತ್ತ್ವಿಕಭಾವಗಳಲ್ಲಿ ಒಂದು; ಮೂರ್ಛೆ; ಪ್ರಜ್ಞೆ ಕಳೆದುಕೊಳ್ಳುವುದು: ಸ್ತಂಭ, ಪ್ರಲಯ, ರೋಮಾಂಚ, ಸ್ವೇದ, ವೈವರ್ಣ್ಯ, ವೇಪಥು, ಅಶ್ರು, ವೈಸ್ವರ್ಯ-ಈ ಎಂಟು [ಸಾತ್ತ್ವಿಕ ಭಾವಗಳಾಗಿವೆ]. ಅವುಗಳಲ್ಲಿ ಪ್ರಜ್ಞೆ ಕಳೆದುಕೊಳ್ಳುವುದು 'ಪ್ರಲಯ' (ದಶರೂ. ೦೯೯). **ಪ್ರಳಯ:** ೨. ಪ್ರಳಯದುರಿ ಕಾಳಕೂಟದ ಗುಳಿಗೆ ಪುರಾಂತಕ ಲಲಾಟನೇತ್ರಾನಳನೊಂದಳವಿಗಮುಗ್ಗಳಮಮರ್ಗಳ ಮುಳಿಸುಗಳುಂ ಮುಳಿದು ತುಡುವ ದಿವ್ಯೇಷುಗಳುಂ (ಶಂಕಥಾ. ೩-೩೩); ಪ್ರಳಯಕ್ಕೆ ಹೋಜಗು ಕಲಿಕಾಲ ಹೊಗದಂತಕನ ಸುಳಿವವಟಿಳ್ಳಿಲ್ಲ (ಹಕಥಾ. ೬-೩೯). ೩. "ಪಂಚತಾ, ಕಾಲಧರ್ಮಃ, ದಿಷ್ಟಾಂತಃ, ಪ್ರಳಯಃ . . . ೧೧ ಸಾಯುವುದಕ್ಕೆ ಹೆಸರುಗಳು, ಮರಣ" (ಸಿದ್ಧಾಂತಿ. ೨೬೩). ೭. ಕಾರುಣ್ಯಂ ಹಾಸ್ಯಂ ಶೃಂಗಾರಮಿವಿನಿತರೊಳಮಕ್ಕೆ ವೈದರ್ಭಿ ಮನೋಹಾರಿ ಪ್ರಳಯಾದ್ಭುತರಸ ವೀರರಸಂಗಳ್ಗೆ ಪಾಂಚಾಲಿಕೆಯಂ (ಕಾವ್ಯಾಕ. ೭೫೫); ಸ್ತಂಭ . . . ಪ್ರಳಯಂಗಳೆಂಬಷ್ಟವಿಧ ಸಾತ್ತ್ವಿಕಭಾವಗಳಿಂ (ಶವೇಳ. ೨೨೩). [ಸಂ.]

**ಪ್ರಲಯಕಾಲ, ಪ್ರಳಯಕಾಲ** (ನಾ). ಪ್ರಪಂಚದ ವಿನಾಶದ ಕಾಲ; ಜಗತ್ತಿನ ಕೊನೆಗಾಲ. **ಪ್ರಳಯಕಾಲ:** "ಸಂವರ್ತಃ, ಪರಿವರ್ತಃ : . . ಮಹಾಪ್ರಳಯಃ-ಈ ಪ್ರಳಯಕಾಲಂ" (ಹಲಾಯು. ೨೦-೦೦೭); ಬಱಯ ಬಱಸಿಡಿಲ್ಗಳೆತ್ತಿತ್ತಲುಂ ತುಱಗಿತತ್ತಿತ್ತಲುಂ ಪ್ರಳಯಕಾಲದ ಮೇಘಮಱಗುತಿವೆ (ಕೈಮಿಜೈ. ೯-೧೧). [ಸಂ.]

**ಪ್ರಲಯಭೈರವ** (ನಾ). ಪ್ರಳಯಕಾಲದ ರುದ್ರ; ಮಹಾರುದ್ರ: ಪ್ರಲಯಭೈರವನೆಂಬ ಬಿರುದು ಅವನಿಯ ಮೇಲೆ ನೆಲೆಗೊಳಿಸಿ (ಕುಲಂದ. ೦-೨೦೬-೩). [ಸಂ.]

**ಪ್ರಲಯಾಗ್ನಿ, ಪ್ರಳಯಾಗ್ನಿ** (ನಾ). ಪ್ರಪಂಚದ ಲಯಕಾಲದಲ್ಲಿ ಏಳುವ ಬೆಂಕಿ; ಪ್ರಳಯಕಾಲದ ಬೆಂಕಿ: ಬಂದ ತತ್ಪ್ರಲ[ಯಾ]ಯಾಗ್ನಿಯೊಲು ಜಗದಂದವಂ ಮಾಡುತ್ತ (ಐಕಥ. ೩೯-೩೩); ಪ್ರಲಯಾಗ್ನಿ ಪೊತ್ತಿ ಲೋಕಂ ದಹಿಸುತಿರೆ (ಶ್ರೀರಾಮಾ. ೦೦೯-೦೨೦). **ಪ್ರಳಯಾಗ್ನಿ:** ಪ್ರಳಯಾಗ್ನಿಯಾದುದೋ ನಿಜಬಳದಳವಂ ತೋಱಲಗ್ನಿ ಬಳೆದೊದವಿದುದೋ (ಬಂಹಂ. ೧೦-೯೦). [ಸಂ.]

**ಪ್ರಲಾಪ, ಪ್ರಳಾಪ** (ನಾ). ೧. ಮಾತನಾಡುವಿಕೆ; ಸಂಭಾಷಣೆ: ಅದೊಂದು ವ್ಯರ್ಥಪ್ರಲಾಪವೆಂದು ಆಕ್ಷೇಪಕರ ಅಭಿಪ್ರಾಯ (ಜೀವಾಶ್ವ. ೦೦೨). ೨. ಅಸಂಬದ್ಧವಾದ ಮಾತು; ಹರಟೆ: "ಪ್ರಲಾಪಃ, ಅನರ್ಥಕಂ, ವಚಃ — ಪ್ರಯೋಜನವಿಲ್ಲದ ಮಾತಿಗೆ ಪೆಸರು" (ಸಿದ್ಧಾಂತಿ. ೩೯); ಮೆದುಳಿನ ಕಸರತ್ತಿನಿಂದ ಬರುವ ಭಾಗ್ಯವಾದರೂ ಏನು? ಎಂಬ ಪ್ರಶ್ನೆ ಮೂರ್ಖರ ಪ್ರಲಾಪ (ಜೀವಾಶ್ವ. ೬). ೩. ಅಳು; ರೋದನ: ಇವಳ ಪ್ರಲಾಪವನ್ನು ನೆರೆಮನೆಯಲ್ಲಿದ್ದ ಕುಂತಿದೇವಿಯು ಕೇಳಿ . . . ಎಂದಳು (ಪೀಠಿಕಂ. XII, ೨೦); ಯುದ್ಧದಲ್ಲಿ ಮೃತರಾದವರ ಸಂಬಂಧಿಗಳಾದ ಸ್ತ್ರೀಯರ ಪ್ರಲಾಪ (ಭಾರತ. ೯೯). ೪. ರೋಗಿಯು (ಸನ್ನಿಪಾತದಿಂದ) ಬಡಬಡಿಸುವುದು; (ಜ್ವರವು ಅತಿ ಹೆಚ್ಚಾದಾಗ ರೋಗಿಯು) ವ್ಯರ್ಥವಾದ ಮಾತುಗಳನ್ನಾಡುವುದು: ನಡುಕ, ಪ್ರಲಾಪ, ದಾಹ, ಮೈನೋವು (ವೈದ್ಯಸಾ. I. ೬೩); ಅಳಲೆಕಾಯಿ, ಪರ್ಪಾಟಕ . . . ಕಷಾಯ ಹಾಕಿ, ಶೋಧಿಸಿ ದ್ರಾಕ್ಷಿ ಹಣ್ಣು ಕೊಡಲು, ಪ್ರಲಾಪ, ಮೂರ್ಛೆ . . . ಪೈತ್ಯಜ್ವರ ಮಾಣುವುವು (ಸಕಲ್ಯ. ೮೨). 'ಪ್ರಲಾಪಸನ್ನಿಪಾತ' ಪರಾ. **ಪ್ರಳಾಪ:** ೨. "ಪ್ರಳಾಪವೆಂಬುದು ಬಱುಮಾತು" (ಹಲಾಯು. ೨೯-೦೯೯). ೩. ಜೀಯ ನಿಮ್ಮಡಿಗಳಿಗೆ ಗುರು ಗಾಂಗೇಯ ವಿದುರಾದಿಗಳು ಹೇಳಿದ ಜೋಯಿಸವ ಕೈಕೊಂಡಿರೇ ನಮ್ಮಾ ಪ್ರಳಾಪದಲಿ (ಕುಮ್ಯಾಗ. ೩-೩೯); ಅಳದವರಳು ತಿರ್ದರು ರತಿಕಾಂತನ ಹಳವಳಿಸುವ ಪ್ರಳಾಪದಲಿ (ಮೋಹತ. ೬-೨೩). ೪. ತೆಗಬ ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ಕಕ್ಕ ಮುಸ್ತೆ ಕರ್ಕಟಕಂ ಮುಟ್ಟೆಗೆಯೆಂಬಿವನಿತುಮಂ ಪೈತ್ತಿಗಜ್ವರಂ ದಾಹಮುಂ ಪ್ರಳಾಪಮುಮಱಗುಂ (ಲೋಕೋಪ. ೯-೦೬). [ಸಂ].

**ಪ್ರಲಾಪಂಗೆಯ್** (ಕ್ರಿ). ಅಳು; ರೋದಿಸಂ: ಬಡವರ ನಂಟನಾವೆಡೆ ದಯಾಪರನಾವೆಡೆ . . . ಮನೋರಮನಾವೆಡೆ ಪೇಟಲಾಗದೇ ಎಂದು ಪ್ರಲಾಪಂಗೆಯ್ದು (ಆಕ್ರಿ. ೩-೧೨೦ ವ); ಅಂತು ಕಾಲಪ್ರಾಪ್ತನಪ್ಪುದುಂ ಲಕ್ಷ್ಮಣನಂತಃಪುರಪುರಂಧ್ರಿಯರ್ ಕಂಡತಿಪ್ರಲಾಪಂಗೆಯ್ವುದುಂ (ಶಂರಾಮಾ. ೦೩-೯೯ ವ). [ಪ್ರಲಾಪ + ಕೆಯ್ಯ್]

**ಪ್ರಲಾಪಸನ್ನಿಪಾತ, ಪ್ರಳಾಪಸನ್ನಿಪಾತ** (ನಾ). = ಪ್ರಲಾಪ ೪: ಗಂಧಕತಗರ, ಹಿಂಗುವದ್ದು . . . ಕಾಸಿ ಕೊಡಿಸಲು ಪ್ರಲಾಪಸನ್ನಿಪಾತ ಮಾಣ್ಗುಂ (ವೈದ್ಯಸಾ. I, ೬೭). **ಪ್ರಳಾಪಸನ್ನಿಪಾತ:** ಮೈಯಲ್ಲಿ ನಡುಕ, ಪ್ರಳಾಪ, ದಾಹ . . . ಇವೆಲ್ಲವು ಉಂಟಾದುದೆ ಪ್ರಳಾಪಸನ್ನಿಪಾತವೆಂದರಿವುದು (ಸಕಲ್ಯ. ೦೬೩). [ಸಂ.]

**ಪ್ರಲಾಪಿಸು, ಪ್ರಳಾಪಿಸು** (ಕ್ರಿ). ೧. ಮಾತನಾಡು: (*). ೨. ವ್ಯರ್ಥವಾದ ಮಾತನಾಡು; ಹರಟು: (*). ೩. ಅಳು; ರೋದಿಸು: ಪರಮನೀ ಬಾರಿಗೆ ಬದುಕಿದಡೆ ಮರಣವಿಲ್ಲೆನ್ನೆಂದಿಗೆಂದಿಗೆ ನಿರತಪವನುತಂ ರುದ್ರಪಶುಪತಿ ತಾಂ ಪ್ರಲಾ[ಶಾಕಾಂ. ಆ]ಪಿಸುತ (ಐಕಥ. ೦೩-೬); ನನ್ನ ಕಂದಾ! ಹಾಹಾ! ಎಂದು ಪ್ರಲಾಪಿಸಿ ಮೂರ್ಛೆ ಹೋದನು (ಪೀಠಿಕಂ. I. ೨೩). **ಪ್ರಳಾಪಿಸು:** ೩. ಕಂದರ್ಪನ ದೇಹ ಹತವಾಗೆ . . . ರತಿ ದುಃಖದಿಂದ ಪ್ರಳಾಪಿಸುತಿರಲು (ಮೋಹತ. ೬-೩).

[ಪ್ರಲಾಪ + — ಇಸ್ಸು]

**ಪ್ರಲೀನ** (ಗು). ೧. ಕರಗಿದ ; ಲೀನವಾದ. ೨. ಹಾಳಾದ ; ನಾಶವಾದ. (ನಾ). ೩. ಲೀನವಾದವನು ; ಐಕ್ಯ ಹೊಂದಿದವನು : ಜಂಗಮಪ್ರಾಣಪ್ರಲೀನಾ ಜಂಗಮಪ್ರಾಣಪ್ರದಾನಾ (ಅಸಷ್ಟ. ೩೩-೦೨). [ಸಂ.]

**ಪ್ರಲೋಕಿತ** (ನಾ). [ನಾಟ್ಯ] ಕಣ್ಣುಗುಡ್ಡೆಗಳ ಎಂಟು ಬಗೆಯ ಚಲನೆಗಳಲ್ಲಿ ಒಂದು : ಕಣ್ಣು ಆಲಿಗಳ ೮ ಚಲನೆಗಳಿವೆ . . . ೧. ಸಮ . . . ೬. ಪ್ರಲೋಕಿತ (ಅಭಾಕ್ಕ. ೪೬). [ಸಂ.]

**ಪ್ರಲೋಭನ** (ನಾ). ಆಸೆ ಹುಟ್ಟಿಸುವುದು ; ಮರುಳು ಮಾಡುವುದು ; ಆಮಿಷ : ಸೀತಾಪ್ರಲೋಭನಂ ದೀಪಿಸುವ ಮಾಳ್ಕೆಯಿಂ . . . ತೋರಿದತ್ತೊಮ್ಮೆ (ಶ್ರೀರಾಮಾ. ೨೪೨-೦೦೩); ನೀನು ನಾನಾ ವಿಧದ ಪ್ರಲೋಭನವನ್ನು ಬೀರಿ ನನ್ನನ್ನು ನನ್ನ ಬಾಲವಿಧವಾಪದದಿಂದ ಚ್ಯುತಿಗೊಳಿಸಿದೆ (ಅಂಬಿಕೆ. ೦೬). [ಸಂ.]

**ಪ್ರಲೋಭನೆ** (ನಾ). = ಪ್ರಲೋಭನ : ಚಿತ್ತೈಕಾಗ್ರತೆಯನ್ನು ಭಂಗಗೊಳಿಸುವಂಥ ಪ್ರಲೋಭನೆಗಳಾವುವೂ ಅಲ್ಲಿಲ್ಲದುದರಿಂದ, ಅವನು ಆ ಜಾಗವನ್ನಾರಿಸಿಕೊಂಡಿದ್ದನು (ಪ್ರಹು. ೩೪) ; ನೀತಿತತ್ತ್ವಗಳಿಗೂ ಪ್ರಾಪಂಚಿಕ ಪ್ರಲೋಭನೆಗಳಿಗೂ ನಡುವಣ ಘರ್ಷಣೆ . . . ಪ್ರತಿಪಾದಿತವಾಗಿದೆ (ಕಂಕೋ. I, ೬೪೪). [ಸಂ. ಪ್ರಲೋಭನ]

**ಪ್ರವಕ್ತೃ** (ನಾ). ವಿವರಿಸಿ ಹೇಳುವವನು ; ಪ್ರವಚನಕಾರ ; ವಾಗ್ಮಿ : ಶ್ರದ್ಧಾಳುವೆಂದೋ . . . ಪ್ರವಕ್ತೃವಚನ ಪಾರಾವಾರಾವಗಾಹನ ಪರಿಣತಮತಿವಿಶೇಷನುಂ (ಚಾಪುಂಪು. ೬) ; ಉಪನಿಷತ್ತಿನ ಪ್ರವಕ್ತೃಗಳು ಋಷಿಗಳು (ಭಾರದ. ೩೭). [ಸಂ.]

**ಪ್ರವಚ** (ನಾ). ೧. ದೊಡ್ಡ ಧ್ವನಿ ; ಭಾರಿ ಶಬ್ದ : "ಕಂಚುಕಂ ಮರ್ಮರ ವರ್ಮ ಚರ್ಮ ಕುಟಜಾ ಪ್ರವಚಂ ಕವಚಾಭಿಧಾನಕಂ" (ಚಾಚಾಶ.೬೮). ೨. ಸಾರುವಿಕೆ ; ಘೋಷಣೆ : (?). [ಸಂ.]

**ಪ್ರವಚನ** (ನಾ). ೧. ಮಾತು ; ನುಡಿ. ೨. ವಿವರಣೆ ; ವ್ಯಾಖ್ಯಾನ: ನಾನೇನು ವಿದ್ಯಾರ್ಥಿಯ ತಮ್ಮ ಪ್ರವಚನಕ್ಕೆ ? (ಚಂದ್ರಸ. ೪೪); ಪಾಠ ಪ್ರವಚನಗಳು ನಡೆಯುತ್ತಿರುವಾಗ ಉಪಾಧ್ಯಾಯರ ಕೊರಲಿನೊಂದಿಗೆ ತಮ್ಮದನ್ನೂ ಸೇರಿಸುತ್ತವೆ (ಹಸುಹೂ. ೦೩೩). ೩. ಒಳ್ಳೆಯ ಮಾತು; ಉತ್ತಮವಾದ ಮಾತು. ೪. [ಜೈನ] "ವೀತರಾಗ ಸರ್ವಜ್ಞರಾದ ಆಪ್ತರ ದ್ವಾದಶಾಂಗರೂಪ ಜಿನವಾಣಿ ; ವ್ಯಾಖ್ಯಾನ, ವಿವರಣೆ" (ಕೈಕೋ. ೦೬೩) : ಪ್ರಕಟಿತಜಿನಪ್ರವಚನಪ್ರಕಾರದೊಳ್ (ಸುಕುಸು. ೬-೩); ಪ್ರವಚನಪರಿಪಠನಕಕ್ಷಮತೆ ವಾಣಿಯಂ ತೀರ್ಥಯಾನದಕ್ಷತೆ ಪದಮಂ ಕಿವಿಯಂ ಜಿನವರಚರಿತಶ್ರವಣಪಟುತೆ ಪಿಂಗದನ್ನವಾರ್ಜಿಪೆನಜಿನಂ (ಚಂದ್ರಪು. ೪-೦೩). [ಸಂ.]

**ಪ್ರವಚನಕಾರ** (ನಾ). ಧಾರ್ಮಿಕ ವಿಷಯಗಳನ್ನು ವಿವರಿಸುವವನು,—ವ್ಯಾಖ್ಯಾನ ಮಾಡುವವನು : ಇದರಲ್ಲಿ ಛಾಂದೋಗ್ಯರ ಪ್ರವಚನಕಾರರು...ಆತ್ಮವಾದದ ಮಹಿಮೆಯನ್ನು ಬಹಳ ಸುಂದರವಾಗಿ ವರ್ಣಿಸಿದ್ದಾರೆ (ಭಾರದ. ೪೦) ; ಜೈನತತ್ತ್ವವನ್ನು ಪ್ರವಚನಕಾರನಂತೆ ವಿವರಿಸಿ, ಕೀರ್ತನಕಾರನಂತೆ ಕಥೆಯಿಂದ ಅದನ್ನು ಉದಾಹರಿಸಿ ಹೇಳುವ ರೀತಿ ಪ್ರೌಢ ಕಾವ್ಯಮಾರ್ಗದಲ್ಲಿ ಹೊಸದಾಗಿದೆ (ಕಸಾಚ. ೦೯೩). [ಸಂ.]

**ಪ್ರವಚನಭಕ್ತಿ** (ನಾ). [ಜೈನ] ನಾಮಕರ್ಮದ ಹದಿನಾರು ಭಾವನೆಗಳಲ್ಲಿ ಒಂದು ; ಅರ್ಹಂತರ ಅಥವಾ ಆಗಮಗಳ ಮೇಲಿರುವ ಭಕ್ತಿ : ಪ್ರವಚನಭಕ್ತಿ: — ಅರ್ಹದ್ಭಟ್ಟಾರಕರುಂ ಆಚಾರ್ಯರುಂ ಉಪಾಧ್ಯಾಯರುಂ ಆಗಮಮುಮಂ ಎಂದಿವರೊಳಪ್ಪ ಭಕ್ತಿಯುಂ (ಕಕ್ಕ್ರ. ೨೬೩). [ಸಂ.]

**ಪ್ರವಚನವತ್ಸಲತ್ವ** (ನಾ). = ಪ್ರವಚನಭಕ್ತಿ : ದರ್ಶನವಿಶುದ್ಧಿ... ಮಾರ್ಗಪ್ರಭಾವನಾಪ್ರವಚನವತ್ಸಲ [ಚಾಂ. ೪]ತ್ವಮೆಂಬ ಷೋಡಶ ಭಾವನೆಗಳೊಳ್ (ಚಾಪುಂಪು. ೨೪) ; ಪ್ರವಚನವತ್ಸಲತ್ವಮಿತಿ_ಚಾತುರ್ವರ್ಣ್ಯದೊಳಪ್ಪ ವಾತ್ಸಲ್ಯಮುಂ (ಕಕ್ಕ್ರ. ೨೬೩). [ಸಂ.]

**ಪ್ರವಣ** (ಗು). ೧. ಇಳಿಜಾರಾದ. ೨. ಬಾಗಿದ ; ಬಗ್ಗಿರುವ. ೩. ಆಸಕ್ತವಾದ; ತತ್ಪರವಾದ; ಮಗ್ನವಾದ: ಗುರುಶಿಕ್ಷೆಗ್ನಾವಸಂಘಪ್ರವಣಗುಣತಪೋನಿಷ್ಠಿತಾನೀತಸಾಧೂತ್ಕರದೊಳ್...ಕೈಕೊಂಡು ಪರ್ಯಕ್ಷಿಯಂ (ಸುಕುಸು. ೪-೦೬) ; ಪ್ರಣವಧ್ಯಾನಪ್ರವಣಪದ್ಮಾಸನಸ್ಥರ್ಗೆ (ಶ್ರೀಕೃಷ್ಣ. ೨೨). ೪. ನಮ್ರನಾದ ; ವಿನೀತನಾದ : ಪ್ರವಣ ಪಂಡಿತ ತಪೋಭರಮಂಡಿತಚಿಂತನಾ (ಹಾಡಾಕ್ಕ. ೧-೦೦-೨೩). (ನಾ). ೫. ಆಸಕ್ತನಾದವನು ; ತತ್ಪರನಾದವನು : ಪ್ರವಣನೆಂದರೆ ಆಸಕ್ತಿಯುಳ್ಳವನು (ಹೊಹುಗ. ೬೬). ೬. ಆಸಕ್ತಿ; ತತ್ಪರತೆ : ಆವೊಂ ವಾದಿ ಕಥಾತ್ರಯಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ ವಿದ್ಯಾವಷ್ಟಂಭಮನಪ್ಪುಕೆಯ್ಯು... ತ್ರೈವಿದ್ಯಶ್ರುತಕೀರ್ತಿದಿವ್ಯಮುನಿವೋಲ್ ವಿಖ್ಯಾತಿಯಂ ತಾಳ್ದಿದಂ (ಕಂಡಮಾ. ೦-೨೪). ೭. ವಿನೀತ ; ನಮ್ರನಾದವನು : "ಪ್ರವಣಃ, ಪ್ರಹ್ವಃ—ಈ ೨ ವಿನೀತಂ" (ಹಲಾಯು. ೩೬-೦೬೬) ; ರಿಪುಗೆ ಮಾರಿ ಪಗೆವರಗಣ್ಡಂ ಪ್ರವಣಂಗಂ ಚಕ್ಕಿಗನತಿಧವಳಯಸಂ (ಶಾಶಾ. XX, ೨೪-೨೦;1034). ೮. ಪ್ರಸಿದ್ಧನಾದವನು ; ಕೀರ್ತಿಶಾಲಿ : ಪ್ರವಣನೊಳ್—ಪ್ರಸಿದ್ಧವಾದವನಲ್ಲಿ (ಕಪುಶ. ೨೦೪ ೩೬೪). ೯. ನಾಲ್ಕು ದಾರಿಗಳು ಕೂಡುವ ಸ್ಥಳ ; ಚೌಕ : "ಪ್ರವಣಃ—೧. ಕ್ರಮದಿಂದ ಪಾಟವಾಗಿ ಇಳಿಯತಕ್ಕ ನೆಲ, ಬೊಗ್ಗಿದವನು. ಈ ೨ ಕ್ಕೂ ಪೆಸರು. ನಾಲ್ಕು ಬೀದಿಗಳೂ ಸೇರಿದ ಚೌಕಕ್ಕೆ ಪೆಸರಾದಾಗ" (ಸಿದ್ಧಾಂತಿ. ೩೦೪). [ಸಂ.]

**ಪ್ರವಣತೆ** (ನಾ). ತತ್ಪರತೆ ; ಆಸಕ್ತಿ : ಮರಾಠ ಸರದಾರರ ವೀರವೃತ್ತಿಯೂ, ಸಾಹಸ ಪ್ರವಣತೆಯೂ. ಲಾವಣಿಕಾರರ ರಸಿಕವೃತ್ತಿಯೂ ಮಹಾರಾಷ್ಟ್ರಮನೋಧರ್ಮದ ಕಟ್ಟಿನ ಘಟಕಗಳಾಗಿವೆ (ಮುಹಾ. ೩೪) ; ಆಯಾ ಮಾರ್ಗದಲ್ಲಿ ಹೆಚ್ಚಿನ ಪ್ರವಣತೆ ಇದ್ದವರನ್ನು ಆಯಾ ಅಂಕಿತಗಳಿಂದ ಕರೆದುದಾಗಿರಬೇಕು (ಶಕ್ತ್ರಿ. ೦೭). [ಸಂ. ಪ್ರವಣತಾ]

**ಪ್ರವತೆ** (ನಾ). ಒಂದು ಬಗೆಯ ಸಸ್ಯ : "ಪ್ರವತಾ— ಕೋಟುಕುಟುಮ" (ಟಿಕಧ. ೯೯). [?]

**ಪ್ರವಯಣ** (ನಾ). ರಥದ ಕುದುರೆ ಮೊದಲಾದುವನ್ನು ನಡೆಸಲು ಉಪಯೋಗಿಸುವ ಕೋಲು,—ಚಾವಟಿ, —ಮೊಸೆಗೋಲು. [ಸಂ.]

**ಪ್ರವಯಸ್ಕ** (ನಾ). ೧. ತುಂಬ ವಯಸ್ಸಾದವನು ; ಅತಿವೃದ್ಧ. ೨. ಶಕ್ತಿವಂತನಾದವನು : ಮೂಜಿನೆಯ ವಕ್ತ್ರವೆಂಬೊಂ ಪ್ರವಯಸ್ಕನುಂ ವಪುಷ್ಮಂತನುಂ . . . ಚಾರಿತ್ರವಂತನುಮೆಂದಷ್ಟಗುಣಸಮನ್ವಿತನಕ್ಕುಂ. ಅಲ್ಲಿ ಪ್ರವಯಸ್ಕನೆಂಬೊಂ ಅತಿವೃದ್ಧನುಮತಿಬಾಲಕನುಮಲ್ಲದೆ ಸಮತಿಕ್ರಾಂತ ದಶವರ್ಷನುಮತಿಕ್ರಾಂತಸಪ್ತತಿಸಂವತ್ಸರನುಮಕ್ಕುಂ (ಚಾಪುಂಪು. ೩). [ಸಂ.]

**ಪ್ರವರ** (ಗು). ೧. ಶ್ರೇಷ್ಠವಾದ ; ಉತ್ತಮವಾದ ; ಮುಖ್ಯವಾದ : ಪ್ರವರನೃಪಕುಮಾರಾತ್ತೋದಯಾ[ದಿ] ಪ್ರಮೋದಾಸವಸಮುದಿತಸೇನಾರಾತಿವೃತ್ತಾಂತವೃತ್ತಂ (ಕಂಡಾ. ೩-೨೦೨) ; ನವ್ಯೊಳಗೊರ್ವನಂ . . . ಪ್ರವರವಿಹಂಗಮಕುಲಚಕ್ರವರ್ತಿಪಟ್ಟಕ್ಕೆ ಯೋಗ್ಯನಂ ಮಾಡಿ (ಪಂಚತಂ. ೨೨೩-೮). ೨. ಹಿರಿಯ ; ಜ್ಯೇಷ್ಠ. (ನಾ). ೩. ಪ್ರಮುಖ ವ್ಯಕ್ತಿ ; ಪ್ರಧಾನವ್ಯಕ್ತಿ : "ಅಗ್ರ್ಯಂ . . . ಪ್ರವರಂ . . . ಅಗ್ರಣೀ —ಈ ೧೩ ಮುಖ್ಯಂ" (ಹಲಾಯು. ೧೧೦೪-೫) ; ಕವಿ ಗಮಕಿ ವಾದಿ ವಾಗ್ಮಿಪ್ರವರರ್ ಗುಣವರ್ಮನೊಳ್ ಸಮಂಬರ್ಪರಾರ್ (ಪುಷ್ಪ. ೦-೬೪) ; ಅಪ್ರತಿಮ ಶಿವಗುಣಕುಲಕೆ ದಂಡಪ್ರಣಾಮವನಾಚರಿಸಿ . . . ಆ ಪ್ರವರರಿಗೆ

ಬಿನ್ನವಿಸಿ (ಎಸಕ್ರ. ೯೩-೬೩). ೪. ಪೀಳಿಗೆ ; ವಂಶ : ಅವರು ಪಿತ್ರಾರ್ಜಿತದ ರಾಜ್ಯಪ್ರವರಪಾತ್ರರು (ಕುಶ್ಮಾ.ಸ. ೦೨-೦೯) ; ನಿನಗೆ ಸಂಧ್ಯಾವಂದನೆ ಬರುವುದೇ ? ನಿನ್ನ ಪ್ರವರವೇನು ಹೇಳುವಿಯಾ (೪೪೪. ೩೯೦). ೫. ಸಂತತಿಯ ಮೂಲಪುರುಷರ ವರ್ಗ. ೬. ಕುಲದ ಪೂರ್ವಿಕ ; ವಂಶದ ಮೂಲಪುರುಷ ; ಪೂರ್ವಜ. ೭. ನಲವತ್ತೆರಡು ಗೋತ್ರಗಳಲ್ಲಿ ಯಾವುದಾದರೂ ಒಂದು. ೮. ಸಂತಾನ ; ಸಂತತಿ. ೯. ಒಂದು ಬಗೆಯ ಸಸ್ಯ : "ಪ್ರವರ—ತ್ರಿಫಲೆ, ಕುಸ್ತುಂಬರಿ, ಲಾಮಂಚ[ಲಾಮಚ]" (ಓಷಧಿ. ೯೯). ೧೦. (ಅಲಂ) ಅನವಶ್ಯಕವಾದ ವಿವರಣೆ : ತನ್ನ ಪ್ರವರವನ್ನು ಶುರು ಮಾಡುವ ಲಕ್ಷಣಗಳನ್ನು ತೋರಿಸಿದ (ಕುಹೋಕಂ. ೧೦೦). ೧೧. [ಛಂದ] ಅಕ್ಷರಛಂದಸ್ಸಿನಲ್ಲಿ ಮೂರನೆಯ ಛಂದಸ್ಸಾದ ಮಧ್ಯೆಯಲ್ಲಿ ಒಂದು ಭೇದದ ಹೆಸರು : ಪವನೋದ್ಭವದಿಂ ಪ್ರವರಂ ಪ್ರವರೇ (ಛಂದೋಂಬು. ೨-೩೩). [ಸಂ.]

**ಪ್ರವರಶೈವ** (ನಾ). ೧. ಶೈವಧರ್ಮದ ಆರು ಬಗೆಗಳಲ್ಲಿ ಒಂದು : ಆದಿಶೈವ ಮಹಾಶೈವ ಅನುಶೈವ ಅಂತರ (ಅವಾಂತರ) ಶೈವ ಪ್ರವರಶೈವ ಅಂತ್ಯಶೈವ ಎಂಬ ಈ ಆಱು ಶೈವದ ನೀತಿಯಲ್ಲ (ಸಿದ್ಧೇಶ. ೪-೪). ೨. (ಸೂಕ್ಷ್ಮಾಗಮದ ಪ್ರಕಾರ) ಶೈವಧರ್ಮದ ಏಳು ಬಗೆಗಳಲ್ಲಿ ಒಂದು : ಅನಾದಿಶೈವ ಆದಿಶೈವ ಮಹಾಶೈವ ಅನುಶೈವ ಅವಾಂತರಶೈವ ಪ್ರವರಶೈವ ಅಂತರಶೈವವೆಂಬವೇ ಸಪ್ತಶೈವಂಗಳವಱಲ್ಲಿ . . . ಶಿವದೀಕ್ಷಾಯುಕ್ತರಾದ ಅಂಭಷ್ಟ ಕುಲಾಲಾದಿಗಳೇ ಪ್ರವರಶೈವರು (ಏಕೋಕ. ೬೭). [ಸಂ.]

**ಪ್ರವರಾಕ್ಷರ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಹನ್ನೆರಡನೆಯ ಛಂದಸ್ಸಾದ ಜಗತಿಯಲ್ಲಿ ಒಂದು ಪ್ರಭೇದ : ಪವಮಾನವರ್ಕವರುತದ್ವಯ ಸಂತವಿರಾಮಮೆಂಬಿನೆಗವಾಱನೆಯೊಳ್ ಕವಿರಾಜಹಂಸ ಮತದಿಂ ಜಗದೊಳ್ ಪ್ರವರಾ[ಪಾಠಾಂ. ವಿತಾ]ಕ್ಷರಾಹ್ವಯಮನೋದಬಲೇ (ಛಂದೋಂಬು. ೨-೦೩೩). [ಸಂ.]

**ಪ್ರವರೆ** (ನಾ). ಶ್ರೇಷ್ಠಳಾದವಳು : ಪವನೋದ್ಭವದಿಂ ಪ್ರವರಂ ಪ್ರವರೇ (ಛಂದೋಂಬು. ೨-೩೩). [ಸಂ. ಪ್ರವರಾ]

**ಪ್ರವರ್ತ** (ಗು). ತೊಡಗಿದ ; ವ್ಯವಹರಿಸಿದ : ಪೊಗಳಂ ತವೆ ಕೊಯ್ಯುದ್ಧರಣೀಭಾಗದೊಡೆಯನನಂತು ಕಾಣುತನಾಗಕಾತೀತಪ್ರವರ್ತಜ್ಞಾನನಿಧಿಯಾಗಿ (ಜಸಕ್ರ. ೯೩-೬). [ಸಂ.]

**ಪ್ರವರ್ತಕ** (ಗು). ೧. ಕಾರ್ಯದಲ್ಲಿ ತೊಡಗುವಂತೆ ಮಾಡುವ ; ತೊಡಗಿಸುವ. ೨. (ದುಷ್ಕಾರ್ಯಕ್ಕೆ) ಪುಸಲಾಯಿಸುವ ; ಚಿತಾವಣೆ ಮಾಡುವ : 'ಪ್ರವರ್ತಕಿ' ಪರಾ. (ನಾ). ೩. ಕೆಲಸದಲ್ಲಿ ತೊಡಗಿರುವುದು ; ಪ್ರವೃತ್ತಿ : ಪುಣ್ಯ ಪಾಪ ಸ್ವರ್ಗ ನರಕ ಬಂಧ ಮೋಕ್ಷ ಪ್ರವರ್ತಕ ನಿವರ್ತಕ ಆದಿಯಾದ ಕರ್ಮಭ್ರಮೆ (ಚಕ್ಕಸ. ೪. ೩೬೨-೦೩೩೦). ೪. ಮೂಲಪುರುಷ ; ಮೊದಲಿಗ : ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀ ಶ್ರೇಯಮಾತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ (ಆದಿಪು. ೩-೦೬ ವ) ; ಭವಕರ್ಮ ಸಂಸ್ಕಾರಪ್ರವರ್ತಕನು (ಬಸಪು. ೩೩-೦೯). ೫. ಸ್ಥಾಪಕ ; ಸ್ಥಾಪನೆ ಮಾಡಿದವನು ; ಸಂಸ್ಥೆ, ಮತ, ಸಿದ್ಧಾಂತ ಮೊದಲಾದುವುಗಳನ್ನು ಪ್ರಾರಂಭಿಸಿದವನು : ಡಿಥಿರಾಂಬ್ ಎಂಬ ಸಾಮೂಹಿಕಗೀತಗಳ ರಚನಕಾರರೇ ರುದ್ರನಾಟಕದ ಪ್ರವರ್ತಕರಾದರು (ಅಂಕಾ. ೨೦). ೬. ನಿರ್ಣಯಕಾರ ; ನ್ಯಾಯನಿರ್ಣಯ ಮಾಡುವವನು. [ಸಂ.]

**ಪ್ರವರ್ತಕಿ** (ನಾ). ದಂಬಿಟ್ಟೆಳೆ ಎಬ್ಬಿಸಿದ (ಪರ್ಯಾಯ): ದಂಬಿರ್ಯೋಧನೆ ಮಾಡುವ ವ್ಯಕ್ತಿ : ನರ್ತಕಿಯು ಪಾಪಿತೆಯು ಪರ್ಣವಿಕ್ರಯಿಯು ಪ್ರವರ್ತಕಿಯು ದಾಸಿಯು . . . ಒಡನಾಡಿ ದೊಡೆ ಬಾಲೆಯರ್ತವೆ ದುರಾಚಾರಮಂ ಕಲಿವರು (ಕೃಖಿಕಾ. ೩-೩೬). [ಸಂ. ಪ್ರವರ್ತಕೀ]

**ಪ್ರವರ್ತನ** (ನಾ). ೧. ಮುನ್ನಡೆ ; ಮುಂದುವರಿಯುವಿಕೆ : ನರಕಂ ತುರಗನಿಕುರುಂಬ ಕೀಲಾಲಕಲ್ಲೋಲಪ್ರವರ್ತನಾನೇಕನದನದೀಪ್ರವಾಹ ಬಾಹುಳ್ಯದುಸ್ತರಾವತ ರಣಮಾರ್ಗಮುಂ (ಪಂಪಭಾ. ೦೬-೩೦ ವ) ; ಜಘನ್ಯ ಭೋಗಭೂಮಿಪ್ರವರ್ತನಮರಡು ಕೋಟಿ ಕೋಟಿ ಸಾಗರೋಪಮದ ಕಡೆಯ ಪಲ್ಯೋಪಮದೆಂಟನೆಯ ಭಾಗಮುಳಿಯ (ಪಂಪಭಾ. ೦-೩೬ ಕ್ರೊ). ೨. ತೊಡಗುವುದು : ಪಂಚಾಣುವ್ರತಾದಿಪ್ರವರ್ತನಸ್ವಭಾವಸಂಯಮಮುಂ (ಆದಿಪು. ೦೩-೦೬ ವ). ೩. ಚಟುವಟಿಕೆ ; ಕಾರ್ಯಶೀಲತೆ. ೪. ನಡತೆ ; ನಡವಳಿಕೆ : ದ್ವಿಜಮಾರ್ಗವನೆ ದಿಟವಾಗಿ ನೀ ಹಿಡಿದಾಡಿದಡೆಯುಮಾಗಾಗದೀ ಕರ್ಮಕ್ರಿಯಾಚಾರಪ್ರವರ್ತನವು (ಬಸಪು. ೩-೪೯). ೫. ರೀತಿ ; ಕ್ರಮ. [ಸಂ.]

**ಪ್ರವರ್ತನೆ** (ನಾ). = ಪ್ರವರ್ತನ ೧ : ಸರ್ವಜಗದ ಜೀವದ ಪ್ರವರ್ತನೆಯ ಚಾರಿತ್ರಂಗಳ ನೆನಹುಮಾತ್ರದಿಂದ ಶಿವನು ಒಂದೇ ವೇಳೆಯಲ್ಲಿ ನಿರ್ಮಿಸಿದನು (ಚಕ್ಕಸ. ೪. ೦೩೦-೩೩೦) ; ಹಿಂದಣ ಕಾಲ ಪ್ರವರ್ತನೆಯಿಂದೆ ಸಜ್ಜನಭಕ್ತಿಯೊಳು ಬಳಸಂದು ನಿಶ್ಚಲಭಾವದಿಂದಾಚರಿಸುತಿರು (ಬಸಪು. ೪-೩೦). [ಸಂ. ಪ್ರವರ್ತನ]

**ಪ್ರವರ್ತಿ** (ಗು). ೧. ಮುನ್ನಡೆವ ; ಕ್ರಮಿಸುವ. ೨. ಕ್ರಿಯಾಶೀಲವಾಗಿರುವ. ೩. ವ್ಯಾಪ್ತವಾದ ; ವಿಸ್ತಾರವಾದ. (ನಾ). ೪. ತೊಡಗುವವನು ; ಅನುಸರಿಸುವವನು : ಯಮ ನಿಯಮಯೋಗ ವ್ರತಾಯತಶಮದಮಾಶ್ರಯಸುಚರಿತನುತ್ತಮ ಶಿವಾಚಾರ ಪ್ರವರ್ತಿನಿರಸ್ತ ಸಕಳಾರ್ಥಿ (ಬಸಪು. ೦೯-೩). [ಸಂ. ಪ್ರವರ್ತಿನ್]

**ಪ್ರವರ್ತಿತ** (ಗು). ೧. ಮುನ್ನಡೆಸಿದ ; ಸಾಗಿಸಿದ : ಮುಂತ್ರಿಮುಖ್ಯರುಂ ಪುರಾತನಚಕ್ರವರ್ತಿಪ್ರವರ್ತಿತಮಾರ್ಗಮಿದೆಂದು ಕಾಕಿಣೀರತ್ನದಿಂದಲ್ಲಿ ಮುನ್ನಿದರ್ಗೊಂದು ಪ್ರಶಸ್ತಿಯಂ ವರಾಮೃಷ್ಟಂ ಮಾಡಿ (ಪಂಪಭಾ. ೧೦-೬೩ ವ). ೨. ತೊಡಗಿದ : ನಿತ್ಯಪ್ರವರ್ತಿತದಯದಾನಧರ್ಮೋದ್ಯೋಗನಿ (ಶಾಶಿಇ. XX. ೯೬-೦೦ ; 1072). ೩. ಹಬ್ಬಿದ ; ವ್ಯಾಪ್ತವಾದ : ಸೌಭಾಗ್ಯನಿಧಾನದೀಪವರ್ತಿ ಸಕಳದಿಗನ್ತರಪ್ರವರ್ತಿತಕೀರ್ತಿ (ಶಾಶಿಇ. XX. ೯೬-೦೯ ; 1072). [ಸಂ.]

**ಪ್ರವರ್ತಿಸು** (ಕ್ರಿ). ೧. ವರ್ತಿಸು ; ವ್ಯವಹರಿಸು : ಪ್ರತಿಕ್ಷಣಂ ವಿಶಾರುಗಳ್ ಚಿತ್ರಕ್ಷಣಂಗಳ್ ಪೂರ್ವಾಪೂರ್ವ ಚಿತ್ರವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವು (ಶಾಂತಿಪು.೬-೦೯೨ ವ) ; ಶೋಷಣೆ ದೋಹನೆ ಸ್ಥಾಪನೆ ಚಾಲನೆ ಕಳಾಪಮಂ ಮಾಡಿ ತ್ರಿದೋಷಾದಿಗಳಂ ಪ್ರವರ್ತಿಸಲೀಯದೆ (ಅಜಿತ. ೨೯-೬೭) ; ಕಷ್ಟಮಂ ಮಾಳ್ಪಾ ಜಗತ್ಕರ್ತೃ ಮನಸಿಜಭೃಷ್ಣನಂ ಗೆಲ್ದವೋಲ್ ಶೈವಮಂ ತತ್ತ್ವಸ್ವಪ್ನದೆ ತಲ್ಲೋಕಂಗಳೊಳ್ ಪ್ರವರ್ತಿಸಲೀಶನರಸುಗೆಯ್ವುತ್ತಿರ್ದನು (ಹರಿಪು. ೨೯-೯೩). ೨. (ಕಾಲವು) ನಡೆ ; ಸಾಗು : ವ್ಯಯಮೆಮ್ಬ ಸ[೦]ವತ್ಸರಂ ಪ್ರವರ್ತ್ತಿಸೆ (ಆಇ. XII. ೨೦೯-೦೩ ; 814) ; ಶಕವರ್ಷಮೆಣ್ನೂಱ ಅಯ್ದನೆಯ ವರ್ಷಂ ಪ್ರವರ್ತ್ತಿಸುತ್ತಿರೆ (ಎ. XXI. ೩೩-೩ ; 883) ; ತ್ರಿಸಾಗರೋಪಮ ಕೋಟಾಕೋಟಿಸ್ಥಿತಿಯಿಂ ಪ್ರವರ್ತಿಸುವಂದಾ ಕಾಲದ ಮನುಷ್ಯರು ಚಾವಿಪಾಕರನಿರ್ಮಳಶರೀರರುಂ (ಕಾಪುಂಕ. ೯). ೩. ಆರಂಭವಾಗು ; ಪ್ರಾರಂಭವಾಗು : ಒದಗ ದಿನ್ನುಂ ಮುರಾರಿಯ ಸಮರಮರ್ಜುನನ ಕದನಂ ಪ್ರವರ್ತಿಸದು (ಕೃಖಿಕಾ. ೦೦-೩೨). ೪. ಆಚರಿಸು ; ಅನುಸರಿಸು : ಪರಮೇಶ್ವರಧರ್ಮಪ್ರಭಾವನೆಯಂ ಪ್ರತಿದಿನಂ ಪ್ರವರ್ತಿಸಿಯುಮಂ (ಆದಿಪು. ೦೨-೯) ; ಭಕ್ತಗೋಷ್ಠಿಸುಸಂಗತಿಯೊಳು ಬಸವನುಂ ತಾವುಂ ಪ್ರವರ್ತಿಸಲು (ಬಸಪು. ೬೦-೨). [ಪ್ರವರ್ತನ+ —ಇಸು]

**ಪ್ರವರ್ಧ** (ಗು). ಬೆಳೆಯುವ : ಅಮಿತಸಂಸೃತಿಜೀವಘಟಚಕ್ರಮಲಕರ್ಮಬಲಪ್ರವರ್ಧಭ್ರಮಣಮೊಡಗೂಡಲ್ಕೆ (ಬಸಪು.೩೦-೨೯). [ಸಂ.]

**ಪ್ರವರ್ಧತೆ** (ನಾ). ಬೆಳವಣಿಗೆ : ಬಳಿಕಾ ಗರ್ಭದೊಳಗೆ ಮೂಱು ವೊಱಗೆ ಮೂಱು ವರ್ತಿಸುವಹಾಯತೆ ಅಸ್ತಿತೆ ವಿಪರಿಣತೆ ಪ್ರ[ಪಾಠಾಂ.ವಿ] ವರ್ಧತೆ ಅಪಕ್ಷೀಯತೆ ವಿನಶ್ಯತೆ ಎಂಬ ಷಡ್ಭಾವವಿಕಾರವಮುಳ್ಳುತನನಿಸಿ (ಎವೀಳ-೨೩೬). [ಸಂ. ಪ್ರವರ್ಧತಾ]

**ಪ್ರವರ್ಧನ** (ಗು). ೧. ವೃದ್ಧಿಪಡಿಸುವ ; ಹೆಚ್ಚಿಸುವ : ಬಸವನೆಂಬ ಪ್ರಮಥನೊರ್ವಂ ನಿಶಿತಸದ್ಭಕ್ತಿಪ್ರವರ್ಧನಕಾರಣಾರ್ಥದಲಿ ವಸುಮತಿಗೆ ಬಂದಿದ್ದಪನು (ಚಿತ್ರ. ೨೦-೨೯). ೨. ಬೆಳೆಯುವ ; ವರ್ಧಿಸುವ : ಅತಿ ಪ್ರವರ್ಧನಪ್ರಜಾನುರಾಗನುಮತಿಪ್ರಬಲರಣರಾಮನುಮೆನಿಸಿದ ರಣರಂಗ ಸಿಂಹನಿಂ (ಗದಾಯು.೨-೬ ವ). (ನಾ). ೩. ಬೆಳವಣಿಗೆ ; ವೃದ್ಧಿ : ವಿಶ್ವಯಶಃಪ್ರವರ್ಧನವಮಂ ಆಟಾಮ್ಲವರ್ಧನವಮಂ ನೋಂತಳ್ (ಸುಕುಮಾ.೯-೦೯). [ಸಂ.]

**ಪ್ರವರ್ಧಮಾನ** (ಗು). ೧. ಅಭಿವೃದ್ಧಿ ಹೊಂದುತ್ತಿರುವ ; ಏಳಿಗೆ ಹೊಂದುತ್ತಿರುವ : ಬಲದೇವ ವಾಸುದೇವರ್ . . . ಮಾತಾಪಿತೃಗಳನುರಾಗದೊಡನೆ ಪ್ರಮೋದಪ್ರವರ್ಧಮಾನವಾಗೆ ಸುಖಮಿರ್ಪನ್ನೆಗಂ (ಶಾಂತಿಪು. ೦-೮೦ ವ). ೨. ಬೆಳೆಯುತ್ತಿರುವ. [ಸಂ.]

**ಪ್ರವರ್ಧಿತ** (ಗು). ಬೆಳೆದ ; ವೃದ್ಧಿಯಾದ : ಮೋದದಿಂ ಜಾಬಾಲ ಕೈವಲ್ಯಾದಿ ಶಾಖೆಗಳೊಳ್ ಪ್ರವರ್ಧಿತವಾದ ಭಸ್ಮೈಶ್ವರ್ಯಪದವಿ ಸಮಗ್ರವಾಯ್ತೆನೆ (ಏಕಕ್ಷ.೯೩-೭೫). [ಸಂ.]

**ಪ್ರವರ್ಧಿಸು** (ಕ್ರಿ). ಬೆಳೆ; ವೃದ್ಧಿಯಾಗು : (೩). [ಪ್ರವರ್ಧನ+-ಇಸು]

**ಪ್ರವಲ್ಹಿಕೆ** (ನಾ). ಒಗಟು ; ಸಮಸ್ಯೆ : "ಒಗಟೆಯದು ಪ್ರಹೇಳಿಕೆ ಪ್ರವಲ್ಹಿಕೆ [ಪಾಠಾಂ. ಪ್ರವಲ್ಹಿಕೆ, ಪ್ರವಪ್ಪೀಕೆ] ಯುಂ" (ಮಂಗರಾ. ೨೬-೭); ಉಲ್ಲಸಿತ ಪ್ರವಲ್ಹಿ[ಲ್ಹಿ]ಕಾಪಾನಗಾನಾದಿ ವಿವಿಧವಿನೋದವಿಧಾಯಿಬಾಳಿಕಾ ಲೋಲಲೋಚನಮರೀಚಿಪುಂಜವಿಸರದಿಂ ಕುಸುಮಿತಮಾಗೆಯುಂ (ವರ್ಧಮಾ. ೬-೯೯ ವ). 'ಪ್ರಹೇಳಿಕೆ' ಪರಾ. [ಸಂ. ಪ್ರವಲ್ಹಿಕಾ]

**ಪ್ರವಹ** (ಗು). ೧. ಮುಂದಕ್ಕೆ ಹೋಗುವ ; ಹರಿಯುವ ; ಪ್ರವಹಿಸುವ. (ನಾ). ೨. ಹೊರಗೆ ಹೊರಡುವುದು : "ಪ್ರವಹಃ, ಬಹಿರ್ಗಮನಂ – ಗೃಹಾದಿಗಳಿಂದ ಈಚೆಗೆ ಬರುವಿಕೆ, ಹೊರಕ್ಕೆ ಹೊರಡುವಿಕೆ" (ಸಿದ್ಧಾಂತಿ. ೩೬೦). ೩. ಗಾಳಿ; ವಾಯು. ೪. ವಾಯುದೇವ : ಗಣಪ ಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣನು ಇನಜಗೆ ಸಮ ಚಂದ್ರಸೂರ್ಯರು ಮನುಸುತೆಯು ಹೆಚ್ಚು ಪ್ರವಹನು (ಪುರಂದ. ೦-೦೩೦-೩). [ಸಂ.]

**ಪ್ರವಹಣ** (ನಾ). ೧. ಓಟ; ಹರಿವು : "ಪ್ರವಹಣಂ, ಡಯನಂ – ಈ ೨ ರಥದ ಹರಿ" (ಶಬ್ದಾಯು. ೬೩-೨೬೦); ಇವುಗಳ ಯೋಗದಿಂದ ಈ ಪ್ರಜ್ಞಾಪ್ರವಹಣತಂತ್ರಗಳೂ ಸವ್ಯವಾಗುತ್ತವೆ (ಕಾವ್ಯಕು.೩೨). ೨. ಹಡಗು ; ಜಹಜು : "ಪೋತಃ, ಪ್ರವಹಣಃ–ಈ ೨ ಛತ್ರಂ" (ಶಬ್ದಾಯು. ೦೦೬-೩೩). ೩. ತೆರೆಯಿರುವ ಮೇನೆ ; ಅಂದಣ : "ಕರ್ಣೀರಥಃ, ಪ್ರವಹಣಂ, ಡಯನಂ – ೩ ಮನುಷ್ಯರು ಹೊರುವ ವಿಮಾನದ ಹೆಸರು, ಡೋಲಿಗೂ ಹೆಸರು" (ಸಿದ್ಧಾಂತಿ.೨೩೨). [ಸಂ.]

**ಪ್ರವಹಿಸು** (ಕ್ರಿ). (ನೀರು) ಮುಂದೆ ಸಾಗು : ವಸುಮತಿಯೊಳು ಶುಭ್ರಸಂಕಾಶದಿಂ ಪ್ರವಹಿಸುತಿರ್ದಳಾ ಪುಣ್ಯಗಂಗೆ (ಪಂಪಾಶತ. ೬-೩೪); ವನಮಧ್ಯದೊಳ್ ಪ್ರವಹಿಸುತ್ತಲಿರುವ ನದಿ (ಹರಿಶ್ಚಂ. ೨೯೯-೯); ಮಯಸ್ಸಿರಿಗೆ ಷೋಡಶವಸಂತವೀಚಿಯನೂತ್ತಿ ಪ್ರವಹಿಸಿತು ಕಾಲನದಿ ರಾಮ ಲಕ್ಷ್ಮಣಭರತಶತ್ರುಘ್ನಜೀವನದಿ (ಶ್ರೀರಾಮಾ. ೨೬-೨).
[ಪ್ರವಹ + – ಇಸು]

**ಪ್ರವಳ** (ಗು). ವೇಗವಾಗಿ ಚಲಿಸುವ ; ರಭಸವಾಗಿ ಚಲಿಸುವ : ಪ್ರವಳ ಕರಿ ಮಕರ ಘೂತ್ಕಾರವಾತದಿಂದುದ್ಭವೊಗೆವ ಜಲಬಿಂದುಗಳಿಂದಿವದೊಳಿ ತಾರಕಿತಂ ಮಾಡುವುದು ನಭೋಭಾಗವಂ ತದಂಭಃಪೂರಂ (ಶಂಕ್ರಷ. ೦೦-೯೯). [ಸಂ. ಪ್ರವಲ]

**ಪ್ರವಾಣಿ** (ನಾ). ನೆಯ್ಗೆಯವರ ಲಾಳಿ ; ಹಾಸಂಎಳೆಗಳ ನಡುವೆ ಹೊಕ್ಕುಎಳೆಗಳನ್ನು ಹಾಯಿಸುವ ಲಾಳಿ. [ಸಂ.]

**ಪ್ರವಾದ** (ನಾ). ೧. ಶಬ್ದವನ್ನು ಮಾಡುವುದು. ೨. ಹೇಳುವುದು; ಹೇಳಿಕೆ : 'ಪ್ರವಾದಿಸು' ಪರಾ. ೩. ಸುದ್ದಿ ; ಸಮಾಚಾರ : ಅವರು ಮಹಮ್ಮದನಿಗೆ ಭೂತಪ್ರ ಹಿಡಿದಿದೆಯೆಂದು ಪ್ರವಾದವನ್ನೆಬ್ಬಿಸಿ ಹರಡತೊಡಗಿದರು (ಕೈಗಂಬ. ೨೨) ; ಅವನನ್ನು ಕಾಳಗುಡ್ಡನೆಂದು ಪ್ರತಿನಾಮಧೇಯದಿಂದ ಕರೆಯುತ್ತಿದ್ದರೆಂದೂ ಪ್ರವಾದವಿತ್ತು (ಕೋಟಿಚನ್ನ. ೯೯). ೪. ಜನರ ಆಡುಮಾತು ; ವದಂತಿ ; ಗಾಳಿಸುದ್ದಿ : ಇಲ್ಲಿ ವಿಶೇಷವಾಗಿ ಮಹತ್ಕಾರ್ಯ ನಡೆಯುವುದೆಂದು ಪ್ರವಾದವಿದೆ (ತಾತವನಾ. ೯೬); ನಿಂತುಕೊಂಡೇ ಮತದ ಬೋದು ಹಾಗೂ ತೊಲೆಗಳ ಮೇಲೆ ಬರೆಯುತ್ತಿದ್ದನೆಂಬ ಪ್ರವಾದವಿದೆ (ಕರಕ. ೭೮೦). [ಸಂ.]

**ಪ್ರವಾದಿ** (ನಾ). ೧. ಶಬ್ದವನ್ನು ಮಾಡುವುದು. ೨. ಮಾತನಾಡುವುದು. ೩. (ದೇವರ ಪ್ರತಿನಿಧಿಯಾಗಿ) ಪ್ರಚಾರ ಮಾಡುವವನು, ಬೋಧಕ : ಸರ್ವಜ್ಞ ಪಂಡಿತರ ಕವಿಯಲ್ಲ, ವಾಮರರ ಪ್ರವಾದಿ (ಕರಕ. ೬೭೦) ; ಅದಕ್ಕೆ ಸಾಧುಗಳು, ಸಂತರು, ಪ್ರವಾದಿಗಳು . . . ಉತ್ತರ ಕೊಡುತ್ತ ಬಂದಿದ್ದಾರೆ (ರಥಸಾ .೦). [ಸಂ. ಪ್ರವಾದಿನ್]

**ಪ್ರವಾದಿಸು** (ಕ್ರಿ). ದೈವಿಕವಾದ ಮಾತುಗಳನ್ನು ಹೇಳು,–ವಿವರಿಸು.
[ಪ್ರವಾದ + – ಇಸು]

**ಪ್ರವಾರಣ** (ನಾ). ೧. ಕೇಳಿದುದನ್ನು ಕೊಡುವುದು ; ಬಯಸಿದುದನೆಲ್ಲ ಪೂರೈಸುವ ದಾನ ; ಮಹಾದಾನ : "ಪ್ರವಾರಣವೆಂಬುದು ಮಹಾದಾನಂ" (ಶಬ್ದಾಯು. ೦೨೭-೬೬). ೨. ಫಲಾಭಿಲಾಷೆಯಿಂದ ಮಾಡುವ ದಾನ ; ಕಾಮ್ಯದಾನ : "ಪ್ರವಾರಣಂ – ಕಾಮ್ಯದಾನಂ, ಫಲಾಪೇಕ್ಷೆಯಿಂದ ಕೊಡುವದಕ್ಕೆ ಪೆಸರು" (ಸಿದ್ಧಾಂತಿ. ೩೨೩). [ಸಂ.]

**ಪ್ರವಾಲ, ಪ್ರವಾಳ** (ನಾ). ೧. ಚಿಗುರು ; ಪಲ್ಲವ : "ಪಲ್ಲವಾಂಕುರಮಪ್ರವಾಳ[ಪಾಠಾಂ. ಳ]ಮೆನಲು ಎಳೆಯ ಕೊನರಕ್ಕುಂ" (ಮಂಗರಾ. ೩೨-೯). ೨. ಹವಳ ; ವಿದ್ರುಮಂ : "ಪವಳಂ ಪ್ರವಾಲಂ[ಪಾಠಾಂ. ಳಂ] ಕಪೋತಾಂಘ್ರಿ ವಿದ್ರುಮಂ ಹವಳಮಕ್ಕು" (ಮಂಗರಾ. ೯೩-೯೦) ೩. ವೀಣೆಯ ದಂಡ : ಮೂರುಸ್ಥಾಯಿಗಳಲ್ಲಿ (ಸ್ವರ)ಶುದ್ಧಿಗಾಗಿ ಇದರ ಪ್ರವಾಲವು ಸ್ವಲ್ಪ ಉದ್ದವಾಗಿರುತ್ತದೆ (ಕಸಾಕ್ರ. ೧). **ಪ್ರವಾಳ**: ೧. "ಪ್ರವಾಳಃ, ಪಲ್ಲವಾಂಕುರಃ—ಈ ೨ ಮರದ ಕೊನರ್" (ಶಬ್ದಾಯು. ೩೦-೩೦) ; ಲೋಧ್ರ ಲವಂಗಪ್ರಕರ ಪ್ರವಾಳರುಚಿರಂ . . . ಕಣ್ಗೊಳಿಸುಗುಂ ಖಪ್ಪಾಶ್ರಮೋಪಾಂತದೊಳ್ (ಕಾದಂಬ. ೨೦೩); ಕಾಂತಾಕಟಾಳಿಪ್ರಚಯದೊಳಬಳಾಂಘ್ರಿಪ್ರವಾಳಾಘದೋಳ್ . . . ತಾನಿರ್ದನಾಸ್ಥಾನದೊಳತುಳ ವನಸ್ಪರ್ಧಿಯೊಳ್ಪುವಸಂತಂ (ರಾಜಶೇ. ೯-೭೭). ೨. ಕಣ್ಗೆಸೆವುದು ಲಹರೀಲೋಳಬಾಳಪ್ರವಾಳ (ಎಕ. VIII, ಸೊರಬ. ೩೨೮-೬ ; 1178) ; ಭಾಳಾಕ್ಷದ್ಯುತಿ ಬಾಡವಾಗ್ನಿಗೆ ಜಟಾಜೂಟಂ ಪ್ರವಾಳಕ್ಕೆ ಸಪ್ಪಾರ್ಪಾಳಂಕಾರಮದಾಹಿಕೋಟಿಗೆ . . . ಎಣೆಯಾಗಲು (ಕಾಸಕ. ೯೩-೩ ; 1179) ; ವದನಂ ಚಂದ್ರನಿಭಂ ವಿಲೋಚನಯುಗಂ ಪಂಕೇಜಪತ್ರಪ್ರಭಂ ರದನಂ ವಜ್ರಸಮಂ ಪ್ರವಾಳಸದೃಶಂ ದಂತಚ್ಛದಂ . . . ಭೂಪಾಳನಾ (ರಾಜಶೇ. ೩-೬). ೧, ೨ : ಕೃತಿಯಿಂತಿದಕ್ಕೆ ಮೊದಲಾವುದೆಂದೆನೆ ಪತಿವ್ರತೆಯಂತೆ ಕಾಂತಾನುಕೂಲದಿಂ ಕೌರವಕ್ಷಿತಿವರನ ಸೇನೆಯಂತಾ ದ್ರೌಣಿಯಿಂ ವೃಕ್ಷದಂತಾ ಪ್ರವಾಳದಿಂದ . . . ಒಪ್ಪಿತು ಸಮುದ್ರಂ (ಶಾಬಶಂ. ೦-೨೩). ೩. "ಪ್ರವಾಳಃ, ವೀಣಾದಂಡಃ — ವೀಣೆಯ ದಂಡಿಗೆಕೋಲಿನ ಹೆಸರು" (ಸಿದ್ಧಾಂತಿ. ೩೯); ಬೀಣೆಯಂ ಮಿಡಿದು

ನೋಡಿ ತಂತಿಯೊಳ್ ತನುರೋಮಮಂ ಸೋರೆಯೊಳ್ ಶಲ್ಕಮಂ ಪ್ರವಾಳದೊಳ್ ಪಾಷಾಣಮಂ ತೋಱೆ ಕುಡುವೊಡೆ ನಿರ್ದೋಷಮಪ್ಪ ವೀಣೆಯಂ ಕುಡುಮೆನೆ (ಅರ್ಥಶೀ. ೬-೦೪ ವ). ೪. ಕೂದಲು. ೫. ಹಸಿರು ಬಣ್ಣ. ೬. ಕೆಂಪು ಬಣ್ಣ : "ಎಳೆದಳಿರುಂ ರೋಮ ನೇಗಿಲ ಈಚು ಪಚ್ಚೆ ವಿಪಂಚಿ ಬಾಲುಂ ಪವಳಂ ಸಲೆ ಕೆಂಪಿದೆಂಟು ನಾಮಂ ಚಲುವಿಂ ರಾಜಿಪ ಪ್ರವಾಳಶಬ್ದಂ" (ಶಾನಾಕಂ. ೩೬). [ಸಂ.]

**ಪ್ರವಾಸ** (ನಾ). ೧. ಪರಸ್ಥಳಕ್ಕೆ ಹೊರಟು ಬರುವುದು; ಪರಸ್ಥಳದ ಪ್ರಯಾಣ,—ಸಂಚಾರ : ತನ್ನೊಡವುಟ್ಟಿದರ್ಗಾದ ಪ್ರವಾಸಾಯಾಸಂಗಳ್ಗಂ ದೆಸೆಗಂ ಮನ್ನು ಮಿಕ್ಕು ಬರೆ (ಶಂಕಆ. ೩-೮೦ ವ) : ಹಿಂದೆ ಯಾರಣ್ಯಪ್ರವಾಸದಿ ಬಂದ ದೂರ್ವಾಸಾದಿ ಋಷಿಗಳಿಗಂದು ತೃಪ್ತಿಯ ನೆಸಗಲೋಸುಗ (ಗಗಕಾ. ೦೪-೯೬) ; ಬಲು ಚೆನ್ನಾಗಿದೆ, ನಿಮ್ಮ ಪ್ರವಾಸದ ಏರ್ಪಾಟು ! (ಹಟುಹೊ. ೩೨೭). ೨. [ಕಾವ್ಯಮೀ] ವಿಪ್ರಲಂಭಶೃಂಗಾರದ ಪೂರ್ವಾನುರಾಗ, ಮಾನ, ಪ್ರವಾಸ ಮತ್ತು ಕರುಣಾತ್ಮಕವೆಂಬ ನಾಲ್ಕು ಬಗೆಗಳಲ್ಲಿ ಒಂದು ; ನಲ್ಲನು ಸಂಚಾರದಲ್ಲಿರುವುದು: ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಮಿಂತೆ ನೀನುಮನ್ನನೆ ನಡೆ ನೋಡುತುಂ ನಭದೊಳಿರ್ದಪೆಯಪ್ಪುದಱಿಂದೆ ನಿನ್ನನಾನನುಪಿವೆನೆನ್ನ ಮೆಯ್ ಬಡವೊ ನಲ್ಲನ ಮೆಯ್ ಬಡವೋ ನಿಶಾಕರಾ—ಇದು ಪ್ರವಾಸಂ (ಕಾವ್ಯಾವ. ೬೦೭) : ಪೂರ್ವಾನುರಾಗ ಮಾನಾಖ್ಯ ಪ್ರವಾಸ ಕರುಣಾತ್ಮಕವೆಂಬ ವಿಯೋಗಚತುಷ್ಟಯವಿಶಿಷ್ಟರಿಂ ಪ್ರಭಿನ್ನ ಪ್ರಕಾಶ ವಿಪ್ರಲಂಭ ವಿದಗ್ಧರಿಂ (ಶವೀಶ. ೦೯೯). [ಸಂ.]

**ಪ್ರವಾಸಕಥನ** (ನಾ). ದೇಶ, ವಿದೇಶಗಳಲ್ಲಿ ಮಾಡಿದ ಪ್ರವಾಸವನ್ನು ಕುರಿತ ವಿವರಣಾತ್ಮಕವಾದ ನಿರೂಪಣೆ : ತನ್ನ ಪ್ರವಾಸಕಥನವನ್ನು ಬರೆದಿಟ್ಟು ಎಂಬತ್ತೆಂಟನೆಯ ವಯಸ್ಸಿನಲ್ಲಿ ಇಹಲೋಕಯಾತ್ರೆ ಮುಗಿಸಿದನು (ಕೃಪಾಇ. I. ೦೩೯). [ಸಂ.]

**ಪ್ರವಾಸನ** (ನಾ). ೧. ಪರಸ್ಥಳಕ್ಕೆ ಕಳುಹಿಸುವುದು ; ಊರಿನಿಂದ ಹೊರಗೆ ಕಳುಹಿಸುವುದು. ೨. ದೇಶಭ್ರಷ್ಟನನ್ನಾಗಿ ಮಾಡುವುದು; ಗಡೀಪಾರು ಮಾಡುವುದು. ೩. ಕೊಲ್ಲುವಿಕೆ ; ವಧೆ : "ಮಾರಣಂ . . . ಪ್ರವಾಸನಂ . . . ಸಂಜ್ಞಪನಂ—ಈ ೨೧ ಕೊಲೆ" (ಹಲಾಯು. ೭೬–೩೨೩) ; ಪ್ರವಾಸನಕ್ಕೆ (ಕೊಂದು ಹಾಕುವುದಕ್ಕೆ) ನಾನೊಪ್ಪುವುದಿಲ್ಲ (ಕಣಾಕುಂ. ೦೦೦). [ಸಂ.]

**ಪ್ರವಾಸಪತ್ರ** (ನಾ). (ಒಬ್ಬನು ಒಂದು ದೇಶದಲ್ಲಿ ಪ್ರಯಾಣ ಮಾಡಲು ಮತ್ತು ಹಾಗೆ ಮಾಡುವಾಗ ತಕ್ಕ ಸಂರಕ್ಷಣೆ ಪಡೆಯುವ ಹಕ್ಕನ್ನು ಹೊಂದಿರಲು ಆ ದೇಶದ ನಿಯುಕ್ತಾಧಿಕಾರಿಯು ಕೊಡುವ) ಪ್ರವಾಸಾಧಿಕಾರಪತ್ರ ; ರಹದಾರಿ : "ಪ್ರವಾಸದ ರಹದಾರಿ ; ಪ್ರವಾಸಪತ್ರ ; ಪಾಸ್‌ಪೋರ್ಟ್" (Pass—port. ಕಣ್ವಿಶಿ. ೬೦) ; ಸಾಮಾನುಗಳನ್ನು ತೂಕ ಹಾಕಿಸುವುದು, ಪ್ರವಾಸಪತ್ರ ("ಪಾಸ್‌ಪೋರ್ಟ್") "ವೀಸಾ" ಮೊದಲಾದುವುಗಳನ್ನು ತನಿಖೆ ಮಾಡಿಸುವುದು . . . ಇದರಲ್ಲಿ ವೇಳೆ ಹಾಗೂ ಹೀಗೂ ಕಳೆಯಿತು (ಸಂಟಿರು. ೯೪). [ಸಂ.]

**ಪ್ರವಾಸಮಂದಿರ** (ನಾ). ಯಾತ್ರಿಕರು ಇಳಿದುಕೊಳ್ಳಲು ಮಾಡಿರುವ ವಸತಿ : ಅವರು ಪ್ರವಾಸಮಂದಿರದಲ್ಲಿ ಇಳಿದುಕೊಂಡರು (ಕಕವು. ೩-೩೩). [ಸಂ.]

**ಪ್ರವಾಸಸಾಹಿತ್ಯ** (ನಾ). ಪ್ರವಾಸಕಥನದ ಬರವಣಿಗೆ : ನಮ್ಮಲ್ಲಿ ಪ್ರವಾಸ ಸಾಹಿತ್ಯ ಬಂದುದು ಈಚೆಗೆ (ರೂಢಿ). [ಸಂ.]

**ಪ್ರವಾಸಿ** (ನಾ). ಪ್ರವಾಸ ಮಾಡುವವನು ; ಯಾತ್ರಿಕ : ತಾನು ಕಂಡ ಪ್ರವಾಸಿಗಳನ್ನೂ ನಾವಿಕರನ್ನೂ ವಿಚಾರಿಸಿ ತಾನೆ ರಚಿಸಿದ ಆತನ ಗ್ರಂಥವು ಪ್ರತ್ಯಕ್ಷತಃ ತೀರ ನಿರ್ದುಷ್ಟವೂ ಅಲ್ಲ . . . ನಿಷ್ಪಕ್ಷವೂ ಅಲ್ಲ (ಭ್ರಾಶಿಂ. ೬೦) ; ನಮ್ಮ ದೇಶಕ್ಕೆ ಬಂದು ಹೋದ ಪ್ರವಾಸಿಗಳ . . . ಕಥನಗಳನ್ನು ಹೇಳಿದ್ದಾಗಿದೆ (ಕೃಪಾಇ. II. vii ಕೃತ್ಯಾವಿತ). [ಸಂ.]

**ಪ್ರವಾಸಿಕೇಂದ್ರ** (ನಾ). ಪ್ರವಾಸಿಗಳ ಆಕರ್ಷಣೆಯ ಮುಖ್ಯಸ್ಥಳ : ನಂದಿಬೆಟ್ಟ ಪ್ರವಾಸಿಕೇಂದ್ರವಾಗಿದೆ (ರೂಢಿ). [ಸಂ.]

**ಪ್ರವಾಸಿಗ** (ನಾ). = ಪ್ರವಾಸಿ : ಆ ವೃದ್ಧಿಯಿಲು ಎಣ್ಬರ್ ಪ್ರವಾಸಿಗರುಣ್ಬ ಸತ್ರಕ್ಕೆ ಕೊಟ್ಟ ಮೊದಲ್ ಗದ್ಯಾಣಮಿಪ್ಪತ್ತಯ್ದು (ಸೌಇಇ. XI-i, ೯೨–೪೯; 1054) ; ಹದಿಮೂಱು ಕಮ್ಮ ಗದ್ದೆಯಂ ಬಂದ ಪ್ರವಾಸಿಗರುಣ್ಬಂತಾಗಿ ಆಚಂದ್ರಾರ್ಕಸ್ಥಾಯಿ ಮಾಡಿ (ಕಇ. IV. ೨೩–೨೦; 1054); ದೇಸಿಗ ಪ್ರವಾಸಿಗಳ ಆಹಾರದಾನಕ್ಕೆ ಬಟ್ಟ ಸತ್ರಂ (ಎಕ. VII. ಶಿಕಾರಿ. ೦೯–೦೪ ; 1080). [ಪ್ರವಾಸ + —ಇಗ]

**ಪ್ರವಾಸಿಬಂಗಲೆ** (ನಾ). = ಪ್ರವಾಸಮಂದಿರ : ಪ್ರವಾಸಿಬಂಗಲೆಯ ಆಳುಗಳು ಕಾಫಿ ತಂದರು (ಹಸಹೊ. ೩೬೨). [ಪ್ರವಾಸಿ + ಬಂಗಲೆ]

**ಪ್ರವಾಸಿಮಂದಿರ** (ನಾ). = ಪ್ರವಾಸಮಂದಿರ : ಆ ಊರಿಗೆ ಒಂದು ಮೈಲಿ ದೂರದಲ್ಲಿ ಲಕ್ಷಣವಾದ ಪ್ರವಾಸಿಮಂದಿರವಿದೆ (ಕಂಟಿಚು. ೯೬); ಹರ್ಷವರ್ಧನ . . . ದೇಶದಲ್ಲೆಲ್ಲ ಪ್ರವಾಸಿಮಂದಿರಗಳನ್ನೂ, ಬೌದ್ಧ ಸಂಘಾರಾಮಗಳನ್ನೂ ನಿರ್ಮಿಸಿದ್ದಾನೆ (ಕೃಪಾಇ. I. ೨೩೨). [ಸಂ.]

**ಪ್ರವಾಸೋದ್ಯಮ** (ನಾ). ದೇಶ ವಿದೇಶಗಳ ಜೀವನಪದ್ಧತಿ, ಸಂಸ್ಕೃತಿ, ನಾಗರಿಕತೆಗಳನ್ನು ಅರಿಯಲು ಅಥವಾ ವಿಹಾರಾರ್ಥವಾಗಿ, ಪ್ರೇಕ್ಷಣೀಯಸ್ಥಳಗಳಿಗೆ ಪ್ರವಾಸ ಮಾಡುವ ಜನರಿಗೆ ಅನುಕೂಲಗಳನ್ನು ಒದಗಿಸುವ, ಸಂಚಾರಕ್ಕೆ ಸಂಬಂಧಿಸಿದ ವ್ಯವಸ್ಥಿತವಾದ ಏರ್ಪಾಟು : ಅಭಿವೃದ್ಧಿಶೀಲದೇಶಗಳಲ್ಲಿ ಪ್ರವಾಸೋದ್ಯಮಕ್ಕೆ ಸರ್ಕಾರದಿಂದ ಹೆಚ್ಚು ಪ್ರೋತ್ಸಾಹ ದೊರೆಯಬೇಕು (ರೂಢಿ). [ಸಂ.]

**ಪ್ರವಾಹ** (ನಾ). ೧. ಹರಿಯುವಿಕೆ ; ಪ್ರವಹಿಸುವಿಕೆ: "ಓಘಃ, ಪ್ರವಾಹಃ . . . ರಯಃ —ಈ ೬ ತೊಱೆಯ ಹರಿಹಂ" (ಹಲಾಯು. ೦೦೦–೯೬); ನವರೌಪ್ಯಕುಂಭಮೇ ನಾಕತರಂಗಿಣೀಪ್ರವಾಹದೊಳೆದೆ ಕಾಣಲಾದಪುದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗು. ೪–೭೦). ೨. ದಂಡೆಯ ನೈಸರ್ಗಿಕಮಿತಿಯನ್ನು ಅತಿಕ್ರಮಿಸಿ ಹರಿಯುವ ಹೊನಲು ; ನೆರೆ : ದಕ್ಷಿಣದ ನದಿಗಳು ಆಳದಲ್ಲಿ ಹರಿಯುವುದರಿಂದ ಪ್ರವಾಹದ ಅಪಾಯವೇನೋ ಕಡಿಮೆ (ಕಶಂ. ೨೩). ೩. ಎಡೆ ಬಿಡದಿರುವಿಕೆ ; ಅವಿಚ್ಛಿನ್ನವಾದ ಮುನ್ನಡೆ : "ಪ್ರವಾಹಃ, ಪ್ರವೃತ್ತಿಃ—ಅವಿಚ್ಛಿನ್ನವಾಗಿ ಹರಿಯುವ ನೀರು ಮುಂತಾದವುಗಳ ಪರಂಪರೆ, ಪ್ರಸರಿಸುತ್ತಾ ಇರುವುದು" (ಸಿತ್ಯಾಂಶಿ. ೩೬೦). ೪. ಒಂದು ನರಕದ ಹೆಸರು : ನಾದ ಪ್ರವಾಹ ರುಕ್ಷಸುಪ್ರವಾಹ ಮೇಷವೆಂಬೈದು ಮುತ್ರಿನರಕಂಗಳ ಮಧ್ಯದಲ್ಲಿ ಚಂಡವೆಂಬರಸುನರಕವಿಹುದು (ಶವೀಶ. ೦೩೨). [ಸಂ.]

**ಪ್ರವಾಹಿ** (ನಾ). ಹರಿಯುವಂತಹುದು ; ದ್ರವ : ಘನ, ಪ್ರವಾಹಿ, ವಾಯುರೂಪ ಈ ಮೂರು ರೂಪಗಳಿಂದ ಪದಾರ್ಥಗಳು ಕಣ್ಣಿಗೆ ಬೀಳುತ್ತವೆ (ಮುಂಶಿಐ. ೩-೩೦). [ಸಂ. ಪ್ರವಾಹಿನ್]

**ಪ್ರವಾಹಿಕೆ** (ನಾ). ಅತಿಸಾರದಲ್ಲಿ ಒಂದು ವಿಧ : ವಾಯುವಿನಿಂದ ಮಲ ಶ್ಲೇಷ್ಮ ರಕ್ತಂಗಳು ಕಲನಾಗುತ್ತಿರಲಾಗಿ ಮಲವಿಲ್ಲದೆ ನೋವಿಸಹಿತ ಬರೀ ನೀರೇ ಸುರಿವುದು ಅದು ಪ್ರವಾಹಿಕೆ ಎನಿಸಿಕೊಂಬುದು. ಭಾಷೆಯಲ್ಲಿ ಇದನೇ ನೀರಕೊಂಬು ಎಂಬರು. ಅದಕ್ಕೆ ಎಳ್ಳು, ತುಪ್ಪ, ಮೊಸರು, ಜೇನುತುಪ್ಪ, ಶುಂಠಿ, ಖಂಡಸಕ್ಕರೆ, ಇಷ್ಟನೂ ಸಮಾಂಶವಾಗಿ ಕೂಡಿಸಿ ಕೊಡಲು ಆ ಕ್ಷಣದಲ್ಲಿ ಪ್ರವಾಹಿಕೆ ಪರಿಹರವಹುದು (ವೈಸಂಪಾ. I.೨೨೩). [ಸಂ. ಪ್ರವಾಹಿಕಾ]

**ಪ್ರಸಾಧಿತ** (ಗು). ೧. ಅಲಂಕರಿಸಿದ; ಸಿಂಗರಿಸಿದ : ತೀರ್ಥಂಕರಕುಮಾರಂಗೆ ಸೌಧರ್ಮೇಂದ್ರಂ ಪ್ರಸಾಧಿತ ವಿಷ್ಟಪತ್ರಿತಯನಪ್ಪುದನಱಿದು ಪ್ರಸಾಧನ ಪ್ರಾರಂಭಂಗೆಯ್ಯೆ (ಶಾಂತಿ. ೧೦-೩೬ ವ). (ನಾ). ೨. ಅಲಂಕಾರ ಗೊಂಡವನು ; ಸಿಂಗರಿಸಿಕೊಂಡವನು : ಸುರರಾಜಸಮರ್ಪಿತ್ರಸಂತಾನ ಕುಸುಮದಾಮಾಂಬರಭೂಷಣಪ್ರಸಾಧಿತಂ ಪುರುದೇವಂ ಮೃಗೇಂದ್ರ ವಿಷ್ಟರದೊಳಿರೆ (ಆದಿ. ೮-೭೦ ವ). [ಸಂ.]

**ಪ್ರಸಾರ** (ನಾ). ೧. ಹರಡುವಿಕೆ ; ಹಬ್ಬುವಿಕೆ ; ವ್ಯಾಪ್ತಿ : ಆರ್ಯಸಂಸ್ಕೃತಿಯ ಪ್ರಸಾರವನ್ನು ಪ್ರಭಾವಯುತವನ್ನಾಗಿ ಮಾಡಲು ಇತಿಹಾಸ ಪುರಾಣಗಳ ಪರಿಷ್ಕರಣ ಬಹುಮಟ್ಟಿಗೆ ನಡೆಯಿತು (ಪುಕ್ಕಾರ. ೧೦೬ ೪೦೪೪); ಜನಪದಕಥೆಗಳ ಪ್ರಸಾರ (Diffusion)ದ ದೃಷ್ಟಿಯಿಂದ ಕಿನ್ನರಕಥೆಗಳು ತುಂಬ ಮಹತ್ವದವಾಗಿವೆ (ಸುವರ್ಣ. ೨೩). ೨. ವ್ಯಾಪಾರದ ಮಳಿಗೆ; ಅಂಗಡಿ. ೩. [ಸಂಗೀತ] ಗಾಯಕನ ದೋಷಗಳಲ್ಲಿ ಒಂದು : ಗಾಯಕ ದೋಷಗಳು ೧. ಸಂದಷ್ಟ – ಹಲ್ಲು ಕಚ್ಚಿ ಹಾಡುವವನು . . . ೧೬. ಪ್ರಸಾರ – ಅವಯವಗಳ ಚೇಷ್ಟೆಗೂಡಿ ಹಾಡುವವನು (ಸಂಗೀತಂ. ೦೦೩).

**ಪ್ರಸಾರ ಮಾಡು** = ಹರಡುವಂತೆ ಮಾಡು ; ಬಿತ್ತರಿಸಂ : ಅಂದಂದು ಭವ್ಯವಾದ ಸಂಗೀತವನ್ನು ಪ್ರಸಾರ ಮಾಡುತ್ತ ಸಹಸ್ರಾವ್ಯಲಿಗಳ ವಿಷಯಗಳನ್ನು ಅಂದಂದೇ ಹರಡುತ್ತಿರುವ ರೇಡಿಯೋ (ಕಿಡ. ೬). [ಸಂ.]

**ಪ್ರಸಾರಣ** (ನಾ). ೧. ಹರಡುವಿಕೆ ; ಹಬ್ಬುವುದು : ಈತನ ಹೆಸರಿನಲ್ಲಿರುವ ತರಂಗಗಳೇ (Hertzian waves) ಆಮೇಲೆ ರೇಡಿಯೋ ಪ್ರಸಾರಣದಲ್ಲಿ ಉಪಯೋಗವಾದವು (ಕಿಶಾ. ೦೧೬). ೨. (ಬಟ್ಟೆ ಮುಂತಾದಂವುಗಳ) ಮಡಿಕೆಯನ್ನು ಬಿಚ್ಚಿ ಹರಡುವುದು. [ಸಂ.]

**ಪ್ರಸಾರಣೆ** (ನಾ). ಒಂದು ಬಗೆಯ ಬಳ್ಳಿ; ಹೆಸರಣೆ ; ಮುಳ್ಳುಗೆಸೆ : "ಸಾರಣೀ, ಪ್ರಸಾರಣೀ, ಕಟುಂಭರಾ, ರಾಜಬಲಾ, ಭದ್ರಬಲಾ – ಕಿರಿಯ ಹಸಾರಣೇಗಿಡ, ಸಾರಣೇಗಿಡ" (ನಿಘಂ. ೦೯೬); ಗೊತ್ತುಮೊಗರು ಚಟ್ಟು, ಪ್ರಸಾರಣೆ, ಹೆಸರಣೆ ಹಸರಾಣೆ (ಸಸ್ಯ. ೧೦೦). [ಸಂ. ಪ್ರಸಾರಣೀ]

**ಪ್ರಸಾರಾಂಗ** (ನಾ). (ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷವಾಗಿ) ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಸಾರಕ್ಕಾಗಿ ಇರುವ ವಿಭಾಗ : ವಿಶ್ವವಿದ್ಯಾನಿಲಯದ ಪ್ರಕಟನ ಹಾಗೂ ಪ್ರಸಾರಾಂಗದ ಮುಖ್ಯಾಧಿಕಾರಿಗಳು (ಮುನ್ನುಡಿ V ಹೊರಗಿನ ಪುಟ). [ಸಂ.]

**ಪ್ರಸಾರಿಣಿ** (ನಾ). = ಪ್ರಸಾರಣೆ : "ರಾಜಬಲಾ_ಮಹಾಬಲೆ, ಪ್ರಸಾರಿಣಿ" (ಓಷಧಿ. ೦೬೬). [ಸಂ. ಪ್ರಸಾರಿಣೀ]

**ಪ್ರಸಾರಿತ** (ಗು). ೧. ಹರಡಿದ ; ಹಬ್ಬಿದ : ಕುಟ್ಮಳಿತವದನಂ ಸ್ನಿಗ್ಧಾಲೋಕಂ ಪ್ರಸಾರಿತ ಕಜ್ಜಲಂ . . . ತಳೆದಂ ಚಲ್ವಂ ಲಂಬಾಳಕಂ ನೃಪಬಾಲಕಂ (ಪುಷ್ಪ. ೬-೧೩೦). ೨. (ಬಟ್ಟೆಯ ಮಡಿಕೆಯನ್ನು ಬಿಚ್ಚಿ) ಮಾರಾಟಕ್ಕೆ ಇಟ್ಟ. (ನಾ). ೩. [ನಾಟ್ಯ] ಸ್ಥಾನಕಗಳಲ್ಲಿ ಒಂದು ಬಗೆ ; P "ಕಾಲುಗಳನ್ನು ನೀಡಿ ಒಂದು ಕೈಯನ್ನು ತಲೆದಿಂಬಾಗಿ ಇರಿಸುವುದು. ಸುಖವಾಗಿ ನಿದ್ರಿಸುವುದನ್ನು ಅಭಿನಯಿಸಲಾಗ ಇದನ್ನು ವಿನಿಯೋಗಿಸಬೇಕು" (ಶಾಸ್ತ್ರೀಯ. ಗದ್ಯಾನುವಾದ. ೩೩೩) : ಸಮ, ಆಕುಂಚಿತ, ಪ್ರಸಾರಿತ, ವಿವರ್ತಿತ, ಉದ್ವಾಹಿತ, ನತ ಈ ಆಱು ಮಲಗಿರ್ದ ಸ್ಥಾನಕಂಗಳ್ (ಮಾನಸೋ. ೭-೦೨ ವ). [ಸಂ.]

**ಪ್ರಸಾರಿಸು** (ಕ್ರಿ). ಹರಡು ; ಹಬ್ಬಿಸು ; ಬಿತ್ತರಿಸು : ತನಿಸೊಬಗಂ ಪ್ರಸಾರಿಸಿ ಸಮಂಚಿತಕೃತವಮರ ನಿವಿರ್ಚ್ ಮಂಡನ ಕೆಳೆಯರ್ಕಳೊಳ್ ಬಱಿದೆ ಮೆಚ್ಚಿದವೊಲ್ಪೃಥೆಯಂ ನಿವಿರ್ಚ್ (ಉದ್ಭಟ. ೦೦-೬೦); ತತ್ಪ್ರದೇಶಗತ ಶಕ್ತಿಯಂ ಬುದ್ಧಿಯಿಂದಂ ಪ್ರಸಾರಿಸಿ (ಗೊಮ್ಮಟ. ೯೬-೩). [ಪ್ರಸಾರ + – ಇಸು]

**ಪ್ರಸಿತ** (ಗು). ೧. ಬಿಗಿದ ; ಕಟ್ಟಿದ ; ಬಂಧಿಸಿದ. ೨. ತೊಡಗಿದ ; ಆಸಕ್ತಿ ಹೊಂದಿದ; ಮಗ್ನವಾದ : ಸದಮಲಪ್ರಚುರವಿಶ್ರುತಪರವಃಭಕ್ತ ಗಣಪದಸರೋರುಹಸಾಂದ್ರಮಕರಂದಪಾನಸಮ್ಮುದಿತಚಂಚಚ್ಚಂಚರೀಕನವರತ ಪಂಚಾಕ್ಷರೀಪ್ರಸಿತಹೃದಯಂ (ಅಂಕ. ೦-೦-೦೦೨). (ನಾ). ೩. ಆಸಕ್ತಿಯುಳ್ಳ ವ್ಯಕ್ತಿ ; ಆಸಕ್ತನಾದವನು : "ತತ್ಪರಃ, ಪ್ರಸಿತಃ, ಆಸಕ್ತಃ -೩ ಒಂದು ಪದಾರ್ಥದಲ್ಲಿ ತಗಲಿದ ಮನಸ್ಸುಳ್ಳವನ ಪೆಸರುಗಳು" (ನಿಘಂ. ೩೨೪). ೪. ಕೀವು. [ಸಂ.]

**ಪ್ರಸಿದ್ಧ** (ಗು). ೧. ಎಲ್ಲರಿಗೂ ತಿಳಿದ ; ಹೆಸರುವಾಸಿಯಾದ : ವಿಂಬಲ್ಡನ್ ಮೊದಲಾದ ಪ್ರಸಿದ್ಧ ಕ್ರೀಡಾಕ್ಷೇತ್ರಗಳು . . . ಸುತ್ತಲಿನ ನಿಸರ್ಗಮಯ ಸುಂದರತಮ ಪ್ರದೇಶಗಳು ; ಇವನ್ನೆಲ್ಲ ನೋಡಿ (ಪ್ರವಾಸ ೬೦೨). (ನಾ). ೨. ಎಲ್ಲರಿಗೂ ತಿಳಿದುದು; ಹೆಸರುವಾಸಿಯಾದುದು. ಶೇಷಪಂಡಿತರ ಕೈಗುಣ ಸುತ್ತಮುತ್ತಲೆಲ್ಲ ಬಹಳ ಪ್ರಸಿದ್ಧ (ಅಜ್ಜ. ೨೮). ೩. ಕೀರ್ತಿಶಾಲಿಯಾದವನು; ಪ್ರಖ್ಯಾತ: ಜೈನಸಾಹಿತ್ಯದಲ್ಲಿ ಕುಣಿಕನೆಂದೂ, ಬೌದ್ಧಸಾಹಿತ್ಯದಲ್ಲಿ ಅಜಾತಶತ್ರುವೆಂದೂ ಪ್ರಸಿದ್ಧನಾದ ಮಗಧರಾಜನು ಚೇಟಕನ ಮೊಮ್ಮಗನು (ಕಾಳಿದ. ೦೬೩). ೪. [ವೀರಶೈ] ಶುದ್ಧ, ಸಿದ್ಧ, ಪ್ರಸಿದ್ಧಗಳೆಂಬ ಮೂರು ಬಗೆಯ ಪ್ರಸಾದಗಳಲ್ಲಿ ಒಂದು ; ಜಂಗಮರು ಸ್ವೀಕರಿಸಿ ಉಳಿದಂದು : ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯಾ ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯಾ ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯಾ (ಬಸವ. ೭೮೩) ; ವರಲಿಂಗಮುಖಸಮರ್ಪಿತ ಶುದ್ಧವೆನಿಸುವುದು ಚರಲಿಂಗಕರ್ಪಿಸಿದುದು ಪರಮಸಿದ್ಧಂ ನಾಡೆ ಗುರುಭುಕ್ತಶೇಷದಿಂ ಧರಿಸಿ ಪ್ರಸಿದ್ಧಮೆಂಬಿನಿತುಮಂ ನಿಯಮದಿಂದಿರದ ಕೊಂಬರ ವಿವರಮಂ ಪೇಳ್ವೆಂ (ಶಿಕ್ಷಾ. ೪೭-೦೨); ಜಂಗಮಭುಕ್ತಶೇಷವೇ ಪ್ರಸಿದ್ಧಮೆನಿಸುವುದು (ಶಿವಾ. ೨೩).

**ಪ್ರಸಿದ್ಧವಾಗು** = ಎಲ್ಲರಿಗೂ ತಿಳಿದಿರು ; ಖ್ಯಾತವಾಗು : ಚಹಾ ವ್ಯಾಪಾರದಲ್ಲಿ ಬಹಳ ಪ್ರಸಿದ್ಧವಾದವು (ಮುಂಬಯಿ. ೪-೦೩೯); ಅರಿಸ್ಟಾಟಲನು . . . ಪ್ರಸಿದ್ಧವಾದ ರುದ್ರನಾಟಕದ ಲಕ್ಷಣವನ್ನು ರಚಿಸಿದ್ದಾನೆ (ಕಂಠ. ೬೨). [ಸಂ.]

**ಪ್ರಸಿದ್ಧತೆ** (ನಾ). ಕೀರ್ತಿ ; ಪ್ರಖ್ಯಾತಿ : ಈ ವಿನುತ ಸಿತಕೀರ್ತಿಯಾ ಸದ್ಭಾವಶುದ್ಧತೆಯಾ ಪ್ರಸಿದ್ಧತೆಯಾ ವಿಬುಧಸನ್ಮಾನತೆಯು ನಿಮಗೀಯ ಹಂಕೃತಿಯ ಇಂದು ನೀವೆನ್ನರಿ ಪರಸದಡೆ ಕುಂದುವುದೆ ಇನಿತಾಯುವದು (ಬಸ. ೪೬-೧೦). [ಸಂ. ಪ್ರಸಿದ್ಧತಾ]

**ಪ್ರಸಿದ್ಧಾಂತ** (ನಾ). [ವೀರಶೈ] ಅತಿಶ್ರೇಷ್ಠವಾದ ಅರಿವು ; ಪರಮತತ್ತ್ವ: ಗುರುಸ್ಥಲವೆ ವೇದಾಂತ ಲಿಂಗಸ್ಥಲವೆ ಸಿದ್ಧಾಂತ ಜಂಗಮಸ್ಥಲವೆ ಪ್ರಸಿದ್ಧಾಂತ (ಷೋಡಶ. ೦೩೩-೩೬೬). [ಸಂ.]

**ಪ್ರಸಿದ್ಧಾನ** (ನಾ). ಕೀರ್ತಿ ; ಪ್ರಸಿದ್ಧಿ ; ಪ್ರಖ್ಯಾತಿ: ಪ್ರಸಿದ್ಧಾನಮಂ ಪಡೆದ ಪರಾರ್ಥಮಂ ಶಾಶ್ವತಮೆಂಬುದನುಕ್ತಸಿದ್ಧಮಲ್ಲದಂದಭಿಧಾನಂ ನಿರರ್ಥಕರಮುಮಾಧಾರರಹಿತಮುಮಕ್ಕುಂ (ಶಾಂತಿ. ೬-೦೩೬ ವ). [?]

**ಪ್ರಸಿದ್ಧಿ** (ನಾ). ೧. ಹೆಸರುವಾಸಿ; ಖ್ಯಾತಿ; ಕೀರ್ತಿ: ಮಧ್ವಾಚಾರ್ಯರೆಂಬ ನಾಮಪ್ರಸಿದ್ಧಿಯನು ಪಡೆದನುದಿನದಿ (ಪುರಂದ. ೪-೩೬-೩); ಪಾರ್ಸಿಜನಗಳ ಭಾಷೆಯು ಹಿಂದಿನ ಕಾಲದಲ್ಲಿ ಝುಂಡ್ (ಅಥವಾ ಅವೆಸ್ತಾ) ಎಂದು ಪ್ರಸಿದ್ಧಿ ಪಡೆದಿತ್ತು (ಶಾಸನ ೯೪೪) ; ನಮ್ಮ ಆಸುಪಾಸಿನ ಜನಕ್ಕೆಲ್ಲ ಅವರ ಹೆಸರು ಗೊತ್ತಿತ್ತು. ಅಷ್ಟು ಪ್ರಸಿದ್ಧಿಯಿದೆ (ಕುಟುಂಬ. ೨೮). ೨. ಕಾರ್ಯ ಕೈಗೂಡುವುದು ; ಕಾರ್ಯಸಿದ್ಧಿ. [ಸಂ.]

**ಪ್ರಸಿದ್ಧಿಸು** (ಕ್ರಿ). ಎಲ್ಲರಿಗೂ ತಿಳಿಯುವಂತೆ ಮಾಡು ; ಪ್ರಕಟಪಡಿಸು; ಬಹಿರಂಗಪಡಿಸು: ೧೯೧೦ರಲ್ಲಿ ಪ್ರಕಟವಾಗಿದ್ದ ಒಂದು ಪುಸ್ತಕವನ್ನು. . . ೧೯೨೭ರಲ್ಲಿ ಸೂಕ್ತ ಬದಲಾವಣೆಗಳೊಂದಿಗೆ ಮತ್ತೆ ಪ್ರಸಿದ್ಧಿಸಿದನು

(ಸಸ್ಯಕ. ೯೦) : ನಿಮ್ಮ ದೇಶಸೇವೆಯನ್ನು ಪ್ರಸಿದ್ಧಿಸುವ ಸಲುವಾಗಿಯೇ ಹೊರಟಿದ್ದೇನೆ (ಕೀಚು. ೬೩) ; ಇಂದಿನ ಪತ್ರದಲ್ಲಿ ನಿನ್ನೆ ಅದೃಶ್ಯರಾದ ಜನರ ಹೆಸರುಗಳು ಪ್ರಸಿದ್ಧಿಸಲ್ಪಟ್ಟಿರುತ್ತವೆ (ಕೃಕಕ. ೦೬೧).
[ಪ್ರಸಿದ್ಧ + –ಇಸು]

**ಪ್ರಸುಪ್ತ** (ಗು). ೧. ನಿದ್ರಿಸುತ್ತಿರುವ. (ನಾ). ೨. ನಿದ್ರಿಸಿದವನು : ಶಯ್ಯಾಗೃಹಕ್ಕೆ ಬಿಜಯಂಗೆಯ್ದು ದುಕೂಲಪ್ರಚ್ಛದಾಚ್ಛಾದಿತವಿಶಾಲಹಂಸತೂಲತಲ್ಪತಲದೊಳ್ ಸುಖಪ್ರಸುಪ್ತನಿರೆ (ಕಾರ್ಣಾಟ. ೦೦–೧೬೩ ಪ). [ಸಂ.]

**ಪ್ರಸೂಚಕ** (ಗು). ೧. ತಿಳಿಸುವ ; ಹೇಳುವ ; ಸೂಚಿಸುವ. (ನಾ). ೨. ತಿಳಿಸುವ ವಸ್ತು ; ಸೂಚಿಸುವಂಥದು : ಮುಂಬಿ ಬಂದ ಜಳದಾಗಮಪ್ರಸೂಚಕಂಗಳಪ್ಪ ಲಿವರಲ್ಗಳೆಂದುಂ ಸರೋಜವನದಿಂ ಶಾಳಿವನಕ್ಕೆ ಪರಿವ ಪರಿಕಾಲ್ಗಳಂ ನೆರೆದು (ಸುಕುಮಾ. ೦೦–೩೭ ಪ). [ಸಂ.]

**ಪ್ರಸೂತ** (ಗು). ೧. ಹುಟ್ಟಿದ ; ಜನಿಸಿದ ; ಜನ್ಮ ತಾಳಿದ : ಪ್ರಸೂತಭೂತಾಳಿನಗಾಗಸಂಕುಳಂ ವಸಂತಲಕ್ಷ್ಮೀಚಿರಭೃತ್ತರುವ್ರಜಂ ಲಸತ್ಸುರಾಧೀಶಭಯಂಕರಪ್ರಭಾಪ್ರಸನ್ನಶೈಲಾವಳಿಯಲ್ಲಿ ರಂಜಿಕುಂ (ಶ್ರ.ಕು. ೦೦–೩೨). (ನಾ). ೨. ಹುಟ್ಟಿದವನು; ಜನ್ಮ ತಾಳಿದವನು: ದಿವಸಕರನಕ್ಕೆಳಾಸಂಭವನಕ್ಕಿರೆ ನಾಲ್ಕುಟಿಯೊಳ್ ದಶಸ್ಥಾನಕದೊಳ್ ರವಿಸುತನಿರೆ ಶೂಲದೊಳಿಕ್ಕುವರಾ ಲಗ್ನಪ್ರಸೂತನಂ ಪಾತಕನಂ (ಜಾತಕ. ೨೩–೭) ; ಕನಸಿನೊಳಪ್ಪುಡಂ ಭಯದ ಲೋಭದ ಮಾತು ಮನುಪ್ರಸೂತರೊಳ್ ಜನಿಯಿಸದು (ಕಾರ್ಣಾಟ. ೬–೦೯). ೩. ಹಡೆಯುವಿಕೆ ; ಹೆರಿಗೆ : ತುಂಬಿಯುಂ ಪ್ರೀತಿಯೊಳಪ್ಪ ಗರ್ಭಿಣಿಯದಾಪ್ತು ಸರೋರುಹಮುತ್ಪಲಂ ಪ್ರಸೂತಾತುರೆಯಾಗಿ ಪೆತ್ತುದೆಳೆಯಂ (೧೧೪. ೯–೦೦೨). ೪. ಹೂವು ; ಪುಷ್ಪ. [ಸಂ.]

**ಪ್ರಸೂತಿ** (ನಾ). ೧. ಹಡೆಯುವಿಕೆ; ಹೆರಿಗೆ: ಉತ್ತರಣಿಯ ಬೇರಂ ಯೋನಿಯೊಳಗೆ ಇಕ್ಕೆ ಪ್ರಸೂತಿಯಕ್ಕು (ಕಲ್ಯಾ.ಕ. ೬೩). ೨. ಮಗು : "ಸೂನುಃ . . . ಪ್ರಸೂತಿಃ . . . ಅಪತ್ಯಂ—ಈ ೧೨ ಮಗುವು" (ಹಲಾಯು. ೬೨–೩೯೬) ; ಒತು ಮೂಡುವ ಲಿಂಗವಂತರ ಭಾತಿಗಳು ಶಿವಭಕ್ತಿ ಬೀಜಕೆ ಪಾತಿಗಳು ಪರಮಾರ್ಥನಿಜಯೋಗಪ್ರಸೂತಿಗಳು (ಬಸಕೃ. ೩೭–೯೭).
[ಸಂ.]

**ಪ್ರಸೂತಿಕರ್ಮ** (ನಾ). ಮಗು ಹುಟ್ಟಿದಾಗ ಅದಕ್ಕೆ ಮಾಡುವ ಒಂದು ವಿಧಿ; ಜಾತಕರ್ಮ : ಎಲ್ಲ ಪ್ರಸೂತಿಕರ್ಮದ ತೀರ್ಚೆ ಕೊಟ್ಟಿಲ ಸಮುಲ್ಲಾಸದಿಂ ಕಟ್ಟಿ (ಪಪುಚೀ. ೨೨–೨೯). [ಸಂ. ಪ್ರಸೂತಿಕರ್ಮನ್]

**ಪ್ರಸೂತಿಕಾಗೃಹ** (ನಾ). ಹೆರಿಗೆಯ ಮನೆ: ಪ್ರಸೂತಿಕಾಗೃಹನಿಹಿತನಿಖಿಳಜನಮುಮಂ . . . ಮನಮೊಸೆದು ಮನ್ನಿಸಿ (ಪುಶ್ಯಕೃ. ೯–೩೯ ಪ).
[ಸಂ.]

**ಪ್ರಸೂತಿಕೆ** (ನಾ). ೧. ಮಗುವನ್ನು ಹೆತ್ತಿರುವವಳು : ಬಾಣಂತಿ. ೨. ಹೆರಿಗೆ : ಅಭೂತಪೂರ್ವವಾದ ಪ್ರಸೂತಿಕಾಕೌತುಕವನಾತ್ಮೀಯಾಪ್ತಗುಪ್ತವಾಕ್ಯದಿಂ ಕೇಳ್ದು (ಜಗಿತ. ೩–೦ ಪ). [ಸಂ. ಪ್ರಸೂತಿಕಾ]

**ಪ್ರಸೂತಿಕ್ರಿಯೆ** (ನಾ). = ಪ್ರಸೂತಿಕರ್ಮ : ಪ್ರಸೂತಿಕ್ರಿಯಾಪರಿಣತಾಂತಃಪುರಪರಿಚರಾತಿ ಸಂತಾನನಿರಂತರತಮುಂ (ಕಂಪ್ರಕೃ. ೩–೯೭ ಪ).
[ಸಂ. ಪ್ರಸೂತಿಕ್ರಿಯಾ]

**ಪ್ರಸೂತಿಗೃಹ** (ನಾ). = ಪ್ರಸೂತಿಕಾ ಗೃಹ : ಮರುದೇವೀವಿಳಸತ್ಪ್ರಸೂತಿಗೃಹವಮಂ . . . ಪೊಕ್ಕು (ಆಪು. ೬–೯೯); ಹುಟ್ಟಿದ ಕೂಸೂ ಒಮ್ಮೆ ಪ್ರಸೂತಿಗೃಹದಿಂದ ಹೊರಗೆ ಬಂದಿತೆಂದರೆ ಅದಕ್ಕೆ ತಾಯಿ ಬೋರೆ ತಿರುಗಿ ಕಾಣುವ ಹಾಗಿರಲಿಲ್ಲ (ಸಕುಜೀ. ೯೯೮). [ಸಂ.]

**ಪ್ರಸೂತಿವೈರಾಗ್ಯ** (ನಾ). ಹೆರಿಗೆಯ ನೋವನ್ನು ತಾಳಲಾರದೆ, ತಾತ್ಕಾಲಿಕವಾಗಿ ಉಂಟಾಗುವ ವೈರಾಗ್ಯ: ಮಗುವಿನ ಮುದ್ದುಮುಖ ನೋಡಿದ ಕೂಡಲೆ ಅರ್ಧಗಂಟೆಯ ಹಿಂದೆ ಉಂಟಾಗಿದ್ದ ಪ್ರಸೂತಿವೈರಾಗ್ಯ ಎಲ್ಲಿಗೆ ಓಡಿತೋ ! (ಕಜಿ). [ಸಂ.]

**ಪ್ರಸೂತೆ** (ನಾ). ೧. ಮಗುವನ್ನು ಹೆತ್ತವಳು : ಬಾಣಂತಿ. ೨. ಹೆಣ್ಣುಕುದುರೆ : "ಅರ್ವತೀ . . . ಪ್ರಸೂತಾ, ವಾಜಿನೀ — ಈ ೫ ಘೋಟಿಗೆ" (ಹಲಾಯು. ೬೨–೨೩೭). [ಸಂ. ಪ್ರಸೂತಾ]

**ಪ್ರಸೂನ** (ಗು). ೧. ಹುಟ್ಟಿದ ; ಉತ್ಪತ್ತಿಯಾದ. (ನಾ). ೨. ಹುಟ್ಟು; ಉತ್ಪತ್ತಿ. ೩. ಹೂವು ; ಪುಷ್ಪ : ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಕಂಕಣ. ೦–೩೭ ರಗಳೆ) ; ಅತುಳಸ್ವಚ್ಛಾಂಬುವಿಂ ಮಜ್ಜನಕೆಬಿದು ನವೀನಪ್ರಸೂನಪ್ರತಾನದ್ಯುತಿಸುತ್ತಲ್ (ರಕ್ಷಾಶ. ೬೪) ; ಹಗಲಿರುಳು ನಿನ್ನೊಡನೆ ನಲಿದಾಡಿದೀ-ದೀನಕಾನನಪ್ರಸೂನಮಂ, ಹೇ ಕಾಂತ, ಮರೆಯದಿರು (ಕಪ್ರಾಂಗ. ೪೬–೦೨೩೯). ೪. ಮೊಗ್ಗು. ೫. ಹಣ್ಣು ; ಫಲ. [ಸಂ.]

**ಪ್ರಸೂನಕ** (ನಾ). ಹೂವು ; ಪುಷ್ಪ : "ಪುಷ್ಪಂ . . . ಪ್ರಸೂನಕಂ, ಸುಮನಸ್ — ಈ ೫ ಪೂವಿನ ಪೆಸರ್" (ಹಲಾಯು. ೩೦–೩೨). [ಸಂ.]

**ಪ್ರಸೂನಾಯುಧ** (ನಾ). ೧. (ಮನ್ಮಥನ) ಹೂವಿನ ಬಾಣ : ಉಪೇಶ್ವರನೊಳ್ ನೆರೆವಟ್ಟಿಬಿಂ ಪ್ರಸೂನಾಯುಧತಾಪತಪ್ತೆ . . . ನಿಜಾಲಯದಿಂ ಪೊಱಮಟ್ಟಳ್ (ಕಂಕಕಂ. ೬೯–೭). ೨. ಹೂವಿನ ಬಾಣವನ್ನುಳ್ಳವನು ; ಕಾಮ. [ಸಂ.]

**ಪ್ರಸೂನಾಸ್ತ್ರ** (ನಾ). ೧. ಹೂವಿನ ಬಾಣ ; ಕುಸುಮಾಸ್ತ್ರ : ಮಾನಾಂಕನು ಬಲುಮಾನದಿ ತನ್ನ ಪ್ರಸೂನಾಸ್ತ್ರ [ಶಾಕಾಂ. ಯುಧ] ಗಳನು ತೊಡರ್ಚೆ ಮಾನನಿಧಿಯ ಪರಿಹಾರವನಿಸಲು ಸುಮ್ಮಾನವಳಿದರತಿರಥರು (ಶ್ರೀ ಭೂಕಾ. ೨೦–೨೬೦). ೨. = ಪ್ರಸೂನಾಯುಧ ೨. [ಸಂ.]

**ಪ್ರಸೃತ** (ಗು). ೧. ಮುಂದುವರೆದ ; ಗಮಿಸಿದ. ೨. ಹರಡಿದ ; ವಿಸ್ತರಿಸಿದ. (ನಾ). ೩. ಒಳ್ಳೆಯ ಮಾತನಾಡುವವನು ; ವಿನಯಶಾಲಿ: "ಪ್ರಸಕ್ತಃ, ಪ್ರಸೃತಃ — ಈ ೨ ಗಲಿ ನುಡಿವವಂ" (ಹಲಾಯು. ೬೦೯–೨೦೯). ೪. ಉತ್ಸಾಹವುಳ್ಳವನು : "ಪ್ರತೂರ್ಣಃ, ತ್ವರಿತಃ, ತೂರ್ಣಃ, ಉತ್ಸುಕಃ, ಪ್ರಸೃತಃ — ಈ ೫ ಚಿಟ್ಟರಿಗಂ" (ಹಲಾಯು. ೩೬–೦೯೬). ೫. ಬೊಗಸೆ ; ಅರ್ಧಾಂಜಲಿ. ೬. [ಗಣಿತ] ಒಂದು ಅಳತೆ ; ಎರಡು ಪಲಗಳ ಪ್ರಮಾಣ : ಅಳತೆ ವಿವರಾ ಭತ್ತ ನಾಲ್ಕು ಕವಂದಂ ಕಾಣ್ಯಮೆನಿಪುದದು ಮತ್ತೆ ಪಂಚಕಕೊಂದು ಪಣ ಮಕ್ಕುಮಾ ಪಣ ಮೂವತ್ತೆನಿಸಲದು ನಿಷ್ಕ ನಿಷ್ಕತ್ರಯಕ್ಕೆ ಕರುಪ ದ್ವಾದಶಕ್ಕೆ ಮಾಗಧಪೂನೆ ಬಿತ್ತರಿಸದರಡ ಕೂಡಲು ಪ್ರಸೃತಮೆನಿಪುದದು (ಶಾಸ್ತ್ರಕ. ೬೯–೬). ೭. [ನಾಟ್ಯ] ನಿಃಶ್ವಾಸದ ಭೇದಗಳಲ್ಲಿ ಒಂದು ; ಙ "ಮಲಗಿರುವಾಗ ಶಬ್ದ ಮಾಡುತ್ತ ಬಾಯಿಂದ ಉಸಿರು ಬಿಡುವುದು" (ಶಾಸ್ತ್ರರಂ. ಗದ್ಯಾನುವಾದ. ೨೬೭) : ಸ್ವಸ್ಥ, ಚಲ . . . ಪ್ರಸೃತ — ಈ ಒಂಬತ್ತೂ ಕೋಹಳನ ಮತದಂತೆ ಗಾಳಿಯ ಭೇದಂಗಳ್ (ಶಾಸ್ತ್ರರಂ. ೩–೭೦ ಪ). ೮. ರೆಪ್ಪೆಯ ಒಂಬತ್ತು ವಿಧವಾದ ಚಲನೆಗಳಲ್ಲಿ ಒಂದು; ಙ "ರೆಪ್ಪೆಗಳನ್ನು ವಿಶಾಲವಾಗಿ ತೆರೆಯುವುದು" (ಶಾಸ್ತ್ರರಂ. ಗದ್ಯಾನುವಾದ. ೨೬೩) : ಪ್ರಸೃತ, ಕುಂಚಿತ . . . ಸಮ — ಈ ಒಂಬತ್ತು ಎವೆಯ ಭೇದಂಗಳ್ (ಶಾಸ್ತ್ರರಂ. ೩–೯೫ ಪ). ೯. "ಕಾಲ್ಬೆರಳುಗಳನ್ನು ಚಲಿಸದೆ ನೀಡುವುದು" (ಶಾಸ್ತ್ರರಂ. ಗದ್ಯಾನುವಾದ. ೨೯೩) ; ಅಧಃಕ್ಷಿಪ್ತ . . . ಪ್ರಸೃತ, ಸಂಲಗ್ನ — ಈ ಐದು ಚರಣಾಂಗುಲಿಯ ಭೇದಂಗಳ್ (ಶಾಸ್ತ್ರರಂ. ೩–೦೦೫ ಪ). ೧೦. ಕೈಬೆರಳುಗಳ ಏಳು ವಿಧವಾದ ಚಲನೆಗಳಲ್ಲಿ ಒಂದು: ಸಂಯುತ . . . ಪ್ರಸೃತ — ಈ ಏಳು ಹಸ್ತಾಂಗುಲಿಯ ಭೇದಂಗಳ್ (ಶಾಸ್ತ್ರರಂ. ೩–೧೧೩ ಪ). [ಸಂ.]

**ಪ್ರಸೃತಕರಣ** (ನಾ). [ಕಾಮಶಾ] ರತಿಬಂಧಗಳಲ್ಲಿ ಒಂದಂ : ಸಲೆ ಮಗುಳ್ದೊಱಗಿದ ಲಲನೆಯಿನೆಯನ ಪೆಗಲೊಳಗೆ ಕಾಲಿಟ್ಟರ್ತೊಡೆಯ ಅಲರ್ವಸಿಯೊಳಗಿಟ್ಟೊಲವಿಂ ರತಿಗಗ್ಗಲಿಸಲದೇ ಪ್ರಸೃ[ಕಾಶಾಂ. ಸ್ತ. ಸ್ತ್ರು]ತಕರಣಂ (ಚವ. ೯-೨೯). [ಸಂ.]

**ಪ್ರಸೃತಿ** (ನಾ). ೧. ಮುನ್ನಡೆ ; ಪ್ರಗತಿ ; ಬೆಳವಣಿಗೆ. ೨. ಬೊಗಸೆ ; ಅರ್ಧಾಂಜಲಿ : "ಅಂಗುಲಿ ಮಡಿದ ಕುಡಿತೆಯುಂ ಪ್ರಸೃತಿಯೆಂಬುದು" (ಶಬ್ದಾಮ. ೬೬-೩೬೩). ೩. [ಗಣಿತ] ಒಂದು ಅಳತೆ ; ಎರಡು ಪಲಗಳ ಪ್ರಮಾಣ : ಶಿವನ ನೈವೇದ್ಯದಳತೆಯ ಗಣನೆಗಳ ಪೇಳುವೆವು ನೆಲ್ಗಳಿಂ ನೂಱಿಯಿರ್ಪತ್ತ ಐದೆಂಬುದವನಿಯೊಳು ಶುಕ್ತಿ . . . ಸಾವಿರ ದೆಂಟುನೂರ್ನೆಲ್ ಪ್ರಸೃತಿಯೆನಿಸುವವು (ಏಕೈಶ. ೬-೧೦-೬೦). [ಸಂ.]

**ಪ್ರಸೃತೆ** (ನಾ). ಮೊಳಕಾಲು ; ಜಂಘೆ : "ಪ್ರಸೃತಾ, ಜಂಘಾ—ಈ ೨ ಕಿಱುದೊಡೆ" (ಶಬ್ದಾಮ. ೬೩-೩೬೦). [ಸಂ. ಪ್ರಸೃತಾ]

**ಪ್ರಸೇಕ** (ನಾ). ಮೂಗು ಅಥವಾ ಬಾಯಿಯಿಂದ ಸುರಿಯುವ ನೀರಿನ ಸ್ರಾವ : ವಮನಯೋಗ್ಯರು — ಮಂದಾಗ್ನಿಯುವರು . . . ಪ್ರಸೇಕ ರೋಗದವರು, ಶ್ವಾಸರೋಗದವರು (ಕಳಕ್ಕ. ೨೫). [ಸಂ.]

**ಪ್ರಸೇವ** (ನಾ). ೧. ಬಿದಿರಿನಿಂದ ಹೆಣೆದ ತಟ್ಟೆ ಅಥವಾ ಮಂಕರಿ : "ಸ್ಯೂತಃ, ಪ್ರಸೇವಃ . . . ೨ ಬಿದುರುತಟ್ಟೆಗಳು, ಮಕ್ಕರಿಗಳಿಗೂ ಹೆಸರು" (ಸಿದ್ಧಾಂತಿ. ೩೬೩). ೨. ವೀಣೆಯ ಬುರುಡೆ. [ಸಂ.]

**ಪ್ರಸೇವಕ** (ನಾ). ವೀಣೆಯ ಬುರುಡೆ : "ಪ್ರಸೇವಕಃ . . . ವೀಣೆಯ ಹೆರಳಿನ ಹೆಸರುಗಳು" (ಸಿದ್ಧಾಂತಿ. ೩೯). [ಸಂ.]

**ಪ್ರಸ್ಖಲಿತ** (ಗು). ಎಡವಿದ; ಮುಗ್ಗರಿಸಿದ : ವಿದ್ಯುತ್ಕೇಶವಿದ್ಯಾಧರಂ ತ್ವರಿತಪ್ರಸ್ಖಲಿತಪ್ರಯಾಣರಭಸಂ ಶುದ್ಧಾಂತಕಾಂತಾಜನಂ ಬೆರಸುತ್ಕಂಪಿತ ನೋಡಿ ದಿವ್ಯಮುನಿಪಾದಾಂಭೋಜವಮಂ ಪೊರ್ದಿದಂ (ಶಾಂತಿಪು. ೧೦-೧೦೯). [ಸಂ.]

**ಪ್ರಸ್ತ** (ನಾ). ೧. ಅವಕಾಶ ; ಸಂದರ್ಭ ; ಸಮಯ : ಎಱಗುವುದಕೆ ಪ್ರಸ್ತವೇನು ತನ್ನಯ ಹಂಗು ಕಿಱಿದುಂಟೆ ನನಗಯ್ಯನೆಂದು ಒಪಿಟಿ ಕೊಟ್ಟಂಬಳಿಯಲ್ಲಿ ನಾನಿಹನು (ಭಕ್ತ. ೯೮-೩೬) ; ಪ್ರಸ್ತಕ್ಕೆ ನುಡಿದಿಹರೆ ಬೆಸ್ತಂತೆ ಇರಬೇಕು ಪ್ರಸ್ತವ ತಪ್ಪ ನುಡಿದಿಹರೆ ನಡು ಬೆನ್ನಿನಸ್ತಿ ಮುಱಿದಂತೆ (ಸರ್ವಜ್ಞ. ೦೩೬೯). ೨. ಶುಭಕಾರ್ಯ ; ಮಂಗಳಕಾರ್ಯ : ನೆರೆಹೊರೆಮನೆಯಲ್ಲಿ ಪ್ರಸ್ತವಾಗಲು ಆಗ ಕರೆಯದೆ ಪೋಗಿನ್ನು ಹಾಳು ಹರಟೆ ಬಱಗಟ್ಟು ನೂಱಾಱು ಸುದ್ದಿ ಹೇಳುತ ಅವನ ಹಿರಿಯ ಮಗನಂತೆ ಉದರವ ಪೊರೆದ ಮನವೆ (ಹರಿಂದ. ೯-೩೨-೯); ದೀನನಾದನೆಗೊಂದು ಕವಡೆಯು ಪಾಣಿಯೊಳಗಿಲ್ಲವರ್ಗೆ ಸರಿಯಾಗಾನು ಪ್ರಸ್ತವ ಮಾಡಬಲ್ಲೆನೆ (ಅಕ್ಷರಾ. ೦೯-೧೦). ೩. ಗರ್ಭಾಧಾನದ ಶುಭಕಾರ್ಯ ; ನಿಷೇಕ ; ಒಸಗೆ : ಲಗ್ನ ಮುಗಿದ ಮೇಲೆ ಪ್ರಸ್ತವೂ ರಾಘಪ್ಪನ ಮನೆಯಲ್ಲಿಯೆ ಆಗಬೇಕಾಗಿತ್ತು (ಗಂಪಾಮಿ. ೦೩೪).

ಪ್ರಸ್ತದ ಊಟ = ಶುಭಸಮಾರಂಭದ ಔತಣ,—ಭೋಜನ : ಪ್ರಸ್ತದ ಊಟದಲ್ಲಿ ಹೆಂಗಳೆಯರು ಬಡಿಸುವಾಗ (ಸಪಾಪೀ. ೯ ಬೀಲೀ) ; ಪ್ರಸ್ತದ ಊಟಕ್ಕೆ ಹೋಗಿ ಸ್ವಸ್ಥವಿಲ್ಲದೆ ಬಿದ್ದ (ಗಾದೆ).

[< ಸಂ.ಪ್ರಸ್ತುತ./ಮರಾ. ಪ್ರಸ್ತ ; ತುಳು. ಪ್ರಸ್ತ]

**ಪ್ರಸ್ತರ** (ನಾ). ೧. ಹೂವು, ಎಲೆ ಮೊದಲಾದುವುಗಳಿಂದ ನಿರ್ಮಿಸಿದ ಹಾಸುಗೆ. ೨. ಹಾಸುಗೆ ; ಶಯ್ಯೆ. ೩. ಸಮತಲವಾದ ಪ್ರದೇಶ; ಬಯಲು. ೪. ಕಲ್ಲು ; ಶಿಲೆ : "ಶಿಲಾ . . . ಪ್ರಸ್ತರಃ, ದೃಷತ್ —ಈ ೭ ಕಲ್ಲ ಪೆಸರ್" (ಶಬ್ದಾಮ. ೨೬-೦೪); ಸುರೆಯಿಂ ಸೊರ್ಕಿ ಸುರೋರ್ವೀರುಹಕಿಸಲಯದಿಂ ರಾಗಮಂ ಕೌಸ್ತುಭಪ್ರಸ್ತರದಿಂ ನೈಷ್ಠುರ್ಯಮಂ . . . ತಾಳ್ದಿ (ಕಾದಂಪೂ. ೩೫೬); ಅಹಲ್ಯಾದೇವಿ ಶಿಲೆಯಾಗಿ ಧರಿಸಿದಳು ನಿಜತನುವನಾ ಪ್ರಸ್ತರವಿದೀಗಾ ಸತಿಗೆನುತ ಹತ್ತಿರಕೆ ಬರೆ ರಾಮಾಂಘ್ರಿರಜಾವಾಪರಿಸಿತಾ ಶಿಲೆಯ (ತೊರರಾ. ೧-೧೨-೦೬). [ಸಂ].

**ಪ್ರಸ್ತರಣ** (ನಾ). ೧. ಹರಡುವುದು; ಹಾಸುವುದು. ೨. ಹಾಸುಗೆ; ಶಯ್ಯೆ : ತಮಾಳದಳಪ್ರಸ್ತರಣಂ ಲತಾಂಗಿ ಮಳಯಕ್ರೀಡಾಚಳಂ ನೀನುವಿಪಾ ಮದನಾಕಾರನುಮಲ್ಲಿ ನಿಚ್ಚಲುಮಿರಿಂ ಕೇಳೀವಿನೋದಂಗಳಿಂ (ಕಾಂತಿಪು. ೩-೧೯೩). ೩. ಪೀಠ ; ಆಸನ. [ಸಂ.]

**ಪ್ರಸ್ತರಭವನ** (ನಾ). ಕಲ್ಲಿನಿಂದ ಕಟ್ಟಿದ ಮನೆ ; ಶಿಲಾಭವನ : ಹೇಯೋಪಾದೇಯತತ್ತ್ವಮನಱಿಪಿ ಮತ್ತಮಿವರ್ಕಾಧಾರಭೂತಜಗತ್ತ್ರಯಾಂತಸ್ಥಿತೈಕೋನಪಂಚಾಶನ್ನರಕ ಪ್ರಸ್ತರ [ಕಾಶಾಂ.ಪ್ರಸಾರ] ಭವನವ್ಯಂತರಾವಾಸಾಸಂಖ್ಯಾತದ್ವೀಪಾಬ್ಧಿತ್ರಿಷಷ್ಟಿಸ್ವರ್ಗಪಟಲಂಗಳುಮಂ ವಿಸ್ತರಿಸಿ (ಅಜಿತ. ೧೦-೩೬೨). [ಸಂ.]

**ಪ್ರಸ್ತರಿಸು** (ಕ್ರಿ). ೧. ಹರಡು ; ವಿಸ್ತರಿಸು. ೨. [ಛಂದ] ಲಘು ಮತ್ತು ಗುರುಗಳನ್ನು ಗುರುತಿಸು ; ಪ್ರಸ್ತಾರ ಹಾಕು : ಎರಡುಂ ಮೂಱುಂ ನಾಲ್ಕುಂ ಗುರುವಿಂ ಪ್ರಸ್ತರಿಸಲಂಬುನಿಧಿಗಜ[ಕಾಶಾಂ. ಪ್ರಸ್ತಾರವಾಗಿಯುಂ ಜಗ] ಧರಣೀಶ್ವರಗಣವೊಗೆಗುಂ (ಛಂದೋಂಬು. ೩-೨೯೦); ಪಾದ ಈಗಿರುವಂತೆಯೇ ಪ್ರಸ್ತರಿಸಿದರೆ ಧರೆ, ಗೆ, ಲ್ಲಂ ಎಂಬ ಕೊನೆಯ ಗಣವೂ ವಿಷ್ಣುವೇ ಆಗುತ್ತದೆ (ಸವಾಪೀ. ೨೨೯).

[ಪ್ರಸ್ತರಣ + —ಇಸು]

**ಪ್ರಸ್ತಾಪ** (ನಾ). ೧. ಯಾವುದಾದರೊಂದು ವಿಷಯದ ಅಥವಾ ಮಾತಿನ ಪ್ರಾರಂಭ : "ಪ್ರಸ್ತಾಪ—ಪ್ರಸ್ತಾವ= ಮಾತೆತ್ತುವಿಕೆ" (ಶಬ್ದಕೋ. ೨೭); ಮಗುವಿನ ವಿದ್ಯಾಭ್ಯಾಸ ಪೂರ್ಣವಾಗುವವರೆಗೂ ದಯವಿಟ್ಟು ಈ ಪ್ರಸ್ತಾಪ ಬೇಡ (ಕಾಂತಿಪು. ೧೧). ೨. ವಿಷಯ; ಸಂಗತಿ : ಅದೇ ಪ್ರಸ್ತಾಪ ಹೇಳಬೇಕು ಎಂದು ಇಲ್ಲಿಗೆ ಬಂದೆ (ತ್ಯಾಗಪು. ೬೯). ೩. ಸಂದರ್ಭ; ಅವಕಾಶ ; ಸಮಯ : ನಾಟಕದ ಒಂದು ಪಾತ್ರವಾದ ಶ್ಯಾಮಲಾ ಕುಮಾರಿಯ ವಿವಾಹದ ಪ್ರಸ್ತಾಪ (ಬೀರಯೋ. xii, ಅನುವಾದಕನ ಬಿನ್ನಹ) ; ಪ್ರಸ್ತಾಪಕ್ಕೆ ಬಾರದ ಗಾದೆ ಪ್ರಸ್ತಕ್ಕೆ ಆಗದ ಬಿಜ್ಜಾಯ (ಗಾದೆ).

<ಸಂ. ಪ್ರಸ್ತಾವ]

**ಪ್ರಸ್ತಾಪಿಸು** (ಕ್ರಿ). ಮಾತಿನಲ್ಲಿ ವಿಚಾರವನ್ನು ಪ್ರಾರಂಭಿಸು ; ಮಾತು ಎತ್ತು : ಬೊಮ್ಮರಸಪಂಡಿತರ ಯೋಗ್ಯತೆಯ ವಿಚಾರವನ್ನು ಪ್ರಸ್ತಾಪಿಸಿದರು (ಕಂಗಾಳ್. ೬೦); ಶಾಲೆಯು ಆರಂಭವಾಗುವ ತನಕ ಗೋವಿಂದಮಾಸ್ತರರು ಮೇರಿಯೊಡನೆ ವಿಷಯ ಪ್ರಸ್ತಾಪಿಸಲಿಲ್ಲ (ಕಾಪೀಂ. ೯೯); ಇಲ್ಲದ ಧೈರ್ಯ ತಂದುಕೊಂಡು ಶ್ರೀಧರ ಮಾಲತಿಗೆ ಅಪ್ರಿಯವಾದ ವಿಚಾರವನ್ನೇ ಮತ್ತೆ ಪ್ರಸ್ತಾಪಿಸಿದ್ದ (ಶಾಕ್ಯಂ. ೦೬೯).

[ಪ್ರಸ್ತಾಪ + —ಇಸು]

**ಪ್ರಸ್ತಾರ** (ನಾ). ೧. ಹರಡುವುದು ; ವ್ಯಾಪಿಸುವುದು. ೨. ಹಾಸುಗೆ; ಶಯ್ಯೆ. ೩. ಸಮತಲವಾದ ಭೂಮಿ,—ಪ್ರದೇಶ ; ಬಯಲು. ೪. (ದಟ್ಟವಾದ) ಕಾಡು ; (ಗಹನವಾದ) ಅರಣ್ಯ. ೫. [ಛಂದ] ವೃತ್ತದ ಪ್ರತಿಸಾಲಿನಲ್ಲಿಯೂ ಗುರುಲಘುಗಳನ್ನು ಗುರುತಿಸಿ ಬಳಿಕ ಅಕ್ಷರ ಗಣಗಳನ್ನು ಕಂಡುಹಿಡಿದು ವೃತ್ತವು ಯಾವ ಛಂದಸ್ಸಿಗೆ ಸೇರಿದುದು ಎಂಬುದನ್ನು ಕಂಡುಹಿಡಿಯುವ ಕ್ರಮ : ಮಿಗಿಲಾಗಲಧ್ವ ಯೋಗಂ ನೆಗಟ್ಟಪದೇಶದೊಳಪರಿಮಿತಂ ಪ್ರಸ್ತಾರಂ (ಛಂದೋಂಬು. ೬-೨೬೩). ೬. ಒಂದು ಛಂದಸ್ಸಿನಲ್ಲಿ ಎಷ್ಟು ವೃತ್ತಗಳಾಗಬಹುದು ಎಂಬುದನ್ನು ಕಂಡುಹಿಡಿಯುವ ಕ್ರಮ : ಉಕ್ತ ಮೊದಲಾದ ಆಯಾ ಛಂದಸ್ಸಿನ ಅಕ್ಷರಗಳ ಸಂಖ್ಯೆಯಷ್ಟು ಗುರುಗಳನ್ನು ಮೊದಲು ಸಾಲಾಗಿ ಬರೆದು . . . ಮುಂದುಮುಂದಕ್ಕ ಇಪ್ಪತ್ತಾರರವರೆಗೂ ಆಯಾಸ್ಥಾನದಲ್ಲಿ ಗುರು ಲಘುಗಳು ಅದರ ಹಿಂದಿನ ಸ್ಥಾನಕ್ಕಿಂತ ದ್ವಿಗುಣವಾಗಿರು

ವಂತೆ ಕಡೆಗೆ ಎಲ್ಲವೂ ಲಘುಗಳಾಗುವವರೆಗೆ ಗುರು ಲಘುಗಳನ್ನು ಸಾಲು ಸಾಲಾಗಿ ಬರೆಯುವುದು. ಇದಕ್ಕೆ ಪ್ರಸ್ತಾರವೆಂದು ಹೆಸರು (ಕೃಶಿಷಿ. ೯೦). ೭. [ಸಂಗೀತ] ತಾಳಾಂಗದ ವಿಸ್ತರಣೆ: ತಾಳಕ್ಕೆ ಹತ್ತು ಪ್ರಾಣ ಗಳುಂಟು ; ಕ್ರಮವಾಗಿ ಅವು—೧. ಕಾಲ . . . ೧೦. ಪ್ರಸ್ತಾರ (ಸಂಗೀಶಂ. ೩); ಪ್ರಸ್ತಾರ : ಪ್ರಸ್ತರಿಸುವುದು ಎಂದರೆ ವಿಶದವಾಗಿ ಕಾಣುವಂತೆ ಹರಡುವುದು ಅಥವಾ ವಿಸ್ತರಿಸುವುದು. ಒಂದು ತಾಳಾಂಗ ವನ್ನು ವಿಸ್ತರಿಸುವುದು ಎಂದರೆ ಅದರಲ್ಲಿ ಬರುವ ಉಪಾಂಗಗಳೂ ಗೋಚರ ವಾಗುವಂತೆ ವಿಂಗಡಿಸುವುದು (ಸಂಗೀಶಂ. ೩೮).

**ಪ್ರಸ್ತಾರ ಹಾಕು** = ಲಘು, ಗುರುಗಳನ್ನು ಗುರುತಿಸು : ಸಾಂಗತ್ಯದ ಲಕ್ಷಣಗಳನ್ನು ಹೀಗೆ ಪ್ರಸ್ತಾರ ಹಾಕಿ ಇದು ಸಾಂಗತ್ಯವನ್ನು ವುದು . . . ಅಸ್ಥಿಪಂಜರವನ್ನು ತೋರಿಸಿ ಇವನು ಮನುಷ್ಯ ಎಂದಂತೆ ಆಗುತ್ತದೆ (ಸಂಚಾಶ. ೪ ೩೦೪). [ಸಂ.]

**ಪ್ರಸ್ತಾರಿಸು** (ಕ್ರಿ). [ಛಂದ] ಲಘು ಗುರುಗಳನ್ನು ಗುರುತಿಸು : ಗುರುವೊಂದಂ ಲಘುವೊಂದನೆಂಟುವರೆಗಂ ಪ್ರಸ್ತಾರಿಸು (ಛಂದೋಂಬು. ೦-೯೦). [ಪ್ರಸ್ತಾರ + — ಇಸು]

**ಪ್ರಸ್ತಾವ** (ನಾ). ೧. ಉಪಕ್ರಮ ; ಆರಂಭ ; ಪ್ರಾರಂಭ. ೨. ಪ್ರಸಂಗ; ಸಂದರ್ಭ : ಅಂತು ಧನುರ್ಧರಾಗ್ರಗಣ್ಯನಾಗಿರ್ದೊಂದು ದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಮಱ ದೊಱಗಿದಾ ಪ್ರಸ್ತಾವದೊಳ್ (ಪಂಪಭಾ. ೧-೧೦೯ ವ) ; ಸಂನ್ಯಸನದಿಂ ಪರತ್ರೆಯಂ ಸಾಧಿಸುವೆನೆಂದು ಪರಮಾಗಮಭಾವನೆಯಿಂದಿರ್ದನ್ನೆಗಮಾ ಪ್ರಸ್ತಾವದೊಳ್ (ಪಂಪಾಪು. ೦೫-೭೯ ವ) ; ಹರ್ಷಚಿತ್ತರಾದಾ ತಪಸಿಗಳುಂ ವರ್ಣಾಶ್ರಮಧರ್ಮಂಗಳಂ ರಾಘವಂಗೆ ನಿರವಿಸುತುಮಿ ರ್ದರ್ ಆ ಪ್ರಸ್ತಾವದೊಳ್ (ರಾಮಾಕ. ೦೬-೦೯). [ಸಂ.]

**ಪ್ರಸ್ತಾವನೆ** (ನಾ). ೧. ಪ್ರಾರಂಭ ; ಉಪಕ್ರಮಂ. ೨. ವಿಷಯ ; ಸಮಾಚಾರ : ದೇವಾರಣ್ಯಂ ದೇವರ ದೇವನ ಮನಕಿಂಬನೀಯೆ ತನ್ನಂದನದೊಳ್ ದೇವರ್ ಸಿವಿಗೆಯನಾ ಪ್ರಸ್ತಾವನೆಯುಂ ಕಟುವದಿಟುವೆ ಪೊನಸ್ಥಳದೊಳ್ (ಶಾಂತಿಪು. ೬-೦೩೨). ೩. ವಿಚಾರಸೂಚನೆ ; ವಿಷಯ ಮಂಡನೆ ; ಪೀಠಿಕೆ : ಅಂಥ ದೋಷಾರೋಪವನ್ನು ಮಂಡಿಸುವ ಪ್ರಸ್ತಾವನೆಯು ಲಿಖಿತಮೂಲಕವಾದ ಒಂದು ಸಂಕಲ್ಪದಲ್ಲಿ ಉಲ್ಲಿಖಿತ ವಾಗಿ ನಮೂದಾಗಿದ್ದು (ಕಾಪಾಶ. ೩೦) ; ಮುಂದಿನ ಮಾತಿನ ಪ್ರಸ್ತಾವನೆ ಯನ್ನು ಮಾಡುತ್ತ . . . ಕೇಳಿದ (ಅಹೋಳ. ೫೦). ೪. ಪುಸ್ತಕದ ಪೀಠಿಕೆ ; ಉಪೋದ್ಘಾತ : ವಿಷಯ ನಿರ್ಣಯಿಸುವಾಗ ಗ್ರಂಥದ ಶಿರೋನಾಮ, ಮುನ್ನುಡಿ, ಪ್ರಸ್ತಾವನೆ, ಪರಿವಿಡಿ . . . ಇತ್ಯಾದಿ ಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾನೆ (ಗ್ರಂಥಾ. ೦೬). ೫. [ಕಾವ್ಯಮೀ] ನಾಟಕ (ರೂಪಕ)ಗಳ ಪ್ರಾರಂಭದಲ್ಲಿ ನಟಿ, ವಿದೂ ಷಕ ಅಥವಾ ಪಾರಿಪಾರ್ಶ್ವಕನು ಸೂತ್ರಧಾರನೊಡನೆ ಕಲೆತು ಮಾತನಾಡುವುದು; ನಟಿ, ಸೂತ್ರಧಾರರು ತಮ್ಮ ಸ್ವಂತವ್ಯವಹಾರ ದಿಂದ ನಾಟಕದ ಕಥಾವಸ್ತುವನ್ನು ಸೂಚಿಸಿ ಮುಂದಿನ ಪಾತ್ರ ಪ್ರವೇಶವನ್ನು ಸೂಚಿಸುವುದು ; ಆಮುಖ : ಸೂತ್ರಧಾರನು ಈ ಮಂಗಳಶ್ಲೋಕವನ್ನು ಹೇಳಿ . . . ಹೊರಟು ಹೋಗುವನು. ಅನಂತರ ಕಥೆಯು ಆರಂಭವಾಗುವುದು. ಇಲ್ಲಿಯವರೆಗೆ 'ಆಮುಖ' ಅಥವಾ 'ಪ್ರಸ್ತಾವನೆ' ಎಂದು ಹೆಸರು (ಕೃಶಿಷಿ. ೨೦೩). [ಸಂ. ಪ್ರಸ್ತಾವನಾ]

**ಪ್ರಸ್ತಾವಿತ** (ಗು). ೧. ಪ್ರಾರಂಭವಾದ ; ತೊಡಗಿದ. ೨. ಹೊರಸೂಸಿದ ; ಸಂದಿದ : ವ್ಯೋಮಮುಮಂ ತೀವಿದುದು ತತ್ಕರಪ್ರಸ್ತಾವಿತ ಮಂದಾರಪಾರಿಜಾತಾಸಾರಂ (ಚಂದ್ರಪು. ೬-೪೦). [ಸಂ.]

**ಪ್ರಸ್ತಾವಿಸು** (ಕ್ರಿ). = ಪ್ರಸ್ತಾಪಿಸು : ಲೌಕಿಕದೃಷ್ಟಿಗೆ ಕೂಡ ಈ ಭಾಷೆಯಲ್ಲಿ ಗೋಚರವಾಗುವ ಇನ್ನೊಂದು ಅಪೂರತ್ವವನ್ನು ಇಲ್ಲಿ ಸ್ವಲ್ಪ ಮಟ್ಟಿಗೆ ಪ್ರಸ್ತಾವಿಸಬೇಕೆನ್ನಿಸುತ್ತದೆ (ಸವಿಮರೋ. ೧೨೪). [ಪ್ರಸ್ತಾವ + — ಇಸು]

**ಪ್ರಸ್ತುತ** (ಗು). ೧. ಹೊಗಳಿದ ; ಪ್ರಶಂಸಿಸಿದ. ೨. ಸಿದ್ಧವಾದ ; ತಯಾರಾದ : ಸನ್ಮಾರ್ಗನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕಿದಱ (ಶಾಂತಿಪು. ೦೦-೪೦ ವ). ೩. ಸೇರಿದ ; ಸಮೀಪಿಸಿದ. ೪. ತತ್ಕಾಲದ ; ಸದ್ಯದ ; ಈಗಿನ : ಪ್ರಸ್ತುತ ಪ್ರಸಂಗದಲ್ಲಿ ಆವನ ವಾಗ್ವೈಖರಿಯನ್ನು ಕತ್ತರಿಸಿ ಒಗೆಯಲು ನನ್ನ ಬತ್ತಳಿಕೆಯಲ್ಲಿ ಅಸ್ತ್ರವಿಲ್ಲ (ಪೀಕಕ್ಕ. ೩೪) ; ಪ್ರಶ್ನೆಗಳಿಗೆ . . . ಉತ್ತರವೀಯುತ್ತವೆಯೇ ಎಂಬುದನ್ನು ತಿಳಿಯುವ ಕುತೂಹಲವೇ ಪ್ರಸ್ತುತ ಅಧ್ಯಯನದ ಉದ್ದೇಶ (ಶಾಸಗಿ. ೪ ಮುನ್ನುಡಿ). ೫. ಸಂದರ್ಭೋಚಿತ ವಾದ : ಭೃಂಗಿನಾಟ್ಯಸ್ವನಂ ಪ್ರಸ್ತುತನಾನಾವಾದ್ಯಘೋಷಂಬೆರಸಿ ಬಳಿದುದತ್ತೆತ್ತಲುಂ ಪರ್ಬಿತಾಗಳ್ (ಅಜಿತಪು. ೦೯-೦೬೪). (ನಾ). ೬. ಸಂದರ್ಭ ; ಪರಿಸ್ಥಿತಿ : ಅವಳುಕ್ತಿವಕ್ರಿಮಕ್ಕೆ ಸೂಕ್ತಿ ರತ್ನಾಕರಂ ಮನದೊಳ್ ಮೆಚ್ಚಿ ಮತ್ತೂರ್ವನಾ ಪ್ರಸ್ತುತಕ್ಕೆಂತೆಂದಂ (ಚಂದ್ರಪು. ೬-೭೯ ವ). ೭. ಸಂದರ್ಭಕ್ಕೆ ತಕ್ಕುದು ; ಸಂದರ್ಭೋಚಿತ ವಾದುದು : ಪ್ರಸ್ತುತಮಲ್ಲದುದನೆ ಮಿಗೆ ವಿಸ್ತಾರಿಸಿ ನೆಗಟೆ ವೇಟ್ಕೊ ಡಕ್ಕುಂ ಮತ್ತಪ್ರಸ್ತುತಮೆಂಬುದಲ್ಮಕತಿ (ಕಾಂಶಾ. ೩-೦೭೩). ೮. ಆಗತ್ಯ ; ಆವಶ್ಯಕತೆ : ಪ್ರಸ್ತುತವೆಂಬಾಗ ಹೇರಳದ ಹರುಗೋಲ ವದಗಿಸಿ ಕೊಟು (ಎಕ. VI. ಕಿವಪೂ. ೩-೦೦; 1671) ; ಆವ ಕಡೆಯಿಂದ ಬಿಜೆಮಾಡಿದಿರಿ ನಿಮ್ಮಿಂದಲಾದ ಪ್ರಸ್ತುತಮಿಹುದು (ಪವಪೋ. ೩-೬) ; ವಿಧಿ ನಿಷೇಧಗಳನ್ನು ಪ್ರಭುಸಮ್ಮಿತವಾಗಿ ನಿರೂಪಿಸುವ ವೇದಗಳಲ್ಲಿ ಶ್ರದ್ಧೆಯಿಟ್ಟು ಪ್ರವರ್ತಿಸುವುದೇ ಪ್ರಸ್ತುತವಾಗಿತ್ತು (ಶಾರದ. ೦೩೦). ೯. [ಸಂಗೀತ] ಶ್ರುತಿಗಮಕಗಳಲ್ಲಿ ಒಂದು ಬಗೆ : ಸ್ಫುರಿತ . . . ಪ್ರಸ್ತುತ. . . ಕೋಮಲವೆಂಬ ಯಿಪ್ಪತ್ತೆರಡೇ ಶ್ರುತಿಗಮಕಂಗಳು (ಐಪೀಳ. ೨೩೨). [ಸಂ.]

**ಪ್ರಸ್ತುತಕಾಲ** (ನಾ). ಯೋಗ್ಯವಾದ ಕಾಲ ; ತಕ್ಕ ಸಮಯ ; ಜನನಪ್ರಸ್ತುತಕಾಲದೊಳ್ ಸ್ವಭವನದ್ರೇಕ್ಕಾಣ ವರ್ಗೋತ್ತಮಾಂಶ ನವಾಂಶೋಪಗತ ಸಕೃದ್ದ್ವಿಗುಣಮಂ . . . ಈಗುಂ (ಜಾತಕ. ೬-೩). [ಸಂ.]

**ಪ್ರಸ್ತುತಮತಿ** (ನಾ). ಸಂದರ್ಭದ ಅರಿವಿರುವವನು : ಪ್ರಸ್ತುತ ಮತಿಯಾದ ಜನಮೇಜಯನಿಗೆ ತಟಕ್ಕನೆ ರಾಮಾಯಣದ ಆ ಕಥೆಯನು ಕೇಳುವ ಹಂಬಲ ಮೂಡುತ್ತದೆ (ಪಂಪೀ. ೦೨೪). [ಸಂ.]

**ಪ್ರಸ್ತುತಾಂಕುರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ; ಒಂದು ಪ್ರಸ್ತುತ ವಿಷಯದ ವರ್ಣನೆಯಲ್ಲಿ ಮತ್ತೊಂದು ಪ್ರಸ್ತುತವಾದ ವಿಚಾರವು ಹೊರಹೊಮ್ಮುವುದು: ಪರಪ್ರಸ್ತುತ ದೊಳು ಪ್ರಸ್ತುತವು ತೋರಲು ಉರೆ ಪ್ರಸ್ತುತಾಂಕುರವು (ಕುವಲ. ೩೦).

[ಸಂ.]

**ಪ್ರಸ್ತುತ್ಯ** (ಗು). ೧. ಹೊಗಳಿದ ; ಕೀರ್ತಿಸಿದ : ಕಥೆಯುಂ ತದಾದಿ ಪುರುಷಪ್ರಸ್ತುತ್ಯಜನ್ಮಾಳಿಬಂಧುರಮೆಂದಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದು (ಆದಿಪು. ೦-೨೫). (ನಾ). ೨. ಹೊಗಳಿಕೆಗೆ ಪಾತ್ರ ನಾದವನು; ಕೀರ್ತಿಶಾಲಿ: ಶ್ರೀವೀರನಾರಾಯಣಂ ವಿಸ್ಫಾರೋಜ್ವಳ ಕೀರ್ತಿಸೌರ್ಯನಿಳಯಂ . . . ದಾಯಾದಕೋಳಾಹಳಂ ಪ್ರಸ್ತುತ್ಯಂ ನಯನಾಭಿನನ್ದನಸದಂ ಶ್ರೀವೀರಭೂಪಾಳಕಂ (ಎಕ. VIII. ಷಿಕ. ೯೩-೬; 1060); ಆಸ್ತೇಯಮಹಾವ್ರತಮಂ ಸಲಿಸಿಂ ಪ್ರಸ್ತುತ್ಯರೆನಿಪ್ಪವರಂ ನಿಲಿಸಿಂ (ಶಾಂತಪು. ೦೬೪-೭೨ ರಗಳೆ). [ಸಂ.]

**ಪ್ರಸ್ಥ** (ಗು). ೧. ಮುನ್ನಡೆಯುವ; ಗಮಿಸುವ. ೨. ಇರುವ; ನೆಲಸುವ: 'ವನಪ್ರಸ್ಥ' ಹೋ . (ನಾ). ೩. ಹೋಗಿ ಬರುವಿಕೆ; ಓಡಾಟ: ಅವರ ದೃಷ್ಟಿಯಲ್ಲಿ ಕುಡಚಿಯ ಸ್ಥಾನ ಇನ್ನಷ್ಟು ಉನ್ನತವಾಯಿತು. ಅವರ ಮನೆಯಲ್ಲಿ ಅವನ ಪ್ರಸ್ಥವು ವಿಶೇಷವಾಗಿ ಬೆಳೆಯಿತು (ಕಮುಕೀ. ೯೩೨); ಮಹಾರಾಜರ ದರ್ಬಾರದಲ್ಲಿ ಅವನ ಪ್ರಸ್ಥ ಚನ್ನಾಗಿ ಬೆಳೆಯಿತು (ಗ್ರಾಮಾಯ. ೯೬೦). ೪. ಬೆಟ್ಟದ ಮೇಲಿನ ಸಮತಲಭೂಮಿ; ಸಾನು; ತಪ್ಪಲು : "ನಿತಂಬಃ, ಕಟಕಃ, ಸಾನುಃ, ಪ್ರಸ್ಥಂ, ತಟಂ, ಭೃಗುಃ— ಈ ೬ ತಟ್ಟಲ್" (ಹಲಾಯು. ೨೬-೧೨); ರಜತಾದ್ರಿಪ್ರಸ್ಥವೇದಿಕಾವಕಾಶಂ ಬಿಡಿದು . . . ಪಡುವಣ ಮ್ಲೇಚ್ಛಖಂಡಮಂ ಮೂವಳಸು ಬಳಸಿ ಸಾಧಿಸಿ (ಶಾಂತಿಪು. ೧೧-೯೨ ವ). ೫. ಬೆಟ್ಟದ ತುದಿ,—ಅಗ್ರಭಾಗ. ೬. ಹಿರಿಮೆ; ಔನ್ನತ್ಯ: ಬ್ರಾಹ್ಮಣ, ಬೌದ್ಧ ಹಾಗೂ ಜೈನಸಂಪ್ರದಾಯಗಳಲ್ಲಿ ಆಗ ತಮ್ಮ ತಮ್ಮ ಪ್ರಸ್ಥ ಬೆಳಸಿಕೊಳ್ಳುವ ಒಳಸಂಚುಗಳು ನಡೆದಿದ್ದುದು ಈ ಐತಿಹ್ಯಗಳಿಂದ ಸ್ಪಷ್ಟವಾಗುತ್ತಿದೆ (ಕರ್ನಾಟ. ೦೬೭). ೭. ಮೂವತ್ತೆರಡು ಪಲಗಳ ಒಂದು ಅಳತೆ : ಮೃದ್ವಗ್ನಿಯಿಂದ ಪಾಕ ಮಾಡಿ ಶೋಧಿಸಿ ಆ ಘೃತದಲ್ಲಿ ದ್ರಾಕ್ಷಿ ಒಂದು ಪ್ರಸ್ಥ ಹಾಕಬೇಕು (ಕಳವೈ. ಹಂ. ೯೩೦). ೮. ಒಂದು ಕೊಳಗ ಅಥವಾ ಬಳ್ಳ; ಎಂಟು ಸೇರು: "ಬಳ್ಳದಲ್ಲಿಯುಂ ಪ್ರಸ್ಥಮೆಂಬುದು" (ಹಲಾಯು. ೦೩೩-೧೨); ಯಿದ್ದ ಪ್ರಸ್ಥಕ್ಕೆ ವಸು (ಚತು)ಸಾಸಿರ ? ತಿದ್ದಿದ ಕೊಳಗಕ್ಕೆ ಲಕ್ಷಗೂಡಿತ್ತೆರಡುಂ ಸಾಸಿರ ಬುದ್ಧಿಯ ಖಂಡುಗವೊಂದಕೆ ನಿರ್ಧರ ಮೂವತ್ತ ಎಂಟುಲಕ್ಷಸಾಸಿರ ಕಾಳಂ (ವ್ಯವಹಾ. ಅನುಬಂಧ. ೦-೨); ಒಂದು ಸೊಲ್ಲಗೆಯೇ ನಿಖಂಜವದು ನಾಲ್ಕಾಗಲೊಂದು ಇಡುಬವದು ನಾಲ್ಕಾಗಲೊಂದು ಪ್ರಸ್ಥವಾ ಪ್ರಸ್ಥವೆರಡಾಗಲೊಂದು ವಾಹ (ಎವೇಳ. ೯). [ಸಂ.]

**ಪ್ರಸ್ಥಪುಷ್ಪ** (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಪತ್ರೆ; ಮರುಗ : "ಸಮೀರಣಃ, ಮರುವಕಃ, ಪ್ರಸ್ಥಪುಷ್ಪಃ, ಫಣಿಜ್ಜಕಃ, ಜಂಬೀರಃ – ೫ ಮಗುವ, ಮರುಗದ ಹೆಸರು" (ಸಿದ್ಧಾಂತಿ. ೦೩೦). [ಸಂ.]

**ಪ್ರಸ್ಥಭೂಮಿ** (ನಾ). ಎತ್ತರವಾದ ಸಮತಲಭೂಮಿ : ವಿಶಾಲವಾಗಿ ಮೇಲ್ಮಟ್ಟ ಸಮವಾಗಿರುವ ಎತ್ತರ ಪ್ರದೇಶಕ್ಕೆ ಪ್ರಸ್ಥಭೂಮಿ ಎಂದು ಹೆಸರು (ಭೂಶಿಶ. ೦೩೩); ಸಾಮಾನ್ಯವಾಗಿ ನದಿಯ ಬಯಲುಗಳು, ತೀರ ಪ್ರದೇಶಗಳು, ಪ್ರಸ್ಥಭೂಮಿಗಳೆಂದು ವಿಭಾಗ ಮಾಡಿದ್ದಾಗ್ಯೂ ಈ ದೇಶವು . . . ಭಿನ್ನಭಿನ್ನವಾಗಿಲ್ಲ (ಶಾಇತ್ರ. ೩) ; ಚೋಟಾನಾಗಪುರದ ಬಳಿಯ ಪ್ರಸ್ಥಭೂಮಿಯ ಹರವು (ರಾಷ್ಟ್ರಶಿಪಿ. ೯೩೯). [ಸಂ.]

**ಪ್ರಸ್ಥಾನ** (ನಾ). ೧. ಪ್ರಯಾಣ; ಯಾತ್ರೆ; ಸಂಚಾರ: "ಯಾತ್ರಾ, ಪ್ರಯಾಣಂ, ಪ್ರಸ್ಥಾನಂ—ಈ ೩ ಪಯಣಂ" (ಹಲಾಯು. ೬೯-೨೯೯); ಹರಿಗಂಗುತ್ಸಾಹದಿಂ ಪಟ್ಟಬಂಧನಮಂ ಮಾಡುವಮಿಂದೆ ಹಸ್ತಿನಪುರ ಪ್ರಸ್ಥಾನಮಂ ಮಾಡುವಂ (ಪಂಪಭಾ. ೦೯-೦೦) : ಭೀಮಂಗೆ ನೀಂ ಪಟ್ಟಬಂಧನಮಂ ಮಾಟ್ಪುದದರ್ಕೆ ಹಸ್ತಿನಪುರಪ್ರಸ್ಥಾನಮಂ ಮಾಡುವಂ (ಗದಾಯು. ೦೦-೨೦) ; ಇನ್ನು ತಮ್ಮ ಮುಂದಿನ ಪ್ರಸ್ಥಾನದ ದಿನವನ್ನು ಅವರು ನಿರ್ಣಯಿಸಬೇಕಾಗಿತ್ತು (ವಂಶವೃ. ೯೬೭). ೨. ಶತ್ರುಗಳನ್ನು ನಿಗ್ರಹಿಸಲು ಮಾಡುವ ಪ್ರಯಾಣ ; ದಂಡಯಾತ್ರೆ : ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾವಳಿಯ ದರಿಗೊಂಡುದ್ದೇಶಂ ಚಕ್ರವರ್ತಿಯ ನಾಮದಗ್ಗಳದ ಸಿರಿಯುಂ ಪೋಲ್ವನ್ನಂ (ಶಾಂತಿಪು. ೦೦-೦೯) ; ತನ್ನ ವಜೀರನಿಗೆ ಆ ಮಂತ್ರಿಯು ತಕ್ಕ ಸತ್ಕಾರ ಮಾಡೆಂದು ಶಾಸನವಿರಿಸಿ ತಾನು ಪ್ರಸ್ಥಾನದ ಸಿದ್ಧತೆ ಮಾಡತೊಡಗಿದನು (ಕಗದ್ಯ. ೦೩). ೩. [ನಾಟ್ಯ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು; ಕೆಳವರ್ಗದ ನಾಟಕಗಳಲ್ಲಿ ಒಂದು : ಉಪರೂಪಕಗಳು—೧. ನಾಟಿಕಾ . . . ೬. ಪ್ರಸ್ಥಾನ (ಸಂವಾಟ. ೩೨). [ಸಂ.]

**ಪ್ರಸ್ಥಾನಂಗೆಯ್** (ಕ್ರಿ). ಪ್ರಯಾಣ ಮಾಡು; ಯಾತ್ರೆ ಹೋಗು : ಆ ಸ್ಥಳದೊಳಿನ್ನೆಗಂ ದೇವಸ್ಥಪತಿ ನಿಜಾಜ್ಞೆಯಿಂದೆ ನಿರ್ಮಿಸುಗುಂ ರತ್ನಸ್ಥಗಿತಮೆನಲ್ ಪುರಮಂ ಪ್ರಸ್ಥಾನಂಗೆಯ್ಗು ತಡೆಯುದಲ್ಲಿಗೆ ಕಟಕಂ (ಜಗಪಿ. ೯-೨೩). [ಪ್ರಸ್ಥಾನ + ಕೆಯ್[1]]

**ಪ್ರಸ್ಥಾನತೂರ್ಯ** (ನಾ). ಪ್ರಯಾಣ ಹೊರಡುವಾಗ ಮಾಡುವ ವಾದ್ಯಘೋಷ: ಅನಂತರಂ ವಸಂತವನಕೇಳೀಪ್ರಸ್ಥಾನತೂರ್ಯಂಗಳಂ ಪೊಯ್ಸಿದಾಗಳ್ (ಚಂದ್ರಪು. ೭-೭೭ ವ). [ ಸಂ. ]

**ಪ್ರಸ್ಥಾನತ್ರಯ** (ನಾ). ಬ್ರಹ್ಮಸೂತ್ರ, ಉಪನಿಷತ್ತುಗಳು ಮತ್ತು ಭಗವದ್ಗೀತೆಗಳೆಂಬ ಮೂರು ಪ್ರಮಾಣಗ್ರಂಥಗಳಂ : ಬ್ರಹ್ಮಸೂತ್ರಗಳು, ಉಪನಿಷತ್ತುಗಳು, ಭಗವದ್ಗೀತೆ ಎಂಬವು ಇಂದಿಗೂ ಪ್ರಸ್ಥಾನತ್ರಯಗಳೆಂದು ಪ್ರಸಿದ್ಧ (ಶಾಇತ್ರ. ೨೬೦) ; ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ – ಈ ಮೂರೂ ಪ್ರಸ್ಥಾನತ್ರಯವೆಂದು ಹೆಸರು ಪಡೆದು ವೈದಿಕಧರ್ಮಕ್ಕೆ ಅತಿಪ್ರಮಾಣಗ್ರಂಥಗಳೆಂದು ನಿರ್ಧರಿತವಾಗಿದೆ (ಭಾರದ. ೧೦೯). [ಸಂ.]

**ಪ್ರಸ್ಥಾನತ್ರಯಿ** (ನಾ). = ಪ್ರಸ್ಥಾನತ್ರಯ : ಕರ್ಮಮಾರ್ಗವೇ ಶ್ರೇಷ್ಠವೆಂದು ಪ್ರಸ್ಥಾನತ್ರಯಿಗಳಲ್ಲಿ ಒಂದಾದ ಗೀತೆಯೂ ಹೇಳಿದೆ (ಜೀವಾಪ. ೦೦೦) ; ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ- ಪ್ರಸ್ಥಾನತ್ರಯಿಗೆ ಟೀಕೆ ಬರೆಯದೆ ಆಚಾರ್ಯರಿಗೆ ಪ್ರಧಾನ್ಯ ದೊರೆಯುತ್ತಿರಲಿಲ್ಲ (ಕರ್ನಾಳ. ೩೦). [ಸಂ. ಪ್ರಸ್ಥಾನತ್ರಯೀ]

**ಪ್ರಸ್ಥಾನಪಾಂಶು** (ನಾ). (ರಥದ) ಚಲನೆಯಿಂದ ಉಂಟಾದ ಧೂಳು : ದಿನನಾಥರಥಪ್ರಸ್ಥಾನಪಾಂಶುಪೆನಿಸಿ ದಿಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ (ಮಲ್ಲಿಪು. ೭-೧೦೩). [ ಸಂ. ]

**ಪ್ರಸ್ಥಾನಭೇರಿ** (ನಾ). ೧. ದಿಗ್ವಿಜಯಕ್ಕಾಗಿ ಕೈಗೊಂಡ ದಂಡಯಾತ್ರೆಗಳಲ್ಲಿ ಮಾಡುವ ವಾದ್ಯಘೋಷ : ವಿಜಯೋದ್ಯೋಗವನೆತ್ತಿಕೊಂಡು ಪ್ರಸ್ಥಾನಭೇರಿಯಂ ಪೊಯ್ಸಿದುದು (ಶಾಇ. XX. ೯೬-೦೩ : 1076 ?) : ಅಷ್ಟದಿಗ್ಭಿತ್ತಿಯಂ ಧೀಂಕಿಟ್ಟತ್ತು ರಘುಪ್ರವೀರವಿಜಯಪ್ರಸ್ಥಾನಭೇರೀರವಂ (ಪಂಪರಾಮಾ. ೦೨-೦೭) ; ಮಗಧರಾಜಂ ಪ್ರಸ್ಥಾನಭೇರಿಯಂ ಪೊಯ್ಸೆಂದು ಸೇನಾಗ್ರಣಿಗೆ ಬೆಸಸಿದಾಗಳ್ (ಜಗಪಿ. ೭-೩೯ ವ). [ಸಂ. ಪ್ರಸ್ಥಾನಭೇರೀ]

**ಪ್ರಸ್ಥಾನಮಂಗಳ** (ನಾ). ಪ್ರಯಾಣಕ್ಕೆ ಹೊರಡುವ ಮೊದಲು ಮಾಡುವ ಮಂಗಳಕಾರ್ಯ : ಎಲೆ ಸಖಿ, ಏಳು ಏಳು ! ಶಕುಂತಳೆಯ ಪ್ರಸ್ಥಾನಮಂಗಳವನ್ನು ನೆರವೇರಿಸೋಣ (ಶಾಕುಂತ. ೯೯-೨೩). [ಸಂ. ಪ್ರಸ್ಥಾನಮಂಗಲ]

**ಪ್ರಸ್ಥಾನಶಿಬಿರ** (ನಾ). ಪ್ರಯಾಣಕಾಲದಲ್ಲಿ ತಂಗಲು ಏರ್ಪಡಿಸುವ ಬಿಡಾರ, – ವಿಶ್ರಾಂತಿಸ್ಥಳ : ಗೃಹಮಹತ್ತರಂ ಮುನ್ನಮೆ ಸಮೆದುದಂ ಪ್ರಸ್ಥಾನಶಿಬಿರಮಂ ಪೊಕ್ಕು (ಚಂದ್ರಪು. ೦೦-೧೭ ವ) : ಆ ಪ್ರಸ್ಥಾನಶಿಬಿರದಿಂದಂ ತಳರ್ದಾಗಳ್ (ಭಾರತಪು. ೦೦-೩೩ ವ). [ಸಂ.]

**ಪ್ರಸ್ಥಾಪಿಸು** (ಕ್ರಿ). ಪ್ರಚಾರಕ್ಕೆ ತರು ; ಪ್ರಚಲಿತಗೊಳಿಸು : ಸ್ವಾಮಿ ವಿವೇಕಾನಂದರು ಭಾರತೀಯ ಆಧ್ಯಾತ್ಮದ ಮೌಲ್ಯಗಳನ್ನು ಸಪ್ತಸಾಗರಗಳಾಚೆಯಲ್ಲಿ ಪ್ರಸ್ಥಾಪಿಸಿದರು (ಶ್ರಬಂಧ. ೭೦) ; ಒಬ್ಬರಿಗೊಬ್ಬರು ತಮ್ಮ ಮತವೇ ಶ್ರೇಷ್ಠವೆಂದು ಪ್ರಸ್ಥಾಪಿಸಲು ಹೆಣಗುತ್ತಿದ್ದರು (ಸಾಹಿಪ. ೦೩೩). [ಸಂ. ಪ್ರಸ್ಥಾಪನ + –ಇಸು[1]]

**ಪ್ರಸ್ಥಿತಿ** (ನಾ). ಮುನ್ನಡೆಯುವುದು ; ಸಂಚಾರ ; ಗಮನ. [ಸಂ.]

**ಪ್ರಸ್ಪರ್ಧಿ** (ಗು). ೧. ಪೈಪೋಟಿ ಮಾಡುವ ; ಸ್ಪರ್ಧಿಸುವ : ನೀಹಾರಪ್ರಸ್ಪರ್ಧಿ ಚಂಚಚ್ಚಮರಜಕಲಹಂಸಾಸ್ಪದಂ (ಆದಿಪು. ೦೦-೦೯) ; ಮದನಪ್ರಸ್ಪರ್ಧಿಸೌಂದರ್ಯದೆ ನೃಪಸುತೆಯಂ ಸತ್ಕಳಾಜಾಳಚಾತುರ್ಯದೆ . . . ಎಡಗಿಸಿ (ಚಂದ್ರಪು. ೩-೦೩೯). (ನಾ). ೨. ಎದುರಾಳಿಯಾದುದು ; ಪ್ರತಿ

ಸ್ಪರ್ಧಿಯಿಾದುದಂ: ಪ್ರಕ್ಷುಬ್ಧಕಲ್ಲೋಲಕಲ್ಪಿತಕೋಲಾಹಲಕಲ್ಪಕಾಲರಭಸ ಪ್ರಸ್ಪರ್ಧಿಯಂ ವಾರ್ಧಿಯುಂ (ಕಾವ್ಯಸಾ. ೬೩). [ಸಂ. ಪ್ರಸ್ಪರ್ಧಿನ್]

**ಪ್ರಸ್ಫಾರ** (ಗು). ೧. ಹೊಳೆಯುವ : ಲೋಕೈಕಭೀಕರಮಾಟಂದುದು ನೀಲ ಮೇಘನಿಕಟಪ್ರಸ್ಫಾರದಂಭೋಳಿವೊಲ್ (ಕುಣಾಪಿಷ. ೦೪-೦೭೪). ೨. ಉಬ್ಬಿದ; ಊದಿದ ; ಹಿಗ್ಗಿದ. ೩. ಅಹಂಕಾರವುಳ್ಳ. [ಸಂ.]

**ಪ್ರಸ್ಫುಟ** (ಗು). ೧. ಅರಳಿದ ; ವಿಕಾಸವಾದ. ೨. ಪ್ರಕಟವಾದ. ೩. ಸ್ಪಷ್ಟವಾದ ; ವ್ಯಕ್ತವಾದ. ೪. ಹೊಳೆಯುವ; ಪ್ರಕಾಶಿಸುವ ; ಬೆಳಗುವ : ವಿನುತಶ್ವೇತಾತಪತ್ರಾವಳಿಯರುಣಮಣಿಪ್ರಸ್ಫುಟೋತ್ತುಂಗ ಸಿಂಹಾಸನಮಂ . . . ತಂದರ್ (ಶಂಕಕಂ. ೨೨೩-೦೭) ; ಚೀನಚೇಲಾವೃತ ಮಧ್ಯಂ ಮಾಕ್ತಿಕಪ್ರಸ್ಫುಟಮಕುಟನುದಂಚಿತ್ಸುವರ್ಣೋರುವೇತ್ರಾಂಚಿತ ಹಸ್ತಂ ನಿಂದು ಕಣ್ಗೊಪ್ಪಿದಂ (ರಾಜಶೇ. ೦೪-೦೩೨). [ಸಂ.]

**ಪ್ರಸ್ಫುಟಿಸು** (ಕ್ರಿ). ವ್ಯಕ್ತವಾಗು ; ಪ್ರಕಟವಾಗು : ಈಶ್ವರಪ್ರಕೃತಿ ರೂಪಂ ಪ್ರಸ್ಫುಟಿಸುತೀಯೆಡೆಯ ಸತ್ಯಶಿವಸುಂದರದ ಸಚ್ಚಿದಾನಂದಸ್ವರೂಪಂ (ಮಂಗಿಲೀ. ೩೪-೦೦). [ಪ್ರಸ್ಫುಟ + — ಇಸು]

**ಪ್ರಸ್ಫುರಿತ**(ಗು). ೧. ನಡುಗುವ ; ಅದುರುವ; ಚಂಚಲವಾದ: ಪ್ರಸ್ಫುರಿತ ದಶನವಸನನುಮಾಗಿ (ಕಂಪ್ರಕೃ. ೭-೦೦೦ ಆ). ೨. ಹೊಳೆಯುವ ; ಪ್ರಕಾಶಿಸುವ : ಹೇಮಪ್ರಭಾಪ್ರಸ್ಫುರಿತ ಗಿರಿಶಚಂಚಜ್ಜಟಾಜಾಲಜೂಟವ್ಯೋಮ ಪ್ರೋದ್ಯಾಸಿಚಂದ್ರಂ ತ್ರಿಭುವನಜನಕಾನಂದಮಂ ಮಾಡುಗೆಂದುದು (ಕಾಪಂಕ್ಷು. ೦); ಒಡಗೋಡು ಬಂದವತ್ಯಂತವಿಭವದಲಿ ಇರಿಸಿ ಕೃಷ್ಣಾಜಿನಕುಶಾ ಪ್ರಸ್ಫುರಿತಪೀಠದೊಳರ್ಘ್ಯಪಾದ್ಯಾದ್ಯುರುಸಪರ್ಯೆಗಳಿಂದ ಸತ್ಕರಿಸಿದರು ಮುನಿವರನ (ತಿಪ್ಪುಕೃ. ೩-೬೩). ೩. ಚೆದರಿಸಿದ ; ಚೆಲ್ಲಾಪಿಲ್ಲಿ ಮಾಡಿದ: ಯುವತೀಸಂತಾನ ನಾನಾಚಲದಳಕಲಸಲ್ಲಾಸ್ಯಲೀಲಾಪ್ರಬದ್ಧಂ ವಿವಿಧಾ ಗಾರಾಂಗಣಪ್ರಸ್ಫುರಿತಕೃತಕಕಾಸಾರವಾನೀಯಭಂಗೋದ್ಭವಬಿಂದುವ್ರಾತ ಶೀತಾವರಣನೊಲವಿನಿಂ ತೀಡಿದಂ (ಗಿರಿಕ. ೪-೦೦೯) ; ಕರಿ ಕೇಸರಿಯಂ ಕೆಣಕಿದ ಪರಿಯಂ ಪರುಟವಿಸದಿರ್ ಮದಾಂಧತೆಯಿಂದಾಂತರಿಬಲಬಲಾಹಕ ಪ್ರಸ್ಫುರಿತಮಹಾನಿಲನೊಳ್ (ಕಬಕಂ. ೪-೨೯). [ಸಂ.]

**ಪ್ರಸ್ಫುರಿಸು** (ಕ್ರಿ). ಶೋಭಿಸು ; ಪ್ರಕಾಶಿಸು : ಅವರ ಮನದಜ್ಞಾನಮಂ ಬಿಡಿಸಿ ಸಹಜವೆನಿಸುವದೇ ವಿಶೇಷವೆಂದೀರೈದುಭುಜಗಳಂ ತವೆ ಪಂಚ ಮುಖತ್ರಿಲೋಚನಗಳಂ ತೋಱಿ ಪ್ರಸ್ಫುರಿಸುತ್ತಲಿರ್ದನಯ್ಯಂ (ಗುರುಬಾ. ೩-೪). [ಪ್ರಸ್ಫುರಣ + — ಇಸು]

**ಪ್ರಸ್ಫೋಟನ** (ನಾ). ೧. ಅರಳುವಿಕೆ ; ವಿಕಸನ. ೨. ಬಿರಿಯುವುದು ; ಒಡೆಯುವುದು. ೩. ಕೇರುವುದು; ತೂರುವುದು. ೪. ಕೇರುವ ಸಾಧನ ; ಮೊರ : "ಪ್ರಸ್ಫೋಟನಂ, ಶೂರ್ಪ — ೨ ಮೊರ" (ಸಿದ್ಧಾಂತ. ೨೫೦). [ಸಂ].

**ಪ್ರಸ್ಯಂದ** (ನಾ). ೧. ಸ್ರವಿಸುವುದು ; ಸೋರುವುದು; ಸ್ರಾವ. ೨. ಸ್ರವಿಸುವ ದ್ರವ: ಕರಕಂಡಾತಕ್ಕೆ ಪುಟ್ಟಿದಪಂಜಜಮೆನಿಸೆ ಲೀಲಾಂಬುಜಂ ತುಂಬಿ ಬಿಂಬಾಧರರಾಗಂ ಸೂಸಿತೆಂಬಂದದೊಳೆ ಪೊಳೆಯೆ ಕೆಂಬಲ್ಗಳೊಳ್ಗೆಂಪು ಪಾದಾಂಬುರುಹಪ್ರಸ್ಯಂದವೊಕ್ಕಂತಿರೆ (ರಾಜಶೇ. ೬-೩೨). [ಸಂ.]

**ಪ್ರಸ್ಯಂದಿ** (ಗು). ಸಂರಿಯುವ : ಅವಿರಳಪ್ರಸ್ಯಂದಿಬಾಷ್ಪೋದಕಾನನನಾ ಕಾನನದೊಳ್ತೊಟಲ್ದು ರಘುರಾಮಂ ಸೀದೆವಟ್ಟಿರ್ದುದಂ(ಕಂಠಾಪತ. ೯-೦೨೦). [ಸಂ. ಪ್ರಸ್ಯಂದಿನ್]

**ಪ್ರಸ್ರವ** (ಗು). ೧. ಹರಿಯುವ ; ಸ್ರವಿಸುವ. (ನಾ). ೨. ಪ್ರವಾಹ. ೩. ಬೆಟ್ಟದ ಝರಿ ; ಅಬ್ಬಿ. ೪. ಮೂತ್ರ. [ಸಂ.]

**ಪ್ರಸ್ರವಣ** (ನಾ). ೧. ಬೆಟ್ಟದ ಝರಿ; ಒಜ್ಜರ; ಅಬ್ಬಿ: "ಒಚಿತೆವೊಜ್ಜರ ಪ್ರಸ್ರವಣಮೆನಿಸಿ" (ಚುಂಗಣಾ. ೦೨೪-೦೩) ; ಪರ್ವತ ಪ್ರಾಂತವಾದ ಎತ್ತರವಾದ ಪ್ರದೇಶದಿಂದ ಜಿನುಗಿ ರಿದು ಬರುವ ನೀರು ಪ್ರಸ್ರವಣವು (ಅರ್ಥಶಾ. ೧೬೬). ೨. ಜಲಪಾತ : ವಿವಿಧಗುಲ್ಮನಿಕುಂಜದಲಿ . . . ಪವನನಿಸ್ವನ ಪರ್ಣರವಪ್ರಸ್ರವಣಧಾರಾಧ್ವಾನಖಗಮೃಗನಿವಹನಿನದದಲಬಿಸಿ ನೋಡಿದ ರಿವರು ಜಾನಕಿಯ (ತೊರರಾ. ೩-೦೦-೩೨) ; ಪ್ರಸ್ರವಣಸ್ಥಾನವು ಪ್ರಸ್ರವಣ ಗಳಿರುವ ಗಿರಿದುರ್ಗಪ್ರದೇಶದ ನಿವಾಸಿಗಳಿಗಲ್ಲದೆ ಮೈದಾನದಲ್ಲಿರುವವರಿಗಲ್ಲ (ಅರ್ಥಶಾ. ೩೦). ೩. ನೆಲದೊಳಗಿಂದ ಉಕ್ಕಿ ಬರುವ ನೀರು; ಬುಗ್ಗೆ ; ತಲಪರಿಗೆ ; ಊಟೆ. ೪. ಬೆವರು ; ಸ್ವೇದ. ೫. ಮೂತ್ರ ವಿಸರ್ಜನೆ. [ಸಂ.]

**ಪ್ರಸ್ರಾವ** (ನಾ). ೧. ಹರಿಯುವಿಕೆ ; ಸ್ರವಿಸುವಿಕೆ. ೨. ಮೂತ್ರ : "ಮೂತ್ರಂ, ಪ್ರಸ್ರಾವಃ — ೨ ಮೂತ್ರದ ಹೆಸರುಗಳು" (ಸಿದ್ಧಾಂತ. ೦೮೮). [ಸಂ.]

**ಪ್ರಸ್ವಾಪನ** (ನಾ). ೧. ನಿದ್ರಿಸುವಂತೆ ಮಾಡುವುದು; ನಿದ್ರೆಯನ್ನುಂಟು ಮಾಡುವುದು. ೨. ಜೃಂಭಕ, ಪ್ರಸ್ವಾಪನ, ಅಪ್ರತಿಹತ, ನಿಶ್ಶ್ರೇಷೀಕರಣ, ಜೀವಗ್ರಾಹಗಳೆಂಬ ಐದು ಬಗೆಯ ಮಂತ್ರ ಗಳಲ್ಲಿ ಒಂದು ; ಎದುರಾಳಿಗೆ ನಿದ್ರೆಯನ್ನುಂಟುಮಾಡುವ ಒಂದು ಮಂತ್ರ: ಜೃಂಭಕ ಪ್ರಸ್ವಾಪನ ಅಪ್ರತಿಹತ . . . ಎಂಬ ಪಂಚಶಕ್ತಿಯ ಮಂತ್ರಗಳಂ (ಪವೇಳ. ೫೦). [ಸಂ.]

**ಪ್ರಸ್ವಿನ್ನ** (ಗು). ಚೆನ್ನಾಗಿ ಬೆವತಿರುವ : ದೀನಂ ವಿವರ್ಣವದನಂ ಕೃಶಂ ದಿಂಡುರುಳಿ, ಪ್ರಸ್ವಿನ್ನಚೀರವಲ್ಕಲಜಟಾಜಟಿಲನಂ ಕಷ್ಟದಿಂ ಗುರುತಿಸಿ (ಶ್ರೀರಾಮಾ. ೦೬೪ ೩೨೭). [ಸಂ.]

**ಪ್ರಸ್ವೇದ** (ನಾ). ೧. ಅತಿಯಾದ ಬೆವರು : ಅಮರಣಮುಸ್ನಾನವ್ರತಮಂ ತಾಳ್ದಿದನುಂ ರವಿಕಿರಣಪ್ರತಾಪಜನಿತಪ್ರಸ್ವೇದಾಕುಲಪವನಾನೀತಪಾಂಶು ನಿಚಯನುಂ . . . ಅಪ್ಪ ಜಿನಮುನಿಗೆ ಮಲಪರೀಷಹಜಯಂ ಅಱಿಯೆ ಪಡುಗುಂ (ಶಕ್ತ್ಯಕೃ. ೩೩೭). ೨. ಆನೆ. [ಸಂ.]

**ಪ್ರಹತ** (ಗು). ೧. ಹೊಡೆದ ; ಬಾಜಿಸಿದ : ಮೌಹೂರ್ತಿಕಗಣನಿರೂಪಿತ ಪ್ರಶಸ್ತಮುಹೂರ್ತದೊಳತಿಪ್ರಮೋದನಿರ್ಭರಪ್ರಣಯಿಪ್ರಹತಮಂಗಳ ಪಟ ಹರವಂಗಳುಂ . . . ಅಂತಃಪುರಜನಾಶೀರ್ವಾದಕೋಳಾಹಳಮುಂ ಮಸೆಯೆ (ಆದಿಪು. ೪-೯೭ ವ). ೨. (ಚಪ್ಪಾಳೆಯಂತೆ) ತಟ್ಟಿದ : ತಾಳ ತತ್ಪರಶಿಶುನರ್ತನಪ್ರಹತಕಂಣರುಝುಂಕೃತಹಸ್ತತೂರ್ಯಸುಂದರರವ ದಿಂದದಂ ಮುಱಿಸಿದಳ್ ಗಡ ಮುಗ್ಧೆಯದೇಂ ವಿದಗ್ಧೆಯೋ (ಕಾಂತಿಪು. ೬-೬೩). ೩. ಹೊಡೆತ ತಿಂದ ; ಗಾಯಗೊಂಡ. ೪. ಸೋತ ; ಅಪಜಯ ಹೊಂದಿದ. ೫. ಹರಡಿದ; ವಿಸ್ತಾರಗೊಂಡ. ೬. ಅರಿತ; ತಿಳಿದಿರುವ. (ನಾ). ೭. ತಿಳಿದವನು ; ಪ್ರಾಜ್ಞ ; ಜ್ಞಾನಿ : "ವ್ಯುತ್ಪನ್ನಃ, ಪ್ರಹತಃ, ಕ್ಷುಣ್ಣಃ, ಸಂಸ್ಕೃತಃ — ಈ ೪ ಪಂಡಿತಂ" (ಕಲಾಯು. ೩೬-೦೯೭). [ಸಂ.]

**ಪ್ರಹತಿ** (ನಾ). ಹೊಡೆತ ; ಏಟು ; ಪೆಟ್ಟು : ನೀಂ ಕರಲ್ಚಿ ವೋಣ್ಪ್ರಹತಿಯನಾನದೆಯ್ದುವೆಯದೆಂತೆಲೆ ತೀರ್ಚದೆ ನಿನ್ನನಿರ್ಪನೇ (ರಾಜಶೇ. ೬-೧೦). [ಸಂ.]

**ಪ್ರಹತಿಸು** (ಕ್ರಿ). ೧. ಹೊಡೆ ; ಏಟು ಕೊಡು ; ಪೆಟ್ಟು ಹಾಕು. ೨. ನಾಶ ಮಾಡು : ಶರತ್ಕಾಲದವೊಲ್ ಪ್ರಹತಿಸುಗೆ ಸಮಗ್ರಪಂಕಮಂ ಸುಜನೌಘಂ (ಶಾಂರಪು. ೦-೩೦). [ಪ್ರಹತ + — ಇಸು]

**ಪ್ರಹರ** (ನಾ). ೧. ಹೊಡೆತ ; ಏಟು ; ಪೆಟ್ಟು : 'ಪ್ರಹರಿಸು' ಪರಾ. ೨. ನಿವಾರಣೆ ; ನಾಶ : ದುಸ್ತರಜ್ಞಾನಪ್ರಪಂಚತಮಸ್ತತಿ ಪ್ರಹರಾರ್ಥದತ್ತಪ್ರಸ್ತುತಜ್ಞಾನ (ಬಸವ. ೬-೪೯). ೩. ಒಂದು ದಿವಸದ ಎಂಟನೆಯ ಭಾಗ ; ಜಾವ ; ಯಾಮ : "ಪ್ರಹರಃ, ಯಾಮಃ — ಈ ೨ ಜಾವಂ" (ಕಲಾಯು. ೦೮-೦೦೭) ; ಎರಡನೆಯ ಪ್ರಹರದ

ರಕ್ಷಕರು ಬರುವುದರೊಳಗಾಗಿ ಇವರು ತಮ್ಮ ಕಾರ್ಯಸಾಧನೆ ಮಾಡಿಕೊಳ್ಳಬೇಕಾಗಿತ್ತು (ಕಾಂಕರಾ. ೨೨೬); ಜೈಲಿನಲ್ಲಿ . . . ಎಂಟೂ ಪ್ರಹರ ಮತ್ತು ಅರವತ್ತ ನಾಲ್ಕು ಗಳಿಗೆಗೆಯಲ್ಲೂ ಹೃದಯದಲ್ಲಿ ಅಂಕಿತವಾದ ನಿನ್ನ ಮೂರ್ತಿಯ ದರ್ಶನ ಮಾಡುತ್ತಲೇ ಇದ್ದೆ (ಶ್ರೀಕಾಶ. ೦೬೩). [ಸಂ.]

**ಪ್ರಹರಣ** (ನಾ). ೧. ಹೊಡೆತ ; ಏಟು ; ಪೆಟ್ಟು : ರಣಾಂಗಣದಂತೆ ಚಮೂರಚಿತಪ್ರಹರಣವಿಶೀರ್ಣರೂಪಮುಂ (ಚಂದ್ರಪ್ರ. ೩-೩೨ ವ). ೨. ಗದಾಯುದ್ಧದ ಒಂದು ವರಸೆ : ವಿಳಂಬಿತವಾಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಮುಚಿತವಿರುದ್ಧಮಚಿಂತ್ಯಮುಮೆಂಬೆಂಟುಂತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ(ಗದಾಯು. ೬-೦೪). ೩. ಯಾವುದಾದರೊಂದು ವಾದ್ಯದ ಬಾಜನೆ, –ವಾದನ : ಪ್ರಹರಣಮಿಂಪಂ ಪಡೆದಿರೆ ಸುರವಧು ಮೃದಂಗಮಂ ಬಾಜಿಸಿದಳ್ (ಚಂದ್ರಪ್ರ. ೦೦-೦೯೩). ೪. ಎಸೆಯುವುದು ; ಬಿಸಾಡುವುದು. ೫. ಆಕ್ರಮಣ : ಕ್ಷತ್ರಿಯಜಾತಿಗೆ ಸತ್ಯ ತ್ಯಾಗ ಪ್ರಜಾಪಾಲನ ಶರಣಾಗತ ರಕ್ಷಣಪ್ರಹರಣಕ್ಷಮಾದಿ ಗುಣಾಚರಣಮುಮಂ . . . ನಿಜಿಸಿ (ಅಂತ್ರ. ೬-೭೩ ವ). ೬. ನಿವಾರಿಸುವುದು ; ತೆಗೆದುಹಾಕುವುದು. ೭. ಆಯುಧ; ಶಸ್ತ್ರ : "ಹೇತಿಃ , ಶಸ್ತ್ರಂ, ಪ್ರಹರಣಂ, ಆಯುಧಂ, ಅಸ್ತ್ರಂ–ಈ ೫ ಕೆಯ್ದು" (ಶಬ್ದಮ. ೭೩-೩೦೩). ೮. ಕಾಳಗ; ಯುದ್ಧ: "ಸಂಗ್ರಾಮಃ . . . ಪ್ರಹರಣಂ . . . ವಿಗ್ರಹಃ–ಈ ೩೫ ಕಾಳೆಗಂ" (ಶಬ್ದಮ. ೭೩-೨೯೯); ಅರವಿಂದಬಾಂಧವತನೂಜನ ಮಹಾಪ್ರಹರಣಹತಿಯೊಳ್ ಯಮನಂದನನ ನೇರ್ಪುಮನಾತ್ಮೀಯಬಲದ ನಾಯಕರ ಸಾವುಮನಱಿದು (ಪಂಪಭಾ. ೦೨-೦೨೦ ವ). [ಸಂ.]

**ಪ್ರಹರಣಕಲಿಕ** (ನಾ). [ಛಂದ] ಪಾದವೊಂದಕ್ಕೆ ಹದಿನಾಲ್ಕು ಅಕ್ಷರಗಳನ್ನುಳ್ಳ, ಪ್ರತಿಸಾಲಿನಲ್ಲಿಯೂ ನನಭನಲಗವೆಂಬ ಗಣಗಳೂ ಒಂದು ಲಘು ಮತ್ತು ಒಂದು ಗುರುವೂ ಇರುವ, ಶಕ್ವರೀ ಛಂದಸ್ಸಿನ ಒಂದು ವೃತ್ತ : ನನಭನಲಗಮೆಂಬಿವು ಗಣನಿವಹಂ ಜನಿಯಿಸಿ ಯತಿ ನಿಲ್ವಿರೆ ಹಯುತತಿಯೊಳ್ ನಿನಗಿದನಱಿವಂತಿರೆ ವಿರಚಿಸಿದೆಂ ವನರುಹವದನೇ ಪ್ರಹರಣಕಲಿಕಂ [ಛಾಂ. ತಂ] (ಛಂದೋಂಬು. ೨-೦೯೭). [ಸಂ. ಪ್ರಹರಣಕಲಿಕಾ]

**ಪ್ರಹರಣಶ್ರಮ** (ನಾ) ೧. ಇತರರನ್ನು ಹೊಡೆದು ಆಯಾಸ ಪಡಿಸುವುದು, –ನೋಯಿಸುವುದು. ೨. ಆಯುಧಗಳಿಂದ ಮಾಡುವ ವ್ಯಾಯಾಮ ; ಶಸ್ತ್ರಾಭ್ಯಾಸ . ೧, ೨ : ಪ್ರಹರಣಶ್ರಮಂ ಖುರಳಿಯೊಳ್ ಮುಖರತೆ ಪುರ್ರ್ರ್ರುಳಿಯೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪ್ರ. ೩-೯ ವ). [ಸಂ.]

**ಪ್ರಹರಣೆ** (ನಾ). = ಪ್ರಹರಣ ೧ : ಅತ್ಯುತ್ಕೃತ್ವಂ – ಅರ್ಕೆ – ಎರ್ಕೆ... ಪ್ರಹರಣ – ಪ್ರಹರಣೆ (ಶಬರ. ೨೬೯ ತ್ರಪೋ). [ಸಂ. ಪ್ರಹರಣ]

**ಪ್ರಹರಿ** (ನಾ). (ಸರದಿಯಂತೆ) ಕಾಯುವವನು ; ಕಾವಲುಗಾರ : ನವಕುಮಾರನು. . .ಕಪಾಲಕುಂಡಲೆಗೆ ಸಲುವಾಗಿ ಒಬ್ಬ ದಾಸಿಯನ್ನೂ ಒಬ್ಬ ಪ್ರಹರಿಯನ್ನೂ. . . .ಕಳುಹಿದನು (ಕಪಾಕುಂ. ೪೦). [ಸಂ. ಪ್ರಹರಿನ್]

**ಪ್ರಹರಿಣಿ** (ನಾ). [ಜೈನ] ಮಂತ್ರದ ಸಹಾಯದಿಂದ ಪೆಟ್ಟು ಕೊಡುವ ಒಂದು ವಿದ್ಯೆ : ಪ್ರಮೋಹಿನಿ ಪ್ರಹರಿ [ಣಿ] ಣಿ ಸಂಕ್ರಮಣ. . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಚಾಪುಂಪು. ೧೯೩). [ಸಂ. ಪ್ರಹರಿಣೀ]

**ಪ್ರಹರಿಸು** (ಕ್ರಿ). ೧. ಹೊಡೆ ; ಏಟು ಹಾಕು : ಸ್ವಾಧೀನವಾಗದಿದ್ದರೆ ಶೂಲಗಳಿಂ ಪ್ರಹರಿಸುತ (ಸೌಗಂಧಿ. ೨೯೨-೩) ; ಅವರು ಅವನನ್ನೂ ಅವನ ಕುದುರೆಯನ್ನೂ ದೊಣ್ಣೆಯಿಂದ ಪ್ರಹರಿಸುತ್ತಿದ್ದರು (ಮರಿಕಾ. ೦೬೩). ೨. ನಾಶಪಡಿಸು ; ನಾಶ ಮಾಡು : ಮಹಿಸು ಕೆಲಭಾರಗಳ ; ಸಹಿಸು ಕೆಲನೋವುಗಳ ಪ್ರಹರಿಸರಿಗಳನನಿತುಯುಕ್ತಿಗಳನರಿತು (ಮಂಕುತಿ. ೯೦೪). [ಪ್ರಹರ + – ಇಸು]

**ಪ್ರಹರ್ಷ** (ನಾ). ಅತಿಶಯವಾದ ಆನಂದ ; ಸಂತೋಷ. [ಸಂ.]

**ಪ್ರಹರ್ಷಣ** (ನಾ). ೧. ಬುಧಗ್ರಹ. ೨. ಅತಿಶಯವಾದ ಆನಂದ , –ಸಂತೋಷ. ೩. ಅತಿಶಯವಾದ ಸಂತೋಷವನ್ನುಂಟು ಮಾಡುವುದು. ೪. [ಕಾವ್ಯಮಿ] ಅರ್ಥಾಲಂಕಾರಗಳಲ್ಲಿ ಒಂದು; ☞ ಇದು ೧. ಯತ್ನವಿಲ್ಲದೆ ಅಪೇಕ್ಷಿತ ಫಲಸಿದ್ಧಿ. ೨. ಅಪೇಕ್ಷಿತಕ್ಕಿಂತಲೂ ಅಧಿಕ ಫಲಸಿದ್ಧಿ. ೩. ಫಲಸಿದ್ಧಿಗಾಗಿ ಉಪಾಯವನ್ನು ಹುಡುಕುವ ಪ್ರಯತ್ನದಿಂದಲೇ ಫಲಪ್ರಾಪ್ತಿ–ಎಂದು ಮೂರು ವಿಧ : ಮನದಲ್ಲಿ ಘನೇಚ್ಛೆ ಪ್ರಯಾಸವಿಲ್ಲದಲೆ ಅನುಕೂಲವಾಗೆ ಪ್ರಹರ್ಷಣಾ ಇನಿಯನಲ್ಲಿಹ ದೂತಿಕೆಯನು ಧ್ಯಾನವ ಮಾಡೆ ವಿನಯದಿ ಬಂದಳು ತಾನೇ (ಕುವಲ. ೦೨೩-೦); ಮನದಲ್ಲಿಚ್ಛೆಯು ಪ್ರಯತ್ನ ಮಾಡದೆ ಸಿದ್ಧವಾದಡೆ ಪ್ರಹರ್ಷಣವೆನಿಸುವುದು (ಕುವಲ. ೦೨೩-೦ಟಿಪ್ಪಣಿ). ೫. [ಛಂದ] ಪಾದವೊಂದಕ್ಕೆ ಹದಿಮೂರು ಅಕ್ಷರಗಳನ್ನುಳ್ಳ, ಪ್ರತಿಸಾಲಿನಲ್ಲಿಯೂ ಮನಜರಗ ಗಣಗಳೂ ಒಂದು ಗುರುವೂ ಇರುವ, ಅತಿಜಗತಿಛಂದಸ್ಸಿನ ಒಂದು ವೃತ್ತ : ಕಣ್ಗೊಪ್ಪಲ್ ಮನಜರಗಂ ಪ್ರಹರ್ಷಣಂ ತಾಂ (ಛಂಶಾ. ೬೨). [ಸಂ.]

**ಪ್ರಹಸನ** (ನಾ). ೧. ಬಹಳವಾದ ನಗು ; ಅತಿಯಾದ ನಗೆ ; ಅಟ್ಟಹಾಸ. ೨. ನಗಿಸುವುದು: ನೃಪಸೇವನಾಪ್ರಹಸನಪ್ರಾವೀಣ್ಯಮುಂ ಬುದ್ಧಿವರ್ಧನಮುಂ ಮಾಸರಮಕ್ಕುಮ್ಮೆಂದವದಶೋಕಾರೋಹಗೇಹಂಗಳೊಳ್ (ಜಾತಕ. ೯-೨೩). ೩. [ಕಾವ್ಯಮಿ] ಹತ್ತು ಬಗೆಯ ರೂಪಕಗಳಲ್ಲಿ ಒಂದು ವಿಧ ; ಕೆಳವರ್ಗದ ನಾಟಕಗಳಲ್ಲಿ ಒಂದು ; ಆಧುನಿಕಸಾಹಿತ್ಯದ ಹಾಸ್ಯನಾಟಕ ; ☞ ಇದು ಇಂಗ್ಲಿಷಿನ 'Farce' ಎಂಬುದರ ಅನುವಾದ : ಪ್ರಹಸನ _ ಇದರ ವಸ್ತು ಕಲ್ಪಿತ ಮತ್ತು ಕೀಳುಜನರ ಚರಿತ್ರೆ ; ಹಾಸ್ಯಪ್ರಧಾನ ರಸ ; ಸಂಧಿ, ಸಂಧ್ಯಂಗ, ಲಾಸ್ಯಾಂಗ,ಅಂಕ ಇವು ಭಾಣದಲ್ಲಿರುವಂತೆಯೇ ; ವೀಥ್ಯಂಗಗಳು ಇರುವುದೂ ಉಂಟು ಇಲ್ಲದ್ದೂ ಉಂಟು ಆರಭಟೀವೃತ್ತಿಯಾಗಲಿ , ವಿಷ್ಕಂಭಕ ಪ್ರವೇಶಕಗಳಾಗಲಿ ಇಲ್ಲ (ಸಂಕಾಶಿ. ೩೦) ; ನಾಟಕ, ಪ್ರಕರಣ, ಭಾಣ ಪ್ರಹಸನ. . . ಈಹಾಮೃಗ ಎಂಬುದಾಗಿ (೧೦) ದಶರೂಪಕಗಳಿರುವುವು (ಕಾಶಕ. ೯೩೯). [ಸಂ.]

**ಪ್ರಹಸನಶೀಲ** (ನಾ). ನಗುವ ಸ್ವಭಾವದವನು : ತುಹಿನಾಂಶು ಕೂಡಿರೆ ಝಷಗೃಹದೊಳ್ ಬುಧ ಜೀವ ಶುಕ್ರರೀಕ್ಷಿಸುವೊಡವಂ ಪ್ರಹಸನಶೀಲಂ (ಜಾತಕ. ೨೦-೦೨). [ಸಂ.]

**ಪ್ರಹಸಿತ** (ಗು). ೧. ನಗುವ ; ಹರ್ಷಿಸುವ ; ಆನಂದಿಸುವ. ೨. ನಗುವಿನಿಂದ ಕೂಡಿದ : ಪ್ರಹಸಿತವದನನಾಗಿ ಪೇಚರರೆಂದೆರಲೆಗಳಂ ನಿಪಾತಿಸಲ್ಕೆನಗೆ ವಿದ್ಯೆಯುಂ ದೇಟ್ಟುಮೆ ಎಂದೊಲ್ಲದೆ (ಶಬ್ದಾ. ೬೦-೬) ; ಕಿಂಚಿತ್ಪ್ರಹಸಿತಾನನವನಜನಾಗುತ (ಅಕಪ್ರ. ೯೩-೬೩). [ಸಂ.]

**ಪ್ರಹಸ್ತ** (ನಾ). ೧. ಚಾಚಿದ ಕೈ; ನೀಡಿದ ಹಸ್ತ : ಅಂತು ಸಮಱದ ಸಂಗ್ರಾಮರಂಗದೊಳ್ ಪರಸ್ಪರವಿರೋಧಕ್ರೋಧವಿಕ್ಷೇಪಹರ್ಷಿತಮಾರ್ಗಪ್ರಹಸ್ತಪ್ರಾಸಾಧಿತಘೋರಸಂಗ್ರಾಮರುಂ (ಪಂಪಭಾ. ೦೩-೯೨ ವ). ೨. ಒಬ್ಬ ರಾಕ್ಷಸನ ಹೆಸರು ; ರಾವಣನ ಮಂತ್ರಿಗಳಲ್ಲಿ ಒಬ್ಬ: ಅರೆಮಗಿದಿರ್ಚುವರ್ ಸಮರಾರಂಭಕ್ಕಾಮೆ ಮುಖ್ಯನಾಯಕರೆನುತ್ತಾರಿಂ ಮುನ್ನಂ ಸೆರಗಂ ಪಾರದೆ ಹಸ್ತಪ್ರಹಸ್ತರುಱಿದೊಡ್ಡಿರ್ದರ್ (ಪಂಪರಾ. ೦೩-೦೨). [ಸಂ.]

**ಪ್ರಹಾರ** (ನಾ). ೧. ಹೊಡೆಯುವಿಕೆ ; ಪೆಟ್ಟು ಕೊಡುವುದು. ೨. ಹೊಡೆತ ; ಏಟು ; ಪೆಟ್ಟು : ಅನ್ಯಶರಪ್ರಹಾರಜರ್ಜರಿತಶರೀರನಾಗಿ (ಗದಾಯು.-೯-೩೩) ; ನಖಪ್ರಹಾರಭರದಿಂದ್ಬೆದಾಱು. . . ಏಣಶ್ರೇಣಿಯುಂ ಪಾಯ್ದು ಕೊಂದುದು (ಪುಶ್ಪ.ಕೃ. ೩-೭೦), ಭೀಮ. . .ಮೇಲಾಳ ಮುಱಿದನು ವಿವಿಧಶಸ್ತ್ರಾಸ್ತ್ರಪ್ರಹಾರದಲಿ (ಕುವ್ಯಾ.ಕ. ೧೧-೦೬). [ಸಂ.]

**ಪ್ರಹಾರತ್ರಯ** (ನಾ). [ಸಂಗೀತ] ಸಮ, ವಿಷಮ ಮತ್ತು ಸಮವಿಷಮಗಳೆಂಬ ಮೂರು ಬಗೆಯ ವಾದ್ಯಬಾಜನಗಳು : ಸಮಪ್ರಹಾರ ವಿಷಮಪ್ರಹಾರ ಸಮವಿಷಮಪ್ರಹಾರಮೆಂಬ ಪ್ರಹಾರತ್ರಯದೊಳಂ (ಅಜಿ.ಪು. ೩-೬೨ ವ). [ಸಂ.]

**ಪ್ರಹಾರಿ** (ನಾ). ನಾಶಪಡಿಸುವವನು; ಪರಾಕ್ರಮಿ : ಸೂರ್ಪಕಪ್ರಹರಪ್ರಹಾರಿಗೆ ದರ್ಪಿತ ತ್ರಿಪುರೇಂದ್ರನಾಗ್ನಿಗಪರ್ವತಿಪ್ರಣುತ ಪ್ರಭಾವಮಯ ದಿವ್ಯದೇಹಂಗೆ. . . ಅರ್ಪಿಸುವೆನಿಂದುಗ್ರಗರಳವ (ಐಸಕ. ೩೬-೯೦). [ಸಂ. ಪ್ರಹಾರಿನ್]

**ಪ್ರಹಾರಿಸು** (ಕ್ರಿ). ಹೊಡೆ; ಏಟು ಕೊಡು; ಪೆಟ್ಟು ಹಾಕು : ನಾನಾಯುಧಂಗಳಿಂದಂ ಪ್ರಹಾರಿಸುವ ಸುಭಟಾನೀಕದಬ್ಬರದ. . .ಅನೂನಸಂಭ್ರಮದಿಂದೆ ಕಲ್ಯಾಣಪಟ್ಟಣದ ಪೊಱವೊಳಲ್ ಮೆಱೆದುದು (ಕಂಪು. ೧೦-೭೦); ಖುರದಿಂ ಪ್ರಹಾರಿಸಲ್ ಸೀಳ್ದುದಮ ಸಕ್ಕಸಮವಾಗಿ (ಕಂಪು. ೯೯-೨೩). [ಪ್ರಹಾರ + — ಇಸು]

**ಪ್ರಹಿ** (ನಾ). ಬಾವಿ : "ಅಂಧುಃ, ಪ್ರಹಿಃ, ಕೂಪಃ, ಉದಪಾನಂ – ೪ ಸೇದುವ ಭಾವಿಯ ಹೆಸರುಗಳು'' (ಸಿದ್ಧಾಂತಿ. ೮೩). [ಸಂ.]

**ಪ್ರಹಿತ** (ಗು). ೧. ಇಟ್ಟ; ಇರಿಸಿದ : ಏಕಿಲ ಭರದೆ ಪಡಲ್ಪಟ್ಟು ಗೇಣಾಗಿ ಪಾಂಥರ್ತೊಡೆ ತೋಳ್ಗಳ್ಕೂಡೆ ಜಾಸುಪ್ರಹಿತಶಿರರದೇಸಿರ್ದರೋ ಶೀತಭೀತರ್ (ರಾಜಶೇ. ೯-೨೨). ೨. ಕಳುಹಿಸಿದ : ಅಮರಾಧಿಪಪ್ರಹಿತ ಸುರತರುಪ್ರಸೂನಗ್ರಥಿತಸುರಭಿದಾಮದುಕೂಲಾಂಬರವಿಚಿತ್ರಭೂಷಸುರಭಿವಿಲೇಪನಪ್ರಮುಖಭೋಗೋಪಭೋಗಂಗಳೊಳಂ (ಅಂಪು. ೬-೩ ವ). ೩. (ಬಾಣದಂತೆ) ಬಿಟ್ಟ; ಪ್ರಯೋಗಿಸಿದ. [ಸಂ.]

**ಪ್ರಹುಡ** 'ಪ್ರವುಡ' ನೋ.

**ಪ್ರಹುಡಿ** (ನಾ). ನೈಪುಣ್ಯ; ಪಾಂಡಿತ್ಯ ; ಪ್ರೌಢಿ : ಕಂಡವ್ವೆ ಕೌಣಪನ ಸಾಹಸತಂಡವನು ಪುಸಿಯಲ್ಲ ಪ್ರಥಮದಿ ಚಂಡ ಚಾಮುಂಡರಿಗೆ ನಮ್ಮಿಂದ ಳಿಯದುಗ್ಗಡದಖಂಡವರಗಳನಿತ್ತಿರಿನ್ನೇನಂಡಿಸಿಕೆ ಮಾರ್ಗವನು ಬಿಡುವದೆ ಪಂಡಿತತ್ವದ ಪ್ರಹುಡಿ (ಅಂಬಿಕಾ. ೦೭-೩೩). [<ಸಂ. ಪ್ರೌಢಿ]

**ಪ್ರಹುಡಿಕಾಱ** (ನಾ). ನೈಪುಣ್ಯವುಳ್ಳವನು ; ನಿಪುಣ : ಲೆತ್ತ ಪಗಡೆ ಜೂಜು ಪ್ರಹುಡಿಕಾಱರೊಳುಬ್ಬಿ ಚಿತ್ತವಿಭ್ರಮಿತರಾಗಿಹರು [ಶಾಂತಿ. ಜತ್ತಿಲೆ ಪಗಡೆಯನಾಡುತಿರಲು. ಓರ್ವ ಚಿತ್ತಭ್ರಮನಾಗುತಿಂತು] (ಅಶ್ವ.ಉ. ೬-೬೩). [ಪ್ರಹುಡಿ + — ಕಾಱ]

**ಪ್ರಹುಡಿಕೆ** (ನಾ). = ಪ್ರಹುಡಿ : ಯೋಗ್ಯವಯೋಗ್ಯವರಿಯದಲೆ ಮಾಡುವರು ಪ್ರಹುಡಿಕೆಯ [ಯೆ] (ಅಶ್ವ.ಕೃ. ೬೨-೯೦). [ಪ್ರಹುಡ (<ಪ್ರವುಡ) + — ಇಕೆ]

**ಪ್ರಹುಡು** (ನಾ). ನೈಪುಣ್ಯ; ಪ್ರೌಢಿಮೆ : ಆನೆಗಳು ವೃಷಭಾದಿ ರೆಕ್ಕೆಯ ನಾನುವರೆ ಅವರೀಗ ಕುಲಗೆಟ್ಟೇನು ಪ್ರಹುಡೆನಲಕ್ಕು (ಅಶ್ವ.ಕೃ. ೬೨-೩೩). [ಪ್ರಹುಡ (<ಪ್ರವುಡ) + — ಉ]

**ಪ್ರಹೃತಿ** (ನಾ). ಅಳಿವು; ಲಯ; ನಾಶ : ಆತಂ ನಿಮಗಭೇದ್ಯನಾತನಿಂದೀ ಜಗದ್ವ್ಯಾಪ್ತದುತ್ಪತ್ತಿಸ್ಥಿತಿಪ್ರಹೃತಿಗಳ್ ನಡೆಗುಂ (ಶಬ್ದಮ. ೦೦-೨೩೨). [ಸಂ.]

**ಪ್ರಹೃಷ್ಟ** (ಗು). ಸಂತುಷ್ಟವಾದ ; ಆನಂದಿತ: ಓರ್ವ ಪುರುಷಂ ಪ್ರಹೃಷ್ಟವದನಂ ತ್ವರಿತಗತಿಯಿಂ ಬಂದು (ಕಾದಂಪೂ. ೯೨೩). [ಸಂ.]

**ಪ್ರಹೇಯ** (ನಾ). ಅತ್ಯಂತ ಹೇಯಂವಾದುದು : ಈಯೊಡಲಂ ಒಡಿದಾವಂ ಸಾಯದೆ ಪುಟ್ಟದೆ ಸಮಸ್ತಪಾಪಾಯಾಸಕ್ಕಾಯತನವಾಗದಿರ್ಕುಂ ಶ್ರೇಯೋರ್ಥಿಜನ ಪ್ರಹೇಯಮಿದೆ ದಲ್ ಪೊದಲೊಳ್ (ಶಾಸಕ. ೨೩೯). [ಸಂ.]

**ಪ್ರಹೇಲಿಕೆ**, ಪ್ರಹೇಳಿಕೆ (ನಾ). ಗೂಢಾರ್ಥವುಳ್ಳ ಮಾತು; ಒಗಟು; ಸಮಸ್ಯೆ : "ಒಗಟೆಯದು ಪ್ರಹೇಲಿ[ಶಾಂ.೪]ಕೆ ಪ್ರವಲ್ಹಿಕೆ" (ಕುಂಗಣ. ೨೭-೭). ಪ್ರಹೇಳಿಕೆ : "ಪ್ರವ(ಲ್ಹಿ:)ಲ್ಹಿಕಾ, ಪ್ರಹೇಳಿಕಾ—ಈ ೨ ಒಗಂಟೆ" (ಹಲಾಯು. ೨೩-೦೩೦): ರಸವತ್ಕಾವ್ಯಕಥಾಪ್ರಹೇಳಿಕೆಗಳಂ ಪೇಳುತ್ತುಂ. . . ಓಲಗಿಪ್ಪರವನೀಭೃತ್ಕಾಂತೆಯುಂ ಕಾಂತೆಯರ್ (ಕುಸುಮಾ. ೩-೦೯); ಮಣಿಮಯಮಂಟಪದ ಮತ್ತವಾರಣದೊಳ್ಮಲಂಗಿ ತನ್ನೋಪಂಗೆ ಜಾಣಿಂ ಪ್ರಹೇಳಿಕೆಯಂ ಪೇಳ್ದೊಡೆ (ಶ್ರೀಕೃತಿ. ೨೯-೦೭೦ ವ); "ಕಾಯವೆ ಮೂರು ಕಾಲಾರು ಮಸ್ತಕ ನವ ಬಾಯಿ ಒಂಬತ್ತು ಬಾಲೆರಡು ಕೈಗಳು ನಾಲ್ಕು ಕಂಗಳ ರವೆ ಹದಿನೆಂಟು ಮೈಯಿಕ್ಕಿ ನಾನೆರಗುವೆನು" ಎಂಬ ಪ್ರಹೇಳಿಕೆಯೂ ಅನೇಕ ಪ್ರತಿಗಳಲ್ಲಿ ಕಂಡುಬರುತ್ತದೆ (ಕುಮಾರಾಂ. ೯೦). ☞ ದಂಡಿಯ ಕಾವ್ಯಾದರ್ಶದಲ್ಲಿ ಸಮಾಗತಾ, ವಂಚಿತಾ, ವ್ಯುತ್ಕ್ರಾಂತಾ, ಪ್ರಮುಷಿತಾ, ಸಮಾನರೂಪಾ, ಪರುಷಾ, ಸಂಖ್ಯಾತಾ, ಪ್ರಕಲ್ಪಿತಾ, ನಾಮಾಂತರಿತಾ, ನಿಭೃತಾ, ಸಮಾನಶಬ್ದಾ, ಸಂಮೂಢಾ, ಪರಿಹಾರಿಕಾ, ಏಕಚ್ಛನ್ನಾ, ಉಭಯಚ್ಛನ್ನಾ ಮತ್ತು ಸಂಕೀರ್ಣಾ ಎಂಬ ಹದಿನಾರು ಬಗೆಯ ಪ್ರಹೇಲಿಕೆಗಳು ವಿವರಿಸಲ್ಪಟ್ಟಿವೆ. [ಸಂ.ಪ್ರಹೇಲಿಕಾ]

**ಪ್ರಹೇಳಿಕೆ** 'ಪ್ರಹೇಲಿಕೆ' ನೋ.

**ಪ್ರಹ್ಲಾದ** (ನಾ). ೧. ಅಧಿಕವಾದ ಸಂತೋಷ ; ಅತಿಶಯವಾದ ಆನಂದ : ಪರಮತತ್ತ್ವಪರಿಚಿತಗುರುಜನಮನಃಪ್ರಹ್ಲಾದಜನಕನುಂ (ಕಂಪ್ರಕೃ. ೯-೯೦ ವ). ೨. ಅವ್ಯಕ್ತವಾದ ಶಬ್ದ. ೩. ಹಿರಣ್ಯಕಶಿಪು ಎಂಬ ಅಸುರನ ಮಗ : ಈತ ತಾ ಪ್ರಹ್ಲಾದದೇವನು (ಸಂಭಕ. ೬-೩೦); ಓಂ ನಮಶ್ಶಿವ ಎಂಬ ವರ್ಣಗಳ ತೇದು ತೇದವ ಬರಸಿ ಮಿಗೆ ಪ್ರಹ್ಲಾದ ನೀನೇ ಬರೆಯೆನಲು ಮಧುಸೂದನನ ನಾಮಗಳನೊಂದೊಂದಾಗಿ ವಿರಚಿಸಿದ (ಕೃಷ್ಣಾಕ. ೬-೦). [ಸಂ.]

**ಪ್ರಹ್ವ** (ಗು). ೧. ನಮ್ರನಾದ; ವಿನೀತನಾದ. (ನಾ). ೨. ಬಾಗಿದವನು; ವಿನೀತನಾದವನು : "ಪ್ರವಣಃ, ಪ್ರಹ್ವಃ—ಈ ೨ ವಿನೀತಂ" (ಹಲಾಯು. ೩೬-೦೯೭). [ಸಂ.]

**ಪ್ರಳಂಬ** 'ಪ್ರಲಂಬ' ನೋ.

**ಪ್ರಳಯ** 'ಪ್ರಲಯ' ನೋ.

**ಪ್ರಳಯಕರ** (ನಾ). ವಿನಾಶಕಾರಿಯಾದಂದಂ : ಸುಭಟಜನಚಮತ್ಕಾರಿ ತೇಜೋಮಹೌರ್ವಾನಲಮುಗ್ರಾರಾತ್ರಿವರ್ಗಪ್ರಳ[ಶಾ ೫ ೦.ಲ]ಯಕರಮದೊಂದೆಯ್ದೆತಾಳ್ದಿತ್ತಗುರ್ವಂ (ಅಂಪು.೦೩-೯೩). [ಸಂ.ಪ್ರಲಯಕರ]

**ಪ್ರಳಯಕಾಲ** 'ಪ್ರಲಯಕಾಲ' ನೋ.

**ಪ್ರಳಯಗತ** (ಗು). ೧. ನಾಶ ಹೊಂದಿದ ; ನಾಶವಾದ. (ನಾ). ೨. ನಾಶವಾದ ವ್ಯಕ್ತಿ : ಕೃತಯುಗಕ್ಕೆ ಅರಸು ಶೂಲಿ . . . ಆ ಶೂಲಿ ಆಚಾರ್ಯನಾದ. . . ಇಷ್ಟವ ಹಂಚಿಕೊಂಡರು ದೃಷ್ಟವ ಕಾಬುದಕ್ಕೆ ಮಾಟವನರಿಸಿ ಪ್ರಳಯಗತರಾದರಯ್ಯಾ (ಪೋಲಕಶಾ. ೯-೦೦). [ಸಂ. ಪ್ರಲಯಗತ]

**ಪ್ರಳಯಗಲೂರ ?** (ನಾ). ಒಂದು ಬಗೆಯ ಚಿನ್ನದ ನಾಣ್ಯ : ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು. ಯಾವವೆಂದರೆ—೧ ಗಬರು . . . ಧಾರವಾಡ ೧ ಪ್ರಳಯಗಲೂರ ೧ ಪಾಪನಾಯಕಿಹೊನ್ನು (ಕಕ್ಕಶಾ. ೦೦೯). [?]

**ಪ್ರಳಯತಿಮಿರ** (ನಾ). ವಿನಾಶಕಾಲದಲ್ಲಿ ಕವಿಯುವ ಕತ್ತಲು ; ಮಹಾಂಧಕಾರ : ಪ್ರಳಯತಿಮಿರದ ಬೀಜ ನೀಲಾಚಳದ ಸಾಯುಜ್ಯವೊ ನಭೋಮಂಡಲದೊಳದನೇವೊಗಳುವೆನು ಮಸಗಿತು ತಮಸ್ತೋಮ (ಶುಪ್ರಾ.ದ್ಯೋ. ೦೩-೨೮). [ಸಂ. ಪ್ರಲಯತಿಮಿರ]

**ಪ್ರಳಯಪಯೋಧಿ** (ನಾ). ವಿನಾಶಕಾಲದಲ್ಲಿ ಉಕ್ಕಿ ಜಗತ್ತನ್ನು ನಾಶ ಮಾಡುವ ಸಮುದ್ರ : ಪ್ರಳಯಪಯೋಧಿವೋಲಳುರ್ದು ಪೆಂಕುಳಿಗೊಂಡ ಮದೇಭವೈರಿವೋಲ್ ಕೆಳರ್ದು . . . ತಾಗಿದಂ (ಕಂಕಕಾ. ೦೦-೦೦೩). [ಸಂ. ಪ್ರಲಯಪಯೋಧಿ]

**ಪ್ರಳಯವಹ್ನಿ** (ನಾ). = ಪ್ರಲಯಾಗ್ನಿ : ಪ್ರಳಯವಹ್ನಿ ತಪಪೊತ್ತಿದೋ ಭಾಳಲೋಚನನ ಕೋಪ ಕಡುಗಿ ಮುನಿಯಾಯ್ತೊ ಪೇಳೆನೆ ಕಣ್ಣ ಕಡೆ ತೋರಗಿಡಿಗೆದಱೆ . . . ವಿಶ್ವಾಮಿತ್ರನುರವಣಿಸಿ ಬಂದನು (ಹಕಾ. ೬-೦). [ಸಂ. ಪ್ರಲಯವಹ್ನಿ]

**ಪ್ರಳಯಾಗ್ನಿ** ' ಪ್ರಲಯಾಗ್ನಿ ' ನೋ.

**ಪ್ರಳಯಾತೀತ** (ನಾ). ವಿನಾಶವನ್ನು ಮೀರಿದವನು ; ನಾಶವಾಗದವನು : ಪ್ರಳಯಾತೀತ ಶರಣಸನ್ನಿಹಿತ ನಮ್ಮ ಅಖಂಡೇಶ್ವರ (ಅಖಂಡೇ. ೦೦೩-೬೦). [ಸಂ. ಪ್ರಲಯಾತೀತ]

**ಪ್ರಳಯಾನಿಳ** (ನಾ). ಪ್ರಳಯಕಾಲದಲ್ಲಿ ಬೀಸುವ ಬಿರುಗಾಳಿ : ಪ್ರಳಯಾನಿಳನಿಂ ಕನಕಾಚಳಮೆಂತು ತರಳದಂತೆ ದರ್ಶನಶುದ್ಧಿಂ ಚಳಿಯಿಸಲರಿಯಂ ಕುಮತಂಗಳಿನಾಪ್ತಪದಾರ್ಥವಲ್ಲಿ ದೃಢನಪ್ಪುದಱೆಂ (ಸಪುಶ. ೪-೦೩೩). [ಸಂ. ಪ್ರಲಯಾನಿಲ]

**ಪ್ರಳಾಪ** ' ಪ್ರಲಾಪ ' ನೋ.

**ಪ್ರಳಾಪಸನ್ನಿ** (ನಾ). = ಪ್ರಲಾಪ ೪ : ಇವು ಮುಂತಾದ ಚಿಕಿತ್ಸೆಗಳು ಪ್ರಯೋಗಿಸಲು ಪ್ರಳಾಪಸನ್ನಿ ಪರಿಹರವಹುದು (ಸಕವೈ. ೦೬೬). [ಪ್ರಳಾಪ (=ಪ್ರಲಾಪ) + ಸನ್ನಿ]

**ಪ್ರಳಾಪಸನ್ನಿಪಾತ** ' ಪ್ರಲಾಪಸನ್ನಿಪಾತ ' ನೋ.

**ಪ್ರಳಾಪಿಸು** ' ಪ್ರಲಾಪಿಸು ' ನೋ.

**ಪ್ರಾಂಗಣ** (ನಾ). ಅಂಗಳ ; ಅಂಗಣ : "ಅಜಿರಂ, ಪ್ರಾಂಗಣಂ_ ಈ ೨ ಅಂಗಣಂ" (ಕರಾಹು. ೩೦-೦೪೪) ; ಶ್ರೀದೇವಂ ವಿಮಾನೋಪಾಂತಸ್ಥಿತಿಯೊಳ್ ಜನನಿಲಯಪ್ರಾಂಗಣದೊಳ್ . . . ತ್ರಿಲೋಕತಿಲಕಂಗೆ ಮಹಾಮಹಮಂ ಪೊಣರ್ಚಿದಂ (ಶಾಂತಿಪು. ೬-೨೪ ವ) ; ಏಸರುಹವದನೆಯರ ನೂಪುರಂಗಳ ದನಿಯಿಂ . . . ಅಳಿಗಳ ರಸಿತಂ ದ್ವಿಗುಣಿಸಿತು ನೃಪಗೃಹಪ್ರಾಂಗಣದೊಳ್ (ಕುಸೃಷ್ಟಿ. ೪-೩೩) ; ಊಟ ಮುಗಿದ ಮೇಲೆ ಮಠದ ಪ್ರಾಂಗಣದಲ್ಲಿ ತಂಪಾದ ಸಿಮೆಂಟುನೆಲದ ಮೇಲೆ ಕೂತ ಬ್ರಾಹ್ಮಣರ ನಡುವೆ (ಸಂಸ್ಕಾರ. ೯೦). [ಸಂ.]

**ಪ್ರಾಂಚಿತ** (ಗು). ೧. ಮನೋಹರವಾದ. (ನಾ). ೨. ಮನೋಹರವಾದುದು ; ರಮಣೀಯವಾದುದು : ಕಾಂಚನದಂತೆ ರಮ್ಯತರಮಪ್ಪ ಜಿನಾಧಿಪಮೂರ್ತಿ ಸತ್ಯಭಾಸಂಚಯ ಮಧ್ಯವರ್ತಿಯೆನಿಸಿರ್ದು ಸುರೇಂದ್ರ ಮದೇಭಮಸ್ತದೊಳ್ ಪ್ರಾಂಚಿತವಾಗಿ ತಾಂ ಪೊಳೆಯುತಿರ್ದುದು . . . ಚಂದ್ರನಂದದಿಂ (ಬಾರಪು. ೬-೯೦) ; ವಿತತಾನೇಕ ಪದಾವಭಾಸಿ ಹರಿನಾಗಪ್ರಾಂಚಿತಂ ಖಡ್ಗಿಮಂಡಿತಮುತ್ಕೀರ್ಣವರಾಹವಾಸಮಬಲಾಂಚದ್ದೀವರಾಶ್ರಿತಂ (ವೃಶಂ. ೦೦-೩೦). ೩. ಗೌರವಾರ್ಹವಾದುದು: ಅದು ಪಂಚಾಕ್ಷರದಂತೆವೋಲ್ಪೂರ್ಣವರ್ಣಪ್ರಾಂಚಿತಂ ಭಸ್ಮದಂತುದಿತಶ್ರೀಕರಲಕ್ಷಣಪ್ರಕಟಿತಂ (ವೃಶಂ. ೨೬-೪೯). [ಸಂ.]

**ಪ್ರಾಂಜಲ, ಪ್ರಾಂಜಳ** (ಗು). ೧. ಮನೋಹರವಾದ ; ಸುಂದರವಾದ : ಭಕ್ತಿರಸಾರ್ದ್ರಚಿತ್ತಯುತಹೃದ್ರಾಜೀವಸಂಪೂರ್ಣಸಂಕಾಶಂ ಪ್ರಾಂಜಲ[ಶಾತಾಂ. ಕಾಶಪ್ರಜ್ವಲ]ಮೂರ್ತಿಕೀರ್ತಿಭರಿತಂ ಶ್ರೀಮಾದಿರಾಜಾಹ್ವಯಂ (೧೦೪. ೦-೩೬). ೨. ಸರಳವಾದ; ನೇರವಾದ. **ಪ್ರಾಂಜಳ** (ನಾ). ೩. ಗೌರವಾರ್ಹ ವ್ಯಕ್ತಿ ; ಪೂಜ್ಯನಾದವನಂ : ಶಾಂಭವಭಕ್ತಪ್ರಾಂಜಳಭೂಮಹಿತಮಹಿಮರೆಳ್ತಂದರಾನಂದದಿಂದಂ (ವೃಶಂ. ೩-೯೩).

**ಪ್ರಾಂಜಲವಾಗು** = ಸರಳವಾಗು ; ನೇರವಾಗು : ಇಷ್ಟದೇವತೆಯ ಇದಿರಿನಲ್ಲಿ ಭಕ್ತಿನಮ್ರವಾದ ಪ್ರಾಂಜಲವಾದ ಅಂತರಂಗನಿರೀಕ್ಷಣೆ (ಕನಾಶ. ೦೬೯) : ಅವರಲ್ಲಿ ನನಗಿರುವ ಭಕ್ತಿಯನ್ನು ಪ್ರಾಂಜಲವಾಗಿ ಈ ರೀತಿ ಅರ್ಪಿಸಿಕೊಂಡಿದ್ದೇನೆ (ಗಾಳಿ. ೬೯) ; ತಾವು ಕಂಡುಂಡ ಬಾಳನ್ನು ಪ್ರಾಂಜಲವಾಗಿಯಾದರೂ ಪರಿಣಾಮಕಾರಕವಾಗಿ ಇಲ್ಲಿ ಕೊಟ್ಟಿದ್ದಾರೆ (ಸಾಸಮ. ೦೬೯). [ಸಂ.]

**ಪ್ರಾಂಜಲತೆ** (ನಾ). ಸರಳತೆ : ಥಂಡಿ ನೆಗಡಿ ಆದಾಗ ಕುಡೀತಿರತೇನಿ ನಾನೆ ಒಮ್ಮೊಮ್ಮೆ ಎಂದು ಆಚಾರ್ಯರು ತಮ್ಮ ಪ್ರಾಂಜಲತೆಯನ್ನಷ್ಟು ತೋರಿಸಿದರು (ಸಮುಕೃ. ೩೯೯). [ಸಂ. ಪ್ರಾಂಜಲತಾ]

**ಪ್ರಾಂಜಲಿ** (ಗು). ೧. ಕೈಮುಗಿದಿರುವ : ಅಂಜನದಿಂ ಪುದಿದ ತಮಃಪುಂಜಂ ಕಿಡೆ ಸೂಕ್ಷ್ಮದೃಷ್ಟಿ ಸಮನಿಸುವವೊಲಾ ಪ್ರಾಂಜಲಿ ವಿಬುಧ್ಧಮತಿಗೆ ನಿರಂಜನನಿಂದಾದುದಮಳದೃಷ್ಟಿವಿಕಾಸಂ (ವರ್ಧಮಾ. ೦೯-೦೬). (ನಾ). ೨. ಹಸ್ತಗಳ ಜೋಡಣೆ ; ಅಂಜಲಿ. [ಸಂ.]

**ಪ್ರಾಂಜಳ** ' ಪ್ರಾಂಜಲ ' ನೋ.

**ಪ್ರಾಂತ** (ನಾ). ೧. ದಡ ; ಅಂಚು. ೨. ಮೇರೆ ; ಗಡಿ ; ಸೀಮೆ. ೩. ತುದಿ ; ಮೊನೆ. ೪. ಪಕ್ಕ ; ಪಾರ್ಶ್ವ. ೫. ಎಡೆ ; ಸ್ಥಳ ; ಪ್ರದೇಶ : ಆಕಾಶದ ಪ್ರಾಂತದಿಂದ ಭಯಂಕರವಾದ ವೇಗದಿಂದ ಗಾಳಿಯು ಗರ್ಜಿಸಿಕೊಂಡೆದ್ದುದು ಕೇಳಿಸಿತು (ರಣೀಕ. ೦೩೦). ೬. ರಾಜ್ಯ; ನಾಡು : ಆ ಪ್ರಾಂತಗಳೊಳಗಿಂದ ಸಹ ಬದಕು ಬಹಳ ಬರಬೇಕೆಂದು ನಮ್ಮ ಅಪೇಕ್ಷೆ (ಮುಂಬಯಿ. ೬ ಫೆಬ್ರವರಿ) ; ಹೊಗೆಸೊಪ್ಪಿನ ಕಾರ್ಖಾನೆಗಳು ಮದ್ರಾಸು, ಬರ್ಮಾ ಮುಂತಾದ ಪ್ರಾಂತಗಳಲ್ಲಿಯೂ ಅನೇಕ ಭಾಗಗಳಲ್ಲಿ ಸಕ್ಕರೆ ಕಾರ್ಖಾನೆಗಳೂ ಇವೆ (ಭೂಅಶ. ೨೫೬). [ಸಂ.]

**ಪ್ರಾಂತಭೇದ** (ನಾ). ೧. ನಾಡುಗಳಲ್ಲಿರುವ ವ್ಯತ್ಯಾಸ, _ ಅಂತರ : ಈಗ ಪ್ರಯಾಣ ಸೌಕರ್ಯಗಳೂ ವ್ಯವಹಾರಸಾಧನಗಳೂ ಹೆಚ್ಚಾಗಿರುವುದರಿಂದ ದೂರವಾಗಲಿ ಪ್ರಾಂತಭೇದಗಳಾಗಲಿ ಪರ್ವತ ನದಿಗಳಾಗಲಿ ಪ್ರಾಂತಭೇದಕ್ಕೆ ಅಷ್ಟು ಮುಖ್ಯ ಕಾರಣಗಳಾಗಿಲ್ಲ (ಕೈಪಿಡಿ. ೨೯೯). ೨. ಒಂದು ಭಾಷೆಯನ್ನು ಆಡುವ ನಾಡಿನಲ್ಲಿಯೇ ಪ್ರತ್ಯೇಕವಾಗಿ ಕಂಡು ಬರುವ ವ್ಯತ್ಯಾಸ : ಈಗ ಕನ್ನಡದಲ್ಲಿ ಧಾರ್ವಾಡದ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ ಎಂದು ಮೂರು ಪ್ರಾಂತಭೇದಗಳಿವೆ (ಕೈಪಿಡಿ. ೨೯೯). [ಸಂ.]

**ಪ್ರಾಂತರ** (ನಾ). ೧. ಎರಡು ಊರಿನ ಮಧ್ಯಪ್ರದೇಶ ; ಎಡೆಯ ನಾಡು : "ಎರಡೂರೆಡೆಯ(ಂ) ನಿಡುಮಾಳ(ವಂ)ಂ ಪ್ರಾಂತರಮೆಂಬುದು" (ಕರಾಹು. ೯೩-೦೦೬). ೨. ಬಹಳ ದೂರ ನಡೆಯಬೇಕಾದ ದಾರಿ. ೩. ಬಹಳ ದೂರ ಮರ, ನೆರಳು, ನೀರು ಯಾವುದೂ ಇಲ್ಲದ ದಾರಿ ೪. ಕಾಡು; ಅರಣ್ಯ : ಆಕಾಶ, ಪ್ರಾಂತರ, ಸಮುದ್ರ, ಸರ್ವತ್ರನಿಶ್ಶಬ್ದ _ ಅವಿರತವಾಗಿ ಕಲ್ಲೋಲವಾಗಿದ್ದ ಸಮುದ್ರ ಗರ್ಜನೆ (ಕಹಾಕಂ. ೦೨). [ಸಂ.]

**ಪ್ರಾಂತರಕ್ಷಕ** (ನಾ). ಗಡಿಯನ್ನು ಕಾಯುವವನು ; ಸೀಮಾರಕ್ಷಕ : ಪ್ರಾಂತರಕ್ಷಕರಿಗೆ 'ಸದ್ಯದಲ್ಲಿಯೇ ಯವನಸಾಮ್ರಾಟನಿಂದ ಕೆಲವು ಜನ ದೂತರು ಬರುತ್ತಾರೆ ; ಅವರಿಗೆ ಅಡ್ಡಿಪಡಿಸಬೇಡಿ ! ' ಎಂದು ತಿಳಿಸಿದ್ದನು (ಚಂಕಿಮು. ೫೩೩). [ಸಂ.]

**ಪ್ರಾಂತಲೋಪ** (ನಾ). [ವ್ಯಾಕ] ಅಂತ್ಯಾಕ್ಷರದ ಲೋಪ : ಸಾಸಿರಮಿಕೆ

ಮುಂದೊತ್ತಿ ಸಮಾಸದೊಳಕ್ಕುಂ ಮಯುನ್ನರ್ದರ್ಕೆ ಯಥೋಕ್ತಂ ಶಾಸಿಸು ವರ್ ಸೂರಿರ್ಕಳ್ ಸಾಸಿರಕಂ ಪ್ರಾಂತಲೋಪವುಂ ಕೆಲವೆಡೆಯೊಳ್ (ಶಬ್ದಾಶ. ೨೭೬). [ಸಂ.]

**ಪ್ರಾಂತು** (ನಾ). = ಪ್ರಾಂತ ೬ : ಇಲ್ಲಿ ಕರ್ನಾಟಕ ಪ್ರಾಂತಿನ ವೃಕಿ ಬೆಳಗಾಂವಿ ಎಂಬಲ್ಲಿಯ ತುಪ್ಪ ಬಹಳ ಉತ್ತಮವೆಂದು ತಿಳಿಯುತ್ತಾರೆ (ಹುಂಬಪ್ಸ್. ೩೬). [<ಸಂ. ಪ್ರಾಂತ]

**ಪ್ರಾಂತ್ಯ** (ನಾ). = ಪ್ರಾಂತ ೬ : ಡಾನ್‌ಕಾಸಕ್ಸ್ ಪ್ರಾಂತ್ಯದಲ್ಲಿ ಆಗಲೇ ಅವನ ಕುದುರೆಯ ಗಾಡಿಯನ್ನು ಎತ್ತಿನ ಗಾಡಿಗೆ ಬದಲಾಯಿಸಿಯಾಗಿದ್ದಿತು (ಪುರಿವಾ. ೧೭); ನನ್ನ ಅಜ್ಜಂದಿರಾದ ಏಕಾಂಬರಮುದಲಿಯಾರರು ಈ ಪ್ರಾಂತ್ಯವನ್ನು ಆಳುತ್ತಿದ್ದ ನವಾಬರಲ್ಲಿ, ದಿವಾನಗಿರಿ ನಡೆಸಿ ತುಂಬಾ ಆಸ್ತಿ ಮಾಡಿದರು (ಕೃಶಾಚ. ೦); ಪ್ರಾಂತ್ಯ ಸೇರಿದರೂ ಭ್ರಾಂತಿ ಬಿಡಲಿಲ್ಲ (ಗಾದೆ). [ < ಪ್ರಾಂತ]

**ಪ್ರಾಂಶು** (ಗು). ೧. ಎತ್ತರವಾದ; ಉನ್ನತವಾದ: ಸಾಲಪ್ರಾಂಶು ವಿಶಾಲ ಲೋಲನಯನಂ . . . ಗಂಗಾತ್ಮಜನ್ಮಂ ಜಯಶ್ರೀಲೋಲಂ ಜಮದಗ್ನಿ ರಾಮಮುನಿಯೊಳ್ ಕಲ್ತಂ ಧರ್ಮವಿದ್ಯೆಯಂ (ಕಂಶಶಾ. ೦-೩೮). ೨. ಉದ್ದವಾದ ; ನೀಳವಾದ : ರಾಜತ್ಕಳಕಂಠನಿಸ್ವನೆ ಕಳಾಪಿಪ್ರಾಂಶು ಧಮ್ಮಿಲ್ಲೆಯೆಂಬ ನಿಜಾಕಾರಮಂ ಸಂಟುಮಾಡಿ (ಸುಕುಚಶಾ. ೯-೩೪) (ನಾ). ೩. ಉದ್ದವಾಗಿರುವುದು : "ಪ್ರಾಂಶು, ಉಚ್ಚಂ, ಉನ್ನತಂ, ತುಂಗಂ, ಉದಗ್ರಂ_ಈ ೫ ಉದ್ದಿತು" (ಹಲಾಯು. ೦೨೪-೩೬); ಪುರನಾರೀನಯನಾಂಚಳ ಸ್ಮಿತಲಸದ್ಬಿಂಬಾಧರಪ್ರಾಂಶು ಸ್ವವರಿದೊಂದಾಗಿ ಕಳಿಂದಜಾಮರನದೀ ಶೋಣಾಪಗಾವಾರಿಗಳ್ವೆರಸಿರ್ದಂದಮನಾನೆ . . . ಚಾಮರವ್ರಂದಂ ನೆಗೆ ವಲ್ಲಿ ವಾಜುವ ಮರಾಳವ್ರಾತದಂತೊಪ್ಪುಗುಂ (ಪ್ರಶಶ. ೩-೦೨). ೪. ಎತ್ತರವಾಗಿರುವ ವ್ಯಕ್ತಿ : ರೋಧೋವಳಯಮಲ್ಲಮವಿರಳ ಬಹಳಪ್ರಾಂಶುಪ್ರಕರಮಯಮಾಗೆಯುಂ (ಶರ್ವಪಶಾ. ೬-೩೦ ವ); ವನಿತಾ ರತ್ನಂ ದಲಾ ಕೋಮಲೆ ಜನಕಜೆ ರಾಮಂ ದಲಾ ಬರ್ಪ ನೀಹಾರನಗೇಂದ್ರ ಪ್ರಾಂಶು (ಕಂಶಾಪಶಾ. ೭-೯೩). [ಸಂ.]

**ಪ್ರಾಂಶುಪಾಲ** (ನಾ). ಉನ್ನತಶಿಕ್ಷಣಸಂಸ್ಥೆಯ ಮುಖ್ಯಸ್ಥ ; ಪ್ರಿನ್ಸಿಪಾಲ್ : ಅವರು ಧಾರವಾಡದ ಕಾಲೇಜೊಂದರಲ್ಲಿ ಪ್ರಾಂಶುಪಾಲ ರಾಗಿದ್ದಾರೆ (ಜನ). [ಈ ಬಳಕೆಯಲ್ಲಿರುವ ಈ ಶಬ್ದವು ಸಂಸ್ಕೃತದಲ್ಲಿ ಈ ಅರ್ಥದಲ್ಲಿ ವ್ಯತ್ಪನ್ನವಾಗುವುದಿಲ್ಲ. ಇಂಗ್ಲಿಷಿನ 'ಪ್ರಿನ್ಸಿಪಾಲ್' ಎಂಬ ಶಬ್ದಕ್ಕೆ ರೂಪ ಸಾಮ್ಯವಿರುವುದರಿಂದ ಇದಕ್ಕೆ ಪ್ರಯೋಗಾರ್ಹತೆಯಿದೆ]

**ಪ್ರಾಂಸರಿನೋಟು** 'ಪ್ರಾಮಿಸರಿನೋಟು' ನೋ.

**ಪ್ರಾಕಟ** (ನಾ). ಎಲ್ಲರಿಗೂ ತಿಳಿದುದು; ಪ್ರಕಟವಾದುದು : ಅಭ್ಯುದಯ ಪರಮನಿಃಶ್ರೇಯಸಮುಂ ಪ್ರಾಕಟಮಕ್ಕುಂ ವಿದಿತಾನೇಕ ಕವೀಶ ಪ್ರಯೋಗಪದಪದ್ಧತಿಯೊಳ್ (ಶಬ್ದಾ. ೦-೦೯) ; ಕೇಕರಪಿಂಗವಿಳೋಕನ ಮುಗ್ರಂ ಪ್ರಾಕಟಕಟಕಟ ದಶನಸಮಗ್ರಂ (ಶರ್ವಪಶಾ. ೦೩-೨೦ ಕಗಳ); ಪ್ರಾಕಟದೆ ಹೊಳೆವ ಪೂರ್ಣವಿಾಯ ಚಂದ್ರನವೋಲನೇಕರೂಪಾಗಿ (ಶಿಶೃಕೃ. ೨-೬-೩೯). [ < ಪ್ರಕಟ]

**ಪ್ರಾಕಟ್ಯ** (ನಾ). ಹೊರಗೆ ಕಾಣುವಿಕೆ : ಪ್ರಕಟವಾಗುವಿಕೆ : ಪ್ರಕಾಶ ವೆಂದರೆ ವ್ಯವಹಾರಕ್ಕೆ ಬೇಕಾದ ಯೋಗ್ಯತೆ. ಇದನ್ನು ತಾರ್ಕಿಕರು ವಿಷಯಾತ್ತ ಎನ್ನುವರು. ಮೀಮಾಂಸಕರು ಪ್ರಾಕಟ್ಯವೆನ್ನುವರು (ಹಿಂದಕಾ. ೯೩); ಜ್ಞಾನದಿಂದ ಉತ್ಪನ್ನವಾಗಿ, ಜ್ಞಾನಕ್ಕೆ ವಿಷಯವಾದ ವಸ್ತುವಿನಲ್ಲಿ ಪ್ರಾಕಟ್ಯವೆಂಬ ಧರ್ಮ ಕಾಣಿಸಿಕೊಳ್ಳುತ್ತದೆ (ತತ್ವಶಾ. ೨೬೧). [ಸಂ.]

**ಪ್ರಾಕಾಮ್ಯ** (ನಾ). ೧. ತನ್ನ ಇಷ್ಟಕ್ಕೆ ಅನುಸಾರವಾಗಿ ನಡೆಯುವ ಸ್ವಾತಂತ್ರ್ಯ ; ಇಚ್ಛಾಸ್ವಾತಂತ್ರ್ಯ. ೨. ವಿಧೇಯವಾಗಿಲ್ಲದಿರುವಿಕೆ ; ಸ್ವೇಚ್ಛೆ. ೩. ಶಿವನ ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು ; ಆರನೆಯ ಸಿದ್ಧಿ ; ಶಕ್ತಿ, ಸೌಂದರ್ಯ, ಆಯುಸ್ಸು, ಮಹಿಮೆ, ಮತ್ತು ಕಾಂತಿಗಳನ್ನು ಉಂಟುಮಾಡುವ ಸಿದ್ಧಿ : ಅಣಿಮಾ . . . ಪ್ರಾಕಾಮ್ಯ . . . ಕಾಮರೂಪಿತ್ವಾದಿ ಭೇದದಿಂ ಕ್ರಿಯಾಗೋಚರರ್ದ್ಧಿ ಬಹುವಿಧ(ಶಬ್ದಾಶ್ರಿ. ೦೬೯); ಸ್ವೇಚ್ಛೆಯಿಂದಾಕಾಶಗಮನಾದಿ ಸರ್ವಸಿದ್ಧಿಯೇ ಪ್ರಾಕಾಮ್ಯವೆನಿಸುವದು ಸ್ವಶರೀರಪ್ರಕಾಶದಿಂ ಸರ್ವಾರ್ಥಂಗಳಂ ಬೆಳಗುವ ತನಪಾದೊಡಂ ಪ್ರಾಕಾಮ್ಯಮಕ್ಕುಂ (ಶಿತೀಳ. ೨೯೦); ಪ್ರಾಕಾಮ್ಯ ಸಿದ್ಧಿಯ ತಿಳಿಮು ಪರರಿಗೆ ಕೊಡುವ ವಿವರವ, ಬಲುಬಲವು ಬಲುಸುಂದ ರಾಯುಷು ಬಲುಮಹಿಮೆ ಬಲುಕಳೆಯುಯೆಂಬವನೊಲಿವೃಯಾವುದೆ ಯಿದುವೆ ಪ್ರಾಕಾಮ್ಯನಿಪ ಸಿದ್ಧ್ಯೆಂದ (ಪ್ರಾಕಷಿಂ. ೨೦-೯೯); ಐಶ್ವರ್ಯವು ಅಣಿಮಾ, ಲಘಿಮಾ, ಗರಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂದು ಎಂಟು ವಿಧ (ಶಾಶತ್ಪ. ೩೨೯). [ಸಂ.]

**ಪ್ರಾಕಾರ** (ನಾ). ೧. ಬೇಲಿ. ೨. ಸುತ್ತಲೂ ಕಟ್ಟಿರುವ ಗೋಡೆ; ಸುತ್ತುಗೋಡೆ ; ಪಾಳಿ: "ವಪ್ರಂ, ಸಾಲ (೦)ಃ, ಪ್ರಾಕಾರಃ-ಈ ೩ ಕೋಂಟೆ" (ಹಲಾಯು. ೯೮-೦೩೩); ಎನಗೀ ಪ್ರಾಕಾರವಿಭೇದನಮಾವುದೊ ಗಹನಂ (ಕಂಶಾಪಶಾ. ೦೦-೩೮); ದೊಡ್ಡ ದೇವಾಲಯಗಳಲ್ಲಿ ಇಂತಹ ದ್ವಾರ ಗಳೂ ಗೋಪುರಗಳೂ ಪ್ರಾಕಾರದ ನಾಲ್ಕು ದಿಕ್ಕುಗಳಲ್ಲಿಯೂ ಇರುವು ದುಂಟು (ಕನ್ನಡಸ್ವ. ೩೯). [ ಸಂ. ]

**ಪ್ರಾಕು**$_1$, **ಪ್ರಾಕ್ಕು**$_1$ (ಗು). ೧. ಹಿಂದಿನ; ಪೂರ್ವಕಾಲದ. (ನಾ). ೨. ಹಿಂದಿನ ಕಾಲ ; ಪೂರ್ವಕಾಲ : "ಅದಿಃ . . . ಪ್ರಾಕ್, ಪುರಃ-ಈ ೭ ಮುನ್ನಂ" (ಹಲಾಯು. ೧೦೭-೨೨); ದಾರಿಯ ಎರಡು ಸಾಲುಗಳಲ್ಲೂ ಪ್ರಾಕಿ ನಲ್ಲಿ ನೆಟ್ಟಿದ್ದ ಈ ಧೂಪದ ಮರಗಳು (ಸ್ವಕ್ಷಪೂ. ೯೯); ಭಾರೀ ಪುರಾತನ ವಾದ ಮನೆ ಇದು, ಪ್ರಾಕಿನ ಕಟ್ಟೋಣ ಬೇರೆ (ಕಂಬಹು. ೩೦). ೩. ಮೂಡಲು; ಪೂರ್ವದಿಕ್ಕು: "ಪ್ರಾಚೀನಂ, ಪ್ರಾಕ್-ಈ ೨ ಮೂಡಲಾ ದುದು" (ಹಲಾಯು. ೧೭-೦೦೩); "ಪ್ರಾಕ್ ಪುರಮೋದನುಗ್ರಹಿಸೆ ಪೂರ್ವಕ್ಕೆ ಪೆಸರಕ್ಕು" (ಹುಂಗಣ. ೨೨೭-೯). **ಪ್ರಾಕ್ಕು**: ೨. ದೋಣಿಯೊಳ್ಳಿದು ಕ್ರಯವನು ಪೇಳ್ವುದಲ್ಲದೊಡೆ ಪ್ರಾಕ್ಕಿನೊಳ್ಳೇಳುತಿಹ ಪದ್ಮರಾಗದ ಪರಿ ಯೋಳೀ ಕತೆಯೊಳುದು ಪೇಳ್ವುದು (ರಕ್ಷಣಾ. ೦೯-೬).

**ಪ್ರಾಕಿನ ಬಾಕಿ** =ಹಳೆಯ ಬಾಕಿ; ಬಹಳ ಹಿಂದಿನ ಸಾಲ : ಕೊನೆಗೆ ಪ್ರಾಕಿನ ಬಾಕಿ ಹಣ ಖಂಡಣೆ ಸಹಾ ೩ ಲಕ್ಷರೂಪಾಯಿ ಮೇಲೆ ಚುಕಾಯಿಸಿ (ಹೈದಶ. ೯೩). **ಪ್ರಾಕಿನವ** = ಹಿಂದಿನ ಕಾಲದವನು ; ಪುರಾತನ ವ್ಯಕ್ತಿ : ನಮ್ಮ ಎಳೆಚಿತ್ತಾಯರು ಹೇಳಿದರು—ನೀನು ಈ ಊರಿಗೇನೆ ಪ್ರಾಕಿನವನೆಂದು; ವಯಸ್ಸಾದವನೆಂದು (ಜಾನಳ. ೯೩). [<ಸಂ. ಪ್ರಾಚ್]

**ಪ್ರಾಕು**$_2$, **ಪ್ರಾಕ್ಕು**$_2$ (ಅ). ಹಿಂದೆ; ಮೊದಲು; ಯಿದಕ್ಕೆ ನೀಉ ಪ್ರಾಕು ಕೊಡುವ ಗುತ್ತಿಗೆ ರೊಕ್ಕ ಬಿಟ್ಟು ಬಿರಾಡು ಕ್ರಯಾದಾಯ × × × ವೆಚ್ಚ ಬಿರಾಡ ಗಲುಡ ಸೇನಬೋವ ಆಯಗಾರರಿಗೆ ಕೊಡುವ ಉಪ್ಪು ಸಹಾ ಎನಿಸಿ ಸರ್ವಮಾನ್ಯದ ಶಿಲಾಶಾಸನ (ಎಳ. XI. ಮೊಳಕಾ. ೮-೦೦; 1551); ಎಂದಿಮ್ಮ ರಾಜಯ್ಯಗೆ ಪುಣ್ಯವಾಗಬೇಕೆನ್ದು ಪ್ರಾಕು ತೆಜುವ ರೊಕವನೂ ಸರ್ವ ಮಾನವಾಗಿ ಬಿಟೆಉ (ಎಳ. XI. ಹಿಂದುಉ. ೯೦-೦೩; 1556 ?); ಪ್ರಾಕು ರೈತರು ಮಾಡಿದ್ದ ಭೂಮಿಯಲ್ಲಿ ಪೌತಿ ಪರಾರಿ ಆದವರ ಪಾಳು ಭೂಮಿಯು . . . ಸಾಗುವಳಿ ಮಾಡಬೇಕು (ಪುಹಾಮ. II. ೬೦).

**ಪ್ರಾಕ್ಕು**$_3$.

**ಪ್ರಾಕ್ಕು ಮುತ್ತೈಯ್ದೆ** = ಹಿಂದೆ ಮುತ್ತೈದೆಯಾಗಿದ್ದವಳು ; ವಿಧವೆ : (೯). [< ಸಂ. ಪ್ರಾಕ್]

**ಪ್ರಾಕುಪ್ರಮಾಣ** (ನಾ). ಪುರಾತನಕಾಲದ ಪ್ರಮಾಣ : ಗುತ್ತಿಗೆಪ್ರಾಕು ಪ್ರಮಾಣನು . . . ಸೋಮೇಶ್ವರದೇವರ ಭಂಡಾರಕ್ಕೆ ಮಾಸಗದಿಯಾಗಿ ಸಲಿಸುವಿರಿ (ಮೈಕಂ. ೦೯೯೩. ೨೯-೦೩; 1530). [ಪ್ರಾಕು$_1$+ಪ್ರಮಾಣ]

ಪ್ರಾಕೃತ (ಗು). ೧. ನೈಸರ್ಗಿಕವಾದ; ಸಹಜವಾದ: ಮೊದಲು ಸ್ತ್ರೀಯು ಯಾವ ಸೌಂದರ್ಯದಿಂದ ಸೃಷ್ಟಿಕರ್ತನಿಂದ ಸೃಷ್ಟಳಾಗಿ ಈವರೆಗೆ ಬಂದಳೋ ಅಂತಹ ಪ್ರಾಕೃತ ಗಂಭೀರಸೌಂದರ್ಯದ ಸ್ತ್ರೀಯನ್ನು ನೀವು ನೋಡಬೇಕು (ಪುರಿಷಾ. ೬೩); ಪ್ರಾಕೃತಘಟನೆಗಳ್ಗೆ ಪ್ರಕೃತಿಕಾರಣದಂತೆ ದೇವಕಾರಣ ಮಿರ್ಪುದೆಂದು ಗುರು ಕಲಿಸಿದನ್ ನನಗೆ (ಶ್ರೀಣಾಪು. ೩೬-೪೧). ೨. ಸಾಮಾನ್ಯವಾದ; ಸಾಧಾರಣವಾದ. ೩. ಒರಟಾದ; ಅಸಂಸ್ಕೃತವಾದ; ಅಸಭ್ಯವಾದ. (ನಾ). ೪. ಸಾಮಾನ್ಯವಾದುದು; ಸಾಧಾರಣವಾದುದು: ಈಕೆಯ ರೂಪಿನ ಪರಿಯಂ ಕೋಕನದಜನಂದು ಕಂಡೊಡಂತಾ ಗೌರೀ ಶ್ರೀಕಾಂತೆಯರಾಕೃತಿಯಂ ಪ್ರಾಕೃತಮೆನೆ ಮಾಡನೆನಿಸಿ ರುಕ್ಮಿಣಿಯೆಸೆಗುಂ (ಜಗಪ. ೧೦-೯೯). ೫. ಸಾಮಾನ್ಯನಾದವನು; ನಾಡಾಡಿ; ಪಾಮರ: ಪ್ರಾಕೃತನಲ್ಲನೀ ದಶರಥಾಗ್ರುತನೂಭವಂ (ತೊರಾಪು. ೩-೬೩); ಅರಿಯನೀ ಲಕ್ಷ್ಮಣನು ಮಾಯಾನಿರುಗೆಯಾಕೃತಿಯಾದ ಸೀತೆಯು ತೆರನ ವಂಚಿಪೆನೀತನನು ಪ್ರಾಕೃತನ ತೆರದಂತೆ (ತೊರಾಪು. ೩-೬-೨), ನೀನು ಭಾವಿಸುವನಿತ್ತು ಗಾಲವನು ಪ್ರಾಕೃತನೆ? (ಕಂಕೃಸ. ೦೩). ೬. ಪ್ರಕೃತಿತತ್ತ್ವವಾದಿ; ನಿಸರ್ಗವಾದಿ: ಶಾಸ್ತ್ರವನ್ನು ನಂಬದೆ ಕೇವಲ ಜಗತ್ತನ್ನು ನೋಡಿ ಸಿದ್ಧಾಂತಗಳನ್ನು ಕಲ್ಪಿಸತಕ್ಕ ಪ್ರಾಕೃತರು ಮತ್ತು ಚಾರ್ವಾಕರು ನಾಲ್ಕು ತತ್ತ್ವಗಳನ್ನು ಮಾತ್ರ ನಂಬುತ್ತಾರೆ (ಜೀವಾಕ್ಕ. ೦೬). ೭. ಯಾಗದ ಪಶು; ಯಜ್ಞಪಶು: "ಯಾಗಕೆಯ್ದಿರ್ದ ಪಶುವು ಪ್ರಾಕೃತವೆನಿಕು" (ಖುಂಗಣಾ. ೬೬-೦೯). ೮. ಆರ್ಯಭಾಷಾ ವರ್ಗದ ಪ್ರಾಚೀನಭಾರತದ ದೇಶಭಾಷೆಗಳು ಮತ್ತು ಆ ಭಾಷೆಗಳಲ್ಲಿ ಯಾವುದಾದರೊಂದಂ: ಸಂಸ್ಕೃತಂ ಪ್ರಾಕೃತಂ ಅಪಭ್ರಂಶಂ ಪೈಶಾಚೀವೆಂಬ ಮೂಱುವರ ಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಶಂದೋಂಬು. ೦-೯೬ ಪ); ಸಂಸ್ಕೃತ ಪ್ರಾಕೃತ ಅಪಭ್ರಂಶ ಪೈಶಾಚಿಕಾದಿ ಭಾಷಾಭೇದದಿಂ ಪೇಳ್ವ ಲಾಕ್ಷಣಿಕರಪ್ಪ ಕವೀಶ್ವರರಿಂ (ಶಿವೀಕ. ೦೬೦). ೯. ಕ್ಷುದ್ರಮಂತ್ರಗಳಲ್ಲಿ ಒಂದು ಬಗೆ: ದ್ರಾವಿಡ, ವೈಕೃತ, ಪ್ರಾಕೃತ ಇತ್ಯಾದಿ ಕ್ಷುದ್ರುವಂತ್ರಂಗಳು . . . ತಿಳಿದಿರಲಕ್ಕುಂ (ಶಿವೀಕ. ೬೦). ೧೦. ನಿತ್ಯ, ನೈಮಿತ್ತಿಕ, ಪ್ರಾಕೃತ ಮತ್ತು ಆತ್ಯಂತಿಕಗಳೆಂಬ ನಾಲ್ಕುವಿಧ ಪ್ರಳಯಗಳಲ್ಲಿ ಒಂದು; ಪ್ರಕೃತಿಯ ನಾಶರೂಪವಾದ ಪ್ರಳಯ: ಪ್ರಲಯವು, ನಿತ್ಯ, ಪ್ರಾಕೃತ, ನೈಮಿತ್ತಿಕ, ಆತ್ಯಂತಿಕ ಎಂದು ನಾಲ್ಕು ವಿಧ . . . ಪ್ರಾಕೃತ ಪ್ರಲಯವೆಂದರೆ ಪ್ರಕೃತಿಯೆಂಬ ಮಾಯೆಯಲ್ಲಿ ಬ್ರಹ್ಮನೊಡನೆ ಬ್ರಹ್ಮಾಂಡ ವಿನಾಶ (ಹಿಂದತಾ. ೦೯೬). ೧೧. [ಯೋಗ]ಪ್ರಾಣಾಯಾಮದ ಪ್ರಾಕೃತ, ವೈಕೃತ, ಕೇವಲಕುಂಭಕಗಳೆಂಬ ಮೂರು ಪ್ರಕಾರಗಳಲ್ಲಿ ಒಂದು: ಪ್ರಾಕೃತ ವೈಕೃತಮಾದ ದ್ವಿವಿಧರೇಚಕ ಪೂರಕ ಕುಂಭಕ ಉತ್ಕರ್ಷ ಅಪಕರ್ಷ ಶೂನ್ಯ ಉತ್ಕ್ರಾಂತಿ ಎಂಬ ಸಪ್ತ ಪ್ರಾಣಾಯಾಮಲಕ್ಷಣಂಗಳಂ (ಶಿವೀಕ. ೦೩೩); ಪ್ರಾಕೃತಪ್ರಾಣಾಯಾಮವೆಂದು ವೈಕೃತಪ್ರಾಣಾಯಾಮವೆಂದು ಆ ಎರಡಱಿಂ ಪೊಱತಾದ ಕೇವಲಕುಂಭಕವೆಂದು ಮೂಱು ಪ್ರಕಾರವಾಗಿ ಪುದದೆಂತೆನೆ ದಿನವೊಂದಕ್ಕೆ ಇಪ್ಪತ್ತೊಂದುಸಾವಿರದ ಆಱುನೂಱು ಹಂಸ ಹಂಸವೆಂದುಚ್ಚರಿಸುವ ಅಹಂಕಾರಾತ್ಮಕವಾದ ಜೀವಜಪವೇ ಪ್ರಾಕೃತ ಪ್ರಾಣಾಯಾಮವೆನಿಸುವುದು (ಶಿಖಂಕೀ. ೨೦೬-೩೯). ೧೨. [ನಾಟ್ಯ] ಕಣ್ಣುಗುಡ್ಡೆಯ ಒಂಬತ್ತು ವಿಧವಾದ ಚಲನೆಗಳಲ್ಲಿ ಒಂದು; ಕಣ್ಣುಗುಡ್ಡೆಯ ಸ್ವಾಭಾವಿಕಚಲನೆ: "ಆಲಿಗಳು ಸ್ವಭಾವವಾಗಿರುವುದು . . . ಪ್ರಾಕೃತವನ್ನು ಅದ್ಭುತರಸ ಮತ್ತು ಆವೇಶಗಳಲ್ಲೂ ವಿನಿಯೋಗಿಸಬೇಕು" (ಶಾಸ್ಕೆಂ. ಗದ್ಯಾನುವಾದ. ೨೬೯); ಭ್ರಮಣಂ ವಲನಂ ಪಾತಂ . . . ಸಮುದ್ವೃತ್ತಂ ನಿಷ್ಕ್ರಾಮಂ ಅಮಿತಪ್ರಾಕೃತಗಳಾಲಿಯೊಂಬತ್ತಕ್ಕುಂ (ಶಾಸ್ಕೆಂ. ೩-೩೯). [ಸಂ.]

ಪ್ರಾಕೃತಕಾವ್ಯ (ನಾ). ಪ್ರಾಕೃತಭಾಷೆಗಳಲ್ಲಿ ರಚಿತವಾಗಿರುವ ಕಾವ್ಯ: ಆನಂದವರ್ಧನನ ಕಾಲದಲ್ಲಿ ಪ್ರಾಕೃತಕಾವ್ಯಕ್ಕೆ ಇನ್ನೂ ಹೆಚ್ಚಾದ ಮನ್ನಣೆಯಿತ್ತು (ಕೃಷ್ಣಾಲೋ. XI ಮುನ್ನುಡಿ). [ಸಂ.]

ಪ್ರಾಕೃತಜನ (ನಾ). ಪಾಮರಜನ; ನಾಡಾಡಿಜನ: ವಲಂ ವಿಷಯಾಸಕ್ತಿಯೊಳಾಯಾಸ್ಯಕನಿರತರಾಗಿರ್ಪ ಪ್ರಾಕೃತಜನಂಗಳ ಗಮನಮೇ ಸಮಸ್ತವೇದಿಗೆ ಹೃದಯಂಗಮಮಪ್ಪುದು (ಶಾಂತಿಪು. ೯-೦೦೩ ಪ). [ಸಂ.]

ಪ್ರಾಕೃತಪುರುಷ (ನಾ). ಸಾಮಾನ್ಯಮನುಷ್ಯ; ನಾಡಾಡಿ; ಪಾಮರ: ಮೊಗಮಂ ನೋಡುತ್ತುಮಿನಿವಿಂದು ಪರಾಭವಂ ಪ್ರಾಕೃತಪುರುಷಂಗಂ ಕಾಪುರುಷಂಗಂ ಪೊತ್ತು ನಿಲ್ವುದರಿದು (ಶಾಂತಿಪು. ೩-೬೬ ಪ). [ಸಂ.]

ಪ್ರಾಕೃತಭಾಷೆ (ನಾ). = ಪ್ರಾಕೃತ ೮: ಪ್ರಾಕೃತಭಾಷೆಗೆ ಸಂಸ್ಕೃತವೇ ಮೂಲವಾಗಿ (ಪ್ರಕೃತಿಯಾಗಿ)ರುವುದು. ಇದು ಸಂಸ್ಕೃತದಿಂದ ಹುಟ್ಟಿದುದೆಂದಾಗಲಿ, ಸಂಸ್ಕೃತದಿಂದ ಬಂದಿತೆಂದಾಗಲಿ . . . ಈ ಭಾಷೆಗೆ ಪ್ರಾಕೃತಭಾಷೆಯೆಂದು ಹೆಸರು ಬಂದಿದೆ (ಶಾಕಶ. ೯೩೬). [ಸಂ. ಪ್ರಾಕೃತಭಾಷಾ]

ಪ್ರಾಕೃತಾಸ್ತ್ರ (ನಾ). ಸಾಮಾನ್ಯವಾದ ಬಾಣ — ಅಸ್ತ್ರ: ಪ್ರಾಕೃತಾಸ್ತ್ರನಿಕರಂಗಳಿನಂತಾ ಭೀಕರರ್ ಕರಮ ಕಾದೆ ಬಟೀಕ್ಕಪ್ರಾಕೃತಾಸ್ತ್ರನಿಧಿಯಂ ತೆಗೆದಂ ಶೌರ್ಯಾಕರಂ ವೆಗಟ್ಟ ಮಾಗಧಭೂಪಂ (ಶೀಪುಪು. ೦೨-೨೯೦). [ಸಂ.]

ಪ್ರಾಕೃತಿಕ (ಗು). ಪ್ರಕೃತಿಗೆ ಸಂಬಂಧಿಸಿದ; ಸ್ವಾಭಾವಿಕವಾದ; ನೈಸರ್ಗಿಕವಾದ: ಧ್ವನಿ ಮೊದಲಾದುವು ಪ್ರಕೃತಿಯಿಂದ ಸಿದ್ಧಿಸಿದುವು. ಇವಕ್ಕೆ ಪ್ರಾಕೃತಿಕ ಎಂದು ಹೆಸರು (ಶಾಕಶ್ಯ. ೮೬೩); ಬೆಂಗೂರಿನ ಪ್ರಾಕೃತಿಕಸ್ವರೂಪ ಅಂಥದು (ದುಂಬಶಾ. ೦). [ಸಂ.]

ಪ್ರಾಕ್ಕು₁ 'ಪ್ರಾಕ್ಕು₁' ನೋ.

ಪ್ರಾಕ್ಕು₂ 'ಪ್ರಾಕ್ಕು₂' ನೋ.

ಪ್ರಾಕ್ತನ (ಗು). ೧. ಹಿಂದಿನ; ಪೂರ್ವದ: ಪ್ರಾಕ್ತನಜನ್ಮವಿದ್ಯೆಗಳ್ ಬಂದು ನಿತುಂ ನೆಲಸಿದುವು ಸಕಲವಿದ್ಯಾನಿಧಿಯೊಳ್ (ಆಪು. ೩-೬೦); ಪ್ರಾಕ್ತನಪುಣ್ಯ ಪ್ರಾಪ್ತಿಯಿಂದಾ ಬಯಕೆ ಸಮನಿಸುಗುಂ ಚಿತ್ತವೇಡಂ (ಕುಪ್ರಪು. ೯-೨೪); ಮನದೊಳೆನಗೀಶ ಮತ್ಪ್ರಾಕ್ತನಜನ್ಮಾವಳಿಯನೆಯ್ದೆ ಕೇಳ್ವಟ್ಟು ಕರಂ ಜನಿಯಿಸಿದಪುದು (ಶಂದ್ರಪ್ರಪು. ೩-೬). (ನಾ). ೨. ಅತಿ ಹಿಂದಿನ ಕಾಲ; ಪೂರ್ವಕಾಲ: ವ್ಯಕ್ತವಾಗಿಹ ಶಬ್ದವುದಿಸದು ಪ್ರಾಕ್ತನದ ಜನ್ಮದಲಿ ಪುಣ್ಯದ ಶಕ್ತಿಯಿಲ್ಲದರಿಪುದಕಾರ್ಯವು ದುರ್ಲಕ್ಷ್ಯವೆಂದೆನಲು (ಶಿವೀಕ. ೩-೩೦); ಪ್ರಾಕ್ತನವೇ ಹೂತ ಹಾಗೆ ನೂತನವಿದು ರಮ್ಯವಾಗಿ (ಕರುಣ್ಯಾ. ೧೯-೦೩). ೩. ಹಿಂದಿನ ಕಾಲದ ವಿದ್ವಾಂಸ: ವರ್ಗದಕ್ಕರಂಗಳ್ ನಾಲ್ಕುಂ ಶಾಂತಮಿರೆ ಪೇಟ್ಟ ತಾಣದೊಳಂತಕ್ಕುಂ ಪ್ರಾಕ್ತನೋಕ್ತವರ್ಗಪ್ರಾಸಂ (ಶಂದೋಂಬು. ೦-೯೬ ಅಡಿ). ೪. ಹಣೆಯ ಬರೆಹ; ವಿಧಿ; ಅದೃಷ್ಟ: ಪ್ರಾಕ್ತನದಲ್ಲಿ ಸುಖವನ್ನು ನೋಡದೆ ಕಷ್ಟವನ್ನೇ ಅನುಭವಿಸಬೇಕೆಂದಿದ್ದರೆ ಅದಕ್ಕೆ ನಾನಾದರೂ ಏನು ಮಾಡಲಿ? (ಶರಷು. ೦೩). [ಸಂ.]

ಪ್ರಾಕ್ತನವಿಮರ್ಶಕ (ನಾ). ಪ್ರಾಚೀನಕಾಲದ ವಿಷಯವನ್ನು ಪರಿಶೀಲಿಸುವವನು-ಅಭ್ಯಾಸ ಮಾಡುವವನು: ಇದು ಕೃಷ್ಣಾ-ಗೋದಾವರೀನದಿಗಳ ನಡುವಣ ಆಂಧ್ರಶಿಲ್ಪಿಯೊಬ್ಬನ ಕೈಕೆಲಸವೆಂದು ಪ್ರಾಕ್ತನ ವಿಮರ್ಶಕರ ನಿರ್ಣಯ (ಶಕಶ. ೩೩೯). [ಸಂ.]

ಪ್ರಾಕ್ತನಶಾಸ್ತ್ರ (ನಾ). ಪ್ರಾಚೀನಅವಶೇಷಗಳ ಶೋಧನೆಗೆ ಸಂಬಂಧಿಸಿದ ಶಾಸ್ತ್ರ: ಅವನು ಅಭ್ಯಾಸಕ್ಕೆ ಪ್ರಾಕ್ತನಶಾಸ್ತ್ರವನ್ನು ಮುಖ್ಯವಿಷಯವಾಗಿ ಆರಿಸಿಕೊಂಡನು (ಲೂಡಿ). [ಸಂ.]

ಪ್ರಾಕ್ತನಶೋಧಕ (ನಾ). ಪ್ರಾಚೀನಅವಶೇಷಗಳನ್ನು ಶೋಧಿಸುವವನು: ಪ್ರಾಕ್ತನಶೋಧಕನ ಕೆಲಸ ಬಹಳ ಕಷ್ಟಕರವಾದುದು (ಲೂಡಿ). [ಸಂ.]

**ಪ್ರಾಕ್ತನಶೋಧನೆ** (ನಾ). ಪ್ರಾಚೀನ ಅವಶೇಷಗಳನ್ನು ಅನ್ವೇಷಿಸುವುದು : ರಾಷ್ಟ್ರೀಯಮಹತ್ತ್ವವುಳ್ಳವೆಂದು ಸಂಸತ್ತಿನಿಂದ ವಿಧಿದ್ವಾರಾ ಘೋಷಿತವಾದ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಅಭಿಲೇಖಗಳು ಮತ್ತು ಪ್ರಾಕ್ತನಶೋಧನೆಯ ನಿವೇಶನಗಳು ಮತ್ತು ಅವಶೇಷಗಳು (ಕಾಂರಾಶ. ೨೬೪). [ಸಂ.]

**ಪ್ರಾಕ್ಪ್ರಣೇತ** (ನಾ) ಐದು ಬಗೆಯ ಭಿಕ್ಷೆಗಳಲ್ಲಿ ಒಂದು ; ತಂಗಳು : ಮಾಧೂ[ಧು]ಕರ ಅಸಂಕ್ಲೃಪ್ತ ಪ್ರಾಕ್ಪ್ರಣೇ[ತ]ತ ಅಯಾಚಿತ ತಾತ್ಕಾಲಿಕವೆಂಬ ಪಂಚವಿಧಭಿಕ್ಷಂಗಳನಾದೊಡಂ . . . ಭೋಜನಗೈದು (ಶಿವೇಕ. ೦೨೪). [ಸಂ.]

**ಪ್ರಾಗಲ್ಭ್ಯ** (ನಾ). ೧. ದಿಟ್ಟತನ ; ಧೈರ್ಯ : ಅಕಠೋರಶರೀಷಪುಷ್ಪ ಸುಕುಮಾರಪ್ರಕೃತಿಯಪ್ಪ ನಾರೀಜನಕೆ ಪ್ರಾಗಲ್ಭ್ಯಂ ದೊರೆಕೊಳ್ವುದಲ್ಲ (ಕಾದಂಸಂ. ೩೦೩). ೨. ಜಂಬ ; ಹೆಮ್ಮೆ ; ಅಹಂಕಾರ. ೩. ಪ್ರಾವೀಣ್ಯ ; ನಿಪುಣತೆ ; ಕೌಶಲ : ಸುಹೃದ್ಬಲಂ ಮಾರ್ವಲಕಂ ಗುಣಾರ್ಣವ ಶರಪ್ರಾಗಲ್ಭ್ಯಮಂ ತೋರುವಂ (ಪಂಪಭಾ. ೩-೩೩) ; ಚಿತ್ರಕನ ಚಿತ್ರವಿದ್ಯಾಪ್ರಾಗಲ್ಭ್ಯಮಂ ಪ್ರತ್ಯೇಕವಮವಲೋಕಿಸಿ (ಮಲ್ಲಿಪು. ೩-೯೩): ಹೀಗೆ ಉಚಿತವಾದ ಪದವೈಚಿತ್ರಿಯಿಂದಲೂ ರೀತಿಯಿಂದಲೂ ಚಿಂತನೆಯ ಪ್ರಾಗಲ್ಭ್ಯದಿಂದಲೂ ನವ್ಯರಸಸ್ಯಂದಿಯಾದ ಭಾವನೆ (ಕಾವ್ಯಕು. ೯೬). ೪. ಪ್ರವೀಣ; ನಿಪುಣ : ಅಪ್ರತಿಹತಪ್ರಾಗಲ್ಭ್ಯರೀಗಳ್ ಪೃಥಾಸುತರ್ (ಪಂಪಭಾ. ೬-೯೭). [ಸಂ.]

**ಪ್ರಾಗವಸ್ಥೆ** (ನಾ). ಹಿಂದಿನ ಸ್ಥಿತಿ; ಪೂರ್ವದ ಅವಸ್ಥೆ : ಪ್ರಧಾನವೂ ಜಗತ್ತಿನ ಪ್ರಾಗವಸ್ಥೆ ಅತ್ಯಾಕೃತವೂ ಪ್ರಾಗವಸ್ಥೆ (ಬ್ರಹ್ಮಸೂ. ೩೩೦). [ಸಂ. ಪ್ರಾಗವಸ್ಥಾ]

**ಪ್ರಾಗೈತಿಹಾಸಿಕ** (ಗು). ಇತಿಹಾಸಕ್ಕೂ ಪೂರ್ವಕಾಲದ : ಜನಪದ ಸಾಹಿತ್ಯವು ಪ್ರಾಗೈತಿಹಾಸಿಕಜೀವನದ ಪರಂಪರಾಗತಸಂಗತಿಯಾಗಿದೆ (ಕನ್ನಸಾ. IV. ಕೃಷ್ಣಾಪಹ) : ಆಗ ಹಳೆಗಾಲದ ಪ್ರಾಗೈತಿಹಾಸಿಕಜನರ ಪಂಶಿಲನೆಯೂ . . . ಅಗತ್ಯವಾಗಿ ಕಂಡು ಬಂತು (ಕುಲವಾ. ೯). [ಸಂ.]

**ಪ್ರಾಗ್ಜನ್ಮ** (ನಾ). ಹಿಂದಿನ ಹುಟ್ಟು; ಪೂರ್ವಜನ್ಮ: ಪ್ರಾಗ್ಜನ್ಮಕಥಾವಳಿಯೆಲ್ಲಮಂ ಬಗೆದು ನೋವೆನಗಾದುದು (ಆದಿಪು. ೩-೩೩) ; ಮಿಗೆ ಮತಂಗನು ಮತ್ತೆ ಪ್ರಾಗ್ಜನ್ಮಗಳ ಕರ್ಮವಿಶೇಷದಿಂದಚಿಕೆಗಳನ್ನುಳ್ಳವ ತಿಳಿವ ತಿರ್ಯಗ್ಜಾತಿಭಾಷೆಗಳ (ತಿಮ್ಮಪ್ರಿ. ೨-೩). [ಸಂ.]

**ಪ್ರಾಗ್ಭವ** (ನಾ). ೧. ಮೂಡಲಲ್ಲಿ ಹುಟ್ಟಿದುದು ; ಪೂರ್ವದಲ್ಲಿ ಅವತರಿಸಿದುದು : "ಪ್ರಾಚೀನಂ, ಪ್ರಾಗ್ಭವಮ್—ಮೂಡಲಲ್ಲಿ ಹುಟ್ಟಿದ್ದು" (ಸಿದ್ಧಾಂತಿ. ೨೬). ೨. ಹಿಂದಿನ ಜನ್ಮ,—ಹುಟ್ಟು. [ಸಂ.]

**ಪ್ರಾಗ್ಭಾರತೀಯ** (ಗು). ಭಾರತದ ಚರಿತ್ರೆಗೆ ಹಿಂದಿನ : ಹರಪ್ಪ ಸಂಸ್ಕೃತಿ ಅಥವಾ ಪ್ರಾಗ್ಭಾರತೀಯಸಂಸ್ಕೃತಿ (ಪ್ರೋಟೋ-ಇಂಡಿಕ್) ಆಕಸ್ಮಿಕವಾಗಿ ಬೆಳಕಿಗೆ ಬಂದಿತು (ಭಾರತ. ೯). [ಸಂ.]

**ಪ್ರಾಗ್ರ್ಯ** (ಗು). ೧. ಎತ್ತರವಾದ ; ಉನ್ನತವಾದ. (ನಾ). ೨. ತುತ್ತತುದಿ. ೩. ಮುಖ್ಯನಾದವನು; ಪ್ರಮುಖ : ಉಗ್ರತಪದಿಂದೆಯತುಳ ಸಮಗ್ರೈಯನಭವಂಗೆ ವಧುವೆನಿಪ್ಪಳನಾನವ್ಯಗ್ರದೆ ಪಡೆವೆಂ ಕುಧರಪ್ರಾಗ್ರ್ಯನೆ ಕೆಳೆವೆಂದು ಮೇನೆ ನುಡಿವವಸರದೊಳ್ (ಗಿರಿಜಾ. ೩-೬). [ಸಂ.]

**ಪ್ರಾಗ್ರೂಪ** (ನಾ). ೧. ಹಿಂದಿನ ಆಕಾರ; ಪೂರ್ವರೂಪ. ೨. ರೋಗವು ವ್ಯಕ್ತವಾಗುವ ಮೊದಲು ತೋರುವ ರೋಗಲಕ್ಷಣ : ಪ್ರಾಗ್ರೂಪವೆಂಬುದು ರೋಗ ಹುಟ್ಟುವ ಮೊದಲೇ ಅವ್ಯಕ್ತವಾದ ಲಕ್ಷಣ (ವೈದ್ಯಸಾ. I. ೨೫); ಪ್ರಾಗ್ರೂಪ ಎಂದರೆ ರೋಗ ಹುಟ್ಟುವುದಕ್ಕೆ ಮೊದಲೇ ಉಂಟಾದ ಅವ್ಯಕ್ತವಾದ ರೋಗಲಕ್ಷಣ (ಸಕವ್ಯ. ೨೦). [ಸಂ.]

**ಪ್ರಾಗ್ವಂಶ** (ನಾ). ಹೋಮದ್ರವ್ಯವಿರುವ ಗೃಹಕ್ಕೆ ಪೂರ್ವಭಾಗದಲ್ಲಿರುವ, ಯಜಮಾನ ಮತ್ತು ಋತ್ವಿಕ್ಕುಗಳು ಇರುವ ಗೃಹ ; ಯಜ್ಞಶಾಲೆಯ ಒಂದು ಭಾಗ : "ಪ್ರಾಗ್ವಂಶಃ . . . ಹವಿಸ್ಸೆಂಬ ಹೋಮದ್ರವ್ಯವಿರುವ ಮನೆಗಿಂತಲೂ ಮೂಡಲಲ್ಲಿ ಯಜಮಾನ ಮೊದಲಾದವರಿಗಿರುವುದಕ್ಕೆ ನಿರ್ಮಿಸಿದ ಮನೆಗೆ ಹೆಸರು" (ಸಿದ್ಧಾಂತಿ. ೨೦೬) ; ಮಯಂ ವಿಸ್ಮಯಮಾಗೆ ಮಾಡಿದ ಸಭಾವಿಸ್ತಾರಮಂ . . . ಯಾಗದೇವ ಯಜನಪ್ರಾಗ್ವಂಶವಕ್ಷೀವಿಚಿತ್ರಮಹಾಶಾಲೆಗಳಂ (ಜಗಮೋ. ೦೬-೩) ; ಈ ಜನಪಳಯದೊಳು ಪ್ರಾಗ್ವಂಶದಲಿ ಪರಿವೀಳಿತವಾಯ್ತು ಸದಸ್ಯ ಋತ್ವಿಜರ ವಿಧಾನದಲಿ (ಕುಮಾವ್ಯಾಸ. ೭-೩೦). [ಸಂ.]

**ಪ್ರಾಗ್ವಾಸನೆ** (ನಾ). ಹಿಂದಿನ ಜನ್ಮದ ಸ್ವಭಾವಗಳ ಕೋರಿಕೆ : ಮತ್ತೆ ಪ್ರಾಗ್ವಾಸನೆಯ ಪೆಸರಿನ ಸುತ್ತುವಳ್ಳಿಯ ಮೆಟ್ಟಿರದೆ ಮೈವೆತ್ತುತಿಹ ಸಂಕಲ್ಪ ಚಿಗುರಿಗೆ ಜುಟ್ಟುತಗಲಿಸದೇ (ಗಗಚಾ. ೦೬-೧೯). [ಸಂ. ಪ್ರಾಗ್ವಾಸನಾ]

**ಪ್ರಾಗ್ವೈಭವ** (ನಾ). ಹಿಂದಿನ ಕಾಲದ ವೈಭವ : ಯುಟಿಯುತ್ತಿದೆ ಪಾಷಾಣಾದಿ ಪ್ರಾಗ್ವೈಭವ ಜೀವ (ಕರುಣ್ಯಾ. ೭೦-೦). [ಸಂ.]

**ಪ್ರಾಘಾರ**(ನಾ). ೧. ಸೋರುವಿಕೆ; ಒಸರುವಿಕೆ: "ಶ್ಚ್ಯೋತಃ, ಪ್ರಾಘಾರಃ—೨ ಸೋರಿಹೋಗುವಿಕೆ, ಸೋರುವಿಕೆ" (ಸಿದ್ಧಾಂತಿ. ೩೪೪). ೨. ಹೋಮದಲ್ಲಿ ಅಗ್ನಿಗೆ ಮಾಡುವ ಆಜ್ಯಾಹುತಿ. [ಸಂ.]

**ಪ್ರಾಘುಣಕ** (ನಾ). ಆಮಂತ್ರಣವನ್ನು ಪಡೆದು ಅಥವಾ ಪಡೆಯದೆ ಮನೆಗೆ ಬರುವ ಗೌರವಸ್ಥ ; ಅತಿಥಿ ಅಥವಾ ಅಭ್ಯಾಗತ : "ಅತಿಥಿಯಾಗಂತು ಪ್ರಾಘುಣಕನೆನೆ ಬರ್ದಿನಂ" (ಮುಂಗಾಂಗಾ. ೭೦-೦೬). [ಸಂ.]

**ಪ್ರಾಙ್ಮುಖ** (ಗು). ೧. ಪೂರ್ವದಿಕ್ಕಿಗೆ ಮುಖ ಮಾಡಿಕೊಂಡಿರುವ; ಪೂರ್ವಾಭಿಮುಖವಾದ : ಮಹಾಪಥಗಮನವ್ರವಾಸವ್ರತವ ಒಡೆದ ಮಲಚಿರಿತರು ಮನವ ಬಲಿದಿಹ ಗಾಢಧೈರ್ಯದಲಿ ಅಮರಶ್ಯವಲ್ಲಿನೀತಟಕೆ ನಿರ್ಗಮಿಸಿ ಪ್ರಾಙ್ಮುಖವರ್ತನದಿನುತ್ತರಮವೆನಿಪ ನಿಜಯೋಗಬಲದಲಿ ನಡೆದರಲ್ಲಿಂದ (ತಿಮ್ಮಯು. ೦-೨೬). (ನಾ). ೨. ಪೂರ್ವಾಭಿಮುಖವಾಗಿರುವುದು : ಮುನ್ನಮೆ ನಿಜಾಸಿದ ಮಣಿಖಚಿತೋನ್ನತಹರಿಪೀಠದೋಳ್ ಜಗತ್ಪತಿಯ ಮಾನೋನ್ನತನಂ ಪ್ರಾಙ್ಮುಖದಿಂದುನ್ನತಸುರಮಾಲಿಲಾಲಿತಾಂಘ್ರಿದ್ವಯನಂ ಇರಿಸಿ (ಆದಿಪು. ೯-೩೪). [ಸಂ.]

**ಪ್ರಾಚಾರ್ಯ** (ನಾ). ಮುಖ್ಯ ಉಪಾಧ್ಯಾಯ; ಪ್ರಮುಖ ಗುರು : ಹಂಚೇರುಪಟ್ಟಣ ಒಂದು ಮಹಾಘಟಿಕಾಸ್ಥಾನವಾಗಿತ್ತು . . . ಅನಂತಶಿವದೇವರು ಎಂಬ ಗುರು ಅದರ ಪ್ರಾಚಾರ್ಯರಾಗಿದ್ದರು (ಶಿಕಂಪಂ. ೬೭); ಪ್ರಾಚಾರ್ಯ ಪರಾಂಜಪೆಯವರ ಕಡೆಗೆ ಹೋದಾಗ ಅವನ ವಿಷಯವನ್ನೆಲ್ಲ ಜ್ಞಾಪಕಕ್ಕೆ ತಂದುಕೊಂಡು ಅವರು ನರಹರಿಗೆ ನಗುತ್ತ ನುಡಿದಿದ್ದರು (ಸಮಾಜ. ೦೨೨೪). [ಸಂ.]

**ಪ್ರಾಚಿಕೆ** (ನಾ). ೧. ಒಂದು ಬಗೆಯ ಪಕ್ಷಿ; ಗಿಡುಗ; ಡೇಗೆ : "ಪ್ರಾಚಿಕೆ ವಿಷಮತ್ತಿಡನಂ ಶ್ಯೇನಮೆನೆ ಗಿಡುಗನಕ್ಕುಂ" (ಮುಂಗಾಂ. ೩೨-೬). ೨. ಕಾಡುನೊಣ. ೩. ಸೊಳ್ಳೆ. [ಸಂ. ಪ್ರಾಚಿಕಾ]

**ಪ್ರಾಚೀನ** (ಗು). ೧. ಪೂರ್ವದಿಕ್ಕಿನಲ್ಲಿರುವ. ೨. ಹಳೆಯ; ಹಿಂದಿನ; ಪುರಾತನಕಾಲದ : ಸತ್ಯಕ್ಕೇ ಅಂತಿಮವಿಜಯ ಸುನಿಶ್ಚಿತ . . . ಎಂದು ಪ್ರಾಚೀನಮುನಿಪುಂಗವರು ಹೇಳಿದರು (ರವೀಂದ್ರ. ೩); ಪ್ರಾಚೀನ ಆಸ್ಟ್ರೇಲಿಯನರೇ ಭಾರತದ ಮೂಲನಿವಾಸಿಗಳೆನ್ನಬಹುದು (ದ್ರಾವಿಡ. ೨೯). (ನಾ). ೩. ಹಳೆಯದು; ಪುರಾತನವಾದುದು : ದಕ್ಷಿಣಭಾರತದಲ್ಲಿ ಚಿತ್ರಕಲೆ ಸಾಕಷ್ಟು ಪ್ರಾಚೀನವಾದುದೇ ಆಗಿದೆ (ಭಾರತ. ೩೨೬); 'ವಿಂಧ್ಯಗಿರಿ' ಎಂಬ ಹೆಸರು ಎಷ್ಟು ಪ್ರಾಚೀನವೋ ತಿಳಿಯದು (ಸಂಶೋಕ. ೬೭). ೪. ಮೂಡಲಿಗೆ ಸೇರಿದುದು; ಪೂರ್ವಕ್ಕೆ ಸಂಬಂಧಿಸಿದುದು : "ಪ್ರಾಚೀನಂ, ಪ್ರಾಕ್—ಈ ೨ ಮೂಡಲಾದುದು" (ಶಬ್ದಾಮ. ೦೬-೧೦೩).

೫.–ಪ್ರಾಚೀನಕರ್ಮ : ನಮ್ಮ ಪ್ರಾಚೀನಕ್ಕೆ ಯಾರು ಹೊಣೆ ರಂಗವ್ವ (ಹಾಉಳಿ. ೧೦೭); ಹೇಗೆ ಪ್ರಾಚೀನದಲ್ಲಿ ಬರೆದಿದೆ ಹಾಗೆ ಇರಬೇಕು ಸಂಸಾರದಲ್ಲಿ (ಹೀಚಂಕೂ. ೯೭). ೬.–ಪ್ರಾಚೀನಾವೀತ : "ಜನ್ನಿವಾರವ ನೆಡದೊಡಲು ಪ್ರಾಚೀನಂ" (ಕುಂಗಣ. ೬೩-೮). ೭. ಬೇಲಿ; ಗೋಡೆ; ಪೌಳಿ: "ಪ್ರಾಚೀನಂ . . . ಊರ ಸುತ್ತಲೂ ಹಾಕಿರುವ ಬೇಲೀ ಮುಂತಾದ ತಡೆಗಳ ಹೆಸರುಗಳು" (ಸಿದ್ಧಾಂತಿ. ೯೯). ೮. ಹಳಬ; ಮುದುಕ; ವೃದ್ಧ : ಅವರೆಲ್ಲೂಬ್ಬ ವೃದ್ಧನೂ ಒಬ್ಬ ಯುವಕನೂ . . . ಎಚ್ಚರವಾಗಿದ್ದರು. ಪ್ರಾಚೀನನು ಯುವಾಪುರುಷನ ಸಂಗಡ ಮಾತಾಡುತ್ತಿದ್ದನು (ಕಹಾಕಉ. ೧). 'ಅರ್ವಾಚೀನ' ಪರಾ. [ಸಂ.]

ಪ್ರಾಚೀನಕರ್ಮ (ನಾ). ಪೂರ್ವಜನ್ಮಗಳಲ್ಲಿ ಮಾಡಿದ ಪಾಪಕರ್ಮ ಮತ್ತು ಅದರ ಫಲ : ಪ್ರಾಚೀನಕರ್ಮವು ಬಿಡಲರಿಯದು (ಪುರಂದ. ೯-೦೭ ಪಲ್ಲವಿ). [ಸಂ. ಪ್ರಾಚೀನಕರ್ಮನ್]

ಪ್ರಾಚೀನಕಾಲ (ನಾ). ಹಿಂದಿನ ಕಾಲ : ನಮ್ಮ ದೇಶದಲ್ಲಿ ಬಹಳ ಪ್ರಾಚೀನಕಾಲದಿಂದ ಅರಳೆಯ ನೂತು ಬಟ್ಟೆಗಳನ್ನು ಮಾಡುವ ರೀತಿಯು ಜನರಿಗೆ ಗೊತ್ತುಂಟು (ಕುಂಆಬು. ೯-೨೯); ಈ ಸಾಹಿತ್ಯದ ಸಮಗ್ರವಾದ ಇತಿಹಾಸವನ್ನು ಪ್ರಾಚೀನಕಾಲದ ಯಾರೂ ಬರೆಯಲಿಲ್ಲ (ಅಂಕಾ. ೨೦೩). [ಸಂ.]

ಪ್ರಾಚೀನತೆ (ನಾ). ಹಳೆಯದಾಗಿರುವಿಕೆ : ಭಾರತದಲ್ಲಿ ಮೂರ್ತಿಶಿಲ್ಪದ ಪ್ರಾಚೀನತೆಯನ್ನು ಸಮರ್ಥಿಸಲು ನಮಗೆ ಅನೇಕ ಗ್ರಂಥಗಳ ಆಧಾರ ದೊರೆತಿದೆ (ಭಾಕಿದ. ೩೦೯); ದ್ರಾವಿಡಭಾಷೆಗಳ ಉಗಮ ವಿಕಾಸ ವರ್ಗೀಕರಣ ಅವುಗಳ ಪ್ರಾಚೀನತೆ . . . ಇವೇ ಮೊದಲಾದ ಅನೇಕ ವಿಷಯಗಳನ್ನೊಳಗೊಂಡಿದೆ (ಪ್ರಾಶಿ. ೪. ಮುನ್ನುಡಿ). [ಸಂ. ಪ್ರಾಚೀನತಾ]

ಪ್ರಾಚೀನಪಾಠ (ನಾ). ಹಸ್ತಪ್ರತಿಗಳಲ್ಲಿ ತುಂಬಾ ಹಳೆಯದಾದ ಪ್ರತಿಯ ಪಾಠ : ಇದು ಪ್ರಾಚೀನಪಾಠವೂ (Antiquarian's text) ಆಗಿರದೆ ವಿಮರ್ಶನಪಾಠವೂ (Critic's text) ಆಗಿರದೆ ಎರಡರ ಮಧ್ಯದ ಒಡಂಬಡಿಕೆಯಾಗಿರುತ್ತದೆ (ಭಾರಕಿ. ೯೫). [ಸಂ.]

ಪ್ರಾಚೀನಬರ್ಹಿ (ನಾ). ಇಂದ್ರ; ಈ ನೂರು ಯಜ್ಞಗಳನ್ನು ಮಾಡಿರುವುದರಿಂದ ಹಿಂದೆ ಬಹುಕಾಲ ಅಗ್ನಿಯ ಮುಂದೆ ಕುಳಿತಿದ್ದವನು: "ಇಂದ್ರಃ . . . ಪ್ರಾಚೀನಬರ್ಹಿಃ . . . ವೇಘವಾಹನಃ — ಈ ಶಿ— ದೇವೇಂದ್ರನ ಪೆಸರ್" (ಹಲಾಯು. ೧೦-೩೨); ಪ್ರಾಚೀನಬರ್ಹಿರುಪಮಂ ಪ್ರಾಚೀಹರಿದಭಿಮುಖಂ ಮರುದ್ಧತಕೇತುಕೂಕ್ಮ್ಯೋಚಿತಶರ್ಜಿತರಿಪುಚಿಳಿತಾಚಳ ಸ್ತಂಭಗಜಾಧಿರೂಢನಧೀಶಂ (ಶಾಂತಿಪು. ೧೦-೦೯೩); ಪ್ರಾಚೀನಬರ್ಹಿ [ಸಕಲ]ಚರಾಚರಂ ಗುರುಸವನ[ದ] ಸಮಯದೊಳಾ [ಹೇಮಾ]ಚಳಮ ಬೇವಸಂ ಕಾಳೋಚಿತಗತಿ ನೆಗಟ್ ಬಹುವಿಧಂ ನರ್ತಿಸುಗುಂ (ಶಶಿಪು. ೧೨-೯೯); ಆ ಮೇರುಪರ್ವತಂ . . . ಪ್ರಾಚೀನಬರ್ಹಿಯಂತೆ ನವಖಂಡ ಗೋತ್ರಾವಲಂಬಿಯುಂ (ಚಕಾವ. ೦-೩೩ ವ). [ಸಂ. ಪ್ರಾಚೀನಬರ್ಹಿಸ್]

ಪ್ರಾಚೀನವಾಸನೆ (ನಾ). = ಪ್ರಾಗ್ವಾಸನೆ : ತ್ರಿಗುಣವಾದ ಅಂತಃಕರಣದಲ್ಲೂ ಪ್ರಾಚೀನವಾಸನೆಯೆಂಬ ಕರ್ಮಾಧೀನವಾಗಿ ಆಯಾ ಕಾಲದಲ್ಲಿ ಒಂದೊಂದು ಗುಣವು ಉತ್ಕಟವಾಗಿ ಪ್ರಬಲವಾಗುವುದು (ಹಿಂದಾಗ. ೬೦). [ಸಂ. ಪ್ರಾಚೀನವಾಸನಾ]

ಪ್ರಾಚೀನಾವೀತ (ನಾ). ಎಡತೋಳಿನ ಕೆಳಗಡೆಯೂ ಬಲಭುಜದ ಮೇಲೆಯೂ ಬರುವಂತೆ ಧರಿಸುವ ಯಜ್ಞೋಪವೀತ ; ಈ ಪಿತೃಕಾರ್ಯಗಳಲ್ಲಿ ಮಾತ್ರ ಹೀಗೆ ಧರಿಸುತ್ತಾರೆ : "ಜನ್ನಿವಾರವಂ . . . ಎಡದೊಡುವುದು ಪ್ರಾಚೀನಾವೀತಮೆಂಬುದು" (ಹಲಾಯು. ೬೬-೨೬೩). [ಸಂ.]

ಪ್ರಾಚೀನಾವೀತಿ (ಗು). ಜನಿವಾರವನ್ನು ಎಡತೋಳಿನ ಕೆಳಗಡೆಯೂ ಬಲಭುಜದ ಮೇಲೆಯೂ ಬರುವಂತೆ ಧರಿಸಿರುವ. [ಸಂ. ಪ್ರಾಚೀನಾವೀತಿನ್]

ಪ್ರಾಚೀನೆ (ನಾ). ಒಂದು ವಿಧವಾದ ಮೂಲಿಕೆ ; ಅಗಳುಶುಂಠಿ : "ಪ್ರಾಚೀನಾ, ವನತಿಕ್ತಕಾ . . . ಅಗರುಶೊಂಠಿ, ಅಗಳುಶೊಂಠಿ" (ಸಿದ್ಧಾಂತಿ. ೦೩೦). [ಸಂ. ಪ್ರಾಚೀನಾ]

ಪ್ರಾಚೀರ (ನಾ). ಸುತ್ತುಗೋಡೆ; ಪೌಳಿ: ಅಲ್ಲಿ ಕೊಂಚದೂರ ಹೋಗಿ ನೋಡಲಾಗಿ, ಒಬ್ಬ ಹೆಂಗುಸು ತಮ್ಮ ಮನೆಯ ಪ್ರಾಚೀರ(ಮನೆಯ ಬಹಿರಾವರಣದ ಗೋಡೆ)ವನ್ನು ಅವಲಂಬಿಸಿಕೊಂಡು ಹೊರಗೆ ಏನನ್ನೋ ನೋಡುತ್ತಿದ್ದಳು (ಚಿಹಕ. ೨೯); ಸೌಭಾಗ್ಯಮಂದಿರದ ಪ್ರಾಚೀರದ ಮೇಲೆ ಮುಳ್ಳಿನ ಸಲಾಕೆಗಳು ಒತ್ತೊತ್ತಾಗಿ ನಡಲ್ಪಟ್ಟಿರುವುವು (ಕಕೃಕೇ. ೦೨೮). [ಸಂ.]

ಪ್ರಾಚುರ (ನಾ). ಅಧಿಕವಾಗಿರುವಿಕೆ ; ಸಮೃದ್ಧಿಯಾಗಿರುವಿಕೆ : ಖೇಚರರುಯಿಡೆಗೆಯ್ದು ತಮ್ಮಯ ಪಥಶ್ರಮವಿಮೋಚನಂಗೆಯ್ವು ಪೋಗಲಿಮಂದು ರಚಿಸಿದ್ದ ಪ್ರಾಚುರದ ವೈಜಯಂತಿಗಳು ಕರಮೆಸೆದವಾ. ಪುರದ ಕೇರಿಗಳ ನಡುವೆ (ಗುಕಬಾ. ೧-೨೯). [< ಸಂ. ಪ್ರಚುರ]

ಪ್ರಾಚುರ್ಯ (ನಾ). ಹೆಚ್ಚಾಗಿರುವುದು ; ಅಧಿಕವಾಗಿರುವುದು ; ಸಮೃದ್ಧಿ : ಪ್ರಾಚುರ್ಯಾತಿಶಯಂ ಪೊದಟ್ಟಮುಳಪಟ್ಟಿಂಶದ್ಗುಣಶ್ರೇಣಿ ಪಂಚಾಚಾರಂ ಸುತಪಃಪರೀಷಹಜಯಂ . . . ಸಪ್ತರ್ಧಿಸಂಪನ್ನರ ಪ್ರಾಚಾರ್ಯರ್ ನಮಗೀಗೆ ನಿರ್ಮಳಶ್ರಿವೆತ್ತಾಚಾರಸಂಪತ್ತಿಯಂ (ಕಾಂತೀಕ. ೧-೩) ; ಪ್ರಾಚುರ್ಯಸಮ್ಯಗ್ವಲಕೀರ್ತಿಯುಷ್ಮತ್‌ಪ್ರಭಾಚಾರುತರಕಟಾಕ್ಷಪ್ರಭಾವದೆ ದಲಾ ವಾಚಾಲವಾದಿಯಂ ಗೆಲ್ದು ಬರ್ಪೆಂ (ಶಬ್ದಗ. ೯-೨೬); ಕನ್ನಡ ಭಾಷೆಯು ಸಂಸ್ಕೃತಜನ್ಯವೆಂದು ಕರೆಯಲ್ಪಡಲು ಪ್ರಮುಖವಾದ ಕಾರಣವೆಂದರೆ ಈ ಭಾಷೆಯ ಕೋಶದಲ್ಲಿ ಕಂಡುಬರುವ ಸಂಸ್ಕೃತಶಬ್ದಗಳ ಪ್ರಾಚುರ್ಯವೆಂದೇ ಹೇಳಬೇಕು (ಭಾಶಾಅ. ೯೬). [ಸಂ.]

ಪ್ರಾಚೇತಸ (ನಾ). ೧. ವಾಲ್ಮೀಕಿ : "ಪ್ರಾಚೇತಸಃ, ವಾಲ್ಮೀಕಿಃ, ಮೈತ್ರಾವರುಣಃ_(ಈ ೩) ವಾಲ್ಮೀಕಿ" (ಹಲಾಯು. ೬೬-೨೬೮); ಕುಶಲವರಿಗಜುಹಿದನು ಪ್ರಾಚೇತಸನಗಸ್ತ್ಯನು ರಾಮಚಂದ್ರಗೆ ಬೆಸಸಿದುತ್ತರ ರಾಮಕಥೆಯನು ಸಾಂಗವಾಗಿರಲು (ಜಾಕೃಳ. ೨ ಸೂಚನೆ); ಭೂಜಾತೆ ಪ್ರಾಚೇತಸನೊರ್ಳ್ಗಿಗಾಪಿಂ ಪುತ್ರಾತ್ರಮದೊಳ್ಪಿರ್ದನಂ (ಜಾಶಾಕ. ೯೯-೦೦). ೨. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು; "ಶತಭಿಶೆ" (ಜಾಶಕ-ಶಂ. ೩). [ಸಂ.]

ಪ್ರಾಚ್ಯ (ಗು). ೧. ಎದುರಿಗಿರುವ ; ಸಮ್ಮುಖದ ; ಮುಂದಿನ. ೨. ಹಳೆಯದಾದ; ಪುರಾತನವಾದ. ೩. ಮೂಡಲ ದಿಕ್ಕಿನ; ಪೂರ್ವದಲ್ಲಿರುವ : ಪ್ರಾಚೀನಕಾಲದಲ್ಲಿ ಚೈನ, ಭಾರತ ಮುಂತಾದ ಪ್ರಾಚ್ಯದೇಶಗಳಲ್ಲಿ ಈ ಬೆಳವಣಿಗೆ ಮೊದಲು ಆರಂಭವಾಯಿತು (ಶಿಕ್ಷಣ. ೩೫). (ನಾ). ೪. ಪೂರ್ವದಿಕ್ಕಿನಲ್ಲಿರುವ ದೇಶ : 'ದೂರಪ್ರಾಚ್ಯ' ಪರಾ. [ಸಂ.]

ಪ್ರಾಚ್ಯತೆ (ನಾ). = ಪ್ರಾಚೀನತೆ : ಈ ಕಲೆಯು ಸುಮಾರು ಇನ್ನೂರು ವರ್ಷಗಳ ಪ್ರಾಚ್ಯತೆಯುಳ್ಳುದಿರಬಹುದು ಎಂಬ ಊಹೆಯಿಂದ ತೃಪ್ತನಾಗಿದ್ದೆ (ಯಕ್ಷಆ. ೦೦). [ಸಂ. ಪ್ರಾಚ್ಯತಾ]

ಪ್ರಾಚ್ಯವೃತ್ತಿ (ನಾ). [ಛಂದ] ಮಾತ್ರಾಛಂದಸ್ಸಿನಲ್ಲಿರುವ ಒಂದು ವೃತ್ತ; ವೈತಾಲೀಯದಲ್ಲಿ ಒಂದು ಭೇದ: ಔಪಚ್ಛಂದಸಿಕಂ ಮೊದಲಾಗೆ ವೈತಾಳಿಯುಂ ಉದೀಚ್ಯವೃತ್ತಿಯುಂ ಪ್ರಾಚ್ಯವೃತ್ತಿಯುಮಪರಾಂತಿಕೆಯುಂ ಮೆಂದು ಮಾತ್ರಾಗಣಂಗಳಿಂ ವೈತಾಳಿಗಳ್ ಬೇಟ್‌ವೇಟ್ ಪೆಸರ್ವಡೆಗುಂ (ಛಂದೋಂಬು. ೩-೨೨೦ ವ). [ಸಂ.]

ಪ್ರಾಚ್ಯಶೈಲ (ನಾ). ಮೂಡಲ ಗಿರಿ; ಪೂರ್ವಾಚಲ: ಮನುವಂಶಪ್ರಾಚ್ಯಶೈಲದ್ಯುಮಣಿ ಜನಿಯಿಸಿದಂ ಚಕ್ರವರ್ತಿಪ್ರಧಾನಂ (ಅಂಕೃ. ೯-೩೯). [ಸಂ.]

**ಪ್ರಾಚ್ಯಶೋಧನೆ** (ನಾ). – ಪ್ರಾಕ್ತನಶೋಧನೆ : ಪ್ರಾಚ್ಯಶೋಧನೆಯನ್ನು ವೈಜ್ಞಾನಿಕವಾಗಿ ನಡೆಸಬೇಕಾದರೆ ಬಹಳ ಹಣವು ಬೇಕಾಗುತ್ತದೆ (ಒೂ). [ಸಂ. ಪ್ರಾಚ್ಯಶೋಧನ]

**ಪ್ರಾಜನ** (ನಾ). ಬಾವಟಿ ; ಬಾಟಿಕೋಲು ; ಬಾರುಕೋಲು : "ಪ್ರತೋದಃ, ಪ್ರಾಜನಂ, ತೋತ್ರಂ – ಈ ೩ ಮುಳ್‌ಹುಗೋಲ್" (ಹಲಾಯು. ೯೯-೩೨೩); "ತೋತ್ರಮಬು ಕೋಲಲಕ್ಕು ಪ್ರಾಜನಂ ಮುಳುಹು" (ಚುಂಗಂಆ. ೦೦೯-೨). [ಸಂ.]

**ಪ್ರಾಜಾಪತ್ಯ** (ಗು). ೧. ಪ್ರಜಾಪತಿಗೆ ಸೇರಿದ. – ಬ್ರಹ್ಮನಿಗೆ ಸಂಬಂಧಿಸಿದ. (ನಾ). ೨. ಬ್ರಾಹ್ಮ, ಪ್ರಾಜಾಪತ್ಯ, ಆರ್ಷ, ದೈವ, ಗಾಂಧರ್ವ, ಆಸುರ, ರಾಕ್ಷಸ ಮತ್ತು ಪೈಶಾಚಗಳೆಂಬ ಎಂಟು ವಿಧವಾದ ಮದುವೆಗಳಲ್ಲಿ ಒಂದು; ವರನಿಂದ ತೆರ, ಕಾಣಿಕೆ ಮುಂತಾದುವನ್ನು ತೆಗೆದುಕೊಳ್ಳದೆ, ಇಬ್ಬರೂ ಧರ್ಮಕಾರ್ಯಗಳನ್ನು ಆಚರಿಸುತ್ತ ಸಂತೋಷವಾಗಿ ಬಾಳುತ್ತಿರಬೇಕೆಂದು ಹಾರೈಸಿ ಕನ್ಯಾಪ್ರದಾನ ಮಾಡುವುದು. ೩. ಗಂಗಾ ಮತ್ತು ಯಮುನಾ ನದಿಗಳು ಸಂಗಮಗೊಳ್ಳುವ ಸ್ಥಳ; ಪ್ರಯಾಗ. ೪. ವಿಷ್ಣು. ೫. ಒಂದು ಬಗೆಯ ತಪಸ್ಸು. ೬. ಪಿತೃಗಳ ಲೋಕ; ಪಿತೃಲೋಕ. ೭. ಸಂನ್ಯಾಸಾಶ್ರಮವನ್ನು ಸ್ವೀಕರಿಸುವ ಮೊದಲು ತನ್ನ ಸ್ವತ್ತೆಲ್ಲವನ್ನೂ ಇತರರಿಗೆ ದಾನ ಮಾಡುವಿಕೆ. ೮. ರೋಹಿಣೀನಕ್ಷತ್ರ. ೯. (ರಾಜನ) ಅಧಿಕಾರ; ಆಳ್ವಿಕೆ : ಪಶ್ಚಿಮದೇಶಗಳ ಪ್ರಾಜಾಪತ್ಯ ಇಂಥಲ್ಲಿ ಕ್ರಮೇಣ ಶಿಥಿಲವಾಗುತ್ತಿದೆ (ಐಕಂ. ೦೪). ೧೦. ಶಿಲ್ಪಶಾಸ್ತ್ರದ ಹಸ್ತಪ್ರಮಾಣಗಳಲ್ಲಿ ಒಂದು : ಈ ಪ್ರಕಾರದಿಂದಂಗುಲಿಗಳ ಭೇದವನರಿವುದಿನ್ನು ಹಸ್ತಭೇದವೆಂತೆನೆ ಪೂರ್ವೋಕ್ತಮಾನಾಂಗುಲವಿಪ್ಪತ್ತುನಾಲ್ಕಾಗಲೊಂದು ಕಿಷ್ಕುಹಸ್ತವೆನಿಸುವುದು ಅದು ಇಪ್ಪತ್ತೈದಾದೊಡೆ ಪ್ರಾಜಾಪತ್ಯಹಸ್ತವೆನಿಸುಗು (ಶಿವತ. ೨೯೦). [ಸಂ.]

**ಪ್ರಾಜಾಪತ್ಯಕೃಚ್ಛ್ರ** (ಗು). ಹೆಚ್ಚಾದ ಕಾಯಕ್ಲೇಶದಿಂದ ನಿರ್ವಹಿಸಬೇಕಾದ ಒಂದು ಬಗೆಯ ತಪಸ್ಸು : ದೋಷಪರಿಹಾರಾರ್ಥವಾಗಿ ಶರೀರಬಾಧಾತ್ಮಕತ್ವದಿಂ ಮಹಾಕಷ್ಟಂಗಳಾದ ತಪ್ತಕೃಚ್ಛ್ರ ಪ್ರಾಜಾಪತ್ಯಕೃಚ್ಛ್ರ . . . ಯಾವಕಕೃಚ್ಛ್ರಾದಿ ಕೃಚ್ಛ್ರಂಗಳಂ ಪಕ್ಷ ಮಾಸಾದಿಗಳಲ್ಲಿ ಅನ್ನಮಂ ಪೆರ್ಚಿಸಿ ತಗ್ಗಿಸಿಕೊಂಬುದು (ಶಿವತ. ೦೨೨). [ಸಂ.]

**ಪ್ರಾಜ್ಞ** (ನಾ). ೧. ಜಾಣ ; ಬುದ್ಧಿವಂತ; ಪಂಡಿತ : "ಧೀರಃ . . . ಪ್ರಾಜ್ಞಃ . . .ಮತಿಮಾನ್ – ಈ ೨೮ ವಿದ್ವಾಂಸರ್" (ಹಲಾಯು. ೩೫-೦೭೭); ದಿವಿಜೇಜ್ಯಂ ನಿರೆ ಜನ್ಮಲಗ್ನಗೃಹದೊಳ್ ಪ್ರಾಜ್ಞಂ (ಜಾತಕ. ೦೫-೦೦); ಲೋಭವೀ ಪೆರ್ಗ್ಗಳದ ನಿರ್ಬಂಧನವು ಪ್ರಾಜ್ಞರಿಗುಚಿತವಲ್ಲೆಂದ (ಭಾಷ್ಯಾಶಾ. ೯-೯); ರಾಮನೇನೊಂದುಮಂ ನುಡಿಯಲಾರದೆ ನೋಡುತಿರ್ದನ್ ಮನೋಜ್ಞನಂ, ವಾನರಮಹಾಪ್ರಾಜ್ಞನಂ! (ಶ್ರೀರಾಮಾ. ೨೪೯-೦೨೨). ೨. ಪರಮಾತ್ಮ. ೩. [ತತ್ತ್ವಶಾ] ಆತ್ಮನ ಒಂದು ಅವಸ್ಥೆ; ಕಾರಣ ಶರೀರದಲ್ಲಿದ್ದು ಸುಷುಪ್ತ್ಯಾವಸ್ಥೆಯನ್ನು ಅನುಭವಿಸುವ ಜೀವ : ಕಾರಣಶರೀರದಲ್ಲಿರುವ ಜೀವನಿಗೆ ಪ್ರಾಜ್ಞನೆಂದೂ, ಪರಮಾತ್ಮನೆಂದೂ... ಹೇಳುವರು (ತಿಜಾಸೂ. ೯೯); ಈ ವಿಧದವಸ್ಥೆಯಲಿ ಹೊಳೆಯುವ ಜೀವನನಿಸುತ ವಿಶ್ವ, ತೈಜಸನೋವಿ ಪ್ರಾಜ್ಞನೆನಿಪ್ಪ ಪೆಸರನು ತಳೆದು ತೋಱುವನು (ಅಜ್ಞಾತ. ೯-೦೨) ; ಒಬ್ಬನೇ ಪರಮಾತ್ಮನು ವಿಶ್ವ, ತೈಜಸ, ಪ್ರಾಜ್ಞ ಎಂಬ ರೂಪಗಳಿಂದ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ಜೀವರಿಗೆ ಕೊಡುವನೆಂದು ತಾತ್ಪರ್ಯ (ಹಜಾರ. ೬-೦೯ ವೀಟು). [ಸಂ.]

**ಪ್ರಾಜ್ಞಕ** (ನಾ). = ಪ್ರಾಜ್ಞ ೩ : ನಿತ್ಯಂ ಸಕಲಾತ್ಮಂ ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾಜ್ಞಕನಾದಂ (ಕಕಂ. ೩-೪೩). [ಸಂ.]

**ಪ್ರಾಜ್ಞಮತಿ** (ನಾ). ಬುದ್ಧಿವಂತ ; ಪಂಡಿತ : ಪ್ರಾಜ್ಞಮತಿ ಭರತನುರಿಯುತ್ತಿದನ್ (ಶ್ರೀರಾಮಾ. ೦೨೦-೨೨೩). [ಸಂ.]

**ಪ್ರಾಜ್ಞೆ** (ನಾ). ೧. ತಿಳಿದವಳು; ಪಂಡಿತೆ : "ಪ್ರಾಜ್ಞೀ, ಪ್ರಜ್ಞಾ – ೨ ಲೌಕಿಕವ್ಯವಹಾರದಲ್ಲಿ ಜಾಣೆಯಾದವಳು" (ಸಿದ್ಧಾಂತಿ. ೦೭೦). ೨. ಪಂಡಿತನ ಪತ್ನಿ. [ ಸಂ. ಪ್ರಾಜ್ಞೀ ]

**ಪ್ರಾಜ್ಞೆ** (ನಾ). ೧. ಅರಿವು ; ಬುದ್ಧಿ ; ತಿಳಿವಳಿಕೆ : ಆಗಲೇನಾಯ್ತಾಗ ಕಾಂಬೆವು ಯೋಗಪುರುಷನ ನೆಲೆಯನೆಂದೆನುತಾಗಲೇ ಹೊತ್ತಿಕ್ಕಿ ಪ್ರಜ್ವಲಿಸಿದುದು ಪ್ರಾಜ್ಞೆಯಲಿ (ಶಿಕಾಗ. ೯-೭-೪೮). ೨. = ಪ್ರಾಜ್ಞೆ ೧ : "ಪ್ರಾಜ್ಞಾ, ಧೀಮತೀ—೨ ಬಹಳ ಬುದ್ಧಿಯುಳ್ಳವಳು" (ಸಿದ್ಧಾಂತಿ. ೦೭೦). [ಸಂ. ಪ್ರಾಜ್ಞಾ]

**ಪ್ರಾಜ್ಯ** (ಗು). ೧. ಬಹಳವಾದ; ಅತಿಶಯವಾದ. ೨. ಉತ್ತಮವಾದ; ಶ್ರೇಷ್ಠವಾದ : ಹಿತಪುರೋಹಿತ ಪ್ರಾಜ್ಯಾಜ್ಯಾಹುತಿಹುತಹುತವಹಸಮುಜ್ವಲರೊಳ್ (ಜಂಕಥಾ. ೬-೭೪ ಶ) ; ಪರಪೀಡಾಮುಖಿದುಷ್ಟದುರ್ಜನನೀಕಾಯಾತಂಕದಿಂ... ಮೇಣಜೀರ್ಣಭಯದಿಂ ಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ (ಜಂಕೃಪು. ೦-೯೩). (ನಾ). ೩. ಬಹಳವಾದುದು; ಹೆಚ್ಚಾದುದು : "ಪ್ರಾಜ್ಯಂ ... ಅದಭ್ರಂ — ಈ ೧೮ ಪೊಕ್ಕಳಂ" (ಹಲಾಯು. ೦೦೬-೦೬). ೪. ಉತ್ತಮವಾದುದು ; ಶ್ರೇಷ್ಠವಾದುದು : ನಿನಗಿಂ ತ್ಯಾಜ್ಯಂ ಪರಿಗ್ರಹಂ ದರ್ ಪ್ರಾಜ್ಯಂ ತಪಮದುವೆ ಪಾಲ್ಯಮಾ ಕೈವಲ್ಯಂ (ಅಜಿತ. ೬-೭೭) ; ಪೂಜ್ಯರುಮೇಕೆ ಪೇಱ್ವಸುಗಿದಪ್ಪುವರಂ ಪುರುಷಾರ್ಥಸಂಗ್ರಹ ಪ್ರಾಜ್ಯ [ಪಾಠಾಂ ಪ್ರಾಜ, ಪೂಜ್ಯ] ಮಿದೆನ್ನದಾಂ ಪಿರಿದುಮೊಲ್ಲದೊಡಂಬಡ (ಅರ್ಥಸಂ. ೨-೩೨). [ಸಂ.]

**ಪ್ರಾಡ್ವಿವಾಕ** (ನಾ). (ನ್ಯಾಯಾಲಯದ) ವ್ಯವಹಾರಗಳನ್ನು ತೀರ್ಮಾನಿಸುವ ಅಧಿಕಾರಿ : ನ್ಯಾಯಾಧಿಪತಿ : "ಪ್ರಾಡ್ವಿವಾಕಃ... ನ್ಯಾಯಾಧ್ಯಕ್ಷಃ — ಈ ೪ ನ್ಯಾಯಾಧ್ಯಕ್ಷಂ" (ಹಲಾಯು. ೬೦-೨೭೩) ; ವಿಳಸತ್ಸುಂದರನೆಯ್ದೆ ಮಾತುಳತಯಿಂದಿಂದಂದು ದಾಯಾದ್ಯರಂ ಬಳಿಸಂದಾಡಿಸುತೆಂದಿನಂತೆ ದಯೆಯಿಂ ಕಾಪಾಡುತಂ ಬಾಲನಂ ಮಿಳಿತಜ್ಞಾತಿಗಳೀ ತೆಱಂ ಜಗದೊಳೆಂದಾ ಪ್ರಾಡ್ವಿವಾಕ [ಪಾಠಾಂ. ಪ್ರೌಢಿವಾರ್ಕ]ರ್ಗೆ ತಾಂ ಜ್ವಳನಾಕ್ಷಂ ನುಡಿಯಲ್ (ಜಾರಾಕ್ಷ. ೬-೭-೪೯); ಒಡನೆಯೆ ಈ ಊರಿನ ಪ್ರಾಡ್ವಿವಾಕನ ಹತ್ತಿರ ಶರ್ಮನ ಮೇಲೆ ಅಭಿಯೋಗವನ್ನು ತಂದು ನಮ್ಮ ಹುಡುಗಿಯನ್ನು ನಾವು ಸ್ವಾಧೀನ ಮಾಡಿಕೊಳ್ಳಬೇಕು (ಮೃಚ್ಛ. ೨೭೭). [ಸಂ.]

**ಪ್ರಾಣ** (ನಾ). ೧. ಉಸಿರಾಟ. ೨. ಗಾಳಿ; ಉಸಿರು ; ವಾಯು : 'ಪ್ರಾಣ' ಎಂದರೆ 'ಉಸಿರು' ಎಂದು ಅರ್ಥ (ಮುಕ್ತಮ. ೧೪). ೩. ಪ್ರತಿಯೊಂದು ಜೀವಿಯಲ್ಲೂ ಇರುವ ಚೈತನ್ಯವಸ್ತು ; ಜೀವ : "ಅಸವಃ, ಜೀವಿತಂ, ಪ್ರಾಣಾಃ, ಜೀವಃ, ಜೀವಾ— ಈ ೫ ಪ್ರಾಣದ ಪೆಸರ್" (ಹಲಾಯು. ೨೨-೦೩೪) ; ಎನ್ನೊಡಲ್ಗೆ ನೀಂ ಪ್ರಾಣಮಮೋಘಮಪ್ಪುದಱಿನೋಪನೆ ನಿನ್ನನಗಲ್ವಗಳ್ಗೆಯುಂ ಪ್ರಾಣದಗಲ್ಕೆಯುಂ ಸಮನದಕ್ಕೆ ವಿಯೋಗಮನೆಂತು ಸೈರಿಪೆಂ (ಆದಿಪು. ೦೨-೪೩); ಪ್ರಾಣದಿನಧಿಕಮೆನಗೆ ನೀ ಪ್ರಾಣಮಣಂ ತೃಣಮೆಗೆತ್ತು ನವೆಯುತ್ತು ನೀ ಕ್ಷೋಣಿಗೆ ನಿನ್ನ ವಿಯೋಗಮನೇಕ್ಷಣೆ ಎನಿತು ಸೈರಿಸದ ಕಾರಣದಿಂ (ಶಾರ್ಕ್ಯಪು. ೬-೨೪). ೪. ಅನ್ನ; ಆಹಾರ : "ಬಾಹ್ಯ—ಪ್ರಾಣ, ಅನ್ನ" (ಒತರ. ೦೦೬). ೫. ಬಲ ; ಶಕ್ತಿ : "ಪ್ರಾಣಃ, ಸ್ಥಾಮ, ಬಲಂ . . . ಸಹಃ — ಈ ೮ ಬಲ್ಪು (ಬಲುಹು) " (ಹಲಾಯು). ೦೨೦ – ೪೮). ೬. ಶರೀರದೊಳಗಿರುವ ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನಗಳೆಂಬ ಐದು ಬಗೆಯ ವಾಯುಗಳಲ್ಲಿ ಒಂದು : ಪ್ರಾಣಾದಿ ವಾಯುಗಳು — ಪ್ರಾಣ, ಅಪಾನ, ಸಮಾನ,

ಉದಾನ, ವ್ಯಾನ (ಅಮೃತ. ೩-೩೨ ಟೀಕು); ಸಮುದಾಯದಿಂದ ಪ್ರಾಣಾಪಾನ ವ್ಯಾನೋದಾನ ಸಮಾನಗಳೆಂಬ ಪಂಚಪ್ರಾಣಗಳು ಹುಟ್ಟುವುವು (ಹಿಂದಾ. ೦೪೬). ೭. ಪರಮಾತ್ಮ; ಈಶ್ವರ: ಪ್ರಾಣನೂ ಪರಮನೂ ಕಾಣದಲೆ ಒಳಗಿರಲು ಮಾಣದೆ ಸಿರಿಯ ಹಿಡಿದದಕೆ ಮೂರ್ಖಿ ತಾ ಪ್ರಾಣಾತ್ಮನೆಂಬ (ಸರ್ವಜ್ಞ. ೨೦೬); ಪ್ರ+ಅ+ಣ=ಪ್ರಾಣ, ಎಂದು ಪರಮಾತ್ಮನಿಗೆ ಹೆಸರು (ಹಾಕಿ. ೬-೨೯ ತಾತ್ಪರ್ಯ). ೮. ಒಂದು ಬಗೆಯ ಸಸ್ಯ; ಬಾಣಂತಿಬೋಳ: "ಬೋಲಃ, ಗಂಧರಸಃ, ಪ್ರಾಣಃ . . . ರಸಃ — ೭ ಬೋಳದ ಹೆಸರುಗಳು, ಬಾಣಂತೀಬಾಳ್" (ಸಿದ್ಧಾಂತಿ. ೩೦೬). ೯. ಪ್ರೀತಿಪಾತ್ರ ವ್ಯಕ್ತಿ ಅಥವಾ ವಸ್ತು: ಹೊಳ್ಳರೇ ಹೇಳುತ್ತಿದ್ದರು ಹೆಂಡತಿಗೆ ನಾನೆಂದರೆ ಪ್ರಾಣ ಎಂದು (ಶರ್ಮ.ಶ. ೦೨೬); ಅವನಿಗೆ ಚಕ್ಕುಲಿ ಯೆಂದರೆ ಪ್ರಾಣ (ಟೂಶಿ).

ಪ್ರಾಣ ಕಳೆದುಕೊಳ್ಳು=ಜೀವ ತೆಗೆದುಕೊಳ್ಳು: ಹೆಂಗಸು, ಪಾಪ! ಕಾಲು ಜಾರಿ ಬಿದ್ದು ಸತ್ತಿರಬೇಕು. ಆಕೆಯ ತಮ್ಮಂದಿರಾದ ಈ ರಾಜರು ಆ ದುಃಖದಿಂದ ತಾವೂ ದುಮುಕಿ ಪ್ರಾಣ ಕಳೆದುಕೊಂಡರು (ಕಾಂತಿಕಾ. ೩೦೦); ನಾನೆಲ್ಲಿ ಪ್ರಾಣ ಕಳೆದುಕೊಂಡು ಬಿಟ್ಟೆನೋ ಎಂದು ಅಜ್ಜ ಎಷ್ಟು ಗೋಳಾಡುತ್ತಾರೋ ? (ಮುಕಮು. ೬೦೦). ಪ್ರಾಣಕ್ಕೆ ಬರು=(ಅಲಂ)ವಿಪರೀತ ಕಷ್ಟವಾಗು: ಈ ಬಿಸಿಲಲ್ಲಿ ಎರಡು ಮೈಲು ನಡೆದರೆ ನಮಗೇ ಪ್ರಾಣಕ್ಕೆ ಬರುತ್ತದೆ (ತಪುಕ. ೦೬೬). ಪ್ರಾಣಪ್ರಯತ್ನಮಾಡು=(ಅಲಂ) ಬಹಳ ಕಷ್ಟಪಡು: ದಂಡಿಗೆ ಬೇಕಾದ ಸಾಮಾನು ಸರಂಜಾಮು ಪ್ರಾಣಪ್ರಯತ್ನ ಮಾಡಿ ತರಿಸಿ ಕೊಟ್ಟು (ರಾಕೆಂದ್ರ. ೪೪). ಪ್ರಾಣ ಹಿಂಡು = (ಅಲಂ) ಅತಿಶಯವಾಗಿ ಕಾಡು; ಬಹಳ ತೊಂದರೆ ಕೊಡು: ಹೆಂಡತಿ ಪ್ರಾಣ ಹಿಂಡುತಿ (ಪುರಂದ. ೩-೨೦೦-೪). ಪ್ರಾಣ ಹಿಡಿ=(ಅಲಂ) ಜೀವಧಾರಣೆ ಮಾಡು; ಬದುಕಿರು: ಅರೆಹೊಟ್ಟೆ ತುಂಬಿಸಿಕೊಂಡಾದರೂ ಪ್ರಾಣ ಹಿಡಿದರು (ಶುಕ್ಕಮು. ೬). ಪ್ರಾಣ ಹೋಗು=ಜೀವ ಹೋಗು: ಪ್ರಾಣ ಹೋಗಲು ಮುತ್ತುಬಂಧ್ವಳು ಜಾಣೆ ಕರೆದರು ಬಾರಳು (ಪುರಂದ. ೩-೨೦೦-೪); ಪ್ರಾಣ ಹೋಗುವ ಆಸನ್ನವಾದ ಕಾಲದಲ್ಲಿ . . . ಕಪಾಲಕುಂಡಲೆಯ ಕಂಠದಿಂದ ಅಂತಹ ಸ್ವರವು ಹುಟ್ಟುವುದೆಂದಾರು ಬಲ್ಲವರಾಗಿದ್ದರು (ಕಪಾಕುಂ. ೦೩೦). [ಸಂ.]

**ಪ್ರಾಣಂಬಡೆ** (ಕ್ರಿ). ಜೀವವನ್ನು ಪಡೆ: ವೀರಭಕ್ತಯೊಳಟ್ಟಿಯಲಿ ತಲೆ ಸೇರಿಸಲು ಪ್ರಾಣಂಬಡೆ [ಪಾಠಾಂ. ಪಡೆ]ದನು (ಬಸವಪು. ೪೯-೦೩). [ಪ್ರಾಣ + ಪಡೆ₁]

**ಪ್ರಾಣಂಬೊಯ್** (ಕ್ರಿ). ಜೀವ ತುಂಬು; ಜೀವಂತವಾಗಿಸು: ಪ್ರಾಣಂಬೊಯ್ದನೊ ಚಿತ್ರಿಸುತ್ತುಮವಳಂ ಸೌಂದರ್ಯಸಾರಂಗಳಿಂ (ಶಾಕುಂತ. ೨೩-೪೪). 'ಜೀವಂಬೊಯ್' ಪರಾ. [ಪ್ರಾಣ+ಪೊಯ್₁]

**ಪ್ರಾಣಕಂಟಕ** (ನಾ). ೧. ಜೀವಕ್ಕೆ ಉಂಟಾಗುವ ಅಪಾಯ; ಪ್ರಾಣಕ್ಕೆ ಆಗುವ ಆಘಾತ: ಪ್ರಾಣಕಂಟಕವಾಗುವ ಭಯಂಕರ ಖಾಯಿಲೆ ಅದು (ಟೂಶಿ). ೨. ಜೀವಕ್ಕೆ ಅಪಾಯವನ್ನುಂಟು ಮಾಡುವವನು; ಪ್ರಾಣ ತೆಗೆಯುವವನು; ಕೊಲೆಗಡುಕ: ಆ ಪ್ರಾಣಕಂಟಕನಿಂದ ಕೊನೆಗೂ ಅವರಿಗೆ ಬಿಡುಗಡೆ ಸಿಗಲಿಲ್ಲ (ಟೂಶಿ). [ಸಂ.]

**ಪ್ರಾಣಕಾಂತ** (ನಾ). ಜೀವಕ್ಕೆ ಸಮನಾದವನು; ಪ್ರಿಯವ್ಯಕ್ತಿ; ಪತಿ: ಕಾಣದಿರಲಾಜಿ ಪ್ರಾಣಕಾಂತನ ವೇಣುನಾದನ ತೋಱಿಸೆ (ಪುರಂದ. ೩-೦೪೬ ಪಲ್ಲವಿ); ಪ್ರಾಣಕಾಂತಾ ಲಾಲಿಸಿನ್ನಾ ಕ್ಷೋಣಿಪನೀ ಪರಿಯೊಳ್ ನಿನ್ನಾ ಕಾನೇ ಸಲಹಿರಲ್ಕೆ ಹಿತಸಮಾನನವನ ಕಾವುದೆಸೆ (ರಕ್ಷ್ಮಾಶ. ೦೪).
[ಸಂ.]

**ಪ್ರಾಣಕಾಂತೆ** (ನಾ). ಜೀವಕ್ಕೆ ಸಮನಾದವಳು; ಪ್ರಿಯೆ; ಪತ್ನಿ: ನನ್ನ ಪ್ರಾಣಕಾಂತೆಯಿಂದ ಉಪಭೋಗಿಸಲ್ಪಟ್ಟ ಈ ಲತಾಮಂಟಪದಲ್ಲಿಯೇ ಒಂದು ಮುಹೂರ್ತನಿಲ್ಲುವೆನು (ಶಾಕುಂತ. ೪೩-೦೦). [ಸಂ. ಪ್ರಾಣಕಾಂತಾ]

**ಪ್ರಾಣಕೊಡು** (ಕ್ರಿ). ೧. (ಇನ್ನೊಬ್ಬರ ಪ್ರಯೋಜನಕ್ಕಾಗಿ) ಜೀವ ಕೊಡು; ಬಲಿಯಾಗು: ನೀನು ನನಗಾಗಿ ಪ್ರಾಣಕೊಡಲು ನಿಜವಾಗಿಯೂ ಸಿದ್ಧಳಿದ್ದೀಯಾ ? (ಏಕಾ. ೬೬). ೨. (ಅಲಂ) ಯಾವುದಾದರೂ ಕಾರಣಕ್ಕಾಗಿ ಸರ್ವಸ್ವವನ್ನೂ ತ್ಯಜಿಸು: ಪ್ರಾಣ ಕೊಟ್ಟಾದರೂ ಹಿಡಿದಿರುವ ಕೆಲಸವನ್ನು ಪೂರೈಸುತ್ತೇನೆ (ಟೂಶಿ). [ಪ್ರಾಣ + ಕೊಡು₁]

**ಪ್ರಾಣಗುಣ** (ನಾ). ಜೀವದ ಸ್ವಭಾವ; ಪ್ರಾಣದ ಗುಣ: ಅಂತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ ಮನಗುಣಾದಿಗಳ ಪ್ರಾಣ ಗುಣಾದಿಗಳ ಕಳೆದಲ್ಲಿ ಶರಣರಹರೆ (ಅವಶಂ. ೯೦-೪೦೪). 'ತನುಗುಣ' ಪರಾ. [ಸಂ.]

**ಪ್ರಾಣಗೇಡಿ** (ನಾ). ಜೀವವನ್ನು ತೆಗೆಯುವವನು; ಪ್ರಾಣಘಾತಕ: ಪ್ರಾಣಗೇಡಿಯ ಮಾಡಿದರು ಪಾಲಕನೀ ಧರಗೆ (ಏಕಾಗ. ೪-೦೦-೦೪). [ಪ್ರಾಣ + ಕೇಡಿ₁]

**ಪ್ರಾಣಘಾತಕ** (ಗು). ೧. ಜೀವಕ್ಕೆ ಹಾನಿಯನ್ನುಂಟುಮಾಡುವ: ಇವರು ಪ್ರಾಣಘಾತಕ ಗಾಯ ಹೊಂದಿ ಸರಕಾರೀ ರುಗ್ಣಾಲಯದಲ್ಲಿ ವಾಸವಾಗಿರುವರು (ಸ್ವರಾಜ್ಯ. ೦೪೨). (ನಾ). ೨. ಜೀವವನ್ನು ತೆಗೆಯುವುದು; ಕೊಲೆ; ಪ್ರಾಣವಧೆ: ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ ಬೇಡನ ಕೈಲಾಸಕೊಯ್ದೆಯಯ್ಯಾ (ಬಸವ. ೬೫). ೩. ಜೀವವನ್ನು ತೆಗೆಯುವವನು; ಕೊಲೆಗಡಂಕ: ಇವನಂತಹ ಪ್ರಾಣಘಾತಕರು ಅವರ ವಂಶದಲ್ಲಿ ಯಾರೂ ಇರಲಿಲ್ಲ (ಟೂಶಿ). [ಸಂ.]

**ಪ್ರಾಣತ** (ನಾ). [ಜೈನ] ಹದಿನಾರು ಸ್ವರ್ಗಗಳಲ್ಲಿ ಒಂದು; ೲ ಊರ್ಧ್ವಲೋಕದಲ್ಲಿರುವ ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ ಮತ್ತು ಅಚ್ಯುತಗಳೆಂಬವು ಹದಿನಾರು ಸ್ವರ್ಗಗಳು. ಇವುಗಳಿಗೆ ಕಲ್ಪಗಳೆಂದೂ ಹೆಸರಿದೆ. ಈ ಎಲ್ಲದರ ಗುಂಪಿಗೂ ಕಲ್ಪವೆಂಬ ಹೆಸರಿದೆ: ಅತಿಬಲಕ್ಕಮ್ಮಂ ಗತಜೀವಿತನಾಗಿ ಮಹಾಬಲಂ ಮಹಾವ್ರತದಿಂದನ್ನಿತಮಂತಿ ಸಮಾಧಿಗುಪ್ತವೃತ್ತಿಯುಪದೇಶದೊಳ್ ಪುಟ್ಟಿದಂ ಪ್ರಾಣತದೊಳ್ (ಆದಿಪು. ೩-೬೬); ಆನತ ಪ್ರಾಣತ ಆರಣಾಚ್ಯುತ ಕಲ್ಪಸಂಭವ ದೇವರ್ (ಚಂದ್ರಪ್ರ. ೦೬೨). [ಸಂ.]

**ಪ್ರಾಣತಕಲ್ಪ** (ನಾ). = ಪ್ರಾಣತ: ಆರಾಧನಾವಿಧಿಯಿಂ ಪ್ರಾಣತಕಲ್ಪದೊಳ್ ಪ್ರಾಣತವಿಮಾನದೊಳ್ ಪ್ರಾಣತೇಂದ್ರನಾಗಿ . . . ಸುಖ ವಿರ್ಪನಂ (ಶಾಂತಿಪು. ೨೬೬); ಪ್ರಾಣತಕಲ್ಪದೊಳತುಳಪ್ರಾಣತಸುರರಾಜನಾಗಿ . . . ಸುಖಮಿರ್ದಂ (ಪುಷ್ಪದಂ. ೯-೦೦). [ಸಂ.]

**ಪ್ರಾಣತೆಗೆ** (ಕ್ರಿ). ಜೀವವಿಲ್ಲದಂತೆ ಮಾಡು; ಜೀವ ಕಳೆ; ಕೊಲ್ಲು: ಪ್ರಾಣ ತೆಗೆಯುತ್ತೇನೆ ಎಂದು ಬೆದರಿಕೆ ಹಾಕುವುದೆ ? (ಬೀಚಿಕಾ. ೦೬೬).

ಪ್ರಾಣ ತೆಗೆದುಕೊಳ್ಳು = ಆತ್ಮಹತ್ಯೆ ಮಾಡಿಕೊಳ್ಳು; ಜೀವವಿಲ್ಲದಂತೆ ಮಾಡಿಕೊಳ್ಳು: ಧಾರೆಯ ದಿನವೇ ಹಳ್ಳಕ್ಕೆ ಹಾರಿ ಪ್ರಾಣ ತೆಗೆದುಕೊಂಡ ಸುದ್ದಿ ಕಿವಿಗೆ ಬಿದ್ದಿದ್ದೇ ತಡ . . . ಪ್ರಜ್ಞೆ ತಪ್ಪಿ ಕಣ್ಣು ಮುಚ್ಚಿದವರು ಮತ್ತೆ ಕಣ್ಣು ತೆರೆಯಲೇ ಇಲ್ಲವಂತೆ (ಮುಕಮು. ೦೬೩). [ಪ್ರಾಣ + ತೆಗೆ₁]

**ಪ್ರಾಣತ್ಯಾಗ** (ನಾ). ೧. ಜೀವವನ್ನು ಬಿಡುವುದು; ಪ್ರಾಣವನ್ನು ತ್ಯಜಿಸುವುದು; ಆತ್ಮಹತ್ಯೆ: ಯಾವುದಾದರೂ ಪುಣ್ಯಕ್ಷೇತ್ರದ ಕೆರೆ ಹಾರಿ ಪ್ರಾಣತ್ಯಾಗ ಮಾಡುವುದೇ ಒಳ್ಳೆಯದೆಂಬ ಯೋಚನೆಯೂ ಒಮ್ಮೆ ಮನಸ್ಸನ್ನು ಹದಗೆಡಿಸಿತು (ಶರ್ಮ.ಶ. ೦೩೦). ೨. ಸಾವು; ಮರಣ:

ಭೋಗಿವಿಷಂಬೋಲ್ಪ್ರಾಣತ್ಯಾಗವಮಾಗಿಸುಗುವಮಳಕೃತಿವಧುಗಿನಿತುಂ (ಶಂಶಾ. ೬-೬೦). [ಸಂ.]

**ಪ್ರಾಣದಾನ** (ನಾ). ೧. ಜೀವವನ್ನು ಉಳಿಸುವುದು; ಪ್ರಾಣಾಪಾಯದಿಂದ ಕಾಪಾಡುವುದು : ಒಡೆಯನಟ್ಟಿದ ದಂಡು ಮೇಲ್ವರಿದಡೆ ತೆರಳ್ದೋಡುವುದು ವೀರವೆ ಕಡಗಿ ಬಂದು ಪ್ರಾಣದಾನವನೆಮ್ಮಯುಂ ಬೇಡಿ (ಅಕಪು. ೪೬-೫೦); ಪ್ರಾಣದಾನದ ಹಿರಿವೆ ತಾಂ ಪ್ರಾಣಮಯಕೆ (ಅಶೀ. ೩೬-೯). ೨. (ಅಲಂ) ಅಧಿಕಾರ ಅಥವಾ ಅವಕಾಶವನ್ನು ಉಳಿಸಿ ಕೊಡುವುದು : ಹಲವಾರು ಬಾರಿ ಅವನು ತಪ್ಪು ಮಾಡಿ ಸಿಕ್ಕಿಬಿದ್ದಿದ್ದರೂ ಅವನ ಹೆಂಡತಿ ಮಕ್ಕಳ ಮುಖ ನೋಡಿ ಸಾಹೇಬರು ಅವನಿಗೆ ಪ್ರಾಣದಾನ ನೀಡಿದ್ದಾರೆ (ಲೂ). [ಸಂ.]

**ಪ್ರಾಣದೇವರು** (ನಾ). [ದ್ವೈತ] ಜೀವಕ್ಕೆ ಒಡೆಯನಾದವನು; ವಾಯುಪುತ್ರನಾದ ಮಾರುತಿ : ಹೀಗೆಯೆ ಪ್ರಾಣದೇವರಲ್ಲಿ ಪರಮಾತ್ಮನಿದ್ದರೂ ಮುಖ್ಯಪ್ರಾಣರೂಪಿಯಾಗಿಯೇ ತೋರುತ್ತಿರುವನು (ಹಸಾರ. ೪-೦೬ ಹಾಕ್ವರ್ಧು). [ಪ್ರಾಣ + ದೇವರು]

**ಪ್ರಾಣಧರ್ಮ** (ನಾ). ಜೀವದ ರೀತಿ.-ನೀತಿ : ಅನಲಯೋಗದೊಳನ್ನವನು ಜೀರ್ಣಿಸುತ ಮೇಲಲ್ಲಿಂದ ತನುವಂ ದಿನದಿ ಚೇಷ್ಟಿಸಿ ಧರಿಸಿಹುದೆ ಕೇಳ್ ಪ್ರಾಣಧರ್ಮವದು (ಗಗಕಾ. ೯-೬೩). [ಸಂ.]

**ಪ್ರಾಣಧಾರಣೆ** (ನಾ). ಜೀವವನ್ನು ಹಿಡಿದಿರುವುದು; ಬದುಕಿರುವುದಂ : ಪ್ರಾಣಧಾರಣೆಗೆ ಬೇಕಾದಷ್ಟು ವೆಚ್ಚ ಮಾಡಿ ಮಿಕ್ಕಿದುದನ್ನು ಸಹಾಯಹೀನರಾದ ಹೆಂಗಸರ ಸೇವಾರ್ಥವಾಗಿ ದಾನ ಮಾಡುವೆನು (ಕಪಾಳಿಯಂ. ೦೬೦). [ಸಂ. ಪ್ರಾಣಧಾರಣ]

**ಪ್ರಾಣನ** (ನಾ). ೧. ಕಂಠ; ಕುತ್ತಿಗೆ. ೨. ನೀರು; ಜಲ. ೩. ಬದುಕಿಸುವುದು; ಜೀವವನ್ನು ಉಳಿಸುವುದು : ಜಾಯಾವಿಯೋಗದಿಂ ದುಃಖಿತನಾಗಿಯುಮ್ಮನ್ನ ತಂದೆ ಪುತ್ರಸ್ನೇಹದಿಂದಳವಿಗಬಿದ ಹೃದಯಶೋಕಮನಡಂಗಿರ್ದು ಮ..ಪ್ರಾಣನಪ್ರಯತ್ನತತ್ಪರನಾಗಿ (ಕಾದಂಪು. ೦೬೯). [ಸಂ.]

**ಪ್ರಾಣನಷ್ಟ** (ನಾ). ಜೀವ ಹೋಗುವುದು; ಸಾವು; ಮರಣ : ಬಸ್ಸು ಅಪಘಾತಕ್ಕೊಳಗಾದರೂ ಹೆಚ್ಚು ಪ್ರಾಣನಷ್ಟವಾಗಲಿಲ್ಲ (ಲೂ). [ಸಂ.]

**ಪ್ರಾಣನಾಥ** (ನಾ). ೧. ಗಂಡ; ಪತಿ : ಮಕ್ಕೊಂಡೆಡೆಯೊರ್ವಳ್ ಆತ್ಮೀಯಪ್ರಾಣನಾಥನಗಲ್ಕೆಯಂ ಸೈರಿಸಲಾಜದೆ (ಅಂಪು. ೦೨-೪೯ ಪ). ೨. ಯಮ. ೩. ಜೀವದ ಒಡೆಯ; ಶಿವ : ಎನ್ನ ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪೆಯಯ್ಯಾ ಕೂಡಲಸಂಗಮದೇವಾ ನೀನೆನ್ನ ಪ್ರಾಣನಾಥನಾಗಿ (ಬಸವ. ೬೦೨); ಕೇಳು ಕೇಳಯ್ಯಾ ಪ್ರಾಣನಾಥನೆ ಎನ್ನ ಪ್ರಾಣಪೂಜೆಯ ಬಗೆಯ ಬಣ್ಣಿಸುತಿರ್ಪೆನು (ಅಪ್ರಂಕೀ. ೨೪೦-೯೬). [ಸಂ.]

**ಪ್ರಾಣನಾಥೆ** (ನಾ). ಹೆಂಡತಿ; ಪತ್ನಿ : ಸಾಣೆವಿಡಿದಿರ್ದ ಕರಪತ್ರಮುಕೊಡಿಸಿದಂ ಪ್ರಾಣನಾಥೆಯ ಕೈಯೊಳು (ಕೈವಲ್ಯ. ೨೬-೬೦). [ಪ್ರಾಣನಾಥ + — ಎ]

**ಪ್ರಾಣನಾಶಕ** (ಗು). ಸಾವನ್ನುಂಟುಮಾಡುವ; ಜೀವ ಕಳೆಯುವ : ಗಿಡಗಳಿಗೆ ಹಾಕಲು ತಂದಿರುವ ಆ ಪ್ರಾಣನಾಶಕದ್ರವ್ಯವನ್ನು ಮಕ್ಕಳ ಕೈಗೆ ಸಿಗುವಂತೆ ಇಡಬೇಡ (ಲೂ). [ಸಂ.]

**ಪ್ರಾಣಪಂಚಕ** (ನಾ). ಶರೀರದೊಳಗಿರುವ ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನಗಳೆಂಬ ಐದು ಬಗೆಯ ಪ್ರಾಣವಾಯುಗಳು : ಸುಜ್ಞಾನಜು ಇದು ಪ್ರಾಣಪಂಚಕನಿರ್ಗಮ ಸಾಮಾನ್ಯ ವ್ಯಾನವು ಗರ್ಭವೂ ದಾನವು ಅಪಾನವು ಪ್ರಾಣಗಳುಯೆಂದ (ಜ್ಞಾಸಿಂ. ೩-೨೯). 'ಪಂಚಪ್ರಾಣ' ಪರಾ. [ಸಂ.]

**ಪ್ರಾಣಪಣ** (ನಾ). ಜೀವವನ್ನೇ ಒಡ್ಡುವುದಂ; ಪ್ರಾಣವನ್ನೇ ಪಣವಾಗಿಡುವುದಂ : ಪ್ರಾಣಪಣ[ಜಗಂ. ಪಥ. ಪದ]ವಿದು ನಿಖಿಳವಿದ್ಯದಜಾಣತನವಿದು ವಿನಯವೆಂದಿದು ಕೇಣವಿಲ್ಲದೆ ನೆರವಿ ನೆಟಿ ಹೊಗಳಿತು ಧನಂಜಯನ (ಕುಮ್ಮಾ.೪.-೬-೯೬). [ಸಂ.]

**ಪ್ರಾಣಪತಿ** (ನಾ). = ಪ್ರಾಣನಾಥ ೧ : ಮಧುರೆಯಲಿ ಬಿಲ್ಲ ಹಬ್ಬ ಪುಟ್ಟಿಸಿ ಕುಟಿಲದಲಿಯಮ್ಮ ಪ್ರಾಣಪತಿಯ ಕರೆಸಿದ ಸುದತಿಯರ ಮನದಳಲು ತಟ್ಟದಿಹುದೆ ನಮ್ಮ ಎದೆಗಿಚ್ಚು ಕಂಸನ ತಲೆಗೆ ಮೂಡಲಿಯೆನುತ (ಶ್ರೀಹರಿ. ೪-೦೦೦-೧೪). [ಸಂ.]

**ಪ್ರಾಣಪದ** (ನಾ). ಜೀವಕ್ಕೆ ಸಮವಾಗಿ ಪ್ರೀತಿಸುವ ವಸ್ತು; ಅತಿ ಪ್ರಿಯವಸ್ತು : ಧರೆಯೊಳೆಲ್ಲಂ ಸ್ವಾತಿವರುಷಂ ಸುರಿಯಲೆಂತಹ ಹನಿಗಳಿಗೆ ಏ ಪರಿಯೊಳಂ ಕಟಿಗೊಳ್ವದಂತಾಗಿದಟಿ ವರ ದೇಟಿ ನಿರತವದಟಿಂ ಪ್ರಾಣವದವಾದಿರವಿಗಲ್ಲದೆ ಬಾಯಿದೆಟಿಯದು ಕರಮಸೆವ ಸಿಂಪೊಂದು ನೆನೆಪುತಮಿಹುದು ಮಳೆಗಳಿಗೆ (ಅಕಪು. ೩೦-೨೪). [ಸಂ.]

**ಪ್ರಾಣಪದಕ** (ನಾ). ಬದುಕಿನಲ್ಲಿ ಪ್ರಿಯವಾದ ವಸ್ತು : ಓದಿಗಿಂತಲೂ ಕ್ರಿಕೆಟ್ ಆಟ ಅವನ ಪ್ರಾಣಪದಕವಾಗಿತ್ತು (ಲೂ). [ಸಂ.]

**ಪ್ರಾಣಪರಿಚ್ಛೇದ** (ನಾ). ಜೀವ ಬಿಡುವುದಂ; ಪ್ರಾಣ ಕಳೆದುಕೊಳ್ಳುವುದಂ : 'ಪ್ರಾಣಪರಿಚ್ಛೇದಂಗೆಯ್' ಪರಾ. [ಸಂ.]

**ಪ್ರಾಣಪರಿಚ್ಛೇದಂಗೆಯ್** (ಕ್ರಿ). ಜೀವ ಬಿಡು;ಪ್ರಾಣ ಕಳೆದುಕೊಳ್ಳು : "ಪ್ರಾಣಪರಿಚ್ಛೇದಂಗೆಯ್ವನಂ ಆಯಶ್ಯಾಳಿಕನೆಂಬುದು" (ಹರಾಯು.೬೦-೨೦೬). [ಪ್ರಾಣಪರಿಚ್ಛೇದ + ಕೆಯ್ೆ]

**ಪ್ರಾಣಪವನ** (ನಾ). ಜೀವದ ಉಸಿರು; ಪ್ರಾಣವಾಯುಂ : ಪ್ರಾಣಪವನನ ಬೀಡು ಬಿಟ್ಟುದು ಗೋಣನಲಿ (ಕುಮ್ಮಾ.೪.೦೯-೯೬). [ಸಂ.]

**ಪ್ರಾಣಪೂಜೆ** (ನಾ). ಪರಮಾತ್ಮನ ಅರ್ಚನೆ; ದೇವರ ಪೂಜೆ : ಕೇಳು ಕೇಳಯ್ಯಾ ಪ್ರಾಣನಾಥನೆ ಎನ್ನ ಪ್ರಾಣಪೂಜೆಯ ಬಗೆಯ ಬಣ್ಣಿಸುತಿರ್ಪೆನು (ಅಪ್ರಂಕೀ. ೨೪೦-೯೬). [ಸಂ. ಪ್ರಾಣಪೂಜಾ]

**ಪ್ರಾಣಪ್ರತಿಷ್ಠಾಪನೆ** (ನಾ). ೧. ವಿಧಿಪೂರ್ವಕವಾಗಿ ಪ್ರಾಣವನ್ನು ಆವಾಹನೆ ಮಾಡಿ ವಿಗ್ರಹವನ್ನು ಪ್ರತಿಷ್ಠಿಸುವ ಪೂಜೆಯ ಒಂದು ಅಂಗ ; ವಿಗ್ರಹದಲ್ಲಿ ದೇವತ್ವವನ್ನು ಆವಾಹಿಸುವುದು. ೨. ಜೀವ ತುಂಬುವುದು ; ಜೀವಂತಗೊಳಿಸುವುದು : ಘಟನೆಗಳನ್ನು ಸನ್ನಿವೇಶಗಳನ್ನು ಕಲ್ಪಿಸಿಕೊಂಡು ಅವುಗಳಲ್ಲಿ ಪ್ರಾಣಪ್ರತಿಷ್ಠಾಪನೆ ಮಾಡಿ . . . ಅವು ಜೀವಿಸುವಂತೆ ಮಾಡಿಕೊಳ್ಳಬೇಕು (ಸಂಹಾಕ್ರಿ.೬೨). [ಸಂ. ಪ್ರಾಣಪ್ರತಿಷ್ಠಾಪನ]

**ಪ್ರಾಣಪ್ರತಿಷ್ಠೆ** (ನಾ).= ಪ್ರಾಣಪ್ರತಿಷ್ಠಾಪನೆ ೧ : ಶಾಸ್ತ್ರೋಕ್ತವಾಗಿ ನಿರ್ಮಿತವಾದ ಪ್ರತಿಮೆಯಲ್ಲಿ ನಿರ್ದಿಷ್ಟದೇವತೆಯನ್ನು ಆವಾಹನೆ ಮಾಡುತ್ತಾರೆ. ಈ ವಿಧಿಗೆ 'ಪ್ರಾಣಪ್ರತಿಷ್ಠಾ' ಎಂದು ಹೆಸರು (ಹಾಕರ. ೩೦೬); ಮೂಲಬೇರದ ಸ್ಥಾಪನೆಯಾದ ಮೇಲೆ ಪ್ರಾಣಪ್ರತಿಷ್ಠಾ ನೇತ್ರೋನ್ಮೀಲನಾದಿ ಕರ್ಮಗಳನ್ನು ವಿಧಿವತ್ತಾಗಿ ಮಾಡಿ (ಹೊಯ್ಸಳಾ. ೦೯). [ಸಂ. ಪ್ರಾಣಪ್ರತಿಷ್ಠಾ]

**ಪ್ರಾಣಪ್ರಿಯ** (ಗು). ಜೀವಕ್ಕೆ ಸಮವಾದ ; ಬಹಳವಾಗಿ ಪ್ರೀತಿಸುವ : ಬಗೆಯಂ ಪ್ರಾಣಪ್ರಿಯಸ್ತ್ರೀಜನತನಯಧನವ್ರಾತದೊಳ್ ಮಾಡದಾರ್ತಾಜಿಗೆ ಬಂದೊಡ್ಡಲ್ಕೆ ವೇಟ್ಟಂಗರನಿಕಪದೊಳಿಮ್ಮಂದವಂ ನೀನೆ ಕಾಣ್ಬೈ (ಅಂಪು. ೦೯-೬೩) ; ಪ್ರಾಣಪ್ರಿಯರ್ನಾನಂ ಕಾಣದಿರ ಪೊತ್ತುವುದು ಹರಣದುರಿ (ಕಶ್ಯಾಂಗ. ೩೩-೦೫೦೩). [ಸಂ.]

**ಪ್ರಾಣಪ್ರಿಯೆ** (ನಾ). ಹೆಂಡತಿ; ಪತ್ನಿ : ಪ್ರಾಣಪ್ರಿಯೆಯಿಲ್ಲದೆ ನೀಃಪ್ರಾಣಮದೆಂತುಮ್ಮದೀಗಳೀಯೊಡಲಿಹಿತಪ್ರಾಣಾನಿಲನಿಂದೆನ್ನ ಕೃಪಾಣಾಹಿಯನೂಡಿ ಬಟಿಕಮಾನುಂಡಪ್ಪೆಂ (ಅಶಂಪು. ೦೦-೬೬). [ಸಂ. ಪ್ರಾಣಪ್ರಿಯಾ]

**ಪ್ರಾಣಬಾಧೆ** (ನಾ). ಜೀವ ಹೋಗುವ ಸ್ಥಿತಿಯಲ್ಲಿ ಆಗುವ ತೊಂದರೆ ; ಪ್ರಾಣ ಹೋಗುವಾಗ ಆಗುವ ಹಿಂಸೆ : ಅವರು ಪ್ರಾಣಬಾಧೆ ತಡೆಯಲಾರದೆ ಬಹಳ ನರಳಾಡುತ್ತಿದ್ದರು (ಮೂಕಿ). [ಸಂ. ಪ್ರಾಣಬಾಧಾ]

**ಪ್ರಾಣಬಿಡು** (ಕ್ರಿ). ೧. ಸಾಯು; ಮರಣವನ್ನು ಹೊಂದು : ಶುಕ್ಲ ಶೋಣಿತಶರೀರ . . . ಪ್ರಾಣಬಿಟ್ಟರೆ ದುರ್ಗಂಧ ನಾಱುವುದು (ಶ್ರೀಕಂಡ. ೩-೯೩-೨); ಹೆತ್ತ ತಾಯಿ ದುಸ್ಸಹ ಸಮಾಚಾರವನ್ನು ಕೇಳಿ ಪ್ರಾಣಬಿಟ್ಟರು (ಹಂಸರಾ. ೦೭೦); ಫಕೀರನು ಪ್ರಾಣಬಿಟ್ಟಿದ್ದಾನೆ ಎಂದು ಹೇಳಿದರು (ದಾಂಪತ್. ೨೯೭). ೨. (ಅಲಂ) ಅತ್ಯಂತ ಕಷ್ಟಪಡು ; ಶ್ರಮಿಸು : ಇಷ್ಟು ಪ್ರಾಣಬಿಟ್ಟರಲ್ಲ ನೀವು, ಕೊನೆಗೂ ಒಂದು ಕುಂಟುಪಂಕ್ತಿ ಬರೆದೇ ಹೋದರು ಅವರು (ಕುಗಿಯು. ೩೯೭). [ ಪ್ರಾಣ + ಬಿಡು₁ ]

**ಪ್ರಾಣಭಯ** (ನಾ). ಜೀವಕ್ಕೆ ಉಂಟಾಗುವ ಅಪಾಯದ ಅಂಜಿಕೆ; ಪ್ರಾಣದ ಹೆದರಿಕೆ : ನಿಮ್ಮ ಪ್ರಸಾದದಿಂ ಪ್ರಾಣಭಯಂ ಪಿಂಗಿದುದು (ರಘುರಾಮ್ಯ. ೦೨-೦೬೩) ; ಪ್ರಾಣಭಯ ತನ್ನಂತೆ ಸಕಲಪ್ರಾಣಿಗಳಿಗುಂಟು (ಶಿವ್ಯಾಂ. ೯-೩೦). [ಸಂ.]

**ಪ್ರಾಣಮಯಕೋಶ** (ನಾ). ಜೀವವನ್ನು ಆವರಿಸಿಕೊಂಡಿರುವ ಐದು ಬಗೆಯ ಆವರಣಗಳಲ್ಲಿ ಒಂದು: ಸೂಕ್ಷ್ಮತನುವಿನಲ್ಲಿ ಪ್ರಾಣಮಾರುತಮುಂ ಕರ್ಮೇಂದ್ರಿಯಂಗಳುಂ ಕೂಡಿ ಪ್ರಾಣಮಯಕೋಶವೆನಿಸುವುದು (ವಿವೇಕ. ೪೦) ; ಪಂಚಪ್ರಾಣವು ಕರ್ಮೇಂದ್ರಿಯವು ಕೂಡಿ ಪ್ರಾಣಮಯ ಕೋಶವೆಂದು ಹೇಳಲ್ಪಡುವುದು (ಜ್ಞಾಸಿ. ೦೩-೦೦) ; ದೇಹದಲ್ಲಿ ಪೂರ್ಣಬಲವನ್ನು ಕೊಡತಕ್ಕ ಇಂದ್ರಿಯಗಳನ್ನು ಪ್ರೇರಿಸತಕ್ಕ ವಾಯುವೇ ಪ್ರಾಣಮಯಕೋಶ (ಆವಾತ್. ೦೫೦). 'ಕೋಶಪಂಚಕ' ಪರಾ. [ಸಂ.]

**ಪ್ರಾಣಮಿತ್ರ** (ನಾ). ಜೀವಕ್ಕಿಂತಲೂ ಅತಿಶಯವಾದ ಸ್ನೇಹವನ್ನು ಹೊಂದಿರುವವನು ; ಪ್ರಾಣಸಖ : ಪ್ರಾಣಮಿತ್ರನೆನಿಪ್ಪ ಭಕ್ತಪ್ರಾಣನಂ ಬಸವಣನನಗಲ್ದಿಂತೇಣಧರಧರನಲ್ಲಿಗೆಂತುಟೆ ಹೋಗಬಹುದಯ್ಯಾ (ಬಸವ. ೩೭-೩೨) ; ಅವರಿಬ್ಬರೂ. . . ಪ್ರಾಣಮಿತ್ರರು (ಪುಶರು. ೩೫೦). [ಸಂ.]

**ಪ್ರಾಣಯಾತನೆ** (ನಾ). = ಪ್ರಾಣಬಾಧೆ : ಕೃಷ್ಣನನ್ನು ನೋಡುತ್ತ, ಪ್ರಾಣಯಾತನೆಯನ್ನೂ ಲಕ್ಷಿಸದೆ. . .ನಮ್ಮೊಡನೆಯಲ್ಲಾ ಋಜುಮಾರ್ಗದಲ್ಲಿ ಯುದ್ಧಮಾಡಿದರೆ ಖಂಡಿತವಾಗಿಯೂ ನಿಮಗೆ ವಿಜಯವಾಗುತ್ತಿರಲಿಲ್ಲ ಎಂದನು (ಶಕಶಾ. ೩೦೯). [ಸಂ. ಪ್ರಾಣಯಾತನಾ]

**ಪ್ರಾಣರಕ್ಷಣೆ** (ನಾ). ಜೀವವನ್ನು ಕಾಪಾಡಿಕೊಳ್ಳುವುದು : ಅಂತು ಮಯ್ಯಱಿಯದಿರ್ದನಂ ಕಂಡು ಭಯಂಗೊಂಡುಪದೇಶಕ್ಕೆಡೆಯಿಲ್ಲದೆ ಪ್ರಾಣರಕ್ಷಣೋಪಾಯಮನಾದೊಡಂ ಮಾಟಪ್ಪೆನೆಂದಲ್ಲಿಂದ ಮ ಟ್ಟ ಚ್ಛೋ ದ ಸರೋವರಮಂ ಪೊಕ್ಕು (ಕಾದಂಪೂ. ೬೩೩) ; ಸುಲ್ತಾನನನ್ನು ನಗರದಿಂದ ಚಿತ್ರದುರ್ಗದ ಕೋಟೆಗೆ ಹೋಗಿ ಪ್ರಾಣರಕ್ಷಣೆ ಮಾಡಿಕೊಳ್ಳುವಂತೆ ಮಾಡಿದ್ದೇನೆ (ದಾಂಪತ್. ೦೩೩). [ಸಂ. ಪ್ರಾಣರಕ್ಷಣ]

**ಪ್ರಾಣಲಿಂಗ** (ನಾ). ೧. ಪರಮಾತ್ಮ ; ಶಿವ : "ಶಿವಃ = ಪ್ರಾಣಲಿಂಗ" (ಕಾಶಕ್. ೦೭೨). ೨. [ಶೈವ] ಐದು ಬಗೆಯ ಲಿಂಗಗಳಲ್ಲಿ ಒಂದು : ಶೈವಸಿದ್ಧಾಂತಸಮ್ಮತವಾದ ಪಂಚಲಿಂಗಾರ್ಚನದೊಳು ಸ್ವಯಂಭುಲಿಂಗ ಬಾಣಲಿಂಗ ಚರಲಿಂಗ ಸಂಕೀರ್ಣಲಿಂಗ ಪ್ರಾಣಲಿಂಗವೆಂಬೈದಱೊಳಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನತತ್ಪರರಾಗಬೇಕೆಂದು ನಿಶ್ಚಯಿಸ ಲಕ್ಕುಂ (ವಿವೇಕ. ೦೦೨). ೩. [ವೀಶೈ] ಇಷ್ಟಲಿಂಗ, ಭಾವಲಿಂಗ ಮತ್ತು ಪ್ರಾಣಲಿಂಗಗಳೆಂಬ ಮೂರು ಬಗೆಯ ಲಿಂಗಗಳಲ್ಲಿ ಒಂದು; ದೇಹಗುಣವ್ಯಾಪ್ತಿಯನ್ನು ಬಿಟ್ಟು ಶಿವಸ್ವರೂಪದಲ್ಲಿ ಮನಸ್ಸು ಲೀನವಾಗುವ ಒಂದು ಸ್ಥಿತಿ : ಪ್ರಾಣಲಿಂಗವು ಸಕಲ ನಿಷ್ಕಲರೂಪ ವಾಗಿದ್ದು, ಮನಸ್ಸಿನಿಂದ ಗ್ರಹಿಸತಕ್ಕುದಾಗಿರುವುದು (ಶಿವಾಸೂ. ೩೩) ; ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗವೆಂದು ಶಿವಲಿಂಗತ್ರಯಭೇದಂಗಳವು ಗಳಲ್ಲಿ ದೇಹಗುಣವ್ಯಾಪ್ತಿಯಂ ಬಿಟ್ಟು ಶಿವಲಿಂಗಸ್ವರೂಪದಲ್ಲಿ ಮನವು ಮುಟ್ಟಹುದೇ ಪ್ರಾಣಲಿಂಗವೆನಿಸುವುದು (ಶಿವೇಶ. ೦೨೩). [ಸಂ.]

**ಪ್ರಾಣಲಿಂಗಿ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ನಾಲ್ಕನೆಯ ಹಂತವಾದ ಪ್ರಾಣಲಿಂಗಸ್ಥಲವನ್ನು ತಲುಪಿರುವವನು ; ನಾನಂ, ನನ್ನದು ಎಂಬ ಮೋಹವನ್ನು ತೊರೆದು ಸರ್ವವನ್ನೂ ಲಿಂಗಮಯವೆಂದು ಭಾವಿಸುವವನು: ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣಾನೈಕ್ಯನು ಮೆಲ್ಲಮೆಲ್ಲನೆ ಆದಹೆನ್ನೆಂಬನ್ನಬರ ನಾನೇನು ವಜ್ರದೇಹಿಯೆ (ಬಸವ. ೯೯೭); ನಾನು ನನ್ನದೆಂಬ ಭ್ರಮಾಜನ್ಯವಾದ ಮೋಹವನ್ನು ತ್ಯಜಿಸಿ ಇದೆಲ್ಲವೂ ಲಿಂಗಮಯವಾದುದೆಂದು ತಿಳಿದು ತದೇಕಯತ್ತ ಮಾನಸನಾಗಿರುವುದೇ ಪ್ರಾಣಲಿಂಗಿಯ ಸ್ವರೂಪವು (ಶಿವಾಸೂ. ೩೪) ; ಎನ್ನ ಸಿದ್ಧರಾಮನಂತೆ ಶುದ್ಧ ಪ್ರಾಣಲಿಂಗಿಯೆಂದೆನಿಸಯ್ಯ (ಅಬಂಧೀ. ೭೩-೪೩). [ಸಂ. ಪ್ರಾಣಲಿಂಗಿನ್]

**ಪ್ರಾಣಲಿಂಗಿಸ್ಥಲ** (ನಾ). [ವೀಶೈ] ವೀರಶೈವಮತದಲ್ಲಿ ಸಾಧನೆಯ ಷಟ್ಸ್ಥಲಮಾರ್ಗದ ನಾಲ್ಕನೆಯ ಸೋಪಾನ,— ಹಂತ; ಷಟ್ಸ್ಥಲಗಳಲ್ಲಿ ಒಂದು : ಅನಿಲಾಂಗದಲ್ಲಿ ಮನೋಹಸ್ತದಿಂದ ಚರಲಿಂಗಾರ್ಚನ ಯುಕ್ತವಾದುದೇ ಪ್ರಾಣಲಿಂಗಿಸ್ಥಲ (ಶಿವಾಸೂ. ೯೭) ; ಪ್ರಾಣಲಿಂಗಿಸ್ಥಲ . . . ಅಂಗಲಿಂಗಸ್ಥಲ ಈ ಐದು ಪ್ರಾಣಲಿಂಗಿಸ್ಥಲಂಗಳು (ಅಬಂಧೀ. ೨೩೦-೦೪೯). [ ಸಂ. ]

**ಪ್ರಾಣವಂಚಕ** (ನಾ). (ತನ್ನ) ಜೀವಕ್ಕೆ ವಂಚನೆ ಮಾಡಿಕೊಳ್ಳುವವನು : ಮೊದಲಿಸಲುಂ ಪ್ರಾಣವಂಚಕನಾದವಂಗಂ ಲಿಂಗಭಕ್ತಿ ಸುಮೇಧಿಸದು ಧನವಂಚಕಂಗೆ ಸುಸಾಧ್ಯವಾಗದದು ಆದಿಜಂಗಮಭಕ್ತಿ (ಬಸವ. ೩೯-೦೯). [ಸಂ.]

**ಪ್ರಾಣವಧೆ** (ನಾ). ಕೊಲ್ಲುವುದು ; ಪ್ರಾಣಹಾನಿ : ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ ನಡೆವ ನಾಲ್ಕುಂ ದೆಸೆಗಳೊಳಂ ನೂಱುಯೋಜನಪ್ರಮಾಣಾಂತರದೊಳಾವ ಜೀವಕ್ಕಂ ಪಸಿವು ಪಸವುಂ ಪ್ರಾಣವಧೆಯುಮಾಗದಿರೆಯುಂ (ಶಾಂತಿಪು. ೦೨-೦೯ ವ) ; ಶಾಸ್ತ್ರ ಘನ ವೆಂಬೆನೆ ಕರ್ಮದ ಭಜಸುತ್ತಿದೆ ವೇದ ಘನವೆಂಬೆನೆ ಪ್ರಾಣವಧ [ಶಾಸ್ತ್ರಂ. ವೇಧ] ಯ ಹೇಳುತ್ತಿದೆ (ಬಸವ. ೨೦೬). [ಸಂ. ಪ್ರಾಣವಧ]

**ಪ್ರಾಣವಲ್ಲಭ** (ನಾ). ೧. ಪ್ರೀತಿಪಾತ್ರ ವ್ಯಕ್ತಿ : ಬಿಡದೆ ಪೊಗೆ ಸುತ್ತೆ ತೋಳಂ ಸಡಲಿಸದಾ ಪ್ರಾಣವಲ್ಲಭರ್ ಪ್ರಾಣಮನಂದೊಡೆಗಳೆದರೋವ ರೋವರೊಳೊಡಸಾಯಲ್ಪಡೆದರಿನ್ನವೇಂ ಸ್ನೇಹಮೋವೇ (ಅಂತ್ಯ. ೩-೨೪). ೨. ಗಂಡ ; ಪತಿ : ಹಾ ಮದೀಯ ಪ್ರಾಣವಲ್ಲಭನೆ . . . ಎಮ್ಮ ದೃಷ್ಟಿಗೆ ದೂರವಾದ್ಯೆ (ಕೌಶಿಕ. ೩೭-೭). [ಸಂ.]

**ಪ್ರಾಣವಲ್ಲಭೆ** (ನಾ). ಹೆಂಡತಿ ; ಪತ್ನಿ: ಪೊಲ್ಲಮೆಯೊಳ್ ತೀವಿರ್ದ ಗೃಹಸ್ಥರೆಲ್ಲಂ ಕಣ್ಣಿವೆ ಮಱೆಯಾದೊಡೆ ಬಾಟದನಿತಂ ಮಾಟ್ಪ ಸ್ನೇಹದ ಪ್ರಾಣವಲ್ಲಭೆಯುಮಂ ದೋಷಂಗೆಯ್ದೊಳೆಂಬುದಂ ಕೇಳ್ದನಿತಱೊಳೆ ಪೊಱ ಮಡಿಸಿ ಕಳೆವರ್ (ಜೀವಸಂ. ೩೯-೦೯೬) ; ಶಕುಂತಲೆ . . . ತಾನು ಹೃದಯೇಶ್ವರನ ಪ್ರಾಣವಲ್ಲಭೆಯಾಗಿ, ರಾಣಿಯಾಗಿ ಬಾಳಿ ಸುಖಿಸುವೆನೆಂದಾಶಿಸಿದಳು (ರಘುಕಾ. ೭೦). [ಸಂ. ಪ್ರಾಣವಲ್ಲಭಾ]

**ಪ್ರಾಣವಾಯು** (ನಾ). ೧. ಜೀವನಾಧಾರವಾದ ಗಾಳಿ ; ಆಮ್ಲಜನಕ : ಪ್ರಾಣವಾಯುಗಳವರು ಸುಭಟಶ್ರೇಣಿದೇಹಕೆ ನಿನ್ನ ತನು ವಿಶ್ವಪ್ರಾಣವದಱಿಂದಾಯ್ತು ಪರಿಭವವು (ಕುಮ್ಯಾಂ. ೨೦-೦೨) ; ಶ್ಲೇಷ್ಮದಿಂದ ತಡೆಯಲ್ಪಟ್ಟ ಪ್ರಾಣವಾಯುವು ಅನ್ನಜೆ, ಯಮಳೆ, ಗಂಭೀರೆ, ಕ್ಷುದ್ರೆ, ಮಹತೆ ಎಂಬೈದು ಪ್ರಕಾರದಿಂದ ಬಿಕ್ಕುಳನ್ನುಂಟುಮಾಡುವುದು (ಚಿಕಿತ್ಸ. ೨೫೦). ೨. [ಯೋಗ] ಪ್ರಾಣವೆಂಬ ಹೆಸರುಳ್ಳ ವಾಯು : ರೇಚಕ ಪೂರಕ ಕುಂಭಕ ರೂಪಿಂದೆ ಚೇಷ್ಟಿಸುವುದೊಂದು ಪ್ರಾಣವಾಯು (ಭಕ್ತಿಶ. ೩೩-೦೩). [ಸಂ.]

**ಪ್ರಾಣವಿಯೋಗ** (ನಾ). ಜೀವವು ಶರೀರದಿಂದ ಬೇರೆಯಾಗುವುದು; ಸಾವು; ಮರಣ: ಚೈತ್ಯವೃಕ್ಷದೊಳು ಪಂಚನಮಸ್ಕಾರಮನುಚ್ಚರಿಸುತ್ತಂ ಪ್ರಾಣವಿಯೋಗಮಾಗೆ (ಆರಾಕ. ೦೬); ಪಾಪದ ನವೆದಡಾಮಿಳಿಗೊಳಿದು ಪ್ರಾಣವಿಯೋಗಕಾಲದಲಿ ಕಾಯ್ದವನು ನೀ (ಹಂಸಾ. ೪೩); ಕೈನಾಡಿಯನ್ನು ಹಿಡಿದು ನೋಡಿದನು; ನಾಡಿಯ ಗತಿಯು ಕಾಣಲಿಲ್ಲ, ಪ್ರಾಣವಿಯೋಗವಾಗಿದ್ದಿತೇ? (ಕರಾಟು. ೯೦). [ಸಂ.]

**ಪ್ರಾಣಸಂಕಟ** (ನಾ). ೧. ಸಾಯುವಾಗ ಉಂಟಾಗುವ ನೋವು: ಪ್ರಾಣಬಾಧೆ: ಗಡ್ಡಂ ಮೀಸೆಗಳು ಬೇಯಲು ಸಮೀಪದ ಗಡಿಗೆ ಬಾವಿಗಳೊಳಗೆ ಧುಮ್ಮಿಕ್ಕುವರು ತಮ್ಮಯ ಪ್ರಾಣಸಂಕಟಕೆ (ಚಿಕಪ್ರ. ೩೬–೬೯); ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ (ಗಾದೆ). ೨. (ಆಲಂ) ಅತ್ಯಂತ ಹಿಂಸೆ; ವೇದನೆ: ಶಿರ ಕೊಳಗಳಿಂದುಂಟಾಗುವ ಪಿಪಾಸೆ, ಒದ್ದೆಸೌದೆಯಿಂದಾಗಿ ಪ್ರಾಣಸಂಕಟ ಇವುಗಳಿಂದ ಕೂಡಿದ ಅನಾರೋಗ್ಯಕರವಾದ ಅಡುಗೆಮನೆಗಳಿಂದಾಗಿ ಎಷ್ಟು ಮಂದಿ ಸ್ತ್ರೀಯರು ತಮ್ಮ ಆರೋಗ್ಯವನ್ನು ಕಳೆದುಕೊಂಡಿಲ್ಲ? (ಅಡುಶಾ. ೨೦). [ಸಂ.]

**ಪ್ರಾಣಸಂಯಮ** (ನಾ). ೧. ಉಸಿರಾಟವನ್ನು ಹತೋಟಿಯಲ್ಲಿಡುವುದು. ೨. [ಜೈನ] ಷಟ್ಕಾಯಜೀವಗಳ ವಧೆ ಮಾಡದಿರುವುದು: ಅಭ್ಯಂತರಂ ಬಾಹ್ಯಮೆಂಬೆರಡುಂ ತೆಱದ ಪರಿಗ್ರಹಮನೀಡಾಡಿ ಪ್ರಾಣಸಂಯಮಮಿಂದ್ರಿಯಸಂಯಮಮೆಂಬೆರಡುಂ ತೆಱದ ಸಂಯಮಮುಮಂ ತಾಳ್ದಿ (ಶಬ್ದಸಂ. ೧೧–೦ ವ). 'ಇಂದ್ರಿಯಸಂಯಮ' ನೋಡಿ. [ಸಂ.]

**ಪ್ರಾಣಸಖಿ** (ನಾ). ಜೀವಕ್ಕೆ ಸಮವಾದ ಗೆಳತಿ: ಅತ್ಯಂತ ಪ್ರಿಯಳಾದವಳು: ಕ್ಷಮಿಸು ನೀಂ ಪ್ರಾಣಸಖೀ ರಮಣೀ ರಾಕೇಂದುಮುಖೀ (ಶಾಕುಂತ. ೦೦೦ ಅಂತರ್ಗ). [ಸಂ. ಪ್ರಾಣಸಖೀ]

**ಪ್ರಾಣಸಮೆ** (ನಾ). ೧. ಜೀವಕ್ಕೆ ಸಮನಾದವಳು; ಪ್ರಾಣಪ್ರಿಯೆ: ಪ್ರಾಣಸಮೆ ಹೃದಯದಿಂ ಮತ್ಪ್ರಾಣದೊಳೊಡಗೂಡಿ ಪೋಗಲಾಗೆಂದೆನ್ನಂ ಮಾಣಿಪವೋಲ್ ಕರ್ಣ ಸುಮನೋಬಾಣಾಗ್ನಿಸ್ಫುರಿತಹೃದಯದೊಳ್ ಸೊಗಯಿಸುಗುಂ (ಕಾದಂಪೂ. ೧೦೩). ೨. ಹೆಂಡತಿ; ಪತ್ನಿ. [ಸಂ. ಪ್ರಾಣಸಮಾ]

**ಪ್ರಾಣಸ್ಥಾನ** (ನಾ). ಜೀವವಿರುವ ಸ್ಥಳ; ಹೃದಯ: ವಾತಾದಿದೋಷಗಳು . . . ಅತ್ಯಂತಬಲವುಳ್ಳುದಾಗಿ ಪ್ರಾಣಸ್ಥಾನವಾದ ಹೃದಯವನ್ನಾಶ್ರಯಿಸಿ ಸನ್ಯಾಸವೆಂಬ ರೋಗವನ್ನುಂಟುಮಾಡುವುದು (ಸಕಶ್ವ. ೨೪೦). [ಸಂ.]

**ಪ್ರಾಣಸ್ನೇಹಿತ** (ನಾ). ಜೀವಕ್ಕೆ ಸಮನಾದ ಗೆಳೆಯ; ಪ್ರಿಯಮಿತ್ರ: ನಾವು ಧನಿಕರಲ್ಲದಿದ್ದರೂ ಪ್ರಾಣಸ್ನೇಹಿತರನ್ನು ಹೇಗೆ ಆದರಿಸಬೇಕೆಂದು ನಮಗೆ ಗೊತ್ತು (ಕುಲೀನಾ. ೦೨೯); ಪ್ರಾಣಸ್ನೇಹಿತನಾದರೂ ಮೀನಿನ ಬುಟ್ಟಿಗೆ ಕೈಹಾಕಬೇಡ (ಗಾದೆ). [ಸಂ.]

**ಪ್ರಾಣಸ್ವರೂಪ** (ನಾ). ಜೀವದ ರೂಪದಲ್ಲಿರುವವನು; ಪ್ರಾಣಪ್ರಿಯ: ಪತಿಯನಗೆ ಪ್ರಾಣಸ್ವರೂಪನಾಗಿದ್ದಾನೆ (ಕಹಾಗು. ೦೨೦). [ಸಂ.]

**ಪ್ರಾಣಹತಿ** (ನಾ). ಮರಣ; ಸಾವು: ಸಹಜಾಶುಚಿದೇಹಂ ಪ್ರಾಣ[ಶಾಂತಿ. ೧೫]ಹತಿ ಪ್ರಾರಂಭಮೆಂದು ಮನಿತಾರತಿನಿಸ್ಪೃಹನಾಗಿ ತೊಱೆದು ನೆಗೞ್ವಂ ಗೃಹಸ್ಥರೊಳ್ ಬ್ರಹ್ಮಚಾರಿಯೋಟನೆಯಾತಂ (ಸುಕುಮಾ. ೬–೩೨). [ಸಂ.]

**ಪ್ರಾಣಹತ್ಯೆ** (ನಾ). ಕೊಲ್ಲುವುದು; ಸಾಯಿಸುವುದು: ಬಿರಡಿಗಳನ್ನು ತಾನು ಕೊಲ್ಲುವುದಿಲ್ಲವೆಂತಲೂ ಇಸ್ತ್ರಿಯ ಬಾಯಿಗೆ ಸಿಕ್ಕು ಅವು ತಾವೆ ಪ್ರಾಣಹತ್ಯೆ ಮಾಡಿಕೊಳ್ಳುತ್ತವೆಂತಲೂ ಅಗಸನು ಹೇಳುತ್ತಾನೆ (ದೀಳಕ್ಷ್ಯ. ೩೨); ಪ್ರಾಣಹತ್ಯೆಗೆ ಪ್ರವೃತ್ತವಾಗಲು, ನಿನಗೊದಗಿದ ವಿಪತ್ತು ಯಾವದು? (ಕೃಕಳ್ಳ. ೬). [ಸಂ. ಪ್ರಾಣಹತ್ಯಾ]

**ಪ್ರಾಣಹರ** (ಗು). ೧. ಜೀವವನ್ನು ತೆಗೆಯುವ; ಕೊಲ್ಲುವ. (ನಾ). ೨. ಜೀವವನ್ನು ತೆಗೆಯುವಂಥದು; ಸಾಯಿಸುವಂಥದು: "ಕ್ಷ್ವೇಳಃ ಗರಳಂ, ವಿಷಂ—೩ ಸಾಮಾನ್ಯವಾಗಿ ಸಕಲ ವಿಷಗಳಿಗೂ ಹೆಸರುಗಳು. ಅಂದರೆ ಪ್ರಾಣಹರವಾದ ಪಿತ್ತನಂಜು" (ಸಿದ್ಧಾಂತಿ. ೬೩). [ಸಂ.]

**ಪ್ರಾಣಾಂತಿಕ** (ಗು). ೧. ಮರಣವು ಸಮೀಪಿಸಿದ; ಸಾವು ಸಮೀಪಕ್ಕೆ ಬಂದ: ಪ್ರಾಣಾಂತಿಕ ಸಂಕಟವು ದೊಡ್ಡದಲ್ಲವೆ? (ಕೃಕಳ್ಳ. ೬೯). (ನಾ). ೨. ಸಾವು; ಮರಣ. [ಸಂ.]

**ಪ್ರಾಣಾತಿಪಾತ** (ನಾ). ೧. ಕೊಲ್ಲುವಿಕೆ; ಸಾಯಿಸುವಿಕೆ. ೨. [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು; ಆಯುಸ್ಸು, ಇಂದ್ರಿಯ, ಪ್ರಾಣಗಳ ವಿಯೋಗದಿಂದಾಗುವ ಕ್ರಿಯೆ: ಪಂಚವಿಂಶತಿಕ್ರಿಯೆಗಳು ೧ ಸಮ್ಯಕ್ತ್ವಕ್ರಿಯೆ . . . ೧೧ ಪ್ರಾಣಾತಿಪಾತ (ಆಯುಸ್ಸು, ಇಂದ್ರಿಯಶಕ್ತಿ, ಪ್ರಾಣ ಇವುಗಳ ವಿಯೋಗಕ್ರಿಯೆ) (ಕೃಕಠ. ೬೬). 'ಪಂಚವಿಂಶತಿಕ್ರಿಯೆ' ನೋಡಿ. [ಸಂ.]

**ಪ್ರಾಣಾಪಹರಣ** (ನಾ). ಜೀವವನ್ನು ತೆಗೆದುಕೊಂಡು ಹೋಗುವುದು; ಸಂಹಾರ; ಕೊಲ್ಲುವುದು: ಪ್ರಾಣಾಪಹರಣದ ದುರುದ್ದೇಶದಿಂದ ಅವಳು ಪ್ರೇರಿತಳಾಗಿದ್ದಳೆಂಬುದಕ್ಕೆ ಸಾಕಷ್ಟು ರುಜುವಾತಿಲ್ಲ (ಕುಟುಕು. ೨೦೯). [ಸಂ.]

**ಪ್ರಾಣಾಪಾಯ** (ನಾ). ಜೀವಕ್ಕೆ ಉಂಟಾಗುವ ತೊಂದರೆ,—ಅಪಾಯ: ಪ್ರಾಣಾಪಾಯದ ಭೀತಿ ಇಲ್ಲವೆಂದು ಹರ್ಷ ತಾಳಿದರು (ಕುಂತಕಾ. ೨೬); ತಾನು ಪ್ರಾಣಾಪಾಯದಿಂದ ಪಾರುಗಾಣಬಹುದೆಂಬ ಆಶೆ ಜನಿಸಿತು (ಕೃಕಳ್ಳ. ೯). [ಸಂ.]

**ಪ್ರಾಣಾಯಾಮ** (ನಾ). [ಯೋಗ] ಪ್ರಾಣವಾಯುವನ್ನು ಒಂದು ಕ್ರಮದಲ್ಲಿ ವ್ಯವಸ್ಥೆಗೊಳಿಸುವುದು: ವಿಪ್ರೋತ್ತಮರನುಮತದಿಂ ಪ್ರಾಣಾಯಾಮಮಂ ಮಂತ್ರಿಸಿ (ಗುಣ. ೧೧–೯೬ ವ); ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳೆಂಬ ಅಷ್ಟಾಂಗ ಯೋಗದೊಳಗೆ (ಅಂಕೇ. ೨೦೯–೩೩). [ಸಂ.]

**ಪ್ರಾಣಾರ್ಪಣೆ** (ನಾ). ಜೀವವನ್ನು ಅರ್ಪಿಸುವುದು; ಸಾಯುವುದು: ದೇಶದ ಸಲುವಾಗಿ ಹಠಾತ್ ಪ್ರಾಣಾರ್ಪಣೆ ಮಾಡುವುದು ಅತ್ಯಂತ ಅವಶ್ಯಕ (ಇಕ್ಷ್ವ. ೯); ದಂಬನ ಕಾಲುಬುಡದಲ್ಲಿ ಹೋಗಿ ತನ್ನ ಪ್ರಾಣಾರ್ಪಣೆ ಮಾಡಿತು—ಬಾಡು (ದಂಪಾ. ೦೦೬). [ಸಂ. ಪ್ರಾಣಾರ್ಪಣ]

**ಪ್ರಾಣಾವಧಿ** (ನಾ). ಜೀವಿತದ ಅವಧಿ; ಸಾಯುವವರೆಗಿನ ಕಾಲ: ಪ್ರಾಣಾವಧಿಯ ರಿಪುಗಳಂ ನುತಿಗೆ ರಕ್ಷಿಪ ಧುಣೀಣಯನ್ನವಗುಣಗಳಂ ಹರಿಸು (ಜಕ್ಕ. ೩–೬–೦). [ಸಂ.]

**ಪ್ರಾಣಾಹುತಿ** (ನಾ). ೧. ಜೀವದ ಬಲಿ; ಸಾವು; ಮರಣ: ಗಾಳದ ತುದಿಯೊಳಿಪ್ಪ ಭೂನಾಗನಂ ಕಂಡು ಪ್ರಾಣಾಹುತಿಯೆಂದು ಸವಿವ ಮೀನಿನಂತೆ (ಕವಳ. ೬೯–೩). ೨. ಊಟಕ್ಕೆ ಮೊದಲು ಪಂಚಪ್ರಾಣಗಳ ಹೆಸರಿನಿಂದ ಇಡುವ ಅನ್ನದ ಬಲಿ: ರಾಯರು ಪ್ರಾಣಾಹುತಿಯನ್ನಿಟ್ಟು ಊಟವನ್ನು ಪ್ರಾರಂಭಿಸಿದರು (ಕೂತಿ). [ಸಂ.]

**ಪ್ರಾಣಿ** (ನಾ). ೧. ಜೀವವನ್ನು ಹೊಂದಿರುವಂಥದು; ಜೀವಿ. ೨. ಮೃಗ; ಪಶು: ಅಲ್ಲಿ ನಾನಾಜಾತಿಯ ಪ್ರಾಣಿಗಳು ಇದ್ದವು (ಕಪ. ೨–೨೬); ಮನುಷ್ಯಶಿಶು ಇತರ ಪ್ರಾಣಿಗಳ ಶಿಶುಗಳಿಗಿಂತ ದುರ್ಬಲ (ಕರ್ನಾಟಿ. ೦೬೯). ೩. ಮನುಷ್ಯ; ಮಾನವ: ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೇ ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನವಪ್ಪುದೆ (ಬಸವ. ೦೨೮); ಪಂಥ ಬೇಡಿ ಪ್ರಾಣಿಗಳಿರಾ ಸಂತತ ಹರಿದಾಸರಾಗಿ (ಪುರಂದ. ೩–೦೦೩ ಶಬ್ದ). [ಸಂ. ಪ್ರಾಣಿನ್]

**ಪ್ರಾಣದ್ಯೂತ** (ನಾ). ೧. ಯುದ್ಧ ; ಕಾಳಗ : " ಯುದ್ಧದಲ್ಲಿಯುಂ ಪ್ರಾಣದ್ಯೂತಮೆಂಬುದು" (ಶಬ್ದಮ. ೧೩೦-೪). ೨. ಹುಂಜ, ಟಗರು ಮೊದಲಾದ ಪ್ರಾಣಿಗಳ ಮೇಲೆ ಪಣವಿಟ್ಟು ನಡೆಸುವ ಕಾಳಗ : "ಪ್ರಾಣದ್ಯೂತಂ, ಸಮಾಹ್ವಯಃ—೨ ಕೋಳಿ ಮೊದಲಾದ ಜಂತುಗಳ ಪಂದ್ಯದ ಹೆಸರುಗಳು " (ಅಭಿಧಾನ. ೬೨೦). [ಸಂ.]

**ಪ್ರಾಣಧರ್ಮ** (ನಾ). ಜೀವಿಗಳು ಬದುಕಿರಲು ಕೈಗೊಳ್ಳುವ ಕಾರ್ಯ: ಪ್ರಾಣಧರ್ಮ ಎಂಬಲ್ಲಿ ಜೀವಿಗಳಲ್ಲಿ ಪ್ರಾಣರಕ್ಷಣ ಅಥವಾ ಪ್ರಾಣಧಾರಣಕ್ಕಾಗಿ ಸ್ವಾಭಾವಿಕವಾಗಿ ನಡೆಯುವ ಕಾರ್ಯಗಳು (ಆಯುರ. ೧೧). [ಸಂ.]

**ಪ್ರಾಣವಧೆ** (ನಾ). ಪ್ರಾಣಿಗಳನ್ನು ಕೊಲ್ಲುವುದು : ಪ್ರಾಣರಕ್ಷಣಮೆ ಪರಮಧರ್ಮಂ ಪ್ರಾಣವಧೆಯು ಪರಮಪಾತಕವೆಂಬುದರಿಂ ಪ್ರಾಣವಧೆಗೆಯ್ಯಲಾಗದು (ಹಂಹಚ. ೬೦-೨೦) ; ಪ್ರಾಣವಧೆ . . . ಸುಳ್ಳಾಡುವುದು ಎಂಬ ನಾಲ್ಕು ಕೆಟ್ಟಕೆಲಸಗಳನ್ನು ಅವನು ನೀಗುವವನು (ಶಾಸ್ತ್ರಶ. ೧೬೮).
[ಸಂ. ಪ್ರಾಣವಧ]

**ಪ್ರಾಣವಧೆಗೆಯ್** (ಕ್ರಿ). ಜೀವಿಗಳನ್ನು ಕೊಲ್ಲು : ಪ್ರಾಣಿಗಳನ್ನು ವಧಿಸು : ವಿಧಿಪೂರ್ವಕಂ ಪ್ರಾಣವಧೆಗೆಯ್ವರಲ್ಲದೆ ವೃಥಾ ವಧೆಗೆಯ್ವರಿಲ್ಲ (ಹಂಹಚ. ೬೨-೧೧). [ಪ್ರಾಣವಧೆ + ಕೆಯ್$_1$]

**ಪ್ರಾಣಿಶಾಸ್ತ್ರ** (ನಾ). ಪ್ರಾಣಿಗಳ ಜೀವನಕ್ಕೆ ಸಂಬಂಧಿಸಿದ ಶಾಸ್ತ್ರ; ಪ್ರಾಣಿಗಳನ್ನು ಕುರಿತ ಶಾಸ್ತ್ರ : ಭೌತಶಾಸ್ತ್ರ (Physics) ರಸಾಯನಶಾಸ್ತ್ರ (Chemistry) ಸಸ್ಯಶಾಸ್ತ್ರ (Botany) ಪ್ರಾಣಿಶಾಸ್ತ್ರ (Zoology) . . . ಬೇರೆಬೇರೆಯಾದವು (ಶಿಕ್ಷ. ೧೨) ; ನಾನು ಆ ಕಾಲದಲ್ಲಿ ಪ್ರಕೃತಿಶಾಸ್ತ್ರ, ವನಸ್ಪತಿಶಾಸ್ತ್ರ, ಪ್ರಾಣಿಶಾಸ್ತ್ರಗಳನ್ನು ಅವರಿಂದ ಕಲಿತೆನು (ಜೀಚರ. ೨೨).
[ಸಂ.]

**ಪ್ರಾಣಿಶಾಸ್ತ್ರಜ್ಞ** (ನಾ). ಪ್ರಾಣಿಶಾಸ್ತ್ರವನ್ನು ತಿಳಿದವನು : ಪ್ರಾಣಿಶಾಸ್ತ್ರಜ್ಞರ ಪರಿಶೋಧನೆಗಳಿಂದ ಹೊರಪಡುವ ವಿಷಯಗಳನ್ನು ಶಾಸ್ತ್ರೀಯವಾಗಿ ವಿಂಗಡಿಸುವುದು ವರ್ಗೀಕರಣದ ಮೊದಲನೆಯ ಮಜಲು (ಪ್ರಾಣಿಶಾ. ೧೨). [ಸಂ.]

**ಪ್ರಾಣಿಸಂಗ್ರಹಾಲಯ** (ನಾ). ಸಾರ್ವಜನಿಕರ ಪ್ರದರ್ಶನಕ್ಕಾಗಿ ವಿಸ್ತಾರವಾದ ಪ್ರದೇಶದಲ್ಲಿ ಕಾಡುಮೃಗಗಳನ್ನು ಕೂಡಿಟ್ಟಿರುವ ಸ್ಥಳ ; ಮೃಗಾಲಯ ; ಖಾನೆಬಂಗಲೆ : ಮನುಷ್ಯನೆಂಬ ಒಂದು ಪ್ರಾಣಿಯೂ ಇದೆ. ಆದರೆ ಅವನಿಗೆ ಪ್ರಾಣಿಸಂಗ್ರಹಾಲಯ ಕಟ್ಟಿ ಪ್ರದರ್ಶಿಸುವ ಬುದ್ಧಿ ಇದೆ (ಅಶಾ. ೨೪೨). [ಸಂ.]

**ಪ್ರಾಣಿಸು** (ಕ್ರಿ). ಬದುಕುವಂತೆ ಮಾಡು ; ಬದುಕಿಸು : ಗೋಣ ಕೊಯ್ದರೆ ನೆನೆಯಲಾ ಹರಿಯನ್ನ ಪ್ರಾಣಿಸುವ (ಹಂಕಹ. ೬-೬೦).
[ಪ್ರಾಣ + — ಇಸು$_3$]

**ಪ್ರಾಣಿಹಿಂಸೆ** (ನಾ). ಪ್ರಾಣಿಗಳನ್ನು ಕೊಲ್ಲುವಿಕೆ ; ಪ್ರಾಣವಧೆ ; ಜೀವಹಿಂಸೆ : ಯಮ ತನ್ನ ಪುರದಿ ಸಾಚಿರದನು . . . ಪ್ರಾಣಿಹಿಂಸೆಯ ಮಾಳ್ಪ ಬ್ರಹ್ಮಹತ್ಯಗಾರರ ಎಳೆದು ತನ್ನಿರೋ ಎಂದು (ಪುರಂದ. ೨-೧೨೩-೨); ಕೆಲವು ನಿರೂಪಕರು ಪ್ರಾಣಿಹಿಂಸೆ ತ್ಯಾಗ ಮಾಡಿದರು (ಹಿಂದಗಾ. ೧೪). 'ಜೀವಹಿಂಸೆ' ಪರ್ಯಾ. [ಸಂ.. ಪ್ರಾಣಿಹಿಂಸಾ]

**ಪ್ರಾಣೇಶ** (ನಾ). ೧. ಗಂಡ ; ಪತಿ : ಪ್ರಾಣೇಶನ ಬರವಿಂಗಿವು ಮಾಣದೆ ಕೆತ್ತಿದಪುವೆಡದ ಕಣ್ಣುಂ ತೋಳುಂ ಪ್ರಾಣೇಶನ ಬರವಿಲ್ಲಂ (ಜಗು. ೧೧-೫೩); ಬರ್ಹಿವಧು ತಾಂ ಪ್ರಾಣಭಯದಿಂದೆ ಪ್ರಾಣೇಶನಂ ಮರಣಮುಖನಂ ಬಿಟ್ಟು . . . ಪೊಂದವುದು (ಶಬ್ದಾಂಗ. ೩೪-೧೪೧). ೨. ಪರಮಾತ್ಮ : ಈಶ ಸರ್ವೇಶ ಪ್ರಾಣೇಶ ನೀಂ ರಕ್ಷಿಪುದು (ರಾಜ್ಯಶೋ. ೪-೧೪); ಇತ್ತಲೀ ಪ್ರಾಣೇಶನಿದ್ದ ನಿಮಿತ್ತದಲಿ ಪಶುಗಳು ಬೆಳೆದ ಹೊಲದತ್ತ ತೆಗೆಯಲು (ಜೈಮಿ. ೬೦-೨೩). ೩. ಯಮ : ಪ್ರಾಣೇಶಂ ಬರ್ಪೆಮೆನ್ನನುಯ್ಯಲ ಮೋಘಂ (ಜಗು. ೧೦-೫೩). ೪. ಗಾಳಿಯ ಅಧಿದೇವತೆ ; ವಾಯು.
[ಸಂ.]

**ಪ್ರಾಣೇಶ್ವರ** (ನಾ). = ಪ್ರಾಣೇಶ ೧ : ಒರ್ವಳ್ ನಿಜಪ್ರಾಣೇಶ್ವರನನೆಂತುಂ ತನ್ನೊಳೆಳವಡಿಸಲಾರದೆ ನಿಜಪ್ರಿಯಸಖಿಗಿಂತೆಂದಳ್ (ಅಜಿತ. ೧೨-೩೩ ವ); ಪ್ರಾಣೇಶ್ವರನೊಳ್ ಮನ್ನಣೆಗಾಣೆಗೆ ಗೋಸನೆಗೆ ಸೂಟ ಪಾಟಿಗೆ ನಮ್ಮೊಳ್ಮಾಣದೆ ಮುಚ್ಚರಿಪಂತಿರೆ ಹೂಣಿಸಿ ಮುಂಚಲ್ಕೆವೇಟ್ಪುಮೊರ್ವರಿನೊರ್ವರ್ (ಆದಿಪು. ೧೨-೧೩). [ಸಂ.]

**ಪ್ರಾಣೇಶ್ವರರಸ** (ನಾ). [ವೈದ್ಯಶಾ] ಪ್ರಾಣವಾಯುವು ಶ್ಲೇಷ್ಮವನ್ನು ಕತ್ತರಿಸಿ ಶ್ವಾಸ ನಿಶ್ವಾಸಗಳು ನೇರ್ಪಡುವಂತೆ ಮಾಡುವ ಒಂದು ಬಗೆಯ ಔಷಧಿ : ಶ್ವಾಸ ಬಿಕ್ಕಳಗಳೆಂಬ ಎರಡು ರೋಗಕ್ಕೂ ಪ್ರಾಣೇಶ್ವರರಸವ ಕೊಡುವುದೆಂದು ಅಶ್ವಿನೀದೇವತೆಗಳ್ಳನ್ನರು ಪಚಿಸಿ ಇರ್ಪರು (ಶಕ್ತಿ. ೨೪೦). [ಸಂ.]

**ಪ್ರಾಣೇಶ್ವರಿ** (ನಾ). ೧. ಹೆಂಡತಿ : ಪತ್ನಿ : ಆತನ ಪ್ರಾಣೇಶ್ವರಿ ವಜ್ರಮಾಲಿನಿ ಕಂಡು (ಶಾಂತಿಪು. ೮-೯೬ ವ); ದಿಲ್ಲೀಶ್ವರನ ಪ್ರಾಣೇಶ್ವರಿಯಾಗಲು ಯೋಗ್ಯೆಯಾದವಳು (ಕೆಹಾಕು. ೬೬). ೨. ನಲ್ಲೆ; ಪ್ರೇಯಸಿ : ಒರ್ವಂ ತನ್ನ ಪ್ರಾಣೇಶ್ವರಿಯ ಮೊಗಮಂ ನೋಡಿ (ಆದಿಪು. ೧೨-೧೩ ವ).
[ಸಂ. ಪ್ರಾಣೇಶ್ವರೀ]

**ಪ್ರಾಣೋಪ** (ನಾ). ಜೀವಕ್ಕೆ ಸಮವಾದವನು ; ಗಂಡ : ಪೋಪುದುಚಿತವಲ್ಲ ಜೀಯ ಕೇಳ್ ದೈತ್ಯಚಮೂಪನ ಮಹದೈಶ್ವರ್ಯ ನೀ ಪರಿಗ್ರಹಿಸಿಕೊಂಡಿಹುದೆಂದು ರತಿಯ ಪ್ರಾಣೋಪಗೆ ಖಳಮಂತ್ರಿ ನುಡಿದ (ತೋಹಕ. ೦೩-೪); ಅರಿದು ಭ್ರಮಿಸುವರೆ ಸ್ತ್ರೀಯು ಪ್ರಾಣೋಪಂಗೆ ಉತ್ತರಮನೀಯ (ಶಶಶೋ. ೪-೦೪). [ಸಂ.]

**ಪ್ರಾಣೋಪಕಾರ** (ನಾ). ಜೀವವನ್ನು ಉಳಿಸುವುದು ; ಕೊಲೆಯನ್ನು ತಪ್ಪಿಸುವುದು : ನಿಮ್ಮಡಿ ನೀಮೆನಗೆ ಪ್ರಾಣೋಪಕಾರಮಂ ಗೆಯ್ದಿರ್ (ಹಂಹಚ. ೦೦೦-೬) ; ಪ್ರಾಣೋಪಕಾರಮಂ ಕಲ್ಯಾಣಮಾನೆನಗಿತ್ತು ದೇವ ಕಣಯ್ದದ ನಿಮ್ಮಾ ತ್ರಾಣ ಪ್ರವೀಣ ಪರಮಪ್ರಾಣ ಹಿತಾಚರಣಾಪಿತರ ಸಾಧಾರಣಮೇ (ಹಂರಾಚ. ೬-೬೬). [ಸಂ.]

**ಪ್ರಾತ** (ನಾ). ಬೆಳಗು ; ಪ್ರಭಾತಸಮಯ : ಪಸಂತಪ್ರಾತದಲ್ಲಿ ಬಿರಿದು ಅರಳುತ್ತಿರುವ ಗುಲಾಬಿಯಂತೆ ಇರುವ ಮುಖ (ಹಂಯಾತ್ರೆ. ೩೩).
[<ಸಂ. ಪ್ರಾತರ್]

**ಪ್ರಾತಃಕಾಲ** (ನಾ). ಬೆಳಗಿನ ಹೊತ್ತು ; ಹೊತ್ತಾರೆ : ಪ್ರಾತಃಕಾಲದಲ್ಲಿ ಅಗ್ರೋದಕವ ತಂದು ಲಿಂಗದನುವನರಿದು ಪಾದೋದಕವ ತಪ್ಪದೆ ಕೊಂಬುದು (ಶಶೂ.ಶ. ೦೦೩-೨೬) ; ಅವ್ಯಯಸಮಾಸಕ್ಕೆ—ಅಂತರ್ಮುಖ . . . ಪುನಃಪಾಕ, ಪ್ರಾತಃಕಾಲ (ಕಮುದ.೧೦ ಶ್ರಯೋ). [ಸಂ.]

**ಪ್ರಾತಃಸವನ** (ನಾ). ಬೆಳಗಿನ ಸಮಯದಲ್ಲಿ ಸೋಮರಸವನ್ನು ಅಗ್ನಿಗೆ ಆಹುತಿ ಮಾಡುವುದು : ಪ್ರಾತಃಸವನ ಮಾಧ್ಯಂದಿನವು ಸಾಯಮಸವನಗಳು ವಸುರುದ್ರ ಆದಿತ್ಯರೊಳು ರಾಜಿಸುವ . . . ಮೂರ್ತಿತ್ರಯವ ಚಿಂತಿಸಿ ದಿವಸವೆಂದಾಹುತಿಗಳಿಂದರ್ಚಿಸುತ ಸುಖಿಸುತಿರು (ಹಾರಿ. ೦೨-೩೪). [ಸಂ.]

**ಪ್ರಾತಃಸ್ನಾನ** (ನಾ). ಬೆಳಗಿನ ಹೊತ್ತು ಮಾಡುವ ಸ್ನಾನ : ಹೇಗೆ ಉದ್ಧಾರ ಮಾಡ್ವನು ಶ್ರೀಹರಿ . . . ಮಡಿಸಿ ಪ್ರಾತಃಸ್ನಾನ ಮಾಡದೆ ಮನೆಮನೆ ತಿರಿನಾಗಿ ಬೆಸಗೊಂಡು ತಿಂಬುವನ (ಪುರಂದ. ೧-೦೩೩-೦); ಪ್ರಾತಃಸ್ನಾನವ ಮಾಡಿ ರಕ್ಕಸರಾಯ ಭೂತೇಶನ ಪಾದಯುಗವ ಶ್ವೇತಾಬ್ಜದಿಂದರ್ಚಿಸಿ ದಾನವಬುಧಪ್ರಾತಕೆ ಕೊಟ್ಟನುತ್ಸವದಿ (ತೋಹಕ. ೦೦-೩೦).
[ಸಂ.]

**ಪ್ರಾತಃಸ್ಮರಣೀಯ** (ಗು). ೧. ಬೆಳಗಿನ ಹೊತ್ತು ಪ್ರಪ್ರಥಮವಾಗಿ

ಸ್ಮರಿಸಲು ಯೋಗ್ಯವಾದ : ವಿಜ್ಞಾನಾಸಕ್ತಿಯಿರುವವರೆಲ್ಲರಿಗೂ ಪ್ರಾತಃಸ್ಮರಣೀಯನಾದ ಮೈಕೇಲ್ ಫ್ಯಾರಡೆ (ವಿಜ್ಞಾ. XIV ಜುಲೈ). (ನಾ). ೨. ಲೋಕಕಲ್ಯಾಣವನ್ನು ಸಾಧಿಸಿರುವ, ದೇವತೆಗಳ ಸಾಲಿನಲ್ಲಿ ನೆನೆಯಲು ಯೋಗ್ಯನಾದ ವ್ಯಕ್ತಿ : ಇಂತಹ ಪ್ರಾತಃಸ್ಮರಣೀಯರಾದ ನಿರೀಹಪುರುಷರು ನಮ್ಮ ದೇಶದಲ್ಲಿರುವುದೇ ನಮ್ಮ ಭಾಗ್ಯೋದಯವು (ಚಿತ್ರ. ೦೨೬). [ಸಂ.]

**ಪ್ರಾತರಾಶ** (ನಾ). ಬೆಳಗಿನ ಊಟ ; ಪ್ರಾತಃಕಾಲದ ಭೋಜನ : ಭಿಲ್ಲನು ಇವರನ್ನು ನೋಡಿ ಪ್ರಾತರಾಶ(ಬೆಳಗಿನ ಭೋಜನ)ವು ಎಷ್ಟು ಹೊತ್ತಿಗೆ ಸಿದ್ಧವಾಗುವುದೆಂದು ಕೇಳಿದನು (ಚಿತ್ರ. ೩೪). [ಸಂ.]

**ಪ್ರಾತರ್ವಿಧಿ** (ನಾ). ಪ್ರಾತಃಕಾಲದಲ್ಲಿ ಮಾಡಬೇಕಾದ ದೇಹಶೌಚ, ಸಂಧ್ಯಾವಂದನಾದಿ ಕಾರ್ಯಗಳು ; ಬೆಳಗಿನ ಕರ್ತವ್ಯ : ಮರುದಿನ ಬೆಳಗ್ಗೆ ಕೃಷ್ಣನು ತನ್ನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸಿದ್ಧನಾಗಲು . . . ತಿಳಿಸಿದರು (ಪತಿತ. ೨೩೦); ದಾಣಸಿಗರೂ . . . ಹತ್ತಿರದ ಹಳ್ಳಕೆ ಹೋಗಿ ಪ್ರಾತರ್ವಿಧಿಗಳನ್ನೆಲ್ಲ ಮುಗಿಸಿಕೊಂಡು ಬಂದದ್ದಾಯಿತು (ಕಂಬನಿ. ೨೯). [ಸಂ.]

**ಪ್ರಾತಿಕೂಲ್ಯ** (ನಾ). ವಿರೋಧ ; ಪ್ರತಿಕೂಲ : ನಾನು ಇನ್ನು ಮುಂದೆ ತಮಗೆ ಅನುಕೂಲ್ಯವನ್ನೇ ಮಾಡುತ್ತೇನೆ. ಪ್ರಾತಿಕೂಲ್ಯವನ್ನು ಮಾಡುವುದಿಲ್ಲ (ಹಿಂದಿಪಾ. ೨೬೩). [ಸಂ.]

**ಪ್ರಾತಿನಿಧಿಕ** (ಗು). ೧. ಪ್ರತಿನಿಧಿಸುವ : ಇದು ನವೀನಪ್ರಜ್ಞೆಯಲ್ಲಿ ಬರೆದ ಶ್ರೇಷ್ಠಕೃತಿಗಳ ಪ್ರಾತಿನಿಧಿಕಸಂಗ್ರಹವೇನಲ್ಲ (ಹೊಸ. ೨೯೬) ; ಕರುಣರಸಾಸ್ವಾದನೆಯೂ ಶೃಂಗಾರಾದಿ ರಸಗಳ ಆಸ್ವಾದನೆಯಂತೆಯೇ ಸುಖಾತ್ಮಕವಾಗಿರುತ್ತದೆ ಎಂಬುದು ಭಾರತೀಯ ಕಾವ್ಯಮೀಮಾಂಸೆಯ ಪ್ರಾತಿನಿಧಿಕ ಅಭಿಪ್ರಾಯ (ಕ್ರೌಂಚ. ೫೦). (ನಾ). ೨. ಪ್ರತಿನಿಧಿಸುವಂತಹುದು : ಅದೃಷ್ಟವಶಾತ್ ಗ್ರೀಕ್ ದುರಂತನಾಟಕದಲ್ಲಿ ಹೆಚ್ಚು ವಿಪುಲವಾದ ಮತ್ತು ಪ್ರಾತಿನಿಧಿಕವಾದ ಕೃತಿಸಮೂಹ ಉಳಿದು ಬಂದಿದೆ (ಸಾಹಿತ್ಯ. ೨೨೬). [ಸಂ.]

**ಪ್ರಾತಿನಿಧ್ಯ** (ನಾ). ಒಬ್ಬರ ಪ್ರತಿಯಾಗಿ ಅಧಿಕಾರವನ್ನು ವಹಿಸಿಕೊಂಡಿರುವುದು ; ಪ್ರತಿನಿಧಿತ್ವ : ಪ್ರೊ. ರೈಟ್ . . . ಪ್ರಾತಿನಿಧ್ಯ ದೊರಕಿಸಿಕೊಡುವದಾಗಿ ಸಮ್ಮೇಳನದ ಅಧಿಕಾರಿಗಳಿಗೆ ಪತ್ರ ಬರೆದು (ಕರ್ನಾಟ. ೯೮). [ಸಂ.]

**ಪ್ರಾತಿಪದಿಕ** (ನಾ). [ವ್ಯಾಕ] ವಿಭಕ್ತಿಯ ಪ್ರಕಾರ ಸಿದ್ಧವಾದ ನಾಮಪದದ ಮೂಲರೂಪ : ಪ್ರಾತಿಪದಿಕಂಬೊಲಾತನಧಾತುಕನವಿಭಕ್ತಿ ಭೂಷಿತಂ ನಿಯತಾರ್ಥೋಪೇತಂ ನಿಶ್ಚಿತನಾಮಖ್ಯಾತಂ ತಾಂ ಪ್ರತ್ಯಯಾರ್ಹನಾದಂ ದಿವಿಜಂ (ಶಬ್ದಾ. ೩-೨೪) ; ಸುಪ್ಪ್ರತ್ಯಯಕ್ಕೂ ಸ್ತ್ರೀಪ್ರತ್ಯಯಕ್ಕೂ ಪ್ರಕೃತಿಯಾದದ್ದು ಲಿಂಗವು ; ಈ ಲಿಂಗಕ್ಕೆ ಸಂಸ್ಕೃತ ವ್ಯಾಕರಣದಲ್ಲಿ ಪ್ರಾತಿಪದಿಕವೆಂದು ಹೆಸರು (ಹೊಸಗ. ೪). [ಸಂ.]

**ಪ್ರಾತಿಭ** (ಗು). ೧. ಪ್ರತಿಭೆಯಿಂದ ಕೂಡಿದ : 'ಪದಪದದಕ್ಕರಕ್ಕರದ ವಾಕ್ಯದ ವಾಕ್ಯದ' ಪರಿಪರಿಗಳನ್ನು ಉಜ್ಜಿ, ಬಿಚ್ಚಿ, ಬಿಡಿಸಿ ನೋಡುವ ಸೂಕ್ಷ್ಮದರ್ಶಕವಾದ ಸಹೃದಯತೆಯ ಪ್ರಾತಿಭನೇತ್ರ ಬೇಕು (ಸಾಹಿ.೬೩). (ನಾ). ೨. ಹೊಸಹೊಸದಾಗಿ ವಿಷಯಗಳು ಹೊಳೆಯುವ ಬುದ್ಧಿ ; ಪ್ರತಿಭೆ. ೩. [ತರ್ಕಶಾ] ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ ಮತ್ತು ಪ್ರಾತಿಭಗಳೆಂಬ ಹನ್ನೆರಡು ಬಗೆಯ ಪ್ರಮಾಣಗಳಲ್ಲಿ ಒಂದು : ಪ್ರಮಾಣವು ಪ್ರತ್ಯಕ್ಷ . . . ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ (ಹಿಂದಿಪಾ. ೦೩೩). [ಸಂ.]

**ಪ್ರಾತಿಭಾವ್ಯ** (ನಾ). ಹೊಣೆಗಾರಿಕೆ ಜಾಮೀನು : ಈಡು. [ಸಂ.]

**ಪ್ರಾತಿಭಾಸಿಕ** (ಗು). ೧. ತೋರಿಕೆಗೆ ಮಾತ್ರ ಕಾಣುವ ; ವಾಸ್ತವವಲ್ಲದ : ಕವಿಯು ಪ್ರಾತಿಭಾಸಿಕ ಅನುಭವದಿಂದ ನಾವು ಜೀವನದ ಸ್ವಾರಸ್ಯವನ್ನು ಕಂಡುಕೊಳ್ಳುತ್ತೇವೆ (ಸಾಹಿತ್ಯ. ೩೯). (ನಾ). ೨. ಭ್ರಮೆಯ ತತ್ಕಾಲದಲ್ಲಿ ಮಾತ್ರ ಸತ್ಯವೆನಿಸುವ ತೋರಿಕೆ ; ಈ ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯಿದೆಯೆಂಬ ಜ್ಞಾನವು ಪ್ರಾತಿಭಾಸಿಕವೆನಿಸುವುದು : ಪಾರಮಾರ್ಥಿಕ ವ್ಯಾವಹಾರಿಕ ಪ್ರಾತಿಭಾಸಿಕ ತ್ರಯವೆಂದು ಪದಾರ್ಥಗಳು ನಾಲ್ಕಾಗಿ ತಿಳಿಯಲಕ್ಕುಂ ಅವುಗಳೊಳು ರಜ್ಜುಭುಜಂಗ ಶುಕ್ತಿಕಾರಜತ ಮರುಮರೀಚಿಕಾದಿಗಳೇ ಪ್ರಾತಿಭಾಸಿಕಗಳು (ವಿವೇಕ. ೨೦) ; ಅನಿರ್ವಾಚ್ಯವು ವ್ಯಾವಹಾರಿಕ, ಪ್ರಾತಿಭಾಸಿಕ ಎಂದು ಎರಡು ವಿಧ. ವ್ಯಾವಹಾರಿಕವು ಗವಾದಿಗಳು, ಪ್ರಾತಿಭಾಸಿಕವು ಭ್ರಾಂತಿಯಲ್ಲಿ ತೋರಿ ಬರುವ ರಜ್ಜುಸರ್ಪಾದಿಗಳು (ಹಿಂದಿಪಾ. ೦೯೪). [ಸಂ.]

**ಪ್ರಾತಿವೇಶ್ಯ** (ನಾ). ೧. ಪಕ್ಕದ ಮನೆಯ ವ್ಯಕ್ತಿ ; ನೆರೆ. ೨. ಒಂದೇ ಮನೆಯ ಬೇರೆ ಭಾಗದಲ್ಲಿ ವಾಸಮಾಡುವ ವ್ಯಕ್ತಿ : ಸ್ತ್ರೀಯಿದ್ದ ಮನೆಯು ಬಿಟ್ಟು ಕೆಲದ ಮನೆಯೊಳಿರ್ಪನಂ ಪಾರ್ಶ್ವಸ್ಥನೆಂಬುದು ಇದ್ದ ಮನೆಯೊಳಿರ್ಪುದು ಪ್ರಾತಿವೇಶ್ಯನೆಂಬುದು (ಕಾಮಶಾ. ೨೩೨). [ಸಂ.]

**ಪ್ರಾತಿಶಾಖ್ಯ** (ನಾ). ವೇದದ ಪ್ರತಿಯೊಂದು ಶಾಖೆಗೂ ಇರುವ ವ್ಯಾಕರಣ : ನ್ಯಾಯ ವೈಶೇಷಿಕ . . . ಪ್ರಾತಿಶಾಖ್ಯ ಕಲ್ಪ ಹೋರಾ ದೋಹಳ ಧರ್ಮ ವೇದಾಂತ ಸಿದ್ಧಾಂತಗಳಲ್ಲಿ ಪ್ರಮಾಣಪ್ರಮೇಯೋಪನ್ಯಾಸ ದೃಷ್ಟಾಂತ ಸಮನ್ವಯಾದಿ ಸದ್ಯುಕ್ತಿ ನಿರೂಪಕರಾದ ವಾದಿಗಳಿಂ (ವಿವೇಕ. ೨೨೬). [ಸಂ. ಪ್ರಾತಿಶಾಖ್ಯ]

**ಪ್ರಾತಿಹಾರಕ** (ನಾ). ಯಕ್ಷಿಣಿ ಮಾಡುವವನು ; ಮಾಟಗಾರ ; ಗಾರುಡಿಗ : "ಮಾಯಾಕಾರಃ, ಪ್ರಾತಿಹಾರಕಃ – ೨ ಮಾಯೆ ಮಾಡುವವನ ಹೆಸರುಗಳು" (ಸಿದ್ಧಾಂತಿ. ೩೦೦). [ಸಂ.]

**ಪ್ರಾತಿಹಾರ್ಯ** (ನಾ). ೧. ಗಾರುಡಿ ; ಯಕ್ಷಿಣಿ. ೨. [ಜೈನ] ಕೇವಲಜ್ಞಾನವನ್ನು ಪಡೆದ ತೀರ್ಥಂಕರನಿಗೆ ಒದಗುವ ಅಶೋಕವೃಕ್ಷ, ದಿವ್ಯಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದೇವದುಂದುಭಿ ಮತ್ತು ಆತಪತ್ರಗಳೆಂಬ ಎಂಟು ವಿಧದ ಸಂಪತ್ತು : ಪುರುಪರಮೇಶ್ವರನಂದನ ದೊರೆಕೊಳಿಸುಗೆ ನಿನಗೆ ತಡೆಯದಾ ಪುರುಪರಮೇಶ್ವರನ ನಿರತಿಶಯಗುಣಪರಿಕರಮುಂ ತತ್‌ಪ್ರಾತಿಹಾರ್ಯಮುಂ ಮಂಗಳಮುಂ (ಆದಿಪು. ೦೨-೩೩) ; ಯತಿಪಂ . . . ಚೈತ್ಯಕ್ಷಿತಿಜಾತಪ್ರಾಂತದೇಶಸ್ಥಿತ ಕನಕಮಯಪ್ರಾತಿಹಾರ್ಯಾಷ್ಟಕಾರ್ಹತ್ಪ್ರತಿಬಿಂಬಭ್ರಾಂತಿಯಂ ಮಾಡಿದಂ (ಚಂದ್ರಪ್ರ. ೨-೬೨). [ಸಂ.]

**ಪ್ರಾತ್ಯಕ್ಷಿಕ** (ಗು). ೧. ತನ್ನ ಕಣ್ಣುಗಳಿಂದಲೇ ನೋಡಿದ ; ಪ್ರತ್ಯಕ್ಷವಾಗಿ ನೋಡಿದ. (ನಾ). ೨. ಕಣ್ಣಾರೆ ನೋಡಿದುದು : ಪ್ರತಿತಾಳೆಯು ಕೇವಲ ಮಾನಸಿಕವಾಗಿರದೆ ಪ್ರಾತ್ಯಕ್ಷಿಕವಾಗಿರಬೇಕು (ಶ್ರೀರ. ೩೩). [ಸಂ.]

**ಪ್ರಾತ್ಯಯಿಕ** (ಗು). ೧. ಬೇರೆಯಾದ ; ಪ್ರತ್ಯೇಕವಾದ : ಪ್ರಾತ್ಯಯಿಕ ಸೀಮೆ ಸೀಮೆಗೆ ಶಿಲಾಶಾಸನವ ಬರಸಿ (ಎಪಿಗ್ರ. XX. ೨೩೯-೦೫ ; 1547). (ನಾ). ೨. ಸಾಲಗಾರನಿಗೆ ಜಾಮೀನಾಗಿ ನಿಲ್ಲುವವನು : ಜಾಮೀನ್‌ದಾರ. [ಸಂ.]

**ಪ್ರಾತ್ಯಯಿಕಿ** (ನಾ). [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು ; ಭೋಗ್ಯವಸ್ತುಗಳನ್ನು ಸಂಗ್ರಹಿಸುವುದು : ಪಂಚವಿಂಶತಿಕ್ರಿಯೆಗಳು –೧. ಸಮ್ಯಕ್ತ್ವಕ್ರಿಯೆ . . . ೧೩. ಪ್ರಾತ್ಯಯಿಕಿ (ಭೋಗ್ಯವಸ್ತು ಸಂಗ್ರಹ), ೧೪. ಸಮಂತಾನುಪಾತ (ಪ್ರಾಣಿಗಳು ವಾಸಿಸುವಲ್ಲಿ ಮಲ

ಮೂತ್ರತ್ಯಾಗ) (ಕೈಶಕ. ೬೪). 'ಪಂಚವಿಂಶತಿಕ್ರಿಯೆ' ಪರಾ. [ಸಂ. ಪ್ರಾತ್ಯಯಿಕೀ]

**ಪ್ರಾಥಮಿಕ** (ಗು). ೧. ಮೊದಲನೆಯ ; ಪ್ರಾರಂಭದ : ಪ್ರಾಥಮಿಕ ಪಾಠ್ಯನೆಯ ತರಗತಿಯೊಳು ಕಿರಿಯವನೋದುತಲಿಹನು (ಇಂಶಾಪ. ೩೬–೬೬). (ನಾ). ೨. ಮೊದಲನೆಯದು ; ಪ್ರಾರಂಭದ ಹಂತಕ್ಕೆ ಸೇರಿದುದು : ಈ ಅಕ್ಷರಸಂಜ್ಞೆಗಳ ಸರಿಯಾದ ಪರಿಜ್ಞಾನವೇ ಭಾಷಾಭ್ಯಾಸಕ್ಕೆ ಪ್ರಾಥಮಿಕವೆನಿಸುವ ಸಾಧನವೆಂದು ವೈಯಾಕರಣರು ಹೇಳುತ್ತಾರೆ (ಸಂಕೋಶ. ೦). ೩. ಮೊದಲನೆಯವನು : ತದಾಗಮದರ್ಥೋಕ್ತಿ ಪದಾರ್ಥಮೆಂದು ನಿಶ್ಚಯಿಪ ಪರಮದರುಶನಾನುತನಂ ಪ್ರಾಥಮಿಕಂ (ಸುಕುಸು. ೬–೨೬). [ಸಂ.]

**ಪ್ರಾಥಮಿಕವಿದ್ಯಾಭ್ಯಾಸ** (ನಾ). ಆರಂಭದ ವಿದ್ಯಾಭ್ಯಾಸ : ಲಚ್ಚನು ಈ ನಡುವೆ ತನ್ನ ಪ್ರಾಥಮಿಕವಿದ್ಯಾಭ್ಯಾಸವನ್ನು ಮುಂದುವರಿಸಿದನು (ಸುಕಸು. ೧೯೯). [ಸಂ.]

**ಪ್ರಾಥಮಿಕಶಾಲೆ** (ನಾ). ಪ್ರಾರಂಭದ ಶಿಕ್ಷಣವನ್ನು ನೀಡುವ ಶಾಲೆ ; ಪ್ರೈಮರಿಸ್ಕೂಲು: ಬೆಂಗಳೂರಿನ ಹತ್ತಾರು ಪ್ರಾಥಮಿಕಶಾಲೆಗಳ ಬಳಿಗೂ ರಾಯರು ಹೋಗಿ ನಿಂತಿದ್ದರು (ಕಂಕಸು. ೧೩೦). [ಸಂ. ಪ್ರಾಥಮಿಕಶಾಲಾ]

**ಪ್ರಾಥಮಿಕಶಿಕ್ಷಣ** (ನಾ). = ಪ್ರಾಥಮಿಕವಿದ್ಯಾಭ್ಯಾಸ : ಎಲ್ಲರೂ ಪ್ರಾಥಮಿಕಶಿಕ್ಷಣವನ್ನು ಪಡೆಯುವಂತಾದರೆ ಅವರು ಮುಂದೆ ತಮ್ಮ ಅಭಿರುಚಿ ಆಸಕ್ತಿಗಳನ್ನು ಬೆಳೆಸಿಕೊಂಡು ಸಮಾಜಕ್ಕೆ ತಮ್ಮ ವಿಶಿಷ್ಟಕಾಣಿಕೆಯನ್ನು ಸಲ್ಲಿಸಲು ಅವಕಾಶವಾಗುತ್ತದೆ (ಶಿಕ್ಷರ. ೦೬೬). [ಸಂ.]

**ಪ್ರಾದಕ್ಷಿಣ** (ನಾ). ಬಲಗಡೆಯಿಂದ ಸುತ್ತು ಹಾಕುವುದು; ಪ್ರದಕ್ಷಿಣೆ : ಕೂಡೆ ಪ್ರಾದಕ್ಷಿಣವ ಬಂದಡಿಮಾಡಿ ಕಾಯವ ನೀಡಿ ಕರಣಗಳ ಬೇಡಿಕೊಂಡನು ಗುರುವ ಭವಗಳು ಬೇಡವೆನಗೆನುತ (ಗಗಶಾ. ೨–೨೦). [<ಸಂ. ಪ್ರಾದಕ್ಷಿಣ್ಯ]

**ಪ್ರಾದುರ್ಭವಿಸು** (ಕ್ರಿ). ಕಾಣಿಸಿಕೊಳ್ಳು ; ಹುಟ್ಟು ; ಆವಿರ್ಭವಿಸು : ವೇದವು ವ್ಯರ್ಥ, ವೇದವು ಅನರ್ಥ ಎನ್ನುವ ನಾಸ್ತಿಕವಾದ ಆಸ್ತಿಕರಲ್ಲಿಯೇ ಪ್ರಾದುರ್ಭವಿಸಿದಾಗ ವೇದಾರ್ಥನಿರ್ಣಯಕ್ರಮವನ್ನು ಮೀಮಾಂಸಾಕಾರರು ಕೈಗೊಂಡರು (ಭಾರದ. ೦೨೬). [ಪ್ರಾದುರ್ಭಾವ + —ಇಸು]

**ಪ್ರಾದುರ್ಭಾವ** (ನಾ). ಕಣ್ಣಿಗೆ ಕಾಣಿಸಿಕೊಳ್ಳುವುದು ; ಗೋಚರಿಸುವುದು; ಆವಿರ್ಭಾವ: ಕಾರ್ಯಸಿದ್ಧಿ ಪ್ರಾದುರ್ಭಾವಕ್ಕೆ ವಿಘ್ನಂ ಪಲವುಳವೆಂ ಯಲ್ಲ[ರ್]ಮೇ ಬಾರದು (ಹಂಕಚಾ. ೬–೪೦); ಅಂತು ಗರ್ಭನಿರ್ಭರ ಪ್ರಾದುರ್ಭಾವವಾಗಿ ನವಮಾಸಂ ಶೀವೆ (ಜಗಂ. ೨–೧೮ ವ). [ಸಂ.]

**ಪ್ರಾದೇಶ** (ನಾ). ೧. ನೀಡಿದ ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವಿನ ಅಳತೆ: "ಪ್ರಾದೇಶಮೆಂಬುದು ಒಟ್ಟೋಟು" (ಶಬಾಸು. ೬೯–೩೬೯); ಚಂದ್ರಾಪೀಡಂ ಅಂತರದನೇಜಿ ದಿವ್ಯವಾಜಿಯ ಮಹಾಜವಮಂ ಕಂಡು ಭುವನತ್ರಯಮಂ ಪ್ರಾದೇಶಮಾತ್ರಮಾಗಿ ಬಗೆದು (ಕಾದಂಪೂ. ೯೬೩). ೨. ಪ್ರದೇಶ; ಸ್ಥಳ. [ಸಂ.]

**ಪ್ರಾದೇಶನ** (ನಾ). ಕಾಣಿಕೆ ; ಕೊಡುಗೆ : "ತ್ಯಾಗಃ . . . ಪ್ರತಿಪಾದನಂ, ಪ್ರಾದೇಶನಂ, ಅಂಹತಿಃ — ೧೩ ಕೊಡುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೨೨೨). [ಸಂ.]

**ಪ್ರಾದೇಶಿಕ** (ಗು). ೧. ಒಂದು ಪ್ರದೇಶಕ್ಕೆ ಸೇರಿದ,–ಸಂಬಂಧಿಸಿದ: 'ಪ್ರಾದೇಶಿಕಭಾಷೆ' ಪರಾ. (ನಾ). ೨. ಒಂದು ಪ್ರದೇಶಕ್ಕೆ ಸೇರಿದುದು, –ಸಂಬಂಧಿಸಿದುದು: ಪ್ರಾದೇಶಿಕವಾಗಿ ಇತರ ಮೌಲ್ಯಗಳನ್ನು ಅವಲಂಬಿಸಿರುವ ಕೌಶಲ್ಯವಾಗಿಯೇ ಉಳಿದುಕೊಂಡಿದೆ(ಶಿಕ್ಷರ. ೩೩೦). ೩. ಒಂದು ಪ್ರದೇಶಕ್ಕೆ ಸೇರಿದವನು : ದ್ಯಾವಾಪೃಥಿವೀಮೂರ್ತಿಗದಾವಂ ಪ್ರಾದೇಶಿಕಂ ಪೊಣರ್ಕೆಗೆ ನೆಱೆವಂ (ಜಗಂ. ೦೭–೩). [ಸಂ.]

**ಪ್ರಾದೇಶಿಕಭಾಷೆ** (ನಾ). ಒಂದು ಪ್ರದೇಶಕ್ಕೆ ಸೀಮಿತವಾದ ನುಡಿ; ಸ್ಥಳೀಯಭಾಷೆ : ಇಲ್ಲಿ ನಮಗೆ ಪ್ರಾದೇಶಿಕಭಾಷೆಯ ತೊಂದರೆ ಬೇರೆ (ಜೀಕುಂಕ. ೩೨೯). [ಸಂ. ಪ್ರಾದೇಶಿಕಭಾಷಾ]

**ಪ್ರಾದೇಶಿಕಸೈನ್ಯ** (ನಾ). ಬೇರೆ ಬೇರೆ ಪ್ರಾಂತ್ಯಗಳಲ್ಲಿ ಶಾಂತಿರಕ್ಷಣೆಗಾಗಿ ವ್ಯವಸ್ಥೆ ಮಾಡಿರುವ (ಕೇಂದ್ರದ) ಸೈನ್ಯ: "ದೇಶರಕ್ಷಣೆಗೆ ಪ್ರಾಂತವಾರಾಗಿ ವ್ಯವಸ್ಥೆ ಮಾಡಿದ ಸೈನ್ಯ: ಪ್ರಾದೇಶಿಕಸೈನ್ಯ" (Territorial army. ಇಂಕಿಶ). [ಸಂ.]

**ಪ್ರಾದೋಷಿಕ** (ಗು). ೧. ಸಾಯಂಸಂಧ್ಯೆಗೆ ಸಂಬಂಧಿಸಿದ. (ನಾ). ೨. [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು; ಕೋಪಾವೇಶದಲ್ಲಿ ಇತರರನ್ನು ತಿರಸ್ಕರ ಅಥವಾ ನಿಂದೆಗೆ ಗುರಿಮಾಡುವುದು : ಪಂಚವಿಂಶತಿಕ್ರಿಯೆಗಳು :–೧ ಸಮ್ಯಕ್ತ್ವಕ್ರಿಯೆ . . . ೬. ಪ್ರಾದೋಷಿಕ (ಕ್ರೋಧಾವೇಶದಲ್ಲಾಗುವ ಪ್ರಮಾದ) (ಕೈಶಕ. ೬೪). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ಪ್ರಾಧಾನ್ಯ** (ನಾ). ಪ್ರಧಾನತೆ ; ಪ್ರಾಮುಖ್ಯ : ಟೀಕಕರು . . . ಕರ್ಮಯೋಗಕ್ಕೇನೇ ಹೆಚ್ಚು ಪ್ರಾಧಾನ್ಯವಿತ್ತಿರಬಹುದು (ಕರ್ಮಜಾ. ೧೫೯); ಯುರೋಪುಖಂಡದಲ್ಲಿ ಅವನ ಪ್ರಾಧಾನ್ಯವು ತಗ್ಗುತ್ತಿರುವಂತೆ ಕಂಡರೂ... ಅವನ ಮಹತ್ತ್ವವು ನವಜೀವನವನ್ನು ಪಡೆಯಲಾರಂಭಿಸಿದೆ (ಅಂಕ. ೨). [ಸಂ.]

**ಪ್ರಾಧಾನ್ಯತೆ** (ನಾ). = ಪ್ರಾಧಾನ್ಯ : ನಿನಗೆ ವಯಸ್ಸು ಎಷ್ಟೇ ಆಗಿರಲಿ, ಅದರ ಪ್ರಾಧಾನ್ಯತೆಯಿಲ್ಲ (ಜೀಕುಂಕ. ೩೬೬). ☞ ಇದು ವ್ಯಾಕರಣಬದ್ಧರೂಪವಲ್ಲ. [ಪ್ರಾಧಾನ್ಯ + —ತೆ]

**ಪ್ರಾಧಿಕಾರ** (ನಾ). ೧. ವಿಶೇಷವಾದ ಅಧಿಕಾರ; ಹೆಚ್ಚಿನ ಅಧಿಕಾರ: ಪರಂತು ಪಾಕಿಸ್ಥಾನದ ಈಗಿನ ರಾಜ್ಯಕ್ಷೇತ್ರಕ್ಕೆ ಪ್ರವಚನಮಾಡಿದ್ದು ಮತ್ತೆ ಭಾರತದಲ್ಲಿ ನೆಲಸುವುದಕ್ಕಾಗಿ ಅಥವಾ ಖಾಯಮಾಗಿ ಭಾರತಕ್ಕೇ ಹಿಂತಿರುಗುವುದಕ್ಕಾಗಿ ಯಾವುದಾದರೂ ವಿಧಿಯಿಂದ ಅಥವಾ ಯಾವುದಾದರೂ ವಿಧಿಯ ಪ್ರಾಧಿಕಾರದ ಮೇರೆಗೆ ಕೊಡಲಾದ ಅನುಜ್ಞೆ (ಭಾಸಂಶ. ೫). ೨. ವಿಶೇಷವಾದ ಅಧಿಕಾರವನ್ನು ಕೊಟ್ಟು ಸ್ಥಾಪಿಸಿರುವ ಸರಕಾರದ ಒಂದು ಸಂಸ್ಥೆ ಅಥವಾ ವ್ಯವಸ್ಥೆ : ಕರ್ನಾಟಕ ಸರಕಾರವು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಿದೆ (ಊ). [ಸಂ.]

**ಪ್ರಾಧಿಕಾರಿ** (ನಾ). ಹೆಚ್ಚಿನ ಅಧಿಕಾರವುಳ್ಳವನು ; ವಿಶೇಷ ಅಧಿಕಾರಿ : ಉಚ್ಚತಮ ನ್ಯಾಯಾಲಯದ ನ್ಯಾಯಾಧೀಶ ಪದಧಾರಣೆ ಮಾಡಿದ್ದವರು ಯಾರೊಬ್ಬರೇ ಆಗಲಿ . . . ಯಾವುದೇ ಪ್ರಾಧಿಕಾರಿಯ ಸಮಕ್ಷಮ ವಕೀಲತ್ತನ್ನಾಗಲಿ ಕಾರ್ಯವನ್ನಾಗಲಿ ನಡೆಯಿಸತಕ್ಕದಲ್ಲ (ಭಾರಾಶ. ೬೬). [ಸಂ. ಪ್ರಾಧಿಕಾರಿನ್]

**ಪ್ರಾಧ್ಯಾಪಕ** (ನಾ). ಪ್ರಧಾನ ಅಧ್ಯಾಪಕ; ಮುಖ್ಯೋಪಾಧ್ಯಾಯ : ವಿದ್ಯಾಲಯಗಳಲ್ಲೂ ಸಹ ಪ್ರಾಧ್ಯಾಪಕರು . . . ಪ್ರಮಾಣ ಮಾಡಬೇಕಾಯಿತು (ಮುಕ್ತಾಕ. ೦೬ ೬೦೬೪); ಮುಂದೆ ವಿಶ್ವವಿದ್ಯಾನಿಲಯದಲ್ಲಿ ಆತ ಹಿರಿಯ ಪ್ರಾಧ್ಯಾಪಕನಾಗಿ ತಮಗೆ ಗೌರವ ತರಬೇಕೆಂಬ ಬಯಕೆ ಅವರಿಗಿತ್ತು (ಕಂಗತ. ೦೨೦). [ಸಂ.]

**ಪ್ರಾಧ್ವ** (ಗು). ೧. ದೂರದ; ದೂರದಲ್ಲಿರುವ. ೨. ಬಗ್ಗಿದ ; ಬಾಗಿರುವ. ೩. ಕಟ್ಟಿದ; ನಿರ್ಮಿಸಿದ. ೪. ಅನುಕೂಲಕರವಾದ ; ಸಹಾಯಕವಾದ. ೫. ಪ್ರಯಾಣ ಮಾಡುತ್ತಿರುವ. (ನಾ). ೬. ಸಾಗಿಸುವ ಸಾಧನ ; ವಾಹನ. ೭. ಪ್ರಾರಂಭ ; ಉಪಕ್ರಮ. ೮. ದೂರದ ಪ್ರಯಾಣ. ೯. ಕಟ್ಟುವಿಕೆ ; ಬಂಧನ. ೧೦. ಗೇಲಿ ; ತಮಾಷೆ ; ಹಾಸ್ಯ. [ಸಂ.]

**ಪ್ರಾಪಂಚಿಕ** (ಗು). ೧. ಪ್ರಪಂಚಕ್ಕೆ ಸಂಬಂಧಿಸಿದ. ೨. ಲೋಕ

ವ್ಯವಹಾರದ; ಲೌಕಿಕವಾದ; ಐಹಿಕ : ಅವಳ ಜೀವನ ಪ್ರಾಪಂಚಿಕ ಭೋಗವಿಲಾಸಗಳಿಗೆ ಮಾರುಹೋಯಿತು (ಭೃಶು. ೩೬೦). (ನಾ). ೩. ಲೋಕವ್ಯವಹಾರ : ಲೌಕಿಕತೆ : ಪ್ರಾಪಂಚಿಕವನರಿಯದೆ ಪರಮ ಧರ್ಮಂ ಚಮತ್ಕೃತಿಯಿಂದೆ ಕಿನ್ನರವೀಣೆಯಂ ಪಿಡಿದು. . . ಕೇಳಿಸಲು (ಚಕು. ೨೮–೩). ೪. ಲೋಕವ್ಯವಹಾರವನ್ನು ಬಲ್ಲ ವ್ಯಕ್ತಿ; ಲೌಕಿಕ ವ್ಯಕ್ತಿ : ಗುರುಗೋವಿಂದಭಟ್ಟರು ಪ್ರಾಪಂಚಿಕರು (ಕೋಶ. ೩೯ ಶಿವರಾಮ ಕಾರಂತ); ನಾನೊಳ್ಳೆಯ ಪ್ರಾಪಂಚಿಕಳು. ನನ್ನ ಸಂಗ್ರಾಹಕಬುದ್ಧಿಯೂ ಆಶ್ಚರ್ಯಕರವಾದದ್ದು (ಸ್ಮೃತಿ. ೩೦೯). [ಸಂ.]

**ಪ್ರಾಪಕ** (ಗು). ೧. ಪಡೆಯುವ; ಹೊಂದುವ. (ನಾ). ೨. ಪಡೆದುದು; ಹೊಂದಿದುದು : ನಿರತಿಶಯನಿಜಾನಂದಸುಧಾರಸಸ್ಯಂದಿ ಚಿನ್ಮಯನಿಜಾತ್ಮಸ್ವರೂಪಪ್ರಾಪಕವಾಂ (ಜಾತಕ. ೫೦–೩೦೨ ವ). ೩. ಪಡೆದವನು; ಹೊಂದಿದವನು : ಪಾಪಪುಣ್ಯಗಳು ಬರಲಾಪವೇ ನಿನ್ನುಳಿದು ಪ್ರಾಪಕನು ನೀನು ಇರಲಾಗಿ (ಕಥಾ. ೨೦೨). [ಸಂ.]

**ಪ್ರಾಪಣ** (ನಾ). ೧. ಹೊರೆದುವುದು; ಪಡೆಯುವುದು. ೨. ತೆಗೆದು ಕೊಳ್ಳುವುದು; ಸ್ವೀಕರಿಸುವುದು : ನಿಮ್ನುಟಕ್ಷೇತ್ರದೊಳ್ ಪುಟ್ಟುವ ಜೀವಕ್ಕೆ ನಿಮ್ನುಟಕ್ಷೇತ್ರಾನುಪೂರ್ವ್ಯನುಶ್ರೇಣ್ಯಗತ್ಯಭಾವಂ ನಿಮ್ನುಟಕ್ಷೇತ್ರ ಪ್ರಾಪಣನಿಮಿತ್ತಂ ಶ್ರವಿಗ್ರಹಗತಿಯಕ್ಕುಂ (ಚತ್ರ್ಯ. ೦೦೦); ಮತ್ತ ಮುಕ್ತಾದಿತ ಘ್ರಾಣೇಂದ್ರಿಯಪ್ರಾಪಣಂಗಳಪ್ಪ ಗಂಧಾಪಣಂಗಳೊಳ್ (ಕಂಪ್ರ. ೦–೦೨೯) ೩. ಸ್ಪಷ್ಟಪಡಿಸುವುದು; ಸ್ಪಷ್ಟೀಕರಣ; ವಿವರಣೆ. [ಸಂ.]

**ಪ್ರಾಪಣಿಕ** (ನಾ). ವ್ಯಾಪಾರ ಮಾಡುವವನು; ವ್ಯಾಪಾರಿ; ವರ್ತಕ : "ಪಣ್ಯಾಜೀವಃ, ವಣಿಕ್, ಪ್ರಾಪಣಿಕಃ, ನೈಗಮಃ, ನೈದೇಹಃ – ಈ ೫ ಹರದಂ" (ಹಲಾಯು. ೯೩–೪೦೬). [ಸಂ.]

**ಪ್ರಾಪನ್ನ** (ನಾ). ಮರೆಹೊಕ್ಕವನು; ಶರಣಾಗತ : ಎನ್ನ ಪಾಲಿಸಿ ದಂದದಿ ಸಕಲ ಪ್ರಾಪನ್ನರ ಸಲಹೊ (ಜಾಗ. ೦೬). [<ಸಂ. ಪ್ರಪನ್ನ]

**ಪ್ರಾಪ್ತ** (ಗು). ೧. ಪಡೆದ; ದೊರೆತ; ಲಬ್ಧವಾದ : ಶ್ರೀಪೇಣ ಭೂಪತಿ . . . ಪ್ರಾಪ್ತಸಪ್ತಪರಮಸ್ಥಾನನಾದಂ (ಚಂದ್ರಪ್ರ. ೪–೨೪ ವ). ೨. ಯೋಗ್ಯವಾದ; ತಕ್ಕ : 'ಪ್ರಾಪ್ತವಯಸ್ಕ' ಪರಾ. (ನಾ). ೩. ದೊರೆತುದು; ಲಾಭ; ಲಬ್ಧ : ಒಂದು ಮುಗಿಯುವುದ ರೊಳಗೆ ಇನ್ನೊಂದು ಪ್ರಾಪ್ತ (ಜಾಂಕಾ. ೨೪೪). ೪. ಯೋಗ್ಯವಾದುದು; ತಕ್ಕುದು : "ಯುಕ್ತಂ, ಉಚಿತಂ, ನ್ಯಾಯಂ, ಪ್ರಾಪ್ತಂ, ಔಪಯಿಕಂ – ಈ ೬ ಉಚಿತಂ" (ಹಲಾಯು. ೦೨೩–೬೦). ೫. ತಿಳಿದವನು; ಪಂಡಿತ : "ಸೂರಿ, ಮೇಧಾವಿ. . . ಪ್ರಾಪ್ತಂ, ವಿಶಾರದಂ. . . ವಿದ್ವಾಂಸನೆನಿಸಿಕ್ಕು" (ಜುಂಜಾ. ೬೬–೨). [ಸಂ.]

**ಪ್ರಾಪ್ತವಯಸ್ಕ** (ನಾ). ಯೋಗ್ಯವಾದ ವಯಸ್ಸನ್ನು ಮುಟ್ಟಿದವನು; ಪ್ರೌಢ : ಅವನು ಪ್ರಾಪ್ತವಯಸ್ಕನಾದನು (ಭೃಶು. ೬೦); ಈ ಕಾಯಿಲೆ ಹೆಚ್ಚಾಗಿ ಮಕ್ಕಳಿಗೆ ಮತ್ತು ಪ್ರಾಪ್ತವಯಸ್ಕರಿಗೆ ಬರುತ್ತದೆ (ಶಿಂಶೋ. ೬೮). [ಸಂ.]

**ಪ್ರಾಪ್ತಿ** (ನಾ). ೧. ಪಡೆಯುವಿಕೆ; ಹೊಂದುವಿಕೆ. ೨. ಸೇರುವಿಕೆ; ತಲುಪುವಿಕೆ. ೩. ದೊರಕಿದುದು; ಲಭ್ಯವಾದುದು; ಲಾಭ : ಪ್ರಾಪ್ತಿಯನಸಕಟಿಯಲುವಾಪ್ರಾಪ್ತಿಯನಾಗಿಸಲುವಾಗದದಜಿ ದೋಷಾ ಪ್ರಾಪ್ತಿಯನೇಂ ನಿಮ್ಮನ್ನರ್ ಸುಪ್ತರವ್ಯೋಲ್ಮೋಹಮೂರ್ಛೆಯುಂ ತಾಳ್ದು ವರೇ (ಕಂದಾಶು. ೬–೦೨೦). ೪. ಸುದೈವ; ಅದೃಷ್ಟ : ಪ್ರಾಪ್ತಿ ಇಲ್ಲದ್ದಕ್ಕೆ ಬಾಯಿ ಬಿಟ್ಟರೆ ಬರುತ್ತದೆಯೆ? (ತ್ರೀಕಥ. ೦೩೪). ೫. ಸಾಧ್ಯವಾದುದು; ಶಕ್ಯವಾದುದು : ಕಂತುಹರನ ಸಮಾನವನಿಪ ಮಹಂತರುಗಳಂತರವನರಿಸಲು ಪ್ರಾಪ್ತಿಯೇ ನಿನಗೆ (ಚಕು. ೦೨–೮೧). ೬. [ಯೋಗ] ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು; ಯಾವುದನ್ನು ಬೇಕಾದರೂ ಪಡೆಯುವ ಶಕ್ತಿ : ಮಹರ್ಧಿಕದೇವರಾಗಿ ಅಣಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಗಲ್ಭ್ಯ ವಿಶಿತ್ವ ಮಾತ್ವ ಕಾಮರೂಪಿತ್ವವೆಂದೀ ಅಷ್ಟಗುಣೈಶ್ವರ್ಯಂಗಳೊಳ್ ಕೂಡಿ (ಕಣ್ಣಾಶಾ. ೪೮–೩). [ಸಂ.]

**ಪ್ರಾಪ್ತಿಸು** (ಕ್ರಿ). ಉಂಟಾಗು; ಒದಗು; ಲಭಿಸು : ಇಕ್ಕುವ ಸೂಲ ಪ್ರಾಪ್ತಿಸಲಿ . . . ಮತ್ತೆಯೂ ಲಿಂಗಾರಾಧನೆಯ ಮಾಡುವೆ (ಬಸವ. ೬೦೬); ಮಾತಂಗಸಂಗತಮಿತ್ರದೋಷವು ಪ್ರಾಪ್ತಿಸುವುದು (ಬಸವ. ೬೦–೦೦); ಮಳೆ ಹೆಚ್ಚಿ, ನೀರ ಒರತೆ ಪ್ರಾಪ್ತಿಸಿ, ಬೆಟ್ಟದ ಮಗ್ಗುಲುಗಳು ಎಷ್ಟೋ ಕಡೆಗಳಲ್ಲಿ ಜರಿದು, ಹೀಗೆ ಕುಸಿದು ಮುಕ್ಕುಗೊಂಡಿದ್ದವು (ಕಾಡಕಟೂ. ೩೦೩). [ಪ್ರಾಪ್ತಿ + – ಇಸು]

**ಪ್ರಾಪ್ತ್ಯಾಶೆ** (ನಾ). [ಕಾವ್ಯಮೀ] ನಾಟಕದ ಕಥಾಸಂವಿಧಾನದಲ್ಲಿ ಇರುವ ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ ಮತ್ತು ಫಲಾಗಮಗಳೆಂಬ ಐದು ಹಂತಗಳಲ್ಲಿ ಮೂರನೆಯದು; ಫಲವನ್ನು ಪಡೆಯುವ ಆಸೆಯನ್ನು ಸೂಚಿಸುವ ಅಂಕ : ಪ್ರಾಪ್ತ್ಯಾಶೆ ಸಾಧನೋ ಪಾಯಗಳೂ ಅವುಗಳಿಗೆ ಅಡಚಣೆಗಳೂ ಇರುವುದರಿಂದ ಫಲಪ್ರಾಪ್ತಿ ಆದರೂ ಆಗಬಹುದೆಂಬ ಸಂಭವ (ಕೃಶಾ. ೨೦೮). [ಸಂ. ಪ್ರಾಪ್ತ್ಯಾಶಾ]

**ಪ್ರಾಪ್ಯ** (ಗು). ೧. ಪಡೆಯಬಹುದಾದ; ಹೊಂದಲು ಯೋಗ್ಯ ವಾದ. (ನಾ). ೨. ಪಡೆಯಬಹುದಾದುದು : ಪ್ರಾಪ್ಯವೆಂದು ವಿಯ್ದಲ್ ಪಡುವುದು (ಕಮುದ. ೦೨೬ ವೃತ್ತಿ). (ನಾ). ೩. ದೊರೆಯು ವವನು; ಲಭಿಸುವವನು : ಹಾಲು ಮೊಸರಂದದ ವಿಕಾರ್ಯನು ಕೇಳು ಸ್ವರ್ಗದ ಪೋಲು ಪ್ರಾಪ್ಯನು (ಅಷ್ಟ್ಯಕ. ೬–೨೦). [ಸಂ.]

**ಪ್ರಾಬಲ್ಯ** (ನಾ). ೧. ಹೆಚ್ಚಳ; ಆಧಿಕ್ಯ : ಈ ರೋಗದ ಪ್ರಾಬಲ್ಯ ವನ್ನು ತಡೆಯದೇಕಾದರೆ . . . ಮರಗಳ ಬೆಳವಣಿಗೆಗೆ ನೆರ ವಾಗುವ ಸನ್ನಿವೇಶಗಳನ್ನು ಹತೋಟಿಯಲ್ಲಿಡಬೇಕು (ಪ್ರಾಶಿಕಾ. ೦೬೨). ೨. ಸಾಮರ್ಥ್ಯ; ಪ್ರಭಾವ : ವಿಶೇಷವಾಗಿ ಕಲಿಯ ಪ್ರಾಬಲ್ಯದಿಂದ ಈಗ ಇಂತಹ ಕಾರ್ಯಕ್ಕಾರೂ ಸಹಕಾರಿಗಳಾಗುವುದಿಲ್ಲ (ಕಥಾಶಿಂ. ೦೦೬). ೩. ಏಳಿಗೆ; ಅಭ್ಯುದಯಂ : ಉತ್ತರಖಂಡದಲ್ಲಿ ಅಲ್ಲಲ್ಲಿ ತುರುಷ್ಕರ ಪ್ರಾಬಲ್ಯವಿದ್ದಿತೆಂಬುದು ನಿಜ (ತ್ರೀರಾಹು. ೦೩೪). [ಸಂ.]

**ಪ್ರಾಬೋಧಿಕ** (ನಾ). ೧. ಬೆಳಗಿನ ಕಾಲ; ಮುಂಜಾವು; ಪ್ರಾತಃ ಕಾಲ. ೨. ರಾಜನನ್ನು ಉದಯಕಾಲದಲ್ಲಿ ಎಬ್ಬಿಸಲು ಹೊಗಳಿ ಹಾಡುವ ಸ್ತುತಿಪಾಠಕ. [ಸಂ.]

**ಪ್ರಾಭಂಜನ** (ನಾ). ಗಾಳಿ; ವಾಯು : ಕಂಜವೃಜಿನಘನನಿರ್ಧೂತ ಪ್ರಾಭಂಜನ ಕಂಜಾಂಬಕ ಪೂಜಿತಪದಕಂಜಮುನಿನುತ ಧನಂಜಯನಯನ ಧನಂಜಯವರದ ಜಯ (ಹಾಡ್ಕದೀ. ೬೪–೨೨). [<ಪ್ರಭಂಜನ]

**ಪ್ರಾಭವ** (ನಾ). ಅತಿಶಯತೆ; ಹೆಚ್ಚುಗಾರಿಕೆ; ಮೇಲ್ಮೆ : ಇಂತಿದು ವಿಸ್ತಾರಿತ ಕಾಮಹೋಮಹುತ ಭುಕ್ಪ್ರಜ್ವಾಲೆಯೋ ಎಂಬ ಸಂಪದಮಂ ಬೀಱುದುದಿಂದ್ರದಿಗ್ಭಿವರದೊಳ್ ಚಂದ್ರದ್ಯುತಿಪ್ರಾಭವಂ (೧೦೪. ೪–೪೪); ಎವಗೆ ರಚಿಸಿತು ರಾಜ್ಯವಿಭ್ರಂಶವನು ತತ್ಸುಕೃತೋದಯ ಪ್ರಾಭವವೆ ತಿರುಗಿಸಿತೆಂದು ನಯದಲಿ ಧರ್ಮಸುತ ನುಡಿದ (ಕುವ್ಯಾಗ. ೧೦–೪೪). [ಸಂ.]

**ಪ್ರಾಭಾಕರ** (ಗು). ೧. ಪೂರ್ವಮೀಮಾಂಸಾಪ್ರಚಾರಕನಾದ ಪ್ರಭಾ ಕರನಿಗೆ ಸಂಬಂಧಿಸಿದ : ಧರ್ಮವೆಂಬುದು ಸುಖಕ್ಕೆ ಸಾಧನೆಯೆಂಬುದು ಭಾಟ್ಟಮತವಾದರೆ ಧರ್ಮವೇ ಈ ಪುರುಷಾರ್ಥವೆಂಬುದು ಪ್ರಾಭಾಕರ ಮತ (ಕಾಕದ. ೦೨೪). (ನಾ). ೨. ಪ್ರಭಾಕರನಂ ಬೋಧಿಸಿದ ಮತ. ೩. ಪೂರ್ವಮೀಮಾಂಸಾ ಪ್ರಚಾರಕನಾದ ಪ್ರಭಾಕರನ ಮತದ ಅನುಯಾಯಿ : ಚಾರ್ವಾಕ ಬೌದ್ಧ ಸಾಂಖ್ಯರಖರ್ವ ಪ್ರಾಭಾಕರರ್ . . .

ಉರ್ವೀಶನ ಸಭೆಯೊಳಿರ್ದರತಿಮುದದಿಂ (ಚೀರಕೃ. ೬-೧೨) : ಪ್ರಾತಿಜ್ಞಾನ ದಲ್ಲಿಯೂ ಆತ್ಮನು ಪ್ರತ್ಯಕ್ಷನಾಗಿರುವನು ಎಂದು ಪ್ರಾಭಾಕರರು ತಿಳಿಯುವರು (ಭಾತತ್ತ್ವ. ೪೦೩). [ಸಂ.]

**ಪ್ರಾಭಾತ** (ನಾ). ಬೆಳಗಿನ ಕಾಲ ; ಪ್ರಾತಃಕಾಲ : ಕುಂಕುಮದ ತೀರ್ಥದೊಳ್ ಮಿಂದೇಳ್ವ ಫಾಲ್ಗುಣ ಪ್ರಾಭಾತರವಿಯಂತೆ ಮೆರೆದುದು ವದನಮಂಡಲಂ (ಕ್ರೀಣಾಪೂ. ೦೩-೩೩೯). [ಸಂ.]

**ಪ್ರಾಭಾತಿಕ** (ಗು). ಬೆಳಗಿನ : ಪ್ರಾತಃಕಾಲದ : ಸಕಲ ಪ್ರಾಭಾತಿಕ ಕ್ರಿಯೆಯಂ ನಿರ್ವರ್ತಿಸಿ (ಅಂತ್ಯ. ೦೩-೨೦ ಕ) ; ಅಂತು ಚಿಂತಿಸುತಿರ್ದಿರುಳಂ ಕಳಿದು ಬೆಳಗಪ್ಪುದುಂ ಕೃತಪ್ರಾಭಾತಿಕ ನಿಯಮನಾಗೆ ಮಹಾಶ್ವೇತೆಯು ಮಘಮರ್ಷಣನಿಯಮಜಪಂಗಳಂ ಮಾಡುತಿರ್ದಳ್ (ಕಾದಂಪೂ. ೯೯೬). [ಸಂ.]

**ಪ್ರಾಭೃತ** (ನಾ). ೧. ರಾಜ, ದೇವತೆ ಮೊದಲಾದ ಹಿರಿಯರ ಸಂದರ್ಶನಕ್ಕೆ ಹೋದಾಗ ಕೊಡುವ ಕಾಣಿಕೆ, — ನಜರು : "ಪ್ರಾಭೃತಂ . . . ಉಪದಾ—೬ ರಾಜದರ್ಶನಾರ್ಥವಾಗಿ ತರತಕ್ಕ ಕಾಣಿಕೆ, ನಜರ್ ಮುಂತಾದಕ್ಕೆ ಪೆಸರು" (ಸಿದ್ಧಾಂತ. ೨೯೩); ನಿಜೋಚಿತ ಸ್ಥಾನ ದೊಳ್ಕೆಯ್ದಾಸನದೊಳ್ ಕುಳ್ಳಿರ್ಪುದುಮನಂತರಮರಸನಾ ಪ್ರಾಭೃತಂ ಕೋಶಾಧ್ಯಕ್ಷರಿಂ ಕೈಕೊಳಲ್ವೇಳ್ದು (ಪರ್ಶಪೂ. ೩-೩೬ ವ) ; ಪ್ರಾಭೃತತ್ರಯ ಗಳನುರ್ವಿ ಸೋಂಕದೆ ತರಲು (ಜಾಗಕು. ೦-೯). ೨. ಕಾರ್ಯವನ್ನು ಸಾಧಿಸುವ ಉದ್ದೇಶದಿಂದ ನ್ಯಾಯವಿರುದ್ಧವಾಗಿ ಕೊಡುವ ಹಣ ; ಲಂಚ ; ರುಷುವತ್ತು. [ಸಂ.]

**ಪ್ರಾಮಾಣಿಕ** (ಗು). ೧. ಅಳತೆಗೆ ಸಿಕ್ಕಿದ ; ಪ್ರಮಾಣದ. ೨. ಆಧಾರ ದಿಂದ ಸಾಬೀತು ಪಡಿಸಿದ ; ಪ್ರಮಾಣದಿಂದ ಸಿದ್ಧವಾದ. ೩. ವಿಶ್ವಾಸಾರ್ಹವಾದ ; ನಂಬಿಕೆಗೆ ಅರ್ಹವಾದ. (ನಾ). ೪. ವಿಶ್ವಾಸಾರ್ಹವಾದುದು : ಅವರ ಈ ವಿಧಾನಕ್ಕೆ ಪ್ರಾಮಾಣಿಕ ವಾದ ಯಾವ ಆಧಾರವೂ ಇಲ್ಲ (ಅಂಕಾ. ೬). ೫. ನಂಬಿಕೆಗೆ ಅರ್ಹನಾದವನು ; ನಂಬಿಕಸ್ಥ : ನೀನು ಪ್ರಾಮಾಣಿಕನಾಗಿದ್ದೆ (ಕಂಪಿಹು. ೦೩೪); ಇದನ್ನು ಪ್ರಾಮಾಣಿಕರಾದವರು ಒಪ್ಪದಿರಲು ಸಾಧ್ಯವಿಲ್ಲ (ರಾಶ್ಮಿಕಾ. ೦೦). [ಸಂ.]

**ಪ್ರಾಮಾಣಿಕತನ** (ನಾ). ನಂಬಿಕೆಗೆ ಅರ್ಹವಾಗಿರುವಿಕೆ : ಅವನ ಪ್ರಾಮಾಣಿಕತನವನ್ನು ಪರೀಕ್ಷಿಸಿ ನೋಡಬೇಕೆಂಬ ಲವಲವಿಕೆ ಅವನಲ್ಲಿ ಹುಟ್ಟಿತು (ಮುಂಬಯಿ. ೯-೩೦) ; ಸಂಪಾದಕರ ಪ್ರಾಮಾಣಿಕತನಕ್ಕೆ ಮೆಚ್ಚಿ, ಒಳನೋಡಿದೆ (ಹುಟ್ಟುಹು. ೩೩). [ಪ್ರಾಮಾಣಿಕ + — ತನ]

**ಪ್ರಾಮಾಣಿಕತೆ** (ನಾ). = ಪ್ರಾಮಾಣಿಕತನ : ಕೃತ್ರಿಮರಾಹಿತ್ಯ ಪ್ರಾಮಾಣಿಕತೆಗಳಿಗೆ ಹೆಸರಾಗಿದ್ದ ಅವನು ಮತತ್ಯಾಗದ ವಿಷಯವನ್ನು ಗೆಳೆಯರಿಗೆ ತಿಳಿಸಿದ್ದನು (ಕೃಪಕು. ೩೬೨) ; ಪ್ರಾಮಾಣಿಕತೆ ಎನ್ನುವ ಮಾತೇ ಇಲ್ಲ ನಿಮ್ಮ ಜಾತಕದಲ್ಲಿ (ಕಂಗಲ. ೬೬). [ಸಂ. ಪ್ರಾಮಾಣಿಕತಾ]

**ಪ್ರಾಮಾಣ್ಯ** (ನಾ). ೧. ಆಧಾರ ; ಪುರಾವೆ ; ಸಾಕ್ಷಿ : ಜನ ಗಳಿಸ ಬಯಸುವ ಅಪೂರ್ವಗುಣ ಬರಿಯ ಹೊಸತನವಲ್ಲ, ಪ್ರಾಮಾಣ್ಯ ಮಾತ್ರ (ಸಾಹಿಪ್ರ. ೦೨) : ಜ್ಞಾನಸ್ವರೂಪದಲ್ಲಿರುವ ಪ್ರಾಮಾಣ್ಯ, ಸಂಶಯ, ಸಂಭಾವನಾ ಮೊದಲಾದ ಅಂಶಗಳು ಸಾಕ್ಷಿಸ್ವರೂಪೇಂದ್ರಿಯಕ್ಕೆ ಗೋಚರ ಗಳಾಗುವುವು (ಹಿಂದಶಾ. ೨೯೬). ೨. ಆಧಾರಭೂತವಾದುದು; ಸಮರ್ಥನೆ ಮಾಡುವ ಪ್ರಮಾಣ : ಬಹು ಹಿಂದಿನಿಂದ ಭಗವದ್ಗೀತೆಗೆ ಸಾಕಷ್ಟು ಪ್ರಾಧಾನ್ಯವೂ ಪ್ರಾಮಾಣ್ಯವೂ ಇತ್ತು (ಕಾಕಿದ. ೦೦೯). ೩. ಅಳತೆ ; ಪ್ರಮಾಣ : (೩). [ಸಂ.]

**ಪ್ರಾಮಿಸರಿನೋಟು, ಪರಮೇಶ್ವರಿನೋಟು, ಪರಮೇಸೂರನೋಟು, ಪ್ರಾಂಸರಿನೋಟು** (ನಾ). ಒಂದು ಗೊತ್ತಾದ ಮೊಬಲಗನ್ನು ಒಬ್ಬ ಗೊತ್ತಾದ ವ್ಯಕ್ತಿಗೆ ಅಥವಾ ಆ ಪತ್ರ ತಂದವನಿಗೆ ಒಂದು ಗೊತ್ತಾದ ದಿನ ಅಥವಾ ಯಾವಾಗ ಕೇಳಿದರೆ ಆವಾಗ ಪಾವತಿಮಾಡುವುದಕ್ಕಾಗಿ ವಾಗ್ದಾನ ಮಾಡಿ ರುಜು ಹಾಕಿಕೊಟ್ಟ (ಸಾಲ) ಪತ್ರ ; ವಾಗ್ದಾನ ಪತ್ರ ; ಪ್ರೋನೋಟು : ಬೇಕಾದರೆ ಪ್ರಾಮಿಸರಿನೋಟು ಬರೆದು ಕೊಡುತ್ತೇನೆ (ಮೋಹಿಹ. ೩೯); ಸಾಹುಕಾರರು ತಾಳುವ ಹಾಗಿದ್ದರೆ ಒಂದು ಪ್ರಾಮಿಸರಿ ನೋಟನ್ನು (ವಾಗ್ದಾನದ ಸಾಲಪತ್ರ) ಬರೆದುಕೊಟ್ಟು ಮುಂದಕ್ಕೆ ತೀರಿಸುವೆವೆನ್ನಬಹುದು (ಹಣಶ್ರ. ೬೭). **ಪರಮೇಶ್ವರಿನೋಟು** : ನೀನು ಸರಳ ಮನುಷ್ಯನೆಂಬುದು ಊರೊಳಗೆ ಯಾರಿಗೇನು ಗೊತ್ತಿಲ್ಲವೆ ? . . . ನೆನಪಿಗೆಂದು ಪರಮೇಶ್ವರಿನೋಟು ಬರೆದುಕೊಡು (ಎಠಿಕ. ೬೯). **ಪರಮೇಸೂರನೋಟು** : ಪರಮೇಸೂರನೋಟು ಬರಕೊಟ್ಟು ತಗೊಂಡು ಹೋಗು (ಬಿಣಿಬಿ. ೩೮). **ಪ್ರಾಂಸರಿನೋಟು** : ಸಾಲ ಪಡೆಯಲು ಪ್ರಾಂಸರಿನೋಟು ಬರೆದುಕೊಟ್ಟಿದ್ದಾರೆ (ಒೞ).

[←ಇಂ. Promissorynote./ ತುಳು. ಪ್ರಮೋಸ್ರಿನೋಟು]

**ಪ್ರಾಮುಖ್ಯ** (ನಾ). ಮುಖ್ಯವಾಗಿರುವಿಕೆ; ಪ್ರಧಾನತೆ ; ಮಹತ್ವ : ಧರೆಯಲ್ಲಿ ಸೊಗಸಾದ ವಾಳಿಗೆ ಮನೆಗಳಿರಲಿ . . . ಕೊರತೆಯೇಂ ತನ್ನದೇ ಪ್ರಾಮುಖ್ಯವೆಂದು ? (ಶಂಕ್ಷೆ. ೦೯-೦). [ಸಂ.]

**ಪ್ರಾಮುಖ್ಯತೆ** (ನಾ). ಪ್ರಮುಖವಾಗಿರುವುದು : ಈ ದೃಷ್ಟಿಯನ್ನವಳು ತ್ಯಜಿಸಿದ್ದರೆ ಅವಳ ಜೀವನದ ಪ್ರಾಮುಖ್ಯತೆಯ ಕುಂಠಿತವಾಗುತ್ತಿತ್ತು (ಕೃಪಕು. ೦೯೬) ; ಜ್ಞಾನದ ಪ್ರಾಮುಖ್ಯತೆ ವಿಷಯವಾಗಿ ಹೋರಾಡಿದ ಶ್ರೀ ಶಂಕರಾಚಾರ್ಯರು ಪ್ರಚಂಡಬೌದ್ಧಿಕಕರ್ಮವಾದಿಗಳಾಗಿದ್ದರು (ಧರ್ಮಗಾ. ೦೫೦). [ಪ್ರಾಮುಖ್ಯ + — ತೆ]

**ಪ್ರಾಯ** (ನಾ). ೧. ಜೀವ ಹೋಗುವಿಕೆ ; ಮರಣ. ೨. ಪ್ರಾಣ ತ್ಯಾಗಕ್ಕಾಗಿ ಮಾಡುವ ಉಪವಾಸ. — ಆಹಾರತ್ಯಾಗ : "ಪ್ರಾಯಃ, ಭೋಜನತ್ಯಾಗಃ, ಸನ್ಯಾಸಃ, ಅನಶನಂ—ಈ ೪ ಕಡೆಗಾಲದ ಅನಶನಂ" (ಹಲಾಯು. ೦೨೩-೬೩). ೩. ತಾರುಣ್ಯ ; ಹರೆಯ; ಯೌವನ : "ಯೌವನಂ —ಪ್ರಾಯಂ" (ಕಾಶಕ್ಕ. ೦೬೩) ; ಪ್ರಾಯದ ಪೆಂಪೆ ಪೆಂಪೆವಾಗೆ (ಶಂಕ್ಷಾ. ೦೯-೦೬) ; ಪ್ರಾಯದ ಮಿಂಡರಿಂದೆ ಗಳಿರ್ದ ಧನಂಗಳನಾಗಳುಂ . . . ತೃಪ್ತಿಯನಾಗಿಸುತ್ತೆ (ಹಾಲಾಶ್ಕ. ೩-೯-೦೦). ೪. ವಯಸ್ಸು : ಕ್ರಮ ಕ್ರಮದಿಂ ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯವಾದೊಡೆ . . . ಮುಂಜಿಬಂಧನಕ್ರಿಯೆಯಂ ಮಾಡಿ (ಪಶ್ಮಾಕಾ. ೬೩-೨೦) ; ಪ್ರಾಯಂ ಕೂಸಾ ದೊಡಭಿಪ್ರಾಯಂ ಕೂಸಕ್ಕುಮೆ (ಕಪುಂದ. ೨೯೩ ಕ್ರಿಯೋ) ; ನರಸಿಂಹನಿಗೆ ಈಗ ಹದಿನೆಂಟು ವರ್ಷ ಪ್ರಾಯವಾಗಿತ್ತು (ಮಕಪು. ೦೬೩). ೫. ಸಮಾ ಸಾಂತ್ಯಗಳಲ್ಲಿ ಸಮಾನವಾದುದು ಎಂಬರ್ಥದಲ್ಲಿ ಸೇರುವ ಶಬ್ದ : ಅನಂತ . . . ಅವಘಡಪ್ರಾಯವಾದ ಅಪವಾದಗಳು ಬಂದರೂ ಅಕ್ಕರ ಅಕ್ಕಸ ತಾಳದೆ ಸಮುದ್ರನಾಥನಂತೆ ಎಲ್ಲವನ್ನೂ ಒಡಲಿನಲ್ಲಿ ನುಂಗಿಕೊಂಡು ಸಾಗಹತ್ತಿದ್ದ (ಜಲಾಶ. ೨೯).

**ಪ್ರಾಯಕ್ಕೆ ಬರು**=೧. ವಯಸ್ಸಿಗೆ ಬರು; ಪೌಢವಾಗು: ಅನೇಕ ಜೀವಿಗಳು ಪ್ರಾಯಕ್ಕೆ ಬರುವ ಮೊದಲೇ ನಾಶವಾಗುತ್ತವೆ (ಕೀಟಕ. ೦). ೨. ಮೈನೆರೆ ; ಪುಷ್ಪವತಿಯಾಗು; ದೊಡ್ಡವಳಾಗು : ನಾನು ಪ್ರಾಯಕ್ಕೆ ಬಂದ ಹೊಸದು ; ಆಗ ಒಂದು ದಿನ ಪರಾಶರಋಷಿಯು ಯಮುನಾನದಿಯನ್ನು ದಾಟಬೇಕಾಯಿತು (ಕಕಕು. ೬); ಅವಳು ಪ್ರಾಯಕ್ಕೆ ಬಂದ ಕೂಡಲೆ ದುರಾಚಾರಿಯಾದ್ದರಿಂದ ಅವಳನ್ನು ಯಾರೂ ವರಿಸಲಿಲ್ಲ (ಸ್ತ್ರೀಎಚ. ೨೦೬). **ಪ್ರಾಯ ತುಂಬು**=ಬಾಲ್ಯಾವಸ್ಥೆ ಕಳೆದು ಯೌವನ ಬರು; ತಾರುಣ್ಯವನ್ನು ಹೊಂದು : ನಾರಾಯಣಮಾಸ್ತರರ ಹಿರಿಮಗು, ಮೆಟ್ರಿಕ್‌ನಲ್ಲಿದ್ದವ, ಪ್ರಾಯ ತುಂಬಿದ ಮಗು, ಕೇಶವ ಹೋದನಂತೆ ವಿಷಮಜ್ವರದಿಂದ (ಮುಗಿಯು. ೩೮೭); ಪ್ರಾಯ ತುಂಬಿರಲು

ಪಾತ್ರೆ ತುಂಬಿರಲಿ, ಬರಿದು ಭ್ರಾಂತಿ ಏಕೆ? (ಹಳು. ೦೦೬-೪). ಪ್ರಾಯ ಬರು = ಪ್ರಾಯ ತಂಬು: ಪುರುವಿಗೆ ಪ್ರಾಯ ಬಂತು (ಕೀಕಿಹಿ. I, ೨೦೬); ಶಾಲೆಗೆ ಸೇರಿದ್ದು ತಡ, ಪಾಸಾದುದು ಮೆಲ್ಲಗೆ ಹೊರತು. ಈಗಾಗಲೇ ಪ್ರಾಯ ಬಂದಿದೆ (ಹುಂಗಿಯು. ೩೭). ಪ್ರಾಯ ಮೀರು = ವಯಸ್ಸಾಗು; ವಯಸ್ಸು ಕಳೆ: ಇಬ್ಬರೂ ಸುಮಾರು ಐವತ್ತು ವರ್ಷ ಪ್ರಾಯ ಮೀರಿದವರು (ಹುಕಹು. ೩೦೯). ಪ್ರಾಯ ಸಲ್ಲು = ವಯಸ್ಸಾಗು: ನಿನಗೆ ಪ್ರಾಯ ಸಂದಿತಲ್ಲ; ನಾಳೆ ಯಾರು ನಿನ್ನ ನಂತರ ಗುಂಕಾರನೆಂದು ಯೋಚಿಸಿದ್ದೀಯಾ? (ಕುಕಿಕಿ. ೬೬). ಪ್ರಾಯ ಹೋಗು = ಪ್ರಾಯ ಸಲ್ಲು: ಪ್ರಾಯ ಹೋದರೂ ಪ್ರಯಾಸ ಬಿಡದು (ಗಾದೆ). [ಸಂ.]

**ಪ್ರಾಯಃ** (ಅ). ಬಹುಮಟ್ಟಿಗೆ; ಬಹುಪಾಲು: ಅತ್ಯಾನಿರುವ ಕಡೆ ಗಳಲ್ಲೆಲ್ಲಾ ಈ ಚಿಹ್ನೆಗಳು ಪ್ರಾಯಃ ಕಂಡುಬರುತ್ತವೆಯೆಂದು ಅದರ ಅಭಿಪ್ರಾಯ (ಜಜಾಕ. ೩೪). [ಸಂ. ಪ್ರಾಯಸ್]

**ಪ್ರಾಯತ** (ನಾ). ಇಂದ್ರಿಯಂಗಳನ್ನು ಹತೋಟಿಯಲ್ಲಿಟ್ಟು ಕೊಂಡಿರುವ ವ್ಯಕ್ತಿ; ಸಂಯಮಿ: ಮಿಥಿಲೆಯಲಿ ಮುನ್ನೊಬ್ಬ ವೇಶಿಯ ಕಥೆಯ ಪೇಳುವೆ ಕೇಳು ಭೂಪತಿ ಮಥಿಸುವಳು ಪ್ರಾಯತರ ಮನಗಳನಧಿಕಚೆಲುವಿನಲಿ (ಜಜಗ. ೦೦-೦೩-೦); ಏಕಪತ್ನೀವ್ರತಂ ಪ್ರಾಯತಂ ಕೋವಾಲಂ (ಕ್ಯಬಿಕ. ೦೦-೯೦). [.< ಪ್ರಯತ]

**ಪ್ರಾಯತೆ** (ನಾ). ಇಂದ್ರಿಯವನ್ನು ಹತೋಟಿಯಲ್ಲಿ ಇಟ್ಟುಕೊಂಡಿರು ವವಳು; ಇಂದ್ರಿಯಲಾಲಸೆಯಿಲ್ಲದವಳು: ಆ ರಾಜ್ಯದೊಳ್ ಬಜಿಯ ನಾರಿಯರ್ ಪ್ರಾಯತೆಯರಾಗಿ ... ಸ್ತ್ರೀಯೋರ್ವಳರಸಾಗಿರಲ್ಮವಳ ಕೆಳಗಾಗಿ ಬದುಕುವರ್ (ಕ್ಯಬಿಕ. ೦೩-೧೨). [ಸಂ. ಪ್ರಾಯತ + -ಎ]

**ಪ್ರಾಯಶಃ** (ಅ). ೧. ಬಹುಮಟ್ಟಿಗೆ; ಬಹುಪಾಲು; ಬಹುಶಃ: ನೊಳಂಬ ರಾಜ್ಯವನ್ನು ಪೂರ್ಣವಾಗಿ ಗಂಗಮಾರಸಿಂಹನು ಆಕ್ರಮಿಸಿಕೊಂಡಿದ್ದರಿಂದ ... ಪ್ರಾಯಶಃ ಅವರೆಲ್ಲರೂ ತಮ್ಮ ರಾಜ್ಯವನ್ನು ಬಿಟ್ಟು ತಲೆಮರೆಸಿ ಕೊಂಡು ಹೋದಂತೆ ತೋರುತ್ತದೆ (ಹೊಳಂಬ. ೪೬); ಪ್ರಾಯಶಃ ನಾನು ಕಾಕಸಸ್‌ನಿಂದ ಹಿಂದಿರುಗುವುದಿಲ್ಲ (ಹರಿಣ. ೬). ೨. ಸಾಮಾನ್ಯವಾಗಿ: ಪ್ರಾಯಶಃ ಎಲ್ಲಾ ಪ್ರಾಚೀನ ನಾಟಕಕಾರರ ವಿಷಯದಲ್ಲಿಯೂ ಇದನ್ನೇ ಹೇಳಬಹುದು (ಅಂಕಾ. ೬೬). [ಸಂ. ಪ್ರಾಯಶಸ್]

**ಪ್ರಾಯಶ್ಚಿತ್ತ** (ನಾ). ೧. ಮಾಡಿದ ತಪ್ಪಿಗಾಗಿ ವ್ಯಥೆ ಪಟ್ಟು ಪರಿಹಾರ ಮಾಡಿಕೊಳ್ಳುವ ಕರ್ಮ- ವಿಧಿ: ಈ ನಾಯಿನೀಡಾಡಿ ಪ್ರಾಯಶ್ಚಿತ್ತಮಂ ಕೈಕೊಳ್ಳಿರಿ (ಶಂಕಹ. ೦೬೭-೦೯); ಕುಲಮದಕ್ಕೆ ಹೋರಿ ಜಂಗಮಭೇದವ ಮಾಡುವ ಫಲವೇನು ನಿತ್ಯಲಿಂಗಾರ್ಚನೆ ಪ್ರಾಯಶ್ಚಿತ್ತ (ಚಕಕ. ೨೪೯); ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳುವುದಿಲ್ಲ (ಹುಜಾಕ. ೫೨); ಪಾಪಕ್ಕೆ ತಕ್ಕ ಪಾಪೋಸು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ (ಗಾದೆ). ೨. [ಜೈನ] ಅಭ್ಯಂತರತಪಗಳಲ್ಲಿ ಒಂದು; ಪ್ರಮಾದದೋಷಗಳ ಪರಿಹಾರಕ್ಕಾಗಿ ಆಲೋಚನೆ ಮೊದಲಾದ ಚಿತ್ತಶೋಧಕಕ್ರಿಯೆಗಳಲ್ಲಿ ಮನಸ್ಸು ಪ್ರವೃತ್ತವಾಗುವುದು: ಅಭ್ಯಂತರತಪಷಟ್ಕದೊಳಂ ಪ್ರಾಯ ಶ್ಚಿತ್ತವಿನಯವೈಯಾವೃತ್ಯಸ್ವಾಧ್ಯಾಯಧ್ಯಾನವ್ಯುತ್ಸರ್ಗಂಗಳಂ ಕೈಕೊಂಡು (ಅಪಾ. ೩-೩೩ ವ). [ಸಂ.]

**ಪ್ರಾಯಶ್ಚಿತ್ತಕರ್ಮ** (ನಾ). ನಿತ್ಯ, ನೈಮಿತ್ತಿಕ, ಪ್ರಾಯಶ್ಚಿತ್ತ, ಕಾಮ್ಯ ಮತ್ತು ನಿರ್ಮಲಗಳೆಂಬ ಐದು ಬಗೆಯ ಕರ್ಮಗಳಲ್ಲಿ ಒಂದು; ತಾನು ಮಾಡಿದ ತಪ್ಪಿನ ಪರಿಹಾರಕ್ರಿಯೆಯಾಗಿ ಮಾಡುವ ಕರ್ಮ: ಕರ್ಮವಾದೊಡೆ ನಿತ್ಯ ನೈಮಿತ್ತಿಕ ಪ್ರಾಯಶ್ಚಿತ್ತ ಕಾಮ್ಯ ನಿರ್ಮಲ ವೆಂದು ಪಂಚವಿಧಂ (ಶಿವೇಕ. ೦೩೯); ಜ್ಞಾತಾಜ್ಞಾತ ಪಾಪಕ ಪರಿಹಾರದ್ದೆಶ ಯಿಂದ ಮಾಡುವುದೇ ಪ್ರಾಯಶ್ಚಿತ್ತಕರ್ಮವು (ಶಿಗಮು. ೦-೪-೦). [ಸಂ. ಪ್ರಾಯಶ್ಚಿತ್ತಕರ್ಮನ್]

**ಪ್ರಾಯಸ್ಥ** (ನಾ). ವಯಸ್ಸಿಗೆ ಬಂದವನು; ತರುಣ: ಒಬ್ಬ ಪ್ರಾಯಸ್ಥನ ಸಮತೂಕದ ಆಹಾರವೆಂದರೆ ... ಜೀವಾತುಗಳು ಸಾಕಷ್ಟು ಪ್ರಮಾಣದಲ್ಲಿ ಇರುವುದು ಅಗತ್ಯ (ಆಹುಶಾ. ೬೦); ಪ್ರಾಯಸ್ಥನಾದರೂ ಪ್ರಾಚೀನ ಬಿಡಲಿಲ್ಲ (ಗಾದೆ). [ಸಂ.]

**ಪ್ರಾಯಸ್ಥೆ** (ನಾ). ವಯಸ್ಸಿಗೆ ಬಂದವಳು; ತರುಣಿ: (೬). [ಪ್ರಾಯಸ್ಥ + -ಎ]

**ಪ್ರಾಯಿಕ** (ನಾ). ಸಾಮಾನ್ಯವಾದುದು: ನಾಮಪದಗಳೇ ಮುಂತಾದುವಲ್ಲಿ ... ವ್ಯಂಜಕತ್ವವಿರುವುದನ್ನು ಮಹಾಕವಿಗಳ ಪ್ರಬಂಧಗಳಲ್ಲಿ ಪ್ರಾಯಿಕ ವಾಗಿ ನೋಡಬಹುದು (ಧ್ವನ್ಯಾಲೋ. ೦೩೬); ಹಿಂದಿನ ಸಾಹಿತಿಗಳು ಬಾಯಿ ಮಾತಿನಲ್ಲಾಗಲಿ, ಬರವಣಿಗೆಯಲ್ಲಾಗಲಿ ಪ್ರಾಯಿಕವಾಗಿ ನನಗೆ ಪ್ರೋತ್ಸಾಹ ಕೊಡಲಿಲ್ಲ (ಶಿಂಆ. II. ೪). [ಸಂ.]

**ಪ್ರಾಯೋಗಿಕ** (ಗು). ೧. ಪರೀಕ್ಷೆಯ ಮೂಲಕ ಮಾಡಿ ತೋರಿಸುವ; ಪ್ರಯೋಗದ ಮೂಲಕ ಸಿದ್ಧಪಡಿಸುವ: ಫ್ಯಾರಡೆ ಅತ್ಯುತ್ತಮ ವರ್ಗದ ಪ್ರಾಯೋಗಿಕ ವಿಜ್ಞಾನಿ (ಶಿಆಸ. XV. ಹುಣಾಕರ್ಣಣ). (ನಾ). ೨. ಪ್ರಯೋಗದಿಂದ ಕೂಡಿರುವುದು: ವಿಷಯಗಳನ್ನು ಪ್ರಾಯೋಗಿಕ ವಾಗಿ ಉಪಯೋಗಿಸಿಕೊಳ್ಳುವ ರೀತಿ ... ಅಲ್ಲಿರಬೇಕು (ಶಿಕ್ಷಕ. ೨೭೩). ೩. ಪ್ರಯೋಗವನ್ನು ಮಾಡಿ ತೋರಿಸುವವನು: ಶಾಸ್ತ್ರವಿಜ್ಞಾನಿಗೆ ಇಷ್ಟವಿರಲಿ, ಇಲ್ಲದಿರಲಿ, ಅವನ ತಮಾರ್ಜಿತವಾದ ಜ್ಞಾನವನ್ನು ಪ್ರಾಯೋಗಿಕನು ಬಳಸಿಕೊಳ್ಳದೆ ವಿಧಿಯಿಲ್ಲ (ಶಿಂ. ೬೨). ೪. [ಜೈನ] ಅಭಾಷಾತ್ಮಕವಾದ ಶಬ್ದಭೇದ, ಪ್ರಯೋಗಜನ್ಯವಾದ ವೀಣಾದಿಗಳ ತತಶಬ್ದ, ಡೋಲು ಮೊದಲಾದುವುಗಳ ವಿತತಶಬ್ದ, ತಾಳ ಮೊದಲಾದುವುಗಳ ಘನಶಬ್ದ ಮತ್ತು ಕೊಳಲು ಮೊದಲಾದುವುಗಳ ಸುಷಿರಶಬ್ದ: ಶಬ್ದವು ಪ್ರಾಯೋಗಿಕ, ವೈಸ್ರಸಿಕ (ಸ್ವಾಭಾವಿಕ) ಎಂದು ಎರಡು ವಿಧವಾಗಿದೆ (ಕ್ಷಿಕ. ೩೬). [ಸಂ.]

**ಪ್ರಾಯೋಗಿಕವಿಮರ್ಶೆ** (ನಾ). ವಿಮರ್ಶೆಯಲ್ಲಿ ಕಾವ್ಯಾರ್ಥವಿಶ್ಲೇಷಣೆ ಯನ್ನು ಅನುಸರಿಸಿ ರಚಿಸಿರುವ ಪ್ರಯೋಗಾತ್ಮಕ ಬರಹ; ಇದು ಇಂಗ್ಲಿಷಿನ 'practical criticism' ಎಂಬುದರ ಅನುವಾದ: ನಮ್ಮ ಕಾವ್ಯಮೀಮಾಂಸೆಯ ಕೂಲಂಕಷವಾದ ಪರಿಜ್ಞಾನವನ್ನು ಪಡೆದು ಅದರ ಬೆಳಕಿನಲ್ಲಿ ಪ್ರಾಯೋಗಿಕವಿಮರ್ಶೆಯನ್ನು ಬೆಳೆಸಬೇಕು (ಅಂಕಮ. IX. ಮುನ್ನುಡಿ). [ಸಂ. ಪ್ರಾಯೋಗಿಕ ವಿಮರ್ಶ]

**ಪ್ರಾಯೋಗ್ಯತಾಲಬ್ಧಿ** (ನಾ). [ಜೈನ] ಕಾಲಲಬ್ಧಿ, ಕರಣಲಬ್ಧಿ, ಉಪಶಮಲಬ್ಧಿ, ಕ್ಷಯೋಪಶಮಲಬ್ಧಿ ಮತ್ತು ಪ್ರಾಯೋಗ್ಯತಾ ಲಬ್ಧಿಗಳೆಂಬ ಐದು ಬಗೆಯ ಲಬ್ಧಿಗಳಲ್ಲಿ ಒಂದು; ಕರ್ಮವು ಕ್ರಮ ಕ್ರಮವಾಗಿ ಕಡಮೆಯಾಗುವ ಪ್ರಾಪ್ತಿ: ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ (ಸುಕುಚ. ೩-೩೪ ವ); ಭವ್ಯಾಭವ್ಯಸಾಮಾನ್ಯಂ ಪ್ರಾಯೋಗ್ಯತಾಲಬ್ಧಿಯಕ್ಕುಂ (ತತ್ತ್ವಸೂ. ೬೦). [ಸಂ.]

**ಪ್ರಾಯೋಜಿತ** (ಗು). ಯಾವುದಾದರೂ ಒಂದು ಕೆಲಸದ ಖರ್ಚಿನ ಜವಾಬ್ದಾರಿಯನ್ನು ಹೊತ್ತಿರುವ.

ಪ್ರಾಯೋಜಿತ ಕಾರ್ಯಕ್ರಮ = (ಜಾಹಿರಾತಿನ ಪ್ರಚಾರಕ್ಕಾಗಿ) ಹಣ ಕೊಟ್ಟು ಪ್ರಚುರಪಡಿಸುವ ಕಾರ್ಯಕ್ರಮ: ಟಿ.ವಿ.ಯಲ್ಲಿ ಈಗೀಗ ಪ್ರಾಯೋಜಿತ ಕಾರ್ಯಕ್ರಮಗಳು ಚೆನ್ನಾಗಿರುತ್ತವೆ (ಆಡು). [ಸಂ.]

**ಪ್ರಾಯೋಪಗಮನ** (ನಾ). [ಜೈನ] ಉಪವಾಸದಿಂದ ಮರಣ ಹೊಂದುವ ವ್ರತ; ಏಕಾಂಗಿಯಾಗಿ, ನಿರಾಹಾರಿಯಾಗಿ ನಿಶ್ಚಲ ನಾಗಿ ನಿಂತು ತಪಸ್ಸು ಮಾಡುವುದು: ದ್ವಾದಶವಿಧವಪ್ಪ ತಪದೊಳ್

ನೆಗಟ್ಟು ಪ್ರಾಯೋಪಗಮನದಿಂ ಸಂನ್ಯಸನಂಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆ ಪೋದ . . . ಸುಕುಮಾರಸ್ವಾಮಿಯ ಕಥೆಯಂ ಪೇಳ್ವೆಂ (ವಡ್ಡಾರಾ. ೧-೧೧) ; ಚತುರ್ವಿಧಾರಾಧನಾಪೂರ್ವಕಂ ವಿಹಿತಪ್ರಾಯೋಪಗಮನವಿಧಾನನಾಗಿ (ಚಂದ್ರಪ್ರ. ೧೦-೨೩ ವ). [ಸಂ.]

**ಪ್ರಾಯೋಪವೇಶ** (ನಾ). = ಪ್ರಾಯೋಪಗಮನ : ಮುನಿರಾಜಂ . . . ಅಳ್ಕದಾಚಾಮ್ಲವರ್ಧನಮಂ ತಪ್ಪದೆ ನೋಂತು ತಪ್ಪತ ನುವಂ ಪ್ರಾಯೋಪವೇಶಕ್ಕೆ ತಂದು (ಶಾಂತಿಪು. ೯-೬೪) ; ನಾನು ಪ್ರಾಯೋಪವೇಶ ಮಾಡಿ ಈ ಪ್ರಾಣತ್ಯಾಗಮಾಡಲು ನೀನು ಸಮ್ಮತಿಸಬೇಕು (ವಾಲ್ಮೀಕಿ. ೦೦೩). [ಸಂ.]

**ಪ್ರಾರಂಭ** (ನಾ). ೧. ಮೊದಲು ಮಾಡುವಿಕೆ; ಉಪಕ್ರಮ; ಆರಂಭ : ಶ್ರೀಮನ್ ವಿನಾಯಕ್ಯಧೀಶಂ . . . ಕಲಾಶಾಲಿಧೈರ್ಯಂ ಕ್ಷೇಮಪ್ರಾರಂಭಮಂ ಮಾಳ್ಪೆಮಗತಿದಯೆಯಿಂ (ಜಾತಕ. ೦-೦-೦) ; ಸಂಗರಪ್ರಾರಂಭಸಮಯತೂರ್ಯಧ್ವನಿಗೆ ವೇಗಮುದ್ವೇಗದಿಂ ರೋಷದಿಂ ಘೋಷದಿಂ ಸಂಧಿಸಿತುಭಯಬಲಂ (ಕಬ್ಬಿಗರ. ೬೨-೨೨೪೭). ೨. ಕೆಲಸ ; ಕಾರ್ಯ : ಸಕಳಕ್ಷತ್ರಿಯಮೋಹದಿಂ ನಿಜಭುಜಪ್ರಾರಂಭದಿಂ ಪೋಗೆ ತಾಗಿ ಕೆಲರ್ ನೊಂದೊಡೆ (ಚಂಪಕಾ. ೧-೬೪). ೩. [ಜೈನ] ಇಪ್ಪತ್ತೈದು ಕ್ರಿಯೆಗಳಲ್ಲಿ ಒಂದು ; ಭೇದನಭೇದನಾದಿ ಕ್ರಿಯೆಗಳಲ್ಲಿ ತಾನು ಪ್ರವೃತ್ತನಾಗುವುದು ಅಥವಾ ಅನ್ಯರನ್ನು ಪ್ರವರ್ತಿಸಿ ಆನಂದಪಡುವುದು : ಪಂಚವಿಂಶತಿಕ್ರಿಯೆಗಳು ೧. ಸಮ್ಯಕ್ತ್ವಕ್ರಿಯೆ . . . ೨೧. ಪ್ರಾರಂಭ (ಸ್ವಕೃತ – ಪರಕೃತಭೇದನ ಛೇದನಗಳಲ್ಲಿ ಹರ್ಷ) (ಕೈಪಿಡಿ. ೬೪). 'ಪಂಚವಿಂಶತಿಕ್ರಿಯೆ' ಪರಾ. [ಸಂ.]

**ಪ್ರಾರಂಭಿಗ** (ನಾ). ಮೊದಲು ಮಾಡುವವನು ; ಆರಂಭಿಸುವವನು ; ಮೊದಲಿಗ : ಸಮುಶುದ್ಧಸ್ಫುಟಮಪ್ಪುದೊಂದು ಸುತಿಯಂ ಪ್ರಾರಂಭಿಗಂ ಮಾಡೆ (ಶಾಂತಿಪು. ೦೦-೩೩). [ಪ್ರಾರಂಭ + – ಇಗ]

**ಪ್ರಾರಂಭಿಸು** (ಕ್ರಿ). ಮೊದಲು ಮಾಡು ; ಆರಂಭಿಸು : ವಿದ್ಯುಚ್ಛಕ್ತಿಯನ್ನು ಉರುವಲಾಗಿ ಬಳಸಲು ಹೆಚ್ಚು ಹೆಚ್ಚು ಜನರು ಪ್ರಾರಂಭಿಸುತ್ತಿರುವುದರಿಂದ ಇಲ್ಲಿ ಅದರ ಕುರಿತು ಒಂದೆರಡು ಮಾತುಗಳು ಅನವಶ್ಯವಾಗಲಾರವು (ಅಡುಗೆ. ೦೪) ; ಜಾನಕಮ್ಮನವರೇ ಊಟದ ಮಧ್ಯವಲ್ಲಿ ಮಾತಿಗೆ ಪ್ರಾರಂಭಿಸಿದರು (ಮೂಕಜ್ಜಿ. ೦೩೬). [ಪ್ರಾರಂಭ + – ಇಸು]

**ಪ್ರಾರಂಭೋತ್ಸವ** (ನಾ). (ಸಂಘ, ಸಂಸ್ಥೆ ಮೊದಲಾದುವುಗಳನ್ನು ವಿಧ್ಯುಕ್ತವಾಗಿ) ಆರಂಭಿಸುವಾಗ ನಡೆಸುವ ಸಮಾರಂಭ ; ಆರಂಭೋತ್ಸವ : ದೇವಯ್ಯಗೌಡರ ಮತಾಂತರವನ್ನು . . . ಮೇಗರವಳ್ಳಿಯ ಮಿಷನ್‌ಸ್ಕೂಲಿನ ಪ್ರಾರಂಭೋತ್ಸವ ನಡೆಸಲು ಬಂದಾಗ ತಾವೆ ಖುದ್ದಾಗಿ ನಡೆಸಿಕೊಡುತ್ತಾರೆ (ಮಲೆಗ. ೬೨) ; ಸ್ಟರಕಾರುಸ್ಕೂಲಿನ ಪ್ರಾರಂಭೋತ್ಸವಕ್ಕೆ ತಾವೇ ದಯಮಾಡಿಸಬೇಕು (ಕನಕ. ೨೪೩). [ಸಂ.]

**ಪ್ರಾರಬುದ** (ನಾ). ಹಿಂದೆ ಮಾಡಿದ ಕರ್ಮ : ಸ್ತುತ್ಯನಹುದೆಂದಾಡಿ ಪ್ರಾರಬುದಿದೇನೆನಗೆ ಹತ್ತಿಕೊಂಡುದು ಜೀಯ ವಿವರಿಸು (ಹರಿಕು. ೦೯-೩೪). [< ಸಂ. ಪ್ರಾರಬ್ಧ]

**ಪ್ರಾರಬ್ಧ** (ಗು). ೧. ಮೊದಲು ಮಾಡಿದ ; ಆರಂಭಿಸಿದ. (ನಾ). ೨. ಹಿಂದೆ ಮಾಡಿದ ಪಾಪದ ಫಲ ; ಕರ್ಮ ; ವಿಧಿ : ಪ್ರಾರಬ್ಧ ಪ್ರಯತ್ನಗಳ ತಾರತಮ್ಯವನಿಲ್ಲಿ ಹೇಳಿಹೆ ಕೇಳೆರಯ್ಯಾ ಪ್ರಯತ್ನದ ಹೆಚ್ಚು ಕುಂದಿನಂತೆ ಇಂದಾಗಲಿ ಮುಂದಾಗಲಿ ಪ್ರಾರಬ್ಧವು ಫಲಪದವನೀವುದು (ಕನ್ನಡ.ಕ. ೪೩-೧೧೬) ; ಊರು ಬಿಟ್ಟು ಬೇಜೂರಿಗೆ ಹೋದರೆ ಪ್ರಾರಬ್ಧವು ಬೇಜಾದೀತೆ (ಪುರಂದ. ೧-೦೩೭-೧) ; ತನ್ನ ಪಿತೃಗಳು ನರಕದಲ್ಲಿರುವುದನ್ನು ತಿಳಿದು ಉದ್ದಾಲಕನು ಪ್ರಾರಬ್ಧವನ್ನು ಬರೆದಂತೆ ವಿಧಿಯನ್ನೇ ಕೇಳುವೆನೆಂದು ಬ್ರಹ್ಮನ ಬಳಿಗೆ ಹೋದನು (ಕಥಾಕ. ೨೬೩). ೩. (ಅಲಂ) (ಪಾಪದಂತೆ) ಹಿಂಬಾಲಿಸುವ ವ್ಯಕ್ತಿ : ಎಲ್ಲಿಲ್ಲದ ಪ್ರಾರಬ್ಧಗಳು ಎಂದುಕೊಂಡು ಕೊಂಚ ಬೇಗ ಪಾಠ ಮುಗಿಸಿ ಮನೆಗೆ ಹೊರಟು ನಿಂತರು (ಕಾವೇರಿ. ೦೦). [ಸಂ.]

**ಪ್ರಾರಬ್ಧಕರ್ಮ** (ನಾ). ಹಿಂದೆ ಮಾಡಿದ ಕರ್ಮ : ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಬಿಡದು ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದು (ಏಕವ. ೬೬೩) ; ಪ್ರಾರಬ್ಧಕರ್ಮವದುಂಡು ತೀರುವುದು (ಗಗಣಾ. ೨೨-೬೦). [ಸಂ. ಪ್ರಾರಬ್ಧಕರ್ಮನ್]

**ಪ್ರಾರ್ಥನ** (ನಾ). ಬೇಡಿಕೊಳ್ಳುವುದು ; ಮೊರೆಯಿಡುವುದು : 'ಪ್ರಾರ್ಥನಂಗೆಯ್' ಪರಾ. [ಸಂ.]

**ಪ್ರಾರ್ಥನಂಗೆಯ್** (ಕ್ರಿ). ಬೇಡು ; ಮೊರೆಯಿಡು : ಅನಘಂ ತ್ರೈಲೋಕ್ಯಚೂಡಾಮಣಿ ವರಮಹಿಮಂ ಚಿತ್ರವೃತ್ತಿಸ್ಥಿರಾಢ್ಯಂ ಘನವೇದಾಭೇದ್ಯಚೋದ್ಯಪ್ರಭುವಿಭು ಶಿವನಂ ಪ್ರಾರ್ಥನಂಗೆಯ್ಯೆ (ಚಂದ್ರಪ್ರ. ೨-೦೭). [ಪ್ರಾರ್ಥನ + ಕೆಯ್[1]]

**ಪ್ರಾರ್ಥನಾಪತ್ರ** (ನಾ). ಬೇಡಿಕೆಯ ಪತ್ರ ; ಮನವಿ : ಪಂಥಾಭಿಮಾನಿಗಳ ಪ್ರಾರ್ಥನಾಪತ್ರವನ್ನು ಚಕ್ರವರ್ತಿಗೆ ನೇರವಾಗಿ ತಲುಪಿಸುವಂತೆ ನೆಕ್ಕದೋವ್ ಅವನನ್ನು ಕೇಳಿಕೊಂಡಿದ್ದನು (ಪುನರು. ೩೬೬). [ಸಂ.]

**ಪ್ರಾರ್ಥನೆ** (ನಾ). ೧. ಬೇಡುವುದು ; ಕೋರಿಕೆ : "ಅಧ್ಯೇಷಣಾ . . . ಪ್ರಾರ್ಥನಾ, ಅರ್ಥನಾ — ಈ ೬ ಬೇಡುಹ" (ಹಲಾಯು. ೩೯-೨೦೫) ; ಸಿಂಹವು ಇಲ್ಲಿಯ ಪ್ರಾರ್ಥನೆಯನ್ನು ಕೇಳಿ . . . ಪಂಜರದೊಳಗಿಂದ ಬಿಟ್ಟುಬಿಟ್ಟಿತು (ಪಂಚತಂ. ೪-೭೬). ೨. ಆಸೆ ; ಬಯಕೆ ; ಇಚ್ಛೆ. ೩. ದೇವರಲ್ಲಿ ಬೇಡಿಕೊಳ್ಳುವುದು ; ಭಗವಂತನಲ್ಲಿ ಮೊರೆಯಿಡುವುದು : ನಾನಾಭಾಷೆಗಳಲ್ಲಿ ಮನುಷ್ಯರು ಅವನ (ದೇವರ) ಪ್ರಾರ್ಥನೆ ಮಾಡುತ್ತಾರೆ (ಪಂಚತಂ. ೪-೦೧೦). ೪. ದೇವರನ್ನು ಕುರಿತ ಸ್ತುತಿಪರವಾದ ಹಾಡು ; ಸ್ತೋತ್ರ : "ಇಲಿಗಳಿಂದ ನಮ್ಮನ್ನು ರಕ್ಷಿಸಿ" ಎಂಬ ಒಂದು ಪ್ರಾರ್ಥನೆ ವೇದದಲ್ಲಿ ಇದೆಯಂತೆ (ರೇಣುಕ. ೪೬) ; ಸಭೆಯು ವಿನಾಯಕನ ಪ್ರಾರ್ಥನೆಯಿಂದ ಆರಂಭವಾಯಿತು (ಕಥಾ). [ಸಂ. ಪ್ರಾರ್ಥನಾ]

**ಪ್ರಾರ್ಥಿತ** (ಗು). ೧. ಬೇಡಿದ ; ಯಾಚಿಸಿದ. ೨. ಇಚ್ಛಿಸಿದ ; ಬಯಸಿದ : ಪ್ರಾರ್ಥಿತ ತ್ರಿವಿಧೈಕಭಕ್ತಿ ಸುಖಾರ್ಥಿಗಳನಾ ತ್ರಿವಿಧಭಕ್ತಿ ಸವರ್ಥಸುಖತರಶರಧಿಯಲಿ ನೆಚ್ಚಿಯದ್ದಿ ನೆಚ್ಚಿಯದ್ದಿ (ಏಕಪು. ೬-೨೬). (ನಾ). ೩. ಬೇಡಿದುದು : ಇದೆ ಸಾರಂ ಸ್ವರ್ಗಲೋಕಕ್ಕಿದೆ ಸುರಸಮಿತಿ ಪ್ರಾರ್ಥಿತಂ (ಶಾಂತಿಪು. ೬-೨೪). [ಸಂ.]

**ಪ್ರಾರ್ಥಿಸು** (ಕ್ರಿ). ಬೇಡು ; ಕೇಳಿಕೊಳ್ಳು ; ಯಾಚಿಸು : ಅಸುರಾಂತಕನುಂ ತಾನುಮೊಂತಾನುಂ ಪ್ರಾರ್ಥಿಸಿದೊಡೊಡಂಬಟ್ಟಜಾತಶತ್ರುಗೆ ಪೊಡೆವಟ್ಟು (ಪಂಪಭಾ. ೦೨-೦೩೪ ವ) ; ಈ ಕೋಮಳೆಯಂ ಪ್ರಾರ್ಥಿಸಿದೊಡೆ ನಿಷ್ಫಲಮಾಗದು (ಕಾದಂಪು. ೬೬೩) ; ಸುರಕ್ಷಿತವಾಗಿ ತಲುಪಲಿ ಎಂದು ದೇವರಿಗೆ ಪ್ರಾರ್ಥಿಸಿದರೆಂದು ಕಾಣುತ್ತದೆ (ಕಂಗಾಕ್ಕ. ೩೦). [ಪ್ರಾರ್ಥನ + – ಇಸು]

**ಪ್ರಾಲಂಬ** (ಗು). ೧. ನೇತಾಡುವ ; ಜೋಲಾಡುವ : ಪ್ರಾಲಂಬರತ್ನಾಗ್ರಗುಚ್ಛಸಂದೋಹದಿಂ . . . ಎಸೆದು ತೋರ್ಪಳಂ . . . ಕಂಡ ಸುರ್ವೀಶ್ವರಂ (ಕಾದಂಬ. ೨೬೧ ಕಳೆ). (ನಾ). ೨. ಕಂಠದಿಂದ ಎದೆಯವರೆಗೆ ಇಳಿಬಿದ್ದಿರುವ ಉದ್ದವಾದ ಹಾರ : "ಪ್ರಾಲಂಬಂ . . . ಕತ್ತಿನಿಂದ ಎದೆಯ ಮೇಲೆ ನೆಟ್ಟಗೆ ಜೋಲಾಡುವಂತೆ ಹಾಕಿಕೊಂಡ ಹುವ್ವಿನ ಹಾರ ; ಪುಷ್ಪಮಾಲಿಕೆ" (ಸಿದ್ಧಾಂತಿ. ೨೦೦). [ಸಂ.]

**ಪ್ರಾಲಂಬಕ** (ನಾ). = ಪ್ರಾಲಂಬ ೨ : "ಕೊರಲೊಳಿಕ್ಕಿದ ಹೂವಿನ ಮಾಲೆ ಪ್ರಾಲಂಬಕಮೆಂಬುದು" (ಹಲಾಯು. ೯೦-೪೦೦). [ಸಂ.]

**ಪ್ರಾಲಂಬಿಕೆ** (ನಾ). ಚಿನ್ನದ ಸರ ; ಸುವರ್ಣಹಾರ : "ಪ್ರಾಲಂಬಿಕಾ

. . . ಭಂಗಾರದಿಂದಲೆ ರಚಿಸಲ್ಪಟ್ಟ ಕಂಠಹಾರ, ಕಂಠಿ:ಸರ, ಚಂದ್ರಹಾರ, ಗೋಧಿಸರ ಮುಂತಾದದ್ದು" (ಸಿದ್ಧಾಂತಿ. ೦೯೯). [ಸಂ. ಪ್ರಾಲಂಬಿಕಾ]

**ಪ್ರಾಲೇಯ, ಪ್ರಾಳೇಯ** (ನಾ). ೧. ಹಿಮ ; ಮಂಜು : "ಪ್ರಾಲೇಯ ಶಿಶಿರಂ ತುಷಾರಂ ನೀಹಾರ . . . ಹಿಮಮೆನಿಕ್ಕುಂ" (ಕುಂಗಾಹ. ೦೨೦-೦) : ನಿಯತಪ್ರಾಲೇಯದೀಪ್ತಿದ್ಯುಮಣಿಭಗಣದೀಪೋಜ್ವಲಾಕೃತಿವಾತ್ಯೋದಯಮಪ್ಪಾಕಾಶಮಂಬಾಗಸವೆಳಕನಂತೈಕಸಂಶುದ್ಧಸಿದ್ಧಾಲಯದೊಳ್ ಸಾಮರ್ಥ್ಯದಿಂ ಮುಟ್ಟದೆ ನತಭುವನರ್ಸಿದ್ಧರೇಜಿರ್ದ ಪೀಠತ್ರಯಮಂಬಂತಿರ್ಪುದು (ಅರ್ಹಸ. ೦-೩೩) ; ಪ್ರಾಲೇಯಂ ಬಯಲಾಗೆ ದೈತ್ಯಪರಿವ್ಯಢನು ಕುಲಶೈಲಗಳೊಳಿಡಲು (ಕೃಕುಪು. ೬-೩೨). ೨. ಪಚ್ಚ ಕರ್ಪೂರ: "ಪ್ರಾಲೇಯಮನಲು ಘನಸಾರಮೆನೆ ಪಚ್ಚ" (ಕುಂಗಾಹ. ೯೯-೨೨).

**ಪ್ರಾಳೇಯ** : ೧. "ಪ್ರಾಳೇಯಂ . . . ನೀಹಾರಃ — ಈ ೮ ಮಂಜು" (ಕರಾಟುಾ. ೦೦೬-೨೩). [ಸಂ.]

**ಪ್ರಾಲೇಯಕರ** (ನಾ). ೧. ತಂಪಾದ ಕಿರಣಗಳುಳ್ಳವನು : ಚಂದ್ರ ; ಶೀತಕರ : ಎರಳೆ ಮೊಲ ಮತ್ತಾಲವೆಂದು ಪ್ರಾಲೇಯಕರನುರದೊಳೊಪ್ಪುವ ಕಳಂಕಕ್ಕೆ ಪೆಸರಿಡುವರು (ರಾಜಶೇ. ೬-೦೯) ; ಪೂರ್ಣಪ್ರಾಲೇಯಕರಬಿಂಬಸಮವಕ್ತ್ರಮುದಲನೀಲಾಲಕಂ (ಕುವಲಾಪು. ೦-೬೯). ೨. ಕರ್ಪೂರ. [ಸಂ.]

**ಪ್ರಾಲೇಯಾಂಶು** (ನಾ). ೧. ಚಂದ್ರ : ಪ್ರಾಲೇಯಾಂಶುವಿಭೂಷಿತಂ (ಶಾಬಂಪು. ೨೯೩) ; ಕಾಲಪ್ರಾಲೇಭವಪಂಚಾನನ . . . ಚಿಂತಾರಹಿತ ಚಿದಖಿತಾನಂದ ನಿರ್ದ್ವಂದ್ವ ಪೂರ್ಣಪ್ರಾಲೇಯಾಂಶುಪ್ರಭಾಪ್ರಸ್ಫುರಿತನುತ ಯಶೋಭಾಸಿ ಮಾದಾರ್ಯವರ್ಯ (ನೃಕಶಿ. ೩೨-೩೦). ೨. ಕರ್ಪೂರ. [ಸಂ.]

**ಪ್ರಾಲೇಯಾದ್ರಿ** (ನಾ). ಹಿಮದಿಂದ ಕೂಡಿರುವ ಪರ್ವತ; ಹಿಮಾಚಲ: ಪ್ರಾಲೇಯಾದ್ರಿನವಪ್ರಸೂನಭರದುರಂ ಗಂಗಾಸರಿಲ್ಲೋಲ . . . ಮಾರುತಂ (ಶಾಬ್ದಾಕ. ೯೯೬). [ಸಂ.]

**ಪ್ರಾವರಣ** (ನಾ). ಹೊದೆಯುವ ವಸ್ತ್ರ ; ಉತ್ತರೀಯ : "ಪ್ರಾವರಣಂ . . . ಉತ್ತರೀಯಂ — ಈ ೪ ಮೇಲುದು" (ಕರಾಟುಾ. ೯೦-೩೯೨) ; ಕ್ಷೌಮದುಕೂಲಾದಿ ದಿವ್ಯವಸನವಿವಿಧಪ್ರಾವರಣವಿಶೇಷಂಗಳುಂ (ಅಂತಪು. ೦೩-೩ ವ) ; ಗಾಂಡೀವಿ ಮುಕ್ತಕಳಂಬಕಂಡಪ್ರಾವರಣದಲಿ ಮುಸುಕಿದನು ಗುರುನಂದನನ ರಥವ (ಕುಪ್ರಾಕ. ೦೯-೦೬). [ಸಂ.]

**ಪ್ರಾವರಣಾಂಶುಕ** (ನಾ). = ಪ್ರಾವರಣ : ಬೈತಿಟ್ಟು ಕಾಪಿಟ್ಟನೋನೀಳಪ್ರಾವರಣಾಂಶುಕಾಂತರದೊಳಂಭೋಜೋದ್ಭವಂ ನನ್ನಿಯಂಬಾಳಾವ ಕೈಡೆಯಾಗಿ ಮೂಜಗಮದೇನೊಪ್ಪಿತ್ತೊ ಪರ್ಮರ್ಬಿನಿಂ (ಜಕಶ. ೬-೦೨). [ಸಂ.]

**ಪ್ರಾವಾರ** (ನಾ). = ಪ್ರಾವರಣ : "ಪ್ರಾವಾರಃ . . . ಉತ್ತರೀಯಂ — ೫ ಉತ್ತರೀಯದ ಹೆಸರು. ಮೈ ಮೇಲೆ ಹೊದ್ದಿರುವ ವಸ್ತ್ರ" (ಸಿದ್ಧಾಂತಿ. ೨೦೯). [ಸಂ.]

**ಪ್ರಾವಿಡೆಂಟ್‌ಫಂಡು** (ನಾ). ಭವಿಷ್ಯಕ್ಷೇಮನಿಧಿ ; ಭವಿಷ್ಯನಿಧಿ : ವಿಮೆ ಕಂಪನಿಗಳೂ ಪ್ರಾವಿಡೆಂಟ್‌ಫಂಡು ಏರ್ಪಾಡೂ ಹೀಗೆಯೇ ಸರಕಾರಿ ಅಥವಾ ಸಹಕಾರಿ ಆಡಳಿತದಲ್ಲಿರಬಹುದು (ಜಕಶ್ರ. ೦೯೬).
[ ← ಇಂ. Provident fund ]

**ಪ್ರಾವಿರ್ಭೂತ** (ನಾ). ಕಾಣಿಸಿಕೊಂಡವನು ; ಆವಿರ್ಭೂತನಾದವನು: ದ್ವಾವಿಂಶತಿಪಾರಾವಾರಾವಧಿಗೆಟಿದುಯ್ದು ನಾರಣಾಚ್ಯುತಕಲ್ಪಪ್ರಾವಿರ್ಭೂತರನೆಂದಂದಾವೆಡೆಯುಂ ಜವನ ಧಾಟಿ ಮುಟ್ಟದುದುಂಟೇ (ಕುಗ್ಗಪು. ೦೩-೦೦೬). [ಸಂ.]

**ಪ್ರಾವೀಣ್ಯ** (ನಾ). ಜಾಣ್ಮೆ ; ಪ್ರವೀಣತೆ : ನೃಪಸೇವನಾಪ್ರಹಸನಪ್ರಾವೀಣ್ಯಮುಂ ಬುದ್ಧಿವರ್ಧನಮುಂ ಮಾಸರಮಕ್ಕುಮೆಯ್ಯೆಂದವದಶೋಕ್ತಾರೋಹಗೇಹಂಗಳೊಳ್ (ಜಾತಕ. ೯-೨೩) ; ಆಯಾ ವಿಷಯದಲ್ಲಿ ಪ್ರಾವೀಣ್ಯ ಪಡೆದಿರುವ ಉಪಾಧ್ಯಾಯರು ಮಾರ್ಗದರ್ಶನ ಮಾಡಲು ಕಾದಿರುತ್ತಾರೆ (ಶಿಕ್ಷದ. ೬೯೬). [ಸಂ.]

**ಪ್ರಾವೀಣ್ಯತೆ** (ನಾ). = ಪ್ರಾವೀಣ್ಯ : ಮಧುವಿದ್ಯಾಸಂಪನ್ನರೂ ಲಲಿತಕಲೆಗಳಲ್ಲಿ ಪ್ರಾವೀಣ್ಯತೆ ಪಡೆದವರೂ ಎಂದು ಕೇಳಿರುವ ನಮಗೆ ನಿಮ್ಮಲ್ಲಿ ಒಂದು ಬೇಡಿಕೆಯಿದೆ (ಜೀಮುಂತ. ೯೯೯). [ಪ್ರಾವೀಣ್ಯ + — ತೆ]

**ಪ್ರಾವೃಟ** (ನಾ). ಒಂದು ಬಗೆಯ ಸಸ್ಯ : "ಪ್ರಾವೃ(ಷ)ಟಃ—ಕಡವ" (ಟಿಕಧಿ. ೯೬). [ಸಂ.]

**ಪ್ರಾವೃಟ್ಕಾಲ** (ನಾ). ಮಳೆಗಾಲ; ಕಾರ್ಗಾಲ : ಪ್ರಾವೃಟ್ಕಾಲದೊಳಡಸಿ ಮಹಾವರ್ತದ ಮಟಿಗೆಳೋಘಮೋಘಂ ಕೊಳೆ (ಆಕಪು. ೦೨-೨). [ಸಂ.]

**ಪ್ರಾವೃತ** (ಗು). ೧. ಬಳಸಿದ ; ಸುತ್ತುವರಿದ : ಎನಗೆ ವಿದ್ಯಾಕಾಂಕ್ಷೆಯತ್ತೊಂದಿದ ಜ್ಞಾನಪ್ರಾವೃತಮಾಯೆಯಿಂದೆ ತಪಮಂ ಕೈಕೊಳ್ಳುದೆತ್ತ (ಸುಕಪೂ. ೩-೯೨) ; ಖಟ್ವಾಂಗನಿಕಾಯಪ್ರಾವೃತೋದ್ಯನ್ಮಣಿಮಯಶಿಬಿಕಾರೂಢ ಮಾದೇವಿಯಲ್ಲಿ (ಚಂದ್ರಪು.೬-೯೬). (ನಾ). ೨. ಹೊದೆಯುವ ಬಟ್ಟೆ.— ವಸ್ತ್ರ : "ನಿವೀತಂ, ಪ್ರಾವೃತಂ—ಹೊದಿಯುವ [ಬಟ್ಟೆ, ಅಂಗವಸ್ತ್ರ" (ಸಿದ್ಧಾಂತಿ. ೨೦೩). ೩. [ನಾಟ್ಯ] ದೇಶೀಯ ಆಕಾಶಚಾರಿಗಳಲ್ಲಿ ಒಂದು ಬಗೆ ; ೪ "ಪಾದವನ್ನು ಮುಂದಂಪರಿಸಿ [ಸಂಕಂಚಿಸಿ] ಮನೋಹರವಾಗಿ ಮೇಲಕ್ಕೆ ಎತ್ತುವುದು" (ಶಾಸ್ತ್ರಂ. ೬೩೩ ಗದ್ಯಾನುವಾ) ; ಮಿಗೆ ವೇಷ್ಯನಮುದ್ವೇಷ್ಯಂ ನೆಗಳ್ದ ಸವೃತ್ತೈವಮೊಸೆವ ವೃಷ್ಯೋತ್ಕೈಪಂ ಬಗೆವಡೆದ ಸೂಜಿವಿದ್ಧಂ ನಗೆಮೊಗದೊಳೆ ಪ್ರಾವೃತಾಖ್ಯಮುಲ್ಲೋಲಮಿವುಂ (ರಾಸ್ಕಂ. ೬-೦೬). [ಸಂ.]

**ಪ್ರಾವೃಷ** (ನಾ). ೧. ಮಳೆಗಾಲ ; ಕಾರ್ಗಾಲ : ಅನುರಾಗಾಂತಂ ವಸಂತಪ್ರಿಯನ ವಿರಹದೊಳ್ ಗ್ರೀಷ್ಮತಾಪಜ್ವರಂ ಮೇದಿನಿಗಾದಂ ಪುಟ್ಟಿ ಮೇಲೇಂ ತಳೆದುದೊ ಮಟಿಯಂ ಪ್ರಾವೃಷಂ (ಅರ್ಹಸ. ೩-೦೦೨). ೨. ಒಂದು ಬಗೆಯ ಮರ; ಅರಳಿ : "ಪ್ರಾವೃಷಃ—ಅರಳಿ" (ಟಿಕಧಿ. ೯೬). [ಸಂ.]

**ಪ್ರಾವೃಷೇಣ್ಯ** (ಗು). ಮಳೆಗಾಲಕ್ಕೆ ಸಂಬಂಧಿಸಿದ ; ಮಳೆಗಾಲದ : ಚಾಮೀಕರಕಳಶಮೆ ಕುರುಭೂಮಿಗೆ ತಾಂ ನೇಲೆ ಮಾಡಮಂ ಬಳಸಿ ನಭಶ್ಯಾಮಂ ನಂದನವನಮಾಭಿರಾಮ ಘನಪ್ರಾವೃಷೇಣ್ಯಪಟಲಮಾನಿಟಿಕುಂ (ಶಾಂತಿಪು. ೯-೦೯೦.) [ಸಂ.]

**ಪ್ರಾವೃಷ್ಯ** (ನಾ). ೧. ಒಂದು ಬಗೆಯ ಮರ ; ಕೊಡಸಿಗೆ. ೨. ಒಂದು ಬಗೆಯ ಮರ ; ಕದಂಬವೃಕ್ಷ : "ಪ್ರಾವೃಷ್ಯಃ — ವಿಟಂಕ, ಕಡವ, ಕೊಡಸಿಗ" (ಟಿಕಧಿ. ೯೬). ೩. ಒಂದು ಬಗೆಯ ರತ್ನ ; ವೈಡೂರ್ಯ : "ಪ್ರಾವೃಷ್ಯಂ—ವೈಢೂರ್ಯ" (ಟಿಕಧಿ. ೯೬). [ಸಂ.]

**ಪ್ರಾಶನ** (ನಾ). ೧. ರುಚಿ ನೋಡುವುದು ; ಸೇವಿಸುವುದು : ಬಿಸಿದು ನೆತ್ತರ ಕಾಸು ಖಂಡಗಳ ಕೊಯ್ದು ಶೋಧಿಸುತಲಾ ಪ್ರಿಥಾಸನ ಪ್ರಾಶನಗಳ ಮಾಡಿಸು ಪಾರ್ವತಿಗೆ (ಏಕೋತ್ತಪು. ೩-೩-೯) ; ಘಾಟುನೀರನ್ನು ತೀರ್ಥದಂತೆ ಪ್ರಾಶನ ಮಾಡಿದೆ (ಸಂಬಿಕು. ೩೯). ೨. ತಿನ್ನುವಂತೆ ಮಾಡುವುದು; ತಿನ್ನಿಸುವುದು: 'ಅನ್ನಪ್ರಾಶನ' ಪರಾ. ೩. ಆಹಾರ. [ಸಂ.]

**ಪ್ರಾಶಸ್ತ್ಯ** (ನಾ). ೧. ಸರ್ವೋತ್ಕೃಷ್ಟವಾಗಿರುವಿಕೆ ; ಶ್ರೇಷ್ಠವಾಗಿರುವಿಕೆ : ಪ್ರಾಧಾನ್ಯ : ಅಂತೇ ಶ್ಯಕ್ಷಣಕಕ್ಷೇತ್ರಕ್ಕೆ ಇಲ್ಲಿ ಪ್ರಾಶಸ್ತ್ಯವಿದೆ (ಸವಜೀ. ೦೨ ಶೀಕೆ) ; ಸೂರ್ಯನು ಕೃತ್ತಿಕಾನಕ್ಷತ್ರದಲ್ಲಿದ್ದಾಗ ವಸಂತಕಾಲ ಆಗ ಆರಂಭವಾಗುತ್ತಿದ್ದುದರಿಂದ ಕೃತ್ತಿಕಾನಕ್ಷತ್ರಕ್ಕೆ ಅಷ್ಟೊಂದು ಪ್ರಾಶಸ್ತ್ಯ ಬಂದಿತ್ತು (ನಕ್ಷತ್ರ. ೯). ೨. ಕೀರ್ತಿ ; ಪ್ರಸಿದ್ಧಿ. [ಸಂ.]

**ಪ್ರಾಶಿತ** (ಗು). ೧. ತಿಂದ; ಸೇವಿಸಿದ. (ನಾ). ೨. ತಿನ್ನುವಿಕೆ. ೩. ಪಿತೃಗಳಿಗೆ ನೀಡುವ ತರ್ಪಣ, ಪಿಂಡ ಮುಂತಾದುವು. [ಸಂ.]

**ಪ್ರಾಶ್ನಿಕ** (ಗು). ೧. ಪ್ರಶ್ನೆಗಳಿಂದ ಕೂಡಿರುವ. (ನಾ). ೨. ಪ್ರಶ್ನಿಸುವವನು; ಪರೀಕ್ಷಿಸುವವನು: ಸಭಾಪತಿಯಾಗಿರ್ದ ಮಹಾಬಳನುಮಂ ಪ್ರಾಶ್ನಿಕರಾಗಿರ್ದ ವಿದ್ವಜ್ಜನಮುಮಂ ಸಭಾಜನಮುಮಂ ಶಿಳಿಪಿ (ಅಜಿ. ೨-೧೦ ಪ); ಆತನುಂ ಪ್ರಾಶ್ನಿಕರಾಗಿರ್ದ ವಿಶ್ವಾವಸು ತುಂಬುರ ನಾರದರ್ಕಳನ್ನರಪ್ಪ ಗಂಧರ್ವನಿವಹಾಚಾರ್ಯರೆಲ್ಲಮೊಂದೆ ಸರದೊಳ್ ಪೊಗಳ್ (ಶಾಂತಿ. ೨-೩೨ ಪ). ೩. ನ್ಯಾಯವನ್ನು ನಿರ್ಣಯಿಸುವವನು; ತೀರ್ಪುಗಾರ. [ಸಂ.]

**ಪ್ರಾಶ್ಯ** (ಗು). ೧. ತಿನ್ನುವ; ಸೇವಿಸುವ. (ನಾ). ೨. ಆಹಾರ. [ಸಂ.]

**ಪ್ರಾಸ** (ನಾ). ೧. ಎಸೆಯುವುದು; ಎಸೆತ. ೨. ಒಂದು ಬಗೆಯ ಆಯುಧ; ಕೊಂತ: "ಪ್ರಾಸಃ, ಕುಂತಃ—ಈ ೨ ಕುಂತಂ" (ಹಲಾಯು. ೬೮-೬೨೦); ಉದ್ವೀಚಿಮರುಮರೀಚಿನಿಚಯಚಂಚಲಲೋದ್ದಾಮಬಲಬಹುಲನಿಷ್ಠುಮಚಪ್ರಾಸಪಾಣಿ . . . ಅಸಿತಭುಜಗಶಿಶುತರಳತರವಾರಿಖಡ್ಗಖೇಟಕವ್ಯಗ್ರಕರದ್ವಯೋದ್ದಾಮಪದಾತಿಬಹಳಮಿದು ಲಾಟಬಲಂ (ಅಜಿ. ೧೩-೪೫ ಪ): ಪ್ರಾಸ ಪಟ್ಟಿಸ ಪರಿಘ ಬಾಣ ಶರಾಸನಾದಿ ಸಮಸಶಸ್ತ್ರವಿಲಾಸವಿಭವದಲೀಜಾದನು ರಣವಾದ್ಯರಭಸದಲಿ (ಕುಶಲ. ೬-೨೯-೨೨). ೩. [ಛಂದ] ಪದ್ಯದ ನಿಯತಸ್ಥಳಗಳಲ್ಲಿ ಬರುವ ನಿಯತಾಕ್ಷರ; ☛ ಪದ್ಯದ ಪ್ರತಿ ಪಾದದ ಆದಿಯಲ್ಲಿ ಮೊದಲ ಎರಡು ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರುವುದು. ಇದು ಹರಿ, ಕರಿ, ವೃಷಭ, ತುರಂಗ, ಶರಭ ಮತ್ತು ಅಜ ಎಂದು ಆರು ವಿಧ: ನುತಶಬ್ದಾಲಂಕಾರದೊಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ (ಕಾವ್ಯಾ. ೨-೩೦); ಪ್ರಾಸವಿಲ್ಲದ ಪದವ ಶಾಸು ಹಾಡಿದರೇನು (ಸರ್ವಜ್ಞ. ೦೨೦೮); ಪ್ರಾಸದ ದೃಷ್ಟಿಯಿಂದ ಕನ್ನಡಛಂದಕ್ಕೆ ವೈಶಿಷ್ಟ್ಯ ಉಂಟೇ ಉಂಟು (ಛಂದೋವಿ. ೬೦). 'ಅನುಪ್ರಾಸ' ಪರಾ. [ಸಂ.]

**ಪ್ರಾಸಂಗ** (ನಾ). ಎರಡು ಎತ್ತುಗಳನ್ನು ಆರಿಗೆ ಹೂಡುವ ನೊಗ: "ಪ್ರಾಸಂಗಃ . . . ಕಲಿಯಾರ ನೊಗ" (ಸಿದ್ಧಾಂತಿ. ೨೩೯). [ಸಂ.]

**ಪ್ರಾಸಂಗಿಕ** (ಗು). ೧. ಸನ್ನಿವೇಶಕ್ಕೆ ಸಂಬಂಧಿಸಿದ. (ನಾ). ೨. ಸನ್ನಿವೇಶಕ್ಕೆ ಸಂಬಂಧಿಸಿದುದು; ಪ್ರಸಂಗಕ್ಕೆ ಹೊಂದಿರುವಂತಹುದು: ಜೀವನದ ಅತ್ಯಂತ ಮೂಲಭೂತವಾದ . . . ವಿಷಯಗಳನ್ನು ತೀರ ಪ್ರಾಸಂಗಿಕವೆನ್ನಬಹುದಾದ ಮಾತುಕತೆಗಳಲ್ಲಿ, ಘಟನೆಗಳಲ್ಲಿ ನಿರೂಪಿಸಲಾಗಿದೆ (ಕುಹಕ್ಷಿ. ೨೬೯). ೩. [ಕಾವ್ಯಮೀ] ನಾಟಕದ ಕಥೆಯಲ್ಲಿರುವ ಎರಡು ವಿಧಗಳಲ್ಲಿ ಒಂದು; ಸಂದರ್ಭಕ್ಕೆ ಹೊಂದಿಕೊಂಡಂತೆ ಸೇರಿ ಬರುವ ಉಪಕಥೆ: ಪ್ರಾಸಂಗಿಕವೆಂದರೆ, ಮುಖ್ಯಕಥೆಗೆ ಅಂಗವಾಗಿ ಮಧ್ಯೆ ಬರತಕ್ಕ ಕಥೆ (ಕೈಪಿಡಿ. ೨೦೫).

**ಪ್ರಾಸಂಗಿಕವಾಗಿ** = (ಮಾತುಕತೆಯಾಗುತ್ತಿರುವ) ವಿಷಯಕ್ಕೆ ಸಂಬಂಧಿಸಿದಂತೆ; ಸಾಂದರ್ಭಿಕವಾಗಿ: ಅರ್ಥವ್ಯಂಜಕತ್ವ ಪ್ರಾಸಂಗಿಕವಾಗಿ ಅಲ್ಲಿ ಬರುತ್ತದೆ (ಕೃಷ್ಣಾಲೋ. ೦೦೬); ಪಾಠದಲ್ಲಿ ಕಲಿಯುವ ಅಂಶಗಳನ್ನೇ ಅಲ್ಲದೆ ಕಲಿಯುವ ಉತ್ತಮಕ್ರಮವನ್ನೂ ಪ್ರಾಸಂಗಿಕವಾಗಿ ಮಕ್ಕಳಲ್ಲಿ ಬೆಳಸಬೇಕು (ಶಿಕ್ಷಣ. ೪೪೭). [ಸಂ.]

**ಪ್ರಾಸಂಗ್ಯ** (ನಾ). ನೊಗ ಕಟ್ಟಿ ಪಳಗಿಸಬೇಕಾದ ಎತ್ತು: "ಯುಗ್ಯಃ, ಪ್ರಾಸಂಗ್ಯಃ, ಶಾಕಟಃ— ಈ ೩ . . . ನೊಗವನ್ನು ಹೊರುವ ಎತ್ತು" (ಸಿದ್ಧಾಂತಿ. ೨೪೭). [ಸಂ.]

**ಪ್ರಾಸಕ** (ನಾ). ೧. ಈಟಿಯಂತೆ ಚೂಪಾದ ತುದಿಯುಳ್ಳ ಒಂದು ಬಗೆಯ ಸಾಧನ; ☛ ಮಾಂಸವನ್ನು ಈ ಸಾಧನದಲ್ಲಿ ಚುಚ್ಚಿ ಬೆಂಕಿಯಲ್ಲಿ ಬೇಯಿಸುವ ಕ್ರಮ ಈಗಲೂ ಇದೆ. ೨. ಈಟಿ. ೩. (ಕೆಂಡದ ಮೇಲಿಟ್ಟು) ಬೇಯಿಸಿದುದು: ಪ್ರಾಸ[ಕಾಂ . ಸು]ಕವ ಮಾಡಿ ಬದನೆಯ ಕಾಯ್ಗಳಂ ಕಿವುಚಿ ಸಾಸುವೆಯುನಿಕ್ಕಿ ಸಮತಳಗೊಡುವುದೊಂದು ತೆಱ ಸೂಸಲಂ ತಳಿದು ವೊಗ್ಗರಣೆಯಂ ಮಾಡುವು[ದ]ದೊಂದು ತೆಱ (ಸೂಪಶಾ. ೪-೨೬). ೪. ಬೇಯಿಸಿದ ತಿನಿಸು: ಸಂಡಿಗೆ ಸಂಭಾರಗಡಲೆ ಪ್ರಾಸಕ ಕುಕ್ಕುಟಾಂಡವನವಲಕ್ಕಿಗಳನು ದುಂಡರಳ್ಗಡಲೆ ಭಕ್ಷ್ಯಗಳ ಬಡ್ಡಿಸಿಕೊಳುತುಂಡರು ನೆಱೆ ಸೊಕ್ಕುವನಕ (ಪೋಹಚ. ೦೮-೬೬). [ಸಂ.]

**ಪ್ರಾಸಾಕ್ಷರ** (ನಾ). [ಛಂದ] ಪ್ರಾಸವಾಗಿ ಬರುವ ಅಕ್ಷರ: ಒಂದೇ ಪಾದದಲ್ಲಿಯಾಗಲಿ, ಅನೇಕ ಪಾದಗಳಲ್ಲಿಯಾಗಲಿ; ಪಾದದ ಆದಿ ಮಧ್ಯಗಳಲ್ಲಿಯಾಗಲಿ, ಮಧ್ಯಾಂತಗಳಲ್ಲಿಯಾಗಲಿ, ಆದ್ಯಂತಗಳಲ್ಲಿಯಾಗಲೀ; ಪ್ರಾಸಾಕ್ಷರವು ಒಂದೇ ಆಗಲಿ, ಅನೇಕವಾಗಲಿ-ಈ ರೀತಿ ಯಥೇಷ್ಟವಾಗಿರುವುದು (ಕೈಪಿಡಿ. ೯೬); ಕನ್ನಡಜಾನಪದಕವಿವರನಾದ ಸರ್ವಜ್ಞನು ಪ್ರಾಸಾಕ್ಷರಕ್ಕೆ ಕೊಟ್ಟಿರುವ ಮಹತ್ವವನ್ನು ಈ ತ್ರಿಪದಿಯಲ್ಲಿ ಕಾಣಬಹುದು (ಸಂಶೋಧ. ೦೨೫). [ಸಂ.]

**ಪ್ರಾಸಾದ₁** (ನಾ). [ವೀಶೈ] ಪ್ರಸಾದ: ವಿನಯದಿಂ ಗುರುವಿಗೆ ಸಮರ್ಪಿಸಿ ಘನದ ಲಿಂಗ ಸಮರ್ಥವಂ ಮತ್ತನಘಜಂಗಮಭಕ್ತಿಯಂ ಪ್ರಾಸಾದಮಂ ಪಡೆದು (ಏಕಶಿ. ೪೧-೦೬). [< ಸಂ. ಪ್ರಸಾದ]

**ಪ್ರಾಸಾದ₂** (ನಾ). ೧ (ಕಲ್ಲು, ಇಟ್ಟಿಗೆ ಮೊದಲಾದುವುಗಳಿಂದ ಕಟ್ಟಿದ) ಮಹಡಿಯ ಮನೆ, ಕರುಮಾಡ, ಅರಮನೆ, ದೇವಾಲಯ ಮುಂತಾದವು: "ಇಟ್ಟಿಗೆ ಮೊದಲಾದವಱಿಂ ಮಾಡಿದರಮನೆ ದೇಗುಲಂಗಳಂ ಪ್ರಾಸಾದವೆಂಬುದು" (ಹಲಾಯು. ೪೪-೦೬೫); ಗೈರಿಕದಿ ಮುಕ್ತಾಫಲದಿ ಸಮೆದ ಕಲಶಂಗಳೋರಣಿಪ ಪ್ರಾಸಾದ ಸೌಧ ಹರ್ಮ್ಯಂಗಳಿಂದೆಸದುದಾ ದ್ವಾರಾವತಿ (ಕಣಾಪ. ೨-೩). ೨. ಮೇಲಿನ ಅಂತಸ್ತು; ಉಪ್ಪರಿಗೆ; ಮಹಡಿ: ನಿನಗೆ ಮುಕ್ತಿಪ್ರಾಸಾದಮನಡರಲಿವುವೆ ಸೋಪಾನಂಗಳ್ (ಅಜಿ. ೫-೬೦); ಕನ್ಯಾಂತಃಪುರಪ್ರಾಸಾದಮನೇಱಿ (ಕಾದಂಬ. ೭೬೯). ೩. [ಜೈನ] ಚೈತ್ಯಾಗಾರ, ಬಸದಿ ಮುಂತಾದುವು; ☛ ಸ್ವರ್ಗದಲ್ಲಿ ವೈರಾಜ, ಪುಷ್ಪಕ, ಕೈಲಾಸ, ಮಣಿಕ, ತ್ರಿವಿಷ್ಟಪಗಳೆಂಬ ಐದು ಮಹಾಪ್ರಾಸಾದಗಳು ಮತ್ತು ಭೂಮಿಯ ಮೇಲೆ ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸರ್ವತೋಭದ್ರ, ವಲಭಿಚ್ಛಂದ ಎಂಬ ಐದು ಪ್ರಾಸಾದಗಳು ಇವೆಯೆಂದು ಜೈನರು ನಂಬುತ್ತಾರೆ: ಪ್ರಾಸಾದಾನ್ತರಮಾನ್ಯಚಿತ್ರಕನಕಪ್ರಜ್ವಲ್ಯದಿನ್ಯಕ್ಕುದಾನ್ಯಾಸಿರ್ಪ್ಪರ ಪೂಜಿದನ್ಸಿಯೆ ಅವರ್ಸ್ಪರ್ಗ್ಗಗ್ರಪವಾನೇಜಿದಾರ್ (ಎಕ. II, ೨೬-೨: ಕು. ೭೦೦); ಪ್ರಾಸಾದಾಂತರದಿಂದಮಯ್ದು ಜಿನಚೈತ್ಯಾಗಾರಮೊಂದಿಂತೆ ವಿನ್ಯಾಸಂ ನಾಡೆ ಬೆಡಂಗುವೆತ್ತಿರೆ . . . ತದ್ಭೂಮಿ ಕಣ್ಗೊಪ್ಪುಗುಂ (ಶಾಂತ್ರಪು. ೦೫-೨೨). [ಸಂ.]

**ಪ್ರಾಸಾದಿ** (ನಾ). [ವೀಶೈ] ತಾನು ಅನುಭವಿಸುವ ಪ್ರತಿಯೊಂದು ಪದಾರ್ಥವನ್ನು ಮೊದಲು ಲಿಂಗಕ್ಕೆ ಅರ್ಪಿಸಿ, ಅರ್ಪಿತಪದಾರ್ಥವನ್ನು ಭಕ್ತಿಪೂರ್ವಕವಾಗಿ ಪ್ರಸಾದರೂಪದಲ್ಲಿ ಸ್ವೀಕಾರ ಮಾಡುವವನು; ಷಟ್ಸ್ಥಲಗಳಲ್ಲಿ ಮೂರನೆಯ ಹಂತವಾದ ಪ್ರಸಾದಿಸ್ಥಲವನ್ನು ತಲುಪಿದವನು; ಪ್ರಸಾದಿ: ಪ್ರಾಸಾದಿಗೆ ಪ್ರಸಾದಸ್ಥಲ (ಕೋಲಶಾಂತ. ೯೩-೦೬೬); ಲಿಂಗನಿಷ್ಠೆ ಮೊದಲಾದ ಸ್ಥಳಗಳ ಪರಿಜ್ಞಾನದಿಂದ ಆ ಆಚರಣವುಳ್ಳ ಸಮಸ್ತಪಾಪಪರಿಹಾರ ಮಾಡಿಕೊಂಡ ಮಾಹೇಶ್ವರನು ಮನೋನ್ಯವಮಲ್ಯಸಂಬಂಧದಿಂದ 'ಪ್ರಾಸಾದಿ' ಎನಿಸುವನು (ಶಾಶತ್ರ. ೬೭೭). [<ಸಂ. ಪ್ರಸಾದಿನ್]

42

**ಪ್ರಾಸಾದಿಕ** (ಗು). ೧. ಅನುಗ್ರಹಿಸುವ ; ಪ್ರಸನ್ನವಾದ : ಜಗತ್ತಿನಲ್ಲಿ ಇಂದಿನವರೆಗೆ ಶ್ರೇಷ್ಠರಾದ ಕವಿಗಳು 'ಆವೇಶ', 'ಪ್ರಾಸಾದಿಕವಾಣಿ' ಮೊದಲಾದವುಗಳ ಗೊಡವೆಗೆ ಹೋಗದೆ . . . ಅನುಪಮಸೌಂದರ್ಯವನ್ನು ನಿರ್ಮಿಸಿರುವರು (ಗೊಕ್ಕು.ಗು. ೩೩). ೨. ರಮ್ಯವಾದ; ಸುಂದರವಾದ. [ಸಂ.]

**ಪ್ರಾಸಾಭಾಸ** (ನಾ). ಪ್ರಾಸದಂತೆ ತೋರುವುದು ; ಪ್ರಾಸದ ಹಾಗಿರುವುದು : ಪ್ರಾಸಾನುಪ್ರಾಸಾಂತಪ್ರಾಸಂಗಳ್ಕೊಳುವತಿಶಯಂಗಳ್ಪ್ರಾಸಾಭಾಸಂಗಳಟಿದ ಮಾಡುಂ (ಕಇಶಾ. ೨-೯೩). [ಸಂ.]

**ಪ್ರಾಸಿಕ** (ನಾ). ಈಟಿಯನ್ನು ಹಿಡಿದಿರುವವನು : "ಪ್ರಾಸಿಕಃ, ಕೌಂತಿಕಃ – ಈ ೨ ಈಟಿಯೇ ಆಯುಧವಾಗಿ ಉಳ್ಳವನು, ಸಬಳಿಗನು" (ಸಿದ್ಧಾಂತಿ. ೨೩೬). [ಸಂ.]

**ಪ್ರಾಸು** (ನಾ). = ಪ್ರಾಸ ೩ : ಸನೇಮ = ಪ್ರಾಸು (ಕಶಬ. ೪. ೦೯ ಟೀಕು) : ಪದ ತಪ್ಪಿದರೆ ಪ್ರಾಸು ತಪ್ಪೀತೆ ? (ಗಾದೆ). [<ಸಂ. ಪ್ರಾಸ]

**ಪ್ರಾಸುಕ** (ಗು). ೧. ಹುಳಂಬೀಳದ; ಶುದ್ಧವಾದ : ಕಾಯಿಸಿ ಸೋಸಿದ ಸ್ವಚ್ಛನೀರು (ಪ್ರಾಸುಕ ಜಲ) (ಕೃತಕ. ೬೬). (ನಾ). ೨. ಹುಳು ಬೀಳದುದು ; ಶುದ್ಧವಾದುದು : ಭಟಾರಾ ಪ್ರಾಸುಕಮಪ್ಪ ನೀರಂ ಪೊಟ್ಟದೊಳ್ ಬಂದುದಂ ಕುಡಿದು ನಿಮ್ಮ ಸೇದೆಯನಾಱಿಸಿಂ (ವಡ್ಡಾ. ೦೦೩-೩೦). [<ಪ್ರಾ. ಫಾಸುಅ, ಫಾಸುಗ]

**ಪ್ರಾಸುಕಾಹಾರ** (ನಾ). ಹುಳಂಬೀಳದ ಆಹಾರ ; ಶುದ್ಧವಾದ ಆಹಾರ: ಜ್ಞಾನಸಂಯಮತಪೋನಿಮಿತ್ತಮಾಗಿ ಪರಕೃತಪ್ರಶಸ್ತಪ್ರಾಸುಕಾಹಾರಮಂ ರಾಗದ್ವೇಷಮಿಲ್ಲದುಂಬುದುಂ (ಕಕೂಪ್ಪ. ೨೯೩). [ಪ್ರಾಸುಕ + ಆಹಾರ]

**ಪ್ರಾಸ್ತಾವಿಕ** (ಗು). ೧. ಸಾಂದರ್ಭಿಕವಾದ; ಸಮಯಕ್ಕೆ ತಕ್ಕುದಾದ: ಅವನು ಉಚ್ಚಸ್ವರದಿಂದ ಮಿಕ್ಕ ಸಭಿಕರನ್ನು ಕುರಿತು ಪ್ರಾಸ್ತಾವಿಕ ಭಾಷಣ ಮಾಡಿದನು (೬೦೦೮. ೦೬೩). (ನಾ). ೨. ಸಮಯೋಚಿತವಾದುದು ; ಸಂದರ್ಭೋಚಿತವಾದುದು : ಈಗ ನಡೆಯುತ್ತಿರುವ ನಾಡ ಹಬ್ಬದ . . . ಸಮಾರಂಭದಲ್ಲಿ ಪ್ರಾಸ್ತಾವಿಕವಾದ ನಾಲ್ಕು ಮಾತುಗಳನ್ನು ಹೇಳಬೇಕೆಂದು ನನಗೆ ಕರೆ ಬಂದಾಗ ಮನಸ್ಸಿನಲ್ಲಿ ಮೊದಲು ಮೂಡಿದ ಭಾವಗಳೆಂದರೆ ಆಶ್ಚರ್ಯ ಮತ್ತು ಅಧೈರ್ಯ (ಕಪಾಠೋ. ೦೨೬.) [ಸಂ.]

**ಪ್ರಾಹ್ಣ** (ನಾ). ದಿನದ ಮೊದಲನೆಯ ಭಾಗ; ಬೆಳಗ್ಗೆ ; ಪ್ರಾತಃಕಾಲ. [ಸಂ.]

**ಪ್ರಾಲೇಯ** 'ಪ್ರಾಲೇಯ' ನೋ.

**ಪ್ರಾಲೇಯಾಚಲ, ಪ್ರಾಲೇಯಾಚಳ** (ನಾ). ಹಿಮದಿಂದ ಕೂಡಿದ ಬೆಟ್ಟ; ಹಿಮಗಿರಿ ; ಹಿಮಾಲಯ : ಪ್ರಸ್ಫುರತ್ಪ್ರಾಲೇಯಾಚಲವಿಘಾತನಪ್ಪ ಪೊಲಿಳಾಭೃನ್ನಾಥಂ (ಕಂಕಚಾ. ೦೯-೩೩). ಪ್ರಾಲೇಯಾಚಳ : ಪೊಗ ಪೆಟ್ಟು ಪ್ರಸನ್ನಕತಿಪಯಪ್ರಯಾಣಂಗಳಿಂ ಪ್ರಾಲೇಯಾಚಳಮಧ್ಯಮ ಕೂಟಮನೆಯ್ದುವಪುದುಂ (ಶಾಂತಿಪು. ೦೦-೩೬ ಪ). [ಸಂ. ಪ್ರಾಲೇಯಾಚಲ]

**ಪ್ರಾಲೇಯಾಚಳ** 'ಪ್ರಾಲೇಯಾಚಲ' ನೋ.

**ಪ್ರಿತುವಿ** 'ಪೃಥುವಿ'ನೋ.

**ಪ್ರಿಥಿವಿಸಾಗರ** (ನಾ). ಒಬ್ಬಾತನ ಹೆಸರು : ಶ್ರೀಪ್ರಿಥಿವಿಸಾಗರನ್ ಪಟ್ಟಂ ಗಟ್ಟಿಸಿ (ಎಇ. IX. ೦೯-೦ ; ಶು. ೩೦೦). [ಽ ಇದು 'ಪೃಥ್ವೀಸಾಗರ'ಎಂಬುದರ ಅಪಲಿಖಿತ]

**ಪ್ರಿಥುವಿ** 'ಪೃಥುವಿ' ನೋ.

**ಪ್ರಿನ್ಸಿಪಾಲ್** (ನಾ). ಉನ್ನತಶಿಕ್ಷಣಸಂಸ್ಥೆಯ ಮುಖ್ಯಸ್ಥ : ಪಾಠಶಾಲೆಗಳಲ್ಲೂ ವಿದ್ಯಾಶಿಕ್ಷಣಾದಿ . . . ಕೆಲಸಗಳನ್ನು ನೋಡಿಕೊಂಡಿರಲು ಪ್ರಿನ್ಸಿಪಾಲ್ ಎಂದೊಬ್ಬ ಅಧಿಕಾರಿಯನ್ನು ನಿಯಮಿಸಿದ್ದರು (೨೩೦ರು. ೩೩). [←ಇಂ. Principal]

**ಪ್ರಿಯ** (ಗು). ೧. ಅಕ್ಕರೆಯ ; ಪ್ರೀತಿಪಾತ್ರವಾದ ; ನಲ್ಮೆಯ. ೨. ಪದಾರ್ಥಗಳ ವಿಷಯದಲ್ಲಿ ಬೆಲೆ ಅಧಿಕವಾಗಿರುವ; ತುಟ್ಟಿಯ. (ನಾ). ೩. ಅಕ್ಕರೆ ; ಪ್ರೀತಿ; ವಾತ್ಸಲ್ಯ: ಪ್ರಿಯದಿಂದೆ ಮಹಾಕಾಳಾಹ್ವಯನೀಶಂ ನೆಲಸೆ ನಗರಿಯೊಂದಧಿಕಖ್ಯಾತಿಯಿನೆಸೆದು ತೋರ್ಪುದು (ಶಾಕಂಕು. ೨೧೦) ; ಕಿರಿದುಂ ಪ್ರಿಯದಿಂದಮೆ ಮುಂ ಪೆತ್ತವರಿರವಂ ಪೋಲ್ವುದು ಪುಟ್ಟಿದ ಶಿಶು (ಕಮುಶಾ. ೩-೩೪). ೪. ಹಿತವಾದುದು ; ಇಷ್ಟವಾದುದು : ಪ್ರಿಯಮಪ್ಪುದು ಧರ್ಮಂ ವೃಥ್ವಿಯ ಸೂನುವಿನಿಂದ ಧರ್ಮಮಂತದು ತಾನಪ್ರಿಯಮಪ್ಪುದು ತನಗೆ (ಪಂಪಭಾ. ೬-೩೩). ೫. ಒಳ್ಳೆಯದು; ಶುಭವಾದುದು: "ಪ್ರಾಗ್ರ್ಯಂ . . . ಪ್ರಿಯಂ . . . ಪೇಶಲಂ–ಈ ೨೯ ಒಳ್ಳಿತು" (ಕರಾಯು. ೦೧೯-೧). ೬. ಪ್ರೀತಿಪಾತ್ರನಾದವನು ; ನಲ್ಲ : "ವಲ್ಲಭಃ, ದಯಿತಃ, ಪ್ರಿಯಃ – ಈ ೩ ಕೂರ್ಪವಂ" (ಕರಾಯು. ೬೦-೨೦೨) ; ಆ ಜಯವಧುಗನಂತವೀರ್ಯಂ ಪ್ರಿಯನಾದೊಂ (ಶಾಂತಿಪು. ೪-೯೬). ೭. ಬೇಕಾದ ವ್ಯಕ್ತಿ ; ಆಪ್ತ ; ಆತ್ಮೀಯ : ನಿನ್ನವೋಲೆನಗಾರ್ತನುಂ ಪ್ರಿಯಂ (ಶ್ರೀರಾಮ. ೩೯-೦೬೦). ೭. ಬೆಲೆಯೇರಿಕೆ ; ತುಟ್ಟಿ : ಬಹಳ ಪ್ರಿಯವಾದ ಕಾಲದಲ್ಲಿ ಧಾನ್ಯವನ್ನೆಲ್ಲಾ ಮಾರಿ ನಾಲ್ಕಾರು ತಿಂಗಳು ಪೂರ್ತಿ ತಮಗೆ ಬೇಕಾದಷ್ಟು ಇಟ್ಟುಕೊಂಡಿರುವರು (ಕೃಶಿಕ್ಕ. ೯೩) ; ಎಂಥೆಂಥ ಪ್ರಿಯದ ಮಾಲುಗಳನ್ನು . . . ಕಡಿಮೆ ಬೆಲೆಗೆ ಕೊಂಡ ಸಾಹಸ ಹೇಳಿಯಾಯಿತು (ಹುಲಿಮು. ೯೨). [ಸಂ.]

**ಪ್ರಿಯಂಕರಿ** (ನಾ). ಒಂದು ಬಗೆಯ ಸಸ್ಯ ; ಹೆಗ್ಗುಳ್ಳ : "ಪ್ರಿಯಂಕರೀ– ಹಬ್ಬಾಲ, ಬಿಳಿಯ ನೆಲಗುಳ್ಳ" (೬ಶಧಿ. ೯೯). [ಸಂ. ಪ್ರಿಯಂಕರೀ]

**ಪ್ರಿಯಂಗು** (ನಾ). ೧. ಒಂದು ಬಗೆಯ ಸಸ್ಯ ; ನವಣೆ : "ಪ್ರಿಯಂಗುಃ, ಕಂಗು : – ಈ ೨ ನವಣೆ" (ಕರಾಯು. ೯೩-೪೨೬) ; ಅಭಿನವಪ್ರಿಯಂಗು ಶ್ಯಾಮಾಂಗಮರ್ಧಚಂದ್ರಬುದ್ಬುದವ್ಯಾಕೀರ್ಣಾತ್ರಿಶೂಲಕರಾಲವಿಶಾಲವೇತ್ರ ಪೇಟಕಂ (ಆದಿಪು. ೦೩-೯೩ ವ). ೨. ಒಂದು ಬಗೆಯ ಮರ : ಮಾಡಿದ ವೈವಾಹಕದಿಂ ಪ್ರಿಯಂಗುಫಲಮಕ್ಕುಂ (ಲೋಕೋಪ. ೬-೪೨) ; ರತಿಪ್ರಿಯನಂ ಪ್ರಿಯಂಗು ತನ್ನಲಗಣೆಯಿಂ ಜಗತ್ತ್ರಯಮುಮಂ ಗೆಲಿಸಿತ್ತು (ಜಗಂ. ೦೯-೬). ೩. ಒಂದು ಬಗೆಯ ಬಳ್ಳಿ : "ಶ್ಯಾಮವಲ್ಲೀ – ಪ್ರಿಯಂಗು" (೬ಶಧಿ. ೦೬೪). [ ಸಂ. ]

**ಪ್ರಿಯಂನುಡಿ** (ಕ್ರಿ). ಹಿತವಾದುದನ್ನು ಹೇಳು ; ಇಷ್ಟವಾದುದನ್ನು ತಿಳಿಸು: ಸಂಸ್ಕೃತದ ನಿತ್ಯಬಿಂದುಗೆ–ಗುಣಂಗೊಂಡಂ . . . ಪ್ರಿಯಂನುಡಿದಂ, ಧನಂಬಡೆದಂ (ಕಶಬ. ೦೬೬ ಕೃಯೋ). [ ಪ್ರಿಯ + ನುಡಿ₁ ]

**ಪ್ರಿಯಂಬಡಿಸು** (ಕ್ರಿ). ಹಿತವನ್ನುಂಟುಮಾಡು ; ತೃಪ್ತಿಪಡಿಸು : ಘನತರೋತ್ಸುಕಚಿತ್ತದಿಂ ಮೇದಿನಿಯೊರಸಲಭಿವಂದಿಸುತ ತಾನನುನಯೋಚಿತ ಸತ್ಕ್ರಿಯಾದಿಗಳಿಂ ಪ್ರಿಯಂಬಡಿಸಿ (ಐಕಜ. ೨೮-೬). [ಪ್ರಿಯ + ಪಡಿಸು]

**ಪ್ರಿಯಂವದ** (ನಾ). ೧. ಇಷ್ಟವಾದುದನ್ನು ಹೇಳುವುದು ; ಹಿತವಾದುದನ್ನು ನುಡಿಯುವುದು. ೨. ಇಷ್ಟವಾದುದನ್ನು ಹೇಳುವವನು ; ಹಿತವಾದುದನ್ನು ನುಡಿಯುವವನು : "ಶ್ಲಕ್ಷ್ಣಃ, ಪ್ರಿಯಂವದಃ –೨ ಪ್ರಿಯವನ್ನು ನುಡಿಯುವವನ ಪೆಸರುಗಳು" (ಸಿದ್ಧಾಂತಿ. ೩೩೨). [ಸಂ.]

**ಪ್ರಿಯಕ** (ನಾ). ೧. ಮೈಮೇಲೆ ಚುಕ್ಕೆಗಳುಳ್ಳ ಒಂದು ಬಗೆಯ ಜಿಂಕೆ; ಚಿಗರೆ. ೨. ಒಂದು ಬಗೆಯ ಮರ; ಹೊನ್ನೆ: "ಪೀತಸಾಲಕಃ . . . ಪ್ರಿಯಕಃ, ಜೀವಕಃ –೬ ಹೊನ್ನೇಮರದ ಹೆಸರುಗಳು" (ಸಿದ್ಧಾಂತಿ. ೦೨೨) ; ಪ್ರಿಯಾಳ ಪ್ರಿಯಕ ಕುರವಕಾಶೋಕ . . . ಭೂರ್ಜಾವಕೀರ್ಣಾಂ

(ಅರಗಣ. ೩-೩೩). ೩. ಒಂದು ಬಗೆಯ ಮರ; ಈಚಲು: "ನೀಪಃ, ಪ್ರಿಯಕಃ, ಕದಂಬಃ, ಹಲಪ್ರಿಯಃ – ೪ ಕಡಹದ ಗಿಡದ ಹೆಸರುಗಳು, ಈಚಲ ಗಿಡದಲ್ಲಿ ಉತ್ಪನ್ನಜಾತಿ" (ಸಿದ್ಧಾಂತಿ. ೮೫). ೪. ಒಂದು ಬಗೆಯ ಗಿಡ : ಪ್ರಿಯಂಗು : "ಪ್ರಿಯಕಃ-ಕಡವ, ಹೊನ್ನೆ, ಪ್ರಿಯಂಗು" (೬೫೦. ೯೮). [ಸಂ.]

**ಪ್ರಿಯಕರ** (ಗು). ೧. ಪ್ರೀತಿಯನ್ನುಂಟುಮಾಡುವ ; ಅಕ್ಕರೆಯನ್ನು ತೋರುವ. ೨. ಪ್ರೀತಿಗೆ ಪಾತ್ರವಾದ. (ನಾ). ೩. ಪ್ರೀತಿಯನ್ನುಂಟುಮಾಡುವುದಂ; ಅಕ್ಕರೆಯುಳ್ಳುದು : ಅವನಿಗೆ ತನ್ನ ತಾಯಿಯ ಜೀವ ನೂರು ಬಲೀಂದ್ರ ಹೋತಗಳ ಜೀವಕ್ಕಿಂತಲೂ ಹೆಚ್ಚು ಪ್ರಿಯಕರವ ಗಿತ್ತು (ಕಾಷೂರು. ೩೬೬). ೪. ಪ್ರೀತಿಯನ್ನು ತೋರುವವನು; ಪ್ರೇಮವುಳ್ಳವನು : ವಿಧುವಿಂದಂ ವಿಬುಧೋತ್ಕರಪ್ರಿಯಕರಂ ತೀವ್ರಾಂಶುವಿಂದಂ ಪ್ರತಾಪಧನಂ ದಳತ್ಪದ್ಮದಿಂದಧಿಕಶ್ರೀನಿಳಯಂ ಸುಪುತ್ರನೊಗೆತರ್ಕುಂ (ಪುಷ್ಪಕೃ. ೩-೧೨೨). ೫. ನಲ್ಲ; ಪ್ರೇಮಿ : ಆಕೆ ತನ್ನ ಪ್ರಿಯಕರನಿಗೊಂದು, 'ಕೊನೆಯ ಪತ್ರ' ಬರೆದಿಟ್ಟು 'ಆತ್ಮಹತ್ಯೆ' ಮಾಡಿಕೊಳ್ಳುತ್ತಾಳೆ (ಡೂಕಸಂ. ೩೯). [ಸಂ.]

**ಪ್ರಿಯಕಾರಿಣಿ** (ನಾ). ಪ್ರೀತಿಗೆ ಕಾರಣಳಾದವಳು ; ಪ್ರಿಯೆ : ಪ್ರಿಯಕಾರಿಣಿ ಭುವನಜನಪ್ರಿಯಕಾರಿಣಿ ನೆಗಟ್ಟಿ (ವರ್ಧಮಾ. ೧೧-೨೩). [ಸಂ. ಪ್ರಿಯಕಾರಿಣೀ]

**ಪ್ರಿಯಕಾವೇರಿ** (ನಾ). ಒಂದು ಬಗೆಯ ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧. ಗಬರು, ೧. ಪ್ರಿಯಕಾವೇರಿ (ಕಕ್ಕಲಾ. ೦೦೩). [?]

**ಪ್ರಿಯಗಳ್ಳ** (ನಾ). ಪ್ರೀತಿಯನ್ನು ಪಡೆದವನು; ಒಂದು ಬಿರುದು : ಅಮ್ಮನ ಗಂಧವಾರಣಂ ಪಡೆಮೆಚ್ಚೆಗಂಡಂ ಪ್ರಿಯಗಳ್ಳಂ[ಶಾಸಂ. ಪ್ರಗಳ್ಳಂ] ಗುಣನಿಧಿಗುಣಾರ್ಣವಂ (ಶಂಕಕಾ. ೦-೦೯೮ ವ): "ಪ್ರಿಯಳನ್ನು ಅಪಹರಿಸಿದವನು, ಅರ್ಜುನ ಸುಭದ್ರೆಯನ್ನು ಅಪಹರಿಸಿದಂತೆ" (ಶಂಷ್ಟೋ. ೩೩). 'ಗುಣಗಳ್ಳ' ಪರಾ. [ಪ್ರಿಯ + ಕಳ್ಳ$_1$]

**ಪ್ರಿಯಜನ** (ನಾ). ಆತ್ಮೀಯಜನ; ಆಪ್ತೇಷ್ಟರು : ಈ ವಿದ್ಯಾಧರ ಶ್ರೇಣಿಯ ಪರಿಭಾಷಗಳ್ ನಿನ್ನವಾಗದೆ ಸಾವಮಂ ಪ್ರಿಯಜನಪ್ರಯೋಜ್ಯಂ ಅಲ್ಲದೆಡೆಯೊಳುನ್ನತ್ತವಿಳಸಿತಂ (ಶಾಂತಿಪು. ೩-೬೪೩); ಪ್ರಿಯಜನದಿನಲ್ಲದಾಜು ಗುಮೆ ಯುವತಿಯ ವಿರಹಶಿಖಿ ಸಮೀಕೃತಶಿಶಿರಕ್ರಿಯೆಯಿಂ (ವರ್ಧಮಾ. ೮-೬೩). [ಸಂ.]

**ಪ್ರಿಯಜೀವ** (ನಾ). ಒಂದು ಬಗೆಯ ಮರ : "ಪ್ರಿಯಜೀವಃ— ಹೆಮ್ಮರ" (೬೫೦. ೯೯). [ಸಂ.]

**ಪ್ರಿಯತಮ** (ನಾ). ೧. ಅತಿಹಿತವಾದುದಂ ; ಅತ್ಯಂತ ಪ್ರೇಮವುಳ್ಳುದು : ಪ್ರಿಯತಮ[ಮಂ] ತಾಳ್ದಿದರಯನಮುಮಯರೇಖಾದ ಕಾಂಗವಮಂ ನಕ್ಷತ್ರ[ಂ] ಜಯಪಾಳಮಹಾಮುನಿ ಪಾಂಡುಯತಿ ದ್ರುಮಸೇನಸೂರಿ ಕಂಸಾ[ಚಾ]ರ್ಯರ್ (ವರ್ಧಮಾ. ೦೬-೪೯). ೨. ಪ್ರಿಯನಾದವನು; ನಲ್ಲ : ವಿರಹದಿಂ ಪ್ರಿಯತಮನಸಮಾಗಮಪ್ರತ್ಯಾಶೆ ಹೃದಯಮಂ ಬೇಯಿಸಲ್ಕೆ (ಕಣ್ವಾಂಗ. ೩೩-೦೫೦೦). ೩. ಅತ್ಯಂತ ಹಿತವಾದವನು; ಆಪ್ತ : ಪ್ರಿಯತಮನೆನಗು ರತ್ನತ್ರಯದೊಳ್ ನಿನ್ನಡಿಗೆ ತಡೆಯದೆಜಗಿಸು ಭುವನತ್ರಯವಮಂ (ಶಶಪು. ೬-೭೯); ಅನೀತನಂ ಸಕ್ಕಿ್ರಯಾನಲನಿಂ ಸುಟ್ಟನುಮಿಲ್ಲ ಮತ್ಪ್ರಿಯತಮಂ ಕರ್ಣಾಂಗಿದೇಂ ಕೂರ್ತನೋ (ಗದಾಯು. ೩-೪೦). [ಸಂ.]

**ಪ್ರಿಯತಮೆ** (ನಾ). ಪ್ರಿಯಳಾದವಳು; ನಲ್ಲೆ: "ನಲ್ಲಳನಿಯಳೊಪಳು ಕಾದಲೆಯೆನಲ್ಕೆ ಮನದನ್ನೆಯೆಂದೊಡಂ ಪ್ರಿಯತಮೆಗೆ ನಾಮಮಕ್ಕುಂ" (ಕಬ್ಬಸಾ. ೬೩); ಪ್ರಿಯತಮೆಯನಗಲ್ದ ಶರೀರಿಯ ಜೀವನಮೇವುದೊಂದು ಮರಣಮನಾಂ ನಿಶ್ಚಯಮಂ ಮಾಡುವ ಪದದೊಳ್ (ವಚಳು. ೯-೯೬). [ಸಂ. ಪ್ರಿಯತಮಾ]

**ಪ್ರಿಯಮಿತ್ರ** (ನಾ). ಬಹಳ ಪ್ರಿಯನಾದವನು ; ಪ್ರಾಣಮಿತ್ರ : ಪ್ರಿಯಮಿತ್ರನೆನಗೆ ಕಮಲಪ್ರಿಯನಂದನನವನನೆನ್ನ ಪಕ್ಕದೆ ತೇಜಸ್ವಿಯನಂ ತಾಡಿದನಾ ಕಳಶಯೋನಿ ನೆಗಟ್ಟಿಂದ್ರಸುತನಿನೇಗುಂದಿದನೋ (ಗದಾಯು. ೨-೧೯) ; ಪ್ರಿಯಮಿತ್ರ ಚಕ್ರವರ್ತಿಯ ಭಯದಿಂದುಗಿದರಿಕದಂಬದಂ ತಂಬುರುಹಪ್ರಿಯಬಿಂಬಂ ತೇಜದಳರ್ಕೆಯ ಬಿಸುಪಂ ಬಿಸುಟು ಮಗುಟ್ದು ತೋಱಿದುದಾಗಳ್ (ವರ್ಧಮಾ. ೯-೫೦). [ಸಂ.]

**ಪ್ರಿಯವಚ** (ನಾ). ಪ್ರೀತಿಯ ಮಾತು ; ನಲ್ನುಡಿ : ಪ್ರಿಯವಚದಂತೆ ಪುಣ್ಯಾತಿಯಂತೆ ಸುಧಾಕರನಂತೆ...ಹಂಪೆಯ ಹರಿದೇವಸುನ್ನತಕೃತಿಪ್ರಸರಂ ಭುವನೈಕಭಾಸುರಂ (ಗಿರಿ. ೦-೦೮). [ಸಂ.]

**ಪ್ರಿಯವಚನ** (ನಾ). = ಪ್ರಿಯವಚ : "ಚಟು(ಃ), ಚಾಟು(ಃ)—ಪ್ರಿಯವಚನಂ" (ಹಲಾಯು. ೨೪-೦೯೩); ಪ್ರಿಯವಚನಂಗಳಿಂ ಕರೆದು ಕೆಯ್ಯಂಗಿದು (ಧರ್ಮಾಮೃ. ೦-೯೦). [ಸಂ.]

**ಪ್ರಿಯವತಿ** (ನಾ). ಒಂದು ಬಗೆಯ ಸಸ್ಯ : "ಪ್ರಿಯವತೀ—ಹೊನಗನ್ನೆ" (೬೫೦. ೯೯). [ಸಂ. ಪ್ರಿಯವತೀ]

**ಪ್ರಿಯವನಿತೆ** (ನಾ). ಪ್ರೀತಿಪಾತ್ರಳಾದ ಸ್ತ್ರೀ ; ನಲ್ಲೆ : ಪ್ರಿಯವನಿತಾಚರನೊಗೆದಂ ಪ್ರಿಯತನಯಂ ಕೇಶವಾಂಕನಾದನಿದೇಂ ವಿಸ್ಮಯಕರಮೊ (ಅಂಪು. ೬-೩): ಪ್ರಿಯವನಿತಾಘನಸ್ತನದಿಚುಂಬನೊಳ್ . . . ಒಳಪೊಕ್ಕು ಕಾಮುಕಜನಂ ಬರ್ದುಕಿರ್ದುದು ಬಂದ ಮಾಗಿಯೊಳ್ (ಶಾಂತೀಶ್ವ. ೧೨-೮೬). [ಸಂ. ಪ್ರಿಯವನಿತಾ]

**ಪ್ರಿಯವಲ್ಲಿ** (ನಾ). ಒಂದು ಬಗೆಯ ಸಸ್ಯ : "ಪ್ರಿಯವಲ್ಲೀ—ಪ್ರಿಯಂಗು" (೬೫೦. ೯೯). [ಸಂ. ಪ್ರಿಯವಲ್ಲೀ]

**ಪ್ರಿಯವಾದಿನಿ** (ನಾ). ಹೆಣ್ಣು ಗಿಳಿ : "ಪ್ರಿಯವಾದಿನೀ—ಹೆಣ್ಣು ಗಿಳಿ" (೬೫೦. ೯೯). [ಸಂ. ಪ್ರಿಯವಾದಿನೀ]

**ಪ್ರಿಯವಾರ್ತೆ** (ನಾ). ಸಂತೋಷದ ಸುದ್ದಿ : ಈ ಪ್ರಿಯವಾರ್ತೆಯನ್ನು ನಾವು ತಿಳಿಸಲೇಬೇಕು (ಕಾಳಂತ. ೦೦೩-೮). [ಸಂ. ಪ್ರಿಯವಾರ್ತಾ]

**ಪ್ರಿಯಶೈಲ** (ನಾ). ಕಲ್ಲಿನ ಮೇಲೆ ಬೆಳೆಯುವ ಪಾಚಿ ; ಕಲ್ಲುಹೂವು : "ಪ್ರಿಯಶೈಲಂ—ಕಲ್ಲ ಹೂ" (೬೫೦. ೯೯). [ಸಂ.]

**ಪ್ರಿಯಸಂಭಾಷಣ** (ನಾ). ಹಿತವಾದ ಸಲ್ಲಾಪ,—ಸಂವಾದ : ಪ್ರಿಯಸಂಭಾಷಣಸಹಿತಂ ಬಯಸಿದುದಂ ಪರಿಜನಕ್ಕೆ ಸಾಲ್ಪಿನಮಿತ್ತ ಪ್ರಿಯಮಂ ಪುಟ್ಟಿಸಿದಂ ಸುರಭಿಯೊಳೇನೌದಾರ್ಯನಿಧಿಯೊ ಜನಕನರೇಂದ್ರಂ (ಶಂರಾಮಾ. ೩-೪೦); ಪ್ರಿಯಸಂಭಾಷಣದಿಂದಾತನಂ ಸಂತೋಷಂಬಡಿಸುತ್ತುಂ (ಕಾರಪು. ೦೦-೦೯ ವ). [ಸಂ.]

**ಪ್ರಿಯಸಖ** (ನಾ). ೧. = ಪ್ರಿಯಮಿತ್ರ : ಒರ್ವನೆ ಪೋಗಿ ಕಾಣ್ಕೆಯಿಂ ಭೋಂಕನೆ ಮಾಟಿಸ್ಪಿಂ ಪ್ರಿಯಸಖಂಗೆ ಸಂತಸದೊದವಂ (ಕಾದಂಕಾ. ೯೩೩); ಪ್ರಿಯಸಖನಿಂತೆನೆ ಸಲಿಲಾಶಯಕ್ಕೆ ತದ್ರಾಜಹಂಸನೊಯ್ಯನೆ ಮುದಿತಾಶಯನಾಗಳ್ ನಡೆದಂ (ಲೀಲಾವ. ೩-೩೯). ೨. ಖದಿರವೃಕ್ಷ. [ಸಂ.]

**ಪ್ರಿಯಸಖಿ** (ನಾ). ಪ್ರೀತಿಪಾತ್ರಳಾದ ಗೆಳತಿ,—ಸ್ನೇಹಿತೆ : ಮದೀಯ ಪ್ರಿಯಸಖಿಯ ಕೂರ್ಮೆಯ ತೊಡರ್ವಂ ಪಱಿದು (ಕಾದಂಕಾ. ೩೯೩) ; ಯಾಮಿನೀಪ್ರಿಯಸಖಿಯೆ, ಹೇ ಸ್ವಪ್ನಕಾಮಿನಿಯೆ, ಲಲನೆಯಾತ್ಮದೊಳಾವ ಕಮನೀಯನಾಕಮಂ ಕಟ್ಟುತಿಹೆ (ಕಣ್ವಾಂಗ. ೩-೩೩). [ಸಂ. ಪ್ರಿಯಸಖೀ]

**ಪ್ರಿಯಸ್ರಾಹೆ** (ನಾ). ಒಂದು ಬಗೆಯ ನಾಣ್ಯ (?) : ಪರಿವರ್ತ್ಯನಕ್ಕೆ ಸಲುವ ಪ್ರಿಯಸ್ರಾಹೆ ನಿಜಗಟವರಹ ಗದ್ಯಾಣ ಗ ೩೦ (ಹ್ಯಕಂ. ೦೯೩೦. ೦೦-೦೬; 1585). [?]

**ಪ್ರಿಯಾಂಬು** (ನಾ.) ಮಾವಿನ ಮರ : "ಪ್ರಿಯಾಂಬುಃ —ಮಾವು" (ಒಶಂ. ೯೮). [ಸಂ.]

**ಪ್ರಿಯಾಲ,** ಪ್ರಿಯಾಳ (ನಾ). ಒಂದು ಬಗೆಯ ಸಸ್ಯ : "ರಾಜಾದನಂ, ಪ್ರಿಯಾಲಃ, ಸನ್ನಕದ್ರುಃ, ಧನುಃಪಟಃ —ಮೊರಟೀಗಿಡ, ಮೊರಟೇಗಿಡ" (ಸಿದ್ಧಾಂತಿ. ೦೦೯). ಪ್ರಿಯಾಳ : "ಪ್ರಿಯಾಳಂ_ಚಾರುಬೀಜ" (ಒಶಂ. ೯೮). [ಸಂ.]

**ಪ್ರಿಯಾಳ** 'ಪ್ರಿಯಾಲ' ನೋ.

**ಪ್ರಿಯೆ** (ನಾ). ೧. ಪ್ರೀತಿಪಾತ್ರಳಾದವಳು ; ನಲ್ಲೆ : "ನಲ್ಲಳೆ ನಲ್ಲಂದನುನಯದಿಂ ಪ್ರಿಯೆ'' (ಆದಿಪು. ೦೬೩); ಪ್ರಿಯೆ ತನಗೆಂಬುದಂ ಬಗೆಯದೆನ್ನವಂ ಪಿಡಿಗಿಕ್ಕಿ ಪೋಗಿ ಸಂಜೆಯೊಳನುರಕ್ತನಾಗಿ ನೆರೆದಿರ್ದಪಂ (ಮಲ್ಲಿಪು. ೭-೦೯): ಪ್ರಿಯೆ ಮಿಗೆ ನೋಡಿ ತನ್ನ ಪೊಸವೇಷಮಾನಕ್ಕಟ ಪೊಳ್ಳುಪೋದುದನ್ನೆಯ್ದುವನದೆಂತು ಸೈರಿಪಂ . . . ಎನುತ್ತೆ (ಕೃ.ಚ. ೦೬-೭೯). ೨. ಪ್ರೀತಿ; ವಾತ್ಸಲ್ಯ; ಅಕ್ಕರೆ : ನಿನಗೆ ಪ್ರಿಯೆಯಿಂದಿತ್ತ ಜ್ಞಾನಾಂಜನದ ಬೀಜವನಿನ್ನು ಸದ್ಭಾವನದ ಸಜ್ಜನಭೂಮಿಯಲಿ ನೀ ಬಿತ್ತಿ ಪರಸುಖದ ಫಲವಳೆಯನನುಗೈದು ಜನಪಾವನರಿಗುಣಬಡಿಸು (ಗಗಶಾ. ೦೭-೯೬). ೩. ಹೆಂಗಸು ; ಸ್ತ್ರೀ. ೪. ಸಣ್ಣ ಏಲಕ್ಕಿ. ೫. ಸಮಾಚಾರ; ವಾರ್ತೆ. ೬. ಮಾದಕಪಾನೀಯ. ೭. ಒಂದು ಬಗೆಯ ಮಲ್ಲಿಗೆ. [ಸಂ. ಪ್ರಿಯಾ]

**ಪ್ರಿಯೋದ್ಭವ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ಗರ್ಭಿಣಿಯು ಹೆತ್ತ ಮೇಲೆ ಮಾಡಬೇಕಾದ ಕರ್ಮ; ಜಾತಕರ್ಮ : ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ . . . ನಿರ್ವೃತಿಯೆಂಬಯ್ವತ್ತುಮೂರು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಅಂಪು. ೦೩-೦೫ ವ). [ಸಂ.]

**ಪ್ರೀಣನ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಪಡಿಸುವಿಕೆ : "ತರ್ಪಣಂ, ಪ್ರೀಣನಂ, ಅವನಂ—೩ ತೃಪ್ತಿ ಹೊಂದಿಸುವಿಕೆ'' (ಸಿದ್ಧಾಂತಿ. ೩೩೩); ಬುಧಜನಪ್ರೀಣನಾಗ್ರೇಸರಗ್ರಾಮಣಿಯಾದಂ (ಅಜಿಪು. ೦೨-೦೫). ೨. ತೃಪ್ತಿಗೊಳಿಸುವಂತಹುದು : ಪ್ರೀಣನಮಾದುದು ಮುನಿಗೀರ್ವಾಣ ಮುಖಾಂಬುಜಮನದರ್ದಿರಲ್ ಶೈಶವದೊಳ್ ವಾಣೀವಧು ನಿಜಾಸದ ನಿಶ್ರೇಣಿಯುಮೊಲ್ ಶ್ರುತದ ಠವಣೆಕೋಲ ವಿಳಾಸಂ (ಅನಂಪು. ೩-೩೦). ೩. ಅನ್ನ : "ಪ್ರೀಣನಃ—ಅನ್ನ" (ಒಶಂ. ೦೦೦). [ಸಂ.]

**ಪ್ರೀಣನಕರ** (ಗು). ೧. ಪ್ರೀತಿಯನ್ನುಂಟುಮಾಡುವ; ಆನಂದಕರವಾದ. (ನಾ). ೨. ಆನಂದಕರವಾದುದು : ಪ್ರಾಣಿಹಿತಮಂ ವಿನೇಯಪ್ರೀಣನಕರಮಂ ಆದಿಪುರಾಣಮನಪರಿಮಿತಭಕ್ತಿಯಿಂ ವಿರಚಿಸುವೆಂ (ಅಂಪು. ೦-೮೨) ; ಜಾಣಿನ ಬೆಡಂಗು ವಿಬುಧಪ್ರೀಣನಕರಮೆನಿಸಿ ನೇರ್ಪು ನೇರ್ಪೊಡೆ ಪೇಳ್ವೆಂ (ಸುಕುಸಚ. ೦-೩೯). [ಸಂ.]

**ಪ್ರೀಣಿತ** (ಗು). ಸಂತೋಷಗೊಳಿಸಿದ : ಆನಂದಪಡಿಸಿದ : ಪರಮಂ ಪ್ರೀಣಿತವಸ್ತುಸ್ವರೂಪಮಂ ನವಪದಾರ್ಥಮಂ ನಂಬುಗೆಯಿಂ ಪರಿಭಾವಿಸಿದಂ ಯೋಗೀಶ್ವರನಾಜ್ಞಾನಿಚಯಮಂ ಶುಭಧ್ಯಾನಪರಂ (ಮಲ್ಲಿಪು. ೧೯-೬೦). [ಸಂ.]

**ಪ್ರೀತ** (ಗು). ೧. ತೃಪ್ತಿಹೊಂದಿದ; ತಣಿದ. ೨. ಸಂತೋಷಗೊಂಡ; ಹರ್ಷಗೊಂಡ. (ನಾ). ೩. ತೃಪ್ತಿ ಹೊಂದಿದವನು ; ಸಂತುಷ್ಟನಾದವನು : ಈತನೆಮ್ಮಯ ಬಂಧು ಕೃತವಾಳಸುರನು ವಿನೀತನು ನಿನ್ನ ಸೇವೆಯೊಳು ಪ್ರೀತನು (ಕಲೆ. ೨೯-೦೦೦). ೪. ಸಂತೋಷಗೊಂಡವನು ; ಹರ್ಷಿತನಾದವನು : "ಹೃಷ್ಟಃ . . . ಪ್ರಮುದಿತ, ಪ್ರೀತಃ—೬ ಸಂತೋಷಪಟ್ಟವನು'' (ಸಿದ್ಧಾಂತಿ. ೩೩೦); ಭಂಗಿ ಭಾಷಿತದಿನಾತನಂ ಪ್ರೀತನಂ ಮಾಡಿ (ಪುಣ್ಯಪು. ೭-೯೯ ವ). ೫. ಪ್ರಿಯನಾದವನು : ನವಿಲುಗರಿಯ ನವನೀತಚೋರನಾಬಾಲವೃದ್ಧಪ್ರೀತ (ಕಂಠು. ೩೯-೮). [ಸಂ.]

**ಪ್ರೀತಿ** (ನಾ). ೧. ಸುಖ ; ಸಂತೋಷ ; ಆನಂದ : "ಪ್ರಮೋದಃ, ಪ್ರಮುದಃ, ಹರ್ಷಃ, ಪ್ರೀತಿಃ . . . ಸುಖಂ—ಈ ೧೩ ಸುಖದ ಪೆಸರ್" (ಕಣಾಯು. ೩೦-೦೨೩) ; ಪ್ರೀತಿಮಿಗೆ ಶಂಖಿಪಟಹವಿನೂತೋದ್ದುರ ಸಿಂಹಘಂಟಿಕಾನಿಸ್ವನಸಂಕೇತದೆ . . . ವೈಮಾನಿಕಾಮರರ್ನೆರೆತಂದರ್ (ಸುಕುಸ. ೯-೬೯). ೨. ಗೆಳೆತನ; ಸ್ನೇಹ: "ಸಖ್ಯಂ . . . ಪ್ರೀತಿಃ . . . ಸಭಾಜನಂ—ಈ ೯ ಕೆಳೆ" (ಕಣಾಯು. ೦೦೭-೨೦) ; ರುಕ್ಮಿಣಿಯ ಮುಂದೆನ್ನೊಂದು ಸೌಭಾಗ್ಯಮಂ ಪರಿಹಾಸಂಗೆಯ್ಯುತಿರ್ಪ ನಾರದನ ಮಾತಂ ಪ್ರೀತಿಯಿಂ ಕೇಳ್ದು (ಜಗಂ. ೦೨-೦೦೩). ಜಗನ್ನಾಥನು . . . ಸ್ವಲ್ಪ ಕಾಲದಲ್ಲಿಯೇ ಯಜಮಾನನ ಪ್ರೀತಿಯನ್ನು ಸಂಪಾದಿಸಿದನು (ಕುಂಜಾಬು. ೯-೩೦). ೩. ಅನುರಾಗ ; ಒಲವು ; ಪ್ರೇಮ : ತನ್ನ ಪ್ರೀತಿಯ ಸಮಸ್ಯೆಯನ್ನು ತನ್ನಿಂದ ಸಹ ಬಚ್ಚಿಡಲು ಪ್ರಯತ್ನಿಸುವ ನರಹರಿ ಅದನ್ನು ಪಾಟಣಕರನೆದುರಿಗೆ ಬಿಚ್ಚುವದು ಹೇಗೆ ಸಾಧ್ಯ ? (ಸಮುಣ. ೨೩೨). ೪. [ಜ್ಯೋತಿ] ಇಪ್ಪತ್ತೇಳು ಬಗೆಯ ಯೋಗಗಳಲ್ಲಿ ಎರಡನೆಯದು : ಪ್ರೀತಿಯೋಗಕೆ ವೀರ ೨೪ ಗಳಿಗೆ ಮೇಲೆ ತ್ಯಾಜ್ಯ (ಶಾಸ್ವಾರ. ೬೦-೩); ವಿಷ್ಕಂಭ ಪ್ರೀತಿ . . . ವೈಧೃತಿಗಳೆಂಬಿಪ್ಪತ್ತೇಳುಯೋಗಂಗಳುಂ (ಶಿವೆ. ೩೨೦). ೫. [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; ಗರ್ಭವತಿಯಾದ ಮೂರನೆಯ ತಿಂಗಳಲ್ಲಿ ಮಾಡುವ ಜಿನಪೂಜೆ: ಆಧಾನ ಪ್ರೀತಿ ಸುಪ್ರೀತಿ . . . ನಿರ್ವೃತಿಯೆಂಬಯ್ವತ್ತುಮೂರು . . . ಗರ್ಭಾನ್ವಯಕ್ರಿಯೆಗಳುಂ (ಅಂಪು. ೦೩-೦೫ ವ) ; ಆಧಾನಮುಂ ಪ್ರೀತಿಯುಂ . . . ಅಗ್ರನಿವೃತ್ತಿಯುಮೆಂದಾಧಾನಾದಿ ನಿರ್ವಾಣಪರ್ಯಂತಮಪ್ಪಯ್ವತ್ತುಮೂರು ಗರ್ಭಾನ್ವಯಕ್ರಿಯೆಯೊಳ್ (ಚಾಪುಂಪು. ೨೦೨). [ಸಂ.]

**ಪ್ರೀತಿಂಕರವಿಮಾನ** (ನಾ). [ಜೈನ] ಒಂದು ಸ್ವರ್ಗದ ಹೆಸರು : ಸಿಂಹಚಂದ್ರಚಾರಣರುಂ . . . ಊರ್ಧ್ವಗ್ರೈವೇಯಕದೊಳ್ ಪ್ರೀತಿಂಕರವಿಮಾನದೊಳ್ ಅಹಮಿಂದ್ರನಾದೊಂ (ಚಾಪುಂಪು. ೦೩೯). [ಸಂ.]

**ಪ್ರೀತಿಪಾತ್ರ** (ನಾ). ಪ್ರಿಯವಾದ ವ್ಯಕ್ತಿ : ಜಾತೆ, ಪತಿಗೆ ಪ್ರೀತಿಪಾತ್ರಳಾಗು! (ಶಾಕುಂತ. ೩೦-೦೩) ; ಉದಿಪುರಿ ಪ್ರಧಾನಮಹಿಷಿಯಲ್ಲದಿದ್ದರೂ ಅತ್ಯಂತ ಪ್ರೀತಿಪಾತ್ರಳಾದ ಮಹಿಷಿ (ಔಂಕಸು. ೨೯೩). [ಸಂ.]

**ಪ್ರೀತಿಬಡು** ' ಪ್ರೀತಿವಡು ' ನೋ.

**ಪ್ರೀತಿಭೂಮಿ** (ನಾ). (ಆಲಂ) ಪ್ರೇಮಕ್ಕೆ ಪಾತ್ರಳಾದ ಹೆಂಗಸು ; ಪತ್ನಿ : ಹಿರಣ್ಯಪುರಮನಾಳ್ವ ಗರುಡವೇಗಂಗಂ ತದ್ವಿಯ ಪ್ರೀತಿಭೂಮಿ ಪ್ರೀತಿಷೇಣಗಂ ಮಕ್ಕಳಿಂದ್ರತಿಲಕನುಂ ನಭಸ್ತಿಲಕನುಂ (ಶಾಂತಿಪು. ೯-೯೯ ವ). [ಸಂ.]

**ಪ್ರೀತಿವಡು**, ಪ್ರೀತಿಬಡು (ಕ್ರಿ). ೧. ಅಕ್ಕರೆಯನ್ನು ತೋರಿಸು; ಪ್ರೀತಿಸು : ಆ ಯತಿನಾಯಕನೊಂದು ಸಾರಮೋಯಿಶಿಖುವಂ ಕಂಡು ಪ್ರೀತಿವಟ್ಟು (ಕಂತಕಂ. ೨೬೦-೦೯) ; ಅಬ್ಬರ್ತನನೆ ಪ್ರೀತಿವಟ್ಟಂಗಳ್ಕು ಮಿಸುಪ ನಾಮಂ (ಕಬ್ಬಿಗ. ೭೯). ಪ್ರೀತಿಬಡು : ೨. ಇಚ್ಛಿಸು; ಬಯಸು: ಅನಂಗಸೌಂದರಿಯಾ ಪದಕದ ಮೇಲೆ ಪ್ರೀತಿಬಟ್ಟು . . . ತಂದೀವುದೆಂದು ಲಲ್ಲೆಗೈದು ಪ್ರಾರ್ಥಿಸುವುದುಂ (ಧರ್ಮಾಮೃ. ೨-೦೦೬). [ಪ್ರೀತಿ + ಪಡು]

**ಪ್ರೀತಿಸು** (ಕ್ರಿ). ಅಕ್ಕರೆಯನ್ನು ತೋರು : ಅವರುಗಳು ನನ್ನನ್ನು ಪ್ರೀತಿಸುತ್ತಿದ್ದುದಲ್ಲದೆ ಗೌರವದಿಂದಲೂ ವರ್ತಿಸುತ್ತಿದ್ದರು (ಕಂಗಾಳ. ೯೭); ನನ್ನ ಕಕ್ಕನು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದನು (ಕೃಕಕ್ಕ. ೯೭). [ಪ್ರೀತಿ + — ಇಸು]

**ಪ್ರೀಯ** (ನಾ). ಅಕ್ಕರೆ; ಪ್ರೀತಿ: ಪ್ರೀಯದೆ ಬಂದು ನಿನ್ನ ಮನಮೊಲ್ದಲ

ರೋಳಿಗಳಿಂ ವಿಚಿತ್ರಶೋಭಾಯುತಭೂಷಣಪ್ರಸರವಂ ಸಮೆದು (ಶಾಂತೀಶ್ವ. ೦೦-೩೮). [<ಸಂ. ಪ್ರಿಯ]

**ಪ್ರೇಂಖ** (ನಾ). ೧. ಉಯ್ಯಾಲೆ. ೨. ನಾಟ್ಯ ; ನೃತ್ಯ : "ಉಯ್ಯಲೊಳು ನೃತ್ಯದೊಳು ಪ್ರೇಂಖಮಪ್ಪುಂ" (ಶಬ್ದಮ. ೦೫೬-೬೬). ೩. ಹೊಳಪು ; ಪ್ರಕಾಶ: "ನೃತ್ಯ ಮಾಯ್ಯಲುಂ ಪೊಳಪಿವು ಪ್ರೇಂಖ ಶಬ್ದ" (ಶಾಬಾರ. ೦೫೦). [ಸಂ.]

**ಪ್ರೇಂಖಣ** (ನಾ). ೧. ತೂಗಾಟ ; ತೂಗಾಡುವುದು. ೨. ಉಯ್ಯಾಲೆ. ೩. ಒಂದು ಬಗೆಯ ಮರ : ಜಾಯಿಕಾಯಿ, ಪ್ರೇಂಖಣ, ತಾಳೀಸಪತ್ರೆ . . . ಜೇನುತುಪ್ಪದಲ್ಲಿ ಸೇವಿಸಲು ಅಶ್ಮರೀ, ಮೂತ್ರಕೃಚ್ಛ್ರ, ಗರ್ಭವಾತ ಸಹ ಮಾಣುವುವು (ಕಳ್ಯಾ. ಶಂ. ೯೯೬). ೪. [ನಾಟ್ಯ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು ; ಸೂತ್ರಧಾರನಿಲ್ಲದ ಏಕಾಂಕ ನಾಟಕ : ನಾಟಿಕಾ . . . ೯ ಪ್ರೇಂಖಣ . . . ೧೮ ಭಾಣಿಕಾ—ಎಂದು ಉಪರೂಪಕಗಳು ಹದಿನೆಂಟು ವಿಧ (ಸಂಶಾಟಿ. ೩೨). [ಸಂ.]

**ಪ್ರೇಂಖಿತ** (ಗು). ೧. ಅಲ್ಲಾಡುವ; ತೂಗಾಡುವ : ಮಣಿಪ್ರಭಾಪ್ರೇಂಖಿತ ರಥ್ಯಾಮಂಡನಮಂ ಕಂಡಂ (ಶಾಂತಿಪು. ೬೦೬); ಪ್ರೇಂಖಿತ ಶಂಖಸಮುದಾಯಮೆ ಬೆಳ್ದಾವರೆಗಳಾಗೆಯುಂ (ಜಗ. ೦೯-೯೯ ವ). (ನಾ). ೨. ತೂಗಾಟ; ಅಲ್ಲಾಡುವುದು : "ಪ್ರೇಂಖೋಳಿತಂ, ತರಳಿತಂ, ಪ್ರೇಂಖಿತಂ, ಲುಳಿತಂ—ಈ ೪ ಅಲ್ಲಾಡುವುದು" (ಕಹಾಯು. ೦೫೩-೬೦). ೩. ಉಯ್ಯಾಲೆ. [ಸಂ.]

**ಪ್ರೇಂಖೋಲ** (ನಾ). ೧. ಅಲ್ಲಾಡುವಿಕೆ ; ತೂಗಾಟ ; ಒಲೆದಾಟ : ಉದ್ವೀಚಿಮರುಮರೀಚಿನಿಚಯಚಂಚಲೋದ್ದಾಮಬಲಬಹುಲನಿಷ್ಪವಚವ್ರಾಸಪಾಣಿವಾರಾಶಿ ಕವಮುಗ್ರವುಂಖ ಪ್ರೇಂಖೋಲಾನೇಕನೇತ್ರಪಟ್ಟಿಕಾ . . . ಲಾಟಬಲಂ (ಅಂಕು. ೦೬-೯೩ ವ). ೨. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಸಲೆ ಡೋಲ ಪಾದಚಾರಿಯೆನೊಲವಿಂದಂ ಮಾಡೆ ಪದದೆ ಮತ್ತೊಂದು [ಪದಂ] ಕಲದಿಂದೆ ನೆಗೆದು ತಿರುಗಲ್ ಲಲನೇ ಪ್ರೇಂಖೋಲ ಕರಣಮೆಂದೆನಿಸಿರ್ಕುಂ (ಛಾಸ್ಯಕಂ. ೯-೦೯೦). [ಸಂ.]

**ಪ್ರೇಂಖೋಲನ**, ಪ್ರೇಂಖೋಳನ (ನಾ). ೧. ಒಲೆತ ; ತೂಗಾಟ ; ಒಲೆದಾಟ: "ಪ್ರೇಂಖೋಲ[ಶಾಶಂ. ೪]ನಂದೋಳಮೆನಲದೊಲಿಹಿಂಗಳ್ಕು" (ಶುಂಗಣ. ೦೫೬-೬೯). ೨. ತೂಗುಮಣೆ ; ಉಯ್ಯಾಲೆ ; ಜೋಕಾಲಿ. ಪ್ರೇಂಖೋಳನ : ೧. "ಡೋಲಾ, ಪ್ರೇಂಖೋಳನಂ, ಪ್ರೇಂಖಾ—ಈ ೩ ಅಲ್ಲಾಟಂ" (ಕಹಾಯು. ೦೫೬-೬೮); ಅಗಲ್ ಪ್ರೇಂಖೋಳನವಿಳಾಸದಿಂದಾ ಸರಮಂ ಲೀಲಾಸರಮನುತ್ತರಿಸುವಂತುತ್ತರಿಸಿ (ಶಂಕ್ರಪು. ೩-೯೩೮). [ಸಂ.]

**ಪ್ರೇಂಖೋಲಿತ**, ಪ್ರೇಂಖೋಳಿತ (ಗು). ೧. ಅಲ್ಲಾಡುವ; ತೂಗಾಡುವ: ಅತಿಪ್ರಚುರಚಲದವನಿಪಾಲ ಸಂಚಲಚ್ಚಾಮರಮರುತ್ಪ್ರೇಂಖೋಲಿ[ಶಾಶಂ. ೪]ತಾಧರಣವಿಚಿತ್ರನೇತ್ರವೈಜಯಂತಿಕಾಂಚಲನುಂ . . . ನಡೆಯ (ಅಂಕು. ೦೨-೬೦ ವ). (ನಾ). ೨. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; "ಒಂದು ಕಾಲಿನಿಂದ ಡೋಲಪಾದಚಾರಿಯನ್ನು ಮಾಡಿ ಇನ್ನೊಂದು ಕಾಲಿನಿಂದ ನೆಗೆದು ಸುತ್ತುವುದು" (ಛಾಸ್ಯಕಂ. ೩೦೦ ಗದ್ಯಾನುವಾದ): ಪ್ರೇಂಖೋಲಿತ ಸಲೆ ಡೋಲಪಾದಚಾರಿಯ ನೊಲವಿಂದಂ ಮಾಡೆ ಪದದೆ ಮತ್ತೊಂದು [ಪದಂ] ಕಲದಿಂದೆ ನೆಗೆದು ತಿರುಗಲ್ ಲಲನೇ ಪ್ರೇಂಖೋಲಕರಣಮೆಂದೆನಿಸಿರ್ಕುಂ (ಛಾಸ್ಯಕಂ. ೯-೦೫೮). ಪ್ರೇಂಖೋಳಿತ : ೩. [ಕಾಮಶಾ] ಸಂಭೋಗದಲ್ಲಿ ಒಂದು ಬಗೆ : ಪಟ್ಟಿಹಿನೆಯನ ತಿಗಂ ಮುಟ್ಟೆ ಸತಿ ಮೊಳಕಾಲನಿಟ್ಟೊವ್ಮೆಯೊಮ್ಮೆ ಕಟಿಯುನೆ ಕಾಲ್ಗಳಿಂ ಮೆಟ್ಟಿ ಕಿಬ್ಬರಿಗಳನೆ ತಟ್ಟಿ ಮರ್ಮಾಂಗಳಂ ಮುಟ್ಟಿ ರಮಿಸಲ್ಕದೇ ಪ್ರೇಂಖೋಳಿತಂ (ಜವಪ. ೦೦-೦೦). [ಸಂ.]

**ಪ್ರೇಂಖೋಳನ** 'ಪ್ರೇಂಖೋಲನ' ನೋ.

**ಪ್ರೇಂಖೋಳಿತ** 'ಪ್ರೇಂಖೋಲಿತ' ನೋ.

**ಪ್ರೇಕ್ಷಕ** (ನಾ). (ನಾಟಕ, ಸಿನಿಮಾ, ನೃತ್ಯ ಮೊದಲಾದುವುಗಳನ್ನು) ನೋಡುವವನು; ನೋಟಕ : ಆಯಾ ಶ್ರೇಣಿಯ ಪ್ರೇಕ್ಷಕರಿಗೆ ತಕ್ಕ ಹಾಗೆ ಬೇರೆ ಬೇರೆಯ ಸ್ಥಲವು ಏರ್ಪಟ್ಟಿತು (ಅಕ್ಕಿ.ಕ. ೬೦). [ಸಂ.]

**ಪ್ರೇಕ್ಷಣ** (ನಾ). ೧. ಕಣ್ಣು. ೨. ನೋಡುವಿಕೆ ; ನೋಟ : "ಪ್ರೇಕ್ಷಣಂ ವೆಕ್ಕಣಂ ನೋಟಂ" (ಕಕ್ಕಿ. ೩೮); ಪ್ರೇಕ್ಷಣ – ವೆಕ್ಕಣ (ಶಬ್ದ. ೩೨ ಪ್ರಯೋ). ೩. ಪ್ರದರ್ಶನ; ದೃಶ್ಯ. ೪. ಒಂದು ಬಗೆಯ ನೃತ್ಯ ಪ್ರದರ್ಶನ : ಪ್ರೇಕ್ಷಣಮಂ ಮುದದಿಂ ಬಂದೀಕ್ಷಿಪ ವಿಟತತಿಯ ಕಣ್ಗೆ ಬಲೆಯೆನಿಸಿದ ಕಂಜಾಕ್ಷಿಯರಿರೆ ಪಲರಲ್ಲಿ ವಿವಕ್ಷಿತನಾ ಚಾರುದತ್ತನಧಿವೀಕ್ಷಿಸಿದಂ (ಜೀವಂಧ. ೪-೯೬). [ಸಂ.]

**ಪ್ರೇಕ್ಷಣೀಯ** (ಗು). ನೋಡಲು ಅರ್ಹವಾದ ; ನೋಡಬೇಕಾದ ; ರಮ್ಯವಾದ : ಆ ದಿನವನ್ನೆಲ್ಲ . . . ಮುಂಬಯಿಯಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದರಲ್ಲಿ ಅವರು ಕಳೆದರು (ಕರ್ಮ. ೦೦೫೯). [ಸಂ.]

**ಪ್ರೇಕ್ಷಾಗಾರ** (ನಾ). ನಾಟಕ ಮುಂತಾದುವುಗಳ ಪ್ರದರ್ಶನಸ್ಥಳ : ಅಲ್ಲಿ ಪ್ರೇಕ್ಷಾಗಾರವನ್ನು ಕಟ್ಟಿಸಿ ಅದರಲ್ಲಿ ರಾಜನೂ ಅರಮನೆಯ ಹೆಂಗಸರೂ ಕುಳಿತುಕೊಳ್ಳುವುದಕ್ಕೆ ಮಂಚಗಳನ್ನು ರಚಿಸಿದನು (ಪಕಾ. ೨೨) ; ಪ್ರೇಕ್ಷಾಗಾರವು ಚಿತ್ರವಿಚಿತ್ರವಾದ ಶಿಲ್ಪಕಾರ್ಯದಿಂದಲೂ ನಾನಾವರ್ಣದ ಮಣಿಗಳಿಂದಲೂ ಶೋಭಿಸುತ್ತಿದ್ದಿತು (ಅಕ್ಕಿ.ಕ. ೬೦). [ಸಂ.]

**ಪ್ರೇಕ್ಷಾಗೃಹ** (ನಾ). = ಪ್ರೇಕ್ಷಾಗಾರ : ವರ್ಧಮಾನಮಂಬೀಕ್ಷಣಪ್ರಿಯ ಪ್ರೇಕ್ಷಾಗೃಹಮುಮಂ (ಅಂಕು. ೦೫-೬೫); "ಪ್ರೇಕ್ಷಾಗೃಹ" ವನ್ನು ಹೇಗೆ ಕಟ್ಟಬೇಕು ? (ಶಾಶಿಖಾ. ೦೩). [ಸಂ.]

**ಪ್ರೇಕ್ಷಾಸದನ** (ನಾ). = ಪ್ರೇಕ್ಷಾಗಾರ : ವರ್ಧಮಾನಾಭಿಧಾನ ಪ್ರೇಕ್ಷಾಸದನಂಗಳಿಂದಂ (ಶಾಂತಿಪು. ೦೦-೯೯ ವ). [ಸಂ.]

**ಪ್ರೇಕ್ಷೆ** (ನಾ). ೧. ನೋಡುವುದು; ನೋಟ; ದರ್ಶನ : ನಕ್ಷತ್ರಮಂಡಲದಿನಾಚೆಯಿಂದೊಂದು ದನಿ ವಕ್ಷೋಗುಹಾಂತರದಿನೊಂದು ದನಿಯಿಂತೀ ಸಾಕ್ಷಿದ್ವಯವು ನಿನ್ನೊಳೊಂದುಗೂಡಿದೊಡದೇ ಪ್ರೇಕ್ಷೆ ಪರಬೊಮ್ಮನದು (ಮಂಕುತಿ. ೬೦). ೨. ಪ್ರದರ್ಶನ; ದೃಶ್ಯ. ೩. ಬುದ್ಧಿ; ಚಾತುರ್ಯ; ಜಾಣ್ಮೆ : "ಪ್ರೇಕ್ಷಾ . . . ಉಪಲಬ್ಧಿಃ—ಈ ೧೩ ಬುದ್ಧಿ" (ಕಹಾಯು. ೩೩-೦೬೯). [ಸಂ. ಪ್ರೇಕ್ಷಾ]

**ಪ್ರೇತ** (ನಾ). ೧. ಜೀವವಿಲ್ಲದ ದೇಹ ; ಹೆಣ; ಶವ: "ಪ್ರೇತಃ, ಪರೇತಃ, ಕುಣಪಃ, ಶವಃ—ಈ ೪ ಪೆ(ಹೆ)ಣಂ" (ಕಹಾಯು. ೦೦೯-೬); ಬಿಡದಲ್ಲ ಬಂಧುಜನದೊಟ್ಟುಡಿಯದ ಕಣ್ಣೀರ ಪೂರಮಾ ಪ್ರೇತವನಾರೋಗಡಿಸದೆ ಸುಡುವುದು (ಕುಕಶಾ. ೨-೨೮); ಮಗುವನ್ನು . . . ಸ್ಮಶಾನದವರೆಗೆ ಹೆಂಡತಿಯು ಪ್ರೇತದ ಜೊತೆಗೆ, ಅದನ್ನು ತಾನೇ ಒಯ್ದುಹು (ಗಂಪಾಶಿ. ೨೬೦). ೨. ಪಿಶಾಚಿ; ದೆವ್ವ; ವ್ಯಂತರ : "ಪ್ರೇತಃ . . . ನರಕಯಾತನೆ ಪಡುವ ಪ್ರಾಣಿ, ಸತ್ತು ಹೋಗಿ ಸಂಸ್ಕಾರವಿಲ್ಲದೆಯಿರುವವನು" (ಸಿದ್ಧಾಂತಿ. ೩೮೯) ; ಬಿಡದೆ ಬಸಿವೇಟಂಗಳ ರಕುತದ ಕಡಲಾ ಕಡಲನು ಕಲಕೆ ಕಾಗೆಯ ಗಡಣ ನಾಯ್ನರಿ ಹದ್ದು ಭೂತ ಪ್ರೇತ ಪಡೆ ದಣಿಯೆ (ಕೌಶಿಕ. ೩೩-೦೦). ೩. ದೇಹವನ್ನು ಅಗಲಿದ ಜೀವ : ಎಷ್ಟೋ ದಿನಗಳ ಹಿಂದೆಯೇ ಗತಿಸಿ ಹೋದ ಕುಮಾರಿಯ ಪ್ರೇತವು ಇಂದು ನಿನ್ನೊಡನೆ ಮಾತನಾಡುತ್ತಿದೆ (ಅರ್ಜುನ. ೯೬). ೪. ಪಿತೃದೇವತೆ. [ಸಂ.]

**ಪ್ರೇತಕ** (ಗು). ಹೆಣಕ್ಕೆ ಸಂಬಂಧಿಸಿದ : ಶಿವನ ಪಾದಾಂಬುವಂ ಧರಿಸಿದ ಮಾನವಂ ತವೆ ಸೂತಕ ಪ್ರೇತಕಾದ್ಯಶೌಚಂಗಳೊಳಗವಿರತಂ ವರ್ತಿಸುತ್ತಿರ್ದೊಡಂ ನೋಡವನೆ ಅಣಿಯರಂ ಶುದ್ಧಂ (ಅಜಾತ. ೦-೩-೦೦). [ಸಂ.]

**ಪ್ರೇತಕರ್ಮ** (ನಾ). ಸತ್ತವನ ದೇಹಕ್ಕೆ ಮಾಡುವ ಸಂಸ್ಕಾರ; ಅಂತ್ಯ

ಕ್ರಿಯೆ; ಶವಸಂಸ್ಕಾರ : ಆದೊಡಂ ಪ್ರೇತಕರ್ಮಂಗಳೊಳ್, ೬ ವಾಸುದೇವಾ—ನಿನ್ನನೆಮ್ಮೊಳ್ ಕೂಡೆ ಅಳ್ಕುವೆನ್ (ಅಕ್ಷಾ. ೯೬–೯೬೦).
[ಸಂ. ಪ್ರೇತಕರ್ಮನ್]

**ಪ್ರೇತಕಳೆ** (ನಾ). ಲವಲವಿಕೆ ಇಲ್ಲದಿರುವ ಸ್ಥಿತಿ ; ತುಂಬ ಮಂಕಾಗಿರುವಿಕೆ : ಮಾಡಿದ ತಪ್ಪಿನಿಂದಾಗಿ ಅವನ ಮುಖದಲ್ಲಿ ಪ್ರೇತಕಳೆ ಹರಿಯುತ್ತಿತ್ತು (ರೂಢಿ). [ಸಂ. ಪ್ರೇತಕಲಾ]

**ಪ್ರೇತಕಾರ್ಯ** (ನಾ). =ಪ್ರೇತಕರ್ಮ : ಧೀರಮತಿ ಪಾರ್ಥಿವಕುಮಾರ. ತಡೆ ಶೋಕವಂ; ಪ್ರೇತಕಾರ್ಯಮನೆಸಗಿ ಚಿತ್ತಗೆ. ಕಳುಹಾತನಂ ಲೋಕದುತ್ತಮಗತಿಗೆ (ಶ್ರೀರಾಪಟ್ಟಾ. ೧೦೭–೦೫೩). [ಸಂ.]

**ಪ್ರೇತಗಾಹು** (ನಾ). ಹೆಣಗಳನ್ನು ಸುಡುವ ಸ್ಥಳವನ್ನು ಕಾಯುವಿಕೆ; ಸುಡುಗಾಡಿನ ಕಾವಲು : ವರವಾರಣಾಸಿವಧ್ಯವೆ ಲಾಳದೇಶವಚ್ಚರಿಯ ಕಾಶೀಪುರವಯೋಧ್ಯೆ ಶ್ಮಶಾನಧರೆಯರವಮನೆ ಪ್ರೇತಗಾಹಿನ ತವಗ ಮಣೆ ಪೀಠ (ಹರಿಶ್ಚಂ. ೦೦–೯೬). [ಪ್ರೇತ+ಕಾಹು$_1$ (< ಕಾವು )]

**ಪ್ರೇತತರ್ಪಣ** (ನಾ). ಸತ್ತವರಿಗೆ ಅರ್ಪಿಸುವ ತರ್ಪಣ : "ಪ್ರೇತತರ್ಪಣಮನೆ ನಿವಾಪವೆಂದೆನೆ ಕರ್ವುದಾ ತಿಲೋದಕಮಕ್ಕು" (ಮಂಗರಾ. ೦೦೬–೯). [ಸಂ.]

**ಪ್ರೇತನಾಥ** (ನಾ). ಯಮ : ಶ್ವೇತಮುನಿಯಂ ಕಾಯ್ದು ತನ್ನ ನಿಶಾತ ಶೂಲದೊಳಿಟ್ಟನುಗ್ರನು ಪ್ರೇತನಾಥನ ವಕ್ಷಮಂ (ಜೈಮಿ. ೧೦–೨೮).
[ ಸಂ. ]

**ಪ್ರೇತಪತಿ** (ನಾ). = ಪ್ರೇತನಾಥ : "ಶಮನಃ, ಸಮವರ್ತೀ, ಪ್ರೇತಪತಿಃ . . . ಶ್ರಾದ್ಧದೇವಃ— ಈ ೧೭ ಜವನ ಪೆಸರ್" (ಹಲಾಯು. ೦೩–೭೦); ಭೂತಳದೊಳಾ ಗೋವಧಾದೋಷಿಗಳ್ಗೆ ಯಾ ಪಾತಕಂ ನಾನಾಪ್ರಕಾರದಿಂ ಬಡದೆ ಯಾ ಪ್ರೇತಪತಿಯಾಜ್ಞೆಯಿಂ ನರಕದಿಂ ಬೇವುತಿರ್ಪರು ಮಹಾಪ್ರಳಯಯತನಕಾ ( ಶೀಕೃತಿ. ೯–೨–೦೩ ); ಪ್ರೇತಪತಿಯಿದಿರೊಳಂದೀ ಭೂತಳಸುರನಸುವನೊಯ್ದು ತೋಱಲು (ವಿಷ್ಣುಪು. ೯–೦೦೭ ). [ಸಂ.]

**ಪ್ರೇತಪೀಡೆ** (ನಾ). ದೆವ್ವದ ಕಾಟ : ನೆಮ್ಮದಿಯಿಂದಿರುವಾಗ ಈ ಪ್ರೇತಪೀಡೆ ಬೇರೆ ( ಕರ್ಮಸ. ೦೫೦ ). [ಸಂ. ಪ್ರೇತ ಪೀಡಾ]

**ಪ್ರೇತಬಲಿ** (ನಾ). ಉತ್ತರಕ್ರಿಯೆ ಮಾಡುವಾಗ ಪ್ರೇತಕ್ಕೆ ಅರ್ಪಿಸುವ ಪಿಂಡ : (೯). [ಸಂ.]

**ಪ್ರೇತಭೂಮಿ** (ನಾ). ಸುಡುಗಾಡು ; ಶ್ಮಶಾನ : ಏನು ಗೂಗೆಯ ಕೂಗಿನಿತು ಕರ್ಕಶ, ಏಕಾ! ಸುತ್ತಲಿಹ ಪ್ರೇತಭೂಮಿಯ ಮಹಿಮೆಯಿರಬೇಕು! ( ಕಂದ್ರಸ. ೦೦೦–೨೬ ). [ಸಂ.]

**ಪ್ರೇತಯಾತ್ರೆ** (ನಾ). ಶ್ಮಶಾನಯಾತ್ರೆ : ತಾವಿಂದು ಗುರುಮಹಾರಾಜರ ಪ್ರೇತಯಾತ್ರೆಯನ್ನೇ ನೋಡುತ್ತಿರುವದೆಂದು ಅನಿಸಿಬಿಟ್ಟಿತ್ತು ಅವರಿಗೆ ( ಸ್ಮೃತಿಶಿ. ೪೫೦ ). [ ಸಂ. ಪ್ರೇತಯಾತ್ರಾ]

**ಪ್ರೇತವನ** (ನಾ). = ಪ್ರೇತಭೂಮಿ : ಪ್ರೇತವನದೊಳಗೆ ಬೆಳೆದ ಹೂವಾರ ಮುಡಿಹಕ್ಕೆ ಯೋಗ್ಯಂ (ಹರಿಶ್ಚಂ. ೭–೦೬). [ಸಂ.]

**ಪ್ರೇತವಿದ್ಯೆ** (ನಾ). "ಸತ್ತವರೊಂದಿಗೆ ವ್ಯವಹಾರ ನಡೆಸಿ ಭವಿಷ್ಯ ಹೇಳುವ ವಿದ್ಯೆ: ಪ್ರೇತವಿದ್ಯೆ; ಕಣ್ಕಟ್ಟು; ಯಕ್ಷಿಣಿ ; ಇಂದ್ರಜಾಲ" (Necromancy. ಇಂಕಿಪ). [ ಸಂ. ಪ್ರೇತವಿದ್ಯಾ ]

**ಪ್ರೇತಸಂಸ್ಕಾರ** (ನಾ). = ಪ್ರೇತಕರ್ಮ : ಬೇರೆ ರೀತಿಯ ಸೂಕ್ತಗಳೂ ಕೆಲವು ಋಗ್ವೇದಸಂಹಿತೆಯಲ್ಲಿ ಸೇರಿಕೊಂಡಿವೆ. ಇವುಗಳಲ್ಲಿ . . . ಕೆಲವು ವಿವಾಹಕ್ಕೆ ಮತ್ತು ಪ್ರೇತಸಂಸ್ಕಾರಕ್ಕೆ ಸಂಬಂಧಪಟ್ಟವು ( ಭಾರಿಪ. ೨೩ ); ಹೆಂಡತಿಯ ಹಾಗು ಮಗನ ಪ್ರೇತಸಂಸ್ಕಾರವನ್ನು ರಾಘಪ್ಪ...ಮಾಡಿಸಿದನು (ಗಂಕಾಮಾಯ. ೨೮೦). [ಸಂ.]

**ಪ್ರೇತಸೂತಕ** (ನಾ). ಐದು ಬಗೆಯ ಸೂತಕಗಳಲ್ಲಿ ಒಂದು ; ಸತ್ತ ವ್ಯಕ್ತಿಯ ಸಂಬಂಧದಿಂದ ಉಂಟಾಗುವ ಸೂತಕ ; ಮರಣಸೂತಕ : ಪ್ರೇತಸೂತಕ ಜಾತಿಸೂತಕ ಜಾತವಿರಹಿತನಾಗಿ ದಿವಿಜವ್ರಾತದೊಳು ತಾನುತ್ತಮನಾಂಗವುದಾಯ್ತು ಸರ್ವಾಂಗ (ಬಸವಪು. ೧೮–೯೯); ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಛಿಷ್ಟಸೂತಕ ರಜಸ್ಸೂತಕವೆಂಬ ಪಂಚಸೂತಕಂಗಳ ಕಳೆದು (ಅಣಂಕಿ. ೯೭–೯೦). [ಸಂ.]

**ಪ್ರೇತಾಂಗಳ** (ನಾ). = ಪ್ರೇತಭೂಮಿ : ಎಳೆಯ ರವಿರಶ್ಮಿಯಲಿ ಪ್ರೇತಾಂಗಳದ ಧೂಮಜ್ವಾಲೆಯಲಿ . . . ಆಯುಷವೀದು ಹೋಗದೆ ದಿನದಿನದೊಳು (ಕುಮಾ ವ್ಯಾ. ೩–೫೬). [ಪ್ರೇತ + ಅಂಗಳ$_1$]

**ಪ್ರೇತಾರಾಧನೆ** (ನಾ). ಭೂತಗಳಿಗೆ ಮಾಡುವ ಪೂಜೆ ; ಆರಾಧನೆ : ಕಲೆ, ಮಾಟ , ಪ್ರೇತಾರಾಧನೆ—ಇವು ಇದೇ ಕಾಲದಲ್ಲಿ ಪ್ರಾರಂಭವಾದವು (ಶಿಲ್ಪಶಾ. ೨೦). [ಸಂ. ಪ್ರೇತಾರಾಧನಾ]

**ಪ್ರೇತಾವಾಸ** (ನಾ). =ಪ್ರೇತಭೂಮಿ: ಭೂತಪತಿಯೊಗೆವುದುಂ ತನ್ನಾತ್ಮವಲಂ ಮಡಿದಳಕ್ಕುಮಲ್ಲದೊಡಾತಂ ಪ್ರೇತಾವಾಸದೊಳಾಡುವ ಭೂತಂಗಳ ಕೂಡೆ ವಿಹರಣಂಗೆಯ್ವುವನೆ (ಕೃಹಂ. ೯–೦೦೨). [ಸಂ.]

**ಪ್ರೇತಿ** (ನಾ). ೧. ಸಾವು ; ಮರಣ. ೨. ಬೇರೆಯಾಗುವುದು ; ಅಗಲುವುದು. ೩. ವಿರುದ್ಧವಾದಂದು ; ಪ್ರತಿಕೂಲವಾದುದಂ : ನಾನು ಏತಿ ಅಂದರೆ ಅವರು ಪ್ರೇತಿ (ಜಾನಗಾದೆ. ೯೯). 'ಏತಿಪ್ರೇತಿ'ಪರಾ. ☞ 'ಪ್ರೇತಿ'ಯೆಂಬುದಂ ಏತಿಪ್ರೇತಿ ಎಂಬ ಕೂಡುನುಡಿಯಲ್ಲಿಯೂ ಕೆಲವೊಮ್ಮೆ ಬಿಡಿಯಾಗಿಯೂ ಪ್ರಯೋಗವಾಗುತ್ತದೆ. [ಸಂ.]

**ಪ್ರೇಮ** (ನಾ). ೧. ಒಲವು ; ಪ್ರೀತಿ : ಪ್ರೇಮದೊಳೆ ತನ್ನ ಬೆನ್ನನೆ ಧೂಮಪ್ರಭೆ ನಾರಕತ್ವಮೆಬ್ಬಿಂದವೊಲ್ (ಶಾಕ್ಯಕೃ. ೭–೦೦೩). ೨. ಅನುರಾಗ ; ಪ್ರಣಯ : ಪ್ರೇಮರಸಾಮೃತಾಂಬುಧಿಯ ಮೇರೆಯ ತಾನೆನೆ (ಶಾಂತೀಶ್ವ. ೦೦–೯೬). ೩. ಅಕ್ಕರೆ ; ವಾತ್ಸಲ್ಯ : ಪ್ರೇಮದೆ ಧರ್ಮೋದ್ಭವನಾ ಭೀಮಂಗಾ ಸತಿಯೊಳಂತು ಪರಿಣಯನಮನುದ್ದಾಮಯಶನಂದು ಮಾಡಿ (ಪೀಲಾಚಿ. ೯–೬೩); ಪ್ರೇಮವೆ ನಿಖಿಲಪೂಜೆಯಾಯ್ತು (ಶ್ರೀರಾಪಟ್ಟಾ. ೦೭–೯೯೩). ೪. ಸಂತೋಷ ; ಆನಂದ. ೫. [ಛಂದ] ಒಂದೊಂದು ಪಾದದಲ್ಲಿಯೂ ಒಂದು ಭಗಣ, ಒಂದು ಲಘು ಮತ್ತು ಒಂದು ಗುರುವೂ ಇರುವ ವೃತ್ತ : ಸೋಮ ಹರಿಯುಂ ಕಾಮಹರನುಂ ತಾಮಿರೆ ಪೆಸರ್ ಪ್ರೇಮಂ (ಛಂದೋಂಬು. ೨–೬೨). ೬. ಪ್ರತಿಸಾಲಿನಲ್ಲಿಯೂ ನಾಲ್ಕು ಗುರುಗಳುಳ್ಳ ಒಂದು ವೃತ್ತ ; ಪ್ರತಿಷ್ಠಾಛಂದಸ್ಸಿನಲ್ಲಿ ಒಂದು ವೃತ್ತ : ಪ್ರೇಮಂ ಗಗಗ ಗಂ (ಛಂದೋಂಬು. ೯. ೨–೬೫). [ಸಂ. ಪ್ರೇಮನ್]

**ಪ್ರೇಮಂಗೈ** (ಕ್ರಿ). ಪ್ರೀತಿಸು ; ಒಲವುದೋರು : ಪ್ರೇಮಿ ಪ್ರಿಯಂ ಸಹಚರಂ ಮರಾಯಣನೆನಲ್ ಪ್ರೇಮಂಗೈವ[ಶಾಶಂ. ಪ್ರೇಮಂಗೈವ] ನೆನಿಕ್ಕುಂ (ಮಂಗರಾ. ೬೦–೮). [ಪ್ರೇಮ + ಕೈ$_{11}$ (< ಕೆಯ್$_1$) ]

**ಪ್ರೇಮಕಥೆ** (ನಾ). ಪ್ರಣಯದ ಕಥೆ : ಶಾಕುಂತಲವು ದುಷ್ಯಂತಶಕುಂತಲೆಯರ ಪ್ರೇಮಕಥೆ (ಧರ್ಮಶಾ. ೬೭). [ಸಂ. ಪ್ರೇಮಕಥಾ]

**ಪ್ರೇಮಕಲಹ** (ನಾ). ಪ್ರೀತಿಯ ಹುಸಿಜಗಳ : ಈ ಮಾತಿನಿಂದ ನಮ್ಮಲ್ಲಿ ಸ್ವಲ್ಪ ಪ್ರೇಮಕಲಹವಾಗಿ ಅಕ್ಕಿ ತರಬೇಕೆಂದು ಹೇಳಿ ಅವರನ್ನು ಸಾಗಹಾಕಿದೆ (ಸ್ಮೃತಿಶಿ. ೧೨೯). [ಸಂ.]

**ಪ್ರೇಮಗೀತ** (ನಾ). ಪ್ರೀತಿಯನ್ನು ವಸ್ತುವಾಗಿಟ್ಟುಕೊಂಡಿರುವ ಹಾಡು ; ಪ್ರಣಯಗೀತೆ : ಠಾಕೂರರ ಪ್ರೇಮಗೀತಗಳ ಸಮುಚ್ಚಯ 'ತೋಟಗಾರ' (ರವೀಂಶಾ. ೫೯) ; ಬುದ್ಧಿಪ್ರಧಾನತೆಯು ವಿದ್ವತ್ ಪ್ರಚುರವಾಗದೆ ಬರಿ ಜೀವನದೃಷ್ಟಿಯ ಒಂದು ಅಂಗವಾಗಿ ಬರುವುದನ್ನು ವಿಡಂಬನಗೀತಗಳಲ್ಲಿಯೂ ಪ್ರೇಮಗೀತಗಳಲ್ಲಿಯೂ ಬೇರೆ ಭಾವಗೀತಗಳಲ್ಲಿಯೂ ನಾವು ಕಾಣುತ್ತೇವೆ (ಪವ್ಯಕಾ. ೫೦). [ಸಂ.]

**ಪ್ರೇಮಪಾತ್ರ** (ನಾ). ಪ್ರೀತಿಗೆ ಪಾತ್ರವಾದ ವ್ಯಕ್ತಿ : ಸೌ. ರಾಧಾದೇವಿ ಯುವರು ಕೃಷ್ಣರಾಯರ ಪ್ರೇಮಪಾತ್ರರಿರುವರೆಂಬ ಸಂಗತಿಯು ನಿಜವೇ ಹೇಗೆ? (ಸ್ವ್ರಾಂತಿ. ೦೧೯). [ಸಂ.]

**ಪ್ರೇಮಭಂಗ** (ನಾ). ಪ್ರಣಯಕ್ಕೆ ಅಡ್ಡಿಯುಂಟಾಗುವುದು : ಪ್ರೇಮ ಭಂಗವು ಅನೇಕಸಾರಿ ತರತರನಾದ ಉನ್ಮಾದಗಳಲ್ಲಿ ಪರ್ಯವಸಾನವಾಗು ತ್ತದೆ (ಕಾವರು. ೨೬೬) ; ಪ್ರೇಮಭಂಗದಿಂದಾದ ಓದು ಆತ್ಮಹತ್ಯೆಯ ವಿಷಯವನ್ನು . . . ಚರ್ಚಿಸುತ್ತಿದ್ದಳು (ಜಯಂತ. ೨೬೩). [ಸಂ.]

**ಪ್ರೇಮಲ, ಪ್ರೇಮಳ** (ಗು). ಪ್ರೀತಿಯಿಂದ ಕೂಡಿದ ; ಪ್ರೇಮಪೂರಿತ ವಾದ : ಕವಿತೆಯಿಂದ ನಾವು ಬಯಸುವುದೇನನ್ನು ? ನಿರ್ಲಿಪ್ತವೂ ಜ್ಞಾ ದೀಪ್ತವೂ ಪ್ರೇಮಲವೂ ಆದ ಚಿತ್ತದ ಸಂಸರ್ಗವನ್ನು (ಕಾವ್ಯಕು. ೩೬); ಇವನು . . . ಸಾಕಷ್ಟು ಸುಂದರ, ಹಣವಂತ ; ಪ್ರೇಮಲಸ್ವಭಾವದ ವ್ಯಕ್ತಿ (ಶೀರ್ಷ್ಯಗಂ. ೦೬). ಪ್ರೇಮಳ : ನನ್ನಲ್ಲಿ ಏನಾದರೂ ಒಳ್ಳೆಯ ಗುಣ, ಏನಾದರೂ ಪ್ರೇಮಳಸ್ವಭಾವ ಇದ್ದುದಾದರೆ ಅದರ ಶ್ರೇಯಸ್ಸು ಮಾತೃನಿಷ್ಠ ಸಹೋದರನಿಗೂ . . . ಸಲ್ಲುತ್ತದೆ (ಶ್ಯಾಕುಚಾ. ೩೬). [ಸಂ.]

**ಪ್ರೇಮಲೆ** (ನಾ). ಪ್ರೀತಿಪಾತ್ರಳಾದವಳು : ಸ್ವಪ್ನರೋಹಿಣಿ ಪ್ರೇಮ ಚಂದ್ರಗೆ ಲಕ್ಷರೂಪಿಣಿ ಪ್ರೇಮಲೆ (ಷೂಷಸ. ೦೯–೦೨). [ಸಂ. ಪ್ರೇಮಲಾ]

**ಪ್ರೇಮವಿವಾಹ** (ನಾ). ಗಂಡು, ಹೆಣ್ಣು ಪರಸ್ಪರ ಪ್ರೀತಿಯಿಂದ ಒಪ್ಪಿ ಮಾಡಿಕೊಳ್ಳುವ ಮದುವೆ : ತಮ್ಮ ಈ ಪ್ರೇಮವಿವಾಹಕ್ಕೆ ತನ್ನ ತಾಯಿಯೂ ಒಪ್ಪಿದ್ದಾಳೆ ಎಂಬ ಆನಂದದ ಸುದ್ದಿಯನ್ನಷ್ಟೇ ತಿಳಿಸಿದಳು (ಆಕೋಲೀ. ೦೦೦). [ಸಂ.]

**ಪ್ರೇಮಳ** 'ಪ್ರೇಮಲ'ನೋ.

**ಪ್ರೇಮಾನುಬಂಧ** (ನಾ). ಅನುರಾಗಬಂಧನ : ಭವವಾರ್ಧಿಪ್ರತಿಮುಗ್ನ ಜೀವನಿವಹಂ ಪ್ರೇಮಾನುಬಂಧಾ ಮನೋಭವರಾಗಾಶಯಮುಮಂ ನಿಮಿರ್ವ ಭವಸಂತಾನಂಗಳೊಳ್ ಕೂರ್ವ ಕೂಡುವ ತ[ಟ್ಟಿ]ರ್ವ ಬಯಕ್ಕೆಯಂ ಬಯಸುಗುಂ (ಶಾಂತಿಪು. ೯–೬). [ಸಂ.]

**ಪ್ರೇಮಾಲೋಕನ** (ನಾ). ಪ್ರೀತಿಯಿಂದ ನೋಡುವುದು ; ಅನುರಾಗ ದೃಷ್ಟಿ : ಪ್ರೇಮಾಲೋಕನಸುಮನೋದಾಮದೆ ಬರಿತೆಗೆಯೆ ಭೂಭುಜಂ ನಿಜತನುದಿವ್ಯಾಮೋದಂ ಬಳಸೆ ಲತಾಕೋಮಳೆ ಕುಳ್ಳಿರ್ದಳೊಡನೆ ಹೇಮಾಸನದೊಳ್ (ಮಲ್ಲಿಪು. ೯–೭೦). [ಸಂ.]

**ಪ್ರೇಮಿ** (ನಾ). ಪ್ರೀತಿಸುವ ವ್ಯಕ್ತಿ ; ಪ್ರಣಯಿ : "ಪ್ರೇಮಿ ಪ್ರಿಯಂ ಸಹಚರಂ ಪರಾಯಣನೆನಲ್ ಪ್ರೇಮಗ್ಗೆವನೆನಿಕ್ಕು" (ಮಂಗರಾ. ೬೮–೬) ; ಮತ್ತೆ ಮರುದಿನ ಮುಂಜಾನೆ ಭೆಟ್ಟಿಯೆಂದು ಪ್ರೇಮಿಗಳಿಬ್ಬರೂ ಅಗಲಿದರು (ಸವಚೀ. ೯೦೬). [ಸಂ. ಪ್ರೇಮಿನ್]

**ಪ್ರೇಮಿಸು** (ಕ್ರಿ). ಪ್ರೀತಿಸು ; ಒಲವುದೋರು : ನೀನೆಂದೆಂದಿಗೂ ಪ್ರೇಮಿಸುತ್ತಿರು ಅವಳೆಂದೆಂದಿಗೂ ಸುಂದರಿಯಾಗಿರಲಿ (ಕಾರಚಾ. ೩೬). [ಪ್ರೇಮ + –ಇಸು]

**ಪ್ರೇಮೋನ್ಮಾದ** (ನಾ). ಹುಚ್ಚುಪ್ರೀತಿ ; ಪ್ರೇಮದ ಉದ್ವೇಗ : ಪ್ರೇಮೋನ್ಮಾದ, ಪ್ರಣಯಕೋಪ, ವಿರಹತಾಪ. . .ಎಲ್ಲವನ್ನೂ ಕಲಾವಿದ ನಿರೂಪಿಸಿದ (ಕಾರರ. ೩೬೦). [ಸಂ.]

**ಪ್ರೇಯ** (ನಾ). ೧. ಸುಖ ; ಕ್ಷೇಮ : ನಿಮ್ಮ ಜೀವನವು ಪ್ರೇಯ ಮೇಣ್ ಶ್ರೇಯಕ್ಕಾಗಿ ! (ಕರುಶ್ರಾ. ೬೬–೦೯). ೨. [ಕಾವ್ಯಮೀ] ಅಲಂಕಾರಗಳಲ್ಲಿ ಒಂದು ; ಪ್ರೀತಿಪರವಾದ ಮಾತುಗಳಿಂದ ಕೂಡಿದ ಬರಹವೇ ಪ್ರೇಮವೆಂಬ ಅಲಂಕಾರದಿಂದ ಕೂಡಿರುವುದು: ಪ್ರೇಯಂ, ಪ್ರಿಯತರವಚನಾಖ್ಯೇಯಮಹಂಕಾರಿಗಿರಿಮಮೂರ್ಜಸ್ವಿ ಶುಭಪ್ರಿಯಾರ್ಥಾಶಂಸಾಭಿಪ್ರಾಯಮಲಂಕಾರಮಾಶಿಯೆಂಬರ್ ಕೆಲಬರ್ (ಕಾವ್ಯಾವ. ೬೬೨) ; 'ರಸವತ್', 'ಪ್ರೇಯ', 'ಊರ್ಜಸ್ವಿ', 'ಸಮಾಹಿತ'. —ಈ ಅಲಂಕಾರಗಳಲ್ಲಿ ರಸಾದಿಗಳಿಗೆ ಅಂಗತ್ವವುಂಟು (ಕೃಷ್ಣಾರೋ. ೬೦). [ಸಂ. ಪ್ರೇಯಸ್]

**ಪ್ರೇಯಸಿ** (ನಾ). ಪ್ರೀತಿಪಾತ್ರಳಾದವಳು ; ನಲ್ಲೆ : ಸುದತೀ ಸದ್ರೂಪವಮಂ ತಾಳ್ದಿದ ವನಜಭವಪ್ರೇಯಸೀನಾಮಮುಮಂ ತಾಳ್ದಿದ . . . ವಾಕ್ಸುಂದರಿ ಪರಮಮಚೋವೃದ್ಧಿಯಂ ಮಾಡುಗೆವ್ವೋಳ್ (ಸುಕುಮಾ. ೦–೬) ; ಪ್ರೇಯಸಿ ಬಂದು ನಿನ್ನ ಮನಮೊಲ್ದರಲೋಳಿಗಳಿಂ ವಿಚಿತ್ರಶೋಭಾಯತಪ್ರಸರಮಂ ಸಮೆದು (ಕಸುಮಾ. ೩–೬೬) ; ಆದಿದೇವ 'ರಾಗರಸಿಕ, ಈತನ ರಸಿಕತೆಗೆ ಮೆರುಗು ಕೊಡಲು ಯಶಸ್ವತಿ ಹಾಗೂ ಸುನಂದೆಯರು ಪ್ರೇಯಸಿಯರಾಗಿ ಬಂದರು (ದಾಶಕಂ. ೦೬). [ಸಂ. ಪ್ರೇಯಸೀ]

**ಪ್ರೇಯಸ್ಸು** (ನಾ). ಸುಖ ; ಕ್ಷೇಮ : ಇದೇ ಶ್ರೇಯಸ್ಸಿನ ದಾರಿ, ಪ್ರೇಯಸ್ಸಿನ ದಾರಿಯೂ ಹೌದು (ದಾಕ್ಕೋರ. ೨೦೬) ; ಅಪಾರಸಂಪತ್ತನ್ನು ಗಳಿಸಿಯೂ ಪ್ರೇಯಸ್ಸಿಗಿಂತ ಶ್ರೇಯಸ್ಸೇ ಮುಖ್ಯವೆಂದು ಭಾರತವು ಸಾರಿತು (ಭಾರದ. ೩೮೬). [ಸಂ. ಪ್ರೇಯಸ್]

**ಪ್ರೇರಕ** (ಗು). ೧. ಉತ್ತೇಜನಗೊಳಿಸುವ ; ಪ್ರಚೋದಿಸುವ. (ನಾ). ೨. ಉತ್ತೇಜನಗೊಳಿಸುವುದು ; ಪ್ರಚೋದನೆ : ಭಾರ್ಯರಿಂದೊಡಗೂಡಿ ಕಾರಣಕಾರ್ಯವಸ್ತುಗಳಲ್ಲಿ ಪ್ರೇರಕಪ್ರೇಯ ರೂಪಗಳಿಂದೆ ಪಟತಂತುಗಳವೊಲಿದ್ದು . . . ಈತನ ವಿಹಾರವು ಗೋಚರ ಪುದೇನೋ (ಹಸಾರ. ೩–೯) ; ಹಿಂದೆ ಸೃಷ್ಟಿಕ್ರಿಯೆಗೆ ಪ್ರೇರಕವಾಗಿರುವ ಶಕ್ತಿ ಒಂದು ಯುಗಧರ್ಮ (ಶಾವಗೀ. ೯). ೩. ಕಾರ್ಯದಲ್ಲಿ ತೊಡಗಿಸು ವವನು ; ಪ್ರಚೋದಕ : ಪ್ರೇರಕಂ ನೀಂ ಬರಲು ಸಾಕ್ಷಿಯಂತೀ ತಂದೆ (ಕಂಠಿರ. ೭–೦೩೩) ; ವ್ಯಾಸಮಹರ್ಷಿ ಭರತಖಂಡದ ಐಕ್ಯ ಮತ್ತು ಸಂಘಟನೆಗೆ ಪ್ರೇರಕನಾದನು (ಮಣ್ಣಾರ. ೦೦೨ ೩೬೮೬). [ಸಂ.]

**ಪ್ರೇರಕಶಕ್ತಿ** (ನಾ). ಉತ್ತೇಜನಗೊಳಿಸುವ ಶಕ್ತಿ ; ಪ್ರಚೋದಿಸುವ ಚೈತನ್ಯ : ಈ ಎರಡು ವಿರುದ್ಧಪಂಥಗಳಿಗೂ ಪ್ರೇರಕಶಕ್ತಿಯೊಂದೇ ಎಂಬುದು ವಿಚಿತ್ರಸಂಗತಿ. ಈ ಪ್ರೇರಕಶಕ್ತಿ ಅರಿಸ್ಟಾಟಲ್ಲನ ಸಿದ್ಧಾಂತ (ಮಣ್ಣಾರ. ೦೦ ೩೬೮೬) ; ಹಿಂದಿನ ಪ್ರೇರಕಶಕ್ತಿಯಾಗಲೀ . . . ಉದಾರ ಮನೋಭಾವವಾಗಲೀ ಈಗ ಉಳಿದಿರಲಿಲ್ಲ (ಘಟಕು. ೦೯). [ಸಂ.]

**ಪ್ರೇರಣ** (ನಾ). ೧. ಒಂದು ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವುದು ; ಕಾರ್ಯಮಗ್ನನಾಗಲು ಪ್ರಚೋದಿಸುವುದು : ಭಕ್ತಿಪ್ರಿಯಾಪ್ರೇರಣದಿಂ ತದ್ವರ್ಣನೋಪಕ್ರಮದೊಳೆಸಗಿದೆಂ ಧ್ರಾಂತನೆ (ಕಂಠ್ರಿಪು. ೦–೬೯). ೨. [ವ್ಯಾಕ] "ಪ್ರೇರಣ ಎಂದರೆ ಇನ್ನೊಬ್ಬನಿಂದ ಕೆಲಸ ಮಾಡಿಸುವುದು ಎಂದು ಅರ್ಥ" (ಮಣ್ಣಕು. ೦೩೦). [ಸಂ.]

**ಪ್ರೇರಣಾರ್ಥ** (ನಾ). [ವ್ಯಾಕ] ಇನ್ನೊಬ್ಬರಿಂದ ಕೆಲಸ ಮಾಡಿಸುವುದನ್ನು ತಿಳಿಸುವುದು : ಎಲ್ಲ ಧಾತುಗಳಿಗೂ ಪ್ರೇರಣಾರ್ಥದಲ್ಲಿ –ಇಸು ಪ್ರತ್ಯಯ ಸೇರಿ ಹೊಸ ಧಾತುಗಳಾಗುತ್ತವೆ (ಮಣ್ಣಕು. ೦೩೦) ; ಪ್ರೇರಣಾರ್ಥದ ಇಸು ಪ್ರತ್ಯಯದ ಮೇಲೆ ಮತ್ತೆ ಪ್ರೇರಣಾರ್ಥದಲ್ಲಿ ಇಸು ಪರವಾದರೆ ಪೂರ್ವದ ಇಸುವಿಗೆ ಲೋಪವಾಗುವುದು (ಕೃಶಿಪ. ೬೨). [ಸಂ.]

**ಪ್ರೇರಣಿಸು** (ಕ್ರಿ). ಉತ್ಸಾಹಗೊಳಿಸು ; ಪ್ರಚೋದಿಸು : ಅಜು ದೋಜಿ ನಿಂದು ಬಣ್ಣಕೆ ನಿನ್ನ ಕಳುಹಿ ಪ್ರೇರಣಿಸುತಿದ್ದನು ಭಾವು ನೋಡ (ಘಟ. ೯೦–೯೦). [ಪ್ರೇರಣ + –ಇಸು]

**ಪ್ರೇರಣೆ** (ನಾ). ಒಂದು ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡು ವುದು ; ಪ್ರಚೋದನೆ : ಅರಣ್ಯದ ಭೂತ ಬೇತಾಳವಡೆ ಸುತ್ತಿ ಮುತ್ತಿ ಬೊಬ್ಬಿಟ್ಟು ಝಂಕಿಸಿದುವಾ ಕಾಶಿಕನ ಪ್ರೇರಣೆಯಿಂದ (ಹಕಾ. ೯–೪೩); ಅಜೇಯವಾದ ಪ್ರಕೃತಿಗೆ ಎದುರಾಗಿ, ಅದಕ್ಕೆ ಸೋತು,

ದಾಸನಾಗಿ ಅದರ ಪ್ರೇರಣೆಯಂತೆ ವರ್ತಿಸುವುದರ ಬದಲು . . . ಅದರೊಡನೆ ಸಹಕರಿಸುವುದು ಒಳಿತಾದ ಮಾರ್ಗ (ಧಾರ್ಮ. ೦೦೩). [ಸಂ. ಪ್ರೇರಣ]

**ಪ್ರೇರಿತ** (ಗು). ೧. ಉತ್ತೇಜನಗೊಂಡ ; ಪ್ರಚೋದನೆಗೊಳಗಾದ : ಪೌರವನಾಂಕರಾಳದೊಳಗೊರ್ವ ವಸಂತವಿಲಾಸಕೌತುಕಪ್ರೇರಿತಮಾನಸಂ ತೊಳಗುತಿರ್ದ (ಹಂಪ್ರಪು ೩-೬೯). (ನಾ). ೨. ಪ್ರಚೋದಿತವಾದುದು; ಹುರುಪುಗೊಂಡುದು : ಕಾಗದವನ್ನು ಕೈಗಳು ಯಂತ್ರಶಕ್ತಿಯಿಂದ ಪ್ರೇರಿತವಾದಂತೆ ಮಡಚಿ ಮುದ್ದೆ ಮಾಡಿದ್ದವು (ಕುಕುಹಾ. ೪೮). ೩. ಪ್ರಚೋದನೆಗೊಂಡ ವ್ಯಕ್ತಿ; ಹುರುಪುಗೊಂಡ ವ್ಯಕ್ತಿ: ತದ್ ಭ್ರೂವಿಕ್ಷೇಪಣಪ್ರೇರಿತಂ ಮೇಘನಾದನಾದರದಿಂ ಬಂದು (ರಾಜಶೇ. ೬-೪೦ ವ) ; ವಾಜಶ್ರವಸರಿಂದ ಪ್ರೇರಿತನಾಗಿ ನಾನು ಇಲ್ಲಿಗೆ ಬಂದಿಲ್ಲ (ಚಕಂಪಾ. ೬). ೪. ರಾಯಭಾರಿ. [ಸಂ.]

**ಪ್ರೇರಿಸು** (ಕ್ರಿ). ಪ್ರಚೋದಿಸು ; ಹುರುಪುಗೊಳಿಸು : ಯಾತ್ರಿಗವನೀತಳಪತಿಯಂ ಪ್ರೇರಿಸಿತ್ತು ಪುಗಿಲೊಳ್ ಶರದಂ (ಶಾಂತಿಕೃ. ೧೦-೧೪೦) ; ಇಸುವನ್ನೀ ಮನಮಂ ಪ್ರೇರಿಸುವೀತನನಖಿಳಲೋಕಗುರುವಂ . . . ಇಸುವಸಮಾಸ್ತ್ರರ್ ಜಲಧಿವಸನವಸುಧೆಯೊಳುಂಟೇ (ಗಿರಿ. ೬-೨೯). ಅವರೀರ್ವರೂ ಗಜಾರೋಹಣವಂ ಮಾಡಿ ಗಜವಂ ಪ್ರೇರಿಸಲು ಆ ಗಜವು . . . ತೆರಳುತ್ತ (ಶಾಗಂಂ. ೪೦೨-೨೦). [ಪ್ರೇರಣೆ+—ಇಸು₃]

**ಪ್ರೇರೇಪಕ** (ಗು). ಹುರುಪುಗೊಳಿಸುವ : ಪ್ರಚೋದಿಸುವ. [< ಪ್ರೇರಕ]

**ಪ್ರೇರೇಪಣೆ** (ನಾ). = ಪ್ರೇರಣೆ : ಅವಳು ಪ್ರೇರೇಪಣೆ ಮಾಡದಿದ್ದರೆ ಕೈಕೆಗೆ ದುರ್ಬುದ್ಧಿ ಹುಟ್ಟುತ್ತಲೇ ಇರಲಿಲ್ಲ (ಧಾರಣ. ೯೨) ; ಇಷ್ಟು ಸುಲಭವಾಗಿ ನಮಗೆ ಅಷ್ಟು ಪುಣ್ಯ ಪ್ರಾಪ್ತಿಯಾಗಬೇಕೆಂದೇ ಈ ಕಡೆ ಬರಲು ಪ್ರೇರೇಪಣೆ ಮಾಡಿದಿ ? (ಚಕಂಪಾ. ೩೬). [<ಪ್ರೇರಣೆ]

**ಪ್ರೇರೇಪಿತ** (ನಾ). ಪ್ರಚೋದಿತನಾದವನು ; ಪ್ರೇರಣೆಗೊಂಡವನು : ಸರ್ವಶುಭಾಕಾಂಕ್ಷೆಯಿಂದ ಪ್ರೇರೇಪಿತನಾಗಿ ಆಡುತ್ತಿದ್ದೇನೆ (ಚಕಂಪಾ. ೦೩೦). [< ಪ್ರೇರಿತ]

**ಪ್ರೇರೇಪಿಸು** (ಕ್ರಿ). = ಪ್ರೇರಿಸು : ಅವನ ಕಡೆಯವರು ಜನಗಳನ್ನು ಪ್ರೇರೇಪಿಸುತ್ತಿದ್ದಾರೋ ಏನೋ (ಕಂಗಾಳ್ಯ. ೩೩೦) ; ಕೇಶವಣ್ಣನೇ ಈ ಬಣ್ಣದ ಸೀರೆಯನ್ನು ಕೊಂಡುಕೊಳ್ಳಲು ಪ್ರೇರೇಪಿಸಿದ್ದು (ಪಪಹೀ. ೮). [< ಪ್ರೇರಿಸು]

**ಪ್ರೇಷಕ** (ನಾ). ೧. ಕಳಿಸುವುದು ; ರವಾನಿಸುವುದು. ೨. ಕಳುಹಿಸುವ ಸಾಧನ : ಟೆಲಿಫೋನ್ ಪದ್ಧತಿಯಲ್ಲಿ ಎರಡು ಮುಖ್ಯ ಭಾಗಗಳಿವೆ. ಮೊದಲನೆಯದನ್ನು ಪ್ರೇಷಕವೆಂದೂ ಎರಡನೆಯದನ್ನು ಗ್ರಾಹಕವೆಂದೂ ಕರೆಯುತ್ತಾರೆ (ಶಿಕ್ಷಾ.ಶಿ. ೩೦). [ಸಂ.]

**ಪ್ರೇಷಣ** (ನಾ). ೧. (ದೂತನನ್ನು) ಕಳುಹಿಸುವುದು ; ರವಾನಿಸುವುದು. ೨. ಪ್ರಚೋದಿಸುವುದು. ೩. [ಜೈನ] ದೇಶವ್ರತಾತಿಚಾರದ ಪ್ರೇಕ್ಷಣ, ಶಬ್ದ, ಆನಯನ, ರೂಪಾಭಿವ್ಯಕ್ತಿ, ಪುದ್ಗಲಕ್ಷೇಪಗಳೆಂಬ ಐದು ವಿಧಗಳಲ್ಲಿ ಒಂದು ; P "ಎಲ್ಲೆಯ ಹೊರಕ್ಕೆ ಹೋಗಿ ನಿರ್ದಿಷ್ಟಕಾರ್ಯವನ್ನು ಮಾಡಿಕೊಂಡು ಬರುವಂತೆ ಹೇಳುವುದು" (ಕೃಪಕೋ. ೧೬೨) : ಕಪಟದೊಳೇಂ ಪ್ರೇಷಣಶಬ್ದಪುದ್ಗಲಕ್ಷೇಪಸಮುದಿತಾನಯನಂ ತಾವಪಚಾರಂಗಳ್ ರೂಪಾನುಪಾತಮುಂ ಪ್ರವಿತತ ದೇಶನಿಯಮವ್ರತದೊಳ್ (ಸುಕುಮಾ. ೬-೧೯) : ತನ್ನ ಸೀಮೆಯೊಳಿರ್ದ ದಾಸಿ ದಾಸರನ್ನು ಕಳುಹಿ ಲೇಸಾಗಿ ಕೆಲಸವ ಮಾಡಿಸುತಿರ್ಪುದು ಪ್ರೇಷಣವೆಂಬತಿಚಾರ (ದ್ವಾರಕಾ. ೧೧-೩೦೩). [ಸಂ.]

**ಪ್ರೇಷಿತ** (ಗು). ೧. ಕಳುಹಿಸಿದ ; ರವಾನಿಸಿದ : ಅಜಿತಂಜಯ ಮಹಾರಾಜಂ . . . ಪ್ರೇಷಿತಾಶೇಷಪ್ರಕೃತಿಸಮೇತಸಚಿವಸಂದೋಹಸಂದರ್ಶನಾರ್ಥಂ . . . ಅಖಿಳಪ್ರಧಾನಪರಿವಾರಪರಿಕ್ಕೃತನುಮಾಗಿರೆ (ಹಂಪ್ರಪು. ೩-೨ ವ); ಸೇನಾಪತಿಪ್ರೇಷಿತಪ್ರೇಷ್ಯಜನದೆ ಬಟಿಸಂದು (ಪುಷ್ಪಕೃ. ೩-೦೦೦ ವ). ೨. ಆಜ್ಞಾಪಿಸಿದ ; ನಿರ್ದೇಶಿಸಿದ. (ನಾ). ೩. ಕಳುಹಿಸಲ್ಪಟ್ಟವನು ; ದೂತ : ಪತಿಪೋಷಿ ಮಂತ್ರಿಪಂ ರಾಜಶೇಖರಪ್ರೇಷಿತನಲ್ಲಿಗೇಳ್ತಂದು ನಿಜವಿನಯದಿಂ ಮೆಚ್ಚಿದು (ರಾಜಶೇ. ೬-೯೬ ವ). [ಸಂ.]

**ಪ್ರೇಷ್ಯ** (ಗು). ೧. ಕಳುಹಿಸಿದ ; ರವಾನಿಸಿದ. (ನಾ). ೨. ಕಳುಹಿಸಲ್ಪಟ್ಟವನು; ದೂತ : ತತ್ಸಮಯದೊಳ್ ಸೇನಾಪತಿಪ್ರೇಷಿತಪ್ರೇಷ್ಯಜನದೆ ಬಟಿಸಂದು (ಪುಷ್ಪಕೃ. ೩-೦೦೦ ವ). ೩. ಸೇವಕ; ಜವಾನ. ೪. ಕೂಲಿಕೆಲಸ ಮಾಡುವವನು; ಕೂಲಿಗಾರ : "ಪ್ರೇಷ್ಯಃ, ಪ್ರತಿಸ್ಕಂದಃ— ಈ ೨ ಕೂಲಿಕಾಟಿ" (ಹಡಾಹು. ೬೧-೨೦೪). [ಸಂ.]

**ಪ್ರೊಫೆಸರ್** (ನಾ). ಪ್ರಾಧ್ಯಾಪಕ; ಹಿರಿಯ ಅಧ್ಯಾಪಕ: ಹೌದು ಪ್ರೊಫೆಸರ್, ನನ್ನ ಪ್ರಯೋಗದಲ್ಲಿ ನಾನು ಜಾಗರೂಕನಾಗಿಯೇ ಇದ್ದೀನೆ (ಹೊಸಕ್ಕ. ೦೨). [← ಇಂ. Professor]

**ಪ್ರೋಕ್ತ** (ಗು). ೧. ಹೇಳಿದ ; ಪ್ರಕಟಿಸಿದ ; ತಿಳಿಸಿದ : ಇನ್ನದಕ್ಕೇ ಬಾರದುವೆಲ್ಲಂ ವ್ಯಕ್ತಂ ನ್ಯಾಯವಿರುದ್ಧಂ ಪ್ರೋಕ್ತಮಹಾದೋಷಮಂತು ಪೇಟಲ್ಕೆಂತುಂ (ಕಂಪಾ. ೦-೦೦೬); ಮಹಾಸ್ಕಾಂದಪುರಾಣಪ್ರೋಕ್ತ ಕಾಶಿಯೊಳು ಮಣಿಕರ್ಣಿಕೆಯೊಳು ಧನ್ಯರಹರಿಲ್ಲಿಯವಗಾಹನಂ (ಹಕಾ. ೩-೬೬). (ನಾ). ೨. ತಿಳಿಸಿದುದು ; ಹೇಳಿಕೆ : ನಿನ್ನ ಸುತನಂ ಪಿಡಿದ ಸಿಂಹಮುಂಟೆ ಅಪ್ರಸಿದ್ಧ ಪ್ರೋಕ್ತವಿದು (ಕೃಮಹಾ. ೨೬-೩೬). ೩. ಒಂದು ಬಗೆಯ ಸಸ್ಯ: "ಪ್ರೋಕ್ತಃ— ಬೆಳುವಾಲಿ" (೬ತಧಿ. ೦೦೩). [ಸಂ.]

**ಪ್ರೋಕ್ತಿ** (ನಾ). ಹೇಳಿಕೆ: ಆವ ನೀತಿಯಿದಾವ ಧರ್ಮವಿದಾವ ಶಾಸ್ತ್ರಪ್ರೋಕ್ತಿ ಭುವನದೊಳಾವ ಭಕ್ತಿಯಿದೆಂತು ಸೈರಿಸಬಹುದು ಹೇಳಯ್ಯ (ಐಸಪು. ೩೩-೩೬). [ಸಂ.]

**ಪ್ರೋಕ್ಷಣ** (ನಾ). ೧. (ನೀರು, ತೀರ್ಥ ಮೊದಲಾದುವುಗಳನ್ನು) ಸಿಂಪಡಿಸುವಿಕೆ; ಚಿಮುಕಿಸುವಿಕೆ. ೨. ಯಜ್ಞಪಶುವನ್ನು ಪರಿಶುದ್ಧಗೊಳಿಸಲು ತೀರ್ಥವನ್ನು ಚಿಮುಕಿಸಿ ವಧೆಮಾಡುವುದು : "ಪರಂ ಪರಾಕಂ, ಶಪನಂ, ಪ್ರೋಕ್ಷಣಂ . . . ಯಜ್ಞದಲ್ಲಿ ವೇದೋಕ್ತಪ್ರಕಾರವಾಗಿ ಮಾಡುವ ಪಶುವಿಶಸನವೆಂಬ ಶ್ರೌತಪಶುವಧೆ'' (ಸಿದ್ಧಾಂತಿ. ೨೨೦). ೩. ಊಟ ಮಾಡುವುದಕ್ಕೆ ಮುಂಚೆ ಎಲೆಗೆ ಬಡಿಸಿದ ಭೋಜನ ಪದಾರ್ಥಗಳ ಮೇಲೆ ನೀರನ್ನು ಚಿಮುಕಿಸಿ ಶುದ್ಧಿಗೊಳಿಸುವಿಕೆ. [ಸಂ.]

**ಪ್ರೋಕ್ಷಣೆ** (ನಾ). ೧. = ಪ್ರೋಕ್ಷಣ ೧: ಪ್ರೋಕ್ಷಣೆ ಮಾಡಿದರೆ ಪ್ರಹುಡ ನಾದಾನೆ? (ಗಾದೆ). ೨. = ಪ್ರೋಕ್ಷಣ ೩ : ಆಚಾರ್ಯರು ಪ್ರೋಕ್ಷಣೆ ಮಾಡಿ ಊಟವನ್ನು ಪ್ರಾರಂಭಿಸಿದರು (ರೂಪ). [ಸಂ. ಪ್ರೋಕ್ಷಣ]

**ಪ್ರೋಕ್ಷಿತ** (ಗು). ೧. ಪ್ರೋಕ್ಷಣೆ ಮಾಡಿ ಶುದ್ಧಗೊಳಿಸಿದ; ನೀರು ಚಿಮುಕಿಸಿ ಶುದ್ಧವಾದ. (ನಾ). ೨. ಯಜ್ಞದ ಬಲಿಪಶು : "ಪ್ರಮಿತಾತಃ, ಉಪಸಂಪನ್ನಃ, ಪ್ರೋಕ್ಷಿತಃ . . . ಯಜ್ಞದಲ್ಲಿ ಕೊಲ್ಲಲ್ಪಡುವ ಪಶು ಮುಂತಾದವುಗಳ ಹೆಸರುಗಳು'' (ಸಿದ್ಧಾಂತಿ. ೨೨೦). [ಸಂ.]

**ಪ್ರೋಕ್ಷಿಸು** (ಕ್ರಿ). ಸಿಂಪಡಿಸು; ಚಿಮುಕಿಸು; ಕಮಂಡಲೂದಕದಿಂದೆ ಮುನಿವರಂ ಪ್ರೋಕ್ಷಿಸಿದೊಡುರಗತಲ್ಪದೊಳುಪ್ಪವಡಿಸುವಬ್ಜಾಕ್ಷನೀತಂ ತಪ್ಪದೆಂಬಂತೆ ಕಣ್ದೆರೆದು ವಾಲ್ಮೀಕಿಗಭಿನಮಿಸಲು (ಕೃಮಹಾ. ೨೧-೩೦); ಹಿಮಾಲಯನು ಆ ಮುನಿಯನ್ನು ಬಹಳವಾಗಿ ಸನ್ಮಾನಿಸಿ . . . ಪಾದಪ್ರಕ್ಷಾಲನ ಮಾಡಿ ಚರಣತೀರ್ಥವನ್ನು ಮನೆ ತುಂಬ ಪ್ರೋಕ್ಷಿಸಿದನು (ತುಳಸೀ. ೨೦). [ಪ್ರೋಕ್ಷಣ +— ಇಸು₃]

**ಪ್ರೋಚ್ಚಂಡ** (ಗು). ೧. ಅತಿಭಯಾನಕವಾದ: ವೀರಲಕ್ಷ್ಮೀಸದನ ಪ್ರೋಚ್ಚಂಡ ದೋರ್ದಂಡನಂ . . . ಇರ್ದಂ (ಕುಸ್ವಕೃ. ೨-೯೬). ೨. ಅಧಿಕವಾದ ; ಹೆಚ್ಚಾದ. (ನಾ). ೩. ಹೆಚ್ಚು ; ಅಧಿಕ : ನನಗೆ ಪ್ರೋಚ್ಚಂಡವಾದ ಭರತಿ ಬಹುಶಃ ನಸುಕಿನಲ್ಲಿಯು ಬರುವುದು (ಗಾಳಿಕ. ೦೬೯). [ಸಂ.]

**ಪ್ರೋಚ್ಚಲಿತ** (ಗು). ಮೇಲಕ್ಕೆ ಚಲಿಸಿದ; ನೆಗೆದ: ಜನಜನ್ಮೋತ್ಸವದೊಳ್ ವೇದಿನಿಗಿರಿಸಿದ ಕಾಂಚನಧ್ವಜಸ್ತಂಭಮಿದೆಂಬಿನೆಗಂ ಸೊಗಯಿಸಿದುದು ಮೇರುನಗಂ ಪ್ರೋಚ್ಚಲಿತದುಗ್ಧಪೂರದುಕೂಲಂ (ಚಂದ್ರಪ್ರ. ೦೨-೦೩೬). [ಸಂ. ಪ್ರೋಚ್ಚಲಿತ]

**ಪ್ರೋಜ್ವಲ** (ಗು). ೧. ತೀಕ್ಷ್ಣವಾಗಿ ಉರಿಯುವ; ಪ್ರಜ್ವಲಿಸುವ. (ನಾ). ೨. ದೊಡ್ಡ ಬೆಂಕಿ; ಮಹಾಜ್ವಾಲೆ : ಮುಂದೆ ಸಂಭವಿಸಿತ್ತು . . . ಗಾಂಗೇಯದ್ರೋಣಾದಿ ಕರ್ಣದುರ್ಯೋಧನರ ಜೀವಕಾನನ ದಹನಪ್ರೋಜ್ವಲಂ (ಕಣ್ಣಾಂಗ. ೬೯-೦೬೯೭). [ಸಂ.]

**ಪ್ರೋಜ್ವಲಿಸು** (ಕ್ರಿ). ಬಹಳವಾಗಿ ಉರಿ; ಪ್ರಜ್ವಲಿಸು: ಪ್ರೋಜ್ವಲಿಸಿದುದು ಕೋಪನಜ್ವಾಲೆ ಭೂಮಿಪನಗೆ (ಶ್ರೀಹಾಕು. ೨-೯೩೬) ; ರಾಗಾರುಣಜ್ವಾಲೆ ಪ್ರೋಜ್ವಲಿಸುವೋಲ್ ಉಗ್ರದಾವಾಗ್ನಿ ತರುನಿಚಯವುವಂ ಕೊಂಡುರಿಯು ವಂತೆ ಪೊತ್ತಿದುದು ಚಿತ್ರಾಂಗಿಯಂ ಪ್ರಣಯಪ್ರಲಯಶಿಖಿ (ಚಿತ್ರಾಂಗ. ೯೦-೦೦೦೦). [ಪ್ರೋಜ್ವಲ + –ಇಸು]

**ಪ್ರೋಜ್ಝಿತ** (ಗು). ಬಿಟ್ಟ; ತ್ಯಜಿಸಿದ: 'ಪ್ರೋಜ್ಝಿತಚಾಪ' ಪರಾ. [ಸಂ.]

**ಪ್ರೋಜ್ಝಿತಚಾಪ** (ನಾ). (ಯುದ್ಧದಲ್ಲಿ) ಬಿಲ್ಲನ್ನು ಬಳಸುವುದನ್ನು ಬಿಟ್ಟವನು; ಧನುಸ್ಸನ್ನು ತ್ಯಜಿಸಿದವನು: ಗುರುವಂ ಪ್ರೋಜ್ಝಿತ ಚಾಪನಂ ಪುಸಿದು ಕೊಂದು (ಗದಾಯು. ೩-೩೩). [ಸಂ.]

**ಪ್ರೋಡ್ಡೀಣ** (ನಾ). ಹಾರುವುದು; ನೆಗೆತ: ಉಡ್ಡೀಣ ಪ್ರೋಡ್ಡೀಣದಿಂದ ಪೊಳೆಪೊಳೆದು (ಕವಿಮು. ೨೨-೯). [<ಸಂ. ಪ್ರೋಡ್ಡೀನ]

**ಪ್ರೊಡ್ಡೀನ** (ಗು). ಹಾರಿದ; ನೆಗೆದ; ಮೇಲೆದ್ದ : ಉಚ್ಛ್ವಾಸಖಿನ್ನ ಶ್ರವಮುಂ ಪ್ರೋಡ್ಡೀನದೀನಶ್ರಮದೊಳೊಗೆದ ರೋಮಾಂಚಮು ಶೀತವಾತಸ್ತಿಮಿತೋಪಸ್ಪರ್ಶರೋಮಾಂಚದೊಳ್ ಬೆರಸಿದಲ್ ಕನ್ನೆಗೇಕನ್ನ ಮಂದಂ (ಅಗ್ನಿನೇ. ೩-೨೨) ; ಗಂಭೀರಸ್ಫಾರವೇಳಾಬಹಳಪರಿವೃತೋಲ್ಲೋಲ ಕಲ್ಲೋಲಮಾಲಾರಂಭಪ್ರೋಡ್ಡೀನಫೇನ . . . ಘನಘೋರಾವರೌದ್ರಂ ಸಮುದ್ರಂ (ಕಾವ್ಯಸಾ. ೬೩). [ಸಂ.]

**ಪ್ರೋತ** (ಗು). ೧. ಹೆಣೆದ ; ಹೊಲಿದ. ೨. ಕೂಡಿಸಿದ ; ಜೋಡಿಸಿದ. ೩. ಕಂಡರಿಸಿದ ; ವೆಟ್ಟಿದ : ಶ್ರೀಧರಾಧಿಪ ಭೋಜರಾಜ ಮಕುಟಪ್ರೋತಾಶ್ಮರಶ್ಮಿಚ್ಛಟಾಚ್ಛಾಯಾಕುಂಕುಮಪಂಕಲಿಪ್ತ (ಎಪಿ. II. ೯೯–೬೨ ; ಕ್ರಿ. 1100). ೪. ಕಟ್ಟಿದ ; ಬಂಧಿಸಿದ. ೫. ಚುಚ್ಚಿದ. ೬. ನೆಯ್ಗೆಯಲ್ಲಿ ಅಡ್ಡಡ್ಡವಾಗಿ ಜೋಡಿಸಿದ. (ನಾ). ೭. ನೆಯ್ದ ಬಟ್ಟೆ : 'ಓತಪ್ರೋತ' ಪರಾ. [ಸಂ.]

**ಪ್ರೋತ್ಕರ** (ನಾ). ಗುಂಪು; ಸಮೂಹ : ಗಿರಿಪತಿಯಂ ಮೇನೆಯು ನಾದಪಿಂ ಜೀಲ್ಕೊಟ್ಟು ಮಕುಟರತ್ನಪ್ರಕರಸ್ಫುರಿತಪ್ರದ್ಯೋತಪ್ರೋತ್ಕರ ವಿಳಸಿತವಳಯದೊಳಗೆ ಶಿವನೆಸೆದಿರ್ದಂ (ಗಿರಿಜಾ. ೦೦-೦೦೬). [ಸಂ.]

**ಪ್ರೋತ್ಕಲಿತ** (ಗು). ಮೇಲೆದ್ದ ; ಹಾರಿದ : ನಕ್ರಚಕ್ರಸ್ಫುರದುರು ತರಯಾದಶ್ಚರಾಧ್ಮಾಪಿತ ಪ್ರೋತ್ಕಲಿತಾಂಭಃಕುಂಭಿಕುಂಭೋನ್ನದರಸ ವಿಲಸತ್ಕ್ಷೋಭರೌದ್ರಂ ಸಮುದ್ರಂ (ಶಂಕರ. ೦೩೦-೬). [ಸಂ.]

**ಪ್ರೋತ್ತುಂಗ** (ಗು). ಬಹಳ ಎತ್ತರವಾದ ; ಬಹು ಉನ್ನತವಾದ : ವರರತ್ನಕನಕಮಯವಿಸ್ಫುರಿತ ಪ್ರೋತ್ತುಂಗತೋರಣಪ್ರಾಕಾರಂ (ಸುಕುಮಾ. ೯ ೬೩) ; ಆತ್ಮಭವಪ್ರೋತ್ತುಂಗ ಮೂರ್ಧಾಗ್ರದೊಳಿಟ್ಟಾವಲೊಡಂ (ಚಂದ್ರಪ್ರ. ೨ ೩೬). [ಸಂ.]

**ಪ್ರೋತ್ಥಾನ** (ಗು). ೧. ಮೇಲಕ್ಕೆ ಎತ್ತುವ ; ಮೇಲೆತ್ತುವ. ೨. ಉದ್ಧರಿಸುವ : ಜಾವಕರಿಗೆ ಸುಯೋಗಿಗಳಿಗೆ ಮಹಾವ್ರತಿಗಳುಪುಣ್ಯ ಗಳುಂಟಾ ಜಾವಕರು ನಿಜನಿರ್ಜರಪ್ರೋತ್ಥಾನಶಕ್ತಿಯಲಿ ದೀಪಿಸುವರು (ಶಿವ್ಪಾಶಾಂ. ೩-೬೬). [ಸಂ.]

**ಪ್ರೋತ್ಪಾಟನ** (ನಾ). ಉತ್ಪಾಟನ ; ನಾಶ : ತ × × × ತ ಪ್ರೋತ್ಪಾಟನ ಪಟುವೆನಿಪ್ಪ ನಾಚುಗಿಭೂವ ಜಗವೆಲ್ಲಂ ಕಡುಪಿಂಗೆ ಕಂಟಳಿಪಿನಂ [ವ] × × × (ಎಪಿಗ್ರಾ. XV. ೯೨–೬ ; ಕ್ರಿ. 12ನೆಯ ಶ). [ಸಂ.]

**ಪ್ರೋತ್ಕ್ಷಿಹಿತ** (ಗು). ಚೆನ್ನಾಗಿ ಮುಚ್ಚಿದ,–ಮರೆಮಾಡಿದ : ವಿನಿರ್ಧೂತ ಧಾತ್ರಿರಜಃಪ್ರೋತ್ಕ್ಷಿಹಿತಾಂಗಂ . . . ಅಂಭೋವಾಹಮಂಭೋದಸಿಂಧುರ ಮಂ ಪಾಯ್ದು ಪಳಂಚಿ ಪೊಯ್ದುದು ರಟಜ್ಜಂರ್ಝಾಮರುತ್ಕುಂಜರಂ (ಲಾಳಿಕ. ೬-೦೦೬). [ಸಂ.]

**ಪ್ರೋತ್ಫುಲ್ಲ** (ಗು). ೧. ಚೆನ್ನಾಗಿ ಅರಳಿದ,–ಬಿರಿದ. ೨. ವಿಶಾಲವಾದ ಪೇಚರಕಿನ್ನರಾಮರಯುಗಂ ನಾನಾವಿನೋದಂಗಳಂ ಮದವಾಪೇಶಕರಂಗಳಂ ಸಲಿಸುತಂ ಪ್ರೋತ್ಫುಲ್ಲ ಚಂಚಲ್ಲತಾಸ್ಪದದೊಳ್ . . . ತಳ್ತಿರೆ ಕಾಮ ರಾಗಮಯಮಾಯ್ತೇನೀ ನಗಂ ರಮ್ಯಮೋ (ಅಜಿ. ೯-೦೦೬). (ನಾ). ೩. ಚೆನ್ನಾಗಿ ಬಿರಿದುದು,–ಅರಳಿದಂದು : ಓರ್ವಂ ದ್ವಿಜಪ್ರವರು ಮೌಕ್ತಿಕಮಾಲಿಕಾವಲಯಮಂ ಪ್ರೋತ್ಫುಲ್ಲಮಂ ಪುಂಡರೀಕವನಂದಲ್ತೆ ಮನೋರಮಾಂಕತಳದೊಳ್ ತಂದಿಕ್ಕಿದಂ ಸ್ವಪ್ನದೊಳ್ (ಆದಿಪು. ೩೬೩). [ಸಂ.]

**ಪ್ರೋತ್ಸಾಹ** (ನಾ). ೧. ಬಹಳವಾದ ಉತ್ಸಾಹ,–ಹುರುಪು. ೨. ಉತ್ತೇಜನ ; ಪ್ರಚೋದನೆ : ರಾಜಮಹಾರಾಜರು ಮತ್ತು ಮಹಾ ಮಂಡಲೀಕರು ಘಟಿಕಾಸ್ಥಾನಗಳಿಗೆ ಹಚ್ಚಿನ ಪ್ರೋತ್ಸಾಹವನ್ನು ಕೊಡು ತ್ತಿದ್ದರು (ಕರ್ನಾಟ. ೬೬). [ಸಂ.]

**ಪ್ರೋತ್ಸಾಹಕ** (ನಾ). ಹುರಿದುಂಬಿಸುವವನು ; ಉತ್ತೇಜನ ಕೊಡುವವನು : ಎಲೋ. ಪ್ರೋತ್ಸಾಹಕನೆ ಕೆಗೆ ನಮ್ಮ ಪ್ರಥು ಭೇಟಿ ಯಲ್ಲಿ ವಿಮುಖನಾದನು (ಶಾಕುಂತ. ೨೩-೦). [ಸಂ.]

**ಪ್ರೋತ್ಸಾಹಗೊಳಿಸು** (ಕ್ರಿ). ಹುರಿದುಂಬಿಸು; ಉತ್ತೇಜಿಸು : ತುಂಡಾ ನಿರಾಶೆಗೊಂಡಿದ್ದ ಅವನನ್ನು ಅವನ ಮಾಸ್ತರರು ಪ್ರೋತ್ಸಾಹಗೊಳಿಸಿದರು (ಲೂಕಿ). [ಪ್ರೋತ್ಸಾಹ + ಕೊಳ್$_1$ + –ಇಸು]

**ಪ್ರೋತ್ಸಾಹಗೊಳ್ಳು** (ಕ್ರಿ). ಉತ್ತೇಜನಗೊಳ್ಳು ; ಉತ್ತೇಜನವನ್ನು ಪಡೆ: ಸಾಹಿತ್ಯರಚನೆಗಳನ್ನು ಬರೆಗೆ . . . ಕೊಳ್ಳುವ–ಕೊಡುವ, ಪ್ರೋತ್ಸಾ ಹಿಸುವ–ಪ್ರೋತ್ಸಾಹಗೊಳ್ಳುವ . . . ಈ ಕಾರ್ಯಕ್ಕೆ ಉದಾರಚರಿತರು ನೆರವು ನೀಡಬೇಕಾಗಿ ಪ್ರಾರ್ಥನೆ (ಸಂಕೋಶ. vii ೩೦೪). [ಪ್ರೋತ್ಸಾಹ + ಕೊಳ್ಳು$_1$ (<ಕೊಳ್$_1$)]

**ಪ್ರೋತ್ಸಾಹಿಸು** (ಕ್ರಿ). ಹುರಿದುಂಬಿಸು ; ಉತ್ತೇಜಿಸು : ಯಾ ಸ್ಥಳ ವನ್ನಾಕ್ರಮಿಸಿ ಪಟ್ಟಣವಂ ಕಟ್ಟಿ ಉಪಾಯದಿಂದ ಪ್ರೋತ್ಸಾಹಿಸುತ ಯದ ರಿಂದ ಬೇಕಾದ ವಸ್ತುಗಳಂ ಪಡದು ಸುಖದಿಂದಿರಬಹುದು (ಶ್ರೀಗುಂ. ೯೦೬-೯) ; ಮನಸ್ಸಿಗೆ ಹಿತವೆನಿಸುವ ಸಾಮೂಹಿಕ ಅಭ್ಯಾಸಗಳನ್ನು ಆಚರಿಸಲು ಪ್ರೋತ್ಸಾಹಿಸಬೇಕು (ಶಿಕ್ಷಣ. ೩೦೦). [ಪ್ರೋತ್ಸಾಹ+ –ಇಸು]

**ಪ್ರೋಥ** (ಗು). ೧. ಪ್ರಸಿದ್ಧವಾದ. ೨. ಇಟ್ಟ ; ಇರಿಸಿದ. (ನಾ). ೩. ಕುದುರೆಯ ಮೂಗಿನ ಹೊಳ್ಳೆ : ಕೆತ್ತುತ್ತಮತ್ಯಂತವಿಸ್ಫುರಿತ ಪ್ರೋಥಮನೋರ್ಮೆಯುಂ . . . ಇರ್ದತ್ತುದಾತ್ತಂ ಹಯಂ (ಮಲ್ಲಿಪು. ೬-೬೩) ; ಆ ಪ್ರಧಾನಮತ್ತರಪ್ರೋಥಮದಕ್ಕುಂ ಬಿತ್ತರ ಪ್ರೋಥದರಡುಕೆಲದ ನಾಸಾಪುಟಮುಂ ಪ್ರೋಥದ ಕಣ್ಣಡೆ ಘೋಣಮದು (ಅಶ್ವಶಾ. ೯-೦೩). ೪. ಟೊಂಕ ; ಸೊಂಟ. ೫. ಪ್ರಯಾಣಿಕ ; ಪಯಣಿಗ. [ಸಂ.]

**ಪ್ರೋದ್ಗತ** (ಗು). ೧. ಮುಂದಕ್ಕೆ ಚಾಚಿಕೊಂಡಿರುವ : ಸ್ಫುರದೀಪ

ತ್ಪ್ರೋದ್ಗತೋರೋರುಹವಮುಕುಳಿಯರುನ್ಮತ್ತಹಂಸೀಕ್ವಣನ್ನೂಪುರೆಯರ್ . . . ಪೊಡೆವಟ್ಟೆಯ್ದೆವಂದಿರ್ದರಾಗಳ್ (ಆದಿಪು. ೬-೩೬). ೨. ಹೊರಹೊಮ್ಮಿದ : ವೇತ್ರಹಸ್ತಪ್ರತಿಮುಖರ ಪ್ರೋದ್ಗತಾಭೀಳಘೋಷಂ (ಗಂಠ. ೩-೪). [ಸಂ.]

**ಪ್ರೋದ್ಗಮ** (ನಾ). ಉಂಟುಮಾಡುವಂಥದು : ಒದಗಿಸುವಂಥದು : ಚಂಡಾಂಶುಬಿಂಬಕ್ಕವಮೆಯ ರಜನೀಪ್ರೋದ್ಗಮಂ . . . ತಾನೆಂಬಿನಂ ಬಂದುದು ತಟಜ್ಜ್ವಾಲವಂಭೋದಕಾಲಂ (ಕಾದಂಸಾ. ೩೨೯). [ಸಂ.]

**ಪ್ರೋದ್ದಂಡ** (ಗು). ಬಹಳ ಕಠಿಣವಾದ ; ಅತ್ಯುಗ್ರವಾದ : ಮಂಡಿತೋರುಜಟಾಭಟಪ್ರೋದ್ದಂಡಹತಿಯಿಂದಂಬುರುಹಗರ್ಭಾಂಡಕೂಟಕಟಾಹ ಮೊಡೆಯಲು (ಚಿತ್ರಪು. ೧೭-೦೯). [ಸಂ.]

**ಪ್ರೋದ್ದಾನ** (ನಾ). ಸುರಿಯುತ್ತಿರುವ ಮದಜಲ ; ಸೂಸುವ ಮದೋದಕ : ಕ್ಷಿತಿಚಕ್ರಂ ಗತಿಚಕ್ರಗಂಧಗಳಿತ ಪ್ರೋದ್ದಾನಜಂಭಾಳ ಶೋಭಿತಂ (ಪುಷ್ಪದಂತ. ೦-೪೦) ; ಭ್ರಮದ್ಭೃಂಗಸಂಗಪ್ರಥಿತಪ್ರೋದ್ದಾನ ಧಾರಾಘಟಿತಕಟತಟಂ . . . ಘನನಿನದಮದೇಂ ಬಂದುದೋ ದಂತಿಜಾಳಂ (ರಾಜಶೇ. ೦೩-೭೭). [ಸಂ.]

**ಪ್ರೋದ್ದಾಮ** (ಗು). ೧. ಅಪರಿಮಿತವಾದ ; ಹೆಚ್ಚಾದ : ಸಮುದಾನೀಕಪಮಂ ಮಹಾಭಯದಮಂ ಪ್ರೋದ್ದಾಮ ಜಂಬೂಕದಂಬಮನಭ್ರಂಕಷ ಕೂಟಮಂ . . . ಎಯ್ದಿದಂ ಸಕಲಕಾಕಾನೀಕಲಕ್ಷ್ಮೀಶ್ವರಂ (ಶಂಕಶಂ. ೨೪೯-೦೨) ; ಆ ಮಹಾವಜ್ರಾಯತ ಪ್ರೋದ್ದಾಮದಾಯಸಭೀಮತನು ನಿರ್ಮಾಮವೆನೆ ನುಗ್ಗಾಗಿ ಬಿದ್ದುದು ನೃಪನ ತಕ್ಕೆಯಲಿ (ಶಬ್ದಾ.ಗ. ೦೦-೬೯). ೨. ಶ್ರೇಷ್ಠವಾದ ; ಹಿರಿದಾದ ; ಅತಿಶಯವಾದ : ಸಕಲಕ್ಷತ್ರಮಣಿ ಪೂಜ್ಯನಮಳಚರಿತ್ರಂ ಪ್ರೋದ್ದಾಮಸೋಮವಂಶಲಲಾಮಂ (ಶಂಕಶಾ. ೦-೬೦). (ನಾ). ೩. ಶ್ರೇಷ್ಠವಾದುದು : ರಮಣೀಯಂ . . . ವಿಲಸತ್ಕಾವ್ಯಂ ಮಹೀಚಕ್ರದೊಳ್ ಸುಮನೋಮಾಲ್ಯದ ಪೊಲ್ ಸುನಾಯಕ ಗುಣಪ್ರೋದ್ದಾಮಮಾಗಿರ್ದಪುತ್ತಮಪುಣ್ಯಾಧಿಕಕಂಠಭೂಷಣಮದಕ್ಕುಂ (ನಾರಪು. ೦-೪೦). [ಸಂ.]

**ಪ್ರೋದ್ಧೂತ** (ಗು). ಮೇಲೇಳುತ್ತಿರುವ : ಇಂತಿದೆ ತೋಟತ್ತು ಮದಾಂಧಸ್ಯೆರಿಭಮಿರಪ್ರೋದ್ಧೂತರೇಣುಪ್ರಜಂ[ಶಾಕಾಂ. ಮಮಾಂತಸ್ಯೆರಿಭಕರಪ್ರೋದ್ಧೃತ್ಕರೇಣುಪ್ರಣಂ] (ಕಾರಂಪೂ. ೦೩೩). [ಸಂ.]

**ಪ್ರೋದ್ಭವ** (ಗು). ೧. ಹುಟ್ಟಿದ ; ಜನ್ಮ ತಾಳಿದ. (ನಾ). ೨. ಹುಟ್ಟಿದವನು ; ಜನ್ಮ ತಾಳಿದವನು : 'ಘಟಪ್ರೋದ್ಭವ' ಪರಾ. [ಸಂ.]

**ಪ್ರೋದ್ಭಾಸಿ** (ಗು). ೧. ವಿಶೇಷವಾಗಿ ಹೊಳೆಯುವ,—ಪ್ರಕಾಶಿಸುವ : ಗೋಪಣನ್ನಿದಿಗಿಭಪ್ರೋದ್ಭಾಸಿಗನ್ನದ್ವಿಪಂ (ಎಶಿ. II, ೬೮-೯೭ ; ಸು. 1100); ರತ್ನಪ್ರಭಾಪೋಜ್ಜೃಂಭಿತಪ್ರೋದ್ಭಾಸಿವೀಚೀನಿಚಯಘನಘನಾರಾವರೌದ್ರಂ ಸಮುದ್ರಂ (ಕಾವ್ಯಸಾ. ೭೭). ೨. ವಿಶೇಷವಾಗಿ ಹೊಳೆಯುವಂಥದು : ರತ್ನಮಯಪ್ರಸಿದ್ಧಶಿಬಿರಾಲಂಕಾರ ಸಿದ್ಧಾಲಯಾಸ್ಪದಮಂ ಖೇಚರ ಚಕ್ರವರ್ತಿವಿಭವಪ್ರೋದ್ಭಾಸಿಯಂ ಮೆಚ್ಚಿ ನೋಡಿದನಾ ಭೂಚರಚಕ್ರವರ್ತಿ (ಆತಪು. ೯-೨೦). [ಸಂ.]

**ಪ್ರೋದ್ಭೂತ** (ಗು). ೧. ಹುಟ್ಟಿದ ; ಆವಿರ್ಭವಿಸಿದ : ಎನ್ನೀ ಕಾವ್ಯಕ್ಕೆ . . . ಭೃಂಗಾವಳೀಸಂಪನ್ನಪ್ರೋದ್ಭೂತರುಚಿರಾರಿತರಮಮುದಿತಾನಂದವೇಶಂ ಗಣೇಶಂ (ಗಂಠ. ೦-೩). (ನಾ). ೨. ಹುಟ್ಟಿದುದು ; ಮೂಡಿದುದು : ಮಾತೇನುದ್ಭೂತದೋಷಪ್ರಕರರಹಿತನೆನಿಪನಾಪ್ತಂ ತದಾಪ್ತಾನನಪ್ರೋದ್ಭೂತಂ (ಸುಕುಮಾ. ೩-೩೯). [ಸಂ.]

**ಪ್ರೋದ್ಭೇದ** (ಗು). ೧. ಒಡೆದ ; ಮುರಿದ. ೨. ಹೊರಹೊಮ್ಮಿದ ; ಹೊರಬಂದ : ಪುಳಕಪ್ರೋದ್ಭೇದಘರ್ಮೋದಕವಿಸರಮನೊತ್ತಂಬದಿಂತಾಗೆಯುಂ (ಆದಿಪು. ೪-೩೦). (ನಾ). ೨. ಮುರಿಯುವಿಕೆ ; ಮುರಿತ : ಮಾದ್ಯದ್ಗಜಗಂಡಭಿತ್ತಿಕಷಣಪ್ರೋದ್ಭೇದದಿಂ ಸಾರ್ದು ಬಂದಿದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್ (ಶಂಕಶಾ. ೪-೨೨). [ಸಂ.]

**ಪ್ರೋದ್ವೃತ್ತ** (ನಾ). ಅತಿಶಯವಾಗಿ ಸೊಕ್ಕಿದವನು ; ಉನ್ಮತ್ತನಾದವನು : ಅಣ್ಮಿ ತಾಗಿದರಂ ಸೀಳ್ದು ಕೆಲಂಬರಂ ಕೆಲಬರಂ ಪ್ರೋದ್ವೃತ್ತರಂ ದೈತ್ಯರಂ ತುದಿಗಾಲಿಂ ಒಡಿದೆತ್ತಿ ಪೊಯ್ದು ನೆಲದೊಳ್ ಕೊಂದಂ ಮರುನ್ನಂದನಂ (ಶಂರಾಮಾ. ೨೦-೦೯೩). [ಸಂ.]

**ಪ್ರೋನೋಟು** (ನಾ). ಸಾಲಗಾರನು ಸಾಲಿಗನಿಗೆ ಬರೆದು ಕೊಟ್ಟ ಕರಾರುಪತ್ರ; ಪ್ರಾಮಿಸರಿನೋಟು : ಪ್ರೋನೋಟಿನ ಮಾಯಿದೆ ಮುಗಿಯುತ್ತ ಬಂತಲ್ಲ ಎಂಬ ವಿಚಾರವೂ ಹೊಳೆಯುತ್ತದೆ (ಸ್ವಕ್ಷಹೂ. ೦೯೭) ; ನೀವು . . . ಪ್ರೋನೋಟು ಬರಕೊಟ್ಟು ನಮ್ಮಿಂದ ಪಡಕೊಂಡ ಹಣ . . . ಕೊಟ್ಟಿಲ್ಲ (ಶುರುಕಾ. ೩).

[ಟಿ ಇದು 'Promissory note' ಎಂಬುದರ ಸಂಕ್ಷಿಪ್ತರೂಪ]

**ಪ್ರೋನ್ನತ** (ಗು). ಬಹಳ ಎತ್ತರವಾದ,—ಉನ್ನತವಾದ : ತನ್ನನೊರ್ಲ್ವಾ ತ್ರಿಲೋಕಶ್ರೀಯೆಲ್ಲಂ ಪೊರ್ದಿದಂತೆನೊಸೆದನೊ ಮನದೊಳ್ ಸೂಕ್ತಿಕರ್ಣಾವತಂಸಂ ಶ್ರೇಯಾಂಸಂ ಪ್ರೋನ್ನತಾಂಸಂ (ಆದಿಪು. ೯-೦೩೨) ; ತತ್ಸಭಾಮಧ್ಯದೊಳ್ ತದ್ವಿದರೆಲ್ಲಂ ಕೀರ್ತಿಸುತ್ತಿರ್ಪುದುಮದನೆ ಮನಂಗೊಂಡು ಚಿತ್ತೋದಿತಾನಂದದಿನಿರ್ದಂ ಪ್ರೋನ್ನತಾಂಸಂ (ಸುಕುಮಾ. ೨-೭೩). [ಸಂ.]

**ಪ್ರೋನ್ನತಿ** (ನಾ). ೧. ಬಹಳ ಎತ್ತರ. ೨. ಹಿರಿಮೆ ; ಶ್ರೇಷ್ಠತೆ : ಇನ್ನಟಿಯಲ್ಕೆ ಬರ್ಪುದೆಲೆ ಧೂರ್ತಕಿರಾತ ಭವತ್ಪರಾಕ್ರಮಪ್ರೋ[ಶಾಕಾಂ. ದು]ನ್ನತಿಯೆಳ್ಚರಂ (ಕಿರಾ. ೪-೦೦೭). [ಸಂ.]

**ಪ್ರೋನ್ಮತ್ತ** (ಗು). ಬಹಳವಾಗಿ ಕೊಬ್ಬಿದ ; ಸೊಕ್ಕಿದ : ಪ್ರೋನ್ಮತ್ತವೈರೀಭಕೇಸರಿಸಿಂಗಂ ಪತಿಯೆಂದೊಡುನ್ನತಿಯನಿನ್ನೇವಣ್ಣಿಪೆಂ. ದುರ್ಗನಾ (ಶಂಕಶಂ. ೦೨-೩) ; ವಿಚಾರಿಪೊಡೆನ್ನವೋಲಿತರನ್ಯವನಿಂತಾವೊಂ ಪ್ರೋನ್ಮತ್ತವೃತ್ತಿಯನಿರ್ದಪಂ (ಶಂಪ್ರಕೃ. ೨-೯೦). [ಸಂ.]

**ಪ್ರೋನ್ಮಿಳಿತ** (ಗು). ಕೂಡಿರುವ ; ಸೇರಿರುವ : ಪ್ರಬಲಜಲಚರಾನೀಕಗಂಭೀರಭೀಮೋಜ್ಜ್ವಳರಾವಪ್ರೋದ್ಭೂತಪ್ರೋನ್ಮಿಳಿತ ಘುಳುಘುಳುಧ್ವಾನಮಂಭೋನಿಧಾನಂ (ಗಂಠ. ೦-೯೬). [ಸಂ. ಪ್ರೋನ್ಮಿಲಿತ]

**ಪ್ರೋಷಧ** (ನಾ). [ಜೈನ] ಉಪವಾಸದ ಹಿಂದಿನ ದಿನ ಮತ್ತು ಮಾರುದಿನ ಒಪ್ಪತ್ತು ಮಾತ್ರ ಊಟ ಮಾಡುವ ಒಂದು ಬಗೆಯ ಉಪವಾಸವ್ರತ ; ಟಿ ಉಪವಾಸವು ಸಾಧ್ಯವಾಗದೆ ಹೋದರೆ ಕೇವಲ ನೀರನ್ನು ಕುಡಿದು ಇರಬಹುದು. ಅದಕ್ಕೂ ಅಸಮರ್ಥರಾದವರು ಒಂದು ಹೊತ್ತು ಶುದ್ಧ ಸಾತ್ತ್ವಿಕ ಹಗುರು ಅನ್ನವನ್ನು ಸ್ವೀಕರಿಸಬಹುದು. ಅಷ್ಟಮಿ, ಚತುರ್ದಶಿ ದಿನಗಳಲ್ಲಿ ಉಪವಾಸವನ್ನು ಮಾಡಬೇಕೆನ್ನುವವರು ಮುಂಚಿನ ದಿನ ಮಧ್ಯಾಹ್ನ ಊಟ ಮಾಡಿದೊಡನೆಯೇ ಮಾರುದಿವಸ ಉಪವಾಸದ ಪ್ರತಿಜ್ಞೆಯನ್ನು ಮಾಡಬೇಕು. ಆಗಿನಿಂದಲೇ ತನ್ನ ಮನೆತನದ ಎಲ್ಲ ಕೆಲಸಗಳನ್ನು ಬಿಟ್ಟು ಏಕಾಂತಸ್ಥಳಕ್ಕೆ ಹೋಗಿ ಧ್ಯಾನ ಸ್ವಾಧ್ಯಾಯಗಳನ್ನು ಮಾಡುವುದರಲ್ಲಿ ತೊಡಗಬೇಕು. ಈ ರೀತಿ ಇರುಳು ಹಾಗೂ ಅಷ್ಟಮಿ, ಚತುರ್ದಶಿಗಳ ಪೂರ್ಣ ಹಗಲು ಮತ್ತು ಇರುಳುಗಳನ್ನು ಕಳೆಯಬೇಕು. ಆಮೇಲೆ ಮಾರುದಿನ ಮಧ್ಯಾಹ್ನದಲ್ಲಿ ಅತಿಥಿಗೆ ಮೊದಲು ಊಟ ಹಾಕಿ ತಾನು ಅನಾಸಕ್ತವೃತ್ತಿಯಿಂದ ಊಟ ಮುಗಿಸಬೇಕು. ಈ ಉಪವಾಸವು ಕೇವಲ ಹೊಟ್ಟೆಗಾಗಿ ಮಾತ್ರ

ವಲ್ಲ. ಆ ಅವಧಿಯಲ್ಲಿ ಪಂಚೇಂದ್ರಿಯಗಳೂ ಉಪವಾಸದಲ್ಲಿರ ಬೇಕು. ಇಂದ್ರಿಯಗಳಂ ಸ್ವಾದಿಷ್ಟಭೋಜನ, ಸುಂದರಸ್ತ್ರೀ, ಸುಗಂಧದ್ರವ್ಯ, ಇಂಪಾದ ಸಂಗೀತದ ಕಲ್ಪನೆಯಲ್ಲಿ ಸಹ ಇರ ಬಾರದು : ಸಂಯಮಿಗಳ್ಗತ್ಯಕ್ಕೃಷ್ಟದಿಂ ದಾನವುನತಿವುಂದದಾರ್ಶೀ ವುದುಂ ಪ್ರೋಷಧಪ್ರಕ್ರಮದಿಂ ಪರ್ವಂಗಳಂ ನೋಂಪುದುಂ . . .. ಶಿಕ್ಷಾ ಬ್ರತಂಗಳ್ (ಸುಕುಮಾ. ೬-೦೦). [ಸಂ.]

**ಪ್ರೋಷಧೋಪವಾಸ** (ನಾ). = ಪ್ರೋಷಧ : ನೋಡದದೆ ಪ್ರತಿಲೇಪನೆಯಂ ಮಾಡದೆ ಮಡಗಿಡುವ ಕೊಳ್ವ ಪಾಸುವುದುಂ, ಕೊಂಡಾಡದುದುಂ ನೆನೆಯದುದುಂ ಕೇಡಿನಿತುಂ ಪ್ರೋಷಧೋಪವಾಸವ್ರತದೊಳ್ (ಸುಕುಮಾ. ೬-೨೩) ; ಪ್ರೋಷಧೋಪವಾಸಕ್ಕತಿಚಾರವಿದೋಷವನುಳಿದನವರತ ಲೇಸಾಗಿ ನಡೆವರು ಷೋಡಶಸ್ವರ್ಗನಿವಾಸಿಗಳಹರತಿವುದದಿಂ (ದ್ವಾರಕಾ. ೦೦-೬೨೩) ; ಪ್ರತಿಯೊಂದು ಅಷ್ಟಮಿ, ಚತುರ್ದಶಿತಿಥಿಗಳಲ್ಲಿ ಮನ, ವಚನ, ಕಾಯಗಳ ಸ್ಥಿರತ್ವವನ್ನು ಸಾಧಿಸುವುದಕ್ಕಾಗಿ ನಾಲ್ಕುಪ್ರಕಾರದ ಆಹಾರವನ್ನು ತ್ಯಾಗಮಾಡಿ ಉಪವಾಸವನ್ನು ಆಚರಿಸುವುದು (ಕೈಪಿಡಿ. ೪೬೯). [ಸಂ.]

**ಪ್ರೋಷಧೋಪವಾಸಿ** (ನಾ). [ಜೈನ] ಪ್ರೋಷಧೋಪವಾಸವನ್ನು ಮಾಡುತ್ತಿರುವವನು ; ಪ್ರೋಷಧವ್ರತವನ್ನು ಕೈಗೊಂಡಿರುವವನು: ಪರಮನಿರಂಜನ ನಿಜಪರಮಾತ್ಮನನಱಿದು ಲೇಸಾಗಿ ಧ್ಯಾನಿಸುತ ತಱು ಸಂದಿಂತು ನೆಗಳುತಿಪ್ಪಾತನು ಉಱುವ ಪ್ರೋಷಧೋಪವಾಸಿ (ದ್ವಾರಕಾ. ೦೧-೬೪೪) ; ಪ್ರೋಷಧೋಪವಾಸಿ :— ಅಷ್ಟಮಿ, ಚತುರ್ದಶಿ ತಿಥಿಗಳಲ್ಲಿ ಮನ, ವಚನ, ಕಾಯಗಳ ಸ್ಥಿರತ್ವವನ್ನು ಸಾಧಿಸುವುದಕ್ಕಾಗಿ ಉಪವಾಸ ವನ್ನು ಮಾಡುವವನು (ಧಾರಕ. ೦೪೪). [ಸಂ. ಪ್ರೋಷಧೋಪವಾಸಿನ್]

**ಪ್ರೋಷಿತ** (ಗು). ಪ್ರಯಾಣದಲ್ಲಿರುವ ; ಪ್ರವಾಸದಲ್ಲಿರುವ. [ಸಂ.]

**ಪ್ರೋಷಿತಭರ್ತೃಕೆ** (ನಾ). [ಕಾವ್ಯಮೀ] ಎಂಟು ಜನ ನಾಯಿಕೆಯ ರಲ್ಲಿ ಒಬ್ಬಳು ; ವಿದೇಶಕ್ಕೆ ಹೋಗಿರುವವನ ಪತ್ನಿ : ಪ್ರೋಷಿತ ಭರ್ತೃಕೆ ನಾಯಿಕೆಯಾಗಿರುವಾಗ ಪ್ರವಾಸವಿಪ್ರಲಂಭ (ರ್ಕಾವ್ಯಾಲೋ. ೬೩). [ಸಂ. ಪ್ರೋಷಿತಭರ್ತೃಕಾ]

**ಪ್ರೋಷ್ಠ** (ನಾ). ೧. ಎತ್ತು ; ವೃಷಭ. ೨. ಕಾಲುಗಳುಳ್ಳ ಮಣೆ. ೩. ಒಂದು ಬಗೆಯ ಮೀನು. ೪. [ಕಾಮಶಾ] ರತಿಬಂಧಗಳಲ್ಲಿ ಒಂದು ಬಗೆ : ಮೆಲ್ಲನೆ ಮಲಗಿರ್ದವಳು ತನ್ನೆರಡು ಪಾದಂಗಳಂ ಮೇಲಕ್ಕೆ ಯತ್ತಿ ತೋರಣಕಂಭದಾಕಾರಂಗೆಯ್ದು ತನ್ನ ಕಾಲ್ಗಳಂ ತಿರುವುತ ಕೂಡಿ ದರೆ ಪ್ರೋಷ್ಠ[ಪಾಠಾಂ. ಷ್ಠ]ಮೆಂಬ ಕರಣಂ (ಕಾಮಶಾ. ೨೪೩). [ಸಂ.]

**ಪ್ರೋಷ್ಠಪದ** (ನಾ). ೧. [ಜ್ಯೋತಿ] ಪೂರ್ವಾಭಾದ್ರಾ, ಉತ್ತರಾ ಭಾದ್ರಾ ಎಂಬ ಎರಡು ನಕ್ಷತ್ರಗಳು. ೨. ಚಾಂದ್ರಮಾನ ದಲ್ಲಿನ ಮೂರು ವಂತ್ತು ನಾಲ್ಕನೆಯ ನಕ್ಷತ್ರಗಳಿಗೆ ಸಂಬಂಧಿಸಿದ ತಿಂಗಳು ; ಭಾದ್ರಪದಮಾಸ. [ಸಂ.]

**ಪ್ರೋಷ್ಠಿ** (ನಾ). ಹೆಣ್ಣುಮೀನು : "ಪ್ರೋಷ್ಠಿಯೆನೆ ಶಫರಿಯೆಂದೆನೆ ಹೆಣ್ಣು ಮೀನಕ್ಕು" (ಮಂಗರಾ. ೦೨೦-೬). [ಸಂ. ಪ್ರೋಷ್ಠೀ]

**ಪ್ರೋಹ** (ನಾ). ಆನೆಯ ಕಾಲು : ಸುಸಂಘಟಿತಪ್ರೋಹಫಳೀಹಸ್ತಗಾತ್ರನುಂ ಪರಿಪೂರ್ಣಾಶ್ಲಿಷ್ಟಪಾರ್ಶ್ವಿಯುಂ . . . ಅಪ್ಪ ವಿಜಯಪರ್ವತಗಜೇಂದ್ರಂ ಬಂದು (ಆದಿಪು. ೦೨-೩೬ ವ). [ಸಂ.]

**ಪ್ರೌಢ** (ಗು). ೧. ಚೆನ್ನಾಗಿ ಬೆಳೆದ; ವೃದ್ಧಿಯಾದ : ಪ್ರೌಢವಿಲಾಸಿನೀ ಮನಸಿಜಂ. . . ಶ್ರೀಧರಂ (ಜಾತಕ. ೦-೩). ೨. ಗಾಢವಾದ; ಸಾಂದ್ರ. ೩. ವೇಗವುಳ್ಳ; ರಭಸವಾದ. ೪. ಪಾಂಡಿತ್ಯದಿಂದ ಕೂಡಿದ; ಬುದ್ಧಿವಂತಿಕೆಯ. ೫. ಮದುವೆಯಾದ; ವಿವಾಹ ಮಾಡಿಕೊಂಡ. (ನಾ). ೬. ಪಾಂಡಿತ್ಯದಿಂದ ಕೂಡಿರುವುದು; ವಿದ್ವತ್ಪೂರ್ಣ ವಾಗಿರುವುದು : ಶಾಸನಗಳ ಭಾಷೆ, ವ್ಯಾಕರಣ, ಛಂದಸ್ಸು ಇವು ಪ್ರೌಢ ವಾಗಿವೆ (ಶಾಶಾಸ. ೦೩). ೭. ವಯಸ್ಸಿಗೆ ಬಂದವನು ; ಪ್ರಾಯಸ್ಥ : ನೀನು ಇನ್ನೂ ಸಣ್ಣವನು. ಸ್ವತಂತ್ರನಾಗಿ ನಡೆಯತಕ್ಕಷ್ಟು ಪ್ರೌಢನಾಗಿಲ್ಲ (ಪಂಚತಂತ್ರ. ೪-೩೮). ೮. ಪಂಡಿತ; ಪ್ರಗಲ್ಭ : ನಿಮ್ಮಯ ಸಭೆಯೊಳಿಪ್ಪ ಪ್ರೌಢರ ವಿಚಾರಿಸಿ ತಾವೆ ಪೇಳ್ವರು (ಕೌಶಿಕಾ. ೨-೨೧); ಒರ್ವ ವಿಟ ನಿದಿರ್ವಂದು ಮತ್ತೇಭಗಾಮಿನಿ ಭೃಂಗನೀಲಕುಂತಳೆ ಪನ್ನಗಾಭಸುಂದರ ವೇಣಿ ಬೆದಱಬೇಡನುತ ತಕ್ಕೈಸಿದನದೇಂ ಪ್ರೌಢನೋ (ಕೈವಲ್ಯ. ೨೬-೪). [ಸಂ.]

**ಪ್ರೌಢತೆ** (ನಾ). ಜಾಣ್ಮೆ; ನೈಪುಣ್ಯ; ಪ್ರಾವೀಣ್ಯ : ದುರ್ಧರಾಹವಮರ ಜಯಪ್ರೌಢತಾರೂಢದೋಶ್ಶೌರ್ಯದೆ ಶೂರಾರಾತಿಸಂದೋಹವನೆಱಗಿ (ಶಂಕರ್ಕೃ. ೫-೦೪೯) ; ತುಳುಂಕಿದರಂಬುವಂ ನಿಜಪ್ರೌಢತೆಯಿಂದವೊಲ್ದು ವಿಸಟಂಬರಿಂದಾಡಿದರ್. . .ಲಲಿತಾಂಗಿಯರ್ (ಹರಿವಂಶ. ೪-೫೩). [ಸಂ. ಪ್ರೌಢತಾ]

**ಪ್ರೌಢವತ್ಸೆ** (ನಾ). ಅನೇಕ ಕರುಗಳನ್ನು ಹಾಕಿರುವ ಹಸು : "ಬಷ್ಕ ಯಣೀ, ಪ್ರೌಢವತ್ಸಾ— ಈ ೨ ಕಡೆಗಂದಿ" (ಹಲಾಯು. ೪೫-೦೦೩). [ಸಂ. ಪ್ರೌಢವತ್ಸಾ]

**ಪ್ರೌಢವಯಸ್ಕ** (ನಾ). ವಯಸ್ಸಿಗೆ ಬಂದವನು : ಪುಲಿಕೇಶಿ ಸಾಯುವಾಗ ಅಂದರೆ ಸುಮಾರು ೬೪೨ರಲ್ಲಿ ವಿಕ್ರಮಾದಿತ್ಯನು ಪ್ರೌಢವಯಸ್ಕನಾಗಿರ ಬೇಕು (ಕರ್ನಾಟ. ೬೬). [ಸಂ.]

**ಪ್ರೌಢವಿದ್ಯಾಭ್ಯಾಸ** (ನಾ). ೧. ಹೆಚ್ಚಿನ ತಿಳಿವಳಿಕೆಯನ್ನು ನೀಡುವ ಶಿಕ್ಷಣ : ಇದ್ದ ಊರಿನಲ್ಲಿ ಪ್ರೌಢಶಾಲೆಯಿಲ್ಲವಾದ್ದರಿಂದ ಮಗನನ್ನು ಪ್ರೌಢವಿದ್ಯಾಭ್ಯಾಸಕ್ಕಾಗಿ ಬೇರೆ ಊರಿಗೆ ಕಳುಹಿಸಬೇಕಾಯಿತು (ರೂಢಿ). ೨. (ವಿಶ್ವವಿದ್ಯಾನಿಲಯದ ಮಟ್ಟದ) ಉನ್ನತಶಿಕ್ಷಣ : ಎಷ್ಟೇ ಕಷ್ಟವಾದರೂ ಸರಿ, ಮಗನಿಗೆ ಪ್ರೌಢವಿದ್ಯಾಭ್ಯಾಸ ಮಾಡಿಸಬೇಕೆಂಬ ಅವನ ಹಟ ಸಾರ್ಥಕವಾಯಿತು (ರೂಢಿ). [ಸಂ.]

**ಪ್ರೌಢವಿವಾಹ** (ನಾ). ವಯಸ್ಸಿಗೆ ಬಂದ ವಧೂವರರ ವಿವಾಹ : ಪ್ರೌಢವಿವಾಹ, ವಿಧವಾವಿವಾಹ . . . ವಿಚಾರವಂತರನ್ನು ಆಕರ್ಷಿಸಿತು (ಧರ್ಮಶಾ. ೬೩). 'ಬಾಲ್ಯವಿವಾಹ' ಪರಾ. [ಸಂ.]

**ಪ್ರೌಢಶಾಲೆ** (ನಾ). ಹೆಚ್ಚಿನ ವಿದ್ಯಾಭ್ಯಾಸವನ್ನು ನೀಡುವ ಶಾಲೆ ; ಹೈಸ್ಕೂಲು : ತೀರ್ಥಹಳ್ಳಿಗೆ ಮುಂದೆ ತಂದೆ ಕರೆತಂದರು ಪ್ರೌಢಶಾಲೆಗೆ ಸೇರಿಸಿದರು (ಇಂಕಾಶ. ೦೪-೩೯) ; ಮಾಧ್ಯಮಿಕಶಾಲೆ ಸೆಕೆಂಡರೀಶಿಕ್ಷಣದ ಒಂದು ಅಂಗ ಮಾತ್ರವಾದ್ದರಿಂದ ಅದು ಪ್ರೌಢಶಾಲೆಯ ಕಡೆ ಕೈ ತೋರಿ ಸಲೇಬೇಕು (ಶಿಕ್ಷಣ. ೦೫೦). 'ಪ್ರಾಥಮಿಕಶಾಲೆ' ಪರಾ. [ಸಂ. ಪ್ರೌಢಶಾಲಾ]

**ಪ್ರೌಢಶಿಕ್ಷಣ** (ನಾ). ೧. = ಪ್ರೌಢವಿದ್ಯಾಭ್ಯಾಸ ೧: ಶಿಕ್ಷಣ ವ್ಯವಸ್ಥೆ ಯನ್ನು ಕೆಳಗಿನ ನಕ್ಷೆಯ ಮೂಲಕ ವಿವರಿಸಬಹುದು: ಪ್ರಾಥಮಿಕ ಶಿಕ್ಷಣ→ ಪ್ರೌಢಶಿಕ್ಷಣ → ವಿಶ್ವವಿದ್ಯಾನಿಲಯದ ಶಿಕ್ಷಣ (ಶಿಕ್ಷಣ. ೦೯೩). ೨. = ಪ್ರೌಢವಿದ್ಯಾಭ್ಯಾಸ ೨: ಇದ್ದ ಊರಿನಲ್ಲಿಯೇ ಕಾಲೇಜು ಬಂದುದರಿಂದ ಅವನ ಮಗನ ಪ್ರೌಢಶಿಕ್ಷಣಕ್ಕೆ ಸುಲಭವಾಯಿತು (ರೂಢಿ). [ಸಂ.]

**ಪ್ರೌಢಿ** (ನಾ). ೧. ಬಲಿಯುವಿಕೆ; ಪಕ್ವವಾಗುವಿಕೆ. ೨. ಚತುರತೆ; ಜಾಣ್ಮೆ; ನಿಪುಣತೆ : "ಪ್ರೌಢಿಃ — ಜಾಣತನಂ" (ನಾನಾರ್ಥ. ೦೬೦); ಆಚಾರ್ಯರ್ಕಳ್ಮಿಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ (ಪುಣ್ಯಾಶ್ರ. ೧-೩); ಪ್ರೌಢಿಯಲ್ಲಿದು ಕೇಳಿ ಬಲ್ಲವು ರೂಢಿಯಲಿ ಸಮಬಲರು ಭೀಮ ಸಗಾಢದಲಿ ಬಲಭದ್ರ ಕೀಚಕ ಶಲ್ಯರೆಂಬುವರು (ಕುಮಾವ್ಯಾ. ವಿ. ೪-೯). ೩. ಸೊಕ್ಕು; ಗರ್ವ. ೪. ಧೈರ್ಯ; ಎದೆಗಾರಿಕೆ. ೫. ಸಾಹಸ; ಶೌರ್ಯ. ೬. [ಕಾವ್ಯಮೀ] ಅರ್ಥಗುಣಗಳಲ್ಲಿ ಒಂದು ; ದೀರ್ಘ

ಸಮಾಸವನ್ನು ರಚಿಸುವ ಅಥವಾ ಸಮಾಸದ ಅರ್ಥವನ್ನು ಸರಳವಾದ ಮತ್ತು ವಿರಳ ಶಬ್ದಗಳಲ್ಲಿ ನಿರೂಪಿಸುವ ಬರಹದ ಗುಣ : ಅರ್ಥಗುಣಗಳಲ್ಲಿ ಓಜಸ್ಸು (ಅಥವಾ ಪ್ರೌಢಿಯು) ಮೊದಲು ನಾಲ್ಕು ಭೇದಗಳು ಕೇವಲ ವೈಚಿತ್ರ್ಯ ಮಾತ್ರ (ಕೃಶಾ. ೨೩೯). [ಸಂ.]

**ಪ್ರೌಢಿಮೆ** (ನಾ). ೧. ಜಾಣ್ಮೆ; ಚಾತುರ್ಯ; ನೈಪುಣ್ಯ : ಯಾವನೋ ನಿಪುಣನಾದ ಕಲಾವಿದನು ವರ್ಷಗಟ್ಟಲೆ ದುಡಿದು ಅದರಲ್ಲಿ ತನ್ನ ಕಲಾಪ್ರೌಢಿಮೆಯನ್ನು ಭಟ್ಟಿ ಇಳಿಸಿದ್ದನು (ಕಂಠತು. ೮). ೨. ಅತಿಶಯವಾದ ಕೌಶಲ್ಯ : ಅದು... ಗ್ರೀಕರ ರುದ್ರನಾಟಕದ ಪ್ರೌಢಿಮೆಯನ್ನೂ ಗಾಂಭೀರ್ಯವನ್ನೂ ಗಳಿಸಿತು (ಅಂಕಾ. ೬೬). [ಪ್ರೌಢಿ + -ಮೆ]

**ಪ್ರೌಢಿವೆಯು** (ಕ್ರಿ). ನೈಪುಣ್ಯವನ್ನು ಹೊಂದು ; ಪ್ರೌಢಿಮೆಯನ್ನು ಪಡೆ : ಸಮುಗ್ರತರಶಿಕ್ಷಾನುಗ್ರಹ ಪ್ರೌಢಿವೆತ್ತನವರ್ಮ್ಮರ್ ದಯೆಗೆಯ್ದು ರಕ್ಕೆ ದಯೆಯಿಂ ಭವ್ಯಾಳಿಗೆ (ಕಂಜಾಪು. ೦-೩). [ಪ್ರೌಢಿ + ವೆಟ್ಟು]

**ಪ್ರೌಢೆ** (ನಾ). ೧. ತಾರುಣ್ಯಾವಸ್ಥೆಯನ್ನು ಮೀರಿದ ಹೆಂಗಸು; ಮಧ್ಯಮ ವಯಸ್ಸಿನವಳು : ಐದುವರ್ಷಪರ್ಯಂತರ ಕೂಟವಾಗಿ ಮೂವತ್ತುವರ್ಷ ಪರ್ಯಂತ ಪ್ರೌಢೆ ಎನಿಸಿಕೊಂಬಳು (ಕಕೃ. ೬೦). ೨. ತಿಳಿದವಳು; ಪ್ರಾಜ್ಞೆ : ಅತಿಪ್ರೌಢೆಯನುಜ ಕಳದಿ (ಜಗು. ೨-೬೯ ಕ); ನಾನು ನಿನಗೀಗ ಚಿಕ್ಕವಳು. ಹುಡುಗಿಯೂ ಅಲ್ಲ, ಪ್ರೌಢ ಮೊದಲೇ ಅಲ್ಲ (ಶಾಂತಲಾ. ೬೬). ೩. [ಕಾವ್ಯವಿದ್ಯಾ] ಬಾಲೆ, ಮುಗ್ಧೆ, ವಿದಗ್ಧೆ ಮತ್ತು ಪ್ರಗಲ್ಭೆಯರೆಂಬ ನಾಯಿಕೆಯರ ನಾಲ್ಕು ಭೇದಗಳಲ್ಲಿ ಮೂರನೆಯ ವರ್ಗಕ್ಕೆ ಸೇರಿದವಳು ; ವಿದಗ್ಧೆ : ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೋಲೆಯೆಂದಿಂತು ಧಾತ್ರಿಯೊಳಪ್ಪನ್ನಾಲ್ಕ್ಕಾಂತೆಯರ್ (ಜುಚ. ೭-೦). [ಸಂ. ಪ್ರೌಢಾ]

**ಪ್ರೌಢೋಕ್ತಿ** (ನಾ). =ಪ್ರೌಢಿ ೬ : ಪರಕಾರ್ಯೋತ್ಕರ್ಷಕ್ಕೆ ತಾಂ ಕಾರಣವಾಗದಲೆಯುರೆ ಕಾರಣವಾಗೆ ಪ್ರೌಢೋಕ್ತಿ (ಕುಕಾ. ೬೮೦); ವಿಷಯವಿಲ್ಲಿ ಕವಿಯ ಪ್ರೌಢೋಕ್ತಿಯಿಂದ ಅರ್ಥೋತ್ಕರ್ಷ ವ್ಯಂಜಕವಾಗಿದೆ (ರೃತ್ಯಾರೋ. ೦೩೨). [ಸಂ.]

**ಪ್ಲಕ್ಷ** (ನಾ). ೧. ಒಂದು ಬಗೆಯ ಮರ : ಬಸರಿ : "ಎತ್ತಿಗುದಿ ಪ್ಲಕ್ಷ ಮಕ್ಕುಂ" (ಕುಂಗಕಾ. ೬೭-೦೯). ೨. ಅತ್ತಿಮರ. ೩. ಆಲದ ಮರ : ಬರ್ಪಾ ಪಥದೊಳೆಸೆದುದುದ್ದಂಡಶಾಖಾಕದಂಬೋಜ್ಜ್ವಳಪರ್ಣೋದೀರ್ಣ ಕುಂಭತ್ಸ್ವಳಕುಳವಿಳಸಚ್ಛಾಯಕಂ ಪ್ಲಕ್ಷವೃಕ್ಷಂ (ಕೃಜಾ. ೨೦-೦೭). ೪. ನೆರಳು ; ಛಾಯೆ : "ಪ್ಲಕ್ಷಿ-ಛಾಯಯಾಯಾಂ, ನೆಳಲೊಳ್" (ಕಾಕೃ. ೦೦೯). ೫. ಭೂಮಿಯ ಸಪ್ತದ್ವೀಪಗಳಲ್ಲಿ ಒಂದರ ಹೆಸರು. [ಸಂ.]

**ಪ್ಲವ** (ಗು). ೧. ತೇಲುವ. ೨. ಹಾರುವ; ನೆಗೆಯುವ. ೩. ಉತ್ತಮವಾದ ; ಶ್ರೇಷ್ಠವಾದ. (ನಾ). ೪. ತೇಲುವಿಕೆ. ೫. ಹಾರುವಿಕೆ ; ನೆಗೆತ. ೬. ಪ್ರವಾಹ; ಹರಿವು : ನಿರ್ಝರಪೂರಮಾಗಿಯುಮತ್ಯುಗ್ರಾಶ್ರುಧಾರಾಜಲಪ್ಲವಮುಂ ಚಾರಿಸಲೆಂತುಮಾಱದು ವಲಂ ಕಾಲೋರಗಗ್ರಸ್ತನಂ (ಅಶಪು. ೩-೬೯) ; ಅವಳಸಿಯ ಬಾಸೆಯಿಂದೀ ನವಯೌವನವನದ ಲತೆಯ ಲಾವಣ್ಯಜಳಪ್ಲವಮನೊಳಕೊಳ್ವುದೆಂದಾಳ ವಾಳಮನೆ ನಿಮ್ನನಾಭಿಮಂಡಲಮೆಸಗುಂ (ಚುಂಪು. ೩-೬೨) ; ವರನೊತ್ತಿದ ಘುಸೃಣರಸಂ ಗುರುಕುಚತಟಗಧಾತು ನಿರ್ಝರಪ್ಲವಮೀಳಿವಂತಿರೆ ನಸುಲ್ಕೃತರ ತಳ್ತೀಂ ಕರಮೆಸೆದುದೊ ಬಾಸವಳ್ಳಿ ತಳಿರೆಲೆಚಿದವೋಲ್ (ಗಾಕಾ. ೦೦-೯೬). ೭. ನೀರಿನ ಮೇಲೆ ತೇಲುವ ಸಾಧನ : ತೆಪ್ಪ, ದೋಣಿ, ಮೊದಲಾದವು : "ತಳ್ಪಂ. ಉಡುಪಃ, ಪ್ಲವಃ—ಈ ೩ ತೆಪ್ಪಂ" (ಕಣಾಯು. ೦೦೦-೯೯). ೮. ಕಪ್ಪೆ. ೯. ಕೋತಿ. ೧೦. ಚಂಡಾಲ ; ಹೊಲೆಯ. ೧೧. ಒಂದು ಬಗೆಯ ನೀರು ಹಕ್ಕಿ : ಕೃಕರ ಕರೇಟು ಕುಕ್ಕುಟ . . . ಕಂಕವರ್ತಕ ಕುರರೀಪ್ಲವಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹಚ್ಚಿ. ೯-೬೨); ಆಗಳ್ ಸಮುದ್ರಂಗಳೆಯ್ದುತ್ತಿರ್ಪ ವೆಂತನೆ ... ನೊರಗಳ್ ಸದ್ದುದ್ದುಭಂಗಳ್ ಗಜ ತುರಗ ನರರ್ ಕುಕ್ಕುಟಂಗಳ್ ಪ್ಲವಂಗಳ್ ನೆರೆದೆತ್ತಂ ತುಂಬಿ ಘೋಷಂ ಪೊರೆದೊರೆಯೆ ದಿಶಾಭಾಗಮಂ ಬಂದವಾಗಳ್ (ಶಾಂತಿ. ೦-೦೦-೩೦). ೧೨. ಅರವತ್ತು ಸಂವತ್ಸರಗಳಲ್ಲಿ ಮೂವತ್ತೈದನೆಯ ಸಂವತ್ಸರ : ಪ್ರಭವ. . . ಶಾರ್ವರಿ ಪ್ಲವ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ಅಕೀ. ೨೬೩). [ಸಂ.]

**ಪ್ಲವಂಗ** (ನಾ). ೧. ಕೋತಿ ; ಮಂಗ : "ಬಲೀಮುಖಃ, ಮರ್ಕಟಕಃ, ವನೌಕಾಃ, ಪ್ಲವಂಗಮಃ, (ಪ್ಲವಂಗಃ), ಪ್ಲವಗಃ . . . ವಾನರಃ— ಈ ೧೧ ಕೋಡಗಂ" (ಕಣಾಯು. ೩೯-೬೮) ; ನೆತ್ತರ ಹೊರದರಿ ಹೋಹ ಪ್ಲವಂಗಕ್ಕವಧಿಯಿಲ್ಲ (ಕೊಕಾ. ೬-೬೩-೯೯). ೨. ಕಪ್ಪೆ : "ಮಂಡೂಕಃ . . . ಪ್ಲವಂಗಃ—ಈ ೮ ಕಪ್ಪೆ" (ಕಣಾಯು. ೦೦೯-೯೦). ೩. ಒಂದು ಬಗೆಯ ಜಿಂಕೆ. ೪. ಅಂಜೂರ ವೃಕ್ಷ. ೫. ಅರವತ್ತು ಸಂವತ್ಸರಗಳಲ್ಲಿ ನಲವತ್ತೊಂದನೆಯ ಸಂವತ್ಸರ : ಆ ವರ್ಷವೇ ಪ್ರಭವ . . . ಪ್ಲವಂಗ ಕೀಲಕ . . . ಅಕ್ಷಯವೆಂದಱುವತ್ತುತೆಱನಾಗಿಹುದು (ಅಕೀ. ೨೬೩). ೧. ೫ : ಮನೆ ಸಲೆ ಹೇವಿಳಂಬಿ ಸಹಕಾರಿ ವಿಕಾರಿ . . . ನಿಜವಲ್ಲಭೆ ದುರ್ಮುಖಿಯಿಂದೊಡನ್ನೆ ಪಿಂಪಿನ ವಿಭವಂ ಪ್ಲವಂಗದವೊಲಾದುದು ಮನ್ಮಥಚಿತ್ರಭಾನುವಿಂ (ಸೂಕ್ತಿಸು. ೬-೯೩೬); ಸೌಮ್ಯ ಶ್ರೀಮುಖಿಂ ಪ್ರಭವ ಶುಕ್ಲಾನಂದನಿವನಿರಲ್ಕೆ ಕೃತಕಂ ಪ್ಲವಂಗದುರ್ಮುಖಿಯಿಂ ವಿಕಾರಿಯಂ ಪ್ರತಿದಿನಂ ಕರೆಯುತೆಯೆಂದು 'ಸಂವತ್ಸರಮನತಿಶಯಂ ಪೇಳ್ವಂತೆ ರೌದ್ರಿ ರಕ್ತಾಕ್ಷಿ ತಾಯಂ ಮಗಳ್ ಕೋಪಿಸಿದಳು (ಕಶಪು. ೦೦-೯೦). ೬. ಕುದುರೆ ; ಅಶ್ವ : "ತುರಂಗಂ ಕಪಿ ಭೇಕಂಗಳಿಂತು ಪ್ಲವಂಗಮಕ್ಕು" (ಶಾಕಾ. ೯೭). [ಸಂ.]

**ಪ್ಲವಂಗಮ** (ನಾ). ೧. = ಪ್ಲವಂಗ ೧ : "ಬಲೀಮುಖಃ ... ಪ್ಲವಂಗಮಃ . . . ವಾನರಃ — ಈ ೧೧ ಕೋಡಗಂ" (ಕಣಾಯು. ೩೯-೬೮). ೨. ಕಪ್ಪೆ : "ಮಂಡೂಕಃ ... ಪ್ಲವಂಗಮಃ , ಪ್ಲವಂಗಃ —ಈ ೮ ಕಪ್ಪೆ" (ಕಣಾಯು. ೦೦೯-೯೦). [ಸಂ.]

**ಪ್ಲವಂಗವಿದ್ಯೆ** (ನಾ). [ಜೈನ] ವಿದ್ಯೆಗಳಲ್ಲಿ ಒಂದು ; ಮರ್ಕಟವೇಷವನ್ನು ತಾಳುವ ವಿದ್ಯೆ : ಅಣುವಂ ಪ್ಲವಂಗವಿದ್ಯೆಯಿಂ ಕಪಿಮೂರ್ತಿಯಂ ಕೈಕೊಂಡು ಕಾಪಿನವರ್ಗೆಲ್ಲಂ ಮಹಾನಿದ್ರೆಯಂ ಮಾಡೆ (ಶಾಪುಂಪು. ೪೦೯). [ಸಂ. ಪ್ಲವಂಗವಿದ್ಯಾ]

**ಪ್ಲವಕ** (ನಾ). ೧. ತೇಲುವವನು : "ಪ್ಲವಕಃ, ಪ್ಲವಮಾನ. —ಈ ೨ ತೇಲ್ವಂ" (ಕಾಕೃ. ೦೩೯). ೨. ಕಪ್ಪೆ. ೩. ಡೊಂಬ. ೪. ಚಂಡಾಲ. ೫. ಕೋತಿ ; ಮಂಗ. [ಸಂ.]

**ಪ್ಲವಗ** (ನಾ). ೧. = ಪ್ಲವಂಗ ೧ : "ಬಲೀಮುಖಃ . . . ಪ್ಲವಗಃ . . . ವಾನರಃ — ಈ ೧೧ ಕೋಡಗಂ" (ಕಣಾಯು. ೩೯-೬೮); ನವರಸರಸಿಕಂ ಸುಮನಸ್ತವನೀಯಮೆನಿಪ್ಪ ಕಾವ್ಯದತಿಶಯಮಂ ದುಃಕವಿಯಱಿಯನೆಂದು ಜಱಿಯ ಪ್ಲವಗಕ್ಕೀವಾಟ್ಟಿ ಪಾರಿಜಾತಪ್ರಸೂನಕಂ (ಕರ್ಣಾಶಾ. ೦-೩೬). ೨. ಕಪ್ಪೆ ; ಮಂಡೂಕ : "ಮಂಡೂಕಃ, ಪ್ಲವಗಃ . . . ಪ್ಲವಂಗಃ—ಈ ೮ ಕಪ್ಪೆ" (ಕಣಾಯು. ೦೦೯-೯೦) ; ಪ್ಲವಗಪ್ಲುತದಿಂ ಚಾರಣನಿವಹಂ ಚಾರಣಗಣಂಗಳಂ ತಾಗೆ ಪಯಃಪ್ಲವದೊಳಗೆ ಮುಟ್ಟಿ ಪಾರಿಪ್ಲವನೇತ್ರೆಯರವರಕಾಂತೆಯರ್ ಸೊಗಯಿಸಿದರ್ (ಅಶಪು. ೯-೬೦). ೩. ಒಂದು ಬಗೆಯ ನೀರು ಹಕ್ಕಿ; ನೀರುಕೋಳಿ. ೪. ಸೂರ್ಯನ ಸಾರಥಿ ; ಅರುಣ. [ಸಂ.]

**ಪ್ಲವಗಕೇತು** (ನಾ). ಕಪಿಯಂನ್ನು ಧ್ವಜದಲ್ಲಿ ಉಳ್ಳವನು; ಕಪಿಧ್ವಜ:

ಅವಿತಚತುರಂಗಸೇನಾಸಮನ್ವಿತರ್ ಪ್ಲವಗಕೇತುಗಳ್ಮಾರುತಮಾರ್ಗಮಂ ನೆಳಸಿ ಬಳಸಿ ನಡೆದರ್ (ಶಂರಾಪ್ರ. ೦೩–೨೬). [ಸಂ.]

**ಪ್ಲವನ** (ನಾ). ೧. ತೇಲುವುದು : "ಪ್ಲವನಂ, ಪ್ಲವನೀಯಂ—ಈ ೨ ತೇಲ್ಕೆ" (ಶಾಶಕ್ಕ. ೦೨೮). ೨. ಮೀಹ ; ಸ್ನಾನ. ೩. ಕುಪ್ಪಳಿಸುವುದು; ನೆಗೆತ. ೪. ಪ್ರವಾಹ ; ನೆರೆ : ಉದ್ಗತನಿರ್ಝರಪ್ಲವನದಿಂ ಗಂಗಾಸರಿತ್ಪೂರಮಂ ನಗುವಂತುನ್ನತಿವೆತ್ತ ಕಲ್ಪತರುಸಾನೂದ್ಯಾನದಿಂ ಮೇರುವಂ ನಾಗುವಂತೊಪ್ಪುವುದಂ ವಸಂತ ಗಿರಿಯಂ ಕಂಡಂ ವಹೀವಮಂಡನಂ (ಶಂರಾಪ್ರ. ೨–೦೩). ೫. ಇಳುಕಲು ; ಇಳಿಜಾರು. ೬. ಕುದುರೆಯ ನಡಗೆಗಳಲ್ಲಿ ಒಂದು ಬಗೆ. [ಸಂ.]

**ಪ್ಲವಿಸು** (ಕ್ರಿ). ಹರಿ ; ಪ್ರವಹಿಸು : ಪ್ಲವಿಸುತ್ತಿರ್ಪವರೋದನಮತ್ತೃಲುಂ ! ರಣಂ ವಿಂದತ್ತು ಕರೆವ ಕಂಬನಿವಮಳೆಯ ತೀರ್ಥದಲಿ ! (ಅಕ್ರೂಗ. ೬೮–೨೪೨೩). [ಪ್ಲವನ+—ಇಸು]

**ಪ್ಲಾಂಟೇಷನ್** (ನಾ). ಹತ್ತಿ, ಹೊಗೆಸೊಪ್ಪು, ಕಾಫಿ, ಟೀ ಮೊದಲಾದ ಗಿಡಗಳ ತೋಟ : ವಬ್ಲಿಕ್‌ರಸ್ತೆಗಳ ಉದ್ಯಾನ ತೋಟಗಳ ಪ್ಲಾಂಟೇಷನ್‌ಗಳ ನಾಲಾಗಳ . . . ಸ್ವಾಧೀನಗಾರರು (ಗ್ರಾಮಚರಿ. ೦೦೬); ಅಲ್ಲಿಯ ಪ್ಲಾಂಟೇಷನ್ ಕೃಷಿಯ ಹೊಲಗಳ ವಿಸ್ತಾರ ಸ್ವಾಭಾವಿಕವಾಗಿ ದೊಡ್ಡದೇ ಇರುತ್ತದೆ (ಬಕಿಸಂ. ೪೮). [← ಇಂ. Plantation]

**ಪ್ಲಾಟಿನಂ** (ನಾ). ಒಂದು ಬಗೆಯ ಲೋಹ ; "ಅಸಂಮಿಶ್ರಿತ ಆಮ್ಲಗಳಿಂದ ಕ್ಷಯಿಸದ, ಬಹಳ ತೀವ್ರಶಾಖದಲ್ಲಿ ಮಾತ್ರ ಕರಗುವ, ತಗಡಾಗಿ ಬಡಿಯಲೂ ತಂತಿಯೆಳೆಯಲೂ ಆಗುವ, ಭಾರವಾದ, ಒಂದು ಬಿಳಿಯ ಲೋಹ" (Platinum. ೩೦೩೪) : ಈಗ ನಮಗೆ ಗೊತ್ತಿರುವ ಧಾತುಗಳಲ್ಲಿ ಪ್ಲಾಟಿನಮ್ ಎಂಬ ಧಾತುವಿನ ಹೊರತು ಚೆನ್ನದಷ್ಟು ಭಾರವುಳ್ಳ ಧಾತುವು ಎರಡನೆಯದಿಲ್ಲ (ಮುಂಬರು. ೪–೦೦೨). [← ಇಂ. Platinum]

**ಪ್ಲಾವ** (ನಾ). ೧. ಹರಿಯುವುದು. ೨. ಹಾರಂವಿಕೆ ; ನೆಗೆತ. ೩. ಉಕ್ಕಿ ಹರಿಯುವುದು ; ದಡ ಮೀರಿ ಹರಿಯುವುದು. [ಸಂ.]

**ಪ್ಲಾವಕ** (ಗು). ತೇಲುವ : ಕೃತಿ ವರ್ತಮಾನದಲ್ಲಿ ಜನ್ಮವೆತ್ತಿದರೂ ಅದರ ಸೆಳೆತಕ್ಕೆ ಸಿಕ್ಕಿಕೊಳ್ಳದೆ ಸಂತತ ವರ್ತಮಾನಕ್ಕಿರುತ್ತದೆ, ತನ್ನಲ್ಲಿ ತುಂಬಿಕೊಂಡಿರುವ ಸಲವಿನ ಪ್ಲಾವಕಶಕ್ತಿಯಿಂದ (ಕಾವ್ಯಕು. ೦೦). [ಸಂ.]

**ಪ್ಲಾವನ** (ನಾ). ೧. ಮೇರೆ ಮೀರಿ ಹರಿಯುವುದು ; ದಡ ಮೀರಿ ಹರಿಯುವುದು. ೨. ನೆರೆ ; ಪ್ರವಾಹ. ೩. ಸ್ನಾನ : ಶೋಷಣ ದಾಹನ ಪ್ಲಾವನಗಳೆಂಬ ಮಾಜುಕ್ರಿಯೆಗಳು (ಚಿವೇಶ. ೦೦೩). ೪. ತೇಲುವವನು : ಅಲಘುಪ್ರಸಾದಾಮೃತಪ್ಲಾವನರ್ಗೆ ಮತ್ತೊಲವಿನಿ ಪ್ಲಾವನಕ್ರಿಯೆಗೆಯ್ವರೇಕೆ (ಅಣಕ. ೦–೦೧–೨೦). [ಸಂ.]

**ಪ್ಲಾವಿತ** (ನಾ). ಆವೃತವಾಗುವಿಕೆ : ಕಾಳಿಯ ಪೂಜಾಸ್ಥಾನವು ನರವಾಂಸರಕ್ತದಿಂದ ಪ್ಲಾವಿತವಾಗುವುದೆಂಬುದನ್ನು . . . ಅವಳ ಹೃದಯವು ಸಹಿಸಲಾರದಾಗಿದ್ದಿತು (ಕಪಾಕು. ೦೨೪). [ಸಂ.]

**ಪ್ಲಾಸ್ಟಿಕ್ಕು** (ನಾ). ರಬ್ಬರಿನಂತೆ ಮೃದುವಾಗಿರುವ ವಸ್ತು ; ಒಂದು ಬಗೆಯ ಮೇಣ : ಪ್ಲಾಸ್ಟಿಕ್ಕು ಗೋಬಿಯನಾಟಕ ತಂದಳು (ಕಂದ್ರಬೀ. ೬–೩೨). [← ಇಂ. Plastic]

**ಪ್ಲೀಡರು** (ನಾ). ನ್ಯಾಯವಾದಿ ; ವಕೀಲ : ಒಬ್ಬ ಅಡ್ವೋಕೇಟ್ ಯಾ ಪ್ಲೀಡರ್ ಖರ್ಚುಗಳನ್ನು ಫಲಾನೆ ಕಾಲದಲ್ಲಿ ಕೊಡುವಂತೆ ಕಂಡೀಷನ್ನಾಗಿ ಯಾವ ಕರಾರೂ ಮಾಡಲ್ಪಡದೆ ಇದ್ದರೆ ಆ ಖರ್ಚಿನ ಬಗ್ಗೆ ಅಡ್ವೋಕೇಟ್ ಯಾ ಪ್ಲೀಡರಿಂದ ಮೂರು ವರ್ಷಗಳು (ಗ್ರಾಮಚರಿ. ೦೬೭). [← ಇಂ. Pleader]

**ಪ್ಲೀಹ** (ನಾ). ೧. ಹೊಟ್ಟೆಯ ಎಡಭಾಗದಲ್ಲಿ ಇರುವ ಮಾಂಸಗ್ರಂಥಿ ; ಗುಲ್ಮ : ತೊರಳೆ : ಮುಂದೆ ಅವು ಪ್ಲೀಹಕ್ಕೆ ಹೋಗಿ, ಅಲ್ಲಿ ಈ ಸತ್ತ ಕಣಗಳನ್ನು ಒಪ್ಪಿಸಿ ಬರುವುವು (ಶಾಂಕ್ರ. I. ೩೦೮); ಹಾಗಾದರೆ ಈ 'ನಾಗಸೇನ' ಎಂಬುದು ಉಗುರೇ ? ಹಲ್ಲೆ ? . . . ಮೂತ್ರಕೋಶವೆ ? ಪ್ಲೀಹವೇ ? (ಬುದ್ಧಕ್ರ. ಬುರಿಂದ. ೩೪). ೨. ಗುಲ್ಮರೋಗ : ಬಿಸರುಹಸಖನಿರೆ ಮಕರದೊಳಸದ್ಗ್ರಹದ್ವಿತಯವಿರೆ ನಿಶಾನಾಥಂಗಿರ್ದೆಸೆಯೊಳ್ ಮನುಜಂ ಪ್ಲೀಹ ಶ್ವಸನ ಕ್ಷಯ ಗುಲ್ಮ ವಿದ್ರಧಿವ್ಯಾಧಿಯುತಂ (ಜಾತಕ. ೨೦–೦೩); ತಾಳೀಸಪತ್ರೆ ೧ ತೊಲ . . . ಚೂರ್ಣವಂ ಮಾಡಿ ಸಕ್ಕರೆವೆರಸಿ ಸೇವಿಸೆ . . . ಪ್ಲೀಹ, ಎದೆನೋವು . . . ಮಾಣ್ಗುಂ (ಸಕಕ್ಕ. ೨೦೩). [ಸಂ.]

**ಪ್ಲೀಹಾಪಹೆ** (ನಾ). ಒಂದು ಬಗೆಯ ಮರ : "ಪ್ಲೀಹಾಪಹಾ—ದೇವದಾರು" (ಓಕದಿ. ೦೦೦). [?]

**ಪ್ಲುತ** (ಗು). ೧. ತೇಲುತ್ತಿರುವ. ೨. ಕುಪ್ಪಳಿಸುವ ; ನೆಗೆಯುವ ; ಹಾರುವ : ಪ್ಲುತ ಲೀಲಾಮೃಗಾಳಿಮಂ ಶುಕಪಿಕವ್ಯಾಹಾರಸಂಪಾದಿತ ಪ್ರತಿನಾದೋದಯಮುಮಂ . . . ಪೊರ್ಕಂ ಮಹೀವಲ್ಲಭಂ (ಅಂರಾಪ. ೪–೦೩). ೩. ಮುಳುಗಿದ ; ಲೀನವಾದ. (ನಾ). ೪. [ಅಶ್ವಶಾ] ಕುದುರೆಯ ಐದು ಬಗೆಯ ನಡಗೆಗಳಲ್ಲಿ ಒಂದು; ಕುಪ್ಪಳಿಸುತ್ತ ನಡೆಯುವುದು: ಆಸ್ಕಂದಿತ ರೇಚಿತ ಧೌರಿತ ವಲ್ಗಿತ ಪ್ಲುತಮೆಂಬೈದುಂ ತೆಜದ ನಡೆಯಿಂ ಬೆಡಂಗುವಡೆದ ವಟ್ಟದ ವಾರುವವರ್ಗಂ (ಶಾರಕು. ೦೩–೨೦೭); ಕುಪ್ಪಳಿಸಿ ಕುಪ್ಪಳಿಸಿ ಹಾರಿ ಓಡುವುದು ಪ್ಲುತವೆನಿಸಿಕೊಂಬುವುದು (ಅಶ್ವಶಾ. ೨೩–೩). ೫. [ಛಂದ] ಉಚ್ಚಾರಣೆಯಲ್ಲಿ ಮೂರು ಮಾತ್ರೆಗಳ ಕಾಲವನ್ನು ತೆಗೆದು ಕೊಳ್ಳುವ ಅಕ್ಷರ ; ದೀರ್ಘಕ್ಕಿಂತಲೂ ಸ್ವಲ್ಪ ಕಾಲಾವಕಾಶವನ್ನು ಹೆಚ್ಚಿಗೆ ತೆಗೆದುಕೊಳ್ಳುವ ಅಕ್ಷರ ; ತ್ರಿಮಾತ್ರಕ : ಮಾತ್ರಾತ್ರಯ ಪರಿಗತಮಪ್ಪುದೆ ವಲಂ ಪ್ಲುತಂ (ಕಾವ್ಯಾವ. ೦೦); ಹ್ರಸ್ವಮದೇಕಮಾತ್ರಕಂ ದೀರ್ಘಮುಭಯಮಾತ್ರಂ ತ್ರಿಮಾತ್ರಕಂ ಪ್ಲುತಮಕ್ಕುಂ (ಕಮುರ. ೦೦); ಪ್ಲುತಕ್ಕೆ ಮಾತ್ರ ಮೂರು. ಆದರೆ ಛಂದೋದೃಷ್ಟಿಯಲ್ಲಿ . . . ಪ್ಲುತವನ್ನು ಗುರುವಾಗಿಯೇ ಗುಣಿಸಿದ್ದಾರೆ (ಸಂಕೋರ. ೧೦೩). ೬. [ಸಂಗೀತ] ತಾಳದ ಆರು ಅಂಗಗಳಲ್ಲಿ ಒಂದು; ಲಘುವಿನ ಮೂರರಷ್ಟು ಅಕ್ಷರಕಾಲವನ್ನು ಹೊಂದಿರುವುದು : ತಾಳಕ್ಕೆ ಬರುವ ಅವಯವಗಳಿಗೆ ಅಂಗಗಳು ಎಂದು ಹೆಸರು. ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ ಇವೇ ಷಡಂಗಗಳು . . . ಲಘುವಿನ ಮೂರರಷ್ಟು ಅಕ್ಷರಕಾಲವನ್ನು ಪ್ಲುತವೂ ಲಘುವಿನ ನಾಲ್ಕರಷ್ಟು ಅಕ್ಷರಕಾಲವನ್ನು ಕಾಕಪಾದವೂ ಹೊಂದುತ್ತವೆ (ಸಂಗೀಶಂ. ೩೪). [ಸಂ.]

**ಪ್ಲುಷ್ಟ** (ಗು). ೧. ಸುಟ್ಟ ; ಕರಿಕಾದ. (ನಾ). ೨. ಸುಟ್ಟುದು ; ಕರಿಕು : ದೀರ್ಘೋಷ್ಣಫೂತ್ಕಾರಂಗೆಯ್ದು ನಾಗರಾಜಚಕ್ರದಿಂ ಪ್ಲುಷ್ಟಮಾದ ಸಪ್ತಸಾಗರಸಲಿಲದೊಳ್ ಮಲಮಲನೆ ಮಱುಗುವ ಜಲಚರ ಚಕ್ರದಿಂ (ಗರಾಧು. ೬–೨೦). [ಸಂ.]

**ಪ್ಲೇಗು** (ನಾ). ಜ್ವರ, ಬಲಹೀನತೆಗಳುಂಟಾಗಿ ಕೈಕಾಲುಸಂದುಗಳಲ್ಲಿ ಗಡ್ಡೆಯೆದ್ದು ಬಾಧಿಸುವ ಒಂದು ಬಗೆಯ ಅಂಟುರೋಗ ; ಮಾರಿರೋಗ : ಪ್ಲೇಗನ ಪೋಗಿಸು ಮಾರಿಯೇ (ಪ್ರಸೂವು. ೨–೯೩) ; ಪ್ಲೇಗು ಮುಖ್ಯವಾಗಿ ಪ್ರಾಣಿಸಂಬಂಧ ರೋಗ (ಶಂಕೋ. XI. ೩೩೫). [← ಇಂ. Plague]

**ಪ್ಲೇಟು** (ನಾ). ತಟ್ಟೆ ; ತಾಟು . ರಾಮಣ್ಣ ಉಪ್ಪಿಟ್ಟಿಗೆ ಮುಹೂರ್ತ ಮಾಡಬೇಕೆಂದು ಪ್ಲೇಟನ್ನು ಮುಂದಕ್ಕೆ ಎಳೆದುಕೊಂಡ (ಮೂರಾಬ. ೪೨) ; ಬೋಂಡಾದ ಪ್ಲೇಟುಗಳನ್ನು ಮೇಜಿನ ಮೇಲಿಡುತ್ತ ವಾಣಿ ಹೇಳಿದನು (ಶಂರುಟ. ೯೨). [← ಇಂ. Plate]

**ಪ್ಲೋಷ** (ಗು). ೧. ಸುಡುವ ; ದಹಿಸುವ : ಸದ್ಯಸ್ಸಂತಾಪಿತಲೋಹ

ಫತ್ರಿಕಾವರಿರಂಭಸುಧಮವ್ಲೋಷಗಲಜ್ಜಾಂಗಲಗಲ ದ್ರು ಧಿ ರವಿ ಚಲದಸ್ತಿ ನಿರ್ಯನ್ನಹ್ಲಾ ಶುಷ್ಮಕೃಂಠ . . . ಆಕ್ರಂದತ್ಸ್ವರಪರಿಗತರ್‌ ಸ್ಥ್ಯರಿಸ ಕಾಜಿದೆ ತಡದಡಿಸಿ (ಜಿಖ. ೩-೪೭ ವ). (ನಾ). ೨. ಸುಡುವಿಕೆ; ದಹಿಸುವಿಕೆ. ೩. ನಾಶ; ಧ್ವಂಸ: ದ್ವಿಟ್ಪುರಪ್ಲೋಷ[ಜಾಣಾ. ಧ್ವಂಸ] ರತಿಕ್ರೋಧಂ . . . ರಕ್ಷಿಸುಗೆ (ಜಗಜಿ. ೧-೩). [ಸಂ.]

**ಫ** (ನಾ). ೧. ಕನ್ನಡವರ್ಣಮಾಲೆಯ ನಲವತ್ತೆರಡನೆಯ ಅಕ್ಷರ. ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ: "ಖಫಖರಮ ದೆರಡಕ್ಕು" (ಜೀಂಗಣಾ. ೦೦೪-೦೨).

**ಫಂಜಿಕೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಗಂಟುಭಾರಂಗಿ. 'ಹಂಜಿಕೆ' ಪಠಾ. [ಸಂ. ಫಂಜಿಕಾ]

**ಫಂಟ** 'ಪಂಟು' ನೋ.

**ಫಂಟತನ** (ನಾ). ಮೋಸಗಾರಿಕೆ; ವಂಚಕತನ: ಇದೆಲ್ಲಾ ಫಂಟತನದ ಮಾತು ಬಿಟ್ಟುಬಿಡು (ಗ್ರಾಮಾಯ. ೩೦೨). [ಫಂಟ (<ಪಂಟು) + — ತನ]

**ಫಕತ** 'ಪಕತ್' ನೋ.

**ಫಕಫಕ** (ನಾ). ಒಂದು ಅನುಕರಣ ಶಬ್ದ: 'ರಾತ್ರಿ' ಗಳಲ್ಲಿ ಕರಂಟು ಆಗೀಗ ಫಕಫಕ ಮಾಡುವದು (ಕಿರಿಯು. ix ಶಾಸ್ತ್ರ್ಯಕಾಕು).

**ಫಕೀರ್** 'ಪಕೀರ' ನೋ.

**ಫಕೀರ** 'ಪಕೀರ' ನೋ.

**ಫಕ್ಕಡ** 'ಫಾಕಡ' ನೋ.

**ಫಕ್ಕನೆ** (ಅ). ಇದ್ದಕ್ಕಿದ್ದಂತೆ; ಒಮ್ಮೆಲೆ: ಗಂಗೆಯೊಳು ಕೋಣನ ಹಾಗೆ ಮೈಗೆಟ್ಟು ಫಕ್ಕನೇ ಮುಳುಗಿ (ಜಕಜಾ. I. ೩೩೩); ಫಕ್ಕನೆ ವಸಂತ ದುರುಘರ್ಮದೊಳು ದಾಕ್ಷಿಣ್ಯಮೊಕ್ಕಂಸಲೆಳೆಗಾಳಿಯುರ ಬಿಡದೆ ಸುಳಿವಂತ (ಜರಜು. ೬-೩); ಇನಿಯನ ಮುಖು ಅರಳಿತು ಫಕ್ಕನೆ(ಕಂದುಬ.೧೭).

[ಫಕ್$_0$ + — ಅನೆ$_1$]

**ಫಕ್ಕಿ** (ನಾ). ರೀತಿ; ರೂಢಿ; ಪದ್ಧತಿ: ಇದು "ಸುರು ಹಚ್ಚು" ಎಂಬ ಉತ್ತರಕರ್ನಾಟಕದ ಫಕ್ಕಿಯನ್ನು ಹೋಲುತ್ತದೆಯಲ್ಲವೆ? (ಕುಮಾಸಾಂ. ೩೯೯); ಮಾತಿನ ಫಕ್ಕಿಯಂತೆಯೇ ಪಂಪನು ಅನೇಕ ನಾಣ್ನುಡಿಗಳನ್ನು ಜೀವಂತವಾಗಿ ಪ್ರಯೋಗಿಸಿದ್ದಾನೆ (ಸುವರ್ಣ. ೦೦೦).

[ಸಂ. ಫಕ್ಕೀ./ತೆಲು. ಫಕ್ಕಿ]

**ಫಕ್ತ** 'ಪಕತ್' ನೋ.

**ಫಜೀತಿ, ಪಜೀತಿ**(ನಾ). ತೊಂದರೆ; ಇಕ್ಕಟ್ಟು; ಕಷ್ಟ; ಗೋಳು: ಬಂದ ಮೇಲೆ ಅವನ ಫಜೀತಿ ಎಷ್ಟುಂತ ಹೇಳಲಿ? (ಮುಂಬಯಿ. ೦೯೯); ನೆಕ್ಕವು ಮೂಗಿನೊಳಕ್ಕೆ ಹೋದುದೇ ತಡ ಬುಳುಬುಳುಗುಟ್ಟಿ ಅಸಾಧ್ಯ ಫಜೀತಿ ಮಾಡಿಬಿಟ್ಟಿತು (೪೪ಹು. ೬೭); ನಾನದನ್ನು ತಂದೆಯವರಿಗೆ ತೋರಿಸುವ ಫಜೀತಿಯೇ ಇರುವುದಿಲ್ಲ (ಶಾರಿಹು. ೯೧). **ಪಜೀತಿ**: ಇದರಿಂದ ಎಷ್ಟೋ ಸಲ ತಿಂಗಳ ಕೊನೆಯ ದಿನಗಳಲ್ಲಿ ಪಜೀತಿಯಾಗುತ್ತಿತ್ತು (ಶಂಲ್ಕ. ೯೬); ಅವನ್ನು ಮುಟ್ಟಿಕೊಂಡು ದಿನಕ್ಕೆರಡು ಸ್ನಾನ ಮಾಡುವ ಪಜೀತಿ ಬೇಡ (ಸ್ವಕ್ಕಹೂ. ೬).

**ಫಜೀತಿ ಪಡು** = ಕಷ್ಟಕ್ಕೆ ಒಳಗಾಗು; ಸಂಕಟದಲ್ಲಿ ಸಿಲುಕು: ಫಜೀತಿ ಪಡಲಿ . . . ಅವರದೇ ತಪ್ಪು (ಸಾಚಿ. ೦೮). ಫಜೀತಿ ಬೀಳು = ಫಜೀತಿ ಪಡು: ನೀವು ಯಾಕೆ ಕಟ್ಟಿಕೊಂಡು, ಬಿಟ್ಟುಕೊಂಡು, ಕರೆದು ಕಳಿಸಿ ಫಜೀತಿ ಬೀಳಬೇಕು (ಜಾಳಹೂ. ೯). ಫಜೀತಿ ಮಾಡು = ಗೋಳಾಡಿಸು; ತೊಂದರೆಪಡಿಸು; ಪೀಡಿಸು: ಅವರನ್ನು ಸುತ್ತುಗಟ್ಟಿ ಫಜೀತಿ ಮಾಡುವದೇ ನನಗೊಂದು ಹಬ್ಬವಾಗಿತ್ತು (ಪೂಣಿಮ. ೩); ಕಳ್ಳರು ವರ್ತಕನ ಮೇಲೆ ಬಿದ್ದು ಹೊಡದು ಫಜೀತಿ ಮಾಡಿ ಹಣದ ಚೀಲ ಕಿತ್ತುಕೊಂಡು ಹೋದರು (ಕಥಾಮಂ. IV. ೦೯).

[ ←ಅರ .ಹಿಂ. ಫಜೀಹತ್; ಮರಾ. ಫಜೀತೀ ]

**ಫಟ್** (ನಾ). ಒಂದು ಅನುಕರಣ ಪದ: ಕಂಚುಕಿ ಫಟ್ಟೆಂದು ಪೊಡವೋಲ್ಲಿಗ್ಗಿ ಕೇಳಿದರ್ (ಜಜಜು. ೯೭-೩೬); ಒಮ್ಮೆ ಫಟ್ ಎಂದು ಸಿಡಿದು ಬಿಗಿಯಿತೋ, ಆಯಿತು (ಜಿಕಕ್ಕ.೯೮).

**ಫಟಕ** 'ಪಟಕ' ನೋ.

**ಫಟಕಿ, ಫಟಾಕಿ, ಫಟಿಕಿ, ಫಟಿಕೆ** (ನಾ). ಬೆತ್ತ ಅಥವಾ ಚರ್ಮದ ಚಾವಟಿಯಿಂದ ಕೊಡುವ ಏಟು,—ಹೊಡೆತ: ಪಹರೇಕರಿಯವರ ಕಡೆಯಿಂದ ಐವತ್ತು ಫಟಕಿಗಳನ್ನು ಹೊಡಿಸಿದರು (ಮಂಜಿಳ.೦೧೦). **ಫಟಾಕಿ**: 'ಫಟಾಕಿಶಿಕ್ಷೆ' ಪರಾ. **ಫಟಿಕಿ**: ದಂಡ, ಫಟಿಕಿ, ಹದ್ದುಪಾರು . . . ಇವೇ ಮೊದಲಾದವುಗಳು ಶಿಕ್ಷೆಯ ವಿಧಾನಗಳಾಗಿದ್ದುವು (ಹಿಂದುಾ.೬೨). **ಫಟಿಕೆ**: ಸರಕಾರದವರು ಅವನಿಗೆ ಬೆನ್ನ ಮೇಲೆ ಫಟಿಕೇ ಹೊಡೆಯುವ ಶಿಕ್ಷೆಯನ್ನು ನಿರ್ಣಯಿಸಿದರು (ಮುಂಬಯಿ.೩-೯೩). [← ಮರಾ. ಫಟಕಾ]

**ಫಟಕಿಶಿಕ್ಷೆ, ಫಟಾಕಿಶಿಕ್ಷೆ** (ನಾ). ಬೆತ್ತ ಅಥವಾ ಚಾವಟಿಯಿಂದ ಹೊಡೆಯುವ ಶಿಕ್ಷೆ: ಕಾಯದೆಯನ್ನು ಧಿಕ್ಕರಿಸಿದ ಸಂ. ಆ ತಪ್ಪಿಗೆ ಫಟಕಿಶಿಕ್ಷೆಯ ಪ್ರಾಯಶ್ಚಿತ್ತವನ್ನುಂಡ (ಎಳಗ್ಗ.೨೭); ಫಟಕೀಶಿಕ್ಷೆ ಕೊಡಿಸಿದನೇ? . . . ಈ ಸೇಡು ತೀರಿಸಿಕೊಳ್ಳದೆ ಬಿಡುವನೆ? (ಮುಂಂಆ.೯). **ಫಟಾಕಿಶಿಕ್ಷೆ**: ದೇವರು ಕೊಟ್ಟ 'ಫಟಾಕಿ'ಶಿಕ್ಷೆಯ ದಾರನ್ನು ಮೈಮೇಲೆ ಮೂಡಿಸಿಕೊಂಡಂತೆ ಕೊನ್ನಿನ ವರ್ಧಂತಿ ವರ್ತುಲವನ್ನು ಬೆನ್ನ ಮೇಲೆ ಕಟ್ಟಿಕೊಂಡು ಅವರು ಬಾಳುವದು ಹೇಗೆ? (ಕಪಹ್ಜ.೩೦೭). [ಫಟಕಿ + ಶಿಕ್ಷೆ]

**ಫಟಾಕಿ** 'ಫಟಕಿ' ನೋ.

**ಫಟಾಕಿಶಿಕ್ಷೆ** 'ಫಟಕಿಶಿಕ್ಷೆ' ನೋ.

**ಫಟಾಕ್ಷಿ** 'ಪಟಾಕಿ' ನೋ.

**ಫಟಿಂಗ, ಪಟಿಂಗ** (ನಾ). ೧. ಪೋಕರಿ; ಉಡಾಳ: ಸಕ್ಕರ ಇದ್ದಲ್ಲಿ ಇರುವೆಗಳು ಮುಕ್ಕುರುವವು; ಗಾಂಜಾ ಇದ್ದಲ್ಲಿ ಫಟಿಂಗರು ನೆರೆಯುವರು (ಜಯಂಕ.೦೬೯); ದಡ್ಡನಾಗಿ ಸಂಭಾವಿತನೆಂದೆನಿಸಿಕೊಳ್ಳುವುದಕ್ಕಿಂತ, ಜ್ಞಾನಿಯಾಗಿ ಫಟಿಂಗನಾಗಿ ಉಳಿಯುವುದೇ ಮೇಲು (ನಾಕ್ಕ್ಮ. ೩೦೫). ೨. ತಂಟೆಕೋರ; ತುಂಟ: ನಾವು ದಿಟದ ಶೀಲವಂತರೆಂದು ನುಡಿದುಕೊಂಬ ಫಟಿಂಗ ಧಂಡರ ವಿಧಿ ಎಂತಾಯಿತ್ತೆಂದರೆ ಹೆಂಡದ ಮಡಕೆಗೆ ವಿಭೂತಿಮಂಡಲವ ಬರೆದಂತಾಯಿತ್ತು (ಅಜಿಶಳ. ೨೪೬-೬೦); ನೀನು ಮಾಡಿದ್ದು ಫಟಿಂಗರ ಕೆಲಸ; ಇದು ಸರಿಯಲ್ಲ (ಅಜಾಕ. ೦೦೯). **ಪಟಿಂಗ**: ೨. ಈ ನಾಸ್ತಿಕ ಪಟಿಂಗ ಎಲ್ಲಿದ್ದಾನೆ (ಪಗಹೂ.೨೪೬); ಅವನು ಶುದ್ಧ ಪಟಿಂಗ (ಜಜಾ. II, ೦೨೬೫); ಮತ್ತೆ ಪಟ್ಟಿಂಗ ಹೊಡಿತಾನೆ ಪಟಿಂಗ, ಬಾಯಿಗೆ ಬಂದ್ಹಾಂಗೆ (ಮಲಮ.೨೪೮).

[←ಮರಾ. ಫಟಿಂಗ]

**ಫಟಿಂಗತನ, ಪಟಿಂಗತನ** (ನಾ). ತುಂಟತನ; ಚೇಷ್ಟೆ; ತಂಟೆ: ಈಗಂಥ ಫಟಿಂಗತನ ಮಾಡಹತ್ತಿದಿರಿ? (ಕಲಾಪ.೬೩). **ಪಟಿಂಗತನ**: ಈಗ ನಿಮ್ಮ ಮುಂದೆ ತುರುಕರ ಪಟಿಂಗತನ ನಡೆಯುವುದಿಲ್ಲ (ಗುರುದಾ. ೦೭).

[ಫಟಿಂಗ + — ತನ]

**ಫಟಿಂಗಿ** (ನಾ). ತುಂಟಿ; ತಂಟೆಕೋರಿ: ಲೇ ಪದ್ದೀ, ಫಟಿಂಗೀ, ಸುಳ್ಳುಕೋರೀ (ಜಕಿದಾ. I,೩೦೭). [ಫಟಿಂಗ + — ಇ$_3$]

**ಫಟಿಕಿ** 'ಫಟಕಿ' ನೋ.

**ಫಟಿಕೆ** 'ಫಟಕಿ' ನೋ.

**ಫಟೆ** (ನಾ). ನಾಗರಹಾವಿನ ಹೆಡೆ: "ಫಣಃ ಫಣಾ,ಫಟಾ — ಈ ೩ ಹಾವಿನ ಹೆಡೆ" (ಹಲಾಯು ೦೦೩-೦೯). [ಸಂ. ಫಟಾ]

**ಫಡ್ಡ$_1$, ಪಡ್ಡ** (ನಾ). (ಜೋಳ, ಕಬ್ಬು ಮೊದಲಾದುವುಗಳ) ಬೆಳೆದು ನಿಂತ ಪೈರು; ಎತ್ತರವಾದ ಬೆಳೆ: ಅಕ್ಕನ ಊರಾಗ ಮೆಕ್ಕಿಯ ಫಡದಾಗ ಗಕ್ಕನೆ ಬಾರೂ ಮಳಿರಾಜ (ಹಳ್ಳಿಯ. ೦೯೩); ಕಾಯಿಪಲ್ಲೆಗಳ ಮಡಿ

ಗಳಾಗಲಿ . . . ಕಬ್ಬು ಬಾಳೆಗಳ ಫಡಗಳಾಗಲಿ ಅಬಾಧಿತವಾಗಿದ್ದು ಸಸಿ ಬಳ್ಳಿಗಿಡಗಳೆಲ್ಲ ಪ್ರಫುಲ್ಲಿತವಾಗಿ ತೋರಿ ದೇಸಾಯರ ಮನಸ್ಸಿಗೆ ಆನಂದವನ್ನಿತ್ತವು (ತೋಳಮು. ೬೩); ತೋಟದಲ್ಲಿಯ ಬಾಳೀ ಫಡವನ್ನೆಲ್ಲ ಒಂದು ರಾತ್ರಿ ಕಡಿದು ಹಾಕಿದರು (ಮನಕಿ. ೨೦). **ಫಡ್ಡ** : ಕಬ್ಬಿನ ಫಡದಲ್ಲಿ ಕಬ್ಬು ಕಡಿದು ರವದೆ ಸವರಿ ಹೊರೆಕಟ್ಟುವ ಕೆಲಸದಲ್ಲಿ ನಿರತನಾಗಿದ್ದ ರಾಮ (ಜೀವಿಂ. ೯೬); ಭೀಮಪ್ಪ . . . ತೋಟದಲ್ಲಿ ನುಗ್ಗಿ ಅಲ್ಲಿದ್ದ ಗೊಂಜಾಳಿನ ಫಡದಲ್ಲಿಯ ತೆನೆ ಕೊಯ್ದುದ್ದಲ್ಲದೆ, ಮೆಣಸಿನ ಕಾಯಿಯನ್ನು ಹರಿದು . . . ಹಾಕಿದ (ಮನಕಿ. ೮). [ ← ಹಿಂ. ಮರಾ. ಫಡ ]

**ಫಡ್ಡ$_4$** (ಅ). ತಿರಸ್ಕಾರ ಹಾಗೂ ಕೋಪಗಳನ್ನು ಸೂಚಿಸುವ ಒಂದು ಪದ : ಸಾರುಸಾರಧಿಮನ್ಯು ಫಡ ಇನ್ನಾರ ಬಸುಜಿನು ಹೊಗುವೆ (ಕುಮಾವ್ಯ. ೩-೩೨); ಗಿರಿಜೆ ಕೋಪದಿಂ ಖೂಳ ಫಡ ಹೋಗೆನುತೆ ಶಪಿಸುವನಿತಜಿಓಳೀಶನೊಲಿದು ನಿಜದಿಂದಿರ್ದನು (ಕಂಕೃ. ೩೬-೯).

**ಫಡಫಡ$_2$** (ದ್ವಿರುಕ್ತಿ) : ಫಡಫಡಾನಿರುತಿರಲು ರಾಯನ ಹಿಡಿವವನ ಹೆಸರೇನು (ಕುಮಾವ್ಯ. ೨-೩೩); ಫಡಫಡೆಲೊ ದುರ್ಮಾರ್ಗ ಮುನ್ನಿನ ನುಡಿಗಳನು ನುಡಿ (ಅಸಂಅ. ೦-೩-೭೩).

**ಫಡಕು** 'ಪಡಕು'$_2$ ನೋ.

**ಫಡಗಳ್ಳಿ** (ನಾ). (ಉಕ) ಪಾಪಾಸುಗಳ್ಳಿ; ಮುಳ್ಳುಗಳ್ಳಿ: ಹೋಗಲಿ ಊರೊಳಗಿನ ಫಡಗಳ್ಳಿ ಹೋಯಿತೆಂಗು ತಿಳಿಯಿರಿ (ಹೊಂಮ. ೭೩): ದಾರಿಯಲ್ಲಿ ಬಳಸಿ ನಿಂತ ಫಡಗಳ್ಳಿಯನ್ನು ನಾವು ಕಿತ್ತುಹಾಕಿ ಸುಗಮವಾದ ದಾರಿ ಮಾಡಬೇಕು (ಹಮ್ಮಿ. ೬೯). [ ಫಡಂ + ಕಳ್ಳಿ$_2$ ]

**ಫಡಣೇಸ** 'ಫಡನವೀಸ' ನೋ.

**ಫಡನವೀಸ**, ಫಡಣೇಸ, ಫಡನೀಸ (ನಾ). ಸರಕಾರಿ ಲೆಕ್ಕಪತ್ರಗಳ ಮುಖ್ಯಾಧಿಕಾರಿ; ಮುಖ್ಯದಫ್ತರದಾರ: ಹರಿಮಹಾದೇವಭಾನುವನ್ನು ತನ್ನ ಫಡನವೀಸನನ್ನೂ ಮಾಡಿಕೊಂಡನು (ಕಂಸಂ. ೬೯). **ಫಡಣೇಸ** : ಪೇಂಡಶಯವರ ಕಾಲದ ಒಬ್ಬ ಫಡಣೇಸರು ಫಂಡರಪುರದಲ್ಲಿದ್ದರು (ಸ್ಮೃತಿಚಿ. ೨೪೬). **ಫಡನೀಸ** : ತನ್ನ ಮುಖ್ಯ ಫಡನೀಸನಾದ ಖ್ವಾಜಾಶಹಾ ಮನಸೂರನನ್ನು ತನ್ನ ಸಂಗಡಲೆ ಒಯ್ದನು (ಆಕ್ಕರ. ೬೩). [ ← ಪಾರ. ಫರ್ದನವೀಸ್; ಹಿಂ. ಮರಾ. ಫಡನವೀಸ್, ಫಡನೀಸ್ ]

**ಫಡನೀಸ** 'ಫಡನವೀಸ' ನೋ.

**ಫಡಪೋಶಿ** 'ಪಡಪೋಸಿ' ನೋ.

**ಫಡಪೋಶಿತನ** (ನಾ). ಅಲಕ್ಷ್ಯ; ಅಜಾಗರೂಕತೆ : ರಾಘಪ್ಪ . . . ಫಡಪೋಶಿತನದಿಂದ ಹೇಳಿ ದೇಸಾಯರತ್ತ ನೋಡುತ್ತ ಹುಚ್ಚುನಗೆ ನಕ್ಕು, 'ನಾ ಬರತೇನಿ' ಅನ್ನುತ್ತ ಎದ್ದನು (ಗಂಮಹಾಮು. ೨೪೨). [ ಫಡಪೋಶಿ (< ಪಡಪೋಸಿ) + – ತನ ]

**ಫಡಪೋಸಿ** 'ಪಡಪೋಸಿ' ನೋ.

**ಫಡಫಡ$_1$** (ಅ). ಒಂದು ಅನುಕರಣ ಶಬ್ದ: ಫಡಫಡ ಪಾಯಿಸೆ [ಯ್ಯೆ]ರ್ದೆ ನಡನಡುಗುವ ತನು . . . ಆದೊಡ ಬಿಡೆ ನಂಬುಗೆ ಕೂರ್ತಳೆಂದು ಕೂಟದ ಪಥದೊಳ್ (ವ್ಯರಚಿ. ೦೦-೩೬).

**ಫಡಫಡ$_2$** 'ಫಡ್ಡ$_4$' ಪರಾ.

**ಫಡಫಡಾಟ** (ನಾ). ಫಡಫಡ ಎಂಬ ಸದ್ದು: ದಿನ ಹೋದ ಮನುಷ್ಯರ ಬಳಿಯ ಪರದೆಯ ಫಡಫಡಾಟ ಸಾಕು (ಶಂಮುಖಿ. ೯೨). [ ಫಡಫಡ$_1$ + ಆಟ ]

**ಫಡಫಡಿಸು** (ಕ್ರಿ). ಫಡಫಡ ಎಂದು ಸದ್ದು ಮಾಡು: ಹಿನ್ನೆಲೆಗೆ ಕ್ರೌಂಚವು ರೆಕ್ಕೆ ಫಡಫಡಿಸಿ ಸರಳುವ ಸದ್ದು (ಕ್ರೌಂಚಕ್ಷ. ೩೨-೨೨); ಹಕ್ಕಿಗಳು ಫಡಫಡಿಸುತ್ತ ಹಾರಾಡಿ ಮತ್ತೆ ಕುಳಿತವು (ಶಂಗಾತ. ೨೬). [ ಫಡಫಡ$_1$ + – ಇಸು$_3$ ]

**ಫಡಾಳಿ** 'ಪಡಾಳ್ಳಿ$_2$' ನೋ.

**ಫಡಿ** 'ಪಡ್ಡೆ' ನೋ.

**ಫಡಿಕೆ** 'ಪಡಿಕ್ಕೆ' ನೋ.

**ಫಡ್ಚ**, ಪಡಚ, ಪಡಿಚ, ಪಡ್ಚ (ನಾ). ೧. ನಿರ್ನಾಮ; ನಾಶ; ಧ್ವಂಸ : ಬೇಲಿ ಮುಟ್ಟಿದರೆ ಶೋಕ್ ಹೊಡೆದು ಆಸಾಮಿಯೇ ಫಡ್ಚ! (ಕಗುಕ. ೦೮೨). **ಪಡಚ** : ೧. ಬಿರುಗಾಳಿ ಬಡೀತದಲ್ಲಾ ಅಂತ ಏರ್‌ದಂ ನಿಲ್ಲಿಸುವುದಕ್ಕೆ ಹೊರಟರೆ, ನಮ್ಮ ಪ್ರಾಣವೇ ಪಡಚ (ಶಂಗೂಂ. ೦೯೨). ೨. ಸಾಲ ಮೊದಲಾದ ವ್ಯವಹಾರಗಳನ್ನು ಮುಗಿಸುವುದು ; ಫೈಸಲಾತಿ : (೬). **ಪಡಿಚ** : ೩. (ಪದಾರ್ಥಗಳನ್ನು) ನಿಶ್ಶೇಷವಾಗಿ ಬಳಸುವಿಕೆ,—ಫೈಸಲು ಮಾಡುವಿಕೆ : (೬). **ಪಡ್ಚ** : ೧. ಕನಿಷ್ಠ ಒಂದು ವರ್ಷದ, ಮನೆಯ ಸಾಮಾನು ದಾಸ್ತಾನು ಇರಿಸಿಕೊಳ್ಳದಿದ್ದರೆ, ನಾವು ಪಡ್ಚವೇ ಸರಿ (ಪುಂಗಿಮು. ೩೬೩) ; ಪಡ್ಚ ಆಯಿತು. ನನ್ನ ಅಮ್ಮನ ಹಾಗೆ . . . ನೀವೂ ಹೇಳುತ್ತೀರಲ್ಲಾ ? (ಶಾರುಂಶ. ೨೪೦).

**ಪಡ್ಚ ಮಾಡು**, **ಪಡಚಾ ಮಾಡು** = ನಾಶಮಾಡು ; ನಿರ್ನಾಮಗೊಳಿಸು : ಅದರ ಪ್ರಾಣ ತೆಗೆಯಲಿಕ್ಕೆ ಹೋದರ ನಾಳೆ ಊರಿಗೆ ಊರನ್ನೇ ಅದು ತಿಂದು ಪಡ್ಚ ಮಾಡೀತು (ಶರಾಪ. ೩೨) ; ಒಬ್ಬೊಬ್ಬ ಕಾಫರ್‌ನನ್ನೂ ಹಿಡಿದು, ಗಂಟಲನೊತ್ತಿ ಪಡಚಾ ಮಾಡಿಬಿಡುತ್ತಿದ್ದೆ (ಅಶಾಂತಿ. ೧೮೦). [←ಮರಾ. ಫಡಚ್ಯಾ, ಫಡಛ್ಯಾ, ಫಡಶಾ. ತುಳು. ಫಡ್ಚ, ಫಡಿಚ, ಪಡಚ, ಪಡಿಚ, ಪಡಿಚಿ, ಪಡ್ಚ]

**ಫಡ್ಡಳಿ** 'ಪಡ್ಡಳಿ$_1$' ನೋ.

**ಫಣ$_1$** 'ಪಣವು$_1$' ನೋ.

**ಫಣ$_2$** 'ಬಣ್ಣ' ನೋ.

**ಫಣ$_3$** (ನಾ). ಹಾವಿನ ಹೆಡೆ : "ಫಣಃ, ಫಣಾ, ಫಟಾ—ಈ ೩ ಹಾವಿನ ಹೆಡೆ" (ಕಣಾಮು. ೦೦೩-೦೯) ; ಫಣಮಯ್ದಂ ಪಡೆದಂ ತನಗೆಣೆವಡೆದಂ ಶೇಷನುರ್ವಿಯಂ ತಾಳ್ದನೆನಲ್ . . . ಕಣ್ಬೊಣರಂ ತಣಿಓದುದು ಭುಜಯುಗಂ ರಘುಸುತನಾ (ಶಂಆಪಾ. ೦೨-೦೯) : ಫಣವ ಮೆಟ್ಟಿ ಬಾಲವ ಕೈಯಲಿ ಪಿಡಿದು ಫಳಫಳಿಸುತ್ತಾತ ನಾಟ್ಯವನಾಡೆ (ಪುರಂದ. ೨-೦೦೪-೨) ; ಸಹಸ್ರಫಣಗಳುಳ್ಳ ಶೇಷನೇ ವಿಶ್ವದ ಸ್ವಾಮಿಯಾದ ಲಕ್ಷ್ಮಣನಿರುವನು (ತುಳಸೀ. ೦೪೩). [ಸಂ.]

**ಫಣಕಟ್ಟು** 'ಪಣಕಟ್ಟು$_2$' ನೋ.

**ಫಣಗೆಲಸ** (ನಾ). ಒಂದು ಪಂಗಡಕ್ಕೆ ಸೇರಿದ ಕೆಲಸ : ಗಾಣದವರ ಕೆಲಸ : ತೇಲಿಗರ ಮಗ ನಾನು ಫಣಗೆಲಸವ ಬಲ್ಲೆಯೆಂಬಲಿ ನೀಡಿ ಸಲಹೆನೆ ಸುದ್ದಿ ಕೇಳುತ ಕರೆದು ತಂದನು ಮನೆಗೆ ಕಲುಶೆಟ್ಟಿ (ಕೀತಕಾ. ೨-೨೩). [ಫಣ$_2$ (<ಬಣ್ಣ ) + ಕೆಲಸ]

**ಫಣಪರ** (ನಾ). [ಜ್ಯೋತಿ] ಲಗ್ನದಿಂದ ಎರಡು, ಐದು, ಎಂಟು ಮತ್ತು ಹನ್ನೊಂದನೆಯ ಸ್ಥಾನಗಳ ಸಂಜ್ಞೆ, — ಸಂಕೇತ : ಉದಯದಶಾಸ್ತಮಯ ಚತುರ್ಥದೆಡೆಗೆ ಕೇಂದ್ರಂ ಚತುಷ್ಟಯಂ ಕಂಟಕಮೆಂಬುದು ಸಂಜ್ಞೆ ತತ್ಪರಂ ತಾನದು ಫಣಪರಮದಱ ಪರಮದಾಪೋಕ್ಲೀಬಂ (ಶಾಕಚಿ. ೦-೩೬). [ಸಂ. ?]

**ಫಣಭೃತ್ತು** (ನಾ). ೧. ಹೆಡೆಯುಳ್ಳುದು ; ನಾಗರಹಾವು. ೨. ಹಾವು : "ವಿಷಧರಃ . . . ಫಣಭೃತ್ . . ಭುಜಂಗಮಃ —ಈ ೨೫ ಪಾವಿನ ಪೆಸರ್" (ಕಣಾಮು. ೦೦೩-೦೬). [ಸಂ. ಫಣಭೃತ್]

**ಫಣಮಣಿ** (ನಾ). ಹಾವಿನ ಹೆಡೆಯಲ್ಲಿರುವ ರತ್ನ : ಚೂಡಾಮಣಿಗಳೆಗೆ ಚಕ್ರಿಪದದೊಳ್ ಫಣಮಣಿ ಪುನರುಕ್ತಿ ಪಾಂಡ್ಯಪತಿಗಾಯ್ತಾಗಳ್ (ಶಾಂತಿಪು. ೦೦-೪). [ಸಂ.]

**ಫಣಸ್ತ** (ನಾ). ಗುಂಪು ; ವರ್ಗ ; ಪಣಕಟ್ಟು : ಈಯುಭಯಪೇಟೆ ಸೆಟ್ಟಿ ವರ್ತಕರು ಮುಂತಾದ ಸಕಲ ಫಣಸ್ತರಿಂದ ಕುಳ ೧ಕ್ಕೆ ×× ಅಡ್ಡ ಮಡೆ×ವೆ ೧ ಕ್ಕೆ ೧ ವಂದು ಹಣ . . . ಕೊಡುವ ಪ್ರಕಾರ ಸರ್ವಜನ ಸಮ್ಮತಿಯಿಂದ ದಾನಪತ್ರ ಬರಸಿಕೊಟ್ಟು (ಎಕ. IX. ಹೊಸಕೋ. ೦೦೩-೦೩ ; ೧೬೯೩). [ಫಣ್ಣಾ (<ಬಣ್ಣಾ) + – ಸ್ತ]

**ಫಣಾಧರ** (ನಾ). = ಫಣಭೃತ್ತು ೨ : "ಫಣಾಧರನಕ್ಷಿಕರ್ಣಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಚುಂಗಿಗಾ. ೦೦೬–೦). [ಸಂ.]

**ಫಣಾಪತಿ** (ನಾ). ಸರ್ಪಗಳ ಒಡೆಯ ; ಆದಿಶೇಷ : ಅದು . . . ಬಹುವಿಷಧರವೆಂದೊದವಿದ ಮಹತ್ವದಿಂದಿಟಿಪುದು ಧನಪತಿ ದಿವಿಜಪತಿ ಫಣಾಪತಿಪುರವಂ (ಕೃಕೃ. ೨–೩೬). [ಸಂ.]

**ಫಣಾಮಣಿ** (ನಾ). = ಫಣಮಣಿ : ಧರೆ ಫಣವೆಂಬೆನೆ ವಾಗೇಂದ್ರನ ಫಣಾಮಣಿಯು ಮೇಲಡಗಿತ್ತು (ಐಶಶ. ೬೩೬) ; ಫಣೆಯ ಫಣಾಮಣಿಯುಮಂ ವಾರಣರದಮುಂ . . . ಅತಿಕ್ರಿಪಣನ ಪಣಮುಂ ಬಾಟಲ್ಕೆ ಸಾರವಾರು ಮನೆಂದುಂ (ಅಜಾಕ. ೦–೯೯). [ಸಂ.]

**ಫಣಾರತ್ನ** (ನಾ). = ಫಣಮಣಿ : ದೀಪದೊಳ್ ಪನ್ನಗಪತಿಯ ಫಣಾರತ್ನದೀಪಂ ವಿತಾನಾವಳಿಯೊಳ್ ದಿವ್ಯಂ ವಿತಾನಂ ತುಱುಗಿದುವಮರೇಂದ್ರಾರ್ಚನಕ್ಕೆ (ಅಕೃ. ೦೩–೨), ಫಣಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೦–೪೪) ; ನಾನಾಫಣಾರತ್ನವೊಪ್ಪಿರೆ ಬಂದಂ ಮಟಿಯುಂ ನಿವಾಸಿಸಲನಂತಂಗುಂದನಂತೋರಗಂ (ಜಗಂ. ೩–೯). [ಸಂ.]

**ಫಣೆ** (ನಾ). ೧. ಹೆಡೆಯುಳ್ಳ ಹಾವು ; ಸರ್ಪ : "ಉರಗಂ ಭೋಗಿ ಸರೀಸೃಪಂ ಫಣಿ ಭುಜಂಗಂ ಚಕ್ರಿ ದರ್ವೀಕರಂ" (ಶಬ್ದಕೋ. ೦೯–೬) ; ಫಣಿ ಗರುಡಾಂಗದ ಪಚ್ಚೆಯ ಮಣಿಯಂ ಕಂಡಂತೆ (ಹಂಡಾಹು. ೯–೦೬) ; ಹುತ್ತಿನಿಂ ಫಣಿವೆರಸಿ ಕಡೆಯೆ ಕಂಡು (ಚಕಶ. ೦೩–೫೦) ; ಗರುಡ ಮೆಟ್ಟಿದ ಫಣಿಯ ಪೋಲ್ . . . ದುರುಳದಾನವ ಮಾಸುತ ಚಿಂತಿಸಿ ಮೂಗನಾಗಿರಲು (ಕೌಶಾ. ೩೬–೨). ೨. ಆಶ್ಲೇಷ ನಕ್ಷತ್ರದ ಅಭಿಮಾನಿದೇವತೆ ; ನಾಗ : ಸ್ವಾತಿ ಫಣಿ ಭರಣಿ ಶತಭಿಷೆ ಭೂತೇಶಂ ಜ್ಯೇಷ್ಠೆ ಮುಂಚೆ ಕಱಿದೊಡೆ ಮಟಿ ಧಾತ್ರೀತಳಕೆ ನೆಱೆಯೆ ಕಱಿಯದು (ಜ್ಯೋತಿ. ೧೦೬). ೩. ರಾಹು. ೪. (ಅಲಂ) ಬೆನ್ನಿನ ಮೇಲಾಗುವ ಒಂದು ಬಗೆಯ ಕುರು ; ಸರ್ಪಹುಣ್ಣು : ಬೆನ್ನ ಫಳಿ (ಣಿ)ಗೆ ಎನ್ನ ಕೇಳಬೇಡ ಅಂಗಾಲ ಹುಣ್ಣಿಗೆ ಎನ್ನ ಕೇಳಬೇಡ . . . ವಿಶ್ವಾದ ವ್ಯಾಧಿಗೆ ನಾನರಸು (ಶರಣ. ೦೩೬–೩೪೪). ೫. [ಗಣಿತ] ಮೂವತ್ತುಮೂರು ಅಂಕೆಗಳುಳ್ಳ ಒಂದಂ ದೊಡ್ಡ ಸಂಖ್ಯೆ : ಎಕ್ಕಂ ದಾಹಂ . . . ಫಣಿ ಮಹಾಫಣಿ ಕ್ರತು ಮಹಾಕ್ರತು ಸಾಗರ ಮಹಾಸಾಗರ ಪರಿಮಿತ ಮಹಾಪರಿಮಿತ — ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೬) ; ಎಕ್ಕಂ ದಾಹಂ . . . ಫಣಿ ಮಹಾಫಣಿ ಕ್ರತುಮಹಾಕ್ರತುವೆಂಬಿವೇ [೪] ಉಗ್ಗಡಣೆಗಳು (ಶಿವೇಕ. ೬). [ಸಂ. ಫಣಿನ್]

**ಫಣೆ** 'ಫಳ್ಕ' ನೋ.

**ಫಣಿಕಟಕ** (ನಾ). ಹಾವುಗಳನ್ನೇ ಕಡಗವಾಗಿ ಉಳ್ಳವನು ; ಶಿವ : "ವಿರೂಪಾಕ್ಷಂ ವ್ಯೂಢಂ ಧೂರ್ಜಟಿ ಫಣಿಕಟಕಂ ವಾಮದೇವಂ ವೃಷಾಂಕಂ" (ಶಬ್ದಕೋ. ೩–೦೩) ; ಚಣಮರಾಳಕಗಮನೆ ಬಂದಳು ಫಣಿಕಟಕನಲ್ಲಿರ್ದಾಮಣಿಕಂಣಾಕರಾಂಬುಜೆ ಬಂದಳು (ಐಶಕ. ೩೦–೦೦) ; ಆಂ ಪೋಗಿ ಫಣಿಕಟಕನಂಘ್ರಿಗೆಯರಗಲವರು ಮುತ್ತೈದೆಯಾಗೆಂದು ಪರಕೆಯನಿಯ್ಯಲು (ಶಶಪೋ. ೬–೩೬). [ಸಂ.]

**ಫಣಿಕುಂಡಲ** (ನಾ). ಹಾವಿನಿಂದಾದ ಕಿವಿಯ ಆಭರಣ : ಮೂಡಿದನು . . . ಫಣಿಕುಂಡಲವ ಪಂಚಮುಖದ ವಿಶ್ವನಾಥಂ (ಹಕಗಾ. ೦೩–೦೯). [ಸಂ.]

**ಫಣಿಕೇತನ** (ನಾ). ಹಾವಿನ ಚಿಹ್ನೆಯ ಧ್ವಜವುಳ್ಳವನು ; ದುರ್ಯೋಧನ : ಖತಿಯ ಹಿಡಿದನು ಶೌರಿ ಮಣಿಯದ ಮತಗುಡದ ಫಣಿಕೇತನನ ಕಂಡು (ಕುಭಾ. ಉ. ೯–೩೬). [ಸಂ.]

**ಫಣಿಗೃಹ** (ನಾ). ಹಾವುಗಳ ನೆಲೆ ; ಹುತ್ತ : ಸುಖನಿಧಿ ಕಂಠೀರವವಿಷ್ಟರದಿನಧಿಕನಮರಾಲಯದಿಂ ಧೀರಂ ಫಣಿಗೃಹದಿಂದಂ ವೀರಂ (ಕಾಂತಿ. ೯–೨೦೦). [ಸಂ.]

**ಫಣಿಗೇಹ** (ನಾ). = ಫಣಿಗೃಹ : ಫಣಿಫಣಾಸ್ಫುರಿತಮಣಿದೀಪಿಕಾವ್ಯೂಹಮಂ ಕ್ವಣಿತಮಣಿಕಿಂಕಿಣೀನಿನದಫಣಿಗೇಹಮಂ . . . ನೋಡಿ (ಅಂಕೃ. ೬–೨೬ ಕಗಳ). [ಸಂ.]

**ಫಣಿಜ್ಝಕ** (ನಾ). ತುಳಸಿ, ಪುದಿನ, ಮೊದಲಾದ ಸಸ್ಯಜಾತಿಗೆ ಸೇರಿದ ಗಿಡ ; ಬಿಳಿಮರುಗದ ಗಿಡ : " ಪಣಿಜ್ಜಕ—ಬಿಳೇಮರುಗದ ಗಿಡ " (ಗಂಗಾಶು. ೬). [ಸಂ.]

**ಫಣಿತಲ್ಪ** (ನಾ). ಹಾವನ್ನೇ ಹಾಸುಗೆಯನ್ನಾಗಿ ಮಾಡಿಕೊಂಡವನು ; ವಿಷ್ಣು : ಅಪ್ಪ ಬಾ ಫಣಿತಲ್ಪ ಬಾ . . . ಮಱಿಯಾನೆ ಬಾ ಮಾಣಿಕ್ಯ ಬಾ (ಕಾಕಿಶ. ೦–೬೩). [ಸಂ.]

**ಫಣಿತಿ** (ನಾ). ಮಾತು ; ವಾಕ್ಕು : ವಿತತಕಳಾತತಿಯೊಳ್ ಪರಿಣತಿಯಂ ಸೂಚಿಸುವ ಸರಸಫಣಿತಿಗಳಂ ಸಂಗತವಾಗೆ ನುಡಿದೊಡಂ ದುರ್ಗತರವು ಕಾನನದ ಜೊನ್ನದಂತಿರೆ ವಿಫಲಂ (ಶಿತಿಪು. II, ೩೩೬). [ಸಂ.]

**ಫಣಿಧರ** (ನಾ). ಹಾವನ್ನು ಧರಿಸಿದವನು ; ಶಿವ : ಫಣಿಧರನಿಂ ಪಡೆದಂ ಗಡ ಪಣೆಗಣ್ಣಂ (ಕೃಕಂ. ೦೩–೪೦). [ಸಂ.]

**ಫಣಿನಾಯಕ** (ನಾ). ಸರ್ಪಗಳ ಒಡೆಯ : ದಿವಿಜನೋ ಫಣಿನಾಯಕನೋ ಮನೋಭವನಿವಂ ಕರಮೊಪ್ಪಿದಂ (ಕಜಾ. ೦–೧೯೦) ; ನಿಜಾಂಗರುಚಿಯೊಳ್ . . . ಫಣಿನಾಯಕಂ ಕರಂ ಸೊಗಯಿಸಿದಂ (ಅಂಕೃ. ೯.೦೦೦). [ಸಂ.]

**ಫಣಿನಿ** (ನಾ). ಹೆಣ್ಣು ಹಾವು ; ನಾಗಕನ್ಯೆ : ಕಾಲು ಸೋಂಕಿದ ಫಣವುಳ್ಳ ಫಣಿನಿಯು ಫಣವನೆತ್ತಿಕೊಂಡು ನಿಲ್ಲುವಂತೆ ಉನ್ಮಾದಿನಿಯಾದಾಯವನಿಯು ಮಸ್ತಕವನೆತ್ತಿಕೊಂಡು ನಿಂತು ' . . . ನೀನೆನ್ನವನೇ ಆಗಿರುವೆ' ಎಂದಳು (ಕಶಾಕಂ. ೯೦). [ಸಂ. ಫಣಿನೀ]

**ಫಣಿನಿಲಯ** (ನಾ). = ಫಣಿಗೃಹ : ಫಣಿನಿಲಯಂ ಪರೀಕ್ಷಿಸುವೊಡಾಲದ ಮೂಡಣ ಮಯ್ಯೊಳಾಗೆ ತೆಂಕಣದೆಸೆಯತ್ತಲಯ್ದುಪುರುಷಂಬರೆಗಂ ನೆಱೆ ತೋಡುಗುಪ್ಪುನೀರ್ (ಲೋಕೋಶ. ೫–೩೦). [ಸಂ.]

**ಫಣಿಪ** (ನಾ). ೧. ಹಾವುಗಳ ಒಡೆಯ ; ಆದಿಶೇಷ : ಪೊಡವಿಯುಂ ಬಗಿವ ಫಣಿಪನನುಗಿವ ಜಲಧಿಯುಂ ಕಾಡಿವ . . . ಕಡುಗಲಿಗಳು (ಚಕಶ. ೦–೯೬). ೨. ಸರ್ಪಲೋಕದ ಒಡೆಯ : ಧಾತ್ರಿಪ ಫಣಿಪರ ಖೇಚರಪ ತ್ರಿದಶಪರೆಯ್ದೆ ವಿಶ್ವಕರ್ಮಂ ಬರೆದಂ ಚಿತ್ರಪಟವಂ ದಲೆನೆ ಭುವನತ್ರಿತಯ ಕಾಣಲಾದುದಭವನ ಸಭೆಯೊಳ್ (ಕಾಂತಿಪು. ೯–೬೯). [ಸಂ.]

**ಫಣಿಪತಿ** (ನಾ). = ಫಣಿಪ ೧ : ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೦–೪೪) ; ಜನನವಿಧಿಗಳ ಕೋಟಲೆಯನೆಣಿಸುವಡೆ ತಾಂ ಫಣಿಪತಿಗೆ ಹವಣಲ್ಲ (ಐಶಕೃ. ೩೦–೬೩) ; ತಲೆಪೊಱೆಯ ತೂಕದಲ್ಲಿ ಫಣಿಪತಿ ಬಳುಕತೊಡಗಿದ (ಕುಭಾ. ಉ. ೦೦–೦೩). [ಸಂ.]

**ಫಣಿಪತಿಕೇತನ** (ನಾ). = ಫಣಿಕೇತನ : ಫಣಿಪತಿಕೇತನಧೂಮಕೇತುವುಂ ಪಾಂಡವಬಾಲಪ್ರದೀಪನುಂ . . . ಎನಿಸಿದ ಭೀಮಸೇನಂ (ಗದಾಯು. ೨–೦ ಪ). [ಸಂ.]

**ಫಣಿಪತಿತಲ್ಪ** (ನಾ). = ಫಣಿತಲ್ಪ : ಪಡೆದ ವೈಭವದೇಳಿಗೆಯಲಿ ಪಾಲ್ಗಡಲ ನಡುವಸೆವ ಫಣಿಪತಿತಲ್ಪನಂ . . . ಮೆಚ್ಚಿಸುವ ಬೆಡಗುವಡಪ ಸೋಲಿಸುವ ವೇಶ್ಯಾಂಗನೆಯರೆಸದಿರ್ದರು (ರಕ್ಮಾಶ. ೨–೦೩). [ಸಂ.]

**ಫಣಿಪಾಶ** (ನಾ). [ಕಾಮಶಾ] ರತಿಬಂಧಗಳಲ್ಲಿ ಒಂದು ; (ಹಾವುಗಳಂತೆ ಹೆಣೆದುಕೊಳ್ಳುವ) ಒಂದು ಬಗೆಯ ಆಲಿಂಗನ ; ನಾಗಬಂಧ : ಕೃತಬಂಧುರತಿಕ್ರೀಡಾಮತದೆ ತಗುಳ್ದಬಲೆ ತನ್ನ ಜಾನುದ್ವಯನಿರ್ಗತ ಹಸ್ತದ್ವಿತಯವ್ಯಾಪೃತೆಯಿಂ ನೆಗಳ್ದೊಂದೆ ಕಾಂತನೊಳ್ ಫಣಿಪಾಶಂ (ಮನ್ಮ.ವಿ. ೦೪-೨೪); ಮೆಲ್ಲನೆ ಮಲಗಿರ್ದವಳಂ . . . ತನ್ನೆರಡು ಕೈಗಳಂ ಮೊಳಕಾಲ ಕೆಳಗಿಕ್ಕಿಯಿರಲಾಗಿ ಪುರುಷ ತನ್ನೆರಡು ಕೈಗಳಿಂ ಅವಳ ಕೈಗಳಂ ಮಲಕಿಕ್ಕಿ ಮೊಳಕೈವಳಗಿಕ್ಕಿ ಕೊರಳಂ ತಕ್ಕಿಸಿ ರಮಿಸಲ್ಕೆ ಫಣಿಪಾಶಮೆಂಬ ಕರಣಂ (ಕಾಮಕಾ. ೨೪೬). 'ನಾಗಪಾಶಕರಣ' ಪರಾ. [ಸಂ.]

**ಫಣಿಪೇಂದ್ರ** (ನಾ). = ಫಣಿಪ ೧ : ಮಂದರಗಿರಿಯಾದುದು ಗಡ ಧನು ಫಣಿಪೇಂದ್ರನು ಹೆದೆಯಾದ ಗಡ ಸಂದ ಮುಕುಂದನಾದನು ಬಾಣವೆಂಬುದು ಸಂದೇಹವೇನಲ್ಲದಿಹುದೆ (ಕೃಷ್ಣರಾ. ೬-೨೬). [ಸಂ.]

**ಫಣಿಭುಕ್ಕು** (ನಾ). ೧. ಸಣ್ಣ ಹಾವುಗಳನ್ನು ತಿಂದು ಬದುಕುವ ಒಂದು ಬಗೆಯ ದೊಡ್ಡ ಹಾವು : "ಫಣಿಭುಗ್ರಾಜಫಣೆಯೆನಲ್ಕರವಾವು" (ಮೋಗಣ. ೦೦೮-೩). ೨. ನವಿಲು. ೩. ಗರುಡ. [ಸಂ. ಫಣಿಭುಜ್]

**ಫಣಿಭೋಗ** (ನಾ). ಹಾವಿನ ಸುರುಳಿ, – ಮಂಡಲ : ಅಡವಿಯಲಿ ಫಣಿಭೋಗದಲಿ ಬಿಗಿವಡೆದು ಬಳಲಿದ ಭೀಮಸೇನನ ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ (ಕುಮಾ.ಭಾ. ೦೪ ಸೂಚನೆ). [ಸಂ.]

**ಫಣಿಯಾಲ** 'ಪಣಿಯಾಲ' ನೋ.

**ಫಣಿರಾಜ** (ನಾ). = ಫಣಿಪ ೧ : ಫಣಿರಾಜಂ ಬಾರಿಯಿಟ್ಟುಕ್ಕಿದೊಡನುದಿನಂ ಬರ್ಪ ಸರ್ಪಂಗಳಂ ಬಲ್ಪಿನೆ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ (ಕಾವ್ಯಾ.ಕ. ೯೦೦) ; ಫಣಿರಾಜನಂ ಶುಚಿಚೂಡನಿಕ್ಕಿದನೊಂದು ಬೆರಳಿಗೆ ಮುದ್ರಿಕೆಯ ತೆರದಿ (ಅಕ್ರೂ. ೫೯-೩೩). [ಸಂ. ಫಣಿರಾಜನ್]

**ಫಣಿರಾಜಕೇತನ** (ನಾ). = ಫಣಿಕೇತನ : ಕಮಲಾಕರದಿಂ ಪೊಣಮಟ್ಟ ನಾಗಳಂ ಭುಜಯುಗತೋರಣಾಯಿತಗದಾಪರಿಘಂ ಫಣಿರಾಜಕೇತನಂ (ಗದಾಯು. ೬-೨೬). [ಸಂ.]

**ಫಣಿರಾಜನಂದನೆ** (ನಾ). ಸರ್ಪರಾಜನ ಮಗಳು; ಆದಿಶೇಷನ ಮಗಳು: ಫಣಿರಾಜನಂದನೆಯುಲೂಪಿ . . . ಮೂರ್ಛಿತರಾಗಿ ಸಮರಧಾರಿಣಿಯೊಳಿಹ ದೊರೆಗಳಂ ತರಿಸಿ ಮಂತ್ರೌಷಧಗಳಿಂದೆ ಪಾಲಿಸುತಿರ್ದಳು (ಕೈಮಿನಿ. ೨೬-೪). [ಸಂ. ಫಣಿರಾಜನಂದನಾ]

**ಫಣಿರಾಜಶಯನ** (ನಾ). = ಫಣಿತಲ್ಪ: ಸರಸಿರುಹನಯನ ಫಣಿರಾಜಶಯನ . . . ವರಕೌಸ್ತುಭಾಭರಣ ಸಲಹು (ಕೈಮಿನಿ. ೨-೩೦). [ಸಂ.]

**ಫಣಿರ್ಜಕ** (ನಾ). = ಫಣಿಜ್ಝಕ : "ಫಣಿರ್ಜಕಂ ಮರು ಮರುವಕಂ" (ಕನ್ನಕೋ. ೩೭-೨೫); "ಮರು ಮರುವಕಂ ಫಣಿರ್ಜಕವಕ್ಕು" (ಮೋಗಣ. ೩೯-೨೬). [ಸಂ.]

**ಫಣಿಲೋಕ** (ನಾ). ಸರ್ಪಲೋಕ; ನಾಗಲೋಕ: ಅನಿಮಿಷಲೋಕವುಂ ವಿಬುಧರಿಂ ಫಣಿಲೋಕಮನುಗ್ರನಾಗಸಾಧನದಿಂ . . . ಅದೇನನುಕರಿಸಿತ್ತೊ ರಾಜಭವನಂ (ಪಾಂಡವಿ. ೩-೦೩); ಗಗನವಿತತನ ನಾಭಿ ದಶದಿಕ್ಕುಗಳು ಕಿವಿ ಫಣಿಲೋಕ ವಿಮಲಾಂಘ್ರಿಗಳು ಧ್ರುವನಿಂ ಮೇಲುಭಾಗ ಮುಖಾಂತಕನ ಮುಕುಟ (ಕುಮಾ.ಕ. ೯-೨೩). [ಸಂ.]

**ಫಣಿವೇಣಿ** (ನಾ). ಹಾವಿನಂತೆ ಜಡೆಯುಳ್ಳವಳು ; ನಾಗವೇಣಿ : ರಕ್ಷಿಸು ವಿನುತ ಗೀರ್ವಾಣಿ ಫಣಿವೇಣಿ ಶರ್ವಾಣಿ ಶಿವನ ರಾಣಿ (ಉದ್ಭಟರ. ೫-೪); ಅಜನ ಪಟ್ಟದ ರಾಣಿ ವರದೆ ಕಲ್ಯಾಣಿ ಫಣಿವೇಣಿ ವಾಣಿ . . . ಸುಮತಿಯು ತಾಯೆನಗೆ (ಕೈಮಿನಿ. ೦-೪). [ಸಂ. ಫಣಿವೇಣೀ]

**ಫಣಿಶಯನ** (ನಾ). = ಫಣಿತಲ್ಪ : ರಕ್ಷಿಪುದೀ ಕಾಳಿಯ ಫಣೇಂದ್ರನಂ ಫಣಿಶಯನಾ (ಜಗನ. ೩-೦೦೯). [ಸಂ.]

**ಫಣಿಶಾಯಿ** (ನಾ). = ಫಣಿತಲ್ಪ: ದಯೆ ಮಾಡಿ ಸಲಹಯ್ಯ . . . ಫಣಿಶಾಯಿ ಅವಗುಣವ ನೋಡದೇ ಚರಣಸ್ಮರಣೆಯ ಮಾಡುವಂಥ ಭಕುತಿಯನಿತ್ತು (ಭೂಸುರ. ತಾ. ೨೦-೯೯-೧). [ಸಂ. ಫಣಿಶಾಯಿನ್]

**ಫಣೀಂದ್ರ** (ನಾ). ೧. ಹಾವು ; ಸರ್ಪ : ಫಣೀಂದ್ರವೃಂದಂ . . . ಒಪ್ಪಿತಾ ಶ್ರೀನೇತ್ರನುತ್ತುಂಗಸಭಾಂತರಾಳದೊಳ್ (ಉದ್ಯತಿ. ೦೨-೦೨೯). ೨. = ಫಣಿಪ ೧ : ಮತ್ತಹಸ್ತಿಗಳ ಮಸ್ತಕದಿಂ ಬದಿರಿಂ ಫಣೀಂದ್ರೋತ್ತಮಾಂಗದಿಂ . . . ಒಕ್ಕಳವಮುತ್ತನಾಯುತ್ತುಮಿರ್ಪ ಶಬರಪ್ರಿಯಕಾಮಿನಿಯರ್ಕಳಂ (ಕಾವ್ಯಾ.ಕ. ೦೦೯); ಅವಧರಿಸಲೆ ಫಣೀಂದ್ರ ಭೂಮಂಡಲದ ರಾಯರೊಳಿಪ್ಪಾಂಡುಸುತ ಕೌರವರ್ಗಾದುದಾಹವಂ (ಕೈಮಿನಿ. ೨೯-೦೬). [ಸಂ.]

**ಫಣೆ₁** 'ಪಣೆ' ನೋ.

**ಫಣೆ₂** (ನಾ). ಹಾವಿನ ಹೆಡೆ; ಫಣ : "ಫಣಃ. ಫಣಾ. ಫಟಾ— ಈ ೩ ಹಾವಿನ ಹೆಡೆ" (ಕರಾಮು. ೦೦೩-೦೯). [ಸಂ. ಫಣಾ]

**ಫಣೆಕಟ್ಟು** 'ಪಣೆಗಟ್ಟು' ನೋ.

**ಫಣೆಗಣ್ಣು** 'ಪಣೆಗಣ್' ನೋ.

**ಫಣೇರಪೆಟ್ಟಿಗೆ** (ನಾ). ಬಾಚಣಿಗೆ, ಕುಂಕುಮದ ಭರಣಿ, ಕನ್ನಡಿ ಮೊದಲಾದುವನ್ನು ಇಡುವ ಪೆಟ್ಟಿಗೆ : ಅಳಿಯತನದಲ್ಲಿ . . . ಬೇಕಾದರೆ ಒಂದು ಫಣೇರಪೆಟ್ಟಿಗೆಯನ್ನೇ ಬೇಡಲು ನಿನ್ನ ಮಗನಿಗೆ ಹೇಳು (ರಾಮರಾಜ. ೩೩).

[ಫಣೇರಂ (ಪ್ರ ←ಮರಾ. ಫಣೇರೇ = ಕನ್ನಡಿ, ಬಾಚಣಿಗೆ ಮೊದಲಾದುವನ್ನಿಡುವ ಚೀಲ) + ಪೆಟ್ಟಿಗೆ]

**ಫಣ್ಯಾಕಲ್ಪ** (ನಾ). ಹಾವುಗಳನ್ನೇ ಆಭರಣವಾಗುಳ್ಳವನು ; ಶಿವ : ಲುಪ್ತಾಘನ ಫಣ್ಯಾಕಲ್ಪನ ನತಫಣಿತಲ್ಪನ . . . ಸನ್ನುತಿಪೆಂ (ಉದ್ಭಟರ. ೪-೦). [ಸಂ.]

**ಫತ್ತೆ** (ನಾ). ಗೆಲವು; ವಿಜಯ : ಇಂಗ್ರೇಜಸರಕಾರಕ್ಕೆ ಫತ್ತೆ ಆದ ಸಂತೋಷದ ಬಗ್ಗೆ ಮಡಿಕೇರಿ ಕೋಟೆಯಲ್ಲಿ ಇಪ್ಪತ್ತೊಂದು ಫಿರಂಗಿ ಹಾರಿಸಿದರು (ಕಾಕೀಂವ್ರ. ೦೮).

[← ಅರ. ಹಿಂ. ಫತಹ್; ಮರಾ. ಫತೇ, ಫತ್ತೇ]

**ಫತ್ತೆಮಾರಿ, ಪತ್ತೇಮಾರಿ, ಫತ್ತೇಮಾರಿ** (ನಾ). ಒಂದು ಬಗೆಯ ದೊಡ್ಡ ನಾವೆ.—ದೋಣಿ : ಎಲ್ಲಕ್ಕೂ ದೊಡ್ಡನಾವೆಗೆ ಫತ್ತೆಮಾರಿಯೆಂದೆನ್ನುವರು (ಕಹಾಗ. ೩೦೬); ಈ ದೇಶದ ವ್ಯಾಪಾರಸ್ಥರು ಫತ್ತೆಮಾರಿಗಳಲ್ಲಿಯೂ ಬಗಲಗಳಲ್ಲಿಯೂ ಸರಕುಗಳನ್ನು ತುಂಬಿಕೊಂಡು . . . ಸಮುದ್ರಪ್ರಯಾಣ ಮಾಡುತ್ತಿದ್ದರು (ಮುಂಬಾಯಿ. ೩-೦೦೬). **ಫತ್ತೇಮಾರಿ:** ಆ ದಳವಾಯಿಗೂ ಆ ಐದುಸಾವಿರ ಕುದುರೆಗಳಿಗೂ ಪತ್ತೇಮಾರಿ ಮೇಲೆ ಹಾಕಿಸಿ . . . ಕುಂಬಳೆಕೋಟ್ಲೂಕಿನಲ್ಲಿ ಇಳಿಸಿದ್ದರು (ಕಾಕೀಂವ್ರ. ೦೨). **ಫತ್ತೇಮಾರಿ :** ಫತ್ತೇಮಾರಿಯಲ್ಲಿ ೧೫೦ರಿಂದ ೫೦೦ ಟನ್ನಿನ ವರೆಗೆ ಮಾಲು ಹೇರುವರು (ಕಹಾಗ. ೩೦೬). [← ಮರಾ. ಫತ್ತೇಮಾರೀ, ಫತೇಮಾರಿ]

**ಫತ್ತೇಮಾರಿ** 'ಫತ್ತೆಮಾರಿ' ನೋ.

**ಫನ** (ನಾ). ಸಂಪೂರ್ಣ ಹಾಳು ; ಸರ್ವನಾಶ : ಅವನ್ನ ಸ್ವಲ್ಪ ನಮ್ಮ ಬಲಗ್ಹಾಕ್ಕೊಂಡ್ರೆ? . . . ರಾಮಕೃಷ್ಣೋರ ಕಡೆ ಕೇಸ್ನ ಫನ ಮಾಡ್ಬಿಡಬಹುದು (ಓಜಕ. ೨೦); ಮನೆ ಅಥವಾ ಹೋಟೇಲಿನ ಹಿಂಬದಿಯ ಜಗಲಿಯಲ್ಲಿ ಅದರ ಫನಾ ನಡೆಯುತ್ತದೆ (ಕಶಕ. ೦೦೩).

[←ಅರ. ಹಿಂ. ಫನಾ; ಮರಾ. ಫನಾ, ಫನ್ನಾ]

**ಫರ** (ನಾ). ಗುರಾಣಿ; ಢಾಲು. [ಸಂ.]

**ಫರಂಗಿ** 'ಫಿರಂಗಿ' ನೋ.

**ಫರಂಗಿಮಣೆ, ಪರಂಗಿಮಣೆ** (ನಾ). ತಪ್ಪು ಮಾಡಿದವನನ್ನು ಕುರ್ಚಿಯ ಆಕಾರದಲ್ಲಿ ಕೂರಿಸುವ ಒಂದುಬಗೆಯ ಶಿಕ್ಷೆ; ಕುರ್ಚಿ ಕೂರಿಸುವುದು:

ಏತ ಹಾಕುವುದು. ಫರಂಗಿಮಣೆಯಲ್ಲಿ ಉಳಿತುಕೊಳ್ಳುವುದು ಮೊದಲಾದ ಬಗೆಯ ಒಂದೊಂದು ಭಯಂಕರಶಿಕ್ಷೆಯನ್ನನುಭವಿಸಿದವರು ಮತ್ತೊಮ್ಮೆ ಓದಿಗೆ ಕಳ್ಳಮನಸ್ಸನ್ನು ಮಾಡುತ್ತಿರಲಿಲ್ಲ (ಕರುಣಾ. ೬೬), ಕೋದಂಡ, ಫರಂಗಿಮಣೆ—ಇವುಗಳ ಶಿಕ್ಷೆಯೊಂದಿಗೆ . . . ಯಕ್ಷಗಾನಗಳನ್ನು ಅಲ್ಲಿ ಹೇಳಿಕೊಡುತ್ತಿದ್ದರು (ಹುಟುಂ. ೦೬). **ಪರಂಗಿಮಣೆ** : ಆ ದಿನ ಅವನನ್ನು ಅಧ್ಯಾಪಕರು ಪರಂಗಿಮಣೆ ನಿಲ್ಲಿಸಿದ್ದರು (ಅಜಾಶ. ೦೪೪) ; ಪರಂಗಿಮಣೆ, ಉಪ್ಪುಗಳಿಗಾಗಿ . . . ನಮ್ಮ ಶಾಲೆ ಇತ್ತಂತೆ (ಒಡಹುಂ. ೩೬).

[← ತುಳು. ಪರಂಗಿಮಣೆ]

**ಫರಕ** 'ಫರಕು' ನೋ.

**ಫರಕು, ಫರಕ** (ನಾ). ಹೆಚ್ಚುಕಡಮೆ; ವ್ಯತ್ಯಾಸ; ಭೇದ ; ಅಂತರ : ಅದಕ್ಕೂ ಭೀಮಸೇನಾಚಾರ್ಯು ಕೊಟ್ಟ ಕುಂಡಲೀಗೂ ತುಸು ಫರಕು ಅದ (ಕಪುಹ. ೨೩೪). **ಫರಕ** : ಮೂರುರೂಪಾಯಿಯು ಬದಲಿ ಈಗ ಒಂದು ಒಂದುವರೆ ರೂಪಾಯಿಯ ಫರಕವನ್ನು ತೋರುತ್ತದೆ (ಹುಂಬಣ್ಣ. ೨೬೪). [←ಅರ. ಫರ್ಕ್; ಹಿಂ. ಮರಾ. ಫರಕ್]

**ಫರಜು, ಫರ್ಜು** (ನಾ). [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ . . . ಫರಜು ಮುಂತಾದ ಕಷ್ಟರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು . . . ಮಾರ್ಗದರ್ಶಕರಾಗಿದ್ದಾರೆ (ಸಂಗೀತ. ೨೪೪) ; ಹಿಂದಿನವರು ಹಾಡುತ್ತಿದ್ದ ಧಾಟಿಗಳು—ಫರಜು, ಕಾಪಿ, ಖಮಾಚು, ಮಧ್ಯಮಾವತಿ, ಆನಂದಭೈರವಿಯಂಥ ರಾಗಗಳಿಂದ ಕೂಡಿದ್ದುವು (ಕಾಶಗೀ. ೦೦೬). **ಫರ್ಜು** : ರಾಗ ಫರ್ಜು, ಆದಿತಾಳ (ಕಪುಹು. ೦೬).

[←ಹಿಂ. ಪರಜ್, ಫರ್ಜ್; ಮರಾ. ಪರಜ್]

**ಫರದೆ** 'ಪರದೆ' ನೋ.

**ಫರಫರೆ** (ನಾ). ಮಂಟಪ ಮೊದಲಾದುವುಗಳಲ್ಲಿ ಆಲಂಕಾರಕ್ಕಾಗಿ ಕಟ್ಟುವ ತೆಳುವಾದ ಕಾಗದಗಳ ತೋರಣ : ಅವರಿಂದಲೇ ಕಾಗದದ ಫರಫರೆಗಳನ್ನು ದೊರಕಿಸಿದಳು (ಗಂಕುಜಾಯಿ. ೦೩೨). [?]

**ಫರಮಾನಾ** 'ಫರ್ಮಾನಾ' ನೋ.

**ಫರಮಾನು** 'ಫರ್ಮಾನು' ನೋ.

**ಫರಮಾಯಿಶಿ** 'ಫರಮಾಯಿಷಿ' ನೋ.

**ಫರಮಾಯಿಷಿ, ಪರಮಾಯಿಷಿ, ಪರಮಾಶಿ, ಫರಮಾಯಿಶಿ, ಫರಮಾಶಿ** (ಗು). ೧. ಅಪ್ಪಣೆಯಂತೆ ಸಿದ್ಧಪಡಿಸಿದ ; ಹೇಳಿ ಮಾಡಿಸಿದ. ೨. ಅತ್ಯುತ್ತಮವಾದ ; ಸೊಗಸಾದ ; ಉತ್ಕೃಷ್ಟವಾದ : ಸರ್ಕಾರಕ್ಕೆ ಫರಮಾಯಿಷಿ ಜನಿಸಿ ಮುಂತಾದುದನ್ನು ಕಳುಹಿಸತಕ್ಕ ವಿಷಯ (ಹುಹಾಪಂ. II. ೩೬). **ಪರಮಾಯಿಷಿ** : ೨. ಪ್ರಮಿಳೆ . . . ಪರಮಾಯಿಷಿ ಉಪ್ಪಿಟ್ಟಿಗೆ ಬಾಯಲ್ಲಿ ನೀರೂರಿಸಿಕೊಂಡು ಹಾರಿಹೋದಳು (ಹುಪುಶ. ೦೨). (ನಾ). ೩. ಇಷ್ಟವಾದುದು : ಬೈರಾಗಿಗೆ ಅವನ ಸಂಗೀತ ತುಂಬ ಪರಮಾಯಿಷಿ ! (ಹುಕಣ. ೬೪). **ಪರಮಾಶಿ** : ೨. ಓಹೋ, ಇದೇಯೊ ನಿನ್ನ ಪರಮಾಶಿ ಮಿಾನು ? (ಕಗುಹ. ೦೩) ; ನಾಗಪ್ಪಯ್ಯನಿಗೂ ಸುಬ್ಬಣ್ಣಯ್ಯರಿಗೂ ಪರಮಾಶಿ ಜೋಡಿಯಂತೆ (ಸ್ವಕೃಹೂ. ೬೬). ೪. ಸೊಗಸಾದುದು ; ಶ್ರೇಷ್ಠವಾದುದು : ನನ್ನ ಒಳ್ಳೆಯ ಪರಮಾಶಿಯದು (ಕೃಪರ್. ೯೩). **ಫರಮಾಯಿಶಿ** : ೨. ನಮ್ಮ ಮಾವ ಊರಿನಿಂದ ಫರಮಾಯಿಶಿ ಮಾವಿನ ಹಣ್ಣುಗಳನ್ನು ತಂದಿದ್ದಾರೆ (ಕೂಶಿ). **ಫರಮಾಶಿ** : ೨. ಫರಮಾಶಿ ನಂಟುತನ (ಸ್ವಕೃಹೂ. ೨೨೦).

[←ಪಾರ. ಹಿಂ. ಫರ್ಮಾಇಶೀ ; ಮರಾ. ಫರಮಾಶೀ, ಫರಮಾಸೀ, ಫರ್ಮಾಶೀ, ಫರ್ಮಾಸೀ]

**ಫರಮಾಯಿಸು** 'ಫರ್ಮಾಯಿಸು' ನೋ.

**ಫರಮಾಶಿ** 'ಫರಮಾಯಿಷಿ' ನೋ.

**ಫರಮಿಾನು** (ನಾ). ಒಂದು ಬಗೆಯ ದೀಪ (?) : ಇಲಾಲುಗಳು, ಫರಮಿಾನುಗಳು, ಅದಕ್ಕೆ ಬತ್ತಿ ಎಣ್ಣೆ ಸಹಾ . . . ಕಳುಹಿಸಬೇಕೆಂದು ಅಪ್ಪಣೆಯಾಯಿತು (ಹುಪುಣ. ೩೩). [?]

**ಫರವಾನೆ** 'ಪರವಾನೆ' ನೋ.

**ಫರಶಿ** 'ಫರಸಿ' ನೋ.

**ಫರಶಿಕಲ್ಲು** 'ಫರಸುಗಲ್ಲು' ನೋ.

**ಫರಸಿ, ಫರಶಿ, ಫರಸು** (ನಾ). ೧. ಗಾರೆಯಿಂದ ಅಥವಾ ಹಾಸು ಗಲ್ಲುಗಳಿಂದ ಸಿದ್ಧಪಡಿಸಿದ ನೆಲ : ನಾನು ಫರಸಿಯ ಮೇಲೆಯೆ ಕಂಬಳಿ ಹಾಸಿಕೊಂಡು ಮಲಗುತ್ತೇನೆ (ಖಾಕಹ. ೯೩). ೨. ನೆಲಗಟ್ಟಿಗೆ ಉಪಯೋಗಿಸುವ ಹಾಸಂಗಲ್ಲು : ಕಲ್ಲಿನ ಫರಸಿ ಹಾಕಿ ಸಿದ್ಧಗೊಳಿಸಿದ ದೊಡ್ಡ ಪಡಸಾಲೆ (ಶೀಕಪಹು. ೦೨). **ಫರಶಿ** : ೨. ೩೩ ಪೂಹರಗಳು (ಪಾವರೆಗಳು) ೩೪ ಫರಶಿಗಳು (ಹುಂಪಣ್ಣ. ೦೦೨). 'ಫರಶಿಕಲ್ಲು' ಪರಾ. **ಫರಸು** : ೧. ಗೋಡೆಗಳಿಗೆ ಗಿಲಾಯು ಮಾಡಿಸುವದು, ಫರಸು ಮಾಡುವದು . . . ಇತ್ಯಾದಿ ಕೆಲಸ ಪ್ರಾರಂಭವಾಯಿತು (ಕಂಪುಟ. ೯೩).

[ ← ಅರ. ಫರ್ಶ್ ; ಮರಾ. ಫರಶೀ]

**ಫರಸು** 'ಫರಸಿ' ನೋ.

**ಫರಸುಗಲ್ಲು, ಪರಸಿಗಲ್ಲು, ಫರಶಿಗಲ್ಲು** (ನಾ). ನೆಲಗಟ್ಟು, ಕಟ್ಟೆ, ಜಗಲಿ ಮೊದಲಾದುವುಗಳಿಗಾಗಿ ಬಳಸುವ ಹಾಸುಗಲ್ಲು : ಫರಸುಗಲ್ಲಿನ ಬೀದಿಯ ಮೇಲೆಲ್ಲ ಮಣಗಟ್ಲೆ ಮಿಾನುಗಳು ಸೂರೆಯಾಗಿದ್ದುವು (ಚಕುನ. ೯). **ಪರಸಿಗಲ್ಲು** : ಅವಳು ಪರಸಿಗಲ್ಲಾಗಿ ತನ್ನ ಮೈಯನ್ನು ಎಂದಿನಂತೆ ಅದಕ್ಕೆ ಮಾತ್ರ ಒಡ್ಡಿದಳು (ಚಕಾಶ. ೩೩). **ಫರಶಿಕಲ್ಲು** : ಆ ಜಾಗದಾಗ ತುಸಾ ದೂರಾ ನಾಕಾರು ಫರಶಿಕಲ್ಲು ಒಗೆ (ಕಮ್ಮಟ. ೨೬).

[ ಫರಸು (< ಫರಸಿ ) + ಕಲ್ಲು (< ಕಲ್) ]

**ಫರಮೋಷಿ, ಪರಮೋಶಿ, ಪರಾಮೋಶಿ** (ನಾ). ಅಜಾಗ್ರತೆ ; ಕಣ್ಣು ತಪ್ಪಿ ಆದ ತಪ್ಪು : ಫರಾಮೋಷಿಯಾದರೂ ಪಡಪೋಸಿ ಯಾಗಬಾರದು (ಗಾದೆ). **ಪರಮೋಶಿ** : ಪರಮೋಶಿಯಾಯಿತು. ಬಟ್ಟೆ ಗಿಟ್ಟೆ ಹಾಳಾಗಿಲ್ಲವಷ್ಟೆ (ಕರುಣಾ. ೬). **ಪರಾಮೋಶಿ** : ಹೀಗೊಂದು ಪರಾಮೋಶಿ ಆಯಿತಲ್ಲ (ಕಮುಕ. ೪).

[←ಪಾರ. ಹಿಂ. ಮರಾ. ಫರಾಮೋಶೀ]

**ಫರಾರಿ**[1], **ಪರಾರಿ**[1], **ಫರಾರೆ** (ನಾ). ಕಣ್ಣು ತಪ್ಪಿಸಿ ಹೊರಟು ಹೋಗುವಿಕೆ ; ಓಡಿಹೋಗುವಿಕೆ ; ನಾಪತ್ತೆ : ತನ್ನ ಕೆಟ್ಟಬುದ್ಧಿ ಬಿಡದೆ, ಇಲ್ಲಿಂದಾ ಫರಾರಿ ಆಗಿ ಹೋಗಬೇಕು (ರಾಜೇಂದ್ರ. ೨೬೩); ನಿನ್ನೆ ಮಧ್ಯಾನಕ್ಕೆ ಫರಾರಿ ಆಗಿ ಹೋದವ ಈವತ್ತು ಇಷ್ಟು ತಡ ಆಗಿ ಯಾಕ ಬಂದೊ. (ರಪಂಜ. ೯೩) ; ಹಣ ಸಿಗದಿದ್ದರೆ ಫರಾರಿಯಾಗುವುದೊಂದೇ ಪರಿಹಾರ ವಾಗಿದೆ (ಹುಟ್ಟ್ಕೆ. ೨೦೪). **ಪರಾರಿ**[1] : ಮಕ್ಕಳುಯಿಬ್ಬರು ಪರಾರಿಯಾಗಿ ಕೆಲವು ದಿವಸದ ಮೇಲೆ (ಎಕ. VIII. ಸಾಗರ. ೯೬-೨೦ ; 1646 ?) ; ನನ್ನ ಥಾಂಡಿಗ ದೂತರಂತೂ ಯಾವಾಗಲೋ ಫರಾರಿಯಾಗಿದ್ದಾರೆ (ಹಕ್ಕೊಂಡ. ೦೪೬). **ಫರಾರೆ** : ಆಸಾಮಿ ಫರಾರೆಯಾದ (ಪಕಡಾ. II. ೯೩೬).

**ಫರಾರಿ ಮಾಡು** = ಕಣ್ಣಿಗೆ ಬೀಳದಂತೆ ಓಡಿಸಿ ಬಿಡು ; ನಾಪತ್ತೆ ಮಾಡು : ಅವನಿಂದ ಕೈಮುರೆ ಮಾಡಿಕೊಂಡು ಅವನನ್ನು ಫರಾರಿ ಮಾಡಿ ಬಿಡುವುದೂ ಉಂಟು (ಕೃಕಕ. ೦೨). [←ಅರ. ಹಿಂ. ಮರಾ. ಫರಾರೀ]

**ಫರಾರಿ**[2] (ನಾ). ೧. ಹಾರಾಡುವ ಬಟ್ಟೆಯ ತುಂಡು: (೩). ೨. ನಾವೆಯ ಹಾಯಿಪಟ : (೩). [←ಮರಾ. ಫರಾರಾ]

**ಫರಾರೆ** 'ಫರಾರಿ[1]' ನೋ.

**ಫರಾಶೀಸ, ಫರಾಷೀಸ, ಫರಾಸಿಸ** (ನಾ). ಫ್ರಾನ್ಸ್‌ದೇಶದವನು : ಕೊಡೆಯಾಲಕ್ಕೆ ಫರಾಶೀಸರ ಕೆಲವು ಮಂದಿ ಬಂದು, ಇಳಿದಿದ್ದರಿಂದ

(ರಾಕೇಂದ್ರ. ೦೦೪). **ಫರಾಷೀಸ :** ಮೊಮದಲ್ಲಿಹಾನರು ತಮ್ಮ ಮೇಲೆ ಪುಲಚೇರಿಯಿಂದ ಫರಾಷೀಸತ ಫಳುಡು ಸುದಾ ಚಂದಾಸಾಬರು ಬಂದು ಮುತ್ತಿಗೆ ಹಾಕಲಾಗಿ (ಕೃಪಶ. ೩೩). **ಫರಾಸಿಸ :** ನವಾಬನು . . . ತನ್ನ ಕಡೆಯ ಫರಾಸಿಸರ ಸೇನಾಪತಿಯಾದ ಲಾಲಿ ಮೊದಲಾದ ಸರದಾರರನ್ನು ಕರೆಯಿಸಿ (ಆಕ್ರಶಾ. ೪೪).

[←ಪಾರ. ಹಿಂ. ಫರಾಸೀಸ್ ; ಮರಾ. ಫರಾಶೀಸ್, ಫರಾಸೀಸ್]

**ಫರಾಷೀಸ** 'ಫರಾಶೀಸ' ನೋ.

**ಫರಾಸಿಸ** 'ಫರಾಶೀಸ' ನೋ.

**ಫರಾಳ** 'ಫಲಾರ' ನೋ.

**ಫರುಜು** 'ಪರಜು' ನೋ.

**ಫರೆ** (ನಾ). ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣ : ೧೭ ಪಾಯಲಿ ಅಂದರೆ ೧ ಫರಾ ೮ ಫರೆಗಳು ಅಂದರೆ ೧ ಖಂಡಗ (ಮುಂಬಶಾ. ೦೦೩). [←ಮರಾ. ಫರಾ]

**ಫರ್ಜಿ** (ನಾ). ಚದುರಂಗದ ಆಟದ ವಜೀರ,–ಮಂತ್ರಿ : ಈಗ ತಮ್ಮ ಆ ಸೋತ ಆಟಕ್ಕೆ ಶ್ರದ್ಧೆಯೇ ಫರ್ಜಿ (ಕ್ರೀಡಾಕ್ಷ. ೪೪).

[←ಪಾರ. ಮರಾ. ಫರ್ಜಿ ; ಹಿಂ. ಫರಜೀ]

**ಫರ್ಜು** 'ಫರಜು' ನೋ.

**ಫರ್ನಾದಿ** (ನಾ). ಮಾವಿನ ಹಣ್ಣಿನಲ್ಲಿ ಒಂದು ಬಗೆ : (ಹುಂಂಣದು.೨-೬೨).

[←ಮರಾ. ಫರ್ನಾದೀನ್, ಫರ್ನಾದೀಸ್./ಪೋರ್ಚು. ಫರ್ನಾದೀಜ್]

**ಫರ್ಮಾನ್** 'ಫರ್ಮಾನು' ನೋ.

**ಫರ್ಮಾನ** 'ಫರ್ಮಾನು' ನೋ.

**ಫರ್ಮಾನು,** ಪರಮಾನು, ಫರಮಾನಾ, ಫರಮಾನು, ಫರ್ಮಾನ್, ಫರ್ಮಾನ (ನಾ). ೧. ಆಜ್ಞೆ ; ಹುಕುಮ : ಬಡಜನರಿಂದ ಹತ್ತು ರೂಪಾಯಿ ವಸೂಲು ಮಾಡಲು ಫರ್ಮಾನು ಹೊರಟಿತು (ಜೀದಾಶ. ೬೩) : ಪುಣೆಯಿಂದ ಕಾಕಾನ ಫರ್ಮಾನು ಬಂದಿತು (ಬೀಕಶ. II, ೮). ೨. ಆಜ್ಞಾಪತ್ರ : ಹೆಡ್‌ಮಾಸ್ತರರ ಹಸ್ತಾಂಕಿತವಿದ್ದ ಫರ್ಮಾನು ಅದು (ರಕ್ತರ್ಕ. ೦೫೭). **ಪರಮಾನು :** ೧. ಅಧಿಕಾರಿಗಳ್ಗೆ ಪರಮಾನು ನಿರೂಪ ಲೇಖನಮಂ ಬರೆಸಿತ್ತು (ಕೆಳನೃ. ೩-೩೧). **ಫರಮಾನಾ :** ೧. ಕಂಬಕ್ಕೆ ಬಗಿಯಲು 'ಫರಮಾನಾ' ಹೊರಡಿಸಿದರು (ಸಹೂಕ. ೦೨೪). **ಫರಮಾನು :** ೨. ಇವರಿಂಗೆ ಫರಮಾನ ತಂದಿತ್ತರಾಕ್ಷಣ ನೋಡಿ (ಬೀಕಮಂ. ೦–೦೩೩). **ಫರ್ಮಾನ್ :** ೨. ಸುಲ್ತಾನರು ತಮ್ಮ ಎರಡು ಆನೆಗಳನ್ನು ಪ್ರಕಟಿಸಿದರು. ಅವುಗಳನ್ನು ಫರ್ಮಾನ್ ತಯಾರಿಸಿ . . . ಡಂಗೂರ ಹೊಡೆಸಿದರು (ಕೊಪಕ್ಕ. ೦೨೪) ; ಸಾರ್ವಭೌಮ ಚಕ್ರವರ್ತಿ ಏನಾದರೂ ಫರ್ಮಾನ್ ಹೊರಡಿಸಿ . . . ರೈತರಿಗೆ ಹಂಚಿ ಬಿಡಬೇಕೆಂದು ಹೇಳಿದರೆ ನೀವೇನು ಮಾಡ್ತೀರಿ? (ಪ್ರಪಕು. ೪೦೩). **ಫರ್ಮಾನ :** ೨. ಬುಂದೇಲಖಂಡದ ಸ್ವಾತಂತ್ರ್ಯದಾನದ ಫರ್ಮಾನವನ್ನು ಬರೆದನು (ಛಾಜೀಕೇ. ೨೨೦). [←ಪಾರ. ಫರ್ಮಾನ್ ; ಹಿಂ. ಫರಮಾನ ; ಮರಾ. ಫರ್ಮಾನ, ಫರ್ಮಾನಾ]

**ಫರ್ಮಾಯಿಸು,** ಫರಮಾಯಿಸು (ಕ್ರಿ). ವಿಧಿಸು ; ಅಪ್ಪಣೆ ಮಾಡು ; ಆಜ್ಞೆಮಾಡು : ನಿಮಗೆ ೧೦೦೦ ರೂಪಾಯಿ ದಂಡ ಅಥವಾ ೬ ತಿಂಗಳು ಶಿಕ್ಷೆಯನ್ನು ಫರ್ಮಾಯಿಸಿದ್ದೇನೆ (ನ್ಯಾಕಂ. ೦೭) ; ಕೈದಿಯನ್ನು ಜತೆಯಲ್ಲಿಯೇ ಕರೆದು ತರಬೇಕೆಂದು ಅಪ್ಪಣೆ ಬೇರೆ ಫರ್ಮಾಯಿಸಿದ್ದಾಳೆ (ಐಯಜಾ. ೦೨೩). **ಫರಮಾಯಿಸು :** ಇಂಗ್ರೇಜಫೌಜು ಹೊರಡಿಸ ಬೇಕಾದ್ದಕ್ಕೆ ಹುಕುಂ ಫರಮಾಯಿಸಲು . . . ತಿಳಿಸಿ ಇದ್ದೇವೆ (ರಾಕೇಂದ್ರ. ೦೩೪). [<ಫರ್ಮಾನು + – ಇಸು]

**ಫರ್ಲಾಂಗು** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ಒಂದು ಮೈಲಿಯ ಎಂಟನೆಯ ಒಂದು ಭಾಗ : ಅವರಿಗೂ ಆಕೆಗೂ ಸುಮಾರು ಒಂದರ್ಧ ಫರ್ಲಾಂಗು ಅಂತರವಿತ್ತು (ಕಂದುಬಿ. ೩೩).

[←ಇಂ. Furlong]

**ಫರ್ಲೋ** (ನಾ). ನಿರ್ದಿಷ್ಟವಾದ ನೌಕರಿಯ ಅವಧಿಯ ನಂತರ ನೌಕರದಾರನಿಗೆ ಸಿಕ್ಕುವ ಪೂರ್ಣವೇತನದ ರಜ : ಒಂದು ವರ್ಷ ಫರ್ಲೋ ರಜವನ್ನು ಪಡೆಯುವುದಕ್ಕಾಗಿ . . . ಗವರ್ನರನ್ನು ಭೇಟಿ ಮಾಡಿದರು (ಜಗಸಂ. ೨೩). [←ಇಂ. Furlough]

**ಫಲ$_1$,** ಫಳ (ನಾ). ೧. ಹಣ್ಣು : ಫಲಮೂಲಂಗಳನಾಂತು ವಲ್ಕಲದಿ ನೊಪ್ಪಂಬೆತ್ತು . . . ಇರ್ದಪ್ಪವು ಪಾರ್ಶ್ವದೊಳ್ ನಿಯಮಮಂ ತಾಳ್ದಿರ್ದಪೋರ್ ಭೂರುಹಂಗಳ್ (ಆದಿಪು. ೨೬೨); ಚರಿಪಾರಣ್ಯದ ಪಕ್ಷಿಗೊಂದುತರು ಗೊಡ್ಡಾಗರ್ ಫಲಂ ತೀವಿದಾ ಮರಗಳ್ ಪುಟ್ಟವೆ (ಸೋಮೇಶ. ೨೩); ಫಲಮಿಲ್ಲದ ಮರನಂ ಮಕ್ಕಳಿಲ್ಲದೊಂದರಸು ಮೊಪ್ಪದು (ಶಂಹಂ. ೬–೦೪). ೨. ಬೆಳೆ ; ಉತ್ಪತ್ತಿ : "ಫಲಂ—೧ ಬೆಳೆದ ಧಾನ್ಯಾದಿ ಫಲ, ಪ್ರಯೋಜನ ೨" (ಸಿದ್ಧಾಂತ. ೪೨೦); ಫಲ ನೋಡದೆ ಕಟ್ಟಿತು, ಹೊಲ ಹೂಡದೆ ಕಟ್ಟಿತು (ಗಾದೆ). ೩. ಲಾಭ ; ಪ್ರಯೋಜನ : ಅಂಧಕನ ಕೈಯಲ್ಲಿ ದರ್ಪಣವಿರ್ದು ಫಲವೇನು (ಬಸವ. ೧೦೮); ಫಲಂ ಸ್ವರ್ಗಭೋಗಭೂಮಿಸಂಭವಂ (ಕಂಪ್ರಕು. ೩–೩೨ ವ); ಬೇವು ಬೆಲ್ಲದೊಳಿಡಲೇನು ಫಲ ಹಾವಿಗೆ ಹಾಲೆರೆದೇನು ಫಲ (ಪುರಂದ. ೦-೬೦ ಕಲ್ಯಾ). ೪. ಕಾರ್ಯದ ಪರಿಣಾಮ; ಫಲಿತಾಂಶ : ದ್ರವ್ಯಮುಂ ಕ್ಷೇತ್ರಮುಂ ಕಾಲಮುಂ ಭಾವಮುಂ ಪ್ರಕೃತಿಯುಂ ತೀರ್ಥಮುಂ ಫಲಮು ಮೆಂದು ಕಥೆಗೆ ಸಪ್ತಾಂಗಮಕ್ಕುಂ . . . ಫಲಮೆಂಬುದು ತತ್ವಜ್ಞಾನಂ (ಶಾಪುಂಕ. ೬); ಏನನೋದಿ ಏನ ಕೇಳಿ ಏನ ಮಾಡಿಯೂ ಫಲವೇನು ನಿಮ್ಮವರೊಲಿಯದನ್ನಕ್ಕ (ಬಸವ. ೨೪೬); ವೇದಪಾರಾಯಣದ ಫಲ ಗಂಗಾದಿ ತೀರ್ಥಸ್ನಾನಫಲ . . . ವಸ್ತ್ರಾದಿ ಕನ್ಯಾದಾನಫಲವಹುದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (ಕುವ್ಯಾಆ. ೦–೨೦). 'ಫಲಭೋಗ' ಪರಾ. ೫. ಇಚ್ಛೆ; ಬಯಕೆ: 'ಫಲಸಿದ್ಧಿ' ಪರಾ. ೬. ಮುಟ್ಟು; ರಜೋದರ್ಶನ. ೭. ಕತ್ತಿ, ಚಾಕು ಮೊದಲಾದುವುಗಳ ಅಲಗು,— ಧಾರೆ. ೮. ಹಲಗೆ. ೯. ಗುರಾಣಿ; ಢಾಲು: "ಫಲಕಃ, ಫಲಂ, ಚರ್ಮನ್—೩ ಹಲಿಗೆ . . . ಹರಿಗೆ" (ಸಿದ್ಧಾಂತ. ೨೬೩). ೧೦. ಒಂದು ಬಗೆಯ ಚರ್ಮವಾದ್ಯ ; ತಮಟೆ : ಈಶಾನ ಈಶ್ವರಮಡಿಯಾರ್ಗ್ಗೆ ಕೊಟ್ಟ ತಿವಳಿ ೧ ದಟ್ಟ ೩ ಖಣ್ಣಿಕೆ ೩ ಫಲಂ ೬ ಜಯಘಂಟಿ ೧ ಫಲಕಾಳೆ ೩ ಫಲ ೧೫ (ಪ್ರಕಂ. ೦೪೪೬, ೨೮–೦೫; 1032). ೧೧. ನೇಗಿಲಿನ ಮರ. ೧೨. ನೇಗಿಲಿನ ಕುಳ. ೧೩. ಹಣ್ಣಿನ ಒಳಭಾಗ,– ತಿರುಳು. ೧೪. ಸ್ಥಳದ ಅಳತೆ,—ಆಯ : 'ಕ್ಷೇತ್ರಫಲ', 'ಘನಫಲ' ಪರಾ. ೧೫. [ಗಣಿತ]ಗುಣಿಸುವುದರಿಂದ ಅಥವಾ ಭಾಗಿಸುವುದರಿಂದ ಬರುವ ಲಬ್ಧ; ಗುಣಲಬ್ಧ ಅಥವಾ ಭಾಗಲಬ್ಧ. ೧೬. ತ್ರೈರಾಶಿಕ ದಲ್ಲಿ ಎರಡನೆಯ ರಾಶಿ : ಇಚ್ಛೆ ಫಲಂ ಪ್ರಮಾಣಮೆಂಬವು ನಿಚ್ಚಲು ತಾಂ ಮೂಱುರಾಶಿ ಪೆಸರಿವು ನಿರುತಂ ಯಿಚ್ಛೆಯನು ಫಳದಿ ಗುಣಯಿಸಿ ಬೆಚ್ಚರದಿಂ ಪವಣೊಳೊತ್ತೆ ಮಧ್ಯದ ಫಲಮುಂ (ವ್ಯವಹಾ. ಅಸಂಬಂಧ. I, ೦೦). ೧೭. [ನ್ಯಾಯಶಾ] ಪ್ರಮೇಯದ ಹನ್ನೆರಡು ವಿಭಾಗಗಳಲ್ಲಿ ಒಂದು : ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ–ಆತ್ಮ ಶರೀರ ಇಂದ್ರಿಯ ಅರ್ಥ ಬುದ್ಧಿ ಮನಸ್ಸು ಪ್ರವೃತ್ತಿ ದೋಷ ಪ್ರೇತ್ಯಭಾವ ಫಲ ದುಃಖ ಅಪವರ್ಗವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು . . . ವಿಭಾಗ ಮಾಡಿರುವರು . . . ಸುಖದುಃಖಾನುಭವವು ಫಲ (ಹಿಂದಶಾ. ೦೦೩). ೧೮. ಹದಿನಾರು ಪದಾರ್ಥಗಳಲ್ಲಿ ಒಂದು : ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯವಾದ ಜಲ್ಪ ವಿತಂಡಾ ಹೇತ್ವಾಭಾಸ ಫಲ

ಜಾತಿ ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಿರುವವರು (ಹಿಂದರ್ಶ. ೧೦೩). ೧೯. (ಅಲಂ) ಗರ್ಭ; ಬಸಿರು : ಫಲಮನ ಪೇಕ್ಷಿಸದಿರ್ದೊಡೆ ಪಲಾಶತರುಬೀಜಚೂರ್ಣದೊಳ್ ಮಧುಘೃತಮು ಕಲಸಿ . . . ಭಗದೊಳಿಟ್ಟೊಡಾಗದು ಗರ್ಭಂ (ರೂಕೂಂಕ. ೯-೦೬೯). 'ಫಲಪತಿ' ಪರಾ. ಫಳ : ೧. ಫಳದೊಳ್ ದೇವೇಂದ್ರನುದ್ಯಾನದ ವಿವಿಧಫಲಂ ಪೂಗಳೊಳ್ ಕಲ್ಪವೃಕ್ಷಂಗಳ ಪೂಗಳ್ (ಅಂಪು. ೦೬-೨); ಫಳವೆಂದುಂ ಕಟಿವಣ್ಣಳಾಗವಲರೆಂದುಂ ಬೀಯುವು (ಜಗಂ. ೨-೦೬). ೧೬. ಬಲದ ಭಾಗ ಆದಿಯಾಗಿ ಯಿಚ್ಛೆಯೆಂಬುದೆ ಪ್ರಥಮರಾಶಿ ಫಳ ಮೆಂಬುದೆ ರಾಶಿ ಪ್ರಮಾಣಮೆಂಬುದೆ ಕಡೆಯ ರಾಶಿ (ವ್ಯವಹಾ. ಅಸುಹಂಧ I, ೧೧). ೨೦. ಕಪ್ಪುಹಲಗೆ : ಶಿಕ್ಷಕನು ಫಳದ ಮೇಲೆ ಸಣ್ಣ ಬಿಂದು ರೇಖೆ ತೋರಿಸುತ್ತಾನೆ (ಶಾಶಸಂ. ೨೨೮).

ಫಲ ನಿಲ್ಲು = ಬಸಿರಾಗು; ಗರ್ಭ ಕಟ್ಟು: (*). ಫಲವಾಗು = ೧. ಹಣ್ಣು ಬಿಡು: ಬಾಳೆಗೆ ಫಲವಾಯಿತ್ತ ಕಡೆ...ಮಾಡುವ ಭಕ್ತಂಗೆ ಮನ ಹೀನವಾದರೆ ಅದೇ ಕಡೆ (ಬಸವ. ೬೬೯); ನಿಮ್ಮಿಷ್ಟಸಿದ್ಧಿಯು ಬೆಳಸು ಫಲವಾಯ್ತು (ಉತ್ಕಾದ್ಬೋ. ೬-೦೯). ೨. ಪ್ರಯೋಜನವಾಗು : ಅಳಲಿ ಮನೆಯಲಿ ಕಾಳಗಗೆಡದಡೆ ಫಲವಹುದೆ (ಉತ್ಕಾದ್ಬೋ. ೬-೩೨). ೩. ಸಿದ್ಧಿಸು; ನೆರವೇರು; ಕೈಗೂಡು : ಕಂದನ ರಣಕೆ ನೂಕಿದರಿ ಬಗೆಯೊಲವು ಫಲವಾಯ್ತಲಾ (ಉತ್ಕಾದ್ಬೋ. ೬-೧೫). ೪. ಬೆಳೆಯಿಂದ ಕೂಡಿರು; ಫಸಲು ಸಹಿತವಾಗಿರು: ಫಲವಾದ ವಾಸ್ಗ್ಯಯಾಬುವಣಂ (ಶೌಭಾ. IX-೧. ೬೬-೫೬: ೨೨೨). ೫. (ಅಲಂ) ಗರ್ಭ ನಿಲ್ಲು; ಬಸಿರಾಗು : ಫಲವಾದೊಡಲಿಗೆ ತವ್ಮೊಳ್ಳಲೆಗಳನುಟ್ ತೂಗುತಿರ್ಪುವೆಂದೆನೆ ಮಂದಾನಿಲನಿಂ ತೂಗಾಡುತ್ತುಂ ಸಲೆ ನಿಲೆ ಕಳವೆಗಳ ಗರ್ದೆಗಳ್ ಓರಿದೆಸಗುಂ (ತ್ರಿಪು. ೨-೩೯). [ಸಂ.]

ಫಲ₂ (ನಾ). ಒಂದು ಬಗೆಯ ನಾಣ್ಯ : ಹೊನ್ನಿನ ನಾಲ್ಕನೇ ಒಂದು ಪಾಲಿನಷ್ಟು ಒಂದು ಚಿನ್ನದ ನಾಣ್ಯವಿರುತ್ತಿತ್ತು. ಅದಕ್ಕೆ ಹಣವೆಂತಲೂ ಫಲವೆಂತಲೂ ಅನ್ನುವರು (ಕರ್ನಾಗ. ೨೬೦). [← ಮರಾ. ಫಲವ್]

ಫಲಂಗುಡು, ಫಲಕೊಡು (ಕ್ರಿ). ೧. ಫಸಲು ಕೊಡು; ಬೆಳೆಯನ್ನು ನೀಡು : ಸಮಯದೊಳಿ ಬಿತ್ತಿ ಬೀಜವನಮಿತಫಲಂಗುಡುವ ಪೊಲನನುಳಿ ಯುವ ತೆರದಿಂ . . . ಧರ್ಮಪತ್ನಿಯನುಳಿದಂ (ಶಾಕುಂತ. ೯೯-೦೫೫). ಫಲ ಕೊಡು : ೨. ಫಲ ನೀಡು ; ಹಣ್ಣು ಬಿಡು : ಒಂದೆರಡು ಮೂಲ್ಕಾ ಲಿಂಬೆಗಿಡಗಳನ್ನು ನೆಟ್ಟರೆ, ಅದು ಯಾವಾಗಲೂ ಫಲಕೊಡುತ್ತಿರುವುದು (ಅಡುಗೆ. ೦೩೦). ೩. ಪ್ರಯೋಜನ ಕೊಡು; ಪರಿಣಾಮವುಂಟು ಮಾಡು: ಅದೃಷ್ಟವು ಫಲಕೊಡಬೇಕಾದರೆ ದೃಷ್ಟವಾಗಿ ಕರ್ಮ ಮಾಡ ಬೇಕು (ಕಥಾ. ೧೧). [ಫಲ₁ + ಕುಡು₁ (< ಕೊಡು₁)]

ಫಲಂದೋಱು, ಫಲದೋಱು (ಕ್ರಿ). ೧. ಹಣ್ಣು ಬಿಡು : ಮಾವೆಲ್ಲಿ ಫಲಂದೋಱುವುದೀ ಕಾಲದೊಳು (ಕಥಾಸ. ೩-೩೦). ಫಲದೋಱು: ೨. ಪರಿಣಾಮವನ್ನು ಬೀರು : ಮದನಮೋಹಿನಿಗಾಗ ಚಿಂತೆ ಮೊಳೆತು . . . ಕಾತುರ ಪರ್ಚಿ ವಿರಹಾಗ್ನಿ ಸಂತತ ಫಲದೋಱಿದುದು (ಕಂಸವ. ೯-೦೬). [ಫಲ₁ + ತೋಱು]

ಫಲಕ, ಫಳಕ (ನಾ). ೧. ಲೋಹ, ಮರ, ಗಾಜು ಮುಂತಾದುವುಗಳ ತೆಳುವಾದ ಹಾಳೆ : "ಹಲಗೆ ಫಲಕಮಕ್ಕು" (ಶಬ್ದಮ. ೬೨-೨೧); ಒಂದು ಉಕ್ಕಿನ ಫಲಕದ (Plate) ಮೇಲೆ... ಒತ್ತಿದ ಇನ್ನೊಂದು ಫಲಕವಿದೆ (ಹಿಂದ್ಯಾ. ೨೦೪); ಪೆಟ್ಟಿಗೆಯಲ್ಲಿ . . . ಛಾಯಗ್ರಾಹಿ ಫಲಕವನ್ನಿಡಲಿಕ್ಕೆ ತಕ್ಕ ವ್ಯವಸ್ಥೆಯಿದೆ (ಚಿತ್ರಾ. ೮). ೨. ಬರೆಯಲು ಅಥವಾ ಕಂಡರಿಸಲು ಸಿದ್ಧಪಡಿಸಿದ ಸಪಾಟಾದ ಮೇಲ್ಭಾಗ : ಅದರ ಸುತ್ತಲೂ ಇರುವ ಫಲಕಗಳಲ್ಲಿ ಪಾರ್ವತಿ ... ಗಾಯಕರು ಮುಂತಾದವುಗಳು ಇವೆ (ವ್ಯವಾಸ್ತು- ೧೧೧). ೩. ಪುಟ; ಪಾನು : ಪತಿ ಪುತ್ರ ಪಿತನೆಂಬ ಮಿತ್ರ ಬಾಂಧವ ನೆಂಬ ಭವಚಿತ್ರ ಫಲಕಗಳ ತಿರುವುತ್ತ ನಿಂತು (ಸುಕಿರೇ. ೩೯-೬). ೪. ಹರಿಗೆ; ಗುರಾಣಿ : "ಫಲಕಃ, ಫಲಂ, ಚರ್ಮನ್—೩ ಹಲಿಗೆ . . . ಹರಿಗೆ" (ನಿಘಂಟು. ೨೬೫); ಖಡ್ಗ ಫಲಕ ಚಾಪಬಾಣಂಗಳಾಂತ ವಾಮದಕ್ಷಿಣಕರ ಚತುಷ್ಟಯದಿಂ . . . ಪೃಥಿವ್ಯಾದಿ ಸೂಕ್ಷ್ಮಭೂತವರ್ಗದಲ್ಲಿರ್ಪಂ (ಶಿವಸ. ೨೮೩); ರಾವುತರ ಅಂಗರಕ್ಷಣೆಗೆ ಹಲವು ಪದರಗಳ ಚರ್ಮದ ಕವಚ; ಪೇಲ್ ವೈಗೆ ಕಬ್ಬಿಣದ ಫಲಕಗಳು (ಅಳಿಕೆ. ೦೨೩). ೫. ಹಣ್ಣು : ನವಕಳಿ ಕಾಂಕುರಪ್ರಕರಮಂ . . . ನವಫಲಕಂಗಳಂ ಮಿಳಿರ್ಪ ಕೊಂಬುಗಳೆಂಬ ಕರಂಗಳಿಂ ಮಧೂತ್ಸವದೋಳನೆಮ್ಮ ತೇದೊಡವೆಯೆಂದಿದಿರೊಳ್ ಪಿಡಿದಂಗಜಂಗೆ ಲೆಕ್ಕವನೆಗೆದೋಱುವಂತೆಸದು ತೋಱಿದುವಂದಿನ ಬಂದ ಮಾವುಗಳ್ (ಅಜಿತ. ೬-೨೯). ಫಳಕ : ೨. ಆ ಘನಕಾಂತಗವರಿಕಾಂತಾಳಿಕ ಫಳಕತಿಳಕಹರನೆನಿಪರಿಗಾಗಂ ತನಯನಧಿಕತೇಜೋವಂತಂ (ಕಂಕಕಾ. ೯-೦೬). ೩. ಒಂದು ಫಳಕ ಇದ್ದಂತೆ ಇತಿಹಾಸ. ಒಂದು ರಮ್ಯಕಾವ್ಯ ವನ್ನೂ ಬರೆಯಬಹುದು, ಅಥವಾ ಕಿರಾಣಿಸಾಮಾನದ ಲೆಖ್ಖವನ್ನೂ ಬರೆಯಬಹುದು. (ಅಕಹ. ೦೨೪). ೪. "ಖೇಟಕಂ, ಫಳಕಂ, ಚರ್ಮ, ಅವರಣಂ—ಈ ೪ ಹರಿಗೆ" (ಹಲಾಯು. ೬೬-೩೦೬); ಕೊಳ್ಳಿಲೆ ಮಗನೆ ಅಸಿ ಫಳಕವಿದೆ (ಅಣ್ಣರ.ದೇ. ೦೦೬-೨೩). [ಸಂ.]

ಫಲಕಪಾಣಿ (ನಾ). ಗುರಾಣಿಯನ್ನು ಹಿಡಿದಿರುವವನು : "ಚರ್ಮಿನ್, ಫಲಕಪಾಣಿ—ಈ ೨ ಕಡಿತಲೆಗಾಱಂ" (ಹಲಾಯು. ೦೩೪). [ಸಂ. ಫಲಕಪಾಣಿನ್]

ಫಲಕಾರಿ (ನಾ.) ಪ್ರಯೋಜನವುಳ್ಳುದು; ಫಲಪ್ರದವಾದುದು : ನಮ್ಮ ಅರ್ಜಿಯು ಫಲಕಾರಿಯಾಗದೆ ಇರಲಾರದು (ಶಾವೇಂ. ೧೧೧). [ಸಂ. ಫಲಕಾರಿನ್]

ಫಲಕಾಳೆ (ನಾ.) ಒಂದು ಬಗೆಯ ಕಹಳೆ (?) : ಈಶಾನ ಈಶ್ವರ ಮುಡಿಯಾರ್ಗ್ಗೆ ಕೊಟ್ಟ ತಿವಳಿ ೧ ದಟ್ಟ ೩ ಖಣ್ಣಿಕೆ ೩ ಫಲಂ ೬ ಜಯಘಂಟೆ ೧ ಫಲಕಾಳೆ ೩ ಫಲ ೧೫ (ಪ್ರುಅಂ. ೦೯೯೬, ೨೮-೦೫: 1032). [ಫಲ₁ + ಕಾಳೆ (< ಕಹಳೆ)]

ಫಲಕೊಡು 'ಫಲಂಗುಡು' ನೋ.

ಫಲಚಕ್ರ (ನಾ). [ಸಂಗೀತ] ನೂರೆಂಟು ತಾಳಗಳಲ್ಲಿ ಒಂದು : ಚಂಚತ್ಪುಟ...ಫಲಚಕ್ರ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ಶಿವಸ. ೨೫೮). [ಸಂ.]

ಫಲಜೀವಿ (ನಾ). ಹಣ್ಣು ಮೊದಲಾದುವನ್ನು ಒದಗಿಸುವ ಜೀವ; ಸಸ್ಯ : ಎಂತು ತಪಸಿಗಳಂತೆ ನಿಂತ ಫಲಜೀವಿಗಳ ಜಂತುವಲ್ಲೆಂದು ಜನ ತಿಂದು ಮತ್ತದನು ಸಂತೆಯೊಳಗಿಡುವ (ಸರ್ವಜ್ಞ. ೦೦೨೬). [ಸಂ.ಫಲಜೀವಿನ್]

ಫಲಜ್ಞಾನ (ನಾ). ತತ್ತ್ವದ ತಿಳಿವು; ಪರತತ್ತ್ವದ ಜ್ಞಾನ : ಜ್ಞಾನವೆಂಬ ಪ್ರಮಾಣಕ್ಕೂ ಆ ಪ್ರಮಾಣದಿಂದ ಬ್ರಹ್ಮವನ್ನು ಅರಿತುಕೊಳ್ಳುವುದೆಂಬ ಫಲಜ್ಞಾನಕ್ಕೂ ಇರುವ ತಾರತಮ್ಯವನ್ನು ಇಲ್ಲಿ ತಿಳಿಯಿಸಿದೆ (ಶ್ರೀಶ್ರೀ. ೦೪ ಅಂಟಿ). [ಸಂ.]

ಫಲಜ್ಯೋತಿಷ (ನಾ). [ಜ್ಯೋತಿ]ಗಣಿತಜ್ಯೋತಿಷ, ಪ್ರಶ್ನಜ್ಯೋತಿಷ, ಫಲಜ್ಯೋತಿಷ ಎಂಬ ಜ್ಯೋತಿಷದ ಮೂರು ಅಂಗಗಳಲ್ಲಿ ಒಂದು: ಜಾತಕವನ್ನು ನೋಡಿ ಮುಂದಿನ ಆಗುಹೋಗು ಮೊದಲಾದ ಫಲವನ್ನು ಹೇಳುವ ಜ್ಯೋತಿಷದ ಭಾಗ : ಫಲಜ್ಯೋತಿಷ (astrology)ದಲ್ಲಿ ಬಹಳ ನಂಬಿಕೆ ಮತ್ತು ಜ್ಞಾನ, ತತ್ತ್ವಶಾಸ್ತ್ರದಲ್ಲೂ ಭೌತಶಾಸ್ತ್ರದಲ್ಲೂ ಬಹಳ ಆಸಕ್ತಿ (ಗಡಿಕ. ೯೯). [ಸಂ.]

ಫಲತ್ರಿಕ (ನಾ). ಅಳಲೆಕಾಯಿ, ತಾರೆಕಾಯಿ ಮತ್ತು ನೆಲ್ಲಿಕಾಯಿ; ತ್ರಿಫಲೆ : "ತ್ರಿಫಲಾ, ಫಲತ್ರಿಕಂ – ಅಳಲೇಕಾಯಿ, ತಾರೇಕಾಯಿ, ನೆಲ್ಲಿಕಾಯಿಗಳೆಂಬ ತ್ರಿಫಲಗಳಿಗೆ ಹೆಸರು" (ನಿಘಂಟು. ೩೦೭). [ಸಂ.]

**ಫಲದ** (ಗು). ೧. ಫಲವನ್ನು ಕೊಡುವ. ೨. ಪ್ರಯೋಜನಕಾರಿಯಾದ; ಲಾಭದಾಯಕವಾದ. (ನಾ). ೩. ಫಲವನ್ನು ಕೊಡುವಂತಹುದು; ಫಲದಾಯಿಯಾದುದು : ನಿಲೆ ವೆಣತಂಶದೊಳುದಯ ಶಶಾಂಕದಲ್ಲಿ ಬಲ್ಲಿತೆ ಫಲದಂ (ಜಾಶತ. ೨೨-೦೦); ಉದಗ್ರಮನೋಜ್ಞಫಲದಂ . . . ನೀತಿಸುರವಹೀರುಹಂ (ರಾಶತ. ೦೩-೦೬). ೪. ಮರ; ವೃಕ್ಷ. [ಸಂ.]

**ಫಲದಾನ, ಫಳದಾನ** (ನಾ). ೧. ಹಣ್ಣುಗಳನ್ನು ನೀಡುವುದು,—ಒದಗಿಸುವುದು : ಕುಸುಮಫಲಪರಿಣತಫಲದಾನಂಗಳಪ್ಪ ವನಸ್ಪತಿ ವೃಕ್ಷೌಷಧಿಗುಲ್ಮಂಗಳಪ್ಪನೋಕಹಜಾತಿಗಳಿಂ (ಶಾಂತಿಪು. ೦೨-೦೯ ವ). ೨. ದಾನವಾಗಿ ಅಥವಾ ಪ್ರಸಾದರೂಪವಾಗಿ ಹಣ್ಣು ಇಲ್ಲವೆ ತೆಂಗಿನ ಕಾಯಿ ಕೊಡುವುದು. **ಫಳದಾನ** : ೧. ಫಳದಾನಂಗಳನಿಪ್ಪತ್ತುಸ್ಸಿಯ ನನಾಥ ಪ್ರೀತಿಯಂ . . . ವಿನಯದಿಂ ಮಾಡುತ್ತಿರಲ್ ನಾಡೆ ಸಂಗಳಿಕಂ ಕಾಮಿತಸಿದ್ಧಿ (ಕುಸುಮಾ. ೩-೬೮). [ಸಂ.]

**ಫಲದಾಯಕ** (ನಾ). ೧. ಫಲವನ್ನು ನೀಡುವಂತಹುದು : ಮಾಡು ವನ್ನಗ್ಕ ಫಲದಾಯಕ (ಬಸವ. ೮೬೩). ೨. ಕರ್ಮಕ್ಕೆ ಸರಿಯಾದ ಫಲವನ್ನು ನೀಡುವವನು; ದೇವರು. [ಸಂ.]

**ಫಲದಾಯಿ** (ನಾ). ಪರಿಣಾಮಕಾರಿಯಾದುದು; ಸಫಲವಾದುದು : ಈ ಪೂರ್ವಸಿದ್ಧತೆ . . . ಪ್ರೇಕ್ಷಕರ ಕಡೆಯಿಂದ ಆದಾಗ ಮಾತ್ರ ಆ ಪ್ರದರ್ಶನ ಸಂಪೂರ್ಣ ಫಲದಾಯಿ (ರಾಮುರಾ. ೮೦). [ಸಂ. ಫಲದಾಯಿನ್]

**ಫಲದೋಟು** 'ಫಲಂದೋಟು' ನೋ.

**ಫಲಪೂಜೆ** (ನಾ). ೧. ಶುಭಕಾರ್ಯಗಳಲ್ಲಿ ಭಾಗವಹಿಸಿದ ಎಲ್ಲ ಜನರಿಗೆ ಫಲದಾನ ಕೊಡುವುದಕ್ಕೆ ಮುಂಚಿತವಾಗಿ ಬಾಳೆಹಣ್ಣು, ತೆಂಗಿನಕಾಯಿ ಮುಂತಾದುವುಗಳಿಗೆ ಮಾಡುವ ಪೂಜೆ. ೨. ಹೊಸ ಬೆಳೆಯನ್ನು ಒಕ್ಕುವಾಗ (ಕಣದಲ್ಲಿ) ಮಾಡುವ ಧಾನ್ಯದ ಪೂಜೆ; ರಾಶಿಪೂಜೆ. ೩. ಹೊಸಹಣ್ಣುಗಳನ್ನು ಕಿತ್ತು ತಂದಾಗ ಅವುಗಳಿಗೆ ಮಾಡುವ ಪೂಜೆ : (೬). [ಸಂ. ಫಲಪೂಜಾ]

**ಫಲಪೂರ** (ನಾ). ಮಾದಳದ ಮರ ಮತ್ತು ಅದರ ಹಣ್ಣು : ಫಲಪೂರಂ ಜನ್ಮಸಾಫಲ್ಯಸಂಸ್ಥಿತಿಯಂ ಮಾಡಿದುದೆಂದು ನೋಡಿದಳಲಂಬಿಂ (ಕೃಷ್ಣಕೃ. ೩-೦೦೩). [ಸಂ.]

**ಫಲಪೂರಕ** (ನಾ). =ಫಲಪೂರ : "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ— ೪ ಮಾದೀಗಿಡ, ಮಾದಾಳದ ಗಿಡ" (ಶಿವ್ಯಾಂತಿ. ೦೩೦). [ಸಂ.]

**ಫಲಪ್ರದ** (ನಾ). = ಫಲದಾಯಿ : ಹಾಕತಕ್ಕ ತೆರಿಗೆಯು ಚೆನ್ನಾಗಿ ಫಲಪ್ರದವಾಗಿ ಹಣವನ್ನು ಒದಗಿಸುವಂಥದುದಾಗಿರಬೇಕು (ಕಾಕರ. ೩೫೯); ಅವನ ಪ್ರಯತ್ನ ಫಲಪ್ರದವಾಗಲಿಲ್ಲ (ರ್ರ್ರಶಿಶಿ. ೩-೬). [ಸಂ.]

**ಫಲಪ್ರಾಪ್ತಿ** (ನಾ). ಫಲವು ದೊರಕುವಿಕೆ : ಮಾಟಕೂಟ ಫಲಪ್ರಾಪ್ತಿ ಎಂಬ ಮಾತ ಕೇಳಲಾಗದು (ಬಸವ. ೫೦೯); ಸುಖದ ಫಲಪ್ರಾಪ್ತಿಯನಾಗಿವ ಕಲ್ಪವೃಕ್ಷವಲ್ಲದೆ ಧರ್ಮಂ (ಕೃಷ್ಣಕೃ. ೦೩-೩೩). [ಸಂ.]

**ಫಲಭರ, ಫಳಭರ** (ನಾ). ೧. ಹಣ್ಣುಗಳ ಭಾರ : ಧರ್ಮಾಮೃತ ವರ್ಷದಿಂ . . . ಭವ್ಯಸಸ್ಯಂಗಳನನೇಕಬ್ರತಫಲಭರವಿನತಂಗಳ್ ಮಾಡಿ (ಆದಿಪು. ೦೬-೪೦ ವ); ಫಲಭರದಿಂದೆಜಗುವ ಚೂತಲತಿಕೆಯಂತಿರೆ . . . ಅ ಲಲನೆ ಭೂಪತಿಗೆ ಪೊಡಮಟ್ಟಳ್ (ಕುಸುಮಾ. ೫-೪೮). ೨. ಹಣ್ಣುಗಳ ಭಾರವನ್ನು ಹೊಂದಿದುದು ; ವಿಪುಲವಾದ ಫಲವುಳ್ಳುದು : ಧರಣ ಬಿತ್ತದೆ ಬೆಳೆಯಬೇಹುದು ತರುಸಸಿಗಳನವರತ ಫಲಭಾರವಾಗಬೇಕು (ಕೌಶಲಾ. ೪೪-೩೩). **ಫಳಭರ** : ೧. ಸೆಳೆಗೊಂಬಲ್ಲಾಡುವವೊಲ್ ಫಳಭರದಿಂ . . . ಸೆಳೆದಲ್ಲಾಡಿಯುವಾಕೆಯು ಸೆಳೆನಡು ನೋಡಿದರ ಮನಮನಲ್ಲಾಡಿ ಸುಗುಂ (ಮಲ್ಲಿಪು. ೩-೩೫); ಫಳಭರನಮ್ರಕಮ್ರಲತೆಯಂ ಲತೆ ತಂಬೆಲರಿಂದ ಮಪ್ಪಿದಂತೆಳಸಿದ ಸೋದರಪ್ರಣಯದಿಂ ಲಲಿತಾಂಗಿಯರಪ್ಪಿ (ಆದಿಪು. ೨-೪೯). [ಸಂ.]

**ಫಲಭರಿತ** (ಗು). ೧. ಹಣ್ಣುಗಳಿಂದ ತುಂಬಿದ. (ನಾ). ೨. ಫಸಲಿನಿಂದ ತುಂಬಿದುದು : ಫಲಭರಿತಂಗಳನೀ ಕೆಯ್ಯಾಲಂಗಳಂ ಕಾವರಿಲ್ಲ (ಕಂಠಾಮಾ. ೭-೩೨). [ಸಂ.]

**ಫಲಭಾಗ** (ನಾ). [ಜ್ಯೋತಿ] ಫಲಜ್ಯೋತಿಷದ ವಿಭಾಗ : ಬೇಬಿಲೋನಿಯನರು ಜ್ಯೋತಿಷ್ಯದ ಫಲಭಾಗವನ್ನು ಬೆಳೆಸಿದರು (ಶಿಶ್ರಾ ವಾ ೬೪). [ಸಂ.]

**ಫಲಭಾಗಿ** (ನಾ). ಫಲವನ್ನು ಪಡೆಯುವವನು,—ಅನುಭವಿಸುವವನು: ಸುರೇಜ್ಯನಿರೆ . . . ಕುಂಭದೊಳ್ ಕೂಡೆ ತತ್ಸಮಾನಫಲಭಾಗಿ (ಜಾಶತ. ೦೭-೨೮); ಪ್ರಜೆಗಳು ಮಾಡುವ ಎಲ್ಲಾ ಒಳ್ಳೆಯ ಮತ್ತು ಕೆಟ್ಟ ಕೆಲಸಗಳಿಗೂ ರಾಜರು ಫಲಭಾಗಿಗಳಾಗಿರುತ್ತಾರೆ (ಶಕಥಾ. ೩೬೮). [ಸಂ. ಫಲಭಾಗಿನ್]

**ಫಲಭಾರ, ಫಳಭಾರ** (ನಾ). = ಫಲಭರ ೧ : ಫಲಭಾರಾಕ್ರಾಂತ ಸಾರ್ವರ್ತುಕನಿಕಟವನಂ . . . ಕಣ್ಗಂ ಮನಕ್ಕಂ ಪಡೆದುದು ಪದವಂ (ಕಂಠಾಮಾ. ೭-೩೦); ಫಲಭಾರಾನತಭೂರುಹಾವಳಿಗಳಿಂ ನೀರೇಜಷಂಡಂಗಳಿಂ ಬೆಳೆಗೆಯ್ಯೆದೆಸೆರುಂ ಕಳಿಂಗವಿಷಯಂ (ನೇಮಿಪು. ೩-೬೯). **ಫಳಭಾರ** : ಫಳಭಾರಾನಮ್ರಕಮ್ರಾವನಿಜಮಂ . . . ಅನುಪಮಾನರದದಿಂದೆಯ್ದಿದರ್ . . . ಪಾಂಡವರ್ಕಳ್ (ನೇಮಿಪು. ೯-೦೦೯); ಫಳಭಾರಾನತಮಾಯ್ತು ಮಾವು (ಶಾಂತೀಶ್ವ. ೦೫-೦೦೦). [ಸಂ.]

**ಫಲಭೋಗ** (ನಾ). ಪರಿಣಾಮವನ್ನು ಅನುಭವಿಸುವಿಕೆ: ಏವನೇವನೆಂದೊಡೆ ಮಾಣದು ಕಾಯದ ಕರ್ಮದ ಫಲಭೋಗವು (ಬಸವ. ೦೯); ನೀನು ನನಗೆ ಒಂದು ಕರ್ಮವನ್ನು ಮಾಡಲು ಹೇಳುವೆ ಮತ್ತು ಅದರ ಫಲಭೋಗವನ್ನು ಮಾತ್ರ ತಪ್ಪಿಸಿಕೊಳ್ಳುವೆ (ಕರಕ. ೦೩೯). [ಸಂ.]

**ಫಲಮಂಜರಿ, ಫಳಮಂಜರಿ** (ನಾ). ೧. ಹಣ್ಣುಗಳ ಗೊಂಚಲು. ೨. [ಸಂಗೀತ] ಒಂದು ರಾಗದ ಹೆಸರು : ಮಧು ಮಾಧವಿ . . . ಫಲ[.ಪಾಠಾಂ.ಪಳ]ಮಂಜರಿ ಶಯಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂ ಪುಟ್ಟಿದವು (ಬಶೀಕ. ೨೩೯); ಲಲಿತ ಸಾಳಂಗ ಸಾವೇರಿ ಗುಜ್ಜರಿ ಗೌಳ ಫಲ [ಪಾಠಾಂ. ಪಳ] ಮಂಜರಿಗಳೆಂಬ ರಾಗಂಗಳಿಂ ಬಳಸಿ ಪಾಡಿಸಿದಂ . . . ಕುಶಲವರನು (ಕೃಮಿಕಾ. ೨೦-೩೬). **ಫಳಮಂಜರಿ:** ೧. ಅದು ಮುಕ್ತಿಪುರಕೆ ಗೋಪುರಮದು ನಾಕಾನೋಕಹಕ್ಕೆ ಫಳಮಂಜರಿ (ಚಂದ್ರಪ್ರ. ೦೦-೨೯). [ಸಂ. ಫಲಮಂಜರೀ]

**ಫಲಮರಿ** (ನಾ). (ಬಲಿ ಕೊಡುವುದಕ್ಕೆ ತಂದ) ಗಬ್ಬದ ಕುರಿ : ಪಕ್ಕದಲ್ಲೇ ಹಿಡಿದುಕೊಂಡಿರುವ ಫಲಮರಿಗಳನ್ನು ಒಂದೊಂದಾಗಿ ಅವನ ಕೈಗೆ ಕೊಡುತ್ತಾರೆ (ಚಮ್ಮಕು. ೬೪). [ಫಲ್ $_1$ +ಮರಿ $_2$ (<ಮಱಿ)]

**ಫಲವಂತ** (ನಾ). ೧. ಫಲವತ್ತಾದುದು ; ಫಲಕೊಡುವಂತಹುದು. ೨. [ಜೈನ]ಕರ್ಮಗಳನ್ನು ನಾಶಪಡಿಸುವ ಎಂಟುಧರ್ಮಗಳಲ್ಲಿ ಒಂದು : ಫಲ[ಪಾಠಾಂ.ಳ]ವಂತಮೆಂಬುದು ಜಾತಿಜರಾರೋಗ ಮರಣವಿಚ್ಛೇದದಿಂದಂ ಶಿವಮಜರಮಕ್ಷಯಮವ್ಯಾಬಾಧಮಪ್ಪ ಪರಮ ನಿರ್ವಾಣಮಂ ಪುಟ್ಟಿಸುವ ಧರ್ಮಂ (ಕಾವುಂಶು. ೭). [ಸಂ. ಫಲವತ್]

**ಫಲವತಿ, ಫಳವತಿ** (ನಾ). ೧. ಬಸುರಿ; ಗರ್ಭಿಣಿ : ಪಲಕಾಲಂ ಪುಷ್ಪವತಿಯೆನಾದಪೆನೆಂದುಂ ಫಲವತಿಯಾದಪೆನಿಲ್ಲೆಂದು ಲತಾಲಲಿತಾಂಗಿ ಬಾಡಿ ಪಾಡಬಿದೆಂಗುಂ (ಸುಕುಮಾ. ೯-೯೮); ನೀ ಪುಷ್ಪವತಿಯಾಗಲ್ಲಿ ಫಲವತಿಯಾಗು ನಡೆ ಕುರುರಾಯಭವನದಲಿ (ಕುವ್ಯಾಸ. ೦೪-೬೩). **ಫಳವತಿ:** ೨. ಹಣ್ಣುಗಳನ್ನು ಬಿಡುವ ಮರ ಅಥವಾ ಬಳ್ಳಿ : ಫಳವತಿಯಪ್ಪ ಕಲ್ಪಲತೆ ಪುಷ್ಪವಿಲಾಸಮನಪ್ಪುಕೆಯ್ವವೊಲ್ (ಮಲ್ಲಿಪು. ೪-೩೨). [ಸಂ. ಫಲವತೀ]

**ಫಲವತ್ತು** (ನಾ). ೧. ಸಾರವತ್ತಾದುದು; ಒಳ್ಳೆಯ ಫಸಲು ಕೊಡುವಂತಹುದು; ಫಲಪ್ರದವಾದುದು : ಫಲವತ್ತಿಲ್ಲದ ರಾಜ್ಯದಲ್ಲಿ ಪ್ರಭು ದಂಡಕ್ಕಾಸೆಗೆಯ್ವಲ್ಲಿ ಬಲ್ಲರ್ ನಿಲೆ ಸಲ್ಲದೈ (ಸೋಮೇಶ. ೧೫); ನೆಲವೋ ಫಲವತ್ತಾದ ಕಪ್ಪುಭೂಮಿ (ಕಳಹು. ೯); ತರಕಾರಿಗಳನ್ನು ಬೆಳೆಯಲು ಫಲವತ್ತಾದ ಜಿಗುಟುಮಣ್ಣು ಒಳ್ಳೆಯದು (ಅಡುಗೆ. ೦೨೬). ೨. ಹಣ್ಣುಗಳಿಂದ ತುಂಬಿದುದು; ಫಲಪೂರ್ಣವಾದುದು. [ಸಂ. ಫಲವತ್]

**ಫಲವಳಿಗೆ**, ಫಳವಳಿಗೆ (ನಾ). ಮಂಟಪಕ್ಕೆ ಕಟ್ಟುವ ಎಲೆ, ವಸ್ತ್ರ, ಹಣ್ಣು, ಆಹಾರಪದಾರ್ಥ ಮೊದಲಾದಂವು : ಮತ್ತೆ ಮಖಮಂಟಪಕೆ ಕಟ್ಟಿ ಫಲವಳಿಗೆಯಂ ಸುತ್ತಲೊಪ್ಪಿತು ಶಾಲೆ (ಕುರಂಗ. ೨೦-೯). **ಫಳವಳಿಗೆ:** ಫ[ಶಾಕಾಂ.ಪ]ಳವಳಿಗೆ ಮೇಲ್ಕಟ್ಟು ಹೊಳೆವ ಭಸಿತಂಗಳೊಳು ... ವಿಭವದಿಂ ಶ್ರೀಗುರು ಪ್ರಭು ಬಂದ ಪುಣ್ಯದಿಂ (ದೀಕ್ಷಾಬೋ. ೩೫-೦೦೩೬); ನವಗ್ರಹಹೋಮಕ್ಕೆ ಸಲೆಗೆವೊಂದು ಫಳವಳಿಗೆಯ ಚಕ್ಕುಲಿಗೆ ಕೊಳಗ ಹನ್ನೊಂದು (ಎಕ. III, ತಿರುಮ. ೯೬-೩೩; 1270); ಮಂಟಪದೊಳು ಸಿಂಹ ಪೀಠಮನಿಕ್ಕಿ . . . ಉತ್ತಮವಾದ ಸಪುರಂಗಳಾ ವಿಸ್ತರದಿನಳವಡಿಸಿ ಫಳವಳಿಗೆಯಂ ಕಟ್ಟಿ (ಅಂಗಪು. ೦೩-೯೬). 'ಪಳವಳಿಗೆ' ಪರಾ. [ಫಲ$_1$+?]

**ಫಲಶೋಭನ** (ನಾ). ನಿಷೇಕ; ಪ್ರಸ್ತ : ತಿಂಗಳೊಪ್ಪತ್ತಿನಲ್ಲಿ ಫಲಶೋಭನ ಕಾರ್ಯವನ್ನು ಮುಗಿಸಿಬಿಡಬೇಕೆನ್ನುತ್ತೇನೆ (ಸತುಶೀ. ೯೬೩). [ಸಂ.]

**ಫಲಶ್ರುತಿ** (ನಾ). ೧. (ಪುರಾಣ ಮೊದಲಾದುವುಗಳ ಕೊನೆಯಲ್ಲಿ ಸತ್ಕಥಾಶ್ರವಣದ) ಫಲವನ್ನು ಹೇಳುವುದು : ಆರನೆಯ ಕಾಂಡದ ಕೊನೆಯಲ್ಲಿ . . . ಫಲಶ್ರುತಿಯೂ ಬಂದಿರುವುದರಿಂದ ಅಲ್ಲಿಗೇ ಕಾವ್ಯವು ಮುಗಿದಿರಬೇಕು (ಕಾರವ. ೬೫) ; ಅಧ್ಯಾತ್ಮಿಕ ಫಲಶ್ರುತಿಯನ್ನು ಕವಿ ಮತ್ತೆ ಮತ್ತೆ ಹೇಳಿದ್ದಾನೆ (ಕುಶೀ. ೦೩೩). ೨. ಪರಿಣಾಮ ; ಲಾಭ ; ಪ್ರಯೋಜನ : ಫಲಶ್ರುತಿ—ಇದು ಪೆಂಪಿಂ ನಡೆನೋಡುತಿರ್ಪ ಸುಜನರ್ಗಿಷ್ಟಾರ್ಥಸಂಸಿದ್ಧಿಯಂ . . . ಮಾಳ್ಕುಂ (ರಾಸ್ತಕಂ. ೦-೨೨) ; ಅದರ ಫಲಶ್ರುತಿಯೇ-ಅವರ ಈ ಹೊಸನೋಟಕ್ಕೆ ಕಾರಣವಾಯಿತು (ಓಂಬದ. ೨೬೯). [ಸಂ.]

**ಫಲಸಂಬಂಧ** (ನಾ). ಯಾಗಾದಿ ಕರ್ಮಗಳಿಗೂ ಅವುಗಳನ್ನು ಆಚರಿಸುವ ವ್ಯಕ್ತಿಗೂ ಇರತಕ್ಕ ಮೂರು ಬಗೆಯ ಸಂಬಂಧಗಳಲ್ಲಿ ಒಂದು : ಕರ್ಮಗಳಿಂದ ಉಂಟಾಗುವ ಪ್ರಯೋಜನದಲ್ಲಿ ಅಪೇಕ್ಷೆಯುಳ್ಳವನಾದರೆ ಅಧಿಕಾರಿಯೆನ್ನಲ್ಪಡುವನು. ಇದೇ ಫಲಸಂಬಂಧ (ಹಿಂದಸಾ. ೨೫೬). [ಸಂ.]

**ಫಲಸಾರಸನ** (ನಾ). ಹಣ್ಣುಗಳ ಸಾಲು_ಮಾಲೆ : ಫಲಸಾರಸನಮ್ ವಂತೆತ್ತಲುಮೊದವಿರೆ ಕುರ್ವ ಪುಟಿಲೋಳದಿರ್ದಗೊಳ್ಳನೆಗಂ ಕಲರುತಿಯಂ ವಾಡಿದುದುತ್ಪಲಸಾರಸನು ಪುಳಿಂದಲಲನಾನಿಕರಂ (ಕಾವ್ಯಾವ. ೩೨೬). [ಸಂ.]

**ಫಲಸಿದ್ಧಿ** (ನಾ). ೧. ಇಷ್ಟಾರ್ಥವು ನೆರವೇರುವಿಕೆ; ಇಷ್ಟವಾದ ಫಲ ಪ್ರಾಪ್ತಿ : ಒದವಿದ ಸಾಮಗ್ರಿಯೊಳೇಕದೇಶವೈಕಲ್ಯಮಾಗೆಯುಂ ಮತ್ತಂ ತತ್ಸದೃಶಫಲಸಿದ್ಧಿಯಂ ತೋರ್ಪುದದು ವಿಶೇಷೋಕ್ತಿಯೆಂಬಲಂಕೃತಿಯಕ್ಕುಂ (ಕಾವ್ಯಾಕ. ೬೫೦) ; ಅಂಗಿ-ಚೊಣ್ಣ-ಟೊಪ್ಪಿಗೆಗಳು ಅಲ್ಲೇ ಬಿದ್ದು ಕಾಯಿಯ ಆಜ್ಞೆಯ ಫಲಸಿದ್ಧಿಯನ್ನು ಹೇಳುವಂತೆ ಅಣಕಿಸುತ್ತಿದ್ದವು (ಜಯಂತ. ೯). ೨. ಉತ್ತಮವಾದ ಪರಿಣಾಮ. [ಸಂ.]

**ಫಲಹಾರ** 'ಫಲಾರ' ನೋ.

**ಫಲಾಖ್ಯಾನ** (ನಾ). [ಜೈನ] ಶಲಾಕಾಪುರುಷನಿಗೆ ಮುಂದೆ ಬರಲಿರುವ ಸುಖವನ್ನು ತಿಳಿಸುವುದು: ಫಲಾಖ್ಯಾನಮೆಂಬುದು ಆ ತ್ರಿಷಷ್ಟಿಶಲಾಕಾಪುರುಷರ ಪುಣ್ಯಕರ್ಮಪರಿಪಾಕದೊಳ್ಪುಟ್ಟಿದಭ್ಯುದಯಸುಖಮನಕ್ಕೆ ಕರ್ಮಕ್ಷಯದೊಳ್ಪುಟ್ಟಿದ ನಿಶ್ಶ್ರೇಯಸದ ಸುಖಮನಕ್ಕೆ ಪೇಳ್ವುದು (ಚಾಪುಂಪು. ೦೩) [ಸಂ.]

**ಫಲಾಗಮ** (ನಾ). [ಕಾವ್ಯಮಿ] ನಾಯಕನ ಕಾರ್ಯದೃಷ್ಟಿಯಿಂದ ನಾಟಕದ ವಸ್ತುವಿನಲ್ಲಿರುವ ಐದು ಅವಸ್ಥೆಗಳಲ್ಲಿ ಕೊನೆಯದು : ಇಷ್ಟಾರ್ಥ ನೆರವೇರುವುದು : ಫಲಾಗಮ—ಕಾರ್ಯ ಕೈಗೂಡುವಿಕೆ (ಸಂಪಾಟಿ. ೧೩). [ಸಂ.]

**ಫಲಾತನ್** (ನಾ). ಗಟ್ಟಿಗ; ಮಹಾಪರಾಕ್ರಮಿ; ಶೂರ: ಇನ್ನೊಂದು ಹತ್ತುದಿನ ಕಳೆದಿದ್ದರೆ. . . . ನಾನಲ್ಲ, ಫಲಾತನ್ ಬಂದಿದ್ದರೂ ಏನೂ ಮಾಡಕ್ಕಾಗ್ತಾ ಇರ್ಲಿಲ್ಲ (ಸರ್ಕಸಿಂ. ೩೫೨). [ ? ]

**ಫಲಾದನ** (ನಾ). ೧. ಹಣ್ಣು ತಿನ್ನುವುದು. ೨. ಹಣ್ಣು ಮಾತ್ರ ಆಹಾರವಾಗಿರುವುದು ; ಫಲಾಹಾರ : ತ್ರಿದಿನಕ್ಕೊರ್ಮೆ ಫಲಾದನಂ ನೆಗಳ್ದುದಾತಂಗೊಂದು ತಿಂಗಳ್ (ಚಂಪೂ. ೨-೯೯). ೩. ಗಿಳಿ ; ಶುಕ. [ಸಂ.]

**ಫಲಾಧ್ಯಕ್ಷ** (ನಾ). ಒಂದು ಬಗೆಯ ಗಿಡ ; ಹಾಲೆ : "ರಾಜಾವನಂ, ಫಲಾಧ್ಯಕ್ಷಂ, ಕ್ಷೀರಿಕಾ_ಇ ಹಾಲೇಗಿಡ, ಹಾಲುಬಳ್ಳಿ ಹೆಸರು" (ಸಿದ್ಧೌಷ. ೦೨೨). [ಸಂ.]

**ಫಲಾನ**, ಪಲಾನಾ, ಪಲಾನೆ, ಫಲಾನಾ, ಫಲಾನೆ (ಗು). ಈ ಬಗೆಯ; ಇಂತಹ : ಫಲಾನ ಕುಲದ ಹೆಣ್ಣು ಫಲಾನ ಕಾಲದ ಗಂಡಿಗೆ ಕೊಟ್ಟಿದೆ (ಎಸಪ್ಪ. XXVII, ೫). **ಪಲಾನಾ** : ಪಲಾನಾ ಊರಿನಲ್ಲಿ ಪಲಾನಾ ಬ್ರಾಹ್ಮಣನಿದ್ದಾನೆ . . . ಅತನನ್ನು ಕರೆಸಿದರೆ ನಾನು ಬಿಟ್ಟು ಹೋಗುವೆ (ಕಥಾಪಾಂ. IV. ೯೬-೭೬). **ಪಲಾನೆ** : ಪಲಾನೆ ಮನುಷ್ಯ ಕೆಟ್ಟ ನಡತೆಯವನೆಂದು ಗುಮಾನಿಗೆ ಕಾರಣವಿದೆ (ಶಶಿಂ. II. ೬೩೬). **ಫಲಾನಾ** : ಪ್ರತಿವಾದಿಯನ್ನು ಫಲಾನಾ ದಿವಸದಲ್ಲಿ . . . ಪ್ರತ್ಯುತ್ತರ ಕೊಡಬೇಕೆಂದು ತಿಳಿಸತಕ್ಕದ್ದು (ಗ್ರಾಕಾಶ. ೨೫). **ಫಲಾನೆ** : (೯).
[←ಪಾರ. ಅರ. ಹಿಂ. ಫಲಾನಾ; ಮರಾ. ಫಲಾಣಾ]

**ಫಲಾನಾ** 'ಫಲಾನ' ನೋ.

**ಫಲಾನುಮೇಯ** (ಗು). ೧. ಪರಿಣಾಮದ ಮೂಲಕ ಊಹಿಸಬಹುದಾದ. (ನಾ). ೨. ಪರಿಣಾಮದ ಮೂಲಕ ಊಹಿಸಬಹುದಾದುದು. [ಸಂ.]

**ಫಲಾನೆ** 'ಫಲಾನ' ನೋ.

**ಫಲಾಭಿಸಂಧಿ** (ನಾ). ಫಲ ದೊರೆಯಬೇಕೆಂಬ ಉದ್ದೇಶ; ಫಲಾಪೇಕ್ಷೆ: ಚಿತ್ತಶುದ್ಧಿಯು . . . ಮಾಡಿದ ಕರ್ಮಗಳನ್ನು ಫಲಾಭಿಸಂಧಿ ಇಲ್ಲದೆ ಈಶ್ವರನಲ್ಲಿ ಸಮರ್ಪಿಸುವುದರಿಂದಲೂ ಸಂಭವಿಸುವುದು (ಭಾತತ್ತ್ವ. ೩೩೬). [ಸಂ.]

**ಫಲಾರ**, ಪರಾಳ, ಪಲಹಾರ, ಪಲಾರ, ಪಳಾರ, ಫರಾಳ, ಫಲಹಾರ, ಫಳಾರ (ನಾ). ೧. ಕೇವಲ ಹಣ್ಣುಗಳನ್ನು ಆಹಾರವಾಗಿ ತೆಗೆದುಕೊಳ್ಳುವಿಕೆ ; ಫಲಮಾತ್ರ ಸೇವನೆ: ಪ್ರವೃತ್ತಿಮಾರ್ಗದ ಶೈವ ಭಿನ್ನಯೋಗಿಯ ವಿಶುದ್ಧಿಚಕ್ರ ಪರಮಾನ್ನ ಪಂಚಕಜ್ಜಾಯ ಫಲಾರಂಗಳಿಗೆ ಮುಖವಾಗಿ ಆರೋಗಿಪುದು (ವಚಾ. II. ೦೬೯); ತೋರಬಾರದ ಹಣ್ಣಂತೆ ಕಾಣೆ ಫಲಾರಕ್ಕೆ ಆಗಬೇಕಂತೆ ಕಾಣೆ (ನಾಶರ. ೨೦೯). ೨. ಅಲ್ಪೋಪಹಾರ ; ತಿಂಡಿ ; ತಿನಿಸು : ಅವನ ಫಲಾರವೆಂದರೆ ಲೋಟಾ ನೀರು (ಪಾಂಡ್ಯ೩.೦೯). **ಪರಾಳ** : ೨.ಅವುಗಳ ಪರಿವಾರವಾದ ಚಹಾ ಪರಾಳದಂಗಡಿಗಳೂ ಬೀಡಿ ದುಕಾನುಗಳೂ . . . ಸೌಖ್ಯ ಸೌಕರ್ಯಗಳನ್ನು ಒದಗಿಸುತ್ತಿವೆ (ಕವಕ. ೦೨). **ಪಲಹಾರ** : ೨. ಪರಲೋಕವೆಂಬುದು ಪಲಹಾರದ ಗುಡ್ಡೆಯೆ ? (ಗಾದೆ) ; ಊಟ ಹಾಗ, ಪಲಹಾರ ಮುಪ್ಪಾಗ (ಗಾದೆ). **ಪಲಾರ** : ೨. ರಙ್ಗಸ್ವಾಮಿಯವರ ಪಾದಕೆ ರಙ್ಗಾಪುರದ ಪರದೇಸಿ ಪಲಾರದ ನಿಗ್ರಿಯೆತ್ತಿ ಭಿಕ್ಷಾವೃತ್ತಿಯಲ್ಲಿ ಮಾಡಿ ಸಮರ್ಪಿಸಿದವ ದೀಪಮಾಲೇ ಕಂಭ (ಎಕ. XII, ತಿಪಟೂ. ೩೯-೫, 1748). **ಪಳಾರ** : ೨. ಟೀಶನ್ನಾಗ

ಫಳಾರ ತಿನಿಸಿ ಚಾ ಕುಡಿಸಿದ್ರೆ ಆತು (ಎಳೆ. ೧೬). **ಫರಾಳ**: ೨. ಬ್ರೆಡ್ಡು, ಬಾಳೆಹಣ್ಣು, ಪುರೀ ಭಾಜಿ ಏನೇನೋ ಗುಡ್ಡ ಎತ್ತರ ಫರಾಳ ಕಟ್ಟಿಸಿ . . . ಶೇಷಣ್ಣಾ ಬಂದ (ವೃ. ೩) ; ಅನೇಕ ಬಗೆಯ ಫರಾಳದ ವಸ್ತು ಗಳಿದ್ದರೂ ಅದನ್ನೆಲ್ಲ ಬದಿಗೆ ಸರಿಸಿದರು (ಸ್ಮೃತಿ. ೨೫) ; ಅಲ್ಲಿಂದ ಚಹಾ ಫರಾಳದ ಗಡಿಬಿಡಿಗೆ ಮೊದಲಾಯ್ತು (ಅನ್ನ. ೨೬). **ಫಲಹಾರ**: ೨. ಮುದ್ರಾಧಾರಣೆಯ ಕೆಲಸವು ತೀರಿದ ತರುವಾಯ ಶ್ರೀಪಾದರುಗಳ ಫಲಹಾರವು ಮುಗಿಯಿತು (ವಾಗ್ಮೀ. ೫). **ಫಳಾರ**: ೨. ಸುಮಾರು ಎರಡು ತಂಬಿಗೆಯಷ್ಟು ಬಿಸಿನೀರು . . . ಒಂದೂವರೆ ರಾಗಿರೊಟ್ಟಿ – ಇವಿಷ್ಟು ಅವರ ಬೆಳಗಿನ ಹೊಟ್ಟೆ ಗಟ್ಟಿ ಮಾಡುವ ಫಳಾರಗಳು (ಕರುಣ ೨೧) ; ನಾವು. . . ಏಕಾದಶಿ ದಿನ ಯಾರೂ ಕಾಣದಂತೆ ರಾತ್ರಿ ಫಳಾರ ಮಾಡುತ್ತಿದ್ದಿಲ್ಲವೆ ? ಬ್ರಹ್ಮನು ನಾಲ್ಕು ಬಾಯಿಗಳಿಂದಲೂ ಫಳಾರ ಮಾಡುತ್ತಿದ್ದ ! (ಕೃಷ್ಣ. ೭೯). [< ಫಲಾಹಾರ]

**ಫಲಾವಾಪ್ತಿ** (ನಾ). ೧. ಇಷ್ಟಾರ್ಥವನ್ನು ಪಡೆಯುವಿಕೆ ; ಫಲ ಪ್ರಾಪ್ತಿ. ೨. ಸಂತಾನಪ್ರಾಪ್ತಿ, –ಲಾಭ : ದೇವಿಯರೊಂದಭಿಲಷಿತ ಫಲಾವಾಪ್ತಿಗೆ ದೇವ ನಿಮ್ಮ ದಯೆಗೆಯ್ದು ಫಳಂ ಕೇವಲ ಶುಭಸೂಚಕಂ (ಮಲ್ಲಿ. ೯-೩೫). [ಸಂ.]

**ಫಲಾಸಿ** 'ಪಲಾಸಿ' ನೋ.

**ಫಲಾಹಾರ** (ನಾ). ೧. ಹಣ್ಣುಗಳನ್ನು ಮಾತ್ರ ಆಹಾರವಾಗಿ ತೆಗೆದು ಕೊಳ್ಳುವುದು, –ಸೇವಿಸುವುದು : ಆ ವರುಷದಲ್ಲಿಯ ಜನರು ಮೂಱು ತಾಳದುದ್ದ ವರಾಗಿಕಲ್ಪವೃಕ್ಷಫಲಾಹಾರದಿಂದಿಪ್ಪತ್ತುಸಾವಿರವರ್ಷದಾಯುಷ್ಯ ವಂತರೆನಿಸಿ . . . ಸದಾನಂದಿಗಳಾಗಿರ್ಕುಂ (ಪವೀ. ೨೦೪) ; ಫಲಾಹಾರವನು ಮಾಡೂ ಪರಮಪುರುಷ ಭೂಬಲನೆ ಲಕ್ಷ್ಮೀಕಂದರ್ಪರ ಸಹಿತ (ಹರಿಂದ. ರಾ. ೧-೧೩೦ ಕಲ್ಲಿ). ೨. (ಉಪವಾಸ ಮಾಡುವವರು ತೆಗೆದು ಕೊಳ್ಳುವ) ಅಲ್ಪಪ್ರಮಾಣದ ತಿಂಡಿ, –ತಿನಿಸು ; ಅಲ್ಪೋಪ ಹಾರ : ಫಲಾಹಾರಕ್ಕೆ ಉಪ್ಪಿಟ್ಟು ಮಾಡುತ್ತೇನೆ (ಬಹಾಗ. ೬) ; ರಾತ್ರಿ ಫಲಾಹಾರಕ್ಕೆ ಕಡುಬು ಕಾಯಿಹಾಲು ಮಾಡಿತ್ತು (ವಾಗ್ಮೀ. ೨೦). [ಸಂ.]

**ಫಲಾಹಾರಮಂದಿರ** (ನಾ). ದುಡ್ಡು ತೆಗೆದುಕೊಂಡು ತಿಂಡಿ, ತೀರ್ಥ ಗಳನ್ನು ಒದಗಿಸುವ ಸ್ಥಳ ; ಹೋಟೆಲು : ಆ ಫಾಸಲೆಗೇ ಅದೊಂದು ಒಳ್ಳೆಯ ಫಲಾಹಾರಮಂದಿರವಾಗಿದೆ (ರೂಢಿ). [ಸಂ.]

**ಫಲಿ$_1$** (ಗು). ೧. ಹಣ್ಣು ಬಿಟ್ಟಿರುವ. (ನಾ). ೨. ಹಣ್ಣು ಬಿಟ್ಟಿರುವ ಮರ : "ಫಲವಾನ್, ಫಲಿನಃ ಫಲೀ – ೩ ತತ್ಕಾಲದಲ್ಲಿ ಹಣ್ಣು ಬಿಟ್ಟಿರುವ ಮರದ ಹೆಸರುಗಳು" (ಸಿದ್ಧಾಂತ. ೧೧೧೧). [ಸಂ. ಫಲಿನ್]

**ಫಲಿ$_2$** (ನಾ). ಒಂದು ಬಗೆಯ ಬಳ್ಳಿ ; ಪ್ರಿಯಂಗು : "ಶ್ಯಾಮಾ . . . ಫಲಿನೀ, ಫಲೀ . . . ಪ್ರಿಯಕಃ – ೧೨ ಪ್ರೇಂಕಣಗಿಡದ ಹೆಸರು, ಪ್ರಿಯಂಗು ಪ್ರಸಿದ್ಧವಾದದ್ದು" (ಸಿದ್ಧಾಂತ. ೦೨೪). [ಸಂ. ಫಲೀ]

**ಫಲಿತ**, ಫಳಿತ (ಗು). ೧. ಹಣ್ಣುಗಳುಳ್ಳ ; ಫಲಸಹಿತವಾದ : ಅನೇಕ ಪನಸ . . . ಕದಳೀಪ್ರಮುಖಫಲಿತಭೂಜರಾಜಿಗಳ್ (ಕೃಷ್ಣ. ೩-೬೬ ವ) ; ಕೃತಾಂತನ ಫಲಿತ ಶಾಲೀವನವ ಮುತ್ತಿದ ಗಿಳಿಗಳೋ ಆಚಾರ್ಯನಂಬುಗಳೋ (ಕುಮಾರವ್ಯಾ. ೦೬-೯). (ನಾ). ೨. ಹಣ್ಣು ಗಳನ್ನುಳ್ಳುದು : ಶುಕವ್ರಜಮುತ್ಪತ್ಪದಿಂ ಸವಿವ ಫಲಂಗಳಿಂ ಫಲಿತಮಾಯ್ತು ಮನೋಜವಮನೋರಥದ್ರುಮಂ (ಅಜಿತ. ೬-೧೦೦) ; ವಧೂವರರಾಗವಿಪಯವಲ್ಲರಿ ಫಲಿತಮಾದುದು (ಜಗ. ೨-೩೨೪). ೩. ಪರಿ ಣಾಮ ; ಸಿದ್ಧಿ : ಆ ನೀತಿ . . . ಒಂದು ಬುದ್ಧಿಯ ಎಚ್ಚರಿಕೆಯ ಮತ್ತು ಒಂದು ಎದೆಯ ಗಟ್ಟಿತನದ ಸಯೋಗದ ಫಲಿತ (ಮಹಾಗ. ೪, ಕ್ಷೇಹರ ಮಾತು). 'ಫಲಿತಾಂಶ' ಪರಾ. ೪. ಪರಿಣಾಮವಾಗಿ ಬಂದ ಫಲ : ಅನೇಕ ಬಲಗಳಿಗೆ ಸಮಾನವಾದ ಒಂದು ಬಲವನ್ನು ಆ ಬಲಗಳ ಫಲಿತವೆಂದು (Resultant) ಹೇಳುವರು (ಭೌತಶಾ. ೯೯). **ಫಳಿತ**: ೧. ಫಳಿತ ಪನಸಾಮ್ರಸನ್ನಾತುಳಂಗ . . . ಅನೋಕಹಕುಳಂಗಳಿಂದೆಸೆವುಪದಿ ಬಹು ರುದ್ದಾನಂ (ವರ್ಧಮಾ. ೧-೫೩) ; ಫಳಿತ ಕುಜಂಗಳಿಂದಧಿಕಸಂತಿರೆ . . . ದಾಡಿಮ ತರುವ್ರಜಮಾ ಬನದೊಳ್ ವಿರಾಜಿಕುಂ (ಕುಸುಮಾ. ೦-೬೦). [ಸಂ.]

**ಫಲಿತಾಂಶ** (ನಾ). ೧. ಪರೀಕ್ಷೆಯ ಪರಿಣಾಮ ; ಫಲಿತಾಂಶಕ್ಕಾಗಿ ಕಾದ ವಿದ್ಯಾರ್ಥಿಯಂತೆ ವಾಸಂತಿಯ ಮನಸ್ಸಿನ ಸ್ಥಿತಿಯಾಗಿತ್ತು (ಕೀರ್ತನೆ. ೦೦೩) ; ನೀವು ಹೇಗೆ ಇಷ್ಟು ಒಳ್ಳೆಯ ಫಲಿತಾಂಶವನ್ನು ಪಡೆದಿರಿ (ಕಾಲಮ. ೨೨೩). ೨. ಯಾವುದಾದರೊಂದು ಸಂಶೋಧನೆಯಿಂದ ತಿಳಿವಿಗೆ ಬಂದ ವಿಷಯ : ಅವರ ಮಹತ್ತರವಾದ ಸಂಶೋಧನೆಯ ಫಲಿತಾಂಶದಿಂದ ಮಾನವಕುಲಕ್ಕೇ ಉಪಕಾರವಾಯಿತು (ರೂಢಿ). [ಸಂ.]

**ಫಲಿತಾರ್ಥ** (ನಾ). ಪರಿಣಾಮದ ಫಲ : ಆತನಿದಿರೊಳಗಸುವ ಲಲಿತ ಮಂದಸಿಸಿ ಶಮನಿಲಯಮಂ ಸಾರುವೊಡೆ ಫಲಿತಾರ್ಥಮೆಂದು ತಿಳಿ (ವಂಶಾಭ. ೨-೫-೩೨). [ಸಂ.]

**ಫಲಿನ**, ಫಳಿನ (ಗು). ೧. ಫಲವನ್ನು ಕೊಡುವ. ೨. ಫಲ ಸಹಿತವಾದ ; ಸಫಲವಾದ. (ನಾ). ೩. ಹಣ್ಣು ಬಿಟ್ಟಿರುವ ಮರ : "ಫಲ ಹಿಡಿದ ಮರನಂ ಫಲಿನಮೆಂಬುದು" (ಹಲಾಯು. ೨೯-೨೯) ; "ಮರ ಗಳೊಳು ಫಲಿನಮನೆ ಫಲಮುಳ್ಳವಕ್ಕಂ" (ಮಂಗರಾ. ೩೦-೧). ೪. ಹಲಸಿನ ಮರ ; ಪನಸವೃಕ್ಷ. **ಫಳಿನ**: ೩. "ಫಲಮುಳ್ಳುದು ಫಳಿನಂ" (ಪಶುಕೋ. ೩೦-೨). [ಸಂ.]

**ಫಲಿನಿ**, ಫಳಿನಿ (ನಾ). ೧. ಒಂದು ಬಗೆಯ ಬಳ್ಳಿ ; ಪ್ರಿಯಂಗು : "ಪ್ರಿಯಂಗುಃ, ಫಲಿನೀ, ಶ್ಯಾಮಾ – ಈ ೩ ಪ್ರಿಯಂಗು" (ಹಲಾಯು. ೩೨-೯೦) ; "ಪ್ರಿಯಂಗು ಶ್ಯಾಮೆ ಫಲಿನಿ" (ಮಂಗರಾ. ೩೯-೯). ೨. ಒಂದು ಬಗೆಯ ಸಸ್ಯ ; ಜಾಲಿನಿ : "ಫಲಿನಿ ಜಾಲಿನಿಯಕ್ಕು" (ಮಂಗರಾ. ೯೯-೯೯). ೩. ಒಂದು ಬಗೆಯ ಸಸ್ಯ ; ಅಗ್ನಿಶಿಖೆ : "ವಿಶಲ್ಯಾ, ಅಗ್ನಿ ಶಿಖಾ, ಅನಂತಾ, ಫಲಿನೀ, ಶಕ್ರಪುಷ್ಪೀ–೫ ಬೆಣ್ಣೆಬಿದುರುಸೊಪ್ಪು, ಅಗ್ನಿಶಿಖೆ" (ಸಿದ್ಧಾಂತ. ೦೯೩). **ಫಳಿನಿ** : ೧. "ಫಳಿನಿ ಶ್ಯಾಮಂ ಪ್ರಿಯಂಗುನಾಮಂ ನೆಗೞ್ಗುಂ" (ಪಶುಕೋ. ೩೩-೯). [ಸಂ. ಫಲಿನೀ]

**ಫಲಿನೀಫಲ** (ನಾ). ಪ್ರಿಯಂಗುಬಳ್ಳಿಯ ಹಣ್ಣು : ಇವು ಜಂಬೂಫಲ ಮಂಜರಿಯಿವು ಫಲಿನೀಫಲದ ಗುಚ್ಛಂ . . . ಎಂದು ತೋಱುದನವನೀ ಪಾಲಂಗೆ ಲೀಲೆಯಿಂ ವನಪಾಲಂ (ಶಂಪ್ರಕು. ೨-೬೬). [ಸಂ.]

**ಫಲಿಯಿಸು** 'ಫಲಿಸು' ನೋ.

**ಫಲಿಸಿಕೆ** (ನಾ). ಹೊಂದಿಕೊಳ್ಳುವಿಕೆ ; ಪ್ರಯೋಜನಕರವಾಗಿರುವಿಕೆ ; ಕೂಡಿಬರುವಿಕೆ : ಈ ಊರಿನಲ್ಲಿ ಫಲಿಸಿಕೆಯಿಲ್ಲವೆಂದು ಅವರು ಊರು ಬಿಟ್ಟು ಬೇರೆ ಊರಿಗೆ ಹೋದರು (ರೂಢಿ). [ಫಲಿಸು + – ಇಕೆ]

**ಫಲಿಸು**, ಫಲಿಯಿಸು, ಫಳಿಯಿಸು, ಫಳಿಸು (ಕ್ರಿ). ೧. ಹಣ್ಣು ಬಿಡು ; ಫಲ ಕೊಡು : ಫಲಿಸಿತರಸಾ ನಿನ್ನ ಭಾಗ್ಯದ ಬೆಳಸು (ಕುಮಾರವ್ಯಾ. ೦೩-೩) ; ರಾಮ ನಿನ್ನಲಿ ಫಲಿಸಿತಗ್ಗದ ಸತ್ಕತರು (ತೊರವೆ. ೨-೩-೨೯) ; ಪಲ್ಗಿರಿದುಸಿರುವವೊಲ್ಪಲಿಸಿ ದಾಳಿಂಬದ ಮರಗಳೊಪ್ಪಿಹುವು (ಕಂಪರ. ೫-೬೦) ; ಬಾಳೇ ಅಗಿಗಳನ್ನು ಹಚ್ಚಿದ ಬಳಿಕ ಮೂರನೇ ವರ್ಷ ಫಲಿಸುತ್ತವೆ (ಕಬಾಗ. ೨೬೬). ೨. ಉಂಟಾಗು ; ಪ್ರಾಪ್ತವಾಗು ; ಒದಗು : ಇನ್ನಿವರಿಂ ದಿವ್ಯ ಫಲಿಕ್ಕೆ (ರಮೋಚ್ಛ. ೪-೯೬) ; ಸದುಗುರುಭಜನಂ ಫಲಿಸುವುದ ದೆಂದೋ (ಶಿಶುಕೃ. ೯೫-೪೨) ; ಸುಮಂತ್ರಮುಖದಲಿ ಫಲಿಸುವುದೆ ಸುತಲಾಭ (ತೊರವೆ. ೦-೫-೫) ; ಕೊನೆಯ ಗಳಿಗೆಯು ಫಲಿಸೆ ಕುಡಿ ಗಾಳಿಪಾಲು (ಶಿಷಾಶಿ. ೩೦-೦೩). ೩. ಪ್ರಯೋಜನವಾಗು ; ಉಪಯೋಗಕ್ಕೆ ಬರು : ಅವನೋಲೆಯಕಾಱತನ ಗಾಂಡೀವಿಯಿದಿರಲಿ ಫಲಿಸುವುದು ಮೇಣಾವನದ್ಭುತ ಮಂತ್ರಶಕ್ತಿಗೆ ಮಣಿವನಸುರಾರಿ ಕಾವರಿಲ್ಲರ್ಜುನನ ಕೈಯಲಿ ಸಾವವರು

ನಾವಲ್ಲ (ಶುಶ್ಯಾದ್ರೋ. ೬-೩೩); ಅವರ ಕೈಯಿಂದಲೇ ಹಿಡಿದು ಕೊಡಬೇಕು ಹಾಗಲ್ಲದಿದ್ದರೆ ಆ ದಾನವು ಫಲಿಸುವುದಿಲ್ಲ (ಕಂಗಾಳ್. ೦೩೬). ೪. ಈಡೇರು; ನೆರವೇರು; ಸಿದ್ಧಿಯನ್ನು ಪಡೆ: ನಾಡಿದುದು ಫಲಿಸಲರಿಯದು ದೈವ ಗತಿಯಲಿ ಫಲಿಸಿತಾದಡೆ ರಾಜ್ಯಲಕ್ಷ್ಮಿಗೆ ಸೂಳೆತನವಹುದೆ (ಕುಶ್ಯಾ. ೩-೦೦); ಮಾತಿದು ಫಲಿಸದಿರ್ದರೆ ಪತಿಕರಿಸಬೇಡ (ಕೋಠರಾ. ೬-೧೭-೦೦) : ಆನಿಯನ್ನೈತರುವ ಅವಧಿಯ ದಿನಂ, ಷಣ್ಮಾಸದ ನಿರೀಕ್ಷಣಂ ಫಲಿಸುವಾ ದಿನಂ (ಕಶ್ಯಾಂಗ. ೬೨-೦೬೦೩); ಅರ್ಜುನನು ಮಹಾಸಂಗ್ರಾಮಕ್ಕೆ ಅಣಿಯಾಗುತ್ತಾನೆ. ಹೀಗೆ ಭಗವಂತನ ಕಾರ್ಯ ಫಲಿಸುತ್ತದೆ (ರರ್ಮಣಾ. ೧೩೮). ೫. ದೊರಕಿಸಿಕೊಡು; ಲಾಭವಾಗುವಂತೆ ಮಾಡು: ಗ ೬೦ ವರಹದ ಭುಮಿಯಂನು ಕಂಲು ನೆಟು ಫಲಿಸಿ ಕೊಟದರಿಂದ (ಎಕ. VII, ಶಿಕಮೊ. ೦೦೬-೨೨; 1558 ?). ಫಲಿಯಿಸು: ೨. ತೀರ್ಥಕರನಪ್ಪ ಪುಣ್ಯಂ ಬೇಗಂ ಫಲಿಯಿಸಿತು (ಕರ್ಣಕಾ. ೪-೬೪) ; ಫಲಿಯಿಸಿದುದು ಕೆಯ್ಯೊಳ್ ಪರಲಲನಾಪರಿರಂಭವೊಲ್ಲದಿರ್ದೊಡಂ (ಲೀಲಾವ. ೦೪-೦೦೭); ಹುಂ ಎನೆಯುಂ ಅಲ್ತೆಯಲ್ತೆಯೆನೆಯುಂ ಫಲಿಯಿಸುಗುಂ ಪ್ರಶ್ನಾರ್ಥರ್ೀಜ್ಞಲಾನುಮಾನಾರ್ಥಯುಗಳಮವು (ಕವಿಜ. ೩೦೭). ಫಳಿಯಿಸು: ೧. ಫಳಿಯಿಸಲಾರ್ತುದೇ ಅಸುಕೆ (ಕಂದ್ರಪ್ರ. ೭-೯೨). ಫಳಿಸು: ೧. ಫಳಿಕಂ ತ್ರಿವರ್ಗಮುಂ ಕೈಗೊಳಿಕಂ ತತ್ಸಾಧನಂಗಳುಂ (ಜೆಕಿ. ೪-೭೯).

[ಫಲ$_1$ + —ಇಸು$_3$]

**ಫಲೀನ** (ನಾ). ೧. ಹಣ್ಣು; ಫಲ. ೨. ಸಜ್ಜನ; ಉತ್ತಮ ಮನುಷ್ಯ. ೩. ಮುನಿ; ಯತಿ. ೪. ಮೋಕ್ಷ; ಮುಕ್ತಿ. ೫. ತಲೆಯ ಕೂದಲು. ೬. ಕೆಸರು: "ಉತ್ತಮನುಂ ಪಂಕ ಶಿರೋರುಹಂ ಮುನಿ ಫಲಂ ಮೋಕ್ಷಂ ಫಲೀನಾಹ್ವಯಂ" (ನಾನಾರ. ೯೬). [ ? ]

**ಫಲುಗುಣ** 'ಪಲುಗುಣ' ನೋ.

**ಫಲೋತ್ತರ** (ನಾ). ಒದಗಲಿರುವ ಫಲ; ಬರಲಿರುವ ಪರಿಣಾಮ: ಧೌಮ್ಯಾದಿ ಋಷಿಗಳು ಹೇಳಿದರು ತಚ್ಛಕುನಸಂಗತಿಗಳ ಫಲೋತ್ತರವ (ಕುಶ್ಯಾ. ೦೦-೦). [ಸಂ.]

**ಫಲೋತ್ಸುಕ** (ನಾ). ಫಸಲನ್ನು ಬಯಸುವವನು: ಬೇಸಐನಾಳ್ವನೇ ಬೆಳೆವ ಬಿತ್ತಿನ ಸಂಕ್ರಮದೊಳ್ ಫಲೋತ್ಸುಕಂ (ಕೃಷ್ಣಕಿ. ೩-೬೦). [ಸಂ.]

**ಫಲೋದಯ** (ನಾ). ೧. ಫಲವುಂಟಾಗುವುದು; ಫಲಪ್ರಾಪ್ತಿ; ಲಾಭ: ಜೀವವಿವಾದಮೆತ್ತ ಪರಲೋಕಫಲೋದಯಮೆತ್ತ (ಶಾಂತಿಪು. ೬-೦೨೯). ೨. ಫಸಲು ಉಂಟಾಗುವುದು, —ದೊರಕುವುದು: ದುಷ್ಟಪ್ರಸರದೇಳಿಗೆ ವಾಪಿಯೋಲಗ ಹುಸಿಯ ಬಾಳುವೆ ಹುದುವಿನಾರಂಭದ ಫಲೋದಯವು ನಸಿದು ಹೋಗದೆ (ಕುಶ್ಯಾ. ೬-೯೮). [ಸಂ.]

**ಫಲ್ಗು** (ಗು). ೧. ಚಿಕ್ಕ; ಕ್ಷುದ್ರ; ಅಲ್ಪವಾದ. ೨. ಸಾರವಿಲ್ಲದ: ನೀರಸವಾದ. (ನಾ). ೩. ಚಿಕ್ಕದು; ಸಣ್ಣದು: ಕೂಸನೆಯಿನ್ನುಂ ಶಾಸ್ತ್ರಾಭ್ಯಾಸಂ ಪಿರಿದಿಲ್ಲ ಫಲ್ಗು ಬಹುವಚನೋಪನ್ಯಾಸದೊಳಮೆಸೆದು ನೀನಿಂತೀ ಸಭೆಯಂ ಪೊಕ್ಕು ಬಾದುಗೆಯ್ಯಲ್ ನೆಱೆವೋ (ವರ್ಧಮಾ. ೦೪-೧೩). ೪. ಸಾರವಿಲ್ಲದುದು: "ರಿಕ್ತಂ, ತುಚ್ಛಂ, ಅಸಾರಂ, ಫಲ್ಗು, ವೃಷ್ಟಫಲಂ — ಈ ೫ ತುಚ್ಛಂ" (ಹಲಾಯು. ೦೨೬-೯೨). ೫. ಒಂದು ಬಗೆಯ ಸಸ್ಯ: "ಕಾಕೋದುಂಬರಿಕಾ, ಫಲ್ಗುಃ, ಮಲಪೂಃ, ಜಘನೇಫಲಾ—ಇ ಕಲ್ಲತ್ತೀಗಿಡದ ಹೆಸರುಗಳು" (ಸಿಶ್ಯಾಂತಿ. ೦೨೩). [ಸಂ.]

**ಫಲ್ಗುಣ** 'ಪಲುಗುಣ' ನೋ.

**ಫಲ್ಗುನ** (ನಾ). ೧. ಫಾಲ್ಗುಣಮಾಸ. ೨. ಅರ್ಜುನ; ಫಲುಗುಣ. ೩. ಇಂದ್ರ. [ಸಂ.]

**ಫಲ್ಗುನಿ** (ನಾ). ಪುಬ್ಬಾ ಮತ್ತು ಉತ್ತರೆ ಎಂಬ ಎರಡು ನಕ್ಷತ್ರಗಳ ಜೋಡಿ. [ಸಂ. ಫಲ್ಗುನೀ]

**ಫವುಚಾಯಿಸು** 'ಪೌಂಚಾಯಿಸು' ನೋ.

**ಫವುಜು** 'ಫೌಜು' ನೋ.

**ಫಶಿ** (ನಾ). ಮೋಸ; ವಂಚನೆ.

**ಫಶಿ ಹಾಕು** = ಮೋಸಮಾಡು: ಗಿರಾಕಿಕರು ಹಳೆಮಾಲಿಗೆ ಹೊಸಾದರ ಧಾರಣೆಯು ಕೊಟ್ಟು ಫಸಾಸುವ ಅಂದರೆ ಫಶಿ ಹಾಕುವ ಅಥವಾ ಠಕ್ಕಿಸುವ ಸಂಭವವಿರುತ್ತದೆ (ಮುಂಬವ್ಯಾ. ೪೦). [←ಮರಾ. ಫಶಿ]

**ಫಸಗಿ** (ನಾ). = ಫಶಿ.

**ಫಸಗಿ ಹಾಕು** = ಮೋಸ ಮಾಡು: ನೀವು ನಮಗೂ ಫಸಗಿ ಹಾಕಿದ್ರೆಲ್ಲಾ (ಬಂಕಹು. ೦೭೬) ; ಕಾಕಾನ್ನ ಹ್ಯಾಂಗ ಫಸಗೀ ಹಾಕಿದೇ ಅಂತ (ದೀಕಹ. II, ೨೦೨). [← ಮರಾ. ಫಸಗತ್]

**ಫಸಫಸಿಸು** (ಕ್ರಿ). ಫಸಫಸ ಎಂಬ ಶಬ್ದವಾಗುವಂತೆ ನೊರೆ ಬಿಡು,—ಬುರುಗೇಳು: ಆಸಿಡ್ ಅಥವಾ ಲಿಂಬೇರಸ ಹಿಂಡಲು ಯಾವ ಜಸದ ಭಸ್ಮವು ಶಾಂತ, ಸ್ಥಿರವಾಗಿ ನಿಲ್ಲುವದೋ, ಫಸಫಸಿಸುವುದಿಲ್ಲವೋ ಅದು . . . ಶರೀರದಲ್ಲಿ ಸೇರಲು ಯೋಗ್ಯವಾಯಿತೆಂದು ತಿಳಿಯಬೇಕು (ಶಿಕಧೀ. ೩೩). [ಫಸಫಸ$_0$ + —ಇಸು$_3$]

**ಫಸಲ್, ಫಸಲು** (ನಾ). ಬೆಳೆ; ಬೆಳಸು: ಮುಂದಿನ ಸಾಲಿಗೆ ಶೀರ್ವೇ ಜಾಸ್ತಿ ಫಸಲ್ ಜಾಸ್ತಿ ಮುಂತಾದವುಗಳನ್ನು ಭರ್ತಿ ಮಾಡಿ ಪಟ್ಟಾ ಕೊಡಲ್ಪಡುವದು (ಗ್ರಾಕೂಕ. ೬೯). **ಫಸಲು**: ಬಂಗಾರದಂಥ ಫಸಲು ಬಂದು ಮನೆ ತುಂಬುತ್ತದೆ (ಕಂದಕೋ. ೦೦೬); ಫಸಲು ಕಣಜಕ್ಕೆ ಬಂದು ಸೇರಿತೆಂದರೆ ಆಗ ಅದನ್ನು ತೂಕ ಮಾಡಿ ಬೆಲೆ ಕಟ್ಟುವುದು ಹದಕ್ಕೆ ಬರುತ್ತದೆ (ಶಿಬಿಂರ. II, ೬); ಖರ್ಜೂರದ ಫಸಲು ಇನ್ನೇನು ಬಂದಿದೆ ಮನೆಗೆ (ಕುಟ್ಯಿರ. ೮೩). [← ಅರ. ಫಸ್ಲ್ : ಹಿಂ. ಮರಾ. ಫಸಲ್]

**ಫಸಲಿ, ಫಸ್ಲಿ** (ನಾ). ಒಂದು ಮುಸಲ್ಮಾನ ವರ್ಷಗಣನೆ: (೬). ಫಸ್ಲಿ: ಹೈದರಾಬಾದಿನ ಜಹಗೀರುಗಳ (ವಿನಿಯಮಾದ) ಫಸ್ಲಿ ೧೩೫೯ನೆಯ ವರ್ಷದ ವಿನಿಯಮನ (ಫಸ್ಲಿ ೧೩೫೯ನೆಯ ವರ್ಷದ ೨೫ನೆಯ ವಿನಿಯಮನ) (ರಾಧಾವ. ೩೦೭ ಒಂದನೆಯ ಅನುಸೂಚಿ). ೯ ಈ 'ಫಸಲಿ' ಎಂಬ ಗಣನೆಯ ಕ್ರಮವನ್ನು ಅಕ್ಬರ್ ಉತ್ತರಭಾರತದಲ್ಲಿ ೧೫೫೬ರಲ್ಲಿ ಪ್ರಾರಂಭಿಸಿದನು. ಇದನ್ನೇ ಶಹಜಹಾನನು ೧೬೩೬ರಲ್ಲಿ ದಕ್ಷಿಣ ಭಾರತಕ್ಕೂ ಅನ್ವಯಿಸಿದನು.

[←ಪಾರ. ಫಸ್ಲೀ; ಹಿಂ. ಫಸಲೀ ; ಮರಾ. ಫಸಲೀ, ಫಸ್ಲೀ]

**ಫಸಲು** 'ಫಸಲ್' ನೋ.

**ಫಸಾದ** (ನಾ). ಬಂಡು; ದಂಗೆ: ಫಸಾದ ಮಾಡಲಿಕ್ಕೆ ನೋಡುವವರನ್ನು ಕೊತ್ವಾಲರಿಂದ ಕೋಳ ಹಾಕಿಸಿ ಬಿಡುತ್ತೇನೆ (ಶಾಗ್ಯಿಬ. ೦೦೬).

[←ಅರ. ಹಿಂ. ಮರಾ. ಫಸಾದ್]

**ಫಸಾಯಿಸು, ಫಸಾಸು** (ಕ್ರಿ). ಮೋಸ ಮಾಡು: ನೀವು ಹೀಂಗ ನನ್ನ ಫಸಾಯಿಸಬಾರದಿತ್ತು (ಮೂಲಾಬಿ. ೨೩೦) ; ಈ ವಿಶ್ವನಾಥ . . . ಒಬ್ಬಿಬ್ಬರನ್ನು ಫಸಾಯಿಸಿದ್ದಾನೆಯೆ? (ಮೂರುದಾ. ೬೦). **ಫಸಾಸು**: ಫಸಾಸುವ ಅಂದರೆ ಫಶಿ ಹಾಕುವ ಅಥವಾ ಠಕ್ಕಿಸುವ ಸಂಭವವಿರುತ್ತದೆ (ಮುಂಬವ್ಯಾ. ೪೦) ; ನಾಳೆ ನೀನ ಅನಬಾರದು ಕಾಕೂ ಫಸಾಸಿದರೂ ಅಂತ (ದೀಕಹ. I, ೦೭೩). [ಫಸಾ$_0$ (೯←ಮರಾ. ಫಸವಿಣೇ) + — ಇಸು$_3$]

**ಫಸಾಸು** 'ಫಸಾಯಿಸು' ನೋ.

**ಫಸ್ಲಿ** 'ಫಸಲಿ' ನೋ.

**ಫಳ** 'ಫಲ$_1$' ನೋ.

**ಫಳಕ** 'ಫಲಕ' ನೋ.

**ಫಳಕಾರ** (ನಾ). ಪ್ರಯೋಜನವನ್ನು ಉಂಟುಮಾಡುವವನು; ಉಪಕಾರಿ: ಇಳೆಯೊಳಗೆಲ್ಲ ಸಿಂಹಚೂಡನೆ ಫಳಕಾರಂ ಚಂಡಶಾಸನಂ ಬಗೆವೊಡೆ ಭೂತಳದೊಳ್ಕೃತಘ್ನಂ (ಅಮಂತಿ. ೦೦-೩೩). [ಸಂ. ಫಲಕಾರ]

**ಫಳಣೆ** 'ಫಾಳಣೆ' ನೋ.

**ಫಳದಾನ** 'ಫಲದಾನ' ನೋ.

**ಫಳಪಾಕಾಂತತೆ** (ನಾ). ೧. ಫಲ ಬಿಟ್ಟೊಡನೆ ನಾಶವಾಗುವ ಮಾರ್ಷಿಕಬೆಳೆಯ ಸ್ವಭಾವ. ೨. ಸಂತಾನಪ್ರಾಪ್ತಿಯಾದೊಡನೆ ತಂದೆ ತಾಯಿಂಗಳು ಸಾಯುವಿಕೆ. ೧. ೨: ಫಳಪಾಕಾಂತತೆಯೋಷಧಿಗಳ ತೆಱದಿಂದೆಯ್ದೆ ಸಮನಿಸಿತ್ತೃಕೃಟ ಸುಂಗಳಿಸದೆ ತನಯಾನ ಲೀಲಾವಿಳೋಕನ ಪ್ರಭವಸೌಖ್ಯಮಾ ದಂಪತಿಯೊಳ್ (ಚಂದ್ರಪ್ರ. ೩-೯೦).
[ಸಂ. ಫಲಪಾಕಾಂತತಾ]

**ಫಳಫಳ** (ನಾ). ಒಂದು ಅನುಕರಣಪದ : ಅವಳ ಕಿವಿಯ ಓಲೆಗಳು ದೀಪದ ಬೆಳಕಿನಲ್ಲಿ ಫಳಫಳ ಎಂದು ಹೊಳೆಯುತ್ತಿದ್ದುವು (ಲೂಕ).

**ಫಳಫಳನೆ** (ಅ). ೧. ಪ್ರಕಾಶಮಾನವಾಗಿ : ಜನವಾರವು ರಾತ್ರಿಯ ಮಿಂಚಿನಂತೆ ಫಳಫಳನೆ ಹೊಳೆಯುತ್ತಾ ಇತ್ತು (ಹುಚ್ಚಿಕ. ೬೦). ೨. ವೇಗವಾಗಿ ; ರಭಸವಾಗಿ : ಫಳಫಳನೆ ಅರ್ಭಟಿಸಿ ಭಾಪುರೇ ರಾವಣನ ಬೆಳೆ ಬೆಳೆದ ನಂದನವನವ ಕಿತ್ತಿ (ತೊರೆ. ೨-೯೩).
[ಫಳಫಳ + — ಅನ್ನೆ]

**ಫಳಫಳಿಸು** (ಕ್ರಿ). ಹೊಳೆ ; ಮಿಂಚು : ನಂದಿಯ ಪತಾಕೆಗಳ್ ಫಳಫಳಿಸಿ ಗಗನದೊಳ್ (ಹೀಕಚ. ೧೦-೨೫); ಫಣವ ಮೆಟ್ಟಿ ಬಾಲವ ಕೈಯಲಿ ಪಿಡಿದು ಫಳಫಳಿಸುತ್ತ ನಾಟ್ಯವನಾಡೆ (ಪುರಂದ ೨-೦೦೩-೨) ; ಬೆಳಕು ಅವನ ಮುಖದ ಮೇಲೆ ಬಿದ್ದು ಫಳಫಳಿಸಿದುದರಿಂದ ಅವನು ಒಳ್ಳೇ ಗೌರವರ್ಣದ ಸುಂದರ‍ತರುಣನೆಂದೂ ಹೊಳೆಯಿತು (ಕಾಬಳೂ. ೩).
[ಫಳಫಳ + — ಇಸು]

**ಫಳಭರ** 'ಫಲಭರ' ನೋ.

**ಫಳಭಾರ** 'ಫಲಭಾರ' ನೋ.

**ಫಳಮಂಜರಿ** 'ಫಲಮಂಜರಿ' ನೋ.

**ಫಳರಸ** (ನಾ). ಹಣ್ಣಿನ ರಸ : ಫಳರಸದೆ ಬೆಳೆವ ನವಶಾಳೀವನಂಗಳ್ (ಹರಿ. ಈ. ೨-೧೦) ; ಫಳರಸದಿಂದ ಮುಂ ಬಳೆದವುಬದಱಿಂ ನವಪುಷ್ಪವಾಟಸಂಕುಳಕುಸುವಮಾಸವಂ ಪೊರೆಯೆ ತತ್ಫಳವುಂ ಮಧುಪಾಳಿ ಮುತ್ತೆ (ಪಾರ್ಶ್ವಕ ೦೩-೯೯). [ ಸಂ. ಫಲರಸ ]

**ಫಳವತಿ** 'ಫಲವತಿ' ನೋ.

**ಫಳವಳಿಗೆ** 'ಫಲವಳಿಗೆ' ನೋ.

**ಫಳಹೀನತೆ** (ನಾ). ಫಲವಾಗದಿರುವಿಕೆ ; ನಿಷ್ಫಲತೆ : ಅತಿರಾಗತೆಯಿಂ ಸ್ತ್ರೀಪದಹತಿಗಂ ದಳವೇಱಿಯಲರ್ದಶೋಕಂ ಫಳಹೀನತೆಗೆಡೆಯಾದುದು (ಚಂದ್ರಪ್ರ. ೬-೯೫). [ಸಂ. ಫಲಹೀನತಾ]

**ಫಳಾರ್** (ನಾ). ಒಂದು ಅನುಕರಣಪದ : ಒಂದು ತಣಿಗೆಯನ್ನು . . . ಉಜ್ಜಿದರು. ಅದು ಫಳಾರ್ ಎಂದು ಮಿಂಚಿತು (ಹುಚ್ಚಿಕ. ೭೯).

**ಫಳಾರ** 'ಫಲಾರ' ನೋ.

**ಫಳಿ**$_1$ (ನಾ). ಒಂದು ಬಗೆಯ ಉತ್ತಮವಾದ ಬಟ್ಟೆ : ಫ [ಪಾರಿಸಂ. ಪ]ಳಿಯ ಸೀರೆಯು ಪಟ್ಟೆಪಾವಡೆಯ ಪೆಣ್ಗಳ ತಂಡವಳಿಸುದುದಾರಿಶಿವಿಡಿದು (ಕುರಂಗಾಂ. ೯೦-೬೦) ; ಭೀಮಸೇನಂ ಥಟ್ಟನೆದ್ದನು ಫಳಿಯನುಟ್ಟು ಶೃಂಗರದಿಂದ ತೊಟ್ಟು ಕುಪ್ಪಸಗಳಂ ಹೆಣ್ಣ ರೂಪಂ ತಾಳ್ದು . . . ಪವಡಿಸಿದ (ಕುರಂಗ. ೩೫-೫೦). [ಸಂ. ಫಲಿ]

**ಫಳಿ**$_2$, **ಫಣ್ಣೆ**$_2$ (ನಾ). ೧. ಮರದಿಂದ ಮಾಡಿದ ತೆಳುವಾದ ಉದ್ದನೆಯ ತುಂಡು ; ಹಲಗೆ : ನೆಲಕ್ಕೆ ಕಟ್ಟಿಗೆಯ ಫಳಿಗಳನ್ನು ಜೋಡಿಸಿದ್ದರು (ಶಾರಕ. ೩) ; ಶೇಷಣ್ಣ ಸಾಮಾನು ಇಡುವ ಫಳಿಯ ಮೇಲೆ ಚಾದರ ಹಾಸಿದ (ಸ್ವಪ್ನ. ೨) ; ಫಳಿಗಳನ್ನು ಜೋಡಿಸಿ ರಂಗಭೂಮಿಯನ್ನು ರಚಿಸಲಾಗಿತ್ತು (ರಂಗಪೋ. ೦೩೮). **ಫಣ್ಣೆ**$_2$ : ೨. ಕೋಲು ; ದಂಡ : ಯಾವ ಕ್ಷೇತ್ರದ ಅಳತೆಯು ತಿಳಿಯಬೇಕಾಗಿರುವದೋ ಆ ನಂಬರಿನ ಮೇಲೆ ಈ ಫಣೆಯನ್ನು ಇಡಬೇಕು (ಕ್ಷೇತ್ರ. ೧೯). ೩. ಚಿಣ್ಣಿಕೋಲಾಟದಲ್ಲಿ ಬಳಸುವ ಕೋಲು ; ದಾಂಡು : ಬಣ್ಣದ ಫಣೆಯು ಉರೀ ಹಚ್ಚುವ ಕಟ್ಟಿಗೆ ಯಾಯಿತು (ಜುಂಜಪ್ಪ. ೨-೨೬೮). 'ಚಿಣಿಫಣಿ' ಪರಾ.
[←ಮರಾ. ಫಳೀ]

**ಫಳಿತ** 'ಫಲಿತ' ನೋ.

**ಫಳಿದ್ವ** 'ಫಳಿದ್ವ' ನೋ.

**ಫಳಿನ** 'ಫಲಿನ' ನೋ.

**ಫಳಿನಿ** 'ಫಲಿನಿ' ನೋ.

**ಫಳಿಯಿಸು** 'ಫಲಿಸು' ನೋ.

**ಫಳಿಸು** 'ಫಲಿಸು' ನೋ.

**ಫಳಿಹತ** 'ಪಟಿಹತ್ತ' ನೋ.

**ಫಳೆಯಕಾಱ** (ನಾ). ಗುರಾಣಿಯನ್ನು ಹಿಡಿದಿರುವವನು ; ಹಲಗೆಕಾರ : ಫಳೆಯಕಾಱಿಂ, ಫೆಳಾವುಗಂ (ಕಮರ. ೦೫ ಕ್ರಮೋ).
[ಫಳೆಯ (ಪ್ರ← ಪ್ರಾ. ಫಲಅ) + — ಕಾಱ]

**ಫಾಂಟ** (ನಾ). ೧. ಸೋಸುವುದೇ ಮೊದಲಾದ ಕ್ರಿಯೆಗಳಿಂದ ಸುಲಭವಾಗಿ ಸಿದ್ಧಪಡಿಸಿದುದು : "ಫಾಂಟಂ ಎಂಬುದು ಸುಗಮಂ" (ಹರಾಯು. ೦೨೭-೯೯) ; ಆ ಕ್ಷಣದಲ್ಲಿ ಔಷಧಗಳ ನೀರಿನಲ್ಲಿ ನೆನೆಯಿಕ್ಕಿ ಆಗತಾನೆ ಹಿಂಡಿದ ರಸ ಫಾಂಟ-ಕಷಾಯ (ಶೈದ್ಯಶಾ. I. ೦೦೫). ೨. ಕಷಾಯ ; ಅರ್ಕ : ಔಷಧದ ಚೂರ್ಣದಲ್ಲಿ ಅದರ ನಾಲ್ಕುಪಟು ಎಸರುನೀರು ಸುರಿವಿ ಸ್ವಚ್ಛವಾದ ಅರಿವೆಯಲ್ಲಿ ಹಾಕಿ ಸೋಸಬೇಕು. ಇದಕ್ಕೆ ಫಾಂಟವೆನ್ನುತ್ತಾರೆ (ಗೃಹವೈ. ೦೦). [ಸಂ.]

**ಫಾಕಡ**, ಪಾಕಡ, ಪಾಕಡಾ, ಫಕ್ಕಡ, ಫಾಕಡಾ (ಗು). ೧. ಚಾಲಾಕಾದ ; ಚತುರತೆಯಿಂದ ಕೂಡಿದ : ಫಾಕಡ ಆಸಾಮಿ ಕಾಣಪ್ಪ (ಐರುಕ್ಮ. ೪೫). **ಪಾಕಡ** : ೧. ನೀನು ಪಾಕಡ ಆಸಾಮಿ ಅಂತ ನನಗೆ ಗೊತ್ತು (ಶಟಿಣ. ೩೬೯). (ನಾ). ೨. ಬುದ್ಧಿವಂತ ; ಚತುರ : ಈತ ದಕ್ಷ, ಗಟ್ಟಿಗ, ಪಾಕಡ, ಫಾಟ (ಬ್ರ್ಯ. ೨೨). **ಪಾಕಡಾ** : ೩. ಕಿಲಾಡಿ ; ಪಟಿಂಗ : ನಮ್ಮ ರೈಲಿನಲ್ಲಿ ಒಬ್ಬ ಪಾಕಡಾ ಇದ್ದಾನೆ (ಅಕಪ. ೨೭೩). **ಫಕ್ಕಡ** : (ಗು).೪. ಸೊಗಸಾದ ; ಅಚ್ಚುಕಟ್ಟಾದ : ಇಂದು ಫಕ್ಕಡ ಮಸರು ಅವಲಕ್ಕಿ ಆಗಿ ಬಿಡಲಿ (ಕಶಕ. ೦೩) ; ಎಂಥ ಫಕ್ಕಡ ಕನ್ನಡ ಮಾತಾಡತಾನಲ್ರೀ (ಹೂಸಂಖಾ. ೦೦೨). **ಫಾಕಡಾ** : ೧. ಫಾಕಡಾ ಆಸಾಮಿ ಧೆಪ್ಪಾಟಿಕಮಾಪನರು (ಪಶ್ಯರು. ೦೬೨).
[←ಹಿಂ. ಮರಾ. ಫಾಕಡಾ]

**ಫಾಕಡಾ** 'ಫಾಕಡ' ನೋ.

**ಫಾಜಿಲ್** (ಗು). ೧. ಆವಶ್ಯಕತೆಗಿಂತ ಅಥವಾ ನಿರೀಕ್ಷೆಗಿಂತ ಹೆಚ್ಚಾದ; ಮಿತಿಮೀರಿದ ; (*). (ನಾ). ೨. ನಿರೀಕ್ಷಿಸಿದುದಕ್ಕಿಂತ ಹೆಚ್ಚಾಗಿ ಬಂದ ; ಉತ್ಪನ್ನ, — ಆದಾಯ : (*).
[←ಅರ. ಹಿಂ. ಫಾಜಿಲ್ ; ಮರಾ. ಫಾಜೀಲ್]

**ಫಾಜೀಲ** (ಗು). ಶಿಷ್ಟವಲ್ಲದ : ಅಶ್ಲೀಲವಾದ : ಈ ಕತೆಯಲ್ಲಿಯ ಅವಳ ಫಾಜೀಲ ಅಸ್ಥೆಯನ್ನು ತಿರಸ್ಕರಿಸುತ್ತ ನುಡಿದಳು ಚಂದ್ರಭಾಗಕ್ಕ (ಮಾರುಹಾ. ೩೮). 'ಫಾಜೀಲತನ' ಪರಾ .
[←ಅರ. ಹಿಂ. ಫಾಜೀರ್ ; ಮರಾ. ಫಾಜೀಲ]

**ಫಾಜೀಲತನ** (ನಾ). ಅಶ್ಲೀಲತೆ ; ಅಸಭ್ಯತೆ : ತುಂಗಕ್ಕ ಬದಿಯ ಹೆಂಗಸಿನತ್ತ ಒಮ್ಮೆ ನೋಡಿ ಕಣ್ಣು ಮಿಟುಕಿಸಿದ ರೀತಿಯ ಫಾಜೀಲತನ ನೋಡಿ (ಮಾರುಗಾ. ೦೯೪). [ಫಾಜೀಲ + — ತನ]

**ಫಾಜೆ**, ಪಾಜ್ಜೆ$_2$ (ನಾ). (ಉಕ) (ಆಟದಲ್ಲಿ) ಮುಟ್ಟಬೇಕಾದ ಸ್ಥಳ.

**ಫಾಜೆ** : (ಶಾತಕೋ. ೦೩).

**ಫಾಜೆಗಟ್ಟು, ಪಾಜೆಗಟ್ಟು, ಫಾಜಿಗಟ್ಟ** = ಫಾಜೆ: ಮತ್ತೆ ನಾವು ಇದೇ ಮಾಶಿನ ಫಾಜೆಗಟ್ಟಿಗೆ ಬಂದೆವು (೦೯ಹು. ೬೦) ; ಅಡಗಿಕೊಂಡ ಚಿಕ್ಕಮಕ್ಕಳು ಕೂಗಾಡುತ್ತ ತಪ್ಪಿಸಿಕೊಂಡು . . . ಪಾಜೆಗಟ್ಟಿ ಮುಟ್ಟುವರು (ಕನ್ನಕಾ. ೩೬); ಮುಂಬಯಿಯ ಕೊನೆಯ ಫಾಜಿಗಟ್ಟಿಯಾದ ವ್ಹಿ. ಟಿ. ಸ್ಟೇಶನ್ನು ಬಂದಿತು (ಕಾಟಿಕ. ೬೨). [←ಮರಾ. ಫಾಂಜ್ = ಅಗಸೆಯ ಕಟ್ಟೆ]

**ಫಾಣಾಫಾಣ, ಫಾನಾಫಾನ** (ನಾ). (ಉಕ) ಅವ್ಯವಸ್ಥಿತವಾಗಿ ಚೆದುರುವುದು ; ದಿಕ್ಕಾಪಾಲು : ಎಲ್ಲರೂ ಫಾಣಾಫಾಣ ಆಗಿ, ಊರು ದಿಕ್ಕದಿವಾಳಿ ಆಗಿ ಹೋತು (ಗ್ರಾಮಜೀವ. ೬೦೦). **ಫಾನಾಫಾನ** : ದುಡ್ಡು ಹೋದ ಮ್ಯಾಲ ಎಲ್ಲಾರು ಫಾನಾಫಾನಾ ಆಗೋರು (ಗಂಪಜೀವ. ೦೦೦). [←ಮರಾ. ಫಾಣಾಫಾಣ]

**ಫಾಣೆ** (ನಾ). ೧. ಶುದ್ಧಗೊಳಿಸದೆ ಇರುವ ಬೆಲ್ಲದ ರಸ ; ಕಾಕಂಬಿ. ೨. ಮೊಸರಿನಲ್ಲಿ ಕಲಸಿದ ಹುರಿಹಿಟ್ಟು ; ಕರಂಭ. [ಸಂ.]

**ಫಾಣಿತ** (ನಾ). ೧. ಬೆಲ್ಲದ ಪಾಕಕ್ಕೆ ಸಂಪೂರ್ಣವಾಗಿ ಬಂದಿರದ ಕಬ್ಬಿನ ರಸ ; ಕಾಕಂಬಿ : "ಗುಡಮಕಾರಂ ಫಾಣಿತಂ" (ವಸ್ತುಕೋ. ೯೪-೦೨) ; "ಅರ್ಧಪಾಕವಾಗಿ ಕಾಯಿಸಿದ ಕಬ್ಬಿನ ಹಾಲಿಗೆ ಫಾಣಿತವೆಂತಲೂ ಹೆಸರುಗಳು" (ಸಿದ್ಧಾಂತಿ. ೨೯೬). ೨. ಬೆಲ್ಲ : "ಮತ್ಸ್ಯಂಡಿ, ಫಾಣಿತ ಎಂದೊಡೆ ಬೆಲ್ಲದ ಪಾಕ, ಬೆಲ್ಲವೆಂದೂ ಎಂಬರು" (ಚಾತಾ. ೬). ೩. ಹಾಲಿನಿಂದ ಮಾಡುವ ಒಂದು ಬಗೆಯ ತಿಂಡಿ. [ಸಂ.]

**ಫಾನಾಫಾನ** 'ಫಾಣಾಫಾಣ' ನೋ.

**ಫಾಯದೆ** 'ಫಾಯಿದೆ' ನೋ.

**ಫಾಯದೆಶೀರ** 'ಫಾಯಿದೇಶೀರ' ನೋ.

**ಫಾಯಿದೆ**, ಪಾಯದೆ, ಪಾಯಿದೆ, ಫಾಯದೆ (ನಾ). ಪ್ರಯೋಜನ ; ಲಾಭ ನಫೆ : ತಮ್ಮ ವಿಲಾಖತಿನ ಫಾಯಿದೆಯಿಂದ ಸಂತೋಷ ಪಡಿಸಬೇಕು (ರಾಜೇಂದ್ರ. ೩೬) : ಎಲ್ಲೋ ಫಾಯಿದೆ ಮಾಡಲು ಇನ್ನೊಂದೂರಿಗೆ ಹೋಗಿರಬೇಕು (ಹುಗಿಹು. ೩). **ಪಾಯದೆ:** ಇಂಜನೇರು ಕೆಪ್ಪನ್ ರನೆಲ್‌ಸಾಹೇಬ್ ಬಹಾದ್ದುರವರು ನಿಶಾನಿ ನಿಲ್ಲಿಸಿ, ದುರ್ಬೀನಿನಿಂದಾ ನೋಡಿ, ತಮ್ಮ ಸರಕಾರದ ಪಾಯದೆ ಕೆಲಸ ಮಾಡುತ್ತಿದ್ದರು (ರಾಜೇಂದ್ರ. ೨೯೯); ನಮ್ಮನ್ನ ವ್ಯಾಮೂರೀ ದುಡಿಸಿ, ಅದರ ಪಾಯದೇಕ ತಾವು ಮಾಲಕರಾಗೂದು (ಕೆಂಪಹು. ೯೯). **ಪಾಯಿದೆ :** ಈ ವ್ಯಾಪಾರದಲ್ಲಿ ತುಂಬಾ ಪಾಯಿದೆ ಇದೆ (ರೂಢಿ). **ಫಾಯದೆ :** ನನಗಿದೆಲ್ಲದರಿಂದ ಬಂದ ಫಾಯದೆ ಏನು ಹೇಳು (ಮೂಕಿಜಾ. ೯೨) ; ಅವರ ಆಸ್ಥೆಯ ಫಾಯದೆ ಒಂದಿಲ್ಲೊಂದು ರೀತಿಯಲ್ಲಿ ತೆಗೆದುಕೊಳ್ಳಬಹುದಲ್ಲ (ಕ್ಷೇತಿತ. ೬೮). [← ಅರ. ಫಾಯಿದಾ ; ಪಾರ. ಹಿಂ. ಮರಾ. ಫಾಯದಾ]

**ಫಾಯಿದೇಶೀರ**, ಫಾಯದೆಶೀರ (ಅ). ಲಾಭಪ್ರದವಾಗಿ ; ಲಾಭ ಬರುವಂತೆ : ರೋಖ ರಕಮಿನಿಂದ ಖರೀದಿ ಮಾಡುವ ಆಸಾಮಿಗಳಿಗೆ ಮಜೂರಿಯ ಖರ್ಚು ಫಾಯಿದೇಶೀರ ಬೀಳುವ ಸೂಚನೆ (ಮುಂಬವ್ಯಾ. ೪೦ ಪ್ರಸ್ತಾವನೆ). **ಫಾಯದೆಶೀರ :** ಕಿರಕೋಳಕ್ಕೆ ಫಾಯದೆಶೀರ ಬೆಲೆಯು ಸಿಗಲಿಕ್ಕಿಲ್ಲ (ಮುಂಬವ್ಯಾ. ೨೩೦). [← ಮರಾ. ಫಾಯದೇಶೀರ್]

**ಫಾಯಿಷ್** (ನಾ). ಪ್ರಕಟಣೆ ; ಜಾಹಿರಾತು : ಡಿಸ್ಟ್ರೀಕ್ಟ್ ಗೆಜೆಟಿನಲ್ಲಿ ಫಾಯಿಷ್ಮಾಡಬೇಕು (ಗ್ರಾಮಜೀವ. ೬೦). [← ಮರಾ. ಫಾಯಶ್]

**ಫಾರಂ** 'ಫಾರಮ್ಮು' ನೋ.

**ಫಾರಮ್ಮು**, ಫಾರಂ (ನಾ). ೧. ಮಾಹಿತಿಯನ್ನು ಬರೆಯಲು ನಿಗದಿಯಾದ ರೀತಿಯಲ್ಲಿ ಸಿದ್ಧಪಡಿಸಿದ ಕಾಗದ : ಅವರು ಕೊಟ್ಟ ಫಾರಮ್ಮಿನಲ್ಲಿ ನನ್ನ ವಿವರವನ್ನೆಲ್ಲಾ ತುಂಬಿಸಿದೆ (ರೂಢಿ). ೨. ಶಾಲೆಗಳಲ್ಲಿಯ ತರಗತಿ,—ಇಯತ್ತೆ : ಮನೆಯ ತಾಪತ್ರಯದಿಂದಾಗಿ ಅವಳ ಓದು ಎಂಟನೆಯ ಫಾರಮ್ಮಿಗೇ ನಿಂತುಹೋಯಿತು (ರೂಢಿ). **ಫಾರಂ :** ೧. ನಡೆದ ಸಂಗತಿ ತಿಳಿದ ಕೂಡಲೆ ೩ ರಿಪೋರ್ಟುಫಾರಂಗಳುಳ್ಳ ಫಾರಂಗಳಲ್ಲಿ ಬರೆದು . . . ರವಾನಿಸಬೇಕು (ಗ್ರಾಮಜೀವ. ೩೨). ೨. ನಿಮ್ಮ ಮಗಳು ಎಷ್ಟನೇ ಫಾರಂನಲ್ಲಿ ಓದುತ್ತಿದ್ದಾಳೆ ? (ರೂಢಿ). ೩. ಒಟ್ಟಿಗೆ ಮುದ್ರಿಸಲು ಚೌಕಟ್ಟಿನಲ್ಲಿ ಬಂಧಿಸಿ ಅಣಿಮಾಡಿ ಇಟ್ಟಿರುವ ಮುದ್ರಣದ ಮೊಳೆಗಳ ಜೋಡಣೆ ಮತ್ತು ಇಂತಹ ಜೋಡಣೆಯಿಂದ ಆದ ಪುಟಗಳ ಸಮೂಹ : ಹೀಗೆ ಚೌಕಟ್ಟಿನಲ್ಲಿ ಬಿಗಿ ಮಾಡಿದ ಪುಟಸಮೂಹಕ್ಕೆ 'ಫಾರಂ' ಎಂದು ಹೆಸರು (ಮುದ್ರಣ. ೪೦). [← ಇಂ. Form]

**ಫಾರೀಕತ್ತು**, ಪಾರಿಕತ್ತು, ಪಾರಿಖತ್ತು, ಪಾರೀಕತ್ತು, ಪಾರೀಖತ್ತು (ನಾ). ೧. ಪಾಲು ; ವಿಭಾಗ : ಫಾರೀಕತ್ತು ಅನದ್ಯಾಡಪಾ. ಅವನ್ಸಂಗ್ತೀಲೆ ಫಾರಿಕತ್ತು ಮಾಡಿಕೊಂಬೋ ಹಾಂಗಿಲ್ಲಾ (ಬಿಂಜಹು. ೦೦೬). **ಪಾರಿಕತ್ತು :** ೨. (ಜಮೀನು, ಆಸ್ತಿ ಮುಂತಾದುವು) ಬೇರೆ ಬೇರೆಯಾದುದನ್ನು ತಿಳಿಸುವ ಪತ್ರ ; ವಿಭಜನೆಯ ಪತ್ರ : ಮುಂದಿನ ವಾರವೋ ಆ ಮುಂದಿನ ವಾರವೋ "ಹಿಸ್ಸೆ ಆಗಿ ಪಾರಿಕತ್ತಾಗ್ತದಂತೆ !" (ಕಾಮೂರು. ೩೦೬) ; ಎಲ್ಲಿ ಹುಡುಕಿದರೂ 'ಪಾರಿಕತ್ತು' ಏಕೆ ಸಿಗಲಿಲ್ಲವೆಂಬುದೂ . . . ಕೋರ್ಟಿನಲ್ಲಿ ದತ್ತು ಏಕೆ ಊರ್ಜಿತವಾಗಲಿಲ್ಲವೆಂಬುದೂ ಮುಂತಾದ ಸಾವಿರಾರು ವಿಚಾರಗಳು ನಮ್ಮ ಹಳ್ಳಿಯ ಶ್ಯಾನುಭೋಗನಿಗೆ ಗೊತ್ತು (ಗರುಡಾ. ೬೬). **ಪಾರಿಖತ್ತು :** ೧. ಇಬ್ಬರೂ ಸ್ವಂತ ಹಿಡುವಳಿದಾರರಾಗಿದ್ದರೆ ಹಿಸ್ಸೆಯ ಪಾರಿಖತ್ತು ಪತ್ರ ಛಾಪಾಕಾಗದದ ಮೇಲಾಗಿ ಅದನ್ನು ರಿಜಿಸ್ಟರು ಮಾಡಬೇಕಿತ್ತು (ಗಂಗಾಳ. ೦೩೯). **ಪಾರೀಕತ್ತು:** ೨. ಸಣ್ಣಪ್ಪ ಸತ್ತ ಮೇಲೆ ಅವನ ಮಕ್ಕಳೆಲ್ಲ ವಿಭಾಗವಾಗಿ "ಪಾರೀಕತ್ತು" ಮಾಡಿಕೊಂಡರೂ . . . ದತ್ತು ಏಕೆ ಊರ್ಜಿತವಾಗಲಿಲ್ಲ (ಗರುಡಾ. ೬೬). **ಪಾರೀಖತ್ತು:** ೧. ಮಾತೆತ್ತಿದರೆ ಪಾಲು ಪಾರೀಖತ್ತು ಎಂದು ಅಪ್ಪ ಮಕ್ಕಳು ಅಣ್ಣತಮ್ಮಂದಿರು ಹಿಸ್ಸೆ ಮಾಡಿಕೊಂಡ ಕಾರಣ ಒಂದು ಸಣ್ಣ ಮನೆ ನಾಲ್ಕಾರು . . . ಮನೆಗಳಾಗಿ ಮಾರ್ಪಟ್ಟಿದೆ (ವಮ್ಮರು. ೩೦೯). [← ಪಾರ. ಫಾರಿಗಖತೀ ; ಹಿಂ. ಫಾರಖತಿ ; ಮರಾ. ಪಾರಕತ್, ಪಾರಕತೀ, ಪಾರಖತ್, ಪಾರಖತೀ]

**ಫಾಲ** (ನಾ). ೧. ನೇಗಿಲಿನ ಗುಳ. ೨. ಹತ್ತಿ ಬಟ್ಟೆ: "ಫಾಲಂ, ಕಾರ್ಪಾಸಂ, ಬಾದರಂ—೩ ನೂಲುಬಟ್ಟೆ" (ಸಿದ್ಧಾಂತಿ. ೨೦೨). ೩. ಗಂಟಲು ; ಮೂಟೆ. ೪. ಹಣೆ ; ನೊಸಲು : ಸಂತಸಂದಳೆದಾಳಿದನ ಪದಧೂಳಿಗೆಯು ಸಿರಫಾಲವನು ಸಾರ್ಚಿ (ಗಗಹಾ. ೨೨-೦೦೯). [ಸಂ.]

**ಫಾಲದಿವ್ಯ** (ನಾ). ಕಾಯಿಸಿದ ಕಬ್ಬಿಣದ ಗುಳವನ್ನು ಹಿಡಿದು ತಾನು ಸತ್ಯವಂತನೆಂದು ಸಿದ್ಧಪಡಿಸುವ ಒಂದು ದಿವ್ಯ: ದಿವ್ಯಗಳಲ್ಲಿ ಬಹು ಪ್ರಚಲಿತವಿದ್ದುದೆಂದರೆ 'ಪಾಳದಿವ್ಯ' ಅಥವಾ 'ಫಾಲದಿವ್ಯ' (ಕರಾಅ. ೩೯೬)§ [ಸಂ.]

**ಫಾಲ್ಗಣ** 'ಪಾಲುಗುಣ' ನೋ.

**ಫಾಲ್ಗುನ** (ನಾ). ಚಾಂದ್ರಮಾನವರ್ಷದ ಹನ್ನೆರಡನೆಯ ತಿಂಗಳು : "ಫಾಲ್ಗುನಃ, ತಪಸ್ಯಃ, ಫಾಲ್ಗುನಿಕಃ— ೩ ಫಾಲ್ಗುನಮಾಸದ ಹೆಸರುಗಳು" (ಸಿದ್ಧಾಂತಿ. ೪೦) ; ವಿಶ್ವನಾಥನಾದಿಜಿನಂ ಫಾಲ್ಗುನಬಹುಲೈಕಾದಶಿಯೊಳಮನಂತಸುಖನಿಲಯನುತ್ತರಾಷಾಢದೊಳ್ ಧ್ಯಾನಮರೀಚಿಯಿಂ ಬೆದಱ (ಆದಿಪು. ೧೦-೧೬). [ಸಂ.]

**ಫಾಲ್ಗುನನಂದೀಶ್ವರ** (ನಾ). [ಜೈನ] ಫಾಲ್ಗುಣಮಾಸದಲ್ಲಿ ಆಚರಿಸುವ ಒಂದು ವ್ರತ ಮತ್ತು ಆ ವ್ರತ ನಡೆಯುವ ದಿನ,—ನೋಂಪಿ: ಅನ್ನೆಗಂ ಫಾಲ್ಗುನ ನಂದೀಶ್ವರಮಾದುದಾಗಳುಭಯಬಲಮುಮುಭಯಘೋಷಣೆಯಂ ಘೋಷಿಸಿ ಕಾಳೆಗಮನುಟಿದಿರ್ಪುದಂ (ಪಂಪಭಾ. ೦೯-೬೩ ವ). [ಸಂ.]

**ಫಾಲ್ಗುನಿಕ** (ನಾ). = ಫಾಲ್ಗುನ : "ಫಾಲ್ಗುನಃ, ತಪಸ್ಯಃ, ಫಾಲ್ಗುನಿಕಃ —೩ ಫಾಲ್ಗುನಮಾಸದ ಹೆಸರುಗಳು" (ಸಿದ್ಧಾಂತಿ. ೯೦). [ಸಂ.]

**ಫಾಶಾ** 'ಫಾಸೆ' ನೋ.

**ಫಾಶಿ** 'ಫಾಸಿ' ನೋ.

**ಫಾಸಲೆ,** ಪಾಸಲೆ, ಫಾಸಿಲೆ (ನಾ). ೧. ದೂರ; ಅಂತರ: ಬೆಂಗಳೂರಿನಿಂದ ಮೈಸೂರಿಗೆ ಬರುವ ದಾರಿಯಲ್ಲಿ ೨೭ ಮೈಲಿ ಫಾಸಲೆಯಲ್ಲಿರುವ ರಾಮಗಿರಿ ಎಂಬ ಊರಿಗೆ ಕ್ಲೋಸ್‌ಪೇಟೆ ಎಂಬ ಹೆಸರು ಉಂಟಾಯಿತು (ಕುಹಾಸಂ. II, ೩); ನಂಜರಾಜನ ಶರೀರವು ಬಿದ್ದಿದ್ದ ಸ್ಥಳಕ್ಕೂ ರಾಜಒಡೆಯನಿದ್ದ ಸ್ಥಳಕ್ಕೂ ಅರ್ಧಮೈಲು ಫಾಸಲೆಯಿರಬಹುದು (ಶ್ರೀರಾಜು. ೨೦೦); ನಾಲ್ಕುಮೈಲಿ ಫಾಸಲೆಯಲ್ಲಿ ಯಾವ ಊರೂ ಇರಬಾರದು (ಅರಿಕು. ೬೬). **ಪಾಸಲೆ**: ೨. ಸುತ್ತ ಮುತ್ತಲ ಪ್ರದೇಶ,—ಸ್ಥಳ: ಸುಮಾರು ಹತ್ತಿಪ್ಪತ್ತು ಮೈಲು ಪಾಸಲೆಯೊಳಗೆ ಒಂದೇ ಒಂದು ಆಸ್ಪತ್ರೆ ಇಲ್ಲ (ಜಾಲಕೂಟ. ೦೯); ಈ ಪಾಸಲೆಗೆಲ್ಲ ಅವರೇ ಮೊದಲು ಗಾಡಿ ತರಿಸ್ಕೊಂಡ್ರೋರು (ಕುಕಿಷು. ೦೬೩). **ಫಾಸಿಲೆ**: ೧. ಎರಡು ಗ್ರಾಮಗಳ ನಾಲ್ಕು ಮೈಲಿ ಫಾಸಿಲೆಯಲ್ಲಿ ಮೊಕ್ಕಾಂ ಮಾಡಿದರು (ಕಹಿಪಾ II, ೯೬೨). [← ಅರ. ಹಿಂ. ಮರಾ. ಫಾಸಲಾ]

**ಫಾಸಿ,** ಫಾಶ್ಶಿ, ಫಾಸ್ಸಿ, ಫಾಶಿ (ನಾ). ನೇಣು ಹಾಕಿ ಕೊಲ್ಲುವ ಶಿಕ್ಷೆ; ಗಲ್ಲು: ಆದರೆ ಫಾಸಿಯ ಹಗ್ಗ ಒಂದಿರಲಿಲ್ಲ (ಅಂಗಾಹಿ. ೨೫); ಅವನಿಗೆ ಸಿಂಗಾಪುರದಲ್ಲಿ ಫಾಸಿಯಾಯಿತು (ಕಾರಿಕ. ೮೦). **ಫಾಶ್ಶಿ**: 'ಫಾಶಿ ಸಜಾ' ಪರಾ. **ಫಾಸ್ಸಿ**: ದೀನಜನೋದ್ಧಾರಕನಂತೆ . . . ದೀನಜನರ ಕೊರಳಿಗೆ ಫಾಸ್ಸಿ ಹಾಕುವವ (ಶಲಕು. ೯೩). **ಫಾಶಿ**: ಏನು, ಯಾರಾದರೂ ಫಾಶಿಗೆ ಕೊಡಲಿರುವರೇನು ನನ್ನನ್ನ (ಹಾಕ್ಸಾರ್ಕ. ೨೦೬); ಜಹಾಗೀರದಾರರಿಗೆ ಯಾವ ಶಿಕ್ಷೆ ಆಗುವುದೋ ಕೇಳಬೇಕೆಂದು ಎಲ್ಲರೂ ಆತುರರಾಗಿದ್ದಾರೆ. 'ಫಾಶಿ ಇಲ್ಲದಿದ್ದರೆ ಕಾಳಾಪಾಣಿ' ಎಂದು ಎಲ್ಲರೂ ಆಡುತ್ತಾರೆ (ಕವಿಕ. ೯೦); ಭೀತಿಯ ಅಪಾಯದ ಹಾಗೂ ಫಾಶಿಯ ಉರುಳಿನ ನೆರಳಲ್ಲೇ ನಾವು ದುಡಿಯಬೇಕು (ಅಕ್ಷಾರ್ಕರ. ೦೩೬).

**ಫಾಸಿ ಕೊಡು** = ಗಲ್ಲುಗಂಬಕ್ಕೇರಿಸು; ನೇಣು ಹಾಕು: ಕಳ್ಳರನ್ನು ಪತ್ತೆ ಮಾಡದಿದ್ದರೆ ನಿನಗೆ ಫಾಸಿ ಕೊಡುವೆನು (ಕಂಠೀರಾಜ್ಕು. ೩೬). [← ಹಿಂ. ಫಾಂಸೀ ; ಮರಾ. ಫಾಶೀ, ಫಾಂಶೀ]

**ಫಾಸಿಕಂಬ** (ನಾ). ನೇಣು ಹಾಕುವ ಕಂಬ: ಅವನ ದೃಷ್ಟಿಯೆದುರಿಗೆ ಜೇಲಿನ ದೊಡ್ಡ ದೊಡ್ಡ ಗೋಡೆಗಳು ಬಂದು ನಿಂತಂತಾಯಿತು. ಶಿವಿಗತ್ತಿಯು ಬಂದೂಕು ಹಿಡಿದುಕೊಂಡು ಪಹರೆ ಮಾಡುವ ಪೋಲೀಸರು, ಕಲ್ಲು ಒಡೆಯುವ ಕೈದಿಗಳು, ಫಾಸೀಕಂಬ (ಜುಜ್ಜುಹಿ. ೦೩). [ಫಾಸಿ + ಕಂಬ$_1$ (< ಕಂಭ)]

**ಫಾಸಿಖಾನೆ** (ನಾ). ಗಲ್ಲಿನ ಶಿಕ್ಷೆಯನ್ನು ಕೊಡುವ ಸ್ಥಳ: ನಿನಗೆ ಈ ಬಂದೀಖಾನೆಯಲ್ಲಿ ಫಾಸಿಖಾನೆಯಿದೆಯೆಂದೂ ಮತ್ತು ನನಗೆ ಫಾಸಿ ಶಿಕ್ಷೆಯನ್ನು ವಿಧಿಸಲು ಅಧಿಕಾರವಿದೆಯೆಂದೂ ತಿಳಿದಿರುವುದೇ? (ಬುತಾಹಿ. ೦೬೩). [ಫಾಸಿ + ಖಾನೆ]

**ಫಾಸಿಲ್** 'ಫಾಸಲೆ' ನೋ.

**ಫಾಸಿಶಿಕ್ಷೆ** (ನಾ). = ಫಾಸಿ: ಮುಖಕ್ಕೆ ಫಾಸಿಶಿಕ್ಷೆ ಅನುಭವಿಸಲು ಹೋಗುವ ಕೈದಿಯ ಕಳೆ ಬರುವುದು (ದೋರಕು. ೬೬). [ಫಾಸಿ + ಶಿಕ್ಷೆ]

**ಫಾಸೆ,** ಪಾಸ್ಕೆ, ಪಾಸ್ಸೆ, ಫಾಶಾ (ನಾ). ೧. ಪಗಡೆ, ಲೆತ್ತ ಮೊದಲಾದುವುಗಳಲ್ಲಿ ಬಳಸುವ ದಾಳ: ಬಸಂತಿಯು . . . ಪಗಡಿಗಳನ್ನು ಇಟ್ಟು ಹಸ್ತಿದಂತ ನಿರ್ಮಿತವಾದ ಫಾಸೆಗಳನ್ನು ಕೊಟ್ಟಳು (ಮುಂಕಾಶ. ೬೨). **ಪಾಸ್ಕೆ**: ೨. ಪಗಡೆಯಾಟದಲ್ಲಿ ದಾಳಗಳಿಂದ ಸೂಚಿತವಾಗುವ ಸಂಖ್ಯೆ; ಗರ: ಇಂದು ಲೆತ್ತದ ಪಾಸಿಯೇ ತಿರುವುಮುರುವಾಗಿ ಬಿಟ್ಟಿತು (ಕೃಕಮೂಶ್ರ. ೨೮೦). **ಪಾಸ್ಸೆ**: ೨. ದೂತಕ್ರೀಡೆಯಲ್ಲಿ ನಿಪುಣನಾದವನು ಪಾಸೆಗಳು ಹೇಗೆ ಬಿದ್ದರೂ ಖೇದಪಡುವುದಿಲ್ಲ (ಕುಭಾಶ. ೯೦). **ಫಾಶಾ**: ೧. ಪರಮಪಾಪಿ ಶಕುನಿ ತಾನು ಫಾಶಾದೊಳಗೆ ಫಕೀರನಾಗಿ ಧರ್ಮರಾಜ ಧರುಣಿ ದ್ರೌಪತಿನ ಸೋತರ (ಜಾಲ್ಗಿಗ. ೯೯). [← ಮರಾ. ಫಾಸಾ]

**ಫಾಳ,** ಫಾಳು (ನಾ). ತುಂಡು; ತುಕಡಿ: ಜಂಗವೋತ್ತಮರಿಗೆಲ್ಲರಿಗು ಆ ಕನಕದ ಫಾಳವನ್ನು ತೋರಿ (ಹುಕೋಶ. ೦೩೦). **ಫಾಳು**: ಆ ಚರಮೂರ್ತಿಗಂ ವೊಂದು ಹೇಮದ ಫಾಳನ್ನು ಕೊಟ್ಟು (ಹುಕೋಶ. ೦೩೦). [← ಮರಾ. ಫಾಳ]

**ಫಾಳಣೆ.** ಫಳಣೆ (ನಾ). ೧. ವಿಭಾಗಿಸುವಿಕೆ; ಬೇರ್ಪಡಿಸುವಿಕೆ: ರೇಲವೇ ಫೀ, ಜಕಾತ, ಗಾಡಿಬಾಡಿಗೆ ಮುಂತಾದ ಖರ್ಚುಗಳ ಫಾಳಣೆ ಮಾಡಲಿಕ್ಕೆ ಅಡಚಣೆ ಬೀಳುವದು (ಮುಂಂಬಿಯ್ಯಾ. ೯೦). **ಫಳಣೆ**: ೨. ಜಮೀನಿನ ವಿಭಾಗ,—ತುಂಡು: ಕೆಲವು ಹಳ್ಳಿಗಳಲ್ಲಿ ಫಳಣೆಯೆಂಬ ವಿಭಾಗಗಳಿದ್ದವು. ಒಂದು ಫಳಣೆಯೆಂದರೆ ಸುಮಾರು ೨ ಕೂರಿಗೆ ಆಗುತ್ತಿತ್ತು (ಕಹಾಗ. ೩೬೩). [← ಮರಾ. ಫಾಳಣೀ]

**ಫಾಳಿ** (ನಾ). ತುಂಡು; ತುಕಡಿ (?): ಈ ಕ್ಷೇತ್ರಮಂ ವಿಷ್ಕಂಭದಿನವಕರ್ಷಣಭಾಗಹಾರಮಾತ್ರ ಫಾಳಿಗಳಂ ಮಾಡಿಯೇಕಫಾಳಿಯಂ ತೆಗೆವುತ್ತಿರೆ ವಿಶೇಷಕ್ಷೇತ್ರಮಕ್ಕುಂ (ಕ್ಷೇತ್ರ. ೨೦–೨೦). [← ಮರಾ. ಫಾಳೀ]

**ಫಾಳು** 'ಫಾಳ' ನೋ.

**ಫಾಳೆ** 'ಪಾಳ್ಯ' ನೋ.

**ಫಕೀರು,** ಒಕೀರು (ನಾ). ೧. ಆಸ್ಥೆ; ಆಸಕ್ತಿ: ಶಿವರಾತ್ರಿಯ ಹಬ್ಬದ ದಿವಸ ಮಹದೇವಪುರದಲ್ಲಿ ಬಹಳ ಫಕೀರಿನಲ್ಲಿ ಖುಷಿಯಿಂದ ಹಬ್ಬ ಮಾಡುತ್ತಾ ಇರುತ್ತಾರೆ (ರಾತೇಂದ್ರ. ೦೦೯). **ಒಕೀರು**: ೨. ಚಿಂತೆ; ಕಾಳಜಿ: ಕೆಂಪ ಕೇರೀಲಿರೋದು ಅಕ್ಕಪಕ್ಕದ ಮನೆಯೋರ್ಗೆಲ್ಲಾ ತುಂಬಾ ಒಕೀರಾಗಿತ್ತು (ಅನಾಬಿ. ೬೯); ಮಣಿ . . . ಏನಾಗಿ ಹೋಗಿದೆಯೋ ಅವರಿಗೆ ಎಂಬ ಒಕೀರಿನಿಂದ ಹೆಡ್‌ಮೇಷ್ಟರ ರೂಮಿನೊಳಕ್ಕೆ ಬಂದ (ತ್ರ್ಯಂಬಿಸ್ಕೇ. ೦೬೪).

[← ಅರ. ಫಿಕ್ರ್; ಹಿಂ. ಫಿಕಿರ್, ಫಿಕ್ರ್; ಮರಾ. ಫಿಕೀರ್, ಫಿಕರ್]

**ಫಿತೂರಿ,** ಪಿತೂರಿ (ನಾ). ಕುತಂತ್ರ; "ಒಳಸಂಚು; ಸಂಚು" (ಹಾಕಕೋ. ೦೮). **ಪಿತೂರಿ**: ನಿಜಸಂಸ್ಥಾನದೊಳಿರ್ಪ ಕುಹಕನಿಯೋಗಿಗಳೊಡರ್ಚಿದ ಪಿತೂರಿ[ಹಾತಾಂ. ಪಿತುರ್ಮ]ಯಿಂ ವಿಜಯಪುರವರ್ತಿಯೆನಿಸುವ ಮುಜಬರಖಾನು ತರಳ್ದೆ (ಕಕವ್ಯ. ೬–೩೩); ಇದು ಬಂಡವಾಳಗಾರರ ಪಿತೂರಿ (ಅಶ್ವಾವ. ೦೭); ರಾಜಕೀಯಜಾಗೃತಿ ಎರಡು ರೂಪಗಳನ್ನು ತಾಳಿತು; ಒಂದು ಪಿತೂರಿಯದು; ಇನ್ನೊಂದು ಸುಧಾರಣೆಯದು (ಶ್ಯಾಕ್ಯಶಾ. ೦೩).

**ಪಿತೂರಿ ನಡೆ** = ಒಳಸಂಚು ಆಗು; ತಂತ್ರಕ್ಕೆ ಎಡೆಯಾಗಿರು: ಹೈದರನು ತಕ್ಷಣವೇ ಅನುಮಾನಶಕ್ತಿಯಿಂದ ಪಿತೂರಿ ನಡೆದಿದೆಯೆಂದು ಗ್ರಹಿಸಿದನು (ಒಕಹ. ೬೫). **ಪಿತೂರಿ ನಡೆಸು**=ಒಳಸಂಚನ್ನು ಹೂಡು; ಸಂಚು ಮಾಡು: ಇಬ್ಬರೂ ಸೇರಿ ಪಿತೂರಿ ನಡೆಸಿದರು (ಕೊಪಕಿಕ. ೨೦೩); ನೀವೆಲ್ಲ ಕೂಡಿ ನನ್ನ ವಿರುದ್ಧ ಒಂದು ಪಿತೂರಿ ನಡೆಸಿದ್ದೀರಿ (ಐಜಾಜ. ೦೩೪). **ಪಿತೂರಿ ಮಾಡು** = ಪಿತೂರಿ ನಡೆಸು: ನಾನು ಎಷ್ಟೋ ಪಿತೂರಿ ಮಾಡಿದೆ. ಆದರೆ ದುಃಖ ಮತ್ತು ಲಜ್ಜೆ ಹೊರತು ಮತ್ತೇನೂ ದೊರೆಯಲಿಲ್ಲ (ಮುಲಿಪಾ. ೦೦೨). **ಪಿತೂರಿ ಹೂಡು** = ಪಿತೂರಿ ನಡೆಸು: ಎರಡನೆಯ ಬಾಜಿರಾಯ . . . ಬ್ರಿಟೀಷರ ಮೇಲೆ ಬೀಳಲು ಪಿತೂರಿ ಹೂಡಿದನು (ಶಾರಿದ. ೯೨೬). **ಫಿತೂರಿಯಾಗು** = ಒಳಸಂಚಿನಲ್ಲಿ ಭಾಗಿಯಾಗು: ನೀನು ಫಿತೂರಿಯಾಗಿಲ್ಲವೆಂಬುದನ್ನು ಕಾರ್ಯ ಮಾಡಿ

ತೋರಿಸದಿದ್ದರೆ ನನ್ನ ವತನವನ್ನೇ ಖಲಾಸಾ ಮಾಡಿಸಿ ಬಿಡುವೆನು (ಹುಬ. ೨೭೩).
[← ಅರ. ಫುತುರ್; ಹಿಂ. ಫಿತೂರ್; ಮರಾ. ಫಿತುರೀ, ಫಿತೂರ್]

**ಫಿದವಿ**, **ಫಿದಿವಿ**, **ಫಿದ್ವಿ** (ನಾ). ೧. ಸೇವೆ; ಕೈಂಕರ್ಯ: ಗೌರ್ನರ್ ವದವಿ ಮೇಲೆ, ಕಾರ್ಕೂನ್ ಫಿದವಿ ಕೀಳೆ? ಎರಡೂ ಒಂದೆ ನನಗೆ (ಶಿಶುಂ. ೨೬-೩). **ಫಿದಿವಿ**: ೨. ಸೇವಕ; ಆಳು: (೯). **ಫಿದ್ವಿ**: ೨. (ಕೈಶಗ. II. ೩೩೯). [← ಅರ. ಹಿಂ. ಮರಾ. ಫಿದವೀ]

**ಫಿದಿವಿ** 'ಫಿದವಿ' ನೋ.

**ಫಿದ್ವಿ** 'ಫಿದವಿ' ನೋ.

**ಫಿನಾಯಿಲ್** 'ಫಿನೈಲ್' ನೋ.

**ಫಿನೈಲ್**, **ಫಿನಾಯಿಲ್** (ನಾ). ಕ್ರಿಮಿನಾಶಕವಾದ ಒಂದು ಔಷಧಿ ದ್ರವ; ಕಾರ್ಬಾಲಿಕ್ ಆವ್ಲ: ನೊಣಗಳ ವಿಷಯವೂ ಹೀಗೆಯೇ . . . ನಿತ್ಯವೂ ಫಿನೈಲ್ ಹಾಕಿ ನೆಲವನ್ನು ಸಾರಿಸುತಿದ್ದರೂ ಅವು ಎಲ್ಲೆಲ್ಲೂ ಕಾಣಸಿಕೊಳ್ಳುತ್ತವೆ (ಶಂಟಿಬು. ೯೯). **ಫಿನಾಯಿಲ್**: ಮೊನ್ನೆ ಫಿನಾಯಲ್ ಹಾಕಿದ ಬಕೆಟ್ಟಿನಲ್ಲಿ ಹುಳಿ ತಂದು ಬಡಿಸಿಬಿಟ್ಟರು ಪುಣ್ಯಾತ್ಮರು (ಅಗಸ್ಯ. ೬೩). [← ಇಂ. Phenyl, Phenol]

**ಫಿರಂಗಿ**, ಪರಂಗ, ಪರಂಗಿ, ಪಿರಂಗಿ, ಫರಂಗಿ (ನಾ). ೧. ಐರೋಪ್ಯ ಜನಾಂಗಕ್ಕೆ ಸೇರಿದವನು: ಕಾವಲುದಳದ ಸಿಪಾಯಿಗಳು . . . ಫಿರಂಗಿಗಳ ಬಳಿಗೋಡಿದರು (ವನಹೂ. ೦೨೬); ಫಿರಂಗಿಗಳನ್ನು ಹಿಂದುಸ್ತಾನದಿಂದ ಹೊರಗೆ ಅಟ್ಟುವುದನ್ನು ನೋಡುವುದೇ ನನ್ನ ತೀವ್ರ ಇಚ್ಛೆಯಾಗಿದೆ (ಕ್ರಾಂಶಿ. ೫೬). ೨. ತೋಪು; ದೊಡ್ಡ ತುಬಾಕಿ: ಇಡಿಸಲೆ ನಿನ್ನ ಫಿರಂಗಿ ಬಾಯೊಳು (ಲಕ್ಷ್ಮಶಾ. ೩-೭೭); ಪೆಟಲು ಬಾಣ ಫಿರಂಗಿ ಕೋವಿಯ ಭಟರು ಹರಿಗೆಯ ಬಲ್ಲಿನಲಿ ಸಂಘಟಿಸಿತಾಕ್ಷಣ (ಕಠೀ. ೩೩೦-೦೩); ಅವರನ್ನು ಫಿರಂಗೀಬಾಯಿಗೆ ಕಟ್ಟಿ ಸಂಹರಿಸುವಂತೆ ಹೇಳು (ಮುದ್ರಾಮಂ. ೦೨೬); ಗುಂಡು ಹಾರಿಸಿದ ಫಿರಂಗಿಯಿಂದ ಹೊರಟಿದ್ದ ಕರಿನೀಲಿಯ ಹೊಗೆ ಬತೇರಿಯನ್ನು ತುಂಬಿತ್ತು (ಕೃಷ್ಣಕೂ. ೨). ೩. ಮೇಹರೋಗ: 'ಫಿರಂಗಿರೋಗ' ಪರಾ. **ಪರಂಗ**: ೧. ಸಮಸ್ತವೀರಪರಿವಾರಾಸಯವಾಗಿ ಗೋವಯ ಪರಂಗದ ಕಪಿತನ ಮೇಲೆ ದಂ[ಡು] × ಟಯೆಲ್ಲನ × (ಕಇ. I. ೬೯-೬; ೦೫೨೨); ಪರಂಗದವರ ರಾಜಕಾರ್ಯ್ಯದಲಿ ನಂಮ ಅರಮನೆಯ ಬಾಗಿಲಲ್ಲಿ ನಿಂ[ನ ತಂಮ] ಯೆಕಪ್ಪನಾಯಕನು ಯಿಱಿದು ಯಿ[ಱಿಯಿಸಿಕೊಂಡು] ಬೀಳಲಾಗಿ (ಕಇ. III. ೦೩-೯; 1542). **ಪರಂಗಿ**: ೧. ಹೊಯ್ಸಳ ಕೊಂಗು ಸಿಂಧು ಪರಂಗಿ ಪಾಂಚಾಲಾದಿ ನೃವರೇಳ್ವಂಚರಿಲ್ಲಿಯಲಿ (ಮರೇಶು. ೯-೧೩); ಕರೆಯವನಿಗೆ ಬಾಧಕರಾಗಿರುವ ಪರಂಗಿಗಳ ಬಲವನುಡುಗಿಸಿ (ಕಳವ್ಯ. ೭-೭); ಪರಂಗಿಗಳಿಂದ ಬಂದ ಪಮ್ಮೇಳದ್ರವ್ಯಂಗಳಂ . . . ಉಳಿಯದ್ವೇಳ್ಕು (ಮಹಾಶಿ. ೧೧-೯೦). ೪. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಪಪ್ಪಾಯಿ: 'ಪರಂಗಿಗಿಡ' ಪರಾ. ೫. (ಕರಾ) ಪೈನಾಪಲ್ ಗಿಡ; ಅನಾನಸು: 'ಪರಂಗಿಗಿಡ' ಪರಾ. **ಪಿರಂಗಿ**: ೨. ತರಕಸ ಶಾರ್ಙ್ಗ ಪಿರಂಗಿ ಭಲ್ಲೆಯ ಬಟ್ಟ ಬಿಜುಗಣ್ಣು ಛೀಕರಾನನವು . . . ಒಪ್ಪಲ್ಪಪ್ಪ ತುರುಕ ವಜೀರ (ಮರೇಶು. ೨೦-೭೦); ಪುರದ ಕೋಟೆಯ ಸುತ್ತಣ ಕೊತ್ತಳಗಳೊಳು ಮಡಿದುವು ಬಲು ಪಿರಂಗಿಗಳು (ಕಂಠಶ. ೬-೦೭): ಕೊತ್ತಲಗಳ ಮೇಲೆ ಯೆತ್ತಿ ಪಿರಂಗಿಯ ಹತ್ತು ದಿಕ್ಕಿನೊಳು ಹಾರಿಸಲು (ಶ್ರೀಗಂಶ. ೨-೦೯). **ಫರಂಗಿ**: ೧. ಯಾವ ಫರಂಗಿ ಬಂದು ಹೇಳುತ್ತಾನೋ ಹೇಳಲಿ (ಶಿವಶ. ೯೬); ಇವನನ್ನು . . . ಫರಂಗಿಯವರು ಹಿಡಿದು ಗಲ್ಲಿಗೆ ಏರಿಸಿದಾಗ ತಾಲ್ಲೂಕು ತಾಲ್ಲೂಕೇ ಅತ್ತಿತಂತೆ (ಕಶಜಾ. II. ೦೫೨); ನಡುವೆ ಫರಂಗಿಗುಂಡು ಸುತ್ತುತ್ ಫರಂಗಿ ದಂಡು (ಜಾಕಶ. ೦೫೨). [← ಇಂ. Frank./ ಹಿಂ. ಮರಾ. ಫಿರಂಗೀ. / ಸಂ. ಫಿರಂಗ]

**ಫಿರಂಗಿಉಬ್ಬೆ** (ನಾ). ಫಿರಂಗಿರೋಗದಿಂದ ಬರುವ ಹುಣ್ಣು: ಫಿರಂಗಿಉಬ್ಬೆಗೆ . . . ತಾಳಕ ೧೦ ತೂಕ, ರಸ ೨ ತೂಕ, ಕಪ್ಪಲಿಸತ್ವ ೧ ತೂಕ ನಿಂಬೇಹುಳಿಯಿಂದರೆದು ಮೂಸೆಯಲಿರಿಸಿ ಗುಳಿಗೆಯ ಮಾಡಿ ಮೂಸೆಯಲಿರಿಸಿ ಮೇಲೆ ಮರಳ ತುಂಬಿ ತುಸು ಪುಟಸಿಕೊಳ್ಳೆ ಹರವಹುದು (ಅಪ್ರಶಿ. ೦೫೨). [ಫಿರಂಗಿ + ಉಬ್ಬೆ$_1$? ]

**ಫಿರಂಗಿಚೆಕ್ಕೆ**, ಪರಂಗಿಚೆಕ್ಕೆ (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಬೇರು: ಫಿರಂಗಿ ಚೆಕ್ಕೆ ೧ ಸೇರು, ಇದಕ್ಕೆ ಕೊಡುವ ದ್ರವ್ಯ- ಹಿಪ್ಪಲಿ . . . ದೇವದಾರು, ಇವುಗಳು ಪತ್ರಿ ಗ ೨ ತೂಕವ ಚೂರ್ಣವ ಮಾಡಿ ತೆಗೆದುಕೊಳ್ಳುವುದು (ಅಪ್ರಶಿ. ೩೯). **ಪರಂಗಿಚೆಕ್ಕೆ**: (ಮೈಕಿ. ೬೦-೦೯೩೬); ಪರಂಗಿಚೆಕ್ಕೆಯ ಒಣಬೇರುಗಳಿಂದ ಸಾರ್ಸಪರಿಲ ಎಂಬ ವಸ್ತು ಸಿಕ್ಕುತ್ತದೆ (ಕಶಕೋ. X. ೭೯೩). [ದೇ.ಶ ತಮಿ. ಪಱಙ್ಗಿಚ್ಚಕ್ಕೈ; ತೆಲು. ಪರಂಗಿಚೆಕ್ಕ]

**ಫಿರಂಗಿರೋಗ**, ಪರಂಗಿರೋಗ (ನಾ). ಒಂದು ಬಗೆಯ ಮೇಹರೋಗ; ಉಪದಂಶ; ಪರಂಗಿ ಹುಣ್ಣಿನ ರೋಗ: ಉಪದಂಶ ಅಥವಾ ಫಿರಂಗಿರೋಗ (syphilis)ದಲ್ಲಿ ತೀವ್ರವಾದ ಮನೋರೋಗಗಳುಂಟಾಗುವುವು (ಮನೋರೋ. ೨೯). **ಪರಂಗಿರೋಗ**: ಪರಂಗಿ ರೋಗವು ನಮ್ಮ ಇಂಡಿಯಾದೇಶದ ಹಲವು ಭಾಗಗಳಲ್ಲಿರುವ ಕುರುಡುತನಕ್ಕೆ ಕಾರಣವಾಗಿರುತ್ತ (ಅಮೃಕೃ. ೦೦೫). [ಫಿರಂಗಿ + ರೋಗ]

**ಫಿರಂಗಿಶೂಲೆ** (ನಾ). = ಫಿರಂಗಿಉಬ್ಬೆ: ಫಿರಂಗಿಶೂಲೆಯಾಗಿದ್ದ ಠಾವಿಗೆ ದಿನ ಒಂದಕ್ಕೆ ಮೂಱು ಬಾರಿ ತೊಡೆದು ಮಾಯಲು ೫ ದಿನದ ಮೇಲೆ ಕೀವು ಬರುವುದು (ಅಪ್ರಶಿ. ೩೯). [ಫಿರಂಗಿ + ಶೂಲೆ$_1$]

**ಫಿರಂಗಿಹುಣ್ಣು**, ಪರಂಗಿಹುಣ್ಣು (ನಾ). = ಫಿರಂಗಿಉಬ್ಬೆ: ಆತ್ಮೆಲವಂ ಪಾವಡೆಗೆ ತೊಡೆದು ಹುಣ್ಣಿಗೆ ಹಾಕಲು ಎಂಥ ಫಿರಂಗಿಹುಣ್ಣು ಮಾಣ್ಗುಂ (ಅಪ್ರಶಿ. ೬೬). **ಪರಂಗಿಹುಣ್ಣು**: ಉಪದಂಶವೆಂದರೂ . . . ಪರಂಗಿ ಹುಣ್ಣು ಎಂದರೂ ಎಲ್ಲಾ ಒಂದೇ ಜಾತಿ (ವೈಶಾ. II. ೦೭೬). [ಫಿರಂಗಿ + ಹುಣ್ಣು (<ಪುಣ್)]

**ಫಿರಕ** 'ಫಿರ್ಕಾ' ನೋ.

**ಫಿರತಿ**, **ಫಿರ್ತಿ** (ನಾ). ಸಂಚಾರ; ಪರ್ಯಟನ; ಪ್ರವಾಸ: ಈ ಸಾರಿಯ ಫಿರತಿಯಲ್ಲಿ . . . ರಾಮರಾಯನ ಜೊತೆಗೆ ಕಟ್ಟಿಗೆ ಹೋಗಬೇಕಾಗಿ ಬಂದಿತು. ಅವನ ಫಿರತಿಗಳು ಹೆಸರಾಗಿದ್ದವು (ಗಂಪೂಬು. ೦೯೪); ಇವರು ವರ್ಷಕ್ಕೆ ಏಳು ತಿಂಗಳು ಫಿರತೀ ಮಾಡಲೇಬೇಕು (ಕಾರವ. ೬೫); ಇದ್ದೂರಾಗ ಹತ್ತು ರೂಪಾಯಿ ಕಡಿಮಿ ಸಂಬಳ ಸಿಕ್ಕರೂ ಅಡ್ಡಿಯಿಲ್ಲ ಈ ಫಿರತಿ ಕೆಲಸ ಸಿಗಬಾರದು (ಪೂಶಾಕ. ೯೩). **ಫಿರ್ತಿ**: ಆಗಾಗ ಫಿರ್ತಿಯ ಕೆಲಸವೂ ಬೀಳುವುದು (ಸಾಂಬು. ೧೩೦); ಸಾಹೇಬರೊಂದಿಗೆ ಅವರು ಹಳ್ಳಿಯ ಮೇಲೆ ಫಿರ್ತಿಗೆ ಅದೇ ಹೋಗಿದ್ದರು (ಹೇಮಂಕ. ೦೭೫). [← ಮರಾ. ಫಿರತೀ]

**ಫಿರಿಕಟ್ಟು** (ನಾ). ತಡೆ; ಬಂಧನ; ಬಂದೋಬಸ್ತು: ಅವನಿಗೆ ಜಾರಂದಾಯ ಭೂತ ಹಿಡಿದಿದೆ . . . ಆದಕ್ಕೆ ತಕ್ಕ ಫಿರಿಕಟ್ಟು ಮಾಡದಿದ್ದರೆ ಅದು ಎಲ್ಲರನ್ನೂ ರಕ್ತ ಕಾರಿಸಿ ಕೊಲ್ಲುವ ಮಹಾಭೂತ! (ಕಪಾಶಿ. ೦೯೯). [← ತುಳು. ಪಿರಿಕಟ್ಟು]

**ಫಿರಿಯಾದಿ** 'ಫಿರ್ಯಾದು' ನೋ.

**ಫಿರಿಯಾದು** 'ಫಿರ್ಯಾದು' ನೋ.

**ಫಿರ್ಕಾ**, **ಫಿರಕ**, **ಪಿರ್ಕಾ** (ನಾ). ಶಾನುಭೋಗನ ಅಧಿಕಾರಕ್ಕೆ ಒಳಪಟ್ಟ ಹೋಬಳಿಯ ಒಂದು ವಿಭಾಗ: ಸಿಲೆದಾರಿ ಫಿರ್ಕಾದಲ್ಲಿ

೨೮,೦೦೦ ಕುದುರೆಗಳಿದ್ದವು (ಮುಹಾಕಂ. II. ೦೬); ಎರಡು ಅಥವಾ ಹೆಚ್ಚು ಗ್ರಾಮಗಳನ್ನು ಅಥವಾ ಅವುಗಳ ಭಾಗಗಳನ್ನು ಒಂದು ಫಿರ್ಕಾವಾಗಿ ಏರ್ಪಡಿಸಬಹುದು (ಗ್ರಾಕಾಶ. ೬೬); ಅವರ ಫಿರ್ಕಾದಲ್ಲಿ ಕಂದಾಯ ಯಾವಾಗಲೂ ಬಾಕಿಯಾದುದೇ ಇಲ್ಲ (ಜಪ್ತ್. ೨೦). ಫಿರಕ : (೬).

**ಫಿರ್ಕಾ** : ಒಂದೊಂದು ಫಿರ್ಕಾದಲ್ಲಿ ಶಾಲ್ಲೂಕು ಅವುಲ್ದಾರರುಗಳು . . . ಗ್ರಾಮನೌಕರರಿಗೆ ರಜಾ ಮಂಜೂರುಮಾಡಲು ಅಧಿಕಾರ ಹೊಂದಿರುವರು (ಗ್ರಾಕಾಶ. ೭). [← ಅರ. ಹಿಂ. ಫಿರಕಾ]

**ಫಿರ್ಕಾ** 'ಫಿರ್ಕಾ' ನೋ.

**ಫಿರ್ತಿ** 'ಫಿರತಿ' ನೋ.

**ಫಿರ್ಯಾದಿ** 'ಫಿರ್ಯಾದು' ನೋ.

**ಫಿರ್ಯಾದು**, ಫಿರಿಯಾದಿ, ಫಿರಿಯಾದಿ, ಫಿರಿಯಾದು, ಫಿರ್ಯಾದಿ (ನಾ). ೧. ತಮಗಿರುವ ತೊಂದರೆಯನ್ನು ತಿಳಿಸಿ ಪರಿಹಾರಕ್ಕಾಗಿ ಮಾಡುವ ವಿನಂತಿ ; ನ್ಯಾಯಸಂಪಾದನೆಗಾಗಿ ಸಲ್ಲಿಸುವ ಅಹವಾಲು : ಈ ಕೋರ್ಟಿನ ಹಕೀಮರಲ್ಲಿ ಒಬ್ಬರ ತರುವಾಯ ಮತ್ತೊಬ್ಬರು ಅಧಿಕಾರ ವಹಿಸಿ ಹದಿನೈದು ದಿನ ಫಿರ್ಯಾದುಗಳನ್ನು ದಾಖಲ್ಮಾಡಿಕೊಂಡು ಆಮೇಲೆ ಹದಿನೈದು ದಿನ ಅವುಗಳ ವಿಚಾರಣೆ ನಡೆಸುತ್ತಿದ್ದರು (ಮುಹಾಕಂ. II. ೯೭); ಡೆಪ್ಯೂಟಿಕಮಿಷನರವರು . . . ತಮ್ಮಲ್ಲಿಗೆ ಫಿರ್ಯಾದು ಬಂದು ವಿಚಾರಣೆ ನಡೆಸಿಯಾಗಲಿ, ಫಿರ್ಯಾದಿಲ್ಲದೆ ತಾವಾಗಿಯೇ ಆಗಲಿ ಜುಲ್ಮಾನೆ ಹಾಕಬಹುದು (ಗ್ರಾಕಾಶ. ೮೬). ೨. ದೂರು : ರಷ್ಯಾನ್ನಿಯ ರಾಜ್ಯದ ಮೇಲೆ ಅನೇಕ ಸಾಹುಕಾರರ ಅರ್ಜಿ ಫಿರ್ಯಾದುಗಳು ಹೆಚ್ಚಿದವು (ಮುರಾಶ. ೩); ಯಾವ ಕೋರ್ಟಿಗೆ ಹೋಗಿ . . . ಫಿರ್ಯಾದು ಮಾಡುವುದು ? (ಮುರಾಶ. ೦೯೦).

**ಫಿರಿಯಾದಿ** : ೩. ದೂರು ಕೊಟ್ಟವನು ; ಆಪಾದನೆ ಮಾಡಿ ಅಹವಾಲು ಸಲ್ಲಿಸಿದವನು ; ವಾದಿ : ಈ ವಿವರವನ್ನು ಟೀಪುಸುಲ್ತಾನರಿಗೆ ಫಿರಿಯಾದಿಯಾಗಿ ಜಾಹೀರು ಮಾಡಿದರಿಂದ (ರಾಕೇಂಪ್ರ. ೩೬). **ಫಿರಿಯಾದಿ:** ೨. ಆಳುಗಳು ಪೋಲೀಸ್ ಸ್ಟೇಷನ್ನಿಗೆ ಫಿರಿಯಾದಿ ಕೊಟ್ಟರು (ಗಂಗಾಶ. ೩೯).

**ಫಿರಿಯಾದು** : ೧. ಕುಹಕಿಗಳ್ ರಚಿಸಿದ ಫಿರಿಯಾದಿನಿಂ ನಿತ್ರಾಣಿಸಲಪ್ಪುದೆ ಸ್ಥಳದಿಂ ಮುನ್ನಮೆ ತೊಲಗಿ ಪೋಗಿ (ಕಳಪ. ೮-೯೬); ಅಮಿಲ ಶಿರಸ್ತೇದಾರರು ಹೋಗಿ ಜನರ ಫಿರಿಯಾದನ್ನು ವಿಚಾರಣೆ ಮಾಡಿ ಬಂದೋಬಸ್ತು ಮಾಡಿಸಬೇಕು (ಮುಹಾಕಂ. II. ೬೬). **ಫಿರ್ಯಾದಿ** : ೧. ನ್ಯಾಯಾಧೀಶರ ಸಭೆಯಲ್ಲಿ ಫಿರ್ಯಾದಿಯನ್ನು ಮಾಡಿದರು (ಕೃಹಚಿತ್ರ. ೨೦); ಅವರು . . . ನನ್ನಿಂದ ಫಿರ್ಯಾದಿ ಬರೆಯಿಸಿದರು (ಎಡಹ. ೭೭) ; ನಾಳೆ ದರ್ಬಾರದಲ್ಲಿ ಫಿರ್ಯಾದಿಯನ್ನು ಕೊಡು (ಮುರಾಶ. ೦೯೦). ೨. ನನ್ನ ಮೇಲಿನ ಫಿರ್ಯಾದಿಗಳನ್ನು ಕೇಳಿ ಕೇಳಿ ಬೇಸತ್ತನು (ಮುರಾಮು. ೩). ೩. ಫಿರ್ಯಾದಿಯ ವಕೀಲನಿಗೆ ಮೈ ಉರಿಯಿತು (ಕಮುಕ. ೦೬೭) ; ಅದಕ್ಕೆ ನಾನೇ ಪ್ರಮುಖ ಫಿರ್ಯಾದಿ ಆಗಿದ್ದೆ (ಅಕವಾ. ೨); ಫಿರ್ಯಾದಿ, ಅಪರಾಧಿಗಳಿಬ್ಬರೂ ತಮ್ಮ ತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು (ಹುಬ್ಬಿಕ. ೦೬).

**ಫಿರ್ಯಾದಿ ಹೋಗು** = ನ್ಯಾಯಾಲಯಕ್ಕೆ ಅಹವಾಲು ಸಲ್ಲಿಸು : ಅವನು ನ್ಯಾಯಾಧೀಶನ ಬಳಿಗೆ ಫಿರ್ಯಾದಿ ಹೋದನು (ಮುಂಬಹು. ೯೦೭).

[← ಅರ. ಪಾರ. ಫರ್ಯಾದ್, ಫರಿಯಾದ್ ; ಹಿಂ. ಫರಿಯಾದ್, ಫಿರಿಯಾದ್ ; ಮರಾ. ಫಿರ್ಯಾದ್ ]

**ಫಿರ್ಯಾದುಕಛೇರಿ** (ನಾ). ಮೈಸೂರಿನ ಅರಸರು ಏರ್ಪಡಿಸಿದ ಅಠಾರಾ ಕಚೇರಿಗಳಲ್ಲಿ ಒಂದು; ತಕರಾರುಗಳು, ಅಹವಾಲುಗಳನ್ನು ವಿಚಾರಣೆ ಮಾಡುವ ಕಚೇರಿ : ಕಚೇರಿಗಳು ೧. ದಿವಾನ್‌ಕಚೇರಿ . . . ೧೮. ಫಿರ್ಯಾದುಕಛೇರಿ (ಮುಹಾಕಂ. II. ೩೯).

[ಫಿರ್ಯಾದು + ಕಛೇರಿ (<ಕಚೇರಿ)]

**ಫಿರ್ಯಾದುದಾರ** (ನಾ). = ಫಿರ್ಯಾದು ೩ : ಫಿರ್ಯಾದುದಾರರು ಮತ್ತು ಸೆಷನ್ಸ್ ನ್ಯಾಯಾಧೀಶರೇ ನಡೆಸಬೇಕಾದ ಕೇಸುಗಳಲ್ಲಿ, ದಾವಾದ ಬಗ್ಗೆ . . . ಆರೋಪ ಹೊರಿಸಬಹುದು (ಕರಕೋ. I. ೬೬೩).

[ಫಿರ್ಯಾದು + — ದಾರ್]

**ಫಿಲಂ** (ನಾ). ೧. ಭಾವಚಿತ್ರ ಅಥವಾ ಚಲನಚಿತ್ರಗಳನ್ನು ಮೂಡಿಸುವುದಕ್ಕಾಗಿ ಉಪಯೋಗಿಸುವ ಸೆಲ್ಯುಲೈಡಿನ ಸುರುಳಿ. ೨. ಚಲನಚಿತ್ರ ; ಸಿನಿಮಾ : ಇದನ್ನು 'ಫಿಲಂ' ತೆಗೆಯಬೇಕು (ಹಮ್ಮಿಂಚ. ೩ ಪತ್ನ-ಪತ್ನ ಮಾತು). [← ಇಂ. Film]

**ಫೀ**.ಫೀಜು, ಫೀಸಂ (ನಾ). ಶುಲ್ಕ : ಆ ಬದುಕಿಗೆ ಬಿದ್ದಿರುವ ಫೀಗೆ ಬದ್ಧ ತಕ್ಕೊಳ್ಳಲಾಗದು (ಮುಂಬಾ. ೨೨ ಪ್ರಶ್ನಾಪ); ವಕೀಲರ ಫೀ ಕೊಡಬೇಕಲ್ಲ ಜನ್ನಪ್ಪ ? (ಗ್ರಾಮಾಯ. ೨೮೬). **ಫೀಜು** : ಉಳಿದ ಒಂದು ಪಾಲು ಕಕ್ಷಿಗಾರರ ಕಡೆಯ ವಕೀಲರಿಗೆ ಫೀಜಾಗಿ ಸಲ್ಲುತ್ತಿತ್ತು (ಮುಹಾಕಂ. II. ೯೩) ; ಹೈಸ್ಕೂಲಿನಲ್ಲಿ ಓದುತ್ತಿದ್ದ ಇಬ್ಬರಿಗೆ ಅರ್ಧ ಫೀಜು ಕಟ್ಟಬೇಕಾಗಿತ್ತು (ಮುಹಾಗ. ೭೩). **ಫೀಸು** : ಈಗ ನಾನು ನಿಮಗೆಷ್ಟು ಫೀಸು ಕೊಡಬೇಕಾಗಿದೆ ? (ಕುಕರು. ೨೦೩). ☞ 'ಫೀಜು', 'ಫೀಸು' ಎಂಬ ರೂಪಗಳು ಇಂಗ್ಲಿಷಿನ 'ಫೀ' ಎಂಬುದರ ಬಹುವಚನ ರೂಪಗಳು. [← ಇಂ. Fee]

**ಫೀಜು** 'ಫೀ' ನೋ.

**ಫೀನಿಕ್ಸ್** (ನಾ). ೧. ಐದಾರು ಶತಮಾನಗಳ ಕಾಲ ಅರೇಬಿಯಾ ಮರಳುಗಾಡಿನಲ್ಲಿ ಜೀವಿಸಿದ್ದು, ಬಳಿಕ ತಾನೇ ಬೆಂಕಿಯಲ್ಲಿ ಸುಟ್ಟು ಕೊಂಡು ಮತ್ತೆ ಹೊಸ ಹುರುಪಿನೊಂದಿಗೆ ಅದೇ ಬೂದಿಯಿಂದ ಹೊರಬಂದು ಬಹುಕಾಲ ಬದುಕುವುದೆಂದು ನಂಬಲಾದ ಒಂದು ಬಗೆಯ ಪಕ್ಷಿ : ಮುಕ್ಕಿ ಮೊಗೆಯುವೆ ಕಾಲ . . . ಉಗ್ರವ್ಯಾಪ್ರನ ಹರಿತಹಲ್ಲು ಕಿತ್ತಿಸುವೆ. ಪುರಾತನ ಪಕ್ಷಿ ಫೀನಿಕ್ಸ್ ತನ್ನ ರಕ್ತದ ಬೂದಿ (ಪಂಚಮು. ೬೦-೯). ೨. ಒಂದು ನಕ್ಷತ್ರರಾಶಿ : ಚಕೋರವು ಪಾಶ್ಚಾತ್ಯರ ಫೀನಿಕ್ಸ್ (ಪಕ್ಷಕ್ಷ. ೨೦). [← ಇಂ. Phoenix]

**ಫೀಸು** 'ಫೀ' ನೋ.

**ಫುಕ್ಕಟೆ** 'ಪುಕ್ಕಟೆ' ನೋ.

**ಫುಗಡಿ**, ಪುಗಡಿ, ಪುಗುಡಿ (ನಾ). ಪರಸ್ಪರ ಕೈಗಳನ್ನು ಭದ್ರವಾಗಿ ಹಿಡಿದು, ನಿಂತಲ್ಲೇ ಗಿರ್ರನೆ ತಿರುಗುವ ಒಂದು ಬಗೆಯ ಆಟ; ಅಪ್ಪಾಲೆ ತಿಪ್ಪಾಲೆ ; ಬಗಟ್ಟಬುಗುರಿ (ಉಕ) : ಇಬ್ಬರೂ ಎದ್ದು ನಿಂತು ಚಿಕ್ಕಮಕ್ಕಳು ಪುಗಡಿಯಾಡುತ್ತಾರಲ್ಲ — ಆ ರೀತಿಯಲ್ಲಿ ಕೈಯಲ್ಲಿ ಕೈಯಿಕ್ಕಿ ರಿಂಗಣಗುಣಿತ ಹಾಕತೊಡಗಿದರು (ಗೀಪುಗ. ೦೬) ; ಪುಗಡಿಯಾಟ ನಡೆದಿತ್ತು (ಪಾತರ. ೬೦). **ಪುಗಡಿ** : ನಾನೊಮ್ಮೆ ಪುಗಡಿ ಆಡುತ್ತಿದ್ದೆ — ಗೋಯು ಕೂಡ (ಕವಳ. ೯೭) : ನಾಳೆ ತಿಳಿಯುವುದು ಬೆಳಗಾದರೆ, ಗಂಡ ಬಂದು ಪುಗಡೀ ಆಡಿಸುವಾಗ ತಲೆ ಹೇಗೆ ತಿರಗುವದೆಂಬದು (ಕವಳ. ೯೭). **ಪುಗುಡಿ** : "ರಾಸಕ್ರೀಡಾ — ಪುಗುಡಿ" (ಶಾಕಕ್ಕ. ೦೨೦); "ಪುಗುಡಿ — ಮಕ್ಕಳ ಆಟ, ಹೆಣ್ಣು ಮಕ್ಕಳ ದುಂಡಾಟ" (ಪಾನಕೋ. ೦೬).

**ಫುಗಡಿ ಹಾಕು** = ಅಪ್ಪಾಲೆ ತಿಪ್ಪಾಲೆ ಆಡು : ಪಗಡೆಕಾಯಿ ಕುಚಬಾಲೇರೇ ಪುಗಡಿ ಹಾಕೀರೆನ್ನ ಮುಂದೆ ತೆಗೆದುಕೊಡುವ ವಸ್ತುವ ನಿಮಗೆ (ಕವಳ. ೦೦೯-೯). [← ಮರಾ. ಫುಗಡೀ]

**ಫುಟ್‌ಲಾಯರಿ** 'ಫೂಟ್‌ಲಾಯರಿ' ನೋ.

**ಫುಟ್‌ಲಾಯರು**, ಪೂಟುಲಾಯರು (ನಾ). ಕಾನೂನಿನ ಪ್ರಶಸ್ತಿ ಪತ್ರ ಅಥವಾ ಸನದನ್ನು ಪಡೆಯದೆ ಹಳ್ಳಿಗಳಲ್ಲಿ ಒಬ್ಬ ವಕೀಲನ ಪರವಾಗಿ ವಕೀಲಿವೃತ್ತಿಯನ್ನು ನಡೆಸಿ ಲಾಯರ ಬಳಿಗೆ ಕಕ್ಷಿಗಳನ್ನು ಒದಗಿಸುವವನು : ಹೆಸರಾಂತ ಫುಟ್‌ಲಾಯರು ಚಿಂತಾಮಣಿಯವರ

ಕುವರಿ ಕೇವಲ ನಾಟಕದ ನರಸಿಂಹನ ಕೈಹಿಡಿಯುವುದುಂಟೇ ? (ಕೂಕುಕ. ೩೩). **ಪೂಟುಲಾಯರು :** ಅವನೊಬ್ಬ ಪೂಟುಲಾಯರು (ಕೂಕಿ). [<ಫೂಟು$_1$ + ಲಾಯರು]

**ಫುಟಾಫುಟ** (ನಾ). ೧. ಚೂರುಚೂರು ; ತುಂಡುತುಂಡು. ೨. ಅಸ್ತವ್ಯಸ್ತ ; ಚೆಲ್ಲಾಪಿಲ್ಲಿ : ಈ ಫರಜುಲ್ಲಾಖಾನನ ದಂಡು ಯಾವತ್ತೂ ಮುರಿದು ಫುಟಾಫುಟ ಆದ ವರ್ತಮಾನ ನವಾಬಹೈದರಲ್ಲಿ ಖಾನರು ಕೇಳಿ (ರಾಕೇಂದ್ರ. ೨೦). [←ಮರಾ. ಫುಟಾಫೂಟ್]

**ಫುಪ್ಪುಸ, ಪುಪ್ಪುಸ** (ನಾ). ಶ್ವಾಸಕೋಶ : ಈ ವಿಷಪದಾರ್ಥಗಳು . . . ಶ್ವಾಸದ ಮಾರ್ಗದಿಂದ ನಮ್ಮ ಪುಪ್ಪುಸಗಳಲ್ಲಿ ಸೇರಿ ಅಪಕಾರ ಮಾಡುತ್ತವೆ (ಮುಂಬಯಿ. ೩-೦೩೦) ; ಆ ನರುಗಂಪನ್ನು ಎರಡು ವರ್ಷಗಳ ವರೆಗೆ ತನ್ನ ಪುಪ್ಪುಸಗಳಲ್ಲಿ ಕಾದಿಡಲು ಪ್ರಮೀಳೆ ಹವಣಿಸಿದಳು (ನಕುಶೀ. ೩೩೦) ; ಹೃದಯ, ಪುಪ್ಪುಸ ತಮ್ಮ ಕಾರ್ಯವನ್ನು ರಕ್ತದ ಬೆಂಬಲದಿಂದ ಸಾಗಿಸುತ್ತಿರುವುವು (ಜರಂಬ. ೬೨). **ಫುಪ್ಪುಸ :** ಪುಪ್ಪುಸದಲ್ಲಿ ನೋವಿದೆಯೇ? (ರೇಬಾಸ. ೦೨೩) ; ರಮಾಬಾಯಿಗೆ . . . ಪುಪ್ಪುಸವಿಕಾರದ ಬಾಧೆಯಾಗಿತ್ತು (ಶ್ರೀರಂಗ. ೩೦): ಈ ಬಲಪುಪ್ಪುಸದ ಆಪರೇಶನ್ನು ಆದ ನಂತರ ಆತ ಸಂಕಟದಿಂದ ಪಾರಾದ (ಮುಕ್ತಿ. ೯). [<ಸಂ. ಪುಪ್ಪುಸ]

**ಫುರೋಕ್ತ** 'ಪುರೋಕ್ತ' ನೋ.

**ಫುಲ್ಗರ** (ನಾ). ಒಂದು ಬಗೆಯ ಜೋಳ : ಭಗವಂತಫುಲ್ಗರ, ಪಟ್ಟಣಸಾಳಿ, ಗೌರೀಕುಲ, ಬಸವನ ಪಾದ, ಫುಲ್ಗರ . . . ಕೆಂಡಮೂಕನ ಜೋಳ ಈ ಯೆಂಟು ಜಾತಿಗಳನ್ನು ಮುಖ್ಯ ಪೈರುಗಳಾಗಿ, ಇಲ್ಲವೇ ಬೇರೆ ಮುಂಗಾರೀ ಹಿಂಗಾರೀ ಜಾತಿಗಳ ಪೈರಿನಲ್ಲಿ ನಡುನಡುವೆ ಹಲಕೆಲವು ಸಾಲುಗಳಾಗಿ ಬಿತ್ತುವರು (ಕಬಾಗ. ೨೬೦). [ ? ]

**ಫುಲ್ಲ** (ಗು). ೧. ಅರಳಿದ ; ವಿಕಸಿತವಾದ : "ಫುಲ್ಲಮುದ್ಗಮನಂ ವಿಜೃಂಭಿತಂ" (ಮಂಗರಾ. ೧೨೦-೩) : ತಿಳಿಗೊಳನಂ ಫುಲ್ಲಪಂಕೇಜಮಂ ನಿರ್ಮಳತಾರಾಧೀಶನಂ ಪೋಲ್ತೆಸೆಯೆ ನಗೆಮೊಗಂ ಕಾಂತೆ ಕಣ್ಗೊಪ್ಪಿತೋರ್ಕುಂ (ಅಕಪು. ೦-೯೦) ; ವಿಪಿನಸುಂದರಚೈತ್ರಮಾಸದ ಫುಲ್ಲಪುಷ್ಪಮಯ ಕಿಂಶುಕವೊ (ಶ್ರೀರಾಮಾ. ೩೦೩-೯೯). ೨. ಹೂವು ಬಿಟ್ಟಿರುವ ; ಹೂವುಗಳಿಂದ ತುಂಬಿದ. ೩. (ಕಣ್ಣುಗಳಂತೆ) ಅಗಲವಾಗಿ ತೆರೆದ, – ಹಿಗ್ಗಲಿಸಿದ. (ನಾ). ೪. ಹೂವು ; ಪುಷ್ಪ : 'ಫುಲ್ಲಶರ' ಪರಾ. ೫. [ನಾಟ್ಯ] ಕಪೋಲದ ಆರು ಭೇದಗಳಲ್ಲಿ ಒಂದು ; ಇ ಕೆನ್ನೆಗಳನ್ನು ಸಂತೋಷದಿಂದ ಅರಳಿಸುವುದು. ಸಂತೋಷದಲ್ಲಿ ಇದನ್ನು ವಿನಿಯೋಗಿಸಬೇಕು" (ಶಾಸ್ತ್ರರಂ. ಗದ್ಯಮವಾರ ೨೬೬): ನುತಿವಡೆದ ಕುಂಚಿತಂ ಕಂಪಿತಮೊಪ್ಪುವ ಪೂರ್ಣಮೆಸೆವ ಕ್ಷಾಮಂಫುಲ್ಲಂ ಸತಿ ಕೇಳ್ ಸಮಮಿಂತಾಱುಂ ಮತದಿಂ ರಾಜಿಪುದು ಗಲ್ಲಮಂಬುಜಪದನೇ (ಶಾಸ್ತ್ರರಂ. ೩-೬೯). [ಸಂ.]

**ಫುಲ್ಲಂಬು** (ನಾ). ಹೂವಿನ ಬಾಣ : ಮಲ್ಲಿಗೆಗೋಲ್ಗಳೊ ಮರದ ಮಿಂಟೆಯೊ ಪೇಳು ಫುಲ್ಲಂಬೊ ಲೋಹದಂಬುಗಳೊ (ಭರತ. ೩೦-೩೩). [ಫುಲ್ಲ + ಅಂಬು$_2$]

**ಫುಲ್ಲಕ** (ನಾ). ಹುಳು ; ಕ್ರಿಮಿ : "ಕೃಮಿಃ, ಕೀಟಃ, ನೀಲಂಗುಃ, ಪುಲ್ಲಕಃ_ ಈ ೪ ಪು (ಹು)ಟು" (ಹಲಾಯು. ೧೦೩-೦೪) ; "ನೀಲಂಗು ಫುಲ್ಲಕಂ ಕ್ರಿಮಿ ಕೀಟಮಚ್ಚ ಪುಟುವಕ್ಕುಂ" (ಮಂಗರಾ. ೧೦೬-೩). [ಸಂ.]

**ಫುಲ್ಲನೇತ್ರ** (ನಾ). (ಕಮಲದ) ಹೂವಿನಂತೆ ಕಣ್ಣುಗಳುಳ್ಳವನು ; ವಿಷ್ಣು : ಫುಲ್ಲನೇತ್ರನೊಳರ್ಕನೊಳು ಶಶಿಯೊಳಾತ್ಮನೊಳು . . . ಸರೋಜದೊಳ್ ಪರಿವರ್ತಿಸಿರ್ಕುಂ ಹಂಸಾಭಿಧಾನಂ (ಮಂಗರಾ. ೦೪೬-೯೦). [ಸಂ.]

**ಫುಲ್ಲಶರ** (ನಾ). ೧. ಹೂವಿನ ಬಾಣ ; ಮನ್ಮಥಬಾಣ : ಫುಲ್ಲಶರಂ ಬಸಂತದ ಪುಗಿಲ್ ನೆಱೆದಿಂಗಳ ತಣ್ಪುಸಿಲ್ . . . ಎಂಬಿಸಂ ಪಲ್ಲವರಂ ಮನಂಗೊಳಿಸುಗುಂ ಕೃತಿ (ಮಲ್ಲಪು. ೦-೯೯). ೨. ಹೂವಿನ ಬಾಣಗಳುಳ್ಳವನು ; ಮನ್ಮಥ : ಫುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳ್ (ಅಜಿಪು. ೦೧-೦೦೦) ; ಫುಲ್ಲಶರನೆಸಕಮುಂ ಹೃದಯೋಲ್ಲಾಸಮುಮಿಂದ್ರಿಯಂಗಳಿಚ್ಛೆಯ ಸುಖಮುಂ ಸಲ್ಲದೊಡಂ . . . ಅಸಾರಮೀ ಸಂಸಾರಂ (ಅಂಬಾಕ. ೪-೩೩). [ಸಂ.]

**ಫುಲ್ಲಹೇತಿ** (ನಾ). = ಫುಲ್ಲಶರ ೨ : ಫುಲ್ಲಹೇತಿಯ ಧಲ್ಲೆಹಕೆ ಕಡುನೊಂದೆ ನನ್ನಯ ನಲ್ಲನಾಗಿಯೆ ಮನ್ಮನೋರಥವೀಯಬೇಕು (ಶೌರಿಚಾ. ೩-೦೬). [ಸಂ.]

**ಫುಲ್ಲಾಬ್ಜಪುತ್ರ** (ನಾ). ಅರಳಿದ ತಾವರೆಯಲ್ಲಿ ಹುಟ್ಟಿದವನು ; ಬ್ರಹ್ಮ : ಆ ತಾರಕಂ . . . ಉಗ್ರತಪಮಂ ಮಾಡಲಾತಂಗೆ ಫುಲ್ಲಾಬ್ಜಪುತ್ರನಿಂ ವರವ ಕೊಡಿಸಲ್ಬಂದು ನೆಲಸಿದಂ ಸರ್ವೇಶ್ವರಂ (ಶೀಕೃಪು. ೩-೨೦-೯೨). [ಸಂ.]

**ಫುಲ್ಲೈಸು** (ಕ್ರಿ). ಅರಳು ; ವಿಕಾಸವಾಗು : ಫುಲ್ಲೈಪ ಸರಸಸುಮನಃಪಲ್ಲವಸಂಗದೆ ಪೊದಟ್ದು ಪೊಂಗುವನಿತಜಿ್ಪೊಳ್ ಮಲ್ಲೀವಲ್ಲಿಮತಲ್ಲಿಗದೆಲ್ಲಿಯ ಕಡುಮೆಂಕೆ ಸೋಂಕೆ ಕೊಂಕುವುದಕಟಾ (ಶಕಂ. ೬-೦೩೬). [ಫುಲ್ಲ + < – ಇಸು$_3$]

**ಫುಲ್ಲೋತ್ಪಲ** (ನಾ). ಅರಳಿದ ಕಮಲ : ಫುಲ್ಲೋತ್ಪಲಭಾವನೆಯಿಂ ನಿಲ್ಲದೆ ಕೆಯ್ಕೊಳ್ವುದೆಂದು ಸಾಂಖ್ಯಂ ಮೂಱುಂ ಕಲ್ಲಿಂದಿಡುತಂ ಗೌರೀವಲ್ಲಭನಂ ನಚ್ಚಿ ಮಚ್ಚಿ ಪೂಜಿಸುತಿರ್ದಂ (ಭೃಶಂ. ೩೯-೦೨೦). [ಸಂ.]

**ಫುಸಲತ್ತು** 'ಪುಸಲತ್ತು' ನೋ.

**ಫೂಟ್‌ಲಾಯರಿ, ಪೂಟಲಾಯರಿ, ಫುಟ್‌ಲಾಯರಿ, ಪೂಟಲಾಯರಿ** (ನಾ). ೧. ಫೂಟ್‌ಲಾಯರನ ವೃತ್ತಿ,–ಕಾರ್ಯ : ಲಾ ಪಾಯಿಂಟುಗಳನ್ನೆಲ್ಲಾ ಅಷ್ಟಿಷ್ಟು ತಿಳಿದಿದ್ದ ಚನ್ನ ಫೂಟ್‌ಲಾಯರಿ ಕೆಲಸ ಮಾಡಿದ (ವನಜ್ಯರು. ೨೦೩). **ಪೂಟಲಾಯರಿ :** ೨. = ಫುಟ್‌ಲಾಯರು : ಹಳ್ಳಿಯಲ್ಲಿ ಹೀಗಾದರೆ ಪೂಟಲಾಯರಿಯು ಮುಂದೆ ಬಂದು (ಮುಂಶಿಮೂ. ೮೪). **ಫುಟ್‌ಲಾಯರಿ :** ೨. ಇವನು ಕೊಂಡಾಪುರದ ಶಾಂತವೀರಯ್ಯ, ಫುಟ್‌ಲಾಯರಿಯ ಹಾಗೆ ಏನಾದರೂ ಇವನ ತಲೆಯಲ್ಲಿ ಇದ್ದೇ ಇರುತ್ತೆ ವಿಚಾರಗಳು (ಮುಕೀ. ೩೯). **ಪೂಟಲಾಯರಿ :** ೧. ಪೂಟಲಾಯರಿಯಲ್ಲಿ ಸಂಪಾದಿಸುತ್ತಿದ್ದುದು (ಕಾಶಿಂಕಾಂ. ೩). [<ಫುಟ್‌ಲಾಯರು]

**ಫೂಟಕೂಲ್‌ಪತ್ರಕ** (ನಾ). ಒಂದೇ ಸರ್ವೆನಂಬರಿನಲ್ಲಿ ಎರಡು ಅಥವಾ ಅದಕ್ಕೂ ಹೆಚ್ಚು ಸಾಗುವಳಿದಾರರನ್ನು ನಮೂದಿಸಿದಾಗ, ಪ್ರತಿಯೊಬ್ಬರ ವಶದಲ್ಲಿರುವ ಭೂಮಿಯ ಕ್ಷೇತ್ರ, ಕಂದಾಯ ಮೊದಲಾದುವುಗಳನ್ನು ತಿಳಿಸುವ ಕಾಗದ : (ಕೃಶ್‌ಗ. II, ೩೩೯). [ ಫೂಟಕೂಲ್$_0$ ( ಇ ← ಇಂ, Protocol) + ಪತ್ರಕ ]

**ಫೂಟಮಾಗಣೆ** (ನಾ). ಮಾಗಣೆಯ ಪೋಟುಭಾಗ,—ಹಿಸ್ಸೆ : (ಕೃಶ್‌ಗ. II, ೩೩೯). [ < ಫೂಟು$_1$ + ಮಾಗಣೆ$_1$ ]

**ಫೂಟಲಾಯರಿ** 'ಫೂಟ್‌ಲಾಯರಿ' ನೋ.

**ಫೂಟು$_1$, ಪೂಟು** (ನಾ). ೧. ಪ್ರತ್ಯೇಕವಾದುದು ; ಪೃಥಕ್ಕಾದುದು : ತಾಲ್ಲೂಕ್ ಅಮಲ್ದಾರರಾಗಲಿ, ಸಬ್‌ತಾಲ್ಲೂಕ್‌ಡೆಪ್ಯುಟಿಅಮಲ್ದಾರರಾಗಲಿ ಫೂಟಾಗಿ ವಿಚಾರಣೆ ಮಾಡಿ ಫೈಸಲ್ ಕೊಡತಕ್ಕದ್ದು (ಗ್ರಾಮಾಕ. ೯೩). (ಗು). ೨. ಚಿಕ್ಕ ; ಸಣ್ಣವಿಭಾಗಕ್ಕೆ ಸೇರಿದ : 'ಫೂಟು ದೊರೆ' ಪರಾ. **ಫೂಟು :** ೩. ಸಾರಾಂಶ ; ತಿರುಳು : 'ಫೂಟಜ್ಞಿ' ಪರಾ. [ ← ಮರಾ. ಫೂಟ್ ]

**ಫೂಟು$_2$** (ನಾ). ಒಂದು ಅಳತೆಯ ಪ್ರಮಾಣ ; ಒಂದು ಅಡಿ ; ಹನ್ನೆರಡು ಅಂಗುಲ : ಸಹ್ಯಾದ್ರಿಯ ೧೭೦೦ ಫೂಟು ಯೆತ್ತರವಾದ

ಶಿಖರಗಳು ಸಮುದ್ರತೀರಕ್ಕೆ ಹೊಂದಿರುತ್ತವೆ (ಕಣಾಗ. ೪): ಮರದ ಸುತ್ತಳತೆಯು ಹೆಚ್ಚುಕಡಿಮೆ ಎರಡು ಸಾವಿರ ಪೂಟುವುಂಟು (ಖುಂಖಯು. ೨-೨೪); ಒಂಭತ್ತು ಪೂಟು ಅಂದರೆ ಒಂದು ಮಾರು ಆಗುವದು (ಕೃಷಿಶ್ರ. ೯೩).. [←ಇಂ. Foot]

**ಪೂಟುತೀರ್ಮಾನ** (ನಾ). (ನ್ಯಾಯಾಲಯದಲ್ಲಿ ಅನಾವಶ್ಯಕವಾದ ವಿವರಗಳನ್ನು ಗಮನಿಸದೆ) ಆಗಿಂದಾಗ್ಗೆ ಕ್ಷಿಪ್ರವಾಗಿ ಕೊಡುವ ನ್ಯಾಯನಿರ್ಣಯ : ಯಾವುದಾದರೂ ಅಪೀಲನ್ನು. . . ಆ ನ್ಯಾಯಾಲಯದವರಿಗೆ ತೋರಿದ ಸಂದರ್ಭದಲ್ಲಿ ಪೂಟುತೀರ್ಮಾನ ಮಾಡುವುದಕ್ಕೆ ಉಪಬಂಧಗಳನ್ನು ಕಲ್ಪಿಸುವ ನಿಯಮಗಳು (ಕಾರಾಸ. ೬೬).
[ಪೂಟು₁ + ತೀರ್ಮಾನ]

**ಪೂಟುದೊರೆ** (ನಾ). ಚಿಕ್ಕರಾಜ್ಯದ ಅರಸು ; ಪಾಳೆಯಗಾರ; ಮಾಂಡಲಿಕ : ಕೆಲವರು. . . ದೇಶೀಯ ಮಹಾರಾಜರನ್ನೂ ಮುಸಲ್ಮಾನ್ ದೊರೆಗಳನ್ನೂ ಅನುಸರಿಸಿಕೊಂಡು ಇದ್ದರು. ಇಂಥಾ ಪೂಟುದೊರೆಗಳು ಜರುಗಿಸುತ್ತಿದ್ದ ಅಧಿಕಾರವು ಅಲ್ಲಲ್ಲಿ ವಿಶೇಷವಾಗಿ ಭಿನ್ನಿಸಿದ್ದಾಗ್ಯೂ ನಮ್ಮ ಭರತಖಂಡದಲ್ಲಿ ಇಂಥವರು ಹೆಚ್ಚಾಗಿದ್ದಂತೆ ತಿಳಿಯಬಂದಿದೆ (ಕಾಳೆಗಾ. ೦೪).
[ಪೂಟು₁ + ದೊರೆ₂]

**ಪೂತ್ಕರಿಸು** (ಕ್ರಿ). ೧. ಉಗಿ; ಉಗುಳು : ನಾಕನದೀವಾರಿಯನೀಂಟಿ ಪೂತ್ಕರಿಸಿ . . . ಪಾಲ್ಗಡಲೊಳುದ್ಯದ್ವಾಲಲೀಲಾಪ್ರವರ್ತನಮಂ ತಾಳ್ದಿಭ ವಕ್ತ್ರನೀ ಕೃತಿಗಜಸ್ರುಂ ಮಾಳ್ಕೆ ನಿರ್ವಿಘ್ನಮಂ (ಕಠಕಂ. ೦-೬); ಅಭ್ರಮಾತಂಗ ಪೂತ್ಕರಿಸಲ್ಕೆ ಚದರಿ ಪನಿಗಳ್ಗಗನತಳದಿ ಪಠಕಲಿಸಿದುವೊಯೆನಲು ನಕ್ಷತ್ರತತಿಯು ಚದುರ ಬೀರಿದವು (ಕಂಠಾ. ೩-೨-೩೩): ಸಗ್ಗಿಗರಾಣ್ಮನ ಘನಕರಿಘಟೆಗಳ್. . . ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಪೂತ್ಕರಿಸಿದವುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ (ರಾಮಾಶ್ವ. ೩-೦೦). ೨. ಟಿಸ್ ಎಂದಂ ಸದ್ದು ಮಾಡು : ದೀಪ ನೊಂದುವಾಗ ತುಸು ಪೂತ್ಕರಿಸಿಯೆ ನೊಂದುತ್ತದೆ (ಇಕೃಕ. ೦೯೩). ೩. ಹಾವಿನಂತೆ ಬುಸಂಗುಡು; ಬುಸ್ಸೆನ್ನು : ಅಗ್ನಿ . . . ಪ್ರಳಯಕಾಲದ ಮಹಾಸರ್ಪದಂತೆ ಪೂತ್ಕರಿಸಿತು (ಅಕ್ರಖು. ೦೦೪). ೪. (ಆಲಂ) ಸಿಡುಕಿನಿಂದ ಮಾತನಾಡು; ಅಬ್ಬರಿಸಂ : ನೀ ಏನ ಹೇಳುವಿ ಅದನ್ನ ? – ಗಂಗವ್ವ ಪೂತ್ಕರಿಸಿದಳು (ಅಹೋಳ. ೬೩). [ಪೂತ್ಕರಣ + —ಇಸು₁]

**ಪೂತ್ಕಾರ** (ನಾ). ೧. ಸಶಬ್ದವಾಗಿ ಉಸಿರು ಬಿಡುವಿಕೆ : ಧನ್ವಿಪದಾತಿವ್ರಾತಟಂಕಾರದಿನುರುಕಹಳಾಜಾಲಪೂತ್ಕಾರದಿಂ . . . ವಿಷ್ಟಪಮಂ ಶಬ್ದಾತ್ಮಕಂ ಮಾಡಿದುದುಭಯಮಹೀಭೃಚ್ಚಮೂಚಕ್ರವಾಳಂ (ಕಂಠ್ರಪು. ೦೦-೬೬); ಮುಖಂದಗಜಪೂತ್ಕಾಗಂ ರಥಾಂಗರಥಚೀತ್ಕಾರಂ. . . ಬೆರಸಿ ಬಳೆದಾಗುಸಮಂ ಮುಸುಂಕೆ (ಗಂ೦೪. ೯-೪ ಪ). ೨. ಹಾವಿನ ಬುಸುಗುಟ್ಟುವಿಕೆ : ಜಹಾಂಗೀರ ಕೆಣಕಿದ ನಾಗಿನಿಯನ್ನು ತಡೆದು ಪೂತ್ಕಾರವನ್ನು ಸ್ವಾಗತಿಸುವ ಅವಿವೇಕಕ್ಕೆ ಹೋಗಲಿಲ್ಲ (ಷಹಠಜ. ೨೦). [ಸಂ.]

**ಪೂತ್ಕೃತಿ** (ನಾ). = ಪೂತ್ಕಾರ ೧ : ಭೃಂಗವಧೂಝಂಕೃತಿ ಶಂಖಪೂತ್ಕೃತಿರುತಂ. . . ಉದ್ಯತ್ಕೋಕಿಳರವಂ ಭೇರೀಘನಧ್ವಾನವಾಗೆ ವಸಂತಂ ಋತುಸಾರ್ವಭೌಮವಿಭವಂ ಮೆಯ್ವೆತ್ತದೇಂ ಬಂದುದೋ (ಹಂಠ್ರಶಿ. ೬-೩೬). [ಸಂ.]

**ಫೂಲ್‌ಸ್ಕೇಪು, ಫೂಲ್‌ಸ್ಕೇಪ್** (ನಾ). ಹದಿನೈದರಿಂದ ಹದಿನೇಳು ಅಂಗುಲ ಉದ್ದವೂ ಹನ್ನೆರಡರಿಂದ ಹದಿಮೂರುವರೆ ಅಂಗುಲ ಅಗಲವೂ ಇರುವ ಕಾಗದ : ಸಾಮಾನ್ಯವಾಗಿ ಬರೆಯಲು ಉಪಯೋಗಿಸುವ 'ಫೂಲ್‌ಸ್ಕೇಪು' ಕಾಗದಗಳಿಗೆ ಈ ಗುರುತುಗಳಿರುವುವು (ಖಾಂಶ್ರ. II. ೬೨೪). **ಫೂಲ್‌ಸ್ಕೇಪ್:** ಮುದ್ರಣಕ್ಕೆ ಉಪಯೋಗಿಸುವ ಕಾಗದಗಳು : ೧. ಫೂಲ್‌ಸ್ಕೇಪ್, ೨. ಕ್ರೌನ್ (ಮುದ್ರಕ. ೬೨). [←ಇಂ. Fool's-Cap]

**ಫೂಲ್ಸ್‌ಕೇಪ್** 'ಫೂಲ್‌ಸ್ಕೇಪು' ನೋ.

**ಫೆಳಾವುಗ** (ನಾ). (?) : ಫಳಿಯಕಾಜಿ, ಫೆಳಾವುಗಂ, ಫೇಳಿ, ಅಫಳಿಯಂ (ಕಪುರ. ೦೩ ಪ್ರಯೋ). [?]

**ಫೇಡೆ** 'ಪೇಡ' ನೋ.

**ಫೇಣಿ** (ನಾ). ಒಂದು ಬಗೆಯ ಸಿಹಿ ಭಕ್ಷ್ಯ : ಅಜುಬೋನ ಫೇಣಿ ಗಾರಿಗೆ ಇಡ್ಡಲಿಗೆ ಅವುಗು . . . ಹೂರುಂಡೆಯನು ತೆಜಿಹಿಲ್ಲನಿಸಿ ಗಡಣಿಸುತ್ತ ಗುಡ್ಡರುಗಳಿಗೆ (ಸಿದ್ಧರಾ. ೯-೬೩); ರಸಪೊಸರ್ವ ಸಜ್ಜಿಗೆಯೆಣ್ಣೆವೂರಿಗೆ ಸುಫೇಣಿ ಮುಸುಕಿಡೆ ಬೆಣ್ಣೆದಳಗು (ಕಾಕಠು. ೦೦-೨೯); ಜೇನು ಸಕ್ಕರೆ ಕ್ಷೀರ ರಸವಪ್ಪ ಫೇಣಿ ಸುಖೀನುಂಡೆ ವಡೆ ಗಾರಿಗೆಯ. . . ಬಡಿಸಿದರು (ತೋಕಠ. ೩-೩೨). [ಸಂ. ಫೇಣೀ]

**ಫೇನ** (ನಾ). ೧. ನೊರೆ ; ಬುರುಗು : "ಫೇನಃ, ಡಿಂಡೀರಃ—ಈ ೨ ನೊರೆ" (ಹಲಾಯು. ೧೦೦-೩೩); ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಂ (ಕಂಠಕಾ. ೦-೦೩೬); ಉತ್ಕೀರ್ಣಫೇನಂ. . . ಅಂಭೋನಿಧಾನಂ (ಜಗಂ. ೦-೨೩); ರವಿಹಯಾನನಫೇನಪುಂಜವೋ. . . ಎನೆ ತರಳತಾರಾಳಿ ಕಣ್ಗೆಸೆದುದು (ಹಕಠಾ. ೩-೭೪). ೨. ಕಡಲ ನಾಲಗೆ; ಸಮುದ್ರದ ನೊರೆ : "ಡಿಂಡೀರಃ, ಅಬ್ಧಿಕಫಃ, ಫೇನಃ — ೩ ಸಮುದ್ರದ ನೊರೆ" (ಸಿದ್ಧಾಂತಿ. ೩೦೬). [ಸಂ.]

**ಫೇನಿಲ** (ಗು). ೧. ನೊರೆಯುಳ್ಳ ; ಬುರುಗುಳ್ಳ. (ನಾ). ೨. ಅಂಟುವಾಳದ ಮರ ಮತ್ತು ಅದರ ಕಾಯಿ. ೩. ಒಂದು ಬಗೆಯ ಮರ ; ತಿಲಕವೃಕ್ಷ : ''ತಿಲಕಂ ಕ್ಷುರಕಾಖ್ಯಂ ಫೇನಿಲವಮಕ್ಕುಮರಿಷ್ಟಶಾಖಿ'' (ವಸ್ತುಕೋ. ೩೩-೨) ; ''ಕ್ಷುರಕಮೆನೆ ಫೇನಿಲಮೆನಲ್ ತಿಲಕತರು ವಕ್ಕು'' (ಮಂಗರಾ. ೩೬-೦೬). [ಸಂ.]

**ಫೇರಂಡ** (ನಾ). ನರಿ ; ಜಂಬುಕ : ''ಜಂಬುಕಃ, ಶಿವಾ, ಫೇರಂಡಃ . . . ಮೃಗಧೂರ್ತಕಃ —ಈ ೮ ನರಿ'' (ಹಲಾಯು. ೩೯-೬೬). [ಸಂ.]

**ಫೇರಣೆ** 'ಪೈರಣೆ' ನೋ.

**ಫೇರವ** (ನಾ). ೧. = ಫೇರಂಡ: ''ಶಿವೆ ಮೃಗಧೂರ್ತಂ ... ನರಿ ಫೇರವಂ'' (ವಸ್ತುಕೋ. ೪೦-೩) ; ಕಾಕಳಿಕಳಿಕಿತವಪ್ಪ ಕಳಕಂಠೀಜನದ ಗೇಯಮೆತ್ತಲೀ ಕಠೋರಫೇರವ ಪೆಕ್ಕಾರಾರಾವಮೆತ್ತಲ್ (ಪರ್ಣಷಾ. ೬-೪ ಪ) ; ಹರಿಕಂಖಮಹಾಭೈರವರವಮದು ಕಿವಿಪುಗೆ ಫೇರವರವವೊದವೆ ರಿಪುಬಲಂ ಕೆಡೆದಿರದೇ (ಜಗಂ. ೯-೦೦೬). ೨. ನೀಚ ; ಅಧಮ. ೩. ಪಿಶಾಚಿ ; ರಾಕ್ಷಸ. [ಸಂ.]

**ಫೇರಿ, ಪೇರಿ₁** (ನಾ). ೧.ಪ್ರದಕ್ಷಿಣೆ ; ಸುತ್ತು : ಭೂಮಿಯು ತನ್ನ ಮೈ ಸುತ್ತು ತಿರುಗುತ್ತ ಸೂರ್ಯನ ಸುತ್ತುಮುತ್ತು ವರ್ತುಲಾಕಾರವಾಗಿ ಫೇರಿಯನ್ನು ಹಾಕುತ್ತದೆ (ಮುಂಂಖಯು. ೬-೩೪) ; ಎಂಥಾ ಮೋಜಿನ ಕುದುರಿ ಹತ್ತಿದ ಮ್ಯಾಲ ತಿರುಗುವುದು ಹನ್ನೊಂದು ಫೇರಿ (ಕಂಆಕ. ೯೬-೨) ; ಮರಿಗುದುರಿ ಫೇರಿ ತಿರುಹುತ ಬರುತಾನ ಬರಿಗೊಡದವ್ವಾ ಬದಿಗಾಗೆ (ಕರ್ನಾಕು. ೦೨೪). ೨. ಸುತ್ತಾಟ ; ಸಂಚಾರ ; ಓಡಾಟ : ಕುದುರೆಗಳು ಹಲ್ಲಣಿಸಿ ಫೇರಿ ಮಾಡಲಿಕೆಂದು ಸಂದಣಿಸಿ ನಿಂದಿರುವವು (ಕೃಕ್ರಂ. ೨-೩೩) ; ಅಲ್ಲಿ ನಿಂತಿದ್ದುದೂ ಜಾತಿಯಲ್ಲಿ ಕುದುರೆಯಾಗಿದ್ದರೂ . . . ಅಜ್ಜಸಾಬು ಹೇರಿಗೂ ಫೇರಿಗೂ ಬಳಸುತ್ತಿದ್ದ ತಟ್ಟಿಗಿಂತ ತುಸು ಉತ್ತಮವಾಗಿತ್ತು (ಮಠಮು. ೪೨೦). ೩. ಸುತ್ತುಗಳನ್ನುಳ್ಳದು ; ಸುಂಳಿ (?) : ಕಬ್ಬು ಬೆಳೆಯುವ ಸಮಯದಲ್ಲಿ ಒಂದು ಫೇರಿ ಬರುವುದನ್ನು ನೋಡಿ ಆ ಕಬ್ಬಿನ ನಾಲ್ಕೂ ಕಡೆಗೂ ಅದರ ಭಾರದ ತೂಕವನ್ನು ನೋಡಿ ಹತ್ತು ಹದಿನೈದು ಇಪ್ಪತ್ತು ಕಬ್ಬುಗಳನ್ನು ಒಂದುಗೂಡಿಸಿ . . . ಬಿಗಿದು ಕಟ್ಟಿ (ಕೃಷಿಶ್ರ. ೦೬೪).

**ಫೇರಿ₁** : ೨. ನಾವು ತಿರುಗೋ ಮುಖ್ಯಗಳು, ಆಗಾಗ ಒಂದು ಫೇರಿ ಹೊಡದು ಬಂದು ಬುದ್ರೀನಿ (ಪುಲ್ಲಿ. ೦೬೩). 'ಪ್ರಭಾತಫೇರಿ' ಪರಾ.

**ಫೇರಿ ಬಿಡು**=ಓಟ ಕೀಳು ; ವೇಗವಾಗಿ ಹೋಗು : ಆ ದಿವಸ ಸೈಕಲು ಹತ್ತಿ ಫೇರಿ ಬಿಟ್ಟಿರಾಯಿತು (ಜಕಜ. ೬೬) : ಗಾಡಿ 'ರೋಟು' ಇದ್ದರೆ ನಾನು ಸೈಕಲ್ ಫೇರಿ ಬಿಡುತ್ತೇನೆ (ಜಕಜ. ೨೬) ; ಫೇರಿ ಬಿಟ್ಟನೆಂದರೆ ಸುಬ್ಬಯ್ಯಶೆಟ್ಟರ ಜಟ್ಕ ಸುಳ್ಳು (ಶಿದಾಅು. ೬). **ಫೇರಿ ಹೊಡೆ**=ಸಂಚರಿಸು ; ಸುತ್ತು : ಹುಬ್ಬಳ್ಳಿ ಧಾರವಾಡ ಕಡೆ ಒಂದು ಫೇರಿ ಹೊಡದು ಬಂದರ ಬೇಕಾದ್ಹಂಗ ಚೈನೀನ ಚೈನಿ (ಹಿತುಗು. ೬೩). **ಫೇರೀ ಮಾಡು** = ಫೇರಿ ಹೊಡೆ : ಆಜೀ ಏನು ಸಾಂಗಲೀ ವುಸ್ತೇದ ಫೇರೀ ಮಾಡತಿರತಾಳೇನು ? (ಅಚಹ. II.೦೫). [←ಹಿಂ. ಮರಾ. ಫೇರೀ]

**ಫೇರಿಸ್ತ್** 'ಫೇರಿಸ್ತು' ನೋ.

**ಫೇರಿಸ್ತಾ** 'ಫೇರಿಸ್ತು' ನೋ.

**ಫೇರಿಸ್ತು**, **ಫೇರಿಸ್ತ್**, **ಫೇರಿಸ್ತಾ**, **ಫೇರೀಸ್ತು** (ನಾ). ವಿವರಗಳನ್ನೊಳಗೊಂಡ ಸೂಚಿ ; ಯಾದಿ ; ಪಟ್ಟಿ : (೬). **ಫೇರಿಸ್ತ್** : (ಕೃಶಗ. II, ೩೯೫). **ಫೇರಿಸ್ತಾ** : ಮಲ್ಲಿಗೇಶ್ವರನು, ದಂಡೆತ್ತಿ ಬಂದಾಗ ಬೇಲೂರು ದೇವಾಲಯವೊಂದರಿಂದಲೇ ತೊಂಭತ್ತಾರು ಸಾವಿರ ಮಣ ಭಂಗಾರವನ್ನು ಸುಲಿಗೆ ಮಾಡಿದನೆಂದು ಅಬ್ದುಲ್ ರಜಾಕನ ಫೇರಿಸ್ತಾದಿಂದ ತಿಳಿದು ಬರುತ್ತದೆ (ಳಕಿ. ೦೩೨). **ಫೇರೀಸ್ತು** : (೬).
[←ಅರ. ಪಾರ. ಫಿಹರಿಸ್ತ್ ; ಹಿಂ. ಫೇಹರಿಸ್ತ್ ; ಮರಾ. ಫೇರೀಸ್ತ್]

**ಫೇರೀಸ್ತು** 'ಫೇರಿಸ್ತು' ನೋ.

**ಫೇರು** (ನಾ). = ಫೇರಂಡ : "ಜಂಬುಕಃ . . . ಫೇರುಃ, ಕ್ರೋಷ್ಟಾ (ಚ) ಮೃಗಧೂರ್ತಕಃ — ಈ ೯ ನರಿ" (ಹರಾಹು. ೩೯-೬೬) : ಶ್ವಾನ ಶಾರ್ದೂಲ ಫೇರು . . . ಮುಂತಾದ ಕ್ರೂರಜೀವಂಗಳು ಸಾಯಲು (ಜ್ಞಾಕಹ. ೨೯-೯೦). [ಸಂ.]

**ಫೇಲ** (ನಾ). ತಿಂದು ಮಿಕ್ಕುದು ; ಎಂಜಲು ; ಉಚ್ಛಿಷ್ಟ. [ಸಂ.]

**ಫೇಲಿ**, **ಫೇಳಿ** (ನಾ). = ಫೇಲ : "ಭೋಜನಕ್ಕಾಗಿ ಮಿಕ್ಕುದು ವಿಘಸ ಮಕ್ಕುಂಡ ಭಾಜನದೊಳಿರೆ ಫೇಲಿ[ಪಾಠಾ. ಳಿ]ಯುಚ್ಛಿಷ್ಟಮೆನಿಸಿಕ್ಕು" (ಮಂಗರಾ. ೬೩-೬). **ಫೇಳಿ** : ಜಂಗುಳಿ ಪುತ್ತಳಿ ಗೋಳಿ ಫೇಳಿ ಜಲಸಂದೇಹಂ (ಕಪುರ. ೨೩). [ಸಂ. ಫೇಲೀ]

**ಫೇಲಿಕೆ**, **ಫೇಳಿಕೆ** (ನಾ). =ಫೇಲ. **ಫೇಳಿಕೆ** : "ಭುಕ್ತೋಚ್ಛಿಷ್ಟಂ, ಫೇಳಿಕಾ-ಈ ೨ ಮಡಗೂಳು" (ಹರಾಹು. ೩೯-೦೬೦) ; "ಭುಕ್ತೋಚ್ಛಿಷ್ಟಂ ಫೇಳಿಕೆ" (ಪತ್ತುಕೋ. ೯೩-೯). [ಸಂ. ಫೇಲಿಕಾ]

**ಫೇಲಿಪಾತ್ರ** (ನಾ). ಪೀಕದಾನಿ ; ಪಡಿಗ : "ಫೇಲಿ[ಪಾಠಾ. ಳಿ]ಪಾತ್ರಯೆನೆ ಪಡಿಗಮೆನಿಸಿಕ್ಕು" (ಮಂಗರಾ. ೬೩-೨೩). [<ಸಂ. ಫೇಲೀಪಾತ್ರ]

**ಫೇಲು** (ನಾ). ತೇರ್ಗಡೆಯಾಗದಿರುವಿಕೆ ; ಅನುತ್ತೀರ್ಣತೆ ; ನಾಪಾಸು : ಕಳೆದ ಪರೀಕ್ಷೆಯಲ್ಲಿ ಅವನು ಫೇಲಾಗಿದ್ದುದರಿಂದ ಈಗ ಕಷ್ಟಪಟ್ಟು ಓದುತ್ತಿದ್ದಾನೆ (ಕೂ೦). [ ← ಇಂ. Fail]

**ಫೇಲೆ** (ನಾ). = ಫೇಲ : "ಫೇಲಾ . . . ಉಂಡು ಮಿಕ್ಕ ಎಂಜಲು" (ಸಿದ್ಧಾಂತಿ. ೨೯೦). [ಸಂ. ಫೇಲಾ]

**ಫೇಳಿ** 'ಫೇಲಿ' ನೋ.

**ಫೇಳಿಕೆ** 'ಫೇಲಿಕೆ'ನೋ.

**ಫೈಲು** (ನಾ). ೧. ಬೇಕಾದಾಗ ನೋಡುವುದಕ್ಕೆ ಅನುಕೂಲವಾಗುವಂತೆ ಕಾಗದಪತ್ರಗಳನ್ನು ಜೋಡಿಸಿ ಇಡುವ ಸಾಧನ : ಅದಕ್ಕೆ ಸಂಬಂಧಿಸಿದ ಕಾಗದಗಳನ್ನು ಮೊದಲನೆಯ ಫೈಲಿನಲ್ಲಿ ಇಟ್ಟಿದ್ದೀನಿ (ಕೂ೦). ೨. ಜೋಡಿಸಿಟ್ಟ ಕಾಗದಪತ್ರಗಳ ಕಟ್ಟು : ಕಾರಕೂನ . . . ಯಾವುದೋ ಫೈಲಿನಲ್ಲಿ ಮಗ್ನನಾದ (ಕಪ್ಪುಹಿಂ. ೦೨) ; ಎಲ್ಲ ಫೈಲುಗಳನ್ನು ತರಿಸಿ ತಾವೇ ಪರಿಶೀಲಿಸುವುದಾಗಿ ಅಧಿಕಾರಿಗಳು ತಿಳಿಸಿದ್ದಾರೆ (ಕೂ೦). ೩. ನ್ಯಾಯಾಲಯದಲ್ಲಿಯ ವಿಚಾರಣೆಗಾಗಿ ಜೋಡಿಸಿ ಇಟ್ಟುಕೊಂಡಿರುವ ದಾಖಲೆಗಳ ಕಟ್ಟು : ಸದರಿ ವ್ಯಾಜ್ಯವನ್ನು ಫೈಲಿನಿಂದ ವಜಾ ಮಾಡುತ್ತಾರೆ (ನ್ಯಾಪೂಳ. ೨೯) ; ಮೊಕದ್ದಮೆಯನ್ನು ಪೊಲೀಸಿನವರು ಫೈಲಿಗೆ ತೆಗದುಕೊಂಡು ತನಿಖೆ ಪ್ರಾರಂಭವಾಡಿದರು (ಕಕದಾ. II, ೬೬೦). [ ←ಇಂ. File ]

**ಫೈಸಲ್** 'ಫೈಸಲು' ನೋ.

**ಫೈಸಲಾತಿ** (ನಾ). ತೀರ್ಮಾನ ; ನಿರ್ಣಯ : ಅವನ ಪ್ರಾಮಾಣಿಕತನವನ್ನು ಮೆಚ್ಚಿ ಸಾಲಿಗರು ಲೇವಾದೇವಿಯ ಫೈಸಲಾತಿ ಕ್ರಮಗಳಿಗೆ ಅವನನ್ನೇ ನೇಮಿಸಿದರು (ದಾದಾಪ. ೪೦); ಕಚೇರಿಯ ಒಂದು ಕಡತವನ್ನು ಫೈಸಲಾತಿ ಬಗ್ಗೆ ತರಬೇಕೆಂದು ಹೇಳಿ ಕಳಿಸುತ್ತೇನೆ (ಜುಹಾಗ. ೦೨೫). [ < ಫೈಸಲು ]

**ಫೈಸಲು**, **ಫೈಸಲ್** (ನಾ). = ಫೈಸಲಾತಿ : ಕಮ್ಮಿ ಜಾಸ್ತಿಯ ಲೆಖ್ಖವಿದ್ದ ರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರುಗುಸುರು ನೀನು (ಅಶಾಂ೦. ೩೦-೩೮); ಈ ಮೊಕದ್ದಮೆಯ ಫೈಸಲನ್ನು ಮೂರನೇ ದಿನಸ ಹೇಳುವುದಾಗಿ ದಂಡನಾಧಿಕಾರಿ ಅಪ್ಪಣೆ ಮಾಡಿದ್ದೂ ಅಲ್ಲದೆ-ಯಾವ ಕೃತ್ಯವೂ ನಡೆಯಲಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ (ಅದೂಟ. ೦೯೩). **ಫೈಸಲ್** : ಆಗ ಫೈಸಲ್ ಆಗುವಂತೆ ತೋರಲಿಲ್ಲ (ಹಂಡುತ್ರಿ. ೯); ಯಾವ ಕೋರ್ಟಿನಲ್ಲಾಗಲಿ ಫೈಸಲಾಗದೆ ಬಾಕಿಯಲ್ಲಿರುವ ಇಂಥಾ ಎಲ್ಲಾ ವ್ಯಾಜ್ಯಗಳೂ ಆಯಾ ಕೋರ್ಟಿನವರಿಂದಲೇ ವಿಚಾರಿಸಲ್ಪಟ್ಟು ವ್ಯವಸ್ಥೆ ಮಾಡಲ್ಪಡಬೇಕು (ನ್ಯಾಪೂಳ. ೨೦).
**ಫೈಸಲ್ ಮಾಡು**=ತೀರ್ಮಾನಿಸು ; ನಿಕಾಲಿಮಾಡು : ಎಲ್ಲ ಫೈಸಲ್ ಮಾಡಿ ಬಿಡುತ್ತೇನೆ (ಚಾಂಕ್. ೨೬೦) ; ಆ ಕಾಗದಗಳನ್ನೆಲ್ಲ ನಾನೇ ಫೈಸಲ್ ಮಾಡತ್ತಿದ್ದೆನಲ್ಲ ? (ರಂಗಳ. ೨೦).
[← ಅರ. ಫೈಸ್ಲಾ ; ಹಿಂ. ಮರಾ. ಫೈಸಲ್]

**ಫೊಟ್ಟನೆ** (ಅ). 'ಫೊಟ್' ಎಂಬ ಸದ್ದಿನೊಡನೆ : ಥೊಪ್ಪನೆ, ಧಣಮ್ಮನೆ ಫುಟ್ಟನೆ, ಫಟ್ಟನೆ (ಕಮರು. ೦೯ ಕ್ರಯೋ). [ಫೊಟ್ಅ + —ಅನೆ]

**ಫೊಳಲಿನಾಡು** (ನಾ). ಒಂದು ನಾಡಿನ ಹೆಸರು : ಕೊಟುಂಬಾದಿಂಜರಲ್ಲಿ ಪಡೆದ ಊರು ಫೊಳಲಿನಾಡುಕ್ಕೊಟಿಯೂಳು ಬಳಗೂರಂ ದಿಜಅ ಮಾದೇವಿಯಾಳುತ್ತಿರೆ (ಎಕ. XII, ಶಿರಾ. ೨೯-೩೯; ಸು. ೯೦೦). [?+ನಾಡು]

**ಫೋಟೋ** (ನಾ). ಚಿತ್ರಗ್ರಾಹಕಯಂತ್ರ (ಕೆಮರಾ)ದ ಸಹಾಯದಿಂದ ಮೂಡಿಸುವ ಚಿತ್ರ ; ಛಾಯಾಚಿತ್ರ : ಪತ್ರಿಕೆಯಲ್ಲಿ ೧೨ ವರ್ಷದ ಒಬ್ಬ ಹುಡುಗನ ಫೋಟೋ ಬಂದಿತ್ತು (ಜಿವಾಕ್ಕ. ೨೯೨); ಅಕ್ಕನ ಫೋಟೋ ಮೊಗ್ಗಾವಿಯ ಮನೆಯಲ್ಲಿ ಉಳಿದುಬಿಟ್ಟಿದೆ (ತಮುಕ. ೪೬೪).
[← ಇಂ. Photo]

**ಫೋಟೋಗ್ರಫಿ** (ನಾ). ಛಾಯಾಚಿತ್ರ ತೆಗೆಯುವ ವಿದ್ಯೆ : ಫೋಟೋ ತೆಗೆಯಲು ಸ್ಥೂಲಪ್ರಕಾಶ ಬೇಕು. ಸೂಕ್ಷ್ಮಶರೀರವು ಫೋಟೋಗ್ರಫಿ ತತ್ವಕ್ಕೆ ಸಂಬಂಧಪಟ್ಟುದಲ್ಲ (ಜಿವಾಕ್ಕ. ೨೩೩). [←ಇಂ. Photography]

**ಫೋಟೋಗ್ರಾಫರ್** (ನಾ). ಛಾಯಾಚಿತ್ರಗಳನ್ನು ತೆಗೆಯುವವನು ; ಫೋಟೋ ತೆಗೆಯುವವನು : ಫೋಟೋಗ್ರಾಫರ್‌ನು ದೊಡ್ಡ ಚಿತ್ರಗಳನ್ನು ಚಿಕ್ಕವನ್ನಾಗಿಯೂ . . . ಪರಿವರ್ತಿಸಬಲ್ಲ (ಜಿವಾಕ್ಕ. ೨೨೪).
[ ← ಇಂ. Photographer ]

**ಫೋಡ್** (ನಾ). ಜಮೀನನ್ನು ವಿಭಾಗಿಸುವಿಕೆ. – ಪೋಟುಭಾಗ ಮಾಡುವಿಕೆ : (ಕೃಶಗ. II, ೩೩೯). 'ಫೋಡು' ಪರಾ.
[←ಹಿಂ. ಫೋಡಾ ; ಮರಾ. ಫೋಡ್]

**ಫೋತಿ** 'ಪೌತಿ' ನೋ.

**ಫೋನ್** 'ಫೋನು' ನೋ.

**ಫೋನು**, **ಫೋನ್** (ನಾ). ವಿದ್ಯುಚ್ಛಕ್ತಿಯ ಸಹಾಯದಿಂದ ಧ್ವನಿಯನ್ನು (ಮುಖ್ಯವಾಗಿ ಮಾತುಗಳನ್ನು) ತಂತಿಮಾರ್ಗವಾಗಿ ಸ್ಥಳ

ದಿಂದ ಸ್ಥಳಕ್ಕೆ ಸಾಗಿಸುವ ಸಲಕರಣೆ ; ದೂರವಾಣಿ ; ಟೆಲಿಫೋನು : ನನ್ನ ಫೋನಿನ ಸಂಖ್ಯೆಯನ್ನು ಆತನಿಗೆ ಶ್ರುತಪಡಿಸಿ . . . ಹಸಿದಿದ್ದ ಹೊಟ್ಟೆಯ ಕಡೆಗೆ ಈಗ ಗಮನ ಕೊಟ್ಟೆ (ಹಂಬಿಬು. ೦೦೩). **ಫೋನ್** : ನಮ್ಮ ಮನೆಯಲ್ಲಿ ಫೋನ್ ಇದೆ (ಲೂಪ).

**ಫೋನುಮಾಡು** = ದೂರವಾಣಿಯ ಮೂಲಕ ಸಂಪರ್ಕ ಬೆಳೆಸು.— ಮಾತನಾಡು : ಅಗತ್ಯವಿದ್ದರೆ ಫೋನು ಮಾಡಿ ತಿಳಿಸಿಬಿಡು (ಲೂಪ).

[←ಇಂ. Phone]

**ಫೋನೋಗ್ರಾಫು** (ನಾ). ರಬ್ಬರ್ ತಟ್ಟೆಗಳ ಮೇಲೆ ಧ್ವನಿಸಂಗ್ರಹ ಮಾಡಿ, ಅದನ್ನು ಪುನಃ ಧ್ವನಿಯಾಗಿ ಹೊರಡಿಸುವ ಯಂತ್ರ; ಸ್ವರಲೇಖಕಯಂತ್ರ; ಗ್ರಾಮಫೋನು : ಮಹಾರಾಜರು ಅದನ್ನು ಎದಿಸನ್ನನ ಫೋನೋಗ್ರಾಫಿನಲ್ಲಿ . . . ಧ್ವನಿ ಮುದ್ರಿಸಿಕೊಂಡರು (ಹಂಗೀಕ.೨೦) ; ಫೋನೋಗ್ರಾಫಿನಲ್ಲಿ ನಾಟಕದ ನಟಿಯರ ಹಾಡುಗಳನ್ನು ಕೇಳಿಸಿ, ಅವನು ತನ್ನ ಮಿತ್ರವರ್ಗವನ್ನು ಸಂತೋಷಗೊಳಿಸುವ (ಇತ್ಯ.೩೦೧).

[←ಇಂ. Phonograph]

**ಫೋನೋಗ್ರಾಮ್** (ನಾ). = ಫೋನೋಗ್ರಾಫು : ಅವರ ಮನೆಯ ಹಳೆಯ ಕಾಲದ ಫೋನೋಗ್ರಾಮಿನಿಂದ ಹಾಡು ಕೇಳಿ ಬರುತ್ತಿತ್ತು (ಲೂಪ).

[←ಇಂ. Phonogram]

**ಫೋರ್ಜರಿ** (ಗು). ೧. ಕೃತಕವಾದ ; ನಕಲಿ : ನಿನ್ನ ಹತ್ತಿರ ಫೋರ್ಜರಿ ನೋಟುಗಳು ಇಲ್ಲವಲ್ಲ (ಜಿಪಕ್ಕ. ೦೬). (ನಾ). ೨. ದಸ್ತಾವೇಜು ಮೊದಲಾದುವುಗಳ ಖೋಟಾ ರಚನೆ ; ಅಸಲಿನಂತೆಯೇ ಇರುವ ಸುಳ್ಳು ಪತ್ರ : ಅವನು 'ಫೋರ್ಜರಿ' ತಯಾರಿಸುವುದರಲ್ಲಿ ಹೆಸರುವಾಸಿ (ಲೂಪ). ೩. ಕಳ್ಳರುಜು.—ಸಹಿ : ಅವನು . . . ಫೋರ್ಜರಿಯ ಆಪಾದನೆಗಾಗಿ ಬಂದಿಯಾಗಿದ್ದ ತನ್ನ ತಮ್ಮನನ್ನು ನೋಡುವ ಸಲುವಾಗಿ ಅವನಲ್ಲಿಗೆ ಬಂದಿದ್ದನು (ಭೂಕಲು. ೦೬೪). [←ಇಂ. Forgery]

**ಫೌಜದಾರ್** 'ಫೌಜುದಾರ' ನೋ.

**ಫೌಜದಾರ** 'ಫೌಜುದಾರ' ನೋ.

**ಫೌಜದಾರಿ** 'ಫೌಜುದಾರಿ' ನೋ.

**ಫೌಜು, ಪವುಜು**, ಪೌಜು, ಫವುಜು (ನಾ). ದಂಡು ; ಸೈನ್ಯ ; ಪಡೆ : ಭಾಸ್ಕರ ಬಿಸಿಲ್ಗುದುರೆಯ ಫೌ[ಪಾಠ. ಪೌ]ಜನಟ್ಟಿದನು (ಜೀಹಕ. ೦೯-೯೩); ಪಾರವಿಲ್ಲದ ರತ್ನಕಾಂತಿಯಿಂ ಜ್ವಲಿಪ ಭಂಗಾರದಾಸನದಲ್ಲಿ ಮಂಡಿಸಲ್ಕಿಕ್ಕ ಪಂವಾರ ನೃಪಸೇವೆಯೊಳ್ ನಿರತರಾಗಿರುತಿರಲು ಸುರುಟಂಗೆ ಫೌಜೊದಗಿತು (ಅಜಾಶಂ.೨೯-೮೩); ಗಾಜೆ ನೋಡಲು ಬಂದ ಜನರಿಗೂ ವಿನಾಕಾರಣ ಪೆಟ್ಟು ಸಿಕ್ಕಿ ಸರಕಾರದ ಮೇಲೂ ಪೋಲೀಸು ಫೌಜಿನ ಮೇಲೂ ಹಳ್ಳಿಯವರಿಗೆ ಸಿಟ್ಟು ಒಳಗೊಳಗೆ ಕುದಿಯುತ್ತಿತ್ತು (ಕುಕುಆ. ೦೨೦). **ಪವುಜು** : ಭರದಿಂದಾ ಕಾಲದ ಕಾರ್ಮುಗಿಲೊಳ್ ಪಿರಿದುಂ ಮುಳಿದು ಪಳಂಚುವ ಪಾಂಗಿಂದೆರಡುಂ ಪವುಜಿನ ವೀರಾನೀಯ ತಟ್ಟೇಟಿಯಿದಿರ್ಚಿದರು (ಜಯಾಕ.೬-೩೩); ಕರಿಗಳೊ ಕಲ್ಪಾಂತಮೇಘದೊಬ್ಬುಳಿಗಳ ಸರಿಗಳೊ ಕಾಲಾಳ ಪವುಜೊ . . . ಎನೆ ತುರುಕರ ಬಲವೈದಿದುದು (ಕಂಪಂ.೦೬-೯೬). **ಪೌಜು**: "ಒಡ್ಡೆನಲ್ ಪೌಜುವೆಸರ್" (ಕರ್ಣಾ. ೩೬); ತಾ ತುರಂಗದ ಮೇಲೆ ಪಡು ತಮಮಂಜ ಖಂಡೆಯವ ಒಡಿದು ಚಂಡಿಕಾಕಿರಣದ ಮೇಲೆ ಅಂಗೈಸಿ ಏಟಲಾಗಿ ಪೌಜು ಬೆರೆಯಿತ್ತು (ನರಕಸ. ೩೬-೨೯೯); ಕರಿಘಟೆಯೊಂದು ಕರಭ ಪೌಜು ತುರಗ ಸಾವಿರ ಹತ್ತುಸಾವಿರಮುಂದಿ ಇರಲದನೊಂದು ಪೌಜಿಂದು ಪೇಳ್ವರು (ಕುಂಅಸಾಂ. ೪೦-೬೬) ; ಮೊಳೈಸಿ ನಿಲಿಸಿದಂ ನಿಜಬಲದ ಪೌಜುಗಳ ನರ್ಧಚಂದ್ರಾಕೃತಿಯೊಳು (ಕೃಪಿಶ. ೨೫-೦೦). **ಫವುಜು**: ಒಡ್ಡಿದ ಫವುಜನು ದೊಕ್ಕನಂದೊಬ್ಬುಳಿ ಮಾಡ (ಅಪಂಶ.೨೯-೫೦); ಈಗ ನಿಮ್ಮ ಫವುಜು ಕಳುಹಿಸಿ ಕೊಟ್ಟರೆ ಈ ಕೋಟೆ ನಿಮ್ಮ ಕೈವಶ ಮಾಡಿಕೊಡುತ್ತೇವೆ (ರಾಜೇಂದ್ರ.೩).

**ಫೌಜುಫೌಜು, ಪೌಜುಪೌಜು** (ದ್ವಿರುಕ್ತಿ): ವಾಜಿವಾಜಿಗಳ ವೈಹಾಳಿಯುಂ ಮಾಡುತ್ತ ಫೌಜುಫೌಜಿಗೆ ಕೂಡಿಕೂಡಿ ಖುರಪುಟರವಕೆ ಮೂಜಗವು ತಲ್ಲಣಿಪ ತೆಱದಿಂದೆ . . . ಹೊಯ್ದಾಡುತಿರಲು (ಶ್ರೀಕಠಾ.೦೪-೩೮); ಪೌಜುಪೌಜಾಗಿ ಬೊಬ್ಬಿಟ್ಟೇಱುವರಿಭಟರೋಜೆಯನೇನ ಬಣ್ಣಿಸುವೆ (ಕಂಪಂ. ೦೪-೯೭). **ಫೌಜನಿಕ್ಕು** = ಸೈನ್ಯವನ್ನು ನಿಲ್ಲಿಸು : ಕಾಳಗದಲ್ಲಿ ಫೌಜನಿಕ್ಕಿದಡೆ ಮಾಱಿದಡೆ ಅರಸಂಬರಲ್ಲದೆ ಬಂಟರೆಂಬುದಿಲ್ಲ (ಪೋಳಕಜ.೨-೩); ಶೋಣಿತಪುರದ ಪಶ್ಚಿಮದಿಕ್ಕಿನಲ್ಲಿ ಶೂಲಪಾಣಿಯಾ ಪೌಜನಿಕ್ಕಿದನು (ಪೋಳಕ. ೩೬-೩೦). **ಫೌಜಾಗು** = ಗುಂಪಾಗು ; ಪಡೆಯಾಗು : ಅಖಿಲಲಕ್ಷಿಲ ಧಾತ್ರೀಶರನಿಬರು ಬೇಗ ತಂತಮ್ಮಾ ಬಲವೆರಸಿ ಪೌಜಾಗಿ . . . ನಿಲೆ (ಹಾಕ್ಯಾ. ೦೬-೬೬) : ಆತನ ಯಜ್ಞಶಾಲೆಯೊಳ್ ಅಜುಸಾಸಿರಗಂಧರ್ವ ರೇಳುಪೌಜಾಗಿ ಮೇಳಮಂ ಕಟ್ಟಿ ನರ್ತನಮನೆಸಗುತ್ತಿರ್ಪರು (ರಾರಹಂ. ೨೯-೨೦೩). [← ಅರ. ಹಿಂ. ಮರಾ. ಫೌಜ್]

**ಫೌಜುದಾರ, ಪಉಜುದಾರ, ಪೌಜುದಾರ, ಫೌಜದಾರ್, ಫೌಜದಾರ, ಫೌಜ್ದಾರ** (ನಾ). ೧. ಸೈನ್ಯದ ನಾಯಕ; ಸೇನಾಧಿಪತಿ : ಯುದ್ಧ ಪ್ರಸಕ್ತಿ ಬಿದ್ದ ಕಾಲದಲ್ಲಿ ಅಂಥಾ ಮುಖಂಡರಿಂದ ದಂಡಿನ ಸಹಾಯವನ್ನು ಹೊಂದುತಿದ್ದರು. ಇಂಥಾ ಮುಖಂಡರಿಗೆ ಫೌಜುದಾರರು ಎಂತಲೂ ಹೆಸರಿತ್ತು (ಹಾಳಿಗಾ.೦೬); ಕಾಜಿಯು ಹೆಚ್ಚು ಸಿಪಾಯಿಗಳನ್ನು ತರುವಂತೆ ಫೌಜುದಾರನಿಗೆ ಹೇಳಿ ಕಳುಹಿಸಿದನು (ಬಂಕಶು. ೩೦೨). ೨. ಪೋಲೀಸು ದಳದ ಕಿರಿಯ ಅಧಿಕಾರಿ : ಏನು ಮಾಡಬೇಕೆಂಬ ಪ್ರಶ್ನಾರ್ಥಕ ದೃಷ್ಟಿಯನ್ನು ಫೌಜುಧಾರನು ಗುಪ್ತಪೋಲೀಸನ ಕಡೆಗೆ ಬೀರಿದನು (ಪೂಹಾಸಾ. ೩೬); ಅವನು ಫೌಜುದಾರರ ಮಗ ಹುಸೇನಿ (ಬಂಗಠೂ.೨೨). **ಪಉಜುದಾರ**: ೧. ಅಮಿಾನ ಪಉಜುದಾರ ಅಮಿಾರಬೇಗಸಾಹೇಬರು ಜಮೀನದಾರರು . . . ಬರಸಿ ಕೊಟ್ಟ ತಾಮ್ರಪತ್ರದ ಶಾಸನ (ಎಕ. XII. ತಿಪ. ೦೦೨-೩; 1720). **ಫೌಜುದಾರ** : (೩). **ಫೌಜದಾರ್** : ೨. ಹೆಡ್‌ಕ್ವಾರ್ಟರಿನ ಈ ಎಲ್ಲ ಪೋಲೀಸರ ಮೇಲೆ ಒಬ್ಬ ಫೌಜದಾರ್ (ಸಬ್‌ಇನ್‌ಸ್ಪೆಕ್ಟರ್) ಇರುತ್ತಾರೆ (ಶಾಕೋ೦೧.೩೩). **ಫೌಜದಾರ**: ೧. ಅದುವರಗೂ ಅಲ್ಲಿ ಫೌಜದಾರ ಮುಂತಾದ ಪ್ರಧಾನರಾದ ರಾಜಕರ್ಮಚಾರಿಗಳು ವಾಸಮಾಡುತ್ತಿದ್ದರು (ಕಚಾಕಿಂ. ೩೬). ೨. ನೆಲಕ್ಕೆ ಬಿದ್ದ ಫೌಜದಾರರನ್ನು ಉಪಚರಿಸಲು ಕೂಡ ಚಾವಡಿಯಲ್ಲಿ ಯಾರೂ ಉಳಿದಿರಲಿಲ್ಲ (ಗ್ರಾಪಕಹು. ೦೬೪); ಮಧ್ಯವಯಸ್ಸಿನ ದಷ್ಟಪುಷ್ಟ ದೇಹದ ಆ ಫೌಜದಾರರು ತಮ್ಮ ತೀಕ್ಷ್ಣದೃಷ್ಟಿಯನ್ನು ನನ್ನ ಮೇಲೆ ಹರಿದಾಡಿಸಿದರು (ಶಾಕೋ೦೧.೩೩); ಫೌಜದಾರರು ಅವರನ್ನು ಬಹು ಬಬರಿನಿಂದ ಆಮಂತ್ರಿಸಿದರು (ಕಕೃಕ್ಕ. ೨೯೬). **ಫೌಜ್ದಾರ** : ೨. ಛತ್ರದಲ್ಲಿ ಪ್ರಿಯಪಟ್ಟಣದ ಫೌಜ್ದಾರರು ಬಿಡಾರ ಮಾಡಿಕೊಂಡಿದ್ದರೆ . . . ಅವರ ಒಬ್ಬಳೇ ಮಗಳು ಹತ್ತು ವರ್ಷದ ಹುಡುಗಿಯನ್ನು ಎತ್ತಿಕೊಂಡು ಹೋಗಿ ಬಿಟ್ಟಿಧಾರಂತೆ (ಕಂಗಾಳ್ಯ. ೦೨೦). [ಫೌಜು + – ದಾರ೩]

**ಫೌಜುದಾರಿ, ಪೌಜುದಾರಿ, ಫೌಜದಾರಿ** (ನಾ). ೧. ಆಡಳಿತ ಸೌಕರ್ಯಕ್ಕಾಗಿ ಪ್ರತ್ಯೇಕಿಸಿದ ಪ್ರಾಂತ,—ಜಿಲ್ಲೆ : ಅಲ್ಲಿಯ ನೆಡವಳಿಕೆಗಳನ್ನು ತಿಳಿಯಲು ಆ ಗಡಿಗಳಿಗೆ ಸಮಿಾಪವಾಗಿರುವಂತೆ ೬ ಫೌಜುದಾರಿ(ತುಕಡಿ)ಗಳೂ ಸ್ಥಾಪಿತವಾದುವು (ಮಹಾಶಂ. II. ೩೬). **ಫೌಜುದಾರಿ** : ೨. ಅಪರಾಧಕ್ಕೆ ತಕ್ಕ ದಂಡನೆಯನ್ನು ವಿಧಿಸುವ ಸ್ಥಳ : ತಕ್ಸೀರು ವಿಚಾರಣೆ ಮಾಡುವ ಕಚೇರಿ,—ನ್ಯಾಯಾಲಯ: (೩). **ಫೌಜದಾರಿ** : ೧. ಪೂರ್ವದಲ್ಲಿ ಡಿಸ್ಟ್ರಿಕ್ಟುಗಳಿಗೆ ಫೌಜದಾರೀ ಎಂದು ಹೆಸರು ಇತ್ತು (ಹಾಕುಶಂ. ೩೩೬). ೩. ದೊಂಬಿ ; ಜಗಳ ; ರೂಪಚಂದನ ಅಪ್ಪಣೆಯ ಮೇರೆಗೆ ಅವನಿಂದ ಎಷ್ಟೋ ಫೌಜದಾರಿಗಳಾಗಿದ್ದುವು (ಶಟಾಶ್ಯಾ. ೪೦); ಇವರು ಜೀವ ಉಳಿಸಿಕೊಂಡು ಓಡಿಬರದಿದ್ದರೆ ಫೌಜದಾರಿಯಾಗುತ್ತಿತ್ತು (ಕ್ರೀಶಾಕ್ಕ.೩೩). [←ಹಿಂ. ಮರಾ. ಫೌಜದಾರೀ]

**ಫೌಜ್ದಾರ** 'ಫೌಜುದಾರ' ನೋ.

**ಫ್ಯಾಷನ್** 'ಫ್ಯಾಷನ್ನು' ನೋ.

**ಫ್ಯಾಷನ್ನು**, **ಫ್ಯಾಷನ್** (ನಾ). ಉಡುಗೆ, ತೊಡುಗೆ ಮೊದಲಾದುವು ಗಳಲ್ಲಿ ಕಾಲಕಾಲಕ್ಕೆ ಬಳಕೆಗೆ ಬರುವ ಸಂಪ್ರದಾಯ.—ರೂಢಿ: ದಿನದಿಂದ ದಿನಕ್ಕೆ ಉಡುಗೆ ತೊಡುಗೆಗಳ ಫ್ಯಾಷನ್ನು ಬದಲಾಗುತ್ತಲೇ ಇರುತ್ತದೆ (ರೂಢಿ). **ಫ್ಯಾಷನ್**: ಅವಳು ಈಗಿನ ಕಾಲದ ಯಾವ ಫ್ಯಾಷನ್ ಅನ್ನೂ ಮಾಡುವುದಿಲ್ಲ (ರೂಢಿ). [← ಇಂ. Fashion]

**ಫ್ರೋಕ್ಷ್ಯ** 'ಪುರೋಕ್ಷ್ಯ' ನೋ.

**ಬ₁** (ನಾ). ೧. ಕನ್ನಡವರ್ಣಮಾಲೆಯ ನಲವತ್ತುಮೂರನೆಯ ಅಕ್ಷರ; ಬಕಾರ: ಉತ್ತರಪದದ ಆದಿಯಲ್ಲಿರುವ ಕ, ತ, ಪ ಗಳಿಗೆ ಕ್ರಮವಾಗಿ ಗ, ದ, ಬ ಗಳು ಪ್ರಾಯಶಃ ಆದೇಶವಾಗಿ ಬರುವುವು (ಶಬ್ದ.ರ.೬೦). ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ: "ಖಚಘರವಾದರದಕ್ಕು ಗ ಡ ಬ ಲಂ ಮೂಱಕ್ಕು" (ಕುಂಗಾ. ೦೧೯-೦೦).

—**ಬ₂** (ಪ್ರ). ಗುಣವಾಚಕದೊಂದಿಗೆ ಸೇರಿ ವ್ಯಕ್ತಿವಾಚಕಾರ್ಥವನ್ನು ಕೊಡುವ ಒಂದು ಪ್ರತ್ಯಯ: 'ಪಳಬ', 'ಪೊಸಂಬ' ಪರಾ.

**ಬಂಕ₁** 'ಬಂಕಿ₁' ನೋ.

**ಬಂಕ₂** 'ಪಕ್ಕ' ನೋ.

**ಬಂಕ₃** 'ಬಾಂಕು₃' ನೋ.

**ಬಂಕಂಗಡಿ** (ನಾ). ಮುಂಭಾಗದ ಎರಡೂಕಡೆಗಳಲ್ಲಿ ಜಗಲಿಗಳಿರುವ ಅಂಗಡಿ: ಅಲ್ಲಿಂದ ಹೊರಟ ಮೇಣವನು, ಮೈಲಾಪುರದ ಕಾಳಾದೇವಿ ರಸ್ತೆಯಲ್ಲಿರುವ ಗೋಪಾಲನಾಯರರ ಬಂಕಂಗಡಿಗೆ ಬಂದು ಮುಟ್ಟಿದನು (ಕಾಬುಕು.೩೩). [ಬಂಕ₃ (< ಬಾಂಕು₃) + ಅಂಗಡಿ (<ಅಂಗಾಡಿ)]

**ಬಂಕಣ** 'ಬೊಕ್ಕಣ₁' ನೋ.

**ಬಂಕದೆಱೆ** (ನಾ). ಒಂದು ಬಗೆಯ ತೆರಿಗೆ.—ಸುಂಕ: ಬಂಕದೆಱೆ ಸಿದ್ದಾಯ ಬಿಟ್ಟಿ ಕೊಟ್ಟಣವನುಪಸುಂಕ ಮಲಪದಿಕೆ ಸೊಲ್ಲಗೆ ಕವಾ ಕಡ್ಡಾಯ (ಸಿಂಗಿರಾ.೨೨-೨೬). [ಬಂಕ₂ + ತೆಱೆ₃]

**ಬಂಕಪುರ**, **ಬಂಕಾಪುರ** (ನಾ). ಒಂದು ಊರಿನ ಹೆಸರು; ಈಗಿನ ಧಾರವಾಡಜಿಲ್ಲೆಯ ಶಿಗ್ಗಾಂವಿತಾಲ್ಲೂಕಿನ ಒಂದು ಊರು: ಬ[ಙ್ಕ]ಪುರದ ಧೋರ ಜಿನಾಲಯದ ಚನ್ದ್ರಪ್ರಭ ಭಟಾರಪ್ಪ್ಗೆ ಸುಣ್ಣಯನುಭ್ಯನ್ತರಸಿದ್ಧಿಯಾಳುತ್ತಿರೆ (ಶಾಇ. XI-I, ೩೯-೭; 925); ಚಕ್ರಗೊಟ್ಟವ್ಯಚ್ಚಂಗಿ ವಿರಾಟನ ಪೊಳಲು ಬನ್ಕಪುರಂ ಬನವಾಸೆ (ಎಇ. XVI, ೫೫ಕ. ೬೨-೯; 1242). **ಬಂಕಾಪುರ**: ಬಙ್ಕಾಪುರದೊಳಜಿತಸೇನಭಟ್ಟಾರಕರ ಶ್ರೀಪಾದಸನ್ನಿಧಿಯೊಳ್ . . . ನೋನ್ತು (ಎಇ. II, ೩೬-೦೦೯; 974); ಬಙ್ಕಾಪುರದ ಮಚಮಠಸ್ಥಾನಮುಂ (ಎಇ. XIII, ೦೭೦-೪೦; 1055); ಬಂಕಾಪುರಕ್ಕೆ ಹೋದರೆ ಡೊಂಕು ಬಿಟ್ಟೀತೇ? (ಗಾದೆ). [ಬಂಕ₂ + ಪುರ₂]

**ಬಂಕಾಪುರ** 'ಬಂಕಪುರ' ನೋ.

**ಬಂಕಿ** 'ವಂಕಿ' ನೋ.

**ಬಂಕು₁** (ಕ್ರಿ). ಬಾಗು; ಡೊಂಕಾಗು; ವಕ್ರವಾಗು: "ಬಂಕು— ಕೌಟಿಲ್ಯೇ (ವಕ್ರವಾಗು)" (ಧಾತು); ಸೊಪಡಿಂಗವುಗ್ಗಿಸಿ ತುಂಬಿವೆರಸು ಕೂಂಕಿ ಬಂಕಿ ಬಿಟ್ಟ ಕುವಳಯಾಪೀಡನಂ ಕುವಳಯಾಪೀಡನಂ ಮಾಡಿ (ಅಭಿಪು. ೬-೬೩ ವ); ಕೊಂಕುತೆ ಬಂಕುತೆ ಹಾರೈಸುತ್ತಂ . . . ಆಡುವ ಗುಂಡಯ್ಯನ ಹೊಸನೃತ್ಯಂ ನೋಡುವ ಶಿವನಂ ಮುಟ್ಟಿತು ಸತ್ಯಂ (ಸೋಮೇಶ. ೩- ೩೩.೨೦). 'ಬಗ್ಗು₁' ಪರಾ. [ದೇ. ೫ ತಮಿ. ವಾಙ್ಕು; ಮಲ. ವಾಙ್ಙು; ತುಳು. ಬಾಂಗು; ಕೊಡ. ಬಾಂಗ್; ತೆಲು. ವಂಗು; ಕೋಲಾ. ಪಾಯ್ಕು. ಪರ್ಜಿ. ವಂಗ್]

**ಬಂಕು₂** 'ವಂಕು' ನೋ.

**ಬಂಕುಡಿ** 'ವಂಕುಡಿ' ನೋ.

**ಬಂಕುಡಿಗಾಲು**, **ಬಂಕುಳಿಕಾಲು** (ನಾ). ಸೊಟ್ಟಗೆ ತಿರುಗಿಕೊಂಡಿರುವ ಕಾಲು: ಒಡನೊಡಂಬಡದ ಕೆಂಪಿಡಿದ ತಲೆನವಿರ ಬಂಕುಡಿಗಾಲ ಬೆರಳುಗಳ ದೊಡ್ಡತುಟಿಯ . . . ದೂರ್ತನ ಸೊಗಸದಡಿಯಿಡುವವಳೆ ಹಸ್ತಿನಿ (ಅಪಿಪ. ೨-೧೩). **ಬಂಕುಳಿಕಾಲು**: ಬಂಕುಳಿಕಾಲು ಜುಪ್ಪೆಗಳು ವಲ್ಕಹ ಉಗುರ್ಗಳು (ತ್ರಿಸಂ. ೧೯೯-೩).

[ಬಂಕುಡಿ (< ವಂಕುಡಿ) + ಕಾಲು₁ (< ಕಾಲ್₁)]

**ಬಂಕುರು** (ನಾ). ಒಂದು ಬಗೆಯ ಮೀನು: ಹಲ್ಲರಂ ಬಂಕುರಂ . . . ಗಿಜಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಕಾಲ. ೩-೯೩). [?]

**ಬಂಕುಳಿಕಾಲು** 'ಬಂಕುಡಿಗಾಲು' ನೋ.

**ಬಂಕೆ₁**, **ಬಂಕ₁**, **ಬೊಂಕ**, **ಬೊಂಕೆ** (ನಾ). ೧. ಒಂದು ಬಗೆಯ ಅಂಟು.– ಗೋಂದು; ನಿರ್ಯಾಸ: ಬಂಕೆಯಂಟನಂದದಿ ಸ್ನೇಹ (ಕವಿಮು. ೯೯-೩೯). ೨. ಅಂಟು; ಜಿಗಿ: ತ್ರಿದೋಷದಲ್ಲಿ ಸಾವವನ ನಾಡಿ ಅತಿಶೈತ್ಯವಾಗಿ ತುಪ್ಪವ ತೊಡೆದ ಹಾಗೆ ನಯವಾಗಿ ಬಂಕೆ ಬೆವರಾಡುವದು (ವೈದ್ಯಸಾ. I, ೩). **ಬಂಕ₁**: ೧. 'ಬೂರಗಬಂಕ' ಪರಾ. ೩. ಸಿಪ್ಪೆ; ತೊಗಟೆ: ದಾಳಿಂಬದ ಬಂಕಮಂ ಚೂರ್ಣಿಸಿ ವಸ್ತ್ರಗಾಳಿತವಂ ಮಾಡಿ . . . ತೆಗೆದುಕೊಳ್ಳಲು ಎಂತಪ್ಪ ಬಹುಮೂತ್ರಮುಂ ಮಾಣ್ಗುಂ (ಕಳ್ಯ. ೩೬೩). **ಬೊಂಕ**: ೧. "ಕೋಲಕಂ, ತಕ್ಕೋಲಕಂ, ಕೋಶಫಲಂ — ೩ ತಕ್ಕೋಲದ ಗಿಡ, ತಕ್ಕೋಲದ ಬೊಂಕ" (ಸಿದ್ಧಾಂತಿ. ೨೦೬). **ಬೊಂಕೆ**: ೧. "ಪಾಯಸಃ . . . ಸರಳದ್ರವಃ — ೫ ಸರಳದೇವದಾರುವೃಕ್ಷದ ಬೊಂಕೆ" (ಸಿದ್ಧಾಂತಿ. ೨೦೬). 'ಬೂರಗೆಬಂಕೆ' ಪರಾ.

**ಬಂಕೆಬೆವರು**=ಅಂಟಂಟಾದ ಬೆವರು: ಜ್ವರ ಬಿಟ್ಟು ಹೋಗುವಿನ ಮೈಯೆಲ್ಲಾ ಬಂಕೆಬೆವರಿನಿಂದ ತೊಯ್ದು ಹೋಗಿದೆ (ರೂಢಿ).

[ದೇ. ೫ ತೆಲು. ಬಂಕ; ಕೋಲಾ. ಬನ್ಕ,ಬಕ್ಕ; ನಾಯ್ಕಿ. ಬಕ್ಕ; ಪರ್ಜಿ. ಬಾಕ್; ಗೊಂಡಿ. ಬೊಕರ್]

**ಬಂಕೆ₂** 'ವಂಕು' ನೋ.

**ಬಂಕೆಯರಸ** (ನಾ). ಒಬ್ಬಾತನ ಹೆಸರು: ಬಂಕೆಯರಸರಾಳುತ್ತಿರೆ ಬಂಕೆಯಾನ ಮಗಂ ಕುನ್ದಟ್ಟ (ಎಇ. VII, ೨೦೩-೯; 874); ಮಹಾಸಾಮನ್ತ ಕಱುದೇವಯ್ಯರಾನ್ವಯದೊಳ್ ಬಙ್ಕೆಯರಸರ ಮಗಂ ಶ್ರೀಲೊಕಟಿ ಯರಸರ್ (ಎಇ. VII (S), ಶಿಕಾರಿ. ೩೬೮- ೫; 902). [ಬಂಕೆ₁ + ಅರಸ₁]

**ಬಂಕೋಲು** (ನಾ). ಕೊಕ್ಕೆಕೋಲು; ದೋಟಿ: ಹಣ್ಣ ಬಂಕೋಲ ನುರೆ ಮುಂಗೈಯ್ಯಗಳೆಡೆಯಲ್ಲಿ ಹೊಂದಿಸುತ (ದುರಳು. ೬-೨೨).

[ಬಂಕು₂ (< ವಂಕು) + ಕೋಲು₁ (< ಕೋಲ್₁)]

**ಬಂಗ** (ನಾ). ೧. ಭಿನ್ನವಾದುದು: ಚೂರು: "ಬಂಗ (ಬಂಗಿ)— ಭಂಗ = ನಾಶ, ಭಿನ್ನ" (ಕರ್ನಕೋ. ೨೭). ೨. ಕಷ್ಟ; ದುರ್ಗತಿ; ಹೀನಸ್ಥಿತಿ: ಏನೋ ನಿನ್ನ ಅಣಿವು ದಣಿವು ಬಂಗ ಬಡತನ ಎಲ್ಲಾ ಕೇಳಿಕೊಂಡು ಬಂದಾಯ್ತು (ಹುಟ್ಟಿಕ.೦೩೪); ಏನೋ ಅವರ ಬಂಗ ಬಡತನಕ್ಕೆ ಒಂದಿಷ್ಟು ಕಾಯಿ ಕಸಿ ಕಿತ್ತುಕೊಂಡ್ಹೋಗಿ ಹೊಟ್ಟೆ ಹೊರಕತಾರೆ (ಕಪ್ಪುಕು. ೦೭೯); ಬಂಗು ಬಂದವನಿಗೆ ಬಂಗ ಬರದಿರದು (ಗಾದೆ). ೩. ಅವಮಾನ; ತೇಜೋಭಂಗ: ಅವರ ಮನೆ ಬಾಗಿಲಿಗೆ ಹೋಗಿ ಅನುಭವಿಸಿದ ಬಂಗ ಎಂದಿಗೂ ಮರೆಯಲಾರೆ (ರೂಢಿ). ೪. (ಆಲಂ) ವೃತ್ತಿ; ಉದ್ಯೋಗ: ಆಳುಗಳೆಲ್ಲಾ . . . ವ್ಯವಸಾಯಗಳಿಗೂ ಬಂಗಗಳಿಗೂ ಸೇರಿಕೊಂಡರು (ಚಕ್ರಳ. ೪೧). [< ಸಂ. ಭಂಗ]

**ಬಂಗಡ** (ನಾ). ಒಂದು ಬಗೆಯ ಬಳ್ಳಿ: ಬಳಿತಿಗಡೆ. ಬಂಗಡಬಳ್ಳಿ (ವೃಕ್ಷಾಗಿ. ೩೬-೦೦೩೪). [?]

**ಬಂಗಡೆ**, ಬಗ್ಗಡೆ (ನಾ). ಒಂದು ಬಗೆಯ ಕಡಲ ಮೀನು : ಸೀಗುಡಿ ಗೆಂಡೆ ಕುಚ್ಚು ಪನ್ನಲು ಬಸಿಗ ಗಿಡಿಲು ಬಂಗಡೆ ಹಾವು . . . ಮೀನ್ಗಳಂ ಗುದಿಗೆಯ್ದುರು (ಹಕಹಾ. ೩-೯೩) ; ಈ ಹೊತ್ತು ರಂಪಣಿ ಹಾಕಿದ್ದರೆ ಬಂಗಡೆ ರಾಶಿಗಟ್ಟಲೆ ಬೀಳಬಹುದಿತ್ತು (ಕುರುಂ. ೬೩) ; ಸ್ವಾರ್ಲ್ಪ್ ಮತ್ತು ಬಂಗಡೆಮೀನಿನ ಗಬ್ಬುವಾಸನೆಯೊಡನೆ ಕುದುರೆಯ . . . ಉಚ್ಚೆಯ ಕಟ್ಟುವಾಸನೆಯೂ ಕೂಡಿದ್ದುದನ್ನು ನೋಡಿದರೆ (ಮಲೆಮ. ೯೨೦). **ಬಗ್ಗಡೆ** : ಮಂದಿಮೀನ್ಬಳಿಮೀನ್ಬಗ್ಗಡೆ ಬಣ್ಣಮೀನೆನಿಪವೆಲ್ಲಂ ಬೀಳ್ದುವಾ ತಾಣದೊಳ್ (ರಾಜಶೇ. ೩-೦೦೩).

[ ←ತುಳು. ಬಂಗುಡೆ, ಬೊಂಗುಡೆ. / ಮರಾ. ಬಂಗಡ್ ]

**ಬಂಗದ್ಧ** (ನಾ). ಒಂದು ಬಗೆಯ ಹುಲ್ಲು: (೬). [ ? ]

**ಬಂಗರ**$_1$ 'ಬಂಗಾರ' ನೋ.

**ಬಂಗರ**$_2$ 'ಬವರಿ' ನೋ.

**ಬಂಗರಳಿ** (ನಾ). ಒಂದು ಬಗೆಯ ಸಸ್ಯ : "ಬಂಗರಳಿಯೆನೆ ಹೀಲವಕ್ಕುಂ" (ವೈಂಗಲ. ೩೬-೦೭) ; ಬಂಗರಳಿಯರಳಿ . . . ಪೇರಿಪ್ಪೆ ತುಪ್ಪೆಗಳಿರ್ಪವು (ಶಂರಿವತಿ. ೦೦-೨೬). [ ? ]

**ಬಂಗಲೆ**, ಬಂಗ್ಲೆ (ನಾ). ದೊಡ್ಡಮನೆ ; ಮಹಲು : ಕೃಷ್ಣರಾಯರು ವಾಸಮಾಡುತ್ತಿದ್ದುದು ಆ ಬಡಾವಣೆಯಲ್ಲಿ ಸ್ವಂತ ಬಂಗಲೆಯಲ್ಲಿ (ಮಹಾಗ. ೦೨) ; ಮಧ್ಯಾಹ್ನ ಹೊಸಬರನ್ನೆಲ್ಲ ಬಂಗಲೆಗೆ ಬರಹೇಳಿ . . . ಹಾಜರು ಪಟ್ಟಿಯಲ್ಲಿ ದಾಖಲು ಮಾಡಿಕೊಂಡರು (ರಕ್ತರೂ. ೬೨). **ಬಂಗ್ಲೆ**: ಈ ಬಂಗ್ಲೆಯಲ್ಲಿ ಎಷ್ಟು ಕೋಣೆಗಳಿವೆ ? (ಶಂದುಟಿ. ೯೯) ; ಊರ ಹೊರಗೆ ದೊಡ್ಡದೊಂದು ಬಂಗ್ಲೆ ಮಾರಾಟಕ್ಕೆ ಬಂದಿದೆ (ಹಮ್ಮೊಂರ. ೯೬).

[ ←ಇಂ. Bungalow / ಹಿಂ. ಮರಾ. ಬಂಗಲಾ ]

**ಬಂಗವಾಡಿ** (ನಾ). ಒಂದು ಊರಿನ ಹೆಸರು : ಬಂಗವಾಡಿಯ ಕೆಱೆಗೆ ಬಿತ್ತುಕಟ್ಟು ಬಿಟ್ಟುದು (ಎಕ. X, ಕೋಲಾರ. ೦೯೬-೦೯; ಸು. ೯೫೦).

[ಬಂಗ? + ಪಾಡಿ$_2$]

**ಬಂಗಳಿಚ** (ನಾ). ಬಂಗಾಳದೇಶದಲ್ಲಿ ಹುಟ್ಟಿದವನು ; ಬಂಗಾಳಿ : ವರೇಂದಂ, ಬಂಗಳಿಚಂ (ಶಬ್ದಾಮ. ೯೨೦ ವ್ಯಾಖ್ಯಾ). [ಬಂಗಳ$_0$ + —ಇಚ]

**ಬಂಗಾರ**, ಬಂಗರ$_1$, ಬಂಗಾಱ, ಬಿಂಗರ, ಬಿಂಗಾರ, ಬಿಂಗಾರಿ$_2$, ಭಂಗಾರ, ಬಂಗಾಱ (ನಾ). ೧. (ವಿಶೇಷವಾಗಿ ಒಡವೆಗಳನ್ನು ಮಾಡಲು ಉಪಯೋಗಿಸುವ) ಒಂದು ಬಗೆಯ ಹಳದಿಬಣ್ಣದ ಲೋಹ ; ಹೊನ್ನು ; ಚಿನ್ನ : "ಬಂಗಾರ (ಭಂಗಾರ) — ಭೃಂಗಾರ= ಚಿನ್ನ, ಚಿನ್ನದ ಹೂಜೆ" (ತದ್ಭಕೋ. ೨೬) ; ಹಳೆಯ ಬಂಗಾರದಿಂದ ಹೊಸ ಒಡವೆ ಮಾಡುವಂತೆ ಹಳೆಯ ವೈದಿಕಧರ್ಮಕ್ಕೆ ನವ್ಯಚೇತನವನ್ನು . . . ಶ್ರೀಕೃಷ್ಣನು ನೀಡಿದ್ದಾನೆ (ಹಾಕದ. ೦೦೬) ; ಅತ್ತಿಮಬ್ಬೆ . . . ಲಿಪಿಗಾರರಿಗೆ ಬಂಗಾರದ ಕಂಟವನ್ನು ದಾನಮಾಡಿಬಿಡುತ್ತಿದ್ದಳು (ದಾನಚಿಂ. ೦೭೩). ೨. ಚಿನ್ನದಿಂದ ಮಾಡಿದ ಹೂಜೆ: ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. ೩. ಚಿನ್ನದ ಒಡವೆ ; ಸ್ವರ್ಣಾಭರಣ : ಹಣ ಬಂಗಾರ ವಸ್ತ್ರ ಕಪ್ಪಡ ಬಟ್ಟೆಯಲ್ಲಿ ನೆಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟಿ ಎತ್ತದ ಭಾಷೆ (ಆದಯ. ೨೦-೩೨) ; ಬಣ್ಣವನುಡರು ಬಂಗಾರಗಳನು ತೊಡರು (ಶೀಬಸಂ. ೬-೯೦) ; ಮೆಯ್ಯ ಬಂಗಾರಗಳ ನುಗಿದು ಮಜಿಮಾಡಿದರ್ (ಶಂಕ್ರಿ. ೨೯-೨೬). ೪. (ಅಲಂ) ಮಕ್ಕಳನ್ನು ಪ್ರೀತಿಯಿಂದ ಕರೆಯುವಾಗ ಬಳಸುವ ಶಬ್ದ: ನನ್ನ ಬಂಗಾರ ಬಾಪ್ಪಾ ಇಲ್ಲಿ (ರೂಢಿ). **ಬಂಗರ**$_1$ : ೧. ಮುತ್ತಿನ ಕಂಠಿ ಬಂಗರದ ಕೊಡೆ (ಎಕ. VI, ಶಕ್ಕಮ. ೦೦೯-೩೬; 1717) ; ಬಂಗರವು ಬೆಂಕಿಯೊಳು ಬೀಳಲು ಬಂಗರವು ತಂಡಸದಿ ಹುಡುಕುಯೆ ಹಿಡಿದ ತೆರನಂತೆ (ಜ್ಞಾಮೃ. ೦೯-೩೬). Δ **ಬಂಗಾಱ** : ೫. (ಅಲಂ) ಶ್ರೇಷ್ಠನಾದವನು : ಪರಬಳಸೂಱೆಕಾಱಂ ವೈರಿಬಂಗಾಱಂ (ಮುಂಬಶಾ. X, ೨೦೯-೯; ೧೧೧) ; ರಿಪುರಾಯ[ರ]ವರಬಂಗಾಱಂ (ಸೌಇಇ. XI-ii, ೦೬೨-೭; 1112) : ಬಿರುದಬಂಗಾಱಂ ಶಾಮಂತ ಗಸಣಿ (ಮ್ಯಶಾ. ೦೯೩೭, ೧೭-೨೯; 1190). **ಬಿಂಗರ** : ೩. ಉಂಗುರದ ಕಾಲ ಊರುತ ಜಾರುತ ಬಿಂಗರದ ನಡುವ ಬಳುಕುತ ಲಕ್ಕವ್ವ ಬಂದಳೇ (ನಾಶಕ. ೨೩). **ಬಿಂಗಾರ** : ೧. "ಬಿಂಗಾರ (ರ) — ಭೃಂಗಾರ" (ತದ್ಭಕೋ. ೩೦) ; ಋತ್ವಕ್ಕೃತ್ವಂ–ಋಜು—ರಿಜು . . . ಭೃಂಗಾರ—ಬಿಂಗಾರ (ಶಮದ. ೨೬೬ ಶ್ರಹೋ). ೬. ಕಾಗೆಬಂಗಾರ; ಅಭ್ರಕ : ಇದರಲ್ಲಿ ಮುಖ್ಯವಾಗಿರುವ ವಸ್ತುಗಳೆಂದರೆ ನುಣುಪಾದ ಜಿಡ್ಡಿನಂತಿರುವ ಖನಿಜದ ಪುಡಿ, ಬಿಂಗಾರ (ಟಾಲ್ಕ್) (ಶಶೀಕೋ. I. ೩೩). **ಬಿಂಗಾರಿ**$_2$ : ೨. (ನಂಜವ್ವಗೆ ಆಣ್ಣರವಿ ಮಾಡಿ, ಹೊನ್ನ ಬಿಂಗಾರಿಯನ್ನು ತೋರಿ, ಮುಗುಳ್ನು ಕೊಳ್ಳನು) (ಶಿಲ್ಪ್ಯ. ೯೨-೨೩). ೭. ತೂಗು ಬಿಟ್ಟಿರುವ ಚಿನ್ನದ ಅಲಂಕಾರವಸ್ತು; ಗುಳೋಪು ; ರಸಗುಂಡು : ಬಿಗಿದ ಬಿಂಗಾರಿಗಳ ಹಸುರ್ವಂದರವ ಮುಸುಕಿ ನೆಗೆದ ಮೇಲ್ಕಟ್ಟುಗಳ ಸೂಯಾಣ ಪಂಚವರ್ಣದ ಚೂಳಿಕೆಗಳೊಪ್ಪಲು . . . ವಿವಾಹಗೃಹವೆಸೆಯಿತ್ತು (ಸಿದ್ಧಕಾ. ೬-೩೩); ಬಿಗಿದ ಬಿಂಗಾರಿಗಳ ಮೇಲ್ಕಟ್ಟುಗಳ ಮಣಿಮಯಸೂಸಕದ. . .ಚಪ್ಪರದೆಡೆಯೆಡೆಯ ಚೌಕಿಗೆಯ ಚತುರಂಗದ ವಿಚಿತ್ರದ ರಚನೆ ಚೆಲುವಾಯ್ತು (ಕುವ್ಯಾಸ. ೬-೨೩); ಬಿಗಿದ ಬಿಂಗಾರಿಗಳ . . . ಸುತ್ತಣ ಸಾಲಭಂಜಿಕೆಗಳ ವಿಲಾಸದಲಿ ಸೊಗಸುತಾ ಮಂಟಪ (ತೊರೆರಾ. ೦-೦೩-೬). **ಭಂಗಾರ** : ೧. ವರ್ಗಚತುರ್ಥಾಕ್ಷರಂಗಳ್ಗೆ-ಘಟಾಯಿಯಂ . . . ಭಂಗಾರಂ, ಭಂಡಾರಂ (ಶಮದ. ೦೫ ಶ್ರಹೋ); ತೋರದ ತೋಳುಳ್ಳರ್ ಭಂಗಾರದ ಕಂಭದವೊಲುಪ್ಪೊಡಂಬುಳ್ಳವರ್ (ಸೌಂದ. ೦-೦೯). ೩. ಚಿನ್ನದಿಂದಾದ ಭಂಗಾರ (ಒಡವೆ) ಚಿನ್ನದ ರೂಪಲ್ಲದೆ ಮತ್ತೊಂದು ರೂಪಾಗಬಲ್ಲುದೆ ಹೇಳಾ (ಸಿದ್ಧೇಶ. ೦೯-೩೨). ೮. (ಅಲಂ)ಶ್ರೇಷ್ಠವಾದುದು; ಉತ್ತಮವಾದುದು: ಭಂಗಾರದಂಥಾ ಎತ್ತೊಂದು ಪೊನ್ನೇ ಕೈಯೊಳಗಿಂದ ಹೋಯಿತ್ತು (ಆಕೋಶ. ೯೦). Δ **ಭಂಗಾಱ** : ೫. ಮಣ್ಣಾಳಿಕ ಬಿರುದ ಭಂಗಾಱಂ (ಸೌಇಇ. XI-i, ೯೭-೭; 1062) ; ರಾಯಜಗದಳವ[ನೋಜ] [ರತಿ]ಮುಚ್ಚರಿವ ಸವತಿ ಮದಭಂಜನೆ ರಾಯಭಂಗಾಱ (ಎಇ. XXVIII, ೪೫-೪೬; 1082); ರಾಯರಾಯಪುರಸೂಱೆಕಾಱ ವೈರಿಭಂಗಾಱ (ಎಕ. II, ೦೯೩-೯೦; 1131).

**ಬಂಗಾರದ** ನೀರು = ಚಿನ್ನದ ಬಣ್ಣ ಬರುವಂತೆ ಮೆರುಗನ್ನು ಕೊಡುವ ರಾಸಾಯನಿಕದ್ರವ : ಬೆಳ್ಳಿಒಡವೆಗೆ ಬಂಗಾರದ ನೀರು ಬಿಡಿಸಿದ್ದಾರೆ (ರೂಢಿ). **ಬಂಗಾರದ** ಮುಲಾಮು = ಚಿನ್ನದ ಮುಲಾಮು.— ಗಿಲೀಟು : ಅವೆಲ್ಲಾ ಬಂಗಾರದ ಮುಲಾಮು ಹಾಕಿದ ಒಡವೆಗಳು (ರೂಢಿ). **ಬಂಗಾರದವಳು**, **ಭಂಗಾರದವಳು** = (ರಾಜನ) ಉಪಪತ್ನಿ : ಪಟ್ಟದ ಹೆಂಡತಿಗೆ ಅಚ್ಯುತರಾಯನೆಂಬ ಮಗನಿದ್ದನು. ಬಂಗಾರದವಳಿಗೆ ಕೃಷ್ಣರಾಯನೆಂಬ ಮಗನಿದ್ದನು (ಶೀಶಾಂ. VII, ೨೦) ; ಬಂಗಾರದವಳು, ಬಂಗಾರಕ್ಕಾಗಿ ಹೆಂಡಿರಂತೆ ಬಂದವಳು, ವೇಶ್ಯೆಯಲ್ಲ. ಮದುವೆಯಾದ ಹೆಂಡಿರಲ್ಲ (ಪಮ್ಮುಸ. ೦೩೮) ; ದೊಡ್ಡಮ್ಮ ರಣಧೀರನ ಭಂಗಾರದವಳಾಗಿರಲು ಅಪೇಕ್ಷಿಪಟ್ಟು, ಅರಮನೆಗೆ ತೆರಳುತ್ತಾಳೆ (ಸಂಶಕ. ೦೦೨). **ಭಂಗಾರದ** ಸ್ತ್ರೀ = ಬಂಗಾರದವಳು : "ಭೋಗಿನ್ಯಃ, ಅನ್ಯಾಃ, ನೃಪಸ್ತ್ರೀಯಃ — ಅರಸು ಭೋಗಪಡುವದಕ್ಕೆ ಉಪಯುಕ್ತರಾಗಿ ಪಟ್ಟದ ರಾಣಿಗಿಂತಲೂ ಬೇರೆ ಸ್ತ್ರೀಯರ ಹೆಸರುಗಳು. ಇದು ಭಂಗಾರದ ಸ್ತ್ರೀಯರಿಗೂ ಹೆಸರಾಗುತ್ತೆ " (ಸಿದ್ಧಾಂತಿ. ೦೬೮).

[< ಸಂ. ಭೃಂಗಾರ, ಭೃಂಗಾರೀ. / ತಮಿ. ಪಙ್ಙಾರ, ಪಙ್ಙಾರು ; ತುಳು. ಬಂಗಾರ, ಭಂಗಾರ್, ಭಂಗಾರ; ತೆಲು. ಬಂಗರ, ಬಂಗರು, ಬಂಗಾರ, ಬಂಗಾರು]

**ಬಂಗಾರಕಡ್ಡಿ** (ನಾ). ಚಿನ್ನದ ಕಡ್ಡಿಯಂತೆ ತೆಳುವಾಗಿರುವ ಒಂದು

ಬಗೆಯ ಬಟ್ಟೆ: ಈಗ ಬಂಗಾರಕಡ್ಡಿ ಬೆಲೆ ಕ್ವಿಂಟಾಲಿಗೆ ನಾನೂರೈವತ್ತು ರೂಪಾಯಿ ಆಗಿದೆ (ಒಂಟ). 'ಬಂಗಾರಸಣ್ಣ' ಪರಾ.

[ಬಂಗಾರ + ಕಡ್ಡಿ]

**ಬಂಗಾರಚೌಕಿ** (ನಾ). ಅರಮನೆಯ ಸ್ತ್ರೀಯರಂ ವಾಸಿಸುವ ಅಂತಃಪುರದ ಒಂದು ಭಾಗ: ಕಂಗೊಳಿಸುವ ದಿವ್ಯಕಾಂತಿಯ ತೀಡುತ ಬಂಗಾರಚೌಕಿಯೊಪ್ಪಿದುದು (ಶಂಪ. ೬-೩೪). [ಬಂಗಾರ + ಚೌಕಿ]

**ಬಂಗಾರಸಣ್ಣ** (ನಾ). =ಬಂಗಾರಕಡ್ಡಿ : ಬಂಗಾರಕಡ್ಡಿಯನ್ನೇ ಬಂಗಾರ ಸಣ್ಣ ಎಂದೂ ಕರೆಯುತ್ತಾರೆ (ಒಂಟ). [ಬಂಗಾರ + ಸಣ್ಣ]

**ಬಂಗಾರಹುಡಿ** (ನಾ). ಚಿನ್ನದ ಪುಡಿ : ಬಂಗಾರಹುಡೀಲೇ ಭಂಡಾರಾನ ಬೆಳಸೇನಂದಾಂವಾ (ಸಹೀಗೀ. ೮೨-೬). [ಬಂಗಾರ + ಹುಡಿ (<ಪುಡಿ)]

**ಬಂಗಾಲ**, **ಬಂಗಾಳ** (ನಾ). ಒಂದು ದೇಶದ ಹೆಸರು; ವಂಗ: ಬಂಗಾಲದಲ್ಲಿ ಮುತ್ತೈದೆಯರು ಶಂಖದ ಬಳೆ ಹಾಕಿಕೊಳ್ಳುತ್ತಾರೆ (ಅಕ್ಕಳ. ೪); ಬಂಗಾಲ : ಭಾರತಉಪಖಂಡದ ಈಶಾನ್ಯಭಾಗದಲ್ಲಿರುವ ಐತಿಹಾಸಿಕಪ್ರದೇಶ (ಕಶಕೋ. XI. ೬೬೪). **ಬಂಗಾಳ** : ವಂಗ ಕಳಿಂಗ ಬಂಗಾಳ . . . ನೇಪಾಳರ್ ಮೊದಲಾದ ರಾಜಪುತ್ರರ ಪಂಕ್ತಿಗಳೊಳಂ (ಗಂಧ. ೨-೦೦೩ ಪ); ರಾಳ ಚೋಳ ವರಾಳ ಯವ ಬಂಗಾಳ . . . ವಿದರ್ಭಧರಣೀಪಾಲತತಿ ಸಂದಣಿಸಿದುದು (ಕೂಶರಾ. ೦-೬-೦೪); ಅಂಗಾಲಿಗೆ ತ್ರಾಣವಿದ್ದರೆ ಬಂಗಾಳಕ್ಕೆ ಹೋಗಬಹುದು (ಗಾದೆ).

[←ಹಿಂ. ಮರಾ. ಬಂಗಾಲ್ / ಸಂ. ವಂಗ]

**ಬಂಗಾಲಿ**, **ಬಂಗಾಳಿ** (ನಾ). ೧. ಬಂಗಾಳದೇಶಕ್ಕೆ ಸೇರಿದವನು. ೨. ಬಂಗಾಳದೇಶದ ಭಾಷೆ: ಈ ಬಂಗಾಲೀಚಿತ್ರಕ್ಕೆ ಈ ಗೌಡ ಬಂಗಾಲೀ ವಿಮರ್ಶೆ ಹೊಂದಿಕೆಯಾಗುತ್ತದೆ (ಅಚಿಕ. ೩೩). ೩. (ಆಲಂ) ಮೋಸಗಾರಿಕೆ; ಕುಯುಕ್ತಿ : 'ಗೌಡಬಂಗಾಲಿ', 'ಬಾರಾಬಂಗಾಲಿ' ಪರಾ. **ಬಂಗಾಳಿ** : ೨. ಬಂಗಾಳಿಯನ್ನು ಅಭ್ಯಾಸ ಮಾಡಲು ಈ ಭಾಷಾಂತರ ನೆರವಾಗುತ್ತದೆಯೆಂಬುದು ನನ್ನ ನಂಬಿಕೆ (ಶಿಶಿಂರ. I. xvi ಮುನ್ನುಡಿ). ೩. ಬಂಗಾಳಕ್ಕೆ ಹೋದರೂ ಗವುಡಬಂಗಾಳಿ ಬಿಡಲಿಲ್ಲ (ಗಾದೆ). ೪. ಒಂದು ಬಗೆಯ ಮರ; ಹೂವರಸಿ : ರಕ್ತವಿಪ್ಪುದು ಬಂಗಾಳಿ ರಸದಂತೆ (ಅಶ್ವೋಶ್ರ. ೩-೨೩-೨೦); ಬಂಗಾಳಿಗಿಡದ ಬುಡಕ್ಕೆ ಕುಳಿತ ಮುದುಕಿಯ ಕಡೆಯಿಂದ ನಾಲ್ಕಾಣೆ ವುಗ್ಗಿ ತಿಂದು ಮುಗಿಸುವಷ್ಟರಲ್ಲಿ ಶಾಲೆ ಬಿಟ್ಟಿತು (ಗಾಅಶ. ೦೬೬). ೫. [ಸಂಗೀತ] ಒಂದು ರಾಗದ ಹೆಸರು : ಸಮಸ್ತರಾಗಂಗಳೊಳಗೆ ರಾಮಕ್ರಿಯೆ . . . ಬಂಗಾಳಿ ಮಧ್ಯಮಾವತಿಯೆಂಬ ಮುವತ್ತಾಱು ರಾಗಂಗಳೇ ಮುಖ್ಯಮಾಗಿ ಬಳಕೆಯಿಂದ . . . ಇರ್ಪವು (ಶಿತೀಳ. ೨೩೪); ವಾಟ್ಯ ಸಾಳಂಗ ಬಹುಳಿ ಬಂಗಾಳಿ ಈ ನಾಲ್ಕು ರಾಗವಾದಿಯಾದ ಮೂವತ್ತೆರಡುರಾಗವನು . . . ಪಾಡುವರು (ಕೃಕಸೂ. I. ೨೨). [← ಹಿಂ. ಮರಾ. ಬಂಗಾಲೀ]

**ಬಂಗಾಲಿತನ** (ನಾ). ಮೋಸ; ವಂಚನೆ; ಠಕ್ಕು : ಕಂಗಾಲತನವು ಹೆಚ್ಚಾದ ಕಾಲಕ್ಕೆ ಅನ್ನದ ಕೊರತೆಯನ್ನು ತತ್ವಜ್ಞಾನದ ಬಂಗಾಲಿತನದಿಂದ ಮುಚ್ಚಬೇಕಾಗುತ್ತದೆ (ಅಶಾಮು. ೩೪). [ಬಂಗಾಲಿ + —ತನ]

**ಬಂಗಾಳ** 'ಬಂಗಾಲ' ನೋ.

**ಬಂಗಾಳಪಚ್ಚೆ** (ನಾ). ಒಂದು ಬಗೆಯ ಔಷಧದ್ರವ್ಯ : ಬೋಳಾಮುಸ್ತಕಿ, ಬಂಗಾಳಪಚ್ಚೆ, ಪಚ್ಚೆತುತ್ತ . . . ತಾವ್ರುದ ಚೆಂಬಿನಲ್ಲಿ ಮರ್ದಿಸಿ ಹುಳುಕಡ್ಡಿ ರಕ್ತ ಬರುವ ಹಾಗೆ ಕೆರೆದು ತೊಡೆಯ ಗುಣ (ಅಶ್ವಿಚಿ. ೧೦೪).

[ ← ತಮಿ. ವಙ್ಕಳಪ್ಪಚ್ಚೈ ]

**ಬಂಗಾಳವಿದ್ಯೆ** (ನಾ). =ಬಂಗಾಲಿತನ : ಬಂಗಾಳವಿದ್ಯೆದಹಮ್ಮಿನಲಿ ಬಸವ ನಾಡಿಗೊಡೆಯನ ಗೆಲ್ದು ಹಮ್ಮೊಡಗೂಡಿ ಗೃಹಕ್ಕೆದಿದನು (ಅಶ್ವಾಶ್ವ. ೬-೦).

[ಬಂಗಾಳ (<ಬಂಗಾಲ) + ವಿದ್ಯೆ]

**ಬಂಗಾಳಿ** 'ಬಂಗಾಲಿ' ನೋ.

Δ**ಬಂಗಾಱು** 'ಬಂಗಾರ' ನೋ.

**ಬಂಗಿ** 'ಭಂಗಿ' ನೋ.

**ಬಂಗಿಮುಕ್ಕ** 'ಭಂಗಿಮುಕ್ಕ' ನೋ.

**ಬಂಗು** (ನಾ). ೧. ಚರ್ಮದ ಮೇಲೆ ಕಪ್ಪುಚುಕ್ಕೆಗಳುಂಟಾಗುವ ಒಂದು ಬಗೆಯ ಚರ್ಮರೋಗ: ಬೀರಗೆ ಸಿದ್ಧಾರ್ಥಂ ಕಾಟ್ಟೀರಗೆ ಕರಿಯೆಳ್ಳಲಿಂಬಿವಂ ಪೂಸುಗಜಕ್ಷೀರದೊಳರೆದಾನನಪಂಕೇರುಹವಮಂ ಬಂಗು ಪಿಂಗುಗುಂ (ಕೋಶೀಅಕ. ೬-೫೪); ನರವುಲಿ ಮೊದವ ಬಂ[ಶಾಶಂ. ಭೂ. ಪಂ]ಗು ನೆರೆದಾನನದ ಚುಬ್ಬುವರಸಿರ್ದ ಲಂಕಾಳಿನ ನಿಡಿಯೊಡಲು (ಅಶಕ. ೦೦-೦೦); ಪಡಪಲದ ಬೀಜವ ಪೂಸೆ ಬಂಗು ತೀರ್ಗು೯ (ಅಶ್ವಿಚಿ. ೫೪). ೨. ಬೂಷ್ಟು; ಬೂಜು : ಅವನುಪಕಾರಮನಾಂ ಪೇ[ಟ]ವೇಟ್ಟುದೆ ನಮ್ಮ ತಿರಿದು ತಂದುಣ್ಬಶನಕ್ಕವ[ರ]ಣ್ಣೆ ಸೂಜಿಮೊನೆಯನಿಸುವೆಣ್ಣೆಯುಂ ಬಂಗುವಡಾದ ಕಟ್ಟುಯುಂ ಪೇಟ್ಟುಂ (ಸುಕುಸೂ. ೨-೬೬). [ದೇಶಿ ತಮಿ. ವಙ್ಕು]

**ಬಂಗುರಿಸು** (ಕ್ರಿ). ೧. 'ಬಂ' ಎಂದು ಶಬ್ದ ಮಾಡು : ಇಂಗಡಲ ತಾವರಸದಿ ಬಂಗುರಿಪ ತುಂಬಿಗಳ ಗಾವರಂ ಗಾನ ಮಿಗೆ ರಂಗಿಸುತ ಕೇಳುವೆಯ ನಿಟ್ಟಿಪ ಸಮುದ್ರೇಶ (ಅಂಗಶ್ವ. ೨-೪೦). ೨. (?) : ಬಾಂಬಟ್ಟೆಯೆಡೆಗೆ ಹೋಗಿ ಬೆಳೆದಮ್ಯತಫಳಮಂ ಗಣನೆಯಿಲ್ಲೆನಿಸಿ ಬಂಗುರಿಪ ಖಚರಪಾನಂಗಳಿಂ ಬಿಡದೆಱೆವ ತಂಗರಗವೂ . . . ಎನಿಸಿ ಶೃಂಗಚಿಂದೆಂಗೆಸೆದವು (ಅಂಗಶ್ವ. ೩-೨೬). [? + —ಇಸು]

**ಬಂಗ್ಲೆ** 'ಬಂಗಲೆ' ನೋ.

**ಬಂಚ**, **ವಂಚ** (ನಾ). ೧. ಪೀಳಿಗೆ; ಮನೆತನ; ಕುಲ: "ವಂಶಮಂ ಬಂಚಮೆನಲಕ್ಕು" (ಕ್ಶಾಕ್ಶ. ೩೬); ಈ ಲಲ್ಲಾಡನಟಾದೊಂ ಕೊಬ್ಬಾಳರ ಕೊಡುಗೂರರ ಬಪ್ಪಾಮತ್ತನ್ನೆ ಅಱುಗೆ (ಎಕ.III(B). ಹಗ್ಗಡ. ೩-೦೫; ಸು. ೯೫೧ರಹು ೫೫); ಶತ್ವಕ್ಕೆ ಚತ್ವಂ . . . ವಂಶ—ಬಂಚ (ಶಬರ. ೨೬೩ ಪ್ರಯೋ). ೨. ಕೊಳಲು : ಎರಡುಂ ಬಂಚಂಗಳಿಂದೀಚರಮೊಸರ್ವಿನೆಗಂ ಕಿನ್ನರದ್ವಂದ್ವಮೊತ್ತುತ್ತಿರೆ . . . ಕೇಳುತ್ತಿರ್ದ ಕಾದಂಬರಿಯಿನವಮಂ ದೂರದೊಳ್ ಕಂಡಂ (ಕಾದಂಅಂ. ೦೬೪); ಮದನನ ಬಿಲ್ಲ ಹೇವೊಡೆ ವಿಪಂಚಿಯ ಬಂಚದ ನುಣ್ಪು ಕರ್ಣಪೂರದ ಪರಮಾಮೃತಾಂಬುವೆನೆ ನೇವುರದಿಂದುಡೆ ನೂಲ ತೊಂಗಲಿಂ ಮೃದುರವಮಾಣ್ಣೆ (ಅಶಂಶ್ವ. ೪-೩೦); ಗೋವರ ಪೆಣ್ಗಳ್ ಬಂಚದ ಗಾವರಕರ ಸೋಲ್ತು ಬಳಸಿ ನಿಲೆ (ಕಮಚಶಾ. ೪-೦೫೬). **ವಂಚ** : ೧. "ವಂಚಂ=ವಂಶಂ" (ಶಬ್ದ. ಶಂ. ೨). ೨. 'ವಂಚಿಗ' ಪರಾ. [<ಸಂ. ವಂಶ]

**ಬಂಚನೆ** (ನಾ). ಮೋಸ; ಕಪಟ: "ಅತಿಬಂಚನೆಯನೆ ಮರುಟಕ್ಕು [ಮಱಸದಕ್ಕು]" (ಅಕ್ಕಶಂ. ೩); "ಬಂಚನೆಯೆ ವಂಚನೆ" (ಶಶಾಣಿ. ೬೦); ಪುಸಿನಸೆ ಬಣ್ಣನೆ (ಎಕ. VI. ಕಶ್ರಮ. ೯೪-೦೯; ಸು. 1080 ?). [<ಸಂ. ವಂಚನ]

**ಬಂಚರ** (ನಾ). ೧. ಒಂದು ಬಗೆಯ ತಂತೀವಾದ್ಯ; ತಂಬೂರಿ : ಆ ಬಂಚರವನ್ನೆತ್ತಿ ವಿಸಾಂಟ ಪರೀಕ್ಷಿಸಿ, ಸುತಿ ಮಾಡಿ . . . ರಾಗವಾಲಿಕೆಯನ್ನು ಸವಿಗರೆಯುವಳು (ಕುಂಶ್ರಕ. ೫೬-೦೨). ೨. ವೀಣೆ (?) : ಬಾಳ ಬಂಚರ ಮಿಡಿದು ನುಡಿಸು ಬಂಧುರ ಸುಂದರಾ! (ಕಶರಾ. I. ೪೬೦). ೩. (?) : ಚಂಚತ್ಪಂಚಶರನ ಬಂಚರದಂತೆ ಮುಂಚಿ ಪಂಚಮದಿಚರಂ ಪಂಚಮನೆ ನೆಗಳ್ದು ಸಂಗಡಿಸಿದ ಕೆಂಗಣ್ಣಾಕ್ಕಿಗಳಿಂ (ಶಾಶಕೀ. ೨-೬೩ ಪ); "ಭಟ್ಟಂಗಿ ಧ್ವನಿ" (ಶಾಅಕೀ. ಕೋಶ). [ ? ]

**ಬಂಚರದ್ದಳಿ** ? (ನಾ) : ಅಲಿನೀಜ್ಯಾಮ್ಯದುಮಂಜಿಂಜಿತ ಸಮಂ ಸಣ್ಣಿಂಚರಂ ಬಂಚರದ್ದಳಿಯೊಳ್ಳಳ್ಳೊಡನುಣ್ಮೆ ನುಣ್ಣುರದೆ ಮಿಂಚಂ ಸೀಳ್ದ ಪೊಲ್ಲ್ವೊಣ್ಣೆ ಕಾಳಳಿಯೊಳ್ಕೂಡಿದ ಸೀಯನಪ್ಪ ರಸಗೇಯಂ ಚಿತ್ರಮಂ ತಾಗೆ (ಅಂಲಾಪ. ೩-೬೦). [ ? ]

**ಬಂಚಿಸು** (ಕ್ರಿ) ೧. ಮೋಸ ಮಾಡು; ವಂಚಿಸು: ಬಂಚಿಸಿ ತನ್ನನುಡೆಯ ಧನವಂ ಚಪಲಂ ಕೊಂಡು (ಅರಿಶೃ. ೩-೦೯): ಧರ್ಮ ಬುದ್ಧಿಯಧರ್ಮಬುದ್ಧಿಯಾಗಿ ಧನವಂ ಬಂಚಿಸಿ (ಪಂಚತಂ. ೦೭೭-೨೦). ೨. ತಪ್ಪಿಸು: ಚಾಣಾಕ್ಯನ ದೃಷ್ಟಿಯಂ ಬಂಚಿಸಿ [ಪಾಠಾಂ. ಯಿಂದಂಜಿಸಿ] . . . ತುತ್ತನರಸಂ ವಿಷಮಿಶ್ರಿತಮೆಂದರಿಯದೆ ಕೊಟ್ಟಂ (ವಡ್ಡಾರಾ. ೦೯೦-೨); ಅತ್ತ ಮನುಜಮನೋಜನುಂ ಮದನಪರಿತಾಪಕ್ಕಾಱದುಮ್ಮಳಿಸಿ ವಧುಮಥನನ ಕಣ್ಣಂ ಬಂಚಿಸಿ . . . ಎಯ್ದೆವಂದು (ಶಂಶರಾ. ೩-೦೦ ವ); ನೆಣದ ವಳ್ಳಂಗಳಂ ಪಾಯ್ದುಂ ನೆತ್ತರ ತೊಱೆಗಳಂ ಬಂಚಿ[ಪಾಠಾಂ. ಜಿ] ಸಿಯುಂ . . . ಪೋಗಿಪೋಗಿ (ಶಂಶಕಾ. ೦೩-೩೩ ವ).
[ಬಂಚನೆ+ —ಇಸು₂]

**ಬಂಜ** (ನಾ). ನಿರ್ವೀರ್ಯನಾದವನು; ಷಂಡ: ನಿನ್ನೊಡನಿರ್ದ ಬೊಜಂಗರ್ ನಿನ್ನಂತಿರೆ ಬಂಜರಲ್ಲರದಟರ್ಕಳವರ್ (ಧರ್ಮಾಮೃ. ೨-೦೨೩); ಈ ಸಲೆ ಬಂಜನೆಂಬ ಸೊಲ್ಲಾದ್ರಿಯೊಳಿಂತು ಪೊಃಪುದು (ಅಾದ್ಯ. ೬-೩೮).
[< ಸಂ. ವಂಧ್ಯ. / ಪ್ರಾ. ವಂಝ. ಮರಾ. ವಾಂಝ್]

**ಬಂಜಗ** (ನಾ).=ಬಂಜ: ಬಂಜಗಂ ನೀನರಸ ಮುಟ್ಟದಿರು . . . ದೂರದಲಿ ನಿಲ್ಲು (ಕರಕು. ೩-೨೮). [ಬಂಜ + — ಗ₃]

**ಬಂಜರ** 'ಬಂಜರು' ನೋ.

**ಬಂಜರು, ಬಂಜರ** (ನಾ). ೧. ಏನೂ ಬೆಳೆಯದ ನೆಲ; ಬೀಳುನೆಲ; ಪಾಳುಭೂಮಿ: "ಊಷವಾನ್, ಊಷರಃ—೨ ಚವುಳುಮಣ್ಣುಳ್ಳ ಬಂಜರುದಿಣ್ಣೆ ಪೆಸರುಗಳು" (ಸಿದ್ಧಾಂತಿ. ೯೩); ಅರಣ್ಯಪ್ರದೇಶವನ್ನೂ ಬಂಜರುಜಮೀನನ್ನೂ ತಾತಾ ಅವರಿಗೆ ವಶಪಡಿಸಬೇಕಾಗಿತ್ತು (ಭಾಗ್ಯಶಿ. ೭೬).

**ಬಂಜರ**: ೩. (ಆಲಂ) ವ್ಯರ್ಥವಾದುದು; ಬರಡು; ಅಪ್ರಯೋಜಕವಾದುದು: ಕೀರಂಗಳಾಡದಿಹ ಪಂಜರಂ ಬಂಜರಂ ಸಾರಸಗಳಿಲ್ಲದಿಹ ಕಾಸಾರ ನಿಸ್ಸಾರ (ಪಂಚಾರಾ. ೦-೩-೭೦).

**ಬಂಜರಾಗು** = (ಆಲಂ) ಬರಿದಾಗು; ಶೂನ್ಯವಾಗು: ಮನ ಬೀಡು ಬಂಜರಾಯ್ತು (ಕಾವಡಿ. ೨-೨೬). **ಬಂಜರು ಬೀಳು** = ಏನೂ ಬೆಳೆಯದಿರು; ಫಲವಿಲ್ಲದಾಗು: ಅಮ್ಮ ದೊಡ್ಡ ತೋಟ ನೋಡಿ ಕೊಳ್ಳುವವರಿಲ್ಲದೆ ಬಂಜರು ಬಿದ್ದಿದೆ (ಕಣ್ಣ).
[← ಹಿಂ. ಮರಾ. ಬಂಜರ್. / ತುಳು. ಬಂಜರೆ = ಏನೂ ಬೆಳೆಯದ; ತೆಲು. ಬಂಜರು]

**ಬಂಜರುಗಾಡು** (ನಾ). = ಬಂಜರು ೧: ಕುಜಗ್ರಹದ ಬಹುಭಾಗ ನೀರಿನಿಂದ ಬತ್ತಿ ಹೋದ ಮರುಭೂಮಿ; ಬಂಜರುಗಾಡು (ಅಾಕಾ. ೨೦).
[ಬಂಜರು + ಕಾಡು₁]

**ಬಂಜರುಭೂಮಿ** (ನಾ). = ಬಂಜರು ೧: ದೀಕ್ಷಾಗ್ರಹಣ ಮಾಡದ ಅಗವಾನುಷ್ಠಾನವು ಬಂಜರುಭೂಮಿಯಲ್ಲಿ ಬಿತ್ತಿದ ಬೆಳೆಯಂತೆ (ಶಾರದ. ೬೩). [ಬಂಜರು + ಭೂಮಿ]

**ಬಂಜಾರ** (ನಾ). ಒಂದು ಅಲೆಮಾರಿ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ; ಲಂಬಾಣಿ: (ಎಪಮೃ. XXV. ೧).
[← ಹಿಂ. ಬಂಜಾರಾ ;.ಮರಾ. ಬಂಜಾರೀ, ವಣಜಾರಾ, ವಣಜಾರೀ]

**ಬಂಜಾವು** (ನಾ). ಕರಂ ಹಾಕದ ಹಸು; ಗೊಡ್ಡಾಕಳಂ: ಸತ್ಯನಿಧಿ ಕಟ್ಟಿಸಿದಂ ಬಂಜಾವನು (ಲಕ್ಷ್ಮೀಶಂ. ೩೨-೬೦). [ಬಂಜು + ಆವು]

**ಬಂಜು** (ನಾ). ಬಂಜೆತನ; ಗೊಡ್ಡುತನ: 'ಬಂಜಾವು', 'ಬಂಜುಗೆಡು' ಪರಾ. [ಬಂಜ + — ಉ₄]

**ಬಂಜುಗೆಡು** (ಕ್ರಿ.) ಬಂಜರಿಲ್ಲದಾಗು; ಫಲವತ್ತಾಗು: ಮೊದಲ ಮೊಳಗಿಗೇ ಭುಜುಗಟ್ಟಿತೋ ಭೂಮಿ ಅಣಬೆ ತಾಳಿ (ಪಂಚಶಿತಾ. ೩-೦೦).
[ಬಂಜು + ಕೆಡು₁]

**ಬಂಜೆ** (ನಾ). ೧. ಗೊಡ್ಡು; ಫಲವಿಲ್ಲದುದು: "ಬಂಜೆ—ವಂಧ್ಯಾ(ಧ್ಯ) = ಗೊಡ್ಡು; ವಿಫಲ" (ಕರ್ಣಕೋ. ೨೮); ಬಂಜೆಯ (ಮ)ರನಂ ಅವಕೇಶಿ ಯೆಂಬುದು (ಹಲಾಯು. ೨೯-೨೯). ೨. ವ್ಯರ್ಥ; ಹಾಳು; ನಿರರ್ಥಕ: ಮಹಾಧ್ವರಕಾಲಂ ಬರ್ಪನ್ನವರಂ ದಿವಸಂಗಳಂ ಬಂಜೆಯಲ್ಲದುತ್ತುಂಗ ದಾನಂಗಳಂ ಮಾಡುತ್ತುಮ್ದೃಟಕ್ಷಿತೀಂದ್ರಚಂದ್ರಮನಿರೆಯರೆ (ಅಾದ್ಯಟಿ. ೯-೩೧ ವ); ದಿನವ ಬಂಜೆಯ ಮಾಡದಿಹ ಪರವಿನಯನಹ ವರದೈವಗುರುಪೂಜನೆಯು . . . ಅಸುಗೋಪನಾವನು ಮನುಜರೊಳ ಗುತ್ತಮನು (ಕುಮಾರ. ೩-೩೦). 'ಬಂಜೆವಡಿಸಂ' ಪರಾ. ೩. ಮಕ್ಕಳನ್ನು ಹಡೆಯದವಳು; ಗೊಡ್ಡಿ: "ಬಂಜೆಯನೆ ವಂಧ್ಯಾಖ್ಯಂ" (ಕಬಿಕಂ. ೦೫೪); ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಪಾಟಿಪ್ಪಂ (ಸಮುಕ. ೦೨-೩೩); ಬಂಜೆ ಬೇನೆಯನಱಿಯಳು (ಪುಕಾಡೇ. ೩. ೦೮೦-೩೦೯); ಹೆತ್ತರಿಯದ ಬಂಜೆ ಸೂಲಗಿತ್ತಿಯೆ ಜಗದಿ? (೧೯೭೦. ೦೦೦-೧). ೪. ಪ್ರಯೋಜನವನ್ನು ಹೊಂದದವಳು; ಫಲವನ್ನು ಪಡೆಯದಿರುವವಳು: ಲಾವಣ್ಯದ ಬಂಜೆ ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮುಮಂ ಗಿರಿರಾಜಂ ಕರುಣಿಸಿ ನೋಡಿ (ಗಿರಿಕ. ೯-೦೦೯ ವ). ೫. ಒಂದು ಬಗೆಯ ಸಸ್ಯ: "ನಾಗಾರಿಃ—ಗರುಡ, ಬಂಜೆ, ಮಡುವಾಗಲು" (ಓಶಧಿ. ೬೩). (ಗು). ೬. ಫಲವಿಲ್ಲದ; ಗೊಡ್ಡಾದ: ಮೊದಲಿಲ್ಲದ ಭೂಮಿರುಹಕ್ಕೆ ಶಾಖೆಬಂಜೆವನಿತೆ ಗಾತ್ರಜಂ ಮೃತಶರೀರಿಗೆ ಜೀವಕಳಾಪ್ರವೇಶಮೆಂಬಿವು ವಿರತೇನು (ಕಶಿ. ೦೩೩-೦೭). ೭. ವ್ಯರ್ಥವಾದ; ನಿರರ್ಥಕ; ಹಾಳಾದ: ಈಶನಂ ನೆನೆಯದ ದಿನಂ ಬಂಜೆ ದಿನವಯ್ಯ (ಶಾಂಗೀರ. ರೀ. ೨೬೩-೧೦).

**ಬಂಜೆ ಮಾಡು** = ಹಾಳುಂ ಮಾಡು; ನಿಷ್ಫಲಗೊಳಿಸು: ವಿಜಯ ಲಕ್ಷ್ಮಿಪೊಲೀಶನ ತೋಳ ತಟ್ಟಿನೊಳ್ ಪೊಸಯಿಸು ನಲ್ಮೆಯಂ ದಿವಸ ಲಕ್ಷ್ಮಿಯನೇಕೆಗೆ ಬಂಜೆ ಮಾಡುವೈ (ಪಂಚಾಶು. ೯-೦೬೭). **ಬಂಜೆಯಾಗು** = ೧. ಫಲವಿಲ್ಲದಾಗು; ನಿಷ್ಫಲವಾಗು: ಅವಂಧ್ಯಃ, ಫಲೇಗ್ರಹಿಃ — ೨. ಬಂಜೆಯಾಗದೇ ಕ್ಲುಪ್ತವಾಗಿ ಫಲ ಬಿಡುವ ಗಿಡದ ಹೆಸರು, ಫಲವೃಕ್ಷ (ಸಿದ್ಧಾಂತಿ. ೦೦೦); ಭೂಮಿ ಯಾರೊಬ್ಬರ ಸ್ವಂತ ಆಸ್ತಿ ಆಗದಿರುವ ವಕ್ಷಕ್ಕೆ ಆದೆಂದೂ ಬಂಜೆಯಾಗಿರುವುದಿಲ್ಲ (ಕುವರು. ೯೨೩). ೨. ಮಕ್ಕಳನ್ನು ಹೆರದಿರು; ಗೊಡ್ಡಾಗು: ಕಪಿಲೆ ಎಂಬಳು ಮಕ್ಕಳಿಲ್ಲದೆ ಬಂಜೆಯಾಗಿರ್ಪುದಾಂ (ಹುಣ್ಯಾಸ್ರ. ೩-೯೦ ವ); ಬಮ್ಮಲದೇವಿ ಬಂಜೆಯಾಗಿಯೇ ಉಳಿದಿರಬಾರಳು (ಕವಿಚ. viii, ಪ್ರಸ್ತಾವನ). ೩. ವ್ಯರ್ಥವಾಗು; ನಿರರ್ಥಕಗೊಳ್ಳು: ಭಾವರತಿ ಬಲಿದು ಬಂದಂತೆ ಬಗೆದು ಕಣ್ವೆಱೆದು ಕಾಣದೆ ಬಯಲನಪ್ಪಿದ ತೋಳ್ ಬಂಜೆಯಾಗೆ (ಗಿರಿಕ. ೨-೦೦೩ ವ); ದಿನ ಬಂಜೆಯಾಗದೆ ಪರಮಾತ್ಮರತರಾದ ಮುನಿಗಳಿಗನ್ನದಾನವನು ಮನ ಮುಟ್ಟಿ ಮಾಡುವ ಭಾಗ್ಯವೆಂಬುದನಾವ ಮನುಜ ಪಡೆಯಬಹುದೆಂಬ (ಕಾಶಿ. ೩-೯೦); ಬಂಜೆಯಾಗದು ವಿಪ್ರರಿಂದೆನ್ನೊಳೆಂದ ನುಡಿ (ಕೃಷಿಕಾ. ೨೯-೩೭).
[< ಸಂ. ವಂಧ್ಯಾ. / ಪ್ರಾ. ವಂಝಾ. / ತುಳು. ಬಂಜೆ. / ಹಿಂ. ಬಂಝಾ; ಮರಾ. ವಾಂಝ್]

**ಬಂಜೆಗೈ** (ಕ್ರಿ). ವ್ಯರ್ಥಗೊಳಿಸಂ; ನಿರರ್ಥಕಗೊಳಿಸಂ: ತನ್ನ ಬಾಣವಂ ಬಂಜೆಗೈದವರೆ ಪೊಱೆಬಿಗರು (ಕೃಷಿಕಾ. ೨೦-೫೯).
[ಬಂಜೆ + ಗೈ (< ಕೆಯ್₁)]

**ಬಂಜೆತನ** (ನಾ). ಫಲವಾಗದಿರುವಿಕೆ; ಗೊಡ್ಡುತನ: ಎನಗೀ ಜನ್ಮ ಮಿದಿಂತ ಬಂಜೆತನದಿಂದಂ ಪೋಕುವೋ (ಸುಕುಮಾ. ೯-೦೦೯); ತನ್ನ ಬಂಜೆತನವಿಂದು ಪೋದುದು (ಕೃಷಿಕಾ. ೨೬-೫೯); ನಂಜುಂಡ ಜೀವದ ಬಂಜೆತನವಳಿಯಿತು (ಸಿದ್ಧಕೃ. ೩-೦೦). [ಬಂಜೆ + — ತನ]

**ಬಂಜೆವಡಿಸು** (ಕ್ರಿ). ವ್ಯರ್ಥಗೊಳಿಸಂ; ನಿರರ್ಥಕಗೊಳಿಸಂ: ಸತ್ಪುರುಷ

ರದೇಕೆ ಬಂಜೆಪಡಿವರ್ ಗಡ ದುರ್ಲಭಕಾಲಲಬ್ಧಿಯಂ (ಚಂದ್ರಪು. ೨-೩೭) : ಮದಗಂಧಸಾರಸಪ್ತಚ್ಛದಂಗಳಂ ಪುದಿದು ಬೆಳೆದ ತಾಪಿಂಛದ ಪರ್ಣಾವಳಿ ಕಳಿಶಂಕೆಯಿಂ ವಾಯ್ದುದೞೊಳ್ ಪುದಿದಿತ್ತಿ ಬಂಜೆವಡಿಪ್ಪುದು ಮುಳಿಸು (ಚಂದ್ರಪು. ೫-೫೦). [ಬಂಜೆ + ಪಡಿಸು]

**ಬಂಜೆವಾಗಲ್**, ಬಂಜೆವಾಗಲ, ಬಂಜೆಹಾಗಲ (ನಾ). ಒಂದಂ ಬಗೆಯ ಮೂಲಿಕೆ : ವಿವಿಧವ್ರಣದೊಳ್ ಸಲೆ ಬಂಜೆವಾಗಲಂ . . . ಪೂಸುಗಾ ವಿಷಂ ಪೊಜಮಡುಗುಂ (ಲೋಕೋಪ. ೦೦-೩೬). **ಬಂಜೆವಾಗಲ** : ಬಂಜೆ ವಾಗಲದ ಗೆಣಸ ನಾಲ್ಕುವರಹತೂಕವ ನೀರಿನಿಂದಾ ಅರದು ನಸ್ಯಂ ಕುಡಿಯ ಕೊಡಲು ಸರ್ಪಯಿಲಿ ಬೆಕ್ಕು ಚೇಳು ನಾಯಿ ನರಿ ಮೊದಲಾದ ವಿಷಗಳು ಶಮನವಹುದು (ಬಿಪಚಿ. ೨೩-೭). **ಬಂಜೆಹಾಗಲ** : ಬಂಜೆಹಾಗಲದ ಗೆಡ್ಡೆ, ತುರುಚನ ಬೇರಿನ ತಿಗುಡು ಇವುಗಳನ್ನು ಸಮತೂಕದಲ್ಲಿ ಚೂರ್ಣಿಸಿ (ಸಕಲವೈ. ೯೭). [ಬಂಜೆ$_1$ + ಪಾಗಲ್$_1$]

**ಬಂಜೆವಾಗಲ** 'ಬಂಜೆವಾಗಲ್' ನೋ.

**ಬಂಜೆವಾತು** (ನಾ). ವ್ಯರ್ಥವಾಗುವ ಮಾತು ; ಫಲ ಕೊಡದ ಮಾತು: ನುಡಿಯಬಹುದೇ ಬಂಜೆವಾತನು (ಕುವ್ಯಾಪಿ. ೬-೨೭). [ಬಂಜೆ +ಮಾತು$_1$]

**ಬಂಜೆಪೊಟ್ಟು** (ನಾ). ವ್ಯರ್ಥವಾದ ಕಾಲ ; ಪ್ರಯೋಜನಕ್ಕೆ ಬಾರದಿರುವ ಸಮಯ : ಸದಮಳಪಾತ್ರಕ್ಷೇತ್ರದೊಳಿದು ಬಿತ್ತುವ ಪದದ ಪೊಟ್ಟು ಗೃಹಮೇಧಿಗದೇವುದೊ ಮಧ್ಯಾಹ್ನದ ಪೊಟ್ಟಲ್ಲದ ಪೊಟ್ಟುಂ ಬಂಜೆಪೊಟ್ಟು ತಾನದು ಪೊಟ್ಟೇ (ಅರ್ಥನೇ. ೧-೭೯). [ಬಂಜೆ + ಪೊಟ್ಟು]

**ಬಂಜೆಹಾಗಲ** 'ಬಂಜೆವಾಗಲ್' ನೋ.

**ಬಂಟ$_1$**, ಬಟ, ಭಂಟ (ನಾ). ೧. ವೀರ ; ಶೂರ ; ಪರಾಕ್ರಮಿ : "ಘನವೀರನಪ್ಪವಂ ತುಟಿಲಾಳು ಬಂಟಂ" (ಕಬ್ಬಿಗ. ೪೨); ಕನ್ನೆಯ ಬಂಟನ ವೃದ್ಧಸ್ತ್ರೀಯ ಮೂವರ ಚಿತ್ರಕಥೆಗಳಂ ಪಟದೊಳ್ ತೋಱಿ (ಪಣ್ಣಾರಾ. ೧೪-೦೬) ; ಮಹಾಸಾಮಂತ್ತಂ ಕನ್ನನ ಬಣ್ಟಂ ಕಟಕಪ್ರಾಕಾರಂ ನೆರೆಪೊಡೆ ಬಣ್ಟಂ (ಶಾಶಾ. XI-i. ೪೭-೭ ; ೯೯೩). ೨. ಯೋಧ ; ಸೈನಿಕ : ಕಾಳಗದಲ್ಲಿ ಪೌಜನಿಕ್ಕಿದಡೆ ಮಾಱದಡೆ ಅರಸಂಬ ರಲ್ಲದೆ ಬಂಟರೆಂಬುದಿಲ್ಲ (ಪೋಲಿಪಾ. ೨-೫) ; ಬವರಕ್ಕಾಗದ ಬಂಟನೇ (ಸೋಮೇಶ. ೨೨). ೩. ದಾಸ ; ಸೇವಕ : ತೊತ್ತಿಂಗೇಕೆ ಲಕ್ಷಣ ಬಂಟಂಗೇಕೆ ಆಚಾರ (ಬಸವ. ೪೬೬) ; ಬಗೆದೆನಪಂಥವನು ಕರುಣಾಳುಗಳ ಬಲ್ಲಹ ನೀನು ನಿನ್ನಂಘ್ರಿಗಳಿಗೀ ತಲೆಬಂಟ ನೀನಿದ ಕಾಯಬೇಕು (ಕುವ್ಯಾಪಿ. ೦೦-೧೬) ; ನೆಚ್ಚಿನ ಬಂಟಂ ಹನುಮಂತಂ ಕಿಮ್ಮನಿರ್ದನೆ? (ರಾಮಾಕ್ಕ. ೩೭-೬) ; ಸಮಯಕ್ಕಾದವನೇ ನಂಟ, ಕೆಲಸಕ್ಕೆ ಒದಗಿದವನೇ ಬಂಟ (ಗಾದೆ). ೪. ದಕ್ಷಿಣಕನ್ನಡದ ಒಕ್ಕಲಿಗರ ಒಂದು ಪಂಗಡ : ವ್ಯವಸಾಯಗಾರರು . . . ಬಂಟ, ದಖ್ನಿ (ತುಳುನಾ. ೦೭೦). **ಬಟ** : ೧. "ಬಟ (ಬಂಟ, ಬಂಟು)_ಭಟ" (ಶಬ್ದಕೋ. ೨೮); ಶಾಂತರಸ . . . ಬೆಸಗೆಯ್ವಲ್ಲಿ ಮರಲಿ ಬಟರಿಂಗೆ ಕೊಟಾರ್ (ಎಕ. VI. ಕೊಪ್ಪ. ೩೯-೪ ; ಸು. 700?) ; ಅಚುತರಾಯಮಹಾರಾಯರೂ . . . ವೀರಬಟರಿಗೆ ದರ್ಮವಾಗಿ ವಿಟ್ಟ (ಎಕ. X (೩). ಕೋಲಾರ. ೦೦೪-೫ ; 1535). ೨. ಮತ್ತಿ ಘಡದ ಚಿಕ್ಕನಾಯಕಹಳ್ಳಿಯ ಸುತ್ತಣ ಬಟರೊಂದೆಸೆಯ ಒತ್ತರಿಸಿ . . . ಏಱಿದರು (ಕಂಪು. ೦೪-೩೭). ೩. ನಿತಂಬಿನಿಯರಸಿಯ ಬಾಸೆಗಳಂ ಯಮರಾಜನ ಬ[ಪಾಠಾಂ. ಭ]ಟರೆನ್ನದೆ ಶೋಭಾಕರಮೆಂದೊಡಂ (ಧರ್ಮಾಮೃ. ೭-೦೫೫). **ಭಂಟ** : ೧. ನಾವು ವೃದ್ಧರು ಬಿರುದುಗಿರುದಿನ ಲಾವಣಿಗೆ ನಮಗೇಕೆ ಹೇಳೈ ನೀವಲೈ ಜವ್ವನದ ಭಂಟರು ರಣದ ಧುರ ಭರಕೆ (ಕುವ್ಯಾಪಿ. ೯-೩೦) ; ಮಂಠಿಸಿದರಿಗಳ ತಲೆಯನರಿದು ಕಾಳಕಂಠಗೆ ವನಮಾಲೆಯಿತ್ತು ಭಂಟರಾಗಿಹೆವು (ಕಂಪಾ. ೮-೪೨) ; ಬಂಟ ನೀನೊಳ

ಜಗಕೆ ಭಂಟ ಹೊರಜಗಕೆ (ಮಂಟೇಶ. ೬೩). ೩. ಭಂಟನಸೆ ಬಕುತರಿಗೆ (ಕುವ್ಯಾಅ. ೫-೬) ; ಭಂಟನಲ್ಲವೆ ನಾನು ದೀನರ ನೆಂಟನಲ್ಲವೆ ನೀನು (ಹಂಪಾ. ೭೦). ೫. ಕಾವಲುಗಾರ ; ಕಾಪಿನ ಆಳು : ಸುಡುಗಾಡಿಕ್ಕೆಗೆ ಭಂಟನಾಗನೆ ಹರಿಶ್ಚಂದ್ರಂ (ಸೋಮೇಶ. ೩೨).

**ಬಂಟರ ಬಾವ, ಬಂಟರ ಭಾವ** = ಪರಾಕ್ರಮಿಗಳನ್ನು ಸೋಲಿಸಿ, ಅವರ ಕಡೆಯ ಹೆಣ್ಣನ್ನು ಮದುವೆಯಾಗುವವನು ; ಒಂದು ಬಿರುದು : ಪರಬಲಭಯಂಕರನುಂ ಬಣ್ಟರ ಬಾವನುಂ (ಎಕ. VI. ಕಡೂರು. ೧೫೭-೫೨ ; 1191) ; ಕೊತ್ತಗಾವುಣ್ಡನ್ ತತ್ಪುತ್ರ ಕೋರಾತ್ಯ ಗಾವುಣ್ಡಂ ದುಷ್ಟಸ್ವಮಾಹಕ ಮಱಿಪೊಕ್ಕೆ ಕಾವನ್ತೆ ಬಣ್ಟರ ಭಾವಂ (ಎಕ. III. ನಂಜನ. ೦೨೨-೦೪ ; 266 ? ಕ್ರಿಶ) ; ಯಾಚಕಜನನಿಧಿನಿಧಾನ[ಂ] ಬಂಟರ ಭಾವಂ ಪರನಾರೀದೂರಂ ಸರಣಾಗತಪ್ರಿಯಂ (ಕಾಶಿ. ೪೧-೫೯-೦೦ ; 1128) ; ಗೋವನಿಕಲಂಕಮಲ್ಲ ಬಂಟರ ಭಾವ ಪರನಾರೀಸಹೋದರ (ಇಕ. V. ೪೦-೨೭ ; 1586). [< ಸಂ. ಭಟ]

**ಬಂಟ$_2$**,ಬಟ್ಟ$_4$, ಭಟ್ಟ (ನಾ). ೧. ಹೊಗಳುವವನು ; ಸ್ತುತಿಪಾಠಕ : 'ಬಂಟಸಾಮಿ' ಪರಾ. **ಬಟ್ಟ$_4$** : ೧. 'ಹೊಗಳುಬಟ್ಟ' ಪರಾ. ೨. ವಿದ್ವಾಂಸ ; ಪಂಡಿತ : (?). ೩. ಪೂಜಾರಿ ; ಪುರೋಹಿತ : ಬಟ್ಟರಿಗೆ ಮಂತ್ರಕ್ಕಿಂತ ಉಗುಳೇ ಜಾಸ್ತಿ (ಗಾದೆ). ೪. ಅಡುಗೆಯವನು : ಈವತ್ತು ಬಟ್ಟರು ಬಂದಿಲ್ಲ (ಲೂಪ). **ಭಟ$_1$** : ೧: "ಭಟಃ_ಉಗ್ಗಡಿಸುವಂ" (ಶಾಕಕ್ಕ. ೨೬೩). 'ಭಟಾಂಗ' ಪರಾ. [< ಸಂ. ಭಟ್ಟ]

**ಬಂಟ$_3$** (ನಾ). ಶ್ರೇಷ್ಠಜಾತಿಯ ಕುದುರೆ : ದಾಂಟಲಪ್ಪರದ ಕುಟಿಯಂ ಗೆಂಟಱೊಳಂ ಕಂಡು ಪಿರಿದು ಪರಿತಂದು ಮುದಂ ನಾಂಟರೆ ಲಂಘಿಸಿ ಪೋದವು ಬಂಟಂಗಳೆನಿಪ್ಪ ಕುದುರೆಗಳ್ ಕೆಲವದಱೊಳ್ (ಶಾರಪು. ೦೦-೪). [ ?./ಮರಾ. ಬಟ್ ]

**ಬಂಟಂಗ** (ನಾ). ಶೌರ್ಯದ ರೀತಿ ; ಪರಾಕ್ರಮದ ಬಗೆ : ಕಂಠೀರವ ರಾಜನಾದಿರಲಿ ಕರಿಗಳ ಬಂಟಂಗ ಮೆಱೆವುದೆ ಸ್ವಾಮಿ (ಕಂಪಾ. ೦೨-೭೨). [ಬಂಟು + ಅಂಗ$_1$]

**ಬಂಟತನ** (ನಾ). ೧. ಪರಾಕ್ರಮ ; ಶೌರ್ಯ : ರಾವಣಗೆಂಟುಮಡಿ ಯಿಂದಪ್ಪರಿ ರಣದಲಿ ಬಂಟತನದ ಪರಾಕ್ರಮಂಗಳ ಕಾಣದೇ ಲೋಕ (ಕೌಶಿಕಾ. ೩೭-೨೦) ; ಅಕ್ಕಮಹಾದೇವಿಯ ವಚನವು ಅವಳ ಧೈರ್ಯ ಸಾಹಸಗಳ ನಿದರ್ಶನವಾಗಿ ನಮ್ಮಲ್ಲಿ ಬಾಳುವೆಯ ಬಂಟತನವನ್ನು ಪ್ರೇರಿಸುತ್ತದೆ (ಕವಿಪ. ೫). [ಬಂಟ$_1$ + — ತನ]

**ಬಂಟವಣ** (ನಾ). ಪರಾಕ್ರಮಿಗಳಂ ಸಲ್ಲಿಸಂವ ಹಣ: ಈನ್ತು ನೆಗರ್ತ್ತವೆತ್ತ ಬಂಟಸಾಸಿರ್ವ್ವರುಂ ದೇವಗ್ಗೆ ಬಂಟವಣಮನಾಚಂದ್ರಾರ್ಕ್ಕತಾರಂಬರಂ ಬಿಟ್ಟರ್ (ಶಾಶಾ. XI–ii, ೦೪೫-೬; 1008). [ಬಂಟ$_1$ + ಪಣ$_3$]

**ಬಂಟಸಾಮಿ** (ನಾ). ಹೊಗಳಂಭಟ್ಟರಲ್ಲಿ ಮುಖ್ಯನಾದವನು : ಅಚ್ಚಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾಟ್ಗಬ್ಬಗಳಂ ಬಂಟ[ಪಾಠಾಂ. ಬಟ್ಟ]ಸಾಮಿಗಳಂ ಕೇಳಿಸಿ ತಾಮೆ ತಮ್ಮ ಮನದೊಳ್ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ (ಅರ್ಥನೇ. ೧-೩೫). P ಇದು ಇತರರನ್ನು ದೂಷಣೆ ಮಾಡಿ ಒಡೆಯನನ್ನು ಹೊಗಳುವವನು ಎಂಬರ್ಥದಲ್ಲಿ ಉಪಯೋಗವಾಗಿದೆ. [ಬಂಟ$_2$ + ಸಾಮಿ$_1$]

**ಬಂಟಿಕೆ** (ನಾ). ವಾರ್ತೆ; ದೌತ್ಯ (?) : ಅಂಬರೀಷಾವನಿಪಸುತೆಯ ಬಂಟಿಕೆಯ ಹರಿಗಂಬರೀಷಂ ಮುಳಿಯನೆ (ಶಕ್ರಾ. ೦೦-೬೫). [ಬಂಟ$_1$ + — ಇಕೆ]

**ಬಂಟು** (ನಾ). ೧. ಪರಾಕ್ರಮ; ಶೌರ್ಯ : ಸಾಸಿರ್ವ್ವರುಂ (ವ)ಆತನ ಬಣ್ಟಂಗೆ ಮೆಚ್ಚಿ (ಎಕ. VIII. ಸೊರಬ. ೪೭-೭; 1150); ಉಂಟಾದ ಬಲೆ ಕಾಲು ಕಣ್ಣ ನಾಯಕ ಕುನ್ನಿ ಬಂಟುಳ್ಳ ನಾಯಿ ಹುಲಿಗಳ ಅಂಟುಸಾಳುವ

ಸೇಣ ತಡಿಕೆ ಗಾಣಗಳಿಂದ ಉಂಟಾಗಿ ನಡೆಸಂದ ರಾಯ (ಹಂಶಾಂ. ೧–೬೦); ನಂಟುಂ ಬಂಟುಂ ನೆರವಿರ್ಪಿನಂ ಗೆಲ್ವುದುಮೊಲ್ವುದುಂ ನಿಮಗಕ್ಕುಂ (ರಾಮಾಶ್ವ. ೯೬–೦೭). 'ಬಂಟುತನ' ಪರಾ. ೨. ಸೇವೆ; ಕೈಂಕರ್ಯ : 'ಬಂಟುಗೆಯ್' ಪರಾ. ೩. ಪರಿವಾರ; ರಕ್ಷಕರು; ಕಲಿ ಮಲಪ್ರಧ್ವಂಸಕಂ ಕೇಶಿರಾಜನ ಬಂಟು ನಯ[ಸೇ]ನಸೂರಿಪದಪದ್ಮಾರಾಧನಾರತ್ನ ಚಿತ್ತನ್ (ಎಇ. XVI. ೩೩–೦೬; 1053). ೪. ಸೈನ್ಯ; ದಂಡು : ತುರಗಮುವೊಂದುಸತ್ತಿಗೆಯುಮೊದಿರೆ ಕಾಪಿನ ಬಂಟು ಸುತ್ತಲುಂ ಬರೆ (ಆದಿಪು.೦೦–೯೬ ಆಧಿಕಪತ್ರ); ಭೂರಿ ಗೋವೃಂದವನು ಗೋಪಕುಮಾರರನು ಯಾದವರ ಬಂಟಿನ ಮೇರೆಯನು ಏಗೆ ಕಾದನಲ್ಲದೆ ತುಱುವ ಕಾದವನೇ (ಷಾಳ್ಕಾ. ೨೦.೬೬). ೫. ಸೇವಕ ; ಭೃತ್ಯ ; ಊಳಿಗದವನು : ನಮ್ಮ ಬಂಟಂಗೆ [ಪಾಠಾಂ. ಎಮ್ಮ ಭಂಟಂಗೆ]ನಾಮೆ ಬೆಸಕೆಯ್ಯುನಿತಾಯ್ತು (ಶಾಂತಪು.೨೦೦–೦೭); ಭೂತಗಣ ಬಂಟು ನೃತ್ಯ (ಶಂಕರು. ೩೦–೨೪). [ಬಂಟ$_1$ + — ಉ. /ತುಳು. ಬಂಟು = ವೀರೋಚಿತವಾದ ; ತೆಲು. ಬಂಟು]

ಬಂಟುಗೆಡು (ಕ್ರಿ). ಶೌರ್ಯ ಕುಂದು ; ಕೆಚ್ಚಿಲ್ಲದಾಗು : ಕೂರದರ್ ನೆಲಸನೊಟ್ಟಜಿಯುಂ ಕೊಳೆ ಕೊಟ್ಟು ಬಂಟು[ಪಾಠಾಂ. ಮುಂಡು, ಮುಟ್ಟು]ಗೆಟ್ಟನ್ನುಮರಣ್ಯದೊಳ್ ನಮೆದವಂ ಯಮನಂದನಂ (ಕಂಶಪು. ೬–೩೩) ; ಕಂಠಮಂ ಕತ್ತರಿಸಲಾ ಶಿರಂ ತನ್ನಡೆಗೆ ಬಂಟುಗೆಡದೈದಿದೊಡೆ (ಕೃಜಿಜಾ. ೦೫–೬೨). [ಬಂಟು + ಕೆಡು$_1$]

ಬಂಟುಗೆಯ್ (ಕ್ರಿ). ಸೇವೆ ಮಾಡು ; ಊಳಿಗ ಮಾಡು : ದುಷ್ಕುಲಂಗಳೊಳ್ ಪುಟ್ಟಿ ಪೆಜರ್ಗೆ ಕೀಱುವೆಸಂಗೆಯ್ದುಂ ಬಂಟುಗೆಯ್ದುಂ ನವೆವುತ್ತುಂ. . .ದುರ್ಗತಿಗೆ ಸಲುವರ್ (ಕಪಾರ. ೩೭೩). [ಬಂಟು + ಕೆಯ್$_1$]

ಬಂಟುತನ (ನಾ). ಪರಾಕ್ರಮ ; ಕೆಚ್ಚು ; ಶೌರ್ಯ : ನೆರೆದು ಪರದಾರಮಂ ಕಲಿವುದೆ ಚತುರತ್ವಂ ಸೊಕ್ಕುವುದೆ ಬಂಟುತನಂ . . . ಎಂಬರ್ ಧೂರ್ತರ್ (ಶಾಂತಿಪು. ೩೬೬); ಗಱಿ ತೋಱಿ ಗಂಡರೆಂಬವರ ಕಾಣೆ ನಿಱಿ ಸೋಂಕಲು ಮುನಿಯಿಲ್ಲ ನೋಡದ್ಯಾ ನಂಟುತನವೇನವನ ಬಂಟು[ಪಾಠಾಂ. ಟ]ತನವೇನವನ ಹುಲ್ಲ ಕಿಚ್ಚು ಹೊಲೆಯನ ಮೇಳಾಪ (ಬಸವ. ೪. ೧೦೨) ; ಜಗಂ ನೋಡೆ ಮಾಡಿದನತ್ಯದ್ಭುತಮಪ್ಪ ಬಂಟುತನಮಂ ಗೋವಿನ್ದದಣ್ಣಾಧಿಪಂ (ಶಾಶಾಇ. XX.೭೭–೯೨; ೪); ಬಂಟುತನವು ಎದೆಗಾರಿಕೆ ಧೈರ್ಯ ವೀರತ್ವವನ್ನು ತಿಳಿಯಪಡಿಸುತ್ತದೆ (ತುಳುಜಾ. ೬೧). [ಬಂಟು + — ತನ./ತೆಲು. ಬಂಟುತನ]

ಬಂಟೆದೆ (ನಾ). ಪರಾಕ್ರಮವುಳ್ಳ ಮಾನಸ್ಸು : ಇಂದು ಬೆಳಗಿನಿಂದ 'ಹೊಯ್ಸಳ ! ಹೊಯ್ ಸಳ !' ಎಂಬ ಕಡೆಯಿಲ್ಲದ ಕೂಗು ನಿನ್ನ ಬಂಟೆದೆಯ ಮುಟ್ಟಲೆಂದು ನನ್ನ ಕಿವಿಕೊಳವಿಯಲ್ಲಿ ಹೊಕ್ಕಾಡುತಿದೆ (ಶಿಶಾ. ೪). [ಬಂಟು + ಎದೆ (<ಎರ್ದೆ)]

ಬಂಟೇಳು 'ಬಂಡೇಳು' ನೋ.

ಬಂಡ$_1$ (ನಾ). ೧. ಪದಾರ್ಥ; ಸಾಮಾನು; ಸರಕು : ಪಲಂಬರ್ ಶಾಕಟಿಕಪರದರುಱಿರಸು ಬಂಡಿಗಳೊಳ್ ಪಟ್ಟಿಯಂ ಧಾನ್ಯಮಂ ತೀವಿಕೊಂಡು ಪೊಱಲ್ಗೆ ಮಾಱಲೆಂದು ಪೋಪನ್ನೆಗಂ . . . ಬಂಡಮುಮೆಟ್ಟುಗಳುಂ ಮೊದಲಾಗೆಲ್ಲಮಂ ಕಳ್ಳರ್ ಕೊಂಡು ಪೋದರ್ (ವಡ್ಡಾರಾ. ೬೬–೦೯); ಬಂಡವ ತುಂಬಿದ ಹಸುಬೆ ಕೊಂಡವನ ನುಂಗಿತ್ತು (ಪೋಳೀಶಶ. ೨೯೩–೬೯೪); ಉರುತರ ಬಂಡವ ತುಂಬಿ ಹಡಗೇಱಿ ಹರದುಗೆಯ್ಯಲು (ಶಶಿಜಸಂ. ೪–೦೩). ೨. ಮಾನವಿಲ್ಲದವನು ; ನಿರ್ಲಜ್ಜ : "ಬೂತುಗಳೆನೆ ಬಂಡರ್ [ಪಾಠಾಂ. ಬಂಡುಂ]" (ಅಭಿಪ. ೨೯); ಕಜ್ಜಗರ ಜೋಡೆಯ ಬಂಡರ. . . ಬೀಡೆಗಾಱರಾಗರಮನೆ . . . ಎಸೆದಿರ್ಪುವು ಸೂಳೆಗೇರಿಗಳ್ (ಕಾವ್ಯಾಕಾ. ೮೨); ಲೋಕದೊಳ್ಪೀಡುವಮಂ ಬಂ[ಪಾಠಾಂ. ಭಂ]ಡಂ (ಕೃಜಿಜಾ. ೨೬–೬೪); ಬಂಡನ ಸ್ನೇಹ ಮಾಡಿ ಇದ್ದ ಬುಡ ಕಳಕೊಂಡ (ಗಾದೆ). ೩. ವಿದೂಷಕ ಹಾಸ್ಯಗಾರ : ಭಂಡಂ — ಬಂಡಂ (ಕಮಪ. ೬. ೨೩೩ ಪ್ರಯೋ). ೪. ಹೇರಳ; ಹೆಚ್ಚಳ ; ಆಧಿಕ್ಯ : ದವಸ ಬಂಡವಾಗಿದೆ (ಚಿಲ್ಲಿಲೆ. ೨೪೦–೨೦). (ಗು). ೫. ನಾಚಿಕೆಯಿಲ್ಲದ ; ಲಜ್ಜೆಗೇಡಿಯಾದ : ಬಂಡವೈಷ್ಣವನೆ ಕೇಳದಜನಿಂದೆ ಹರಿಯುಡಿಯು ಖಂಡಿಸಿದುದೆಂದು ಪದ್ಮಪುರಾಣವೊರೆದುದು (ಸಿದ್ದೇಪು. ೬–೩೩).

ಬಂಡಬಂಡವಾಗಿ = ಹೆಚ್ಚುಹೆಚ್ಚಾಗಿ; ಅತ್ಯಧಿಕವಾಗಿ : ತೊಲೆಗಳವರೆಗೆ ಬಂಡಬಂಡವಾಗಿ ನೇಲುಬಿದ್ದ ಇಲ್ಲಣ, ಜಾಡಗಳನ್ನು ಸವರಿದರು (ಚಿತ್ರಾ. ೨೬೦). [<ಸಂ. ಭಂಡ. / ತಮಿ. ವಣ್ಣ, ವಣ್ಣು; ತುಳು. ಬಂಡ್, ಬಂಡು, ಭಂಡ್, ಭಂಡ, ಭಂಡೆ ; ಕೊಡ. ಬಂಡೇ; ತೆಲು. ಬಂಡ, ಬಂಡು ; ಕೋತ. ಬಂಡ್ಯಾ. / ಮರಾ. ಭಂಡ್, ಭಾಂಡ್]

ಬಂಡ$_2$ (ಗು). ೧. ಕುಂದುಗಳುಳ್ಳ ; ನ್ಯೂನ. ೨. ಸತ್ತ್ವಗುಂದಿದ : ನಿರ್ವೀರ್ಯ. (ನಾ). ೩. ಬಾಲವಿಲ್ಲದ ಎತ್ತು : "ಬಂಡ-ಬಾಲ ಮೋಟಾದ ಎತ್ತು" (ಪಾಶಂ. ೬); ಮಾಗಧೀಭಾಷೆಯಲ್ಲಿ ಬಾಲ ಕತ್ತರಿಸಿದ ಗೂಳಿಯನ್ನು 'ಬಂಡ' ಎಂದು ಕರೆಯುತ್ತಾರೆ (ಪಾಶಂ. ೦೦). [ಸಂ.]

ಬಂಡ$_3$, ಬಂಡೆ$_3$ (ನಾ). ಕುರಿಯ ತುಪ್ಪಟ ; ಉಣ್ಣೆ : ಬಣ್ಣವೇಱಿಂಗೆ ಅಯ್ದು ವಿಸ (ಎಇ. VIII. ೨೬೬–೩೪; 752); ಕುರುಬರ ಸಂಗವ ಮಾಡಿ ಕುರಿಗಳ ಮೆಯ್ಸೋದ ಕಲಿತು ಬಂಡ ನೂಲೋದ ಕಲಿತು (ಪಾಶತ. ೦೫೦). 'ಅಡಿಬಂಡ' ಪರಾ. ಬಂಡೆ$_3$ : "ಊರ್ಣಾ–ಕುರೀಬಂಡ ಮುಂತಾದ ಕೂದಲು" (ಸಿದ್ಧಾಂತ. ೩೮೭). [?]

ಬಂಡಣ, ಭಂಡಣ (ನಾ). ಕಾಳಗ; ಯುದ್ಧ : "ಬಂಡಣ = ಕಾಳೆಗಂ" (ಕಮಪ. ಶಂ. ೨); ಬಂಡಣದೊಳೆನ್ನನೋಡಿಸಿ ಕೊಂಡುಯ್ದಂ ನಿನ್ನನಾ ಸರಿತ್ಸುತಂ (ಶಂಶಪು. ೦–೬೬) ; ಚಂಡಕೋದಂಡನ ದಂಡು ಬಂಡಣಕ್ಕಿಸಲಂಡುಗೊಂಡು ನಿಂತು (ಹಮ್ಮಿರ. ೩–೩೩ ಪ); ಪಲಬರರಸರಂ ಬಂಡಣದೊಳ್ ಗೆಲ್ದು (ಮಾರಾಶ. ೨–೬೬ ಪ). ಭಂಡಣ : "ಯುದ್ಧಾಹ್ವಯಂ ಭಂಡಣಂ" (ಕರ್ಣಾಶ. ೨); ಭಂಡಣದೊಳಟ್ಟಿದು ಪೆಂಡಿರ್ ಭಂಡಾರಂ ಪೋದೊಡದು ವಿಧಾತ್ರವಶಂ (ಅಜಿತಪು. ೦೦–೬೦); ಭಂಡಣದೊಳ್ ಜಯಾವಜಯಮೆಂಬುದು ಸಿದ್ಧಂ (ದಶಕು. ೨–೩೪) ; ಚಂಡವರಾಕ್ರಮದಷ್ಟು ಶಶಾಂಕರ್ ಭಂಡಣಮಂ ಪೊಕ್ಕು ನೃಪಪಂಚಕದೊಳಗೆ ಪಳಂಚಿದರು (ಜಯುಜಾ. ೬–೩೩). [<ಸಂ. ಭಂಡನ]

ಬಂಡತನ (ನಾ). ನಾಚಿಕೆಯಿಲ್ಲದಿರುವಿಕೆ; ಅವಮಾನದಿಂದ ಕೂಡಿರುವಿಕೆ; ನಿರ್ಲಜ್ಜೆ : ಆ ಯಮಂ ಬಂಡತನವೇ ಶ್ವೇತ ನಡೆ ನರಕಕುಂಡಕ್ಕೆ ನೀನೆಂದು ಗರ್ಜಿಸಲ್ಕೆ (ಶಿಲಪು. ೩೦–೨೬); ಪೈಶಾಚರಂತೆ ಹೇಸದೆ ರಕ್ತಪಾನವಮಂ ಮಾಡಿಯೊಡಲ ಪೋಷಿಸಿದೆ ಬಂ[ಪಾಠಾಂ. ಭಂ]ಡತನವಿದು (ಕೃಜಿಜಾ. ೨–೬೦). [ಬಂಡ$_1$ + — ತನ]

ಬಂಡಬಾಳು (ನಾ). ಮಾನವಿಲ್ಲದ ಬಾಳು; ಹೀನಬದುಕು : ಬಂಡಬಾಳನ್ನು ಬಾಳಿದ ಬಾಣಭಟ್ಟ ಏಕಿಂದು ಪರಾಧೀನನಾಗಿದ್ದಾನೆ ? (ಪಾಶಿ. ೦೦೪). [ಬಂಡ$_1$ + ಬಾಳು$_2$ (<ಬಾಟ್ಕು)]

ಬಂಡಮಾತು (ನಾ). ನಾಚಿಕೆಯಿಲ್ಲದ ಮಾತು : ಇನ್ನೊಂದು ಸಲ ಇಂಥ ಬಂಡಮಾತು ಆಡಬೇಡ (ರೂಢಿ). [ಬಂಡ$_1$ + ಮಾತು$_1$]

ಬಂಡಲು, ಬಂಡಲ್ಲು (ನಾ). ೧. ಗಂಟು ; ಮೂಟೆ : ತನ್ನ ಮೇಲೆ ಹೇರಿದ ಬಂಡಲನ್ನು ಹೊತ್ತುಕೊಂಡು ತಿರುಗುವ ಅಭ್ಯಾಸ ಮಾಡಿಕೊಳ್ಳಬೇಕಾಯಿತು (ಅಂಗಾಶ. ೩೩). ೨. ಕಟ್ಟು; ಪೊಟ್ಟಣ : ಚಹಾ ತುಂಬಿದ ಕಿಟ್ಲಿ, ಬಿಸ್ಕಿಟ ಬಂಡಲುಗಳು ಬಂದವು (ಜೀಶಾಶ. ೦೬). ಬಂಡಲ್ಲು : ೧. ನನಗ ಇರಲೀ ಅಂತ ಒಂದು ದೊಡ್ಡ ಬಂಡಲ್ಲ ತಂದು ಕೊಟ್ಟಾರ ನೋಡ! (ಶಂಬರು. ೪೪). [←ಇಂ. Bundle]

ಬಂಡಲ್ಲು 'ಬಂಡಲು' ನೋ.

**ಬಂಡವಲ** 'ಬಂಡವಾಳ' ನೋ.

**ಬಂಡವಲು** 'ಬಂಡವಾಳ' ನೋ.

**ಬಂಡವಳ** 'ಬಂಡವಾಳ' ನೋ.

**ಬಂಡವಳಗಾರ** 'ಬಂಡವಾಳಗಾರ' ನೋ.

**ಬಂಡವಾಲಶಾಹಿ** 'ಬಂಡವಾಳಶಾಹಿ' ನೋ.

**ಬಂಡವಾಳ**, ಬಂಡವಲ, ಬಂಡವಲು, ಬಂಡವಳ, ಬಂಡವಾಳು, ಬಾಂಡವಲು, ಭಂಡವಲ, ಭಂಡವಲು, ಭಂಡವಾಳ, ಭಂಡವಾಳು, ಭಾಂಡವಲ, ಭಾಂಡವಲು, ಭಾಂಡವಳು (ನಾ). ೧. (ವ್ಯಾಪಾರ ಅಥವಾ ಉದ್ಯೋಗದಲ್ಲಿ ತೊಡಗಿಸುವ) ಮೂಲಧನ : ಅಸಲು : ಇಲ್ಲಿನ ಕೈಗಾರಿಕೆಗಳಿಗೇ ಬಂಡವಾಳವಿಲ್ಲದಿರುವಾಗ. . . ಇಲ್ಲಿ ಏಳಿಗೆ ಹೇಗುಂಟಾಗಬೇಕು ? (ಜಾತ್ರ. ೧೩೦); ಅರ್ಥಶಾಸ್ತ್ರದಲ್ಲಿ ಬಂಡವಾಳವನ್ನು ಒಂದು ಉತ್ಪಾದನಕಾರಕವಾಗಿ ಪರಿಗಣಿಸುವುದು ರೂಢಿಗೆ ಬಂದಿದೆ (ಕರ್ನಾಟ. XI, ೭೯೩). ೨. ಬೆಲೆ; ಮೌಲ್ಯ : ಚಮತ್ಕಾರಗಳ ಚದುರತನಮಂ. . . ಶೃಂಗಾರದ ಬಂಡವಾಳವಂ ತಿಳಿದವಳು (ಶೃಂಗಾರ. ೨೨೦-೩). **ಬಂಡವಲ:** ೧. ವ್ಯವಹರಿಸುವಗೆ ಬಂಡವಲಮಿ[ಬಾ] ಬಂಡಮೊದವಿಲ್ಲದೆಂತು ಪೋದಪ್ಪೆ (ಕೃಷ್ಣ. ೬-೬ ವ). ೩. (ಅಲಂ) ಸತ್ತ್ವ; ತಿರುಳು; ಸಾರ : ತಮ್ಮಲ್ಲಿದ್ದ ಬುದ್ಧಿಯ ಬಂಡವಲವನ್ನು ವ್ಯವಹಾರಕ್ಕೆ ಬಳಸಿ, ವ್ಯವಹಾರನಿಪುಣರಾಗಿದ್ದರು (ಕನಸಿ. ೦೦೧). **ಬಂಡವಲು :** ೧. ಸಂಪತ್ತಿಯನ್ನು ಹುಟ್ಟಿಸಲಿಕ್ಕೆ ಬಂಡವಲಾದರೂ ಬೇಕು (ಮುಂಬಯಿ. ೩-೨೨೦). ೩. ಆತನು ಆದೊಂದು ಕೊಡಲಿಯಿಂದ ಇಡಿಯ ಆಯುಷ್ಯದಲ್ಲಿ ಹೊಟ್ಟೆಯ ಪ್ರಶ್ನೆಯನ್ನು ಬಿಡಿಸಬಲ್ಲನು. ಅದುವೆ ಅವನ ಬಂಡವಲು (ಕನ್ನಡಿ. ೩೯); ಸುಖ ಸಿಗಲೊಲ್ಲದೆಂದು. . . ಮಡದಿ ಮಕ್ಕಳಿಂದ ಕಾಣೆಯಾಗುವದಕ್ಕಾಗಲಿ ಬಹಳ ಬಂಡವಲು ಬೇಕಿಲ್ಲ (ಜಾಳಿ. ೩೭). **ಬಂಡವಳ:** ೧. 'ಬಂಡವಳಗಾರ' ಪರಾ. **ಬಂಡವಾಳು:** ೧. ನಿಮ್ಮ ದಯದ ಬಂಡವಾಳೊಂದಧಿಕವಾಗಿರಲಿ (ಕರಕು. ೩-೨೦). **ಬಾಂಡವಲು :** ೧. 'ಬಾಂಡವಲುಶಾಹಿ' ಪರಾ. **ಭಂಡವಲ :** ೧. ಭಂಡವಲ ಹಾಕಿ ಭಂಡವಲ ತಗಿಯೋ ಕೆಲಸ (ಗಂಪಾಯು. ೨೧೩); ಭಂಡವಲ ಕೂಡಾ ಆಗ ಸ್ಥಿರವಾಗಿ ನೆಲೆಯೂರಿತ್ತು (ಏಸುಕ. ೦೯). **ಭಂಡವಲು:** ೧. ಗೋದಿಯ ಒಂದೇ ವ್ಯವಹಾರದಲ್ಲಿ ಭಂಡವಲಿನ ಇಮ್ಮಡಿ ಲಾಭವಾಯಿತು (ಜಯಂತ. ೩೯೩); ಕಲಕತ್ತೆಯ ಪತ್ರಿಕೆಗಳು ಪರದೇಶದ ಭಂಡವಲಿನಿಂದಲೇ ಕೂಡಿದ್ದವು (ಶಕ್ತ. ೨೯). ೩. ಮೂಲ ಭಂಡವಲು ಮುಗಿಯಲಿಲ್ಲ, ನಿಜ, ಬೆಳೆಯಲಿಲ್ಲ ಕೂಡ ಜ್ಞಾನವೆಲ್ಲ ಅಜ್ಞಾನದಂತೆ ಮೊದಲಿದ್ದ ಹಾಗೆ ಮೂಢ (ಅರಳು. ೨೩೯-೬). **ಭಂಡವಾಳ:** ೧. 'ಭಂಡವಾಳಗಾರ' ಪರಾ. **ಭಂಡವಾಳು:** ೧. 'ಭಂಡವಾಳುಗಾರ' ಪರಾ. **ಭಾಂಡವಲ:** ೧. ಮಲ್ಲೇಶ ನೌಕರನಲ್ಲದಿದ್ದರೂ ಗೌಡನ ಭಾಂಡವಲದಲ್ಲಿಯೆ ವ್ಯಾಪಾರ ಮಾಡುವ ಪಾಲುಗಾರನಲ್ಲವೆ? (ಶ್ರೀಕ. ೯೦). **ಭಾಂಡವಲು:** ೧. ಅವನ ಭಾಂಡವಲು ಉಪಯೋಗಿಸಿಕೊಂಡು ಇತ್ತ ಬೇರೆ ವ್ಯವಹಾರ ಸಾಗಿಸ ಬೇಕಾಯಿತು ! (ಶ್ರೀಕ. ೩೭); ಯಾವನೊಬ್ಬ ಸಾಹಸಿಯೂ ನಾಲ್ಕಾರು ಮಂದಿಯ ಕಡೆಯಿಂದ ಭಾಂಡವಲು ಕೂಡಿಸಿಕೊಂಡು (ಶ್ರೀಂರ. ೨೭). ೪. ವಸ್ತು; ಸಾಧನ: ಈಗ ಹಡಗದ ಎಣ್ಣೆ_ಮುಖ್ಯ ಭಾಂಡವಲ_ಶೀರಿತು (ಅಕನ. ೨೨೩). **ಭಾಂಡವಳು:** ೩. ಭಾಂಡವಳು ಅವನಲ್ಲಿಲ್ಲ (ಒಂಟಿದ. ೨೭.)

**ಬಂಡವಾಳವಿಲ್ಲದ ಬಡಾಯಿ** = ೧. ಸತ್ತ್ವವಿಲ್ಲದ ಜಂಬ; ಒಣಜಂಬ: ನಾನು ಬಂಡವಾಳವಿಲ್ಲದ ಬಡಾಯಿಯನ್ನು ಕೊಚ್ಚಿದ್ದೆ (ಕರಿಂ. II, ೧೦೦೯). ೨. ಒಣಜಂಬದ ವ್ಯಕ್ತಿ: ಅವನಂಥ ಬಂಡವಾಳವಿಲ್ಲದ ಬಡಾಯಿಯನ್ನು ನಾನು ಮತ್ತೆಲ್ಲೂ ನೋಡಿಲ್ಲ (ಅದೇ).

[ ← ಮರಾ. ಭಾಂಡವಲ/. ತೆಲು. ಬಂಡವಲ, ಬಂಡಾಲ ]

**ಬಂಡವಾಳಗಾರ,** ಬಂಡವಳಗಾರ, ಭಂಡವಾಳಗಾರ, ಭಂಡವಾಳುಗಾರ (ನಾ). ಹಣವನ್ನು ವ್ಯಾಪಾರದಲ್ಲಿ ತೊಡಗಿಸುವವನು; ಸಾಹುಕಾರ: ಜನರನ್ನು ಓಲಿಸುತ್ತಿದ್ದ ಬಂಡವಾಳಗಾರರನ್ನು ಓಡಿಸಿದೆವು (ಕಾರಿಮ. ೬೯); ಬಂಡವಾಳಗಾರರಿಗೂ ಕಾರ್ಮಿಕರಿಗೂ ಉಂಟಾಗುತ್ತಿರುವ ಘರ್ಷಣೆಗಳ ಕಾರಣಗಳನ್ನೂ ಕುರಿತು ತರುಣವಿದ್ಯಾರ್ಥಿಗಳು ವಿಚಾರ ಮಾಡುವಂತೆ ಪ್ರಚೋದಿಸುವುದು ಆವಶ್ಯಕ (ಕೃಷಾಕ. ೦೫೦). **ಬಂಡವಳಗಾರ:** ಬಂಡವಾಳಗಾರರ ಮತ್ತು ಕಾರ್ಮಿಕರ, ಶ್ರೀಮಂತರ ಮತ್ತು ಬಡವರ ನಡುವಣ ಕಲಹಗಳಿಗೆ ಕಾರಣವೇ ಇರುವುದಿಲ್ಲ (ಕನ್ನಶ್ರಾ. ೦೫೨). **ಭಂಡವಾಳಗಾರ :** ಚಂಪಾರಣ್ಯಜಿಲ್ಲೆಯ ಒಕ್ಕಲುಜನವನ್ನು ಸಂಘಟಿಸಿ ಆಂಗ್ಲೇಯ ಭಂಡವಾಳಗಾರರ ವಿರುದ್ಧ ಸತ್ಯಾಗ್ರಹವನ್ನು ಹೂಡಬೇಕಾಯಿತು (ರಾಜಕ. ೮). **ಭಂಡವಾಳುಗಾರ :** ಅಜ್ಞಾನದ ಲಾಭ ಪಡೆದು ಅವರನ್ನು ಆಳುತ್ತಿರುವ ರೀತಿ ಭಂಡವಾಳಗಾರರ ದುಡ್ಡಿನ ಸುಲಿಗೆಗಿಂತಲೂ ನೀಚತಮವಾದದ್ದು (ಒಂಟಿದ. ೦೦೦).

[ ಬಂಡವಾಳ + – ಗಾರ (< – ಕಾರ) ]

**ಬಂಡವಾಳಗಾರಿಕೆ** (ನಾ). ಬಂಡವಾಳವನ್ನು ಹೂಡಿ ಮಾಡುವ ಉದ್ಯೋಗ : ಹೆಚ್ಚಿನ ಹಣವನ್ನು ಉತ್ಪಾದನೆ ಮಾಡುವುದು ಬಂಡವಾಳಗಾರಿಕೆಯಾದ್ದರಿಂದ ಮೂಲದಲ್ಲಿ ಹಣವು ಅವಶ್ಯ (ಮೂವಾದ. ೦೨೩).

[ ಬಂಡವಾಳಗಾರ + – ಇಕೆ ]

**ಬಂಡವಾಳದಾರ,** ಭಾಂಡವಲದಾರ (ನಾ). = ಬಂಡವಾಳಗಾರ : ಆ ಕಂಪೆನಿಯ ಬಂಡವಾಳದಾರರಲ್ಲಿ ಭಿನ್ನಾಭಿಪ್ರಾಯವುಂಟಾಗಿ ವ್ಯಾಪಾರವೆಲ್ಲಾ ಕೆಟ್ಟು ಕಂಪನಿಯನ್ನೇ ಮುಚ್ಚಿ ಬಿಟ್ಟರು (ಅದೇ). **ಭಾಂಡವಲದಾರ:** ಭಾಂಡವಲದಾರ ಕೂಲಿಕಾರರ ವಿಷಯಗಳೂ . . . ಸಾಹಿತ್ಯದಲ್ಲಿ ಪ್ರತಿಬಿಂಬಿಸುವುವು (ಶ್ರೀಂರ. ೦). [ ಬಂಡವಾಳ + – ದಾರ್ ]

**ಬಂಡವಾಳಶಾಹಿ**, ಬಂಡವಾಲಶಾಹಿ, ಬಾಂಡವಲುಶಾಹಿ, ಭಂಡವಾಳಶಾಹಿ, ಭಾಂಡವಲಶಾಹಿ (ಗು). ೧. ಐಶ್ವರ್ಯದ ಮದದಿಂದ ಕೂಡಿದ: ತನ್ನ ಹಂಗಿಗೊಳಗಾಗಲಿಲ್ಲವಲ್ಲ ಎಂದು ಅವರ "ಬಂಡವಾಳಶಾಹಿ" ಬುದ್ಧಿ ಕೆರಳಿತು (ಅವಕಾ. ೦೦೦). (ನಾ). ೨. = ಬಂಡವಾಳಗಾರ : ನಮ್ಮ ದೃಷ್ಟಿಯೇನೋ ಬಂಡವಾಳಶಾಹಿಯ ಕಡೆಗೆ. ಒಲವೆಲ್ಲಾ ಅವರ ಕಡೆಗೆ (ಕತ್ತಲೆ. ೧೨). **ಬಂಡವಾಲಶಾಹಿ :** ೨. ಬಂಡವಾಲಶಾಹಿಯ ಜತೆ ಸಾಮ್ರಾಜ್ಯಶಾಹಿಯ ಜತೆ_ಬಡಿದಾಡಿದ ಸ್ವಾತಂತ್ರ್ಯಪ್ರೇಮಿ (ಹಾರುಹು. ೨೨). **ಬಾಂಡವಲುಶಾಹಿ:** ೨. ನಾವೇನು ಬಡವರ ರಕ್ತ ಹೀರುವ ಬಾಂಡವಲುಶಾಹಿಗಳೇ? (ಹುತ್ತು. ೩೨). **ಭಂಡವಾಳಶಾಹಿ:** ೩. ಬಂಡವಾಳದ ಅಧಿಕಾರ; ಐಶ್ವರ್ಯದ ದೌಲತ್ತು: ಭಂಡವಾಳಶಾಹಿಯು ನಿರ್ನಾಮವಾಗಲಿ, ಕೆಲಸಮಾಡಿದ ಕೈಯ ತುತ್ತು ಕೆಲಸ ಮಾಡಿದವನ ಬಾಯಿಗೇ ಬೀಳಬೇಕು (ಕೃಣಾಕ. ೩೭). **ಭಾಂಡವಲಶಾಹಿ :** ೨. ಭಾಂಡವಲಶಾಹಿಗಳು ಹೊನ್ನ ಹಕ್ಕಿಯನ್ನು ಉಕ್ಕಿನ ಪಂಜರದಲ್ಲಿ ಬಂಧಿಸಿಟ್ಟಿರು (ರತ್ನಪಾ. ೩೬). [ಬಂಡವಾಳ + ಶಾಹಿ./ಮರಾ. ಭಾಂಡವಲಶಾಹೀ ]

**ಬಂಡವಾಳಿಗ,** ಭಂಡವಾಳಿಗ (ನಾ). = ಬಂಡವಾಳಗಾರ: ಅತಿರೇಕದ ಅತಿಶಿಕ್ತಮೂಲ್ಯವನ್ನು ಎತ್ತಿಹಾಕುವ ನಡವಳಿಗೆ ಬಂಡವಾಳಿಗ ದಲ್ಲಾಳಿಯಾಗಿ ಮಾರ್ಪಡುವದೇ ಈ ಬೇಸಾಯದ ಬಂಡವಾಳಗಾರಿಕೆಯ ಹೆದ್ದಾಸೆಯ ಹೆದ್ದಾರಿ (ಮೂವಾದ. ೧೯೯). **ಭಂಡವಾಳಿಗ :** ಅವರ ಆಶೆ ಆಕಾಂಕ್ಷೆಗಳೆಲ್ಲ ಭಂಡವಾಳಿಗರ ದರ್ಪದ ತುಳಿತಕ್ಕೆ ಸಿಲುಕಿ ಕಮರಿ ಹೋಗುತ್ತವೆ (ಕಾಂಡಯ. ೩೩). [ ಬಂಡವಾಳ + – ಇಗ ]

**ಬಂಡವಾಳು** 'ಬಂಡವಾಳ' ನೋ.

**ಬಂಡಸಾಲೆ** (ನಾ). ೧. ಮಳಿಗೆ; ಕೋಠಿ; ಉಗ್ರಾಣ: ಅವರ ಬಂಡಸಾಲೆಯಲ್ಲಿ ಹಣದ ಪುರವಣೆಯನ್ನು ಮಾತ್ರ ನಾನು ಮಾಡಿ,

ಕೊಟ್ಟಿನು (೭೦೫. ೦೬೬). ೨. ದೊಡ್ಡ ಕಟ್ಟಡ; ಮಹಲು; ಸೌಧ: ಸಂಪಿಗೆಯ ಊರಲ್ಲೇ ಭಟ್ಟರು ಎಬ್ಬಿಸಿದ 'ಬಂಡಸಾಲೆ' ಸಾಮಾನ್ಯವಾಗಿ 'ವಿಲಾಯತಿ'ಯಲ್ಲೇ ನೋಡ ಸಿಗಬೇಕು (ಶರಾವ. ೬).

[ ಬಂಡ₁ + ಸಾಲೆ₄./ತುಳು. ಬಂಡಸಾಲೆ ]

**ಬಂಡಳಿಸು** (ಕ್ರಿ). ಹೇಳಿದುದನ್ನೇ ಪುನಃ ಹೇಳು; ಪುನರುಕ್ತಿ ಮಾಡು : ಮುಳಿವ ತಿಳಿವ ಗಂಡರ ಪೆಂಡಿರ ನುಡಿಗಳನೆ ಬಂಡಳಿಸುವ [ಪಾಠಾಂ. ಬಂದಣಿಸುವ, ಬಂಡುಳಿಸುವ, ಬಣ್ಣಿಸುವ] ಪುರುಳಿಗಳುಮಂ . . . ಕೊಟ್ಟು (ಅಂತ. ೮–೩೪ ವ); ಪೊಗೊಂಬಿನೊಳ್ ಪಾಯ್ದು ಬಂಡಳಿಸು[ಪಾಠಾಂ. ಬಂಡಣಿಸು, ಬಂಡುಳಿಸು, ಬಂದೆಳಸು, ಮಂಡಳಿಸು]ತ್ತಿರ್ಪ ಶುಕಾಳಿ (ಅಂತ. ೦೦-೯೬); ಅರಗಿಳಿವಿಂಡು ಬಂಡಳಿವ ಸಾರಿಕೆ ಚಾವಳಿಪುನ್ನದಾಳಿ ಗಾವರಿಸುವ ಸೋಗೆ ಕೇಗುವ . . . ವಿಕಾರವಿಲ್ಲದಿರೆಯುಂ ಬನವೊಪ್ಪಿದುದು (ಪುಷ್ಪ. ೦೪-೨೩).

[ಬಂಡಳ್ಳ (ಶ ←ತವಿ. ವಣ್ಟುಬ್ಬಿ=ಅರ್ಥವಿಲ್ಲದ ಶಬ್ದ) + —ಇಸು₁]

**ಬಂಡಾಟ** (ನಾ). ಅವಮಾನ ; ಸಿಗ್ಗು : ಕೂಟಕಪಟದಿಂದ ಕುಂದ ಪೊಱಿಸಿ ಬಂಡಾಟ ಬಾಹಿರನೆಂದೆನಿಸಿ (ಕಕಶಾಂ. ೦೦–೩೪). ೨. ಕಷ್ಟಪಡು ವಿಕೆ; ಹೆಣಗಾಟ; ಒದ್ದಾಟ : ಸಮುದ್ರದ ನಂಟಸ್ತನ ಉಪ್ಪಿಗೆ ಬಂಡಾಟ (ಹುಟ್ಟಿಹ. ೬೪); ಅದೇ ಬಂಡಾಟ ಸಾರ್ ಈ ಹಳ್ಳೀಲಿ (ರಂಗಳ. ೭೩); ಬಂಡಿ ಬಂಡಾಟ ಹೇರು ಹಟ್ಯಾಟ ತಲೆಮೊಟ್ಟೆ ಪರಮಸುಖ (ಗಾದೆ). [ಬಂಡು₂ + ಆಟ]

**ಬಂಡಾಡು₁** 'ಬಂಡು₂' ಪರಾ.

**ಬಂಡಾಡು₂** 'ಬಂಡು₄' ಪರಾ.

**ಬಂಡಾಯ** (ನಾ). (ಸರ್ಕಾರ ಮುಂತಾದ) ಆಡಳಿತದ ರೀತಿಗೆ ತಮ್ಮ ಅಸಮ್ಮತಿಯನ್ನು ಸೂಚಿಸಲು ಮಾಡುವ ಪ್ರತಿಭಟನೆ; ಕ್ರಾಂತಿ : ಭಾರತದಲ್ಲಿ ಬಂಡಾಯಕ್ಕಾಗಿ ವೀರ ಉತ್ಸಾಹಿಯೋಧರು ಬೇಕಾಗಿದ್ದಾರೆ (ಆತ್ಮಾ.ಚ. ೦೩೩); ೧೮೫೭ರ ಬಂಡಾಯದಲ್ಲಿ ನಮ್ಮ ಅಜ್ಜನನ್ನು ಹಿಡಿದೊಯ್ದು ಗಲ್ಲಿಗೇರಿಸಿದರು (ಸ್ವ.ಶತ. ೦೫); ಪರದೇಶಿಯರನ್ನು ಬಗ್ಗು ಬಡಿಯಲು ನಮ್ಮ ಹಿರಿಯರಾದ ಸೈನಿಕರು ಬಂಡಾಯವನ್ನೇ ಹೂಡಿದರೆಂಬುದನ್ನು ಮರೆಯಬೇಡಿರಿ (ಹಬ್ಬ. ೦೯೯). 'ಬಂಡು₄' ಪರಾ.

[← ಮರಾ. ಬಂಡಾಳ್, ಬಂಡಾಳ, ಬಂಡಾಲೀ./ತುಳು. ಬಂಡಾಯಿ]

**ಬಂಡಾಯಗಾರ** (ನಾ). ದಂಗೆ ಮಾಡುವವನು; ಕ್ರಾಂತಿಕಾರ : ಸರ್ಕಾರಕ್ಕೆ ವಿರೋಧವಾಗಿ ಹೂಡಿದ ಹೋರಾಟದಲ್ಲಿ ಆ ಬಂಡಾಯಗಾರರು ಪ್ರಯೋಗಿಸಿದ . . . ವಿಧಾನಗಳ ಬಗ್ಗೆ ಅವನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು (ಪುನರು. ೪೪೪).

[ಬಂಡಾಯ + — ಗಾರ (< — ಕಾಱ) ]

**ಬಂಡಾಯಸಾಹಿತಿ** (ನಾ). ಸಾಮಾಜಿಕಶೋಷಣೆಗಳ ವಿರುದವಾಗಿ ಸಾಹಿತ್ಯಸೃಷ್ಟಿ ಮಾಡುವವನು : ಬಂಡಾಯಸಾಹಿತಿ ಸಾಮಾಜಿಕ ಸಂಬಂಧಗಳ ಹಿಂದಿರುವ ಮೋಸಗಳನ್ನು ಅಮಾನವೀಯತೆಯನ್ನು ಗುರುತಿಸಿ ಸಮಾಜವ್ಯವಸ್ಥೆಯ ವಿರುದ್ಧ ಸ್ಫೋಟಿಸುತ್ತಾನೆ (ಕಂಕೋ. XI. ೭೯೬).

[ಬಂಡಾಯ + ಸಾಹಿತಿ]

**ಬಂಡಾಯಸಾಹಿತ್ಯ** (ನಾ). ಆಧುನಿಕ ಕನ್ನಡಸಾಹಿತ್ಯದ ಒಂದು ಪ್ರಕಾರ; ರಾಜಕೀಯ, ಸಾಮಾಜಿಕ ಘಟನೆಗಳಿಂದ ಬದುಕಿನಲ್ಲಿ ಉಂಟಾದ ಬವಲಾವಣೆಯನ್ನು ಪ್ರತಿಭಟಿಸುವ ಸಲುವಾಗಿ ಸೃಷ್ಟಿಯಾದ ಸಾಹಿತ್ಯ : ಶೋಷಣೆಯ ವಿರುದ್ಧ ಶ್ರಮಜೀವಿಗಳನ್ನು ಬಂಡಾಯಕ್ಕೆ ಅನುಗೊಳಿಸುವುದೇ ಬಂಡಾಯಸಾಹಿತ್ಯದ ಗುರಿಯಾಗಿದೆ (ಕಂಕೋ. XI, ೭೯೬). [ಬಂಡಾಯ + ಸಾಹಿತ್ಯ]

**ಬಂಡಾರ** 'ಭಂಡಾರ' ನೋ.

**ಬಂಡಾರಿ** 'ಭಂಡಾರಿ' ನೋ.

**ಬಂಡಾರಿಗ** 'ಭಂಡಾರಿಗ' ನೋ.

**ಬಂಡಾರಿಸು** 'ಭಂಡಾರಿಸಂ' ನೋ.

**ಬಂಡಾರೆ** 'ಬಂಡಾರಿ' ನೋ.

Δ **ಬಂಡಾಱ** 'ಭಂಡಾರ' ನೋ.

**ಬಂಡಾಱಕಾಱ** (ನಾ). ಖಜಾನೆಯ ಮುಖ್ಯಾಧಿಕಾರಿ; ಖಜಾಂಚಿ : ಆಳಿಕಾಱರುಂ ಬಣ್ಡಾಱಕಾಱರುಂ(ಎಕ VIII, ಸೊರಬ. ೨೬೫–೪೦; ಸು. 1265).

[ಬಂಡಾಱ (<ಭಂಡಾರ) + — ಕಾಱ]

**ಬಂಡಿ₁**, ಭಂಡಿ₁ (ನಾ). ೧. ಗಾಡಿ ; ಶಕಟ ; ಚಕ್ಕಡಿ : "ಮಾಡಿಯೆನಲ್ ಬಂ[ಪಾಠಾಂ. ಗಾ, ದಂ]ಡಿ" (ಶಬ್ದಾಂಶ. ೩೯) ; ಶಾಕಟಿಕ ಪರದರುಂಬೆರಸು ಬಂಡಿಗಳೊಳ್ ಪಟ್ಟಿಯುಂ ಧಾನ್ಯಮಂ ತೀವಿಕೊಂಡು ಪೊಟಲ್ಗೆ ಮಾಱಲೆಂದು ಪೋಪನ್ನೆಗಂ (ವಡ್ಡಾರಾ. ೬೬–೦೦); ಅಂತು ತನ್ನ ತಂದ ಬಂಡಿಯ ಕೂಟಿಲ್ಲಮಂ ವತ್ತಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಶಂಕರಾ. ೩–೨೯ ವ); ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ ಕಡೆಗೀಲು ಬಂಡಿಗಾಧಾರ (ಲೇದಾಕ. ೦–೨); ಬಾರಿಸಿದ ಬಲು ಹೋಱಿಯ ಬಂ[ಪಾಠಾಂ. ಭಂ]ಡಿಗಳೋರಣಿಸಿದವು ಪಯಣದಲಿ (ಕೊರಠಾ. ೦–೬–೩). ೨. ರಥ ; ತೇರು : ಕೀಲ ಕಳೆವರು ರವಿಯ ಬಂಡಿಯ (ಸಂಕಶ. ೭–೦೬) ; ನೀನಾರ ಬಂಡಿಯುಂ ಪೊಡೆದಪ್ಪೆ (ಕ್ರ.ಬಿಠಾ. ೨೪–೩೯). ೩. ಗಾಲಿ ; ಚಕ್ರ : (೬). ಭಂಡಿ₁ : ೧. ಧನ್ನಮಂ ಭದ್ರನುಮೇಟೊರಿರ್ವರ್ ಕುಡಿಯರರೊರ್ಮೆ ನಡೆವ ಭಂಡಿಗಳ್ ಶ್ರೀನದೀ ತೀರದಿಟ್ಟೆಡೆಯೊಳೊಂದೊಂದಂ ಸೋಂಕಿ ಮುಱಿಯೆ (ಶಾಂತಿಪು. ೯–೯೬ ವ); ತಂಬುಲಿಗರ್ವಿಟ್ಟಾಯಂ ಭಂಡಿಗೆಲೆ ನೂಱುಹೇಱಿಂಗೆ ನೂಱು (ಎಇ. XX. ೦೨–೩೩; 1167). ೩. "ಶಕಟಃ [ರ]ಥಾಂಗ[ಮರ]ಸಂಜ್ಞಕಮಂತದು ಭಂಡಿ ಗಂತ್ರಿ ಕಂಬಳ ವಾಹ್ಯಂ ಪ್ರಕಟಂ ಕರ್ಣೀರಥನಾಮಕಮಕ್ಕುಂ ಪ್ರವಹಣಂ ರಥಾಂಗಂ ಚಕ್ರಂ" (ಪಶ್ತುಕೋ. ೬೬–೨೬); ಭಂಡಿಗಳಂತೆ ಕಱಿನಾವ ಕಡಗಗಳಂ ಧರಿಸಿ (ಶಾಗಂಂ. ೩೪೬–೯).

**ಬಂಡಿಯ ಈಱು** = ಗಾಡಿಯ ಮೂಕಿಯ ಮರ : "ಈಷಾ = ಬಂಡಿಯ ಈಱು" (ಶಾಕಕ್ಕ. ೩೬) **ಬಂಡಿಯ ಗಾಲಿ, ಭಂಡಿಯ ಗಾಲಿ** = ೧. ಗಾಡಿಯ ಚಕ್ರ : ಪಾಂಡವಕೌರವಬಲಮಾಟದಿರ್ದ ಭೂಮಿಯೊಳ್ ಪಣಮಂ ಬಿತ್ತುವುದುಂ ಬಂ[ಪಾಠಾಂ. ಭಂ]ಡಿಯ ಗಾಲಿಯ ಪಣವಕ್ಕುಂ (ಸಮುತ. ೦೨–೦೪); ಇದೊಂದು ಭಂಡಿಯ ಗಾಲಿಯಂತುಟನೆರಡು ಕಲಹಂಸೆಗಳ್ ಕರ್ಚಿಕೊಂಡು ಪೋದಪ್ಪುವು (ಶಂಕತಂ. ೦೩೬–೨೦) ; ಅಱಿ ಸಱಿ ತೋರಗಲು ಕವಣೆಗಲು ಕಣೆ ಭಂಡಿಯ ಗಾಲಿ ಕಲ್ಲೆ (ಸೌಇಇ. XX, ೦೨೬–೩ ; 1186). ೨. (ಆಲಂ) ಸೊನ್ನೆ; ಶೂನ್ಯ : ನೀನು ಹೀಗೇ ಕಾಲ ಕಳೀತಿದ್ದರೆ ಪರೀಕ್ಷೇಲಿ ನಿನಗೆ ಬಂಡಿಯ ಗಾಲಿಯೇ ಬರೋದು (ಲೂಹ). **ಬಂಡಿಯ ಬೋಯಿಕೆ** = ರಥವನ್ನು ನಡೆಸುವ ಊಳಿಗ, – ಸೇವೆ; ಸಾರಥ್ಯ : ಕಮಲದಳಾಯತೇಕ್ಷಣನೊಡನೆ ಬಂಡಿಯ ಬೋಯಿಕೆಗೆ ವೀಳೆಯವ ಪಿಡಿದೆವು (ಕುವ್ಯಾಕ. ೩–೬೬). **ಬಂಡಿಯ ಬೋವ, ಭಂಡಿಯ ಬೋವ** = ರಥವನ್ನು ನಡೆಸುವವನು ; ಸಾರಥಿ : ಕಿರೀಟಿಯ ಮನೆಯ ಬಂಡಿಯ ಬೋವನಾದವನು ವೀರನಾರಾಯಣ (ಕುವ್ಯಾಉ. ೦–೯೩) ; ಒಬ್ಬ ಮಾವನ ಕೊಂದ ಒಬ್ಬ ಮೈದುನಗೆ ಭಂಡಿಯ ಬೋವನಾದ (ಪುರಂಶ. ೦–೦೦೬–೧). **ಬಂಡಿಯ ಬೋವಗುಲ** = ರಥವನ್ನು ನಡೆಸುವ ಊಳಿಗದವನ ವಂಶ ; ಸಾರಥ್ಯವನ್ನು ಮಾಡುವವನ ಕುಲ : ದೇವಕೀಸುತ ನೀನು ಬಂಡಿಯ ಬೋವಗುಲದಲಿ ಜನಿಸಿದನೆ (ಕುವ್ಯಾಕ. ೩–೩೪). **ಬಂಡಿಯ ರ, ಬಂಡಿಯ ಱ** = ಗಾಡಿಯ ಗಾಲಿಯ ಆಕಾರದಲ್ಲಿರುವ 'ಱ' ; ಶಕಟರೇಫ (ಱ) : ಹೀಗೆ 'ಟ' ಕ್ಕೆ ರಳ ಎಂದೂ 'ಱ' ಕ್ಕೆ ಶಕಟರೇಫ

ಅಥವಾ ಬಂಡಿಯ ರ ಎಂದೂ ಹೆಸರಾಯಿತು (ಶ್ರಿಶಿ. ೯) : ರಕಾರವನ್ನು ಕೇಶಿರಾಜ ಮತ್ತು ಇತರರು ಶಕಟರೇಫ ಎಂದು ಕರೆದಿದ್ದಾರೆ. ಮತ್ತೆ ಕೆಲವರು ಇದನ್ನು ಬಂಡಿಯ ರ (ಐ) ಎಂದೂ ಉಲ್ಲೇಖಿಸಿದ್ದಾರೆ (ದ್ರಾಶಿ. ೩೫೦). **ಬಂಡಿಯ ಹುಲಿ, ಭಂಡಿಯ ಪುಲಿ** = ಬೇಟೆಗಾಗಿ ಬಂಡಿಯಲ್ಲಿ ಸಾಗಿಸುವ ಸಾಕಿ ಪಳಗಿಸಿದ ಹುಲಿ : ಓಡಿನಾಯಿಗಳು ಹೆಗಲ ಸಾಳುವಂ ಬಂ[ಪಾಠಾಂ. ಭಂ]ಡಿಯ ಹುಲಿ . . . ಅಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಕ. ೩-೯) ; ಭಂಡಿಯ ಪುಲಿಯಂ ಮೆಲ್ಲನೆ ಕೊಂಡಿಳಿಪುತೆ . . . ಮೃಗಮಂಡಲಮನಸರ್ಕೆ ತೋಱೆ (ಗಿರಿಕ. ೧-೯೯).

**ಬಂಡೀಕಪ್ಪು** = (ಬೇಗನೆ ಅಳಿಸಿ ಹೋಗದ) ಗಾಡಿಯ ಚಕ್ರದ ಕೀಲೆಣ್ಣೆಯ ಮಸಿ : ಅರ್ಜಿ ಬರೆಸುತ್ತಿದ್ದವರೆಲ್ಲ ಅತ್ತುರಾತುರದಲ್ಲಿ ಬರೆಸಿ, ಬಂಡೀಕಪ್ಪಿನ ಹೆಬ್ಬೆಟ್ಟುಗಳನ್ನು ಎಣ್ಣೆ ಸಮೇತ ಒತ್ತಿ ಒಂದೊಂದಾಗಿ ತಂದು ಕೊಟ್ಟರು (ಪನ್ನೊರು. ೦೬೦). [ದೇ.॥ ತಮಿ. ಪಣ್ಟಿ, ವಣ್ಟಿ; ಮಲ. ವಣ್ಟಿ; ತುಳು. ಬಂಡಿ, ಭಂಡಿ ; ತೆಲು. ಕೋಲಾ. ಬಂಡಿ ; ಕೋತ. ವಂಡ್ಯ; ತೊದ. ಪೊಡ್ಯ. / ಪ್ರಾ. ಭಂಡೀ, ಭಂಡಿಆ]

**ಬಂಡಿ$_3$** (ನಾ). ಸೊಂಟದ ವರೆಗೆ ಬರುವ ಒಂದು ಬಗೆಯ ಅಂಗಿ ; ಕಸೆಯಂಗಿ : ಕುಬೇರನು ತನ್ನ ಬಂಡಿಯ ಜೇಬಿನೊಳಗಿಂದ ಒಂದು ಅಂಪೆಯ ಚೀಲವನ್ನು ಹೊರಕ್ಕೆ ಎಳೆದನು (ರಕ್ತಕ್ರ. ೬). 'ಬಗಲಬಂಡಿ' ಪರಾ. [← ಮರಾ. ಬಂಡೀ]

**ಬಂಡಿಕಾರ** 'ಬಂಡಿಕಾಱ' ನೋ.

**ಬಂಡಿಕಾಱ, ಬಂಡಿಕಾರ, ಭಂಡಿಕಾರ, ಭಂಡಿಕಾಱ** (ನಾ). ೧. ಗಾಡಿ ಹೊಡೆಯುವವನು ; ಗಾಡಿಕಾರ : ಮಿಗೆ ಮಣ್ಣೆಲಸದೊತ್ತರು ಬಂಡಿಕಾಱರು ಕಲುಕುಟಿಗರಿದ್ದೆಡೆಯ ಸೊನ್ನಲಪುರಕೆ ಪ್ರಭು ಬಂದ (ಶೃಶಂಲೀ. ೦೩-೯). **ಬಂಡಿಕಾರ** : ೧. ಬಂಡಿಕಾರಣ್ಣನ ಬಂಪಾಟ ನೋಡಿರೂ ಬಾರುಕೋಲವನ ಬಲಗೈಲಿ (ಹಳ್ಳಿಹಾ. ೯೮) ೨. ದೇವಾಲಯದ ರಥದ ಮೇಲ್ವಿಚಾರಕ : (ಶಿ). **ಭಂಡಿಕಾರ** : ೧. ಪೊರಮಟ್ಟು ಕಲ್ಲುಕುಟುಕರ ಭಂಡಿಕಾರರಂ ಕರಸಿದನು (ಪಪಮೋ. ೨೧-೦೩) **ಭಂಡಿಕಾಱ** : ೧. ಕಲಸಿಗಳಗೆ ಕಲುಕುಟಿಗರಿಗೆ ಭಾಗಿ ೨ ಭಣ್ಡಿಕಾಱಂಗೆ ೧ (ಎಕ. II, ೩೩೦-೫ ; ಸು. 1500). ೨. ಭಂಡಿಕಾಱರ ಜೀವಿತಕ್ಕೆ ವರಹ ಗ ೧ (ಎಕ. XV, ಶೇಲಾರು. ೬೦-೯೫ ; 1485). [ಬಂಡಿ$_1$ + –ಕಾಱ]

**ಬಂಡಿಬಸವ** (ನಾ). ೧. ಹಿಂದಿನ ಕಾಲದಲ್ಲಿ ಮಕ್ಕಳ ಆಟಕ್ಕಾಗಿ ಮಾಡುತ್ತಿದ್ದ ಮರದ ಅಥವಾ ಲೋಹದ ಗಾಲಿಗಳಿರುವ ಬಸವಣ್ಣನ ವಿಗ್ರಹ : ಮಗುವು ಬಂಡಿಬಸವನನ್ನು ಎಳೆದುಕೊಂಡು ಆಡುತ್ತಾ ಇದೆ (ಶಿಪ). ೨. ಬಸವನಹುಳು : ಜಿಗಣೆ, ಜೇಡ, ಚೇಳು . . . ಬಂಡಿಬಸವ, ಜರಿ (ಪಶ್ಚನು. ೨೯೦). [ಬಂಡಿ$_1$ + ಬಸವ$_1$]

**ಬಂಡಿಬೋವ** (ನಾ). ಗಾಡಿಯನ್ನು ನಡೆಸುವವನು ; ಗಾಡಿಕಾರ : ಕಟ್ಟೆಗಕಾಱರಿಂಗೆಱೆದು ಬಂಡಿಬೋವರ್ಗೆಱೆದು ನಾಯಕಮಂಡಳೀಕರ್ಗೆ ಱೆದು (ಪಶು. ೫೯ ೨೭). [ಬಂಡಿ$_1$ + ಬೋವ (< ಬೋವು)]

**ಬಂಡಿಮಾಳ** (ನಾ). ಗಾಡಿಗಳನ್ನು ನಿಲ್ಲಿಸುವ ಸ್ಥಳ ; ಗಾಡಿಖಾನೆ : ತೋಪು ವಿಶಾಲವಾದ ಬಂಡಿಮಾಳಕ್ಕೆ ನೆರಳನ್ನು ಕೊಡುತ್ತಿದೆ (ಸ್ವಸ್ಥಹೊ. ೪೪). [ಬಂಡಿ$_1$ + ಮಾಳ$_3$ (= ಮಾಲ)]

**ಬಂಡಿವರಿಯಿಸು** (ಕ್ರಿ). ಗಾಡಿಯನ್ನು ಓಡಿಸು : ಗಾಲಿಯಿಲ್ಲದೆ ಬಂಡಿವರಿಯಿಸುವ (ಶರ್ಮಿಮ್ಮ. ೦೨-೨೯). [ಬಂಡಿ$_1$ + ಪರಿಯಿಸು]

**ಬಂಡಿಹೋಕ** (ನಾ). ಗಾಡಿಯಲ್ಲಿ ಪ್ರಯಾಣ ಮಾಡುವವನು : ಪರಸ್ಥಳದ ಬಂಡಿಹೋಕರು ಕಾಯಿವಲ್ಲೆ ಮಾರಾಟಗಾರರು ಇವರನ್ನುಳಿದವರು ಮನೆಯಲ್ಲಿಯೇ ಇದ್ದರು (ರಕ್ತಕ್ರ. ೨೦೯). [ಬಂಡಿ$_1$ + ಹೋಕ (< ಪೋಕ)]

**ಬಂಡು$_1$** 'ವಂಡು' ನೋ.

**ಬಂಡು$_2$** (ನಾ). ಜೇನು ; ಮಕರಂದ ; ಮಧು : "ಬಂಡು ಮಕರಂದಂ" (ಶಬ್ದಮ. ೯೬) ; ಓಗರವೂಗಳ ಬಂಡನೆಯ್ದೆ ಪೀರುತ್ತೊಡವಂದುವಿಂದ್ರವನದಿಂ ಮಱಿದುಂಬಿಗಳ್ (ಶಂಶಕಾ. ೧೧-೬೧) ; ಬಂಡನುಂಡು ನನೆಗೊಂಬುಗಳಂ ಮೊರೆದೇಟ್ವ ಭೃಂಗಝಂಕಾರವೆ ಮಾಟ್ಪುದಾರ ಬಗೆಗಂವ ಎದನೋತ್ಸವ ಹರ್ಷಭಾರಮಂ (ಶಂರಾಮಾ. ೦-೦೦೬) ; ಹೊಸಕಮಳಕುಟ್ಮಲದ . . . ಬಂಡುಂಬ ಕೊಳ್ಗಿಸಱೊಳಗೆ ಸಿಲ್ಕಿ ಜಿನುಗುವ ಮಱಿಗೆ ಸೌರಭ್ಯರಸದ ಕುಟುಕಿತ್ತು ಸಾಗಿಸುವ ಬಾಣತಿಮುಂಬಿ ಮೆಱೆದುವು (ಹಶಕಾ. ೩-೪೦).

**ಬಂಡಾಡು$_1$** = ಜೇನು ತುಂಬಿ ಸೂಸು ; ಮಕರಂದ ಹೊರ ಹೊಮ್ಮು : ಬಂಡಾಡುವ [ಪಾಠಾಂ. ಡೋಡಿದ] ನವಕರ್ಣಿಕಾರಮತಿಮಧು ರತೆಯೊಳ್ ಕೂಡಿದ ನಿಂಬಾರಾಮಂ ನಾಡೊಳಗೊಳಮೊಡಿನ್ನದೇವರ್ಣ ಪುದೋ (ಕಾವ್ಯಾವ. ೯೭೩) ; ಬಂಡಾಡೆ ಮೇಲೆ ಮಧುಕರಮಂಡಳಿಗಳ್ ಬಿಟ್ಟು ಮಿಳಿರ್ವ ಮತದಿಯ ಮುಡಿ ಮಾರ್ಕೊಂಡುದು ಕಾರ್ಮುಗಿಲಡಿಯೊಳ್ ತಾಂಡವಮಂ ಮೆಱೆವ ಸೋಗೆಸವಿಲ ಬೆಡಂಗು (ಪರ್ವಶ. ೩-೩೩).

**ಬಂಡು$_3$** (ನಾ). ೧. ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜೆ : 'ಬಂಡು ಮಾತು', 'ಬಂಡುವೋಗು' ಪರಾ. ೨. ನಾಚಿಕೆಗೇಡಿನ ನಡುವಳಿಕೆ : ಭಂಡತನ: ಬಂಡು ಬಕ್ಕುಡಿ ಭಂಗ ಬಂಧನ ಕನಲ್ಕೆ ಕಳಕಳ ಮೆಂಬಿವು . . . ಜನದೊಳಿಲ್ಲ (ಕಂಪ. ೬-೪೨). ೩. ಹೆಣಗಾಟ ; ಕಷ್ಟ ; ಬವಣೆ : ಹೆಂತರಿಲ್ಲದ ಮನೆವಾರ್ತೆ ಅವಗು ಬಂಡು ಕಾಣಯ್ಯ (ಸರ್ವಜ್ಞ. ೦೬೯೩). ೪. ನಾಚಿಕೆಯಿಲ್ಲದವಳು ; ಮಾನವಿಲ್ಲದವಳು : ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ ಕಂಡಲ್ಲಿ ಹರಿವ ಮಗ ನಾದರಾ ಮನೆಗೆ ದಂಡ ತಪ್ಪುವದೆ (ಸರ್ವಜ್ಞ. ೦೬೩೩). (ಗು). ೫. ನಾಚಿಕೆಗೇಡಿಯಾದ ; ಲಜ್ಜಾಸ್ಪದವಾದ : ಬಂಡು ಭೂತಗಳಿಲ್ಲ ಕೊಂಡೆಯಪರಿಲ್ಲ ವಂಡವಿಲ್ಲಾ ಪುರದೊಳಗೆ (ಜನರಾ. ೦-೯೩).

**ಬಂಡಾಗು** = ೧. ನಾಚಿಕೆಗೀಡಾಗು ; ಅವಮಾನ ಹೊಂದು : ಭೂಮಂಡಲೇಶ್ವರನು ಕೇಳಿದೊಡೆ ದಂಡವನೆಮ್ಮುವರೊಳು ಕೊಂಬನದೞಂ ಬಂಡಾಗುವುದೆಮ್ಮ ಕಾರ್ಯ (ಶೃಶಂಲೀ. ೩-೯೩); ನನ್ನಿಂದೆ ಬಂಡಾಗಿ ಹೋಗದ ವೀರರಾರೆಲವೋ (ಮೋಹತ. ೩೯-೧೦); ಕಮಲಪದನೆಯರ ಪೀನಸ್ತನಂಗಳ ನೋಡಿ . . . ತಲೆಗೆದರ್ದು ಬಂಡಾದಂತೆ ಮಮ್ಮಚಯಮಲರ್ದೊಪ್ಪಿರೆ (ಪಪಮೋ. ೦೦-೯೫). ೨. ಹೆಣಗಾಡು ; ಕಷ್ಟಕ್ಕೀಡಾಗು: ಈ ಅಂದಗಾಱ ಅಣ್ಣಾಗಳ ಕಂಡು ಬಂಡಾದಿರಣ್ಣಾ (ಮೋಳಿಪಾ. ೦೬-೬೬). **ಬಂಡುಮಾಡು** = ಅವಮಾನ ಮಾಡು ; ನಾಚಿಕೆಗೇಡು ಮಾಡು : ದೇವೇಂದ್ರನಿದಿರಲಿ ಮುನಿಯ ಬಂಡು ಮಾಡುವೆ [ಪಾಠಾಂ. ಭಂಡನಂ ಮಾಳ್ಪೆ] (ಹಶಕಾ. ೩-೮); ಗಂಡನುಳ್ಳ ಹೆಂಡಿರ ಕೊಂಡು ಒಯ್ದು ಅವರ ಬಂ[ಪಾಠಾಂ. ಭಂ]ಡು ಮಾಡುವನೀ ಪುರಂದರವಿಠಲ (ಪುರಂದ. ೦-೦೦೯-೩); ಧನಸೇನಸೆಟ್ಟಿ . . . ಬಂಡು ಮಾಡಿ ಸತಿಯ ಕೊಲ್ಲದೆ ತನ್ನ ಧನವ ಧರ್ಮಕ್ಕಿತ್ತು ತಾನು ತಪವನಾಚರಿಸುವುದಕ್ಕೆ ಪೋದನು (ಧರ್ಮಸಮ. 1, ೩೭೩). [ಬಂಡು$_1$ + –ಉ$_4$]

**ಬಂಡು$_4$** (ನಾ). ೧. ಬಂಡಾಯ ; ದಂಗೆ : ಮುಂದೆ ತೀವ್ರವೇ ಜಂಗಮರ ಬಂಡು ಮುನಿಯಿತು (ಮಂಗಶಿಹು. ೯-೬೧). ೨. ಅಡ್ಡಿ ; ತಡೆ : ಉದ್ದಂಡ ಶಿವಮಂತ್ರಮಂ ಸ್ಮರಿಸುತಿರ ಮಱೆದೊಮ್ಮೆ ಬಂಡು ಬರೆ ನಾಲಿಗೆಯ ಕೊಯ್ದಿಟ್ಟ (ಶೃಶಂಲೀ. ೬-೨೨೭).

**ಬಂಡಾಡು$_2$** = ಬಂಡಾಯ ಹೂಡು ; ದಂಗೆಯೇಳು : ರೂಢಿಯಲಿ ಶುಂಭಾಸುರಂಗೆ ಬಂಡಾಡಿದನು ವಿಳ ಚಂಡನೆಂಬವ (ದೇವೀಮ. ೩-೬೦). **ಬಂಡುಹೂಡು** = ದಂಗೆಯೇಳು ; ಬಂಡಾಯ ಎಬ್ಬಿಸು : ಭಾರತೀಯನೆಂದು ಮರ್ಯಾದಿತವಾಗಿ ಕೆಲವರು ತಿಳಿದುಕೊಂಡ ಸಂಸ್ಕೃತಿಗೆ ಬೌದ್ಧರೂ ಜೈನರೂ ತಂತಮ್ಮ ರೀತಿಯಲ್ಲಿ ಇದಿರುಬಿದ್ದಂತೆ ವೀರಶೈವರೂ ಸ್ವತಂತ್ರವಾಗಿ ಬಂಡು ಹೂಡಿದರು (ಶಪಾ. ೦೩); ನೀವೆಲ್ಲರು ಕೂಡಿ ಸನ್ನ

ಮೇಲೆ ಬಂಡುಹೂಡಿದರೂ ನಾನು ಈ ಮಾತು ಖಂಡಿತ ಸತ್ಯವೆಂದೇ ಹೇಳುತ್ತೇನೆ (ಗಾಳಗು. ೩೪). [←ಮರಾ. ಬಂಡ್, ಬಂದ್]

**ಬಂಡುಕೋರ**, ಬಂಡುಖೋರ (ನಾ). ೧. (ಸರ್ಕಾರ ಮೊದಲಾದ) ಆಡಳಿತಕ್ಕೆ ವಿರೋಧವನ್ನು ವ್ಯಕ್ತಪಡಿಸುವವನು ; ದಂಗೆಯೇಳು ವವನು ; ಬಂಡಾಯಗಾರ : ಹಲವಾರು ಬಂಡುಕೋರರು ಒಂದಾಗಿ ಆ ಜಮೀನ್ದಾರನ ಪುಂಡಾಟವನ್ನು ಅಡಗಿಸಿದರು (ಒಂಟಿ). ಬಂಡು ಖೋರ : ೧. ನಾರಣ್ಣನು ಬಂಡುಖೋರರ ಗುಂಪನ್ನು ಸೇರಿದ್ದನ್ನು ಕಂಡು ಅವನಿಗೆ ಸಖೇದ ಆಶ್ಚರ್ಯವಾಗಿತ್ತು (ಸವಾಲ್. ೬೬೦). (ಗು). ೨. ಬಂಡಾಯಪ್ರವೃತ್ತಿಯ : ಅವರಲ್ಲಿ ನಿಮ್ಮಂತೆ ಉಂಡಾಡಿಗತನ ವಾಗಲೀ ಬಂಡುಖೋರ ಮನೋವೃತ್ತಿಯಾಗಲೀ ಇರುವುದಿಲ್ಲ (ಮಾತೃಮ. ೨೦೦). [ಬಂಡು₄ + — ಕೋರ್. /ಮರಾ. ಬಂಡ್‌ಖೋರ್]

**ಬಂಡುಖೋರ** 'ಬಂಡುಕೋರ' ನೋ.

**ಬಂಡುಗ** (ನಾ). = ಬಂಡುಕೋರ ೧ : ನೆರೆ ಮುಳ್ಳು ತುಂಟವಸರ ಬಂಡುಗರೆಮ್ಮ ಹೊರೆಯೊಳಗಿರಬೇಡವೆಂದು ಪರವನವುಪ್ಪಗಳ್ಗೊಡಿಸೆ ಬೆಳ್ದಾಳೆಯರಲೊಪ್ಪಿದುವು ವನತಟದೆ (ಕಂಪಪು. ೩-೯೬). [ಬಂಡು₄ + — ಗ₂]

**ಬಂಡುಗಟ್ಟು** (ಕ್ರಿ). ದಂಗೆಯೇಳು : ಬಂಡಾಯ ಮಾಡು : ಕೆಲ ಬಕ್ರ್ರ್ಮ್ಮಕಣಗಮ್ರ್ಮರ್ಮ್ಮರಿವರಟೀಂ ಬಣ್ಣುಗಟ್ಟಿ (ಎಕ. VIII. ಸೊರಬ. ೦೫೨-೦೬ : 1380). [ಬಂಡು₄ + ಕಟ್ಟು₁₁]

**ಬಂಡುಗಾರ** (ನಾ). ೧. = ಬಂಡುಕೋರ ೧ : ಪೂಗಾರಗೊಲಿದ ಬಂಡುಗಾರ ಗೊಲ್ಲ (ಶಿಶಾಕ್ಕ. ೦೫೫-೩) : ಪುಂಡ ಪಾಳೆಯಗಾರಿಕೆಯ ಬಂಡು ಗಾರರನ್ನು ಬೆಳೆಯಿಸಿ ಕೊಡುವುದು ಯಾವ ದೃಷ್ಟಿಯಿಂದಲೂ ಹಿತವಲ್ಲ (ಚಿಕ್ಕವಂ. ೨೦). ೨. ಬದಲಾವಣೆಯನ್ನು ಬಯಸುವವನು ; ಕ್ರಾಂತಿಕಾರ : ಇಂದಿನ ಸಾಹಿತ್ಯದ ಬಂಡುಗಾರರೇ ನಾಳಿನ ಸಮ್ಮೇಳನದ ಅಧ್ಯಕ್ಷರಾಗುವವರು (ಮುಂಗಾರು. ೦೦೭). [ಬಂಡು₄ + — ಗಾರ (< — ಕಾಱ)]

**ಬಂಡುಗಾರಿಕೆ** (ನಾ). ದಂಗೆಯೇಳುವ ಪ್ರವೃತ್ತಿ : ಜೀವನದ ಆರಂಭ ದಲ್ಲಿಯೇ ಅವನು ತನ್ನ ಸ್ವಚ್ಛಂದವೃತ್ತಿಯ, ಸ್ವತಂತ್ರಬುದ್ಧಿಯ, ಉದ್ದಂಡ ಬಂಡುಗಾರಿಕೆಯ, ಪುಂಗುರುಹುಗಳನ್ನು ತೋರಿಸದೇ ಹೋಗಲಿಲ್ಲ (ಚಿವಾದ. ೦೯). [ಬಂಡುಗಾರ + — ಇಕೆ]

**ಬಂಡುಗೆಡೆ** (ಕ್ರಿ). ನಾಚಿಕೆಯಿಲ್ಲದ ಮಾತನ್ನಾಡು : ತೊಡನೆಕ್ಕಿ ಠವಾಳ ತನದಲಿ ಬಂಡುಗೆಡೆ[ಪಾಠಾಂ. ಭಂಡುಗೆಲೆ]ವುತ ಪಲುಹಣಿಯ ತಾಯ್ ವಿಂಡನಂ ಹೊಱವಡಿಸಿ (ಜಕಕೃ. ೪೨-೦೯) : ಕೆಂಡದ ಕೊಂಡವ ಮಂಡೆ ದೊನೆದು ಪೊಕ್ಕು ಬಂಡುಗೆಡೆವುತ ಕಳ್ಳುಡಿದು (ಜಕಕಾಂ. ೦೦-೬೪). [ಬಂಡು₃ + ಕೆಡೆ₂]

**ಬಂಡುಗೆಯ್** (ಕ್ರಿ). = ಬಂಡುಗಟ್ಟು : ನೀಂ ಕಂಡುವಂ ಕಂಡಂತೊರೆದು ಗಂಡನಲೆದು ಬಂಡುಗೆಯ್ದು ಸಬ್ಬವಂಗೊಳವೇಟ್ಟುದು (ಕಕಚಿ. ೬-೦೭೩ ಕ) : ಅವನೆಮ್ಮ ನಾಡೊಳ್ ದಾಟುಟ್ಟು ತುಱುಸೆಱೆಯೊಡನೆನ್ನಣುಗರಂ ಪಿಡಿದು ಬಂಡುಗೆಯ್ವು (ಕಕವಂ. ೦೪-೯). [ಬಂಡು₄ + ಕೆಯ್₁]

**ಬಂಡುಗೆಲೆ** (ಕ್ರಿ). = ಬಂಡುಗೆಡೆ : ಕೋಡಗನಂತೆ ಕಂಡಕಂಡವರಲ್ಲಿ ಪಿಂಡಿನೊಳಗೆ ಹೊಕ್ಕು ಬಂಡುಗೆಲೆಯಲೇತಕ್ಕೋ (ಪೂರ್ವಕಾ. ೦೬-೬೬) ; ಪುಂಡರೆಲ್ಲರ ಕೂಡಿಕೊಂಡು ಬಂ[ಪಾಠಾಂ. ಭಂ]ಡುಗೆಲೆವುತಮ್ಮ ಪವುಳಿಯ ಹೊಱಗೆ ಮಾಱಕೊಂಡಾಡುತಿರ್ದನುಬ್ಬಿನೊಳು (ಕರಾಕಾಂ. ೩೯-೩೦) ; ಪೋಟ ಪೊಂಡರಿಗೆ ಕುರುಡ ಕುಂಟರಿಗೆ ಬಂಡುಗೆಲೆವುದು ಸಹಜ (ಭೃಂಗಕು. I. ೯೬). [ಬಂಡು₃ + ಕೆಲೆ]

**ಬಂಡುಣ್** (ಕ್ರಿ). ಜೇನನ್ನು ಕುಡಿ ; ಮಕರಂದವನ್ನು ಹೀರು : ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂಡುಣ್ಬುವು (ಕಂಪಪು. ೩-೬೦) ; ಕೊಡುತಿರ್ಪ ರಥಾಂಗಂ ನಲಿದಾಡಿ ನರ್ತಿಪ ನವಿಲ್ ಬಂಡುಂಬ ಪೆಣ್ದುಂಬಿ (ಸುಕುಮಾ. ೦-೬೩) ; ಮಾಳತಿಯೊಳ್ ಬಂಡುಂಡ ಪಾದಾಳಿಯನಳಿಮಾಲೆ ಎಱಗಿ ಬಂಡುಣ್ಬವೊಲ್ (ಗಿರಿ. ೯-೦೩೨). [ಬಂಡು₃ + ಉಣ್]

**ಬಂಡುಣಿ** (ನಾ). ಹೂವಿನ ರಸವನ್ನು ಆಹಾರವಾಗಿ ಉಳ್ಳುದು ; ದುಂಬಿ : "ಅಲರ್ವಕ್ಕಿ, ಬಂಡುಣಿ, ಪಱಪೆ . . . ಪುಯ್ಯೆರಡಡಿ—ಈ ೭ ಭ್ರಮರಂ" (ಕಬಾಸ. ೩೩-೦೯೬) : ಬಂಡುಣಿಗಳಿಱವ ಮೈಗಂಪು ಸೊಗಸ ಲೊರ್ಪಿಳ್ಪಲೆ ಕಣ್ಗೆಸೆದಳು (ಶ್ರೀಂದಕ್ಕ. ೦೬-೩೪) : ರಾಜರಾಜಪ ಲೋಚನ ಕೈರವದೊಳು . . . ನೃಪತಿಯ ಚಾರುನಯನಪಾತಿಲಗ್ನಂಬಡೆದುವು ಬಂಡುಣಿಪಱಿಯಂತೆ (ಜಯಾಕಾ. ೩-೦೦) ; ಅವಳಾಡಿದ ನಾಲ್ಕಾರು ಇನಿ ಮಾತುಗಳನ್ನು ಅವನು ಬಂಡುಣಿಯಂತೆ ಆರ್ತಿಯಿಂದ ಹೀರಿದ (ಹುಂಕಾ. ೩೭). [ಬಂಡುಣ್ + — ಇ₃]

**ಬಂಡುಣಿಗುರುಳ್** (ನಾ). ತುಂಬಿಯಂತೆ ಕಪ್ಪಾದ ಕೂದಲು ; ಭ್ರಮರ ಕುಂತಳ : ಹರಿಣೆಗಣ್ಗಳ ಬಂಡುಣಿಗುರುಳ್ಗಳ ವರಪಿಕಾಲಾಪದ . . . ಆ ಲಲನೆಯನೀಕ್ಷಿಸಿದನು (ಕೃಶಂಕ. ೯-೦೯). [ಬಂಡುಣಿ + ಕುರುಳ್₁]

**ಬಂಡುಣಿವೆದೆಯ** (ನಾ). ತುಂಬಿಯನ್ನು ಬಿಲ್ಲಿನ ಹೆದೆಯಾಗಿ ಹೊಂದಿರುವವನು ; ಮನ್ಮಥ : "ಇಂಗೋಲ್ವಿಲ್ಲಂ, ಬಂಡುಣಿ ವೆದೆಯಂ . . . ಗಿಳಿದೇರಂ — ಇವು ೧೩ ಕಾಮದೇವಂಗೆ ಪೆಸರ್" (ಕಬಾಸ. ೪೭-೦೩) ; ದಿಂಡುದೊಡೆಯ ಪಿಂಡಿಯರ್ ಬಂಡುಣಿವೆದೆಯನ ದಂಡಾಳ್ಗಳೆನೆ ಪಿಂಡೆಟ್ಟಲ್ಲಿಗಲ್ಲಿಗೆ ಸಂಚರಿಸಿ (ರಾಜಶಾಕ್ಕ. ೦೨೨-೨೯). [ಬಂಡುಣಿ + ಪೆದೆ + — ಅ₇]

**ಬಂಡುಣಿಸು** (ನಾ). ಹೂವಿನ ಜೇನಿನ ಸೇವನೆ : ಕೆಂದಾವರೆಯ ಬಂಡು ಣಿಸಿಗಳಸಿಯ್ಯತಂದಿಹ ಮದಹಂಸೆಯಂತೆ (ಕಂಪಪು. ೯-೨೨). [ಬಂಡು₃ + ಉಣಿಸು₁]

**ಬಂಡುಬಾಳು** (ನಾ). = ಬಂಡಬಾಳು : ಆತ ತನ್ನ ಬಂಡುಬಾಳನ್ನು ನೆನೆದು ದುಃಖಿಸಿದನು (ಒಂಟಿ). [ಬಂಡು₃ + ಬಾಳು₂ (< ಬಾಟ್₂)]

**ಬಂಡುಮಾತು** (ನಾ). ನಾಚಿಕೆಯಿಲ್ಲದ ಮಾತು ; ಲಜ್ಜಾಸ್ಪದವಾದ ನುಡಿ: ಕಂಡ ನಾರಿಗಿಚ್ಛೈಸುವ ಲಂಡಗೆ ಪುರಾಣವೇಕೆ ಬಂ[ಪಾಠಾಂ. ಭಂ]ಡು ಮಾತಿನ ಕವಿಯ ಬಹುಪಾಂಡಿತ್ಯವೇತಕೆ (ಪುಕಂದ. ೦-೩೦-೩). [ಬಂಡು₃ + ಮಾತು₁]

**ಬಂಡುವೋಗು** (ಕ್ರಿ). ನಾಚಿಕೆಗೆ ಈಡಾಗು ; ಲಜ್ಜೆಗೊಳಗಾಗು : ಬಿತ್ತಲ್ಲದದು ಫಲದೊಳಱೊತ್ತಂಬ ನಾಣ್ನುಡಿಯಂತೆ ತಪದಿಂದಂ ಗುಣ ದಿಂದಂ ಪುರದೊಳ್ ಪಲವುದಿವಸಂ ಮೆಚ್ಚಾಗಿರ್ದಲ್ಲಿಯೆ ಬಂಡುವೋದೈ (ಧರ್ಮಾಮೃ. ೬-೦೨೬). [ಬಂಡು₃ + ಪೋಗು₁ (< ಪೋ₁)]

**ಬಂಡುಸೋನೆ** (ನಾ). ಜೇನಿನ ಮಳೆ : ಕಣ್ಮಲರ್ಗಳಿಂ ಸುರಿಯುವ ಬಂಡುಸೋನೆಗೆಣೆಯೊಂದಿದ ಕಣ್ಣನಿ (ಪ್ರಭುಲಿ. ೪-೩೪). [ಬಂಡು₃ + ಸೋನೆ₁]

**ಬಂಡುಳಿಕೆ** ? (ನಾ). (?) : ಕಾರ್ವಿಲ್ಲ ಪಳಿವ ಪುರ್ಬುಗಳೆಯ ಬಂಡುಳಿಕೆಗಳ ನಿಳಿಕೆಗೈವ ಸುಕ್ಕುಗುರುಳುಗಳೆಳದಾಡೆ (ಕುಕ್ಕಾಂಗ. ೩-೦೪). [?]

**ಬಂಡೆ₁**, ಭಂಡೆ₁ (ನಾ). ದೊಡ್ಡ ಗಾತ್ರದ ಕಲ್ಲು: ಆ ಕೆಱೆಯವೊಳಗಣ ಬಣ್ಡೆಯ × × × ದ ಕಂಡೇಶ್ವರದೇವರ ಅಮೃತಪಡಿ (ಎಕ. XII. ಮಧುಗಿ. ೦೦೬-೯ ; 1503) ; ಪ್ರವಾಹದಲ್ಲಿ ಈಜಿ ಶಕ್ತಿಗುಂದಿ ತೇಲಿಹೋಗು ತ್ತಿದ್ದೆ. ಈ ದಿನ ಬಂಡೆಯೊಂದು ಸಿಕ್ಕಿತು (ರಾಜಾಕ. ೦೦೦). **ಭಂಡೆ₁** : ಬಡಗಲು ಕಲ್ಲ ಭಣ್ಡೆಯ [ಬಟ್ಟೆ]ಯೇ ಮೇರೆ (ತಶಾಸ. XI–ii, ೦೪೦-೩೦ ; 1097) : ಬಡಗ ಯಿಶಾಣ್ಯ ಭಂಡೆದ ಗಡಿ (ಎಕ. VII. ಶಿಕಾಪು. ೦-೫೦೨ ; 1513). [ದೇ. ॥ ತೆಲು. ಬಂಡ]

**ಬಂಡೆ₂** (ನಾ). ಶೀಲವಿಲ್ಲದವಳು ; ಕುಲಟೆ : ರಂಡೆಗೆ ಗಂಡನಿಲ್ಲ ಬಂಡೆಗೆ ನೀತಿಯಿಲ್ಲ (ಗಾದೆ). 'ಭಂಡೆ₂' ಪರಾ. [ಸಂ. ಬಂಡಾ./ಪ್ರಾ. ಭಂಡೀ]

**ಬಂಡೆ₃** 'ಬಂಡು₂' ನೋ.

**ಬಂಡೆಕಲ್ಲು** 'ಬಂಡೆಗಲ್ಲು' ನೋ.

**ಬಂಡೆಗಲ್ಲು, ಬಂಡೆಕಲ್ಲು** (ನಾ). = ಬಂಡೆ₁ : ಕೊಪ್ಪಳದ ಹತ್ತಿರ . . . ಬಂಡೆಗಲ್ಲುಗಳ ಮೇಲೆ ಅಶೋಕನ ಶಾಸನಗಳು ಇರುತ್ತವೆಂದು ಇತ್ತೀಚೆಗೆ ತಿಳಿಯ ಬಂದಿದೆ (ಕರ್ನಾಟ. ೨) ; ಬಂಡೆಗಲ್ಲಿನ ನಿವೇಶನದಲ್ಲಿ ನೀರು ಬೇಗ ಹರಿದುಹೋಗುವುದು (ಗ್ರಕಾ. ೦೩೩). **ಬಂಡೆಕಲ್ಲು** : ಅಂಗಿ ವಸ್ತ್ರಗಳನ್ನು ನೊರೆಕಾಯಿ ಹಾಕಿ ಬಂಡೆಕಲ್ಲಿನಲ್ಲಿ ಒಗೆದಾಯಿತು (ಕೆಸ್ತೂ. ೯೬). [ಬಂಡೆ₁ + ಕಲ್ಲು (<ಕಲ್₃)]

**ಬಂಡೆಬ್ಬಿಸು** (ಕ್ರಿ). = ಬಂಡುಗಟ್ಟು : ನಿಂದ್ಯವಾದ ಸಂಗತಿಗಳ ವಿರುದ್ಧ ಬಂಡೆಬ್ಬಿಸುವ ಧೈರ್ಯವು ನಮ್ಮ ಜನಕ್ಕೆ ಬರುವವರೆಗೆ ದೇಶದ ಉದ್ಧಾರ ವಾಗಲಾರದು (ಜ್ಞಾಕುಶಾ. ೨೩) ; ಇಡೀ ದೇಶದ ಭ್ರಷ್ಟರ ದಳವು ಬಂಡೆಬ್ಬಿಸಬಹುದು (ಹೋಕಾ. ೯೯).

[ಬಂಡು₄ + ಎಬ್ಬಿಸು (< ಎಟ್ಟಿಸು)]

**ಬಂಡೇಳು, ಬಂಟೇಳು** (ಕ್ರಿ). = ಬಂಡುಗಟ್ಟು : ಬಂಡೆದ್ದು ಗಿರಿಪಟ್ಟ ನೆರೆ ಸೂರೆಹೋದಾವು (ಎಜಾಜಾ. ೦೨೩-೦). **ಬಂಟೇಳು** : ಎಂಟುಸಾವಿರ ದೈನಜುಬ್ಬರನಗಿಲ್ಲಿ ನಾಂಟರುತಿಹ ಪಕ್ಷದವರು ಉಂಟು ನಿಮಗೆ ಲಕ್ಷಪಕ್ಷ ನೀವದಜೆುಂದ ಬಂಟೆದ್ದಿರೆಂದನಾ ಚಕ್ರಿ (ಕರಿಕ. ೯೩-೨೨).

[ಬಂಡು₄ + ಏಳು₁ (< ಏಳ್₁)]

**ಬಂತಿ** 'ಪಂತಿ' ನೋ.

**ಬಂತಿಗಟ್ಟು** 'ಪಂತಿಗಟ್ಟು' ನೋ.

**ಬಂತಿದಲೆಯ** (ನಾ). ಸಾಲು ತಲೆಗಳುಳ್ಳವನು ; ದಶಕಂಠ ; ರಾವಣ : ಇಂತು ಬಂತಿದಲೆಯಂ ಚೆಲ್ಲಣಮನಿಟ್ಟು, ದಟ್ಟಿಯಂ ಬಿಗಿದು . . . ಪೊಜಮಡುವುದುಂ (ಅದ್ಭುತ. ೯೩-೦೬).

[ಬಂತಿ (< ಪಂತಿ) + ತಲೆ₁ + – ಅ₁]

**ಬಂತಿದೇರ** 'ಪಂತಿದೇರ' ನೋ.

**ಬಂದ್** 'ಬಂದು₂' ನೋ.

**ಬಂದ₁** 'ವರ್' ಪರಾ.

**ಬಂದ₂** 'ಬಂದು₂' ನೋ.

**ಬಂದಂಬಿಡು** (ಕ್ರಿ). ಬಂಧನವನ್ನು ತೊರೆ ; ವ್ಯಾಮೋಹವನ್ನು ತ್ಯಜಿಸಂ : ಮನಸಂ ಸ್ಥಿತಿಟ್ಟು ಬಾಟ್ಸ್ಗಾಸೆಯಿಂ ಬಂದಂಬಿಟ್ಟು ವಿಮೋಹವಮಂ ಬಿಸುಟು ಕಣ್ಣಂ ಮುಚ್ಚಿ (ಧರ್ಮಾಮೃ. ೯-೫೨).

[ಬಂದ₂ (<ಬಂದು₂) + ಬಿಡು₁]

**ಬಂದಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ . . . ಬಿಜ ಯಿತಗಾವುಣ್ಣನುಂ ಬನ್ನಗಾವುಣ್ಣನುಂ (ಎಕ. XI. ಹೊಳಲ್ಕೆ. ೩೦-೦೦; ೯೬೪).

[ಬಂದ₄ + ಗಾವುಂಡ (<ಗಾಮುಂಡ)]

**ಬಂದಣಿಕೆ, ಬಂದಣಿಗೆ, ಬಂದನಿಕೆ, ಬಂದನಿಕ್ಕಿ, ಬಂದರಿಕೆ, ಬಂದಲಿಕೆ, ಬಂದಳಿಕೆ, ಬಣತಿಗೆ, ಬತಣಿಕೆ, ಬದಣಿಕೆ, ಬದನಿಕೆ, ಬಿಂದಣಿಕೆ** (ನಾ). ೧. ಬೇರೊಂದು ಸಸ್ಯವನ್ನು ಅವಲಂಬಿಸಿ ಜೀವಿಸುವ ಸಸ್ಯ ; ಪರಾವಲಂಬಿಸಸ್ಯ : ಎಲವದ ಬಂದಣಿಕೆ ಯನಿಂತಲಸದೆ ಕುಡಿಸಲ್ಕೆ(ಲ್ತೆ) ನಾಯ ವಿಷಮಟಿಗುಂ (ಏಮದ. ೦೩-೩೩) ; ಅಶ್ವತ್ಥವೃಕ್ಷದಲ್ಲಿ ಅವಲವನಾದರೂ ಅದರ ಬಂದಣಿಕೆಯನಾದರೂ ಶುಭದಿನದಲ್ಲಿ ತಂದು ಹಾಲಲ್ಲರೆದು ಋತುಸ್ನಾತೆಯಾದ ಸ್ತ್ರೀಗೆ ಕುಡಿಯ ಕೊಡಲು ಗರ್ಭ ನಿಲ್ಲುವುದು (ಕೃಕಶಾ. II. ೯೯) ; ತನ್ನಂಥ ನಿಸರ್ಗವಿರೋಧಿವ್ಯಕ್ತಿಯ ಕತ್ತಿಗೆ ಆ ಬಳ್ಳಿಯೇ ಬಂದಣಿಕೆಯಾಗಲೂ ಬಹುದು (ಜಾಕ್ಕರ್ಕ. ೩೦೩). ೨. ಒಂದು ಬಗೆಯ ಪರಾವಲಂಬಿಸಸ್ಯ ; ಜೀವಂತಿಕೆ : "ಬಂದಣಿಕೆ, ಜೀವಂತಿಕೆ, ವೃಕ್ಷರುಹೆ, ವಂದೆ, ವೃಕ್ಷಾದನಿ" (ಅಕಾ. ೯). ೩. ಒಂದು ಸ್ಥಳದ ಹೆಸರು : ಬನ್ದಣಿಕೆಯ ಸತ್ಯಜಿರ ನಾಗಾರ್ಜುನ ನಾರ್ಗ್ಗ ವುಣ್ಣಗೆಯ (ಎಕ. VIII. ಸೊರಬ. ೨೩೯-೬; ೯೯೯); ಒಂದಿರುಳೊಳ್ಳನುವರಂ ತಂದಿಕ್ಕಿದ ಪುಷ್ಪಮಾಲೆ ನಿಮಿರ್ದುದು ಪಾದಕ್ಕೆಂದೊಡೆ ಭುವನಕ್ಕಚ್ಚರಿ ಬಂದಣಿಗೆ[ಜಾಶಾಂ. ೪೬]ಯ ಶಾಂತಿನಾಥತೀರ್ಥಾತಿಶಯಂ (ಸುಕುಕ. ೨-೩೦).

**ಬಂದಣಿಗೆ** : ೧. ಲೊಕ್ಕಿಯ ಬಂದಣಿಗೆಯುಮಂ ಚಕ್ಕನೆ ಪೊಸಲಿಲ್ಲ ದಿರ್ದೋರ್ದೆರ್ಕೆಯ ಪಾಲಂ ಪೊಕ್ಕಿರಲೆಟಿ ನಿಬಿಡವೆನಲ್ ಸಿಕ್ಕಿದ ಮುಳ್ಳಲಗು ಪಾದದಿಂ ಪೊಱಮಡುಗುಂ (ಏಮದ. ೨-೨೦೬). ೨. "ಪರರೋಹಿಣೀ – ಬಂದಣಗೆ(ಕೆ)" (ಓಶಂ. ೯೩). **ಬಂದನಿಕೆ** : ೩. ಬಲ್ಲ ಬನ್ದು ಬನ್ದನಿಕೆಯ ತೀರ್ಥ್ಥದೊಳ್ಪೊಱದುದಚ್ಚರಿಯಂ (ಎಕ. VII. ಶಿಕಾ. ೨೦೯-೨೫; ೯೧೮).

**ಬಂದನಿಕ್ಕಿ** : ೩. ಬನ್ದನಿಕ್ಕಿಯ ನಟ್ಟಮುಣ್ಡರ್ ತವ್ಮ್ಮೊಳೆಟಿಯ (ಎಕ. VIII. ಸೊರಬ. ೩೬೦-೨; ಸು. ೧೬೦ ೧). **ಬಂದರಿಕೆ** : ೨. ಬಂದರೆ; ಬಂಡಾರ, ಹಂಗರಿಕೆ, ಬಂದರಿಕೆ (ವೃಕ್ಷಶಿ. ೩೨-೬೦೮). **ಬಂದಲಿಕೆ** : ೧. ಗಂಡಸು ಗೆಲಸಬೇಕು. ಪೆರಸೈಟ್ (ಬಂದಲಿಕೆ)ನ ಹಾಗೆ ಬದುಕಬಾರದು (ಅದುಕ. ೨೩೦). ೩. × × × ವಮಾಸ ಸುದ್ಧ ಗುರು ಈ ದಿನದ ಹುಣ್ಣಾವಿಗೆ ಬನ್ದಲಿಕೆಯಾಗಿ ಕೊಡಕಣಿಯ ಬಡಗಿ ಸಾದೋಜನ ಕಳ್ಳರು ಕಾಗಿ ತಳಿದ್ದುರ್ಗ ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೦೬-೩; 1371). **ಬಂದಳಿಕೆ** : ೧. ವಿಜಯನಗರದ ಪ್ರೌಢ ದೇವರಾಯನ ಕಾಲದ ನೂರೊಂದು ವಿರಕ್ತರ ತರುವಾಯ ಶರಣಸುರ ಭೂಪವನಕ್ಕೆ ಮತ್ತ ಬಂದಳಿಕೆ ಬಂದಿತು (ಕರಿಕ. ೬೦೭); ಮಾನವು ಗದ್ದಲು ಒಲವಿನ ವೃಕ್ಷಕೆ ಜಾಡಿಯ ಮಾತು ಬಂದಳಿಕ (ಕಂರ್ರಕೀ. ೦೦೨-೯೩). ೨. "ವಂದಾ – ಬಂದಳಿಕೆ" (ಓಶಧ. ೦೯೩). ೩. ತತುಸಮಯುಲ್ಲಿ ಬಂದಳಿಕೆಗೆತ್ತಿ ನಡೆದಲ್ಲಿ (ಎಕ. VII. ಶಿಕಾ. ೦೬೦-೨; ಸು. 1160). **ಬಣತಿಗೆ** : ೧. ಒಣಗಿದ ಮರ ಎಲೆಯಿಲ್ಲದ ಬಳ್ಳಿ ಬಣತಿಗೆ ಪುಟ್ಟದ ವನದಲ್ಲಿ [ಜಾಶಾಂ. ಒಣಗಿದ ಮರದಲಿ ಇಲ್ಲದ ಬಳ್ಳಿ ಬಣತಿಗೆ ಹುಟ್ಟಿದವನ ತಳ್ಳಿ] (ಕೆಶಂದ. ರಾ. ೯-೦೯-೩). **ಬತಣಿಕೆ** : ೨. "ವಂದಾ, ವೃಕ್ಷಾದನಿ:, ವೃಕ್ಷರುಹಾ, ಜೀವಂತಿಕಾ — ಈ ೪ ಬತಣಿಕೆ" (ಚಾತಶಾ. ೦೦೯). **ಬದಣಿಕೆ** : ೧. ಎಲೆಯ ದೆಲೆಯ ಬದಣಿಕೆಯಂ ಭರಣಿನಕ್ಷತ್ರದಲ್ಲಿ ತಂದು ಕೈಗೆ ಕಟ್ಟುವುದು (ಸಕಲ. ೦೨೦). **ಬದನಿಕೆ** : ೧. ಇನ್ನೊಂದು ವರ್ಗದ ಗಿಡಗಳು ಬದನಿಕೆಯಂಥವು (ಜಾಂತ್ರ. I. ೩೦೩); ಗಿಡಕ್ಕಂಟಿದ ಬದನಿಕೆಯಂತೆ ಬೆಳೆಬೆಳೆದು (ಹುಕ್ಷಾ. ೩). ೨. "ಬದನಿಕ (ಬಂದಣಿಕೆ) – ವಂದಾಕಾ" (ಕದ್ಯಕೋ. ೨೪) ; "ಕಳುಬಳ್ಳಿ, ಅವರಬಳ್ಳಿ, ಬದನಿಕ . . . ಶಾವಿಗಬಳ್ಳಿ" (ಸಕ್ಕ. ೪೩): ೪. ಒಂದು ಬಗೆಯ ಗಿಡದ ಬೇರು : ಇಟ್ಟ ಕಣ್ಣಿನ ಬೊಟ್ಟು . . . ವಸುರಿನ ಬಟ್ಟ ಗುಪ್ಪಸ . . . ಮೆಟ್ಟದೆಕ್ಕಡ ತೋಳ ಬದನಿಕೆ ತೊಟ್ಟ ಮಾಂದಳಿರೆಲೆಯ ಚಲ್ಲಣ ದಿಟ್ಟಗಚ್ಚರಿದೋರೆ ಬಂದರು . . . ಶಬರಕೋಟಿಗಳು (ಅವಂಶಾ. ೩-೩-೩). **ಬಿಂದಣಿಕೆ** : "ಮಾರತರುಹವ್ಮನಲು ಬಿಂದಣಿಕೆ [ಜಾಶಾ. ಮಾರತರುತರುಹವನೆ ಬಂದಣಿಕೆ]ಯಕ್ಕು" (ಶುಂಗರಾ. ೯೩-೯೦).

[<ಸಂ. ವಂದಾಕ, ವಂದಾಕಾ, ವಂದಾಕೀ./ತುಳು. ಬಂದಣಿಗೆ, ಬಂದನಿಗೆ; ತೆಲು. ಬದನಿಕ, ವದನಿಕ]

**ಬಂದಣೆಗೆ** 'ಬಂದಣಿಕೆ' ನೋ.

**ಬಂದನಿಕೆ** 'ಬಂದಣಿಕೆ' ನೋ.

**ಬಂದನಿಕ್ಕಿ** 'ಬಂದಣಿಕೆ' ನೋ.

**ಬಂದಮಿಣಿ** (ನಾ). ಕಾಲಿಗೆ ಕಟ್ಟಿಕೊಳ್ಳುವ ಹಗ್ಗ : "ಬಂದಮಿಣಿ– ಈಳಿಗರ ಈಚಲಗಿಡ ಏರುವ ಸರಹಗ್ಗ" (ಜಾವಕೋ. ೨೦).

[ಬಂದು₂(<ಬಂದು₂) + ಮಿಣಿ₂ (<ಮಿಳ್ಳೆ₂)]

**ಬಂದರಿ** 'ಬಂದಾರಿ' ನೋ.

**ಬಂದರಿಕೆ** 'ಬಂದಣಿಕೆ' ನೋ.

**ಬಂದರು** (ನಾ). ಕರಾವಳಿಯಲ್ಲಿ ಹಡಗಿನಿಂದ ವಸ್ತುಗಳನ್ನು ಇಳಿಸುವ ಹಾಗೂ ಹಡಗಿಗೆ ತುಂಬುವ ಸ್ಥಳ; ಹಡಗುನಿಲ್ದಾಣ; ರೇವು: ಹಡಗುಗಳು ನಿಲ್ಲುವುದಕ್ಕೆ ಬೇಕಾಗುವ ಆಳವುಳ್ಳ ಬಳಿಯಲ್ಲಿರುವಷ್ಟು ಅನುಕೂಲವಾದ ಮತ್ತು ವಿಸ್ತಾರವಾದ ಬಂದರು ಇಂಡಿಯಾದಲ್ಲಿ ಎಲ್ಲಿಯೂ ಇಲ್ಲ (ಕೂಗಿಊಳ.೬೨); ಪರವೂರುಗಳಿಂದ ಬಂದ ಮಂಜಿಗಳು ಊರ ಬಂದರಿನಲ್ಲಿ ತಂಗುವುದು ಸ್ವಾಭಾವಿಕ (ಚಾಹುಕ್ತ.೩೬).

[←ಪಾರ., ಹಿಂ. ಮರಾ. ಬಂದರ್]

**ಬಂದರೆ** 'ಬಂದಾರಿ' ನೋ.

**ಬಂದರಿಕೆ** 'ಬಂದಣಿಕೆ' ನೋ.

**ಬಂದಳ** (ನಾ). ಅಗಲಬಾಯಿಯ ಪಾತ್ರೆ: ಬಂದಳ ಸೋರೆ ಲರಗ ಹರವಿಯು ಮೊಗೆ ಬಿಂದಿಗೆ ಗಡಿಗೆ ಗುಡಾಣ (ಅಕುಬಾ. ೩-೦೩೨).

[←ತೆಲು. ಬಂದಳ, ಬಂದಲ, ಬಂದಡು]

**ಬಂದಳಿಕೆ** 'ಬಂದಣಿಕೆ' ನೋ.

**ಬಂದಾ** (ನಾ). ಚಿಲ್ಲರೆಯಲ್ಲದುದು: ಈ ಚಿಲ್ಲರೆ ಕೊಟ್ಟು ಬಂದಾ ತೆಗೆದುಕೊಂಡು ಬಾ (ಜೂ). [←ಪಾರ. ಬಂದ್ : ಮರಾ. ಬಂದಾ]

**ಬಂದಾರಿ, ಬಂಡಾರೆ, ಬಂದರಿ, ಬಂದರೆ, ಬಂದುರೆ** (ನಾ). ೧. ಒಂದು ಬಗೆಯ ಮರ: ಬೆಲ್ಲವತ ಬಂದಾರಿ ಸಾವೇರಿಯುಂ ತಡಸು . . . ತಾಱ ಬೋರೆಗಳೆಸೆದವು (ಕಂಠಿಪು. ೦೩-೦೩). **ಬಂಡಾರೆ:** ೨. ಒಂದು ಬಗೆಯ ಗಿಡ: ಬಂದರೆ, ಬಂಡಾರೆ, ಹಂಗರಿಕೆ, ಬಂದರಿಕೆ (ವೃಶಿಗ. ೩೨-೩೦೬). **ಬಂದರಿ:** ೨. ಅಲ್ಲಿಂದಂ ಮೂಡಲು ಬಂದರಿಗಿಡುವಿನ ಹಿಟ್ಟುಗಲ್ಲು ಬಂಡೆ (ಶಾಇ. IX-ii, ೩೩೩-೨೯; 1531). **ಬಂದರೆ:** ೨. 'ಬಂದಾರೆ' ಉಲ್ಲೇಖದ 'ಮೈಟಿಗಿ. ೩೨-೬೧೮' ಪ್ರಯೋಗವನ್ನು ನೋಡಿ. **ಬಂದುರೆ:** ೨. (ವೃಶಿಗ. ೩೦-೦೨೦೩).

[←ತೆಲು. ಬಂದಾರು, ಬಂಡಾರು. / ಮರಾ. ಬಂದಾಟೀ]

**ಬಂದಿ**$_1$ (ನಾ). ೧. ಸೆರೆ; ಬಂಧನ; ಕಟ್ಟು: ಎನಗಿಂದಿಂಗಾಱುತಿಂಗಳ್ ಸಮನಿಸಿದವುದಿಲ್ಲಿಲ್ಲಿಯುಂ ಬಂದಿಮಾಂಬರ್ (ಶಾಶುಚ. ೬-೦೬); ಅಗ್ಗಳದ ಬಾಣದ ಬಂದಿಯಲಿ ಸಿಲುಕಿತ್ತು ರಿಪುಸೇನೆ (ಕುಮ್ಯಾದ್ರೋ. ೦೯-೩೫): ರಾಘವಂ . . . ದೇವರ್ಕಳ ಬಂದಿಯಂ ಬಿಡಿಸಿ . . . ಅರಸುಗೆಯ್ಯುತಿರ್ದಂ (ಚಜಾಕ್ಯ. ೦೬-೦೬). ೨. ಸೆರೆಮನೆ; ಬಂದೀಖಾನೆ; ಜೈಲು: ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ ಬಂದಿಕಾರಾ ಶ್ರಾವಣಾ (ಗಂಗಾತ. ೩೬-೨). ೩. ಹತೋಟಿ; ಹಿಡಿತ; ಅಂಕೆ: ತಪಸ ಮಾಡಿ ವಿಕಾರಂಗಳು ಬ್ರಹ್ಮಂಗೆ ಬಂದಿಯಾಸಿಕ್ಕಿದರು ಬಳಿಕ (ಕುವ್ಯಾ. ೬-೦೩); ಮಾಯಾಗುಣವಿಕಾರದ ಬಂದಿಯಲಿ ತಲೆ ಸಿಲುಕಿ ನರಕವಲಾಳುತಿಹರು (ತಿಭಾಗ. ೯-೯-೨೩). ೪. ಸೆರೆ ಸಿಕ್ಕಿದ ವ್ಯಕ್ತಿ; ಸೆರೆಯಾಳು: ಭೂನಾಯಕಂ ಬಿಡಿಸೆ ಬಿಟ್ಟ ಬಹು ಬಂದಿಯಿಂ ಕರವೆ . . . ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಶ್ವ.೯-೭ ರಗಳೆ); ಬಂದಿಯ ಹಿಡಿದಾತನ ತಂದೆಯ ತಲೆ ಹೋಹುದೆಂದು ಒತರಾಚಾರವೆಂದು ವೃಥಾ ಸಾವನೇ (ಶರಶ. ೦೬೩-೬೬೬); ನೀನು ಇಲ್ಲಿ ಬಂದಿ ಎಂಬುದನ್ನು ಅರಿತಿರುವಿಯಾ? (ಬೇಂಶ್. ೯೩). ೫. ಸೆರೆಹಿಡಿಯುವವನು: "ಪ್ರಗ್ರಹಃ, ಗ್ರಾಹಕಃ, ವಂದೀ – ಈ ೩ ಬಂದಿ" (ಹರಾಹು. ೦೨೩-೬೯). ೬. ತಡೆ; ಅಡ್ಡಿ; ಪ್ರತಿಬಂಧ: (೯). ೭. ಕೊಳ್ಳೆ; ಲೂಟಿ; ಸೂರೆ: ಅಳಿಗಳ ದಳವುಳಂ ಬಸಂತನ ಬಂದಿ ಬಾಲಚೂತನ ಭಯಂ ಮಳಯಾನಿಳನ ಗಾಸಿ (ಗಂಶ. ೯-೦೦೬ ವ); ಕಳವು ಹುಸಿ ಹಾದರ ವಿರೋಧ ಸ್ಫುರಿತವಾಜಿಡಿ ಬಂದಿ ಪಳದುಳ ಬೆಳಗುವತೆಯನ್ಯಾಯ . . . ಅಡಗಿದವೀ ಯುಧಿಷ್ಠಿರ ನೃಪನ ರಾಜ್ಯದಲಿ (ಕುವ್ಯಾಸ. ೬-೦೦); ಕಿಸುರು ಗಾವಳಿ ಬಂದಿ ಗಳಹತನ ಮಾವಿವೇಕವುಸಿರಲೇನಾ ಚಿನ್ನಬಸವನಿಹ ರಾಜ್ಯದೊಳ್ ವಿಸುಕಿ ವೇವಣ್ಣಸುವನು (ಚಿಶ್ಚ.೬-೯೦). ೮. ತೋಳಿಗೆ ಧರಿಸುವ ಒಂದು ಬಗೆಯ ಆಭರಣ: ವಂಕಿ: ನವರತ್ನದ ರಚೆಯಾದ ಬಂದಿ ವಿರಾಜಿಸು ತಿರ್ಪುದಪ್ಪಿಯಗಜೆಯ ತೋಳೆಂ (ಗಂಶ. ೩-೮೩); ಕಡಗ ಕಂಕಣ ಸೂಡಗ ಹೊನ್ನ ಬಳೆ ಬಂದಿ ಖಡೆಯ (ಕಜಾಕಾಂ. ೦.೦೦೬): ಇರೋದು ನಾಗರ ಕುಚ್ಚು, ಈ ಬಂದಿ (ಕುಂಶಿಪು. ೩೮). ೯. ಕತ್ತಿನಲ್ಲಿ ಧರಿಸುವ ಒಂದು ಬಗೆಯ ಸರ: ನಾ ತೂಗಿ ಬಾಗಿ ನೀರು ಮೊಗೆದ ಮೂವಯ್ಯ ಕೊಂಡಿ ಸಮೆದು ಬಂದಿ ಬಿತ್ತು ಕೂವಯ್ಯ (ಜಾನಪು. ೫೩೯); ಕತ್ತಿನಲ್ಲಿ ಅಡ್ಡಿಕೆ, ಅಸಲಿ, ಬಂದಿ, ಜೋಮಾಲೆ (ಪುಶ್ಚ. ೯೦). [ಸಂ. ಬಂದಿ, ಬಂದೀ]

**ಬಂದಿ**$_2$ (ನಾ). ೧. ಹೊಗಳುಭಟ್ಟ; ಸ್ತುತಿಪಾಠಕ: "ಬಂದಿ–ವಂದಿನ್– ಸ್ತುತಿಪಾಠಕ" (ಕನ್ನಕೋ. ೨೯). ೨. ಹೊಗಳಿಕೆ; ಕೊಂಡಾಟ: ಅಗ್ಗಳಿಕೆ ಮಾಳಿಸು ಮುಖದಲಿ ಮೋಡಿ ಬಂದಿ ಭಾರಣೆ ಬಿಂಕ ಚೆಲು ಚಮತ್ಕಾರಂಗಳಿಂದ ಸಮವಾಗೆ ಕೈದೋಱಿದಂ ವೃಷಕೇತು ಬಭ್ರುವಾಹನನ ಮೇಲೆ (ಜೈಭಾ. ೨೩-೦೩). 'ವಂದಿ'$_1$ ಪರಾ.

[ಸಂ. ಬಂದಿನ್, ವಂದಿನ್]

**ಬಂದಿಕಾರ** 'ಬಂದಿಗಾಱ' ನೋ.

**ಬಂದಿಕಾಱ** 'ಬಂದಿಗಾಱ' ನೋ.

**ಬಂದಿಕಾಱತನ** (ನಾ). ಬಂಧನದಲ್ಲಿಡುವ ಗುಣ: ಕೊಂದು ಕುಟ್ಟಿ ದಂಡವ ತಕೊಂಬುವಂಗೆ ಅದು ಬಂದಿಕಾಱತನವೊ ಕೃಪೆಯೋ ಇದ ಬಂದವ ತಿಳಿಯಬೇಕು (ಷೋಪು. ೦೫೬-೫೦೬).

[ಬಂದಿಕಾಱ (<ಬಂದಿಗಾಱ) + – ತನ]

**ಬಂದಿಕೋಲು** 'ಬಂದಿಗೋಲ್' ನೋ.

**ಬಂದಿಖಾನ** 'ಬಂದೀಖಾನೆ' ನೋ.

**ಬಂದಿಖಾನೆ** 'ಬಂದೀಖಾನೆ' ನೋ.

**ಬಂದಿಗಟ್ಟಿಸು** (ಕ್ರಿ). ತಾಳಿಯಿರುವ ಬಂದಿಯನ್ನು ಕೊರಳಿಗೆ ಕಟ್ಟುವಂತೆ ಮಾಡು: ಮದುವೆಮಾಡು: ಇಲ್ಲಿಗಾವ್ತರನಟ್ಟಿ ಬಂದಿಗಟ್ಟಿಸನು ತನ್ನಲ್ಲಿಗೆ ಬರಲೆಂಬನವನ್ನು ಇಲ್ಲಿ ತನ್ನಂಗಲವಸಗಿದರರದೆ ಸಾಕು ಸಲ್ಲೀಲೆಯೊಳಗೀವೆನೆಂದ (ಜಶ. ೩೬-೫೮). [ಬಂದಿ$_1$ + ಕಟ್ಟಿಸು]

**ಬಂದಿಗಟ್ಟು** (ಕ್ರಿ). ೧. ತಾಳಿಯಿರುವ ಬಂದಿಯನ್ನು ಕೊರಳಿಗೆ ಕಟ್ಟು: ಮದುವೆಯಾಗು: ಕರಮೆಸೆವ ಸಾಕೇತನಗರದ ದೊರೆ ಸುರಥನಿಗೆ ವಜ್ರರೇಖೆಗೆ ನೆಱ ಜನಿಸಿಯ ಸನತ್ಕುಮಾರಗೆ ಬಂದಿಗಟ್ಟಿರ್ದ ತರುಣಿ ತಾನು ಸುನಂದೆ (ಶಕಚ. ೬-೦೩). ೨. ಮದುವೆಯನ್ನು ಮಾಡಿಸು: ಇವಳಿವನಿಗೆ ತಕ್ಕವಳಿವನಿವಳಿಗೆ ವಿವರಿಸೆ ತಕ್ಕವನೆಂದು ತವೆ ಪೂಗ್ಗೊಲ್ಲರೊಸೆದು ನಿನಗೆನ್ನನುತ್ಸವದೊಳು ಬಂದಿಗಟ್ಟಿದರು (ಕುಶಾಕಾಂ. ೨೬-೦೦೫).

[ಬಂದಿ$_1$ + ಕಟ್ಟು$_2$]

**ಬಂದಿಗಾವಲು** (ನಾ). ಸೆರೆಮನೆಯ ಕಾವಲು; ಜೈಲಿನ ಕಾವಲು: ಮುಂದಣ ಮೆಯ್ಯಾಗಿಹಿಗೊಂದನ್ನು ಕಯ್ಯುವೀಸಿ ಹೊರನಡೆಯಿಸಿ, ಬಂದಿಗಾವಲರಿಗೆ ಕ್ಷೀಣಸ್ವರದಿಂದ ಬೆಸಗುಡುತ್ತಿರುವನು (ಕುಂಶ್ರಕ. ೦೨೬-೦೬).

[ಬಂದಿ$_1$ + ಕಾವಲು (< ಕಾವಲ್$_1$)]

**ಬಂದಿಗಾಱ, ಬಂದಿಕಾರ, ಬಂದಿಕಾಱ** (ನಾ). ೧. ಬಂಧಿಸುವವನು; ಸೆರೆಹಿಡಿಯುವವನು: ನೊಂದೆವಾಗಿ ದೇವ ಸುರಕುಲಬಂದಿಗಾ[ಜಾಕಾಂ. ಕಾ]ಱನ ಕೈಯುಲಕಟಾ (ಕೂಕಾ. ೦-೯-೫೩); ಅದೇಂ ಚೆಲುವಡೆದತ್ತೊ ಚಿತ್ರಭವನಂದದ ಬಂದಿಗಾಱನಾ (ಶಳಿ. ೫-೭). ೨. ಸೂರೆ ಮಾಡುವವನು; ಕೊಳ್ಳೆಗಾರ: ಮುಂದುಂ ಹಿಂದುಂ ಸಂಧಿಸಿದ ಬಂದಿಗಾಱರ ಗೊಂದಣಮುಮಂದಿಪ (ಚಾಪುಕ್ಕ. ೯೦-೨೯). **ಬಂದಿಕಾರ:** ೩. ಜೈಲಿನ ಮೇಲಧಿಕಾರಿ: ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ ಬಂದಿಕಾರಾ ಶ್ರಾವಣಾ

(ಗಂಗಾಕ. ೩೭-೨). **ಬಂದಿಕಾಟಿ:** ೧. ಬಂದಿಕಾಱನಂತೆ ತೆಱಪುವಾರ್ದು ಪಿಡಿವ ಶಾಕಿನಿಯರಿಂ . . . ರಣದೇವತೆಯರಿಂದತಿಭಯಂಕರಾಕಾರವಪ್ಪುದು (ಕಾವ್ಯಸಾ. ೩೨೯ ಕೊದ್ಯ೪); ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ (ಕಂಕಣ. ೬-೬೨ ವ) ; ಬಂದು ಕಂಡರು ಮೇಲವರಾ ಕುದುರೆಯ ಬಂದಿಕಾಱನನು ಬೇಗದೊಳು (ಕುಶಾಕಾ. ೯-೬೪). ೨. ಸಂದ ಸುಭಟರು ಬನ್ನಿ ಸ್ವರ್ಗದ ಬಂದಿಕಾಱರು ಬನ್ನಿ (ಕುವ್ಯಾ.೪. ೮-೩೦). ೩. ಕಳ್ಳ; **ತುಡುಗ:** ಕುತ್ತಿನ ಕುಮಂತ್ರದ ಬಂದಿಕಾಱನು ಚಾಟು ಚವಳಿಗನೆಂದು ನಾ ಮುಂದಱಿಯೆ (ಕೃಕೋ. ೬-೫೩) [ಬಂದಿ$_1$ + —ಕಾಱ]

**ಬಂದಿಗೃಹ** (ನಾ). ಸೆರೆಮನೆ ; ಕಾರಾಗೃಹ ; ಜೈಲು : ನನ್ನನ್ನು ಪತ್ತೆ ಹಚ್ಚುವ ಹಂಚಿಕೆ ನಿಮಗೆ ಸಿಗುವಂತಿದ್ದರೆ, ನೀವು ಈ ಪ್ರಕಾರದ ಬಂದಿಗೃಹ ರಕ್ಷಕನ—ಜೇಲರನ ಚಾಕರಿಗೆ ನಿಲ್ಲುತ್ತಿರಲಿಲ್ಲ (ಅಂಬಿ. ೨೯). [ಸಂ.]

**ಬಂದಿಗೆ** (ನಾ). ೧. ಆಯುಧದ ಹಿಡಿ : ಕಾವಿಲ್ಲದ ಕೊಡಲಿವಿಡಿವೆನೆಂಬಂತೆ ಬಂದಿಗೆಯಿಲ್ಲದೆ ಸುರಿಗಿವಿಡಿವೆನೆಂಬಂತೆ . . . ದೆಸೆಗೆಡಲ್ವೇಡ (ಶಶಾಸಮ್ಮ. ೯-೩೦). ೨. ಹಿಡಿಯುಳ್ಳ ಆಯುಧ,— ಕತ್ತಿ: ಮಡಿಸಿದ ಶೇಷನ ಬಂದಿಗೆ ಮಾರಿಯ ಮಂಡೆಯು ನಡುಘಳಿಗೆಯು ಮೃತ್ಯುವಿನೊಳನರವುಂ ದೊಂಗಲ್ ಪಿಡಿದೊಣಗಲ್ಗರುಳುಳ್ಳ ಹಿಣಿಲ ಚವರದ ಹಲಗೆಯ ಕಡುಗಲಿ ಕಣ್ಗೊಟ್ಟಿದನು (ಜಕ್ಕ೪. ೨-೬); ಮುಗಿಲ ಹರಿಗೆಗೆ ಮಾರುತನ ಬಂದಿಗೆಯು ಹೊಯ್ಲನೆ ನಕುಳನೆಚ್ಚಂಬುಗಳು ಕಿಡಿ ಸೂಸಿದವು (ಕುವ್ಯಾ.೪. ೨೦-೦೯).

[ ? ]

**ಬಂದಿಗೆಕೋಲು** 'ಬಂದುಗೆಗೋಲು' ನೋ.

**ಬಂದಿಗೊಳ್** (ಕ್ರಿ). ಸೆರೆಹಿಡಿ ; ಬಂಧಿಸಂ : ಇನಿಯನ ಬಗೆಯ ತೀರದು ಬಂದಿಗೊಂಬ ಸುಗುಣೆಯರಿಹವರದೊಳು ಸೂಱೆಗೊಂಬರು ಸೊಗದ ಸುಗ್ಗಿಯ (ಹರಿ. ೮-೩೦) ; ಹಸುವಂ ಬಂದಿಗೊಂಡ ಪೊಲ ತಳವಾಱ ರೊರ್ಮೆಗಂ ಕಟ್ಟೋಲಗದ ರಾಯನೆಡೆಗೆಯ್ತಂದು (ರಾಮಾಶ್ವ. ೦೧೦-೦೪). [ಬಂದಿ$_1$ + ಕೊಳ್$_1$]

**ಬಂದಿಗೊಳಿಸು** (ಕ್ರಿ). ಸೆರೆಹಿಡಿ; ಬಂಧಿಸು: ಸೌಂದರ್ಯಮನೆರ್ದೆಯೊಳ್ ಬಂದಿಗೊಳಿಸಿ (ಅಕ್ಕರ. ೦೧೩-೬). [ಬಂದಿಗೊಳ್ + —ಇಸು$_3$]

**ಬಂದಿಗೋಲ್, ಬಂದಿಕೋಲು** (ನಾ). ಅಂಗಸಾಧಕನು ಉಪಯೋಗಿಸುವ ದಂಡ: ಕಟ್ಟಿದ ದಟ್ಟಿ ಕೈದಳದ ಪೊಂಗಿಱುಗುಟ್ಟಿಗೆ ರನ್ನ ಬಂದಿಗೋಲ್ . . . ಮನಂಗೊಳಲ್ (೩೪೩. ೯-೦೩೯). **ಬಂದಿಕೋಲು** : ಅಂದುಗೆ ಕಾಲೊಳು ರಘುನರಘುನರೆನುತಿರೆ ಬಂದಿಕೋಲನು ಕೈಯೊಳಾಂತು (ಜ್ಞಾತಚ. ೨-೫೨). [← ತುಳು. ಬಂದಿಕೋಲು]

**ಬಂದಿಗ್ರಹಣ** (ನಾ). ಕಳ್ಳನನ್ನು ಹಿಡಿಯುವುದು: ಬಂದಿಗ್ರಹಣ, ಬಲ್ವಂದಿಕಾಱ (ಕಶುದ. ೨೧೯ ಕ್ರಹೋ) ; ವಸುಮತಿಗೆ ಬಲ್ವಂದಿಕಾಱ ಬಂದಿ ಗ್ರಹಣ (ಕಾವ್ಯ. ೯೩). [ಸಂ.]

**ಬಂದಿನಿ** (ನಾ). ಸೆರೆಯಲ್ಲಿರುವವಳು : ಬಂಧಿತಳಾದವಳು : ಅವಳೀಗ ಕೇವಲ ಬಂದಿನಿಯಾಗಿದ್ದಳು (ಅಂಬಿ. ೨೯). [ಸಂ. ಬಂದಿನೀ]

**ಬಂದಿವಡು** (ಕ್ರಿ). ಸೆರೆಯಹಾಗಂ ; ಬಂಧನಕ್ಕೊಳಗಾಗು : ಸಿರಿಕಂಡದ ಕೋಟ್ಕಿಸೆಱೆಯೊಳ್ ಕಾಲ್ಕುಸಿದುಂ ಪಾಱುಗೆಯ್ಯಕ್ಕೆ ಬಂದಿವಟ್ಟುಂ (ರಾಮಾಶ್ವ. ೨-೨೩). [ಬಂದಿ$_1$ + ಪಡು$_1$]

**ಬಂದಿವನೆ** (ನಾ). = ಬಂದಿಗೃಹ : ಮಹಿಶೂರನಾಡೊಳ್ ಬಂದಿವನೆಯೊಳಿರ್ಪವರ ಸೊಗಮುಂ ಕಂಡು (ಅಕ್ಕತಿ. ೦೧೬-೬). [ಬಂದಿ$_1$ + ಮನೆ]

**ಬಂದಿವರ್** (ಕ್ರಿ). ಬಂಧನಕ್ಕೊಳಗಾಗು; ಸೆರೆಯಾಗು: ಕೈಬಸದೊಳೊಪ್ಪಿಸಿ ತಪ್ಪದೆ ಬಂದಿವಂದುದೋ (೩೪೩. ೩-೦೦೩). [ಬಂದಿ$_1$ + ಪರ್]

**ಬಂದಿವಾನ** 'ಬಂದೀವಾನ' ನೋ.

**ಬಂದಿವಾಟ್** (ಕ್ರಿ). ಸೆರೆಯಲ್ಲಿರು ; ಬಂಧನದಲ್ಲಿ ಬಾಳು : ರಕ್ಕಸನೊಳ್ ಬಂದಿವಾಟ್ದಿನ್ನನೊಪ್ಪುಗೊಂಡನೆಂಬೊಂದು ಲೋಕಾಪವಾದದ ದೂಸಱಿಂ . . . ಕಳಿಪಿದನೈ (ರಾಮಾಶ್ವ. ೧೦-೨೩). [ಬಂದಿ$_1$ + ಬಾಟು$_1$]

**ಬಂದಿವಾಟ್ಗೆ** (ನಾ). ಸೆರೆಯ ಜೀವನ ; ಬಂಧನದ ಬದುಕು : ಪಂಜರನೊಂದು ಪಕ್ಕಿ . . . ತನ್ನ ಬಂದಿವಾಟ್ಗೆಯೊಳೆ ದಿನದಿನದ ಪಾಲ್ಪಣ್ಗಳ ನಿನಿದಿಸಿದಾಗಿ ಸವಿಯುತುಂ ನಿಶ್ಚಿಂತಮಿರ್ಪಂತಿರೆ (ರಾಮಾಶ್ವ. ೬೪-೩೦). [ಬಂದಿವಾಟ್ + — ಗೆ]

**ಬಂದಿವಿಡಿ, ಬಂದಿಹಿಡಿ** (ಕ್ರಿ). ೧. ಸೆರೆಹಿಡಿ ; ಬಂಧಿಸು : ಮನದಿಂ ಸೆಱೆಗೆಯ್ಯುಂ ಲೋಚನದಿಂ ಬಂದಿವಿಡಿಗುವೆಂದುಂ ವನಿತಾಜನಂ (ಕಾಂತಿಶ. ೩-೦೦) ; ಅವುದರ್ ಬಸವಣ್ಣನಂ ಬಂದಿವಿಡಿಯಲ್ಕೆಂದು ಬಱು ಮನದ ಹೊಱವಿಭೂತಿಯನಲ್ಲಿ ಶೀವಿಟ್ಟು (ಬಸ. ೯-೯೨) ; ತನ್ನಬಲೆಯ ಬಗೆಯಂ ಬಂದಿವಿಡಿದು ಕೂಡಿದನಾ ಕಾದಲನು (ಅಧುಣ. ೬-೯೬). ೨. ಕೊಳ್ಳೆಹೊಡೆ : ಸೂರೆ ಮಾಡು : ಕನ್ನಮನಿಕ್ಕುವ ಬಟ್ಟೆಗೊಳ್ಳ ಸಂಚಳಿಸದೆ ಪೊಕ್ಕು ಬಂದಿವಿಡಿವಂಯಿಲವೊಡ್ಡುವ ನಿನ್ನ ಗೊಡ್ಡಮಂ ಶೀಲದವಧಾರಿಸು (ವರ್ಧಮಾ. ೬-೫೧) : ಕಳಹೋದರೆ ಕನ್ನದುಳಿಯ ಹಿಡಿವೆ ಬಂದಿವಿಡಿವರೆ ನಿಮ್ಮಿಂದ ಮುಂದೆ ನಡೆವೆ ಮನಭೀತಿ ಮನಶಂಕೆಗೊಂಡೆ ನಾದರೆ ನಿಮ್ಮಾಣೆ (ಬಸವ. ೬೭೬). **ಬಂದಿಹಿಡಿ** : ೧. ಬಂದ ಹುಳುವ ಬಂದಿ ಹಿಡಿದು ಕೊಂದು ತಿಂಬುದು (ಅಶೀಗೀ. ೪೪-೦೬). [ಬಂದಿ$_1$ + ಪಿಡಿ$_1$]

**ಬಂದಿವಿಡಿಹ** (ನಾ). ಸೆರೆಹಿಡಿಯುವಿಕೆ ; ಬಂಧಿಸುವಿಕೆ : "ಗ್ರಾಹಕಂ ಪ್ರಗ್ರಹವೆನಲ್ಬಂದಿವಿಡಿಹವಕ್ಕು" (ಶುಂಗಂ. ೦೩೬-೪೦). [ಬಂದಿ$_1$ + ಪಿಡಿಹ]

**ಬಂದಿಶಾಲೆ** (ನಾ). ಕಾರಾಗೃಹ ; ಸೆರೆಮನೆ : ಬಂದಿಶಾಲೆಯೊಳಕಟ ಶಿವಶಿವವೊಂದು ಕಡೆಯಲಿ ಖಚರ ಕಿನ್ನರರೊಂದು ಕಡೆಯಲಿ ಸಿದ್ಧ ವಿದ್ಯಾಧರ ಮಹೋರಗರು (ಳಾತಾ. ೦೦-೬೩) : ಬೆಂದವಸುರನ ರಾಣಿವಾಸದ ಮಂದಿರಂಗಳು ಹಲವು ದೇವರ ಬಂದಿಶಾಲೆ ವಿಚಿತ್ರ ಕರಣಿಕ ಮಂತ್ರಿ ಕೇರಿಗಳು (ಳಾತಾ. ೩೨-೯). [ಸಂ. ಬಂದಿಶಾಲಾ]

**ಬಂದಿಸು$_1$** (ಕ್ರಿ). ಅಡ್ಡಬೀಳು : ನಮಸ್ಕರಿಸು : ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆ (ವಡ್ಡಾರಾ. ೬೪-೨೬) ; ಜಿನಚೈತ್ಯ ಬ್ರಾತಮಂ ಬಂದಿಸು ಜಿನಪದಪದ್ಮಂಗಳಂ ದಿವ್ಯಮಪ್ಪರ್ಚನೆಯಿಂದು ಭಕ್ತಿಯಿಂದರ್ಚಿಸು (ಅಂಕ. ೩-೭) ; ಚಂಡಮಾರಿ ಲೋಚನಗೋಚರತನುವಾಗಿ ಕುವರನಂ ಬಂದಿಸಿ (ಹುಕೋಚ. ೯-೬೨). [< ವಂದಿಸು]

**ಬಂದಿಸು$_2$** (ಕ್ರಿ). ಸೆರೆಹಾಕು : ಬಂಧಿಸು : ರಾಜದ್ರೋಹದೇವತೆ ಬಂದಿರುಳು ತನ್ನೆದೆಯ ಮೆಟ್ಟಿಯೆ ಬಂದಿಸುವಳದನೇನ ಪೇಳುವೆನು (ಅಶಂಚ. ೯-೩೦). [ಬಂದಿ$_1$ + — ಇಸು$_3$]

**ಬಂದಿಹಿಡಿ** 'ಬಂದಿವಿಡಿ' ನೋ.

**ಬಂದಿಹೊಗು** (ಕ್ರಿ). ಸೆರೆಸಿಕ್ಕು : ಬಂದಿಯಾಗು : ನಿಂದೆ ಹೊದ್ದದ ನಡೆವಳಿಗಳು . . . ಬಂದಿ ಹೊಗದಾಸಱು ವಿತಾಳಿಸಿ ನಿಂದಿರದು ನೆಲೆಗೊಳ್ಳದಾ ಜನವೃಂದದಲಿ ಕಟ್ಟಾಸೆ ದಶರಥನೃಪನ ರಾಜ್ಯದಲಿ (ಕೊರಚ. ೧-೩-೨೬). [ಬಂದಿ$_1$ + ಹೊಗು (< ಪೊಗು)]

**ಬಂದೀಕರಣ** (ನಾ). ಸೆರೆ ; ಬಂಧನ : ಬಂದೀಕರಣ ಮಾಡಿದ ಯಾವ ವ್ಯಕ್ತಿಯನ್ನೂ ಬಂದೀಕರಣದ ಕಾರಣಗಳನ್ನು ಸಾಧ್ಯವಾದಷ್ಟು ಶೀಘ್ರವಾಗಿ ತಿಳಿಸದೆ ಅಭಿರಕ್ಷೆಯಲ್ಲಿ ಇಡತಕ್ಕುದಲ್ಲ (ಶಾಧಾಪ. ೦೨). [ಸಂ.]

**ಬಂದೀಕರಿಸು** (ಕ್ರಿ). ತನ್ನ ವಶಕ್ಕೆ ತೆಗೆದುಕೊಳ್ಳು; ಸೆರೆಹಿಡಿ; ಬಂಧಿಸು; ಕೈದು ಮಾಡು : ಮಂದಹಾಸದ ಭಾಸಮಂ ಕೊಳಲು ಚಂದ್ರಿಕೆಯ ಬಂದೀಕರಿಸಿ ಬಾಣತತಿಯ ಕುಡಿನೋಟಂಗಳಂದಮಂ ಕಂಡು ಮುನಿವೃಂದ. ಮಾನಂದಮಂ ಪೊಂದಿದರು (ಪಂಚಾಶಾ. ೧-೦೬-೯). [ಬಂದೀಕರಣ + — ಇಸು$_3$]

**ಬಂದೀಖಾನೆ**, ಬಂದಿಖಾನ, ಬಂದಿಖಾನೆ (ನಾ). ಸೆರೆಮನೆ; ಕಾರಾಗೃಹ : "ಕಾರಾ, ಬಂಧನಾಲಯಃ – ೨ ಸೆರೆಮನೆ, ಬಂದೀಖಾನೆ" (ಸಿದ್ಧಾಂತಿ. ೨೬೩); ಜಂಗಮಕ್ಕೆ ಸುಖಾಸನವನಿಕ್ಕದೆ ತಾನೆ ಗದ್ದುಗೆಯ ಮೇಲೆ ಕುಳಿತಡೆ ಬಂದೀ ಖಾನೆ[ಪಾಠಾಂ. ಬಂದಿಕಾನ]ಯಲ್ಲಿ ಕುಳಿತ ಸಮಾನ (ಕಲ್ಪಕ. ೯-೩); ಅವನನ್ನು ಬಂದೀಖಾನೆಗೆ ಹಾಕಿದ್ದೇವೆ (ಜೀಶರೋ. ೨೬). **ಬಂದಿಖಾನ** : ಬಿಡದುವಚರಿಸಿ ನೇಮಿಯು ಕುಂಜಳಕಾಯನೊಡೆದು ಹುಟ್ಟಿದ ರಾಯನನು ತಡೆಹನಿಕ್ಕಿಸಿದನು ಬಂದಿಖಾನದೊಳು ಪೊಡವೀಶ್ವರ ಸುರುತಾಳ (ಕುಮಾರಾಂ. ೦೬-೦೦೬). **ಬಂದಿಖಾನೆ** : ಮೋಹದ ಬಂದಿಖಾನೆಗೆ ಸಿಲುಕಿ ಕೆಡಬೇಡ (ಅಖಂಡ. ೦-೩-೩೬); ಅವನ ಕಾಲಿಗೆ ಬೇಡಿ ಹಾಕಿಸಿ ಬಂದಿಖಾನೆಯಲ್ಲಿ ಮಡಗಿಸಿ (ರಾಜೇಂದ್ರ. ೦೨೦). [←ಪಾರ. ಬಂದೀಖಾನಹ್; ಹಿಂ. ಮರಾ. ಬಂದೀಖಾನಾ]

**ಬಂದೀವಾನ**, ಬಂದಿವಾನ (ನಾ). ಸೆರೆಯಲ್ಲಿರುವವನು ; ಕೈದಿ : "ಪ್ರಗ್ರಹಃ, ಉಪಗ್ರಹಃ, ಬಂದೀ – ೩ ಸೆರೆಮನೆಯೊಳಗಿರುವವನ ಹೆಸರುಗಳು, ಬಂದೀವಾನ" (ಸಿದ್ಧಾಂತಿ. ೨೬೩). **ಬಂದಿವಾನ** : ನೀನೀ ಸಮಯದಲ್ಲಿ ಬಾರದಿದ್ದಲ್ಲಿ ನಾನೂ ನನ್ನ ಪುತ್ರಿಯೂ ಕಳ್ಳರ ಬಂದಿವಾನ ರಾಗುತ್ತಿದ್ದೆವು (ಕಥಾಕೋ. ೬೮) ; ಸಂಕೋಲೆಗಳನ್ನು . . . ವಧ್ಯರಾದ ಬಂದಿವಾನರೆಲ್ಲರಿಗೂ ಹಾಕುವ ಪದ್ಧತಿಯಿದೆ (ಕೋಕ್ಸಮು. ೯೯).

[← ಹಿಂ.ಮರಾ. ಬಂದೀವಾನ್]

**ಬಂದೀವಾಸ** (ನಾ). ಸೆರೆಮನೆ ವಾಸ ; ಜೈಲಿನ ವಾಸ : ಅವನ ಬಂದೀ ವಾಸದ ಸಮಯದಲ್ಲಿ ಅವನು ತನ್ನೊಬ್ಬ ಗೆಳೆಯನಿಗೆ ಚೀನಾ, ಹಿಂದೂಸ್ತಾನ ಗಳ ವಿಚಾರವನ್ನು ಬಣ್ಣಿಸಿದ್ದನು (ಚಾಂಚ್ರ. III.೦೨೯೯). [ಸಂ.]

**ಬಂದು**₁ 'ಬರ್' ಪರಾ.

**ಬಂದು**₂. ಬಂದ್, ಬಂದ್₂, ಬಾಂದ್₁, ಬಾಂದು (ನಾ). ೧. ಬಂಧನ ; ಸೆರೆ : (೬). ೨. ಬೇಡಿ ; ಸಂಕೋಲೆ. ೩. ಮುಚ್ಚಿದುದು ; ನಿಲ್ಲಿಸಿದುದು ; ಕೊನೆಯಾದುದು : ನಂಬಿಗೆಯು ಇಲ್ಲದಂತಾಗಿ ಖಾತೆ ಗಳನ್ನು ಬಂದು ಇಡುವ ಪ್ರಸಂಗಗಳು ಬರಹತ್ತಿದವು (ಪುಂಜಿಕಾ. ೬ ಕ್ರಾನ್ತಿ). ೪. ಹರತಾಳ ; ಸಂಪು ; ಮಂಪ್ಕರ : ತಮ್ಮ ಬೇಡಿಕೆಗಳ ಪೂರೈಕೆಗಾಗಿ ಸದಾಕಾಲ ಯಾವುದಾದರೊಂದು ಪಂಗಡದವರು ಪದೇ ಪದೇ ಬಂದು ಆಚರಿಸಲು ಜನತೆಗೆ ಕರೆಯುತ್ತರೆ ದೇಶದ ಪ್ರಗತಿಯಾದರೂ ಹೇಗೆ ಸಾಧ್ಯ ? (ಪೂ). **ಬಂದ್** : ೩. ಆತು ಹಗಾರ. ಭಜನಿ ಬಂದ್ (ಪಾಠಾಂ. ೨೯) ; ಮುಂದಿನ ಕದ ಬಂದ್ – ಗಲ್ಲಿ ಕದ ಖುಲ್ಲಾ (ಕಂಗಾ. ೦೩೯). **ಬಂದ್**₂ : ೫. ಸಂಬಂಧ ; ಕಟ್ಟು ; ಬಾಂಧವ್ಯ : 'ಬಂದಂ ಬಿಡು' ಪರಾ. ೬. ಹೊಂದಿಸಿ ಕಟ್ಟಿದುದು: 'ನೆತ್ತಿವಂದ' ಪರಾ. **ಬಾಂದ್**₁: ೭. ಜಮೀನಿನ ಎಲ್ಲೆಕಟ್ಟನ್ನು ಖಚಿತಗೊಳಿಸಲು ಹಾಕುವ ಕಟ್ಟೆ; ಒಡ್ಡು : (ಕೃಷಿಗ. II. ೩೯೬); ಬಾಂದ್ಹಾಕೋರು ಬರುತಾರಂತೆ . . . ಬಾಂದು ಎಂಬೋದು ಬಂಧನವಾಗಿದೆ (ನಾಕಶ. ೦೯೩). **ಬಾಂದು** : ೭. ಒಂದು ಹೊಲದ ಮಣ್ಣು ಮತ್ತೊಂದು ಹೊಲಕ್ಕೆ ಹೋಗದ ಹಾಗೆ ಹೊಲದ ಬಾಂದಿನ ಹದ್ದು ಹಿಡಿದು . . . ಸುತ್ತಲೂ ಒಡ್ಡು ಹಾಕಿಸುವದು ಅವಶ್ಯವಾಗಿದೆ (ಕೃಷಿಶ್ರ. ೩೨); ಬೇಕಾದರೆ ಬೇರೆ ಬಾಂದು ಹಾಕಿ (ಮುಖಮು. ೦೫೫). ೮. ಗಡಿ; ಮೇರೆ: ಅಂದೇ ನನ್ನ ಕಾರ್ಯಕ್ಷೇತ್ರದ ಬಾಂದುಗಳನ್ನು ಗುರುತಿಸಿಕೊಂಡೆ (ಕಾಂಕ. ೦೯). ☞ ಈ ಪರ್ಯಾಯರೂಪದ ವ್ಯುತ್ಪತ್ತಿ ವಿಚಾರಣೀಯ.

ಬಂದಾಗು = ಮುಚ್ಚು : ಈ ರಸ್ತೆ ಬಂದಾದಂತೆಯೇ (ಅಕೋ. ೯೯); ಇಂದು ಅಂಗಡಿ ಬಂದಾಗಿದೆ (ಪೂ). ಬಂದು ಮಾಡು=೧. ನಿಲ್ಲಿಸು; ತಡೆಹಾಕು : ನಿನ್ನ ಚಿತ್ರವ್ಯವಸಾಯವನ್ನು ಬಂದು ಮಾಡು ಶ್ಯಾಮಾ (ಕಂಗರೋ. ೦೯೬) ; ಈ ಉಪದೇಶವನ್ನು ಬಂದು ಮಾಡಿರಿ ಸಾರ್ (ಕಂಗರೋ. ೫೭). ೨. ಮುಚ್ಚು ; ಹಾಕು: ಹೋಗಿ ಬಹಳ ಬೇಗನೇ ಬಂದು ಮಾಡಿ ಬಾ (ಕೂಕಿಕಾ. ೩). ಬಾಂದಿನವರು = ಭೂಮಿಯನ್ನು ಅಳತೆ ಮಾಡುವವರು; ಮೋಜಣಿದಾರರು : ಬಾಂದಿನವರು ಬಂದರು ಕಾಣಿಸ್ಲಾ ನಾವ್ ಬಾಳೋದ್ ಹೆಂಗಸ್ಲಾ (ನಾಕಶ. ೦೩೯); ಈಗ ಬಾಂದಿ ನವರೊಬ್ಬರು ಆ ಮನೆಯಲ್ಲಿ ಬಾಡಿಗೆದಾರರಾಗಿ . . . ಇರುತ್ತಿದ್ದರು (ಸಮುಚ. ೦೨೬೨).

[← ಪಾರ. ಹಿಂ. ಬಂದ್ ; ಮರಾ. ಬಂದ್, ಬಾಂದೀ. / ಸಂ. ಬಂಧ]

**ಬಂದುಕ**, ಬೊಂದುಕ₂ (ನಾ). ೧. ಮೋಸಗಾರ; ವಂಚಕ; ಕಪಟಿ : "ಬಂದುಕನೆವಲ್ ಚಿಲ್ಲವತ್ತನುಮೆನಲ್ ನಂಬಿಸಿಯೆ ತಿಂಬಾತನಕ್ಕು" (ಶಬ್ದಮಂ. ೪೬); ಉಕ ಪ್ರತ್ಯಯಕ್ಕೆ – ಕಟ್ಟುಕಂ . . . ಬಂದುಕಂ, ದಿಂಡುಕಂ (ಶಮದ. ೨೦೩ ಸ್ತ್ರಸೂ). ೨. ಉಪಾಧ್ಯಾಯ ; ಗುರು : "ಬಂದುಕನುಪಾಧ್ಯಾಯನಕ್ಕು" (ಕಕ. ೬೨). **ಬೊಂದುಕ₂** : ೧. "ಬೊಂದುಕನೆಂದುಂ ಚಿಲ್ಲವತ್ತನೆಂದುಂ ನಂಬಿಸಿ ತಿಂಬವಂ" (ಕಕಾ. ೬೦-೩೩೬) ; "ನಂಬಿಸಿ ತಿಂಬವನಂ ಬುಧರಂಬರ್ ಬೊಂದುಕನು ಚಿಲ್ಲವತ್ತನು ಮೆಂದುಂ" (ಕಕೆಂ. ೦೫೩). [?]

**ಬಂದುಕಟ್ಟು** (ನಾ). ೧. ಅಚ್ಚುಕಟ್ಟು; ಓರಣ : (೬). ೨. ಜಾತಿ ಪದ್ಧತಿ : (೬). ೩. ನಿಯಮಕ್ಕೆ ಒಳಪಟ್ಟಿರುವುದು ; ಸಂಪ್ರ ದಾಯಬದ್ಧವಾದುದು: ಅಚ್ಚುಕಟ್ಟಾದ ಕೆಲಸ ಚಂದ, ಬಂದುಕಟ್ಟಾದ ಊಟ ಚಂದ (ಗಾದೆ). [ದೇ. ‖ತುಳು. ಬಂದುಕಟ್; ತೆಲು. ಬಂದುಕಟ್ಟು]

**ಬಂದುಗೆ** 'ಬಂಧೂಕ₁' ನೋ.

**ಬಂದುಗೆಗೋಲು**, ಬಂದಿಗೆಕೋಲು (ನಾ). ೧. ಅಂಗಸಾಧಕನು ವ್ಯಾಯಾಮಕ್ಕಾಗಿ ಉಪಯೋಗಿಸುವ ಒಂದು ಬಗೆಯ ಸಾಧನ : ಹಡಪಿಗರೂಡುವಲೆಯ ಫಳಿಗೆಗಳ ಪಾಡಚಿದರಗಟ್ಟಿಕೊಳುತ ಬಂದುಗೆ ಗೋಲ ನೀಡುತ ತಿರುಹುತೆಯ್ದಿದರು (ಕಕ. ೬೩-೦೬). 'ಬಂದಿ ಗೋಲ್' ಪರಾ. **ಬಂದಿಗೆಕೋಲು** : ೨. = ಬಂದಿಗೆ ೩ : ಹಿಡಿ ಮಾರ್ಕೋಲನೆನ್ನೊಡನೆನುತ ತಿವಿದನು ಭೀಮ ಕುರುಪತಿಯ ಮೇಳಮಿ ತೆರದಂಕ ಬಂದಿಗೆಕೋಲ ಹೊಯ್ದಾಟದಲಿ ಬಗಿಕಾ ಕೀಲುಗದೆಗಳ ಹಿಡಿದು ತಿಬಿಬಿದರಧಿಕರೋಷದಲಿ (ಕುಮ್ಯಾಅ. ೬-೩೯).

[ ಬಂದುಗ್ಗೆ + ಕೋಲ್₁ ]

**ಬಂದುಗೆದುಟಿ** (ನಾ). ಬಂದುಗೆಯ ಹೂವಿನಂತೆ ಕೆಂಪಗಿರುವ ತುಟಿ : ಬಂದುಗೆದುಟಿ ತೊಂಡೆವಣ್ದುಟಿಯವರು ಮಂದಗಮನೆಯೊಳ್ಳಿದಿದರು (ಜೀಜಂಪಾಂ. ೦೦-೯೬) ; ಬಂದುಗೆದುಟಿಯು ವಿಸುವ ಬಡನಡುವಿನ . . . ಕುಮಾರಿಯ ರೂಪನದೇನಂ ಬಣ್ಣಿಪೆನು (ಜಹುಚಿಕಾ. ೩-೬೨).

[ಬಂದುಗೆ (< ಬಂಧೂಕ₁) + ತುಟಿ]

**ಬಂದುಗೆಯರಲ್** 'ಬಂದುಗೆಯಲರ್' ನೋ.

**ಬಂದುಗೆಯಲರ್**, ಬಂದುಗೆಯರಲ್ (ನಾ). ಬಂಧೂಕವೃಕ್ಷದ ಹೂವು : ಬಂದುಗೆಯಲರಂ ಸವಿವೂಲಿಂದಿಂದಿರನಾಮ್ರಫಲವನರಗಿ ನಲವಿಂ ಮಾಂದಳಿರಂ ಪಿಕನಿನಿಯಳ ಚೆಂದುಟಿಯಂ ಚುಂಬಿಸಿದನಿಳಾಧಿಪ ನಾಗಳ್ (ಉದ್ಭಟ. ೯-೦೧೨). **ಬಂದುಗೆಯರಲ್** : ಕೋಮಳೆಯ ಕನಕ ಕಾಂಚೀದಾಮದ ಕೆಂಬರಲ ನುಣ್ಣದಿರ್ ತಿಂಬಿರೆ ನಾಭೀಮಂಡಳವಿಮಿಳಿಸಿದು ದಭಿರಾಮತೆಯಿಂದುಳ್ಳರಲ್ದ ಬಂದುಗೆಯರಲಂ (ಕಂದ್ರಕು. ೦೦-೦೦೯) ; ಬಂದುಗೆಯರಲ ತೊಡರ್ (ಕಪ್ಪ... ೦೯೨).

[ಬಂದುಗೆ (<ಬಂಧೂಕ₁) + ಅಲರ್₂]

**ಬಂದುಗೆವಾಯ್** (ನಾ). ಬಂದುಗೆಹೂವಿನಂತೆ ಕೆಂಪಗಿರುವ ಬಾಯಿ : ಬಲ್ಮೊಲೆಯ ನಳಿತೋಳ ಬಂದುಗೆವಾಯ ತೆಳ್ಗದಂಪಿನ . . . ಗಣಿಕೆಯು ರೆಸೆದರು (ಕಶ್ಮರಾ. ೬-೯೯) ; ಬಂದುಗೆವಾಯ್ದೆಱೆದು ಬಂಧಕಿ ಇಂತೆಂದು ತ್ತರಂಗೊಟ್ಟಳಾಗ (ಕ್ರಶಂಕ. ೩-೭೩). [ಬಂದುಗೆ (<ಬಂಧೂಕ₁) + ಬಾಯ್]

**ಬಂದುಗೆವಾಯ್ದೆಱೆ** (ನಾ). = ಬಂದುಗೆದುಟಿ : ನಿಱಿಗುರುಳಿನ ತುಱುಗೆವೆಯ ಬಂದುಗೆವಾಯ್ದೆಱೆಯ ಪಿಱುಗುವ ಕದಪಿನ ಪೞಿನೊಸಲಿನ ಪೆರ್ಮೊಲೆಯ ಪೆಣ್ಗಳ ತಂಡ (ಶಬ್ದಾಸಾ. ೩೪-೦೩).
[ಬಂದುಗೆ (<ಬಂಧೂಕ₁) + ಬಾಯ್ದೆಱೆ₁]

**ಬಂದುರೆ** 'ಬಂದಾರೆ' ನೋ.

**ಬಂದೂಕ₁**, ಬಂದುಗೆ (ನಾ). ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಕವುಲ ಕೈರವ ಮೊಲ್ಲೆ ಬಂದೂಕ ಚಂಪಕಂ ಕವಾನೀಯವೆಸೆವ ಮಲ್ಲಿಗೆ (ಜಗನ್ನಾ. ೩-೨೩). ಬಂದುಗೆ : "ಬಂಧೂಕಂ, ಬಂಧುಜೀವಂ—ಈ ೨ ಬಂದುಗೆ" (ಹಲಾಯು. ೩೩-೩೩) ; ಬಂದುಗೆಯ ಕುಸುಮವರಸವಂ . . . ಪೀರ್ವ ಷಟ್ಪದಂ ನೆನೆಯಿಸಿತೆಯ್ದುಂದು ನಯದಿಂದೆ ಪಕಿ ಸಾರ್ತಂದರುಣಾಧರವನೀಂಟುವುದನಂಗನೆಯಾ (ಜಾನ್ವೀಳ. ೯-೩೮) : ಕಣಗಿಲೆಯ ಬಂದುಗೆಯ ಕಕ್ಕೆಯ ಸಣಬ ಸರಿಸದ ಕುಸುಮದಲಿ ರಿಪುಗಣಭಯಂಕರನರ್ಚಿಸಿದನಂಧಾಸುರಾಂತಕನ (ಜೈಮಿ. ೩-೯೩). [< ಸಂ. ಬಂಧೂಕ]

**ಬಂದೂಕ₂** 'ಬಂದೂಕು' ನೋ.

**ಬಂದೂಕು**, ಬಂದೂಕ₂, ಬಂದೂಖು (ನಾ). ಮದ್ದಿನ ಸಹಾಯದಿಂದ ಗುಂಡು ಹಾರಿಸುವ ಸಾಧನ ; ತುಪಾಕಿ ; ಕೋವಿ : ಬಂದೂಕಿನ ಮುಂದೆ ಯಾವ ಧೈರ್ಯ ನಿಂತೀತು! (ಹುಲ್ಕಿ. ೦೬೨); ಬಂದೂಕಿನ ತೋಟವನ್ನು ಅಮುಕುತ್ತಲೇ ಗುಂಡು ಹಾರುತ್ತದೆ (ಜಿಹಾಕ್ಸ. ೦೯೬). ಬಂದೂಕ₂ : ಕಲ್ಲಿನ ಏಟಿಗೆ ಸಿಕ್ಕದವರು ಮೇಲಿಂದ ಬಿದ್ದ ಬಂದೂಕದ ಏಟಿಗೆ ಸಿಕ್ಕಿ ಸತ್ತರು (ಶಂಕಿಸು. ೨೨೪); ಈ ಅಂಬಾರಿಗಳಲ್ಲಿ ನಾಲ್ಕು ಜನ ಉದ್ದನೆಯ ಬಂದೂಕಗಳನ್ನು ಹಿಡಿದು ಕುಳಿತಿದ್ದರು (ಕ್ರಿಪಾಇ. II, ೦೬೨). ಬಂದೂಖು : ಅಂತಹ ಸಂದರ್ಭಗಳಲ್ಲಿ ಬಂದೂಖು ವಗೈರೆ ಆಯುಧಗಳನ್ನು ಉಪಯೋಗಿಸುವ ಸಂಭವ ಬಂದರೂ ಸಾಧ್ಯವಾದಷ್ಟು ಮಟ್ಟಿಗೂ ಉಪಯೋಗಿಸಿ (ಗ್ರಾಮಸೂಚಿ. ೩೦).
[← ಅರ. ಪಾರ. ಹಿಂ. ಮರಾ. ಬಂದೂಕ್ ]

**ಬಂದೂಖು** 'ಬಂದೂಕು' ನೋ.

**ಬಂದೋಬಸ್ತ್** 'ಬಂದೋಬಸ್ತು' ನೋ.

**ಬಂದೋಬಸ್ತಿ** 'ಬಂದೋಬಸ್ತು' ನೋ.

**ಬಂದೋಬಸ್ತು**, ಬಂದೋಬಸ್ತ್, ಬಂದೋಬಸ್ತಿ (ನಾ). ೧. ಸರಿಯಾದ ವ್ಯವಸ್ಥೆ ; ಅಚ್ಚುಕಟ್ಟಾದ ಏರ್ಪಾಟು : ಬಂದೋಬಸ್ತುಗಳೆಲ್ಲವೂ ಲೀಲಾಜಾಲವಾಗಿ ನಡೆದುಕೊಂಡು ಹೋಗುವುವು (ಸುಶಾಸಿ. ೦೨೨). ೨. ರಕ್ಷಣೆ ; ಭದ್ರತೆ : ಕೆಲವರನ್ನು ಮಾತ್ರ ಒಳಗಡೆಯ ಬಂದೋಬಸ್ತಿಗೋಸ್ಕರ ಅವಶ್ಯಕವಾದ ಸ್ಥಳಗಳಲ್ಲಿ ಇರಿಸಿ (ಸುಶಾಸಂ. II, ೦೩): ಅಲ್ಲಲ್ಲಿ ಬೇಕಾದಷ್ಟು ಮಂದಿ ಇಟ್ಟು ಬಂದೋಬಸ್ತು ಮಾಡಿಸಿ (ರಾಕೀಂಶ್ರ. ೩): ಅವಳನ್ನು ನೀನು ಗಿಣಿಯಂತೆ ಮನೆಯೊಳಗೇ ಬಂದೋಬಸ್ತಿನಲ್ಲಿ ಇಟ್ಟಿರುವೆಯಾ ? (ಕಳ್ತಕೂ. ೬೯). ಬಂದೋಬಸ್ತ್: ೧. 'ಬಂದೋಬಸ್ತ್' ಈ ಪದವು ನನಗೆ ಅತ್ಯಂತಪ್ರಿಯ (ಸುಶಾಸಿ. ೦೨೨). ಬಂದೋಬಸ್ತಿ : ೨. ಇದರ ಬಂದೋಬಸ್ತಿಯ ಬಗ್ಗೆ ತಮ್ಮ ಸನ್ನಿಧಿಗೆ ಬಂದಿರುವೆವು (ಕೃಶಿಕ್ರ. ೨೦).

**ಬಂದೋಬಸ್ತು ಮಾಡು** = ಭದ್ರಮಾಡು ; ಜೋಪಾನಗೊಳಿಸು : ಒಳಕ್ಕೆ ಬಾರದಂತೆ ಕೋಟೆ ಬಾಗಿಲಲ್ಲಿ ತನ್ನ ಕಡೇ ಜನಗಳನ್ನು ಇಟ್ಟು ಬಂದೋಬಸ್ತುಮಾಡಿ (ಶಾಕುಸಂ. ೦೬೦); ತಪ್ಪಿದ್ದವರನ್ನು ಶಿಕ್ಷಿಸಿ ಬಂದೋಬಸ್ತು ಮಾಡುವುದು (ಸುರಾಶಾಸಿ. ೯೭). [←ಪಾರ. ಬಂದುಬಸ್ತ್, ಹಿಂ. ಬಂದೋಬಸ್ತ್ ; ಮರಾ. ಬಂದೋಬಸ್ತ, ಬಂದೋಬಸ್ತೀ]

**ಬಂದ್ರು** (ನಾ). ಒಂದು ಬಗೆಯ ಬಟ್ಟೆ (?) : ಜರತರದ ವಸ್ತ್ರವಾಗಂಗಿ ಕಿಂಖಾಪು ಮೇಲ್ ಥರಥರದ ವೈಠಣೆಯ ಚಾದ್ರ ಬೂರಾನ್ನುರಿಯ ಪರಿಪರಿಯ ಬಂದ್ರುಗಳ ವಸ್ತ್ರದ ಖಿಲತ್ತುಗಳು (ಕೃಕ್ರಪಿ. ೩-೩೬). [?]

**ಬಂಧ** (ನಾ). ೧. ಕಟ್ಟು ; ಬಂಧನ. ೨. ಹಗ್ಗ ; ಪಾಶ : "ಹಗ್ಗವೂ ಬಂಧಂ" (ಚುಂಗಣ. ೦೦೯-೨). ೩. ಸಂಕೋಲೆ ; ಸರಪಣಿ. ೪. ಗಾಯದ ಪಟ್ಟಿ. ೫. ಅಡವು ; ಒತ್ತೆ. ೬. ಸೆರೆ ಹಿಡಿಯುವುದು ; ಬಂಧಿಸುವುದು. ೭. ಸೇರಿಸುವುದು; ಕೂಡಿಸುವುದು. ೮. ಕೂಡುವುದು ; ಸೇರುವಿಕೆ ; ಯೋಗ. ೯. ಕೂಡಿಸಿದುದು ; ಜೋಡಣೆ : ಅಂತು ಸಮುದ್ರಂ ಬಹಿತ್ರಂ ಬೆದಱುವಂದು ತಿಟ್ಟನೆ ತಿಱಿದು . . . ಕೂಪಕಂಭಂ ಮುಱಿಯೆ ಬಂಧಂ ಬಿರಿಯೆ . . . ನಾವಿಕಾಜನಮೆರ್ದೆಗೆಟ್ಟು (ಜಂಪು. ೪-೦೯೩). ೧೦. ಅಳ್ಳಕವಲ್ಲದುದು ; ಗಟ್ಟಿ ; ಮಂದ : ತುಱುಮೆಯ ಬೇರನಿಕ್ಕಿ ತಱಿಪೆರ್ಮೆಯ ಪಾಲುಮಮಾರ್ಥಮಪ್ಪಿನಂ ಪಱುಗಿಸಿ ಬಂಧವಾಗೆ (ಲೋಕೋಪ. ೬-೦೦). ೧೧. (ಕಾವ್ಯ ಮೊದಲಾದುವುಗಳ) ರಚನೆ : ಸಮಮುಂಬುದು ಬಂಧದೊಳವಿಷಮಂ ಮೃದುಸ್ಫುಟವಿಮಿಶ್ರವಿನ್ಯಾಸಪದಕ್ರಮದಿಂ ಮಾಱು ತೆಱು ಬಂಧಮುಂ ಯಥಾರ್ಥಾನುವೃತ್ತಿಯುಂ ವರ್ತಿಸುಗುಂ (ಕಾವ್ಯಾವ. ೩೦೦); ಬಂಧದೊಳು ಲಕ್ಷಣದೊಳು ಪದವಿಸರದೊಳು . . . ತಿದ್ದುವುದು (ಜಕಶಾ. ೦-೨೦); ಗತಿಯು ತನ್ನ ಛಂದದಲ್ಲಿ ಭಾವ ತನ್ನ ಬಂಧದಲ್ಲಿ ಹುವೆನಿಲ್ಲ ಹೊಂದದಲ್ಲಿ (ಅರಳು. ೦೬೪-೦೦). ೧೨. ಅಂಚು; ಗಡಿ. ೧೩. ದೇಹ; ಕಾಯ. ೧೪. ಒಂದು ಬಗೆಯ ಸಸ್ಯ : ಸಿಡಿಗುಲಿಗೆ, ಬಂಧ (ಕ್ರುಶಿಗ. ೦೪-೨೩೩). ೧೫. [ತತ್ತ್ವಶಾ] ಇಹಲೋಕದ ಬಾಂಧವ್ಯ; ಲೌಕಿಕವ್ಯಾಮೋಹ: ಬಂಧಂ ಬಂಧಕಾರಣಂ ಮೋಕ್ಷಂ ಮೋಕ್ಷಕಾರಣಂ (ಪಂಪಾರಾ. ೬-೦೬); ದಯಿತಾಸಂಬಂಧ ಬಂಧಂ ಭವಪರಿಣತಿ ತನ್ಮೂಲಮಾ ಬೇಸಂ ಏಕ್ಷಯ ಮಂದಾಶಂ ತೊಡರ್ವಂ ಬಿಡಿಸಿ (ಶಾಂತಿಪು. ೯-೦೯); ಧೀರ ಲಾಲಿಸು ಬಂಧ ಮೋಕ್ಷಕೆ ಕಾರಣವು ಮನವಹುದು (ಗಣಶಾ. ೦೩-೨೬). ೧೬. [ಕಾವ್ಯಮೀ] ಚಮತ್ಕಾರಪೂರ್ಣವಾದ ಶಬ್ದವೈಚಿತ್ರ್ಯದಿಂದ ಕೂಡಿದ ವಾಕ್ಯ ; ಚಿತ್ರಕವಿತ್ವ : ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧವೆಂದೂ' ಹೆಸರು (ಕೃಶಿಕ. ೨೩೯). ೧೭. [ಜೈನ] ನವಪದಾರ್ಥಗಳಲ್ಲಿ ಒಂದು : ಜೀವಮುಂ ಕರ್ಮಮುಂ ಎಂಬೆರಡಱ ಅನ್ಯೋನ್ಯಪ್ರದೇಶಾನುಪ್ರವೇಶಾತ್ಮಕಮಪ್ಪುದು ಬಂಧಂ (ಕತ್ತ್ವಕ್ರ. ೮): ಅಜೀವಕರ್ಮಪುದ್ಗಲಗಳೊಡನೆ ಜೀವನು ಏಕೀಭೂತನಾಗುವುದೆ ಬಂಧವು (ಕೃಕಶ. ೩). ೧೮. ಸಪ್ತತತ್ತ್ವಗಳಲ್ಲಿ ಒಂದು: ತತ್ತ್ವಗಳು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ ಎಂದು ಏಳುವಿಧಗಳನ್ನುಳ್ಳವೆಂದೂ ಹೇಳಬಹುದು (ಶಾಕತ್ತ್ವ. ೨೩೩).

**ಬಂಧದ ಕಾಯಿ** = (ಬಿಡಿಭಾಗಗಳನ್ನು ಜೋಡಿಸಲು ಉಪಯೋಗಿಸುವ) ಅಂಟುಳ್ಳ ಒಂದು ಬಗೆಯ ಕಾಯಿ : ಮುಸಿ ಮೈಬಟ್ಟೆಗಳಿಗೆ ತಗುಲದಂತೆ ಹುಡುಗರಿಂದ ಬಂಧದ ಕಾಯಿ ತರಿಸಿ, ಅದರ ಅಂಟುನೀರು ಚಿಮುಕಿಸಿ ಅರೆಯಬೇಕು (ಶಾಗಿ. ೨೬). [ಸಂ.]

**ಬಂಧಕ** (ಗು). ೧. ಹಿಡಿಯುವ ; ಬಂಧಿಸುವ. ೨. ತಡೆಗಟ್ಟುವ ; ಪ್ರತಿಬಂಧಿಸುವ. (ನಾ). ೩. ಹಿಡಿಯುವುದು ; ಬಂಧಿಸುವುದು : ಉಳಿದ ಕರ್ಮವೆಲ್ಲವೂ ಅವನಿಗೆ ಬಂಧಕವೂ ಮಾರಕವೂ ಆದುದು (ಕತ್ತ್ವಪ. ೯೬). ೪. ಕಟ್ಟು ; ಬಂಧನ : ವಿಶ್ವದ ಎಲ್ಲ ಭಾಗಗಳನ್ನೂ ಒಟ್ಟಿಗೆ ಸೇರಿಸುವ ಬಂಧಕವು ಎಲ್ಲಿದೆ ? (ಹುಲ್ಕಿ. ೨೬೬). ೫. ಸೆರೆಹಿಡಿಯುವವನು ; ಬಂಧಿಸುವವನು. ೬. ಏರಿ ; ಒಡ್ಡು ; ಅಡ್ಡಗಟ್ಟೆ. ೭. ಕೆರೆ ; ಕಟ್ಟೆ. ೮. ಒತ್ತೆ ; ಅಡವು. [ಸಂ.]

**ಬಂಧಕಿ** (ನಾ). ೧. ಹಾದರಗಿತ್ತಿ ; ಜಾರೆ : "ಪಾಂಸುಳಾ, ಬಂಧಕೀ . . . ಅಭಿಸಾರಿಕಾ—ಈ ೧೧ ಹಾದರಗಿತ್ತಿ" (ಹಲಾಯು. ೬೦-೩೪೨) ; ಸತ್ಯವಾದಿಯಂತೆ ಪೊಳೆಯದೆ ಬಂಧಕಿಯಂತೆ ಮಂದಿಗೇವ್ಯಸದೆ (ಕೃಷ್ಣಾಸ್ವ. ೬-೩೦ ಪ) ; ಈಕೆಗೆ ಅನೇಕ ಭರ್ತೃಗಳಿರುವುದರಿಂದ ಈಕೆ ಬಂಧಕಿ (ಹುಟೀ. ೦೬೩). ೨. ಬಂಜೆ. ೩. ಹೆಣ್ಣಾನೆ. [ಸಂ. ಬಂಧಕೀ]

**ಬಂಧಗೌರವ** (ನಾ). ಕಾವ್ಯರಚನೆಯ ಹಿರಿಮೆ,—ಪ್ರೌಢಿಮೆ : ಇನಿತು ವಿವರ್ಣಿಕೆ ವಾತ್ಯಕ್ತಿಯೊಳ್ . . . ಶಾಂತಿವರ್ಮನ ನಯಂ ಗುಣವರ್ಮನ ಬಂಧಗೌರವಂ (ಆಗಪು. ೧-೦೦). [ಸಂ.]

**ಬಂಧತಂತ್ರ** (ನಾ). ರಥ, ಆನೆ, ಕುದುರೆ ಮತ್ತು ಪದಾತಿಗಳಿರುವ ಸೈನ್ಯಸಮೂಹ; ಸಂಪೂರ್ಣವಾದ ಸೈನ್ಯ. [ಸಂ.]

**ಬಂಧನ** (ಗು). ೧. ಕಟ್ಟುವ ; ಬಂಧಿಸುವ. ೨. ತಡೆಗಟ್ಟುವ ; ವಿರೋಧಿಸುವ. (ನಾ). ೩. ಕಟ್ಟುವಿಕೆ ; ಜೊತೆಗೂಡಿಸುವಿಕೆ. ೪. ಸೆರೆಮನೆ; ಕಾರಾಗೃಹ : "ಕಾರಂ ಬಂಧನಾಖ್ಯಂ" (ಹುಂಗಾ. ೦೦೬-೧); ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯ (ಮುಹಾದೇ. ೩. ೦೬೯-೩೦೩); ರಾಮಪ್ಪಗೌಡ ಮತ್ತು ತಿಮ್ಮಪ್ಪಗೌಡ ಇಬ್ಬರನ್ನು ಸೆರೆಹಿಡಿದು, ಬಂಧನದಲ್ಲಿರಿಸಿದನು (ಹೊಳಂಪ. ೬೯). ೫. ಕಟ್ಟು ; ಬಂಧ : ಬಂಧನಂ ಕಚದೊಳ್ ವಿರೋಧಂ ಪಂಜರದೊಳ್ . . . ಅಲ್ಲದಿಲ್ಲವೆಲ್ಲಿಯುಂ (ಚಂದ್ರ ಪು. ೩-೯ ಪ). ೬. ಹಗ್ಗ ; ಪಾಶ. ೭. ಸರಪಳಿ ; ಸಂಕೋಲೆ : ಬಂಧನಮಂ ಪಱಿಯುತ್ತೆ . . . ಗಂಧಮಹಾಸಿಂಧುರಮಯಿತರ್ಪಂತಿರೆ ಸ್ಯಂಧನಮೆಟ್ಟಿಂದು ತಾಗಿದಂ ನರಸುತನೊಳ್ (ಪಂಪಾ. ೦೨-೨೨). ೮. ಸೆರೆ ಹಿಡಿಯುವುದು ; ಬಂಧಿಸುವುದು. ೯. ಪಟ್ಟಿ. ೧೦. ಸೆರೆ ; ವಶ ; ಅಧೀನ. ೧೧. ನಿಗ್ರಹ ; ಅಂಕೆ ; ಹಿಡಿತ. ೧೨. ರಚನೆ ; ನಿರ್ಮಾಣ. ೧೩. [ತತ್ತ್ವಶಾ] ಐಹಿಕಬಂಧ: 'ಭವಬಂಧನ' ಪರಾ.

**ಬಂಧನ ಹಾಕು** = ಮಂತ್ರಶಕ್ತಿಯಿಂದ ಕಟ್ಟುಹಾಕು, —ದಿಗ್ಬಂಧನ ಮಾಡು : ಪ್ರೇತವನ್ನು ಹಿಡಿದು ಮನೆಗೆ ಬಂಧನ ಹಾಕಿ ಬರಬಾರದೆ ? (ಕರ್ಮಸ. ೨೩೪). [ಸಂ.]

**ಬಂಧನಕಾರಿ** (ನಾ). ಕಟ್ಟಿಗೆ ಒಳಪಡಿಸುವಂತಹುದು ; ಬಂಧಿಸುವುದು : ನಾನು ಮಾಡಿದ ಹದಿನೈದು ವರ್ಗಗಳು ಅಭ್ಯಾಸಕ್ಕೆ ಅನುಕೂಲವಾಗಿವೆ. ಆದರೆ ವಿಭಾಗಗಳು ನಿರ್ದಿಷ್ಟವಾಗಿ ಹೀಗೆಯೇ ಎಂದು ಬಂಧನಕಾರಿಯಾಗಲಾರವು (ಜಾನಪ. ೩೦). [ಸಂ. ಬಂಧನಕಾರಿನ್]

**ಬಂಧನಗೊಳಿಸು** (ಕ್ರಿ). ಬಿಗಿಮಾಡು ; ಸೇರಿಸು : ಬಗೆವೆತ್ತ ಬಾಗಿಲ ಕದ ವಜ್ರ ಲಾಳವಿಂಡಿಗೆಗಳ ಬಂಧನಗೊಳಿಸಿ ಬಿಗೆ ವಿಶ್ವಾಸಿ ಕಠೋರ ರಾಕ್ಷಸಿಯರ ತ್ತೆಗೆಯದೆ ಕಾಪನಿಕ್ಕಿದರು (ತೊರಹಪ. ೩೩-೩೭).

[ಬಂಧನ + ಕೊಳ್$_1$ + — ಇಸು]

**ಬಂಧನಾಗಾರ** (ನಾ). ಸೆರೆಮನೆ ; ಕಾರಾಗೃಹ : ಭಿಕ್ಷುವು ತಾನು ಋಣ, ರೋಗ, ಬಂಧನಾಗಾರ, ದಾಸತ್ವ, ಕಾಂತಾರಗಳಲ್ಲಿ ಇದ್ದಂತೆ ತಿಳಿಯುವನು (ಬುದ್ಧಕ. ೦೯೩). [ಸಂ.]

**ಬಂಧನಿ** (ನಾ). ೧. ಕಟ್ಟು ; ಬಂಧನ. ೨. ಹಗ್ಗ ; ಮಿಳಿ. ೩. ಸರಪಳಿ ; ಸಂಕೋಲೆ : ಕಬ್ಬಿಣದ ಬಂಧನಿಗಳಿಂದ ಬಿಗಿದಿದ್ದ ತೇಗದ ತೊಲೆಗಳ ಬಲವಾದ ಸಾರುವೆ ಆ ಕಟ್ಟಡವನ್ನು ಸುತ್ತುವರಿದಿತ್ತು (ಕೃಷರು. ೩೦೬). [ಸಂ. ಬಂಧನೀ]

**ಬಂಧಮೋಚನ** (ನಾ). [ಜೈನ] ಬಂಧನದಿಂದ ಬಿಡುಗಡೆ ಹೊಂದುವ ಒಂದು ಬಗೆಯ ವಿದ್ಯೆ : ಅಮಿತತೇಜಂ ಶ್ರೀವಿಜಯಂಗೆ ಯುದ್ಧ ವೀರ್ಯಮುಂ ಪ್ರಹರಣಾವರಣಮುಂ ಬಂಧಮೋಚನಮುಮೆಂಬ ಮೂಱು ವಿದ್ಯೆಗಳಂ ಕೊಟ್ಟು (ಶಾಪುಂಪು. ೦೯೦). [ಸಂ.]

**ಬಂಧಮೋಚನಿ** (ನಾ). = ಬಂಧಮೋಚನ : ಮಹಾಜ್ವಾಳಿನಿ ಯುದ್ಧವೀರ್ಯ ಬಂಧಮೋಚನಿ ಪ್ರಹರಣಾವರಣ ಭ್ರಾಮಂ ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಪು. ೦೯೬). [ಸಂ. ಬಂಧಮೋಚನೀ]

**ಬಂಧವಿದ** (ನಾ). (ಆಭರಣಾದಿಗಳನ್ನು) ಮಾಡುವವನು ; ರಚಿಸುವವನು : ದಿಟ್ಟಿಗೆವರ ಬಂಧವಿದಂ ಕಟ್ಟಿದ ಪಲತೆಱದ ಮಣಿಯ ಸೂಸಕದ ನೆಟಿಲ್ ಕುಟಿಲಮುತಲದೊಳ್ ಪೊಳೆದೆಡೆಗೆಟ್ಟುತ್ತಲ್ಲಿ ಬಣ್ಣವುರವಂ ತೀವಿರ್ (ಚಂದ್ರಪು. ೬-೪೬). [ಸಂ. ಬಂಧವಿದ್]

**ಬಂಧವಿಮೋಚನ** (ನಾ). = ಬಂಧಮೋಚನ : ಸೌಜನ್ಯಕಂದಾಂಕುರಂ ಶ್ರೀವಿಜಯಂಗೆ ಹೇತಿವಿದಾರಿಣಿಯುಂ ಬಂಧವಿಮೋಚಿನಿಯುಮೆಂಬ ವರದುಂ ವಿದ್ಯೆಗಳಂ ಕೊಟ್ಟು (ಶಾಂತಿಪು. ೬-೩೭ ಪ).

[ಸಂ. ಬಂಧವಿಮೋಚಿನೀ]

**ಬಂಧಸ್ತಂಭ** (ನಾ). ಆನೆಯನ್ನು ಕಟ್ಟುವ ಕಂಬ ; ಆಲಾನಸ್ತಂಭ : "ಆಲಾನಂ, ಬಂಧಸ್ತಂಭಃ—೨ ಆನೆಯನ್ನು ಕಟ್ಟಿಹಾಕುವ ಕಂಭದಂಥಾ ಗೂಟದ ಪೆಸರು" (ಸಿಕ್ಕಾಂಪಿ. ೨೪೯). [ಸಂ.]

**ಬಂಧಾಬಂಧಿ** (ನಾ). ಮಲ್ಲಯುದ್ಧದ ಒಂದು ವರಸೆ ; ಕೈಕೈಗಳನ್ನು ಹಿಡಿದು ವರಸೆಗಳನ್ನು ಹೂಡಿ, ಕಾದುವ ಯುದ್ಧ : ಒಡನೆ ದಂಡಗಳನೊಡ್ಡುತ್ತಲ್ಲಿ ಕೈಗಳಂ ಪಿಡಿದು ಬಂಧಾಬಂಧಿಯರರ ಮುಷ್ಟಾಮುಷ್ಟಿ ಬೆಡಗಿನಿಂದೊದಗಿ . . . ತೊಡಕುಗಾಳಗವ ತೊಡಗಿದರು (ಶೀಕೃಪು. ೩-೬-೭೯). [ಸಂ.]

**ಬಂಧಿತ** (ಗು). ೧. ಕಟ್ಟಿಗೆ ಒಳಗಾದ ; ಬಂಧನಕ್ಕೊಳಗಾದ. (ನಾ). ೨. ಕಟ್ಟಿಗೆ ಒಳಗಾದುದು : ಭವ್ಯಪರಂಪರೆಯ ನಾಡು ಪರ ತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು (ಅತ್ಮಾರ್ಚ. ೨). ೩. ಕಟ್ಟಿಗೆ ಒಳಪಟ್ಟವನು ; ಬಂಧನಕ್ಕೆ ಒಳಗಾದವನು : ಅಜ್ಞಾನದಿಂದ ಆವರಿಸಲ್ಪಟ್ಟವನಾಗಿಯೂ ವಿಷಯಾದಿಗಳಿಂದ ಬಂಧಿತನಾಗಿಯೂ ಬಹಿರ್ಮುಖವಾದ ಮನಸ್ಸುಳ್ಳವನಾಗಿಯೂ ವ್ಯವಹಾರ ಮಾಡುತ್ತಿದ್ದೇನೆ (ಹುಕ್ಕಾರ. ೨೬೦). [ಸಂ.]

**ಬಂಧಿಸು** (ಕ್ರಿ). ೧. ಕಟ್ಟಿಹಾಕು; ಬಿಗಿ : ಪುಸಿ ಕೊಲೆ ಕಳವು ಪರಸ್ತ್ರೀವ್ಯಸನಂ ಬಹುವಿಧಪರಿಗ್ರಹಂ ನರರಂ ಬಂಧಿಸಲೀ ಭವಾಬ್ಧಿಯೊಳಗಿರ್ದಿಸಲಾರ್ಕುಂ ದ್ಯೂತಮದ್ಯಮಾಂಸವ್ಯಸನಂ (ಅತಿಪು. ೨-೬೭): ನೊಸಲ ಸೀಸಕ ನುಗ್ಗುನುಸಿ ಬಂಧಿಸಿದ ಸರವಣಿ ಹಿಳಿದವರಿಬಲದಸಕ ನಿಂದುದು ಪಾರ್ಥ ನೆಚ್ಚನು ವೈರಿಮೋಹರವ (ಕುಮ್ಯಾಭ್ರಾ. ೦೭-೩) ; ನಳತೋಳ ಪಾಶದೊಳಗೆ ತನ್ನಿನಿಯನ ಬಿಗಿದು ಬಂಧಿಸುತ (ಕಂಹಾ. ೬-೦೭೦). ೨. ಬೇಡಿ ಹಾಕು; ಕೋಳ ತೊಡಿಸು : ತಸ್ಕರರಂ ಬಾರಿಸಿ ಕಪ್ಪರಂ ಕೆಡಿಸಿ ದಂಡಂಗೊಂಡು ವಿಂಡರ್ಕಳಂ ಭರದಿಂ ಬಂಧಿಸಿ (ರಹ್ರಾಜು. ೨-೬೪) ; ಹಾಸಿ ಹರಹಿದ ತೋಳನೊಬ್ಬುಳಿ ಮಾಡಿ ಬಂಧಿಸಿದ (ಕೌಶಾ. ೨೨-೦೦) ; ಈತನ ಹಿಡಿದು ಬಂಧಿಸಲಾಗಿ ಯದುಕುಲನಾಥನಾರಾಯಣ ಬಹನು (ತೊರಹಪ. ೩೫-೬೦). ೩. ಕೂಡಿಸು ; ಜೋಡಿಸು : ವಿಸುನಿಯಂತ್ರದ ಮಣಿಮಾಲೆಯ ತೋಳ್ಗೆ ಬಂಧಿಸಿದಳತ್ಯಂತಭಕ್ತಿಯಲಿ (ತೊರಹಪ. ೯-೭೬). ೪. ನಿರ್ಮಿಸು; ರಚಿಸು : ಶಶಿಕಾಂತಶಿಲೆಯಿಂದೆ ಬಂಧಿಸಿದ ಸೋಪಾನದ ಸುಪಂತಿಯಿಂದ . . . ಶೋಭಿಸುತಿರೆ (ಶತಮೋ. ೬-೩೯). ೫. ಮುಚ್ಚು : ಮುಂದಕೆ ಅಡಿಯನೊಂದನಿಡೆ ಶಕ್ಯಯ್ಯ ಬಂಧಿಸಲು ತನ್ನ ದ್ವಾರದ ಕವಾಟವನಾಗ (ಭ್ರಾಕಥಾ. ೦೯-೩). [ಬಂಧನ + —ಇಸು]

**ಬಂಧಿಸ್ತ** (ನಾ). ಬಂದೋಬಸ್ತು ; ಜೋಪಾನ : ಅಳಿಯನ ಆಳೀಸಿನಿಂದ ತರಿಸಿದ ಗುಟ್ಟರಟ್ಟಿನ ಫಾಯಿಲ್‌ಬೋರ್ಡಿನಲ್ಲಿ ಬಂಧಿಸ್ತ ಮಾಡಿಸಿಕೊಂಡರು (ಜಾಕಹ. II. ೦೬). [ ← ಮರಾ. ಬಂದಿಶ್ತ, ಬಾಂದಿಸ್ತೀ ಬಂದೀಸ್ತ ]

**ಬಂಧು** (ನಾ). ೧. ಸಂಬಂಧ; ನೆಂಟು. ೨. (ವಿಶೇಷವಾಗಿ ತಾಯಿಯ

ಕಡೆಯ) ಸಂಬಂಧಿಕ : ನೆಂಟ : "ಆತ್ಮೀಯಃ, ಸ್ವಜನಃ, ಬಂಧುಃ, ಆಪ್ತಃ, ಜ್ಞಾತಿಃ, ಬಾಂಧವಃ ಈ ೬ ನೆಂಟರ್" (ಹಲಾಯು. ೬೪-೩೫೩) : ಉಂಬಾಗಳಿಲ್ಲೆನ್ನ ಉಡುವಾಗಳಿಲ್ಲೆನ್ನ ಬಂಧುಗಳು ಬಂದಾಗಳಿಲ್ಲೆನ್ನ ಲಿಂಗಕ್ಕೆ ಇಲ್ಲೆಂಬ ಜಂಗಮಕ್ಕೆ ಇಲ್ಲೆಂಬ . . . ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹೇಂ ಏಟ್ಟ ಹೇಳಿತ್ತೆ (ಬಸವ. ೨೨೨) ; ಕಂಸಂ . . . ಬಂಧುಗಳಬಂಧುರವೆನೆ . . . ಕೈಕೊಳ್ಳದೆ . . . ಪಾಸಟಿಯೊಳ್ ಕೂಸನವಪ್ಪಳಿಸಿ (ಜಗನ್ನಾ. ೨-೩೩ ವ) ; ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (ಗಾದೆ). ೩. ಗೆಳೆಯ ; ಸ್ನೇಹಿತ. ೪. ಒಂದು ಬಗೆಯ ಮರ : 'ಬಂಧುಜೀವ' ಪರ್ಯಾ. ೫. [ಜ್ಯೋತಿ] ಲಗ್ನದಿಂದ ನಾಲ್ಕನೆಯ ರಾಶಿ : ವ್ಯವಹರಿಪ ಸಂಜ್ಞೆ ಚತುರಸ್ರವೆಂದೆನಿಪ್ಪವು ಚತುರ್ಥಗೃಹಕೆ ಚತುರ್ಥಕ್ಕೆ ವಲಂ ಮತ್ತಂ ಪಾತಾಳ ವೇಶ್ಮ ಸುಖ ಓಟುಕ ಬಂಧುವೆಂದೈದು ಪೆಸರ್ (ಜಾತಕ. ೦-೩೯).

ಬಂಧುಚಿಂತಾಮಣಿ = ಬಂಧುಗಳು ಕೇಳಿದುದನ್ನು ಚಿಂತಾಮಣಿಯಂತೆ ಕೊಡುವವನು ; ಒಂದು ಬಿರುದು : ಬಂಧುಚಿಂತಾಮಣಿ ಸಮಾಶ್ರಿತಜನಕಲ್ಪವೃಕ್ಷನ್ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಶಾಸನ. XX. ೯೬-೦೮; 1072). ಬಂಧುಬಳಗ = ನೆಂಟರು ಮತ್ತು ಪರಿಜನರು : ಅನಿಮಿತ್ತಬಂಧುವೆ ತಾಯ್ತಂದೆ ಬಂಧುಬಳಗವೆ . . . ಕಾವುದು (ಬಸವ. ೨-೩೯) ; ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ (ಪುರಂದ. ೦-೯೩-೦). [ಸಂ.]

**ಬಂಧುಕೃತ್ಯ** (ನಾ). ಒಬ್ಬನು ತನ್ನ ಬಂಧುಗಳಿಗೆ ಮಾಡಬೇಕಾದ ಕಾರ್ಯ,— ಕರ್ತವ್ಯ : ಆಳುಗಲಸಕೆ ಕೆಲಬರರಸನ ಬೇಳವೋಳಕೆ ಕೆಲರು ಕೆಲಬರು ಬಾಲೆಯರ ಕೊಳುಕೊಡೆಯ ಬಳಗದ ಬಂಧುಕೃತ್ಯದಲಿ (ಕುಮಾ.ಆ. ೩-೦೯). [ಸಂ.]

**ಬಂಧುಜನ** (ನಾ). ನೆಂಟರು ; ಬಳಗ : ಕಡಲ ತಡಿಯೆಯ್ದೆ ನೆಲನಂ ಪಡೆವರ್ ಭವದೀಯ ಪುತ್ರರುಳ್ಳವಿಗಳೊಳ್ ಪಡೆದುದು ಬಂಧುಜನಂ ನಿಮ್ಮಡಿಗಾವೇಂ ಪೋಷ್ಯವರ್ಗದಿಂದಂ ಪೊಜಿಗೇ (ಅಂತ್ಯ. ೬-೯೩). [ಸಂ.]

**ಬಂಧುಜೀವ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು : "ಬಂಧೂಕಂ, ಬಂಧುಜೀವಂ—ಈ ೨ ಬಂದುಗೆ" (ಹಲಾಯು. ೩೫-೫೫). [ಸಂ.]

**ಬಂಧುಜೀವಕ** (ನಾ). =ಬಂಧುಜೀವ. [ಸಂ.]

**ಬಂಧುತನ** (ನಾ). ನೆಂಟಸ್ತಿಕೆ ; ಬಾಂಧವ್ಯ : ಬಳ್ವಳ ಬಳಿನ ಬಂಧುತನವಿನಿತಾಯ್ತೋ (ಸುಕುಮಾ. ೯-೨೫) ; ನೀವೇಳನೆಯ ಭವದಲಿ ಬಂಧುತನದಲಿ ನಮ್ಮನೈದುವುದು (ಕೊಕಲ. ೦-೯-೨೦); ಉಳಿದು ಕೌರವ ಬಂಧುತ[ಪಾಠಾಂ. ಜ]ನವನು ತೀರ್ಥಯಾತ್ರೆಗೆ ವಿದುರ ಹೋದವಂ (ಹರಿಭಾಗ. ೩-೦ ಸೂಚಕ). [ಬಂಧು+ -ತನ]

**ಬಂಧುತೆ** (ನಾ). ೧. ಬಾಂಧವ್ಯ ; ನೆಂಟು. ೨. ನೆಂಟರ ಗುಂಪು ; ಬಳಗ "ಬಂಧುತಾ ಅಂದರೆ ನೆಂಟರ ಗುಂಪು, ನೆಂಟತನಕ್ಕೂ ಹೆಸರು" (ಸಿದ್ಧಾಂತಿ. ೦೭೭). [ಸಂ. ಬಂಧುತಾ]

**ಬಂಧುತ್ವ** (ನಾ). =ಬಂಧುತನ. [ಸಂ.]

**ಬಂಧುರ** (ಗು). ೧. ಸಮತಟ್ಟಿಲ್ಲದ; ಏರುಪೇರಾದ. ೨. ಕೊಂಕಿದ; ವಕ್ರವಾದ. ೩. ಚೆಲುವಾದ ; ಸುಂದರವಾದ. ೪. ನೋವುಂಟು ಮಾಡುವ ; ತೊಂದರೆಯನ್ನು ಕೊಡುವ. (ನಾ). ೫. ಬಾಗಿರುವುದು ; ಮಣಿದುದು : "ನತಂ, ನಮ್ರಂ, ಬಂಧುರಂ—ಈ ೩ ಎಱಗಿರ್ದುದು" (ಹಲಾಯು. ೦೨೫-೭೮). ೬. ಚೆಲುವಾದುದು : ಸುಂದರವಾದುದು: ಅಗ್ರಗುಂಗಳಸಹಾಯಂಗಳ್ ಬೆರಸಿರೆ ಕನ್ನಡದೊಳ್ ಬಂಧುರಮಾಗದು ಕಾವ್ಯರಚನೆ (ಕಲಾ. ೦-೩೩) : ಆನಂದವರ್ಧನನ ಜೀವನ ಸರ್ವಾಂಗಸುಂದರವೂ ತತ್ತ್ವಾನುಭವಬಂಧುರವೂ ಭಕ್ತಿನಿರ್ಭರವೂ ಆಗಿತ್ತು (ಧ್ವನ್ಯಾಲೋ. XXVII. ೬೮೦೯). ೭. ಒಂದು ಬಗೆಯ ಪಕ್ಷಿ ; ಬಾತು. ೮. ಬಂಧುಜೀವ. ೯. ರಥದಲ್ಲಿ ಸಾರಥಿಯು ಕುಳಿತುಕೊಳ್ಳುವ ಸ್ಥಳ. [ಸಂ.]

**ಬಂಧುರತೆ** (ನಾ). ಚೆಲುವು ; ಸೌಂದರ್ಯ : ತಳೋದರಿಗೆ ವೃಕೋದರ ನಾಗಿಪಂ ಕಚಬಂಧಬಂಧುರತೆಯಂ (ಗದಾಯು. ೦-೭೦) ; ವಿಶ್ವಚೇತನದಾ ಸ್ಪಂದನವೇ ಸೌಂದರ್ಯವಾದುದುವೆ ಜೀವನ ಮೂಲಬಂಧುರತೆ ಬೊಮ್ಮನದು (ಮಂಕುತಿ. ೯೯೬). [ಸಂ.]

**ಬಂಧುರವಡೆ** (ಕ್ರಿ). ಚೆಲುವಾಗು ; ಸುಂದರವಾಗು : ಬಂಧುರವಡೆದ ಮೋಹನಸಾಲೆಯುಂದದೆಯ್ದುದಿರ್ಪಾಮಂದಿರವಿಹುದು (ಕಂಪಹ. ೭-೩೭). [ಬಂಧುರ+ ಪಡೆ]

**ಬಂಧುರವಿಡಿ** (ಕ್ರಿ). = ಬಂಧುರವಡೆ : ಸ್ಮರಕರಿಕರದಂತೆ ರಂಜಿಸುತಿಹ ಬಂಧುರವಿಡಿದೂರುದ್ವಯದ ಗರುವನಾರುಸಿಗರು (ಕಂಪಹ. ೯-೦೦೭). [ಬಂಧುರ+ ಪಿಡಿ]

**ಬಂಧುರಿತ** (ಗು). ೧. ಬಾಗಿದ ; ಬಗ್ಗಿದ. ೨. ಕೊಂಕಿದ ; ವಕ್ರವಾದ. (ನಾ). ೩. = ಬಂಧುರಿತಕರಣ : ವಲ್ಲಭೆ ಮಲಗಿರ್ದವಳು ತನ್ನ ಎರಡು ಕೈಗಳಿಂ ಕೊರಳಂ ಪಿಡಿದು ರಮಿಸಲ್ಕೆ ಬಂಧುರಿತವೆಂಬ ಕರಣಂ (ಕಾಮಶಾ. ೨೩೭). [ಸಂ.]

**ಬಂಧುರಿತಕರಣ** (ನಾ). [ಕಾಮಶಾ] ರತಿಕೇಳಿಯ ಒಂದು ಭಂಗಿ : ಮಗುಳ್ದೊಡಗಿ ಮೊಳಕಾಲೊಳಗೆ ಕಯ್ಯನೊಯ್ದು ಬಲೆ ಬಗೆಗೊಂಡವನ ಕೊರಳನಪ್ಪಲವನು ಸೊಗಸೊಗೆಯಲವಳೂರುಯುಗವಾನಮರ್ದಪ್ಪಿ ರತಿವೊಗೆಯಲದೆ ಬಂಧುರಿತಕರಣಂ (ಬಸವ. ೯-೩೩). [ಸಂ.]

**ಬಂಧುರೆ** (ನಾ). ಚೆಲುವೆ ; ಸುಂದರಿ : ಲಾವಣ್ಯಸಿಂಧುವೇಳಾಲೀಲಾಯಮಾನಕೇಕರಾಕ್ಷಿಬಂಧುರೆಯುಂ ಭರತಾಗಮಭವನವಿಹಿತಮಹನೀಯಮಾಣಿಪ್ರದೀಪೆಯುಂ (ಎಚ್. V. ಕೆಂಬಾಯು. ೫೬-೭೩; 1117). [ಬಂಧುರ+ -ಎ]

**ಬಂಧುಲ, ಬಂಧುಳ** (ಗು). ೧. ಬಾಗಿದ ; ಬಗ್ಗಿದ. ೨. ಸುಂದರವಾದ ; ಚೆಲುವಾದ. (ನಾ). ೩. ಗಂಡನಲ್ಲದವನಿಂದ ಹುಟ್ಟಿದವನು : "ಕಟ್ಟವಳತನುಜಂ ಬಂಧುಳ[ಪಾಠಾಂ. ೪]ನೆನಿಕ್ಕು" (ಮಂಗರಾ. ೯೨-೦೦). ೪. ವೇಶ್ಯಾಮಂದಿರದ ಸೇವಕ. ೫. = ಬಂಧೂಕ : (ಮೃಚ್ಛಕ. ೩೦-೦೦೨೧). ಬಂಧುಳ : ೨. ಬಂಧುಳಃ, ಬಂಧಕೀಪುತ್ರಃ—ಈ ೨ ಕಿಡಿಕೆಯ ಮಗಂ" (ಹಲಾಯು. ೯೨-೩೪೭). [ಸಂ.]

**ಬಂಧುವರ್ಗ** (ನಾ). ನೆಂಟರ ಗುಂಪು ; ಆಪ್ತರ ಸಮೂಹ : ತೀಹಿದನು ಧೃತರಾಷ್ಟ್ರ ಭೀಷ್ಮರ ಲಲಿತಮತವನು ಬಂಧುವರ್ಗಸ್ಖಲಿತವನು ಸ್ವೈರಿಸುವುದೆಂದನು ವಿನಯದಲಿ ವಿದುರ (ಕುಮಾ.ಆ. ೧೭-೨೬) ; ಉರಿಯಲಳಿವುದು ಕಾಯ ಮೋಹದ ತರುಣಿಪುಳಿವಳು ಬಂಧುವರ್ಗವು ಸರಿಗು ಹಿಂದಕೆ (ಕೌಶಿಕ. ೨೩-೦೬). [ಸಂ.]

**ಬಂಧುವಿಯೋಗ** (ನಾ). ನೆಂಟರ ಅಗಲಿಕೆ : ಬಂಧುವಿಯೋಗದಿನೆನಗನು ಬಂಧಿಸಿದ ಮಹೋಪತಾಪವದು ನೀಂ ಬರೆ ನಿರ್ಬಂಧದಿನಳಜಾತ್ತದಜುಂ ಬಂಧುಗಳಿಂ ನೀನೆ ಬಂಧು ಜಗತಿಬಂಧು (ಕಂಪಹ.ತ. ೫-೨೮). [ಸಂ.]

**ಬಂಧುಸ್ಥಾನ** (ನಾ). [ಜ್ಯೋತಿ] "ಲಗ್ನದಿಂದ ನಾಲ್ಕನೆಯ ಸ್ಥಾನ" (ಜಾತಕ. ೯೦೬೩). [ಸಂ.]

**ಬಂಧುಹನನ** (ನಾ). ನೆಂಟರನ್ನು ಕೊಲ್ಲುವುದು ; ಆಪ್ತರ ಸಂಹಾರ : ಬಂಧುಹನನಕೆ ಮನದರಲು ಭವಪಿಂಥ್ಯದಲಿ ಬೆಳ್ಳಾಗಿ ರೌರವಸಿಂಧುವಿನೊಳೋಲಾಡದಿಹನೇ ಪರಮಪಾತಕನು (ಕುಮಾ.ಆ. ೩-೭೭). [ಸಂ.]

**ಬಂಧುಳ** 'ಬಂಧುಲ' ನೋ.

**ಬಂಧೂಕ** (ನಾ). ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಗಿಡ;

ಬಂದುಗೆ : "ಬಂಧೂಕಂ, ಬಂಧುಜೀವಂ—ಈ ಎರಡು ಬಂದುಗೆ" (ಶಬ್ದಮ. ೩೩-೩೩); ಮುದದವಂ ಜಪಾಪ್ರಸವರಕ್ತಾಶೋಕಬಂಧೂಕಶೋಣ ವರ್ಣಜ್ಯೋತಿಗಳೆಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ (ಅಭಿ. ೦೬-೩): ಬಂದನು ಸೂರ್ಯನು . . . ಬಂದನು ಉದಯಾದ್ರಿ ಶಿಖರದ ರತ್ನನು ಬಂಧೂಕಸುಮದ ಸನ್ನಿಭನು (ಜಿಂಶಾಕ. ೦೩-೩೦) [ಸಂ.]

**ಬಂಪು₁**, ಬೊಂಪು (ನಾ). ೧. ಸಾಬೂನಿನಂತೆ ಉಪಯೋಗಿಸುವ, ಅಂಟುಅಂಟಾಗಿರುವ ಒಂದು ಬಗೆಯ ವನಸ್ಪತಿ : (*). **ಬೊಂಪು₁** : ೨. ಅಂಟು : ಜಿಗಿ : ಕಣ್ಣುಗಳಲ್ಲಿ ಶ್ಲೇಷ್ಮವೆರಸಿ ನೀರು ಬೊಂಪುಬೋಪಾಗಿ ಸುರಿಯಲು ಮೇವು ಬಟ್ಟು ಜಡನಾಗಿ ನಿಂತಿರಲು (ಅಶ್ವಶಾ. ೬೨-೯); ಬಿಳಿದಾಗಿ ನೀಟಾಗಿ ಕೊಂಚ ಬೊಂಪಾಗಿ ಪಿರಿದು ಬಲ್ಲಿತಾಗಿ ಇದ್ದೊಡೆ ಮದನಜಲಮೆಂಬದು (ಕಾಮಶಾ. ೨೩೩).

[ದೇ.॥ ತಮಿ. ವಟುಮ್ಪು; ಮಲ. ವಟುಮ್ಪು; ತೆಲು. ಬಂಪು= ಹಲ್ಲಿನ ಮೇಲಿನ ಕೊಳೆ]

**ಬಂಪು₂**, ಬೊಂಪು₂ (ನಾ). ಒಂದು ಬಗೆಯ ಮೀನು : ಸೀಗಡಿ ಕೊರವಂ ಬಂಪು . . . ಹಂದಿಗನಾನೆಪಾಗಮದಲೆಂಬಗಣಿತಶಫರಾಳಿ ಗಳನೆ ತೆಗೆದರ್ ಬೇಡರ್ (ಶೃಕ್ರಿ. ೨೭-೯೦). **ಬೊಂಪು₂** : ಸಿಸಿಲು ಬೊಂಪು ಸವಿವಾಯ ಗೊದಳೆ ಗಜು ಮೆಚಿವ ಕಾಗೆಂಡೆ . . . ಆನೆಮೊಗನೆಂಬ ಮಾನ್ಸಗಳಂ ಗುದಿಗೆಯ್ದಾರು (ಕಕಾ. ೩-೯೩). [?]

**ಬಂಬಣ** (ಅ). ಹೆಚ್ಚಾಗಿ, ಅಧಿಕವಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ. 'ಬಂಬಲ', 'ಬಂಬಳ' ಪರಾ.

**ಬಂಬಣ ಬಾಡಿಸು**=ಅಧಿಕವಾಗಿ ಸೊರಗಿಸು,—ಒಣಗಿಸು : ಪಗಲೊ ಳೂರ್ಮಿಯುಂ ತಮ್ಮನಂಡಲೆದು ಬಂಬಣ ಬಾಡಿಸಿ ಬಿಡದೆ ಕಡುಗಾಯ್ದು ಕಣ್ಣೊಳುಳ್ಳವುಷ್ಣಕರನ ಬಿಸುಗದಿರ್ಗಳೆಯ್ದೆ ಮೆಯ್ದುಗೆದುವು (ವರ್ಧಪು. ೬-೨೩ ವ). **ಬಂಬಣಂ ಬಾಡು**=ಅಧಿಕವಾಗಿ ಒಣಗು,—ಸೊರಗು : ವಿರಹಾಕುಳೆಯಲರ್ದ ಲತೆಗಳಂ ಪೊರ್ದಲಣ್ಮದೆ ತನ್ನಂತೆ ಬಂಬಣಂ ಬಾಡಿರ್ದ ಜಾದಿಯಂ ನೋಡಿ (ಪಾರ್ಶ್ವಪು. ೯-೬೯ ವ).

**ಬಂಬಲ್₁**, ಬಂಬಲು₁, ಬೊಂಬಲ್ (ನಾ). ೧. ಗುಂಪು ; ಸಮೂಹ : "ಬಂಬಲ್, ತುಱುಗಲ್ . . . ಗುಪ್ಪೆ, ಗೊಂದಣ (ಉಂದಲ್)—ಈ ೪೦ ಸಮೂಹಂ" (ಕಕಾ. ೦೦-೩೨೨); ಮದಗಜಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳೆ ವಿಮುಖೀಭೂತಂಗಳಾದುವು (ಜಂಪು. ೯-೯೯ ವ): ಮೀಳ್ದಾಡುವ ತುಂಬಿಯ ಬಂಬಲಂತೆ . . . ಸೋಲಿಸದೆ ಕಾವನ ೞಬ್ಬಂ (ಕ್ಷಾಶಾ. ೦೯). **ಬಂಬಲು₁** : ೧. "ಬಂಬಲೆನಲು ಬಳಗಮೆನಲ್ ಶ್ರೇಣಿ" (ಕಕ. ೬೯); ಬಂಬಲು ತುಱುಗಲಾಗಿರೆಪೊಳಿಸಿ ಪೊಱಮಡುವ ಕಾಲನವಣೆಗಳೊಳಮೇಂ ನವವಿಧದ ಬಿನ್ನಣಮಂ ನಿನ್ನಾಳ್ದಂಗೆ ಬಿನ್ನವಿಸು (ಆಹುಕ. ೨-೪೦ ವ). ೨. ಒಟ್ಟಿಲು; ರಾಶಿ : ಬಸಿವ ಬಲುಜಿಗಿಯ ಕರುಳ ಬಂಬಲು (ಕುಮಾರ್ತ್ಯಾ. ೨-೫೩). ೩. ಜೊಂಪೆ; ಗೊಂಚಲು : ತಾರಗೆಗಳ ಬಂಬಲಂತೆ ತೋರಮುಡಿಯೊಳೆಳಮುತ್ತಿನ ಜಲೆಯ ಶೃಂಗಾರವೊಪ್ಪಿರೆ (ಕಕ. ೪೦-೫೦). ೪. ರಭಸ; ವೇಗ: 'ಬಂಬಲ್ವರಿ' ಪರಾ. **ಬೊಂಬಲ್**: ೨. ಮಲ್ಲಿಗಡಲ ತೆರೆಯ ಬೊಂಬಲ್ಗಳಂ ಜೇಂಗೊಡನ ಸಾಲ್ಗಳಂ (ಶೃಕ್ರಿ. ೩-೦-೦). [ದೇ.॥ ತುಳು. ಬೊಂಬುಳ]

**ಬಂಬಲ್₂** (ಅ). ಹೆಚ್ಚಾಗಿ, ಬಹುವಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ. 'ಬಂಬಲ', 'ಬಂಬಳ' ಪರಾ.

**ಬಂಬಲ್ವಾಡು**=ಅಧಿಕವಾಗಿ ಸೊರಗು,—ಬಾಡು : ಕೊಟ್ನಡೆಯದ ನಂತೆ ಬಂಬಲ್ವಾಡುತ್ತುಂ (ಧರ್ಮಾಮೃ. ೦-೦೯೯).

**ಬಂಬಲ** (ಅ). ಅಧಿಕವಾಗಿ, ಹೆಚ್ಚಾಗಿ ಎಂಬ ಅರ್ಥವನ್ನು ಕೊಡುವ ಒಂದು ಅನುಕರಣಾವ್ಯಯ . 'ಬಂಬಳ' ಪರಾ.

**ಬಂಬಲಂ ಬಾಡು**, ಬಂಬಲ ಬಾಡು=ಅಧಿಕವಾಗಿ ಸೊರಗು,— ಬಾಡು : ಪದ್ಮೋದರಂ ಪಥಶ್ರಮದಿಂ ಪರಿಶ್ರಾಂತನಾಗಿ ಪಸಿವಳುರೆ ಬಂಬಲಂ ಬಾಡಿ ಬಟಲ್ವುದುಂ (ಪಂಪಾಶ. ೧೬-೯೩); ಪೆಂಡಿರುಂ . . . ಅಡರ್ಪಿಲ್ಲದೆ ಕಲ್ಪವೃಕ್ಷಮುಡಿದು ಕೆಡೆಯೆ ಬಂಬಲ ಬಾಡಿದ ವಸಲತೆ ಗಳುಮಂ ಪೋಲ್ತು (ಶಂಕಿರಾ. ೦೯-೨ ವ): ಉಣಲಿಲ್ಲದೆ ಪಸಿವಿಂ ಬಂಬಲ ಬಾಡಿ (ಧರ್ಮಾಮೃ. ೬-೧೬೯).

**ಬಂಬಲಿಸು**, ಬಂಬಳಿಸು, ಬೊಂಬಾಳಿಸು (ಕ್ರಿ). ೧. ಗುಂಪಾಗು ; ಸಂದಣಿಸು : ತುಱುಗೆಮೆಯ ತರ್ಕಿಯೊಳ್ ಬಂಬಲಿ [ಶಾಂ. ೮]ಪ ಕಣ್ಣಾ ಗಳೊಸರೆ (ವರ್ಧಪು. ೪-೬೨ ವ): ಹೂಗಿಡಮುಲಿರಿಹುದೇತಕ್ಕೆ ? ತುಂಬಿಯು ಬಂಬಲಿಸಲಿ ಎಂದು (ಗತೇಶ. ೬೩-೯). ಬಂಬಳಿಸು : ೧. ಮೇಲಿನ 'ವರ್ಧಪು' ಪ್ರಯೋಗದ ಪಾಠಾಂತರವನ್ನು ನೋಡಿ. **ಬೊಂಬಾಳಿಸು**: ೨. ಹರಡು ; ವ್ಯಾಪಿಸು : ಜಳಲಿನನು ಬೊಂಬಾಳಿಸಿದ ಭಾಸುರದ ರಕ್ತದಲಿ (ಕೊಶರಾ. ೩-೦೦-೨೮). [ಬಂಬಲ್₁ + —ಇಸು]

**ಬಂಬಲು₁** 'ಬಂಬಲ್₁' ನೋ.

**ಬಂಬಲು₂** (ನಾ). ಎಳನೀರಿನ ತೆಂಗಿನ ಕಾಯಿಯಲ್ಲಿರುವ ತೆಳುವಾದ ತಿರುಳು; ಗಂಜಿ: ಬಂಬಲು ಗೋರಿಕೊಡ್ಲ ಬುದ್ಧಿ! (ಪಮ್ಮಶು. ೦೬೦). [ ? ]

**ಬಂಬಲುಗರುಳು** 'ಬಂಬಲ್ಗರುಳ್' ನೋ.

**ಬಂಬಲುಗಿಡಿ** (ನಾ). ಕಿಡಿಗಳ ಗುಂಪು,—ರಾಶಿ : ಹೊಸಮಸೆಯ ಬಾಯ್ದಾರೆಗಳ ಬಂಬಲುಗಿಡಿಯು ಬಾಣಾಳಿಗಳಲೀತನ ಹೂಳಿದನು (ಕುಮಾರ್ತ್ಯಾ. ೨೦-೨೩) ; ಕಡಲೊಳಿದಲೊಡನೆ ಬಂಬಲುಗಿಡಿಯು ಗಡಣದಿಂ ಬಡಬನೊಡ ಗೂಡಿ (ಅಣ್ವಕ. ೦-೯). [ಬಂಬಲು₁ (< ಬಂಬಲ್₁) + ಕಿಡಿ]

**ಬಂಬಲುಗುರುಳ್** 'ಬಂಬಲ್ಗುರುಳ್' ನೋ.

**ಬಂಬಲ್ಗಿಡಿ** (?). (?) : ಬರಿಗುಂಡಂ ಪಿಣಿಲೇಱಿ ರೋಮಮುಡಿ ದಿರ್ಬಣ್ಣಾಗೆ ಮುಂಗಾಲಗಲ್ತಿರೆ ಬಿರ್ಕುರ್ವೆ ಮೊಗಂ ಕರಂ ಪೆಗಲ ಬಣ್ಬಿಂ ಜೋಲ್ವ ಬಾಲಂ ಮುಟುಂಕಿರೆ ಬಂಬಲ್ಗಿಡಿವಂ ಪೊದಟ್ಟಗೆಪೂಗೊಂಬೊಪ್ಪೆ ಕೋಟ್ಕುಟ್ಟೆ ಪೆರ್ಸೊರೆ ಸೂಸುತ್ತಿರೆ ಭೀಕರಂ ಸೊಗಯಿಸುತ್ತುತ್ಕ್ರೋಕರಂ ಸೂಕರಂ (ಶಂಕ್ರಪು. ೩-೭೦). [ ? ]

**ಬಂಬಲ್ಗರುಳ್**, ಬಂಬಲುಗರುಳು, ಬಂಬಲ್ಗರುಳು (ನಾ). ಜೊಂಪೆ ಜೊಂಪೆಯಾಗಿ ಹೆಣೆದುಕೊಂಡಿರುವ ಕರುಳು ; ದೊಂಡೆಕರುಳು : ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋೞ್ಚಿಕ್ಕಿ ಬಂಬಲ್ಗರುಳ್ಗಳನಸಲ್ಕೆ ವಿಳಾಸದಿಂ ಮುಡಿಯಿಪಂ ಪಂಕೇಜಪತ್ರೇಕ್ಷಣೇ (ಶಂಕಶಾ. ೬-೬೨). **ಬಂಬಲುಗರುಳು** : ಅಂದ ಕೊರಳಿನ ಬಸಿವ ಬಂಬಲುಗರುಳ ಜಱಿವ ಕಪಾಲದೊಗುನೆತ್ತರ ರಣಾಪವನಿ ಕಱುವೃತಿರ್ದುದು ರೌದ್ರಮಯರಸವ (ಕುಮಾರ್ತ್ಯಾ. ೦೩-೬೯ ). ಬಂಬಲ್ಗರುಳು : ಒಡಲನೊಚ್ಚತಗೊಂಡ ವಂಬಿನ ಕುಡಿಗೆ ನೆಱಿಯದು ರಕ್ತಜಲ ಬಳಿವಿಡಿದು ಕವಿವಂಟುಗಳು ಬಂಬಲ್ಗರುಳ ಸೇದಿದವು (ಕುಮಾರ್ತ್ಯಾ. ೧೦-೩). [ಬಂಬಲ್₁ + ಕರುಳ್]

**ಬಂಬಲ್ಗರುಳು** 'ಬಂಬಲ್ಗರುಳ್' ನೋ.

**ಬಂಬಲ್ಗುರುಳ್**, ಬಂಬಲುಗುರುಳ್ (ನಾ). ಒತ್ತಾದ ಕೂದಲು ; ದಟ್ಟವಾದ ಕೇಶರಾಶಿ : ಅಮರಾಂಗನೆಯರ ಬೀಸುವ ಚಾಮರದ ಗಾಳಿಯಲಂಪಿನೊಳಲ್ಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ ತಳರ್ವ ಚಿನ್ನಪೂಗಳನವಯಮದೊಳಿ ಸಯ್ತು ಮಾಡುವ ಕೆಯ್ತುಮುಮಂ (ಅಜಿತ. ೯-೯ ವ) ; ಮಿಳಿರ್ವ ಬಂಬಲ್ಗುರುಳ್ಗಳೆಂಬ ತೊಡಂಕುವಲೆ ಬಸಂತನ ಕೆಳೆಯನೇಂಬೆರಲಿಯುಂ ಸಿಲ್ಕಿಸೆಯುಂ (ಕ್ಷಾಶಾ. ೩೩). **ಬಂಬಲುಗುರುಳ್** : ದೀರ್ಘನಯನದ ಬಲುಮೊಲೆಯ ಬಾಸೆಗಳ ಬಂಬಲುಗುರುಳ . . ಪುಳಿನಜಘನಸ್ಥಳದ ದಾನವಸತಿಯರಿರ್ದರ್ (ಕೂಡಶಾ. ೩-೨-೬೯).

[ಬಂಬಲ್₁ + ಕುರುಳ್₁]

**ಬಂಬಲ್ಗೊಂಬು** (ನಾ). ಎಲೆಯ ಜೊಂಪೆಗಳಿಂದ ತುಂಬಿರುವ ಕೊಂಬೆ ; ಎಲೆಗಳಿಂದ ಕೂಡಿ ದಟ್ಟವಾದ ಶಾಖೆ : ನೆಗೆದು ಲಂಬಿಸಿದ ಬಂಬಲ್ಗೊಂಬುಗಳಿಂಬಾದಶೋಕಾನೋಕಪದಿಂಬಿಸೊಳೊಂದಿ ಮಂದ ಯಿಸಿ ನೀಳ್ದು ಪರ್ವಿ ಪೆರ್ವೆತ್ತ ಕರ್ವುರ್ಗಿರೊಳಗೆ (ನೇಮಿಪು. ೫-೩೨ ವ). [ಬಂಬಲ್$_1$ + ಕೊಂಬು$_1$]

**ಬಂಬಲ್ಗೊಳ್** (ಕ್ರಿ). ಗುಂಪಾಗು ; ಸಾಂದ್ರವಾಗು ; ಮಂದಯಿಸು : ಚಿಂಬಾಯ್ಪರಿಯಂ ಬಂದುಗೆಯೆಂಬಾಸಯಿನೊಸೆದು ಮುಸುಬಿ ಬಂಬ ಲ್ಗೊಂಬಾ ತುಂಬಿಗಳೆನೆಯಳಮಿಸೆಯುದೇಂ ಬಳಿಮುದೊ ಚುಂಬಿಸೊಗದ ಕಳಿಗೆಟಿದೊರಪೊಲ್ (ಶಬರ. ೯-೧೩೬). [ಬಂಬಲ್$_1$ + ಕೊಳ್$_1$]

**ಬಂಬಲ್ಜಡೆ, ಬಂಬಲ್ಜಡೆ** (ನಾ). ಹೆಣೆದುಕೊಂಡಿರುವ ಕೂದಲು ; ಜಟೆ : ನೀಳ್ದ ಬಂಬಲ್ಜಡೆ ನೆರೆ ಮೆರೆಯಲ್ ಸ್ಥಾಣುವೋಲ್ ನಿಶ್ಚಲತ್ವಂ ಬೆರಸಾದಂ ಸೂರ್ಯಬಿಂಬಕ್ಕಭಿಮುಖನೆನಿಪೀ ಮೌನಿ (ಶಾಂತಿ. ೧೦೨-೧೬೪). **ಬಂಬಲ್ಜಡೆ** : ಎಳವಿಂಚಂ ಪೋಲ್ವ ಬಂಬಲ್ಜಡೆ ಬಳೆವ ಘನಶ್ಮಶ್ರು . . . ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ಶಾಂತೀ. ೧-೧೩೩). [ಬಂಬಲ್$_1$ + ಜಡೆ$_1$]

**ಬಂಬಲ್ಜಡೆ** 'ಬಂಬಲ್ಜಡೆ' ನೋ.

**ಬಂಬಲ್ದಂಬುಲ** (ನಾ). ಕಟ್ಟುವೀಳೆಯ : ಕರಂ ಮೆಯ್ವೆತ್ತು ಮುಯ್ಯಾಗವಾಗದುಮಾರ್ಗಂ ಕುಡುತಿರ್ಪ ಕಪ್ಪುರದ ಬಂಬಲ್ದಂಬುಲಂ (ಶಂಕರಾ. ೯-೧೦೯). [ಬಂಬಲ್$_1$ + ತಂಬುಲ]

**ಬಂಬಲ್ದಗುಳ್** (ಕ್ರಿ). ದಟ್ಟಯಿಸು ; ಸಾಂದ್ರವಾಗು ; ಅಧಿಕವಾಗು : ಹೇಮಂತದೊಳ್ ಮದಮಂ ತಗು[ಳ್ದು] ಶಿಶಿರದೊಳುಬ್ಬಿದು ಮತ್ತಂ ಬಸಂತದೊಳ್ ಬಂಬಲ್ದಗುಳ್ದ ಮದನಮದಾನೇಕಪಕ್ಕೆ ಪಕ್ಕಾದಳೀಕ (ಶಾಂತಿ. ೬-೯೯ ವ). [ಬಂಬಲ್$_1$ + ತಗುಳ್$_1$]

**ಬಂಬಲ್ದೆರೆ** (ನಾ). ಒಂದಾದ ಮೇಲೊಂದರಂತೆ ಬರುವ ಅಲೆ ; ತರಂಗಮಾಲೆ : ಎಡೆಗುಡದೆ ನೂಂಕಿ ಮೆಲ್ಲನೆ ತಡಿಯಂ ಸಾರ್ಚಿದ ಪುದಿದಿಂ ಬಂಬಲ್ದೆರೆಗಳ್ (ಕಂತಹಾ. ೫-೩೩) ; ಪಾಲ್ದಂಬಿದ ಸಾಲ್ದೆನೆಗಳ ನೆಲ್ದಂಬುಗಲಸೊಲ್ದು ಸೀಳಿ ಗಿಳಿ ಭಯಭರದಿಂ ಜೋಲ್ದಿಳಿಗೆಲೆವಂತರೆ ಬಂಬಲ್ದೆರೆಯೊಳ್ಪೊಳೆದು ಪಾಡಿಯ ನೀರೊಳ್ಪೋರ್ಕುಂ (ರಾಜಶೇ. ೨-೧೩). [ಬಂಬಲ್$_1$ + ತೆರೆ$_1$]

**ಬಂಬಲ್ದೊಡಿ** (ನಾ). ತೊರೆಗಳ ಸಮೂಹ : ಅಲರ್ವಂಡಿಂದಾದ ಬಂಬಲ್ದೊಡಿಗಳ ನಲವಿಂ ದಾಂಟಿ ಪೋಪನ್ನೆಗಂ (ಕಾವ್ಯಸಾ. ೦೦೩). [ಬಂಬಲ್$_1$ + ತೊಡಿ$_1$]

**ಬಂಬಲ್ನಿಱಿ** (ನಾ). ಒತ್ತಾದ ನೆರಿಗೆ ; ದಟ್ಟವಾಗಿರುವ ನಿರಿಗೆ : ಬಂಬಲ್ನಿಱಿ ಮದನನ ನನೆಯಂಬಿನ ಪೊದೆಯೆನಿಸೆ ಕಣೆಯಮಳವಟ್ಟಿರೆ ಮುಯ್ಯಂ ಬಳಸಿದ ಮೇಲುದು ಕುಚಮಂ ಬಿಗಿದಿರೆ ಗುರುನಿತಂಬೆ ದುಗುಲಮಮುಟ್ಟಳ್ (ಜಗಂ. ೧೧-೧೦೬). [ಬಂಬಲ್$_1$ + ನಿಱಿ$_1$]

**ಬಂಬಲ್ಮಿದುಳ್** (ನಾ). ಒಂದರೊಡನೊಂದು ತೊಡರಿಕೊಂಡಿರುವ ಮಿದುಳುಗಳ ರಾಶಿ : ಬಂಬಲ್ಮಿದುಳ್ ಪಾಯ್ಪುರೆ . . . ಕಾದಿತ್ತು ಖಿಡ್ಗಿಪ್ರತಾಪಂ (ಜಗಂ. ೬-೫೩). [ಬಂಬಲ್$_1$ + ಮಿದುಳ್]

**ಬಂಬಲ್ಮುಡಿ** (ನಾ). = ಬಂಬಲ್ಗುರುಳ್ : ಜೋಲ್ದಿರ್ದ ಬಂಬಲ್ಮುಡಿ ಶಿಥಿಲಚಿತ್ರಿರ್ದ ನೀವೀಭರಂ ಕಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳ್ ಹೈದ್ಯಾಂಗಿ ಶಯ್ಯಾಗ್ರದಿಂದಂ (ಜಗಂ. ೨-೭೬). [ಬಂಬಲ್$_1$ + ಮುಡಿ]

**ಬಂಬಲ್ವನಿ** (ನಾ). ಎಡೆಬಿಡದೆ ಸಂರಿಯುವ ಹನಿ : ವನಿತ ಮೊಲೆವಾಲ ಬಂಬಲ್ವನಿಗಳೊ ನಸುನಗೆಯೊ ಮೊಳೆಗಳೋ ಪೊಳೆದಪುವೆಂಬನವೊಗದ ಪಲ್ಲೆಮೊಪ್ಪುವ ತನಯನ ನಗೆಮೊಗಮನೆಂದು ಪೇಟು ಕಂಡಪೆನೋ (ಅಜಿತ. ೦-೯೯). [ಬಂಬಲ್$_1$ + ಪನಿ$_1$]

**ಬಂಬಲ್ವರಿ** (ಕ್ರಿ.) ರಭಸವಾಗಿ ಓಡು : ಧಾವಿಸಂ : ನೇಲ್ವ ಪೆಣಕ್ಕೆ ಪರ್ದೆಬಗೆ ವೈರಿಯ ನಾಲ್ಕುಬಲಕ್ಕಮೊಂದೆ ಬಂಬಲ್ವರಿಯುತ್ತುಮಿರ್ದುದು ಜಯದ್ವಿರದಂ (ಕಾವ್ಯಾ. ೬೪) ; ಬಂಬಲ್ವರಿಯುತ್ತುಂ ನೆಗೆದೆಂಬುದಮಂ ತೇಸವಿಮಿಱಿಯುತಂ . . . ಅದೇಂ ಬಿನದಮನಮರಪತಿಗೆ ತೋಱಿದುದೊ ಗಜಂ (ಚಂದ್ರಪ್ರ. ೦೨-೬೪) ; ಮಸಗಿದ ಮಿಟ್ಟುವೆ ಮದಗಜದೆಸಕಮನೊಳ ಕೊಂಡುದೆನಿಸಿ ಭೀಮನ ಬಲಮುಂ ದೆಸೆಗೆಡಲಱಿಯುಟ್ಟುತ್ತುರ್ವಿಸೆ ಬಂಬಲ್ವರಿದು ತೊತ್ತಳಂದುಬೞಿಯುತ್ತುಂ ಬಂದು (ಮಹಾಶೀ. ೦೨-೧೩೪). [ಬಂಬಲ್$_1$ + ಪರಿ$_2$]

**ಬಂಬಲ್ವರಿಗೊಳ್** (ಕ್ರಿ). ದಟ್ಟವಾಗಿ ವ್ಯಾಪಿಸು ; ಸಾಂದ್ರವಾಗು : ಕಾಲ್ಕಿಡಿದಿರ್ದೊಡಾ ಚರಣಪಲ್ಲವದಿಂದೊದೆದೆತ್ತಿ ಸುತ್ತಿ ಬಂಬಲ್ವರಿ ಗೊಂಡು ನೀಳ್ದು ಕಿಸುಪೇಱಿದ ಕೇಕರಕಾಮಪಾಶದಿಂ ಕೊಲ್ವವೊಲ್ (ರೇವಾತ. ೦೯-೬೬). [ಬಂಬಲ್$_1$ + ಪರಿಗೊಳ್]

**ಬಂಬಲ್ವರಿಯಿಸು** (ಕ್ರಿ). ರಭಸವಾಗಿ ಓಡಿಸು ; ವೇಗವಾಗಿ ಧಾವಿಸು ವಂತೆ ಮಾಡು : ಎರಡುಂ ಭಾಗಂಗಳೊಳ್ ತನ್ನಣುಗಿನ ಸುತರುನ್ನತ ನಾಗಂಗಳಂ ಜೇಂಕರಿಸುತ್ತಿಂಬಾಗಿ ಬಂಬಲ್ವರಿಯಿಸೆ (ಶಾಂತಿಪು. ೫-೬೯) ; ಕರಿಯಂ ಪಾಯ್ದೇಱಿ ಬಂಬಲ್ವರಿಯಿಸಿ ಗಿರಿಯೊಳ್ ಪೋರಿಸುತ್ತುಂ ಸರತ್ಕೇ ಸರಿ ಕಾಸಾರಕ್ಕೆ ಕೊಂಡುಯ್ವುದಿದು (ರೇವಾತ. ೬-೨೪) ; ರಾಕ್ಷಸಧ್ವಜ ಬಲಕ್ಕೆ ತಾರ್ಕ್ಷ್ಯಧ್ವಜರ ಬಲಮುಗಿದು ಸುಗಿವುದುಂ ಬಲದೇವಂ ಕಂಡು ತನ್ನ ಗಂಧಗಜಮಂ ಬಂಬಲ್ವರಿಯಿಸಿ ಪಿದ್ವಿಡ್ವಲದ ವೀರರಂ ವಿನಾಶಕ್ಕೆ ತಪ್ಪುದುಂ (ಮಹಾಶೀ. ೬-೮೩ ವ). [ಬಂಬಲ್$_1$ + ಪರಿಯಿಸು]

**ಬಂಬಲ್ಬೆಳಗು** (ನಾ). ದಟ್ಟವಾದ ಬೆಳಕು ; ಸಾಂದ್ರವಾದ ಕಾಂತಿ : ಜೋಲ್ವ ಮೇಲುದನಿನಿಸು ಮುಸುಕುತಲರ್ಗಣ್ಣ ಬಂಬಲ್ಬೆಳಗುಗಳ ಸೂಸುತೆ (ಹರ್ಷಾ. ೯-೨೦). [ಬಂಬಲ್$_1$ + ಬೆಳಗು$_2$]

**ಬಂಬಲ್ಸರಿ** (ನಾ). ಎಡೆಬಿಡದ ಮಳೆ ; ಜಡಿಮಳೆ : ಮಲ್ಸರಿ ಸೂಲ್ಸರಿ ಮುಗಿಲೊಳ್ಗಲ್ಸರಿ ತೆಳ್ಸರಿ ಕರಂ ಪೊನಲ್ವರಿಯುವ ಬಂಬಲ್ಸರಿ ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱಿದುವಿರುಳುಂ ಪಗಲುಂ (ರಾಜಶೇ. ೯-೧೦೨). [ಬಂಬಲ್$_1$ + ಸರಿ$_2$]

**ಬಂಬಳ** (ಅ). ಹೆಚ್ಚಾಗಿ, ಅಧಿಕವಾಗಿ ಎಂಬರ್ಥವನ್ನು ಕೊಡುವ ಒಂದು ಅನುಕರಣಾವ್ಯಯ : ಕಂಬನಿಯೊಲೋಲಾಡಿ ಬಂಬಳ ಪೊಗಬಾಡಿ ನೋಲಿಂ ಕರಂ ಬೞಲು (ಜಗಂ. ೦೩-೧೦೬ ಟಿಳೆ). 'ಬಂಬಲ' ಪರಾ.

**ಬಂಬಳಂ ಬಾಡು, ಬಂಬಳ ಬಾಡು** = ಹೆಚ್ಚಾಗಿ ಒಣಗು ; ಅಧಿಕವಾಗಿ ಸೊರಗು,—ಬತ್ತು : ಪಸಿವಿಂದಂ ತೃಷೆಯಿಂದಂ ಪಥಶ್ರಮದಿಂ ದಾದಮಾನುಂ ಸೇದೆಗೆಟ್ಟು ಬಂಬಳಂ ಬಾಡಿರ್ಪನ್ನೆಗಂ (ವಡ್ಡಾರಾ. ೧೦೦-೨೩); ಕಾಂತೆಯರ್ . . . ನಿಜವಾಸದ ವಿಳಾಸವಿಹಗಂಗಳಂ ನೋಡಿ ಬಂಬಳಂ ಬಾಡಿ (ಕುಸ್ಮಕೃ. ೧೩-೯೭ ವ) ; ಆ ಬಾಳೆ ಕಾದ ಪುಡಿಯೊಳ್ ಬಿರ್ದೆಳವಾಳೆ ಯಂತೆ ಬಂಬಳ ಬಾಡಿ (ಸುಕುಮಾ. ೦೨-೨೪ ವ) ; ಬಂಬಳ ಬಾಡಿದ ದೇಹ ದಟ್ಟಳಿದ ತುಱುಂಬು ಕಂದಿದ ಮೊಗದಿಂದ . . . ಪಲುಂಬಿದರು (ಚಿತ್ರ. ೧೦-೭೯). **ಬಂಬಳನೆ ಬಾಡು** = ಹೆಚ್ಚಾಗಿ ಸೊರಗು,—ಬತ್ತು : ಬಂಬಳ [ಬಾಡಿ. ಲ]ನೆ ಬಾಡಿ ಮಂಜಿಱಿದಂಬುಜಲತೆಯಂತಿರ್ದ ಜಾನಕಿಯಂ ನೀಲಾಂಬರನೀಕ್ಷಿಸಿ (ಕುಂದಮಾ. ೦೫-೯).

**ಬಂಬಳಿಸು** 'ಬಂಬಲಿಸು' ನೋ.

**ಬಂಬಾಳ, ಬೊಂಬಾಳ$_2$** (ನಾ). ೧. ಕಣ್ಣು ಕೋರೈಸುವಂತಹ ಬೆಳಕು ; ಅತ್ಯಂತ ಪ್ರಕಾಶಮಾನವಾದ ಪ್ರಭೆ : 'ಬಂಬಾಳದೀವಿಗೆ' ಪರಾ. **ಬೊಂಬಾಳ$_2$** : ೧. 'ಬೊಂಬಾಳದೀಪ', 'ಬೊಂಬಾಳ ದೀವಿಗೆ' ಪರಾ. ೨. ಕಣ್ಣು ಕೋರೈಸುವ ಪ್ರಭೆಯುಳ್ಳ ದೀಪ : ಚಂದನದ ತೈಲದಿಂ ದುರಿವ ಬೊಂಬಾಳಂಗಳಿಂದೆ . . . ಇರುಳ್ಕಂಗೊಳಿಸು

ತಿರೆ (ಕೃಮಿಶಾ. ೨೯–೩೬); ಜಾರಚೋರರತ್ತಣಿಂ ಭೀತಿಯಣಂ ನಾಡೊಳ್ ಲ್ಲನೆ ಬಾಗಿಲಂ ಪಡಿದೆಱೆದು ಬೊಂಬಾಳಂಗಳನುರಿಯಿಸಿ ತಾಂ ನಿದ್ದೆವೋದ ಸಜ್ಜನರ ಸಜ್ಜುಗೊಂಡ ಬೀಡುಗಳ ಸಾಲ್ಗಳಿಂ . . . ಕೇರಿಗಳ್ ಸೊಗಯಿಪೆ (ಧರ್ಮಾಮೃ. ೫೬–೨೦); ಮುನಿವ ಕಾಲಂಗೆಯ್ದುನಿನ್ನುರಿವ ಬೊಂಬಾಳ ನಂದುವಂತಿವನ ಚಿತ್ರವಿಮೋಕ್ಷವಾಯ್ತು! (ಕೃಶಾಂ. ೯೯–೬೯೯).

[ ← ಮರಾ. ಬಂಬಾಳ್, ಬಂಭಾಳ್]

**ಬಂಬಾಳದೀವಿಗೆ, ಬೊಂಬಾಳದೀವಿಗೆ** (ನಾ). ಪ್ರಕಾಶಮಾನವಾಗಿ ಉರಿಯುತ್ತಿರುವ ದೀಪ; ಪ್ರಜ್ವಲಿಸುತ್ತಿರುವ ದೀಪ : ಬಂ[ಪಾಠಾಂ. ಬೊಂ]ಬಾಳದೀವಿಗೆ ಬೆಳಗಿತು ಬಾಲಾರ್ಕಬಿಂಬಗಳೆನೆ (ಕುಮಾರಾಂ. ೦೯–೫೯). **ಬೊಂಬಾಳದೀವಿಗೆ** : ಬೆಳಗಿದವು ಬೊಂಬಾಳದೀವಿಗೆ (ಕುಮಾರವ್ಯಾ. ೬–೯೩); ಬೆಳಗಿದವು ಬೊಂಬಾಳದೀವಿಗೆ ಲಕ್ಷಸಂಖ್ಯೆಯಲಿ (ಕೊರಾಣ. ೩–೬–೩); ಹೂವಿನ ಗೊಂಚಲಂಬಂದದೆ ಬೊಂಬಾಳದೀವಿಗೆ ಮಱೆದುವಿಕ್ಕಲದೆ (ಪೋಕಶ. ೦೩–೬).

[ ಬಂಬಾಳ + ದೀವಿಗೆ./ಮರಾ. ಬಂದಾಳ್‌ದೀವಾ, ಬಂಬಾಳ್‌ದಿವಾ]

**ಬಂಬಿಕನೂರ್** (ನಾ). ಒಂದು ಊರಿನ ಹೆಸರು : ಬಂಬಿಕನೂರ ಪೂರ್ವ್ವಿಗರ ಗೊಲಂಕಿಗಾವುಣ್ಡನ ಮಗ (ಎಕ. ೪೯, (೩). ಹೊಸಕನ್ನ. ೨೦೬–೩; ೬೮೦).

[ .? + ಊರ್ ]

**ಬಂಬು₁** 'ಬೊಂಬು₁' ನೋ.

**ಬಂಬು₂, ಬೊಂಬು₂** (ನಾ). ೧. ಕೊಳವೆ; ನಳಿಗೆ : ಬಂಬಿನ ಸಹಾಯದಿಂದ ಬಾವಿಯೊಳಗಿನ ನೀರು ಮೇಲೆ ತೆಗೆಯುತ್ತಾರೆ (ಹುಬ್ಬಳ್ಳಿ. ೩–೮೦). ೨. ಗಾಳಿಯ ಒತ್ತಡದಿಂದ ಕೂಗುವ ಸಾಧನ; ಸೈರನ್ನು : ಗಿರಣಿಯ ಬಂಬು ಕರೆಯುವುದು ಏಳು! (ಸೂರ್ಯಗಾ. ೫೦–೬); ಕೋಲಾರಲಂಪೂರ ರೇಲ್ವೆವರ್ಕಶಾಪದ ಬಂಬು ಕೂಗಿಕೊಂಡಿತು (ಹಚಿಶಾ. ೦೨೬). ೩. ದೊಡ್ಡಪಾತ್ರೆ; ಹಂಡೆ : ಬಂಬಿನಲ್ಲಿಯ ನೀರು ಆರಿಲ್ಲ ವಷ್ಟೆ ಎಂದು . . . ಬದಿಗೆ ಇಟ್ಟ ಬಂಬಿಗೆ ಕೈಹಚ್ಚಿ ನೋಡಿದಳು (೯೦೦. ೯೬); ಮತ್ತೊಂದು ಮೂಲೆಯಲ್ಲಿ ಝುಗಝುಗಿಸುವ ಬಿಸೀರಿನ ಬಂಬು (ಸುಂದಾ. ೨). **ಬೊಂಬು₂** : ೧. "ಬೊಂಬು = ಕೊಳವೆ" (ಜಾನಕೋ. ೨೯).

[←ಅರಂ. ಹಿಂ. ಬಂದಾ; ಮರಾ. ಬಂಬ್]

**ಬಂಬುಚ್ಚು** 'ಬಂಬೂಚು' ನೋ.

**ಬಂಬೂಚು, ಬಂಬುಚ್ಚು** (ನಾ). (ಕರಾ) ತೇವದಿಂದ ವಸ್ತುಗಳ ಮೇಲೆ ಬರುವ ಒಂದು ಬಗೆಯ ಕ್ರಿಮಿ : ಎಲ್ಲಬ್ಬು ಹಣ ತೆತ್ತು ಬಿತ್ತಿದರೂ ಆ ಹಂದಿ ಹರಿಣ ಮೊದಲಾದ ಕಾಡು ಪ್ರಾಣಿಗಳ ಕಾಟ ಬೇರೆ. ಬಂಬೂಚು ರೋಗವೂ ತಪ್ಪಿದ್ದಲ್ಲ (ಚಾಗಿ. ೦೦೯). **ಬಂಬುಚ್ಚು** : ಈ Racket ಕೃಷಿ departmentನವರಿಗೆ ಬಂಬುಚ್ಚು ಹಿಡಿಯಲಿ ಕ್ಕಾದೀತು (ಮಣಿಗಮು. ೦೫೦).

[< ಬೂಜು₁ ?]

**ಬಂಭರ** (ನಾ). ತುಂಬಿ; ಭ್ರಮರ : ಗಂಡಸ್ಥಲದ ಮದಪರಿಮಳಕೆ ಬಂದೆರಗುತಿಹ ಬಂಭರವ ಪೊಡೆವ ವಿಶಾಲಕರ್ಣಾಂಚಲದ ಮಾರುತನ (ಅರಂಶಾ. ೦–೦–೯); ಮೃದುರವದಿಂದಲೆಡಬಲದಿ ನಾದಿಸುವ ಕೋಗಿಲೆ ಶುಕಾಳಿಗಳ ಭೋರ್ಗರೆವ ಬಂಭರಗಳ . . . ನೋಡುತ್ತ (ಕೌಶಾಂಶಾ. ೬–೯–೬೨).

[ಸಂ.]

**ಬಂಭ್ರಮಿಸು** (ಕ್ರಿ). ಅತಿಶಯವಾಗಿ ಸುತ್ತು_ತಿರುಗು : ಎಂಥತ್ತು ನಾಲ್ಕುಲಕ್ಷಣಗುಣಗಳೆಂಬ ಗಂಭೀರದ ನೇಣ ಬಿಗಿದು ಬಂ[ಪಾಠಾಂ. ಸಂ] ಭ್ರಮಿಸದ ಧ್ಯಾನವೆಂಬ ನೊಗವ ಮಾಡಿ ಸಂಭ್ರಮ ಮಿಗೆ ಹೂಡಿದನು (ಕೃತಿಶಾಂ. ೦೦–೦೦೦); ಕಂಗಳು ಬಂಭ್ರಮಿಸಿ, ಹಮ್ಮುಕ್ಕಿ ಜಂಗಮಿಸಿ ಎದೆ ಮೊಗ ಕೆಳಗಳಿಸಿ ನೋಡುತಿರೆ (ಕಹಂಗ. ೯೯–೬೦೯).

[ಬಂ₂ (ಪ ← ಸಂ. ಭ್ರಮ) + ಭ್ರಮಿಸು]

**ಬಂಹಿಮ** (ನಾ). ಹೆಚ್ಚಳ; ಆಧಿಕ್ಯ; ಅತಿಶಯ : ಬಂ[ಪಾಠಾಂ. ಬ್ರಂ] ಹಿಮವಚ್ಛಲಲಕ್ಷ್ಮಿಯ ಸಿಂಹಂಗಳನಂತಬಳನ ಪಾದಾಂತಿಕದೊಳ್ ಸಂಹತಿಗೊಂಡಿರ್ದಪುವೆನೆ ಸಿಂಹಾಸನಮೆಸದುದಮಳಮಣಿಖಚಿತಂಗಳ್ (ಶಾಂತಿಪು. ೬–೯೬); ಅಸುರಾರಿಯ ಪೊರ್ಕುಳ ಪದ್ಮಮಂ ಖರದ್ಯೋತಿಯ ಕೆಯ್ಯ ಕಂಜಮಂ ನಿದೆಯ್ದೆ ಸುರುಳ್ಳುಗುವೆಂಬಿನಂ ಜಗತ್ಕೌತುಕಮಾಯ್ತು ನುಷ್ಟ ಮಹಿಮಂ (ಕೃತಿಪು. ೬–೯೬).

[ಸಂ. ಬಂಹಿಮನ್]

**ಬಕ** (ನಾ). ೧. (ಯುಕ್ತಿ, ಮೋಸ ಹಾಗೂ ಜಾಗರೂಕತೆಗಳಿಗೆ ಹೆಸರಾದ) ಕೊಕ್ಕರೆ ಜಾತಿಯ ಒಂದು ಬಗೆಯ ಹಕ್ಕಿ : "ಬಕಃ, ಬಕೋಟಃ — ಈ ೨ ಬಕಾ" (ಕರಾಯು. ೬೨–೯೬); ಬಕ ಕುರರವಕ್ಷಿಕ್ಷಿಪ್ತಕೀಚಕಕಿಂಜಲ್ಕ ಪುಂಜಪಿಂಜರಿತಾಚ್ಛೋದಕ ಪರಿಪೂರ್ಣತಟಾಕಪ್ರಕರ ಸರೋನಿಕರರಂಜಿ ತಾಶಾಮಲಯಂ (ಆದಿಪು. ೬–೬೮); ಬೆಳುವ ಬೆಂಜಗ ಬೊಕ್ಕು ಬಕ ಮಿಂಚುಲಿಗ ಕೆಂಜರಿಗಣ್ಣ ಶಿಖಿ ಮಡಗೊಳಲೆ ಮುಖ್ಯವಿಹಂಗವಿವೆ (ಕುಶಾ. ೬–೦–೬೬). ೨. ಕಪಟ; ವಂಚಕ; ಠಕ್ಕ. ೩. ಭೀಮಸೇನನಿಂದ ಹತನಾದ ಒಬ್ಬ ರಾಕ್ಷಸ : ನೇಸಱ್ ಮೂಡಿದುದು ಬಕಂಗೆ ಮಿಬ್ಬು ಮೂಡುವ ತೆಱದಿಂ (ಪಂಪಭಾ. ೬–೩೬); ಬಕನಂ ಹಿಡಿಂಬನಂ . . . ಜರಾಸಂಧನನಿಕ್ಕಿ ಕೊಂದ ಬಲ್ಲಾಳ್ಕೆರುತ್ತುಪ್ಪಿತಂ ಕೇವಳನೇ (ಗದಾಯು. ೨–೯೬); ವಿಕಟಭುಜಬಲರೇಖಚಕ್ರದೊಳಕುಟಿಲರು ಭೂಸುರರ ರಕ್ಷಿಸಿ ಬಕನ ಮುಱಿದರು (ಕುಮಾ. ೦೦ ಸೂಕತ). ೪. ಕೃಷ್ಣನಿಂದ ಹತನಾದ (ಕೊಕ್ಕರೆಯ ರೂಪದ) ಒಬ್ಬ ರಾಕ್ಷಸ : ನಂದ ಪೂತನಿ ಬಕರನಿಪ್ಪವರಿಂದ ಕೀರ್ತಿಯನುದಾರವಿಕ್ರಮನಿಂದು ಬಾಲಕರಾಟವನು ಮಾಣಿಸುವನು (ಹರಿಗ. ೦೦–೦೨–೦೬). ೫. ಒಂದು ಬಗೆಯ ಗಿಡ : "ಶಿವಮಲ್ಲೀ, ಪಾಶುಪತಃ, ಏಕಾಷ್ಠೀಲಃ, ಬಕಃ, ವಸುಃ — ೫ ಬಕಪುಷ್ಪದ ಹೆಸರು, ಕೊಕ್ಕರೇ ಹುವ್ವಿನ ಗಿಡ" (ಅಕ್ಕಾಂ. ೦೮೦). ೬. ಖನಿಜಗಳನ್ನು ಸುಡುವ ಅಥವಾ ಘನಭಟ್ಟಿ ಇಳಿಸುವ ಒಂದು ಸಾಧನ: ಲಾವಾವನ್ನು ಬಟ್ಟಿ (ಬಕ)ಗಳಲ್ಲಿ ಕಾಯಿಸಿದರೆ, ಗಂಧಕವು ಕಾದು ಕರಗಿ, ಅನಿಲರೂಪವನ್ನು ತಾಳಿ, ಇನ್ನೊಂದು ಕಡೆಗೆ ಬಂದು, ಗಂಧಕವಾಗಿ ಗಟ್ಟಿಗಟ್ಟುವುದು (ಖಾಶಿ. II. ೬೩೯).

[ ಸಂ. ]

**ಬಕಗ್ರೀವ** (ನಾ). ಬರವಣಿಗೆಯಲ್ಲಿ ಉದ್ಧೃತಭಾಗಗಳನ್ನು ತೋರಿಸಲು ಬಳಸುವ ಚಿಹ್ನೆ ; (" ") : "ಬಕಗ್ರೀವದಲ್ಲಿ" ಎನ್ನುವುದು "in inverted commas" ಎಂಬುದಕ್ಕೆ ಕನ್ನಡ! ನಮ್ಮಲ್ಲಿ ಹಿಂದಿನಿಂದಲೂ ಇರುವ "ಹಂಸಪಾದ" ಎಂಬುದರ ಮಾದರಿಯ ಮೇಲೆ, ಈ "ಬಕಗ್ರೀವ" ವನ್ನು ಅನುವಾದ ಚಿಹ್ನೆ ಎಂಬ ಅರ್ಥದಲ್ಲಿ . . . ಬಳಕೆಗೆ ತಂದಿದ್ದರು (ಶಂಚು. ೬೦).

[ಸಂ.]

**ಬಕತರ** (ನಾ). ಲೋಹದ ಜಾಲರಿಯಿಂದ ಕೂಡಿದ ಕವಚ : ದಂತದ ಸೂನಗೆ ಸೊಂದಿಲೋಳಾಂತುಸಿಮ್ಯೆಗಮರ್ದ ಜಿಲೆಯ ಬಕತರ ಜೂಡಾಲು ತೋಳಪಾನೆಯನೇರ್ದಿದಿರಾಂತಂ ಧುರಕಾ ಬರೀದಯಮಾದ್ರೋಹಿತಂ (ಕಕ್ಕ. ೨–೩೬); ಧರಿಕ್ಕೆಗಳೋಳಾಂತಸಿ ಬಕತರ ದಂತಂಗಳೋಳಮರ್ದ ಸೂನಗೆಯೆಸೆಯುಲ್ ಕರಪದಮೊಗದೆಡೆಯಾಡುವ ಗಿರಿತುಲವೆನೆ ಕವಿದು ವಾನೆವಿಂದಿಹೋ ಸೆಯೊಳ್ (ಕಕ್ಕ. ೨–೨೮).

[←ಪಾರ. ಹಿಂ. ಬಕ್ತರ್, ಬಖ್ತರ್; ಮರಾ. ಬಕತರ್, ಬಕ್ತರ್, ಬಖತರ್, ಬಖ್ತರ್]

**ಬಕಧ್ಯಾನ** (ನಾ). ಬಕಪಕ್ಷಿಯು ತನ್ನ ಆಹಾರದ ಬೇಟೆಗಾಗಿ ನಿಶ್ಚಲವಾಗಿರುವಂತೆ ಮಾಡುವ ಧ್ಯಾನ; ಕಪಟಧ್ಯಾನ : ಗೀರ್ವಾಣಭಾಷೆಯೊಳ್ ಸ್ತುತಿಯಂ ವಾಚಿಸಿದನೋಂಕಾರವೆರಸಿ, ಬಕಧ್ಯಾನಮಂ ನಿಂದಿ ಪೋಲಲ್ಲ ನಿಂದನು, ಬಗೆಯ ದಾವಿಯಂ ರೆಪ್ಪೆವುಲ್ಲಿಂದಡಕಿ ಮುಚ್ಚಿ (ಶ್ರೀರಾಕಾ. ೨೯೬–೯೨೩).

[ಸಂ.]

**ಬಕಬಂಧನ** (ನಾ). (ಬಕಪಕ್ಷಿಯನ್ನು ಹಿಡಿಯುವ) ವಿಫಲವಾದ ಪ್ರಯತ್ನ : ಪೋದ ದಾರಿಯಿಂ ಪೋಕೆ ! ಬಕಬಂಧನಕೆ ವೃಥಾ ಯತ್ನಿಸದಿರ್ಕೆ ಗೆಳೆಯ (ಪಶ್ವೆ. ೦೭-೯೩). [ಸಂ.]

**ಬಕಬಂಧನಕೌಶಲ** (ನಾ). (ಅಲಂ)ಸರಳರೀತಿಯಿಂದ ಮಾಡಬಹುದಾದ ಕೆಲಸವನ್ನು ಕಠಿಣಮಾರ್ಗದಿಂದ ಮಾಡುವಿಕೆ ; ವ್ಯಥಾಶ್ರಮ ಪಡುವಿಕೆ : ನಿಮ್ಮ ಮಾತು ಬಕಬಂಧನಕೌಶಲವೇ ಹೊರತು ಬೇರೆಯಲ್ಲ (ಕಿಶ್ಕಕೀ. ೬೦). 'ದ್ರಾವಿಡಪ್ರಾಣಾಯಾಮ' ಹೋ. [ಸಂ.]

**ಬಕರ** 'ಬಕರಾ' ನೋ.

**ಬಕರಾ, ಬಕರ** (ನಾ). ೧. ಗಂಡಾಡು ; ಹೋತ. ೨. (ಅಲಂ) ಏನೂ ತಿಳಿಯದವನು ; ದಡ್ಡ : ಈ ಕೇಶವರಾಯನಿಗೆ, ಅದೆಷ್ಟೂ ಮನಸ್ಸು ಚಲಿಸಲಿಲ್ಲವೆಂದರೆ ನಂಬುವ ಬಕರಾ ಯಾರು ? (ಕಂಗಿ. ೩೩) ; ಹತ್ತು ಗಂಟೆಗೆ ಒಬ್ಬ 'ಬಕರಾ'ನನ್ನು ಹಿಡಿಯಬೇಕಾಗಿದೆ. (ಎಡಕ. ೬೩). **ಬಕರ** : ೧. ಜೀವನ್ನಾ ಬೆದರಿದ ಬಕರನಂತೆ ಬೆಚ್ಚಿ ಹಿಮ್ಮೆಟ್ಟಿದ (ಕಬಹುತ. ೦೦೯). ೨. ಅಂಗಡಿಯವನಿಗೂ ಆ ಬಿದ್ದ ಬಕರನಿಗೂ ಮಾರಾಮಾರಿಯಾಯಿತು (ವೃಕ್ಕ೬. ೬೯). [←ಹಿಂ. ಬಕರಾ ; ಮರಾ. ಬಕರಾ, ಬಕರೀ, ಬಕರೇ. / ಸಂ. ಬರ್ಕರ]

**ಬಕರೆ** 'ಬಕ್ಕರೆ' ನೋ.

**ಬಕವಿಡಂಬನ** (ನಾ). ಸೋಗು ; ಕಪಟ : ವಿಕಳರಾವಿದನೆತ್ತ ಬಲ್ಲವು ಸಕಲಗುಣಸರ್ವಜ್ಞ ನಿನಗೀ ಬಕವಿಡಂಬನವೇ (ಕುವ್ಯಾ.ಕ. ೨೨-೨೦). [ಸಂ.]

**ಬಕವೃತ್ತಿ** (ನಾ). ೧. ಮೋಸಗಾರಿಕೆ ; ಕಪಟ : ಬಕವೃತ್ತಿ ಹಿಸುಣತನ ಪರನಿಂದೆ . . . ದೋಷಾಕರಗಳು (ಜೀವಂಕ. ೩-೯೯) ; ಪರಸ್ತ್ರೀವ್ಯಸನ ವಕ್ರಾಚಾರ ಬಕವೃತ್ತಿ ಕೃತವಿನಾಶನ ಡಂಭ ಹಿಂಸಾರತಿ ನಿಜಾನ್ವಯಧರ್ಮ ಕರ್ಮಚ್ಯುತಿಗಳವು ದೋಷಾಂಕುರಂಗಳು (ಕುವ್ಯಾ.ಅ. ೦೩-೦೪). ೨. ಮೋಸಗಾರ ; ವಂಚಕ. [ಸಂ.]

**ಬಕವೇಸಿತನ** (ನಾ). ಮೋಸದ ವ್ಯಭಿಚಾರ : ಬಕವೇಸಿತನದಿಂದೊಡಲ ಸೂಡಿಂಗಿರಲಾಜದೆ ಪುಸಿಗೂರ್ಮೆಯಿಂದೋವಳನಪ್ಪಿಕೊಂಡು (ಧರ್ಮಾಮೃ. ೬-೪೩). [ಬಕ + ವೇಸಿ₁ (<ವೇಶಿ) + -ತನ]

**ಬಕವೈರಿ** (ನಾ). ೧. ಬಕನ ರೂಪದಲ್ಲಿದ್ದ ರಾಕ್ಷಸನನ್ನು ಕೊಂದವನು; ಕೃಷ್ಣ : (೬). ೨. ಬಕಾಸುರನನ್ನು ಕೊಂದವನು ; ಭೀಮಸೇನ : ಶುಕಮುನಿಯಂತೆ ಸ್ತುತಿಸಲಜಿಯೆ ಬಕವೈರಿಯಂತೆ ಧ್ಯಾನವ ಮಾಡಲಜಿಯೆ (ಹರಿಂದ. ದಾ. ೧-೮೦-೧) : ಆ ನೃಪಂ ಬಕವೈರಿಗಿಂತೆಂದನು (ಕೃಜಹಾ. ೪-೬೦). [ಸಂ. ಬಕವೈರಿನ್]

**ಬಕವ್ರತಿ** (ನಾ). (ಮೋಸ ಮಾಡುವುದಕ್ಕಾಗಿ) ತಪಸ್ವಿಯಂತೆ ನಟಿಸುವವನು : ಸ್ವಾಮಿಕಾರ್ಯವಿಘಾತಕಂಗತಿಕಾಮುಕಗೆ ಮಿಥ್ಯಾಪವಾದಿಗೆ ಭೂಮಿದೇವದ್ವೇಷಿಗತ್ಯಾಶಿಗೆ ಬಕವ್ರತಿಗೆ . . . ಪರಲೋಕವಿಲ್ಲ (ಕುವ್ಯಾ.ಅ. ೪-೨೬). [ಸಂ. ಬಕವ್ರತಿನ್]

**ಬಕಳು** (ನಾ). ಒಂದು ಬಗೆಯ ತೆರಿಗೆ (?) : ಆ ಹಳಿಗಳ ಪೂರ್ಬ್ಬಾಯ ಅಪೂರ್ಬ್ಬಾಯ ಹಾಣ ಅಭೋಗ ಬಕಳು ಕತುಪೆ ಬಂಡಿ ಅರವಟ್ಟಿಕೆ ಕುದಿರೆಹದಿಕೆ ಆನೆಹದಿಕೆ (ಎಕ. IX (s). ಕೊಗಳ. ೦೬೯-೨ : 1329). [?]

**ಬಕಾಟ** (ನಾ). ಪುರುಷನ ಜನನೇಂದ್ರಿಯ : ನೀ ಅವಡ ಕಟ್ಟಿ ಹಿಡದರ ಕಾಡ ಕಿನ್ನಾಳಾ ಬಕಾಟ ಕಟ್ಟಿ ಹೋದೀತು ! (ಹೊಸಂಗಾ. ೨೩). [← ಮರಾ. ಬಕಟೇ]

**ಬಕಾರ** (ನಾ). 'ಬ' ಎಂಬ ಅಕ್ಷರ : ಬಕಾರಕ್ಕೆ — ನಾಂಬಂ, ಎಂಬಂ, ತಿಂಬಂ (ಶಬ್ದಮ. ೨೩೨ ಕೃಯೋ). [ಸಂ.]

**ಬಕಾರಿ** (ನಾ). = ಬಕವೈರಿ ೨ : ಕುರುಕುಲಮಂ ಬಕಾರಿ . . . ತವೆ ಕೊಂದ ಮುಟ್ಕೆಯಿಂದುರುತರ ಬಾಹುವಿಕ್ರಮದೆ ನಾಂ ತವೆ ಕೊಲ್ಲದೆ ಮಾಣೆಂ (ಶಂಕಕಾ. ೨೩೪-೦೩) ; ಧರೆಯೊಳ್ ಬೀರದ ಪೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾಸ್ಕರಸುತನಿಂ ನಾಲ್ಮಡಿ ಶಂಕರನಿಂದಯ್ವಡಿ ನೆಗೞ್ತೆಯುದಟರ ಭೀಮಂ (ಅವ್ವಾ.ಪ. ೬೦) : ಕೀಚಕನಂ ಬಕಾರಿ ಮುಂಜಿಂದಂ (ಸೋಕುಲ. ೬೯).

ಬಕಾರಿನಂದನ = ಭೀಮನ ಮಗ ; ಘಟೋತ್ಕಚ : ಆರಿವನು ಹೈಡಿಂಬನಿಲೀಧಿಯಲಾರು ಭೀಮಜನಿತ್ತಲಾರು ಬಕಾರಿನಂದನನೆನಲು ಬಲವಿರುಳಳಪುರವಯಾಯಾಯ್ತು (ಕುವ್ಯಾ.ದ್ರೋ. ೦೬-೯೭). [ಸಂ.]

**ಬಕಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಪ್ರಕಾರ : ಮುಖ್ಯವಾದ ಕೆಲವು ಆಸನಗಳು, ಅಷ್ಟವಿನ್ಯಾಸಗಳು—೧. ಉತ್ತಾನಾಸನ . . . ೧೨. ಬಕಾಸನ (ಶಾರದ. ೦೬೬) ; ಬಕಾಸನ . . . ಬಕ ವೆಂದರೆ ಕೊಕ್ಕರೆ. ಈ ಭಂಗಿಯಲ್ಲಿರುವಾಗ, ದೇಹವು, ನೀರಿನಲ್ಲಿ ಹಾಯ್ದುಹೋಗುವ ಕೊಕ್ಕರೆಯ ರೂಪವನ್ನು ಹೋಲುತ್ತದಾದುದರಿಂದ ಈ ಆಸನಕ್ಕೆ ಈ ಹೆಸರು (ಯೋಗಂ. ೨೨೯). [ಸಂ.]

**ಬಕಾಳ** (ನಾ). ವ್ಯಾಪಾರಿ ; ಉದ್ಯಮಿ : (೬). [←ಅರ. ಹಿಂ. ಬಕ್ಕಾಲ್ ; ಮರಾ. ಬಕಾಲ್, ಬಕ್ಕಾಲ್]

**ಬಕಾಳಭಾತು** (ನಾ). (ಅಂಗಡಿಯವನು ಮಾರುವ) ಮೊಸರನ್ನ : ಈವತ್ತು ಅವರ ಮನೆಯಲ್ಲಿ ಪುಳಿಯೋಗರೆ, ಬಕಾಳಭಾತು ಮಾಡಿದ್ದರು (ಕೂಶಿ). [ಬಕಾಳ + ಭಾತು]

**ಬಕೀಟು** 'ಬಕೆಟ್ಟು' ನೋ.

**ಬಕುತ, ಬಗುತ** (ನಾ). ಗುರು, ಹಿರಿಯರು, ದೇವರುಗಳಲ್ಲಿ ಭಕ್ತಿಯುಳ್ಳವನು ; ಭಕ್ತ : "ಬಕುತ (ಬಗುತ)—ಭಕ್ತ" (ಕರ್ನೃಕೋ. ೨೭) ; ಬಡಿಸಿದರುಂಡು ತೇಗುವ ಬಕುತರಿಗೆ ನೂರ್ಮಡಿ ಸತ್ಫಲವನೆಯ್ದುಸುವೆ (ವೋಹಕ. ೩೯-೯೭) ; ತ್ರಿಭುವನದೊಳಗಿಹ ಬಕುತರಿಗನುದಿನ ಶುಭಗಳನಿತ್ತು ರಕ್ಷಿಸುತ (ಕೇಪವಂ. ೦-೨). **ಬಗುತ** : ಬಗುತರುಗಳಂ ಚಿವುಟಿದಡೆ ಹಾಲುಗುವವೇ (ಬಸಪು. ೩೭-೬೩) ; ತದ್ದ್ರವ್ಯದೊಳಗೆನಿತು ಬಗುತರ್ ಬಂದೆರೆ ದೊಡವರ್ ಬೇಡಿದುದನಿಲ್ಲೆನ್ನದೀವಂ ಗಡ (ಶರ್ಣ್ವಾ. ೯-೭). [<ಸಂ. ಭಕ್ತ]

**ಬಕುತವತ್ಸಲ** (ನಾ). ಭಕ್ತರಲ್ಲಿ ಪ್ರೀತಿಯುಳ್ಳವನು ; ಭಕ್ತವತ್ಸಲ : ಬಕುತವತ್ಸಲ ಶ್ರೀರಂಗೇಶ ಸಾಹಸ್ರಮುಖನ ತಲ್ಪದೊಳೆಸೆದಿಹನು (ಕೇಪವಂ. ೬-೯೩). [< ಸಂ. ಭಕ್ತವತ್ಸಲ]

**ಬಕುತಿ, ಬಗುತಿ** (ನಾ). ಭಕ್ತಿ : "ಬಕುತಿ (ಬಗುತಿ)—ಭಕ್ತಿ" (ಕರ್ನೃಕೋ. ೨೭); ಸಂಪ್ರೀತಿಯುಹ ನವವಿಧದ ಬಕುತಿಗೆ ಸಿಲುಕ (ಕುವ್ಯಾ.ಅ. ೬೦೨. ೬-೦೩); ಆಲಿಗಳೆವೆಯಲುಗದೆ ಬಕುತಿಯಲಿ ತ್ರಿಶೂಲಿಯ ಮೇಲೆ ಕಣ್ಣನವ ಕೀಲಿಸಿದನು (ವೋಹಕ. ೨೦-೩೩); ಅಕಳಂಕಚರಿತ ಬೆಟ್ಟದ ಚಾಮೇಂದ್ರನ ಬಕುತಿಗೆ ಮನವೊಲಿದಿಹೆನು (ಕೇಪವಂ. ೪-೪೦). **ಬಗುತಿ** : "ಬಕುತಿ (ಬಗುತಿ)—ಭಕ್ತಿ" (ಕರ್ನೃಕೋ. ೨೭). [< ಸಂ. ಭಕ್ತಿ]

**ಬಕುರ** (ನಾ). ಒಂದು ಬಗೆಯ ಊದುವ ವಾದ್ಯ ; ಕಹಳೆ : ಆ ವಾದ್ಯಗಳ ಸಮೂಹದಲ್ಲಿ . . . ನಾಡೀ, ತುರವ, ಬಕುರ ಮುಂತಾದ, ಮರುದ್ವಾದ್ಯಗಳೂ ಹೆಸರಿಸಲ್ಪಟ್ಟಿವೆ (ಸಂಗೀಶಾ. ೦೦೪). [ಸಂ.]

**ಬಕುಶ** (ನಾ). [ಜೈನ]ಮುನಿಗಳ ಐದು ಪ್ರಕಾರಗಳಲ್ಲಿ ಒಂದು ಪಂಗಡ : ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಅಯ್ದು ಪ್ರಕಾರಗಳು (ಕೃಪರ. ೯೯). [< ಸಂ. ವಕುಶ]

**ಬಕುಳ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು; ನಾಗಕೇಸರ ; ☛ ದೋಹದಕ್ರಿಯೆ ಮಾಡುವಾಗ ಸ್ತ್ರೀಯರು ಮದ್ಯಪಾನ ಮಾಡಿ ಬಕುಳವೃಕ್ಷದ ಮೇಲೆ ಉಗುಳಿದರೆ ಅದರ ಹೂವುಗಳು ಅರಳುವುವೆಂಬುದು ಕವಿಸಮಯಗಳಲ್ಲಿ ಒಂದು : "ವಕುಳದೊಳ

ಬಕುಳಂ" (ಕರ್ಣಾ. ೩೫): ಬಕುಳದ ಪೂವಿನಸ್ತವಳಯಕ್ಕೆ ದುಕೂಲದ ಚೆಲ್ವನಪ್ಪ ಸಾಳಿಗೆಗೆ ಪಯೋಜಸೂತ್ರನವಮುಂಜಿಗೆ ನೇತ್ರದ ಕೋವ ಣಕ್ಕೆ ವಿಕ್ಕಿಗುರುವ ಬೂದಿಗೊಡ್ಡೆ ತನುವಂ . . . ನಿಂದಳೊರ್ವಳಂ ಕಂಡು (ಶಾಂತಿ. ೯-೯೦); ಬೇಲ ಬೊಬ್ಬುಲಿ ಬಕುಳ ಶಮಿ ಕುದ್ದಾಳ . . . ಒಪ್ಪಲ ಮಾರೆಯುವ ನೋಡಬಲೆ (ಕೂರರಾ. ೩-೦-೨೮).

ಬಕುಳದ ಮಡಕೆ = (?) : ಖಡುಗಿ ಹಳಚುವ ಖಳನ ಮಸ್ತಕ ವೊಡೆಯಲೊದೆದನು ತಿರುಗಿ ಬಕುಳದ ಮಡಕೆವೊಡೆದಂತಾಯ್ತು ಚಿಮ್ಮಿದು ದರುಣಜಲ ನಭಕೆ (ತಿರಾಗ. ೭-೭-೯೬); ಜರಿದ ಬಕುಳದ ಮಡಕೆಯಂದದಿ ಮೆರೆವ ಹನುಮನು ಸತ್ವಗೆಟ್ಟುದು ಹರಣ ತಳಕೆಳಕಾಗೆ ಧರೆಯೊಳು ಬಿದ್ದನಾ ಹನುಮ (ಕುಂರಾ. ೫-೨೭). [ಸಂ. ಬಕುಲ]

ಬಕೆಟ್ಟು, ಬಕೀಟು (ನಾ). ನೀರು ಸೇದಲು, ತುಂಬಿಡಲು ಹಾಗೂ ಒಯ್ಯಲು ಉಪಯೋಗಿಸುವ ಮರದ ಅಥವಾ ಲೋಹದ ಹಿಡಿ ಯುಳ್ಳ ಪಾತ್ರೆ; ಬಾಲ್ದಿ (ಉಕ) : ಮೊನ್ನೆ ಫಿನಾಯಲ್ ಹಾಕಿದ ಬಕೆಟ್ಟಿನಲ್ಲಿ ಹುಳಿ ತಂದು ಬಡಿಸಿಬಿಟ್ಟರು ಪುಣ್ಯಾತ್ಮರು (ಜಗ್. ೭೫); ಟ್ರ್ಯಾಕ್ಟರ್ ಮುನ್ನುಗ್ಗಿದೊಡನೆಯೇ ಬಕೆಟ್ಟು ತುಂಬಿಕೊಳ್ಳುತ್ತದೆ (ಕರ್ನೋ. I. ೦೭೩). ಬಕೀಟು : ಎರಡು ಮೂರು ಬಕೀಟು ನೀರಾದರೂ ಅವನ ಮಡಿವಂತಿಕೆಗೆ ಸಾಕಾಗುತ್ತಿರಲಿಲ್ಲ (ಶಂಕ. ೦೭). [← ಇಂ. Bucket]

ಬಕೋಟ (ನಾ). ಒಂದು ಬಗೆಯ ಕೊಕ್ಕರೆ : "ಬಕಃ, ಬಕೋಟಃ— ಈ ೨ ಬಕಂ" (ಶಬ್ದಮ. ೯೨-೯೭); ಎಳೆಮೀನ್ ಪೊಳೆದೊಡಮೊಳಪುಗ ದಿರ್ದುವು ಜಲಾಶಯಪ್ರಾಂತದೊಳ್ ಬಕೋಟಕುಟುಂಬಂ (ಲೀಲಾವ. ೯-೦೯). [ಸಂ.]

ಬಕ್ಕ$_1$, ಬೊಕ್ಕ (ನಾ). ೧. ಬೋಳು ತಲೆಯವನು; ಬೋಡ : ಆ ಬಕ್ಕನನ್ನು ಮದುವೆಯಾಗುವುದಿಲ್ಲವೆಂದು ಹುಡುಗಿ ನಿರಾಕರಿಸಿದಳು (ಒಾಡು). ೨. ಏನೂ ಇಲ್ಲದುದು ; ಬೋಳು ; ಬರಿದು : (*). (ಗು). ೩. ಏನೂ ಇಲ್ಲದ ; ಬೋಳಾದ ; ಬರಿದಾದ : 'ಬಕ್ಕದಲೆ' ಪರಾ. ಬೊಕ್ಕ : ೧. ಬೊಕ್ಕರ್ ಕೆಲಂಬರದಟಂ ಪಕ್ಕನೆ ನಡೆತಂದು ಚಕ್ರದಿಂ ಕೊಡಲಿಗಳಿಂ ಗಕ್ಕನೆ ಕಾರ್ಬೊನ್‌ದಡಿಯಿಂ ಒಕ್ಕುತ್ತ ನಿಮ್ಮಂ ಕನಲ್ದು ಬಾಧಿಸುತಿರ್ಕುಂ (ಹಾರಾಶ್ಕ. ೯-೦೫-೨೭). ೩. 'ಬೊಕ್ಕತಲೆ' ಪರಾ.

—ಬಕ್ಕ$_2$ '— ಬಾಕ' ನೋ.

ಬಕ್ಕಂಡಿ (ನಾ). ಹಲ್ಲುಮುಡಿ.

ಬಕ್ಕಂಡಿ ಕಟ್ಟು=ಹಲ್ಲುಮುಡಿ ಕಟ್ಟು : ಅವುಡುಗಚ್ಚು : ಗೋವರ್ಧನ ರಾಯರು ಬಕ್ಕಂಡಿ ಕಚ್ಚಿಕೊಂಡು ಬಿದ್ದರು (ಕೆಸ್ತ್ರ. ೦೯೨).

[← ಮರಾ. ಬಕಂದೀ = ಮುಷ್ಟಿಯ ಹೊಡೆತ]

ಬಕ್ಕಂಬಯಲ್, ಬಕ್ಕಬಯಲ್ (ನಾ). ೧. ತೆರವಾದ ಜಾಗ; ಬಯಲು ಸ್ಥಳ : ಸಿತಗೆ ಪತಿಗೆ ವಿಗೆ ಕಾಯ್ಪಳ್ ನೋಟಕ್ಕೆ ಕಡುಸೊಂದಿ ನಾಣಿಲಿ ಬಕ್ಕಂಬಯಲೊಳಮದಾರುವಂ ಬಂಚಿಸುವಳ್ (ಕಾವ್ಯಾ. ೫೫೫); ಬಕ್ಕಂಬಯಲ್, ಕಳ್ಳಂಗಡಲೆ (ಕಮದ. ೦೭೨ ಕೃಹೋ). ೨. ಬರಿದು; ಶೂನ್ಯ : (*). ಬಕ್ಕಬಯಲ್ : ೧. ಅಗ್ನಿಶಿಖಾವಾಯುಕ್ಕೆ ದೂರವಪ್ಪ ಬಕ್ಕ[ಪಾಠಾಂ. ಬಕ್ಕಟ]ಬಯಲ ತಾಣದೊಳ್ ದೊಮ್ಮಳಿಸಿ ನಿಂದು ಬಹು ಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್ (ಶಂರಾಮ. ೦೦-೦೫೫ ಪ); ಕುಟು ಯಿದು ತೆಮರಿದು ಬಕ್ಕಬಯಲಿದಾಶ್ರಯಮಿದು ಗೆಂಟಿದು ಸಾರಯೆಂಬ ನಿರ್ಣಯಮದಾದುದಿಲ್ಲೊದವಿ ಪುದಿದ ಮರ್ಬಿನೊಳಾರ್ಗಂ (ಕಾವ್ಯಾವ. ೭೯೯).

ಬಕ್ಕಂಬಯಲಾಗು, ಬಕ್ಕಬಯಲಾಗು = ೧. (ಅಲಂ) ಏನೂ ಇಲ್ಲ ದಾಗು ; ಕರಗಿ ಹೋಗು ; ಲೀನವಾಗು : ಅಕ್ಕ ನಿನ್ನಾತ್ಮಸಂಭವ ಮುಗ್ಗುಲೊಳಗಿರ್ದು ಬಕ್ಕಂಬಯಲಾದ ಬಗೆಯ ಒಕ್ಕಣಿಸೆನಗೆಂದು ಸತ್ರಾ ಜಿತಸುತೆ ದುಃಖವನಾಂತು ಕೇಳಿದಳು (ಮೋಹತ. ೯-೮೮). ೨. ನಾಶವಾಗು; ಪಾಳುಬೀಳು ; ಹಾಳಾಗು : ಎಲೆಲೆ ಪಗಲ್ಗಳ್ಳ . . . ನಿನ್ನ ನಾಡು ಬಕ್ಕಂಬಯಲಕ್ಕು (ರಾಮಾಶ್ವ. ೬೬-೨೩); ಆ ತೋಟ ಬಕ್ಕಬಯಲಾಯಿತು (ಒಾಡು). [ಬಕ್ಕ$_1$ + ಬಯಲ್ (< ಪಯಲ್)]

ಬಕ್ಕಟ 'ಬಜುಕಟೆ' ನೋ.

ಬಕ್ಕಟಬಯಲು 'ಬರ್ಕಟಬಯಲ್' ನೋ.

ಬಕ್ಕಡ (ನಾ). (?) : ಕಂಗಳ ಸಂಘಟ್ಟದಿನೊಗೆವುರಿಗಳ ಬಕ್ಕಡಗಳರಿಯ ಬಕ್ಕಡಗಳ್ ಜೋದರ ಬಾಣಮಗ್ನಿಬಾಣಂ ಕರಚಕ್ರ ತಮೋರಿಚಕ್ರಮೆನಿಸಿ ದುದೆನಸುಂ (ಗದಾಯು. ೯-೩೭) [?]

ಬಕ್ಕಣ$_1$ 'ಬೊಕ್ಕಣ$_1$' ನೋ.

ಬಕ್ಕಣ$_2$, ಬೊಕ್ಕಣ$_2$ (ನಾ). ಆಹಾರ : ತಿನಿಸು : "ಬಕ್ಕಣ – ಭಕ್ಷಣ = ತಿನಿಸು, ತಿಂಡಿ" (ಕರ್ನಕೋ. ೨೭); ಮಯ್ಗಲಿಗಳ ಕಂಡದಿಂಡೆಗಳ ಬಕ್ಕಣ ಮಂ, ತವೆ ಮೆಲ್ದು . . . ಕೈಪಜ್ಜೆಯೊಳಾಡುವ ರಕ್ಕಸಿಯರ್ಕಳೊಪ್ಪಿ ದರ್ (ಶಬ್ದಾ. ೨೮೫); ತಿನೆ ತವುಗುವೊಂದು ಚಿಂತೆಯನಿನಿತುಂ ತಿನಲಾರ ದಾನೆ ಬಕ್ಕಣಮಂ ಬಯ್ತುನುಮಿಂ ಪೆರ್ಗರ್ಕದೆ ದುಮ್ಮನದಿಂ ಪಸುತಿರ್ದು ಪರರ ಲೋಭಿಮರುಳ್ಗಳ್ (ಚಂದ್ರಪ್ಪ. ೫-೯೫). ಬೊಕ್ಕಣ$_2$: "ಬೊಕ್ಕಣ– ಭಕ್ಷಣ = ಬಕ್ಕಣ" (ಕನ್ನಕೋ. ೩೨). [< ಸಂ. ಭಕ್ಷಣ]

ಬಕ್ಕಣವಲ್ಮಿಕೆ (ನಾ). ಒಂದು ಪ್ರದೇಶದ ಹೆಸರು (?) : ಬಟ್ಟೆ ಗೆಜ್ಜೆಯ ಏರಿ ಉಳಗಾಗೆ ಬನ್ದು ಕಡೆಗೊಡೆ ಕಲ್ಬುನಾಸೆಯು ಅನ್ತೆ ಬನ್ದು ಸೇರಲಮದಾ ಬಕ್ಕಣವಲ್ಮಿಕೆಯ ಅನ್ತೆ ಬಡಗ ನೋಡಿ ಪರಿದ ಪೇರೊ ಜ್ಜೆಯ (ಎಕ. IX (೬). ಶಂಗಳೂ. ೦೫೦–೯೦ ; ೫೭೫). [?]

ಬಕ್ಕತಲೆ 'ಬಕ್ಕದಲೆ' ನೋ.

ಬಕ್ಕದಲೆ, ಬಕ್ಕತಲೆ, ಬೊಕ್ಕತಲೆ, ಬೊಕ್ಕದಲೆ (ನಾ). ೧. ಕೂದಲು ಉದುರಿ ಬೋಳಾದ ತಲೆ : ಬಕ್ಕದಲೆಯ ಆ ಮನುಷ್ಯನನ್ನು ಎಲ್ಲಿಯೋ ನೋಡಿದಂತಿದೆ (ಒಾಡು). ೨. ಟೋಪಿ, ಪೇಟ ಮೊದಲಾದುವನ್ನು ಧರಿಸದಿರುವ ತಲೆ ; ಬರಿತಲೆ : ಬಳ್ಳಾರಿಯ ವಿದ್ಯಾರ್ಥಿಯೊಬ್ಬನು ನಮ್ಮ ವರ್ಗಕ್ಕೆ ಸೇರಿದನು. ತನ್ನ ಪರಿಪಾಟಿಯಂತೆ ಬಕ್ಕದಲೆಯಿಂದಲೆ ಒಳಗೆ ಬಂದನು (ಗಾಕ. ೦೫೩). ಬಕ್ಕತಲೆ : ೨. ಬಕ್ಕತಲೆಯಲಿಂತು ನೀನು ಅರಳಿದೊಂದು ಕುಸುಮದೆದುರು ನಿಂತು (ಶಂಕಪ. ೩೩–೯). ಬೊಕ್ಕತಲೆ : ೧. ಇದ್ದಕ್ಕಿದ್ದಂತೆಯೇ ಅವನ ಕಣ್ಣು ತುಂಬಿಕೊಂಡು ನಾಲ್ಕೈದು ಹನಿಗಳು ಮರಿಯಪ್ಪನವರ ಬೊಕ್ಕತಲೆಯ ಮೇಲೆ ಬಿದ್ದುವು (ಅಂಮಕಾ. ೦೯೬). ೨. ಈಗ ಏಕೆ ಕರೆಳಿಸಿರಬಹುದೆಂಬ ತರ್ಕದಲ್ಲಿಯೇ ಕಿಟ್ಟ ಜೋಡು ಮೆಟ್ಟಿಕೊಂಡು ಬೊಕ್ಕತಲೆಯಿಂದ ಹೊರಟನು (ಗಂಪೂಮು. ೯೯). ಬೊಕ್ಕದಲೆ : ೧. (ಕುಂಅಮು. ೯. ೫-೨೯೬). ೨. ಬೊಕ್ಕದಲೆ ಯೊಳು ಬೊಕ್ಕರಿಸುತಂ ಮುಕ್ಕಿರಿಕಿ ನಿಲ್ಲಲು (ಕಾಪ್ಪ. ೯-೩೦).

[ಬಕ್ಕ$_1$ + ತಲೆ$_1$]

ಬಕ್ಕದಾಸ (ನಾ). ಏನೂ ಗತಿಯಿಲ್ಲದವನು ; ನಿರ್ಗತಿಕ : ದಾನಧರ್ಮ ವಿಲ್ಲದ ಹೀನದಾಸನು ನಾನು. . . ಬ್ಯಾನೆ ಇದ್ದಲ್ಲಿ ಬಡುವ ಬಕ್ಕದಾಸನು ನಾನು (ಕೋಕ್ಷಕೀ. ೨೭-೩); ಬಕ್ಕದಾಸನೊ ನಾನು ವಿಜಯವಿಠಲ ನಿನ್ನ ಲೆಖ್ಖಕ್ಕೆ ಮೊದಲು ಎನಿಸುವೆನೇನಯ್ಯ (ಹದಾಕ್ಕ. ೨೫೮-೦೫೭).

[ಬಕ್ಕ + ದಾಸ$_1$]

ಬಕ್ಕನೆ (ಅ). ಇದ್ದಕ್ಕಿದ್ದಂತೆ ; ಕೂಡಲೆ : ಬೆಕ್ಕು ಹಿಂದೆ ಹೋಗುತಾ, ಶಾನೆ ಹಿಂದೆ ನಿಂತ ಒಂದು ಇಲಿಯನ್ನು ಬಕ್ಕನೆ ಬಾಯಿಗೆ ಹಾಕಿ ಕೊಳ್ಳುತಾ ಬಂತು (ಹಿತಕಾ. iv ೨೭). [ಬಕ್$^{\circ}$ + —ಅನೆ$_1$]

ಬಕ್ಕನೆತ್ತಿ, ಬೊಕ್ಕನೆತ್ತಿ (ನಾ). — ಬಕ್ಕದಲೆ ೨: ಒಂದು ಕಾಲದಲ್ಲಿ ಟೊಪ್ಪಿಗೆ ಹಾಕುವುದು ಮಂಗಲಚಿಹ್ನವಾಗಿತ್ತು. ಇಂದು ಬಕ್ಕನೆತ್ತಿ ಯಿಂದ ಅಡ್ಡಾಡುವುದೇ ಐಕ್ಯದ ಕುರುಹು (ಭಾರತಂ. ೯೭). ಬೊಕ್ಕನೆತ್ತಿ :

ತುಂಬಾ ಹಿಮ ಬೀಳುತ್ತಿದೆ. ಬೊಕ್ಕನೆತ್ತಿಯಲ್ಲಿ ಬರಬೇಡಿ (ಊಂ).
[ಬಕ್ಕ₁ + ನೆತ್ತಿ]

**ಬಕ್ಕಬಯಲ್** 'ಬಕ್ಕಂಬಯಲ್' ನೋ.

**ಬಕ್ಕಬಾಗಿಲು** (ನಾ). (?) : ಯಾವತ್ತು ಕದಂಗ ಕಂಡುಕ ಮುಂತಾಗಿ ತೆಗಸಿ ಆಳ್ವೇರಿ ಬಕ್ಕಬಾಗಿಲು ಮುಂತಾಗಿ ತಯಾರು ಮಾಡಿಸಿ (ಶಾಕೇಂಪ್ರ.೩). [ಬಕ್ಕ₁ + ಬಾಗಿಲು (< ಬಾಗಿಲ್)]

**ಬಕ್ಕಬೋರಲು.** ಬೊಕ್ಕಬೋರಲು. ಬೊಕ್ಕುಬೋರಲು (ನಾ). ಬುಡಮೇಲು ; ತಲೆಕೆಳಗು : ಒಂದು ಎಲೆ ತೆಗೆದು ಬಕ್ಕಬೋರಲಾಗಿ ಮಗ್ಗುಲಿಗೆ ಮುಚ್ಚಿ ಇಟ್ಟುಕೊಂಡ (ಗಾಳಿಕ. ೨೩). **ಬೊಕ್ಕಬೋರಲು :** ತಿಂಗಳ ಕಡೆಯಾದ್ದರಿಂದ ಡಬ್ಬಿಗಳನ್ನೆಲ್ಲಾ ಬೊಕ್ಕಬೋರಲು ಮಾಡಿ ಅಡಿಗೆ ಮಾಡಬೇಕಾಯಿತು (ಊಂ). **ಬೊಕ್ಕುಬೋರಲು :** ಅದನ್ನು ಮೆಲ್ಲಗೆ ಕಿಡಕಿಯ ಹೊರಗೆ ಎತ್ತಿ ಬೊಕ್ಕುಬೋರಲಾಗಿ ಹಿಡಿದಳು (ಗಂಜಾಯ. ೪).

**ಬಕ್ಕಬೋರಲು ಬೀಳು.** ಬೊಕ್ಕಬೋರಲು ಬೀಳು = ಹೊಟ್ಟೆ ಅಡಿಯಾಗಿ ಬೀಳು ; ಮಗುಚಿಕೊಳ್ಳು: ಮೆಟ್ಟಿಲಿನ ಮೇಲೆ ಯಾಯಾನ ಶರೀರ ಬಕ್ಕಬೋರಲು ಬಿದ್ದಿತು (ಶಾಕಂ. ೦೦೩) ; ಎತ್ತರದ ಜಗಲಿಯಿಂದ ಮಗು ಬೊಕ್ಕಬೋರಲು ಬಿದ್ದು ಅಳುತ್ತಿದೆ (ಊಂ).

**ಬಕ್ಕಬೋರಲು ಹಾಕು** = ೧. ಮಗುಚಿ ಇಡು : ಡಬ್ಬಿಗಳನ್ನೆಲ್ಲಾ ಚೆನ್ನಾಗಿ ತೊಳೆದು ಬಕ್ಕಬೋರಲು ಹಾಕು (ಊಂ). ೨. (ಅಲಂ) ನಾಶಮಾಡು ; ಹಾಳುಮಾಡು : ಚಿತ್ರಕೇತುರಾಜನ ಮನೆಯನ್ನು ನಾರದನೇ ಬಕ್ಕಬೋರಲು ಹಾಕಿದನು (ಕುಳಗಿ. ೨೩) ; ಎಷ್ಟೋ ವರ್ಷ ಗಳಿಂದ ಮಾಡಿಕೊಂಡಿದ್ದೆಲ್ಲಾ ಒಂದು ಕ್ಷಣದಲ್ಲಿ ಬಕ್ಕಬೋರಲು ಹಾಕಿ ದ್ದಾಯ್ತು (ಊಂ). [ಬಕ್ಕ₁ + ಬೋರಲು]

**ಬಕ್ಕಬೋಳು** (ನಾ). ಬರಿದು; ಖಾಲಿ; ಶೂನ್ಯ: ಹೂಮುಡಿದು ಕೊಂಡು ಹಿಗ್ಗುವುದು ಹೆಣ್ಣಿಗಷ್ಟೆ ಇರುವ ಸೌಭಾಗ್ಯ. ಗಂಡುಗಾಡಿ ಬಕ್ಕ ಬೋಳು (ಗಾಳಿಕ. ೦೦೦). [ಬಕ್ಕ₁ + ಬೋಳು (< ಬೋಡು)]

**ಬಕ್ಕರಸೆ** (ನಾ). (?): ನಿಯತದ್ವಿತ್ವಕ್ಕೆ—ಪಪ್ಪುಕಂ . . . ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕಿವಂ, ಬಕ್ಕರಸೆ, ಬಕ್ಕುಡಿದಂ (ಶಮದ. ೩೬ ಕೃಯೋ). 'ಬಕ್ಕಸೆ' ಪರಾ. [?]

**ಬಕ್ಕರಿ** 'ಭಕ್ಕರಿ' ನೋ.

**ಬಕ್ಕರಿಸು** (ಕ್ರಿ). ತಿನ್ನು; ಕಬಳಿಸು : ಆತನು ಬಂದ ಕೂಡಲೇ ಆ ನಮ್ಮ ಬಡಪ್ರಾಣಿಯಾದ ಗೋವನ್ನು ಅಬ್ಬರದಿಂದ ಬಕ್ಕರಿಸಿ ಬಿಟ್ಟಾನು (ಉಶಾಕ. ೬೯) ; ತಿನ್ನಲು ಬೆಳೆಯದು ತುಸು ಕಡಿಕಾಳು ಬಕ್ಕರಿಸುವುದೋ ಹಂಟೆಯ ಕೂಳು ? (ಗಂ. ೦೦೯-೦೯); ಒಂದು ತಪ್ಪೇಲಿ ಅನ್ನವನ್ನು ಬಕ್ಕರಿಸುತ್ತಾರೆ! (ಮೋಟಿಶಂ. ೨೬). [< ಭಕ್ಷಿಸು]

**ಬಕ್ಕರೆ.** ಬಕರೆ, ಬಗ್ಗರೆ (ನಾ). ೧. ಮಡಕೆಯ ಚೂರು; ಓಡು; ಬೋಕಿ : "ವಕ್ಕರೆ ಬಗರಿಗೆ ಎಸೆವ ಬಕ್ಕರೆಯಕ್ಕು" (ಕಬ್ಬಿಪಂ. ೬೩); ಕೈಯೊಳ್ ಬಕ್ಕರೆಯಲ್ಲಿ ಕೆಂಡವಂ ತೆಗೆದುಕೊಂಡು ಬಂದು (ಕುಳಕ. ೧೩); ಅಕ್ಕರೆಯಿಂದ ಕಂದನ ಸಾಕಿ, ಕೈಗೆ ಬಕ್ಕರೆ ಕೊಟ್ಟಾರೆ ? (ಜೀತಶಂ. X, ೨೬). 'ಬೋಕಿ' ಪರಾ. ೨. ಮುಚ್ಚುಳ ; ಶರಾವೆ : ಫಲ ವಸ್ತ್ರ ತಾಂಬೂಲ ಕಾಣಿಕೆಯುವಂ ಹೊಸಬಕ್ಕರೆಯಲ್ಲಿ ಇರಿಸಿ ಮಂತ್ರಸಮನ್ವಿತವಾಗಿ...ನಿವಾಳಿಸಿ (ಜಾಂಶ. ೦೩೯-೦೬). **ಬಕರೆ :** ೧. ಕಾಡುಬೆರಣೆಗಳಲ್ಲಿ ಹೊಸ ಮಣ್ಣು ಹೆಂಚು (ಬಕರೆ) ಹೊಸ ಕೆಮ್ಮಣ್ಣುಗೆಡ್ಡೆಗಳನ್ನಿಟ್ಟು ಪುಟ ಹಾಕಿ (ಸಕವೈ. ಶಂ. ೪೩೩). **ಬಗ್ಗರೆ :** ೧. ಉಡಲಿಲ್ಲುಣವಿಲ್ಲದಜೀವದುದರಾಗ್ನಿಯೊಡಲ ಸುಡಲು ಬಗ್ಗರೆಯ ಹಿಡಿದು ಪುರದ ಕೇರಿಗಳೊಳು ಭಿಕ್ಷವ ಕೊಡಿಯೆಂದು ಬೇಡುತಮಿರಲು (ಶೀಬಸಂ. ೭-೬೭); ಇರಿಬಿದನೊಂದು ದೊಡ್ಡ ಹೊಸ ಬಗ್ಗರೆಯಂತದು ತುಂಬುವಂತುಟಂ ಸುರಿದನು ಕೂಳ (ಪನ್ನಶಾ. ೬-೩೦೯).

**ಬಕ್ಕಸೆ** (ನಾ). (?) : ನಿಯತದ್ವಿತ್ವಕ್ಕೆ-ಪಪ್ಪುಕಂ...ಬಕ್ಕಸೆ, ರಕ್ಕಸಿ, ಕೆಕ್ಕೊರಸು, ಉಕ್ಕಿವಂ, ಬಕ್ಕರಸೆ (ಶಮದ. ೩೬ ಕೃಯೋ). 'ಬಕ್ಕರಸೆ' ಪರಾ. [?]

**ಬಕ್ಕಳ** (ನಾ). ಹೆಚ್ಚು; ಅಧಿಕ; ತುಂಬ : ಬಾಯಿಯಿಂದ ಲೋಕ ಸುಧಾರಣೆಯ ತತ್ವ ಹೇಳುವುದು ಬಕ್ಕಳ. ಆದರೆ ಕೈಯಿಂದ ಕಾರ್ಯ ಕೇಳಬಾರದು (ಕಾಳಶಾ. ೪೭); ತಮ್ಮ ಬಕ್ಕಣದಲ್ಲಿ ಕಾಸು ಕಪರ್ದಿಯಿಲ್ಲ ದಿದ್ದರೂ ಬಾಯಲ್ಲಿ ಬಕ್ಕಳ ಮಾತಿದ್ದರೆ ಸಾಕೆಂಬ ಸಂತೋಷದಿಂದ ಜನರು ಕಾಲ ಕಳೆಯುತ್ತಿದ್ದರು (ಕ್ರೀಮಂ. ೬೪). [?]

**ಬಕ್ಕಳೆ** (ನಾ). ಕೊರಳಲ್ಲಿ ಹಾಕಿಕೊಳ್ಳುವ ಹಾರ ಅಥವಾ ಚೀಲ (?) : "ಕಂಠಕಚ್ಚರದೊಳ್ ಬಕ್ಕಳೆ" (ಕಶಾಂಶ. ೬೪); ಮೆಯ್ಯ ಮಸಿ ಕೊರಲ ಬಕ್ಕಳೆ[ಶಾಕಂ. ಬಕ್ಕಂ, ಬಕ್ಕಳೆ] ಪೊಯ್ಯೆ ಪುಗಿಲ್ಗರೆವ ಕೆಯ್ಯ ಕಂಕರಿಕೆ ಕರಂ ರಯ್ಯಮೆನೆ ಪಾಱುತಿರ್ದಳನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸು ತ್ತುಂ (ಕಾವ್ಯಾ.ಶ. ೩೦೯) ; ಜಡೆಯುಂ ಬಕ್ಕಳೆ[ಶಾಕಂ. ಲೆ]ಯುಂಮಾನಾಳ್ದು (ಅರ್ಜನೀ. ೩-೪೩) ; ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ ಮಿಂಟುದ ಕಣ್ಗಳ್ಪಸರಂ ಸುತ್ತಿದ ಬಾಳದುಳ್ಳಿವಿಯ ಸೊಂಟಗೆ ಪಂಪಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ಲುಲೆಯ ಬಂದಿಗೆ ಪಾವುಗೆ ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಶಾ. ೫೪೩). [?]

**ಬಕ್ಕಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರಂ : ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಳ್ಪದೇವತೆಗಳನಿಲ್ಲದೆ ಒಲಿಸಿದರು ಪೊಳ್ಳಿಲ್ಲದ ಗತಿ ಇಲ್ಲವೂ ಎಂದಿಗೂ (ಶಿಶಾಸು. ೫೬-೨). [?]

**ಬಕ್ಕಿ** (ನಾ). ಕಂಕುಳು ; ಬಗಲು : ಸಿಕ್ಕಿರ್ದ ಮರಿಗಳಂ ಬಕ್ಕಿಯೊಳಗವ ಚುತ್ತ ಮಿಕ್ಕಿರ್ದ ಕುರಿಗಳಂ ಚ್ಯೆಯ ಚ್ಯೆಚ್ಯೆಯೆಂದು ಕರೆಯುತ್ತ . . . ಬೀರಪ್ಪನಂ ನೆನೆದು ಮರೆದಿರ್ದನಾ ಮಾಯಿಕಂ (ದುರತ. ೬-೧೩).
[← ಮರಾ. ಬಖ್. ತೆಲು. ಬಗಿ = ಪಕ್ಕ]

**ಬಕ್ಕು** (ನಾ). ಒಂದು ಬಗೆಯ ನೀರುಹಕ್ಕಿ : ಬಕ್ಕುಗಳಂಚೆ ಕೊಂಚೆ ಜಳ ವಾಯಸಸಂತತಿ . . . ಸಾರಸಪಕ್ಷಿಯೆಂಬ ನೀರ್ವಕ್ಕಿಗಳಿಂ ಮನಂಗೊಳಿಸು ತಿರ್ದುದು ಪೂಗೊಳನಂಬುಜಾವಳಂ (ನಳಶಂ. ೦೧೯). [?]

**ಬಕ್ಕುಡಿ₁.** ಬರ್ಕುಡಿ. ಬಳ್ಕುಡಿ (ನಾ). ೧. ಬೆರಗು; ಆಶ್ಚರ್ಯ: "ಬಕ್ಕುಡಿ . . . ತಳವೆಳಗು ಮಲ್ಲಟಾಯೆಸಲ್ಕೆ ಬೆಜಗಪ್ಪ ಭಾವಂ" (ಕಶ್ಶಕ. ೪೧). ೨. ಭಯ; ಅಂಜಿಕೆ; ಒತ್ತುವ ಕೋಡ ಕಾಳೆ ಕುಣಿವೋಜೆಗೆ ಬಾಜಿಪ ಜುಂಜೆ ಬೇಂಟೆಯಿಂದೆತ್ತಣಿನಪ್ಪ ಬಕ್ಕುಡಿಯ ಬಲ್ಲುಲಿ (ಕೂಕ್ತಸು. ೩-೨೦೦). ೩. ದೈನ್ಯ; ನಮ್ರಭಾವ: ಚುಂಬನಮಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ದು ಕೂಡುವಟ್ಟುಂಬರಿಯೆಂಬಿವಾಗೆ (ಅರ್ಜನೀ. ೩-೭೦); ಮಕ್ಕಳಾಟಿಕೆಯಾಯ್ತಲಾ ಸೌಬಲನ ದೆಸೆಯಿಂದ ಮಿಕ್ಕು ನೀ ಸ್ವೈರಿಸುವು ದೆಮ್ಮದು ಬಕ್ಕುಡಿಯ ಬೇಳಂಬ (ಕುವ್ಯಾ.ಸ. ೦೩-೫೯). ೪. ತಳಮಳ; ಕಾತರ: ಬಂಡು ಬಕ್ಕುಡಿ ಭಂಗ ಬಂಧನ ಕನಲ್ಕೆ ಕಳಕಳಮೆಂಬಿವು . . . ನೋಡಲಾ ನಾಡ ಹಿರಿಯೂರ ಪಟ್ಟಣದ ಪಾಳೆಯದ ಜನದೊಳಿಲ್ಲ (ಕಂಶ. ೬-೪೨). ೫. ವಿವಾದ; ಚರ್ಚೆ : "ವಿವಾದಃ = ಬಕ್ಕುಡಿಯುಂ" (ಅಭಿಪಾ.೨೨-೬). 'ಬಕ್ಕುಡಿಗುಟ್ಟು' ಪರಾ. **ಬರ್ಕುಡಿ:** ೫. ನಿಮ್ಮೊಳಿದೇಂ ಬರ್ಕುಡಿಯೆಂದಾತನಂ ನಿವಾರಿಸಿ (ಶೀಬಶ. ೯-೨೬೪); ಪೊನ್ನೆಣ್ಣೆನಿಂ ನುಡಿ ನುಡಿವಂತು ಬರ್ಕುಡಿ[ಶಾಕಂ. ಳ್ಕು]ಡಿಯ (ಅಲಾವ. ೨-೦೦೩); ಮುಳಿಸೆಗುರ್ ಸೊರ್ಕುರ್ ಬರ್ಕುಡಿ ಪುರುಡು . . . ನುಸುಳ್ವಿಣಕಾಂಗನೆಯುರ್ಗೆ ಶಾಶ್ವತಂ (ಕೃಶಂ. ೨೮-೬೩). **ಬಳ್ಕುಡಿ :** ೨. "ಅಗುರ್ವುರ್ ಬಿಗುರ್ ಬೆಗರ್ ಬಳ್ಕುಡಿ ... ಅದಿರ್ಪು — ಈ ೧೦ ಭಯಂ" (ಕಶಶಾ. ೩೭-೨೨೩) ; ಎಕ್ಕಿಕ್ಕೆ ಬಾಧಿಸುತ್ತಿದ್ದ ಸಂದೇಗವನು ಬಳ್ಕುಡಿಯನು ಸಂತರಿಸಿಕೊಳ್ಳಲು ನನಗೆ ಅನುಪೂಪವಿತ್ತು (ಶಬ್ಬಕ. ೨೦೨-೦೨).

**ಬಕ್ಕುಡಿ₂** (ನಾ). ಒಂದು ಬಗೆಯ ಸಸ್ಯ: ಮಂಗರವಳ್ಳಿ : "ಮಂಗುರ ವಳ್ಳಿ ವಕ್ರಿ ಬಕ್ಕುಡಿಯೆನಿಕ್ಕುಂ" (ಷುಂಗರಾ. ೯೩-೦೩). [?]

**ಬಕ್ಕುಡಿಗುಟ್ಟು, ಬರ್ಕುಡಿಗುಂಟ್ಟು** (ಕ್ರಿ). ಚರ್ಚಿಸು; ವಾದವಾಡು : ತನ್ನ ಧರ್ಮದವರೊಡನೆ ಪುಸ್ತಕಾದಿಗಳೊಳು ನಿನಗಿದೆನಗಿದೆಂದು ಬಕ್ಕುಡಿ ಗುಟ್ಟಿದದುಂ (ಕಸೂಕ್ತ. ೨೨೭); ಮತಿವಿಕಳ ಚಾರ್ವಾಕ ಬಱಿದೆ ಬಕ್ಕುಡಿ ಗುಟ್ಟುತ್ತಿವಾದಿಪ್ಪೆ (ಆರಾಕ. ೩-೭-೫); ನಿಮ್ಮ ದೈವಂ ಸ್ವತಂತ್ರನಲ್ಲಾಗಿ ಬಂಧುರತರ ಜಗತ್ಕರ್ತನೆಂತು ಬಕ್ಕುಡಿಗುಟ್ಟಬೇಡಮೆಲೆ ದುಷ್ಕೃತಯುತ (ಹಾಸೋಪು. ೯-೧೭೨). **ಬರ್ಕುಡಿಗುಟ್ಟು:** ತರ್ಕದೊಳ್ ಬಾದುಂ ಬರ್ಕುಡಿ ಗುಟ್ಟಿ ಪೊಟ್ಟುವಡೆದೊ (ಸುಕುಮಾ. ೩-೯೫). [ಬಕ್ಕುಡಿ₁ + ಕುಟ್ಟು₁]

**ಬಕ್ಕುಡಿಗೆಯ್, ಬರ್ಕುಡಿಗೆಯ್, ಬಳ್ಕುಡಿಗೆಯ್** (ಕ್ರಿ). ೧. = ಬಕ್ಕುಡಿ ಗುಟ್ಟು: ವಟುಗಳೋದನಾಲಿಸಿ ತಪ್ಪಂ ಒಡಿವುವುಪನ್ಯಾಸದೆ ಬಕ್ಕುಡಿ ಗೆಯ್ವುವು ಮುನಿಗಳೊಡನೆ ಶುಕಶಾರಿಕೆಗಳ್ (ಜಗಂ.೦೭-೫೦); ಕೊಱವಜ್ಜಯು ತಾನಾಕೆಯುಂ ಪಾಣಿಗ್ರಹಣಕ್ಕೆ ಕಯ್ಯನೊಡ್ಡುವಂತೆ ಕಯ್ಯನೊಡ್ಡಿ ಬಗೆದು ಮೊಯ್ಯನೆ ಸೋಲ್ತು ಬಕ್ಕುಡಿಗೆಯ್ದೊಯ್ವಂತೆ ಕಯ್ಯ ಪೊಯ್ದೊಡೆ (ಬಂಹಂ. ೯-೭೭ ವ). ೨. ಆಶ್ಚರ್ಯಪಡು : ಕಯ್ಯಾರದಿಂದೆ ಬಕ್ಕುಡಿಗೆಯ್ವರ್ಚರಿ ದೊಂದು ಸಮಯಮಂ ಸಮತೆಯಿನಾರಯ್ವರ್ ಜೈನಮಾನಾಮೆಡೆಗೆಯ್ವುದ ಮತ್ಯಂತಕಲುಷಹೃದಯರದೇನೋ (ಸಮಪ. ಅವಾಂಹ. ೩೭೫-೬೦). **ಬರ್ಕುಡಿಗೆಯ್:** ೧. ಜಯಂತನಂ ಜಡಿದು ಬರ್ಕುಡಿಗೆಯ್ದು ಬಸಂತನಂ ಸಮುಜ್ಜ್ವಳಕುಸುಮಾಸ್ತ್ರನಂ ಜಱಿದು (ಪ್ರಶಂ. ೦೭-೭). **ಬಳ್ಕುಡಿಗೆಯ್ :** ೧. ಜಲಜನ್ಮಕೋರಕದ್ವಯ ಸೊಕ್ಕುವಿಕ್ಕಾನೆದಲೆ ಗಾಲಿವಕ್ಕಿ ಪೊಱೊ ನ್ನಲಿಗಗಳ ಚೆಲ್ವನಲೆದು ಮಲೆದೆಕ್ಕತುಳಗೆಡಿಸಿ ಬಳ್ಕುಡಿಗೆಯ್ದು ನೆಲೆವನೆಯ ಮುಂದೆ ನಿಂದ ಬೆಲೆವೆಂಡಿರುಗಳ ನೆಲೆವೊಲೆಗಳ್ . . . ಎಡ್ಡಂಬಡೆದವು (ಕಾದ್ಯಕೇ. ೯-೨೦). [ಬಕ್ಕುಡಿ₁ + ಕೆಯ್₁]

**ಬಕ್ಕುಡೆಯ, ಬಗ್ಗಡೆಯ** (ನಾ). ವಿತಂಡವಾದ ಮಾಡುವವನು : ಕಡುದುರುಳರಂ ಧೂರ್ತರಂ ಬಕ್ಕುಡೆ [ಹಾಕಾಂ. ಬಗ್ಗಡೆ, ಬಗೆಗೆಡೆ]ಯರಂ ದುರ್ನೀತರಂ ನಾಣ್ಗೆಡಿಕರಂ . . . ಕಾಯ್ಯಾಯೆಮ್ಮವಂ (ಬಸಪು. ೩೮-೭೦). **ಬಗ್ಗಡೆಯ :** ನುಡಿದಹನು ದುರ್ಭಾಷೆಗಳನಡಿಗಡಿಗೆ ಶಿವನಿಂದೆಯನುಸುರ್ವ ಬಗ್ಗಡೆಯನಂ ಕೊಲಲಹುದು (ಬಸಪು. ೫೭-೨೯).

**ಬಗ್ಗಡೆಯತನ** = ಔಚಿತ್ಯ ಮೀರಿದ ವರ್ತನೆ; ಅಧಿಕಪ್ರಸಂಗ : ಹಿಗ್ಗಿ ಹಿಂದೆಮ್ಮವನು ಹಾವಿನ ಹಗ್ಗದಲಿ ಹೆಡಗುಡಿಯ ಕಟ್ಟಿದ ಬಗ್ಗಡೆಯತನ ಕಿದಕೊ . . . ಸಾವಿನ ಸುಗ್ಗಿ ನಿನಗೆನುತಚ್ಚನಿಂದಾರ್ರಿಯನು ಸೌಮಿತ್ರಿ (ತೊರರಾ. ೭-೯೯-೦೩). [<ಬಕ್ಕುಡಿ₁ + — ಅ₇]

**ಬಕ್ಕೆ, ಬರ್ಕೆ** (ನಾ). ೧. ಸಿಹಿಯಾದುದು; ಇನಿದು : (೪). ೨. ಒಂದು ಬಗೆಯ ಹಲಸು : ಪಥಿಕರ್ಬರ್ಕೆಂದು ಭೃಂಗಂಗಳಿಂದುಲಿವಂತಿ ರ್ದುದು ಪಣ್ತ ಬಕ್ಕೆ (ಆದಿಪು. ೦೨-೭೭); ಬೇಗ್ಗಳಿಂ ತುಱುಗಿರೆ ಕಾಯ್ತ ಬಕ್ಕೆ (ಎಕ. XI. ದಾವಣ. ೩೫-೩೮; ಸು. 1160); ಹಲಸಿನ ಹಣ್ಣಿನ ಮಹಾ ಗಾತ್ರವನ್ನು ನೋಡಿ ಅಜ್ಜೀಸಾಬು ಕೇಳಿದನು "ಬಿಳುವನೋ ? ಬಕ್ಕೆಯೋ ?" (ಮರೆಪು. ೯೩೦). 'ಬಕ್ಕೆವಲಸು' ಪರಾ. Δ **ಬರ್ಕೆ :** ೨. ಬರ್ಕೆ[ಹಾಕಾಂ.ಕ್ಕೆ]ವಲಸುಗಳೊಳಸುರರ ತೆರ್ಕೆಯನೆಟ್ಟಿಟ್ಟ ಪೊಯ್ವುದುಂ ಕೋಟ್ಮಿದುಟುಂ ಬರ್ಕೆ[ಹಾಕಾಂ.ಕ್ಕೆ]ಯ ತೊಳೆಯುಂ ಸೂಸಿದುವು (ಶಂರಾಪಾ. ೦೦-೦೨೦). 'ಬರ್ಕೆವಲಸಂ' ಪರಾ.

[ದೇ.॥ ತಮಿ. ವರುಕ್ಕೈ. / ಮರಾ. ಬರಕಾ]

**ಬಕ್ಕೆವಲಸು, ಬಕ್ಕೆಹಲಸು, ಬರ್ಕೆವಲಸಂ** (ನಾ). = ಬಕ್ಕೆ ೨: "ಸ್ವಾದುಪನಸಕ್ಕೆ ಪೆಸರೊಂದುವುದು ಬಕ್ಕೆವಲಸೆಂದು" (ಶಬ್ದಶುಂ. ೨೭); ಅರನೇಱಲ ಪೊಂಬಾಱೆಯ ಸುರಯಿಯ ಮಾಮರದ ಬಕ್ಕೆವಲಸಿನ ಪುದುವಿಂ ಪರದುರ್ಬಿದ ಕಟ್ತಲೆ ದಿನಕರಾಂಶುಗಳ್ಗಂ ವಿಭೇದಿಸಲ್ಕರಿದು (ಕಾವ್ಯಾಶ. ೨೯೮) : ಬೇರ್ಗಳೊಳಗೆ ಕಾತ ಬಕ್ಕೆವಲಸುಗಳ ಪಣ್ಗೊನೆಗಳಂ... ಮುಕ್ಕಣ್ಣನೆಡೆಗೆ ವನಪಾಲಕಂ ಪೊಱಿಸಿಕೊಂಡೈತಂದನು (ಕಂಪು. ೯೫-೨೯) : ದಾಳಿಂಬಂ ಬಕ್ಕೆವಲಸು . . . ಎಡೆಯೆಡೆಯೊಳ್ ಮನೋಹರಮಾಗಿರ್ಕುಂ (ಧಾಮೂಕ್ತ. ೯-೨೫). **ಬಕ್ಕೆಹಲಸು :** ಬಕ್ಕೆಹಲಸು, ಅರಬಕ್ಕೆಹಲಸು, ಕಾಪು ಹಲಸು ಹೀಗೆ ಬಗೆಬಗೆಯ ಹಲಸಿನ ಮರಗಳಿದ್ದವು (ಕ್ಯಾಕುಕಾ. ೦೦); ಒಂದು ಬಕ್ಕೆಹಲಸಿನ ಹಣ್ಣನ್ನು ಕತ್ತರಿಸಿ ಮಕ್ಕಳ ಮುಂದಿಟ್ಟರು (ಶಂಜಹಂ. ೦೫). Δ**ಬರ್ಕೆವಲಸು :** ಬರ್ಕೆ[ಹಾಕಾಂ.ಕ್ಕೆ]ವಲಸುಗಳೊಳಸುರರ ತೆರ್ಕೆಯನೆಟ್ಟಿಟ್ಟ ಪೊಯ್ವುದುಂ ಕೋಟ್ಮಿದುಟುಂ ಬರ್ಕೆ[ಹಾಕಾಂ.ಕ್ಕೆ]ಯ ತೊಳೆಯುಂ ಸೂಸಿದುವು (ಶಂರಾಮಾ. ೦೦-೦೨೦); ಕಾಯ್ತೊಳೆದೆಂಗು ಪಣ್ತ ಬರ್ಕೆವಲಸು (ಪರ್ಣಪು. ೨-೦೭). [ಬಕ್ಕೆ + ಪಲಸು]

**ಬಕ್ಕೆಹಲಸು** 'ಬಕ್ಕೆವಲಸಂ' ನೋ.

**ಬಕ್ರಬರ್** (ಕ್ರಿ). ಅಡ್ಡಿಬರು ; ತೊಡಕಾಗು : ಇ ದಮ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುಳ್ ಸಾಸಿರ್ವರ್ಪಾರ್ವರುಂ ಸಾಸಿರಂ ಕವಿಲೆಯುಂ ಕೊಂದ್ದ ಪಾತಕನಕ್ಕು (ಪ್ಯಕಂ. ೦೯೩೭, ೫೩-೩೯; ಸು. ೬೬೦).

[ಬಕ್ರ₀ (ಪ ←ಸಂ. ವಕ್ರ) + ಬರ್ (<ವರ್)]

**ಬಕ್ಶೀಸು** 'ಬಕ್ಷೀಸು' ನೋ.

**ಬಕ್ಷಿ, ಭಕ್ಷಿ** (ನಾ). ೧. ಅರಮನೆಯ ಮುಖ್ಯಾಧಿಕಾರಿ : ಮೋದೀಖಾನೀ ಬಕ್ಷೀ ವೀರಭದ್ರೈಯ (ಎಕ. XIV. ಕಾಪುರಾ. ೨೦೭-೦; 1868) ; ಇಬ್ಬರು ಬಕ್ಷಿಗಳನ್ನು ಜಡ್ಜಿಗಳಾಗಿ ನೇಮಿಸಿ (ಮಹಾಪಂ. II. ೨೭); ಈ ತಳ್ಳಿಯು . . . ವಿಳಂಬವಿಲ್ಲದೆ ಅರಮನೆಯ ಬಕ್ಷಿಯ ಕೈಗೆ ಬಂತು (ಹಾಗ್ಗೇಪ. ೨೨೭). ೨. (ಬಕ್ಷಿಯ ಹೆಸರಿನಲ್ಲಿ ಮುದ್ರಿಸಿದ) ಒಂದು ಬಗೆಯ ನಾಣ್ಯ : 'ಗೋವಿಂದಬಕ್ಷಿ' ಪರಾ. **ಭಕ್ಷಿ :** ೧. ಮುಂದಿನ ನವರಾತ್ರಿಯಲ್ಲಿ ಅವನು ಮಹಾರಾಜರ ಮುಂದೆ ಹಾಡುವುದಕ್ಕೆ ಏರ್ಪಾಡು ಮಾಡುವುದಾಗಿ ವೀಣೆ ಭಕ್ಷಿಗಳು ಅವನಿಗೆ ವಾಗ್ದಾನ ಮಾಡಿದ್ದರು (ಸುಬ್ಬಣ್ಣ. ೯); ಭಕ್ಷಿ ಆನಂದ ರಾಯನಿಗೆ ವರ್ತಮಾನವನ್ನು ಕೂಡಲೇ ಹೇಳಿ ಕಳುಹಿಸಿದನು (ಇಂತು. ೯೯).

[←ಪಾರ. ಬಖ್ಶೀ ; ಹಿಂ. ಬಕೀ. ಬಕ್ಶಿ ; ಮರಾ. ಬಕ್ಷೀ. ಬಕ್ಶೀ. ಬಖ್ಶಿ . ಬಖ್ಷೀ]

**ಬಕ್ಷೀಸ್** 'ಬಕ್ಷೀಸು' ನೋ.

**ಬಕ್ಷೀಸು, ಬಕ್ಶೀಸಂ, ಬಕ್ಷೀಸ್, ಭಕ್ಷೀಸ್, ಭಕ್ಷೀಸಂ** (ನಾ). (ಮೆಚ್ಚುಗೆಯಿಂದ ಕೊಡುವ) ಬಹುಮಾನ ; ಇನಾಮು : ಆಳು ಗಳಿಗೆ ಹದಿನೈದು ರೂಬಲ್ ಬಕ್ಷೀಸು ಕೊಟ್ಟನು (ಪುಪಕು. ೬೦) ; ಬಕ್ಷೀಸಿನ ಆಶೆಯಿಂದ ಎಲ್ಲಾದರೂ ಇಂಥ ಕಳವುಗಳ ಪತ್ತೆಯಾಗುವುದುಂಟೇ ? (ಕಳ್ಳಕಾ. ೭). **ಬಕ್ಶೀಸು :** ಸಂಕಣ್ಣನಾಯಕನಂ ಕರಶಿ ಆಲಿಂಗನವಂ ಮಾಡಿ ಕೊಂಡು ಮರೆಮಾಚಿದೆಯೆಂದು ಹೇಳಿ ಸದರಿ ಬಕ್ಶೀಸನ್ನು ಕೊಟ್ಟ (ಕೆಳಪಂ. ೨೦-೦೯). **ಬಕ್ಷೀಸ್ :** ಅಲ್ಲಿ ಕಾಯುತ್ತಿದ್ದ ದರವಾನನಿಗೆ ಐದು ರೂಪಾಯಿಯ ನೋಟನ್ನು "ಬಕ್ಷೀಸ್" ಇತ್ತು ಬೊಹಿಯನ್ನು ಹತ್ತಿದನು (ಹಿಧಿಕ್ಕ. ೩೯). **ಭಕ್ಷೀಸ್ :** ಮೇಘದೂತದ ಶ್ಲೋಕಗಳನ್ನು ಹೇಳು ವುದು ಕೇಳಿ ಎಜ್ಯುಕೇಶನಲ್ ಇನ್ಸ್‌ಪೆಕ್ಟರ್ ಕೃಷ್ಣಮೂರ್ತಿಗೆ ಒಂದು ಫೌಂಟನ್ ಪೆನ್ 'ಭಕ್ಷೀಸ್' ಕೊಟ್ಟಿದ್ದರು (ಅಸ್ವಶಂ. ೩೯). **ಭಕ್ಷೀಸು :** ನಿಮಗೆ ಇದನ್ನು ಭಕ್ಷೀಸಾಗಿ ಕೊಟ್ಟಿದ್ದೇನೆ (ಕಮಳ. ೨).

[←ಪಾರ. ಬಖ್ಶೀಸ್ ; ಹಿಂ. ಬಖಶೀಸ್, ಬಖ್ಶೀಸ್ ; ಮರಾ. ಬಕ್ಷೀಸ್, ಬಖ್ಶೀಸ್, ಬಖ್ಷೀಸ್]

**ಬಖರ್** 'ಬಖರು' ನೋ.

**ಬಖರು, ಬಖರ್, ಬಖೈರು** (ನಾ). ದೇಶಭಾಷೆಯಲ್ಲಿ ಗದ್ಯರೂಪ ವಾಗಿ ಬರೆದ ಐತಿಹಾಸಿಕ ವಿವರಗಳನ್ನೊಳಗೊಂಡ ಗ್ರಂಥ : ನವಾಬರು ಸವಣೂರಿಗೆ ರಾಜಕುಟುಂಬವನ್ನೂ . . . ಕರೆದುಕೊಂಡು

ಹೋಗಿ ಮನ್ನಿಸಿದರೆಂದು ಆ ಸಂಸ್ಥಾನದ ಬಖರುಗಳಲ್ಲಿ ಬರೆದಿದೆ (ಸಮಜೀ. ೩). **ಬಖರ್** : ಇತಿಹಾಸಗ್ರಂಥಗಳು ಬಖರ್ ಎಂದು ಮಹಾರಾಷ್ಟ್ರದಲ್ಲಿ ಪ್ರಸಿದ್ಧವಾಗಿರುವುವು (ರಕ್ತ್ರಾ. ೬೮). **ಬಖೈರು**: ಪುರಾತನ ಕೈಫೀಯತ್ತುಗಳನ್ನೂ ಬಖೈರುಗಳನ್ನೂ ಕಡತಗಳನ್ನೂ ಶಾಸನಗಳನ್ನೂ ತಿಳಿದವರು ಹೊರಕ್ಕೆ ತರಬೇಕು (ಶಿಕ್ಕರು. ೦ ಮುನ್ನುಡಿ) ; ಮರಾಟಿಭಾಷೆಯಲ್ಲಿ ಶಿವಾಜಿ ಮೊದಲಾದ ವೀರರ ಕಥೆಗಳೂ ಪುನೆ ಶ್ರೀಮಂತರ ಚರಿತ್ರೆಗಳೂ ಬರೆಯಲ್ಪಟ್ಟಿವೆ. ಇವುಗಳನ್ನು ಬಖೈರು ಎನ್ನುತ್ತಾರೆ (ಮುಸಸಿ. ೭).

[← ಮರಾ. ಬಖರ್, ಬಖೇರ್]

**ಬಖಾರಿ** (ನಾ). ಧಾನ್ಯ ಮುಂತಾದುವನ್ನು ಬಹಳ ಕಾಲ ರಕ್ಷಿಸಿಡಲು ಮಾಡಿದ ಗೂಡು ; ಪಣತ : ಬಖಾರಿಯಲ್ಲಿ ಗೋಡೆಯ ಹತ್ತರ ಇಲ್ಲವೆ ತಳಕ್ಕೆ ಇರುವ ಚೀಲಗಳೆಲ್ಲ ಹವೆಯಿಂದ ನೀರಿನಿಂದ ತೊಯಿದಂತೆ ಆಗುತ್ತದೆ (ಮುಂಬಪ್ರಾ. ೬೩). 'ವಖಾರ' ಪರಾ.

[ ←ಹಿಂ. ಬಖಾರ್ ; ಮರಾ. ಬಖಾರೀ ]

**ಬಖೇಡಿ** (ನಾ). ೧. ವಾಜ್ಯ ; ಕಲಹ ; ಜಗಳ : (*). ೨. ತೊಂದರೆ ; ಕಿರಿಕಿರಿ : (*). [ ←ಹಿಂ. ಮರಾ. ಬಖೇಡಾ]

**ಬಖೈರು** 'ಬಖರು' ನೋ.

**ಬಗಟು** (ಕ್ರಿ). ೧. ತೊಡೆಗಳನ್ನು ಅಗಲಿಸು : "ಬಗಟು_ ಉರುವಿಶ್ಲೇಷೇ (ಕಾಲುಗಳನ್ನು) ಅಗಲಿಸು" (ಧಾಪಾ). ೨. ಪಾಲು ಮಾಡು ; ವಿಭಾಗಿಸು : ಅಂಬುಮು ಮೂಗನಿಕ್ಕುಬಿೞೆ ಕೀಳ್ವುದು ಪಲ್ಗಳನೇಱುಬಟ್ಟೆಯಾಗಿರೆ ಕಿಱಿದೆಂಟುಸೂೞ್ ಬಗಟಿ ಕೊಯ್ವುದು ಮಾಡೆಯುಂ (ಸೂಕ್ತಿಸು. ೬-೩೭೬).

[ದೇ. ॥ ತಮಿ. ಮಲ. ವಕು ; ತುಳು. ಬಗುಟು]

**ಬಗಟಿ** 'ಬಗಡೆ' ನೋ.

**ಬಗಟಿಗೋಳ** (ನಾ). (?) : ಮುದದೆ ವೈಯೆಂಬುದೇ ನಿಶ್ಚಯಂ ಕುಂಠವೆಂಬುದೇ ತತ್ಕ್ರಿಯಾಹಾನಿ ವೈಕುಂಠಪುನಲಾಗಿ ಮದನಪಿತನೇ ಕಾಲು ಮುಱಿದ ಕುಂಠನೆನಿಪ್ಪ ಪೆಸರು ಲೋಕಪ್ರಸಿದ್ಧಂ ಅದಱಿಂದಲವನ ಪಾದಸ್ತಂಭವಾಗೆ ಮೆಟ್ಟಿದುದು ಮೇಘದಲ್ಲಿ ನೆಲದೊಳಗೊಂದು ಕಾಲಿರಲ್ಕದು ಬಗಟಿಗೋಳ ಮಲ ಹೆಟ್ಟಿದಂತಾಗಿರ್ದಸಾ ಹರಿ ನಿರೋಧದಿಂದ (ಶಿಕ್ತ್ರಾ. ೩-೦೪-೨೩). [?]

**ಬಗಡೆ**, ಬಗಟೆ (ನಾ). ೧. ಚೆನ್ನಾಗಿ ತಳಿಸದಿರುವ ಅಕ್ಕಿ ; ತೌಡು ಮಿಶ್ರವಾದ ಅಕ್ಕಿ : (*). **ಬಗಟಿ** : ೨. "ಅಕ್ಕಿಯ ಮೇಲಣ ತೌಡು (?) " : (ಕೃಶಬ್ದ).

**ಬಗಡೆಯಕ್ಕಿ**=ಚೆನ್ನಾಗಿ ತಳಿಸದ; ತೌಡು ಮಿಶ್ರಿತವಾದ ಅಕ್ಕಿ: ಈ ಸಲದ ರೇಷನ್ ಅಕ್ಕಿ ದನಕ್ಕೆ ಹಾಕುವ ಬಗಡೆಯಕ್ಕಿಯ ಹಾಗಿದೆ (ರೂಢಿ).

[← ಮರಾ. ಬಗಡ್]

**ಬಗದತ್ತಿ** (ನಾ). (?) : ಕಟ್ಟಾಳ್ತನಸಗ್ಗ ವಸ್ತುವ ಬಣ್ಣಸಂಬೀಱುವೋಂ ಪಡೆಯಂ ಬೆಳಪ ಬಿರುಸಪ್ಪವರ ಬಿರುದನೊಡ್ಡಿಬೊಪೊನ್ ಬದ್ದ ಬಗದತ್ತಿ ಆಣೆ ಗಣ್ಡಾರದ ಗಣೆ ಪೊಕ್ಕ ಅಜ್ಜಯ ಅಟ್ಟ (ಎಇ. XXIV. ೨೬-೦೦; ಸು. 885). [?]

**ಬಗದಳ** 'ಭಗದಾಳ' ನೋ.

**ಬಗದಾರೆ** (ನಾ). ಒಂದು ಬಗೆಯ ಹಕ್ಕಿ : ತರ್ಕಿಪ ಬಗದಾರೆಯ ಕೂಡ ಬಹ ಕೊಳರ್ವಕ್ಕಿಯ ಕೆಲದಾಡಿಸುತ ದಿಕ್ಕಿಗೆ ಪೆಸರಂತ ಸಿಬಿಲೆಗೆ ಕವಳವನಿಕ್ಕಿ ಕಾದಿಸುತಿರ್ದ ಮದನ (ಮೋಹಚ. ೩-೩೩) : ಜಾಣ ಮೆಲ್ಲುಡಿ ಗೆಲವರ ಗಿಳಿ ಬಗದಾದ[ರೆ] . . . ಹೊವ್ಮರಿ ಮಂಚದ ಸುತ್ತ ಠಾಣಮುವಿರಲು ನೋಡಿದನು (ಮೋಹಚ. ೩೦-೯೯). [?]

**ಬಗದಾಳ** 'ಭಗದಾಳ' ನೋ.

**ಬಗನಿ** 'ಬಯಿನೆ' ನೋ.

**ಬಗನೆ** 'ಬಯಿನೆ' ನೋ.

**ಬಗನೆಕಳ್ಳು** (ನಾ). ಬಗನೆಮರದಿಂದ ತೆಗೆದ ಹೆಂಡ. — ಮದ್ಯ: ಅವನಿಗೆ ಕುಡಿಯುವ ಚಟವಿದ್ದಿದ್ದರೆ ಬಗನೆಕಳ್ಳನ್ನು ಅಥವಾ ಅಕ್ಕಿಯ ಭೋಜವನ್ನು ಕುಡಿಸುತ್ತಿದ್ದರು (ಶಂಕಕಾ. ೯೬).

[ ಬಗನೆ (<ಬಯಿನೆ) + ಕಳ್ಳು (<ಕಳ್$_3$) ]

**ಬಗಬಗ** (ನಾ). ಬೆಂಕಿ, ಗಾಯ ಮೊದಲಾದುವುಗಳು ಉರಿಯುವುದನ್ನು ಹೇಳುವ ಒಂದು ಅನುಕರಣ ಪದ: ಹೊತ್ತಿಸಿದ ಜಡೆ ಬೆಂದುದಳ್ಕುರಿ ಹತ್ತಿ ಬಗಬಗ [ಪಾಠಾಂ. ಭಗಭಗ] ಎನುತಲುತ್ತಪುನುತ್ತಮಾಂಗಂ ಬೇವುತಿರಲು (ಚಕಥ. ೧೬-೨೩); ಗಾಯ ಬಗಬಗ ಎಂದು ಉರಿಯುತ್ತಿದೆ (ರೂಢಿ).

**ಬಗಬಗನೆ** (ಅ). ಬಗಬಗ ಎಂದು : ಬೆಳಗುವನಲಂ ಬಗಬಗನೆ [ಪಾಠಾಂ. ಧಗಧಗನೆ] ಶಕೆ ದೆಳೆದುಂಬುತಿಹ ಕಬ್ಬುನದ ಕಾವಲಿಯೊಳಗೆ ಕುಳ್ಳಿರ್ದು (ಚಕಥ. ೩೬-೩೩). [ ಬಗಬಗ + — ಅನೆ ]

**ಬಗರ್**, ಬಗರು$_1$ (ಅ). ಇಲ್ಲವೆ ; ಹೊರತಾಗಿ : 'ಬಗರ್ಬಡ್ಡಿ', 'ಬಗರ್ಹುಕುಂ' ಪರಾ. **ಬಗರು$_2$** : 'ಬಗರುಜಿರಾಯಿತು' ಪರಾ.

[←ಅರ. ಹಿಂ. ಬಗ್ಯೆರ್; ಪಾರ. ಬಿಘೈರ್; ಮರಾ. ಬಗರ್, ಬಗ್ಯೆರ್ ]

**ಬಗರಗೆ** (ನಾ). ೧. (ಒಣಗಿದ ನದಿದಂಡೆಯಲ್ಲಿ ನೀರಿಗೋಸ್ಕರ ತಾತ್ಕಾಲಿಕವಾಗಿ) ತೋಡಿದ ಕುಳಿ. — ಗುಣ್ಣಿ : "ಚುಂಡೀ, ಚುಂಡೀ, ಚೂಚುಕಃ—ಈ ೩ ಬಗರಗೆ" (ಹಲಾಯು. ೦೧೩-೬೨); ಪಥಿಕರಜಲ್ಗೊಂಡು ತೋಡಿದಬುಂಬುನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಂ (ಕಾದಂಕಾ. ೨೬೬); ಬೇಗೆ ಪರ್ವಿದ ಪರ್ವತಂಗಳ ತಾಪಮಂ ಕಳೆವೊಡವಱಂಮನ್ತಂಗಳಪ್ಪ ಜಲಧರಂಗಳೆ ಕಳೆಗುಂ ಕೀಱುದುಪಪ್ಪ ತೊಱೆಯುಂ ಬಾವಿಯುಂ ಬಗರಗೆಯುಂ ಕಳೆಯಲಾಱವು (ಅರ್ಜನೀ. ೬-೨೨ ವ); ಬಗರಗೆಯೊಳ್ ಮಣಲನೆನಿತ್ತಗಬ್ಬರ್ ಮಾನಸರನಿತ್ತು ನೀರೂಸರ್ಗದ (ಅತಿಪುಂ. II. ೨೮೬). ೨. ಹೆಂಚಿನ ಚೂರು ; ಓಡು ; ಬಕ್ಕರೆ: "ಪಕ್ಕಲೆಂಮುಂ ಬಗರಗೆಯೆಂದುಂ ಬಕ್ಕರೆ" (ಶಶಸಾ. ೬೬-೯೯೦); ಕೈಯೊಳ್ ಪಿಡಿದಾ ಲಾಗುಳದ ಕೋಲೊ ಬಗರ[ ಪಾಠಾಂ. ರಿ ]ಗೆಯೋ (ಕವೃಕಾ. ೦೯೯); ಬೆಂಗಡರಿದ ಬಸುರ್ಗಳ ಕೆವರ್ದಲೆಗಳ ಕೆಂಗಣ್ಣುಗಳ ಕೋರೆದಾಡೆಯ ಸಂಗಳಿಸಿದ ಬಗರಗೆ ಬಾಳ ಕೈಯ ಭೂತಂಗಳಾ ಹುರದೋರ್ದವು ಕೇಳ (ಕೂಪಾಪೂ. ೬-೨೬); ಛುಗಿಛುಗಿಲ್ಛುಗಿಲೆಂದು ಕಬ್ಬೊಗೆ ನೆಗೆಯಲುರಿ ಹೊಡೆವಬುಜಜಾಂಡದ ಬಗರ[ಪಾಠಾಂ. ರೊ]ಗೆಯ ಭೇದಿಸಿತು (ಕುಪ್ರಾಕ. ೬-೯೯) ೩. (?): ಕೆಣಕಿವರೆ ಛುಗಿಲೆಂದುದೀತನ ರಣಪರಾಕ್ರಮ ಪಟ್ಟ ಕರಪದ ಬಣಬೆ ಸಿಕ್ಕಿತು ಕಾಳುಗಿಚ್ಚಿನ ಬಾಯ ಬಗರಗೆಗೆ [ ಪಾಠಾಂ. ತುತ್ತಾಗಿ ] (ಕುಪ್ರಾಕ. ೩-೮).

**ಬಗರಿ** 'ಬವರಿ' ನೋ.

**ಬಗರು$_1$** (ಕ್ರಿ). (ಉಗುರಿನಿಂದ) ಕೆರೆ; ಗೆಬರು ; ಗೋರು ; ತೋಡು : ಪ್ರತಿಯೊಂದವನ್ನೂ ಎರಡು ಮೂರು ಬಾರಿ ಕೇಳಿ, ಕೇಳಿ, ಬಗರಿ, ಬಗರಿ ಬಿಡಿಸುತ್ತಿದ್ದರು (ಶಂಶಾ. ೬೯): ಇಷ್ಟವನ್ನು ಬಗರಿ ಕೂಡಿಡಬಹುದು (ಶಾಳ್ಕಿತ. ೮೬). [ ದೇ. ॥ ತಮಿ. ಪರುಕ; ತೆಲು. ಬರುಕು ; ಕುಇ. ವೆರ್ಗ ]

**ಬಗರು$_2$** 'ಬಗರ್' ನೋ.

**ಬಗರುಜಿರಾಯಿತು** (ನಾ). ಸರ್ಕಾರದ ಅಪ್ಪಣೆಯಿಲ್ಲದೆ ಬೇಸಾಯ ಮಾಡುವ ನೆಲ : ಭೂಮಿ ಇಲ್ಲದ ಬಡವನಾದ ಬಗರುಜಿರಾಯಿತು ಕುಳವು ಹೆಗ್ಗಡಿಯಾಗಿ ಬಲವಾಗಿರಬೇಕಾದರೆ ಪುರುಷನ ಸಹಾಯವನ್ನು ಪಡೆಯಬೇಕಾಗಿತ್ತು (ಶಾಳಗಾ. ೨೦). [ ಬಗರು$_2$ (<ಬಗರ್) + ಜಿರಾಯಿತು ]

**ಬಗರ್ಬಡ್ಡಿ** (ಅ). ಬಡ್ಡಿ ಇಲ್ಲದೆ : (*). [ ಬಗರ್ + ಬಡ್ಡಿ$_3$ ]

**ಬಗರ್ಬದಲಿ** (ಅ). ಬದಲಿಯಿಲ್ಲದೆ; ವ್ಯತ್ಯಾಸವಿಲ್ಲದೆ : (*).
[ ಬಗರ್ + ಬದಲಿ₂ ]

**ಬಗರ್ರಜ** (ಅ). ರಜವಿಲ್ಲದೆ; ಬಿಡುವಿಲ್ಲದೆ : (*).
[ ಬಗರ್ + ರಜ್ಜ (< ರಜಾ) ]

**ಬಗರ್ಹುಕುಂ, ಬಗರ್ಹುಕ್ಕುಂ** (ಅ). ಅಪ್ಪಣೆಯಿಲ್ಲದೆ : ರೆವಿನ್ಯೂ ಜಮೀನಿನಲ್ಲಿ ಕನ್‌ವರ್‌ಷನ್ ಆಗದೆ 'ಬಗರ್‌ಹುಕುಂ' ಮನೆ ಕಟ್ಟಿದ್ದು ಸರ್ಕಾರಕ್ಕೆ ಗೊತ್ತಾದರೆ ನಿನ್ನ ಮನೆ ಪಾಯದ ಕಲ್ಲು ಕದಲಿಸಿ ಬಿಟ್ಟಾರು! (ಪಮ್ಮಿ. ೪). **ಬಗರ್ಹುಕ್ಕುಂ**: ಸರ್ಕಾರದ ಜಮೀನನ್ನು ಅಥವಾ ನೀರನ್ನು ಬಗರ್‌ಹುಕ್ಕುಂ ಉಪಯೋಗಿಸಿದ್ದಕ್ಕೆ . . . ವಿಧಿಸುವ ಜುಲ್ಮಾನೆ (ಕಂದಾ. ೦೩೫). [ ಬಗರ್ + ಹುಕುಂ ]

**ಬಗರ್ಹುಕ್ಕುಂ** 'ಬಗರ್ಹುಕುಂ' ನೋ.

**ಬಗಲ್** (ನಾ). ತುಂಡು ; ಚೂರು.
ಬಗಬಗಲ್ಮಾಡು = ಚೂರುಚೂರು ಮಾಡು : ಯುಗಸಹಸ್ರ ಕ್ಕೊಡೆಯಬಹುದೆ ಬಲದುರ್ಗಮಂ ಬಗಬಗಲ್ಮಾಡಿ ಮುರಿವಡದು ರಿಪುಮಸ್ತಕವನೊಗದು ಬಿಸುಡಿದ ಪಾರ್ಥ ಪಾಶುಪತಬಾಣದಿಂ (ಕುರಂಗ. ೩೬-೩೩). [ ←ಮರಾ. ಬಖಲ್ ]

**ಬಗಲ** (ನಾ). ವಿಶಿಷ್ಟ ಆಕಾರದ ಒಂದು ಬಗೆಯ ಅರಬ್ಬಿನಾವೆ : ಛತ್ತ್ರಮಾರಿಗಳಲ್ಲಿಯೂ ಬಗಲಗಳಲ್ಲಿಯೂ ಸರಕುಗಳನ್ನು ತುಂಬಿಕೊಂಡು . . . ಸಮುದ್ರಪ್ರಯಾಣ ಮಾಡುತ್ತಿದ್ದರು (ಮುಂಬಯಿ. ೩-೧೦೩).
[ ← ಮರಾ. ಬಗಲಾ./ತುಳು. ಬಗಲೆ ]

**ಬಗಲಂಗಿ** (ನಾ). ಗಿಡ್ಡತೋಳಿನ ಒಂದು ಬಗೆಯ ಅಂಗಿ : (*).
[ ಬಗಲು + ಅಂಗಿ₂ ]

**ಬಗಲಬಂಡಿ** 'ಬಗಲುಬಂದು' ನೋ.

**ಬಗಲಬಂಡೆ** 'ಬಗಲುಬಂದು' ನೋ.

**ಬಗಲಾಂಟ** (ನಾ). ಸುಳ್ಳು ಆಪಾದನೆ; ಮಿಥ್ಯಾರೋಪ : ಇದೇನು ಹೊಸ 'ಬಗಲಾಂಟ'ದ ಸುದ್ದಿ ತಂದಾನೊ ಎನ್ನುವಂತೆ ಮಾಸ್ತರರನ್ನು ನೋಡಿ . . . ಕೇಳಿದರು (ಮೂರುದಾ. ೩೦).
[ ←ಮರಾ. ಬಂಗಲಾಟ್, ಬಂಗಲಾಠ್ ]

**ಬಗಲಿ** (ನಾ). ಕನ್ನ ; ಕಂಡಿ: 'ಬಗಲಿಪದ್ಧತಿ' ಪರಾ.
[←ಮರಾ. ಬಗಲೀ]

**ಬಗಲಿಪದ್ಧತಿ** (ನಾ). ಕನ್ನ ಕೊರೆದು ಕದಿಯುವ ಪದ್ಧತಿ : ಬಾಗಿಲಿನ ಹತ್ತಿರ ಗೋಡೆ ಕೊರೆದು ಒಳಸೇರುವುದಕ್ಕೆ 'ಬಗಲಿ'ಪದ್ಧತಿಯೆಂದೂ . . . ಕರೆಯುವ ರೂಢಿಯಿದೆ (ಬಂಗಾರ. ೦೫೦). [ಬಗಲಿ + ಪದ್ಧತಿ]

**ಬಗಲು** (ನಾ). ೧. ಕಂಕುಳು; ಕಕ್ಷ : ಗಂಡುಗಲಿ ಕೃತವೀರ್ಯ ಸಂಭವಂ ಬಗಲೊಳಾಂತೊಲಪಿನಿಂ ತಿರುಗಲು (ಜರಸು. ೦೩-೩೬); ಲಲನೆ ಯರ ಮೈ ಕಂಪನಂಬಡೆದು ಬಗಲೊಳಗೆ ಜಲವಿಳಿದು ಬಾಯಿರತವು (ಮಲ್ಲಿಕಾ. ೯-೮); ಪಾದರಕ್ಷೆಯನ್ನು ಪಟ್ಟಿಯ ವಸ್ತ್ರದಲ್ಲಿ ಹುದುಗಿಸಿ, ಬಗಲಲ್ಲಿಟ್ಟು ಬಸವಣ್ಣನವರ ಅರಮನೆಗೊಯ್ದನು (ಕರೀ. ೬೩೦-೭ ಪ). ೨. ಮಗ್ಗುಲು ; ಪಕ್ಕ : ಪಡುವಲಾಗಿ ತಿರಿಗಿ ಬಗಲಾಗಿ ತಿರಿಗಿದ ದುರಿದೂಬಲಾಗಿ ಕರಿಯ ಕಲ್ಲ ಮೇಲೆ ಹಾದು (ಎಕ. III, ತಿರುಮ. ೬೨-೨೦: 1622); ಹಳ್ಳಿಯ ರೈತನೊಬ್ಬ. . . ದಾರಿಯ ಬಗಲಲ್ಲಿ ಗಾಡಿ ಹೊಡದು ಕೊಂಡು ಹೋಗುತ್ತಿದ್ದನು (ಕೈಪಿಡಿ. ೦೮೨). ೩. ಪಕ್ಷ; ಪಂಗಡ : ಒಬ್ಬೊಬ್ಬ ಸಂಪಾದಕರು ಬಗಲಿಗೆ ಇರಲಿ (ಅರಳು. ೩೯೭-೧೧).
ಬಗಲಿಗೆ ಬೀಳು=ಅಧೀನವಾಗು ; ವಶವಾಗು : ಶ್ಯಾಮಣ್ಣ ಬಗಲಿಗೆ ಬಿದ್ದರೆ (ಶೋಕಕ. ೦೯) ; ಕಾಶಾ ಬಗಲಿಗೆ ಬಿದ್ದರ ಅಂತ ತಿಳೀ (ದೀಚಪ. II, ೨೦೦). [←ಪಾರ. ಬಘಲ್ ; ಹಿಂ. ಮರಾ. ಬಗಲ್]

**ಬಗಲುಕಸೆ** (ನಾ). ಒಂದು ಪಕ್ಕದಲ್ಲಿ ಲಾಡಿಯನ್ನು ಗಂಟುಕಟ್ಟಿ ತೊಡುವ ಅಂಗಿ : ಮೈಯಲ್ಲಿ ಕೊಡೆಯರಿಮೆಯ ಬಗಲುಕಸೆಯ ಅಂಗಿಯನ್ನು ತೊಟ್ಟಿದ್ದ (ಜನಪ. ೨೬). [ಬಗಲು + ಕಸ್ಸೆ]

**ಬಗಲುಚೀಲ** (ನಾ). ಹೆಗಲಿಗೆ ನೇತುಹಾಕಿಕೊಳ್ಳುವ ಚೀಲ : ಅವನು ತನ್ನ ಬಗಲುಚೀಲದಿಂದ ಪುಸ್ತಕಗಳನ್ನು ಹೊರದೆಗೆದನು (ರೂಪ).
[ಬಗಲು + ಚೀಲ]

**ಬಗಲುಬಂಡಿ** 'ಬಗಲುಬಂದು' ನೋ.

**ಬಗಲುಬಂದು, ಬಗಲಬಂಡಿ, ಬಗಲಬಂಡೆ, ಬಗಲುಬಂಡಿ** (ನಾ). ಒಂದು ಬಗೆಯ ಅಂಗಿ : ಜಗನ್ನಾಥದಾಸರು ಬಗಲುಬಂದನ್ನು ತೊಟ್ಟು ಕೊಂಡು ಲಪ್ಪಾಟಿಯನ್ನು ಸುತ್ತಿಕೊಂಡು. . . ಮನೆಗೆ ಬಂದರು (ಕಥಾ. ೩೨೩). **ಬಗಲಬಂಡಿ** : ಶರೀಫರು. . . ಬಿಳೀ ಬಗಲಬಂಡಿಯನ್ನು ಅಚ್ಚುಕಟ್ಟಾಗಿ ತೊಡುತ್ತಿದ್ದರು (ಕಂಠಹ. ೬೧ ಶರೀಫಶಿವಯೋಗಿ); ಚಳಿಯ ಸಲುವಾಗಿ ಅವರು ಒಂದು ಖಾದಿಯ 'ಬಗಲಬಂಡಿ' ಯನ್ನು ಹಾಕುತ್ತಿದ್ದರು (ಎಸ್ಸಾತ. ೦೫೦). **ಬಗಲಬಂಡೆ** : ವೇದವ್ಯಾಸಾಚಾರ್ಯ ಉಟ್ಟಿದ್ದು ಅಂಚಿನ ದೋತರ, ತಲೆಗೆ ಸುತ್ತಿದ್ದು ಕೆಂಪುಬನಾತು, ಮೈಯಲ್ಲಿ ಶುಭ್ರವಾದ ಬಗಲಬಂಡೆ (ಕಾದಮ್ಮ. ೦೬). **ಬಗಲುಬಂಡಿ** : ಹಿಂದಕ್ಕೊಮ್ಮೆ ಬಗಲುಬಂಡಿಗಳನ್ನು ನಮ್ಮ ಪುರಾತನರು ಹಾಕುತ್ತಿದ್ದರು (ಮುಂಗಾರು. ೨೯).
[←ಪಾರ. ಮರಾ. ಬಗಲ್‌ಬಂದ್ ; ಹಿಂ. ಬಗಲ್‌ಬಂದೀ]

**ಬಗಲೆ, ಬಗಳೆ** (ನಾ). ೧. ತಾಂತ್ರಿಕರು ಪೂಜಿಸುವ ಒಬ್ಬ ದೇವತೆಯ ಹೆಸರು : ಈ ಎಲ್ಲಾ ಕ್ರಮಗಳೂ ಸಚ್ಚಿದಾನಂದರೂಪಿಣಿಯಾಗಿರುವ ತ್ರಿಪುರಾ, ಲಲಿತಾ, ಪರಾ, ಬಗಲಾ — ಮೊದಲಾದ ಸಾವಿರಾರು ಸಂಕೇತಗಳಿಂದ ಸೂಚಿಸಲ್ಪಡುವ ಶಕ್ತಿತಾದಾತ್ಮ್ಯವನ್ನು ಉಂಟುಮಾಡುವವುಗಳಾಗಿವೆ (ಶಾರದ. ೨೨೦). **ಬಗಳೆ** : ೨. ಪಗಲಾದೇವತೆಯನ್ನು ಕುರಿತು ಹೇಳುವ ಮಹಾಮಂತ್ರಗಳಲ್ಲಿ ಒಂದು : ಬಗಳಾ . . . ಇತ್ಯಾದಿ ಮಹಾಮಂತ್ರಗಳು (ವಿವೇಕ. ೬೦). [<ಸಂ. ಪಗಲಾ]

**ಬಗಸಿಗೆ** (ನಾ). ಬೊಗಸೆ ; ಅಂಜಲಿ : ಕುಂಚಿತಾಂಗುಲಿಗಳನ್ನುಳ್ಳ ಅಂಗೈಯು ಪ್ರಸೃತಿಯೆನಿಸುಗು. ಅದು ಕುಡಿತೆ; ಆ ಎರಡೂ ಕೂಡಿದರೆ ಅಂಜಲಿಯೆನಿಸುಗು. ಅದು ಬಗಸಿಗೆ (ವಾಚಾರು. ೪). [<ಬಗಸೆ]

**ಬಗಸು₁** 'ಬಯಸು₁' ನೋ.

**ಬಗಸು₂** (ನಾ). ೧. ಆಸೆ; ಹಂಬಲ : ಅಗಸಿಯ ತೆರಿ ನನ್ನ ಬಗಸುಳ್ಳ ತಳವಾರಾ ಬೊಗಸಿ ತುಂಬಿಡಕಿ ಬೀಳಲಿಯ ಕೋ(ಪಲ್ಲಗ. ೩೯). ೨. (?) : ಸೊಗಸಿನಿಂ ಬಗಸಿನಿಂ ಮಿಗಿಲಾಗಿ ಲಘುವಾಗಿ (ಜವವು. ೧೯-೩೦).
[<ಬಗಸು₁]

**ಬಗಸೆ, ಬೊಗಸೆ₁** (ನಾ). ೧. ಎರಡು ಅಂಗೈಗಳನ್ನೂ ಕೂಡಿಸಿದುದು ; ಸೇರೆ; ಅಂಜಲಿ : ಕುಡುತೆ ಬಗಸೆ ಮೊಲ ಗೆರಸಿ . . . ಮೊದಲಾದವು ಅವಮಾನಮೆಂಬುವಕ್ಕುಂ (ಶ್ರಾವಣ. ೩೯-೦೬); ಒಗೆದೊಗೆದು ಕಾಲ್ದಿರುಹಿ ರಕ್ತಮಂ ಬಗಸೆಯಿಂ ಮೊಗೆಮೊಗೆದು ಕುಡಿವುತಂ (ಕಕುಕ. ೩-೭-೬೮); ಹುಡುಗಿಯರು ಗಾಡಿಗಳನ್ನು ನಿಲ್ಲಿಸದೆ ಹಾಗೆಯೇ ಮೇಲೇರಿ ಬಗಸೆ ತುಂಬ ದ್ರಾಕ್ಷಿಗಳನ್ನು ಎತ್ತಿ . . . ಹಾಕುತ್ತಿದ್ದರು (ಮರಳಿನ. ೦೫೯). ೨. ಒಂದು ಸೇರೆಯಲ್ಲಿ ತುಂಬುವಷ್ಟು : ಯಾರಾದರು ಬಂದ ಪುಣ್ಯಾತ್ಮರು ಸೊನ್ನ ತಲೆ ಪ್ಯಾಲಿ ಮಂದು ಬಗಸೆ ನೀರು ಆಕಬೇಕೆಂದು ಬೇಡುತ್ತೀನೆ (ಪ್ಪಾಅ. ೧೯೨೯, ೯೭-೦೬: 1593 ?). **ಬೊಗಸೆ₁** : ೧. ರಕ್ತವನ್ನು ಬೊಗಸೆಗಳಿಂದ ಹಿಡಿದು ಬಾರಿಬಾರಿಗೂ ಕುಡಿಯುತ (ಕೃಷಾಕ. ೦೬೬); ಬೊಗಸೆಯೊಳಿರೆ ಹೂವು ಕೈಗಳನೆರಡನು ಪರಿಮಳಗೊಳಿಸುವುದಲ್ತೆ (೨೦ಚಾಹ. ೬೯-೩೩). ೨. ಆಕೆಯನ್ನು ಮೂರುಲೋಕ ಸುತ್ತಿಸಿ, ಮೂರು ಬೊಗಸೆ ನೀರನ್ನು ಕುಡಿಸದೆ ಬಿಡುವೆನೇ ? (ಲಕ್ಷ್ಮೀಶ. ೦೬೦).

**ಬಗಸೆಗಣ್**, ಬಗಸೆಗಣು, ಬಗಸೆಗಣ್ಣು, ಬೊಗಸೆಗಣ್, ಬೊಗಸೆಗಣ್ಣು (ನಾ). ಬೊಗಸೆಯಷ್ಟು ಅಗಲವಾದ ಕಣ್ಣು : ಬಗಸೆಗಣ್ಣುಡಿನೋಟವಮುಮ ಪೊಸಗಾಡಿಯುಂ ತೆಗೆಯೆ (ಕರ್ಣಾ. ೩-೩೦); ಬಗಸೆಗಣ್ಗಳೊಳು ವಿಲಾಸವೆಸೆಯೆ ರಸವೊಗುವಂತೆ ಪಾತ್ರವಾಡಿದಳು (ಶಠಕ. ೦೩-೭೮); ಮೊಗವನಿತುಮಂ ವ್ಯಾಪಿಸಲೆಳಸುವ ಬಗಸೆಗಣ್ಗಳಂ ಮೇರೆಯೊಳ್ ನಿಲಿಸುವೆಲ್ಲೆಗಟ್ಟೆಗಳಂತಿರ್ಪ ಪುರ್ಬುಗಳುಂ . . . ಮನಂಗೊಳೆ (ಚಕವಂ. ೬೬-೦೯). **ಬಗಸೆಗಣು** : ಸಸಿಯನ್ನ ಮೊಗದೊಳು ಮೊಳೆವ ವಿಲಾಸೆಯ ಚೆನ್ನವಮಣಿಕದುಟಿ ಬಗಸೆಗಣು [ಪಾಠಾಂ. ಣ್]ತಿಂಗಳರೆನೊಸಲು (ಸಾಳ್ವಭಾ. ೯-೬). **ಬಗಸೆಗಣ್ಣು** : ಒರ್ವಳಂ ತನ್ನ ಬಗಸೆಗಣ್ಣಿಂ ಮುರಿದು ನೋಡೆ (ಕರ್ನಾ. ೮-೯೬);ಬಗಸೆಗಣ್ಣ ಮಲಾಂಗಿಯರ್ಪೆತಂದರು ಬಗಿದ ಪುರ್ಬಿನ ಪೆಣ್ಣೆನೊಡನೆ (ಶಂಕ್ರ.ಸಾಂ. ೯-೦೯೦). **ಬೊಗಸೆಗಣ್**: ಬೊಗಸೆಗಂಗಳ ಬಾಲೆಯರ ತಂದಾತನ ಶ್ರೀಕೃಷ್ಣ ಎನ್ನಿರೊ (ಕವಚ. ೦೩೦-೩) : ಭಟ್ಟನಿಯ ಬೊಗಸೆಗಂಗಳಲ್ಲಿ ಕಂಬನಿ ತುಂಬಿ ಬಂದಿತು (ಪಾಡಿ. ೩೭೮). **ಬೊಗಸೆಗಣ್ಣು** : ಬೊಗಸೆಗಣ್ಣಿನ ಮುಂಗುದಿಯನು ಸೋಲ್ವೆ (ಪಾರ್ಶ್ವಂತ. ೧೮ ಅಡಿಕಶ್ಯ) : ಅವಳ ಬೊಗಸೆಗಣ್ಣುಗಳಲ್ಲಿ ತುಂಬುತ್ತಿದ್ದ ನೀರನ್ನು ನೋಡಿದಾಗ ಗಲಿಬಿಲಿಗೊಂಡ (ವಾತ್ಸ್ಯ. ೩೭).

[ಬಗಸೆ + ಕಣ್]

**ಬಗಸೆಗಣು** 'ಬಗಸೆಗಣ್' ನೋ.

**ಬಗಸೆಗಣ್ಣು** 'ಬಗಸೆಗಣ್' ನೋ.

**ಬಗಸೆಗೈ** (ನಾ). ಜೋಡಿಸಿದ ಕೈ ; ಸೇರೆಗೈ : ಬಗಸೆಗೈಗಳಲಿ ನೀರ್ವಿಡಿದು ಶ್ರೀರಂಗೇಶ ಸೊಗಸುಗಾತಿಯರ ಮೇಲಿಸಲು (ಕಂಪಾ. ೨೩-೦೨೩).

[ಬಗಸೆ + ಕೈ$_2$ (< ಕೆಯ್$_2$) ]

**ಬಗಳಾಮುಖಿ** (ನಾ). = ಬಗಲೆ ೧ : ಗಿರಿಗಳೊಳು ಸುರಗಿರಿಯು ಭೂಮಿಯ ತರುಗಳೊಳು ಮಂದಾರ ದೈವತದಿರವಿನೊಳು ಬಗಳಾಮುಖಿಯು (ಜ್ಞಾನಸಿಂ. ೦-೦೩). [< ಸಂ. ವಗಲಾಮುಖೀ]

**ಬಗಲ** 'ಬೊಗಳ' ನೋ.

**ಬಗಳೆ** 'ಬಗಲೆ' ನೋ.

**ಬಗಾಟಬಗರಿ** 'ಬೊಗಾಟಬುಗರಿ' ನೋ.

**ಬಗಿ$_1$** (ಕ್ರಿ). ೧. (ಎರಡು ಭಾಗಗಳಾಗುವಂತೆ) ಸೀಳು ; ಹೋಳು ಮಾಡು : "ಬಗಿ—ವಿಶ್ಲೇಷೇ (ಭಾಗ ಮಾಡು)" (ಕಮಿಪಾ); ಅಂಬರಂಬರಂ ಬಗಿದು ನಿಮಿರ್ವ [ಪಾಠಾಂ. ಬಳೆದು ಮಿಳಿರ್ವ] ತೆರೆಗಳ್ (ಆದಿಪು. ೦೨-೭೯ ಪ); ನಿಮ್ಮುದರವ ಬಗಿದಾನು ಹೊಗುವ ಭರವೆನಗೆ (ಜಕವ. ೯೮೭) : ಈಗಳೆ ನಿಮ್ಮನುಗಿದುಂ ಬಗಿದುಂ ದೆಸೆವಲಿಗುಡುತುಮೆನ್ನ ಚೆನ್ನತಮ್ಮನಂ ಕೊಳ್ವೆಂ (ರಾಘವಾಂಕ. ೦೩೭-೨), ೨. ಕೆದಕು ; ಬೆದಕು : ಪಿರಿದಪ್ಪೆರೆಯುಂ . . . ನಿಮ್ಮುರದಿಕ್ಕಿ ಮೆಟ್ಟಿ ಪುಲುಗಳ್ ಕರಮೆಲ್ಲೆಡೆ ಪತ್ತಿ ಬಗಿದು ತಿನೆ ಮೆಯ್ಯುಡಗಂ (ಧರ್ಮಾಮೃ. ೩-೭೯). 'ಬಗಿಯೇಜು' ಪರಾ. ೩. ಎರಡು ಭಾಗಗಳಾಗುವಂತೆ ತಳ್ಳಿ, ಜಾಗ ಮಾಡಿಕೊಳ್ಳು : ಮೊನೆಯಂಬಿನ ತಂಪಲೊಳರ್ಜುನನಂ ಕರ್ಣನುಮನಿನಿಸು ಕಾಣದಣಂ ಮೆಲ್ಲನೆ ಬಗಿದು ನೋಡಿ ಕುಡುಮಿಂಚಿನಂತೆ ಮೋಗೊಗೆದು ನಾರದಂ ನರ್ತಿಸಿದಂ (ಕಂಪಶಾ. ೦೨-೦೮೯) : ಸೌಂದರಪೆರುಮಾಳೆಯಿರ್ದ ವನಕ್ಕೆ ಬಂದು ಅಲ್ಲಿ ಮುಂದೆ ನೆರೆದಿರ್ದ ನೆರವಿಯುಂ ಬಗಿದು ಎನ್ನ ಭಕ್ತನ ಕೂಡಿ (ಶಂಕರ. ೬-೮೩) ; ಬಿಡುಮುಡಿಯ ಕಟ್ಟದೆ ತವಕದಲ್ಲಿ ನೋಳಿಪ್ಪೆತ್ಸುಕ್ಯದಿಂ ಮಂದಿಯ ಬಗಿದು ಚೆಲ್ವೆಗಂಗಳೊಳೀಕ್ಷಿಸುತ್ತಿರ್ದಳೊರ್ವಳಾ ಕುವರನ ಮಹೋತ್ಸವವನು (ಕಂಪು. ೫-೦೯). ೪. ಅಗೆ ; ತೋಡು : ಬಗಿಪು ಪಾತಾಳವುಂ ಮುಟ್ಟುವಗಳುದ್ಧದಿಂ . . . ಎಸೆವುದಾ ಪುರವು (ಜಕಾಂಶ. ೩. ೨೮೦-೦); ಹೊಸವೊಜಿತೆಯಂ ಬಗಬಗಿದು ತೋಡಿದದಲ್ಲದೇ ಕೈಕೊಳ್ಳನು (ಚಸತು. ೯೭-೦೦). ೫. ಬೇರೆ ಮಾಡು ; ಬೇರ್ಪಡಿಸು ; ವಿರಳಗೊಳಿಸು (?) : ಬಗಿದಗುಟಿಊದದಂತ ತೆಗೆದಾಜಿಸಿದೋಗರದೊಳ್ ಪೊವಳ್ದು ಕಮ್ಮಗೆ ಕನೆಗೊಂಡ ಗೆತ್ತೆಮೊಸರಂ ಸುರಿದು . . . ಕಲಸಿರ್ದ ತಣ್ಣಲಸುಗೂಬನಿಳಾಪತಿಗಿತ್ತಂ (ಲೀಲಾವ. ೩-೩೨) ; ಸಿಡುಗೇಶವ : ಗಿ ಬಗಿದು ಕಮ್ಮಿಣ್ಣೆಯನೊಡನೆಟದೊರ್ವಳವಳಿಗೆ . . . ಉಗುರ್ಗಳನಾಡಿಸಿದಳು (ಶಬರಸಾಂ. ೨೯-೯೩). ೬. (ಆಲಂ) ನಾಶಮಾಡು ; ಇಲ್ಲವಾಗಿಸು : ಕೌರವನ ತಮ್ಮಂದಿರ ಸುಸನ್ನಾಹವ ವಿಸಂಚಿಸಿ ಬಗಿದು ಸಮಸಪ್ತಕರನೊಡೆಹಾಯ್ಸಿ (ಕುಮಾ.ಕ. ೦೯-೨೪).

[ದೇ.॥ ತಮಿ. ವಕ್ಕೈ, ವಕು ; ಮಲ. ವಕಮು, ವಕು]

**ಬಗಿ$_2$** (ನಾ). ೧. ಸೀಳುನಿಕೆ ; ಕತ್ತರಿಸುವಿಕೆ : (೯). ೨. ಹೋಳು ; ಭಾಗ : 'ಇರ್ಬಗಿ' ಪರಾ. ೩. ಸೀಳು ; ಬಿರುಕು : ಕೊಯ್ಯೆ ಪೊರಳ್ಚಿ ಕುತ್ತೆ ಕೂಜಿದಿಕ್ಕಿ ತಡಂಗಡಿವೊಟ್ಟೆ ನೆತ್ತಿಯುಂ ಪೊಯ್ಯೆ ಬಬಲ್ದು ವೈತರಣಿಯುಂ ಪುಗೆ ಕಾಯ್ದುಬಿಟ್ ಲೋಹಮಾಂ ಚುಂಚುಯ್ಯೆನೆ ಸುಟ್ಟು ಹುಣ್ಣಾರಳಿ ಮೆಯ್ಯನಿತುಂ ಬಗಿಯಾಗಿ ಬಾಯ್ಗಳಿಂ ಪುಯ್ಯಲನಿಕ್ಕುಪಂ ಕೊಳಜು ಕೊಳ್ಗುದಿವುಳ್ಗುದಿಗೊಂಡು ಮುಗ್ಗುವರ್ (ಅಪಂಶು. ೯-೩೨).

[< ಬಗಿ$_1$./ ತೆಲು. ಬಗಿ = ಪಕ್ಕ]

**ಬಗಿ$_3$**, ಬಗ್ಗಿ (ನಾ). (ಉಕ) (ನಾಲ್ಕು ಚಕ್ರಗಳುಳ್ಳ, ಒಂದು ಅಥವಾ ಎರಡು ಕುದುರೆಗಳನ್ನು ಕಟ್ಟುವ) ಒಂದು ಬಗೆಯ ಕುದುರೆಯ ಗಾಡಿ : ಸಾರೋಟು : ಜಾಗಿರದಾರರ ಮಕ್ಕಳು ವಿರಾಜಮಾನರಾಗಿ ಒಂದು ಬಗಿಯಲ್ಲಿ ಕುಳಿತುಕೊಂಡು ಆ ಶಾಲೆಗೆ ಹೋಗುತ್ತಿದ್ದರು (ಚಿತ್ರೀ. ೩೦) ; ಜ್ಞಾನಶಂಕರರು . . . ಬಾಡಿಗೆ ಬಗಿಯನ್ನು ಹಿಡಿದು ಮನೆಗೆ ಹೊರಟರು (ಶ್ರೀನೃಸಿ. ೩೯). **ಬಗ್ಗಿ** : ಒಬ್ಬನು ಅಥವಾ ಇಬ್ಬರು ಸವಾರಿ ಮಾಡಬಹುದಾದ ಹಗುರವಾದ ಗಾಡಿ : ಬಗ್ಗಿ (Buggy- ಇಂಕಂ).

[← ಇಂ. Buggy. / ಅರ. ಬೋಗೀ ; ಹಿಂ. ಬಗ್ಗೀ, ಬಗ್ಘೀ ; ಮರಾ. ಬಗೀ]

**ಬಗಿನಿ** 'ಬಯಿನೆ' ನೋ.

**ಬಗಿಯೇಜು** (ನಾ). ಕೆದಕಿದುದರಿಂದ ಉಂಟಾದ ಗಾಯ : ಅರೆವಣನಾದೊಡಂ ಬಿಡದೆ ಮಾಡುವ ದೀವಿಗೆಯಾಸೆಯುಳ್ಳ ಬೀರರ ಬ[ಪಾಠಾಂ. ಬಿ]ಗಿಯೇಜು ಬಾಯುಂಗಿಲು ಸಿಂಕಿಪ ಕಂಡದ ಸತ್ತ ರಾಜಪುತ್ರರ ವನಿತಾಜನಂ ತೊಜೆದು ತೋ[ ಕೋ ]ಳ್ಗುದಿ ಬಾಳ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಯ್ತೆರಮುಂ ಬಲಂಗಳೊಳ್ (ಅಸಂಶು. ೦೦-೯೭).

[ ಬಗಿ$_1$ + ಏಜು$_4$ (<ಏಜು$_4$) ]

**ಬಗಿಸು** (ಕ್ರಿ). ೧. ಸೀಳುವಂತೆ ಮಾಡು; ಸೀಳಿಸು: ಉದ್ರೇಕದಿಂದೀಕೆಯುದರಮುಂ ಬಗಿಸಿದ ಸತಿದ್ರೋಹ ನಾಲ್ಕು (ಕಂಪು. ೯-೩೧). ೨. ಅಗೆಯಿಸು; ತೋಡಿಸು: ಹೊಲದ ಮಣ್ಣನ್ನೇ ಬಗಿಸಿ ತೆಗೆದು ಸಾರಿಸಿ ದೊಡ್ಡದೊಂದು ಕಣವನ್ನು ಮಾಡಿಸುತ್ತಿದ್ದರು (ವಚಿಪಾ. ೬೩). [ಬಗಿ$_1$ + —ಸು$_1$]

**ಬಗೀಚಾ**, ಬಗೀಚೆ (ನಾ). ಸಣ್ಣ ತೋಟ; ಕೈತೋಟ: ಇದು ಬಂದ ಹೋದವರ ದಣಿಯಿಂದ ಮಾಡಿದ ಬಗೀಚಾ ಅಂತ ತಿಳಿದಿಯೇನು ? (ಬಾಂಬಾಯ. ೦೯). **ಬಗೀಚೆ**: ಒಂದೊಮ್ಮೆ ಹೇಳಿದ ಬಗೀಚೆಯೊಳಗಿನ ಬಂಗಲೆಯಲ್ಲಿ ಇಬ್ಬರೂ ಕೂಡಿ ಸುಖವಾಗಿ ಕಾಲವನ್ನು ಕಳೆಯಬಹುದಾಗಿದ್ದಿತು (ವಗು. ೫೬).

[← ಪಾರ. ಬಾಗಚಾ; ಹಿಂ. ಬಗೀಚಾ; ಮರಾ. ಬಗಿಚಾ, ಬಗೀಚಾ]

**ಬಗೀಚೆ** 'ಬಗೀಚಾ' ನೋ.

**ಬಗುತ** 'ಬಕುತ' ನೋ.

**ಬಗುತಿ** 'ಬಕುತಿ' ನೋ.

**ಬಗುನಿ** 'ಬಯಿನೆ' ನೋ.

**ಬಗುಲಿ** (ನಾ). ಒಂದು ಬಗೆಯ ಸಸ್ಯ: ಮರಸದ. ಬಗುಲಿ. ಹಂಡಿಕೆ ಕುಡ್ಡು. ಮರಸುತ್ತುಬಳ್ಳಿ (ಮ್ಯಶಿಗ. ೦೬-೨೯೨). [ ? ]

**ಬಗುಸಾಳೆ** (ನಾ). ಬೊಗಳೆ; ಬಡಾಯಿ: ಒಂದೇ ಪೆಟ್ಟಿನಲ್ಲಿ ಹೊಡೆದು ಹಾಕಿ ಬರುತ್ತೇನೆಂದು ಬಗುಸಾಳೆ ಮಾತು ಕೊಟ್ಟ . . . ಮನೆಯ ದೂಲದ ಮೇಲೆ ಬಂದು ಕೂತುಕೊಂಡಿತು (ಕಥಾಮು. IV. ೪೬). [ ? ]

**ಬಗುಳ್₁**, ಬಗುಳು₁, ಬೊಗಳು, ಬೊಗುಳು₁ (ಕ್ರಿ). ೧. ನಾಯಿಯು ಕೂಗು,–ಧ್ವನಿ ಮಾಡು: "ಬಗುಳ್__ಕುಕ್ಕುರಧ್ವನೌ, ಸಾರಣೇ ಚ (ಆಮಶಂಕೆಯಿಂದ ತೊಂದರೆಪಡು)" (ಕಮಂಜ): ಪೆರ್ಬಡಿಕೆಯ ನಾತ ಮಾನೆಗಳ ಬಲ್ಣನಂ ಬಗುಳುತ್ತ ಮುತ್ತಿ ಕೀವುಡುತ ತಗುಳ್ವನಂ ತೆಗೆವ ವಾಯ್ಗುಳಗುರ್ವಿಸುತಿರ್ಪ ತೋರ್ಪ ಪೇರಡವಿಯ ಬೇಡಮಳ್ಳಗಳ ನೀಕ್ಷಿಸುತುಂ (ಅನಂತ. ೩-೪೫); ಬಾಟ್ಟ ಮನೆಗೊಂದು ಬಗುಳ್ವುದು ಬೇಟ್ಟುಂ (ಆಹೂತಿ. ೧-೯೦). ೨. ಗಳಹು; ಅಪಲಾಪ ಮಾಡು; ಹರಟು: ನ್ಯಾಯಮಿದು ಧರೆಗೆ ದುರಭಿಪ್ರಾಯದ ದುರ್ಜನನ ಮೊಜೆಯುಂ ಕಂಡೊಡೆ ಥೂ ಬೇಯೆಂಬುದುಜ್ ಬಗುಳ್ವನ ಬಾಯೊಳಗುಗುಟೆಂಬ ನಾಡ ಗಾದೆಯ ಬಲದಿಂ (ರರ್ಮಣಾ.. ೧-೬೯); ನಾಯಿ ಬಗುಳದೆ ಕೆಲಕೆ ಸಾರು (ಕೊರಟಾ. ೩-೩-೬). **ಬಗುಳು₁** : ೧. ಮುಳಿದು ಬಗುಳುವ ವಾಯ್ಗ ಚಂದ್ರಮನಳುಕುವನೆ (ಕುಮ್ಯಾರಾ. ೬೧೩. ೦೦-೦೬); ನಾಯಿಯೊಂದು . . . ಬಗುಳಿತು (ಕುಹಾಂ. ೧೦೨). ೨. ಬಗುಳುವಿವದಿರು ಹರಿಯ ಬಡಿಹೋರಿಗಳಲಾ (ಕುಮ್ಯಾಸ. ೦೦-೯); ಬಾಯ ಬಡಿಕರು ಬಂದ ಬಣ್ಣಗೆಯಸಗಿ ಬಗುಳುವರು (ಕೃಷ್ಣಾಗ. ೦೯-೨೯). **ಬೊಗಳು**: ೧. ಆನೆ ಕಂಡು ಶ್ವಾನ ಬೊಗಳಿದ ಹಾಗೆ (ಗಾದೆ). ೨. ಶರಣ ಪಕ್ಷ ಗುರು ಚರ ಪರವೆಂದು ಬೊಗಳುವ ಕುನ್ನಿಗಳ ನೋಡಿ (ಮಹಾದೇ. ೩. ೯೭-೨೨೩); ಹುಸಿಯ ಬೊಗಳುವನೊಬ್ಬ ಹುಚ್ಚ ಹೊಲೆಯ (ಪುರಂದ. ೦-೦೬೮-೯); ಈ ಗಂಡುಹುಡುಗರು ಏನೇನೋ ಬೊಗಳುತ್ತಾವೆ (ರಂಗರೋ. ೯೬). **ಬೊಗುಳು₁** : ೩. ಒದರು; ಹೇಳು : ಯಾವ ತೋಟ ಲೂಟಿ ಹೊಡೆಯುವುದಕ್ಕೆ ಹೋಗಿದ್ದಿರಿ. ನಿಜ ಬೊಗಳಿ (ಕಳಹು. ೩೨).

**ಬಗುಳ ಸನ್ನಿ** – ಬಗುಳುಸನ್ನಿ: ಏತರಿಂದಿವಗೀ ಪರಿಯ ಕಡುಮಾತು ಬಂದುದೊ . . . ತನುಜಾತಗಿಕ್ಕಿತು ಬಗುಳ ಸನ್ನಿ ವಿಕಾರವಕಟ (ತ್ರಿಶಾ್ಯ. ೦೦-೯). [ದೇ.॥ ತುಳು. ಬಗುಳು, ಬಗಳ್ಸು, ಬಗುಲ್, ಬಗುಲು]

**ಬಗುಳ್₂** (ಕ್ರಿ). ಭೇದಿಯರಾಗು; ಆಮಶಂಕೆಯುಂಟಾಗು: "ಬಗುಳ್_ಕುಕ್ಕುರಧ್ವನೌ, ಸಾರಣೇ ಚ (ಆಮಶಂಕೆಯಿಂದ ತೊಂದರೆ ಪಡು)" (ಕಮಂಜ). [ ? ]

**ಬಗುಳಾಟ**, ಬೊಗುಳಾಟ (ನಾ). ಕೆಲಸಕ್ಕೆ ಬಾರದ ಮಾತು; ಹರಟೆ: ಬಂಡುಗಲೆ ಬಗುಳಾಟವಾಡುತ ವಿಂಡರೊಡನೆ ತಿರುಗುವ ತುಂಡುವೇಶ್ಯೆಯ ತುರ್ಡುಕುಜಗಳತಿ ಭಂಡೆರಲ್ಲ (ಕರಿಂ. ೩೬೯-೩); ಬಗೆಯಾದ ಪುರುಷನ ಮಾತಾ ನಗೇಡಿತನದಲ್ಲಿ ಬಗುಳಾಟದೊಳಗಿಹ ವಿಗಡೆಯಾದರೆ ನಿನ್ನ ನೆನೆಯೆ (ಕಪೂಕ. ೦೬-೬೩). **ಬೊಗುಳಾಟ** : ಆವ ತೆರದ ಬೊಗುಳಾಟವನ್ನುಲಿದರೀ ಭೂಪಾಲರು (ಅಕಮು. ೩-೦೯). [ಬಗುಳ್₁ + ಆಟ]

**ಬಗುಳಿಸು**, ಬೊಗುಳಿಸು (ಕ್ರಿ). ನಾಯಿಯು ಬಗುಳುವಂತೆ ಮಾಡು: ಆ ಹುಡುಗ ನಾಯಿಯನ್ನು ಛೂ ಬಿಟ್ಟು ಬಗುಳಿಸಿದನು (ಆಡು). **ಬೊಗುಳಿಸು**: ನೀನು ಆ ನಾಯಿಯನ್ನು ಹಿಂಸೆ ಮಾಡಿ ಬೊಗುಳಿಸಬೇಡ (ಆಡು). [ಬಗುಳು₁ (<ಬಗುಳ್₁ ) + –ಇಸು₃]

**ಬಗುಳು₁** 'ಬಗುಳ್₁' ನೋ.

**ಬಗುಳು₂**, ಬಳ್ಳು₂, ಬೊಗುಳ್, ಬೊಗುಳು₂, ಬೊಳ್ಳು (ನಾ). ೧. (ನಾಯಿ,ನರಿ ಮುಂತಾದ) ಪ್ರಾಣಿಗಳು ಕೂಗುವಿಕೆ,–ಅರಚುವಿಕೆ: ರಾತ್ರಿಯೆಲ್ಲಾ ಎದುರುಮನೆಯ ನಾಯಿಯ ಬಗುಳಿನಿಂದ ನಿದ್ರೆ ಮಾಡಲಾಗಲಿಲ್ಲ (ಆಡು). ೨. ಗಳಹುವಿಕೆ; ಬಡಬಡಿಸುವಿಕೆ: 'ಬಗುಳುಸನ್ನಿ' ಪರಾ. ಬಳ್ಳು₂: ೧ 'ಬಳ್ಳಿಕ್ಕು'. 'ಬಳ್ಳುಗೆಡೆ' ಪರಾ. **ಬೊಗುಳ್** : ೧. "ಭಂಡನಂ, ಭಂಡನೀಯಂ, ಭಾಂಡ್ಯಂ, ಈ ೩ ಬೊಗುಳ್" (ಶಾಕಸ. ೧೦೦). **ಬೊಗುಳು₂**: ೨. 'ಬೊಗುಳುಸನ್ನಿ' ಪರಾ. **ಬೊಳ್ಳು**: ೧. 'ಬೊಳ್ಳಿಡು', 'ಬೊಳ್ಳುಗರೆ' ಪರಾ. [<ಬಗುಳ್₁ . / ತುಳು. ಬಗಳು]

**ಬಗುಳುಸನ್ನಿ**, ಬೊಗುಳುಸನ್ನಿ (ನಾ). ಜ್ವರದ ತಾಪವು ಹೆಚ್ಚಾಗಿ ಅಸಂಬದ್ಧವಾಗಿ ಮಾತನಾಡುವಂತಹ ಒಂದು ಬಗೆಯ ರೋಗ: "(ಟೈಫಸ್‌ಜ್ವರದಲ್ಲಿಯಂತೆ) ಮಾತಾಡುವ, ಗೊಣಗುಟ್ಟುವ,–ಸನ್ನಿ; ಬಗುಳುಸನ್ನಿ" (Typhomania. ೩೦೪೩). **ಬೊಗುಳುಸನ್ನಿ** : ಆತ ಬೊಗುಳುಸನ್ನಿಯಿಂದ ರಾತ್ರಿಯೆಲ್ಲಾ ಕೂಗಾಡಿದನು (ಆಡು). [ಬಗುಳು₂ + ಸನ್ನಿ₂]

**ಬಗುಳೆ**, ಬೊಗಳೆ (ನಾ). ೧. ಕೆಲಸಕ್ಕೆ ಬಾರದ ಮಾತು; ಪೊಳ್ಳು ಹರಟೆ: "ಪೊಳ್ಳುಹರಟೆ ; ಬುರುಡೆ ; ಬಗುಳೆ ; ಅವಿವೇಕದ ಮಾತು ; ಅವಿವೇಕ" (Bosh. ೩೦೪೩). **ಬೊಗಳೆ**: ೧. ನಿಜವಾದ ವೀರನಿಗೆ ಇಂತಹ ಬೊಗಳೆಯು ಸರಿಯೆನಿಸದು (ಹಿಂಕಮು. ೬). ೨. ಸುಳ್ಳು : ಅದೆಲ್ಲ ಬರೀ ಬೊಗಳೆಯಿಂದೇ ನನ್ನ ಅಭಿಪ್ರಾಯ (ಹಾಕೋಲಿ. ೦೬೬). ೩. ಬಡಾಯಿ : ಅವನು ಬೊಗಳೆ ಕೊಚ್ಚಿಕೊಳ್ಳುವುದರಲ್ಲಿ ಬಲು ಗಟ್ಟಿಗ (ಆಡು). ೪. ಬಡಾಯಿಕೋರ: ಈತ ಎಷ್ಟಿದ್ದರೂ ಬೊಗಳೆ (ಕಥಾ್ಯಿ. ೦೯೬).

**ಬೊಗಳೆ ಬಿಡು** = ಸುಳ್ಳು ಹೇಳು ; ಸುಳ್ಳಾಡು : ರುದ್ರನನ್ನು ಹಿಗ್ಗಿಸಲು . . . ಸೋಮಯಾಜರು ಬೊಗಳೆ ಬಿಡುತ್ತಾರೆ (ದೇವಹೊ. ೦೯೦). **ಬೊಗಳೆ ಹೊಡೆ** = ಬೊಗಳೆ ಬಿಡು : ಅವನ ಹಾಗೆ ಬೊಗಳೆ ಹೊಡೆಯುವವನನ್ನು ನಾನು ಬೇರೆಲ್ಲೂ ನೋಡಿಲ್ಲ (ಆಡು). [<ಬಗುಳ್₁]

**ಬಗೆ₁** (ಕ್ರಿ). ೧. ಆಲೋಚನೆ ಮಾಡು; ಯೋಚಿಸು : "ಬಗೆ–ಪರಿಭಾವೇ, ಚಿತ್ತೇ ಚ" (ಕಮಂಜ) : ಸಕ್ಕದಮುಂ ಪಾಗದಮುಮೆಂದಕ್ಕುಂ ಬಗೆದಂತೆ ಸಮಬ್ ಪೇಟಲ್ ಮುನ್ನಂ (ಕವಿರಾ. ೧-೪೦) : ದಿವ್ಯಾಹಾರಮನೆಲ್ಲಾ ಕಾಲಮುಣಲ್ಬಿಲಕ್ಕುಮೆಂದು ಬಗೆದು (ವಡ್ಡಾರಾ. ೬೯-೩); ಎಂದು ತನ್ನೊಳ್ ಬಗೆಯುತ್ತಿರ್ಪನಂ (ಹಂಪಕಾ. ೦೦-೦೯ ವ). ೨. ಎಣಿಸು ; ಗಣಿಸು ; ಲಕ್ಷಿಸು: ಅಂತು ಬಂದ ಪಾಟೆಗಾಲಮಂ ಬಗೆಯದೆ . . . ಬರ್ಪನಂ (ಶಾಂತೀಶ. ೩೩೩) ; ಎನ್ನನಣಂ ಬಗೆಯರೆಂಬ ಬಗೆಯನೆ ಬಗೆದಂ (ಸುಕುಮಾ. ೨-೬೧). ೩. ಅರಿ ; ತಿಳಿ ; ಭಾವಿಸು : ಬಗೆಯೆ ನಿರಹಂಕಾರ ಸುಜ್ಞಾನಿಗಳ ಮೇಳವನೊಲ್ಲದಾ ಪ್ರಭುವಗಲಿ ತಾನಿರಬಲ್ಲನೇ (ಪ್ರಭುಲಿಂ. ೬-೩೯); ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩). ೪. ಬಯಸು; ಅಪೇಕ್ಷಿಸು ; ಇಚ್ಛಿಸು : ಅಟ್ಟಿಯಲ್ ಬಗೆವೊಂಗೆ ಬ್ರಹ್ಮತಿಯ ಪಾಪ ಮಕ್ಕುಂ (ಎಪಿ. VII, ೨೦೦-೨೦; ೩೦೩) ; ಬಗೆದೆಡೆಯನೆಯ್ದೆ ಬಗೆದ ಬಗೆಯಂ ಬಗೆದಂತೆ ತೀರ್ಚಿ ಪೋಪ ಜೋಡೆಯರಂ ಕಂಡು (ಹಂಪಕಾ. ೯-೬೦ ವ); ಬಗೆದು ದಣಿಯರು ಯೋಗಿಗಳು (ಕುಮ್ಯಾಸ. ೯-೩೬) ; ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ . . . ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ (ಪುರಂದ. ೦-೦೬೮-೨). [ದೇ. ॥ ತಮಿ. ವಕೈ ; ತುಳು. ಬಗೆ ; ತೆಲು. ವಗಚು]

**ಬಗೆ₂** (ನಾ). ೧. ಆಲೋಚನೆ ; ಯೋಚನೆ : ಬಗೆ ಪೊಸತಪ್ಪುದಾಗಿ ಪ್ಪಿದಾಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು (ಹಂಪಾ. ೧-೯) ; ಇದಂ ಬರಿದು ಮಾಡಿ ಪೇಟ್ವೆನೆಂಬ ಛಗೆ ಮನದೊಳ್ ಮಿಗೆ ಮಾಣದೆ (ಹಂಪಹಂ. ೯೩-೬). ೨. ಅಭಿಪ್ರಾಯ ; ಮತ: "ಬಗೆಯೆನಲಭಿಪ್ರಾಯಮಕ್ಕು" (ಕಬಿಸ. ೬೯); ಮಂದಗಮನೆಯ ಕಂಡಿರೇ ಎನೆಂದು ನುಡಿದಳು ಸತಿಯು ಬಗೆಯೇನೆಂದು ಕೇಳಲು ನೃಪಗೆ ಬಳಿಕಿಂತೆಂದುದಾ ಪಕ್ಷಿ (ಪಲಿಕ. ೨-೮೯). ೩. ಮನಸ್ಸು ; ಚಿತ್ತ : "ಬಗೆ – ಪರಿಭಾವೇ.

ಚಿತ್ತೇ ಚ" (ಶಬ್ದಾ) ; ಕುಟಿಲತಂತ್ರ ಪೆರರ ಬಗೆಯಂ ತೆಱದಿರೆ ಪೆಱರ್ಗಱ ಪೆಲಾರ್ವವಂ ಮಾತಱವಂ (ಶಬ್ದಾ. ೦-೦೫) ; ಅಬ್ಬಾ ಇಂದೆಮಗಾಗಿಲ್ಲ ಬಗೆಯಿಲ್ಲಮಪವಾಸಂಗೆಯ್ದುವೆಂ (ಪಂಪಾ. ೬೦-೯) ; ಮಾಸವ ಕೀರ್ತಿ ಕಲಿ ಹುಗದ ಹೆಸರಿಂಗದೋಷೆ ಕೊರಗದ ವರ್ಪವುಗದ ಬಗೆ ಹುಸಿ ಹುಗದ ನುಡಿ (ಶಶಾ. ೦-೯೧). ೪. ರೀತಿ ; ಮಾರ್ಗ ; ಕ್ರಮ : ಪಸರಿಸಿದಾ ಬಗೆ ಮನಮಂ ಪೊಸತಾಗೆ ನೆಗಟ್ಟಲಱಯಿಬಾ ರಚನೆಯೊಳೀಂ ಬಸಮಂ (ಕವಿ. ೦-೦೫) : ಎನಗನುಕೂಲವಕ್ಕೆ ಗುಣಪರ್ವಾನ ಜಾಣ್ಮುಡಿ ಪಂಪನಿಂವು ಪೊನ್ನನ ಬಗೆ (ಅಪಂ. ೦-೩೪) ; ಮಂಗಳ ನೀನಾತನ ಕೈವಿಡಿ ದೆಂದಿನ ಬಗೆಯ ಸುಖಂಗಳನಾಂತು ಬಿಗೆ ಜೀವಿಸು (ಮೋಹ. ೬-೯೬). ೫. ಆಸೆ ; ಬಯಕೆ : ಇಚ್ಛೆ : ನೀನಿದರ್ಕೇನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆವಂತೆ ತೀರ್ಚುವೆಂ (ಶಂಕರ. ೪-೬೯ ವ) ; ನುಡಿಯೊಳಗೆ ತನ್ನ ಬಗೆಯರಿ ಬೇಡಿದ ಪದವಿಯನೀವ ಕೂಡಲಸಂಗಮದೇವ (ಬಸವ. ೬೬೦). ೬. ಕಲ್ಪನೆ ; ಊಹೆ ; ತುಂಗಭದ್ರೋದ್ಧದ ಬೆಳಗಿಂ ಗೊಳಗಪ್ಪನಿತನೆಮ್ಮ ಬಗೆ ಪುಗದು (ಅಂಕ. ೬-೦೦). ೭. ಉಪಾಯ ; ತಂತ್ರ ; ಹಂಚಿಕೆ : ಆ ನರಿ ಬಗೆಯೊಳ್ ಪಿರಿಯನಪ್ಪುದಱಿಂ ತನ್ನ ಬುದ್ಧಿಗೆ ತಾನೇ ಮೆಚ್ಚಿ (ಪಂಚತಂ. ೩೯-೬); ಆವಗಂ ಕಾಣಲೀಯವು ರಾಮಣೀಯರೋಮಾವಳಿಯನುದ್ಧ್ವೃತ್ತಪೀನಕುಚಯುಗಳವಿವ್ವಾವು ದಿಂತಿ ದಕೆ ಬಗೆಯಿಂದು ಕುರ್ತೇಕಾಂತವಾಂ ಕರ್ಣದೊಡನೆ ಪಾಳ್ಪ ಭಾವದಿಂ ಪರವನಾಚಿಯ ಲೋಚನಂಗಳಿಂದೀವರದಳಗಳೇತೊಪ್ಪಿದವು (ಪಾಂಡವ. ೬-೩). ೮. ಗತಿ : ದಿಕ್ಕು : ಪಿಂಡಕ್ಕೆ ಬಗೆ ಇಲ್ಲದವ ದಂಡ ಏನು ಕೊಟ್ಟಾನು ? (ಗಾದೆ). ೯. ಜಾತಿ : ಬಗೆಯ್ಯೆದು ತಣೆಯುತಿರೆ ಬಳಗಕೇಂ ವಾರ್ತಂ (ಶಾಂತಿ. ೩೯-೦೩೩) ; ಬಗೆಯೊಂದರೆ ಜಾತಿ : ಬಗೆಯೆಂದರೆ ರೀತಿ (ಶಿಶುಮಂ. ೩೯).

**ಬಗೆಯೊಳೊಗೆದವ** = ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ : ಮನಸಿಜ : "ಬಗೆಯೊಳೊಗೆದವನೆಂದು ಬಂಡುಣಿವದೆಯನೆಂದು ಮುಗು ಳ್ಗಣಾಸ್ತ್ರ" (ಶಶಿ. ೬೪). **ಬಗೆಯೊಳೊಗೆವ, ಬಗೆಯೊಳೊಗೆವವ** = ಮನಸ್ಸಿನಲ್ಲಿ ಹುಟ್ಟುವವನು ; ಕಾಮ : "ಇಂಗೋಲ್ವಿಲ್ಲಂ . . . ಬಗೆಯೊಳೊಗೆವಂ . . . ಗಿಳಿದೇರಂ — ಇವು ೧೩ ಕಾಮಂದೇವಾಗೆ ಪೆಸರ್" (ಶಬ್ದ. ೯೬-೦೩); "ಗಿಳಿದೇರ ಪೂವುಣಂಬಂ ಬಗೆಯೊಳೊಗೆವವಂ" (ಶಶಿಂ. ೨೮).

[<ಬಗೆ₁./ ತುಳು. ಬಗೆ ; ತೆಲು. ವಗ. / ಮರಾ. ಬಗಾ]

**ಬಗೆ₃** (ನಾ). ಒಂದು ಬಗೆಯ ಹೂವು ಮತ್ತು ಅದರ ಗಿಡ : ಪ್ರಕಟವಂದಾರ ಬಗೆ ನಾಗಸಂಪಗೆಯಾದಿ ಸಕಲಕುಸುಮಂಗಳಂ ತಂದು (ಕಾಶಿ. ೯೩-೯೩). [<ಸಂ. ಬಕ. / ಪ್ರಾ. ಬಗ]

**ಬಗೆಕಾರ** 'ಬಗೆಗಾಱ' ನೋ.

**ಬಗೆಕಾರ್ತಿ** 'ಬಗೆಗಾರ್ತಿ' ನೋ.

**ಬಗೆಕಾಱ** 'ಬಗೆಗಾಱ' ನೋ.

**ಬಗೆಗ** (ನಾ). ಒಬ್ಬಾತನ ಹೆಸರು : ಮಲ್ಲಿಕಾರ್ಜುನಭಟ್ಟರ್ಗ್ಗೆ ಮಾವಿನೂರೊಳ್ ಬಗೆಗನ ಕೊಟ್ಟಂ . ಸಾವಿರಬಳ್ಳಿಯ ತೋಣ್ಟ (ಎಇ. XXVI. ೪-೦೯ ; ೪೦೦). [?]

**ಬಗೆಗಲ್** (ಕ್ರಿ). ಮನಸ್ಸನ್ನು ತಿಳಿ, – ಅರಿತುಕೊಳ್ಳು : ಅಬಲೆ ಯಿರ್ದಿರವಂ ಸಖಿ ನೋಡಿ ಮತ್ತಮಾ ಕಮಲದಳಾಯತೇಕ್ಷಣೆಗಿದಂ ನುಡಿದಳ್ ಬಗೆಗಲ್ವ ಬಲ್ಮೆಯಿಂ (ಜಗ. ೦೦-೦೦). [ಬಗೆ₁ + ಕಲ್₁ ]

**ಬಗೆಗಾಣ್**, ಬಗೆಗಾಣು (ಕ್ರಿ). ೧. ಮನಸ್ಸನ್ನು ತಿಳಿ,–ಅರಿ: ಪುದುವಾಟ್ಕೆ ಯೊಳೆನ್ನ ಬಲ್ಮದಲ್ಮದ ಬಗೆಗಂಡಿರೇ (ಶಂಕರ. ೦೦-೩೦). **ಬಗೆಗಾಣು** : ೨. ದಾರಿಗಾಣು; ಮಾರ್ಗವನ್ನು ಕಂಡುಕೊಳ್ಳು: ಇವನಂ ಜಯಿಸುವ ಬಗೆ ಗಾಣೆನು (ಕೃಷ್ಣ. ೨೩-೬) : ಸಾಧನಕೆ ಬಗೆಗಾಣೆನೆನ್ನಬಹುದೆ ಸಾದರದಿ ಗುರುಕರುಣ ತಾ ಪಡೆದ ಬಳಿಕ (ಶಿವಾಶ್. ೨೩ ಪಲ್ಲ). [ಬಗೆ₁ + ಕಾಣ್]

**ಬಗೆಗಾಣು** 'ಬಗೆಗಾಣ್' ನೋ.

**ಬಗೆಗಾರ** 'ಬಗೆಗಾಱ' ನೋ.

**ಬಗೆಗಾರ್ತಿ**, ಬಗೆಕಾರ್ತಿ (ನಾ). ಬೇರೆಯವರ ಮನಸ್ಸನ್ನು ತಿಳಿಯುವ ವಳು ; ಇಂಗಿತಜ್ಞೆ : ಪೂಗೆಯ ಗಂಧವನುರ್ದಿಸುತ ಪೂವ ಪೊರೆಯಿಸುತ ಬಗೆಗಾರ್ತಿಯೊರ್ವಳೆಸೆದಳ್ (ಚಂದ್ರ. ೬-೯೬).; ಪಲ್ಲೆಳಗಿನ ಬಗುವಿಂಗೆಯಂ ಬಳಯಿಸುತ ಬೆಲ್ದಿಂಗಳ ಬಗೆಗಾರ್ತಿಯರೆಯ್ದಿದರ್ (ಶಾಂತೀಶ. ೩೬-೦೬). **ಬಗೆಕಾರ್ತಿ** : ನಗೆಕಾರ್ತಿ, ನುಡಿಕಾರ್ತಿ, ಬಗೆಕಾರ್ತಿ (ಕರ್ಣಾ. ೨೦೦. ಕೃಷ್ಣ). [ಬಗೆಗಾಱ + — ತಿ₁ (< — ಇತ್ತಿ)]

**ಬಗೆಗಾಱ**, ಬಗೆಕಾರ, ಬಗೆಕಾಱ, ಬಗೆಗಾರ (ನಾ). ಬೇರೆಯವರ ಮನಸ್ಸನ್ನು ತಿಳಿಯುವವನು ; ಇಂಗಿತಜ್ಞ : ಆ ಬಗೆಯ ರಸಾಬ್ಧಿ ಯಪ್ಪ ಬಗೆಗಾಱರ ಮೊತ್ತದಿನೊಪ್ಪಿತೋಲಗಂ (ಶಾಂತೀಶ. ೨-೬೦) : ಬೆಳ್ಮಡಿಯಿಂದ ಬಗುಹುಕಾಱರ ಬಲ್ಮೆಯಿಂದ ಬಗೆಗಾಱರನೆಡೆಗೆಡಿಸುವನು (ಶಾಂತಿನಾ. ೪-೦೦೩). **ಬಗೆಕಾರ** : ಭಾವುಕ, ರಸಿಕ, ಚದುರ, ಬಗೆಕಾರ, ಜಾಣ, ಅರಿಗ (ಕಂನಾಡು. ೬೯). **ಬಗೆಕಾಱ** : ಪಗೆಕಾಱಂ, ಬಗೆಕಾಱಂ, ನಡೆವಳಿಕಾಱಂ (ಶಾಸಕೂ. ೧೬೦ ಕಾದಾ) : ಕಾಬುರಿಚ ಪೊಳಲಿಚ ದಡಗ ಬಗೆಕಾಱ ನಡೆವಣಿಗ . . . ಚಂಚುಗಾಱರ ಕೇರಿ ಮೆಱೆದಿಹವು (ಸಾಹಿತ್ಯ. ೨-೮) ; ಅಱೆಯಿಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲುಟಾಳೆಕಾಱ (ಚಿಕ. ೬-೨೩). **ಬಗೆಗಾರ** : ನಗೆಯ ಮಸರಿನಿಂದೆ ತೋರಿಕೆಗೆ ನಗೆಗಾರನಾಗಿದ್ದರೂ ಒಳಗೆ ಅವನೊಬ್ಬ ಬಗೆಗಾರನಾಗಿದ್ದನೆಂದು ತೋರುತ್ತದೆ (ಕರ್ಣ. ೪೬೬) ; ಕಲಾಕುಶಲನು ... ಹಳೆಯ ಮಾತನ್ನು ಹೊಸ ಮಾಡಿಯಲ್ಲಿ ನುಡಿಯುವ ಬಗೆಗಾರನು (ಜಾನಪ. ೩).

**ಬಗೆಕಾಱಮುಖದರ್ಪಣ** = ಮನಸ್ಸನ್ನು ತಿಳಿಯುವವರಿಗೆ ಕನ್ನಡಿ ಯಂತಿರುವವನು ; ಒಂದು ಬಿರುದು : ವರಪ್ರಸಾದಮ್ಮಾಯಿ [ರಾ]ಯಾಸ್ಥಾನಚಮತ್ಕಾರ ಬಗೆಕಾಱಮುಖದರ್ವಣ (ಮೂಂಕರ. ೦೯೬೬, ಸಂದಗ. ೦೦-೯ : ೯೭೮) : ಮಹಾಲಕ್ಷ್ಮೀಲಬ್ಧವರಪ್ರಸಾದ [ಮ್ಮಾ] ಯಿ ರಾಯಾಸ್ಥಾನಚಮತ್ಕಾರ ಬಗೆಕಾಱಮುಖದರ್ಪಣ ಶರಣಾಗತವಜ್ರ ಪಂಜರಂ (ಕರ್ನಾಇ. XX. ೩೬-೯: 1056). [ಬಗೆ₁ + — ಕಾಱ]

**ಬಗೆಗಿಡಿಸು** 'ಬಗೆಗೆಡಿಸು' ನೋ.

**ಬಗೆಗಿಡು** 'ಬಗೆಗೆಡು' ನೋ.

**ಬಗೆಗುಂದು** (ಕ್ರಿ). ಮನಸ್ಸು ಕುಗ್ಗು; ನಿರಾಶೆಗೊಳ್ಳು ; ಬೇಸರ ಹೊಂದು : ಬಗೆಗುಂದಿ ಚಕ್ರಮಿಥುನಂ ಮಿಗೆ ನೊಂದು (ಗಿಂಕ. ೪-೬೯): ಪಗೆಮ ಕೆಳೆಗೊಂಡ ಪದ್ಮಿನಿ ನಗೆಗುಂದಿದಳವನಡಂಗೆ ಕೋಕಾನೀಕಂ ಬಗೆಗುಂದಿದುದೆಂದನಾಣದೆ ನಗುವಂತೆವೊಲಲರ್ದುದುತ್ಪಲಂ (ಕೃಷಿ. ೦-೯೯). [ಬಗೆ₂ + ಕುಂದು₁ ]

**ಬಗೆಗುಡು** (ಕ್ರಿ). ಮನಸ್ಸು ಕೊಡು : ಚಿತ್ತವಿಡು : ಕೊಲಿಯೊಳ್ ಪೊರೆಯಿಲ್ಲದ ಪರಲಲನೆಗೆ ಬಗೆಗುಡದ ಕಳ್ಗದುಱೆ ಪುಸಿಯದ ಕಾದಲಿಸಿ ವಿಷಯಂಗಳೊಳ್ ಪಂಬಲಿಸದ ಗುಣಮ್ಮೆದಣಾಪುತ್ತಾ ಜನಪತದೊಳ್ (ಶಾಂತೀಶ. ೦-೦೬). [ಬಗೆ₂ + ಕುಡು₁ ( <ಕೊಡು₁ )]

**ಬಗೆಗುದಿ** (ನಾ). ಮನಸ್ಸಿನ ಚಿಂತೆ ; ಮನೋವ್ಯಥೆ : ಮತ್ತಾರು ನೀನೇ ! ಮೂದಲಿಸಿತು ಅವನ ಬಗೆಗುದಿ (ಬಳ್ಳಿ. ೦೬೪). [ಬಗೆ₂ + ಕುದಿ₃]

**ಬಗೆಗುರುಡುತನ** (ನಾ). ಮನಸ್ಸಿಲ್ಲದಿರುವುದು : ಸದರ್ಥವು ಕಾಣದ ಬಗೆಗುರುಡುತನವು ಈಗಿನವರ ಪಾಲಿಗೆ ಬಂದಿರುವುದು ಇನ್ನೊಂದು ದೋಷ (ಸಾಹಿ. ೬೦). [ಬಗೆ₂ + ಕುರುಡು + — ತನ]

**ಬಗೆಗೆಡಿಸು**, ಬಗೆಗಿಡಿಸು (ಕ್ರಿ). ಕ್ರಮ ತಪ್ಪಿಸಂ ; ದಾರಿ ತಪ್ಪಿಸು ; ರೀತಿಗೆಡಿಸು : ಬಗೆಗೆಡಿಸಿ ಮಾರವೆಯುನು . . . ಬ್ರಹ್ಮವನಗಲದೆ ತಾನೆಂದು ಭಾವಿಸಿ ಧನ್ಯನಾಗು (ಗುಗಾ. ೧೩-೯೦). **ಬಗೆಗಿಡಿಸು** : ಬಗೆಗಿಡಿಸೆ ಮೋಹನೀಯಂ ನಗಧರ ಶವಧಾರಿಯಾಗೆ ಷಣ್ಮಾಸಮದೇಂ ನೆಗಟ್ಟುದೊ ಸಲೆ ಬಲದೇವನ ಮೆಗಲ ಮೇಣಂ ಕುಂದದೆಂಬ ನಾಟ್ಕುಡಿ ಜಗದೊಳ್ (ಶಂಕಾಮಾ. ೦೩-೩೩). [ ಬಗ್ಗೆ + ಕೆಡಿಸು₁ ]

**ಬಗೆಗೆಡು**, ಬಗೆಗಿಡು (ಕ್ರಿ). ೧. ಬುದ್ಧಿಗೆಡು ; ವಿವೇಕವಿಲ್ಲದಾಗು : ಮಗನೆ ನೀಂ ವಗೆಯುಂ ತಜ್ಜಿದೊಟ್ಟು ನೆಟ್ಟನೆನ್ನದ ಬಗೆಗೆಟ್ಟು ದಾಯಿಗರೊಳಿಂ ಮಗುಟ್ಟುಂ ಪುದುವಾಟ್ಟುದೆಂಬರೇ (ಶಂಶಕಾ. ೦೦-೩೦); ಬಗೆಗೆಟ್ಟು ಸಾವ ಬಗೆಯುಂ ಮಗಳೆ ಮಹಾಶ್ವೇತೆ ಬಗೆಯದಿರ್ (ಕಾದಂಪೂ. ೯೯೦) ; ಪಗೆವನ ಮನೆಯುಂ ಬಗೆಗೆಟ್ಟು ಪೊಕ್ಕೊದು ಸಾವಕ್ಕುಂ (ಶಂಶಕಾ. ೨೦೩-೦೦). ೨. ಚಿತ್ತಕ್ಷೋಭೆಯುಂಟಾಗು : ಪಾದರಿಗಂ ನಿಲ್ಲದೆ ಪೋದುದರ್ಕೆ ಬಗೆಗೆಟ್ಟದಾಕೆ ಕಣ್ಗೊಪ್ಪಿದಳ್ (ಕಶ್ಮಿಕಾ. ೬೯) ; ಬಗೆಗೆಟ್ಟು ಬಾಯ್ವಟ್ಟು ಜನನಿ ಜವದಿನೇಳ್ವಂದಲ್ಲಿಯಪೆಮಬಿಸಿ ಕಾಣದೆ (ಶಾಂಶಿ. ೦೩-೦೦೨ ಶ) : ಕಷ್ಟಗಳಿಷ್ಟಿದ್ದರೇನು ಸಭ್ಯರು ಬಗೆಗೆಡದೇಳ್ಗೆ ಪಡೆದಪರಲ್ತೆ (೨೦ಶಾಶ. ೨೨೦-೯೩). **ಬಗೆಗಿಡು** : ೧. ಬಗೆಗಿಡೆ ಮುಪ್ಪು ಚಪ್ಪರಿಸದನ್ನೆಗಂ . . . ಪರಮದೀಕ್ಷೆಗುಪೇಕ್ಷಿಸಿದಂ ವಿವೇಕಿಯೋ (ಶಕ್ರ.ಪು. ೦೩-೩೪). [ಬಗ್ಗೆ + ಕೆಡು₁]

**ಬಗೆಗೆಲ್** (ಕ್ರಿ). ಮನಸ್ಸನ್ನು ಗೆಲ್ಲು ; ಚಿತ್ತವನ್ನು ಸೆಳೆ : ಬಗೆಗೆಲಲೆಂದು ಕಾಡಿ ಪುಸಿನಿದ್ದೆಯೊಳಾನಿರ ಲಲ್ಲೆಗೆಯ್ದು (ಶಂಶಕಾ. ೯-೦೦೭). [ಬಗ್ಗೆ + ಗೆಲ್₁]

**ಬಗೆಗೇಡು** (ನಾ). ದಾರಿ ತಪ್ಪಿಸುವಂತಹುದು; ಮಾರ್ಗ ಕೆಡಿಸುವಂತಹುದು : 'ನಾ ಬಲ್ಲೆ' 'ಗೊತ್ತಿಲ್ಲ' ಎಂಬ ವಾದದ ಹಾದಿ ಬಗೆಗೇಡು ನಗೆಗೇಡು ಹತವಾತಿಮು (ಮುಳ್ಳುಗಂ. ೬-೨). [ಬಗ್ಗೆ + ಕೇಡು]

**ಬಗೆಗೊಳ್**, ಬಗೆಗೊಳು, ಬಗೆಗೊಳ್ಳು (ಕ್ರಿ). ೧. ಮನಸ್ಸಿಗೆ ತಂದುಕೊಳ್ಳು ; ಲಕ್ಷ್ಯಕ್ಕೆ ತೆಗೆದುಕೊಳ್ಳು : ಅದಱಿಂದ ಚಿತ್ತಮಳ್ಕದ ಮನಂ ಬಗೆಗೊಳ್ವದ ಮೋಹಮತ್ತಿ ಕಟ್ಟಿದ ಜಡೆ (ಶಂಶಕಾ. ೭-೬೯); ಜಗಜ್ಜನ ಮಧಿಕಾನಂದಂಬೆರಸೆಯ್ದೆ ಕೀರ್ತಿಸುತ್ತಿರೆ ಎದ್ದದ್ದಿಂದಂ ಬಗೆಗೊಂಡಾ ಗೃಹದೀದಂ ವೇಟಲ್ಮವೇಟ (ಶಂಶಕಾ. ೦೨-೭) ; ಬಗೆಗೊಂಡೋದದೆ ಕೇಳದಲ್ಲ ಕಳಿಯುಂ ಕಾವ್ಯಜ್ಞರಿಂ ಕಲ್ಲದಚ್ಚಿಗದಿಂ ಕಟ್ಟಿದ ಕಟ್ಟ ಕನ್ನಡದ ಕಾಟ್ಗಬ್ಬೀಗಳಂ ಬಂಟಸಾವಿಗಳಂ ಕೇಳಿಸಿ (ಅರ್ಧನೇ. ೦-೩೩). ೨. ಎಣಿಸು ; ನಿಶ್ಚಯಿಸು : ಆದಡಂ ಪೋಗಿ ನೋಡುವೆನೆಂದು ಬಗೆಗೊಂಡು (ಅಶಕ. ೩-೩) ; ಈತನಲಿಯೊಂದು ವಿನೋದವನು ಮಾಡುವೆನೆನುತ್ತಲ್ಲ ಮನು ಬಗೆಗೊಂಡ (ಕೃಷ್ಣರಾ. ೦೧-೬). ೩. ಮನಸ್ಸನ್ನು ಸೆಳೆ,– ಆಕರ್ಷಿಸು : ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬವಂ ಬಗೆಗೊಳೆ ಪೇಟಲಾಜರಿನಿತುಂ (ಕಶ್ಮಿಕಾ. ೦೩). **ಬಗೆಗೊಳು** : ೧. ಈರೇಳು ದ್ವೀಪಗಳಿರಲ್ ದಾಂಟುವೆನವನು ಬಗೆಗೊಳದೆ (ಕೊರಕಾ. ೬-೩೬-೧೭). ೩. ಇದ್ದೊಂದು ಒಡವೆಯ ಇಬ್ಬಗೆ ಮಾಂವಗೆ ಬಗೆಬಗೆ ಒಡಮಾಡಿ ಬಗೆಗೊಳಲು (ಮುಳ್ಳುಗಂ. ೩-೩೬). **ಬಗೆಗೊಳ್ಳು** : ೧. ಶ್ರೀರಣಾಶುದ್ಧನು . . . ಕುಲಾದಿ ಮದಂಗಳ ಬಗೆಗೊಳ್ಳ (ಮಹಾಪು. ೭. ೦೩-೨೦೬) ; ವಿತೆಱಿಂ ಮೃಗಾಕ್ಷಿದಮಯಂತಿಯ ಸಂಗಮದಪ್ಪುದೆಂದು ನಿಶ್ಚಿತನನಾಗಿ ರಾಜ್ಯಸುಖಮಂ ಬಗೆಗೊಳ್ಳದೆ (ನಳಚಂ. ೬೩); ಸುತನಾಶವನು ಬಗೆಗೊಳ್ಳನು (ಕುಮಾರರಾ. ೦೬-೬೬). [ಬಗೆ + ಕೊಳ್₁]

**ಬಗೆಗೊಳಿಸು** (ಕ್ರಿ). ೧. ಮನಸ್ಸನ್ನು ಆಕರ್ಷಿಸಂ ; ಚಿತ್ತವನ್ನು ಸೆಳೆ : ಲಲಿತಮುಖಸೌರಭಕ್ಕೆಱಗುವಲಿಮಾಲೆಯಂ ಬಗೆಗೊಳಿಸಿ ತಳರ್ದಗ ಗಜಗಮನೆ (ಅಂಶು. ೬-೩೭ ಪಳೆ) ; ಸಮುಜ್ಜ್ವಳಕನಕವರ್ಣೆ ಎಂಗೆ ಬಗೆಗೊಳಿಸಿದಳುದ್ಯಾನಕೇಳಿಲೀಲಾಕ್ಷಣದೊಳ್ (ಶಾಂತಿಪು. ೮-೦೩) ; ಬಗೆಗೊಳಿಸ ತೊಡಗಿತ್ತು ಎಂಗೆ ರೂಪು ಲೋಚನಕೆ (ವಂಶಕ. ೩-೦೦). ೨. ಮನಸ್ಸಿಗೆ ತಂದುಕೊಳ್ಳು ; ಮೆಚ್ಚು : ರಾಯನುಮರಸಿಯರುಮಾನಂದವಡೆದು ಬಗೆಗೊಳಿಸೆ . . . ಪೇಳಿದೆನು (ಹರಿಚ. ೦-೩೦). [ಬಗೆಗೊಳ್ + — ಇಸು₃]

**ಬಗೆಗೊಳು** 'ಬಗೆಗೊಳ್' ನೋ.

**ಬಗೆಗೊಳ್ಳು** 'ಬಗೆಗೊಳ್' ನೋ.

**ಬಗೆತ** (ನಾ). ಅಭಿಪ್ರಾಯ ; ಮನೋಗತ : ಬರಿಹ ಮಾತ್ರಕ್ಕೆ ನಾನಲ್ಲದೆ ಬಗೆತಕ್ಕೆ ಆತನೇ (ಮೂರಸುಲು. ೯. ಎರಡುಪಾತು) ; ನುಡಿತದಲ್ಲಿ ಮಿಂಚೂ ಇದೆ, ಬಗೆತದಲ್ಲಿ ಜೇನೂ ಇದೆ (ಕಿತ್ತಿಕ್ಕ. ೦ ಮುನ್ನುಡಿ) ; ಈ ಬಗೆತವು ಇಲ್ಲಿ ಬಲು ಚೆನ್ನಾಗಿ ಸಾಧಿಸಲಾಗಿದೆ (ಕಾಶೊರ. ೭ ಪಠಳ). [ಬಗ್ಗೆ + – ತ್ತ₃]

**ಬಗೆತುಂಬು** 'ಬಗೆದುಂಬು' ನೋ.

**ಬಗೆದಟ್ಟು** (ಕ್ರಿ). ಮನಸ್ಸನ್ನು ತಾಗು ; ಮನವರಿಕೆಯಾಗು : ಬಗಸೆಗಳ್ ಪೊಳೆಯ ನಡುವಲೆಯ ಕಂಣಮಾಲೆಯ ಬಗೆದಟ್ಟ ಘಟ್ಟವಳ್ಳಿಯರರದರಾ ಯುಕ್ತಕರ್ವಮಾದಿಗಳನೊಲವಿಂ (ಕಶ್ಮಿಕಾ. ೬-೬೯). [ಬಗ್ಗೆ + ತಟ್ಟು₁]

**ಬಗೆದರ್** (ಕ್ರಿ). ಎಣಿಸಂ ; ನಿಶ್ಚಯಿಸು : ಚಿಂತಾಸಮುದ್ರಾಂತರ ಪರಿವ್ಯತನಾಗಿ ಸೈರಿಸಲಾಱದೆ ಪೊಱಲಂ ತೊಱಲ್ದು ನೋಟ್ಟ ಬಗೆದಂದು ರಾಜಮಂದಿರದಿಂ ಪೊಱಮಟ್ಟು ಬರೆ (ಶಂಶಕಾ. ೪-೬೯ ಶ) ; ನೋಡಿಕೊಂಬೆ ನೆನುತ್ತ ನುಡಿದೊಡಂಬಡಿಸಿ ಮನವಾಡಿ ತಿರುವೆಣ್ಣೆನಲ್ಲೂರ್ಗಂದು ಬಗೆದಂದು ವಹಿಲದಿಂ ಪೊಱಮಟ್ಟನು (ಸೌಂದಪು. ೪-೬೯) ; ಕಲ್ಮದೊಳ್ ಕುಳ್ಳಿರ್ದ ಮಂಜೊಳಗೊಂದಿದ ಮೊಲ್ಲೆವೂಪನಾರಡಿವೂರೆ ಭೋಗಿಸಲ್ಕ ಮಾಳಿಯಲ್ಕಮಣಂ ಬಗೆದರ್ಪುದಾರೊ ನಾಂ (ಕಾಶಂಂತ. ೬೬-೦೦೯). [ಬಗ್ಗೆ + ತರ್]

**ಬಗೆದೀರ್** (ಕ್ರಿ). ಮನಸ್ಸು ತೃಪ್ತಿಯಾಗು ; ತಣಿ : ದಿವ್ಯಮುನಿಪುಂಗವರಂ ಬಗೆದೀರ್ಪಿನಂ ನಿಜಾತ್ಯಂತಪತಿವ್ರತಾಗುಣದಿನರ್ಚಿಸಿ ಮೆಚ್ಚಿಸು ನೀಂ (ಶಂಶಕಾ. ೦-೦೦೬). [ಬಗ್ಗೆ + ತೀರ್]

**ಬಗೆದುಂಬು**, ಬಗೆತುಂಬು (ಕ್ರಿ). (ಸಂತೋಷದಿಂದ) ಹೃದಯ ತುಂಬು,–ಉಬ್ಬು : ಆಂಡಯ್ಯಕವಿ 'ಕನ್ನಡನಾಡನ್ನು' ಬಗೆದುಂಬಿ ಬಣ್ಣಿಸಿದ್ದಾನೆ (ಕಾಸಕಹ. ೨೭). **ಬಗೆತುಂಬು** : ನೀಲಾಂಬಿಕೆ ಲಿಂಗೈಕ್ಯವಾದಂದು ಸೊನ್ನಲಿಗೆಯ ಸಿದ್ಧರಾಮ ಬಗೆತುಂಬಿ ಹೇಳಿದ (ಕಹಾಕ. ೦೨೯). [ ಬಗ್ಗೆ + ತುಂಬು₁ ]

**ಬಗೆದೆರು** (ಕ್ರಿ). ಮನಸ್ಸು ಕೊಡು ; ಚಿತ್ತವಿಡು : ಕಾವನು ಬಗೆದೆತ್ತು ಬರೆಯುತಿದೆ ಸುಗ್ಗಿ (ಕಾಂಶಕ. ೧೨೦-೨೩೨). [ಬಗ್ಗೆ + ತೆರು₁ (< ತೆಱು₁)]

**ಬಗೆದೋಱು** (ಕ್ರಿ). ೧. ಮನಸ್ಸಿನಲ್ಲಿದ್ದುದನ್ನು ಹೇಳು,–ಪ್ರಕಟಿಸು : ಇಂತಿದನೀವೆನೆಂದ[ನ]ಂ ಪುಸಿದೊಡಮಾಸೆದೋಱ ಬಗೆದೋ[ಱ] [ಕಾಕಾಂ. ಱ]ದೊಡಂ ನೆರೆದಿರ್ದೊಡಂ . . . ಮತ್ತಮಾಟಿಸುವುದೆ (ಶಂಶಕಾ. ೯-೯೨) ; ಅಂಗನೆ ನೀಂ ಗರ್ವಿಸಿದಪ್ಪೆಯೆಂದು ಬಗೆದೋಱ ನಲ್ಲನೇನೊಲ್ಲನೇ (ಅಶಂಪು. ೮-೯೦). ೨. ಆಸೆಯನ್ನು ಪ್ರಕಟಿಸು ; ಹಂಬಲವನ್ನು ತಿಳಿಸು : ಆ ವೇಳೆಯಲ್ಲಿ ಸಿಂಗರಗೈದು ನಿನ್ನಯ ಭಾವದ ಬಗೆದೋಱುವವನ ಕಾವನಂಬಿಗೆ ಮೆಯ್ಯೊಡ್ಡಿಸಿ ಸೆಳೆವ ಸಂಭಾವಿಸು ಮೋಹರತಿಯೊಳು (ಕಂಶಕ. ೬-೩೭). [ಬಗ್ಗೆ + ತೋಱು]

**ಬಗೆಪೋಗು** (ಕ್ರಿ). ಮನಸ್ಸಿಗೆ ಹಿತವಾಗು ; ಮನದಟ್ಟಾಗು : ಬಗೆ ಪೋಯ್ತೆಂತಿದು ನಾಕಲೋಕವಿಭವಂ ಮಧ್ಯೃತ್ತಕಂ ತಪ್ಪದು (ಅಂಶು. ೩-೬೯) ; ಬಗೆಪೋಯ್ತಾಗಳೆಲೇ ಇವಲ್ತೆ ತುಹಿನಕ್ಷೋಣಿ.ಧ್ರುಮತ್ತುಂಗಸಾನು

ಗೆಳೊಳ್ ಭೋರೆನೆ ಬಂದು ವಾಯುವ್ಯದದೆ ನೋಡಾಕಾಶಗಂಗಾಜಲಂ (ಆಜ್ಞಾ.ಕ. ೪೬). [ಬಗ್೨ + ಪೋಗು೧ (< ಪೋ೧)]

**ಬಗೆಬರ್** 'ಬಗೆವರ್' ನೋ.

**ಬಗೆಬಿಚ್ಚು** (ಕ್ರಿ). ಅಂತರಂಗವನ್ನು ವಿವರಿಸು; ಮನಸ್ಸಿನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳು: ಬಂದುದಂ ಬಗೆಬಿಚ್ಚಿ ನುಡಿವ ರೊಮ್ಮೊಮ್ಮೆ (ಶಾಂತಿ. ೯೦–೬೮). [ಬಗ್೨ + ಬಿಚ್ಚು೧ (< ಬಿರ್ಚು)]

**ಬಗೆಮುಟ್ಟು** (ಕ್ರಿ). ೧. ಮನಸ್ಸನ್ನು ತಟ್ಟು,–ತಾಗು; ಹೃದಯ ಸ್ಪರ್ಶಿಯಾಗು: ಬೀಣೆಯಂ ವಿಡಿದ ಬಂಚಮನೊತ್ತುವ ದಕ್ಷಿವಾಜ ಪಾಡುವ ಬಗೆಮುಟ್ಟಿ ಪಾಡುವವರಗ್ಗದ ದೇವರ ಕದ್ದಿರೇಂದ್ರದಾ ದಿವಿಜ ವಿಮಾನದಂತೆ ಬಳಸಿರ್ದ ವಿಶಾಳಜನಾಲಯಂಗಳೊಳ್ (ಮಲ್ಲಿ. ೦೦–೦೬೨). ೨. ಮನಸ್ಸು ಒಪ್ಪು; ಸಮ್ಮತಿಸು: ನಾವು ಆ ವಾಕ್ಯಗಳಿಗೆ ಬಗೆ ಮುಟ್ಟಿ ಒಪ್ಪಿಸಿಕೊಟ್ಟಿರುವ ಈ ಉಂಬಳಿಗೆಯನ್ನು . . . ಸಾರ್ಥಕಮಾಡಿ ಕಂಡಡೇಕು (ಮುಕ್ತ.ಕ. ೦೭–೨೬). [ಬಗ್೨ + ಮುಟ್ಟು]

**ಬಗೆಯಣುಗ** (ನಾ). ಮನಸ್ಸಿನಿಂದ ಹುಟ್ಟಿದವನು; ಕಾಮ: ಖಗ ನಾಮವಿಹುದಾವುದು ಬಗೆಯಣುಗನ ಗಜವೇಂ (ಕೃಕಿ. ೦–೨೬–೩). [ಬಗ್೨ + ಅಣುಗ (< ಅಣುಂಗ)]

**ಬಗೆಯಳಲು** 'ಬಗೆಯಬಲ್' ನೋ.

**ಬಗೆಯಱ್** (ಕ್ರಿ). ಮನಸ್ಸನ್ನು ತಿಳಿ; ಇಂಗಿತವನ್ನು ಅರಿ: ಮಗ ಮಗಿಪ ಜಾದಿ ಪೂಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱ್ದೋಲಗಿಪುದು ಮಾಲೆಗಾಱನಂ ಪೋಲ್ವುದಗ್ರಮಾಲ್ಯಮಹೀಜಂ (ಅಂತ್ಯ. ೩–೩೬); ಅರಸಾ ಪೊನ್ನಮನುಣ್ಬ ಪಕ್ಕಿಬಾಗಿಲೊಳ್ ಬಂದಿರ್ಪ ದೆಂದು ಬಗೆಯಱ್ದು ಬಿನ್ನಪಂಗೆಯ್ದು (ಕಬ್ಬಿ. ೦೩೮); ವಿಶ್ವ ಧರ್ವ ದೊಳು ಬಗೆಯಱ್ತೆಸಗುವುಲ್ಲವರಿಗಂದೆಂದಿಗೂ ಮೊಗದೋರುವ ಮೋಸಗಳು (ಹುಂಚ. ೨–೫೦). [ಬಗ್೨ + ಅಱ್]

**ಬಗೆಯಬಲ್**, ಬಗೆಯಳಲು (ನಾ). ಮನಸ್ಸಿನ ಕ್ಲೇಶ; ಮನೋವ್ಯಥೆ: ಅದರ್ಕೆ ತಕ್ಕುದಂ ನಿಮ್ಮಡಿಗಳ್ ಬಲ್ಲಿರೆಂದು ಬಗೆಯಬಲಾಱ್ ಪೊನ್ನಪಕ್ಕಿ ಬಿನ್ನಪಂಗೆಯ್ಯಲ್ (ಕಬ್ಬಿ. ೦೩೦). ಬಗೆಯಳಲು: ಆಡಿದಲ್ ನನ್ನಿಯಂ ಬಗೆಯಳಲಿನಿಂ ಪಾಲ ನೀಡಿದಲ್ (ಶಾಂತಿ. ೦೬೨–೩೦೭). [ಬಗ್೨ + ಅಬಲ್೨]

**ಬಗೆಯಾಣ್ಮ** (ನಾ). ಮನೋವಲ್ಲಭ; ನಲ್ಲ: ಒಂದೆಡೆಯೊಳ್ ಮನೆ ಯಾಣ್ಮನ ಕಣ್ಮೆವೆಯ ಕಾಂಡಪಟಮಾಗೆಯುಂ ಬಗೆಯಾಣ್ಮನ ಕಣ್ಣೆವೆಯ ದೂದವಿಯಾಗೆಯುಂ (ಕಂಕಥಾ. ೯–೫೦ ಕ). [ಬಗ್೨ + ಅಣ್ಮ (< ಆಳ್ವ)]

**ಬಗೆಯಿಡು** (ಕ್ರಿ). ಮನಸ್ಸಿಡು; ಆಸಕ್ತನಾಗು: ಬಟ್ಟಮೊಲೆಯ ದಾಲೆಯ ನೊಸಲೊಳು ಬಗೆಯಿಟ್ಟು ಬಲ್ಲಹನೊಲವಿಂ ಚವುಕದ ಬೊಟ್ಟಂ ಕಂಕುಮದಿಂದಿಡೆ (ಅಜಿಪು. ೦೯–೬೯). [ಬಗ್೨ + ಇಡು೧]

**ಬಗೆಯಿಸು** (ಕ್ರಿ). ೧. ಮನಸ್ಸನ್ನು ಸೆಳೆ,–ಆಕರ್ಷಿಸು: ಮನಕೊಪ ನೊಗೆಯಿಸುವ ಬಗೆಯಿಸುವ ರಾಜೋಪವನಮೆಸೆದುದು (ಕೃಕಿಶ. ೨೫–೯೬). ೨. ತಿಳಿದಂಕೊಳ್ಳುವಂತೆ ಮಾಡು; ಭಾವಿಸುವಂತೆ ಮಾಡು: ಹಗೆತನವನುಳಿದು ದಯವಲ್ಲ ಬೆಳೆದು ತನ್ನಂತೆ ಪರರ ಬಗೆಯಿಸುವುದು ಬಡತನ (ಜೀಜಾಶ. ೬೩). [ಬಗ್೨ + –ಇಸು೨]

**ಬಗೆಯೆಣಿಕೆ** (ನಾ). ಮನಸ್ಸಿನ ಅಭಿಪ್ರಾಯ,–ಆಶಯಂ: ಇದು ನಿನಗೆ ಬಗೆಯೆಣಿಕೆ. ಎನಗೆ ಎರ್ದೆದೆಂಕೆ (ಅಕ್ಕಣ್ಣ. ೩೬–೨೩೬). [ಬಗ್೨ + ಎಣಿಕೆ]

**ಬಗೆಯೊಡೆಯ** (ನಾ). = ಬಗೆಯಾಣ್ಮ: ಗಡಣದೆ ಮಾದೇವಿಯ ಬಗೆಯೊಡೆಯನ ನೊಸಲೊಳ್ . . . ನಟ್ಟುವು ಕಾವನಂಬುಗಳ್ ತಾವ್ಯೆದುಂ (ಕಬ್ಬಿ. ೩೦೭). [ಬಗ್೨ + ಒಡೆಯ]

**ಬಗೆವಡೆ** (ಕ್ರಿ). ತಿಳಿ; ಅರಿತುಕೊಳ್ಳು: ಆ ತೊರೆ ಸಮುದ್ರೆಗೆಳತ್ತಲೇ ಹರಿದು ಹೋಗುವುದೆಂಬುದನ್ನು ಬಗೆವಡೆದವು (ಪಾಕೋಶ. ೩೫೩). [ಬಗ್೨ + ಪಡೆ೧]

**ಬಗೆವರ್**, ಬಗೆಬರ್ (ಕ್ರಿ). ಮನಸ್ಸಿಗೆ ಬರು,–ತೋಚು: ಬಗೆವಂದ ಗೊಡ್ಡಾಟವನಾಡಲೆಂದು ದುರ್ಜನಪರಿವೃತನಾಗಿ (ಧರ್ಮಾಮೃ. ೨–೨೯). ಬಗೆಬರ್: ಸ್ವೈರಿಣಿ ಬಗೆಬಂದಾಗಳೆ ಮಾರಕ್ರೀಡೆಯನೊಡರ್ಚಲೆಂದುವ ಪತಿಯಂ ದಾರಕನಂ ಕೊಲವೇಟ್ಟಳ್ (ಕಂಕಥಾ. ೬–೩೫); ಹರನ ಭಕ್ತಿಯ ಮಾಡಿದೊಡೆ ಗೋಚರಿಸಿ ತೋಱುವನಲ್ಲವುಪ್ರಭು ಕರುಣದಿಂದಲಿ ನೀನು ಬಳಿಕಾತನಲಿ ಬಗೆಬಂದ ವರವಮನೋರಥಸಿದ್ಧಿಯನು ಪತಿಕರಿಸಿ ಪಡೆವುದು (ಕೃಕುಲ. ೬–೩). [ಬಗ್೨ + ವರ್]

**ಬಗೆವಿಡಿ** (ಕ್ರಿ). ಮನಸ್ಸನ್ನು ಸೆಳೆ,–ಆಕರ್ಷಿಸು: ಬಗೆವಿಡಿದಾಹತಾದಿ ಗಮಕಂಗಳಿನೊಯ್ಯನೆ ಬೀಣೆ ಬಾಜಿಪನ್ನೆಗಂ (ಶಬ. ೯–೦೦೩). [ಬಗ್೨ + ಪಿಡಿ೧]

**ಬಗೆವುಗಿಸು** (ಕ್ರಿ). = ಬಗೆವಿಡಿ: ಏಂ ಬಗೆವುಗಿಸಿದುದೋ ಹೇಮಾಂಬುಜದ ಮರಾಳಮಿಥುನಮಂ ತನ್ಮಿಥುನಂ (ಅಶಂತ್ಯ. ೬–೫೫). [ಬಗ್೨ + ಪುಗಿಸು (< ಪುಗಿಸು)]

**ಬಗೆವುಗು** 'ಬಗೆವೊಗು' ನೋ.

**ಬಗೆವೆಚ್ಚು** 'ಬಗೆವೆರ್ಚು' ನೋ.

**ಬಗೆವೆರಸು** (ಕ್ರಿ). ಮನಸ್ಸಿಗೆ ಬರು; ಮನಮುಟ್ಟು: ಬಗೆವೆರಸಿ ಸಂದಪ್ಪವಾದಡೆಯುಂ ಪರೋಕ್ತಿಗಳರ್ಥಮಂ (ಕಕಾ. ೦–೨೮); ಜಗದರಸ ರಾಮಂಗೆ ಕೈಗಳ ಮುಗಿದುಮುಗಿದು ಕೆಲಸಾರುತಿರ್ದಾದಂ ಬಗೆವೆರಸಿ ಬಲ[ಪಾಠಾಂ. ಬಗೆಬಗೆಯ ಕಪಿ]ಪತಿಗಳೆಪ್ಪತ್ತೇಳು ಕೋಟಿಯನೆ (ತೊರರಾ. ೯–೮–೨). [ಬಗ್೨ + ಬೆರಸು೧ (< ಬೆರೆಯಿಸು)]

**ಬಗೆವೆರ್ಚು**, ಬಗೆವೆಚ್ಚು (ಕ್ರಿ). ಮನಸ್ಸು ಉಬ್ಬು; ಉತ್ಸಾಹಗೊಳ್ಳು: ಬಗೆವೆರ್ಚೆ ಕೇಳುತಿರ್ದಪೆ ಏಗೆ ಪೇಳ್ದಪೆನೆಲೆಲೆ ಧೂರ್ತವಿಪ್ರನೆ ಕೇಳ್ (ಗಿರಿ. ೯–೦೦೯). ಬಗೆವೆಚ್ಚು: ಪೊಗುತ ಸ್ವಗೆಡೆದೆದ್ದು ಮತ್ತ ಮಯ್ಯಿಕ್ಕುತಂ ಬಗೆವಚ್ಚಿ ಪೊಡಮಟ್ಟು ನಲಿದೆದ್ದು ನಡೆವುತಂ (ಶಂಶಿ. ೯–೦೨೨). [ಬಗ್೨ + ಪೆರ್ಚು೧]

**ಬಗೆವೆಱು** (ಕ್ರಿ). ಮನಸ್ಸಿಗೆ ಬರು; ಮೆಚ್ಚು: ಬಗೆವೆತ್ತು ಅಭವಾದಿ ಗಳೆತ್ತ ಪದವಿಗೆ ಹಗೆಗೊಂಡು ಹರಿ ಕೆಡಿಸುವನು (ಪೋಚಕ. ೩೦–೦೬). [ಬಗ್೨ + ಪೆಱು೧]

**ಬಗೆವೇಳ್** 'ಬಗೆವೇಟ್' ನೋ.

**ಬಗೆವೇಟ್**, ಬಗೆವೇಳ್ (ಕ್ರಿ). ೧. ಮನಸ್ಸನ್ನು ತೆರೆದು ಮಾತನಾಡು; ಹೃದಯವನ್ನು ಬಿಚ್ಚಿ ಹೇಳು: ತನಯರನಿಟ್ಟು ಸಂತತಿಯೊಳಂತೆಮಾಗಂ ಬಗೆವೇಟದೇಕೆ ಪೋದನೊ (ಅಂತ್ಯ. ೯–೬೬); ಬಗೆವೇಟ್ಟೊಡನ್ನ ಮೇಳದ ಕೆಳೆಯರ್ಕಳಿಲ್ಲ (ಕಂಕಥಾ. ೯–೬೯); ಸಮಧಿಕಚಿಂತೆಯಂ ನುಡಿಯಲುಂ ಬಗೆವೇಟಲುಮೊಲ್ಲದಾ ಶರತ್ಸಮಯದ ಸೋಗೆಯಿರ್ಪ ತೆಱದಿಂ ಕಡುವಿನ್ನನೆ ಮೂಗುಮಟ್ಟು ಖೇದಮನೊಳಗೊಂಡು ನಿಂದಬಲೆಯಿರ್ದಿರವಂ ಸಖಿ ನೋಡಿ (ಜಗ. ೦೦–೦೦). ಬಗೆವೇಳ್: ೨. ದಾರಿ ತೋರಿಸು: ಶಿವಭಕ್ತಾಪರಾಧದಿಂ ಸಂಭವಿಸಿತಿನಿತು ಪರಿಭವವಿದಕೆ ಬಗೆವೇಳ್ಳೆನೊಡ ಮರ್ದನಯೆಂದು ದೈನ್ಯದಿಂ ಬಿನ್ನೈಸಿ (ಸೌಂದರ್ಯ. ೯–೦೫). [ಬಗ್೨ + ಪೇಟ್]

**ಬಗೆವೊಗು**, ಬಗೆವುಗು (ಕ್ರಿ). ಮನಸ್ಸನ್ನು ಪ್ರವೇಶಿಸು: ನೋಟದೊಳ್ ಟ್ಯಜಂಬಡೆದು ಮೆಲ್ನುಡಿಯೊಳ್ ಬಗೆವೊಕ್ಕು . . . ಕೂಟಸುಖಂಗಳಂ ಪಡೆದಂ (ಕಂಕಥಾ. ೩–೮೩). ಬಗೆವುಗು: ಎಲ್ಲಮನೊಪ್ಪಿಸಿ ನಿರ್ಣಯಂ ನಯಂ ಬಗೆವುಗೆ ಮಾಡಿದರ್ಕಲುಮವೇಷಮನೊಲ್ಲದನುಪ್ರವೇಶಮಂ

(ಜಗನ್ನಾ. ೯-೧೨೫); ಶ್ರೀಕಂಠರಿಪುವಿನಸ್ವಾನೀಕಂ ಬಗೆವುಗಲದೊರ್ಮೆ ಸತ್ರಾಜಿತ್ಯನಾಕಾರಂ ಬಗೆವೊಕ್ಕುದು ಲೋಕಜನಮುತ್ತಿಗಳಂ ಗರುತ್ಮದ್ಧ್ವಜನಾ (ಜಗನ್ನಾ. ೧೦-೮); ಗುಣವುವುದಂ ಶಬ್ದ ವಣಿದವರ್ಣಾನಾವುವನಿಟ್ಟು ನೆಱೆಯೆ ಕರ್ಣಾಟಕಲಕ್ಷಣಶಬ್ದಶಾಸ್ತ್ರವುಂ ಲಾಕ್ಷಣಿಕರ್ವೇಟಿಂದು ಬೆಸಸ ಬಗೆವುಗೆ ಪೇಟ್ದಿಂ (ಶಬ್ದ. ೩). [ಬಗ್ಗೆ + ಪೊಗು]

**ಬಗೆಹರಿ** (ಕ್ರಿ). (ಮನಸ್ಸಿನ ಆಲೋಚನೆ, ಉದ್ದೇಶ ಮುಂತಾದುವು ನಿರಾತಂಕವಾಗಿ) ತೀರ್ಮಾನವಾಗು; ಇತ್ಯರ್ಥಗೊಳ್ಳು; ನಿರ್ಧಾರವಾಗು: ಕನ್ನಡಸಾಹಿತ್ಯದಲ್ಲಿ ನಾಗವರ್ಮರು ಎಷ್ಟು ಮಂದಿ ಎಂಬ ಪ್ರಶ್ನೆಯೊಂದು ಬಗೆಹರಿಯದ ಸಮಸ್ಯೆಯಾಗಿದೆ (ಕಾಪಿಸ. ೨೧); ಈ ದೇಶದ ಶೈಕ್ಷಣಿಕಸಮಸ್ಯೆಗಳು ಖಂಡಿತವಾಗಿಯೂ ಬಗೆಹರಿಯುವುದಿಲ್ಲ (ಶಿಪಶಿ. ೦೦). [ಬಗ್ಗೆ + ಹರ್ (< ಪರ್)]

**ಬಗೆಹರಿಸು** (ಕ್ರಿ). ೧. ಇತ್ಯರ್ಥಗೊಳಿಸು; ನಿರ್ಣಯಿಸು; ನಿರ್ಧರಿಸು: ಶುಶ್ರೂಷೆಯ ಜೀಲದ ಪ್ರಶ್ನೆಯನ್ನು ಐದು ತಲೆಮಾರು ಹಿಂದೆಯೇ ಸಮಾಜ ಬಗೆಹರಿಸಿದ್ದಿತು (ಕಾಂಯು. ೯೬); ಅಂತಿಮವಾಗಿ ಈ ಪ್ರಶ್ನೆಯನ್ನು ಬಗೆಹರಿಸಬೇಕು (ಹಂಶಹ. ೦೫೦). ೨. ತೀರಿಸು; ಸಂದಾಯ ಮಾಡು: ನೆರೆದಿದ್ದ ಅಷ್ಟು ಜನ ಸಾಹುಕಾರರ ಸಾಲದಲ್ಲಿ ಒಂದನ್ನು ಸಹ ಬಗೆಹರಿಸುವ ಪರಿಸ್ಥಿತಿಯಿರಲಿಲ್ಲ (ಚಕ್ರಕೊ. ೩೯). [ಬಗ್ಗೆ + ಹರಿಸು (< ಪರಿಯಿಸು)]

**ಬಗ್ಗ₁, ವಗ್ಗ₁** (ನಾ). ಹುಲಿ; ವ್ಯಾಘ್ರ: "ಬಗ್ಗಂ ವ್ಯಾಘ್ರಾಭಿಧಾನಂ" (ಶಬ್ದಾಂ.೯೭); ಸುತ್ತಿದ ರೇಫ ದದ್ವಕ್ಕರವಾದುದರ್ಕೆ — ಚಕ್ರಪಕ್ಷಿ — ಚಕ್ಕವಕ್ಕಿ . . . ವ್ಯಾಘ್ರ — ಬಗ್ಗ (ಶಮಣಿ. ೨೬೦ ಪ್ರಯೋ); ಗರ್ಜಿಸುತ್ತಿರ್ಪ ಬಗ್ಗದ ಬಲ್ಗಂಡಿಕೆಗಂಡು . . . ತಿವಿದಂ ತತ್ಕಾಲಮೇಘಾಹ್ವಯಂ (ರಾಜಶೇ. ೩-೯೯); ಇದೆ ಬಗ್ಗನನಿಕ್ಕು! ಮೇಣದೆ ಚಿತ್ರಗನಂ ತುಡು! (ರಾಘುಕ್ಕ. ೯೯-೨೨). **ವಗ್ಗ₁**: ಶ್ರೀಮದಾಹವಮಲ್ಲದೇವರ ವಗ್ಗ (ಎ.ಕ.XVI, ೬೬-೩; 1067). [< ಪ್ರಾ. ವಗ್ಘ. /ಸಂ. ವ್ಯಾಘ್ರ]

**ಬಗ್ಗ₂, ವಗ್ಗ₂** (ನಾ). ೧. ಗುಂಪು; ನೆರವಿ; ಸಮೂಹ: "ಬಗ್ಗಂ ವರ್ಗಂ" (ಶಬ್ದಾಂ.೯೭); ದಿತ್ವಾಗ್ರರೇಫಲೋಪಕ್ಕೆ — ವರ್ಗ — ಬಗ್ಗ (ಶಮಣಿ. ೨೬೦ ಪ್ರಯೋ). **ವಗ್ಗ₂**: "ವಗ್ಗ (ಬಗ್ಗ) — ವರ್ಗ" (ತದ್ಭವರೂ.೩೯). ೨. ಗ್ರಂಥದ ಪರಿಚ್ಛೇದ, — ಸರ್ಗ: ಅನೇಕ ಶಾಸನಗಳ ಕೊನೆಯಲ್ಲಿ ಕಂಡುಬರುವ ಚಿಹ್ನೆಯೊಂದು ಧಮ್ಮಪದದ ಪ್ರತಿ 'ವಗ್ಗ'ದ ಕೊನೆಯಲ್ಲಿಯೂ ಇದೆ (ಶಾಪಶ.೦೯). [< ಪ್ರಾ. ವಗ್ಗ. /ಸಂ. ವರ್ಗ]

**ಬಗ್ಗ₃** (ನಾ). ಶಿವ; ಈಶ್ವರ: "ಬಗ್ಗನೆನೆ ಮುಕ್ಕಣ್ಣನಕ್ಕು" (ಕಬಿತ.೬೩); ಬೀಯಲ್ ಸರಸತಿ, ಬಿಳಿಯಂ ಬಗ್ಗಂ (ಕನ್ನಾ.ಕು.೦೦೩ ವ್ಯಾಖ್ಯಾ); ವೇಗದಿ ಬಗ್ಗನುಂಬ್ರಯೆಡೆಗಂ ನಡೆತಂದದನೆಲ್ಲಮಂ . . . ಪೇಳಲು (ಶಾಂತಸ್ಕ. ೦-೬-೨೩). [< ಸಂ. ಭರ್ಗ]

**ಬಗ್ಗಂದೊವಲ್, ಬಗ್ಗದೊವಲ್, ಬಗ್ಗದೊವಲು** (ನಾ). ಹುಲಿಯ ಚರ್ಮ; ವ್ಯಾಘ್ರಾಜಿನ: ಬಗ್ಗಂದೊವಲ್, ಬಗ್ಗದೊವಲ್ (ಕನ್ನಾ.ಕು.೩೭೮ ಪ್ರಯೋ). **ಬಗ್ಗದೊವಲ್**: ಬಗ್ಗದೊವಲಂ ಅಸವಸದೊಳುಟ್ಟನಂ ದೇವರಾದಿತ್ಯನಂ. . .ನುತಿಸಿದಂ (ಅಚ್ಚಕೈ.೩-೩೦); ಪಾರ್ವತಿಯಾಣ್ಮಂ . . . ಬಗ್ಗದೊವಲ ಪಾಸುಗೆಯಲ್ಲಿ ಸಲ್ಲೇಲೆಯಿಂ ಮೂರ್ತಿಗೊಂಡಿರೆಯಿರ (ಕೃ.ಹು. ೦೯-೩೦ ಕ); ಬಗ್ಗದೊವಲಂ ಕಂಡೊಡಂ ಬೆರ್ಚುವರಲೆಗಳ್ ಪರಿವ ಪೆರ್ಬುಲಿನೋಟವಮಂ ಸೊಸಲುಂಟೆ (ಶ್ರೀಪಾಮ.೦೬-೩೩). **ಬಗ್ಗದೊವಲು**: 'ಬಗ್ಗದೊವಲುಡಿಗೆ' ವರಾ. [ಬಗ್ಗ₁ + ತೊವಲ್₂ (< ತೊೞಲ್₁)]

**ಬಗ್ಗಡ, ಬೊಗ್ಗಡ** (ನಾ). ೧. ಮಣ್ಣು, ಕಸ, ಸೆಗಣಿ ಮುಂತಾದುವು ಕಲಸಿಕೊಂಡಿರುವ ನೀರು; ರಾಡಿ; ಕೊಚ್ಚೆ: ಆನೆ, ಕುದುರೆ, ರಥ, ಪದಾತಿಗಳಿಂದ ಆ ನೀರು ಕಲಕುವುದು, ಕದಡುವುದು, ಬಗ್ಗಡವಾಗುವುದು (ಬಂದ್ಯಕ. ಬಿಂಬಂ. ೯೩); ನಾವು ಕೇವಲ ಕಸರನ್ನೂ ಸಗಣಿಯ ಬಗ್ಗಡವನ್ನೂ ಉಳಿದಿದ್ದೇವೆ (ಹಂಂಶ.II.೨೬೩). ೨. ಕೊನೆಯಲ್ಲಿ ಉಳಿದುದು; ಗಸಿ; ಗಪ್ಪು: ಮೇಲಿನ ತಿಳಿ ಖರ್ಚಾಗಿ ಬಗ್ಗಡ ಮಾತ್ರ ಉಳಿದಿದೆ (ಜಶ). **ಬೊಗ್ಗಡ**: ೩. (ಆಲಂ) ಕಳವಳ; ಕ್ಷೋಭೆ: ಕಿಟ್ಟಣ್ಣನ ಮನಸ್ಸು ಕಲಕಿ ಬೊಗ್ಗಡವಾಗಿ ಹೋಗಿ ಮತ್ತೆ ತಿಳಿಯಾಗಬೇಕಾದರೆ ಎಂಟು ಹತ್ತು ದಿನಗಳು ಬೇಕಾಗುತ್ತಿತ್ತು (ಶ್ರೀಶಕ.೪). [?]

**ಬಗ್ಗಡೆ** 'ಬಂಗಡೆ' ನೋ.

**ಬಗ್ಗಡೆಯ** 'ಬಕ್ಕುಡೆಯ' ನೋ.

**ಬಗ್ಗಣೆ₁** (ನಾ). ೧. ಗದರಿಕೆ; ಝಂಕಣೆ: ತಂದೆ ಕಡಂಗಿ ಕಲ್ಪಿಸುವ ಕಲ್ಪಿಯಮೊಲ್ಲದೆ ತಾಯ್ಮಗುಳ್ದು ನಿರ್ವಂದದಿನೆಯ್ದೆ ಬಗ್ಗಿಸುವ ಬಗ್ಗಣೆಗಳ್ಕದ (ಸುಕುಸು.೨-೬); ನಿಱಿಸು ನಿಘಾತಮಾಂಕೆ ಬಗೆ ಬಗ್ಗಣೆ ವಂಚನೆ ಬಂಧಮೆಂಬಿವಂ ಮೞೆವೊವರ್ಜರ್ಕಳೇಂ ಕಲಿಸುತಿರ್ದರೊ ಚಟ್ಟರನುಟ್ಟಿಮಟ್ಟರಂ (ಧರ್ಮಾ.೨-೩೦). ೨. ಕೂಗಾಟ; ಅರ್ಭಟ: ಹೆಗ್ಗಡಲ ತೆರೆಯಂತೆ ಮೊಳಗುವ ಲಗ್ಗೆಗಳಲೋರಂತೆ ಸುಭಟರ ಬಗ್ಗಣೆಯ ಬಲುಭುಜರ ಘನತರ ಸಿಂಹನಾದದಲಿ ತಗ್ಗಿದುದು ಧರೆ (ಕಭಾಗ. ೦೦-೩೨-೯೬).

**ಬಗ್ಗಣೆ₂, ಬಗ್ಗಳೆ** (ನಾ). ಹಕ್ಕಿಗಳ ಕೂಗು; ಕೂಜನ: ಕಳಕಂಠಿಯ ಬಗ್ಗಣೆಯೇವುವೆಂಬ . . . ಮಧುಮಾಸದ ಗೋಸಣೆಯೇವುವೆಂಬ ಬದ್ದರ ನೞೆಯಟ್ಟ (ಅಜಿತ.೬-೨೩); ಕೋಗಿಲೆಯ ಬಗ್ಗಣೆ ತುಂಬಿಯ ಗೇಯ ಮೆಂಬಿವಂ ಬಲ್ಲವರು ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ (ಮಲ್ಲಿ.೦-೪೪). **ಬಗ್ಗಳೆ**: ಪರಪುಷ್ಟಧ್ವಾನದೊಳ್ ಬಗ್ಗಳೆ ಪುರುಳಿಗೊಳಲ್ ಲಲ್ಲೆ (ಅಜಿತ. ೦-೯೩). [ಬಗ್ಗ₂ + — ಅಣೆ]

**ಬಗ್ಗದೊವಲ್** 'ಬಗ್ಗಂದೊವಲ್' ನೋ.

**ಬಗ್ಗದೊವಲ** (ನಾ). ಹುಲಿಯ ಚರ್ಮವನ್ನು ಧರಿಸಿದವನು; ವ್ಯಾಘ್ರಚರ್ಮಾಂಬರ; ಶಿವ: ಬಗ್ಗದೊವಲಗೆ ಸೊಡರ ಹಚ್ಚುಸುವ ಹಾಲೆರವೆ (ಕಶ್ಯಕ. ೩-೬೦).

[ಬಗ್ಗದೊವಲ್ (<ಬಗ್ಗಂದೊವಲ್) + — ಅ]

**ಬಗ್ಗದೊವಲು** 'ಬಗ್ಗಂದೊವಲ್' ನೋ.

**ಬಗ್ಗದೊವಲುಡಿಗ** (ನಾ). = ಬಗ್ಗದೊವಲ: ಬಗ್ಗದೊವಲುಡಿಗನೀರೇಳ್ಬುವನದೊಡೆಯನೆಸೆದಂ ರಾಜವಿಭವದಿಂದೆ (ಕಂಚಿ. ೨೯-೯೦).

[ಬಗ್ಗದೊವಲುಡೆ + — ಇಗ]

**ಬಗ್ಗದೊವಲುಡಿಗೆ** (ನಾ). ಹುಲಿಯ ಚರ್ಮದ ಉಡುಪು; ವ್ಯಾಘ್ರಚರ್ಮದ ಉಡುಗೆ: ಬೆಳುಗಾಯ ಕೆಂಜಡೆಯು ಚೆನ್ನಾಗಿ ಬಗ್ಗದೊವಲುಡಿಗೆ ವಿಭೂತಿ ರುದ್ರಾಕ್ಷಿಗಳು (ಶಶಕೋ. ೦೩.೦೩).

[ಬಗ್ಗದೊವಲು (<ಬಗ್ಗಂದೊವಲ್) + ಉಡಿಗೆ₁ (<ಉಡುಗೆ)]

**ಬಗ್ಗದೊವಲುಡೆ** (ನಾ). = ಬಗ್ಗದೊವಲುಡಿಗೆ: 'ಬಗ್ಗದೊವಲುಡೆಯ' ವರಾ. [ಬಗ್ಗದೊವಲ್ (< ಬಗ್ಗಂದೊವಲ್) + ಉಡೆ₁]

**ಬಗ್ಗದೊವಲುಡೆಯ** (ನಾ). = ಬಗ್ಗದೊವಲ: "ಎಣ್ಮಯ್ಯಂ . . . ಸಬ್ಬಂ, ಬಗ್ಗದೊವಲುಡೆಯಂ, ಬಾನ್ನವಿರಂ . . . ಅಯ್ಯೊಗಂ — ಈ ೩೩ ಈಶ್ವರಂಗೆ ಪೆಸರ್" (ಕಶಾ. ೯೭-೦); ಪೆಗ್ಗಳಿಪ ಶೀತಕರನೀರೆಂಟುಭಾಗದೊಳ್ ಬಗ್ಗದೊವಲುಡೆಯನೊಂದಂ ತಳೆದು ಚಂದ್ರನಂ ನೋಡಿ ಮತ್ತಿಂತೆಂದನು (ಕಂಚಿ. ೨೨-೨೩); ಬಗ್ಗದೊವಲುಡೆಯಂಗೆ ಪಟ್ಟಣಗೆಯನುಡಿಸಿ (ರಾಘುಕ್ಕ. ೦೫೦-೦೨). [ಬಗ್ಗದೊವಲುಡೆ + — ಅ]

**ಬಗ್ಗನೆ** (ಅ). ಕೂಡಲೆ; ತಕ್ಷಣ: ಬಗ್ಗನಿಲ್ಲಿಂದ್ಯೆದಿ ನಾವು ನಮ್ಮಯ ಗಡಿದುರ್ಗದೊತ್ತಲಿ ನಿಲ್ವೆವು (ಕಂಪಶ. ೦೯-೪೯); ಸಗ್ಗದಿನಾಗಳ್ ಚರರಂ ದಿಗ್ಗಜಮಂ ಕರತರಲ್ಕೆ ಕಳಿಪಿದೊಡವರ್ಗಳ್ ಬಗ್ಗನೆ ಬಂದುಸಿರಲ್ಕೆ (ಹಾಚಾಸ್ಕ. ೦-೩-೨೩); ಸುಗ್ಗಿಗರ ಪಿರಿಯನ್ಯತರ ನೋಡಿ ಹರ್ಷದಿಂ ಬಗ್ಗನಿದಿರೆದ್ದು ಸೆಳೆದಪ್ಪ (ಶಂಕಾಜು. ೨-೩೨-೩೩). [ಬಗ್₂ + — ಅನೆ₁]

**ಬಗ್ಗಬರಿ** 'ಬಬ್ಬು₂' ವರಾ.

**ಬಗ್ಗಬಾಱ** 'ಬಬ್ಬು₂' ವರಾ.

**ಬಗ್ಗಮರಿ** (ನಾ). ಹುಲಿಯ ಮರಿ; ವ್ಯಾಘ್ರಶಿಶು : ಚೆಳೆಯನುರೆ ಚೆಲ್ಲುವವು ಬಗ್ಗಮರಿಗಳು (ಶಶಿಶೋ. ೬-೧೦). [ಬಗ್ಗ₁+ಮರಿ₂ (<ಮಱಿ)]

**ಬಗ್ಗರೆ** 'ಬಕ್ಕರೆ' ನೋ.

**ಬಗ್ಗವಳ್ಳಿ** (ನಾ). ಒಂದು ಬಗೆಯ ಬಳ್ಳಿ (?) : ಬಗ್ಗವಳ್ಳಿಯ ಬಳ್ಳಿ ಗಾವಣದೋಳಿಯಿಂ ಸೊಗಯಿಪ್ಪ ಸಮ್ಮಗ್ಗವಾಕ್ಷದ ವಂಕದಾರದ ಕೇತಕೀಗರ್ಭಯಿನೊಂದಿ ನಿಂದಗ್ಗಳಿಕ್ಕೆಯನೀಟ್ಟು ನೀಳ್ದ ನಿವೇಶದೊಳ್ ಮದನಂ ಮಹತ್ಕೆಗ್ಗು ಪೊರ್ದದ ರೂಹಿನೊಳ್ ನೆಲಸಿರ್ಪವೋಲ್ ಸುಖಮಿರ್ಪನಂ (ಚಾಂತಿ. ೩-೭೯). [ಬಗ್ಗ₂ + ಬಳ್ಳಿ]

**ಬಗ್ಗಸಮ್ಮ** (ನಾ). –ಬಗ್ಗಂದೊವಲ್ : ಜಡೆಗಳ ಬಂಬಲೇ ತಲೆವೇರ್ ಫಣೆ ಸುತ್ತಿದ ಬಳ್ಳಿ . . . ಬಗ್ಗಸಮ್ಮದೊಳ್ಪಡೆ ಪೊಸಚಲ್ಲಣಂ (ಶಶಿಂ. ೩-೩).
[ಬಗ್ಗ₁+ಸವ್ವ₂ (<ಚವ್ವ)]

**ಬಗ್ಗಳೆ** 'ಬಗ್ಗಣ್ಣೆ' ನೋ.

**ಬಗ್ಗಿ** 'ಬಗ್ಗಿ' ನೋ.

**ಬಗ್ಗಿಸು₁** (ಕ್ರಿ). ೧. ಬಗ್ಗುವಂತೆ ಮಾಡು ; ಬಾಗಿಸು : ತರಣಿಶತಕೋಟಿ ತೇಜದ ರತ್ನದೋಹರಿಯ ಹಿರಿಯ ಸೌಧೋತ್ತರಂಗಳ ಪ್ರಾಂಗಣಂಗಳೊಳು ಹರನೋಲಗದ ಸಮಯಮಂ ದ್ವಾರಪಾಲಕರ ಶಿರವ ಬಗ್ಗಿಸಿ ಕೇಳುತ ಕರಗಳಂ ಮುಗಿದು (ಗುಶಕ. ೩-೯೦) ; ನೀನು ತಲೆ ಬಗ್ಗಿಸಿಕೊಂಡೇ ಕುಳಿತಿದ್ದೀಯಲ್ಲ (ಕಂಗಾಳ್. ೨೩೨). ೨. ಚೆಲ್ಲು ; ಸಂರಿ : ಬೀರಕ್ಕ . . . ಕಡಾಯಿನ ನೀರನೆಲ್ಲಾ ಬಗ್ಗಿಸಿದ್ದಾಳೆ (ಅಶಿಶಿಂ. IX. ೬೨) ; ಮಗ್ಗಲುತೋಟದ ಜನಗಳೆಲ್ಲಾ ಅಲ್ಲಿಗೆ ಬಂದು ನಾನು ನೀರು ಬಗ್ಗಿಸುತ್ತಿದ್ದ ಧಾಟಿಯನ್ನೇ ನೋಡುತ್ತಿದ್ದರು (ಕಂಗಾಳ್. ೬೦೭). ೩. ಸೋಲಿಸು ; ಹಿಮ್ಮೆಟ್ಟಿಸು : ಜಕ್ಕವಕ್ಕಿಯಂ ಪರಿವಡೆದಿರ್ದ ಕೋರವೂರೆ ಬಗ್ಗಿಸೆ ನೈದಿಲದಿನೆಯ್ದೆ ಕಣ್ಮಲರ್ ಕೊರಗಿಸೆ ನಾಡೆ . . . ಬನವಣ್ಣಿಸಿವಂದದಿನೊರ್ವಳೊಪ್ಪಿದಳ್ (ಕಸ್ಕಗಾ. ೦೦೨). ೪. ಗದರಿಸು ; ಬೆದರಿಸು; ಝುಂಕಿಸು : "ಬಗ್ಗಿಸಿದನೆನಲ್ಕೆ ಝುಂಕಿಸಿದ ನೊಳು ಪೊಟ್ಟುಂ" (ಶಬ್ದಾರ. ೯೩) ; ಒಸಗೆ ಮೇಣ್ ಮುನಿಗೆ ಮೇಣವ ರೆಲ್ಲರುಮಂತೆ ಬಗ್ಗಿಸುಗೆ ಮತ್ತುಬಾಯಿಲಾಗದು ನೆಟ್ಟನೆ ಪೊಣ್ದುದಂ (ಶಶಿ. ೦-೩೩೪) ; ಕಿಱಯಂದು ತಂದೆ ಬಗ್ಗಿಸಲಱಯನೆ ತಾಯ್ ಜಡಿದು ತಿಳಿವಲ ಱಯಳೆ (ಸುಕುಷು. ೨-೬೨). ೫. ಮೂದಲಿಸು ; ಹೀಯಾಳಿಸು ; ಹಂಗಿಸು : ನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀಮೊದಱಯವಂ ಬಗ್ಗಿಸಿದೊಡದೃಶ್ಯಂಗಳಾಗಿ ಪೋಕುಂ (ಶಚ್ಚಾ. ೦೦೦-೪) ; ಮುನಿಕುವರರೋದುವ ವೇದವೇದಾಂಗಂಗಳ ತಪ್ಪವಿಡಿದು ಜಡಿದು ಬಗ್ಗಿಸುವ ಪದುಮರಾಗದ ಬಣ್ಣದರಗಿಳಿಗಳುವಂ (ಶಂಕರಾ. ೦-೦೦೭ ಪ) ; ಕಟಲೆ ನುಡಿದಟಲೆ ಬಗ್ಗಿಸಿ ಘಟಿಲಿನೆ ನಡೆಯೆಂದು ಜಡಿದು ಸಾರಥಿಯಂ ಪಾಂಗುಱದು ನಿಲಲೀಯದಲ್ಲಿಂದೆಟೆದುಯ್ವಂತುಯ್ದು ಳಾತ್ಮವರನಂ ನರನಂ (ಶಬ್ದಾ.ಶ. ೨೩). 'ಬಾಗಿಸು₂' ವರಾ.
[ಬಗ್ಗು₁ + — ಇಸು₁]

**ಬಗ್ಗಿಸು₂** (ಕ್ರಿ). (ಕೋಗಿಲೆ ಮೊದಲಾದ ಪಕ್ಷಿಗಳು) ಕೂಗು ; ಉಲಿ : ಕಾವ್ಯಬಂಧಮೊಪ್ಪುಗುಮೆಳಮಾವ ಕೆಂದಳಿರ ಪೂವಿನ ಬಿಳ್ದೊಂಚಿಯಿಂ ಬಟಲ್ದು ತುಂಬಿಗಳನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪು ವಂತೆವೋಲ್ (ಶಂಶಶಾ. ೦-೬) ;. ಪಿರಿದುನ್ನದಾಳಿ ಬಗ್ಗಿಸುವ ಪಿಕಾಳಿ ಪುಷ್ಪಿತ ಲತಾಳಿ (ಎಶಿ. VIII. ಶಾಗಠ. ೦೦೬-೨೬ : 1042) ; ಪಾಡುವ ತುಂಬಿ ಬಗ್ಗಿಸುವ ಕೋಗಿಲೆ ಪರ್ಚಿಪ ನೀಲಕಂಠ (ಶಶುಷಾ. ೩-೦೯೯).
[ಬಗ್ಗು₂ + — ಇಸು₂]

**ಬಗ್ಗು₁** (ಕ್ರಿ). ೧. ಕೆಳಮಂಖವಾಗು ; ಬಾಗು ; ಬಗ್ಗಿ ಕವಿವಂಬುಗಳ ಗೞಗಳ ಲಗ್ಗೆಗರಿನಾಯಕರ ಕವಿಗಳು ನೆಗ್ಗಿದವು ಮುಗ್ಗಿದವು ಮನ ಮಾಣಿಂಕದತಿರಥರ (ಶುಚ್ಯಾ.೯. ೨೦-೬) ; ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ ? (ಗಾದೆ). ೨. ಡೊಂಕಾಗು ; ವಕ್ರವಾಗು : ಆ ಕಿಟಕಿಯ ಸರಳುಗಳೆಲ್ಲ ಹಳೆಯವಾಗಿ ಬಗ್ಗಿವೆ (ಒಂ೨). ೩. ಓರೆಯಾಗು : ಓಲು : ಬಿನ್ನಣದ ಗೋಪುರದ ಮಂಟಪದ ಕೃಥುಮಗಳು ಚಿತ್ರಾಗಿ ನಿಗುರುತಂ ಬಗ್ಗುತ್ತ. . . .ನೋಡಿ (ಶಚುಶ್ಚ. ೨೮-೩-೩೬). ೪. ವಿನಯವನ್ನು ಹೊಂದು ; ವಿನೀತವಾಗು : ಭೋಗ್ಗನೊಂದೇ ದಿನದೊಳು ಕೋಟಿ ನಾತ್ಮನು ಬಗ್ಗಿದಾಗ್ ಬಾಗಿಲಹುದೇ (ಶಚ. ೨-೬೬) ; ಬಗ್ಗಿದವನಿಗೆ ಒಂದು ಗುದ್ದು ಹೆಚ್ಚು (ಗಾದೆ). ೫. ಮಣಿ ; ಸಗ್ಗು ; ತಗ್ಗು : ಅತಿಕಾಂಕ್ಷೆಯನಾವಂ ಮಾಳ್ಪನವಂ ಸತತಂ ಹಿಂಸೆಗೆ ಬಗ್ಗುವನಲ್ಲಂ (ಶಮಶಾ. ೦೦-೦೩) ; ಗ್ರಾಮದ ಮುಖಂಡರು ಇಷ್ಟು ಪ್ರಯತ್ನಪಟ್ಟರೂ ಬಗ್ಗದ ಹಟವಾದಿಯು . . . ಗ್ರಾಮಸ್ಥರನ್ನು ಅಕರಾಧಿಗಳನ್ನಾಗಿ ಮಾಡುತ್ತಿದ್ದನು (ಶುಕ್ಷಿ. ೦೬). ೬. ಗದರು ; ಝುಂಕಿಸು : 'ಬಗ್ಗಣ್ಣೆ', 'ಬಗ್ಗಿಸು₁' ವರಾ. 'ಬಾಗ್ಗು' ಹೋ.
[ದೇ. ■ ತುಳು. ಬಗ್ಗು ; ಕೊಡ. ಬಗ್ಗ್]

**ಬಗ್ಗು₂** (ಕ್ರಿ). (ಪಕ್ಷಿಗಳು) ಕೂಗು ; ಉಲಿ : 'ಬಗ್ಗಿಸು₂' ವರಾ.

**ಬಗ್ಗು₃** (ನಾ). ಬೆದರಿಸುವಿಕೆ ; ಗದರಿಸುವಿಕೆ ; ಝುಂಕಣೆ : "ಬಗ್ಗು, ಬಪ್ಪಂಡಂ, ಬೆಚ್ಚ, ಚಪ್ಪರಣೆ— ಈ ೪ ಜಂಕಣ್" (ಶಚಾ. ೫೩-೨೫೬).
[ <ಬಗ್ಗು₁ ].

**ಬಗ್ಗು₄** (ನಾ). ಪಕ್ಷಿಗಳ ಕೂಗು ; ಹಕ್ಕಿಗಳ ಧ್ವನಿ : "ಬಗ್ಗೆನಲ್ಕದು ಪಕ್ಷಿಗಳ ದನಿಗೆ" (ಶಚ. ೦೨೬). [<ಬಗ್ಗು₂]

**ಬಗ್ಗು₅** (ನಾ). ಐಶ್ವರ್ಯ ; ಸಂಪತ್ತು : "ಬಗ್ಗು (ಬಗ್ಗ, ಬಾಗ)— ಭಾಗ್ಯ" (ಶಕ್ಕಶೋ. ೨೬) ; ಕೃತಿಯದು ಚದುರಕರ್ಣಾಟಕಕ್ಕೆಲೆಯಿಱವನ ಬಗ್ಗಿನ ಬೆಳೆ (ಶಾಂತಶೋ. ೦-೨೨) ; ಮಾಣಿವರಲಲಿತೆಯ ಲಲನೆಯ ನೊಸಲದು ಬಗ್ಗಿನ ನೆಲೆವನೆ (ಹಾಶಾಸ್ಕ. ೦-೦೩-೦೬) ; ಪುಣ್ಯದ ರಾಶಿಯಂತೆ ಬಗ್ಗಿನ ನೆಲೆಯಂತೆ ಮೈಮೆವೆತ್ತು ಚೆಲ್ವಾದ ಪರ್ವತಂ ತೋಱವಂದುದು (ಶಾಶುತ್ತ. ೬೨-೦೦). [<ಪ್ರಾ. ಬಗ್ಗ./ಸಂ. ಭಾಗ್ಯ]

**ಬಗ್ಗುಬಡಿ** (ಕ್ರಿ). (ಅಲಂ) ಬಾಯಿ ಮುಚ್ಚಿಸು : ಅಡಗಿಸು ; ಸಂಪ್ಪನಾಗಿಸು : ಸಂನ್ಯಾಸಿಗಳನ್ನು ಬಗ್ಗುಬಡಿದೆವೆಂದು ಹಂಸ ಡಿಂಭರ ಅವಿನಯವು ಮತ್ತಷ್ಟು ಉಬ್ಬಿ ಹರಿಯಿತು (ಶೀಙಟ್ಟು. ೦೯೦) ; ತಾಯಿಯನ್ನು ಬಗ್ಗುಬಡಿದಂತೆ ಈ ಬಾರಿಯೂ ಮಾಡಬೇಕೆಂದು ನೆನೆಸಿ ಇದರ ಬಗ್ಗೆ ಮನೆಯಲ್ಲಿ ಚಕಾರಕೆತ್ತಲು ತೆಗೆಯಲಿಲ್ಲ (ಗಂಜಾಶಾಯ. ೩೬).
[ ಬಗ್ಗು₁ + ಬಡಿ₁ ]

**ಬಗ್ಗುರಿ₁** (ನಾ). ಎದೆಗೂಡಿನ ಮೂಳೆ : ಕಟಕಟಾಯಿಶಾ ಮತ್ಸ್ಯವಿಬ್ಬಿಲ್ಲರಲ್ ಜಗಕೆ ಸಂಕಟಮಪ್ಪುದಚ್ಚರಿಯೆ ನೋಡೆಂದು ಕೂರ್ಢ ಲಟಕಟಿಸಿ ಕಡ ಲೊಳ್ ಪೊಕ್ಕು ಗುಡಿಗುಡಿವ ವಿಹಾನ ಬಗ್ಗುರಿಯನೊದೆದೊಂ (ಶಶ್ಚ. ೨೦-೬) : ಉಡಿದರಾಂತವರ ಬಗ್ಗುರಿಗಳಂ ದಾನವರ್ ಕುಡಿದರ ರುಣಾಂಬುವಂ ಶಾಕಿನಿಯರ್ (ಶಶ್ಚ. ೨೯ ೨೨).
[ ದೇ. ■ ಕೊಡ. ಬಗ್ಗರೆ = ಬೆನ್ನೆಲುಬು ]

**ಬಗ್ಗುರಿ₂** (ನಾ). ಜಿಂಕೆ ಮೊದಲಾದ ಪ್ರಾಣಿಗಳನ್ನು ಹಿಡಿಯುವವನು; ಬೇಡ : ಜಗದ ಪ್ರಾಣಿಗಳುಲಿದುಲಿದು ಮರಳಿ ಮತ್ತಪ್ಷಿಯೇ ಬೀಳಲು ಬಲೆಯ ನೇಣು ಬಗ್ಗುರಿಯ ಕೈಯಲಿರಲು ಬಲೆಯ ನೇಣ ಕಣ್ಣಿಯ ಕಳಚಿ ಶರಣನು ಶರಣೆನುತ್ತವೆ ನೀದು (ಅವತಂ. ೬೩-೩೬೬). [< ಸಂ. ವಾಗುರಿಕ]

**ಬಗ್ಗುವೇಶ್** (ನಾ). ಸಂಪತ್ತಿನ ದೇವತೆ ; ಭಾಗ್ಯಲಕ್ಷ್ಮಿ : ಬಗ್ಗದೊವಲು ಡೆಯೊಳುಳ್ಪಡೆ ವಿರಾಜಸುತಿರಲ್ ಬಗ್ಗುವೆಣ್ಣಿನಿಯನಟ್ಟಿಯ ಚೆಲ್ವಗಾಲ ಸಲಹುಗ್ಗಳದ ಭೋಗವಲ್ಲ (ಶೀಶಮ. ೬-೩೯). [ಬಗ್ಗು₅ + ಪೆಣ್]

**ಬಗ್ರಿಹಗ್ಗ** (ನಾ). ಎರಡು ಕೊನೆಗಳಲ್ಲೂ ಹಿಡಿದುಕೊಳ್ಳಲು ಅನುಕೂಲವಾದ ಲೋಹದ ಬಳೆಗಳನ್ನು ಹೊಂದಿರುವ ಹಗ್ಗ ; ಇದಕ್ಕೆ 'ಡಗ್ರಿಹಗ್ಗ'ವೆಂದೂ ಹೇಳುತ್ತಾರೆ : ಅವರು ಬಲೆಗಳನ್ನೆಲ್ಲಾ ಒಂದರೊಂದಿಗೆ ಒಂದನ್ನು ಗಂಟುಹಾಕಿ ಅದರ ಎರಡೂ ತುದಿಗಳಿಗೂ 'ಆಣಿ' (ಬಿದಿರಿನ ದೊಣ್ಣೆ)ಯನ್ನು ಹಾಕಿ 'ಬಗ್ರಿ' ಹಗ್ಗವನ್ನು ಕಟ್ಟಿ ಆಚೆ ಈಚೆ ಗಿಡಗಳಿಗೆ ಬಿಗಿದರು (ಕೃಷಿಪ. ೦೦೩) ; ಬಲೆಯ ಕೆಳಗಡೆ ಅಂಚು. ಆ ಅಂಚುಗಳ ತುದಿಯಲ್ಲಿ ಕಟ್ಟಿರುವ ಬಗ್ರಿಹಗ್ಗವನ್ನು ಹತ್ತಾರು ಮಾರು ದೂರಕ್ಕೆ ಎಳೆದು ಬಂಡೆಗಳಿಗೂ ಕುರುಚಲುಗಿಡದ ಬುಡಗಳಿಗೂ ಕಟ್ಟಿದರು (ಜಟ್ಟಿಹ. ೦೯). [ಬಗ್ರಿ₁ + ಹಗ್ಗ (< ವಗ್ಗ)]

**ಬಚಕಾನಿ** 'ಬಚ್ಚಕಾನೆ' ನೋ.

**ಬಚನಾಗ** (ನಾ). ಒಂದು ಬಗೆಯ ವಿಷಯುಕ್ತವಾದ ಔಷಧಿ ಬೇರು : ಬಚನಾಗ (ಕಡಗೋಲಮಂಡೀ ಬೇರು), ಸುಂಬಳಕಾರ ಮೊದಲಾದ ಪ್ರಸಿದ್ಧ ವಿಷಗಳು. ಇವುಗಳಿಗೆ ಯೋಗವಾಹಿ ಎಂದೂ ಹೇಳುವರು ; ಅಂದರೆ ಬೇರೆ ಔಷಧಗಳ ಕೂಡ ಬೆರಸಿದರೂ ಇವು ತಮ್ಮ ಪರಾಕ್ರಮವನ್ನು ತೋರಿಸತಕ್ಕವೆಂಬ ಅರ್ಥವು (ಗೃಹವ್ಯ. ೬) ; ಜೀವಸಗಳು ೧. ಅಕ್ಕಲಖಾರ . . . ೧೫. ಬಚನಾಗ (ಜುಂಬಿಕ್ಕಾ. ೦೨೨).
[← ಹಿಂ. ಬಛನಾಗ್ ; ಮರಾ. ಬಚನಾಗ್. / ಸಂ. ವತ್ಸನಾಭ]

**ಬಚಲು** 'ಬಚ್ಚಲ್' ನೋ.

**ಬಚಾಯಿಸು** (ಕ್ರಿ). ೧. ಉಳಿಸು ; ಪಾರುಮಾಡು; ರಕ್ಷಿಸು : ಏನು ತಪ್ಪುಮಾಡಿದ್ದರೂ ಅವರನ್ನು ಬಚಾಯಿಸುತ್ತೇನೆ (ಕಂಠ. ೨೯೩) ; ಅವಳನ್ನು ಬಚಾಯಿಸುವ ಜವಾಬ್ದಾರಿ ನಿಮ್ಮದು (ಕಾಶಿರಾ. ೬೨) ; ನಿಮ್ಮನ್ನು ಬಚಾಯಿಸುವ ಮನಸ್ಸಿದೆ (ದೀಪಹೊ. ೦೫೦). ೨. ನಿಭಾಯಿಸು ; ನಿರ್ವಹಿಸು : ಅವನು ಯಾವ ಕೆಲಸವನ್ನಾದರೂ ಬಚಾಯಿಸುತ್ತಾನೆಂಬ ವಿಶ್ವಾಸ ನನಗಿದೆ (ರೂಢಿ).

**ಬಚಾಯಿಸಿಕೊಳ್ಳು** = ಉಳಿದುಕೊಳ್ಳು; ಪಾರಾಗು; ರಕ್ಷಿಸಿಕೊಳ್ಳು: ನಿಮ್ಮೆಲ್ಲಿ ಬಚಾಯಿಸಿಕೊಂಡೋರು ಯಾರು ? (ರಂಗಪ. ೯೩) ; ಅವನಿಂದ ಬಚಾಯಿಸಿಕೊಂಡು ಹೋದರೆ ಸಾಕಪ್ಪ ಅಂತಿದ್ದೆ (ಪುಷ್ಕರು. ೨೦೨).
[< ಬಚಾವು + — ಇಸು₁]

**ಬಚಾವ್** 'ಬಚಾವು' ನೋ.

**ಬಚಾವು, ಬಚಾವ್** (ನಾ). ಉಳಿವು ; ಪಾರಾಗುವಿಕೆ ; ರಕ್ಷಣೆ : ಮುಂದೆ ನಡೆದ ಕೇಸಿನಲ್ಲಿ ಕಾಳೇಗೌಡನ ಬಚಾವು (ಕಂಠ. ೨೬೩) ; ಸಂಜೆಯ ಮುಂದೆ ಈ ದೃಶ್ಯದ ರಂಗಕಾಲೀಮನ್ನು ಇಡುವುದರಿಂದ ಸಾರ್ವಜನಿಕರ ಕಾಳ್ಕು ಕಟ್ಟೆಗಳು ಬಚಾವು ಆಗುತ್ತದೆ (ಕಂಗಕೋ. ೧೨೦). ಬಚಾವ್ : "ಬಚಾವ್ ಆದೆನಪ್ಪ" ಎನ್ನುತ್ತ ಪಾಗಾವನ್ನಿಳಿದ ಮಾಸ್ತರರ ಮನಸ್ಸು ಬಹಳ ಕದಡಿಹೋಗಿತ್ತು (ಜೂಕುಜಾ. ೬೪) ; ಈಗಿನ ದಿವಸದಲ್ಲಿ ಮಕ್ಕಳು ಕಲಿತು ಬುದ್ಧಿವಂತರಾಗದಿದ್ದರೆ ಬಚಾವೇ ಇಲ್ಲ (ಸ್ವಕ್ಷಹೊ. ೪೭).

**ಬಚಾವಾಗು** = ಉಳಿದುಕೊಳ್ಳು; ರಕ್ಷಿಸಿಕೊಳ್ಳು; ಪಾರಾಗು : ನಿಮ್ಮ ಮಾತಿನಂತೆ ಇವತ್ತು ಬಚಾವಾದರೆ ಸಾಕು (ಜುಕೇ. ೦೫೨). **ಬಚಾವು ಮಾಡು** = ಉಳಿಸು ; ಪಾರುಮಾಡು ; ರಕ್ಷಿಸು : ನಿನ್ನನ್ನು ಹೇಗೋ ಬಚಾವು ಮಾಡಿದರಂತೆ (ಜುಕುಪ. ೨೮೦). [←ಹಿಂ. ಮರಾ. ಬಚಾವ್]

**ಬಚ್ಚ₁, ವಚ್ಚ₂** (ನಾ). ೧. ಮಗು ; ಬಾಲಕ ; ಹಸುಳೆ : "ಬಚ್ಚ—ವತ್ಸ = ಮಗು, ವೈಶ್ಯ" (ಕರ್ನಕೋ. ೨೬) ; ಬಚ್ಚರ ಬಯಲ ನುಡಿಗೆ ಬಗೆಯಿತ್ತೊಡೆ ಮೆಚ್ಚಿ ಮಿಗಿಲನೀಯದನೇಳಿಸಿದೊಡೆ . . . ಪುಚ್ಚಣೆಯಹುದು (ಜಹುಕಾ. ೦೯-೩೦). ೨. ಹಸುವಿನ ಕರು : (೭). ವಚ್ಚ₂ : ೨. ಪಶು . . . ವಚ್ಚ ಸಹಿತ ಬಂದಿರ (ಷೋಶಕ. ೨೨-೩೭). [< ಪ್ರಾ. ಬಚ್ಚ, ವಚ್ಚ, ವಚ್ಛ. / ಸಂ ವತ್ಸ. / ಪಾರ. ಹಿಂ. ಮರಾ. ಬಚ್ಚಾ]

**ಬಚ್ಚ₂** (ನಾ). ವ್ಯಾಪಾರ ಮಾಡುವವನು ; ಹರದ ; ವೈಶ್ಯ : ಬಚ್ಚರ ದೂಸಿಗರ ನಿಯೋಗಿಗಳಗ್ಗಳಮಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು (ಪಕ್ಷ್ಮಾ. ೦೨೩-೬) ; ಧನದಧವನಮನಿವ ಸಿರಿಯು ಬಚ್ಚ ರಾವಣಾಂಗಳಿಂ ಪೊದಟ್ಟ [ಕಾವ]ಣಂಗಳಿಂ . . . ಸವಸ್ತ್ರಮಸ್ತುವಿಸ್ತಾರಹಾರ ಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ (ಜಂತಕಾ. ೦-೩೬ ಕಗಳ) : ಬಚ್ಚರ್ ಕಿರ್ಚು ಮುಟ್ಟಿದ ತುಪ್ಪದಂತೆ ಬಲ್ಪುಗಿಡೆ (ಧರ್ಮಾಮೃ. ೨-೬೯).
[<ಸಂ. ವೈಶ್ಯ. / ತೆಲು. ಬಚ್ಚು]

**ಬಚ್ಚ₃** (ನಾ). ಮಕ್ಕಳು ಆಟಕ್ಕಾಗಿ ಬಳಸುವ ಕಲ್ಲು ಅಥವಾ ಬಿಕ್ಕರೆಯ ಚಪ್ಪಟೆಯಾದ ಸಣ್ಣ ಬಿಲ್ಲೆ,—ಹಲವೆ ; ಚಾಪು : ಹುಡುಗಿಯರು ಬಚ್ಚ ಇಟ್ಟುಕೊಂಡು ಕುಂಟಬಿಲ್ಲೆಯಾಟ ಆಡುತ್ತಿದ್ದಾರೆ (ರೂಢಿ).
[← ಮರಾ. ಬಚ್ಚಾ]

**ಬಚ್ಚಕಾನೆ, ಬಚಕಾನಿ, ಬಚ್ಚಖಾನೆ, ಬಚ್ಚಗಾನಿ** (ನಾ). ೧. ಹುಡುಗರ ಬಟ್ಟೆ,—ಉಡುಪು : (೭). ಬಚಕಾನಿ : ೧. ಹುಡುಗರ ಸಲುವಾಗಿ ನೆಯ್ದ ರೇಶ್ಮಿಯ ಅಂಚಿನ ಸಣ್ಣದೋತರ ಜೋಡುಗಳಿಗೆ ಬಚಕಾನಿಯನ್ನುತ್ತಾರೆ (ಜುಂಣಯಿ. ೬-೯೯). ೨. ಬಟ್ಟೆ; ವಸ್ತ್ರ: ಅವರ ಕಣ್ಣಿಗೆ ಅಷ್ಟೊಂದು ಜರಿಪೇಟಗಳೂ ಬಣ್ಣದ ಬಟ್ಟೆಗಳೂ ಬಚಕಾನಿಗಳೂ . . . ಸೇರಿದ ಹಾಗಿತ್ತು (ಕಾಮೂರು. ೩೬೦). ಬಚ್ಚಖಾನೆ : ೨. ಮೈತುಂಬ ಬಚ್ಚಖಾನೆಗಳನ್ನು, ಸೀರೆ, ಕಣಗಳನ್ನು ಮದುಮಗಳಿಗೆ ಹೊರಿಸಿದರು (ಜುಕಕು. ೦೦೩). ಬಚ್ಚಗಾನಿ : ೧. ಬಚ್ಚಗಾನಿ ಉಟ್ಕಂಡು ಚಿನ್ನದ ರುದ್ರಾಕ್ಷೀನ ಕೊರಳಿಗೆ ಹಾಕ್ಕೊಂಡಿದ್ನಲ್ಲಾ ? (ಜುಕಕು. ೫೦೩). [← ಮರಾ. ಬಚಕಣೀ]

**ಬಚ್ಚಖಾನೆ** 'ಬಚ್ಚಕಾನೆ' ನೋ.

**ಬಚ್ಚಗಾನಿ** 'ಬಚ್ಚಕಾನೆ' ನೋ.

**ಬಚ್ಚಣಿಸು** (ಕ್ರಿ). ೧. ಬಣ್ಣವನ್ನು ಹಚ್ಚು,—ಬಳಿ ; ರಂಗನ್ನು ಲೇಪಿಸು : ಬರೆದು ಬಚ್ಚಣಿಸಿದಂತಿನ್ನೆದೆಯೊಳಗಿರು ಗುರುವೆ (ಶಿಕ. ೯-೦೨೩) : ಮಣ್ಣಿನಿಂದ ಹೊಸದಾಗಿ ಒಂದು ದೊಡ್ಡ ಬಿಂದುರೆಯನ್ನು ಮಾಡಿ ಬಚ್ಚಣಿಸಿ ನಿಲ್ಲಿಸಿದ್ದರು (ಪಗಿಗ. ೯೩). ೨. ಬಳಿ ; ಲೇಪಿಸು : ಸುಣ್ಣವ ಮಾಗಿನಲಿ ಬಚ್ಚಣಿಸಿ ಕಳುಹುವವನವರ ಮನೆಗಳಿಗೆ (ಕೃಷ್ಣಾ.ಕಾ. ೬-೩೩).
[ಬಚ್ಚಣೆ₁ + — ಇಸು₁]

**ಬಚ್ಚಣೆ₁, ಬಚ್ಚರಣೆ, ಬರ್ಚಣೆ** (ನಾ). ೧. ಬಣ್ಣವನ್ನು ಬಳಿದು ಚಿತ್ರಿಸುವಿಕೆ ; ಬಣ್ಣದ ಕೆಲಸ : ಕಣ್ಣಿಲ್ಲದವಂಗೆ ಬಣ್ಣ ಬಚ್ಚಣೆ ಯಾಕೆ (ಪೋಸವಚ. ೯೨-೩೬೬) ; ತೋಳ ದರ್ಪದಲುಬ್ಬಿ ವಾಲಿಯ ಬಾಲಕನ ಬಚ್ಚಣೆಯ ತೊಟ್ಟಿಲ[ಪಾಠಾಂ. ಬಚ್ಚರಣೆದೊಟ್ಟಿಲ]ಕಾಲ ದೆಸೆಯಲಿ ಕಟ್ಟು ವಡೆದವನೀತನಲ್ಲವಲೆ (ಕೊಕಕಾ. ೬-೦೦-೫೦). ೨. ಶೃಂಗಾರ; ಅಲಂಕಾರ: ಬಣ್ಣ ಬಚ್ಚಣೆಯ ರಂಜನೆಯ ವೇಷವನೊಂದಿದಣ್ಣಗಳು ಸಹಜಸುಜ್ಞಾನಿಗಳೆನಿಪ್ಪ ಮುಕ್ಕಣ್ಣನ ಶರಣಜನಕೆ ಸರಿಯೆ (ಸಿದ್ಧೇಶ್ವ. ೨೨-೦೬೫). ೩. ಬಣ್ಣ ಹಾಕಿದ ಆಕೃತಿ ; ಚಿತ್ರ: ಪೊಳೆವ ಬಚ್ಚಣೆಯ ಹರಿಗೆ ಬಿಚ್ಚುಗತ್ತಿಯ . . . ಬಲಗರ ಮಧ್ಯದೆ ಸರ್ವಸಂಭ್ರಮದೊಳು ಮಾಲೆಯಾಳದೇಶದವನೀಶ ಬಂದ (ಕಂಪಕಾ. ೨೦-೬೫). ೪. (ಆಲಂ) ವೇಷ ; ಸೋಗು : ಬನ್ನಿರೆ ಅಕ್ಕಗಳು ಹೋಗಿರೆ ಅಲದ ಮರಕ್ಕೆ ಕಚ್ಚುವುವೆ ನಿಮ್ಮ ಚಿಪ್ಪಿನ ಹಲ್ಲುಗಳು ಬೆಚ್ಚಸುವುವೆ ನಿಮ್ಮ ಬಚ್ಚಣೆಯ ರೂಹುಗಳು (ವಚಕ. ೫೬೨) ; ತೊಲಗದ ಕಂಭದ ಹುಲಿಯ ಬಚ್ಚಣೆಯ ಗಜಮುಖದ ಭುಜಬಳಗರುಡನ . . . ಹರಿಗೆಕಾಱರ ಪರಿವೀಥಿಯೊಳಂ (೧೦೬ಕ. ೬-೫೫ ಶ). ಬಚ್ಚರಣೆ : ೩. ಅಂತು ಬರಹದ ಬಚ್ಚರಣೆಯ ಪೆಣ್ಣು ಕಣ್ಣೊಳ್ ತೊಟಲೆ ಧೈರ್ಯಂಗೆಟ್ಟು ಬಾಯ್ಬುಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಪುಣ್ಯಾಸ್ರ. ೩-೯೨ ಶ) ; ಶರಭಭೇರುಂಡರೂಪಾಂಚಿತ ವಿಚಿತ್ರದ ಬಚ್ಚರಣೆಯ ಹರಿಗೆಯ . . . ಹರಿಗೆಕಾಱರ ಮೊತ್ತದೊತ್ತಿನುಭಯಪಾರ್ಶ್ವದೊಳು (ಜಯಕೃ.

೩-೩೩ ಪ). ೫. ಬಣ್ಣ ಬಳಿಯುವ ಕಸಬು ; ಬಣ್ಣಗಾರಿಕೆ : ಕಳಕಳಿಕೆ ಕೋಳಾಹಳಿಸೆ ಕದ್ದಳಿಗ ದೂಸಿಗ ಬೂಸ ಗಂಧಿಗ ಕೊಲಪ ಚಿಟ್ಟಿಗ ಬಚ್ಚರಣೆ ಬಳೆಗಾಱ ದೋಗಾಱ . . . ಜಂಗುಳಿಗಗೇರಿಗಳೊಳಗೆ ರ್ಘಾಧಿಸಿದನು ಶಿಖಾಳಿಗಳ (ಶಿವತಂ. ೩-೬-೩೩). ೬. (ಆಲಂ) ಮಾಯೆ: ಬಚ್ಚರಣೆಯು ಸಂಸಾರದ ಹಚ್ಚನೆಯ ಕಂಡು ದಿಟವೆನುತಿರ್ಪೀ ಕುಚ್ಛಿತಮಸಾಮಿಸಮು ದೆಚ್ಚಿಸುವದಿದೋನ್ನಮಶಿವಾ (ಶತಕಂ. ೨೯). ಬರ್ಚಣೆ : ೩. ಕೋಡ ಮೊನೆಯೊಳ್ ತಗುಳ್ದ ಸೂನಗಿತ್ತಿಯ ಕೊನೆಗೊಡಂಕೆಯೊಳ್ ತೂಗುವ ಬೆಳಿಯ ಚಾಮರದ ಬಿದುವೊಳ್ಪರೆದು ಬರ್ಚಿಸಿದ ಸಿಂಧೂರದ ಬರ್ಚಣೆಯ . . . ವಿಳಾಸಮುಳವಡೆ (ಕಾಕಸೇ. ೬-೧೦ ಪ).

ಬಚ್ಚಣೆಯ ಮಾತು = ಬಣ್ಣದ ನುಡಿ; ಗಿಲೀಟಿನ ಮಾತು : ಬಣ್ಣ ಬಚ್ಚಣೆಯ ಮಾತು ಕಲಿತು ಹೊನ್ನು ಹಣ್ಣು ಮಣ್ಣಗಾಗಿ ಅನ್ಯವ ನೀಮ್ಮವರ ಪ್ರಸಂಗವ ಹಡೆಯಬಂದ ಗನ್ನಗಾಱಂಗೇಕೆ ಅಱವು (ವಚನಸಂ. ೮೯-೩೩೯).

[ < ಪಚ್ಚು₃ + — ಅಣೆ₄. / ತೆಲು. ಬಚ್ಚನ. / ಸಂ. ಪ್ರಚ್ಛನ್ನ ]

ಬಚ್ಚಣೆ₂ 'ಬಚ್ಚಳೆ' ನೋ.

ಬಚ್ಚಣೆವಾತು (ನಾ). ಬಣ್ಣದ ಮಾತು : ಗಿಲೀಟಿನ ನುಡಿ : ಬಚ್ಚರ ಬಯಲ ನುಡಿಗೆ ಬಗೆಯಿತ್ತೂಡೆ ಮೆಚ್ಚಿ ಮಿಗಿಲಸೀಯದನೇಳಿಸಿದೊಡೆ ಬಚ್ಚಣೆವಾತಿನ ಬದಗರ್ಗೊಲಿದೊಡೆ . . . ಪುಚ್ಚಣೆಯಹುದು (ಶಮುಕಾ. ೮೯-೫೦) ; ಈ ನಿಮ್ಮ ಬಚ್ಚಣೆವಾ[ತಾಕಾಂ. ಮಾ]ತಿಗಿರದೆ ನಾನೊಡ ಬಡುವುದಿಲ್ಲ (ಸತ್ಯಕೌ. ೩-೬೯). [ಬಚ್ಚಣೆ₁ + ಮಾತು₁]

ಬಚ್ಚಣೆವೆಱು (ಕ್ರಿ). ಬಣ್ಣದ ಕೆಲಸದಿಂದ ಕೂಡಿರು ; ಚಿತ್ತಾರ ವನ್ನು ಪಡೆ : ಪರಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ ಬಚ್ಚಣೆವೆತ್ತ ಬಿಲ್ಗಳ್ (ಅಭ್ಯಾ. ೨೬೩). [ಬಚ್ಚಣೆ₁ + ವೆಱು₁]

ಬಚ್ಚನಾಲಗೆ (ನಾ.) (ಆಲಂ) ವ್ಯರ್ಥವಾದ ನಾಲಗೆ: ಅಚ್ಚ ಪಳದಿಯ ಕಾಯ ಜೋಡ ಮೇಲೊತ್ತದೊಡೆ ನಚ್ಚಿರ್ದ ಕೈಯ ಕರದಿನ ಹಿಂಡ ಹಿಡಿಯದೊಡೆ ಮೆಚ್ಚಿನಾಟಕ ಮಿಱಿ ಬಂದ ಕೆಂಪಿನ ಹಣ್ಣನಂಡ ಲೆದು ಬಿಡದಿರ್ದೊಡೆ ಬಚ್ಚನಾಲಗೆಯೆ ದೀಳೆಂದು ಹಾಸಂಗಿಯಂ ಪಚ್ಚೆಯ ವಿದೂಷಕನುರುಳ್ಚಿದಂ ಬಾಲಿಯರ ಮಚ್ಚಿಸುವ ಕಟಕಿವಾತುಗಳ ಜಾಣ್ಕೆ ಗಳಿಂದೆ ವಗಡೆಯಾಡುವ ನೆವದೊಳು (ಕೃಬಿಲಾ. ೬-೩೦). ಇಲ್ಲಿಯ ಶ್ಲೇಷಾರ್ಥದಲ್ಲಿ ಸಂದೇಹವಿದೆ. [< ಬಚ್ಚ₁₇ + ನಾಲಗೆ]

ಬಚ್ಚನೆ (ಅ). ಇದ್ದಕ್ಕಿದ್ದಂತೆ : ತಟ್ಟನೆ; ಕೂಡಲೆ : ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ದ ನಾಣ ವೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬಚ್ಚನೆ ಬಸಿಯುತ್ತುಂ (ಶಾಪ್ಯಾ.ಕ. ೬೩೩). [ಬಚ್₃ + — ಅನೆ₁]

ಬಚ್ಚಬಯಲ್ 'ವಯಲ್' ವರಾ.

ಬಚ್ಚಬಯಲು 'ವಯಲ್' ವರಾ.

ಬಚ್ಚಬರಿದು 'ಬಱಿದು' ವರಾ.

ಬಚ್ಚಬರಿಯ 'ಬಱು'₂ ವರಾ.

ಬಚ್ಚಬಱಿದಾಗು 'ಬಱಿದು' ವರಾ.

ಬಚ್ಚಬಱಿಯ 'ಬಱು' ವರಾ.

ಬಚ್ಚರ (ನಾ). ಒಂದು ಬಗೆಯ ರೋಗ (?) : ನೆಲದಾಳಕಲ್ಪಮಂ ಪೇಳ್ವೆ . . . ಅಕ್ಕಿಗಚ್ಚನಲ್ಲಿ ಕುಡಿಯೆ ಬಚ್ಚರಂ ಪೋಕು (ಏಪ್ರಕಿ. ೩). [?]

ಬಚ್ಚರಣೆ 'ಬಚ್ಚಣೆ'₁ ನೋ.

ಬಚ್ಚರೆ ? (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗ : "ಬಚ್ಚರೆ ಬರ್ದಿರ್ ಸಗ್ಗಮೆನಲಮರಲೋಕಂ" (ಅಭ್ಯಾಕೈ. ೦೦೦). [ ? ]

ಬಚ್ಚಲ್, ಬಚಲು, ಬಚ್ಚಲು₁, ಬರ್ಚಲ್ (ನಾ). ೧. ಹೊಲಸು ನೀರು ಹರಿದುಹೋಗಲು ಮಾಡಿರುವ) ಚರಂಡಿ : ಗಟಾರ ; ಮೋರಿ: "ಕಸಱುಗೆಯೊಂದು ಬಚ್ಚಲ್" (ಅಕಸಾ. ೭೩-೩೩೩) ; ನಿಚ್ಚಂ ನಿರ್ಮಲಜಲಮಿರೆ ಬಚ್ಚಲ ನೀರ್ಗೆಱೆವ ಕೀಟಕಂಬೊಲ್ತನ್ನಂ ನಚ್ಚಿದ ಸತಿಯಿರೆ ಬೆಲೆವೆಣ್ಗೆಚ್ಚಿಸುವುದು ನೀತಿಯೇ (ಅಭ್ಯಪ. ೧೦-೬೩). ೨. (ವ್ಯವಸಾಯ ಮುಂತಾದುವಕ್ಕೆ ನೀರನ್ನು ಒದಗಿಸಲು ತೋಡಿದ) ನಾಲೆ: ಬಚ್ಚಲ್ಗಳಂ ತಿರ್ದಿಸಲವಿರಳಘರ್ವಾರ್ದ್ರಕಾಂತಾಜನ ಕ್ಕಾದರದಿಂ ನೀರಾಟಮಾಡಲ್ ನೆಱೆಗುವೆನೆ ಪೊದಟ್ದತ್ತು ಚಂದ್ರಾಂಶು ಜಾಲಂ (ಕಾದಂಕಾ. ೪೨೨); ಬೆಲಗಸೆ ತೀವಿಕೊಂಡು ಕುಡಿಯಲ್ ಪೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲನೆಲೆದೋಂಟದೊಳ್ ಪರಿಯಿಸಲ್ ಪಱು ಗೋಲ್ಗಳನಿಕ್ಕಿ ವಾಯಿಸಲ್ . . . ಬಗೆದುದಂದು ಜನಂ ಘನಚಂದ್ರಿಕಾಂ ಬುವಂ (ಅಕಪು. ೬-೯೩) ; ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ಕಣ್ಗೆ ಸಿರಿವಿಸೆ (ಅಪಂಪು. ೬-೨೯ ವ). ಬಚಲು: ೨. ಮುರಿದು ಬಂದ ಬಚಲ ಹೆಬ್ಬದುವಿನ ನಟ್ಟ ಕಲ್ಲು (ಕೊಂಕಶಾ. ೦೯೯೯, ಬಂಗಾಶ್ರಿ ೬-೩೯ ; 1258); ನಾರಣಸೆಟ್ಟಿಯ ಬಚಲಿಂದ ತೆಂಕಲು (ಕರ್ನಾ. ೦೯೩೦, ಮಂಗಳೂರು. ೩೩೯-೧೨ ; 1278) ; ಪಡುವಲು ಹರಿದ ಬಚಲಿಂದ ಮೂಡಲು (ಕರ್ನಾ. ೦೯೩೩, ಕಾಕುರು. ೩೨೩-೦೮; 1364). ಬಚ್ಚಲು₁ : ೧. ಬಚ್ಚಲ ನೀರು ತಿಳಿದಲ್ಲಿ ಫಲವೇನು (ಅಕವ. ೦೨೦); ಬಚ್ಚಲುದಕಂ ತಿಳಿದೊಡಾರ ಮಾಹಕ್ಕ ಯೋಗ್ಯಂ (ಹಕಶಾ., ೬-೦೮); ತನ್ನ ಕಾಲಂ ತೊಳೆದುಕೊಳಲ್ ಬಚ್ಚಲಿಗಳವಡುವುದೆಂದು ಪಿಂದಪ್ಪಿಟ್ಟಗೆಯ ನೊಂದನೊಯ್ದು ನಿಚ್ಚಲುಂ ನೀರಿಂ ಕಾಲ್ಗಚ್ಚುವ ಸಮಯದಲ್ಲಿ ಮಿಸುನಿ ಯಾಗಿರ್ದುದಂ ಕಂಡು ತುಷ್ಟನಾಗಿ (ಪುಣ್ಯಾಸ್ರ. ೯-೩೨ ವ) ; ಸಜ್ಜನರ ಸಂಗವದು ಹೆಜ್ಜೇನುಕೊತದಂತೆ ದುರ್ಜನರ ಸಂಗದೊಡನಾಟ ಬಚ್ಚಲಿನ ರೊಜ್ಜನಂತಿಹುದು (ಸರ್ವಜ್ಞ. ೬೦೯). ೩. (ಮನೆಯಲ್ಲಿ) ನೀರು ಹರಿದು ಹೋಗಲು ಅನುಕೂಲವಾದ ಮೋರಿಯಿರುವ ಸ್ನಾನ ಮಾಡುವ ಕೋಣೆ; ಸ್ನಾನಗೃಹ : ನಮ್ಮ ರಾಮೂ ನಿಮ್ಮನೇ ಬಚ್ಚಲಲ್ಲೇ ಸ್ನಾನ ಮಾಡ್ತೀನಿ ಅಂತ ಹಟ ಹಿಡಿದಿದ್ದಾನೆ (ಕಂಕಸಂ. ೦೩) ; ಬಚ್ಚಲಿಗೆ ಬಗೆಯಿಲ್ಲದವ ಮಾಳಿಗೆ ಕಟ್ಟ್ಯಾನೇ ? (ಗಾದೆ). ೪. (ಮನೆಯಲ್ಲಿ) ನೀರು ಹರಿದು ಹೋಗಲು ಅನುಕೂಲವಾದ ಮೋರಿ ಮತ್ತು ಕಟ್ಟೆಗಳಿರುವ (ಸ್ನಾನ ಮಾಡುವ) ನಿರ್ದಿಷ್ಟಸ್ಥಳ: ಬಚ್ಚಲಿನ ಜಗಲಿಯ ಮೇಲೆ ತಾಮ್ರದ ಬೋಸಿ (ಶಾಳಹೂ. ೦೦೩); ಅವರು ಸ್ನಾನ ಮಾಡಲು ಬಚ್ಚಲಿಗೀದಿದ್ದಾರೆ (ಕೂಶಿ). Δ ಬರ್ಚಲ್: ೨. ಮೂಡಣ ಕಂಟಿ ವಡ್ಡದಿಂ ಬಡಗಲುಂ ಕೆಱೆಯ ಬರ್ಚಲಿಂದ ಮೂಡಲುಂ (ಎಕ. VII, ಶಿಕಾರಿ. ೦೩೦-೬೦; 1047).

ಬಚ್ಚಲ ಮನೆ=ಬಚ್ಚಲು ಕೋಣೆ : ಶ್ರೀಧರನು ಆದಷ್ಟು ಬೇಗ ಬಚ್ಚಲ ಮನೆಗಾಗಿ ಹೊರಟನು (ಶಾಳಹೂ. ೦೦೪).

ಬಚ್ಚಲು₁ 'ಬಚ್ಚಲ್' ನೋ.

ಬಚ್ಚಲು₂ 'ಬಸಲೆ' ನೋ.

ಬಚ್ಚಲುಕೋಣೆ (ನಾ). ಸ್ನಾನ ಮಾಡಿದ ನೀರು ಹೊರಕ್ಕೆ ಹರಿದು ಹೋಗಲು ಅನುಕೂಲವಾದ ಬಚ್ಚಲಿರುವ ಕೊಠಡಿ; ಸ್ನಾನಗೃಹ : ಅವರ ಮನೆಯ ಬಚ್ಚಲುಕೋಣೆಯಲ್ಲಿ ದೊಡ್ಡ ಹಂಡೆಯಿದೆ (ಕೂಶಿ).

[ಬಚ್ಚಲು₁ (<ಬಚ್ಚಲ್) + ಕೋಣೆ₂ (<ಕೋಣ್)]

ಬಚ್ಚಲುಮನೆ (ನಾ). = ಬಚ್ಚಲುಕೋಣೆ : ಬಚ್ಚಲುಮನೆ ಕಟ್ಟುವವನು ಅದರಲ್ಲಿ ತೂಬು, ಒಲೆ, ಗೂಡು ಇತ್ಯಾದಿಗಳನ್ನು ತನ್ನ ಅಭಿರುಚಿಗೆ ತಕ್ಕಂತೆ ನಿರ್ಮಿಸಂತ್ತಾನೆ (ಶಿವಾತ್ಮ. ೦೬೩).

[ಬಚ್ಚಲು₁ (<ಬಚ್ಚಲ್) + ಮನೆ]

ಬಚ್ಚಲೆ₁ 'ಬಸಲೆ₁' ನೋ.

**ಬಚ್ಚವಸರ** (ನಾ). ವೈಶ್ಯರ ಅಂಗಡಿಗಳ ಸಾಲು : ಬಾಗಿಲ್ವಾಡದ ಮುಂದಣ ಭಾಗಂಗಳ ಬಚ್ಚವಸರಮಾರ್ಗಿಗೆ ಕುಡುವುದುದ್ಯೋಗದ ಪಸರವು ವಿಸ್ತಸವಾಗವುದಿಂ ಗೆಯ್ವೊನಿಲ್ಲ ವರದಂ ವರದಂ (ಶಾಂತಿಪು. ೩-೦೩). [ಬಚ್ಚ₁ + ಪಸರ]

**ಬಚ್ಚಳೆ, ಬಚ್ಚಣೆ₂** (ನಾ). ೧. ಕರುವಿನ ಮೇಲೆ ಪ್ರೀತಿಯುಳ್ಳ ಹಸು ; ವತ್ಸಲೆ : ತಕಾರಕ್ಕೆ ಚತ್ವಂ . . . ವತ್ಸಲಾ—ಬಚ್ಚಳೆ, ಬಚ್ಚಣೆ (ಶಬ್ದರ. ೨೬೩ ವೃತ್ತಿ) ; ಹೊಗರೊಗುವ ಬಚ್ಚಳೆಯು ನಂದಿಯು ವೊಗದ ವಾಳ್ಕೆಯೊಳಿಹ ಮುಖಾಡವ ನಗುತ ಶಂಕರದಾಸಿಮಯ್ಯನ ಮುಖಕೆ ಸೇರಿಸಿದ (ಶಂಕರದಾ. ೬-೩). ೨. ಪ್ರೀತಿಪಾತ್ರಳಾದ ಯುವತಿ : ಎನ್ನ ಪೂಸ್ನ ಪದಗದ ರನ್ನದಾರದ ಬಚ್ಚಳೆ, ನೀಟ್ ! (ರಾಜಶೇಖ. ೦೦೪-೦೦). **ಬಚ್ಚಣೆ₂** : ೧. ತಕಾರಕ್ಕೆ ಚತ್ವಂ . . . ವತ್ಸಲಾ—ಬಚ್ಚಳೆ, ಬಚ್ಚಣೆ (ಶಬ್ದರ. ೨೬೩ ವೃತ್ತಿ). [< ಸಂ. ವತ್ಸಲಾ]

**ಬಚ್ಚಾಳಿ, ಬಚ್ಚಾಲಿ** (ನಾ). ಕೆಡುಕ ; ಕಿಡಿಗೇಡಿ : ಕೆಳಗಡೆಯು ಕೋಣೆಗಳಲ್ಲಿ ಯಾರೋ ಕೆಲವು ಬಚ್ಚಾಳೀ ತರುಣರಂಥವರು ಬಾಡಿಗೆ ಗಿದ್ದರು (ಚಿ. ೩೪). **ಬಚ್ಚಾಲಿ** : ವಾಚು ಮಾರಿಯಾಗಿತ್ತು . . . ಯಾರೋ ಒಬ್ಬ ಬಚ್ಚಾಲಿಗೆ ಹದಿನೈದು ರೂಪಾಯಿಗೆ ಅದನ್ನು ಕೊಟ್ಟಿದ್ದ (ಮುಂಗಾರು. ೨೦). [?]

**ಬಚ್ಚಿಸು₁** (ಕ್ರಿ). ಬಚ್ಚಿಡು ; ರಹಸ್ಯವಾಗಿಡು : ಬಚ್ಚಿ ಬಿಸುಡುತ ಮಾಯೆಯು ಬಚ್ಚಿಸುತಲಗದು ಹೋಸುತ ಸಂಸಾರವಂ ಕೊಚ್ಚಿಸುತ . . . ರಂಜಿಸಿದರಚ್ಚರಿಯ ಶಿವಗಣಗಳು (ಏಂಗಳ. ೩೦-೦೦). [ಬಚ್ಚು₁ (<ಬಯ್ಚು) + — ಇಸು₁]

**ಬಚ್ಚಿಸು₂, ಬರ್ಚಿಸಂ** (ಕ್ರಿ). ೧. ಬಣ್ಣ ಹಾಕು ; ಚಿತ್ರಿಸು ; ವರ್ಣ ವಿನ್ಯಾಸ ಮಾಡು : ಬರಯಲ್ಬಾರದು ಬಚ್ಚಿಸಲ್ಕರಿದು (ಅನಂತಪು. ೦-೦೦೪); ಬಿತ್ತಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳು ಬೇಟೆಗ್ವೇಟ್ ನೋಡಿ ಮೆಚ್ಚುತಿರ್ಪಾರ್ಗಳ್ (ಚನ್ನಬ. ೯೩). ೨. ಬಳಿ ; ಲೇಪಿಸು ; ಲೇಪನವಮಾಡು : ಪಚ್ಚಿಗಪ್ಪುರವನೆಚ್ಚುವನು ಗಂಧವ ಮೈಗೆ ಬಚ್ಚಿಸುವನು ಚಕ್ರನಾಥ (ಕರಚ. ೦೪-೧೩೩). **Δಬರ್ಚಿಸು** : ೧. ವಿಶ್ವಕರ್ಮನೆಣೆಯಾಗಿರೆ ಕಂಡರಿಸಲ್ವಿಳಾಸದಿಂ ಕರುವನೊದರ್ಚಿ ಬರ್ಚಿಸುವ ಬಲ್ಮೆಗೆ ಬೀಗುವ ಚೀರಪಟ್ಟಿ ತಾಂ ಸರಿಯೆನಿಪಂದದಿಂ ಕರು ವಿಡಲ್ ನೆಟ್ಯಂ ದ್ವಿಜರಾಜಕನ್ಯೆಯಂ (ಶುಕಮವಾ. ೩-೩೬) ; ಬರೆದು ಬರ್ಚಿಸಿದಂತೆವೊಲಾಗೆ . . . ಎಸೆದುದುನ್ನವಿತತೋತ್ಸವಕೇತನಂ ಶುಭಾ ನಂದಿತಲೋಕಚೇತನವಮತೀವವಿನೂತನವಾ ನಿಕೇತನಂ (ಜಗರ. ೦೦-೯೩) ; ಮಸಿದಸಪಮಾಸ್ಯನುನ್ಮದನಬಾಣಶಲಾಕೆ ವಿಳಾಸದಿಂದಮೋಜಿಸಿದಲರ್ವಿಲ್ಲ ನೈಕ್ಷವ ಧನುರ್ಲತೆ ಬರ್ಚಿಸಿ ಮೀನಕೇತುವೆತ್ತಿಸಿದ ಸಮುಲ್ಲಸಜ್ಝಷವತಾಕೆ ಯೆನಿಪ್ಪವೊಲಾಂತಳಾಕೆಯಾ ಪಸದನದೊಳ್ ಜಗತ್ತ್ರಿತಯಚಿತ್ರವಿಮೋಹನ ಶಕ್ತಿಯೇಟ್ಗೆಯಂ (ಶಂಕರ್ಷ. ೬-೬೩). ೨. ಪಲ್ಲವಪ್ರಸರದೊಳಿಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್ ಮಿಸುಗುವ ಕರ್ಪು ಬರ್ಚಿಸಿದವೊಲ್ ಬಗೆಗೊಳ್ವೆನೆಗಂ ಬಸಂತದೊಳ್ ಬಸದಿಯ ಬಾಗಿಲಂ ತೆಟಿದ ಮಾಟ್ಕೆಯೊಳಿರ್ದುವು ಬಂದ ಮಾವುಗಳ್ (ಅಭಿಪು. ೦-೬೬); ಅವಿರಳಮಾದುವಾ ಪುರದೊಳ್ . . . ತೀವುವ ಕಲಶಂಗಳರ್ಚಿಸುವ ಕನ್ನಡಿ ಬರ್ಚಿಸಿಕೊಳ್ವ ಪಂಡಿರಾಡುವ ರಸರಾಸ್ಯಂ (ಅನಂತಪು. ೩-೪). [<ಬಚ್ಚಣೆ₁ + — ಇಸು₁]

**ಬಚ್ಚು₁** 'ಬಯ್ಚು' ನೋ.

**ಬಚ್ಚು₂, ಬರ್ಚು, ಬೊಚ್ಚು₂** (ಕ್ರಿ). ೧. ಒಣಗಂ ; ಬತ್ತು ; ಬಾಡು : ಬೂದಿಯಲ್ಲಿ ಹೊರಳುವ ಕತ್ತೆಯಂತೆ ಕಿಚ್ಚ ಹಾಯಿ [ಯು] ವವಳಿಂತೆ ಬಚ್ಚಿ ಹೊತ್ತಿನ ಭೋಗಕ್ಕೆ ಮಚ್ಚಿ ಹುಚ್ಚಾದಿರಲ್ಲಾ (ಸಿದ್ಧೇಶ. ೦೩೩-೪೦೦) ಬೆಚ್ಚು ಹಾಕಿದ ಗಡಗಿ ಮುಚ್ಚಿಟ್ಟ ಬನಹುಲುಸು ಬಚ್ಚಾದ ಬೆಳೆಯ ಕಣವುಕ್ಕಿ ಗುಂಡಯ್ಯ ಹೆಚ್ಚಾಯ್ತು ನಿನ್ನ ಶಿವಭಕ್ತಿ (ಕಿನ್ನರ. ೩೦೪). ೨. ಕೃಶವಾಗು; ಸೊರಗು: ತಿಂಗಳೊಂದಾಯಿತು ನನ್ನ ಗಂಡು ಬಚ್ಚಿ, ಒಣಗಿ, ಕಡ್ಡಿಯಾಗಿ ಕಂಗಾಲು (ಜಾನಪದ. ೦೨೩); ಹೊತ್ತಿಗೆ ಒಂದೊಂದು ತಂಬಿಗೆ ಕೊಡುತ್ತಿದ್ದಳು ಭಾಗೀರಥಿ. ಈಗ ಬಚ್ಚಿದೆ. ಅದಾದರೂ ಏನು ಕೊಟ್ಟೀತು ! (ಜಾಗ. ೨೦). ೩. ಬರಿದಾಗು; ಬೋಳಾಗು: 'ಬಚ್ಚು ಬಾಯಿ' ಪರಾ. **Δ ಬರ್ಚು** : ೪. ಕಡಮೆಯಾಗು; ಕುಗ್ಗು: ಪೆರ್ಚು ವುದು ಪುಳ್ಳಿಯಿಂದಂ ಬರ್ಚುವುದದು ಕಂಡೆ ಕಿರ್ಚು ಮೋಹಾಗ್ನಿ ಕರಂ ಪೆರ್ಚುವುದರ್ಥಂ ಬರೆಯುಂ ಪೆರ್ಚುವುದದು ಬಾರದಿರೆಯುಂ (ಜಾತಕ. ೪೪-೦೬). ೫. (ಆಲಂ) ನಾಶಮಾಡು ; ನಿಸ್ಸತ್ತ್ವಗೊಳಿಸಂ : ಜವನ ಮುಳಿಸವನ ಮುಳಿಸನೆ ಜವನೇ ಬರ್ಚಿದವೊಲಿಂತು ಕುಜೀದಜೀದಟಿದಂ (ಗದಾಯು. ೩-೦೬); ಪಾಂಡವಪತಾಕಿನಿಗೆ ಜವಂ ನೆಟ್ ಬರ್ಚಿದಂತೆ ಭೋರನೆ ಬಂದು . . . ಬಾಂದೊಟೆಯ ಸುತನೊಡ್ಡಿ ನಿಲೆ (ಕೇಶವ. ೦೨-೪೩ ವ). **ಬೊಚ್ಚು₂** : ೩. 'ಬೊಚ್ಚುಬಾಯಿ' ಪರಾ.

ಬಚ್ಚಿ ಬರು=ಸೊರಗು; ಕೃಶವಾಗು : ಹೆತ್ತವರು ಒಂದು ವರ್ಷ ದೊಳಗಾಗಿ ಸತ್ತುಹೋದರೆಂಬ ವ್ಯಥೆಯಿಂದ ವಾಗ್ದೇವಿಯು ಬಚ್ಚಿ ಬಂದಳು (ವಾಗ್ದೇವಿ. ೦೪೦). 'ಬತ್ತು₁' ಪರಾ. [ದೇ. ಶ ತುಳು. ಬಚ್ಚು]

**ಬಚ್ಚು₃** (ನಾ). (ಮರ, ಗಿಡ ಮುಂತಾದುವು) ಬತ್ತಿ ಹೋಗಿರುವುದು; ಒಣಗಿರುವುದು : ಒಂದು ಈಚಲು ಬಚ್ಚು ತೇರಿಕೊಂಡು ಹೋಗುತ್ತಿತ್ತು (ಪಮ್ಮರು. ೦೪೦). [< ಬಚ್ಚು₂]

**ಬಚ್ಚು₄** (ನಾ). ಕೋಟೆಕೊಳಗದಲ್ಲಿ ಬಳಸುವ ಒಂದು ಬಗೆಯ ಯಂತ್ರವಿಶೇಷ (?) : ವಿಚಿತ್ರವಾದ ಕೊತ್ತಲಗಳುಳ್ಳ ಕೋಟೆಗಳು ಫಿರಂಗಿಗಳು ಬಚ್ಚುಗಳು ಜವರುಜಂಗಿಗಳು . . . ಮೊದಲಾದ ಯಂತ್ರ ವಿಶೇಷಗಳು (ಕೃಷ್ಣಾ. ೦೬೪). [ ? ]

**ಬಚ್ಚುಬಾಯಿ, ಬೊಚ್ಚುಬಾಯಿ** (ನಾ). ಹಲ್ಲಿಲ್ಲದ ಬರಿದಾದ ಬಾಯಿ; ಬೋಡುಬಾಯಿ : ಕುಂಟುಕಾಲು, ಬಚ್ಚುಬಾಯಿ (ಶಂಕೋ. ೩೦-೬). **ಬೊಚ್ಚುಬಾಯಿ** : ಆಕೆಯ ಬೊಚ್ಚುಬಾಯಿ ಏನನ್ನೋ ಹೇಳಲು ವ್ಯಾಕುಲಿತವಾಗಿದ್ದಿತು (ಶಾಪಿಆ. ೩) : ಬೊಚ್ಚುಬಾಯಿ ಅದವನು ಕಬ್ಬು ಬಯಸಿದ ಹಾಗೆ (ಗಾದೆ). [ ಬಚ್ಚು₂ + ಬಾಯಿ₁ (< ಬಾಯ್) ]

**ಬಚ್ಚಿ₁, ಪಚ್ಚಿ₃** (ಗು). ೧. ಬರಡಾದ; ಗೊಡ್ಡಾದ : 'ಬಚ್ಚಿವೆಣ್' ಪರಾ. (ನಾ). ೨. ವ್ಯರ್ಥವಾದುದು ; ಹಾಳಾದುದು : "ಬಚ್ಚಿ ಯೆನಲ್ ಕೆಟ್ಟುದು" (ಕಚಂಹ. ೩೨). **ಪಚ್ಚಿ₃** : ೧. 'ಪಚ್ಚಿವೆಣ್' ಪರಾ. ೩. ಮಕ್ಕಳಾಗದವಳಂ; ಬಂಜೆ : "ಪಚ್ಚಿ ಬಂಜೆಯೆನೆ ವಂಧ್ಯಾಖಂ" (ಕಚಂಹ. ೦೩೬).

ಬಚ್ಚಿಬಜುಗ = ಅಪ್ರಯೋಜಕ ; ನಿರುಪಯೋಗಿ : ಸಾಸಿರಾಬ್ಬ [ಬ್ದ]ದ ಬಚ್ಚಿಬಜುಗನೊ ಪನ್ನರಶ್ವರುಪದ ಸುಧೀಷಣನೊ (ಜಯಂತ. ೩-೬). **ಬಚ್ಚಿಯಾಗು** = ಇಲ್ಲವಾಗಂ; ಹಾಳಾಗು; ನಾಶವಾಗು : ಮನೆಯೊಳೆಲ್ಲಂ ಮನೆಯೊಳುಂ ಮಾಯವಾಗುತಿರೆ ನೆನೆದುದೆಲ್ಲಂ ನೆನಹಿನೊಳ್ ಬಚ್ಚಿಯಾಗುತಿರೆ (ಶಂಕರೇ. ಜ. ೦೫೬-೪): ಎರಡನೆ ಮನೋ ಮಾಲಿನ ಹೋಯಿತ್ತು ಕರಿಗೊಂಡು ಹುರುಡು ಮುರುಟಿತ್ತು ಮುನಿಸನು ಗಟ್ಟುದುಗ್ರಮತ್ಸರ ಬಚ್ಚಿಯಾಯ್ತು (ಶಕಳಾ. ೦೪-೦೬); ಮದನವಿಕಾರ ಮೊರ್ಮೊದಲೆ ಸಾರ್ಚಿ ಶಕುಂತಳೆಗಿಚ್ಚೆ ಬಚ್ಚಿಯಾದುದು (ಸತ್ಯಾಕ್ತಿ. ೦೩-೩೩). [ < ಬಂಜೆ ]

**ಬಚ್ಚಿ₂** (ನಾ). ಒಂದು ನಾಡಿನ ಹೆಸರು : ಕಾವ್ಯಕ್ಕೆ ಕಾನಿತ್ತಂ ಶಾಸನ ದಗ್ರಹಾರಂ ಸಾರವೆಂಬಿನಂ ಪೆಸರಿಟ್ಟು ಕಾನೀಯ ಹರಿಗನ ಧರ್ಮ ಭಂಡಾರದಂತೆ ಸಾರವಮಾದುದು ಬಚ್ಚಿಗ್ರಹಾರವಾ ಬಚ್ಚಿ[ಶಾಶಾಂ.

ಚೆಚ್ಚಿ, ಚೆರ್ಚಿ] ಸಾಸಿರದೊಳಂ ಧರ್ಮಪುರಂ (ಶಂಕಹಾ. ೦೯-೩೬) ; "ಬಚ್ಚಿಸಾಸಿರದೊಳಂ – ಆ ಬಚ್ಚಿಸಾವಿರ ಎಂಬ ನಾಡಿನಲ್ಲಿಯೂ . . . ಬಚ್ಚಿಸಾಸಿರ : ಇದೊಂದು ನಾಡಿನ ಹೆಸರು. ಜಿನವಲ್ಲಭ ಗಂಗಾಧರನ ಶಾಸನದಲ್ಲಿ "ಸಬ್ಬಿನಾಡ ನಟ್ಟನಡುವಣ ಧರ್ಮಪುರ ದುತ್ತರದಿಗ್ಭಾಗದ ವೃಷಭಗಿರಿ" ಎಂಬಲ್ಲಿ ನಾಡಿನ ಹೆಸರು ಸಬ್ಬಿ ಎಂದು ಕಾಣುತ್ತದೆ. ಇದು ಸಬ್ಬಿಸಹಸ್ರನಾಡಾಗಿರಬೇಕು. ಬಚ್ಚಿ ಸಾಸಿರ ಸರಿಯಾದ ಹೆಸರಲ್ಲವೆಂದೂ "ಸಬ್ಬಿಸಾಸಿರ"ಎಂಬುದು ಸರಿಯಾದುದೆಂದೂ ಹೇಳಬಹುದಾಗಿದೆ" (ಶಂಕಹಾ. ೩೬೬). [?]

**ಬಚ್ಚಿಗ** (ನಾ). ಮಕ್ಕಳನ್ನು ಪಡೆಯಲಾರದವನು ; ನಪುಂಸಕ : ಮೆಚ್ಚಿದೆನು ಮೆಚ್ಚಿದೆನಿನ್ನು ಮನ ಮೆಚ್ಚಿನರಕೆಯನುಸುರಿನಲ್ಯಂಗಿಚ್ಚನಡಿ ಗೆದ್ದೆಣಗಿ ನತಸಂತಾನ ಸಂತಾನ ಬ[ಪಾಠಾಂ. ಬಿ]ಚ್ಚಿಗನುಮಿವನೆಂಬ ನುಡಿಯಂ ಬಿಚ್ಚಿಯೆನಿಸೆನೆ (ಜುಕೇಪು. ೬-೬). [ಬಚ್ಚಿ$_1$ + – ಗ$_8$]

**ಬಚ್ಚಿವೆಣ್**, ಪಚ್ಚಿವೆಣ್ (ನಾ). ಮಕ್ಕಳಾಗದವಳು ; ಬಂಜೆ : "ಬ[ಪಾಠಾಂ. ಪ]ಚ್ಚಿವೆಣ್ಣಿಂ ಬಂಜೆ" (ಕಾವ್ಯಾ. ೨೬.). ಹಚ್ಚಿವೆಣ್ : "ಪಚ್ಚಿವೆಣ್ಣಿಂದು ಬಂಜೆ" (ಶಬಮ. ೬೨-೩೬೫) ; "ಪಚ್ಚಿವೆಣ್ ಬಂಜೆಯೆನಿಸುಗು" (ಅಭಿಕುಂ. ೬೯). [ಬಚ್ಚಿ$_1$ + ಪೆಣ್]

**ಬಚ್ಚಿಪೋಗು** (ಕ್ರಿ). ವ್ಯರ್ಥವಾಗು; ಹಾಳಾಗು; ನಾಶವಾಗು : ಬಚ್ಚಿ ಪೋಗದ ರಾಮಬಾಣಂಗಳಂ ನಡುವೆ ನುಚ್ಚುನೂಱಾಗೆ ಕತ್ತರಿಸಿ (ಕೃಬಿಚಾ. ೨೦-೬೯). [ಬಚ್ಚಿ$_1$ + ಪೋಗು$_1$ (< ಪೋ$_1$)]

**ಬಚ್ಚೋಡಿಮ್ಯ** (ನಾ). (?) : ಕೆಂಪಿನ ಸೀರೆ, ಬಿಳಿಯ ಸೀರೆ, ಇವು ಕೆಡುವುದಕ್ಕೆ—ಬಿಳಿದಾಸಾಳದ ಹೂ ಕೆಂಪಿನ ದಾಸಾಳದ ಹೂ ಕರಿಹತ್ತಿಯ ಹೂ ಈ ಎಳೆಗಾಯಿ ಇವಂ ನೀರಲ್ಲಿ ಕುದಿಸಿ ಕೈಯಲ್ಲಿ ಕಿವಿಚಿ ನೀರ ಬಸಿದು ಕೊಂಡು ಬಿಳಿಯ ವಸ್ತ್ರವ ಸುಟ್ಟು ಕರಿಯ ಹಾಕಿ ಗೋಪಿಚಂದನ ಸಹ ಹಾಕಿ ಕದಡಿ ಬಚ್ಚೋಡಿಮ್ಯಯವಳಿಗೆ ಒಂದು ಬಟ್ಟಲು × × × ಮ್ಯೆಯೊಳಗೆ ಅರೆಬಟ್ಟಲು ಮೇರೆಯಲ್ಲಿ ಎಂಟುದಿನ ಕುಡಿಯ ಕೊಡಲು ಕೆಂಪಿನ ಸೀರೆ ಬಿಳಿಸೀರೆ ಕೆಡುವುದು ಸಹ ವಯಾಣ್ಣಿಂ (ಸಶಕ. ೦೯೯).

[ಬಚ್ಚೋಡಿ$_1$ + ಮ್ಯ (< ಮೆಯ್$_1$)]

**ಬಚ್ಚಾಲಿ** 'ಬಚ್ಚಾಳಿ' ನೋ.

**ಬಜಂತ್ರಿ** 'ಬಾಜಂತ್ರಿ' ನೋ.

**ಬಜರಂಗಬಲಿ** (ನಾ). ಹನುಮಂತ; ಆಂಜನೇಯ; ಮಾರುತಿ : ಬಜರಂಗಬಲಿಯ ಮೂರ್ತಿಯನ್ನೂ ಕುಸ್ತಿಪಟ್ಟರ ಚಿತ್ರಗಳನ್ನೂ ಅವನು ತನ್ನ ಗೋಡೆ ಮುಚ್ಚಲು ಮಾತ್ರ ಇಟ್ಟಿಲ್ಲ (ಶೀಶಕ್ಕ. ೭೨).

[← ಹಿಂ. ಮರಾ. ಬಜರಂಗಬಲೀ, / ಸಂ. ವಜ್ರಾಂಗಬಲಿನ್]

**ಬಜಾಯಿ** (ನಾ). ಒಂದು ಬಗೆಯ ಚರ್ಮವಾದ್ಯ : 'ಬಜಾಯಿಆನೆ' ಪರಾ. 'ಬಾಜಾ' ನೋ. [← ಹಿಂ. ಮರಾ. ಬಾಜಾ]

**ಬಜಾಯಿಆನೆ** (ನಾ). ಬಜಾಯಿ ಮುಂತಾದ ವಾದ್ಯಗಳನ್ನು ಹೊತ್ತು ಕೊಂಡು ಹೋಗುವ ಆನೆ : ೧೦೦೦ ನಿಶಾನೆಆನೆಗಳೂ ೨೦೦೦ ಬಜಾಯಿ ಆನೆಗಳೂ ಇದ್ದುವು (ಅಕ್ಕಬು. ೦೪). 'ನಿಶಾನೆಆನೆ' ಪರಾ.

[ಬಜಾಯಿ + ಆನೆ$_1$]

**ಬಜಾಯಿಸು** (ಕ್ರಿ). ೧. ವಾದ್ಯವನ್ನು (ಜೋರಾಗಿ) ಬಾರಿಸಂ, – ನುಡಿಸು : ವಾದ್ಯಗಾರರು ಭಯಂಕರವಾಗಿ ವಾದ್ಯವನ್ನು ಪುರ್ರ್ಯಸಿ ಡೋಲು ಬಜಾಯಿಸುತ್ತಾರೆ (ಗರುಡಾ. ೬೦). ೨. ಕಟ್ಟುನಿಟ್ಟಾಗಿ ಹೇಳು ; ಅಪ್ಪಣೆ ಮಾಡು : ಮಿಟಾಬದೋಲೆಕಾರರ್ ಭೀಮಗೆ ದಾಟು ದಾಟು ಬಜಾಯಿಸುವರಿಲ್ಲ (ಶಹಾರಾ. ೦೭): ಮನ್ನಾಗ ಆ ಮೂಳಗೋಳಿಗೆ ಸಲಗೀ ಕೊಡಬ್ಯಾಡಾ ಸಲಗೀ ನಾಯಿ ತಲೀಗೇರ್ಯಾವು ಎಂದು ಬಜಾಯಿಸಿದ್ದರು (ಹೋಂಬಿಉ. ೨೨). ೩. ಜಾರಿಮಾಡು ; ಚಲಾಯಿಸು : ಇನ್ನೂ ಒಂದು ಹೊಸ ಚಾಳಿಯು ಇವರಿಗೆ ಇತ್ತೀತ್ತ ಅಂಟಿತ್ತು. ಏನೂ ಕಾರಣವಿಲ್ಲದೇ ಉಳಿದವರ ಮೇಲೆ ಅಧಿಕಾರ ಚಲಾಯಿಸುವುದು (ಮೂಕುಬಾ. ೬೦); ರಂಗಕ್ಕ ಯಜಮಾನರಿಗೆ ಸಸ್ಪಮನಾಯ ಹುಕುಂ ಬಜಾಯಿಸಿದರು (ಶೀಶಕ. II. ೩೦೫). [ಬಜಾವಣೆ + – ಇಸು$_1$]

**ಬಜಾರ್** 'ಬಾಜಾರ' ನೋ.

**ಬಜಾರ** 'ಬಾಜಾರ' ನೋ.

**ಬಜಾರಿ** 'ಬಾಜಾರಿ' ನೋ.

**ಬಜಾರು** 'ಬಾಜಾರ' ನೋ.

**ಬಜಾವಣೆ**, ಬಾಜವಣೆ (ನಾ). ೧. ಚರ್ಮವಾದ್ಯ ಮೊದಲಾದುವು ಗಳನ್ನು ಬಾರಿಸುವಿಕೆ : ತಾಳಮಾನ ಸರಿಸವನಜಿಯ ಓಜೆಬಜಾವಣೆ [ಪಾಠಾಂ. ಣೆ]ಯ ಲೆಕ್ಕವನಜಿಯ (ಅಶಪ. ೯೯೯) ; ಮಾಳಿಗೆಯೊಳಗಣ ಸೊಡರ್ಗುಡಿ ಡಾಳಂಬಡೆದಂತೆ ರಂಗರಕ್ತೆಯೊಳಮರ್ದಂ ಪಾಳೆಕಿವಡದು ಬಜಾವಣೆ ಮಾಳವಸಿರಿಯೆಂಬ ರಾಗವಂ ಚಾಳಿಸಿದಂ (ಜುಕೀಪು. ೨-೬೦); ಕಾಯೆ ಬಜಾವಣೆ ಗವಂಕವೆಸೆಯೆ ಪಾದರಾಯತವಾದರು ಕೂಡೆ (ಶಶಕ. ೫-೩೬). ೨. ಕಾಯದೆ ಮೊದಲಾದುವುಗಳನ್ನು ಜಾರಿ ಮಾಡು ವುದು, – ಚಲಾವಣೆ ಮಾಡುವುದು : ಅವ್ಯತದ ಬಟ್ಟಲಿರುವ ತಟ್ಟೆಯಲ್ಲಿ ಟೀಗಿನ ಸೂಜಿ ಸೇರಿಸಿದಂತಾಗುವುದೆಂದು ಬಜಾಯಿಸಿದ್ದಾನೆ. ಆದರೆ ಈ ಬಜಾವಣೆ ತಿಳಿದವರಿಗೆ ಮಾತ್ರ (ಜುಮಾಬಿ. ೨೩). ಬಾಜವಣೆ : ೧. ಚಂಡೆಮದ್ದಳೆಗಳ ಬಾಜವಣೆಯಲ್ಲಿ ಕೈ ನುರಿತ ಮೇಳಗಾರರೂ ನಮ್ಮಲ್ಲಿದ್ದರು (ಪಾತೀಸು. ೯೯).

[← ಮರಾ. ಬಜಾವಣೇ, ಬಜಾವಿಣೇ = ವಾದ್ಯವನ್ನು ಬಾರಿಸು, ಕಾಯದೆಯನ್ನು ಜಾರಿಗೆ ತರು]

**ಬಜೆ** (ನಾ). ಕಟುವಾದ ವಾಸನೆಯುಳ್ಳ ಒಂದು ಬಗೆಯ ಸಸ್ಯ ಮತ್ತು ಉಪಯುಕ್ತ ಔಷಧೀಯ ಗುಣವುಳ್ಳ ಅದರ ಬೇರು ; ಉಗ್ರಗಂಧಿ : "ಉಗ್ರಗಂಧಿಯೆನೆ ವಜೆ ಬಜೆಯು [ಪಾಠಾಂ. ವಚೆಯೆಂದ] ನಿಕ್ಕುಂ" (ಮಂಗರಾ. ೯೦-೬೯) ; ಬಜೆ ಸಂಪರ್ಚಲ ಹಿಂಗುಬಜೆ ಕೊಡಸಿಗೆಯೆಂಬವನಿತುವಂ ಕುಡಿಯಿಸಲುಷ್ಣಜಲಾನ್ವಿತಮದು ಕೆಡಿಸುಗುಮಜಸ್ರಮೆನೆ ನಡೆವ ನುಣ್ಪುವಂ ನೆತ್ತರುಮಂ (ಲೋಕೋಪ. ೯-೦೨೦) ; ಒಡೆಯ ಚಿತ್ರ್ಯಸೊಂದೆ ಪೆಟ್ಟಿಗೆ ಕುಡಿದ ಬಜೆಯನು ಕಾರಿಸುವ (ಶಾಶ್ಮಚಾ. ೨೨-೬೬); ಬಜೆ . . . ಇದು ಜವುಗುಪ್ರದೇಶದಲ್ಲಿ ಬೆಳೆಯುತ್ತದೆ. ಇದಕ್ಕೆ ಗುಪ್ತಕಾಂಡವಿದೆ. ಮಕ್ಕಳ ಅಜೀರ್ಣಕ್ಕೂ ಅತಿಸಾರಕ್ಕೂ ಇದರ ಬೇರಿನ ಕಷಾಯವನ್ನು ಉಪಯೋಗಿಸುತ್ತಾರೆ (ಸಸ್ಯಶಾ. ೦೬೬). 'ಅತಿಬಜೆ' ಪರಾ.

**ಬಜೆಬೆಣ್ಣೆ** = ತೇದ ಬಜೆ ಮತ್ತು ಬೆಣ್ಣೆಗಳ ಮಿಶ್ರಣ ; ೯ ವಿಶೇಷವಾದ ಔಷಧೀಯಂಗುಣವುಳ್ಳ ಈ ಮಿಶ್ರಣವನ್ನು ಎಳೆಯ ಮಕ್ಕಳಿಗೆ ತಿನ್ನಿಸುವ ವಾಡಿಕೆ ಇದೆ : ತೊಟ್ಟಿಲೊಳ್ ವಿಷ್ಣುವಂ ಮಲಗಿಸಿದಳಕ್ಕೆ ಬಜೆಬೆಣ್ಣೆಯಂ ಸುರಕೋಟಿ ಕೈಮುಗಿವೊಲು (ಕರಕು. ೦೫-೯೩); ಸ್ವಧರ್ಮದ್ರೋಹಿಯ ಮುಖವು ಕಾಣಬರುತ್ತಲೇ ಪ್ರತಾಪನಿಗೆ ಹುಟ್ಟಿದಾಗ ಇಟ್ಟಿದ್ದ ಬಜೆಬೆಣ್ಣೆಯು ಕೂಡ ತೊಳಸಿಕೊಂಡು ಮೇಲಕ್ಕೆ ಬಂದದ್ದರಿಂದ ಒಡನೆ ಅವನು ತನ್ನ ಬರ್ಚಿಯನ್ನು ಗುರಿಯಿಟ್ಟೆಸೆದನು (ಕಚ್ಯೋಚಿ. ೦೯೬). [<ಸಂ. ವಚಾ./ತವಿ. ವಚವ್ಪ್, ವಚವುಪ್ಪು ; ಮಲ. ವಯಮ್ಪು ; ತುಳು. ಬಜೆ; ತೆಲು. ವಚ, ವಸ]

**ಬಜ್ಜಿ** 'ಭಜಿ' ನೋ.

**ಬಜೆಕರಕು** 'ಬಜೆಕರುಕು' ನೋ.

**ಬಜೆಕರುಕು**, ಬಜೆಕರಕು (ನಾ). ಬಜೆಯನ್ನು ಸಂಟ್ಟು ಮಾಡಿದ ಪುಡಿ (?) : ಪರ್ವಾಟಕ, ಬಜೆಕರುಕು . . .ಕಷಾಯ ಹಾಕಿ ಕೊಡಲು. . .ಸಕಲ

ಜ್ವರಗಳೂ ನಿಲ್ಲುವುವು (ಸಕಶ್ಯ. ೦೦೦.). **ಬಜೆಕರಕು** : ರೇಣುಕೆ, ಗಲಜರವೇರು, ಬಜೆಕರಕು, ಜಟಾಮಾಂಸಿ . . . ಇವಂ ಕಷಾಯಂ ಕಾಯಿಸಿ ಕೊಟ್ಟರೆ ವಾತಜ್ವರಂ ಕೆಡುಗುಂ (ಸಕಶ್ಯ.೬೯).
[ಬಜೆ$_1$+ಕರುಂ$_1$ < ಕರಿಂಉ]

**ಬಜೆಟ್** 'ಬಜೆಟ್ಟು' ನೋ.

**ಬಜೆಟ್ಟು, ಬಜೆಟ್** (ನಾ). ವಾರ್ಷಿಕ ಆಯವ್ಯಯದ ಅಂದಾಜುಪಟ್ಟಿ: ಅಧ್ಯಯನತಂಡಗಳು ಸಾಮಾನ್ಯವಾಗಿ ತಮ್ಮದೇ ಆದ ಬಜೆಟ್ಟು (Budgets)ಗಳನ್ನೂ . . . ಹೊಂದಿರುವ ಸ್ವತಂತ್ರ ಅಂತರಸರ್ಕಾರಿ ಸಂಸ್ಥೆಗಳಾಗಿವೆ (ಅಂಚು೦. ೦೯೦). **ಬಜೆಟ್** : ಆಯುವ್ಯಯಪತ್ರ, ಮುಂಗಡಪತ್ರ, ಬಜೆಟ್ (Budget. ಕನ್ನಿ. ೦೦). [←ಇಂಗ್ಲಿ. Budget]

**ಬಜ್ಜರ** (ನಾ). ೧. ನವರತ್ನಗಳಲ್ಲಿ ಒಂದು; ವಜ್ರ; ಹೀರ: "ಬಜ್ಜರಮೆಂದು ವಜ್ರಂ" (ಶಬ್ದ. ೩೦-೬೦); ನಿಡಿದಾದ ದಾಹುಬಳ ಮುನ್ನದಸಿಂಧುರಕಂಧರಕ್ಕೆ ಬಜ್ಜರದಮಳ್ಗಂಬಮಾದ ತೊಡೆ . . . ಜಗದೊಳ್ಕಿಱಿಗುಂ ನೃಪೇಂದ್ರನಾ (ಆಪಂಪು. ೨-೨); ಎಳೆಮುತ್ತಿನಂತೆ ಮೈವಣ್ಣ ಬಜ್ಜರದಂತೆ ಸುಲಿಪಲ್ಲ ಪಂಕ್ತಿ . . . ನವೀನಪ್ರವಾಳದಂತೆ ಪೊಳೆವ ಪದತಳವೊಪ್ಪೆ (ಶಾಂರಪು. ೦೨-೬); ಪಳಿಕಿನಜಿಯ ಭಿತ್ತಿಯಿಂ, ಬಜ್ಜರದ ಜಂತೆಯಿಂ . . . ಮದನಗೃಹದ ಬಾಗಿಲ್ಮಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ಅಸುಕ್ತ ೩೯-೨೦). ೨. ಇಂದ್ರನ ಆಯುಧ: ವಜ್ರಾಯುಧ: "ಬಜ್ಜರಮೆಂದು ವಜ್ರಾಯುಧಂ" (ಶಬ್ದ. ೬೬-೨೦); ಅಲರ್ವಿಲ್ಲಲ್ಲದಂಗಜನಂತೆ, ಬಜ್ಜರದಲಗಿಲ್ಲದಮರೇಂದ್ರನಂತೆ ಕಲೆಯಿಲ್ಲದಿಂದುವಿನಂತಿಲ್ಲಿಗೆಯ್ಯುಂದನಲಘುವಿಕ್ರಮ ರಾಮನಾಥ (ಕುಶಾಹಾ. ೨೦-೦೦೩). [<ಸಂ. ವಜ್ರ]

**ಬಜ್ಜರಕವಾಟ**(ನಾ). ವಜ್ರದ ಬಾಗಿಲು,—ದ್ವಾರ: ವಿವಿಧತರಚಿತ್ರಿತದ ಬಜ್ಜರಕವಾಟದಿಂ . . . ಶಿವನಿರ್ಪ ಲೋಕ ಜ್ಯೋತಿರ್ಲೋಕಮೆರಡನೀ ಲವಲವಿಕೆ ಧಿಕ್ಕರಿಸುತಿದೆ (ಪಂಶಾ. ೩-೨-೩). [ಬಜ್ಜರ+ಕವಾಟ]

**ಬಜ್ಜರಕೇರಿ** (ನಾ). ವಜ್ರದ ಮಾರಾಟ ಮಾಡುವ ಬೀದಿ: ಸಾಲುಮನೆಗಳ ಕೇರಿ ಪವಳ ಬಜ್ಜರಕೇರಿ (ಸಿದ್ಧಕಾ. ೦೩-೩೩). [ಬಜ್ಜರ+ಕೇರಿ]

**ಬಜ್ಜರಗಂಬ** (ನಾ). ವಜ್ರದ ಕಂಬ,—ಸ್ತಂಭ: ಬಜ್ಜರಗಂಬಮಿಂದ್ರನೀಲದ ತೊಲೆ (ರೇವಾ. ೦೩-೦೩); ನಿರ್ಮಿರ್ಚದ ಬಜ್ಜರಗಂಬ[ಅಕಾಂ. ಭ] ವಿಂಬುಗೊಂಡುತ್ತಮನೀಲಪುತ್ರಿಕೆ ವಿರ ಜಿತಮಾಯ್ತು ವಿವಾಹ ಗೇಹದೊಳ್(ಶಾಶಿಕ. ೬-೨). [ಬಜ್ಜರ+ಕಂಬ$_1$ (< ಕಂಭ)]

**ಬಜ್ಜರದುಂಬಿ** (ನಾ). ವಜ್ರದಷ್ಟು ಕಠಿಣವಾದ ಮೂತಿಯನ್ನು ಹೊಂದಿರುವ ತುಂಬಿ,—ಭ್ರಮರ: ಶಿವನ ನಿರ್ಮಾಲ್ಯಪಡ್ನಾನದಿಂದ ನಾಕಪತಿ ಶಿರಿಯ ಮಸ್ತಕಕ್ಕೆ ಹಾಕಲು ಪೂವಿನಾ ಕಂಪಿಗೆಚಿಗೆ ಬಜ್ಜರದುಂಬಿಗಳು ತಾಳದಾ ಕುಸುಮಮಾಲೆಯನು ತೆಗೆದು ನೆಲಕ್ಕೆ ಕಾಲಿಂದೊರಸುತಿರಲುಮದನು (ಶಾಶಿಕ. ೦೨-೯೩). [ಬಜ್ಜರ+ತುಂಬಿ$_1$]

**ಬಜ್ಜರವಂಕಿ** (ನಾ). ವಜ್ರದ ವಂಕಿ; ತೋಳುಬಂದಿ: ಕುಚಿಸುಟುಪೊರ್ಕುಟೀರ್ಕೊಳಿಸಿ ಸುತ್ತಿದ ಪಟ್ಟೆಯ ದಟ್ಟಿ ವಕ್ಷಮಂ ಕೆಳೆಗೊಳೆ ಸಕ್ಕಿದೊತ್ತರದ ಬಜ್ಜರವಂಕಿ ತೊಡಂಕು ಸೊನ್ನೆನೂಲ್ ತಳತಳೆನಿಪ್ಪ ಸಣ್ಣಪೊಸ ಪೊನ್ನುಡೆ ಬಿಣ್ಣೊಡೆ ಬಿಂಕವೆತ್ತ ಮಲ್ಲರೆರಡಿಕೆಂದಳಂ ತೊಳಗುಗನ್ನೆರ್ದೆಯೊಳ್ ಯದುಶೈಲನಾಥನಾ (ಶಕಹಿ. ೩-೯೦). [ಬಜ್ಜರ+ವಂಕಿ]

**ಬಜ್ಜರವಸರ** (ನಾ). ವಜ್ರಗಳನ್ನು ಮಾರುವ ಅಂಗಡಿ: ದೆಸೆಗಳ್ ನಿಜಾಂಶುಮಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜಕೆಯಿಂದಂ ಕೊಸಗಿನ ಮರದುಟುಗಲರಲ್ದೆಸವಂತಸೆದಿರ್ಪುದಲ್ಲಿ ಬಜ್ಜರವಸರಂ (ಜಾಜಿ. ೯-೦೦೭).
[ಬಜ್ಜರ+ವಸರ]

**ಬಜ್ಜರಿ** (ನಾ). (?) : ಪದದೊಡವೆ ವೀರಸಿರಿಯುಪ್ಪಿದ ತೋಳ್ಸುತ್ತಿನಿಸಿ ರನ್ನವಟ್ಟೆಯ ರುಕ್ಪ್ಪಂಜದ ಮಂಜರಿವೊಲ್ ರಂಜಿಸಿದುದು ಪೊನ್ನಾಯುಂಗಡ ಪೊನ್ನ ಬಜ್ಜರಿ ಕಟಿಯೊಳ್ (ಆಶಂಪು. ೩-೩೦). [?]

**ಬಜ್ಜರೋದಕ** (ನಾ). ವಜ್ರದ ಕಾಂತಿ: ದಂತಿಕುಂಭದ ವಿದಾರಿಸಿ ಸೂಸಿಹ ಮುತ್ತು ತತ್ತರ್ಡ್‌ವವು ಬಜ್ಜರೋದಮೆ ಪುಷ್ಪಸರಂ ಸುರಗಿರಿಯಗ್ರಶೃಂಗಗಳ್ ತೀವಿದ ಕೋಡಾಗೆಸೆಯೆ ಪಾಮರಮುದ್ರಿಯವೊಲ್ ರಾಜಿಸಂ (ಭರಶಾ. ೩-೨೬). [ಬಜ್ಜರ+ಉದಕ$_2$]

**ಬಜ್ಜಿ$_1$** (ನಾ). ಬದನೆಕಾಯಿ ಮೊದಲಾದ ತರಕಾರಿಗಳನ್ನು ಸುಟ್ಟು ಅಥವಾ ಬೇಯಿಸಿ, ಸೌತೆಕಾಯಿ, ಕ್ಯಾರೆಟ್, ಟೊಮ್ಯಾಟೋ ಮೊದಲಾದ ತರಕಾರಿಗಳನ್ನು ಹಸಿಯಾಗಿ ಮೊಸರಿನೊಂದಿಗೆ ಸೇರಿಸಿ, ಒಗ್ಗರಿಸಿ ಮಾಡುವ ಒಂದು ಬಗೆಯ ವ್ಯಂಜನ: ಕೆಲವಕ್ಕೆ ಬದನೆಯ ಬಜ್ಜಿ ಕೆಲವಕ್ಕೆ ಕತ್ತರಿಸಿದಕೆಕೀರ ಚೆಲುಕೆ (ಸೂಶಾ. ೯-೨೦); ಗೋದುವೆಯ ಸಜ್ಜಿಗೆದಗೆದೆಳೆವಳುಕಿನಲೊಪ್ಪುವ ಕಜ್ಜಾಯಕೆ ವ್ಯಂತಾಕದ ಸೊಬಗಿನ ಬಜ್ಜಿಯ ಮುಖಾಮಿಕಶಾಖಾಮೃತಗಳ ನೀಡಿದರಬಲೆಯರು (ಬಸವಪು. ೦೯-೩೬); ಮರಿಚೇಲಕ್ಕೀರಪ್ಪಿಯು ಕರಿಬೇವುಂ ಕಾರಗಣಸು ಕೊತ್ತುಂಬರಿಯೊಪ್ಪಿರುತಿಹ ಕ್ಷೀರಂ ತಿಂತ್ರಿಣಿವೆರಸಿದ ವಾರ್ತಾಕ ಬಜ್ಜಿಯಮರಗರ್ಘಂಟೇ (ಶಿತಾ. ೩೬೦). [ದೇ.೩ ತುಳು. ತೆಲು. ಬಜ್ಜಿ]

**ಬಜ್ಜಿ$_2$** 'ಭಜಿ' ನೋ.

**ಬಜ್ಜಿಸು** 'ಭಜ್ಜಿಸು' ನೋ.

**ಬಜ್ಜಿಗುಂಟಣಿ** (ನಾ). ಗಟ್ಟಿಗಿತ್ತಿಯಾದ ಕುಂಟಲಗಿತ್ತಿ: ಬಜ್ಜಿಗುಂಟಣಿ ಸಜ್ಜವನೆಯ ಬಾಗಿಲಂ ಪತ್ತಿ ಮಱಿಗೇಲುತ್ತಿರ್ದೊಳಗಂ ಪೊಕ್ಕು (ಕಂದ್ರಪು. ೯-೩೯ ವ). [ಬಜ್ಜಿ? + ಕುಂಟಣಿ]

**ಬಟ** 'ಬಂಟ$_1$' ನೋ.

**ಬಟಮಾನ್ಯ** 'ಭಟಮಾನ್ಯ' ನೋ.

**ಬಟರಿ** 'ಭಟಾರಿ' ನೋ.

**ಬಟವಡೆ** 'ಬಟವಾಡೆ' ನೋ.

**ಬಟವಾಡೆ, ಬಟವಡೆ, ಬಟ್ವಾಡೆ** (ನಾ). (ಸಂಬಳ, ಕೂಲಿ, ಪತ್ರ ಮೊದಲಾದುವುಗಳನ್ನು) ಹಂಚುವುದು; ವಿತರಣೆ ಮಾಡುವುದು: ಸೇನಾಜನರುಗಳಿಗೆ ತಲಬಿನ ಬಟವಾಡೆಯಾಗುತ್ತಿತ್ತು (ಮುಶಾಮಂ. II. ೦೩); ಚಿಕ್ಕನವಾಬರು ತಾವೇ ಸ್ವತಃ ಕೂಲಿಯವರಿಗೆ ದುಡ್ಡು ಬಟವಾಡೇ ಮಾಡಿ . . . ಬರುವಾಗ (ಹುಟ್ಟಿಹ. ೬೬); ಅತ್ತ ಬಟವಾಡೆಯಾದ ಹಣವೆಲ್ಲವೂ ಮರುದಿನ ಈ ಉಪಾಯದಿಂದ ಹೈದರನ ಬೊಕ್ಕಸಕ್ಕೆ ಬಂದು ಸೇರಿತು (ಒಕಳ. ೬೨). **ಬಟವಡೆ** : ಮಗಾರ ಬಟವಡೆಯ ಕೆಲಸ ಸುರುವಾಗಿ ಮೂರು ನಾಲ್ಕು ತಾಸಿನವರೆಗೂ ಹಾಗೇ ನಡೆಯಿತು (ಅಕ್ಕ. ೨೦೯); ವಾರಕ್ಕೊಂದಾವರ್ತಿ ಕೊಡುವ ಬಟವಡೆಹಣ ಅರೆಹೊಟ್ಟೆಗೆ ಮಾತ್ರ ಆಧಾರ (ಕೊಶಕಳ. ೩೨); ಅಂಚೆಯ ಹಸಿಬೆಯನ್ನು ಹೆಗಲಿಗೇರಿಸಿ ಬಟವಡೆಗೆ ಹೊರಟ (ಅಕಶ.II. ೩೩). **ಬಟ್ವಾಡೆ** : ಪೂಜೆ ಮುಗಿದು ಪನಿವಾರ ಬಟ್ವಾಡೆಯ ಸಮಯ ಅವನಿಗೆ ವಿಠೋಬನ ನೆನಪು (ಉಟ್ಟೋಹಿ. ೩); ಬಟ್ವಾಡೆಯಾದ ತಾರೀಕು ಇನ್ನೂ ಎರಡು ದಿನ ಮುಂದಿನದ್ದಾಗಿ (ಕೈರುಣಾ. ೭); ಮೊದಲು ಟಪ್ಪಾಲುಕಚೇರಿಯಲ್ಲಿ ಕಾಗದಪತ್ರಗಳ ಬಟ್ವಾಡೆ ಮಾಡುತ್ತಿದ್ದ (ಹುಕ್ಕುಕು. ೨೨). [← ಹಿಂ. ಬಟವಾರಾ . ಮರಾ. ಬಟವಾಡಾ]

**ಬಟಾಟೆ** (ನಾ). (ನೆಲದ ಅಡಿಯಲ್ಲಿ ಬೆಳೆಯುವ, ತರಕಾರಿಯಾಗಿ ಬಳಸುವ) ಗೆಣಸಿನಂಥ ಒಂದು ಬಗೆಯ ಗೆಡ್ಡೆ; ಆಲೂಗೆಡ್ಡೆ : ಬಟಾಟೆಗಿಡದಲ್ಲಿ ಕೆಲವು ಉತ್ತಮತರದ "ಬೀಜ"ಗಳನ್ನು ಆಯ್ದು ಅವುಗಳನ್ನು ಮುಂದಿನ ಋತುವಿನಲ್ಲಿ ಬೆಳೆಸಿದನು (ಸಸ್ಯಶ. ೨೯); ನಮ್ಮ ಆಳುಮನುಷ್ಯ ಪೇಟೆಯಿಂದ ಬಟಾಟೆ ತರುವುದು ಮೂರು ಸೇರು (ಕುಂಶಿಂ. ೯).

[←ಮರಾ. ಬಟಾಟಾ, ಬಟಾಟೇ./ತುಳು. ಬಟಾಟೆ./ಇಂ. Batata. Potato : ಪೋರ್ಚು. ಸ್ಪ್ಯಾನಿಷ್. ಬಟಾಟಾ]

**ಬಟಾಣಿ**, ಬಟ್ಟಾಣಿ, ವಟಾಣಿ (ನಾ). (ಕಡಲೆಯ ಜಾತಿಗೆ ಸೇರಿದ) ಒಂದು ಬಗೆಯ ದ್ವಿದಳಧಾನ್ಯ : ಬಟಾಣಿಬೀಜಗಳನ್ನು ಹಸಿಯಾಗಿರುವಾಗ, ಒಣಗಿದಾಗ ಉಪಯೋಗಿಸಲಾಗುವುದು . . . ಬಟಾಣಿಯಲ್ಲಿ ರುಚಿಯ ಜೊತೆಗೆ ಶರೀರಪೋಷಕ ಸಾರವಸ್ತುವಿದೆ (ಹಕಿ. ೪೦). 'ಬಟ್ಟಗಡಲೆ' ಹೋ. ಬಟ್ಟಾಣಿ : ಕಿತ್ತು ಕಿತ್ತುತ್ತಿತ್ತ ಕೆಡೆದ ಹಾರಂಗಳೊಳ್ಮುತ್ತುಗಳ್ಕಾರಿ ನೊಕ್ಕಿಲದೊಳಗೆ ಬತ್ತಿದೊತ್ತೊತ್ತಾದ ಹೋಳ ಬಟ್ಟಾಣಿಗಳ ಬೀಜಂಗಳೆಂಬಂತೆ ಕಾಣಿಸಿದುವು (ಶೀಹಣ. ೯-೩). ವಟಾಣಿ : ಸ್ವಲ್ಪ ಕಪ್ಪು ಅಥವಾ ಕೇಸರಿ ನೆಲವಾದರೆ . . . ಹಿಂಗಾರಿಯ ಧಾನ್ಯ ವಟಾಣಿ ಮೊದಲಾದ ಕಟಾಣಿಜಿನಸುಗಳು ಕಡಲಿಯ ಧಾನ್ಯಗಳು ಇವುಗಳನ್ನು ಬೆಳೆಯಬಹುದು (ಕೃಶಿಕೃ. ೯೨). [ದೇ.೩ ತಮಿ. ಮಲ. ಪಟ್ಟಾಣಿ ; ತುಳು. ಬಟಾಣಿ ; ತೆಲು. ಬಟಾನಿ. / ಮರಾ. ವಾಟಾಣಾ. / ಸಂ. ವಟಧಾನ್ಯ]

**ಬಟಾಯಿ** (ನಾ). ೧. ಬೆಳೆಗಾರನಿಂದ ಹೊಲದ ಒಡೆಯನಿಗೆ ಸಲ್ಲುವ ಧಾನ್ಯದ ಅಂಶ, –ಭಾಗ ; ವಾರಪಾಲು ; ಕೋರು : (ಕೃಸಂಗ. II. ೩೯೪) : ವೆಂಕಟರಾಯನು ಗಿರಿಯಪ್ಪನೆಂಬ ಪವಾಡಗಿತ್ತಿಯು ಮಾಡುವ ಸಮಾರಾಧನೆಗೆ ಬಟಾಯಿ ಧಾನ್ಯವನ್ನು ಉಪಯೋಗಿಸಿ ರಾಜದ್ರೋಹ ಮಾಡಿದ್ದಾನೆ (ಕಹ. ೩೬೬). ೨. "ಸರ್ಕಾರದ ಪರವಾಗಿ ಮಾಡುವ ವ್ಯವಸಾಯ" (ಕಆಶ. ಕೋಶ) : ಇವುಗಳಲ್ಲಿ ಕೆಲವು ಬಟಾಯಿ — ಅಂದರೆ ವೃತ್ತಿದಾರರಾದ ಇನಾಂದಾರರ ಸ್ವಂತ ಅನುಭವ ಅಥವಾ ವಹಿವಾಟನಲ್ಲಿದ್ದವು (ಕಆಶ. ೨೫೪).

[←ಹಿಂ. ಮರಾ. ಬಟಈ., ಬಟಾಈ]

**ಬಟಾಯಿಭೂಮಿ** (ನಾ). ವಾರಕ್ಕೆ ಕೊಟ್ಟಿರುವ ಭೂಮಿ ; ಕೋರಿ ಜಮೀನು : ಅರಮನೇ ಚಾಕರರಲ್ಲದವರು ಅನೇಕರು ಸರ್ಕಾರದ ಬಟಾಯಿಭೂಮಿಗಳನ್ನು ವ್ಯವಸಾಯ ಮಾಡುತಾ . . . ಜೀವಿಸಿಕೊಳ್ಳುತ್ತಿದ್ದರು (ಮಸಕ. ೨). [ಬಟಾಯಿ + ಭೂಮಿ]

**ಬಟಾರ**₁ 'ಭಟಾರ' ನೋ.

**ಬಟಾರ**₂ (ನಾ). ಗೋಣೀಚೀಲ : ಅದನ್ನು ಚನ್ನಾಗಿ ಬಿಸಿಲಲ್ಲಿ ಹಾಕಿ ಒಣಗಿಸಿ ಬಟಾರಗಳಲ್ಲಿ ತುಂಬಿ ಇಟ್ಟು ರಂಗು ನೋಡಿ ಮಾರಾಟ ಮಾಡುತ್ತಾರೆ (ಕೃಶಿಕೃ. ೯೨). [?]

**ಬಟಾರಿ** 'ಭಟಾರಿ' ನೋ.

**ಬಟು**₁ 'ಬಟ್ಟು' ನೋ.

**ಬಟು**₂ (ನಾ). ಬ್ರಹ್ಮಚಾರಿ ; ವಟು : "ಬಟು — ವಟು = ಹುಡುಗ, ಬ್ರಹ್ಮಚಾರಿ" (ಕನ್ನಕೋ. ೨೬) ; ಪೊಱವಾಗಿಲೊಳ್ ಮುನಿಯೋರ್ವಂ ಬಟುವೆರಸು ಬಂದಿರ್ದಂ (ಹಹಕ. ೦೦-೦). [<ಸಂ. ವಟು]

**ಬಟುಗಲ್ಲು** (ನಾ). ಗುಂಡಗಿರುವ ಕಲ್ಲು ; ದುಂಡಾದ ಶಿಲೆ : ನಿಡಿಗಲ್ಲು ನಿಶಿತ ಹಾಸಱೆಗಲ್ಲು ಚೌಕದ ಬಡಿಗಲ್ಲು ಬಟುಗಲ್ಲು ಬೀಳೆ ತುಡುಕಿದ ವಜ್ರಮಾರ್ಗಣದಿಂದ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಱಿಸಿದ (ಕೃಂಕಕ. ೪೦-೬೩). [ಬಟು₁ (<ಬಟ್ಟು) + ಕಲ್ಲು (<ಕಲ್₃) ]

**ಬಟುಮೊಲೆ** 'ಬಟ್ಟಮೊಲೆ' ನೋ.

**ಬಟುವು** 'ಬಟ್ಟು' ನೋ.

**ಬಟುವುದಿಂಬು** (ನಾ). ಗುಂಡಾಗಿರುವ ದಿಂಬು ; ದುಂಡನೆಯ ದಿಂಬು : ಬಿಳಿಯ ಬಟ್ಟೆಗಳಿಂದ ಕಟ್ಟಿ ಪೂಲಿದಿರುವ ಮನ್ಮಥನ ವಂದು ತೊಡೆಯು ಬಟುವುದಿಂಬುಯಿದೆಂಬಂತೆ (ಶಗಂಂ. ೦೯೬-೪).

[ಬಟುವು (<ಬಟ್ಟು) + ದಿಂಬು₂]

**ಬಟುಹು** 'ಬಟ್ಟು' ನೋ.

**ಬಟ್ಟ**₁ 'ಬಟ್ಟು' ನೋ.

**ಬಟ್ಟ**₂ (ಸಪೂರೂ). 'ಬಟ್ಟಿತು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಟ್ಟಗಲ್', 'ಬಟ್ಟವೆಱೆ' ಪರಾ. [<ಬಟ್ಟಿತು]

**ಬಟ್ಟ**₃ (ಸಪೂರೂ). 'ಬಱಿದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಟ್ಟತಲೆ' ಪರಾ. [<ಬಱಿದು]

**ಬಟ್ಟ**₄ 'ಬಂಟ₂' ನೋ.

**ಬಟ್ಟಕೆಱೆ** (ನಾ). ಒಂದು ಊರಿನ ಹೆಸರು (?) : ಸಾದೇವಂ ಬಟ್ಟಕೆಱೆಯಂ ಅಟ್ಟಿದಂ (ಎಕ. XIII. ೦೪೯-೩ ; ೩೬೦). 'ಬಟ್ಟಕೆಱೆ' ಪರಾ. [ಬಟ್ಟ₁ + ಕೆಱೆ]

**ಬಟ್ಟಗಡಲೆ** (ನಾ). ದುಂಡಗಿರುವ ಒಂದು ಬಗೆಯ ಕಡಲೆ : "ಕಳಾಯಃ, ಖಂಡಿಕಃ, ಸಾತೀನಃ — ಈ ೩ ಬಟ್ಟಗಡಲೆ" (ಹಕಾತು. ೧೩-೪೨೬) ; ಕರಿಹಸ್ತಚರ್ಮಮಂ ಪೋರ್ದ್ ಕರಿದಂತವನರೆದು ಬಟ್ಟಗಡಲೆಯ ಬಟ್ಟಂ ಬೆರಸಿಕ್ಕುಗೆ ಮೊದಲೊಳ್ ತಾವರೆಯುಲರಲ್ಲಾದ ಸುರಭಿಗಂಧಮನಾಳ್ಗುಂ (ಸೂಸೂಶ. ೬-೩೨). 'ಬಟಾಣಿ' ಹೋ.

[ಬಟ್ಟ₂ (<ಬಟ್ಟಿತು) + ಕಡಲೆ]

**ಬಟ್ಟಗಡಸು** (ನಾ). ಮೈ ತುಂಬಿಕೊಂಡಿರುವ ಕಡಸು : ಬಟ್ಟಗಡಸು ಕೆಂದ ಹುರಿಗ ಕಾರಿಯು ಬೆಳ್ಳ ನೆಟ್ಟ ಕೊಂಚಿನಕಾರಿ ಜಾರೆ (ಚುರೇಸಾಂ. ೦-೪೦). [ಬಟ್ಟ₂ (<ಬಟ್ಟಿತು) + ಕಡಸು₁]

**ಬಟ್ಟಗಡ್ಡ** (ನಾ). ದುಂಡನೆಯ ಗಡ್ಡ : ತಳತಳಿಪೊಳ್ಮೊಸಲ್ . . . ಮೊಲ್ಲೆವಲ್ ಪೊಳೆವ ಮಲ್ಲಿಗೆ ಮಟ್ಟಿದ ಬಟ್ಟಗಡ್ಡದಿಂ ಬಳೆಯಿಪುದೊಳ್ಳೊಗಂ ಸೊಬಗಿನಿಂ ಬಗೆಗಾರ್ತಿಯರ್ಗಾಸೆಯಟ್ಟಿಯಂ (ಚಾಪು. ೩-೬).

[ಬಟ್ಟ₂ (< ಬಟ್ಟಿತು) + ಗಡ್ಡ₁]

**ಬಟ್ಟಗಲ್**, ಬಟ್ಟಗಲ್ಲು (ನಾ). ಗುಂಡಗಿರುವ ಕಲ್ಲು ; ದುಂಡುಗಲ್ಲು : ಬಟ್ಟಗಲ್ಲಿಂತು ವರ್ತುಳದಿಂದೆ ಚೆಲ್ವಾಗಿ ಪುಟ್ಟುವುದೆ ಪೊಸತು (ಕೃಬಜಾ. ೨೬-೨೩). ಬಟ್ಟಗಲ್ಲು : ಅಂತೆ ಬರೆ ಒಟ್ಟೆಯೊಳಗಣ ಬಿಳಿಯ ಬಟ್ಟಗಲ್ಲು (ಕುಹಾ. ೦೪೨೦, ೦೦-೦೪೬ ; ೯೭೭) ; ಬಟ್ಟಗಲ್ಲಿನ ವ್ಯಾಲ ತುಪ್ಪ ಸುರುವಿದಂಗ ಏನಾರ ಆತ ನನ ಮಗಳ (ಜೋಕಗೀ. ೨೦೦).

[ಬಟ್ಟ₂ (< ಬಟ್ಟಿತು) + ಕಲ್₃]

**ಬಟ್ಟಗಲ್ಲು** 'ಬಟ್ಟಗಲ್' ನೋ.

**ಬಟ್ಟಗಾಣ** (ನಾ). ಗುಂಡಾಗಿ ಸುತ್ತುವ ಗಾಣ : ಅಯ್ಯಾ ಮನದ ರಜದ ಮಣ್ಣು ಕಳೆದು . . . ಅದನೊಂದೆಡೆಗೆ ತಂದು ಬಟ್ಟಗಾಣದಲಿಕ್ಕಿ ಹಿಳಿವನಯ್ಯಾ (ಸಿದ್ಧಶ. ೩೦೫-೦೦೨೬). [ಬಟ್ಟ₂ (<ಬಟ್ಟಿತು) + ಗಾಣ₁]

**ಬಟ್ಟಗುತ್ತ** (ನಾ). ೧. (ಅಲಂ) ಮೋಸ ; ವಂಚನೆ : ಬಟ್ಟಗುತ್ತದ ವಿದ್ಯವಿವರಿಗೆ ಕೊಟ್ಟರುಂಟೆಲೆ ಮಂತ್ರಿ ಕೇಳ್ ಮಾಮಮುಟ್ಟ ನುಡಿಯಲಿ ಭಾವಿಸದೆ ಸದ್ಧರ್ಮವಾರ್ಗದಲಿ (ಕೂಕಂ. ೨-೨-೩೯). ೨. ಮೋಸಗಾರ ; ವಂಚಕ : ಸೂಱೆಗಾಱನಂತೆ ಪೆಱರಂ ಕ್ಲೇಶಂಗೊಳಿಸದೆ ಬಟ್ಟೆ [ಟ್ಟ] ಗುತ್ತನಂತೆ ಉಪವಾಸವಮಂ ತೋಱಿ ಕಾಡದೆ (ಚರ್ಮಾಹ್ಮ. ೩-೯೯). 'ಬಟ್ಟೆಗುತ್ತೆ' ಹೋ. [ಬಟ್ಟ₁ + ಗುತ್ತ₂ (< ಗುಪುತ)]

**ಬಟ್ಟಗುತ್ತತನ** (ನಾ). ಮೋಸಗಾರಿಕೆ ; ವಂಚನೆ : ಕಾಯವ ದಂಡಿಸಿ ಆತ್ಮನಿಗ್ರಹವ ಮಾಡಿ ಬಟ್ಟಗುತ್ತತನವ ಹಣ್ಣೆ ತಗಹಿನಲ್ಲಿ ಕುಳ್ಳಿರ್ದು ಬೇಡಿಕೊಂಬ ತಪ ತಾನೇಕೆ (ಶಸ್ಸವ. ೪. ೬೨೫-೬೬೩) ; ಆಹಹ ಕುಡುವೆನೆಂಬ ಬುದ್ಧಿ ಚಿತ್ತದೊಳಗೆ ಬೇಗ ಹೊಳದು ಕೊಟ್ಟನೇಳು ತಂಗಿ ಬಟ್ಟಗುತ್ತತನವಿದೇವುದು (ಕೃಜರ. ಹ. ೨೬೬-೩). [ಬಟ್ಟಗುತ್ತ + –ತನ]

**ಬಟ್ಟಗೆ** (ಅ). ದುಂಡಗೆ : ಗುಂಡಾಗಿ : ಬಾಳಾಂತು ಬಳಸಿ ಬಟ್ಟಗೆ ಬಂದು ಸುತ್ತುರೆಗಾಳಿಯಂತೊದಗಿ ಸುತ್ತುವರು ಏಳೆಂಟು ಹದಿನಾಱು ಹಾರ

ಹುಣಿನಂತೆ ಸಾಲಾಗಿ ಸರಳಿಸುತಿಹರು (ಶಶಿತ. ೬೩-೩೦).

[ಬಟ್ಟು$_{8}$(<ಬಟ್ಟಿತು) + – ಅಗ್ಗೆ]

**ಬಟ್ಟಗೆಯ್ದು**, ಬಟ್ಟಗೈದು (ನಾ). ಗುಂಡನೆಯ ಆಯುಧ ; ಚಕ್ರಾಯುಧ : "ಬಟ್ಟಗೆಯ್ದು[ಪಾಠಾಂ. ಗೈದು]ವೆನೆ ಚಕ್ರಂ" (ಚಕೂ. ೯೨). 'ಬಟ್ಟಗೆಯ್ದು' ಪರಾ. ಬಟ್ಟಗೈದು : "ಪಾಲುಂಬಳೆ, ಬಟ್ಟಗೈದು–ಈ ೨ ಚಕ್ರಂ" (ಶಕಾ. ೧೭-೦೦); ತನ್ನಿಂ ತಾನೆ ಚತುರ್ಭುಜನಕ್ಕುಂ ಸಂಕಿನ ಬಟ್ಟಗೈದಿನ ಗಜೆಯ ತಾವರೆಯ ಸೊಬಗಿನ ಪೊರ್ದುಗೆಯಿನೆಸಗುಂ (ಶಾಮಶಾಕ್ಕ. ೬೯-೦೦).

ಬಟ್ಟಗೈದುಗೈಯವ = ದುಂಡಗಿರುವ ಆಯುಧವನ್ನು ಹಿಡಿದಿರುವವನು ; ಚಕ್ರಪಾಣಿ ; ವಿಷ್ಣು : "ಬಟ್ಟಗೈದುಗೈಯಪನೆನಲ್ಕಿಂದಿರಾಪತಿಯ ನಾಮಂ" (ಶಶರ. ೬೨). [ಬಟ್ಟು$_{8}$ (< ಬಟ್ಟಿತು) + ಕೆಯ್ದು]

**ಬಟ್ಟಗೈದು** 'ಬಟ್ಟಗೆಯ್ದು' ನೋ.

**ಬಟ್ಟಗೊಡೆ** (ನಾ). ಗುಂಡಗಿರುವ ಕೊಡೆ. – ಛತ್ರಿ : ಬಟ್ಟಗೊಡೆ ಚಂದ್ರಕಾಂತಿಯನಟ್ಟುಂಬರಿಗೊಳೆ (ಶಂಶಕಾ. ೬-೯) ; ಒಗೆಯೆ ಕವಿಲ್ತ ಕಾಪೆ ಪೊಸಜನ್ನವರಂ ಶಿಖಿ ಕೋವಣಂ ಕರಂಡಗೆ ಕಿಸುವೊನ್ನ ಬಟ್ಟಗೊಡೆ. . . ಬಗೆವುಗೆ ಬಂದನಂದು ಬಲಿಯಲ್ಲಿಗೆ ವಾಮನನಾಗಿ ಕಾವುದಂ (ಅರ್ಜಪೇ. ೬-೨೩) : ಎಸೆದುದು ಬಿಳಿಯ ಬಟ್ಟಗೊಡೆ ನಾರದನಾ (ಜಾಪಿ. ೦೦-೦೦). [ಬಟ್ಟು$_{8}$ (< ಬಟ್ಟಿತು) + ಕೊಡೆ$_{2}$]

**ಬಟ್ಟಚಕ್ರ** (ನಾ). = ಬಟ್ಟಗೆಯ್ದು : ಬಟ್ಟಳಾಸುರಕರ್ವಿನ ಶುಕ್ರದೇವರು ಕೊಟ್ಟ ವೈಷ್ಣವಮಂತ್ರದಿಂದೆ ಬಟ್ಟಚಕ್ರವ ಬಲಗೊಂಡು ಪ್ರಾರ್ಥಿಸಲಾಗಿ ತಟ್ಟನೆ ಪಥವ ಪಾಲಿಸಿತು (ಸೋಶಕ. ೨೯-೩೫).

[ಬಟ್ಟು$_{8}$ (< ಬಟ್ಟಿತು) + ಚಕ್ರ$_{1}$]

**ಬಟ್ಟಚ್ಚಿ** (ನಾ). ಗುಂಡಾಗಿರುವ ಕಣ್ಣು : ಕಮ್ಮಿನೆಯ ಪೊದರ್ದಲೆಯ ಬಟ್ಟಚ್ಚಿಯ ಕಟ್ಟುಬಿದ ದಗೆಯ ಪೇರೊಡಲ ಗೋರರೂಪಿನ ದಾನವಂ (ಶಾಮಶಾಕ್ಕ. ೦೦೦-೩೦). [ಬಟ್ಟು$_{8}$ (<ಬಟ್ಟಿತು) + ಅಚ್ಚಿ]

**ಬಟ್ಟಜವ್ವನ** (ನಾ). ದುಂಡಗಿರುವ ಮೊಲೆ ; ವೃತ್ತಸ್ತನ : ಬಟ್ಟಜವ್ವನದೆಡೆಗಳೊಳ್ ಎಟರ ದಿಟ್ಟಿಗಳ್ ನಟ್ಟಂತೆ ನಿಲೆ (ಶಂಪು. ೦೦-೦೬) ; ಬಟ್ಟಜವ್ವನದ ಎಪ್ಪೋದರಿಯರಂ ಪೆಗಲೊಳ್ ಪೆಂಪಿಂ ತಳೆದು ತಳರ್ವ ವಿಪುಳ ವಿದ್ಯಾಧರರ್ಗೆ ಸಹಾಯಪವಾಗಿ . . . ಕಳುಪಲ್ (ಶಾಶಚೀ. ೦-೦೩೩ ವ).

[ಬಟ್ಟು$_{8}$ (< ಬಟ್ಟಿತು) + ಜವ್ವನ]

**ಬಟ್ಟಜವ್ವನೆ** (ನಾ). ದುಂಡಗಿರುವ ಮೊಲೆಗಳನ್ನು ಹೊಂದಿದವಳು ; ವೃತ್ತಸ್ತನೆ : ಉಟ್ಟುದು ತೊಟ್ಟುದೆಲ್ಲವ ಮುಕ್ತಿಯೆಂದೆಂಬ ಬಟ್ಟಜವ್ವನೆಗೆ ವರ್ತಿಯನು ಅಟ್ಟ ನಿಂದಂತೆ ನಿರ್ಗ್ರಂಥಮಿರದೆಯಳವಟ್ಟುದು ತನ್ನನಿವಶಿಗೆ (ಶ್ರಕಿಂ. ೦-೩೩) ; ಮುಟ್ಟಿದೊಡಸು ನಿಲ್ಲದೆನುತೊರ್ವ ತೊಲಗಿದು ಬಟ್ಟಜವ್ವನೆಯನಪ್ಪಿದನು (ಸೋಶಕ. ೦೬-೩೩); ಬಟ್ಟಜವ್ವನೆಯರಂ ಶಿಂತಾದರಿಂದು ಬಾಯಿಟ್ಟಿಟ್ಟನ್ನು ನುಡಿಯಲದೇಕೆ (ಶರಕ. ೦-೩೦).

[ಬಟ್ಟಜವ್ವನ + – ಎ$_{1}$]

**ಬಟ್ಟತಲೆ**(ನಾ). ಬೋಳುತಲೆ ; ಕೂದಲಿಲ್ಲದ ತಲೆ : ಬಟ್ಟತಲೆಯವನಾದರೆ ಹೆಡಿಗೆ ಹೊತ್ತಾನೇ ? (ಗಾದೆ). [ಬಟ್ಟು$_{8}$ (<ಬಟು್ದು) + ತಲೆ$_{1}$]

**ಬಟ್ಟದಲೆ** (ನಾ). ಗುಂಡಗಿರುವ ತಲೆ : (ಮುಂಜಿಪು. ೬. ೫-೩೦).

[ಬಟ್ಟು$_{8}$ (<ಬಟ್ಟಿತು) + ತಲೆ$_{1}$]

**ಬಟ್ಟದುಱುಂಬು** (ನಾ). ಗುಂಡಗಿರುವ ತುರುಬು; ದುಂಡಾದ ಮುಡಿ : ಮಲ್ಲಿಗೆ ಮೊಲ್ಲೆ ಜಾಜಿ ಕೇತಕಿ ಮೊದಲಾದ ಕುಸುಮಕುಲವನಾಂತು ಮೆಱೆವ ಬಟ್ಟದುಱುಂಬಿನ . . . ಬಸವರಾಜಂ (ಶಶಿ. ೨-೦೬).

[ಬಟ್ಟು$_{8}$ (<ಬಟ್ಟಿತು) + ತುಱುಂಬು$_{1}$]

**ಬಟ್ಟದೆನೆ** (ನಾ). ವೃತ್ತಾಕಾರವಾದ ಕೋಟೆಯ ತೆನೆ : ಪಳಿಕಿನ ಕೋಂಟೆ ಬಟ್ಟದೆನೆ ಬೇವಿನ ದಂಡೆ ಸಭಕ್ಕೆ ವಿಜಾಜುವಟ್ಟಳೆ . . . ಮೆಱೆಗುಂ ಪುರದೊಳ್ ನಿರಂತರಂ (ಗಿರಿ. ೨-೬೮); ಹೊಸ ಹೊಂಗೋಂಟೆಯ ಬಟ್ಟದೆನೆಯೆ ರಂಜಿಸುವ ದಳಾವಳಿ (ಶಮುಶಾ. ೦-೩೨).

[ಬಟ್ಟು$_{8}$ (< ಬಟ್ಟಿತು) + ತೆನೆ]

**ಬಟ್ಟದೊಡೆ** (ನಾ). ದುಂಡಗಿರುವ ತೊಡೆ ; ಪುಷ್ಟವಾಗಿರುವ ತೊಡೆ : ಬಲ್ದಲೆಯಂ ತೋಳ್ನೀಳ್ದನಗಲ್ದುರದಂ ಬಟ್ಟದೊಡೆಯವಂ ಕೆಂಗಣ್ಣಂ . . . ಒಲ್ದೊಲಿಸುಗುಮೆಸೆವ ಬೀರಸಿರಿಯಂ ಧುರದೊಳ್ (ಕಾವ್ಯಾ.ಕ. ೨೫೬); ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ ನಿನ್ನ ಕಿಱುದೊಡೆಗೆ ಕಾಮನ ದೊಣೆ ತೊಣೆಯಲ್ಲಂ (ಶಂಶರ. ೦೯-೦೬). [ಬಟ್ಟು$_{8}$ (< ಬಟ್ಟಿತು) + ತೊಡೆ$_{1}$]

**ಬಟ್ಟದೊಡೆಯ** (ನಾ). ದುಂಡಗಿರುವ ತೊಡೆಗಳುಳ್ಳವನಂ : ಅತ್ಯಕ್ಕ-ಅಲರ್ಗಣ್ಣಂ, ಬಟ್ಟದೊಡೆಯಂ (ಶಮುದ. ೦೬೬ ಕ್ರ ಯೋ).

[ಬಟ್ಟದೊಡೆ + – ಅ$_{1}$]

**ಬಟ್ಟನೆ** (ಅ). = ಬಟ್ಟಗೆ : ಪುಟ್ಟುವ ಗಾಳಿಯ ಬಟಿಯನೆ ಬಟ್ಟನೆ ಸುಟಿಗೊಳೆ ಮರುದ್ವಿಮಾನಪ್ರಕರಂ ತಿಟ್ಟನೆ ತಿರಿಯೆ ನಿಶಾಚರನಟ್ಟನದೊಂದುಗ್ರಗದೆಯಿನಸುರಾಂತಕನಂ (ಜಾಪಿ. ೦೨-೯೩) ; ತಿಟ್ಟನೆ ಬಟ್ಟನೆಯೆಂಬವ ಱಿಯೋಳ್ ಭ್ರಮಾರ್ಥಂ (ಶಮುದ. ೩೦೭) : ಅಬಲೆಯ ಬಟ್ಟನೆಸೆವ ಬಲ್ಮೊಲೆಯೆಂಬೆರಡುಂ ಬೆಟ್ಟದ ತಪ್ಪಲ ನಡುವಣೆಱುಂಬಿನೊಳಡಗಿ . . . ನೀಱಿನ ಬಗೆ . . . ನಡೆಯುತ್ತಿರೆ (ಶಮುಶಾ. ೪-೦೦).

ಬಟ್ಟನೆ ವರ್, ಬಟ್ಟನೆ ಬರ್ = ಸುತ್ತುವರಿದು ಬರು,–ತಿರುಗು, ಚರಿಸು : ಮೋದಶಯುಕ್ತಿಜರ್ಗಿತ್ತುದರ್ಕೆ ಬಾಯ್ಬಿಟ್ಟರೆ ವಿಪ್ರಕೋಟಿ ಮುಡಗಲ್ಕೆಡೆಯಿಲ್ಲದೆ ಪೊನ್ನ ರಾಶಿಯಂ ಬಟ್ಟನೆ ಬಂದು ಕಾಯೆ ಯಮನಂ ದನನೇಂ ತೊದಳಲ್ಲದಿತ್ತನೋ (ಶಂಶಕಾ. ೬-೩೯) ; ಎನಿತಂ ಬೆದವೆದ ಬೆಂದವರ್ಯ್ . . . ಎನಿತಂ ಭವಗಹನದೊಳಗೆ ಬಟ್ಟನೆ ಬರ್ಪಯ್ (ಶಆಪ. ೨-೬೨); ಎರೆಯಂ ಕರ್ಚಿ ಬಲಕ್ಕೆ ಪೋಗೆ ಶುಭದಂ ಪೆಣ್ಕಾಗೆ ಮೇಣಾಂತ್ರದಂಬರದೊಳ್ ಬಟ್ಟನೆ ಬರ್ಪೊಡತ್ಯರ್ಥಿಲಾಭಂ (ಕೋಕೋಶ. ೦೨-೨೦) ; ಸುಟಿದನೆಂದು ಸಂಚಲಿಸಿದನುಂ ಬಟ್ಟನೆವಂದನುಮಕ್ಕುಂ (ಶಮುದ. ಪ. ೩೩ ವೃತ್ತಿ) ;

[ಬಟ್ಟು$_{8}$ (< ಬಟ್ಟಿತು) + – ಅನೆ$_{2}$ (< – ಅನೆಯ$_{3}$)]

**ಬಟ್ಟಬಯಲ್** 'ವಯಲ್' ಪರಾ.

**ಬಟ್ಟಬಯಲು** 'ವಯಲ್' ಪರಾ.

**ಬಟ್ಟಬಾಣ**, ಭಟ್ಟಬಾಣ (ನಾ). (?) : ಅಥವನಿಂ ಕರಜಲರುಹಂಗಳು ಬಟ್ಟಬಾಣಂಗಂಕುರಿಸಿದವೊಲು ಪೃಥುಲೋನ್ನತಕರಾಂಬುಜಯುಗಂ ಚಲುವಾಯಿತಯ್ಯಂಗೆ (ಶಸಪು. ೩೬-೩೯). ಭಟ್ಟಬಾಣ : ಲಲಿತ ಕರಪಲ್ಲವಂಗಳ್ ಶೋಭಿಸಿದುವು . . . ಭಟ್ಟಬಾಣಂಗೀಶಪೂಜೆಯಂ ಫಳಿಲನೆಸಗಲ್ ಕರಯುಗಂ ಜನಿಸಿದಂತೆವೊಲ್ (ಅರಾಶ. ೨-೩-೦೬). [?]

**ಬಟ್ಟಬೈಲು** 'ವಯಲ್' ಪರಾ.

**ಬಟ್ಟಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ ; ದುಂಡುಮಲ್ಲಿಗೆ : ಬಟ್ಟನವಿಲಭೋಗವನೆಂಬ ವ್ರತಿಕರ ತೊಟ್ಟಸಲೆಂದಾ ಮದನ ಮಿಟ್ಟಿಯಂಬುಗಳ ಮಾಡಿಸಿದಂತುಟಹವಲ್ಲಿ ಬಟ್ಟಮಲ್ಲಿಗೆಯ ಮೊಗ್ಗೆಗಳು (ಅಂಜಶ. ೨-೯೦). [ಬಟ್ಟು$_{8}$ (< ಬಟ್ಟಿತು) + ಮಲ್ಲಿಗೆ]

**ಬಟ್ಟಮುತ್ತು** (ನಾ). ಗುಂಡಗಿರುವ ಮುತ್ತು ; ದುಂಡಾದ ಮೌಕ್ತಿಕ: ಆ ದೇವಿ . . . ರಾಯನ ಮಕುಟಕಳವಟ್ಟು ಮೋದಿಸುವ ಬಟ್ಟ ಮುತ್ತಂ ದೂಗದ ಚಿಪ್ಪು ಬರಲಾದರಿವುದೇಯಂಬ ಮಾಳ್ಕೆಯಿಂ ಸುಮ್ಮನಿರೆ ನೊಂದನಂತಾ ದಕ್ಷನು (ಶೀಕ್ಷಕೃ. ೩-೨-೦೨); ಬಟ್ಟಮುತ್ತಿನ ಪದಕಹಾರನೆ ಬಾಹುಹಸ್ತಚತುಷ್ಟನೆ (ಹುರಿಂದ. ೦-೫-೨); ಬಟ್ಟಮುತ್ತುಗಳು ಕೇವಣಿಸಿರ್ದ ಪಾರಿಯ ಪಟ್ಟಾವಳಿ ಚಲ್ಲಣವ ತೊಟ್ಟು (ಕೋಶಕ. ೦೨-೯೩).

[ಬಟ್ಟು$_{8}$ (< ಬಟ್ಟಿತು) + ಮುತ್ತು$_{3}$]

**ಬಟ್ಟಮೊಗ** (ನಾ). ದುಂಡಾದ ಮುಖ : ಕರಮ ತತ್ಪುರನಾರಿಯರ ಬಟ್ಟಮೊಗದ ಮಯ್ಸಿರಿಗಂಡು ಕಱುಬಿ ಕಱಿಕಱಿಗಂದಿದನೊಯೆನಲ್ ಹರಿಣಾಂಕನುದರದ ಕಲಂಕಮೊಪ್ಪಿದುದು (ಕಬ್ಬಿಗಾ. ೯-೬೩); ನಗೆಮೊಗದ ವರಾ ಸಿರಿಮೊಗದವರು . . . ಬಟ್ಟಮೊಗದವರು ನಲ್ಮೆಗೆವೆತ್ತು ನಡೆದರೊಗ್ಗಿ ವಲಿ (ಸೋಮೇಶ. ೨೯-೦೩); ಬಟ್ಟಮೊಗಕ್ಕೆ ಕಟ್ಟಿದಿರೊಳೆಸೆವ ಬಟ್ಟವೆಱೆಯ ದಿಟ್ಟಿತಾಗದಂತೆ ಮಱೆಗೆಯ್ದು (ರಾಜಶೇ. ೯-೦೯೪).

[ಬಟ್ಟ₂ (<ಬಟ್ಟಿತು) + ಮೊಗ]

**ಬಟ್ಟಮೊಲೆ, ಬಟುಮೊಲೆ** (ನಾ). ದುಂಡಾಗಿರುವ ಕುಚ ; ವೃತ್ತಸ್ತನ : ಬಟ್ಟಮೊಲೆಯಂತೆ ಕೊರಲೊಳ್ ಕಟ್ಟಿಕ್ಕಲ್ ನರಕಕೂಪದೊಳ್ ಮುಂಬುಗ ಲೊಡಂ ಬಟ್ಟೊಡನೆ ಸಗ್ಗವೇಱುವ ಬಟ್ಟಲ್ಲವೆಯೊಲ್ಲದಿರ್ದೊಡನ್ನಾಂಗ ನೆಯಂ (ಲೀಲಾವ. ೦೯-೦೦೯); ಬೆಟ್ಟತಪ್ಪ ಬಟ್ಟಮೊಲೆಯಿಟ್ಟೆಡೆಯೊಳ್ ತೊಟ್ಟನೆ ಸಿಲ್ಕಿದ ಕಣ್ (ಕಬ್ಬಿಗಾ. ೬೯). **ಬಟುಮೊಲೆ** : ಚಟುಲ ಕಾಮೋದ್ದೀಪನದಿಂದೆ ಕಡುಧೂರ್ತವಟುಗಳು ರಸಿಕುವರಿಯರ ಬಟು ಮೊಲೆಗಳ ಕೈದುಡುಕಿದುದು (ಸೋಮೇಶ. ೭-೦೩).

[ ಬಟ್ಟ₂ ( < ಬಟ್ಟಿತು ) + ಮೊಲೆ₁ ]

**ಬಟ್ಟಲ್, ಬಟ್ಟಲು** (ನಾ). ೧. ಗುಂಡಗಿರುವ ಸಣ್ಣ ಪಾತ್ರ ; ಕಟೋರ : ಪಿರಿದೊಂದು ಕಾಜಿನ ಬಟ್ಟಲೊಳ್ ಕಮ್ಮಿತಪ್ಪ ನೀರಂ ತೀವಿ ಚಂದ್ರಬಿಂಬಮಂ ನೀರೊಳ್ ಕಾಣ್ಬಂತಿರೆ ಮಾಡಿ (ವಡ್ಡಾರಾ. ೦೫೬-೦೭); ಸೋರೆಯು ಬಟ್ಟಲಂ ನಂಬಿ ಕಂಚಿನ ಬಟ್ಟಲನೊಡೆವ ಗೊರವನುಮಂ (ರಘುಕು. ೬-೩೦); ವಾರುಣಿ ಕಳ್ಳನೀಂಟಿ ಮಱಿದಿಕ್ಕಿದ ಬಟ್ಟಲೊ . . . ಪೇಱಿನಲ್ಕೆ ನೀಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿ ಯೊಳ್ (ಲೀಲಾವ. ೩-೩). **ಬಟ್ಟಲು** : ೧. ಕರಿದಂ ಬಿಳಿದಂ ಬಿಳಿದಂ ಕರಿದಾಗಿರೆ ಮಾಟ್ಟ ಪೋಪ ಬಟ್ಟಲುಗಳನಂಬರದೊಳ್ನಲಿವ . . . ಇಂದ್ರ ಜಾಲಿಗರಕ್ಕುಂ (ನೇಮಿ. ೦೨-೦೯). ೨. ತಟ್ಟೆ ; ತಳಿಗೆ : ಉಂಬ ಬಟ್ಟಲು ಬೇಱೆ ಕಂಚಲ್ಲ ನೋಡುವ ದರ್ಪಣ ಬೇಱೆ ಕಂಚಲ್ಲ (ಬಸವ. ೫೬೦) ; ಹೊನ್ನ ಬಟ್ಟಲೊಳಾತಗಳೆಗೊಲಿದಿತ್ತನ್ನೆ ಕರ್ಪುರದ ವೀಳೆಯವ (ಉತ್ತರರಾ. ೯-೦೦) ; ಜಯರಾಮು ಮನೆ ಸೇರಿದಾಗ ಅವನ ತಂದೆ ಊಟಕ್ಕೆ ಕುಳಿತುಕೊಂಡಿದ್ದರು . . . ತಾಯಿ, ಮಗನಿಗೂ ಬಟ್ಟಲಿಟ್ಟಳು (ಕಂಗವ. ೦೩೭). ೩. ಮಂಡಿಯ ಚಿಪ್ಪು : ಬಟ್ಟಲು ಕಟ್ಟದ ಮೊಣಕಾಲ್ಗಳುಂ ಮೊಟ್ಟನೆ ಮುಱಿದ ನಿಟ್ಟೆಲುಗಳುಂ . . . ಕುಣಿದಾಡುವ ಮರುಳ್ಗಳುಂ ಮಹಾಭಯಂಕರಮಾಗೆ (ಮಹಾಶೇ. ೦೨-೩೯ ಪ).

**ಬಟ್ಟಲಗಣ್ಣು, ಬಟ್ಟಲ ಕಣ್ಣು = ಬಟ್ಟಲುಗಣ್ಣು** : ಮುಟ್ಟು ಮೈಲಿಗೆ ಇಲ್ಲ ಬಟ್ಟಲಗಣ್ಣಿನ ದಿಟಯೋಗಿ ತಾ ಮಲಗಿಹನು (ಸಿದ್ಧಪು. ೩-೪) ; ಕಟ್ಟಾಣಿ ಕಟ್ಟಾಳ ಕಟ್ಟೀ ಮ್ಯಾಲೆ ನಿಂತಾಳ ಬಟ್ಟಲ ಕಣ್ಣ ತಿರುವ್ಯಾಳ (ಕಹಜಾ. II, ೦೦೫೨). **ಬಟ್ಟಲ ತಂಬುಲ = ಗೌರವಾರ್ಥವಾಗಿ ತಟ್ಟೆಯಲ್ಲಿ ಕೊಡುವ ವೀಳೆಯ** : ಬಟ್ಟಲ ತಂಬುಲಂಬಡೆವ(ಂ)ನ್ನೀ ಮಯ್ಯಾರ್ದೆಯೆಲ್ಲ(ಂ)ಮಾಯ್ದುವರ್ದಾರಸರ ಮಾಡಿಸಿದೆರಡುನ್ದೇಗುಲಂ (ಶಾಶಾ. IX-೨, ೬೭-೩೩ ; ೯೯೨).

[ದ್ರಾ. ೫ ತಮಿ. ವಟ್ಟಿಲ್ ; ಮಲ. ವಟ್ಟ : ತುಳು. ಬಟ್ಟಲ್, ಬಟ್ಟೊಳು ; ಕೊಡ. ಬಟ್ಟ ; ತೆಲು. ಬಟ್ಟ]

**ಬಟ್ಟಲು** 'ಬಟ್ಟಲ್' ನೋ.

**ಬಟ್ಟಲುಗಣ್ಣು** (ನಾ). ಗುಂಡಗಿರುವ ಕಣ್ಣು : ಕಟ್ಟಾಣಿ ಕಟ್ಟಾಳು ಕಟ್ಟಿ ಮೇಲೆ ನಿಂತಾಳು ಬಟ್ಟಲುಗಣ್ಣು ತಿರುವ್ಯಾಳು (ಜಪದ. ೦೦).

[ ಬಟ್ಟಲು ( < ಬಟ್ಟಲ್ ) + ಕಣ್ಣು ( < ಕಣ್ ) ]

**ಬಟ್ಟವಂಜರ** (ನಾ). ಗುಂಡಗಿರುವ ಪಂಜರ ; ದುಂಡಾದ ಪಂಜರ : ರತಿದೇವಿಯ ಕೇಳಿಗಿಟ್ಟ ಸುಣ್ಣಕಱಿನ ಬಟ್ಟವಂಜರದ ಕೋಗಿಲೆಯುಂ ಗೆಲೆವಂದುದಿಂದುಮಂಡಳದ ಕಳಂಕಲೇಖೆಯುಮರೇಂದ್ರವಧೂಮುಖಪತ್ರ ವಿಭ್ರಮಂ (ಲೀಲಾವ. ೨-೦೦).

[ ಬಟ್ಟ₂ (<ಬಟ್ಟಿತು) + ಪಂಜರ₁ ]

**ಬಟ್ಟವಕ್ಕಿ** (ನಾ). ಚಕ್ರವಾಕಪಕ್ಷಿ : ಬಟ್ಟವಕ್ಕಿಗಳಂಚೆ ಕೊಂಚೆ ಸಂಚರಿಸಿ ಬೊಬ್ಬಿಟ್ಟುದ ಕೇಳಿ ತಾಪಸರು ಕೆಟ್ಟರು (ಸೋಮೇಶ. ೬-೦೯).

[ ಬಟ್ಟ₂ (<ಬಟ್ಟಿತು) + ಪಕ್ಕಿ ]

**ಬಟ್ಟವಟ್ಟು, ಬಟ್ಟವೊಟ್ಟು** (ನಾ). ಗುಂಡಾದ ಬಟ್ಟು.—ತಿಲಕ : ಮಿಸುಪ ಬಯ್ತಲೆಗಳಿಂ ಹ್ರಸ್ವಕೇಶಂಗಳಿಂ ನಿಶದಮಾ ಗುಲ್ಫಲಂಬಿತ ಚೇಲ ನಿಕರದಿಂದೆಸೆದಿರ್ದ ಬಟ್ಟವಟ್ಟುಗಳಿಂದೆ . . . ಎಸೆಯುತ್ತಿರಲ್ (ಅಶಾ. ೩-೬-೬). **ಬಟ್ಟವೊಟ್ಟು** : ಪುರಾಣೋಕ್ತ . . . ಅರಸುಗಳ್ಗಂ ವ್ಯಕ್ತತಿಗ ಮತಿಶಯಮಾಗಿ ಸುರುಚಿರವಿಭೂತಿಯಿಂದಂ ಬಟ್ಟವೊಟ್ಟಿಂದಂ ನಿರವಿಕಂ (ಅಶಾ. ೦-೨-೦೩).

[ಬಟ್ಟ₂ (<ಬಟ್ಟಿತು) + ಬಟ್ಟು ]

**ಬಟ್ಟವಡೆ** (ಕ್ರಿ). ದಂಡಾಗಿರು ; ವೃತ್ತತೆಯನ್ನು ಹೊಂದಿರು : ಬಟ್ಟವಡೆದ ರತ್ನಪವಳಮುತ್ತುಗಳ ಮೇಲ್ಪಟ್ಟು ಕಣ್ಣಾನಕ ರಂಜಿಸಿತು (ಸೋಮೇಶ. ೨೬-೦೯).

[ ಬಟ್ಟ₂ (< ಬಟ್ಟು) + ಪಡೆ₁ ]

**ಬಟ್ಟವನಿ** (ನಾ). ಗುಂಡಗಿರುವ ಹನಿ ; ದುಂಡಾದ ತೊಟ್ಟು : ವನಜದಳಗಳಲ್ಲಿ ನಿಂದಮೃತದ ಬಟ್ಟವನಿಗಳೊ ಬಟ್ಟಮುತ್ತುಗಳೊ . . . ಎಂಬಂತೆ ಜನವಗಳ್ವರ ತೋಱುತಿಹುವು (ಜಕ. ೦೫-೦೯).

[ ಬಟ್ಟ₂ (<ಬಟ್ಟಿತು) + ಪನಿ₂ ]

**ಬಟ್ಟವಾಲು** (ನಾ). ಕಾಸಿ ಗಟ್ಟಿಯಾದ ಹಾಲು : ಕಾದಿಳಿಪಿಯಾಱಿದ ಬಟ್ಟವಾಲಿನಂತೆ . . . ಅತಿರುಚಿಯ ಪಡೆದುದು (ಸೂಹಕಾ.೦-೬); ಬಟ್ಟ ವಾಲನು ಚಿಲುಪಾಲನು . . . ತನಿವಾಲ ಬಟ್ಟಜವ್ವನೆಯೆಡೆಮಾಡಿದಳರಸಗೆ ಬಟ್ಟಲು ಬಟ್ಟಲು ತುಂಬಿ (ಜಕ. ೦೦-೩೪) ; ಚಿಲುಪಾಲು ತಂಬಾಲು ಕೆನೆವರಸಿದ ಪಾಲು ಸುಲಲಿತ ಬಟ್ಟವಾಲುಗಳ . . . ಲಲನೆಯರುಣ ಬಡಿಸಿದರು (ಕಂಪಿಲ. ೬-೯೦). 'ಬಟ್ಟಳೆ' ಪರಾ.

[ ಬಟ್ಟ₁ + ಪಾಲು₁ (<ಪಾಲ್₁) ]

**ಬಟ್ಟವಾವುಗೆ** (ನಾ). (ಮುಂಭಾಗದಲ್ಲಿ) ಗುಂಡಗಿರುವ ಹಾವುಗೆ ; ದಂಡಾದ ಪಾದುಕೆ : ಶೈಲವದ್ಧದ ಬಟ್ಟವಾವುಗೆಗಳನು ಪೊಂಬಾಳೆಯ ನಿಡುಚವರಗಳಾ ಲೀಲೆಗಾತಿಯರೊಯ್ಯುತಿರೆ (ಜಕ. ೯೭-೯೩).

[ ಬಟ್ಟ₂ (<ಬಟ್ಟಿತು) + ಪಾವುಗೆ ]

**ಬಟ್ಟವೃತ್ತ** (ನಾ). (?) : ಕಮ್ಮಜನಂಬು ಕಮ್ಮಜಂಗೆಂಬಂತೆ ಬಟ್ಟವೃತ್ತರ ಬಾಳಂತೆ ತನ್ನ ಕೊಂಬೆ ತನಗೆ ಘಾತಕಮಾಗೆ (ಅರ್ಜುನ. ೬-೬೩ ಪ). [?]

**ಬಟ್ಟವೆಱೆ** (ನಾ). ಗುಂಡಗಿರುವ ಚಂದ್ರ ; ಪೂರ್ಣಚಂದ್ರ ; ಹುಣ್ಣಿಮೆಚಂದ್ರ : ಬಟ್ಟವೆಱೆಯಂತೆ ಮೊಗ . . . ಭೂಪಾಲಕನ ಪಟ್ಟದಾನೆಯ ಕುಂಭದಂತೆ ಜಘನಂ ಸೊಂಪುವಟ್ಟರ್ದ ವಾರನಾರಿಯರು ನಡೆತಂದರು (ಸೌಂದರ್ಯ. ೭-೩೩) ; ಬಟ್ಟವೆಱೆಯ ಬೆಳ್ದಿಂಗಳ ಹೊಂದಾವರೆ ವಟ್ಟಲೊಳ್ ಸೋದಿವರುಂಟೇ (ಸೋಮೇಶ. ೦-೨೯) ; ಬಟ್ಟಮೊಗಕ್ಕೆ ಕಟ್ಟಿದಿರೊಳೆಸೆವ ಬಟ್ಟವೆಱೆಯ ದಿಟ್ಟಿ ತಾಗದಂತೆ ಮಱೆಗೆಯ್ದು (ರಾಜಶೇ. ೯-೦೯ ಪ).

[ಬಟ್ಟ₂ (<ಬಟ್ಟಿತು) + ಪೆಱೆ]

**ಬಟ್ಟವೊಟ್ಟು** 'ಬಟ್ಟವಟ್ಟು' ನೋ.

**ಬಟ್ಟಸಾಣೆ** (ನಾ). ಗುಂಡಗಿರುವ ಸಾಣೆಕಲ್ಲು : ಚಂದ್ರಮಂಡಲಮೆಸೆದುದು ಕಿಸುಗಲ್ಲ ಬಟ್ಟಸಾಣೆಯ ಪಾಂಗಿಂ (ಧರ್ಮನಾ. ೩-೩೯).

[ಬಟ್ಟ₂ (<ಬಟ್ಟಿತು) + ಸಾಣೆ₁]

**ಬಟ್ಟಳೆ** (ನಾ). ಗಟ್ಟಿಮಜ್ಜಿಗೆ : ಇಟ್ಟು ನವಸವ್ವಾರ್ಚಿಗೇಹದಗ್ರದಿ ನಿವಿರ್ದ ಬಟ್ಟಳೆಯ ಕಾಸುತಂ ಕ್ಷಾರಪ್ರಮಾಣದಿಂ ಪಿಟ್ಟನಿತ ಕೈಗೊಳಿಸಿ ಜೀರಗೆ ಮರೀಚವಂ ದಟ್ಟಮಾಗರವೆಱವುತ ಬಟ್ಟಯೊಳು ಘೃತವಿಂಗು ಪಯ ಫೇನವಮಂ ನೀಡಿ (ಜಂಗಪು. ೬-೨೪).

[ಬಟ್ಟ₁ + ಅಳೆ₂]

**ಬಟ್ಟಬಿ³** (ನಾ). ಹಾಸುಗಲ್ಲು ; ಚಪ್ಪಟೆಯಾದ ಕಲ್ಲು ; ಶಿಲಾಪಟ್ಟಕ : ಸಸಿಗಲ್ಲ ಬಟ್ಟಬಿ³ಗಳ ಮೇಲಿರಲೆಗಳು ನಸುನಿದ್ರೆಯಿಂದೊಱಗಿರಲು (ಕುಶಾಚಾಂ.೯-೦೬). 'ಪಟ್ಟಬಿ³' ಪರಾ. [ಬಟ್ಟ₂ (<ಪಡು₁) + ಅಬಿ³₄]

**ಬಟ್ಟಾಡಿಸು** (ಕ್ರಿ). ಹನಿಸು ; ಸುರಿಸು : ಮಗಳಂ ಮುದ್ದಾಡಿಸದ ಕಣ್ಣ ನೀರಂ ಬಟ್ಟಾ [ಪಾಠಾಂ. ದೇಱುಸಾ]ಡಿಸುವುದಮಂ (ಲೀಲಾವ ೭-೩೯ ವ). [ಬಟ್ಟು + ಆಡಿಸು]

**ಬಟ್ಟಾಡು. ಬೊಟ್ಟಾಡು** (ಕ್ರಿ). ೧. ದುಂಡಗಿರುವ ವಸ್ತುಗಳಾದ ಚೆಂಡು, ಗೋಲಿ, ಬಚ್ಚ ಮೊದಲಾದುವುಗಳಿಂದ ಆಡು ; ಚೆಂಡಾಟ, ಗೋಲಿಯಾಟ ಮೊದಲಾದುವುಗಳನ್ನು ಆಡು : ತನ್ನೋರಗೆಗಳಪ್ಪ ಪಲಂಬರ್ ಮಾಣಗಳ್ವೆರಸು ಪೂಱಪೊೞಲೊಳ್ ಬಟ್ಟಾಡುತ್ತಿರೆ (ಕಣ್ಣ.ಶಾ. ೬೩-೨೨): ವಟ್ಟಂದತ್ತುದು ಬೆಳ್ಳಿಯ ಬೆಟ್ಟಂ ಬಿಣ್ಪಂಗೆನಿಪ್ಪ ಕೋಟಿಕಶಿಲೆಯಂ ಬಟ್ಟಾಡಿದ ಬಾಹಾಬಳವಿಟ್ಟಳವೆಂಟನೆಯ ಕೇಶವಂಗಿದಿರಂಟೇ (ಸಂಶಾಖಾ. ೦೨-೬೦); ಹೇಮಾಚಳವಂ ಬಟ್ಟಾಡುವೀಶಪ್ರಮಥಸಮಿತಿ ಬಂದತ್ತು ಸಂರಂಭದಿಂದಂ (ಜಗಥ. ೦೯-೦೦). ೨. (ಕಣ್ಣೀರು) ತೊಟ್ಟಿಕ್ಕು ; ಹನಿ : ಇಟ್ಟ ಮುಸುಕಿಱದ ಸುಯ್ ನಯನದೊಳು ಹೊಳೆಹೊಳೆದು ಬಟ್ಟಾಡುವುದಕ (ಹಕಶಾ. ಕಂ ೨೦೯) ; ಸುಟ್ಟಿಗೊಂಡೇಟ್ಟ ಮುದಶ್ರು ವಕ್ಷಪುಟದೊಳ್ ಬಟ್ಟಾಡೆ (ಅಜಿಪು. ೨-೩೨) ; ಗಜಹಯಂಗಳ ಕಣ್ಣೊಳು ಬಟ್ಟಾಡಿದುವು ಕಂಬನಿಗಳು (ಕಬಿಪು. ೩೮-೦೯). **ಬೊಟ್ಟಾಡು:** ೨. ಏಣಾಂಕನಿಭವದನೆಯರು . . . ದಿಟ್ಟಿಗಳೊಳಗಶ್ರುಗಣ ಬೊಟ್ಟಾಡಲು ತೊಟ್ಟನೆ ಬಿಳ್ದಳಿದರು (ಶ್ರೀಶಾಂ. ೬-೩೮). [ಬಟ್ಟು+ಆಡು₁]

**ಬಟ್ಟಾಣ** 'ಬಟಾಣ' ನೋ.

**ಬಟ್ಟಾನೆ** (ನಾ). (?) : ಮೇಲ್ವಾಯ್ದ ಸಿಂಗಂಗಳೆಲ್ಲಮಾದಿಯ ಪಂದಿಯಂ ಪೇಱದ ಗ್ರಾಮಸಿಂಹಂಗಳಂತಿರ್ದುವು ಪೆಳಱ ಬೆಂಗುಡುವ ಬಟ್ಟಾ [ಪಾಠಾಂ. ಟ್ಟ] ನೆಗಳ್ಗಂ ಮಣೆಯೇಱಿಂದಿಱದತ್ತಿದಲ್ಲಿ ಪಾದದ ಮಸಿಯು ಮಳೀಮಸಮಾದ ಮುಸುಂಬು ಮುಸುಪಿನ ಮುಸುಂಬಿನಂತೆ ಕಡಲಂ ಕಟ್ಟಿಲೆಂದು ಬೆಟ್ಟವಂ ಕಿಟ್ತಿತ್ತಿದ ಸುಗ್ರೀವನಂತಿರ್ದುದು (ಅರ್ಜಬೀ. ೫-೦೦೩ ವ). [ ? ]

**ಬಟ್ಟ₁** (ನಾ). ೧. ಹೊಟ್ಟೆ ; ಉದರ ; ಬಸಿರು : ಬಟ್ಟಯೊಡೆವಂತೊಱಲುವವರು ನಗುತಂ ನಲಿವು ಹುಟ್ಟಿಯಾನಂದಮುಯರಾಗೆಲ್ಲರುಂ . . . ಹರಸುತ್ತಿರ್ದರು (ಸಿದ್ಧರಾ. ೯-೨೬) ; ಮೊಗರಸ ರಾಗವೇಱ³ ನೊಸಲಚ್ಚತರಂ ಪೂರೆಯೇಱ³ ಗಾತ್ರದಿಂದೊಗೆದು ಮುದಶ್ರು ಜಾಱ³ ತೆಳುವಟ್ಟ [ಟ್ಟ] ಯೊಳೊಯ್ಯನೆ ಸೂಲೆದೋಱಲ್ (ಶಾಬ್ದ.ಶಾ. ೩೩೯). ೨. ಒಂದು ಬಗೆಯ ಹೊಟ್ಟೆಯ ರೋಗ ; ಅಂಡವಾಯು : 'ಬಟ್ಟಕಟ್ಟು', 'ಬಟ್ಟಬೀಳು' ಪರಾ.

[ದೇ. ॥ ಮಲ. ವಟ್ಟ ; ತುಳು. ಕೊಡ. ಬಟ್ಟ]

**ಬಟ್ಟ₂, ಭಟ್ಟ₁** (ನಾ). ಧಾನ್ಯಗಳನ್ನು ಅಳೆಯುವ ಒಂದು ಅಳತೆ.–ಪರಿಮಾಣ : ಅದನ್ನು ವಾರಕ್ಕೆ ಮಾಡುತ್ತಿದ್ದವರು ಎಲ್ಲಾ ಕಳೆದು ವರ್ಷಕ್ಕೆ ನಾಲ್ಕು ಬಟ್ಟ ಬತ್ತ ಕೊಡುತ್ತಿದ್ದರು (ಶುಕಳ೩. ೬) ; ಒಂದು ಎರಡು ಮೂರು ಎಂಬಾಗ ಸಾವಿರ ಬಟ್ಟ ಭೂಮಿಯನ್ನು ನಟ್ಟೂ ಆಯಿತು (ಪಾಕಗೀ. ೯೦). **ಭಟ್ಟ₁** : ನಮ್ಮ ಸೀಮೆಯಿಂದ ಏಳು ಸಾವಿರ ಭಟ್ಟ ಅಕ್ಕಿಯನ್ನು ಮೂರು ತಿಂಗಳ ಒಳಗೆ . . . ಜಮಾಯಿಸಿ ಕೊಟ್ಟೇವು (ರಾಜೇಂದ್ರ. ೦೨೮).

[ ದೇ. ॥ ತಮಿ. ವಟ್ಟ; ಕೊಡ. ಬಟ್ಟ = ಎಂಬತ್ತು ಸೇರಿನ ಅಳತೆ ]

**ಬಟ್ಟ₃** 'ಭಟ್ಟ₂' ನೋ.

**ಬಟ್ಟ₄** (ನಾ). (?) : ಬಾವಿಯ ಕೇರ(ಱ) ನಿಟ್ಟಗೆಯು(ಯು) ಕಟ್ಟಿಸು ಸುಣ್ಣಮನಿಕ್ಕು ಕಲ್ಕೆಲಾ ಹಾಮಡಗಳೊಳ್ಪದಂತಿರಿಸು ಕಟ್ಟುಗೆ(ಗು) ಕಿಟ್ಟ ನೋಳಕ್ಕು ಮತ್ರಪಾ ಬಾವಿಯ ಬಟ್ಟ ನೀಳ್ದಗುಱ³ ಕಲ್ಗಳನೊಳ್ಪತನಿಕ್ಕಿ ಮತ್ತೆ ನೀಂ ಬಾವಿಯ ಸುತ್ತಲುಂ(ಮುಂ) ಮದಿಲನಿಕ್ಕಿಸು ಮಾಡಿಸು ನೀ(ಧಿ)ರ ಭಾಗ(ರ)ಕಂ (ಜಲ್ಪಸು. ೦೦-೬೧). [?]

**ಬಟ್ಟ₅** (ನಾ). (?) : "ಬಟ್ಟಯುದು ಸದ್ದೆಯಾಕ್ಕುಂ [ಪಾಠಾಂ. ಪೊಟ್ಟಲದು ಪಟ್ಟಯಾಕ್ಕು]" (ಶಂಗಶಾ. ೧೦೨-೩). [?]

**ಬಟ್ಟಕಟ್ಟು** (ಕ್ರಿ). (ಬಾಧೆಯುಂಟು ಮಾಡುವ) ಹೊಟ್ಟೆಯೊಳಗಿನ ವಾಯುವನ್ನು ನಿಲ್ಲಿಸು ; ಅಂಡವಾಯುವನ್ನು ತಡೆ : ಬಟ್ಟ ಬಿದ್ದು ಬಹಳ ತೊಂದರೆಯಾಗಿದೆ, ಬಟ್ಟಕಟ್ಟಬೇಕು (ಜಾಪ್ರ). [ಬಟ್ಟ₁ + ಕಟ್ಟು₁]

**ಬಟ್ಟಗೆ** (ನಾ). ಬಣ್ಣ ಬಳಿಯುವ ಕುಂಚ : ಕೂಡ ಬಟ್ಟಗೆಯುನ್ ತಿಟ್ಟ ವಿಡಲ್ಕಿದೇನ್ನರದನೇ (ಎಕ. ೪. ಅಕಳ. ೯೯-೯; 1070); ಮದನನೆ ಬಟ್ಟಗೆಯೊಳ್ ತಿಟ್ಟವಿಟ್ಟಪೊಲ್ ನೃಪನೆಸೆದಂ (ಶಬ್ದಪು. ೯-೦೨೬) ; ಪಳಕಿನ ಪಲಗೆಯುಮಂ ಬಣ್ಣವಣ್ಣಗೆಯ ಬಟ್ಟಗಗಳಂ ತಾನೆ ತಂದು ಕೊಟ್ಟು (ಲೀಲಾವ. ೭-೩೯ ವ). [<ಸಂ. ವರ್ತಿಕಾ./ತಮಿ. ವಟ್ಟಿಕೈ]

**ಬಟ್ಟಗೆವಲಗೆ** (ನಾ). ಚಿತ್ರವನ್ನು ರಚಿಸುವ ಹಲಗೆ,–ಫಲಕ : ಬರೆಯಲೆಂದು ಬಟ್ಟಗೆವಲಗೆಯುಂ ತರಿಸಿ ತಿಟ್ಟವಿಟ್ಟು ಬರೆವನ್ನೆಗಂ (ಅಜಿಪು. ೯-೬೩ ವ); ಶರತ್ಕಾಲದ ಜಳಧರಮಂ ಕಂಡದಱ ದೊರೆಯ ಚೈತ್ಯಾಲಯಮಂ ಮಾಡಿಸುವೆನೆಂದು ಬಟ್ಟಗೆವಲಗೆಯುಂ ತರಿಸಿತದಾಕಾರಮಂ ಬರೆಯೆ (ಪಾರ್ಶ್ವಪು. ೨೩); ಬಟ್ಟಗೆವಲಗೆಯೊಳಾಗಳೆ ದಿಟ್ಟಗೆ ನೇರ್ಪಟ್ಟು ತೋಱ³ ನೆಟ್ಟನೆ ಭೂಪಂ ತಿಟ್ಟವಿಡಲ್ (ಪಾರ್ಶ್ವಪು. ೯-೬೬). [ಬಟ್ಟಗೆ+ಪಲಗೆ]

**ಬಟ್ಟಜಾರು** (ಕ್ರಿ). = ಬಟ್ಟಬೀಳು: ಬಟ್ಟಜಾರಿ ಬಹಳ ತೊಂದರೆಯಾಗಿದೆ (ಜಾಪ್ರ). [ಬಟ್ಟ₁+ಜಾರು₁ (<ಜಾಱು₁)]

**ಬಟ್ಟಿಡು. ಬೊಟ್ಟಿಡು** (ಕ್ರಿ). ೧. ಕಸ್ತೂರಿ, ಚಂದನ, ಕುಂಕುಮ ಮೊದಲಾದುವುಗಳಿಂದ ಹಣೆಯ ಮೇಲೆ ಗುಂಡಾದ ಗುರುತನ್ನು ಇಡು,–ತಿಲಕವಿಡು : ದಿಟ್ಟ ಹತ್ತೀತೆಂದು ಬಟ್ಟೀಡಿದ್ದೆ ಭೃಶದ ಹಣೆಮೇಲೆ ಸುಟ್ಟುಹೋಗಲೆಂದು ಕಟ್ಟಿಗಾಣ್ಣ (ಸಿದ್ಧಪು. ೯-೯೯). ೨. (ಕಣ್ಣೀರು) ತೊಟ್ಟಿಕ್ಕು; ಹನಿ : ಬಟ್ಟಿಡುವಾನಂದಾಶ್ರುವಿನೊಳಗಂಪು ತೊಟ್ಟನೆ ಸುಱಿಯ ಕೇಳಿವಳು (ಕುಶಾ. ೯-೦೦೦). **ಬೊಟ್ಟಿಡು** : ೧. ಕಳ್ತೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು (ಜಂಶಾ. ೯-೬೭ ವ) ; ಪಟ್ಟವಂ ನೆರೆದು ಕಟ್ಟ ಬೊಟ್ಟಿಟ್ಟರ್ . . . ಆತನಾ ಏನಪ್ರುನಿಟಲಾಗ್ರದೊಳ್ (ಅಜಿಪು. ೯-೫೮). ೩. ಹಣೆಯಂ ಮೇಲೆ ತಿಲಕವಿಟ್ಟುಕೊಳ್ಳು : ರೋಷವ ಹಿಡಿದರೀಗಳೆ ಸುಟ್ಟು ಬೊಟ್ಟಿಡುವನು ಜಾತ್ರೆಯುವ (ಶುಬ್ದ.ಶ. ೦೬-೦೬); ಬೆಟ್ಟ ಕರ್ಪೂರವೊಂದು ಬೊಟ್ಟಿಡಲು ಬೂದಿಲ್ಲ (ಸರ್ವಜ್ಞ. ೦೦೦). [ಬಟ್ಟು + ಇಡು₁]

**ಬಟ್ಟಿತು. ಬಟ್ಟಿತ್ತು** (ನಾ). ೧. ಗುಂಡಗಿರುವುದು; ದುಂಡಾದುದು; ವರ್ತುಲಾಕಾರವಾದುದು : "ಸೊನ್ನಲಿಗೆಯೊನೆ ಬಟ್ಟಿತಕ್ಕು" (ಶಬ್ದಸ್ಮೃ. ೯೬); ತಾಱಗೆಮ ನೀಳ್ದ ಪುರ್ವ ನಿಡುಗಣ್ ಪೊಱ³ಯಲ್ಲದ ಬಟ್ಟಿತಪ್ಪ ಬಾಯ್ದೆಱ³ (ಶಂಶಾ. ೦-೦೦೯) ; ಅನಿಲಹತಿಯಿಂದಂಬರಕೆ ನೆಗೆದ ವನಧಿಮಧ್ಯದ ಬಟ್ಟಿತಪ್ಪ ಚಿಪ್ಪೊ . . . ಎನಲೆಸೆದುದಸ್ತಾದ್ರಿಯೊಳ್ ಚಂದ್ರಮಂಡಲಂ ಮುನ್ನೇಸಱೂಗಮದೊಳು (ಕಬಿಪು. ೧೦-೯೦). (ಗು). ೨. ಗುಂಡಾದ ; ವರ್ತುಲಾಕಾರವಾದ : ಬಟ್ಟಿತು ಮೊಲೆ, ಬಟ್ಟಿಮೊಲೆ (ಶಬ್ದಸು. ೩೦೯ ಪ್ರಯೋ). **ಬಟ್ಟಿತ್ತು** : ೧. "ನಿಸ್ತುಲಂ, ವರ್ತುಳಂ ವೃತ್ತಂ–ಈ ೩ ಬಟ್ಟಿತ್ತು" (ಕರಾಟು. ೦೨೯–೬೯).

**ಬಟ್ಟಿತಾಗಿ, ಬಟ್ಟಿತ್ತಾಗಿ**–ಗುಂಡಾಗಿ : ದುಂಡಾಗಿ : ವರ್ತುಲಾಕಾರವಾಗಿ : ಬಟ್ಟಿತಾಗಿಯಂ ಹಣೆಗೆ ಸುಣ್ಣದ ಬೊಟ್ಟಸಗಿ . . . ದಾಸಿಯರಿಟ್ಟಣಿಸಿದರು ಸಂಜೆಯಲಿ ಪುರವರದ ಮಧ್ಯದಲಿ (ಜಾಶಾ. ೦೩-೪); ಬಟ್ಟಿತಾಗಿಯ ಬೊಟ್ಟನಿಟ್ಟು ಬಟ್ಟವ ಕೃಸ ಪಟ್ಟಿಪ ಸ್ವರ್ಗ ಪಡೆಯುವದೆ

ಸಾಣೆಕಲ್ ಕೆಟ್ಟ ಕೀಡೇನು (ಶಬ್ದ. ೧೦೨೦); ನೀನವೃೂಡೆ ಬಹುಭಾಷಿ ತುಂಬಿದ ಸಿದ್ದಿಗೆಯಂತೆ ರಥದ ಗಾಲಿಯಂತೆ ಬಟ್ಟಿತ್ತಾಗಿರ್ಪ ನಿನ್ನನೆಂತುಯ್ಯಲ್ಪರ್ಕುಂ (ಶಂಕರ. ೦೩೦-೨೦); ಕೈವಾರವಂ ಬೀಸಿದಂತೆ ಬಟ್ಟತ್ತಾಗಿ ತೋರ್ಪುದು ಸೊನ್ನೆ (ಕಬುದ.೦೭ ವೃತ್ತಿ). ಬಟ್ಟಿದಂ = ದುಂಡಾದ ಶರೀರವುಳ್ಳವನು ; ಗುಂಡಗಿರುವವನು : ಸದಯಂ ಕಿಚ್ಚನೆ ಪೆರ್ಬ್ಬಟ್ಟಿದನತಿಚ್ಚವಳಂ ಸಖಿಪ್ರಿಯಂ ಸುಕಿಯೆನಿಕುಂ (ಶಾಕಿ. ೨-೨೦). ಬಟ್ಟಿದುವು (ಬಹುವ) : ಮೊಲೆಗಳ್ ಬಟ್ಟಿದುವಾಗಿ ಕರ್ಗಿದ ಕುರುಳ್ ಕೊಂಕಾಗಿ ಕಣ್ಗೆಯ್ದು (ಶಂಕಥಾ. ೪-೭೪); ಸಿಂಹದ ಕಟಿಯಂತೆ ಬರ್ಪಮಾತ್ರಾಂತಂಗಳಾಗಿ ಬಟ್ಟಿದುವಾದ ಕಟಿತಟಂಗಳುಂ (ಶಾರಪು. ೨-೩ ಪ).

[ <ಬಟ್ಟು ]

ಬಟ್ಟಿತ್ತು 'ಬಟ್ಟಿತು' ನೋ.

ಬಟ್ಟಿಬೀಳು (ಕ್ರಿ). ಹೊಟ್ಟೆಯಲ್ಲಿ ಗಾಳಿ ತುಂಬಿಕೊಂಡು ನೋವಾಗು; ಅಂಡವಾಯು ಕಟ್ಟು : ಬಟ್ಟಿಬಿದ್ದು ಬಹಳ ತೊಂದರೆ ಕೊಡುತ್ತಿದೆ (ಲೂಕ). [ಬಟ್ಟಿ$_{2}$ + ಬೀಳು$_{1}$ (<ಬೀಲ್)]

ಬಟ್ಟಿಸುಂಕ 'ಭಟ್ಟಿಸುಂಕ' ನೋ.

ಬಟ್ಟು, ಬಟ್ಟು$_{1}$, ಬಟುವು, ಬಟುಹು, ಬಟ್ಟಿ$_{1}$, ಬೊಟ್ಟು$_{2}$ (ನಾ). ೧. ವೃತ್ತ; ಮಂಡಲ; ಬಿಂಬ : "ಬಟ್ಟೆಂದು ಮಂಡಲಂ" (ಕಶಾ. ೪೬-೨೪); ಹುಣ್ಣಿಮೆಯ ಸುಸಿಯ ಬಟ್ಟೊಸರ್ದ ಪರಿತರ್ಪ ದಿವ್ಯಾಮೃತದ ತೊಣ್ಣೆಯೊ . . . ಈ ಕೃತಿಯ ರಸವೊ ಪೇಳೆಂದೆಲ್ಲ ರಸಿಕರಾನಂದಿಪಂತೆಸಗುವುದು (ಕದ್ಯ. ೦-೩೦); ನೆಯ್ದಿಂಗಳ ಬಟ್ಟಕಟ್ಟಿದಿರೊಳು ಕಂಡಖಿತ ಚಕೋರಿಯಂತವಳು ಉಟ್ ಪೆರ್ಚಿದಳೆದೆಯೊಳಗೆ (ಕುಮಾಸಂ. ೩೨-೦). ೨. ಗುಂಡಾಗಿರುವ ವಸ್ತು, ಆಕೃತಿ ಮುಂತಾದುವು : ಭ್ರಮದ್ಭ್ರಮರಸಂಕುಳಂ ಬನದೊಳಟ್ಟುಯಿಂ ದಾಡುತಿರ್ಪ, ಮನ್ಮಥನ ಪೊನ್ನ ಬಟ್ಟುಗಳ ಪೋಲ್ಕೆಯಂ ಪೆಟ್ಟಿಕುಂ (ಸುಕುಮಾ. ೪-೩೦); ಪಳುಕಿನ ಬಟ್ಟುಗಳ್ ಗಗನದಿಂದುದಿರ್ದಪ್ಪುವು ಚಿತ್ರಮೆಂಬಿನಂ ಫಳಫಳನಭ್ರದಿಂದ ಮಿಡುಕುಂಬನಿ ಸೂಸೆ (ಜಗಂ. ೪-೦೮); ಕರಂ ಕಾಯ್ದು ಕಬ್ಬೊನ್ನ ಬಟ್ಟು ಸೀವರದ ಪನಿಯೊಳಾಳುಗುವ (ಜೀಮಂ. ೬೦-೦೦ ಪ). ೩. ಒಂದು ಬಗೆಯ ಗುಂಡಾದ ಆಭರಣ : ಪೊಳೆಯೊಳಲೆದ ಪವಳದ ಬಟ್ಟಿನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮನಂಗರಾಗರಸದುರುಳಿಯಂತಾದುದು (ಶಂಕಥಾ. ೨-೩೪ ಪ). 'ಬೈತಲೆಬಟ್ಟು' ಪರಾ. ೪. ಗುಂಡಾಗಿರುವ ಗುರುತು; ದುಂಡಾದ ಚಿಹ್ನೆ : ಹಣೆಬಟ್ಟಿನ ಕೈಯ ಒತ್ತಿ ಓಡಿಯಲು ಬ್ಯಾಡ ನೆತ್ತರೀದಾವು ಬೆರಳೀಗೆ (ಕಸ್ವಾ. ೦೨೦). ೫. ಹಣೆಯಲ್ಲಿ ಇಟ್ಟುಕೊಳ್ಳುವ ಕಸ್ತೂರಿ, ಕುಂಕುಮ, ಗಂಧ, ಸಾದಂ ಮೊದಲಾದುವುಗಳ ದುಂಡನೆಯ ಗುರುತು; ತಿಲಕ : ಹಾರಮನಿಕ್ಕಿ ಪೊಚ್ಚಪೊಸಮಲ್ಲಿಗೆಯಂ ಮುಡಿದಿಂ ತುಱುಂಬಿ ವಿಸ್ತಾರದಿನಿಟ್ಟು ಚಂದನದ ಬಟ್ಟಂ (ಚಕೋರಚ. ೬-೦೬೪) ; ಪುರಸ್ತ್ರೀಯ ಮುಖಕ್ಕಿಟ್ಟ ಬ[ಪಾಠಾಂ. ಬೊ]ಟ್ಟೆನೆಯೆನಿಸಿ ಭೂಪಾಲಗೇಹಂ ವಿರಾಜಿಸುವುದು (ಕದ್ಯ. ೩-೨೩); ಭೂರಮಣಿಯ ಪೆಣ್ನೊಸಲ ರತ್ನದ ದಿವ್ಯಚಾರುತರದ ಬಟ್ಟಿವಂತೆ ಶ್ರೀರಂಗಪಟ್ಟಣವೆಸೆದಿಹುದು (ಕಂಕಂ. ೨-೨೪). ೬. ಆಟದಲ್ಲಿ ಉಪಯೋಗಿಸುವ ದುಂಡಾದ ಬಿಲ್ಲೆ ಮತ್ತು ಅದರಿಂದ ಆಡುವ ಆಟ : ಮಣೆಯೊಂದು ಬಟ್ಟಿನ ಮೇಗೆ ಪದಿನಾಲ್ಕು ಬಟ್ಟನೊಂದೊಂದಱ ಮೇಗೋಳಿಯೊಟ್ಟಾಡುತ್ತಿರ್ಪನ್ನೆಗಂ (ಕಮಾ. ೩೩-೨೪); ದುರ್ಯೋಧನಪ್ರಭೃತಿಗಳ್ ನೂರ್ವರುಂ ಧರ್ಮಪುತ್ರಾದಿಗಳಯ್ವರುಂ . . . ಗುಳ್ಳಿಗೊಟ್ಟಿ ಬಟ್ಟುಳೆಸೆಂಡುಂ ಪೊಡೆಸೆಂಡೆಂಬಿವನಾಡುತ್ತೊಡವಳೆದರ್ (ಶಂಕಥಾ. ೨-೩೦); ಕಮಳಮುಖಿ . . . ಮಿಱುಗುವ ನೀಲದ ಬಟ್ಟಂ ತಿಱಕಲ್ಗಳನಾಡುವಂತೆ ಕಣ್ಗೆಸೆದಿರ್ದಳ್ (ಶಾರಂಗ. ೨೩). ೭. ತೂಕ ಮಾಡಲು ಉಪಯೋಗಿಸುವ ಗುಂಡಗಿರುವ ಲೋಹದ ಬಿಲ್ಲೆ; ತೂಕದ ಬಿಲ್ಲೆ : ಒಂದೊಂದು ವಿಧವಾದ ತೂಕದ ಬಟ್ಟುಗಳೂ ಅಳತೆಯ ಸಾಧನಗಳೂ ವ್ಯವಹಾರದಲ್ಲಿದ್ದುವು (ಶಾಗ್ಯ. ೩). ವಾಣಿಜ್ಯಜೀವಿಗಳಾದ ಈ ನಗರದ ನಿವಾಸಿಗಳು ಬಟ್ಟುಗಳ ತೂಕವನ್ನು ಕರಾರುವಾಕ್ಕಾಗಿ ನಿರ್ಣಯಿಸತಕ್ಕದ್ದು ಸಹಜವೇ ಆಗಿದೆ. ಕೆಲವು ಬಟ್ಟುಗಳ ತೂಕ ಒಂದಕ್ಕಿಂತ ಒಂದು ಇಮ್ಮಡಿಯಾಗಿದೆ (ಗತಿಕ. ೬೩). ೮. ಗುಂಡಗಿರುವ ನಾಣ್ಯ : ಆತಗೊಂದುಸಾವಿರ ಹೊನ್ನ ವೃತಿಮಾಸವಿಕ್ಕುವೆವ ದೊಂದುದಿನಕರ್ಥಕಹ ಬಟ್ಟಿಲ್ಲದೆೞ್ತಿದಱ ಕಾರಣವ ಸಾಮಭೇದದಿಂದಱಿಯದಡೆ (ಸಿಂಗಿರಾ ೫೦-೦೦). ೯. ಹಪ್ಪಳ, ಚಪಾತಿ ಮೊದಲಾದುವನ್ನು ಲಟ್ಟಿಸಲು ಮಾಡುವ ಕಣಕದ ಸಣ್ಣ ಉಂಡೆ : ಕುಟ್ಟಿ ಕಣಕದೊಳು ಸಂಬಣ್ಣಯಾಱಿಱೊಳೊಂದು ಬಟ್ಟವಾಲೆರೆಯಿಕ್ಕಿ ಮಿದಿದು ಬಟ್ಟಂ ಮಾಡಿ ದಟ್ಟಿತೆಂದೆನಿಸಿ ಲತೆಯಿಱಿದು ಹಂಚಿನೊಳಿಕ್ಕಿ ಸುಟ್ಟು ಪರಿಯಣಕೆ ತೆಗೆದು (ಸೂಶಾ. ೦-೦೦); ಹಪ್ಪಳದ ಹಿಟ್ಟು ಕಲಸಿ ಬಟ್ಟನ್ನು ಮಾಡುತ್ತಿದ್ದರು (ದೂಕಿ. ೨೯೪). ೧೦. ನೀರು ಮುಂತಾದ ದ್ರವ ಪದಾರ್ಥಗಳ ಹನಿ; ತೊಟ್ಟು : "ಕಾಳು, ಹನಿ, ತಟಕು, ತೊಟ್ಟು, ಬಟ್ಟು, ಅಗಳು" (ಕಂಕಾಹು. ೬೦). ೧೧. (?) : ಇಟ್ಟ ನಿಸಾಂತ ಹೇತುಗಳಿನಾದವುಗುಬ್ಬಿಗೆ ಬಟ್ಟು ಬೀಱಮೊಲೊಟ್ಟನೆ ಸೊನ್ನು ಬೀಟಿಡೆಯ × × × ಗೊಣ್ಣು (ಎಕ. II. ೦೩೪-೦೭; ಸು. ೫೬೦). ಬಟ್ಟು$_{1}$ : ೨. ಆಗಸದ ಗುಣವೆ ಬಯಲು . . . ರೂಪೆ ಬಟು ಕುಱುಹೆ ಬಿಂದು ವಿನೀತಲ್ಕೆ ಗರುವ ಕೇಳ್ಸದಾಶಿವನೆಯಧಿದೈವ (ಶಿತತ್ತ್ವ. ೬-೫-೪೬); ಈ ಬಟುವಿನ ಭೂಮಿಯಂ ಹಗ್ಗದಿಂದ ಸುತ್ತಣ ವಳಯವನಳೆದು . . . ಬಂದುದು ಕಂಭದ ಲಬ್ಧ (ಕ್ಷೇತ್ರಗ. ೦೩-೩). ಬಟುವು : ೨. ಕೊರೆಕೊರೆದಾಣಗ್ಗೆದಿಹ ಚಂದ್ರಕಾಂತದ ಶಿಲೆಯ ಬಟುವುಗಳೋ (ಜರಾಪು. ೦೩೧-೪೦) ; ೧೮ ಚೌಕದ ಕಮಲ ೧ ರತ್ನಕಂಬಳೀ ಬಟುವು ೧ ಕಾರ್ಪ ಭಾರಕಿ ೧ ಮಾಮುಡಾವು ಭಾರಕಿ (ಎಕ. XIV. ಪಂಕಪ. ೨೯೩-ಕ್ರಿ. ೦೪೩ 1847). 'ಬಟುವುದಿಂಬು' ಪರಾ. ಬಟುಹು : ೨. "ಅಮೃತದಲಿ ಬಟುಹಿನಲಿ ದೈತ್ಯರಲಿ . . . ದೃಢದಲ್ಲಿ ಮೇಣ್ ವೃತ್ತನುಮಮನಿಕ್ಕು" (ಮುಂಗಡ. ೧೩೪-೬೫); ಬೆರಲ ದಪ್ಪದೊಳು ಬಟುಹಾಗಿ ಕಳಿಲೆಯನ್ನುತ್ತರಿಸಿಕೊಂಡು (ಸೂಶಾ. ೬-೩). ಬಟ್ಟಿ$_{1}$ : ೧. ಇಂತಿರ್ದ್ದಿದು ತೊಳಪ ನೇಸಱಾ ಬಟ್ಟವುದು ನಡುಬಾನನ್ ಅಡರ್ದು ನಿಲ್ವನ್ನೆವರವ್ (ಅಂತಿಗೂ. ೨೦-೪೦೩). 'ಬಟ್ಟವಡೆ' ಪರಾ. ಬೊಟ್ಟು$_{2}$ : ೩. ಮುತ್ತಿನ ಬೊಟ್ಟು ಬುಗುಡಿಯ ಚಕ್ರ ನವರತ್ನ ಕೆತ್ತಿದ ತೋಳ ಪಡಿಕರವು (ಶಾಂತೀಶ. ೩-೬೪); ರನ್ನದೋಲೆ ಮುತ್ತಿನ ಬೊಟ್ಟು ಪೊಳೆವ ಮೂಗುತಿ ಕಂಠಮಾಲೆ . . . ಕಂಕಣಾಂಗಳಂ ಲಲನೆಯರ್ ಗಿರಿರಾಜಸುತೆಗೆ ಸಿಂಗರಿಸಲ್ (ಕಂತ್ರಿ. ೩೬-೪); ಎಸೆವ ರತ್ನದ ಬೊಟ್ಟಿನ ಹರಳೋಲೆಯ . . . ಬಿಸಜಗಂಧಿಯರ್ಕೈದಿದರು (ಕಂಪಿ. ೨೦-೦೪). 'ತಾಳಿಬೊಟ್ಟು', 'ಬೈತಲೆಬೊಟ್ಟು' ಪರಾ. ೫. "ತಿಳಕಂ, ತಮಾಳಪತ್ರಂ . . . ಲಲಾಟಿಕಾ — ಈ ೭ ಬೊಟ್ಟು" (ಕಹಾಯು. ೬೪-೩೬೭); ಕಳೆಯ್ದುಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು (ಶಂಕಥಾ. ೪-೬೭ ವ); ನೊಸಲೊಳಿರಿಸಿದ ವಿಭೂತಿಯ ಬೊಟ್ಟು ಬೆಳಗುತಿರೆ (ಇಹರ. ರೇ. ೩೨-೪); ಹಣೆ ತುಂಬ ಚಂದ್ರನಂತಹ ಕುಂಕುಮದ ಬೊಟ್ಟು ಇತ್ತು (ಅಮೋಲ. ೭೭). ೧೦. ಬೊಟ್ಟನನಿತು ಸುಖಕಾಗಿ ದುಃಖವನೊಂದು ಬೆಟ್ಟದನಿತನುಂಬರಕಟಾ (ಕರಶ. ೬೫-೩೬); ಜೈನಸಾಮ್ರಾಜ್ಯದಲ್ಲಿ ಧರ್ಮದ ಹೆಸರಿನಲ್ಲಿ ಒಂದು ಬೊಟ್ಟೂ ರಕ್ತಪಾತವಾಗಲಿಲ್ಲ (ಶಾರಶ. ೦೬೬): ಖಂಡುಗ ಹಾಲಿಗೆ ಒಂದೇ ಬೊಟ್ಟು ಹೆಪ್ಪು (ಗಾದೆ).

ಬಟ್ಟಸಂಬು = "ದುಂಡಾದ ಮೊನೆಯುಳ್ಳ ಬಾಣ" (ಶಂಶದೀ. ೫೦೩): ಅಂಗನ ಬಟ್ಟಸಂಬುಗಳ ಬಲ್ಸರಿ ಸೋಂಕುಗುಂ (ಶಂಶಕಾ. ೧೨-೨೦೬).
ಬಟ್ಟುವಾಗಿ = (ಆಲಂ) ಪೂರ್ಣವಾಗಿ : ಆ ಹತ್ತು ಸಹಸ್ರವರಹಗಳನ್ನು . . . ಈಗಲೇ ಕಯ್ಯೊಳಿಸಿ ಕುಡಬೇಕು . . . ಒಂದೇ ಗಂಟೆನಲ್ಲಿ? ಬಟ್ಟುವಾಗಿ ? (ಶಟ್ಟಿಅ. ೧೯೪-೩).

[<ಸಂ. ವೃತ್ತ./ಪ್ರಾ. ವಟ್ಟ./ತಮಿ. ಮಲ. ಪೊಟ್ಟು, ವಟ್ಟ, ಪಟ್ಟು; ತುಳು. ಬೊಟ್ಟ; ಕೊಡ. ಬೊಟ್ಟ್; ತೆಲು. ಬೊಟ್ಟು, ಬಟುವು]

ಬಟ್ಟುಗುರ್ (ನಾ). ಗುಂಡಗಿರುವ ಉಗುರು ; ದುಂಡಾದ ನಖ : ಚಂದ್ರನೆಸೆದತ್ತುದಯಾವನಿಭೃತ್ತ್ರಿವಿಕ್ರಮಂ ನೆಗಪಿದ ಪಾದದುಂಗುಟದ ಬಟ್ಟುಗುರೆಂಬಿನಮಂಬರಾಗ್ರದೊಳ್ (ಶಕಅ. ೬-೨೨).

[ಬಟ್ಟು + ಉಗುರ್$_1$]

ಬಟ್ಟುಗೆಯ್ (ಕ್ರಿ). ದುಂಡು ಮಾಡು; ಉಂಡೆ ಮಾಡು : ಸಿಡಿಲಂ ನೆಟ್ಟಗೆ ಬಟ್ಟುಗೆಯ್ದು ತೆಱನಪ್ಪಿ ದಿಟ್ಟಿಯುಂ (ಶಾಂತೀಶ. ೩-೫).

[ಬಟ್ಟು + ಕೆಯ್$_1$]

ಬಟ್ಟುಗೆಯ್ದು (ನಾ). ದುಂಡಗಿರುವ ಆಯುಧ; ಚಕ್ರ : 'ಬಟ್ಟುಗೆಯ್ದು' ಪರಾ.

ಬಟ್ಟುಗೆಯ್ದುಗಯ್ಯ = ಚಕ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನಂ; ವಿಷ್ಣು : "ಸಿರಿಯರಸನಿಂಗಡಲಳಿಯು ಸೌರಿ . . . ಕಾವನಯ್ಯಂ ಬಟ್ಟುಗೆ[ಶಾಕಾಂ. ಗ]ಯ್ದುಗಯ್ಯಂ ಭಾವಿಸೆ" (ಕಬ್ಬಮಂ. ೬).

[ಬಟ್ಟು + ಕೆಯ್ದು]

ಬಟ್ಟುವೆಱು (ಕ್ರಿ). ದುಂಡಾಗು; ವೃತ್ತಾಕಾರವನ್ನು ಪಡೆ : ಬಟ್ಟುವೆತ್ತ ಮೌಕ್ತಿಕದ ಛತ್ರ ಸೂರೆವಾನ ಘಟಿಸಿ ನಿಂದಿವೆ (ಶೃಶಾಅ. ೨-೨೯).

[ಬಟ್ಟು + ಪೆಱು$_1$]

ಬಟ್ಟುವೊಱಗು (ನಾ). ಗುಂಡಗಿರುವ ದಿಂಬು. —ಲೋಡು : ಮಡಿಸಿ ಹಚ್ಚಡಿಸಿ ರತ್ನದ ಬಟ್ಟುವೊಱಗ ಸಂಗಡಿಸಿದರತಿಮುದದಿಂದ (ಶಂಪಅ. ೬-೦೩).

[ಬಟ್ಟು + ಒಱಗು$_1$]

ಬಟ್ಟೆ$_1$ (ನಾ). ಹಾದಿ; ಮಾರ್ಗ; ದಾರಿ : "ಅಧ್ವಾ, ಪಂಥಾಃ . . . ಪದ್ಯಾ, ನಿಗಮಃ—ಈ ೧೨ ಬಟ್ಟೆ" (ಕಣಾಟಮು. ೯೩-೦೦೫); ಬಟ್ಟೆಯೊಳೊರ್ವನಂ ಪೆಡಂಗಯ್ಯೊಡಿಯೆ ಕಟ್ಟಿ ಒಂದೆವಱೆಗುಟ್ಟಿ ಪೊಲಲ ಜನಂಗಳ್ ಮುಸುಱಿಕೊಂಡು ನೋಡುತ್ತಮೊಡವರೆ (ವಡ್ಡಾರಾ. ೦೩-೨೯) ; ಗದಾದಂಡಮಂ ಕೊಂಡೊರ್ವನೆ ವೈಶಂಪಾಯನಸರೋವರದ ಬಟ್ಟೆಯಂ ನಡೆಗೊಂಡು (ಶಂಶಕಾ. ೦೩-೬೦ ವ); ಯಮನಂದನನ ಪಾರ್ಥನ ಕಾಲೊಡೆದು ಬಸಿವರುಣಜಲದಲಿ ಬಟ್ಟೆ ಕೆಸಱಾಯ್ತು (ಕುವ್ಯಾಆ. ೯-೦).

ಬಟ್ಟೆಯಂ ಬಡಿ, ಬಟ್ಟೆಯ ಬಡಿ = (ಆಲಂ) ದಾರಿಹೋಕರನ್ನು ಹೊಡೆ; ದರೋಡೆ ಮಾಡು : ಭರದಿಂದ ಬಟ್ಟೆಯಂ ಬಡಿದು ಹರದರ ಕೆಯ್ಯ ಶರನಿಧಿಯ ಮುತ್ತುವಂ ತಂದು (ಸಕ್ಯುಕೌ. ೦೦-೨೯); ಬಟ್ಟೆಯ ಬಡಿವ ಕಳ್ಳಂಗೆ ಬೇಹು ಸಂದು ಕಳವು ದೊರಕಿದಂತೆ (ಅಶಂ. ೨೦೯-೯೯೦); ಬಟ್ಟೆಯ ಬಡಿದ ಕಳ್ಳಬಂಟನ ಭೂಪಾಲರು ಬೇಹನಿಕ್ಕಿ ಹಿಡಿತರಿಸಿ ನಾಳೆ ಶೂಲಕ್ಕೆ ತೆಗೆಸುವರೆ (ಶವಶ. ೬-೫). ಬಟ್ಟೆಯ ಕಣ್ = ದಾರಿಯ ಎದುರು,—ಮುಂಭಾಗ : ಬಟ್ಟೆಯ ಕಣ್ಣೊಳದ್ದಂ ಬಟ್ಟಿರ್ದ ವೃದ್ಧವಾನರನಂ ಕಂಡು (ಶಂಶಕಾ. ೬-೩೦ ವ). ಬಟ್ಟೆಯ ಬಾಧೆ = ದಾರಿಯಲ್ಲಿ ಕಳ್ಳಕಾಕರಿಂದ ಉಂಟಾಗುವ ಹಿಂಸೆ,—ತೊಂದರೆ : ಕವಿಳಾಸಪುರದಲ್ಲಿ ಸುಂಕ ಸಾದ ತಳಸಾರಿಗೆ ಬಟ್ಟೆಯ ಬಾಧೆ ಗ್ರಾಮಬ್ರಯನಿಧಿ . . . ವಿವರ (ಎಪಿ. XXI, ೨-೬೨; 1260). ಬಟ್ಟೆಯ ಬೊಮ್ಮ = ಕಾಲುದಾರಿಯಲ್ಲಿರುವ ಕ್ಷುದ್ರದೇವತೆಯ ವಿಗ್ರಹ : ಬಂಜೆ ಮಕ್ಕಳ ಬಯಸಿ ಬಟ್ಟೆಯ ಬೊಮ್ಮಂಗೆ ಹರಸಿಕೊಂಡಂತಾಯಿತ್ತಯ್ಯ (ಶವವ. ೨೦-೦೬). ಬಟ್ಟೆಯರ್ = ದಾರಿಹೋಕರು : ವಿವಿಧದೇವಗೃಹ ದಾಟವಾಟದಿಂ ಮಱುಗಿ ಬಟ್ಟೆಯರ ನೋಟ್ಟ ನೋಟದಿಂ . . . ನೆಱೆಯೆ ಸೊಗಯಿಪಾಯೇಕಚಕ್ರವಂ ಮೆಚ್ಚಿದಂ ಹರಿಗನಮಿತವಿಕ್ರಮಂ (ಶಂಶಕಾ. ೩-೨೨).

[<ಪ್ರಾ. ವಟ್ಟ, ವಟ್ಟಾ./ಸಂ. ವರ್ತ್ಮನ್./ಹಿಂ. ಮರಾ. ವಾಟ್/ತುಳು. ಕೊಡ. ಬಟ್ಟೆ]

ಬಟ್ಟೆ$_2$ (ನಾ). ೧. ವಸ್ತ್ರ; ಅರಿವೆ: "ಪಥದೊಳಗಱುವೆಯೊಳು ಬಟ್ಟೆಯು" (ಕಬ್ಬಮಂ. ೯೦); ಬಟ್ಟೆಯ ನೀರೊಳಗದ್ದಿ ಒಣಗಿಸಿ ಉಟ್ಟುಕೊಂಡರೆ ಅದು ಮಡಿಯಲ್ಲ (ಪುರಂದ. ೦-೦೦೯-೦); ಬದುಕಿಗೆ ಅಗತ್ಯವಾದ ಅನ್ನ ಬಟ್ಟೆಗಳನ್ನು ಒದಗಿಸುವ ವೃತ್ತಿಗಳು ಕೆಲವು (ಹಂಕ್ರ. ೯). ೨. (ಆಲಂ) ಋತುಸ್ರಾವ: 'ಬಟ್ಟೆಗುತ್ತೆ' ಪರಾ.

ಬಟ್ಟೆಬರೆ = ವಸ್ತ್ರ ಮುಂತಾದುವು : ಅರಿವೆ ಅಂಚಡಿ : ಉಳಿಕೆ ಬಟ್ಟೆಬರೆ ದವಸಧಾನ್ಯ (ಶಾಕೇಂದ್ರ. ೨೫); ತನಗಾಗಿ ಬಟ್ಟೆ ಬರೆಗಳನ್ನೂ ಒಡವೆಗಳನ್ನೂ ಕೊಂಡುಕೊಂಡಳು (ಆಕ್ರಮು. ೫೬); ಕಂದಾಯಕ್ಕಾಗಿ ಕೊಟ್ಟು ಬಡ್ಡಿ, ಬಟ್ಟೆಬರೆಗೆ ಕೊಟ್ಟು ಮಿಕ್ಕರೆ ಹೊಟ್ಟೆಪಾಡಿಗಾಗುತ್ತಿತ್ತು (ಹುಶ್ರಿಹ. ೬೯). ಬಟ್ಟೆಬೊಂತೆ = ಬಟ್ಟೆಬರೆ : ಬಟ್ಟೆಬೊಂತೆಗಳು ಕಾಲುಮಣೆಗಳ ಮೇಲೆ ಚೆಲ್ಲಾಡಿದ್ದುವು (ಋಶಿವಾ. ೮೬). ಬಟ್ಟೆಹೋಗು = ಋತುಸ್ರಾವವಾಗು; ರಕ್ತಸ್ರಾವವಾಗು : ಈ ಸಾರಿ ವಿಪರೀತ ಬಟ್ಟೆಹೋಗಿ ಅವಳು ತುಂಬ ದುರ್ಬಲಳಾಗಿದ್ದಾಳೆ (ಕೂಶ).

[ <ಪ್ರಾ. ಪಟ್ಟ./ತುಳು. ಕೊಡ. ಬಟ್ಟೆ; ತೆಲು. ಬಟ್ಟ./ಸಂ. ಪಟ್ಟ ]

ಬಟ್ಟೆಕೆಱೆ (ನಾ). ಒಂದು ಊರಿನ ಹೆಸರು ; ಈ ಧಾರವಾಡ ಜಿಲ್ಲೆಯ ಈಗಿನ ಬೆಟಗೇರಿ : [ನಾ]ಗಧೋರನೆಂಬೋ ಬಟ್ಟೆಕೆಱೆಯ [ಧಾಱುಗೆ] ಮುಱಿಯವಡದ ಪೊಲ (ಕಶಾ. XI-i, ೨೦-೫; 893). 'ಬಟ್ಟಕೆಱೆ' ಪರಾ. [ಬಟ್ಟೆ$_1$ + ಕೆಱೆ]

ಬಟ್ಟೆಗ (ನಾ). ಹಾದಿಯಲ್ಲಿ ನಡೆಯುವವನಂ ; ದಾರಿಗ; ಪ್ರಯಾಣಿಕ : ಗಾಡಿಕಾರ್ತಿಯರ ಗಾಡಿಗೆ ಸೋಲ್ತು ನಿಲ್ವ ಬಟ್ಟೆಗರ . . . ಬಡದ ಬಗ್ಗಿಪ ಕೋಗಿಲೆಗಳ ಚೆಲ್ವನೊಳಕೊಂಡಿರ್ಪುದು (ಕಬ್ಬಿಕಾ. ೦೫) ; ಬಟ್ಟೆ ಬಟ್ಟೆಯ ಕಿಲಕಿಲದೊಳಃ ನೀರರವಟ್ಟಗೆಯಿಟ್ಟರಲ್ಲಿ ಬಟ್ಟಜವ್ವನೆಯರಿರಲು ನೋಡಿ ಬಟ್ಟೆಗರಿಟ್ಟಣಿಸಿಯೆ ನಿಂದಿಹರು (ಅಂಶಶ. ೨-೦೦೫) ; ತೊಲಗೆ ನೀರಾಸೆ ತೊಲಗದೆ ನೀರೆಱೆವಾ ಲಲನೆಯರಾಸೆ ಬಟ್ಟೆಗರು ಸಲೆ ನೋಡುತವರ ನೀರೀಂಟುತಿಹರು (ಕುರಾಶಾಂ. ೨-೯೦). [ಬಟ್ಟೆ$_1$ + —ಗ]

ಬಟ್ಟೆಗಟ್ಟು (ಕ್ರಿ). ದಾರಿಯನ್ನು ಕಟ್ಟು ; ಅಡ್ಡಗಟ್ಟು ; ದರೋಡೆ ಮಾಡು; ಸುಲಿ : ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದುಱೆ ದೊಡೆ (ವಡ್ಡಾರಾ. ೬೬-೦೩) ; ನೆತ್ತಿ ತಱಿಂಟಾಗೆ ಪುಳ್ಳಿಯನಡಕುವ ಬಡವರ್ಗಂ ಬಟ್ಟೆಗಟ್ಟಿ ಬಡಿವ ಬೇಡರ್ಗಂ ಸಿರಿಯೇಕಾಗದು (ರಶೂಶು. ೬-೦೩೬). [ಬಟ್ಟೆ$_1$ + ಕಟ್ಟು$_1$]

ಬಟ್ಟೆಗಾಣ್ (ಕ್ರಿ). ಹಾದಿಯನ್ನು ಕಾಣು ; ದಾರಿಯನ್ನು ತಿಳಿ ; ಮಾರ್ಗವು ಗೋಚರವಾಗು: ನಿಮ್ಮನಾಭಿಮಂಡಳಮನೊಳಪೊಕ್ಕು ಒಳಗೆ ತೀವಿದ ಪುಡಿಗತ್ತುರಿಯ ಸುಟ್ಟುರೆಯನಸಿದನೆ ಬೇಱೊಂದು ಬಾಸೆಯೆಂಬಂತೆ ನೆಗಪಿ ಮೇಗೊಗೆದು ಬಟ್ಟಮೊಲೆಯಿಟ್ಟೆಡೆಯೊಳ್ ಬಟ್ಟೆಗಾಣದೆ ಬಳಸಿ ಸುಳಿದಾಡಿಯುಂ (ಶಂಪ್ರಶು. ೬-೯ ವ); ನಭಂಬರಂ ಪೊದಟ್ದುದವಿದ ಕೋಂಟೆಯಂ ನುಗುಳ್ದು ಪೋಗಲಹಃಪತಿ ಬೇಱೆ ಬಟ್ಟೆಗಾಣದೆ ತಡೆದಿರ್ಪನಲ್ಲಿ ಪೊಣರ್ವಕ್ಕಿಗೆ ಸಂತಸವಾಗೆ ಸಂತತಂ (ಶುಕ್ರಶು. ೨-೬೯).

[ಬಟ್ಟೆ$_1$ + ಕಾಣ್]

ಬಟ್ಟೆಗಾರಕ (ನಾ). (?) : ಬಟ ಬಟ್ಟೆಗಾರಕದ ತೆರನು (ಎಪಿ. VII. ಶಿಕಶಿ. ೩-೨೫ : 1671). 'ಬಟ್ಟೆವರಿಯಂ' ಪರಾ. [?]

**ಬಟ್ಟೆಗಾವಲ್** (ನಾ). ಪ್ರಯಾಣದ ದಾರಿಯಲ್ಲಿ ಬರಬಹುದಾದ ವಿಪತ್ತಿನ ವಿರುದ್ಧವಾದ ರಕ್ಷಣೆ,-ಕಾವಲು : ಮಹೇಶ್ವರನ ಬಟ್ಟೆಗಾವಲ್ಗೆ ಕರ್ಣಜ ಮೋಘನಾದರಂ ಕೊಟ್ಟು (ಕೈ.ಬಟ. ೯-೬೯). [ಬಟ್ಟೆ$_1$ + ಕಾವಲ್$_1$]

**ಬಟ್ಟೆಗುತ್ತೆ** (ನಾ). ಋತುಸ್ರಾವಕ್ಕೆ ಸಂಬಂಧಿಸಿದ ರೋಗವನ್ನುಳ್ಳವಳು (?) : ಕಟ್ಟು ಜಾತಿಯನಾರನಾವಡೆ ಮುಟ್ಟಿಕೊಂಬರು ಹಾನಿನಾಸೆಗೆ ಬಟ್ಟೆ[ಪಾಠಾಂ. ಬಟ್ಟು, ಬಟ್ಟ, ಬಿಟ್ಟ]ಗುತ್ತೆಯರಿಂತು ವಾರವುರಂಧ್ರಿಯರು (ಜಕ್ಕ. ೯೦-೩೬). 'ಬಟ್ಟಗುತ್ತೆ'ಹೋ.
[ಬಟ್ಟೆ$_2$ + ಕುತ್ತ + — ಎ$_2$]

**ಬಟ್ಟೆಗೆಡು** (ಕ್ರಿ). ದಾರಿತಪ್ಪು ; ದಿಕ್ಕುಗೆಡು : ತಿಳಿಸಿದರೆ,ಕತ್ತಲಲಿ ಮಿಂಚು ಹೊಳೆದಂತಾಗಿ, ಬಟ್ಟೆಗೆಡುವುದು, ಕುರುಡು ದಟ್ಟೈಸಿ ! (ಕಂಠ್ರಸ. ೨೦-೦೯) ; ಒಂದು ಕಡೆ ಸ್ವಾತಂತ್ರ್ಯ, ಒಂದು ಕಡೆ ಮಾಧುರ್ಯ ನಡುವಿಹೆನು ಬಟ್ಟೆಗೆಟ್ಟು (ಅಗ್ನಿಹಂ. ೬). [ಬಟ್ಟೆ$_1$ + ಕೆಡು$_1$]

**ಬಟ್ಟೆಗೊಡು** (ಕ್ರಿ). ಹಾದಿಯನ್ನು ಕೊಡು ; ದಾರಿ ಮಾಡಿಕೊಡು ; ಅವಕಾಶ ಕೊಡು : ವ್ಯಡನಲ್ಲದನ್ಯದೈವಕ್ಕೆ ನಮಿಸಿದಡೆನ್ನ ಹೊಡೆದು ಮುಕ್ಕುವುದು ದಾವಾಗ್ನಿ ಮೇಣಲ್ಲದಿರ್ದಡೆ ಬಟ್ಟೆಗೊಟ್ಟಪುದು (ಹಕಹ. ೦೦-೨೩) ; ರಘುಜರಾಮನ ಮನದ ಕೋಪದುಬ್ಬೆಗೆ ಬಟ್ಟೆಗೊಟ್ಟುದಂ . . . ನೆನೆನೆನೆದು ನಿಟ್ಟುಸಿರ್ವಿಟ್ಟು ಸುಯ್ಯಂತುದಧಿ ತೆರೆ ಪೆರ್ಚುಗೆಯೊಳಿರ್ದುದು (ಕೈ.ಬಟ. ೬-೨). [ಬಟ್ಟೆ$_1$ + ಕೊಡು$_1$]

**ಬಟ್ಟೆಗೊಲೆ** (ನಾ). (ಓಡಾಟವಿರುವ) ಹಾದಿಯಲ್ಲೇ ಕೊಲ್ಲುವುದು : ಇನಿತವಸ್ಥೆಯ ಬಟ್ಟೆಗೊಲೆಯಲ್ಲದಲೆಯಣ್ಣ ಇನಿತವೆಯ್ದದೆ ಮೇಲೆ ಮಾಳ್ಪ ವಧೆಗಳಿವಣ್ಣ (ಶಾಕಂಕ. ೯-೦೬೩). [ಬಟ್ಟೆ$_1$ + ಕೊಲೆ$_1$]

**ಬಟ್ಟೆದಪ್ಪು** (ಕ್ರಿ). ಹಾದಿ ತಪ್ಪು ; ದಾರಿ ತಪ್ಪು : ಕಲ್ಪಿಗೆಡೆಯಾವುದೊ ಪಾಟಿಂಸು ಬಟ್ಟೆದಪ್ಪಿ ಮುಂ ನೆಗಟ್ಟಿಡೆಯಿಲ್ಲ. ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ (ಕಂಶಕಾ. ೬-೨೦); ಮನುಜಜೆವೆತ್ತ ದಚಿಳಮುಪಶಾಂತಿಯ ಬಟ್ಟೆದಪ್ಪೆ ಕಡೆಯೊಳ್ ಕುಯೋನಿಯೊಳ್ ಮತ್ತಾಟ್ಟುಗಂ (ಕಂಠ್ರಕು. ೬-೨೦) ; ವೃತ್ರನೆನಿಸಿದನಾ ಭಯಂಕರನೇತ್ರನು . . . ಅಟ್ಟಹಾಸವ ಮಾಡಿದಡೆ ಕಂಗೆಟ್ಟರಮರರು . . . ಬಟ್ಟೆದಪ್ಪಿದರಿನ ಶಶಿಗಳು (ಏಕಾಗ. ೬-೯-೦೦). [ಬಟ್ಟೆ$_1$ + ತಪ್ಪು$_1$]

**ಬಟ್ಟೆದೆಗೆ** (ಕ್ರಿ). ಓಡಿ ಹೋಗು ; ಪಲಾಯನ ಮಾಡು : ಬಟ್ಟೆದೆಗೆದೆವು ನಿಮ್ಮ ರಕ್ಕಸಫುಟ್ಟೆಯರ ಗಾಢಣೆಗೆ ಸೈರಿಸದೆ (ಕೊರಕಾ. ೩-೬-೪೦) ; ಬಟ್ಟೆದೆಗೆದನು ಬಳಿಕ ಕಮಲಜನಿಷ್ಟದೇವತೆಯೆನಿಪ ದನುಜಘರಟ್ಟನತಗೆ ಜಯತು ಜಯ ಜಗದೀಶ ಜಯಯೆನುತ (ಏಕಾಗ. ೯-೩-೬).[ಬಟ್ಟೆ$_1$ + ತೆಗೆ$_1$]

**ಬಟ್ಟೆದೋಱಿಸು** (ಕ್ರಿ). ದಾರಿಯನ್ನು ತೋರಿಸು ; ಮಾರ್ಗವನ್ನು ತೋರು : ಉಱಿದೊಡಮಟ್ಟಿದೊಡಂ ಬಟ್ಟೆದೋಱಿಪ ರಸಭರಿತಾ ಚರಿತಮ್ಮನೆ (ಕಾವ್ಯಾಕ್ಕ. ೯-೨೦). [ಬಟ್ಟೆ$_1$ + ತೋಱಿಸು]

**ಬಟ್ಟೆದೋಱು** (ಕ್ರಿ). = ಬಟ್ಟೆದೋಱಿಸು : ಗುಣಾರ್ಣವಭೂಭುಜಂಗೆ ಕಟ್ಟಿದಿರೊಳೆ ಬಟ್ಟೆದೋಱುವವೊಲಂದೊಗೆದಂ ಕಮಲೈಕಬಾಂಧವಂ (ಹಂಪಕಾ. ೯-೦೦೦) ; ಪುರೂರವನೆಂಬ ಬೇಡಂ ಸಾಗರಸೇನಮುನಿವರರ್ ದಿಶಾಮೂಢರಾಗಿ ಪೊಲಗೆಟ್ಟಿರ್ದಡು ಬಟ್ಟೆದೋಱಿ ಧರ್ಮಮಂ ಕೇಳ್ದು . . . ದೇವನಾಗಿರ್ದ (ಕಾಪುಂಪು. ೦೬೩). [ಬಟ್ಟೆ$_1$ + ತೋಱು]

**ಬಟ್ಟೆನಡೆ** (ಕ್ರಿ). ಹಾದಿಯಲ್ಲಿ ನಡೆ ; ಮಾರ್ಗವನ್ನು ಕ್ರಮಿಸು ; ಪ್ರಯಾಣವನ್ನು ಮುಂದುವರಿಸಂ : ಜಾನಪದಾಂಗನಾಜನದ ಗಾಡಿಗೆ ಸೋಲ್ತು . . . ಪಥಿಕರ್ ಮಱಿದಿಲ್ಲೆನಲ್ ಪರಿಮ್ಲಾನತೆ ಸೈತು ಬಟ್ಟೆನಡೆಯಲ್ಪಡೆಯರ್ ವಿಷಯಾಂತರಾಳದೊಳ್ (ಮಲ್ಲಿಪು. ೨-೨೬).
[ಬಟ್ಟೆ$_1$ + ನಡೆ$_1$]

**ಬಟ್ಟೆಪಾಟು** (ನಾ). ಹಾದಿಯಲ್ಲಿ ಹಾಡುವ ಹಾಡು : ಹಂದರದ ಬೇರೊಂದು ಮಗ್ಗುಲಿನಲ್ಲಿ ಬಟ್ಟೆಪಾಟು ಓಪಪಾಟುಗಳನ್ನು ಹಾಡಿಕೊಂಡು ಬಂದ ನಾಲ್ವರು ಕೊಡವರು ದುಡಿ ಬಡಿಯುತ್ತ . . . ಮುಹೂರ್ತ ಪಾಟನ್ನು ಹಾಡಲು ಪ್ರಾರಂಭಿಸಿದರು (ಹುಂಚಾ. ೨೦೨).
[← ಕೊಡ. ಬಟ್ಟೆಪಾಟ್]

**ಬಟ್ಟೆಬೆಂತರ** (ನಾ). ದಾರಿಯ ದೆವ್ವ ; ಮಾರ್ಗದಲ್ಲಿನ ಪಿಶಾಚಿ : ದೊರೆಯಿಂತು ಚಿತ್ತವೈಕಲ್ಯದಿಂ . . . ಕಿಲ್ತು ನವಿರಂ ಶರೀರಮಂ ವಸನಂಗಳಂ, ಚರಿಸ ಬಟ್ಟೆಬೆಂತರನಂತೆ (ಶ್ರೀಶಾವಾ. ೯೯-೯೯೯). [ಬಟ್ಟೆ$_1$ + ಬೆಂತರ]

**ಬಟ್ಟೆಯಱಿ** (ಕ್ರಿ). ದಾರಿಯನ್ನು ತಿಳಿ ; ಮಾರ್ಗವನ್ನು ಅರಿ : ಹುಟ್ಟುಗುರುಡನು ಕಟ್ಟ ಕಣ್ಣವನ ಕೈಹಿಡಿದು ಬಟ್ಟೆಯಱಿಯದೆ ಗುಳಿಯ ಬಿದ್ದವನ ತೆಱಹುದು (ರೀಣ್ವಶೋ. ೦೩-೦೨) ; ವರತತ್ತ್ವದ ಬಟ್ಟೆಯಱಿ ದವರಲ್ಲರ ಪರಮುಕ್ತಿಕನ್ನೆ ಮೋಹಿಸುವ ಪರವಶ್ಯದ ವ್ರತಗಳ ನೊಂದೊಂದನು ವರಿವೀವುದೆಂದು ನುಡಿದರು (ಜಟಂಕಾಂ. ೨-೦೦).
[ಬಟ್ಟೆ$_1$ + ಅಱಿ]

**ಬಟ್ಟೆಯುರುಳಿ** (ನಾ). ಬಟ್ಟೆಯ ಉಂಡೆ ;- ಅರಿವೆಯ ದೊಂದೆ : ಶ್ರೀರಂಗರಾಯನ ಶಿರಸ್ಸನ್ನು ಮೆಲ್ಲನೆತ್ತಿ ಇಳಿಹಿ, ಆತನ ಚಾದಿಯ ಬಾಯ್ಗೆ ಟ್ಟನ್ನು ಬಿಟ್ಟಿ ಬಿಸುಟು, ಗಿಡಿವಟ್ಟ ಬಟ್ಟೆಯುರುಳಿಯನ್ನೆತ್ತಿ ಬಿಸಾಡಿ, ಕಯ್ಯಾಲ್ಗಳ ಬಿರುಗಟ್ಟುಗಳನ್ನು ಬಿದುರ್ಚುತ್ತಿರುವನು (ವಾಂಕೃತ. ೦೦೩-೨೯). [ಬಟ್ಟೆ$_2$ + ಉರುಳಿ$_1$]

**ಬಟ್ಟೆವರ್** (ಕ್ರಿ). ಹಾದಿಯಲ್ಲಿ ನಡೆ ; ಪ್ರಯಾಣ ಮಾಡು : ಭಟಾರಾ ನಿನ್ನ ಬಟ್ಟೆವಂದುಪವಾಸಂಗೆಯ್ದು ಸೇದೆವಟ್ಟಿರ್ (ವಡ್ಡಾರಾ. ೯೦-೨೩).
[ಬಟ್ಟೆ$_1$ + ಬರ್ (<ವರ್)]

**ಬಟ್ಟೆವರಿಯ ?** (ನಾ). (?) : ಅಱುಪದಿಂಬಗ್ಗಗಿಂ ಕೊಟ್ಟ ವ್ಯವಸ್ಥೆ ಯಾವುದನ್ನೊಡುಟ್ಟಿಗೆರಡು ವರಿಸ ಬಟ್ಟೆವರಿಯರ ಪತ್ರುವರಿಸಂಬಱಂ ಮತ್ತ ವರ್ಣಾಂ (ಶಾಇ. XI-i, ೯೩-೦೫; 870). 'ಬಟ್ಟೆಗಾರಕ' ಪರಾ. [?]

**ಬಟ್ಟೆವಿಡಿ** (ಕ್ರಿ). ದಾರಿಯನ್ನು ಹಿಡಿ ; ಮಾರ್ಗವನ್ನು ಅನುಸರಿಸು : ಬೆಳ್ದಿಂಗಳಂ ಬಿತ್ತರಿಸಿದಂತಿರ್ದ ದಶಪುರದ ಬಟ್ಟೆವಿಡಿದು ನಡೆಯುತ್ತ (ಕಾದಂಬ. ೯೨೬) ; ಶರನಿಧಿಯ ತೀರದ ಪಟ್ಟಣವ ಪಡಿತಳಿಸಿ ಪಾರಾವಾರ ದೋರಣದ ಬಟ್ಟೆವಿಡಿದೆಡಕಿಕ್ಕಿ ಮೇರುವಿನಿಟ್ಟಣಿಯ ಜನಪದದ ರಾಯರ ಕಟ್ಟಿ ಕೇಳುತ ಕಂಡ ಮ್ಲೇಯಲಿ ಹಿಡಿದುವಗಲದಲಿ (ಕೊರಕಾ. ೯-೯-೨೩) ; ಬಟ್ಟೆವಿಡಿವವರಿರ್ವರುಂ ಮಯೂರಧ್ವಜನ ಪಟ್ಟಣಕೆ ನಡೆತಂದರ್ (ಕೈ.ಬಟ. ೨೬-೯). [ಬಟ್ಟೆ$_1$ + ಹಿಡಿ$_1$]

**ಬಟ್ಟೆವೋಗು** (ಕ್ರಿ). = ಬಟ್ಟೆವಿಡಿ : ಆರಾನುಂ ಬಟ್ಟೆವೋಪರ್ ಬೇಡಂ ಬಿಟ್ಟಿರ್ದರ್ (ವಡ್ಡಾರಾ. ೯೯-೩) ; ವಿನಯದಿನಾವಿಾ ಭುವನೈಕನಾಥನಂ ಸಲ್ಗೆವರಸು ಬೇಡುತ್ತಿರೆ ಬಂದನುವಿಸುವ ನಿಮ್ಮ ಮುದುಗಣ್ಣನದೋಳದೇನುಂತೆ ಬಟ್ಟೆವೋಪೊಡೆ ಪೋಗೆಂ (ಆದಿಪು. ೯-೦೦೩); ಬಟ್ಟೆವೋಪರ್ಬಟಲ್ಕೆ ಗಟಿದುದನಱಿವ ಬಾಡುಂದಳಿರ ಪಾಸಿಕೆಗಳುಮಂ (ಕಾದಂಉ. ೨೩೬).
[ಬಟ್ಟೆ$_1$ + ಪೋಗು$_1$ (<ಪೋ$_1$)]

**ಬಟ್ವಾಡೆ** 'ಬಟವಾಡೆ' ನೋ.

**ಬಡ** (ಸಪೂರೂ). 'ಬಡವು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. ೧. ಸೊರಗಿದ ; ಕ್ಷೀಣವಾದ : 'ಬಡಗುದುರೆ' ಪರಾ. ೨. ಸಣ್ಣದಾದ ; ಚಿಕ್ಕದಾದ : 'ಬಡಗಣ್$_1$' ಪರಾ. ೩. ಅಲ್ಪಶಕ್ತಿಯ ; ಅಸಮರ್ಥವಾದ : ಬಡವಿರಾಟನನಾರು ಬಲ್ಲರು ದ್ರೋಣನದಿರಿಸಲಿ (ಕುಪ್ಯಾರ್ಕ್ರಿ. ೧೭-೯೦). ೪. ಬಡತನದಿಂದ ಕೂಡಿದ ; ದಾರಿದ್ರ್ಯದಿಂದ ಇರುವ : ಸಿರಿವಂತರನಿತ್ತ ಬನ್ನಿಮೆಂದಾದರದಿಂ ಕರೆವ ಬಡಜೈನನಾದೊಡೆ ಕರೆಯದ ದುರ್ಗರ್ವಿ ಜೈನನನೆನಿಕುಮು ಕಷ್ಟಂ (ಸಮಕ. ೯ ೩೩).

**ಬಡಬಡಾಗು** = ೧. ಅತಿಬಡವಾಗು ; ಸೊರಗು ; ಕೃಶವಾಗು : ಮಯ್ಯುನ್ನಿರ್ವರುಮುಱ್ ನೋಂತಭಯಮನರಾಗಿಯುಂ ದುರಿತಭೀತಿಯಿಂ ನಡುಗಿ ಬಡಬಡಾದಂತಾದರ್ (ಕಾಂತಿ. ೬-೭೦) ; ತಳಿದನಶನಾದಿ ತಪದಿಂ ಕಳೇವರಂ ಬಡಬಡಾಗಿ ಗಿಡಿಗಿಡಿಜಂತ್ರಂ ಮಿಳಿಮಿಳಿಗಣ್ಗಳೆನಲ್ ನೋಂತಳ್ (ಸುಕುಮಾ. ೯.೬) ; ಬಡಬಡಾದುದು ನಿನ್ನಂಗವಲ್ಲರಿ (ಶ್ರೀಪಾಂ. ೧೧-೯೧). ೨. ಅತಿ ಚಿಕ್ಕದಾಗು ; ಹ್ರಸ್ವವಾಗು : ಕಾದಲರ ಪುರುಡಿ ನೊಸಳದೊಡನೆ ಇರುಳ ಬಳಗಂ ಬಡಬಡಾಗೆಯುಂ (ಶಂಕ್ರಕೃ. ೬-೬೩ ಕ).

**ಬಡ ಮಾಡು** = ಬಡವಾಗುವಂತೆ ಮಾಡು ; ಸೊರಗಿಸು ; ಕೃಶಗೊಳಿಸು : ಆ ಕೋಡಗೂ . . . ಬ್ರತೋಪವಾಸಂಗಳಿಂ ಮೆಯ್ಯಂ ಬಡ ಮಾಡಿ [ಪಾಠಾಂ. ದಂಡಿಸುತ್ತಂ] ಸಲ್ಪುದೊಂದು ದಿವಸಂ . . . ಮುನಿವರರ ಪಕ್ಕದೆ ಬಿರ್ದತ್ತು (ವಡ್ಡಾರಾ. ೧೬೩-೨೪) ; ತನುವಂ ಬಡ ಮಾಡಿ ಕಾಡಿ ದಂಡಿಸಿದವನಂಗಜನ್ಮನ ಕವರ್ತೆಯು ದಂಡದ ಪಾಂಗಿದೆಂತುಟೋ (ಶಂಕರಾ. ೩-೧೩). [<ಬಡವು]

**ಬಡಕ₁** (ನಾ). ೧. ಬಡಕಲಾಗಿರುವುದಂ; ಸಣಕಲು : ಪ್ರಹ್ಲಾದನೆಂದರೆ ಪ್ರತ್ಯಕ್ಷ ಆಹ್ಲಾದಮೂರ್ತಿ...ಅಶಕ್ತನಲ್ಲದಿದ್ದರೂ ವ್ಯ ಬಡಕ (ಶಿಕಾಶ. ೬೭). ೨. ಬಡಕಲಾಗಿರುವವನು ; ಸಣಕಲವ್ಯಕ್ತಿ : ಕ ಪ್ರತ್ಯಯಕ್ಕೆ—ಬಡಕಂ, ನಿಡುಕಂ (ಶಮಂದ. ೨೦೫ ವೃಯೋ) ; ರಣಜಿತಸಿಂಗಮಹಾರಾಜನು ಗಿಡ್ಡನೂ ಬಡಕನೂ ಆಗಿದ್ದನು (ಕಂಸಂ. ೨೦೪) ; ಗೋದೀ, ನಾನು ಬಡಕ ಹುಟ್ಟಾ ಇದ್ದೀನಿ. ಚಹದಿಂದ ಬಡಕಾಟ ಆಗಿಲ್ಲ (ರಕ್ತಕ್ಷ. ೦೬೪).

[ಬಡ (<ಬಡವು) + — ಕ₃]

—**ಬಡಕ₂** '—ಬಡಿಕ₂' ನೋ.

**ಬಡಕಟ್ಟಿ** (ನಾ). ಕೃಶವಾಗಿರುವವಳು ; ಬಡಕಲಾಗಿರುವವಳು : ನಿಮಗೇನು ಜಡಾ ಗಿಡಾ ಆಗಿತ್ತೇನ್ರೋ ? ಬಾಳ ಬಡಕಟ್ಟಿ ಆಗಿ ಕಾಣ್ತೀರಿ (ಪುಶಮು. ೨೨). [ಬಡ (<ಬಡವು) + ಕಟ್ಟು₂ + —ಇ₂]

**ಬಡಕಬೆ** (ನಾ). (?) : ಮೂಱನೆಯ ವರಿಸಕೆ ಪ ೩ ಬಡಕಬೆ ನೂಱಕೆ ಪ ೨ ಕಿನ್ನುನಿ ನೂಱಕೆ ಪ (ಎಕ. XIV, ತಿನಪು. ೬೨-೨೦; 1309). [?]

**ಬಡಕರಿಸು** (ಕ್ರಿ). ಕೃಶವಾಗು ; ಸೊರಗು ; ಒಣಗು : ಬಸಿರ್ಬತ್ತಿ ಬಾಯ್ಬತ್ತಿ ಬಡಕರಿಸಿ. ಪಲ್ದೋಱಿ[ಪಾಠಾಂ. ಬಾಯ್ಬತ್ತಿ ಪಲ್ದೋಱಿ] ಬೆನ್ನು ಕುಸಿದು ಮೊಗಪೊಣಗಿ ಕಣ್ಣಿಂದಿ ಕಾವುಳಂ ಕವಿದೊಡಂ (ಅದಪು. ೫. ೯೩೬-೨೬). [< ಬಡ + — ಇಸು₁]

**ಬಡಕಲ** (ನಾ). ಕೃಶನಾಗಿರುವ ವ್ಯಕ್ತಿ : ಅವನೊಬ್ಬ ಬಡಕಲ (ಉಪ).

[ಬಡಕಲು + — ಅ₇]

**ಬಡಕಲು** (ನಾ). ೧. ಸೊರಗಿದುದು ; ಕೃಶವಾದದಂ : ಕಾಯಿಲೆಯಿಂದ ನರಳಿ ಬಡಕಲಾಗಿದ್ದ ಅವಳ ಮೈಯನ್ನು ನೋಡಿ ನನ್ನ ಮನಸ್ಸಿಗೆ ತುಂಬಾ ಸಂಕಟವಾಯಿತು (ಕೃಕಾಶ. ೪೪). (ಗು). ೨. ಸೊರಗಿದ; ಕೃಶವಾದ; ಒಣಗಿದ : ಒಂದು ಬಡಕಲು ಕುದುರೆಯ ಮೇಲೆ ಅವಳನ್ನೇರಿಸಿ . . . ನಡೆಸುತ್ತಿದ್ದನು (ಕಂಕ. ೩೦); ಆವಳ ತಾಯಿಯು . . . ಒರಟುಒರಟಾದ ಬಡಕಲು ಹೆಂಗಸು (ಮಹಾತ್ಮಾ. ೯೪). ೩. (ಆಲಂ) ಸತ್ತ್ವವಿಲ್ಲದ ; ನಿಸ್ಸಾರವಾದ : ಅಕ್ಕಿ ಶೀರ ಬಡಕಲು ಆಹಾರ (ಅಕಾಪಾ. ೬೪).

ಬಡಬಡಕಲು (ದ್ವಿರುಕ್ತಿ) : ಅಮಾಂಸಃ, ದುರ್ಬಲಃ, ಛಾತಃ-೩ ಬಡಬಡಕಲು ಮೈಯುಳ್ಳವನು, ನರಪೇತಲವನು, ಬಲವಿಲ್ಲದವನು, ಅಶಕ್ತನು (ಸಿದ್ಧಾಂತ. ೦೬೦). [ಬಡಕು + —ಅಲು (<—ಅಲ್₂)]

**ಬಡಕಾಟ**, ಬಡಕಾಣಿ (ಗು). ೧. ಸೊರಗಿದ; ಬಡಕಲಾದ : ಕೋಟಕೋಟಿ ಬಡಕಾಟ ದಂಪತಿಯ ಮಾಡಿ ನಾಡ ಲೂಟಿ (ಕರಾಪ. ೬೦-೯). (ನಾ). ೨. ಬಡಕಲು ಮನುಷ್ಯ; ಕೃಶವಾಗಿರುವವನು; ಸೊರಗಿದವನು : ಗೋದೀ, ನಾನು ಬಡಕ ಹುಟ್ಟಾ ಇದ್ದೀನಿ. ಚಹದಿಂದ ಬಡಕಾಟ ಆಗಿಲ್ಲ (ರಕ್ತಕ್ಷ. ೦೬೪). ಬಡಕಾಣಿ : ಧನಪತಿ ರವಿಗಂ ನೋಡಿ ಬಡಕಾಣಿ ಸೊಡರಂ ನೀಡುವೊಲ್ಪುಡಿದಿದ್ದರದೆ ನಡೆನಡೆಯೆಂದರ್ (ಹರಿಶ್ಚ. ೨-೧೦೬). [ಬಡ(<ಬಡವು) + ಕಾಟ್ಟಿ]

**ಬಡಕಾಣಿ** 'ಬಡಕಾಟ' ನೋ.

**ಬಡಕಾಯತ್** 'ಬಡಗಾಯತ್' ನೋ.

**ಬಡಕಾಯಿಸು** (ಕ್ರಿ). ೧. ಏಳಿಗೆ ಹೊಂದು ; ಅಭಿವೃದ್ಧಿಯನ್ನು ಹೊಂದು : ಆ ಮಾಧವ ಒಬ್ಬನನ್ನು ಬಿಟ್ಟರೆ, ತಂದೆ ಮಕ್ಕಳೆಲ್ಲ ತುಂಬ ಬಡಕಾಯಿಸಿದ್ದಾರೆ (ಪಾರಿಜಾ. ೦೬೬). ೨. ಬೆಳೆಸು ; ಅಭಿವೃದ್ಧಿಪಡಿಸು: ಅವನು ಸಣ್ಣದಾಗಿ ಅಂಗಡಿ ಹಾಕಿಕೊಂಡು ವ್ಯತ್ತಿಯನ್ನು ಆರಂಭಿಸಿ, ಅದನ್ನು ಈಗ ಬಡಕಾಯಿಸಿ ದೊಡ್ಡದ ಮಾಡಿದ್ದ (ಊರುಕ. ೬೯).

[ಬಡಕ₀ (ಫ ← ಹಿಂ. ಬಢನಾ) + —ಇಸು₁]

**ಬಡಕು** (ನಾ). ೧. ಕೃಶವಾದುದು : ಬಡವಾದುದು. ೨. ಬಡತನ. ೧, ೨ : ಕೊಂಕು ಬಡಕೆಂಬ ನುಡಿಯಾ ಪಾಡ ಮಡದಿಯರವಯವಗಳೊಳಲ್ಲದೆ ಬಿಱುನುಡಿಯಿಲ್ಲ (ಕಂಪಪ. ೨-೧೪). ೩. ದರಿದ್ರ ; ಬಡವ.

ಬಡಕು ಭಗ್ಗು = ಬಡವರು ಮುಂತಾದವರು ; ಬಡಬಗ್ಗರು : ಊರೊಳಗೆ 'ಬಡಕು ಬಗ್ಗು' ಉಳಿಯಬೇಕೋ ಬೇಡವೊ? (ಕಳುಕು. ೦೦೨).

**ಬಡಬಡಕನೆ** = (ಆಲಂ) ಮೆಲ್ಲನೆ ; ನಿಧಾನವಾಗಿ : ಬಡಬಡಕನೆ ಸುಳಿದುದು ಸುರಭಿಸಮೀರಂ ಬಂದ ಬಸಂತದ ಸಮಯದೊಳು (ಕಥಾಸಾ. ೦೦-೪). [ಬಡಕ₁ + —ಉ₄]

**ಬಡಕ್ಕು** 'ಬಡಗು' ನೋ

**ಬಡಗ₁** 'ಬಡಗು' ನೋ.

**ಬಡಗ₂** (ನಪು). ೧. ಉತ್ತರದಿಕ್ಕಿನವನಂ : ನಿನ್ನಂಬೆಯಂ ಕೊಲ್ಲಿಸಿದ ತವಸಿಯುಂ, ಮೇಣ್ ಕೊಂದ ಆ ಬಡವು ಬಡಗನುಂ ತವಿಯದೊಳರಿನ್ನುಂ (ಶ್ರೀಣಾಪು. ೨೦೪-೨೨೪). ೨. ನೀಲಗಿರಿಬೆಟ್ಟದ ಪ್ರದೇಶದಲ್ಲಿ ವಾಸಿಸುವ ಒಂದು ಜನಾಂಗ : ಕುಡಗರು ತುಳುವರು ತೊಡವರು ಬಡಗರು (ಅಕಳು. ೩೦೪-೬); ಬಡಗರು ಆಡುವ ಭಾಷೆ ದ್ರಾವಿಡಭಾಷೆ (ದ್ರಾಹಿ. ೦೯೩). ೩. ದ್ರಾವಿಡಭಾಷೆಗಳಲ್ಲಿ ಒಂದು; ನೀಲಗಿರಿಯ ಬಡಗರು ಆಡುವ ಭಾಷೆ : ಬಹಳಜನ ವಿದ್ವಾಂಸರು ಇಂದಿಗೂ ಬಡಗಭಾಷೆಯನ್ನು ಪ್ರತ್ಯೇಕವಾಗಿ ಪರಿಗಣಿಸದೆ ಕನ್ನಡಭಾಷೆಯ ಒಂದು ಉಪಭಾಷೆಯಾಗಿಯೇ ನೋಡುವರು. ಆದರೆ ಬಡಗಭಾಷೆಯನ್ನೂ ಒಂದು ಪ್ರತ್ಯೇಕ ದ್ರಾವಿಡ ಭಾಷೆಯೆಂಬಂತೆ ಸಮೀಕ್ಷಿಸುವುದು ಅಗತ್ಯವೆಂದು ತೋರುತ್ತದೆ (ದ್ರಾಹಿ. ೦೯೩). [ಬಡಗು + —ಅ₇]

**ಬಡಗಣ್₁** (ನಾ). ಸಣ್ಣ ಕಣ್ಣು : ನಿಡಿದಪ್ಪಂಗುಲಿ ಕೆಂಪುವೆತ್ತ ವಿಪುಳಶ್ರೋತ್ರ (ಸ್ರೋತಂ) ಲ(ರ)ಸತ್ಸುಷ್ಕರಂ . . . ಬಡಗಣ್ನೊಪ್ಪುವ ದಕ್ಷಿಣೋನ್ನತರದಂ ತಾನಾಗೆ ಪೂಜ್ಯಂ ಗಜಂ (ಲೋಕೋಪ. ೦೦-೬೬).

[ಬಡ(<ಬಡವು)+ಕಣ್]

**ಬಡಗಣ್₂** 'ಬಡಗು' ಪರಾ.

**ಬಡಗಣ** 'ಬಡಗು' ಪರಾ.

**ಬಡಗದೆಸೆ** (ನಾ). ಉತ್ತರದಿಕ್ಕು ; ಬಡಗಲು : ಸೀತಾತಗನಿಯ ಬಡಗದೆಸೆಯ ಪರಪುಷ್ಕರಾವತೀ ಜನಪದದೊಳ್ (ಧರ್ಮಾಪು. ೦೦-೨೬) ; ಬಡಗದೆಸೆಯ ಬೀಡಿಳಿದಿರ್ದ ಮೊರಸರ ಪಡೆ ಹನುಮನ ನೇಮದಲಿ ತುಡುಕಿ . . . ಬೊಬ್ಬಿಱಿದೇಱಿದರು (ಕುಶಪು. ೦೯-೬೭). 'ತೆಂಕದೆಸೆ' ಪರಾ.

[ಬಡಗ₁ (<ಬಡಗು) + ದೆಸೆ₁]

**ಬಡಗದೇಶ** (ನಾ). =ಬಡಗನಾಡು ೧ : ಬಡಗದೇಶದೊಳೊರ್ವ ಮಲ್ಲಯ್ಯನೆಂದೆಂಬ ಮೃಡಭಕ್ತನುಂಟು (ಶಾಂರಕೃ. ೯-೨೪).

[ಬಡಗ₁ (<ಬಡಗು) + ದೇಶ]

**ಬಡಗನಾಡು** (ನಾ). ೧. ಉತ್ತರದ ದೇಶ ; ಬಡಗಣ ನಾಡು : ದರ್ಶನ ಜ್ಞಾನಚಾರಿತ್ರಂಗಳಂ ಪ್ರತಿಪಾಳಿಸಿ ಬಡಗನಾಡ ಪಸವು ಕಿಳಿದುದೆಂಬು ದನಾನಾಡಿಂದಂ ಬಂದರ್ ಪೇಟೆ (ವಡ್ಡಾ.ಕಾ. ೯೦-೦೬); ಬಡಗನಾಡ ಮಧುರಾಪುರದೊಳ್ ವೈಶ್ಯಕುಲಪ್ರಧಾನಂ ಜಿನದತ್ತನೆಂಬ ಶ್ರಾವಕಂ (ಶೀಚಂ. ೯೦-೨೦); ಸಮಸ್ತಗೌಡಪ್ರಭುಗಳು ಬಡಗನಾಡ ಶಿಶಿಸರಿ ಗಡಸುಬರ ಚಿಕವಿಠಪಂಗಳ ಮಗ ವಿಠಪಂಗಳಿಗೆ . . . ಸರ್ವಮಾನ್ಯವಾಗಿ ಧಾರೆ ಯನ್ನೆರದುಕೊಣ್ಣು ಪುಡುಗೊಟ ಗ ೨ ಎರಡು ಹೊನ್ನು (ಮೈ.ಅಂ. ೦೯೩೦, ೬೯-೮ ; 1396). ೨. ಉತ್ತರದಿಕ್ಕಿನಿಂದ ದಕ್ಷಿಣಕ್ಕೆ ಬಂದು ನೆಲಸಿದ ಬ್ರಾಹ್ಮಣರ ಒಂದಂ ಪಂಗಡ : ಆಚಾರ್ಯ. . .ಅಷ್ಟ ಸಹಸ್ರಂ, ಬಡಗನಾಡು, ಬಾರದೇಶಿಕಾರ (ಕುಳುಜಾ. ೧೭೦). [ಬಡಗ$_1$ (<ಬಡಗು) + ನಾಡು]

**ಬಡಗನ್ನಿಕೆರೆ** (ನಾ). ಒಂದು ಊರಿನ ಹೆಸರು (?): ತನ್ನರಸಿ ಚಿಕ್ಕಬ್ಬೆಗೆ ಬಡಗನ್ನಿಕೆರೆಯ ಬಡಗಣ ಬನರಿಯ ಪಿನ್ನಣ ಕೆರೆಯಮಿವ್ವಿಟ್ಟ ದೇವರ್ಗ್ಗೆ (ಎಕ. VII, ಶಿಮೊ. ೯೬-೦೯ ; ಸು. 915). [<ಬಡಗ$_1$? + ಕೆರೆ]

**ಬಡಗಬಾಗಿಲು** 'ಬಡಗವಾಗಿಲು' ನೋ.

**ಬಡಗಮುಖ** (ನಾ). ೧. ಉತ್ತರದಿಕ್ಕು ; ಬಡಗು. ೨. ಉತ್ತರದಿಕ್ಕಿಗೆ ಮುಖ ಮಾಡಿದವನು : ವಸುಭೂತಿಯುಂ ಬಡಗಮುಖನಾಗಿ ಕುಳ್ಳಿರಿಸಿ (ಧರ್ಮಾಮೃ. ೦-೦೯೦). 'ತೆಂಕಮುಖ' ಪರಾ. [ಬಡಗ$_1$ (<ಬಡಗು) + ಮುಖ]

**ಬಡಗಮೊಗ** (ನಾ). = ಬಡಗಮುಖ ೧ : ವಿಜಯಾರ್ಧಾಚಲ ಕಟಕಾಭಿ ಮುಖೀಕೃತನಿಜವಿಜಯಕಟಕನಾಗಿ ಬಡಗಮೊಗದೆ ನಡೆದು (ಆಂಶು. ೦೩-೯೬ ವ) ; ತಣ್ಣೆಯದ ಮುಕ್ಕೂಡು ಬಡಗಮೊಗದೆ ಪೋಗಿ (ಮೈ.ಅಂ. ೦೯೩೯, ೩೬-೮ ; 11ನೆಯ ಶತ) ; ಬಡಗಮೊಗದಿಂದೆ ಮೂಜಗದೊಡೆಯಂ ಕುಳ್ಳಿರ್ದಂ (ಪರ್ಶು. ೦೩-೭). [ಬಡಗ$_1$ (<ಬಡಗು) + ಮೊಗ]

**ಬಡಗಲ್** 'ಬಡಗು' ಪರಾ.

**ಬಡಗಲು** 'ಬಡಗು' ಪರಾ.

**ಬಡಗಲೆ**, ಬಡಗಲೈ (ನಾ). [ವಿಶಿಷ್ಟಾ] ವಿಶಿಷ್ಟಾದ್ವೈತಿಗಳಲ್ಲಿ ಹಣೆಯ ಮೇಲೆ 'U' ಆಕಾರದ ನಾಮವನ್ನು ಹಚ್ಚುವ ಪಂಗಡ ; ರಾಮಾನುಜಾಚಾರ್ಯರ ಪಂಥೀಯರ ಒಂದು ವರ್ಗ : (*). ಬಡಗಲೈ: ಶ್ರೀವೈಷ್ಣವಮತದ ಈ ತತ್ವ ಕ್ರಮೇಣ ಬಡಗಲೈ ತೆಂಕಲೈ (ಉತ್ತರ ದಕ್ಷಿಣ) ಭಾಗಗಳಾಗಿ ಒಡೆದವು (ಕಾಕದ. ೨೯೬). 'ತೆಂಗಲೆ' ಪರಾ. [←ತಮಿ. ವಟಕಲೈ]

**ಬಡಗಲೈ** 'ಬಡಗಲೆ' ನೋ.

**ಬಡಗವಾಗಿಲು**, ಬಡಗಬಾಗಿಲು (ನಾ). ಉತ್ತರದಿಕ್ಕಿನ ಬಾಗಿಲು ; ಉತ್ತರದ್ವಾರ : ಎಡೆಗೇರಿಯ ಬಡಗವಾಗಿಲ ಶ್ರೀಲಕ್ಷ್ಮೀನಾರಾಯಣ ದೇವರಂಗಭೋಗಕ್ಕಂ . . . ಬಿಟ್ಟತಕೆ ತೋಂಟ (ಸೌಇಇ. IX-i, ೨೭೬-೬೦; 1160). ಬಡಗಬಾಗಿಲು : ಆ ಪುರದ ಬಡಗಬಾಗಿಲ್ಗೀ ಪವಣಂ ಶಿಲಿಯರೊಂದು ಕೂಗಳತೆಯೊಳ್ ಕಾಪಂಗಳನುರ್ಚುತುಂ (ಶ್ರೀಮುಕಾ. ೦೦-೩). [ಬಡಗ$_1$ (<ಬಡಗು) + ಬಾಗಿಲು (<ಬಾಗಿಲ್)]

**ಬಡಗಸಂಡಗೆ** (ನಾ). ಒಂದು ಬಗೆಯ ಸಂಡಗೆ ; 'ಕುಂಬಳ ಸಂಡಗೆ' (ಸೂಶಾ. ೯-೦ ಟೀಕು) ; P "ಗದ್ಯಸೂಪದಲ್ಲಿ . . . ನೆಲ್ಲಿಯ ಸಂಡಗೆ . . . ತದುಕಿನ ತಿರುಳು ಇವು ಸಂಭಾರವಸ್ತುಗಳು ಎಂದಿದೆ" (ಸೂಶಾ. ೯-೦ ಟೀಕು): ಹುರಿಯಕ್ಕಿಯೆಳ್ಳು . . . ಕರಿಬೇವು ಬಡಗಸಂಡಗೆ ಯಿಂಗು ಕಡಲೆಪಿಟ್ಟುರಿಸನದ ಹುಡಿ . . . ಮೆಂತೆಯದ ಚೂರ್ಣ ಹಪ್ಪಳಂ ಸಂಭಾರವಸ್ತುವಹವು (ಸೂಶಾ. ೯-೦). [ಬಡಗ$_1$ + ಸಂಡಗೆ]

**ಬಡಕಾಯ್**, ಬಡಕಾಯ್, ಬಡಗೈ, ವಡಗಯ್, ವಡಗಾಯ್ (ಗು). ೧. ಉತ್ತರದಿಕ್ಕಿನ ; ಬಡಗಣ : ಪೆರ್ಗ್ಗೂರ್ಲ್ಲಿಯುಳ್ಳೂಡಿತ್ತು ಪೆಟ್ಟ್ಹೋಗೆಯು ಮೊದಲುಳ್ ಬಡಗಾಯ್ವೈರ್ಗ್ಗೂರ್ಲ್ಲಿಯ ಸನ್ದು ಕಾವೇರಿಯುಳ್ ಕೂಡಿತ್ತು ಸೀಮೆ (ಎಕ. IV, ಎಳಂದೂ. ೬೦-೬೬ ; ಸು. ೫೦೦). **ಬಡಕಾಯ್** : (ನಾ). ೨. ಉತ್ತರದಿಕ್ಕು : ಪ್ರತಿಚಿದೆಸೆ ಪೆದ್ದಾಣ ಎ ವಾಯವ್ವಾ ದೆಸೆ ಪೆಟ್ಟನ್ನಲಿಸ್ಪಡಕಾಯ್ಯೂಕು ಉದಿಚಿದೆಸೆ ಕೆರೆಯನ್ನೀಗ್ಗೂರೆ ಪಟ್ಟ (ಎಕ. X (ಚ). ಕುಳಕಾ. ೩೨೬-೩೨; ಸು. 850). **ಬಡಗೈ**: ೧. ಕೆರೆಯನ್ನೆಂಕ್ಕೆ ನಟ್ಟ ಕಲ್ಲೆ ಪೆರ್ಗ್ಗಟನಿಯಿನ್ ಬಡಗೈ ನಟ್ಟ ಕಲ್ಲೆ (ಎಕ. X (ಚ). ಶಿಕ್ಕ.ಶಿ. ೬೬-೦೭ ; ಸು. 850). **ವಡಗಯ್** : ೧. 'ವಡಗಯ್ಗ್ಗೇರಿ' ಪರಾ. **ವಡಗಾಯ್** ೧. ಮುಟ್ಟಸ್ದಿನ್ನಡಗಲ್ಲೆ ಪಡುವಯಾಲೆ ತಾಯನ್ದೆಕೆರೆಯ ವಡಗಾಯ್ನುಡುಗಲ್ಲೆ ಕೊತ್ತನ್ದೆ ಕೆರೆಯ (ಎಕ. X (ಚ). ಶಿಕ್ಕ.ಶಿ. ೦೦೬-೬೩ ; 850); ತೆನನ್ದಾಕಕೆರೆ ಎ ಪೆರ್ಮುರ್ಗಗೆರೆ ಎ ವಡಗಾಯ್ ಸನ್ದು ಕಿಱುಮಾವಿ ಪಂಳಮೆ (ಎಕ. IV, ಎಡತೊ. ೬೦-೬೯ ; ಸು. ೫೦೦). 'ತೆಂಕಾಯ್' ಪರಾ. [ಬಡಗು + –ಆಯ್ಕ್./ತುಳು. ಬಡಕಾಯಿ, ಬಡಕ್ಕಾಯಿ]

**ಬಡಗಾಳಿ** (ನಾ). (?) : ಒಡವೆಳೆದೆಳೆಯ ಲತೆಯ ಕೆಂದಳಿರ್ಗಳ್ ಬಡಗಾಳಿಯ ಸೋಂಕಿಂ ಪೊಸಪಲಸಿನ ನಿಡುವಣ್ಣಂ ಪೊಡೆಯುತ್ತಿರೆ (ಅಜಿಕಾ. ೦೦-೭). [P ಇದು 'ಪಡುಗಾಳಿ' ಎಂದಿರಬಹುದೆ ?]

**ಬಡಗಿ**, ಬಡಾಯಿ$_1$, ಬಡಿಗ, ಬಡಿಗ್ಗೆ, ಬಡ್ಡಗಿ, ಬದ್ದಗಿ, ಬದ್ದಿ (ನಾ). ೧. ಪಂಚಕಾರುಕರಲ್ಲಿ ಒಬ್ಬ ; ಮರಗೆಲಸ ಮಾಡುವವನು ; ತಕ್ಷ : "ತ್ವಷ್ಟಾ, ಕಾಷ್ಠತಟ್, ತಕ್ಷಾ, ರಥಕಾರಃ, ವರ್ಧಕೀ – ಈ ೫ ಬಡಗಿ" (ಹಲಾಯು. ೯೬-೪೩೩) ; ನೃಪತಿ ತನ್ನ ಬಡಗಿಗಳ್ ವಿಶ್ವಕರ್ಮನುಂ ವಿಶ್ವಮತಿಯುಮೆಂಬೊರಂ ಕರೆಯಿಸಿ (ವಡ್ಡಾರಾ. ೦೯೭-೯) ; ಬಡಗಿಯಂತೆ ಕೆತ್ತುವರ್ ಅಗಸನಂತೆ ಬೀಸಿ ಪೊಯ್ವರ್ (ಧರ್ಮಾಮೃ. ೩-೭೩). **ಬಡಾಯಿ$_1$** : ೧. ನಾಲ್ವತ್ತು ಆಳಿನಲ್ಲಿ ಹತ್ತು ಹನ್ನೆರಡು ಅಕ್ಕಸಾಲೆ ಬಡಾಯಿ ವಗೈರೆಯವರು (ರಾಜೇಂದ್ರ. ೬೩). **ಬಡಿಗ** : ೧. ಒಬ್ಬ ಬಡಗನಿಂದ ಅವುದಾನೊಂದು ಗಳೆಯ ಪಾಸಿಕೊಂಡೊಯಿದು ಹೋಗಿ ಭೂಮಿಯಲ್ಲಿ ಹೂಡಿ ಹೊಡೆದರೆ ನೀಟವಾಗಿ ನಡೆದರೆ ಹೂಡುವರು (ವಶಸಂ.೦೨೬-೦೦೭): ಹಡಗು ಗಾಳಿಗೆ ಲೇಸು ಗುಡುಗು ಮಳೆ ಬರೆ ಲೇಸು. . .ಊರಿಂಗೆ ಬಡಿಗ ಲೇಸು (ಸರ್ವಜ್ಞ. ೦೦೯೦) ; ಬಡಿಗರ ಮಾನಪ್ಪನು ನಮಗೆ ಈ ಪೆಟ್ಟಿಗೆಯನ್ನು ಮಾಡಿಕೊಟ್ಟನು (ಕಕಪ.೯-೩). **ಬಡಿಗ್ಗೆ** : ೧. ತನ್ನ ಬೇಳೆಯ ಬಳು ಬಡಿಗೆಯ ಹೊಲದೊಳಗೆ ರುದ್ರಶಕ್ತಿ ದೇವರ ಕಾಲಂ ಕರ್ಚ್ಚಿ ಧಾರಾಪೂರ್ವಕಂ ಮಾಡಿ ಬಿಟ್ಟ ಮತ್ತರೆರಡು (ಕಇ. I, ೨೯-೯೯ ; 1148). ೨. ಬಡಗಿಯ ವೃತ್ತಿ,–ಕೆಲಸ : ಹಿರಿಯೂರ ಬಡಿಗೆ ಕಂಪಾಚಿಕೆ ಅಕಸಾಲಿಕೆ ಪಂಚಾಳ ಕೊಲವರ್ತನೆ (ಎಕ.IX (ಕ), ಕಾಪಕಾ. ೬೫-೦೬ ; ಸು. 1380). **ಬಡ್ಡಗಿ** : ೧. "ಬಡಗಿ (ಬಡ್ಡಗಿ, ಬಡಿಗಿ, ಬಡಗ)— ವರ್ಧಕಿ" (ಕನ್ನಕೋ. ೨೮); ಚಿತ್ತಾರಿ ಕೇತೋಜನ ಮಗಂ ಬಡ್ಡಗಿ ಆಯ್ಯೋಜಂ ಈ ಶಾಸನದ ಕಲ್ಲಂ ಗೆಯ್ದಂ (ಮೈ.ಅಂ. ೦೯೩೦, ೬೯-೬೩ ; 1063) ; ವರ್ಧಕಿ— ಬಡ್ಡಗಿ, ಬಡಗಿ (ಕಮುದ.೨೫೩ ಕೃದಂ). **ಬದ್ದಗಿ**: ೧. 'ಅರಬದ್ದಗಿ' ಪರಾ. **ಬದ್ದಿ** : ೧. ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲೆಯಾಗಿ ಬಿದ್ದ ಮರನ ತಂದು ಬದ್ದಿಯ ಕಾರುಕನ ಕೈಯಲ್ಲಿ ಸುಬದ್ಧಿಸಿ ಬಂಧಿಸಿ ಸುದ್ಧಯಿಸಿ (ಸರ್ವಪ. ೦೦೫-೩೬೬). [← ಪಾಲಿ. ವಡ್ಢಕಿ./ ಪ್ರಾ. ವಡ್ಢಇ./ಸಂ. ವರ್ಧಕಿ./ ಹಿಂ. ಬಢಈ ; ಮರಾ. ಬಢಈ, ಬಢಾಈ]

**ಬಡಗಿವೆಸ** (ನಾ). ಬಡಗಿಯ ಕೆಲಸ ; ಐದು ದೇಗುಲಂಗಳ ಬಡಗಿವೆಸ ದೊಳ್ ಪಡಿಸಲಿಸುವ ಮಂಡಳಿಕ ಮಾಣಿಕಾಚಾರಿ ಹೊಂನೋಜ (ಎಕ. VIII, ಸಾಗರ. ೦೦೯-೬೯ ; 1042). [ಬಡಗಿ + ಬೆಸ$_1$]

**ಬಡಗಿವೊಲ** (ನಾ). ಬಡಗಿಗಾಗಿ ಬಿಟ್ಟ ಹೊಲ : ಬ[ಡ]ಗಿವೊಲದ ಸದಿನಲೀಶಾನ್ಯದ ಗುಡ್ಡೆ (ಸೌಇಇ. XX, ೦೭-೩೬; ೯೮೦). [ಬಡಗಿ + ಪೊಲ]

**ಬಡಗು** , ಬಡಕ್ಕು, ಬಡಗ್ಗ, ವಡಗಂ (ನಾ). ಉತ್ತರದಿಕ್ಕು; ಬಡಗಣ ದೆಸೆ : ಅಬ್ದಿದಿಲ್ಲಿಕೆ ಶೇಂಕಿರ್ದುದು ಭಾರದಿಂ ಬಡಗನಲ್ ಪೆಂಪಾರ್ಗ ಗಸ್ತ್ಯಂಬರಂ (ಶಂಕರ. ೯-೨೦) ; ಅವರ ಆಳ್ವಿಕೆ ಬಡಗಿನಲ್ಲಿ ಕೃಷ್ಣಾನದಿಯಿಂದ ಹಿಡಿದು ತೆಂಕಲದಲ್ಲಿ ಭವಾನಿನದಿಯ ತನಕ ಪಸರಿಸಿತ್ತು (ಹಾಹುಕ. ೩) ; ತೆಂಕು, ಬಡಗು, ಪಡು ದಿಕ್ಕುಗಳಲ್ಲಿಯೂ ಬೆಳಕು ಹರಡುವುದನ್ನು ಕಂಡಿದ್ದೇವೆ (ಅಣಂಕ. I, ೪೯೪). **ಬಡಕ್ಕು** : ಪುಳಿಯಿ[ಂ] ಬಡಕ್ಕು ಪೋದ ಪೇರೊ[ಗೆ] (ಎಇ. X, ೬೬-೬೬; ೩೩೨). **ಬಡಗ್ಗ** : ಬಡಗ ಗಾವುಣ್ಡುಗಳ ಪಸುಗೆಯ ಪೊಲನ್ (ಎಕ. XVIII, ೩೯-೨೯; ೨೨೨). **ವಡಗು**.

**ಬಡಗಣ್** = ಉತ್ತರ ದಿಕ್ಕು : ಮೇರು ಪಡುವಣ್ಗೆ ಸೀತಾತೀರಂ ತೆಂಕಣ್ಗೆ ನೀಲಗಿರಿ ಬಡಗಣ್ಣಾ ತಾರಂ ದ್ರಾವಣರಾವಕ್ಷಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ (ಜುಶ್ರೀ. ೨-೦೨) : ಪಡುವಣ್ಗೆ, ಬಡಗಣ್ಗೆ (ಶಾಶಾಪೊ. ೩೭ ಪ್ರಯೋ) ; ಬಡಗಣನೊಗೆದತ್ರದೊಂದು ದೀಪ್ರಪ್ರಸರಂ (ಪರಗಪ್ರ. ೦೦-೨೨). **ಬಡಗಣ, ವಡಗಣ** = ಉತ್ತರದಿಕ್ಕಿನ : ಎಳ ಗೊವನೂರ ಬಡಗಣ ಸಿ(ಸೀ)ಮೆಯುಳ್ ಕು(ಕೂ)ಡಿ (ಎಕ. XVIII, ೩೬೩-೨೩ ; ೩೩ನೆಯ ಶಕ) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಅಂಪ್ರ. ೩-೯ ವ); ತೆಜ್ಕಣ್ಣಾ ಸೀಮೆ ನೆಯ್ದಿಲ್ಗೆಱೆಯಾ ಏಱು ಮೂಡಣ್ಣಾ ಸೀಮೆ ಇಡಿವಟ್ಟದಾ ವಡಗಣ್ಣಾ ಸೀರಿಜಗ (ಎಇ. XXI, ೨೯-೦೨ ; ಸು. ೩೩ನೆಯ ಶಕ). **ಬಡಗಣಂ** = ಉತ್ತರ ದಿಕ್ಕಿನವನು : ಅಕಾರಕ್ಕೆ — ಮೂಡಣಂ, ತೆಂಕಣಂ, ಬಡಗಣಂ (ಶಬರ. ೦೦೦ ಪ್ರಯೋ) ; ಪಡುವಣಂ, ಬಡಗಣಂ (ಶಬ್ದಾಶು. ೪೨೦ ಪ್ರಯೋ). **ಬಡಗಲ್, ಬಡಗಲು** = ಉತ್ತರ ದಿಕ್ಕು; ಬಡಗು : ತದ್ವಾಡಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱೆಯೆ ಸುಖೋದ್ದೀಪಮೆನಿಸಿ ಬೆಳುಗಲಿದೇಶಂ (ಅಜಿಪು. ೦೨-೯೬) ; ನೈರಿತಿಯೊಳ್ಪರವುಲಿಗೆಱೆಯ ತೆಂಕಣ ಕೂಡಿಯಿಂ ಬಡಗಲ್ಪರೆಯೆರದ ಕೊಳನುಂ ಬೂದಿವಾಳುಂ (ಸೌಇಇ XI-i, ೩೨-೩೬; 1007) ; ಸುರರೆಲ್ಲಂ ಬಡಗಲು ನೆರೆದಿರೆಯಾ ದೆಸೆ ಕುಸಿದು ತೆಂಕ ನೆಗೆದೊಡೆ (ಸಮಶ. ೦೦-೦೦೯); ಬಡಗಲುತ್ತರಕುರುನರೇಂದ್ರರ ನಡುಗಿಸಿದರು (ಕುಮ್ಯಾಶ. ೦೯-೩೯).

[ದೇ.೩ ತಮಿ. ಮಲ. ವಟಕ್ಕು; ಕೊಡ. ಬಡಕ್; ತೆಲು. ವಡಕು]

**ಬಡಗುದುರೆ** (ನಾ). ಸೊರಗಿದ ಕುದುರೆ; ಕೃಶವಾದ ಅಶ್ವ : ಏನನಂ ಬೆನು ಬಸವ ನೀನೀವಾನೆವಱೆಗಳು ಬಡಗುದುರೆಗಳನೂನಸತಿಯರು ವರುಣ ಮೃತ್ತಿಕೆ ಕಂಪಿನಱುವೆಗಳು (ಬಸಪು. ೨೨-೩೩); ಲಶುನವುಮೋವು ಮನುಷ್ಯಂ ಮೊಸರುಮನೊಡಗೂಡಿಕೊಂಡು ಬಡಗುದುರೆಗೆ ಸಂಕಿಸದೊಂದು ಪಕ್ಷಮಿಕ್ಕುಗೆ ವಿಶೇಷದಿಂ ಫಲಮನೀವುದದು ನಿಶ್ಚಯದಿಂ (ಅಶ್ವಶಾ. ೬-೩೦).

[ಬಡ (< ಬಡವು) + ಕುದುರೆ]

**ಬಡಗೊಂಟು** (ನಾ). = ಬಡಗುದುರೆ : ಉಡಿದೈ ಬಂಡಿಯನೇನಗುರ್ವೊ ಮಗುಟ್ದುಂ ವಿಕ್ರಾಂತದಿಂ ಕಾಗೆಯಂ ಪಿಡಿದೈ ಸಂಕಿಸದಿರ್ದು ಕತ್ತೆ ಬಡಗೊಂಟೆಂದಿಂತಿವಂ ನೋಎನಿಂ ಬಡಿದೈ . . . ಇದೇನಾಶ್ಚರ್ಯಮೊ ಸಾಹಸಂ (ಅಂಪು. ೬-೬೩). [ಬಡ (<ಬಡವು) + ಗೊಂಟು]

**ಬಡಗೆಲಸ** (ನಾ). ಸಣ್ಣ ಪುಟ್ಟ ಕೆಲಸ; ಚಿಲ್ಲರೆ ಕೆಲಸ: ಬೆಸನುತಂ ತವೆ ಬಟ್ಟಿಯಂ ಮಾಡಿಸಿಕೊಳುತ ಬಡಗೆಲಸವಂ ಸಂತಸದಿ ಮಾಡಿಸೆ ಮಾಡಿ ಬದುಕುವೆವು (ಬಸಪು. ೨೩-೦೯). [ಬಡ (<ಬಡವು) + ಕೆಲಸ]

**ಬಡಗೈ** 'ಬಡಗಾಯ್' ನೋ.

**ಬಡಗೊಂಡಿ** (ನಾ). ಕೃಶವಾದ ಕೊಂಡಿ; ಸವೆದ ಸರಪಳಿಯ ತುದಿ : ಬಣಜಿಗನ ಬಳಕೆಯಂತೆ ಕೊತ್ತಳಂ ಬಱಿದಾಗಿ ಬಟ್ಟು ಬಡಗೊಂಡಿಯಂತಿ ರಾಳ್ವೇರಿಯಬೆದು ಕಡುಗೊಯ್ಯಲಾದ ಕೆಯ್ಯಂತೆ ತೆನೆ ಮುಱಿದು (ಅಶಂಪು. ೦೦.೯೩ ವ). [ಬಡ (<ಬಡವು) + ಕೊಂಡಿ ]

**ಬಡತನ** (ನಾ). ೧. ಸೊರಗಿರುವಿಕೆ ; ಸಣ್ಣಗಾಗಿರುವಿಕೆ ; ಕೃಶತೆ : ಸರಳತೆಯುಂ ಬಡತನವುಮುಮಬಳಾವಾಧ್ಯದೊಳ್ (ಎಕ. XIII, ೩೩೨-೯೨; ೨೨೨), ಬಡತನವಂ ಬಡುತಿರ್ಪುದು ನಡು (ಕಾದಂಪೂ. ೯೦೩); ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನ ಉಂಟೆ (ಕೂಕ್ಯಸಂ.೨೨೬-೯). ೨. ದರಿದ್ರತೆ; ದಾರಿದ್ರ್ಯ ; ನಿರ್ಗತಿಕತನ : ಜಗದ ಬಡತನವಮನೊರ್ಮೆಯೆ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗಟ್ದು ಬಡತನವಮನದನೇಕೆ ಗಡಂ ಸ್ಮರಿಸುವನೆನೆ ಪೊದಟ್ದುದು ಮಧ್ಯಂ (ಆದಿಪು. ೯-೬೦); ಎಂತಾನುಂ ಪಡೆದ ಧನವಮನಸದ್ವ್ಯಯಂಗೆಯ್ದೊಡೆ ಬಡತನಮಕ್ಕುಂ (ಚಂಚಂ. ೬೦೦-೨): ನಿನ್ನಯ ಸಿರಿಯೆ ಸಿರಿ ಬಡತನವೆ ಬಡತನ (ಕುಮ್ಯಾಶ. ೦೯-೨೦). ೩. ಕೊರತೆ; ಅಭಾವ : ಪಿರಿದಹ ನರಕಹಿಂಸೆಗಳನಡಸಿ ಸ್ವರ್ಗವನೀವ ಕರ್ಮದ ಕಡುವಿಸಂಪದದಿಂದೆ ಜ್ಞಾನದ ಬಡತನವೆ ವಿಗೆ ಲೇಸು (ಗಗಕಾ. ೦೩-೯೬): ದುಡಿಯದೆ ನಮ್ಮ ದೇಶದಲ್ಲಿ ಆಹಾರಕ್ಕೆ ಬಡತನ ಬಂದಿದೆ (ಜೂ೦).

[ಬಡ (<ಬಡವು) + - ತನ]

**ಬಡತರ್ಪ್** 'ಬರೆತರವು' ನೋ.

**ಬಡತಾವು** (ನಾ). ಏನೂ ಇಲ್ಲದ ಜಾಗ; ನಿರ್ಗತಿಕ ಸ್ಥಳ; ಕುಗ್ರಾಮಂ : ದೊಡ್ಡೊಡೆಯ ತನ್ನಯ ಮಂತ್ರಿಸುರಾ ಬಡತಾವಿಗಟ್ಟನಿಟ್ಟಿದರೇನು ನಮ್ಮ ಚಿಕ್ಕೊಡೆಯನಲ್ಲಿಗೆ ಬಂದೆವು (ಜಹ. ೯೬-೯೭).

[ಬಡ (<ಬಡವು) + ತಾವು]

**ಬಡತಿ, ಬಡ್ತಿ** (ನಾ). (ಸಂಬಳ, ಹುದ್ದೆ ಮೊದಲಾದುವುಗಳಲ್ಲಿ) ಏರಿಕೆ; ಹೆಚ್ಚಳ : ಸರಕಾರೀನೌಕರಿಯ ಬಗ್ಗೆ ಸಂಬಳ, ಬಡತಿ, ಭತ್ಯ, ಪಿಂಚಣಿ, ಪದವಿ ಇವೇ ಆ ವರ್ಗದ ಪಂಚಪ್ರಾಣಗಳಾದವು (ಜುಹಾದ. ೧೩); ಬಹು ಮಾನದ ಜೊತೆಗೆ ಕೆಲಸದಲ್ಲಿ ಬಡತಿ ದೊರೆಯುತ್ತದೆ (ಚಗಹೊ. ೦೬೨); ನಿಮ್ಮ ಉತ್ತಮಕೆಲಸದ ಸಲುವಾಗಿ ನಿಮಗೆ ಯೋಗ್ಯವಾದ ಬಡತಿ ಸಿಗುವ ವೇಳೆ ಇದೇ ಅಲ್ಲವೇ ? (ಕಳ್ಳಕಾ. ೩೨). **ಬಡ್ತಿ** : ಕಚೇರಿಯ ಮಾತು, ಮೇಲಿನ ಅಧಿಕಾರಿಗಳ ವಿಶ್ವಾಸಸಂಪಾದನೆ, ಮುಂದಿನ ಬಡ್ತಿ ಯಾವಾಗ ಬರುತ್ತದೆ? —ಈ ಮಾತುಗಳಲ್ಲ ನಡೆದುವು (ಜುಹಾದ. ೦೯); ನನಗೆ ಒಟ್ಟಿಗೆ ಇಪ್ಪತ್ತು ರೂಪಾಯಿ ಬಡ್ತಿ ಸಿಕ್ಕಿದೆ (ಕಂದ್ಬೃ. ೩೦).

**ಬಡ್ತಿ ನೀಡು** = ಮೇಲಿನ ಹುದ್ದೆಗೆ ಏರಿಸು: ಮೇಲಿನ ಅಧಿಕಾರಿಗಳು ಅವರಿಗೆ ಮೊದಲ ದರ್ಜೆಯ ಗುಮಾಸ್ತರಾಗಿ ಬಡ್ತಿ ನೀಡಿದರು (ಜೂ೦). **ಬಡ್ತಿ ಹೊಂದು** = ಮುಂದಿನ ಹುದ್ದೆಗೆ ಏರು: ಕಾಲಕ್ರಮದಲ್ಲಿ ಬಡ್ತಿ ಹೊಂದಿ ಮೇಲಕ್ಕೆ ಬರಬಹುದು (ಅಗಹೊ. ೦೯). [<ಹಿಂ. ಮರಾ. ಬಢತೀ]

**ಬಡತಿಗೆ** (ನಾ). ಕೋಲು; ದೊಣ್ಣೆ; ಬಡಿಗೆ : ಆಗ ಶಂಭಯ್ಯನವರ ತಲೆಗೆ ಬಡತಿಗೆಯಿಂದ ಹೊಡೆದಂತಾಯಿತು (ಸಂಬಣ. ೬); ಎಸೆದ ಬಡತಿಗೆಯಷ್ಟು ಉದ್ದವಾದ ಮಾವಿನ ಕೊಂಬೆ ಉರಿಯುತ್ತಿತ್ತು (ಕೃಕೃ. ೯೩). 'ಬಡಿತ' ಪರಾ. [<ಬಡಿಗೆ ]

**ಬಡನಡು** (ನಾ). ಸಣ್ಣಗಿರುವ ನಡು; ಕೃಶವಾದ ಸೊಂಟ : ಪಾಲ್ಗಡಲೊಳಮುಮಾರ್ದಿನೊಳಂ ಪುಟ್ಟಿದ ಕಳ್ಸೊರ್ವನೊಳಮುಂತೆ ನಡುಗುವ ಬಡನಡುಗಳ್ಗೆ ನಡುಕಮುಮಂ . . . ಕೆಯ್ಗುಯ್ದು (ಚಂಕಥಾ. ೬-೦೬ ವ); ನೆಲೆಮೊಲೆಯ ಬಿಣ್ಪಂಗೆ ಬಡನಡು ಬಳ್ಕೆ (ಗಂಶ. ೨-೦೦೩ ವ); ಕರಿಕುಂಭ ಜಘನ ಬಡನಡು ಬಟ್ಟಬಲ್ಮೊಲೆ ಕಂಬುಕಂಧರವುದುರಾಜಮುಖಿವು ಪದ್ಮಿನಿಗೆ (ಕೋಕಶ. ೦೯-೬೯). [ಬಡ (<ಬಡವು) + ನಡು]

**ಬಡನುಡಿ** (ನಾ). ದುರ್ಬಲವಾದ ಮಾತು ; ಸತ್ತ್ವವಿಲ್ಲದ ನುಡಿ : ಮನದೊಳಿದ್ದುದನೆಹಗೆ ಹೇಳದೆಯೆನುತ ಪಡೆದಾ ದೊಡ್ಡಹೊಟ್ಟೆಯನೆನುತ ಬಡನುಡಿಯಂ ನುಡಿವರೇ ಭಕ್ತರೊಳಗೆನುತ (ಬಸಪು. ೩೬-೦೯); ಜಲಬಿಂದು ಶುಕ್ತಿಕೆಯೊಳು ಬೀಳೆ ಮುತ್ತಾಗಿ ಬೆಲೆವಡೆವಂತನ್ನ ಬಡನುಡಿ ಬೆಲೆವಡೆಯದೆ ಮಾಣ್ಬುದೆ (ಪ್ರಕಂಶ. ೦-೦೯); ಬಡನುಡಿ ಬಲ್ನುಡಿ ಬಡದೈವಕಲ್ಲದೆ ಬಡಕಟ್ಟ

ವಿನ್ನ ಪೊಂದುವದೆ (ಕಹಣಂ. ೬೨-೬೩). [ಬಡ (<ಬಡವ) + ನುಡಿ]

**ಬಡಹ**, ಬಡಹ (ನಾ). ಎಡಬಿಡದೆ ಸುರಿಯುತ್ತಿರುವ ಮಳೆ; ಜಡಿಮಳೆ: ಕಿತ್ತುಂಬಿನ ಬಡಹವಿದೆನಿಸಿ ಪಾಂಡ್ಯನಂಬಂ ಕಚೆದು (ಅಂಕಕಾ. ೬೨-೬೦) ; ತುಂದಲ್ಲೊಳೆನೆ ನೆಟ್ಟು ಬಡಹಮುನಲ್ಲುರಿದುವು ಬಡದ ಮಟೆಗಳೆರಡುಂ ಪಗಲುಂ (ಜಗ. ೬-೩೨); ಬಡಹಂ ದೆಂಬತ್ತ ಮೇಪಂ ವಚಿದು ಬಿಡದೊದಲ್ ಕೋಡ . . . ನಿಂದಿರ್ದುದೋರೊಂದೆಡೆಯೊಳ್ ಹಾಜಿಲ್ಲಕೊತ್ತಬಿಡಿದು ಮೃಗವ್ಯಾಗೀವ್ಯಂದಮೋರಂದದಿಂದಂ (ಅಂಕ್ರ ಕ. ೯-೪೭). ಬಡಹ : ಪೋದುದಾಗಳೆಂತಡವಿಡದಿರ್ದ ಶಕ್ರಧನುವಾ ಬಡಹಂ ಬರೆ ಮೇಘಜಾಲದೊಳ್ (ಕುಸುಮ. ೬-೩೪); ಬಡಹಂ ಕೈಕೊಂಡು ದುರ್ವಿನೀತಳಮದು ನೆಜ್ ಜೌಗೆಟ್ಟು . . . ಕಂಪಲ್ಕಸಗೆ (ಕಾಂತೇಶ. ೬೨.೩೬); ಮುಗಿಲೇಜ್ ಸುರಿದುದು ಬಡಹವಾ ಜೀವಂಜಸೆಯು ಕಣ್ಣಾನೀರೊಗುವ ತೆಜದಿ (ಜಾಳ್ಕ. ೩೦-೩). [<ಪ್ರಾ. ವಡಪ್ಪ]

**ಬಡಹಟ್ಟು** ' ಬಡಪೆಟ್ಟು ' ನೋ.

**ಬಡಹಡು** ' ಬಡವಡು ' ನೋ.

**ಬಡಹತ್ತು** (ನಾ). =ಬಡತನ ೨ : ನಾನೂ ಬಡವನೇ : ಬಡಪತ್ತಿನಲ್ಲಿ ಹುಟ್ಟಿ ಬೆಳೆದವನು, ವಾರಾನ್ನದಿಂದ ಪರೀಕ್ಷೆ ಪಾಸು ಮಾಡಿದವನು (ಅಮ್ಮಕು. ೧೧೧). [←ತುಳು. ಬಡಪತ್ತ್]

**ಬಡಹಶು** (ನಾ). ಅಸಹಾಯಕಸ್ಥಿತಿಯಲ್ಲಿರುವ ಪಶು ; ದುಃಸ್ಥಿತಿಯಲ್ಲಿರುವ ಪ್ರಾಣಿ : ಕೆಸಜಲ್ಲಿ ಬಿದ್ದ ಬಡಪಶುವಿನಂತೆ ಆನು ದೆಸೆದೆಸಗೆ ಬಾಯಿ ಬಿದುತ್ತಿದ್ದೆನಯ್ಯ (ಕಲವ. ೪. ೬). [ಬಡ (< ಬಡವ) + ಪಶು]

**ಬಡಹಾಯಿ** (ನಾ). ೧. ದುರ್ಬಲ ; ಅಸಮರ್ಥ ; ಅಶಕ್ತ: ನಮ್ಮಂತಹ ಬಡಪಾಯಿಗಳು ಇಂತಹ ಕೆಲಸಕ್ಕೆಳಿದರೆ ಕಾರ್ಯ ಸಫಲವಾಗಬಹುದೆನ್ನುವ ನಂಬಿಕೆ ಇಲ್ಲ (ಕಟುಣಾ. ೩೯): ಬಡಪಾಯಿಗಳು ಹೋರಾಡುತ್ತಿರುವ ಸಾಮ್ಯವಾದಿ ಸಮಾಜರಚನೆಯೇ ಇದು (ಕರ್ಮಾಶಾ. ೧೨) ; ಈ ನೆಲವೆಲ್ಲವು ಕಾಗದವಾದರೆ ಜಲವೆಲ್ಲವಾದರೆಶಾಯಿ ಮರ ಗಿಡವೆಲ್ಲವು ಲೆಕ್ಕಣಿಯಾದರೆ ಬಡಪಾಯಿ ಸಾಕು ಬಡಾಯಿ (ಅಂಕಾಶ. ೦೫೬-೬೦). ೨. ನಿರ್ಗತಿಕ; ದರಿದ್ರ : ಅಯ್ಯೋ ತಾನು ಬಡಪಾಯಿ . ಹೇಗೆ ಅಂಥ ಸುಖ ಸಿಕ್ಕೀತು ? (ಜೀವರಂ. ೬೨); ನನ್ನಂಥ ಬಡಪಾಯಿಯನ್ನು ಯಾರೂ ಕೇಳುವುದೇ ಇಲ್ಲ (ಕೈಪಿಡಿ. ೩೮); ಆ ಬಡಪಾಯಿಯ ಅಂತರಂಗದಲ್ಲಿ ಏನೇನು ಅಡಗಿದೆಯೋ ದೇವರೇ ಬಲ್ಲ ! (ಬಿಳಿಯೋ. ೮೬). (ಗು). ೩. ಸೊರಗಿದ; ಕೃಶವಾದ; ಒಣಗಿದ : ಆ ಬಡಪಾಯಿ ಪ್ರಾಣಿ ಬಾಯಾರಿಕೆಯಿಂದ ಈ ಅಮೃತಸರೋವರಕ್ಕೆ ಬಂದಿತ್ತು (ಪಾಂಚ. ೩೦); ಬಡಪಾಯಿ ಕೇಟಿಡಿಯ ದೇಹದಲ್ಲಿ ಉಳಿದಿದ್ದ ಚಟುವಟಿಕೆಯೂ ತೀರಿ ಹೋಯಿತು (ಅನ್ನಗೋ. ೩೫). [ಬಡ (<ಬಡವ) + ಪಾಯ್]

**ಬಡಹಾರ್ವ**, ಬಡಹಾರುವ (ನಾ). ದರಿದ್ರನಾದ ಬ್ರಾಹ್ಮಣ; ನಿರ್ಗತಿಕನಾದ ಬ್ರಾಹ್ಮಣ : ಎಮ್ಮಂ ಬಡಪಾರ್ವರನರಸರೆ ನೀವಿಪಾಗಳಜ್ ವಿರಜಿಯರೊ ಪೇಚ್ಎಂ (ಅಂಕಕಾ. ೨-೬೩); ಈ ಕುಲಾಂಗನೆಯರೀ ಬಡಪಾರ್ವನ ನಂಟರಾಗರೇ (ಕಥೆ. ೧೦-೩೨): ಬಡಪಾರ್ವರೊಳ್ ದೇಶಿದು ಬಾಯ್ ಬಡಿವುದನ್ ಕಲ್ತೆ (ಅಕ್ಕನ್ಸಾ. ೯೩-೬೯೯). ಬಡಹಾರುವ : ಈ ಪುಃಷಿಗಳೇ ಬಣುಗುಗಳು ಬಡಹಾರುವರು (ಕುಕ್ಕಾ ಕ. ೯-೩೩). [ಬಡ (<ಬಡವ) + ಪಾರ್ವ]

**ಬಡಪೆಟ್ಟು**, ಬಡಪಟ್ಟು (ನಾ). ಬಡಿಯ ಏಟು; ದೊಣ್ಣೆಯ ಹೊಡೆತ. ಬಡಹಟ್ಟು.

ಬಡಪೆಟ್ಟಿಗೆ, ಬಡಪಟ್ಟಿಗೆ=(ಅಲಂ) ಸುಲಭವಾಗಿ; ಸರಾಗವಾಗಿ; ತೊಡಕಿಲ್ಲದೆ : ಆಫೀಸ್ ಕೆಲಸ ಬಡಪೆಟ್ಟಿಗೆ ಆಗೋಲ್ಲ (ಕುಸುಮ. ೨೦೬); ಅರಮನೆಯ ಜನ,ಗುರುಜನ,ಬಡಪೆಟ್ಟಿಗೆ ಅಂಥದಕ್ಕೆ ಒಪ್ಪಿಗೆ ಕೊಡುತ್ತಿರಲಿಲ್ಲ (ಚಿಜ.೬೬); ರಂಗಣ್ಣ ಬಡಪಟ್ಟಿಗೆ ಮನೆಯಿಂದ ಹೊರಡುತ್ತಿರಲಿಲ್ಲ(ಕಚ್ಚಾಳು. ೨೬೦) ; ಆನಂದ ವಸಂತರ ನಡುವೆ ಚರ್ಚೆ ಪ್ರಾರಂಭವಾದರೆ . . . ಬಡಪಟ್ಟಿಗೆ ಮುಗಿಯುತ್ತಿರಲಿಲ್ಲ (ದೂರಕ. ೨೪). [< ಬಡಿ + ಪೆಟ್ಟು]

**ಬಡಬ** (ನಾ). ೧. ಸಮುದ್ರದ ಒಳಗಿರುವ ಬೆಂಕಿ ; ವಡಬಾಗ್ನಿ; ಕಡಲ್ಗಿಚ್ಚು : ಕಡಲೋಳಡಲೊಡನೆ ಬಂಬಲುಗಿಡಿಯ ಗಡಣದಿಂ ಬಡಬನೊಡಗೂಡಿತು (ಅಭ್ಜಾಕ. ೦-೮); ಕಣ್ಗೊಳ್ಗಪ್ಪ ಬಂದತ್ತುಭೇಂದ್ರಂ . . . ಬಡಬನಳರ್ಕೆಯೊ ಭೈರವನಡರ್ಪೊ ವಿಕ್ರಮನ ದರ್ಪವೋ . . . ಎಂದೆನೆ ಕಜುತ್ತು ತಾಗಿತ್ತಾಗಳ್ (ಕಾಶೀಕ. ೬-೮೨). ೨. [ಕಾಮಶಾ] ಸ್ತ್ರೀಯರಲ್ಲಿ ಒಂದು ಗುಂಪು : ಬಡಬಜಾತಿ ಸ್ತ್ರೀಯಾಗಲಿ ಹರಿಣಜಾತಿ ಸ್ತ್ರೀಯಾಗಲಿ . . . ಕಾಮೋತ್ಪವಕ್ಕೆ ಪ್ರಿಯಳು (ಕಾಕುಣ. ೨೧೬). [ಸಂ.]

**ಬಡಬಜ್ವಾಲೆ** (ನಾ). = ಬಡಬ ೧ : ಬಡಬಜ್ವಾಲೆಯ ವಿಸ್ಫುಲಿಂಗತತಿಯಂ ಬಂತಿರ್ಪ ಕಣ್ ಚಕ್ರದಿರ್ಕೆಡೆಯಂ ಬಾಯೊಳಿಜುಂಕಿದಂತೆ ಪೊಳೆಯಂ ಕೊಂಕಿರ್ದ ಕೊರ್ದಾಡೆ (ಕಣಂ. ೪-೪). [ಸಂ. ಬಡಬಜ್ವಾಲಾ]

**ಬಡಬಡ**$_1$ (ನಾ). ತ್ವರಿತ, ಶೀಘ್ರತೆ, ನಿರರ್ಥಕತೆ ಇತ್ಯಾದಿಗಳನ್ನು ತಿಳಿಸುವ ಒಂದು ಅನುಕರಣಶಬ್ದ : ವರಲು ಪರಿವಾರ ಬಡಬಡನಲು ಮುಗುಳುನಲಿ ನಗುತ್ತ (ಎಕ. VIII. ಸಾಗರ. ೦೦೯-೦೦; 1250 ?).

**ಬಡಬಡ**$_2$ (ಅ). ಬೇಗನೆ, ಶೀಘ್ರವಾಗಿ ಎಂಬ ಅರ್ಥದ ಒಂದು ಅನುಕರಣಾವ್ಯಯ : ಎಪ್ಪನೆಯ ಪಾಠ ಅಂತ ಹೇಳಿಬಿಡಿ. ಬಡಬಡ ಅಂದು ಬಿಡುವ (ಅಷ್ಟಮೀ. ೯); ಹೋಗಿ ಬಡಬಡ ಬೇರ್ವರ್ನ (ವರನಿರುವ ಮನೆ) ಯಿಂದ ಮದಲಿಂಗನನ್ನು ಕರಕೊಂಬರ್ರಿ (ಕುಕಸಂ. ೩೬).

**ಬಡಬಡಕ** (ನಾ). ಬಡಬಡ ಎಂದು ಮಾತನಾಡುವವನು : ಬಡಬಡಕರನು ಹೇಳದಿರು ಮನ ನಡುಗುತಿರ್ದುದು ಮದನಹರನೆದೆ ಮಿಡುಕುತಿರ್ದುದು (ಕೂಕಣ. ೬-೯೬-೧೦). [ಬಡಬಡ$_1$ + — ಕ$_2$]

**ಬಡಬಡಕನೆ** ' ಬಡಕು ' ಪರಾ.

**ಬಡಬಡಗುಟ್ಟು** (ಕ್ರಿ). ವ್ಯರ್ಥವಾದ ಮಾತನ್ನಾಡು ; ವಟಗುಟ್ಟು ; ಗಳಹು : ಬಡಬಡಗುಟ್ಟಿ ಬಾಯಾಜಿ ಬಹಳ ಕಾಲ ಗೊಡೆಗುಟ್ಟಿ ಶಾಸ್ತ್ರಗಳಹರ ನಡೆಯ ನಗುತ ಕ್ಷಣದೊಳು ಶಾಸ್ತ್ರವಾರ್ಧಿಯ ಕಡೆಗಂಡ ಕುಶಲನೆಯ್ದಿದನು (ಕಕ. ೬೨-೬೨). [ಬಡಬಡ$_1$ + ಕುಟ್ಟು]

**ಬಡಬಡನೆ** (ಅ). ಜಾಗ್ರತೆಯಾಗಿ ; ತ್ವರಿತವಾಗಿ : ಹತ್ತೇ ರೂಬಲ್ ಸಾಕು ಎಂದವಳು ಬಡಬಡನೆ ನುಡಿದಳು (ಪ್ರಕಾ. ೦೯೯). [ಬಡಬಡ$_1$ + — ಅನೆ$_1$]

**ಬಡಬಡಾಗು** ' ಬಡ ' ಪರಾ.

**ಬಡಬಡಿಕೆ** (ನಾ). ಗಳಹುವಿಕೆ ; ಹರಟುವಿಕೆ ; ವ್ಯರ್ಥಾಲಾಪ : ಬಿಡುಗಡೆಯು ಬಂದಿತೆಂಬ ಬಡಬಡಿಕೆ ನಿಲಿಸೊ ಹುಂಬ (ಕೀರ್ತ. ೯೯) ; ಬಾದಷಹನ ಬಡಬಡಿಕೆಗೆ ಶಿವಾಜಿಯು ಬೆದರಿ ಬೆಂಡಾಗತಕ್ಕವನಲ್ಲ (ಸಿಂಕರು. ೪೦). [ಬಡಬಡ$_1$ + — ಇಕೆ]

**ಬಡಬಡಿಸು** (ಕ್ರಿ). = ಬಡಬಡಗುಟ್ಟು : ನುಡಿಯಲೇನಾಳದವರನೆಣಿಕೆಯೊಳಿಡುವನೇ ಲೋಕತ್ರಯವನೆಂದೊಡನೊಡನೆ ಬಡಬಡಿಸಿ ಮೀಸೆಯ ಮುರಿದನಸುರೇಂದ್ರ (ಅಕಂಠಾ. ೧-೩-೩) ; ಮುದುಕಿ ಬನುವನ್ನು ಮುಂದೆ ನಿಲ್ಲಿಸಿಕೊಂಡು ಅದೇನನ್ನೋ ಬಡಬಡಿಸುತ್ತಿದ್ದಳು (ಅಕಸ. ೩೮). [ಬಡಬಡ$_1$ + — ಇಸು$_1$]

**ಬಡಬಶಿಖಿ** (ನಾ). = ಬಡಬ ೧ : ಬಡಬಶಿಖಿಯನು ಕರದಿ ನಂದಿಪ . . . ರಕ್ಕಸಪಡೆಯ ಕೂಡಿದು ರಣಕೆ ಸಿಂಗರಗೈದು ಹೊಜವಂಟ (ಅಶಿಣ. ೩೩-೩) ; ಬಡಬಶಿಖಿಯಲ್ಲಿ ಪರ್ಬುವ ಪೂಡರ್ಪನೊಳಕೊಂಡು ಮೇಲೆ ಮೇಲ್ಪೆ ತರ್ಪನ್ನೊಡಲುರಿಯನವಧರಿಸು (ರಾಜಕೀ. ೦೩-೦೯೬). [ಸಂ. ಬಡಬಶಿಖಿನ್]

**ಬಡಬಾಗ್ನಿ** (ನಾ). = ಬಡಬ ೧ : "ಕಡಲ್ಗಿಚ್ಚು ಬಡಬಾಗ್ನಿಯಕ್ಕು" (ಜ್ಞಾಪಂ. ೦೩) ; ಜನಭಾವನೆಯೆಂಬ ಬಡಬಾಗ್ನಿಯಿಂ ವಿಷಯಸಾಗರವಂ ಪೀರದೆ . . . ಶಾಶ್ವತಸುಖಂ ದೊರೆಕೊಳ್ಳದು (ಧರ್ಮಾಮೃ. ೬-೯೭) ; ಬಡಬಾಗ್ನಿ ಸೊರಜಿನ ದಾಳಿಗಳಾಕುವುದುಂಟಿ (ಉಜ್ಞಾಕ್ರೊ. ೨-೬೯).

[ ಸಂ. ]

**ಬಡಬಾನಲ, ಬಡಬಾನಳ** (ನಾ). ೧. = ಬಡಬ ೧ : ಬಡಬಾನಲಂಗೆ ಸೆಡೆದಿಂಗಡಲೆ ಸರಣ್ಗೊಳ್ಳುದುದವುರಶ್ಶೈಲಮಂ (ಶಂಖಾಪು. ೦-೦೦೩). ೨. ಒಂದು ಬಗೆಯ ಮಂತ್ರಾಸ್ತ್ರ ; ಆಗ್ನೇಯಾಸ್ತ್ರ : ಹರಿ ಬಡಬಾನಲವ ತೊಡೆ ದನುಜ ಕೈದುವ ಬಿಸುಟು ನಿಂದನು ತನಗೆ ಬಂದುದು ಮರಣ ವೆಂದೆನುತಾಗ ಕೈಮುಗಿದು (ಶಾರಾ. ೩೩-೬೩). **ಬಡಬಾನಳ** : ೧. ಅಗುರ್ವುರಿವರಿಯುತ್ತುಮಿರ್ಪಣೆ ಬೃಹದ್ವಡಬಾನಳನಂತೆ ತೋಱಿ (ಜಂಕಶಾ. ೬-೯೯) ; ಬಡಬಾನಳನ ಶಿಖಾವಳಿ ಕುಡಿಯಿಟ್ಟುದು (ಶಾಂತೀಶ್ವ. ೦೩-೦೦) ; ವಾಳೆಗೆ ಮೊಗದಿರುಹುವುದೆ ಬಡಬಾನಳನು (ಉಜ್ಞಾಕ್ರೊ. ೩-೩೬).

[ ಸಂ. ]

**ಬಡಬಾನಳ** 'ಬಡಬಾನಲ' ನೋ.

**ಬಡಬಿಜ್ಜೆ** (ನಾ). ಕಡಮೆಯಾದ ವಿದ್ಯೆ ; ಅಲ್ಪವಿದ್ಯೆ : ಮಗನೆ ಕಡು ಗುಡುರೆಯುಂ ಬಡಬಿಜ್ಜೆಯುಂ ಸಮಂ ಮಗನೆ ನಾಣ್ನುಡಿ ತಪ್ಪದೆಂಬುದಿಂತೀ ಕ್ರಮಂ (ಶಂಖಕ. ೦೯-೦೦೯). [ಬಡ (< ಬಡವು) + ಬಿಜ್ಜೆ]

**ಬಡಬೆ** (ನಾ). ೧. ಹೆಣ್ಣುಕುದುರೆ : ಬಡಬೆಯು ಬೆನ್ನೊಳ್ ನರನಟು ದೊಡಮಂತಾ ಬಡವೆ[ಬೆ] ಸಮರದೊಳ್ ಶರಹತಿಯಿಂ ಮಡಿವೊಡವೆಂತುಂ ಸ್ವರ್ಗಂಬಡೆಗುಮ ತತ್‍ಕ್ಷಣದಿನವನಧೋಗತಿಗಿಬ್ಬಿಂ (ಅಶ್ವಶಾ. ೨-೩೨). ೨. = ಬಡಬ ೨ : ಬಿಡದೆ ಮೃಗಿಯು ವೃಷನು ಬೆರಸಿ ಬಡಬೆ ಹಯನು ಬೆರಸಿ ಈ ಎರಡು ನಿಧಾನಿಸುವೊಡೆ ಉಚ್ಚತರವು (ಜನಶ. ೯-೨೩) ; ಹರಿಣಿ ಬಡಬಾ ಕರಿಣೀ ಯಿಾ ಮೂರು ಪ್ರಕಾರ ಸ್ತ್ರೀಜಾತಿಯಿಹುದು (ಜಗಂ. ೯೯೩-೯).

[ಸಂ. ಬಡಬಾ]

**ಬಡಮತಿ** (ನಾ). ಅಲ್ಪವಾದ ತಿಳಿವಳಿಕೆ : ಇನಿತು ಬಡಮತಿಯಿಂ ಬಸವ ರಾಜನ ಕೃತಿಯ ನಾನೆಂತು ರಚಿಸುವೆನು (ಬಸಪು. ೦-೦೪).

[ಬಡ (< ಬಡವು) + ಮತಿ]

**ಬಡಮದುವೆ** (ನಾ). ಕಡಮೆ ವೆಚ್ಚದಲ್ಲಿ ಮಾಡುವ ಮದುವೆ : ಬಡತನದ ಲಗ್ನ : ಈ ಸುತಂಗೊಂದು ಬಡಮದುವೆಯಂ ಮಾಡೆ (ಕಕ್ಕಾಣ. ೦೩-೩). [ಬಡ (< ಬಡವು) + ಮದುವೆ]

**ಬಡಮನ** (ನಾ). ೧. ಹುರುಳಿಲ್ಲದ ಮನಸ್ಸು : ಅಲ್ಪಮನಸ್ಸು : ಇಲ್ಲವೆಯ ಮೇಲೆ ಕಂಚಿೂಡೆದಂತೆ ಬಡಮನವೆನ್ನ ಕಾಡಿತ್ತಯ್ಯಾ (ಅಸಪ. ೨೯೬) ; ಮಱುಗಿ ಮನದೊಳ್ ಮುನಿದು ಕೆಲದ ಕಡುನೀಱರನದರ ನೋಟ್ಟ ಬಡ ಮನದ ಮಂಡಳಿಕಮಂಡಳಿ (ಪರ್ಣೀಪು. ೯-೪೩ ಪ): ಈ ಬಡಮನದ ವಿಪ್ರನದೇನ ಬೇಡಿದ (ಸಂಕಕ. ೦೦-೨೦). ೨. ಹೇಡಿ ; ಧೈರ್ಯಗೇಡಿ : ಡಮರುಗ ಹಸ್ತ ಭಸ್ಮಾಸುರಗಳ್ಗೆ ಬಡಮನನಾಗಿ ನಡನಡುಗಿ ಡಮರುಗವಾತವೆತ್ತನ ನೋವಿದ ಚಂಡಮಹಿಮಗಾನೆಬಿಜ್ಜುವೆನು (ಕಕಶಾ. ೬೦-೩೩).

[ಬಡ.(< ಬಡವು) + ಮನ]

**ಬಡಮಲ್ಲ** (ನಾ). ಅಸಮರ್ಥನಾದ ಮಲ್ಲ : ಬಡಮಲ್ಲರನೆಲ್ಲರುಮಂ ಪಡಲಿಟ್ಟೈ ಕಂಸನುಬಿದ ಮಱ್ಲದಿರ್ದಡೆಯೊಳ್ ಮಡಿಪಿದೆಯದಿನ್ನು ನಡ ಯದು ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ (ನೇಮಿಪು. ೦೦-೯೯).

[ಬಡ (< ಬಡವು) + ಮಲ್ಲ]

**ಬಡಮಾತು** (ನಾ). = ಬಡನುಡಿ : ಬಡಮಾತನಾಡಿದೆ ತವ ವಂಚಬಾಣಕ್ಕೆ ವ್ಯಾಡ ವಿಧಿ ವಿಷ್ಣು ದೇವೇಂದ್ರ ಒಡಲೊಳು ಪೆಣ್ಣುದ್ರವೆತ್ತರು (ಕೋಶಕ. ೩-೯೦). [ಬಡ (< ಬಡವು) + ಮಾತು$_1$ ]

**ಬಡರು** (ಕ್ರಿ). ಗಾಬರಿಯಿಂದ ಬೆದರು.– ಬೆಚ್ಚು.

ಬಡರು ಬೀಳು, ಬಡರಿ ಬೀಳು = ಗಾಬರಿಯಿಂದ ಬೆದರಿ ಬೀಳು.– ಬೆಚ್ಚಿಬೀಳು : ನಿದ್ರಿಸುತ್ತಿದ್ದ ಪೀಂಚಲು ಏನೋ ದುಃಸ್ವಪ್ನದಿಂದ ಎಚ್ಚರುವಂತೆ ಬಡರು ಬಿದ್ದಿದ್ದಳು (ಮಲೆಕು. ೨೬೩) ; ತತ್ತರಿಸಿದ್ದ ಸಲಗ ಮತ್ತೆ ಬಡರಿ ಬಿದ್ದು ಎದ್ದು ಓಡಲು ಪ್ರಯತ್ನಿಸುತ್ತಿದ್ದಂತೆಯೇ . . . ಅದನ್ನು ಹೊತ್ತುಕೊಂಡು ಮನೆಯ ಕಡೆಗೆ ಇಳಿದರು (ಮಲೆಕು. ೦೨೩) ; ಕಲ್ಲು ತೆಗೆದುಕೊಳ್ಳುವಂತೆ ನೆಲಕ್ಕೆ ಕೈಯಿಟ್ಟು ಬಾಗಲು, ನಾಯಿಗಳು ಬಡರಿ ಬಿದ್ದು ಹಿಂದಕ್ಕೋಡಿದವು (ಕಾಹೂರು. ೯೬೨). [< ಬೆದಱು$_1$]

**ಬಡವ** (ನಾ). ೧. ಕೃಶನಾದವನು ; ಸೊರಗಿದವನು : "ಬಡವನೆನಲ್ ಕೃಶಂ" (ಕರ್ಣಾಶ. ೬೩) ; ಕಾಮಸಂತಾಪದೆ ಬೆಂಡದವಂಗೆ ಬಡವಂಗದವಂಗತಿದುಃಖಿತಂಗೆ ಧಾತ್ರೀಪತಿಕೋಪದೊಳ್ಕೊರ್ದವಂಗೆ ಶರಣ್ಪೆಱತಿಲ್ಲ (ಸಮುಶ. ೦-೦೯೨) : ಬಡಿವೆತ್ತ [ಬಡವ]ನಂತೆ ಶಕ್ತಿಗೆಟ್ಟು (ಧರ್ಮಾಮೃ. ೦-೦೬೪). ೨. ಯಾವ ಆಧಾರವೂ ಇಲ್ಲದವನು ; ನಿರ್ಗತಿಕ; ದರಿದ್ರ: "ಕ್ಷುದ್ರಃ, ದಂದ್ರಃ . . . ದುರ್ಗತಃ — ಈ ೬ ಬಡವಂ" (ಕಣಾಪು. ೩೬-೦೯೩) ; ನೀಚಜಾತಿಗಳುಂ ಬಡವರುಂ ಸದ್ಧರ್ಮಮಂ ಕೈಕೊಂಡು ನೆಗಟ್ಟರ್ (ಧಕ್ಕಾಣ. ೬೬-೩) ; ಮಸಿದುಣ ವೇಡಿದಂ ಬಡವನಾನುಣಲಿತ್ತಂ (ಶಂಕಶಾ. ೩-೬೨) ; ದೈವದೊಳ್ಳೆ ಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಸೋಮಿಶ. ೩೩): ಬಡವನ ಕೋಪ ದವಡೆಗೆ ಮೂಲ (ಗಾದೆ).

ಬಡವ ಬಗ್ಗುಗಳು = ಅತ್ಯಂತ ದರಿದ್ರರು : ಬಡವ ಬಗ್ಗುಗಳೂರ ನಾಡನು ಗ್ರಾಮಕಾರ್ಯದಲಿ ಕೆಡಿಸಿದತಿಪಾಪಿಷ್ಠ (ಕೃಷ್ಣಾಕ. ೯-೯೬). ಬಡವರು ಬಗ್ಗರು, ಬಡಬಗ್ಗರು = ಬಡವಬಗ್ಗುಗಳು : ಬಡವರು ಬಗ್ಗರನ್ನು ಕಂಡರೆ ಕರುಣೆಯಿಂದ ವರ್ತಿಸಬೇಕು (ರೂಢಿ) ; ಚಂದ್ರಶೇಖರನು ಬಟ್ಟೆ ಬರೆ ಪಾತ್ರೆ ಪರಟೆಗಳನ್ನು ಬಡಬಗ್ಗರಿಗೆ ದಾನವಾಡಿದನು (ಶಾಂತಿಸು. ೦೯೩); ಗಾಂಧೀಜಯಂತಿಯಂದು ಅವರು ಬಡಬಗ್ಗರಿಗೆ ವಸ್ತ್ರದಾನ ಮಾಡಿದರು (ರೂಢಿ).

[ಬಡವು + — ಅ$_1$]

**ಬಡವಡು**.- ಬಡಪಡಂ (ಕ್ರಿ) ೧. ಕೃಶವಾಗು; ಸೊರಗು; ಬಡವಾಗು: ತನ್ನೊಳಾದ ಬೇಟದೊಳ್ ಬಡವಟ್ಟುಮೋಟಿಗ್ಗಿವಾಡಿವದ ಸಖಿಯಂತೆ ಸೊಗಯಿಸುವಶ್ವಯಿಳಂ ಕಂಡು (ಶಂಕಶಾ. ೩-೦೩ ಪ); ತಪದಿಂದಂ ಬಡವ[ಪಾಠಾಂ. ಪ]ಟ್ಟ ನಿಟ್ಟೊಡಲನಂ . . . ಪಸು ಕೂರ್ಗೋಡಿಂದೆ ಕೋಡೆತ್ತಿ (ಪರ್ಣಪು. ೩-೬) ; ನೋಂತ ಬಡವ[ಪಾಠಾಂ. ಪ]ಟ್ಟೊಡಲಂ ಸಲ್ಲೇಖನದಿಂದಿಬಿಪದೊಡಲ್ಲದುದೇಂ ದೇವನಾಗಲೆನಗಂ ನಿನಗಂ (ಅಸಂಪು. ೯-೬). ೨. ಬಡತನವನ್ನು ಹೊಂದು ; ನಿರ್ಗತಿಕನಾಗು ; ದರಿದ್ರನಾಗು: ಬಡವಟ್ಟಂಗೆ ಮಹಾನಿಧಿದ್ವಯಮೆ ಕೈಸಾರ್ದಂತೆ . . . ಉತ್ಸಾಹವಿರ್ಮಡಿಸುತ್ತಿರ್ಪಿನಮಿರ್ಪನೀಕ್ಷಿಸುತುಮಾ ಭೂಪೋತ್ತಮಂ ಪುತ್ರರಂ (ಶಾಂತೀಶ್ವ. ೬-೬೩). **ಬಡಪಡು** : ೧. ನೀಮಿಂತೇಕೆ ಕರಂ ಬಡಪಟ್ಟಿರ್ದಿರಿ (ಧಕ್ಕಾಣ. ೦೦೩-೯) : ಬಡವಟ್ಟು ಬೆಟ್ಟದೊಳ್ ಪೋಗಿ ತೊಟಲ್ದು ನಾರ್ಗಳನುಡಲ್ ತರುತಿರ್ದಲೆ ಮಾಡಲಾರ್ತ ನಿಲ್ಲಾಗಳೆ ಕೋಪಮಂ ನಿನಗೆ ಸಂಚಿತಶೌರ್ಯಧನಂ ಧನಂಜಯಂ (ಶಂಕಶಾ. ೬-೯೭) ; ನಾಯನ್ ಬಡಪಟ್ಟು ದುಃಖದೊದವಿಂ ಜಾಯ್ದುಟ್ಟು ಪೊರೞುಟ್ಟು . . . ಸತ್ತಿತ್ತಂತೆ ಕಾಲಾಂತದೊಳ್ (ಸುಕುಮಾ. ೩-೫೦). ೨. ಬಡವಟ್ಟ ಬೇಡಿದವರ್ಗ್ಗೀವಡೆ ಜಂಗಮಕಲ್ಪವೃಕ್ಷಮೆಂಬುದು (ಎಇ. XVI. ೩೩-೦೬; 1102) ; ಒಂದುದಿವಸಂ ನಾಭಿರಾಜನಲ್ಲಾ ಪ್ರಜೆಗೂಡಿ ಬಂದು ಬಡಪ[ಪಾಠಾಂ. ಪ]ಟ್ಟಿರ್ಪವರ್ಗೆ ಗ್ರಾಸವಿಲ್ಲೆಂದೀಶಂಗೆ ತೋಱದೊಡೆ (ಕುಕ್ಕಾಸ್ರ. ೦೦-೧೬ ಪ).

[ ಬಡ ( < ಬಡವು ) + ಪಡು$_1$ ]

**ಬಡವಾನಳ** (ನಾ). = ಬಡಬಾನಲ : ಒಳಗಿರ್ದ ವೈರಿಗಳ್ ಮೊಕ್ಕಳ ವಿಷಯಂ ಪೆರ್ಚಲಧಿಕವಿಭವರ್ಕಳುಮಂ ತಳರದೊಡನಿರ್ದ ಬಡವಾ [ಅಂಕ್ತಾ.ಟಾ] ನಳನೆಂದುಂ ಪೆರ್ಚಲೀಯದುದಂತಂಬುಧಿಯಃ (ಕಂಪಿಣ. ೩-೦೯೯).
[ಸಂ. ಬಡವಾನಲ]

**ಬಡವಿ** (ನಾ). ಯಾವ ಆಧಾರವೂ ಇಲ್ಲದವಳು; ನಿರ್ಗತಿಕಳಾದವಳು; ದರಿದ್ರೆ: ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು ಬಳಸಿ ಕೊಂಡವರನ ನಾವು ಅರಕು ಇರಕು ಎರಕು (ಬಾರದೀ. ೩೯-೦): ನನ್ನ ಪತ್ರದ ಅಷ್ಟು ಬೂವಾಯು ಎಲ್ಲಿಂದ ಬರಬೇಕ್ರಿ ? ನಾ ಬಡವಿ (ಬಾಕೂಲಿ. ೩೦೫).
[ಬಡವ + – ಇ₂]

**ಬಡವು** (ನಾ). ೧. ಕೃಶವಾಗಿರುವಿಕೆ ; ಸೊರಗಿರುವಿಕೆ : (೬). ೨. ಸೊರಗಿದುದಂ ; ಕೃಶವಾದುದಂ ; ತೆಳುವಾದುದಂ : ನಭದೊಳಿರ್ದಪೆಯುವುದರಿಂದ ನಿನ್ನನಾನನುವಿಪೆನೆನ್ನ ಮೆಯ್ ಬಡವೂ ನಲ್ಲನ ಮೆಯ್ ಬಡವೋ ನಿಶಾಕರಾ (ಅಂಪು. ೦೨-೪೦). ೩. ಏನೂ ಇಲ್ಲದಿರುವಿಕೆ ; ನಿರ್ಗತಿಕತನ ; ದಾರಿದ್ರ್ಯ : (೬). ೪. ಕಿರಿದಂ ; ಚಿಕ್ಕದು ; ಅಲ್ಪವಾದುದಂ : ನಿರ್ಜರವತಿ ಎಷ್ಟು ಬಾಗಿಲ ಕಾದಿರ್ದ ಸಜ್ಜನಸಂಪತ್ತು ಬಡವೆ (ಕೋಹಕ. ೩೦-೦೫). ೫. ಅಶಕ್ತನಾದವನು ; ಅಸಮರ್ಥನಾದವನು ; ದುರ್ಬಲ : ಬೇಡ ಓಂಸಿಸಬೇಡ, ಆ ಬಡವು ಗೋಪನನ್ (ಅಕೃಕಾ. ೬-೯೯) ; ನಿನ್ನಂಬೆಯಂ ಕೊಲ್ಲಿಸಿದ ತವಸಿಯುಂ, ಮೇಣ್ ಕೊಂದ ಆ ಬಡವು ಬಡಗನುಂ ತವಿಯದರೊಳರಿನ್ನುಂ (ಶ್ರೀರಾಪು. ೨೦೯-೨೨೪).

**ಬಡವಾಗು** = ೧. ಕೃಶವಾಗು ; ಸಣ್ಣನಾಗು ; ಸೊರಗು : ಅತನ ಮಹಾದೇವಿ ಮಂದೆಯಂಬೋಳಾಕೆಗೆ ಗರ್ಭಮಾಗಿ ಚಂದ್ರನಂ ನುಂಗುವ ಬಯಕೆಯಾಗಿ ಬಡವಾದೊಡೆ (ಪಶ್ಚಾ. ೦೩೬-೦೦) : ಬಡವವ್ವೊಡೆ ಮೇಯದೆ ನೀರ್ಗುಡಿಯದೆ ಮೆಲ್ಕಿಬಿಯದಿರ್ಪೊಡೋರಂತಿರೆ ಕೊಡುವುದು ಬೇವಿನ ಕಷಾಯಮಂ (ಕೋಕೊ.ಹ. ೯-೨೦೭). ೨. ನಿರ್ಗತಿಕನಾಗು ; ದಾರಿದ್ರ್ಯವನ್ನು ಹೊಂದು : ಧನ ಸವೆದು ಬಡವಾದರೆ ಆ ಭಕ್ತನು ಆ ಲಿಂಗಕ್ಕೆ ಪೂಜೆಯಹನು (ಬಸವ. ೦೩೦) ; ಬಡವಾದಿರರಸ ಕಾಲೊಳ್ ನಡೆದಡರೊಡನಾರುಮಿಲ್ಲ ಕಡಲೆಗಳೇ ನಿಮ್ಮುಡಿಯೊಳಗೆ ಪಡುವ ದೇಗುಲ ದೆಡೆಯಾವುದು ಕುಡದ ನಿವಾಗಮಾಯೆಡಬಾಯ್ಕೇ (ಕಬಿರ. ೦೦೨ ಕೃಷಿ): ಕಾಣಿಯ ಬೀಯದಲಿ ಬಡವಹುದೆ ಕನಕಾಚಲ (ಕುಮಾರವ್ಯಾ. ೦-೦೬).

**ಬಡವುಗಳ್** = ಅಸಹಾಯಕವಾದ ಪ್ರಾಣಿ ಮುಂತಾದುವು : ಕರಿ ಕಳಭಂಗಳ ಶಿಶುಕೇಸರಿಗಳ ಬಟೆಯಂ ತಗುಳ್ದು ಬಡವುಗಳನದಂ ತಿಂಬಿ ಓಡಿಯುಂತ್ತುಮರಿಗಂ ವರಿದಾಡುವ ಸವುವಯ[ಸ್ಕರಿ]ಳ್ ಸೊಗಯಿಸಿದಂ (ಅಂಕಿಕಾ. ೨-೦೦): ಅಧಿಕಾರಿಗಳೆನೆ ಸ್ವರಿಸವಧಿಕಾರಿಗಳಾಗಿ ಬಾಟ್ಗಿ ಬಡವು ಗಳವರ್ಗಾಯುಧಭಾರಮೇಕೆ (ಗಣಹು. ೩-೩೩). **ಬಡವು ಬಗ್ಗುಗಳ್** = ಬಡಬಗ್ಗರು : ಬಡವುಬಗ್ಗುಗಳ ಕರಕರದು ಕೃಪಾರದಲಿ ಮನವರಿಸಿ ಸೂಜಿಯ ಬಿಟ್ಟು ತೆಜಿಗೆಯ ಬರಹಗಳ ನೆಜಿ ತೊಡಿಸಿ ಸಂತಸವಡಿಸಿದನು ಜನವ (ಕೂಕಾ. ೬-೯೬-೨೬).

**ಬಡವೆ** (ನಾ). = ಬಡವಿ : ಕುಡುವ ಬೊಜಂಗನಂ ಪಡೆದ ಕುಂಟಣಿಯಂತೆ ಸಿರಿವಂತನ ಕಯ್ಯಂ ಒಡಿದ ಬಡವೆಯಂತೆ (ರಕಪಾಂಪು. ೩-೦೨೪) : ನಾನು ಬಡವೆ, ತಿರಕೊಂಡು ತಿಂಬೋಳು (ಕುರ್ವ.ಕ. ೦೬೬). [ಬಡವ + – ಎ₁]

**ಬಡವೆಣ್** (ನಾ). ಹೆಚ್ಚು ತಿಳಿಯದ ಹೆಂಗಸು ; ಮುಗ್ಧಸ್ತ್ರೀ : ಕಡು ನಾಣ್ಚೆಯುಂಚ ಕಣ್ಮುಚ್ಚಿ ಕಂಪನಗೊಂಬ ಬಡವೆಣ್ಣಿ [ ಅಂಕಾ. ಎಡವೆಣ್ಣಿ, ಮಡದಿಯರಿ] ಕೃತಿಗೆಳೆ ಎಡಬಲದವರೇಳಿಸದಂತೆ ಮನ ದನ್ನರೊಡವ ಬಾಳುವರುವೆಸೊಳು (ಅಂಪ. ೦-೩೩).
[ಬಡ (< ಬಡವು) + ಪೆಣ್]

**ಬಡವೆಟಿ³, ಬಡವೆಟಿ³** (ನಾ). ಚಿಕ್ಕದಾಗಿರುವ ಚಂದ್ರ; ಬಾಲಚಂದ್ರ: ಭಾಳದೊಳಿಕ್ಕಿದ ಬಡವೆಟಿ³ವೊಟ್ಟಂ ಸ್ಥೂಲವಯೋಧರಕಿಕ್ಕಿದ ತಾರಾ ಮಾಲೆಗಳಂ ಬಾಲೆಯುತರಬರೆಸಿದರ್ (ಅಯಂಕ. ೦೨-೧೧). **ಬಡೆಪೆಟಿ³** : ಹರನ ಜೆಡೆಯ ಬಡಪೆಟಿ³ಯಂ ವಾಣೀವರನ ಬೆರಲ ಕಂಠವನಂಬುರು ಹೋದರನ ಕರದ ಕಂಬುವನು . . . ತರಿಸಿ (ಅಯುಕ. ೦-೬೪).
[ಬಡ (< ಬಡವು) + ಪೆಟಿ³]

**ಬಡವೊಡಲ್, ಬಡವೊಡಲು** (ನಾ). ಕೃಶವಾದ ಶರೀರ ; ಸೊರಗಿದ ಮೈ : ಬಡವೊಡಲಂತೆ ಪೋಲ್ತು ಪರ್ವಡದ ಪಂದೆಯಂತೆ ತಲ್ಲಣಿಸಿ (ರಹಾಂಪು. ೧-೦೩೬) : ಸೀರಂತವೊಲ್, ತುಂತುರಾಗದೇವಿ ನನ್ನ ಬಡವೊಡಲ್ ? (ಶ್ರೀರಾಪು. ೩೦೩-೬೩). **ಬಡವೊಡಲು** : ಬಡವೊಡಲು ನಾಸಿದಡ ಬಿಗುಹಂ ಸಡಿಲಿದಡ ನೀ ಮಾತ್ರ ಮುಂದಕ್ಕಡಿಯನಿಡಬಾರದೆ ನಿಲುವೆ (ಅಸಕ. ೯೯-೯).
[ಬಡ (< ಬಡವು) + ಒಡಲ್]

**ಬಡವೊಡಲು** 'ಬಡವೊಡಲ್' ನೋ.

**ಬಡಹ** 'ಬಡವ' ನೋ.

**ಬಡಹಾರುವ** 'ಬಡಪಾರ್ವ' ನೋ.

**ಬಡಹುರಿ** (ನಾ). ಕೃಶವಾದ ಹಗ್ಗ ; ತೆಳುವಾದ ಹುರಿ : ಹಿಡಿದು ಕಟಿಗಳನಳಿವವೊಲವಗಡಿಸಿ ಕಟ್ಟಿದನೇಳನೊಂದೇ ಬಡಹುರಿಯ ನೇಣನಲಿ (ಕರಾಗ. ೦೦-೬೮-೩೨). [ಬಡ (< ಬಡವು) + ಹುರಿ₂ (< ಪುರಿ₂)]

**ಬಡಹೆಟಿ³** 'ಬಡವೆಟಿ³' ನೋ.

**ಬಡಾ** (ಗು). ೧. ದೊಡ್ಡ ; ಹಿರಿಯ : ಇಂಥಾ ದುರ್ಘಟಸಮಯದಲ್ಲಿ ಬಡಾಫಕೀರರಿಲ್ಲವೇ ಎಂಬುದು ಎಲ್ಲರಿಗೂ ಆಶಂಕೆ (ದೌಅಕ್. ೪೦). (ನಾ). ೨. ವಿಸ್ತಾರವಾದುದಂ : 'ಬಡಾಯಿಸು', 'ಬಡಾವಣೆ' ಪರಾ.
[← ಹಿಂ. ಬಡಾ]

**ಬಡಾಯಿ₁** 'ಬಡಗಿ' ನೋ.

**ಬಡಾಯಿ₂** (ನಾ). ದೊಡ್ಡಸ್ತಿಕೆ ; ಒಣಜಂಬ; ಹೆಮ್ಮೆ : ಅವಳ ತಾಯಿ ತಂದೆ ಇದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದರೋ? ಸ್ವಲ್ಪವೂ ಜಂಬ, ಬಡಾಯಿ ಇಲ್ಲ (ದೂರಕ. ೦೦೩); ಒಣಸಾಹಸದ ಬಡಾಯಿಯಲ್ಲ; ಅವನು ಬಹುಶ್ರುತನಾಗಿದ್ದನು (ಅಂಕಿಪು. ೯೯೨).
[← ಹಿಂ. ಮರಾ. ಬಡಾಈ, ಬಢಾಈ. / ತುಳು. ತೆಲು. ಬಡಾಯಿ]

**ಬಡಾಯಿಕೊಚ್ಚು** (ಕ್ರಿ). ಜಂಬ ಹೊಡೆ : ನಾನದನ್ನು ಬಲ್ಲೆ, ಬಲ್ಲೆ ಎಂದು ಯಾರು ಬೇಕಾದರೂ ಬಡಾಯಿಕೊಚ್ಚಬಹುದು (ಕಪಂಚಾ. ೦೯೬); ಕೃಷ್ಣಭಟ್ಟರು ಬಡಾಯಿಕೊಚ್ಚಿಕೊಳ್ಳುತ್ತಿದ್ದರು (ಶ್ರೀಂಕಸು. ೦೩).
[ಬಡಾಯಿ₂ + ಕೊಚ್ಚು₁]

**ಬಡಾಯಿಗಾರ** (ನಾ). ಒಣಜಂಬದವನು : ಅವನು ಚಮತ್ಕಾರಕೂಸ್ಯ ವಾದ ಬಡಾಯಿಗಾರ ಮಾತ್ರವಲ್ಲ . . . ಆಡಂಬರವ್ಯಕ್ತಿಯೆಂದು ಅಗ ಪ್ರತಿಯೊಬ್ಬರಿಗೂ ಮನದಟ್ಟಾಯಿತು (ಕೃಷಪು. ೩೩೬).
[ಬಡಾಯಿ₂ + – ಗಾರ₁ (< – ಕಾಱ)]

**ಬಡಾಯಿಸು** (ಕ್ರಿ). ೧. ದೊಡ್ಡದಾಗು : ಹೆಚ್ಚು : ಅಧಿಕವಾಗು: ಮೈಸೂರವರು ಬಡಾಯಿಸಿ ಕೊಡಗಿನ ಶೀಮೆ ವಳನುಗ್ಗಿ ಬಂದರು (ಕಾಕೀಂದ್ರ. ೩). ೨. ವಿಸ್ತರಿಸು: ಹೆಚ್ಚಿಸು: ಅಧಿಕಗೊಳಿಸು : ಈ ಬಾರಿನ ಸಂಖ್ಯೆಯನ್ನು ೮,೦೦೦ಕ್ಕೆ ಬಡಾಯಿಸಿದರು (ಮುಹಾಕಂ. 11. ೦೯); ನಾಲೆಯನ್ನು ಮೈಸೂರವರೆಗೂ ಬಡಾಯಿಸಿ ಭಾರಿಯಾಗಿ ಕಾಲುವೆ ಮಾಡಿ ದರು (ಮುಹುಗ. ೯೯); ಹುಡುಗ ವ್ಯಾಪಾರ ಮಾಡಿಕೊಂಡು ಹೋಟೆಲ್ ಬಡಾಯಿಸಿದ (ಕಪಂ. ೦೯೮). [ಬಡಾ + – ಇಸು₁ /ತೆಲು. ಬಡಾಯಿಂಚು]

**ಬಡಾಯಿಹೊಡೆ** (ಕ್ರಿ). = ಬಡಾಯಿಕೊಚ್ಚು : ನಾನಾಸಾಹೇಬ ನಕ್ಕು "ನಾನು ಅಷ್ಟು ಹೆದ್ದನೇ. ಅಷ್ಟು ಯೋಚಿಸುವ ಸಾಮರ್ಥ್ಯವುಂಟು

ನನ್ನಲ್ಲಿ" ಬಡಾಯಿಹೊಡೆಯುವವನಂತೆ ನನ್ನ ಹತ್ತಿರ ಹೇಳಿದ (ಅರುಣ. ೦೬೬). [ಬಡಾಯಿ + ಹೊಡೆ, (< ಪೊಡೆ)]

**ಬಡಾವಣೆ** (ನಾ). ೧. ಕಟ್ಟಡ, ನಗರ ಮೊದಲಾದುವುಗಳನ್ನು ವಿಸ್ತರಿಸುವಿಕೆ.–ವಿಶಾಲಗೊಳಿಸುವಿಕೆ: ಹತ್ತಿಪ್ಪತ್ತು ವರ್ಷಗಳ ಹಿಂದೆ ಬೆಂಗಳೂರಿನ ಸುತ್ತಲೂ ತರಕಾರಿ ತೋಟಗಳಿದ್ದವು. ಅವುಗಳನ್ನು ನಗರ ಬಡಾವಣೆಗಾಗಿ ಆಕ್ರಮಿಸಿಕೊಳ್ಳಲಾಗಿದೆ (ಕಕಿ. ೬೩); ದೊಡ್ಡಿಗಳ ಕಟ್ಟಡವನ್ನು ಕಟ್ಟಿಸುವದಕ್ಕೂ ಕಟ್ಟಡವನ್ನು ರಿಪೇರಿ ಬಡಾವಣೆ ಮಾಡುವುದಕ್ಕೂ ಹೀಗೆ ಖರ್ಚಾಗಿ ಉಳಿದ ಹಣವನ್ನು . . . ಕೊಡಲ್ಪಡತಕ್ಕದ್ದು (ಗ್ರಾ ಕಾಶ. ೦೦೦). ೨. ಕಟ್ಟಡ, ನಗರ ಮೊದಲಾದುವುಗಳ ವಿಸ್ತರಿಸಿದ ಭಾಗ.–ವಿಸ್ತರಣ: ನಮ್ಮ ಮನೆಯಿರುವುದು ಬೆಂಗಳೂರುನಗರದ ಜನಭರಿತ ಬಡಾವಣೆಯೊಂದರಲ್ಲಿ (ಪಾಂಗೀ. ೦೧೯). [ಬಡಾ+–ಅಣೆ]

**ಬಡಿ$_1$** (ಕ್ರಿ). ೧. ಹೊಡೆ; ಏಟುಹಾಕು; ತಾಡಿಸು : "ಬಡಿ– ತಾಡನೇ, ಸ್ವಲ್ಪದಂಡೇ ಚ" (ಶಮಂ); ಮೊಗಮಂ ಸುಡು ಒಡಿ ಬಡಿ ನಿಮಿರ್ದಿಱಿ ಬಯ್ ಕಡಂಗಿ ನುಂಗೆಂದು ಮುಸುಱಿ ನಾರಕರಾಗಳ್ . . . ಕುತ್ತುವುದುಂ (ಶಬ್ದಾ.ಶಾ. ೬೨೭-೯); ಕರಿಘಟೆಗಳನಾರ್ದುಡಿಯೆ ಬಡಿದಾನೆವೆರಸಾಗಡೆ ಕೊಂದಂ ಕ್ಷೇಮಧೂರ್ತಿಯಂ ಪವನಸುತಂ (ಹಂಕಶಾ. ೦೨-೬೯); ಹುತ್ತವ ಬಡಿದೊಡೆ ಹಾವು ಸಾಯುಬಲ್ಲುದೆ (ಬಕಚ. ೦೦೭); ತಾಯೆ ಬಾರೌ ತಂಗಿ . . . ಸಾಯುಲವದಿರ ಬಡಿದು ತಾ (ಕುವ್ಯಾ.ಶ. ೯-೧೦). ೨. (ಕಬ್ಬಿಣ ಮೊದಲಾದುವುಗಳನ್ನು ಕಾಯಿಸಿ) ಚಚ್ಚಿ ಉದ್ದ ಮಾಡು; ಸಾಗು ಹಾಕು : ಕಮ್ಮಾಱನಂತೆ ಕಾಸಿ ಬಡಿವರ್ ಮೇದನಂತೆ ಸೀಳ್ವರ್ (ಧರ್ಮಾಮೃ. ೩-೭೩); ಕಾದಿರುವಾಗ ತಾನೆ ಕಬ್ಬಿಣವನ್ನು ಬಡಿಯಬೇಕಾಗುವುದು (ಚಕ್ರ.೪೯). ೩. (ಕೈ ಮೊದಲಾದುವುಗಳನ್ನು) ತಟ್ಟು: ಬರೆದ ಬರಹವಿದೆಂದು ಕಯ್ ನೊಸಲ ಬಡಿದಂ (ಶಾಂಪು. ೦೬೩-೨೮೯); ಎರಡೂ ಕೈಗಳನ್ನು ಬಡಿದು ಧೂಳನ್ನು ಹಾಡಿಸಿ (ಚಮ್ಮ.ಶ. ೨). ೪. (ರಭಸವಾಗಿ) ತಾಗು; ತಗಲು : ನನ್ನ ಕಾಲು ಕುರ್ಚಿಗೆ ಬಡಿದು ಬೆರಳಿನಲ್ಲಿ ರಕ್ತ ಬರುತ್ತಿದೆ (ರೂಢಿ). ೫. ಅವಯವಗಳನ್ನೇ (ಅಸಹಾಯಕವಾಗಿ) ಅಲುಗಾಡಿಸು; ಒದರು; ಚಲಿಸುವಂತೆ ಮಾಡು: ಮುಸಕಂಗುಂದಿದ ಮೆಯ್ ಮಲ್ ಬಡಿವ ಕಾಲ್ (ಹಂಕಶಾ. ೦೨-೧೫೦); ಬಲೆಯೊಳ್ ಕಪೋತಂಗಳಸಂಘಾತಂ ಸಿಲ್ಕಿ ತಲೆಯುಮನೊಡಲುಮಂ ಬಡಿಬಡಿದು ಬಚಲುತಿರ್ಪುದುಂ (ಹಂಕಶಂ. ೨೧೯-೦೯); ಉಡು ಮೊಲ ನರಿ ಹುಲ್ಲೆ ಮರೆ ಸಾರಗಗಳ ಕಂಗಿಡಿಸುವ ಪಂಘಾಲಿಗಳು ನಡುವಿನ ರಕ್ತಮಃಖಲೆಯಾಂತು ಬಾಲವ ಬಡಿಯುತ ನಡೆದುವೊಗ್ಗಿನಲಿ (ಕೋಚಕ. ೧೯-೦೨). ೬. (ಹರೆ, ನಗಾರಿ, ತಮಟೆ ಮೊದಲಾದ ಚರ್ಮವಾದ್ಯಗಳನ್ನು) ಬಾರಿಸು; ನುಡಿಸು: ಕೂಟಿಲ್ಲದೆ ಮದ್ದಳೆಯುಂ ಬಡಿವ (ಧರ್ಮಾಮೃ. ೦೨-೨೧); ಸಿಡಿಲ ಕಡುಹಿನಿಂದೆ ಬ್ರಹ್ಮಾಂಡಭೇರಿಯು ಬಡಿವವೊಲಾನೆಯ ಮೇಲೆ ಹೊಡೆವ ಡಮಾವಿಂಗಳಬ್ಬರ ಗಗನವ ತುಡುಕಿತು (ಹಂಕಶಾ. ೧೦-೨೩); ಸುಡುವರೆ ಪಂಜಹುದು ಬಡಿಯೆ ಭೇರಿಯುಹುದು (ಹಕಲ್ಕ. ೨೧೭). ೭. (ಸಿಡಿಲು ಮೊದಲಾದುವುಗಳು) ಎರಗು; ಹೊಡೆ; ಅಪ್ಪಳಿಸು: ತೆಱಹುಗೊಟ್ಟೊಳಹೊಗಿಸಿ ತದೆದನು ಬಱಸಿಡಿಲು ಬಡಿವಂತೆ (ಕಕಚ. ೯-೩೦). ೮. ಗ್ರಹ, ದೃಷ್ಟಿ, ರೋಗ ಮೊದಲಾದುವು ತಾಗು.–ಹಿಡಿ.–ಆವರಿಸು : ಅಚ್ಚರಿಗೊಂಡುಗ್ರಬಾಹು ಕಂಡು ಬೆಚ್ಚಿಬಿದ್ದನು ತನಗೆ ಬಡಿಯಲು ರಾಹು (ಶ್ರೀಗಂಧ. ೯೯-೩); ದೃಷ್ಟಿ ಬಡಿದಿದೆ, ಅದಕ್ಕೆ ಮದ್ದು ಮಾಡಿ ನೋಡ್ತೀನಿ (ಶುಪೋಚಂ. ೩೩೩). 'ಗರಬಡಿ' ಪರಾ. ೯. (ಕೆಟ್ಟವಾಸನೆ ಮುಂತಾದುವು) ಬರು.–ಉಂಟಾಗು: ಹೋತದಲ್ಲಿ ಆದರಲ್ಲೂ ಬೆದೆಹತ್ತುವ ಕಾಲವಲ್ಲಿ ತದೆಯಲಾಗದ ಹೊಲಸುನಾತ ಬಡಿಯುವುದು (ಹಂಕೋ. I. ೭೭೬); ಕಾಕಾ ಅವರಿಂದ ಕಾಗದ ಬಂದ ವಾಸನಿ ಅವಂಗ ಬಡಿದವ (೦೭೫ಚ. 11. ೦೦೩). ೧೦. [ಗಣಿತ] ಗುಣಿಸು ; ಗುಣಾಕಾರ ಮಾಡು: ತಿಪಿ ಪೆರ್ಚುಯ್ ಬೆರ್ಚಿಸು . . . ಅಣೆ ಬಡಿ ಮೇಂದು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಚ. ೧೧).

**ಬಡಿದಾಟ**=ಹೊಡೆದಾಟ; ಘರ್ಷಣೆ; ಹೋರಾಟ : ಕೋಮುವಾರು ಘರ್ಷಣೆಗಳಾಗುವ ಸೂಚನೆ ಕಾಣಿಸಿತು . . . ಆದರೆ ಬಡಿದಾಟಕ್ಕೊಂದು ಕಾಂಟುನೆವ ಬೇಕಲ್ಲ? (ಹರ್ಷಾ.ಕ. ೦೬೪); ಸಹಸ್ರಾರು ಜನರು ತಮ್ಮ ಉದ್ದೇಶ ಸಾಧನೆಗಳಿಗಾಗಿ ಬಡಿದಾಟ ನಡಿಸುವವರು (ಶುಹಾಶ್ಯಾ. ೬೯). **ಬಡಿದಾಡು**= ಹೊಡೆದಾಡು; ಹೋರಾಡು: ಕಡಿದಾಡಿದರ್ ಕತ್ತಿ ಕ್ಕೆದುವಿಂ ಗದೆಗಳಿಂ ಬಡಿದಾಡಿದರ್ (ಕಚಕ್ರ. ೨೧-೬); ಪಶುಗಳನ್ನು ಸಾಕಿದವರು . . . ಹಚ್ಚಿನ ಬೆಳೆಯ ಪಾಲಿಗೆ ಪಾತ್ರರೆಂದು ಬಡಿದಾಡಹತ್ತಿದರು (ಜಾಚಚ. ೬೨). **ಬಡಿದುಕೊಳ್ಳು** =೧. ಹೊಡೆದುಕೊಳ್ಳು; ತಾಟಿಸಿಕೊಳ್ಳು; ತಲೆಯಂ ಕಾಲ್ಗಳಂ ಪಾಷಾಣವೃಕ್ಷಂಗಳೊಳ್ ಶತಚೂರ್ಣಮಾಗೆ ಬಡಿದುಕೊಂಡು . . . ಪ್ರಳಾಪಂಗೆಯ್ದು (ಶಬ್ದಾ.ಶಾ. ೯೯-೨೯). ೨. ಆವರಿಸು; ಹಿಡಿದುಕೊಳ್ಳು: ಪ್ರಾಚೀನಕಾಲದಲ್ಲಿ ದೇವತೆಗಳಿಗೆ ಅಲ್ಲದಿದ್ದರೆ ರಾಕ್ಷಸರಿಗಾದರೂ ನಗಡ ಬಡಿದುಕೊಳ್ಳುತ್ತ ಇದ್ದಿರಬೇಕು (ದೀಕ್ಷ. ೦೬); ಇವನ ಅಜ್ಜನಿಗೋ ಅಜ್ಜಿಗೋ ಇದ್ದಿತಂತೆ ಈ ದರಿದ್ರದ ರೋಗ. ಆದರೆ ಇವನಿಗೆ ಹನ್ನೆರಡನೆಯ ವರ್ಷಕ್ಕೇ ಬಡಿದುಕೊಳ್ಳಬೇಕೇ? (ಶುಂರುಚಾ. ೯೩).

☞ ಈ ಧಾತುವು ಹಲವು ಶಬ್ದಗಳ ಜೊತೆಗೆ ಸೇರಿ ವಿಶಿಷ್ಟವಾದ ಧಾತುವಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ: ಕಾಪ್ಪಡಿ, ಗರಬಡಿ, ಬಾಯ್ಬಡಿ, ಸಿಡಿಲ್ಬಡಿ ಇತ್ಯಾದಿ.

[ದೇ.॥ ಮಲ. ಮಟ; ತುಳು. ಕೊಡ. ಬಡಿ]

**ಬಡಿ$_2$** 'ಬಟ್ಟು$_1$' ನೋ.

**ಬಡಿ$_3$** (ನಾ). ೧. ಹೊಡೆಯುವುದು: (೬). ೨. ಪೆಟ್ಟು; ಏಟು: (೬). ೩. (ಹೊಡೆಯಲು ಉಪಯೋಗಿಸುವ) ಕೋಲು; ದೊಣ್ಣೆ; ಬಡಿಗೆ : "ಸ್ವಲ್ಪದಂಡ ತಾಡನಗಳೊಳ್ ಬಡಿಯೆನಿಕ್ಕುಂ" (ಶಬ್ದ.ಕುಂ. ೯೩); ಮಿಡಮಿಡಮಿಡುಕುವಿನಂ ಬಡಿಯೊಳೊಡೆಯೆ ಪೊತ ಪೆಡತಲೆಯಂ (ಶಬ್ದಾ.ಶಾ. ೦೨೭-೮); ಜೂದಿನ ಗೆಲ್ದದೊಳಾದೀ ಮೇದಿನಿಯಂ ಕಂಡು ಕಜ್ಜಮಂ ಕಾಣದೆ ದುರ್ಯೋಧನನದೇನದೇಂ ಮರುಳಾದನೊ ಬಡಿಗಂಡನಲ್ಲ ಪಾಲನೆ ಕಂಡಂ (ಹಂಕಶಾ. ೬-೦೯); ಬೆಕ್ಕು ಪಾಲನಲ್ಲದೆ ಮೇಲಣ ಬಡಿಯಂ ಕಾಣದು (ಧರ್ಮಾಮೃ. ೬-೦೨೬).

[ < ಬಡಿ$_1$/ತಮಿ. ಮಲ. ವಟಿ; ತುಳು. ಬಡು; ತೆಲು. ಬಡ; ಕೋಲಾ. ಬಡ್ಡ]

**ಬಡಿಕ$_1$** (ನಾ). (ವಾದ್ಯ ಮೊದಲಾದುವುಗಳನ್ನು) ಬಡಿಯುವವನು.– ಬಾರಿಸುವವನು : ಮದ್ದಳೆಯ ಬಡಿಕರ ಬಿಂಕ ಮೇಳವಲ್ಲಲಾ ನಿನಗೆ (ಕುವ್ಯಾ.ಶ. ೩-೨೨). [ಬಡಿ$_3$ + –ಕ$_2$]

**–ಬಡಿಕ$_2$, –ಬಡಕ$_2$,– ಬಡುಕ** (ಪ್ರ). ಲಂಚ, ಮಾತುಗಾರಿಕೆ, ಆಹಾರಸೇವನೆ ಮುಂತಾದುವುಗಳಲ್ಲಿ ಅತಿಯಾದ ಪ್ರವೃತ್ತಿಯುಳ್ಳವನು ಎಂಬರ್ಥದಲ್ಲಿ ಬರುವ ಪ್ರತ್ಯಯ: 'ಕೊಟ್ಟಬಡಿಕ', 'ಬಾಯ್ಬಡಿಕ' ಪರಾ. -ಬಡಕ$_2$: 'ಬಾಯಿಬಡಕ', 'ಲಂಚಬಡಕ' ಪರಾ. – ಬಡುಕ: 'ಬಾಯಿಂಬಡುಕ' ಪರಾ. [<ಬಡಿ$_1$]

**ಬಡಿಕೆ** 'ಬಡಿಗೆ' ನೋ.

**ಬಡಿಕೊಳ್** 'ಬಡಿಗೊಳ್' ನೋ.

**ಬಡಿಕೋಲ್** 'ಬಡಿಗೋಲ್' ನೋ.

**ಬಡಿಕೋಲು** 'ಬಡಿಗೋಲ್' ನೋ.

**ಬಡಿಗ** 'ಬಡಗಿ' ನೋ.

**ಬಡಿಗಲ್ಲು** (ನಾ). ೧. ಹೊಡೆಯಲು ಉಪಯೋಗಿಸುವ **ಕಲ್ಲು:**

ಇಡುಗಲ್ಲು : ನಿಡಿಗಲ್ಲು ನಿಶಿತ ಹಾಸರೆಗಲ್ಲು ಚೌಕದ ಬಡಿಗಲ್ಲು ಬಟ್ಟುಗಲ್ಲು ಬೀಳೆ (ಹೋಚಕ. ೪೦-೬೩). ೨. (ಕಬ್ಬಿಣ ಮೊದಲಾದುವುಗಳನ್ನು ಬಡಿಯಲು ಆಧಾರವಾಗಿ ಇರಿಸಿಕೊಳ್ಳುವ) ಅಡಿಗಲ್ಲು; ಅಡೆಗಲ್ಲು : ಮೇಳವದಿ ನೃಪರೊಗ್ಗಿನಿಂದಾ ಸ್ಥೂಳಬಾವವ ತಡುಕಲಾಧನು ಮೇಲೆ ಬಡಿಗಲ್ಲುರುಳಿದಂತಿರಲು (ಜೀಮಿಕ. ೦೫-೨೬): ಕುಂಭೀನಸಿಯು ಇದನ್ನೇ ಯೋಚಿಸುತ್ತ ಬಡಿಗಲ್ಲ ಮೇಲೆ ಕುಳಿತಿದ್ದಳು (ಶ್ರೀಜಾಕ. ೯೧). ೩. ಆಕರ್ಷಣಕಾಗಿ ಇಟ್ಟಿರುವ ತಿಂಡಿಯನ್ನು ಇಲಿಯು ಮುಟ್ಟಿದ ಕೂಡಲೆ ದಪ್ಪಕಲ್ಲು ಮೇಲೆ ಬೀಳುವಂತೆ ಆಳವಡಿಸಿರುವ, ಇಲಿ, ಹೆಗ್ಗಣಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಸಾಧನ; ಬೋನು : ಬಡಲ ಕಿಚ್ಚಿಗೆ ಪೋಗಿ ಬಡಿಗಲ್ಲು ಕಡಹಿಕೊಂಡ ದಗಿದ ಮೂಷಕನಂತಾದೆ (ಪ್ರಭುಲಿಂ. ೦-೦೦೯-೨); ಬಡಿಗಲ್ಲಿನಲಿ ಹೆಗ್ಗಣ ಮಿಡುಕುವಂದದಿ ಮದನಶರವಾಯಾಪುಬಂಧದಲಿ ತೊಡರಿ . . . ಅಡಿಯಿಡಲಾಣನವನು (ಅಮೃತ. ೨-೬೨). ೪. (ಆಲಂ) ಕಷ್ಟ; ತೊಂದರೆ ; ತಾಪತ್ರಯ : ಏನು ಮಾಡುವುದು ! ತಾನು ಹೋಗುವುದು ಒತ್ತಟ್ಟಿಗಿರಲಿ, ನಿವಗೆ ಬಡಿಗಲ್ಲು ತಂದನು ! (ಪತ್ರಂಚು. ೦೬೬).

[ ಬಡಿ₁ + ಕಲ್ಲು (< ಕಲ್₃) ]

**ಬಡಿಗುಂಡು** (ನಾ). ಹೊಡೆಯಲು ಉಪಯೋಗಿಸುವ ಕಲ್ಲು; ಇಡುಗುಂಡು : ಪಿಡಿಗುಂಡು ಬಡಿಗುಂಡು ಜಡಿದು ಪೊಯಿವ ಗುಂಡು ಒಡನೆತ್ತಿ ಹಾಕುವ ಗುಂಡು ಗಡಣಿಸಿ ಕೊತ್ತಳದಪ್ಪದೆ ತೆನೆಗಳಿಂದೆಡೆಯೊಳ್ದವು ಗುಂಡುಗಳು (ಅಜಿತ. ೦೬-೯೬). [ಬಡಿ₁ + ಗುಂಡು₁]

**ಬಡಿಗೆ₁**, ಬಡಿಕೆ (ನಾ). ಬಡಿಯುವ ಸಾಧನ; ಕೋಲು; ದೊಣ್ಣೆ : ಬಡಿವ ಬಡಿಗೆಗಳ ಕೆಯ್ಯೊಳ್ ತೊಡೆಯುದು ಸಲೆ ಪೊಟ್ಟಗೊಡೆದು ಕಡವಡದೆತ್ತಂ (ಸುಕುಮಾ. ೩-೦೫) : ಹೊಡೆಸಿದ ಮರಳಿ ವಿಶ್ವಾಮಿತ್ರನಾಕಳ ಹಸಿಯ ಬಡಿಗೆಯಲಿ (ಹರಿಶ. ೨೯-೬೮); ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ ಮಡಿದಿಹುದೆ (ಸರ್ವಜ್ಞ. ೫೬೩). ಬಡಿಕೆ : ಹಾಳುವುಂಡೇದಕ್ಕೆ ದೊಣ್ಣೇನೆ ಸ್ಯೆ ಅಂತಾ, ಒಂದು ಬಡಿಕೆ ತಗೊಂಡು ಜಪ್ಪಿದೆ (ಜಾನಪ. ೩೩); ನಾಲ್ವತ್ತರ ಮೇಲೆ ನಡಿಕೆ, ಎಂಭತ್ತರ ಮೇಲೆ ಬಡಿಕೆ (ಗಾದೆ). [ಬಡಿ₁ + – ಗೆ]

**ಬಡಿಗೆ₂** 'ಬಡಗಿ' ನೋ.

**ಬಡಿಗೆಕಾಱ** (ನಾ). ಕೋಲು ಹಿಡಿದಿರುವವನು; ಕೋಲುಕಾರ : ಮುಂತಣ ಮಾವಂತರ ಪಿಂತಣ ಬಡಿಗೆಕಾಱರ ನಡುವಣ ವೀರ ಜೋದರ . . . ಕೋಲಾಹಳದಬ್ಬರಮುಬ್ಬರವಾಗೆ (ಗಿರಿಜಾ. ೬-೫೫ ವ). [ಬಡಿಗೆ₁ + – ಕಾಱ]

**ಬಡಿಗೆಕೊಳ್** 'ಬಡಿಗೆಗೊಳ್' ನೋ.

**ಬಡಿಗೆಗೊಳ್**, ಬಡಿಗೆಕೊಳ್ (ಕ್ರಿ). ೧. (ಹೆದರಿಸಿ ಓಡಿಸಲು) ದೊಣ್ಣೆಯನ್ನು ಹಿಡಿ ; ಕೋಲನ್ನು ಹಿಡಿದುಕೊಳ್ಳು: ಮರ್ಕಟಂಗಳ ಪಡೆಯನಟ್ಟಿದ ಹಿಂಡು ದನವಿಗೆ ಬಡಿಗೆಗೊಂಡಂತೆ (ಕೌಶಿಕಾ. ೩೫-೦೯). ಬಡಿಗೆಕೊಳ್ : ೨. ದೊಣ್ಣೆಯಿಂದ ಹೊಡೆ : ನೆಲ್ಲಿಯ ಕಾಯ್ಗಳಂ ಬಡಿಗೆಕೊಂಡವೊಲಕ್ಕಿದ ತೋರಹತ್ತದಿಂ ಜಲ್ಲನೆ ತುಂಬಿಗಳ್ ಕೆದಱ ಬಂದುವು ಬಿಂಕದಿನಂಕದಾನೆಗಳ್ (ಆದಿಪು. ೨೦೩). [ಬಡಿಗೆ₁ + ಕೊಳ್₁]

**ಬಡಿಗೆಗೋಲು** (ನಾ). = ಬಡಿಗೆ₁ : ಕೈಗಳ ಸಕಲದನುಜರು ಹಿಡಿದು ಡೊಲಲು ನೆಗೆದು ಹಾಯುತ ಕೊಡಹಿ ಬಡಿದನು ಬಾಲದಿಂದವ ಬಡಿಗೆ ಗೋಲಂತೆ (ಕೌಶಿಕಾ. ೦೬-೫೨). [ಬಡಿಗೆ₁ + ಕೋಲು₁ (< ಕೋಲ್₁)]

**ಬಡಿಗೆವಲೆ** (ನಾ). ಒಂದು ಬಗೆಯ ಬಲೆ : ಹಾಱುವಲೆ ಜಾಱುವಲೆ ಬಡಿಗವಲೆ . . . ಮಂದಿಸಿನವಲೆಯ ಹೊಱೆಗಳ ಬೇಡವಡೆ ನೆರೆದುದು (ಹರಿಶ. ೫-೯). 'ಬಡಿವಲೆ' ಪರಾ. [ಬಡಿಗೆ₁ + ಬಲೆ₁]

**ಬಡಿಗೊಳ್**, ಬಡಿಕೊಳ್ (ಕ್ರಿ). ೧. ದೊಣ್ಣೆಯನ್ನು ಹಿಡಿ; ಕೋಲನ್ನು ತೆಗೆದುಕೊಳ್ಳು : ಬಡಿಗೊಂಡು ಗೋಣಿವಣ್ಣಂ ಬಡಿವಂತಿರೆ ಪವನಸೂನು . . . ಬಡಿದನನಿಬರಂ ಕೌರವರಂ (ಗದಾಯು. ೩-೦೦) ; ನರನ ಬಿಲುಗೊಂಡೊಂದುದೆಸೆಯಲಿ ಮರುತಿ ಬಡಿಗೊಂಡೊಂದುಕಡೆಯಲಿ . . . ಎರಡುಮಾಱಿಡಿಯಮುತ ನಿಂದರು (ಜಾಮಿಕ. ೧೦-೬೨). ೨. ಬಡಿಗೆಯಿಂದ ಬಡಿ, –ಹೊಡೆ : ಬಡಿಗೊಳೆ ಬಿದು ಬಬ್ಬರಬಿಂದೊಡನುಗೆ ಪೊಸಮುತ್ತು (ಶಂಕರ. ೦೦-೦೦೩); ಬಡಿಯಂ ಬಹ್ವಾಮಲಕದ ಫಳವಂ ಬಡಿಗೊಳುದಿರ್ಪಂದದಿ ಬೀಳ್ವಹ ಬಲ್ಪಡೆ (ಜಯನೃ. ೬-೫೨). ೩. ಬಡಿಗೆಯ ಏಟು ತಿನ್ನು, –ಪೆಟ್ಟುತಿನ್ನು : ಕೆಲರ್ . . . ಸೌಜನ್ಯಕಂದಾಂಕುರನ ಶರಕ್ಕಳ್ಕಿ ಬೆ[ ಳ್ಕ ] ತ್ತೋಡೆಯುಂ . . . ಬಡಿಗೊಂಡ ಮೊಲದಂತೆಯುಂ ತಲೆಕೆಟಗಾಗಿ ಬಿಟ್ಟರ್ (ಶಾಂತಿಪು. ೯-೬೦ ವ); ಬಡಿಗೊಂಡು ಪಣ್ ಪಱಿದು ಬೀಟ್ (ಶಬ್ದಮ. ೧-೯೯). ಬಡಿಕೊಳ್ : ೨. ಬಡಿಕೊಳೆ ಕಾಯುಂ ಪಣ್ಣುಂ ತೊಡಂಬ ಪಱಿದುದಿರ್ವ ಮಾಟ್ಕೆಯಿಂ ಕಿಱಿಯರಿಯರ್ ಮುಡಿವರನ ಕ್ರಮದಿಂ (ಶಂಕರಶ. ೦-೬೩). ೩. ರಿಪುಸೇನೆ ಬಲ್ದು ನಿದ್ರೆಯಿಂ ಬಡಿಕೊಂಡ ನೆಲ್ಲಿಯಂತೆ ನೆಲಕ್ಕೆ ಬೀಟ್ಟುದುಂ (ಧರ್ಮಾಮೃ. ೦೬-೧೮೯); ಬಡಿಕೊಂ[ಪಾಠಾಂ. ಗೊಂ]ಡ ನೆಲ್ಲಿಯ ಕಾಯಂತಾ ಬಲವೂಡನೆ ಚೆಲ್ಲಿತು ಕಂಡಕಡೆಗೆ (ಕುಮಾರಾಂ. ೯೦-೩೩). [ ಬಡಿ₃ + ಕೊಳ್₁ ]

**ಬಡಿಗೋಲ್**, ಬಡಿಕೋಲ್, ಬಡಿಕೋಲು, ಬಡಿಗೋಲು (ನಾ). ಬಡಿಯಲು ಉಪಯೋಗಿಸುವ ಕೋಲು, –ಲಾಠಿ: "ದಣಗೆಯು ಬಡಿಗೋಲವೆಸರ್" (ಶಬ್ದಮ. ೬೩); ಏಱಿನ ಮೇಲೆ ಬಡಿಗೋಲ್ ಕೋಲೆಯ ಮೇಲೆ ಕವರ್ತಯೆಂಬಂತೆ ಸಂತಾಪದ ಮೇಲೆ ಸಂತಾಪವುಂ ಮಾಡ್ಪ ನಿನ್ನ ನೋಂಪಿಯೆಂಬ ಗರಗಸಕ್ಕೆನ್ನಮೆಯ್ಯನೊಡ್ಡಲಾಱೆಂ (ಧರ್ಮಾಮೃ. ೦-೦೬೨). ಓಡಿವ ಏಗಂಗಳ ಬಡದಿರೆ ಬಾಯೊಳು ಬಡಿಗೋಲ್ಗಳಿನಿಕ್ಕಿ ಕಿವಿಯ ಒಡೆಮುರಿಹಿಡೊಡೊದಱುವ ಶಬ್ದವಿಪಿನದೊಳೆಡೆಗೊಂಡುದು (ಹೋಚಕ. ೦೫-೨೦). **ಬಡಿಕೋಲ್**: ನುಲಿ ನೇಣ್ ಬಡಿಕೋಲ್ ಬಲೆ . . . ಇದಿರೊಳ್ ಬರ ಕಾಣಲುಮಾಗದು (ಜೀವಂಧ. ೦೨-೦೦); ಬಡಿಕೋಲಂ ಸಮಮಾಡಲಕ್ಕುಂ . . . ಕಡುಮುನ್ಮುಱುಕಿಂ ಹಿತ ಕೇಳ್ವನೇ (ಸೋಮೇಶ. ೯೯); ತಿರುಗೆ ತಿರುಗುತ್ತುಂ ಸಂಗಡಿಸಿ ಪರಿದುಱಿಬೆನುತ್ತುಂ ಬಡಿಕೋಲಿಂದಿಟ್ಟನಧಿಕಬಲನಾ ಮೊಲನಂ (ರಾಮ. ೦-೮೭). **ಬಡಿಕೋಲು** : ಚಾಳಿಸಿದ ಹದವಿಲ್ಲುಗಳ ಬಡಿಕೋಲುಗಳ ಬೇಟೆಗಾಱರು ಬಳಸಿದರು ಶಿವನ (ಕುಮಾ.ಪು. ೫-೩೩) : ಭ್ರೂಲತೆಯ ಹದವಿಲ್ಲುಗಳ ಹೊಳೆವಾಲಿಗಳ ಹೊದೆಗೋಲುಗಳ ನಳಿತೋಳ ಬಡಿಕೋ[ ಪಾಠಾಂ. ಗೋ ]ಲುಗಳ . . . ಬೇಟೆಕಾತಿಯರೈದಿದರು ವನವ (ಶಿವರಾ. ೦-೫-೯೯); ಓಡಿ, ತಡಗಟ್ಟಿ; ಬಡಿಕೋಲನಿಡಿ! (ಶಂಭ್ರಪ. ೨೯-೩). **ಬಡಿಗೋಲು** : ಮನಸಿಜನ ಬಡಿಗೋ[ ಪಾಠಾಂ. ಕೋ ]ಲೋ ಶಿವನು ಸೂಡಿರ್ದ ಚಂದ್ರನ ಭಾಗವೋ . . . ಎನಲರ್ಧಚಂದ್ರನಂ ಬಣ್ಣಿಸು ವೊಡರಿದು ಕಾವ್ಯಂಗಳೊಳಗೆ (ಜನಕಾ. ೩-೮೨); ಗುಟ್ರಿಯವರೂ, ಬಡಿಗೋಲಿನವರೂ, ಹಣೆವಟ್ಟದ ದೊಣ್ಣೆಯವರೂ, ಸಿದ್ಧವಾಗಲಿ (ಕಟಿಜಾ. ೩). [ ಬಡಿ₁ + ಕೋಲ್₁ ]

**ಬಡಿಗೋಲು** 'ಬಡಿಗೋಲ್' ನೋ.

**ಬಡಿನ** 'ಬಡಿನ' ನೋ.

**ಬಡಿತ** (ನಾ). ಹೊಡೆಯುವಿಕೆ; ಏಟು; ಪೆಟ್ಟು: ಬಸಿವ ನೆತ್ತರ ಬಾಳ್ವೆಯೊಳ್ ಬಡಿತ ಕಡಿತಗಳನೆಸಗಿದವನಲ್ಲ (ಶಾಂತಿಕ. ೦೬೨-೩೫೯); ಅವರ ತಲೆ ತಬಲೆಯ ಬಡಿತಕ್ಕೆ ಸರಿಯಾಗಿ ತೂಗುತ್ತಿತ್ತು (ಅರೋಹ. ೦೬೬). 'ಬಡಿತಂಗಾಸಂ' ಪರಾ. [ ಬಡಿ₁ + – ತ₃ ]

**ಬಡಿತಂಗಾಸು** (ಕ್ರಿ). (ಲೋಹವನ್ನು) ಬಡಿಯುವುದಕ್ಕೆ ಹದವಾಗುವಂತೆ ಕಾಯಿಸಂ, –ಬಿಸಿಮಾಡು: ಚಾಟೆವಾಟ ತಿದಿಯಾಗಿವರುಂ

ಮಿಡುಮಿಡುಕಿ ಬಡಿತಂಗಾಸುವರುಂ [ ಪಾಠಾಂ. ಬಡಿತಂಗೊಂಡು ಕಾಸಿ ಸುಡುವರುಂ] ನೋಡೆನೋಡೆ ಕಣ್ಣಾಳಂ ಮಿಸಾಂಟುವರುಂ (ಅರಿಪು. ೩-೬೩೪); ಸುಜ್ಜಸುಜ್ಜನೆ ಬಡಿತಂಗಾಸುವುದುಂ ಕರ್ಕಶಕ್ಷಾರವಾರಿಯುಂ ತಂದು ಸಜ್ಜಸಜ್ಜನೆ ಪೂಸುವುದುಂ (ಸುಕುಮಾ. ೧೦-೯೭ ವ). [ಬಡಿತ + ಕಾಸು₁]

**ಬಡಿತಂಗೊಳ್** (ಕ್ರಿ). ಪೆಟ್ಟುಹಾಕು ; ಏಟುಹೊಡೆ: ಬಾಟಿವಾಟಿ ತಿದಿಯುಗಿವರುಂ ಮಿಡುಮಿಡುಕಿ ಬಡಿತಂಗೊಂಡು ಕಾಸಿ ಸುಡುವರುಂ [ ಪಾಠಾಂ. ಬಡಿತಂಗಾಸುವರುಂ ] (ಅರಿಪು. ೩-೬೩ ವ). [ಬಡಿತ + ಕೊಳ್₁]

**ಬಡಿದಂಟು** (ನಾ). ಕೋಲಿನಂತಿರುವ ಕಾಂಡ ; (ಗರಿಗಳಿಲ್ಲದೆ) ಬರಿದಾಗಿರುವ ಕಡ್ಡಿ : ಗೊಡ್ಡಮ್ಮನ ಮುಂದೆ ಬಡಿದಂಟು ಒಗೆದಂತೆ ಗಿರಾಕಿಗಳ ಮುಂದೆ ಒಂದೆರಡು ಪತ್ರಿಕೆಗಳನ್ನು ಅವರು ಒಗೆದಿರುತ್ತಾರೆ (ಗಾಳಿ. ೩೩). [ ಬಡ್ಡಿ₃ + ದಂಟು ]

**ಬಡಿನ,** ಬಡಿಣ (ನಾ). ಬಡಿಸಿದುದು; ಆಹಾರ; ಎಡೆ: ಬಳಾರಿಗಿತ್ತ ಬಡಿನಂ ಹಾರ್ದಿಕದ ಹರ್ದಿಗೆ ಬಿರ್ದ್ದ ವ್ಯಕಕೈತ್ತಿದ ಬುತ್ತಿಯೆಯೊಡ ಹಿತರ್ ಮೆಯ್ಯೋಜಿ ಮಾಣಾಂಪವರೇ (ಶುಂಆಶಾ. X. ೩೨೩-೩೦ ; 1205); ಅವಯುವದಿನಯ್ದು ಬಲಮಂ ಜವಂಗೆ ಬಡ್ಡಿಸಿದ ಬಡಿನಮನೆ ಶರಹತಿಯಿಂ ತವೆ ತಲೆವುತ್ತಿರ್ಪುದುಮಮಾ ಕುವರಂ ಶತಖಂಡಮಾಯ್ತು ತನ್ನ ಪಸ್ಯಿನ್ನಂ (ಕುಹಾಪೀ. ೬೨-೦೦೬). **ಬಡಿಣ:** ಬಡಿಣಮನೊಲ್ಲದಂತಿರಿಸಿ ಭಿಕ್ಷಕೆ ಪೋಪ ವನಂತ ಕೂಡೆ ಕೂಡೊಡನಿರುತಿರ್ಪ ಮುಕ್ತಿಸುಖಭೋಗಮನೊಲ್ಲದೆ . . . ಕೋಟಲೆಗೊಳುತ್ತಿಹರಾ ಮರುಳರ್ (ಚಕ್ರ. ೯೬).

[ < ಬಡ್ಡಿಸು. / ತಮಿ. ವಟ್ಟವ್; ತೆಲು. ವಡ್ಡನ, ವಡ್ಡಿನ ]

**ಬಡಿಮಣೆ** (ನಾ). (ನೆಲ ಮೊದಲಾದುವುಗಳನ್ನು) ಬಡಿದು ಸಮ ಮಾಡುವ ಸಾಧನ ; ದಮ್ಮಸು : ಬಡಿಮಣೆಯಿಂದ ಬಡಿದು ಸಮ ಮಾಡಿ (ಕುಂಅಹಾ. ೯-೦೦೬). [ಬಡಿ₁ + ಮಣೆ]

**ಬಡಿವಡೆ,** ಬಡಿಹಡೆ (ಕ್ರಿ). ಹೊಡೆತವನ್ನು ಪಡೆ ; ಏಟು ತಿನ್ನು : ಊರ ಸೀರೆಗೆ ಅಸಗ ಬಡಿವಡೆದಂತೆ [ಪಾಠಾಂ. ತಡಬಡಗೊಂಬು, ಹಡಬಡಿ ಹಡೆ, ಬಡಿಹಡೆದಂತೆ] ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ (ಬಸವ. ೩೦೯ ; ಗುಹಾ. ೪೨-೬ ನೋ); ಮನವಿಲ್ಲದವ ಮುಟ್ಟಿ ಬಡಿವಡೆದ ತೆಱನೆನಗೆ (ಕನ್ನರ. ಹ. ೯೯-೩) ; ವೀರವಾನರನ ಲಾಂಗೂಲದಿಂ ಬಡಿವಡೆದು ರಕ್ಕಸರ ನೆರವಿ ಹೇರಾಳದಿಂ ಪುಡಿವಡೆದು ಬಯಲಾಗೆ (ಕೈಬಿಹಾ. ೦೬-೪೨). **ಬಡಿಹಡೆ :** ಲೋಹಸಂಗದಿ ಕಿಚ್ಚು ಬಡಿಹಡೆದುದೆಂಬಂತೆ . . . ಬೇಹುದೊಂದಳವಟ್ಟ ಬಳಿಕ ಬಿಡಲಾಗದು (ಸಿದ್ಧರಾ. ೯-೯೦).

[ಬಡ್ಡಿ₃ + ಪಡೆ₁]

**ಬಡಿವರ** 'ಬಡಿವಾರ' ನೋ.

**ಬಡಿವಲೆ** (ನಾ). ಒಂದು ಬಗೆಯ ಬಲೆ : ಪಿಡಿವಲೆ . . . ಬಡಿವಲೆ ಬಲುವಲೆಗಾಱರು ಕೂಗಿ ಬೊಬ್ಬಿಡುತಲೈದಿದರು ಮುಂಗಡೆಯ (ಸೋಮಶ. ೦೯-೦೬); ಪಿಡಿವಲೆಯ ಕಾಲ್ಗಣ್ಣಗಂಪಿಲ ಬಡಿವಲೆಯ . . . ಕಿ[ಪಿ]ಡಿದು ಕಾಮರ್ಮುಗಿಲಂತೆ ಕವಿದುದು ಶಬರಸಂದೋಹ (ಅಸಂಶಾ. ೩-೩-೩). 'ಬಡಿಗೆವಲೆ' ಪರಾ. [ಬಡಿ₁ + ಬಲೆ₁]

**ಬಡಿವಾರ,** ಬಡಿವರ (ನಾ). ಒಣಜಂಬ ; ಬಡಾಯಿ ; ಡಂಭ : ಬಿಡದಹಂಕಾರ ಬಲುಬಡಿವಾರದಲ್ಲಿ ಸುಖಬಡಿವೆನು ದುರುಳನಡತೆಗಳಾಚರಿಸಿ (ಕೋಕ್ಷರಿ. ೦೬-೦) ; ಬಡದೆ ಮಡಿಮಡಿಯೆಂದು ಬಡಿವಾರಮಂ ಮಾಡಿ (ಮಲ್ಲಕ. ೨-೨೨) ; ಅಟ್ಟಕ್ಕೆ ಹಾರದ ಬೆಕ್ಕು ಬೆಟ್ಟಕ್ಕೆ ಹಾರುವನೆಂದು ಬಡಿವಾರ ಕೊಚ್ಚಿಕೊಂಡಂತಾಗುತ್ತದೆ (ಚಿಕ. ೨೩೯). **ಬಡಿವರ :** ಎನ್ನೊಡನೆ ಬಂದೊಡೀಗಳೆ ಕನ್ನೆಗೆ ಪೊಕ್ಕವನನೊಲ್ದು ತೋಱದಪೆಂ ನೀವೆನ್ನಂ ಬಿಡಿ ಪರಸೇವೆಯೊಳಿನ್ನರುವೋಸಾಗರೆನ್ನ ಬಡಿವರಮೇನೋ (ದಾಕು. ೯-೯೯). [← ಪಾರ. ಮರಾ. ಬಡಿವಾರ್]

**ಬಡಿವೆಱು** (ಕ್ರಿ). = ಬಡಿವಡೆ : ಬಡಿವೆತ್ತ [ಬಡವ]ನಂತೆ ಶಕ್ತಿಗೆಟ್ಟು (ರಮಾಶು. ೦-೦೬೬) ; ಊರ ಸೀರೆಗಸಂ ಬಡಿವೆತ್ತನೆನಿಪ್ಪ ಜನದ ನಾಟ್ಕುಡಿ ನಿನಗೆ (ಆಗಾ. ೬-೬). [ಬಡ್ಡಿ₃ + ಪೆಱು₁]

**ಬಡಿವೋರಿ,** ಬಡಿಹೋರಿ (ನಾ). ಹೊಡೆತ ತಿಂದು ಕೆಲಸಮಾಡುವ ಎತ್ತು : ಎಂದಿನ ಕೊಂಗರ್ಮನೆ ಬಡಿವೋರಿಗಳೇ ಪಟಗೂಟ ಪಂದೆಗಳ್ (ಚಕ್ರ. ೩-೯೩). **ಬಡಿಹೋರಿ :** ಒಡೆಯ ಬಂಟನಿಗೆ ಬಡಿಹೋರಿಯಾದ (ಪಗಹ. ೪. ೯೨೬-೩೬) ; ಬಗುಳುವಿವದಿರು ಹರಿಯ ಬಡಿಹೋರಿಗಳಲಾ ಜಗವಱಿಯದೇ (ಕುಪ್ಪಾ.ಸ. ೦೦-೯) : ಕೊಡಗು ಕೊಂಕಣ ಕೊಂಗ ಮಲೆಯಾಳ ರಾಜ್ಯದ ಬಡಿಹೋರಿಗಳು ಮನನಡುಗಿ ಒಡನೆ ಕಾಣಿಕೆಯ ನಿತ್ಯಾನೆಯ ಸಜ್ಜಾರ ನಡುಕೇರಿಯೊಳಗೊಪ್ಪುತಿಹುದು (ಕಂಕಪ. ೬-೩೨).

[ಬಡಿ₁ + ಪೋರಿ₂]

**ಬಡಿಶ** (ನಾ). (ಮೀನು ಮೊದಲಾದುವುಗಳನ್ನು ಹಿಡಿಯಲು ಉಪಯೋಗಿಸುವ) ಗಾಳ ; ಕೊಕ್ಕೆ : "ಬಡಿಶವೆಂಬುದು ಮೀನ ಗಾಳಂ" (ಕರಾಮು. ೧೨೬-೬೯) ; ಝಷಾಸಿಚಯಂ ಅವಿಮಲೋಭದಿಂ ಬಡಿಶಮಾಂಸವನಾಸ್ವಾದಿಸಿ ಸಿಲ್ಕಿ ಸಾವನೆಯ್ದುಗುಂ (ಕಣ್ಣಾಶ್ರ. ೩೩೦) : ಕರಮ ಭುಕ್ತ್ಯಾಕಶಯಿಂ ಬಡಿಶಂಗಳೊಳ್ಕಿಡವ ಪಿರಿಯ ಮೀನ್ಗಳ ತೆಱದೆ . . . ರಾಜಸುಮಿಂದ್ರಿಯಂಗಳಿಂದಂ ಶಿವಧ್ಯಾನತತ್ಪರರೆಯ್ದೆ ರಂಜಿಸಿದರು (ಅರಾಶ. ೩-೩-೨೩) ; ಬಡಿಶಗತಪಹ ಮತ್ಸ್ಯದಂದದಿ ಕೆಡೆದು . . . ಬೆಕ್ಕಿಯ ಕಡಿದ ಪಕ್ಷಿಯ ತೆಱದೊಳಡಿಯಿಡಲಾಱದವನು (ಅಮ್ಮಕ. ೨-೬೨).

[ಸಂ.]

**ಬಡಿಸ** (ನಾ). = ಬಡಿಶ : "ಬಡಿಶಂ ಮತ್ಸ್ಯಬಂಧನಂ . . . ಅದು ಕಿಱಿದಾದಡೆ ಬಡಿಸವೆಂಬುದು" (ಪಾಶರಾ. ೦೦೦) ; ಜಲದೊಳಗಣ ನಿಮಿಷಾವಳಿ ಬಲೆಗಾಱನ ಬಡಿಸದಲಿ [ಪಾಠಾಂ. ಸರಳ್ಗೆ] ಸಿಕ್ಕಿಹ ಮಾಂಸಕ್ಕೆಳಸಿ ತನುವಳಿವ ತೆಱದಿಂ ಲಲನೆಯರ್ಗಂ ಹೇಮಭೂಮಿಗೆಳಸಲ್ ಕೆಡುವರ್ (ಪದ್ಮಣಾ. ೩-೬೬). [< ಸಂ. ಬಡಿಶ]

**ಬಡಿಸು₁** (ಕ್ರಿ). ಹೊಡೆಯಿಸಂ ; ಏಟು ಕೊಡಿಸಂ : ಸೊಕ್ಕಿರ್ದರ ಮದಮಿಂತಲ್ಲದುಡುಗದೆಂದು ಸಾಯೆ ಬಡಿಸುವಂ (ರಮಾಶು. ೨-೬೩) : ಹೊಟ್ಟೆಯನು ಕಟ್ಟುವುದು ಬಟ್ಟೆಯುಲಿ ಬಡಿಸುವದು ಕಟ್ಟಾರ ಭಂಗಪಡಿಸು ವದು ಗೇಣುದ್ದ ಹೊಟ್ಟೆ ಕಾಣಾಯ್ತ (ಸರ್ವಜ್ಞ. ೦೯೩೩). [ಬಡಿ₁ + — ಇಸು₁]

**ಬಡಿಸು₂** 'ಬಡ್ಡಿಸು' ನೋ.

**ಬಡಿಹ** (ನಾ). ಹೊಡೆತ ; ಪೆಟ್ಟು ; ಪ್ರಹಾರ : ಬಡಿಹದ ಮಾಕ್ಕಳಂತೆ ಅಜಲ್ವೆಯೊಳಂ ನೀರ್ ಮುಟ್ಟಿದ ಕೆಂಡದಂತುಪಶಮದೊಳಂ . . . ನೆರೆದಿರ್ಪುದುಂ (ರಮಾಶು. ೩-೦೨೩) ; ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಒಡೆಯಾಣೆಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು (ಬಸವ. ೨೫೦) ; ಮರ್ಕಟಂಗಳ ಬಡಿಹ ಮಾಣಿಸು ದೇವ (ಕೌಂಶಾ. ೦೩-೯). [ಬಡಿ₁ + — ಹ₂ (< — ಪ₃)]

**ಬಡಿಹಡೆ** 'ಬಡಿವಡೆ' ನೋ.

**ಬಡಿಹೋರಿ** 'ಬಡಿವೋರಿ' ನೋ.

**ಬಡು₁** (ನಾ). ಪ್ರಾಣಿಗಳ ಹೆಣ, —ಶವ : ಜಾಕಿ, ಓಬಯ್ಯ ಇಬ್ಬರನ್ನು ಜೊತೆಗೆ ಕರೆದುಕೊಂಡು ಕೋವಿಗಳೊಡನೆ 'ಬಡು' (ದನದ ಹೆಣ) ಬಿದ್ದಲ್ಲಿಗೆ ಹೊರಟನು (ಕಾಹೂರು. ೨೬೯) ; ದನವನ್ನು ಹುಲಿ ಹಿಡಿದು... ಬಡುವನ್ನು ಕಾಡಿಗೆ ಎಳೆದುಕೊಂಡು ಹೋಗಿ . . . ಹಳುವಿನಲ್ಲಿ ಮುಚ್ಚಿಟ್ಟಿತ್ತು (ಕಾಶಿಪು. ೦೯೧). [ದೇ.॥ ತೆಲು. ಬಡುಗು]

**ಬಡು₂** (ನಾ). (ಸಾವಾನುಗಳನ್ನು ಇಡಲು) ಗೋಡೆಯಲ್ಲಿ ಮಂಡವಾಚಿ ಕೊಂಡಿರುವಂತೆ ಉದ್ದವಾಗಿ ಕಟ್ಟಿರುವ ಕಲ್ಲು, ಸಿಮೆಂಟು, ಮರ ಮುಂತಾದುವುಗಳ ಕಟ್ಟೆ: ಸಾಮಾನು ಇಡುವ ಮೇಜು (ಅಂತಮ್ಮ

ಗಳುಳ್ಳ) ನಿಲುವು, ಬಡು, ಅಡ್ಡಣಿಗೆ (ಕಿಟ್ಟೆಲ್. ೩೧೪೩) ; ಅಡಿಗೆಮನೆಯ ಒಂದು ಬಡುವಿನ ಮೇಲೆ ಕಂಚಿನ ಗೌರಿಯ ಪ್ರತಿಮೆಯೊಂದಿತ್ತು (ಹೂಹಣ್ಣು. ೬೦).

–ಬಡುಕ '–ಬಡಿಕ₂' ನೋ.

**ಬಡುಗುಲಿ** (ನಾ). (?) : ಪಾತಕಜೀವಂಗಳ್ ಎಳ್ಳನಂತೆ ಗಾಣಕ್ಕೆ ವಂದು . . . ಮೀಯ್ವಲ್ಲದೊಕ್ಕಲಂತೆ ಬಡುಗುಲಿಗೆ ವಂದು . . . ತಿಟ್ಟನೆ ತಿಂವುವು (ಕರ್ಣಾಮೃ. ೩-೬೬). [?]

**ಬಡೇಜಾವು** (ನಾ). (ಉಕ) ಒಣಜಂಬ ; ಡೌಲು ; ಬಡಾಯಿ : ಆತನ ಶಾಸನ ಮಾಡುವುದು ಒತ್ತಟ್ಟಿಗೆ ಉಳಿದು, ಆತನ ಬಡೇಜಾವು ನಡೆದರೆ ! (ಛತ್ರಪ. ೦೩೬) ; ಆ ಸಣ್ಣ ಹುಡುಗನ ಮುಂದೆ ಯಾಕ ನಿನ್ನ ಬಡೇಜಾವ (ಜಾತಕ. ೩೦). [ ← ಮರಾ. ಬಡೇಜಾವ್, ಬಡೀಜಾವ್ ]

**ಬಡೇಸೋಪು** (ನಾ). ಜೀರಿಗೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ಗೊರಟೇಜೀರು, ಹಸರಾಣಿ, ಬಡೇ ಸೋಪು ಇವು ಯಾವಾಗಲೂ ಹುರಿಯದೇ ಉಪಯೋಗಿಸಲ್ಪಡಬೇಕು (ಗೃಹವ್ಯ. ೨). [←ಹಿಂ. ಬಡೀಶೋಫ್ : ಮರಾ. ಬಡೀಶೇಪ್, ಬಡೀಶೋಪ್]

**ಬಡ್ಡ** (ನಾ). ತಿಳಿಗೇಡಿ ; ದಡ್ಡ ; ಮಂದಮತಿ : ದುಡ್ಡು ಕೊಟ್ಟಣ್ಣಾನು ಬಡ್ಡನಾಗುವನಯ್ಯ ಬಡ್ಡಿಗೆ ಬಡ್ಡಿ ಗಂಟಿಕ್ಕಿದಾ ಹಣವು ದೊಡ್ಡರಾಯನ ಪಾಲು (ಜಾಂಸಂ. ೬೪-೬೦) ; ಅಡ್ಡೇಟು ತಗಲಿದರೆ ಬಡ್ಡನಾದರೂ ಗೆದ್ದಾನು (ಗಾದೆ). [ಬಡ್ಡು₂ + –ಅ₇. / ತುಳು. ಬಡ್ಡ]

**ಬಡ್ಡಗಿ** 'ಬಡಗಿ' ನೋ.

**ಬಡ್ಡಗಿವಾಳ** (ನಾ). ಮರಗೆಲಸವನ್ನು ಮಾಡುವವನು ; ಬಡಗಿ : ಮಾಳಿಗಾವುಣ್ಡ ಜಕ್ಕೋಜಗೆ ಕಮ್ಮಾಱವಾಳ ಕೊಟ್ಟ ಕಯಿ ಮತ್ತ ೫ ಬಡ್ಡಗಿ ವಾಳ ಬಿಣ್ಣೋಜಗೆ ಕೊಟ್ಟ ಮತ್ತ ೫ (ಶಾಇ-IX-1, ೦೨೩-೨೬ : 1059). [ಬಡ್ಡಗಿ (< ಬಡಗಿ) + –ವಾಳ₃ ( <–ವಳು)]

**ಬಡ್ಡಿ₁** 'ಪೊಡ್ಡಿ' ನೋ.

**ಬಡ್ಡಿ₂, ವಡ್ಡಿ, ಏದ್ದಿ** (ನಾ). ೧. ಹೆಚ್ಚಳ; ಆಧಿಕ್ಯ: ವಿಘಾತಿಯ ಬಡ್ಡಿಗನ್ನಕ ಬರುಕಿದನು (ಕುಮಾವ್ಯಾ. ೦೨-೪೩). 'ಬಡ್ಡಿವಡೆ' ಪರಾ. ೨. ಸಾಲವಾಗಿ ಕೊಡುವ ಅಥವಾ ಪಡೆಯುವ ಹಣದ ಮೇಲೆ, ಪಡೆಯುವ ಅಥವಾ ತೆರುವ ಹೆಚ್ಚಿನ ಹಣ ; ವೃದ್ಧಿ : ಕಡನುಂ ಬಡ್ಡಿಯುಮೆಂದವಳೊಡಮೆ ಯನವಳೀಯೆ ಕೊಳ್ಗೆ ಪುಸಿಸಾಲಕ್ಕಂ (ಕುಚಾ. ೦೦-೬೩) ; ಕಾಸಿಗೆ ವೀಸವ ಬಡ್ಡಿ ಗಳಿಸಿಕೊಂಡು ಶೇಷಗಿರಿಯ ಮೇಲೆ ವಾಸವಾಗಿದ್ದೇನೆ (ಪುರಂದ. ೨-೬೨-೦) ; ಇವೊತ್ತು ನಿನ್ನ ಸಾಲವನ್ನೆಲ್ಲಾ ಬಡ್ಡಿಸಹಿತವಾಗಿ ತೀರಿಸಿಬಿಡುತ್ತೇನೆ (ಚಚಾ. ೨೪೭). ವಡ್ಡಿ : ೨. ನೀನೂ ತೆಱುವ ಸಿದ್ದಾಯ ಎರಡು ಹಣ ಯಿಾ ಪುಣ್ಯಗಳ ಬೆವ್ವಳಿಯ ವಡ್ಡಿ × × × ಗವುಡ ಸುಂಕ ಮಗ್ಗ...ಸರ್ವಮಾನ್ಯವಾಗಿ (ಎಕ. X. ಮುಳಬಾ. ೨೦-೨ ; 1468) ಏದ್ದಿ : ೧. "ಏದ್ದಿ (ವದ್ದಿ), ವೃದ್ಧಿ—ಏಳಿಗೆ ; ಹೆಚ್ಚಳ" (ಕನ್ನಕೋ: ೪೦); ಮಾತ್ಸ ಕೃತ್ಯಂ—ಮುಡು—ರಿಜು...ವೃದ್ಧಿ—ಏದ್ದಿ, ಶೃಂಗಾರ—ಸಿಂಗಾರ (ಶಮದ. ೨೬೮ ಪ್ರಯೋ).

[< ಪ್ರಾ. ವುಡ್ಢಿ. /ಸಂ. ವೃದ್ಧಿ. /ತಮಿ. ಮಲ. ವಟ್ಟಿ ; ತುಳು. ಬಡ್ಡಿ ; ತೆಲು. ವಡ್ಡಿ]

**ಬಡ್ಡಿಕಾಱ** (ನಾ). ಬಡ್ಡಿ ವ್ಯವಹಾರವನ್ನು ಮಾಡುವವನು : ಬಡ್ಡಿ ಕಾಱನಂತೆ ಒಂದು ಕೊಟ್ಟು ಎರಡು ಪಡೆವ ಜಡಜೀವಿಗಳ ಭಕ್ತರೆನ ಬಹುದೇನಯ್ಯ (ಬಸವಶ. ೬೩-೯೪). [ಬಡ್ಡಿ₂ + – ಕಾಱ]

**ಬಡ್ಡಿಗುಡು** 'ಬಡ್ಡಿಗೊಡು' ನೋ.

**ಬಡ್ಡಿಗೊಡು, ಬಡ್ಡಿಗುಡು** (ಕ್ರಿ). ೧. ವೃದ್ಧಿಯಾಗು ; ಬೆಳೆ : ಒಡ್ಡಿದನು ಕರತಳವನಗಲಿಕೆ ಬಡ್ಡಿಗೊಡುವ ವಿಷಾನಲಾಗ್ರವನಡ್ಡವಿಸಿ ಘಡ ಹೋಗದಿರು ಹೋಗದಿರು ನಿಲ್ಲೆನುತ ಖಡ್ಡಿಸುತ (ಜೈಭಾಗ. ೪-೬-೪೪). ೨. ಬಡ್ಡಿಯನ್ನು ಸಲ್ಲಿಸಬೇಕೆಂಬ ಕರಾರಿನಿಂದ ಸಾಲ ಕೊಡು; ಬಡ್ಡಿ ವ್ಯವಹಾರ ಮಾಡು : ತನ್ನ ನಡಯಿಸಿದ ಬಳಿಕಿನ್ತೆಂದುವರ ಬಡ್ಡಿಗೊಟ್ಟು ಪೆಚ್ಚಿಸಿ ಪೊನ್ನಂ . . . ಶ್ರೀಸಾನ್ತಿಸೆಟ್ಟಿ ಪರಿರಕ್ಷಿಸಿದಂ (ಶಾಇ. XX. ೩೩-೩೨ ; 1082); ಹರದನ ಬಡ್ಡಿಗೊಟ್ಟೊಡವೆ ರಾಜಕುಮಾರನ ತೇಜದೇಳ್ಗೆ ನಾಣ್ಬರುದಿನ ಚಿತ್ರವಿದ್ಯೆ (ಅಸಂಪು. ೬-೪೪) ; ಆ ಕುಸೀದಕನು . . . ವೃದ್ಧ್ಯಾಜೀವನೆನೆ ಬಡ್ಡಿ ಗೊಡುವನಕ್ಕುಂ (ಶಬ್ದಗಾ. ೦೦೨-೦). ೩. ತೆಗೆದುಕೊಂಡ ಸಾಲದ ಹಣಕ್ಕೆ ಬಡ್ಡಿಯನ್ನು ತೆರು. ಬಡ್ಡಿಗುಡು : ೨. ದ್ವೈಗುಣಿಕಃ . . . ಕುಸೀದಕಃ — ಈ ೪ ಬಡ್ಡಿಗುಡುವವಂ (ಹಲಾಯು. ೪೩-೪೦೬) ; ಹತ್ತೆಂಟು ಪಣವಂ ಕಡಂಗೊಟ್ಟು ಬಡ್ಡಿಗುಡುಗುಂ (ಶಾಸ್ತ್ರಸಾ. ೪೪-೬). [ಬಡ್ಡಿ₂ + ಕೊಡು₁]

**ಬಡ್ಡಿಗೊಳ್** (ಕ್ರಿ). ಬಡ್ಡಿಯ ಹಣವನ್ನು ಪಡೆ : ಸಾಲವೀಯದೆ ಬಡ್ಡಿಗೊಳ್ವೆನೆಂಬ [ಪಾಠಾಂ. ಸಾಲಿಸದೆ ಬಡ್ಡಿವೇಟ್ಕೆಂಬ]. . . ಮರುಳನಂತೆ (ಕರ್ಣಾಮೃ. ೦೨-೨೪) ; ಕಡಗೊಂಡನೊ ಬಡ್ಡಿಗೊಂಡನೊ (ಶಮದ. ೦೬೬ ಪ್ರಯೋ). [ಬಡ್ಡಿ₂ + ಕೊಳ್₁]

**ಬಡ್ಡಿಮಗ** 'ಪೊಡ್ಡಿ' ಪರಾ.

**ಬಡ್ಡಿಯಿಕ್ಕು** (ಕ್ರಿ). ಬಡ್ಡಿಯನ್ನು ಕೊಡು : ಬಡ್ಡಿಯಿಕ್ಕುವಂ ಮೊದಲಂ ಕೊಟ್ಟು ಪತ್ರಮಂ ಸೀಳಿಸುವಂತೆ (ಕರ್ಣಾಮೃ. ೦೪-೧೦೪). [ಬಡ್ಡಿ₂ + ಇಕ್ಕು]

**ಬಡ್ಡಿಯುಣ್** (ಕ್ರಿ). ಬಡ್ಡಿವ್ಯವಹಾರದಿಂದ ಜೀವಿಸು : ಕುಸೀದನೆನೆ ಬಡ್ಡಿಯುಂಬಂ (ಶಬ್ದಗಾ. ೦೦೨-೦). [ಬಡ್ಡಿ₂ + ಉಣ್]

**ಬಡ್ಡಿವಡೆ** (ಕ್ರಿ). ಹೆಚ್ಚಾಗು; ಅಧಿಕಗೊಳ್ಳು : ಆ ಧಾತುವಿನ ಮೂಲಾರ್ಥವೇನೆಂಬುದನ್ನರಿತರೆ, ಬಡ್ಡಿವಡೆಯುತ್ತಾ ಬಂದ ಮತ್ತಿನ ಪದಗಳ ಹೊಲಬು ತಾನಾಗಿ ಕಂಗೊಳಿಸಬಹುದು (ಶಾಕೋಶ. ೩೩೮). [ಬಡ್ಡಿ₂ + ಪಡೆ₁]

**ಬಡ್ಡಿವೇಡು** (ಕ್ರಿ). ಬಡ್ಡಿಯನ್ನು ಅಪೇಕ್ಷಿಸು.–ಬಯಸು : ತನ್ನಂ ತಪದಿಂ ನೋಯಿಸದುನ್ನತಿಯಂ ದಿವ್ಯಭೋಗವಂ ಬಯಸುವ ಗಾಂಪಂ ನೆಱೆ ಪೋಲ್ಕುಂ ಸಾಲಿಸದಿನ್ನಳಿಪಿಂ ಬಡ್ಡಿವೇಡಿ ಮಱುಗುವ ಮರುಳಂ (ಕರ್ಣಾಮೃ. ೬-೦೩೬). [ಬಡ್ಡಿ₂ + ಬೇಡು₁]

**ಬಡ್ಡಿಸು, ಬಡಿಸು₂** (ಕ್ರಿ). ಊಟಕ್ಕೆ ನೀಡು.—ಹಾಕು; ಉಣಬಡಿಸು: ಈತಂಗೆ ನೀಂ ಬಸಿಱ್ ತೀವೆ ಬಡ್ಡಿಸದಿರ್ (ಶಬ್ದಾಶಾ. ೬೬-೬); ಮಾಳತಿಕೆಯುಂ ಬಡ್ಡಿಸಲುಮುತ್ಪಳಿಕೆಯುಂ ಕೈಘಟ್ಟ ನೀಡಲುಂ . . . ಪೇಟ್ಟಾಗಳ್ (ಅಂಪು. ೬-೨೦ ವ) ; ಬಡ್ಡಿಸಿದಿದ್ದಲಿಗೆಯ ಮುಂದೆ ಕುಳ್ಳಿರ್ದು . . . ಉಂಬುವ ಕಾರ್ಯವ ಬಿಟ್ಟು ದೊಡ್ಡಕಾರ್ಯವನೆಣಿಸಿದಿರಿ (ಪೇಬಸ. ೨೩-೨೬೩). ಬಡಿಸು₂: "ಬಡಿಸು – ಓಲಗಕ್ರಿಯಾಯಾಂ (ಊಟಕ್ಕೆ ಬಡಿಸು)" (ಕಮಾ) ; ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನವಮನಟ್ಟು ಬಡಿಸು ನಾವಱಿಯದೆನಸುಂ ಸವಿಯಂ (ಕಬಿಕಾ. ೨-೦೪೬); ಅನಂತಕಾಲ ಮಾಡುವ ಲಿಂಗಪೂಜೆಯು ಒಂದು ದಿನ ಬಡಿಸಿದ ಜಂಗಮತೃಪ್ತಿಗೆ ಸರಿಯಲ್ಲ (ಶಶಕ. ೪. ೩೩೦-೦೦೪೨) : ಘಡ ತೊಲಗು ಪವಮಾನಸುತ ನಿನ್ನೊಡಲನೀ ಶಾಕಿನಿಯ ಬಳಗಕೆ ಬಡಿಸುವೆನು (ಕುಮಾವ್ಯಾ. ೦೩-೩೨).

[ದೇ.॥ ತಮಿ. ವಟ್ಟಿ ; ತುಳು. ಬಳಸು ; ತೆಲು. ವಡ್ಡಿಂಚು]

**ಬಡ್ಡು, ಬೊಡ್ಡು** (ನಾ). ೧. ಮೊಂಡು ; ಹರಿತವಿಲ್ಲದುದು ; ತೀಕ್ಷ್ಣತೆಯನ್ನು ಕಳೆದುಕೊಂಡಿರುವುದು : 'ಬಡ್ಡುಗಟ್ಟು' ಪರಾ. ೨. ಮಸುಕಾಗಿರುವಿಕೆ ; ಕಾಂತಿಹೀನತೆ : 'ಬಡ್ಡುಹಿಡಿ' ಪರಾ. ೩. ತಿಳಿಗೇಡಿ ; ಬುದ್ಧಿಯಿಲ್ಲದ ವ್ಯಕ್ತಿ : ಮಱೆಯೊಳಗೆ ಮೃಗರೆದ ವೀರರಂ ಸಂಹರಿಸುತೆ ಬಡ್ಡು ಬಣಗುಗಳನೋಡಿಸಿ . . . ಪುರವನೊಳ ಪೊಗುತ್ತಿರ್ದ್ದರು (ಕಂಪು. ೪೨-೨೮) : ಕಲಿಯಲಿಕ್ಕೆ ಸ್ವಲ್ಪ ಬಡ್ಡು. ಅವಳು ಶಾಲೆ ಬಿಟ್ಟು ಎರಡು ವರ್ಷವಾಯಿತು (ಗೋದಾಳು. ೬೪.) (ಗಂ). ೪.

ಮೊಂಡಾದ; ಹರಿತವಿಲ್ಲದ: 'ಬಡ್ಡುಗತ್ತಿ' ಪರಾ. ೫. ಮಸುಕಾದ; ಮಂಕಾದ: ಕಾಂತಿಹೀನವಾದ: ಮೊಳಕಾಲಿನವರೆಗಿನ ಕೊಳಕುವಂಚಿ, ತಲೆಗೆ ಸುತ್ತಿದ್ದ ಬಡ್ಡು ಕೆಂಬರು ವಸ್ತ್ರ (ಮುಕಜ. ೯೯). ೬. ತಿಳಿಗೇಡಿಯಾದ; ದಡ್ಡತನದಿಂದ ಕೂಡಿದ: ಅವನೊಬ್ಬ ಬಡ್ಡು ಮನುಷ್ಯ. ಅವನಿಗೆ ಯಾರ ಮಾತೂ ಪಥ್ಯವಾಗುವುದಿಲ್ಲ (ಊಹ). **ಬೊಡ್ಡು**: ೧. ಚಕ್ರವು ತೀರ ಬೊಡ್ಡಾದುದರಿಂದ ನೀರಿನ ಶಕ್ತಿಯು ಎಷ್ಟೋ ವ್ಯರ್ಥವಾಗುತ್ತಿತ್ತು (ಕಾಂಕ್ಷ. I. ೯೦); ಬಾಕಿ ಯಾವುದರಲ್ಲಿ ಬೊಡ್ಡಾದರೇನು. ಇಂತಹ ವಿಷಯಗಳಲ್ಲಿ ಮಾತ್ರ ನಮ್ಮ ಜನರ ಕಲ್ಪನಾಶಕ್ತಿ ಹರಿತ ಅಲ್ಲವೆ! (ಮೂಕರಾ. ೦೯೦); ಹಾರೆ ಮೋಟು, ಗುದ್ದಲಿ ಬೊಡ್ಡು, ಗೈಯುವವನಿಗೆ ಒಕ್ಕೈ (ಗಾದೆ). ೬. ಒರಟು; ನಾಜೂಕಿಲ್ಲದುದು: ಅವರ ಕೆಲಸಗಳೆಲ್ಲ ಬೊಡ್ಡು (ಕಾಂಕ್ಷ. II. ೬೦೦). ೮. ಒರಟಾದ: ನಾಜೂಕಿಲ್ಲದ: ಉಳುವುದನ್ನಾಗಲಿ, ನೇಯುವುದನ್ನಾಗಲಿ, ಬಲು ದೊಡ್ಡ ಉಪಕರಣಗಳಿಂದ ಪೂರೈಸುವರು (ಕಾಂಕ್ಷ. II. ೬೦೦).

[ದೇ. ಕ ತುಳು. ಬಡ್ಡ್]

**ಬಡ್ಡುಕುದುರೆ** (ನಾ). ಚುರುಕಿಲ್ಲದ ಕುದುರೆ: ಬಡ್ಡುಕುದುರೆಗೆ ಬಡಿತವೇ ಮದ್ದು (ಗಾದೆ). [ಬಡ್ಡು + ಕುದುರೆ]

**ಬಡ್ಡುಗಟ್ಟು** (ಕ್ರಿ). ಮೊಂಡಾಗು; ತೀಕ್ಷ್ಣತೆಯನ್ನು ಕಳೆದುಕೊಳ್ಳು: ತನ್ನ ರಾಜನೀತಿಯ ಭೇದೋಪಾಯದ ಕನ್ನದ ಮೊನೆ, ಬಡ್ಡುಗಟ್ಟುತ್ತಾ ಬರುವುದು ಅವನಿಗೆ ಗೊತ್ತಾಗದಿರಲಿಲ್ಲ (ಕಾಕೀಸು. ೦೦೨).

[ಬಡ್ಡು + ಕಟ್ಟು₁]

**ಬಡ್ಡುಗತ್ತಿ**, **ಬೊಡ್ಡುಕತ್ತಿ** (ನಾ). ಮೊಂಡುಕತ್ತಿ; ಹರಿತವಿಲ್ಲದ ಕತ್ತಿ: ಬಡ್ಡುಗತ್ತಿಯಲಿ ಹುಡುಗರ ತಲೆಯ ನೀನಡ್ಡಾದಿಡ್ಡಿಯಲಿ ಕೆರೆವೆ (ಜ್ಞಾ ಪಠ. ೦೬-೦೭). **ಬೊಡ್ಡುಕತ್ತಿ**: ಎಳಚಿತ್ರಾಯರು . . . ತುರಿಸುತ್ತಿದ್ದ ಕಾಲಿನ ಮಾಂಸಖಂಡಗಳನ್ನು ಕೈಯ ಬೊಡ್ಡುಕತ್ತಿಯಿಂದ ಹೆರೆದುಕೊಂಡರು (ಚಾಟ. ೬೬). [ಬಡ್ಡು + ಕತ್ತಿ]

**ಬಡ್ಡುಹಿಡಿ** (ಕ್ರಿ). ನಯವಿಲ್ಲದೆ ಕಾಂತಿಯನ್ನು ಕಳೆದುಕೊಳ್ಳು,— ಮಂಕಾಗು: ಬಡ್ಡುಹಿಡಿದು ಕೆದರಿದ್ದ ಕೂದಲನ್ನು ಮಾಯಿಸಿ ಎಣ್ಣೆ ಕಾಣಿಸಿ ಬಾಚಿ ಸರಿಮಾಡಿದ್ದಳು (ಮುಕಜ. ೫೦).

[ಬಡ್ಡು + ಹಿಡಿ₁ (< ಪಿಡಿ₁)]

**ಬಡ್ತಿ** 'ಬಡತಿ' ನೋ.

**ಬಣ್₁** (ನಾ). ಶೂನ್ಯತೆಯನ್ನು ಕುರಿತಂತೆ ಬಳಸುವ ಅನುಕರಣಶಬ್ದ: 'ಬಣಗುಟ್ಟು' ಪರಾ.

**ಬಣಬಣ** (ದ್ವಿರುಕ್ತಿ): ಮದುವೆಗೆ ಬಂದ ನೆಂಟರೆಲ್ಲಾ ಹೊರಟು ಹೋದಮೇಲೆ ಮನೆ ಬಣಬಣ ಎನಿಸುತ್ತಿದೆ (ಊಹ).

**ಬಣ್₂** 'ಬಣ್ಣ' ನೋ.

**ಬಣ್₃** (ನಾ). ಒಂದು ದೇಶದ ಹೆಸರು: ಸೇನ್ದ್ರ ಕಬಣೋಭಯದೇಶದಾ ವೀರಾಪುರುಷ ಸಮಕ್ಷದೆ ಕೇಕಯ ಪಲ್ಲವರಂ ಕಾದೆಱದು ಪೆತ್ತಜಯನಾ ವಿಜಆರಸನ್ಗೆ . . . ಕೊಟ್ಟಾರ್ (ಪ್ರಜಾ. ೦೯೬೩, ೭೬-೦೦; ಸು. 450). [?]

**ಬಣಂಜ** 'ಬಣಜ' ನೋ.

**ಬಣಂಜಿಗ** 'ಬಣಜಿಗ' ನೋ.

**ಬಣಂಜಿಸು** 'ಬಣಜಿಸು' ನೋ.

**ಬಣಂಜು** 'ಬಣಜು' ನೋ.

**ಬಣಂಜುಧರ್ಮ** (ನಾ). ೧. ವರ್ತಕರ ಧರ್ಮ: ಬಣಂಜುಧರ್ಮವನೆ ಪಾಲಿಸಿ ಛೇತರನೆಯ್ದಿ ಕಾದು ನಿರ್ಮ್ಮಳತರಕೀರ್ತ್ತಿಯಂ ಪಡೆದಳಾಸ್ಪರ್ದಡಿ ವೆಣ್ನಾಲ ಸಟ್ಟಿಕವ್ವೆಯೊಳ್ (ಕಅ. IV. ೦-೭೯; 1204). ೨. ವರ್ತಕರ ಧರ್ಮವನ್ನು ಪಾಲಿಸುವವನು: ಉದಗ್ರಪುಣ್ಯರಾದರಿತವಿಶಿಷ್ಟರೆಂಬುದಿದು ಸಂಸ್ತುತಿಯಲ್ತು ಬಣಂಜುಧರ್ಮ್ಮರ (ಎಕ. VII. ಶಿಕಾ. ೦೦೯-೬೮; 1181). [ಬಣಂಜು (<ಬಣಜು) + ಧರ್ಮ]

**ಬಣಂಜುಪಟ್ಟಣ** (ನಾ). ವ್ಯಾಪಾರ ನಡೆಯುವ ನಗರ; ವ್ಯಾಪಾರ ಕೇಂದ್ರ: ಮಲ್ಲಿಸೆಟ್ಟಿಯರು ಮುಂನಂ ಶ್ರೀಪಾದನಾದಿಯ ಬಣಂಜುಪಟ್ಟಣಂ ಕಾಣುವ್ವೆಟ್ಟಿದಲು . . . ಸಮಸ್ತಶಾಸನಿಗರ ಮುಂದಿಟ್ಟು ಕೊಂಡು (ಎಇ. XIX. ೨೫-೯೬; 1246); ಕರವೊಸೆದಿಪ್ಪ ತದ್ದವಡಿ ಸಾಸಿರದಾ [ಬ]ಣಂಜುಪಟ್ಟಣಂ ಸಿರಿಗೆ ನಿವಾಸ ದೇಸಿಯ ಶವರ್ವಾನೆ (ಕೊಲ್ಲಾ. ೫೦-೩; 1265). [ಬಣಂಜು (<ಬಣಜು) + ಪಟ್ಟಣ]

**ಬಣಂಜುಸಮಯ** (ನಾ). = ಬಣಂಜುಧರ್ಮ ೧: ಧರೆಗೆಸೆ[ವೀ]ಬಣಂಜುಸಮಯಪ್ರತಿಪಾಳನವರ್ತ್ತಿಯಿಂದೆ ದುರ್ದ್ದರರತರಮಪ್ಪ ಚಂಡಿಕೆಯ ವೆಣ್ನಾಲೆ ನಾರಿಯನಿಪ್ಪ ನಾಮಮಂ ಧರಿಯ್ಸಿ(ಯಿಸಿ) (ಕಅ. IV. ೦-೭೫; 1204). [ಬಣಂಜು (<ಬಣಜು) + ಸಮಯ]

**ಬಣಂಬೆ**, **ಪಣಂಬೆ**, **ಬಣಬೆ**, **ಬಣವೆ**, **ಬಣವೆ**, **ಬಳಂಬೆ** (ನಾ). ೧. (ಹುಲ್ಲು, ಮೇವು ಮುಂತಾದುವುಗಳ) ಮೆದೆ,—ರಾಶಿ,—ಒಟ್ಟಿಲು: "ಕುತ್ತಱ ಬಣಂಬೆ" (ಶಬ್ದಮ. ೦೦೯-೨); ಕರುಳ ಮೆದೆಯುಂ ಪಿಕ್ಕಿ ಪರಪಿ ನೋಡಿಯುಂ ಪಲ್ಗಳ ಬಣಂಬೆಗಳೊಳ್ ಪರವಸಂಗೊಂಡು ಮೆಟ್ಟಿಯುಂ . . . ಎಲ್ಲಿಯುಂ ದುರ್ಯೋಧನನನಱಸಿ ಕಾಣದೆ (ಗದಾಯು. ೬-೨೮ ವ); ಪೆಣದ ಬಣಂಬೆಗಳಂ ಕೋಟ್ಟಿದುಬಿ ಕೋಟ್ಟಿ ಸೆಱುಮಾಗುವುರ್ವುಪಡೆಯೆ (ಕಂರಾಮ. ೦೬-೫೯ ವ); ಪೆಣನ ಬಣಂಬೆಯೊನಡರ್ದು ಬಿಸುನೆತ್ತರ ಕಾಲನಿಱದು . . . ನಲಿವ ಕಾಗೆಗೂಗೆಗಳುಂ (ಕಾಕುತ್ಸ್ಥ. ೯೭-೦೫). ೨. ಹುಲ್ಲು, ಮೆದೆ ಮೊದಲಾದುವನ್ನು ಒಟ್ಟುವ ಸ್ಥಳ: ಮನೆಯಗೇರಿಯುಮಂ ಬಣಂಬೆಯುಮನೊಂದು ತೋಂಟಮುಮಂ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಕಅ. II. ೦೯-೬೫; 1123); ಪನ್ನೆರಡು ಕೆಯ್ಯು ಬಣಂಬೆ (ಶಾಂಕಶಾ. ೦೯೯೬, ಹುಕ್ಕೇರಿ. ೯-೦೦; 1195). Δ **ಪಣಂಬೆ**: ೧. ಒಡಲಿದಱಂದಮಂ ಬಗೆದು ನೋಟ್ಪೊಡೆ ಪೇಲ ಪಣಂಬೆ ಕುತ್ತವಿರ್ಪೆಡೆ (ರವಿಶಾಸ್ತ್ರ. ೬-೬೬). **ಬಣಬೆ**: ೧. ನೆಣನ ಬಣ[ಕಾಶಾಂ. ಣಂ]ಬೆ [ಕಾಶಾಂ. ಪಳ್ಳಂ]ಗಳೊಳ್ ಕೈದುಗುತ್ತಿ ನೋಡಿಯುಂ (ಗದಾಯು. ೬-೨೮ ವ); ಮಡಿದು ಕೆಡೆದ ವೀರರ ಪೆಣದ ಬಣ[ಕಾಶಾಂ. ಣಂ]ಬೆಯುಂ ಮೆಟ್ಟಿ . . . ಪೋಱಮಾಡುವಾಗಳ್ (ಜಾಪ. ೬-೯೬ ವ); ದ್ರುಪದನಂದನನೆಯುಳಲ ಶಿಖಂಡಿಯನವಲೇ ಕುರುಕುಲದ ಕರಡದ ಬಣಬೆ ಕಾದುಬೂಹುವುದು (ಕುಪ್ಪಾಭ. ೨-೬೨). **ಬಣವೆ**: ೧. ಕೊಟ್ಟದ್ದು ಬರಲಿಲ್ಲ ತಂದದ್ದು ಬಿಡಲಿಲ್ಲವೊಟ್ಟಿದ್ದ ಬಣವೆಗಳುವೊಂದಿಲ್ಲ (ಕುಕ್ಕಿಕ. ೬-೯); ಯಂತ್ರದ ಮುನ್ನಡೆಗೋಸ್ಕರ ಯುದ್ಧ ಬೇಕೆನ್ನುವುದು ಅರಳಿಗಾಗಿ ಛತ್ತದ ಬಣವೆಯನ್ನು ಸುಟ್ಟ ಹಾಗೆ (ತಿಂಪ್ರಾ. ೦೬೩). **ಬಣವೆ**: ೧. ಬಣವೆಗಳ ದಹನವು ಎಲ್ಲರಿಗಿಂತ ಅರ್ಧ ತಾಸು ಮುಂಚಿತವಾಗಿ ರಾಘಪ್ಪನಿಗೆ ಗೊತ್ತಿರುತ್ತಿತ್ತು (ಗಂಡೂಹು. ೫೫). **ಬಳಂಬೆ**: ೧. ಬಳಂಬೆಯು ತೆಱ ತಳಸಾರಿಗೆ ಕಾಣಿಕೆ ಕವಣಾಯ ದಣ್ಡಾದಾಯವಿನ್ನಿತುಮಂ . . . ಕೊಟ್ಟರ್ (ಸೌಇಇ. IX–1. ೦೬೨-೦೯; 1106); ಪಳ್ಳದೊಳಗಣ ಬಳಂಬೆಯಂತೆ ದ್ರೋಹನ ನಿತ್ತರಣೆಯಂತೆ . . . ಲೇಸಲ್ಲದ ಸುಬುಕ್ಕಿ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ಕರ್ಣಾಕು. ೯-೨೬); ಪರ್ಬಿಣದ ಬಳಂಬೆ ಪೆರ್ಗ್ಗರುಳ ತಿಂತಿಣಿ ನೆತ್ತರ ಪೆರ್ಬೊನಲು (ಎಕ. VIII. ಸೊರಬ. ೦೨-೬; 1155 ?). ೨. ಬಳಂಬೆ ನಿವೇಸಣಂ ಮೂಡಣ ಬೆಳದೊಳಾಗಳೆಯೊಳಗಲಂ (ಇಇ. XIX. ೫೬-೬೯; 1054); ಒನ್ದು ಮನೆಯೊನ್ದು ಬಳಂಬೆ (ಎಇ. XIII. ೩೨೦-೨೬; 1126). [ದೇ. ಕ ತುಳು. ಬಣವೆ]

**ಬಣಕಮೆಂಡಿಗವುಂಡ** (ನಾ). ಒಬ್ಬಾತನ ಹೆಸರು (?): ಕಾಟುಕದ ಬಣಕಮಣ್ಡಿಗವುಣ್ಡ ತಱುಗೆಳ್ಗೆ ವಂದು ಎನೀವಟ್ಟಿ ಕದಿ ಸತ್ತು ಸ್ವರ್ಗ್ಗಿ

ಯದಂ (ಕ್ಕ.ಅ. ೧೮೯೦. ೬೯–೮೦; ೧೧೨೨). [?+ಗವುಂಡ (<ಗಾವುಂಡ)]

**ಬಣ್ಣಕಾರ** 'ಬಣ್ಣಗಾರ' ನೋ.

**ಬಣಗ₁** 'ಬಳಗ₁' ನೋ.

**ಬಣಗ₂** (ನಾ). ಅಲ್ಪವ್ಯಕ್ತಿ; ಕ್ಷುದ್ರ; ಹೀನ: ಬಣಗರಂದದಲೆನ್ನನೆಂದರೆ ಹಣೆಯ ಕಣ್ಣಿನ ಕಿಡಿಯ ಕೆದಱುವೆನು (ಕ್ರ.ಕುೞ. ೦೩–೨೫); ಬಣಗರ ತೊಲಗ ಹೇಳೆನುತೆ ಮುಮ್ಮುದಿರಾವಣನಂತೆ ನಿಂದು ಗರ್ಜಿಸಿದ (ಕೋಟಿಕ. ೦೨–೯೯). [ಬಣಗು₂ + — ಅ₇]

**ಬಣಗಾರ** 'ಬಣ್ಣಗಾರ' ನೋ.

**ಬಣಗು₁** (ಕ್ರಿ). ಹರಟು; ಗಳಹು (?) : ಕಲ್ಲುಗೊಳ್ಳುವ ಕೆಲರು ಹಲ್ಲು ಕಿಸಿಯುವ ಕೆಲರು ಬಲ್ಲವರು ಬಲ್ಲಂತೆ ಬಣಗುತಿಹರು (ಪಶ್ಚಿ. ೬–೯). [<ಬಣಗು₂ ?]

**ಬಣಗು₂** (ನಾ). ೧. ಅಲ್ಪವ್ಯಕ್ತಿ; ಕ್ಷುದ್ರ; ಹೀನ: ಬಣಗಿನಂತೆ ನೇರಿತಲ್ಲದು ಬಗೆವಂದೀ ಶರೀರಂ ಕಷ್ಟಂ (ರಘುಚ. ೯–೦೬೩); ನಿಮ್ಮ ತಂದೆ ಕೀರ್ತಿಧರಮಹಾರಾಜಮುನೀಂದ್ರನಂ ನಿಮ್ಮ ತಾಯಿ ಬಣಗೆಂದು ಪೊಱಮಡಿಸಿದುದಕ್ಕೆ ಎನಗತಿದುಃಖಮಾದುದು (ಕ್ಷಾಸ್ತ್ರ. ೬–೬೦ ಪ); ಬಣಗುಗಳ್ ಭೀಮಾರ್ಜುನರು ಆರಣಿಕ ನೀ ನಡುವಾಯಿ (ಕುಮ್ಮಗ. ೬–೫೯). ೨. ತಿಳಿಗೇಡಿ; ಮಂದಮತಿ: ಬಣಗು ನೀನೀಟಕಟ ಭೀಮನ ಕೆಣಕಿ ಬದುಕಿದೆ (ಕುಮ್ಮಿ. ೨–೨೦); ಬಣಗೆ ಬೆಱತಿರದೇಳು . . . ಮಣಿದು ಬದುಕುವುದುಚಿತ (ಕೌರಾ. ೯–೭); ಉಣ ಬಂದ ಜಂಗಮಕೆ ಉಣಬಡಿಸ ಲೊಲ್ಲದಲೆ ಉಣದಿಪ್ಪ ಲಿಂಗಕುಣಬಡಿಸಿ. ಕೈಮುಗಿವ ಬಣಗುಗಳ ನೋಡ (ಸರ್ವಜ್ಞ. ೨೦೦). ೩. ಬಡವ; ದೀನ; ದರಿದ್ರ: ಬಱದ ನಾಡಿಂದ ಬಂದ ಬಣಗುಗಳಂತೆ ಮತ್ತಿಕ್ಕುವರೋ ಇಕ್ಕರೋ ಎಂದು ಒಟ್ಟೈಸಿಕೊಂಡು ತಿಂದು ಮಿಕ್ಕುದ ಬಿಸುಡುವ ಕುನ್ನಿಗಳ ಮೆಚ್ಚುವನೆ ನಮ್ಮ ಕೂಡಲಚನ್ನ ಸಂಗಮದೇವ (ಚಕ್ರ.ಶ. ೪. ೬೫೯–೭೯೯); ಪಣವಿಲ್ಲದೆಯುಟಮಟಿಸುವ ಬಣಗುಗಳಂ ನೆವವನಿಟ್ಟು ಬಿಟ್ಟು . . . ಪಣಮಂ ಸಾಧಿಸುವಳಾವಳವಳೇ ಪೆಱೆವೆಣ್ (ಅಂಡ್ಕ.ಟಿ. ೦೦–೬೬). ೪. ಪಿಶಾಚಿ; ಭೂತ: ಬಣಗುಗಳೊರ್ವ ಋಷಿಯ ಪೊಟ್ಟೆಯಂ ವಿದಾರಿಸಿ ಬಸುಱಿಳಗಿರ್ದರ್ಶನಮಂ ತೋಱಿ ತಿನುತಿರ್ಪುದುಂ (ಕ್ಷಾಸ್ತ್ರ. ೯–೦೯ ಪ). (ಗು). ೫. ಕೀಳಾದ; ನಿಕೃಷ್ಟ ವಾದ: ಬಲವ ಬಲವೇ ನಿನ್ನ ಬಲವಲ್ಲದೆ ಮಿಕ್ಕ ಬಲಗಳುಂಟೆ ಬಣಗು ಗ್ರಹಗಳಿಂದ (ಪ್ರಕೀಂದ. ೨–೬ ಶಿಲ್ಪ); ಗುಣವೆ ಭೂಷಣಮಭಿಮಾನವೆ ವಸ್ತ್ರವೆಂದೆಣಿಸಿ ಕೈವಿಡಿದಿಹಮವಗೆ ಬಣಗುದೊಡಿಗೆಯಾಸೆದೋಱಿಪೇಡ (ಹಕೆ. ೦೯–೬೦). ೬. ಕೆಲಸಕ್ಕೆ ಬಾರದ; ಅಪ್ರಯೋಜಕನಾದ: ಧನು ತನಗೆ ನೆಗಹಲ್ಕೆ ಕೃಷ್ಣಾಜಿನವೂ . . . ಬಣಗುವಿಪ್ರನ ನೆಸಹ ನೋಡಿರೆ (ಕುಮ್ಮಿ. ೦೩–೦೬); ಭೂರಿಭುವನದ ಬಹಳ ಭುಜಬಲಧಾರಕರು ನಾವೀ ನೆಲೆಗೆ ನವಱಾರು ಸರಿ ನಾವಂಜಲೇಕೀ ಬಣಗುಭೂಪತಿಗೆ (ಕೋರಿಣ. ೬–೦–೬೦). 'ಬಿನಂಗು' ಪರಾ. [ದೇ.ಶ. / ಮರಾ. ಭಣಗ, ಭಣಂಗ]

**ಬಣಗುಕವಿ** 'ಬಣಗುಗವಿ' ನೋ.

**ಬಣಗುಗವಿ, ಬಣಗುಕವಿ** (ನಾ). ಅಸಮರ್ಥನಾದ ಕವಿ; ಕುಕವಿ: ಭಂಡಗವಿ ಬಣಗುಗವಿಗಳ ಕೊಂಡುಂ ಕೊನೆದೂಱುತಿರ್ಪ ಕುಕವಿಗಳಂ ತಾಂ ತೊಂಡರನೆ ಸರಿಯೆನಿಪ್ಪನೆ ಚಂಡಾಲರ ನೋಡಿ ನಗುವ ಕವೀಂದ್ರಂ (ಚಂದ್ರಚೂ. ೦–೨೯ ಅಚಕ). **ಬಣಗುಕವಿ**: ಬಣಗುಕವಿಗಳ ಲೆಕ್ಕಿಪನೆ . . . ಕವಿ ಕುಮಾರವ್ಯಾಸ (ಕುಮ್ಮಿ. ೦–೦೬) [ಬಣಗು₂+ಕವಿ₁]

**ಬಣಗುಟ್ಟು** (ಕ್ರಿ). ಬರಿದಾಗಿ ಕಾಣು; ಶೂನ್ಯವಾಗಿ ತೋರು: ಒಂದಾನೊಂದು ದಿನ ತಿರುಗಾಟವನ್ನು ನಿಲ್ಲಿಸಿದರೆ, ಆ ದಿನವೆಲ್ಲ ಹಕ್ಕಿಯು ಪಟ್ಟಣ್ಣು ಕರೆದಂತಾಗಿ ಮನವು ಬಣಗುಟ್ಟುತ್ತಿತ್ತು (ಹಿಂಉ. ೬೦). [ಬಣ್ಣ₁ + ಕುಟ್ಟು₁]

**ಬಣಜ, ಬಣಂಜ, ಬಳಂಜ** (ನಾ). ೧. ವರ್ತಕ; ಹರದ; ವ್ಯಾಪಾರಿ: 'ಬಣಜು' ಪರಾ. ೨. ವರ್ತಕರ ಗುಂಪು; ಸಮೂಹ: ಬಣಜಮುಂ ನಾನಾದೇಸಿಯ ಮುಂ ಬಿಟ್ಟಿಯ × × × (ಪ್ರಕಾ. ೦೯೬೩. ೩–೦೫; 1160). ೩. (ವ್ಯಾಪಾರಿಯ) ಸರಕು; ಸಾಮಗ್ರಿ: ಜಾತ್ರಗರೂ, ಕಡುಬೆಬ್ಬಳದ ಆತುರತೆಯಿಂದ ತಂತಮ್ಮ ಬಣಜಗಳನ್ನು ಸಂವರಿಸಿಕೊಂಡ ಬೇಹಾರಿಗರೂ ಇತರರೂ . . . ಗುಡಿಯೊಳಗೆ ಸೇರಿಕೊಳ್ಳರು (ಅರಿಸಂ. ೦೨–೦೬). **ಬಣಂಜ**: ೩. ದೇಗುಲದುಪಕರಣಂಗಳೊಳಂ ಪರದರ ಬಣಂಜದೊಳಂ ಮತ್ತಮೆಂ ದೇಡದರೊಳಂ ಕರ್ವತ್ತಿಯೊಳಂ ತೀರದೆ ದಂದುಗಂಗೊಂಬುದೆನಿತಾನುಮುಂಟು (ಶಕಮಂ. ೪೩–೦೭). **ಬಳಂಜ**: ೨. ಗಂಗವಾಡಿ ತೊಂಬತ್ತಱುಸಾಸಿರಮುಂ ದಾನರವಾಡಿ ಪನ್ನಿರ್ಚ್ಛಾಸಿರದ ಬಳಂಜಮೆಲ್ಲ ನೆರದು (ಎಕ. X (s), ಮುಳಬಾ ೪೦೬–೩; ಸು. 950). [< ಸಂ. ವಣಜ]

**ಬಣಜಿಗ, ಬಣಂಜಿಗ, ಬಳಂಜಿಗ** (ನಾ). ೧. ವ್ಯಾಪಾರಿ; ವರ್ತಕ: ತಳದ ಬಣಜಿಗರೊಳಗಾಗಿ ಭಕ್ತಮುಂ . . . ಕೊಟ್ಟರು (ಸೌಇ. XVII, ೨೯೩–೯೮; 1162); ಬಣಜಿಗನ ಬಟಕೆಯಂತೆ ಕೊತ್ತಳಂ ಬೞಿದಾಗಿ ಬಟಲ್ದ ಬಡಗೊಂಡಿಯಂತಿರಾಳ್ವೇರಿಯುಟಿದು (ಅಪಂಖ. ೧೦–೯೩ ಪ); ಬಳ್ಳಮಾನದ ಬಣಜಿಗರ ಪುತ್ರಿಯರೆ ನಾವೆಲ್ಲ ಶೂದ್ರತಿಯ ಸುತೆಯರೆ ಸಲ್ಲದೆಟಿವೆ ಪಟ್ಟ (ಘಕ. ೩೬–೦೨೦). ೩. [ವೀಶೈ] ವೀರಶೈವರಲ್ಲಿ ಒಂದು ಒಳಪಂಗಡ: ಬಣಜಿಗನೇಸು ಭಕ್ತನಾದರೆಯೂ ಒಟ್ಟಿಲ ಬೆಸನ ಹಂಗ ಬಿಡ (ಅಕಪ. ೯೫೦): ಹಗಲು ಹಾರುವನಾಗಿ ಇರುಳು ಬಣಜಿಗನಾಗಿ ಅರಸಾರ ಮಗನಾಗಿ ತಿರುಗಿ ನಿದ್ದೆಗೆಡಬೇಡ (ಹಾಶಾ. ೬೪). **ಬಣಂಜಿಗ**: ೧. ಇಂತೀ ಧರ್ಮ್ಮಮಂ ನೆಗರಮಹಾಜನಂ ಪಂಚಮಠಮಲ್ಲಿಯ ತಳದ ಬಣಂಜಿಗರುಮೆರಸುಂ ಪ್ರತಿಪಾಳಿಸುವರು (ಸೌಇ. XX, ೬೩–೨೩; 1123); [ನೆರದು ಬ] ಣಂಜಿಗಮ್ಮುದದೆ ಕಟ್ಟಿದೊಡ[ಂತರ] ಪಟ್ಟವರ್ತ್ತಿಯಿಂದವರ ಬ[ಬಾ] ವೃವೆಂದನೆ (ಸೌಇ. XV. ೨೩೩–೩೦; 1216); ಬೇರದವಸರದಿಂ ಮೆಯ್ದುಗೆದು ಬಣಂಜಿಗರ ನೆರವಿ ತಮತಮಗೆ ಪೊಸವರದಿನೆಣಿಕೆಯೊಳಿರಯುಂ (ರಾಮಾಶ್ವ. ೨೨–೦೯). ೨. ಸಂಗರರಂಗದೊಳ್ ವೆಲಮ ಕಮ್ಮ ತೆಲುಂಗ ಬಣಂಜಿಗರ್ ಕರಂ ಭಂಗದೆ ಬೆಂಗುಡರ್ (ಕಕಂ. ೩–೩೦). **ಬಳಂಜಿಗ**: ೧. ಕರಮುದ್ವೃತ್ತತೆಯಿಂ ಬಳಂಜಿಗರ ಪೊಂಗು ಮಯ್ಮೆಗಂ (ಕೊಂಕಣ. ೦೯೩೩, ಕಾಕೀ. ೦೨೯–೨೨; 941); ಈ ಧರ್ಮ್ಮಮಂ ದಯಸಿಂಗಸೆಟ್ಟಿಯುಂ ವಲ್ಲಿಯ ತಳದ ಬಳಂಜಿಗರು ನಡೆಯಿಸುವರ್ (ಸೌಇ. XX, ೩೦–೨೮; 1088); ಸೊಂಟಿಗೆಯಕ್ಕಿ ಮತ್ತಂ ತಳದ ಬಳಂಜಿಗರುಂ ನಾನಾದೇಶಿಗಳು ವಿಂಟ್ಟು ಕೊಟ್ಟರ್ (ಸೌಇ. IX–i, ೦೭೨–೦; 1106). [ಬಣಜು + — ಇಗ / ಸಂ. ವಣಿಜಕ]

**ಬಣಜಿಗವಾಗ** (ನಾ). ವರ್ತಕರಿಗೆ ಸೇರಿದ ಭಾಗ (?) : ಅಂತಾ ಮುತ್ತರಾಜಕ್ಕಂ ಸೀಮಾಸಂಮ[ಬ]ಂಧಮಾಪುದೆಂದಡೆ . . . ಮೂಲಸ್ಥಾನ ದೇವರ ಕೆಯಿಂ ತೆಂಕಲು ಬಣಜಿಗವಾಗದಿಂ ಮೂಡಲು ಬಾಚಗಾವುಂಡನ ಹೊಗದಿಂ ಪಡುವಲು (ಕೂರ್ಗ್ಗ. ೦೩.೭೭; ೧೧೮೦). [ಬಣಜಿಗ+ ಬಾಗ]

**ಬಣಜಿಗಿತಿ** 'ಬಣಜಿಗಿತ್ತಿ' ನೋ.

**ಬಣಜಿಗಿತ್ತಿ, ಬಣಜಿಗಿತಿ** (ನಾ). ವರ್ತಕರ ಹೆಂಗಸು: ಸೋಜೂಮ್ಮ ಬಣಜಿಗಿತ್ತಿಯು ಕಾಲು ಕೀಲಸಿನಷ್ಟಿಡಿ ಕೆಡಿಸಲದೇಕೆ (ಸಮ್ಮಿಶ್ರ. ೩.೩೬). **ಬಣಜಿಗಿತಿ**: ನಮ್ಮ ಗೆಳೆಕಾತಿ ಹೊಸ್ನೂರ ಬಣಜಿಗಿತಿ . . . ನಮ್ಮ ಹಂಬಲವ ಮರತಳೆ (ಜಾಕಶ. ೭೯). [ಬಣಜಿಗ + — ಇತ್ತಿ]

**ಬಣಜಿಸು, ಬಣಂಜಿಸು** (ಕ್ರಿ). ವ್ಯಾಪಾರ ಮಾಡು; ಕ್ರಯವಿಕ್ರಯ ಮಾಡು: ಆಂ ತೆಂಕಣಾಪತ್ತ ಬಣಜಿಸಿ ಧನಾಜಿಪೆದು ಬಂದಪೆನೆಂದು ಪೆತ್ತತಾಪ್ಪುದೆಗಳಗೆ . . . ಜನ್ಮೈಸಲು (ಸೋಮ. ೦–೯೮); ಭಕ್ತನೋರ್ವ

ನೂರೂರ್ಗಳೊಳ್ ಬಣಜಿಸಿರುಳಾಗೆಯಾತಂ ಬಂದಾ ಪುರವ ಪೊಕ್ಕು ನೋಡಲೆಲ್ಲಿಯ ಜನನ ಮಂದಿರವೆ ಘನವಾಗಿ (ಸಿದ್ಧೇಶ. ೬-೬೯). **ಬಣಾಂಜಿಸು :** ಬಣಾಂಜಿಸುವವಂ ವಿಪಣಿಕಂ ನೈಗಮಂ ವಣಿಜನಕ್ಕು (ಮಂಗರಾ. ೧೦೨-೧).
[ಬಣಜು + — ಇಸ್ಸು]

**ಬಣಜು, ಬಣಂಜು, ಬಳಂಜು, ಬಟಿಂಜು** (ನಾ). ವ್ಯಾಪಾರ; ಮಾರಾಟ; ಕ್ರಯ ವಿಕ್ರಯ : ಬಣಂಜು - ಬಣಾಜು (ಕಷ್ಟಾ ಸು. ೮೦ ಕ್ರಯೋ) ; ಬಣಜಿತವುಗೆ ಸಾಜವುಪ್ಪ ಕಜ್ಜವುಂದೆನಿಸಿ . . . ವಾರಾಟದ ಬೇಹಾರವಂ ನಡೆಯಿಸುವ ಕಡುಜಾಣೆಯರ್ (ಪುರಾಶ. ೦೯೭-೭೬). ಬಣಂಜು: ಬೇಹಾರಂಗೆಯ್ದು ಪಡೆಗುಪರದರ ಕಲಕಲದಿಂ ತೀವಿದ ಬಣಂಜಿನ ಘಟ್ಟಮುಮಂ ನಿಟ್ಟಿಸಿ (ಪುರಾಶ. ೦೯೭-೨೬). 'ಬಣಂಜುಧರ್ಮ' ಪರಾ. ಬಳಂಜು : 'ವೀರಬಳಂಜು' ಪರಾ. ∆ ಬಟಿಂಜು : 'ವೀರಬಟಿಂಜು' ಪರಾ.
[ಬಣಜ + — ಉ]

**ಬಣತ** 'ಪಣತ' ನೋ.

**ಬಣತಿಗೆ** 'ಬಂದಣಿಕೆ' ನೋ.

**ಬಣದುರ್ಗಿ** (ನಾ). ಒಂದು ಬಗೆಯ ಮರ : ಬಣದುರ್ಗಿ —ಧಾರವಾಡ ಜಿಲ್ಲೆಯಲ್ಲಿ ಅತಿ ಸಾಧಾರಣವಾದದ್ದು. ಇದರ ಎಲೆಯ ಮೇಲೆ ಹಳದೀಬಣ್ಣದ ಅಂಟು ಮೆತ್ತಿಗಿರುತ್ತದೆ (ಕರಾಅ. ೯೯). [?]

**ಬಣಬಣ** 'ಬಣ್ಣ' ಪರಾ.

**ಬಣಬೆ** 'ಬಣಂಬೆ' ನೋ.

**ಬಣವೆ** 'ಬಣಂಬೆ' ನೋ.

**ಬಣಿತೆ** (ನಾ). ೧. ಮಾತು ; ಉಕ್ತಿ ; ವಚನ : "ಬಣಿತೆ—ಭಣಿತ (ಶಿ) = ಮಾತು" (ಶಬ್ದಕೋ. ೨೮) ; ಅನು ಪೇಳಿದ ಕಾರ್ಯದ ಬಣಿತೆಗಿನ್ನಾವುದುತ್ತರ (ಸೌಂದರ್ಪು. ೪-೭೬) ; ನೆನಹು ಮಾತ್ರದಿಂದ ಜಗವ ಸೃಷ್ಟಿಸಿದೆನೆಂಬ ಭಾವ ಬಣಿತೆಯವನಲ್ಲ (ಸಿದ್ಧೇಶ. ೬-೨೫). ೨. ಚಾತುರ್ಯದಿಂದ ಕೂಡಿದ ಮಾತು ; ಜಾಣ್ನುಡಿ ; ಚತುರೋಕ್ತಿ : ಬಾಣದೊಳ್ಬಣಿತೆಯೊಳ್ . . . ಪರಾಕ್ರಮದ ಪಾಥದೊಳ್ವಾಣಿಸವರಿರ್ಪರ್ಗೆ ಸಮರಾದ ಕಲಿಗಳಂ (ಕೈ ಬಿಆ. ೨೨-೦೨). ೩. ಹೇಳಿದುದು ; ಉಕ್ತವಾದುದು : ಎಣಿಸಲಿವು ತತ್ಸಮವೆನಿಪ್ಪ ಶಬ್ದಂಗಳಿವಸಣಿಯರು ಲಾಕ್ಷಣಿಕ ಕವಿಮಾರ್ಗದೊಳ ತಂದು ಬಣಿತೆಯಾಗಿರ್ಪುದಾಹರಣಂಗಳಿಂ ತಿಳಿದುಕೊಳ್ವುದು (ಕಬ್ಬಿಬುಂ. ೭೮) ; ಕರಣಿಕೆಯನಿತ್ತು ಸಿಸ್ಸಿನ ಬರಹಗಳಿಂದಾಯಬೀಯುವುಮಂ ಬಣಿತೆಗೆ ತಂದುರುದುವ್ಯಯಂಗಳಂ ತಾಂ ವಿರಚಿಸದಾರ್ಜಿಸಿವನೊಪ್ಪುವಗಣಿಕಧನವುಮಂ (ಕೆಳಪ್ಪ. ೭-೩೩). ೪. ಮೂದಲಿಕೆ: ಶಬರನಸುಗೊಂಡು ಪೋಪೆಯೊ ನಿಲ್ಲುನಿಲ್ಲೆನುತ ಕರುಟಿಟ್ಟಿಯಂ ಬಣಿತೆಯಿಂ ಬಾಯೊಳಿಡೆ ತಲೆಯೊಳದು ಛಟ್ಟುಗಿಯೆ (ಕಕುಶು. ೨-೦-೨೭) ; ಪೊಣರಿಚೇಳೀಳಿಂದು ಮುಡುಹ ತಟ್ಟುತ ತೊಡೆಯ ಬಣಿತೆಯಿಂ ಚಪ್ಪರಿಸಿ ಪುರ್ಬುಗಳ ಗಂಟಿಕ್ಕುತೆನಿಕೆಗೊಳ್ಳುತ ವಿಸಾಸೆಯಂ ತಿರ್ದಿ ಕಣ್ಣ ಕೆಂಚಲಿ ಮಾಡಿ ಕುಬುಬಿರಿಯಲು (ಕಕುಶು. ೩-೭-೩೯). ೫. ಚತುರತೆ ; ಜಾಣ್ಮೆ : ಗುಣದೊಳಗೆ ಶೀಲದಲಿ ಮಾತಿನ ಬ[ಹಾಕಾಂ. ಭ] ಣಿತೆಯಲಿ . . . ಶರ್ವಾಣಿ ರತಿಯರಿಗೆಣೆಯೆನಿಪ ಸುಂದರಿಗೆ ವಿಂಕ್ಯನ ಬಣಗುಸತಿಯರು ಸರಿಯೆ (ಕಳಕ. ೧-೩೯) ; ಬಣಿತೆಯಿಂ ರುದ್ರಾಕ್ಷಿ ಪವಳ ಮಾಕ್ತಿಕದ ಕೇವಣಿಸಿರ್ದ ಕಂತೆ (ಸಿದ್ಧೇಶ. ೧೭-೯೮). ೬. (ಅಲಂ) ಅಕರ್ಷಣೆ ; ಅಂದ; ಚೆಲುವು (?) : ಕುಣಿಸುವತಿಸದ್ಗುರುನಿತಂಬದ ಮಣಿಯ ಶ್ರುತಿಕುಂಡಲದ ಕಾಂತಿಯ ಬಣಿತೆಯೊಳು ಜಗಜಗಿಸಿ ರಂಜಿಸಿತಾ ಮಹಾಶಕ್ತಿ (ಅಂಬಿಕಾ. ೦೯-೬೦) ; ಸತ್ಪದ್ಮಪೀಠವಮದು ಬಣಿತೆಯಾಗಿರ್ದುದಾ ಸಿಂಹಾಸನಾಗ್ರದುರುಮಧ್ಯದೊಳನಂತಸೂಬಗಿಂ (ಶುಕಾಶು. ೦-೩೭). ೭. [ಸಂಗೀತ] ಹಾಡಿನ ಸೊಗಸು (?) : ಒಂದು ಪೊಸ ಕೊಳಲಂ ಕೊಳುತ್ತಂದು. . ಬಣಿತೆ ಗಮಕಮಸುಗುಳೆ ಗಮಕವರಿದಂತೊಡರೆ ಅಣಕ ನಯದೊಳ್ಕೊಳಿಯೆ . . . ಪಂಚಮುಖದೊಳಗಲ್ಲ ಕೊಳಲ ದನಿ ತೊಳಗುತಿರೆ (ಅನಾರ. ಹ. ೦೩೦-೨೩) : ಇಂಪು ಸೊಂಪು ಬಣಿತೆ ಬೆಡಂಗು. . .ಕಾಲವಧಾನಸ್ಥಾನವಿಧಿಯೊದವೆ ಬಾಲೆಯರ್ ಕೇಳಿಸಿದರಾರ್ಯನಂ ರಸಪೊಸರ್ವಪೋಲ್ ಬೆರಲೆರಡಜಂ (ಶಬ್ದರಾ. ೬-೬೧); ಧಾತು ನಯ ನೇವಣಿಬಜಾವಣಿಯ ಬಣಿತೆಯಿಂ . . . ಭೂತೇಶನಂ ಮೆಚ್ಚಿಸಿದನಮಲ ತುಂಬುರಂ (೦ಂಗಶು. ೩-೪೭). [<ಸಂ. ಭಣಿತ]

**ಬಣಿತೆಗಾಜಿಕೆ** (ನಾ). ಮಾತಿನ ಚಾತುರ್ಯ : ಬಣಿತೆಗಾಜಿಕೆಯೊಳುಂ ಮರುಳ ವೇಷವ ತೊಟ್ಟು . . . ಪ್ರಭುದೇವ ಬರಲು (ಪ್ರಶುಶ್ರೀ. ೯-೩೯).
[ಬಣಿತೆ + — ಕಾಜ + — ಇಕೆ]

**ಬಣಿವೆ** 'ಬಣಂಬೆ' ನೋ.

**ಬಣ್ಣ, ಪಣ್ಣ, ಘಣ್ಣ, ಬಣ್ಣ, ವಣ್ಣ** (ನಾ). ೧. ರಂಗು; ವರ್ಣ : "ಸಲೆ ಬಣ್ಣಂ ವರ್ಣದೊಳೆ" (ಶಬ್ದಾಸ. ೯೯) ; ಶುಭಲಕ್ಷಣಾಂಕಿತವಾಗಿ ಕೆಂದಾವರೆಯ ಬಣ್ಣದಂತಪ್ಪ ತಳವುಮಂ ಕಂಡು (ಪಶ್ಚಾ. ೦೯೬-೦೬); ಬಣ್ಣಂ ಪೊನ್ನ ಬಣ್ಣಕ್ಕೆಣೆಯೆನೆ ಗರುಡಂ ವಾಹವಾಗಿರ್ಪ ಚಕ್ರೇಶ್ವರಿ ಭಾಸ್ವದ್ವರ್ಣಚಕ್ರಾಕ್ರಮಿಗಳನಲೆದಾಟಕ್ಕೆ ವಿಕ್ರಾಂತದಿಂದಂ (ಅಂತ್ಯ. ೦-೭); ಸುಣ್ಣದ ತುಯ್ಯಲ ಬಣ್ಣವೊಂದೆ ಎಂದರೆ ನಂಟತನಕ್ಕೆ ಉಣ್ಣಬಹುದೆ (ಬಸವ. ೦೨೦). ೨. ಕೆಂಪುಬಣ್ಣ ; ಕೆಂಬಣ್ಣ 'ಬಣ್ಣದುಟ' ಪರಾ. ೩. ಚಿತ್ರ, ಗೋಡೆ ಮುಂತಾದುವಕ್ಕೆ ಹಚ್ಚಲು ಬಳಸುವ, ಬೇರೆ ಬೇರೆ ವರ್ಣಗಳಲ್ಲಿರುವ ದ್ರವಪದಾರ್ಥ : ವಸ್ತುಗಳ ಮೇಲ್ಮೈಗೆ ಸಾಪೇಕ್ಷವಾಗಿ ತಳುಪೂರೆಯಲ್ಲಿ ಹಚ್ಚಬಹುದಾದ . . . ಆರ್ದ್ರ ದ್ರವ ಪದಾರ್ಥವೇ ಬಣ್ಣ (ಪೇಂಟ್) (ಕಂಶಕೋ. IX. ೬೨೦). ೪. ಬೇರೆ ಬೇರೆ ಬಣ್ಣಗಳಿಂದ ಕೂಡಿದ ಚಿತ್ರ; ವರ್ಣಚಿತ್ರ : ಬಿತ್ತಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ ಬೇಟಿವೇಟಿ ನೋಡಿ ಮೆಚ್ಚುತಿರ್ಪಾರ್ಗಳ್ (ಧರ್ಮಾ. ೬೩); ಬಣ್ಣವನು ಬರೆಪ ಸತಿ ಹೊಲ್ಲ (ಸರ್ವಜ್ಞ. ೦೭೯೦). ೫. ರಂಗುರಂಗಾದ ವಸ್ತ್ರ, ಸೀರೆ ಮುಂತಾದುವು : ಕಕ್ಕರವಟಿಯಿಗೆಯ ಚಿತ್ರಾವಟಿಯ ಪಟೀವೆಡೆಯ ತುಟೀವೆಡೆಯ ನೆಟಲಪಾಣಿಯ ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಅಂತ್ಯ. ೯-೩೯ ಪ); ಬಣ್ಣವನುಡರು ಬಂಗಾರಗಳನು ತೊಡರುಣ್ಣರಂಗವನೋಸರಿಸರು ಕಣ್ಣ ಸವಿಗೆಯಾತನ ರೂಪ ನೋಡಿದ ಹೆಣ್ಣಲ್ಲರಾ ಪುರದೊಳಗೆ (ಪೀಬಸಂ. ೬-೯೦); ಬಣ್ಣವಿಲ್ಲದ ಮದುವೆ ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆ ಹೊಯ್ದಂತೆ (ಸರ್ವಜ್ಞ. ೦೬೬೯). ೬. ರಂಗುರಂಗಾದ ಹೂವು. —ಪುಷ್ಪ : 'ಬಣ್ಣಗೋಲ್', 'ಬಣ್ಣಗೋಲ' ಪರಾ. ೭. ಬಗೆ; ವಿಧ; ಪ್ರಕಾರ : ಇಂಬಾಗಿರೆ ಮುದದಿಂ ಪಲವುಂ ಬಣ್ಣದ ಭಕ್ಷ್ಯರಾಶಿವೆರಸಾಕಂತೋಪ್ಪಂಬರಮುಂಡು (ಶಂಕರಂ. ೦೭೩ ೨೩). ೮. ಸ್ವರೂಪ ; ನಿಜರೂಪ : ಪಾಪಪುಣ್ಯಮೆಂಬೆರಡರ ಬಣ್ಣವಾವುದು ಅವಂ ಬಲ್ಲಪರಾರ್ (ಧರ್ಮಾಶ. ೩-೧೩ ಪ); ಆಕೆಯ ಬಣ್ಣ ಬೆಳಗಲು ತಾಯಿಯಮಹಿಮೆಯನು ನೋಡಿರೆಂದೆಲ್ಲಾ ಬಣ್ಣಿಸಲು (ಬಸ್ತಿಶು. ೭-೦೬); ದುರಾಸೆಗೆ ಬಿದ್ದವರ ಬಣ್ಣ ಅವರು ಗುರುತಿಸಿದ್ದು ಈಗಲೇ (ಹೊಸ್ತಿ. ೨೬). ೯. ಅಂದ; ಚೆಂದ; ಚೆಲುವು : ಕಿಸುಗಾಡ ನೆಲಗಳೆಳದಳಿರ ಬಣ್ಣಮಂ ಕೆಯ್ಕೊಂಡು ವಿರಹಿಗಳ ಮನವುನೊನಲಿಸುವಂತೆ ಜಲಜಲನೆ ಪರಿವ ಜರಿವೊನಲ್ಗಳುಮಂ ಕಂಡು (ಶಂಕಶಾ. ೭-೨೩ ಕ); ಬಾಲೆಯರ ಬಣ್ಣಕ್ಕೆ ಸೋಲದೆ ಕಾಳುಶರೀರವೆಂಬ ಒತ್ತರಂಗೊಳ್ಳದೆ. . .ಮಲ್ಲಿಕಾರ್ಜುನನಲ್ಲಿ ಸರ್ವಾಂಗದಲ್ಲಿ ನಿರ್ಲೇಪವಾದುದೇ ಶರಣಸ್ಥಲ (ಮೋಳಕರು. ೦೦೦-೩೯೭). ೧೦. ಹೊಳಪು; ಕಾಂತಿ: ಪೊನ್ನಂ ಬೆಳಗುವವೋಲ್ ಕರ್ಬೊನ್ನಂ ಬೆಳಗಿದೊಡೆ ಬಣ್ಣಮೇನೆಸಗುಮೆ (ಕಪುಆ. ೦೯-೩೨) ; ದ್ವಿಗುಣಿಸೆ ಬಣ್ಣಮಿಂದುಮಣಿಮಂಡಪಕಾಂತಿಗಳಿಂ

ಮುಗುಳ್ತ ಮಲ್ಲಿಗೆಗೆ (ಪುಷ್ಪಕೃ. ೨-೬೦). 'ಬಣ್ಣಂಗೆಡು' ಪರಾ. ೧೧. ತೋರಿಕೆ; ಸೋಗು; ನಟನೆ: 'ಬಣ್ಣಗಾಜ', 'ಬಣ್ಣಗಾಜ಼ಿಕೆ' ಪರಾ. ೧೨. ತೋರಿಕೆಯ ಮಾತು; ಬೂಟಾಟಿಕೆಯ ನುಡಿ; ಬಣ್ಣಾಚಾರ : ಚಕ್ರಿ ಕಳುಹೆ ಬಂದು ಬಣ್ಣವ ನುಡಿಯುವ್ವೈ ವಕ್ರವನಱಿದೆ ಹೋಗು (ಶರಶ. ೪೮-೩೦). ೧೩. ಗುಣಗಾನ; ಸ್ತುತಿರೂಪವಾದ ಹಾಡು; ಬಣ್ಣವಾಡು : ಕಿನ್ನರಿಯರ್ ಪಾಡುಗೆ ನಿನ್ನದೊಂದು ಪಲವುಂ ಬಣ್ಣಂಗಳಂ (ಶಂಕಶಾ. ೦೪-೩೬). ೧೪. ಯೋಗ್ಯತೆ; ಸತ್ತ್ವ : ನಾನು ಚಾಡಿಯ ಮಂತ್ರವನ್ನು ಜಪಿಸದಿದ್ದರೆ ಆಗ ಕಾಣುತ್ತಿತ್ತು ನಿಮ್ಮ ಧೈರ್ಯಸಾಹಸದ ಬಣ್ಣವೆಷ್ಟೆಂಬುದು (ಅಂಜಿಕೆ. ೬). 'ಬಣ್ಣಗಾಣ್' ಪರಾ. ೧೫. ಮೇಲು ಮಟ್ಟಕ್ಕೆ ಸೇರಿದವನು; ಮಿಗಿಲಾದ ವ್ಯಕ್ತಿ : ಬಗಿಪುಗಿಡದಮರ್ದು ಜಗಿಸೆವ ಗದ್ಯವಿರಚನೆಗೆ ಬಾಣನಿ[ಂ]ದಂ ಬಣ್ಣಂ...ನಾಗವರ್ಮಕವೀಂದ್ರಂ (ವರ್ಧಮಾ. ೦-೨೬). ೧೬. ಚಿನ್ನ, ವಜ್ರ ಮುಂತಾದುವುಗಳಲ್ಲಿರುವ ಶುದ್ಧತೆಯ ಪರಿಮಾಣ; ಕ್ಯಾರೆಟ್ಟು : ಕಟ್ಟಣೆಯೊಳಗಣ ಕಾಂಸ್ಯದಂತೆ . . . ಚಿನ್ನದೊಳಗಣ ಬಣ್ಣದಂತೆ . . . ಎನ್ನಲ್ಲಿ ಭಿನ್ನವಿಲ್ಲದೆ ಇರ್ದೆಯಲ್ಲಾ ಸೌರಾಷ್ಟ್ರಸೋಮೇಶ್ವರಾ (ಆದಶ. ೨-೬); ಪದಿನೇಬು ತೂಕದ ಗಟ್ಟಿ ಹತ್ತು ವರೆ ಬಣ್ಣಂ ಹತ್ತು ಗದ್ಯಾಣ ತೂಕದೆಂಟುಂ ನೆಱಿ ಹಾಗ ಬಣ್ಣದ ಪತ್ತೊಂಭತ್ತುಂ ಪೊನ್ನು ತೂಕ ಮತ್ತಂದು ಮತ್ತಂ ಪದಿಮೂಱು ಬಣ್ಣವನೆ ತಾನಾಗಿರ್ದುದು ಪೊನ್ನೆಲ್ಲಮಂ ಪದುಳಂಗೂಡಿ ಸಮಂತದಂ ತರಂ ಸಲು ಬಣ್ಣಮಂ ಪೇಱಿದಂ (ವ್ಯವಹಾ. ೬೨-೨೪); ಒರೆಗೆ ಬಣ್ಣಕ್ಕೆ ಬೆರಸಿ ವೇದೋಚ್ಚರಿತ ಧರ್ಮವನಱಿಹಿದನು ಭೂಸುರಗೆ ಧರ್ಮವ್ಯಾಧನೆಂಬನ ಕಥೆಯ ಕೇಳು (ಕುವ್ಯಾಂ. ೦೪-೪೮). ೧೭. ಯೋಗ್ಯವಾದುದು; ಉಚಿತವಾದುದು ; ತಕ್ಕುದು : ನೀನೇಕೆ ಮರುಳಪ್ಪುದಣ್ಣ ಈಗ ಜಾನಕಿಯನು ಬಿಟ್ಟುಕೊಡುವುದೇ ಬಣ್ಣ (ಶಾರ್ಙಸು. ೮೬). ೧೮. ಜಾತಿ ; ವರ್ಣ : ಮಿಕ್ಕಾದ ಮೂಱುಂ ಬಣ್ಣದವರಂ ಚೆನ್ನಾಗಿ ದಂಡನೆಗೆಯ್ದು ರಾಜ್ಯಮಂ ಪರಿಪಾಲನೆಯನೆಸಗಬೇಕು (ಚಾರಿತಾಂ. ೬೩-೦೪); ನಾವು ಅಕಸಾಲಿಗಳು ಕೋಮಟಿಗರು ಮುನ್ನಾದ ಪದಿನೆಣ್ಬುಬಣ್ಣದಲ್ಲೂ ಯಲು ವಾಲಗ ಮಾಡಿದಾಗ (ಎಕ. XIV. ಶ್ರೀರಂಗ. ೧೩೦-೦೩; 1801). ೧೯. [ಸಂಗೀತ] ಇಂಪು : ಭಣಿತ ಬೆಡಂಗು . . . ಸೇವಣೆ ಕಣಿ ಬಣ್ಣದೊಡ್ಡವಣೆ . . . ಕಳೆಯೆಂಬವಂ ಪೊಱಿದು ಬಾಜಿಸಿದಂ ಮುರವೈರಿ ವಾಸವಂ (ಜಗಂ. ೩-೩). ಪ್ರೊ. : ೧೮. ತಿರುಮಲರಸರಾದ ಮದ್ದ ಹೆಗ್ಗಡೆಯವರು ಅವರ ನಾಲಿನವರು ಗಣ ವಣ ಸಾವನ್ನರು ಕಾಪಿನ ರಾಜ್ಯವನು ಪ್ರತಿಪಾಲಿಸುತ್ತಿರ್ದ್ದ ಕಾಲದಲು (ಎಕ. XX. ೬-೨೬; 1660) ; ನಮ್ಮ ದೇಶದಲ್ಲಿರುವ ಪಣಗಳು – ಪದಿನೆಂಟುಪಣ, ಒಂಬತ್ತು ಪಣಗಳು —ತಮ್ಮಲ್ಲಿ ದೇಶದ ಪ್ರಜೆಯ ಬಹುಭಾಗವನ್ನು ಒಳಕೊಂಡಿವೆ . . . ಇವುಗಳನ್ನು ಬಿಟ್ಟು ಮಿಕ್ಕವೆಲ್ಲ ಈ ಪಣದ ವ್ಯವಸ್ಥೆಗೆ ಒಳಪಟ್ಟವೆ (ಕರ್ಣಾಸಂ. ೯). 'ಪಣಕಟ್ಟು' ಪರಾ. ಫಣ್ಣ : ೧೮. 'ಫಣಕಟ್ಟು', 'ಫಣಸ್ತ' ಪರಾ. ಬಣ್ಣ : ೧೮. ಬ್ರಾಹ್ಮಣ ಬ್ರಾಹ್ಮಣೇತರ . . . ಎಂದು ಮುಂತಾದ ಬಣ ಬಣಗಳೊಳಗಿನ ಸಂಘರ್ಷಣೆಗಳು ಬ್ರಿಟಿಶರ ಪ್ರೇರಣೆಯಿಂದ ಮೆಲ್ಲಗೆ ತಲೆಯೆತ್ತಿದುವು (ಹುಕ್ಷಕೃ. ೨೦). ೨೦. ಪಕ್ಷ; ಪಂಗಡ; ತಂಡ : ಸ್ವಾರ್ಥಪರಾಯಣರ್ ಬಣಗಳಂ ಮಾಡಿ ಬಿಡದೆ ಕೆಡಿಸುವರೂರನು (ಶುಹಾಂಕೇ.೦೦_೬); ಹಗೆಗಳ ಬಣದವರು ಕೈಯೊಳಗೆ ಸಿಕ್ಕರೆ ಅವರನ್ನು ಸಂರಕ್ಷಿಸಬೇಕು (ಮುಂಜಾಹು. ೩-೦೨೨); ಇಕ್ಕಡಿಯ ಬಣದವರೂ . . . ಜೀವದ ಪರಿವೆಯಿಲ್ಲದೆ ಕಾದಿದೆವು (ಕಹಂ. ೪). ವಣ್ಣ : ೧. ಪ್ರಿಯಸೇನೆಯುಂ ಕೆಂದಾವರೆಯ ವಣ್ಣದೊಳೋರಂತಪ್ಪ ಮೆಯ್ಮನೊಡೆಯ ಪದ್ಮಾವತಿಯೆಂಬ ಪಿಡಿಯಾಗಿ ಪುಟ್ಟಿದಳ್ (ಚಕ್ರಾರಾ. ೩೬-೩); ಮಿಸುನಿಯ ವಣ್ಣಕೆ ನಾನಾಬಗೆ ವಟಕ ಸುಪ್ಪಿಪಜ್ಜಿಕೆ ಸರಸ ರಸನೆಯ ಸವಿಗೆ ನಾದೆಂದಾಗ ಫಲ ಸಹಿತಸವ ಜಂಬೀರಗಳುಮುವು (ಕಂಸಾ. ೩-೮೪).

ಬಣ್ಣವಣ್ಣ, ಬಣ್ಣಬಣ್ಣ (ದ್ವಿರುಕ್ತಿ) : ಸ್ತ್ರೀಕುಚಕುಂಭಕುಂಕುಮರಜಃಕಲ್ಲೋಲದಿಂ ಬಣ್ಣವಣ್ಣದ ಚಿಲ್ವಂ ಗೆಡೆಗೊಂಡು ಚಿತ್ರಿತ ಪತಾಕಾಲೀಲೆಯಿಂ ತಾಳ್ದಿ ನಿಂದುದು ಗಂಗಾನದಿ (ಅಂತ್ಯಕೃ. ೦೧.೦೩೦) ; ಬಣ್ಣಬಣ್ಣದ ಪೂಗೊಯ್ದು ಪೊಂಬಾಳೆಯ ವರ್ಣದೆ ಪೊಳ್ಪುಣಗಟ್ಟಿ . . . ಕಾಂತೆಯರೊಡತಿಗೆ ಬಿನ್ನಣಗೆಯ್ದು ತೋಱಿದರು (ವೋಹಕ. ೨೪-೬೪); ಬಣ್ಣಬಣ್ಣದ ಬಟ್ಟೆಯ ಚೂರುಗಳನ್ನು ನೇರವಾಗಿ ಕತ್ತರಿಸಿ ಸೇರಿಸಿ ಹೊಲಿದ ದಟ್ಟಿಗಳನ್ನು ನೆಲದ ಮೇಲೆ ಎಲ್ಲೆಲ್ಲೂ ಹಾಸಿದಂತೆ ಕಾಣಿಸುವ ಹೊಲಗದ್ದೆಗಳು (ಪಂಟಿಬು. ೦೩೦). ಬಣ್ಣದ ಕೋಲು = (ಕೋಲಾಟವಾಡಲು ಬಳಸುವ) ಬಣ್ಣ ಬಳಿದ ಕೋಲು : ನಾಯಿ ಬಡೀಲಿಕ್ಕ ಬಣ್ಣದ ಕೋಲೇ ? (ಗಾದೆ). ಬಣ್ಣದ ಬೀಸಣಿಗೆ = ೧. ರಂಗು ಹಚ್ಚಿದ ಬೀಸಣಿಗೆ : ಆ ಅಂಗಡಿಯಲ್ಲಿದ್ದ ಬಣ್ಣದ ಬೀಸಣಿಗೆಗಳೆಲ್ಲಾ ಒಂದೇ ದಿನದಲ್ಲಿ ಮಾರಾಟವಾಗಿ ಹೋದವು (ರೂಢಿ). ೨. (ಅಲಂ) ಒಯ್ಯಾರಿ; ಒನಪುಗಾತಿ : ಬಣ್ಣದ ಬೀಸಣಿಗ್ಯಂತೆ ಹೆಣ್ಣು ತಿರುಗೋದು ಕಂಡು ಕಣ್ಣುಸನ್ನೆಯ ಮಾಡಿ ಕಣ್ಣಲಿ ಕಂಡವಾ ಚಲಿಕೊಂಬೆ ಮನವೆ (ಪುರಂದ. ೪-೩೨-೦). ಬಣ್ಣದ ಮಾತು = ತೋರಿಕೆಯ ನುಡಿ ; ಬೂಟಾಟಿಕೆಯ ಮಾತು : ಕಣ್ಣು ಕಾಣದ ಹಕ್ಕಿ ಹಣ್ಣ ಮೆಲಬಂದಡೆ ಹಣ್ಣು ಹಕ್ಕಿಯ ನುಂಗಿ ಉಗುಳದಿನ್ನೆಂತೋ ಸಣ್ಣ ಬಣ್ಣದ ಮಾತಿನ ಅಣ್ಣಗಳೆತ್ತ ಬಲ್ಲರು (ಸರ್ವಜ್ಞ. ೨೮-೦೩೦): ಪತಿಗೆ ಬಣ್ಣದ ಮಾತನಾಡ್ಕಾಳೊ ಅವಳು ಮತಿಯಿಲ್ಲದೆ ಪೆಚ್ಚ ಮಾಡ್ಕಾಳೊ (ಪುರಂದ. ೦-೦೬೨_೦). ಬಣ್ಣದ ಸೀರೆ = ಚಿತ್ರ ಬರೆಯಲು ಉಪಯೋಗಿಸುವ ವಸ್ತ್ರ : ಬಣ್ಣದ ಸೀರೆ ಮೇಘವಣ್ಣಗೆಯ ರ್ಘುಳಂಜಪೊಂಜಿಪಳಪಟ್ಟರೆ ಭೂಭುಜನಿರ್ದ ಚಿತ್ರಶಾಲೆಗೆ ನಡೆತಂದನಂದು ನವಯೌವನಸೂರ್ಯನಪೂರ್ವಚಿತ್ರಕಂ (ಶುಲ್ಲಪು. ೩-೯೯). ಬಣ್ಣಬಚ್ಚಣೆಯ ಮಾತು – ತೋರಿಕೆಯ ಮಾತು ; ಸೋಗಿನ ನುಡಿ : ಬಣ್ಣಬಚ್ಚಣೆಯ ಮಾತು ಕಲಿತು ಹೊನ್ನು ಹೆಣ್ಣು ಮಣ್ಣಿಗಾಗಿ ಅನ್ಯವನಿಕ್ಕುಪರ ಪ್ರಸಂಗವ ಪಡೆಯುಬಂದ ಗನ್ನಗಾಜಿಂಗೇಕೆ ಅಱಿವು (ಶೂಲೀಕಹಾ. ೬೯-೩೩೪). ಬಣ್ಣ ಬದಲಾಯಿಸು = ೧. ರಂಗನ್ನು ಬೇರೆ ಮಾಡು ; ವರ್ಣವನ್ನು ವ್ಯತ್ಯಾಸಗೊಳಿಸು : ಗೋಸುಂಬೆಯು ತನಗೆ ಬೇಕಾದಾಗ ತನ್ನ ಬಣ್ಣ ಬದಲಾಯಿಸಿಕೊಳ್ಳುತ್ತದೆ (ರೂಢಿ). ೨. (ಅಲಂ) (ಸ್ವಾರ್ಥದಿಂದ ವ್ಯವಹಾರ, ನಡವಳಿಕೆಗಳಲ್ಲಿ ಇದ್ದಕ್ಕಿದ್ದಂತೆ) ನೇರಮಾರ್ಗವನ್ನು ಬಿಡು ; ಧೋರಣೆಯನ್ನು ವ್ಯತ್ಯಾಸ ಮಾಡಿಕೊಳ್ಳು : ಸಂಬಾರದ ವಸ್ತುಗಳನ್ನು ತುಂಬಿಕೊಂಡ ನಂತರ ಗಾಮಾ ತನ್ನ ಬಣ್ಣ ಬದಲಾಯಿಸಿದ (ಶ್ರವಾ. II. ೨೩೩). ಬಣ್ಣ ಬಯಲಾಗು = ನಿಜಸ್ವರೂಪವು ಪ್ರಕಟವಾಗು; ಮೋಸ ಹೊರಬೀಳು : ಅವನು ಮಾಡಿದ ಉಪಾಯದಿಂದ ಆ ಮೋಸಗಾರನ ಬಣ್ಣ ಬಯಲಾಯಿತು (ರೂಢಿ). ಬಣ್ಣ ಬಿಡು = ಬಣ್ಣವನ್ನು ಬಿಟ್ಟುಕೊಡು ; ರಂಗನ್ನು ಕಳೆದುಕೊಳ್ಳು ; ಮಾಸಲಾಗು : ರೇಯಾನ್, ಉಣ್ಣೆ ಬಟ್ಟೆಗಳು ಬಣ್ಣ ಬಿಡುವುದಾದರೆ, ಕಡೇ ಸಲ ಜಾಲಾಡುವ ನೀರಿಗೆ ಸ್ವಲ್ಪ ವಿನಿಗರ್ ಹಾಕುತ್ತಾರೆ (ಗೃಹಿ. ೯೪). ಬಣ್ಣಮಾಗು, ಬಣ್ಣವಾಗು – ೧. ರಂಗನ್ನು ಹೊಂದು : ಬಣ್ಣವನ್ನು ತಳೆ : ಪಚ್ಯೋತಿಯಂತೆ ಪಲವುಂ ಬಣ್ಣಮಾಗಿ...ತೇಜಃಸಂತತಿಲ್ಲಾ ಪಟಗೆಪೊಳಗಾದೈ (ಧರ್ಮಾಮೃ. ೨.೦೦೩). ೨. ಕೆಂಪಾಗು : ಹಣ್ಣು ಬಲಿದು ಬಣ್ಣವಪುದಕ್ಕೆ ಮೊದಲ ಕೊಂಬು ಮುಱಿಯಿತ್ತು (ಸೋಮೇಶಶಾ. ೪. ೬೦೪-೨೦೧೦). ಬಣ್ಣ ಹಚ್ಚಿ ಹೇಳು = (ಅಲಂ) ಇರುವ ಸ್ವಲ್ಪ ವಿಚಾರವನ್ನು ಅತಿಶಯವಾಗಿ ವರ್ಣಿಸಿ ಹೇಳು :

ಉತ್ಪ್ರೇಕ್ಷೆ ಮಾಡಿ ಹೇಳು : ಬಹಳ ವಾಟ್ಟಿಗೆ ಅದನ್ನು ಕಾಣದಿದ್ದವರು ಬಣ್ಣ ಹಚ್ಚಿ ಹೇಳುವ ಮಾತುಗಳಿಂದಲೇ ನಮ್ಮಲ್ಲಿ ಭಯ ಹುಟ್ಟುವುದು (ಶೂಲಕ್ಷ. ೬೩). ಬಣ್ಣ ಹಾಕು = ಚಿತ್ರ. ಬಟ್ಟೆ ಮುಂತಾದುವಕ್ಕೆ ಬಣ್ಣವನ್ನು ತುಂಬು.– ರಂಗನ್ನು ಕೊಡು : ಬಣ್ಣಗಾರರು ನೂಲಿಗೆ ಬಣ್ಣ ಹಾಕುವ ಕಾಯಕ ನಡೆಯಿಸುತ್ತಾರೆ (ಶಕಪು. ೬–೧೨); ದಾರಕ್ಕೆ ಬಣ್ಣ ಹಾಕುವವರು, ಕೊಂಡ ದಾರದಿಂದ ಬಟ್ಟೆ ನೇಯುವವರು ಎಲ್ಲರೂ ಶ್ರಮಪಡಬೇಕು (ಹಂಪ್ರ. ೪). [<ಸಂ. ವರ್ಣ]

**ಬಣ್ಣಂಗುಂದು**, ಬಣ್ಣಗುಂದು (ಕ್ರಿ). ೧. ಕಾಂತಿಹೀನವಾಗು ; ಕಳೆ ಗುಂದು : ಮಂಕಾಗು : ಎಂ ಕೇಳ್ದುಬಿಯಿವೆ ದಾನವರುಪಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಱಿದ ಬರ್ದಿಲರ್ಗೆ ನಾರಾಯಣಂ . . . ಸ್ಮಿತಿಟ್ಟು ಮಾರಲ್ಚಿದ ತೆಱನಂ? (ರಾಜಶೇಖ. ೦೯–೬). **ಬಣ್ಣಗುಂದು** : ೧. ಬಣ್ಣಗುಂದಿದ ದೇಹದೊಳಗೆಳವಣ್ಣಗಳ ಸೌಖ್ಯವನು ತೋಱಿದಳು ಮದನನೆಸುಗೆಯಲಿ (ಚಕಶ. ೧–೩೮): ಜೀವಿತೇಶ್ವರನ ವಿರಹದೊಳು ಸಿಚ್ಚೆಯ ಭಾವಿಸಿ ಬಣ್ಣಗುಂದುವಳು (ಹಂಂ. ೭–೬). ೨. ಕಳೆಗೆಡು ; ತೇಜೋವಧೆಯಾಗು : ಕಣ್ಣು ಕಟ್ಟಿದ್ದುಮೇಲೆ ಕಡುರೂಪ ಚಲ್ಪಿಕೆಯ ಬಣ್ಣಗುಂದಿದ ಮೇಲೆ ಬಹುಮಾನವೆ (ಕಪಶ. ೩೬–೧). [ಬಣ್ಣ+ಕುಂದು₁]

**ಬಣ್ಣಂಗೆಡು**, ಬಣ್ಣಗೆಡು (ಕ್ರಿ). ೧. = ಬಣ್ಣಂಗುಂದು ೧ : ಬಂದು ನಿಂದುದು ಮುಂದೆ . . . ವುಹಾಬ್ರುಹನ್ ವೋಷಿ ! ಮಿಂಚಿಶಿರ ಪೊನ್ನಂಚ್ಚ ಸುತ್ತಣದಗ್ನಿ ಬಣ್ಣಂಗೆಡಲ್. ಯೋಜನದೀರ್ಘ ಕಾಲಾಯಸದ ಖಡುಗದಿನದಂ ತುಂಡರಿಸಿದನು (ಶ್ರೀರಾಮಾ. ೭೦೬–೩೦೭). **ಬಣ್ಣಗೆಡು** : ೧. ಕಾಯೊ ಕರುಣಾಕರನೆ ಕಡುಪಾಪಿ ನಾನು . . . ಬಣ್ಣಗೆಟ್ಟಡವಿಯಲಿ ತಪಸು ಮಾಡಿದವನಲ್ಲ (ಕಪಶ. ೦೩೪–೧); ತಿಣ್ಣವಡೆದ ಖಾಸನ ಸುದ್ದಿ ಜಪವಾಗಿ ಬಣ್ಣಗೆಟ್ಟುದು ಲೋಕವಲ್ಲ (ಕಂಷಪ. ೦೦–೩೪); ಬೆಟ್ಟದ ಅರಸು:– (ಬಣ್ಣಗೆಟ್ಟು, ಅಧೋಮುಖನಾಗುವವನು) (ಪಟ್ಟಿ. ೩೩–೦೨). ೨. ರಂಗು ಹಾಳಾಗು ; ವರ್ಣವಿಲ್ಲದಾಗು : ಎಂದೆಂದಿಗೂ ಬಣ್ಣಗೆಡದ ಕೃತಕ ಪುಷ್ಪಹಾರವೊಂದು ನೇತಾಡುತ್ತಿತ್ತು (ಕೃಪರು. ೦೯೦). ೩. ದಾರಿ ತಪ್ಪು: ಕಣ್ಣಿಳಿದ ಕಾಪಥನವೊಲು ಮನ ಬಣ್ಣಗೆ[ಡಾಂ. ಬ]ಡುತಿದೆ (ಕೂರಾ. ೩೯–೦೩). [ಬಣ್ಣ+ಕೆಡು₁]

**ಬಣ್ಣಂಬಡಿಸು** (ಕ್ರಿ). ಬಣ್ಣವನ್ನು ಲೇಪಿಸು ; ರಂಗನ್ನು ಹಚ್ಚು : ತಿಳಿನೀರ್ಸರಿಯೊಳ್ಳಿಂದ ಸೀತಾದೇವಿಯ ಸಿರಿಯೊಡಲ ಕುಂಕುಮದಿಂ ಪೊಂಬಣ್ಣಮಾದ ಧನುಷ್ಕೋಟಿತೀರ್ಥೋದಕದಿಂ ಸಿರಿರಾಣಿಗರಿಸಿನದಣ್ಣಂ ಬಣ್ಣಂಬಡಿವುದೆಂದುಂ (ಕಕಶಂ. ೦೦೯–೯). [<ಬಣ್ಣಂಬಡೆ+–ಇಸು]

**ಬಣ್ಣಂಬಡೆ**, ಬಣ್ಣವಡೆ (ಕ್ರಿ). ೧. (ಆಕರ್ಷಕವಾದ) ಬಣ್ಣವನ್ನು ಹೊಂದು : ಪಡದೊಡೆ ಕಂಪಂ ಬಣ್ಣಂಬಡೆವುವು ಬಣ್ಣಮನೆ ಪಡೆದು ವಪ್ಪೊಡೆ ಕಂಪಂ ಪಡೆಯವುವುಟಿದಲರ್ಗಳೆರಡುಮನೊಡವೆಳ್ದೀ ಚಂಪಕಕ್ಕೆ ಪೂಗಳ್ ದೊರೆಯೇ (ಅಂಪು. ೦೦–೦೦೯); ಅರನೇಱಲ್ವಣ್ಣ ಬಣ್ಣಂಬಡೆದ ತನು ಪೃಥುಶ್ರೋಣಿ ನೀಲಾಳಕಂ . . . ಕೋಂಕಾಂತ ಘುರ್ಬೋಂದಿರೆ ನಾನಾಶಕ್ತಿಯರ್ ಬೇಡಿತಿಯರೆಸಕಮಂ ತಾಳ್ದು ಕಣ್ಗೆಡ್ಡಮಾದರ್ (ಶಂಶಂ. ೩–೭). ೨. ಶೋಭಿಸು; ಮೆರೆ : ತಿರುಮಲೆಯಾರ್ಯನುಮವನ ಪಡಿನೆಲಂತೆ ಎಲ್ಲಾ ವಿದ್ಯೆಗಳೊಳಂ ಬಟೀಸಂದು ಬಣ್ಣಂಬಡೆದಂ (ಕಕಶಂ. ೦೬೬–೨೦); ಮೊದಲೊಳ್ ಹರಿಹರ ಬುಕ್ಕರ್ ಮೊದಲೆನಿಸಿದರರಸು ಗೆಯ್ದು ಪಸರಿಸಿ ಜಸಮಂ ಪದಪಿಂ ಕುಱುಂಬರಾಯರ್ ಪದಿಮೂವರ್ ಬರ್ದಿಲವೇಱ ಬಣ್ಣಂಬಡೆವರ್ (ಕಕ್ಷ. ೨–೦೩). **ಬಣ್ಣವಡೆ** : ೨. ಅಣ್ಣ ನಿರ್ದನು . . . ಬಣ್ಣವಡೆವ ಗದ್ದುಗೆಯೊಳು (ಶಕತ. ೩೯–೦೦). ೩. ಅರ್ಹ ವಾಗು ; ಯೋಗ್ಯವಾಗು : ಬಳುವಕ್ಕಿಯ ಬೀಳಗೆಡಪಿದ ಬಿಂಕವೀ ಬಳಿಯೊಳು ಬಣ್ಣವಡೆಯದು (ಹಂಂ. ೨–೯೨). [ಬಣ್ಣ+ಪಡೆ₁]

**ಬಣ್ಣಕ** (ನಾ). ತೋರಿಕೆಯ ಮಾತನ್ನಾಡುವವನು : ಬೂಟಾಟಿಕೆಯ ವ್ಯಕ್ತಿ : ಅನ್ಯಸಂಗಂಗಳಿಗೆ ಎಳಸಿ ಬಳಸಿ ಬಣ್ಣಕರಪ್ಪರೆ ಶರಣರು (ಉಂಕ. ೦೯೯–೨೦೬); ಬಣ್ಣಕರು ಬಣ್ಣದೊಳಗಾಳುವದನೆ ಕಂಡು ಅಣ್ಣ ನಗುತಿರ್ದನಯ್ಯಾ ಯೋಗಿನಾಥಾ (ಉಂಗಲ. ೬೨–೦೦).

[ಬಣ್ಣ+–ಕ₂. / ಸಂ. ವರ್ಣಕ]

**ಬಣ್ಣಕಟ್ಟು** 'ಬಣ್ಣಗಟ್ಟು' ನೋ.

**ಬಣ್ಣಗಂಬಿ** (ನಾ). (ಬಣ್ಣ ಬಳಿದ) ಬರೆಯುವ ಕಡ್ಡಿ : ಲೆಕ್ಕಣಿಕೆ : ಚಾಪದಿಗವಿತೆ ಬಣ್ಣಗಂಬಿಯ ಪುಸ್ತಕಲಿಖಿತಜ್ಞರು ಕನ್ನಡಕವ ತಾಳ್ದಿಹರು (ಸೋಹಕ. ೩–೯೧). [ಬಣ್ಣ+ಕಂಬಿ₁]

**ಬಣ್ಣಗಟ್ಟು**, ಬಣ್ಣಕಟ್ಟು (ಕ್ರಿ). ೧. ಕಾಂತಿಗೂಡು ; ನಳನಳಿಸು : 'ಸಾದಾ' ಮೇವು ತಿಂದು, ಜೊತೆಗೆ ಬಿಟ್ಟಿ ದೊರೆಯುವ ಸರಾಯಿ ಕುಡಿದರೆ ಸಾಕು. ಹೋರಿ ಬಣ್ಣಗಟ್ಟುತ್ತವೆ (ಕಳುಕು. ೦೬೬). **ಬಣ್ಣಕಟ್ಟು** : ೨. ರಂಗುಹಾಕು : ಆ ಹುಡುಗಿ . . . ನೇಯ್ಗುವನು . . . ಬಟ್ಟೆ ನೇಯುವ್ವು, ಬಣ್ಣಕಟ್ಟಿ ಹಿಗ್ಗುವಂತೆ, ತನ್ನ ಮುಂದಿನ ರಾಜ್ಯವನ್ನು ಕಲ್ಪಿಸಿಕೊಂಡು ಹಿಗ್ಗುತ್ತಿದ್ದಳು (ಚಾಗ. ೩). ೩. ಸುಗಂಧದ್ರವ್ಯ ಗಳನ್ನು ಸೇರಿಸು; ವಾಸನೆ ಕಟ್ಟು.

ಬಣ್ಣಕಟ್ಟಿದ **ಅಡಕೆ** = ಏಲಕ್ಕಿ, ಲವಂಗ, ಸಕ್ಕರೆ, ಕೊಬ್ಬರಿ ಮುಂತಾದುವುಗಳೊಂದಿಗೆ ಮಿಶ್ರಮಾಡಿದ **ಪುಡಿಅಡಕೆ** : ಬಣ್ಣಕಟ್ಟಿದ ಅಡಕೆ, ಮೈಸೂರು ವೀಳ್ಯದೆಲೆ ಇದ್ದರೆ ತಾಂಬೂಲ ಹಾಕಿಕೊಳ್ಳಲು ಚೆನ್ನ (ಊ೩). ಬಣ್ಣಕಟ್ಟಿ ಹೇಳು = ಅತಿಶಯವಾಗಿ ಹೇಳು ; ಉತ್ಪ್ರೇಕ್ಷೆ ಮಾಡಿ ವರ್ಣಿಸು : ನೀನು ಈ ಕಸಸನ್ನು ಸತ್ಯಾ ಅಂತ ಬಣ್ಣಕಟ್ಟಿ ಹೇಳೋದೂ ಅಲ್ಲ; ನಾನು ನಿಜಾ ಅಂತ ನಂಬಿ ಕೇಳೋದೂ ಅಲ್ಲ! (ಹೇಮುಕೂ. ೩). [ಬಣ್ಣ+ಕಟ್ಟು₁]

**ಬಣ್ಣಗತೆ** (ನಾ). ಸ್ವಾರಸ್ಯವಾದ ವರ್ಣನೆಯಿಂದ ತುಂಬಿದ ಕತೆ : ಶ್ರೀರಾಜಒಡೆಯ ಮಹಾಸ್ವಾಮಿಯವರಿಗೆ ಸವನಿಸಿದ ಆ ಪ್ರಕರಣದ ವಿಷಯವಾಗಿ . . . ನೂರಾರು ಬಣ್ಣಗತೆಗಳು ಮಸಗುತ್ತಿರುವುವು (ಮುಂಕ್ರಿಕ. ೦೬೭–೦೯). [ಬಣ್ಣ+ಕತೆ]

**ಬಣ್ಣಗನಸು** (ನಾ). ಸುಂದರವಾದ ಸ್ವಪ್ನ: ಸವಿಗನಸು : ನಿನ್ನ ಪ್ರತಿಪಾದನೆಯಿಂದ ನನ್ನ ಜೀವನದಿಂದ ರೂಪುಗೊಳಿಸೆ, ನನ್ನ ಪಾಣ್ಣನು. ಮನೋರಥಗಳನು ಮತ್ತೆಲ್ಲ ಬಣ್ಣಗನಸನು ಭ್ರಾಂತಿಗಳನು ತಂದೆ (ಕಲಮು. ೯೦–೯). [ಬಣ್ಣ+ಕನಸು]

**ಬಣ್ಣಗಬ್ಬ** (ನಾ). ವರ್ಣನೆಗಳಿಂದ ಕೂಡಿದ ಕಾವ್ಯ: ನವರಸದ ತನಿರಸ ಮೊರೆವ ಬಣ್ಣಗಬ್ಬಮಂ ಪೊಳ್ಳೆದೊರೆವ ನಿನಗಮೇಂ ನಿರಹಂಕೃತಿಯೊ ನಿನ್ನಾ ಜಾಣ್ಮೆಯೊಳ್ (ರಾಜಶೇಖ. ೦೬೯–೭). 'ಬಣ್ಣಗಬ್ಬಿಗ', 'ಬಣ್ಣ ವಾಡು' ಪರಾ. [ಬಣ್ಣ+ಕಬ್ಬ₁]

**ಬಣ್ಣಗಬ್ಬಿಗ** (ನಾ). (ವಿಸ್ತಾರವಾಗಿ) ವರ್ಣಿಸುವ ಕವಿ : ನೀನೋ ವರ್ಣನಪೂರ್ವಂ ಬಣ್ಣಗಬ್ಬಿಗರ ಬಲ್ಲಹಂ ಗಡ (ರಾಜಶೇಖ. ೭೦–೩೯).

[ಬಣ್ಣಗಬ್ಬ+–ಇಗ]

**ಬಣ್ಣಗರಡಿಗೆ** (ನಾ). ಕೆಂಬಣ್ಣದ ಭರಣಿ. – ಸಂಪುಟ : ಬಿರಿದ ಪೆರ್ಗಾಯಿಪಡೆದಿರ್ಪುದಱಿಂ ಶೌಂಗಲಂಕರಿಸಲ್ಕೆ ಬಣ್ಣಗರಡಿಗೆಯುಂ ಮುಚ್ಚುಳ್ದೆಗೆದು ರನ್ನಸರಮಂ ನೆಗಟ್ಟುವ ಭಂಡಾಂಗರಂತೆ ಬಗೆವಡೆದ ದಾಡಿಮಂಗಳುಂ . . . ಮನಂಗೊಳೆ (ಕಕಶಂ. ೦೦೨–೨೦).

[ಬಣ್ಣ+ಕರಡಿಗೆ (<ಕರಂಡಿಗೆ)]

**ಬಣ್ಣಗಲ್ಲು** (ನಾ). ಬಣ್ಣದ ಹರಳು ; ರತ್ನ : ಸಂತತ ಬಣ್ಣಗಲ್ಲು ಗಳ ಕೇವಣಸಿರ್ದ ಚಿಂತಾಕ ಬಲುಹನಿಕ್ಕಿದರು (ಲೀಲಾಚ. ೩೩–೩೯).

[ಬಣ್ಣ+ಕಲ್ಲು (<ಕಲ್₂)]

**ಬಣ್ಣಗಳ** (ನಾ). ಚೆಲುವಾದ ಕುತ್ತಿಗೆ ; ಅಂದವಾದ ಕೊರಳು : ಸಣ್ಣಗಳ ನುಣ್ಗೊರಳು ಸವಿಗಳ ಬಣ್ಣಗಳವೋ ಕಂಬುಕಂಠವೂ ಬೆಣ್ಣೆಗಳವೋ (ಜಾಚಾಶ. ೦೬೬-೨೦). [ಬಣ್ಣ+ಗಳ್ಳ ( = ಗಲ)]

**ಬಣ್ಣಗಾಣ್** (ಕ್ರಿ). ಸತ್ತ್ವವನ್ನು ತಿಳಿ ; ಯೋಗ್ಯತೆಯನ್ನು ಅರಿ : ಅರಿವನಯ್ಯಾ ಸಣ್ಣವಹನ್ನಕ್ಕ ಒರೆವನಯ್ಯಾ ಬಣ್ಣಗಾಣ್ಬನ್ನಕ್ಕ (ಬಸವ. ೬೮೬). [ಬಣ್ಣ + ಕಾಣ್]

**ಬಣ್ಣಗಾರ** 'ಬಣ್ಣಗಾಱ' ನೋ.

**ಬಣ್ಣಗಾರಿಕೆ** 'ಬಣ್ಣಗಾಱಿಕೆ' ನೋ.

**ಬಣ್ಣಗಾಱ**, ಬಣಕಾರ, ಬಣಗಾರ, ಬಣ್ಣಗಾರ (ನಾ). ೧. ಬೂಟಾಟಿಕೆ ಮಾಡುವವನು ; ಸೋಗುಗಾರ : 'ಬಣ್ಣಗಾಱಿಕೆ' ಪರಾ. **ಬಣಕಾರ** : ೨. (ಮರದ ಸಾಮಾನು, ಬಟ್ಟೆ ಮುಂತಾದುವಕ್ಕೆ) ರಂಗು ಹಚ್ಚುವ ಜನಾಂಗಕ್ಕೆ ಸೇರಿದವನು ; ರಂಗಾರಿ : ಬಣಕಾರ ಫಕೀರಪ್ಪನಲ್ಲಿ . . . ವಿವರಗಳನ್ನು ಚರ್ಚಿಸಿ ಆಯಿತು (ಗಂಕೂಹು. ೨೦೬) ; ಬಣಕಾರರು . . . ಕೊಟ್ಟವನ್ನೂ ತಂಬಾಕಿನ ಕಡ್ಡಿಪುಡಿಯನ್ನೂ ಅಣಿ ಮಾಡಿದರು (ಸುಕಸಂ. ೩೦). **ಬಣಗಾರ** : ೩. (ಚಿತ್ರ ಬರೆದು) ಬಣ್ಣ ಹಚ್ಚುವವನು : ಆನಿ ವ್ಯಾಗಿರುವ ಶಿವದಾರ ಮೊಗ್ಗೆಯ ಯಾವ ಬಣಗಾರ ಬರೆದಾನ (ಜೋಳಗೀ. ೬೨). **ಬಣ್ಣಗಾರ** : ೨. ಹೊಸಮನೆಯ ಗೋಡೆಗಳಿಗೆ ಬಣ್ಣ ಹಚ್ಚಲು ಅವರು ನಾಲ್ಕು ಜನ ಬಣ್ಣಗಾರರನ್ನು ಕರೆಸಿದ್ದರು (ಕೂತಿ). [ಬಣ್ಣ + —ಗಾಱ (<—ಕಾಱ)]

**ಬಣ್ಣಗಾಱಿಕೆ**, ಬಣ್ಣಗಾರಿಕೆ (ನಾ). ೧. ಬೂಟಾಟಿಕೆಯ ನಡವಳಿಕೆ ; ಬಣ್ಣಾಚಾರ ; ತೋರಿಕೆಯ ವರ್ತನೆ : ನಾ ತಪ್ಪಿ ನುಡಿದಡೆ ಒಪ್ಪವಿಟ್ಟುಕೊಳ್ಳಿರಣ್ಣಾ ಕಣ್ಣನಲ್ಲಿ ಕಸ ಹೊಕ್ಕರೆ ಕೈ ಹಗೆಯೆ ಅಯ್ಯಾ ಇದು ಬಣ್ಣಗಾಱಿಕೆಯಲ್ಲ ಸನ್ನದ್ಧರಿರವು (ಪೋಳಬಸಾ. ೩೩-೦೯೬) ; ಜಡಪಾತ್ರವೆಂದು ನಮ್ಮತ್ತ ನೋಡದೆ ತನ್ನ ಹಡಪವೆಂಗಳ ನೋಡುತಿದ್ದ ಕಡೆಗೀಗ ಬಣ್ಣಗಾಱಿಕೆಗೆ ಕರೆಸಲಾತನೆಡೆಗೆ ನಾವೆಂತಿಪ್ಪುದುಬಹುದು (ಚಕ. ೦೯-೩೬). **ಬಣ್ಣಗಾರಿಕೆ** : ೧. ಕಣ್ಣಿಗೆ ಇಚ್ಛೆಯಾಗದ ನಮ್ಮನ್ನು ಈಗ ಬರಿಯ ಬಣ್ಣಗಾರಿಕೆಗೆ ಕರೆವುದು ಏಕೆ ? (ಚಾಮುಲ್ಲ. ೦೦೨). ೩. ಬಣ್ಣ ಹಚ್ಚುವಿಕೆ ; ರಂಗು ಬಳಿಯುವಿಕೆ : ವರ್ಣಕ್ರಿಯಾವಿಸ್ತಾರಗುಣವಚನೇಷು, ಬಣ್ಣಗಾರಿಕೆಯೊಳ್, ಬಿತ್ತರದೊಳಂ, ಕೊಂಡಾಟದೊಳಂ (ಶಾಕಶ್ಮ. ೨೯೦). [ಬಣ್ಣಗಾಱ + — ಇಕೆ]

**ಬಣ್ಣಗುಂದು** 'ಬಣ್ಣಂಗುಂದು' ನೋ.

**ಬಣ್ಣಗುದುರೆ** (ನಾ). ಮುಖವೂ ಕಾಲೂ ಬೆಳ್ಳಗಿದ್ದು, ಮಿಕ್ಕ ಭಾಗವು ಬೇರೆ ರಂಗುಗಳಿಂದ ಕೂಡಿದ ಕುದುರೆ ; ಪಂಚಕಲ್ಯಾಣಿ : ಇಂತು ಮುಂಬಿ ಬಂದ ಶರತ್ಕಾಲದೊಳ್ ರಾಘವನ ಜನ್ನದ ಬಣ್ಣಗುದುರೆ ತೆಂಕಲ್ಗೆ ಮೊಗಮಿಕ್ಕಿ ನಡೆಯುತುಮಿರ್ಪುದುಂ (ರಾಮಾಶ್ವ. ೬೩-೦೮) ; ವಿವೂರ ನಿಗಳದೊಂದು ಬಣ್ಣಗುದುರೆ (ರಾಮಾಶ್ವ. ೬೯-೨೩). [ಬಣ್ಣ+ಕುದುರೆ]

**ಬಣ್ಣಗುರುಡ** (ನಾ). ಬೇರೆ ಬೇರೆ ಬಣ್ಣಗಳನ್ನು ಕಂಡುಹಿಡಿಯಲಾಗದ ದೃಷ್ಟಿದೋಷವುಳ್ಳವನು : ಬಣ್ಣಗುರುಡರಲ್ಲಿ ಕೆಲವಟ್ಟುಗಾದರೂ ಕೆಲವು ಬಣ್ಣಗಳನ್ನು ಗುರುತಿಸುವಷ್ಟು ಸಾಮರ್ಥ್ಯ ಇದ್ದೇ ಇರುತ್ತದೆ (ಕಂಕೋ. XI. ೮೪೩). [ಬಣ್ಣಗುರುಡು + — ಅ]

**ಬಣ್ಣಗುರುಡು** (ನಾ). ಬೇರೆ ಬೇರೆ ಬಣ್ಣಗಳನ್ನು ಕಂಡು ಹಿಡಿಯಲಾಗದಿರುವ ಒಂದು ಬಗೆಯ ಕಣ್ಣಿನ ದೋಷ : ತಂಬಾಕು ಮತ್ತು ರಾಸಾಯನಿಕವಸ್ತುಗಳ ಸೇವನೆಯಿಂದ ದೃಷ್ಟಿಪಟಲದ ನರಕಣಗಳು ಶಿಥಿಲಗೊಂಡು ಬಣ್ಣಗುರುಡನ್ನುಂಟುಮಾಡಬಲ್ಲವು (ಕಂಕೋ. XI, ೮೪೩). [ಬಣ್ಣ + ಕುರುಡು]

**ಬಣ್ಣಗುರುಡುತನ** (ನಾ). = ಬಣ್ಣಗುರುಡು: ಬಣ್ಣಗುರುಡುತನದಲ್ಲಿ ಎರಡುಬಗೆಯುಂಟು (ಕಂಕೋ. XI. ೮೪೩). [ಬಣ್ಣ+ಕುರುಡುತನ]

**ಬಣ್ಣಗೂಡು** (ಕ್ರಿ). ರಂಗೇರು ; ಹೊಳಪುಂಟಾಗು : ಆ ಬೆಳವಲಗಿಡಕ್ಕೆ ಹೊಸ ಚಿಗುರೆಲೆ ಮೂಡಿ ಬಣ್ಣಗೂಡಿ ಮಿರಿಮಿರಿ ಮಿಂಚಹತ್ತಿದ ದಿನ ತಿಳಿಯುತ್ತಿದ್ದೆ . . . ವಸಂತಾಗಮನ ಆಗಿದೆ ಎಂದು (ಜ್ಯೋ. ೯೩೩). [ಬಣ್ಣ+ಕೂಡು]

**ಬಣ್ಣಗೂಳ್**, ಬಣ್ಣಗೂಳು (ನಾ). (ದೃಷ್ಟಿದೋಷ ಮುಂತಾದುವುಗಳ ನಿವಾರಣೆಗಾಗಿ ಚೆಲ್ಲುವ) ಅರಿಸಿನ, ಕುಂಕುಮ ಮುಂತಾದುವುಗಳನ್ನು ಬೆರಸಿದ ಅನ್ನ ; ಬಣ್ಣದ ಅನ್ನ : ಭೂತಸಂತುಷ್ಟಿಯ ಪ್ರಂತ ಕುಱಿಕೋಣಂಗಳಂ ಪೊಯ್ದು ಬಣ್ಣಗೂಳಂ ಪಸರಿಸಿ (ಕೃಪಚಾ. ೩-೬೨) ; ಚಂಗಿ ಚಂಗಿಯಲಿ ಚರುಬಟ್ಟವಿಕ್ಕುದು ಬಣ್ಣಗೂಳ್ (ಶ್ರೀಣಾಮೂ. ೬೩೬-೨೦೦). **ಬಣ್ಣಗೂಳು** : ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಳಿ ಪೊಂಬರಿವಾಣಗಳ ತುಂಬಿ ಸುಳಿಹೆತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಕೂಹಚ. ೩೦-೩೬) ; ಧರ್ಮರಾಯ . . . ಭೂತಸಂತುಷ್ಟಿ ಆಗುವ ಹಾಗೆ ಕುರಿ — ಕೋಣಗಳನ್ನು ಹೊಯ್ದು ಬಣ್ಣಗೂಳನ್ನು ಚೆಲ್ಲಿಸಿದ (ಐದುರ. ೨೩). [ ಬಣ್ಣ + ಕೂಳ್ (<ಕೂಟು) ]

**ಬಣ್ಣಗೂಳು** ' ಬಣ್ಣ ಗೂಳ್ ' ನೋ.

**ಬಣ್ಣಗೆಡಿಸು** (ಕ್ರಿ). (ಭಯದಿಂದ) ಸತ್ತ್ವಹೀನವಾಗುವಂತೆ ಮಾಡು; ದುರ್ಬಲಗೊಳಿಸು : ಪೆರ್ಬುಲಿ . . . ಕೊಳ್ಳಿವಣ್ಣನ ಬಣ್ಣಗೆಡಿಸಿದುದು (ಹಾಶ್ವಕಾ. ೩-೩೩). [ಬಣ್ಣಗೆಡು (<ಬಣ್ಣಂಗೆಡು ) + — ಇಸು]

**ಬಣ್ಣಗೆಡು** 'ಬಣ್ಣಂಗೆಡು' ನೋ.

**ಬಣ್ಣಗೇಡು** (ನಾ). ಮಾನಗೇಡು ; ಮಾನಹಾನಿ : ಬಾಯಿ ಬಟ್ಟರೆ ಬಣ್ಣಗೇಡು (ಗಾದೆ). [ಬಣ್ಣ + ಕೇಡು]

**ಬಣ್ಣಗೊರಲ್** (ನಾ). ಸೊಗಸಾದ ಕಂಠ; ಇಂಪಾದ ಧ್ವನಿ : ಬಣ್ಣಗೊರಲ್ವೆದೆಯರ್ ಸೋಬನಪಾಡಂ ಪಾಡುಗೆ (ಆಳಪು. ೦೧೬-೮). [ಬಣ್ಣ + ಕೊರಲ್ ]

**ಬಣ್ಣಗೊಳ್** (ಕ್ರಿ). ಸ್ವಾರಸ್ಯದಿಂದ ಕೂಡಿರು ; ರಸವತ್ತಾಗಿರು : ಬಾಲ್ಯ, ಮದುವೆ, ವನವಾಸವು, ವಿರಹ, ಚಿಂತೆ, ವಿಧಿ, ರೋಷವು ಬಣ್ಣಗೊಂಡು ನಲಿದಿವೆ (ಸ್ವರ್ಚಿ. ೩೪ ). [ಬಣ್ಣ + ಕೊಳ್]

**ಬಣ್ಣಗೊಳಿಸು** (ಕ್ರಿ). ರಂಗಾಗುವಂತೆ ಮಾಡು; ವರ್ಣಮಯವಾಗಿಸು : ಕಿರಿ ಕಿರಿಯ ಹರಹಿನೊಳು ಜಲಹಾಸವನು ಮೆರಸಿ ತಿರೆ ಬಣ್ಣಗೊಳಿಸುವೀ ಬಿಸಿಲ ನಲವು (ಜುಕರೀ. ೦೬-೯). [ ಬಣ್ಣಗೊಳ್ + — ಇಸು ]

**ಬಣ್ಣಗೋಗಿಲೆ** (ನಾ). ಚೆಲುವಾದ ಕೋಗಿಲೆ : ಅರಸಂಚೆ ಸೋಗೆನವಿಲು ಬಣ್ಣಗೋಗಿಲೆ ಹರಿರಥಾಂಗದ ಪ್ರತಿಮೆಗಳು ಮೆಱೆದುವು ಚೌದೆಯುಪ್ಪರಿಗೆಗಳೊಳು (ಕಂಕಶ. ೬-೨೮). [ ಬಣ್ಣ + ಕೋಗಿಲೆ ]

**ಬಣ್ಣಗೋರಟೆ** (ನಾ). ಒಂದು ಬಗೆಯ ಸ್ಫಟಿಕದ ಗಿಡ ಮತ್ತು ಅದರ ಹೂವು : "ರಾಜಶರ್ಯಕಃ — ಬಣ್ಣಗೋರಟೆ" (ಓಶಧಿ. ೧೩೯). [ಬಣ್ಣ + ಗೋರಟೆ (< ಗೋರಂಟೆ) ]

**ಬಣ್ಣಗೋಲ್** (ನಾ). ೧. (ಕೋಲಾಟವಾಡುವಾಗ ಬಳಸುವ) ಬಣ್ಣ ಬಳಿದ ಕೋಲು : ಜಡೆಕೋಲಾಟದ ಸುನ್ದರಿಯನ್ನು ಒಡ್ಡಿಸಿ . . . ಗೆಜ್ಜೆಯ ಬಣ್ಣಗೋಲ್ಗಳನ್ನು ಹಂಚಸುತ್ತಿರುವವಳು (ಕಬ್ಬಿಂ. ೦೬೯-೦೯). ೨. ರಂಗುರಂಗಿನ ಹೂವುಗಳಿಂದಾದ ಬಾಣ : 'ಬಣ್ಣಗೋಲ' ಪರಾ. [ಬಣ್ಣ + ಕೋಲ್]

**ಬಣ್ಣಗೋಲ** (ನಾ). ರಂಗುರಂಗಿನ ಹೂವುಗಳಿಂದಾದ ಬಾಣವನ್ನುಳ್ಳವನು; ಮನ್ಮಥ : ಬಣ್ಣಗೋಲನ ತೋಳ ಸಾವಿನ ನುಣ್ಣಗಂಭವೊ

ಗಾನಕಾಯುತ ಸಣ್ಣ ಕೋವುಲ ಸೀತಗಳವಹುದೆಂದಲಿಂದುವುಂಖಿ (ಜಾಚಜಾ. ೦೬೨-೫೦). [ಬಣ್ಣಗೋಲ್ + – ಅ]

ಬಣ್ಣಟಿ ? (ನಾ). (?) : ವಂಬಡಣ ಹೆಗ್ಗದ್ದೆ ಅದಱ ವೇಂಗಣ ಕೊಡಂಗೆ ಎರಡಬಲ್ಲಿಯಂಜ ವುಱದೆ ೨ ಬಂಡಿಣಟಿ ತುಱದೆ ೨ (ಎಕ. XXVII. ೦೬೨–೯೯; 1250) [?]

ಬಣ್ಣದಳೆ (ಕ್ರಿ). ರಂಗನ್ನು ಪಡೆ; ರಂಗೇರಂ : ಬಣ್ಣದಳೆದ ರನ್ನವಾವುಗೆ ಎಡಿದೆಳ್ಗಣ್ಣುವಂಡಿದಳಿೊತ್ತಿನಲಿ (ಸೋತಶ. ೯–೦೩). [ಬಣ್ಣ + ತಳೆ]

ಬಣ್ಣದುಟಿ (ನಾ). ಕೆಂಪಾದ ತುಟಿ; ಚೆಂದುಟಿ : ಆ ರಸಭರಿತ ವಿಚಿತ್ರದೆ ಚಿತ್ರದ ನಾರಿಯು ಬಣ್ಣದುಟಿಯು ಬಂದುಂಗೆಯೊಳು . . . ನೃಪತಿಯು ಚಾರುನಯನವತಿಲಗ್ನಂಬಡದುವು ಬಂಡುಣಿವಱಿಯಂತೆ (ಜಯಾ. ೬-೦೦) ಎಣ್ಣೆಗಂಟುಗಳ ತಡಹುತ ಬಣ್ಣದುಟಿಯ ಭಾವವ ಬೀಱುತ ವುಂದ್ದು ವೆಣ್ಣುಗಳ್ಳೆತಂದರಾಗ (ಶಂಶಶ. ೨೦-೭೪). [ಬಣ್ಣ + ತುಟಿ]

ಬಣ್ಣದೋರು 'ಬಣ್ಣದೋಱು' ನೋ.

ಬಣ್ಣದೋಱು, ಬಣ್ಣದೋರಂ (ಕ್ರಿ). ೧. ಬೆಡಗು ಮಾಡು; ಥಳಕು ತೋರಿಸು : ಕಣ್ಣ ಮೊದಲ್ಲಿ ಕುಳ್ಳಿರ್ದ ಬಣ್ಣದೋಱುವ ಪರಿಯ ನೋಡಾ ಬಣ್ಣವಿಲ್ಲದ ಬಣ್ಣವನುಟ್ಟು ಸುಳಿದ ಅಜಗಣ್ಣನ ಯೋಗಕ್ಕೆ ದೆಱಗಾದೆನು (ಶಂಕ್ಷಸಂ. ೨೬-೦೪). ಬಣ್ಣದೋರು : ೨. ಯೋಗ್ಯತೆಯನ್ನು ವ್ಯಕ್ತಪಡಿಸು : ಇನ್ನುಳಿದುದು ಸಹೃದಯಹೃದಯಾನಿಕಷದಲ್ಲಿ ಬಣ್ಣದೋರಬೇಕು (ಶುಂತಿಗಾ. ೫–೦೯). [ಬಣ್ಣ + ತೋಱು]

ಬಣ್ಣನಿದಿಗೆ? (ನಾ). (?) : ಕುದುರೆಯ ಕೊಟ್ಟಲ್ಲಿ ಪಣ ೧ ಕೊಂಡಲಿ ಪಣ ಬಣ್ಣನಿದಿಗೆಗೆ ಸೊ ೨ ಕಂಚಿಗನ ನಾಯಕಿಬಿಯಲಿ ಗದೆ ಖ ೩ ಕಯ ಖ (ಎಕ. IX (8). ಶೂರ್ಶ್ಶ. ೬೦–೬೪ ; ಕು. 1250). [?]

ಬಣ್ಣನೆ, ಬನ್ನಣೆ (ನಾ). ೧. ವರ್ಣಿಸುವುದು ; ವರ್ಣನೆ : "ಬಣ್ಣನೆ—ವರ್ಣನಾ (ಶಬ್ದಕೋ. ೨೬); ಅಣ್ಣಕೀ ಲೀತಗಳ ಮಾತಿನ ಬಣ್ಣನೆಗಳಂತಿರಲಿ ಭೂಮಿಯು ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ಕೊಶಾ. ೬ ೨-೨೦); ಬಣ್ಣನೆಯ ನುಡಿಜಾಣ್ಮೆಗವಸರವಲ್ಲು (ಜಡಕೃ. ೨೯-೬). ೨. ಸ್ತುತಿ; ಹೊಗಳಿಕೆ : 'ಬಣ್ಣಿಸಂ' ಪರಾ. ೩. ತೋರಿಕೆ; ಸೋಗು ; ನಟನೆ : ಬಣ್ಣಣೆ [ನೆ]ಯ ಕುಸುಖಿ ವಾತುಗಳಣ್ಣಂದಿರ ತೆಱದೆ[ದಿ]ನನ್ನದಿನ್ನದೆನುತ್ತಾಂ ಬಣ್ಣಿಸಲಱಿಯಂ (ಚರುಣಾ. ೦-೬೦). ಬನ್ನಣೆ : ೧. ರಾಯನೊಡವೆಯು ಸವಿಸವಿದು ವುಂಡಾಯುತ್ತಿಕೆ ನಿನಗಹುದು ಸಭೆಯಲಿ ಬಾಯ ಬನ್ನಣೆಯಧಿಕ ವೀರಾಳಾಪ ನಿನಗಹುದು (ಕುಮ್ಮಾಕ್ರೀ. ಹು. ೨೧೯); ವೀರಾಳಾಪದ ವಿವುಳ ಪ್ರತಾಪದ ಬನ್ನಣೆಯ ಬಿನ್ನಣದ . . . ಹರಿಗೇಱಿದ ವೊತ್ತದೊತ್ತಿನು ಭಯಪಾರ್ಶ್ವದೊಳಿಂಬುಗೊಂಡು (ಜಮ್ಮಾಕಿ. ೬-೬೬ ಕ). 'ಬನ್ನಣೆಗಾಱ' ಪರಾ. ೩. ಪುರುಷರನು ಬೆಗಡುಗೊಳಿಸುವ ಬನ್ನಣೆಯ ನುಡಿಯ ಭಾವಿಯರು ಬರುತ್ತಿದ್ದರು (ಕಕಕೊ. ೨೯-೦೩). ೪. ಚೆಲುವು; ಸೌಂದರ್ಯ : 'ಬನ್ನಣೆಗಾರ್ತಿ' ಪರಾ. ೫. ವರ್ಣಲೇಪನ : ತನ್ನ ಚಿಂತೆಯದೊಂದು ದೈವದ ಗನ್ನಗತಕವದೆರಡು ಭಾವದ ಬನ್ನಣೆಯ ಬಗೆ ಮೂಱು ದೈವದ ಭಿನ್ನಿಮುಖ ನಾಲ್ಕು (ಕುಡ್ಜಾ. ೬-೩); ಬಯಲ ಬನ್ನಣೆ ಸಂಸಾರಾಯಿದ ಭಾವಿಸಿ ನೋಡಲು ಘೋರ (ಶಕ್ಕ. ೬೬-೨). ೬. ಅಲಂಕಾರ; ಶೋಭೆ : ನನ್ನಿಯಿಂ ಭೂತಳಾಂತೆಯೊನುತ ಲೋಷಧಿಯರಸ ವನ್ನಿಸುತ ವಸುರುಡಿಗೆಗೊಟ್ಟನೋಡುನೆ ಕಳವು ಬನ್ನಣೆಯೊಳಾ ಪುರವ ಬಳಸಿರ್ದುದೇನೆಂಬೆ ಸಂಭ್ರಮ ವಿಜೃಂಭಣೆಯನು (ಶಂಕಾ. ೦-೩-೬೪). [<ಸಂ. ವರ್ಣನ]

ಬಣ್ಣನೆಗಾರ, ಬನ್ನಣೆಗಾಱ (ನಾ). ವರ್ಣಿಸುವವನು; ಬಣ್ಣನೆ ಮಾಡುವನು : 'ಬಣ್ಣನೆಗಾರ್ತಿ' ಪರಾ. ಬನ್ನಣೆಗಾಱ : ಬನ್ನಣೆ ಗಾಱರೊಳ್ಪಂಚರಕ್ಕರಿಗರ್ ಕೆಳೆವಾರ್ವ ಮಕ್ಕಳುಂ ತನ್ನೊಡನಾಡಿ ನಾಡ ನಲಿಗುಂ ಚಿರದೇವನ್ನಪಂ (ಶಶಂ. ೫-೦೦೦).
[ಬಣ್ಣನೆ + – ಗಾರ (< – ಕಾಱ)]

ಬಣ್ಣನೆಗಾರ್ತಿ, ಬನ್ನಣೆಗಾರ್ತಿ (ನಾ). ೧. ಬಣ್ಣಿಸಂವವಳಂ: "ವರ್ಣನೆ ಮಾಡುವವಳಂ" (ಕ್ರಕಕ). ಬನ್ನಣೆಗಾರ್ತಿ : ೨. ಚೆಲುವೆ; ಸುಂದರಿ : ಚೆನ್ನಾಗಿ ಲಾಲಿಸು ಚೆಲ್ವಡರಿದ ನಿನ್ನ ಕರ್ಣಾಂತರದಲಿ ವೈಚಿವ ಹೊನ್ನ ಹೂವಿಗೆ ಪರಿಮಳ ಬರ ಪೇಳುವೆ ಬನ್ನಣೆಗಾರ್ತಿ ಚಿತ್ತೈಸು (ಸೋಶಕ. ೨೯-೨). [ಬಣ್ಣನೆಗಾರ + – ತಿ (< – ಇತ್ತಿ)]

ಬಣ್ಣನೆನುಡಿ, ಬನ್ನಣೆನುಡಿ (ನಾ). ಹೊಗಳಿಕೆಯ ಮಾತು; "ವರ್ಣನೋಕ್ತಿ, ಸ್ತುತಿವಚನ" (ಕ್ರಕಕ). ಬನ್ನಣೆನುಡಿ : ಅಲ್ಲಿ ನೆರೆದಿರ್ದ ಪಾರ್ಥಿವರಿದೆ ತಳವೆಳಗಾಗೆ ರಾಯನ ಕುವರಿ ಬಳಸಲ್ಕ ದಾದಿಯ ಬನ್ನಣೆ ನುಡಿಗೆ ಪೆರ್ಚಳಿಸುತ್ತಿದಿರ್ದಳಾ ಸಭೆಗೆ (ಕಜಕ್ಕ. ೩-೦೨); ಪ್ರೌಢನಳನಂಗ ರಾಯರ್ಗಂ ರೂಢಿಗೆ ಬರ್ಪಂತುಟುಸಿರ್ದ ಬನ್ನಣೆನುಡಿಯೊಳ್ ಪ್ರೌಢಿಗೆ ಹಿಟ್ಟುತ್ತರಸಂ ಗಾಢೋತ್ಸುಕನಾದನಾತ್ಮಚಾಲೋಕನದೊಳ್ (ಅಶಾ. ೯-೫೯). [ಬಣ್ಣನೆ + ನುಡಿ]

ಬಣ್ಣನೆವಾತು, ಬನ್ನಣೆವಾತು (ನಾ). ಹೊಗಳಿಕೆಯ ಮಾತು ; ಕೊಂಡಾಟದ ನಂಡಿ : [ಬಣ್ಣನೆ] [ಪಾಠಾಂ. ಬನ್ನಣೆ]ವಾತಾಡುವ ಪರಿಹಾಸಗೈವ ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೊರ್ವೆಯೊಳು (ಹಂ. ೦-೦೬). ಬನ್ನಣೆವಾತು : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಬಣ್ಣನೆ + ಮಾತು]

ಬಣ್ಣನೆವೆಱು (ಕ್ರಿ). ಕೊಂಡಾಟವನ್ನು ಪಡೆ ; ಹೊಗಳಿಸಿಕೊಳ್ಳು : ಪತಿಪಾದಭಕ್ತೆಯರೆನಿಸಿ [ಬಣ್ಣನೆ]ವೆತ್ತ ಸತಿಯರೂಲಿದು ಸಮನಿಸುವ ಪತಿಶುಶ್ರೂಷೆಯು ಬಗೆಯುನಱಿತು ಸಂಗತಿಗ್ಗಿದದನು ಬಣ್ಣಿಪೆನು (ಹಂ. ೬-೩). [ಬಣ್ಣನೆ + ಪೆಱು]

ಬಣ್ಣಬಂಟ ? (ನಾ). (?) : ಅತ್ತಿಗೆಯೊಬ್ಬಳ ಕೂಡ್ಯಾಡಿ ದಾಹೋದು ಕಂಡ ಸತ್ಯವ ಮಾಡುವ ಸಾರನೆಂಟ ಬಣ್ಣಬಂಟ ನೂಱೆಂಟ ಬಿಡು ಎನ್ನ ಗಂಟ (ಕಶಕ. ೩೩–೨). [?]

ಬಣ್ಣಬಣ್ಣಿಗೆ 'ಬಣ್ಣವಣ್ಣಿಗೆ' ನೋ.

ಬಣ್ಣಬಾಸಿಗ 'ಬಣ್ಣವಾಸಿಗ' ನೋ.

ಬಣ್ಣಮೀನ್ (ನಾ). ಒಂದು ಬಗೆಯ ಬಣ್ಣದ ಮೀನು : ಗೋರಿವರೆ ಮಂಡವರೆಗೆಳೆಂಬವಂ ಬೀಸರಂಬುಗದೆ ದರ್ಚಿ ಬೀಸಿದಾಗಳ್ . . . ಪಂದಿಮೀನ್ ಪೆಱಮೀನ್ ಬಗ್ಗಡೆ ಬಣ್ಣಮೀನೆಂಬಿವೆಲ್ಲಂ ದೀಳ್ದುವಾ ತಾಣದೊಳ್ (ಜಜಾ. ೩-೦೦೩). [ಬಣ್ಣ + ಮೀನ್]

ಬಣ್ಣವಟ್ಟಿಗೆ (ನಾ). (ಕದಕ್ಕೆ ಹಾಕುವ) ಕೆತ್ತನೆ ಕೆಲಸ ಮಾಡಿದ ಅಡ್ಡಪಟ್ಟಿ : ಮಣಿಸತ್ತಿಗೆಯ ಮೊಗವಂಟಪದ ಬಣ್ಣವಟ್ಟಿಗೆಯ ಅವಾಳಗುಟಿಯ . . . ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ಜಡಕೃ. ೩೦-೨೦). [ದೇ. ೩ ತುಳು. ಬಣ್ಣಾಟಿಗೆ, ಬಣ್ಣಾಟಿಗೆ]

ಬಣ್ಣವಡೆ 'ಬಣ್ಣಂಬಡೆ' ನೋ.

ಬಣ್ಣವಣ್ಣಿಗೆ, ಬಣ್ಣಬಣ್ಣಿಗೆ, ಬಣ್ಣಾಬಣ್ಣಿಕೆ, ಬಣ್ಣಾವಣ್ಣಿಗೆ (ನಾ). ೧. ಬಣ್ಣ ಬಣ್ಣಗಳಿಂದ ಕೂಡಿದುದು; ನಾನಾವರ್ಣಗಳಿಂದ ಕೂಡಿದುದಂ : ಸೂಟಸೂಟದೇಂ ಸವಿದುವೊ ಬಣ್ಣವಣ್ಣಿಗೆಯ ಪೂಗಳ ಸೌರಭವಂ ಮದಾಳಿಗಳ್ (ಅಂಕ್ರ. ೦೦-೦೨೬); ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ಪೂಗಳ ರಜಂಗಳುಮನೊಳ ದೊಂಡಿನ ಪಾಲ್ಗಳುಮಂ ಪೀರ್ದು (ಕಾದಂ. ೩೬೬); ಗಗನತಳಂಗಳೊಳ್ ಖಚಿತರತ್ನಕದಂಬದ ಕಾಂತಿ ಬಣ್ಣವಣ್ಣಿಗೆಯ ಮುಗಿಲ್ಗಳಂ ಕಿದಱ್ (ಅಜಿತ. ೯-೬೩). ೨. ಬಣ್ಣ ಬಳಿಯುವುದು; ಚಿತ್ರಣಕಾರ್ಯ: ಹೊಳೆವ

ಪಲಗೆಯುಮಂ ಬಣ್ಣವಣ್ಣಿಗೆಯ ಬಟ್ಟಗೆಗಳಂ ತಾನೆ ತಂದು ಕೊಟ್ಟು (ಲೀಲಾವ. ೬-೮೯ ವ): ಅವನ ಬಣ್ಣವಣ್ಣಿಗೆಯ ಸ್ಪರ್ಶ ಸ್ಪರ್ಶಕ್ಕೆ ಚಿತ್ರದ ರೂಪು ಕಣ್ದೆರೆಯುಪಂತಿತ್ತು (ಶಬರ. ೨೪). ೩. ಅನೇಕ ವಿಧವಾದುದು ; ಬಗೆಬಗೆಯಾದುದು : ಬೆಣ್ಣೆಗಳ್ಳನ ನಟ್ಟ ಹಣ್ಣ ಶಿವವಿರಹಿತಂ ಬಣ್ಣವಣ್ಣಿಗೆಯ ದೈವವೆ ನೆರವಲು (ಶಾಸಂಕ. ೨-೬೬). ೪. ಹೊಗಳಿಕೆ ; ಸ್ತುತಿ : ಕೊಂಡಾಟ : ಪರಿಪರಿಯ ಬಣ್ಣವಣ್ಣಿಗೆಗಳಂ ಜಪಿಸುತುತ್ತರದಿಜ್ಝುಖಕೆ ನಡವುತೆ (ಹಮ್ಮಾಶ. ೬-೩೪). ೫. ಸೊಗಸು : ಅಂದ : ಬಣ್ಣಸರವ ಪಸರವನಿಕ್ಕಿ ದಂತೆಲ್ಲ ಬಣ್ಣವಣ್ಣಿಗೆಯಲ್ಲಿ ಕಳೆತು ಸಣ್ಣದನಿಯಸೆಯೆ ಬಸದಿ ತುಂಬಿರೆ ಕೂರ್ತರ್ ಬಣ್ಣಿಸಿದರು ಪುರಜನಸ (ಚೆಶ. ೧೮-೬೨). ೬. ಬೆಡಗಿನ ವರ್ತನೆ ; ಬಣ್ಣಾಚಾರ ; ಬಿನ್ನಾಣದ ನಡವಳಿಕೆ : ಹೆಚ್ಚಿದುದು ನಿನ್ನ ರಾಣೀವೆಯಾದಜಾನವರೊಳಗೆ ಮಚ್ಚರವ ಮಾಡಬೇಡೆಂಬುದನೆ ಬಿಟ್ಟು ನಿನ್ನಿಚ್ಚೆಗತನದಿ ಬಣ್ಣವಣ್ಣಿಗೆಯ ಮಾತನಾಡುವುದು ನನಗಾದುದಿಲ್ಲ (ಹಮ್ಮೀ ೦-೪೩). **ಬಣ್ಣಬಣ್ಣಗೆ** : ೧. ಕಣ್ಣಪ್ಪನಂ ತಂದು ಗಣಪದವಿಯಂ ಕೊಟ್ಟು ಬಣ್ಣಬಣ್ಣಗೆಯ ಪೊಸಬೀಳಂಡೆಗಳಂ ಕೊಟ್ಟು (ಶಿವಾ.ಕ. ೬೦. ೦೩೦-೦೪). **ಬಣ್ಣಾಬಣ್ಣಿಕೆ** : ೩. ಹಕ್ಕಿ ಪುಕ್ಕಗಳಿಂದ ನಿರ್ಮಿತವಾದ ಬಣ್ಣಾಬಣ್ಣಿಕೆಯಾದ ಅವರ ವೇಷ . . . ಅವರ ಆನಂದವನ್ನು ಸೂಚಿಸುತ್ತವೆ (ಶಾರದ. ೩೬೪). **ಬಣ್ಣಾವಣ್ಣಿಗೆ** : ೧. ಬಣ್ಣಾವಣ್ಣಿಗೆಯ ದುಃಖವನೆಯ್ದೆ ಕುದಿದಂದು . . . ಭವರೋಗಶರಧಿಯಂ ದಾಂಟಿ ನೀಗುವೆವೆಂದು ನೆನೆವುತಿರಲು (ಶಾಸಂಕ. ೪-೬೨ ಕಗ೪). [ಬಣ್ಣ + ಬಣ್ಣಿಗೆ$_1$]

**ಬಣ್ಣವಳಿ** (ಕ್ರಿ). ಸೊಗಸಂ ಕೆಡು ; ಅಂದಗೆಡು : ಪಣ್ಣ ಬಾಯಿನವಂ ಬಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಂಟ್ಟು (ಗಿರಿಜಾ. ೨-೬೦ ವ).

[ ಬಣ್ಣ + ಅಳಿ$_1$ (< ಅಟು$_1$) ]

**ಬಣ್ಣವಳ್ಗು** (ಕ್ರಿ). ಕಾಂತಿಗುಂದು ; ಕಳಾಹೀನವಾಗು : ಮುದ್ದಾ ಜಮ್ಮಣ್ಣ :– (ಬಣ್ಣವಳ್ಗಿ, ತುಟಿಗಚ್ಚಿ . . . ಕಿಲ್ಗದವನ್ನೆಳೆದು ಕಿರುಗಂಡಿಗೆ ನಿಲಿಸಿಕೊಳ್ಳುವಳು). (ಶಬ್ದ. ೬೬-೦೦).

[ ಬಣ್ಣ + ಅಳ್ಗು (< ಅಟ್ಗು) ]

**ಬಣ್ಣದಾಡು** (ನಾ). ವರ್ಣನೆಯಿಂದ ಕೂಡಿದ ಸ್ತುತಿರೂಪವಾದ ಹಾಡು : ವೀಣೆದಳೆದು ಬಣ್ಣವಾಡುಗಳಂ ಬಾಜಿಪೋಜೆಯೊಳೊರ್ಮೆ ನುಣ್ಣುರವೆತ್ತಿ ಪಾಡುವ ಬಿಡಯದೊಳೊರ್ವ . . . ಬರ್ದಿಲನಾಡೊಳ್ ಬಾಳ್ದಂ (ಶಶಿಶಂ. ೩೬-೨೦) ; ದೊಡ್ಡಮ್ಮ . . . ಬಣ್ಣವಾಡಿನ ರಸಗೇಯದ ರಾಗಮಾಲಿಕೆಯನ್ನು ಸವಿಗರೆಯುವಳು (ಮುಂತ್ರಕ. ೩೬-೧೪). 'ಬಣ್ಣಗಬ್ಬ' ಪರಾ. [ಬಣ್ಣ + ಪಾಡು$_2$]

**ಬಣ್ಣವಾಡುಗೆಯ್** (ಕ್ರಿ.) ವರ್ಣನೆಯಿಂದ ಕೂಡಿದ ಸ್ತುತಿರೂಪವಾದ ಹಾಡನ್ನು ರಚಿಸು : ಆ ವಾದ್ಯವಿದ್ಯಾಧಿಕರ್ . . . ಕಾಮತಂತ್ರದ ವೈಶಿಕಪ್ರಕರಣಮಂ ಬಣ್ಣವಾಡುಗೆಯ್ದು ಪಾಡಿದರ್ (ಶಶಿ. ೬-೦೩೪ ವ).

[ಬಣ್ಣವಾಡು + ಕೆಯ್$_1$]

**ಬಣ್ಣವಾತು** (ನಾ). ತೋರಿಕೆಯ ನುಡಿ ; ಬಣ್ಣಾಚಾರ ; ಸೋಗಿನ ಮಾತು : ಕಣ್ಣೊಳು ನೋಡಿ ಮನದೊಳು ಮಚ್ಚರವನು ಹಣ್ಣುವ ರಾಯರ ಗಂಡ ಬಣ್ಣವಾತಲ್ಲ ನಿನ್ನಾಣೆ ಮೂಲೋಕದ ಕಣ್ಣುದಯಿಸಿದೆ ನೋಡೇಳು (ಕುಮಾರಾಂ. ೨೪-೩೩) ; ನಿನ್ನಾ ಬಣ್ಣವಾಶಿಗೆ ಮಾಟುವೋದಂ (ಚಾಮುಕ್ಕ. ೦೬೩-೨). [ಬಣ್ಣ + ಮಾತು$_1$]

**ಬಣ್ಣವಾವುಗೆ** (ನಾ). ಬಣ್ಣದ ಹಾವುಗೆ ; ವರ್ಣಮಯವಾದ ಪಾದರಕ್ಷೆ :– ಆ ವೇಳೆಯೊಳ್ ಮೆಟ್ಟಿದ ಬಣ್ಣವಾವುಗೆಯ . . . ಬೆಡಂಗಿನ ದಾಳೆಯೊರ್ವಳ್ . . . ಪೊಂಬಟ್ಟಲನೆತ್ತಿ ಬರುತುವಿರ್ದಳ್ (ರಾಮಾಶ್ವ. ೪೪-೦೩). [ಬಣ್ಣ + ಪಾವುಗೆ]

**ಬಣ್ಣವಾಸಿಗ, ಬಣ್ಣಬಾಸಿಗ** (ನಾ). ೧. ಬಣ್ಣಬಣ್ಣದ ಹೂವುಗಳ ದಂಡೆ.—ಮಾಲೆ : ನಮೇರು ಮಂದಾರ ಪಾರಿಜಾತದ ಬಣ್ಣವಾಸಿಗಂಗಳುಂ . . . ಬಿಡುಮುತ್ತಿನ ಸೇಸೆಗಳುಂ ಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು (ಆದಿಪು. ೨-೬೬ ವ) ; ಅದಿಮಾರ್ಗತ್ತೆಯ ವಕುಲದ . . . ಕುಂದದ ಬಣ್ಣವಾಸಿಗಂಗಳನುದಾತ್ತಮಾಲ್ಯಂಗಮಹಿರುಹು ಕುಡುತಿರ್ಕುಂ (ಶಾಂತಿಪು. ೬-೦೦೨); ಸುರಚಾಪಂಗಳನಿಂದ್ರಂ ಮುರಿದಿಟ್ಟಂತಭ್ರಪಥದೊಳೆಗಳ ಬಳಗಂ ಬೆರಸಿಸೆವ ಬಣ್ಣವಾಸಿಗವೆರಡಂ ಚಲದಮಲಕಮಳಲೋಚನೆ ಕಂಡಳ್ (ಸುಕುಮಾ. ೬-೩೪). **ಬಣ್ಣಬಾಸಿಗೆ** : ೨. ಮದುಮಕ್ಕಳ ಹಣೆಗೆ ಕಟ್ಟುವ (ಬಣ್ಣದ ಕಾಗದ, ಬೆಂಡು ಮುಂತಾದುವುಗಳಿಂದ ಮಾಡಿದ) ಒಂದು ಬಗೆಯ ಅಲಂಕಾರ + ತರುಳ ತೊಂಡಲು ಖಂಡದ ಬಣ್ಣಬಾಸಿಗ ನರದ ಹಂಜರ ಚಪ್ಪರದಲಿ ನೆರೆದು ಶಾಕಿನಿಯರು ಮದುವೆಯ ಮಾಡುತ ಮೆಚ್ಚಿದರು. (ಶಂಸಪ. ೦೩-೬೩). [ಬಣ್ಣ + ಬಾಸಿಗ]

**ಬಣ್ಣವಿಕ್ಕು** (ಕ್ರಿ). ಬೂಟಾಟಿಕೆಯ ಮಾತನ್ನಾಡು : ಅಣ್ಣಸಲ್ಲೆ ಪಂಗಾತ ನೊಡೆಯನ್ನೆ ನೀನಿಂತು ಬಣ್ಣವಿಕ್ಕದಿರು ಸಾಕು (ಚೆಶ. ೪೮-೨೩).

[ಬಣ್ಣ + ಇಕ್ಕು]

**ಬಣ್ಣವಿಡು** (ಕ್ರಿ). ೧. ಬಣ್ಣವನ್ನು ಲೇಪಿಸು ; ರಂಗು ಹಚ್ಚು : ಕರುವಿಟ್ಟಂ ಕಾಮದೇವಂ ರತಿಯಾತಿಶಯದಿಂ ಬಣ್ಣವಿಟ್ಟಳ್ . . . ಎನಲ್ಕಂತೆ ಕಣ್ಗೆಡ್ಡಮಾದಳ್ (ಲೀಲಾವ. ೩-೪೬) ; ತದ್ವಸಂತಂ ಪದೆಪಿಂದಂ ಬಣ್ಣವಿಟ್ಟಂಗಜನೃಪತಿಯ ಗೂಡಾರವೋ ಕಾನಿದೆಂಬಂದದೆ . . . ಇರ್ದತ್ತು ಚೂತಂ (ಕುಸುಮಾ. ೪-೪೩). ೨. ಚಿತ್ರವನ್ನು ರಚಿಸು : ದೊಡ್ಡಮ್ಮ :—(ಬಣ್ಣವಿಡುತ್ತ ಮೆಲ್ಲಮೆಲ್ಲಗೆ ಹಾಡಿಕೊಳ್ಳಲಾರಂಭಿಸುವಳು) (ಮುಂತ್ರಕ. ೩೦-೦೩). ೩. ಹೊಗಳು ; ಪ್ರಶಂಸಿಸು : ಮರುಳೆ ನೀ ಬಲು ಬಣ್ಣವಿಡೆ ಖದ್ಯೋತ ರವಿಯಹುದೆ (ಕೌಶಿಕ. ೨೦-೨೦). ೪. ಮೆರುಗು ಕೊಡು ; ಒಪ್ಪವಿಡು ; ಅಂದಗೊಳಿಸು : ಭಾವದ ಬಯಲಿಂಗೆ ಬಣ್ಣವಿಟ್ಟನೆಮ್ಮ ಬಸವಯ್ಯನು (ಶೀಲಸ. ೪. ೪-೪) ; ಕೌರವನು . . . ನೆನೆದ ಮತವನು . . . ಅನುಜಮತದಲಿ ವಿಸ್ತರಿಸಿ ಮೈದುನನ ನುಡಿಯಲಿ ಬಣ್ಣವಿಟ್ಟನು ಜನಪನಪಕೀರ್ತಿಗಂಗನೆಗೆ ತೊಡಿಸಿದನು ಭೂಷಣವ (ಕುಮಾರಾ. ೨-೨೨); ಅಗಣಿತಮತಿಗಳಾದವರೀ ಕೃತಿಯನು ಮಿಗೆ ತಿರ್ದಿ ಬಣ್ಣವಿಡುವುದು (ಅಂಜಶ. ೦-೦೦೬). [ಬಣ್ಣ + ಇಡು$_1$]

**ಬಣ್ಣವಿಳಿ** (ಕ್ರಿ). ಕಾಂತಿಹೀನವಾಗು; ಕಳೆಗುಂದು : ಕರುವಿಮನ್ :— (ಬಣ್ಣವಿಳಿದು, ತುಟಿಗಚ್ಚಿಕೊಂಡು, ಹೊರಡುವನು) (ಮುಂತ್ರಕ. ೨೪-೦೬).

[ ಬಣ್ಣ + ಇಳಿ$_1$ (< ಇೞಿ) ]

**ಬಣ್ಣವುರ** (ನಾ). ೧. ವಿಧವಿಧವಾದ ಬಣ್ಣಗಳಿಂದ ಕೂಡಿದ ವಸ್ತು, ಚಿತ್ರ ಮುಂತಾದುವು : "ಬಣ್ಣವುರಮೊಂದು ವರ್ಣಪೂರಂ" (ಶಕಾ. ೬೩-೪೦೬); ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ಮಗಳ ರಜಂಗಳುಮನೊಳದೊ [ದಿಂ] ಡಿನ ಪಾಲ್ಗಳುಮಂ ಪೀರ್ದು (ಶಾರದಾ. ೩೨೬); ಅಲಂಕೃತವಾದ ಬಣ್ಣವುರದ ಗೋಡೆಗಳನ್ನು . . . ತಾಂಗರಾಯನು ಪರೀಕ್ಷಿಸುತ್ತಿರುವನು (ಶಬ್ದ. ೪೮-೩). ೨. ಸಿಂಧೂರ, ಬುಕ್ಕಿಹಿಟ್ಟು ಮುಂತಾದ ಬಣ್ಣದ ಹಾಗೂ ಸುಗಂಧದ ಪುಡಿ : ಸಿರಿಗನ್ನಡಿ ಬಣ್ಣವುರು ಕರಿ[ಯು]ಳ್ ಬಳಿಯಾರಳಿ [ಮ]ಧು ಮೊಸರ್ ನೆ[ಲ್ಲ]ಜೋತ್ಕರವೆಂದಶೇಷಮಂಗಳಪರಿಕರಮೆಸೆದುದು ವಿವಾಹವೇದಿಯ ಕೆಲದೊಳ್ (ಶರ್ವಶಾ. ೩-೮೩); ಗೋರೋಚನಂ ಲಾಜೆ.ಬಣ್ಣವುರು . . . ಕಾಶ್ಮೀರಮಂಬವಜಾಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುವು (ಜಗ. ೧೦-೪೮); ಲಾಜೆಯುಂ ಸಮೆಪ ಬಣ್ಣವುರಂಗಳನೊಪ್ಪೆ ಮಾಟ್ಟು ನಾನಾವಿಧಮಂಗಳಾಚರಣವಕ್ಷಯರಿಂ . . . ತೀವಿ (ವರ್ಧಪು. ೬-೩). ೩. ಬಣ್ಣವನ್ನು ತುಂಬುವುದು ; ರಂಗು ಹಾಕುವುದು : ಕವಿ

ಸುಟ್ಟುಂಬೆಯಿಂದೆ ಸತ್ತಂ ತೋರ್ಪನಾ ಅವಸರಕೆ ಸೌನ್ದರ್ಯತತ್ತ್ವವಾವ ತರಿಸಿಕೊಳ್ಳವನೊಲ್ದಾರ್ಪ ರೂಪಾರಂ ಮೆಯ್ಸಿರಿ ಬಣ್ಣಪುರಂ ಬಾಳ್ಗೆಗಳ ನೊಪ್ಪಿಸಿಯದಂ ಕಾಣ್ಕೆ ಮಾಳ್ಪಂ (ಸಂಸಕ. ೪೦–೬೯). ೪. ರಂಗವಲ್ಲಿ; ಹಸೆ : ಭವಲಾಲಾಟವಿಲೋಚನಾಗ್ನಿಶಿಖೆಯಿಂ ಬೆಂದಳ್ಕೆ ಮಾತ್ರಂ ಮನೋಭವನೆಟ್ಟುತ್ತೊಡೆ ಕಾಮಕಾಂತೆ ಬಟ್ಟೆಯಂ ತನ್ನಿಚ್ಚೆಯಿಂ ಮೆಚ್ಚಿ ಬಣ್ಣಪುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕಂದಂಗಳಿಂದಿಂದ್ರಗೋಪವಿಳಾಸಂಗಳ ನಾಳಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ (ಕಂಕಚಾ. ೬–೨೪) ; ☞ "ಬಣ್ಣಪುರಂ ತೀವಿದ = ವರ್ಣಪೂರ ಎಂಬ ವಸ್ತ್ರದಿಂದ ಮುಚ್ಚಿದ . . . ಬಣ್ಣಪುರ < (ಸಂ) ವರ್ಣಪೂರ ಎನ್ನುತ್ತಾನೆ ಕೇಶಿರಾಜ; ಅರ್ಥ ಅನಿರ್ದಿಷ್ಟ; ಬಣ್ಣಬಣ್ಣದ ಜಮಖಾನೆ, ನೆಲಕ್ಕೆ ಹಾಸುವ ಬಟ್ಟೆ ಎಂಬರ್ಥವಿರಬಹುದು" (ಶಂಶದೀ. ೨೪೬); ಬಳಭಿಚ್ಛಾಪಲತಾವಳಿ ಬಳಸಿದ ಬೆಳ್ಮುಗಿಲ ಮುಚ್ಚಿಯಿದೆನೆ ಬಣ್ಣಪುರಂ ಬಳಸಿರ್ದೊಡೆ ಸೊಗಯಿಸಿದುದು ಪಳಿಕಿನ ಪಟ್ಟವಣೆ ವೇದಿಕಾಧಿತ್ಯಕದೊಳ್ (ಚಂದ್ರಕೆ. ೬–೩೨); ಪೊಸಮುತ್ತಿನ ಬಣ್ಣಪುರಂ ಮನೆಮನೆದಪ್ಪದೆ ಶೋಭಿಸಿತು (ಜಯುಚ. ೨–೩೯).

[ < ಸಂ. ವರ್ಣಪೂರ ]

**ಬಣ್ಣವೆರು** (ಕ್ರಿ). (ನಾಚಿಕೆಯಿಂದ) ಕೆಂಪಾಗು : ತಿಮ್ಮಾಜಮ್ಮಣ್ಣಿ:— (ಬಣ್ಣವೆತ್ತು, ಹಿಂದಣ್ಗೆ ಹುದುಗುವಳು) (ಶಬ್ಮಿಅ. ೦೦೦–೦೦).

[ ಬಣ್ಣ+ವೆರು₁ ( < ವೆಱು₁) ]

**ಬಣ್ಣವೆರ್ಚು** (ಕ್ರಿ). ಕಾಂತಿಯು ಹೆಚ್ಚಾಗು; ಥಳಥಳಿಸು : ಪಾಂಡ್ಯನಾರಿಯರ ಮೆಯ್ಯ ಪಚ್ಚದ ಪೊಸಪೊಗರಿಂ ಬಣ್ಣವೆರ್ಚೆ ಮಿಱುಗುವ ಸೌಧಂಗಳಿಂ ರಂಜಿಸಿ . . . ತೋರ್ಪ ಕಾಂಚೀಪುರಮುಂಟು (ರಾಜಶೇ. ೬೪–೦೬). [ಬಣ್ಣ + ಪೆರ್ಚು₁]

**ಬಣ್ಣವೇರು** 'ಬಣ್ಣವೇಱು' ನೋ.

**ಬಣ್ಣವೇಱಿಸು** (ಕ್ರಿ). ಶೋಭಿಸುವಂತೆ ಮಾಡು; ಕಳೆಯೇರುವಂತೆ ಮಾಡು : ಬಣ್ಣವೇಱಿಪುಕ್ಕವದ ಪೆರ್ಕಳಮಂ ನಿಟ್ಟಿಸಾ (ಚಿತ್ರಗೋ. ೮–೨೦).

[ ಬಣ್ಣವೇಱು + – ಇಸು₁ ]

**ಬಣ್ಣವೇಱು, ಬಣ್ಣವೇರು** (ಕ್ರಿ). ೧. ರಂಗೇರು; ಬಣ್ಣಬರು. ೨. ಶೋಭಿಸು; ಸೊಗಸಾಗು : ಭಸಿತಕ್ಕೆ ಬಣ್ಣವೇಱುವಂತೆ ರುದ್ರಾಕ್ಷಿಗೆ ಸೌಂದರ್ಯಂ ಸಾರುವಂತೆ . . . ಬಾಲ್ಯವಿಮೋಚನವಾಗಿ ಯೌವನವಾಲಿಂಗಿಸೆ (ಬಸ. ೨–೦೦); ಮಿಗೆ ಬಾಸೆ ಬಣ್ಣವೇಱಿತು ಸೊಗಯಿಸಿದುದು ಮೊಗರಸಂ . . . ಮೇನಕೆಯಾ (ಗಿರಿ. ೩–೩೯). ೩. (ಆಲಂ) ಸಡಗರದಿಂದ ಕೂಡಿರು; ಸಂಭ್ರಮಿಸು : ಕೆಲದೊಳಿರ್ಪಳು ಗೆಲ್ಲಗೊಂಬಳು ನೇಹವ ಬಲಿವಳು ಬಣ್ಣವೇಱುವಳು (ಹರಿ. ೬–೪೬). ೪. ಹೆಚ್ಚಾಗು; ಅಧಿಕಗೊಳ್ಳು : ಸತಿಯರೀ ಕೃತಿಯನಾಲಿಸಿದೊಡಂದಂದಿಗೆ ಪತಿಭಕ್ತಿ ಬಣ್ಣವೇಱುವುದು (ಹಂಬ. ೦–೩೨). ಬಣ್ಣವೇರು : ೧. ಆ ಮಾತನ್ನು ಕೇಳಿದ ಕೂಡಲೆ ಅವನ ಮುಖ ಬಣ್ಣವೇರಿತು (ಜನಪ).

[ ಬಣ್ಣ + ಏಱು₁ (< ಏಱ್₁) ]

**ಬಣ್ಣವೋಡು** (ಕ್ರಿ). ಕಳೆಗುಂದು; ಕಾಂತಿಯನ್ನು ಕಳೆದುಕೊಳ್ಳು : ನೇಸಱುರಿವುರಿಯಿಂದೆ ಸುಟ್ಟು ಕರಿಮುರಿಯೋಗಿ ಚೆನ್ನಮೆಯ್‌ದೊಗಲ್ ನಿನತು ಬಣ್ಣವೋಡುವುದು (ಅಕ್ಕ್ರ. ೨–೨೬). [ಬಣ್ಣ+ಓಡು₁]

**ಬಣ್ಣಸರ₁** (ನಾ). ೧. ಬಣ್ಣಬಣ್ಣದ ಮಣಿ, ಹೂವು ಮುಂತಾದುವುಗಳ ಮಾಲೆ, – ಹಾರ : "ಬಣ್ಣಸರ–ವರ್ಣಸರ = ಬಣ್ಣದ ಮಾಲೆ" (ಕಧ್ಯಕೋ. ೨೮); ಅಂದುಗೆ ಕಂಕಣಂ ಸರಿಗೆ ಬಣ್ಣಸರಂ ಕಟಿಸೂತ್ರಮೆಂದಿಪೊಂದೊಂದಱೊಳೊಂದ[ವಿಂ]ದೆಯೆನೆ ತೊಟ್ಟು (ಶರಶೂ. ೩–೬೮) ; ಸುಗಮಬಂಧದ ಬಣ್ಣಸರದೋಳಿಗಳ ಕಂಬದ ವಜ್ರಮಯಧಾರೆಗಳಲೆಸೆದುದು ಭದ್ರಮಂಟಪವವಮಲಮಣಿಮಯದ (ಕುಮ್ಮಾ. ೦೨–೦೨); ಸಣ್ಣಪವಳ ಕೈಕಟ್ಟಿನ ಪವಳಗಳ್ ಬಣ್ಣಸರದ ಜಾತಿಪವಳ ತಿಣ್ಣವಡೆದ ಪವಳದ ಪಸರಗಳಾಗ ಕಣ್ಣ ಕೊಳ್ಕರಿಸುತೊಪ್ಪಿದುವು (ಕಂಸೂ. ೬–೬೬). ೨. ರಂಗಿನ ಬಾಣ, — ಸರಳು : ವರ್ಣಶರ—ಬಣ್ಣಸರ (ಕಮುಕ. ೨೪೯ ಕ್ರಿಯೋ). ☞ ಸಂಸ್ಕೃತದ 'ಶರ' ಮತ್ತು 'ಸರ' ಎಂಬ ಎರಡು ಶಬ್ದಗಳಿಗೂ 'ಬಾಣ' ಎಂಬರ್ಥವಿದೆ.

[< ಸಂ. ವರ್ಣಸರ. / ತೆಲು. ಬಣ್ಣಸರ, ಬನ್ನಸರ, ಬನ್ನಸರಿ]

**ಬಣ್ಣಸರ₂** (ನಾ). ೧. [ಸಂಗೀತ] ರಂಜನೆಯಿಂದ ಕೂಡಿದ ಹಾಡು : ಸುಶ್ರಾವ್ಯವಾದ ಗೀತ : ಬಾಯ್ದೆಱೆಯದೆ ಬಣ್ಣಸರಮನುಚ್ಚರಿಸುವ ನೆಱೆವೆಱೆವೊಗದಬಳೆಯ ನುಣ್ಗೊರಲತಿರಂಜನೆವಡೆಯಿತ್ತು (ಜಯುಚ. ೯–೩೦); ದೇಗುಲಗಳೊಳಗೆ ಮೊಳಗುವ ಸಮಸ್ತವಾದ್ಯಧ್ವನಿಯಾಕಾರಮಂ ಗಳೆವುವ ಸಂಗೀತಕಾಱರ ಬಣ್ಣಸರಗಳಾ ಪೊಳಲೊಳೆಡೆವಿಡದೆ ಘೂರ್ಣಿಸಿದುವು (ಸಚ್ಚುಕಾ. ೦೨–೯). ೨. [ನಾಟ್ಯ] ವರ್ಣದ ಸ್ವರಗಳ ಲಯಕ್ಕನುಗುಣವಾದ ನರ್ತನ (?) : ಪೆಸರಱೆಯದಮರತೂರ್ಯಪ್ರಸರಂಗಳ ಜತಿಗೆ ತೊಡರದಿನಿಸಱಲದೆ ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದೇನವಳ ಪರಿಣತಿಯೋ (ಅರಪು. ೯–೩೦); ಎಸಟ ಮೊನೆಕೂರಿತಡಿಗೊಟ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕಣೆದಾಗಸಮೆಂಬ ರಂಗದೊಳ್ ಬಣ್ಣಸರಮನಾಡಿದರನೇಕರಮರಾಂಗನೆಯರ್ (ಶಾಂತಿಪು. ೦೨–೦೬); ಮ್ಮೆ ಪೊಳೆವ ಮಿಂಚಂ ಪೋಲೆ ಚೆಲ್ವಾಗಿ ಬಣ್ಣಸರಂ ಕಾಟ್ಟುರಮೇಱ ಕಾಕಳಿ ನಭೋರಂಗಾಗ್ರದೊಳ್ ನಿಚ್ಚಲಾಡಿಸುವಂ ಪಾಡಿಸುವಂ ವಿಯಚ್ಚರಿಯರಂ ವಾಗ್ಗೇಯವಿದ್ಯಾಧರಂ (ಅರಶೇ. ೨–೯೬). 'ಜತಿಸ್ವರ' ಪರಾ.

[<ಸಂ. ವರ್ಣಸ್ವರ]

**ಬಣ್ಣಸರಂಗೊಳ್** (ಕ್ರಿ). ಬಣ್ಣದ ಮಣಿಸರವನ್ನು ತೆಗೆದುಕೊಳ್ಳು : ಪೆಸರಱಿಯದಮರತೂರ್ಯಪ್ರಸರಂಗಳ ಜತಿಗೆ ತೊಡರದಿನಿಸಱಲದೆ ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದೇನವಳ ಪರಿಣತಿಯೋ (ಅರಪು. ೯–೩೦). [ಬಣ್ಣಸರ₁ + ಕೊಳ್₁]

**ಬಣ್ಣಾಂತರ** (ನಾ). [ಗಣಿತ] ಹದಿನೆಂಟು ಬಗೆಯ ಗುಣಿಸುವ ಲೆಕ್ಕಗಳಲ್ಲಿ ಒಂದು : ಅಡಿಕೆ ಸೂತ್ರು ಬಣ್ಣಾಂತರಾ ಇವು ಮೊದಲಾದ ಲೆಕ್ಕಾಚಾರಗಳು ಗುಣಿಸಿ ಭಾಗಿಸುವ ವಿವರ (ಶಾಸ್ತ್ರ. ೦–೪); ಮಾಗ್ಗಿಗಣಿತ . . . ಕ್ಷೇತ್ರಗಣಿತಮುಂಗುಳಿಆಳತೆ ರಾಜನೀತಿ ಬಣ್ಣಾಂತರ ಪದ್ಮನಾಭ . . . ಉತ್ಕಳಿತಗಣಿತವುಂ ಅಷ್ಟಾದಶಗಣಿತಂಗಳು (ಕ್ಷೇತ್ರಗ. ೨–೪).

[?. / ತಮಿ.ವಣ್ಣವರ್ = ಗುಣಿಸುವ ಸಂಖ್ಯೆ]

**ಬಣ್ಣಾಚಾರ** (ನಾ). ಸೋಗಿನ ನಡೆವಳಿಕೆ; ತೋರಿಕೆಯ ವ್ಯವಹಾರ : ಪಂಚಿತರು ಯಾರೂ ಅವನ ಬಣ್ಣಾಚಾರಕ್ಕೆ ಮರುಳಾಗುವುದಿಲ್ಲ (ಜನಪ).

[ಬಣ್ಣ + ಆಚಾರ]

**ಬಣ್ಣಾಬಣ್ಣಿಕೆ** 'ಬಣ್ಣವಣ್ಣಿಗೆ' ನೋ.

**ಬಣ್ಣಾವಣ್ಣಿಗೆ** 'ಬಣ್ಣವಣ್ಣಿಗೆ' ನೋ.

**ಬಣ್ಣಿಕೆ** 'ಬಣ್ಣಿಗೆ₁' ನೋ.

**ಬಣ್ಣಿಗ** (ನಾ). ಕಾಂತಿಯುಳ್ಳವನು ; ಶೋಭಾಯಮಾನನಾದವನು : ನಳನಳಿಪ ಲಾವಣ್ಯದಿಂದೆಸೆವ ಬಣ್ಣಿಗಂ . . . ತಾನಾಗಿ ಬಾಲಲೀಲೆಯ ಬಸವನೊಪ್ಪಿದಂ ಬಳೆದೋಳ ಭಾಗ್ಯನಿಧಿ ಹುಲಿಯಾಗುರ ಸುಲಭಗಂ (ಬಸ. ೦–೧೩೨). [ಬಣ್ಣ + —ಇಗ]

**ಬಣ್ಣಿಗೆ₁, ಬಣ್ಣಿಕೆ** (ನಾ). ೧. ರಂಗು ; ವರ್ಣ ; ಬಣ್ಣ : ಐಮುಚಿ ಅಕ್ಕಿಯಂ ಐದು ಬಣ್ಣ[ಪಾಠಾಂ. ಣ]ಗೆಯ ಪುಷ್ಪಂಗಳಿಂದ್ಯೆದುಪರಿಯಾಣದೊಳ್ಯೆದುಪರಿಯ ಭಕ್ಷ್ಯಂಗಳಂ ಚರುವಿಟ್ಟು (ಪುಣ್ಯಾಸ್ರ. ೬–೩೦ ಪ); ಎಸೆವಪರಂಜಿಯ ತಗಡ ಬಣ್ಣಿಗೆಯನು . . . ಅಸಿಯಳಂಗಕೆ ಹೋಲಿಸುವೆನು (ಕೀಜಸಂ. ೨೩–೨೦೬); ರತ್ನಮಯಪೀಠಗಳ ನಾನಾಬಣ್ಣಿಗೆಯ ಲೋಡುಗಳು

ರಂಜಿಪವು (ಜಿನಾ. ೦-೩-೨೯). ೨. ಕೆಂಪುಬಣ್ಣ; ಅರುಣವರ್ಣ: 'ಬಣ್ಣಗೆದುಟಿ' ನೋ. ೩. ಬಗೆಬಗೆಯ ಬಣ್ಣಗಳಿಂದ ಕೂಡಿದುದು; ವರ್ಣಮಯವಾದುದು: ನೆಱೆ ವಣ್ಣ ವೆದ್ದುದರದಿ ಜಗಂಗಳ ಬಣ್ಣಗೆಯ ಚಿತ್ರವನು ತಾಯಿಗೆ ಬಾಯೊಳಗೆ ತೋರ್ಪ (ಜಗನ್ನಾ. ೧೦-೪೨-೨೭); ಬಣ್ಣಗೆಯ ಚಿತ್ರಾನ್ನ ಪಾಯಸಂಗಳಂ (ಜಕು. ೨೨-೦೬). ೪. ಬಣ್ಣ ಬಳಿಯುವಿಕೆ; ಲೇಪನ: 'ಬಣ್ಣಗೆವಡೆ' ನೋ. ೫. (ಚಿತ್ರಕ್ಕೆ ಬಣ್ಣ ತುಂಬಲು ಬಳಸುವ) ಕುಂಚ: ವಿನೋದಾಸ್ಪದವಾದ ಈ ಚಿತ್ರವು ಅರ್ಧ ಬರೆಯಲ್ಪಟ್ಟಿದೆ...ಬಣ್ಣಗೆಯನ್ನು ತೆಗೆದುಕೊಂಡು ಬಾ (ಶಾಕುಂತ. ೯೯-೬). ೬. ಚಿತ್ರ ಮುಂತಾದುವನ್ನು ಬರೆಯಲು ಬಳಸುವ ಬಣ್ಣ; "ಮಸಿ" (ಶಬ್ದಮ). ೭. ವಿವರಣೆ; ವರ್ಣನೆ: ಬಾಂಧವನೆಂದು ಮುರಹರನ ಕಣ್ಣ ಕಂಡಱಿಯದಡೆ ಹಿರಿಯರ ಬಣ್ಣಗೆಯ ಲಜ್ಜೆವೆ (ಜಗನ್ನಾ. ೦-೦೦-೪೦). ೮. ಹೊಗಳಿಕೆ; ಸ್ತುತಿ; ಸ್ತೋತ್ರ: ಯದುಕುಲವರಂವರೆಯಿಂ ಪೂಜೆಗೊಂಡ ಶ್ರೀಮನ್ನಾರಾಯಣನಂ ಪೂಜಿಸುವ ವಸುದೇವನೋ... ಎಂದಿಂತು ಪೊಣ್ಮುವ ಬಣ್ಣಗೆಗಳಿಂದಳವಟ್ಟವ ಹೃದಯಮುಮಂ ಪದುಳಂಗೊಳಿಸಿ (ಜಕು. ೬೦-೦೨). ೯. ಸೊಗಸು; ತೋರಿಕೆ: ಗೊಹೇಶ್ವರಲಿಂಗದಲ್ಲಿ ಈ ಬಣ್ಣಗೆಯ ಮಾತು ಸಲ್ಲದು ಕೇಳಾ (ಅಕವ. ೨೨೩-೦೦೦೯); ಪಾಂಡುಪುತ್ರರು ದಾಯಿಗರು ನಗುವಂದವಾದುದು ಬಾಯ ಬಡಿಕರು ಬಂದ ಬಣ್ಣಗೆಯಸಗಿ ಬಗುಳುವರು (ಕೃಷ್ಣಾ.ಕಾ. ೦೪-೨೯). ೧೦. ರೂಪ; ಆಕಾರ; ಸ್ವರೂಪ: ಬಣ್ಣಗೆಯ ನೋಡಿದರೆ ಮಾದಲ ಹಣ್ಣನಾಕೃತಿ ಛಾಯುವಿಡಿದಿಹುದು (ಕೃಷ್ಣಾ.ಕಾ. ೯-೪೭). ೧೧. ಸೊಗಸು; ಅಂದ: ಬಿಣ್ಣತೇನೆಮಗೆ ನಿಮಗೆ ಬಂಧುತನದೊಂದು ಬಣ್ಣಗೆಯಲಿ (ಜಕ. ೪೩-೯೬). ೧೨. ಅಲಂಕಾರ; ಶೃಂಗಾರ: ಆವ ಪಂಯ ದೇಸಿಯಾಣ್ಮಗೆ ಬಗೆವರ್ಪುದಾ ವಿಧಗಳನಾರ್ಕೆದು ಭಾವಿಸಿ ತೀಡುದುಟ್ಟು ಕೊಟ್ಟು ಬಣ್ಣಗೆಯಿಂದ ಭಾವವ ಬಂದಿಗೊಳುವುದು (ಜಕು. ೩-೦೬). ೧೩. ಬಣ್ಣಬಣ್ಣದ ಗೌಸಿನ ಬಟ್ಟೆ (?): ಛತ್ರಮಂ ತವನಿಧಿಗೆ ಕವಿಲೆಯಂ ಕಱೆವೆಡೆಗೆ ಎತ್ತುಗಳ ಬಣ್ಣಗೆಯ ಹಿಂಡಿಗೊಂದುಳಿ ನೃಪರೋಲೈಸೆ (ಹರಿಶ್ಚಂ. ೯-೯೩). ಬಣ್ಣಿಕೆ: ೧೧. ವೃಷವಾಹನಂ... ಈಶ್ವರನ ರೂಪಂ ವಿಗುರ್ವಿಸಿ ಬಂದಿರ್ಪುದುಂ ಪುರದವರೆಲ್ಲಂ... ಬಣ್ಣಿಕೆಯ ಪೂಜೆಗಳಂ ಮಾಡಿ ಪೊಡೆವಡುತಿರ್ಪನ್ನೆಗಂ (ಧರ್ಮಾಮೃ. ೩-೨೨೭). [<ಸಂ. ವರ್ಣಿಕಾ]

ಬಣ್ಣಗೆ₂ (ನಾ). ಒಂದು ಬಗೆಯ ತೆರಿಗೆ: ಊರಲೊಕ್ಕಲಲೊನ್ದು ಪೊಱಯುಂ ವತ್ತುಕೊಳಗಛತ್ರಮುಂ ಒನ್ದು ಕಂತೆಯುಂ ಬಣ್ಣಗೆ ಮೂಗುಳಮಂ ಕಪ್ಪಡಕ್ಕೆ ಪಟ್ಟಿಯುಂ ಬ್ರಹ್ಮಲಿಂಗಿಬರ್ಗೆ ಕೊಟ್ಟುದು (ಶಾಸಂ. ೦೯೯೬, ೨೪-೨೬; 1032); ದೇವರ ಗಾಣಕ್ಕೆ [ತೆ] ಱೆ ಬಣ್ಣಗೆ ತೊಂಕಿ ಬೀರವಣ ಸರ್ವ್ವಬಾಧಾಪರಿಹಾರವಾಗಿ ಬಿಟ್ಟರು (ಕ್ಲಾಇ. XI-ii. ೦೩೬-೨೬; 1109); ನಿಧಿನಿಕ್ಷೇಪ ಜಳ ಪಾಶಾಣ ತರುಮಾಳಾಸಮನ್ವಿತ [ಸುಂ] ಕ ಸಾದ ಬಣ್ಣಗೆ (ಕ್ಲಾಇ. XV. ೦೩೩-೩೬; 1206). [?]

ಬಣ್ಣಗೆಗಯ್ದು (ನಾ). ಬೇರೆ ಬೇರೆ ಆಕಾರದ ಆಯುಧ: ಓರ್ವರೋರ್ವರಂ ಬಣ್ಣಗೆಗಯ್ದುವಂ ಪಿಡಿದು ನಾಡಕರೋವದೆ ಕುತ್ತಿ ಕೊಯ್ದೊಡಂ... ತನು ಮುನ್ನಿನ ಮಾಟ್ಕೆಯಕ್ಕುಂ (ಶಾಂತೀಶ್ವ. ೬-೯೩). [ಬಣ್ಣಗೆ + ಕಯ್ದು (<ಕೆಯ್ದು)]

ಬಣ್ಣಗೆಗಾಲು (ನಾ). ಬಣ್ಣ (ಅಲಕ್ತಕ) ಬಳಿದ ಕಾಲು: ಬಾಳೆದೊಡೆಯ ಬಣ್ಣಗೆಗಾಲಾ...ಮನೋಹರರೂಪದ ನೀಱೆಯ ನವಲಾವಣ್ಯದ ಸಿರಿಯುನ ದೇನಂ ಬಣ್ಣಿಪೆನು (ಜಯನೃ. ೩-೬೩); ಬಡನಡುವಿನ ಬಣ್ಣದೊಡೆಯ ಬಣ್ಣಗೆಗಾ[ಕಾಂ. ಕಾ]ಲ ನಿಡಿದೋಳಿನರವೆಱೆನೊಸಲ... ಬೆಡಗಿನ ಪೆಣ್ಗಳಲ್ಲಿಹರು (ಶಂಕ್ರಶಾಂ. ೦-೨೦೦). [ಬಣ್ಣಗೆ₁ + ಕಾಲು₁ (< ಕಾಲ್₁)]

ಬಣ್ಣಗೆಗೊಳ್, ಬಣ್ಣಗೆಗೊಳು (ಕ್ರಿ). ಹೊಳೆ; ಶೋಭಿಸು: 'ಬಣ್ಣಗೆಗೊಳಿಸಂ' ನೋ. ಬಣ್ಣಗೆಗೊಳು: ಬಣ್ಣಗೆಗೊಳುವ ಬಗೆಯ ಪೊಸವರೆಯದ ಪೆಣ್ಣನೊಲುಮೆಯು ಪೆರ್ಚೆಪುದು (ಜಕು. ೬-೨೦).
[ ಬಣ್ಣಗೆ₁ + ಕೊಳ್₁ ]

ಬಣ್ಣಗೆಗೊಳಿಸು (ಕ್ರಿ). ಶೋಭಿಸುವಂತೆ ಮಾಡು; ಹೊಳಪುಂಟು ಮಾಡು: ಪೊನ್ನದೊಳ್ಪಣ್ಪುಗೊಳಿಸಿ ಚೆಂಬೊನ್ನ ಕರ್ವಣೆಯ ಪೊರ್ಗಳಿಂ ಬಣ್ಣಗೆಗೊಳಿಸಿರವಚ್ಚದ ಪಚ್ಚವಣಿಗಳ ಬೆಳಗಿನೊಳ್ಪೆರಸಿ (ಜಕು. ೦೨೩-೦೬).
[ ಬಣ್ಣಗೆಗೊಳ್ + –ಇಸು₃ ]

ಬಣ್ಣಗೆಗೊಳು 'ಬಣ್ಣಗೆಗೊಳ್' ನೋ.

ಬಣ್ಣಗೆದಪ್ಪು (ಕ್ರಿ). (ಅಲಂ) ಗೌರವಕ್ಕೆ ಕೆಡುಕುಂಟುಮಾಡು; ಹಿರಿಮೆಗೆ ಹಾನಿತರು: ಹೆಣ್ಣ ಬೇಕಾದರೆ ಬರಬೇಕು ನಾವೆಮ್ಮ ಬಣ್ಣಗೆದಪ್ಪಿ ಕೊಡುವವೆ (ಜಕ. ೪೭-೯೯). [ ಬಣ್ಣಗೆ₁ + ತಪ್ಪು₁ ]

ಬಣ್ಣಗೆದುಟಿ (ನಾ). ಕೆಂಪಾದ ತುಟಿ; ಚೆಂದುಟಿ: ಬಾಲಪಲ್ಲವವನೇಳಿಪ ಬಣ್ಣಗೆದುಟಿಯ (ಕೃಷ್ಣಾ. ೯-೦೯); ಬಡನಡುವಿನಬಲೆ ಬಣ್ಣಗೆದುಟಿಯ ಚೆನ್ನೆ (ಜಕ್ಕು. ೩-೩). [ ಬಣ್ಣಗೆ₁ + ತುಟಿ ]

ಬಣ್ಣಗೆಬವಣ್ (ನಾ). ೧. ಅಲಂಕಾರದ ಪ್ರಮಾಣ. ೨. ವರ್ಣನೆಯ ಪ್ರಮಾಣ. ೧, ೨: ಕೊನಬುಗಾರ್ತಿಯ ಸೊಗಸಂ ಪಡೆಗುಂ ಕೃತಿಯುಂ ಪದಪಿಂಡೆಡೆಯೊಡೆಯೊಳ್ಕೃತಕ್ಕ ಬಣ್ಣಗೆಬವಣಂ (ಕಕಾ. ೦-೦೬).
[ ಬಣ್ಣಗೆ₁ + ಪವಣ್ ]

ಬಣ್ಣಗೆವಡಿಸು (ಕ್ರಿ). ಬಣ್ಣ ಬಳಿ; ಒಳ್ಳೆಯದಾಗಿರುವಂತೆ ಚಿತ್ರಿಸು: ಬನ್ನಣೆಗೆಯ್ದು ಬಱೆದ ಬಣ್ಣಗೆವಡಿಸದಿರು (ಗೀತಗೋ. ೨೩-೯೯).
[ ಬಣ್ಣಗೆ₁ + ಪಡಿಸು ]

ಬಣ್ಣಗೆವಡೆ (ಕ್ರಿ). ೧. ಬಣ್ಣ ಹೊಂದು; ರಂಗೇರು: ಬಾಲಾತಪದಿಂದ ಬಣ್ಣಗೆವಡೆದಿಂದ್ರನೀಲಾದ್ರಿಯುನಿಂಗೆಯ್ದ ನೀಲನೀರದ ನಿಭಕಾಯಗೆ... ಆನೆಱಗುವೆನು (ಕರ್ಣಕ. ೦-೨೬); ಬಳ್ಳಿಮಿಂಚುಗೆಯಿಂದ ಬಣ್ಣಗೆವಡೆದಿರ್ದ ಕಾಮುರ್ಗಿಲ ಮೋಹರದಂತೆ (ಶಾಸಂ. ೩೯೯-೨೦). ೨. ಕೊಂಡಾಟಕ್ಕೆ ಒಳಗಾಗು; ಹೊಗಳಿಸಿಕೊಳ್ಳು: ಪೊಡವಿಯ ಬಲ್ಲೋಜೆಯನಟ್ಟಿ ಬಣ್ಣಗೆವಡೆವರ್ (ಅಕ್ರೂ. ೨-೦೬). [ ಬಣ್ಣಗೆ₁ + ಪಡೆ₁ ]

ಬಣ್ಣಗೆವೆಳಗು (ನಾ). ಥಳಥಳಿಸುವ ಕಾಂತಿ; ಸೊಗಸಾದ ಹೊಳಪು: ಪೊಗರೇಱುವ ಮೊಗಸಿರಿಯುಂ ಬಗೆಗೊಳಿಸುವ ಬಗಪೆಗಣ್ಣ ಬಣ್ಣಗೆವೆಳಗುಂ ಎಗೆಯೊಸಗೆವೇಟಲೀಪರಿ ನೆಗಟ್ಟಿಯ್ದುದ ತನ್ನ ಭಾಗ್ಯದೇವತೆಗೆತ್ತಂ (ಜಕು. ೯-೪೯). [ ಬಣ್ಣಗೆ₁ + ಬೆಳಗು₂ ]

ಬಣ್ಣಗೆವೆಱು (ಕ್ರಿ). ೧. ವರ್ಣನೆಯನ್ನು ಹೊಂದು,–ಪಡೆ: ಭೇದಿಸಿ ಕಾಣ್ಬ ತತ್ತ್ವದಿರವೃಣ್ಮೆಪ ಬಣ್ಣಗೆವೆತ್ತ ಬಿನ್ನಣಂ (ಜಕು. ೩-೦೨೨). ೨. =ಬಣ್ಣಗೆವಡೆ ೧: ಸುಳಿವ ಮಿಂಚಿನ ಬಣ್ಣಗೆವೆತ್ತ ಕಣ್ಮಲರ್ ಮೂರ್ವರೆಲದಾರ್ಪಿನಂ (ಕಮಪು. ೨-೦೯೩). [ ಬಣ್ಣಗೆ₁ + ಪೆಱು₁ ]

ಬಣ್ಣಿಸು, ವಣ್ಣಿಸು (ಕ್ರಿ). ೧. ಬಣ್ಣ ಹಾಕು; ರಂಗೇರುವಂತೆ ಮಾಡು: ಬಣ್ಣ ಕಟ್ಟು: ಅರಿಸಿನವ ಬೆರಸಿ... ಎಣ್ಣೆಯೊಳು ಮೊದಲು ಕಲಸಿದ ಬೋನದೊಳಗಿಕ್ಕಿ ಬಣ್ಣಿಸಿಯುದಂ ಕಲಸಿ ಬೆಳೆಯುಪ್ಪ ನಿಕ್ಕಲದು ಸಾಸುವೆಯ ಕಟ್ಟೋಗರ (ಸೂಪಶಾ. ೩-೨೦). ೨. ಹೊಳೆಯುವಂತೆ ಮಾಡು; ಮೆರುಗು ಕೊಡು: ಪೊಸವಿಸಲ ಪೊಳಪಿನಂ ನುಣ್ಣ ನುಜ್ಜಳಿಪ ರನ್ನದೆಳವೆಳಗಿನ ಬಳಗದಿಂ ಬಣ್ಣಿಸಿ ಸುರಶರಾಸನಂಗಳ ನೆಟ್ಟಿಲಿಕ್ಕಿದಂತೆ ನಿಮಿರ್ವ ನಿರ್ಝರಂಗಳುಮಂ (ಕಾದಂಬ. ೩೩೬); ಬಣ್ಣಿಸಿ ನುಣ್ಣಿಸಿದ ಕರ್ವಣೆಗಲ್ಗ ಕೃಗನ್ನಡಿಯಂತಂತು ತಳತಳಿಪ ಗಂಡ ಮಂಡಲಂ (ಧರ್ಮಾಮೃ. ೧೯೬-೨೯). ೩. ಅಲಂಕರಿಸು; ಶೃಂಗಾರ ಮಾಡು: ಕಣ್ಣಿಗೆ ಕಜ್ಜಳವಚ್ಚು ಬಣ್ಣಿಸಿ ಸೊಡರ್ವೆಟ್ಟಿನಟ್ಟು

ಪಾಲೆಜಿ'ದೋವಿ ಚಿಣ್ಣನ ವಕ್ಕಿಗ್ಯೆದಿದಳು (ಕೋಚಕ. ೯-೭೯). ೪. ವಿಸ್ತಾರವಾಗಿ ಹೇಳು ; ವಿವರಿಸು ; ವರ್ಣಿಸು : ಸೌಧರ್ಮೇಂದ್ರಂ ನಿಮ್ಮ ರೂಪನಾದಮಾನಂ ನಚ್ಚಿ ಬಣ್ಣಿಸಿದೊಡಿಂದ್ರನ ಮಾತಂ ನಂಬದೆ ನಿಮ್ಮಂ ನೋಡಲ್ ಬಂದಂ (ಪಲ್ಲ್ಮಾ. ೬೭-೬) ; ಎಸಟಂ ಮುಟ್ಟಲೊಡಂ ತನ್ನ ಸೌರಭಂಗಟ್ಟು ನೆಗಟ್ದ ಕತ್ತುರಿ ಮಣ್ಣಂ ಮಸಿಗವೆಣೆಯುವ್ಪುದೆನೆ ಬಣ್ಣಿಸುವಂ ಕೇದಗೆಯ ಕಂಪನೇವಣ್ಣಿಸುವಂ (ಆದಿಪು. ೦೦-೦೦೭) ; ಅರಸ ಬಣ್ಣಿಸಲಳವೆ ನರನ ಮಹಾಸ್ತನಾಟಕವ (ಕುಮ್ವ್ಯಾ. ೦೪-೬). ೫. ಹೊಗಳು ; ಕೊಂಡಾಡು ; ಸ್ತುತಿಸು ; ದೇವರ್ಕಳೆಲ್ಲವಮಾತನ ಶೀಲ ಪ್ರಭಾವಮಂ ಬಣ್ಣಿಸೆ (ಜಾಪುಂಪು. ೭೦) ; ಬಣ್ಣಿಪುದಿಳಾವಳೆಯಂ ಸಲೆ ಕಂಚಿಕಟ್ಟೆಯಂ (ಶಾಇಇ. XI—1, ೬೩–೯೦ ; 1028) ; ಭೀಷ್ಮಂಗೆ ಸಮರ ಸಮಾನಭಟನಿನ್ನಾವನೆಂದು . . . ಕೌರವರಾಯ ಬಣ್ಣಿಸಿದ (ಕುಮ್ವ್ಯಾ. ೦-೪೪). ವಣ್ಣಿಸು: ೧. ಗಳ್ಕಿಕ್ಕುತ ಮುಂಸುಕಿ ಮುಂಬರಿವ ಶುನಿಗಳು ಎಸೆದುವಾ ದಂಡಿನೆಚ್ಚರಿಕೆಯ ಕಾವಲರೊಂದೆಸಕವನೇನ ವಣ್ಣಿಸುವೆ (ಕಂಪು. ೦೯-೨೯). ೫. ಒರಿದನೀವ ನೆಗಟ್ತಿಯ ದಾನಿಯನ್ನು ನಾನಾ ವಿಧದಿನ್ದೆ ವಣ್ಣಿಪುದಿಳಾವಳಯಂ ಜಗದೇಕದಾನಿಯಂ (ಎಕ. VII, ಶಿಕಾ. ೦೫೦–೨೫ ; 1047). [ಬಣ್ಣನೆ+ — ಇಸು₁]

ಬತ್ತ₁ 'ಬ್ರತ' ನೋ.

ಬತ್ತ₂ (ನಾ). [ಗಣಿತ] ಸಂಕಲನ ಮಾಡುವಿಕೆ ; ಕೂಡುವಿಕೆ : " ಯುತಂ, ಯುಕ್ತಂ . . . ಕೂಡು, ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು " (ವ್ಯವಹಾ. ೦೦-೨೦). [?]

ಬತಗೆಡಿಸು (ಕ್ರಿ.) ವ್ರತದಿಂದ ಭ್ರಷ್ಟನಾಗುವಂತೆ ಮಾಡು ; ವ್ರತಗೆಡಿಸು : ವ್ರತವುಳ್ಳವರ ಬತಗೆಡಿಸಿತ್ತು ನೋಡಾ ಮನವು (ಅಲಂದೇ. ೨೫೭-೦೦೯). [ಬತಗೆಡು + — ಇಸು₁]

ಬತಗೆಡು (ಕ್ರಿ). ವ್ರತಭ್ರಷ್ಟನಾಗು : ಗುಡಿ ತನಕ ಹೋಗಿ ಬರ್ತೇನೆ ಅಂದಿತ್ತಂತೆ ಒಂದು ಬತಗೆಟ್ಟ ಮುಕ್ಕ! (ಶೇಃಕು. ೯೫): ಹೊನ್ನು ಕಾಣದ ಬತಗೆಟ್ಟರುವನೇನು ? (ಶಾಗಿ. ೭೬). [ಬತ₁ (<ಬ್ರತ) + ಕೆಡು₁]

ಬತಗೇಡಿ 'ಬ್ರತಗೇಡಿ' ನೋ.

ಬತಣಿಕೆ 'ಬಂದಣಿಕೆ' ನೋ.

ಬತಾರೀಕು (ನಾ). ಆ ದಿನಾಂಕ ; ಆ ತೇದಿ : ಪೂಜೆ ಪಡಿತರ ದೀಪಾರಾಧನೆ ವಗೈರೇ ಬಗ್ಗೆ ಬತಾರೀಕು ಯಿನಾಮು . . . ನಡಸಿಕೊಣ್ಡು ಬರುವದು (ಎಕ. VI, ಕೊಪ್ಪ. ೯೬-೪೭; 1811). [←ಪಾರ. ಮಾರಾ. ಬತಾರೀಖ್]

ಬತಾಸು 'ಬತ್ತಾಸು' ನೋ.

ಬತೇರಿ, ಬತ್ತೇರಿ (ನಾ). ಕೋಟೆಯ ಗೋಡೆಗಳನ್ನು ಎತ್ತರಿಸಿ ತುಪಾಕಿಗಳನ್ನಿಟ್ಟು ಶತ್ರು ಸೈನ್ಯಗಳಿಗೆ ಸಾವು ನೋವುಗಳನ್ನುಂಟು ಮಾಡುವಂತೆ ಏರ್ಪಡಿಸಿರುವ ದುಂಡನೆಯ ಪ್ರದೇಶ ; ಕೋಟೆಯ ಮೇಲಿನ ತೋಫ್‌ಖಾನೆ : ಹೆಡವಳಿ ಮಾರ್ಗದಿಂದ ಆ ಬೆಟ್ಟ ಕೋಟೆ ನುಗ್ಗಿ, ಮೂರು ನಾಲ್ಕು ಬತೇರಿಯನ್ನು ಆಕ್ರಮಿಸಿಕೊಂಡು (ಹಾಶೇಂದ್ರ. ೫೦) ; ಬಲವಾದ ಬತೇರಿಗಳನ್ನು ಬಹು ಚಮತ್ಕಾರವಾಗಿ ಸುತ್ತಲೂ ಕಟ್ಟಿದಾರೆ (ಶಾಳಗಾ. ೯೬) ; ಅವರ ಸ್ಥೂಲಕಾಯ . . . ದಪ ನಾದ ಕೋಲು—ಒಂದೊಂದೂ ಬೆಟ್ಟದ ಮೇಲೆ ನಿಂತ ಬುರುಜು, ಬತೇರಿಗಳಂತೆ ಚಿತ್ರದುರ್ಗದ ಜನಕ್ಕೆ ಪ್ರೀತಿಪಾತ್ರವಾಗಿವೆ (ಹಂಗೀಕ. ೩). ಬತ್ತೇರಿ : ಪಟ್ಟಣದ ಕೋಟೆ ಮುಂದೆ ಯೆರಡು ಹೊಳೆ ಮಧ್ಯ ಬತ್ತೇರಿಗಳ ತಯಾರು ಮಾಡಿಸಿ ಆ ಬತ್ತೇರಿಗಳ ವಳಗೆ ತಮ್ಮ ಫೌಜನ್ನು ನಿಲ್ಲಿಸಿ (ಹಾಶೇಂದ್ರ. ೨೬) ; ಕುತ್ತುರಿಗೆ ಬೆಂಕಿ ಹತ್ತಲು ಬತ್ತೇರಿಗೆ ಒಡಿದರ ನಂದೀತ ? (ಗಾದೆ). 'ಬುರುಜು', 'ಬ್ಯಾಟರಿ' ನೋ. [ ←ಇಂ. Battery ]

ಬತ್ತ, ಭತ್ತ₁, ವತ್ತ (ನಾ). ಒಂದು ಬಗೆಯ ಧಾನ್ಯ ; ನೆಲ್ಲು : ಜಗದ್ಗುಹನೆಂಬೊಂ ತನ್ನ ಬತ್ತಮಂ ಚಂಪಾನಗರಕ್ಕೆ ಮಾಱಲೆಂದು ಕೊಂಡು ಪೋಗಿ ಬತ್ತಮನಳೆವಲ್ಲಿಯಾ ಮೂವರ ದೋಷಂಗಳುಂ ಪ್ರಕಟ ಮಾಗಿ (ವಡ್ಡಾ. ೨೦-೦೬) ; ಅಗ್ಗಳದ ಬತ್ತದ ಪೆರ್ವೆಳಸಿಂದೆ . . . ದೊರೆವೆತ್ತುದು ವೆಂಗಿಮಂಡಲಂ (ಅಕು. ೦-೨೨) ; ಗಂಧಶಾಲಿಯ ಬತ್ತದೊಳಗಿರ್ದ ಕಳೆಯ ಕೀಳ್ವಂದದೆ ಖಳರ ತೀರ್ಕಣಿಸಿ (ಕೋಚಕ. ೯೨-೭೩). ಭತ್ತ : ಭತ್ತಮುಮನ್ ಕವಿಲೆಯ ಪಾಲು ಎಟ್ಟುಂ (ಎಕ. VI, ಕೊಪ್ಪ. ೩೭-೨ ; ಸು. 676 ?) ; ವಿಷ್ಣು ದೇವರ ಮನೆಯ ಭತ್ತಮಂ ಕೊಟ್ಟಣಕ್ಕಿಕ್ಕ ಬರುತಿರೆ (ಸಿದ್ಧರಾ. ೭-೦೨) ; ಕನಸಿನ ಭತ್ತಕ್ಕೆ ಗೋಣಿ ಯಾಂಪ್ಯೆ ನೃಪತೀ (ಶಾಶ್ಮಶಾ. ೫೮೦) ; ಒಂದು ಪಡಿ ಭತ್ತಕೆ ಬಾಯ ಬಿಡಿಸ್ಯಾಳಣ್ಣ (ಪುಕಂದ. ೦-೦೬೨-೨). ವತ್ತ₁ : ಇರ್ಪತ್ತಯ್ಗಣ್ಡುಗಂ ವತ್ತ ತೆಱುವೊದು (ಎಕ. XIV, ತಿರುಮು. ೨೫೪-೬ ; ಸು. 800).

ಭತ್ತದರಳು=ನೆಲ್ಲನ್ನು ಹುರಿದು ಮಾಡಿದ ಅರಳು ; ಲಾಜೆ : ಕನ್ನೈದಿಲೆಗೆಡ್ಡೆ, ಖರ್ಜೂರ ಇವುಗಳನ್ನೆಲ್ಲಾ ಕಷಾಯವಿಟ್ಟು . . . ಭತ್ತದರಳಿನ ಚೂರ್ಣವನ್ನು ಹಾಕಿ ತೆಗೆದುಕೊಳ್ಳಲು . . . ಕಾವಾಲೆ ಸಹ ಗುಣವಾಗುವುವು (ಶಕವೈ. ೯೩).

[<ಪ್ರಾ. ಭತ್ತ=ಅನ್ನ./ಸಂ. ಭಕ್ತ=ಅನ್ನ./ತಮಿ. ವತ್ತ=ಅನ್ನ ; ಮಲ. ವತ್ತ; ತುಳು. ಬತ್ತ್=ಅನ್ನ]

ಬತ್ತಂಗುಟ್ಟು, ಬತ್ತಕುಟ್ಟು, ಬತ್ತಗುಟ್ಟು (ಕ್ರಿ). ೧. ಅಕ್ಕಿ, ಅವಲಕ್ಕಿ ಮುಂತಾದುವನ್ನು ಮಾಡಲು ಒರಳಿನಲ್ಲಿ ನೆಲ್ಲನ್ನು ಹಾಕಿ ಕುಟ್ಟು,—ಕೊಟ್ಟಣಕ್ಕೆ ಹಾಕು : ಬತ್ತಂಗುಟ್ಟುವರಂತೆ . . . ದರ್ಶನಮುಂ ನಿಶ್ಶಂಕೆಯುಮೆಂಬೆರಡುಮಂ ಲೇಸು ಮಾಡುವುದು (ರಪರ್ಮಾಮೃ. ೨-೯). ಬತ್ತಕುಟ್ಟು : ೧. ಹಿಂದಿನ ಕಾಲದಲ್ಲಿ ಮನೆಯಲ್ಲೇ ಬತ್ತ ಕುಟ್ಟಿ ಅಕ್ಕಿ ಮಾಡಿ ಬಳಸುತ್ತಿದ್ದರು (ರೂಢಿ). ೨. (ಅಲಂ) (ಭಯ, ಆತಂಕ ಮೊದಲಾದುವುಗಳಿಂದ ಹೊಟ್ಟೆಯಲ್ಲಿ) ತಳಮಳವಾಗು : ಪರೀಕ್ಷೆ ಹತ್ತಿರ ಬಂದಂತೆಲ್ಲಾ ನನ್ನ ಹೊಟ್ಟೆಯಲ್ಲಿ ಬತ್ತ ಕುಟ್ಟಲು ಮೊದಲಾಯಿತು (ರೂಢಿ). ಬತ್ತಗುಟ್ಟು : ೧. ಮೃತ್ಯು ಮಾರಿಯರನ್ನ ಮನೆಯಲಿ ಬತ್ತಗುಟ್ಟುವರು (ಕೌಶಿಕಾ. ೧೦-೭೦). [ಬತ್ತ + ಕುಟ್ಟು₁]

ಬತ್ತಕುಟ್ಟು 'ಬತ್ತಂಗುಟ್ಟು' ನೋ.

ಬತ್ತಗುಟ್ಟು 'ಬತ್ತಂಗುಟ್ಟು' ನೋ.

ಬತ್ತಲಿಕೆ 'ಪತ್ತಲಿಕೆ₁' ನೋ.

ಬತ್ತಲಿಗ, ಬೆತ್ತಲಿಗ (ನಾ). ೧. ಬಟ್ಟೆಯನ್ನು ಧರಿಸದಿರುವವನು; ನಗ್ನ ; ದಿಗಂಬರ : ಆ ನಿರ್ಲಜ್ಜಂ ಬತ್ತಲಿಗನಪ್ಪ ಸವಣನಲ್ಲಿಗೆ ಪೋಗಿ ಕಂಡು ನುಡಿದು ಕಾಡಿ ಬರ್ಪಂ ಬಾ ಮಗಳೆ (ವಡ್ಡಾರಾ. ೨೨-೨೨). ೨. ಜೈನಸಂನ್ಯಾಸಿ : ಬತ್ತಲಿಗರ ಮಾತಂ ಕೇಳ್ದುತ್ತಮಮೆನಿಸಿರ್ದ ಕುಲಮನಟಿದ್ಯೆ (ರಪರ್ಮಾಮೃ. ೬-೯೩). ಬೆತ್ತಲಿಗ : ೨. ಬೆತ್ತಲಿಗರ ನುಡಿಗೇಳಿ ರಾಜ್ಯಸಂಪತ್ತ ತೋರದೀದಾಡೆ (ಅಂಶ. ೦೦-೫). [ಬತ್ತಲೆ₁ + — ಇಗ]

ಬತ್ತಲಿರ್, ಬತ್ತಲಿರು, ಬತ್ತಲೆಯಿರ್ (ಕ್ರಿ). ಮೈಮೇಲೆ ಬಟ್ಟೆಯಿಲ್ಲದಿರು; ನಗ್ನವಾಗಿರು ; ವಿವಸ್ತ್ರವಾಗಿರು : ಕೃತ್ತಿಪುಡೆಯನ್ನಿತ್ತಮೆನೀಂ ಬತ್ತಲಿರಲೇಕೆ (ಬಸಪು. ೦೬-೦೯). ಬತ್ತಲಿರು : ಬತ್ತಲಿದ್ದವಗೆ ಭಯವಿಲ್ಲ (ಸರ್ವಜ್ಞ. ೩೫೦). ಬತ್ತಲೆಯಿರ್ : ಬತ್ತಲೆಯಿರ್ಪುದರಿದೋ ಸೀರೆಯುಟ್ಟಿರ್ಪುದರಿದೋ (ರಪರ್ಮಾಮೃ. ೭-೮೦); ಬತ್ತಲೆ ಪೂಜ್ಯಮಲ್ಲದೊಡೆ ಬತ್ತಲೆಯಪ್ಪ ದಿನೇಶಬಿಂಬಮಂ ಬತ್ತಲೆಯಿರ್ಪ ಮಕ್ಕಳುಗಳಂ . . . ಕಂಡು ಮಾನಿಸರ್ಸತ್ತವರಾರೊ (ರಪರ್ಮಾಮೃ. ೯–೭೩).

[ಬತ್ತಲೆ₁ + ಇರು₁ (<ಇರ್₁) ]

ಬತ್ತಲಿರು 'ಬತ್ತಲಿರ್' ನೋ.

**ಬತ್ತಲಿಸು** (ಕ್ರಿ). ಬರಿದಾಗಿರು ; ಬೋಳಾಗಿರು : ಎಲೆಗಳೆದು ಬತ್ತಲಿಸಿ ನಿಂದ ತರುಕುಲದಂತೆ (ಹಾಗೀಸ. ದೇ. ೨೫೯-೦೬); ಅಜ್ಞಾನವೇ ಸುತ್ತ ಬತ್ತಲಿಸಿದೆ (ಗಂಗಾತ. ೩೨-೦೬).

[ಬತ್ತಲು$_2$ (<ಬತ್ತಲೆ$_1$) + — ಇಸು$_1$]

**ಬತ್ತಲು$_1$** (ನಾ). ಒಣಗಿದ ತರಕಾರಿ, ಹಣ್ಣು ಮುಂತಾದುವು ; ತಳಲು : ಮಾವಿನ ಬತ್ತಲು ಹುಣಸೆಯ ಹಣ್ಣು . . . ತದುಕಿನ ತಿರುಳು ಇವು ಸಂಭಾರವಸ್ತುಗಳು (ಸೂಪಶಾ. ೪-೦ ಅಂಬಿ).

[ಬತ್ತು$_1$ + —ಅಲು ( < —ಅಲ್$_2$ ) ./ ತಮಿ.ವಟ್ಟಲ್]

**ಬತ್ತಲು$_2$** 'ಬತ್ತಲೆ$_1$' ನೋ.

**ಬತ್ತಲೆ$_1$**, ಬತ್ತಲು$_2$, ಬೆತ್ತಲೆ$_1$ (ನಾ). ೧. ಮೈಮೇಲೆ ಬಟ್ಟೆ ಮೊದಲಾದುವುಗಳ ಹೊದಿಕೆಯಿಲ್ಲದಿರುವುದು; ನಗ್ನತೆ : ಬತ್ತಲೆ ಪೂಜ್ಯಮಲ್ಲದೊಡೆ . . . ಬತ್ತಲೆಯಿರ್ಪ ಮಕ್ಕಳುಗಳಂ . . . ಕಂಡು ಮಾನಿಸರ್ ಸತ್ತುಮರಾರೊ (ರಪೂಜ್ಞು. ೬-೬೬); ಬತ್ತಲೆಯ ಬಾಳ್ವೆಣಂಗಳು ಸುತ್ತ ಮುತ್ತಿರಲು (ಹಾಗೀಸ. ದೇ. ೨೫೨-೦); ಎಲೆ ಮಗಳೆ ನಿಮ್ಮ ಸವಣರ್ ಸತ್ತು ದೇವರ್ಲೋಕದೊಳು ಬತ್ತಲೆಯ ಸವಣರಾಗಿ ಪುಟ್ಟುವರ್ (ಪುಣ್ಯಾಸ್ರ. ೩-೯೬ ಪ). ೨. ಬರಿದಾದುದು; ಶೂನ್ಯವಾದುದು; ರಿಕ್ತವಾದುದು : ಹೊತ್ತು ಮುಣುಗುತ ಬಂತು ಬತ್ತಲೆಯು ಜಗಕೆಲ್ಲ (ಕಸ್ಸಶಾ. ೨೯೯). ೩. ದಿಗಂಬರಸಂನ್ಯಾಸಿ; ಜೈನಭಿಕ್ಷು : ಪುತ್ತುಂ ಬತ್ತಲೆಯುಂ ಬಱಿದಿಲ್ಲೆಂಬೀ ನಾಣ್ಣುಡಿಯುಂಟಪ್ಪುದು (ರಪೂಜ್ಞು. ೮-೬೦); ಎಲೆ ದೇವರೆ ಪುತ್ತುಂ ಬತ್ತಲೆಯುಂ ಬಱಿದಿಲ್ಲದೆಂಬರ್ (ಹುಕೋಶ. ೪-೦೩). (ಗು). ೪. ನಗ್ನವಾದ ; ಬರಿಮೈಯಿಂದಿರುವ : ತದಾವ್ರುವನ ದೊಳೊರ್ವಂ . . . ಬ[ಪಾಠಾಂ. ಬೆ]ತ್ತಲೆ ಮರುಳಂತೆ ತನ್ನೊಳೆ ಮಿನು ಕುತ್ತುಂ ಮೋನದೊಳಿರ್ಪಂ (ಧರ್ಮಾಮೃ. ೬-೨೬); ಎತ್ತಿದ ಕಯ್ಯ ಕತ್ತಿಗೆ ಭಯಂಗೊಳ್ . . . ಬಪ್ಪ ಬತ್ತಲೆ ಮರುಳ್ಗಳ್ ತಂಡದಿನೇಂ ಮಹೋಗ್ರಮೋ (ಜಂಪು. ೨-೦೬). **ಬತ್ತಲು$_2$** : ೨. 'ಬತ್ತಲಿಸು' ಪರಾ. **ಬೆತ್ತಲೆ$_1$** : ೫. ಮುಚ್ಚುಮರೆಯಿಲ್ಲದುದು; ನಿಚ್ಚಳವಾದುದು : ಇದೂ ನಾಟಕವಲ್ಲ . . . ಕೇವಲ ನಿಜ. ಬೆತ್ತಲೆಯ ಸತ್ಯ (ರಂಗಶಾ. ೦೬೨). ೬. ಮುಚ್ಚುಮರೆಯಿಲ್ಲದ; ನಿಚ್ಚಳವಾದ : ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು (ಶಂಮು. ೩೦-೦).

ಬತ್ತಲೆಗುದುರೆ=ಜೀನು ಹಾಕಿರದ ಕುದುರೆ: ಗಂಡ ಮಾದೇವರಾಯ ಹತ್ತಿದ ಬತ್ತಲೆಗುದುರಿ ಹತ್ತಿದ ಬತ್ತಲೆಗುದುರಿ ಹೊಂಟಾನತ್ತೆಯ ಮನೆಗೆ (ಕಸ್ಸಶಾ. ೬೨-೦೯).

[ದೇ.೩ ತುಳು. ಬತ್ತಲೆ, ಬೇತಲ್. ಬೇತಾಳ್; ತೆಲು. ಬತ್ತಲ]

**ಬತ್ತಲೆ$_2$**, ಬೆತ್ತಲೆ$_2$ (ಅ). ಮೈಮೇಲೆ ಬಟ್ಟೆಯಿಲ್ಲದೆ ; ನಗ್ನವಾಗಿ ; ವಿವಸ್ತ್ರವಾಗಿ : ಬೇಡಿದ ಭೂಷಣಂಗಳಂ ಬತ್ತಲೆ [ಪಾಠಾಂ. ಳೆ] ಬಾಂಗಿ ತಾಂಗುವಳೆ (ಸುಕು. ೭-೩೦); ಒರ್ವಳ್ ನೀಱೆ ಮೈಯೊಡ್ಡಿ ಬತ್ತಲೆ ನಿಂದಿರ್ದಳೆರಲ್ಗೆ ತೀರ್ದ ರತಪೇದಶ್ರಾಂತಿಯಿಂ ಬಿಚ್ಚಿತಂ (ಸೂಕ್ತಿಸು. ೦೪-೬೯); ಬತ್ತಲೆ ತಿರುಗುವ ಜನರಿರುವೆಡೆಯೊಳು ಅಗಸನು ಮಾಡುವುದೇನು (ಕಂಪಾತ. ೦೫೮-೬೩). **ಬೆತ್ತಲೆ$_2$** : ಎಲೆ ಯತಿ ಮುಕ್ತಭಾವ ನೀನೇಕೆ ಬೆತ್ತಲೆ ಬಂದೆ (ಶೀಬಸಂ. ೦೯-೦೩) ; ಹುತ್ತವನೇಱಿದವರು ಹುಲ್ಲುಗಳ ಕಟ್ಟಿ ಬೆತ್ತಲೆ ನೀರ ಹೊಕ್ಕವರು ಕತ್ತಿ ಕಠಾರಿಯ ಬಿಸುಟ ಕಾಲಾಳಿನ ಮೊತ್ತವನೇನ ಬಣ್ಣಿಸುವೆ (ಕಂಪು. ೦೩-೯೬). [<ಬತ್ತಲೆ$_1$]

**ಬತ್ತಲೆಗ**, ಬೆತ್ತಲೆಗ (ನಾ). ೧. ದಿಗಂಬರಸಂನ್ಯಾಸಿ ; ಜೈನಭಿಕ್ಷು: ಈ ನಿನ್ನರ್ಘಗಪ್ಪಡದ ಯತಿಯರ ಧರ್ಮಮೊಳ್ಪಿತಲ್ತಿವರುಟ್ಟರುಮಲ್ಲರ್ ಬತ್ತ[ಪಾಠಾಂ. ಬೆ]ಲೆಗರುಮಲ್ಲರ್ (ಪಶ್ಪಾರಾ. ೯೩-೦೨) ; ತಲೆವಱಿದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಪೆವೆಂಬ ಬತ್ತಲೆಗರ ಮಾತುಗೇಳದಿರು (ಅಂಕು. ೨-೯) ; ಸತ್ತು ಸಗ್ಗದ ಸತಿಯರನು ಕೊಡುವೆನೆಂಬ ಬತ್ತಲೆಗರ ಮಾತು ಕೇಳಿ ಉತ್ತಮ ರೂಪವತಿಯರ ಭೋಗುಗಳನೊತ್ತರಿಸುವೆನೆನಬಹುದೆ (ಶೀಬಸಂ. ೩೯-೩೯). **ಬೆತ್ತಲೆಗ** : ೨. ಬೆತ್ತಲೆಯಾಗಿರುವವನು ; ನಗ್ನ : ಉಡಿಗೆ ತೊಡಿಗೆ ಇಟ್ಟವರು ವೇಸಿಯುಂ ಸೋಂಕಲೊಡನೆ ಬೆತ್ತಲೆ[ಪಾಠಾಂ. ಲಿ]ಗರಾಗಿಹರು (ಗೂಮ್ಮಕ. ೨-೦೦೦).

[ಬತ್ತಲೆ$_1$ + — ಗ$_2$]

**ಬತ್ತಲೆಗಣ್ಣು**, ಬೆತ್ತಲೆಗಣ್ಣು (ನಾ). ೧. (ಅಲಂ) ಜ್ಞಾನದ ಪ್ರಭಾವವಿರದ ಕಣ್ಣು : ಕತ್ತಲೆಯ ಗವಿಯಯ್ಯ ಕವಿಹೃದಯದಾ ಗುಹ್ಯ; ಬಯಲು ಬತ್ತಲೆಗಣ್ಣಿಗದು ಅಸಹ್ಯ (ಅಶೇ. ೨-೦೨). **ಬೆತ್ತಲೆಗಣ್ಣು** : ೨. ಕನ್ನಡಕದ ಸಹಾಯವನ್ನು ಹೊಂದದ ಕಣ್ಣು ; ಬರಿಗಣ್ಣು : ಆ ಮಹಾರತ್ನದ ಪ್ರಭೆ ಅವನ ಬೆತ್ತಲೆಗಣ್ಣಿನ ಮೇಲೆ ಬಿದ್ದೊಡನೆಯೇ ಅವನು ಕುರುಡನಾದನು. (ಯೋರಕ್ಕ. ೬೮). [ಬತ್ತಲೆ$_1$+ಕಣ್ಣು(<ಕಣ್)]

**ಬತ್ತಲೆಯಿರ್** 'ಬತ್ತಲಿರು' ನೋ.

**ಬತ್ತಳಿಕೆ** 'ಪತ್ತಳಿಕೆ$_1$' ನೋ.

**ಬತ್ತಳಿಗೆ** 'ಪತ್ತಳಿಕೆ$_1$' ನೋ.

**ಬತ್ತಾಯ**, ಭತ್ತ$_2$, ಭತ್ತಾಯ, ಭತ್ತೆ, ಭತ್ಯ (ನಾ). ೧. ಬತ್ತದ ಬೆಳೆಯಿಂದ ಬರುವ ಉತ್ಪನ್ನ,-ವರಮಾನ : ಕಾಡರಂಬ ನೀರಾರಂಬಕೆ ಸಲುವ ಕೆಱೆ ಕುಂಟೆ ಕೊಣನು ಅಚೆ ಅಚುಕಟುದರೆ ನೆಡಲಿ ಸಕಳ ಬತ್ತಾಯ (ಎಕ. X (S). ಕೋಲಾರ. ೩೦೯-೦೫ ; 17ನೆಯ ಶತ). ೨. ಜೀವನ ನಿರ್ವಹಣೆಗಾಗಿ ಕೊಡುವ ಹಣ ; ಜೀವನಾಂಶ : "ಬತ್ತಾಯ—ಭೃತ್ಯಾ=ಅಶನಾರ್ಥ" (ಕರ್ನಕೋ. ೨೬) ; ಆಂ ಬಂದ ದಿನಮೊದಲಿಂದು ತನಕೆನ್ನ ಹಿಂದುಳಿದ ಬತ್ತಾಯ ಬಂದುದು (ಹಕಶಾ. ೦೦-೮). **ಭತ್ತ$_2$** : ೩. "ಸರ್ಕಾರಿ ನೌಕರರಿಗೆ ನೀಡುವ ಹೆಚ್ಚುವರಿ ಸಂಬಳ ; ನ್ಯಾಯಾಲಯವು ಸಮನ್ಸುಗಳನ್ನು ಜಾರಿ ಮಾಡುವಾಗ ತಾತ್ಕಾಲಿಕ ನೌಕರರಿಗೆ ಕೊಡುವ ಹಣ. ಕಚೇರಿ ಕೆಲಸದ ಮೇಲೆ ಮಾಡುವ ಪ್ರಯಾಣದ ಖರ್ಚಿಗಾಗಿ ಸಿಬ್ಬಂದಿಗೆ ಕೊಡುವ ಹಣ ಮುಂತಾದವು" (ಕೃಸಗ. ೫೯೯). **ಭತ್ತಾಯ** : ೧. ಆ ದೇವರ್ಗೆ ಬಯ್ಗಿನ ನಿವೇದ್ಯಕೆ ಭತ್ತಾಯ ಹೇಗೆ (ಎಕ. VII. ಶಿಕಾ. ೨೩೬-೩ ; 1147): ಅರಸರ ಸಿದ್ಧಾಯ ಭತ್ತಾಯದೊಳ × × ವದಲು . . . ನಿ[ವೇ] ದ್ಯದ ತುಪ್ಪಕ್ಕೆ ಕೊಟ್ಟರು (ತೌಇ. XI — ii. ೨೦೬-೦೨ ; ? ). **ಭತ್ತೆ** : ೩. ಸಂಬಳ, ಬಡತಿ, ಭತ್ತೆ, ಪಿಂಚಣಿ, ಪದವಿ ಇವೇ ಈ ವರ್ಗದ ಪಂಚಪ್ರಾಣಗಳಾದವು (ಮಾವಾರ. ೯೩) ; ಮಾರಾಟದ ಉತ್ಪನ್ನದ ಮೇಲೆ ಭತ್ತೆ . . . ಪ್ರವಾಸದ ಸೌಕರ್ಯ ಇವೆಲ್ಲ ಇದ್ದುವು (ವಾತ್ಸಲ್ಯ. ೩೬). **ಭತ್ಯ** : ೩. ಇಲಾಖೆಯಲ್ಲಿದ್ದಾಗ ನೂರಿಪ್ಪತ್ತೈದು ರೂಪಾಯಿಗಳ ಸಂಬಳ ಬರುತ್ತಿತ್ತು. ಮೇಲೆ ಭತ್ಯ ಬರುತ್ತಿತ್ತು (ರಂಗಳ. ೩) ; ಸುಲ್ತಾನನ ರಾಜ್ಯದಲ್ಲಿ ಹೋದ ಕಡೆಯಲ್ಲೆಲ್ಲಾ ನಮಗೆ ಬೇಕಾದ ಭತ್ಯವನ್ನೂ ಒದಗಿಸಿ ಕೊಡಬೇಕೆಂದು ಅಪ್ಪಣೆಯಾಗಿತ್ತು (ಕ್ರವಾಇ. II. ೯೬). 'ಭತ್ತಾದಾಯ' ಪರಾ. [ಬತ್ತ$_1$ +ಆಯ$_1$ ./ ಹಿಂ. ಭಾತ್; ಮರಾ. ಭತ್ತಾ. / ಸಂ. ಭೃತ್ಯಾ. / ಲ್ಯಾಟಿನ್ . ಬಸ್ತುಮ್. / ಇಂ. Batta]

**ಬತ್ತಾಸ** 'ಬತ್ತಾಸು' ನೋ.

**ಬತ್ತಾಸು**, ಬತಾಸು, ಬತ್ತಾಸ (ನಾ). ಸಕ್ಕರೆಯ ಪಾಕದಿಂದ ಮಾಡುವ ಬಗೆಬಗೆಯಾಕಾರದ ಬಗೆಬಗೆಯ ಬಣ್ಣದ ಒಂದು ಸಿಹಿ ತಿಂಡಿ : ಆ ರೊಕ್ಕ ಕೊಟ್ಟು ಬೆಂಡು, ಬತ್ತಾಸು ತಕ್ಕೊಂಡು ತಿನ್ನುವ (ಮುಂಬಯಿ. ೪-೯೯) ; ಅವರು ಮಂಡಕ್ಕಿ, ಹುರಿಕಡಲೆ, ಬೆಂಡು, ಬತ್ತಾಸು ಕೊಂಡುಕೊಂಡರು (ಕಶಕ್ಕ. ೩-೨೫). **ಬತಾಸು** : ಗೋದುಮೆ ತಂಡುಲಾದಿ ಬಹುಚೂರ್ಣಂಗಳೊಡವೆರಸಿ ಸಕ್ಕರೆಯ ಪರಿಪಾಕದಡಿಗೆಯಿಂ ಘೃತದೊಡನೆ

ಗ್ಯೆದ ಲಡ್ಡಿಗೆ ಬತಾಸು . . . ಕೊಡುತ (ಕಠಕೋ. ೧೭–೬೦); ಗಂಡು ಹೆಣ್ಣಿನ ಮೇಲೆ . . . ಕಾಳು, ಬತಾಸು ಮುಂತಾದ ಸಿಹಿತಿಂಡಿಗಳನ್ನು ಎಸೆಯುತ್ತಾರೆ (ಕೃಣಾ. II, ೪೪೬). ಬತ್ತಾಸ : ಸಕ್ಕರೆಯ ಬೆಂಡು ಬತ್ತಾಸಗಳ ಪರ್ವತವೇ ಬಿದ್ದಿತು (ಹಕ್ಕಿ. ೬೦) ; ಬಂದ ಮುತ್ತೈದೆಯರಿಗೆ, ಕುಮಾರಿಯರಿಗೆ . . . ಪೇಢೆ, ಬತ್ತಾಸಗಳನ್ನು ಹಂಚುತ್ತಾರೆ (ಶಾಹ್ಮ. ೬೨). [← ಹಿಂ. ಬತಾಸಾ, ಬತಾಶಾ; ಮರಾ. ಬತ್ತಾಸಾ, ಬತಾಸಾ]

**ಬತ್ತಿ** (ನಾ). ೧. (ದೀಪಕ್ಕೆ ಹಾಕುವ) ಹುರಿ ಮಾಡಿದ ಹತ್ತಿಯ ಎಳೆ, –ತಿರಿ; ವರ್ತಿ : ಸೊಡರೊಳ್ ಬತ್ತಿಯುಮೆಣ್ಣೆಯುಮೊಡನೞಿದ ವೊಲಾಯುಯುಮಂ ಶರೀರಮುಂ[ಮು]ಮಳಂಕೊಡದವೆ ನೋಂತಂ ಮುನಿ ಮುನ್ನೊಡಮೞ್ಬಿದುಮೊಡನೆ ತಮ್ಮೌಚಿತ್ಯಮೆನಲ್ (ಶಾಂತಿ. ೯–೧೦೪); ವಣತೆಯೂ ಇದೆ ಬತ್ತಿಯೂ ಇದೆ ಜ್ಯೋತಿಯ ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ (ಅಕಮ. ೦೯–೭೮) ; ಬತ್ತಿ ಹೆತ್ತುಪ್ಪವನ್ನು ಹೊತ್ತಿಸಿದ ಫಲವೇನು ಮತ್ತೊಂದು ದೈವಕೆಬಗುವನ ಶಿವಪೂಜೆ ಹತ್ತಿ ಗೇಡು (ಸರ್ವಜ್ಞ. ೦೬೨). ೨. ಸಿಡಿಮದ್ದನ್ನು ಹತ್ತಿಸಲು ಬಳಸುವ ಒಂದು ಬಗೆಯ ಸಾಧನ : ದಾದರ್ಲ್ಯಾ . . ಖಾಡಿಯ ಬಾಯಿಗೆ ಮದ್ದು ಜಡಿದು, ಬತ್ತಿ ಸೇರಿಸುವ ಸನ್ನಾಹ ಮಾಡತೊಡಗಿದ (ದೀಪಚ. II, ೦೬೭); ಬತ್ತಿ ನೂಕಲಾರದ ಬಂಟ ದಳ ನಡಿಸ್ಯಾನೇ ? (ಗಾದೆ). 'ಜಾವಿಗೆಬತ್ತಿ' ಪರಾ. ೩. ಕಂದೀಲು; ಮೋಂಬತ್ತಿ: (?). ೪. ವಿರೇಚನಚಿಕಿತ್ಸೆಗಾಗಿ ಔಷಧದಲ್ಲಿ ಅದ್ದಿ ಗುದದಲ್ಲಿ ಇಡುವ ವೈದ್ಯಕೀಯ ಸಾಧನ ; ಔಷಧಿಯಲ್ಲಿ ಅದ್ದಿ ತೆಗೆದ ಹತ್ತಿಯ ತಿರಿ : ಸುರದಾರು ಸೊರೆಯ ಬೀಜಂ ಸುರಮಾರುಣಿ ಬೆಲ್ಲಮಂಬಿವಿನಿತುಮನೊಂದಾಗಿರೆ ಮಿದಿದು ಮಾಡಿ ಬತ್ತಿಯನಿರಿಸುಗೆ ಗುದದೊಳಗೆ ಕಳೆಗುಮರಿಸೆಯ ಮೊಳೆಗಳ್ (ಗೋಕೋಚಿ. ೯–೦೪೪) ; ಪುಣಸೆಯ ವಣ್ಣ ಬತ್ತಿಯೊಳ್ ಸೈಂಧವಮಂ ಬೆರಸಿ ಗುದಮುಖದೊಳಿಡೆ ಬಾಹಿರಮಕ್ಕುಂ ಕಠಿನಮಾಗಿ ಬಿಗಿದಿದ್ದ ಮಲಂ (ಅಕ್ಕಣ. ೦೦–೨೭). ೫. ಸಂಗಂಧವನ್ನು ಲೇಪಿಸಿರುವ ಕಡ್ಡಿ: 'ಅಗರು ಬತ್ತಿ', 'ಊದುಬತ್ತಿ' ಪರಾ. ೬. ಹೊಗೆಸೊಪ್ಪು ಸೇದಲು ಎಲೆಯನ್ನು ಸುತ್ತಿ ಮಾಡಿದ ಸುರುಳಿ ; ಬೀಡಿ, ಚುಟ್ಟಾ ಮುಂತಾದುವು : ಬದುವಿನ ಮೇಲೆ ನಾಗಣ್ಣ ಬತ್ತೀ ಸೇದುತ್ತ ಕುಳಿತಿದ್ದ (ಬೀಚಿಮ. ೩) , ಮಂದೀ ನಗಿಯೊಳಗ ಬತ್ತೀ ಕಮರಿನ ಹೊಗೀ ಎತ್ತ್ಯಾ. ಇದೇನು ಖಾಟ ನಮ್ಮವ್ವಾ ! (ಹೊಸಂಜಾ. ೮೮). ೭. (ಆಲಂ) ಎಳೆಯ ಮಗು ; ಹಸುಳೆ ; ಹಸಂಗೂಸಂ : "ಕುಡ —ಬಾಲ್ಯೇ, ಹಸುಳೆತನದೊಳ್ . . . ಕುಡು=ಬತ್ತಿ" (ಶಾಕ್ಯ. ೨೨೯) ; ತನ್ನ ತೊಡೆಯ ಮೇಲೆ ಮಗನನ್ನು ಕೂಡಿಸಿಕೊಂಡು ಹತ್ತು ತಿಂಗಳ ಬತ್ತಿಗೆ ಉಣ್ಣಿಸುವಂತೆ ಉಣ್ಣಿಸುವಳು (ಕೃಶ. ೦೬೦). ೮. (ಹತ್ತಿಯ) ಚೂರಂ ; ತುಂಡು : ದೇವಾರ್ಚನೆಗಳಾದಿ ವಿಧಾನದೊಳು[೯] ಗಾಚಿಂತರಾಗಿಹರಲ್ಲದುಣಾವಾಗ ಪೀನಘಂಟೆಗಳೆಳಿದು ಬತ್ತಿಗಳಾಸಿಸುತ ಕರ್ಣದಲಿ (ಅಕ್ಕಿಶ. ೯–೨೪) ; ಕಿವಿಯ ಕುಳಿಗಳಲ್ಲಿ ಪಚ್ಚಕಪ್ಪುರದ ಬತ್ತಿಗಳನಿತ್ತು (ಪ್ರಗೂಂ. ೩೦೬–೦).

ಬತ್ತಿಕೊಡು = (ಆಲಂ) ಮೋಸ ಮಾಡು ; ದಗಾ ಹಾಕು : ಈ ಹಾಳು ಸುಳಾಲಿ ಇವೊತ್ತು ಬತ್ತಿ ಕೊಟ್ಟ (ಕಳುವು. ೦೬೬) ; ನನ್ನ ದೋಸ್ತಿಗಳೇ ನನ್ನ ಬುಡಕ್ಕೆ ಬತ್ತಿ ಕೊಟ್ಟರು (ಹಿಂಗೂಂ. ೬೪). ಬತ್ತಿಯಿಡು =ಕೆಡಕು ಮಾಡುವುದಕ್ಕಾಗಿ ಚಾಡಿಹೇಳು: ಹೊಟ್ಟೆಕಿಚ್ಚಿನಿಂದ ಕೆಲವರು ಬತ್ತಿಯಿಟ್ಟು ಅವರ ಸಂಸಾರವನ್ನೇ ಹಾಳು ಮಾಡಿದರು (ಜನ). ಬತ್ತಿ ಹಚ್ಚು = ಆಸ್ಫೋಟನೆಯನ್ನುಂಟುಮಾಡು : ನಾಲ್ಕಾರು ಜನರ ಮಧ್ಯೆ ಓಡಾಡಿ ಬತ್ತಿ ಹಚ್ಚುವುದೇ ಅವನ ಸ್ವಭಾವ (ಜನ).
[← ಹಿಂ. ಬತ್ತೀ. / ಸಂ. ವರ್ತಿ]

**ಬತ್ತಿಕೋವಿ** (ನಾ). ಹತ್ತಿಯಿಂದ ಬೆಂಕಿ ಹಚ್ಚುವ ಸಿಡಿಮದ್ದಿನ ಬಂದೂಕ : ಬತ್ತಿಕೋವಿ, ಭರ್ಜಿ, ಈಟಿ, ಉದ್ದಗತ್ತಿ, ಬಿಲ್ಲುಬಾಣಗಳ ಸಾಹಸಿಗಳೂ ಅಲ್ಲ ಸ್ವಲ್ಪ ಇರುತ್ತಿದ್ದರು (ಮುಕಿಮು. ೬೩).
[ಬತ್ತಿ + ಕೋವಿ₁]

**ಬತ್ತಿಗೆ** (ನಾ). ನೀರು ಮುಂತಾದ ದ್ರವಪದಾರ್ಥಗಳನ್ನು ತುಂಬಿಡಲು ಹಾಗೂ ಸಾಗಿಸಲು ಬಳಸುವ ಚರ್ಮದ ಚೀಲ; ತಿತ್ತಿ: ನಾನಾವಿಧ ಪಾನಕದ ತುಂತುರುಗಳಿಂದ ಕೇವಾಗಿರುವ ಗೋಚರ್ಮದ ಬತ್ತಿಗೆಯಂ ಪಿಡಿದು (ಕೃಶಾಂ. ೩). [< ಸಂ. ಭಸ್ತ್ರಿಕಾ]

**ಬತ್ತಿಸು** (ಕ್ರಿ). ೧. ನೀರಿಲ್ಲದಂತೆ ಮಾಡು ; ಒಣಗಿಸಂ ; ಇಂಗಿಸಂ : ಬತ್ತಿಸಿದನಂದಹಿತಸುಭಟರ ವೀರಶರನಿಧಿಯ (ಕುಮ್ಮಾರೈ. ೨–೨೫) ; ಉಗ್ರನೇಱುವ ಮಹಾವಾಹನದ . . . ನಾಲ್ಕುಪಾದಾಗ್ರಹತಿಗೇಳ್ಕೆಂಧೂಳ್ ಬತ್ತಿಸಿತು ಗಗನಗಂಗಾನದೀಜಲವನು (ಕಂಪ. ೪೪–೦೦) ; ಈ ಖಳಬಲಸಾಗರವನು ಕುಂಭಜನ ಅಗಮದಂದದೆ ಬತ್ತಿಪೆ (ಕಂಪಕ. ೦೨–೬೬). ೨. (ಬೆಂಕಿ, ದೀಪ ಮೊದಲಾದುವನ್ನು) ಆರಿಸು ; ನಂದಿಸು : ಬಡಬಾಗ್ನಿಯ ಬಾಯನೆಯ್ದೆ ಬತ್ತಿಸುವುದು ತೇಜಂ (ಎಕ. VII, ಶಿಕಪೂ. ೯–೯೩ ; 1122) ; ಬತ್ತಿಯ ಬತ್ತಿಸಗೊಡದರೆ, ಸುಡುತಿರಲು ಬೆಳಕಿನ ಕುಡಿಯಾಗಿ ಮೆರೆಯುವದು (ಕೋಗಾ. ೩೯–೯೫). ೩. ದ್ರವಪದಾರ್ಥವನ್ನು ಕುದಿಸಿ ಇಂಗಿಸು ; ಅಟ್ಟಿಸು : ಕಷಾಯವನ್ನು ಬತ್ತಿಸುವುದರಲ್ಲಿ ತುಸು ಹೆಚ್ಚು ಕಡಿಮೆಯಾದರೆ ಗಾಬರಿಯಿಲ್ಲ (ಮುಕಿಮು. ೨). ೪. ಅಡಗಿಸಂ; ಇಲ್ಲವಾಗಿಸು ; ನಾಶಮಾಡು : ಬತ್ತಿಸಿ ನೃಪಾಲರಾಟೋಪಮಂ ಕೋಪದಿಂ (ಚನ್ನಾಳಿ. ೬೨–೦೯೬). [ಬತ್ತು₁ + – ಇಸು]

**ಬತ್ತೀಸ** (ನಾ). ಒಂದಂ ಸಂಖ್ಯೆ ; ಮೂವತ್ತೆರಡು : ಕಂಬಳಿಯ ಹಚಿಕಿನಲ್ಲಿ ಬತ್ತೀಸಕೋಟಿ ದೇವರ್ಕಳೆಲ್ಲರು ಸಿಕ್ಕಿ ಅಳಲುತ್ತ ಬಳಲುತ್ತಲೈದಾರೆ (ಜೋಕಮಾ. ೬–೨೯) : ಮಾದಿರಾಜಂ ಮತ್ತೆ ಬತ್ತೀಸಾದಿ ರಾಗಂಗಳೆಗನಿತು ದಂಡಿಗೆಗಳಂ ರಚಿಸಿ ವೇದಿಸಲು (ಅಸಪ. ೦೯–೬) ; ಈ ವಚನಗಳು . . . ಅಂದು ಬಳಕೆಯಲ್ಲಿದ್ದ 'ಬತ್ತೀಸ' ಎಂದರೆ ೩೨ ರಾಗಗಳಲ್ಲಿ ಹಾಡಲ್ಪಡುತ್ತಿದ್ದವು (ಹಂಗೀಚಂ. ೭೯).
[< ಪ್ರಾ. ಬತ್ತೀಸ. / ಹಿಂ. ಮರಾ. ಬತ್ತೀಸ್. / ಸಂ. ದ್ವಾತ್ರಿಂಶತ್]

**ಬತ್ತೀಸಕಡಿ** (ನಾ). (?) : ಬತ್ತೀಸಕಡಿಯ ಬಾಹರಪುಟದ ಗುಳಮದ ಕಣಂಗಳ ಕುಳಿಶದಳಂ (ಅಪಂಪ. ೦೯–೬೩). 'ಬತ್ತೀಸಾಯುಧ' ಪರಾ.
[ಬತ್ತೀಸ + ಕಡಿ₁]

**ಬತ್ತೀಸಕಲೆ** (ನಾ). [ವೀಶೈ] ಮೂವತ್ತೆರಡು ಕಲೆಗಳು ; ❡ "ಮೂವತ್ತೆರಡು (ಬತ್ತೀಸ) ಕಳೆಗಳು : ಸದಾಚಾರ, ಸದ್ಭಕ್ತಿ, ಸಮ್ಯಕ್‌ಜ್ಞಾನ, ಸತ್ಕ್ರಿಯೆ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ, ಅಕ್ರೋಧ, ಸತ್ಯವಚನ, ಕ್ಷಮೆ, ದಮೆ, ಭವಿಭಕ್ತಭೇದ, ಸತ್ಪಾತ್ರದ್ರವ್ಯಾರ್ಪಣ, ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ದಶವಿಧಪಾದೋದಕ, ಏಕಾದಶಪ್ರಸಾದ, ಷೋಡಶಭಕ್ತಿನಿರ್ವಾಹ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ, ತ್ರಿವಿಧ ಷಡ್ವಿಧ ನವವಿಧ ಜಪ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಪಿತ, ಚಿದ್ಭೂತಿ ಸ್ನಾನ ಧೂಳನಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷಧಾರಣ, ತಾ ಮಾಡುವ ಸತ್ಯಶುದ್ಧ ಕಾಯಕ, ತಾ ಬೇಡುವ ಸದ್ಭಕ್ತಿ ಭಿಕ್ಷೆ, ತಾ ಕೊಟ್ಟು ಕೊಂಬುವ ಭೇದ, ತಾನಾಚರಿಸುವ ಸತ್ಯ ನಡೆನುಡಿ, ತಾ ನಿಂದ ನಿರ್ವಾಣಪದ —ಇಂತಿವು ೩೨ ಕಲೆಗಳು" (ಚನ್ನಬ. ೪. ೬೨೬೬) : ಷೋಡಶಭಕ್ತಿಯು ಮಾರ್ಗವ ತಿಳುಹಿ ಬತ್ತೀಸಕಲೆಯ ನೆಲೆಯನಱುಹಿ . . . ನಿರೂಪವ ಕೊಡಲು (ಚನ್ನಬ. ೪. ೩೩೬–೬೭೯). [ಬತ್ತೀಸ + ಕಲೆ₁]

**ಬತ್ತೀಸಪುತ್ಥಳಿ** (ನಾ). ಮೂವತ್ತೆರಡು ಗೊಂಬೆಗಳು,—ವಿಗ್ರಹಗಳು. **ಬತ್ತೀಸಪುತ್ಥಳಿಕಥೆ, ಬತ್ತೀಸಪುತ್ಥಳಿಕತೆ** = ವಿಕ್ರಮಾದಿತ್ಯರಾಜನ ಸಿಂಹಾಸನದ ಎರಡು ಬದಿಗಳಲ್ಲೂ ಅಳವಡಿಸಿದ್ದ ಮೂವತ್ತೆರಡು ಗೊಂಬೆಗಳು ಸಜೀವವಾಗಿ, ಭೋಜರಾಜನಿಗೆ ಹೇಳಿದುವೆಂದು ಭಾವಿಸಲಾದ ಮೂವತ್ತೆರಡು ಕಥೆಗಳು : ವಿಚಿತ್ರವಸ್ತುಗಳನ್ನು ಕೇಳುವುದೆಂದರೆ ಮಕ್ಕಳಿಗೆ ಆನಂದ . . . ಬತ್ತೀಸಪುತ್ಥಳಿಕಥೆಗಳು ಈ ಮಾದರಿಯವು (ಜಾಂತ್ರ. I, ೨೦೯) ; ಓದುವಾಗ . . . ಅದು ಬತ್ತೀಸ ಪುತ್ಥಳಿಕತೆಯಾದರೂ ಸರಿಯೆ ; ಯವನಯಾಮಿನೀಕಥೆಗಳಾದರೂ ಸರಿಯೆ ಮನಸ್ಸಿಗೆ ಸಂತೋಷವಾಗುತ್ತದೆ (ಮೂಕಜ್ಜಿ. ೩). [ಬತ್ತೀಸ + ಪುತ್ಥಳಿ]

**ಬತ್ತೀಸರಾಗ** (ನಾ). [ಸಂಗೀತ] ಪ್ರಸಿದ್ಧವಾದ ಮೂವತ್ತೆರಡು ಬಗೆಯ ರಾಗಗಳು ; ▶ "ರಾಗಗಳು — ೮ ಪುರುಷರಾಗಗಳು : ಭೈರವಿ, ಭೂಪಶಿ (ಭೂಪಾಲ), ಶ್ರೀರಾಗ, ರಾಗಪಂಜರ, ವಸಂತ, ಮಾಲವ, ಬಂಗಾಲ, ನಾಟಕ (ನಟ್ಟ) ; ೨೪ ಸ್ತ್ರೀರಾಗಗಳು : ಭೈರವಿಗೆ : ದೇವಕ್ರಿಯಾ, ಮೇಘರಂಜೀ, ಕುರಂಜೀ ; ಭೂಪಾಲಕ್ಕೆ : ಬೇಲಾವುಲೀ, ಮಲಹರಿ, ಭೌಲೀ ; ಶ್ರೀರಾಗಕ್ಕೆ : ಅಂಧಾಲೀ, ಭಲಾತೀ, ಮಾಹುರೀ; ರಾಗಪಂಜರಕ್ಕೆ: ದೇಶೀ, ಲಲಿತಾ, ತೋಡೀ; ವಸಂತಕ್ಕೆ : ರಾಮಕ್ರಿಯಾ, ವರಾಲೀ, ಕೌಶೀ ; ಮಾಲವಕ್ಕೆ : ಗುಂಡಕ್ರಿಯಾ, ಘೂರ್ಜರೀ, ಗೌಲೀ ; ಬಂಗಾಲಕ್ಕೆ : ಕರ್ಣಾಟ ಗೌಲಿಕಾ, ಧನ್ನಾಸಿಕಾ, ಕಾಂಭೋಜೀ ; ನಟ್ಟವಿಗೆ : ದೇಶಾಕ್ಷೀ, ಆಹರೀ, ನಾರಾಯಣೀ (ಅಭಸಂ. ೧೧೧೪-೧೧೨೪)" (ಶ್ರೀತತ್ತ್ವ. ೩೮) : ಎನ್ನ ಕಾಯವ ದಂಡಿಗೆಯ ಮಾಡಯ್ಯಾ . . . ಬತ್ತೀ[ಶಾಶಾಂ ಕ್ರ]ಸರಾಗವ ಹಾಡಯ್ಯಾ (ಬಸವ. ೫೦೦) ; ಶಿವನ ಮೂರ್ತಿಯನೊಲಿದು ಪಾಡುತಂ ಬತ್ತೀಸರಾಗಂಗಳಿಂದೆ (ಜಾಶಿಶ. ೨-೦೯). [ಬತ್ತೀಸ + ರಾಗ]

**ಬತ್ತೀಸಲಕ್ಷಣ** (ನಾ). ಮೂವತ್ತೆರಡು ಬಗೆಯ ಗುರುತುಗಳು,—ಚಿಹ್ನೆಗಳು ; ▶ "(ಅ) ಲಕ್ಷಣ — ೩೨ (ಅ) ಮಹಾಪುರುಷಲಕ್ಷಣ (ಬತ್ತೀಸಶುಭಲಕ್ಷಣ) — ೩೨ : ಪಂಚಸೂಕ್ಷ್ಮಗಳು : ತ್ವಕ್, ಕೇಶ, ಅಂಗುಲಿ, ದಂತ, ಅಂಗುಲಿಪರ್ವ ; ಪಂಚದೀರ್ಘಗಳು : ಭುಜ, ನೇತ್ರ, ಹನು, ಜಂಘೆ, ನಾಸಿಕ ; ಸಪ್ತರಕ್ತಗಳು—ಹಸ್ತ ತಲ, ಪಾದತಲ, ಅಧರೋಷ್ಠ, ನೇತ್ರ, ತಾಲು, ನಾಲಗೆ, ಉಗುರು ; ಷಡುನ್ನತಗಳು—ವಕ್ಷಃಸ್ಥಲ, ಕುಕ್ಷಿ, ಕೇಶ, ಸ್ಕಂದ, ಹಸ್ತ, ಬಾಯಿ ; ಪೃಥುತ್ರಯಗಳು—ವಕ್ಷಸ್ಥಲ, ಕಟಿ, ಲಲಾಟ ; ಲಘುತ್ರಯಗಳು—ಗ್ರೀವಾ, ಜಂಘಾ, ಶಿಶ್ನ ; ಗಂಭೀರತ್ರಯಗಳು —ಸ್ವರ, ಕರ್ಣ, ನಾಭಿ (ಬೌದ್ಧಧರ್ಮಾನುಸಾರಸಂಗ್ರಹ — ಸಂ. ೨೨೪–೫). (ಆ) ಸಾಮುದ್ರಿಕಲಕ್ಷಣ — ೩೨ : ಛತ್ರ, ಕಮಲ, ಮನುಷ್ಯ, ರಥ, ವಜ್ರ, ಕಚ್ಛಪ, ಅಂಕುಶ, ವಾಪಿ, ಸ್ವಸ್ತಿಕ, ತೋರಣ, ಚಾಮರ, ಸಿಂಹ, ವೃಕ್ಷ, ಚಕ್ರ, ಶಂಖ, ಹಸ್ತಿ, ಸಮುದ್ರ, ಕಲಶ, ಪ್ರಾಸಾದ, ಮತ್ಸ್ಯ, ಯವ, ಸ್ತಂಭ, ಸೂರ್ಯ, ಕಮಂಡಲ, ಪರ್ವತ, ಚವರೀ, ದರ್ಪಣ, ವೃಷ, ಪತಾಕಾ, ಲಕ್ಷ್ಮೀ, ಪುಷ್ಪಮಾಲಾ, ಮಯೂರ (ಹಸ್ತಸಾಮುದ್ರಿಕ ಶಾಸ್ತ್ರ — ಸಂ. ೨೨೫–೨೨೬). ಸ್ವಶರೀರ, ಕುಲಿಶ, ದ್ವೀಪ, ಸಮುದ್ರ, ಭವನ, ವಿಮಾನ, ಬಾಣ, ಗೋಪುರ, ಇಂದ್ರಕೇತು, ಶಂಕ, ಪತಾಕ, ಮುಸಲ, ಹಯ, ರವಿ, ಶಶಿ, ಸ್ವಸ್ತಿಕ, ದಾರು, ಕೂರ್ಮ, ಅಂಕುಶ, ಸಿಂಹ, ಗಜ, ವೃಷಭ, ಮತ್ಸ್ಯ, ಛತ್ರ, ಶಯ್ಯಾ, ಆಸನ, ವರ್ಧಮಾನ, ಶ್ರೀವತ್ಸ, ಚಕ್ರ, ಅನಲ, ಕುಂಭ (?) (ಶಾಸ್ತ್ರಸಾರಸಮುಚ್ಚಯ)" (ಶ್ರೀತತ್ತ್ವ. ೩೫೦). [ಬತ್ತೀಸ+ಲಕ್ಷಣ]

**ಬತ್ತೀಸಶಸ್ತ್ರ** (ನಾ). = ಬತ್ತೀಸಾಯುಧ : ಕಲಿಗೆ ಮುಖದರ್ಪಣ ಬತ್ತೀಸಶಸ್ತ್ರಶಾಸ್ತ್ರಪ್ರವೀಣ (ಕಲ್ಯಾಶಾ. ೯-೩೭ : 1171) ; ಬತ್ತೀಸಶಸ್ತ್ರ ಗಳಲಿಟ್ಟು ಬೊಬ್ಬೆಯನಿಟ್ಟು . . . ಬಿಕ್ಕರದ ಪರಿಘಂ ಪೊಡೆಯ (ನಂಶಾರಾ. ೩-೦೩-೭). [ಬತ್ತೀಸ + ಶಸ್ತ್ರ]

**ಬತ್ತೀಸಾಯುಧ** (ನಾ). ಮೂವತ್ತೆರಡು ಬಗೆಯ ಅಸ್ತ್ರಗಳು : ▶ ಈ ಆಯುಧಗಳ ವಿವರದ ಬಗ್ಗೆ ಬೇರೆ ಬೇರೆ ಗ್ರಂಥಗಳಲ್ಲಿ ವ್ಯತ್ಯಾಸ ಗಳಿವೆ. "ಆಯುಧ—೩೨ (ಬತ್ತೀಸಾಯುಧ) : ಚಕ್ರ, ಭಿಂಡಿ ವಾಳ, ಭೃಶುಂಡಿ, ದೃಘಣ, ದಂಶಕಂಟಕ, ಇಳಾಹಸ್ತ, ಇಷು, ಮುಸಲ, ಮೌಷ್ಟಿಕ, ಮಯೂಖಿ, ಲಗುಡ, ಲವಿತ್ರ, ಪರಿಘ, ಪ್ರಾಸ, ಪಾಶ, ಶಕ್ತಿ, ಶತಘ್ನಿ, ಸೀರ, ಸ್ಥೂಣ, ತೋಮರ, ಗದಾ, ಗೋಶೀರ್ಷ, ಅಮುಕ್ತವಜ್ರ, ಆಸ್ತರ, ಅಸಿಧೇನುಕ, ಪಟ್ಟಿಸ, ಮುದ್ಗರ, ಪಿನಾಕ, ಕಂಠ, ಕಾಳರಾತ್ರಿ, ಯಾಪನ, ನಳಿಕಾ (ನೀತಿ ಪ್ರಕಾಶಿಕಾಸಂಖ್ಯಾರತ್ನಮಾಲಾ. ಪು. ೨೯೦); ಖಡ್ಗ, ಕರಾಚೂರಿ, ಕಕ್ಕಡ, ಕಡುಗತ್ತಿ, ಸಣೆಗತ್ತಿ, ಸಬಳ, ಈಟಿ, ಇದುರುಗತ್ತಿ, ಉಬ್ಬಣ, ಕಬ್ಬಿ(ಣ)ಕೋಲು, ಚಕ್ರ, ಚಂಡು, ಪೋತಿ, ಚಲ್ಲಿಹ, ಬಲ್ಲಿಹ, ಬಂಕು, ಬಾಣ, ನೆದೆ, ನರಾದಿ, ಶೂಲ, ಶಿರಾದಿ, ಚೂರಿ, ಚಿಕ್ಕಠಾರಿ, ಕಿರಸೆ, ಪರಶು, ಪಾಶ, ಪಟ್ಟೆಯ, ಮಟ್ಟ, ಅಂಕುಶ, ವಂಕಿ, ಲೌಡಿ, ಜವದಾಡೆ (?) (ವಿಚಿಂ. ೧೬೩-೨೬೩. ೬-೪೩೪) : ಬಾಣ, ಖಡ್ಗ, ತೋಮರ, ಸ್ತೋಮ, ಸೃಗ, ಚೀರಿ, ಶಕ್ತಿ, ಯಷ್ಟಿ, ಭಿಂಡಿವಾಲ, ಪರಿಘ, ಪರಶು, ಗದೆ, ಪ್ರಾಸ, ಮುದ್ಗರ, ಮುಸಲ, ಶೂಲ, ಪಾಶ, ಚಕ್ರ, ಮುಸಂಡಿ, ವಜ್ರ, ದಂಡ, ಹಲ, ಅಶನಿ, ಕುಂತ, ಅರಿಷ್ಟ, ಕ್ರಕಚ, ಪರಶು, ಶಂಕು, ತೋತ್ರ, ವೇಣಾ, ತ್ರಿಶೂಲ, ಕುಸೂಲ (ವಿದ್ಯಾಕ. ೧೩)" (ಶ್ರೀತತ್ತ್ವ. ೫೩) : ಬತ್ತೀಸಾಯುಧದಲ್ಲಿ ಅಭ್ಯಾಸವ ಮಾಡಿದರೇನು ಹಗೆಯ ಕೊಲುವರ ಒಂದಲಗು ಸಾಲದೆ (ಬಸವ. ೭೩೯) ; ಬತ್ತೀಸಾಯುಧಂಗಳು ಮೆರೆವ ಕರಗಳಲಿ ತೊನೆವ ಶ್ರೀಮೂರ್ತಿಯನು ನರಹರಿ ದನುಜಾಗಳ ತೋಱುತಿರಲು (ಸಂಶಶ. ೬-೯೯) ; ಜಡಿವ ಬತ್ತೀಸಾಯುಧಂಗಳ ಸುಭಟರ ಬೆಡಗಿನ ನಿಕರವೊಪ್ಪುಹುವು (ಸಂಶಂ. ೬-೩೯). [ಬತ್ತೀಸ + ಆಯುಧ]

**ಬತ್ತು₁** (ಕ್ರಿ). ೧. ಒಣಗು ; ಆರು ; ಇಂಗು : "ಬತ್ತು—ನಿರ್ದ್ರವೇ" (ಕಪಾಠಾ) ; ಕೆಮ್ಮುಂ . . . ಬಾಯ್ ಬತ್ತುವುದುಂ (ಕಷ್ಟಾಶಾ. ೩೬-೩); ಒಡಲುರಿಗುಂ ಮನಂ ಮಱುಗುಗುಂ . . . ಬಾಯ್ಬಿಡದೆ ಬತ್ತುಗುಂ (ಅಂಪು. ೦೨-೯೦) ; ಕುರುಪತಿ ನಿನ್ನ ಪೊಕ್ಕ ತೊಱೆಗಳ್ಗೊದಲಾಗಿರೆ ಬತ್ತ ದಪ್ಪುವು (ಗದಾಯು. ೬-೦೨) ; ಸಾಗರ ಬತ್ತಲೆಡೆಯಲಿ ನಿಂದ ನೀರ ಪೊರಾಯ್ತು ಕುರುಸೇನೆ (ಕುಮ್ಯಾ.ಶ. ೨-೭). ೨. ಬರಿದಾಗು ; ಶೂನ್ಯವಾಗು ; ಖಾಲಿಯಾಗು : (೦). ೩. ಗೊಡ್ಡಾಗು ; ಬರಡಾಗು : ಹತ್ತುಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡಸಿಹವೆಂಬವರ ಮುಖವ ನೋಡಲಾಗದು (ಬಸವ. ೨೨೩). ೪. ಸೊರಗು; ಜೋಲು; ಕುಗ್ಗು : ತಾಪತ್ರಯದೊಳೆ ಕುದಿದೆಂ ಬತ್ತಿದೆಂ ಬಾಡಿದೆಂ ಯಾತನೆಗೊಂಡೆಂ (ಕಣ್ಣಶ. ೯-೨೨); ತೊಗಲು ಸಡಿಲಿದ ಗಲ್ಲ ಬತ್ತಿದ ಹಗಲು ನಟುಕಿದ ನರೆತ ವಿಸಸಿಯ. . . ಮುಪ್ಪಿನ ಮುಗುದನೀತನ ಕಾದ ಹೇಳಿದು ನಗೆಯ ಸುರಿದೈ (ಕುಮ್ಯಾ.ಶ. ೦-೩೩); ಬತ್ತಿರ್ದ ಮೊಲೆಯ ಕುಪ್ಪುಸದೊಳಱುಮೆಯ ಚಿಂದನೊತ್ತಿ ಬಗಿದುಂ . . . ಹಣ್ಣುಮುದುಕಿಸೂಳೆಯರೆಸೆದರು (ಕಂಶು. ೦೦-೭೬). ೫. ಮಂಕಾಗು; ಕಂದು; ಕಾಂತಿಯಿಲ್ಲದಿರು : ಬತ್ತಿರ್ದ ವಕ್ತ್ರಾಂಬುರುಹಂ ಮಿಂಚಾ ಗಲಿರ್ಪಂ ತೊಡೆದು (ಚಕು. ೬-೯೭); ಬಾಗಿದೊಡಲಿನ ಬತ್ತಿದಾನನದ. . . ಶಬರಿಯ ಸುಪ್ರಸಿದ್ಧೆಯ ಸಾರ್ದರೊಲವಿನಲಿ (ತೊರರಾ. ೩-೦೨-೨೯). ೬. (ಧ್ವನಿಯು) ಕುಗ್ಗು : ಕಡಮೆಯಾಗು : ಚೀಱಿದ ಬತ್ತದೆ ಜತಿ

ಜಾತಿ ಕಟ್ಟಿಣೆ ಜಾಜದೆ . . . ಸವಿದೋಱ ಹಾಡಿದರು ಗಾಯಕರು (ಈಶ. ೦-೬೨). ೭. ದ್ರವಪದಾರ್ಥವು ಕುದಿದು ದ್ರವಾಂಶವು ಕಡಮೆಯಾಗಿ ಗಟ್ಟಿಯಾಗು ; ಅಟ್ಟು : ಕಾಯ ಬತ್ತಿದ ಹಾಲು ಚೆಲುವಾಲನಿಕ್ಕು (ಜಂಗರಾ. ೬೯-೨); ಎಳೆಯ ಹಲಸಿನ ಕಾಯ ಕುದಿಸಿ ಮತ್ತೊವ್ವೆ ಹಾರೊಳಗುವ್ವನಿಕ್ಕಿಯದ ಬತ್ತುವಂದದಿಯಪ್ಪು (ಸೂಶಾ. ೯-೯೬). ೮. ಇಲ್ಲವಾಗು ; ಮಾಯವಾಗು : ಕುವುುದಂಗಳ ನಗೆ ಬತ್ತಿದುವು ಪಾಯ್ದು ನೇಸಱನಾಗಳ್ (ಅಜಿತ. ೬-೩). 'ಬಟ್ಟ್ಯು₃' ನೋ.

[ದೇ. ‖ ತಮಿ. ಮಲ. ವಱ್ಱು; ತುಳು. ಬತ್ತು; ಕೊಡ. ಬಟ್; ತೆಲು. ವತ್ತು, ವರುಟು; ಕೋಲಾ. ವತ್ ; ಪರ್ಜ. ವೆತ್, ವೆಟ್; ಗಡಬ. ವಟ್; ಗೊಂಡಿ. ವತ್ತಾನಾ; ಕುಡುಖ್. ಬತ್ತಾನಾ]

**ಬತ್ತು₂** (ನಾ). ಒಣಗಿದುದು; ಒಣಕಲು; ಶುಷ್ಕವಾದುದು. ಬತ್ತಾಗು = ಒಣಕಲಾಗು ; ಬಾಡು : ಬತ್ತು ಮರ ಪಲ್ಲವಿಸಿ ಫಲವಾಯ್ತು ಶೀತ ಮರ ಬತ್ತಾಯ್ತು. . . ಬತ್ತಿದುವು ಕೆರೆ ಧಾವಿ ಹರಿ ಚಕ್ರವಂ ತುಡುಕಲು (ಕುಮಾರ. ೨೨-೯೦). [< ಬತ್ತು₁]

**ಬತ್ತುಂಬಯ** 'ಬತ್ತುಂಬಯಸ್' ನೋ.

**ಬತ್ತುಂಬಯಸ್**, **ಬತ್ತುಂಬಯ** (ನಾ). ಹಾಲು ಕೊಡುವುದನ್ನು ನಿಲ್ಲಿಸಿದ ಹಸು; ಗೊಡ್ಡಾಕಳು: ಬತ್ತುವುದು ಪಯಸ್, ಬತ್ತುಂಬಯಸ್ (ಶಬ್ದಾ.ಸು. ೬೬೬). ಬತ್ತುಂಬಯ : ಬಕಾರಕ್ಕೆ_ಬತ್ತುಂಬಯಂ, ಬತ್ತುಂಬಟು (ಕಶುರ. ೦೬೦ ಪ್ರಯೋ). [ಬತ್ತು₁ + ಪಯಸ್]

**ಬತ್ತುಂಬಟು** (ನಾ). ಒಣಗಿದ ಬಟ್ಟೆ; ಆರಿದ ಅರಿವೆ : ಬಕಾರಕ್ಕೆ – ಬತ್ತುಂಬಯಂ, ಬತ್ತುಂಬಟು, ಅಟ್ಟುಂಬರಿ (ಕಶುರ. ೦೬೦ ಪ್ರಯೋ). [ಬತ್ತು₁ + ಪಟ್ಟ]

**ಬತ್ತುಗೆ** (ನಾ). ತೇವವನ್ನು ಕಳೆದುಕೊಳ್ಳುವಿಕೆ; ಒಣಗುವಿಕೆ : ಸುರಿವ ಬಾಷ್ಪಜಳಂ ಕರುಣಾರ್ದ್ರಹಾರವಂ ಬಳಿಯಿಸೆ ಬಾಯ ಬತ್ತುಗೆಯು ನಿಂತೆರ್ದೆಗಟ್ಟುಟುತುಂ . . . ಬಿಟ್ಟಿಳಿಂದಜಿತಸೇನ (ಹಂಪ್ರತಿ. ೩-೦೦). [ಬತ್ತು₁ + – ಗೆ]

**ಬತ್ತುವಸುರು** (ನಾ). ತೆಳ್ಳಗಿರುವ ಹೊಟ್ಟೆ; ಒಳಸೇರಿದ ಹೊಟ್ಟೆ : ಲೀನಾಖ್ಯ ಲೀನವೆಂಬ ಪೆಸರ್ವಡೆದ ಗರ್ಭದಲ್ಲಿ—ಬತ್ತುವಸುರಿನಲ್ಲಿ (ಚಾಶಕಾ. ೨-೨-೨೦ ಪ). [ಬತ್ತು₁ + ಬಸುರು (<ಬಸಿಱು)]

**ಬತ್ತುವಾಲ್** (ನಾ). ಕುದಿಸಿ ಇಂಗಿಸಿದ ಗಟ್ಟಿಯಾದ ಹಾಲು; ಕೆನೆಹಾಲು : ನವರಿಕ್ಕಿಯೋಗರಂ ಕೂಡಿದ ಬತ್ತುವಾಲ್ ವಿಸುವ ಗಳ್ಪವೊಸರ್ ಮೊದಲಾದವೆಲ್ಲಮುಂ ಜೋಡಿಸಿ (ಜಾಱಸ್ತ. ೦-೬-೩). [ಬತ್ತು₁ + ಪಾಲ್₁]

**ಬತ್ತೆ** (ನಾ). (ಔಷಧಿ, ಅಡಕೆ ಮುಂತಾದುವನ್ನು) ಅರೆಯಲು ಅಥವಾ ಕುಟ್ಟಲು ಬಳಸುವ ಕಲ್ಲಿನ ಅಥವಾ ಲೋಹದ ಒರಳಂ ಮತ್ತು ಗುಂಡು : ಕಬ್ಬಿಣದ ತರತರದ ಜೀನಸಗಳು_೧. ಅಡಕೊತ ಗಳು . . . ೫೭. ಬತ್ತೆಗಳು (ಖಲಬತ್ತೆ) (ಮುಂಜಾ. ೦೦೩). 'ಕಲಬತ್ತು' ನೋ. [← ಪಾರ. ಬತ್ತಾ; ಮರಾ. ಬತ್ತಾ, ಬತ್ತಾ]

**ಬತ್ತೆಮ್ಮೆ** (ನಾ). ಹಾಲು ಕೊಡದಿರುವ ಎಮ್ಮೆ; ಗೊಡ್ಡೆಮ್ಮೆ : ತಂದ ಬತ್ತೆಮ್ಮೆಗಳು ಕರು ಹಾಕಿದುವು. ಹಾಲು ಮಾರಿದನು (ಅಗುಹ. ೯೬). [ಬತ್ತು₁ + ಎಮ್ಮೆ (<ಎರ್ಮೆ)]

**ಬತ್ತೇರಿ** 'ಬತೇರಿ' ನೋ.

**ಬತ್ವ** (ನಾ). 'ಬ' ಎಂಬ ಅಕ್ಷರ; ಬಕಾರ : ಸಮನಿಸುಗುಂ ಬತ್ವ ಕೊರ್ಮೆ ವತ್ವಮುಂ ವತ್ವದೆಡೆಗೆ ಬತ್ವಂ ಬಹುಳಂ (ಕಶುರ. ೨೬೬). [ಸಂ.]

**ಬದಂಗ** 'ಬದಗ' ನೋ.

**ಬದಗ**, **ಬದಂಗ**, **ಬದೆಗ** (ನಾ). ೧. ವಿಟ ; ಜಾರ; ವ್ಯಭಿಚಾರಿ : ಜಾತಿಸೂಳೆಗೆ ರಣಭೀತನ ಪೊಸನುಡಿವಾತನ ಖಳನ ಕೆಳೆಯನ ಬದಗನ ಬೂತಿನ ಮಾತು ದಿಟಮಲ್ತು (ಅಜಿತ. ೨-೩೯) ; ಬಚ್ಚಣೆವಾತಿನ ಬದಗ ಗೊಲಿದೊಡೆ. . . ಪುಚ್ಚಣೆಯಹುದೆನುತೊರ್ವಳ್ ಮುಗ್ಧೆಗೆಯುಸುರಿ ದಳು ವಿದಗ್ಧೆ (ಜಗುಳ. ೦೯-೩೦); ಒದವಿಸಿಯಾ ವಿಷಯಂಗಳ ಜೀವರ ಬದಗರ ಮಾಡುವಹೋ ಮಾಯೆ (ಪಶ್ವಸ. ೦೪೦-೯). ೨. ಕೆಳದರ್ಜೆಯ ಸೇವಕ ; ಕೀಳಾಳಂ ; ಊಳಿಗದವನು : "ಬದಗನೆಂದು ಕೀಟಾಲ್" (ಶಶಾ. ೬೦-೩೩೩); ಬಡಿಕೋಲಂ ಪಿಡಿದು ಪರಿವ ಬದಗರುಮಂ ದಟ್ಟರ ನಾಂತು ಪರಿವೃತ್ಯಜಕಾಅರುವಮಂ . . . ಕಂಡು (ಅಜಿತ. ೩-೦೦೯ ಪ) ; ಬಿದ್ದಿನರ ಪೀಳಯದ ಬದಗರು ಭಟರ ಪೋಡಿಯಲಿ ಹೊದ್ದಿದೊಡೆ ಹುರುಳಹರೆ (ಕುಶಾ೦. ೦೯-೨೩); ದನುವ ಕಾಯ್ದುನ್ನಿತ್ತಿರ್ಪ ಬದಗನೇಂ ಕಱದಂ ಕಾಡಿದನೊ (ಸಿಶ್ವೀಪು. ೯-೪೬). ೩. ದಡ್ಡ ; ಮೂರ್ಖ; ತಿಳಿಗೇಡಿ : ಜಾಣ ಜಾಣೆಯರಾಟವೆಂಬುದು ಚದುರಂಗದಾಟದಂತಿಹುದು ಬದಗರ ಲೀಲೆಯಹುದು ಟೊಳ್ಳಿಗವಡೆಯ ಕಿದರ್ವ ಸೋಗಳೆಯವಾದಂತೆ (ಈಶ. ೦೦-೦೯). ಬದಂಗ : ೧. ಜಡಿದೊಡ ಪೊಂಗಿ ಪಂದೊಲವ ಪೊರ್ಕೊಱಿಯೋಱುವ . . . ವೊಕ್ಕಳಂಬಡುವ ಬದಂಗನಂ ದೆಸ[ಜಾಶಾ. ಬದಂಗಿ ದುರ್ಬೆಸ]ನಿಯಲ್ಲದಳಾತನನೊಟ್ಟಿ ಸುಟ್ಟಪಳ್ (ಅಜಿತ. ೨-೬೬). ಬದೆಗ : ೩. ಬದೆಗರಂದದಿ ಹೋರಲೇತಕೆ ಗೆಲವು ನಿನ್ನದು ಸೋಲವೆನಗೆ ಹೋಗು (ಈಶ. ೩೦-೬೩). ೪. ಅಲ್ಪವ್ಯಕ್ತಿ; ಕ್ಷುದ್ರ; ನೀಚ : ಇದು ತನಗೆ ಪರಿಣಾಮವಾಯ್ತರೆ ಬದೆಗ ಹುಸಿವವರರಸ (ಶಶಾಗ. ೩-೭-೦೩); ಬದೆಗ ದಶವುಖನೊರಜು ಬಾಡಬನಾದರವರಿವುದೆ (ಪಾಕ್ವ. ೨೩-೦೯).

[ಬದಗು + – ಅ₁. / ತಮಿ. ಪತಕ. / ಸಂ. ಪಾತಕ – ಪಾಪ]

**ಬದಗಿ** (ನಾ). ೧. ಊಳಿಗದವಳು ; ಸೇವಕಿ ; ದಾಸಿ : ಎಲೆ ಕೆಣಕಿದೆ ಕರ್ಣ ಬೂತಿನ ಬೀಳಲಿನ ಬದಗಿಯನು (ಕುಶಾ೦. ೦೩-೦೯); ಕರ್ಣ. ಈ ಬದಗಿಯನ್ನೇಕೆ ಕೆಣಕಿದೆ ? ಯುದ್ಧದಲ್ಲಿ ಆಕೆಯ ಭೀಮನು ನನ್ನನ್ನು ಮಾರಿಯಾಗುತ್ತಾನಲ್ಲವೆ? (ಜಾಶಸು. ೦೦೩). ೨. ಏನೂ ತಿಳಿಯದವಳು; ಮುಗ್ಧೆ : ನೋಡುವುದೆನ್ನೆರ್ದೆಯೋ ಕಣ್ಣೋ . . . ತಾ ಸೊಕಗಳೆ ಗೀಡಹುದಾತ್ಮನೊ ಪರಮನೊಯೆಂದಳ್ ಬದಗಿಯವೊಲ್ ಚದುರೆ (ಪಾಕ್ವಕೀ. ೯-೨೬). [ಬದಗ + – ಇ₁./ತಮಿ. ಪತಕಿ]

**ಬದಗಿಗ** (ನಾ). ನೀಚ ; ಕೀಳುಮನುಷ್ಯ : ಈಳಿಗೆ ಭೂತಚೇಷ್ಟೆಯೊ . . . ಬದಗಿಗರು ಸೈರಿಸದೆ ಕೂನ್ಯಗಳನೆಸಗಿದರೊ (ಪ್ರಭುಪು. ೩-೯೦); ಮುಟ್ಟುದಿರು . . . ಪೊಕ್ಕೊರೆಗೊಡಂಬಡುವ ಬದಗಿಗು [ಗ]ಯೆಂದು ಯದೆಯೊಳನಿತುಂ ದಯಂಗೊಡದೆ ಕಳಕಳಿಸುವಳ ನೋಡುತಿರಲು (ಪ್ರಭುಪು. ೯-೦೬೯). [ಬದಗು + – ಇಗ]

**ಬದಗು** (ನಾ). ೧. ಹಾದರ; ವ್ಯಭಿಚಾರ : ಎತ್ತಿದ ಬದ್ಗೊ ಪೇಣ್ ಬದಗೊ[ಜಾಶಾ. ಬೆಜಗೊ] ಪೇಟುವಿದೀಕೆಯ ಕೂರ್ಪೊ ಮೆಲ್ಕೊ (ಅಜಿತ. ೨-೬೮); ಎನ್ನ ಮಾಟ್ಟು ಬದಗೇಂ ಪಱತಾದುದೆ ಬೇಡ ಕಿವ್ವಾಗಂ ಮನೆಗುಸುಟೀಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಟ್ಟಿಯೋ (ಅಜಿತ. ೨-೦೦೯). ೨. ತೊತ್ತುಗೆಲಸ; ಊಳಿಗ; ಸೇವೆ : 'ಬದಗುಗೆಯ್' ನೋ. ೩. ಮೋಸ; ವಂಚನೆ; ಠಕ್ಕು : "ಬದಸು, ಬದಗು— ಕೌಟಿಲ್ಯಂ" (ಕಶುರ. ೫೦. ೨). ೪. ದಡ್ಡತನ; ಮೂರ್ಖತನ : ಲಿಂಗಾಂಗದ ಪುರುಳಱಯದ ಮರುಳೇ ತಿಳಿವಿಸಿಲ್ಲದ ಬದಗಿನ ತಿರುಳೇ ಕೇಳು (ಪಾಕ್ವಕೀ. ೬-೬೯). ೫. ವ್ಯಭಿಚಾರಿ ಎಂಬರ್ಥದ ಒಂದು ಬಯ್ಗುಳ: ಚದುರುವುಲ್ಲೆಯ ತೆರದೊಳವಳು ಕಿಟ್ಟೋಡಿ ನಡಗುತ್ತ

ಗುಡಿಯ ಕದಗಳಂ ಗಳಗಳನೆ ಮುಚ್ಚಿಯುಗುಳಿಯು ಜಡಿಯು ಎದೆಗುಂದಿ ಭೂತಂಗಳೋಡೆ ಸಿದ್ಧರ್ ನೋಡೆ ಬದಗು ಹೊಲೆಮಾಲೆ ನೀನೊಳ ಪೊಗಲ್ಪಿಡುವೆನೆ ಭಲರೆ ಎಂದಾರ್ದನೊಲಿದು (ಶಸುಶ್ರು. ೩-೦-೨೨).

**ಬದಗುಗೆಯ್** (ಕ್ರಿ). ತೊತ್ತುಗೆಲಸ ಮಾಡು; ಊಳಿಗ ಮಾಡು : ಅರಸರ ದೆಸೆಯಿಂ ಮನೆಯುಂ ಕವರ್ತೆವೋಪುದುಂ ಪೆಱರ್ ಕೀೞಲೊ ಳಿಮ್ಮುಬ್ಬೆಯುಂ ಮುತ್ತುಬ್ಬೆಯುಂ ಸಾರ್ದು ಬದಗುಗೆಯ್ವಾಗಳ್ (ಆಶ್ರು. ೩-೩೪ ಪ); ಪೆಱರ ಕೀೞಲಂ ಸಾರ್ದೆಮ್ಮುಬ್ಬೆಯುಂ ಮುತ್ತುಬ್ಬೆಯುಂ ಬದಗುಗೆಯ್ವಾಣಾಶಿರ್ಪನಂ (ಜಾಕ್ರಂಕ್ರು. ೦೮). [ಬದಗು + ಕೆಯ್$_{1}$]

**ಬದಗುಳಿಗ** (ನಾ). ಊಳಿಗ ಮಾಡಿ ಜೀವಿಸುವವನು ; ತೊತ್ತು : ಬದಗುಳಿಗನ ತೋಳ್ಮುಟ್ಟಿದ ಸುದತಿಯೊಳಿಂಬಾಗದಂತೆ ಕೆಟ್ಟುದು ಪುಱ ಮುಟ್ಟಿದ ದುಗ್ಧದಂತೆ . . . ಪತಿಗೆ ಶಯ್ಯಾತಳದೊಳ್ (ಹುಕೋಚ. ೨-೩೯).
[ಬದಗು + — ಉಳಿಗ$_{2}$]

**ಬದಜಾತ** (ನಾ). ಕ್ಷುದ್ರವ್ಯಕ್ತಿ; ಅಲ್ಪ; ನೀಚ : ಈ ಬದಜಾತನನ್ನು ಹೊಡದು ಓಡಿಸೋ ! (ಜಂಕ್ರಬು. ೯೬೯). [← ಪಾರ. ಹಿಂ. ಬದ್‌ಜಾತ್]

**ಬದಣೆ** 'ಬದನೆ' ನೋ.

**ಬದಣಿಕೆ** 'ಬಂದಣಿಕೆ' ನೋ.

**ಬದಣೆ** 'ಬದನೆ' ನೋ.

**ಬದಣೆಗಾಯಿ** 'ಬದನೆಕಾಯ್' ನೋ.

**ಬದಣೆಗುಪ್ಪೆ, ವದಣೆಗುಪ್ಪೆ** (ನಾ). ಒಂದು ಸ್ಥಳದ ಹೆಸರು : ಬದಣೆ ಗುಪ್ಪೆ ನಾಮ ಅವಿನೀತಮಹಾಧಿರಾಜೇನ ದತ್ತೇನ ಪಡಿಯೇಃಬಱೊಳಂ ಊರೊಳ್ಪನ್ನಿರ್ಕ್ಕಣ್ಡುಗಜ್ಗೆಯ್ದು (ಎಕ. I. ೦-೦೯; ೪೮೮). **ವದಣೆಗುಪ್ಪೆ** : ಪುನ್ನಾಡುಎಡೆನಾಡುವಿಷಯೆ ವದಣೆಗುಪ್ಪೆ ನಾಮ ಗ್ರಾಮಃ (ಎಕ. III (B). ತಂಜನ. ೨೬೬-೫೩; 808). [ಬದಣೆ (< ಬದನೆ) + ಕುಪ್ಪೆ$_{1}$]

**ಬದನಾಮಿ** 'ಬದ್ನಾಮಿ' ನೋ.

**ಬದನಿಕೆ** 'ಬಂದಣಿಕೆ' ನೋ.

**ಬದನಿದಿ** (ನಾ). ಒಂದು ಸ್ಥಳದ ಹೆಸರು : ಮೂಡನ ಸೀಮೆ ಕಳ್ಳಿವೆಟ್ಟನ ಮೂಡಣ ಪೊರೆಯು ಮೂಱುಬಟ್ಟು ಒಳಗು ಮೂಡಣ ಬಡಗಣ ಕೊನ್ನಡು ಬದನಿದಿಯು ಬಡಗಣ ಒಳ್ಳೆ (ಪ್ರಾಅ. ೦೯೨೭. ೦೨೨-೬೩; 800).
[?]

**ಬದನೆ, ಬದಣಿ, ಬದಣೆ** (ನಾ). ೧. ಒಂದು ಬಗೆಯ ತರಕಾರಿ ಗಿಡ ಮತ್ತು ಅದರ ಕಾಯಿ : ಬದನೆಯು ಪೊಸ ಬಿತ್ತಂ ತೋಡಿ ಬಯ್ತಿಟ್ಟು ಕೂಷ್ಮಾಂಡದ ಫಲದೊಳದಂ ಮಧ್ವಾಜ್ಯದಿಂ ಮುಚ್ಚಿಸಲ್ ಪಣ್ತೊದವಿ ದಱೊಳೆ ಬಿತ್ತಂ ಕೊಂಡು ಬಿತ್ತಲ್ ವಿಚಿತ್ರಂ ಬದನೆಯು ಫಲಮಕ್ಕುಂ ಬಳ್ಳಿ ಕೂಷ್ಮಾಂಡಮಕ್ಕುಂ (ಲೋಕೋಪ. ೬-೫೫); ಕೂಷ್ಮಾಂಡವವರೆ ಬದನೆಗಳಿಂ ಲೇಸಾಗಿರೆ ಮಾಡಿದ ಸವಿಮೇಲೋಗರಮಂ ತಂದು ಬಡಿಸಿದರ್ ಕಾಂತೆಯರ್ (ಕರ್ಮಕ. ೨-೫೫). ೨. (ಆಲಂ) ಹುರುಳಿಲ್ಲದುದು; ಪ್ರಯೋಜನಕ್ಕೆ ಬಾರದುದು: ಪಂಪ ಹುಟ್ಟಿ ಭಾರತವ ಕಟ್ಟಿ ಹಿರಿ ಸಿದ್ಧಪದವ ಮುಟ್ಟಿ ನಿರ್ಜರೆಯು ಪಡೆದ . . . ತೀಡಿದರು ಅದನೆ ಅದನೆ ಯಾರಾರೊ ಎಂದು ರಸವಾರಿ ಹೋಗಿ ಪುಸ್ತಕವೆ ಆಯ್ತು ಬದನೆ (ಮುಕ್ತಿಕಂ. ೨೯-೦೨). **ಬದಣಿ** : ೧. "ಬದಣಿ— ವಾರ್ತಾಕಿ, ಭಂಡಾಕಿ, ಹಿಂಗುಲಿ, ಸಿಂಹಿ, ದುಷ್ಪ್ರಧರ್ಷಣಿ" (ಶಾಕಾ. ೮); ಆ ಕ್ಷೇತ್ರದವೊಳಗಾದ ಅಡಕೆ . . . ಬದಣಿ ಕಬ್ಬು ಕಾರೆಗೆಣಸುಯೇನುಂಟಾದುದನು ಆ ಕ್ಷೇತ್ರಕ್ಕೆ ಸಲುವ ನಿವೇಸನ ೧೫ ಅರೆ X (ಎಕ. III (B). ತಂಜನ. ೨೯೨-೦೫; 1527). **ಬದಣೆ** : ೧. "ವಾರ್ತಾಕವೆಂಬುದು ಬದಣೆ" (ಕಾಯು. ೨೬-೮೦); ಇಂತು ಬದಣೆಯ ಕಾಯಿ ಲಿಂಗವಾಗುತ್ತಮಿರೆ (ಬಸರ. ೯-೬೯); ಸತಿ ಕದ್ದಳೊಂದು ಬದಣೆಯ ಕಾಯನು (ಸಿದ್ಧೇಶ್ರು. ೦೯-೭).

[ದೇ:೫ ತಮಿ. ವಟುತುಣೈ, ವಟುತಲೈ; ಮಲ. ವಟುತಿನ, ವಟುತಿನಿ; ತುಳು. ಬದನೆ; ತೆಲು. ವಂಗ; ಕೋಲಾ. ವಂಗೆ; ಮಾಲ್ತೊ. ಬಟಂಗೊ. / ಹಿಂ. ಬೈಂಗನ್, ಬೈಂಗನೀ; ಮರಾ. ಬೈಂಗಣ್, ಬೈಂಗನ್. / ಸಂ. ವೃಂತಾಕ ].

**ಬದನೆಕಾಯ್, ಬದಣೆಗಾಯಿ, ಬದನೆಕಾಯಿ** (ನಾ). ಒಂದು ಬಗೆಯ ಕಾಯಿಪಲ್ಲೆ; ವೃಂತಾಕ : 'ತುಳುವಬದನೆಕಾಯ್' ಪರಾ. **ಬದಣೆಗಾಯಿ** : ಬದಣೆಗಾಯುಂ ಸಹಜಲಿಂಗಮಂ ಮಾಡಿದಂ ಬಸವಂ (ಕಬಶ್ರು. ೫೬-೯೦). **ಬದನೆಕಾಯಿ** : ಬದನೆಕಾಯಿ ಬೀಜವನ್ನು ಡಿಸೆಂಬರ್ ನಿಂದ . . . ಮೇ ತಿಂಗಳವರೆವಿಗೂ ಸಸಿ ಮಾಡಿ ನೆಡಬಹುದಾಗಿದೆ (ಕಕಕ. ೨೦); ಪುರಾಣ ಹೇಳೋದು, ಬದನೆಕಾಯಿ ತಿನ್ನೋದು (ಗಾದೆ).
[ಬದನೆ + ಕಾಯ್$_{4}$]

**ಬದನೆಕಾಯಿ** 'ಬದನೆಕಾಯ್' ನೋ.

**ಬದನೆಕುತ್ತಿ** (ನಾ). ಬದನೆಗಿಡದಲ್ಲಿ ಮೊದಲ ಸಲ ಬೆಳೆ ತೆಗೆದ ಮೇಲೆ ಉಳಿಯುವ ಬಾಡ; ಗುತ್ತಿ: ಬೆಳಗಿನ ಜಾವ ಎದ್ದೊಡನೆ, ಹೊಗೆಸೊಪ್ಪಿನ ಹಿತ್ತಲಿನಲ್ಲಿ ಉಳಿದ ಹರಿವೆ, ಬದನೆಕುತ್ತಿಗಳಿಗೆ ನೀರೆರೆಯುವ ಸಂಭ್ರಮವಾಯಿತು (ಮುಕಮ. ೫೬೯). [ಬದನೆ + ಕುತ್ತಿ$_{1}$]

**ಬದಮಾಷ್** 'ಬದ್ಮಾಶ್' ನೋ.

**ಬದರ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಬೋರೆ; ಎಲಚಿ : ತ್ರಿದ್ವ್ಯೇಕದಿನಾಂತರಿತ ಬದರಾಕ್ಷಾಮಲಕಪ್ರಮಾಣಾ ಹಾರಂಗಳುಮಪ್ಪ ಮಿಥುನಂಗಳ್ಗೆ ಸಂಭೋಗ್ಯಮಾಗಿ ಸಲೆ ಜಘನ್ಯಭೋಗ ಭೂಮಿಯ ಕಡೆಯ ಪಲಿತೋಪಮದೊಟನೆಯ ಭಾಗಮುಱುದುದು (ಆಪು. ೬-೯೯ ಪ); ಆತತಪರಿಖಾವಳಯಂ ಸುತ್ತಲುಮನುಪಮ ಬದರಾಶೋಕ ಮಹೀಜಂ (ಸುಕುಮಚ. ೦೦-೫೬ ದಗಳ); ವಂಗುವಿನ ಮೊಳೆವಲ್ಲಳೂರಿದ ಬದರವನನಿಯನಿಗೀವಳು ಕಾಂತೆ (ಗಕಾಸ. ೫೦-೦೦೦). [ಸಂ.]

**ಬದರಿ** (ನಾ). ೧. = ಬದರ: "ಬದರೀ, ಕುವಲೀ, ಕರ್ಕಂಧೂಃ— ಈ ಮೂಱುಂ ಬೋರೆಗಿಡದ ಪೆಸರ್" (ಹಲಾಯು. ೩೨-೯೦); ಬದರಿಯ ವೃಕ್ಷದ ಮೂಲದೊಳುದಕಂ ಮಧು ಮಧುಕಮೆಳ್ಗೇಬಿಮನರದಿಕ್ಕಿದೊಡದು . . . ಮಧುರಫಲನೆಱಗುಗುಮಧಿಕಂ (ಲೋಕೋಪ. ೬-೩೭); ತೆಂಗು ತಾಟ್ ಬದರಿ ದಾಡಿಮ (ಶರ್ಕ್ರು. ೨-೩). ೨. ಹತ್ತಿಗಿಡ. ೩. ಹಿಮಾಲಯದ ಉತ್ತರದಲ್ಲಿ ಅಲಕನಂದಾ ನದಿಯ ದಡದಲ್ಲಿರುವ ಒಂದು ಪುಣ್ಯ ಕ್ಷೇತ್ರ: ಧರೆಯೊಳಗೆ ಶ್ರೀಪುರಂದರವಿಠಲರೇಯನ ಪರಮಭಾಗವತರ ಉದರ ಬದರಿ (ಪುರಂದ. ೨-೨೭-೩); ಅರ್ಭಕತನದೊಳ್ಳೆದಿ ಬದರಿಯಲಿ ಮಧ್ವಮುನಿ ನಿರ್ಭಯದಿ ಸಕಲಶಾಸ್ತ್ರವ ಪಠಿಸಿದ (ಕಕಂ. ೩೯).
[ಸಂ. ಬದರೀ ]

**ಬದರಿಕಾಶ್ರಮ** (ನಾ). = ಬದರಿ ೩: ಮುನ್ನೆ ಬದರಿಕಾಶ್ರಮದೊಳ್ ಆ ಯತಿಯಿಂದಂ ನರ ನಾರಾಯಣರೆನೆ ನೆಗಟ್ದಿಪರಿಗ ನಾವಿರ್ವರುಂ (ಕಂಕಾ. ೩೯-೯೯ ಪ); ಬದರಿಕಾಶ್ರಮದಿ . . . ಮಹಾನುಭಾವರ ಪಿತನು ನಡೆತಂದ (ಕಂಕಕ. ೩-೦); ಬದರಿಕಾಶ್ರಮಕೆ ಪುನರಪಿಯೈದಿ ವ್ಯಾಸಮುನಿಪದಕೆರಗಿ . . . ಬ್ರಹ್ಮತ್ವವೈದಿದ ಮಧ್ವಮುನಿರಾಯಗಭಿವಂದಿಪೆ (ಕಕಂ. ೩೫).
[ಸಂ.]

**ಬದರಿಕೆ** (ನಾ). ೧. ರಕ್ಷಕ; ಕಾವಲುಗಾರ; ಪಹರೆಯವನು : (೯). ೨. ರಕ್ಷಣೆ; ಕಾಪಾಡುವಿಕೆ: ಗ್ರಾಮನೌಕರಿಗಳನ್ನು ನೋಡುವವರು ಇಡುವ ಲೆಕ್ಕಗಳ ಮತ್ತು ಇತರ ಕಾಗದಪತ್ರಗಳ ಬದರಿಕೆ, ಅವುಗಳನ್ನು ಹಾಜರ್ ಮಾಡೋಣ ಮತ್ತು ವರ್ಗಾಯಿಸೋಣ (ಗ್ರಾಮಾಕ. ೧೦೦).
[ ← ಪಾರ. ಮರಾ. ಬದರಕಾ, ಬದ್ರಕಾ ]

**ಬದಲಾಯಿಸು** 'ಬದಲಿಸು' ನೋ.

**ಬದಲಾವಣೆ** (ನಾ). ಮಾರ್ಪಾಡು; ವ್ಯತ್ಯಾಸ: ಚಿಕ್ಕಪ್ಪನ ಮುಖದಲ್ಲಾದ ಗಮನಾರ್ಹ ಬದಲಾವಣೆಯನ್ನು ಗುರುತಿಸಿ ಯಶೋದೆ ಹೇಳಿದಳು (ವಾಕ್ಯ. ೩೭); ಸರಿಯಾದ ಲೆಕ್ಕವಿದ್ದರೆ ನಿಮ್ಮ ಅವಶ್ಯಕತೆಗಳಿಗೆ ಸರಿಯಾಗಿ ಅಂದಾಜು ಪತ್ರದಲ್ಲಿ ತಕ್ಕ ಬದಲಾವಣೆಗಳನ್ನು ಮಾಡಲು ಸುಲಭವಾಗುವುದು (ಆಡುಕ. ೦೨೩).
[ಬದಲಾಯಿಸು (<ಬದಲಿಸು) + — ಅಣೆ₄ ]

**ಬದಲಿ₁** (ಗು). ೧. ಬದಲಾದ; ಬೇರೆಯಾದ: ನಾನು ಕಾಲಕಾಲಕ್ಕೆ ಕೊಂಡ ಹಲವಾರು ಕೊಡೆಗಳು ಹೀಗೆ ಒಂದೊಂದು "ಬದಲಿ ಆಸಾಮಿ" ಇಟ್ಟು ಓಡಿಹೋದುದರಿಂದ ನನಗೀಗ ಒಂದು ಹಳೆ ಕೊಡೆಗಳ ಅಂಗಡಿ ಇಟ್ಟರೆ ಹೇಗೆ ಎಂಬ ವಿಚಾರ ಬರತೊಡಗಿದೆ (ಕೇಳ್ಕ. ೮೨). (ನಾ). ೨. ಒಂದು ವಸ್ತುವಿಗೆ ಪ್ರತಿಯಾಗಿ ಬರುವ ಮತ್ತೊಂದು ವಸ್ತು ಅಥವಾ ಒಬ್ಬ ವ್ಯಕ್ತಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ವ್ಯಕ್ತಿ: ನೀನು ಕೊಟ್ಟ ಪುಸ್ತಕಕ್ಕೆ ಬದಲಿಯಾಗಿ ಈ ಪುಸ್ತಕವನ್ನು ಇಟ್ಟುಕೊಂಡಿರು (ಲೂಪ). [ ← ಹಿಂ. ಮರಾ. ಬದಲೀ ]

**ಬದಲಿ₂** (ಅ). ಪ್ರತಿಯಾಗಿ; ಬದಲಾಗಿ: ರಶೀದಿಗಳನ್ನು ಕೊಡದೆ ಇದ್ದರೆ ಆ ಶೇಕದಾರ ಶ್ಯಾನುಭಾಗರಿಗೆ ನಶಿಹತ್ತು ಮಾಡಿ ಅವರಿಗೆ ಬದಲಿಯತಬಾರಿ ಶೇಕದಾರ ಶ್ಯಾನಭಾಗರನ್ನ ಮೊಕರರಮಾಡಿಟ್ಟು . . . ನಡೆದುಕೊಳ್ಳುವದು (ಮುಹಾಮು. II. ೬೬). [< ಬದಲ್₁]

**ಬದಲಿನೇಮಕ** (ನಾ). ಒಬ್ಬ ವ್ಯಕ್ತಿಗೆ ಬದಲಾಗಿ ಮತ್ತೊಬ್ಬ ವ್ಯಕ್ತಿಯನ್ನು ಗೊತ್ತುಮಾಡುವಿಕೆ.—ನಿಯಮಿಸುವಿಕೆ: ಕಾರ್ಯನಿರ್ವಾಹಕನೇಮಕ, ಬದಲಿನೇಮಕ (Acting appointment. ಶಕ್ರಿ.ಶ. ೨).
[ಬದಲಿ₂ + ನೇಮಕ]

**ಬದಲಿಭತ್ಯ** (ನಾ). (ಬದಲಿ ಕೆಲಸಕ್ಕಾಗಿ ಕೊಡುವ) ಹೆಚ್ಚಿನ ಹಣ: ಬದಲಿಭತ್ಯ, ಕಾರ್ಯನಿರ್ವಾಹಕ ಸಂಭಾವನೆ (Acting allowance. ಶಕ್ರಿ.ಶ. ೨). [ಬದಲಿ₂ + ಭತ್ಯ (<ಬತ್ಯಾಯ)]

**ಬದಲಿರಜೆ** (ನಾ). ರಜಾದಿನವೊಂದರಲ್ಲಿ ಕೆಲಸ ಮಾಡಿದ ಪ್ರಯುಕ್ತ ಅದರ ಬದಲಿಗೆ ಬೇರೊಂದು ದಿನ ಸಿಗುವ ರಜೆ: ನಿನ್ನೆ ಬದಲಿರಜೆ ಹಾಕಿದ್ದೆ (ಲೂಪ). [ಬದಲಿ₂+ರಜೆ (<ರಜಾ)]

**ಬದಲಿಸು, ಬದಲಾಯಿಸು** (ಕ್ರಿ). ೧. ವ್ಯತ್ಯಾಸಗೊಳ್ಳು; ಮಾರ್ಪಾಡು ಹೊಂದು; ಬದಲಾಗು: ಈ ತಾರೆಗಳ ಸ್ಥಾನಗಳು ಯಾವಾಗಲೂ ಬದಲಿಸುತ್ತವೆಂದು ಅವನಿಗೆ ತಿಳಿಯಿತು (ಮುಂಜಾಮ. ೩–೦೬೯); ಸುಂದರಿಯ ಮನಸ್ಸಿನ ಸ್ಥಿತಿಯೇ ಬದಲಿಸಿತು (ಹಳ್ಳಿಹಾ. ೦೦೯). ೨. ವ್ಯತ್ಯಾಸಗೊಳಿಸು; ಬದಲಾಗುವಂತೆ ಮಾಡು; ಮಾರ್ಪಡಿಸು: ಕೇವಲ ಪ್ರೇಮ ಹಾಗೂ ಮರಣಗಳು ಮಾತ್ರ ಸಕಲವನ್ನೂ ಬದಲಿಸಬಲ್ಲವು (ಕೃಪಾಕೋ. ೩೯); ತನ್ನಭಿಮತವನು ಬದಲಿಸದಾತನು ಹೊಂಡದ ನೀರಿನಂತಹನು (ಅಂಜಾಶ. ೦೯೬–೨೦). **ಬದಲಾಯಿಸು**: ೧. ಆ ಹತ್ತು ವರ್ಷಗಳು ಹರವಲ್ಲಭನ ಸಂಸಾರವು ಬದಲಾಯಿಸಿ ಬಹಳ ಹೀನಸ್ಥಿತಿಗೆ ಬಂದಿದ್ದಿತು (ಕೀಲೀಜ. ೬೦); ಹುಡುಗರು ಎಷ್ಟು ಬೇಗ ಬದಲಾಯಿಸುತ್ತಾರೆ ಅನ್ನುವುದೇ ವಿಚಿತ್ರ (ಜಾಕಿಮ. ೦೦೦). ೨. ಶ್ರೀಪುರಂದರದಾಸರು . . . ಪ್ರಚಾರದಲ್ಲಿದ್ದ ಪಾಠಪದ್ಧತಿಯನ್ನು ಬದಲಾಯಿಸಿ . . . ಪಿಳ್ಳಾರಿಗೀತವನ್ನು ಸೃಷ್ಟಿಸಿದರು (ಜಗದಾ. ೬೩); ಮಾತು ಬದಲಾಯಿಸಲು ಸಂಗಾಯಿ ನುಡಿದಳು (ವಶಿಶಾ. II. ೯೬೬). ೩. ಒಂದು ವಸ್ತುವಿಗೆ ಪ್ರತಿಯಾಗಿ ಬೇರೊಂದು ವಸ್ತುವನ್ನು ಕೊಡು; ವಿನಿಮಯ ಮಾಡು: ಎಣ್ಣೆಯು ಸೋರ ಹತ್ತಲು . . . ವ್ಯಾಪಾರಿ ಜನರು ಬದಲಾಯಿಸಿ ಕೊಡುವದಿಲ್ಲ (ಮುಂಜಾಮ. ೬೯ ಕೃತ್ಯಾಶಕ). [ಬದಲು₂ + — ಇಸು₁]

**ಬದಲು₁** (ಕ್ರಿ). ವ್ಯತ್ಯಾಸಗೊಳ್ಳು; ಬದಲಾಯಿಸು; ಬೇರೆಯಾಗು: ಬೋಳನ ಆಲೋಚನೆಯು ಆಕಾಶದ ಬಣ್ಣವು ಬದಲುತ್ತಾ ಇದ್ದಂತೆ ನೋಯುತ್ತಾ ತನ್ನ ಮನೆಗೆ ಹೋದನು (ಕಾಂಜಿ. ೦೨ ಕತಾಸಾರ).
[←ಅರ.ಪಾರ. ಹಿಂ. ಮರಾ. ಬದಲ್]

**ಬದಲು₂** (ನಾ). ೧. ಬದಲಾವಣೆ; ಮಾರ್ಪಾಡು; ಪರಿವರ್ತನೆ. ೨. ಪ್ರತಿಯಾದುದು; ಒಂದಕ್ಕೆ ಬದಲಾಗಿ ಮತ್ತೊಂದು ಇರುವುದು: ಗ ೩ನೂ ಅರಮನೆಗೆ ವಹಿಸಿಕೊಂಡು ಆ ಬದಲಿಗೆ ಗ ೩ . . . ತೆಗೆದುಕೊಂಡು (ಎಶಿ. VII. ಶಿವಮೊ. ೨೯–೨೬ ; 1712); ಕ್ರತುವೀರ್ಯಸಂಭವನ ಕೀರ್ತಿಯುಳಿದಿನ್ನೊಂದು ಬದಲಿಲ್ಲವೆರೆ ಮಗಳೆ (ಕರಕು. ೬–೨೨); ಈ ರೂಪಿಗೆ ಬದಲಿಲ್ಲ (ಶಕೀರ.೩೬). ೩. ಪ್ರತಿಯಾಗಿ ಹೇಳುವ ಮಾತು; ಮಾರ್ನುಡಿ; ಪ್ರತ್ಯುತ್ತರ: ನಿನ್ನರ್ಭಕಂ . . . ವಿದಿತೋಪಚಾರದಿಂದುರೆ ತೃಪ್ತಿಗೊಳಿಸಿಹಂ ಬದಲುಂಟೆ ಸಾಕೆನುತ ಪರಸೆ (ಕರಕು. ೯–೯೩); ಸುವೇಲೆಯ್ಯೆ ಧರ್ಮಜನೆ ಬದಲನು ಪೇಳಬೇಡ (ಶಶಿಶಾ. ೦೯–೯೩); ಈ ಬದಲನ್ನು ಧೈರ್ಯವಾಗಿಯೆ ಹೇಳಿಬಿಟ್ಟರಾದರೂ ಒಳಗೊಳಗೆ ಹೆದರಿಕೆ (ಹುಟುಹು. ೬೩). ೪. ವಿನಿಮಯ; ಅದಲುಬದಲು: ಪಟ್ಟಣಗಳಲ್ಲಿಯೂ ಅನೇಕ ಸಣ್ಣಸಣ್ಣ ಪದಾರ್ಥಗಳನ್ನು ಪದಾರ್ಥದ ಬದಲಿಗೆ (Barter) ಬೆಲೆ ಕೊಳ್ಳುವ ಪಾಡಿಕೆಯುಂಟು (ಜಾಪ್ರ. ೦೯). ೫. (ಕೆಲಸ ಮುಂತಾದುವಕ್ಕೆ) ಒಬ್ಬನಿಗೆ ಪ್ರತಿಯಾಗಿ ಬರುವ ಮತ್ತೊಬ್ಬ ವ್ಯಕ್ತಿ: ಎಬ್ಬಿಸಲು ಕೋಪಮಂ ಧರಿಸುವನೊ . . . ಎಳಿಸಲ್ಕೊಬ್ಬರಂ ನಾ ಕಾಣೆ ಬದಲನೆಂದಳಲಿದಳು (ಕುರಂಗ. ೩–೩೩). 'ಬದಲಿ₁' ಪರಾ.

ಬದಬದಲು (ದ್ವಿರುಕ್ತಿ): ಬೆಟ್ಟು ಬಿಲ್ಲೆಡದ ಬದಬದಲು ಧನುವಿಡಿಯಲದನೊಡನೊಡನೆ ಪಿಡಿಗೊಡದಲ (ಕಪಮು. ೨೩–೩೩). **ಬದಲಾಗಿ** = ಪ್ರತಿಯಾಗಿ: ಒಂದು ಬಗೇ ಜಿನುಸು ಕೊಟ್ಟು ಅದಕ್ಕ ಬದಲಾಗಿ ಮತ್ತೊಂದು ಬಗೇ ತೆಗೆದುಕೊಳ್ಳುವಿಕೆ (ಸಿದ್ಧಾಂತ. ೨೯೬); ಗೋಚರ ಮಾಯ್ತು ಸಮರವೀವ ಸುಭಟರ ಮೋಹರಕೆ ಬದಲಾಗಿ . . . ಮದುವೆ ದಿಬ್ಬಣದೊಸಗೆ ಮೆರವಣಿಗೆ! (ಶತ್ಯಾಂಗ. ೬೬–೨೦೦೩). **ಬದಲಾಗು** = ವ್ಯತ್ಯಾಸಗೊಳ್ಳು; ಪರಿವರ್ತನೆಯಾಗು: ಬನಸಿರಿ ತೊಟ್ಟ ಪೊಂದೊಡವೆಂಗೆ ಬದಲಾಯ್ತು (ಶ್ರೀರಾಕ. ೯೦ ಪೀಠಿ); ನನ್ನಿಂದಲೆ ಲೋಕ ಉಳಿಯುವುದು; ನನ್ನಿಂದಲೆ ಯುಗ ಬದಲಾಗುವುದು (ಅಕ್ಷಮಿ. ೩೯). **ಬದಲು ಹೇಳು** = ಉತ್ತರಕೊಡು; ಪ್ರತ್ಯುತ್ತರ ಹೇಳು: ನಾನು ಏನು ಹೇಳಿದರೂ ಏನು ಮಾಡಿದರೂ ಬದಲು ಹೇಳೊಲ್ಲ (ದಾಕಟ್ಟ. ೦೨೦).
[<ಬದಲು₁]

**ಬದಲು₃** (ಅ). ಪ್ರತಿಯಾಗಿ; ಬದಲಾಗಿ: ನಾನು ನಿನ್ನನ್ನು ಪ್ರೀತಿಸುವುದನ್ನು ನಿಲ್ಲಿಸಿಬಿಟ್ಟಿದ್ದೇನೆ. ಅದರ ಬದಲು ಇದೀಗ ನಾನು ನಿನ್ನನ್ನು ತಿರಸ್ಕರಿಸುತ್ತೇನೆ (ಅಕ್ರಮ. ೨೯); ದಿನ ದಾಟಿ ದಿನ ಬಂದರೂ ಬರಬೇಕಾದ ದಿವಸಗಳು ಬರಲೊಲ್ಲವು. ಬದಲು ನದಿ . . . ಬಾವಿಗಳ ನೀರು ಅದೆಲ್ಲಿ ಮಾಯವಾಗುತ್ತಿದೆಯೋ ತಿಳಿಯದು (ಕಾಂಪ. ೦). [<ಬದಲು₁]

**ಬದಲುಗೈ** (ಕ್ರಿ). ಅದಲುಬದಲು ಮಾಡು; ಬದಲಾಯಿಸು: ವನವಾಸಮೆನಗೆ ನಿಯಮಿತಮಾದುದುರೆ ಧರ್ಮದಿಂದಿಳೆಯ ನೀಂ ಪೊರೆಯ ವೇಳ್ಕುಮಂತಿರಲೀವರ್ಗದ ಬದಲುಗೈದೊಡಾ ತಂದೆ ಬಾಣೆದಯಿಂದೆ ಬೀಳ್ಗಲ್ಲೆ (ಛಕಕ. ೫–೨೬). [ಬದಲು₂ + ಗೈ (<ಕೆಯ್₁)]

**ಬದಲುಜವಾಬು** (ನಾ). ಎದುರುತ್ತರ; ಮಾರ್ನುಡಿ: ಅವರೇನಾದರೂ ಕೋಪಿಸಿಕೊಂಡರೆ ಬದಲುಜವಾಬು ಕೊಡಬೇಡ (ಮುಹಾಮ. ೦೨೩).
[ಬದಲು₂ + ಜವಾಬು]

**ಬದಲುತ್ತರ** (ನಾ). = ಬದಲುಜವಾಬು: ರಾಜಸತಿಗಾನಂದ ಮಿಗೆ . . . ಸಾರ್ಥಕಕೆ ಮನದಂದನಧಿಪತಿಯೆನಲು ಬದಲುತ್ತರವನುಸುರಿದಳು (ಕಶಂಕಾ. ೨–೦–೨೦). [ಬದಲು₂ + ಉತ್ತರ]

**ಬದಲುಮಾತು** (ನಾ). = ಬದಲುಜವಾಬು : ಬದಲು ಮಾತದು ಮಾಣು ! (ವಚನಾ. I, ೯೦೭); ಬದಲುಮಾತಾಡುವವನು ಬೆದರಿಸಿದರೆ ಬಿಟ್ಟಾನೆ ? (ಗಾದೆ). [ಬದಲು₂ + ಮಾತು₁]

**ಬದವು** 'ಬದುವು' ನೋ.

**ಬದಸಾಟ** (ನಾ). ಮೋಸ; ವಂಚನೆ; ಕುಯುಕ್ತಿ: ಆ ಏತಜ್ಹೊಂದು ಬದಿಯ ಬದಸಾ[ಪಾಠಾಂ. ಗಾ]ಟವೊ ! ತನಗಯ್ಯನೆಂದವಜ್ಹದನಪ್ಪೊಡೆ ಕುಶಂ ಏತಿಯುಮನಿಸುವನ ? (ರಾಮಾಶ್ವ. ೦೬೦-೦೩). [ಬದಸು + ಆಟ]

**ಬದಸು** (ನಾ). ಮೋಸ; ಕುಟಿಲತೆ: "ಬದಸು, ಬದಗು – ಕೌಟಿಲ್ಯಂ" (ಕಬಿಕ. ಕಾ. ೨). 'ಬದಗು', 'ಬದಸಾಟ ಪರಾ. [?]

**ಬದಸ್ಸೂರ್** 'ಬದಸ್ತೂರು' ನೋ.

**ಬದಸ್ತೂರು**, ಬದಸ್ತೂರ್ (ಅ). ಹೇಗೆ ಇದೆಯೋ ಹಾಗೆ; ಯಥಾವತ್ತಾಗಿ : ಆನೆಗೆ ಅಲಂಕಾರಕ್ಕೆ . . . ೩ ಆನೆಗೆ ಹಳದೀ ಜನಾತಿನ ಜಬ್ರೀಜೂಲು ರೇಶ್ಮೆ ಜಾಲರು ಸಹ ೧ ಬದಸ್ತೂರು ಲೋಕಸಿದಿ ೧ ಕತ್ತಿಗೆ ಕಟ್ಟುವ ಪಟ್ಟಿ ಬದಸ್ತೂರು ೧ ಸಹ (ಎಕ. XIV. ಪಂಪತ. ೨೧೨-ಕ್ರಿಶ ೧೯೨ ; 1847); ತಾವೂ ಕೋಟೆ ವಳಗೆ ಹೋಗಿ ಬದಸ್ತೂರು ಆನೆಕಲ್ಲನು ಬಲ ಕಾಯಿಸಿ (ಕ್ರಷ. ೯೭); ಬದಸ್ತೂರು ಒಂದೊಂದು ಹೋಬಳಿ ಶೇಕದಾರನು . . . ಶ್ಯಾನುಭಾಗನ ರುಜು ಸಹ ಮಾಡಿ ರಶೀದಿ ಕೊಡುತ್ತಾ ಬರುವದು (ಮಹಾಶಾಂ. II, ೬೬). **ಬದಸ್ತೂರ್**: ಡಿಕ್ರಿಯ ಅಮಲ್ಜಾರಿಯ ಬಗ್ಗೆ ನಡೆಯುವ ಹರಾಜಿನೊಳಗೆ . . . ಕ್ರಯದಾರನಿಂದ ತರಲ್ಪಡುವ ಬದಸ್ತೂರ್ ದಾವೆ (ನ್ಯಾಶಾಕ. ೦೬೨). [←ಪಾರಂ. ಹಿಂ. ಬದಸ್ತೂರ್]

**ಬದಹು** 'ಬದುವು' ನೋ.

**ಬದಾಮಿ** 'ಬಾದಾಮಿ' ನೋ.

**ಬದಾಮು** 'ಬಾದಾಮಿ' ನೋ.

**ಬದಿ₁** (ನಾ). ೧. ಪಕ್ಕ; ಮಗ್ಗಲು; ಪಾರ್ಶ್ವ: "ಬದಿಯೆನೆ ಪಾರ್ಶ್ವ" (ಕಕರ. ೬೩); ಕಾಳ್ಗಿವಿಗಳೆರಡು ಬದಿ ಗಗನಭುವನವೇ ಗೃಹವು (ಕಷೋ. ೦೬೦-೯೯೬) ; ಬಲದ ಬದಿ ವೇದಾಂತಿಗಳ ಭಾಗ ಎಡದ ಬದಿ ಪಂಡಿತರ ಭಾಗು (ಬಸಕ್ರ. ೩೫-೦೬); ಬಲದ ಬದಿಯಲ್ಲಿ ಭವಹರನೆಂಬ ಗಣೇಶ್ವರನೆನಿಸಿರ್ಪಾ ಅಯ್ಯ (ಸಿದ್ಧೇಶ.೬೪-೦೬೮). ೨. ಪಕ್ಕೆ; ಅಳ್ಳೆ; ಬರಿ: "ಬದಿಯೆ ಪಕ್ಕೆಯನಿಕ್ಕು" (ಕಬ್ಬಿಕ್ಕೆ. ೩೦); ಕಡೆ ಬೇವ ಸರ್ಪ ಬದಿ[ಪಾಠಾಂ.ರಿ] ಬೇವ ಸಾರಂಗ . . . ದೆಸೆಗೆಟ್ಟು ಕವಿದವು ಹರಿಶ್ಚಂದ್ರಭೂಪತಿಯ ಮೇಲೆ (ಹಕಕಾ. ೦೦-೯); ಕುಣಿದವಿಬ್ಬರ ಮುಷ್ಟಿಯಬ್ಬರ ಹಣೆಯಲಿ . . . ಕಂದದಲಿ ಶಿರದಲಿ ಬದಿಯಲುದರದಲಿ (ಕುಮ್ಯಾಕ. ೨-೦೦೬); ತುಜ್ಹಿಸಿಕೊಳುತಿದ್ದಸೆಯ ಬಗೆಗಳ ಹೊಜಗನಾಲಿಸುತ . . . ಹರಿಬದಾಜಿಯ ಹೊಜ್ಹಗೆ ವಾಳರ ಬರವ ಬಯಸುತ್ತಿರ್ದನಾ ಹನುಮ (ತೊರಾ. ೩-೩-೨). ೩. ಹತ್ತಿರ ; ಸನಿಹ; ಸಾಮಿಪ್ಯ: ಇದನು ಪಠಿಸೆ ಸದಾ ಭಾಗ್ಯವಕ್ಕು . . . ಬದರನಿವಾಸ ವಿಜಯವಿಠ್ಠಲ ಬದಿಯಲ್ಲೆ ಬಂದೊದಗುವ (ವಿದಾಕ್ಕ. ೯೩-೯); ಇದೆ ರಾಮನೆನುತ ಬಯಲನ್ನಪ್ಪಲೊರ್ವ . . . ಬದಿಯೊಳಿಹನೆಂದ ರಸಿ ತಕ್ಕೈಸಲೊರ್ವ ... ವಿಶ್ವರೂಪಾಂತು ಸುದತಿಯರ ಕಂಗಳಿಗೆ ತೋರಲಡೆಯಾಡಿದರು (ವಂಕಾರಾ. ೨-೨೦-೦೦); ಮಾದಯ್ಯನು . . . ಅವಳ ತಲೆಯ ಬದಿಯಲ್ಲಿ ನಿರ್ವಿಣ್ಣನಾಗಿ ಕುಳಿತಿದ್ದನು (ಶ್ರೀಶಾಮ. ೦೦೦).

**ಬದಿಬದಿ** (ದ್ವಿರುಕ್ತಿ): ಬೀದಿಯ ಬದಿಬದಿಗೆ ಚದುರಂಗವುದುರ್ಯಾವು (ಜೂಹಾತಿ. ೯೯-೦). **ಬದಿಗಾಗು**=ಪಕ್ಕಕ್ಕೆ ಜರುಗು; ಅರುಗಾಗು; ಕೆಲಸಾರು: ನೀರಾಗೆ ನಿಂತಿರುವ ನೀಲೀವಾವುದದಣ್ಣಾ ನೀರು ಕಟ್ಟಾವು; ಬದಿಗಾಗೊ (ಜಮಹ. ೨೦). **ಬದಿಗಿಡು** = ೧. ಪಕ್ಕಕ್ಕೆ ಸರಿಸು; ಪಕ್ಕದಲ್ಲಿ ಇಡು: ಈ ಪಾತ್ರೆಯನ್ನು ಆ ಬದಿಗಿಡು (ಜೂಪ). ೨. (ಅಲಂ) ಗಮನಿಸದಿರು ; ಗಣನೆಗೆ ತೆಗೆದುಕೊಳ್ಳದಿರು ; ಅಲಕ್ಷಿಸು : ಅವಳ ಮನಸ್ಸನ್ನು ನೋಯಿಸಬಾರದೆಂದು ತಮ್ಮ ಎಲ್ಲ ಅನಾನುಕೂಲತೆಗಳನ್ನೂ ಬದಿಗಿಟ್ಟು . . . ಶಿಕ್ಷಣ ಕೊಡಿಸಿದ್ದರು (ಕುಂಕುಮ. ೩೯) ; ಪಾದ್ರಿಯೂ ಮೊದಲಿನ ಸಂಕೋಚ ಬದಿಗಿಟ್ಟು ಬಹುಗಂಭೀರರೀತಿಯಲ್ಲಿ ಹೇಳಿದರು (ಆಮೋಲ. ೨೬). **ಬದಿಗಿರಿಸು** = ೧. ಪಕ್ಕದಲ್ಲಿಡು : ಅದನ್ನು ಅವನ ತಟ್ಟೆಯ ಬದಿಗಿರಿಸಿ ತಾನು ಅವನ ಎದುರು ಕುಳಿತುಕೊಂಡಳು (ಮಹಾಕ್ಷ್ಮಾ. ೦೬). ೨. = ಬದಿಗಿಡು ೨ : ತಮ್ಮ ವೈಯಕ್ತಿಕ ಆಶೋತ್ತರಗಳನ್ನೂ ಮನೋಧರ್ಮವನ್ನೂ ಬದಿಗಿರಿಸಿ, ಮಕ್ಕಳ ಬೆಳವಣಿಗೆಗೆ ಸೂಕ್ತವೆನಿಸುವಂತೆ ವರ್ತಿಸುವರು (ಶಿಕ್ಷಣ. ೯೯೯) ; ನಿನ್ನ ಸಮಾಧಾನಕ್ಕಾಗಿ ನನ್ನ ದುಃಖವನ್ನು ಬದಿಗಿರಿಸಿ ಬರೆಯಲು ಕುಳಿತಿದ್ದೇನೆ (ಕುಂಕುಮ. ೬೨). **ಬದಿಗೊತ್ತು** = ಬದಿಗಿಡು ೨ : ಬಪ್ಪ ಕರ್ಮಗಳ ಬದಿಗೊತ್ತಿ ಬೊಮ್ಮನೊಳಗಿಪ್ಪವನೆ ಯೋಗಿ (ಸರ್ವಜ್ಞ. ೩೦೨); ಈ ಗ್ರಂಥಗಳಲ್ಲಿ . . . ಜಾತಿ ಕುಲ ಗೋತ್ರಗಳನ್ನು ಬದಿಗೊತ್ತಿ ಭಕ್ತಿಗೆ ಕೊಟ್ಟ ಪ್ರಾಶಸ್ತ್ಯ, ಅತಿಶಯ ಬೆಲೆಯುಳ್ಳದ್ದು (ಕಾಕರ. ೩೯೬). 'ಬರಿ'₁ ಪರಾ.

[ದೇ. ॥ ತುಳು. ಬದಿ]

**ಬದಿ₂** (ನಾ). ಕೆಸರು ; ಪಂಕ ; ರಾಡಿ : "ಪಕ್ಕೆ ಕೆಸರುಂಗಳೊಳಂ ಬದಿ" (ಕಾಕ್ಮೂಕಂ. ೯೯) ; ಬದಿಗಳೊಳಗೆ ಬಿದ್ದು ಹೊರಳಿದವರು ನೆಜ್ಹ ಕೆದಜ್ಹಿದ ತಲೆಯಿಂದಲಾಗ ಗದಗಾಪುಗೊಳುತ ಹೋಗಲು ದೆಸೆ ಕಾಣದೆ ಸದೆಯಿಸಿಕೊಂಡರೇನೆಂಬೆ (ಕುಂಪಾ. ೦೬-೦೩); ಗದ್ದೇ ಬದೀಲಿ ಬಿದ್ದು ಮುಂಡೀಯು ನೊಂದವು ಮುಂಗೈ ಕಿತ್ತೂ (ಹುಟ್ಟಿಹ. ೯೨) ; ನದೀ ದಾಟ ಬದೀಲಿ ಬಿದ್ದ ಹಾಗೆ (ಗಾದೆ). [ದೇ. ॥ ತಮಿ. ವತಿ ; ತೆಲು. ಬಾಡಿ, ಬಾಡೆ]

**ಬದಿಕೆಜ್ಹೆ** (ನಾ). ಒಂದು ಕೆರೆಯ ಹೆಸರು : ಬದಿಕೆಜ್ಹೆಯ ಕೀಜ್ಹೇರಿಯ ಬೇರಂಗಾಲುಂ ಒಕ್ಕಲೊಳೊನ್ದು ಪೊಜ್ಹೆಯುಂ . . . ಬಳಿವತ್ತಮುಂ ಸಲ್ವದು (ಎಕ. III (II). ಪಂಜತ. ೨೯೯-೦೦ ; 977). [ಬದಿ₂ + ಕೆಜ್ಹೆ]

**ಬದಿಪಾರು** (ಕ್ರಿ). ಅಕ್ಕಪಕ್ಕ ನೋಡು : ಪೊಸಗಪಲಿದೆತ್ತಣದಿಂದೆಂದು ಬದಿಪಾರಲು (ಇಂದ್ರಕೀ. ೩೦). [ಬದಿ₁ + ಪಾರು₁ (< ಪಾರ್₁)]

**ಬದಿಯೆಲು** (ನಾ). ಪಕ್ಕೆಯ ಮೂಳೆ : ತಿವಿದನು ತಿರುಗಿ ಬದಿಯೆಲು ನುಗ್ಗು ನುಸಿಯಾಗೆ (ಕುಮ್ಯಾಕ. ೧೦-೪೯); ಸೀಳಿಸೀಳಲುಸಿಟಿಲಿಂದು ಬದಿಯೆಲು ಕಳಚಿ (ತೊರಾ. ೩-೦-೨೦). [ಬದಿ₁+ಎಲು(<ಎಲ್ವು)]

**ಬದಿರಿ** (ನಾ). ಒಂದು ವಂಶದ ಹೆಸರು (?) : ಸಾಕ್ಷಿ ಕೊಡಲೂರ್ ಪೊಜ್ಜುಗಲರು ಎಳ್ಮಡಿಯರು ಬದಿರಿಯಾರುವ್ರ್ ಮುಮುಗರುವ್ರ್ (ವೃಕಾ. ೦೯೧೬, ೦೩-೯ ; 726). [?]

**ಬದಿಶೂಲೆ** (ನಾ). ಪಕ್ಕೆನೋವು ; ಅಳ್ಳೆನೋವು : ತಲೆನೋವು ನಾಯ್ಗೆಮ್ಮು, ಬದಿಶೂಲೆ, ಕಾಲೊಡಕ, ವಾತಪಿತ್ತಗಳೆಲ್ಲ ಭೈರವನ ಸೆರೆಗೈದು ಪೀಡಿಸುಗೆ! (ಜಗಾರ. ೯೬-೬). [ಬದಿ₁ + ಶೂಲೆ]

**ಬದಿಹುಲ್ಲು**, ಬದೆಹುಲ್ಲು (ನಾ). ಒಂದು ಬಗೆಯ ಹುಲ್ಲು : ಬದಿಹುಲ್ಲು, ಕಂಡಬತ್ತದ ಹುಲ್ಲು, ಪರಿಹುಲ್ಲು (ವ್ಯಕಿ. ೩೦-೩೮೦); **ಬದೆಹುಲ್ಲು** : ಬದೆಹುಲ್ಲು . . . ಕರಡ, ಅಂಜಿಹುಲ್ಲು (ವ್ಯಕಿ. ೨೬-೩೦೯).

[ಬದಿ₁ + ಹುಲ್ಲು (< ಪುಲ್)]

**ಬದು** 'ಬದುವು' ನೋ.

**ಬದುಂಕು** 'ಬರ್ದುಂಕು' ನೋ.

**ಬದುಕಿಸು** 'ಬರ್ದುಂಕಿಸು' ನೋ.

**ಬದುಕು₁** 'ಬರ್ದುಂಕು' ನೋ.

**ಬದುಕು₂** 'ಬರ್ದುಕ್ಕು₂' ನೋ.

**ಬದುಕುವಂತ** (ನಾ). ಕೆಲಸವಂತ ; ಕಷ್ಟಜೀವಿ : ಸಣ್ಣಸಾಹ್ಕಾರ್ರು ಒಳ್ಳೆ ಬದುಕುವಂತರು (ಕಲುಮ. ೦೩೬).

[ಬದುಕು₂ (< ಬರ್ದುಕ್ಕು₂) + – ವಂತ]

**ಬದುಬೆ** 'ಬಾದುಬ್ಬೆ' ನೋ.

**ಬದುವು, ಬದವು, ಬದಹು, ಬದು, ಬದುಹು** (ನಾ). ೧. ಎಲ್ಲೆ; ಮೇರೆ; ಗಡಿ; ಸೀಮೆ: ಪಡುವಂ ಶಂಖದ ಬಸದಿಯ ಪೊಲದ ಮೇರ ವಾಯುಬ್ಯದಲು ಪಳ್ಳದ ಪಡುವಣ [ಬ]ದುವಿನ ಕೊತ್ತುರೊಳಗಣ ಉಳಿಮುಖದ ಕಿಂನರಿಗಲ್ಲು (ಶಾಇ. XX. ೬೯–೩೪; 1112). ೨. (ಹೊಲ, ಗದ್ದೆಗಳಲ್ಲಿ ನೀರು ನಿಲ್ಲುವುದಕ್ಕಾಗಿ ಹಾಕುವ) ಮಣ್ಣಿನ ಎತ್ತರವಾದ ಕಟ್ಟೆ,–ದಂಡೆ; (ಹೊಲ, ಗದ್ದೆಗಳ ಅಂಚಿನಲ್ಲಿ ರಚಿಸಿದ) ಮಣ್ಣಿನ ಒಡ್ಡು: ಹೊಲಗಳ ಗುಂಟ ಬೈಲುದಾರಿ ಹಿಡಿದು ಗದ್ದೆಯ ಬದುವುಗಳ ಮೇಲೆ ಹಾಯ್ದು . . . ಒಕ್ಕಲ ಮಕ್ಕಳು ಗ್ರಾಮಗ್ರಾಮಾಂತರಗಳಿಗೆ ಹೊರಟಿದ್ದಾರೆ (ಜಕ್ಕ. ೩೩); ರೈತರ ಹೆಂಗಸರು ಕೆರೆಯಿಂದ ನೀರ ತಂದು ಸಗಣಿಯನ್ನು ಕಲಸಿ ಹೊಲಗಳ ಬದುವಿನಲ್ಲಿ ಬೆರಣಿ ತಟ್ಟುತ್ತಿದ್ದರು (ಕೃಷಿ. ೦೩); ಒಂದು ಹೋರಿಯು . . . ಬದುವಿನಲ್ಲಿ ಮೇಯುತ್ತ ನಿಂತಿದ್ದ ಆಳನ್ನು ನಿಟ್ಟಿಸುತ್ತಿತ್ತು (ಪಾಂ. ೩೯). **ಬದವು**: ೩. (?): ಪಾರಿಸ್ವಸೆಟ್ಟಿಯರಿಂಗೆ ಕೊಟ್ಟ ಸಿಲಾಸಾಸನದ ಕ್ರಮವೆಂತೆಂದಡೆ ಪಟ್ಟಣದ ಬೇಹಾರಿಗಳಿಂಗೆ ಮನೆವಣವು x ಯಕ್ಕೆ ಪ ೫ ಯದಿಮಕ್ಕೆ ಪ ೫ ಬದವಿಂಗೆ ಪ ೩ (ಎಕ. XI (8). ಚಾಕಣಾ. ೬೯–೦೪; 1319). **ಬದಹು**: ೪. (ಕೆರೆ, ಕುಂಟೆ ಮುಂತಾದವುಗಳ) ಏರಿ: ಚಿಕ್ಕ ಕುಂಟೆಯ ಒತ್ತಿನಿಂ ಬದಹು (ಎಕ. VII. ತಿಪಟೂ. ೨೬–೨೭೨; 1524). **ಬದು**: ೧. ದೆಟ್ಟದ ತಪ್ಪಲುಗಳೂ, ಗೋಮಾಳಗಳೂ, ಹೊಲದ ಬದುಗಳೂ ಹೇರಳವಾಗಿದ್ದವು (ಜುಟ್ಟಿಜ. ೬೯); ತಾಕುಗಳ ಸುತ್ತಲೂ ಬದುಗಳನ್ನು ಹಾಕಬೇಕು (ಕೃಷಿ. ೬೦). ೩. ಈ ಹತ್ತಿಲನೂ ಅ ಳ ಮುಡಿ ಗದೆಯನೂ ಬದು ೧೨ ಮುಡಿ ಅಕ್ಕಿಯನೂ ೧ ನಂದಾದೀವಿಗೆಯನೂ ನಡಸಿ . . . ಬಾಳುವರು (ಶಾಇ. IX–ii. ೪೪೪–೨೫; 1433). ೪. ಉದ್ದಕ್ಕೂ ನಾಲೆ ಏರಿಯ (ಬದು) ಮೇಲೆಯೇ ಗಾಡಿಯ ರಸ್ತೆ (ಗಟುಂ. ೨೨). **ಬದುಹು**: ೧. ಶ್ರೀರಾಮನಾಥದೇವರ ತೋಟದ ಮೂಡಣ ಬದುಹಿನ ಬಡಗಣ ಕಲ್ಲು (ಎಕ. VI. ಕಡೂ. ೬೩–೩೦; 1230 ?); ಅರಳಿಯ ಕೊಳದ ಮೂಡಣ ಬದುಹು ಅಲ್ಲಿಂ ಬಡಗಲು ಹಾದಿಯ ದಾರಿ (ಎಕ. XII. ತಿಪಟೂ. ೪೦–೩೬; 1286). ೨. "ಬದುಹು ಪಾಳಿ" (ಹುಂಗಣಾ. ೦೦೯–೨); ಮೂಡಲು ಎರೆಯ ಕೆಯ್ಯ ದೊಡ ಬದುಹು (ಎಕ. XI. ಹೊಳಲ್ಕೆ. ೫೩–೬೫; 1220). ೪. ಚಿಂಚಗಟ್ಟ ನಾಯಕರ ಗುಯ್ಯಲ ಹಳುಗಿನ ಹಳ್ಳದ ಮೂಡಣ ಬದುಹಿನ ನಟ್ಟ ಕಲು ಮೇರೆ (ಶಾಇ. IX–i. ೪೪೩–೫೬; 1226). 'ಬರುಹು' ಪರಾ.

**ಬದುಹು** 'ಬದುವು' ನೋ.

**ಬದೆಗ** 'ಬದಗ' ನೋ.

**ಬದೆಹುಲ್ಲು** 'ಬದಿಹುಲ್ಲು' ನೋ.

**ಬದ್ಧ** (ನಾ). ೧. ಗಾಢವಾದುದು; ದೃಢವಾದುದು: "ಬದ್ಧಂ=ಗಾಢಂ" (ಅಭಿಧಾ. ಶಂ. ೨). ೨. ಸತ್ಯ; ದಿಟ; ನಿಜ: "ಕಿಸರೋಳಿದಿದ ಹೆಜ್ಜೆಯೊಳು ನಿಶ್ಚಯದೊಳುಂ ಬದ್ಧವೆನಿಕುಂ" (ಕಜಾ. ೬೩); ಕದ್ದ ಕಳ್ಳನ ಮಾತು ಬದ್ಧವಾದರೆಯೇನು (ಪಾಪಾ. ೩೯); ನನ್ನ ಹತ್ರ ಸುಳ್ಳು ಹೇಳ್ತಿಯಲ್ಲಾ! ಸುಳ್ಳೋ ಬದ್ಧೋ? ಹೇಳು! (ಮುಕುದು. ೨೦). [<ಸಂ. ಬದ್ಧ]

**ಬದ್ದಗಿ** 'ಬಡಗಿ' ನೋ.

**ಬದ್ದಣ** 'ಬದ್ದವಣ₁' ನೋ.

**ಬದ್ದನೆ** (ನಾ). ನಿಯಮಿತವಾಗಿ ಒಂದು ಕಾರ್ಯವನ್ನು ನಡೆಸಿಕೊಂಡು ಹೋಗುವುದು; ವರ್ತನೆ: ಯಾ ಹುಳಿಯಾರ ಸುಂಕದಲ್ಲಿ ನಾನಾದಿನಶಿನ ನಡೆಗಳಿಗೆ ಬದ್ದನೆ ಪ್ರಕಾರಾ ಲೆಕ್ಕಾ ಹಚಿಕೊಳುತ್ತಯಿದ್ದಾರೊ ಆದೆ ಪ್ರಕಾರಕ್ಕೆ ಬದ್ದನೆ ನಿಂತ್ರ ನಡೆ ೧ಕ್ಕೆ ಕಣ್ಪರಾಯಿ ೮೦೦೦೦ (ಎಕ. XVI. ಚಿಕ್ಕನಾ. ೪೦–೦೪; 1802). [<ಸಂ. ವರ್ತನ]

**ಬದ್ದಬದಸು** (ನಾ). ಅತಿಶಯವಾದ ಮೋಸ; ಅಧಿಕವಾದ ವಂಚನೆ: ಅಂತು ಮಜಿಪೊಕ್ಕು ಬಂದ ರಾಯನಂ . . . ಅದಿಗಡಿಗೆ ಬದ್ದಬದಸಿಂ ಪಗೆದು (ರಾಜಶೇ. ೬೨–೦೦). [ಬದ್ದ + ಬದಸು]

**ಬದ್ದರ, ಬದ್ದರ** (ನಾ). ೧. ಶುಭವಾದುದು; ಮಂಗಳಕರವಾದುದು. ೨. ಗಟ್ಟಿಯಾದುದು; ಬಿಗಿಯಾದುದು; ಭದ್ರವಾದುದು: ಬಿಗಿದ ದಡ್ಡಿಯ ಬದ್ದರದ ಬೀಯಗದ ರಾಣೀವಾಸದಂದಣ ತೆಗೆದು ನಡೆದುದು ಮುಂದೆ ಸಂತೋಷದಲಿ ಯದುಸೇನೆ (ಕುಷ್ಟಾಂ. ೦೦–೬೩). ೩. ಒಂದು ಬಗೆಯ ಆನೆ,–ಗಜ: (?). ೪. ಎತ್ತು; ವೃಷಭ. ೫. (ಕೋಟೆ ಕಾಳಗದಲ್ಲಿ) ಆತ್ಮರಕ್ಷಣಾರ್ಥವಾಗಿ ಬಳಸುತ್ತಿದ್ದ ಒಂದು ಬಗೆಯ ಸಾಧನ,–ಉಪಕರಣ: ಪಾಯ್ದು ಕೋರ್ಗಳೆಗೆ ಬದ್ದರವೊಡ್ಡಿದ ಕೋಂಟೆ ಗಾವಗಂ ಕೆಡವುವ ಗೆಗ್ಗೆ ಮಂಕದರದಿಂ ಪೊಚಿಮಾಟ್ಟಚಿವಾಳ್ಗಮಾಂಕೆಯಾಳ್ ಗಡಣಿಸೆ ಕಾದುತಿರ್ದುದು ಮಹೇಂದ್ರವದಾತಿನಿ ಮುತ್ತಿ ಸುತ್ತಲುಂ (ಚಂದ್ರಪ್ರ. ೩–೦೦೩); ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಳೆ ವೀರಸೇತು ನಡೆಸಾರಂ ಬದ್ದರಂ . . . ಪಡಿಗೋಂಟೆಯೆಂಬ ಬಹುಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ಪಸುಪೇಣಂ ಸಾರ್ದು ಸೂಳೈಸಿದಂ (ಅಕಂಪ್ರ. ೦೦–೬೪); ಬಲದ ಬದ್ದರದೊಟ್ಟದಂಬಿನ ಹೊಳೆವ ಹೊದೆಗಳ ಸೂತರುರವಣೆಗಳ ಸುರೇಖೆಯ ಗತಿಯ ವಾಜಿಯ ರಥವ ನೋಡಿದರು (ಕುಷ್ಟಾಕಾ. ೦೦–೦೬). **ಬದ್ದರ**: ೧. ಒಸಗೆ ಬದ್ದರವಾಗೆ ಶಿಶುವೇಷದಿಂದ ರಂಜಿಸಿದ ಕಾರಣಿಕನು (ಕೃಷ್ಣ. ೦೬೩). ೫. ಜೋಡನೊಡ ಹಾಯ್ದಂಬು ಧರಣಿಯೊಳಾಡಿದವು . . . ಬದ್ದರಂಗಳ ಬೀದಣವ ಕೊಯಿದು ಈಡಿಜಿದವು (ಕುಷ್ಟಾಂ೯. ೬–೪೭); ಉರುಶತಘ್ನಿಯ ರಾಯ ಚಿಮ್ಮುವ ಭರದ ಭೈರವ ಬದ್ದರದ ನಡೆಸರದ ಡಬ್ಬುಕ ಡೊಂಕಣಿಗಳನು ತೂಜಿದರು ನಭಕೆ (ಕೂರಾ. ೬–೦೦–೦೯).

**ಬದ್ದರದ ಬಂಡಿ, ಬದ್ದರದ ಬಂಡಿ** = ಬದ್ದರವೆಂಬ ಸಾಧನವನ್ನು ಹೊಂದಿರುವ ರಥ: ತವಕದಲಿ ಬದ್ದರದ ಬಂಡಿಗಳವುಚಿದವು (ಕುಷ್ಟಾದ್ರೋ. ೨–೨೫); ಒಗ್ಗಿನಿಂ ಬದ್ದರದ ಬಂಡಿವಿಂಡ್ಕೈದಿದುವು (ಜೈಮಿ. ೪೨–೨೪); ಕೋಲ ಕೋಳಾಹಳಕೆ ಸೈರಿಸದಾಳ ನಾಯಕವಾಡಿ ಹರಿಗೆಯ ಚಾಚಿದರು ಬಲು ಬದ್ದರದ ಬಂಡಿಗಳ (ಕುಷ್ಟಾಂ೯. ೬–೪೪). [<ಸಂ. ಭದ್ರ]

**ಬದ್ದವಣ₁, ಬದ್ದಣ** (ನಾ). ೧. ಶುಭಸಮಾರಂಭದಲ್ಲಿ ಬಾರಿಸುವ ವಾದ್ಯ; ಮಂಗಳವಾದ್ಯ: "ಬದ್ದವಣಮೆಂದೊಸಗೆವಜ" (ಶಜಾ. ೬೩–೪೦೩); ವಸಂತಕನದೇಂ ಗುಡಿತೋರಣ ಶೋಭೆ ಪೊಯ್ದು ಬದ್ದವಣ ಮೆಳಂಬಮಾದುದೊ ನಿಕೇತನದಲ್ಲಿ ಮನೋಜರಾಜನಾ (ಅನಂ. ೦೦–೦೦೪); ಆ ಪುರದೊಳ್ ಗುಡಿಗಳಂ ಕಟ್ಟ ಬದ್ದವಣಂಗಳಂ ಬಾಜಿಸಿ ಪಿರಿದಾಗಿರ್ದೊ ಸಗೆಯಂ ಕೊಂಡಾಡುತ್ತುಮಿರಲ್ (ವಾಕಪ್ಪ. ೪–೩೬ ಪ); ಕೊಂಬು, ಕಾಳೆ, ಜೇಗಟೆ, ಮದ್ದಳೆ ಮುಂತಪ್ಪ ಬದ್ದವಣಂಗಳ ಬಿರುಸರಂ ಎಲ್ಲೆಡೆಯೊಳಂ . . . ಮಾರ್ದನಿಗುಟ್ಟದುದು (ಅರ್ಜು. ೩೨–೦೦). ೨. (?): ಅತ್ತಗೆ ಕೇಳ್ ಪೇಟರ ನೈಮಿತ್ತಕರೆನಿಪವೆಡ ಪೇಟ್ಕಿವಿಪ ಬದ್ದವಣಕ್ಕೆತ್ತಿದ ಕಯ್ಯನೆ ಬುಡಿಚಿಂಗೆತ್ತುವೆಯದು ಕೂಡದೆಂದು ಕಾಡೆಲೆ ಕುಲಟೇ (ಅರ್ಧ. ೬–೩). **ಬದ್ದಣ**: ೧. "ಬದ್ದಣಮೆನಲೊಸಗೆಯ ಪಜ" (ಶಜು. ೪೬); ಎತ್ತಲುಂ ಬದ್ದಣದ ದನಿ (ಶ್ರೀಹಾಕ. ೪೦–೩೬); ಬದ್ದಣಂ ಮೊಳಗಿತ್ತಾಗಳ್ ಬಾನೊಳ್ ಸುರರ ಕೇಳಿಪೊಲ್ (ಶಾಂಪ. ೨–೩೪).

**ಬದ್ದವಣರ್**=ಶುಭಸಮಾರಂಭದಲ್ಲಿ ಮಂಗಳವಾದ್ಯವನ್ನು ಬಾರಿಸುವವರು: ಬಾಜಿಸಲಿರ್ದ ಬದ್ದವಣರಿಂ ಫಳಿಪಟ್ಟಲುಂ ಪರಿವೇಷ್ಟಿಸಿರ್ದ ನಕ್ಷತ್ರಮಾಲಕರಿಂ ಕಿಕ್ಕಿರಿಗಿಗಿದ ವಿವಾಹಮಂಟಪಮುಂ . . . ನೋಡುತುಂ (ಜಂಪಿ. ೬–೩೬).

[< ಸಂ. ಭದ್ರಪಣವ]

**ಬದ್ಧವಣ್ಣ** (ನಾ). ೧. ಬೆಳೆಯುವಿಕೆ; ಉತ್ಕರ್ಷ : ವರ್ಧಮಾನ—ಬದ್ದವಣ (ಕಶಬ್ದ. ೨೬೩ ಪ್ರಯೋ). ೨. ಒಂದು ಬಗೆಯ ಗಿಡ ಮತ್ತು ಅದರ ಕಾಯಿ; ಪರಳು; ಬಿಡಲು: "ಬದ್ದವಣ (ಬದ್ದಣ)—ವರ್ಧಮಾನ—ಮಂಗಳವಾದ್ಯ, ಒಂದು ಗಿಡ" (ಕದ್ಯಕೋ. ೨೬). ೩. (?) : ಇಡಿದಿರೆ ಪೂತ ಮರದುಮದಿದುವುಗಳೊಳ್ ಬದ್ದವಣದ ಪುಡಿಪುಲ್ ಬೆನ್ನೊಳ್ ಬಿಡಲುಗೆ ಕುಸುಮಕುಲರಜಮಡದರ್ದು ಸುರಗಿರಿಯನಿಂದ್ರರುಂದ್ರ ಗಜೇಂದ್ರಂ (ಆಪು. ೬-೭೩). [<ಸಂ. ವರ್ಧಮಾನ]

**ಬದ್ದವಣಂಬೊಯ್** (ಕ್ರಿ). ಮಂಗಳವಾದ್ಯವನ್ನು ಬಾರಿಸಂ: ಮುನೀಶನಾದೇಶಂಗೆಯ್ದು ಪೋಗೆಂದು ಕಳುಹಿದೊಸಗೆಗೆ ಮನದೊಳೆ ಗುಡಿಗಟ್ಟಿ ಬಗೆಯೊಳ್ ಬದ್ದವಣಂಬೊಯ್ದು . . . ಬನಮಂ ಪೊಕ್ಕು (ಜಗಂ. ೧೦-೨೫ ಪ). [ಬದ್ದವಣ್ಣ + ಪೊಯ್₁]

**ಬದ್ದವಣಂಬೊಯಿಸು** (ಕ್ರಿ). ಮಂಗಳವಾದ್ಯವನ್ನು ಬಾರಿಸುವಂತೆ ಮಾಡು : ಅಂತಸ್ತಮಯವಾಗೆ ಸೈಂಧವನುಂ . . . ಪೊಚ್ಚ ಬದ್ದವಣಂ ಬೊಯಿಸಿದಂ (ಪಂಪಭಾ. ೧೨-೩೩ ಪ). [ಬದ್ದವಣ್ಣ₁ + ಪೊಯಿಸು]

**ಬದ್ದಿ** 'ಬಡಗಿ' ನೋ.

**ಬದ್ದಿಗೆ** 'ಬದ್ದುಗೆ' ನೋ.

**ಬದ್ದು₁** 'ಬಾಟ್₁' ಪರಾ.

**ಬದ್ದು₂** 'ಬರ್ದು₄' ನೋ.

**ಬದ್ದು₃** (ನಾ). ೧. ಹಳ್ಳ; ಗುಣಿ : ಕಿಕ್ಕಿಂವ ಬಾಣಗಳು ತನೆತನಗಿಕ್ಕಿ ಕಟ್ಟಿದ ತೊಲೆಗಳಗಣಿತ ಕಕ್ಕುದರಿ ಬದ್ದುಗಳಲೊಪ್ಪುವ ತಳ್ಳುವಲಗೆಗಳು ಮಿಕ್ಕಿರುವ ಕೈದುಗಳು . . . ದಿಕ್ಕುದಿಕ್ಕಿಲಿ ತಿಂತಿಣಿಸಿ ರಚಿಸಿದನು ಪಟ್ಟಣವ (ಕೃಷ್ಣಾಕ. ೪-೩೮). ೨. ಚಿಣ್ಣಿಕೋಲು, ಗೋಲಿ ಮುಂತಾದ ಆಟಗಳನ್ನಾಡುವಾಗ ನೆಲದಲ್ಲಿ ತೋಡುವ ಗುಳಿ, –ಕುಣಿ : ಗೋಲಿಯನ್ನು ಬದ್ದಿಗೆ ಸರಿಯಾಗಿ ಬೀಳುವಂತೆ ತೀಕು (ಆಡು). [?]

**ಬದ್ದುಗೆ. ಬದ್ದಿಗೆ** (ನಾ). ೧. (ಸೀರೆ, ಪಂಚೆ ಮೊದಲಾದುವುಗಳ) ಸೆರಗಿನ ತುದಿಯಲ್ಲಿ ನೇಯದ ಬಿಟ್ಟ ವಸ್ತ್ರದ ಎಳೆ; ಕರೆ; "ಸೀರೆಯ ಸೆರಗಿನ ದಡಿ" (ಹಾಕಕೋ. ೨೦). ೨. ಸೊಂಟಕ್ಕೆ ಕಟ್ಟಿಕೊಳ್ಳುವ ಪಟ್ಟಿ; ನಡುಕಟ್ಟು : ಉಡಿಯ ಬದ್ದುಗೆಯ ಕಠಾರ ಹಿಡಿದ ಹಗೆಯೆಕ್ಕ ತುಳದ ತುಳುವರೊಗ್ಗು ನಡೆತಂದುದರಸನೋಲೈಸಿ (ಪ್ರಭು. ೧೩-೭೧); ಕಡೆಯ ಪೆಂಡೆಯ ಗೆಜ್ಜೆ ಕಣಕಾಲ ಬಾಸಿಂಗಮಡೆಯ ಬದ್ದುಗೆಯ ಕಿಗ್ಗಟ್ಟು ಬಿಡೆಯುವಿಲ್ಲದೆ ಪೋಲಗಟ್ಟಿನ ಬಲ್ಲಾಳ ಪಡೆ ನಡೆಯಿತು ಬಾಣನೊಡನೆ (ಕೋಟಹ. ೪೦-೦೪). **ಬದ್ದಿಗೆ** : ೧. ಜವಳಿಯೆಳೆಗಳ ಬದ್ದಿಗೆಯ ಸೀಲೆಯಾ ಸೆಜಗು ಸುವಿರಾಜಿಸುತ್ತಿರ್ದುದು (ಸುಕುಮಾ. ೧೪-೩೩). ೨. ಕಟ್ಟಿದ ಕಠಾರದ ಬದ್ದಿಗೆಯ ತೊಂಗಲ್ದೆಗೆದು ಬಿಗಿದೆಟಲ್ಜ ಬಾಲಗಟ್ಟಿಯ ವಿಳಸದ ಸೆಜಗಂ ಸೆಳೆದಳ್ಳಿಯಿಯೆಯುಂ (ಅಪಂತು. ೧೦-೫೫ ಪ). 'ಬದುಪು' ಹೋ. [ದೇ.೩ ತೆಲು. ಬದ್ದೆ]

**ಬದ್ದುಗೆದಾರ** (ನಾ). ನಡುಪಟ್ಟಿಯ ದಾರ: ಉಟ್ಟ ವಟ್ಟಾವಳಿಯ ಮೇಲಳವಟ್ಟ ಬದ್ದುಗೆದಾರದೊಂಗಲ ಕಟ್ಟಿ ಮೆಚ್ಚವ ಕಠಾರಿಗಳ ಹೊಗಟ್ಟುಗಳು (ಪಕವು. ೬೦-೨೩); ವೈರಿಬಾಹುದ್ಯಯವ ಬದ್ದುಗೆ ದಾರದಲಿ ಕಟ್ಟಿದನು (ಕುಬ್ಜಾಕ. ೨೨-೩೬); ಅಳವಡಿಕೆಯಲಿ ಪೀತಪಟ ಸಮ್ಮಿಳಿತ ಬದ್ದುಗೆದಾರವನು ಬಲಿದಲೆವ ಜಡೆಗಳನೊಬ್ಬುಳಿಸಿ ಬಿಗುಹಿಕ್ಕಿ (ಕೂಡಾಕ. ೬-೨೬-೦೬). [ಬದ್ದುಗೆ + ದಾರ₁]

**ಬದ್ದೆ₁** 'ಬರ್ದೆ' ನೋ.

**ಬದ್ದೆ₂** (ನಾ). ಕೆಳಹೊಟ್ಟೆ; ಕಿಬ್ಬೊಟ್ಟೆ : ತುಸುವೆ ಉಬ್ಬಿದಂತಿದ್ದ ತನ್ನ ಬದ್ದೆಯ ಭಾಗವನ್ನು ನೋಡಿಕೊಂಡು ಮುಗುಳುನಗುತ್ತಾ ಏನನ್ನೊ ಸವಿಯುವಂತೆ ಕ್ಷಣಕಾಲ ನಿಂತಳು (ಮುಕಘು. ೩೬೬). [?]

**ಬದ್ದೆಗ** 'ಬರ್ದೆಗ' ನೋ.

**ಬದ್ದೆದಲ್ಲಟ** (ನಾ). ಪ್ರೌಢೆಯರನ್ನು ತನ್ನ ಸೌಂದರ್ಯಾದಿಗಳಿಂದ ಸೋಲಿಸಂಪವನು ; ಪ್ರೌಢಸ್ತ್ರೀಯರಿಗೆ ತವಕವನ್ನುಂಟುಮಾಡುವವನು : ನೋಟದೊಳಟ್ಟುಜಂಬಡೆದು . . . ಕೂಟದೊಳುಣ್ಮಿದ ಬೆಚ್ಚ ತಟ್ಟೆಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಟಂ (ಕಂಕಶಾ. ೩-೬೨). [ಬದ್ದೆ₁ ( < ಬರ್ದೆ) + ತಲ್ಲಟ]

**ಬದ್ದೆವಜ್ಜೆ** (ನಾ). "ಪ್ರೌಢಿಮೆಯನ್ನುಳ್ಳ ಹೆಜ್ಜೆ ಗುರುತು" (ಕಂಕಶಾ. ೦೯೬) : ಪದಮುಮುಸಿಂಬುಮನಣಮುಚಿಯದದೇವುದು ಬದ್ದೆ ಬೆಳ್ಳಿಗಂ ವಜ್ಜೆ ದಲೆಂಬುದನೆರಡುಮಾನಚಿಪಾತನೆ ಚದುರಂ ಚದುರಂಗೆ ಬದ್ದೆವಜ್ಜೆಗಳೊಳವೇ (ಕಂಕಶಾ. ೩-೯೩). ❁ ಇದು 'ಬದ್ದೆ' ಮತ್ತು 'ವಜ್ಜೆ'ಗಳೆಂಬ ಭಿನ್ನಶಬ್ದಗಳಿರಬಹುದು. [ಬದ್ದೆ₁ ( < ಬರ್ದೆ) + ವಜ್ಜೆ]

**ಬದ್ದೆವೆಣ್** (ನಾ). ಚತುರೆ ; ಪ್ರೌಢಸ್ತ್ರೀ : ನುಡಿಯೊಳು ನಗಿಸುವ ಸರಸಕಾತಿಯರು ಮೇಲುಡಿಸಿ ತೊಡಿಸುವ ನೀಚಿಯರು ವಿಡಿದು ವೀಣೆಗಳ ಬಾಜಿಪ ಬದ್ದೆವೆಂಡಿರು ಕಡುಹಗೆಯಾದರವಳಿಗೆ (ವರ್ಧಕ. ೩-೦೨). [ಬದ್ದೆ₁ (<ಬರ್ದೆ) + ಪೆಣ್]

**ಬದ್ಧ** (ಗು). ೧. ಕಟ್ಟಿದ ; ಬಿಗಿದ. ೨. ಬಂಧನಕ್ಕೊಳಗಾದ; ಅಧೀನವಾದ. ೩. ಕ್ರಮಕ್ಕೆ ಅನುಗುಣವಾದ; ವಿಧಿವತ್ತಾದ; ನಿಯಮಾನುಸಾರವಾದ. ೪. ಹೆಣೆದ : ಕೂಡಿಕೊಂಡ ; ಸೇರಿದ : 'ಬದ್ಧಭ್ರುಕುಟಿ', 'ಬದ್ಧಾಂಜಲಿ' ಪರಾ. ೫. ಆವರಿಸಿದ ; ಸಂತೃಪ್ತವಾದ : ಸಕಲ ಬದ್ಧಾಶ್ರವನಿರೋಧದಿನಯೋಗಿಕೇವಲಿಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನಪ್ರಾಣಾಪಾನಪ್ರಚಾರಂ ಸಮುಚ್ಛಿನ್ನ ಕ್ರಿಯಾವ್ಯತ್ಕ್ರಿಧ್ಯಾನಪ್ರವರ್ತನಾಪರನಾಗಿ (ಕಂಪಶಾ. ೦೬-೬೯ ಪ) ; ಬದ್ಧಾಷ್ಟಕರ್ಮಮಂ ನಿಜಬುದ್ಧಿಯ ಬಲದಿಂದನಂತಚಾತುಷ್ಟಯದಿಂದು ದ ತರಿಪುಗಳನುಸಿದ ಸಿದ್ಧರ್ ಲೋಕಪ್ರಸಿದ್ಧರೀಗೆಮಗೊಳ್ಪಂ (ಅಭ್ಯಮ. ೦-೨). ೬. ತಡೆದ ; ಹೊರಬರದ ; ಕಟ್ಟಿಕೊಂಡ : 'ಬದ್ಧಮಲ' ಪರಾ. ೭. ಹತ್ತಿಕ್ಕಿದ ; ಹತೋಟಿಯಲ್ಲಿಟ್ಟುಕೊಂಡ : 'ಬದ್ಧೇಂದ್ರಿಯ' ಪರಾ. ೮. ಗಾಢವಾದ ; ದೃಢವಾದ ; ತೀವ್ರವಾದ : 'ಬದ್ಧದ್ವೇಷ', 'ಬದ್ಧವೈರ' ಪರಾ. ೯. ಕುಂದಣಿಸಿದ ; ಕಟ್ಟಿದ. ೧೦. ರಚಿಸಿದ ; ಕಟ್ಟಿದ. ೧೧. ತೊಟ್ಟ ; ಧರಿಸಿದ : ಇನ್ನೆನ್ನುಮನೊಲ್ಲುಮೊಲ್ಲಳೆವಳೆಂಬಾಶಂಕೆ ಪುಟ್ಟಿತ್ತು ಚಿತ್ತದೊಳಾಬೇಗ ದೊಳುರ್ವರಾಸ್ತ್ರತಿಲಕಂಗತ್ಯುನ್ನತಂ ದಕ್ಷಿಣಾಂಸದ ಬದ್ಧ ಶ್ಲಥಬಾಹುಕೀರ್ತಿ ಕಳೆದತ್ತಂದಾದ ಸಂದೇಹಮಂ (ಪಾಂಶಿಪು. ೩-೦೯೮). ೧೨. (ನಾ). ಕಟ್ಟು ; ಪಾಶ ; ಬಂಧನ : ಮುಕ್ತಿ ಬದ್ಧಗಳೆರಡು ತಾವತಿಪ್ರಕಟವಾಗಿಯೆ ಸತ್ಯವೆಂಬರ ಯುಕುತಿಯಲ್ಲೊಬ್ಬಾತಗೆರಡಣ ಸಂಗ ದೊರಕುವದೆ (ಶಿಭಾಗ. ೦೦-೦೬-೭) ; ಬದ್ಧವೆಂಬುದು ಮುಕ್ತವೆಂಬುದು ಬುದ್ಧಿಗೇ ಸರಿಯಾತ್ಮಕಿಲ್ಲಲೆ (ಅಮೃಕ. ೩-೦೪೦). ೧೩. ಕಟ್ಟಿ ಹಾಕಿದುದು ; ಬಂಧಿಸಿದುದು : "ಬದ್ಧಂ, ಪಿನದ್ಧಂ, ಅಮುಕ್ತಂ, ಅಪಿನದ್ಧಂ—ಈ ೪ ಕಟ್ಟಲ್ಪಟ್ಟುದು" (ಹಲಾಯು. ೦೨೬-೬೨). ೧೪. ಹಿಡಿತ ; ಹತೋಟಿ; ನಿಯಂತ್ರಣ : 'ಬದ್ಧಗೊಳಿಸು' ಪರಾ. ೧೫. ಸತ್ಯ ; ದಿಟ; ನಿಜ : ನೀನು ಹೇಳುವಂಥಾದ್ದು ಸಟೆಯೋ ? ದಿಟವೋ ?. . . ಬದ್ಧವೇ ಸರಿ. ಪರೀಕ್ಷೆ ಮಾಡಬೇಕು (ರಾಕೀಂದ್ರ. ೧೦೬). ೧೬. ಕಟ್ಟಳೆ ; ನಿಯಮ : 'ಬದ್ಧಭೋಜನ' ಪರಾ. ೧೭. ಯಾವುದಾದರೊಂದು ಕಟ್ಟಿಗೆ ಒಳಪಟ್ಟವನು : "ಬದ್ಧಃ, ನದ್ಧಃ, ಸಂಯತಃ — ಈ ೩ ಕಟ್ಟುಪಟ್ಟವಂ" (ಹಲಾಯು. ೩೬-೦೬೩) ; ಬದ್ಧನಲ್ಲ ಮುಕ್ತನಲ್ಲ ಎರಡಿಲ್ಲವಾಗಿ ಸಹಜಭರಿತನಯ್ಯಾ (ಅಪ. ೪. ೦೯೭-೨೭೬). ೧೮. [ವಿಶಿಷ್ಟಾ]

ನಿತ್ಯ, ಮುಕ್ತ, ಬದ್ಧರೆಂಬ ಮೂರುಂ ಬಗೆಯ ಜೀವಾತ್ಮರಲ್ಲಿ ಒಂದು ಬಗೆ ; ಸಂಸಾರಿ : ಈ ಜೀವಾತ್ಮತತ್ತ್ವವು ನಿತ್ಯ, ಮುಕ್ತ, ಬದ್ಧ ಎಂದು ಮೂರು ವಿಧ . . . ಈಗ ಪ್ರಕೃತಿಸಂಬಂಧದಲ್ಲಿರುವವರು ಬದ್ಧರು (ಹಿಂದಶಾ. ೨೪೭). ೧೯. [ಸಂಗೀತ] ತಾನದಲ್ಲಿ ಒಂದು ಪ್ರಕಾರ : ಪ್ರಾಚೀನಸಂಗೀತದಲ್ಲಿ ತಾನ, 'ಬದ್ಧ' ವೆಂದೂ 'ಅಬದ್ಧ' ವೆಂದೂ ಎರಡು ರೀತಿಯಲ್ಲಿತ್ತು (ಸಂಗೀಶಂ. ೬೮). 'ಬದ್ಧತಾನ' ಪರಾ. ೨೦. [ನಾಟ್ಯ] ನರ್ತನದಲ್ಲಿ ಒಂದು ಪ್ರಕಾರ ; ನೃತ್ಯದಲ್ಲಿ ಹೆಜ್ಜೆ ಹಾಕುತ್ತ ಮುಂದಕ್ಕೆ ಚಲಿಸುವ ಒಂದು ಬಗೆಯ ಗತಿ : ಒದವಿದಪ ಸ್ಕಂದಿತವಾಗ್ಗದ ಬದ್ಧಂ ಜನಿತಪುುಮೆಸೆವೂರೂದ್ವೃತ್ತಂ ಸುದತಿ ಪದಿ ನಾಲು ಭೌಮಂ ಪುದಿದೆಸೆವೀ ಚಾರಿಯೆಂಬ ಪೆಸರಸೆದಿರ್ಕುಂ (ಅಸ್ಕರಂ. ೬-೪). [ಸಂ.]

**ಬದ್ಧಕ** (ನಾ). ಬಂಧನಕ್ಕೆ ಸಿಲುಕಿದವನು : ಆ ಜಂಗಮ ಹೆಣ್ಣ ಬೇಡಿದರೆ ಸಂಸಾರಿ ಎಂದು ಹೊನ್ನ ಬೇಡಿದರೆ ಆಶಕನೆಂದು ಮಣ್ಣ ಬೇಡಿದರೆ ಬದ್ಧಕನೆಂದು ಇಷ್ಟಕ್ಕೆ ನೊಂದ ಮತ್ತೆ ಭಕ್ತಿವಾಸಿಗೆ ಹೋರಲೇಕೆ (ಪ್ರೋಳಪತಾ. ೩೬-೨೦೯). [ಸಂ.]

**ಬದ್ಧಕಂಕಣ** (ನಾ). ತನ್ನ ಗುರಿಯನ್ನು ನೆರವೇರಿಸಲು ಸಂಕಲ್ಪ ಮಾಡಿದವನು ; ಕಂಕಣಬದ್ಧ : ಬಲದೇವನು . . . ವರ್ಣಚಿತ್ರಕಲೆ (oil Painting) ಯನ್ನು ಮುಂದಕ್ಕೆ ತರಬೇಕೆಂದು ಬದ್ಧಕಂಕಣನಾದವನು (ಕಲಾಶಾ. ೩೬). [ಸಂ.]

**ಬದ್ಧಕತನ** (ನಾ). ಬಂಧನಕ್ಕೊಳಗಾಗಿರುವಿಕೆ : ಕಾಯದೊಳ ಗುಂಟೆಂದರೆ ಕರ್ಮಕಾಂಡಿಯಲ್ಲ ಜೀವದೊಳಗುಂಟೆಂದರೆ ನಾನಾಯೋನಿಯವನಲ್ಲ . . . ಅದು ಇದ್ದಿಲು ಶುಭ್ರವಾದ ತೆಱನಂತೆ ಹೊದ್ದದಾಗಿ ಬದ್ಧಕತನವಿಲ್ಲವೇದೆ ನಿಃಕಳಂಕಮಲ್ಲಿಕಾರ್ಜುನಾ (ಪ್ರೋಳಪತಾ. ೩-೮). [ಬದ್ಧಕ + — ತನ]

**ಬದ್ಧಕೋಣಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ ; ₱ "ಬದ್ಧವೆಂದರೆ ಕಟ್ಟಲ್ಪಟ್ಟ, ತಡೆಯನ್ನು ಹೊಂದಿದ ಎಂದರ್ಥ. 'ಕೋಣ' ವೆಂದರೆ ಮೂಲೆ. ಈ ಭಂಗಿಯಲ್ಲಿ, ನೆಲದ ಮೇಲೆ ಕುಳಿತು, ಹಿಮ್ಮಡಿಗಳನ್ನು ಗುದ ಗುಹ್ಯಸ್ಥಾನಗಳ ನಡುತಾಣಕ್ಕೆ (perineum) ಅಳವಡಿಸಿ ಪಾದಗಳನ್ನು ಹಿಡಿದು, ಮಂಡಿಯ ಭಾಗಗಳು ಎರಡು ಕಡೆಗಳಲ್ಲಿಯೂ ನೆಲ ಮುಟ್ಟುವವರೆಗೂ ತೊಡೆಗಳನ್ನಗಲಿಸಬೇಕಾಗಿದೆ" (ಯೋಗದೀ. ೦೦೨) : ಅಷ್ಟವಿನ್ಯಾಸಗಳು ೧. ಉತ್ತಾನಾಸನ ೨. ಚತುರಂಗದಂಡಾಸನ . . . ೩೨. ಟಿಟ್ಟಿಭಾಸನ ೩೩. ಬದ್ಧಕೋಣಾಸನ (ಶಾರದ. ೦೬೬). [ಸಂ.]

**ಬದ್ಧಗೊಳಿಸು** (ಕ್ರಿ). ಹಿಡಿತಕ್ಕೆ ತರು ; ಹತೋಟಿಯಲ್ಲಿಡು ; ನಿಯಂತ್ರಣಗೊಳಿಸು : ಹಾದಿಯಿಲ್ಲದೆ ಹರಿವ ಮರುಳು ಮನವನು ನಿನ್ನ ಬುದ್ಧಿಬಲದಿಂದಲೇ ಬದ್ಧಗೊಳಿಸಿ (ಹಪಲ್ಲ. ೬೬-೪). [ ಬದ್ಧ + ಕೊಳ್[1] + — ಇಸು[3] ]

**ಬದ್ಧತಾನ** (ನಾ). = ಬದ್ಧ ೧೯ : ಬದ್ಧತಾನ ತಾಳಗತಿಯನ್ನು ಅನುಸರಿಸಿ, ಅಬದ್ಧತಾನ, ತಾಳಗತಿಯನ್ನನುಸರಿಸದೆ ಹಾಡಲ್ಪಡುತ್ತವೆ. ಬದ್ಧತಾನ ಈಗ ಬಳಕೆಯಲ್ಲಿಲ್ಲ (ಸಂಗೀಶಂ. ೬೮). [ಸಂ.]

**ಬದ್ಧತೆ** (ನಾ). ೧. ಕಟ್ಟಳೆ ; ನಿಯಮ : ಯಾವನೊಬ್ಬ ನಾಗರಿಕನೂ . . .ಸರ್ವಜನರು ಸೇರುವ ಸ್ಥಾನಗಳನ್ನು ಉಪಯೋಗಿಸುವ ಸಂಬಂಧದಲ್ಲಿ ಯಾವುದೊಂದು ನಿರ್ಯೋಗ್ಯತೆ, ಬದ್ಧತೆ, ನಿರ್ಬಂಧ ಅಥವಾ ಷರತ್ತಿಗೆ ಒಳಪಟ್ಟರತಕ್ಕದಲ್ಲ (ಭಾರಸ. ೬). ೨. (ಮಲವು) ಹೊರಬರದೆ ಕಟ್ಟಿಕೊಳ್ಳುವಿಕೆ : 'ಮಲಬದ್ಧತೆ' ಪರಾ. [ಸಂ. ಬದ್ಧತಾ]

**ಬದ್ಧದ್ವೇಷ** (ನಾ). ಕಡು ಹಗೆ ; ಗಾಢ ವೈರ : ಅರಸ ಕೇಳಾಯುಷ್ಯಭಾಗ್ಯಗಳೆರಡು ಕಿಡುವವು ತಪ್ಪದವನೀಸುರರ ಬದ್ಧದ್ವೇಷ ಲೇಸಲ್ಲೆಂದನಾ ವಿದುರ (ಕುಮ್ಯಾಭಾ. ೩-೧೮) ; ವೀರೇಂದ್ರಸಿಂಹನಿಗೂ ಮಾನಸಿಂಹನಿಗೂ ಬದ್ಧದ್ವೇಷ (ಬಂಕಿಮ. ೦೪೬). [ಸಂ.]

**ಬದ್ಧಪದ್ಮಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ : ₱ "ಬದ್ಧಪದ್ಮಾಸನ . . . 'ಬದ್ಧ' ವೆಂದರೆ ಕಟ್ಟಲ್ಪಟ್ಟ ಅಥವಾ ಬಿಗಿತಕ್ಕೆ ಒಳಗಾದ. ಈ ಭಂಗಿಯಲ್ಲಿ ಕೈಗಳನ್ನು ಬೆನ್ನ ಹಿಂದೆ ಎದುರುಬದುರು ದಿಕ್ಕಿನಲ್ಲಿ ಅಡ್ಡಗಿಸಿ, ಅವುಗಳಿಂದ ಕಾಲಿನಂಗುಟ (ಹೆಬ್ಬೆರಳು)ಗಳನ್ನು ಹಿಂಗಡೆಯಿಂದ ಬಿಗಿಹಿಡಿಯುವುದು. ಮುಂಗಡೆ ಅಡ್ಡಗಿಸಿದ ಕಾಲುಗಳೂ ಮುಂಗಡೆಯಲ್ಲಿ ಅದೇ ಬಗೆಯಲ್ಲಿ ಕೈಗಳೂ ಈ ಮಧ್ಯೆ ದೇಹವು ಇವುಗಳ ಹಿಡಿತಕ್ಕೆ ಒಳಪಟ್ಟಿರುವುದರಿಂದ, ಈ ಭಂಗಿಗೆ ಈ ಹೆಸರು '' (ಯೋಗದೀ. ೦೦೬): ಮುಖ್ಯವಾದ ಕೆಲವು ಆಸನಗಳು . . . ೧೪. ಬದ್ಧಪದ್ಮಾಸನ ೧೫. ಯೋಗಮುದ್ರಾಸನ (ಶಾರದ. ೦೬೬) ; ಮುಕ್ತಪದ್ಮಾಸನ, ಬದ್ಧಪದ್ಮಾಸನ ಇವು ಧ್ಯಾನಕ್ಕೆ ಅನುಕೂಲವೆಂದೂ . . . ಹೇಳಲ್ಪಟ್ಟಿದೆ (ಮಹೋಪಂ. ೩೦೩). [ಸಂ.]

**ಬದ್ಧಭೂಮಿಕ** (ನಾ). ಸಮಮಾಡಿ ಸಿದ್ಧಗೊಳಿಸಿದ ವೇದಿಕೆ. — ನೆಲಗಟ್ಟು : " ಕುಟ್ಟಿಮಂ, ಬದ್ಧಭೂಮಿಕಂ — ಈ ೨ ನೆಲಗಟ್ಟು " (ಹರಾಯು. ೪೯-೦೩೯). [ಸಂ.]

**ಬದ್ಧಭೋಜನ** (ನಾ). (ದೇವಸ್ಥಾನದಲ್ಲಿ) ಕಟ್ಟಳೆಯ ಪ್ರಕಾರ ಹಾಕುವ ಊಟ,—ಭೋಜನ : ದನಿಯರು ತಮ್ಮ ಬದ್ಧಭೋಜನ ನಡವಂತಾಗಿ ಯಿಕ್ಕಿಕೊಂಡು (ಸೌಇಇ. IX-ii. ೪೦೯_೨೬ : 1365). [ಸಂ.]

**ಬದ್ಧಭ್ರುಕುಟಿ** (ನಾ). ೧. ಗಂಟಿಕ್ಕಿದ ಹುಬ್ಬು ; ಹುಬ್ಬುಗಂಟು : ಕಾಱಿದವು ಕುಡಿಮೀಸೆ ಕಾದುದು ಮೋಱೆ ಬದ್ಧಭ್ರುಕುಟಿಯಲಿ ಹುರಿಯೇಱಿತಧಿಕ ಕ್ರೋಧತಾಮಸ ಸಿಮ್ಮ ದಳಪತಿಯ (ಕುಮ್ಯಾಕ. ೨೫-೩) ; ದಾಶರಥಿ . . . ಸಿಗ್ಗಿಂದೆ ಬದ್ಧಭ್ರುಕುಟಿಯಿಂದೆ ನೋಡುತಿರ್ದನ್ ಬಲ್ಲುಬೆರಗಾಗಿ (ಶ್ರೀರಾಮಾ. ೩೦೫-೦೨೩). ೨. ಹುಬ್ಬುಗಂಟಿಕ್ಕಿದವನು : ಭೀಮಸೇನನುದ್ದಾಮಕೋಪಾಟೋಪಚಿತ್ತದಿಂ ಬದ್ಧಭ್ರುಕುಟಿಯಾಗಿ (ಗದಾಯು. ೬-೯ ವ) ; ಬದ್ಧಭ್ರುಕುಟಿ ಸೆರೆ ಬಿಗಿಯುವೋಲೌಡುಗಚ್ಚಿ, ನಿದ್ರೆಯನೊದ್ದು, ಸೀಳ್ದು ದುಃಸ್ವಪ್ನಮಂ, ಕುಳಿತೆದ್ದನಬ್ಬರಿಸಿ (ಶ್ರೀರಾಮಾ. ೨೬೩-೨೬೮). [ಸಂ.]

**ಬದ್ಧಮಲ** (ನಾ). ಕಟ್ಟಿಕೊಂಡಿರುವ ಮಲ ; ಹೊರಬರದಿರುವ ಮಲ: ಸಂವತ್ಸರಲವಣ, ಇಂಗು, ಶುಂಠಿ ಎಂಬೀ ಔಷಧಿಗಳನ್ನು ಶುಂಠಿಯ ಕಷಾಯದ ಬಿಸುನೀರಿಂ ಕುಡಿಯೆ . . . ಬದ್ಧಮಲ ಬಿಡುವುದು (ಅಶ್ವಶಾ. ೨೦). [ಸಂ.]

**ಬದ್ಧಮೂಲ** (ನಾ). ೧. ಬಲವಾಗಿ ಬೇರೂರಿದುದು ; ಗಾಢವಾಗಿ ನೆಲಸಿದುದು : ಒಂದು ಸಾರಿ ಪ್ರಣಯವು ಹುಟ್ಟಿ ಬದ್ಧಮೂಲವಾದರೆ— ಆಮೇಲೆ ರೂಪವಿರಲಿ ಹೋಗಲಿ ಪ್ರಣಯವು ನಡೆದುಕೊಂಡು ಹೋಗುವುದು (ಬಂಕಿಮ. ೩೦). ೨. ಗಟ್ಟಿಯಾಗಿ ನೆಲಸಿದವನು ; ಸ್ಥಿರವಾಗಿ ನಿಂತವನು : ಆ ಸುಖದಲ್ಲಿ ನಾವೆಲ್ಲರೂ ಇಹಸಂಸಾರದಲ್ಲಿ ಬದ್ಧಮೂಲರಾಗಿ, ಎಂದರೆ, ಬಲವಾದ ಬೇರನ್ನು ಬಿಟ್ಟುಕೊಂಡವರಾಗಿದ್ದೇವೆ (ಕಠಾಕಂ. ೦೨೫). [ಸಂ.]

**ಬದ್ಧರ** 'ಬದ್ದರ' ನೋ.

**ಬದ್ಧರಸ** (ನಾ). ೧. ಸ್ನೇಹಭಾವದಿಂದ ಕೂಡಿದವನು. ೨. ಪಾರಜವನ್ನು ಲೋಹದಲ್ಲಿ ಬೆರಸಿದವನು. ೧, ೨ : ಬಿನ್ನವಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದನುಮಾದ ರಸವಾದಿಯಂತೆ ಜ್ವಳನಜಟರಾಗಿಸಿ (ಶಾಂತಿಪು. ೫-೩೬ ವ). [ಸಂ.]

**ಬದ್ಧರೂಪ** (ನಾ). [ಭಾಷಾಶಾ] ಬೇರೊಂದಕ್ಕೆ ಹೊಂದಿಕೊಂಡಿರುವಂಥ ಶಬ್ದರೂಪ : ಪ್ರತ್ಯಯಗಳು ಯಾವಾಗಲೂ ಪ್ರಕೃತಿಗಳೊಡನೆ ಕೂಡಿಕೊಂಡೇ ತೋರಿ ಬರುವುದರಿಂದ . . . ಪ್ರತ್ಯಯಗಳನ್ನು ಬದ್ಧರೂಪಗಳೆಂದೂ (ಬಾಂಡ್‌ಫಾರಂ) ಕರೆಯುವುದುಂಟು (ಕಲಿಕೋ. 1, ೬೪೩). [ಸಂ.]

**ಬದ್ಧವಿಘಾತಿ** (ನಾ), ಕೆಡುಕಿಗೆ ಸಂಬಂಧಿಸಿದುದು : (ಖಂಡಿತವಾಗಿ) ಕೇಡನ್ನುಂಟು ಮಾಡುವುದು : ದೇವಿ ನೇಮಿಸಲಱಿಯೆನೆಂದೊಡಿದಾವ ಧರ್ಮವು ಶಿವಶಿವೀ ಹದ ಸಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು (ಕುವ್ಯಾ.ಶಿ. ೩-೯). [ಸಂ.]

**ಬದ್ಧವಿರೋಧ** (ನಾ). ತೀವ್ರವಾದ ದ್ವೇಷ ; ಕಡುಹಗೆ : ಮೊದಲೊಳ್ ಬದ್ಧವಿರೋಧದಿಂ ನೆಗೞ್ದ ಕುಂತೀಪುತ್ರರೊಳ್ ಭೀಮನಂಕದ ಗಾಂಧಾರಿಯ ಪುತ್ರರೊಳ್ಮೊದಲಿಗಂ ದುರ್ಯೋಧನಂ ಧರ್ಮಯುದ್ಧದೊಳಂತಾತನನಿಕ್ಕಿ ಕೊಂದಂ (ಗದಾಯು. ೦-೩೩). [ಸಂ.]

**ಬದ್ಧವೈರ** (ನಾ). ಅತಿಯಾದ ದ್ವೇಷ ; ಕಡುಹಗೆ ; ಬದ್ಧವಿರೋಧ : ಆ ಬದ್ಧವೈರದಿನಿನಿತು ಕಲುಪ್ಪುಂ ಕಾಯ್ಪುಂ ನಿನಗಾದುದು (ಶಾಂತಿಪು. ೯-೯೦ ವ) ; ಆ ಮರ್ಕಟಂಗಳೆರಡರ್ಕಂ ಏಕದ್ರವ್ಯಾಭಿಲಾಷೆಯಿಂ ಬದ್ಧವೈರಂ ಬಳೆದು (ಪುಂಶಾಂ. ೨೬೬-೬) ; ಓರೊರ್ವರ ನೆಱಂಗಳುಮನನ್ಯೋನ್ಯಬದ್ಧವೈರಕಾರಣಂಗಳುಮಂ ಮೂದಲಿಸುತ್ತುಂ (ಸುಕುಮಾ. ೦೦-೯೨ ವ). [ಸಂ.]

**ಬದ್ಧಾಂಜಲಿ** (ನಾ). (ನಮಸ್ಕಾರ ಮಾಡಲು) ಜೋಡಿಸಿದ ಕೈ ; ಮುಗಿದ ಕೈ : ನೀಂ ಪೋಗಿ ಕಾದಂಬರೀದೇವಿಗೆ ಬದ್ಧಾಂಜಲಿಯಾಗಿ ಪ್ರಣಾಮಪುರಸ್ಸರಮಪ್ಪೆನ್ನ ಬಿನ್ನಪಮಂ ಪೇೞ್ವುದು (ಕಾದಂಬ. ೩೯೯) ; ಉದ್ಧರಿಸಿದನಶ್ರಮದಿಂ ಸಿದ್ಧಶಿಲೋಚ್ಚಯಮನೊಂದೆ ಕರತಲದಿಂ ದರ್ಘೋರ್ಕೋದ್ಧರಣಸಹಿತಮಮರರ್ ಬದ್ಧಾಂಜಲಿಯಪ್ಪಿನಂ ಸುಮಿತ್ರಾಪುತ್ರಂ(ಪಂಪರಾ. ೦೦-೩೦) ; ಆ ನೀತಿಭೂಷಣಮಂತ್ರಿಪಂ . . . ರಾಜಶೇಖರರಾಜೇಂದ್ರಂಗೆ ಮಣಿಮಕುಟಮಂ ಮಣಿದು ಬದ್ಧಾಂಜಲಿಯಾಗಿ ನಿಂದಿರ್ಪುದುಂ (ರಾಜಶೇ. ೬-೦೩೨ ವ). [ಸಂ.]

**ಬದ್ಧಿಸು** (ಕ್ರಿ). ನಿಯಮಿಸು ; ನಿಶ್ಚಯಿಸು : ಉದ್ಯೋಗಿಸಿದರಾಗಮನದಲ್ಲಿ ಹವನವ ಶಿವನ್ಹತಿ ದಾನದಕ್ಷಿಣೆಯ ಶುದ್ಧಿಯ ಮಾಡಿದು ಮನೆಯ ಸುಲಗ್ನದಿ ಬದ್ಧಿಸಿದರು ಮೌಹೂರ್ತಿಕರು (ಮೋಹತ. ೦೬-೯೨).

[ಬದ್ಧ + — ಇಸು]

**ಬದ್ಧೇಂದ್ರಿಯ** (ನಾ). ಇಂದ್ರಿಯಗಳನ್ನು ನಿಗ್ರಹಿಸಿದವನು,-ಹತೋಟಿಯಲ್ಲಿಟ್ಟುಕೊಂಡಿರುವವನು ; ಜಿತೇಂದ್ರಿಯ : ಶುದ್ಧಮಾರ್ಗದರ್ಧ್ವದೋಳ್ ಶಿವಂಪತಿಯಾಗಿ ಬದ್ಧೇಂದ್ರಿಯಂ ತಾನನಂತೇಶ್ವರಂ (ಏಕೈಪು. ೬-೨-೯೨). [ಸಂ.]

**ಬದ್ನಾಮಿ**, ಬದನಾಮಿ (ನಾ). ಕೆಟ್ಟ ಹೆಸರು ; ಅಪಯಶಸ್ಸು ; ಅಪಖ್ಯಾತಿ : ಹಾಗೆ ಮಾಡಿದ್ದೇ ಆದರೆ ನಮ್ಮೂರಿಗೇ ಪುಂಡುಕೋಪೆಯೆಂಬ ಬದ್ನಾಮಿ ಬರುತ್ತೆ (ಕಂಪ. ೨೦೦).**ಬದನಾಮಿ** : ಅದ ಕಣದಾದಭವ ಮದನನಂ ಕೊಂಡು ತಾಂ ಮೊದಲೆ ಮಸಮಂ ಕೊಲ್ಲದವಗೆ ತಂದ ಬದನಾಮಿ ಸಾಕು (ಕುಮೋಶಿ. ೦-೨೦) ; "ಕೋಟಲೆ" (ಮಕೋಶಿ. ೩೯೯). [←ಪಾರ. ಹಿಂ. ಮರಾ. ಬದನಾಮಿ]

**ಬದ್ಮಾಶ್**, ಬದಮಾಷ್, ಬದ್ಮಾಷ್ (ಗು). ೧. ಕೀಳಾದ; ಕೀಳುಮಟ್ಟದ. (ನಾ). ೨. ನೀಚ ; ಕೀಳುಮನುಷ್ಯ : ಬದ್‌ಮಾಶ್ ನನ್ನ ಕೈ ಹಿಡಿಯಲು ಪ್ರಯತ್ನಿಸುತ್ತಿದ್ದ (ಕಂಪ. ೦೦೦). **ಬದಮಾಷ್** : ೨. ಬ್ಲಾಟೋ ದುಂಡು ಕುಡುಕ, ಲಫಂಗ, ಬದಮಾಷ್ (ಕುಂಹಿ. ೦೨೦) ; ಬಂಗಾರದಂಥ ಕಾಯಿಗಳನ್ನು ಹಾಳುಮಾಡಿದಿ ಬದಮಾಷ್ (ರಂಗಶೋ. ೯೦). **ಬದ್ಮಾಷ್** : ೧. ಅವಳು . . . ಯಾರೋ ಬದ್ಮಾಷ್ ಜನರ ಗುಂಪಿನವರೊಳಗಿನವಳಿರುವಂತೆ ತೋರುತ್ತದೆ (ಕ್ಕಕ್ಕ. ೫೦). ೨. ಬದ್ಮಾಷ್, ನಿನ್ನ ಚಾಟ್ರುಸ್ಸು ಹೇಗಾಗುವದೋ ನೋಡುತ್ತೇನೆ (ಸ್ವ.ಶಿ. ೩೩೩) ; ಕೆಲಸ ಮಾಡಾಕ ಬಂದಿದ್ದಿಯೋ, ತುಡುಗು ಮಾಡಾಕ ಬಂದಿದ್ದಿಯೋ ಬದ್ಮಾಷ್ (ಜಾಪೋಶಿ. ೦೨೦).

[← ಅರ. ಪಾರ. ಹಿಂ. ಮರಾ. ಬದಮಾಶ್]

**ಬದ್ಮಾಷ್** 'ಬದ್ಮಾಶ್' ನೋ.

**ಬಧಿರ** (ನಾ). ಕಿವಿ ಕೇಳಿಸದವನು ; ಕಿವುಡ ; ಕೆಪ್ಪ : "ಬಧಿರನೇಡಂ ಕಿವುಡನೆನಿಸಿಕ್ಕು" (ಪುಂಗರಾ. ೦೦೯-೫) ; ಕುಬ್ಜ ವಾಮನ ಬಧಿರ ಮೂಕ ಕಿರಾತೋನ್ಮತ್ತ ಜಡಜನಂಗಳುಮಂ . . . ಕೊಟ್ಟು (ಆದಿಪು. ೯-೫೯ ವ) ; ಕರುಣವಿಲ್ಲವನ ಕಾಪುರುಷನ ವಿಕಾರಿಯ ಬಧಿರನ ಪೆಂಡಿರು ಪರರ ಪೆಂಡಿರಲ್ತೆ (ಜಸವ. ೦೨-೯೯) ; ನಮೆವ ದೀನಾಂಧಬಧಿರರಂ ದಾನಧರ್ಮಂಗಳಿಂ ಪಾಲಿಸುತ್ತುಂ (ರಾಮಾಶ್ವ. ೧೫-೦೯). [ಸಂ.]

**ಬಧಿರತೆ** (ನಾ). ಕಿವಿ ಕೇಳಿಸದಿರುವಿಕೆ ; ಕಿವುಡು : ಘೋಷಘಂಟಾರವಂ ದಿಗ್ರದನೀಶ್ರೋತ್ರಕ್ಕೆ ಸಂಪಾದಿಸೆ ಬಧಿರತೆಯಂ . . . ಬಂದುದಂದನ್ನಚಕ್ರಕ್ಕಿದು ಕಲ್ಪಾಂತಾಭ್ರಮೆಂಬಂತುದಿತರಿಪು ಮನೋದೈನ್ಯಮುಗ್ರೇಭಸೈನ್ಯಂ (ಪುಶ್ಯಪು. ೫-೯) ; ಕಟಿತಟಕಾಂಚಿ ಪದನೂಪುರಾಳಿಸ್ವನಂ ದಿಗ್ಗಜಂಗಳ್ಗೆ ಬಧಿರತೆಯನೋಲ್ಕೈಸೆ ಬರುತಿರ್ದುದಾ ಭವಾನಿಯ ಸಖೀನಿವಹಂ (ಕಂಪು. ೩೬-೫೩). [ಸಂ. ಬಧಿರತಾ]

**ಬಧಿರತ್ವ** (ನಾ). = ಬಧಿರತೆ : ಪರರ ಪಟುತನವಾದದಲಿ ಮೂಗರವೊಲಿಹ ಪರವಚನದುತ್ಕಟವೊರೆಗೆ ಬಧಿರತ್ವವನು ವರಗುಣದೋಷದರುಶನವು ದೊರಕಿದೊಡೆ ಜಾತ್ಯಂಧನೆನಿಸುವ ಪುರುಷನಾವವನವನು ಸಾಕ್ಷಾತ್ಪರಮಪುರುಷೋತ್ತಮನಲೇ (ಕುವ್ಯಾಉ. ೯-೬೦). [ಸಂ.]

**ಬಧಿರಿತ** (ಗು). ಕೇಳಿಸದಂತೆ ಮಾಡಿದ ; ಕಿವುಡುಗೊಳಿಸಿದ : ಅನ್ನೆಗಂ ಗಂಭೀರತರತುರಗಹೇಷಾರವಬಧಿರಿತಸಕಲಭುವನವಿವರನುಂ . . . ಆಗಿ (ಆದಿಪು. ೩-೯೦ ವ) ; ಚಂಚಚ್ಚಾಪಮೌರ್ವೀರವಬಧಿರಿತದಿಕ್ಚಕ್ರಮಂ . . . ನಿರ್ಜನವನಮನಿದಂ ಬಂದು ನೀನೆಂತು ಪೊಕ್ಕೈ (ಪಂಪಶಂ. ೫೬-೨). [ಸಂ.]

**ಬನ₁**, ಬನವು (ನಾ). ೧. ಕಾಡು; ಅಡವಿ; ಅರಣ್ಯ : "ಬನವೆಂದು ವನಂ" (ಶಬ್ದ. ೫೯-೦೬೦) ; ಮುನಿ ವೀತರಾಗನೆಂದುಂ ಬ[ಶಾಕಾಂ. ಜ]ನಮಂ ಸಾರ್ತಕ್ಕುಂ (ಶಬಿರಾ. ೦-೬೯) ; ಬನಕಂ ಪೊಲಕಂ ನಡೆಯಲ್ಕಿನಿಸಾಱದೆ ಮಱುಗುವಾರ್ಯರಂ ಕಂಡು ಮನೋಜನಿತದಯಂ ಕರಿ ಹರಿ ವಾಹನಂಗಳಂ ಪಡೆದು ವಿಮಲವಾಹನನಾದಂ (ಆದಿಪು. ೬-೫೬) ; ನವಿಲ್ ಕಾರ್ಗಾಲಮಂ ಹಂಸೆ ಸರೋವರಮಂ ಮಧದಾನೆ ಬನಮಂ . . . ನೆನೆವಂತು ಜಿನಪಾದಾಂಭೋಜಂಗಳಂ ನೆನೆಯುತ್ತುಂ (ಧರ್ಮಾಮೃ. ೩-೦೯೦). ೨. ತೋಟ ; ಉದ್ಯಾನ : ನಂದನ : "ಬನಮೋದೆನಲ್ಕುದ್ಯಾನಮಕ್ಕು" (ಕಕಾ. ೬೨) ; ಬನದ ತಳಿರ್ ಕಳಿಕೆ ಮುಗುಳ್ ನನೆ ಬಿರಿಮುಗುಳಲರ ಗೊಂಚಲೆಂಬಿವು ವನಜಾನನೆಯರ ಪೂದುಡುಗೆಗೆ ಮುಟ್ಟನಾದುವೇಂ ಪೆಂಪೊ ಭರತನಂತಃಪುರದಾ (ಆದಿಪು. ೧೦-೦೨೫) ; ಚಂಪಕ ಮಾಲತಿ ಮುಡಿವಾಳಗಳಿಂ ಬನವೆಸೆದುದು (ತ್ರಿಕುಶಿ. ೨-೨೦) ; ಮಲ್ಲಿಗೆಯ ವನಸಂಪಿಗೆಯ ಬನವೆಲ್ಲ . . . ವೃಥಾ ಸೆಲನಿಲ್ಲ ನಳನ ರಾಜ್ಯದಲಿ (ನಳಚ. ೪-೦೫). ೩. ಮರಗಳ ಗುಂಪು,-ಸಮೂಹ ; ತೋಪು : "ತೋಪು-ಬನಂ" (ನಾಕಕ್ಕ. ೨೯) ; ಅಲರ್ದ ಪೊಂದಾವರೆಯ ಪಂತಿಯೊ ತಳಿತ ಮಾವಿನ ಬನವೊ (ಕುವ್ಯಾಅ. ೬-೦೨). **ಬನವು** : ೧. ತೆರಳಿದರು ಶೃಂಗಾರನಿಧಿಗಳು . . . ಕಳಾವಿದೆಯರುಗಳಾ ಮುಸುಕಿಯಿಪ್ಪ ಬನವಿಗೆ (ಕೌಶಿರಾ. ೦-೯೩).

ಬನದ ಊಟ, ಬನದೂಟ = ಹುಣ್ಣಿಮೆ ದಿನಗಳಲ್ಲಿ ವಿಹಾರಾರ್ಥವಾಗಿ ತೋಟದಲ್ಲಿ ಮಾಡುವ ಊಟ ; ವನಭೋಜನ : ಚಿಕ್ಕ ದೊಡ್ಡ ಹೆಣ್ಣುಮಕ್ಕಳು ಬನದ ಊಟ ಮಾಡುವರು (ಕನ್ನಕಾ. ೧೯೨) ಹೆಣ್ಣು

ಮಕ್ಕಳು ಬನದೂಟವನ್ನು ಸೌರಿಸುವರು (ಶತ್ಕಜಾ. ೦೬೭). ಬನದಂಬಿಕೆ = ಪಾರ್ವತಿಯ ಒಂದು ಅವತಾರ : ಬನಶಂಕರಿ : ವನದೇವಿ : ಭಕ್ತಜನಪ್ರಸನ್ನೆ ವಿಸ್ತಾರವಿಚಿತ್ರಮೂರ್ತಿ ಬನದಂಬಿಕೆ ಮಾಜ್ಕೆಮಗಿಷ್ಟ ಸಿದ್ಧಿಯಂ (ಶಕಶಂ. ೪). ಬನದಬ್ಬೆ = ಬನದಂಬಿಕೆ : ನೆಲನೆಲ್ಲಂ ಕೊಂಡಾಡುವೆಕ್ಕಲವಿರಿಯುಂ ಬನದಬ್ಬೆಯುಂ ಮಹಾಲಕ್ಷ್ಮಿಯುಂ . . . ಪೊಲೆಯರ ದನಿಮುಪ್ಪೂಡಂ ಕೇಳದಂತು ಕಂಚುವಜೆವೆರಸು ಲೇಸುನುಡಿ ಲೇಸುನುಡಿಯೆಂಬ ಮಹಿಮೆಯಿಂದುಣ್ಬರ್ (ಧರ್ಮಾಮೃ. ೯-೧೦೦); ಬನದಬ್ಬೆ ಬಳರಿ ಬಾದು. . .ಮನೆದೈವವೆಂಬಿವೆಲ್ಲಂ ಜನಭಕ್ಷಂಗಡದ ಕಾಲ ಕಟ್ಟಿಂ ಕಷ್ಟಂ (ಕೊಾರ. ೪೬೯). ಬನದ ಶಂಕರಿ = ಬನದಂಬಿಕೆ : ದಿನಪಸುತನ ದೂತರು ಬಂದು ಎಳೆವಾಗ ಬನದ ಶಂಕರಿ ಎತ್ತ ಹೋದಳೆ ಮೂಳೀ (ಪುರಂದ. ದಾ. ೩-೦೨೬-೭). ಬನದ ಹುಣ್ಣಿವೆ = ಪುಷ್ಯಮಾಸದ ಹುಣ್ಣಿಮೆ : ಬನದ ಹುಣ್ಣಿವೆ ದಿನ ಬಾಗಿಲ ತೋರಣವನು ಕಟ್ಟ ಬಜೆದೆ ಪಲ್ಲಿಯುವ ಬೀಜಃ (ಪುರಂದ. ದಾ. ೩-೦೨೬-೭) ; ಪೌಷ್ಯಮಾಸದ ೧೫ನೆಯ ತಿಥಿ ಬನದ ಹುಣ್ಣಿವೆ . . . ಬನಶಂಕರಿಯೇ ಈ ಹಬ್ಬದ ಅಧಿದೇವತೆ (ಹಾಹಬ್ಬ. ೦೬೯).

[<ಸಂ. ವನ]

**ಬನ₃** (ನಾ). ಒಂದು ಬಗೆಯ ಬೆಲೆ ಬಾಳುವ ಬಟ್ಟೆ.—ಉತ್ತಮವಾದ ವಸ್ತ್ರ : ಮಣಿಕನಕಭಾಜನಂಗಳೊಳ್ ಪಟ್ಟಸೂತ್ರದ ನೇತ್ರದ ಬನದ ಮಹಾ ಚೀನದ ದೇವಾಂಗದ ಪಂಗಳಜವಳಿಗಳನಾಂತು ಬರ್ಪ ಕಾಂತ್ರಿಯರ್ ಚಿತ್ರ ಪಟಚಿಹ್ನಾವಳಂಬಿತ ವಿಜಯಕೇತನಂಗಳಾಗೆಯುಂ (ವರ್ಧಕ. ೬-೩ ವ).

[?]

**ಬನಂಬಿಡಿ** (ಕ್ರಿ). ವನವನ್ನು ಆಶ್ರಯಿಸು : ಒಳ್ಳೀರ ಕೃಪೊಷೆ ಕರ್ಬಿನ ಬಿಲ್ ತವಗ್ರುದೊಳ್ ಮಿಳಿರ್ವ ತಮಾಳಪಲ್ಲವದ ಚಾಮರದುಪ್ಪರವಟ್ಟ ವೊಪ್ಪೆ ಬಂದಳಿದಿಸುಪ್ಪೊ ಬನಂಬಿಡಿದು ಪಾಂಥರನಾ ಪರಿವಂಧಿಸುಸ್ಮಥಂ (ಚಂದ್ರಪ್ರ. ೮-೧೦೦). [ಬನ₁ + ಪಿಡಿ₁]

**ಬನಕಾಜ** (ನಾ). (ಮರದ ಸಾಮಾನು. ಬಟ್ಟೆ ಮುಂತಾದಂಮಕ್ಕೆ) ಬಣ್ಣ ಹಚ್ಚುವವನು : ಬಣ್ಣಗಾರ : ಪಲವುಂ ಮಾರನನಿಟ್ಟು ಲೇಸಾಗಿ ಪಾಳ್ತನ್ನಾಗಿ ಬನಕಾಜ ಚವುಂಡೆಯಂಗೆ ಸರ್ವನಮಸ್ಯವಾಗಿ ಬಿಟ್ಟ ಮಾಣಿಕೇಶ್ವರದ ಕೋಲ ಪಂತ್ರರು ಪನ್ನರಡು ಪಂಸಿಕಯ್ಯ ನಿವೇಶನ . . . ಬನಕಾಜ ನನ್ನಯಂಗೆ ಮಾತ್ರಜು ಅಜುಗೆಯ್ಯ ನಿವೇಶನ (ಶಾಇ. XX. ೦೬೩-೩೭ ; 1190).

[₿ ಇದು 'ಬಣ್ಣಗಾಜ' ಎಂಬುದರ ಅಪಲಿಖಿತವಿರಬಹುದು]

**ಬನಗತ್ತಲೆ** 'ಬನಗಳ್ತಲೆ' ನೋ.

**ಬನಗಳ್ತಲೆ.** ಬನಗತ್ತಲೆ (ನಾ). ದಟ್ಟವಾದ ಕತ್ತಲೆ: ಕಗ್ಗತ್ತಲೆ : ಗಾಢಾಂಧಕಾರ : ಪಸುರಲೆಮುಜುಗಿದ ಬನಗಳ್ತಲೆಯೊಳಗೆಸವ ವಸಂತಂ ... ಆ ಕಂಗಣ್ಣಾಕ್ಕೆಯ ಸರಮುಂಬ ಪೊಸ ಗಂಟಿಯನಲುಗಿಸೆ (ಜಮಃಕಾ. ೦-೩೦): ಬನಗಳ್ತಲೆಯುಂ ಕಮಳಾಪ್ತನ ಕದಿರುಂ ಕಾದಿ ಮಡಿವುತಳಿಯುಂ ಚಾಂಪೇಯ ನಿಕಾಯಮಾಡುಪಲ್ಲದೊಡೆನುಸುಂ ತದ್ವಯಕೆ ಪಗೆತನಂ ಸಮನಿಪುದೇ (ರಾಜಶೇ. ೩-೩೯). ಬನಗತ್ತಲೆ : ನಿಬಿಡನೀರವಕಾನನಾಂತರಂ ಸತುವಗಲು ಮಾರ್ತಾಂಡನುರವಣೆಯನಡಗಿಸುತೆ ತಂಪು ಬನಗತ್ತಲೆಯು ಭೀಷ್ಮಸಮ್ಮೋ ಹನವ ಮೆರೆದತ್ತು ಚಿತ್ರಗತವಾದಂತೆವೋಲ್ ನಿಶ್ಚಲಂ (ಶತ್ರುಂಗ. ೩-೩೭).

[ಬನ₁ + ಕಳ್ತಲೆ (<ಕಟ್ಟಲೆ)]

**ಬನಗಾಹು** (ನಾ). ತೋಟದ ಕಾವಲು. -ರಕ್ಷಣೆ.

ಬನಗಾಹಿನವರು = ತೋಟವನ್ನು ಕಾಯುವವರು : ತೋಟದ ಕಾವಲುಗಾರರು : ವನಿತ ಸತ್ಯೆಯ ಮೋಹದಾ ನಂದನವು ಪೊಗದು ಪೆಂದು ಬನಗಾಹಿನವರಾಡಲು (ಸಾಕ್ಯಾಅ. ೩೦-೩೦).

[ಬನ₁ + ಕಾಹು₁ (<ಕಾವು)]

**ಬನಗಾಳಿ** (ನಾ). ಕಾಡಿನಲ್ಲಿ ಬೀಸುವ ಗಾಳಿ : ಓ! ಓ! ಬನಗಾಳಿ ಇದೇನೀ ತೆಜದೂಟಗಂ! (ರಾಜಪಾಕ್ಕ. ೯೪). [ಬನ₁ + ಗಾಳಿ₁]

**ಬನಗುತ್ತಿಗೆ** (ನಾ). ತೋಟದ ಗುತ್ತಿಗೆದಾರನಿಂದ ಬರುವ ಹಣ.— ವರಮಾನ : ಆ ಪೂಜಾರಿ ದ್ಯಾವಣ್ಣ ಚಿಕ್ಕಪಂಣ್ಣಕಲ್ಲಿಗಳಿಗೆ ಕೊಟ್ಟ ಶಿಲಾಶಾಸನದ ಕ್ರಮವೆಂತೆಂದಡೆ ಮಣಲಿಗೆ ನಾಡೊಳಗಣ . . .ತೋಟ ಮನೆ ಕಡಿಗುತ್ತಿಗೆ ಅಜಾವಣಾಪನೂ ಬನಗುತ್ತಿಗೆ . . . ಆಗುವಮಾಡಿಕೊಂಬದು (ಮೈಅಆ. ೦೯೯೨. ೩೭-೩೯ : 1380). [ಬನ₁+ಗುತ್ತಿಗೆ (<ಗುತ್ತಗೆ)]

**ಬನದುರ್ಗ** (ನಾ). (ಶತ್ರುಗಳು ಪ್ರವೇಶಿಸಲು ಸಾಧ್ಯವಾಗದಂತೆ) ದಟ್ಟವಾದ ಕಾಡಿನ ನಡುವೆ ಕಟ್ಟಿದ ಕೋಟೆ; ವನದುರ್ಗ : ಗುಡಿಯ ಗುಂಟಿಗಳಿಗೆ ಬನದುರ್ಗ ಮೇಲವರಡಿಗೆಯ ಗುಂಡಿಗೆ ದುರ್ಗ ಕಾಡಿವ ನೀರಿಗೆ ಜಲದುರ್ಗ ಪಾಳಾದುವಾ ಪಡೆಗೆ ಪಗೆಗಳಿದಿರುಂಟೆ (ವರ್ಧಕ. ೬-೩೯). 'ಜಲದುರ್ಗ' ಪರಾ. [ಬನ₁ + ದುರ್ಗ]

**ಬನಪಶ್ಮ** (ನಾ). ಔಷಧಿಯಾಗಿ ಉಪಯೋಗಿಸುವ ಒಂದು ಬಗೆಯ ವನಸ್ಪತಿ : ೩೨೨ ಬಾದಾಮಹಲವ, ೩೨೩ ಬನಪಶ್ಮ (ಮುಂಶಾವ್ಯಾ.೦೬೬).

[← ಪಾರ. ಬನಫ್ಶಃ : ಹಿಂ. ಬನಫ್ಶಾ, ಬನಫಶಾ]

**ಬನಪು** (ನಾ). ಒಂದು ಬಗೆಯ ದೊಡ್ಡ ಜಾತಿಯ ತೇಗದ ಮರ: (೪).

[←ತುಳು. ಬನಂಪು. ಬರಂಪು. ಬಣುವು. ಬಣ್ಪು]

**ಬನವಂದಿ** (ನಾ). ಕಾಡುಹಂದಿ : ಇಭಂ ಬನವಂ [ಶಾಅಂ.ಪಂ]ದಿ ತರಕ್ಷು ಖಡ್ಗಿ. . . ಮಾರಮಾಪುಗಳಿಂಬಿವಾಗಳುಂ ಕರಮೆಸದಿರ್ಪಿರ್ನ ಮೆಜೆದುದಾ ವಿಪಿನಂ (ಶಶಶಂ. ೩-೩೯). [ಬನ₁ + ಪಂದಿ]

**ಬನವಕ್ಕಿ** (ನಾ). ಕಾಡಿನಲ್ಲಿರುವ ಪಕ್ಷಿ : ಕಾಡುಹಕ್ಕಿ : ಎಚ್ಚಜೋಸಿ ಪೋಯ್ತುನಿತಜೊಳು ಕೊಳರ್ವಕ್ಕಿ ಬನವಕ್ಕಿಗಳು ಸರಗೆಯ್ಯೆ (ಶಾಕ್ಯಾಅ. ೦೬-೩೯). [ಬನ₁ + ಪಕ್ಕಿ]

**ಬನವಟ್ಟೆ** (ನಾ). ಕಾಡುದಾರಿ : ಅರಣ್ಯಮಾರ್ಗ : ನಾಡೊಳಗಣ ಚೋರರ ಪರಿಯಾಲ್ತಾ ಬೀಡಿನ ಬನವಟ್ಟೆಯು ಪೊಯ್ಯುಂ (ಅರ್ಧ್ಯರೇ. ೨-೨೭); ಅರಣ್ಯ ಗೋಚರರೊರೆಯಿ ಪಣ್ಣಲಂ ಪೂಗಳ್ಗೆ ತಾಂ ದಿನದಿನಂ ನಡೆದು ಸಮದ ಬನವಟ್ಟೆಯುಂ (ಶ್ರೀರಾಮಪೂ. ೦೬೯-೯೨). [ಬನ₁ + ಬಟ್ಟೆ₁]

**ಬನವತಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಬನವತಿ ಮಾರಪ್ಪನ ಸಂಬಿದ ಹಾಗೆ (ಗಾದೆ). [?]

**ಬನವಸೆ** 'ಬನವಾಸಿ' ನೋ.

**ಬನವಳಿಗ** (ನಾ). ತೋಟದ ಕಾವಲುಗಾರ ; ವನಪಾಲಕ : ಮದನ ಮಂತ್ರಿ ಬನವಂ ಪುಗುತ್ತಿದಂ . . . ತರಹಂಸಲಿಂದು ದರಹಸಿತಾಸ್ಯ ಗಾಳಧಾಳಿಯ ಬಂದವೇದು ಬನವಳಿಗನರಸಗೆ ದೂಜಿದಂ (ಚಂದ್ರಕು. ೬-೪).

[ಬನ₁ + - ವಳಿಗ₂]

**ಬನವಾಶಿ** 'ಬನವಾಸಿ' ನೋ.

**ಬನವಾಸಿ.** ಬನವಸೆ. ಬನವಾಶಿ. ಬನವಾಸೆ (ನಾ). ೧. ಒಂದು ದೇಶದ ಹೆಸರು : ನಲ್ಲರೊಳ್ಸೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರ ನೋಟಕ್ಕೊಡಾವ ಬೆಟ್ಟುಗಳೊಳವಾವ ನಂದನವನಂ ಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೬); ಶ್ರೀವಿಷ್ಣುಪದಸೇಕರಂ ಬನವಾಸಿವಿಷಯಾಧಿಃಶ್ವರಂ ಮಹೇಶ್ವರಭಕ್ತಂ (ಎಕ. III (B). ಹೆಗ್ಗ.ಕ. ೦೩೩.೦೨; 1079); ಬನವಾಸಿಗೆ ಹೋದರೂ ಬರಗಾಲ ತಪ್ಪಲಿಲ್ಲ (ಗಾದೆ). ೨. ಒಂದು ನಾಡು ಅಥವಾ ಪಟ್ಟಣದ ಹೆಸರು. ೩. ಒಂದು ಬಗೆಯ ನಾಣ್ಯ: ಬ್ರಿಟಿಶ ಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು . . . ೧೦. ಸವಲಗುಂದೀ, ೧೧. ಬನವಾಸೀ, ೧೨. ಶಮಶೇರಿ (ಕಾಂಗಿ. ೨೬೦). **ಬನವಸೆ :** ೨. ಬನವಸೆ ಹಾನುಂಗಲುಗೊಂಡ ಭುಜಬಳವೀರಗಂಗ

ಪ್ರತಾಪಚಕ್ರವರ್ತಿ ಹೊಯ್ಸಳಬಲ್ಲಾಳದೇವರು . . . ರಾಜ್ಯಂಗೆಯ್ಯುತ್ತಿರೆ (ಎಕ. II (R). ೩೬೩-೨೭ ; 1173) ; ಸಕಲಸೌರಂಭದಲಿ ಸೊಗಸಿಪುದಲ್ಲಿ ಬನವಸೆಯೆಂಬ ಪಟ್ಟಣವು (ಶ್ರಕುಕೀ. ೩ ೨). **ಬನವಾಶಿ. ಬನವಾಸೆ :** ೨. ರಾಜಧಾನಿ ಬನವಾಸೆಪುರದ ಜಯಂತೀ ಮಧುಕೇಶ್ವರದ ಮೊಗಸಾಲೆ ಯುಮಂ . . . ಮಾಡಿಸಿ (ಕಶಿಇ. XI-i, ೦೦೪-೨೯; 1068 ?); ಬಂಕಪುರಂ ಬನವಾಸೆ ಕೊಯತುತುರ್ಗಂಗಪರಾಕ್ರಮಂ ವಿಜಯವರ್ಧನನೀ ಕಲಿ (ವಿ)ವಿಷ್ಣುವರ್ಧನಂ (ಎಕ. XVI, ಶಕ್ಯಶಾ. ೬೨-೯; 1242).

**ಬನವಸೆ ಪನ್ನಿರ್ಚ್ಛಾಸಿರ, ಬನವಾಶಿ ಪನ್ನಿರ್ಚ್ಛಾಸಿರ, ಬನವಾಸಿ ಪನ್ನಿರ್ಚ್ಛಾಸಿರ** = ಹನ್ನೆರಡುಸಾವಿರ ಗ್ರಾಮಗಳಿಂದ ಕೂಡಿದ ಬನವಸೆಯೆಂಬ ನಾಡು : ಬನವಸೆ ಪನ್ನಿರ್ಚ್ಛಾಸಿರಮುಂ ಬೆಳ್ವೊಲ ಮೂನೂರುಂ . . . ಬಾಗಿನಾಡೆಪ್ಪತ್ತುಮಂ ಬೂತುಗಂಗೆ ಕನ್ನರದೇವಂ ಮೆಚ್ಚುಗೊಟ್ಟಂ (ಎಕ. III, ಮಂಡ್ಯ. ೪೦-೨೦; 950); ಶ್ರೀಕನ್ನರದೇವಂ ಪೃಥ್ವೀರಾಜ್ಯಂಗೆಯ್ಯೆ ಬಪ್ಪುವ್ಯಂ ಬನವಾಶಿ ಪನ್ನಿರ್ಚ್ಛಾಸಿರದ ಪಟ್ಟಮನಾಳೆ (ಕ್ಯಶಾ. ೧೯೨೯, ೬೮-೯; 964); ಚಾ[ವು]ಣ್ಡರಾಯರಸರ್ ಬನವಾಸಿ ಪನ್ನಿಚ್ಛಾಸಿರಮನಾಳುತ್ತ ಮಿರಲ್ (೩೮. IV, ೦೬೯-೧೦; 1048). [< ಸಂ. ವನವಾಸೀ]

**ಬನವಾಸೆ** 'ಬನವಾಸಿ' ನೋ.

**ಬನವು** 'ಬನ$_1$' ನೋ.

**ಬನವೆಂಕಿ** 'ಬನವೆಂಕೆ' ನೋ.

**ಬನವೆಂಕೆ, ಬನವೆಂಕಿ** (ನಾ). ಕಾಳ್ಗಿಚ್ಚು; ಕಾಡಿನ ಬೆಂಕಿ; ದಾವಾನಲ: "ಬನವೆಂಕೆಯೆಂದು ದಾವಾಗ್ನಿ" (ಕಶಶಾ. ೩೦-೯೨). **ಬನವೆಂಕಿ :** "ಬನವೆಂಕಿಯೆ ದಾವಾನಲಂ" (ಕಶಕಂ. ೩೮). [ಬನ$_1$ + ಬೆಂಕೆ]

**ಬನವೆಣ್ಣು** (ನಾ). ಕಾಡಿನಲ್ಲಿ ವಾಸಿಸುವವಳು ; ಕಾಡಿನ ಹೆಣ್ಣು : ಅನಾಗರಿಕಸ್ತ್ರೀ : ನಿಷ್ಕರುಣೆ ಎನ್ನದಿರ್, ಬನವೆಣ್ಣೆ (ಶಕ್ರಾಂಗ. ೨೯-೬೬೨).
[ಬನ$_1$ + ಪೆಣ್ಣು (< ಪೆಣ್)]

**ಬನಶಂಕರಿ** (ನಾ). ಕಾಡಿನ ಅಧಿದೇವತೆ; ಪಾರ್ವತಿಯ ಹೆಸರುಗಳಲ್ಲಿ ಒಂದು : ಬನಶಂಕರಿಯೇ ಈ ಹಬ್ಬದ ಅಧಿದೇವತೆ. ಈ ದೇವತೆ ಪಾರ್ವತೀದೇವಿಯ ಒಂಬತ್ತು ಅವತಾರಗಳಲ್ಲಿ ಆರನೆಯವಳು . . . ಈಕೆ ವನಶಂಕರಿ, ವನದೇವತೆ ಎಂದು ಸ್ಪಷ್ಟವಾಗುವಂತಿದೆ (ಕಾಹಬ್ಬ. ೦೬೯); ಕಾಡಿನ ಕವಿಗಳೆ ಓ ಕಲೆಗಾರರೆ . . . ಬನಶಂಕರಿಯನು ಕೀರ್ತಿಸಿರಿ ! (ಕರುಕ್ರಾ. ೬೪-೯). [ಬನ$_1$ + ಶಂಕರಿ]

**ಬನಶಿ** 'ಬನಸಿ' ನೋ.

**ಬನಶಿಗೋದಿ** 'ಬನಸಿಗೋದಿ' ನೋ.

**ಬನಸಂಪಗೆ** (ನಾ). ಕಾಡುಸಂಪಗೆ ಮರ ಮತ್ತು ಅದರ ಹೂವು : ಪಚ್ಚೆಯ ಬೆಟ್ಟುಗಳೊಳ್ ಮೆಯ್ವೆಟ್ಟಿದ ವೈಡೂರ್ಯಮಣಿಕದಂಬಮೊ ತಾನೆನೆ ಬೆಳ್ಪಳಿಸಿದ ಬನಸಂಪಗೆಯುಚ್ಚಳಿಯದ ಮುಗುರ್ಗಳಿಂದ ಸೊಗಯಿಕುಮನಿಶಂ (ಹಾಶಾಸ್ತ್ರ. ೦-೯-೫೮). [ಬನ$_1$ + ಸಂಪಗೆ]

**ಬನಸಿ, ಬನಶಿ, ಬನ್ಸಿ** (ನಾ). ದಪ್ಪವಾಗಿಯೂ ನಸುಹಳದಿಬಣ್ಣದಿಂದ ಕೂಡಿಯೂ ಇರುವ ಒಂದು ಬಗೆಯ ಗೋದಿ : 'ಬನಸಿಗೋದಿ' ಪರಾ. **ಬನಶಿ :** 'ಬನಶಿಗೋಧಿ' ಪರಾ. **ಬನ್ಸಿ :** 'ಬನ್ಸಿರವೆ' ಪರಾ. [ ← ಮರಾ. ಬನಸೀ, ಬನಶೀ, ಬನ್ಸೀ ]

**ಬನಸಿಗೋದಿ, ಬನಶಿಗೋದಿ, ಬನ್ಸಿಗೋಧಿ** (ನಾ). = ಬನಸಿ : ತೊಗರಿ, ಕಡ್ಲಿ, ಬನಸೀಗೋದಿ, ಸಾಸವಿ (ಮುಂಶಿವ್ಯಾ. ೨೮). **ಬನಶಿಗೋದಿ :** ಬನಶೀಗೋದಿಯು ಕಾಳು ದೊಡ್ಡದಿದ್ದು ಮತ್ತು ಬಣ್ಣದಿಂದ ದಪ್ಪ ಅರುಷಣವಂತ ಇರಬೇಕು (ಮುಂಬವ್ಯಾ. ೩೧). **ಬನ್ಸಿಗೋಧಿ :** ಬನ್ಸಿಗೋಧಿಯಿಂದ ತಯಾರಿಸಿದ ರವೆಯು ತುಂಬ ಚೆನ್ನಾಗಿರುತ್ತದೆ (ಊಶ).
[ಬನಸಿ + ಗೋದಿ$_1$ ( < ಗೋದುಮೆ) ]

**ಬನಸಿರಿ** (ನಾ). ೧. ಕಾಡಿನ ಸಿರಿ ; ಅರಣ್ಯಸಂಪತ್ತು : ಕಾಡಿನಲ್ಲಿ ಮರ ಕಡಿಯಬೇಕಾದರೆ, ಬನಸಿರಿಯನ್ನು ಉಪಯೋಗ ಮಾಡಿಕೊಳ್ಳಬೇಕಾದರೆ ಸರ್ಕಾರದ ಸನ್ನದು ಅವಶ್ಯಕ (ಹಸುಹೂ. ೨೪೦). ೨. ವನದೇವತೆ ; ವನಲಕ್ಷ್ಮಿ : ಬನಸಿರಿ ಸುರವರಲೋಕದ ಬನಸಿರಿಗುಱಿ ತೋಱಲೆಂದು ನಿಜವಿಭವಮನಂದನುನಯದಿಂ ಕಟ್ಟಿದ ಕಾಂಚನತೋರಣಮೆನಿಸಿ ಕರ್ಣಿಕಾರಂ ಮೆಱೆಗುಂ (ಶಾಶಕ. ೯-೬೬). [ಬನ$_1$+ಸಿರಿ]

**ಬನಹಿಪ್ಪಲಿ** (ನಾ). ಹಿಪ್ಪಲಿಯಲ್ಲಿ ಒಂದು ಬಗೆ ; ಕಾಡುಹಿಪ್ಪಲಿ : ತಗರ ಕೋಡು, ಬನಹಿಪ್ಪಲಿ, ತಲೆನವಿರು, ಕಾಲುಗುರು, ಬಜೆಯುಮಂ ಧೂಪವಿಕ್ಕುವುದು (ಚಾಂಶ. ೦೨೬-೨೦). [ಬನ$_1$+ಹಿಪ್ಪಲಿ]

**ಬನಾತ** 'ಬನಾತು' ನೋ.

**ಬನಾತು, ಬನಾತ** (ನಾ). ಬಣ್ಣಬಣ್ಣದ ಉಣ್ಣೆಯ ಬಟ್ಟೆ ; ಸಕಲಾತಿ : ದಮಾಸಿನ ವೃಷಭಧ್ವಜಗಳೂ × × × ಬನಾತಿನ ತೆರೆಗಳೂ (ಎಕ. XIV, ಶಂಶಪ. ೨೯೨-೦೪೨ ಪುಟ; 1847) ; ಒಂದು ಬಾರಿ ರೋಮನ್ ಚಕ್ರವರ್ತಿಯು ಬಹಳ ಹಸನಾದ ಬನಾತಿನ ಅಂಗಿಯನ್ನು . . . ಕಳುಹಿಸಿದನು (ಕೃಗಂಶ. ೦೨೩) ; ಅಂಗಳದ ಮಧ್ಯದಲ್ಲಿ ಬನಾತಿನ ನಡೆಮುಡಿಯು ಹಾಸಲ್ಪಟ್ಟದ್ದಿತು (ಶ್ರೀಕಾಮ. ೯೯). **ಬನಾತ :** ವಾರಿನ ಮೇಲೆ ಕಿಮ್ಮತ್ತು ಆಗತಕ್ಕ ಕಪಡಾ ಜಿನಸಗಳು. ೧. ಬನಾತ, ೨. ಕಾಸ್ಮೀರಿ (ಮುಂಶವ್ಯಾ. ೦೯೦). [ ← ಹಿಂ. ಮರಾ. ಬನಾತ್]

**ಬನಾವಟ್** 'ಬನಾವಟಿ' ನೋ.

**ಬನಾವಟ** 'ಬನಾವಟಿ' ನೋ.

**ಬನಾವಟಿ, ಬನಾವಟ್, ಬನಾವಟ** (ಗುಂ). ೧. ಕೃತ್ರಿಮವಾದ ; ನಿಜವಲ್ಲದ : ಬನಾವಟಿ ಪತ್ರಗಳನ್ನು ಕಳುಹಿಸಿ ನಿಮಗೆ ಮೋಸಗೊಳಿಸಿರುವ ಆರೋಪದ ಮೇಲೆ ನನ್ನನ್ನು ಈಗಲಾದರೂ 'ಮಾವನ ಮನೆ'ಗೆ ಕಳುಹಿಸಬೇಕೆಂಬ ನಿಮ್ಮ ಬಯಕೆಯು ಈಡೇರುವಂತಿಲ್ಲ (ಕಂಶಾ. ೯೩). (ನಾ). ೨. ಕೃತ್ರಿಮವಾದುದು ; ನಕಲಿಯಾದುದು : ಇಲ್ಲಿ ಬನಾವಟಿಯ ಮಾಲವನ್ನು ತಯಾರ ಮಾಡುತ್ತಾರೆ. ಆದಕ್ಕೆ ಇಲ್ಲಿ ಸುಮಾರ ಮಾಲೆಂದೆನ್ನುತ್ತಾರೆ (ಮುಂಶವ್ಯಾ. ೬೮). **ಬನಾವಟ್ :** ೧. ಹಾಗೆ ಕಲಾಸೃಷ್ಟಿಯಾಗುವಂತಿದ್ದರೆ ಅದು ಕೃತಕವಸ್ತು. ಅಂಥವು ಅನುಕರಣೆಗಳು, ಬನಾವಟ್ ಮ್ಹಾಲುಗಳು ! (ಕರಿದ. ೦೦೬). **ಬನಾವಟ :** ೧. ಈ ಬನಾವಟ ಮುತ್ತಿನ ಹಾರ ಅಲ್ಲಿರಿಸಿ ಅದನ್ನು ತಂದುಕೊಡಿರಿ (ಗರ್ಣಗು. ೯೮). ೨. ಅಚ್ಚಖರೆ, ಖರೆ ಮತ್ತು ಸುಳ್ಳ ಇವುಗಳ ಮಿಶ್ರಣದಿಂದ ತಯಾರಾಗಿದ್ದದ್ದು ಹಾಂಗು ಕೃತ್ರಿಮ ಅಂದರೆ ಬನಾವಟ ಈ ಪ್ರಕಾರ ಮೂರು ತರದು ಇರುತ್ತವೆ (ಮುಂಶವ್ಯಾ. ೬೨ ಪ್ರಸ್ತಾವನ).
[←ಹಿಂ. ಬನಾವಟ್, ಬನಾವಟೀ; ಮರಾ. ಬನಾವಟ್, ಬನೋಟ್]

**ಬನಾವಣೆ** (ನಾ). ೧. ಕೃತಕವಾಗಿ ತಯಾರುಮಾಡುವುದು ; ಅನಧಿಕೃತವಾಗಿ ಸಿದ್ಧಪಡಿಸುವುದು : ನಾಣ್ಯವನ್ನು ಬನಾವಣೆ ಮಾಡೋಣ ೭ ಸಂವತ್ಸರಗಳು (ಗ್ರಾಪಮಾಕ. ೦೬೩). ೨. ಪರಸ್ಪರ ಹೊಂದಾಣಿಕೆ—ಸಾಮರಸ್ಯ : ದೇಹಕ್ಕೂ ಮನಸ್ಸಿಗೂ ಬನಾವಣೆಯಿಲ್ಲ ಎನ್ನಿಸಿತು (ಶಿಶಂಶ. II, ೦೬೯). ೩. ಕಲ್ಪನೆ; ಊಹೆ : ಅವರ ಕಕ್ಷಿಗಾರರ ಬಚಾವು ಈ ಕೇಸು ಕೇವಲ ಪೋಲೀಸಿನವರ ಬನಾವಣೆಯೆಂದು (ಕಂಪ. ೬೭೨). ೪. ಕೃತಕವಾದುದು ; ಕೃತ್ರಿಮವಾದುದು ; ಖೋಟಾ : ಬನಾವಣೆಯಾದದ್ದು ಎಂದು ತಿಳಿದು ಮತ್ತೊಬ್ಬನಿಗೆ ಕೊಟ್ಟರೂ ಇಟ್ಟುಕೊಂಡರೂ ೫ ಸಂವತ್ಸರಗಳ ಪರ್ಯಂತ (ಗ್ರಾಪಮಾಕ. ೦೬೭). 'ಬನಾವಟಿ' ಪರಾ. [←ಮರಾ. ಬನಾವಣೀ]

**ಬನಿ$_1$** (ನಾ). ೧. ಸಾರ ; ಸತ್ತ್ವ ; ತಿರುಳು : ಇವುಗಳಲ್ಲಿ ಜನಪದ ಸಾಹಿತ್ಯದ ಬನಿ ಅಷ್ಟಾಗಿ ಕಂಡುಬರುವುದಿಲ್ಲ (ಕಜಶಾ. ೨೮ ಪ್ರಸ್ತಾವನ).

೨. (ಹಾಲು, ಮೊಸರು, ಕಲಸಿದ ಹಿಟ್ಟು ಮುಂತಾದುವುಗಳಲ್ಲಿರುವ) ಜಿಗುಟು ; ಅಂಟು : ಸೊಗಡು : ಅವರು ಪರೀಕ್ಷಿಸಿದ ಯಾವ ಹಸುವೂ ಅವರಿಗೆ ತೃಪ್ತಿಯನ್ನುಂಟುಮಾಡಲಿಲ್ಲ. . . ಐದನೆಯದರ ಹಾಲು ನೀರು, ಅದರಲ್ಲಿ ಬನಿಯಿಲ್ಲ (ಶಿಹಾ. ೦೫); ಹಸುವಿನ ಬೆಣ್ಣೆಯಲ್ಲಿ ನಶ್ಯವನ್ನು ಮಿದಿಯುತ್ತಿದ್ದರು. ಹಾಗೆ ಮಿದ್ದರೆ ಅದಕ್ಕೆ 'ಬನಿ' ಬರುತ್ತದೆ (ಚಿಕ್ಕೂ. ೫. ೦೬೨). ೩. ಕಳೆ ; ತೇಜಸ್ಸು ; ಹೆಣ್ಣುಡುಗೆಯುಟ್ಟ ಹರೆಯದ ಹೆಣ್ಣು ಚಾಮರಿ ಹೆಣ್ತನದ ಆ ಬನಿಯನ್ನು, ಚೆಲುವನ್ನು ತಳೆಯುತ್ತಿದ್ದಳು (ಸಚಿ. ೫೩).

ಬನಿ₂, ಬನ್ನಿ₃ (ನಾ). ೧. ಒಂದು ಬಗೆಯ : ತೆರಿಗೆ ಶ್ರೀಮತು ರಗವೆಡೆಂಗಂ ಕಾಳೆಗಕೆ ನಡವುತ್ತು ರೋಣದ ಮಹಾಜನಕೆ ಬನಿಯಂ ಬಿಟ್ಟಾರ್ (ಎಕ. XIII, ೦೪೭-೪; ಸ್ಕ್ಕ. 876) ; ಸೋಮೇಶ್ವರಪಂಡಿತ ದೇವರ್ಗೆ ಧಾರಾಪೂರ್ವಕಂ ಮಾಡಿ ಬನಿಯಂ ಬಿಟ್ಟನು (ಸೌಇಇ. XX. ೦೭೬-೭ ; 1174). ಬನ್ನಿ₂ : ೧. 'ಹುಲ್ಲುಬನ್ನಿ' ಪರಾ. ೨. (ಹೊಲ, ಗದ್ದೆಗಳಲ್ಲಿ) ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಕೂಲಿಯಾಳಿಗೆ ಕೊಡುವ ಬೆಳೆದ ಧಾನ್ಯದ ಒಂದು ಭಾಗ : (*).

[ ದೇ. ತ. ತುಳು. ಬಣಿ./ಹಿಂ. ಬನಿ, ಬನ್ನೀ ]

ಬನಿಗೊಳ್ಳು (ಕ್ರಿ). ಸತ್ತ್ವಯುತವಾಗು ; ಸಾರವತ್ತಾಗು : ಜೀವಂತವಾದ, ದಿನದಿನವೂ ಬೆಳೆಯುತ್ತಿರುವ, ಬನಿಗೊಳ್ಳುತ್ತಿರುವ,—ಬನಿಗೊಳ್ಳಬೇಕಾಗಿರುವ—ಈಗಿನ ಭಾಷೆಯ ಗತಿಗೆ ತಡೆಯಾಗಿ ತಂಡೊಡ್ಡದ ಕವಿತೆಯಲ್ಲಿ ಕೇವಲ ಸಂಪ್ರದಾಯಬದ್ಧವಾದ ಶಬ್ದರೂಪಕ್ಕೂ, ಸಂಧಿನಿಯಮಗಳಿಗೂ, ಕಡೆಗೆ ನಿರ್ದುಷ್ಟತೆಗೂ ಮೀರಿದ ಗುಣವೊಂದಿದೆ (ಬಿಸಿಗಿ. V ಮುನ್ನುಡಿ). [ಬನಿ₁ + ಕೊಳ್ಳು₁ (<ಕೊಳ್₁)]

ಬನಿಯ, ಬನಿಯಾ (ನಾ). ವ್ಯಾಪಾರ ಮಾಡುವವನು ; ವರ್ತಕ ; ವೈಶ್ಯ : ವ್ಯಾಪಾರಸ್ಥರು . . . ಬಣಜಿಗ, ಬನಿಯ (ಕುಳುಂಬಾ. ೦೬೨) : ಬನಿಯಾ: ಚಂದ್ರಗುಪ್ತ ದಾಸೀಪುತ್ರ; ಗಾಂಧೀಜಿ ಬನಿಯಾ (ಹುಟ್ಟಕ್ರ. ೦೭೬).

[←ಹಿಂ. ಮರಾ. ಗುಜ. ಬನಿಯಾ. ಪ್ರಾ. ವಣಿಅ. / ಸಂ. ವಣಿಜ]

ಬನಿಯನ್ನು ' ಬನೀನು' ನೋ.

ಬನಿಯಾ 'ಬನಿಯ ' ನೋ.

ಬನೀನು, ಬನಿಯನ್ನು (ನಾ). ಅರ್ಧತೋಳಿನ ಒಳಅಂಗಿ ; ⓟ ಇಂಡಿಯಾದೇಶಕ್ಕೆ ಬಂದ ಆಂಗ್ಲರು ಗುಜರಾತಿನಲ್ಲಿ ವರ್ತಕರು ಉಪಯೋಗಿಸುತ್ತಿದ್ದ ಅರ್ಧತೋಳಿನ ಅಂಗಿಯನ್ನು ಮೆಚ್ಚಿಕೊಂಡರು. ಆದುದರಿಂದ ಗುಜರಾತಿನ 'ವಾನಿಯ=ಬನಿಯ' ಎಂಬುದು ಇಂಗ್ಲಿಷಿನಲ್ಲಿ ಗುಣವಾಚಕವಾಗಿ ಬನಿಯನ್ ಎಂದಾಯಿತು. ಆ ಬಳಿಕ ಇದು ನಾಮಪದದ ಅರ್ಥವನ್ನು ಪಡೆಯಿತು. ಸಂಸ್ಕೃತದ 'ವಣಿಜ' ಎಂಬುದು ಇದರ ಮೂಲವೆಂಬುದು ಸ್ವಾರಸ್ಯಕರವಾಗಿದೆ : ರಾಯರು ಒಳ್ಳೆಯ ಒಂದು ಬಿಳೀಪಂಚೆಯನ್ನುಟ್ಟು, ಉದ್ದವಾದ ಬನೀನನ್ನು ತೊಟ್ಟು . . . ನಿಂತಿದ್ದರು (ರಾಹುಳ. ೬೦); ಈ ಹುಡುಗನ ಮೈ ಮೇಲಿದ್ದ ಬಟ್ಟೆಯೆಂದರೆ ತುಂಡು ಬನೀನೊಂದು (ಕೃಪಕು.೦೧೦). ಬನಿಯನ್ನು: ಪಾಯಿಜಾಮದ ಮೇಲೆ ಬನಿಯನ್ನು ಹಾಕಿದ್ದಾನೆ (ಕಥಾ I. ೩೬೩); ಹೊಲಸು ವಸ್ತ್ರವನ್ನು ಬದಲಿಸಿ ಚೊಕ್ಕವಾದ ಚಡ್ಡಿ, ಬನಿಯನ್ನು ತೊಟ್ಟುಕೊಂಡ (ದೀಪಹೊ. ೬೩).

[← ಇಂ. Banian. ಹಿಂ. ಬನಿಯಾಇನ್ : ಮರಾ. ಬನಿಯನ್, ಬನ್ಯಾನ್ : ಗುಜ. ಬನಿಯಾ=ವೈಶ್ಯ./ಸಂ. ವಣಿಜ=ವೈಶ್ಯ]

ಬನೂರ್ 'ಬನ್ನೂರ್' ನೋ.

ಬನ್ನ (ನಾ). ೧. ಅವಮಾನ; ಅಪಮಾನ; ಭಂಗ : "ಬನ್ನಮೆಂದು ಭಂಗಂ" (ಶಶಸಾ. ೬೩-೯೬೨) ; ಪೆಜರ್[ನಾ]ವಂ ಧರಾಚಕ್ರಕ್ಕೆ ಬೀಯಂ ಕೆಳೆಯಪ್ಪವಂ ನೆಟ್ ಯಾರೆಣೆಯೆಂಬನ್ನಂ ಕುಜೀತಬ್ಬಿಗೆ ಬನ್ನಮಂ (ಶಆ. ೨-೦೩೭): ನಿನ್ನ ಪಡೆಗೆಯ್ದ [ಟ್ಟಂ] ಶರದಿಂ ಬಿಡಿಸಿದನಲ್ಲನೆ ಸಂಸ್ತುತಂ ಬನ್ನವಿನ್ನವೆಂಬುವು ಮೊಳವೇ (ಪಂಪಭಾ. ೬-೫೩): ಅನುಜನ ನೆತ್ತರವೀಂಟಿದವನ ನೆತ್ತರ ಜೀಮಸಹಿತ ಮೀಂಟದೆ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂಪೆನೆ ದುಶ್ಶಾಸನನ ಬನ್ನಮಂ ನೀಗುವೆನೇ (ಗದಾಯು. ೫-೮). ೨. ಸೋಲು; ಪರಾಜಯ; ಪರಾಭವ : ತನ್ನೊಳಗಣ ಪನ್ನಗನಂ ಮುನ್ನೀಂ ಪಿಡಿದೊಗೆಯ ಕಾಯ ಲಾಜಿದೆ ಪಿರಿದುಂ ಬನ್ನದ ಕರ್ಪೆಸೆದುದು ತೋಜಿಗಿನ್ನುಂ ಹರಗಳ ತಮಾಳನೀಳಚ್ಛವಿಯಿಂ (ಪಂಪಭಾ. ೫-೫೮); ಬನ್ನದಿಂದಂ ಮಹಾನಾಥ ನಜುಜಿಗೆ ಮುಂದಿದು ಬೆನ್ನ ಹಿಂದಡಗಿದ ಸಮಸ್ತದಿಕ್ಪಾಲರಂ . . . ಕಂಡೊಡನೆ ಪನ್ನಿರಳ್ಳಯಿಸದಿಂ ಕಿಡಿ ಸುರಿಯೆ ಕಲ್ಪಾಂತಶರನಂತೆ ಗುಹನೆಸೆದನು (ಶಂಪು.೩೮-೦೫): ಏಸು ಸಲ ತಪವಗ್ಗದೇಸು ಬನ್ನವನಾಂತು ಕೌಶಿಕಂ ಬ್ರಹ್ಮರ್ಷಿಪದಕರ್ಹನಾದನ್ ? (ಹಂಸಕೌ. ೬೬೯). ೩. ನಾಶ; ಅಳಿವು : ಉನ್ನತಬಲಗೂಡಿ ಬಂದಾಗ ತುರುಕರ ಬನ್ನಕ್ಕೆ ತಂದುದೇನೆಂದೆ (ಕಂಪಹ. ೦೧-೫೯). ೪. ಕಷ್ಟ; ಬಾಧೆ ; ಸಂಕಟ ; ತೊಂದರೆ: ಪುಣ್ಯದೊಂದು ತುತ್ತತುದಿ ಕೃಷ್ಣೆಯ ಬನ್ನದೊಳಾಗೆ ಜೂದಿನೊಳ್ ಪೊರಸಟ್ ವಂತೆ ತವ್ವುರಸುಗೆಟ್ಟು ಕಟಲ್ದೆರ್ದೆಗೆಟ್ಟರಣ್ಯದೊಳ್ ತಿರಿತರುತಿರ್ದ ಕಣ್ಣಡಿಗರಿಂ ಮಗುಟ್ಟುಂ . . . ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೇ (ಪಂಪಭಾ. ೬-೫೩); ವರ್ಣಧರ್ಮದ ರಕ್ಷೆಗವನಿಯ ಬನ್ನವನು ಬಿಡಿಸಲಿಕೆ ತಾನುತ್ಪನ್ನನಾದನು ಯದುಕುಲದಲಿಲೆ ಭೂಪ (ಕಭಾಗ. ೦೦-೫೧-೦೬) ; ಏನಗೇತಕೆಯೋ ಮದುವೆಯ ಬನ್ನ ! (ಗಜಿಕ. ೩-೦೦೬). ೫. ದುಃಖ ; ಅಳಲು : ನಿನ್ನ ಮೊದಲು ನಿನ್ನಾಣೆ ನಿನ್ನನು ಕಾಣದನ್ನಪಾನಂಗಳಿಳಿಯದೆ ಬನ್ನದೊಳಾಳೆದೆ ನಾನು (ಕಂಪು. ೨-೦೦೯). ೬. ಕೊರತೆ ; ಚ್ಯುತಿ ; ಕುಂದು : ಮುಂ ಪೂಣ್ದಂ ನನ್ನಿಗೆ ಬನ್ನಂ ಬರಲೀಯದಾರ್ತಸಗಿದೀ ಖ್ಯಾತಿಯುಂ ಕೀರ್ತಿಯುಂ ಮಾಗಿಲಂ ಮುಟ್ಟಿದುದಲ್ತೆ (ಪಂಪಭಾ. ೦-೫೦). ೭. ಅಡ್ಡಿ; ತಡೆ; ವಿಘ್ನ : ಕನ್ಯೆ ದಿಲಡ್ಡಮೋಜಿಯೊಳಿರುವುದರಿಂದ ಬನ್ನವುಂಟೆ ಪ್ರಭಾಕರಗೆ (ಚಿಕಶ. ೨೦-೦೦೭); ಬಜಿದನ್ನ ತಮೆಗೆ ಬನ್ನ ಮೆಸಗದೆ ಎಹಗೆ ಬಂದ್ಯೆ ಅಹಗೆ ಪಿಂದಿರುಗ್ಗೆ (ಅದ್ಭುಕ. ೬-೦೦) ; ಗಣಪತಿಯೆಂದರೆ ಬನ್ನಗಳನ್ನು ಪಂಹರಿಸುವ ದೇವನು (ರೂಪಕಶ. ೬೩). ೮. ಮುರಿಯುವಿಕೆ; ಸೀಳುವಿಕೆ : (*).

ಬನ್ನದ ಕೂಟ್=ಕಷ್ಟದಿಂದ ಪಡೆದ ಆಹಾರ; ಭಂಗದ ಕೂಳು : ಪನ್ನಿರಡುಬರಿಸಮಲಸದೆ ಬನ್ನದ ಕೂಟುಂಡು ಬರ್ದಟಲ್ಪಿಂಗಲೊಡಂ ತನ್ನಂ ಕಾಳಿಕ ಪಿಂಗಿದ ಪೊನ್ನಿನ ತೆಜನಂತೆ ಕಾಂತೆ ಕರಮೆಸೆದಿರ್ದಳ್ (ಗದಾಯು. ೬-೬೦): ನೀಂ ನಿನ್ನ ನನ್ನಿಯನೆ ಕಾದು ನಿನ್ನನುಜರ್ ಬನ್ನದ ಕೂಟನುಂಡರ್ (ಪಂಪಹೊ. ೨೦೬-೦೩). [<ಸಂ. ಭಗ್ನ./ⓟ 'ಬನ್ನ' ಶಬ್ದಕ್ಕೆ ಇರುವ ಅರ್ಥಗಳು ಸಂಸ್ಕೃತದ 'ಭಂಗ' ಶಬ್ದಕ್ಕೂ ಇದ್ದು ಈ ಶಬ್ದದ ಉಪಯೋಗದಲ್ಲಿ ಸಂಸ್ಕೃತದ 'ಭಂಗ', 'ಭಗ್ನ' ಎಂದೆರಡೂ ಶಬ್ದಗಳ ಪ್ರಭಾವವು ಇರಬಹುದೆಂದು ಕಾಣುತ್ತದೆ ]

ಬನ್ನಂಗ (ನಾ). ಕಷ್ಟ; ಬವಣೆ ; ಸಂಕಟ : ಮುಂಗಾರುಮಳೆ ಆರಂಭವಾಯಿತು . . . ಕಾರಿಗೆ ಮುಂಚೆ ಹೊರಟ ಪಡೆ ದಾರಿಯಲ್ಲಿ ನೀರಿಂಗಾಗಿ ಬನ್ನಂಗ ಪಡಬಾರದು ಎಂದು ಅವನ ಇಷ್ಟ (ಕಚಿ. ೦೯೩). [< ಬನ್ನ./ⓟ 'ಬನ್ನ' ಮತ್ತು 'ಬಂಗ' ಎಂಬ ಎರಡು ಪದಗಳ ನಡುವಣ ಉಚ್ಚಾರಣಾಸಂಬಂಧದಿಂದ ಈ ಶಬ್ದದ ಉಪಯೋಗವಾಗಿರಬಹುದು]

ಬನ್ನಂಗಾಯಿ (ನಾ). (ಕರಾ) ಅರ್ಧ ಬಲಿತ ತೆಂಗಿನಕಾಯಿ : ಒಂದು ಅರ್ಧ ಮುಡಿ ಅವಲಕ್ಕಿ, ಇಪ್ಪತ್ತು ಬನ್ನಂಗಾಯಿ, ನೂರು ಬಾಳೇಹಣ್ಣು ಇವಿಷ್ಟು ತಯಾರಾಗಲಿ ! (ಪಿಶುಗು. ೦೦).

[←ತುಳು. ಬನ್ನಂಗಾಯಿ, ಬಣಂಗಾಯಿ, ಬಣ್ಣಂಗಾಯಿ]

**ಬನ್ನಂಬಡಿಸು**, ಬನ್ನಪಡಿಸು, ಬನ್ನಬಡಿಸು, ಬನ್ನವಡಿಸು (ಕ್ರಿ). ೧. ಅವಮಾನಗೊಳಿಸು; ತೇಜೋವಧೆ ಮಾಡು : ಭಂಗಪಡಿಸು : ಅಂತು ಮುನ್ನಂ ತನ್ನಂ ಬನ್ನಂಬಡಿಸಿದಾನ್ನತತೇಜನಂ ವಿಶ್ವನಂದಿಯಾವ ರಾಜನಂ . . . ಮೂದಲಿಸಿದಂ (ವರ್ಧ. ೬-೧೯ ಕ) : ನಿನ್ನ ಪದಭೃತ್ಯ ಕುಮಾರ್ಜುನ್ನಂ ಗೆಲ್ದಂ ಕಿರಾತನೀತನನೀಗಳ್ ಬನ್ನಂಬಡಿ[ಪಾಠಾಂ. ಬಿಡಿ]ಸುತ್ತ ಸೋಲಿಪ ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ (ಪಂಪಭಾ. ೯-೧೦೯). ೨. ಹಿಂಸೆಪಡಿಸು ; ಬಾಧೆಗೊಳಗುಮಾಡು ; ಸಂಕಟವನ್ನುಂಟು ಮಾಡು : ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದೆನೆ ಸಿರಿಯೋಳರಸುಗಳ್ ಮೆಯ್ಮರೆಯರ್ (ಕಾದಂಪೂ. ೩೬೩). **ಬನ್ನಪಡಿಸು** : ೨. ದೇವರು ಅನೇಕಾನೇಕವಿಧದಲ್ಲಿ ಭಕ್ತರನ್ನು ಬನ್ನಪಡಿಸಿ ದೃಢತೆಯನ್ನು ಪರೀಕ್ಷಿಸಿ ಒಲಿಯುವಂತೆ ನನಗೀಗ ನೀವೊಲಿದಿರಿ (ಕಾಲಕಾ. ೦೦೩). **ಬನ್ನಬಡಿಸು**: ೧. ಮಗನೆ ಹೋಗದಿರು ಮಱೆದು ವಿಶ್ವಾಮಿತ್ರನಾಶ್ರಮಕ್ಕೆ . . . ಮುನಿ ಬನ್ನಬಡಿಸಿಯೆ ಕಾಡಿದಪನಱಿದಿರು (ಹರಿಶ್ಚ. ೩-೬೩) ; ಅಂಜನಾಸುತನು ಮುದದಿ ಪನ್ನಗಾರಿಧ್ವಜನ ಪವನಶಿಖಿರುತಿಗಳ ಬನ್ನಬಡಿಸಿದ ಬಿರುದನುಪ್ಪಡಿಸಿ ಬಾಲರಂ ಚೆನ್ನಾಗಿ ಶಿಕ್ಷಿಸುವ ಮಾಗಧರ ಕೇರಿಯಂ ಕಂಡು ವಿಸ್ಮಿತನಾದನು (ಜೈಭಾರ. ೩-೩-೨೫) ; ನನ್ನ ಜನ ನಿಮ್ಮ ಬನ್ನಬಡಿಸಿದೊಡೆ, ಆಗ ಇಂತೆ ಮೊರೆದು ಹೇಳುವನು (ಕಲಿಕ. ೨೯-೧). ೨. ನಿರಪರಾಧಿಯನು ಬನ್ನಬಡಿಸುವುದುಚಿತವೇ (ಜಕಪು. ೩೯-೩೦) ; ಮಾಯೆ ಬನ್ನಬಡಿಸಿದಳಿಂತು ಜಗವನು (ಚಿಭಾಗ. ೨-೧-೧೦) ; ಕಣ್ಣು ಕಾಣದೆ ಅರಣ್ಯದಲಿ ಬಿದ್ದಂತಿಹೆ ಬನ್ನಬಡಿಸುವುದು ನಿನ್ನ ಧರ್ಮವಲ್ಲ (ಚಿದಾಕ. ೩-೬). **ಬನ್ನವಡಿಸು** : ೨. ಎನ್ನ ರಾಘವ ಸತ್ಯನಾದೊಡೆ ಬನ್ನವಡಿಸಿದ ನಾಯ ಹರಣವ ತಿನ್ನ ತಿನ್ನೆನುತಾರಿ ಬಾಣವ ಬಿಟ್ಟ ಸೌಮಿತ್ರಿ (ತೊರೆರಾ. ೩೬-೬೩).

[ಬನ್ನಂಬಡು + – ಇಸು]

**ಬನ್ನಂಬಡು**, ಬನ್ನಪಡು, ಬನ್ನಬಡು, ಬನ್ನವಡು (ಕ್ರಿ). ೧. ಅಗೌರವಕ್ಕೆ ಈಡಾಗು ; ಅವಮಾನಕ್ಕೊಳಗಾಗು ; ಭಂಗಹೊಂದು : ನಿನ್ನ ಗುರು ವರ್ಧಮಾನಂ ಬನ್ನಂಬಡುವಂತೆ ಮಾಡುವೆಂ ಥಟ ಪೋಪಂ (ವರ್ಧಪು. ೧೩-೧೯). ೨. ಕಷ್ಟಕ್ಕೆ ಗುರಿಯಾಗು ; ತೊಂದರೆಗೆ ಈಡಾಗು ; ಬಾಧೆಗೊಳಗಾಗು : ಮುನ್ನಿನ ಭವದೊಳ್ ಘೋರವನಾಗಿ ಕಾಂಚೀಪುರದೊಳ್ ತಿರಿದು ಪಲವುಕಾಲಂ ಬನ್ನಂಬಟ್ಟು ಪೊನ್ನಂ ಪಡೆದು (ಶಾಂತಿಪು. ೩೦೦-೨೦) ; ಎನ್ನೊಡೆಯನ ಬಲ್ಪಂ ನೀವಿನ್ನುಂ ಕಂಡಱಿದುದಿಲ್ಲ ಬಿದಿಯಂಬಣ್ಣಂ ಬನ್ನಂಬಟ್ಟುದನಱಿಯನೆ (ಕಬ್ಬಿಗ. ೦೫೬). ೩. ಸೋಲು ; ಪರಾಭವ ಹೊಂದು; ಹಿಮ್ಮೆಟ್ಟು: ಬನ್ನಂಬಟ್ಟೆನ್ನ ಮುನ್ನಿನ ಬನ್ನಮುಂ ಪಿರಿದದೆ ನೆವಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬೆನೇ (ಜಗನ್ನಾ. ೦೨-೧೯); ತನ್ನೊಳೆ ತನೆ ಪೆರ್ಚೆ ಮಹಿಶೂರಾಣ್ಮಂ ಪೊಣರ್ವನ್ನೆಗಂ ಬನ್ನಂಬಟ್ಟಿವು ಬಣ್ಣಗೆಟ್ಟುವು (ಕರಿಶ. ೨-೩೯). ೪. ದುಃಖಪಡು ; ಖೇದಗೊಳ್ಳು ; ಸಂಕಟಪಡು : ಕ್ಲೇಶನ್, ಕ್ಲೇಶಕಃ, ಈ ೨ ಬನ್ನಂಬಡುವಾ (ಕಾಶಬ್ದ. ೩೯೯). **ಬನ್ನಪಡು** : ೨. ಆಸ್ತಿ ಉಳಿಯುವಂತಾದರೆ ನಿನ್ನ ಮಗಳೂ ಮೊಮ್ಮಕ್ಕಳೂ ಹೊಟ್ಟೆಗಿಲ್ಲದೆ ಮುಂದೆ ಬನ್ನಪಡುವುದನ್ನು ತಡೆದಂತಾಗುವುದು (ಕಾಗಸು. ೬೯). **ಬನ್ನಬಡು** : ೨. ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನು (ಶಿವಾನುಕ್ರ. ೬-೨೯) ; ಮುನ್ನ ಭೂಸುರ ಶಾಪದಿಂದ ಪಲರಳಿದುಳಿದು ಬನ್ನಬಟ್ಟವರುಂಟು (ಕೃಶಿಭಾ. ೩-೪೦) ; ಅಧಿಕಾರಿಗಳ ಕಟ್ಟಳೆ ಕಾನೂನುಗಳಿಂದ ಪ್ರಜೆಗಳು ಬನ್ನಬಡುತಿದ್ದರು (ಪಾಪುಕ. ೯೯). ೪. ಚಿನ್ನ ಕರುವಿಗೆ ಬನ್ನ ಬಡುವವನು. ಕಣ್ಣ ನೀರನು ಮಿಡಿವನು (ಕವಿಕ. ೦೮-೬). ೫. ನಾಶವಾಗು ; ಅಳಿದು ಹೋಗು : ತನ್ನ ಸಹಾಯದಿಂಬಸುರಾಧೀಶ್ವರನೆನ್ನ ಮೊಮ್ಮನನು ಬಂಧಿಸಿದ ಮುನ್ನ ಹಿರಣ್ಯಕ ಮೊದಲಾದ ದೈತ್ಯರು ಬನ್ನಬಟ್ಟುದ ಬಲ್ಲರೆಲ್ಲ (ಕೋಟಿಶ. ೩೬-೦೩).

**ಬನ್ನವಡು** : ೨. ನಿನ್ನ ಕೊಂದವ ನಾನು ಮಾತಿನ ಭಿನ್ನಭಾವ ವನಱಿಯದಕಟಾ ಬನ್ನವಟ್ಟೆ ತಂದೆ (ತೊರೆರಾ. ೩೬-೩೦) ; ಕನಕಲತೆಯೆಂಬವಳ್ . . . ವಿರಹದಿಂದೆನಸುಂ ಬನ್ನವಡುವ ಭೂಮೀಶ್ವರ ತನುಜೆಯ ನೋವಂ ಬಗೆಗಿ (ಜಗನ್ನಾ. ೯-೯೩). ೫. ಬನ್ನವಟ್ಟಿಹ ಕಪಿಕಾಲಂಗಳ ಮುನ್ನ ಸತ್ರಾಣಿಸುವ . . . ಎನುತ ಸಂತೈಸಿದನು ನೊಂದವರ (ತೊರೆರಾ. ೨೫-೨೩). [ಬನ್ನ + ಪಡು]

**ಬನ್ನಂಬಡೆ** (ಕ್ರಿ). ೧. ಅವಮಾನ ಹೊಂದು ; ಭಂಗಕ್ಕೊಳಗಾಗು : ಈಶ್ವರಂ . . . ಆನಿಟ್ಟ ಪುಲ್ಲನೆತ್ತಿದನೆ ದನುಜರ ಗೆಲ್ದವಂ ಎನುತೊಂದು ಪುಲ್ಲನಿಡೆ . . . ಉಳಿದ ಸುರರುಂ ಆ ಪ್ರಕಾರದಿನಾತ್ಮಶಕ್ತಿಗಳಿನೆತ್ತಿ ಮೇಣ್ ಕ್ಷಿಪ್ರದಿಂ ಬನ್ನಂಬಡೆದರ್ (ಕದ್ಯಾ. ೦೦-೨೩೦) ; ಎನ್ನಂ ಸೆಱೆಯಂ ಬಿಡಿಸಿದೆ ಬನ್ನಂಬಡೆದುಳಿದೆನೆಂದು . . . ಶ್ರುತಿಕನ್ನಿಕೆ ಮಾಧವನ ಹರ್ಷದಿಂ ನುತಿಯಿಸಿದಳ್ (ದಶಾವ. ೨-೨೯). ೨. ಸೋಲು ; ಪರಾಭವಗೊಳ್ಳು : ಪೆಱನಾಡೆಱೆಯಂ ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆ (ಕಬ್ಬಿಗ. ೬೯).

[ಬನ್ನ + ಪಡೆ]

**ಬನ್ನಂಬೆಱು** (ಕ್ರಿ). ೧. = ಬನ್ನಂಬಡೆ ೧: ಹರಿಯಿಂದಂ ಮಂದರಂ ಮಂದರಮಥನದಿನಂಭೋಧಿಯಂಭೋಧಿಯಿಂದಂ ಧರೆ ಬನ್ನಂಬೆತ್ತುವು (ಎಕ. VII, ಶಿಕಾ. ೦೧೯-೨೨; 1069); ಮುನ್ನಮೆ ಬನ್ನಂಬೆತ್ತನಂ ಪುಷ್ಕಲಪುರದ ಹಯಗ್ರೀವನಂ ಕರ್ವದಿಂದಂ ಮಱೆದಾಂ ಮೆಯ್ಯಿಟ್ಟು ನಿದ್ರಾಸುಖದಿನಟಲೆ ಬಂದು . . . ಎನ್ನೀವಳಂ ಕೊಂಡು ಪೋದಂ (ಶಾಂತಿಪು. ೬-೩). ೨. ದುಃಖವನ್ನು ಹೊಂದು ; ಕಳವಳಪಡು : ಬನ್ನಂಬೆತ್ತನ್ನಯ ಬನ್ನಮಂ ಮನ್ನಿಸು (ಉದ್ಭಟ. ೩-೨೯). [ಬನ್ನ + ಪೆಱು]

**ಬನ್ನಂಬೊಂದು** (ಕ್ರಿ). = ಬನ್ನಂಬಡೆ ೧: ನಿಲ್ಲೆಲಗೇ ಎನುತ್ತೆ ಗುರುಶಿಷ್ಯಂ ಕೋಪದಿಂ ಗರ್ಜಿಸಲ್ ಬನ್ನಂಬೊಂದುತೆ (ಶಾಕುಂತ. ೬೩-೦೯೦).

[ಬನ್ನ + ಪೊಂದು (< ಪೊರ್ದು)]

**ಬನ್ನಗೆಡು** (ಕ್ರಿ). ಕಷ್ಟಪಡು; ತೊಂದರೆಗೀಡಾಗು : ತನ್ನ ಗಾತ್ರದೊಳು ಮೇಣನ್ಯರಂಗದೊಳಕಟ ಬನ್ನಗೆಟ್ಟಾ ಚಕ್ರದಿಂದೆ ಸುಡಲು ನನ್ನಿ ನರಕಕ್ಕೆ ವನೆನ್ನನಾದೊಡವೊಂದ ಧನ್ಯವಪ್ಪಾ ಸೂತಸಂಹಿತೆಯವಂ (ಸೂಸಂಹಿ. ೨-೧೫೨).

[ಬನ್ನ + ಕೆಡು]

**ಬನ್ನಣೆ** ‘ಬಣ್ಣನೆ’ ನೋ.

**ಬನ್ನಣೆಗಾರ್ತಿ** ‘ಬಣ್ಣನೆಗಾರ್ತಿ’ ನೋ.

**ಬನ್ನಣೆಗಾಱ** ‘ಬಣ್ಣನೆಗಾರ’ ನೋ.

**ಬನ್ನಣೆಗೆಯ್**, ಬನ್ನಣೆಗೈ (ಕ್ರಿ). ೧. ವರ್ಣಿಸು: ವಿವರಿಸು : ಬನ್ನಣೆಗೆಯ್ವುದು ಬಜಱದೆ ಬಣ್ಣಗೆವಡಿಸದಿರು (ಗೀತಗೋ. ೨೫-೨). **ಬನ್ನಣೆಗೈ** : ೨. ಅಲಂಕರಿಸು : ಶೃಂಗಾರಮಾಡು : ಪನ್ನೀರೆರೆದಂಗಿಯಾನಿಕ್ಕಿ ಕಸ್ತೂರಿಯಿಟ್ಟು ರನ್ನದ ತೊಡವನು ತೊಡಿಸಿ ಬನ್ನಣೆಗೈದಳು ಪರನಂದಿನಿಯು (ಕಹಾಗ. ೨೨೦). [ಬನ್ನಣೆ (< ಬಣ್ಣನೆ) + ಕೆಯ್]

**ಬನ್ನಣೆಗೈ** ‘ಬನ್ನಣೆಗೆಯ್’ ನೋ.

**ಬನ್ನಣೆನುಡಿ** ‘ಬಣ್ಣನೆನುಡಿ’ ನೋ.

**ಬನ್ನಣೆವಾತು** ‘ಬಣ್ಣನೆವಾತು’ ನೋ.

**ಬನ್ನಪಡಿಸು** ‘ಬನ್ನಂಬಡಿಸು’ ನೋ.

**ಬನ್ನಪಡು** ‘ಬನ್ನಂಬಡು’ ನೋ.

**ಬನ್ನಬಡಿಸು** ‘ಬನ್ನಂಬಡಿಸು’ ನೋ.

**ಬನ್ನಬಡು** ‘ಬನ್ನಂಬಡು’ ನೋ.

**ಬನ್ನವಂತ** (ನಾ). (ರೋಗದ) ಬಾಧೆಯನ್ನು ಹೊಂದಿರುವವನು ; ರೋಗಿ ; ವ್ಯಾಧಿಗ್ರಸ್ತ : “ರೋಜನ್, ರೋಜಕಃ, ರುಷ್ಟಃ, ರುಷ್ಟವಾನ್, ರೋಗೀ, ಈ ೫ ಬನ್ನವಂತ” (ಕಾಶಬ್ದ. ೨೨೨). [ಬನ್ನ + – ವಂತ]

ಬನ್ನವಡಿಸು 'ಬನ್ನಂಬಡಿಸು' **ನೋ.**

ಬನ್ನವಡು 'ಬನ್ನಂಬಡು' **ನೋ.**

**ಬನ್ನಿ₁** (ನಾ). ಸಣ್ಣ ಸಣ್ಣ ಎಲೆಗಳು ಹಾಗೂ ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ; ಶಮೀವೃಕ್ಷ ; ಹಿಂದೂಗಳು ಈ ಮರವನ್ನು ಪೂಜ್ಯವೆಂದು ಭಾವಿಸಿದ್ದಾರೆ. ನವರಾತ್ರಿಯಲ್ಲಿ ವಿಜಯದಶಮಿಯಂದು ಬನ್ನಿಯ ಮರವನ್ನು ಪೂಜಿಸಿ, ಅದರ ಎಲೆಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡು ಶುಭಾಶಯಗಳನ್ನು ನುಡಿಯುತ್ತಾರೆ : "ಶಮೀಯನೆ ಬನ್ನಿಯಕಣ್ಣು" (ಮುಂಗಾ. ೩೬-೦೩) : ಮುಳ್ಳಿಲ್ಲದ ಬನ್ನಿಯ ಮರನುಳ್ಳೆಡೆಯೊಳಂ . . . ಒಂದು ಪುರುಷದೊಳ್ ನೀರಕ್ಕುಂ (ಲೋಕೋಪ. ೩-೧೦); ಅನಿಬರು . . . ಅಖಿಳಕ್ಕೈದುವನೊಂದು ಹೆಣಾಕಾರದಲಿ ಬಿಗಿದೊಂದು ಬನ್ನಿಯ ಮರನ ತುದಿಯಲಿ ಕಟ್ಟಿಳಿದರು (ಕುಮಾ.ಭಾ. ೧-೦೨); ಆಲ ಮುಳ್ಮುತ್ತುಗ ಕೊಡಸಿಗೆ ಬನ್ನಿಗಳ್ಕೆಲಕಡರಿ ಮುಸುಕಿಹುವು (ಕಂಠೀ. ೦೬-೩೩).

**ಬನ್ನಿಮಂಟಪ**=ಶಮೀವೃಕ್ಷದ ಸುತ್ತಲೂ ಕಟ್ಟೆಹಾಕಿ ಕಟ್ಟಿರುವ ಮಂಟಪ : ಹಿಂದೆ ವಿಜಯದಶಮಿಯಂದು ಮೈಸೂರು ಮಹಾರಾಜರು ಮೆರವಣಿಗೆಯಲ್ಲಿ ಬನ್ನಿಮಂಟಪಕ್ಕೆ ಹೋಗಿ ಪೂಜೆ ಸಲ್ಲಿಸುತ್ತಿದ್ದರು (ಜೂ). **ಬನ್ನಿಮಹಾಕಾಳಿ**=ಬನ್ನಿಯ ಮರದ ಬಳಿಯ ದುರ್ಗೆ : ವಂಶಾವಳಿಯ ಕರಣಿಕನು ಬನ್ನಿಮಹಾಕಾಳಿಯ ಆಶೀರ್ವಾದದ ಪಟ್ಟಿಯ ನ್ನೋದಿ ಒಪ್ಪಿಸಲು . . . ವಸ್ತ್ರಾಭರಣಗಳಂ ಕೊಡಿಸಿ (ಮುಹಾವಂ. I. ೩೯). **ಬನ್ನಿಯ ಕಟ್ಟೆ**=ಬನ್ನಿಮಂಟಪ : ಬನ್ನಿಯ ಕಟ್ಟೆಯ ಸಾರ್ದನಾ ರಾಯ (ಜಹ. ೨೨-೬); **ಬನ್ನಿಯ ಬೆನಕ** = ಬನ್ನಿಯ ಕಟ್ಟೆಯ ಮೇಲೆ ಪ್ರತಿಷ್ಠೆ ಮಾಡಿರುವ ಗಣಪನ ವಿಗ್ರಹ : ಗುಂಡದೇವಪದ್ದಿ ಬನ್ನಿಯ ಬೆನಕನಲ್ಲಿ ಶ್ರೀಧರದೇವರ ಕೆಯ್ಯಿಂ ಬಡಗ ನಾಕಱ ಹಸುಗೆಯಲು ಕೊಟ್ಟ ಮತ್ತರು ನಾಲ್ಕು (ತೌಳ. IX—i. ೩೩೩-೯೯; 1216); ಇನ್ತೀ ಚತುಸ್ಸೀಮೆಯಲು ನಾಡು ನಟ್ಟು ಕೊಟ್ಟ ಕಲ್ಲುಗಳಿಂದೊಳಗಣ ಕ್ಷೇತ್ರವನೂ ಹೊನ್ನ ಹುಣಿಸೆಯಿಂದವೂ ಬಡಗಲು ಬನ್ನಿಯ ಬೆನಕನಿಂದಲೂ (ಎಕ. IX. ಚನ್ನಪ. ೦೨-೨೦ ; 1266). **ಬನ್ನಿಯ ಮರದ ಮಂಟಪ** = ಬನ್ನಿಮಂಟಪ : ಇನ್ನು ಕೆಲವು ಆಯುಧಗಳನ್ನೂ ಸಂಗಡ ಇರಿಸಿ ಉತ್ತರದಿಕ್ಕಿನ ಬನ್ನಿಯ ಮರದ ಮಂಟಪಕ್ಕೆ ಪಟ್ಟದಾನೆ ಕುದುರೆಗಳ ಸಹಿತವಾಗಿ . . . ಕಳುಹಿಸಿಕೊಟ್ಟರು (ಮುಹಾವಂ. I. ೩೯). [ದೇII. ತಮಿ. ವಾಲ. ವನ್ನಿ]

**ಬನ್ನಿ₂** 'ಬನ್ನಿ₁' ನೋ.

**ಬನ್ನು** (ನಾ). ಮೃದುವಾದ ಒಂದು ಬಗೆಯ ರೊಟ್ಟಿ : ಆ ಮೂರಿಯಂಗಡಿಯಲ್ಲಿ ಬ್ರೆಡ್ಡು, ಬನ್ನು ಸಿಕ್ಕುತ್ತವೆ (ಶೂಂ). [←ಇಂ. Bun]

**ಬನ್ನೂರ್**, ಬನೂರ್ (ನಾ). ಒಂದು ಸ್ಥಳದ ಹೆಸರು : ಬನ್ನೂರ್ವರಿಯ ಮಗ ಪಾಲ ಬಲ್ಲದ ತುಱುಗೊಳೊ ಕಾದಿ ತುಱುವನಿಕ್ಕಿಸಿ ಸ್ವರ್ಗ್ಗಿಯಾದ (ಎಕ. X. ಮುಳಬಾ. ೯೯-೪ ; ಸು. 970). **ಬನೂರ್** : ತೈಲಪದೇವಂ ರಾಜ್ಯಂಗೆಯೆ ಬನವಾಸಿ ಅರಸುಗೆಯೆ ಬನೂರಯ್ಯ ಮಾಡಿಸಿದ ಕಂಭ (ಎಕ. VIII, ಸೊರಬ. ೩೨೯-೬ ; 985). [ಬನ್ನಿ₁ + ಊರ್]

ಬನ್ಸಿ 'ಬನಸಿ' ನೋ.

ಬನ್ಸಿಗೋಧಿ 'ಬನಸಿಗೋದಿ' ನೋ.

ಬನ್ಸಿರವೆ (ನಾ). ಬನಸಿಗೋದಿಯಿಂದ ಮಾಡಿದ ರವೆ : ಬನ್ಸಿರವೆಯಿಂದ ಉಪ್ಪಿಟ್ಟು, ಸಜ್ಜಿಗೆ ಮಾಡಿದರೆ ಉದುರುದುರಾಗಿಯೂ ಮೃದುವಾಗಿಯೂ ಇರುತ್ತದೆ (ಶೂಂ). [ಬನ್ಸಿ (<ಬನಸಿ) + ರವೆ]

ಬಪ್ಪ₁ 'ವರ್' ಪರಾ.

**ಬಪ್ಪ₂**, ಬೊಪ್ಪ (ನಾ). ೧. ತಂದೆ : ನ್ಯಾಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ ನಿಮ್ಮಭಿಪ್ರಾಯಂ ನೆಟ್ಟನಲಂಘ್ಯಂ (ಅಪಂಕ್ತಿ.೦೩-೬೨); ಎಲೆ ಮಗನೆ ಬಪ್ಪನನ್ನೊಡಗೊಂಡು ಬಪ್ಪೆ ನಾಂ ಪರಿಣಯಕೆ (ಜಾತು. ೬-೦೩). **ಬೊಪ್ಪ** : ೧. ಅಂತು ತನೂಭವಂ ಜನಿಸಿಯಾಕ್ಷಣದೊಳ್ಪರಿದೆಯ್ದೆ ಬೊಪ್ಪ ನಾನೆಂತು ಬರ್ದುಂಕುವೆಂ ಬೆಸಸುವುಂದೊಡೆ (ಧರ್ಮ. ೬-೨೯) ; ಆ ಶಿಶುತ್ವದಲೆಮ್ಮ ಬೊಪ್ಪನು ವಾಸವನ ಪುರಕ್ಕೈದಿದನು (ಕುಮಾ.ದ್ರೋ. ೯-೯೯) ; ಬೊಪ್ಪ ಕಳುಹಿದ ವಸ್ತುಗಳನೆಲ್ಲವ ರಾಮನೊಪ್ಪಿಸಿಕೊಂಡು ದುರ್ಗವನು ಪೊಪ್ಪವಿಟ್ಟನು ಸುವರ್ಣೆಯಿಂದ (ಮುರಾಸಾಂ. ೪೨-೩೯). ೨. ತಾತ ; ಪಿತಾಮಹ : "ಬೊಪ್ಪಂ ತಾತನೊಳಂ" (ಶಮದ.೩) ; ಅಪ್ಪನು ನಮ್ಮ ಮಾದರ ಚೆನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ (ಬಸವ. ೩೯೯). ೩. ಮಕ್ಕಳನ್ನು ಪ್ರೀತಿಯಿಂದ ಸಂಬೋಧಿಸುವಾಗ ಹೇಳುವ ಮಾತು : ಕವಡೆ ಥಾಳದಂಡದೊಳೊಡಂಬಡೆ ದಾದಿಯರಿಕ್ಕೆಲಂಗಳೊಳ್ ಸವಡಿಸಿ ಸಾರ್ಚಿ ದಟ್ಟಡಿಯೊಳಿಟ್ಟಿರುತಿರ್ದನನಾರ ಬೊಪ್ಪನೀ ಕವಡೆಯ ಬೊಪ್ಪನೆಂದು ನಡೆ ನೋಡಿದರ್ (ಸೂಕ್ತಿ.ಸು. ೬-೩೩); ಬಾರೆನ್ನ ಬೊಪ್ಪಯೆಂದಡಿಗಡಿಗೆ ಮುದ್ದಿಸುತ್ತ ಕೀರಳನ ಹರುಷದಿಂ ಲಾಲಿಸುತ್ತ (ಶೀಕು. ೧೦-೬೮) ; ಬಾರೆನ್ನ ಬಾರೋ ಕಾರುಣ್ಯಮೂರ್ತಿ ಬೊಪ್ಪ ಬಾರೊ (ಶಬಸ. ೨೫). ೪. ಒಬ್ಬಾತನ ಹೆಸರು : ಕಲಿಗಂಗನಸ್ತು ತನಯಂ ಶ್ರೀಬೊಪ್ಪದಂಡಾಧಿಪಂ (ಎಕ. II. ೩೯೯-೩೩ ; 1135). ೫. (ಆಲಂ) ಪ್ರಪಂಚಕ್ಕೇ ತಂದೆಯಾದವನು ; ಪರಮಾತ್ಮ ; ಕೃಷ್ಣ : ಈ ಬೊಪ್ಪಂ ದೇವಕಿಗಾದಾ ಬೊಪ್ಪಂ ತಪ್ಪದಪ್ಪನಱಿದಂ (ಜಾತಕಮಂ. ೦೬೩-೧೭೭ ; 1161).

**ಬಪ್ಪನಂಕಕಾಱ** = ಒಂದು ಬಿರುದು : ರಿಪುರಾಯಕುವರಬಂಗಾರಂ ಬಪ್ಪನಂಕಕಾಱಂ [ಕುಮಾರ]ಂಕಭೀಮಂ (ತೌಳ. XX. ೬೦-೯ ; 1109). **ಬಪ್ಪನ ಗಂಧವಾರಣ**, **ಬೊಪ್ಪನ ಗಂಧವಾರಣ** = ಒಂದು ಬಿರುದು : ಈ ನರಸಿಂಹಭೂಭುಜಂ ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗಂಧವಾರಣಾಂ (ಎಕ. V. ಬೇಲೂರು. ೦೯೩- ; 1161 ; ಜಾತಕಮಂ. ೩೩೩ ನೋ); ಗಡಿಯಂಕಮಲ್ಲ ಬೊಪ್ಪನ ಗಂಧವಾರಣ ಕಲಿದೇವ ಗೋಪಾಳದೇವರ ದಿಬ್ಯಶ್ರೀಪಾದಪದ್ಮಾರಾಧಕರುಂ (ಎಕ. VIII. ತೀರ್ಥಹ. ೨೫-೪ ; 1260).

[<ಪ್ರಾ. ಬಪ್ಪ./ಸಂ. ವಪ್ಪ, ಹಿಂ./ಬಪ್ಪಾ, ಬಾಪ್ ; ಮರಾ. ಬಾಪ್]

**ಬಪ್ಪ₃** (ನಾ). ೧. ಬೆಟ್ಟದ ಮಗ್ಗುಲು ; ಸಾನು ; ತಪ್ಪಲು. ೨. ದಡ ; ತೀರ ; ತಟ : "ಬಪ್ಪ—ವಪ್ರ=ತಪ್ಪಲು, ದಡ" (ಕರ್ನಾ.ಶ.೫೯); ವಪ್ರ, ಬಪ್ಪ (ಕರ್ಮಾಕು. ೧೩೪ ಕ್ರಿಯೋ) ; ಪತ್ರಿಕೆ — ಹತ್ತಿಗೆ, ವಪ್ರ — ಬಪ್ಪ (ಹೊಸಗ. ೦೦೩). ೩. "ಅಗುಸೇ ಬಾಗಿಲು" (ಶ್ರೀಕ).

[<ಪ್ರಾ. ವಪ್ಪ./ಸಂ. ವಪ್ರ]

ಬಪ್ಪಣ (ನಾ). ಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ಆಡಿಸುವ ಒಂದು ರೀತಿ. — ಬಗೆ : ರೂಢಿಯ ಕೈಯಾಗ ಆರೂಢ ಸಿಕ್ಕಿಹನು ಜೋಡಾಗಿ ಬಪ್ಪಣ ಆಡಿಸುತ ಕಂದನ ಸಡಗರದಿ ತೂಗಿರ (ಸಿದ್ಧಕ. ೩-೩೩). [?]

ಬಪ್ಪವ್ವ (ನಾ). ಒಬ್ಬಾಕೆಯ ಹೆಸರು : ಬಪ್ಪವ್ವಂ ಬನವಾಶಿ ಪನ್ನಿರ್ಚ್ಛಾಸಿರದ ಪಟ್ಟಮನಾಳೆ (ಮೈಅ. ೦೯೩, ೭೬-೪ ; 964).

[ಬಪ್ಪ₂ + ಅವ್ವ₁ (< ಅವ್ವೆ)]

ಬಪ್ಪಸೆಟ್ಟಿ (ನಾ). ಒಬ್ಬಾತನ ಹೆಸರು : ಬಪ್ಪಸೆಟ್ಟಿಯ ಮಗಂ × × ಮಂ ಅಮ್ಮಣಸೆಟ್ಟಿ (ಎಕ. III (B). ಗುಂಡ್ಲುಪೇ. ೩೬-೦ ; ೧೨ನೆಯ ಶತ).

[ಬಪ್ಪ₂ + ಸೆಟ್ಟಿ]

ಬಬಿಯಮ್ಮ (ನಾ). ಒಬ್ಬಾತನ ಹೆಸರು : ನೀತಿಮಾರ್ಗ್ಗ ಪೆರ್ಮ್ಮಾನಡಿಗಳ್ ಸ್ವರ್ಗ್ಗಮೇಱಿದನ್ದು ಮಱುವೂರ ಬಬಿಯಮ್ಮಂ ಕಿಚ್ಚುವೊಕ್ಕಂ (ಎಕ. V. ಅರಕ. ೨೬-೧೨ : ಸು. 916). [? + ಅಮ್ಮ]

ಬಬ್ಬರ, ಬೊಬ್ಬರ (ನಾ). ಸುಸಂಸ್ಕೃತನಲ್ಲದವನು ; ಅನಾಗರಿಕ : "ಬಬ್ಬರಂ ಬರ್ಬರಾರ್ಥಂ" (ಶಮದ. ೩೨). ೨. ಒಂದು ದೇಶದ

ಹೆಸರು; ಬರ್ಬರ : "ಬಬ್ಬರ_ಬರ್ಬರ_ಪಾಮರ, ದೇಶಭೇದ" (ಶಬ್ದಕೋ. ೨೯). ಬೊಬ್ಬರ : ೨. ಮಲಯ ಬೊಬ್ಬರ ಮತ್ಸ್ಯ ಮಗಧ ಬಂಗಾಳವು (ಲೀಲಾವ. ೩-೯೦). [ < ಸಂ. ಬರ್ಬರ ]

**ಬಬ್ಬರಿ** (ನಾ). ಒಂದು ಬಗೆಯ ಮದ್ಯ, — ಹೆಂಡ : ಸಿರಿಸಿಂಬಿ ತಂಪುಗೀ ಬಬ್ಬರಿ ಗಂಗಾಸಾಗರಂ ಸುರಾಳಂ ಸೋವಂ . . . ಎಂಬ ಕೆಲವು ಪೆಸರಿನ ಕಳ್ಳಂ ತುಂಬಿರ್ದನೇಕಘಟನಿಕುರುಂಬವನನುರಾಗದಿಂದೆ ತಂದಿ ಟ್ಟಾಡೊಡೆ (ಚಾರಿತ್ರ. ೧೦-೦೨೬). [ ? ]

**ಬಬ್ಬರಿಗ** (ನಾ). ಒಂದು ದೇಶದ ಹೆಸರು ; ಪಾಂಡ್ಯ ಲಾಳ ನೇಪಾಳ ತುರುಕ ಬಬ್ಬರಿಗ ಕೇರಳ ಪಲ್ಲವಮಂಗ ವೆಂಗಿ ಪಾಂಚಾಳ ಕಳಿಂಗ ಸಿಂಧು ವಿಷಯಾಧಿಪರಾಳ್ವಸಗೆಯ್ಯ (ಕ್ವಾ. I. ೩೦-೦೭; 1222). [ < ಬಬ್ಬರ ]

**ಬಬ್ಬಾಗಿಲ್** (ನಾ). ಒಂದು ಸ್ಥಳದ ಹೆಸರು (?) : ಮುರಿದು ಕಿಡಿವ ಗುಣ್ಣೆಯ ಬಬ್ಬಾಗಿಲ ದ್ವಿಸನ್ನಿಯ (ಎಕ. III (R). ತಂಜಿ. ೨೬೨-೨೯; 969). [ ? ]

**ಬಬ್ಬಾಟ** 'ಬೊಬ್ಬಾಟ' ನೋ.

**ಬಬ್ಬುಲಿ, ಬಬ್ಬುಳಿ, ಬೊಬ್ಬುಲಿ, ಬೊಬ್ಬುಳಿ$_1$** (ನಾ). ಒಂದು ಬಗೆಯ ಮುಳ್ಳುಗಿಡ; ಜಾಲಿ; ಗೊಬ್ಬುಳಿ : ಪಲಸಾಲಂ ತಡಸಾಸು ತೇಗು ಕದುಕಿಂಚಲ್ಲೊನ್ನೆ ಚೆನ್ನಂಗಿ ಬ[ಪಾಠಾಂ. ಬೊ]ಬ್ಬುಲಿ . . . ಎಂಬೀ ಮರದುಱುಗಲಿಱುಂಬಿನಿಂದತಿಗಹನವೆನಿಪ ಗಹನಾಂತರದೊಳಗೆ (ಧರ್ಮಾಮೃ. ೦೨-೩೬); ವನಜವನದಲಿ ತುಱುಚಿ ಕಬ್ಬಿನ ಬನದಿ ಕಡಸಿಗೆ ಚೂತಮಯ ಕಾನನದಿ ಬ[ಪಾಠಾಂ. ಬೊ]ಬ್ಬುಲಿ ಭೀಮಸೇನನಯುರವು ತಮ್ಮೊಳಗೆ (ಕಬ್ಬಾ. ೬-೩); ಈಗ ಊರು ಇದ್ದ ಸ್ಥಳದಲ್ಲಿ ಮೊದಲು ಬಬ್ಬುಲಿ (ಜಾಲಿ)ಯ ಬನವಿದ್ದು ತುಡುಗರಿಗೆ ಆಶ್ರಯವಾಗಿತ್ತು (ಲಿಶಾಶ. ೦೨). ಬಬ್ಬುಳಿ : ಬಬ್ಬುಳಿಯ ಮುಳ್ಳ ಮೆಳೆಯಲಿ ನಿಲ್ಲೆ (ಗೀತಾಂ. ೭೩-೯). ಬೊಬ್ಬುಲಿ : ಬೊಬ್ಬುಲಿಯ ವನಕೈನಿಸು ಕೂರ್ಮೆಯಿಂ . . . ನೀರ ನೆಱೆದೊಡಂ ಮಾವಿನ ವನದಂತೆ ಫಲಮಾಗಲಾರ್ಕುಮೆ (ರಶಾರ್ದ್ಮ. ೬-೭೬); ಚಂದನದ ಸನ್ನಿಧಿಯಲಿ ಪರಿಮಳ ತಾಗಿ ದೇವು ಬೊಬ್ಬುಲಿ[ಪಾಠಾಂ. ಬಬ್ಬುಲಿ, ಬೊಬ್ಬುಳಿ] ತಱೆಯ ಗಂಧಂಗಳಾಗವೆ (ಬಸವ. ೦೧೦) ; ಹಿರಿಯ ಬೊಬ್ಬುಲಿಮರದ ನೆಳಲಿದು (ಬಸವ. ೨೦-೦೦). ಬೊಬ್ಬುಳಿ$_1$ : ವನಜದಲರನಳಿದಾಬಿಡಿಗೆ ಬೊಬ್ಬುಳಿಯ ಪೂವಿನೊಳ್ಮಧುವುಂಟೆ (ಕೃಷಿಜಿ. ೦೯-೦೨) ; ಹಾವಸೆ, ಬೊಬ್ಬುಳಿಮರದ ತಿಗುಡು ಇವೆರಡನು ಕುಟ್ಟಿ . . . ಸಕ್ಕರೆವೆರಸಿ ತೆಗೆದುಕೊಳ್ಳೆ ದಾಹಂ ಪಾಣ್ಗುಂ (ಸಕಸ್ಕ. ೨೬೨). [ < ಸಂ. ಬಬ್ಬುಲ, ಬಬ್ಬೂಲ ]

**ಬಬ್ಬುಳಿ** 'ಬಬ್ಬುಲಿ' ನೋ.

**ಬಬ್ರು** (ಗು). (?) : ಆನೆಗೆ ಹಳದೀ ಬನಾತಿನ ಬಬ್ರುಜೂಲು ರೇಶ್ಮೆ ಜಾಲರು ಸಹ ೧ (ಎಕ. XIV, ತಂಜಿ. ೨೯೨-೦೯೨ ಶುಲಿ; 1847). [ ? ]

**ಬಭ್ರು** (ಗು). ೧. ಕಂದುಬಣ್ಣದಿಂದ ಕೂಡಿದ. (ನಾ). ೨. ಕಂದು ಬಣ್ಣ; ಪಿಂಗಳವರ್ಣ : "ಪಿಂಗಂ ಕಪಿಳಂ ಬಭ್ರು ಪಿಶಂಗಂ . . . ಹರಿತಂ" (ಚಭ್ರುಕೋ. ೦೦೯-೬೩); ಭ್ರುಕುಟಿಕುಟಿಲಭ್ರೂಲತಾಬಭ್ರುರೋಚಿ ಯಿಂ ರುಚಿರತಾಂಬೂಲಾರುಣಾಧರಮರೀಚಿಯಿಂ . . . ರೌದ್ರಭಾವಂ ನೆಲಸಿ ನಿಲೆ (ಕಾದಂಬ. ೨೬೦) ; ಅರಣ್ಯಂ . . . ಮದವತ್ಕುಂಜರಗಾತ್ರ ದಂತೆ ವಿಳಸದ್ವಭ್ರೂಪ್ರಭಾವಿಭ್ರಮಂ (ಕುಕೃತ್ತ. ೩-೬೬). ೩. ಮುಂಗುಸಿ; ಮುಂಗುಲಿ : "ಮುಂಗುರಿಯಲ್ಲಿಯುಂ ಬಭ್ರುವೆಂಬುದು" (ಶಬ್ದಾಯ. ೦೬೬-೩೦); ಹರಿ ಕರಿಗಳೊಂದಾಗಿ ಬೆರೆದು ಬಭ್ರೂರಗವನೆರಳೆ ಪುಲಿ ಯೊಂದನಿಸಿ ಮರೆದು ನಿಜವೈರಗಳ ವರಮುನಿಯ ದಿವ್ಯಪ್ರಭಾವ ದಿಂದೊಪ್ಪಿರ್ಪುವಾ ತಪೋಧನನೆಡೆಯೊಳು (ಶಂಕಾರಾ. ೦-೩-೮). ೪. ಅಗ್ನಿ : ಬಭ್ರುಸದ್ವ್ಯಷ್ಟು ಚಿತ್ರಭಾಂತಿಕೃಲ್ಲುತಶ್ ಪ್ರಭಾಜಿತೋವ್ಯತ್ ಕಕುಭ್‌ಪ್ರಮಿತ ಘೃಣಿಚಯಾದಭ್ರಸ್ಫುಲಿಂಗವವಿವಿಭ್ರಮವಿಭೃತ್ ವಿದ್ಧ ಶುಭ್ರದಕ್ಷರಕ್ಷತಾ (ಕದ್ಯಗಾ. ೦-೬). ೫. ವಿಷ್ಣು : "ವಿಷ್ಣುಃ, ಕೃಷ್ಣಃ . . . ಬಭ್ರುಃ, ಹರಿಃ . . . ವನಮಾಲೀ, ಗದಾಧರಃ — ಈ ೪೫ ನಾರಾಯಣನ ಪೆಸರ್" (ಶಬ್ದಾಯು. ೩-೨೯). ೬. ಶಿವ. ೭. ಕುದುರೆಯ ಹುಬ್ಬು : ಅಕ್ಷಿಕೂಟದಿಂ ಪೊಱಗಣ ಪುರ್ಬುಗಳ್ಗೆ ಬಭ್ರುವೆಂಬ ಪೆಸರಕ್ಕುಂ (ಅಶ್ವಶಾ. ೫೭-೨೩). [ಸಂ.]

**ಬಮರ** 'ಬವರ್ಸ' ನೋ.

**ಬಮರಿ** 'ಬವರಿ' ನೋ.

**ಬಮೆಗೊಳ್** 'ಬೆಮೆಗೊಳ್' ನೋ.

**ಬಮೋಜೀಬ್** (ಅ). ಅದಕ್ಕನುಗುಣವಾಗಿ ; ಅದಕ್ಕನುಸಾರವಾಗಿ : ಅದರ ತರುವಾಯ ನಡೆಯುವ ಅಪಾದನೆಗೆ ಅಯಿವತ್ತುರೂಪಾಯಿಗೆ ಪಿರಾದ ಜುರ್ಮಾನೆಗೂ ಗುರಿಯಾಗತಕ್ಕದ್ದು ಬಮೋಜೀಬ್ ಹುಕ್ಕುಂ (ಗ್ರಾಮಕಾ. ೯ ೩೬೮). [ ← ಪಾರ. ಬಮೂಜಬ್ ; ಹಿಂ. ಬಮೂ ಜಬ್, ಬಮೂಜಿಬ್ ; ಮರಾ. ಬಮುಜಿಬ್, ಬಮೂಜಿಬ್, ಬಮೊಜಬ್, ಬಮೋಜೀಬ್]

**ಬಮ್ಮ** 'ಬೊಮ್ಮ' ನೋ.

**ಬಮ್ಮಡಿ** 'ಬೊಮ್ಮಡಿ' ನೋ.

**ಬಮ್ಮಯ್ಯ** 'ಬೊಮ್ಮಯ' ನೋ.

**ಬಮ್ಮೇತಿ** 'ಬೊಮ್ಮಹತಿ' ನೋ.

**ಬಯ್‌$_1$, ಬೈ** (ಕ್ರಿ). ಬಯ್ತು, ಬೈತ (ಭೂತಕೃ). ಬಯ್ತು, ಬೈತು (ಭೂತನ್ಯೂ). ೧. ಅಡಗಿಸು ; ನಿಕ್ಷೇಪಿಸು ; ಮುಚ್ಚಿಡು ; ಬಚ್ಚಿಡು : "ಬಯ್-ನಿಕ್ಷೇಪೇ (ಬಚ್ಚಿಡು)" (ಕವಿರಾ) ; ದಂಡಕನ್ಯವಂ ಲೋಭಾಭಿಭೂತಂ ವಿಷಾವಿಲದಂಷ್ಟ್ರಂ ಶ್ವಯುವಾಗಿ ಪುಟ್ಟಿ ಸುಟ್ಟಾಗುಂ ಮುಂ ಬಯ್ತ ಭಂಡಾರದೊಳ್ (ಆದಿಪು. ೨-೦೨) ; ಕಮಲಜನಿಲ್ಲಿ ಬಯ್ತ ನೊಲವಿಂ ಕುಮುದೇಕ್ಷಣ ವಜ್ರದಂತವಿದ್ರುಮರದನಚ್ಛದಂಗಳಿನವರ್ಚಿದ ಜಂಗಮನೀಲಪುತ್ರಿಕಾಸಮಿತಿಯನೆಂಬಿನಂ . . .ಪುಳಿಂದಿಯರಿರ್ದರದೊಂದು ತಾಣದೊಳ್ (ಹರಿ. ೦೩-೦೬) ; ಬರೆದಂತೆ ಪೊಲ್ತಂತೆ ಬಯ್ತಂತೆ ಬೆಚ್ಚಂತೆ ಇರಿಸಿದಂ ಶಿವಮೂರ್ತಿಯಂ ಚಿತ್ತದೊಳಗಿಂತೆ (ಸೋಮೇ. ಶೀ. ೩೬-೨೫). **ಬೈ** : ೧. ಎರ್ದೆಯೊಳ್ ಬೈತಿಚ್ಚೆಯೊಳ್ ಕೂರ್ಮೆ ತಳ್ತಿರವಿಂ ಮಚ್ಚುಗೆವೆತ್ತ ಪತ್ತುಗೆಯಿನಂತಾ ನಾಲ್ವರಂದಿರ್ವರಿರ್ವರೆ ಯುಗ್ಮದ್ವಯ ಮಾದರೇಂ ಸಫಲಮೋ ಸತ್ಪಾತ್ರದಾನೋದಯಂ (ಶಾಂತಿಪು. ೬-೦೨೩) ; ೬ವಿ ಫಳತರುಗೆ ನೀರ್ಗಳನೀವುದುಮಂ ಬೈತು ಬಿತ್ತನೊಲವಿಂ ಬೆಳೆಗ್ಗೀ ವುದುಮಂ ಸತ್ಪಾತ್ರಕ್ಕೀವುದುಮಂ ದಾನಮೆಂಬ ನಾಣ್ಣೆಕೆಯುಂಟೇ (ಅರ್ಹನೀ. ೪-೫೬) ; ಆಭರಣಗಳೆಲ್ಲಮಂ ಬೈತು ತಾಂ ಬೇಗದಿಂ ವರಸಖಿಂ ಬೆರಸು ಖೇಚರಚಕ್ರವರ್ತಿ ಬೇಡರ ರೂಪನಾಂತು (ಧರ್ಮನಾ. ೩-೨). ೨. ಪ್ರತಿಷ್ಠೆಮಾಡು : ಬರೆದರೊ ಬೈತರೊ ಪೊಲ್ದರೊ ಪೊರೆದರೊ . . . ಕಡೆದರೋ ಎನೆ ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ (ಗಿರಿಕ. ೩-೦೦೨). ೩. ಸೇರಿಕೊಳ್ಳು : ಹಂಸತೂಲಸ್ಥಲದೊಳ್ ತಾಂ ಬೈತೊಡಂ ಮುಳ್ಳಗಳ ಹೊಸ ಹಸೆಯೊಳ್ ಬೈ[ಪಾಠಾಂ. ಸೈ]ತೊಡಂ ಸ್ನೇಹದಿಂದಂ ನಲವಿಂದಂ ಸ್ತೋತ್ರಮಂ ಮಾಡಿದೊಡ ಪಳಿದೊಡಂ ಸರ್ವಮೊಂದಂದ ಮೆಂದಾಂ ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೭೩). ೪. ಬಂಧಿಸಿ ಇಡು ; ಅಲುಗಾಡದಂತೆ ಇರಿಸು : ಬೇಸಗೆಕಾಲಮುಂಬಬಳೆ ಬೆಟ್ಟುಗಳೆಂಬೊಲೆಗಲ್ಗಳಲ್ಲಿ ಬೈತೀ ಸಕಳೋರ್ವಿ ಯೆಂಬ ಪೊಸಗಾವಲಿಯಂ ರವಿವಹ್ನಿಯಿಂದೆ ತೋಯಾಶಯಮೆಂಬ ಸಂಪಣ ಮಂನರ್ಪಿಸಿ ತಳ್ತುರಿಯಲ್ಕೆ ಕಾಷ್ಠಗಳ್ ದೋಸೆಯನಟ್ಟವೊಲ್ ಮಳಲ ರಾಶಿಗಳೊಪ್ಪಮನಾಳ್ದುವಾಕ್ಷಣಂ (ಚಾರಿತ್ರ. ೯-೬೬).

[ದೇ.॥ ತಮಿ. ವೈ; ಮಲ. ವಕ್ಕ; ಕೊಡ. ಬೆಯ್; ತೆಲು. ವೇಯು; ಕೋತ. ವಯ್; ತೊಡ. ಪೊಯ್]

**ಬಯ್₂**, ಬಯ್ಯು, ಬೈ₂, ಬೈಯು (ಕ್ರಿ). ೧. ಕೆಟ್ಟ ಮಾತನ್ನಾಡು; ಕಠಿಣವಾಗಿ ನುಡಿ: ಅದನಾತಂ ಬಯ್ದೊಡಲ್ಲ ನಾಂ ಬಯ್ದಂ (ಕಬ್ಬಿಗ. ೬-೩); ಕಿಱಿಯವನಱಿಯದೆ ಕಿಡೆನುಡಿದನ ಪ್ಪೊಡಂ ನೊಱುವರಂ ನೆಱೆ ಸಲಿಸುವುದೆಂದುದನಾಂ ಮಱೆವನೆ ಬಯ್ ಬಯ್ಗೆ ಸಲಿಸುವೆಂ ನೊಱುವರಂ (ಜಗನ್ನಾ. ೬-೬೦); ಪಡುವಲಿಳಿಯದ ರವಿಯ ಬಯ್ಯುತ ನಡೆದನಾ ಕುರುರಾಯನು (ಕುಮಾವ್ಯಾ. ೦೪-೪೫). ೨. ಮೊಱದಲಿಸು; ಹೀಗಳೆ: ಪೊಯ್ದ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ಬಯ್ವ ಬಿರುದಿನ ಕಹಳೆ ತಿತ್ತಿರಿಗಳಲ್ಲಲ್ಲಿ (ಜಕ. ಶೀ. ೩೬-೨೨); ಪೊಱವೊಱಲು ಬನದ ಕಟ್ಟಿಲೆ ಮಱುದುಂಬಿಗಳಿಂದೆ ಬಯ್ದು ಪಾಡಿ ಸಾರ್ತಂದುಱದೊಡ್ಡಿ ದರ್ಶಬಿಂಬದ ತುಱುಗಲದೆನಿಸುವುದು ಕಾಂಚನಪ್ರಾಕಾರಂ (ಪುಷ್ಪ. ೩-೬೩); ಕಿದಱಿದವು ನಿಸ್ಸಾಳ ಬಱಿಸಿಡಿಲದ್ಭುತಧ್ವನಿಯಲಿ ನಿರಂತರವೊದಱಿ ಬಯ್ದುವು ಕಹಳೆ ಬಿರುದಾವಳಿಯಲತಿರಥರ (ಕುಮಾವ್ಯಾ. ೬-೦೩). **ಬಯ್ಯು**: ೧. ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು (ಬಸವ. ೩೩); ಬಯ್ಯಲಱಿವೆ ದುರುಕ್ತಿ ಶರದಲಿ ಮೆಯ್ಯನೆಸುವೆಯೊ ಮೇಣು ಮಾರ್ಗಣೆ ಕಯ್ಯಲುಂಟೇ ನಿನಗೆ ಸಂಬಳವೇನು ಸಮರದಲಿ (ಕುಮಾವ್ಯಾ. ೦೩-೩೩). **ಬೈ₂**: ೧. ಜಯಮತಿ . . . ಸಿದ್ಧಾರ್ಥರಾಜ್ಞಿಯರ ಮೇಗೆ ಕ್ರೋಧಮಂ ಭಾವಿಸಿ . . . ದಯೆಯಿಲ್ಲದೊಂ ನಿಷ್ಕರುಣಿ ಎಂದು ಬೈದ[ಪಾಠಾಂ. ಬಯ್ದ]ಳ್ (ಕಬ್ಬಿಗ. ೪೫-೦೨); ನನೆಯುಂಬಂ ತೆಗೆದೆಚ್ಚನಂಗಜನ ತಪ್ಪೇನಾನುಮಂ ತೋಱಿ ಕಾಣ್ಬನಿತಂ ಮಾಡದೆ ಪದ್ಮಜಂ ಮದನನಂ ಬೈದಂತುಟೇ ಬೇಡವಿಬಿನದಂ (ಶಂಕರ. ೪-೬೪); ಕನಲಿ ವಿಧಿಯನು ಬೈವಳೋ ಉಬನಿಯ ಸುರಿವಳೊ ಶೋಕದಲಿ ನಿಜತನುವ ಬಿಡುವಳೊ ಕಾಂತೆಯೆಂತಿಹಳೆನುತ ನಡೆತಂದ (ಶಶಿ. ೬-೨). ೨. ಬೈದವು ಬಹುವೊಗದೊಳು ಕಹಳೆಗಳ್‌ಐರ್ಭೈದುವೊಗದನ ಸ್ವನ್ನದೊಳು (ಹರಿಶ. ೦೨-೬೦). **ಬೈಯು**: ೧. ಚಾಪಳೆಯರಾಲೋಚಿಸುತ ಕಡುಪಾಪಿಯಂಗಜನೆಂದು ಬೈಯು [ಪಾಠಾಂ. ಬಯ್ಯು]ತ ತೋಱಿನೆಡೆಗಿರದೈದಿ ತಂದರು ಸತಿಯ ಸಂತೈಸಿ (ಶಶಿ. ೦-೪೦); ಯಾರೂ ಹುಡುಗರನ್ನು ಹೊಡೆಯಲಿಲ್ಲ ಬೈಯಲಿಲ್ಲ (ಕಳಚು. ೩೩).

ಬೈಬೈ (ದ್ವಿರುಕ್ತಿ): ಅಗಿದು ಮೈದೆಗೆದು ಸಿಗ್ಗಾಗಿ ತಮ್ಮಿಂ ತಾವೆ ತೆಗಳಿ ಬೈಬೈದು ಬಾಯಳಿದು ಶೋಕಿಸಿ ತಾವೆ (ಜಾತಕ. ೪-೨೫೬); ಸಾಲ ಹೆಗ್ಗಹಳೆಗಳು ರಿಪುಭೂಪಾಲಕರ ಬೈಬೈದು ಗಜಱಿದವಾಳುತನದಾಳಾವ ಬೀಱುತ್ತು ಬೆಱಗನಹಿತರಿಗೆ (ಕುಮಾವ್ಯಾ. ೪-೩೨). **ಬೈದಾಟ**=ಒಬ್ಬರನ್ನೊಬ್ಬರು ಬಯ್ಯುವಿಕೆ.—ತೆಗಳುವಿಕೆ: ನುಡಿ ನೋಟ ಬಾಯೂಟ ಬೈದಾಟ ಕಲಹ ಕಾಲ್ಪಿಡಿತವಿಲ್ಲದ ಕಾಂತೆಯರಿಗೆ ಕಡುರಸಿಕರು ಲೇಸು ಮಾಡರೆಂದೊರ್ವಳು ನುಡಿದಳೆಳೆಯಳಿಗೊರ್ವಳಿಗೆ (ಕುಮಾರಾಂ. ೨೬-೯೨); ಪಾರಿವಗಳ ದನಿ ಕೊರಳರ್ಚ್ಕಿಯ ಲಲ್ಲೆ ಕೀರವಱಿಗಳ ಬೈದಾಟ (ಕಂಕಣ. ೦೦-೯೩). **ಬೈದಾಡು** = ಮೊಱದಲಿಸು; ಹೀಗಳೆ: ಸೂಸು ಮಿಗಲೊಳಗೊಳಗೆ ಖತಿಯಲಿ ಕೆಣಕಿ ಬೈದಾಡಿದರು ಸಮರಾಂಗಣಭಯಂಕರ ಶಲ್ಯ ಭಾಸ್ಕರಸುತರು ರಥದೊಳಗೆ (ಕುಮಾವ್ಯಾ. ೯ ಸೂಚನೆ).

[ದೇ.॥ ತಮಿ. ವೈ; ಕೊಡ. ಬಯ್ಕ್]

**ಬಯ್₃**, ಬೈ₃, ಬೈಯು (ನಾ). ಸಂಜೆ; ಬೈಗು: (೧). **ಬೈ₃**: ಉಪಾಯವಿಲ್ಲದೆ ಹೊತ್ತು ಬೈಯಾಗುವಾಗ . . . ಹೊರಟೆ (ಕುಂಗಿಉ. ೯). **ಬೈಯು**: ಕೈಯುಡಿಗಳ್ ಕಂಗಳ್ ಕಡೆಯೊಯ್ಯನೆಯುಗುರ್ದಾಡೆ ಜಿಹ್ವೆ ಕೀಳ್ಪುಟ ವೇಳುಂ ಬೈಯುದ ಕೆಂಪುಗಳಾಗಿರಲಯ್ಯಂ ತಾನೀವನತುಳಸುಖಸಂಪದಮಂ (ಜಾತಕ. ೦-೦೨-೪೯). 'ಬಯ್ಗು' ನೋ.

ಬಯ್ಯಣಕ=ಸಂಜೆಯವರೆಗೂ; ಸಾಯಂಕಾಲದ ತನಕ: (೧). [ದೇ.॥ ತುಳು. ಬಯ್ಯ, ಬೈಯ, ಬೈಯ್ಯ]

**ಬಯ** (ನಾ). ಹೆದರಿಕೆ; ಭಯ; ದಿಗಿಲು: "ಬಯಮೆನಲು ಭಯದೊಳಗಕ್ಕು" (ಶಬ್ದ. ೬೩): ಭೋಗಿ, ಬೋಗಿ, ಭಯ, ಬಯ (ಶಬ್ದಾನು. ೦೪೩ ವೃತ್ತಿ). 'ಬಯಂಗೊಳ್', 'ಬಯಂಬಡಿಸು' ನೋ. [<ಸಂ. ಭಯ]

**ಬಯಂಗೊಳ್** (ಕ್ರಿ). ಹೆದರು; ಭಯಪಡು; ದಿಗಿಲುಗೊಳ್ಳು: ಇಂದ್ರಿಯಂಗಳ ದೆಸೆಗೆ ನಾಡೆಯುಂ ಬಯಂಗೊಂಡು (ಧರ್ಮಾಮೃ. ೩-೨೬). [ಬಯ+ಕೊಳ್₁]

**ಬಯಂಬಡಿಸು** (ಕ್ರಿ). ಹೆದರುವಂತೆ ಮಾಡು; ಭಯಪಡಿಸು; ದಿಗಿಲುಗೊಳಿಸು: ತಿಬ್ಬವೊಗಂ ಬಯಂಬಡಿವ ತೇಜಮನುಳ್ಳ ದೃಢಾಂಗ ಮಾಯತಂ ಗಬ್ಬಿಗರಿಂ ನಿರೀಕ್ಷಿಸಲಗಮ್ಯಮದಾದುದದೊಂದುಮಾಯುಧಂ ನಿಬ್ಬರವಾದ ಚಂಡಮೆನಿಕುಂ ಧರೆಯೊಳ್ (ಜಗನ್ನಾ. ೧-೦೪-೯೬). [ಬಯ + ಪಡಿಸು]

**ಬಯಕಾಱ** (ನಾ). ೧. ಸಂಗೀತಗಾರ: ಮಧ್ಯಮಪಾಂಡ್ಯರಾಯ ಶಸ್ತ್ರಶಾಸ್ತ್ರಪ್ರವೀಣ ಬಯಕಾಱಪಿತಾಮಹ . . . ಶ್ರೀ ವೀರ ಆರಗದ ಹರಿಯಪ್ಪಒಡೆಯರು ಸುಖಸಂಕಥಾವಿನೋದದಲು ರಾಜ್ಯಂಗೆಯ್ಯುತಿರ್ಪ್ಪಲ್ಲಿ (ಎಕ. VI. ಕೊಪ್ಪ. ೩೬-೦೪; ಪು. ೧೩೮೦); ಅಚ್ಯುತದೇವರಾಯ ಮಹಾರಾಯರ ಮನೆಯ ಬಯಕಾಱ ರಾಮಪ್ಪಯ್ಯನವರು ಬೂದಿಹಾಳ ಸೀಮೆಯ ಮದುವೆಯ ಸುಂಕವನು ಬಿಟ್ಟು ಕೊಟ್ಟು ಧರ್ಮಶಾಸನದ ಕ್ರಮವೆಂತೆಂದರೆ (ಎಕ. XII. ತಿಪ. ೩-೬; ೧೫೩೬); ವರವೈಣಿಕ ಬಯಕಾಱರು ಹರುಷದೆ ಕೊರಳ ಬೆರಸನೊಂದುಗೂಡಿ . . . ಪಿರಿದಾಗಿ ಪಾಡುತೊಪ್ಪಿದರು (ಕಂಕಣ. ೬-೩೯). ೨. ವೈಣಿಕ: ತುಱುಗಿ ಪಡೆವಾಗಳ್ ಸೋಲಿವಡದವುದೆಂಬ ಭೀತಿಯಿಂ ಪೆಗಲಿಂ ತೆಗೆದು ಬೀಣೆಯಂ ದೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಬಯಕಾಱರ ತೆರಳ್ಕೆಯಿಂ (ಜಾತಕ. ೦೨-೦೦೬ ಹ); ಹರಿಸಂ ಮಿಗೆ ಚಿಕದೇವಂ ಸರಸಾಗ್ರಣಿ ವೀಣೆ ಬಾಜೆ ಪೋಚಿಗಳಂ ಮುಂಬರಿದು ಕುಡೆ ದೇವರಾಯನ ಚರಣಕೆ ಬಯಕಾಱರಿಂದು ಬಟ್ಟಿಸೆ ನೆಗಟ್ದರ್ (ಚಿಕ. ೪-೦೦೦). [←ತೆಲು. ಬಯಕಾಂಡು, ಬಯಕಾಱ]

**ಬಯಕೆ₁** 'ಬಯ್ಕೆ₁' ನೋ.

**ಬಯಕೆ₂**, ಬಯಕ್ಕೆ, ಬಯ್ಕೆ₂, ಬವಕೆ (ನಾ). ೧. ಇಚ್ಛೆ; ಆಸೆ; ಅಪೇಕ್ಷೆ: "ಇಚ್ಛೆ ಕಾಂಕ್ಷೆ ಸ್ಪೃಹೆಯು ಆಶಂಸಾ ರುಚಿ ಕಾಮ ವಾಂಛೆ ತೃಷ್ಣತಮೆನಲು ಬಯಕೆ" (ಕಂನಿಘಂ. ೦೨೬-೦೦); ನಿಯಮಿತಾಕ್ಷರದಿಂದುಪಮಾಪ್ರತಿಜ್ಞೆಯನೆ ತಿರ್ದುವುದಟ್ಟಿಯನಿರ್ದುಮಾ ಬಯಕೆ ತೀರದ ಕಾರಣದಿಂ ವಿಪರ್ಯಯವಿದಭ್ಯುಪಮೋಕ್ಷ್ಯಪದೂಷಣಂ (ಕಾವ್ಯಾ. ೦-೦೪೩); ಅಹನಂ ಸಾವುದಿಂದಮಳವಡಿಸಿ ನೋಡುವಂ ಸಾಮದೊಳಂ ಪದವಡದೊಡೆ ಬಟ್ಟಿದರ್ತನ್ನದಲ್ಲಿ ಪದವಡಿಸಲೆನ್ನ ಬಯಕೆಯ ದಂಡಂ (ಆದಿಪು. ೦೪-೯೩); ಅಂತೆ ನಿಹಾರದೊಡಂ ಜಾತಿಜೋಗಿನಿಯಲ್ಲು: ಬಗೆಯೊಂದು ಬಯಕೆಯಿಂ ಪಡೆಯೆ ನೋಂತಿಹೆನಿಂತು (ಕಬ್ಬಿಗ. ೩೬-೯೬೩). ೨. ಬಸಿರಿಯರಿಗೆ ಉಂಟಾಗುವ ಆಸೆ.—ಹಂಬಲ: ನೀನುಂ ಮನೆಯಿಂದಂ ಪೊಱಮಟ್ಟು ಪೋಗಿ . . . ಕೆಲವುದಿವಸದಿಂ ಸತ್ತು ಶ್ರೀಮತಿಯ ಗರ್ಭದೊಳ್ ನೆಲಸಿರೆಯಾಕೆಗೆಲ್ಲಾ ಜೀವಂಗಳಂ ದಯೆಗೆಯ್ವ ಬಯಕೆಯಪ್ಪುದುದು (ಕಬ್ಬಿಗ. ೦೫೦-೦೫): ಗರ್ಭಿಣಿಗಳಪ್ಪ ಕಾಮಿನಿಯರ್ ಬಯಸುವ ಬಯಕೆ ದೋಹಲಂ ದೌಹೃದಮುಮಂ (ಶಬ್ದಮಣಿ. ೩೪-೦೯); ಬಳಿಕ ಬಯಕೆ ಪರ್ಚಿದುದು . . . ನಳಿನದಳಾಕ್ಷ ನರಸಿಂಹನ ಮೂರುತಿ ಬಳೆಯುಬಂಗನೆಯ ಗರ್ಭದಲಿ (ಕಂಕಣ. ೪-೬೦). ೩. (ಅಲಂ) ಸ್ತ್ರೀಯರಿಗೆ ಸೀಮಂತ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಚನ್ನಗೆ ಹಚ್ಚುವ ಕಾಡಿಗೆ.—ಕಪ್ಪು: "ಅಂಜನವೆ ಬಯಕೆ" (ಕರಾ. ೦೫೦).

**ಬಯಕ್ಕೆ** : ೧. ನಿನ್ನ ಕೊಟ್ಟುದನೆ ಪಸಾದಮೆಂದು ಪೊಡೆವಟ್ಟು ಮನೋಮುದದಿಂದೆ ಕೊಂಡು ಬಾಳ್ವುದುವೆ ಬಯಕ್ಕೆ ಮಂ ನಿನಗದಂ ಕಿಡಿಪಂದಿಲೆ ಕರ್ಣ ಕೇತುವಾದುದು ನಿನಗಾ ವೃಕೋದರನ ಕಾಯ್ಪುನೆ ಪೊತ್ತಿಸಿದನ್ನ ಕಾಳೆಗಂ (ಪಂಪಭಾ. ೧೩-೬); ಭವವಾರ್ಧಿ ಪ್ರತಿಮಗ್ನ ಜೀವನಿವಹಂ . . . ಭವಸಂತಾನಂಗಳೊಳ್ ಕೂರ್ವ ಕೊಡುವ ತಟ್ಟುರ್ವ ಬಯಕ್ಕೆಯಂ ಬಯಸುಗುಂ (ಶಾಂತಿಪು. ೯-೭). ೨. ಜಿನಮಜ್ಜನಂಗಳಂ ಮಾಳ್ಪ ಜಿನೇಂದ್ರಪೂಜೆಯನೆ ಮಾಳ್ಪ . . . ಚತುರ್ವಿಧಮಪ್ಪ ದಾನಮಂ ಮಾಳ್ಪ ಬಯಕ್ಕೆ[ಶಾಂತಿ. ಯಂಕೆ]ಯಾಯ್ತು ಜಿನದತ್ತೆಗೆ ಭವ್ಯನ ಮೇರು ಗರ್ಭದೊಳ್ (ಅರಣೆ. ೨-೨೩); ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. **ಬಯ್ಕೆ**₂ : ೧. ಚದುರರ ಮೆಚ್ಚು ಭಾವಕರ ಕೈಪಿಡಿ ಜಾಣರ ಬಯ್ಕೆ ಸತ್ಕಳಾವಿದರ ವಿಲಾಸಮತ್ಕರಿಗರಾಭರಣ . . . ತಾನೆನಿಪ್ಪ ಸಮ್ಮುದದೊಳೆ ಬಣ್ಣಕಂ ಧರಣಿ ಸತ್ಕವಿಮಲ್ಲನ ಕಾವ್ಯ ಸಾರವಂ (ಕಾವ್ಯಸಾ. ೧-೨೩) ; ಕೇಳದಿರು ; ತಿಳಿಯವೇಟ್ಕೆಂಬ ಬಯ್ಕೆಯುಂ ಬೇಡ (ಬಸವಪು. ೨೬-೩೬೬). ೨. ಬಯ್ಕೆಳರ ಹಾದಿ ಗಳೊಂದೆಸೆಯೊಳು ಬಯ್ಕೆಯ ಸತಿಯರ ಸಾಲೊಂದೆಸೆಯೊಳು (ತಿರುಶಾ. ಕೀ. ೨೩೭-೨೦). **ಬವೆಕೆ** : ೨. ಒಡಲೊಳ್ ಶಿಶುವೃದಯಿಸ ಬಳೆಯುತ್ತಿರಲೊಡಮಾವುದ ಪಣ್ಣಾಣ್ಪ ಬವೆಕೆ[ಶಾಂತಿ. ಸೆ] ತನಗಡಸಿತು (ಶಿಶುಶಾ. ೨-೩೦).

**ಬಯಕೆ ಮಾಡು** = (ಚೊಚ್ಚಲುಬಸಿರಿಗೆ) ಸೀಮಂತವನ್ನು ಮಾಡು; ಬಯಕೆಯನ್ನು ಪೂರೈಸು : ನಿನಗೆ ಮದುವೆ ಮಾಡಿದೆವು, ಅವಳಿಗೆ ಬಯಕೆ (ಸೀಮಂತ) ಮಾಡಿದೆವು (ಸೂಳು. ೧೧). **ಬೈಕೆಗಪ್ಪು** = ಸ್ತ್ರೀಯರಿಗೆ ಸೀಮಂತ, ಬಾಣಂತನ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಕಣ್ಣಿಗೆ ಹಚ್ಚುವ ಕಾಡಿಗೆ,—ಕಪ್ಪು : "ಅಂಜನಮನೆ ಬೈಕೆಗಪ್ಪು" (ಕಕುಶ. ೮೩).

[< ಬಯಸು₁ + – ಕೆ. / ತಮಿ. ವಯಮ್, ವಯಾವು ; ತುಳು. ಬಯಕೆ, ಬೈಕೆ; ತೆಲು. ಬಯಂಕ, ಬಯ್ಯಂಕ]

**ಬಯಕೆಗವಿ** (ನಾ). ಮಹತ್ವಾಕಾಂಕ್ಷೆಯನ್ನು ಹೊಂದಿರುವ ಕವಿ : ಅಹಂಕಾರದೊಳ್ ಬಾತು ಬಲ್ಪಿಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ (ಅಭಿಚಾತ. ೧-೨೪). [ಬಯಕ್ಕೆ₂ + ಕವಿ]

**ಬಯಕೆವಟ್ಟಲ್** (ನಾ). ಬಯಸಿದುದನ್ನು ಕೊಡುವ ಬಟ್ಟಲು ; ಅಕ್ಷಯಪಾತ್ರೆ : ಪೊಡವಿ ಬಯಕೆವಟ್ಟಲ್ ; ಮಾರಿಯ ಕೋಟೆವಲ್ಲಂ ಮುಜಾವ, ಭೈರವನ ನಿಡುಜಡೆಯಂ ಪಿಡಿವ, ಕಾಳರಕ್ಕಸಿಯ ಕೊರ್ವಾಳಂ ಸೆಳೆವ ಪಡೆವಳರೊಳರ್ . . . ಮೋಣೇತಬ ಚಿಂತೆ (ಶಾಭಾಪ್ಯ. ೧೨-೩). [ಬಯಕ್ಕೆ₂ + ಬಟ್ಟಲ್]

**ಬಯಕೆವೆಣ್** (ನಾ). ಬಯಕೆಯುಂಟಾದ ಗರ್ಭಿಣಿಹೆಂಗಸು : ಕಂಡಕಂಡರೆಲ್ಲಂ . . . ಬಯಕೆವೆಂಡಿರಂತಗುಟುತ್ತುಂ . . . ವಗರಣಮಂ ನೋಡುವರಂತೆ ನಗುತ್ತುಮಿಂತೆಂದರ್ (ಧರ್ಮಾಮೃ. ೯-೬೬). [ಬಯಕ್ಕೆ₁ + ಪೆಣ್]

**ಬಯಕ್ಕೆ** 'ಬಯಕ್ಕೆ₂' ನೋ.

**ಬಯಗು** (ಕ್ರಿ). = ಬಯಸು (?) : ಶ್ರೀಕೇಸಿಗ x x x ಕಲೆನೆಜಿಯಲು ಕಟ್ಟನ್ ಕಟ್ಟುವುದರ್ಕ್ಕೆ ಕೊಟ್ಟ ಸ್ಥಿತಿಕ್ರಮವೆನ್ತೆನ್ದೊಡೆ ಒನ್ದರಣೆಯ ನೀರ ಬಯಗಿದ ಪರಿಸ ಪೆತ್ತೊನ್ದಿ ಎರಡನೆಯ ಪರಿಷಮೆಟಳವಿ ಮೂಲಿನೆಯ ಪರಿಷದನ್ಗೆ ಅಯ್ದಳವಿ ಎಲ್ಲಾ ಕಾಲಕ್ಕಂ ಎಲ್ಲಿಟ್ಟುಲು ಸಲ್ಲುಂ (ಎಕ. III. ಶ್ರೀರಂಗ. ೦೧೯-೦೬ ; ೧೦೭ ?).

[☞ ಇದು 'ಬಯಸು' ಎಂಬುದರ ಅಪಲಿಖಿತವ ? / ತುಳು. ಬಯಕು]

ಬಯನಿ 'ಬಯಿನೆ' ನೋ.

**ಬಯಲ್** 'ವಯಲ್' ನೋ.

**ಬಯಲಾಟ**. ಬೈಲಾಟ (ನಾ). ಮೈದಾನದಲ್ಲಿ ಅಟ್ಟಣೆ ಹಾಕಿ ಆಡುವ, ಯಕ್ಷಗಾನದ ಒಂದು ಪ್ರಕಾರ ; ಜಾನಪದ ನಾಟಕ ಪ್ರಕಾರಗಳಲ್ಲಿ ಒಂದು ಬಗೆ : ಈ ನಾಟಕದಲ್ಲಿ ಅಂಕಗಳ ವಿಭಾಗವಿಲ್ಲ . . . ಆಕಾಶದ ಕೆಳಗೆ ಬಯಲಾಟ (ಕಟೀಕಾ. ೦೬೪) ; ಬಯಲಾಟದ ವೇಷ ಕುಣಿದು ಬೆಳಗು ಬರಲು ದಣಿದೆವು (ಕಂಕುಪು. ೫೮-೨೩). **ಬೈಲಾಟ** : ಹಾವಭಾವ ತುಂಬಿದ ನಮ್ಮ ಹಳ್ಳಿಗರ ಕುಣಿತಗಳು ಭರತಮುನಿಯು ನೃತ್ಯಗಳನ್ನು ಅನೇಕ ಸಂದರ್ಭಗಳಲ್ಲಿ ಹೋಲಬಹುದು . . . ಉತ್ತರ ಕರ್ನಾಟಕದಲ್ಲಿ 'ಮೂಡಲಪಾಯ' ಬೈಲಾಟಗಳಲ್ಲಿಯ ಕುಣಿತಗಳೇ ಇದಕ್ಕೆ ಬಲವಾದ ಸಾಕ್ಷಿ (ಕನ್ನಶಾ. ೩೪) ; ಬೈಲಾಟದಾಗಿನ ಸೋಗು ಮಾತಾಡಿ ದಾಂಗ ಮಾತಾಡತೀಯಲ್ಲೋ ಮಾವಾ ! (ಕುಸ್ತಿ.ಹ. ೯೩).

[ಬಯಲು (<ವಯಲ್) + ಆಟ]

**ಬಯಲಿಗ** (ನಾ). ಶೂನ್ಯದಲ್ಲಿ ಒಂದಾಗುವವನು, — ಐಕ್ಯ ಹೊಂದುವವನು : ಸಚ್ಚಿದಾನಂದ ನಿತ್ಯಪರಿಪೂರ್ಣವಪ್ಪ ನಿಃಕಲಲಿಂಗವು ಧ್ಯಾನಪೂಜೆಗಳಿಲ್ಲದೆ ನಿರವಯದಲ್ಲಿ ಬಯಲಿಗನಾಗಿ (ಶೂನ್ಯಸಂ. ೦-೨೨) ; ಬಸ್ನಬಡದನ ಬಯಲಿಗನನೆ ಮಿಾರ್ವರ್ಗೆಯುಂ ಕೆನ್ನಮಿಕ್ಕದನ ಸತತಂ . . . ನೋಡಿಯಾಡಿಸುತವಗೆ ಚಿನ್ನ ನವರನ್ನದೊಡಿಗೆಯನಿಕ್ಕಿ ಕಣ್ದುಂಬಿ ನೋಡ ಬೇಕೆರೆ ಪ್ರಿಯನೆ (ಪ್ರಕುತಿ. ೩-೦೨೬).

[ಬಯಲ್ (<ವಯಲ್) + – ಇಗ]

**ಬಯಲು** 'ವಯಲ್' ನೋ.

**ಬಯಲುಗ** (ನಾ). [ಬೌದ್ಧ] ಶೂನ್ಯವಾದಿ : ತಮ್ಮ ಯೋಗಗ್ರಂಥಾರಂಭದ ಗುರುವಟಿಯದ ಮೂರ್ಧಂ ಬಯಲುಗನಪ್ಪ ಸವತ್ಕುಮಾರಂ ಶೂನ್ಯಕೃದ ಯಾಂಧಂ (ಶಾಶಂತ. ೨೩ ಕ. ಕಣಗರ್ ಸಂ೦); ಕೀಚದಿರು ಚಾರ್ವಾಕ . . . ಮಾಡದಿರು ಪ್ರಭಾರಿಗ ಮುಖದೋಜದಿರು ವೇದಾಂತಿ ಬಯಲುಗ ಹೋರದಿರು (ಶಾಶಂತ. ೯-೦೦೯).

[ ಬಯಲು(<ವಯಲ್) + – ಗ₂ ]

**ಬಯಲುಗೈ** (ಕ್ರಿ). ಪ್ರಕಟಗೊಳಿಸು; ಹೊರಗೆಡಹು : ಸಿಡಿಲ ಪಳಗಿಸು ಪರಿವು ರವಿಯ ಸರಿಹಿಡಿವರಿವು . . . ಬಾನ ಜಾಲಾಡುತ್ತ ತಾರೆಗಳನಳೆವರಿವು ಸೂಕ್ಷ್ಮಾತಿಸೂಕ್ಷ್ಮವನು ಬಯಲುಗೈವರಿವು (ಮಲೆಗೀ. ೧೮-೯).

[ಬಯಲು (<ವಯಲ್) + ಗೈ (<ಕೆಯ್₁)]

**ಬಯಲುಗೊಳಿಸು** 'ಬಯಲ್ಗೊಳಿಸು' ನೋ.

**ಬಯಲುದೊರೆ** 'ಬಯಲ್ದೊಱೆ' ನೋ.

**ಬಯಲುದೊಱೆ** 'ಬಯಲ್ದೊಱೆ' ನೋ.

**ಬಯಲುನಾಡು** 'ಬಯಲ್ನಾಡು' ನೋ.

**ಬಯಲುಬಂಡಿ** (ನಾ). ಕಮಾನಿಲ್ಲದ ಬಂಡಿ; ಕೊಲ್ಲಾರಿಯಿಲ್ಲದ ಚಕ್ಕಡಿ: ಏಳುಹರದಾರಿ ದೂರ ದಿಬ್ಬಣವಲ್ಲ ಎತ್ತಿನ ಬಂಡಿಯಲ್ಲೇ ಹೊರಟಿತ್ತು. ಕೆಲವು ಸವಾರಿ ಬಂಡಿಗಳು, ಇನ್ನು ಕೆಲವು ಬಯಲುಬಂಡಿಗಳು (ಸ್ಮೃತಿ. ೨೩೬). [ಬಯಲು (<ವಯಲ್) + ಬಂಡಿ]

**ಬಯಲುರಂಗಭೂಮಿ** (ನಾ). ಮೈದಾನದ ಆವರಣದಲ್ಲಿ ಚಾವಣಿ ಯಿಲ್ಲದ, ರಂಗವು ಮಧ್ಯದಲ್ಲಿಯೂ ಪೀಠಪಂಕ್ತಿಗಳು ಸುತ್ತಲೂ ಇರುವಂಥ ರಂಗಭೂಮಿ; ☞ "ಇಂತಹ ವೃತ್ತಾಕಾರವಾದ ರಂಗ ಭೂಮಿಗಳು ಗ್ರೀಸ್ ಮತ್ತು ಇಟಲಿ ದೇಶಗಳಲ್ಲಿ ಅನೇಕ ಕಡೆಗಳಲ್ಲಿ ಇದ್ದುವು. ಈಗ ನಮ್ಮ ದೇಶದಲ್ಲಿ ಪಂದ್ಯಪ್ರದರ್ಶನಗಳನ್ನು ನಡೆ ಸಲು ಕಟ್ಟಿಸುವ ಸ್ಟೇಡಿಯಂಗಳನ್ನು ಇದೇ ಮಾದರಿಯಲ್ಲಿ ಕಟ್ಟಿಸು ತ್ತಾರೆ" : ಊರಿನ ಒಂದು ಮೂಲೆಯಲ್ಲಿ ಬಯಲುರಂಗಭೂಮಿ ಇತ್ತು (ಕಶಕ. ೩-೦೯೯). [ಬಯಲು (<ವಯಲ್) + ರಂಗಭೂಮಿ]

**ಬಯಲುಸೀಮೆ** (ನಾ). ಮೈದಾನದಿಂದ ಕೂಡಿದ ಪ್ರದೇಶ; ಬಯಲು ಪ್ರದೇಶ : ಕಳಸಾಪುರದ ಮಲೆನಾಡು ಬಯಲುಸೀಮೆ ಸಂಧಿಸುವ ಜಾಗ ದಲ್ಲಿದೆ (ಕಳಕು. ೯೩); ಬಯಲುಸೀಮೆಯವರಾದ ನಮಗೆ ರೊಟ್ಟಿಯಿಲ್ಲ ದಿದ್ದರೆ ಹೊಟ್ಟೆಯೇ ತುಂಬದು (ಬಂಗಾರ. ೯೦). 'ಗಿಡಸೀಮೆ' ಪರಾ. [ಬಯಲು (<ವಯಲ್)+ಸೀಮೆ]

**ಬಯಲೊಲ್ಮೆ** (ನಾ). ಕಪಟಪ್ರೇಮ; ಸೋಗಿನ ಪ್ರೀತಿ : ಕೊಟಿಚಾಟ ಹೋರಟೆ ಕಲಹ ಬಜುಗುತ್ತ ಬಯಲೊಲ್ಮೆಗಳ ಮಾಡಿ ಬೆಲೆವೆಣ್ಗೆ ತೆಱುವರ ಧನವ ಬಲ್ಲವರು (ಕುಮಾರಾಂ. ೨೬-೬೯). [ಬಯಲ್ (<ವಯಲ್) + ಒಲ್ಮೆ]

**ಬಯಲ್ಕಡೆ**, ಬೈಲುಕಡೆ (ನಾ). (ಆಲಂ) ಶೌಚ ಮುಂತಾದ ಪ್ರಾತರ್ವಿಧಿ; ಮಲವಿಸರ್ಜನೆ; ಬಹಿರ್ದೇಶ: ಮೊಲ ಬರುವಾಗ ನಾಯಿ ಬಯಲ್ಕಡೆಗೆ ಕೂತ:ಕೊಂಡಿತು (ಗಾದೆ). **ಬೈಲುಕಡೆ** : ಬೈಲುಕಡೆ ಹೋಗೋದು ಹಿಡ ಕೊಂಡು ಹೆಂಡರು ಮಕ್ಕಳು ಮನೀವಾರು ಎಲ್ಲಾ ಆ ಟನಕದಾಸರು ಹೇಳಿ ಧಾಂಗ ಒಂದು ಗೇಣು ಹೊಟ್ಟೆ ದಿಶಿಂದ ನೋಡಿಪಾ (ಕಿಡುಗು. ೯೦). [ಬಯಲ್ (< ವಯಲ್) + ಕಡೆ]

**ಬಯಲ್ಗಾಳಿ** (ನಾ). (ಮೈದಾನದ ಕಡೆಯಿಂದ) ತಡೆಯಿಲ್ಲದೆ ಬೀಸುವ ಗಾಳಿ : ಇಂದವನ್, ನಾಳೆ ನಾನ್ ಏನ್ ಪಾಡೊ ಆ ಬಾಟ್; ಬೀಸುವ ಬಯಲ್‌ಗಾಳಿ, ಪರಿದಡೆಗುಸ ನೆಬಲ್ (ಅಕ್ಷರಾ. ೬-೧೧೦). [ಬಯಲ್ (<ವಯಲ್) + ಗಾಳಿ₁]

**ಬಯಲ್ಗೆಡೆ** (ಕ್ರಿ). (ಆಲಂ) ವ್ಯರ್ಥವಾದುದೆಂದು ಹೀನಾಯವಾಗಿ ನುಡಿ, ಅವಮಾನಿಸು : ಪರತತ್ತ್ವವೆಂದೇಕ ವರರುದ್ರನೆಂದೊರೆದ ಪೊರೆದರ್ಥವದ ಶಿರದ ಸತ್ಕಾರ್ಥದ ಬಜಿ ಬಯಲ್ಗೆಡದು ನೆಟ್ ಉಟಿ ಪುಳ್ಳ ಬೌದ್ಧವ್ಯಾಧರದೆತ್ತಲಜಿಗು ಶೂನ್ಯಾತ್ಮರಯ್ಯೋ (ಶಾಬಂಕ. ೨-೧೬೮). [ಬಯಲ್ (<ವಯಲ್) + ಕೆಡ₂]

**ಬಯಲ್ಗೊಳಿಸು**, ಬಯಲುಗೊಳಿಸು (ಕ್ರಿ). ಸಾವಿಗೆ ಒಳಗು ಮಾಡು, ಗುರಿಮಾಡು; ಸಾವಿಗೀಡುಮಾಡು : ದಕ್ಷಯಾಗದಿ ವಪುವ ಬಯಲ್ಗೊಳಿಸಿ ಮೋನಕಿಯ ಕುಕ್ಷಿಯು ಸಂಜನಿಸಿ ಬೆಳೆವೆ (ಸವವೋ. ೬-೦೮). **ಬಯಲುಗೊಳಿಸು** : ತ್ರಿಜಗದಾಂಬೆ ಗೌರಾಂಬಿಕೆಯು ದಕ್ಷಯಾಗದಿ ತನುವಂ ಬಯಲುಗೊಳಿಸಲು (ಸವವೋ. ೬-೦೭). [ಬಯಲ್ (<ವಯಲ್) + ಕೊಳ್₁ + -ಇಸು₁]

**ಬಯಲ್ಚು** (ಕ್ರಿ). ಪ್ರಕಟಪಡಿಸು : ತೋರಿಸು ; ಹೊರಗೆಡಹು : ರಾಘವಾಸ್ಯಜ್ಯೋತಿ ತನ್ನ ಪಕ್ಷಕೆ ತಾನೆ ವಿದ್ರೋಹಿಯಾದುದೆನೆ ವಾನರವ್ಯೂಹ ಸ್ಥಿತಿಯನಂತೆ ದಶರಥನ ಸುತನಿರ್ದಾಣಮಂ ತೋರ್ದುದು ಬಯಲ್ಚಿ ಆ ತಾರಾಕ್ಷಿವಲ್ಲಭಗೆ (ಶ್ರೀರಾಮಾ. ೬೪೬-೦೬೮). [ಬಯಲ್ (<ವಯಲ್) + -ಚು₁]

**ಬಯಲ್ತಾವರೆ** (ನಾ). ನೀರಿನ ಆಶ್ರಯವಿಲ್ಲದೆ ಬೆಳೆಯುವ ತಾವರೆ: ನೆಲದಾವರೆ : ಕಿರಣಂಗಳೆ ಕಾಪುಗಳೆನೆ ಹಂಪಿಸ್ಸಂಗಳೆ ಪಸುರ್ತ ಪಸುರೆಲೆಯೆನೆ ತೋರ್ಪರುಣದಿನಮಣಿ ಬಯಲ್ತಾವರೆಯನೆ ಪೊಲ್ತಿರ್ದನಪರಗಿರಿಪರಶಿರದೊಳ್ (ಶಾಸ್ತ್ರಸಾ. ೬೬೦ ಬಾತ್ರಸ); ಅರ ದುಱುಗಿರ್ದ ಬಯಲ್ತಾವರೆಯೆಲೆಗೊಡೆಯಿಂದುವಿನಲ್ಲಿ ಸಾಸಿದಿಂ ಕಣ್ಗೆಯ್ದಿರ ಹಂಸವಿಘಸಮಂ ಸಿಚರಣಾವ್ರದ ಸೂಕಿ ಸೃಪಸಾರ್ಥ ಕುಳ್ಳಿರ್ದ (ಶಾಬಂಶಾ. ೨೬೩); ಅರವಿಂದೆಯೊಳತ್ತಲಿತ್ತಂ ಚರಿಯಿಪ ದೇವಿಯರ ಪದತಳಾಂಶು ಬಯಲ್ತಾವರೆಯೆಸಲೆಸಗಿದುವು ಸೂಪುರತತಿ ಬೀಜದುವು ಮಾದನಮಾರ್ವಿರಿಯಿಂ (ಶುಕ್ತಿಕೆ. ೯-೬೨). [ಬಯಲ್ (<ವಯಲ್) + ತಾವರೆ (<ತಾಮರೆ)]

**ಬಯಲ್ದೊರೆ** 'ಬಯಲ್ದೊಱೆ' ನೋ.

**ಬಯಲ್ದೊಱೆ**, ಬಯಲುದೊರೆ, ಬಯಲುದೊಱೆ, ಬಯಲ್ದೊರೆ (ನಾ). ೧. ಮೈದಾನದಲ್ಲಿ ಹರಿಯುವ ನದಿ, ಹೊಳೆ : ಕಣ್ಣನೀರ್ಗಳ ಪೊಸರ್ ಕರಗಿನ್ನ ಕಪೋಲದೊಳ್ ಬಯಲ್ದೊಱೆಯನೊಡರ್ಚೆ ಚಂದ್ರನುಱಿ ಶೋಕ ರಸಾಕುಳಚಿತ್ತೆಯಾಗಿ ಮೆಯ್ಮಱೆಯಳೆ ಚಿತ್ರಮಲ್ತು (ಶಂಶಾಪು. ೯-೩೦); ವಸುದೇವನಂತಾಸುವಮಾ ರಾಕ್ಷಸರಕ್ಷಿತಪ್ರಸೂತಿಕಾನಿಳಯದಿಂ ತಳರ್ದು .... ಮಧುರಾಪುರಮಂ ಪೊಱಮಟ್ಟು ಬಯಲ್ದೊಱೆವರಿವ ಬಟ್ಟೆ ಯೊಳುದ್ದೇಶಕ್ಕೆ ಬರ್ಪಲ್ಲಿ (ಜಗಂ. ೬-೬೪) : ವಿಱುವಿಱುವಾದ ಮೈ ಹೊಳಹಿಂದ ತೆರೆಗಟ್ಟಿ ನಿಱುದೇಳ್ವ ಹೊಂಗಾಸಿಯಿಂದ ಕುಱುಕುಱುಮೆಟ್ಟಿ ರಂಗದೊಳು ತಂಪಿನ ಬಯಲ್ದೊಱೆ ಹೊಳೆವಂತ ಹೊಳೆವರು (ಹರಿ. ೦೩-೧೦೦). ೨. ಬಿಸಿಲಿನಲ್ಲಿ, ನೀರಿಲ್ಲದಿದ್ದರೂ ನೀರಿರುವಂತೆ ಕಾಣುವ ಭ್ರಮೆಯ ನೋಟ ; ಬಿಸಿಲುಗುದುರೆ ; ಮರೀಚಿಕಾಜಲ : "ಬಯಲ್ದೊಱೆ ಬಿಸಿಲ್ಗುದುರೆಯೆನಲುಂ ಗಡ ಮರೀಚಿಕಾಜಳ" (ಕಬ್ಬಿಗ. ೦೦) ; ಸಿರಿ ಸುರಚಾಪದಂತೆ ಪೊಸಜವ್ವನವಿದ್ದಿಲ ಬೂದಿಯಂತೆ ... ಪೆಂಡಿರ ಸುಖಮುಂಮ್ಮ ಪೊಣ್ಮುವ ಬಯಲ್ದೊಱೆಯಂತೆ ... ಕಿಡಲಲ್ಲದೆ ತಾಂ ಸ್ಥಿರಮಾಗಲಾರ್ಕುಮೇ (ರಮಾಪ್ಸು. ೫-೦೮); ದೇವಾ ಬಯಲ್ದೊಱೆಯ ನೀರು ತಿರ್ದಂ ಗುರುವ ದೇವಾ . ಕನಿಷ್ಠರೊಡನೊಡಱುತಿರ್ದಂ ಪ್ರಥುವೆ (ವಾಗೀಶ. ದೇ. ೨೬೦-೨೦) : ವನಜಂತುಗಳ್ ಬಯಲ್ದೊಱೆಗೆ ಮರುಳ್ಗೊಂಡುವು (ರಾಜಶೇ. ೫೨-೪). **ಬಯಲುದೊರೆ** : ೨. ಪ್ರೇಮಸಾಗರದಮೃತ ಬಯಲುದೊರೆಯಾಯ್ತೆ ? (ಶಂಗೀಶ. ೬೬-೨೦). **ಬಯಲುದೊಱೆ** : ೨. ಕಯ್ಯ ನೀರಂ ಚೆಲ್ಲಿ ಬಯಲುದೊಱೆಗೆ ಸಲೆ ಪರಿವನೆಂತೆಂತೆ ಹುಲುಮಕ್ಕಳ ಸತ್ತ್ವದಿಂ ಬಲುಸಿಂಹದೊಳ್ ಕದನಮ ಮಾಡಿಕೊಂಡವನ ನೆರೆ ನಿನ್ನೊಳಾದುದು (ಅಜಿತಂ. ೦೮-೬). **ಬಯಲ್ದೊರೆ**: "ಬಯಲ್ದೊರೆಯೆನಲ್ ಮರು ಮರೀಚಿಕೆಯನಾಮಂ" (ಕಜಿ. ೬೩). [ಬಯಲ್ (< ವಯಲ್) + ತೊಱೆ₂]

**ಬಯಲ್ನಾಡು**, ಬಯಲುನಾಡು (ನಾ). ಗುಡ್ಡ, ಬೆಟ್ಟ ಮುಂತಾದುವು ಗಳಿಲ್ಲದೆ, ಮೈದಾನಗಳಿಂದ ಕೂಡಿದ ನಾಡು ; ಬಯಲುಸೀಮೆ : ಬಯಲ್ನಾಡನೊಳ್ಗೃಗ್ರಹವಾದ ದಿವಸಂ ಬಯಲ್ನಾಡಂ ಬನ್ದು ಕೊತ್ತ ಮಜ್ಜಲಮನಿಱಿದು ತುಱುವಂ ಕೊಣ್ದು ಪೋಗುತ್ತಿರೆ (ಎಕ. IV. ಹಗ್ಗಡ. ೦೦೩-೬ : ಸು. 910). **ಬಯಲುನಾಡು** : ನೀಲಗಿರಿ ಹಡಿಯ ಘಟ್ಟಂ ಯೇಳುಂ ಮಲೆ ಕಂಚಿ ತುಳುವ ರಾಜೇಂದ್ರಪುರಂ ಕೋಲಾಲ ಬಯಲುನಾಡುಮೊನಾಳ್ವದೆ ಕೋಡ ವಿಷ್ಣುವರ್ಧನದೇವಂ (ಎಕ. VIII. ತೀರ್ಥಹ. ೯೦-೫೨ : 1181). [ಬಯಲ್ (<ವಯಲ್) + ನಾಡು]

**ಬಯಲ್ನುಡಿ** (ನಾ). ಸಂಬಳ್ಳನುಡಿ ; ವ್ಯರ್ಥಾಲಾಪ : ಆದೊಡೆ ಬಯಲ್ನುಡಿಯೋದಾನಿದನಿನ್ನೊರೆಯಂ (ಅಜ್ಜುತ. ೯೦-೦೨). [ಬಯಲ್ (<ವಯಲ್) + ನುಡಿ₂]

**ಬಯಲ್ಪಡಿಸು** (ಕ್ರಿ). ಪ್ರಕಟಗೊಳಿಸು, ಹೊರಗೆಡಹು : ಅಮ್ಮ ಅಪಕಾರವನ್ನು ಮಾಡಿದರೂ ಅದನ್ನು ಬಯಲ್ಪಡಿಸದರೆ ಕೆಟ್ಟ ಹೆಸರು ಬಾರದಿರದೆಂದೆಣಿಸಿ ಬಿಟ್ಟಿಟ್ಟನು (ಅಕ್ಷೀಲಕ್ಷ್ಮ ೦೦೬). [ಬಯಲ್ ( < ವಯಲ್) + ಪಡಿಸು]

**ಬಯಲ್ಬೀಟ್** (ಕ್ರಿ). ನೆಲವು ಗೋಚರಿಸು ; ತಳ ಕಾಣು : ಆ ಕುಪಾರಾರಂ ಬಿಜ್ಜ ಭರದಿಂದೆ ವಾರಿಯೊರಟಿನ್ನೆಸಗಂ ಪಚ್ಚು ಸೂಸೆ ಕೊಳ ದೊಳಗೆ ಬಯಲ್ಬಿಟ್ಟುದು ತದ್ರುಭಸಕರ್ಚಿಟ್ಟು ಕಡಂಗಿದುವು ಜಳಚರಪ್ರಕರಂ ಗಳ್ (ಸಂಸ್ಕೃತಿ. ೫-೯೩). [ಬಯಲ್ ( < ವಯಲ್) + ಬೀಟ್ ]

**ಬಯಲ್ಪುಗು** (ಕ್ರಿ) ಕಾಣದಾಗು ; ಇಲ್ಲವಾಗು : ಇಂತಾಕೆವಾಳರ ಬೀರಮುಬ್ಬುಮಿಡೆ, ಸೋರ್ಕರ್ಜ ಸೋರೆ, ಅಳವೋಳವಾಱೆ, ಚಲಂ ನೆಲಗಿಡೆ, ಬಲಂ ಬಯಲ್ಪುಗೆ, ಕೊಂಚೆಗೋಂಟೆ ದೂಳಿಗೋಟೆಯಪ್ಪುದುಂ (ರಾಜಶೇ. ೯೬-೨೦). [ಬಯಲ್ (< ವಯಲ್) + ಪುಗು (< ಪುಗು)]

**ಬಯಲ್ಪೊನಲ್** (ನಾ). = ಬಯಲ್ಪೊಡೆ ೨ : ಬಯಲ್ಪೊನಲಂತೆ ಕಿಡುವಂತಪ್ಪ ಪರಿವಂದಿನಂತೆ ಕಿಡಿವಪ್ಪ . . . ಸಂಸಾರವಂ ನಂಬಿ ದರ್ಶನಮುಮಂ ವ್ರತಮುಮಂ ಕಿಡಿಸುವುದಗ್ಗಿಕೆಯೆಂದು ವ್ರತ ಪರಿರಕ್ಷಣೋಪಾಯಮಂ ಚಿಂತಿಸುತ್ತಿರ್ದರ್ (ಧರ್ಮಾಮೃ. ೩-೦೪).
[ಬಯಲ್ ( < ವಯಲ್) + ಪೊನಲ್]

**ಬಯುಸಿಕೆ** (ನಾ). ಇಚ್ಛಿಸುವಿಕೆ ; ಬಯಸುವಿಕೆ : ಬಯಕೆಯೊಳೇ ಬಾಳ್ ಕಳೆವುದು ಬಯಕೆಯು ದೊರೆತ ಚಣ ಬಯುಸಿಕೆಯನೆ ಬಯಸುವ ತೆರವೇಕಹುದೆನ್ನ ಮನ (ಗೋಕುಮ. ೨೧-೩). [ಬಯಸು$_1$ + — ಇಕೆ]

**ಬಯಸು$_1$** (ಕ್ರಿ). ೧. ಹಂಬಲಿಸು ; ಇಚ್ಛಿಸು ; ಅಪೇಕ್ಷಿಸು : ಕದಪಿನ ಕಣ್ಣ ಸಾರ್ಣೆಯನಲಂಕೃತಮಪ್ಪ ಗಳಪ್ರದೇಶಮಂ . . . ಮೃದುರಶನಾಗ್ರಮಂ ಬಯಸಿ ಚುಂಬಿಸಿದರ್ (ಕಾವ್ಯಸಾ. ೩೩೩ ಸೂದ್ರಕ); ನಿನ್ನ ಪ್ರಾಣವಲ್ಲಭೆ ನಿನ್ನನೆಯಱಸಿ ಬಯಸುತಿರ್ಪಳ್ (ಕಮ್ರ್ಕಾ. ೪೦-೨) ; ರಾಜಹಂಸ ಮಾನಸಸರೋವರಮನಲ್ಲದೆ ಪೆಱತನೇಕೆ ಬಯಸುಗುಂ (ಸುಕುಮಾ. ೪-೩೬ ವ) ; ಪ್ರೇಮಲತೆ ಬಾಯಾರಿ ಕಾತರಿಸುತಾವುದನೊ ತಾನರಿಯದುದ ಬಯಸಿ (ಕಪ್ಪಾಂಗ. ೬-೦೩). ೨. ಕೋರು; ಹಾರೈಸು : ಪರರ ಕೇಡು ಬಯಸಿ ಗುರುಹಿರಿಯರನ್ನು ನಿಂದಿಸುತ್ತ . . . ಪರಮನಿಷ್ಠಮೌನಿಯಂತೆ ಧರೆಯ ಮೇಲೆ ಡಂಭ ತೋಱಿ ಹರಿವ ನೀರಿನ ತೀರದಿ ಕುಳಿತರೇನು ಬಕಧ್ಯಾನದಿ (ಪುರಂದ. ೦-೦೪೦-೨) : ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ (ಗಾದೆ). [ದೇ. ; ತುಳು. ಬಯುಸು, ಬಯಸು]

**ಬಯಸು$_2$** 'ಬಯಿಸಂ' ನೋ.

**ಬಯಸುಹ** (ನಾ). = ಬಯಸಿಕೆ : ತನ್ನೊಳು ಮೋಕ್ಷಮಂ ಬಯಸುಹವದೇ ಕೇಳ್ ಪಾರಮಾರ್ಥಿಕ ಜೀವನನುಮತವು (ಕಬ್ಬಿಗ. ೪-೦೬).
[ಬಯಸು$_1$ + — ಹ$_2$ ( < — ಪ$_2$)]

**ಬಯಸ್ಕೋಪು, ಬಯಾಸ್ಕೋಪು** (ನಾ). ಚಲನಚಿತ್ರ; ಸಿನಿಮಾ : ಇಂಗ್ಲಿಷ್ ಇತಿಹಾಸಕ್ಕೆ ಸಂಬಂಧಿಸಿದ ಕೆಲವು ಕತೆಗಳು ಸ್ಟ್ಯಾಂಡರ್ಡ್ ಬಯಸ್ಕೋಪುಮಂದಿರಕ್ಕೆ ಬರಲಿವೆಯೆಂದು ಗೊತ್ತಾಯಿತು (ಸ್ವಕೃಹೊ. ೦೩೪). **ಬಯಾಸ್ಕೋಪು** : ಬಯಾಸ್ಕೋಪಿಗೆ ಹೋಗಿದ್ದವರೆಲ್ಲರು ಬಂದರು (ಕುಣಾಯು. ೦೦೬). [← ಇಂ. Bioscope]

**ಬಯಾನು** (ನಾ). ತಿಳಿಯಪಡಿಸುವುದು ; ವಿವರಣೆ : ಅವರ ವರ್ಗದ ಅರ್ಜಿಯಲ್ಲಿ ನನಗೆ ಅವರ ಮೇಲೆ ಕ್ರೋಧವಿರುವುದಾಗಿಯೂ . . . ನನ್ನ ಕೋರ್ಟಿನಲ್ಲಿ ಅವರಿಗೆ ನ್ಯಾಯ ದೊರೆಯುವುದಿಲ್ಲವೆಂತಲೂ ಬಯಾನು ಮಾಡಿದ್ದರು (ಕೆಂಪ. ೨೨೨). [← ಪಾರ. ಹಿಂ. ಬಯಾನ್ ; ಅರ. ಬೈಆನಾ; ಮರಾ. ಬಯಾಣ, ಬಯಾಣಾ]

**ಬಯಾಸ್ಕೋಪು** 'ಬಯಸ್ಕೋಪು' ನೋ.

**ಬಯಿನೆ, ಪೈನೆ, ಬಗನಿ, ಬಗನೆ, ಬಗಿನಿ, ಬಗುನಿ, ಬಯುನಿ, ಬೈನಿ, ಬೈನೆ** (ನಾ). ೧. ತಾಳೆಜಾತಿಗೆ ಸೇರಿದ ಒಂದು ಬಗೆಯ ಮರ : ಊರ ತರುಣನೊಬ್ಬ . . . ತೆಂಗಿನ ನಾರಿನ ಹಗ್ಗ, ಬೆತ್ತದ ತೋಳುಕಟ್ಟು, ಬಯಿನೆಹಲಗೆ—ಇವನ್ನು ಜೋಡಿಸಿ ಮನೆಯ ಸಾವಿರ ಬಟ್ಟೆ ಹೊಲವನ್ನು ಸೇರುತ್ತಾನೆ (ಶಾಕಗೀ. ೯೦). **ಪೈನೆ** : ೧. ಬಗನಿ, ಪೈನೆ, ಬೈನೆ, ಬೈರಿ (ಕೃಷಿಗ. ೦೯-೩೨೬). **ಬಗನಿ** : ೧. ಹೆಂಗಸರು ಗೆಣಸು ಹರಡುವುದೂ, ಗಂಡಸರು ಬಗನಿಹೆಂಡವನ್ನು ಇಳಿಸುವುದೂ, ಹಸಿವಾದಾಗ ಬಗನಿಯ ಕಬ್ಬನ್ನೇ ಆಹಾರವನ್ನಾಗಿ ಸಿಗಿದು ಆಯಾಸ ಪರಿಹಾರ ಮಾಡಿಕೊಳ್ಳುವುದೂ ಈ ಜನರ ಅಭ್ಯಾಸ (ಅಸಾಶ. ೯೬); ಎತ್ತರವಾಗಿ ಬೆಳೆದಿದ್ದ ಆ ಬಗನಿಯ ಮರದ ನೆತ್ತಿಯಲ್ಲಿ ಅದರ ಹೂವಿಗೆ ಕಟ್ಟಿದ್ದ ಕಳ್ಳಿನ ಮಡಕೆಯ ಕರಿಯ ಗೋಳವು ನೇತಾಡುತ್ತಿತ್ತು (ಶಾಕೂಕು. ೯೬). **ಬಗನೆ** : ೧. ಅವನು ಕೈಯಲ್ಲಿ ಕರಿಯ ಬಣ್ಣದ ಬಗನೆಯ ಕೋಲನ್ನು ಹಿಡಿದಿದ್ದನು (ಕಂಕಹೆಂ. ೨೩). **ಬಗಿನಿ** : ೧. ಸುರೆಬಗಿನಿಯಾಚೆಲೋಲೆಯ ಮರಗಳಾದಿ ಮತ್ತಿರದೆಸೆವ ಗಂಗಸಾಗರ ಮುಖ್ಯ ರಕ್ಕಸರ ಪರಿಪರಿಯ ಭೋಜನದ್ರವ್ಯಂಗಳಿಡಿದ ಭಂಡಿಗಳೈದೆ ಬರುತಿರ್ದುವು (ಕಲಪ್ರ. ೯೬-೯೫). ೨. ಒಂದಂ ಬಗೆಯ ಬಳ್ಳಿ : ಸೌದೆಯ ಹೊರೆಯನ್ನು ಕಟ್ಟಲು ಬಗಿನಿಯ ಬಳ್ಳಿ ಬಗಿಯಾಗಿರುತ್ತದೆ (ಕೂಶ). **ಬಗುನಿ** : ೧. ಬೇಲ ಬಗುನಿಯು ತದುಕು ತಪಸಿ ಕವಳೆಯು . . . ಕಿಕ್ಕಿರಿಪ ಕಾನನದೊಳು (ಜಜಕೋ. ೬-೯); ಸೊಗಸು ಚಂದನ ಸೊಂಪು ಚಂಪಕ ಅಗರು ಅಂಬಟೆ ಅತ್ತಿ ಮತ್ತಿಯು ಬಗುನಿ ಬೆಳೆದಿಹ ತೆಂಗು ದಾಡಿಮ ಬಾಳೆ ರಸಬಾಳೆ (ಕಡೇ. ೦೩-೩). **ಬಯುನಿ** : ೧. ಪ್ರಳಯಗಾಳಿಯು ತೆಱೆದಿ ತೆಂಗನು ಹಲಸು ಖದಿರವು ಬಯುನಿ ಮರಗಳನೆಳೆಯು ನೇಱುಳು ನುಗ್ಗಿ ಮಾವನು ಕೋಪದಿಂದುಡಿದ (ಅಸಿತಾ. ೦೦.೦೪); ಆತ ಆ ಬಯುನಿಮರದ ಎತ್ತರದಿಂದ ನಾಲ್ಕು ಸುತ್ತಲೂ ನೋಡಿ . . . ಅಲ್ಲಿಂದ ಕೆಳಕ್ಕೆ ಇಳಿದ (ಮೂಕಜ್ಜಿ. ೩೪). **ಬೈನಿ** : ೧. ಬೈನಿ (ಬೆರ್ಲಿ). —ಹುಟ್ಟಿಗೆ ನಾರಾಳ್ಳದ್ದು, ಬರುಸು, ಗಳೆಯ ಕೆಲಸಕ್ಕೆ ಬರುತ್ತದೆ . . . ರಸದಿಂದ ಅರ್ಕ ತೆಗೆದು ಸರಾಯ ಮಾಡುವರು (ಕಡಾಗ. ೪೬); ಪ್ರಿಯದಿಂ ನಿಮ್ಮಂಘ್ರಿಯಂ ಪೂಜಿಸದ ನರನ ಕೈ ಭಾವಿಸಲ್ ಭಾವುರೆ ಬೈನಿಯ ಕೈ (ಹಂಶು. ೩೬೦೪. XVII). **ಬೈನೆ** : ೧. ಬಗನಿ, ಪೈನೆ, ಬೈನೆ, ಬೈರಿ (ಕೃಷಿಗ. ೦೯-೩೨೬).
[ದೇ. ; ತಮಿ. ಪಯಿನಿ . ತುಳು. ಬಯಿನೆ, ಬೈನ, ಬೈನಿ]

**ಬಯಿಲ** 'ಬೈಲ' ನೋ.

**ಬಯಿಸಣಗೆ, ಬೈಶಣಗೆ, ಬೈಸಣಗೆ$_1$, ಬೈಸನಿಗೆ, ಭಸಣಗೆ, ವೈಸಣಗೆ** (ನಾ). ೧. (ವೃತ್ತಿಸಂಘದವರು ಒಟ್ಟಾಗಿ ಕುಳಿತು ನಡೆಸುವ) ಸಭೆ : ಸಮಸ್ತ ನಖರಂಗಳುಂ ಹಿರಿಸಿಂಗಿಯಲು ಶ್ರೀಮತು ಹಬ್ಬೇಶ್ವರ ದೇವರ ದೇವಾಯತದೊಳಶೇಶ ಬಯಿಸಣಗೆಯಾಗಿರ್ದ್ದ ಯಾ ಹಬ್ಬೇಶ್ವರ ದೇವರ ದೇವಕಾರ್ಯ್ಯಾರ್ತ್ಥವಾಗಿ . . . ಬಿಟ್ಟ ಎತ್ತುಮತ್ತಯ್ಯು (ಕೋಶ್ರಾ. ೦೨-೯೬ ; 1186). ೧. **ಬೈಶಣಗೆ** : ನಾಗರಸರ ಮಗ ಬೊಂಮರಸ × × × ಗಳು ಸಮಸ್ತ [ಪಾ]ತ್ರಿಗಳು ನೆರೆದ ಬೈಶಣಗೆಯ ಲಾ × × × (ಸೌಇಇ. XV. ೦೩೬-೦೪ ; 1207). **ಬೈಸಣಗೆ$_1$** : ೨. ಖಡ್ಗಯುದ್ಧದಲ್ಲಿ ಕುಳಿತುಕೊಳ್ಳುವ ಒಂದು ವರಸೆ.–ಪಟ್ಟು : ಸಮಪಾದದಿಂದ ನಿಂತು ಹಾರಿ ಮುಂದಾಗಡೆಯಲ್ಲಿ ಕುಳ್ಳಿರುವದು ಯಾವದುಂಟು ಅದು ಬೈಸಣಗೆಯೆಂದು ಖಡ್ಗಶಾಸ್ತ್ರವ ಬಲ್ಲವರಿಂದ ನುಡಿಯಲ್ಪಡುವದು (ಶಿತ್ವಸಿ. ೪-೩೨). **ಬೈಸನಿಗೆ** : ೩. ಪೀಠ; ಆಸನ: 'ವಜ್ರಬೈಸನಿಗೆ' ಪರಾ. **ಭಸಣಗೆ** : ೩. 'ವಜ್ರಭಸಣಗೆ' ಪರಾ. **ವೈಸಣಗೆ** : ೩. 'ವಜ್ರವೈಸಣಗೆ' ಪರಾ.

**ಬೈಸಣಗೆಯಿಕ್ಕು**=ಸಭೆ ಸೇರು : ಸಾದಲಿಯ ನಾಡ ರಾಮೇಶ್ವರದ ಗ್ರಾಮದಲು ಯಿಕ್ಕಿಸಿದ ಸನ್ನೆ . . . ಆ ಬೈಪಿಸೆಟ್ಟಿಪೊಳಗಾದ ಸಾಲುಮೂಲೆಯ ಸಮಸ್ತ ಹಲರುಗಳು ಬೈಸಣಗೆಯಿಕ್ಕಿ ಮಾಡಿದನ್ನಾ ಸನ್ನೆಯ ಹೊಸನ್ನು ಭಣ್ಣಕ್ಕೆ ವರುಷ ಪರಿಯಂತರ ಸರ್ಬ್ಬವಾನ್ಯ (ಎಕ. X. ಶಿಡ್ಲಘ. ೦೦೨-೩೪ ;1378). [← ಮರಾ. ಬೈಸಣಾ = ಕುಳಿತುಕೊಳ್ಳುವಿಕೆ, ಬೈಸಣೀ = ಕುಳಿತುಕೊಳ್ಳುವ ಪೀಠ ; ಹಿಂ. ಬೈಸನಾ=ಕುಳಿತುಕೊಳ್ಳು]

**ಬಯಿಸಿಕೆ, ಬಯಿಸಿಗೆ** (ನಾ). (?): ಪಟಲಿರಟ ಕಿನ್ನರಂ ಕಿಂಪುರುಷ ಮಹೋರಗ ಗಂಧರ್ವ ಯಕ್ಷರಾಕ್ಷಸ ಭೂತ ಪಿಶಾಚರೆಂಬ ಅಷ್ಟವಿಧವ್ಯಂತರ ಪರಿಶೋಭಿತಂಗಳಪ್ಪ ಎಂಟು ಬಯಿಸಿಕೆವಡಲಿಗೆಗಳುಮಂ (ಶ್ರೀಪಚ. ೨೦-೬). **ಬಯಿಸಿಗೆ** : ಅಸುರನಾಗ ವಿದ್ಯುತ್ಸುಪರ್ಣ ಅಗ್ನಿವಾತ ಸನ್ನಿತೋದಧಿ ದ್ವೀಪದ್ದಿಕ್ಕುಮಾರರೆಂಬ ದಶವಿಧಭವನವಾಸಿಗವಿರಾಜಿತಂಗಳಪ್ಪ ಪತ್ತುಂ ಬಯಿಸಿಗೆಯ ಪ್ರಾವೆಗಳುಮಂ (ಶ್ರೀಪಚ. ೨೦-೩). [ ? ]

**ಬಯಿಸಿಗೆ** 'ಬಯಿಸಿಕೆ' ನೋ.

**ಬಯಿಸು, ಬಯಸು$_2$** (ಕ್ರಿ). ೧. ಮುಚ್ಚಿಡು ; ಅಡಗಿಸು; ಬಚ್ಚಿಡು: ಕೂಡಲಸಂಗಮದೇವಾ ಆನು ಮಾಡಿದುದಲ್ಲದೆ ಬಯಿಸಿದ ಬಯಕೆ ಸಲುವುದೆ ಅಯ್ಯಾ (ಬಸವ. ೬೨೨). **ಬಯಸು$_2$** : ೨. ಅದ್ದು ; ಹುದುಗಿಸು ; ಮುಳುಗಿಸು : ನೇಜಿಲ ಪಣ್ಣಂ ತಿಳಿಯೆಣ್ಣೆಯೊಳ್ ಬಯಸಿ ತೊಯ್ದಂತಪ್ಪ ನುಣ್ಗಾರ್ವು ಪೆರ್ಮೊಲೆ ಚೆಲ್ವಾಗಿರೆ ನಿಂದ ಬೇಡಿತಿಯರಂ ಕಂಡಂ ಮಹೀವಲ್ಲಭಂ (ಕಾವ್ಯಾ.ವ. ೨೦೬). 'ಬಯ್ಯು' ಪರಾ. [ಬಯ್$_1$ + — ಇಸು$_3$]

**ಬಯ್ಕನೆ** (ಅ). ಬೇಗನೆ, ಶೀಘ್ರವಾಗಿ ಎಂಬರ್ಥದ ಒಂದು ಅನುಕರಣಾವ್ಯಯ : ಭೋಂಕನೆ, ಚಿಕ್ಕನೆ, ಭೋರನೆ, ಪಯ್ಕನೆ, ಬಯ್ಕನೆ (ಶಬ್ದಾನು. ೨೦ ಪ್ರಯೋ). [? + — ಅನೆ$_1$]

**ಬಯ್ಕೆ$_1$, ಬಯಕೆ$_1$, ಬೈಕೆ** (ನಾ). ೧. ಬಚ್ಚಿಟ್ಟುದು ; ನಿಧಿ ; ನಿಕ್ಷೇಪ : "ಕತವರಮ ಬಯ್ಕೆಯೆಂಬರ್ ಕವಿಗಳ್" (ಶಂಕರ. ೨೩೩) ; ತನ್ನ ಮುನ್ನಿನ ಬಯ್ಕೆಯ ಕಿಲದೊಳ್ಪುಲಿಯಾಗಿ ಪುಟ್ಟಿದಂ (ಜಾಪುಂಕ. ೨೫) ; ಬುದ್ಧಿವಂತನಪ್ಪ ಮಗಂಗೆ ಬಯ್ಕೆಯಂ ತೋಱುವಂತೆ (ಧರ್ಮಾಮೃ. ೧೦-೫). ೨. ಗುಟ್ಟು ; ರಹಸ್ಯ : ಬಗೆಯ ಬಯ್ಕೆಯ ನೊಪ್ಪಿಸುವಾಗಳ್ ನೀನೆ ವಲಂ ದೊರೆ ಪೇಟ್ದಪೆಂ ಬಗೆದು ಕೇಳ್ (ಅಂಪು. ೩-೩೩); ಬಗೆಯ ಬಯ್ಕೆ[ಪಾಠಾಂ. ಬೈಕೆ]ಗೆ ನಾಲಗೆ ಪಿಸುಣನೆಂಬಂತೆ (ಅಜಿತಪು. ೪-೬೩ ವ) ; ಭಾವಕರ ಬಗೆಯ ಬಯ್ಕೆಯನಗೆಯುತ್ತಿಸೂಱೆಗೊಳ್ವ ಕಳಕಳಾಪಪ್ರೌಢಿಯೊಳಂ (ಆದಿಪು. ೧೦-೨೭ವ). **ಬಯಕೆ$_1$** : ೧. ಕವರಲ್ಬಂದಂಗೆ ಬಯಕೆಯಂ ತೋಱಿದರೆಂಬಂತೆ ಕಳಲ್ಬಂದಂಗೆ ಕೈಯೆಡೆಗೊಟ್ಟರೆಂಬಂತೆ (ಧರ್ಮಾಮೃ. ೨-೦೯೯) ; ಸತ್ತ ಹೆಣ ಕೂಗಿದುದುಂಟು ಬೈಚಿಟ್ಟ ಬಜಕೆ ಕರೆದುದುಂಟು (ಶಾಹಾರೀ. ೩. ೦೦೨-೨೯೯). **ಬೈಕೆ** : ೧. ಮದನನ ಬೈಕೆಯಿಂದು ಪೊಱಪೊಣ್ಮಿತೊ ಕಾಮನ ಬಾಣಸಂಕುಳಂ ಸುದತಿಯರಾಗಿ ಪುಟ್ಟಿದುದೊ . . . ತಿಳಿಯಲ್ಕಗೋಚರ ಮೆನಲ್ ನಡೆದತ್ತಬಳಾಕದಂಬಕಂ (ಪಳಿಹಂ. ೦೨೮) ; ಬಾಯ ಭಂಡಾರದಲಿ ಸರ್ವವ ಕಾಯದೇ ಭಂಜಿಸುಗು ಬೈಕೆಯ ಬೀಯವನು ಸಂಗ್ರಹವ ಮಾಡದು . . . ರಾಯ ಕೇಳಗ್ನಿಯ ಗುಣಂಗಳಿಂದಿವರಲಜಾದುದನು (ಜೈಭಾಗ. ೦೦-೧೩ ೦೩೯). [ಬಯ್$_1$ + —ಕೆ]

**ಬಯ್ಕೆ$_2$** 'ಬಯಕೆ$_2$' ನೋ.

**ಬಯ್ಗಳು** 'ಬಯ್ಗುಳ್' ನೋ.

**ಬಯ್ಗಿರುಳ್** (ನಾ). ರಾತ್ರಿಯ ಕೊನೆಯ ಸಮಯ ; ಬೆಳಗಿನ ಜಾವ: ಬಯ್ಗಿರುಳಿನ ಮನೋಹರಿಯೆಂಬ ಜಾವದಾಗಳ್ ಬಿಳಿದಪ್ಪ ಕಾಡಾನೆಯಂ ಕಾಣ್ಬುದುಂ (ಶಬ್ದಾಶಾ. ೦೫೬-೦೫) ; ಇಂದಿನ ಬಯ್ಗಿರುಳಿನ [ಪಾಠಾಂ. ಬೆಳಗಪ್ಪ] ಜಾವದೊಳ್ ಪದಿನಾಱು ಕನಸುಗಳಂ ಕಂಡೆಂ (ಆದಿಪು. ೦೫-೨೩ವ); ಬಟ್ಟೆವಿಡಿದು ಮುನ್ನಿನಂತ್ರೊರ್ವನೆ ನಡೆದು ನೇಸಱ್ ಪಟ್ಟಲ್ಲಿಯೆ ವಿಶ್ರಮಿಸಿ ಬಯ್ಗಿರುಳೆಟ್ದು ಪಯಣಃಬೋಪಾತಂ (ಜೀವಸಂ. ೩೬-೩೮ವ).
[ಬಯ್ಗು + ಇರುಳ್]

**ಬಯ್ಗು, ಬಯ್ಗೆ, ಬೈಗು, ಬೈಗ್ಗೆ** (ನಾ). ೧. ಇಳಿಹೊತ್ತು ; ಸಾಯಂಕಾಲ ; ಸಂಜೆ : ಇಲ್ಲಿರಿಸಿ ಪೋಗು ಕಳ್ಳಂ ಮೆಲ್ಲನೆ ಬಯ್ಗಂಗೆ ಕುಡಿವಂ (ಧರ್ಮಾಮೃ. ೦೩-೦೯೫) ; ಬಯ್ಗಾದ ಪೊತ್ತು ನಾಲ್ಕಾನೆಯಂ ತಂದು ಸೂಳೆಗೇರಿಯ ಬೀದಿಯ ಕಡೆಯೊಳಿಱುವಂ ಪೋಗಲೀಯದಂತಡ್ಡಂ ನಿಲಿಸಿ (ಬಂಧು. ೩-೬೯ ವ); ಹೊತ್ತಾಱೆ ಬಯ್ಗಂಗೆ ಮತ್ತೆ ಬಾ ಎಂದೆನುತ ಹೊತ್ತನೆ ಕೊಂದು ಹುಸಿಯುವನಿಗಿಂದಲು ಸತ್ಯಾತ ಲೇಸು (ಸರ್ವಜ್ಞ. ೬೬೨). ೨. ಬೆಳಗು ; ನಸುಕು ; ಅರುಣೋದಯ : 'ಬಯ್ಗಿರುಳ್' ಪರಾ. **ಬಯ್ಗೆ** : ೧. ಪೇಟೇಗಳೊ ಬಯ್ಗೆಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ (ಆಂಪು. ೩-೬೩) ; ಮಗಮಗಿಪ ಪುಷ್ಪವಾಟಾಳಿಗಳೆಗಳ್ದಿರಸು ಪೀಠದೊಳ್ ನಿರೆ ಪೊಗಸುಂ ಪಗಲುಂ ಬಯ್ಗೆಯುಮಿರಲಲ್ಲಿಗೆ ಸೊಗಯಿಪನಲ್ಪ ಕಲ್ಪತರುಗಣೆಯಾದಂ (ಶಾಂತಿಪು. ೦೦-೦೦೦) ; ನಿಯತಂ ಬೇಸಗೆಯೊಳ್ ಬಯ್ಗೆಯುಮಾಪಗಲುಮೊಂದು ದವಸಮಂತರಿಸದೆ ಮಾಗಿಯೊಳಬ್ದಕಾಲದೊಳ್ ಭೂಮಿಯೊಳಂ ಪದನಱಿತು ನೀರನೆತ್ತುಗೆ ಬಲ್ಲರ್ (ಲೋಕೋಪ. ೬-೮). **ಬೈಗು**: ೧. ಇಂದು ಬೈಗಿಂದೊಳಗೆ ರಾಸಿ ಹೊನ್ನಂ ಕೊಡುವೆನೆಂದು ಭಾಷೆಯನಿತ್ತನು (ಹಕಲಾ. ೦೦-೭) ; ಶಿರಪನರಿವೆಸು ನಾಳೆ ಬೈಗಿಂದೊಳಗೆ ಸೈಂಧವನ (ಕುಮಾರವ್ಯಾ. ೮-೩೭) ; ನಸುಕು ಬೈಗು ಬೆಳಕು ಮಬ್ಬು ಕಲೆತು ಬೆರೆತು ಆಡುತ ಎತ್ತೊ ಹೊತ್ತಿನತ್ತ ನುಗ್ಗುತಿಹವು ಯುಗವ ದೂಡುತ (ಅರಳು. ೯೯-೧೩). ೨. ಬೈಗಿನ ಪೊಟ್ತಱೊಳ್ ದೇವರ್ಕಳ್ ಬಂದು ಸುಕುಮಾರಸ್ವಾಮಿಯುಂ...ಪೊಗಟ್ಟ ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ (ಶಬ್ದಾಶಾ. ೨೯-೨೦) ; ಬೈಗಿನ ನೈವೇದ್ಯಕ್ಕಂ ಬೈಗಿನ ಪೂಜೆಗಂ . . . ಚತುಸ್ಸೀಮೆಸಹಿತಂ ಧಾರಾಪೂರ್ವಕ ಮಾಡಿ ಬಿಟ್ಟರು (ಶಾಸ. IX-ii, ೨೦೨-೦೭; 1126). **ಬೈಗೆ$_1$** : ೧. ಹೊತ್ತಾಱೆ ಪೂಜಿಸಲು ಬೇಡ ಕಂಡಾ ಬೈಗೆ ಪೂಜಿಸಲು ಬೇಡ ಕಂಡಾ (ಅಕಕಂ. ೯೮-೨೦೩); ಶಿವಲಿಂಗಪೂಜೆಯಂ ಮಾಡಿ ಹರುಷಂ ಮಿಕ್ಕು ಆಡಿ ಹಾಡುತ್ತಲ್ಲಿ ಬೈಗೆಪರಮಿರುತಿರ್ದು (ಚನ್ನ.ಕ. ೫೨-೦೯). 'ಬಯ್$_2$' ಪರಾ.

**ಬೈಗಾಗು** = ಸಂಜೆಯಾಗಂ ಸಾಯಂಕಾಲವಾಗು; ಹೊತ್ತು ಮುಳುಗಂ : ಬೈಗಾಗಿ ಗೋವಲ್ಲವಂ ಕೂಡಿ ಹೊಡೆತಂದು (ಅಹಾಕ. ದೀ. ೦೫೩-೦೦); ತರುಣಭಿಕ್ಷಾಂದೇಹಿ ನಾವೀ ಬರುತ ಬೈಗಾಯ್ತಲ್ಲಿ ಬಂದವು ತಾಯಿ ನೀಡು (ಕೌಶಾ.೬-೪೦).

[ದೇ.ಶ ತಮಿ. ವೈಕಲ್]

**ಬಯ್ಗುಂಬೊಳ್ತು** 'ಬಯ್ಗುಂಬೊಟ್ತು' ನೋ.

**ಬಯ್ಗುಂಬೊಟ್ತು, ಬಯ್ಗುಂಬೊಳ್ತು, ಬಯ್ಗುಪೊಟ್ತು ಬೈಗುಂಬೊಟ್ತು, ಬೈಗುಂಪೊಳ್ತು** (ನಾ). ಸೂರ್ಯನು ಮುಳುಗುವ ಹೊತ್ತು; ಸಂಜೆಯ ಸಮಯ; ಸಾಯಂಕಾಲ : ಅಂತು ನೇಸಱ್ ಪಡಲೊಡಂ ಬಯ್ಗುಂಬೊಟ್ತುರಸಂ ನೀಳ್ದೊರ್ಂಪದಿಂ ಪೊಱಮಟ್ಟು (ಕಾದಂಸಂ. ೯೬೨). **ಬಯ್ಗುಂಬೊಳ್ತು** : ಪೋದ ಬಯ್ಗುಂಬೊಳ್ತು ಕಿಡೆದ ಉಳ್ಕೆಯ ಅಶುಭವಂ ಪರಿಹರಿಸಲೆಂದು ಪರಮೇಶನಂ ಪ್ರಾರ್ಥಿಸಲ್ ಬಂದೆನಯ್ (ಶ್ರೀರಾಮಾ. ೯೬೭-೬೦೩). **ಬಯ್ಗುಪೊಟ್ತು** : ರವಿ ಬಯ್ಗು [ಪಾಠಾಂ. ಯ್ಗ] ಪೊಟ್ತಲಂಪಿಕ್ಕುವ ಕುಂಕುಮರಜದ ಪೊಟ್ಟಳೆಕೊತ್ತಿದನೆಂಬ ಪೊಲರಗಿನ ಮುದ್ರೆಯನೆಸೆದುವು ಮಧುಯಂತ್ರಮುಕುಳಿತಾಂಬುಜಂಗಳೊಳಳಿಗಳ್ (ಪರ್ವಪು. ೮-೨೫). **ಬೈಗುಂಬೊಟ್ತು** : ನಿಜಜನಾಗ್ರಹದೊಳ್ ಮಜ್ಜನ ಭೋಜನಾದಿಗಳಂ ಮನವಲ್ಲದ ಮನದೊಳಗೆ ಮಾಡಿ ಬೈಗುಂಬೊಟ್ತಪ್ಪುದುಂ ನಿಜಭವನಕ್ಕೆ ಬಂದು (ಕಾದಂಸಂ. ೨೬೫); ಸಂಪ್ರಾಪ್ತಮಾದ ವರ್ಷಾಕಾಲದೊಳೊಂದುದಿವಸಂ ಬೈಗುಂಬೊಟ್ತನೊಳೆಂದಿನಂತಿರೋಲಗಂ ಪರಿಯ (ರಾಜಶೇಖ. ೯-೬). **ಬೈಗುಪೊಳ್ತು** : ಸೂಚಿತಪಥಂಬಿಡಿದು . . . ಬೈಗು ಪೊಳ್ತಿನ ಕಡೆಗೆ ಸಾರ್ತಂದರಾಶ್ರಮಕೆ ಶರಭಂಗನಾ (ಶ್ರೀರಾಮಾ. ೦೬೩-೦೮೮).
[ ಬಯ್ಗು + ಪೊಟ್ತು ]

**ಬಯ್ಗುಗೆಂಪು, ಬೈಗುಗೆಂಪು** (ನಾ). ಸೂರ್ಯನು ಮುಳುಗುವ ಹೊತ್ತಿನಲ್ಲಿ ಅಥವಾ ಸಾಯಂಕಾಲದ ಸಮಯದಲ್ಲಿ ಆಕಾಶದಲ್ಲಿ ಉಂಟಾಗುವ ಕೆಂಪು ಬಣ್ಣ ; ಸಾಯಂಕಾಲದ ಕೆಂಪುಕಾಂತಿ ; ಸಂಜೆಗೆಂಪು : ಅಂಜನೇಭದ ಸಿಂದುರವೊ . . . ಸಂಜೆವೆಣ್ಣುಟ್ಟ ರಕ್ತಾಂಬರವೊ ಪೇಳೆನಲ್ಕ ಬಯ್ಗುಗೆಂಪೆ[ಪಾಠಾಂ. ಬೈಗುಗೆಂಪೆ]ಸೆದುದು (ಕೃಷ್ಣಜ. ೮-೯೭). **ಬೈಗುಗೆಂಪು** : ಅಗ ತಾನೆ ಸೂರ್ಯನು

ಬೈಗುಗೆಂಪವನ್ನು ಚೆಲ್ಲಿ ಪಡುಗಡಲ ತೆರೆಯಲ್ಲಿ ಇಳಿದಿಳಿದು ಮಾಯವಾದನು (ಸಕಕ್ಕೆ. VIII. ಕೃಷ್ಣಾಚರಿ) : ಬೈಗುಗೆಂಪುರಿಯಲ್ಲಿ ಸುಡಲಿ ಸಂಶಯವಲ್ಲಿ ! ಹುಣ್ಣಿಮೆಯ ರಾತ್ರಿಯಲಿ ಹೊರಗೆ ಬಾ ನೋಡು ! (ಕಾಜಾಹ. ೩೦-೬). [ಬಯ್ಗು + ಕೆಂಪು₁]

**ಬಯ್ಗುವೊಟ್ಟು** 'ಬಯಂಗ್ಗಂಬೊಟ್ಟು' ನೋ.

**ಬಯ್ಗುಳ್**, ಬಯ್ಗುಳು, ಬಯ್ಗುಳ, ಬಯ್ಗುಳು, ಬೈಗಳು, ಬೈಗುಳ್, ಬೈಗುಳ, ಬೈಗುಳು (ನಾ). ೧. ಜರಿಯುವಿಕೆ : ತೆಗಳಿಕೆ : "ಶಾಪಃ, ಆಕ್ರೋಶಃ, ಆಕ್ಷೇಪಃ, ಕ್ಷಾರಣಾ, ವಿರೂಕ್ಷಣಾ — ಈ ೫ ಬಯ್ಗುಳ್" (ಕಲಾಹು. ೨೯-೦೯೬); ನಿನ್ನ ತಮ್ಮನಪ್ಪ ವಾಯುಭೂತಿಯ ಜೀವಂ ಅಭಿಮಾನಂ ಕಾರಣವಾಗೆಮ್ಮನುಜದೆ ಪರಿಭವಿಸಿ ಬಾಯ್ಗೆ ವಂದುದನೆ ಪೊಲ್ಲಮೆಯ ಬಯ್ಗುಳಂ ಬಯ್ದಂ (ವಡ್ಡಾರಾ. ೧೩-೨); ಪರಮಾರ್ಥಂ ನಿಜಜನಕರ್ ಪರಸಿದ ಪರಕೆಗಳು ಬಯ್ದ ಬಯ್ಗುಳ್ ಮಕ್ಕಳ್ಗಿರದೆಯ್ದುಗುಂ (ಕಾದಂಬ. ೪೮೬) ; ಸತ್ಪೂಜಾಭಂಗಮುಮಂ ಬಯ್ಗುಳಂ ಸದ್ದರ್ಶನಾಲಸ್ಯಮೆಂಬ ಕೊಂತಂಗಳಿಂ . . . ಬೀಟ್ ನೋದುತ್ತುಂ ದಂಡಕೆಯುಂ ಮಾಡುತ್ತುಂ (ಧರ್ಮಾಮೃ. ೦೦-೪೭ ಆಚಾರ). **ಬಯ್ಗಳು** : ೧. ಕೊತವಾಲನ ಬಾಯಿಂದ ಹೊರಟ ಬಯ್ಗಳನ್ನು ನಿಚ್ಚಳವಾಗಿ ಕೇಳಿದರು (ಕೊಕಣಾ. ೬೮). **ಬಯ್ಗುಳ** : ೧. ದಾಂಡಿಗ ಬಂಡಿಗಾರ ಯಜಮಾನನ ಅನ್ಯಾಯದ ಬಯ್ಗುಳಕ್ಕಾಗಿ ಕೋಪದಿಂದ ಹುಬ್ಬುಗಂಟಿಕ್ಕಿದನು (ಕೃಷಿಪು. ೯೯೦). **ಬಯ್ಗುಳು**: ೧. ಹರಿಯ ಬಯ್ಗುಳು ಬೆದಱಿಸಲು . . . ತರತರದ ಕೈದುಗಳ ಸುಭಟರ ಕಂಡುದಮಳಾಸ್ತ್ರ (ಕುಮಾವ್ಯಾ. ೦೯-೪೦). **ಬೈಗಳು** : ೧. "ಬೈಗಳಿನ ಪರಿಕಿಸಲ್ ನಿಂದೆಯದು" (ಕಕರ. ೦೨೬): ಕೊಟ್ಟವರು ಬಂದೆನ್ನ ನಿಷ್ಟುರಂಗಳನಾಡಿ ಕೆಟ್ಟ ಬೈಗಳ ಬೈದು ಮನದಣಿಯಲು ದಿಟ್ಟತನವನು ಬಿಟ್ಟು ಕಳೆಗುಂದಿದೆನಯ್ಯ (ಪುರಂದ. ೦-೦೬-೦) ; ನಾ ಹುಟ್ಟಿ ಆಯ್ತೆರಡು ಮಾಸಂ ಬಯಸೆ ಬೈಗಳು ಬಾರವೆನ್ನೊಳೇಂ ದೋಷಂ? (ಕುತ್ತ. ೧೩-೩). **ಬೈಗುಳ್** : ೧. "ಶಾಪಮಾಕ್ರೋಶಂ ವಿರೂಕ್ಷಣಂ ಕ್ಷಾರಣಾಕ್ಷೇಪಮೆನೆ ಬೈಗುಳೆನಿಸಿಕ್ಕು" (ಚುಂಗಡಾ. ೨೬-೫); ಆ ವೈಶಂಪಾಯನಂ ತಂದೆಯು ಮುನಿಸಿನ ಬೈಗುಳ್ಗಳಿಂದಂ . . . ಗಿಳಿಯ ಬಸುಱೊಳೀಯಂದದಿಂ ಬಂದನಲ್ತೆ (ಕಾದಂಬ. ೬೯೯) ; ಪೆಱರ ಬೈಗುಳಂ ಸೈರಿಸುವುದರಿಂದೋ ಪೆಱರೊಡನೆ ವಾಯಂ ಬಡಿವುದರಿಂದೋ (ಧರ್ಮಾಮೃ. ೬-೯೦). **ಬೈಗುಳ** : ೧. ಕೆಲವರು ಇತರ ಮಕ್ಕಳೊಡನೆ ಕಿತ್ತಾಟ, ಜಗಳ, ಹೊಡೆದಾಟ, ಬೈಗುಳ, ಇತ್ಯಾದಿಗಳಲ್ಲಿ ಮನಃತೃಪ್ತಿ ಪಡೆಯುವವರು (ಶಿಕ್ಷಣ. ೯೯೯), ಯಾವುದಾದರೂ ಉಪಾಯದಿಂದ ಬೈಗುಳ ತಪ್ಪಿಸಿಕೊಳ್ಳುತ್ತಿದ್ದ (ಕಾರಿಯ. ೫೦), **ಬೈಗುಳು** : ೧. ನಾಯಕರ ಕೆಡೆನುಡಿವ ಬೈಗುಳ ಬಾಯ ಬೊಬ್ಬೆಯ ಕೈಯ ಹೊಯ್ಗುಳ ದಾಯಿಗರಲೇ ಎನುತ ಮೂದಲಿಸಿದನು ತಮ್ಮೊಳಗೆ (ಕುಮಾವ್ಯಾ. ೨-೧೩). ೨. ಮೂದಲಿಕೆ; ಹೀಗಳೆಯುವುದು : ನಡೆದುದುರು ಸನ್ನಾಹದಲಿ ಸೂಳಡಸಿ ಮೊಱೆವ ಗಭೀರಭೇರಿಯ ಕಡುರವದ ರಿಪುಭಟರ ಬೈಗುಳ ಗೌರುಗಹಳೆಗಳ . . . ಕಳಕಳವಾಯ್ತು ರಣದೊಳಗೆ (ಕುಮಾವ್ಯಾ. ೯-೦೨). [ಬಯ್₁+_ಗುಳ್₂. /ಕೊಡ. ಬಯ್ಗುಳ]

**ಬಯ್ಗುಳ** 'ಬಯ್ಗುಳ್' ನೋ.

**ಬಯ್ಗುಳು** 'ಬಯ್ಗುಳ್' ನೋ.

**ಬಯ್ಗೆ** 'ಬಯ್ಗು' ನೋ.

**ಬಯ್ಚು**, ಬಚ್ಚು (ಕ್ರಿ). ಮುಚ್ಚಿಡು ; ನಿಧಿಯಾಗಿರಿಸು ; ನಿಕ್ಷೇಪ ಮಾಡು : "ಮುಚ್ಚು, ಮುತ್ತು, ಬಯ್ಚು (ಬಚ್ಚು) . . . ಹುದುಗಿಸು, ಅಡಗಿಸು" (ಕಂಪಕಾ. ೯೦) **ಬಚ್ಚು₁**: ಕಿಚ್ಚಿನಂತುಜ್ವಲಿಸೆ ತೇಱಿನೊಳ್ಗನು ಶರವ ಬಚ್ಚಿದಂ ಮಿಕ್ಕಿದಂ ಧಾರುಣಿಗೆ ಪಿಡಿದಸಿಯ ಕೊಟ್ಟಿದಂ ಸವರಿದಂ ಪರಿಪರಿದು ಕುರುಬಲಂ ನಡುನಡುಗಿ ತಲ್ಲಣಿಸಲು (ಕುರಂಗ. ೬೩-೦೨) ; ದೌಲತ್ತಳನ್ನು ಬಚ್ಚಿ—ಬಂಧನದಲ್ಲಿಟ್ಟು ಬೇಡದ ನಗರವನ್ನು ಬಿಟ್ಟುಕೊಟ್ಟಿದ್ದಾನೆ (ಐಗಿಂಕ್. ೮೨).

**ಬಯ್ಚಿಡು**, ಬಚ್ಚಿಡು, ಬೈಚಿಡು = ೧. ಅಡಗಿಸಿ ಇಡು ; ನಿಧಿಯಾಗಿರಿಸು ; ನಿಕ್ಷೇಪಿಸು : ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು (ಬಸವ. ೦); ಬೇವು ಫಲವಾಗಲದು ಸೇವಿಸಲು ಯೋಗ್ಯವೇ ಧನವು ಘನವಾಗಿ ಬಯ್ಚಿಟ್ಟ ಠಾವಿರೇ ಪೋಕು (ಸರ್ವಜ್ಞ. ೬೪೯) ; ಅಯ್ಯ ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು ಒಳಗೆ ಬಚ್ಚಿಟ್ಟುಕೊಂಡೆನಯ್ಯ (ಶೂನ್ಯಸಂ. ೨೨೦-೫೨) ; ಕೊಳ್ಳೆ ಹೊಡೆದುಕೊಂಡು ಬಂದ ಸ್ವತ್ತುಗಳನ್ನು ಆಲ್ಲೇ ಒಂದು ಮೂಲೆಯಲ್ಲಿ ಇಟ್ಟುಬಿಟ್ಟು ಮಾತ್ರೊಂದು ಕಡೆ ಅವರು ಬಚ್ಚಿಟ್ಟುಕೊಂಡರು (ವ್ಯಾಸಬಿ. ೪೭) ; ಜಾಲಗಾಱನ ದೋಣಿಯಂತೆ ಬಳಸುವ ಹುಟ್ಟಿನಂತೆ ಬೈಚಿಟ್ಟ ನೆಲೆಯಂತೆ ಇದ್ದಡೇನು ಭೋಗಿಸಲರಿಯೆವಾಗಿ (ಮೋಳಿಗಮ. ೩೦-೧೨೯) ; ಕೊಟ್ಟಿದ್ದು ತನಗೆ ಬೈಚಿಟ್ಟದ್ದು ಪರರಿಂಗೆ ಕೊಟ್ಟದ್ದು ಕಟ್ಟಿತೆನಬೇಡ ಮುಂದಕ್ಕೆ ಕಟ್ಟಿಹುದು ಬುತ್ತಿ (ಸರ್ವಜ್ಞ. ೬೦೭). ೨. ಗುಟ್ಟಾಗಿಡು ; ರಹಸ್ಯವಾಗಿರಿಸು : ಸುಳ್ಳನ್ನು ಬಚ್ಚಿಟ್ಟುಕೊಳ್ಳುವುದು ಮಹಾ ಅಪರಾಧ (ಸಂಗಳೋ. ೯) ; ಸಾವಿತ್ರಮ್ಮ . . . ಯಾವ ವಿಚಾರವನ್ನೂ ಬಚ್ಚಿಡಲಿಲ್ಲ (ಕೊನಕ. ೨೦೬) ; ಲಲಿತಸುಖ . . . ವಿಟನೊಲಿದೊಡೊಲಿಯುಳು ಬೆರಸಿ ಬೆರಸದೆ ಮನವ ಬೈಚಿಡುತೆ ನಳಿನಮುಖಿ ಬೇಟದೊಳು ಬೇಗೆಯ ಬಳೆಯಿಪಳು (ಕುಮಾರ. ೬೦೨. ೬-೫೬).

[ಬಯ್₁ + _ ಚು₁. / ತೆಲು. ವಯಿಚು, ವೈಚು]

**ಬಯ್ತು** 'ಬಯ್₁' ಪರಾ.

**ಬಯ್ತಲೆ**, ಬೈತಲೆ (ನಾ). ತಲೆಯ ಮೇಲ್ಭಾಗದಲ್ಲಿ ಕೂದಲನ್ನು ಎರಡುಕಡೆಗೂ ಬಾಚಿದಾಗ ವಂಧ್ಯೆ ಗೆರೆಯಂತೆ ಕಾಣುವ ನೇರವಾದ ಸ್ಥಳ,—ಜಾಗ : "ಸೀಮಂತವೆಂಬುದು ಬಯ್ತಲೆ" (ಕಲಾಹು. ೬೭-೬೭೫) ; ಮೊದಲೊಳ್ ಕಟ್ಟಿದ ಮಂಡೆಯುಂಟ್ಟುಡಿಗೆ . . . ತಿರ್ದಿದ ನುಣ್ಬಯ್ತಲೆ ಲೀಲೆಯಿಂ ಸವಿದ ತಾಂಬೂಲಂ ಜಲಂ ಮಿಂದುದಲ್ಲದೆ ಮತ್ತೇನುಮವನೊಲ್ಲದಿರ್ದುಬಲೆ ಚಿತ್ರಾಕಾರದಿಂ ತೋಱಿದಳ್ (ವಸಂ. ೬೪೯); ಗಗನಮಣಿ ಪಶ್ಚಿಮಾಂಗನೆಯ ಬಯ್ತಲೆ[ಪಾಠಾಂ. ಬೈತಲೆ]ಯ ರಂಗು ಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿಮಸ್ತಕದೊಳು (ಕೃಷ್ಣಚಾ. ೬-೪೩). **ಬೈತಲೆ** : "ನೀಳ್ದ ಬೈತಲೆ ಸೀಮಂತ ಸಮಾಹ್ವಯಂ" (ಹಮ್ಮುಕೋ. ೭೦-೨೦); ಕರವಿಂಬಾಗಿರೆ ತಿರ್ದಿ ಬೈತಲೆಯಂ ... ಬರ್ಬರವೆಂ ಪೂಸಿ ತೊಟ್ಟಲ್ವರ್ (ಸಮಕ. ೬-೬೬) ; ಸಿವಿರ್ದ ವೇಣಿ ಬೈತಲೆಗಳವಟ್ಟ ಸಿಂದುರಮಳಂಕಯೊಳ್ಚಿದ ಕಜ್ಜಳಂ . . . ಚಲನಯುಗಂಗಳೊಪ್ಪೆ ನಟನಗೆಯ ಪಿಂದನೆ ಬಂದನಾಕ್ಷಣಂ (ಧಕಳ. ೬-೧೧೧); ಪರಿಗೆ ಕೆಂಪಿನ ರಚ್ಚೆಗೆ ಸುರಾಂಗನೆಯರಿಗೆ ಸುಭಟವ್ರಜಕೆ ಕುಂಟಣಿ ವರದಿಗಂಗನೆಯರಿಗೆ ಬೈತಲೆ ಗೆಸೆವ ಸಿಂಧೂರ . . . ಎನಲುರವಣಿಸಿ ಕೆಂಧೂಳಿ ನಭವಪ್ಪರಿಸೆ ಹೊಯ್ದಾಡಿದರುಭಯಚತುರಂಗಬಲ ಹಳಚಿ (ಕುಮಾವ್ಯಾ. ೯-೬).

ಬಯ್ತಲೆಯ ಸೌಭಾಗ್ಯ = ಮುತ್ತೈದೆತನ : ಮಱೆಯ ಮಾಯಾಶಿರವಿದೀಗಿದು ಮಱುಗಬೇಡೆಲೆ ತಾಯೆ ನಿನ್ನಯ ನೊಸಲಲಿಹ ಬಯ್ತಲೆ[ಪಾಠಾಂ. ಬೈತಲೆ]ಯ ಸೌಭಾಗ್ಯಕಳಿವುಂಟೆ (ತೊರರಾ. ೬.೦೨-೪೬).

[ ದೇಶ್ಯ. ತುಳು. ಬಕ್ತಲೆ, ಬಗುತಲೆ, ಬಗ್ತಲೆ; ಕೊಡ. ಬವ್ತಲೆ]

**ಬಯ್ತಲೆದೆಗೆ**, ಬೈತಲೆದೆಗೆ (ಕ್ರಿ). ಕೂದಲನ್ನು ಬಾಚಿ ಇಬ್ಭಾಗ ಮಾಡು : ಇಂಬಾದಿದಱೆರ್ತಡಿಯ ಬನಂ ಬಯ್ತಲೆದೆಗೆದ ಕೇಶವನಮೆನಿಸೆ ಪರಾಗಂಬೊರೆದ ಸಿಂಧು ಸೀಮಂತಂಬೊಲಿಳಾಕಾಂತೆಗಧಿಪ ಮಿಗೆ ಸೊಗಯಿಸುಗುಂ (ಪಾರ್ಶ್ವಪು. ೯-೬). **ಬೈತಲೆದೆಗೆ** : ಕಿಱುವೆರಲುಗುರಿಂದೆ ಬೈತಲೆ

ದೆಗೆದಾಗ ಮಜ್‌ದುಂಡಿಗುರುಳ ಮಾನಿನಿಗೆ ತುಱುಬನಿಕ್ಕಿದರು (ಶಂಚಿಕ. ೩೬-೨೪). [ಬಯ್ಯಲೆ + ತೆಗ್ಗ]

**ಬಯ್ಯಲೆವಣಿ**, ಬೈತಲೆವಣಿ (ನಾ). ೧. ಬೈತಲೆಯಲ್ಲಿ ಧರಿಸುವ ಆಭರಣ : (ಕಯ್ಯರೆಗುಬ್ಬುಸಿದ್ದು, ದೆರಲ್ವಣಿದುಕೊಂಡು, ಬಯ್ಯಲೆ ವಣಿಗೆತ್ತಿ ಊರ್ಧ್ವಮುಖಿಯಾಗಿ ಗದ್ಗದಸ್ವರದಿಂದ) . . . (ಘೋಳೈಂದು ನಕ್ಕು ಬಲಿಹಾಟ್ಟಹಾಸವನ್ನಾಲಾಪಿಸುತ್ತಿರುವವಳು (ಮುಂಕ್ರಿ. ೩೯-೨೨). **ಬೈತಲೆವಣಿ**: ೧. ಮುತ್ತಿನ ಭುಜಕೀರ್ತಿ ಹರಳೋಲೆ ಮೂಗುತಿ . . . ಉತ್ತಮವಜ್ರದ ಬೈತಲೆವಣಿಗಳನಿತ್ತನವಳಿಗಸುರೇಂದ್ರ (ಕುಮಾರಾ. ೯೦-೩೯); ಕಲಿಗುಟು ಕೆಲವರಿಗೆ ಜಡೆ ಕೆಲವರಿಗೆ ಮತ್ತೆ ಕೆಲರಲ್ಲಿ ತುಱುಬನಿಕ್ಕಿದರು ಅವರು ಚವಲಿ ಬೈತಲೆವಣಿ ಮುತ್ತಿನ ಬಲಿಯಿಲ್ಲ ಬಂದರೊಪ್ಪದೊಳು (ಕಹ. ೦೬-೨೫). ೨. (ಅಲಂ) ಆಭರಣಪ್ರಾಯವಾದ ವ್ಯಕ್ತಿ : ಶ್ರೇಷ್ಠವ್ಯಕ್ತಿ : ದ್ಯೂತಕೇಳಿಯೊಳಜ್ಞಾತವಾಸದೊಳಂದು ಧಾತುಗುಂದದೆ ಪಾಂಚಾಲಿ ಓತು ಪಾಂಡವರನೊಲಿಸಿ ಹದಿಬದೆಯರ ಬೈತಲೆವಣಿಯೆನಿಸಿದಳು (ಹರಿ. ೩-೯೮). [ಬಯ್ಯಲೆ + ವಣಿ]

**ಬಯ್ಯು** 'ಬಯ್$_1$' ಪರಾ.

**ಬಯ್ಯುಗ** (ನಾ). (?) : ಲಲನಾಮುಖೇಂದು ಲಾವಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದೇನಲೆದುದೊ ಬಯ್ಯುಗ [ಪಾಠಾಂ. ಪೈತಿಕ, ಪೈತಿಗ, ಬೈತುಗ] ದಂತಿರೆ ತಲೆಗೇಱುವ ಕುಸುಮನಿಚಯಮಂ ಕಾಶ್ಮೀರಂ (ಅಂಥ. ೦-೦೨೪). [?]

**ಬಯ್ದಕೂರ್** (ನಾ). ಒಂದು ಊರಿನ ಹೆಸರು : ಮದಿರೆಗೊಣ್ಣ ಕೊಪ್ಪರ ಗೇಶರಿವರ್ಮ್ಮಂಗೆ ಪರಿಷಮಿವರ್ಪ್ಪತ್ತೊಮ್ಮತ್ತಿಱೊಳ್ಬಯ್ದಕೂರ ರಾವಿನಾಡ ಮಾರ್ಕವ್ವ ಮಮ್ಮ ಗಣಪ ರಾಮ ತುಱುವನಿಕ್ಕಿಸಿ ಅಟ್ಟಿ ಸತ್ತನ್ (ಎಕ. X. ಮುಳಬಾ. ೨೦೩-೨೨ ; ೯೮೩). [? + ಊರ್]

**ಬಯ್ದುಂಬು** (ನಾ). ಒಂದು ಊರಿನ ಹೆಸರು (?) : ಸ್ವಸ್ತ್ಯನೇಕ ಸಮರಾಸಂಘಟ್ಟಣೋಪಲಬ್ಧ ಜಯಲಕ್ಷ್ಮೀಸಮಾಲಿಂಗಿತವಕ್ಷಸ್ಥಲ ಗಂಡತ್ರಿಣೇತ್ರ ಶ್ರೀ ಬಯ್ದುಂಬ ಮಹಾರಾಜರ್ ಪೃಥಿವೀರಾಜ್ಯಂಗೆಯೆ (ಎಇ. XXIV. ೨೬-೩ ; ಸು. ೮೮೩). [? + ತುಂಬು (< ತೂಂಬು)]

**ಬಯ್ಮ** (ನಾ). ಒಂದು ಜಾತಿಯ ಹೆಸರು (?) : ಅನ್ನಿಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಬಯ್ಮರ ಜೋಗನುಂ ಇನ್ನಿನಿಬರುಂ ಸಾಕ್ಷಿಯಾಗೆ ಕೊಟ್ಟರ್ (ಎಕ. XI. ಹೊಳಕ್ಕೆ. ೩೦-೦೩ ; ೯೬೪). [?]

**ಬಯ್ಮಿ** (ನಾ). (?) : ಕೈಯಣ ಗಿಂಡಿಯು ಕೊಂಕುಳ ಪೆಟ್ಟಿಗೆ ಕಲ್ಲಿಯುಹದು ತಲಕಟ್ಟು ಬಯ್ಮಿಗಳೆಂಬವು ಪರಿಪರಿ ನೋಡಲು ಕೋಳಿ ಹಾರಿಕೆ ಅಳವಟ್ಟು (ಕರಾಕೋ. ೯೭-೩). [?]

**ಬಯ್ಮಿಸು**, ಬಯಸ್ಸು, ಬೈಸು$_1$ (ಕ್ರಿ). ಬಯ್ಯುವಂತೆ ಮಾಡು : ಜರೆಯುವಂತೆ ಮಾಡು ; ದೂಷಣೆಗೊಳಗಾಗಿಸು : ನೀನು ಒಪ್ಪುವುದಾದರೆ ನಾನು ನಿಮ್ಮ ಮನೆಗೆ ಬರುತ್ತೇನೆ. ನೀನೂ ಬಯ್ಮಿಸಿಕೊಳ್ಳುವ ಹಾಗಿಲ್ಲ (ಕಾಲಿಯ. ೩೩); ನಾನು ಯಾರಿಂದಲೂ ಹಾಗೆ ಬಯ್ಮಿಸಿಕೊಂಡವನಲ್ಲ (ಅಂಗಾರ. ೨೯೫). **ಬಯ್ಸು** : ಭುಸ್ಸಾರ ನಿಮ್ಮಂ ಪಂಚಮಹಾಪಾತಕನ ಮನೆಗೊಡಗೊಂಡು ಪೋಗಿ ಬಯ್ಸಿದಂ (ವಚ್ಚಾರಾ. ೬-೩). **ಬೈಸು$_1$** : ಅಪ್ಪನ ಕಡೆ ಬೈಸಿಕೊಳ್ಳೋದು ತಪ್ಪಿತು (ಅಕಪಾ. ೩೯); ಬಯಕೆ ಕೊಟ್ಟರೂ ಬೈಸಿಕೊಂಬುದು ತಪ್ಪಲಿಲ್ಲ (ಗಾಳಿ). [< ಬಯ್$_2$ + — ಇಸು]

**ಬಯ್ಯು** 'ಬಯ್$_2$' ನೋ.

**ಬಯಿಬತ್ತ** (ನಾ). ಕೆಳತರಗತಿಯ ಒಂದು ಬಗೆಯ ಬತ್ತ : (೬). [ದೇ.॥ ತುಳು. ಬೈತರಿ, ಬಯಿತ್ತರಿ]

**ಬಯ್ಸಿಕೆ** 'ಬೈಸಿಕೆ' ನೋ.

**ಬಯ್ಸು** 'ಬಯ್ಮಿಸು' ನೋ.

**ಬರ್** 'ವರ್' ನೋ.

**ಬರ$_1$** 'ಬಱ' ನೋ.

**ಬರ$_2$** 'ವರ$_1$' ನೋ.

**ಬರ$_3$** (ನಾ). ಅನುಗ್ರಹ ; ವರ : "ಬರ—ವರ = ಅನುಗ್ರಹ" (ಶಬ್ದಕೋ. ೨೯); ನಾಲ್ಕು ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರದಿದಿರು ಬರೆ ವೆಂಚ್ಚಿ ಬರವನಗ್ನಿದೇವಂ ಬೇಡಿಕೊಳ್ಳೆಮೆಂದೊಡೆಮ್ಮನ್ನಯಕ್ಕೆ ನೀನೆ ಹೆಚ್ಚಿದೆ ಯಾಗೆಂದು ಬೇಡುವುದುಂ (ಶಂಪಾ. ೩-೦೦೩ ಶ) ; ವೃಷನಿಂ ಬರಂಗಳಂ ಪಡೆದನೆಂಬರ್ ಕಣಾ! (ಶ್ರೀಚಾಪು. ೩೦-೫೦). [< ಸಂ. ವರ]

—**ಬರ$_4$** '—ವರಂ' ನೋ.

—**ಬರಂ** '—ವರಂ' ನೋ.

**ಬರಂಗಿ** (ನಾ). (?) : ಅಂತು ಖಂ ೭೪ ರೊಕ್ಕ ಗ ೧೧೫ ಭೂಮಿ ಬರಂಗಿ ಖಂ ೨೮ ವರಾರ × × × ರುಹ ಗ ೬ ಅಡಕೇ ಸುಂಕ ಗ ೧ ಉಪಾಧಿಗೆ ಮಾವಿನ ಕೊಡಗಿ ಖಂ ೨೬ ವೊರಹ × × × (ಎಕ. VIII. ತೀರ್ಥಹ. ೦೯-೯೨ ; 1678). [?]

**ಬರಂಪಿಡಿ** (ಕ್ರಿ). ವರವನ್ನು ಸ್ವೀಕರಿಸು , —ಹೊಂದು : ವಿರೋಧಿಗಂಟರ್ದೆಯ ಮಾಱುವ ವೈರಿಗೆ ಮೂರಱಕಣೆ ಮಾನ್ಯರ್ಗ್ಗಡಿವವನೇಂ ಚತುರ್ಬ್ಬ್ರಜನ ಮಚ್ಚರಿಪವಂಣಲೆಬರ್ಮ್ಮನೊಳ್ ಬರಂಪಿಡಿದನ ಮಾಱಿ ಬಾಳ್ವಡವನೇಂ ಜವನೇ ಕಡಿಕೆಯಿಂದು ಕಾದಲೆಂದೊಡರಿಸುವಾತನೇಂ ಭುಜಗಮರ್ದ್ದನನೇ ಕಲಿಗೋಣಭೂಪನೊಳ್ (ಎಕ. VIII. ಸಾಗರ. ೦೦೯-೩೬ ; 1042). [ಬರ$_3$ + ಪಿಡಿ$_1$]

**ಬರಂಬಡೆ** (ಕ್ರಿ). ವರವನ್ನು ಹೊಂದು ; ಅನುಗ್ರಹವನ್ನು ಪಡೆ : ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ ಮಕ್ಕಳಂ ಪಡೆವಂತು ಪರಾಶರಮುನೀಂದ್ರನೊಳ್ ಬರಂಬಡೆದಳ್ (ಪಂಪಭಾ. ೦-೦೦೬ ಶ) ; ನಡುನಡಪಿತ್ತು ತನ್ನನೆನೆ ಮೆಯ್ ಬಡವಾದುದು . . . ತೋಳ್ಗಳೊಳ್ ಬರಂಬಡೆದವೊಲಿಯ್ದೆ ಸುಯ್ ಸರಳವಾದುದು (ಶಂಕ್ರಿ. ೩-೦೨೯) : ಬರಂಬಡೆವನ್ನವರಾರಾಧಿಸಿದಂ (ಹರಿ.ಶ. ೨೫೮ ಶ್ರ.ಹೋ). [ಬರ$_3$ + ಪಡೆ$_1$]

**ಬರಕ$_1$** 'ಬರ್ಕ' ನೋ.

**ಬರಕ$_2$** (ನಾ). ಹೊರೆ (?) : ಪೆಜ್ಜುಂಕಕ್ಕೆ ದ್ರಮ್ಮ ೧ ಆ ಬಳಿಯ ಅಡಕೆ ೨೫ ಕತ್ತೆಯ ಬರಕಕ್ಕೆ ಪೊಂಗೆ ಅಡಕೆ ೨೦ ಸೀರೆಯ ಸುಂಕ ಪೊದಕೆಗೆ ಪಾಗ ೨ ಸೀರೆಗೆ ಪಾಗ ೧ . . . ಅನ್ನಿಲ್ಲಿಯ ಎಣ್ಣರಾಯಿಗರುಂ ನಾಗೇಶ್ವರ ದೇವರ್ಗ್ಗೆ ೫೦ ಮತ್ತರಲು ಕಂತವನ್ನಾಯವುಮಂ ಬಿಟ್ಟರು (ಶಾಂತೀಶ. ೩-೨೨೫; 1047) ; ಅರಮನಸ್ಸಿನಿಂದರೇ ಅಪ್ಪಯ್ಯನ ಹಿತ್ತಲಿಗೆ ಹೋದಳು. ಅಪ್ಪಯ್ಯ ಆ ವೇಳೆಗೆ ಹುಲ್ಲು ಕಿತ್ತಾಗಿತ್ತು, 'ಬರಕ'ದಲ್ಲಿ ಕಟ್ಟುತ್ತಿದ್ದ (ಕಾರು. ೭೯). [ದೇ.॥ ತೆಲು. ಬರಕ=ಹತ್ತಿಯ ಹೇರು]

**ಬರಕಂದಾಜ** (ನಾ). ಬಂದೂಕು ಅಥವಾ ತುಪಾಕಿಯನ್ನು ಹಿಡಿದಿರುವ ಸೈನಿಕ,—ಸಿಪಾಯಿ: ಇಂಗ್ಲಿಷ್ ಸೇನೆ ಅಂದು ದೇವಿಯ ಹಡಗಿಗೆ ಮುತ್ತಿಗೆ ಹಾಕುವ ಸಂಗತಿ ಅವರಿಗೆ ತಿಳಿದು ಅವರಿಬ್ಬರೂ ಬರಕಂದಾಜ ಸೇನೆಯನ್ನು ತೆಗೆದುಕೊಂಡು ಬಂದಿದ್ದರು (ಅಂಕು. ೨೭೯). [← ಪಾರ. ಹಿಂ. ಬರಕಂದಾಜ್, ಬರ್ಕಂದಾಜ್ ; ಮರಾ. ಬರಕಂದಾಜ್, ಬರ್ಕಂದಾಜ್]

**ಬರಕತ್ತು**, ಬರಖತ್ತು, ಬರ್ಕತ್ತು, ಭರಕತ್ತು (ನಾ). ಏಳಿಗೆ; ಅಭಿವೃದ್ಧಿ : ಆ ಮೂರುಮುಕ್ಕಾಲಿನ ಮಾಸ್ತರುಗಳು ಕ್ಲಬ್ಬಿನಲ್ಲಿ ತುಂಬಿರುವತನ್ನು ದಿವಸ ಕ್ಲಬ್ಬು ಬರಕತ್ತಿಗೆ ಬರಲಾರದಯ್ಯ (ಮುಗಿಯು. ೨೦೭); ಯಾವ ಯಾವ ಒಕ್ಕಲುಗಳನ್ನು ತಂದು ಹಾಕಿ ನೋಡಿದೆ; ಬರಕತ್ತಿಗೆ ಬರಲಿಲ್ಲ (ಚಿಕ್ಕಿ. ೦೫). **ಬರಖತ್ತು** : ನೀಯತ್ತಿದ್ದವರಿಗೇ ಬರಖತ್ತು ಎಂದು ತುರುಕರು ಹೇಳುವುದು ನಿಜ (ಕಲಾಂ. ೦೯೬). **ಬರ್ಕತ್ತು** : ಬಡವರಿಗೆ ಯಾವಾಗಲೂ

ಬರ್ಕತ್ತಿಲ್ಲ (ಶಾಳಿ. ೦೩); ಆಕೆಗೆ ಈ ಮದುವೆಯಿಂದ ಬರ್ಕತ್ತಿಲ್ಲ ಎಂದು ಅನಿಸತ್ತಂತೆ (ಕೃಕಾಂಕ: ೬). **ಭರಕತ್ತು** : ಹಿರಿಯರಾದವರು "ಇದು ಹಿಂದಿನಗಳ ಜಾಗ, ಇಲ್ಲಿ ನಮಗೆ ಭರಕತ್ತು ಇಲ್ಲ" ಎನ್ನುತ್ತಾರೆ (ಗಠಜಾ. ೦೬೩). [←ಅರ. ಬರಕತ್; ಹಿಂ. ಬರಕತ್, ಬರ್ಕತ್; ಮರಾ. ಬರಕತ್, ಬರಖತ್, ಬರ್ಕತ್]

**ಬರಕಾಸ್ತು** 'ಬರಖಾಸ್ತು' ನೋ.

**ಬರಖತ್ತು** 'ಬರಕತ್ತು' ನೋ.

**ಬರಖಾಸ್ತ** 'ಬರಖಾಸ್ತು' ನೋ.

**ಬರಖಾಸ್ತು**, ಬರಕಾಸ್ತು, ಬರಖಾಸ್ತ, ಭರಕಾಸ್ತು, ಭರಖಾಸ್ತು (ನಾ). ೧. ಕೊನೆ ; ಮುಕ್ತಾಯ : ಸಾವಿರ ಬಗೆಯ ಭಯದ ಕಲ್ಪನೆಯ ಮೂಲಕ ಬುದ್ಧಿಯನ್ನು ಆರಂಭದಲ್ಲಿಯೇ ಬರಖಾಸ್ತು ಮಾಡಿ ಕುಳಿತಿದ್ದೇವೆ (ಶಾಂಕ. I, ೪೬೬). ೨. ಓಲಗ, ಸಭೆ ಮುಂತಾದುವುಗಳನ್ನು ಸಮಾಪ್ತಿಗೊಳಿಸುವುದು: ವೆಂಕಣ್ಣ ಸಭೆಯನ್ನು ಬರಖಾಸ್ತು ಮಾಡಿದ (ಶಾಂಶಾ. ೪೦). ೩. ಕಚೇರಿ ಮುಂತಾದುವುಗಳನ್ನು ಮುಚ್ಚುವುದು : ನ್ಯಾಯಾಧಿಕಾರಿಯು ಕೋರ್ಟು ಬರಖಾಸ್ತೆಂದು ಹುಕುಂ ಮಾಡಿದನು (ಕೊಡಗು. IV, ೫೩). **ಬರಕಾಸ್ತು** : ೨. ಸಭೆ ಬರಕಾಸ್ತಾಯಿತು (ಅಶ್ವತ. ೨೮) ; ದರಬಾರ ಬರಕಾಸ್ತು ಮಾಡಿ ಹುಕುಂ ಆದ್ದು ಬೆಳಿಗ್ಗೆ ದರಬಾರು ಆಗುತ್ತೆ (ಕುಕಾ. ೩-೪). **ಬರಖಾಸ್ತ** : ೨. ಪಾನ-ಸುಪಾರಿಯ ವೇಶ್ಯಾಯ ದರಬಾರ ನಡೆದು ಬರಖಾಸ್ತ ಆಯಿತು (ಶೀಚಕ. II, ೩೩೫). **ಭರಕಾಸ್ತು** : ೨. ಸಭೆ ಭರಕಾಸ್ತಾಯಿತು (ಮಾಮಾ. ೬೬); ಸಭೆ ಚೆರುವು ಖಾಲಿ ಎಂದು ತಿಳಿದಾಗಲೇ ಭರಕಾಸ್ತಾಗಿ ಬರಿದಾಗಿತ್ತು (ಕೃದ್ಯಶಿ. ೧೦೦). **ಭರಖಾಸ್ತು** : ೨. ಸಭೆಯು ಭರಖಾಸ್ತಾಯಿತು (ಶ್ರೀಶಾಯು. ೨೩೪) : ಈ ದರಬಾರು ಭರಖಾಸ್ತಾಗಲಿ (ಕಾಂಕ್. ೪೭೩). [← ಪಾರ. ಬರ್‌ಖಾಸ್ತ್, ಬರಖಿವಾಸ್ತ್ ; ಹಿಂ. ಮರಾ. ಬರಖಾಸ್ತ್, ಬರ್ಖಾಸ್ತ್]

**ಬರಗ** 'ಬರಗು' ನೋ.

**ಬರಗರಗ** 'ಬರಗರುಗ' ನೋ.

**ಬರಗರುಗ**, ಬರಗರಗ (ನಾ). ಒಂದು ಬಗೆಯ ಸಸ್ಯ; ಗರುಗದಲ್ಲಿ ಒಂದು ಬಗೆ : ಅಲೆಕಾಯಿ ತಾರೆಕಾಯಿ . . . ಅಮರದ ವಳ್ಳಿ, ಬರಗರುಗ ಇವಂ ಕಷಾಯಮಿಟ್ಟು ಸೇವಿಸೆ ಶ್ಲೇಷ್ಮಜ್ವರಂ ತೀರ್ಗುಂ (ಸಕವೈ. ೯೯). **ಬರಗರಗ**: ಹಿತ್ತಾಳೆ ಶುದ್ಧಿ: ಹೊನ್ನಿಗೊನ್ನೆ ಸೊಪ್ಪು ಬರಗರ [ಬರಗರಗ] ಸೊಪ್ಪು ತುಂಬೆ ಯಾ ೩ ರಸಗಳನ್ನು ಸಮ ಮಾಡಿ ೭ ದಿನ ಇದರಲ್ಲಿ ಉನೇ ಹಾಕಿ ತೊಳದು . . . ಸ್ವಲ್ಪ ರಸ ಹಾಕಿ ಕರಗಿಸಲು ಬಣ್ಣ ಬರುವುದು (ಗಂರತ್ನ. ೦೬-೩). [ಬರ್$_1$(<ಬಱ) + ಗರುಗ]

**ಬರಗಲೆ** (ನಾ). ಒಂದು ಬಗೆಯ ಆಭರಣ : ಸರಿಗೆಗಿವು ಲಂಬಣಕ್ಕಿವು ಬರಗಲೆಗಿವು [ಪಾಠಾಂ. ಬರಗಲ್ಗಿವು] ಮುಂಗುಳ್ಗಳಿವು ಮೇಖಲೆಗಿವು ನೂಪುರ ರಚನೆಗಿವೆಂದವನಾದರದಿಂದಂ ಕೊಯ್ದುರಾಯ್ದು ದಿವಿಜಾಂಗನೆಯರ್ (ಅಂಕು. ೬-೬೯) ; ಬರಗಲೆಯುಮಂ ಕೊಪ್ಪುಂ ನೂಪುರಮುಂ ಲಂಬಣಮುಮಲ್ಲಿ ಮಲ್ಲಿಗೆಯ ಮುಗುಳ್ ಬಿರಿಮುಗುಳೆಂದಿವು ತನಗಾಗಿರೆ ದೇಸೆಯ ಮಾಸ ರಿಕ್ಕೆಯಿಂ ಪೊಸಯಿಸಿದಳ್ (ಶಾಂತಿಪು. ೬-೨೨). [?]

**ಬರಗಾಡು** (ನಾ). ನಿಸ್ಸಾರವಾದ ಕಾಡು, ಅಡವಿ : ಬಂಜರುಭೂಮಿ: ಭೂಮಿ ಬರಗಾಡು ನಿಸ್ಸಾರ (ಕೊಂವ. ೪೦೪). [ಬರ್$_1$ (<ಬಱ)+ಕಾಡು$_1$]

**ಬರಗಾಲ** 'ಬಱಗಾಲ' ನೋ.

**ಬರಗಿ** 'ಪರಗಿ' ನೋ.

**ಬರಗಿನಹುಲ್ಲು** (ನಾ). ಒಂದು ಬಗೆಯ ಹುಲ್ಲು; ಬರಗು: "ಕೋದ್ರಹುಲ್-ಬರಗಿನ ಹುಲ್ಲು" (ಚಿಕಿ. ೪೦). [<ಬರಗು$_1$+ಹುಲ್ಲು (<ಪುಲ್)]

**ಬರಗು$_1$** (ಕ್ರಿ). ಬಾಚು ; ಗೋರು : ಬಯಲಿಂಗೆ ಕೈ ಬಿಚ್ಚಿ ಬರಗುತ ಭೀಮ ಬಾ ಸಹಸ ಬಳಲಿದೆಯಲಾಯೆಂದು ಮೋಹದಿಂದ ಕಿಚ್ಚುಗೆದರುತ ಮನದಿ ಕರೆಯಲ್ಕಾರಿಯಂ ಅಚ್ಯುತನು ಹಿಂದಿರಿಸಿ . . . ಉಕ್ಕಿನೋಳ್ಮಾಡ್ದ ಭೀಮನಂ ನಿಲಿಸಿದರು ತಂದು ಮುಂದೆ (ಕುಸಂಗ. ೬೬-೨೨); ಕಾವ್ಯವೆಂದರೆ ನಮ್ಮಂಥ ಜೀವಿಯೇ ಅಲ್ಲದಿರುವಲ್ಲಿ ಅದರೊಳಗೆ ಆತ್ಮವನ್ನು ತುಂಬಿಸುವುದೆಂದರೆ . . . ಬಾನನ್ನು ಬರಗುವಂತೆಯೇ ಸರಿ (ಶಾಕೃಅಂ. ೩೩೪).

**ಬರಗು$_2$**, ಬರಗ (ನಾ). ೧. ಒಂದು ಬಗೆಯ ಧಾನ್ಯ ; ಹಾರಕ : "ಶ್ಯಾಮಕಾಷ್ಟ ಬರಗುವದಕ್ಕುವಂತಾ ಪ್ರಿಯಂಗು ಕಂಗು ಸವಣ್ಣುಂ" (ಶಬ್ದಮಣೀ. ೯೯-೦೬); ನೀವಿಕ್ಕುವ ಕೀರೆಗಂ ಬರಗಿನೋಗರಕ್ಕಂ ಪುಟ್ಟಿದವನಲ್ಲ (ಶಂಖ. ೨-೩೩); ಅದರದೆ ಜ್ಯೇಷ್ಠದವರದ ಬೂದಿಯು ಮೃಗಶಿರದ (ರಾದಿ) ಕೊಂಡ ಮಟಕಿಯಿಂ ಬೆಳೆಗುಂ ಮೇದಿನಿ ಪೊಜಗಣ(ವರ) ನಾಲ್ಕು ಜೋಳಾದಡೆ ಹಾರಕ್ಕು ಬರ(ಱ)ಗು ಬೆಳೆಗುಂ ಸ್ವಲ್ಪಂ (ಅಟ್ಟಿಕು. ೬-೦೩೬). ೨. ಬೆಟ್ಟಗಳಲ್ಲಿ ಬೆಳೆಯುವ, ಬರೆಯುವ ಲೇಖನಿಯನ್ನು ತಯಾರಿಸಲು ಉಪಯೋಗಿಸುವ ಒಂದು ಬಗೆಯ ಕಡ್ಡಿಯಾಗುವ ಹುಲ್ಲು : 'ಬರಗಂಕಡ್ಡಿ' ಪರಾ. **ಬರಗ** : ೧. ಬರಗದ ಅನ್ನ ತಿನ್ನುವವ ಹೂರಿಗೆ ಬಯಸಿದ ಹಾಗೆ (ಗಾದೆ).

[ದೇ.೩ ತಮಿ. ವರಕು; ಮಲ. ವರಗು; ತೆಲು. ವರಗ, ವರಿಗೆ. / ಸಂ. ವರಕ, ವರುಕ./ಮರಾ. ಬರಗ]

**ಬರಗುಕಡ್ಡಿ** (ನಾ). ೧.=ಬರಗು$_2$ ೨: ಕತ್ತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ . . . ರೌಹಿಷಂ — ೬ ಕಾಚೀಹುಲ್ಲು. ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ ಇವುಗಳೆಲ್ಲಕ್ಕೂ ಪೆಸರುಗಳು (ಸಿದ್ಧಾಂತಿ. ೦೫೦). ೨. ಬರಗಿನ ಹುಲ್ಲಿನ ಕಡ್ಡಿಯಿಂದ ಮಾಡಿದ ಲೇಖನಿ : (೬).

[ಬರಗು$_2$ + ಕಡ್ಡಿ]

**ಬರಗೂರ್** (ನಾ). ಒಂದು ಊರಿನ ಹೆಸರು; ಈ ಬಳ್ಳಾರಿ ಜಿಲ್ಲೆಯ ಈಗಿನ ಬರಗೂರು : ಶ್ರೀ ಮಹೇನ್ದ್ರಾಧಿರಾಜನಾತಂ ಚೋರ ಮೊದಲಾದ ಶೇಷಾದಾಯಿಗರ ನಿರ್ಮೂಲಂ ಕಿಡಿಸಿ ಪ್ರಿಥ್ವೀರಾಜ್ಯಂಗೆಯ್ಯುತ್ತ ಬರಗೂರೊಳ್ಬೀಡಂ ಬಿಟ್ಟು (ಎಕ. XII, ಶಿರಾ. ೨೯-೨; ಸು. ೯೦೦); ಶ್ರೀ ಪ್ರಿತುವೀವಲ್ಲಭ ಪಲ್ಲವಕೊಲತಿಲಕ ಶ್ರೀಮನ್ನಯ್ಯಮ್ಮರಸಪ್ಪ [ಸೃ]ತುವೀರಾಜ್ಯಂಗೆಯ್ಯು ಬರಗೂರೊಳಿರೆ (ಎಕ. IX-i, ೪೦-೯; ೯೭೭).

[ಬರಗು$_1$ + ಊರ್]

**ಬರಗೆಡು** (ಕ್ರಿ). ಏನೂ ಇಲ್ಲದಂತೆ ಆಗಿ ಕಂಗೆಡು; ಗತಿಗೆಡು : ಆ ಬರಗೆಟ್ಟ ಬಡ ಹುಡುಗರು ಉಣ್ಣುವ ಸಂಭ್ರಮ ನೋಡಿ ಆ ಧಾರ್ಮಿಕ ವೈದ್ಯನಿಗೆ ಪರಮಸಂತೋಷವಾಯಿತು (ಕುಂಜಾಯ. ೪-೬೬); ಈ ನಂಜೇಲಿಂಗಭಟ್ಟನು ಬರಗೆಟ್ಟು ಅಲ್ಲಿದ್ದ ತಿಂಡಿಗಳನ್ನು ತಿಂದನು (ಹಿಂತಿಂ. II, ೬).

[ಬರ್$_1$ (< ಬಱ) + ಕೆಡು$_1$]

**ಬರಟು** (ನಾ). (ಉಕ) ಹೂವು, ಕಾಯಿಗಳು ಆಗದಂಥ ತೊಗರಿಯ ಹಸಿಯ ಗಿಡ : ಬರಟನಿಂದ ಕಣದ ಕಸ ಹೊಡೆದು ತೆಗೆ (ಬೂಕ). 'ಬಱಲು' ಪರಾ. [?]

**ಬರಡಕೆಱೆ** 'ಬರಡಗೆಱೆ' ನೋ.

**ಬರಡಗೆಱೆ**, ಬರಡಕೆಱೆ (ನಾ). ಒಂದು ಕೆರೆಯ ಹೆಸರು (?) : ಅನ್ನ ಬನ್ದು . . . ಇಶನ್ಯದಿಶಿ ಒಳಗೆಱೆಯ ಬರಡಗೆಱೆಯೊಳ್ಮಡತ್ತು (ಎಕ. XVI, ತಿಪಟೂ. ೦೪೦-೬೬; ಸು. ೯೦೦). **ಬರಡಕೆಱೆ** : ಕೆಡಸೂರ್ ಪೂರ್ಬ್ಬಸ್ಯಾನ್‌ದಿಶಿ ಬರಡಕೆಱೆಯ ಮೂಡ ಕಡೆ ಗೋಡೆಬಳ್ಳವಗೆಱೆಯ (ಮೃಶಂ. ೦೪೦೯, ೦೦-೬೯; ೯೦೦). [ಬರಡ ? + ಕೆಱೆ$^3$]

**ಬರಡಾ**, ಬರಡೀ, ಭರಡಾ (ನಾ). ಒಂದು ಬಗೆಯ ಅಡಕೆ ; ಹಣ್ಣು ಅಡಕೆ : ಬರಡಾಅಡಕೆ—ಬಹಳ ದೊಡ್ಡದಾಗಿ ಹಾಂಗೂ ಸಣ್ಣದಾಗಿರ

ಬಾರದು, ಮಧ್ಯಮ ಇರತಕ್ಕದ್ದು . . . ಇಂಥಾ ಮಾಲವೂ ಒಂದನೇ ನಂಬರದ ಬರಡಾಅಡಿಕೆ ಎಂದೆನಿಸಲ್ಪಡುತ್ತದೆ (ಮುಂಶಿವ್ಯಾ. ೯೯). **ಬರಡೀ:** ಅಡಿಕೇಕಾಯಿ ಹಣ್ಣಾಗುವವರೆಗೆ ಬಿಟ್ಟರೆ ಅದರೊಳಗೆ ಮೇಲಾದ ಬರಡೀ ಅಡಿಕೆ ಹೊರಡುತ್ತದೆ; ಯೆಳೆಕಿನ ಕಾಯಿಯಲ್ಲಿ ಚಿಕಣೀಅಡಿಕೆ ಹೊರಡುತ್ತದೆ (ಕಥಾಗ. ೨೬೯). **ಭರಡಾ:** ಅವಳು . . . ಭರಡಾಅಡಿಕೆಯನ್ನು . . . ಮುಂದೆ ಹಿಡಿದಳು (ಕಕ್ಕರ್ಕ. ೨೦೬). [ ← ಮರಾ. ಬರಡಾ, ಬರಡೀ ]

**ಬರಡಿ** 'ಬಱಡಿ' ನೋ.

**ಬರಡೀ** 'ಬರಡಾ' ನೋ.

**ಬರಡು** 'ಬಱಡು' ನೋ.

**ಬರಡುಗಾಲ** (ನಾ). ಕ್ಷಾಮದ ಕಾಲ : ವಚನಸಾಹಿತ್ಯದ ದೃಷ್ಟಿಯಿಂದ ಹದಿಮೂರು ಹದಿನಾಲ್ಕನೇ ಶತಮಾನಗಳು ಬರಡುಗಾಲವೆಂದೇ ಹೇಳಬೇಕು (ಕೂಕ್ಕಕು. ೦೯). [ಬರಡು ( <ಬಱಡು ) + ಕಾಲ]

**ಬರಡುಗೊಳಿಸು** (ಕ್ರಿ). ವ್ಯರ್ಥಗೊಳಿಸು : ನಿಷ್ಪ್ರಯೋಜಕವನ್ನಾಗಿ ಮಾಡು : ಕಣ್ಣು ಗುಡ್ಡಿಯೆ ಆಗಿ ಕುರುಡುಗೊಳಿಸುವೆಯಾ ? ನೆರಳು ನೀಡುತ ಸಸಿಯ ಬರಡುಗೊಳಿಸುವೆಯಾ? (ಕವ್ಯಕೃ. ೬-೦೩). [ಬರಡು (<ಬಱಡು) + ಕೊಳ್$_1$ + — ಇಸು$_1$]

**ಬರಡುತನ** (ನಾ). ಮಕ್ಕಳಾಗದಿರುವಿಕೆ; ಬಂಜೆತನ : ಕೆಲವೊಮ್ಮೆ 'ಇ' ಜೀವಾತಿನ ಅಭಾವದಿಂದ ಹೆಣ್ಣುಮಕ್ಕಳಲ್ಲಿ ಮತ್ತು ಗಂಡಸರಲ್ಲಿ ಕೂಡ, ಬರಡುತನ ಬರಬಹುದು (ಆರುಆ. ೬೬). [ಬರಡು (<ಬಱಡು)+ — ತನ]

**ಬರಡುಭೂಮಿ** (ನಾ). ಬಂಜೆನೆಲ ; ಪಾಳುಭೂಮಿ ; ಬಂಜರು : ಬರಡುಭೂಮಿ ಬಂಗಾರದ ಭೂಮಿಯಾಗುತ್ತದೆ (ಕಪಂ. ೩೦). [ಬರಡು (<ಬಱಡು) + ಭೂಮಿ]

**ಬರಡುಮರ** (ನಾ). ಫಲ ಬಿಡದ ಮರ : ಎಲ್ಲಿಂದಲೋ ಸುಳಿಗಾಳಿ ತಾಕಿ ಬರಡುಮರದ ಒಂದೆರಡು ಎಲೆಗಳೂ ಉಲಿಯುವಂತೆ, ಅವಳ ತಲೆಯಲ್ಲಿ ಒಂದೆರಡು ವಿಚಾರಗಳು ಗುಜುಗುಜು ಮಾಡಹತ್ತಿದ್ದವು (ಶಿಠಾಶ. ೫೦). [ಬರಡು(<ಬಱಡು) + ಮರ$_1$]

**ಬರಡುಮಾತು** (ನಾ). ವ್ಯರ್ಥವಾದ ಮಾತು : ಸುಮ್ಮನೆ ಬರಡು ಮಾತಿನಿಂದೇನು ಲಾಭ ? (ಜಾ). [ಬರಡು (<ಬಱಡು) + ಮಾತು$_1$]

**ಬರಡೆ** 'ಬಱಡೆ' ನೋ.

**ಬರಣ** (ನಾ). (?) : ಕೇಶವ ದೇವರಿಗೆ ಒನ್ದು ವರಹ ಕುಳದ ದಾಸರಿ ಬರಣ ತಿವ್ಪು ಒನ್ದು ಬರಣ ತೋಟವನೂ ದೇವಸ್ವವಾಗಿ ಧಾರೆಯನೆಱದು ಕೊಟ್ಟೆವಾಗಿ (ಎಕ. VIII, ಸೊರಬ. ೫೨೬-೦೦ ; 1516). [ ? ]

**ಬರಣೆ** (ನಾ). ಕರಡಿಗೆ ; ಕರಂಡಕ : ಎಂ ಬಱದೆ ಪರಪುವ್ವೆ ಪಲವುಂ ಬರಣೆಯನಿರಿಸು ಕಿಲಕಿ ನೆಲೆವೆಲೆ ಪೇಟಾ ಪೊಂಬರಣೆಗಳೆಡರ್ಕೆಂ ಚೆಂಬರಣೆ ಗವಿನಿತಱಿಂದೆ ತಣಿದವೆವೀಗಳ್ (ಕಕಾ. ೬-೫೦) ; ಅರಣೆ ಕಡಿದರೆ ಬರಣೇ ಮದ್ದು ಸಾಲದು (ಗಾದೆ).

[<ಸಂ. ಭರಣೀ./ತಮಿ. ಮಲ. ಪರಣಿ ; ತುಳು. ಬರಣಿ, ಬರಣೆ ; ಕೊಡ. ಬರಣಿ ; ತೆಲು. ಬರಣಿ, ಬರಿಣೆ]

**ಬರತ$_1$** 'ಭರತಿ' ನೋ.

**ಬರತ$_2$** (ನಾ). ಒಂದು ಬಗೆಯ ವ್ಯಂಜನಪದಾರ್ಥ ; ಬಜ್ಜಿ : ಕೆಳ್ಳನ್ನ ಎಂಟುಹತ್ತು ರೊಟ್ಟಿಯ ಮಾಡಿ ಬದನೇಕಾಯಿಯ ಸುಟ್ಟು ಬರತವ ಮಾಡಿ ಅಲ ಮಾಗಣಬೇರು ಹುಣ್ಣಗಂಟಿಯ ಕಾಯಿ ಸಲಸಂದರೊಂದ್ರುತ್ತು ಸಲಸಿದೆನೊ ಶಿವನೆ (ಜೋಕಗೀ. ೯೩). [ ? ].

**ಬರತರಪು** 'ಬರತರಪು' ನೋ.

**ಬರತರಫ್** 'ಬರತರಪು' ನೋ.

**ಬರತರಪು**, ಬಡತರ್ಫ್, ಬರತರಪು, ಬರತರಫ್, ಬರತರ್ಫು, ಬರತರ್ಫು, ಬರ್ತರಫ್, ಬರ್ತರ್ಫ್, ಭರತರ್ಫು (ನಾ). ಉಚ್ಚಾಟನೆ ; ರದ್ದತಿ; ವಜಾ; ಕೆಲಸದಿಂದ ತೆಗೆದುಹಾಕುವಿಕೆ : ಪಾರ್ಲಿಮೆಂಟಿನವರು ಅರಸನಿಗೆ ಹಣ ಕೊಟ್ಟು ಬಕಿಂಗ್‌ಹಮನನ್ನು ಬರತರಪು ಮಾಡಬೇಕೆಂದು ಮತ್ತೆ ಹೇಳಿದರು (ಇಂಗ್ಲಂಚ. ೦೯೦); ೪೦೦೦ ಕುದುರೆ ಬರತರಪು ಮಾಡಿಸಿ (ಹೈದಚ. ೩೯). **ಬಡತರ್ಫ್** : ಕೆಲವು ದಿವಸಗಳ ಕೆಳಗೆ ನಾನು ನಮ್ಮ ಬಡತರ್ಫ (dismiss) ಮಾಡಿದ ಆಳುಮಗನಿಗೂ ಒಂದು ತುಣುಕು ಮಾನಪತ್ರವನ್ನು ಕೊಟ್ಟೆನು (ಶಿಠಾಶ. ೦೯೭). **ಬರತರಪು** : ಅವನು ಆ ಮಣೆಗಾರನನ್ನು ಬರತರಪು ಮಾಡಿಸಿದನು (ಕಥಾಮು. IV, ೩೦). **ಬರತರಫ್** : ಮೊದಲು ಹೈದರನು ನಾಲ್ಕು ಸಾವಿರ ಕುದುರೆಯ ವರನ್ನು ಈ ರೀತಿ ತೊಲಗಿಸಿ ಅವರ ಸೈನ್ಯವನ್ನು ಬರತರಫ್ ಮಾಡಿಸಿದನು (ಟಿಕ. ೬೨) ; ಇನ್‌ಸ್ಪೆಕ್ಟರು . . . ನನ್ನನ್ನು ಬರತರಫ್ ಮಾಡಿಬಿಟ್ಟರು (ಕ್ರೀಕಥ. ೬೬). **ಬರತರ್ಫು** : ಸಸ್ಪೆಂಡು, ಬರತರ್ಫು ಎಂದ ಕೂಡಲೆ 'ದಮ್ಮಯ್ಯ ಮಾಫಿ ಮಾಡಿ' ಎಂದು ವಿಧೇಯತೆಯನ್ನು ತೋರಿಸುವುದು (ಗಜುಡಾ. ೯೩): **ಬರತರ್ಫು** : ಅಂಥಾ ನೌಕರನನ್ನು ಸಸ್ಪೆಂಡ್ ಮಾಡಬಹುದು, ಬರತರ್ಫು ಮಾಡಬಹುದು (ಗ್ರಾಮಶಿ. ೬೬). **ಬರ್ತರಫ್** : (ಕೃಸಗ. II, ೫೯೩). **ಬರ್ತರ್ಫ್** : ಜ್ವರ ನಿಂತರೆ ಬರ್ತರಫ್ ಮಾಡುತ್ತಾರಲ್ಲಾ ಜ್ವರಾನೂ ಉಳಿಸಿಕೊಂಡು ಬಿದ್ದು ಕೋಡೇ ಇರೋಣ, ಅಂತ ಅನ್ನಿಸುತ್ತದೆ (ಹೊಗೂಂ. ೦೦೦) ; **ಸೋಮು** ಪ್ಯಾಸ್ ಆಗಲಿಲ್ಲ. ಆದುದರಿಂದ ತಂಡದಿಂದ ಅವನಿಗೆ ಬರ್ತರ್ಫ್ ಆಯಿತು (ಜ್ಞಾಬಸ್ಮೀ. ೦೨೯). **ಭರತರ್ಫು** : ಷರಾರತ್ತು ಮಾಡಿದವರು ಭರತರ್ಫಾಗಿ ಹೋಗುವಲ್ಲಿ ಮಾರ್ಗದಲ್ಲಿ ಅವರನ್ನೆಲ್ಲಾ ಲೂಟೀ ಮಾಡಿ (ಹೈಠಕ. ೩೯). [←ಹಿಂ. ಬರತರಫ್ ; ಮರಾ. ಬರತರಫ್, ಬರತರ್ಫ್, ಬರ್ತರ್ಫ್]

**ಬರತರ್ಫು** 'ಬರತರಪು' ನೋ.

**ಬರತರ್ಫು** 'ಬರತರಪು' ನೋ.

**ಬರದೆ** (ನಾ). ಒಂದು ನದಿಯ ಹೆಸರು ; ವರದಾನದಿ : ಮೂಡಲು ತಮ್ಮುಗೆಯ ಕಳ್ಳವೊಳೆ ಮೊದಲಾಗಿ ಬರದೆಯಿಂ ತೆಂಕ ಪೋಪ ಭಣ್ಡಕ್ಕೆ (ಎಇ. XIX, ೦೬೫-೦೬ ; 1076). [<ಸಂ. ವರದಾ]

**ಬರನು** 'ಬಱ' ನೋ.

**ಬರಪ** 'ಬರೆಪ' ನೋ.

**ಬರಬತ್ತ** (ನಾ). ಖುಷ್ಕಿ ನೆಲದಲ್ಲಿ ಬೆಳೆಯುವ ಬತ್ತ ; ಪುಣಜಿ ಬತ್ತ : ನೀರಾವರಿ ಇಲ್ಲದ ಕಡೆ ಹೊಲಗಳಲ್ಲೇ ಬರಬತ್ತ ಬೆಳೆಯುತ್ತಾರೆ (ಜಾ). [ ಬರ್$_1$ (<ಬಱ) + ಬತ್ತ ]

**ಬರಬಿಸಿಲು** (ನಾ). (ಹಸಿಯನ್ನು) ಒಣಗಿಸುವಂತಹ ಬಿಸಿಲು ; ಅತಿ ತಾಪದ ಬಿಸಿಲು : ಬರಬಿಸಿಲಿಂದ, ಹೊದೆಯದ ಅವನ ಮೈ ಬಾಡಿ ಬೆಂಡಾಗಿತ್ತು (ಹೇಮಕೂ. ೫೯). [ ಬರ್$_1$ (<ಬಱ) + ಬಿಸಿಲು (<ಬಿಸಿಲ್)]

**ಬರಬು** ' ಬರುಹು ' ನೋ.

**ಬರಮ** 'ಬೊಮ್ಮ' ನೋ.

**ಬರಮಪ್ಪ** (ನಾ). ಬೊಮ್ಮ ; ಬ್ರಹ್ಮ : ಡೋಳಿನ ವ್ಯಾಲ್ ಕ್ಕಿ ಬರಮಪ್ಪ ಹಾಕ್ಯಾನು ತಾಳವ ಶಿವನಪ್ಪ ತಟ್ಯಾನಾ ಒಳ್ಳೊಳ್ಳೆ ಪದ ಗಳು ಹನುಮಪ್ಪ ಹಾಡ್ಯಾನು ಚೆಲುವ ಕನಕಪ್ಪ ಕುಣಿದಾನ್ಯಾ (ಕಥಕ. ೦೨೦-೦೨). [ಬರಮ ( <ಬೊಮ್ಮ) + ಅಪ್ಪ$_1$]

**ಬರಮೋಡ** (ನಾ). ಅಕಾಲದ ಮೋಡ ; ನೀರಿಲ್ಲದ ಮೋಡ : ವಸಂತಪೂರ್ಣಿಮೆಯು ಭೃಗುವಾರದಾ ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ ; ನೋಡೊಂದೆ ಬರಮೋಡ ಬಾನಗಲ ಚಾಚಿ ನೋಹನ ಕಾಲದಾ ಪ್ರಲಯಮೇಘವೆನೆ ಮುಚ್ಚಿಹುದು (ಗೂಕ್ಕೊಕಾ. ೦೦-೨೬೩). [ಬರ್$_1$ (<ಬಱ)+ ಮೋಡ]

**ಬರಲು** 'ಬಱಲು' ನೋ.

**ಬರಲುಕಡ್ಡಿ** (ನಾ). ಪೊರಕೆಯನ್ನು ಕಟ್ಟಲು ಉಪಯೋಗವಾಗುವ ಗಿಡಗಳ ಒಣಗಿದ ಕಡ್ಡಿ : (ಪ್ರ.ತಿ. ೦-೯). [ಬರಲು (<ಬಱಲು) + ಕಡ್ಡಿ]

**ಬರಲುಕೊಂಬೆ** (ನಾ). ಎಲೆಗಳು ಉದುರಿ ಬೋಳಾದ ಕೊಂಬೆ : ಟಿಟಿಗೆದುರುಬದುರಾಗಿ ಉದ್ದವಾದೊಂದು ಮರದ ನೆರಳು ಬಿದ್ದಿತ್ತು. ಆದರ ಬರಲುಕೊಂಬೆಗಳ ಜಟಿಲವೃತಿರೂಪ . . . ನುಜ್ಜುಗಲ್ಲು ನೆಲದ ಮೇಲೆ ಸ್ಪಷ್ಟವಾಗಿ ಮೂಡಿತ್ತು (ಕ್ರಕರು. ೦೬೩). [ಬರಲು (< ಬಱಲು) + ಕೊಂಬೆ₁]

**ಬರಲುಗಿಡ** (ನಾ). ಎಲೆಗಳು ಉದುರಿ ಒಣಗಿದ ಗಿಡ : ಒಂದು ಕವಲ ತುದಿಗೆ ಒಂದು ಗಿಡವು ಶೋಭಾಯಮಾನವಾಗಿ ಬೆಳೆದಿದ್ದು ... ಇನ್ನೊಂದು ಕವಲಿನ ಮೇಲೆ ಒಂದು ಬರಲು ಗಿಡವು ಬೆಳೆದಿತ್ತು (ಕಕ್ಕ. ೦೬೨). [ಬರಲು (<ಬಱಲು) + ಗಿಡ (<ಗಿಡು)]

**ಬರಲುವೋಗು** (ಕ್ರಿ). ಎಲೆಗಳು ಉದುರಿ ಬೋಳಾಗಿರು : ಮಾಗಿಗೆ ಬರಲುವೋದ ಬೂರುಗವುರಂ ಕೋಡುಕೋಡಿನ ಕವಲ್ಗಳೆಗಳಿಂ ಮಲೆ ತಲೆಗೆ ಕೋಡು ಮೂಡಿದ ಕೆರನ ತೋರ್ಪಂತೆ (ಶ್ರೀರಾಪಟ್ಟಾ. ೨೩೦-೯೯). [ಬರಲು (< ಬಱಲು) + ಪೋಗು₁ (<ಪೋ₁)]

**ಬರವಣ** (ನಾ). "ಬರವಣಿಗೆ" (ಗಿಳಿಹಂ. ಕೋಶ) : ಹಸುರು ಮಸಿಯಿಂ ಬರೆದುದಿದರ ಬಿನ್ನಣಮೇಂ ? ನಿನ್ನ ಕವನಕೆ ಕಾಲನಟ್ಟ ಟಪ್ಪಣಮೇಂ ? ಮುನ್ನನಿಂದಿಗೆ ಸಾಲವಿತ್ತ ಬರವಣವೊ ? ನಿಚ್ಚತೆಗೆ ನಮ್ಮನೋಲಯಿಸುವವುತಣವೊ ? (ಗಿಳಿಹಂ. ೨೭-೨೩). [ಬರ್₁ + — ಅಣ]

**ಬರವಣಿಗ** (ನಾ). ಬರೆಯುವವನು; ಲಿಪಿಕಾರ : ಬಿರುದರು ಬರವಣಿಗರುಂ ಗವಟಿಗಳುಂ ಗಾತ್ರಿಗರುಮಯ್ಯತ್ತೊಕ್ಕಲುಂ ಸಮಸ್ತ ನುಱಂಗಳುಂ . . . ಪಾಮಶಕ್ತಿದೇವರಿಗೆ ಧಾರಾಪೂರ್ಬ್ಬಕಂ ಮಾಡಿ (ಕೊಲ್ಹಾಶಾ. ೦೩-೯೬, 1186). [ಬರ್₁ + — ವಣಿಗ₂ (< — ವಳಿಗ₂)]

**ಬರವಣಿಗೆ, ಬರೆವಣಿಗೆ**(ನಾ). ೧. (ಬರೆದ) ಅಕ್ಷರ ; ಲಿಪಿ : "ಲಿಪಿ, ಲಿಬಿ — ೨ ... ಬರೆಯಲ್ಪಟ್ಟ ಅಕ್ಷರಗಳ ಆಕಾರಸ್ಥಿತಿಗೆ ಹೆಸರು ಶಾಸನದ ಲಿಪಿ ಮುಂತಾದ್ದು, ಬರವಣಿಗೆಗೂ ಹೆಸರುಗಳು" (ಸಿದ್ಧಾಂತಿ. ೨೩೯). ೨. ಬರೆಯುವಿಕೆ : ಇಗೊರ್ ಅಲೆಕ್ಸಾಂಡ್ರೊವಿಚ ಬರವಣಿಗೆ ಮುಗಿಸಿ ಕನ್ನಡಕವನ್ನು ತೆಗೆದಿಟ್ಟು "ಕುಳಿತುಕೊಳ್ಳಿ, ಕುಳಿತುಕೊಳ್ಳಿ" ಎಂದರು (ಶಾರಿಕು. ೦೬೩). **ಬರೆವಣಿಗೆ** : ೩. ಬರೆದುದು ; ಬರಹ ; ಲೇಖನ : ಪಂಡಿತರ ಬರೆವಣಿಗೆಗಳಲ್ಲಿ ಸಂಸ್ಕೃತಪ್ರಚುರವಾದ ಭಾಷೆಯಿತ್ತು (ಕಸಾಇ. ೦೦). [ಬರ್₁ + — ವಣಿಗೆ]

**ಬರವಸ** 'ಭರವಸ' ನೋ.

**ಬರವಸಿಗ** 'ಭರವಸಿಗ' ನೋ.

**ಬರವಿಗ** (ನಾ). ಬರುವವನು ; ಆಗಮಿಸುವವನು : ಅನತಿ ದೂರದೊಳೋರ್ವರ್ ಕೊರಿಸಿದ ಬರವಿಗನ ಬರವಿಂಗೆ ಶಯ್ಯಾಸನವುಂ ರಯ್ಯಂ ಮಾಡಿರಿಸೆ ಪೀಠಮರ್ದಕಂ ಸಾರ್ದು ನೋಡಿ (ಕಂಠ್ರವು. ೬೫-೬೦೩). [ಬರವು (<ವರ್₁) + — ಇಗ)]

**ಬರವು** 'ವರ್₁' ನೋ.

**ಬರವುಲಿಕ** (ನಾ). ಒಂದು ಸ್ಥಳದ ಹೆಸರು : ಪೂರ್ವ್ವಸ್ಯಾಂ ದಿಶಿ ಬರವುಲಿಕ ಸೀಮೆ (ಇಇ. VII. ೨೦೯-೯೯; ಸು. 10ನೆಯ ಶತ). [?]

**ಬರಷಣ** 'ಭರಷಣ' ನೋ.

**ಬರಸಿಡಿಲು** 'ಬಱಸಿಡಿಲ್' ನೋ.

**ಬರಸು₁** 'ವರಿಸು₁' ನೋ.

**ಬರಸು₂** 'ಬರೆಯಿಸಂ' ನೋ.

**ಬರಸು₃** (ನಾ). ಬರೆಯುವಂತೆ ಮಾಡುವಿಕೆ ; ಬರೆಸುವಿಕೆ : ಮನೆಯ ಸಾಲೆಯನಾಗಬೇಕಾದರೆ ಈ ಬರಸುಗಳ ಅಗತ್ಯವೇನು ? (ರಂಗರೋ. ೦೨೬). [ಬರ್₁ + — ಸು₃]

**ಬರಹ** 'ಬರೆಪ' ನೋ.

**ಬರಹಗಾತಿ** (ನಾ). ಬರೆಯುವವಳು ; ಲೇಖಕಿ : ಬರಹಗಾತಿಯರ ಲೆಕ್ಕಣಿಕೆಗೆ ಇರುವ ಬಂಧನ ಇದೀಗ ಇಲ್ಲದಾಗಿದೆ (ಕಕ್ಕಕು. ೦೯೬೬-೬೯ ; ೦-೬೦). [ಬರಹ (<ಬರೆವ) + — ಗಾತಿ₁]

**ಬರಹಗಾರ** 'ಬರೆವಕಾಱ' ನೋ.

**ಬರಹಗಾರ್ತಿ** (ನಾ). = ಬರಹಗಾತಿ : ಮಹಿಳಾಬರಹಗಾರರು ; ಅರ್ಥಾತ್ 'ಬರಹಗಾರ್ತಿ'ಯರು (ಕೂಕಸಂ. ೯೬). [ಬರಹಗಾರ (< ಬರೆವಕಾಱ) + — ತಿ₁ (<— ಇತ್ತಿ)]

**ಬರಹು₁** 'ಬರೆಪು' ನೋ.

**ಬರಹು₂** 'ಬರುಹು' ನೋ.

**ಬರಾಕು** (ನಾ). ತ್ವರೆ ; ಜೋರು; ರಭಸ : ರಾಮುನ ಕಾಲುಗಳು ತಿರುಗಿ ಆಲಸ್ಯ ಗೊಳ್ಳಲಿಲ್ಲ. ಅವು 'ಬರಾಕಿ'ನಿಂದ ಮನೆಯ ಕಡೆಗೆ ಸರಿದುವು (ಮಠಕು. ೯೬೨) ; ವೆಂಕಮ್ಮ . . . ಬರಾಕಿನಿಂದ ಗುಡಿಯತ್ತ ನಡೆದರು (ಕದ್ರಸ. ೨೨೬). [←ಮರಾ. ಭರಾಕಾ]

**ಬರಾತ₁** 'ಪರಾತ' ನೋ.

**ಬರಾತ₂** 'ವರಾತ₁' ನೋ.

**ಬರಾಬರಿ₁, ಬರಾಬ್ಬರಿ, ಬರೋಬರಿ₁, ಬರೋಬ್ಬರ, ಬರೋಬ್ಬರಿ, ಭರಾಭರಿ** (ನಾ). ೧. ಸಮನಾದುದು; ಸರಿಯಾದುದು; ಉಚಿತವಾದುದು: ಈಗ ಬರಾಬರಿ ಆಯ್ತು ನೋಡು (ಕಂಠು:ಟಿ ೩೨), ನೀನೆನ್ನೋಡೂ ಒಂದು ರೀತಿಯಿಂದ ಬರಾಬರಿ (ಕರ್ಮಕಿ. ೯೯). ೨. ಸುವ್ಯವಸ್ಥೆ; ಓರಣ; ಅಚ್ಚುಕಟ್ಟು : ಬಡಿಸುತಲಾಗ ಬರಾಬರಿಯನು ಸರ್ವರೊಡಗೂಡಿ ನಿಂದು ಕೊಂಡಿರಲು (ಪ್ರಾಶಕ. ೯೦-೬೯); ರಕ್ಮಸೇಶ್ವರ ಬರಲ್ಮೆಲಬಲದಿ ಕರಕ ಕರದೀಪಿಕೆಗಳು . . . ಆಭರಣಂಗಳಾರಮಂಗಳು ಬರಾಬರಿಯ ಬಡಿಸುತ ಮುಂದೆ ಧೋರಣೆಯೊಳ್ಳೆತರುತಮಿರ್ದುದು (ಸಂಕಾರಾ. ೩-೬-೨೬). **ಬರಾಬ್ಬರಿ** : ೧. ಬರಾಬ್ಬರಿ ಏನೇ ಆದರೂ ಮದವಿ ಇದೇ ಊರಾಗ ಮಾಡೂದು (ಕಿಡುಗು. ೩೯). **ಬರೋಬರಿ₁** : ೧. "ಬರೋಬರಿ" ಮೈಲುದ್ದ ಹೆಸರಿನ ಸೋಮಯಾಜಿಗಳು ಉತ್ತರಿಸಿದರು (ಸಹಿದಾ. II ೯೦೦); ಅಂತೂ ನನ್ನ ಮಾತು ನಿನಗೆ ಬರೋಬರಿ ಅನಿಸಿತಲ್ಲ (ಕಾಗೆ. ೬೯). **ಬರೋಬ್ಬರ** : ೧. ಬರೋಬ್ಬರ ಆತು (ಕಂಸಂ. ೬೦). **ಬರೋಬ್ಬರಿ** : ೧. ನಮ್ಮ ಡಾಕ್ಟರ ಹುಣಸೀಕಟ್ಟಿಯವರಲ್ಲಿ ಹೋದರ ಎಲ್ಲಾ ಬರೋಬ್ಬರಿ ಆಗತದ (ಅಕಪಾ. ೦೨೯); ನಿಮ್ಮ ಪೊಸೀಜರ ಬರೋಬ್ಬರಿ ಇರಬೇಕು (ಗಂಪೂರು. ೯೨). **ಭರಾಭರಿ** : ೨. ತತ್ಸಭೆಯೊಳಾ ನಂದಿಯುಮ್ಮಹಾಕಾಳರ್ ಭರಾಭರಿಗಳಂ ಮಾಡುತಿರ್ದರತಿಭಕ್ತಿಯಿಂದೆ (ಕೆಂಪು. ೨-೨೬). 'ಭರಾಭರಿಗೊಡು' ಪರಾ.

[← ಹಿಂ. ಬರಾಬರ್, ಬರಾಬರೀ, ಬರೋಬರ್ ; ಮರಾ. ಬರಾಬರ್, ಬರಾಬರೀ, ಬರೋಬರ್, ಬರೋಬರೀ]

**ಬರಾಬರಿ₂, ಬರೋಬರಿ₂, ಬರೋಬ್ಬರ್** (ಅ). ಸರಿಯಾಗಿ ; ಸಮನಾಗಿ; ತಕ್ಕುದಾಗಿ : ಈಗ ನನ್ನ ಮನಸ್ಸು ಬರಾಬರಿ ಇಲ್ಲ (ಸಮಜ. ೦೨೬); ನನ್ನ ಖೋಲಿ ಕಸ ಉಡಗಿ ಟೇಬಲ್ಲೊರಸಿ ಎಲ್ಲಾ ಸಾಮಾನು ಬರಾಬರಿ ಇಟ್ಟು ಬಾ (ರಸಂಜ. ೩). **ಬರೋಬರಿ₂** : ಹಾಗಾದರೆ ಉತ್ತರ ಹೇಗೆ ಬರೋಬರಿ ಬಂತು? (ಶಿಂ೩ಶ. ೯೯) : ದಾದಲ್ಯಾ ಬರೋಬರಿ ಹೇಳಿದ ನೋಡ ಶಕೀ (೦೬ಶಕ. 11, ೨೦). **ಬರೋಬ್ಬರ್** : ಸೀಪ್ರು

ಬರೋಬ್ಬರ್ ಕುಲಕರ್ಣಿ ಅನ್ರಪ್ಪ ಸಾಕು (ವೃದ್ಧ೦. ೯೦). [< ಬರಾಬರಿ$_1$]

**ಬರಾಬರಿಗೆಯ್**, ಬರಾಬರಿಗೈ (ಕ್ರಿ). ೧. ವ್ಯವಸ್ಥೆಗೊಳಿಸು ; ಸರಿಗೊಳಿಸು : ಗಲಭೆ ಬೇಡ . . . ವಿಸುಕದಿರಿ ಎಂದು ಸಲೆ ವೇತ್ರಕರ್ ಬರಾಬರಿಗೆಯ್ಯುತ್ತಿರ್ದರಾ ಭಾಳನೇತ್ರನ ಸಭೆಯೊಳು (ಶಂಕರ. ೬-೩೬). **ಬರಾಬರಿಗೈ** : ೨. (ಆಲಂ) ಇಲ್ಲವಾಗಿಸು : ಮೇರು ಮಂದರಗಳೆನೆ ಬರುವ ವರ್ದರಗಳನ್ನೊರುವೇಗದಿ ಬರಾಬರಿಗೈದು ನೀರಧಿಯ ತೀರುವವೊಲ್ತತಪ್ಪ ವಾರುತಿಯ ನಿಟ್ಟಿಸುತ (ಶಂಕರಾ. ೫-೦-೩೬).

[ಬರಾಬರಿ$_1$+ಗೈ (<ಕೆಯ್$_1$)]

**ಬರಾಬರಿಗೈ** 'ಬರಾಬರಿಗೆಯ್' ನೋ.

**ಬರಾಬರಿಗೊಳಿಸು** (ಕ್ರಿ). ಸರಿಮಾಡು ; ನೇರಗೊಳಿಸು ; ವ್ಯವಸ್ಥೆಗೊಳಿಸು : ದನುಜವನಚರರ ನೆರವಿಯು ಬರಾಬರಿಗೊಳಿಸಿ ರುಜುವಥಂಗೈದರಾಗ (ಶಂಕರಾ. ೬-೩೩-೦೯). [ಬರಾಬರಿ$_1$+ಕೊಳ್$_1$+ — ಇಸು$_3$]

**ಬರಾಬ್ಬರಿ** 'ಬರಾಬರಿ' ನೋ.

**ಬರಾಯಿಸು** 'ಭರಾಯಿಸು' ನೋ.

**ಬರಾರ** (ನಾ). ಒಂದು ಬಗೆಯ ತೆರಿಗೆ : ಚಾಂದಬೀಬಿಯು ಒಹು ಶೌರ್ಯದಿಂದ ಅದನ್ನು ರಕ್ಷಿಸಿದಳು ; ಬರಾರವನ್ನು ಕೊಟ್ಟು ಅಕಬರನ ಕೂಡ ಒಪ್ಪಂದ ಮಾಡಿಕೊಂಡಳು (ಹಿಂದುಇ. ೦೬೪).

[← ಪಾರ. ಹಿಂ. ಬರಾರ್]

**ಬರಾವರ್ದು**(ನಾ). ೧. ಗಣನೆ; ಲೆಕ್ಕಾಚಾರ. ೨. ವಂಶಪಾರಂಪರ್ಯವಾದ ಹಕ್ಕನ್ನು ನಮೂದಿಸುವ ಸರ್ಕಾರಿ ಲೆಕ್ಕ : ಆಗ ಗೌಡರ ಬರಾವರ್ದು ಉಳಿಸಲಿಕ್ಕೆ ಮತ್ತು 'ಸಸ್ಸಿಸ' ಡಿಸ್ಮಿಸ ತಪ್ಪಿಸುವುದಕ್ಕೆ ಗೌಡರ ರುಜುವನ್ನು ಶಾನುಭೋಗರು ಫೋರ್ಜರಿ ಮಾಡಿದ್ದುಂಟು (ಕನ್ನಡು. ೦೩೪); ಛತ್ರ, ದೇವಸ್ಥಾನ, ಮಠ . . . ಇವು ಮೊದಲಾದ ಮುಜರಾಯಿ ಬಾಬುಗಳನ್ನು ಖಾವಂದರವರು ವಿಚಾರಿಸಿ ಅಭಿವೃದ್ಧಿಪಡಿಸಿ ಇದರ ಸಂಬಂಧವಾದ ಬರಾವರ್ದುಗಳನ್ನೆಲ್ಲ ಆಯಾ ಫೌಜುದಾರರು ತರಿಸಿಕೊಂಡು ತನಿಖೆ ಮಾಡಿ . . . ನೋಡಿಕೊಳ್ಳಬೇಕೆಂತಲೂ ಸನ್ ೧೮೨೭ರಲ್ಲಿ ಹುಕುಂನಾಮ ಸಾದರ್ವಾಡಿದರು (ಕುಹಾಶಂ. II, ೩೬).

[←ಹಿಂ. ಬರಾವರ್ದ್; ಮರಾ. ಬರಾವರ್ದ್, ಬರಾವರ್ದೀ]

**ಬರಾವರ್ದುದಾರ** (ನಾ). ಬರಾವರ್ದಿನ ಪಟ್ಟಿಯಲ್ಲಿ ಹೆಸರು ನಮೂದಾಗಿರುವ ವ್ಯಕ್ತಿ : ಆಪ್ಸೆರ್ ಬರಾವರ್ದುದಾರರ ಅಥವಾ ಅವರ ಕುಟುಂಬದವರ ಪೈಕಿ ಯಾರಿಗೆ ಹೆಚ್ಚು ಯೋಗ್ಯತೆಯುಂಟೆಂದು ಡೆಪ್ಯುಟಿ ಕಮಿಷನರವರಿಗೆ . . . ತೋರುತ್ತದೆಯೋ ಅಂಥಾವರನ್ನು . . . ಚುನಾಯಿಸತಕ್ಕದ್ದು (ಗ್ರಾಕಾಶ. ೬೬); ಬರಾವರ್ದುದಾರ ಶ್ಯಾನುಭೋಗ ವಸೂಲಾದ ಕಂದಾಯದ ಹಣವನ್ನು ದಸು, (ದುರುಪಯೋಗ) ಮಾಡಿದ್ದಾನೆಂದು, ಅವನನ್ನು ಸಸ್ಪೆಂಡ್ ಮಾಡಿ ನಂಜಪ್ಪನೆಂಬುವನನ್ನು . . . ನೇಮಿಸಿದ್ದರು (೯೦೫. ೦೬೬). [ಬರಾವರ್ದು + – ದಾರ್$_1$]

**ಬರಿ$_1$** (ನಾ). ೧. ಪಕ್ಕ; ಬದಿ; ಪಂಗ್ಗುಲು : 'ಕುನ್' (ಗುಡ್ಡ)+ಬರಿ (ಪಕ್ಕ) ಎಂದರೆ 'ಗುಡ್ಡದ ತಪ್ಪಲು' ಎಂಬುದಾಗಿ ಸಾರ್ಥಕತೆಯೊಡನೆ ಆ 'ಕುಮ್ಮರಿ' ಪದವು ರೂಪುಗೊಂಡಿರಬೇಕು (ಪಾಡೋಶ. ೨೯೪). ೨. ಪಕ್ಕೆ; ಅಳ್ಳೆ : "ಬರಿ ತಕ್ಕಮುದಕ್ಕು" (೪೦೩೦. ೦೯೦); ಪಡೆದವು ಬರಿ ಮುಱಿದ × × ನಿಟ್ಟೆಲ್ವೆರಡು ತೆಱೆದವು (ಎಕ. IV. ಹಗ್ಗಡ. ೦೦೬-೦೯; ಸು. ೯೩೦): ಅಂತು ಚಾತುರ್ದಂತವೊಂದೊಂದಱೊಳ್ ತಾಗಿ ತಳ್ತುಱುವಲ್ಲಿ ತಲೆಗಳ್ ಪಱಿಯೆ ಬರಿಗಳ್ ಮುಱಿಯೆ ತೊಡೆಗಳುಡಿಯೆ (ಶಂಕಶಾ. ೦೦-೩೬ ಪ): ಧರಣಿಪಾಲನ ತೆಗೆದು ಭೀಮನ ಬರಿಯನೆಚ್ಚನು. . . ಜವಗೆಡಿಸಿದನು ನಿನ್ನಾತನನಿಲಜನ (ಕುವ್ಯಾಕ. ೦೯-೨). 'ಬದಿ'$_2$ ಪರಾ.

[ ದೇ. ॥ ತುಳು. ಕೊಡ. ತೆಲು. ಬರಿ ]

**ಬರಿ$_2$** 'ಬಱು$_2$' ನೋ.

**ಬರಿಕೆಯ್** 'ಭರಿಕೆಯ್' ನೋ.

**ಬರಿಕ್ಕೆ$_1$** 'ಬಱುಗೆಯ್$_2$' ನೋ.

**ಬರಿಕ್ಕೆ$_2$** 'ಭರಿಕೆಯ್' ನೋ.

**ಬರಿಕೋಲು** (ನಾ). ರಸ ಹೀರಿದ ಕಬ್ಬು; ರಸವಿಲ್ಲದ ಕಬ್ಬು : ಆಲೆಗಮ್ಮಿಕ್ಷುದಂಡಮನಿಕ್ಕಿ ತಿರುಹಿ ಮರುಕೋಲುಗಳನಿಕ್ಕಿ ಬರಿಕೋಲುಗಳ ಬಿಸುಟವೋಲ್ತ್ಸುಖವಿನೋಳ್ಳೆಳದ ಫಲಜಾಲವನ್ನಿಳುಹಿದಂ (ಕುಶಜ. ೫೦-೬).

[ ಬರಿ$_2$ (<ಬಱಿದು)+ಕೋಲು$_1$ (<ಕೋಲ್$_1$) ]

**ಬರಿಗಂಡ** (ನಾ). ಪಕ್ಕೆಯ ಮಾಂಸಖಂಡ : ಬರಿಗಂಡಂ ಪಿಣಿಲೇಱೆ ರೋಮಮುದಿರ್ದೆನ್ನಾಗೆ ಮುಂಗಾಲಗಲ್ಲುರೆ ಬಿರ್ಚುರ್ವೆ . . . ಕೋಟ್ಟುಕ್ಕೆ ಪರ್ಸೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕ್ರೀಕರಂ ಸೂಕರಂ (ಶಂದ್ರಕ. ೫-೬೦). [ಬರಿ$_1$ + ಕಂಡ$_1$]

**ಬರಿಗಡಗ** (ನಾ). ಕುದುರೆಯ ಪಕ್ಕೆಗಳ ಸುತ್ತ ಹಾಕುವ ತಂಗು.— ಚರ್ಮದ ಸುತ್ತುಪಟ್ಟಿ : ಬರಿಗಡಗ ಕೀಳ್ಕಂಬಿ ದುಕ್ಕುಡಿಯುರುಗು ಗಡಿಯಣ ಮೊಗವಡಂಗಳು ತುರಗವದನದಲೊಪ್ಪಿರಲು ತಾ ಪಕೆಯುನಳವಡಿಸಿ. . . ಪರಿವರಿಯ ಹಕ್ಕರಿಕೆಯಲಿ ಬೀಸಿದರು ಚೌರಿಗಳ (ಕುವ್ಯಾಶ. ೯-೯೯) [ಬರಿ$_1$ + ಕಡಗ$_1$]

**ಬರಿಗಾಲು** 'ಬಱಿಗಾಲು' ನೋ.

**ಬರಿಗೆರೆ** 'ಬಱುಗೆಱೆ' ನೋ.

**ಬರಿಗೈ$_1$** 'ಬಱುಗೆಯ್$_1$' ನೋ.

**ಬರಿಗೈ$_2$** 'ಬಱುಗೆಯ್$_2$' ನೋ.

**ಬರಿಚು** (ನಾ). ಬರ್ಚಿ; ಬರ್ಜಿ; ಈಟಿ : ಮುಂದಿಟ್ಟ ಬರಿಚಿನಿಂ ಮೃತ್ಯುವಿನ ಸುರಚಿಯಿಂ ರಚಿಸಿದೊಲು ರಂಜಿಸಿತು ರಣಮಂಡಲ (ಕರಶ. ೨೬-೨೮). [< ಬರ್ಚಿ]

**ಬರಿದಲೆ** 'ಬಱುದಲೆ' ನೋ.

**ಬರಿದು** 'ಬಱಿದು' ನೋ.

**ಬರಿದೆ** 'ಬಱಿದೆ' ನೋ.

**ಬರಿಮನ** 'ಬಱುಮನ' ನೋ.

**ಬರಿಮಾತು** ' ಬಱುಮಾತು ' ನೋ.

**ಬರಿಮೈ** ' ಬಱುಮೆಯ್ ' ನೋ.

**ಬರಿಯ$_1$** (ನಾ). ದೇವಸ್ಥಾನದ ಸೇವಕ : ದೇವಸ್ಥಾನದ ಸೇವಕರು (Temple Servants) ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ . . . ಸ್ಥಾನಿಕ, ಪಾರಿಯಸ್ (ಕುಳುಜಾ. ೦೬೨). [?]

**ಬರಿಯ$_2$** ' ಬಱಿದು ' ಪರಾ.

**ಬರಿಯಾಟ** ' ಬಱಿಯಾಟ ' ನೋ.

**ಬರಿಯಿಸು** ' ಪರಿಸು$_1$ ' ನೋ.

**ಬರಿಯೂರ್** (ನಾ). ಒಂದು ಊರಿನ ಹೆಸರು : ಮಾದೆಯೂರ ಶಾನ್ತಿವರ್ಮ್ಮಂ ಬರಿಯೂರನಿಱಿಯೆ ಬಳಗಾಜರ ಕೋಳರಂ ಪುನುವಲಪಳ್ಳಿಯಳಿಬ್ಬು ಪುಯ್ಯಲಂ ಪರಿದು ಪರ್ಬ್ಬುಲಮಂ ತಳ್ತಿಱಿದು ಸ್ವರ್ಗಾಲಯಕ್ಕೆ ಸನ್ದಂ (ಎಕ. VIII. ಸೊರಬ. ೫೩-೫; ೯೭೪). [ಬರಿ$_2$ + ಊರ್]

**ಬರಿಯೆಲ್** ' ಬರಿಯೆಲ್ವು ' ನೋ.

**ಬರಿಯೆಲುವು** ' ಬರಿಯೆಲ್ವು ' ನೋ.

**ಬರಿಯೆಲ್ವು**, ಬರಿಯೆಲ್, ಬರಿಯೆಲುವು (ನಾ). ಪಕ್ಕೆಯ ಎಲುಬು ; ಪಕ್ಕೆಯ ಮೂಳೆ : ವನಿತೆಯು ಕೇಶಮಂ ಸಭೆಯೊಳೆಳ್ದನುಜಂ ತೆಗೆವಲ್ಲಿ ಗಂಡನಾಗನೆ ಭಗದತ್ತನಾವೆ ಬರಿಯೆಲ್ವುಡಿವನ್ನೆಗಮೊತ್ತೆ ಗಂಡನಾಗನೆ (ಗದಾಯು. ೬-೨೩) ; ಮುನಿಪತಿಯ ತೋರ್ಪ ಬರಿಯೆಲ್ವಿನ

ವುದುಮಿಂ ಬೂದಿವಾಱುತಿರ್ಪಿರಪಿಂ ಕಾಪುನ ಸುಟ್ಟು ಕಾಡಿವೆನೆ ಕರ್ಗನೆ ಕಸತುದು ಮಲದ ಮುಸಿಯ ಮುಸಕದಿನಂಗಂ (ಅರ್ಧನೇ. ೦ ೬೩). **ಬರಿಯೆಲ್** : ಮೂಱೆಯ ಕಂಭಮಿಲ್ಲ ಸಿಡುಯಿಲ್ಮಿನ ಬಿಮ್ಮರನೇಕ ಪತ್ತಿ ಕೊಂಡರ್ಗಾಳಿಯ ಸೀಳ್ಪು ಸಂದ ಬರಿಯೆಲ್ . . . ಅಮೋಘಪೂರ್ಣ ದೇಹಾಳಯುಪಿಂತಹುದ್ಪಂ (ಜಗಸಂ. ೦೩೦–೨೨). **ಬರಿಯೆಲುವು** : ಉರದ ಬರಿಯಲುವುವನೆಣಿಪಂತಿರಲುಂ ನಡುಗುತಂ ತಪಸ್ವಿಯ ಕೊರಲೊಳ್ ಕರವೆಸೆದು ತೋಱಿದುದು ತಾವರೆದಂಟನ ಮಿಸುಪ ನೂಲ ಪೊಸ ಜಸಿವಾರಂ (ಕಾದಂಕೃ. ೨೦೭); ಖರ ನಕರನಿಕರದಿಂ ಬರಿಯೆಲುವ ನುಗ್ಗೊತ್ತಿ ಕರುಳ ಮಾಲೆಯ ಸೀಳಿ ತೆಗೆವ ಪುಲಿಯುಂ (ತ್ರಾ.ಪಕಂ. ೯–೭೪).

[ಬರಿ₁ +ಎಲ್ವು]

**ಬರಿವದಣೆ** ‘ಬರಿವದನೆ’ ನೋ.

**ಬರಿವದನೆ, ಬರಿವದಣೆ, ಬರುವದಣೆ, ಬಲಿವದನೆ** (ನಾ). ಒಂದು ಬಗೆಯ ಔಷಧೀಸಸ್ಯ,—ವಂಶಾಲಿಕೆ ; “ನೆಲಗುಳ್ಳ” (ಲೋಕೋಪ. ೯–೨೦ ಟೀಕೆ) : ಬರಿವದನೆಯುಪ್ಪುತಲತೆ ನಾಗರಮೆಂಬಿವಿನಿತಱ ಕಷಾಯಾಮಂ . . . ಕುಡಿಯೆಸುಗೆ (ಲೋಕೋಪ. ೯–೨೦); ಸುಂಟಿಯುಮ ಮರ್ದುವಳ್ಳಿಯುಂ ಪುಷ್ಕರಮೂಲಮುಂ ಬರಿವದನೆಯುಂ ಜ್ವರದ ಕೇಡು (ಧರ್ಮಾಮೃ. ೯–೦೦೬). **ಬರಿವದಣೆ** : ಒದವಿದರ ಬೀದಿನಿಪ ಬರಿವದಣೆಯ ಕಿಱುದೆಂಗು ನೆಲ್ಲಿಯೆಂಬಿನಿತಱ ಮೂಲದಿನಿರ್ಕೆಯ್ದೊಡೆಯೊಳ್ ತೆಂಕದೆಸೆಯೊಳಱ . . . ನೀರಕ್ಕುಂ (ಲೋಕೋಪ. ೩–೦೭); ಬರಿವದಣೆ ಲೊಕ್ಕಿ . . . ವಿಷನಾಗರ ಲಶುನಂಗಳೊಳುವ್ವಂ ಬೆರಸುಗೆ ಪವಣಱಗೆ ಬಂಡ ಮಾರೋಗ್ಯಕರಂ (ಅಶ್ವಶಾ. ೭–೩೩). **ಬರುವದಣೆ** : ಬರುವದಣೆ ತುಱುಬಿಯುಸಡಿಯರನ ಫಲಂ . . . ಕಣ್ಗೆಸರ್ ವಿಷಮುಱಗುಂ (ಖಖಾದ. ೬–೨೬). **ಬಲಿವದನೆ** : ನೆಗ್ಗಿಲು, ಬಲಿವದನೆ, ಪುಷ್ಕರಮೂಲ–ಇವು ಪ್ರತ್ಯೇಕ . . . ನಾಗಳ ನೀರಿನಲ್ಲಿ ಹಾಕಿ . . . ಕಾಸಿ (ಸಕವ್ಯ. ೨೩೬).

[?+ಬದನೆ]

**ಬರಿವೊನಲ್, ಬರಿವೊನಲು** (ನಾ). ದಡ ಸೂಸಿ ಹರಿಯುವ ಪ್ರವಾಹ; ದಡವನ್ನು ಮೀರಿ ಹರಿಯುವ ಪ್ರವಾಹ : ಕಿಱುಮಟಲ ದಿಣ್ಣೆಯೊಳ್ ಪರಿವ ಬರಿವೊನಲೆಸದುವೋರೊಂದು ತಾಣದೊಳ್ (ಅಪಂಪು. ೯–೦೭ ರಗಳೆ). **ಬರಿವೊನಲು** : ಕಲ್ಪಮೇಘದ ತಡೆಯ ಬಿಟ್ಟಂತೆ ಬರಿವೊನಲು ಪರಿವು ತೆಯ್ದುದು (ಕಾಂಪಕು. ೨–೬೩). ‘ಪರಿವೊನಲ್’ ಪರಾ.

[ಬರಿ₁ + ಪೊನಲ್]

**ಬರಿವೊನಲು** ‘ಬರಿವೊನಲ್’ ನೋ.

**ಬರಿವೊಯ್ಲು** (ನಾ). ಪಕ್ಕೆಯ ಮಿಡಿಯುವಿಕೆ; ಪಕ್ಕೆಯ ಮಿಡಿತ : ಪೆತ್ತ ಜೀರ್ಕೊಳವಿಪೋಲ್ ಮೂಗೊತ್ತೆ ರಕ್ಕಾಂಬುವಂ ಬರಿವೊಯ್ಲುವೆ ನಿವಿರ್ಚೆ ಬಿಕ್ಕುಳಿಕೆ (ಕಸರ. ೯–೦೯೦).

[ ಬರಿ₁ +ಪೊಯ್ಲು(<ಪೊಯಲ್) ]

**ಬರಿಸ, ಪರಿಶ, ವರಿಷ, ವರಿಸ, ವರುಶ, ವರುಷ, ವಾರಿಷ** (ನಾ). ೧. ಸಂವತ್ಸರ ; ವರ್ಷ : “ಬರಿಸಮೆಂದು ವರ್ಷಂ” (ಶಶಾ. ೩೭–೨೯೭); ಸ್ಮರಿಯಿಪನಿಪ್ರತ್ತಿರ್ಚ್ಛಿಸಿರಬರಿಸ [ಕಾಶಾಂ. ವರ್ಷ]ಕೊರ್ಮೆ ಮನದೊಳುಣಿಸಂ (ಅಂಪು.೬–೦೭); ಬರಿಸ ಪನ್ನೆರಡಾದ ಬಳಿಕಾವರೊಳವೊಂದುಮೆರ ಸದೆ ಪೆಱದೆಗೆದಿಹುದು (ಹರಿ. ೯–೩೯); ತಱಗೆಲೆಯುಂಡು ಮೂಱು ಬರಿಸಂ . . . ಗಾಳಿಯನುಂಡು ಮೂಱು ಬರಿಸಂ, ನಿರಾಹಾರಂ ಮೂಱು ಬರಿಸಂ, ಕಟ್ಟುಗ್ರಂ ತಪಂಗೈವಂ (ರಾಹಕಾಪ. ೩೩–೦೯). ೨. ಮಳೆ ; ವೃಷ್ಟಿ : “ಬರಿಸಮನೆ ವೃಷ್ಟಿಯೊಳ್ ವರ್ಷದೊಳ್ ಸಲೆ ಬರ್ಕು” (ಕಶಶ. ೬೦). **ಪರಿಶ** : ೧. ಸ್ವಸ್ತಿ ಸತ್ಯವಾಕ್ಯನ ಪೆರ್ಮಾನಡಿಗಳ ಪಟ್ಟಂಗಟ್ಟಿದ ಪದಿಮೂಱ್ಣ ಪರಿಶದನ್ದು ಮಱಯರ ಬೂವಯ್ಯನ ಮಗಂ ಬದಿಯಾಯ್ತು ತುಱುಮಸಿಕ್ಕಿಸಿ ಕಾದು ಸತ್ತು (ಎಕ. II, ೩೯೪.೭ ; ೫೫೩ ?). **ವರಿಷ** : ೧. ಮರ್ತ್ಯರ್ಗತಿ ಎಪ್ಪ ವರಿಷಂ ಪ್ರವರ್ತಿಸೆ (ಚಿಂಶಶಾ. ೦೯೩೯, ಶಂಕಾಕೃತಿ. ೦೬ ೩;೫೭೫); ಶಕ ನೃಪಕಾಲಾತೀತ ಸಂವತ್ಸರಙ್ಗಳೆಟ್ನೂಱ ಪಙ್ಚತ್ತೊನ್ಬ ಪರಿಪದನ್ದು ಸಿಂಘರಗುಂದ ನಾಗಸಾಣ್ಯಬಾಜ್ಯರ್ಕವ್ಪ ಣದಿದೋರತ್ತಿಗೇರಿಯ ಏಟ ಇದಕ್ಕ ಸಾಕ್ಷಿ (ಕಇ. II, ೩–೧೦; ೮೫೫). **ವರಿಸ** : ೧. ಸ್ವಸ್ತಿ ಸಕ ನ್ರಿಪಕಾಲಮೊಣ್ಬನೂಱ ಪನ್ನೊನ್ಪನೆಯ ವರಿಸವಾಗೆ (ಎಕ. VI, ತರೀಕೆ. ೬೭–೩ : ೫೫೫) ; ನಿಜಾಯುರವಧಿ ಪದಿನಾಲ್ಕು ವರಿಸಮು ಮೋಱುತಿಂಗಳುಮಯ್ದು ದಿವಸಮುಂಟೆಸಲ್ (ಸುಕುಮಾ. ೯–೧೦ ಪ); ಒಂದೆರಡು ವರಿಸಂ ನಳನಳಿಸಿ ಬೆಳವೃತಿಪ್ಪ ಅರಳೆಲೆಯುರಸಂ (ಜಸರ. ೧೦–೧೧೪). **ವರುಶ** : ೧. ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಶ ೧೪೦೪ ಸಂದು ವರ್ತಮಾನ ಶುಭಕೃತು ಸಂವತ್ಸರದ ಕಾರ್ತಿಕ ಶು ೧೨ಲು . . . ಕೊಟ ಮುಂತ್ರಗಾನೆಯ ಗ್ರಾಮ (ಪ್ರಾಇಂ. ೦೯೩೯, ೯–೩; 1482). **ವರುಷ** : ೧. ಈ ನಾಡೊಳ್ ಪನ್ನೆರಡುವರುಷಂಬರೆಗಮನಾವೃಷ್ಟಿಯಾಗಿ ದುರ್ಭಿಕ್ಷಮಾದಪ್ಪುದು (ಪಣ್ಯಾಶಾ. ೬೩–೨೦); ಇಂತು ತೊಂಬತ್ತೈದು ವರುಷದೊಳು ಹರನಾಣೆಯುಂ ತಾಳ್ದು ಬಾಳ್ದಿಪ್ಪ ಸಮಯದೊಳು (ಹರಿರ. ೭೬. ೧೦–೩); ಪುರವ ವಿರಚಿಸಿ ದಿವ್ಯ ಸಾಸಿರ ವರುಷ ಕೈಗೂಡಿದರೆ ಒಂದೇ ಸರಳಲಾಪವನೆಚ್ಚಡಾಗಳೆ ನಿಮಗೆ ಕದೆಗಾಲ (ಕುಪ್ಪಾ. ೬–೯). ೨. ಸರಳ ಮಳೆಯಲಿ ನನೆದು ಕರಿಘಟೆಯುರುಳಿದವು ಕಲ್ಪಾಂತವರುಷದೊಳುರುಳು ವದ್ರಿಗಳಂತೆಯೆಸೆದವು ವೈರಿದಂತಿಗಳು (ಕುಪ್ಪಾ. ೨–೨೦); ತುರುಕಾಣ್ಯದೊಳಗನಾವೃಷ್ಟಿದೋಷಮು ಬಂದು ಪಸರಿಸೆ ಪವಾಡದಿಂದೆ ವರುಷವಮಂ ಸುರಿಸಿ . . . ಮಳೆಯ ಮಲ್ಲೇಶನೆಂದೆಂಬ ನಾಮವನಾಂತನು (ಕಲಕ್ಕೆ. ೦–೦೯). **ವಾರಿಷ** : ೧. ಏಟ್ನೂಟಪತನೆ ವಾರಿಷಂ ಪ್ರವಾರ್ತಿಸುತಿರೆ (ಎಕ. XVI, ಹಿರಾ. ೦೨೩–೪; 788). [<ಸಂ. ವರ್ಷ]

**ಬರಿಸದೆಱ** (ನಾ). ವಾರ್ಷಿಕ ತೆರಿಗೆ,– ಸುಂಕ: ಬೇಱೆವೇಱ ಬರಿಸದೆಱ ಹಿರಿಯ ಹಾಗವೊಂದು (ಎಇ. XIII, ೨೦–೩೩; 1294). [ಬರಿಸ+ತೆಱ₁]

**ಬರಿಸವಳ** (ಅ). ಪ್ರತಿವರುಷ; ವರುಷಂಪ್ರತಿ : ಅನ್ನನಿಬರು ಸುಂಕಿಗರು ಏಟ್ದ ಇ(ಈ) ಕೆಂಗೆಱಗೆ ಬರಿಸವಳ ಅಱು ಪೇಟ ಸುಂಕಮಂ ಬಿಡುವರು (ಎಇ. XVI, ೬೯–೭೦; 1037). [ಬರಿಸ+ ?]

**ಬರಿಸು** ‘ವರಿಸಂ₁’ ನೋ.

**ಬರಿಹ** ‘ಬರಹ₁’ ನೋ.

**ಬರು** ‘ವರ್’ ನೋ.

**ಬರು₂** ‘ಬಱು₁’ ನೋ.

**ಬರು₃** (ನಾ). ಒಂದು ಬಗೆಯ ಹುಲ್ಲು : ಚಿನಾಯಿ ಜೀನಸು, ಕಾಗದ ಬೆಳ್ಳಿ ವ ಭಂಗಾರ ಪರ್ವಾದ್ದು, ಕಾಚ, ಕೊಳಾಂಜನ, ಛತ್ರಿ, ಪಚ್ಚೆಕರ್ಪೂರ ಬರು, ಮೇಣ, ಸಕ್ಕರಿ (ಮುಂಶಬ್ದಾ. ೦೫೭).

[ ←ಮರಾ. ಬರೂ, ಬೊರೂ./ಪ್ರಾ. ಬರುಅ ]

**ಬರುಕ್ಕೆ** (ನಾ). “ಹದವಿಲ್ಲದಿದ್ದರೂ ಒಣಗಿದ ಭೂಮಿಯನ್ನು ಗಿಡಗಂಟೆ ಹೋಗುವುದಕ್ಕಾಗಿ ಉಳುವ ಉಕ್ಕೆ” (ವಪ್ಪೂರು. ಕೋಶ) : “ಹಳೇ ತೋಟಕ್ಕೆ ಬರುಕ್ಕೆಗೆ ಆರು ಕಟ್ಟಬೇಕು” ಎಂದು ಕೊಟ್ಟಿಗೆಗೆ ಹೋದ (ವಪ್ಪೂರು. ೩೦೨). [ಬರ್₁ (<ಬಱ) +ಉಕ್ಕೆ (<ಉಟಕ್ಕೆ)]

**ಬರುಗನಸು** (ನಾ). ವ್ಯರ್ಥವಾದ ಕನಸು; ನಿಷ್ಪ್ರಯೋಜಕವಾದ ಕನಸು : ಕಲ್ಪನೆ ಮಾತ್ರವಿದ್ದರೆ ಲಘುವಾಗುತ್ತದೆ; ಭಾವ ಮಾತ್ರವಿದ್ದರೆ ಬರುಗನಸಾಗುತ್ತದೆ (ಕಾಶಗ. ೩೦); ಸಂಬಿ ಬರುಗನಸೊಂದನಾ ಮೇಲೆ ಕೋಳು ಹೋಗದಿರು (ಶಕ್ತ್ಯಾಂಗ. ೩೭–೯೯೨).

[ ಬರು₂ (< ಬಱದು) + ಕನಸು ]

**ಬರುಗಯಲ್** ‘ಬಱುಗೆಯಲ್’ ನೋ.

**ಬರುಗಲ್ಲು** 'ಬಱುಗಲ್ಲು' ನೋ.

**ಬರುಗಾಲು** 'ಬಱುಗಾಲು' ನೋ.

**ಬರುಗೆ** (ನಾ). ಕೆನ್ನೆ ಮತ್ತು ಕಿವಿ ಸೇರುವ ಭಾಗ; ಕೆಪರು: ಇನ್ನೊಂದು ಕಲ್ಲಿನಿಂದ ಅದರ ಎಡದ ಕಿವಿಯ ಬರುಗೆಗೆ ಗುರಿಯಿಟ್ಟು ಹೊಡೆದೆ (ಚಂಗಾಳ್ಕ. ೩೬೪). [ ? ]

**ಬರುದಲೆ** 'ಬಱುದಲೆ' ನೋ.

**ಬರುಬು** 'ಬರಂಬು' ನೋ.

**ಬರುಮು** 'ಬೊಮ್ಮ' ನೋ.

**ಬರುಮರುಕ** (ನಾ). ತೋರಿಕೆಯ ಕನಿಕರ; ಸೋಗಿನ ದಯೆ: ಈ ಮೇಳದ ಮಸಕವು ಸರ್ವನಾಶದ ಬರುಮರುಕವಾಗಿ, ಕಣ್ಣಿಂದ ನೆತ್ತರನ್ನು ಹಿಂಡುತ್ತ ಬಾಯಬಿಡಿಸುವ ಆಗ-ನನ್ನ ಮಾತಿನ ಬೆಲೆಯು ನಿಮಗೆ ಅರ್ಥವಾಗುವುದು! (ಮಂತ್ರಕ. ೬೪-೦೪).
[ ಬರು$_2$ (<ಬಱಿದು) + ಮರುಕ (<ಮಱುಕ)]

**ಬರುವದಣೆ** 'ಬರಿವದನೆ' ನೋ.

**ಬರುವಳಿ** (ನಾ). ನಿಷ್ಪತ್ತಿ; ಮೂಲ: ಕನ್ನಡಮಾತುಗಳ ಬರುವಳಿ (ಕನ್ನಪ. I, ೨೩೪; ೦೪ ೩೬). 'ಹುಟ್ಟುವಳಿ' ಹೋ.
[ ಬರು$_1$ (<ವರ್) + - ವಳಿ$_3$]

**ಬರುವೆ** (ನಾ). ಒಂದು ಬಗೆಯ ಪಕ್ಷಿ: ಶುಕ ಮಯೂರ ಮರಾಳ ವಾಯಸಂ ಬಕಪಕ್ಷಿ . . . ವೃಕ ಬರುವೆ ಸಾಳುವಂ ಮರಗೊರಲೆ ಕಾಬು ರಲೆ ವಿಹನು ಗವುಜಗ ಗುಬ್ಬಿ ಚಿಲಿಮಿಲಿಗ ಕೆಂಬೂತ ತಿಚುಕ ಮರಕುಟುಕ ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿದಗ್ನಿ ದಹಿಸಿತು (ತುರಂಗ. ೦೩-೩೬).

**ಬರುಹ$_1$** (ನಾ). ಬರುವಿಕೆ: ನಾಯ ಬಾಲಮಂ ಕಾಸಿ ತಿರ್ದುಹವುಂ ಸೌಳುವಣ್ಣದಲ್ಲಿ ಮಟಿಬರುಹವುಂ . . . ಮೂರ್ಖನಂ ಬುದ್ಧಿವಂತ ನೋಲ್ಪೆಸುಹವುಂ ಇವಟಿಕೋಪಾದಿ (ಶಂಕಶಂ. ೦೩೬-೦೦); ಕವಿಗಳನೊತ್ತಲ್ ರಕ್ತಂ ಬರುಹ ಕಣ್ಗಳ್ ಚೆನ್ನಾಗಿ ತೋಱುಹ . . . ಸಸಿನಮಾಗಿ ಹಿಂಭಾಗ ಮುಂಭಾಗಂಗಳ್ ಅಗಲಮಾಗಿರುಹ ಈ ಲಕ್ಷಣಂಗಳನುಳ್ಳ ಕುದಿರ ಸಂಪೂರ್ಣ ಮಪ್ಪಾಯುಷ್ಯಮನುಳ್ಳುದೆಂದು ಪೇೞ್ಸಿಕೊಳ್ವುದು (ಲೋಕೋಪ. ೦೦-೬೩ ಅಶ್ವ).
[ಬರು$_1$ (< ವರ್) + - ಹ$_2$ (< -ಪ್ಪ$_3$)]

**ಬರುಹ$_2$** (ನಾ). ನವಿಲಿನ ಪುಕ್ಕ,—ಗರಿ; ಬರ್ಹ: ಅರ್ಹಂ, ಅರುಹಂ; ಬರ್ಹಂ, ಬರುಹಂ; ಗಾರ್ಹಪತ್ಯಂ, ಗಾರುಹಪತ್ಯಂ (ಶಾಶಾಭೂ. ೦೨೩ ವೃತ್ತಿ). [<ಸಂ. ಬರ್ಹ]

**ಬರುಹಿ$_1$**, ಬರಿಹಿ (ನಾ). ನವಿಲು; ಮಯೂರ: ಸೂಕರನ ತುಂಬಿಯ ಮರಾಳನ ಭೇಕವೈರಿಯ ಕಾರುರಗ ಕಟ ಕೋಕಿಲನ ಬರುಹಿ [ಶಾಶಂ. ಬರ್ಹಿ] ಯ ಸುಧಾಕಿರಣನ ದಿನಾಧಿಪನ . . . ರತ್ನಾಕರನರೊಂದೊ ಣ ವಿರಬೇಕು(ಶುಪ್ಕಾ.ಸ.೦-೬೪); ಕಂಗೊಳಿಸುವ ಗವಾಕ್ಷಾವಳಿಯಲಾಡುವ ಬರುಹಿ ಪಾರಾವತ ಮೃದುಸ್ವನದ . . . ಮರಗಳ ತಿಂಥಿಣಿಯ ಶೀತಳತರುಚ್ಛಾಯೆ ಯಲಿ ಮೆಱಿವಾ ಪುರವರವ ಕಂಡ (ಶಿಶಾಗ. ೦೦-೩೬-೫೦); ಬರುಹಿ ಕಂಕ ಶಶಾದ . . . ಭರದ್ವಾಜಾದಿ ಖಗವಿರೆ ಕಂಡನಸುರೇಂದ್ರ (ಶಾರಶಾ. ೯-೪). **ಬರಿಹಿ:** ಹರನಂತೆ ಗಂಗಾಧರತ್ವದಿಂದಂ ಮತ್ತೆ ಹರಿಯ ಧೈರ್ಯತೆಯಂತೆ ಕರಿಯ ರೇಖೆಗಳಿಂ . . . ಇಂದ್ರನುಂದದೆ ಪಾಱುವ ಬರಿಹಿಗಳ ಪಿಂಛಂಗ ದಿಂ . . . ಆ ಮಹಾಗಿರಿ ಮೆಱದುದ್ಯೆ (ಶೀಕೃಪು. ೩-೯-೬).
[< ಸಂ. ಬರ್ಹಿನ್]

**ಬರುಹಿ$_2$** (ನಾ). ೧. ಒಂದು ಬಗೆಯ ಹುಲ್ಲು; ಕುಶ: ಚರು ತಿಲದ ರಾಶಿಗಳ ಸ್ರುಕ್ ಸ್ರುವ ಬರುಹಿಗಳ ಬಲುಹೊಱಿಗಳಾಜ್ಯೋತ್ಕರದ ಪತ್ರಾವಳಿಯ ನಿರ್ಮಳಸಾರ ಸಮಿಧೆಗಳ . . . ವಿವಿಧದ್ರುವ್ಯಮಯ ಬಂಧುರದಲೆಸೆದಂದು ಯಜ್ಞವಾಟಿಕೆ ರಾಜಸೂಯದಲಿ (ಶುಪ್ಕಾ.ಸ. ೬-೫೦); ಬರುಹಿಯಿಧ್ಮಸವಿತ್ರ ಪ್ರಣೀತಾವರಣ ಘೃತಪಾತ್ರಾದಿ ಮುಖವೆಂಕರವ ಮೇಳೈಸಿದರು ತತ್ಕೃತುಕುಂಡವಳಯದಲಿ (ಶಾರಶಾ. ೦-೬-೩೪). ೨. ಬೆಂಕಿ; ಅಗ್ನಿ: ಧರಣ ರೇಣುವದಾಗೆ . . . ಸಾಗರಗಳೇ ತುಂತುರ್ವನಿಗಳಾಗಲು ಮಹಾಪ್ರಳಯಬರುಹಿ ಕಿಱುಗಿಡಿಯಾಗಲಚ್ಯುತ ಸರಸಿಜೋದ್ಭವರಣುವೆನಿಸಿ ಭಾಸ್ವುರಣಜ್ಯೋತಿರ್ಲಿಂಗಮಾದೀಶಂಗೆ ವಂದಿಸುವೆ (ಶಂಕಶಾ. ೩-೦). [< ಸಂ. ಬರ್ಹಿ]

**ಬರುಹು**, ಬರಬು, ಬರಹು$_2$, ಬರಬು (ನಾ). ೧. (ಹೊಲ, ಗದ್ದೆಗಳಲ್ಲಿ ನೀರು ನಿಲ್ಲುವುದಕ್ಕಾಗಿ) ಅಂಚಿನಲ್ಲಿ ಹಾಕುವ ಮಣ್ಣಿನ ದಂಡೆ; ಕಟ್ಟೆ; ಬದುವು: ನಾಲ್ಕುಸೀಮೆಯೆಂತೆಂದಡೆ ಮೂಡಣಸೀಮೆ ಹುಪ್ಪವಳ್ಳಿಯ ಸೀಮೆ . . . ತೆಂಕಣ ಸೀಮೆ ಅರಳಿಯ ಗದ್ದೆಯ ಬಡಗಣ ಬರುಹು ಮೇರೆ (ಕಶಾಇ. XV, ೨೩೩-೬೦; 1216). ೨. ಎತ್ತರವಾದ ಪ್ರದೇಶ; ದಿಬ್ಬ; ದಿಣ್ಣೆ: ಪಡುವಣ ಸೀಮೆ ಕರಿಯ ರಾಮನಾನ ಹಕ್ಕಲ ಬರುಹು ಬಡಗಲು ಮಲ್ಲನಹಳ್ಳಿಯ ಹೊಲನ ಸೀಮೆ ಮೇರೆ (ಕಶಾ. V. ೩೨-೬೬; 1216). **ಬರಬು:** ೨. ಆ ಯಲಚಿಯ ಕುಣ್ಟೆಯ ಮೂಡಣಕೋಡಿಯ ಅರಳಿಯ ಮರ ಮೇರೆಯಾಗಿ ಹೊಲದ ಬರಬಿನ ಮೇಲೆ ದರ ಹುಣಸೆಯ ಸರಿತದಲು (ಎಕ. X. ಮುಳಬಾ. ೬-೬; 1416); ತೆಂಕಣ ಕೋಡಿ ಸ್ಥಳದಲೂ ಮೂಡಲಿಗೆ ಕಂಭದ ಮಾನ್ಯದ ಹೊಲ ಮೇರೆ ತೆಂಕಲಿಗೆ ದಶಕಸ್ಥಳದ ದೊಡ್ಡ ಬರಬು ಮೇರೆ (ಎಕ. IX (S). ಶಂಗಳೂ. ೫೦-೯; 1632); ಬರಬುಗಳನ್ನು ನೆಲಮಟ್ಟದಿಂದ ಸ್ವಲ್ಪ ಎತ್ತರವಾಗಿರುವಂತೆ ಕಟ್ಟಿ, ಗಟ್ಟಿಯಾಗಲು ಚೆನ್ನಾಗಿ ತೊಯಿಸಿ ತುಳಿಯಬೇಕು (ಕರಶ. ೬೬). **ಬರಹು$_2$:** ೨. ತೊಪ್ಪೇನ ಘಟ್ಟದ ಬಲ್ಲವತ್ತದ ಕಟ್ಟೆಯ ಬಿತ್ತಿರಿಣ ಹಕ್ಕಲ ಬರಹು (ಎಕ. VII. ಶಿವಮೊ. ೨೬-೨೫೪; 1624). **ಬರುಬು:** ೩. ಕೆರೆ, ಕುಂಟೆ ಮುಂತಾದುವುಗಳ ಏರಿ: ಕಾಲುವೆಗಳ ಮೇಲೂ ಬರುಬುಗಳ ಮೇಲಲೂ ತಿರುಶಿರುಗಿ (ಕಶಾಮಂ. IV, ೦೪೦). 'ಬದುವು' ಪರಾ.
[ ದೇ.: ತಮಿ. ವರಪ್ಪು, ವರಮ್ಪು, ವರ್ಪ್ಪು; ಮಲ. ವರಮ್ಪು; ತುಳು. ಬರಬು; ತೆಲು. ವರುಜು]

**ಬರೆ$_1$**, ವರೆ$_1$ (ಕ್ರಿ). ೧. ಲೇಖಿಸು; ಅಕ್ಷರದಲ್ಲಿರಿಸು: ಕೈಲಾಸವಣ್ಣಿತರ್ಬ್ಬರೆದ ಈ ಮಣ್ಣನಳಿದೋಂ (ಎಕ. IX, ಶಂಗಳೂ. ೧೦-೦೩; ಸು. 820); ಗುಣ ಸೌಂದರಿಯೊಂಬೊಳ್ . . . ಒಂದೋಲೆಯನಿಂತೆಂದು ಬರೆದಳ್ (ವಡ್ಡಾರಾ. ೦೬೩-೯); ವಿಷಯ ಮೋಹಿಸುವಂತೆ ಕೊಡುವುದೆಂಬೀ ಲೇಖವಿಷಯವಿದು ವಿಧಿಕೃತವೊ ತನ್ನ ಮೋಸವೊ ಬರೆದವನ ಮಱಹೊ (ಕೃಶಂಶಾ. ೫೦-೩೬). ೨. (ಬರೆದುದರ ಮೇಲೆ ಅಭ್ಯಾಸಕ್ಕಾಗಿ) ತಿದ್ದು; ತೀಡು: ಬರೆಯದೆ ಬಂದ ಸುದ್ದಗೆಯ ಸೂತ್ರವನೊಂದೆ ಮುಹೂರ್ತಮಾತ್ರದಿಂ ಬರಿಸಿದುದು (ಶಂಕಶಾ. ೬-೩೪). ೩. ಕಾವ್ಯರಚನೆ ಮಾಡು: ತರಲಾಪಾಂಗ ವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ ಬರೆದತನುಚರಿತಮಾಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಅಂತ್ಯ. ೪-೦೪); ವಿಪರೀತಂ ಬರೆಯುತ್ತುಮೊಂದನಲವುತ್ತುಂ ಗದ್ಯಮಂ ಮಾಡೆ (ರಂಡೋಲಾ. ೦-೫೦ ಅಶತದ್ಯ); ಬರೆದಾಹ ಬರೆದೆ ಭಾವುರೆ ಬರೆದಕ್ಕಟ ಬರೆದೆ ಲೇಸು ಬರೆದೆಯೆನುತ್ತುಂ ಬಱದೆ ತಲೆತೂಗುವುದಱಿಂ ಬಱದಪ್ಪುದು ಕಾವ್ಯಮಱಿಯ ದರ ಜಾಣಿಂದಂ (ಗಿಂಕ. ೦-೨೬). ೪. ಚಿತ್ರಿಸು; ರೇಖಿಸು: ಇಂತು ಬರೆಯಲ್ ಬ್ರಹ್ಮಂಗಮೇಂ ಬರ್ಕುಮೇ ಎಂದು ಮುನ್ನಂ ವಿಚಿತ್ರಚಿತ್ರ ವಿದ್ಯಾಕೌಶಲಮನತಿಕುತೂಹಲರೋತ್ತಾರಿತಲೋಚನನಾಗಿ ನೀಡುಂ ಭಾವಿಸಿ ನೋಡಿ (ಅಂಪು. ೪-೪); ಬರೆದ ಬನಮಿರ್ಕೆ ನೋಡೀ ಏರುಮಾಡದ ಕೆಲದೆ ಬೆಳೆದ ಪೂದೋಂಟಮಂ (ಕಬ್ಬಿಗಾ. ೬೪); ನೆನೆದು ಬರೆದಳು ನಳನ ರೂಪ ವನನುನಯದಿ ಚಿತ್ರದಲಿ (ನಳಚ. ೦-೩೬). ೫. ಗೆರೆಯನ್ನು ಎಳೆ; ಗೀಟು ಹಾಕು; ಗೀರು: ಗಿಳಿಯಂ ಸಾಕ್ಷಿಮಾಡಿ ಇರ್ವರುಂ ಚದುರಂಗ

ಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯುಂ ಬರೆಗುಮರಸನರಸಿಯುಂ ಗೆಲ್ದೊಡೆ ಒಂದೆ ಬರೆಯುಂ ಬರೆಗುಂ (ಶಕ್ತಾ.ರಾ. ೧೦೬–೨೭); ತನ್ನ ಮುನ್ನಿನ ಜನ್ಮಂಗಳನಿಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತಮುಪಗತಮುಖಿಮುದ್ರೆಯಾಗಿ (ಆದಿಪು. ೬–೩೨ ಶ); ಸುರನರನಾಗಲೋಕದಿಂ ನರ್ತಿಸುವ ಸೌಂದರವೆಣ್ಣು ಬಾಣನಂದನೆಯು ಸರಿಯಿಲ್ಲವೆಂದು ಮಾಮರೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಕೋಶಕ. ೨೩–೨೦). ೬. ಕಾದ ಲೋಹದಿಂದ ದೇಹದ ಮೇಲೆ ಗೆರೆಯನ್ನು ಎಳೆ; ಬರೆಹಾಕು; ಬರೆಎಳೆ: ಮೃದುನಾಭಿಯ ನಿಟ್ಟೆಲುವಿನ ಹೃದಯದ ಮೇಲಡಿಸಿ ಬರೆಯಲಾಗದು ವಿಷ್ಣುವಿದರತ್ಯಾನುಂ ಬರೆದಂದದು ಮಾಟ್ಕುಮಪಾಯಮಂ ಮನಸ್ಸಾಪಮುಮಂ (ಅಶ್ವಶಾ. ೧೦–೨೭); ಏತರವೂ ದಂಡೆಗಳು ಕೊರಳಲಿ ಭೂತಬರೆಗೀದೇನು ಮೆಯ್ಯಲಿ ವಾತರೋಗಕೆ ಬರೆದ ಬರೆಯೇನೆರಡುಮುಡುಹಿನಲಿ . . . ಎಂದು ದಾನವನಾಥ ಜರದೀಡಾಡುತಿರಲು (ಕೃಷ್ಣಾ.ಕ. ೦೩–೯೯). ೭. ದಾಖಲೆಯಾಗು: ಮಲ್ಲ, ನಿನ್ನ ಶೌರ್ಯ ಸಾಹಸಗಳು ಬರೆದು ಹೋಗಿವೆ. ನಿನಗೆ ಗೌರವ ಸಿಗುವುದು ನಿಶ್ಚಯ (ಪುಟಿಯ. ೧೯೬). ಪರೆ₁: ೧. ಕುಪ್ಪಿ ಊರನ್ ಪರೆದನ್ (ಎಕ. X. ಕಂಕಾಣು. ೦೨೩ ೧–೭; ಕು. ೬೦೦); ಮರಮ್ಮ ಪರೆದ ಲಿಕಿತಂ (ಎಕ. VIII. ಸೊರಬ. ೨೨–೦೦; ಕು. ೬೦೦); ಬೋನರಿ ಪರದೋಮ್ (ಬ್ಯಾಎಂ. ೦೯೭೭. ೯೨–೦೩ ; ?).

ಬರೆದ ಬರೆಹ = (ಹಣೆಯ) ಬರೆಹ; (ಅದೃಷ್ಟದ) ಲಿಖಿತ: ಕೊರಗ ನರಿದಂ ತನ್ನ ಮನೆಗೆ ಮರಬದ್ದಣಿ ಬರೆದ ಬರೆಹವಿದೆಂದು ಕಯ್ ಮೊಸಲ ಬಡಿದಂ (ಕಾಂಂತ. ೦೩೩–೨೯೯). ಬರೆದಿಟ್ಟುಕೊಳ್ಳು = ೧. ಗುರುತು ಹಾಕು; ಗುರುತಿಸು: ನಿಮ್ಮ ಹಣದ ಪೆಟ್ಟಿಗೆಯಲಿ ಎಷ್ಟು ಹಣವಿದೆಯೆಂದು ಬರೆದಿಟ್ಟುಕೊಳ್ಳಿ (ಅಮುಕ್. ೦೨೪); ನಾನು ಓದಿದ ಭಾಗದಲ್ಲಿ ಅಗತ್ಯವೆಂದು ತೋರಿದ ಮುಖ್ಯವಿಷಯಗಳನ್ನು ಸೂಕ್ಷ್ಮವಾಗಿ ಬರೆದಿಡುತ್ತಿದ್ದೆ (ಮುಂಗಾರು. ೦೯). ೨. (ಆಲಂ) ನಿರ್ಧಾರವಾಗಿ ತಿಳಿ: ನೀನು ಪಾರಾಗಲಾರೆ. ಇದನ್ನು ಬರೆದಿಟ್ಟುಕೊ (ಜನಪ). ಬರೆದುಂಡಿಗೆ = ಬರೆದು ಮುದ್ರಿಸಿದುದು; ಗೊತ್ತುಮಾಡಿದುದು: ಬರೆದುಂಡಿಗೆಯ ಚೆಲ್ವ ಹೂವೀಡಿನಿಂ ಕರೆಯೆ ತೆರೆದೆಗೆಯಲಲಿಂದಂ ಬೇಡಂಬ ಬಗೆಗೆ (ಕಾಂತೇಶ. ೦೩೯–೯೨೪). ಬರೆದು ಕೊಡು = ೧. (ಆಸ್ತಿ ಮೊದಲಾದುವುಗಳನ್ನು) ದಾಖಲೆಯ ಸಹಿತ ಕೊಡು; ದಾಖಲೆ ಮಾಡಿ ಕೊಡು: ಅರರ! ಬಿರುಮನೆ! ಮರೆಯದಿರು ಮನೆ, ಮರಿಯ ಮಕ್ಕಳ ಮಡದಿಯಾ . . . ಬರೆದುಕೊಡುವೆನು ಸ್ಥಿರ ಚರಾಸ್ತಿಯ ಉಂಬಳಿ (ಕುಪು. ೨೦–೯೦). ೨. (ಆಲಂ) ನಿರ್ಧಾರವಾಗಿ ತಿಳಿಸು: ಸುತ್ತುಮುತ್ತು ಚಿಟಿಚಿಟಿಸುತ್ತಿಡೆಯೆಡೆಯನೊಡಗೊಂಡು ಬಿಡುನಾಲಗೆಯೊಳೇನೊ ತಿಳಿಯಹುದ ಬರೆದುಕೊಡುವ ನೆಲದೆಡೆಗೆ ಬಾನ್ ಬಡದ ಬೀಸುವ ಗಾಳಿ (ಕಾಂಜೀ. ೦೬೯–೯೦೭). ಬರೆದುಕೊಳ್ = ೧. ಬರೆದಿಟ್ಟುಕೊಂಡಿರು: ಪೊಲದ ಸೀಮೆಯಲ್ಲಮಂ ಓಲೆಯೊಳ್ ಬರೆನ್ದು × × ಕಲ್ಲುಸಾಸನವಾಗೆ ಬರೆದುಕೊಣ್ಡೆಮು (ಎಕ. III, ತಂಜಪ. ೦೩೯–೨೦; ೯೧೬ ?). ೨. (ನಾಮದ) ಗೆರೆಯನ್ನು ಎಳೆ. ೩. ಕಾದ ಲೋಹದಿಂದ ದೇಹದ ಮೇಲೆ ಬರೆಯನ್ನು ಎಳೆದುಕೊಳ್ಳು.– ಹಾಕಿಕೊಳ್ಳು. ೨, ೩. ನೆಚ್ಚನಯ್ಯ ಹರಿ ಮೆಚ್ಚನಯ್ಯ . . . ತೊಗಲಿನ ದೇಹಕೆ ಗೋಪಿ ಗಂಧ ತೇದುಕೊಂಡು ರೋಗ ಬಂದೆಮ್ಮೆಯ ಹಾಗೆ ಬರೆದುಕೊಂಬ ಮನುಜನಿಗೆ (ಪುರಂದ. ೨–೬೯–೨)

[ದೇ.॥ ತಮಿ. ವರಿ, ವರೈ; ಮಲ. ವರಿ, ವರೆ; ತುಳು. ಬರಿ, ಬರೆ; ತೆಲು. ವ್ರಾಯು, ರಾಯು]

**ಬರೆ₂** (ನಾ). ೧. ಗೆರೆ; ಎಳೆ; ರೇಖೆ: ಗಿಳಿಯಂ ಸಾಕ್ಷಿ ಮಾಡಿ ಇರ್ಪರುಂ ಚದುರಂಗಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯುಂ ಬರೆಗುಂ (ಶಕ್ತಾ.ರಾ. ೦೦೬–೨೭); ಕಿಬುಕಾಣಿಕೆಯ ಬೆರಲಿಂದೆಡವಿಟಿಯುದೆ ಸುಟ್ಟುಂಬೆಪರೆಗಟುಯ್ದಿದ ಬರೆಯಿಂ ನೆಜ ನೂಜು ಪರ್ಷಂ (ಲೋಕೋಪ. ೦೦–೦೭). ೨. ಎಲ್ಲೆಯ ಗುರುತು; ಸೀಮಾರೇಖೆ: ಕೋಟದಧಿವಾಸದಿಯಿಕ್ಕಿದ ಕಲ್ಲಿಂದಂ ಎತ್ತಿದ ಬರೆಯಿಂದ ತೆಂಕಲಿಯಿಂತೀ ಚತುಸ್ಸೀಮೆಯಪೊಳಗುಳ್ಳ ಬಾಳು ಬೆಟ್ಟು . . . ಯಿಂತಿಷ್ಟನೂ ಮೂಲಕ್ರಯಕೆ ಸಲುವ ಅರ್ಥವನು ಕೊಂಡು (ಶಾಇ. IX — ii, ೯೭೦–೨೭; 1406). ೩. ಕಾದ ಕುಳದಿಂದ ಮೈಮೇಲೆ ಎಳೆದ ರೇಖೆ.– ಗೆರೆ: ತುಪ್ಪವಮನಾ ಬರೆಯೊಳ್ ಪೂಸುವುದು ಬರದ (ಯ) ಪುಣ್ ಶೀವುವಿನಂ (ಅಶ್ವಶಾ. ೦೦–೨೭); ಅಭಕ್ಷಣೆ ವತ್ಸರಹಿತೆ ರುಜೆ ಸಲೆ ಶಕ್ತಿಹೀನೆ ವಿಕಟಾಂಗಿ ಬಹುಭಕ್ಷೆ ಬರೆಗೊಳಗಾದುದತ್ಯಂಗಹೀನೆ ನಿರ್ವೀರ್ಯೆ ಮಧ್ಯಾಧ್ಯ ಲಕ್ಷಣಪಶುಗಳಂ ಕಳೆದು (ಕಂಪು. ೬೦–೯); ನಾನು ಮರೆತರೂ ಹೊಟ್ಟೆಯ ಮೇಲಿನ ಬರೆಯಂತೂ ನೆನಪು ಕೊಡಲು ಇದ್ದೇ ಇದೆಯಲ್ಲ (ಹುಚ್ಚುಹು. ೯೮) ೪. (?): ಕುವರಿಯ ಪರಮಸೌಂದರಸಿಂಧುವಾ ಬರೆಹವಣಲ್ಲ ನರಗಿರರಿಂಗೆ (ಸೋಹಕ. ೨೯–೨೭).

**ಬರೆಕೊಡು** = ಕಾದ ಕುಳದಿಂದ ಮೈಮೇಲೆ ಗೆರೆ ಎಳೆ.– ಸುಡು: ಅವರಲ್ಲೊಬ್ಬನು ರೊಚ್ಚಿನಿಂದ ಬರೆ ಕೊಟ್ಟು ಈತನ ಎರಡೂ ಕಣ್ಣುಗಳನ್ನು ಕಳೆದನು (ಶುಂಠಾಕ. ೦೩೮); ಅವನ ಒಂದೊಂದು ಮಾತೂ ಒಳಗೆಲ್ಲೋ ಬರೆ ಕೊಡುತ್ತಿದ್ದಂತೆನಿಸಿ ಕುಳಿತಲ್ಲೇ ಚಡಪಡಿಸಿದ (ಪೂರರುಣಾ. ೦೮೦). ಬರೆ ಹಾಕು = ಬರೆ ಕೊಡು: ಸರಕಾರವು ಬರೆಹಾಕೆಯನ್ನು ಕೂಡಲೇ ನೇಮಿಸಿ ವ್ಯಾಕ್ಸಿನೇಶನ್ ಮೈಲಿಗಳನ್ನು ಹಾಕಿಸಿದಂತೆ ಎಲ್ಲರಿಗೂ ಮನೆ ಮನೆಗೆ ಬಂದು ಬರೆ ಹಾಕುವ ಏರ್ಪಾಟು ಮಾಡಲೇಬೇಕು (ಹುಚ್ಚುಹು. ೩೦); ಗುಳ ಕಾಸಿ ಬೇಗ ಬರೆ ಹಾಕಿದರೆ ಬದುಕುತ್ತಾನೆ (ಕಥಾಮಂ. IV. ೦೦); ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದರಂತೆ (ಗಾದೆ). [<ಬರೆ₁]

**ಬರೆ₃** (ನಾ). ಕಡಿದಾದ ಬೆಟ್ಟ, – ಗುಡ್ಡ: ಎಲ್ಲಿ ನೋಡಲು ಸರಿ ಜರಿ ಹಳ್ಳ ಬರೆಗಳು . . . ಮುಳ್ಳುಮರದ ಬೇರೆಡಹುಗಲ್ಲುಗಳಿಂದ ನಿಲ್ಲದೊಪ್ಪಿದುದು ಕಾಂತಾರ (ಕಂಪಸ. ೦೮–೯೩); ಆ ದಾರಿಯಿಂದಲೇ ಬರೆಯನ್ನು ಹತ್ತಿ ಕಾಳೂರಿಗೆ ಹೋಗಬೇಕು (ಷಡ್ಯ.ಕ. ೨೩). [ದೇ.॥ ತುಳು. ಬರೆ]

**ಬರೆಕೋಲು** 'ಬರೆಗೋಲು' ನೋ.

**ಬರೆಗುಡುಹು** (ನಾ). = ಬರೆಗುಳ: ಕುಜುಬನುಬಿ ಮುಳುಗತ್ತಿಯಿಂ ತಿರಿಯಬಿಪೆಗಳು ಬರೆಗುಡುಹುಮಡಗಿದ ಕುಜಿದೊವಲ ತಿದಿಯೆಸೆಯ . . . ಕೆಲವಾಡುಗಳನಾ ಬೊಬ್ಬುಲಿಯು ಮರನಿಪ್ಪ ನೆಪ್ಪಿಗಾತನು ಹೊಡೆದು (ಚತು. ೨೦–೧೨). [ಬರೆ₁ + ಕುಡುಹು (<ಕುಡುಪು)]

**ಬರೆಗುಳ** (ನಾ). (ದನಕರುಗಳ ರೋಗನಿವಾರಣೆಗಾಗಿ) ಬರೆಯನ್ನು ಹಾಕುವ ಕಬ್ಬಿಣದ ಸಲಾಕೆ: ಬರೆಗುಳವನ್ನು ಚೆನ್ನಾಗಿ ಕಾಯಿಸಿ ಎತ್ತಿಗೆ ಬರೆಹಾಕಿದರು (ಜನಪ). [ಬರೆ₁+ಕುಳ (<ಕುಂಟು)]

**ಬರೆಗೊಳ್** (ಕ್ರಿ). ೧. ಬರೆಯನ್ನು ಹೊಂದು; ಸುಡಿಸಿಕೊಳ್ಳು. ೨. (ಆಲಂ) ಏಟುತಿನ್ನು; ಘಾಸಿಹೊಂದು; ಕಷ್ಟವನ್ನು ಅನುಭವಿಸು: ಏಜಿ ಬರೆಗೊಂಡ ಜೂದುಂಗಾಜಿನವೊಲ್ ಲಗ್ಗೆ ಮಾಡಲೊಲ್ಲದೆ ಪಡೆಯುಂ ಸಾಜಿಸಿ ಮುಂದಂ ಪಿಂಗುವ ನೀಜಿಯವೊಲ್ ತೆಗೆಯಮೇಟ್ಟನಾ ವಸುಷೇಣಂ (ಅಪಂಪು. ೦೨–೨೭). [ಬರೆ₁+ಕೊಳ್₁]

**ಬರೆಗೋಲು, ಬರೆಕೋಲು** (ನಾ). = ಬರೆಗುಳ: (೬). ಬರೆಕೋಲು: ಲೆಕ್ಕಣಿಕೆ ಕೋಲಹುದು, ಕಾಗದವು ಹಗೆಗಳೆದೆ, ಬರಹವೇ ಬರೆಕೋಲ ಗಾಯಗಳಾಗುವುವು (ಪಠರಾ. I, ೯೩೪); ನನ್ನ ತಾಯಿ ಅರಿದ ಬರೆಕೋಲನ್ನು ಹಿಡಿದುಕೊಂಡು ಪ್ರವೇಶಿಸಿ ಅದನ್ನು ಕೆಂಡದಲ್ಲಿಟ್ಟಳು (ಮುಂಗಾರು. ೯೯). [ಬರೆ₁+ಕೋಲು₁ (<ಕೋಲ್₁)]

**ಬರೆಪ**, ಬರಪ. ಬರಹ. ಬರೆತ (ನಾ). ೧. ಬರೆದುದು; ಬರವಣಿಗೆ: ಲೇಖನ: ಶ್ರೀಮಾತ್ ಜಕ್ಕಿಮಯ್ಯನ ಮಾರ್ವಂ ಮಹಾದೇವಯ್ಯನ ಬರೆಪಂ (ಕ್ಕೆ‌ಇ. IX-i. ೮೮-೯೦; 1049); ಹೊಸವುರ ಮೊರಕೇಸ್ವರ ದೇವರ ಓಜನ ಮಗ ಸಿಂಗೋಜನ ಪುತ್ರ ಗಣದೋಜನ ಬರೆಪಂ (ಕ್ಕೆಇ. XI-i. ೩೦-೩೯; 1138); ಕೊರರೊಳೆಸೆವ ಕೂಜಿತದ ಸುಮಂತ್ರದಿ ಬೆರಲ ಕೊನೆಯ ಬರೆಪದ ಬಾಸುಳ ಬಂಧುರಯಂತ್ರದಿ . . . ತಗುಣಿಯ ಮೆಯ್ಯಾಲಸ್ಯದ ರಾಜೆಯಂ ಪಿರಿದುಂ ಪಿಂಗಿಸಿದಂ (ಜಹುಕಾ. ೮-೫೬). ೨. ಚಿತ್ರಣ; ಚಿತ್ರ: ಬರೆಪದ ಕನ್ನೆ ಭವಾಂತರಪರಿಚಯದಿಂ ಮೋಹ-ಮೂರ್ಛೆಯಂ ಪುಟ್ಟಿಸಿದಳ್ (ಶಂಕಾಪು. ೪-೯೬); ಬರೆಪದ ಪೆಣ್ಣಂ ಭೂಪ ಕುಸುಮಕೋದಂಡಂ ಕಂಡಂ (ಸುಕುಮಾ. ೬-೬೪); ಬರೆಪದೆ ಬಣ್ಣವು ಪರೆಯೆ ಕಪೋಲದಿಂದುರುಳಿದ ಕಂಬನಿ ಗುರುಚಿದೊ (ಹಾಳಾಂತ. ೮೯ ೫೩೬). ೩. ಕಾವ್ಯಾದಿಗಳ ರಚನೆ: ಬರೆಪದ ಬಲ್ಮೆ ಬಾಜನಿಯ ಬಿನ್ನಣಂ (ಎಕ. VII. ಶಿಕಾ. ೦೨೪-೨೯; 1077); ಬರೆಪಂ ಬಾಜನೆ ಗಂಡಯುಕ್ತಿ ಗಣಿತಂ . . . ಎಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪ. ೪-೫೯). **ಬರಪ**: ೧. ವಾಸ್ತುವಿಧ್ಯಾ(ದ್ಯಾ)ಧರಂ ಕಾವೋಜನ ಬರಪ (ಇಇ. XIII, ೯೬-೯೦; 1084); ಜಕ್ಕಣನ ಬರಪ ಮರುಳೋಜ ಮಾದೋಜನ ಕಂಡರಣೆ (ಕಇ. IV, ೦೦-೬೦; 1121). **ಬರಹ**: ೧. ಶ್ರೀಮಾತು ಕನಕನಂದಿತ್ರೈವಿದ್ಯದೇವರ ಗುಡ್ಡಂ ಸೇನಬೋವ ಭೋಗದೇವನ ಬರಹ (ಎಕ. VII. ಶಿಮೊ. ೮೮-೩೪; 1111); ಎರಡರಸನಾನದು ಧರಣಿಯೊಬ್ಬನ ಶಿರದ ಬರಹವ ತೊಡೆವೆನಿದೆಯೆಂದೆನುತ ತೆಗೆದೆಚ್ಚ (ಕುವ್ಯಾ. ೦೫-೯೨); ಅದರ ಮೇಲಿದ್ದ ಬರಹ ಸ್ಪಷ್ಟವಾಗಿ ಗೋಚರಿಸುತ್ತಿರಲಿಲ್ಲ (ಹಾಹುತ. ೦೦೬). ೨. ಅಂತು ಬರಹದ ಬಚ್ಚರಣೆಯ ಪೆಣ್ಣು ಕಣ್ಣೊಳ್ ತೊಳಲೆ . . . ಮನದೊಳ್ ಚಿಂತಿಸುತ್ತಮಿರಲ್ (ಪುಣ್ಯಾಸ್ರ. ೩-೯೨ ಶ); ಎಸೆವ ಬೊಂಬೆಯ ಬರಹದ ಪಟ್ಟೆಪೀತಾಂಬರ ಪೊಸ ಚಂದ್ರಗಾವಿ ಪೊಪ್ಪಳಿಯ . . . ದಿವ್ಯದುಗುಲದ ನಿರಿಗಳ . . . ಶಶಿಮುಖಿಯರು ರಂಜಿಸಿದರು (ಕಂಶಶ. ೨೪-೯೯). **ಬರೆಹ**: ೧. ಮಱುಗಲಿನ್ನೇಕರಸ ಬಿಡು ವಿಧಿ ಬರೆದ ಬರೆಹವ ತಪ್ಪಿಸಲು ಹರಿಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು (ಪಳಶ. ೩-೩); ಈ ಶಾಸನಗಳು ದೊಡ್ಡವಲ್ಲ, ಎಲ್ಲ ಪುಟ್ಟ ಪುಟ್ಟ ಕಲ್ಲಿನ ಬರೆಹಗಳು (ದ್ರಾಶಿಶಿ. ೫೬). [ಬರ್$_1$+—ಪ$_2$]

**ಬರೆಪಂಬೊಗು** (ಕ್ರಿ). ಬರಹಕ್ಕೆ ಸಾಧ್ಯವಾಗು : ಬರವಣಿಗೆಗೆ ಶಕ್ಯವಾಗು: ಅಕ್ಕರಮುಂ ವರ್ಣಮುಮೆಂದಕ್ಕುಂ ಶುದ್ಧಾಕ್ಷರಕ್ಕೆ ನಾಮಂ ಬರೆಪಂಬೊಕ್ಕುಚ್ಚರಿಸಲ್ ಬಾರದುವಕ್ಕರಮಲ್ತು (ಕಶಬ. ೨).
[ಬರೆಪ+ಪೊಗು]

**ಬರೆಪಕಾಱ**, ಬರಹಗಾರ (ನಾ). ಬರೆಯುವವನು; ಲೇಖಕ: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇಟ್ದ ಬೆಳ್ಗಳ ಕೃತಿಬಂಧಮುಂ ಬರೆಪಕಾಱರ ಕೈಗಳ ಕೇಡು (ಶಂಕಶಿ. ೧-೧೨). **ಬರಹಗಾರ**: ತನ್ನ ಲೇಖಗಳನ್ನು ಪ್ರಕಟಿಸಿ ಪ್ರಭಾವಿ ಬರಹಗಾರ ಎಂದು ಎನಿಸಿಕೊಂಡಿದ್ದು ರಂಗಣ್ಣನವರಿಗೆ ಧೈರ್ಯ ತಂದುಕೊಟ್ಟಿತು (ಅಶಪಾ. ೦೦); ಮುಂದಕ್ಕೆ ಬರುವಷ್ಟರಲ್ಲಿ ಆ ನನ್ನ ಬರಹಗಾರ ಗೆಳೆಯನೇ ಆವನು ಆಗಿದ್ದ! (ಗಾಳಿಗು. ೦೬). [ಬರೆಪ+—ಕಾಱ]

**ಬರೆಪು**, ಬರಹು$_1$ (ನಾ). ಬರವಣಿಗೆ; ಬರಹ : ಕೃಷ್ಣ – ವಿಲೇಖನೇ, ಉಳ್ಕೆಯೊಳ್; ಕರ್ಷತಿ = ಉಳ್ತಪುದು . . . ಕಾರ್ಷ್ಯಂ—ಬರೆಪು (ಕಾಶಿ. ೫೮). **ಬರಹು**$_1$: ಅಂದವ ಆತಪಂಸುಹಕೆ ಬರಕೊಟ್ಟ ಬರಹು (ಎಕ. VII. ಶಿಮೊ. ೦೦೮-೯೨ : 1568 ?); ಸೇನಭವರಮಾವ ಬರದ ಬರಹು (ಎಕ. VII. ಶಿಮೊ. ೯೬-೩೮; ?). [ಬರ್$_1$ + — ಪು$_2$]

**ಬರೆಯಿಡು** (ಕ್ರಿ). ಕಾದ ಲೋಹದಿಂದ ಮೈಮೇಲೆ ಗೆರೆಯನ್ನು ಎಳೆ ; ಬರೆಯೆಳೆ ; ಬರೆಹಾಕು : ಬರೆಯಿಡುವೊಡೆ ಪೆಱಪೆಡೆಯೊಳ್ ಖರಕಿರಣಜ ಸಚ್ಛಶಾಂಕರೇಖಾಕೃತಿಯಿಂ ಬರೆಯಿಡುವುದು (ಅಶ್ವಶಾ. ೦೦-೨೬) ; ಅಕ್ಕಿ ಬರೆಯಿಟ್ಟಾಗಲೂ ಗೋಳಾಡಲಿ (ಹೊಸಕ. ೨೨). [ಬರ್$_2$ + ಇಡು$_1$]

**ಬರೆಯಿಸು**, ಬರಸು$_1$, ಬರೆಸು (ಕ್ರಿ). ೧. ಬರೆಯುವಂತೆ ಮಾಡು ; ಲಿಖಿತಗೊಳಿಸು : ಗರ್ವದೆ ಬರೆಯಿಸಿದಂ ಪೆಸರನಖಿಳದಿಗ್ಭಿತ್ತಿಗಳೊಳ್ (ಶಂಶಕಾ. ೦-೨೦) ; ತನಗೆ ಪರಮವಿಶ್ವಾಸಮುಳ್ಳ ಲೇಖಕನಿಂ ಸೂರ್ಯಮಿತ್ರಂಗೆ ವಿನಯಪತ್ರಮಂ ಬರೆಯಿಸಿ (ಸುಕುಮಾ. ೨-೯೬ ಶ) ; ವಿನೋದ ಕಾಗದ ಬರೆಯಿಸಿ ಕೊಟ್ಟರು ಎಂದೂ ಹೇಳಿದ (ಕಂಗಾಕ. ೯೬೦). ೨. ಕಾವ್ಯರಚನೆ ಮಾಡಿಸು ; ಕೃತಿಯನ್ನು ರಚಿಸುವಂತೆ ಮಾಡು : ಶಾಂತಿಪುರಾಣಮನಿದನೋರಂತಿರೆ ಬರೆಯಿಸುವ ಕೂಡೆ ಪರೆಯಿಸುವ ಜನಕ್ಕಿಂತಾರ್ ನೋಂತರ್ (ಶಾಂತಿ. ೦-೩೯); ಪೊನ್ನಿಗನಿಂ ಬರೆಯಿಸಿದರ್ ಸಕಳೋರ್ವಿಗೆ ಪರೆಯಿಸಿದರ್ ಸಲೆ ಪುರಾಣಚೂಡಾಮಣಿಯಂ (ಅಜಿ. ೦-೩೪) ; ಕಾವ್ಯಗಳನ್ನು ಬರೆಯಿಸುವ ಮನೋಧರ್ಮ ಅತ್ತಿಮಬ್ಬೆಗೆ ತಂದೆಯ ಮನೆಯಿಂದಲೇ ಬಂದಿತೇನೋ (ಸಶಾಕೊ. ೦೫೬). ೩. (ಅಧಿಕಾರಕ್ಕೆ) ನೇಮಿಸು; ನೇಮಕಮಾಡು : ಎನ್ನ ಭಂಡಾರಕ್ಕೆ ಬರೆಯಿಸುವೆನೀತನಂ (ಬಸಕ. ೩-೦೦೧). **ಬರಸು**$_1$ : ೧. ಆಚಂದ್ರಾರ್ಕತಾರಂಬರಂ ಬರಸಿ × × × ಕೊಟ್ಟ ಧರ್ಮ (ಎಕ. VII. ಶಿಕಾ. ೬೨-೦೮; 1292) ; ಬರಸಿದವು ಬಳಿಕೋಲೆ ಮಣಿಹಾಱಂಗೆ ಹೇಳಿಕೆಯಾಯ್ತು ಶಿಷ್ಟರ ಪರುಟವಿಸಿ ಕಳುಹಿದನು ಪುರಗಳಿಗೆ (ಕಜಕಾ. ೧-೬-೮). ೪. ಹೇಳಿಕೊಡು; ಬೋಧಿಸು : ದ್ರೋಣ ಬರಸಿದ ಭಾಷೆಯಿಂದೇ ಕ್ಷೋಣಿಪತಿ ಬಗೆಯದಿರು (ಕುವ್ಯಾ. ೦೫-೫೬). **ಬರೆಸು** : ೧. ಓಲಗಕೆ ನಡೆತಂದು ಬರೆ[ಪಾಠಾಂ. ರ]ಸಿದನೋಲೆಗಳ ಕಳುಹಿದನು ಧರಣೀಪಾಲಕರ ಬರಹೇಳೆನುತ ಹೊಯಿಸಿದನು ಡಂಗುರವ (ಪಳಶ. ೩-೪). ೨. ಒಳ್ಳೆಯ ಸರಸರೂಪಕಗಳನ್ನು ಬರೆದು, ಬರೆಸಿ, ಆಡಿ, ಆಡಿಸಿ, ಪ್ರಚಾರಪಡಿಸಬೇಕು (ನಾಟಕ. ೬೮).
[ಬರ್$_1$ + — ಇಸು$_3$]

**ಬರೆಯೆಳೆ** (ಕ್ರಿ). = ಬರೆಯಿಡು : ನಾಗಣ್ಣನ ಕರುಳಿಗೆ ಒಮ್ಮೆಲೆ ಬರೆಯೆಳೆದಂತಾಯಿತು (ಜನಪ. ೯೮) ; ಭುಸುಗುಡುತ್ತ ಆಕಾಶಕ್ಕೆ ಬೆಂಕಿಯ ಬರೆಯೆಳೆದು ಕಣ್ಮರೆಯಾಗುವ 'ಸುರುಸುರ್' ಬಾಣ (ಹುಲಿಯು. ೨೦೬).
[ಬರ್$_2$ + ಎಳೆ$_1$ (< ಎೞ್$_1$)]

**ಬರೆವಣಿಗೆ** 'ಬರವಣಿಗೆ' ನೋ.

**ಬರೆಸು** 'ಬರೆಯಿಸು' ನೋ.

**ಬರೆಹ** 'ಬರೆಪ' ನೋ.

**ಬರೋಬರಿ**$_1$ 'ಬರಾಬರಿ$_1$' ನೋ.

**ಬರೋಬರಿ**$_2$ 'ಬರಾಬರಿ$_2$' ನೋ.

**ಬರೋಬ್ಬರ್** 'ಬರಾಬರಿ$_2$' ನೋ.

**ಬರೋಬ್ಬರ** 'ಬರಾಬರಿ$_1$' ನೋ.

**ಬರೋಬ್ಬರಿ** 'ಬರಾಬರಿ$_1$' ನೋ.

**ಬರ್ಕ**, ಬರಕ$_1$ (ನಾ). (ಕರಾ) ಒಂದು ಬಗೆಯ ಕಾಡುಪ್ರಾಣಿ : ಹಂದೆ ಬರ್ಕ, ಕಮ್ಮ, ಕಡವೆ ಯಾವಾಗಲೂ ಕಾಣಲಿಕ್ಕೆ ಸಿಗುತ್ತಿತ್ತು (ಕುಳಿಕ. ೩೦) : ದನ, ಎತ್ತು . . . ಕುರ್ಕ, ಬರ್ಕ, ಮೊಲ, ಮುಂಗುಸಿ, ನವಿಲು, ಹೊರಸಲು, ಕಾಡಾಣ ಪಿಕಳಾರ, ಕಾಡುಕೋಳಿ, ಕಣೆಹಂದಿ ಮೊದಲಾದ ಜಂತುಗಳಂತೆ ಸ್ಥಳೀಯವಾಗಿರಲಿಲ್ಲ (ಪುರಮ. ೯೨೦). **ಬರಕ**$_1$ : ಕಾಡುಕುರಿ, ಕಾಡುಹಂದಿ . . . ಬರಕ, ಮೊಲ, ಮುಸಿಯ, ಹುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ವಿಾತಿಯೇ ಇರಲಿಲ್ಲ (ಶಂಜಶಂ. ೨).
[?/ ತುಳು. ಬರಿಂಕ = ಒಂದು ಬಗೆಯ ಸಣ್ಣಗಾತ್ರದ ಜಿಂಕೆ]

**ಬರ್ಕಟ** 'ಬಱುಕಟೆ' ನೋ.

**ಬರ್ಕಟಬಯಲ್**, ಬಕ್ಕಟಬಯಲು (ನಾ). ೧. ಏನೂ ಇಲ್ಲದುದು ; ಶೂನ್ಯ ; ಬರಿದಾದುದು: ತವಮವಾಗಳ್ ಬರ್ಕಟಬಯಲಾದುದರ್ಕನು ದಯಿಸುವಾಗಳ್ (ಗಿರಿ. ೩-೩). ಬಕ್ಕಟಬಯಲು : ೧. ನೀನೆತ್ತ ನಾನೆತ್ತ ಲೆಂದು ಬೊಮ್ಮ ಬಕ್ಕಟಬಯಲು (ಅನುಕಂ. ೩೬೦-೧೦೪೦) ; ಬಯಲ ಪುರುಷ ಬಯಲಾಕಾರ ಬಕ್ಕಟಬಯಲರೂಪನೆ (ಚರಿತ. ೬೭-೧). ೨. (ಅಲಂ) ಹಾಳು ; ನಾಶ : ಅಕ್ಕಟಕ್ಕಟ ದೊರಕಿದ ನಿಧಿಯಿಂದಿನೊಳ್ ಬಕ್ಕಟಬಯಲಾಯಿತಿಂತು (೦೦೩೩. ೩-೧೩೪).

[ಬರ್ಕಟ (< ಬಱುಕಟೆ) + ಬಯಲ್ (< ವಯಲ್) ]

**ಬರ್ಕತ್ತು** 'ಬರಕತ್ತು' ನೋ.

**ಬರ್ಕರ** (ನಾ). ಪ್ರಾಣಿಗಳ ಮರಿ : "ಎಲ್ಲಾ ಪಶುಗಳ ಮಱಿ ಬರ್ಕರ ವೆಂಬುದು" (ಶಠಾಹು. ೯೬-೮೩). [ಸಂ.]

**ಬರ್ಕುಡಿ** 'ಬಕ್ಕುಡಿ$_1$' ನೋ.

**ಬರ್ಕುಡಿಗುಟ್ಟು** 'ಬಕ್ಕುಡಿಗಂಟ್ಟು' ನೋ.

**ಬರ್ಕುಡಿಗೆಯ್** 'ಬಕ್ಕುಡಿಗೆಯ್' ನೋ.

**ಬರ್ಕೆ$_1$** (ನಾ). (ಕರಾ) ಕಡಮೆ ಅಂತಸ್ತಿನ ಮನೆತನ : ಗುತ್ತು ಬರ್ಕೆಗಳ ಯಜಮಾನರನ್ನೂ ಆಮಂತ್ರಿಸಿ ಚೆನ್ನಾಗಿ ಸತ್ಕರಿಸಿದ್ದರು (೬೩.೫. ೩೦). 'ಗುತ್ತು$_4$' ಪರಾ.

[← ತುಳು. ಬರ್ಕೆ = ಬಂಟರ ಒಂದು ಬಿರುದು]

Δ **ಬರ್ಕೆ$_2$** 'ಬಕ್ಕೆ' ನೋ.

Δ **ಬರ್ಕೆವಲಸು** 'ಬಕ್ಕೆವಲಸು' ನೋ.

Δ **ಬರ್ಚಣೆ** 'ಬಚ್ಚಣೆ' ನೋ.

Δ **ಬರ್ಚಲ್** 'ಬಚ್ಚಲ್' ನೋ.

**ಬರ್ಚಿ**, ಬರ್ಜಿ, ಭರ್ಚಿ, ಭರ್ಜಿ (ನಾ). ಒಂದು ಬಗೆಯ ಆಯುಧ ; ಈಟಿ ; ಸಬಳ : ಕೊಳುಗುಳದಿ ಮದವೇರಿ ರೋಷದಿಂದುಭಯಬಲ ಹಳಚಿದುದು ಬರ್ಚಿಯಿಂ ಶೂಲದಿಂ ಶಕ್ತಿಯಿಂದಲೆ ಕೃಪಾಣಂಗಳಿಂದರ ಡೊಡ್ಡಿನೋಳ್ಕಾದಿತುಭಯತಗ ಬಲ ಮಡಿದುದು (ಕುರಂಗ. ೩೪-೬) ; ತನ್ನ ಶಕ್ತಿಯಲಿ ನಿನ್ನ ಸುತ್ತಿರುವುದಾವ ಬೆಂಕಿಉರಿಯು? ಪಾಲಿಸುತ್ತಿರೆಯು ಬರ್ಚಿನಾಲಗೆಯ ಚಾಚಿ ಕಾಯುತಿರೆಯು (ಅಕಳು. ೦೩೬-೦೦) ; ದೊಣ್ಣೆ, ಕೋಲು, ಬರ್ಚಿ ಮುಂತಾದ ಸಮಯಕ್ಕೆ ಸಿಕ್ಕ ಆಯುಧಗಳನ್ನು ತೆಗೆದು ಕೊಂಡು, ಮುಸಲ್ಮಾನರು ಹಿಂದೂಜನರ ಮನೆಗಳನ್ನು ಹುಗ್ಗಿದರು (ಶಂಪಾ೯. ೬೯). ಬರ್ಜಿ : ಬರ್ಜಿಯಿಂದ ಸಂದಿಯಲ್ಲಿ ತಿವಿದಾಗ ಹಾವು ಹೊರಬಂತು (ಜಾ). ಭರ್ಚಿ : ಕೆಲವು ಸಮಾಜಗಳಲ್ಲಿ ಭರ್ಚಿಯನ್ನು ಗುರಿಯಿಟ್ಟು ದೂರದಿಂದ ಎಸೆದು ಪ್ರಾಣಿಗಳನ್ನು ಕೊಲ್ಲುತ್ತಿದ್ದರು (೩೦ಸಾ. ೨೦). ಭರ್ಜಿ : ಗಂಡುಕೊಡಲಿ. ಭರ್ಜಿ, ಗುರಾಣಿ ಎಲ್ಲವನ್ನೂ ಧರಿಸಿದ್ದ (ಆರ್ದು೯. ೩೨) ; ಕಾಸಕ್ ಸಿಪಾಯಿಯೊಬ್ಬನು ತನ್ನ ಬಂದೂಕ ವನ್ನೂ ಭರ್ಜಿಯನ್ನೂ ಕೈಯಲಿ ಹಿಡಿದುಕೊಂಡು ಕೆಲವು ಸಮಯದಲ್ಲಿ ಆ ಬಾಗಿಲನ್ನು ಕಾಯುತ್ತಾ ನಿಂತಿರುತ್ತಾನೆ (ಕುರಿಪಾ. ೨೩).

[← ಹಿಂ. ಬರಛಾ, ಬರಛೀ ; ಮರಾ. ಬರಚೀ, ಬರಛೀ, ಬರಶೀ]

**ಬರ್ಚಿಗಾರ** (ನಾ). ಈಟಿಯನ್ನು ಹಿಡಿದಿರುವವನು ; ಬರ್ಜಿಯಿಂದ ಹೋರಾಟ ನಡೆಸುವ ಸೈನಿಕ : ಬರ್ಚಿಗಾರರ ಬಲವೆ ಬೇಡಾರ ಬಟ್ಟಂತೆ ಒಟ್ಟಿಲದಲಿ ಜೋಳದ ನೆಲುವು (ಕಣಗಿ. ೨೨-೩).

[ಬರ್ಚಿ + – ಗಾರ (< – ಕಾಱ)]

Δ **ಬರ್ಚಿಸು** 'ಬಚ್ಚಿಸು$_3$' ನೋ.

Δ **ಬರ್ಚು** 'ಬಚ್ಚು$_3$' ನೋ.

**ಬರ್ಜಿ** 'ಬರ್ಚಿ' ನೋ.

**ಬರ್ತರಫ್** 'ಬರತರಫು' ನೋ.

**ಬರ್ತರ್ಫ್** 'ಬರತರಫು' ನೋ.

**ಬರ್ದ** (ನಾ). ಜಾಣ್ಮೆಯುಳ್ಳವನು ; ಬುದ್ಧಿವಂತ : ರತಿಪತಿಯ ರಾಜಧಾನಿಯ ಚತುರೆಯರೊಳ್ ಸುಖಿಪ ಬರ್ದನೀ ಗ್ರಾಮ್ಯಯನೇಂ ಕ್ಷಿತಿಪಾಲ ನೆನೆಗುವೇ ಮಾಳತಿಗೆರಗಿದ ತುಂಬಿ ನೆನೆಗುಮೇ ಮಿಕ್ಕಲರಂ (ಬಲ್ಲ. ೦೦-೦೯). [ಬರ್ದು$_4$ + – ಅ$_7$ ]

**ಬರ್ದಂಡು** 'ಭರದಂಡು' ನೋ.

**ಬರ್ದಿಲ** (ನಾ). ೧. ಸಾವಿಲ್ಲದವನು; ಅಮರ ; ದೇವತೆ : "ಆಗಸ ವಟ್ಟೆಗರು ಸಗ್ಗಿಗರು ಬರ್ದಿಲ [ಪಾಠಾಂ. ದುರ್ಗ]ರೈದೆ ಯಾ ಪೆಸರು ಸಲ್ವುದು ಸುರರ್ಗೆ" (ಕಬ್ಬಿಕಾಂ. ೦೦) ; ಸಗ್ಗಮಂ ಸಾರ್ದು ಮುಂಗಿಲ್ದೀರ ನನಟ್ಟಿ ಬರ್ದಿಲರಂ ಸೋಲಿಸಿ, ಕನ್ನವೆಣ್ಗಳಂ ಸೆಱೆವಿಡಿವಂ (ಅದ್ಭುತ. ೨೯-೦೯) ; ಬಲುಗಬ್ಬಿಗನೊಬ್ಬನೆ ಬಾಳ್ವ ಬರ್ದಿಲಂ (ಗಿರಿಜಾ. ೦೦೬-೬). ೨. ದೇವತೆಗಳ ಲೋಕ ; ಸುರಲೋಕ ; ಸ್ವರ್ಗ : "ಬರ್ದಿಲಂ, ಸಗ್ಗಂ –ಈ ೨ ಸ್ವರ್ಗದ ಪೆಸರ್" (ಕಕಾ. ೯೬-೦೭) ; ಬರ್ದಿಲಂ ಸಗ್ಗಕ್ಕೆ ಪೆಸರ್ (ಕಮದ. ೯೩) ; ಶ್ರೀರಂಗರಾಜಂ ಅಪುತ್ರನಾಗಿ ಬರ್ದಿಲಮನೈದ ಲೊಡಂ (ಶಿವಂ. ೨-೦೩).

ಬರ್ದಿಲರ ಬಡಗಿ = ದೇವತೆಗಳ ಬಡಗಿ ; ವಿಶ್ವಕರ್ಮ : ಪೆಸರ್ ನಳಂ. ಬರ್ದಿಲರ ಬಡಗಿಗೆನಗೆ ಪುಟ್ಟಿದಾತಂ (ಶ್ರೀ ರಾಕು. ೩೬೭-೯೩).

[ಬರ್ದು$_3$ + – ಇಲ]

**ಬರ್ದಿಲನಾಡು** (ನಾ). = ಬರ್ದಿಲ ೨: ಪಗೆದೊರೆಗಳುಮೊಂದಿದರಾ ಬರ್ದಿಲನಾಡ ಬಾಟ್ಟಿಯ ಸಿರಿಯಂ (ಅಶ್ರು. ೦೭-೪೪) ; ಕರ್ವೆಟ್ಟುಗಳೀಗಳ್ ಪೂರ್ವವೈರಮಂ ಬಗೆದು ಬರ್ದಿಲನಾಡಿಂಗೆ ದಾಟಿಡಲ್ಕೆ ದಂಡೆತ್ತಿ ಪೋಪು ವಕ್ಕುಂ (ರಾಮಾಶ್ವ. ೩-೩). [ಬರ್ದಿಲ + ನಾಡು]

**ಬರ್ದಿಲವಟ್ಟೆ** (ನಾ). ಸ್ವರ್ಗದ ದಾರಿ ; ದೇವಲೋಕದ ಮಾರ್ಗ ; ಆಕಾಶ : ಬರ್ದಿಲವಟ್ಟೆಯೊಳೈತರುತಲಿರ್ದ ಹನುಮನಂ . . . ತಿಳಿದಳಾ ಸಿಂಹಿಕೆ (ಶ್ರೀರಾಮಾ. ೪೦೦-೨೦೪). [ಬರ್ದಿಲ + ಬಟ್ಟೆ$_1$]

**ಬರ್ದಿಲಾಣ್ಮ** 'ಬರ್ದಿಲಾಳ್ಮ' ನೋ.

**ಬರ್ದಿಲಾಳ್ಮ**, ಬರ್ದಿಲಾಣ್ಮ (ನಾ). ದೇವಲೋಕದ ಒಡೆಯ ; ಸ್ವರ್ಗದ ರಾಜ : "ಬರ್ದಿಲಾಳ್ಮ[ಪಾಠಾಂ. ಣ್ಮ] ಸಗ್ಗಿಗರೆಱೆಯ . . . ಸುರಪತಿಯು ನಾಮಮಕ್ಕುಂ" ( ಕಬ್ಬಿಮಾ. ೦೦ ). ಬರ್ದಿಲಾಣ್ಮ : ಬರ್ದಿಲಾಣ್ಮನಾಗಿರ್ದೊಡಲ್ಲದೆಯ ಓರೊರ್ವನುಂ ಬೇಗುದಿಯಳೊಂದೆ ಬಗೆ ತೊಟಲ್ವಪನ್ (ಅರ್ಧಕ್ರ. ೩-೩೭). [ಬರ್ದಿಲ+ಆಳ್ಮ]

**ಬರ್ದಿಸು** (ಕ್ರಿ). ತಾಳಿಸು ; ಬಾಡಿಸು ; ಹುರಿ : ತತ್ತಟಗುದಿದು ಕಾಯ್ದು ಕಾಯ್ಗೊಂಡದೆಣ್ಣೆಯೊಳರ್ದಿ ಬರ್ದಿಸುತ್ತುಮಾಪಾದಮಸ್ತಕಂ ಬರಂ ವ್ಯತ್ತಿಸಿ ಪತ್ತಿ ತಿದಿಯುಂಗಿಯುತ್ತೆ (ಅಕಪು. ೧೦-೦೦ ವ).

[ಬರ್ದು$_1$ + – ಇಸು$_3$]

**ಬರ್ದು$_1$** (ಕ್ರಿ). ೧. ಸಾಯು ; ಮರಣವನ್ನು ಹೊಂದು : "ಬರ್ದು–ಮರಣೇ" (ಶಮಾ) ; ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ ಪೊಂಗಿ ಸೊಡಗರ್ಡಿಯ ಮೇಲೆ ಪತಂಗಂ ಪಾಯ್ವಂತೆ ಪಾಯ್ದು ಬರ್ದುದು ಸಿಂಗಂ (ಕಾವ್ಯಸಾ. ೦೦೦೪ ಶೂದ್ರಕ) ; ಅತಿ ಶೋಕಾಗ್ನಿಯೊಳರ್ದು ಬರ್ದು [ಪಾಠಾಂ. ಬ್ದು] ಪುದಿದಾತ್ಮಧ್ಯಾನದಿಂ . . . ದುರಂತದುಃಖಮನುಣಲ್ಬೇಡ ( ಆದಿಪು. ೩-೩೭ ). ೨. ನವೆ ; ಬಾಡು ; ಸೊರಗು : ಪರಮಮಿತ್ರಾ ಇಂತೇಕೆ ಬರ್ದಿ[ಪಾಠಾಂ. ಬಟ್ದು] ಬಿಂಬಳಂ ಬಾಡಿ ಪಾಡಱಿದುಬ್ಬೆಗಂಬಟ್ಟಿರ್ದೆ (ಪಶ್ಚಾರಾ. ೩೯-೩).

[ದೇ. ॥ ತಮಿ. ವರುನ್ತು]

**ಬರ್ದು$_2$** 'ಬಾಟು$_1$' ಪರಾ.

**ಬರ್ದು$_3$** (ನಾ). ೧. ಸಾವು ; ಮರಣ : "ಬರ್ದನಲ್ ಸಾವು" (ಕರ್ಣಾ. ೪೩) ; ಎನ್ನೊಳ್ ಕೂರ್ತಿರಪ್ಪೊಡೆ ಬರ್ದನ ಪೊರ್ದನ ಮುನ್ನಮೆ ಶ್ರೀರಘುನಾಯಕಂ ಗಣ್ಪಾರೆ ಕಂಡು ಧನ್ಯನಪ್ಪಂತು ವರಮಂ ಕರುಣಿಪುದು (ರಾಮಾಶ್ವ. ೧೪೦-೦೦). ೨. ಸಾವು ಇಲ್ಲದ ಸ್ಥಳ ; ಸ್ವರ್ಗ : "ಬರ್ದನೆ ಸ್ವರ್ಗವೆಂದೆನಿಪುದುಂ" (ಕವಿ. ೬೨). [<ಬರ್ದು$_1$]

**ಬರ್ದು$_4$, ಬದ್ದು$_2$** (ನಾ). ಜಾಣ್ಮೆ ; ಪ್ರೌಢಿಮೆ ; ಕೌಶಲ : "ಬರ್ದನೆ ಪ್ರೌಢಿಯೊಳಕ್ಕುಂ" (ಕರ್ಣಾಟ. ೧೬) ; ಉಪರಿಚರವಸುಹಾರಾಜನಿಂದಗ್ಗಳಂ ಪೆಱರಾರುಮಿಲ್ಲಮೀ ಸಂಸಾರದೊಳ್ ಬರ್ದ ಬಾಲನೀತನೆ ಬರ್ದನೆಂದು ಪೊಗಟ್ಟೊಡೆ (ಪಂಪಭಾ. ೦೩೬-೨೦) ; ಮಸೆದ ಮದನನ ಪೊಳೆವಲರ್ಗಣೆಗಳಂತೆ ಕಣ್ಣೊಳ್ ಬೆಳೆದೆಳಸಿ ಬಂದಿರ್ದ ಮಾಟದಾಟದ ಮುಂದ್ದಿನ ಬರ್ದನ ಪರಿವಾರದೇವಿಯರುಮಂ . . . ಕಂಡು (ಆದಿಪು. ೨-೬೩ ವ) ; ಆ ಸರಸತಿ ಕೂರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದನೇಟಿಗ್ಗಿಯಂ (ಕರ್ಣಾಟ. ೩) ; ಅಧರಾಮೃತಮಂ ನಿಚ್ಚಂ ತಣ್ಣನೆ ಸವಿವ ಬರ್ದುಕಳ್ಗೆ ಬರ್ದಲರೇಂ ಪಾಸಟಿಯೆ ? (ರಾಮಾಶ್ವ. ೬೦-೦೮). 'ಬರ್ದುಗ' ಪಠಾ. **ಬದ್ದು$_3$** : ಆತನಂ ಕಾಣಲೊಡಂ ಕರಂ ಬಯಸಿ ತಾಮೆಱಿದಟ್ಟುಪರಟ್ಟೆ ಕೂಡೆಯುಂ ನಾ[ಣ್]ಲಿವನ್ನರಾದರೆನುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ ಬಾಲಿಕೆಯುಮಂತುಗೆ ಕೂಡುತೆ ಗೆಲ್ದಮಾತನಂ (ಜಂಹಂ. ೩-೬೦). [ ? ]

**ಬರ್ದುಂಕಿಸು, ಬದುಕಿಸು, ಬರ್ದುಕಿಸು** (ಕ್ರಿ). ೧. ಕಾಪಾಡು ; ರಕ್ಷಿಸು : ನಿನ್ನೊಳಗೀಕೆ ತಾನೆಯೊಲವಪ್ಪಾ ಪಾಂಗುಮಂ ಪೆಂಡಿರೊಳ್ ಸರಿಗಂಡೀಕೆಯ ನೀಂ ಬರ್ದುಂಕಿಪುದು (ಶಾಂತಿಪು. ೫೬-೯೫). ೨. ಮುಕ್ತಗೊಳಿಸು ; ಬಿಡುಗಡೆ ಮಾಡು : ವಿಜಯನೆಂಬ ಕುಮಾರನಂ ಪಿರಿದು ತಂತ್ರಂಬೆರಸು ಪೋಗಿ ಏನಾನುಮೊಂದುಪಾಯದಿಂದೊದ್ದಾಯನನ ಸೆಱೆಯಂ[ಯಿಂ] ಬರ್ದುಂಕಿಸಿ ರಾಜಗೃಹಕ್ಕೊಡಗೊಂಡು ಪೋದೊಡೆ (ವಡ್ಡಾರಾ. ೦೬೫-೦೬). **ಬದುಕಿಸು** : ೧. ಸದ್ಭಾವನೆಯೆ ಪ್ರಸನ್ನವಾಗಿ ಚಿದ್ಬಿಂದುವಿನೊಳು ಪ್ರತಿಬಿಂಬಿಸುತ್ತಿಪ್ಪ ಚಿದ್ಬ್ರಹ್ಮವನೊಳಕೊಂಡ ಮಹಾಶರಣರ ತೋರಿ ಬದುಕಿಸಾ ಎನ್ನ (ಅಧಶ. ೦೬-೯೨) ; ಶಿವಾಚಾರ ಶಿವಭಕ್ತಿ . . . ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ ಎನ್ನ (ಅಕಂದೇ. ೦೯೮-೦೯೩) ; ಬದುಕಿಸು ನನ್ನೊಡೆಯನ ದಮ್ಮಯ್ಯ (ಕೋಗಿಲೆ. ೫೦-೫). ೩. ಬದುಕುವಂತೆ ಮಾಡು ; ಜೀವವುಳಿಸು : ಅಂದು ಮೃತಸಂಜೀವಿಯೌಷಧಿಯಿಂದ ಬದುಕಿಸಿ ಮನೆಗೆ ತಂದನು (ಸಂಕಶ. ೫೦. ೨-೦೫) ; ಅಮ್ಮಯ್ಯನಿಗೆ ಮರಣಸಂಭವವಾದರೆ ಮಾರ್ಕಂಡೇಯನಂತೆ ಈಶ್ವರನನ್ನು ಮೆಚ್ಚಿಸಿ ಬದುಕಿಸಿಕೊಳ್ಳುವೆನೆಂಬ ಭರವಸೆ (ಕಂಗಾಳ್. ೩೨). **ಬರ್ದುಕಿಸು** : ೧. ಅವರೆನ್ನಂಘ್ರಿದ್ವಯದೊಳೆಱಗಿ ಬರ್ದುಕಿಪುದೆಂದರ್ (ವಿಕ್ರಾ. ೬-೦೯೫). [ಬರ್ದುಂಕು + – ಇಸು$_3$]

**ಬರ್ದುಂಕು, ಬದುಂಕು, ಬದುಕು$_1$, ಬರ್ದುಕು$_1$, ಬಟ್ದುಂಕು** (ಕ್ರಿ). ೧. ಜೀವಧಾರಣೆ ಮಾಡು; ಪ್ರಾಣವನ್ನುಳಿಸಿಕೊಳ್ಳು; ಜೀವಿಸು : ಕರ್ಮಕ್ಕೋಡಿ ಬರ್ದುಂಕಲ್ಕೆಮಱವರಾರ್ ಭೂತಳದೊಳ್ (ಕಬಾ. ೦-೬೨); ಪಗೆವರೊಕ್ಕಲೊಳೋಪೆಸಲೊರ್ವರಿಲ್ಲದಂತಿರ ತವೆ ಕೊಲ್ಲುವಂತುಮರಿಕೇಸರಿಗಾಂತು ಬರ್ದುಂಕಲಕ್ಕುಮೋ (ಕಂಕಶಾ. ೯-೫೬); ಸಲ್ಲರ ಕೂಡು ವಾಸೆಯೆ ಬರ್ದುಂಕುವುದರ್ಕೆ ನಿಮಿತ್ತಮಾಗದೇ (ಕಾದಂಬ. ೩೨೮). ೨. ಜೀವನವನ್ನು ನಡಸು; ಬಾಳನ್ನು ಸಾಗಿಸು ; ಹೊಟ್ಟೆಹೊರೆ : ಸೇವಕಂ ಮೊದಲೊಳರಸಂಗಂ ತದನಂತರಂ ಪ್ರಧಾನರ್ಗಂ . . . ಭೀತನಾಗಿರಲ್ವೇಟ್ಕುಂ. . . ಇಂತು ಲಘುತರಮಪ್ಪ ಸೇವೆಯಿಂ ತನ್ನಿಚ್ಛೆಯೊಳ್ ಬರ್ದುಂಕುವ ಶುನಕನ ಲೇಸು (ಕಂಕಕಂ. ೫೨-೨೦); ಹರಹರ ಕರ್ಮದೊಳ್ ಬಳಲದಿಂತು ಬರ್ದುಂಕಿದೆನ್ಕೆ ಸದಾಶಿವಾ ನರಪರ ಸೇವೆಯೊಳ್ ಕುಧಿಯುದಿಂತು ಬರ್ದುಂಕಿದೆನ್ಕೆ (ಸಂಶಾಕ. ೨೩). ೩. ಬಿಡುಗಡೆಯನ್ನು ಹೊಂದು; ಮುಕ್ತವಾಗು : ಆಕೆ ಮದನನ ಕಯ್ಯಿಂ ಬರ್ದುಂಕಿದರಲಂಟು ಬರ್ಪಂತೆ ಬಂದು (ಶಂಕಶಾ. ೩-೦೯ ವ); ಬಂದುದು ಮದನನ ತಿರುವಿಂ ಬರ್ದುಂಕಿದ ಲರಂಬಿನವೋಲ್ (ಸುಕುಮಾ. ೯-೦೦೬); ಸೆಱೆಯಿಂ ಬರ್ದುಂಕಿದಂ (ಕಾಶಾಕೂ. ೯೦ ಅಧ). ೪. ಸಾರ್ಥಕತೆಯನ್ನು ಹೊಂದು ; ಕೃತಾರ್ಥವಾಗು ; ಧನ್ಯತೆಯನ್ನು ಪಡೆ : ಬಂದ ಭವಂಗತಿಸುಖಮುಖದಿಂದಂ ಮೆಯ್ಯಿಕ್ಕಿ ಹರ ಬರ್ದುಂಕಿದೆವೆನುತುಂ (೧೦೪. ೦೦-೧೯). ೫. ಪಾರು ; ನುಸುಳು; ತಪ್ಪಿಸಿಕೊಳ್ಳು : ಆದಂ ತರ್ಪರಗಿಳಿಯನೊಂದು ಗಿಡುಗನೆಡೆಗೊಂಡು ಜಗುನೆಯಂ ಪಾಯ್ವಾಗಳುಗಿಬಗಿಮಾಡಿದಾಗಳದಱ ಕೈಯಿಂ ಬರ್ದುಂಕಿ ತೊಱೆಯೊಳಗೆ ಬಿಟ್ಟೊಡೆ (ಶಂಕಶಾ. ೦-೬೬ ವ) ; ತತ್ಪಲಂಗಳ ಸಮ್ಮತೋಪಮಂಗಳನಾರೋಗಿಸುತ್ತುಂ ಸುಖದಿನಿರ್ದೊಂದುದಿವಸಂ ತನ್ನ ಕೈಯಿಂದಂ ಬರ್ದುಂಕಿದ [ಪಾಠಾಂ. ಬಿದಿರ್ದ] ಪಣ್ಣಂಬೋಧಿಮಧ್ಯದೊಳ್ ಬೀಟ್ಟುದುಂ (ಕಂಕಕಂ. ೨೬೬-೦೬). **ಬದುಂಕು** : ೧. ಈ ನೃಪನಂ ಕಾವವನಾವ ಅಱನೃಪನಮೆನಿಯಿಸೆ ಬದುಂಕುವನ್ನರುಮೊಳರೇ (ಶಾಶಾ. XI-೧, ೬೯-೦೦; 1088); ನಿನ್ನೊಳಂ ತೊಡರ್ದು ಕಾದಿ ಬದುಂಕುವನೇಂ ತ್ರಿನೇತ್ರನೋ (ಎಕ. VI. ಕಡೂರು. ೦೯೯-೯೬; 1205). ೪. ರುದ್ರರಿರ ನಾನಾವ ಕಾಲದೊಳದ್ರಿಜೇಶನ ಪದಯುಗವನುದ್ಯದ್ಭ್ರುತಿಯೊಳರ್ಚಿಸಿ ಬದುಕುವ ಪುಣ್ಯಮಾದಪುದೊ (ಬಸಪು. ೯೫-೯೬). **ಬದುಕು$_1$** : ೧. ತಳವಱ ಕಳ್ಳರ ಬಾರಿಯೊಳೋಗಾಗದೆ ನಿನ್ನ ಬದು[ಪಾಠಾಂ. ದುರ್]ಕಿ ಬಂದಂದ ಮಿದಾರಳವೀಗಳುಂಬಂ (ಸುಕುಮಾ. ೬-೨೯); ಸೂನು ಬದುಕಿದೊಡಿಂದು ನಿನ್ನಂ ನೋನುವೆವು (ಬಸಪು. ೯೮-೦೯); ವಿಷದ ಹುಟ್ಟಿಯೊಳೆಱಗಿ ನೊಣ ಜೀವಿಸುವುದೇ ಶಿವಶಿವ ಕುಮಾರನ ಮುಸುಡ ಮುಂದಕೆ ಬಿದ್ದು ಬದುಕುವುದುಂಟೆ ಭಟನೀರ (ಕುಮಾರವ್ಯಾ. ೬-೯೦). ೨. ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟು ಸುರಕ್ಷಿತವ ಮಾಡುವ ಭರವ ನೋಡಾ . . . ಸಂಗಮದೇವನ ಪೂಜಿಸಿ ಬದುಕುವೋ ಕಾಯವ ನಿಶ್ಚಯಿಸದೆ (ಬಸವ. ೧೬೨); ತೊತ್ತಿರೋಳಿ ತಳೋದರಿ ಬೆರಸಿ ಬದುಕಲಿ ಕರ್ಣ ಕಳುಹಿವಳ (ಕುಮಾವ್ಯಾಸ. ೦೫-೮). ೪. ನೀನೊಲಿದ ವಿಭೂತಿಯ ನಾನು ಧರಿಸಿ ಬದುಕಿದೆನು ಕಾಣಾ (ಅಧಶ. ೦೬-೯೪); ನೀವೆನ್ನ ಮಂದಿರದೊಳಾರೋಗಿಸಿ ಧೊಡಾನಿಂದು ಬದುಕುವೆನು (ಬಸಪು. ೬೦-೨) ; ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು (ಕಶಿ. ೫೩-೯೬ ಪದ್ಯ). **ಬರ್ದುಕು$_1$** : ೧. ನೀನ್ನುಡಿದು ಬರ್ದುಕಿದ್ದೆ ಪೆಱರೆನ್ನಿದಿರೊಳ್ ನುಡಿದು ಕರ್ಣನಂ ಬರ್ದುಕುವರೇ (ಶಂಕಶಾ. ೦೩-೨೬); ಪಿರಿದಪ್ಪಾಪತ್ತೆಲ್ಲವುಂ . . . ಬಿದಿರ ಗಂಟಂ ಕಡಿವಂತಿರೆ ಕಡಿದು ಬರ್ದುಕಿ ಬಂದೈ (ಕಡಾಂಕಶ್ಯ. ೩-೨೯೬ : ಈಯ ಲರ್ವಿಜ್ಜಣಗೆಯನಿನಿತಾಯಾಸದೆ ಬೀಸಲೇಕೆ . . . ಈಯೆಲರಿಂ ಬರ್ದುಕಲೆಂತುಮಮನಾರ್ತವೆನೇ (ಕಂದ್ರಪು. ೬-೯೦). ೨. ಜನಪತಿಗಳ್ ನುಡಿಯಲ್ ಪೊರ್ದನಿಯಾಂತಸುಪದಿಸಿ ಬರ್ದುಕಲೊಲ್ಲದೆ ಮಾರ್ಕೊಂಡನುಚಿತವಿದೆಂದು ಮಾಣಿಪ ಮನುಜೋತ್ತಮರೆಲ್ಲಿಯನುವಿರ್ಪರ್ ಜಗದೊಳ್ (ಗಾಡಂಕು. ೫೯೨) , ಖಳನು ಗುಣಗಣದಾವಾನಳನಃ . . . ಸಮಗ್ರದೋಷಾವಿಳನಂ ಪೆಸರ್ಗೊಂಡು ಬರ್ದುಕುವನ್ನನದಾವಂ (ಕೃಷ್ಣಪು. ೦-೫೨). ೩. ನೀರಾಂಜನೆ ಕರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿತ್ತನಿಸುತ್ತೊಳಪೊಕ್ಕಳ್ (ಆದಿಪು. ೯-೦೯); ಸಲ್ಲಲಿತಗಾತ್ರಿಯೊರ್ವಳ್ . . . ಮನೋಜನ ಬಿಲ್ಲಿಂ ಬರ್ದುಕಿದ ಶರಾಳಿಯಂತಿರೆ ಬಂದಳ್ (ಕಡಾಂಕಶ್ಯ. ೬-೧೯೯). ೪. ನೆಳಲಾದುದು ಧಮ್ಮಿಲ್ಲಂ . . . ಶೀತಳತರ ಜಳಮಾದುದು ಕೋಮಳೆಯಧರಮರೀಚಿ ಪಾಂಥನೇಂ ಬರ್ದುಕಿದನೋ (೧೦೪. ೨-೨೦); ಪರಮಂಗಾರುವವನದಿಂವಿಡಿದು ಬರ್ದುಕಿಂ (ಕದ್ವರಾ. ೮-೬೩): ಅಧಿಕಪರವಸ್ತುವಂ ಕಂಡವರಡಿವಿಡಿದು ಬರ್ದುಕು (ರಾಕಶಂ. ೩-೨೮). ೫. ಬೀಸುವ ಚಾಮರಾಳಿ

ಸುಂದರಿಯರ ಕೆಯ್ಗಳಿಂ ಬರ್ದುಕಿ ಬಿಟ್ಟುವು (ಶಂಕರಾ. ೬-೨೯). ೬. ಸಂರಕ್ಷಿತವಾಗಿರು; ನೆಮ್ಮದಿಯಿಂದಿರು : ಪ್ರಿಯವನಿತಾಘನಸ್ತನದಿ ಜುಂಬನೆಂಳು . . . ವಿಸುಪಾ ಗಭೀರನಾಭಿಯೊಳೊಳವೊಕ್ಕು ಕಾಮಾಂಕ ಜನಂ ಬರ್ದುಕಿರ್ದುದು ಬಂದ ಮೂಗೆಯೊಳ್ (ಆಚಾಚು. ೬-೨೨); ವಾರಿಜ ಭವ ಶಕ್ರಾದಿ ದೇವತೆಗಳು ನಾರಿಯ ಕುಚಮಂಡಲವ ಸೇರಿ ಬರ್ದುಕಲೆಂದು ಮದನನ ಮುಂಗಡೆ ಮೋರ ಹೆಗ್ಗಾಳೆ ಸಾರುದುದು (ಕೋಚಕ. ೬-೦೬).

Δ ಬಟ್ಟುಂಕು : ೧. "ಬಟ್ಟುಂಕಿದಂ = ಜೀವಿಸಿದಂ; ಬಿಡಲ್ಪಟ್ಟಂ" (ಕಭಿದ. ಕಿ. ೦).

[ದೇ.॥ ತುಳು. ಬರ್ದ್ಕ್, ಬದುಕು; ಕೊಡ. ಬದೀಕ್; ತೆಲು. ಬತುಕು, ಬದುಕು, ಬ್ರತುಕು, ಬ್ರದುಕು; ಕೋತ. ವದ್ಕ್; ತುವಿ. ಬತ್ಕ್; ಕೋಲಾ.ಪರ್ಜಿ. ಬದ್ಕ್]

**ಬರ್ದುಕಾಡು** (ಕ್ರಿ). ತಪ್ಪಿಸಿಕೊಳ್ಳು; ಪಾರಾಗು : ನಲ್ಲಳ ಮುಖಾಂಬುಜಮಂ ನಡೆ ನೋಡಿ ನೋಡಿ ಸಾಯದೆ ಬರ್ದುಕಾಡಿದಂ ಜವನ ಬಾರಿಯೊಳಂ ಬರ್ದುಕಾಡದಿರ್ಕುಮೇ (ಅಂಕ್ರ. ೦೨-೨೬); ಅಟ್ಟಿದ ನಿಮ್ಮ ವೇಗಡೆ ಬರ್ದುಂಕಿದನೆಂಬುದನಿಂದ್ರಜಾಲಮಂ ತೊಟ್ಟನೆ ತೋಱ ಬಂದು ಬರ್ದುಕಾಡಿದಂ (ಶಂಕರಾ. ೯-೯೯).

[ಬರ್ದುಕು₁ (< ಬರ್ದುಂಕು) + ಆಡು₁]

**ಬರ್ದುಕಿಸು** 'ಬರ್ದುಂಕಿಸು' ನೋ.

**ಬರ್ದುಕು₁** 'ಬರ್ದುಂಕು' ನೋ.

**ಬರ್ದುಕು₂**, ಬದುಕು₂ (ನಾ). ೧. ಬಾಳು; ಜೀವನ : ಕಟಾದವರ್ಗಟ್ಟುದ ಟ್ಟೊಡವರೇಟ್ಟೊಡಮಂತವರಿಂ ಬಟಿಕ್ಕೆ ಕಾಮುಟಾವೊಡಮೇಲರಂತ ವರಣಂ ತಮಗಂ ಬರ್ದುಕಿಲ್ಲ (ಶಂಕರಾ. ೨-೨೬); ಕಡೆಗಿವನ ಬರ್ದುಕು ನೀರೊಳ್ ನೆರೆಯದಿರದೆಂದು ಪೊಡವಿಯಾಡುವ ಮಾಶಿಗೆಡೆಯಾಗಿ ರವಿ ಪಡುವಕಡಲೊಳೀಹಾ ಬಿಳ್ದನು (ಭಾಚಶಂ. ೩-೯೭). ೨. ಆಸ್ತಿ; ಸಂಪತ್ತು : ಗುರು ಸುಂದರನಂ ಸಲೆ ಕೀರ್ತಿವರ್ಗೆ ಬಂಧುರತರ ವಸ್ತು ರಾಜಿಗಳನೀವುತ . . . ಬರ್ದುಕಿದೆಲ್ಲಮುಮಂತೆ ಸಮಾಪ್ತಿಯಾಗಲ್ (ಜಾಚಕ್ರ. ೩-೦೦-೩). **ಬದುಕು₂** : ೧. ಗಣಿಸುವೊಡೆ ಎಮ್ಮಿರವು ಬದುಕು ಜರುಜಾವು ನಿಮ್ಮ ಕರುಣವಲಾ (ಅಕಕ್ರ. ೩೦-೨೯); ಹಸನಾಗಿ ಇದೆ ಬದುಕು ಸಾಯಲಾಚಿನು ಎನಲು ಕುಸುರಿದಱಯದೆ ಬಿಡರು ದುಡುವವರು ಆಗ (ಕೃಕಂದ. ೨-೬೦-೩); ಹಳೆಯ ಭಾವನೆಗಳನ್ನು ಬೆರು ಸಹಿತ ಕಿತ್ತಿಸೆದು ಬದುಕನ್ನು ಹೊಸದೃಷ್ಟಿಯಿಂದ ನೋಡುವುದನ್ನು ಕಲಿ (ಜಾಜ್ಞಾ. ೦೬೯). ೨. ಆತನು ಹಿರಿಯ ಮಗನಿಗೆ ತನ್ನ ಬದುಕು ಎಲ್ಲ ಕೊಟ್ಟು ಚಿಕ್ಕವನಿಗೆ ಚನ್ನಾಗಿ ವಿದ್ಯೆ ಒಲಿಸಿದನು. (ಹಿರಿಯ ಮಗನು) ಕೆಲವು ದಿವಸಗಳಲ್ಲಿ ಆ ಬದುಕೆಲ್ಲ ಹಾಳುಮಾಡಿ, ಬಡವನಾದನು (ಕುಚಂಅ. ೦-೩); ಗಳಿಸಿದ ಬದುಕು ಧರ್ಮಕಾರ್ಯದಲ್ಲಿ ವ್ಯಯಗೊಳಿಸದಿದ್ದರೆ, ಅದು ಬೆಂಕಿಯಿಂದಾಗಲಿ, ಕಳ್ಳರಿಂದಾಗಲಿ, ರಾಜನಿಂದಾಗಲಿ ಅಪಹರಿಸಲ್ಪಡುತ್ತದಂತೆ ! (ಚಿಬ್ಬೊ. ೩೩). ೩. ಸರಕು; ಸಾಮಗ್ರಿ; ವಸ್ತು : ಅವರ ಅರಮನೆಯಲ್ಲಿ ಇರುವಂಥಾ ಬದುಕು ಸರ್ವಸ್ವವನ್ನು ಲೂಟಿ ಮಾಡಿಕೊಂಡು ಬಾ (ಕಾಕೀಂದ್ರ. ೯೬); ಕೆಲವರು ಕಳ್ಳರು ಕೂಡಿ ಒಂದು ರಾತ್ರಿ ಒಬ್ಬ ಸಾವುಕಾರನ ಮನೆಯ ಕನ್ನ ಕೊರೆದು ಸಿಕ್ಕ ಬದುಕು ತಕ್ಕೊಂಡು ಹೋಗಿ (ಕುಚಂಅ. ೩-೯೧). ೪. ಕೆಲಸ; ಕಾರ್ಯ : ರಮಾವಲ್ಲಭನ ದರ್ಶನಕೆ ಮಹಾತೆಯಿಂ ಕರೆಯಲಪಳೊಲ್ಲ ನಾನಿಲ್ಲಿರದೊಡೀ ಬದುಕ ಸಾಗಿಸುವರಾರೆಂದು ಚಂಡಿಗೊಳಲು (ಕೃಬಕಾ. ೯-೬೬); ಎರಡು ಆಳಿನ ಬದುಕನ್ನು ಒಬ್ಬನೆ ಮಾಡಿ ಸ್ವಲ್ಪಮಟ್ಟಿಗೆ ಸಣ್ಣಸಿದ್ದಾನೆ (ಕಳುಮ. ೯೦): ಈ ಹೊಲದ ಬದುಕು ಹದಗೊಳಿಸೋಣ ರಂಟೆಕುಂಟೆಯ ಹಿಡಿದು ಬೆವರು ಹರಿಸಿ (ಕಂಚುಬು. ೦೯-೨೦). ೫. ಕಸುಬು; ಉದ್ಯೋಗ; ವೃತ್ತಿ : ಇದುವೆ ಜೀವನವೀ ಕುಟುಂಬಕ್ಕಿದು ಉಪಾರ್ಜನೆ ಬದುಕಿದೆಂದೆನ್ನದೆ ಮೃಡನ ಕಲ್ಪಿತದಿನಹ ಬಡಕುಯಕದೊಳಿಂತು ಒದಗಿ ಪಡಿಯಂ ಕೊಡುತಿರಲು (ಚಸಕ್ರ. ೯೭-೩).

[<ಬರ್ದುಂಕು./ತಮಿ. ವತುಕ್ಕು; ತುಳು. ಬರ್ದ್ಕ್; ತೆಲು. ಬ್ರತುಕು; ಕೊಡ. ಬದೀಕೀ; ಕೋತ. ವದ್ಕ್]

**ಬರ್ದುಕುಗೆಯ್** (ಕ್ರಿ). ಜೀವನವನ್ನು ಸಾಗಿಸು : ಬಾಳು: ಆಮಿನ್ನಟ್ಟುಂಡು ಬರ್ದುಗುಗೆಯ್ವುದು ದಿಟಮೇ (ಕಕ್ಕ.ಚ. ೨೦೩ ಪ್ಯಾಕ್ಯಾ).

[ಬರ್ದುಕು₂ + ಕೆಯ್₁]

**ಬರ್ದುಗ** (ನಾ). ಜಾಣ; ನಿಪುಣ; ಪ್ರೌಢ : "ಬಿತ್ತಿಗನೆಂದುಂ, ಬರ್ದುಗನೆಂದುಂ ಪ್ರೌಢಂ" (ಳಕಾಶಾ. ೬೦-೩೩೬); ಪಗೆ ಕೆಳೆಯೊಳ್ ಕೆಳೆ ಪಗೆಯೊಳ್ . . . ನಂಬುಗೆ ಚಲ್ಲವತ್ತರೊಳ್ ಬರ್ದುಗರೊಳ್ ಜರ್ಝರ್ಗಮುಂಟು ಮಾಡವ ಕೀಡಂ (ಚಿತಿಮು. I. ೦೦೩). [ಬರ್ದ್ಕ್₄ + – ಗ್₁]

**ಬರ್ದುಗಾರ್ತಿ** (ನಾ). ಜಾಣೆ; ನಿಪುಣೆ; ಪ್ರೌಢೆ : ಬರ್ದುಗಾರ್ತಿಯರ ಬಹಿರಂಗಣಂಗಳೊಳ್ ಆಳವಟ್ಟ ಕಂಭಂಗಳಲ್ಲಿ ನೆಗಟ್ಟಿಗೆತ್ತಿ ತೆತ್ತಿಸಿದ ಸೌಭಾಗ್ಯಘಂಟೆಗಳೊಳಂ (ಪುಶ್ಯಕ್ರ. ೨-೬೬ ಪ).

[ಬರ್ದ್ಕ್₄ + < – ಕಾಱ + – ತಿ₁ (< – ಇತ್ತಿ)]

**ಬರ್ದುಗೆ** (ನಾ). ಸಾವು; ಮರಣ : "ಬರ್ದುಗೆಯೆನೆ ಸಾವು" (ಕಶಾರ್ಕ. ೦೬); ಎಳಮಾವೇ ತಳಿರುಯ್ಯಲೇ ಕೊಳೆ ತಗುಳ್ದಿಂದೋಳಮೇ . . . ಕರಂ ಬರ್ದಿದೆಂ ಗಳ ನಿ.ಮ್ಮೆಲ್ಲರುಮೆನ್ನ ಬರ್ದುಗೆಯನಾ ನಲ್ಲಂಗೆ ಪೇಟಂ (ಕಾಪ್ಯಾವ. ೦೨೯); ಜನಪಂಗೆ ತತ್‌ಬೌದ್ಧಮುನಿಯ ಬರ್ದುಗೆ ಸುದ್ದಿವೇಳೆ (ಅಚಾ. ೯-೨-೨) ; ಆತನ ಬರ್ದುಗೆಯ ಶಾಂತಿಗಿಂತಾತಗೆ ಮಾಳಯಮನೆನೀಂ ಮಾಟ್ಟ ಜನ್ನದ ಹಸುವಂ ಕಿಡಿದ್ದೊಡೆ ನಿಮಗೆ ಮುನಿಸಾಯ್ತೆ ! (ಕಾಶೂಕ. ೦೦೩-೬). [ಬರ್ದ್ಕ್₃ + – ಗೆ]

**ಬರ್ದುಗೆಡು** (ಕ್ರಿ). ಪ್ರೌಢಿಮೆಯಿಲ್ಲದಿರು : ಮನದೀಲಿಂ ತಮಾಳಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂಚನಲತಿಕಾಂಗಿಯರ್ ಬಯಸೆ . . . ಸಂದ ನಿನ್ನ ಮುನ್ನಿನ ಚರಿತಂಗಳಂ ನೆನೆಯದಿರ್ (ಅಂಕ್ರ. ೨-೯೬).

[ಬರ್ದ್ಕ್₄ + ಕೆಡು₁]

**ಬರ್ದುನುಡಿ** (ನಾ). ಜಾಣ್ಮೆಯಿಂದ ಕೂಡಿದ ಮಾತು; ಪ್ರೌಢೋಕ್ತಿ : ಒಪ್ಪಂಬೆತ್ತಿನಿದಾದ ಬರ್ದುನುಡಿಯುಂ ತಳ್ಳೋಜೆಯುಂ ನಿಲ್ವಿನಂ. . . ಪಲರಲ್ಲರ್ ತಿರ್ದಿದೀ ಕಬ್ಬಮೆಂತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲ್ಗೊಳ್ಳದೇ (ಕ್ಯಾಕಾ. ೩). [ಬರ್ದ್ಕ್₄ + ನುಡಿ₂]

**ಬರ್ದುವೆಣ್** (ನಾ). = ಬರ್ದುಗಾರ್ತಿ : ಅಲರ್ಗಳನಾಂತ ಪಾದಪಗಳೊಳ್ ತರದಿಂದೆಱಗಿರ್ದ ತುಂಬಿಗಳ್ ಪಲವು ಬಸಂತನೊಲ್ದೊಲಿಸಿ ಕಾಡುವ ರೂಢಿಯ ಬರ್ದುವೆಂಡಿರಂ ನಿರೆ ಸಱಗೆಯ್ವೆನೆಂದು ಪಲವಾಗಿರೆ ಮಾಡಿದ ತನ್ನ ಬಳ್ಳಿಸಂಕಲೆಗಳೆಂಬಿನಂ ಬಗೆಯನಿರ್ಕುಳಿಗೊಂಡುವು (ಕ್ಯಾಕಾ. ೩೩).

[ಬರ್ದ್ಕ್₄ + ಪೆಣ್]

**ಬರ್ದೆ**, ಬರ್ದ್ದೆ₁ (ನಾ). ೧. ಪ್ರೌಢೆ; ಜಾಣೆ ; ನಿಪುಣೆ : ವ್ಯಾಳಗಜಂಗಳ ಮನೆಂಕದ ಬರ್ದೆಯರುಮನುಗಿಬಗಿಮಾಡಿದ ಸಂತೋಷದೊಳ್ ಬಳ್ಳಿಬಳೆದ ವಿಶ್ರಾಂತತುಂಗನ ನಿಡುದೋಳ್ಗಳ್ ಗಣಿಕಾಜನಕ್ಕೆ ಕಾಮಪಾಶಂಗಳುಮರಾತಿಜನಕ್ಕೆ ಯಮಪಾಶಂಗಳುಮಾದುವು (ಶಂಕರಾ. ೨-೪೯ ಪ) ; ಬಯಸಲ್ ತಕ್ಕಂದದ ಬರ್ದೆಯರೊಲವಿಂ ಬಯಸಿ ಬಂದೊಡಂ ಬಗೆಯದ ಬಲ್ಮೆಯ ನಳ್ಳ ಸುಭಗನ್ನೆ (ಅಂಚಕ. ೯-೩೯) ; ಸಸಿಯಂ ಮೆಯ್ವಳಗಿಂದೆ. . . ಮೆಯ್ಗಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಕಿರಿದುಂ ಬೆಳ್ಮಾಡಿ ಬೀಟ್ಟಂತುಟುಬ್ಬಿಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಣೀಂ ಬೆಡಂಗಾದರೋ (ಕಶ್ಯಕಾ. ೦೬೯); ದಾದಿಯರುಂ ಬರ್ದೆಯರುಂ ಬೀದಿಯ ಮನೆಯೊಳ್ ಪೊಗಟ್ತೆವೆತ್ತೊಪ್ಪುವ ಮುತ್ತೈದೆಯರುಮಂತವರದೊಳ್

. . . ಸಂದಣಿಸಿರ್ಪರ್ (೩೪೦. ೯-೨೫). ೨. ಮಧ್ಯವಯಸ್ಸಿನವಳು; ನಡುಪ್ರಾಯದವಳು; ಪ್ರಬುದ್ಧೆ : ಕೆಳದಿಯರಿಂದು ಪ್ರಿಂದೆಗೆದು ಮೋನದೊಳೊಂದಿರೆ ಬಟ್ಟ ಬರ್ದಿಯರ್ಕಳಿನುಪಿನಿಂದೊಡಂಬಡಿಸೆಯುಂ ಬಗೆಗೊಳ್ಳದೆ. . . ದೇವಸಂಗೊಳಂತಿರೆ (೩೪೦. ೩-೨೮). ೩. ವಯಸ್ಸಾದವಳು; ವೃದ್ಧೆ; ಮುದುಕಿ : ರಸಭಾವಂ ಪಿಂಗೆ ಶೈಥಿಲ್ಯಮುದವಯುವದೊಳ್ಳಿವೆ . . . ಶಯ್ಯಾಗಿಂಬಾಗಿ ರಾರಾಜಿಸದಾದಂ ಬರ್ದಿಯಂ ಪೋಲ್ತು ಧಮಕೃತಿ ರಸದ್ವರ್ಗನಾದೇಯುಮಲ್ತೇ (ವ್ಯ.೩೦. ೦-೯೬); ತಡಿಗೆಳೊಡೆಯ ಕಳಾಗಳೆ ಬಿಡದೊಡನೆಯ್ತಂದು ಬರ್ದಿಯಂ ಪೀಡಿಸೆ . . . ಸುಂದರೇಶನ ಗುಡಿಗೆಯ್ದುತ್ತೆ ಶೋಕದಿಂದ ಪೊಡೆಗೆಡೆದುಸಿರ್ದಳ್ (ಹಾಲಾಸ್ಯ. ೯-೦೬-೨೨). ೪. ಸೂಳೆ; ಗಣಿಕಾಸ್ತ್ರೀ; ವೇಶ್ಯೆ : ಅಡರ್ದ ಕುಚದ್ವಯಂ ದಯಿತೆ ಬಿರ್ದುವಿವೇಕನೆ ಬರ್ದಿಯೆಂದಳಂತಡಿಗಡಿಗೋಪ ನೀಂ ಸರಸಕಿಪಮು ನಿವಾಸದೊಳ್ಪಟ್ಟ ಕಯ್ಯಾಳಿಂ ಪಿಡಿದಿರೆ ತವ್ಮೊಳಿಟ್ಟು ಸವಿದೋಜಾದ ದೂಸಜಿನೊಂದಹರ್ನಿಶಂ ಕೆಡೆದವು (೦೬೦೩ಕ. ೨-೦೦೯). ೫. ತಲೆಹಿಡುಕಿ; ಕುಂಟಣಗಿತ್ತಿ : ಪೊಸನಾರಂ ಕಲ್ಲೊಳಿತ್ತಲ್ ತ್ರಿಜೀಯುಲರಲನಾಕಾಶದೊಳ್ ಗಾಳಿಯಂ ಖಂಡಿಸಲ್ . . . ಆ ಬರ್ದಿಬಲ್ಲಳ್ (ವ್ಯ.೩೦. ೨೯-೯). ಬದ್ದೆ$_1$ : ೧. ಬೇಟಕಾರ್ತಿಯರಿವರೀಕೆಗಳ್ ಬಸನಿಗಳ್ ಕಡುಬದ್ದೆಯರೆಂದುಮಿಪಲತಾಂಗಿಯರನಿಸಿರ್ದರಂ.ನಯದೆ ನೋಡಿದನವ್ರತಿವೇಶ್ಯಸಂಭವಂ (೩೦೩೦. ೩-೯೮); ಬದ್ದೆಯರುಡುಸಿದೊಡುಡಕಲ್ತ ಕೊವರನಭಿನವಮದನಂ (೩೪೦೩ಕ. ೦-೩೯). ೪. ಕೋಳ್ಗಗ್ಗಳವಾದ ಮನೆಗಂ ತೋಳ್ಗಗ್ಗಳವಾದ ಬದ್ದೆಗಂ ಬೇಸತ್ತು (೩೩೦೩ಪು. ೯-೬೬ ಪ); ಮತ್ತಿನ ಗಂಡವರ್ಜೋಟಿಯಲ್ಲರಿಂದು ಮನದೋಗೆ ಬಟಾನೀರ್ಗುಡಿದ ಬದ್ದೆಯರೀ ಭವವಿಂತೆ ಪೋದುದು ಮಚುಭವದೊಳಾದೊಡವಿಶಾತನೊಳೆ ಬೇಟವುಕ್ಕೆಂದು ಪರಿಸಿ ಪರಿಚ್ಛೇದಿಸಿ ಕಾಮಾಗ್ನಿಯಂ ಪುಗೆಯುಂ (ಅರ್ಗ೩೮. ೩-೨ ಪ).

ಬದ್ದೆಮನೋಹರ = ಚತುರೆಯರನ್ನು ಆಕರ್ಷಿಸುವವನು : ✱ ರಾಷ್ಟ್ರಕೂಟಚಕ್ರವರ್ತಿ ನೃಪತುಂಗನ ಒಂದು ಬಿರುದು : ವೈರಿಭಯಂಕರಂ ಬದ್ದೆ(ಡ್ಡ?)ಮನೋಹರಂ ಅಭಿಮಾನಮನ್ದಿರಂ (ಇ೪. XII. ೨೦೯-೦೨; ೩೨೪); ಅಮೋಘರಾಮಂ ಬದ್ದೆಮನೋಹರಂ (ಎ೩. VII. ೨೦೬-೦೨; ೩೬೬). [ಬರ್ದು$_4$ + —ಎ$_2$]

ಬರ್ದಿಗ, ಬದ್ದಿಗ (ನಾ). ಒಬ್ಬಾತನ ಹೆಸರು : ಬರ್ದಿಗಂ ಕದಂಬಳಿಗೆ ಸಾಯಿರಮುಮನಾಳುತ್ತಿರೆ (ಎ೩. XI. ೩೩೩೪. ೦೦೯-೩;೨೩೦). ಬದ್ದೆಗ : ಶ್ರೀಮತ್ಪೃಥಿವ್ಯದ್ದಿಗ ಭೂಮಿಭತ್ರ್ತೃಸ್ತಂನ್ರ್ಯಾಧಿ ಪಾಲೋಜನಿ ನಾಗವರ್ಮಾರ್ಯ್ಯಃ (೪೩೩೬. ೨೩-೯-೬೬; ೩೩೩ಮ ೩೩); ಅವಾರ್ಯವೀರ್ಯಗಂಗೆ ಬದ್ದೆಗಂ ಪಿರಿಯ ಮಗಂ (೩೦೩೩೧. ೦-೨೩). [< ಭದ್ರ + —ಗ$_2$]

ಬರ್ದಿಗೆಯ್ತ (ನಾ). ಪ್ರೌಢಿಮೆಯುಳ್ಳವಳು ಮಾಡುವ ಕೆಲಸ : ಬಿರುದರ ಬಿಂಕಮುಂ ಪೊಗಟ್ಟ ಕುಂಟಣಿತೋಳ್ಗೆಳಸಿರ್ಪ ಸೂಳೆವೆಂಡಿರ ಸೊಬಗಿಂಗೆ ಮೈಮಾಜಿದು ಮೆಚ್ಚುವ ಬಿಂಕದ ಬರ್ದಿಗೆಯ್ತದೊಳ್ ಬೆರಸಿದೊಡಂದೆ ಬರ್ದಿನೆನುತಿರ್ಪ ಭುಜಂಗನೆ ತೋಳೊಳೇರ್ (೦೬೦೩ಕ. ೨-೬೨).

[ ಬರ್ದ + ಕೆಯ್ತ ]

ಬರ್ನರು (ನಾ). ಉರಿಯುವ ಅನಿಲದ ಅಥವಾ ಸೀಮೆಯೆಣ್ಣೆಯ ದೀಪಗಳಲ್ಲಿ ದೀಪದ ಜ್ವಾಲೆಗೆ ಆಕಾರವನ್ನು ಕೊಡುವಂಥ ಭಾಗ; ಜ್ವಾಲಕ : ಒಮ್ಮೆ ಹೊಗೆಗಟ್ಟುವುದೊಮ್ಮೆ ಭುಗ್ಗೆನುವುದು ಬರ್ನರು ಕೆಟ್ಟ ಲಾಟೀನು (೦೩೩೧. ೨೦೩-೬೮). [←ಇಂ. Burner]

ಬರ್ಫೆ 'ಬರ್ಫಿ' ನೋ.

ಬರ್ಫ 'ಬರ್ಫು' ನೋ.

ಬರ್ಫಿ, ಬರ್ಫೆ, ಬರ್ಫೆ (ನಾ). ಒಂದು ಬಗೆಯ ಸಿಹಿತಿಂಡಿ; ಮಿಠಾಯಿ : ಬರ್ಫಿ : ಪದಾರ್ಥಗಳು : ಒಂದು ರಾತಲು ಹಾಲಿನ ಹುಡಿ : ೧/೪ ರಾತಲು ಸಕ್ಕರೆ . . . ಗೇರುಬೀಜದ ಚೂರುಗಳು (೩೪೩. ೦೦೦). ಬರ್ಫೆ : ಪೇಡೇ ಬರ್ಫೆ ತಕ್ಕೊಂಡು (೩೦೦೩೩. ೩-೯೮); ಚೊಕ್ಕಟವಾದಂತ ಬೆಂಡುಬೆನಕ ಬರ್ಫೆ ತುಕ್ಕಡಿ ಕಲ್ಯಾಣಿಶಾವಿಗೆಳು (೩೩೦. ೪೬). ಬರ್ಫೆ : ಮಸಾಲೆ ಮಿಶ್ರಿತ ಕೇಸರಬರ್ಫೆ ಪೇಡೆ ಮೊದಲಾದ ಖಾದ್ಯಪದಾರ್ಥಗಳನ್ನು ಇಟ್ಟಿದ್ದರು (೩೦೩೩. ೨೦).

[ ←ಪಾರ. ಬರ್ಫೀ, ಬರಫ್ ; ಹಿಂ. ಮರಾ. ಬರ್ಫೀ, ಬರಫೀ]

ಬರ್ಫು, ಬರ್ಫ (ನಾ). ಮಂಜಿನ ಗಡ್ಡೆ ; ಹಿಮ : ನಗುವಾಗ್ಗೆ ಆಕೆಯ ತುಟಿಗಳೆರಡೂ ತೆರೆದು ಹಲ್ಲುಗಳು ಚಮಕಿಸಿದವು. ಅವು ಬರ್ಫಿನ ತುಂಡುಗಳಂತೆ ಶುಭ್ರವಾಗಿದ್ದವು (೩೦೩೩. ೩೩) : ಈ ಭಾಗದಲ್ಲಿ ಯಾವಾಗಲೂ ಬರ್ಫು ಇದ್ದು ಚಳಿಯು ಬಹಳಿದ್ದುದರಿಂದ ಏನೂ ಬೆಳೆಯಲನುಕೂಲವಿಲ್ಲ (೪೩೩. ೨೦). ಬರ್ಫ : ಉಗಿಯು ಘನೀಘನವಾಗಿ ಮಳೆ, ಬರ್ಫಗಳ ರೂಪದಿಂದ ಕೆಳಗೆ ಬೀಳುತ್ತದೆ (೩೦೩೩. ೬-೦೬೪) ; ನಿಂತಲ್ಲಿಯೇ ಅವರ ಕೈಕಾಲು ನೀರಿನಲ್ಲಿ ಬರ್ಫಕ್ಕಿಂತ ತಣ್ಣಗಾದವು (೩೩೩. ೪೪೩).

[ ←ಪಾರ. ಬರ್ಫ್ ; ಹಿಂ. ಮರಾ. ಬರಫ್, ಬರ್ಫ್ ]

ಬರ್ಫೆ 'ಬರ್ಫಿ' ನೋ.

ಬರ್ಬರ (ನಾ). ೧. ಸುಸಂಸ್ಕೃತನಲ್ಲದವನು ; ಅನಾಗರಿಕ : "ಪಾಮರಂ ಪ್ರಾಕೃತಂ ಬರ್ಬರಂ" (೩೦೩೩. ೬೬-೮) ; ಒಂದಾನೊಂದು ಕಾಲದಲ್ಲಿ ಸಂಯಮಹೀನ ಬರ್ಬರರಾಗಿದ್ದವರು ಇಂದು ಮಾನವರಾಗಿದ್ದಾರೆ (೩೩೦೩. II. ೨೬೩) ; ಸೌಂದರ್ಯಪೂರ ಪ್ರಳಯಕ್ಕೆ ದೂರ ಬರ್ಬರನು ಕೈಯ ಚೆಲ್ಲಿ ಮಣ್ಣಾಗಿ ಹೋದ ; ಸಂಹಾರಕಾಲ ಕಲ್ಲಾಗಿ ನಿಂತಿತಲ್ಲಿ (೩೦೩೩. ೩೩-೩). ೨. ಸುಸಂಸ್ಕೃತವಲ್ಲದಂದು : ಯಾರೂ ಬಂಗಾಳಿಯನ್ನು ಸಡ್ಡೆ ಮಾಡುತ್ತಿರಲಿಲ್ಲ. ಸಂಸ್ಕೃತಪಂಡಿತರಿಗೆ ಅದು ಗ್ರಾಮ್ಯ, ಇಂಗ್ಲಿಷ್ ತಿಳಿದವರಿಗೆ ಬರ್ಬರ (೩೦೩೩. X. ೩೩೩). ೩. ನೇರವಾಗಿ ಅರ್ಥವಾಗದುದು ; ಅಸ್ಪಷ್ಟವಾದುದು : ನಷ್ಟ ಪಟ್ಪೀಠದೊಳ್ ಕುಳ್ಳಿರಲ್ ಕೇಳ್ದಿ ನಾನ್ ಪಕ್ಕಿಗಳ್ ಕರಳ್ಯಬಿಪ್ಪುರ್ಚಿಂದೆ ಚೀಜಾಡುವ ಬರ್ಬರದ ಮಾಚಿನುಡಿಯನ್ (೩೩೩. ೩೩-೩೩). ೪. ಹಳದಿಬಣ್ಣದ ಶ್ರೀಗಂಧ : "ಹರಿಚಂದನಂ ಮತ್ತೆ ಬರ್ಬರ ಮಕ್ಕು" (೩೦೩೩. ೯೯-೨೨). ೫. ಒಂದು ಬಗೆಯ ಗಂಧಕದ್ರವ್ಯ ; ಗೋರೋಚನ : "ಪೂತಿಗಂಧಃ — ಗಂಧಕ, ಬರ್ಬರ" (೩೩೦. ೩೩). ೬. ಒಂದು ಬಗೆಯ ಗಿಡ ; ಅಜಗಂಧಿಕೆ ; ನಾರುಂಬೇಳೆ : "ಬರ್ಬರಾ . . . ಅಜಗಂಧಿಕಾ — ೫ ನಾರಂಬ್ಯಾಳೇಗಿಡದ ಹೆಸರುಗಳು" (೩೩೩. ೦೯೯). ೭. ಮುಳ್ಳಿನಿಂದ ಕೂಡಿದ ಒಂದು ಬಗೆಯ ವೃಕ್ಷ ; ಬೊಬ್ಬುಲಿ ; ಜಾಲಿ : ಬರ್ಬರಂ=ಬಬ್ಬರಂ, ಬಬ್ಬರವೆಂದು ನಾಜುವ ಬೇಳೆಯುಂ, ಬೊಬ್ಬುಲಿಯುಮೆಂದು ದೇಶಮುಮಕ್ಕುಂ (೩೩೩. ೩. ೨೩೦ ೩೩). ೮. ಆರ್ಯರಲ್ಲದವರಿಗೆ ಸೇರಿದ ಒಂದು ದೇಶ ಮತ್ತು ಅಲ್ಲಿಯ ಜನಾಂಗ : ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾಪಹ ರಸಮುಂ . . . ನೆಗಟುತ್ತುಮಿರೆ (೩೩೩. ೨-೪೯ ಪ) : ತುರುಕ ಬರ್ಬರ ಪಾರಸೀಕರ ತುರಗವ್ಯಸಾವಿರ ಸಹಿತ ಮೋಹರಿಸಿ ನಿಂದನು ಶಕುನಿ (೩೩೩. ೦-೯) ; ನಡೆದುದು ಗೂರಿಬಲ . . . ಬರ್ಬರದ ದೂಹಾರಿ ಜೋನಗ ವಿಂಧ್ಯ ಬೋಟಕ ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬಳಿವಿಡಿದು (೩೩೩. ೯-೯-೯). ೯. ನೀಚ ; ಪಾಮರ. ೧೦. ದಡ್ಡ ; ತಿಳಿಗೇಡಿ. [ಸಂ.]

ಬರ್ಬರತೆ (ನಾ). ಒರಟುತನ ; ಕ್ರೌರ್ಯ : ಮರದ ಪಟ್ಟಿಗಳಂಥ ಸ್ವಲ್ಪವೂ ಪಾತಿಲ್ಲದ ಆಚಲವಸ್ತುಗಳನ್ನು ಬಟ್ಟು ಮತ್ತಾವುದರ ಮೇಲೂ

ಆ ಬರ್ಬರತೆಗಳನ್ನೆಲ್ಲಾ ಪ್ರಯೋಗಿಸುವ ಅವಕಾಶ ಆ ದುರ್ಬಲ ವಯಸ್ಸಿನಲ್ಲಿ ನನ್ನ ಸ್ವಾಧೀನದಲ್ಲಿರಲಿಲ್ಲ (ಶಿಶಂಕ. II. ೫೦). [ಸಂ. ಬರ್ಬರತಾ]

**ಬರ್ಬುರೆ** (ನಾ). ಒಂದು ಬಗೆಯ ಮುಳ್ಳಿನ ಮರ ; ಜಾಲಿ ; ಬೊಬ್ಬುಳಿ : ಮಾಕಂದಶಾಲಿ ಶುಕಶಿಶುವೀ ಕಂದಿದ ಬರ್ಬುರವನು ಸೇರ್ವುದೆ (ಶಂಶಕ. ೬-೨೮). [ಸಂ.]

**ಬರ್ಬೂರ** (ನಾ). ಜಾಲಿಮರ ; ಬೊಬ್ಬುಳಿ : ದೀರ್ಘಕ್ಕೆ ಹ್ರಸ್ವಂ — . . . ಬರ್ಬೂರ, ಬರ್ಬೂಲ — ಬೊಬ್ಬುಲಿ, ಬಬ್ಬುಲಿ (ಶಮದ. ೨೬೪ ವೃತ್ತಿ) ; ಗುರುವೆ ನಿಮ್ಮಂಘ್ರಿಯಂ ಬಿಡಲಾಜ್ಞೆನೆಂದೊಡುಜಿಲುತಿರೆಯಂತೆ ಗೆಯ್ಯೊಂದು ತಂದೊಂದು ಬರ್ಬೂರಧರಣೀಜದಡಿಯೊಳಗಿರಿಸಿ (ಶಬ್ದಮ. ೨-೨೩). [< ಸಂ. ಬರ್ಬುರ]

**ಬರ್ಮ** 'ಬೊಮ್ಮ' ನೋ.

**ಬಲ್ರು** 'ಬಜಿಲು' ನೋ.

**ಬರ್ಷಣ** 'ಭರಷಣ' ನೋ.

**ಬರ್ಹ** (ನಾ). ೧. ನವಿಲು ಮುಂತಾದ ಪಕ್ಷಿಗಳ ಗರಿ,_ಸೋಗೆ : "ಕಳಾಪಃ, ಬರ್ಹಃ — ಈ ೨ ಸೋಗೆ" (ಹಲಾಯು. ೪೦-೯೯); ಮದನನ ಪಚೆರತ್ನಪುಯಖೇಟಕದಂತಿರೆ ಬರ್ಬಿ ಬರ್ಹಮಂ ಪದೆದು ನವಿಲ್ಗಳಾಡೆ (ಶಗಶ. ೮-೩೦). ೨. ಎಲೆ ; ಪರ್ಣ; ಪತ್ರ : "ಬರ್ಹಂ, ಪರ್ಣಂ, ದಳಂ, ಪತ್ರಂ,ಪಲಾಶಂ, ಛದನಂ, ಛದಃ— ಈ ೭ ಮರದ ಎಲೆ" (ಹಲಾಯು. ೩೦-೩೦); ಬರ್ಹಂಗಳಿಂದಂ ಪೊರೆದಾಶಾಭಿತ್ತಿಯಂ ತನ್ನಯ ಪಸುರ್ವೆಳಗಿಂ ಪೂಸುತಿರ್ಪಂತೆ ಚೆಲ್ವಾಗಿರೆ ಮುಂದೊಂದಂ ಲತಾಮಂಟಪ ವನವನಿವ್ಯಂದಾರಕಂ ಕಂಡಂ (ಕಾದಂಬ. ೪೪೦). ೩. ಪರಿಜನ ; ಪರಿವಾರ. ೪. ಒಂದು ಬಗೆಯ ಸುಗಂಧದ್ರವ್ಯ : "ಗ್ರಂಥಿಪರ್ಣಂ, ಶುಕಂ, ಬರ್ಹಂ . . . ಕುಕ್ಕುರಂ— ೬ ಸ್ಥಾಣೇಯಕವೆಂಬ ಗ್ರಂಥ ದ್ರವ್ಯದ ಹೆಸರುಗಳು" (ನಿಘಂಟು. ೧೪೨). [ಸಂ.]

**ಬರ್ಹಿ$_1$** (ನಾ). ೧. ಬೆಂಕಿ : ಅಗ್ನಿ. ೨. ಯಜ್ಞ, ಯಾಗಾದಿಗಳಲ್ಲಿ ಬಳಸುವ ಒಂದು ಬಗೆಯ ಮೊನಚಾದ ಹುಲ್ಲು ; ಕುಶ : "ಬರ್ಹಿಃ ಕುಶಂ . . . ದರ್ಭೆಯದು" (ಶಂಗರಾ. ೩೪-೮); ಬರ್ಹಿಗಳ ಹೊರೆಗಳಿಂ ಸ್ರುಕ್ಸ್ರುವಾದಿಗಳ ಸಂದೋಹದಿಂದೆ . . . ದಕ್ಷನಧ್ವರಶಾಲೆ ಕಣ್ಗೆಸೆದುದು (ಶಂಪು. ೩೦-೨೪). [ಸಂ. ಬರ್ಹಿಸ್]

**ಬರ್ಹಿ$_2$** (ನಾ). ನವಿಲು ; ಮಯೂರ : ಗಿರಿಯ ತೊರೆದು ಬರ್ಹಿ ಪುಲ್ಲ ಮೊರಡಿಗೆಳಸಬಹುದೆ (ಶಾಂಶದೀ. ೩. ೧೫೨-೩೪೦); ಕೀರುರಗ ಕಪಿ ಕೋಕಿಲನ ಬರ್ಹಿಯ ಸುಧಾಕಿರಣನ . . . ರತ್ನಾಕರನಲೊಂದೊಂದು ಗುಣವಿರಬೇಉ ನೃಪರಿಗೆ (ಅನ್ಯಾಸ. ೦-೫೪). [ಸಂ. ಬರ್ಹಿನ್]

**ಬರ್ಹಿಣ** (ನಾ). = ಬರ್ಹಿ$_2$ : "ಕೇಕೀ, ಶಿಖೀ . . . ಬರ್ಹಿಣಃ, ಕಳಾಪೀ, ಸರ್ಪಾಶನಃ, ಮಯೂರಃ, ಶಿಖಾವಳಃ, ಶ್ಯಾಮಕಂಠಃ — ಈ ೧೦ ನವಿಲ್" (ಹಲಾಯು. ೪೦-೬೬); ಜಗತ್ಪ್ರಣೂತ ಭೂತಳಾಧಿನಾಥನರ್ಥಿಸಂಘಾತನವ ಬರ್ಹಿಣಾನಂದಕರಣಪ್ರತ್ಯಗ್ರಜಲಧರಾಗಮಂ (ಸುಕುಮಾ. ೦-೬೪ ವ) ; ಎಳಸುತಿರ್ಪಂ . . . ಉದ್ಯಾನಂಗಳೊಳ್ ಬರ್ಹಿಣಕಲಭರೆಯಾರ್ಕೇಳಿ ಮೇಳಕ್ಕೆ ನಿಚ್ಚಂ (ಅರಸೀ. ೦-೬೫). [ಸಂ.]

**ಬರ್ಹಿಣವಾಹನ** (ನಾ). ನವಿಲನ್ನು ವಾಹನವಾಗಿ ಉಳ್ಳವನು ; ಷಣ್ಮುಖ : "ಗೌರೀಪುತ್ರಃ, ಷಣ್ಮುಖಃ . . . ಬರ್ಹಿಣವಾಹನಃ, ಮಹಾಸೇನಃ, ಮಹಾತೇಜಾಃ, ಶರಜನ್ಮಾ (ಚ ಕಥ್ಯತೇ)— ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೫-೨೦). [ಸಂ.]

**ಬರ್ಹಿಣಿ** (ನಾ). ಹೆಣ್ಣುನವಿಲು : ತಾನಾ ಪುರುಷಕೇಕಿ ಬರ್ಹಿಣಿಯ ಸಮ್ಮುಖದಿ ಬರ್ಚಿತ ಕಲಾಪಮೇಚಕಸಹಸ್ರಗಳಂ (ಶಬ್ದಾಂಗ. ೫೪-೦೪೬೬). [ಬರ್ಹಿಣ + — ಇ$_2$]

**ಬರ್ಹಿರ್ಧ್ವಜ** (ನಾ). ೧. ನವಿಲನ್ನು ಪತಾಕೆಯಲ್ಲಿ ಉಳ್ಳವನು: ಷಣ್ಮುಖ. ೨. ಒಬ್ಬ ರಾಜನ ಹೆಸರು; ಮಯೂರಧ್ವಜ : ಇವಂ ಬರ್ಹಿರ್ಧ್ವಜನ ತನುಜನನಸೂಯುಕಂ ಧೀರನು (ಜೈಮಿ. ೨೫-೦೫). [ಸಂ.]

**ಬರ್ಹಿರ್ಮುಖ** (ನಾ). ಅಗ್ನಿಯ ಮೂಲಕ ಹವಿಸ್ಸನ್ನು ಸೇವಿಸುವವನು : ದೇವತೆ : ಹವಿರ್ಭೋಜನದ ಬರ್ಹಿರ್ಮುಖರು ನೆರದುದು ನೀರದಾಧ್ವದಲಿ (ಕೂಶಿಣ. ೧-೬-೪೦). [ಸಂ.]

**ಬರ್ಹಿಷ್ಕೇಶ** (ನಾ). ಬೆಂಕಿಯ ಅಧಿದೇವತೆ ; ಅಗ್ನಿ [ಸಂ.]

**ಬರ್ಹಿಷ್ಠ** (ಗು). ೧. ದೊಡ್ಡದಾದ; ಬೃಹತ್ತಾದ. ೨. ದೃಢವಾದ; ಬಲವಾದ. (ನಾ). ೩. ಒಂದು ಬಗೆಯ ಸುಗಂಧದ್ರವ್ಯ ; ಮುಡಿವಾಳ: "ಬಾಲಂ, ಹ್ರೀಬೇರಂ, ಬರ್ಹಿಷ್ಠಂ, ಉದೀಚ್ಯಂ, ಕೇಶಾಂಬುನಾಮ —೫ ಮುಡುವಾಳದ ಹೆಸರುಗಳು" (ನಿಘಂಟು. ೧೪೦). ೪. ಒಂದು ಬಗೆಯ ಸಸ್ಯ ; ಶೈಲಪರ್ಣ; "ಉಶೀರಾವೀರಣ" (ಶಂಥಕ. ೨೩೦). [ಸಂ.]

**ಬಲ್$_1$, ಬಲಿ$_1$** (ಕ್ರಿ). ಬಲ್ತ, ಬಲಿತ. ಬಲಿದ (ಭೂತಕೃ). ಬಲ್ತು, ಬಲಿತು. ಬಲಿದು (ಭೂತನ್ಯೂ). ೧. ದೈಹಿಕವಾಗಿ ಸಾಮರ್ಥ್ಯವನ್ನು ಪಡೆದಿರು; ಸಮರ್ಥವಾಗಿರು ; ಬಲಿಷ್ಠವಾಗು : ಗೋಮೂತ್ರಮಂಡಲ ಮುಮಾಕಾಶಂ ಪೇಜವಿತಿಯುಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ವ); ಕೊಳನ ತಡಿಯಲ್ಲೊಂದು ಹೊಜಿಸು ಕುಳ್ಳಿರ್ದರೇನು ಕಳಹಂಸಿಯಾಗಬಲ್ಲುದೆ (ಬಸವ. ೯೯): ಡೊಂಬನ ಬಿನುಗುನುಡಿಯಂತಿರಲಿ ಬಲ್ಲಡೆ ಮೊನೆಗಣೆಯಲೇ ಮಾತನಾಡು (ಕುಮಾರವ್ಯಾ. ೬-೦೫). ೨. ತಿಳಿ ; ಅರಿ : ಬವರದೊಳೇಂ ಬಲ್ಲಂ ಕರವೊಪಜುಗೆಯಲ್ (ಶಂಶಕಾ. ೦೨-೩) ; ಸಾವ ಪೊತ್ತನಾವಂ ಬಲ್ಲಂ (ಧರ್ಮಾಮೃ. ೦-೨೦೯); ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು ಇವರೆತ್ತ ಬಲ್ಲರು ಲಿಂಗದ ನಿಜವ (ಅದಶ. ೨-೪). ೩. ವೃದ್ಧಿಯಾಗು; ಹೆಚ್ಚಾಗು; ಅಧಿಕಗೊಳ್ಳು : ಚದುರಿಲ್ಲಿಂದಮ ಪರ್ವಿತಲ್ಲ ಜಗತಂ ಜಾಣ್ಪೊಂಗಿದತ್ತಿತ್ರಣಂ ಪದುರೀ ತಾಣದೆ ಬಲ್ತುದು (ಶಶಿ. ೬-೬೫).

**ಬಲಿ$_1$** : ೧. ನೀಮುವಿಗಳ್ ವನಸಿಂಹನ್ಯಾಯದಿಂ ದುರ್ಗದೊಳೆ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇಶನ ತಂತ್ರಂ ನಿಲ್ಕುಂ (ಆದಿಪು. ೦೩-೫೯) ; ಗಜಿ ಪಾಜಿಲ್ಕೆಲ್ಲ ಕಾಲುಂ ಬಲಿಯವು (ಕಾದಂಬ. ೧೯೦); ಬೀದಿವೀದಿಗಳೊಳಾರುಮಂ ಸುಟಿಯಲೀಯದೆ ಬಗ್ಗಿಸುತ್ತೆ ಬಲಿದು ಕಾಪುಗೊಂಡು ಬಳಸಿದ ತಳಾಜಿನಾಯಕರುಮಂ . . . ಈಕ್ಷಿಸುತ್ತುಂ (ಶರಕಿ.೮-೫೬ ವ) : ಕುಲಗಿರಿಗಳೆಲ್ಲವನೊಂದುನಿವಿಷದಿ ಹೊಳಕಿಹೊಳಕಿ ಬಿಡುವೆನ್ನ ಕುಲಿಶದಂಡವ ಹಿಡಿದೀ ಸಗ್ಗಿಗರ ಪಂಗುಳಿ ಸಹಿತವೆ ಬಲಿದೊತ್ತೆ (ಶ್ರೀಕಾಂ. ೬-೫). ೩. ಬಲದ ಬಲಿದ ಕಳಕಳವಂ ಕೇಳ್ದು (ಶಾಂತಿಪು. ೦೦-೬೩) ; ಭವಪೂಜೆ ಬಲಿದು ಪುರುಷಾಕಾರವಾದಂತೆ (ಬಸವ. ೩-೦೫೨) ; ಬಲಿದ ತೋಳಿಕೆಗಳ . . . ರ್ಘೊವಿನ್ನನ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುಮಾರವ್ಯಾ. ೦೬-೪). ೪. ಹಣ್ಣು, ಸಸ್ಯ ಮುಂತಾದಂವು ಪೂರ್ಣವಾಗಿ ಬೆಳೆ : ಒಂದು ವೃಕ್ಷದಲ್ಲಿ ಹುಟ್ಟಿದ ಫಲ ಮೊದಲೇ ಎಳೆಯದಾಗಿ ತದನಂತರದಿಂ ವಿಜಾಜಿ ಬಲಿದಲ್ಲದೆ ಬೀಜಕಂಕುರವಿಲ್ಲ (ಸಕಲವ. ೦೦೩-೫೬೦) ; ಪೊಳೆಯಲೇ ಮಾರುಡಿಸಲು ಬೇಹುದು ಬಲಿದ ಬಳಿಕದು ನಿನ್ನ ಹವಣೇ (ಕುಮಾರ. ೮-೧೩) ; ಹತ್ತಿಯ ಕಾಯಿಗಳು ಬಲಿತು ಹಣ್ಣಾಗಲಿಕ್ಕೆ ಹೆಚ್ಚು ಕಡಿಮೆ ಎರಡುತಿಂಗಳು ಬೇಕಾಗುತ್ತವೆ (ಕುಂಬಾರು. ೪-೨೭). ೫. ದಪ್ಪವಾಗು ; ದೊಡ್ಡದಾಗು : ಲತಾಂಗಿಯ ಜಠರವದು ದಿನದಿನಕೆ ನುಣ್ಪಿಂ ಪೆಂಪುಮಿಂಪುಂ ಕೊನರ್ದು ಬಲಿದೊಂಬತ್ತುತಿಂಗಳು ತುಂಬ ಸಂದೀಶ . . . ಬೆಳೆದನು (ಬಸಪು. ೩-೪). ೬. ಪೆಪ್ಪುಗಟ್ಟು ; ಘನರೂಪವನ್ನು ಪಡೆ : ನೀರು ತಾ ಅನಿಲನಿಂದಲಿ ಬಲಿದು ವಾರಿಕಲ್ಲೆಂದೆನಿಸಿತು (ಶಿಶಗೀ. ೩೨-೦೯೪) ; ವಾರಿ ಬಲಿದು ಸಾರಿಕಲ್ಲಾದಂತೆ ಶೂನ್ಯವೇ ಸ್ವಯಂಭುವಾಯಿತ್ತು (ಅಜಕು.

೦೬೩-೭೯೬) ; ಒಂದೊಂದು ರಜ್ಜುವಿಂ ಕಟಗೊಂದೊಂದಿರ್ದಪುವು ನಾರಕರ ಪಾಪರಜಂ ಮಂದಯ್ಸಿ ಬಲಿದು ನೆಲನಾದಂದದೆ ದುಸ್ಪರ್ಶವಿಷಮನರಕಾವನಿಗಳ್ (ಧರ್ಮಪು.೦೦-೨). ೭. ಒರಟಾಗು; ಬಿರುಸಾಗು : ಮೆಲ್ಪುಗೆಟ್ಟು ಬಲಿದಿರೆ ಮೆಯ್ ಕಣ್ ಪತ್ತೆ ಕರಿದಾಗೆ ನಾಲಗೆ ಸತ್ತಪುದಾ ವಾಜಿ (ಅಶ್ವಶಾ. ೬-೪೦) ; ಕರ ಸಡಗೆ ವೈ ಬಲಿಯೆ ಹುಬ್ಬುಗಳುಜಿ ಬಿಗಿಯೆ . . . ವೀರಾವೇಶದಲಿ ಮಸಗಿದನು ಕಲಿಭೀಮ (ಕುಮಾ.ಭಾ. ೦೨-೦೦). ೮. ಮಲೆ ; ಸೊಕ್ಕು : ಗರ್ವಿಸು : ಮದೋದಯದೊಳ್ ದೇವ ಬಾಹುಬಲಿ ಬಲಿದಿರ್ದಂ (ಆದಿಪು. ೧೪-೧೪) ; ಅಳ್ವಲಿಪುಮುಳ್ಳಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳಡಂ ತೋಳ್ವಲಮಿಲ್ಲ ಭೃತ್ಯಹಯದೋರ್ಬ್ಬಲಮುಳ್ಳಡ ಮೇರ್ವ್ವಲಗಳಿಲ್ಲವೆಳ್ಪೆಸಗೆಯ್ಯದೇಕೆ ಬಲಿವರ್ಮ್ಮರಿಲೆವರ್ (ಎಕ. VII. ಶಿಕಾ. ೦೬೬-೨೬ ; 1068). ೯. ನಿಲ್ಲು ; ಸ್ಥಿರವಾಗು ; ನೆಲೆಗೊಳ್ಳು : [ನಿಡು] ಜಾಗರದೊಳ್ ತೊಡರ್ದೇಕಪಾದದೊಳ್ ಬಲಿದುಪವಾಸದೊಳ್ ನವೆಂದು ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರಂತು ನೋನದೆ ಗುಣಾರ್ಣವನಂ ಪಡೆಯಲ್ಕೆ ತೀರ್ಗುಮೋ (ಪಂಪಭಾ. ೦-೦೩೬) ; ಇದು ಕಲಿಭೀತಿಯಿಂ ಕೃತಯುಗಂ ಬಲಿದಿರ್ದಪುದೆಂಬ ಸಚ್ಚರಿತ್ರದಿನೆಸೆದು . . . ಪೆರ್ಮೆಯಿಂ ವಿದಸೆಯೆಂಬುದು ಸಚ್ಚಿನ ರಾಜಧಾನಿಯಾದುದು (ಶಾರಂಪು. ೦೩); ಗುರು ಕರುಣದಿಂದೊದಗಿದ ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ (ಬಸವ್ಯಸಂ. ೦೬-೩೬). ೧೦. ದೃಢಮನಸ್ಕನಾಗು ; ಹಟ ಹಿಡಿ : ಆರು ನುಡಿಯಲು ಸರ್ವಥಾ ಖಳನಾರಿಯನು ಕೈಕೊಳ್ಳನೆಂದೇ ವೀರ ಬಲಿದನು (ಕುಮಾ.ರ. ೯-೨೩). ೧೧. ರಚಿತವಾಗು ; ನಿರ್ಮಾಣವಾಗು : ಬಲಿದುದನಿತಕೆ ಕೋಟಿ ಪರಿಖಾವಳಯರಚನೆಯಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ಕೋರಾ. ೦-೦೩-೨). ೧೨. ಪ್ರಕಟಗೊಳ್ಳು ; ವ್ಯಕ್ತವಾಗು : ಪಂಚಪುದವ್ಯಾಪ್ತಿತಂ ಪಂಚಾಕ್ಷರೀಪ್ರಿಯಂ ಪಂಚವರ್ಣಂ ಒಗವೊಡೀ ಬಸಿಱ ಶಿಶುವೆಂದು ಪಂಚಿಸದೆ ಪೇಳ್ವಂತೆಯಯ್ದು ತಿಂಗಳಲಿ ನವಮಾಸಚಿಹ್ನಂ ಬಲಿದುದು (ಸಿದ್ಧರಾ. ೦-೩೦). ೧೩. ಆಕಾರವನ್ನು ಹೊಂದು ; ರೂಪವನ್ನು ತಾಳು : ನೀತಿ ಬಲಿದುದೊ ಶಾಂತಿ ರೂಪಾಯ್ತೊ ಸದ್ಗುಣವ್ರಾತವೇ ಮುನಿಯಾಯ್ತೊ (ಹರಿಶ್ಚ. ೩-೬೬) ; ಇಂದುರುಚಿ ಬಲಿದುದೋ ಹರಸ್ಮೇರ ದಿವಿಯೊಳಾಕಾರವಾಯ್ತೊ . . . ಎನೆ ರಜತಾದ್ರಿ ರಂಜಿಪುದು (ಬಸಪು. ೦-೩೮). ೧೪. ತುಂಬು ; ಹರಡು ; ವ್ಯಾಪಿಸು : ಹಸನದೀಧಿತಿ ವಿಗೆ ರಜತಗಿರಿ ವಸುಗಳಭಿನವವಾಯಿ ತೆನಲಾಗಸದೊಳೆಲ್ಲೆಡೆಯೊಳು ಬಲಿದು ಬೆಳೆದಿಂಗಳಗ್ಗಳಿಸೆ (ಬಸಪು. ೦೨-೩೬) ; ಅಂಬರದೊಳೊಮ್ಮೊಮ್ಮೆ ಕಾದುವರ್ ಧರೆಗಿಳಿವುತುಂ ಬಿಡದೆ ಸೆಣಸುವರ್ ಧರೆಯೊಳೊರ್ವರ್ ಗಗನಮಂ ಬಲಿವರೊರ್ವರಿರದೆಬ್ಬಿಡುವರ್ (ಕಂಪು. ೨೩-೨೨) ; ಹೊಲೆ ಬಲಿದ ತನುವಿನೊಳಗಿರ್ದುಮದಱೊಳಗೆ ಕುಲವನ ಱಸುವರೆ (ಸರ್ವಜ್ಞ. ೨೦). ೧೫. ನಿಯಮಕ್ಕೆ ಒಳಪಡು.— ಒಳಗಾಗು : ದೇಗುಲಕೆ ಸಾರದೆ ಹಗಲು ಕಂಬಿಯನಿಳುಹದೆಲ್ಲಿಯುನಿಲ್ಲದಡಿಯಿಡಬಾರದಂತಪ್ಪ ಬಲಿದವಸ್ಥೆಯೊಳಿಯ್ದೆ ಸಂಕಟಗೊಳಲದೇತಕೆ (ಬಸಪು. ೯-೦೩). ೧೬. ಕ್ಲಿಷ್ಟವಾಗು ; ದುಸ್ಸಾಧ್ಯವಾಗು : ಬಲಿದು ದಾಹವ ಮತ್ತೆ ಚಾತುರ್ಬಲ ಭಡಾಳಿಸಿ ಕಾದುತಿರ್ದುದು ಮುಳಿದು ಶಲ್ಯನ ಕೂಡೆ ಪಂಚದ್ರೌಪದೀಸುತರು (ಕುಮಾ.ಭಾ. ೩-೩೦). ೧೭. ಮುಚ್ಚು ; ಬಂಧಿಸು : ಕೆಟ್ಟೆನಕಟಾ ಎಂದು ಮನದೊಳಗೆ ಮಱುಗುತ್ತ . . . ಎದ್ದು ತಾ ಕವಾಟವ ಬಲಿಯು (ಶ್ರೀಕೃಷ್ಣಕಥಾ. ೨-೩೯). ೧೮. ಚುಚ್ಚು ; ನಾಟು : ಆ ಶಿರಸ್ಥಲವೆಂಬ ರಥಕ್ಕೆ . . . ದಶವಾಯುಗಳೆಂಬ ಪಾಶಮಂ ಬಂಧಿಸಿ ಷಡಂಗಗಳೆಂಬ ಮೊಳೆಗಳಂ ಬಲಿದು (ಅಕಸಂ. ೨೬೦-೦೦೬೩) : ಲಲನೆಯರುವ ಚಾರದ ನುಡಿ ಕಿವಿಯೊಳು ಬಲಿದ ಬಲ್ಲೆಹವಾಯಿತಾಗ (ಕಂಪಶ. ೯-೧೩೩). ೧೯. ಹೆಚ್ಚಿಸು ; ವೃದ್ಧಿಗೊಳಿಸು : ರಕ್ಕೆಯವಾಳ್ಗಳ್ ರೆಕ್ಕೆಸಿ ನೋಡಿ ಕಿಲಂಬರೆಂಬುದನಱಿದು ನಾಡೆಯುಂ ನಲಿದು ಮೆಲ್ಲ ಮೆಲ್ಲನೆ ತನ್ನ ಬಲಮಂ ಬಲಿದು (ಧರ್ಮಪು. ೨-೩೯ ವ) ; ಪೊಳಲ ಪರ್ಬಾಗಿಲ್ಗಳಿಕ್ಕಿದವು ಕೋಟೆಕೊತ್ತಳದ ಕಾವಲ್ಗಳು ಬಲಿದರಲ್ಲಲ್ಲಿ ಗಜಬಜವಾಯ್ತು ನಗರದೊಳಗೆ (ಕೃಷ್ಣಭಾ. ೯-೦೬) ; ಬಳಸಿಹ ರಿಪುನೃಪಮನ್ನೆಯರಿವರಗ್ಗಳಿಕೆಗೆ ಕಂಗೆಟ್ಟಾಗ ಇಳೆಯಾಳ್ವ ತಿರುಮಲರಾಜನ ಮಱೆ ಹೊಕ್ಕು ಮುಳಿಸ ಬಲಿವರಾತನಿಗೆ (ಕಂಪಶ. ೩-೦೪). ೨೦. ಬಿಗಿಗೊಳಿಸು ; ಬಿಗಿಯಾಗಿ ಜೋಡಿಸು : ತನ್ನ ಕಮ್ಮ ಕಳಶಮಂ ಬಳ್ಳಿಯೊಳ್ ಟಟ್ಟಿ ನೀರಂ ತೆಗೆವಾಗಳದಂ ಪುಲಿ ಪಿಡಿದು ನೇಲ್ದುದುಮದು ಕಯ್ಗೆ ಬಿಣ್ಣಿತಪ್ಪುದೊಡದು ನೋಟಬ್ಪಿನೆಂದು ಬಲಿದು ಪಿಡಿದು ಮೆಲ್ಲನೆ ತೆಗೆಯೆ (ಪಂಚತಂ. ೦೦೯-೩) ; ಸೂತ್ರದ ಕೀಲ್ಗಳಂ ಬಲಿದು ಕ್ರಮದಿನಾಡಿಪ ಬಡಗಿ ತಾನೇ (ಬಸಪು. ೨೦-೨೯); ತಡಿಯ ಬಲಿಸುವ ಗುಳನ ಜೆಂಚಿಗು ಗಡಣೆಸುವ ಹಕ್ಕರಿಕೆಗಳನಾಯ್ದುಡಸಿ ಹೊಲಿಸುವ ಕಬ್ಬಿಗಳ ಕೊಂಡಿಗಳ ಮಿಗೆ ಬಲಿವ. . . ಬೆಟ್ಟದ ಗಾಲಿಗಟ್ಟನು ತೊಡಿಸುತಿರಲು (ಕುಮಾ.ಭೀ. ೩-೩೬) ; ಬಲಿದು ಮಕುಟಾವಳಿಯ ಶೋಣಿತ ಪಳಿಯ ರಕ್ತಸದೇಶಿಯಲಿ ಬಗಿದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ (ಕೋರಾ. ೧-೦೩-೦೯). ೨೧. ಗಟ್ಟಿಗೊಳಿಸು : ತನ್ನ ಕೆಳದಿಗೆ ಪೇಟ್ದು ಮನಮಂ ಬಲಿದು ತನ್ನಂ ತಾನೆ ಸಂತಯಿಸಿದಳ್ (ಶಾಂತಿಪು. ೯-೦೦೬ ವ) ; ಧನುವನೊದಱಿಸಿ ಸಕಲಸುಭಟರು ಮನವ ಬಲಿದೊಗ್ಗಿಗಿ ಸರಳಿನ ಜಿನುಗುವಳೆಯಲಿ ನಾದಿದರು ನಾರಾಯಣಾರ್ಜುನರ (ಕುಮಾ.ದ್ರೋ. ೦೯-೩೦). ೨೨. ಭದ್ರಪಡಿಸು ; ಸುರಕ್ಷಿತಗೊಳಿಸು : ಉಗ್ರಸೇನನೆಂಬ ದಂಡಾಧಿಪಂ ಕೋಂಟೆಯಂ ಬಲಿದು ಕಾದುವ ಸಮ ಕಟ್ಟಿಂದಿರ್ಪುದುಂ (ಧರ್ಮಾಮೃ. ೯-೨೯೦) ; ಅಂದು ಚಕ್ರವ್ಯೂಹವನು ನಲವಿಂದ ಬಲಿದನು (ಕುಮಾ.ದ್ರೋ. ೯-೦೯) : ಜಲಧಿ ಮೇರೆಯ ಮೀಱಿ ಕಟ್ಟಿಯ ಬಲಿದು ತಡವವರಾರು (ಉತ್ತರಾ. ೬-೩೯). ೨೩. ನೆಲೆಗೊಳಿಸು; ಸ್ಥಾಪಿಸು : ಪಶ್ಚಿಮಪದ್ಮಾಸನದಲ್ಲಿ ಕುಳ್ಳಿರ್ದು ನಿಟ್ಟೆಲುವ ನೆಟ್ಟನೆ ಮಾಡಿ ಅಧೋಮುಖಕಮಲವ ಬಲಿದು ಊರ್ಧ್ವಮುಖವ ಮಾಡಿ (ಅಕ್ಕಶ. ೯. ೯೨೩-೯೯೯) ; ಮನಕಲಿತ ಪ್ರಾಣಮಂ ಹೃದ್ದೇಶದೊಳು ಬಲಿದು ವನಜಬಾಂಧವ ಪ್ರತೀಕಾಶವದನದೆ ವೀರವನು ತುಳುಕಿ ತನುವನೊನೆದಡೆ ಶೈಲ ಸೆಳೆವಂಚದಂತಾದುದು (ಪಂಪಾಶ. ೩-೧-೦೦). ೨೪. ನಿಗ್ರಹಿಸು ; ಸಂಯಮಿಸು ; ತಡೆ : ಬಿಂದುವನು ಬಲಿದಾತ ವಂದ್ಯನಹ ಜಗಕೆಲ್ಲ (ಸರ್ವಜ್ಞ. ೯೦೨). ೨೫. ಪ್ರವೇಶವಿಲ್ಲದಂತಾಗು ; ಮುಚ್ಚಿಹೋಗಿರು : ಆ ಕಡೆಗೆ ಹೋಗುತಿರೆ ಗೋಪುರದಾ ಕದವು ಕಡುಬಲಿದಿರಲು ನಿವ್ಯಾಕುಲರಿಗಾಕುಲತೆ ತೋಱಿದುದು (ಶಾಶ್ವತಾ. ೨೦-೦೦). ೨೬. ನೆರವೇರಿಸು ; ಪೂರ್ಣಗೊಳಿಸು : ಕಳಿದುದೊಂದಪಮೃತ್ಯುವೆನೆ ನೃಪತಿಲಕ ನುಡಿದನು ನಿನ್ನ ಭಾಷೆಯ ಬಲಿತೆ ನಿನ್ನಯ ಬಿರುದ ಸಲಿಸಿದೆ ನವಗಿದೇನೆಂದ (ಕುಮಾ.ದ್ರೋ. ೦೩-೩). ೨೭. ಪ್ರಚೋದಿಸು ; ಉತ್ತೇಜಿಸು : ಏಳು ತಾಯೆ ಸರೋಜಮುಖಿ . . . ನಿನ್ನವರಾಳೆಗೊಂಡಂದವನು ಬಲ್ಲೆನು ನಿನ್ನ ಹರಿಬದಲಿ ಕಾಳೆಗವನೇ ಬಲಿದು ತಹೆನು (ಕುಮಾ.ಶಾ. ೬-೦೨).

ಬಲ್ಲ₁ = ತಿಳಿದವನು ; ಚತುರ ; ಜಾಣ : ತಡೆಯದೆ ಮಹಾಧ್ವ ಕೃತಿಗಳನೊಡರಿಸಲಾಪರ್ಾತನೆಲ್ಲರಿಂದಂ ಬಲ್ಲಂ (ಕಹಾ. ೦-೦೬) ; ಬಲ್ಲರಿಂದಾನು ಕೇಳಿದುದಕೆ ಪೆರ್ಚು ಕುಂದಿಲ್ಲದಂತೆಚ್ಚಱುಗೂಡಿ . . . ಸೊಲ್ಲಿಸುವೆನು (ಹರಿ. ೦-೯೯). ಬಲ್ಲಂತಿಕೆ = ತಿಳಿವಳಿಕೆ ; ಅರಿವು : ಬೇಡಿದಿಷ್ಟವ ಕೊಟ್ಟಾತನು ಭೂತವೋ ಆತ್ಮನೋ ಬಲ್ಲರೆ ನೀವು ಹೇಳಿರಣ್ಣಾ ನಿಮ್ಮ ಜ್ಞಾನದ ಮುಸುಕ ತೆಱದು ನಿಮ್ಮ ಬಲ್ಲಂತಿಕೆಯ ಕಾಣಬಹುದು (ಸರ್ವಶ. ೯೯-೪೩೯). ಬಲ್ಲತನ = ೧. ಶಕ್ತಿ ; ಸಾಮರ್ಥ್ಯ : ತನ್ನ ಮುನ್ನಿನ ನಲ್ಲರೂಪನೆ ತಾಳ್ದು ನಿನ್ನೊಳು ಬಲ್ಲತನಮುಂ ನೋಡಲೆಂದಿಂತಾದೆ ನಾನು (ಬಸಪು. ೨೦-೩). ೨. ತಿಳಿವಳಿಕೆ : ಜ್ಞಾನ : ಕಲ್ಲು ಪಾಣ್ಬ

ಮರದಲ್ಲಿ ದೇವನಿದ್ದಹನೆಂದು ಎಲ್ಲಿಯೂ ತೊಳಲುತಿಪ್ಪ ಅಣ್ಣಗಳು ಕೇಳಿರೊ ಅದನಲ್ಲಲ್ಲಟ್ಟು ಬಲ್ಲತನದ ಕುಜುಹಲ್ಲದೆ ಸೊಲ್ಲಿಂಗಶೀತನಜೀಯ (ಷೋಡಶಾ. ೨೩-೬೨) ; ಇದೇಂ ಬಲ್ಲಹತನವೇ ಪೆಂಪೆ ಗರುವಿಕೆಯ ಗಂಭೀರ ವೃತ್ತಿಯೇ (ಕಬ್ಬಿಗ. ೩-೩೦). ಬಲ್ಲರ ಬಲ್ಲಹ = ಶೂರರಲ್ಲಿ ಶೂರ ನಾದವನು : ಅಂಗಡಿವೀಧಿಯೊಳಿಸೆದೆಯ್ದಂದಂ ತನ್ನೊಡನೆಯ್ದುರ ಪರಿವಿಡಿತವಿಶ್ರಾವಳಿ ಬಲ್ಲರ ಬಲ್ಲಹನು (ಜಗನ್ನಾ. ೦೯-೨೦). ಬಲ್ಲಿಕೆ = ತಿಳಿದಿರುವ ವಿಷಯ : ಶಿರವನತ್ತಿದ ರೀತಿಯೊಳು ಪೇರುರಿಕೆ ತಿವಿತಿವಿನೊಂಕುಪದು ಬಲ್ಲಿಕೆ ವ್ರಾಜ್ಞರಿಗರಿಯದೀಗವರಲ್ಲಿ ಕದನವನು ನೆರವೆನೆಂಬುದ ಮರೆ (ಜನಶಾ. ೩೬-೯೩). ಬಲ್ಲರೊಳ್ ಬಲ್ಲಹ = ಬಲ್ಲರ ಬಲ್ಲಹ : ಬಿರುದೆಂತೆಂಬರ ಗಂಡನಪ್ರತಿಮವೀರಂ ಬಲ್ಲರೊಳ್ಬಲ್ಲಹಂ (ಅಕ್ಕೃತಿ. ೦೩-೯). ಬಲ್ಲವ₁ = ತಿಳಿದವನು; ಜಾಣ: "ಚತುರಃ ಕ್ಷೇತ್ರಜ್ಞ . . . ಪ್ರವೀಣಃ - ಈ ೧೧ ಬಲ್ಲವಂ "(ಕರಾಯು. ೩೩-೧೬೦); ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತಂ . . . ಸರ್ವಜ್ಞನಪ್ಪಂ ನರಂ (ಸೋಮೇಶ. ೦): ಬಲ್ಲವನೇ ಬಲ್ಲ ಬೆಲ್ಲದ ಸವಿಯ (ಗಾದೆ). ಬಲ್ಲವಿಕೆ=ಬಲ್ಲತನ : ನೀವೆಮಗೆ ಹಿಂದು ಬಲ್ಲವಿಕೆಯಲಿ ವಾಕ್ಯ ತುರಿಯವನು ರಚಿಸಿದೊಡೆ ನಂಜುಗೆ ದೊರಕುವುದೆ ನಮಗೆ (ಶೃಶಾಂ. ೦೨-೦೬); ಭಾವಾಜಿ ನಿನ್ನ ಚಿತ್ರವ ನಾವು ನೋಡುಂಪುದಾವ ಬಲ್ಲವಿಕೆ (ಕಿತ. ೩೩-೯೬). ಬಲ್ಲವಿಕೆತನ = ಬುದ್ಧಿವಂತಿಕೆ : ಜಾಣ್ಮೆ : ಇವಳ್ಬಲ್ಲ ಗರ್ವವ ಮುಜುಯದಿರ್ದಡೆ ಸಲ್ಲದೆನಗೀ ಪೆಸರನುತ್ತಲಿ ನಿಲ್ಲಿಸಲು ಗಜವ ಬಲ್ಲವಿಕೆತನವಲ್ಲವರುಸನವುಲ್ಲಸವ ವನಕೇಳಿಗೆಡರಹುದಲ್ಲ ನಮಗಿದು ನೀತಿ ಯುಂದಳದೊರ್ವ ನೆಬಿ ಜಣಿ (ನಾಗಕ. ೯-೨೨).

[ದೇ.॥ ತಮಿ. ವಲಿ, ವಲ್ಲು ; ಮಲ. ವಲ್ಲುಕ; ತುಳು. ಬಲಾಪಿನಿ; ತೆಲು. ಬಲಿಯು]

ಬಲ್₂. ಬಲು (ಸಪೂರೂ). 'ಬಲ್ಲಿತು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ. ೧. ಬಲಯುಕ್ತ; ಶಕ್ತಿಯುತ: 'ಬಲ್ಗೈಯ್' ಪರಾ. ೨. ದೊಡ್ಡ; ದಪ್ಪ : 'ಬಲ್ದಲೆಯ' ಪರಾ. ೩. ಬಹಳ; ಅಧಿಕ; ಅತಿಶಯ: 'ಬಲ್ಮಣ್ಣ', 'ಬಲಿರ್ಪುದು' ಪರಾ. ೪. ವಿಶಾಲ ವಾದ: ವಿಸ್ತಾರವಾದ: 'ಬಲ್ದೊಡೆ' ಪರಾ. ೫. ಗಾಢವಾದ; ದಟ್ಟ ವಾದ; 'ಬಲ್ಗತ್ತಲೆ', 'ಬಲ್ಲಡವಿ' ಪರಾ. ೬. ಜೋರಾದ; ಅಬ್ಬರದ: 'ಬಲ್ದನಿ', 'ಬಲ್ಸರ' ಪರಾ. ೭. ಒತ್ತಾಯದಿಂದ ಕೂಡಿದ; ಬಲಾತ್ಕಾರದ: 'ಬಲ್ಮೆ' ಪರಾ. ೮. ಬಿರುಸಾದ : ಒರಟಾದ : 'ಬಲ್ಮುಡಿ' ಪರಾ. ೯. ಬಿಗಿಯಾದ; ದೃಢವಾದ : 'ಬಲ್ಗಣ್ಣ' ಪರಾ. ೧೦. ಕೊಬ್ಬಿದ; ಬಲಿಷ್ಠವಾದ: 'ಬಲ್ಗಾಟಿ', 'ಬಲ್ಗೂಳಿ' ಪರಾ. ೧೧. ಸಮರ್ಥನಾದ; ದಕ್ಷನಾದ : 'ಬಲ್ಮಂತ್ರಿ', 'ಬಲ್ಸಾವಂತ' ಪರಾ. ೧೨. ಗಡುಸಾದ; ಗಂಭೀರವಾದ : 'ಬಲ್ಸೊಗ' ಪರಾ. ೧೩. ಗಟ್ಟಿಯಾದ; ಸಾಂದ್ರವಾದ : 'ಬಲ್ಮೊಸರ್' ಪರಾ. ೧೪. ಶ್ರೇಷ್ಠವಾದ; ಉತ್ತಮವಾದ : 'ಬಲ್ಲಡಗು' ಪರಾ. ಬಲು : ೧. 'ಬಲುಗಣೆ' ಪರಾ. ೨. 'ಬಲುಗುಂಡು' ಪರಾ. ೩. ಹಣ ಮುಳ್ಳಿಂ ಹೆಣನಾದೊಡಂ ಮುಮತೆಯಿಂ ತಾನಾವಗು ಬಟ್ಟಿರಳ್ ಕ್ಷಣ ಮಾತ್ರಂ ಬಲುಬೂಟಕಂ ಗಟಬಿ (ಸೋಮೇಶ. ೬೨); ಹುಲಿಮುಖ ಬಲು ಭಯಹುಂಕುರವ ಬೀಜುವುವು (ಕಂಠಿಕ. ೨-೬೯). ೪. 'ಬಲುಗಡಲು' ಪರಾ. ೫. 'ಬಲುಗತ್ತಲೆ', 'ಬಲುಗೆಂಪು' ಪರಾ. ೮. 'ಬಲುಬದಿರು' ಪರಾ. ೧೪. ಪರದೇವತೆಯಂದು ಭಕ್ತಿಗೈವುದು ಬಲುದೊರೆಯಿಂದುಪಚರಿಸುವುದು (ಹಾಬ. ೩-೯೦). ೧೫. ಉಗ್ರವಾದ : 'ಬಲುಬೇಸಗೆ' ಪರಾ. [< ಬಲ್ಲಿತು₁]

ಬಲ₁ (ನಾ). ಎಡಭಾಗವಲ್ಲದುದು; ದಕ್ಷಿಣ ಪಾರ್ಶ್ವ: "ಅಪಸವ್ಯಂ, ದಕ್ಷಿಣಂ - ಈ ೨ ಬಲಂ" (ಕರಾಯು. ೦೩೯-೬೧); ಬಲದ ಕಯ್ಯೊಳ್ ಭೈಕ್ಷದ ಭಾಜನಮಂ ಹಿಡಿದು ತೊಟಲ್ಲು ಭೈಕ್ಷಮಂ ಬೇಡಿ ಮಡಗಿಟ್ಟು ಪಗಲುಣ್ಗಂ (ಕರ್ಣಾಕಾ. ೯೨-೦೬); ಬೇಡಿದೊಡೆ ಬಲದ ಬರಿಯುವುದು ನೀಡಾಡುಗುಮುಗಿದು ಕರ್ಣ (ಕಂಠಿಕಾ. ೦-೦೦೦); ಇದಿರೊಳಾನಿಹೆ ಕಲ್ಕ ನೆಡವಂಕದಲಿ ಬಲದಲಿ ಕೃಪನವರಭಾಗದಲಿ ನೀ ಬಂದೆಸು ಕುಮಾರನ ಕರದ ಕಾರ್ಮುಕವ (ಕುಮಾರವ್ಯಾ. ೬-೨೩); ಅಳುವವನ ಎಡಕ್ಕೆ ರಬೇಡ, ಹೊಲಿಯುವವನ ಬಲಕ್ಕಿರಬೇಡ (ಗಾದೆ).

ಬಲಗೊಡತಿ = (ಮದುವೆಯಲ್ಲಿ) ಹೆಣ್ಣಿನ ಬಲಭಾಗದಲ್ಲಿ ಜೊತೆಯಾಗಿರುವವಳು. ಬಲಗೊಡೆಯ = (ಮದುವೆಯಲ್ಲಿ) ಗಂಡಿನ ಬಲಭಾಗದಲ್ಲಿ ಜೊತೆಯಾಗಿರುವವನು : ಹಾಳುನಾಯಿ . . . ಇದೊಂದು ಯಾವಾಗಲೂ ನನ್ನ ಬಲಗೊಡೆಯ. ಬಸವನ ಹಿಂದೆ ಬಾಲ ಬುದ್ದಂಗೆ (ಕಾಣ. ೩೩೬). ಬಲದಂ = ದಕ್ಷಿಣ ಪಾರ್ಶ್ವದಲ್ಲಿರುವವನು : ಬಲಮಗ್ಗುಲಲ್ಲಿರುವ ವ್ಯಕ್ತಿ : ದಕಾರಕ್ಕೆ ಕೆಲದಂ, ಬಲದಂ, ಅಲ್ಲಿದಂ, ಇಲ್ಲಿದಂ, ಎಲ್ಲಿದಂ (ಶಮನ. ೦೦೦) ಶೃ.ಹೂ. ಬಲದ ಕಯ್ = ಬಲಗಡೆ; ಬಲಭಾಗ; ಬಲಪಕ್ಕ: ಎರಡುಂ ಬಲದ ವೀರಭಟರ್ಕಳೊಟ್ಟು ಪೊಜಮಟ್ಟು ಬಿಲ್‌ವಿಲ್ಲಳ್ ಕುದುರೆ ಕುದುರೆಯೊಳ್ ಕಿಟ್ಟಿ ಅತಿತುಮುಲಕಾಳಗ ವೆಟ್ಟ ಬಲದ ಕಯ್ಯಂ ಚಿತ್ರವಾಹನನೊತ್ತಿ ಪುಗುತ್ತನ್ನು ಕಾದಿಸೆ ಕಣ್ನು ಕುಲಮುದ್ದ ನೀನೀ ಕಯ್ಯ ಪೊಕ್ಕು ಕಾದೆಸ್ದು ಬೆಸಸೆ (ಎಕ. VIII, ಸೊರಬ. ೦೦-೬; ಸು. ೬೦೦). ಬಲದ ಕಯ್ಯ ಭಂಡಾರ = ಬಲಗೈ ನೀಡಿದೊಡನೆಯೇ ಹಸ್ತಗತವಾಗುವ ಐಶ್ವರ್ಯ ; ಒಂದು ಬಿರುದು : ಬಸವಯ್ಯ ದಂಡನಾಯ್ಕರು ರಾಜ್ಯವ ಪ್ರತಿಪಾಲಿಸುವ ಕಾಲದಲು ಅವರ ಬಲದ ಕಯ್ಯ ಭಂಡಾರವೆನಿಪ ಗಣಪತಿಸು ವಿಷ್ಣುವರ್ದ್ಧನಪ್ರತಾಪಹೊಯ್ಸಳ ಭುಜಬಳ ದೇಶದೊಳಗೆ ಕಾವೇರಿಯ ದಕ್ಷಿಣಭಾಗದ ಅಧಿಕಾರವ ಮಾಡುವ ಕಾಲದೊಳು (ಎಕ. IV(R), ಕಾಮುಕಾ. ೨೬೦-೬ ; 1368) ; ಶ್ರೀಮನ್ಮಹಾಪ್ರಧಾನಂ ಮಗಪ್ಪದಣ್ಣಾಯಕರ ಬಲದ ಕಯ್ಯ ಭಂಡಾರವೆನಿಪ ಅಚಣ ಪೊಡೆಯರು ಹೊಯ್ಸಳದೇಶವನಾಳುತಿವ್ವಲ್ಲಿ (ಎಕ. IV(R), ಕಾಮುಕಾ. ೨೬೧-೯; 1397). ಬಲವಾಗು = ಬಲಭಾಗಕ್ಕೆ ಬರ್‍ತು; ಬಲಕ್ಕೆ ತಿರುಗು : (೬); [ದೇ.॥ ತಮಿ. ಮಲ. ವಲವ್ ; ತುಳು. ಬಲತ್ ; ತೆಲು. ವಲ, ವಲನು; ಕೋತ. ವರ್ ; ಪರ್ಜಿ. ವಲ]

ಬಲ₂ 'ಮಲ್ಲ₁' ನೋ.

ಬಲ₃. ಬಳ₃ (ನಾ). ೧. ಪರಾಕ್ರಮ; ಕಸುವು ; ಶಕ್ತಿ ; ಸಾಮರ್ಥ್ಯ ; "ಪ್ರಾಣಃ, ಸ್ಥಾಮ, ಬಲಂ . . . ತರಃ, ಸಹಃ- ಈ ೮ ಬಲ್ಪು (ಬಲುಹು)" (ಕರಾಯು. ೦೨೦-೬೮) ; ತ್ರಿದಶ ನರಾಸುರೋರಗಗಃ ಪ್ರಭು ನಿಶ್ಚಿತ ತತ್ತ್ವ ಯೋಗಿ ಯೋಗದ ಬಲವಾಣ್ಣಿ ಪೊಣ್ಮ ಸಿರಿ (ಕಂಠಿಕಾ. ೦-೬೩) ; ಬಲದಿ ಕಾಕ್ಷಿತದಾನದ ಫಲದಿಂದೆತ್ತಾನುಮೊರ್ವ ಸಿರಿ ಸಮನಿಸುಗುಂ (ಶಬ್ದಾನುಶ್ಯ. ೦೦-೬೦). ೨. ಸೈನ್ಯ ; ದಳ ; ಪಡೆ : "ಸೇನೆ ಧ್ವಜನಿ ವರವತಾಕಿನಿ . . . ಬಲಂ ಚಮುವೆನಲು ಪಡೆಗೆ ನಾಮಂ" (ಮಂಗರಾ. ೬೬-೨೯) ; ಅಗ್ಗಳಾಅರಸರ್ ಬೆಸಸಿದೊಡೆ ಬೆಸನ ಪೆತ್ತ್ಪ್ರ್‌ಬೆ ಬಲವನಾನ್ಪೋಳ್ದು ಎಚಿದು ಬಿಟ್ಟಿರ್ (ಎಕ. X (ಕ), ಕೋಲಾರ್. ೮೬-೬ ; ಸು. ೬೮೦) ; ಅಜುಂಬಲೇ ಗಳ್ಕರಸೊದವಿದ ಸಂಗ್ರಾಮಸಂರಂಭದಿಂದು ಬಗೆಯಃ ಪ್ರಾಣಪ್ರಿಯಸ್ತ್ರೀ ಜನತನಯ ಧನಪ್ರಾತದೊಳ್ ಮಾಡದಾರ್ಕಾಡಿಗೆ ಬಂದೊಪ್ಪಲ್ಮೆ (ಅಶಿತ್ತ. ೦೯-೬೨) : ಆ ವೋಹರದ ಜೋಕೆಯ ಹಿಂದೆ ಲಕ್ಷಕಳಂಗಘಟಿಗಳು ಸೆದೆಣಸಿದವು ದ್ರೋಣ ನಿಂದನು ಬಲದ ಕಾಹಿನಲಿ (ಕುಮಾರವ್ಯಾ. ೨-೨೨). ೩. ಪ್ರಭಾವ ; ವರ್ಚಸ್ಸು : ನಿನ್ನ ದಯೆಯಿಂದಮಿನ್ನವರನ್ನಜಿ ಕೊಂದೆವಾಗೆ ಸಕಳರಾಜ್ಯಶ್ರೀಯುಂ ನಿನ್ನ ಬಲದಿಂದೆ ಸಾರ್ದುದು (ಕಂಠಿಕಾ. ೦೯-೩೬) ; ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯಾನ

ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯ, ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯ (ಬಸವ. ೬೯೦). ೪. ನೆರವು; ಸಹಾಯ: ಕೋಪದಲು ರೇಣುಕೆಯು ಭೂಪನ ಕೋಪವನು ನೆಱೆ ಕಂಡು ಬೇಗದಿ ಪಾಪತಿಗೆ ಬಲವಾಗಿ ಬಂದಳು ರಾಮನಿದ್ದೆಡೆಗೆ (ಸಂಕಚ. ೨೩-೨೦). 'ಜನಬಲ' ಪರಾ. ೫. ಕೃಷ್ಣನ ಅಣ್ಣನಾದ ಬಲರಾಮ; ಬಲಭದ್ರ: "ಬಲನೇಕಕುಂಡಲಂ . . . ಕಾಮಪಾಳಂ ರಾಮಂ" (ಶಬ್ದಮಣಿ. ೩-೨೩); ಪಲವುಂ ಪ್ರಕಾರದಿಂದಂ ಪ್ರಲಾಪಿಸುತ್ತುಂ ಗುಣಾಂಗಳಂ ಗಣಿಯಿಸುತಂ ಬಲನನುಜಸ್ನೇಹದೆ ವಿಹ್ವಲತೆಯನೆಯ್ದಿರ್ದ ನವನಿಯೊಳ್ ಬಿಟ್ಟಾಗಳ್ (ಜಾಂಬವ. ೯-೩೭); ದಾಢಗಳಿಂದ ಕಂಠೀರವ ಮದದಂತಿ ಕೋಡುಗಳಿಂದಲೆಂತಂತೆ ಕೂಡಿದ ಬಲ ನಾರಾಯಣರಿಂದಲಿ ನಾಡೊಡೆಯನು ರಂಜಿಸಿದನು (ಪದ್ಮರಾ. ೯-೫೦). ೬. ಆಕಾರ; ಆಕೃತಿ; ರೂಪು. ೭. ಇಂದ್ರಿಯ; ವೀರ್ಯ; ರೇತಸ್ಸು: "ಶುಕ್ಲಂ, ವೀರ್ಯಂ, ಬಲಂ, ಬೀಜಂ, ಇಂದ್ರಿಯಂ, ರೇತಃ – ಈ ೬ ಇಂದ್ರಿಯಂ" (ಕರ್ಣಾಟ. ೦೦೩-೦೬). ೮. ಕಾಗೆ: "ಕಾಗೆ ಯಲ್ಲಿಯುಂ ಬಲನೆಂಬುದು" (ಕರ್ಣಾಟ. ೦೩೩-೩೬). ೯. ಇಂದ್ರನಿಂದ ಹತನಾದ ಒಬ್ಬ ರಾಕ್ಷಸನ ಹೆಸರು: 'ಬಲದಲನ' ಪರಾ. ೧೦. ಭದ್ರ; ಬಿಗಿ; ಗಟ್ಟಿ: ಅವನು ಓಡಿಹೋಗದಂತೆ ಬಲವಾಗಿ ಹಿಡಿದುಕೊಂಡರು (ಆಡು). ೧೧. ಒಬ್ಬ ನಿಘಂಟುಕಾರನ ಹೆಸರು: ನಿಜಗೋಪಾಲ ಧನಂಜಯ . . . ಅಮರ ಶಬ್ದಮಂಜರಿ ಬಲಾದ್ಯಕ್ತಾಭಿಧಾನಾರ್ಥಮಂ ದ್ವಿಜವಂಶಾರ್ಣವಪೂರ್ಣಚಂದ್ರನೆನಿಪೀ ದೇವೋತ್ತಮಂ ಪೇಳೆ ಸೂರಿಜನು ಮೆಚ್ಚಲು ಸೇವ್ಯಮಾಯ್ತು ಜಗದೊಳ್ನಾನಾರ್ಥರತ್ನಾಕರಂ (ನಾನಾರ. ೩). ೧೨. ಬಲಿಷ್ಠವಾದದು; ಬಲಶಾಲಿಯಾದುದು: ಶೇಷನಿಂ ಬಲವಿಲ್ಲ ಮೋಸದಿಂ ಕಳವಿಲ್ಲ ನೇಸಱಿಂ ಜಗಕೆ ಹಿತರಿಲ್ಲ ಪರದೈವ ಈಶನಿಂದಿಲ್ಲ (ಸರ್ವಜ್ಞ. ೨೨೬); ಸರಕಾರ ಬಹಳ ಬಲ ಅಲ್ಲವೇ? (ಕುಮುದಾ. ೨೪). ೧೩. ಯುದ್ಧ. ೧೪. ಆಹುತಿ; ಬಲಿ: "ರಕ್ಕಸನೊಳಾಹುತಿಯೊಳಿಂದ್ರಿಯದೊಳಾಜಿಯೊಳು ನೀರ್ಕಾಗೆಯೊಳು ಶಕ್ತಿಯೊಳು ಮುಸಲಿಯೊಳು ಬಲವೆನಿಕ್ಕು" (ಚುಂಗನಾ. ೦೯೬-೩೯). ೧೫. ಆಕಾಶ; ಗಗನ. ೧೬. ನೀರು. ೧೭. ಕಪ್ಪು: "ಅಸಿತ ಸಹಾಯಮಿಂದ್ರಿಯ ರಣಾಹುತಿ ದಕ್ಷಿಣ ಸ್ಯನ್ಯ ಶಕ್ತಿವಾಯಸಮಸಿತಾಂಬರ ದನುಜ ರೂಪು ವಿಹಾಯಸ ವಾರಿ ದೊಡ್ಡಿತೆಂಬಿವರೋಳ್ ಬಲಮಕ್ಕು" (ನಾನಾರ. ೦೩). ೧೮. [ಜ್ಯೋತಿ] ಗ್ರಹಗಳು ಜಾತಕನಿಗೆ ನೀಡುವ ಬೆಂಬಲ,– ಸಹಾಯ: 'ಕಂಕಣಬಲ' ಪರಾ. ೧೯. [ವಿಶಿಷ್ಟಾ] ಪರಮಾತ್ಮನ ಆರು ಗುಣಗಳಲ್ಲಿ ಒಂದು: ಶುದ್ಧಸತ್ತ್ವವೆಂಬುದು... ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸೆಂಬ ಭಗವಂತನ ಆರುಗುಣಗಳಿಗೂ ಪ್ರಕಾಶಕವಾಗಿರುವುದರಿಂದ ಷಾಡ್ಗುಣ್ಯಮಯವು (ಒಂದಾ. ೨೩೬). ೨೦. [ದ್ವೈತ] ನಲುವತ್ತು ವಿಧವಾದ ಗುಣಗಳಲ್ಲಿ ಒಂದು: ರೂಪ, ರಸ, ಗಂಧ, ಸ್ಪರ್ಶ . . . ಭಯ, ಬಲ, ಲಜ್ಜೆ . . . ಶೌರ್ಯ, ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಒಂದಾ. ೨೬೬). ಬಳ್ಳ: ೧. ಅಂತು ವಸುಪೇಣನು ಲೋಕಾಂತಂಬರಮಳವಿ ಬಳೆಯೆ ಬಳದೆಸಕಮದೊಳಂತೆ ಜನ[ಂಗಳ] ಕರ್ಣೋಪಾಂತದೊಳೊಗೆದೆಸೆಯೆ ಕರ್ಣನೆಂಬನುಮಾದಂ (ಪಂಪಭಾ. ೦-೯೯); ಸಕಪಾಯಕುಜಂಗಳ ದಂತಕಾಷ್ಠದೊಳ್ ದೋಟ ಕೌಂಗುವಾದ್ಯ(ಚ್ಯ) ಲವಂಗೋದಕ ಚೂರ್ಣವೆಂಬಿವಂ ತೊಯ್ದುಕೊಂಡು ಪಲ್ಲುಲಿಯ ದಂತ ಬಳಮಂ ಪಡೆಗುಂ (ಲೋಕೋಪ. ೬-೩); ಭರತಂ ಷಟ್ಖಂಡವಸುಂಧರೆಯುಮನೊರ್ವೋದಲೆ ಬಿಟ್ಟು ಜಿನಸದ್ರೂಪಂ ಧರಿಯಿಸಿದನೆಂದೊಡುಱದರ ಸಿರಿಯುಂ ಸಂಪತ್ತುಮಳವು ಬಳವುಂ ಬಿಂದೇ (ರಮೂರತ್ನ. ೬-೦೩೩). ೨. "ಬಳಮೆನೆ ಸ್ಯನ್ಯಮಕ್ಕು" (ಕಕಾ. ೩೯); ಬಳ ಮೆರಡುಂ ತನ್ನನೆ ಮಿಳಮಿಳ ನೋಡೆ ನರೇಂದ್ರನೊಂದೆ ರಥದಿಂದ ಸುಹೃದ್ಬಳಮನಿರದೆಯ್ದಿ ಭೀಷ್ಮರ ಚರಣಯುಗಕ್ಕೆಱಗಿ ನಿನಗೆ ಜಯಮಪ್ಪೆಂದಂ (ಪಂಪಭಾ. ೦೦-೬೦); ಬಳೆದುದೊ ಭೂತಳಂ ಸುರಿದುದೋ ನಭಮಿಂದುದೊ ದಿಕ್ತಟಂ ಬಳಂಗಳನನೆ ಪರ್ವಿದಾ ಪಡೆಯ ತೂಳ್ದುಟಿಯಿಂ ಗಿಡುಬಳ್ಳಿ ಭೂರುಹಾವಳಿ ಪೊದಱುಳ್ಳ ಬಲ್ಲಡವಿ ಪೇರ್ವಯಲಾಯ್ತು (ಕುಕ್ಕು. ೩-೯೬); ತೊಳದ ಬೆಳ್ಮುಗಿಲ ಪೊಗ್ಗರದಂತೆ ಸಾಲುಗೊಂಡಳವಟ್ಟು ಪುರದಿಂದಲ್ಲೆದಿ ಸಲಿಲವನೀಂಟಿ ಮರಳಿ ಪೋಪ ತೇಜಿಯ ಬಳ ಪೊಪ್ಪಿದುವು (ಕಂಸವ. ೨-೩೩). ೩. ಮಳೆಗಱೆವುದು ಬೆಳೆ ಪೆರ್ಚುವುದಿಳೆ ತಳಕಿಳದು ಪೋಗದೆ ತಡೆದಿಹುದು ಪಳಿವಿಲ್ಲದ ಪತಿವ್ರತೆಯರ ನಡತೆಯ ಬಳದೊಳೆಂಬರು ಬಲ್ಲವರು (ಕಂಠ. ೨-೯). ೫. ಬಳನಂ ನಚ್ಚುವೊಡೀ ಕೃಷೀವಳನುಮಿಾ ಜೂದಾಳಿಯುಂ ಗಾಳಿಗಾದಟಿಯಾಳೀ ಬಳೆದೊಟ್ಟ ನಟ್ಟುವನುಮಿಾ ಗೋಪಾಳರಪ್ಪೀ ಯಮಳ್ಗಳೆ ದಲ್ ಚಂಡಭುಜರ್ (ಕಬುಕ್. ೦೦-೦೦೦); ಎನಿತೊಂದು ಪದೆವು ಮೋಹಂ ವನಜಾಕ್ಷನೊಳನಿತು ಪದವು ಮೋಹಂ ಬಳನೊಳ್ ತನಗಾಗೆ ನಂದವಧು ತತ್ತನಯದ್ವಯಾಳೀಳಿಯಿಂದೆ ಸುಖಮಂ ಪಡೆದಳ್ (ಜಗಂ. ೩-೯೮). [ಸಂ./ ತಮಿ. ವಲವನ್, ವಲ್ಲವನ್, ವಲ್ಲಮೈ, ವಲ್ಲೈ; ಮಲ. ವಲವನ್; ತುಳು ಬಲ; ತೆಲು. ವಲಮು, ವಲಮು; ಕೋತ. ವಲ್]

ಬಲಋದ್ಧಿ, ಬಳಋದ್ಧಿ (ನಾ). [ಜೈನ] ಎಂಟು ಬಗೆಯ ಋದ್ಧಿಗಳಲ್ಲಿ ಒಂದು; ● "ತಪಃಶಕ್ತಿಯಿಂದ ಅಪರಿಮಿತವಾದ ಮನೋವಾಕ್ಕಾಯ ಬಲಗಳುಂಟಾಗುವುದು" (ಕಶಕೋ. ೦೬೯): ಭಾವನೆಯೊಳಾದ ಬುದ್ಧಿ ತಪೋವಿಕ್ರಿಯೌಷಧಿರಸಬಲಾಕ್ಷೀಣಾಭಿಧಾನಸಪ್ತರ್ಧಿಗಳೊಳಂ ನೆಱೆದು (ಅಂಜ. ೬-೩ ಪ); ಬುದ್ಧಿಕ್ರಿಯಾವಿಕ್ರಿಯತಪೋಬಲೌಷಧರಸಕ್ಷೇತ್ರ ಭೇದದಿಂ ಋದ್ಧಿಪ್ರಾಪ್ತಾರ್ಯರಷ್ಟವಿಧಂ (ಶಬ್ದ. ೦೭೩); ಮನ ವಚನ ಕಾಯ ಭೇದದಿಂ ಬಲಋದ್ಧಿ ಮೂಱು ತೆಱಂ (ಚಾರಿ. ೩೯೯). ಬಳಋದ್ಧಿ: ಮನೋಬಳಂ ವಾಗ್ಬಳಂ ಕಾಯಬಳಮೆಂದು ಮೂಱುಂ ತೆಱನಾದ ಬಳಋದ್ಧಿಯೊಳಂ . . . ನೆಱೆದು (ಅಂಜ. ೦೯-೫೦ ಪ). 'ಬುದ್ಧಿಋದ್ಧಿ' ಪರಾ. [ಸಂ.]

ಬಲಂಗೆಡು (ಕ್ರಿ). ಶಕ್ತಿಗುಂದು; ಬಲಹೀನವಾಗು: ಅರಣ್ಯದಾ ಭೀಳತೆಗಂ ಕೋಡದೆ ಕೊಂಕದೆ . . . ಬೆಚ್ಚದೆ ಬೆದಱದೆ ಬಲಂಗಿಡದೆ ಮನಂಗುಂದದೆ ಕೆಲನಂ ಸಾರದೆ ಸಹಾಯಮಂ ಪಾರದೆ ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದಪರ್ಣಯೊಪ್ಪುತ್ತುಮಿರೆಯಿರೆ (೧೦೪. ೯-೩೯ ಪ).

[ ಬಲ₃ + ಕೆಡು₁ ]

ಬಲಂಗೊಳ್, ಬಲಗೊಳ್, ಬಲಗೊಳ್ಳು (ಕ್ರಿ). ಬಲಭಾಗದಿಂದ ಸುತ್ತು ಹಾಕು; ಪ್ರದಕ್ಷಿಣೆ ಮಾಡು: ತನ್ನ ನಾಲ್ವರ್ ತಮ್ಮಂದಿರೊಡನೆ ಮಂಗಳವಸದನಂಗೊಂಡು ಮಂಗಳಪ್ರಧಾನೋಚಿತವಿಜಯಗಜಮನೇಱಿ ಪಿದ್ಯೋತವಾಗಿ ದಕ್ಷಿಣಾವರ್ತಮಪ್ಪ ಹೋಮಾಗ್ನಿಯಂ ಬಲಂಗೊಂಡು (ಕುಕ್ಕು. ೯-೯೬ ಪ); ಶಬಳಂ ರತ್ನದ ತೇಜಮುನ್ನುಮಧಿದೆಯ್ಯಂ ಶಂಕಿದೀಯುರ್ಗ್ಗ ಚಂದ್ರಬಳಂ ಬ್ರಹ್ಮಜನೇಂದ್ರಗೇಹಮೆನುತಂ ಬಂದತ್ತಿಯಿಂ ಸೇಸೆಗೊಣ್ಡು ಬಲಂಗೊಣ್ಡು ಸಮನ್ತು ಪೊದನಸಪೀ ಗ್ರಾಮಾಧಿಪಂ... ಮೂಱು ಪರ್ವ್ವಂಗಳೊಳ್ (ಶಾಸನ. ೫/೧-೧, ೫೩-೬೫; 1007); ಶ್ರೀಲೋಕ ಸ್ವಾಮಿಯಿರ್ದ ಗಂಧಕುಟಿಯಂ ವಾಸುದೇವರ್ವೊದಲಾದ ಯಾದವರೆಲ್ಲರುಂ ಮೂಮ ಬಲಂಗೊಂಡು ರೋಮಾಂಚಕಂಚುಕಿತಶರೀರರಾಗಿ ನಿರ್ವಾಣ ಸೀಮಂತಿನೀಪ್ರಿಯಂಗೆ ಸರ್ವಾಂಗಪ್ರಣತರಾಗಿ (ನೇಮಿಪು. ೦೩-೯೯ ಪ). ಬಲಗೊಳ್: ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚೊಳಗಂ ಪೊಕ್ಕು (ಶಬ್ದಾ. ೬೯-೦); ಶ್ರೀಮಜ್ಜಿನಭವನಮನುಬಲಾಮಯಾದಿಯರದಕ

ವರ್ತಿಸ್ತುತವಮಂ ಮೂವೆ ಬಲಗೊಂಡು ಭವ್ಯಶಿಯಾಪಣೆಯೆನಿಸಿದ ಸರಸ್ವತೀ ಮಣಿಹಾರಂ (ಆದಿಪು. ೯-೧); ಉಪ್ಪಟಯ್ಯನ ಮಯೂರನ ಕಾಳಿದಾಸನ . . . ಭಲ್ಲಟನ ಭಾರವಿಯ ಪದವ ನೆನೆವು ಬಲಗೊಂಡು ತೂವಗಿದೆನೀ ಮಹಾಕೃತಿಯಂ (ಶಬರ. ೦-೦೯): ಚಕ್ರಿ . . . ಬಲಗೊಂಡಸುಜಿತ ಮೂಜು ಬಾರಿ ತನ್ನೊಳು ತಾನು ಗೆಲವೇಱ ಮುನಿಗಳಿರ್ವರಿಗೆ (ಶಶ. ೩-೬೦). **ಬಲಗೊಳ್ಳು:** ಹಾಡಿನಲ್ಲಿ ಅಕ್ಕಮಹಾದೇವಿ, ಕೆರೂರ ರಾಚಯ್ಯ, ದ್ರೌಪದಿ, ಸುಭದ್ರೆ, ದೇವಕಿ ಇವರನ್ನೆಲ್ಲ ಕವಯಿತ್ರಿ ಬಲಗೊಳ್ಳುತ್ತಾಳೆ (ಕರ್ನಾಕ. ೩೯೩); ತುತ್ತು ಮುತ್ತ್ರನು ನೀಡು ಸರಸತಿ ಲಕುಮಿ ಕಾಳಿಕ ಅಂಬೆ ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ (ಅರಳು. ೧೩-೧೨). [ಬಲ$_1$ + ಕೊಳ್$_1$]

**ಬಲಂಬೆರಸು** (ಅ). ಸೈನ್ಯವನ್ನು ಕೂಡಿಕೊಂಡು; ಸೇನಾಸಮೇತವಾಗಿ: ದ್ರೌಪದಿಯ ಕೊಟ್ಟ ನಣ್ಪುಮಂ ದ್ರೋಣನೊಳಾದ ಪರಿಭವಮುಮಂ ನೆನೆದೊಂದಕ್ಷೋಹಿಣೀಬಲಂಬೆರಸು ದ್ರುಪದಂ . . . ನೆಲಂ ಮೂಜಿ ವಿಟ್ಟಂತೆ ಬಲವಕ್ಕದೊಳ್ ನಡೆಯೆ (ಪಂಪಭಾ. ೯-೯೩ ವ); ಕೆಲವು ದಿವಸದ ಮೇಲೆ ವಿಶ್ವಾನುಲೋಮನುಂ ತಾನುಂ ತಂತಮ್ಮ ಬಲಂಬೆರಸು ಪರದೇಶಕ್ಕೆ ಪೋಗಿ ಕಳ್ದು ಬಹುದ್ರವ್ಯಂ ಬಸವಾದುದಱಿಂ ಪೆರ್ಚಿ (ಧರ್ಮಾಮೃ. ೨-೦೯೩). [ಬಲ$_3$ + ಬೆರಸು$_3$]

**ಬಲಂಬೆಱು** (ಕ್ರಿ). ಶಕ್ತಿಯನ್ನು ಪಡೆ; ಸಾಮರ್ಥ್ಯವನ್ನು ಹೊಂದು; ಬಲಿಷ್ಠವಾಗು : ಮದೀಯವಾಗ್ವಿಭವವಿನ್ಯಾಸಂ ಬಲಂಬೆಸ್ತುದಿನ್ನಿರು ಬಲ್ಲಿತ್ತಱ ಕೋಡು ಕೂರಿತವನಂತಿಂತುಂತೆನಲ್ಬರ್ಕುಮೋ (ಆದಿಪು. ೦-೨೩); ಬಲಂಬೆತ್ತೊಡಾ ದಿವಿಜೇಜ್ಯಂ ಸ್ವಗೃಹಂಗಳೊಳ್ ನಿಲೆ ಸುವರ್ಣಂ ಪೂರ್ಣಮಾ ಗೇಹದೊಳ್ (ಶಾಕಶ. ೪-೦೩). [ಬಲ$_3$ + ಪೆಱು$_1$]

**ಬಲಂಬೊಯ್** (ಕ್ರಿ). ಶಕ್ತಿಯನ್ನು ಕೊಡು; ಸಾಮರ್ಥ್ಯವನ್ನು ಎರೆ, —ನೀಡು : ಲೋಕಜ್ಞರು ಸೇವಾವಿಚಕ್ಷಣರುಮಪ್ಪುದಱಿಂದಮಾ ಕುಕ್ಕುಟಯುದ್ಧನಿರೀಕ್ಷಣರಸಕ್ಕೆ ಭಂಗಂಮಾಡದೆ ವಿದ್ಯಾಸಾಮರ್ಥ್ಯದಿನಿರ್ಪರ್ಕೆ ಬಲಂಬೊಯ್ಯು ತಾಮುಮಾ ನೆರವಿಯೊಳದೃಶ್ಯರಾಗಿ ನೋಡುತ್ತುಮಿರ್ದರ್ (ಶಾಂತಿಪು. ೯-೩೩ ವ). [ಬಲ$_3$ + ಪೊಯ್$_2$]

**ಬಲಕನಾಡು** (ನಾ). ಒಂದು ಪ್ರದೇಶದ ಹೆಸರು : ಶ್ರೀಸ್ವಾಮಿಯಬ್ಬೆ . . . ಬಲಕನಾಡ ಸುಳ್ಳಿಗೋಡದ ದೇವಾರಕ್ಕೆ × × ಭಟಾರಗ್ಗೆ ಬಟಿಯಂ ನಟ್ಟ ಬಸದಿಗಂ ದೇವಾರ ಕೊಟ್ಟಳ್ (ಎಕ. VIII, ಸಾಗರ. ೯೩-೦೦; ಸು. ೯೬೦). [ಬಲಕ$_6$ + ನಾಡು]

**ಬಲಕಾಯಿಸು** (ಕ್ರಿ). ೧. ಶಕ್ತಿಯನ್ನು ಪಡೆ; ಬಲವಾಗು: ವೆಲೂರಿಗೆ ವೋಡಿ ಹೋಗಿ ಕಿಲ್ಲೆ ಬಲಕಾಯಿಶಿಕೊಂಡದ್ದರಿಂದ ಆರ್ಕಾಡ ದಪಲತ್ತು ಅನಾಯಕವಾದ ವರ್ತಮಾನ . . . ತಿಳಿದು (ಹೈದರ. ೨೯). ೨. ಬಲಪಡಿಸು; ಸುಭದ್ರಗೊಳಿಸು : ಆ ಕೋಟೆಯನ್ನು ಮೈಸೂರವರು ತೆಗೆದುಕೊಂಡು ತಮ್ಮ ಮಂದಿ ಠಾಣ್ಯಯಿಟ್ಟು ಬಲಕಾಯಿಸಿಕೊಂಡರು (ರಾಜೇಂದ್ರ. ೯). ೩. ಏರು ; ತೀವ್ರವಾಗು : ಒಳಗೊಳಗೆ ಮಾತು ಬಲಕಾಯಿಸಿತು (ಕುರುಬರ. ೦೨೪). ೪. ಕಳೆಗಟ್ಟು ; ವಿಜೃಂಭಿಸು : ಇದರಲ್ಲಿ ಸಾಧಾರಣವಾಗಿ ಒಕ್ಕಲಿಗರೇ ಗೆಲ್ಲುವವರಾದುದರಿಂದ ಈ ಉತ್ಸವ ಬಹಳ ಬಲಕಾಯಿಸುತ್ತದೆ (ಗಹಂದು. ೦೬೦).
[ಬಲಕ್ಕಾ$_6$ (ಫ ← ಹಿಂ. ಬಲಕನಾ, ಬಲಕಾನಾ) + — ಇಸು$_8$./ತುಳು. ಬಲಕ್ರಾಯಿಸ್, ಬಲಕಾಯಿಸು]

**ಬಲಕಟಿಕೆ** 'ಬಲುಗಂಣಿಕೆ' ನೋ.

**ಬಲಕೆಯ್** 'ಬಲಗೆಯ್' ನೋ.

**ಬಲಖರ್ವೀಕೃತ** (ನಾ). (ದೈವಬಲದ) ಶಕ್ತಿಗುಂದಿದವನು; ಬಲಹೀನ: ಶ್ರೀಕೃಷ್ಣಂ ಕಂಸಪುರಾಲೋಕನಕೌತುಕರಸೋದಯಂ ವೀರರಸೋದ್ರೇಕೈದೆಗುಡೆ ಬಲಖರ್ವೀಕೃತನಾ ದೈತ್ಯ ಖಳನ ಪೊಟಲ್ಗೆಯ್ದಂದಂ (ಜಗಂ. ೬-೧). [ಸಂ.]

**ಬಲಗಟ್ಟು** (ಕ್ರಿ). ಎಡಗಡೆಯಿಂದ ಬಲಗಡೆಗೆ ಅಡ್ಡಲಾಗಿ ಹೋಗು : (೯). [ ಬಲ$_1$ + ಕಟ್ಟು$_1$ ]

**ಬಲಗಡೆ** (ನಾ). ಎಡಭಾಗವಲ್ಲದ ಕಡೆ; ಬಲಪಕ್ಕ; ದಕ್ಷಿಣಪಾರ್ಶ್ವ : ಬಲಗಡೆಯಲ್ಲಿ ಬಸಂತನೊಲವಿನಿಂ ಕುಳ್ಳಿರೆ ತನ್ನೆಡದೆಸೆಯೊಳ್ ಸೊಬಗಿಯರಿರೆ ಕಡುಚೆಲ್ವಂ ಪಡೆದನಾವಗಂ ಸನೆಗಣಿಯಂ (ಕಬ್ಬಿಗ. ೧೪೭); ಬಲಗಡೆಗಾಗಿ ಬಾಗಿ ಬಿಗಿಮಟ್ಟುಱ ಬಟ್ಟತೆಂಬಿನಂ ಮಲರ ಸರಂಗಳೊತ್ತರಿಸೆ (ಕಳಾ. ೩-೭). [ಬಲ$_1$ + ಕಡೆ$_3$]

**ಬಲಗಯ್** 'ಬಲಗೆಯ್' ನೋ.

**ಬಲಗರ್ವ** (ನಾ). ಸಾಮರ್ಥ್ಯದ ಬಗೆಗಿರುವ ಸೊಕ್ಕು, —ಮದ : ಆ ಶಿಶುಪಾಲನಳವದೆಂತೆಂದೊಡೆ ಬಲದ ಬಲಗರ್ವದಿಂ ತೋಳ್ವಲದ ಕರಂ ಚಲದಳುರ್ಕೆ[ಯಿಂ] ಸುರರೊಳ್ ಮಾರ್ಮಲೆವಂ (ಶಂಹರ. ೭-೩೯); ಬಲರಿಪು ತನ್ನದೊಂದು ಬಲಗರ್ವದಗುರ್ವಿನೊಳಿಪ್ಪಮೆಯಂ ಕುಲಿಶದಿನೊರ್ವೆ ಖಂಡಿಸಿದಂ (ಕಾವ್ಯಸಾ. ೪೬೯). [ಸಂ.]

**ಬಲಗರ್ವಿತ** (ಗು). ಸಾಮರ್ಥ್ಯದ ದರ್ಪವುಳ್ಳವನು : ಬಲಗರ್ವಿತಪ್ರತಾಪಿಗಳಲಂಘ್ಯರಪ್ರತಿಮರಖಿಳಭೂಭೃತ್ಪ್ರಭುಗಳ್ ಬಲದೇವ ವಾಸುದೇವರ್ ನೆಲೆಗೆಟ್ಟೇಕಾಕಿಯಾದರುಱಿದವರಳವೇ (ಶಂಹರ. ೦೯-೨೯); ದುರುಳನವ ಭಗದತ್ತ ಬಾಹ್ಲಿಕ ನರಕ ವೃದ್ಧಕ್ಷತ್ರ ಮೊದಲಾದರಸುಗಳು ಬಲಗರ್ವಿತರಸಂಖ್ಯಾತರಹರು (ಕುಮಾ.ವ್ಯಾ.ಸ. ೨-೨೦). [ಸಂ.]

**ಬಲಗಾಲ್**, ಬಲಗಾಲು (ನಾ). ಬಲಗಡೆಯ ಕಾಲು; ದಕ್ಷಿಣ ಪಾದ : ಬಲಗಾಲ್ ಸೈತೊಪ್ಪೆ ವಾಮಂ ಕಲಕೆ ತೊಲಗೆ. . . ಲೀಲಾಲಲಿತಾಸ್ಯಕ್ರಾಂತದಿಂ ನಿಂದವುರನರಸಭಾಚಿತ್ತದೊಳ್ ಕಾಂತೆ ನಿಂದಳ್ (ಲೀಲಾವ. ೯-೦೩೩); ಬಲಗಾಲ್ಪಿಂದೆಸೆಗಾಗೆ ವಾಮಪದಮಂ ಮುಂದಿಟ್ಟು. . . ಕೋಮಲೆ ನಿಂದು (ರಾಜಶೇ. ೩-೯೮). **ಬಲಗಾಲು :** ಆವ ಬಿಂಕವೊ ಎಡಗಾಲ ಗದ್ದುಗೆಯ ಮೇಲೋವಿ ಮಡಿಮ ಮತ್ತೆ ಕೆಳಗೆ ಹಾವುಗೆಯೊಳು ಪೆಂಡೆಯದ ಬಲಗಾಲುಱ ಠೀವಿಯೊಳೆಸೆದನಾ ರಾಯ (ಶರಶ. ೦-೩೦).

ಬಲಗಾಲು ಮುಂತಾಗಿ ಹೋಗು=(ಶುಭಲಕ್ಷಣವಾಗಿ) ಬಲಗಾಲನ್ನು ಮುಂದಿಟ್ಟು ಪ್ರವೇಶಿಸು : ನಾನವನ ಮನೆಯುಮಂ ಬಲಗಾಲು ಮುಂತಾಗಿ ಹೊಕ್ಕ ದಿನದಿಂದ ಬಲುಗೆಲಸವಲ್ಲದೆ ಯಿನಿಸು ತಲೆಮತುಱುಸುವೊಡೆ ಪೊತ್ತುಂ ಕನಸಿನಲ್ಲಿ ಕಾಣೆ (ಸಖ್ಯಶ್ರೀ. ೩-೦೯).
[ಬಲ$_1$ + ಕಾಲ್$_1$]

**ಬಲಗಾಲು** 'ಬಲಗಾಲ್' ನೋ.

**ಬಲಗಿ** 'ಬಲಿಗೆ' ನೋ.

**ಬಲಗುಂದು** (ಕ್ರಿ). ೧. ಶಕ್ತಿಯು ಕಡಮೆಯಾಗು; ಸಾಮರ್ಥ್ಯವು ಕುಗ್ಗು. ೨. ಶಕ್ತಿಯನ್ನು ಕಳೆದುಕೊಳ್ಳು; ಬಲಹೀನವಾಗು : ಅವನು ವಯೋಧರ್ಮದಿಂದ ಬಲಗುಂದಿದ್ದಾನೆ (ಕೂಶ).
[ ಬಲ$_3$ + ಕುಂದು$_1$ ]

**ಬಲಗುಡು** (ಕ್ರಿ). (ಪೂಜಾವಿಧಿಯಲ್ಲಿ) ಬಲಭಾಗದಿಂದ ಸುತ್ತು: ಪ್ರದಕ್ಷಿಣೆ ಹಾಕು : ಸಡಗರದಲಿ ಕಂತುಸುತನಪಾಪದು ಬಲಗುಡುತ ಕುಂಭಾಂಡಜೆ ಸಹಿತ ಪೊಡಮಟ್ಟರು ರುಕ್ಮಿಣಿ ಸತ್ಯಭಾಮೆ ಪೆಣ್ಗಡಣಕ್ಕೆ ರತಿದೇವಿಯರಿಗೆ (ಕೋಹಶ. ೯೨-೬೩). [ಬಲ$_1$ + ಕುಡು$_1$ (<ಕೊಡು$_1$)]

**ಬಲಗುಣಿಕೆ** 'ಬಲುಗುಣಿಕೆ' ನೋ.

**ಬಲಗೂಡು** (ಕ್ರಿ). ಸೈನ್ಯದೊಂದಿಗೆ ಇರು; ಸೇನಾಸಮೇತವಾಗಿರು : ತೋರಿಯ ಮಣಿಪೀಠದಲಿ ಮಂಡಿಸಿ ರಾಯಭಾರಿಗಳ್ಕೈಯಿಂದೆ ಕರೆಸಿ ವಾರಿಜದಳನೇತ್ರ ಬಲಗೂಡಿ ಪ್ರಸ್ಥಾನಭೇರಿಯ ದನಿಮಾಡಿಸಿದ (ಕೋಹಶ.

೩೭-೨೬): ಶಿವಭಕ್ತಜನವ್ರಜಂ ವಿಜೃಂಭಿಸಿ ನೆಲಸಿರ್ದ ಪಟ್ಟಣವಿಂದಿಂತಿ ದಲ್ಕೊಳ್ ಬಲ [ಪಾಠಾಂ. ಳ]ಗೂಡಿ ಗಾಡಿ ರಂಜಿಸೆ ಪೊಸವಾಜಿಯೇರ್ದು ವಿಹರಿಪ್ಪದು ಬಲ್ಲತನಕ್ಕೆ ತಕ್ಕುದೇ. (ರಾಜಶೇ. ೦೩-೪). [ಬಲ್$_3$ + ಕೂಡು$_1$]

**ಬಲಗೆಯ್**, ಬಲಕೆಯ್, ಬಲಗಯ್, ಬಲಗೈ (ನಾ). ೧. ಬಲಭಾಗದ ಕೈ; ದಕ್ಷಿಣ ಹಸ್ತ : ಬಲದ ಸುಟ್ಟುವೆರಸಿದರ್ಚಿಯ ವಿಳಾಸದಿಂದಗ್ನಿರಾಜಿ ನೀರಾಜನದೊಳ್ ಬಲಗೆಯ್ಯೊಳ್ ಚಕ್ರಿಗೆ ದೋರ್ವಲವಿಜಯಮನೀವ ತೆಱದಿನೇಂ ಸೊಗಯಿಸಿತೋ (ಶಾಂತಿಪು. ೧೦-೪೨); ಇನಿರಸವಾಂತ ಕರ್ವಿಲ್ಲಿಗೆ ಭ್ರಮರ ಸಿಂಜಿನಿಗೈದೆಡದ ಹಸ್ತದಲಿ ದನಿಗೆಯ್ಯುತಿರೆ ಬಲಗೆಯ್ಯ ಪೂಸರ ದೊರ್ವ ವನಿತೆ ನಿಂದಿರ್ದಳುತ್ಸವದಿ (ಸೋಹಶ. ೩-೩೭). ೨. ಬಲವಾದ ಸಹಾಯ,-ನೆರವು : ಪಡಲಿಟ್ಟಿಂತೆಪೊಲಾಯ್ತು ಕೀಚಕಬಲಂ. . . ಪೆಱವೇಕ್ಷೊಲ್ಲಿಂಗಮೇನಾಗದಿಂದುಡಿದತ್ತಾಗದೆ ಮತ್ಸ್ಯನೊಂದು ಬಲಗೆಯ್ಯಂದಕ್ಕಟಾ ಎಂಬುದಂ ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ರಂಗ ಬಲ್ವನ್ನರಾರ್ (ಪಂಪಭಾ. ೬-೯೦). **ಬಲಕೆಯ್** : (೬). **ಬಲಗಯ್** : ೧. ಅಕ್ಕರವಂ ಬಲಗಯ್ಯೊಳು[ಪಾಠಾಂ. ಗೈಯೊಳ್] ಲೆಕ್ಕಮನೆಡಗಯ್ಯೊಳಭವನನುಲೋಮವಿಲೋಮಕ್ಕೆ ನೆಲೆಯಾಗಿ ಮಾಡಿ ಜಗಕ್ಕಱಿಪಿದ ನೋಜೆಯೀಂದಮಾದಿಬ್ರಹ್ಮಂ (ಸಮಶ. ೨-೧೨). **ಬಲಗೈ** : ೧. ವಿವಿಧವಿಧ ನವನಾಟಕಮಹೋತ್ಸವಸಮುಚ್ಚಯವೆಸೆಯೆ ಏಕಾಂತವಿಭು ಬಲಗೈಯಲ ಗೆಡದ ಕರದಲಿ ಶಿರಂ ಮೆಱೆಯೆ (ಬಸಪು. ೫೨-೯೦); ಬಲಗೈ ಬೆರಳನೊರ್ವ ನಿಗಿತ್ತ ಮೊಣ್ಣೆಯಿಂದುಲಿದು ಭಂಗಿಸಿರೆ ಕಂಡವರು (ಕಂಪಪು. ೬-೦೮೪). ೨. ಭಕ್ತಿಯ ಬಲಗೈಯತುಳವಿರಕ್ತಿಯ ಮನೆ . . . ಎನಲಾ ಪರಶಕ್ತಿಯ ಮಣಿಭವನವೆಸೆದುದು (ಉದ್ಭಟ. ೬-೬೩); ರಾಯರ ಬಲಗೈ ನಾನು . . . ಅವರು ಯಾವ ಕೆಲಸಕ್ಕಂದರೂ ಅದಕ್ಕೆ ತಯಾರಾಗಿರುತ್ತಿದ್ದೆ (ರಾಜುಕ. ೬); ಆಚಾರ್ಯರು ಮಾಲವೀಯರ ಬಲಗೈಯಾಗಿದ್ದರು (ವಪ್ಪಓ. ೪೨).

**ಬಲಗೈಯವನು**=ಹೊಲೆಯರಂದಲ್ಲಿ ಉತ್ತಮಜಾತಿಯವನು : ಊರ ಹೊರಗೆ ಬಲಗೈಯವನಳಿದರೆ ಹಾರುವನಿಂಗೂರೊಳಗಿಹಗೇತಕೆ ಮೀರಿದ ಸೂತಕ (ಶಕ್ತಿಸ. IV. ೦೦-೩). 'ಎಡಗೆಯ್' ಪರಾ. [ಬಲ್$_1$ + ಕೆಯ್$_2$]

**ಬಲಗೆಲ** (ನಾ).= ಬಲಗಡೆ : ಬಲಗೆಲದೆಡೆಯೊಳು ಗರ್ಭಂ ನಿಲೆ ಪುರುಷಂ ವಾಮಭಾಗದಿಂ ಸ್ತ್ರೀಯೆರಡುಂ ಕೆಲದೆಡೆಯೊಳಮಗ್ಗಳು ನಡುವಣ ನೆಲೆಯಿಂದಂ ಪಂಡರಾಗಿ ಪುಟ್ಟುವರೆಂದುಂ (ಮುದ್ರಾ. ೦-೯೪) ; ಆ ಶಚಿ ಮಾಯಾನಿದ್ರೆಯನಾ ಶಶಧರವದನೆಗಿತ್ತು ಬಲಗೆಲದೊಳ್ ಮಾಯಾಶಿಶುವ ನಿರಿಸಿ ಪಾಣಿಕುಶೇಶಯಯುಗದಿಂದೆ ನೆಗಪಿದಳ್ ಜಿನಶಿಶುವಂ (ವರ್ಧಪು. ೦೩-೯೩). [ಬಲ್$_1$ + ಕೆಲ$_1$]

**ಬಲಗೈ** 'ಬಲಗೆಯ್' ನೋ.

**ಬಲಗೈಬಂಟ** (ನಾ). ತುಂಬ ಸಹಾಯವನ್ನು ನೀಡುವವನು ; ಅತ್ಯಂತ ಆಪ್ತನಾದವನು : ತಾನು ಚಕ್ರವರ್ತಿಯ ಬಲಗೈಬಂಟನೆಂದು ಸುಖಾರುವಿಗೆ ಹೆಮ್ಮೆ (ಮುಜಿಸ. ೫೨) ; ವಿಲಿಂಗ್ಡನ್ನರು . . . ಕಾಂಗ್ರೆಸ್ಸಿನೊಡನೆ ಒಪ್ಪಂದವಮಾಡಿ ಜನತೆಯ ಕೋರಿಕೆಯನ್ನು ಮನ್ನಿಸಿದುದು ಬಲಗೈಬಂಟರಾದ ಹಲವಾರು ಸರಕಾರಿ ನೌಕರರಿಗೆ ಒಳಗಿಂದೊಳಗೆ ಜೇಳು ಕುಟುಕಿದಂತಾಗಿತ್ತು (ಕುರುಕಾ. ೦೩೨).
[ಬಲಗೈ (<ಬಲಗೆಯ್) + ಬಂಟ$_1$]

**ಬಲಗೊಳ್** 'ಬಲಂಗೊಳ್' ನೋ.

**ಬಲಗೊಳಿಸು$_1$** (ಕ್ರಿ). ಬಲಗಡೆಯಿಂದ ಸುತ್ತು ಬರುವಂತೆ ಮಾಡು ; ಪ್ರದಕ್ಷಿಣೆ ಹಾಕಿಸು : ಪೂಜೆ ಪೂರಿತವಾಗೆ ಪಾದ್ಮಾಳಿ ನಿಂದುದಾ ರಾಜನಂಬಿಕೆಯ ಮುಂದಿಟ್ಟು ಓಜೆಯಿಂದರುಹನ ಬಲಗೊಳಿಸಿದನು ತನೂಜರ ತಾನೊಡನೆಯ್ದು (ಶರಶ. ೩೯-೨೩).
[ಬಲಗೊಳ್ (<ಬಲಂಗೊಳ್) + – ಇಸು$_3$]

**ಬಲಗೊಳಿಸು$_2$** (ಕ್ರಿ). ಶಕ್ತಿಶಾಲಿಯಾಗುವಂತೆ ಮಾಡು : ಪುಷ್ಟಿಗೊಳಿಸು : ವ್ಯಾಯಾಮವು ದೇಹವನ್ನು ಬಲಗೊಳಿಸುತ್ತದೆ (ರೂಢಿ).
[ಬಲ್$_3$ + ಕೊಳ್$_1$ + – ಇಸು$_3$]

**ಬಲಗೊಳ್ಳು** 'ಬಲಂಗೊಳ್' ನೋ.

**ಬಲಗೋಲು**, ಬಲಗೋಳು (ನಾ). ೧. (ನೊಗ ಅಥವಾ ಗಾಡಿಯ) ಬಲಭಾಗ ; ದಕ್ಷಿಣಪಾರ್ಶ್ವ : ಜ್ಞಾನಚಕ್ಷುವೆಂಬ ನೊಗದ ಉಭಯದ ಕೊನೆಯಲ್ಲಿ ಎಡಗೋಲಿನಲ್ಲಿ ಕಾರಿಯ ಹೂಡಿ ಬಲಗೋಲಿನಲ್ಲಿ ಬೆಳ್ಳಿಯ ಹೂಡಿ ಅಡಿ ಕಿತ್ತುವಂತ ಧಾಯೆಂದು ಪೊಡೆಯಲಾಗಿ (ಶಿಪ. III. ೯೬-೯೬); ಇನ್ನೊಂದು ಗಳಿಗೆ ಇನ್ನಾರ ನೆನೆಯಾಲಿ ಬಲಗೋಲಲ್ಲಿರುವ ಬಸವಣ್ಣನ ನೆನೆದಾರೆ ಬಂದಷ್ಟು ಪಾಪ ಪರಿಯಾರ (ಜಜಾ. ೩). ೨. (ನೊಗ ಅಥವಾ ಗಾಡಿಯ) ಬಲಭಾಗಕ್ಕೆ ಹೂಡುವ ಎತ್ತು : ಈ ಎತ್ತು ಬಲಗೋಲು (ರೂಢಿ). 'ಎಡಗೋಲು' ಪರಾ. **ಬಲಗೋಳು**: ೧. ಒಮ್ಮನದೊಳದ್ದಿದುವು ಹುಟ್ಟುಗಳು, ಉಪ್ಪುನೀರ್ ತುಳ್ಕಿ ತಳ್ಳೊಯ್ಯೆ, ಬಲಗೋಳು ಮುಂದಾಗಿ ನೂಂಕಿದುದು ನಾವೆ ಬಲಮಲ್ಲ, ಒಗ್ಗಿನಲಿ (ಶಾರಸಿ. ೦೩-೩೫೯). [ಬಲ್$_1$ + ಕೋಲು$_1$ (<ಕೋಲ್$_1$)]

**ಬಲಗೋಳು** 'ಬಲಗೋಲು' ನೋ.

**ಬಲಘಟ್ಟನ** (ನಾ). ಸೇನೆಯಂ ತುಳಿತ,-ಪದಾಘಾತ : ಬಲಘಟ್ಟನದಿಂ ಪುಟ್ಟಿದ ಖಳಧೂಳಿಯಿನಾಗಸಂ ಮಲೀಮಸಮಾಗಲ್ ಸಲೆ ರಜನೀಶಂಕೆಯಿನುಜ್ಜ್ವಳಕರಮಂ ಕೆದಱಿತಿಲ್ಲ ರವಿ ದಿಕ್ಕುಳದೊಳ್ (ಪಾರಪು. ೦೦-೫೦).
[ಸಂ.]

**ಬಲಚೋರಿ** (ನಾ). ಬಲಭಾಗದ ಎತ್ತು: ನೊಗದ ಬಲಗಡೆಗೆ ಕಟ್ಟುವ ಎತ್ತನ್ನು ಬಲಚೋರಿ ಎಂದೂ ಹೇಳುತ್ತಾರೆ (ರೂಢಿ). 'ಎಡಚೋರಿ' ಪರಾ. [ಬಲ್$_1$ + ಚೋರಿ ?]

**ಬಲಜ**, ಬಳಜ (ನಾ). ೧. ಪಟ್ಟಣದ ಬಾಗಿಲು ; ಪುರದ್ವಾರ. ೨. ಹೊಲ ; ಕ್ಷೇತ್ರ. ೩. ಸುಂದರವಾದ ಆಕೃತಿ. **ಬಳಜ** : ೪. ಬಾಗಿಲು ; ದ್ವಾರ : ತಿವುರಿ ಗುಡಿ ಗೂಡಾರಂ ಝಂಪಾಳಿ ಚೌಕಿಗೆ ಜಂಪೆ ಮಂಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂಬಿವಱ ಪಸುರಿಂ ಕರ್ಪಿಂ ಕೆಂಪಿಂ ಬಸಂತನ ಬೀಡಿನಿಂತವಱ ಪೊಱವೀಡೆತ್ತಂ ಮಾಡಿತ್ತು ಕಣ್ಗಾನುರಾಗಮಂ (ಅನಂಪು. ೦೩-೬೩). [ಸಂ.]

**ಬಲಜೆ** (ನಾ). ೧. ಚೆಲುವೆ ; ಸುಂದರಿ. ೨. ಭೂಮಿ. ೩. ಒಂದು ಜಾತಿಯ ಮಲ್ಲಿಗೆ. [ಸಂ. ಬಲಜಾ]

**ಬಲಜ್ಯಾಯ** (ನಾ). ೧. ಬಲಶಾಲಿಯಾದವನು ; ಬಲಿಷ್ಠ. ೨. ಬಲರಾಮನನ್ನು ಅಣ್ಣನನ್ನಾಗಿ ಉಳ್ಳವನು ; ಕೃಷ್ಣ. ೧, ೨ : ಶ್ರೀಯ ಮನಃಪ್ರಿಯಂ ಜನಿತಕಾಮನಿಳಾಪ್ರಿಯನಬ್ಜಶಂಖಲಕ್ಷ್ಮಾಯತಹಸ್ತನಾತ್ತವಿಜಯಂ ದ್ವಿಜರಾಜಸುಸೇವಿತಂ ಬಲಜ್ಯಾಯನಭೇದ್ಯಮನ್ತ್ರಕುಶಲಂ ಬಲಿಬನ್ಧನನನ್ತೆ ರಾಯನಾರಾಯಣನೆಮ್ಬುದುರ್ವ್ವಿನರಸಿಂಹ ನರೇನ್ದ್ರನ ಮನ್ತ್ರಿ ಬೂಚನ (ಎಕ. V. ಅರಸೀ. ೦೭೨-೨೬; 1163).
[ಸಂ. ಬಲಜ್ಯಾಯಸ್]

**ಬಲತಂಗಿ** 'ಮಲತಂಗಿ' ನೋ.

**ಬಲತಮ್ಮ** 'ಮಲತಮ್ಮ' ನೋ.

**ಬಲತಾಯಿ** 'ಮಲದಾಯ್' ನೋ.

**ಬಲದಲನ** (ನಾ). ೧. ಸಂಪೂರ್ಣವನ್ನು ನಾಶಮಾಡಿದವನು. ೨. ಬಲನೆಂಬ ರಾಕ್ಷಸನನ್ನು ಕೊಂದವನು ; ಬಲಧ್ವಂಸಿ ; ಇಂದ್ರ. ೧, ೨ : ಕುಲಗೋತ್ರವೈರಿಯುಂ ಬಲದಲನನುಮೆಂದಮರಪತಿಯನೊಲ್ಲದೆ ಪೋದರ್ ಕುಲಗೋತ್ರವೀರಭಟರುಂ ಬಲನಾಥರುಮುಂತುಮವರರೇ ನೋಡುವರೇ (ಜಗಪು. ೦೩-೭೯). [ಸಂ.]

**ಬಲದಾಯಿ** 'ಮಲದಾಯ್' ನೋ.

**ಬಲದೃಪ್ತ** (ನಾ). ಶೌರ್ಯದಿಂದ ಸೊಕ್ಕಿದವನು ; ಪರಾಕ್ರಮದಿಂದ ಅಹಂಕಾರವನ್ನು ಹೊಂದಿದವನು : ಬಲದೃಪ್ತರಾದ ಕ್ಷತ್ರಿಯರು ಒಬ್ಬೊಬ್ಬರಾಗಿ ಹತೋದ್ಯಮರೂ ಹತಾಶರೂ ಆದ ಬಳಿಕ . . . ಅರ್ಜುನನು . . . ಹೋಗುತ್ತಿರುವುದನ್ನು ನೋಡಿ ಎಲ್ಲರೂ ಗುಲ್ಲೆಬ್ಬಿಸಿದರು (ಕಂಕ್ಕಾ. ೬೦). [ಸಂ.]

**ಬಲದೇವ**, ಬಳದೇವ (ನಾ). ೧. ಕೃಷ್ಣನ ಅಣ್ಣ ; ಬಲರಾಮ : "ಬಲದೇವಃ, ಬಲಭದ್ರಃ . . . ಕಾಮಪಾಲಃ, ಹಲಾಯುಧಃ — ಈ ೧೮ ಬಲದೇವನ ಹೆಸರ್" (ಹಂಸಾಯು. ೬–೨೯). ೨. ಒಬ್ಬಾತನ ಹೆಸರು : ಬಲದೇವಾಚಾರ್ಯರ ಪಾಳುಗ್ಗವಣ (ಎಳ. II (R), ೯೨; ೩೫ಹು ೩೩) ; ಬಲದಿಂ ತೇಜದಿನೊಳ್ಪಿನಿಂ . . . ಗಾಂಭೀರ್ಯದಿಂ ಸೌರ್ಯದಿಂ ಬಲದೇವಂಗೆ ಸಮಾನಮಪ್ಪರೊಳರೇ ಮತ್ತನ್ಯದಂಡಾಧಿಪರು (ಎಳ. II (R), ೦೬೯–೨೬ ; 1139). ೩. [ಜೈನ] ಅರುವತ್ತುಮೂವರು ಶಲಾಕಾಪುರುಷರಲ್ಲಿ ಒಂದು ಗುಂಪು ; ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ ಮತ್ತು ಪದ್ಮ ಎಂದು ಒಂಬತ್ತು ಮಂದಿ ಬಲದೇವರು : ಬಲದೇವನಂತೆ ಪೆಣನಂ ಪೊತ್ತು ತೊಟಲ್ವ ಕ್ಷೇತ್ರಪಾಲರಿಂ . . . ಸೋಂಬಸಂ ಮೆಚ್ಚಿ ಬೇಟಾರ್ಗೆ ಪೋದ ಸೂಳೆಯಂತೆಯ್ಕಲಾಡುವ ರಣದೇವತೆಯರಿಂ ದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೭೯ ಪೂರ್ವಕ) ; ಶ್ರೀವರ್ಮನುಂ ವಿಭೀಷಣನುಮೆಂಬ ಪೆಸರೊಳ್ ಬಲದೇವ ವಾಸುದೇವರೆನಿಸಿ ಬಳೆಯೆ (ಆದಿಪು. ೩–೩೦ ವ) ; ಬಲದೇವಂ ದುಃಖಾಗ್ರಜ್ವಲನಾಹತನಾಗಿ ಪೊತ್ತು ತಮ್ಮನ ಪೆಣನಂ ಪಲವಾಡುತ್ತ ತೊಳಲ್ದುಪೊನಲಾಘ್ರಾತಗಹನದಲ್ಲಿಯೆಂಬುದನಱದಂ (೦ಂಹಂ. ೦೯–೯೮). ಬಳದೇವ : ೨. ಬಳ [ಪಾಠಾಂ. ಲ] ದೇವಂ ಭೀಮನ ಭುಜಬಳದೇವಂ ಮನಮನಲೆಯೆ ಕುರುಪತಿಯಂ ಮಾರ್ಕೊಳೆ ಪರಿಭವಿಸದನೆಂದ . . . ಲ್ಲದೆ ಮುಳಿದು ಕೆಳದರ್ ಕಿರ್ಚಿದಾರ್ಗಳ್ (ಗದಾಯು. ೮–೯೩). ೩. ಬಳದೇವವಾಸುದೇವರನಿಱುವುದು ಗುಣದೊಳ್ಪು ರಾಮಲಕ್ಷ್ಮಣರಂ ಪೆಂಪಿಱುವುದು ಭೀಮಾರ್ಜುನರುಮನಿಱುವುದು ಮಲ್ಲಪನ ಪೊನ್ನಮಯ್ಯನ ಚರಿತಂ (೮೫ಪು. ೦–೩೩). [ಸಂ.]

**ಬಲದೊಡ್ಡಿ**, ಬಲಲೊಡ್ಡಿ (ನಾ). ಒಂದು ಬಗೆಯ ಸಸ್ಯ : (ಸಸ್ಯಪಿ. ೧೨೯). ಬಲಲೊಡ್ಡಿ : ಬಲರೊಡ್ಡಿ, ಬಾಡಿಗಾನೆ, ಲೊಡ್ಡುಗಿನ ಮರ (ಸ್ವಶಿಸಿ. ೬೩–೦೪೪೦). [?]

**ಬಲದೋಳ್ದಲೆ** (ನಾ). ಬಲಭುಜ ; ಬಲಹೆಗಲು : ನನೆಯಂಬನೆಯ್ದೆ ನೆಲನಂ ಬಲದೋಳ್ದಲೆಯಲ್ಲಿ ತಾಳ್ದಿದಂ (ಕಾವ್ಯಸಾ. ೪೬).

ಬಲದೋಳ್ದಲೆಯಾಳ್ =ಬಲಭುಜದಂತಿರುವವನು ; ಆಪ್ತನಾದ ಬಂಟ : ಒಡನವನೊಡೆಯಂ ಬಲದೋಳ್ದಲೆಯಾಳಱದುದರ್ಕೆ ಸುರ್ಕಿ ಚಾಮನೃಪಾಲನೊಳೊಪೆವೆರೆದಾಮುಱಯುತ್ತೆೞಿಪ್ಪದೆಂದು ನಿರವಿಸಿ ಮುದಿಯಂ ಸೀಮೆಯಱಯೆ ತಂದಿತ್ತಂ ರಾಮಯ ಲಿಂಗಾಖ್ಯಗಜಮನಶ್ವಪ್ರಜಮಂ (೫೫ಪು. ೨–೬೨). [ಬಲ್ + ತೋಳ್ + ತಲೆ]

**ಬಲಧ್ವಂಸಿ** (ನಾ). ಬಲನೆಂಬ ರಾಕ್ಷಸನನ್ನು ಸಂಹಾರಮಾಡಿದವನು ; ಇಂದ್ರ : ಸುರಸತಿಯು ಸಂತೈಸಿ . . . ಅರಮನೆಗೆ ಬಂದನು ಬಲಧ್ವಂಸಿ (ಕುಮಾರ. ೬–೪೯). [ಸಂ. ಬಲಧ್ವಂಸಿನ್]

**ಬಲಪಕ್ಕ** 'ಬಲವಕ್ಕ' ನೋ.

**ಬಲಪಡಿಸು** (ಕ್ರಿ). ಹೆಚ್ಚುಮಾಡು ; ವೃದ್ಧಿಗೊಳಿಸು : 'ಬಿಲ್ಲಾನ್' ಎಂಬ ಪೂರ್ವದ ಹಳಗನ್ನಡದ ಛಾಯೆಯುಳ್ಳ ರೂಪವೂ . . . ಕುತೂಹಲವನ್ನು ಬಲಪಡಿಸುತ್ತವೆ (ಸಪಾಠಲೋ. ೦೩೯) ; ಅಪಥ್ಯವು ರೋಗವನ್ನು ಬಲಪಡಿಸುತ್ತದೆ (ಲೂಪ). [ಬಲ್ + ಪಡಿಸು]

**ಬಲಪ್ರದರ್ಶನ** (ನಾ). ಶಕ್ತಿಯನ್ನು ತೋರ್ಪಡಿಸುವಿಕೆ : ಸಾಮರ್ಥ್ಯವನ್ನು ಪ್ರದರ್ಶಿಸುವಿಕೆ : ಇಂದು ಅವರ ಸಂಘದಲ್ಲಿ ಬಲಪ್ರದರ್ಶನದ ಸ್ಪರ್ಧೆಯನ್ನು ಏರ್ಪಡಿಸಿದ್ದಾರೆ (ಲೂಪ). [ಸಂ.]

**ಬಲಪ್ರಯೋಗ** (ನಾ). ೧. ಒತ್ತಾಯ ; ನಿರ್ಬಂಧ : ಒಂಟಿಕೋಣೆಗೆ ಹೋಗುವುದಿಲ್ಲವೆಂದು ವಾಸಿಲ್ಯೇವ್ ಹಠಮಾಡಿದನು. ಕಾವಲುಗಾರರು ಬಲಪ್ರಯೋಗ ಮಾಡಬೇಕಾಯಿತು (ತ್ರಿಪರು. ೨೦೬). ೨. ಒತ್ತಡ ; ಒತ್ತರ : ವಿದ್ಯುತ್ಪ್ರವಾಹವು ಕಾಂತದ ಮೇಲೆ ಬಲಪ್ರಯೋಗ ಮಾಡುವುದನ್ನು ನೋಡಿದವರ ಆ ಪ್ರವಾಹಕ್ಕೆ ಸಂಬಂಧಿಸಿದ ಕಾಂತಕ್ಷೇತ್ರವಿದೆಯೆಂದು ಕಂಡು ಬರುವುದು (ಭೌತಶಾ. ೩೩೦). [ಸಂ.]

**ಬಲಬವರಿ** (ನಾ). ಬಲಭಾಗಕ್ಕೆ ತಿರುಗುವ ಒಂದು ಪಟ್ಟು : ತಿವಿದನಣ ಸಿನಲೂಱ ಪೊನೆಯಲಿ ಸವಡಿಯಾನೆಯನೆತ್ತಿದನು ಬಲಬವರಿಯಡಬವರಿಯಲಿ ತಡೆಗಾಲ್ಗೊಯ್ದನಾ ಭೀಮ (ಕುಮ್ಮಾಗ. ೦–೩೬). [ಬಲ್ + ಬವರಿ]

**ಬಲಭಂಜನ** (ನಾ). =ಬಲಧ್ವಂಸಿ : 'ಬಲಭಂಜನಾರಿ' ಪರಾ. [ಸಂ.]

**ಬಲಭಂಜನಾರಿ** (ನಾ). ಇಂದ್ರನ ವೈರಿ ; ಇಂದ್ರಜಿತು : ಬಲಭಂಜನಾರಿ [ಪಾಠಾಂ. ಜಂಬಾರಿಜಿತು, ಜಂಭನಾರಿ] ಮಹೀಪತಾಂಗಿಯ ಮಗಳ ರೂಪಿನ ಕಪಟಕಾಮಿನಿಯ ಬಾಳಿನಲಿ ಬಱಕ್ಕಿದು ಜವರಕೆ ತಾಳಲಾಱದೆ ಹನುಮನಲಿ ಸೇನಾಳಿ ಸಹಿತೋಸರಿಸಿ ನಿಂದನು ಪುರದ ಬಾಹೆಯಲಿ (ತೊರರಾ. ೬–೪೨–೦). [ಸಂ.]

**ಬಲಭದ್ರಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : "ವಾರ್ಷಿಕಂ, ತ್ರಾಯಮಾಣಾ, ತಾಯಂತ್ರೀ, ಬಲಭದ್ರಿಕಾ — ಳ ನೀರಾಮಬಳ್ಳಿ" (ಸಿದ್ಧಾಂತಿ. ೦೪೬). [ಸಂ. ಬಲಭದ್ರಿಕಾ]

**ಬಲಭರ** (ನಾ). ೧. ಸೈನ್ಯದ ಹೆಚ್ಚಳ ; ಸೇನೆಯ ಆಧಿಕ್ಯ : ಬಲಭರಸಂಕ್ಷೋಭಭಯಂದಳೆದಂಬರಕೊಗೆದ ನದಿಗಳೆನೆ ನಿಖಿಲದಿಶಾಕುಲಮಂ ಬಾಸಣಿಸುಗುಮುತ್ತಲಬಾಂಧವಧವಳವೆನಿಸಿದೀ ಧ್ವಜಪಟಲಂ (ಕಾದಂಪೂ. ೬೦೦). ೨. ಸೈನ್ಯದ ಭಾರ : ಬಲಭರದಿಂ ನೆಲಂ ಕುಸಿಯೆ ಶೇಷನ ಪೆರ್ಪೆಡೆ ತರ್ಗಿ ಕಂಠಕಂಧರವೊಳಗಟ್ಟಡಂಗಿದುದು (ಪುಷ್ಪದಂ. ೩–೩೬). [ಸಂ.]

**ಬಲಭೇದಿ** (ಗು). ೧. ನಿಶ್ಶಕ್ತಿಗೆ ಕಾರಣವಾದ. (ನಾ). ೨. =ಬಲಧ್ವಂಸಿ. ೧, ೨ : ಉಳಿ ಗಳೆ ವಿಷಾದವನುಸಿರ ವೇಗವನಂತ, ಮೇಲೆ ಮುಂಬರಿವುದದು ಬೇಡವಿನ್ನು ಗುರುಕಂಪ ನಿನಗೇಕೆ ; ಬಲಭೇದಿ ಜೃಂಭಿತವು ? ಇಲ್ಲಿ ಬಾರಾ ವತ್ಸ ! ನನ್ನ ಜತೆಗೆ (ಶ್ಯಾಮಲೋ. ೯೯). [ಸಂ. ಬಲಭೇದಿನ್]

**ಬಲಮತ್ತ** (ಗು). ೧. ಪರಾಕ್ರಮದಿಂದ ಕೊಬ್ಬಿದ ; ಸಾಮರ್ಥ್ಯದಿಂದ ಸೊಕ್ಕಿದ : ಬಲಮತ್ತ ವ್ಯಕ್ತಿ ಏನು ಮಾಡಲೂ ಹೇಸುವುದಿಲ್ಲ (ಲೂಪ). (ನಾ). ೨. ಪರಾಕ್ರಮದಿಂದ ಕೊಬ್ಬಿದ ವ್ಯಕ್ತಿ ; ಸಾಮರ್ಥ್ಯದಿಂದ ಸೊಕ್ಕಿದ ವ್ಯಕ್ತಿ : ಅವನು ಕಾಮರೂಪಿಯಾಗಿ ಆಕಾಶದಲ್ಲಿ ಸಂಚರಿಸುತ್ತ ಬಲಮತ್ತನಾಗಿ ದೈತ್ಯರನ್ನೂ ದೇವತೆಗಳನ್ನೂ ಮುತ್ತಿ ಅವರ ರತ್ನಾದಿ ಐಶ್ವರ್ಯಗಳನ್ನು ಹೊತ್ತು ತರುತ್ತಿದ್ದನು (ವಚನಾ. ೧೦೯). [ಸಂ.]

**ಬಲಮಥನ** (ನಾ). = ಬಲಧ್ವಂಸಿ : ಬಲಮಥನ ಹೊಗಳಲು ಹರುಷದುಬ್ಬಿನಲನುಜನೊಡಗೂಡಿ ಪೃಥುಳಬಲ ತೊರವೆಯ ಹಿರಣ್ಯಕಮಥನ ತಿರುಗಿದನಿತ್ತಲಧಿಕಪ್ರಥಿತ ವಿಜಯಾಭ್ಯುದಯದೇಳಿಗೆಯಿಂದ ಪಾಳಯಕೆ (ತೊರರಾ. ೬–೪೯–೬೦). [ಸಂ.]

**ಬಲಮರ್ದು**, ಬಳಮದ್ದು, ಬಳಮರ್ದು (ನಾ). ೧. ಶ್ರೇಷ್ಠವಾದ ಮದ್ದು ; ಉತ್ತಮವಾದ ಔಷಧ : "ಬಲಮರ್ದೆನಲಂಕದೌಷಧಂ [ಪಾಠಾಂ. ಬಲಮದಮರ್ದೆನಲಂಕದೌಷಧಂ] ತಾನಕ್ಕುಂ" (ರಸ್ನಕಂ. ೪) ;

"ಬಳವಮರ್ದ್ದ, ಬಲವಮರ್ದ್ದ – ಅಂಕದೌಷಧಂ" (ಕವಾದ. ಕಂ. ೨).

**ಬಳಮದ್ದು** : ೧. "ಬಳವಮದ್ದನಲ್ಯಂಕ[ಪಾಠಾಂ. ಅವಮರ್ದನಲಂಕ, ಬಳಮರ್ದನಲಂಕ, ಬಳವರ್ದನಲಂಕ] ದೌಷಧಂ" (ಕಲ್ಯಾ. ೮೩). ಬಳ

**ಮರ್ದ್ದ** : ೧. "ಬಳವಮರ್ದನಲ್ಯಂಕದೌಷಧಮೆಂದೆನಿಕುಂ ಸಂತತಂ" (ಕಲ್ಯಾ.ಮಾಂ. ೯೦). ೨. ಅತಿಯಾದ ಮತ್ತನ್ನು ಬರಿಸುವಂಥ ದ್ರವ್ಯ; ಉಗ್ರವಾದ ಮಾದಕದ್ರವ್ಯ : ಪರಿಮಳಲೋಭದಿಂ ಮುಸುಱಿ ಮುತ್ತುವ ತುಂಬಿಗಳೊಳ್ಗುಳ್ಗಳೊಳ್ ಬೆರಸುವಿನಂ ಮಗುಳ್ದುವ ದಳಂಗಳೊಳಂ ನಱುಸುಯ್ಯ ಕೆಂಪುಗಳ್ ಬೆರಸುವಿನಂ ಕದಕ್ಕದಿಸಿ ಪೆರ್ಮೊಲೆಗಳ್ ಬಳವಮರ್ದನಂಗಜಂಗರೆವಪ್ಪೊಲೀಳೆ ಸಾಂದರೆವರಿಂಬಳವಟ್ಟರೆ ಘಟ್ಟವಳ್ತಿಯರ್ (ಮಲ್ಲಿಪು. ೨–೬೦) ; ಕಡೆಗಣ್ಣೋಂಟಣೆವಾತು ದೂದವಿ . . . ತನ್ನ ಬರ್ದಬಳವಮರ್ದೊಪ್ಪಾಯಿಲಂ ಕೂರ್ಪ (೬೮ಡಾವ. ೩–೯೬). 'ಬಳವರ್ದಿಕಕ್ಕ', 'ಬಳವರ್ದಕಾಜಿ' ಪರಾ. [ಬಲ್ತ + ಮರ್ದ್ದ]

**ಬಲಮಾಪಕ** (ನಾ). [ಭೌತವಿ] (ಪ್ರಾಣಿ, ಯಂತ್ರ, ಯಾಂತ್ರಿಕಬಲ ಮೊದಲಾದುವುಗಳಿಂದ ವೆಚ್ಚವಾದ) ಶಕ್ತಿಯನ್ನು ಅಳೆಯುವ ಒಂದು ಸಲಕರಣೆ ; ಶಕ್ತಿಮಾಪಕ : (D··· -meter ಶಾಂತಿ. ೩೩). [ಸಂ.]

**ಬಲಮುರಿ** (ನಾ). ೧. ಬಲಭಾಗಕ್ಕೆ ತಿರುಗಿದುದು ; ಬಲಕ್ಕೆ ಹೊರಳಿದುದು ; ಬಲಸುತ್ತು : ಗರುವರ ಚಿತ್ರವನೊಲಿಸಿಕೊಂಬ ಬಲೆಯ ವರಗೃಹವಾ ಬಲಮುರಿಯ ಸುರುಚಿರಶಂಖವ ಹೋಲಿದ ಭೂಮಿಯ ಸರಿ ಕೇಳು (ಪ್ರಭುಸಂ. ೦೦–೬೦) ; ಒಬ್ಬರೊಬ್ಬರು ಬಲಮುರಿಯೆಡಮುರಿಯಾಗಿ ಸಬ್ಬವದೊಳು ಚಾಳಿವರಿದು ಇಬ್ಬರ್ರು ಸುಳಿದಾಡಿ ನಿಂದಳೊಬ್ಬಳು ಹಿಂದೆಯೊಬ್ಬಳಾಡಿದಳು ರಂಗದೊಳು (ಚಕ. ೨೨–೬೯). ೨. ಬಲಗಡೆಗೆ ಬರುವಂತೆ ಬಿಟ್ಟ (ಸೊಂಟಪಟ್ಟಿಯ) ಚುಂಗು : ವರನಿಭಾರಿಯ ಬಳವಿನಲಿ ಬಲಮುರಿಯ ಬಿಗಿದನು ಪದಮುಖಿಕಿ ಮುಂಡಿಚಿಗ ಬಿಟ್ಟನು ಬಿಗಿದ ಬದ್ದುಗೆದಾರಗೊಂಡೆಯವ (ಕುವ್ಯಾ.ಶ. ೮–೦೭). ೩. ನದಿಯ ಬಲಗಡೆಗೆ ಬಾಗಿರುವ ಸ್ಥಳ ; ☞ ಕೊಡಗಿನ ವಿರಾಜಪೇಟೆತಾಲ್ಲೂಕಿನಲ್ಲಿರುವ ಒಂದು ಪವಿತ್ರಕ್ಷೇತ್ರ : ಕಾವೇರಿ . . . ಕನಕೆಯೆಂಬಾ ನದಿಯುವಿರಾಗಿಯ ಬಂದು ವಿನಯದೆ ಭಾಗಮಂಡಲದೆ ಘನಸಂತೋಷದೆ ಸಂಗತಿಯಾಗಿ ಕಾನನದೆ ಬಂದಳು ಬಲಮುರಿಗೆ (ಕಂಪಹ. ೩–೯೦). ೪. ಒಂದು ಬಗೆಯ ಸಸ್ಯ ಮತ್ತು ಬಲಕ್ಕೆ ತಿರುಗಿಕೊಂಡಿರುವಂತೆ ಬಿಡುವ ಅದರ ಕಾಯಿ : "ಪಾನೀಯವಲ್ಲೀ — ಬಲಮುರಿ, ಚಿತ್ರಮೂಲ" (೬ತರ. ೯೬) ; ಕಾಡರಿಸಿನ, ಮುಸುಕುಜೋಳದ ಬೇರು, ಬಲಮುರಿಯ ಕಾಯಿ . . . ಹುಳಿ, ಎಣ್ಣೆ ಕೂಡಿ ಭರಣಿಯೊಳಗೆ ಹಾಕಿಸಿ ಎಲಚಿಸೌದೆಯಿಂದ ಅಡುವುದು (ಪಿಕ್ಕಂ. ೯೬) ; ಕಾಯಿ ಏದುಮುರಿಯಾಗಿ ಬಲಕ್ಕೆ ಸುತ್ತಿರುತ್ತದೆ, ಇದರಿಂದಲೇ ಬಲಮುರಿ ಎಂಬ ಹೆಸರು . . . ಸಂಸ್ಕೃತದಲ್ಲಿ ಮೃಗಶೃಂಗ ಎನ್ನುತ್ತಾರೆ (ಹಸುಹೂ. ೩೯).

ಬಲಮುರಿಯ ಶಂಖ=ಬಲಮುರಿಶಂಖ : ಬಲಮುರಿಯ ಶಂಖಗಳ ಗಂಧದ ಬಲುಹೊಜೆಯ . . . ಹೇಮಘಟಸಂತತಿಯನೊಟ್ಟಿದರು (ಕುವ್ಯಾ.ಸ. ೩–೯೭). [ಬಲ್₁ + ಮುರ್ರಿ₂ (<ಮುರಿವು)]

**ಬಲಮುರಿವೊಕ್ಕುಳ್** (ನಾ). ಬಲಸುಳಿಯಿರುವ ಹೊಕ್ಕುಳು,–ನಾಭಿ: ಈ ಬಲಮುರಿವೊಕ್ಕುಳ್ಗೊಳಸೈಸೆ ತನ್ನೊಳ್ಪೆಳೆದ ತಾವರೆಯಿಂ ನಾಲ್ಮೊಗನಂ ನಿರ್ಮಿಸಿ ಜಗತ್ಕಾರಣತ್ವಮಂ ನೆಲೆಗೆಯ್ದುದು (ಕಳಶಂ. ೦೨೬–೦). [ಬಲಮುರಿ + ಪೊಕ್ಕುಳ್]

**ಬಲಮುರಿಶಂಖ** (ನಾ). ಬಲಭಾಗಕ್ಕೆ ತಿರುಗಿದಂತಿರುವ ಸಂಳಿಗಳುಳ್ಳ ಶಂಖ: ☞ ಅಪೂರ್ವವಾಗಿ ದೊರೆಯುವ ಇಂಥ ಶಂಖದಿಂದ ಅದೃಷ್ಟ ಉಂಟಾಗುವುದೆಂಬ ನಂಬಿಕೆಯಿದೆ : ಬಲಮುರಿಶಂಖ [ಪಾಠಾಂ. ಮುರಿಯ ಶಂಖ] ಧಿಗಿಲಾಭುಗಿಲೆಂದು ಝುಂಕರಿಸಿತೆಂದು ಕಿಟಿಯೊಳಗಣ ಗುಳ್ಳೆ ಕೀಚುಕೀಚೆಂದಂತೆ (ಶನವ. ೩೩–೨೩). [ಬಲಮುರಿ + ಶಂಖ]

**ಬಲಮುರಿಸಂಕು** (ನಾ). = ಬಲವಮುರಿಶಂಖ: ಬೆಳ್ದಿಂಗಳಂತೆ ಪಸರಿಪ ನಗೆಯುಂ ಬಲಮುರಿಸಂಕಿನಂತೆ ಗುಜ್ಜು ಗೊಂಡು ರಂಜಿಪ ಕೊರಲುಂ . . . ಅಬ್ಜಜಮಂ ಪುಟ್ಟಿಪವು (ಅಧ್ಯಕ. ೬–೦೬). [ಬಲಮುರಿ + ಸಂಕು₁ (<ಸಂಶ₁)]

**ಬಲಮೆಂಡಿಗಮುಂಡ** (ನಾ). ಒಬ್ಬಾತನ ಹೆಸರು: ಬಲಮೆಣ್ಡಿಗಮುಣ್ಡನ್ ಅಟಿಗೊಳೆ (ಪ್ರಾಂಅಂ. ೧೯೨೬. ೯೯–೬ ; 10 ನೆಯ ಶಶ). [ಬಲಮೆಂಡಿ₁ + ಗಮುಂಡ₁ (<ಗಾಮುಂಡ)]

**ಬಲಯುತ**, ಬಳಯುತ (ಗು). ೧. ಶಕ್ತಿಶಾಲಿಯಾದ; ಸಮರ್ಥನಾದ: ಅತಿರಥನಾತಂ ಗಡ ಬಲಯುತ ಸಮರಥನೆನ್ನೊಳಧಿಕಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ನೊಡ್ಡಿದುವೇ (ಗದಾಯು. ೩–೩೩); ಬಲಯುತ ಶ್ರೀಕಾಂತನಾಜ್ಞೆಯು ನಿಲೆ ನಿಖಿಲಭೂಪರ ಮುಕುಟದಲಿ . . . ತನ್ನೊಂದು ಚೆಲುವಿಕೆ ನಿಲೆ ವಧೂಹೃದಯದೊಳು ನಿಂದನು ಚಕ್ರಿ ರಾಜ್ಯದಲಿ (ಸಾಳ್ವಭಾ. ೩೬–೩೨). (ನಾ). ೨. ಶಕ್ತಿಶಾಲಿಯಾದವನು; ಸಮರ್ಥ : ಬಲಯುತನಾದಿ ಪಗೆವಂ ಕೊಲಿಸಾಜಿಂ ಕಾಳಿಯುಂ ಗಡಿನ್ನಾರ್ಪವನಾರ್ ಸಲೆ ಕೊಲಬಾರದ ಪಗೆಯುಂ ಗೆಲಬಾರದದೆಂದು ಮೆಂತುಮೆಂಬದು ಪದನೇ (ಅರ್ಜೆಪ. ೬–೩೨). ೩. ಬಲರಾಮನನ್ನು ಕೂಡಿಕೊಂಡಿರುವವನು ; ಬಲಭದ್ರಸಹಿತನಾದವನು. ೨. ೩: ಹರಿಯಂತೆ ಬಲಯುತ ಶಿವನಂತೆ ರಾಜಶೇಖರಂ ... ಅಮೃತಾರ್ಚಿಯಂತೆ ವಿಸ್ತರಿತಕುವಲಯನೆಂದು ಧರ್ಮಜನ ಧರೆ ಪೊಗಳುತಿರೆ (ಕ್ರಪಿಆ. ೨–೦೩).

**ಬಳಯುತ** : ೨. ಚಟ್ಟಸಾಮಂತಮಲ್ಲಂಗನುಜಂ ಶಾಂ ಗೋವಿದೇವನಧಿಕ ಬಳಯುತಂ ವಿಷ್ಣುಲೋಕೈಕನಾಥಂ ತನಯಂ ತಾನಾಗೆ ಚಲುವಂ ಪಡದುದು ವಿಭವಂ ಮಂಗಳ ಶ್ರೀವಿಳಾಸಂ (ಎಕ. XVI. ಶಕ್ಕ. ೬೨–೩೩; 1242); ಬಳಯುತನಪ್ಪ ಚೇರಮನೃಪಾಳನ ನಿರ್ಮಳಕೀರ್ತಿ ಲೋಕಮಂ ಬಳಸಿ ದಿಶಾಗಜಂಗಳನಿತುಂ ಬಿಳಿದಾಗಿರೆ ಕಂಡು (ಶ್ರೀಪು. ೩–೬) [ಸಂ.]

**ಬಲರಕ್ಕಸಿ** 'ಬಲರಾಕ್ಷಸಿ' ನೋ.

**ಬಲರಾಕ್ಷಸ** 'ಬಲರಾಕ್ಷಸಿ' ನೋ.

**ಬಲರಾಕ್ಷಸಿ**, ಬಲರಕ್ಕಸಿ, ಬಲರಾಕ್ಷಸ, ಬಲರಾಕ್ಷಿ, ಬಲಾರಾಕ್ಷಸಿ, ಬಲಾರಾಕ್ಷಿ, ಬಲ್ಲರಕ್ಕಸಿ, ಬಾಲರಾಕ್ಷಸ, ಬಾಲರಾಕ್ಷಸಿ, ಬಾಳರಾಕ್ಷ (ನಾ). ಒಂದು ಬಗೆಯ ಸುವಾಸನೆಯ ಗಡ್ಡೆಗಳನ್ನು ಬಿಡುವ ಕುರುಚಲು ಗಿಡ : "ರಾಕ್ಷಸೀ . . . ಗಣಹಾಸಕಃ– ೬ ಕರೀಕಚೋರ, ರಾಕ್ಷಸೀ ಗಡ್ಡೆ" (ಸಿದ್ಧಾಂತಿ./ ೦೯೦). ಬಲರಕ್ಕಸಿ : ಬಿಳೇ ಪಚ್ಚಮುಂಟಬೇರು (ಪ್ರಾಶಿಇ. ೬೦–೦೨೯). ಬಲರಾಕ್ಷಸ: ಬಲರಾಕ್ಷಸಗಡ್ಡೆ, ಕಳ್ಳಂಗಡಲೆ . . . ನಾವಲಗೆಡ್ಡೆ ಇವಿಷ್ಟು ಪ್ರತ್ಯೇಕವಾಗಿ ಹತ್ತು ಪಲಂಗಳು . . . ತೂಕ ಸೇರಿಸಿ (ಸಕಶ್ಯ. ೬೨). **ಬಲರಾಕ್ಷಿ** : (ಸಸ್ಯಕ. ೯). **ಬಲಾರಾಕ್ಷಸಿ** : (೬). **ಬಲಾರಾಕ್ಷಿ** : (ಪ್ರಾಶಿಇ. ೩–೬೯). **ಬಲ್ಲರಕ್ಕಸಿ** : ತಿಲವಿಷ್ಣೆ . . . ಕರಿಬೇವು, ಬಲ್ಲರಕ್ಕಸಿಗಡ್ಡೆ, ರಾಸ್ನೆ . . . ಇವೆಲ್ಲವಂ ಚೂರ್ಣವಂ ಮಾಡಿ (ಸಕಶ್ಯ. ೨೩೩). **ಬಾಲರಾಕ್ಷಸ** : ಅಂಟುತೊಗರಿ, ಬಾಲರಾಕ್ಷಸ (ಸಸ್ಯಕ. ೦೦೨). **ಬಾಲರಾಕ್ಷಸಿ**: ಬಲರಕ್ಕಸಿ . . . ಬಾಲರಾಕ್ಷಸಿ (ಸಸ್ಯಕ. ೦೦೨). **ಬಾಳರಾಕ್ಷ**: ಮಾನಕ, ಕರಿಮಣಸಂಗಿ, ಬಲರಕ್ಕಸಿ, ಬಾಳರಾಕ್ಷ (ಸಸ್ಯಕ. ೯). [? / ತೆಲು. ಬಲುರಕ್ಕಸಿ, ಬಲುರಕ್ಕಸ. ☞ ಇದು 'ಬಾಳ = ಲಾಮಂಚ' ಎಂಬುದಕ್ಕೆ ಸಂಬಂಧಪಟ್ಟಿರಬಹುದು]

**ಬಲರಾಕ್ಷಿ** 'ಬಲರಾಕ್ಷಸಿ' ನೋ.

**ಬಲರಾಸಿ** (ನಾ). ಸೇನಾಸಮೂಹ; ಸೇನೆಯ ಗುಂಪು: ಜಱಿದುದೀ

ಬಲರಾಸಿ ಗಾಳಿಯ ಹೊರಳಿಗೊಡ್ಡಿದ ಪೊಟ್ಟು ಹಾಱುವುದಂದೆ (ಕುಮಾ.ರಾ.ಪು. ೧೯-೨೭). [<ಸಂ. ಬಲರಾಶಿ]

**ಬಲರಿಪು** (ನಾ). ಬಲನೆಂಬ ರಾಕ್ಷಸನಿಗೆ ಶತ್ರುವಾದವನು; ಇಂದ್ರ: ಬಲರಿಪು ಪೊಗಳುತ್ತಿರೆ ಚಿಱುವುಲಿಯೊಡಂಗವುರವಿಸುತ ಗಣವದಮಂ ಕೊಟ್ಟು (ಶ್ರೀಕೃ. ೩೩-೬) ; ಬಲರಿಪು ತನ್ನದೊಂದು ಬಲಗರ್ವದಗುರ್ವಿನೊಳಿಮ್ಮೆಱಕೆಯುಂ ಕಾಲಿಶದಿನೊರ್ವ ಖಂಡಿಸಿದಂ (ಕಾವ್ಯಸಾ. ೯೬೪). [ಸಂ.]

**ಬಲರೇಖೆ** (ನಾ). [ಭೌತವಿ] "ಬಲಪ್ರಯೋಗದ ದಿಕ್ಕನ್ನು ತೋರಿಸುವ ರೇಖೆ" (Line of force. ೨೦೫೩): ಒಂದು ಏಕಧ್ರುವವನ್ನು ಕಾಂತದ ಉತ್ತರಧ್ರುವದ ಬಳಿ ಬಿಟ್ಟರೆ ಅದು ಕಾಂತದ ಬಲವನ್ನನುಸರಿಸಿ ಚಲಿಸುತ್ತಾ ದಕ್ಷಿಣಧ್ರುವವನ್ನು ಬಂದು ಸೇರುವುದು. ಹಾಗೆ ಬರುವಾಗ ಅದು ಅನುಸರಿಸುವ ಮಾರ್ಗಕ್ಕೆ ಬಲರೇಖೆ (Line of force) ಎಂದು ಹೆಸರು (ಭೌತಶಾ. ೩೦೩). [ಸಂ. ಬಲರೇಖಾ]

**ಬಲಲೊಡ್ಡಿ** 'ಬಲದೊಡ್ಡಿ' ನೋ.

**ಬಲವಂಕ** 'ಬಲವಕ್ಕ' ನೋ.

**ಬಲವಂತ**, ಬಳವಂತ (ಗು). ೧. ಶಕ್ತಿಶಾಲಿಯಾದ; ಬಲಿಷ್ಠ: ಬಲವಂತ ಪುತ್ರನಂದಿಯ ತಲೆಯುಂ ರಿಪುಬಲವುನೆಯ್ದೆ ತಱಿದಿಕ್ಕಿ ಮಹೀವಳಯು ಮನಾಱೆ ಬೆಳಗುತ ಶಿವನಿಳಯದೊಳಂ ಪೊಕ್ಕು ಚಕ್ರವಡಗಿತ್ತಾಗಳ್ (ಶ್ರೀಕೃ. ೩೨-೬೯); ಘಳಿಲನಲಗಂ ಕಿತ್ತು ಪುಟನೆಗೆವ ಲಾಗಿಸುತ ಪುಲಿಯ ಬೆಂಗಡಗೆಯ್ದು ಇಱಿದು ಕಡಪಿದನೊರ್ವ ಬಲವಂತ ಬೇಡನಾಗಳು (ರಾಘಶ. ೦೭-೬೩). (ನಾ). ೨. ಶಕ್ತಿಶಾಲಿಯಾದವನು ; ಸಮರ್ಥನಾದವನು : "ಬಲ್ಲಿದಂ ಬಲವಂತನಂ ಸಳನೆನಿಕ್ಕು" (ಮಂಗರಾ. ೭೦-೦೯); ಅತಿರಥನಾತಂ ಗಡ ಬಲಯುತ ಸಮರಥನೆನ್ನೊಳಧಿಕಬಲವಂತಂ ಮಾರುತಿ ಗಡ ಮಹಾರಥು ಮಾರುತಿಯುಂ ತದ್ರುಥದ ಗಾಲಿಗಳ್ವೊಡ್ಡಿದುವೇ (ಗದಾಯು. ೩-೩೫); ಬಲವಂತನ ಪಗೆವಂ ಮೇಲೆತ್ತಿ ಬರೆ ವಸ್ತುವಾಹನಂ ಗಳನಿತ್ತಾತನಂ ಸಂತೈಸುವುದು ಸಂಧಾನಮೆಂಬುದಕ್ಕುಂ (ಶಂಕಶಂ. ೨೦೯-೦೨); ಎಂಥಾ ಬಲವಂತನೋ ಕುಂತಿಯ ಸಂಜಾತನೋ (ಪುಕೆಂದ. ೦-೨೦೩ ಪಲ್ಲವಿ). ೩. ಐಶ್ವರ್ಯವಂತ ; ಶ್ರೀಮಂತ : ನೆಲ ಬಲವಂತನಿಗೆ, ಕುಲ ನೇಮವಂತನಿಗೆ (ಗಾದೆ). ೪. ಶಕ್ತಿಶಾಲಿಯಾದುದು; ಬಲಿಷ್ಠವಾದುದು : ಶಾಂತಿಕಗುರು ಪಾದಾಂಬುರುಹಾಂತಿಕದೊಳ್ ಜಾತರೂಪ ಧರರಾಗಿ ಶಮಸ್ವಾಂತಕ್ಕೆ ಘಾತಿಗಳ್ ಬಲವಂತಗಳ್ ಕಿಡೆ ಜಿನತ್ವಮೆಮಗಾಯ್ತಾಗಳ್ (ಶಾಂತಿಪು. ೯-೭೦) ; ಬಲವಂತನಪ್ಪುದೊಂದು ಸಿಂಹಮಂ ಮೊಲಂ ಕೊಂದುದು (ಶಂಕಶಂ. ೬೭-೬). ೫. ಬಲಾತ್ಕಾರ ; ಒತ್ತಾಯ ; ನಿರ್ಬಂಧ : ನೀನು . . . ಸಕಲಕಲೆಗಳು ಒಂದೇ ಬಳಿಯಲ್ಲಿ ಸೇರಿದ ಯೆಂಬುದನು ತಿಳಿದಿರಬೇಕೆಂದು ಬಲವಂತದಿಂದ ಕರತಂದೆನು (ವಿಕಶಾ. ೩೭) ; ಭೂಮಿಪ ಸೈಂಧವನು ಬಾಗಿಲೊಳ್ನಿಂದಿರ್ದಾ ಭಾಮೆಯನೀಕ್ಷಿಸಿ . . . ಬಲವಂತದಿಂದೆ ಒಡಿದಾ ಲಲನೆಯ ರಥವೇರಿಸುತ್ತ ನಡೆದಂ ಜವದಿಂ (ಶಾಂಶಾ. ೯-೪೦). **ಬಳವಂತ** : ೨. "ಬಳವಂತ– ಬಲವತ್=ಬಲಿಷ್ಠ" (ಶಬ್ದಮಣಿ. ೨೯) ; ಬಳವಂತನಾದೊಡಂ ತಾನಿಱಿಕೆಯ್ಕಲ್ವೇಡ ರಿಪುವನಾ ತನಭೀಷ್ಟಂಗಳನೀವುದು ನಯಮಂ ನೆಱೆ ಬಳಿಯಿಸುವುದು ಬಗೆಯೊಳಿಂತು ಗೆಲ್ವುದು ಪಗೆಯಂ (ಶಾಂತೀಶ್ವ. ೬-೧೩೦).

**ಬಲವಂತಮಾಘಸ್ನಾನ**=(ಅಲಂ) ಇಷ್ಟವಿಲ್ಲದಿದ್ದರೂ ಬಲಾತ್ಕಾರದಿಂದ ಮಾಡಿಸುವ ಕೆಲಸ ; ನಿರ್ಬಂಧದಿಂದ ಮಾಡಿಸುವ ಕಾರ್ಯ : ಅಂಥವರಿಗೆ ಪಾಠ ಓದಿ ಜ್ಞಾನಾರ್ಜನೆ ಮಾಡಿರೆಂದು ಮೂಲೆಯಲ್ಲಿ ಕೂರಿಸುವುದು ಬಲವಂತಮಾಘಸ್ನಾನದಂತಾಗುತ್ತದೆ (ಶಿಕ್ಷಣ. ೦೩೦). [ಸಂ. ಬಲವತ್]

**ಬಲವಂತತನ** (ನಾ). ೧. ಶೌರ್ಯ ; ಸಾಮರ್ಥ್ಯ ; ಪರಾಕ್ರಮ : ನೆಲೆಯಾವುದು ನಿನ್ನ ಬಲವಂತತನಕ್ಕೆ ಕುಲದೇವ ಕಪಾಲೀಶ ವಿಜಯ ವಿಠ್ಠಲರೇಯ (ಹರಿದಾಸ. ೩೩-೬). ೨. ಬಲಾತ್ಕಾರ ; ಒತ್ತಾಯ : ಹುಲಿ ಹುತ್ತ ಕಳ್ಳರ ಹಾದಿ ಬಲುಗೈಯರ ತೆಕ್ಕೆ ಇದು ಬಲವಂತತನದಿಂದ ಆಗದು ಅವರವರ ಒಲವರದಿಂದಲ್ಲದೆ (ಸುಂಕಕಾಂ. ೪. ೬೩೦-೦೯೯೮). [ಬಲವಂತ + –ತನ]

**ಬಲವಕ್ಕ**, ಬಲಪಕ್ಕ, ಬಲವಂಕ (ನಾ). ಬಲಬದಿ ; ದಕ್ಷಿಣಪಾರ್ಶ್ವ : ಒಂದಕ್ಷೋಹಿಣೀ ಬಲಂಬೆರಸು ದ್ರುಪದಂ ಧೃಷ್ಟದ್ಯುಮ್ನ . . . ವಿಚಿತ್ರಾದಿಗಳಪ್ಪ ತನ್ನ ಮಕ್ಕಳ್ವೆರಸು ನೆಲಂ ಮೂರಿವಿಟ್ಟಂತೆ ಬಲವಕ್ಕದೊಳ್ ನಡೆಯೆ (ಪಂಪಭಾ. ೯-೬೩ ವ); ಓಳಿಗೊಂಡು ಮುಂದಯ್ದು ನಿಂದ ಬಲವಕ್ಕದೆಡವಕ್ಕದಂಗರಕ್ಕರ ನೆರವಿಯುಮನೀಕ್ಷಿಸುತ್ತುಂ (ವರ್ಧಮಾ. ೯-೩೭ ವ): ಬಂದು ನೆಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋಟ್ಟರಾ (ಕರ್ಮಣಾ. ೦೬೪). ' ಎಡವಕ್ಕ ' ಪರಾ. **ಬಲಪಕ್ಕ** : ಹೊಲಿಯುವವರ ಬಲಪಕ್ಕದಲ್ಲಿರಬಾರದು, ಆಳುವವರ ಎಡಪಕ್ಕದಲ್ಲಿರಬಾರದು (ಗಾದೆ). **ಬಲವಂಕ** : ಎಡವಂಕಂ ಬಲವಂಕ [ಶಾಕಾಂ. ವಕ್ಕ] ಮುಂಬೆಡೆಗಳೊಳ್ ನಾಕಿವ್ರಜಂ ಬರ್ಪುದೆಂದೊಡನೇಕಾದಶರುದ್ರರಷ್ಟವಸುಗಳ್ ಪನ್ನಿರ್ವರಾದಿತ್ಯರುಂ ನಡೆವರ್ ಸಂಗರಕೇಳಿಗೆಬೆಸಕದಿಂದುದ್ವೃತ್ತನಾ ವೃತ್ರಹಂ (ಜಗಪು. ೦೩-೨೬); ಧರಣಿಪನ ಬಲವಂಕದಲಿ ಮೋಹರಿಸಿ ಪಾಂಚಾಲಕರು ಚೂಣಿಯೊಳುರವಣಿಸಿದರು ಸಕುಲ ಸಾತ್ಯಕಿ ಭೀಮನಂದನರು (ಕುಮಾ.ರಾ.ಪು. ೯–೩೦); ಕಾಲಿನ ಮೇಲೆ ಕಾಲಿಕ್ಕಿ ಗೌತಮಂ ಸಿಂಹಶಯ್ಯೆಯಲಿ ಬಲವಂಕದಲಿ ಮಲಗಲು (ವೈಶಾಖ. ೬೩–೨೧೮). 'ಎಡವಂಕ', 'ತೆಂಕವಂಕ' ಪರಾ. [ಬಲ್$_1$ + ಪಕ್ಕ]

**ಬಲವತ್ತಿಕೆ** (ನಾ). ಶಕ್ತಿ; ಸಾಮರ್ಥ್ಯ : ಕಾಲಮೃತ್ಯುಮಂ ಕೆಣಕಿದನೆ ಸೈಂಧವನು ತನ್ನ ಬಲವತ್ತಿಕೆಯ ಸಮ್ಮೊಡನೆ ತೋರಿದನೆ ಫಡಫಡ (ತುರಂಗ. ೩೩-೪೦). [<ಬಲವಂತ + –ಇಕೆ]

**ಬಲವತ್ಸೈನ್ಯ**, ಬಳವತ್ಸೈನ್ಯ (ನಾ). ಬಲಿಷ್ಠವಾದ ಸೇನೆ ; ಸಮರ್ಥವಾದ ದಂಡು,–ಸೈನ್ಯ: ಬಲ[ಶಾಕಾಂ.ಳ]ವತ್ಸೈನ್ಯಪದೋತ್ಥಪಾಂಸುಚಯದಿಂ ಸೇನಾಮಹಾಭಾರದಿಂ ಬಳಕೋಳಾಹಳದಿಂ ವಿಯುಚ್ಚರಗಣಂ ಶೇಷಂ ದಿಶಾಪಾಲಕರ್ ಪೊಲಗೆಟ್ಟೋಡೆ (ಜಗಪು. ೬-೪೦). **ಬಳವತ್ಸೈನ್ಯ** : ಬಳವತ್ಸೈನ್ಯಮನವನೀತಳಪತಿ ಬಿಸುಟಂ (ಶಾಂತಿಪು. ೧೦-೦೯). [ಸಂ.]

**ಬಲವದ್ವಿರೋಧ** (ನಾ). ಶಕ್ತಿವಂತರಾದವರ ವೈರ,— ಹಗೆ ; ಸಮರ್ಥರಾದವರ ಶತ್ರುತ್ವ : ಎಮಗೆ ಬಲವದ್ವಿರೋಧದ ತೊಳಸು ಬದ್ದುದು ತೋಟಗಾಱದೆ ಜಲಧಿಮಧ್ಯದಲೂರ ಕಟ್ಟಿದೆವು (ಕುಮಾ.ಭಾ. ೨-೦೯). [ಸಂ.]

**ಬಲವದ್ವೈರಿ**, ಬಳವದ್ವೈರಿ (ನಾ). ಪ್ರಬಲವಾದ ಶತ್ರು . ಶಕ್ತಿಶಾಲಿಯಾದ ಹಗೆ : ಬಲವದ್ವೈರಿತಮೋಹರಾತಿಪಟುಗಳ್ ಪದ್ಮಾಸನಸ್ಪರ್ಶಸಲ್ಲಲಿತಂಗಳ್. . .ಆನತಜನಕ್ಕಾನಂದಮಂ ಮಾಳ್ಕೆ ಮಂಗಳಮುಚ್ಚಂಡಕರಂ ಮಹೀವಳಯದೊಳ್ಕಾಳುಕ್ಯಮಾರ್ತಂಡನಾ (ಗದಾಯು. ೦-೪). **ಬಳವದ್ವೈರಿ** : ಬಳವದ್ವೈರಿಕ್ಷಮಾಪಾಲರನಧಿಕಭುಜಾಗರ್ವದಿಂ ಗೆಲ್ದು ಲಕ್ಷ್ಮೀನಿಳಯಂ . . . ಮಂಗಳಗೀತಂ ಪೊಣ್ಮೆ ಪೊಕ್ಕಂ ನಿಜಶಿಬಿರಮಂ (ಶಂಕಶಂ. ೨೩೬-೦೩). [ಸಂ. ಬಲವದ್ವೈರಿನ್]

**ಬಲವರ್**, ಬಲವರು (ಕ್ರಿ). ಬಲಗಡೆಯಿಂದ ಸುತ್ತು,—ತಿರುಗು : ಪ್ರದಕ್ಷಿಣೆ ಹಾಕು : ನಿಜರಥಮಂ ರಥಾಂಗಧರನಂ ಮುನ್ನಮೇಱಿಲ್ವೇಟ್ದು ಮೂಱುಸೂೞ್ ಬಲವಂದು ಪೊಡಮಟ್ಟು ರಥಮನೇಱು . . . ಗಾಂಡೀವಮನೇಱಿಸಿ ನೀವಿ ಜೇವೊಡೆದಾಗಳ್ (ಪಂಪಭಾ. ೧೦-೦೩೨ ವ) ; ಕಾಂಭೋಜಾವಳಿಗಳ ತುರುಷ್ಕತುರಂಗಮಂಗಳಡಿಯೊಳಡಂಗಿದನೆ ಗೆತ್ತು

ಕೈಗುಸ್ತಿ ನೋಡಿಯುಂ ಬಲವಂದು ನೋಡಿಯುಂ (ಗದಾಯು. ೬-೨೮೮); ಇದೇನಾನುವೊಂದು ಕೃತ್ರಿಮವಮಾಗಲವೇಟ್ಕುಮೆಂದಾ ಪುರನಂ ಬಲವಂದು ನೋಡಿ (ಹ್ಯಕಕಂ. ೦೬೬-೬); ಶರಣರಂ ಬಲವಂದನಾಜ್ಞೆಯುಂ ಕೈಕೊಂಡು ಕರುಣಮಂ ತೋಯುತ ಕುಮಾರನಂ ಬೀಳ್ಕೊಂಡು (ಚಿಕ. ೦-೯೦).

**ಬಲವರು**: ಬಲವರುತ್ತಿಪ್ಪುದಲ್ಲದೆ ಬೇಟೆ ನಡೆಯಿಲ್ಲ ನಲಿದು ತುತಿಯಸು ವುದಲ್ಲದೆ ಬೇಟೆ ನುಡಿಯಿಲ್ಲ (ಬಸವ. ೮೮. ೬೦-೩); ಹರಿಯ ಬಲವಂದಣ್ಣ ನಂಘ್ರಿಗೆ ಶಿರವ ಚಾಚಿ ನಿಜಾಯುಧವ ವಿಸ್ತರಿಸಿ ಪವನಜಪಾರ್ಥಮಾದ್ರೀ ಸುತರು ರಥವೇಱ ಧುರಕೆ ನಡೆದರು (ಕುಮ್ಮಾ.ಕ. ೦-೬೬); ಪರಮ ಪತಿವ್ರತೆಯರ ಪಾದದರ್ಶನ ದೊರೆಕೊಂಡುದೆ ಪುಣ್ಯದಿವಸ ಪರಿದಿವರನು ಬಲವರೆ ಭೂಪ್ರದಕ್ಷಿಣದಿರವನಿನ್ನೇವಣ್ಣಿಪೆನು (ಹರಿ. ೨-೦೦).
[ಬಲ್$_1$ + ವರ್]

**ಬಲವರು** 'ಬಲವರ್' ನೋ.

**ಬಲವರ್ಧಕ** (ನಾ). ಶಕ್ತಿಯನ್ನು ಹೆಚ್ಚಿಸುವ ಔಷಧ ಮುಂತಾದಂವು: ಅಶಕ್ತವಾಗಿದ್ದ ನಿನ್ನ ದೇಹಕ್ಕೋಸ್ಕರ ಸೀಸೆಗಟ್ಟಲೆ ಬಲವರ್ಧಕಗಳನ್ನು ತಂದು ಕುಡಿಸಿ ಮೈಗೂಡಿಸಿದ (ಶಿಕಾ. ೨೩೭). [ಸಂ.]

**ಬಲವರ್ಧನ** (ನಾ). ಶಕ್ತಿಯ ಹೆಚ್ಚಳ; ಪುಷ್ಟಿ: ಬಲವರ್ಧನಕ್ಕೆ :— ನ್ಗಿಲ ಬೇರು, ನೆಲ್ಲಿಯ ಚಟ್ಟು, ಅಮರದಬಳ್ಳಿ — ಇವಂ ಚೂರ್ಣಂ ಮಾಡಿ ತುಪ್ಪ, ಜೇನುತುಪ್ಪವಂ ಸಮಾನಂಗೊಂಡು ಲೇಹ್ಯಂ ಮಾಡುಗೆ (ಅಶ್ವ.ಶಾ. ೨೦೪). [ಸಂ.]

**ಬಲವಿನ್ಯಾಸ** (ನಾ). (ಯುದ್ಧದಲ್ಲಿ) ಸೈನ್ಯವನ್ನು ನಿಲ್ಲಿಸುವ ಕ್ರಮ: "ವ್ಯೂಹಃ, ಬಲವಿನ್ಯಾಸಃ — ೨ ಕಾಳಗಕ್ಕೆ ಚತುರಂಗದಳವನ್ನೂ ಸ್ಥಲದ ಸಂದುಕಟ್ಟಿಗೆ ಶಕ್ಯ ಹಾಗೆಯೇರ್ಪಡಿಸಿ ಗುಂಪುಗುಂಪುಗಳಾಗಿಯೂ ಸಾಲಾಗಿಯೂ ಯುದ್ಧಶಾಸ್ತ್ರರೀತ್ಯಾ ನಾನಾಕಾರಗಳಾಗಿ ನಿಲ್ಲಿಸುವಿಕೆ" (ಸಿದ್ಧಾಂತ. ೨೬೦). [ಸಂ.]

**ಬಲವಿರೋಧಿ** (ನಾ). = ಬಲರಿಪು: ಸವಣಂ ಬಳಪಂಗೊಳೆ ಗಾಂಡಿವಿ ಬಲ್ಗೊಳೆ ಬಲವಿರೋಧಿ ವಜ್ರಂಗೊಳೆ . . . ವೊಣರ್ಗಾವಂ ನಿಲ್ವಂ (ಕಮಸ. ೦೬೬ ಕ್ರಯೋ); ದೂಜಾಯ್ಯುವಳ ದೆಸೆಯಿಂದ ಬಲವಿರೋಧಿಗೆ ಕೇಳದ್ಯೆ (ಕೊರಲಾ. ೦-೦೦-೦೦); ಆ ಮರುತ್ತನೃಪಂದ ಬಲವಿರೋಧಿಗೆ ನಮಿಸಿ . . . ಎನ್ನೊಳು ಬಲಿದು ಬಲುಮುನಿಸನೆಲ್ಲವ ಕಳೆದು ಸಲಹೆಂದೆನುತ ಸಂಪ್ರಾರ್ಥನೆಯ ಮಾಡಿದನು (ಅಶ್ವಮೇ. ೦-೦೦೯).
[ಸಂ. ಬಲವಿರೋಧಿನ್]

**ಬಲವಿಹೀನ** (ನಾ). ಶಕ್ತಿಯಿಲ್ಲದ ವ್ಯಕ್ತಿ; ದುರ್ಬಲವ್ಯಕ್ತಿ: ಸಭೆಯಲಿ ಬಲವಿಹೀನರಿಗಾಪ್ತರಿಲ್ಲೆಂದಬಲೆಯೊಱಲಿದಳು (ಕುಮ್ಮಾ.ಭಿ. ೩-೯೦). [ಸಂ.]

**ಬಲವು** (ನಾ). ಶಕ್ತಿ; ಸಾಮರ್ಥ್ಯ; ಪರಾಕ್ರಮ: ವ್ಯಂಜನದ ಮೇಲಣತ್ವಕ್ಕೆ — ನಿಲವು, ಒಲವು, ಬಲವು (ಶಮದ. ೨೦೦ ಕ್ರಯೋ). ℗ ಈ ಶಬ್ದದ ಪ್ರಯೋಗ ಅಪರೂಪ. [< ಬಲ್$_1$ + — ವು]

**ಬಲವೈರಿ, ಬಳವೈರಿ** (ನಾ). = ಬಲರಿಪು: "ಪಲಗಣ್ಣನುಂ ಮುಗಿಲ್ದೇರ ನಿಂದಿರನೆನಲ್ ಬಲವೈರಿ" (ಅಭಿ.ಕ್ರ. ೦೦); ಬಲವೈರಿಸ್ಪಾರವಜ್ರಾಧಿಕ ಭಯಚಕಿತೋದ್ಭೂತ ಮೈನಾಕ ಗೋತ್ರಾಚಲಪಕ್ಷತ್ರಾಯಿಯಿಂದುಪ್ರಿಯ ತಮಂ . . . ಸಮುದ್ರಂ (ಹಂಶಕಂ. ೦೩೦-೩); ಜಲನಿಧಿಪೊಲ್ ಗಂಭೀರಂ ಬಲವೈರಿಯಪೊಲ್ ಸಮಗ್ರವಿಭವಸನಾಥಂ (ಅಭ್ಯಾ.ವ. ೬೬೬). ಬಳವೈರಿ: ಬಳವೈರಿಯೆಂಬ ಸಾಧಕನಿಳೆಯುಂ ಪೊಸಮಾಸೆಮಾಡ ಶಶಿಮಂಡಲವುಂ ಗುಳಿಗೆಯುಡ ತಿಮಿರಕಾಳಿಕ ಕಿಳಿದಂತ ಜಲಕ್ಕನಾಯ್ತು ಪೊಸಮೆಲ್ದಂಗಳ್ (ಶಿಪಂಪು. ೬-೬೩). [ಸಂ. ಬಲವೈರಿನ್]

**ಬಲಶಾಲಿ** (ನಾ). ಶಕ್ತಿಶಾಲಿ; ಪರಾಕ್ರಮವುಳ್ಳವನು: ಆ ಹುಡುಗ ರಿಗೆಲ್ಲ ಸೀತಾರಾಮು ಎಂಬ ಹುಡುಗನು ಮುಖಂಡ . . . ಬಲಶಾಲಿ ಕುತ್ತು ತುಂಟ (ಅಳು. ೭); ತನ್ನ ಆಳು ಬಹಳ ಉಣ್ಣಬೇಕು ಮತ್ತು ಅವರು ಬಲಶಾಲಿಗಳಾಗಿರಬೇಕೆಂದು ಅವನ ಇಚ್ಛೆ ಇತ್ತು (ಐಂಗಾಕ. ೦೩).
[ಸಂ. ಬಲಶಾಲಿನ್]

**ಬಲಸಂಕು** (ನಾ). = ಬಲಮುರಿಶಂಖ: ಏಕಮುಖದ ರುದ್ರಾಕ್ಷಿ ಪಸ್ಸಗೆ ವೇತ್ರ ಕಾಕಮ್ಮತ್ತಿಕೆ ಬಲಸಂಕು ಬೇಕಾದ ದಿವ್ಯೌಷಧಗಳ ಮುನಿವರರಾ ಕುವರನಿಗೆ ನೀಡಿದರು (ಕೋಟಿಶ್ವ. ೦೯-೮೦).
[ಬಲ್$_1$ + ಸಂಕು$_1$ (< ಸಂಕ$_1$)]

**ಬಲಸಂಘಟ್ಟನ** (ನಾ). ಸೈನ್ಯದ ತಾಳಿತ: ಬಲಸಂಘಟ್ಟನದಿಂ ಮಹೀವನ ವಶೇಷಂ ಪೋಗೆ . . . ಬೀಡುವಿಡುತ್ತ ನಿಚ್ಚ ಪಯಣಂಬಂದಂ ಮುರಿದ್ವಂಸಕಂ (ಅಗಪು. ೦೬-೬೮). [ಸಂ.]

**ಬಲಸನ್ನೆ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ; ಬಲಭಾಗದಿಂದ ಕತ್ತಿಯನ್ನು ಬೀಸುವ ಒಂದು ಕ್ರಮ: ತಳಸಂಚು ಮೇಲ್ವಂಚು ಹಿಂಕ್ಕೋರೆ ಮುಂಕೋರೆ ಬಲಸನ್ನೆಯೆಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ನೆಗೆದು ಮೈಹೊಳೆದು ತಪ್ಪಿಸಿದನೆಲ್ಲವನು (ಅಶ್ವ. ೬೬-೨೬). [ಬಲ್$_1$ + ಸನ್ನೆ]

**ಬಲಸು** (ನಾ). ಒಂದು ಬಗೆಯ ಮರ: ಎಣ್ಣೆ ಎರಡೂವರೆ ಸೇರು . . . ಬಲಸುಬೇರಿನ ಚಕ್ಕೆ . . . ಭಂಗೀಸೊಪ್ಪಿನ ಪುಡಿ ಎಲ್ಲವನ್ನೂ ಚೂರ್ಣ ಮಾಡಿ (ಸಕಶ್ಕ. ಹು. ೯೭೦); ಕಾರೆ, ಗಂಡುಕಕೋಲ್, ಬಲಸು (ಬ್ರಾಹಿ. ೬೦-೬೦೨). [← ತೆಲು. ಬಲುಸು]

**ಬಲಸುತ್ತು** (ನಾ). ಬಲಭಾಗಕ್ಕೆ ಸುತ್ತಿಕೊಂಡಿರುವುದು; ಬಲಪಕ್ಕಕ್ಕೆ ತಿರುಗಿಕೊಂಡಿರುವುದು: ಎದುರುಬದುರು ಸುತ್ತುಗಳುಳ್ಳ ಕೊಳವೆಗಳ ನ್ನಾಗಲಿ ದಂಡಗಳನ್ನಾಗಲಿ ಒಟ್ಟಿಗೆ ಸೇರಿಸಲು ಎಳೆಯುವ, ಒಂದು ಕೊನೆಯಲ್ಲಿ ಎಡಸುತ್ತುಗಳೂ ಮತ್ತೊಂದು ಕೊನೆಯಲ್ಲಿ ಬಲಸುತ್ತುಗಳೂ ಒಂದರಲ್ಲೇ ಇರುವ ಉದ್ದತಿರುಪುಗಟ್ಟಿ (sleeve - nut. ಇಂಕಿ). 'ಎಡಸುತ್ತು' ಪರಾ. [ಬಲ್$_1$ + ಸುತ್ತು$_1$]

**ಬಲಸೂದನ** (ನಾ). = ಬಲಧ್ವಂಸಿ: "ಇಂದ್ರಃ, ದುಶ್ಚ್ಯವನಃ . . . ಬಲಸೂದನಃ, ಶತಮುಖಃ . . . ಮೇಘವಾಹನಃ — ಈ ೩೯ ದೇವೇಂದ್ರನ ಪೆಸರ್" (ಕರಾಯು. ೦೦-೬೩); ಬಲಸೂದನ ಗೌತಮಮುನಿಲಲನೆಗೆ ಮನ ಮಿಕ್ಕಿರಾತನುರುಶಾಪದೆ ನೀಂ ಸಲೆ ಯಾವವಸ್ಥೆವಡೆದೆಯೊಯೆಲೆ ಸುರಪತಿ (ದೂಕಕಂ. ೦೪-೯೯). [ಸಂ.]

**ಬಲಸ್ಥ** (ನಾ). ಬಲಿಷ್ಠನಾದವನು; ಶಕ್ತಿಶಾಲಿ; ಸಮರ್ಥ: ಕುಲದ ಚಲದಾಯ ದಳವಿನ ಕಲಿತನದುನ್ನತಿಯನಲಸದೀ ಸುರಸಭೆಯೊಳ್ ಪಲವಾಡುವೆನ್ನ ನಾಲಗೆ ಬಲಸ್ಥನೊರ್ವಂಗೆ ಜೀಯ ದೇವೆಂದಪುದೇ (ಅರಿಷ್ಟ. ೦೨-೦೦೦); ಶುಂಭದ್ದಿವಾಲಾನಸ್ತಂಭಂ ಲಕ್ಷ್ಮೀಕರೇಣುಗನಿಸಿ ದುದು ಭುಜಸ್ತಂಭಂ ಲಕ್ಷ್ಮೀಪ್ರಾಕಾರಂ ಭುವನಕ್ಕೆಂ ಬಲಸ್ಥನೋ ಬಲದೇವಂ (ಅಜಿತಪು. ೨-೮). [ಸಂ.]

**ಬಲಹಂಸ** (ನಾ). [ಸಂಗೀತ] ಒಂದು ರಾಗದ ಹೆಸರು: ಬಲಹಂಸ ವೆಂಬ ರಾಗವು (೧) ಆರೋಹದಲ್ಲಿ ನಿ-ಯನ್ನು ಬಿಟ್ಟಿದೆ (ಕಸಂಪ್ರ. ೦೬೯); ಬಲಹಂಸ – ೨೮ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ (ಸಂಗೀತಕೋ. ೦೬೯). [ಸಂ.]

**ಬಲಹರ** (ನಾ). = ಬಲಧ್ವಂಸಿ: ಬಲುಹುಮಾಡಿಕೊಳಲ್ಕೆ ಹರಿಯುದ ಬಲಹರಂ ಪವಣಲ್ಲ (ಅಶ್ವ. ೩೯-೪೬). [ಸಂ.]

**ಬಲಹೀನ** (ಗು). ೧. ಶಕ್ತಿಯಿಲ್ಲದ; ನಿಶ್ಶಕ್ತವಾದ; ನಿರ್ಬಲ ವಾದ: 'ಬಲಹೀನಜಾನು' ಪರಾ. (ನಾ). ೨. ಶಕ್ತಿಯಿಲ್ಲದವನು; ಅಶಕ್ತ; ಅಸಮರ್ಥ: ಬಲಹೀನ ನೀನಾ ಖಳನ ಕೊಲುವುದೆಂತು

(ಶೀಮಂಶಾ. ೦೩-೯೩); ವೈಜಯಂತಿಯಲ್ಲಿ ಆಳುತ್ತಿದ್ದ ಕದಂಬರು ೬ನೆಯ ಶತಮಾನದಲ್ಲಿ ಬಲಹೀನರಾಗಿದ್ದರೆಂದು ತಿಳಿಸಿದ್ದೇವೆ (ಕಶಾಇ. ೯೩.) [ಸಂ.]

**ಬಲಹೀನಜಾನು** (ನಾ). ೧. ದುರ್ಬಲವಾದ ಮೊಳಕಾಲು; ನಿಶ್ಶಕ್ತವಾದ ಜಾನು. ೨. ದುರ್ಬಲವಾದ ಮೊಳಕಾಲುಗಳನ್ನುಳ್ಳವನು: ಚಲವಿತ್ತ್ರಂ ಬಲಹೀನಜಾನು ಚಪಲಂ ಕಾಂತಾಪ್ರಿಯಂ . . . ಭ್ರಮಣಾರ್ಥಿ ಬೇಗವೊಸೆವಂ ಮಾನಾನ್ವಿತಂ ಮೇಷಜಂ (ಜಾತಕ. ೦೩-೦). [ಸಂ.]

**ಬಲಹೀನತೆ** (ನಾ). ಶಕ್ತಿಯಿಲ್ಲದಿರುವಿಕೆ; ದುರ್ಬಲತೆ: ಅವರಿಗೆ ವಯೋಧರ್ಮದಿಂದ ಬಲಹೀನತೆಯುಂಟಾಗಿದೆ (ಕಿಂತಿ). [ಸಂ. ಬಲಹೀನತಾ]

**ಬಲಾಂತಕ** (ನಾ). = ಬಲಧ್ವಂಸಿ: ಅನೇಕವೃಂದಾರಕಾನಂದದುಂದುಭಿಗಭೀರಸ್ವರಂಗಳುಮಶೇಷಾನಿಮಿಷಜಯಜಯವಿಶೇಷಘೋಷಂಗಳುಂ ನೆಗಟ್ತಳೆರ್ದಫುಬಲಾಂತಕಂಗೆ ಬಲಾಂತಕಂ ಕೆಯ್ಗೊಟ್ಟೊಳಯಿಂಕೆ ಬಿಜಯಂಗೆಯ್ಸಿ (ಕ್ರಿಕೃತು. ೦೩-೦೦೪ ವ). [ಸಂ.]

**ಬಲಾಕ, ಬಳಾಕ** (ನಾ). ಒಂದು ಬಗೆಯ ಜಲಚರಪಕ್ಷಿ; ಬೆಳ್ಳಕ್ಕಿ: ಬಕಕಲಹಂಸಬಲಾಕಪ್ರಕರ ವ್ಯದಾಕ್ಷಣತರಮ್ಯಮಿದಿರೊಳ್ ತೋಱತ್ತುಕೊಳಂ (ಶಂಕಕಾ. ೮-೩೬); ಕೋಕನದಕುಮುದಕಲ್ಹಾರಬಕಬಲಾಕಮರಾಳಾನೀಕದಿಂ ಚೆಲ್ವುವೆತ್ತ . . . ಸರೋವರಕೆ ಬಂದು (ಕ್ರಿಕಾವ್ಯ. ೦-೪೪ ವ); ಮೈದೋಱಿದುದು ಮುಂಗಾರು . . . ಹರುಷಿಸಿದವು ಬಲಾಕ ಚಾತಕ (ಕಂರಾ. ೪-೬-೨). **ಬಳಾಕ**: "ಬಿಸಕಂಠಂ ಬಳಾಕಮೆನೆ ಬೆಳ್ಳಕ್ಕಿ" (ಮಂಗರಾ. ೩೦-೬); ಕಾಕೋಳೂಕಸೃಗಾಳಬಳಾಕೋಷ್ಟ್ರಚವಮೂರುಖರಮುಖಂಗಳವೋಲ್ ನಾನಾಕುತ್ಸಿತಬೀಭತ್ಸುತರಾಕಾರದಲಿರ್ಪುವಲ್ಲಿ ಯೋನಿಮುಖಂಗಳ್ (ಮಲ್ಲಿಕು. ೦೩-೦೩೩); ಇದುವೆಳೆವೆಣ್ಗಳ ಕಣ್ಗಳೆಮೀನ್ಗಳ ಬೆದಱಿಸ ಬಂದ ಬಳಾಕ (ಸಾಗಳು. ೩-೦೬). [ಸಂ.]

**ಬಲಾಕೆ, ಬಳಾಕೆ** (ನಾ). = ಬಲಾಕ: "ಬಲಾಕಾ, ಬಿಸಕಂಠಿಕಾ – ಈ ೨ ಬೆಳ್ಳಕ್ಕಿ" (ಹಲಾಯು. ೪೨-೯೬); ಅಲ್ಲಲ್ಲಿಗೆ ಪಳುಕಿನ ಬಲಾಕೆಗಳೊಳಂ ಬರೆದ ಸುರಶರಾಸನಂಗಳೊಳಂ . . . ಪೆಱವಂ ಪಲತೆಱದ ಶಿಶಿರೋಪಚಾರಂಗಳುಮಾಟ್ಟ ಪರಿಜನಂಗಳುಮಂ ನೋಡುತ್ತಂ ಪೋಗೆಪೋಗೆ (ಕಾದಂಉ. ೨೦೬). **ಬಳಾಕೆ**: ಕಾಚಮೇಚಕಚಯಚ್ಛಾಯಾಂಬುವಿಂ ಗುಣ್ಪನಿಂ ಪುದಿದಿರ್ದತ್ತು ಸರೋವರಂ ಬಕಬಳಾಕಾನೀಕರಾವಾಕುಳಂ (ಶಂಶಾ. ೦೩-೬೨); ಘಟಿಲನೆ ಬಳಾಕೆಯಾಕೃತಿ ಮಟಿಗಾಲದೊಳಿರದದೃಶ್ಯಮಪ್ಪಂದದಿನಿತ್ತುಟಿಯದೆ ಕಡೆಗಾಲದೊಳೆವಟಿಯೆ ಸುರಂ ಮಾಯಮಾಯ್ತು ದಿವಿಜನ ದೇಹಂ (ಶಂಪ್ರಕು. ೪-೬೮). [ಸಂ. ಬಲಾಕಾ]

**ಬಲಾಚಾರ** (ನಾ). ಒಳ್ಳೆಯ ಗ್ರಹಗತಿ; ಸುಯೋಗ; ಅದೃಷ್ಟ; ಆ ದಿನ ಗಣೇಶನನ್ನು ಬಾವಿಗೆ ಕಳಿಸಿ, ಅವನ ಸ್ಥಾನದಲ್ಲಿ ಈ ಗ್ರಂಥವನ್ನಿರಿಸಿದ್ದೆ. ಆದರೆ ಆ ವಿದ್ಯಾಪತಿಯಿಂದ ನನ್ನ ಗ್ರಂಥಕ್ಕೇನೂ ಬಲಾಚಾರ ಒದಗಿ ಬರಲಿಲ್ಲ (ಮುಂಗಾಕು. ೦೩). [ಈ ಇದು 'ಗ್ರಹಚಾರ' ಎಂಬ ಶಬ್ದಸಾಮ್ಯದಿಂದ ಮಾಡಿಕೊಂಡ ರೂಪ]

**ಬಲಾಢ್ಯ, ಬಳಾಢ್ಯ** (ಗು). ೧. ಬಲಶಾಲಿಯಾದ; ಶಕ್ತಿಯುತವಾದ; ಸಮರ್ಥವಾದ: ಭಾರತವನ್ನು ನಿಯಂತ್ರಿಸಲು ಬೇಕಾಗುವ ಬಲಾಢ್ಯ ಸೈನ್ಯವನ್ನು ಹೊಂದಲು ಬ್ರಿಟನ್ನಿಗೆ ಸಾಮರ್ಥ್ಯವಿಲ್ಲ ಎಂಬುದನ್ನು ಆಳುವವರು ಮನಗಂಡರು (ಆಕ್ಟ್ರಕ. ೦೯೦). (ನಾ). ೨. ಬಲಶಾಲಿಯಾದವನು; ಶಕ್ತಿಶಾಲಿ; ಸಮರ್ಥ: ಗಿರಿಯಂತೆ ಬಿಣ್ಣದು ಸುರಕರಿಯಂತೆ ಬಲಾಢ್ಯನಬ್ಧಿಯಂತೆ ಗಭೀರಂ (ಕಮದ. ೨೦೪ ಪ್ರಯೋ); ಸಹಸ್ರಕಂಠಂ ಜಗದೇಕವೀರಂ ರಾಕ್ಷಸಾಧಿಪಂ ಇನ್ನೆನಿತು ಪರಾಕ್ರಮಿಯೊ, ಎನಿತು ಬಲಾಢ್ಯನೊ, ಪೇಱನಿತು, ಕ್ರೂರನೊ, ಅರಜಿಪರ್! (ಅದ್ಭುತ. ೪೦-೧೬). **ಬಳಾಢ್ಯ**: ೨. ಜನ್ನಸ್ವಾಮಿ ಬಳಾಢ್ಯನಾಗಿ ನಿಲೆ ಸೌಮ್ಯರ್ ನೋಡೆ

ಕೂಸು ಸುಧಾಜನ್ಮಂ ರಕ್ಷಿಸುವಂ ಸ್ವಕೀಯಶಿಶುವಂ ತಾಯ್ ರಕ್ಷಿಪ್ಪೊಂದಂದದಿಂ (ಜಾಕ. ೬-೩). [ಸಂ.]

**ಬಲಾತೈಲ** (ನಾ). ಒಂದು ಬಗೆಯ ಔಷಧೀಸಸ್ಯದಿಂದ ತಯಾರಿಸಿದ ಎಣ್ಣೆ: ಎದೆನೋವುಳ್ಳಾತನು ಬಲಾತೈಲವನ್ನಾದರೂ ಸುಕುಮಾರ ತೈಲವನ್ನಾದರೂ ತೆಗೆದುಕೊಂಬುದು (ಕೃಕೃಸಾ. I, ೦೮೪). [ಸಂ.]

**ಬಲಾತ್ಕರಿಸು** (ಕ್ರಿ). ೧. ಒತ್ತಾಯಮಾಡು; ಬಲವಂತಮಾಡು; ನಿರ್ಬಂಧಪಡಿಸು: ಆತನು ಬಲಾತ್ಕರಿಸಿದರೂ ಕೂಡ ಮನುವು ನಾನಾವನ್ನು ತನ್ನ ಕುದುರೆಯ ಮೇಲೆಯೇ ಕುಳ್ಳಿರಿಸಿಕೊಂಡು ಕರೆತಂದಳು (ಝಾರಾಣಿ. ೦೪); ನಾಲ್ಕಾರುದಿನ ಅಲ್ಲಿಯೇ ಇದ್ದು ಬರಬೇಕೆಂದು ಎಲ್ಲರೂ ಬಲಾತ್ಕರಿಸಿದರು (ಕೃಶಾಕ. ೦೦೩). ೨. ಬಲಪ್ರಯೋಗಮಾಡು; ಶಕ್ತಿಯನ್ನು ಪ್ರಯೋಗಿಸು: ಮಡುವಿನೊಳು ಮಡವಿಡಿದ ನೆಗಳಂ ಬಲಾತ್ಕರಿಸಿ ಬಿಡಿಸಿಕೊಂಡೊಡಮುರಿದು ತಡಿಗಡರಿ (ಕೃಶಿಲಾ. ೧೩-೩೨). [< ಬಲಾತ್ಕಾರ + – ಇಸು₁]

**ಬಲಾತ್ಕಾರ** (ನಾ). ೧. ಒತ್ತಾಯ; ಬಲವಂತ: "ಪ್ರಸಭಂ, ಬಲಾತ್ಕಾರಃ ಹಠಃ – ೩ ಬಲಾತ್ಕಾರದ ಪೆಸರು, ಬಲವಂತಮಾಡುವಿಕೆ, ನಿರ್ಬಂಧಗೊಳಿಸುವಿಕೆ" (ಶಿದ್ಯಾಂಶಿ. ೨೬೦); ಬೆದರಿಕೆ ಹಾಕುವುದರಿಂದಲೂ ಬಲಾತ್ಕಾರದಿಂದಲೂ ಬಹಳ ಹಾನಿಯಾಗುವುದು (ಮುಂಶಿಯು. ೪-೬೩); ನನ್ನ ಆಭರಣಗಳನ್ನು ಈ ಪಾಪಿಗಳು ಬಲಾತ್ಕಾರವಾಗಿ ಕಿತ್ತುಕೊಂಡರು (ಕೃಶಾಕ. ೬೦). ೨. [ಜೈನ] ಮುನಿಗಳ ಒಂದು ಗುಂಪು: ಬಲಾತ್ಕಾರದ ಗಣದ ನೇಮಿಚಂದ್ರದೇವರ ಶಿಷ್ಯರು ಪಾರಿಶ್ವದೇವರು ತಂಮ ಹೆಸರ ಹಾಲ ಧಾರಗೆ ಬಿಟ್ಟ ಬಾಳು (ಕ೨. III-i, ೦೦-೪; 1542); ಗಣಗಳು: ದೇವ, ಸೇನ, ಬಲಾತ್ಕಾರ, ಬಳಗಾಬ (ಕಶಾಇ. ೮೬). [ಸಂ.]

**ಬಲಾಧಿಕ** (ನಾ). ಅತಿಶಯವಾದ ಬಲವುಳ್ಳವನು: ಬಲಾಧಿಕರಸಮಸೈನಿಕರ್ . . . ಲಂಕೆಯುಂ ಪುಗುತಂದರ್ (ಶಂರಾಮ. ೦೪-೮೬). [ಸಂ.]

**ಬಲಾಧಿಕೃತ** (ನಾ). ಸೇನಾಧಿಪತಿ; ದಳಪತಿ: ನಿಜನಂದನನಪ್ಪ ಚಂದ್ರಾಪೀಡನಂ ತಾರಾಪೀಡನರೇಂದ್ರಂ ಬರಿಸಲೆಂದು ಬಲಾಧಿಕೃತನಪ್ಪ ಬಲಾಹಕನೆಂಬನಂ ಬೆಸಸೆ (ಕಾದಂಪೂ. ೪೪೬). [ಸಂ.]

**ಬಲಾಧಿಪ** (ನಾ). = ಬಲಾಧಿಕೃತ: ಇವರಂ ಸ್ವದೇಶಕನಂತವೈಭವದಿಂದೆ ನೀಂ ತತಸುವಾಕ್ಯಮನಾಡಿ ಬೀಳ್ಕೊಡೆನಲ್ ಬಲಾಧಿಪನಾಗಳೇ ನುತಬಲಂಗಳನೆಯ್ದಿಸಲ್ ಬಯಲಾದವದ್ಭುತಮೆಂಬಿನಂ (ಹಾರಿಚ. ೨-೦೪-೩೨). [ಸಂ.]

**ಬಲಾಧ್ಯಕ್ಷ, ಬಳಾಧ್ಯಕ್ಷ** (ನಾ). = ಬಲಾಧಿಕೃತ: ಪುಂಡರೀಕಿಣಿಗೆ ಪಯಣಾಂಬೋಗಲ್ ನಿಶ್ಚೈಸಿದಂ ಧರಣೀಶ್ವರಂ ಅಂತತಿತ್ವರಿತಗಮನಸಿಕ್ಷಿತಮಾನನಾಗಿ ಬಲಾಧ್ಯಕ್ಷನಂ ಬರಿಸಿ (ಆದಿಪು. ೪-೯೦ ವ). **ಬಳಾಧ್ಯಕ್ಷ**: ಭೂಪತಿ ಮೆಚ್ಚಿ . . . ಪಡೆಯಂ ಪಣ್ಣಿ ಬರವೇೞ್ಕೆಂದು ಬಳಾಧ್ಯಕ್ಷಂಗೆ ಬೆಸಸುವುದುಂ (ಮಲ್ಲಿಪು. ೮-೧೩೦). [ಸಂ.]

**ಬಲಾನ್ವಿತ** (ಗು). ೧. ಶಕ್ತಿಶಾಲಿಯಾದ; ಬಲಿಷ್ಠವಾದ. (ನಾ). ೨. ಶಕ್ತಿಶಾಲಿಯಾದವನು; ಬಲಾಢ್ಯ. [ಸಂ.]

**ಬಲಾರಾಕ್ಷಸಿ** 'ಬಲರಾಕ್ಷಸಿ' ನೋ.

**ಬಲಾರಾಕ್ಷಿ** 'ಬಲರಾಕ್ಷಸಿ' ನೋ.

**ಬಲಾರಾತಿ** (ನಾ). = ಬಲರಿಪು: "ಇಂದ್ರಃ. ಮರುತ್ವಾನ್ . . . ಸುರಪತಿಃ, ಬಲಾರಾತಿಃ, ಶಚೀಪತಿಃ . . . ಸಹಸ್ರಾಕ್ಷಃ. ಋಭುಕ್ಷಾ– ೩೫ ದೇವೇಂದ್ರನ ಹೆಸರುಗಳು" (ಶಿದ್ಯಾಂಶಿ. ೨೦). [ಸಂ.]

**ಬಲಾರಿ₁** 'ಭಟಾರಿ' ನೋ.

**ಬಲಾರಿ₂** (ನಾ). = ಬಲರಿಪು: ಮೊಱೆಯಿಡೆ ಕೇಳ್ದು ಚಕ್ರಧರನುಂ ಜಳಜೋದ್ಭವನುಂ ಬಲಾರಿಯುಂ ಮುಳಿಗಿ . . . ಇದಾವನಿಂದಲರ್ದ

ದಾವನಿನೊತ್ತರಿಸಿತ್ತು ಕೌತುಕಂ ಎಂದೆಂದು ನುಡಿಯುತಿರ್ಪನಂ (ಗಿರಿಜಾ. ೬-೭); ಇತ್ತನೋಲಗವನು ಬಲಾರಿಗೆ ಪತ್ತುವಡಿ ತೇಜದಲಿ ಖಳನೆಂಬತ್ತು ಕೋಟಿಕಿರೀಟವರ್ಧನರುಗಳ ಗಡಣದಲಿ (ಕೃಷ್ಣಾ. ೬-೮-೦). 'ಬಲಾರಿಚಾಪ' ಪರಾ. [ಸಂ.]

**ಬಲಾರಿಚಾಪ** (ನಾ). ಕಾಮನ ಬಿಲ್ಲು; ಇಂದ್ರಚಾಪ : ಮೇರುವಿನ ತಪ್ಪಲಲಿ ಬೆಳೆದ ಬಲಾರಿಚಾಪವೊ . . . ಜಂಭಾರಿಭವನವನಳ್ಳಿಱಿಯ ತ್ರಿಪುರಾರಿಯೊಡ್ಡಿನ ಹೊಳಹಿನಲಿ ಹೊಳೆಹೊಳೆದನಾ ಹನುಮ (ಕುವ್ಯಾ.ಅ. ೧೧-೪೭). [ಸಂ.]

**ಬಲಾವಲೇಪ** (ನಾ). ಶಕ್ತಿಯಿಂದ ಉಂಟಾದ ದರ್ಪ,—ಅಹಂಕಾರ : ಸಹಜಾತ ಬಂಹಿಮದ್ಬಲಾವಲೇಪಕ್ಕಂ ಸಮುಚಿತಶಾಸ್ತ್ರವೃತ್ತವರ್ತನಕ್ಕಂ . . . ತಾನೊರ್ವನೆ ನಿರುಪಮಜನ್ಮಭೂಮಿಯಾಗಿ . . . ಒಡ್ಡೋಲಗಂ ಗೊಟ್ಟಿರ್ದ ದಮಿತಾರಿಯ ಮುಂದೆ ಕೃತಕಗಾಯಕಿಯರ್ ನಿಲೆ (ಶಾಂತಿ. ೬-೪೮ ವ) ; ಅದನಾಳ್ವಂ . . . ನಿಜಭುಜಬಲಾವಲೇಪ ಪ್ರತಾಪಾಟೋಪನಿರ್ಜಿತಾನೇಕಶತ್ರುಪ್ರಂಬರಸಂ (ಅಜಿತ. ೨-೨೩ ವ). [ಸಂ.]

**ಬಲಾಸ** (ನಾ). ವಾತ, ಶ್ಲೇಷ್ಮಗಳಿಂದ ಕೊರಳಲ್ಲಿ ಉಂಟಾಗುವ ಒಂದು ಬಗೆಯ ಗಡ್ಡೆ,—ಗಂಟು : ವಾತಶ್ಲೇಷ್ಮಗಳು ಕೊರಳಲ್ಲಿ ಗಾತ್ರವಾಗಿ ಉನ್ನತವಾಗಿ ಇದ್ದ ಗ್ರಂಥಿಯನು ಉಂಟುಮಾಡುವವು. ಆ ಗ್ರಂಥಿ ಬಲಾಸವೆನಿಸಿಕೊಂಬುದು (ವೈದ್ಯಶಾ. II, ೧೧೮). [ಸಂ.]

**ಬಲಾಹ** (ನಾ). ಒಂದು ಬಗೆಯ ವಿಷ : ಪಂಚವಿಂಶತಿಸ್ಥಾವರ ವಿಷ ನಾಮಂಗಳ್ ಸಲೆ ಮುಸ್ತೆ ವತ್ಸನಾಭಂ ಬಲಾಹ[ಪಾಠಾಂ. ಬಲಾಹುಂ] . . . ಏಕವೀರಂ (ಖಗೇಂದ್ರ. ೨-೩) ; ಬಲಾಹವೆಂದು, ವತ್ಸನಾಭವೆಂದು, ಮುಸ್ತಕವೆಂದು . . . ರೋಹಿಣವೆಂದು, ಮುದ್ಗರವೆಂದು, ಹೀಗೆ ಸ್ಥಾವರವಿಷ ಇಪ್ಪತ್ತೈದುಭೇದಂಗಳಿಂದ ಭಿನ್ನವಾಗಿ ಇಹುದು (ವೈದ್ಯಶಾ. II, ೦೬೬). [ಸಂ. ?]

**ಬಲಾಹಕ, ಬಳಾಹಕ** (ನಾ). ೧. ಮೋಡ ; ಮುಗಿಲು ; ಮೇಘ : "ಅಭ್ರಂ, ಅಬ್ದಃ, ಘನಃ . . . ಜೀಮೂತಃ, ಬಲಾಹಕಃ — ಈ ೧೦ ಮುಗಿಲ ಪೆಸರ್" (ಹಲಾಯು. ೧೧-೩೮); ಬಲಾಹಕಪುಂಜಕಾಂತಿಯ ಪಿಂಗತರ ಮುಖ ಕೇಶದಾಸ್ನತಿಯ ಕಂಜನಾಭನ ಮೂರ್ತಿ ಶೋಭಾರಂಜಿತನು (ಕುವ್ಯಾ.ಅ. ೩-೪). ೨. ಅತಿಶಯವಾಗಿ ಮಳೆ ಸುರಿಸುವುದೆಂದು ಭಾವಿಸಲಾದ ಪ್ರಳಯಕಾಲದ ಏಳುಮೇಘಗಳಲ್ಲಿ ಒಂದು : ಅಮರಸಮಿತಿಯ ತಂದ ಪಾಲ್ಗಡಲ ಪಾಲಂ ಪುಷ್ಕಲಾವರ್ತ ಬಲಾಹಕಾಂಬುದಂಗಳ್ ಕನಕಾಚಳಚೂಳಿಕೆಯೊಳ್ ಸುರಿವುತಿರ್ಪಂತಿಂದ್ರರುಂ ಭಗವದುತ್ಕ್ಷೇಪದೊಳ್ ಸು[ರಿ]ಯೆ (ಶಾಂತಿ. ೧೧-೪೩ ವ); ಕರಿಯ ಬಲಾಹಕ ದೊಳು ಹರಿದಾಡುವ ಕರ ಸೊಗಯಿಪ ಮಿಂಚಿನಂತೆ (ಕೃಷ್ಣಕ. ೦೬-೦೯). ೩. ಒಂದು ಬಗೆಯ ಪಕ್ಷಿ; ಬೆಳ್ಳಕ್ಕಿ : ಶುಕಪಿಕಬಕಬಲಾಹಕಟಿಟ್ಟಿಭಕಾದಿ ಪಕ್ಷಿಗಳ ಕೋಲಾಹಲಕಲಕಲಧ್ವನಿಗಳಿಂದಲೂ . . . ಪ್ರಕಾಶಿಸುತ್ತಿದ್ದವು (ಭರತ. ೪೬). ೪. ವಿಷ್ಣುವಿನ ನಾಲ್ಕು ಕುದುರೆಗಳಲ್ಲಿ ಒಂದು. ೫. ಒಂದು ಬಗೆಯ ಹಾವು. ಬಳಾಹಕ : ೧. ವರಯುವತಿ ಬಂದಳು . . . ನವಬಳಾ [ಪಾಠಾಂ. ವಲಾ] ಹಕದೊಳಗೆ ಮಿಂಚಿನ ಗುಪಿಹಿತ ಮಣಿಮೇಘವಾವಿರ್ಭವಿಸಿತೆನೆ ದಂಡಿಗೆಯನಿಳಿದಳು ಹೊಕ್ಕಳೋಲಗವ (ಕುವ್ಯಾ.ಉ. ೬-೧೮). [ಸಂ.]

**ಬಲಿ₁** 'ಬಲ್'₁ ನೋ.

**ಬಲಿ₂** (ಗು). ೧. ಶಕ್ತಿಶಾಲಿಯಾದ : ಬಲಿಸೌಮಿತ್ರಿಸಮೇತರಾಮನ ನಿಳಾಸಂಜಾತೆಯುಂ ಮತ್ತೆ ದೋರ್ಬಲಶತ್ರುಘ್ನಪುರಸ್ಥನಾದ ಭರತ ಕ್ಷ್ಮಾಪಾಲನಂ ಕಂಡು . . . ನಮಸ್ಕಾರಂಗಳಂ ಮಾಡಿದಂ (ರಾಮಕ. ೧೧-೩೬). (ನಾ). ೨. ಗಟ್ಟಿ; ದೃಢ: 'ಬಲಿಕೆಯ್', 'ಬಲಿವಿಡಿ' ಪರಾ. ೩. ಬಲಿಷ್ಠನಾದವನು ; ಶಕ್ತಿಶಾಲಿ : ಶ್ರೀಯುವತೀಪ್ರಿಯಂ ಬಲ ಯುತಂ ಬಲಿದರ್ಪಹರಂ . . . ಆದಿಪುರುಷಂ ಪುರುಷೋತ್ತಮನೀ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗಜಾಷ್ಟ. ೧-೧) ; ಶ್ರೀಯ ಮನಃಪ್ರಿಯಂ . . . ಬಲಜ್ಯಾಯನಭೇದ್ಯ ಮನ್ಯಕುಶಲಂ ಬಲಿಬನ್ಧನನನ್ತ ರಾಯನಾರಾಯಣನೆಮ್ಪುದುರ್ವ್ವಿ ನರಸಿಂಹಪರೇನ್ದ್ರನ ಮನ್ತ್ರಿ ಬೂಚನ (ಎಕ. V, ಅರಸೀ. ೦೩೨-೨೯; 1168); ಆ ಬಲಿಯು ದೈತ್ಯಕದಂಬಕ್ಕೆಬಲಿಯುಂ ಯಾಚ್ಞೀಕೃತಶತ್ರುಭೃದ್ಬಲಿಯುಂ ಮೆಟ್ಟಿ ರಸಾತಳಕ್ಕಿಟ್ಟಿದ್ದೆ ನೀಂ ವಾಮನಾಕಾರದಿಂ (ಅಗಸ. ೧-೩೯). ☞ ಈ ಮೂರು ಪ್ರಯೋಗಗಳಲ್ಲಿ ಬಳಸಿರುವ 'ಬಲಿ' ಶಬ್ದಕ್ಕೆ 'ಬಲಿಚಕ್ರವರ್ತಿ' ಎಂಬುದಾಗಿ ಶ್ಲೇಷಾರ್ಥವನ್ನೂ ಕೊಡಬಹುದು. ೪. ಯೋಧ ; ಸೈನಿಕ. ೫. ಬಲರಾಮ. ೬. ಒಂದು ಬಗೆಯ ಗಿಡ. ೭. ಹಂದಿ. ೮. ಎಮ್ಮೆ. ೯. ಒಂಟೆ. [ಸಂ. ಬಲಿನ್]

**ಬಲಿ₃, ಬಳಿ₃** (ನಾ). ೧. (ಹಿಂದೆ ರಾಜರಿಗೆ ಸಲ್ಲಿಸುತ್ತಿದ್ದ) ತೆರಿಗೆ : ಸುಂಕ ; ಕಂದಾಯ : "ಬಲಿ ಕರಾಹ್ವಯಂ ಸಿದ್ಧಾಯಂ" (ಶಬ್ದಮಣಿ. ೬೨-೬೦); "ಭಾಗಧೇಯಃ, ಕರಃ, ಬಲಿಃ—೩ ಅರಸಿಗೆ ಕೊಡತಕ್ಕ ಕಾಣಿಕೆ, ಕಪ್ಪ, ಕಂದಾಯ, ಕವಳಿಗೆ, ತೆರಿಗೆ, ಮುಂತಾದುವುಗಳ ಪೆಸರುಗಳು" (ಸಿದ್ಧಾಂತ. ೨೯೩). ೨. ಕಾಣಿಕೆ ; ಕೊಡುಗೆ : 'ಬಲಿಗೊಳ್' ಪರಾ. ೩. ಪೂಜೆ ; ಆರಾಧನೆ : "ಅರ್ಚಾ, ಪೂಜಾ, ಸಪರ್ಯಾ, ಉಪಹಾರಃ, ಬಲಿಃ — ಈ ೫ ಪೂಜೆ" (ಹಲಾಯು. ೨೦-೦೨೮) ; ಉತ್ಸವ, ಸ್ನಾಪನ, ಬಲಿಗಾಗಿ ಬೇಕಾದ ಮೂರ್ತಿಗಳು ಮಾತ್ರ ಲೋಹದಿಂದ ನಿರ್ಮಿತವಾಗುವುವು (ಶಾಕಿರ. ೩೦೮). ೪. ದೇವತೆಗಳ ಪ್ರೀತ್ಯರ್ಥವಾಗಿ ಗೃಹಸ್ಥನು ಪ್ರತಿದಿನವೂ ನಡೆಸಬೇಕಾದ ಪಂಚಯಜ್ಞಗಳಲ್ಲಿ ಒಂದು : ತನ್ನ ದಿನದ ಆಹಾರದಲ್ಲಿ ಒಂದು ಭಾಗವನ್ನು ಪ್ರಾಣಿ, ಪಕ್ಷಿ ಮುಂತಾದುವುಗಳಿಗೆ ಕೊಡುವ ಧಾರ್ಮಿಕ ಕ್ರಿಯೆ ; ಭೂತಯಜ್ಞ. ೫. ಆಹುತಿಯಾಗಿ ಅರ್ಪಿಸುವ ಅನ್ನ, ದ್ರವ್ಯ, ಪ್ರಾಣಿ, ಮನುಷ್ಯ ಮುಂತಾದುವು : ಬಲಿಭುಗ್ವ್ರಜಕ್ಕೆ ಬಲಿಯಂ ತಾನಿಕ್ಕುವಳ್ (ಶಬ್ದಂಪು. ೩೬೬); ಪಚಿದ ಪೂಮಾಲೆಗಳ ಬಣ್ಣಗೂಳ್ಗಳ ಬಲಿಯ ಮೊಚಿದ ಪಳೆಗೋಳ್ಗಳ . . . ಸುಡು ಗಾಡೊಳಾ ಮಂತ್ರಿ ಚಂಡಿಕಾಲಯದೆಡೆಗೆ ನಡೆತಂದನು (ಕೃಷ್ಣಾ. ೩೦-೩೩); ದೇವತೆಯ ಬಲಿಪೀಠಗಳನ್ನು ಗುಡಿಸುವವರಿಲ್ಲದೆ ಒಪ್ಪಿಸಿದ ಹಿಂದಿನ ಬಲಿಗಳು ಕೊಳೆತು ನಾರುತ್ತಿದ್ದುವು (ಕಥಾಕ. ೦೮). 'ನರಬಲಿ', 'ಬಲಿಪಶು' ಪರಾ. ೬. ಆಹಾರವನ್ನು ಸೇವಿಸಿದ ಮೇಲೆ ಉಳಿಯುವ ಭಾಗ ; ಎಂಜಲು ; ಉಚ್ಛಿಷ್ಟ. ೭. ಆಹಾರ ; ಅನ್ನ : "ಕೂರ ಮನ್ನಂ ಭಕ್ತಮೋದನಂ ಭಿಸ್ಸಮಾಹಾರಮಶನಂ ಬಲಿಯೆನಲ್ಕೆಪೋಗರ ಮಕ್ಕು" (ಶಂಗರಾ. ೬೩-೧). ೮. ಹಬ್ಬ ; ಉತ್ಸವ : ಬಲಿ ಬಾಯನಂ ಗಳುಂ ಮಂಗಲತೂರ್ಯನಿನದಮುಂ ಗೇಯರವಮುಂ ಪೊಂದೊಟ್ಟಿಲ ಪೊಳಪುಂ ರಂಜಿಸುತಿರೆ ಕಲನಾದದ ಗೋಪಕಾಂತೆಯರ್ ನೆರೆದು (ಜಗ. ೩-೨೬). 'ಬಲಿಪಮೂರ್ತಿ' ಪರಾ. ೯. ಒಬ್ಬ ಪುರಾಣ ಪ್ರಸಿದ್ಧನಾದ ದೈತ್ಯಚಕ್ರವರ್ತಿಯ ಹೆಸರು ; ಪ್ರಹ್ಲಾದನ ಮಗನಾದ ವಿರೋಚನನ ಮಗ ; ಬಾಣಾಸುರನ ತಂದೆ ; ☞ ಈತನನ್ನು ವಿಷ್ಣುವು ವಾಮನಾವತಾರದಲ್ಲಿ ಮೂರಡಿಯಷ್ಟು ಭೂಮಿಯನ್ನು ಬೇಡಿ ತ್ರಿವಿಕ್ರಮನಾಗಿ ಬೆಳೆದು ಪಾತಾಳಕ್ಕೆ ಮೆಟ್ಟಿದನೆಂಬ ನಂಬಿಕೆಯಿದೆ : ಬಲಿಯಂ ವಾಮನರೂಪದಿಂದಮೆ ವಲಂ ಮುಂ ಬೇಡಿದಂ ಭೂರಿಭೂತಲಮಂ (ಶಂಕಾ. ೮-೨೦); ಸಿರಿಯೊಳಾ ಬಲಿ ಭೋಗದೆಡೆಯಲಿ ಸುರಪ ರೂಪದಿ ಮದನ ಹಗೆಗಳ ಹರಣದಲಿ ಕಾಲಾಗ್ನಿ

ರುದ್ರನು ಭೂಪ ದಶರಥನು (ಕಾತಿಂ. ೧-೩೪): ಬಲಿಯು ದಾನವ ಗೃಢ ಚರಿತೆಯನು ಹಿಂತೆ ಕಲಿಯಲಿಲ್ಲವೆ ನೀವು? (ಕುತು. ೧೬-೧). 'ಬಲಿಂದಮ' ಪರಾ. ೧೧. ಚಾವಟರದ ಹಿಡಿ, – ಹಿಡಿಕೆ. ೧೧. ನೆರಿಗೆ; ಮಡಿಕೆ; ಸುಕ್ಕು: 'ಬಲಿಮುಖ' ಪರಾ. ೧೨. [ಜೈನ] ಒಂಬತ್ತುಮಂದಿ ಪ್ರತಿನಾರಾಯಣರಲ್ಲಿ ಒಬ್ಬ: 'ಬಲಿಸ್ನವನ, 'ಬಲಿಸ್ನಪನ' ಪರಾ. ೧೩. ಕಾಗೆ; ವಾಯಸ: "ಕಾಗೆಯಲ್ಲಿ ಬಲಿಯೆಂಬುದಕ್ಕು" (ತುಂಗಾ. ೦೪೦-೦೩). ೧೪. ಗಂಧಕ. ೧೫. ಸ್ವಭಾವ; ಪ್ರಕೃತಿ: "ಸುಜನೋತ್ಸಹ ದೃಢದಳಪತಿ ರಜಕ ಬಲೀಂದ್ರಂ ಸುಕೀರ್ತಿಸಾಂದ್ರಂ ಕಾಕವ್ರಜ ಪ್ರಕೃತಿ ಬಲಿಕೊಡುವುದು ನಿಜದಿಂ ಪನ್ನೊಂದುನಾಮ ಬಲಿಶಬ್ದಂಗಳ್" (ನಾನಾ. ೯೬); "ಸುಜನ ಬಲೋತ್ಸವಂ ಪ್ರಕೃತಿ ಗಂಧಕ ಕೀರ್ತಿಚಮೂಪ ವಾಯಸಂ ರಜಕ ಬಲೀಂದ್ರಪರ್ವತಗಳುಂ ಬಲಿಯಕ್ಕು" (ನಾನಾ. ೦೬). ಬಳಿ: ೧. ಬಳಿಯನೆಲ್ಲವ ತೆತ್ತು ಹೇಜಿನೆತ್ತಿ ಹೊಳೆಯ ಹೊನ್ನೂರು ತಾವರೆಗೆಜಿಯ ಲಿಂಗದಲಿ ತೀಳಿಯ ಕ್ರೀಭಾಂಡ ವಿಕ್ರಯ ಸುಙ್ಕಾನ (ಶಿಶಾ. ೧೯೦-೯೬೬); ಅಳಿವ ಅನ್ಯಾಯ ಕಿಱುಕುಳ ತಪ್ಪು ತೌಡಿವೊಳಗಾದ ಸಮಸ್ತ ಬಳಿಸಹಿತ ಆಗಿ . . . ಪುತ್ರಪೌತ್ರಾದಿಗಳ್ಗೆ ಸಲ್ಲುದು (ಎಕ. XVI, ಚಿಕ್ಕ. ೬೬-೨೪; 1318); ಆ ಗ್ರಾಮದ ಚತುಸೀಮೆಯ ಒಳಗುಳ ನಿಧಿ ನಿಕ್ಷೇಪ . . . ಸರ್ವಪ್ರಾಪ್ತಿ, ಸರ್ವಸ್ವ ಬಳಿಸಹಿತವಾಗಿ ಆಚಂದ್ರಾರ್ಕಸ್ಥಾಯಿ ಆಗಿ ಸುಖದಿಂ ಭೋಗಿಸೂದ ಎಂದು . . . ಕೊಟ ಗ್ರಾಮ (ಮೈಆಂ. ೦೪೪೩. ೦೬-೨೬; 1488). ೯. ಶ್ರೀಕಾನ್ತಾಪತಿ ವಿಕ್ರಮೋರ್ಜ್ಜಿತ ಬಳಿಕ್ಷೋಣೀತಳಂ ವಿಶ್ವರೋಕೈಕಸ್ತುತ್ಯದಶಾವತಾರಯುತನಸುದ್ಯಚ್ಚಂಖಚಕ್ರಾಬ್ಜಲಕ್ಷ್ಮಾಕೀರ್ಣ್ನಾತ್ಮಕರಾಗ್ರನೆನ್ನವೊಲಿವಂ ತಾನೆನ್ದು ಸಾನನ್ದದಿಂದಾ ಕಲ್ಪಾಯು ವನೀಗೆ ಕೇಶವಚಮೂಪಂಗಾಗಳುಂ ಕೇಶವಂ (ಎಕ. VII. ಶಿಕಾ. ೧೨೩-೨; 1159). ☞ ಇಲ್ಲಿರುವ 'ಬಳಿ' ಶಬ್ದಕ್ಕೆ (ಶಕ್ತಿಶಾಲಿ, ಬಲಿ ಚಕ್ರವರ್ತಿ ಎಂಬ) ಶ್ಲೇಷಾರ್ಥಯುತವಾದ ಚಮತ್ಕಾರವಿದೆ.

ಬಲಿ ಬೀಳು = ತುತ್ತಾಗು: ಈಡಾಗು: ರಾಯರು ದುರಾಶೆಗೆ ಬಲಿ ಬಿದ್ದು ಸೊಸೈಟಿಯ ಹಣದ ಋಣ ಬೆಳೆಸುತ್ತಾ ಬರುತ್ತಿದ್ದುದರಿಂದ ಮುಂದೆ ಏನಾಗುಹುದೆಂದು ಊಹಿಸುವುದು ಕಷ್ಟವಾಗಿತ್ತು (ಕುಶೀ. ೦೬೩). ಬಲಿಯಾಗು = ೧. ಆಹುತಿಯಾಗು; ಮರಣವನ್ನು ಹೊಂದು: ಮೂವರು ಬಾಲಕರು ಬಂದು, ಕಟುಕರಿಗೆ ಹಣವಿತ್ತು, ಕುಮಾರರಾಮನನ್ನು ಬಿಡಿಸಿಕೊಳ್ಳುತ್ತಾರೆ. ಚೆನ್ನಿಗರಾಮ ಬಲಿಯಾಗುತ್ತಾನೆ (ಕುಕುರಾಸಾ. ೨೨೪); ಖಾಸಗಿ ಸಾಹುಕಾರರ ಲಾಭಕ್ಕಾಗಿ ಸರ್ವಸಾಧಾರಣರ ಬದುಕು ಬಲಿಯಾಗ ದಂತೆ ಏರ್ಪಡಿಸಬೇಕು (ಜಾಕ್ರ. ೦೯೧). ೨. ಈಡಾಗು; ಗುರಿ ಯಾಗು: ಕಾಲಚಕ್ರದ ಸುಖದುಃಖಗಳಿಗೆ ಸಾಮಾನ್ಯಜೀವಿ ಬಲಿ ಯಾದಷ್ಟು ಈತ ಬಲಿಯಾಗುವುದಿಲ್ಲ (ರಮಾಕಿಜ. ೯೯). ಬಲಿಹಾಕು = ೧. ದುಷ್ಟಶಕ್ತಿಗೆ ಪ್ರಾಣಿ ಅಥವಾ ಆಹಾರವನ್ನು ಬಲಿಯಾಗಿ ಅರ್ಪಿಸು; ಆಹುತಿಕೊಡು: (ಕ). ೨. ಬಲಿಯನ್ನು ಅರ್ಪಿಸಿ ಮಂತ್ರ ಹಾಕುವುದರ ಮೂಲಕ ದುಷ್ಟಶಕ್ತಿಯನ್ನು ಓಡಿಸು: (ಕ). ೩. ಆಹುತಿಯಾಗಿ ತೆಗೆದುಕೊಳ್ಳು: ರಾಜಸೂಯ ಯಾಗಕ್ಕೆ ಮುಂಚೆ ಭೀಮನು ಜರಾಸಂಧನನ್ನು ಹೇಗೆ ಬಲಿ ಹಾಕಿಬಿಟ್ಟ ನೋಡು! (ವಕಾ. ೦೦೩). ೪. (ಆಲಂ) ಶಾಸ್ತಿಮಾಡು; ಶಿಕ್ಷಿಸು: ಡಾಕ್ಟರರನ್ನು ಕರೆಯಲು ಹೋದರೆ ನಿನ್ನನ್ನೇ ಬಲಿಹಾಕಿಯೇನು (ಡಾಕ್ಟ್ರಿ. ೨೬೩). [ಸಂ.]

ಬಲಿಂದಮ (ನಾ). ಬಲಿಯನ್ನು ದಮನಮಾಡಿದವನು; ವಾಮನ; ವಿಷ್ಣು: ಮುಂದಣ ಮಿಗಮಂ ಕಟಿಪದೆ ಸಂದಿಸಿ ಬಟಿಗೊಳ್ಳ ಮಿಗಮುಮಂ ಕಟಿಪದೆ ತಾನೊಂದಳವಿದಪ್ಪದೆಚ್ಚು ಬಲಿಂದಮನಿಂ ಬಲ್ಲ ಬಲ್ಮೆಯಂ ಪೊಗಟಿಸಿದಂ (ಶಂಶಕಾ. ೩-೯೮). [ಸಂ.]

ಬಲಿಕರ್ಮ (ನಾ). ಪೂಜಾಕಾರ್ಯ; ಅರ್ಚನೆ; ಆರಾಧನೆ: "ಉಪಹಾರಂ ಬಲಿಕರ್ಮಂ ಸಪರ್ಯೆ ಪೂಜಾಭಿಧಾನಮರ್ಚನೆಯಕ್ಕುಂ" (ಚಾತ್ಯಕೋ. ೨೦-೧೪); ಸೌಮಿತ್ರಿ . . . ನದಿಗೆ ನಡೆದೊಡನೆ ಮಜ್ಜನಸ್ಗೈದು ಕಮಲಕುಮುದಂಗಳಂ ಪಿಡಿದು ಬಂದೆಲೆಮನೆಗೆ ಬಲಿಕರ್ಮಗಳ ರಚಿಸಿ ಬಿನ್ನಪಂಗೈದನೊಲಿದು (ಪಂಕರಾ. ೩-೬-೦೪). [ಸಂ. ಬಲಿಕರ್ಮನ್]

ಬಲಿಕಲ್ಲು 'ಬಲಿಗಲ್ಲು' ನೋ.

ಬಲಿಕಾರ್ಯ (ನಾ). (ಪಿತೃಗಳಿಗೆ) ಬಲಿಯನ್ನು ಅರ್ಪಿಸುವ ಕ್ರಿಯೆ; ಪಿಂಡಪ್ರದಾನ: ಇಂದು ಕೊರೆಯಿಂ ಸತ್ತ ಹರಿಗೆ ಬಲಿಕಾರ್ಯಕೆ ಧನಂ ದೊರಕದಿರೆ ಫಲ್ಗುನಂ ಕಂದಮೂಲಫಲವೃಂದದಿಂದ ಬಲಿಗೊಟ್ಟು ಸ್ವರ್ಗಕೆಮ್ದಿದಂ (ಶಕ್ಯಕಾ. ೦೦-೦೩೪). [ಸಂ.]

ಬಲಿಕೆ 'ಬಲ್ಕೆ' ನೋ.

ಬಲಿಕೆಅನ್ನ (ನಾ). (ಕರಾ) ಸರಿಯಾಗಿ ಬೇಯದೆ ಇರುವ ಅನ್ನ; ಬಿರುಸಾದ ಅನ್ನ. [ಬಲಿಕೆ (<ಬಲ್ಕೆ) + ಅನ್ನ$_1$]

ಬಲಿಕೆಯ್ (ಕ್ರಿ). ದೃಢಗೊಳಿಸು; ಗಟ್ಟಿಗೊಳಿಸು: ಮನಮಂ ಬಲಿಕೆಯ್ದು ಶುಕನಾಸನನಿಂತೆಂದಂ (ಕಾದಂಪೂ. ೯೯೩). [ಬಲ್$_2$+ಕೆಯ್$_1$]

ಬಲಿಕೆವಂತ (ನಾ). ತಿಳಿದವನು; ವಿಚಾರಜ್ಞ: ಲಿಂಗಕ್ಕೊಂದು ತನ ಗೊಂದೆಂಬಾಗ ಆ ಅಂಗ ಲಿಂಗವಿರೋಧಿಯೇ ಆ ಇಷ್ಟಲಿಂಗವ ಆತ್ಮನ ನೆಲೆಯಲ್ಲಿ ಅಱಿದಿಹೆನೆಂಬುದು ಇಂಬಲ್ಲವೆ ಕುಲ ಛಲ ವಾಗ್ವಾದದ ಮಾತಲ್ಲದೆ ಬಲಿಕೆವಂತರ ನೀತಿಯಲ್ಲ (ಮೋಳಿಗೆಶಿ. ೦೨೬-೯೬೨). [ಬಲಿಕೆ (<ಬಲ್ಕೆ) + –ವಂತ]

ಬಲಿಕೊಡು 'ಬಲಿಗೊಡು' ನೋ.

ಬಲಿಗಂಬ (ನಾ). ಆಹುತಿಯಾಗಿ ಕೊಡುವ ಪ್ರಾಣಿಗಳನ್ನು ಕಟ್ಟುವ ಕಂಬ: ಬಲಿಗಂಬಕ್ಕೆ ಬಚ್ಚಪ್ಪನ ಮಗ ದೇವಿಗೆ ಬಲಿಯಾಗಲು ಕೊಡ ಲ್ಪಟ್ಟಿದ್ದ ಕೋಣವನ್ನು ಕಟ್ಟಿದ್ದ (ಊರುಳ. ೬). [ಬಲಿ$_3$ + ಕಂಬ$_1$ (<ಕಂಭ)]

ಬಲಿಗಟ್ಟು (ಕ್ರಿ). ಬಲಿಯಾಗಿ ಕೊಡು; ಆಹುತಿಯಾಗಿ ಅರ್ಪಿಸು: ಎಲೆ ಸುಕುಮಾರ ನಿನ್ನ ಸುಕುಮಾರಶರೀರಮನಯ್ಯೊ ಪೆತ್ತರಿಂದಲಸದ ಬಂದ ರಾಕ್ಷಸತಪಸ್ವಿಗೆ ಕೇಳ್ದಲಿಗಟ್ಟ ಮಾಂಸಮಂ ಸುಲಿದುಣಲಿಕ್ಕಲಿರ್ದಪರ್ (ಪ್ರಶಂ. ೦೪-೩೬). [ಬಲಿ$_3$+ಕಟ್ಟು$_1$]

ಬಲಿಗಲ್ಲು, ಬಲಿಕಲ್ಲು (ನಾ). ಬಲಿಯನ್ನು ಇಡುವ ಕಲ್ಲು: ಎಷ್ಟೋ ಸಲ ಹಸಿವೆ ತಡೆಯಲಾಗದೆ . . . ಬಲಿಗಲ್ಲಿನ ಮೇಲೆ ಸುರಿದಿದ್ದ ಅಗಳು ಗಳನ್ನು ಹೆಕ್ಕಿ ತಿಂದಿದ್ದೇನೆ (ಕೂಕುಮು. ೩೩). ಬಲಿಕಲ್ಲು: ಗುಡಿಯ ಸುತ್ತಲೂ ಪಾಳಿ–ಸಂತ್ತಿನ ನಡುವಿನಲ್ಲಿ ಅಲ್ಲಲ್ಲಿ ಬಲಿಕಲ್ಲುಗಳು–ನಾಲ್ಕು ದಿಕ್ಕಿನಲ್ಲೂ ಭಕ್ತರು ಕುಳಿತುಕೊಳ್ಳಲು ಅನುಕೂಲವಾಗುವಂತೆ ಚಾವಡಿಗಳು (ಜೀಕಹಿ. ೩೦). [ಬಲಿ$_3$+ಕಲ್ಲು (<ಕಲ್$_3$)]

ಬಲಿಗಿ 'ಬಲಿಗೆ' ನೋ.

ಬಲಿಗುಡು 'ಬಲಿಗೊಡು' ನೋ.

ಬಲಿಗೂಟ್ (ನಾ). ಬಲಿಯಾಗಿ ಅರ್ಪಿಸುವ ಆಹಾರ; ಆಹುತಿ ಯಾಗಿ ಕೊಡುವ ಅನ್ನ: ಅಗ್ನಿಗೊಂಡದೊಳ್ ಪೊತ್ತುವ ನಱುನೆಯ್ಯ ನೆಲ್ಲರಳ ಬಲಿಗೂಟ, ಸಿರಿಕಂಡಸೆಕ್ಕೆಯ ಸವುದೆಯ ಕಮಱಿ ಪೊರೆದೆಲ್ಲೆಡೆ ಯೊಳೆತ್ತಂ ಪಳಂಚಲೆವೆಲರಿಂ . . . ತಪೋವನಮೊಂದು ಕಣ್ಗೊಳಿಸಲೊಡಂ (ರಾಮಾಕ್ಯ. ೬೮-೪). [ಬಲಿ$_3$+ಕೂಟ್$_1$]

ಬಲಿಗೆ, ಬಲಗಿ, ಬಲಿಗಿ, ಬಲ್ಲಗ, ಬಲ್ಲಗಿ, ಬಿಲಿಗಿ (ನಾ). ಒಂದು ಬಗೆಯ ಮರ: ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ . . . ಮುಂತಾದ ಗಗನಚುಂಬಿತವೃಕ್ಷಗಳಿದ್ದರೆ ಕಲವು ಕಡೆಗಳಲ್ಲಿ . . . ಗಿಡಬಳ್ಳಿ ಪೊದೆಗಳಿದ್ದವು (ಕಂಜಿಕಂ. ೨). ಬಲಗಿ: ಸಹ್ಯಾದ್ರಿಗುಂಬೆಯಂಟ

ಯೊಳ್ ಬಲಗಿಯ ಬೃಹತ್ತರುಶ್ರೇಣಿ ಕಿಕ್ಕಿರಿದವೋಲ್ ಪಂಕ್ತಿಪಂಕ್ತಿ ಸ್ತಂಭಗಳ್ . . . ಇರ್ದುವಗಣಿತಂ (ಕ್ರಿ.ವಾ.ಪೂ. ೯೩೯-೨೩೩); ಬಲಗಿಯ ಮರದಂತೆ ತಲೆ ಯೆತ್ತಿ ನೇರಾಗಿ ನೋಡು ನೀಲಾಕಾಶದತ್ತ (ಇಂಕಾಶ. ೦೫೬-೬೯). **ಬಲಿಗಿ:** ಬಲ್ಲಗಿ, ಬಲಿಗಿ, ಕಿರ್ಬಲ್ಲಿ (ವೃ.ತಿಗಿ. ೬೩-೦೨೬೯). **ಬಲ್ಲಗ :** "ಬಲಿಗೆ, ಬಲಿಗಿ, ಕಿಬ್ಬಲ್ಲಿ, ಬಲ್ಲಗಿ, ಬಲ್ಲಗ" (ಸಸ್ಯ.ಶ. ೦೦೬). **ಬಲ್ಲಗಿ :** ನಾಗಸಂಪಿಗೆ, ಬಲ್ಲಗಿ, ಬಂದಿಗೆ . . . ಜಂಡು, ಬದಿರು (ವಸ್ತು.ಕು. ೨೩೮). **ಬಲಿಗಿ :** "ಬಲಿಗೆ, ಬಲಿಗಿ . . . ಬಲ್ಲಗ" (ಸಸ್ಯ.ಶ. ೦೦೬). [ ದೇ. ‖ ತುಳು. ಬಲಿಗೆ ]

**ಬಲಿಗೆದಱ್, ಬಲಿಗೆದಱು** (ಕ್ರಿ). ಆಹುತಿಗಾಗಿ ಬಣ್ಣದ ಅನ್ನ ಮುಂತಾದುವನ್ನು ಎರಚು: ನಿಶ್ಶಂಕೈನೂತರ್ನುಂಡುಗೆಯ್ದು ಬಲಿಗೆದರ್ದಂ (ಕಂಕಿ. ೯೯-೪೦); ಅಂತೈತಂದು ಮಣಿಮಕುಟಕಿರಣಮರುಣಕುಸುಮಮಂ ಪದಪೀಠದೊಳ್ ಬಲಿಗೆದರ್ದಂತಾಗೆ ಬಾಗಿ ಪೊಡಮೊಟ್ಟು (ರಾಜಶೇ. ೦೯-೩೪). **ಬಲಿಗೆದಱು:** ಪಸಿಯ ನೇತ್ರಮಂ ಪಚ್ಚೆವಡಿಸಿದಂತೆ ಪಸುರ್ಪುವಡೆದ ನೆಲದೊಳ್ ಪಚ್ಚೆಯ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಪಸುರ್ಪೆಸೆವ ನೆಲದೊಳು ಉಪಾಶ್ರಯಂಬಡೆದಲಂಕರಿಸುವಿಂದ್ರಗೋಪಂಗಳುಮಂ ಕಿಸುಗಾಡ ನೆಲಂಗಳೆಳದಳಿರ ಬಣ್ಣಮಂ ಕೆಯ್ಕೊಂಡು (ಕಂಶಪಾ. ೬-೨೩೪); ಒಡನೆ ಗಜುಱುವ ವಾದ್ಯದಲಿ ಕೆಂಪಡರಿದೋಗರಸಹಿತ ಭೂತಕೆ ಬಡಿಸಿದರು ಮಾಂತ್ರಿಕರು ಬಲಿಗೆದಱಿದರು ದೆಸೆದೆಸೆಗೆ (ಕುಮಾ.ವ್ಯಾ. ೯-೩). [ ಬಲಿ$_3$+ಕೆದಱ್$_1$ ]

**ಬಲಿಗೆದಱು** 'ಬಲಿಗೆದಱ್' ನೋ.

**ಬಲಿಗೆಯ್** (ಕ್ರಿ). ಆಹುತಿಯಾಗಿ ಅರ್ಪಿಸು; ಬಲಿಕೊಡು: ದುಶ್ಶಾಸನ ರಕ್ತಪಾನದೊಳೆ ಸೊರ್ಕಿದ ಪಾತಕನಂ ಪೊರಳ್ಚಿ ಕೊಂದೀ ಸಮರಾವನೀತಳ ದೊಳಿಂ ಬಲಿಗೆಯ್ವನವೊಲ್ಲನಲ್ತೆ (ಪಂಗಭಾ. ೦೩-೦೯); ಕುತ್ತು ಕುತ್ತು ಬಲಿಗೆಯ್ ಬಲಿಗೆಯ್ ಪೆಱವೆಗ್ಗ ಸೊಲ್ವ . . . ಕಳ್ವ ಕಳ್ವರೊಳ್ ನುಡಿವಟ್ಟಿವಾದನೆಂದು ನವನಾರಕರಂ ಪಱಿದೆಯ್ದಿ ನಾರಕರ್ (ಆಪು. ೧೦-೧೦). [ ಬಲಿ$_3$ + ಕೆಯ್$_1$ ]

**ಬಲಿಗೊಡು, ಬಲಿಕೊಡು, ಬಲಿಗುಡು** (ಕ್ರಿ). ೧. =ಬಲಿಗೆಯ್: ಅಂದು ಕೊಲೆಯಿಂ ಸತ್ತ ಹರಿಗೆ ಬಲಿಕಾರ್ಯಕೆ ಧನಂ ದೊರಕದಿರೆ ಫಲ್ಗುನಂ ಕಂದಮೂಲಫಲವೃಂದದಿಂ ಬಲಿಗೊಟ್ಟು ಸಗ್ಗಕಯ್ದಿದಂ (ಕದ್ಮಾ. ೦೦-೦೩೯ ; ಆ ದೈತ್ಯನನು ತನ್ನಾಯುಧಕೆ ಬಲಿಗೊಟ್ಟು ಬಳಿಕ ಸ್ವಾಯಿಧರ್ಮವ ಬಲಿದು ಕೊಟ್ಟನು ದುಂದುಮಾರನ್ನವ (ಕುಮಾ.ಶ. ೦೯-೬೯); ಅಷ್ಟದಿಕ್ಪಾಲರ್ಗೆ ಪೂಜೆಯಂ ಮಾಡಿ ಚೌಷಷ್ಟಿಯೋಗಿನಿಯರ್ಗೆ ಬಲಿಗೊಟ್ಟು (ಕೃಪಚಾ. ೩-೬೨). **ಬಲಿಕೊಡು :** ೧. ಒಂದು ದ್ವೀಪದಲ್ಲಿ ಹಿಂದೂಸ್ತ್ರೀಯರು ಗಂಗಾನದಿಗೆ ಪ್ರೀತಿಯಾಗಿ ತಮ್ಮ ಚಿಕ್ಕ ಮಕ್ಕಳನ್ನು ಬಲಿಕೊಡುತ್ತಿದ್ದರು (ಭೂಗೋಳ. ೩೩). ೨. (ಆಲಂ) ಕಷ್ಟಕ್ಕೆ ಸಿಕ್ಕಿಸಂ ; ತೊಂದರೆಗೊಳಗುಮಾಡು : ಸಾಲ ಏರಿದ ಹೊತ್ತಿನಲ್ಲಿ ಆಶ್ರಯವಿತ್ತು ಸಾಕಿದ ಆನಂದನನ್ನೇ ಬಲಿಕೊಡಲೂ ಅವರು ಹೇಸಲಿಲ್ಲ (ಕುಠೀ. ೦೬೩) ; ಇದಕ್ಕಾಗಿ ಪ್ರಸಂಗ ಬಂದರೆ ಕರ್ತವ್ಯ ದಕ್ಷರಾದ ನಿಮ್ಮನ್ನು ಬಲಿಕೊಡಬೇಕಾಗುವದು (ಕುಂಕುಮ. ೯೯). **ಬಲಿಗುಡು :** ೧. ಇಱುವ ಬಲಿಗುಡುವ ಪೈರಂದಱಿವುದಂ ಸೀಳ್ವ ಪೋಟ್ಯ ಪರಪುವ ಗೊಟ್ಟಂಗೊಱಿವಗುಟ್ಟು ನಟ್ಟು ಪರೆಪುವ ಪೆಱುವುವ ಗುರ್ವಪ್ಪ ಚಿತ್ರವಿಧವಧೆಯಿಂದಂ . . . ಪುಟ್ಟುಗುಂ ವಿಭಂಗಜ್ಞಾನಂ (ಶಾಂತಿಪು. ೬-೪೦). [ಬಲಿ$_3$+ಕೊಡು$_1$]

**ಬಲಿಗೊರಡು** (ನಾ). ಬಲಿಯನ್ನು ಕೊಡಲು ಉಪಯೋಗಿಸುವ ಕೊರಡು,—ಮರದ ದಿಮ್ಮಿ : ತೋಂಡಾಂಗುಟ್ಟಿ . . . ಕೆಂಗಲ್ಬಣ್ಣದ ಬಲಿಗೊರಡನ್ನೆಳೆದುಯ್ದು ನರಶರಭನ ದೃಷ್ಟಿಗಸ್ಪಯಿಸಿ ಎತ್ತಿ ನಿಲ್ಲಿಸಿ (ಮಂಕುತಿ. ೦೦೯-೦೩). [ಬಲಿ$_3$ + ಕೊರಡು$_1$ (<ಕೊಱಡು)]

**ಬಲಿಗೊಲಿಸು** (ಕ್ರಿ). ಬಲಿಯಾಗಿ ಕೊಲ್ಲಿಸು ; ಆಹುತಿ ಕೊಡು : ಸಾಯಿಸು : ಈ ತನ್ನಯ ಮೂರ್ಖತೆಯ ದುರ್ದಾಯದಿಂದ ಆವಿರ್ಭವಿಸಿ ವಿಜೃಂಭಿಸುತ್ತಿರುವ ವಿಷವೃಕ್ಷಯ ಉಣ್ಣಿಕರನ್ನಾಗಿ ಬಡಿಸುವುದಕ್ಕೆಂದು ಲೆಕ್ಕವಿಲ್ಲದ ಮಹಾಸೈನ್ಯಗಳನ್ನೆತ್ತಿಯೆತ್ತಿ ಬಲಿಗೊಲಿಸುತ್ತ. . . ಕೋಲ್ದರುತ್ತಿರುವನು (ಮಂಕ್ರಿಕ. ೬೯-೩). [ಬಲಿ$_3$ + ಕೊಲಿಸು]

**ಬಲಿಗೊಳ್, ಬಲಿಗೊಳ್ಳು** (ಕ್ರಿ). ೧. ಆಹುತಿಯಾಗಿ ತೆಗೆದು ಕೊಳ್ಳು; ನಾಶಮಾಡು : ಎಲೆ ಎಲೆ ಪಂದಿಪಂದಿ ವಿಗೆ ಬಂದುದು ಬಂದುದು ಭಿಲ್ಲರೆಲ್ಲರಂ ಬಲಿಗೊಳಲೆಂದು ವ್ಯತ್ತು ಕಿಟಿ ರೂಪಮನಾಳ್ದವೊಲ್ (ಕಂಶಂ. ೯-೬). ೨. ಕಾಣಿಕೆಯಾಗಿ ತೆಗೆದು ಕೊಳ್ಳು ; ದಾನವಾಗಿ ಪಡೆ : ಆಱಡಿಗೊಂಡು ಮೂಱಡಿಯನಾ ಬಲಿಯಿಂ ಬಲಿಗೊಂಡು ಭೂಮಿಯೆ ಮೂಱಡಿಯಾಂತು ವಿಱಿ ಬಳೆದಿತ್ತ ನನಿಕ್ಕಿ ರಸಾತಳಕ್ಕೆ ನಿಂದಾಱಡಿವಣ್ಣದಾಗಸಕೆ ಕಾಲಿಡೆ (ರಾಜಶೇ. ೩-೦೦೦). **ಬಲಿಗೊಳ್ಳು :** ೧. ಅರಸನಲ್ಲಿ ತನ್ನ ಹೆಂಡತಿಯನ್ನು ಬಲಿಗೊಳ್ಳುವನೋ ಎಂದು ಅವನು ಹೆದರಿ ಹಿಪ್ಪೆಕಾಯಿ ಆಗಿಹೋಗಿದ್ದನು (ಕಂಜಾವ್ಯ. ೯೯). [ಬಲಿ$_3$ + ಕೊಳ್$_1$]

**ಬಲಿಗೊಳ್ಳು** 'ಬಲಿಗೊಳ್' ನೋ.

**ಬಲಿದಾನ** (ನಾ). ೧. ಬಲಿಯಾಗಿ ಅರ್ಪಿಸುವಿಕೆ; ಆಹುತಿ : ತ್ಯಾಗ, ಬಲಿದಾನಗಳಿಂದ ಕೂಡಿದ ಧರ್ಮವೇ ನಿಜವಾದ ಧರ್ಮ (ರರ್ಮಸಾ. ೬); ಮೇ ತಿಂಗಳಲ್ಲಿ ಮತ್ತೊಂದು ತಿಕ್ಕಾಟ ನಡೆದು ನಾಲ್ಕು ಮಂದಿಯ ಬಲಿ ದಾನವಾಯಿತು (ಆಕ್ತ್ಮಾರ್ಥ. ೦೯೩). [ಸಂ.]

**ಬಲಿಧ್ವಂಸಿ** (ನಾ). ಬಲಿಚಕ್ರವರ್ತಿಯನ್ನು ನಾಶಮಾಡಿದವನು ; ತ್ರಿವಿಕ್ರಮ ; ವಿಷ್ಣು : "ವಿಷ್ಣುಃ, ನಾರಾಯಣಃ, ಕೃಷ್ಣಃ . . . ವನಮಾಲೀ, ಬಲಿಧ್ವಂಸೀ . . . ಶ್ರೀವತ್ಸಲಾಂಛನಃ ೩೯ ವಿಷ್ಣುದೇವರ ಹೆಸರುಗಳು" (ಸಿದ್ಧಾಂತಿ. ೦೬). [ಸಂ. ಬಲಿಧ್ವಂಸಿನ್]

**ಬಲಿನಿಕೇತನ** (ನಾ). ಬಲಿಚಕ್ರವರ್ತಿಯ ವಾಸಸ್ಥಾನ ; ಪಾತಾಳ: "ಪಾತಾಳಮೆನಲು ವಡಬಾಮುಖಮೆನಲು ಬಲಿನಿಕೇತನಮೆನಲು . . . ಅಧೋಭುವನಮೆಂದೆನಲು ಪಾತಾಳಲೋಕಕ್ಕೆ ನಾಮಂ" (ಶಂಗರಾ. ೦೨೬-೦). [ಸಂ.]

**ಬಲಿಪ** 'ಬಲಿಪ್ಪ' ನೋ.

**ಬಲಿಪಶು** (ನಾ). ಆಹುತಿಯಾಗಿ ಅರ್ಪಿಸಲ್ಪಡುವ ಪ್ರಾಣಿ : ಹೆಸಾಯ್ಡನ ನಿರೂಪಣೆಯಲ್ಲಿ ಬರುವ ಯಜ್ಞದಲ್ಲಿ ಬಲಿಪಶುವಿನ ಪಾಲು ಹಂಚಿಕೆಯ ಕ್ಷುದ್ರವಿರಸಸಂದರ್ಭವನ್ನು . . . ಈಟ್ಕಿಲಸ್ ಕೈಬಿಟ್ಟ ದ್ದಾನೆ (ಐವೃಕ್ಕ. VI. ೩೦೩೪). [ಸಂ.]

**ಬಲಿಪಾಡ್ಯ** (ನಾ). ಕಾರ್ತಿಕಮಾಸದ ಮೊದಲನೆಯ ದಿನ ; ಕಾರ್ತಿಕ ಶುದ್ಧ ಪ್ರತಿಪದೆ ಮತ್ತು ಅಂದು ಆಚರಿಸುವ ಹಬ್ಬ; ಈ ದಿವಸ ವಿಷ್ಣುವು ವಾಮನಾವತಾರದಿಂದ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಮೆಟ್ಟಿದನೆಂಬ ಪೌರಾಣಿಕಕಥೆ ಸುಪ್ರಸಿದ್ಧ ವಾಗಿದೆ : ಬಲಿಪಾಡ್ಯದಾ ದಿನವು ಬಂದಿಹುದು ನೋಡಿ. ಒಲಿದಿತ್ತು ನಿಮ್ಮ — ಬಾಲಕರ ಕಾಪಾಡಿ. (ಕುಪ್ಪ. ೦೬-೩); ದಕ್ಷಿಣಭಾರತ ದವರು . . . ಅಮಾವಾಸ್ಯೆ, ಬಲಿಪಾಡ್ಯಗಳ ದಿವಸ ತಾತ್ಕಾಲಿಕವಾಗಿ, ಆದರೂ ಬಿಡಗಿನಿಂದ ಅಂಗಡಿಪೂಜೆ ಮಾಡುವುದುಂಟು (ಛಾಹಕ್ಕ. ೦೯೬). [ಬಲಿ$_3$ + ಪಾಡ್ಯ (< ಪಾಡಿವ)]

**ಬಲಿಪಾಡ್ಯಮಿ** (ನಾ). = ಬಲಿಪಾಡ್ಯ : ಕಾರ್ತಿಕಶುದ್ಧಪ್ರತಿಪದೆಯನ್ನು 'ಬಲಿಪಾಡ್ಯಮಿ' ಎಂದು ಕರೆದು, ಹಬ್ಬವನ್ನು ಆಚರಿಸುತ್ತೇವೆ (ಕೂ). [ಬಲಿ$_3$ + ಪಾಡ್ಯಮಿ]

**ಬಲಿಪೀಠ** (ನಾ). (ದೇವಾಲಯಗಳ ಬಳಿಯಿರುವ, ಸಾಮಾನ್ಯ

ವಾಗಿ ಕಲ್ಲಿನಿಂದ ನಿರ್ಮಿಸಿದ ; ಬಲಿಯನ್ನು ಅರ್ಪಿಸುವ ಜಗಲಿ ; ಆಹುತಿಯಾಗಿ ಕೊಡುವ ದ್ರವ್ಯಗಳನ್ನು ಇಡುವ ಸ್ಥಾನ : ಬಲಿಪೀಠದಶನವಂ ಕೊಳೆ ನೆಲನಂ ಸೋಂಕುತ್ತ ಬರಲು ಪದ್ದಿನ ಪಕ್ಕದಿ ನೆಲಸಿರ್ದ ಗಾಳಿಯಿಂದಂ ಚಲಿಸಿತು ರಜವದುವೆ ಪಕ್ಷಿಗಧಿಪತಿಯಾದುದು (ಪಕ್ಷಿಕಾ. ೬-೬೬); ದೇವತೆಯ ಬಲಿಪೀಠಗಳನ್ನು ಗುಡಿಸುವವರಿಲ್ಲದೆ ಒಪ್ಪಿಸಿದ ಹಿಂದಿನ ಬಲಿಗಳು ಕೊಳೆತು ನಾರುತ್ತಿದ್ದುವು (ಕಳ್ಳಕಾ. ೦೮). [ಸಂ.]

**ಬಲಿಪುಷ್ಪ** (ನಾ). ಬಲಿಯಾಗಿ ಅರ್ಪಿಸಿದ ಆಹಾರಪದಾರ್ಥಗಳಿಂದ ಪುಷ್ಟವಾದುದು ; ಕಾಗೆ: "ಅರಿಷ್ಟಃ, ಕರಟಃ, ಕಾಕಃ, ಬಲಿಪುಷ್ಟಃ, . . . ವಾಯಸಃ — ಈ ೧೦ ಕಾಗೆ" (ಕರಾಯು. ೧೦-೯೨). [ಸಂ.]

**ಬಲಿಪೂಜೆ** (ನಾ). ೧. ಆಹುತಿಯನ್ನು ಅರ್ಪಿಸಿ ಮಾಡುವ ಪೂಜೆ : ಬಲಿಪೂಜೆ ಆಗುವಾಗ ಅವರ ಕೈ ಏಕೋ ನಡುಗುತ್ತಿತ್ತು (ಚಿಕಚಿಂ. ೨೮). ೨. ಕಾರ್ತೀಕಶುದ್ಧ ಪ್ರತಿಪದೆಯಂದು ಆಚರಿಸುವ ಬಲಿಚಕ್ರವರ್ತಿಯ ಹಬ್ಬ : ಬಲಿಪೂಜೆಯಂದು ವಿಜೃಂಭಣೆಯಿಂದ ಲಕ್ಷ್ಮಿಯನ್ನು ಪೂಜಿಸುತ್ತಾರೆ (ಲೂಪ). [ಸಂ. ಬಲಿಪೂಜಾ]

**ಬಲಿಪ್ಪ**, ಬಲಿಪ (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಹುಲಿ : 'ಅಡ್ಡಬಲಿಪ್ಪ' ಪರಾ. ಬಲಿಪ : ಅದು ಬಹುಶಃ ಬಲಿಪ ಇರಬೇಕು. ನಿಮ್ಮ ಈ ಚಿಲ್ಲರೆ ಆಯುಧಗಳಿಂದ ಅದರ ಪ್ರಾಣ ತೆಗೆಯಲಿಕ್ಕೆ ಹೋದರೆ ನಾಳೆ ಊರಿಗೆ ಊರನ್ನೇ ಅದು ತಿಂದು ಪಥ್ಯ ಮಾಡೀತು (ಕರಾಶ. ೫೨). [←ತುಳು. ಬಲಿಪ್ಪೆ, ಬಲಿಪೆ]

**ಬಲಿಪ್ರತಿಪದೆ** (ನಾ). =ಬಲಿಪಾಡ್ಯ : ಕಾರ್ತೀಕಶುದ್ಧ ೧ನೆಯ ತಿಥಿ ಬಲಿಪ್ರತಿಪದೆ (ಕಾಹಠ್ಯ. ೦೯೬) ; ದೀಪಾವಳಿಯಲ್ಲಿ ಬಲಿಪ್ರತಿಪದೆಯಂದೆ (ಕಾಕಾಕಾ. ೭೬). [ಸಂ. ಬಲಿಪ್ರತಿಪದಾ]

**ಬಲಿಬಂಧಕ** (ನಾ). =ಬಲಿಧ್ವಂಸಿ : ವಿಕಳಬಲನವನೇನು ಬಾಳಾಂಬಕನೊ ಬಲಿಬಂಧಕನೋ ಸುರಪಾಲಕನೋ ಫಡಫಡ (ಕುಪ್ಪಾ.ಕ. ೦೨-೫). [ಸಂ.]

**ಬಲಿಬಂಧನ** (ನಾ). = ಬಲಿಧ್ವಂಸಿ : ದುರ್ಯೋಧನನವಮಾಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ (ಹಂಕಠ. ೯-೦೦ ಪ); ನಾರಾಯಣ ತೇ ನಮೋ ನಮೋ . . . ಬಲಿಬಂಧನ ಗೋವರ್ಧನೋದ್ಧಾರ ನಳಿನೋದರ ತೇ ನಮೋ ನಮೋ (ಪುರಂದ. ೩-೧೦೨). [ಸಂ.]

**ಬಲಿಬಂಧಾಕ್ಷಿ** (ನಾ). ಒಂದು ಬಗೆಯ ಸಸ್ಯ ; ಹಾವುಮೆಕ್ಕೆ : "ವಾರುಳಿ ಬಲಿಬಂಧಾಕ್ಷಿ [ಪಾಠಾಂ. ಬಲಿಬದ್ಧಾಕ್ಷಿ, ಬಲಿಬಿರ್ಧಾಕ್ಷಿ] ಹಾವುಮೆಕ್ಕೆ ಹಿಡಿಹಿಡಿಕೆ ತ್ರಿಪತ್ರಿಣಿಯೆಂದೆನಿಕ್ಕುಂ" (ಹುಂಗಣ. ೯೯-೯೯). [ ? ]

**ಬಲಿಭುಕ್ಕು**, ಬಳಿಭುಕ್ಕು (ನಾ). = ಬಲಿಪುಷ್ಟ : "ಕಾಕಂ ಚಿರಾಯು ಬಲಿಭುಗ್ವಾಯಸಂ . . . ಕರಟಮೆನೆ ಕಾಗೆ" (ಹಂಗಣ. ೫೦-೪); ಬಲಿಬುಗ್ವ್ರಜಕ್ಕೆ ಬಲಿಯಂ ತಾನಿಕ್ಕುವಳ್ (ಕಾದಂಬ. ೬೬೬); ಆ ಮಹಾಕಾಳಿಯನಿಪ್ಪ ದೇವಿ ಬಲಿಭುಕ್ಕುಗರೂಪಿನೊಳೆಯ್ದುವಂದು ತದ್ವಾಲನ ಕಣ್ಣಾಳಂ ನಿಶ್ಚಿತಚಂಚುವಿನಿಂದಿಜಿಯಲ್ಕೆ ಸಾರ್ವದಿಂ (ಹುಕಾಕಲ. ೬-೦೨). ಬಳಿಭುಕ್ಕು: "ಅರಿಷ್ಟಃ, ಕರಟಃ . . . , ಬಳಿಭುಕ್, ಧ್ವಾಂಕ್ಷಃ, ಚಿರಜೀವೀ, ವಾಯುಸಃ — ಈ ೧೦ ಕಾಗೆ" (ಕರಾಯು. ೧೦-೯೨) ; ಬಳಿಭುಗ್ಗೃಧ್ರ ಕದಂಬಮಂಬರದೊಳುಗ್ರಶ್ಯಾಮದಶ್ರೇಣಿ ಭೂತಳದೊಳ್ ನರ್ತಿಸೆ . . . ಪಿಂಗಳಕಂ ಗವಾಧಿಪತಿಯುಂ ಕೊಂದು ಭುಜಾದಂಡದಿಂ (ಹಂಕಕಂ. ೦೬೬-೦೬). [ಸಂ. ಬಲಿಭುಜ್]

**ಬಲಿಭೋಜನ** (ನಾ). = ಬಲಿಪುಷ್ಟ : ತೀವಿದ ತಾರಗೆದುತ್ತುಗಳ್ಗೆ ಮೇಲುಂರವಣಿಸುತ್ತೆ ಬರ್ಪ ಬಲಿಭೋಜನಜಾಲವೊ ಮರ್ಬಿನೇಳ್ಗೆಯೋ (ಹಾಕಕ. ೦೦-೨೧). [ಸಂ.]

**ಬಲಿಭೋಜಿ** (ನಾ). =ಬಲಿಪುಷ್ಟ : ಪೋದರಂದನಿಬರುಮೊಂದೆ ಬಿಲ್ಲಗಿದು ತತ್ಪಚರರ್ ಬಲಿಭೋಜಿರಾಜಿವೋಲ್ (ಪಂಪಭಾ. ೦೦-೮೭). [ಸಂ. ಬಲಿಭೋಜಿನ್]

**ಬಲಿಮಥನ** (ನಾ). = ಬಲಿಧ್ವಂಸಿ : ಬಲಿಮಥನ ಫಲುಗುಣರು ಸಹಿತಗ್ಗಳಿಯನೇಕಾಂತದಲಿ . . . ಸೀಳಿದು ಬಿಸುಟನಾ ಭೀಮ (ಕುಪ್ಪಾ.ಸ. ೨ ಸೂಚನೆ). [ಸಂ.]

**ಬಲಿಮಿಂಡ** (ನಾ). ಬಲಿಷ್ಠನಾದ ವೀರ ; ಅತಿಪರಾಕ್ರಮಿ : ಸ್ವಸ್ತಿ ಶ್ರೀನೊಳಂಬಾದಿಯರಸ ಪೃಥುವೀರಾಜ್ಯಂಗೆಯೆ ಪುತ್ರೂರ ತೊಜು ಕೊಳುಳ್ ಪೆತ್ತೋಂ ಬಲಿಮಿಣ್ಡನಾ ಶೆಟ್ಟಿಯರ ಮಗನರವಟ್ಟಂಗಟ್ಟಿ (ಎಕ. X. ಕೋಲಾರ ೨೩೩-೯ : ಸು. 815). [ಬಲ್₁+ಮಿಂಡ]

**ಬಲಿಮುಖ**, ಬಳಿಮುಖ (ನಾ). ಮುಖದ ಮೇಲೆ ನೆರಿಗೆಗಳುಳ್ಳ ಪ್ರಾಣಿ ; ಕಪಿ ; ಕೋತಿ : "ಪ್ಲವಗಂ ಕಪಿ ಮರ್ಕಟಕಂ ಪ್ಲವಂಗಮಂ ಬಲಿಮುಖಾಹ್ವಯಂ ವಾನರಂ" (ಕಪ್ಪ.ಕೋ. ೯೦-೬) ; ಸಕಲಕಪಿಸವಿತವೆರಸಹಿತಕುಲಾಚಲಚಕ್ರ ಜಾರದಂಭೋಳಿ ಜಗತ್ಪ್ರಕಟೋದ್ಯನ್ನಹಿಮನೆನಿಸುವ ಕಕುದ್ಬಲಿಯನಿಪ ಪೆಸರ ಬಲಿಮುಖನಿರ್ವಂ (ಹಂಕಕಂ. ೨೬೬-೬) ; ಬಹುಕಾನನಂಗಳಲಿ ಬಲಿಮುಖರ ರೂಪುಗಳನವರುಚಿ ತಳೆದರ್ಾಳ್ದನ ನೇಮದಲಿ (ಕೂಕರಾ. ೦-೯-೭೦). ಬಳಿಮುಖ : ಬಳಿಮುಖಧರ್ಮಜಹಿರ್ಮುಖ ಚಳಪಾತಿ ನೀಂ ರಾದ್ರಭಾವಮಂ ತಳೆದಿಂತೇಕೊಳಪುಗುವ ಘೋರ ದುರ್ಗತಿಗಳೊಳ್ (ಪಂಪಭಾ. ೩-೭೫). [ಸಂ.]

**ಬಲಿಮುಖಕೇತನ** (ನಾ). ೧. ಕಪಿಧ್ವಜ. ೨. ಕಪಿಗಳಲ್ಲಿ ಶ್ರೇಷ್ಠನಾದವನು ; ಸುಗ್ರೀವ : ಬ[ಪಾಠಾಂ. ವ]ಲಿಮುಖಕೇತನನಂ ಚಕಿತಲೋಚನಂ ರತ್ನಜಟಿ ನಿಜಪ್ರಾಣಭಯಾಕುಲಚಿತ್ತಂ ಪಾಲಸ್ತ್ಯಂ ಕೊಲಲಟ್ಟಿದ ತೀಕ್ಷ್ಣಪುರುಷನೆಂದೀಕ್ಷಿಸಿದಂ (ಕಂಠಾಹಂ. ೦೦-೫೦). ೩. ಕಪಿಧ್ವಜವುಳ್ಳವನು ; ಅರ್ಜುನ. [ಸಂ.]

**ಬಲಿಮುದ್ರೆ** (ನಾ). ಬಲಿ ಕೊಡುವ ಪ್ರಾಣಿಯ ಮೈಮೇಲೆ ಹಾಕುವ ಮುದ್ರೆ.—ಗುರುತು : ಬಲಿಮುದ್ರೆ ಕೊಟ್ಟರೂ ಸುಲಿಗೆ ತಪ್ಪಲಿಲ್ಲ (ಗಾದೆ). [ಸಂ. ಬಲಿಮುದ್ರಾ]

**ಬಲಿಮೂರ್ತಿ** (ನಾ). (ಕರಾ) ಉತ್ಸವಮೂರ್ತಿ; ಉತ್ಸವದೇವರು. [ಸಂ.]

**ಬಲಿಯ** (ನಾ). ಬಲಿಷ್ಠನಾದವನು ; ಶಕ್ತಿಶಾಲಿಯಾದವನು.

**ಬಲಿಯರ ಭೀಮ**=ಬಲಿಷ್ಠರಿಗೆ ಭಯಂಕರನಾದವನು ; ಅತಿಪರಾಕ್ರಮಿ ; ಒಂದು ಬಿರುದು : ಶ್ರೀಮನುಮಹಾಮಣ್ಡಳೇಶ್ವರ ತ್ರಿಪುರಾಧೀಶ್ವರ . . . ವೈರಿಗಜಕೇಸರಿ ಬಲಿಯರ ಭೀಮ ಸಂಗ್ರಾಮರಾಮ ಮಲೆಪರ ನಂದನವನಂ (ಎಕ. I. ೬೨-೦೦; 1096). ☞ ಇಲ್ಲಿ 'ಬಲಿಯರ' ಎಂಬುದಕ್ಕಿಂತ 'ಬಲಿವರ' (=ಎದುರುಬೀಳುವವರ) ಎಂಬುದು ಸೂಕ್ತವಾದುದೇ ? [ಬಲ್₁ (<ಬಲ್₁)+—ಅ₃]

**ಬಲಿಯಿಕ್ಕು** (ಕ್ರಿ). =ಬಲಿಗೆಯ್ : ದಳಪತಿಯಾ ಕಾರ್ಯದಿರವ ನಿನ್ನಯ ಪಾದನಳಿನಕ್ಕೆ ಬಿನ್ನೈಸೆಂದು ಬಳಿಕೆನ್ನ ಕಳುಪಿದ ಚಿತ್ತೈಸಿ ರಿಪುಪಾಯದಳವ ಭೂತಕೆ ಬಲಿಯಿಕ್ಕು (ಕಂಸಠ. ೦೦-೦೨೨). [ಬಲ್₂+ಇಕ್ಕು]

**ಬಲಿಯಿಸು**, ಬಲಿಸಂ (ಕ್ರಿ). ೧. ಬಲಪಡಿಸಂ ; ಬಿಗಿಗೊಳಿಸಂ ; ಭದ್ರಪಡಿಸಂ : ಕುಮ್ಮಟವನು ಬಲಿಯಿಸು ಹೊಸಮಾಲೆಗದು ನಮ್ಮಗೆ ನೇಮಿಯ ಗೆಲ್ದ ಹಮ್ಮು ಬಿಡಿನ್ನು ತುರುಕರು ಬಂದರೆ ನಿನಗುಮ್ಮಳವನು ಪರಿಹರಿಸುಹರೆ (ಕುಂಠಾಕಾಂ. ೪೦-೪೦). ೨. ಸ್ಥಿರಪಡಿಸಂ ; ಸ್ಥಾಪಿಸಂ ; ನೆಲೆಗೊಳಿಸಂ : ಮಲೆತಿದಿರಾಂತು ನಿಲ್ವ ಚಿಕದೇವನ ಚಿಲ್ಲಿಕೆಗೊಂಡ ತಾಣಕಂ ಕಲಿದಳೆದೊಳ್ಮೊಗಂ ಕದುಬದ್ಬೃಜಿಂಳೊಚ್ಚತಮಿರ್ಪ ದಿಟ್ಟ

ಪೊಂಬಲಗೆಯ ಸಾರ್ಚಿದೆಂತೆಪೊಲಿರ್ದಿರ್ಪದ ಪೇರೆರ್ದೆಯಂ ನಿರೂಪಕರ್ ಬಲಿಯಿಸಿ ಚಿತ್ರದೊಳ್ ನೆನೆವರಾ ವಧುರಾವುರಮಲ್ಲಲೀಲೆಯಂ (ಆಕು. ೪೯-೦೩೬). ೩. ದ್ರವಪದಾರ್ಥವನ್ನು ಚೆನ್ನಾಗಿ ಕಾಯಿಸಿ ಗಟ್ಟಿಯಾಗುವಂತೆ ಮಾಡು; ಅಟ್ಟಿಸು : ಹಿರಿದಾಗಿ ಬಲಿದ ಬಾಳೆಯ ಕಾಯ ಸುಟ್ಟುದಱ ತಿರುಳುಮಂ ತೆಗೆದು ಚಿಕ್ಕದಕೆಯಿಂದದೊಳು ಕತ್ತರಿಸಿ ಬಲಿಯಿಸಿದ ಹಾಲು ಮತ್ತದಱ ತೆಱದಿ ಕುಯ್ದು ಬಾಳೆಯ ಕಾಯನು ಬೆರಸಿ (ಸೂಪಶಾ. ೪-೬೪); ನೀರ ಬಲಿಯಿಸ ಬಲ್ಲ, ಹಿಮರುಚಿಯ ಉರಿಸ ಬಲ್ಲ, ಉರಿಯ ಕೋಡಿಸ ಬಲ್ಲ ಸಾಮರ್ಥ್ಯವುಳ್ಳ ಕುಂಟಣಿತನದ ವಿದ್ಯಾಪರಿಣತೆ ಸಂಗಾಯಿ (ಶಂಖಾಂಕ. ೯೭). ೪. ವೃದ್ಧಿಗೊಳಿಸು; ಬೆಳೆಸು; ಹೆಚ್ಚಿಸು: ರಸದಿಂದ ಪುಟ್ಟಿಸಿ ಭಾವದಿಂ ಬಲಿಯಿಸಿ ಪೊಸಬಗೆವೆತ್ತಲಂಕೃತಿಯ ಎಸಕದಿಂ ಬಳೆಯಿಸಿ ಕೃತಿಯೆನಿಸುವನಿದ ರಸಿಕರು ಮೆಚ್ಚುವಂದದಲಿ (ಕುಮಾರಾ. ೦-೪೦); ಸಂಸಾರಕ್ಕೆ ಸಂತಾನವೇ ಸೂರ್ಯ, ಅವರಿಂದಲೇ ಎಲ್ಲ ಆನಂದಕ್ಕೂ ಜೀವ ಎಂಬುದು ಅರಿವಾಗಿ, ಆ ಅರಿವು, ಅಕೆಯ ಕೊರಗನ್ನು ಮತ್ತಷ್ಟು ಬಲಿಯಿಸಿತು (ಕಠಂಬಾ. ೦೩). ೫. ಹಾಳಾದುದನ್ನು ಸರಿಮಾಡಿಸು,— ದುರಸ್ತುಗೊಳಿಸು : ಆ ಜೀರ್ಣವಾದ ಮಠವಸನನು ಬಲಿಯಿಸೆಂದು ಹೇಳಿದಲ್ಲಿ ಅವರ ಬೆಸದಿಂದ ಅಧಿಕಾರಿ ರಂಗಂಣನವರು ಆ ಸಿಖರದ ಮಠ ಮಸನಂ ಜೀರ್ಣವಾಯಿತೆಲ್ಲವನೂ ಬಲಿಯಿಸಿ ಬಿದ್ದ ಇಟ್ಟಿಗೆ ಎಲ್ಲವನೂ ಹೊಡಿಸಿದರು (ಎಕ.ಿ. ೪, ಬೇಲೂರು. ೨೪ ೩; 1298). **ಬಲಿಸು** : ೧. ಒಳಗೆ ನೀ ಕಾದುವೊಡೆ ದುರ್ಗವ ಬಲಿಸು ಬವರಕೆ ಹಿಂದುಗಳೆಯದೆ ನಿಲುವ ಘನ ನಿನಗಿ॰ಗಲಂಟೇ (ಕುಮ್ಯಾ.ಭಿ. ೩-೦೨); ಬಲಿಸು [ಪಾಠಾಂ. ಬಲಿಯಿಸು] ದುರ್ಗವ ಬೇಗ ಬರಿಸು ಸಂವರಣೆಯ ಸಲಿಸು ಸುಖರ ಸಲುಗೆಯನು (ಕುಮಾರಾ. ೩೦-೩೩). ೨. ದಡಿಯು ಬಲಿಸುವ ಗಾಳವ ಚಿಂಚಿಯು ಗಡಣಿಸುವ ಬಲುಗಿ॰ಲ ಗಾಲಿಯ ತೊಡಿಸುವುತ್ಸಹವಾಯ್ತುವರ ಪಾಂಡವರ ಬೀಡಿನಲಿ (ಕುಮ್ಯಾ.ಉ. ೦೦-೦೨). ೪. ಗಂಟು ಕಟ್ಟಲಿಕ್ಕೆ ಕಲಿಸೋದು ರೊಕ್ಕ ತುಂಟತನಗಳ ಬಲಿಸೋದು ರೊಕ್ಕ (ಶರಿಂದ. ೨-೪೮-೨); ಕಾಟ ಗಂಟಿಕ್ಕಿ ಸಂಧಿಗಳನೆಸಗುವ ಮುಳಿಯ ಮೇಟಿಗೊರ್ವನನಟಿಸಿ ಸೊಗಸು ಬಲಿಸುವ ಚಾರುಬೇಟೆಯರ್ಚಲಿಸುವರನಂಗಶಬರನ ಬೇಂಟೆದೋಹಿನ ಮೃಗಂಗಳಂತೆ (ಕೃಪಂಚಾ. ೬-೩೭); ವೈರವ ಬಲಿಸದ ಬಱದೆ ಪಳಿಯದ ಕೊಲೆ ಬೈಗಳಿಂದ ಕೋಟಲೆಗೊಳಿಸದ ಸತ್ಕುಲಕೀವುದು ಕುವರಿಯನು (ಹರಿಶ. ೩-೦೩).

[ಬಲ್$_1$ (<ಬಲ್$^2_1$)+—ಇಸು$_1$]

**ಬಲಿರಿಪು**, **ಬಳಿರಿಪು** (ನಾ). ಬಲಿಚಕ್ರವರ್ತಿಯ ವೈರಿ; ಕೃಷ್ಣ : ಬಲಿರಿಪು ಬಾಣಾವಳಿಯಂ ಬಲವೈರಿಯು ಬಲದ ಮೇಲೆ ಕಱದಂ (ಜಗಂ. ೦೩-೬೬). **ಬಳಿರಿಪು** : ಬಳಿರಿಪುವಿನ್ನೀಕೆಯ ಮದಕಳಸಂಗದ ಸುಖ ಮನವಳ ಮುಖಸಂಗದೊಳೀ ತಳೆಗುಮ ಎಕ್ಕಿಣಿಯುಂಗುಟದೊಳುಳ್ಳ ಸೊಬಗುಂಟೆ ಸತ್ಯಭಾಮೆಯ ನೊಸಲೊಳ್ (ಜಗಂ. ೦೨-೬೨). [ಸಂ.]

**ಬಲಿಪಡೆ** (ಕ್ರಿ). (ಅಲಂ) ಶಿಕ್ಷೆಗೊಳಗಾಗು; ಹೊಡೆತ ತಿನ್ನು : ವನಜವದನೆಯ ಬಯಸಿದೊಡೆ ಬಿಲ್ಲಿನಲಿ ಬಲಿಪಡೆದುದನು ಕೌರವಜನಪ ಮಱದಿರಲಾಗದು (ಕುಮ್ಯಾ.ಉ. ೩-೯). [ಬಲ್$_3$ + ಪಡೆ$_1$]

**ಬಲಿಪದನೆ** 'ಬರಿಪದನೆ' ನೋ.

**ಬಲಿಪಿಡಿ** (ಕ್ರಿ). ದೃಢಗೊಳಿಸು; ಹಿಡಿತಕ್ಕೆ ತಂದುಕೊಳ್ಳು : ಇಂತು ನುಡಿದ ರಾಣಿಯು ನುಡಿಗೇಳಿಯೋರಂತೆ ಚಿತ್ತವ ಬಲಿಪಿಡಿದು ಸಂತಸ ಮಿಗೆ ಸಭೆಯೊಳು ರಾಯಗೆ ಮಾಱುಾಂತು ಬಿನ್ನವಿಸಿದೆನಿಂತು (ಹರಿಶ. ೦-೩೦).

[ಬಲ್$_3$ + ಪಿಡಿ$_1$]

**ಬಲಿಷ್ಠ** (ಗು). ೧. ಅತ್ಯಂತ ಶಕ್ತಿಶಾಲಿಯಾದ: ಅವನ ಬಲಿಷ್ಠ ಬಾಹುಗಳು ಯಾವ ಕಾರ್ಯಕ್ಕೂ ಜಗ್ಗುವುದಿಲ್ಲ (ಕೂಶ). (ನಾ). ೨. ತುಂಬ ಬಲವಾದುದು : ಘೋರಕಾಂತಾರಕ್ಕೆ ಹೋಗಿ ಕುಠಾರದಿಂ ಕಟ್ಟಿಗೆಗಳಂ ಕೈಯಾರೆ ಕಡಿಕಡಿದೊಟ್ಟಿ ಕಟ್ಟಿ ಬಲಿಷ್ಠವಾಗಿರ್ದ ಘೋರ ಹೊಱೆಯಂ ಹೊತ್ತುಕೊಂಡು (ರಸಕ್ತಿ. ೩೦-೪). ೩. ಬಲಶಾಲಿ; ಶಕ್ತಿವಂತ : ಆ ಸಮಯದೊಳಿಂಬಲಸಂತ್ರಾಪ ಬಲಿಷ್ಠಂ ತ್ರಿಪೃಷ್ಠನಶ್ವಗ್ರೀವೋದ್ವಾಸಿ ಪ್ರದೀಪವಮಂ ಕಿಡೆ ಬೀಸುವವೋಲನುವರಕ್ಕೆ ಕೆಯ್ವಾಸುವುದುಂ (ಶಾಂತಿ. ೩-೩೨); ಈ ಶೀಚಕನು ಏಕೀ॰ಷ ಬಲಿಷ್ಠನಾಗಿಯೂ ಪರಾಕ್ರಮಶಾಲಿಯಾಗಿಯೂ ಇದ್ದ ಕಾರಣ ಈ ರಾಜ್ಯದ ಮೇಲೆ ಬರುವುದಕ್ಕೆ ಪರರಾಜರು ಹೆದರುತ್ತಿದ್ದರು (ಪಾ.ಶಿ೦. IX, ೩). [ಸಂ.]

**ಬಲಿಷ್ಠಗೊಳಿಸು** (ಕ್ರಿ). ಪ್ರಬಲಗೊಳಿಸು; ಶಕ್ತಿಯುತವಾಗುವಂತೆ ಮಾಡು : ಅನುಭವ ಅವರ ಸ್ವಭಾವಧರ್ಮವನ್ನು ಸಾಂದ್ರಗೊಳಿಸಿತು, ಬಲಿಷ್ಠಗೊಳಿಸಿತು (ಪರ್ವಾ. ೬೭). [ಬಲಿಷ್ಠ + ಕೊಳ್$_1$ + ಇಸು$_1$]

**ಬಲಿಸದ್ಮ** (ನಾ). = ಬಲಿನಿಕೇತನ : "ಅಧೋಭುವನಂ, ಪಾತಾಳಂ, ಬಲಿಸದ್ಮಂ, ರಸಾತಲಂ, ನಾಗಲೋಕಃ — ಐ ಪಾತಾಳಲೋಕದ ಹೆಸರುಗಳು" (ಸಿದ್ಯಾ.ಅ. ೭೦). [ಸಂ. ಬಲಿಸದ್ಮನ್]

**ಬಲಿಸು** 'ಬಲಿಯಿಸು' ನೋ.

**ಬಲಿಸುತ** (ನಾ). ಬಲಿಚಕ್ರವರ್ತಿಯ ಮಗ; ಬಾಣಾಸುರ : ಉಡಿವಂತೆ ವಿಜಯವಲ್ಲರಿಯಡರ್ಪ ತದ್ದ್ವನಿ ಪಳಂಚಿ ಕೇತಧ್ವಜವಂದುಡಿದುದು ಸಹಸ್ರಭುಜವನದುಡಿವಕ್ಕಿದು ಸಂಚಕರಮೆನಲ್ ಬಲಿಸುತನಾ (ಜಗಂ. ೦೯-೪); ಇನಿತೆಲ್ಲ ವಾರ್ತೆಯನು ಖಳನೋರ್ವನಾಂದೋಡಿ ಪೊಗಿ ಬಲಿಸುತಗೆ ಪೇಳೆ (ಜ್ರಾಶಜ. ೦೦-೩೯). [ಸಂ.]

**ಬಲಿಸೂರ್ಯ** (ನಾ). ಗೋಸುಂಬೆ; ಊಸರವಳ್ಳಿ : "ಶಯಾನಕಂ ಬಲಿ[ಪಾಠಾಂ. ೪]ಸೂರ್ಯಮೆನಲು ಗೋಸುಂಬೆ" (ಬಂಗಣಾ. ೪೯-೦೨). 'ಪ್ರತಿಸೂರ್ಯ' ಪರಾ.

[ಪ್ರಾಸಕ್ಕಾಗಿ ಮಾಡಿಕೊಂಡ ಈ ರೂಪ ಸ್ಪಷ್ಟವಾಗಿಲ್ಲ]

**ಬಲಿಸ್ನವನ** (ನಾ). [ಜೈನ] ತ್ರಿಸಂಧ್ಯೆಯಲ್ಲಿ ಮಾಡುವ ಜಿನಪೂಜೆ : ಜಗತ್ತ್ರಯಸ್ವಾಮಿಗೆ ಸಂಧ್ಯಾತ್ರಯದೊಳ್ಪೂಜಾಭಿಷೇಕಂಗಳಂ ವಿಧಿಸಮೇತದಿಂ ಮಾಡುವ ಪೂಜೆ ಬಲಿಸ್ನವನಂ (ಪ್ರಾಕಶಾ. ೦೬೦-೦೦). [ಸಂ.]

**ಬಲಿಸ್ನಪನ** (ನಾ). [ಜೈನ] ಜಿನನಿಗೆ ಮಾಡುವ ಅಭಿಷೇಕ : ಬಲಿಸ್ನಪನಮೆಂಬುದು ಮಱುಚಿಂ ಸಂಜೆಯೊಳ್ ಮಾಟ್ಟ ಜಿನಾಭಿಷೇಕಂ (ಆದಿಪು. ೦೨-೦ ೩). [ಸಂ.]

**ಬಲಿಹರ**, **ಬಳಿಹರ** (ನಾ). =ಬಲಿಧ್ವಂಸಿ : ಬಲಿಹರನ ಚರಣದಂಡದ ತಲೆಯೊಳ್ ಕಱಗೊಂಡೆಬಲ್ಲ ಬಾಂದೊಱೆಯಲರಿಂದೊಲೆದುದು ವಿಷ್ಣುಕುಮಾರನ ಗೆಲವಂ ಕಂಡಮರರೊಸೆದು ಕಟ್ಟಿದ ಗುಡಿವೋಲ್ (ಅಜಿತಪು. ೬-೩೪). **ಬಳಿಹರ** : ಎಳೆ ರಸೆಯೊಳಟ್ಟುದಂ ಭುಜಬಳದಿಂ ಮುನ್ನೆತ್ತಿದಂತೆ ವಿಷಯಾಂಬುಧಿಯೊಳ್ ಮುಱುಗಿರ್ದಮ್ಮಯ್ಯನುಮಂ ಬಳಿಹರ ಪಿಡಿದೆತ್ತಲೆಂದು ಬಂದೈ ಬರವಂ (ಶಂಶಕಾ. ೪-೦೩). [ಸಂ.]

**ಬಲಿಹರಣ** (ನಾ.) ೧. ಭೂತಪ್ರೇತಗಳಿಗಾಗಿ ಅರ್ಪಿಸುವ ಬಲಿ; ಆಹುತಿ : ಹರಿಯ ಬಾಣವು . . . ಖರನ ತಲೆಗಳ ಬೀಳಿದುದು ಬಲಿಹರಣವಿಕ್ಕಿತು ಕನಕಮೃಗವನು (ತೊರವೆ. ೦೬-೩೭). ೨. ಪೂಜೆಯ ಕಡೆಯಲ್ಲಿ ದೇವತೆಗಳಿಗೆ ಅಥವಾ ಪಿತೃಗಳಿಗೆ ಅರ್ಪಿಸುವ ನೈವೇದ್ಯದ ಭಾಗ : ವೈಶ್ವದೇವ, ಬಲಿಹರಣರೂಪವಾದ ಎರಡು ಅನ್ನಗಳು ದೇವತೆಗಳಿಗೆ, ಉಪಲಕ್ಷಣ ಯಾ ಪಿತೃಗಳಿಗೂ ಸೇರುವುದು. ಸಪ್ತಾನ್ನಗಳಲ್ಲಿ ವೈಶ್ವದೇವ, ಬಲಿಹರಣರೂಪವಾದ ಎರಡು ಅನ್ನಗಳಿಗೆ ದೇವತೆಗಳನ್ನೂ ಪಿತೃಗಳನ್ನೂ ಭಾಗಿಗಳನ್ನಾಗಿ ಮಾಡಿದರೆಂದರ್ಥ (ಹಹಾಚ. ೦೪-೦೪ ಶಾತ್ಪರ್ಯ).

**ಬಲಿಹರಣ ಮಾಡು** = ಆಹುತಿ ಕೊಡು; ಕೊಲ್ಲು : ನಲಿದು ದೈತ್ಯರ ಪಡೆಯನೆಲ್ಲವ ಬಲಿಹರಣ ಮಾಡುತಲು (ತಜಶ. ೬-೦೦೦). [ಸಂ.]

**ಬಲಿಹರಣಂಗೆಯ್** (ಕ್ರಿ). ಭೂತ ಪ್ರೇತಗಳಿಗಾಗಿ ಬಲಿಯನ್ನು

ಅರ್ಪಿಸು : ಒರ್ವ ಶಬರಂ ಕಂಡುವಮಾ ವಿಹಂಗಮಯುಮಾಡುವವೆ ಯೊಳೆಲ್ಲಿಯುಂ ಬಲಿಯಂ ಪಾಸಿ ಬಲಿಹರಣಂಗೆಯ್ವಂತೆ ಕೂಟಂ ಸೂಸಿ ಪೋಪುದುಂ (ಶಬರಶಂ. ೨೬೬–೦೪). [ಬಲಿಹರಣ + ಕೆಯ್$_1$]

**ಬಲೀಂದ್ರಪೂಜೆ** (ನಾ). ಬಲಿಪಾಡ್ಯಮಿಯ ದಿನ (ಕಾರ್ತಿಕ ಶುದ್ಧ ಪ್ರತಿಪದೆ)ದಂದು ಮಾಡುವ ಬಲಿಚಕ್ರವರ್ತಿಯ ಪೂಜೆ : ಬಲೀಂದ್ರ ಪೂಜೆಯಂದು ಮನೆಯವರೆಲ್ಲಾ ಸಂಭ್ರಮದಿಂದ ಹಬ್ಬವನ್ನು ಆಚರಿಸಿದರು (ರೂಢಿ). [ಸಂ. ಬಲೀಂದ್ರಪೂಜಾ]

**ಬಲೀಮುಖ** (ನಾ). =ಬಲಿಮುಖ : "ಬಲೀಮುಖಃ, ಮರ್ಕಟಕಃ . . . ಶಾಖಾಮೃಗಃ, ವಾನರಃ — ಈ ೧೧ ಕೋಡಗಂ" (ಹಲಾಯು. ೬೯–೭೬); ಆ ಬಲೀಮುಖಂ ಕಾಲಮುಖಮನೆಯ್ದುತ್ತೆ (ಶಂಕರ. ೬೦–೪); ಬರಿಯ ಬೆಟಂಬಿಡದೇಡಿಸಿ ನಗಿಸಿತು ಭೂವರನ ಬಲೀಮುಖನೊಂದು (ಶ್ರೀಕಾಂ. ೭–೨೯). [ಸಂ.]

**ಬಲೀಮುಖಿ** (ನಾ). ಹೆಣ್ಣುಕೋತಿ: ಬಿರಿಕಿನೊಳೊಯ್ಯನೊಯ್ಯನರೆ ದೋಱುವ ಬಿತ್ತುಗಳಿಂ ವಿಳಾಸಮಾದರಿಸಿದ ದಾಡಿಮಿಫಳಮನೊಯ್ಯನೆ ಚುಂಬಿಸಿ ಒರ್ವ ಕಾಂತನಂತರುಚಿರಕಾಂತೆ ಕಂಡು ಪುರುಡಿಂ ಬಡಿಯಲ್ ಪಡಿ ಗೊಂಡು ದೀಟ್ಟು ಬಲ್ಪರಿದು ಬಲೀಮುಖೀಮುಖಮನೀಬೆನೆ ಚುಂಬಿಸಿ ತೇಂಕಿ ಕೋಪದಂ (ಅಕ್ಷಕೃ. ೩–೪೭). [ಸಂ. ಬಲೀಮುಖೀ (ಬಲಿ + ಮುಖ + —)]

**ಬಲೀವರ್ದ** (ನಾ). ಎತ್ತು: ವೃಷಭ : "ವೃಷ ಸೌರಭೇಯ ಗೋಪತಿ ಋಷಭ ಬಲೀವರ್ದ ಶಾಕ್ವರೋಕ್ಷ ಕಕುದ್ಮದ್ವೃಷಭಾಖ್ಯಮನಡ್ವಾಹಂ" (ಅಸ್ತು.ಕೋ. ೬೪–೦); ಶೃಂಗಾರದಿಂ ಭಂಗಿವಡೆದು ವೃಷಬಲೀವರ್ದಧ್ವಾನ ಮುಂ ಗೋವತ್ಸಕದಂಬಹಂಭಾರವಮುಂ ವಿಜೃಂಭಿಸೆ (ಚಂದ್ರ. ೪–೫೦ ಟ); ವೃಷಭನ ಅನಿಮಿತ್ತರೋಷಾವೇಶವಿಷಮತೆಗಮಾ ಜರಾದುರ್ಬಲ ಬಲೀವರ್ದದುರ್ದಶಾಮರಣಾಯಾಸಪರಿಣತಿಗಂ ವಿಸ್ಮಯಂಬಟ್ಟು (ಶಂಪ್ರಕೃ. ೨–೫೦). [ಸಂ.]

**ಬಲು** 'ಬಲ್$_1$' ನೋ.

**ಬಲುಕಜ್ಜ** 'ಬಲ್ಗಜ್ಜ' ನೋ.

**ಬಲುಕಣ** 'ಬಲ್ಕಣ್ಣ' ನೋ.

**ಬಲುಕರಿಸು** (ಕ್ರಿ). ಬಲವಂತ ಮಾಡು; ಒತ್ತಾಯಂಪಡಿಸು : ಬಲುಕರಿಸಿ ಕೊಲುವುದು ನೀವಮೇ ತತ್‌ತರುಣಿಗೀ ಕಾಟಿಯಲ್ಲದೀಯದ ಗಂಟಲಲಿ (ಐಕಥ. ೨೯–೦೨); ಬಲುಕರಿಸಿ ಭೂಮಿಯೊಳಗೊಂದಂಗುಲವನೊತ್ತಿದವಂಗೆ . . . ನರಕದೊಳಿರವಲ್ಲದ ಬೇಱೆ ಗತಿಯಿಲ್ಲ (ಕುಮ್ಮಾಉ. ೪–೦೦೪); ಎಲೆ ವಸಂತನ ಚಂದ್ರಮನೆ . . . ಕಲುಷರಹಿತೆಯ ಖಳಕುಲಾಧಮ ಬಲು ಕರಿಸಿ ಕೊಂದೊಯ್ಯನೆಂದುಸುರುವುದು ರಾಮಂಗೆ (ತೊರೆರಾ. ೬–೦೦–೬). 'ಬಲಾತ್ಕರಿಸು' ಪರಾ. ಊ 'ನಿರಾಕರಿಸು', 'ಪತಿಕರಿಸು' ಮೊದ ಲಾದ ಶಬ್ದಸಾಮ್ಯದಿಂದ ಮಾಡಿಕೊಂಡ ರೂಪ. [< ಬಲಾತ್ಕರಣ$_2$ + — ಇಸು$_3$]

**ಬಲುಕಣಿಕೆ** 'ಬಲುಗುಣಿಕೆ' ನೋ.

**ಬಲುಕಣಿಯ** (ನಾ). ಒಂದು ಬಗೆಯ ಮರ : ಬಲುಕಣಿಯ ಹುಡುವೆ ವಕುಳಂ ಸಿಂಧುವಾರ . . . ಒಪ್ಪಿದುದು (ಕುಮ್ಮಾಗ. ೦೦–೩). 'ಬಲುಗುಣಿಕೆ' ಪರಾ. [ ? ]

**ಬಲುಗಂಡ** 'ಬಲ್ಗಂಡ' ನೋ.

**ಬಲುಗಜ್ಜ** 'ಬಲ್ಗಜ್ಜ' ನೋ.

**ಬಲುಗಡಲು** 'ಬಲ್ಗಡಲ್' ನೋ.

**ಬಲುಗಡಿ$_1$** (ನಾ). ಅತಿಶಯವಾದ ಸಾಮರ್ಥ್ಯ. — ಪರಾಕ್ರಮ : ಎಲವೊ ಕೀಚಕ ಹೋಗದಿರು ನಿಲ್ಲೆಲವೊ ಹುಲುಮಂಡಳಿಕ ನಿನ್ನಯ ಬಲುಗಡಿಯ ತೋಱುವುದು ನಿನ್ನಂತರದ ರಾಯರಲಿ (ಕುಮ್ಮಾಶಿ. ೬೦೨.೨೫–೩); ನಮ್ಮ ಹಗೆ . . . ಬಲುಗಡಿಯ ರಕ್ಕಸರನೊಬ್ಬರನುಳಿಯಲೀಯದ ಕೊಂದ ನಾವಿನ್ನುಳಿವುಪಾಯವದೆಂತು (ಅಕ್ಷ್ರೃಕ. ೨–೪). 'ಬಲಗಡಿಯ' ಪರಾ. [ಬಲು ( < ಬಲ್ಲಿತು$_1$ ) + ಕಡಿ$_4$ ( < ಕಡಿದು )]

**ಬಲುಗಡಿ$_2$** (ನಾ). ಬಲವಾದ ಕೋಟೆ.— ದುರ್ಗ : ಇಂತೆಂದು ಬಿನ್ನವಿಸಿ ದನಾ ನೇಮಿ ಪೊಡವಿಪತಿಗೆ ದಾನವಗೆ ಬಿಡಬಾರದು ಪೌಜುಮಾಡಬಾರದು ಬಲುಗಡಿ[ಪಾಠಾಂ. ಗಡಿಯ]ಕುಮ್ಮಟದುರ್ಗವಿಳೆಗೆ (ಕಂಠಸಾಂ. ೨೦–೯೩). [ಬಲು ( < ಬಲ್ಲಿತು$_1$ ) + ಗಡಿ$_3$ ]

**ಬಲುಗಡಿಯ** (ನಾ). ಅತ್ಯಂತ ಸಮರ್ಥನಾದವನು; ಮಹಾಪರಾಕ್ರಮಿ: ಎಲೆಲೆ ಪಾತಕಿ ಹೆಣನ ಹೊಮ್ಮರೆ ಬಲುಗಡಿಯ ನೀನೆಂಬರೆ (ಕುಮ್ಮಾದ್ರೋ. ೦೪–೩); ಕಡೆಗಾಲದ ರುದ್ರನಿಟ್ಟಾಭರಣದ ಕಿಡಿಕನಪ್ಪಾ ವಿಷೋರಗನು ಕಡುಮುನಿಸಿಂ ಬರ್ಪವೊಲು ಬಂದಾ ಬಲುಗಡಿಯನ ಮೇಲ್ವಾಯ್ದುದಾಗ (ಜಕಮಿಸಂ. ೦೪–೦೨೦). 'ಬಲುಗಡಿಯತನ' ಪರಾ. [ಬಲುಗಡಿ$_1$ + — ಅ$_7$ ]

**ಬಲುಗಡಿಯತನ** (ನಾ). = ಬಲುಗಡಿ$_1$ : ಫಡ ಜಯದ್ರಥ ಹೋಗು . . . ತುಡುಕಿದರೆ ಕೈ ಬೇವುದೀ ಬಲುಗಡಿಯತನ ಬಯಲಹುದು (ಕುಮ್ಮಾದ್ರೋ. ೪–೬೦). [ಬಲುಗಡಿಯ + — ತನ ]

**ಬಲುಗಣೆ** 'ಬಲ್ಗಣೆ' ನೋ.

**ಬಲುಗತ್ತಲೆ** 'ಬಲ್ಗತ್ತಲೆ' ನೋ.

**ಬಲುಗತ್ತಿ** 'ಬಲ್ಗತ್ತಿ' ನೋ.

**ಬಲುಗಯ್** 'ಬಲ್ಗಯ್$_1$' ನೋ.

**ಬಲುಗಯ್ಯ$_1$** 'ಬಲ್ಗಯ್ಯ$_1$' ನೋ.

**ಬಲುಗರ$_1$** (ನಾ). ಅನೇಕ ಕೈಗಳು : ಜ್ವಲನಪೇಂ ಶಿಶುಭಕ್ಷ್ಯರಿಂದಗ್ಗಳಮೆ ಯಾತನ ನಾಲಗೆಗಳಂ ಬಲುಗರಂಗಳನರಿದು ಕಳೆಯನೆ ವೀರಗಣನೊಬ್ಬ (ಬಸಪು. ೪೪–೪೫); ಎಲವೊ ಪಾವಕ . . . ವೀರಗಣೇಶ್ವರನು ನಿನ್ನ ಬಲುಗರಂಗಳನೆಳಲುನಾಲಗೆಗಳನರಿದು ಹಾಯ್ಕಿದನಲಾ (ಬಸಪು ೩೦–೨೪). [ಬಲು ( < ಬಲ್ಲಿತು$_1$ ) + ಕರ$_3$ ]

**ಬಲುಗರ$_2$** 'ಬಲ್ಗರ' ನೋ.

**ಬಲುಗರುಳು** 'ಬಲ್ಗರುಳ್' ನೋ.

**ಬಲುಗವಣೆ** 'ಬಲ್ಗವಣೆ' ನೋ.

**ಬಲುಗಳವು** (ನಾ). ೧. ಅತಿಯಾದ ಕಳವು ; ಹೆಚ್ಚಿನ ಕಳ್ಳತನ. ೨. ದಪ್ಪವಾದ ಕೊರಳು. ೧, ೨ : ಅಳಿಯಾಸೆ ಪೂವಿನ ಜೊಂಪದೊಳಗೆ ಬಲುಗಳವು ತುರಂಗಸಂಕುಳದಿ ಎಳೆ ಕಣ್ಣು ದೆಸೆಸುತ್ತು ವಾಚಕ ಮೊದಲೊಳು ತಿಳಿಯಲಾ ದೇಶಕಿಲ್ಲ (ಪರ್ಣಕ. ೦–೩೦). [ಬಲು ( <ಬಲ್ಲಿತು$_1$) + ಕಳವು ; ಬಲು( <ಬಲ್ಲಿತು$_1$) + ಗಳವು$_4$ (ಊ← ಸಂ. ಗಲ)]

**ಬಲುಗಾಹು$_1$** 'ಬಲ್ಗಾವು' ನೋ.

**ಬಲುಗಾಹು$_2$** (ನಾ). ಬಲವಾದ ಮೋಸ ; ಅತಿಯಾದ ಠಕ್ಕು. — ವಂಚನೆ : ಆಹತಾಂದೋಳಿತ ಮೊದಲಾದ ಗಮಕಸಮೂಹಗಳಿಂದ ಕೇಳ್ವರನು ಆಹಾಯೆನಿಸಿದಳಂತರಂಗದ ಬಲುಗಾಹು ಬೇಱಾಗಿರಲವಳು (ಕಂಠಸಾಂ. ೨೫–೦೭). [ಬಲು (<ಬಲ್ಲಿತು$_1$) +ಗಾಹು$_3$]

**ಬಲುಗಾಳೆಗ** 'ಬಲ್ಗಾಳೆಗ' ನೋ.

**ಬಲುಗಿಚ್ಚು** 'ಬಲ್ಗಿಚ್ಚು' ನೋ.

**ಬಲುಗುಂಡು** 'ಬಲ್ಗುಂಡು' ನೋ.

**ಬಲುಗುಣಿಕೆ**, ಬಲಕುಟಿಕೆ, ಬಲಗುಣಿಕೆ, ಬಲುಕುಣಿಕೆ (ನಾ). ೧. ಒಂದು ಬಗೆಯ ಸಸ್ಯ : "ತಲಪೋಟಃ — ಚೊಕ್ಕಣಿಕೆ, ಅವರ, ಬಲುಗುಣಿಕೆ,

ಎಲಚಿ, ನೆಲದಾಳು" (೬೫೦. ೬೫). ಬಲಕುಟಕೆ : ೧. "ತಲಫೋಟಿಕಾ— ಬಲಕುಟಕೆ" (೬೫೦. ೬೬). ಬಲಗುಣಿಕೆ : ೧. "ಪೊ.ಟತಲಃ— ಬಲಗುಣಿಕೆ" (೬೫೧. ೧೦೩). ಬಲುಕುಣಿಕೆ : ೧. "ಶಾಟಿಕಾ—ಬಲುಕುಣಿಕೆ" (೬೫೦. ೧೬೩). ೨. ಒಂದು ಬಗೆಯ ಮರ : ಬಲುಕುಣಿಕೆ ಪಾದರಿ ಹಾಲೆ ತೇಗುಗಳ ವಿಸರ ನಾನಾವೃಕ್ಷಜಾತಿಯಿಂದೆಸೆವ ಘೋರಾರಣ್ಯ ಕಣ್ಗೆಸೆದುದು (ಸಂ೧೧೫. ೩೦-೯). [ಬಲು₂ + ಕುಣಿಕೆ₂]

**ಬಲುಗುದಿ** (ನಾ). ಅತಿಯಾದ ಕುದಿತ : ಕದಡಿ ಹರಿವರುಣಾಂಬುವಿನ ಬಲುಗುದಿಯೊಳಗೆ ನಾದಿದವು ಬಲವನು ಕದನದಲಿ ಗಣನಿಕರ ಕೊಂದವು ಕೋಟಿದಾನವರಾ (ದೇಶಿಚು. ೩-೩೬). [ಬಲು(<ಬಲ್ಲಿತು₁)+ಕುದಿ₃]

**ಬಲುಗುದುರೆ** 'ಬಲ್ಗುದುರೆ' ನೋ.

**ಬಲುಗುಮ್ಮ** (ನಾ). ಭಾರಿಯಾದ ಭೂತ ; ದೊಡ್ಡ ದೆವ್ವ : ತಮ್ಮ ಬಾ ಬಲ ಬೆದಱುತದೆ ಬಲುಗುಮ್ಮನಿವನನು ಕಂಡು (ಕಪಾಲ. ೬-೨೬-೦೭). [ಬಲು (<ಬಲ್ಲಿತು₁) + ಗುಮ್ಮ₁]

**ಬಲುಗೂಳಿ** 'ಬಲ್ಗೂಳಿ' ನೋ.

**ಬಲುಗೆಂಪು** (ನಾ). ದಟ್ಟವಾದ ಕೆಂಪು ; ಕಡುಗೆಂಪು : ಸುಳಿದಾಡುವಬ್ಜ ನೇತ್ರೆಯರ ಪಾದಾಂಗುಳಿಗಳವಟ್ಟ ನುಡಿದಲತಗೆಯ ಬಲುಗೆಂಪು ನೆಲದೊಳೊಪ್ಪಿತು ಭೂದೇವತೆ ತಳೆದ ಕುಂಕುಮಗಂಧದಂತೆ (೪೦ಪಷ. ೨೯-೦೩). [ಬಲು (<ಬಲ್ಲಿತು₁) + ಕೆಂಪು₁]

**ಬಲುಗೆಯ್** 'ಬಲ್ಗೆಯ್' ನೋ.

**ಬಲುಗೆಯ್ಯ** 'ಬಲ್ಗೆಯ್ಯ'ನೋ.

**ಬಲುಗೆಲಸ** (ನಾ). ಅತಿಶಯವಾದ ಕೆಲಸ ; ದೊಡ್ಡಕಾರ್ಯ : ಹಲವು ಮತೇನಪಿಳಭುವನಾವಳಿಯ ಸೃಷ್ಟಿವಿಧಾನದಿಂ ಬಲುಗೆಲಸ ದೆನಗಾಯಿತು (ಎಕಾಗ. ೨-೨-೯೦). [ಬಲು (<ಬಲ್ಲಿತು₁) + ಕೆಲಸ]

**ಬಲುಗೆಲಸಿ** (ನಾ). ಬಹಳ ಕೆಲಸ ಮಾಡುವ ವ್ಯಕ್ತಿ ; ಒಳ್ಳೆಯ ಕೆಲಸಗಾರ : "ಕರ್ಮಠಂ ಕರ್ಮಶೂರನೆನೆ ಬಲುಗೆಲಸಿಯಕ್ಕು" (ಶುಂಗರಾ. ೬೦-೦೫). [ಬಲಗೆಲಸ +— ಇ₃]

**ಬಲುಗೆಸಱು** (ನಾ). ಹೆಚ್ಚಾದ ಕೆಸರು ; ಅತಿಯಾದ ರಾಡಿ : ರುಧಿರದ ಬಿಱುಪೊನಲ ಬಲುಗೆಸಱ ನೆಣವಸೆಯುಱಲ ನೆಲದಲಿ ಧೂಳಿ ಯೆದ್ದುದು ದಳದ ಪದಹತಿಗೆ (ಕುಪ್ಪಾಶ. ೩೨-೬). [ಬಲು (<ಬಲ್ಲಿತು₁) + ಕೆಸಱು (<ಕೆಸಱ್)]

**ಬಲುಗೆಱ್** 'ಬಲ್ಗೆಱ್' ನೋ.

**ಬಲುಗೈ** 'ಬಲ್ಗೆಯ್' ನೋ.

**ಬಲುಗೈತನ** (ನಾ). ಶೌರ್ಯ ; ಪರಾಕ್ರಮ : ನರನ ಬಲುಗೈತನವನೀ ದೋಹರಥ ಹೆಂಗುಸುತನವ ನೀವಮಧರಿಸಿದಿರೆ ಜಗಭಂಡರಿವರಿಗೆ ಮತ್ತೆ ಬಿರುದುಗಳೆ (ಕುಪ್ಪಾದ್ರೋ. ೦೦-೯೩) ; ಕಂಡನವರ ಬಲುಗೈತನವನು ಮೇಲೆ ಕೊಂಡಚ್ಚು ವಜ್ರಶರದಲಿ ಖಂಡಿಸಿ ಬಿಟ್ಟ ಸರಳ ಮೂದಲಿಸ ಉದ್ದಂಡ ತ್ರಿಪಿಷ್ಟಕುಮಾರ (ಶರ೯ಕ. ೬-೦೫). [ಬಲುಗೈ (<ಬಲ್ಗೆಯ್) +—ತನ]

**ಬಲುಗೈದು** 'ಬಲೆಯಿಂದ್ದು' ನೋ.

**ಬಲುಗೈಬಂಟ** (ನಾ). ಪರಾಕ್ರಮಿಯಾದ ಸೈನಿಕ,—ಯೋಧ : ಈತ ಬಲುಗೈಬಂಟನು (ಕುಪ್ಪಾಸ. ೨-೬೬). [ಬಲುಗೈ (<ಬಲ್ಗೆಯ್) + ಬಂಟ₁]

**ಬಲುಗೈಯ** 'ಬಲ್ಗೆಯ್ಯ' ನೋ.

**ಬಲುಗೊಱತೆ** (ನಾ). ದೊಡ್ಡ ನಷ್ಟ,—ಕೊರತೆ : ನಾಯಬೇಕವನಲ್ಲ ದೊಡಾನು ಬಿಡಬೇಕು ಕಾಯುವನಿರ್ವರುಳಿವುದು ನ್ಯಾಯವಲ್ಲಿದು ಬಲು ಗೊಱತೆ ನಿನಗೆ ಕಂಪರಾಯ (ಕುಶಾಹಾಂ. ೩೯-೦೫೦). [ಬಲು (< ಬಲ್ಲಿತು₁) + ಕೊಱತೆ (< ಕೊಱಂತೆ)]

**ಬಲುಗೋಲು** 'ಬಲ್ಗೋಲ್' ನೋ.

**ಬಲುಚರ** 'ಬಲ್ಸರ' ನೋ.

**ಬಲುತವಕ** 'ಬಲುದವಕ' ನೋ.

**ಬಲುತೆರೆ** 'ಬಲ್ದೆರೆ' ನೋ.

**ಬಲುದಂಡಿ** (ನಾ). ಹೆಚ್ಚಿನ ಶಕ್ತಿ ; ಅಧಿಕವಾದ ಪರಾಕ್ರಮ : ಕಂಡು ಕಾಟಣ್ಣನ ರಾವುತಿಕೆಯ ಬಲುದಂಡಿಯನಾ ರಾಮನಾಥ ಕೊಂಡಾಡಿದನು (ಕುಶಾಹಾಂ. ೧೨-೬೯). [ಬಲು (<ಬಲ್ಲಿತು₁) + ದಂಡಿ₁]

**ಬಲುದಗಹು** (ನಾ). ಅಧಿಕವಾದ ನಿರ್ಬಂಧ,—ಅಡ್ಡಿ : ಬೆಗಡು ಬೀತುದು ಬೇಸಱಿನ ಬಲುದಗಹು ಸೋತುದು (ಕುಪ್ಪಾಶ. ೬-೩೨). [ಬಲು (<ಬಲ್ಲಿತು₁) + ತಗಹು₂ (<ತಗವು)]

**ಬಲುದಡಿ** (ನಾ). ಬಲವಾದ ಕೋಲು,—ದಂಡ : ಬಲ್ಲು ಬಲುದಡಿ ಪಿಡಿಚಕ್ರದಲಿ ಕಳಬಂಟ ಕಂಠವಿಚ್ಛೇದ ವಿನೋದದ ತಳವಱರೂರ ಕಾದಿಹರು (ಷೋಡಶ. ೦೫-೦೦೩). [ಬಲು (<ಬಲ್ಲಿತು₁) + ದಡಿ₁ ]

**ಬಲುದಡಿಗ** 'ಬಲ್ದಡಿಗ' ನೋ.

**ಬಲುದವಕ, ಬಲುತವಕ** (ನಾ). ೧. ಬಹಳವಾದ ಆತುರ : 'ಬಲು ದವಕಿ' ಪರಾ. ಬಲುತವಕ : ೨. ಅತಿಯಾದ ಉತ್ಕಂಠತೆ,—ಕಳವಳ : ಇಂತೊಪ್ಪುತಿರೆ ಶಶಿ ಮದನಮೋಹಿನಿಗಾಗ ಚಿಂತೆ ಮೊಳೆತು ಬಲುತವಕ ಮುಂತರಲೆದೋಱೆ ಕಾತುರ ಪರ್ಬಿ ವಿರಹಾಗ್ನಿ ಸಂತತ ಘಲ ದೋಱದುದು (೪೦ಪಷ. ೯-೦೬೦). [ಬಲು (<ಬಲ್ಲಿತು₁) + ತವಕ₁]

**ಬಲುದವಕಿ** (ನಾ). ಬಹಳ ಆತುರವುಳ್ಳವನು : ಅವೆರಡಬಲದೊಳು ರಾವುತರನು ಮತ್ತವರ ಹಿಂಗಡೆಯೊಳಾನೆಗಳ ಅವರ ಮುಂಗಡೆಯೊಳೊಲಿದು ಚೂಣಿಯ ಬಲುದವಕಿಗಳನು ನಿಲಿಸಿದನು (ಕುಶಾಹಾಂ. ೨೦-೯). [ಬಲುದವಕ + — ಇ₃]

**ಬಲುದವಕಿಗ** (ನಾ). = ಬಲುದವಕಿ : ಇವರು ಕಳುಹಿದರುಚಿತದಲಿ ನಿನ್ನವರು ಮಸಗಿದ ಕಡಲಪೊಲು ಬಲುದವಕಿಗರು ಕೋಲಳವಿಗೊಂಡರು ಕೋಡಕೈಗಳಲಿ (ಕುಪ್ಪಾಶ. ೦೫-೦೬). [ಬಲುದವಕ + — ಇಗ]

**ಬಲುದಸಿ** 'ಬಲ್ದಸಿ' ನೋ.

**ಬಲುದುಗುಡ** (ನಾ). ಅತಿಯಾದ ದುಃಖ ; ಬಹಳವಾದ ವ್ಯಸನ : ಬಲುದುಗುಡ ಸಹದೇವನಲಿ ಸಂಗಳಿಸಿತೇ ದ್ರೌಪದಿ ಸುಭದ್ರಾಲಲನೆಯರು ಗನುಚಿತವು ಘಟಿಸಿತೆ (ಕುಪ್ಪಾದ್ರೋ. ೬-೨೨). [ಬಲು (<ಬಲ್ಲಿತು₁) + ದುಗುಡ]

**ಬಲುದುತ್ತು** (ನಾ). ದೊಡ್ಡ ತುತ್ತು : ಎರಡು ಕೈಯನು ಬಲಿದು ಮುಷ್ಟಿಯೊಳಿಱಿಗಿದನು ಖಳ ಬೆನ್ನನೇನಂದಱಿಯಸುತ್ತಲು ಭೀಮ ಬಲು ದುತ್ತುಗಳ ತೋಟಿಯಲಿ (ಕುಪ್ಪಾಅ. ೦೦-೩೩) ; ಎಲವೊ ನಿನ್ನಯ ಬಾಯ ಹವಣಿಂಗಳವಡದ ಬಲುದುತ್ತನಂಗೈಗಳಲಿ ಧರಿಸಿದೆ (ಕೂಕರಾ. ೩-೯-೬). [ಬಲು (<ಬಲ್ಲಿತು₁) + ತುತ್ತು₂]

**ಬಲುದೆಪ್ಪ** (ನಾ). ದೊಡ್ಡ ತೆಪ್ಪ,—ದೋಣಿ : ಹದ್ದೊಱೆಯನುಱೆ ತಡಿಗೆ ದಾಂಟಿಸುವ ತೋರವಹ ಬಲುದೆಪ್ಪವಿರೆ ಮನ ಹಾಱೆ ಸೋರೆಯೋಡಂ ಹಿಡಿದು ತಾಂ ಪಾರವೆಯ್ದುವೆನೆಂಬವನವೊಲು . . . ಕೆಟ್ಟುಹೋದೆಯಲಾ (ಬಸಪು. ೬೦-೯೬). [ಬಲು (<ಬಲ್ಲಿತು₁) + ತೆಪ್ಪ]

**ಬಲುದೋಂಟಿ** (ನಾ). ದೊಡ್ಡ ಕದನ ; ಮಹಾಯುದ್ಧ : ಬಲುದೋಂಟಿ ಯೆಂದರೆಡೆಯೊಳು ನಲಿವ ಸುಭಟರಿಹರು (ಕುಶಾಹಾಂ. ೩-೯೦). [ಬಲು (<ಬಲ್ಲಿತು₁) + ತೋಂಟಿ₁ (<ತೋಟಿ₁)]

**ಬಲುಪು** 'ಬಲ್ಪು' ನೋ.

**ಬಲುಬಿದಿರು** (ನಾ). ಬಿರುಸಾದ ಬಿದಿರು : ಬಲುಬಿದಿರನುಚ್ಚಳಿಸುವಳಿ ಮುಖಕೆಳೆಯ ಕಟ್ಟಾನುವುದೆ (ಕುಪ್ಪಾಶ. ೩-೨೮). [ಬಲು (<ಬಲ್ಲಿತು₁) + ಬಿದಿರು₂ (<ಬಿದಿರ್₂)]

**ಬಲುಬಿಲ್ಲು** (ನಾ). ದೊಡ್ಡ ಧನುಸ್ಸು : ಮಹಾಧನುಸ್ಸು : ಸಲ್ಲಿ ನಿಲ್ಲಾದರೆಯೆನುತ ಬಲುಬಿಲ್ಲನಗುಳಿಸಿದನು ಶರೌಘವನೆಲ್ಲಿ ನಭ ಮಸೆಯೆತ್ತ ಲೆನೆ ಘಾಡಿಸಿದವಂಬುಗಳು (ಕುಮಾರವ್ಯಾ. ೩-೪೬) ; ಸಿಂಜನಿಗೆಯ್ದು ಬಲುಬಿಲ್ಲ ಕರದೊಳಗಾಂತು ಹೇವೊಡೆದ (ಮೋಹಕ. ೧೯-೩೨).
[ ಬಲು (<ಬಲ್ಲಿತು$_1$) + ಬಿಲ್ಲು$_1$ (<ಬಿಲ್$_2$) ]

**ಬಲುಬಿಸಿಲು** 'ಬಲ್ವಿಸಿಲ್' ನೋ.

**ಬಲುಬೆಟ್ಟ** 'ಬಲ್ಬೆಟ್ಟ' ನೋ.

**ಬಲುಬೆಡಗು** 'ಬಲ್ಬೆಡಗು' ನೋ.

**ಬಲುಬೆಳಸು** (ನಾ). ಅಧಿಕವಾದ ಏಳಿಗೆ ; ಹೆಚ್ಚಾದ ಅಭಿವೃದ್ಧಿ : ಪೊನ್ನ ನಿಳಯಂಗಳತಿಸೊಬಗಿನಲಿ ತೊಳಗಿಹುವರಸನ ಸೌಭಾಗ್ಯದ ಬಲುಬೆಳಸ ನದೇನ ಬಣ್ಣಿಸುವೆ (ಕಂಪಾ. ೬-೪೬).
[ ಬಲು (<ಬಲ್ಲಿತು$_1$) + ಬೆಳಸು$_2$ ]

**ಬಲುಬೇಗೆ** (ನಾ). ಬಹಳವಾದ ತಾಪ : ಬಲುಬೇಗೆಯೊಳಗೊಳಗೆ ಬಲುಹು ಹೊಱಗೆ ಪರಾಭವದ ಕಂದೊಳಗೆ ಕಡುಹಿನ ಕಲಿತನದ ಹಳಹಳಿಕೆ ಹೊಱಗೆ ಮಹೀಶ ಹದನಿದು ನಿನ್ನ ನಂದನನ (ಕುಮಾ.ಶ. ೨-೦).
[ ಬಲು (<ಬಲ್ಲಿತು$_1$) + ಬೇಗೆ ]

**ಬಲುಬೇನೆ** (ನಾ). ಅತಿಯಾದ ನೋವು ; ಅಧಿಕವಾದ ವೇದನೆ : ಬಸಿಱೊಳಿವ ಸಂಕಟದ ಬಲುಬೇನೆ ಭ್ರಾಂತಿನಿಂ ಮೈಮಱೆದು ಕಂಡ ಕನಸ್ಸೈಸೆ (ಸಿದ್ಧರಾ. ೨-೬). [ಬಲು (<ಬಲ್ಲಿತು$_1$) +ಬೇನೆ$_1$ ]

**ಬಲುಬೇಸಗೆ** (ನಾ). ಉಗ್ರವಾದ ಸೆಕೆಗಾಲ : ಮಂಜಿನ ಮೇಲುಗಾಳಿಗ ಪುಂಟೆ ಬಲುಬೇಸಗೆಯ ಬಿಸಿಲೊಳಗೆ (ಕುಮಾರವ್ಯಾ. ೪-೪೧).
[ಬಲು (<ಬಲ್ಲಿತು$_1$)+ಬೇಸಗೆ$_1$]

**ಬಲುಬೊಬ್ಬೆ** 'ಬಲ್ಬೊಬ್ಬೆ' ನೋ.

**ಬಲುಭಟ** (ನಾ). ಸಮರ್ಥನಾದ ಸೈನಿಕ : ಒಳಗೊಳಗೆ ಹೊಯಿದಾಡಿ ಹೊರಳುವ ಬಲುಭಟರನಗಿದೊಗುವ ಬಲುಗತ್ತಲೆಯ ಕೋಳಾಹಳವನು . . . ಅರ್ಜುನದೇವನೀಕ್ಷಿಸಿದ (ಕುಮಾರವ್ಯಾ. ೦೬-೪); ಹೊಳೆವ ಖಡ್ಗ ಕಠಾರಿ ಮೊದಲಾದಖಿಳಕೈದುಗಳ ಬಲುಭಟರು . . . ಸಂದಣಿಸಿ ಮೆಱೆದುದು ಪುರದ ಬಾಹೆಯಲಿ (ಜಳಜ. ೨-೦೦). [ಬಲು (<ಬಲ್ಲಿತು$_1$)+ಭಟ$_2$]

**ಬಲುಭಾರ** 'ಬಲ್ಭಾರ' ನೋ.

**ಬಲುಮಟ್ಟು** (ನಾ). ಅಧಿಕ ಪ್ರಮಾಣ : ಆ ನಂಬಿಕೆಗೆ ಬಲುಮಟ್ಟಿನ ಸಮರ್ಥನೆ 'ಇಂಗ್ಲಿಷ್‌ಗೀತಗಳ'ಲ್ಲಿ ದೊರೆಯುತ್ತದೆ (ಸಮಾಲೋ. ೦೬).
[ಬಲು (<ಬಲ್ಲಿತು$_1$)+ಮಟ್ಟು$_2$ (<ಮಟ್ಟ$_1$)]

**ಬಲುಮನುಷ್ಯ** (ನಾ). ಪರಾಕ್ರಮಿಯಾದ ಸೇವಕ : ಶ್ರೀವೀರಬಲ್ಲಾಳ ದೇವರಸರ ಮನೆಯ ಪ್ರಧಾನ ಬೀರೆಯ ದಂಣಾಯಕರ ಬಲುಮನುಷ್ಯ ಚಿಣ್ಣಯನಾಯಕನು (ಎಕ. ೧೯೪೩,6-4;1292). 'ಬಲುಮಾನಿಸ' ಪರಾ.
[ಬಲು (<ಬಲ್ಲಿತು$_1$)+ಮನುಷ್ಯ]

**ಬಲುಮನುಸ್ಯ** 'ಬಲ್ಮನುಷ್ಯ' ನೋ.

**ಬಲುಮರ** 'ಬಲ್ಮರ' ನೋ.

**ಬಲುಮಳೆ** 'ಬಲ್ಮಳೆ' ನೋ.

**ಬಲುಮಿಣಿ** 'ಬಲ್ಮಿಣಿ' ನೋ.

**ಬಲುಮುಗಿಲು** (ನಾ). ದಟ್ಟವಾದ ಮೋಡ : ಸುಗ್ಗಿಯ ಸಿರಿಯ ಹೊಸ ಬೆಳುದಿಂಗಳನು ಬಲುಮುಗಿಲು ಕವಿವಂತೆ ಚರನ ಬಿನ್ನಹಕರಸಿ ಮೊದಲಾಗಿರೆ ಸಮಸ್ತಸಹೋದನದ ಮುಖಸರಸಿರುಹ ಬಾಡಿದವು (ಕುಮಾ.ಸ. ೦೯-೩೦). [ಬಲು (<ಬಲ್ಲಿತು$_1$)+ಮುಗಿಲು (<ಮುಗಿಲ್)]

**ಬಲುಮುಡಿ** 'ಬಲ್ಮುಡಿ' ನೋ.

**ಬಲುಮುನಿಸು** 'ಬಲ್ಮುನಿಸು' ನೋ.

**ಬಲುಮೆ** 'ಬಲ್ಮೆ' ನೋ.

**ಬಲುಮೆಗಾಱ** 'ಬಲ್ಮೆಗಾಱ' ನೋ.

**ಬಲುಮೆಗಾಱ** 'ಬಲ್ಮೆಗಾಱ' ನೋ.

**ಬಲುಮೆವಿಡಿ** (ಕ್ರಿ). ಬೆಂಬಲವನ್ನು ಪಡೆ; ಒತ್ತಾಸೆಯನ್ನು ಹೊಂದು : ಆ ನರಸಿಂಹಪುರವನಾಳುವ ಭೂಪೋತ್ತಮ ಕಪ್ಪವ ಕೊಡದೆ ಪಾತ್ಶಾಗ ತುರುಕರ ಬಲುಮೆವಿಡಿದು ಚಲವೆತ್ತಿರ್ದನು (ಕಂಪಾ. ೦೯-೨).
[ಬಲುಮೆ (< ಬಲ್ಮೆ ) + ಪಿಡಿ$_1$ ]

**ಬಲುಮೆಳೆ** 'ಬಲ್ಮೆಳೆ' ನೋ.

**ಬಲುಮೊಲೆ** 'ಬಲ್ಮೊಲೆ' ನೋ.

**ಬಲುವಗೆ** 'ಬಲ್ವಗೆ$_1$' ನೋ.

**ಬಲುವರದ** (ನಾ). ದೊಡ್ಡ ವ್ಯಾಪಾರಿ,–ವರ್ತಕ : ತುರಗಬಹಿತ್ರವನಡರಿ ತುರುಕಬಲಶರಧಿಯ ಪೊಕ್ಕು ಬಡಗಣ ವರವಾಜಿಗಳ ತಂದೊಪ್ಪಿಸಿಹನು ಬಲುವರದನಂತಾ ಕಾಟಣ್ಣ (ಕುಮಾಸಾಂ. ೪೨-೮೦).
[ಬಲು (<ಬಲ್ಲಿತು$_1$)+ಪರದ$_1$]

**ಬಲುವಲಗೆ** (ನಾ). ದೊಡ್ಡ ಹಲಗೆ,–ಗುರಾಣಿ : ಮಲೆತ ಹಗೆವನ ಪಡಿಮುಖದ ಬಲುವಲಗೆಯಲಿ ಗದೆಯಿಂದ ರಾಯನ ಬಲುಹ ಬಿರುದಾವಳಿಯ ಬರೆವೆನು ಕೃಷ್ಣ (ಕುಮಾ.ಗ. ೩-೩೨). [ಬಲು (<ಬಲ್ಲಿತು$_1$)+ಪಲಗೆ]

**ಬಲುವಸರ** (ನಾ). ದೊಡ್ಡ ಅಂಗಡಿ : ಒಂದೊಂದು ಸರಳಿನ ಸಸಿನದಲಿ ಶತಸಾವಿರದ ಲಕ್ಷೋಪಲಕ್ಷಗಳ ವಿಷಮವಾನರಭಟರ ಕೊರಳಿನ ಬೆಸುಗೆ ಬಿಟ್ಟವು ಬಿಡುದಲೆಯ ಬಲುವಸರವಾದವು ಲಯಕೃತಾಂತನ ಸಂತೆಯಂದದಲಿ (ತೊರರಾ. ೬-೨೦-೨೪). [ಬಲು (<ಬಲ್ಲಿತು$_1$)+ಪಸರ]

**ಬಲುವಾತು** (ನಾ). ಅತಿಯಾದ ಮಾತು : ಮಡದಿ ಮೋಹದ ಬಲುವಾತಲಿ ಚದುರಂಗದಡಿಯ ಮೇಲ್ವಾಯ ಪೇಳಿದಳು (ಕಂಪಾ. ೬-೦೦೪). [ಬಲು (<ಬಲ್ಲಿತು$_1$)+ಮಾತು$_1$]

**ಬಲುವಾನಿಸ** (ನಾ).=ಬಲುಮನುಷ್ಯ : ಸ್ವಸ್ತಿ ಶ್ರೀಮತು ಕೆಳಲಾದಿರಾಯ ಜಗದೊಬ್ಬಗಂಡ ಹೊಯ್ಸಳದೇವನ ಬಲುವಾನಿಸ ಸ್ವಸ್ತಿ ಶ್ರೀಮತು ಸಿತಗರ ಗಂಡ ಸ್ವಾಮಿದ್ರೋಹರ ಗಂಡ ಜಗದೊಬ್ಬ ಗಂಡ (ಎಕ. IX (೩), ಕನ್ನಶ. ೨೦೬-೩; 1272)) ; ಬದ್ದರದ ಬಲುವಾನಿಸರು [ಪಾಠಾಂ. ಮಾನಿಸರು, ವಾನಿಸದ] ಬಂಡಿಗಳನೊಡ್ಡಿದರಾ ನಿರಂತರ ಶರವ ತಡೆದರು ತೆಕ್ಕೆವರಿಗೆಯಲಿ (ಕುಮಾ.ಶ. ೦೦-೩೦). [ಬಲು (<ಬಲ್ಲಿತು$_1$)+ಮಾನಿಸ$_1$(<ಮಾನುಷ$_1$)]

**ಬಲುವಾಸಿ** (ನಾ). ಅಪಾರವಾದ ಕೀರ್ತಿ : ಮಿಾಸೆ ಸೀದವು ಭಟರ ಸುಯ್ಲಿನಲಾಸೆ ಬೀತುದು ದೇಹದಲಿ ಬಲುವಾಸಿಯಲಿ ಮನ ಮುಳುಗಿತ್ತಾ ಬರಿಗೇಕವಮುಖವಾಗಿ (ಕುಮಾ.ಶ. ೦೩-೬). [ಬಲು (<ಬಲ್ಲಿತು$_1$)+ವಾಸಿ$_1$]

**ಬಲುವಿಡಿ$_1$** 'ಬಲ್ವಿಡಿ' ನೋ.

**ಬಲುವಿಡಿ$_2$** 'ಬಲ್ವಿಡಿ$_2$' ನೋ.

**ಬಲುವೆಸ** (ನಾ). ಶ್ರೇಷ್ಠವಾದ ಕೆಲಸ ; ಉತ್ತಮವಾದ ಕೆಲಸಗಾರಿಕೆ : ಎಸೆವ ಸಭಾಮಂಟಪಮ್ ವಸುಧೆಗೆ ಕಡುಚೋದ್ಯಮೆನೆ ಜಗಂ ಬಣ್ಣಿಸೆ ಚೆಲ್ವೆಸದಿರೆ ಕರವೊಪ್ಪುವ ಬಲುವೆಸದಿಂ ಮಾಡಿಸಿದನೆಸವಿನಂ ಮಾರ್ತ(೦)ಣ್ಡಂ (ಸೌಇಇ. IX–i, ೦೪೬-೩೯ ; 1118).
[ಬಲು (<ಬಲ್ಲಿತು$_1$) +ಬೆಸ$_1$]

**ಬಲುವೊನಲು** 'ಬಲ್ವೊನಲ್'ನೋ.

**ಬಲುವೊರಜೆ** (ನಾ). (ಆನೆಗೆ ಬಿಗಿಯುವ) ದಪ್ಪವಾದ ಹಗ್ಗ : ತುಳುಕಿನುಗ್ಗಡಣೆಗಳ ಹಿಣಿಲಿನ ಬಲುವೊರಜೆಗಳ ಬಾರ ಸಂಕಲೆಗಳನು ಬಿಗಿದರು ಜೋಡಿಸಿದರುಬ್ಬರದ ಮದಗಜವ (ಕುಮಾರವ್ಯಾ. ೩-೨).
[ಬಲು$_1$(<ಬಲ್ಲಿತು$_1$) + ಪೊರಜೆ]

**ಬಲುಸನ್ನೆ** (ನಾ). ಬಲವಾದ ಸನ್ನೆಕೋಲು ; ಬಲಿಷ್ಠವಾದ ಎತ್ತುವ

ಸಾಧನ : ಸುಗ ರಕ್ಕಸ ಕಿಂಕರರು ಬೊಬ್ಬಿಡುದು ಬಲುಸನ್ನೆಗಳಲಾಕ್ಕಿನ ತುಜುಬುಗಳಲೆತ್ತಿದರು ತೇರಿಗೆ ತಗ್ಗಲವನಿತಳ (ಕೊರಡಾ. ೩-೬-೬).

[ಬಲು (<ಬಲ್ಲಿತ್ತು$_1$) + ಸನ್ನೆ$_1$]

**ಬಲುಸರಳು** (ನಾ). ಅಧಿಕಸಂಖ್ಯೆಯ ಬಾಣ : ವಾಳಿಗೆ ತೆರಳದ ಕೋಡ ಬಾಗಿಸಿ ಕಲಿವೃಷಭ ಹೊಗುವಂತೆ ದ್ರೋಣನ ಬಲುಸರಳ ಸರಿವಳಿಗೆ ದಂಡೆಯನೊಡ್ಡಿ ದಳವುಳಿಸಿ . . . ಕಟ್ಟಳವಿಯಲಿ ಹೊಕ್ಕನು ಭೀಮ ಬೊಬ್ಬಿಡುದು (ಕುಮ್ಮಾದ್ರೋ. ೦೩-೦೩).

[ಬಲು (<ಬಲ್ಲಿತ್ತು$_1$) + ಸರಳು$_1$ (<ಸರಲ್$_1$)]

**ಬಲುಸರಿ** 'ಬಲ್ಸರಿ' ನೋ.

**ಬಲುಸಾಹಿಗ** (ನಾ). ಬಹಳ ಶೂರ ; ಮಹಾಸಾಹಸಿ : ಹೊಯ್ಸಳದನ ಡಂಗುರವ . . . ಈಶದತ್ತ ಮಹೋಗ್ರತರ ಬಾಣಾಸನವ ತೆಗೆದೇಱುಸುವ ಬಲುಸಾಹಸಿಗರು[ಶಿಶಾಂ. ಳು]ಬಹುದೆಂದು ಸೂರ್ಯಾಸ್ತಮಯ ಸಮಯದಲಿ (ಕೊಕಠಾ. ೦.೦೩-೦೨). [ಬಲು$_1$ (<ಬಲ್ಲಿತು$_1$) + ಸಾಹಿಗ]

**ಬಲುಸೂಱ್** 'ಬಲ್ಸೂಱ್'ನೋ.

**ಬಲುಸೆಱ್** 'ಬಲ್ಸೆಱ್' ನೋ.

**ಬಲುಹಳಿ** 'ಬಲ್ಪಳಿ'ನೋ.

**ಬಲುಹು** 'ಬಲ್ಪು'ನೋ.

**ಬಲುಹುಗುಂದು** (ಕ್ರಿ). ಬಲಗುಂದು ; ಶಕ್ತಿಗುಂದು : ನಲಿದು ದೈತ್ಯರ ಪಡೆಯನೆಲ್ಲವ ಬಲಿಹರಣ ಮಾಡುತಲು ನೋಡುತ ಬಲಹುಗುಂದದ ರಿಪು ಹಿರಣ್ಯಕಶಿಪುವ ನರಹರಿಯು . . . ನೋಡಾಯನುತಲಗಲಕೆ ಚರಣಹತಿ ಮಾಡೆ (ಸಂಕಶ. ೬-೦೦೦). [ಬಲುಹು (<ಬಲ್ಪು) + ಕುಂದು$_1$]

**ಬಲುಹುರಿ** (ನಾ). ಬಹಳವಾಗಿ ಹುರಿಗೊಳಿಸಿದುದು ; ಬಹಳ ಬಿಗಿಯಾದುದು : ಹರುಷ ಮಿಗೆ ಹರಿತಂದು ಬಂಡಿಯ ಶಿರದ ಹಲಗೆಯ ನಡರಿದನು ಬಲುಹುರಿಯ ಹಗ್ಗವ ಹಿಡಿದು ಜಡಿದನು ಹೂಡಿದೆತ್ತುಗಳ (ಕುಮ್ಮಾ೦. ೦೦-೩೬). [ಬಲು (<ಬಲ್ಲಿತು$_1$) + ಹುರಿ$_3$ <ಪುರಿ$_3$)]

**ಬಲುಹೊಱ್** 'ಬಲ್ಪೊಱ್' ನೋ.

**ಬಲೂತಿ** (ನಾ). ವಂಶಪಾರಂಪರ್ಯವಾಗಿ ಗ್ರಾಮಕ್ಕೆ ಸೇವೆ ಸಲ್ಲಿಸುವ ಕಸುಬು : ಹಳ್ಳಿಗಳ ಬಲೂತಿದಾರರಲ್ಲಿ ಒಬ್ಬ ಕುಂಬಾರನಿಗೆ ಬಲೂತಿ ಇರುತ್ತದೆ (ಕಶಾಗ. ೦೯೪). 'ಬಾರಾಬಲೂತಿ'ಪರಾ.

[← ಮರಾ. ಬಲುತೇ, ಬಲೋಂತೇ]

**ಬಲೂತಿದಾರ** (ನಾ). ಹಳ್ಳಿಯಲ್ಲಿ ವಂಶಪಾರಂಪರ್ಯವಾಗಿ ಬಂದ ಕಸುಬನ್ನು ನಡೆಸಿ ದವಸ ಇತ್ಯಾದಿ ವರಮಾನಗಳನ್ನು ಪಡೆಯುವ ಹಕ್ಕನ್ನು ಹೊಂದಿರುವವನು ; ☛ ಇವರಲ್ಲಿ ಹನ್ನೆರಡು ಬಗೆ. 'ಬಾರಾಬಲೂತಿ' ಪರಾ : ಹಳ್ಳಿಗಳ ಬಲೂತಿದಾರರಲ್ಲಿ ಒಬ್ಬ ಕುಂಬಾರನಿಗೆ ಬಲೂತಿ ಇರುತ್ತದೆ (ಕಶಾಗ. ೦೯೪) ; ಜೋಯಿಸ, ಸೊನ್ನೆಗಾರ, ನಾದಿಗ, ಅಗಸ, ಮುಂತಾದ ಬಲೂತಿದಾರರು ಊರತನದ ಕೆಲಸಕ್ಕೆ ಪೂರ್ವದಲ್ಲಿ ಸಹಾಯ ಮಾಡುತ್ತಿದ್ದರು (ಐಜಕೊ. ೩೩).

[ಬಲೂತಿ + – ದಾರ್$_1$./ಮರಾ. ಬಲುತೇದಾರ, ಬಲೋತೇದಾರ]

**ಬಲೂನು**, ಬೆಲೂನು (ನಾ). ೧. "ಸರಿಸುಮಾರು ಗುಂಡಾಗಿರುವ, ಗಾಳಿತೂರದ ಪಟ್ಟೆಯ ಚೀಲದಲ್ಲಿ ವಾಯುವಿಗಿಂತಲೂ ಹಗುರವಾದ ಅನಿಲವನ್ನು ತುಂಬಿ, ತಾನಾಗಿ ಮೇಲಕ್ಕೇರುವಂತೆ ಮಾಡಿರುವ ಸಾಧನ: ಆಕಾಶಬುಟ್ಟಿ " (Balloon. ೩೬೪೩). ೨. ಮಕ್ಕಳು ಬಾಯಿಂದ ಊದಿ, ಗಾಳಿಯನ್ನು ತುಂಬಿ ಆಡಲು ಬಳಸುವ ಬಣ್ಣಬಣ್ಣದ ತೆಳುವಾದ ರಬ್ಬರಿನ ಚೀಲ : ಉಸುರುಬಾರುಡೆ : ಮಗು ಬಲೂನು ಊದಲು ಬಾರದೆ ಅಳುತ್ತಿದೆ (ಊ೦). **ಬೆಲೂನು** : ೨. ನಾವು ಸೂರ್ಯನನ್ನು ಗಾತ್ರದಬೆಲೂನನ್ನು ಮಾಡಿದರೆ ಅದರಲ್ಲಿ ಒಂದು ಮಿಲಿಯ ಭೂಮಿಗಳನ್ನು ಹಿಡಿಸಬಹುದು (ಅಅಅ. ೯).

[← ಇಂ. Balloon]

**ಬಲೆ**$_1$ (ನಾ). ೧. ಪ್ರಾಣಿ, ಪಕ್ಷಿ ಮೊದಲಾದುವನ್ನು ಹಿಡಿಯಲು ಬಳಸುವ, ನೂಲು ಅಥವಾ ಹುರಿಯಿಂದ ಮಾಡಿದ ಸಣ್ಣಸಣ್ಣ ಕಂಡಿಗಳುಳ್ಳ ಹೆಣಿಕೆಯ ಸಾಧನ ; ಜಾಲ : "ಅನಾಯಃ, ಜಾಳಃ, ಕುವೇಣೀ, ಮತ್ಸ್ಯಬಂಧಿನೀ – ಈ ೪ ಬಲೆ" (ಹಲಾಯು. ೯೬-೧೧೦) ; ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಳಿಗುಗಳಾಗಳೆ ತೊಡರ್ಗುಂ (ಅಂಕ. ೩-೯೯೭) ; ಜಗದಗಲದ ಬಲೆಯನಗಲ ಬಲ್ಲವರ ಕಾಣೆ ಮುಗಿಲುದ್ದಂಬರವನುಗಿಯ ಬಲ್ಲವರ ಕಾಣೆ (ಅದಶ. ೦೯-೪೦); ಬಿಡು ನಾಯಂ ಪೊಸಪುಲ್ಲೆಗೊಡ್ಡು ಬಲೆಯಂ. . . ಎಂದು ಬೊಬ್ಬೆಗುಡುತುಂ ಬಂದರ್ ಪಲರ್ ಧೀವರರ್ (ಕಾದ್ಯಟ. ೨-೩೦). ೨. ಕೇಶಾಲಂಕಾರಕ್ಕಾಗಿ ಉಪಯೋಗಿಸುವ ಬಲೆಯಂತಹ ಒಂದು ಅಲಂಕಾರಸಾಧನ : ಮುಡಿಯ ಮುತ್ತಿನ ಬಲೆ ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ . . . ಕಡುಚೆಲುವೆಯರೆಸೆದಿಹರು (ಕಂಜಶ. ೬-೦೦೪). ೩. (ಅಲಂ) ಮೋಸ; ವಂಚನೆ; ಕಪಟ : ಈ ಪುಲಿಯುಮುತ್ತಾಚಾರಮಾಗಿರ್ದುದು ಇದಱ ಬಲೆಯೊಳ್ ಸಿಲ್ಕವೇಡ (ಕಂಕಕಂ. ೨೩೬-೬); ಈಗಳೀ ದಾನವನ ಬಲೆಯಲಿ ತಾಗಿ ಸಿಲುಕಿತು ನಮ್ಮ ಮೋಹರ (ಕುಮ್ಮಾದ್ರೋ. ೦೬-೨೯); ನೆರೆದಿಳಾಮಂಡಲದ ರಾಯರು ಬೈದು ಭಂಗಿಸುತಾ ವಿದೇಹಜನ ಬಲೆಯನೊಡ್ಡಿದನಿವನು ಲುಬ್ಧಕತಿಲಕನೋ ನೃಪರುಹಿಯೊ ಸಾಕಿವನೊಳಗೆ ಮಾತೇಕೆನುತ ಮಿಗೆ ಮೊಱೆದಿದ್ದರಲ್ಲಲ್ಲಿ (ಕೊರಡಾ. ೦-೦೩-೨೯).

**ಬಲೆಗೆ ಬೀಳು** =೧. ಬೇಟೆಗಾಗಿ ಹರಡಿದ ಬಲೆಯಲ್ಲಿ ಸಿಕ್ಕಿಕೊಳ್ಳು: ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾದೆನೈ (ಕುಮ್ಮಾಸ. ೦೯-೦೨೨); ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾಗೆ ನಳನೃಪ ತಿಲಕನೆಂದನು ಮನದ ದುಗುಡದಿ ತನ್ನ ನಿಜಸತಿಗೆ (ಕಳಕ. ೯-೩೬). ೨. ಪ್ರಭಾವಕ್ಕೆ ಒಳಗಾಗು : ದ್ರೋಹಿಗಳ ರಹಸ್ಯವನ್ನೆಲ್ಲ ತಿಳಿದ ಮೊನೆಗಾರ, ಗುಂಡಪ್ಪನಿಗೆ ನಂಬಿಕೆಯುಂಟಾಗುವಂತೆ . . . ಮಾತನಾಡಿದಾಗ, ಗುಂಡಪ್ಪನು ಆ ಬಲೆಗೆ ಬಿದ್ದು, ತನ್ನ ಪಕ್ಷದವರ ಮಂತ್ರ ತಂತ್ರಗಳನ್ನೆಲ್ಲ ಮೊನೆಗಾರನ ಕಿವಿಗಳಿಗೆ ಪ್ರಕಟಮಾಡುವನು (ಸಂಶಳ. ೦೦೦); ನಿಪುಣನೇ ಈ ಜನಗಳ ಬಲೆಗೆ ಬಿದ್ದಿರಬಹುದೆಂದು ನನಗೆ ಸಂದೇಹವಾಗಿತ್ತು (ಶಾಶಶ. ೦೩೨). **ಬಲೆಯ ಬೀಸು** =ವಶಪಡಿಸಿಕೊಳ್ಳಲು ಪ್ರಯತ್ನಿಸು: ಸ್ವಾಧೀನಕ್ಕೆ ತಂದುಕೊಳ್ಳಲು ಹಂಚಿಕೆ ಹೂಡು : ನುಡಿದವಧಿ ಹದಿಮೂಱು ವರುಷದ ಹಿಡಿತಲೆಯನೊದೆದೆಮ್ಮ ನಮ್ಮಿ ಪೊಡವಿಯರ್ಧಕೆ ಬಲೆಯ ಬೀಸದೆ ಬಿಡುವರೇ ಬಳಿಕ (ಕುಮ್ಮಾ೦. ೨೦-೨೩). **ಬಲೆಯಲ್ಲಿ ಬೀಳು** = ೧. ಬೇಟೆಗಾಗಿ ಹರಡಿದ ಬಲೆಯಲ್ಲಿ ಸಿಕ್ಕಿಕೊಳ್ಳು : ಬಹಳ ಮೀನುಗಳು ಬಲೆಯಲ್ಲಿ ಬಿದ್ದಿವೆ (ಊ೦). ೨. ಜಾಲದಲ್ಲಿ ಸಿಕ್ಕಿಕೊಳ್ಳು : ಮುಗ್ಧನಾದ ಬಾಲಕ ವಂಚಕರ ಬಲೆಯಲ್ಲಿ ಬಿದ್ದನು (ಊ೦).

[ದೇ.॥ ತಮಿ. ವಲೈ; ಮಲ. ತೆಲು. ವಲ; ಕೋತ. ವಲ್; ಕೊಡ. ಪಲ್ ; ಕೊಡ. ತುಳು. ಬಲೆ ; ಗದಬ. ವಲ್ಲ ; ಗೊಂಡಿ. ಒಲ್ಲ]

**ಬಲೆ**$_2$, ಬಳೆ$_3$ (ನಾ). ಒಂದು ಬಗೆಯ ಸಸ್ಯ; ಕಳ್ಳಂಗಡಲೆ: "ವಾರಾಹೀ– ಬಲೆ" (ಓಕ೦. ೦೯೯): "ಹೆಕ್ಕೃತ್ತಿ, ಹೆಕ್ಕುಟ್ಟಿ, ಕಿಸಂಗಿ, ವಿಷಗುಂಬಳ, ಬಲೆ, ಬಿಟ್ಟರಳು, ಬೆಣ್ಣೆಗರಗ, ಭೇದ" (ಹ್ಯ೦. ೦೨೦). **ಬಳೆ** : ಬಳೆಯಂ ಬಱಿಯುಮನೊಂದಿರೆ ತಿಳಿತ್ಯಲದೊಳಟ್ಟು ಘೂಸಿ ತಿಮಿರ್ದುದು ಬಱಿಯಂ ಬಟೆಯಂ ಮಿಸಿಸುವುದಂತಾ ಬಳೆಯ ಕಷಾಯಮನೆ ಬಾಲಕಂಗಿಕೆ ಮಾಣ್ದುಂ (ಕೋಳೋಕ. ೯-೦೬೬). [ ಸಂ. ಬಲಾ ]

**ಬಲೆಗಣ್** (ನಾ). ಬಲೆಯಲ್ಲಿರುವ ಕಣ್ಣು; ಜಾಲದ ರಂಧ್ರ : ಪಲ

ವಾಲಾಪದೊಳೇನೊ ಬೆಲ್ಲುರಾಗಸಂ ಕಟ್ಟಳ್ಕಬಿಂದೆತ್ತಿ ಪೊಪಲರ್ಪನ್ನಂ ಬಗಿದಪ್ಪುದಿರ್ದ ಸಳತೋಳ್ಗಳಂ ಬಂಧದೊಳೊಳ್ದದಿರ್ಪಲರ್ಗಣ್ಗಳಂ ಬಲೆಗಗ್ (ವ್ಯ.ಶಬ. ೨-೬೨). [ಬಲೆ₁ + ಕಣ್ ]

**ಬಲೆಗಾರ** 'ಬಲೆಗಾಜ' ನೋ.

**ಬಲೆಗಾಜ**, ಬಲೆಗಾರ (ನಾ). ೧. ಜಾಲವನ್ನು ಬಳಸುವವನು; ಬೆಸ್ತ: "ಜಾಲಿಕ, ವಾಗುರಿಕ_ಬಲೆಗಾಜ" (ಪಾಣಿಂ. ೬); ಪರ ಕವಂಠ ಮತ್ಸ್ಯಂಗಳಂ ನಿಜಕರದಿನೇಕೋದಕದೊಳೊಡರಿಚಿ ಒರಿಯ ಗಾಳವಸಿಕ್ಕುವಾ ಬಲೆಗಾಜನುಂ ತಾನೆ (ಜಸಪು. ೨೦-೨೮); ಸಪ್ಪುಗಾಜರ ಬಲೆಗಾಜರ ಪರದರ ಕ್ಷತ್ರಿಯರ ಪಾರ್ವರ ನಾಡಿಗರೊಂದು ಜಂಗುಳಿ (ಜಾತಕಾತ. ೬೩-೧೯). **ಬಲೆಗಾರ** : ೧. "ಕೈವರ್ತಃ,ದಾಶಃ,ಧೀವರಃ__ಮೀನುಗಳನ್ನು ಹಿಡಿಯುವ ಬೆಸ್ತರವರ ಹೆಸರು, ಮೀನಿನ ಬಲೆಗಾರರು ಆದರೆ ಪಾಶವಾರ" (ಸಿದ್ಧಾಂತಿ. ೯೧). ೨. ಬಲೆಯಿಂದ ಮೃಗ, ಪಕ್ಷಿಗಳನ್ನು ಬೇಟೆಯಾಡುವವನು ; ಬೇಡ : "ವಾಗುರಿಕಃ, ಜಾಲಿಕಃ . . . ೨ ಮೃಗದ ಬಲೆಗಾರನ ಪೆಸರು" (ಸಿದ್ಧಾಂತಿ. ೬೦೨). [ಬಲೆ₁ + _ಕಾಜ]

**ಬಲೆಗ್ರಾಮ** (ನಾ). ಒಂದು ಊರಿನ ಹೆಸರು : ಗೋಪರಾಷ್ಟ್ರ ವಿಷಯಾನ್ತ[ಃ] ಪಾತಿ ಬಲೆಗ್ರಾಮಃ ಸೋದ್ರಙ್ಗಃ (ಇಆ. IX, ೧೨೪-೦೮; 7ನೆಯ ೫೫). [ಬಲೆ₃ + ಗ್ರಾಮ]

**ಬಲೆದೊಡಕು** (ನಾ). ಜಾಲದಿಂದ ಸಿಕ್ಕಿ ಬೀಳಿಸುವ ಬಂಧನ : ಸಂಯೋಗದ ಸುಖ ಪ್ರೆಯುಂಡವಂಗೆ ಲೋಕದ ಸಚ್ಚುಮಟ್ಟಿನ ಬಲೆದೊಡಕು ತಪ್ಪದು (ಮದೀಶ. ೨೮೭-೬೮). [ಬಲೆ₁ + ತೊಡಕು₃(<ತೊಡಂಕು₃)]

**ಬಲೆಬೆತ್ತ** (ನಾ). ಒಂದು ಬಗೆಯ ಬೆತ್ತ : "ನಾಯಿಬೆತ್ತ, ಬಲೆಬೆತ್ತ" (ಸಸ್ಯಕೋ. ೨೬); ಬಲೆಬೆತ್ತ, ನಾಯಿಬೆತ್ತ (ಪ್ರಶಿ. ೦೫-೨೯೦). [ ಬಲೆ₃ + ಬೆತ್ತ ]

**ಬಲೆಮಣಿ** (ನಾ). ತಾರು ಬಿನ ಬಲೆಯಲ್ಲಿ ಪೋಣಿಸಿರುವ ಅಲಂಕಾರದ ಮಣಿ : ವೀರಮುದ್ರಿಕೆ ನೂಪುರ ಕಾಂಚಿಯು ದಾಮ ಹಾರ ಪದಕ ಹತ್ತ ಕಟ್ಟು ತೋರಮುತ್ತಿನ ಬೊಟ್ಟು ತಾಬುಬಿನ ಬಲೆಮಣಿ ಸೇರಿ ಕಣ್ಗೆಸೆದು ಮೆರೆಗೆ (ಕುಂಜಸಾಂ. ೩೬-೦೫೭). [ ಬಲೆ₁ + ಮಣಿ₂ ]

**ಬಲೆವಜಿ** (ಕ್ರಿ). ಬಲೆಯನ್ನು ಕತ್ತರಿಸು; ಜಾಲವನ್ನು ಹರಿದು ಹಾಕು: ದ್ರವ್ಯಲಿಂಗಿಮಾಗಿರ್ದ ಪುಷ್ಪದಾಡನೆಡೆವೆತ್ತು ರಾಗಿಸಿ ಬಲೆವಜಿದ ಕೊಂಕನಂತೆ ಮನೆಯ ಗುಜಿಯಾಗಿರ್ಪುದುಂ (ಧರ್ಮಾಮೃ. ೭-೧೬೮). [ ಬಲೆ₁ + ಪಜಿ₁ ]

**ಬಲೆವೀಸು** (ಕ್ರಿ). (ಮೀನು, ಪ್ರಾಣಿ, ಪಕ್ಷಿ ಮೊದಲಾದುವನ್ನು ಹಿಡಿಯಲು) ಬಲೆಯನ್ನು ಹರಡು ; ಜಾಲವನ್ನು ಒಡ್ಡು : ಬಲೆವೀಸಿ ಪುಲ್ಲೆಯಂ ಕಡಪು ಕಡಂಗಿ ಪೊಯ್ ಪುಲಿಯುಂ . . . ಎಂಬ ರವಂ ಒರಿದಾಯ್ತರಣ್ಯದೊಳ್ (ಕಾಕೀ.೫-೮೯): ಸುಜವರಗು ನೀರುಳ್ಳ ತಾಣಂಗಳೊಳ್ ಬಲೆವೀಸುತ್ತ ನವೀನಮೀನಮುನದೆಂತುಂ ಕಾಣದೆ . . . ಪುರಪೂರ್ವಾಶಾನದೀವಾರಿಯೊಳ್ ಜಾಲಮುಸಿಕ್ಕುತುಂ ಸೆಳೆಯು (ಶೃಶಬ. ೧೬-೯೨). [ಬಲೆ₁ + ಬೀಸು₁]

**ಬಲೆಹುಲ್ಲು** (ನಾ). ಒಂದು ಬಗೆಯ ಹುಲ್ಲು : "ಬಲೆಹುಲ್ಲು, ಮರಹುಲ್ಲು" (ಸಸ್ಯಕೋ. ೦೨೬). [ಬಲೆ₃ + ಹುಲ್ಲು (<ಪುಲ್) ]

**ಬಲೋದ್ಧತೆ** (ನಾ). ಬಲದಿಂದ ಉಂಟಾದ ಗರ್ವ: ಪರಾಕ್ರಮದಿಂದ ಉಂಟಾದ ಸೊಕ್ಕು : ತಾಯೆ ನೀನವಧರಿಸು ಪೇಳ್ದ ನುಡಿ ಪುಸಿಯಲ್ಲ ಮಾಯಿ ಎನ್ನಾಧೀನ ಮದ್ಬಲೋದ್ಧತೆಯಿಂದೆ ಪ್ರೀಯಮಪ್ಪಂತೆಸಗಿ ಮೋಹಿಸುವುದಿದು ತಥ್ಯ ಮತ್ತೀರಣೆಯ ಮೀರದೆ (ಪಂಣಾರಾ. ೨-೩೯-೩೯). [ಸಂ. ಬಲೋದ್ಧತಾ]

**ಬಲೋದ್ಧಂದಿ** (ನಾ). ಹಿಂಸೆ : ತೊಂದರೆ : ಮಹಾಕೋಪೋದ್ರೇಕದಿಂದ ಬಲೋದ್ಧಂದಿ ಜುಲುಂ ಮಾಡೋಣ ೩ ತಿಂಗಳ ಪರ್ಯಂತರ ಅಥವಾ ೫೦೦ ರೂಪಾಯಿ ಜುರ್ಮಾನೆ (ಗ್ರಾಪೊಳ. ೧೯೩). [←ಮರಾ. ?]

**ಬಲೋನ್ಮತ್ತ**, ಬಳೋನ್ಮತ್ತ (ನಾ). ಪರಾಕ್ರಮದಿಂದ ಗರ್ವಿಷ್ಠನಾದವನು : ಸಾಮರ್ಥ್ಯದಿಂದ ಸೊಕ್ಕಿದವನು : 'ಬಲೋನ್ಮತ್ತತೆ' ಪರಾ. **ಬಳೋನ್ಮತ್ತ** : ಚಳಾವರ್ತರ್ . . . ತಿಳಿಸೀರಂತಪರಜರ್ ಬಳಾವಷ್ಟಂಭಂಗಟ್ಟಡಿಗೆಡಗಿ ಕಂಡರ್ ಒರಿಯನೊಳ್ ಬಳೋನ್ಮತ್ತಂ ದಲ್ ದುರ್ಬಳಮಿಭಹಯಾಸೂನರಬಳಂ (ಶಾಂತಿಪು. ೧೧-೫೫). [ಸಂ.]

**ಬಲೋನ್ಮತ್ತತೆ** (ನಾ). = ಬಲೋದ್ಧತೆ : ಭೀಮನ ಈ ಬಲೋನ್ಮತ್ತತೆಯನ್ನೂ ಬಾಹುಗರ್ವವನ್ನೂ ನೋಡಿ ಹನುಮಂತನು ಮನಸ್ಸಿನಲ್ಲಿಯೇ ನಕ್ಕು . . . ಎಂದನು (ಶಶಕಾ. ೦೫೨). [ಸಂ. ಬಲೋನ್ಮತ್ತತಾ]

**ಬಲೌಘ** (ನಾ). ಸೈನ್ಯದ ಗುಂಪು ; ಸೇನೆಯ ಸಮೂಹ : ಕಾಲಾಗ್ನಿಯಂತೆ ಇಟ್ಟಣಿಸುತ್ತೈದುವ ಸುವೇಗನ ಬಲೌಘಕಿದಿರಿಟ್ಟು ನಿಂದಂ ಭೀಮನುತ್ಸಾಹದಿಂದೆ (ಕೃಬಾಳ. ೯-೨೯); ಕುಶಂ ಬಳಿಕ ನಿಜ ಹಸ್ತಲಾಘವದೊಳಲ್ಲಿರ್ದರಂ ಸದೆದು ಲವನಂ ಬಲೌಘಮೊತ್ತಾಯದಿಂ ಮುತ್ತಿಕೊಂಡಿರ್ದ ಕೋಲಾಹಲವನಾಜಿಸಿದನು (ಕೃಬಾಳ. ೨೦-೬೮). [ಬಲ₃ + ಓಘ]

**ಬಲ್ಕಣೆ₁**, ಬಲುಕಣೆ (ನಾ). ೧. ಬಹಳ ಶೂರನಾದವನು ; ಮಹಾಪರಾಕ್ರಮಿ: ಬಲಿಷ್ಠ: ಸಮರ್ಥ : ಕಣೆಯುಂ ಶೌರ್ಯಾಭಿಮಾನಕ್ಕೆಡೆಆದ ರಿಪುಸೈನ್ಯಕ್ಕೆ ಸಂಗ್ರಾಮದೊಳ್ ಬಲ್ಕಣೆಯುಂ . . . ಸಾಮಂತಚೂಡಾಮಣೀಯುಮಣಿಯುರಂ ಬಂದು ಕಂಡಂ ಸುರೇಂದ್ರಂ (ಶಂಶಾ. ೬-೯೫); ಗುಣನಿಧಿ ನಂದಿವರ್ಧನನ ನಾಡುವನಾಳ್ವಿಸಕೆಯ್ಸಿ ವಿಶ್ವಧಾರಿಣಿಯುಮಜ್ಞೆಗೆಯ್ಕದೆ ನಗಂ ಬೆಸಕೆಯ್ವೊಡೆ ಪಾಳಿಸಾಂತ ಬಲ್ಕಣೆಯನಘಾರಿಯುಂ ತವಿಪ ಕಾಲಮಾದಿನ್ನನಗೆ (ಶಾಂತಿಪು. ೯-೧೦೯): ಫಣಿರಾಜಂ ಬಾರಿಯಿಟ್ಟಟ್ಟಿದೊಡನುದಿನದಿಂ ಬರ್ಪ ಸರ್ಪಂಗಳಂ ಬಲ್ಕಣೆ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಾಗಿರಿಯೊಳಿರ್ಪಂ (ಕಾವ್ಯಾವ. ೯೦೦). ೨. ನಿಪುಣ ; ನಿಷ್ಣಾತ ; ಪರಿಣತ : ನಾಲ್ಕುಮುಖಾಯದ ನುಡಿಗಳ್ ಸಿಲ್ಕಾಸಿಲ್ಕಿಗಳನೆಯ್ದೆ ನುಡಿದೈ ಕ್ರಮದಿಂ ಬಲ್ಕಣೆಯ್ಯ ನಯದೊಳ್ನುಡಿಯುಲ್ಕೊಂಕಂ ಕಲ್ವುದಲ್ತೆ ನಿನ್ನೊಂದಿಗರೊಳ್ (ಶಾಂತಿಪು. ೩-೯೧); ನಾಲ್ಕೆಂಬ ವೀಥಿಯೆಡೆಯೊಳ್ ನಾಲ್ಕುಜಮಾಜಿ ಜಿಗೊಳೆ ಮಾಜಿಯುಂದುಂ ಕೊಳ್ ನೀಂ ಸಿಲ್ಕಿಲ್ಲದೆ ಕೂಡಯ್ದಂ ಬಲ್ಕಣೆ ನೀನೆಯ್ದುಗೆಯ್ದು ಕಳೆ ಪಡೆದನಿತಂ (ಅಬ್ಧಿಖು. ೦೨-೫೦). ೩. ಬಲಿಷ್ಠವಾದುದು; ಸಮರ್ಥವಾದುದು; ಪ್ರಬಲವಾದುದು : ಗುಣವಂತಂ ಸತ್ವಗುಣಾಗಣಿತಂ ನಿರ್ಮಳನದಶನನಾಯುಷ್ಯಂ ಬಲ್ಕಣೆಯುಪ್ರವೃತ್ತಿಯ್ಯುಬ್ಬದೆ ಕ್ಷಣಮಾತ್ರಕ್ಕೆಬೆಳ್ಪುವು (ಅಕ್ಕಶಾ. ೬-೨೫). ೪. ಪವಿತ್ರವಾದ ಸ್ಥಳ: ಅಣಿವಿಣಿಗೆಯ್ದಾ ಧರ್ಮ್ಮವನಣಿಯುರಮಳಿದೊಂಗೆ ಪೆಜಿಸು ಗತಿಯಿಲ್ಲಾ ಬಲ್ಕಣೆ ವಾರಣಾಶಿಯೊಳ್ಪಸುವುಂ ಬ್ರಾಹ್ಮಣರನಳಿದನಜಿಗುಜಿಗಿಳಿದ (ಕರ್ಣಾಶಾ. XX. ೦೯-೫೬; 1016); ಪೆರತು ಗತಿಯಿಲ್ಲಾ ಬಲ್ಕಣೆ ವಾರಣಾಸಿಯಲ್ ಬ್ರಾಹ್ಮಣರುಂ ಪಸುಗಳ್ಮನಳಿದನಜಗುಜಿಗಿಳಿದಂ (ಎಕ. VII. ಶಿಕಾ. ೧೫೩-೩೫; 1039). ೫. ಪರಾಕ್ರಮ; ಸಾಮರ್ಥ್ಯ : ನೀನಿನಿಸಾನುಂ ಬಲ್ಕಣೆಯ ಗಂಡನೆ (ಲಂಹಂ. ೬-೫೦ ಶ). ೬. (?) : ನಿನ್ನಂ ಕೊಟಿದ ದಕ್ಕ ಬಲ್ಕಣೆಯನೊತ್ತಿದಂತೆ ನುಗ್ಗ ಮಾಡಮೆಂಬಾಯೆನೆ (ಲಂಹಂ. ೬-೫೦ ಶ). **ಬಲುಕಣೆ** : ೨. ಬಲುಕಣೆಗಳೆಮದಿರನು ಕರಿ ಮುಂಕೊಳಿಸಿ ಕೆಡಹಿತು (ಕುಮಾರದ್ರೋ. ೩-೨೯); ಫಣಿವಿಭೂಷಾಧಾಸುರರ ಬಲುಕ[ಪಾಠಾಂ. ಗ]ಣೆಯ ಬವರವನಸುರಕುಲಭೀಷಣ ಹಿರಣ್ಯಕರದಟು ಮಿಕ್ಕುದು (ಕೊರಂ. ೬-೦೬-೩೯). ೭. ಆಶ್ರಯವಾಗಿರುವವನು ; ನೆಲೆಯಾದವನು: ಗುಣಜಳನಿಧಿ ತೇಜದ ಬಲುಕಣೆ . . . ಸಾಮಾಸಿಗವಂಶಾಗ್ರಣಿಯೆನೆ ವಿಭುಪಲ್ಲಿಕಾರ್ಜ್ಜುನಂ ರಂಜಿಸುವಂ (ಕರ್ಣಾಶಾ.

XX, ೨೯೬-೨೩: 1228).

[ಬಲ್₂(<ಬಲ್ಲಿತು₁)+ಕಣ್ಮ₆./ತುಳು. ಬಲ್ಕಡಿ, ಬಲ್ಗಡಿ]

**ಬಲ್ಕಣ್ಮ₂** (ನಾ). ಒಂದು ಬಗೆಯ ಮರ (?) : ಪುನದಕ್ಷಿಣಸ್ಯ ದಿಸಿ ಬಹುಶುಷ್ಕಹಿಯೆ ಬಲ್ಕಣ ವೃಕ್ಷವೆ ಪುನಪಶ್ಚಿಮ ಮುಖದೆ ಸನ್ನ ಬಹು ಮೂಲಿಕಪೆನ್ನಿಯ . . . ಕೂಡಿತ್ತು ಸೀಮಾನ್ವರಂ (ಎಕ. I, ೦-೨೯ ; ೪೦೫). [?]

**ಬಲ್ಕಣಿತನ** (ನಾ). ೧. ಶೌರ್ಯ ; ಪರಾಕ್ರಮ : ಅಣೆದಿರ್ದ ತೋಳ್ ಬಿಡೆ ಬಲ್ಕಣಿತನದಿಂದಭಿಸಿಷಾದಿಗಳ್ ಜವದಿಂದು ಮಣಿಗಳೆಂಕಿಂಗಳಾಗಿರೆ ರಣಾಗ್ರದೊಳ್ ಪಿಡಿದು ಮನ್ನನದ್ವಿರದಂಗಳ್ (ಪರ್ವಮಾ· ೪-೬೨). ೨. ರಭಸ ; ಜೋರು : ಕಣಿಕಮನಾಜ್ಯದಿಂ ತೊಡೆದು ಮೋದಿಸಿ ದಿದ್ದಮು ಮಾಗೆ ಪೊಯ್ದು ಬಲ್ಕಣಿತನದಿಂದಮೊತ್ತಿ ಮಿದಿದು (ಲೋಕೋಪ. ೬-೦೩). ೩. ಧೈರ್ಯ : ತತ್ಕುಮಾರತಾಪಸರ್ ತಾಪುವೊಳಗಜಿಯದೆ ತಜಿಸಂದು ನಿಂದು ನಿರವಧಿಧೈರ್ಯನಿಧಿಯಪ್ಪ ನಾಭಿನಂದನನ ನಿಯಮದವಸಾನವಂ ಬಲ್ಕಣಿತನದಿಂ ಕಲವು ದೆವಸಂಬರಂ ಪಾರ್ದು ತೀರ್ವುದುಂ (ಪರ್ವಕ್ಕೆ· ೦೦-೯೦ ವ). [ಬಲ್ಕಣ್ಮ₁ + — ತನ]

**ಬಲ್ಕೆ**, ಬಲಿಕೆ (ನಾ). ೧. ಜೋರು ; ರಭಸ : ಭೂರಮಣ . . . ಹತ್ತಿರಕೆ ಬಂದು ತಾಗಿದ ಸರಳ ಬಲ್ಕೆಯಿಂ ಕಿತ್ತು ಸಗ್ಗಳೆಯುಬಕದಿಂದ ಜೋರಿಡುತಿರ್ದ ನೆತ್ತರಂ ತೊಳದೊರಿ ಪ್ಯುಗವಪರೆ ಮಾನಿಸರು ಕ್ರೀಡೆಯಿಂ ನೊಂದಿರೀದಂ (ತುರಂಗ. ೦೦-೦೯). ೨. ದೊಡ್ಡದಾದುದು ; ಹಿರಿದಾದುದು : 'ಬಲ್ಕೆವೆಱು' ಪರಾ. **ಬಲಿಕೆ** : ೩. ಹೆಚ್ಚಳ ; ಆಧಿಕ್ಯ : "ಬೃಂಹಸ್, ಬೃಂಹಿಃ, ಬೃಂಹುಃ, ಬೃಂಹಣಾ, ಬೃಂಹಿತಂ, ಈ ೫ ಬಲಿಕೆ" (ಶಾಕಸ್ಯ. ೬೬) ; ಮಲಂ ಪಿಂಗಿದಂಗದೊಳು ಸಡಿ ಮೂಲವಲಮಿಹುದು ಮೇಣ್ಮಲ ತೊಲಗಲಾ ದೇಹದ ಹುಗು ಮತ್ತೇಕ ಮಲಬಲಿಕೆಯಿಂ ರಾಜಿಸಿರ್ಪಂಗಕ್ಕೆ ಲಿಂಗಸಮವಾದ ರುದ್ರಾಕ್ಷಿ ಭಸಿತಂಗಳಂ ಧರಿಸಿಯಾ ದೇಹ ಸಹ ನೀವು ತಲ್ಲಿಂಗವ ಪಿಡಿಯಲಕ್ಕುಮೆ (ಬಸವೇಶ್ವ. ೬-೬೩). ೪. ಬೆಳವಣಿಗೆ ; ಅಭಿವೃದ್ಧಿ ; ಏಳಿಗೆ : ಇಕ್ಷುದಂಡ ಬಲಿವುವಕ್ಕೆ ಮೊದಲೆ ತನಿರಸ ಬಹುದೇ ನಾನು ನೀನೆಂಬುದಕ್ಕೆ ಸ್ಥಾನಾಪಹುನಕ್ಕೆ ಭಾವದ ಬಲಿಕೆ ಇನ್ನಾವುದೋ (ಸೋಲಿಪಾ. ೩೨-೨೦೩) ; ಶಿಲೆಯ ಪ್ರತಿಷ್ಠೆಯ ಮಾಡಿ ತನ್ನ ಬಲವರ ವಿಶ್ವಾಸದಿಂದ ಬಲಿಕೆಯುನಜಿವುದು ಶಿಲೆಯೊ ಮನವೊ (ಬಸವ. ೯೦೦-೦೫೦೩) ; ಬೆಳೆದೆ ನೀನಾ ಸೂತಕವ ಹೊತ್ತು ಉದರದೊಳು ಬಳಿಕ ಹೊಲೆ ಮಾಡುದಾಕೆಗೆ ನಿನ್ನ ಬಲಿಕೆಯೊಳು (ಬೀಷ್ಮೋ. ೯೩-೨೦). ೫. ಬಲಿತಿರುವಿಕೆ; ಗಟ್ಟಿಯಾಗಿರುವಿಕೆ ; ಬಿರುಸಾಗಿರುವಿಕೆ : ಬಲಿಕೆಗೆ ಮೊದಲು ಅಡಕೆ ಮದುವಾಗಿರುತ್ತದೆ (ರೂಢಿ). 'ಬಲಿಕೆಲನ್ನ' ಪರಾ. ೬. ಪರಿಣತಿ; ಪ್ರೌಢಿಮೆ: ನಲಿದಾಡುತೆಯ್ದುಂದು ಸಹಭೋಜನೆಂಬುದೊಂದೆ ಳೆಗೂಸು ಕೈಯೊಳು ಪಿಡಿದು ಗಿಲಿಕೆಯ ಕೋಲನಿತ್ತಯ್ಯಗೆಗಿಗಿತಿದು ಬಲಿಕೆಯ ಮೆಚ್ಚಲ್ಕೆಯೊಂದ (ಶಶಕ. ೯೬-೦೩೬) ; ಪರರಂ ಜಯಿಸ ಬೇಕೆಂದೇ ಕಲಿತಿರಲ್ಲದೆ ನೀವು ಮುಕ್ತಿಗೆ ಕಲಿತುದಿಲ್ಲಂ ನಿಮಗೆ ಶಾಸ್ತ್ರದ ಬಲಿಕೆಯುಳ್ಳವರೆನಿಸಿಕೊಂಬುದೆ ಮುಕ್ತಿಯೆಂದಿಹಿರಿ (ಸಂಕರಾ. ೦೨-೬). 'ಬಲಿಕೆವಂತ' ಪರಾ. ೭. ರಚನೆ ; ಮಾಟ; ನಿರ್ಮಾಣ : ಅದು ತೃಣದ ಲೆಪ್ಪದ ಬಲಿಕೆಯೊ ತನ್ನ ಚಿತ್ರದ ಬಲಿಕೆಯೊ (ಜರೀಶ. ೦೬೬): ದಳವಾಡಸಹಿತ ಬೈಚಪ್ಪ ದುರ್ಗವ ಹೊಕ್ಕು ತಳುವದದಱ ಬಲಿಕೆಯನು [ಶಾಂತಾ· ಬಲಿಕನ್ನು] ಬಳಸಿ ಬಳಸಿ ನೋಡಿ ದುರ್ಗಸೌರಣೆಯನಂದಲಸದೆ ಮಿಗೆ ಮಾಡಿಸಿದನು (ಶಂಕಾಸಂ. ೩೬-೩೦).

ಬಲಿಕೆಯಾಗು = ೧. ಗಟ್ಟಿಯಾಗು ; ಬಲಿ ; ಬಿರುಸಾಗು : ಬಲಿಕೆಯಾಗದ ಅಡಕೆ ಬಣ್ಣ ಕಟ್ಟಲು ಚೆನ್ನಾಗಿರುತ್ತದೆ (ರೂಢಿ). ೨. ಬಿಗಿಯಾಗು ; ಬಲವಾಗು ; ಭದ್ರವಾಗು: ಕ್ಷಣದೊಳಗೆ ವಾವೊಂದ ನರರ ತೆಗೆದಲ್ಲಿ ನೆಟಿ ಬಿರಿದ ಕುಕ್ಷಿಯುಂ ಸಸಿನೆ ಮಾಡುತ ಕಟ್ಟಿದಾ ಬಲಿಕೆ ಯಪ್ಪಂದದೆ (ಬೀಷ್ಮಪು. ೩-೯-೨೬).

[ಬಲ್₂ (<ಬಲ್ಲಿತು₁)+ — ಕೆ./ ತುಳು. ಬಲಿಕೆ]

**ಬಲ್ಕೆಲೆ** (ಕ್ರಿ). ಬಹಳ ಮಾತನಾಡು : ಲೋಚನಯುಗ್ಮದಿಂದೆದೆಬಲಂಗಳ ನೀಕ್ಷಿಸಿ ತನ್ನ ನಲ್ಲನಂ ಸೂಚನೆಗೈದು ಕೂಡೆ ಕರದೊಯ್ಯನೆ ಬಲ್ಕೆಲೆಯುತ್ತು ಮಾತನೊಳ್ (ಅರ್ಥಾಧಿ. ೨-೮೦). [ಬಲ್₂ (<ಬಲ್ಲಿತು₁) + ಕಲೆ]

**ಬಲ್ಕೆವೆಱು** (ಕ್ರಿ). ಹಿರಿದಾಗು ; ದೊಡ್ಡದಾಗು : ನಿಲ್ಕಡವೆತ್ತಂದಿ ನಾಯುಯುವ್ಯಮೇಭತ್ತನಾಲ್ಕು ಲಕ್ಷಾಂಕಪೂರ್ವಗಳು ಬಲ್ಕೆವೆತ್ತಾ ಪೂರ್ವೆ ಯೆಂದರಷ್ಟೆಂಬುದ ಸಿಲ್ಕಾಗದಂತೆ ಪೇಳುವೆನು (ಶಶತ. ೬೬-೬).

[ಬಲ್ಕೆ + ವೆಱು₁]

**ಬಲ್ಕೇಡಿಗ** (ನಾ). ಬಹಳ ಕೇಡಾಳಿಯಾದವನು ; ಅತಿ ದುಷ್ಟಸ್ವಭಾವ ದವನು : ಕೇಡಿಗರೊಳವನೋರ್ವನೇ ಬಲ್ಕೇಡಿಗನು (ಶರಶತ. ೨೫೦-೯೩).

[ಬಲ್₂ (<ಬಲ್ಲಿತು₁) + ಕೇಡಿಗ]

**ಬಲ್ಗಂಡ**, ಬಲುಗಂಡ (ನಾ). ಬಹಳ ಶೂರನಾದವನು ; ಅತ್ಯಂತ ಪರಾಕ್ರಮಿಯಾದವನು : ಪರಾಂಗನಾಪುತ್ರಂ ಮಲೆಗೆ ಮಾರ್ತಾಂಡಂ ಗಜಕ ಬಲ್ಗಂಡಂ ಹಯವತ್ಸರಾಜಂ (ಎಕ. VII, ಶಿಕಾ. ೩೬-೦೦ ; 1027) ; ಚೋಳಕುಳಕಾಳದಣ್ಡಂ ಸಬರೆ ಬಲ್ಗಣ್ಡಂ ಕಲಿಗಳಾರಾಧ್ಯನಾಗ್ಗ ಮಸಾಧ್ಯಂ (ಸೌಇಇ. XI-i, ೯೬-೪; 1062); ಉದಾರಮಹೇಶ್ವರಂ ಚಲಕೆ ಬಲ್ಗಣ್ಡಂ ಶೌರ್ಯ್ಯಮಾರ್ತ್ತಣ್ಡಂ . . . ಶ್ರೀಮನ್ಮಹಾಮಣ್ಡಳೇಶ್ವರಂ ಲಕ್ಷ್ಮರಸರ್ (ಸೌಇಇ. XX, ೯೬-೬ ; 1074) **ಬಲುಗಂಡ** : ಯಾದವ ಕುಳಾಮ್ಬರದ್ಯುಮಣಿ ಸಮ್ಯಕ್ತ್ವಚೂಡಾಮಣಿ ಮಲಪರೊಳ್ಗಣ್ಡ ಚಲಕೆ ಬಲುಗಣ್ಡ . . . ತಳಕಾಡುಗೊಣ್ಡ (ಎಕ. II, ೦೯೩-೨೦ ; 1131).

[ಬಲ್₂ (<ಬಲ್ಲಿತು₁) + ಗಂಡ₁]

**ಬಲ್ಗಂಡಿಕೆ** (ನಾ). ಬಹಳ ಶೂರತನ ; ಅತ್ಯಂತ ಪರಾಕ್ರಮ : ಒಳಕೆ ಯ್ಯೊಳಿರ್ದು ಪಲ್ಗಿರಿದೊಳವಾಲಂಗೊಂಡು ಮೊರೆವ ಭಷಕನ ತೆಱದಿಂದೊಳ ಪೊಕ್ಕು ದುರ್ಗಮಂ ಸಂಚಳಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯಂ (ಕಾವ್ಯಾವ. ೨೪೪) ; ಈತನಲ್ತೆ ಮುಳಿದೆನ್ನನಿಲ್ಲಿ ಪೊದಱಿಕೊಳ್ ಬಲ್ಗಂಡಿಕೆ ಯನಾಳಿಮೆಟ್ಟಿದೊನೆಂದೊಡರ್ಜುನನಾ ಬಂದಾತನೆನೀತಂದಂ (ಬಂಹಂ. ೦೦-೩೦ ವ). [ಬಲ್₂ (< ಬಲ್ಲಿತು₁) + ಗಂಡಿಕೆ₁]

**ಬಲ್ಗಂಡಿಕೆಗಾಣ್** (ಕ್ರಿ). ಅತಿಶಯವಾದ ಶೌರ್ಯವನ್ನು ಕಾಣು ; ಅತ್ಯಂತ ಪರಾಕ್ರಮವನ್ನು ತಿಳಿ : ಪೊದಱಿಂದಂ ಪೊಱಮಟ್ಟು ಕಟ್ಟಿದಿ ರೊಳಾರ್ಪಿಂ ಗರ್ಜಿಸುತ್ತಿರ್ಪ ಬಗ್ಗದ ಬಲ್ಗಂಡಿಕೆಗುಡು ಗಂಡುಗಲಿ ಬೇಡಂ ಖಡ್ಗದ ಬೆನ್ನೊಳ್ ಮೊನೆದೋಱಿಮಿಱಿ ತಿವಿದಂ ತತ್ಕಾಳ ಮೇಘಾಭ್ಯಯಂ (ರಾಜಶೇ. ೩ ೯೯). 'ಗಂಡಿಕೆಗಾಣ್' ಪರಾ.

[ಬಲ್ಗಂಡಿಕೆ + ಕಾಣ್]

**ಬಲ್ಗಂಡು** (ನಾ). = ಬಲ್ಗಂಡಿಕೆ : ಗಂಡುಡೆಯುಟ್ಟು ಕೈದುವಿಡಿದುಮ್ಮ ಳವಂ ನಿನಗುಂಟುಮಪ್ಪೊಡೆ ಬಲ್ಗಂಡಿನ ದೇವ ಮಾನವ ವಿಯಚ್ಚರ ರೊರ್ವರುಮಿಲ್ಲ (ಶಂಬರಾಮಾ. ೯-೦೩೪). [ಬಲ್₂ (< ಬಲ್ಲಿತು₁) + ಗಂಡು]

**ಬಲ್ಗಂದ** (ನಾ). ಬಹಳವಾದ ಪರಿಮಳ ; ಅತಿಶಯವಾದ ಸುವಾಸನೆ : ಹಯುತತಿಗೆ ಮೊಗರಂಬ ಕಡಿಯಣಂಗಳನಿಟ್ಟು ಪಲ್ಲಣದ ಬಿಗುಹುಗಳ ತಾವಣೆಯ ಲೀವೆಗಳನಳನಡಿಸಿ ಬಲ್ಗಂದವಿಡಿದು ನಮಿಸಿ ನೆಗೆದಡರಿ. . . ಕಾದುತ್ತಲಿರ್ದರಿರ್ಬಲದ ಘೋಟಾರೂಢರಾಹವದೊಳು (ಶಂಕ್ಷ. ೯೯-೩೦).

[ಬಲ್₂ (< ಬಲ್ಲಿತು₁) + ಗಂದ]

**ಬಲ್ಗಂಬ** (ನಾ). ಬಲವಾದ ಕಂಬ ; ಬಲಿಷ್ಠವಾದ ಸ್ತಂಭ : ರಾಜಾಂಗಣದ ಬಯಲ ಬಲ್ಗಂ[ಶಾಶಾಂ. ಬಾಳ್ಗಂ]ಬಂಗಳೊಳ್ ಸೆಱಿಗೆ ಯ್ದಿರ್ದ ಜಾವದಾನೆಗಳ ಮೇಲೆಡೆಗೆಡದು ಮೂವಳಸಾಗಿ ಮುಸುಂಕಿ

ತನ್ನ ಜಂಗಳ್ಗೆ ಪಾಲ್ಗಡಲ ನಡುವಣ್ಗೈರಾವತದ ಲೀಲೆಯನೋಲಗಿಸಿಯುಂ (ಕಂಕ್ರಪ್ರ. ೬-೯೪ ವ): ಸಪ್ತಮದಾವಸ್ಥೆಯಿಂ ಪಿಂದುಮಗಾನದೆ ಬಲ್ಗಂಬ[ಪಾಠಾಂ. ಭ]ಮಂ ಮುಱಿದು ಸಿಗಳಮಂ ಪಱಿದು ಸಿಟ್ಟೋಟದಿಂ ಬೀದಿವರಿದು (ಅಜಿತಪು. ೬-೦೦ ವ).

[ಬಲ್$_{2}$ (< ಬಲ್ಲಿತು$_{1}$) + ಕಂಬ$_{1}$ (< ಕಂಭ)]

**ಬಲ್ಗಜ್ಜ**, ಬಲುಕಜ್ಜ, ಬಲುಗಜ್ಜ (ನಾ). ಬಹಳವಾದ ಕಾರ್ಯ; ವಿಶೇಷವಾದ ಕೆಲಸ: ಮತ್ತಾಸಾಧೀಶಂ ತಾನ್ಮೊದಲುಜ್ಜುಗಿಸಿದ ಬಲ್ಗಜ್ಜಮೆ ನೇಮವೆ ತನಗೆನುತವೆ ತನುವಿನವೊಂದಾಸೆಗೆ ಜಗಗುಪದ ಸಾಮಜಗಮನೆ ಸುಲೋಚನೆಯಾವುದ್ವಾಮ ಸದಿಯ ಪೆಮ್ಮಡುವಂ ಪೊಕ್ಕಳ್ (ಆದಿಪು. ೯-೨೯). **ಬಲುಕಜ್ಜ**: ಉಲುಂಪೆಯೇನಧಿಕವೈ ಪರತನು ಮುಂದಿನ್ನು ಬಲುಕಜ್ಜವುಂಟಪಜಿಂದ ತೊಲಗದವ್ಯೊತ್ತಿನೊಳಿರು (ಜಕತ. ೨೭-೨). **ಬಲುಗಜ್ಜ**: ಹಲವು ಕೋಶಕೆ ಕಡಿವೆಯಿಲ್ಲವಿ ಚತುರಂಗಬಲದೊಳಿರ ದಿಲ್ಲವಿಂದೆನ್ನೆಡೆಗೆ ನೀಂ ಬರ್ಪ ಬಲುಗಜ್ಜವಾವುದುಂಟೆನೆ (ತಂಪ್ರ. ೯-೨೦).

[ಬಲ್$_{2}$ (< ಬಲ್ಲಿತು$_{1}$) + ಕಜ್ಜ]

**ಬಲ್ಗಟ್ಟ** (ನಾ). ದೊಡ್ಡ ಅಣೆಕಟ್ಟು: ಬಳ್ಳರಾಜಂ ಹರಿದ್ರಾನದಿಯುಂ ಬಲ್ಗಟ್ಟಿಯಂ ಕಟ್ಟಿಸಿ . . . ಅಖಿಲಜನಕೆ ಸಂಜೀವನೋಪಾಯಮಂ ಮಾಡಿದಂ (ಎಕ. XI. ದಾವಣ. ೨೯-೬. 1424)

[ಬಲ್$_{2}$ (< ಬಲ್ಲಿತು$_{1}$) + ಕಟ್ಟ$_{1}$]

**ಬಲ್ಗಡಣೆ** (ನಾ). ದೊಡ್ಡ ಸಮೂಹ, — ರಾಶಿ: ಕಡಲ ಮುನ್ನಱಿಯದ ಪೆಂಗಳಚ್ಚರಿವಟ್ಟು ನಿಡುಬೆರಳಟ್ಟು ನಾಸಿಕಕೆ ಮುಡಿಯೊಲೆದೊಲೆದು ನೋಡಿದರದಱಿಂದು ಬಲ್ಗಡಣೆಗೆ ಬಗೆಯೊಳು ಮೆಚ್ಚಿ (ಜಕತ. ೨೩-೯೩).

[ಬಲ್ (< ಬಲ್ಲಿತು$_{1}$) + ಗಡಣೆ$_{1}$ (< ಗಡಣ)]

**ಬಲ್ಗಡಲ್**, ಬಲುಗಡಲು (ನಾ). ದೊಡ್ಡ ಸಮುದ್ರ; ವಿಶಾಲವಾದ ಸಾಗರ: ಅಡಿಗಡಿಗಾನಂದವೆಂಬ ಸಾಗರವನೊಕ್ಕುಡಿತೆಯ ಮಾಡಿ ಸೇವಿಪನು ಒಡನೊಡನೀಂಟದಪ್ಪಕೆ ಹೆಚ್ಚಿ ಕಡಲು ಬಲ್ಗಡಲಾಗುತಿಹುದು (ಜಕತ. ೦೬-೬೦). **ಬಲುಗಡಲು**: ಬಗೆವುದೇ ಬಲುಗಡಲು ಮಂಜನ ಮುಗಿಲವಳಿಯುನು (ಕುವ್ಯಾಸ. ೦೦-೧೦). [ಬಲ್$_{2}$ (< ಬಲ್ಲಿತು$_{1}$) + ಕಡಲ್$_{2}$]

**ಬಲ್ಗಣೆ**, ಬಲುಗಣೆ (ನಾ). ಬಲವಾದ ಬಾಣ; ಶಕ್ತಿಯುತವಾದ ಬಾಣ: ಕೋಲ್ಗಾರೊಳ್ ಸುರಿವಾಲಿವರಲ್ಗಳವೊಲ್ ನೆತ್ತಿಯೆಡೆವು ಮುತ್ತುಗಳೆತ್ತಂ ಗಲ್ಗಲನೆ ಸುರಿಯೆ ಜೋದರ್ ಬಲ್ಗಣೆಯಿಂದೆಚ್ಚರದಟ ನಿಂದಾನೆಗಳಂ (ಕಕ್ಕಗಾ. ೨೬೨); ಬಲ್ಗಿಚ್ಚ ಪಳಿವ ಲಿಂಗಂ ಮೂಡೆ ಕಣ್ಗೆಟ್ಟು ಕಾಲ್ಗಾಣದಾವನಾ ಕಾಳ್ಗೆಯ್ಯಕಳ್ಕುತೆ ತುಳಿಲ್ಗುಂದಿ ನಾಲ್ಮೊಗಂ ತಲೆಗಂಡನೇ ಶಿವನ ಬಲ್ಗಣೆಯ ಪೋಲ್ಗಾವನು (ಶಾಪಶಾಂ. ೩-೨೬). **ಬಲುಗಣೆ**: ಅಣದಣದು ಹೋಹವನ ಗಗನಾಂಗಣದ ಮಾರ್ಗಿಯ ಮಾಡದಿರ ಬಲುಗ[ಪಾಠಾಂ. ಕ]ಣೆಯ ಭಟನೇ ತಾನೆನುತ ಹೊಜವಂಟ ನಾಹವಕೆ (ಕೂರಿಕಾ. ೯-೩-೯). [ಬಲ್$_{2}$ (< ಬಲ್ಲಿತು$_{1}$) + ಕಣೆ$_{1}$]

**ಬಲ್ಗಣ್ಣಿ** (ನಾ). ಬಿಗಿಯಾದ ಹಗ್ಗ: ಮರೆಗೀತೊಡ್ಡೊಡ್ಡು ಬಲ್ಗಣ್ಣಿಯ ಬಲೆಗಳನಂತೊತ್ತುಗೊಳ್ಕೊತ್ತುಗೊಳ್ಳೇ ಸರದಿಂ. . . ಎಂದೆನುತ್ತಾತುರ ದಿಂದೋರೆರೊರ್ಬರೊಳ್ ಸಾಱುವ ಶಬರರ ತೀವ್ರಸ್ವನಂ ಪರ್ಬಿತಾಗಳ್ (ಕುಮುದಾ. ೦೯-೨೬); ಅಣ್ಣಾದೇವನೊಳಿಡಿದ ವಾತ್ಸಲ್ಯಮೆಂಬ ಬಲ್ಗಣ್ಣಿಯೊಳ್ಕಟ್ಟುವಡೆದಲ್ಲನಲಜಿಯುವೆ ನಿರ್ವಿಣ್ಣಭಾವದೊಳಂದು ಲಕ್ಷ್ಮಣಂ. . . ಇಂತೆಂದನು (ಕೃಮಿಪಾ. ೦೮-೬೦). [ಬಲ್$_{2}$ (< ಬಲ್ಲಿತು$_{1}$) + ಕಣ್ಣಿ]

**ಬಲ್ಗತ್ತಲೆ**, ಬಲುಗತ್ತಲೆ (ನಾ). ದಟ್ಟವಾದ ಕತ್ತಲೆ; ಕಗ್ಗತ್ತಲೆ: ಕಾದಿ ಕಾದಿ ಶತಮಾಯನುಱಿ ಬೇಸತ್ತಡರ್ದಂಬರಾಂಗಣದೊಳಿರ್ದು ಬಲ್ಗತ್ತಲೆಯನೊತ್ತಿ ಕವಿಸಿ ಮೋಸದೊಳ್ ಬಲ್ಲಂಬುಗಳ ಸದ್ದು ಪುಟ್ಟ ದಂತೋಸರಿಸದೆಸುತಿರ್ದಂ (ಕಬಿಪ್ರ. ೯೯-೩೯); ಕತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುಪೆಳಗಂ ಬೇಱಿ ತೋರ್ಪರಾರ್ (ಕೃಮಿಪಾ. ೨-೦೩). **ಬಲುಗತ್ತಲೆ**: ಲೇಸೆನಿಪ ಕೈದೀವಿಗೆಗಳ ವಿಭಾಸದಿಂ ಮಿಗೆ ಪಿಡಿವಕೊಂಡು ಲ್ಲಾಸವೆತ್ತಾಳ್ವೆರೆಯ ಮೇಲಿಂತಿರುಳು ತಿರುಗುತಿರೆ ಆ ಸರವಿಗಳು ಸವೆಯೆ ಪರಿತಂದಾಸುರದಿ ಬಲುಗತ್ತಲೆಯ ಮುಱಿಯಾಸೆಯಲಿ ಹಗೆಯುರು ಹೊಗುವರೊ (ಅಕಪು. ೧೬-೨೩); ಬಿಲವುಮುಖದೊಳುತ್ತರಿಸಿ ಬಲುಗತ್ತಲೆ ಯೊಳಡವಿಯ ಮಾರ್ಗದಲಿ ಕಲುಮುಳುಗಳೊಳು ಕಾಪಥಕೆ ಕೋಮಳ ಚರಣಗಳ ಕೊಡುತ ತೊಳಲಿದರು (ಕುವ್ಯಾಆ. ೬-೯೩).

[ಬಲ್$_{2}$ (< ಬಲ್ಲಿತು$_{1}$) + ಕತ್ತಲೆ$_{1}$ (< ಕಟ್ಟಲೆ)]

**ಬಲ್ಗತ್ತಿ**, ಬಲುಗತ್ತಿ (ನಾ). ಬಲವಾದ ಕತ್ತಿ; ಬಲಿಷ್ಠವಾದ ಖಡ್ಗ: ಎತ್ತಿ ಜಪ ಸತ್ತಿಗೆಯ ಮೊತ್ತಂಗಳೆತ್ತಲುಂ ಕತ್ತಲಿಸೆ ಪೊತ್ತ ಮಸೆವೆತ್ತ ಬಲ್ಗತ್ತಿಗಳ ಕಿತ್ತು ಭಟರತ್ತಿ ಜಡಿಯುತ್ತಿರಲ್ಕೆ (ಕೃಮಿಪಾ. ೪-೦೯). **ಬಲುಗತ್ತಿ**: ತತ್ತನೂಜನ ಗಂಟಲಲಿ ಬಲುಗತ್ತಿಯಂ ಘಿತನೊತ್ತು ವಾಗಳೆ ಕೃತ್ತಿವಾಸಂ ಜಾಣನಾದಡೆ ಮೆಚ್ಚಿ ಕೊಡಬೇಡಾ (ಅಕಪು. ೨೬-೨೬).

[ಬಲ್$_{2}$ (< ಬಲ್ಲಿತು$_{1}$) + ಕತ್ತಿ]

**ಬಲ್ಗನ್ನ** (ನಾ). ಬಹಳವಾದ ಮೋಸ; ಅತಿಯಾದ ವಂಚನೆ: ಸಾಂಬನಂ ಜಾಂಬವತಿಯಣುಗನಂ ಸ್ತ್ರೀವೋಲ್ ತೆಱಂಬೊಳೆಯೆ ಸಿಂಗರಿಸಿ ತನ್ಮುನಿ ಗಳೆಡೆಗೆ ತಂದೇಂ ಬಣ್ಣಿಪೆಂ ನಮಿಸಿ ಭಾವಿಕಾರ್ಯಂಗೇಳ್ವೆವೆನುತೆ ಬಲ್ಗನ್ನ ದಿಂದೆ ಡಂಬಕರ್ ಕೇಳ್ದರೀ ಪುತ್ರಕಾಮಿಯ ಬಭ್ರುವೆಂಬವನ ಪೆಂಡಿರಿವ ಳೀಸಂ ಪೆಱುವಳೆಂಬುದಂ (ಶಕ್ಕಗಾ. ೧೦-೦೯೬).

[ಬಲ್$_{2}$ (< ಬಲ್ಲಿತು$_{1}$) + ಗನ್ನ$_{1}$]

**ಬಲ್ಗಯತ್** 'ಬಲ್ಗೆಯತ್' ನೋ.

**ಬಲ್ಗಯ್ಯ** 'ಬಲ್ಗೆಯ್ಯ' ನೋ.

**ಬಲ್ಗರ**, ಬಲುಗರ$_{2}$ (ನಾ). ೧. ಬಲವಾದ ಗ್ರಹ: ಅರಸುಮಕ್ಕಳೆಲ್ಲಮಾ ಬಲ್ಲಂ ಕಂಡು ಬಲ್ಗರಂ ಪೊಡೆವಂತೆ ಪೆಡಂ ಮಗುಳೆ (ಶಂಶಾಪು. ೩-೬೨ ವ); ನುಡಿದಪೆಯಲ್ಲ ನೀಂ ಮಗಳೆ ನಿನ್ನನಿದೇಂ ಪೊಡೆದತ್ತೊ ಬಲ್ಗರಂ ಪಿಡಿದುದೊ (ಅಣವ. ೨-೦೦೬); ಬಯಲುಗನವ್ವ ಸನತ್ಕುಮಾರಂ ಶೂನ್ಯ ಹೃದಯಾಂಧಂ ಕಣ್ಮುಚ್ಚಿ ಗೋಣಂ ನಿಮಿರ್ಚಿ ಬಲ್ಗರಂ ಪೊಡೆದಂತೆ ಬೆಬ್ಬನೆ ಬೆಱತಿರೆ (ಶಾಪಂಕ. ಕಥಾಗರ್ಭಸಂಧಿ. ೨೩ ವ). **ಬಲುಗರ$_{2}$**: ೧. ಪಾರ್ಥ ಬಲುಗರವವಚಿದಂತಿರೆ ಮೂಕನಾದನು ಜಿತಳ ಮೂಗಿನಲಿ (ಕುವ್ಯಾಆ. ೬-೩೬). ೨. ಗ್ರಹಚಾರ: ಬಲುಗರವಿದೆತ್ತಣದೊ ಕಾರುಣ್ಯನಿಧಿಗೆನುತೆ ನಡನಡುಗಿ (ಕೃಮಿಪಾ. ೦೯-೩೦). [ಬಲ್$_{2}$ (< ಬಲ್ಲಿತು$_{1}$) + ಗರ್ರ]

**ಬಲ್ಗರು** (ನಾ). ಎರಕದ ದೊಡ್ಡ ಬೊಂಬೆ: ತಿಳಿಜೊನ್ನದೆಱಕದ ಪುರುಷರೊ ಬೆಳ್ಳಿಯ ಥಳಥಳಿಸುವ ಬಲ್ಗರುಗಳ ಪೊಳಪೊಯೆಂದೆನೆ ಧವಳಾಂಬರದಿಂ ಖಾಸರಳೆಸಿದರೇನ ಬಣ್ಣಿಪೆನು (ಕುಮಾಸಾಂ. ೦೯-೩೪).

[ಬಲ್$_{2}$ (< ಬಲ್ಲಿತು$_{1}$) + ಕರು$_{2}$]

**ಬಲ್ಗರುಳ್**, ಬಲುಗರುಳು (ನಾ). ದೊಡ್ಡದಾದ ಕರುಳು,- ಅಂತ್ರ: ದಂತದಂಡಹತಿಯಿಂ ಬಿಸುನೆತ್ತರ ಧಾರೆಗಳ್ ಭುಗಿಲ್ಭುಗಿಲೆನೆ ಪಾಮ್ಪು ಪೊಣ್ಮುವು ಕೋಟಿಮ್ನಿದುಳೊಕ್ಕುವು ಬಲ್ಗರುಳ್ಗಳ್ (ಶಂಶಾಪು. ೦೩-೯೦). **ಬಲುಗರುಳು**: ಅವನ ನೂಱುಬುಗಳ ಕಡಿದವನವಯವವ ಕೀಲಿಸಿದಡಾ ಕ್ಷಣವವನಿಯಲಿ ಬಲುಗರುಳು ಬದ್ಧವು ಭಟನ ಕಿಬ್ಬರಿಯ (ಕುವ್ಯಾದ್ರೋ. ೩-೯೬). [ಬಲ್$_{2}$ (< ಬಲ್ಲಿತು$_{1}$) + ಕರುಳ್]

**ಬಲ್ಗಲಿ** (ನಾ). ಮಹಾಶೂರ; ಪರಾಕ್ರಮಿ: ಆಳವನಱಿದು ಬೇಗಿಱಿವ ಬಲ್ಗಲಿಗಳುಮಂ . . . ಮತ್ತಮಣ್ಮಿ ನಡೆದಿಱಿವ ನಡೆಗಲಿಗಳುಮಂ ನೋಡಿ ರುದ್ರಾವತಾರಂ . . . ಹಿಮವತ್ಪರ್ವತಕ್ಕೆ ಪೋಪುದುಂ (ಗದಾಯು. ೯-೩೪ ವ). [ಬಲ್$_{2}$ ( < ಬಲ್ಲಿತು$_{1}$) + ಕಲಿ$_{2}$]

**ಬಲ್ಗವಣೆ**, ಬಲುಗವಣೆ (ನಾ). ಕಲ್ಲನ್ನು ಬೀಸಿ ಎಸೆಯಲು ಮಾಡಿರುವ

ದೊಡ್ಡದಾದ ಜಾಳಿಗೆಯ ಸಾಧನ ; ದೊಡ್ಡ ಕವಣೆ : ಸೂಸಿದರ್ ಕೆಂಡಮಂ ಬಲ್ಗವಣೆಕಲ್ಗಳಂ ಬೀಸಿದರ್ (ಶಂಶೆ. ೯೨-೩೬). **ಬಲುಗವಣೆ :** ಶ್ರವಣ ಮನನದ ಬೀಸುವಲೆ ಶಾಂಭವ ಸುವೇದಾದೀಕ್ಷೆಗಳ ಬಲುಗವಣೆಗಳ . . . ನವವಿಧಾವಲ ಭಕ್ತಿಗಳ ರಣತವಕ ದೀಹದ ಹುಲ್ಲೆಗಳ ಮೃಗ ಭವವಿದಾರಣ ಸುಭಟರ್ಕೈದಿತು ಶಿವನ ನೇಮಾವಲಿ (ಕುವ್ಯಾ.ಕ. ೩-೩೩).

[ಬಲ್$_{2}$ (< ಬಲ್ಲಿತು$_{1}$) + ಕವಣೆ$_{1}$]

**ಬಲ್ಗಱ** (ನಾ). ೧. ದೊಡ್ಡ ರೆಕ್ಕೆ : ಮುಂಚುವೆಱಂಕೆಯಾಗೆ ನಿಡಿದೋಳ್ಗಳ್ . . . ನಖರಾವಳಿ ಬಲ್ಗಱಯಾಗೆ ನಾಸಿಕಂ ಚುಂಚುವ ದಾಗಲಾಗಳೆ ನರಾಕೃತಿ ಗಕ್ಕನೆ ಪೋಗಿ ರಾಜಕೀರಾಂಚಿತಜನ್ಮವೆನ್ನಮಾರ್ದಪ್ಪಿ ದುದು (ಅದ್ಭುಟಿ. ೩ ೧೦೩). ೨. ದೊಡ್ಡದಾದ ಬಾಣದ ಗರಿ,– ಪುಕ್ಕ: ಒದೆದೆಡೆಗೊಂಡ ಬಿಲ್ಲ ತಿರುವಂ ಮೊಱೆದೆಳ್ದರದಿಂ ಪಳಂಚಿ ವೇಗದೊಳಿ ರಾಂತು ಬಲ್ಗಱಿಯ ಗಾಢಮೊಡಂಬಡೆ . . . ಱಂಗದೆ ಪೊಗರಾಂತ ಕೊರ್ಗಣೆಗಳೇಂ ಪರಿತಂದುವೊ ಪಾಂಡುಪುತ್ರನಾ (ಕರಕಂ. ೯-೯೨).

[ಬಲ್$_{2}$ (< ಬಲ್ಲಿತು$_{1}$) + ಗಱ]

**ಬಲ್ಗಾಡಿ** (ನಾ). ವಿಶೇಷವಾದ ಸೊಗಸು ; ಅತಿಶಯವಾದ ಸೌಂದರ್ಯ : ತಾವರೆಗೊಳಂ ತಣ್ಗೊಳಂ ಮೆಱೆದುವೆಂತೆನಲ್ ಭೂಮಿವನದ ಬಲ್ಗಾಡಿಯಂ ನೋಡಲೊದೆಳಸಿ ಪಲಗಣ್ ಮರಲ್ಗಳಂ ಪಡೆದೀಕ್ಷಿಪನುವೊ ಬಳಿಕೆ ಕಮ್ಮರಲ್ಗಯ್ಯಾಗಾಲನೆಂದೆಂಬ ಪಟುಘಟನ ಕಣೆಗಳ ದೊಣೆಗಳೋಯೆಂಬಿನಂ (ಕಬ್ಬಿಗಾ. ೯-೩೬).

[ಬಲ್$_{2}$ (< ಬಲ್ಲಿತು$_{1}$) + ಗಾಡಿ$_{1}$]

**ಬಲ್ಗಾಡು** (ನಾ). ದೊಡ್ಡದಾದ ಕಾಡು ; ದಟ್ಟವಾದ ಅರಣ್ಯ : ಶಶಿಯಂತೆ ಶಶಪಟ ವಲ್ಮೀಕಾಗ್ರಯ ವಸುಧಾಧಿಪಬಲದಂತೆ ಮುಸುಗಿದ ಖಡ್ಗ ಕರೀಂದ್ರಗಳಿಂ ಕಣ್ಗೆಸೆದಿಹುದಾ ಬಲ್ಗಾಡು (ಶ್ರೀಕಾಂ. ೭-೦೨).

[ಬಲ್$_{2}$ (< ಬಲ್ಲಿತು$_{1}$) + ಕಾಡು$_{1}$]

**ಬಲ್ಗಾಪು, ಬಲುಗಾಪು$_{1}$** (ನಾ). ಬಲವಾದ ಕಾವಲು ; ಭದ್ರವಾದ ಪಹರೆ: ಅಂತನರ್ಘ್ಯಮಪ್ಪ ದರ್ಶನರತ್ನಮಂ ಸಂಶಯಚೋರರ್ ಪುಗದಂತು ನುಬುಗೆಯೆಂಬ ಬಲ್ಗಾಪನಿಕ್ಕಿ ಮನಮೆಂಬ ವಜ್ರದೋವರಿಯೊಳಿರಿಸಿ (ಧರ್ಮಾಮೃ. ೨-೨). **ಬಲುಗಾಹು$_{1}$ :** ಅಕ್ಕಱಿಂದಲ್ಲ ನೀನೋಡಿ ಹೋದಹೆಯೆಂಬ ಕಕ್ಕುಲಿತೆಗೀಱಿಂದೆನ್ನೆಸೆಯಿಸೆ ಬಲುಗಾಹನಿಕ್ಕಯ್ಯ ಎನೆ . . . ನಡೆದಾ (ಹಕಾ. ೬-೭೬). [ಬಲ್$_{2}$ (<ಬಲ್ಲಿತು$_{1}$)+ಕಾಪು]

**ಬಲ್ಗಾರ** (ನಾ). ೧. ಆರ್ಭಟ ; ಗರ್ಜನೆ : ಕೇಸರಿಯ ಬಲ್ಗಾರ ಕಂಜಿ ವಿಶೇಷಗಜವ್ರಜಂತಿರು ಶಬರರ ವಾಸವನು ಕಂಡಲ್ಲಿ ಮರೆಗೊಂಡಿರಲು (ಕವಿಚ. ೧೦-೫೦). ೨. ಉದ್ಘೋಷ ; ಬಲವಾದ ಧ್ವನಿ : 'ಬಲ್ಗಾರಿಕೆ' ಪರಾ. 'ಉದ್ಗಾರ' ಹೋ. [ಬಲ್$_{2}$ (<ಬಲ್ಲಿತು$_{1}$)+ ?]

**ಬಲ್ಗಾರಿಕೆ** (ನಾ). = ಬಲ್ಗಾರ ೨: ಆಱು ಖಂಡದ ಪ್ರಜೆಗಳಿಗೆ ನಿನ್ನಯ ರೂಪ ತೋಱಿ ಕೃತಾರ್ಥರ ಮಾಡಿ ಮೂಱು ಚೋಟಿಂದಾಱು ಖಂಡವ ಕಂಡು ಬಲ್ಗಾರಿಕೆಯೊಳು ಬಹವೇಳು (ಭರತ. ೨೦-೦೩) ; ಆಱು ಖಂಡವ ತನ್ನ ವಶವಮಾಡಿಕೊಂಡೊಡನಾರಂಗಸೇನೆಯೋಲೈಸೆ ಮೂಱು ಲೋಕವ ದಾಂಟಿ ಕೀರ್ತಿಯನಟ್ಟಿ ಬಲ್ಗಾರಿಕೆಯೊಳು ಬರುತಿರ್ದ (ಭರತ. ೯೯-೩೬).

[ಬಲ್ಗಾರ + — ಇಕೆ]

**ಬಲ್ಗಾಳೆಗ, ಬಲುಗಾಳೆಗ** (ನಾ). ಬಲವಾದ ಕದನ : ಅಂತು ಬಲ್ಗಾಳೆಗವೆನಿಪ ಬಲ್ಗಾಳೆಗವಮು ನೀಡೂ ಕಾದುವನ್ನೆಗಂ (ಶಾಂತಿಪು. ೯-೩೩ ಶ). **ಬಲುಗಾಳೆಗ :** ಬಲುಗಾಳೆಗವ ಭೀಮಂಗೆ ಸೇರಿಸಿ ಪಾಳ ಯಕೆ ತಿರುಗಿದರು ಕೃಷ್ಣಾರ್ಜುನರು ದುಗುಡದಲಿ (ಕುವ್ಯಾ.ಕ. ೦೬-೦).

[ಬಲ್$_{2}$ (<ಬಲ್ಲಿತು$_{1}$) + ಕಾಳೆಗ]

**ಬಲ್ಗಿಚ್ಚು, ಬಲುಗಿಚ್ಚು, ಬಲ್ಗಿರ್ಚು** (ನಾ). ದೊಡ್ಡ ಉರಿ; ಅಧಿಕವಾದ ಬೆಂಕಿ : ಮಿಱುಪ ಮಿಂಚುಗಳ ಬಂಬಲ್ಗಳಗ್ಗಳ ಮುಗಿಲ್ಗಳಮೆರ್ದುಗ್ಗೆಯ ಪರ ನೇಸಱ ಪಲವು ಜಗಜಗಿಸುವ ಬಲ್ಗಿಚ್ಚು ಪಳಿವ ಲಿಂಗಂ ಮೂಡೆ (ಶಾಪಕಂ. ೩-೨೬) ; ಪೆರ್ಚಿದ ಕಂಬನಿಯು ಕಡಲೊಳಗೆ ಡಾವರಿಪ ಬಡಬಶಿಖಿಯೆಂಬಿನಂ ಕಾಣಿಸುವ ಬ[ಶಾಂ. ೪]ಲ್ಗಿಚ್ಚಿಗವನೊಡಲ ನಿಂಬುಗೊಟ್ಟಂ (ಕೃಮಿಚ. ೦೩-೩೯). **ಬಲುಗಿಚ್ಚು :** ಉತ್ತಮದ ತಱುಪಿನೆಮ್ಮೆಯ ಹಾಲನೊಲೆಯ ಮೇಲೆತ್ತಿ ಸೋದಿಸಿಕೊಂಡು ಬಲುಗಿಚ್ಚಿ ನೆ.ಗಸದೆ ಹೊತ್ತದಂದದೊಳು . . . ಕಾಸಿ (ಸೂಶಕಾ.೨-೦) ; ಸುರಂಗ ಗಳೊಳಗೆ ಕರಿಯಮದ್ದನು ತುಂಬಿ ಹತ್ತಿಸೆ ಬಲುಗಿಚ್ಚು ತರಣಿಮಂಡಲವ ಮುಟ್ಟಿದುದು (ಕಂಪರಾ. ೧೮-೦೩೩). **ಬಲ್ಗಿರ್ಚು :** ಹಿಂದಣ ಹಿತತನ ದಿಂದೀ ವಿರಹದೊಳೊಂದಿದ ಬಲ್ಗಿರ್ಚಿಗೆ ವೇದನೆಯಂ ತಂದೆನ್ನಂ ಭಸ್ಮೀಕರಿ ಸದೆ ತಾಂ ನಿರ್ನೆರಮಿಹುದಲ್ಲ ಎಂದಾವೊಡುತೊಳಗಣವಾಯುವನಲ್ಲಿಂದವೆ ಪೊಱಮಡಿಸಿದ ಮಾಳ್ಕೆಯೊಳರವಿಂದವಿಶಾಲವಿಲೋಚನೆಯಾ ನಿಡುಸು ಯ್ಕುರವೊಪ್ಪಿದುದು (ಜಯಾ. ೯-೫೦). [ಬಲ್$_{2}$ (<ಬಲ್ಲಿತು$_{1}$) + ಕಿಚ್ಚು$_{1}$]

**ಬಲ್ಗಿರ್ಚು** 'ಬಲ್ಗಿಚ್ಚು' ನೋ.

**ಬಲ್ಗುಂಡು, ಬಲುಗುಂಡು** (ನಾ). ೧. ದೊಡ್ಡ ಗುಂಡು ; ಭಾರಿಯಾದ ಕಲ್ಲು,–ಬಂಡೆ : ಎತ್ತುಗಲ್ ಪಿರಿಯ ಡೆಂಕಣಿ . . . ಬಲ್ಗುಂಡು ಪೆರ್ದೊಲೆ . . . ಇಡುಗಲ್ಲ ಮೊತ್ತವಾಪುರದೊಳಿಲ್ಲ (ಕಬ್ಬಿಗಾ. ೩-೨೦). **ಬಲುಗುಂಡು :** ೧. ಬಲ್ಲಂಬ ಬಿಸುಟನು ಸುಗತಿದಾಣವುನಿಂಬಱಿದ್ದು ತಾನೇಱುವಂತೇಱದನು ಬಲುಗುಂಡ (ಶಾಕೃಶಾ. ೩-೯೦). ೨. ತುಪಾಕಿ ಯಲ್ಲಿ ಹಾರಿಸುವ ದೊಡ್ಡದಾದ ಗುಂಡು ; ಫಿರಂಗಿಗೆ ಹಾಕುವ ದೊಡ್ಡ ಗೋಲಿ : ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಱಿದೆಡೆಗೆ ಸಿಡಿವ ಡೆಂಕಣಿ ರಾಜಡೆಂಕಣಿಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಕುಮಾರಾಂ. ೯೨-೩೯).

[ಬಲ್$_{2}$ (<ಬಲ್ಲಿತು$_{1}$) + ಗುಂಡು]

**ಬಲ್ಗುದುರೆ, ಬಲುಗುದುರೆ** (ನಾ). ಶಕ್ತಿಯುತವಾದ ಕುದುರೆ ; ಬಲಿಷ್ಠವಾದ ಕುದುರೆ : ಬಲ್ಗುದುರೆಯೊಳ್ ಕೂಡಿ ವಂಬುಗೋಡಿಂದು ಕವಣೆಯಿಂ ಬಲದಿಂದಶ್ವಾಧಾರಿಯೊಪ್ಪುವಂತೆ . . . ಸುವ್ರತಂಗಳಿಂ ಭವ್ಯರುಮೊಪ್ಪುವೆರಸಿರ್ಪುದು (ಧರ್ಮಾಮೃ. ೦೩-೩). **ಬಲುಗುದುರೆ :** ಅಳಿದುದೈನೂಱರಸುಗಳು ಮುಮ್ಮುಳಿತವಾಯ್ತೈವತ್ತುಸಾವಿರ ಬಲು ಗುದುರೆ ನುಗ್ಗಾದುದೊಂಬೈನೂಱು ಭದ್ರಗಜ (ಕುವ್ಯಾದ್ರೋ. ೦೦-೨೦) ; ಮುಸುಕಿ ದೆಸೆಯ ಖುರಪುಟಧೂಳಿ ಬಿಡದೆ ಮಾಮಸಕ ವಾಹಕರೇಱಲಂದು ಬಿಸಿಲ ಕುದುರೆಯಂತುಭಯಬಲದೊಳು ಕಣ್ಗೆಸೆದವು ಬಲುಗುದುರೆಗಳು (ಕುಮಾರಾಂ. ೦೨-೯೦). [ಬಲ್$_{2}$ (<ಬಲ್ಲಿತು$_{1}$) + ಕುದುರೆ]

**ಬಲ್ಗುರುಜು** (ನಾ). ದೊಡ್ಡದಾದ ಮಂಟಪ,—ಅಟ್ಟಳೆ : ನಿಳಯ ನಿಳಯದ ಮುಂದೆ ಬಲ್ಗುರುಜುಗಳ್ ನಡುವೆ ತೊಳಪ ಮಣಿಗುಡಿ ತೋರಣಂಗಳಿಂ ಪನ್ನೀರ ಚಳೆಯದಿಂದಗರುಧೂಪದ ಹೊಗೆಗಳಿಂ ಬೀದಿ ಬೀದಿಗಳ್ ಚೆಲ್ವಾದುವು (ಕಂಕು. ೩-೨).

[ಬಲ್$_{2}$ (<ಬಲ್ಲಿತು$_{1}$) + ಕುರುಜು]

**ಬಲ್ಗುಱಿ** (ನಾ). ಬಲಿಷ್ಠವಾದ ಕುರಿ ; ಕೊಬ್ಬಿದ ಮೇಷ : ದೈವಮಾ ಕುಱಿಯದರ್ಗಂದೆಡೆಗಯ್ದಿ ಒಂದೆರಡು ಮೂಱುಂ ನಾಲ್ಕುಮಯ್ದಾಱು ಬಲ್ಗುಱಿಯುಂ ತಿಂದೊಡೆ ಕಾಪಿನಾಳ್ಪಡಿಗುವೋ ನಾಯ್ಗಿಂಗುಮೋ (ಕಜಾರ. ೯೬೭). [ಬಲ್$_{2}$ (<ಬಲ್ಲಿತು$_{1}$) + ಕುಱಿ$_{1}$]

**ಬಲ್ಗೂದಲ್** (ನಾ). ಹೇರಳವಾದ ಕೂದಲು ; ಕೇಶರಾಶಿ : ಕಿನ್ನವಿರ್ ಮುಡಿ ಕೆದರಿತಾ ರಾಕ್ಷಸಗೆ, ದೆಸೆದೆಸೆಗೆ ಜಡೆಜಡೆಯ ಬಲ್ಗೂದಲಂ ಕೊಡಹಿ (ಶ್ರೀಕಾಪು. ೬೮೭-೨೩೯).

[ಬಲ್$_{2}$(<ಬಲ್ಲಿತು$_{1}$) + ಕೂದಲ್ (< ಕೂಂದಲ್)]

**ಬಲ್ಗೂಳಿ**, ಬಲುಗೂಳಿ (ನಾ). ಬಲಿಷ್ಠವಾದ ಎತ್ತು ; ಕೊಬ್ಬಿದ ವೃಷಭ : ಅದೆಯಂ ಕೋದೆತ್ತುತುಂ ಮಾರ್ದನಿಗೆ ಪುಸಗುತುಂ . . . ಪಾಯ್ವು ಪಿಂಡಂ ಕಲಿಕೆ ಕೆಲೆಯುತುಂ ಬೆರ್ಚಿ ಬಲ್ಗೂಳಿಗಳ್ವೆಂಗುಡೆ ಗಂಡಂ ಸೂಖುತುಂ ಬಂದುದು ಮದವಿದಳಕ್ತಿಂಗಳಾಕ್ಷಂ ಮಹೋಕ್ಷಂ (ಲೀಲಾವ. ೩-೯೬). **ಬಲುಗೂಳಿ** : ರಕ್ಕಸರೇಳಿಗೆಗೆ ಕಡುಭಂಗವೊದವಿತು ಕೀಳುತರದಾ ಹುಲುನರರು ಬಲುಗೂಳಿಯಾದರಲಾ (ರಾಮಾಸಂ. ೩-೩-೨೬).

[ ಬಲ್₂ (< ಬಲ್ಲಿತ್ತು₁) + ಗೂಳಿ₁ ]

**ಬಲ್ಗೆಂಡ** (ನಾ). ದೊಡ್ಡದಾದ ಕೆಂಡ ; ಪ್ರಖರವಾದ ಇಂಗಳ : ಬಲ್ಗೆಂಡಂಗಳನಾಯ್ದು ತಂದು ಪುಟವಪ್ಪಂತೂದಿ . . . ಧೂಪಮಂ ನಲ್ಲಂಪುಣ್ಮಿರಲಾಗಳರ್ಪಿಸಿದನಾ ಗಂಗಾಧರಂಗಟ್ಟಜಂ (ಉದ್ಭಟ. ೧೦-೭೪).

[ ಬಲ್₂ (< ಬಲ್ಲಿತ್ತು₁) + ಕೆಂಡ ]

**ಬಲ್ಗೆಯ್**, ಬಲುಗಯ್, ಬಲುಗೆಯ್, ಬಲುಗೈ, ಬಲ್ಗಯ್, ಬಲ್ಗೈ₁ (ನಾ). ೧. ಶಕ್ತಿ ; ಬಲ ; ಪರಾಕ್ರಮ : 'ಬಲ್ಗಯ್ಯ' ಪರಾ. **ಬಲುಗಯ್** : ೧. ವೀರ ವಿದ್ಯುನ್ಮಾಲಿಯೊಡನೆ ಜರ್ವ ಕಲಿವಾಹಾನಾಭ . . . ಜಂಭ ಮುಂತಾದ ಬಲುಗಯ್ಯ ರಕ್ಕಸರ್ ಕೋಂಟೆಯಿಂ ಪತ್ತಿರ್ದ ದಿವಿಜರಂ ಸದೆಬಡಿದರು (ಕಂಕ್ರು. ೯೩-೨) **ಬಲುಗೆಯ್**: ೨. ಬಲಿಷ್ಠವಾದ ಕೈಗಳನ್ನುಳ್ಳವನು ; ಶೂರ ; ಪರಾಕ್ರಮಿ : ಅಭಿಮನ್ಯುವರ್ಜುನನ ಕುವರನಿವ ಮಗುವಲ್ಲ ಬಲುಗೆಯ್ಯವನ ಮೋಹರದೊತ್ತಿನಲಿ ನಿಂದವರು ಸಾತ್ಯಕಿ ಚೇಕಿತಾನ ಪ್ರಮುಖ ನಾಯಕರು (ಕುಮಾ.ಭಾ. ೨-೦೧). **ಬಲುಗೈ** : ೨. ಎಲೆ ಧನಂಜಯ ಸೀನ ಬಲುಗೈಯುಳಿದವರು ರಣಖೇಡರೇ (ಕುಮಾ.ಕ. ೦೧-೯೦). ೩. ಶಕ್ತಿಯುತವಾದ ಹಸ್ತ : ಜಗವ ಹೂಡುವ ಹೊರೆವ ಬಲುಗೈಯಗಧರಂಗೀ ನೃಪರ ಕುಜಿವಿಂಡುಗಳ ಕುಮ್ಮರಿಗಡಿತಕಾವುದು ಬೇಕು ಭುಜಸತ್ವ (ಕುಮಾ.ಸ. ೦೦-೦೦). ೪. (ಆಲಂ) ಬೆಂಬಲನಾದವನು : ಸರ್ವರಿಗೆ ಬಲುಗೈ ಸಮೃದ್ಧ ಚತುರ್ವರ್ಗಲಾನ್ವಿತಸುರು ಕೃಪಾನಿಧಿ ಶರ್ವನನು ಭಜಿಸಿದನು ಕಾಮಿಸಿ ಯಾದವರ ಜನುವ (ಏಕಾಗ. ೦೦-೬೦-೦೬). **ಬಲ್ಗಯ್** : ೧. ಬಲ್ಗಯ್ಯ ನೃಪರಂಜಿ ತಡೆಯದ ರಘೂದ್ವಹನ ಸೊಲ್ಗೋಳಿ ನಮಿಸಲಿಳಿಯೊಳ್ಗಿರಿಸುತಧ್ವರದ ನಲ್ಗುದುರೆ ಬಂಮು . . . ಪೊಕ್ಕೊಡೆ (ಕೃಮಿಚಾ. ೨೦-೩). **ಬಲ್ಗೈ₁** : ೧. 'ಬಲ್ಗೈಗಲಿ' ಪರಾ.

ಬಲುಗಯ್ಯತನ = ಶೌರ್ಯ : ಪರಾಕ್ರಮ : ಬಲುರಾವುತರ ಸ್ಸೈಯೊಳಗೆ ಬಲ್ಲಿಹವನು ಬಲಿದನು ಸೆಲದ ರಾವುತರ ಸೆಲಪನಿಕ್ಕಿದನಂತಕನ ವೋಲಿ ರಾಮನ ಬಲುಗಯ್ಯತನವನೇನೆಂಬೆ (ಕುಂಡಾಶಾಂ. ೦೬-೯೨).

[ ಬಲ್₂ ( < ಬಲ್ಲಿತ್ತು₁) + ಕೆಯ್₂ ]

**ಬಲ್ಗೆಯ್ತ** (ನಾ). ೧. ಬಹಳ ಕಾರ್ಯ ; ಅನೇಕ ಕೆಲಸ : ಮನಮಂ ಬೆಟ್ಟಿತು ಮಾಡಲೆಂದೆ ಜಡುವರ್ ಬಲ್ದೋಂಟಿಯಿಂ ಬೇಂಟದೊಳ್ ಮನಮಂ ಬೇಂಟವನಾಗಳಂತೆ ಜಳಿವರ್ ಬಲ್ಗೆಯ್ತದಿಂದೊತ್ತಿಯಾಣ್ಮ ನೊಳಂ ಮೆಯ್ಮನೆ ಮಾಣುವಾಕೆ ಭವಮಂ ಪೇಟ್ಮಾಣೀ (ಲೀಲಾವ. ೨-೦೦೩). ೨. ಒಳ್ಳೆಯ ಕೆಲಸ : ಕಾಲ್ದಾಸಿನ ಬಲ್ಲಣೆಯೊಳ್ಸಲ್ಗೆಯ್ತದಿ ನಿಜಿದು ಮಡಿಯೆ ನೆತ್ತರ ತೊಜಿಗಳ್ಗಲ್ಗಲನೆ ಪರಿಯೆ ಕರುಳ ಬಿಣಲ್ಗಳಿ ತೆಪ್ಪಂಗಳಾಗೆ ತೇಂಕಿದರರೆಬರ್ (ಕಂಠಾಷಿ. ೦೩-೭೯).

[ ಬಲ್₂ (< ಬಲ್ಲಿತ್ತು₁) + ಕೆಯ್ತ₁ ]

**ಬಲ್ಗೆಯ್ದು**, ಬಲುಗೈದು, ಬಲ್ಗೈದು (ನಾ). ಬಲವಾದ ಆಯುಧ ; ಬಲಿಷ್ಠವಾದ ಶಸ್ತ್ರ : ಪುಸಿವಾತಿಗೆ ಬಾಯ್ದೆಗೆಯದ ವೈರಿಗಳಜಿತದ ಬಲ್ಗೆಯ್ದಿಗೆ ಸುಗಿಯದ ಯಶಿಕುಲತಿಲಕನನವನೀಪತಿ ಕಂಡಂ (ಜಗನ್ನಾ. ೯-೯೩). **ಬಲುಗೈದು** : ಕೈದುವೇಕೆ ಪುಳಿಂದ ಸಮ್ಮೊಡನೈದಿಸಾ ಭುಜಯುದ್ಧದಲಿ ಬಲುಗೈದುವಿದೆಲಾ ಮುಷ್ಟಿ (ಕುಮಾ.ಅ. ೬-೨೩) ; ತೋಳ್ಪೊರ್ಕೈದು ತಲೆಗಳ ಬೈತಿರಿಸಿ ಬಲುಗೈದುಗಳ ಬಿಸುಟಡಗಿಸೀ ರಾಕ್ಷಸಕಳೇವರವ ಐದು ತಾಪಸವೇಷವನು (ಕೊರಣಾ. ೩-೬-೦೩). **ಬಲ್ಗೈದು** : ಬಲುಸಲ್ವ ಕರ್ಮರಿಪುವಂ ಗೆಲ್ವೊಂದು ಬಲ್ಗೈದುವಾವುದೊ ಸದ್ದರ್ಶನದೀಕ್ಷೆ (ಅಪಂಚ. ೬-೪೦) ; ಬಲ್ಗೈದುಗಳ್ಗಳುಚಿರಂಗಳಂತಿರೆ ಭಟರ ಬೊಬ್ಬೆಯಬ್ಬರವಾಗೆ ಪಡಗುಗಳ ಪರಿಜನಾಂತಿರೆ ಪತಾಕಾನ್ವಿತ ರಥಂಗಳಾಪತೆ ನೋಡೆ ಕಡಲೆನಿಸಿತು (ಕೀಶಠಾ. ೦೦-೦೨).

[ಬಲ್₂ (< ಬಲ್ಲಿತ್ತು₁) + ಕೆಯ್ದು]

**ಬಲ್ಗೆಯ್ಯ**, ಬಲುಗಯ್ಯ, ಬಲುಗೆಯ್ಯ, ಬಲುಗೈಯ, ಬಲ್ಗಯ್ಯ (ನಾ). ೧. ವಿಶೇಷವಾದ ತೋಳ್ಬಲವನ್ನುಳ್ಳವನು : ಮಹಾ ಪರಾಕ್ರಮಿ ; ಸಮರ್ಥ : "ಪರಾಕ್ರಮ.೦ ಪ್ರಥಿತಂ ಬಲ್ಗೆ[ಪಾಠಾಂ. ಲ್ಗೈ]ಯ್ಯಂ" (ಕಬಾಪ. ೦೦೩-೩೦) ; ಮೆಯ್ಯ ದಂಡಿಸಿದನ ಭಿಕ್ಷೆಗೆಂದೊರ್ವರ್ಗೆ ಕೆಯ್ನೊಡ್ಡಿದನೆ ಚಕ್ರಧರನು ಉಯ್ಯಲ ತೂಗಿದಂತಪ್ಪುತಕೆ ಸಂದ ಬಲ್ಗೆಯ್ಯನಲ್ಲವೆ (ಶಠಕ. ೬೬-೩೪). **ಬಲುಗಯ್ಯ** : ೧. ಎಲಗೆ ನಾ ಬೇಡಲೀಯದೆ ನಿನ್ನ ನಿಮ್ಮಣ್ಣ ತಲೆಗೊಟ್ಟನಿನ್ನು ನಿನ್ನುವ ಕಾವ ಬಲುಗಯ್ಯ [ಪಾಠಾಂ. ಗೈಯ] ನಾರು ಹೇಳು (ಸೊಂಡಸೋ. ೭-೩೬) ; ಚಲದಂಕ ಕಾಟ ಕಬ್ಬಿಲ ನಾಗ ಬುಕ್ಕಣ್ಣ ಬಲುಗಯ್ಯ ತಿಮ್ಮಣ್ಣ ವರದ ಕೋಲಿಗೇಡಿ ಮಾದಿಗ ಹಂಪನೆಂದೆಂಬೀ ಬಲುತರದವರೆಯ್ದಿದರು (ಕುಂಡಾಶಾಂ. ೦೯-೯೦). ೨. ಶ್ರೇಷ್ಠನಾದವನು ; ಜ್ಞಾನಿ : ಬಲ್ಲನೆಂಬ ಬಲುಗಯ್ಯ [ಪಾಠಾಂ. ಗೈಯ]ರ ನುಂಗಿತ್ತು ಮಾಯೆ ಅಜಿಯನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ (ಮಹಾದೇ. ೬. ೦೭-೨೩) ; (ವಚಸಂ. ೩೯-೨೦ ನೋ). **ಬಲುಗೆಯ್ಯ** : ೧. ಮೆಯ್ಯ ದಂಡಿಸದ ಚಿತ್ರವನೆ ದಂಡಿಸಿ ತನ್ನೊಳೊಯ್ಯನೆ ನಿಂದು ಕರ್ಮಗಳಾ ಉಯ್ಯ ನುಗ್ಗೊತ್ತು ವಂತೊತ್ತಿಬಿಟ್ಟಾ ಬಲುಗೆಯ್ಯನೆದ್ದನು ತನ್ನ ಪುರಕೆ (ಶಠಕ. ೬೨-೭೦). **ಬಲುಗೈಯ** : ೧. ಬಲುಗೈಯ[ಪಾಠಾಂ. ಗಯ್ಯ]ನೊಡನೆ ಹಗೆವಡೆದು ಕೊಲೆಗಂಜಲೇಕೆ (ಸೋಂಡಪ. ೪೦-೦೬೭) ; ಜಲೆಯನಿಪುದಭಿಧಾನವೆನ್ನದು ವರ ಜರಾಸಂಧಕನಿವನು ಸುರನರರೊಳಗೆ ಬಲುಗೈಯು [ಪಾಠಾಂ. ಯ್ಯ] ನಹನೆಂದಿತ್ತಳರ್ಭಕನ (ಕುಮಾ.ಸ. ೨-೪೯). **ಬಲ್ಗಯ್ಯ** : ೧. ಬಲ್ಗಯ್ಯಂ, ಮಲ್ಗಯ್ಯಂ (ಶಬ್ದಾನು. ೩೩೧ ಕೃ.ಮೋ).

[ಬಲ್ಗೆಯ್ + — ಅ₁]

**ಬಲ್ಗೆರ್ಚು** (ನಾ). (ಮರದ) ವಿಶೇಷವಾದ ಕೆಚ್ಚು,—ಸತ್ತ್ವ ; ಹೇರಳವಾದ ಸಾರ: ಮಂದರದೊಳಂವಂಬಡೆದು ನಿಂದ ಬಲ್ಗೆರ್ಚ[ಪಾಠಾಂ. ಚ್ಚ]ನ ಮುಂಡಿಗೆಯಂ ಮುಜಿದು ಪಿಂಗಾಲ್ಗೆ ತೊಡರ್ಚಿದಗ್ಗದಗ್ಗರಣೆಯಂ ಭುಟಭುಟನೆ ಕೀಳ್ತು (ರಾಜಶೇ. ೬-೦೦ ವ). [ಬಲ್₂ (<ಬಲ್ಲಿತ್ತು₁) + ಕೆರ್ಚು]

**ಬಲ್ಗೆಱೆ**, ಬಲುಗೆಱೆ (ನಾ). ದೊಡ್ಡದಾದ ಕೆರೆ : ಕಡಲುಗಳಾ ನಾಡ ಸಿರಿಯ ಮೊಗವ ನೋಡೆ ಬಿಡದೆಯ್ದೊಂದು ವೆಂಬಂತೆ ಕಡೆಗೋಡಿಗಳಿಂದ ಮೆಱೆವ ಬಲ್ಗೆಱೆಗಳಾ ಪೊಡವಿಯೊಳೆಸೆದಿರುತಿಹವು (ಕುಂಡಾಶಾಂ. ೨-೭೯). **ಬಲುಗೆಱೆ** : ಬಲುಗೆಱೆಗಳು ಬಜತವು ಪೊಕ್ಕ ತೊಱೆಗಳು ತೊಲಗಿಸಿದವು ಜೀವನವನು ಶಿಲೆಗಳೊಟ್ಟಲು ಪುಡಿಪುಡಿವೊದವನಲಾ ಬಲದ ಬಹಳವನೇನೆಂಬೆ (ಕುಂಡಾಶಾಂ. ೧೦-೭೬). [ಬಲ್₂ (<ಬಲ್ಲಿತ್ತು₁) + ಕೆಱೆ]

**ಬಲ್ಗೇಣ್** (ನಾ). ಬಲಿಷ್ಠವಾದ ಸಣ್ಣ ಕತ್ತಿ : ಬಾಣ ಸವೆಯೆ ಬಾಣಾಸನ ಮುಱಿಯೆ ಬಲ್ಗೇಣಿಂದ ಪೊಕ್ಕಿಱಿದಾಡಿ ಪ್ರಾಣವನುಳಿವ ಬಿಲ್ವಡೆ ಸಗ್ಗದೊಳು ಪೋಗಿ ಕಾಣಿಸಿಕೊಂಡರಂದೊಸೆದು (ಕುಂಡಾಶಾಂ. ೧೨-೬೦).

[ಬಲ್₂ ( < ಬಲ್ಲಿತ್ತು₁) + ಗೇಣ್]

**ಬಲ್ಗೈ₁** 'ಬಲ್ಗೆಯ್' ನೋ.

**ಬಲ್ಗೈಗಲಿ** (ನಾ). ಕರಕೌಶಲವುಳ್ಳ ವೀರ ; ಬಹಳ ಪರಾಕ್ರಮಿ : ಬಿಲ್ಗಾಱಿಕೆಯೊಳ್ ಬಲ್ಗೈಗಲಿಗಳನೆಸಗಿ. ಪಾಟವಮಾಟಮುಪ್ಪಂತು ಕಲಿಸಲೊಡಂ . . . ಕಳಿಳಂ ಬೆಳಗಿದರ್ ಯಮಳರ್ (ರಾಮಾಕ್ಮ. ೦೫೦-೦೬).

[ಬಲ್ಗೈ₁ (< ಬಲ್ಗೆಯ್) + ಕಲಿ₃]

**ಬಲ್ಗೈದು** 'ಬಲ್ಗೆಯ್ದು' ನೋ.

**ಬಲ್ಗೊಲೆ** (ನಾ). ಭೀಕರವಾದ ಕೊಲೆ,—ಹತ್ಯೆ : ಸೂಸಿದರ್ ಕೆಂಡಮುಂ . . . ವಾಸಿದರ್ ಕಾರ್ಬೊಗೆಯ ಪರ್ಬಿನಿಂ ಬಲ್ಗೊಲೆಗೆ ಹೇಸಿದರ್ (ಶಂಕ್ಪು. ೯೨–೬೬) ; ನೆಗವತ್ತ ಕಯ್ಗೆ ಬಾಳ್ ಬಲ್ಗೊಲೆಗಳ್, ಬಾಳ್ಗಳಿಡೆವೊಕ್ಕು ಸಂತೈಸದಿರೆ ಕೃಷ್ಣನ್ ಎಲ್ಲಿ ಅಶ್ವತ್ಥಾಮನ್ ? ಒರೆವು ದೊಂದಿರ್ಕುಂ (ಅಶ್ವತ್ಥಾ. ೬೦–೩೬೦). [ಬಲ್$_2$ (< ಬಲ್ಲಿತು$_1$) + ಕೊಲೈ]

**ಬಲ್ಗೋಂಟೆ** (ನಾ). ಬಲವಾದ ಕೋಟೆ ; ಭದ್ರವಾದ ದುರ್ಗ : ತಂತ್ರ ಪಾಲನಂತೆ ಗುಣಪಾಲನುಂ ಬಲ್ಗೋಂಟೆಯಂತೆ ವಿಥ್ಯಾತ್ಮಕ್ಕಭೇದ್ಯನುಂ ಮುತ್ತಿನ ಸತ್ತಿಗೆಯಂತೆಲ್ಲ ದೆಸೆಯೊಳ್ ಸೇವ್ಯನುಂ . . . ರಾಜಸೇವಕ ನಂತದಕವಂತನುಮಪ್ಪುದು (ಧರ್ಮಾಮೃ. ೩–೯೯) ; ಆವ ಪೆರ್ಗಡಲ್ ಅಗಳು, ಆವ ಮಲೆ ಬಲ್ಗೋಂಟೆ, ಅದರ ಮುಂಬಾಯ್ದಿರವು ಮೊಗಗಟ್ಟು ನಿಲಲು ? (ಕಾರಸಿ. ೬–೦೨೪). [ಬಲ್$_2$ (< ಬಲ್ಲಿತು$_1$) + ಕೋಂಟೆ]

**ಬಲ್ಗೋಲ್, ಬಲುಗೋಲು** (ನಾ). ಶಕ್ತಿಯುತವಾದ ಬಾಣ : ಕೋತಿ ವಡೆಯುಮಾಳ್ಪಲಮುಂ . . . ಬಿಬಿಚಣಂ ಮುಂತಪ್ಪ ಬೀರರ ಕೂಟವುಂ, ಬಲ್ಗೋಲ ರಭಸಮುಂ ತಡೆಯಲಾಱದೆ . . . ಮುನ್ನಂ ಪೊಱಮಟ್ಟು ತಂತಮ್ಮೆಡೆಯಂ ಸಾರ್ದುದು (ಅದ್ಭುತ. ೯೩–೦೩). **ಬಲುಗೋಲು** : ಬೀಳಲವನೇಪತಿಗಳತಿಹೀಹಾಳಿಯಲಿ ಸಾತ್ಯಕಿ ಮುಳಿದು ಬಲುಗೋಲಿನಲಿ ಗಂಗಾಕುಮಾರನ ಸಾರಥಿಯನೆಸಲು (ಕುಮಾ.ಭಾ. ೬–೬). [ಬಲ್$_2$ (< ಬಲ್ಲಿತು$_1$) + ಕೋಲ್$_1$]

**ಬಲ್ಸರ** 'ಬಲ್ಸರ' ನೋ.

**ಬಲ್ಟಗರ್** (ನಾ). ಬಲಿಷ್ಠವಾದ ಟಗರು ; ಕೊಬ್ಬಿದ ಟಗರು : ಆತನ ಕಿಲದೊಳ್ ಚಂಡಪ್ರಾಶಂ ಸಿಡಿಲೇಳ್ಗೆಯೇಳ್ವ ಬಲ್ಟಗ[ಶಾಶಂ. ಬಲುದಗ] ರೇಱರ್ದಾತಂ ಸಕಳಜಗದ್ವಿಖ್ಯಾತಂ ಹುತವಹನೆನಿಪ್ಪನು (ಗಂಳ. ೬–೩೪). [ಬಲ್$_2$ (< ಬಲ್ಲಿತು$_1$) + ತಗರ್$_2$]

**ಬಲ್ದಡಿಗ, ಬಲುದಡಿಗ** (ನಾ). ೧. ಅತಿಬಲಿಷ್ಠನಾದವನು; ಮಹಾಬಲ ಶಾಲಿ; ಪತ್ತೊಂಬಯ್ಸಾಸಿರವಾನೆಯುಂ ಪಡಲ್ವಡಿಸಿಯುಂ ಸೈರಿಸಲಾಱದೆ . . . ಬಲ್ದಡಿಗಂ ಬೇಸಿಯುಮೊಂದುಕೋಟಿವರೆಗಂ ಕೊಂದಂ ಮದೇಭಗಳಂ (ಶಂಕಳಾ. ೬೬–೦೮೪). ೨. ಬಹಳಗಾತ್ರವಾದ ಶರೀರವುಳ್ಳವನು : ನಿಡಿಯರ್ ಬಲ್ನಾಯದ ಬಲ್ದಡಿಗರ್ ಮಂದಿರ್ದರಯ್ಯರಾಲದ ಕೆಟಗಿಂ ತೊಡರ್ದರ್ ನಮ್ಮಾಯ ಭಕ್ಷದೊಳದು ವಣ್ಣಿಡು ಪೋಗು ನೀನುಮಾನುಂ ತಿಂಬಂ (ಶಂಕಶಾ. ೬–೦೨) ; ತಡೆಯನೆ ಮೇಲೆತ್ತಲ್ ಬಲ್ದಡಿಗರ್ ಬಲದಿಂದೆ ಕಡೆಯ ನೂಂಕಲುಮೆಂತುಂ ಗಡ ಬಾರದೆನಿಪ ಬೆಟ್ಟಂಗಡಹಡಿಸದೆ ನೋಡಿ (ಧರ್ಮಾಮೃ. ೦೯–೩೪). (ಗು). ೩. ಅತಿಬಲಿಷ್ಠವಾದ ; ಅತ್ಯಂತ ಬಲ ವುಳ್ಳ : ಮನಂಗೆಡಿಪ ಪುಲಿಯಿಂ ರೌದ್ರಾಕಾರಂಗಳಿಂ ಬಿಡೆ ಪಾಯ್ವ ಬಲ್ದಡಿಗ ಮರುಳಿಂ . . . ಇವು ಮೊದಲಾಪ್ಪನೇಕೋಪಸರ್ಗಂಗಳು ಮಾಡಿಯುಂ (ಧರ್ಮಾಮೃ. ೨–೨೨೯). ೪. ತುಂಬಿದಪ್ಪವಾದ : ಪೆರ್ವರದ ದಿಮ್ಮಿಗಳ್, ಬಲ್ದಡಿಗ ಪೇಣಾಗಳ್ . . . ನುಣ್ಣಳಿಲ್ಲೆಟ್ಟುಗಳ್ ಮೆರೆದಿರ್ದು ವಲ್ಲಲ್ಲಿ (ಶ್ರೀಶಾಪು. ೯೩೩–೨೬೪). **ಬಲುದಡಿಗ** : ೨. ತಲೆಯಂ ಬಲುದಡಿ ಗರ್ಗೋಟಿ ನಿಲಲಾಱದೆ ಸುಂಟದಿಂದ ಕೋಡಗದಂತುಮ್ಮಳಿಸಿ ಕಳವಳಿಸಿ . . . ಕರಮೆ ಮಱುಗಿ ತಳವೆಳಗಾದಂ (ಧರ್ಮಾಮೃ. ೦–೧೪೦). [ಬಲ್$_2$ (< ಬಲ್ಲಿತು$_1$) + ದಡಿಗ]

**ಬಲ್ದನಿ** (ನಾ). ಜೋರಾದ ಸ್ವರ ; ಗಟ್ಟಿಯಾದ ಧ್ವನಿ : ಪಾಮರಿ ಚರಿಸುತ್ತಾ ವನಕೆ ಸಾಲ್ದೆಸೆಯನೊಸೆದು ಬಂದೆಱಪ ಗಿಳಿವಳಗಂ ಕಯ್ಯೆತ್ತಿ ರಯ್ಯಮಾಗಿ ಬಲ್ದನಿವೆರಸು ಸೋವೆ (ಶಬ್ದಮ. ೬–೦೬) ; ಬಲ್ದನಿಯ ಚಪ್ಪಳಿ ಗಳಣ್ಮುವೊಲಪ್ಪಳಿಸಿ ತೋಳ್ಗಳಂ (ಶ್ರೀಶಾಪು. ೩೯೨–೨೨೭). [ಬಲ್$_2$ (< ಬಲ್ಲಿತು$_1$) + ದನಿ$_1$]

**ಬಲ್ದಲೆ** (ನಾ). ದೊಡ್ಡ ತಲೆ ; ದಪ್ಪ ತಲೆ : ಸತ್ತಿಗೆ ಗಗ್ಗರಂ ಕರುಳ ಬಕ್ಕಳೆ . . . ನೆತ್ತರ ತಳ್ಪ ಬಲ್ದಲೆಯ ಬಂದಿಗ ಪಾವುಗೆ ಪಂಚಪುಷ್ಪನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಶಾ. ೩೬೩). 'ಬಲ್ದಲೆಯ' ಪಠಾ. [ಬಲ್$_2$ (< ಬಲ್ಲಿತು) + ತಲೆ]

**ಬಲ್ದಲೆಯ** (ನಾ). ೧. ದೊಡ್ಡ ತಲೆಯನ್ನುಳ್ಳವನು : ಬಲ್ದಲೆಯುಂ ತೋಳ್ನೀಳ್ದನಗಲ್ದುರದಂ ಬಟ್ಟದೊಡೆಯುವಂ ಕೆಂಗಣ್ಣಂ ನೀಲ್ದ ಕಿವಿಯಾತ ನೆನಿಸುವನೊಲ್ದೊಲಿಸುಗುಮೆಸೆವ ಬೀರಸಿರಿಯಾ ಧುರದೊಳ್ (ಕಾವ್ಯಾವ. ೨೩೩) ; ಅತ್ತಕ್ಕೆ—ಅಲರ್ಗಣ್ಣಂ . . . ಬಲ್ದಲೆಯಂ, ಅಗಲ್ದುರದಂ (ಕವಿರ. ೦೪೬ ಶ್ರಹೂ). ೨. ಸಮರ್ಥನಾದವನು; ಬಲಿಷ್ಠನಾದವನು; ಪರಾಕ್ರಮಿ : ಗೆಲ್ದಾರ್ದ ಜನಕಸೇನೆ ಸಡಿಲ್ದಗಿಯೆ ಕಿರಾತಸೇನೆ ದಶರಥ ರಾಮುಂ ಬಲ್ದಿಗದಿಸೆ ಮಾರ್ಪಡೆಯೊಳ್ ಬಲ್ದಲೆಯರ್ ಶಬರನಾಯಕರ್ ಪಡಲಿಟ್ಟರ್ (ಶಂಶಾಪು. ೯–೬೪). [ಬಲ್ದಲೆ + — ಅ$_7$]

**ಬಲ್ದಸಿ, ಬಲುದಸಿ** (ನಾ). ಮರ ಅಥವಾ ಲೋಹದ ಚೂಪಾದ ದೊಡ್ಡ ಗೂಟ,— ಶೂಲ : ಬಡುವುರಿಯೆಣ್ಣೆ ಸೂಸುವ ಕನಲ್ಗಿಡಿ. . . ಕಡೆಸಿರಗೆಯ್ದು ನೂಂಕುದಳಿಯಿಕ್ಕುವ ಬಲ್ದಸಿ ಭೀತಿಯಂ ಮಸಕ್ಕೊಡರಿಸೆ (ಶಂದ್ರಪ್ರ. ೩–೦೫೩) ; ಹುರಿವ ಮಳಲಿನ ಕಾಸುವಂಬಲಿಯ . . . ಮರುಳ ಕೈಗಳ ನೆಟ್ಟ ಬಲ್ದಸಿಗಳ ಪರಿಪರಿಯ ಗುಂಡುಗೋವಿಯು. . . ಪಂದಿವಲೆಯ ಮೊತ್ತಂಗಳಾಳ್ವೇರಿಯೊ ಳ್ ಪಸರಿಸಿದುವು (ಶಂಕ್ಪು. ೯೨–೧೧). **ಬಲುದಸಿ** : ಎಸೆವ ಕೋಂಟೆಯ ತನೆಗಳಲಿ ಕಟ್ಟಿಸಿ ಪತಾಕೆಗಳಂ ಬಸಿದ ಬಲುದಸಿಗಳಂ ಮಲಗಿಸಿ ಮಾರಂಗಳನಿರಿಸಿ ಎಡೆಗೆಡೆಗೆ . . . ಪೊಸದುರ್ಗಮಂ ಪಾಟಿಸಿ ಪಿರಿಯ ನತಬಾವಿಗಳನಗುಳಿಸಿದನವಱೊಳಗೆ (ರಿಪು. ೦೬–೧೦) ; ಬಲೆ ಕಾಲ್ವಣ್ಣೆ ಗುನ್ನಲುಗೂಡಿಡಿಸಲು ಬಲುದಸಿಯುಾರುಳಿಯಿಂದ ನೆಲಗಪ್ಪಗಳಿಂದ ಮೃಗಗಳ ಹರಣವ ತೊಲಗಿಸುವರು ಬೇಡರಲ್ಲಿ (ರಾಜಶೇ. ೦೩–೬೪). [ಬಲ್$_2$ (< ಬಲ್ಲಿತು$_1$) + ದಸಿ]

**ಬಲ್ದೆರೆ, ಬಲುತೆರೆ** (ನಾ). ದೊಡ್ಡದಾದ ಅಲೆ,—ತರಂಗ : ಕುದುರೆಯ ತಟ್ಟುಗಳ್ ನೆರೆದ ಬಲ್ದೆರೆಯಂ ಪಿಡಿದಿರ್ದ ಬಾಳ್ಗಳುಣ್ಮಿದ ನಿಡು ವಾಳೆಯುಂ . . . ಪೊಸತೇರ್ ಪಡಗಂ ನೆಗೞ್ದೆ ಪೆರ್ಚಿದ ಕಡಲಂಬನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ (ಕಬ್ಬಿಗ. ೨೦೭) ; ತುಂಬಿದ ಸಂಗೀತ ರಸದ ಬಲ್ದೆರೆಯೊಂದು ತುಂಬಿಉಚ್ಚಿದರೋ ಎಂಬಂತೆ ತುಂಬುರುವೀಣೆ ಯೊಳೊಲ್ದು ಪಾಡಿದರಂದು ತುಂಬುಜವ್ವನೆಯರು (ಶರಶ. ೩–೬೨) ; ವಾರ್ಧಿಗಳ ಬಲ್ದೆರೆಗಳೊಂದೊಂದನಣಮಂತೆ ದುರ್ಧರದ ರಾವ್ತರಿಱು ದಾಡಿದರ್ (ಶಂಕ್ಪು. ೨೯–೯). **ಬಲುತೆರೆ** : ಜಲವಾಸಕ್ಕೆದುವ ಕುದುರೆಯ ಸಾಲುಗಳ್ ಬಲುತೆರೆ ಬೆಳುಗೊಡೆ ನೊರೆಯು ಕೊಳಿಪ ಚಾಮರ ಷಫ ಗಳಾಗಲಾ ಪುರ ಜಲರಾಶಿಯಂತೆ ರಾಜಿಸಿತು (ಶಂಸಪ. ೬–೩೩). [ಬಲ್$_2$ (< ಬಲ್ಲಿತು$_1$) + ತೆರೆ$_4$]

**ಬಲ್ದೊಱೆ** (ನಾ). ವಿಶಾಲವಾದ ತೊರೆ : ನಿತ್ತರಿಸದೆ ಬಲ್ದೊಱೆ ಯೊಳ್ ಮತ್ತನಿಸದೆ ಬರ್ದೊಡಣ್ಣ ಸಹವಾಸಿಯೆ ಬಂದೆತ್ತುವುದುಳಿದವ ರಜಸಿಯುಮೆತ್ತಲ್ ಕೇಳಾಗದೆಂಬ ನಿಯಮಮುಮುಂಟೇ (ಧರ್ಮಾಮೃ. ೦–೧೨೩) ; ಉತ್ತುಂಗಶಿಲೆಗಳಿಂ ಭರದಿಂ ಬಿಳ್ದು ಪರಿವ ಬಲ್ದೊಱೆಯತಿ ಬಂಧುರವಡೆಯಿತ್ತು (ಜಯಶಾ. ೯–೧೧). [ಬಲ್$_2$ (< ಬಲ್ಲಿತು$_1$) + ತೊಱೆ$_2$]

**ಬಲ್ನಗೆ** (ನಾ). ಅತಿಯಾದ ನಗು; ದೊಡ್ಡನಗೆ : ಆ ಸಮಯದೆ ದೇವಿಯುಪಗೆ ಮೋಹದ ರತಿಯಾಸೆಯ ಪುಟ್ಟಿಸಲಾಗ ಸೂಸುತ ರೂಪ ಜಯಂತ ಬಲ್ನಗೆಯ ವಿಲಾಸದೆ ಸುಬರೊಳಿಂತೆಂದ (ಶಂಸಪ. ೦೦–೯). [ಬಲ್$_2$ (< ಬಲ್ಲಿತು$_1$) + ನಗೆ]

**ಬಲ್ನನೆ** (ನಾ). ದಪ್ಪವಾಗಿರುವ ಮೊಗ್ಗು : ನನೆಯುಂ ಮುಂಡಾಡುತೆ

ಬಲ್ನನೆಯಂ ಬಲವಂದು ಮುಗುಳನಾಲಿಂಗಿಸಿ ಕಂಪಿನ ಬಿರಿಮುಗುಳಂ ಚುಂಬಿಸಿಯುನುನಯದಿಂದಲರನಲೆದು ತೀವಿದುವಳಿಗಳ್ (ಗಂಕ. ೨-೬೬); ವಿಳಿರ್ದಾಡುವ ಸುಣ್ಣಾಳಿರಲ್ಲಿಯಲ್ಲಿ ಬಲ್ನನೆಗಳವಲ್ಲಿಯಲ್ಲಿ ... ಪಣ್ಗೊನೆಗಳವಲ್ಲಿಯಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಗಾ. ೩೨).

[ ಬಲ್₂ (<ಬಲ್ಲಿತ್ತು₁) + ನನೆ₁ ]

**ಬಲ್ನಿಡಿದು** (ನಾ). ಬಹಳ ದೊಡ್ಡದಾದುದು; ಅತಿ ವಿಶಾಲವಾದುದು. ಬಲ್ನಿಡಿಯವು (ಬಹುವ) : = ವೈಡೂರ್ಯಮಯಮುಂ ಕಾಂಚನಮಯಮುಂ ಸ್ವರ್ಣರತ್ನಮಯಮುಮಾಗಿ ಯಥಾಕ್ರಮದಿನೆಂಟುಂ ನಾಲ್ಕುಂ ನಾಲ್ಕುಂ ಬಲ್ನಿಡಿಯವಪ್ಪ ಮೂಱುಂ ಪೀಠಂಗಳ ಮೇಗೆ ... ನೆರೆದು (ಆದಿಪು. ೬.೨೫೦ ವ). [ಬಲ್₂ (<ಬಲ್ಲಿತ್ತು₁) + ನಿಡಿದು₁]

**ಬಲ್ನಿಱಿ** (ನಾ). ಹೆಚ್ಚಿನ ನೆರಿಗೆ ; ತುಂಬ ನಿರಿ : ಎಲೆ ಸುಕುಮಾರ ... ಗೆಜ್ಜೆ ಮೆಲ್ಲುಲಿಗುಡೆ ಬಂದು ಬಲ್ನಿಱಿಯನಪ್ಪದೆ ತಳ್ವದೆಯ್ದೆ ಕನಕೋದ್ಭವಾ (ರಾಜಶೇ. ೦೪-೦೦೨) ; ತವಮಾಲದೊಳ್ದಳಿರುಡೆ ತಳ್ತ ಪಾಲಿಯ ತರಂಗದ ಬಲ್ನಿಱಿಗಟ್ಟು ... ಪಸಿರ್ವವತ್ತ ಪಟ್ಟಳಿಯ ನಿಚೋಳಮೊಪ್ಪಿರೆ ಪುಳಂದಿಯರಾದರಮರ್ತ್ಯಕಾಂತೆಯರ್ (ಕಾದಂಬ. ೩-೯).

[ ಬಲ್₂ (<ಬಲ್ಲಿತ್ತು₁) + ನಿಱಿ₂ ]

**ಬಲ್ನುಡಿ** (ನಾ). ಬಿರುಸಾದ ನುಡಿ; ಒರಟಾದ ಮಾತು : ಬಡಿಹೋರಿ ಬಲ್ಪೆಟನೆಂಬ ಬಡನುಡಿ ಬಲ್ನುಡಿ ಬಡದೈವಲ್ಲದೆ ಬಡಶಬ್ದ ನಿನ್ನ ಪೊಂದುವದೆ (ಕಶಾಂ. ೬೨-೬೩); ಕೊಡೆದಳೆಯುಂ ಮಾನವನಂ ಪಿಡಿವಂ ಮಳೆ ಬಿಸಿಲ ದೆಸೆಗೆಯದೆಱಂತೀಗಳ್ ಬಡದೊರೆಗಳ್ ಚಂಡನ ಬಲ್ನುಡಿಗೊಳಗಾಗಿಂತು ಕಟ್ಟಿತನವಂ ನೆಗಳ್ದರ್ (ಹರಿಶ್ಚ. ೩-೨೨).

[ ಬಲ್₂ (<ಬಲ್ಲಿತ್ತು₁ ) + ನುಡಿ₂ ]

**ಬಲ್ನೆಣ** (ನಾ). ಹೆಚ್ಚಾದ ಕೊಬ್ಬು; ಅತಿಯಾದ ಮೇದಸ್ಸು : ಕಾದ ಪಂದಿಗಳ ಬಲ್ನೆಣದಿಂ ಪೊಲಸಟ್ಟ ನಾರ್ವ ಜೇವಡೆಗಳ ಪುಣ್ಗಳಿಂ ಕೊರೆವ ನೆತ್ತರ ಕೆಯ್ ನಡುಗಲ್ಕೆ ನೀಡಿ ಕೀಟಾಳಿಯುಡೆ ಗಂಟಲೀ ಮುಱಿದ ನೊರ್ಮೆಯ ನಿರ್ಘೃಣನೆನ್ನ ತಂದೆಯಂ (ಕಾದಂಪೂ. ೦೯೪).

[ ಬಲ್₂ (<ಬಲ್ಲಿತ್ತು₁) + ನೆಣ ]

**ಬಲ್ನೆಲೆ** (ನಾ). ಬಲವಾದ ನೆಲೆ ; ಸ್ಥಿರವಾದ ಆಶ್ರಯ : ನಿತ್ಯಯೋಗಿ ನಿಷ್ಕಂಪಮಮಂಗೆ ಶಾಂತಮನುತಾಪಮನಾಱಿಸಿ ತಂ[ದಾದಂ]ದು ಬರ್ದೊಂಚ ಪರಿದಿರ್ದಪೋಲ್ ಮುನಿಗೆ ಕಲ್ನೆಲೆ ಬಲ್ನೆಲೆಯಂ ನಿದಾಘದೋಳ್ (ಶಾಂತಿಪು. ೯-೦೦೬). [ ಬಲ್₂ (<ಬಲ್ಲಿತ್ತು₁)+ನೆಲೆ₁ ]

**ಬಲ್ಪಂಥ** (ನಾ). ಅತಿಶಯಂವಾದ ಹಟ ; ಬಹಳವಾದ ಛಲ : ಸ್ವಲ್ಪ ದಿನವೊಳಯಿತು ಒಂದು ಸಾಧನ ಕಾಣೆ ಕಲ್ಪಾಯುಃ ನಿನಗಿಲ್ಲವಲ್ಲೊ ಬಲ್ಪಂಥಗಳ ಮಾಡಿ ಭೋಗಪಡದಿರು (ಹರಿದಾಸ. ೯೮-೯).

[ ಬಲ್₂ (<ಬಲ್ಲಿತ್ತು₁) +ಪಂಥ₁ (<ಪಂತ₁) ]

**ಬಲ್ಪಳಿ**, ಬಲುಹಳಿ (ಕ್ರಿ). ಬಲಗುಂದು ; ಶಕ್ತಿಹೀನವಾಗು : ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಱಿ ನೋಡುತುಂ (ಶಂಕರ. ೬-೦೨೯) ; ದೆಸೆದೆಸೆಗೆ ಕರೆಕರೆದು ಬಾಯಾಱಿ ಬಲ್ಪಳಿದು ನಿಂದಿರ ಲಾಱದೆ ಕಾರ್ ಕುಪ್ಪಳಿಸಿ ಭೋಂಕನೆ ಕುಳ್ಳಿರ್ದು (ಗಂಕ. ೯-೬೬೩); ನೋಡಿ ಮರೀಚಿಕಾಜಲಮನಂಬುವಿದೆಂದೆಳಸುತ್ತ ಬಂದು ಕೈನೀಡಿ ಕಲಂಕಿ ಪೊಕ್ಕು ತಗೆದಿಕ್ಕುತ ಪುಷ್ಕರಮಂ ನಿಜಾಸ್ಯದೊಳ್ ಬಾಡಿ ಬಳಲ್ದು ಬಲ್ಪಳಿದು ... ಬೀಳ್ವುದರ್ಕಕರಕಲ್ಪಿತಸಂಜ್ವರನೊಂದ್ದ ಕುಂಜರಂ (ರಾಜಶೇ. ೩-೩೯). ಬಲುಹಳಿ : ಮಂಗಳ ಮಂಗಳ ... ಕೊಲಿವಳಿದು ಛಲವಳಿದು ಬಲುಹಳಿದು ನಿಲಲು ಸೂತ್ರದ ಜಂತ್ರದವಳಿಯೊಲು ಫಲಸಿದ್ಧಿ ಎನಿಸಿ ನಿಷ್ಫಲಸಿದ್ಧಿಯನೆ ಬಿಟ್ಟು ಭಕ್ತ್ಯಂಗನೆಯ ಮರ್ತ್ಯಕ್ಕೆ ತಂದಿತ್ತವಂಗೆ (ಅವಕಾ. ೨೬೯-೦೪೦೦) ; ಎನ್ನನ್ನೇಕೆ ಕಾಡುವಿ ಎಲೆ ತಂದೆಗಳಿರಾ ಬಲುಹಳಿದು ಭವಗೆಟ್ಟು ಛಲವಳಿದು ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ (ಸುಹಾರೇ ಶ. ೦೫೦-೨೯೮).

[ ಬಲ್ಪು+ಅಳಿ₁ (<ಅಟ್₁) ]

**ಬಲ್ಪಾವು** (ನಾ). ದೊಡ್ಡಹಾವು : ಅವನವುರವದವಿಯುಂತ್ಕಮ್ಮದೊಳವನಿಗೆ ಬಲ್ಪಾವದಾಗಿ ಬೀಳ್ವಿನಂ (ಜಾಲಾಸ್ಯ. ೦-೨-೫೯).

[ ಬಲ್₂ (< ಬಲ್ಲಿತ್ತು₁) + ಪಾವು₁ ]

**ಬಲ್ಪಿಡಿ₁** 'ಬಲ್ವಿಡಿ₁' ನೋ.

**ಬಲ್ಪಿಡಿ₂** 'ಬಲ್ವಿಡಿ₂' ನೋ.

**ಬಲ್ಪಿಲಿ** (ನಾ). ಬಲವಿಲ್ಲದುದು ; ನಿರ್ಬಲವಾದುದು : ಒಡಲಿದು ಬಲ್ಪಿಲಿಯಕ್ಕುಂ (ಶೌಚಂದ. ೯-೦೦). [ಬಲ್ಪು+ –ಇಲಿ₂]

**ಬಲ್ಪು**, ಬಲುಪು, ಬಲುಹು (ನಾ). ೧. ಬಲ; ಶಕ್ತಿ; ಸಾಮರ್ಥ್ಯ; ಪರಾಕ್ರಮ : "ಪ್ರಾಣಃ ... ತರಃ ಸಹಃ—ಈ ೮ ಬಲ್ಪು (ಬಲುಹು)" (ಹಲಾಯು. ೦೨೦-೩೬) : ಬಲ್ಪುಂ ಕೊರ್ಪುಮಾರ್ಪುಂ ನಿರಂತರಮೊಪ್ಪಲ್ (ಎ. XIII. ೩೬೯-೩; ೯೭೦) ; ಮಾಣಿಕಂ ಸೂಸೆ ಬಲ್ಪಿಂದೊದೆದಂ ಸಾರ್ತಂದು ದುರ್ಯೋಧನನ ಮಕುಟಮಂ ಕೋಪದಿಂ ಭೀಮಸೇನಂ (ಶಂಕಪಾ. ೦೩-೯೮); ಕೆಡೆದಿರ್ದ ಶಬರಂ ಕಕ್ಕಡವಂದಿಯನೀಕ್ಷಿಸುತ್ತ ಶಬರ ಸಮೂಹಂ ಬಿಡೆ ಕೊಂಡುಕೊನೆದು ಬಲ್ಪಂ ನುಡಿಯುತ್ತಿರ್ಪನ್ನಂ (ಗಂಕ. ೦-೦೦೦). ೨. ಬೆಳೆಯುವಿಕೆ; ಬಲಿಯುವಿಕೆ : ಎಳವಾಳೆ ಬಲ್ಪಿಗೆ ಬಂದರ ಸೀಗೆಯು ಮೆಳೆಯೊಳು ಮಥನವೆ (ಮೋಹತ. ೩೯-೨೪). ೩. ದೃಢತೆ; ಸ್ಥಿರತೆ : ಪಿಡಿದೀ ವ್ರತಮಂ ನಾಂ ಸಾವೊಡೆ ಸಾವೆಂ ಬಿಡುವೆವಲ್ಲವೆಂದೊಡೆ ಮೂರ್ಖಿಂ ಮಡಿಪದೆ ಮಾಣಂ ಬಲ್ಪಿಂ ಪಿಡಿವೆಂ ಜಿನವದಮನಿದುವೆ ಕಜ್ಜಂ ವೆಱತೇಂ (ಧರ್ಮಾಮೃ. ೩-೦೦೦): ಪಿಂಗಿದ ನೀಜರ ಬಲ್ಪು ಪಾಱ್ ಪಾದರಿಗರ ನಾಣ್ಗಳಂರ್ಕುಗಿಡೆ ... ಜೇವೊಡೆಯ ಬಲ್ಲುಲಿ ನೀಳ್ದುದು ಕರ್ಪುವಿಲ್ಲನಾ (ಕಬ್ಬಿಗಾ. ೩೦೦) ; ಏರಚಿಸಿದಂ ... ಲಕ್ಷ್ಮೀಶನೆಂಬೊರ್ವನು ಹೃದ್ಯನಜದೊಳ್ದೇವಪುರದ ಲಕ್ಷ್ಮೀಶನ ಪದದ್ವಯವನಾವಗಂ ಧ್ಯಾನಿಸುವರಡಿಗಳು ಸದ್ವಿನಯದಿಂ ಭಜಿಪ ಬಲ್ಪಿಂದೆ ವಿಮಲ ಜೈಮಿನಿಭಾರತದ ಕಥೆಯನು (ಜೈಮಿಭಾ. ೦-೦೦). ೪. ಗಾಢತೆ; ಬಿಗುಹು; ಬಿಗಿ: ಕಲ್ಪಲತೆಗಳೆಡೆಬಲದಲ್ಲಿ ಹಬ್ಬಿದ ಕಲ್ಪವೃಕ್ಷವೊಯಿಂಬ ಸೊಬಗ ಕಲ್ಪಿಸುತ್ತಿರ್ದನಾ ರಾಯನಾ ವೆಣ್ಗಳ ಬಲ್ಪಿನೊಳಮರ್ದಪ್ಪಿದಾಗ (ಚರಿ. ೬-೩೩). ೫. ಬಲಾತ್ಕಾರ; ಬಲವಂತ ; ಒತ್ತಾಯ : ಸಮಸುಖದುಃಖಮಂ ತಳೆವ ರೋಹಿಣಿ ... ಎನ್ನಯ ಮೋಹದ ಮರ್ತ್ಯರೂಪದಿಂದಮ ಬಱಸಂದಳೊಲ್ದು ಮಗುಟ್ದುಂ ಬರೆ ಪಿಂತೆಯ ಮತ್ತ ಬಲ್ಪಿನಿಂಗಮ ನಿಲಿಸಿಟ್ಟನೆಯ್ದ ನಿಜಲೋಕದೊಳಾಕೆಯನಲ್ಲಿ ಕಂಡಪ್ಪೆ (ಕಾದಂಉ. ೬೦೯) ; ಕೆಲಬರ್ ಸಿಂಗಮನೊತ್ತಿ ಪಲ್ಲಣಿಸಿ ಬಲ್ಪಿಂದೇಱುತುಂ ಬೇಗದಿಂ ... ನಡೆವರೆತ್ತಂ ಬೀರರಾ ಪಾಡಿಯೊಳ್ (ಕಬ್ಬಿಗಾ. ೨೩೩) ; ಕಂತೆ ಕಟ್ಟಿಗೆ ಕಪ್ಪರಂಗಳನಿಭಾಸುರನ ವಿಷ್ಣುವಿಧಿಗಳ ಸದೆದು ಬಲ್ಪಿನಿಂ ಸೆಳೆದುಕೊಂಡ್ಯ (ಛಾಶಂ. ೯-೦). ಬಲುಪು : ೧. ಬಲುಪಿನೊಳಂ ತೇಜದೊಳಂ ... ರೂಪಿನೊಳಂ ಸಲ್ಲಲಿತವಪ್ಪೞಿತದೊಳಂ ಗೆಲುವವನ್ನಗ್ಗಾಣಿಕೆ ರೇವಗೌಂಡಂಗೆಳೆಯೊಲ್ (ಶಾಸ. IX–i. ೨೯೯-೩೭; 1147); ಕಲಿತನದ ಬಲುಪಿನಾರ್ಪಿಂ ಕೊರ್ಪಿಂ ಧರೆಗೆಸೆವ ಪಂಚಲಿಂಗನ ಚರಣಾಬ್ಜವರಪ್ರಸಾದ ತೋಂಟಿಗುತ್ತರ್ವರ್ಪವೃತ್ತಿ ಕಂಡಗೆಯುಂ ... ರಂಗಭೋಗಕ್ಕಂದುಂ (ಶಾ. I. ೩೦-೩೫; 1222); ಮೆಲುಪು ಬಲುಪಿನ ಶಕುತಿಗಳುಡುಗಲಿ ನೆನಪು ಮರಳದೆ ತೊಡೆದು ಹೋಗಲಿ (ಪಕೀಲ. ೦೦೯-೯). ೫. ಹೆಡಗುಡಿಯ ಕಟ್ಟಿಮುಭಯವ ನಡೆಯಲಿ ಹಱುಗೋಲನಲ್ಕೆಯಂಬಿಗನಾಗಂ ಪಿಡಿದು ಕೋಡಗನ ದ್ವಿಜನಂ ಕಡುಬಲುಪಿಂ ಪಿಂತೆ ತಗೆದು ಕಟ್ಟಿದ ಕರಮುಂ (ಪದ್ಮಪಾ. ೨-೦೮೪). ಬಲುಹು : ೧. "ಪ್ರಾಣಃ, ಸ್ಥಾಮನ್, ಬಲಂ ... ಸಹಃ_ಈ ೮ ಬಲ್ಪು (ಬಲುಹು)"

(ಹರಿಹರ. ೦೨೦-೪೯); ಜನನಮರಣಕ್ಕೊಳಗಾಗದನ ಬಲುಹನೇನ ಬಣ್ಣಿಪೆನಪ್ಪ (ಹರಿಹರ. ೬. ೦೦-೬): ಕುಬೇರನ ಗರ್ವಭೂರುಹವ ಬೇರುಳಿಯದೆ ಕಿತ್ತು ಬಿಸಾಡುವೆನೀಶನ ಭಾರಿಯ ಬಲುಹ ಮುಚ್ಚಿವೆನು (ಕೃಷ್ಣಕಾ. ೦೦-೧೨೬); ಎಲೆ ಕುಮಾರಕ ಹರಕುಮಾರಾಂಗಳವಿಯಲಿ ನಿಲಲರಿದು ಕೊರಳಿನ ಬಲುಹನಜ್ಜಯದೆ ಗಿರಿಯ ಹೊಜಲುಂಫ್ಯಿಸುವರೆ ಭಟರು (ಕುಮಾರವ್ಯಾ. ೯-೩೯). ೩. ಬೇಂಟೆಗೆಯ್ವುದ ಭೂಪಾಲಕನನೆಳೆತಟು ಮಾಡಿ ತಗೆದೆನ್ನಾಶ್ರಮಕ್ಕೊಯ್ದು ಬಳಕ ನೋಡುಮೆನವನ ಸತ್ವಗಿತ್ವದ ಬಲುಹನೆಂದ ವಿಶ್ವಾಮಿತ್ರನು (ಹರಿಶ. ೩-೧೦) ; ಅನಘನಪ್ಪಾ ಮಾದಿರಾಜನ ಮನದ ಬಲುಹಂ ನೋಡಿದವೆ ನಾನು (ಬಸವ. ೦೯-೬೩). ೪. ಪಸ್ಸವ ಬಹಳವಾಗಿ ಧರಿಸು ಸೆಜ್ಜೆಯ ಬಲುಹಾಗಿ ಕಟ್ಟು ಶಿವದಾರವ ಬಲುಹಿನಲಿ ಸುತ್ತೆಂದು ಹೇಳುವುದು ಉಪದೇಶವೇ ಬೇಜಿ ಕಟ್ಟುವ ಠಾವುಂಟಾಗಿ (ಕನ್ನಡ. ೪. ೩೨೬-೦೦೩೩); ಆಗಳತಿಸಾಕಾರರೂಪವದಾಗೆ ನಡನಡುಗುತ್ತ ಹತ್ತಿರೆಗಾಗ ಕ್ಯಸನ್ನೆಯಲಿ ಕರೆವುತ್ತೊಡೆಯ ನಂಬಿಯನು ಆಗ ತನ್ನುಡೆಚ್ಚಿ ಯನು ಬಲುಹಾಗಿ ಒಡಿಸುತ್ತಾತನಂ ತಲೆವಾಗಿಸುತ್ತಂ ಭಯದ ಬಿತ್ತಂ ಬಿತ್ತಿ ಚಿತ್ತದಲಿ (ಬಸವ. ೨೬-೨೩). ೫. "ಹಠಃ, ಪ್ರಸಭಃ — ಈ ೨ ಬಲುಹು (ಬಲ್ಪು)" (ಹಲಾಯು. ೦೨೩-೬೪); ಕಂಗಳಲಿ ಕಟ್ಟಿದ್ದ ಮುಸುಕೆ ಸಭಂಗನಾಗ ತಗೆದು ಬಿಸುಟು ಸಮನಂಗಳಂ ಬಲುಹಿಂದ ತಜೆದುಜಿ ನೋಡಲು (ಬಸವ. ೩೦-೬೦) ; ಕಾಂಚೀದೇವಿ . . . ಬಲುಹಿನಲಿ ಭೂಸುರನ ಚಿತ್ತವ ಶಿಳುಹಿ ಬಂದಳು ಮನೆಗೆ (ಕುಮಾರ. ೦೦-೨೦) ; ಆನೆಮನುಜನು ವಂತಾ ಕಾಂತೆ ಬಲುಹಿಂದ ತಾನುಣಿಸಿದಳಾತ್ಮಪತಿಯ (ಶರಶ. ೧೦-೩೬). ೬. ಬಲವುಳ್ಳದು; ಬಲಿಷ್ಠವಾದುದು ; ಸಮರ್ಥವಾದುದು : ತಲೆ ಇಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು . . . ಬಲುಹೆನಿಸಿದ ಕರಡಿ ಹಾಡಿ ಹರಸಿ ಬೆಳೆಯಿತ್ತು (ಅರಶ. ೩೯-೦೦೩) ; ದೇವಿ ನೇಮಿಸಲಜ್ಜಿಯೆನಂದೊಡಿದಾವ ಧರ್ಮವು ಶಿವಶಿವೀ ಹದ ಸಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು (ಕುಮಾರ. ೩-೯). ೭. ಬಲವುಳ್ಳವನು ; ಬಲಿಷ್ಠನಾದವನು ; ಸಮರ್ಥ : ಬಲಿವನಿತನಾರೋಗಿಸಿದಪಂ ನಿಲಿಸಲಾಪ್ಪೆ ಎನ್ನನನುತಂ ಬಲುಹಲಾ ನೀನಿದಕೆ ನಾನೇನಜ್ಜಿಯೆನೇ ಎನುತ (ಬಸವ. ೩೯-೦೩); ಈತ ಧನುವಿನೀತ ಖಡ್ಗದಲೀತ ಪರಿಘದಲೀತ ಕುಂತದಲೀತ ಬಲುಹೆಂದಂಥ ಭೂಪತಿಗಳುಹಿದನು ವಿದುರ (ಕುಮಾರ. ೬-೨೯). ೮. ಅಧಿಕ ನಾದವನು ; ಮಿಗಿಲಾದವನು ; ಉತ್ತಮ : ಬಲುಹದಾರ್ಯ ತಾಟಕಿಗೆ ವೆಗ್ಗಳರದಾರು ಸುಬಾಹುವಿಗೆ (ತೊರವೆ. ೩-೬-೯೨). ೯. ಹೆಚ್ಚಾದುದು ; ಅಧಿಕವಾದುದು : ಭಟನುಜಿಬಿ ಬಲುಹೋ ದಿಟ್ಟನಿವ ಕೌರವರ ಥಟ್ಟಿನಲಿ (ಕುಮಾರ. ೨೦-೦೬) ; ನೆಲಹುಗಳಾ ಮೊಸರ ಸುಂಡನು ನಿನ್ನ ಕಂದನ ಗಸಣಿ ಬಲುಹು ಯಶೋದೆ (ಕೃಷ್ಣಶಾ. ೨೦-೯೯). ೧೦. ಬೆಂಬಲ ; ಒತ್ತಾಸೆ : ನರನ ನುಡಿ ಹೊಲ್ಲಗಡಾ ಮುರಹರನ ಬಲುಹುಳ್ಳನ್ನಬರ (ಕುಮಾರವ್ಯಾ. ೬-೬೩) ; ಜನರ ಪರಿಪರಿ ದೂಷ್ಯ ಭೂಷ್ಯವ ನೆನೆವೆನೇ ತಮ್ಮಡಿಯ ಸಂಭಾವನದ ಬಲುಹಿರಲಾವ ಭಯ ಮೇಕೆಂದು ಕೈಮುಗಿದ (ಗದುಗು. ೦೬-೬೪). ೧೧. ಕಟ್ಟು ; ಆನಿಕೆ : ಕಾಂತಾಲೋಚಭಾರದಿಂದೆ ನುಣ್ಗೂರಲು ಮುಂದೆಂತಹುದೆಂದು ಸಂದೆಗದೆ ಸಂತತ ಬಣ್ಣಗಲ್ಲುಗಳ ಕೇವಣಿಸಿರ್ದ ಚೆಂತಾಕ ಬಲುಹನಿಕ್ಕಿದರು (ಜೋಹಶ. ೨೩-೪೮). ೧೨. ಕಠಿಣವಾದುದು ; ಕಷ್ಟಕರವಾದುದು : ದೇವ ಕಾಳೆಗ ಬಲುಹು ಬಿಸಿಲಿನ ಡಾವರಕೆ ರಥತುರಗಪತಿನಿರ್ಜೀವಿಯಾದವು (ಕುಮಾರವ್ಯಾ. ೦೦-೨೬): ಬಲುಹಿನ ಸೀನಾ ಏಳನ ಕೊಲುವುದೆಂತೆನೆ ಕೋಪಿತನಾಗಿ ತನಗಿದು ಬಲುಹೆಯೆಂದದನುಸುರಿದನು (ಜೈಮಿನಿ. ೦೩-೯೬): ವರಕಾಮುಸೃಷ್ಟಿಯೆನಿಪ ಗೃಹಪತಿರತ್ನ ಪರಿಪರಿ ಗೃಹವಸ್ತುಗಳನು ನೆರಪುವುದನೋಡು ವಿಭವದ ಮಾಳ್ಪನೆಂದರೆ ತಡಬಡವುಂಟೆ ಬಲುಹೆ (ಶರಶ. ೬೬-೦೦೩). ೧೩. ಮಹಿಮೆ ; ಪ್ರಭಾವ : ಎನಲು ತಾ ನರವರವಸಿಷ್ಠಂಗಿನಿತು ಸತ್ವವಿದೇನದೆಂದರೆ ಘನವನಜ್ಜಿಯಲು ಪಾರ್ಥ ರುಷಿಗಳ ತಪದ ಬಲುಹುಗಳ ತನತನಗೆ ಮುನಿವರರು ದೇವರ ಜನವ ಶಾಪಿಸಲೊಪ್ಪರೊಪ್ಪರಿಗನುಸರಿಸಿ ಗಜಜ್ಜಿಸಿತು ತತ್ಕ್ಷಣ ಪಾರ್ಥ ಕೇಳೆಂದ (ಸಂಶಕ. ೨೯-೩೬). ೧೪. ಹಿರಿಮೆ ; ಘನತೆ ; ಪ್ರೌಢಿಮೆ : ವಿದ್ಯದ ಬಲುಹನೆ ತೋಜಿ ಬುದ್ಧಿಯ ಮೆಜಿವವನಲ್ಲ ನಿರ್ಧೂಳಿ ಜನ್ನ ನಿಜಗುಣಯೋಗಿ ಕಂಡಯ್ಯ (ಶರಗೀ. ೧೨೯-೬೧೨). ೧೫. ಬಿರುಸು ಮಾತು : ಕೆಲಸ ಮಾಡಲು ನಿಮ್ಮ ಭವನದ ನಳಿನಮುಖಿಯರ ಕಳುಹು ಸುರಪತಿ ಬಲುಹ ನುಡಿದರೆ ನಿನ್ನ ಕತನದಿ ಕೆಡುವುದಾ ಲೋಕ (ಸಂಶಕ. ೨೦-೩೩). (ಗು). ೧೬. (ಅಲು) ಹೊರಗೆ ಮಾತ್ರ ಬಲವಾಗಿರುವಂತೆ ಕಾಣುವ ; ಅಶಾಶ್ವತವಾದ : ನಂಬದಿರು ಈ ದೇಹ ನಿತ್ಯವಲ್ಲ . . . ಒಳಗೆ ಮಲ ಮೂತ್ರಾದಿ ಕ್ರಿಮಿಗಳಿರವು ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು ಬಲುಹು ದೇಹವ ನೆಚ್ಚಿ ಕೆಡಬೇಡ ಮನುಜ (ಪುರಂದ. ೦-೨೬-೦).

ಬಲುಹು ಮಾಡು = ೧. ಬಲಪ್ರಯೋಗ ಮಾಡು ; ಶಕ್ತಿಯನ್ನು ಉಪಯೋಗಿಸು : ಬಲುಹು ಮಾಡಿಕೊಳಲ್ಕೆ ಹರಿಯಜ ಬಲಹರರ ಪವಣಲ್ಲ ಎಂದಡೆ ಅಳವಿಯೇ ನಿಮಗೆಮ್ಮೊಡನೆ ಮಾಜಿಕಾಂತು ಕೆಡಬೇಡ (ಬಸವ. ೩೯-೩೬). ೨. ಒತ್ತಾಯ ಮಾಡು ; ಬಲಾತ್ಕಾರ ಮಾಡು : ಮನೆವೆಂಡಿತಿಯೊ ನಾನೊತ್ತೆಸೂಳೆಯೊ ನಿನಗೆ ಸೋದರವತ್ತಿಗೆಯೊ . . . ನಿನ್ನವರ ಒತ್ತಿ ನೀನೆನ್ನಂ ಬಲುಹು ಮಾಡುತ್ತ ಕಾಡಲದೇಂ ಬಹುದು (ಬಸವ. ೯೦-೯೬).

ಬಲ್ಪಾಗು, ಬಲುಹಾಗು, ಬಲುಹಹು = ೧. ಹೆಚ್ಚಾಗು ; ಅಧಿಕವಾಗು ; ಬಹಳವಾಗು : ಮುಪ್ಪು ಬಲ್ಪಾಗೆ ಶಿಥಿಲನಕ್ಕಂ (ಮುಂಗರು. ೯೦-೦೦) ; ಭರ್ತ್ರುರುರವಣೆ ಪಿರಿದಾಯಿತ್ತು ಭಕ್ತರ ತೇಜಂ ಬಲುಹಾಯಿತ್ತು (ಬಸರ. ೬-೯೦) ; ಬೇಡತನ ಬಲುಹಾಯ್ತು ನಿಮ್ಮನು ಕಾಡುವವರಾರು (ಸಂಶಕ. ೬-೩೦) ; ಅಜಿವು ತಲೆಕೆಳಗಾಯ್ತು . . . ಮಜವೆ ಗಜಗಟ್ಟಿತು ಮನೋಭವ ನಿಟಿಗೆಲಸ ಬಲುಹಾಯ್ತು (ಕುಮಾರ. ೨-೦೨). ೨. ಬಲ ಬರು ; ಸಾಮರ್ಥ್ಯ ವುಂಟಾಗು : ಬಡವಂಗೆ ಹಣ ದೊರಕಿದಂತೆ ಕತ್ತಲೆಗೆ ಬಲುವಾದಂತೆ ಗಿರಿಗೆ ನಡೆ ದೊರಕಿದಂತೆ ಬಣಗುರಕ್ಕಸರಿಗೀಶ್ವರನಿರೂಪಿತದಿಂ ದ್ರುಹಿಣ ಕೊಟ್ಟ ವರದ ಬಲದಿಂ ಲೋಕಗಳನೆಲ್ಲ ಹಣಿದವಾಡಲ್ಕುಮರರರ್ದೆಗುಂದಿತು (ಬಸಶಂ. ೦೬-೯). ೩. ಬಲವುಳ್ಳುದಾಗು ; ಬಲಿಷ್ಠವಾಗು : ಕುಂಬಳಕಾಯಿಗೆ ಕಬ್ಬಿನದ ಕಟ್ಟ ಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೇ (ಬಸವ. ೯೨). ೪. ಬಲಿಷ್ಠನಾಗು; ಸಮರ್ಥನಾಗು: ಆದಡಿದ ಕೊಳ್ಳೆನುತ ಸಾತ್ಯಕಿ ಕೋದನಭ್ರವನಂಬಿನಲಿ ಬಲುಹಾದನ್ಯ ಮಗ್ನು ಎನುತ ಕಡಿದನು ಸೋಮದತ್ತಸುತ (ಕುಮಾರವ್ಯಾ. ೦೯-೯). ೫. ಉಗ್ರವಾಗು; ಪ್ರಚಂಡವಾಗು : ನಡುಹಗಲು ಪರಿಯಂತ ಕಾಳೆಗ ಬಿಡದೆ ಬಲುಹಾಯ್ತುಖಿಳವೇಗದ ಕಡುಗುದುರೆ ಬಳಲಿದವು (ಕುಮಾರವ್ಯಾ. ೦೦-೨೨).

[ಬಲ್$_2$ (< ಬಲ್ಲಿತು$_1$) + — ಪು$_2$]

ಬಲ್ಪುಗಿಡು 'ಬಲ್ಪುಗೆಡು' ನೋ.

ಬಲ್ಪುಗುಳ್ (ನಾ). ದಪ್ಪವಾದ ಗುಳ್ಳೆ; ಭಾರಿಯಾದ ಬೊಬ್ಬೆ: ಪುಷ್ಪ ಕೋಮಲಲಿಂಗಾಂಗದೊಳಾಯ್ತು ಬಲ್ಪುಗುಳದೆನ್ನಿಂ ಮುನ್ನಮೇಗೆಯ್ವೆನೆಂದು ಲಸತ್ಚಿತ್ತದೆ ತನ್ನ ಗೋಣ್ಗೊಜಿಯ (ಪ್ರಭು. ೯-೬೩).

[ಬಲ್$_2$ (< ಬಲ್ಲಿತು$_1$) + ಪುಗುಳ್$_2$]

ಬಲ್ಪುಗೆಡು, ಬಲ್ಪುಗಿಡು (ಕ್ರಿ). ಬಲವನ್ನು ಕಳೆದುಕೊಳ್ಳು; ಸಾಮರ್ಥ್ಯವನ್ನು ಕಳೆದುಕೊಳ್ಳು; ಶಕ್ತಿಗುಂದು : ಕಡವಗಲೊಳ್ ನಿಜಾಂಗಮಾತಿರಕ್ತದೊಳೊಟ್ಟಿರೆ ಬಲ್ಪುಗೆಟ್ಟು ತೇರ್ ಪೊಡೆಗೆಡೆಯಲ್ . . .

ಇನನೆಯ್ದಿದನಸ್ತಶೈಲವಮಂ (ರಶಳು. ೨-೩೯). ಬಲ್ಪುಗಿಡು : ಎಂತು ಪೆಱಗಿಕ್ಕಿ ನಳನಂ ನೀಂ ತಱಿಸಿದಂತೆ ಬಲ್ಪುಗಿಡದಣ್ಣ್ಮೆಯಿಂದಂತಕನೆ ಮಸಗಿ ಮೇಲೆಟ್ಟಿಂತೆವೊಲಿರ್ದಂ ಪ್ರಹಸ್ತನಪ್ರತಿಮಬಲಂ (ಕಂಠಾಪು. ೦೩-೬೬); ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ ಬಚ್ಚರ್ ಕಿರ್ಚು ಮುಟ್ಟಿದ ತುಪ್ಪದಂತೆ ಬಲ್ಪುಗಿಡೆ (ಧರ್ಮಾಪು. ೨-೩೯).

[ಬಲ್ಪು +ಕೆಡು$_1$]

**ಬಲ್ಪುಚ್ಚು** (ನಾ). ಬಲವಾದ ಹುಚ್ಚು; ಅತಿಯಾದ ಬುದ್ಧಿಭ್ರಮಣೆ : ಬಲ್ಪುಚ್ಚಾದಂ ಪೆರ್ಚಿದಪೊಲ್ಪೊಳೆಯಿಸುತಂದು ರಾತ್ರಿ ದರ್ಪಕಶಿಖಿ ಪೊಂಗಲ್ಪದ್ಮಾವತಿ ಜುಣುಗಿರ ನಲ್ಪೊಂಬಾಗಿಲ್ಗೆ ಬಂದನಾ ಕವಿರಾಜಂ (ಅದ್ಭುಟಿ. ೦೨-೩೩). [ಬಲ್$_2$ (< ಬಲ್ಲಿತು$_1$) + ಪುಚ್ಚು$_1$ (< ಪುಚ್ಚು)]

**ಬಲ್ಪುದೋಱ್** 'ಬಲ್ಪುದೋಱು' ನೋ.

**ಬಲ್ಪುದೋಱಿಸು** (ಕ್ರಿ). ಶಕ್ತಿಯನ್ನು ತೋರಿಸು; ಸಾಮರ್ಥ್ಯವನ್ನು ಪ್ರದರ್ಶಿಸು : ಮತ್ತಂ ಮಲೆತು ನೀಡು ಅಖ್ಖಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನನುರ್ಬುತ್ತೊಯ್ಯನೊಳಪೊಕ್ಕು ಮಿಕ್ಕು ಪಱಿಡಿಕ್ಕಿ ಮುರಿವ . . . ಮಲ್ಲರ ನೆರವಿಗಳೊಳಂ (ಗಂಳ. ೨-೦೦೩ ಪ). [ಬಲ್ಪುದೋಱು + – ಇಸು$_3$]

**ಬಲ್ಪುದೋಱು, ಬಲ್ಪುದೋಱ್** (ಕ್ರಿ). = ಬಲ್ಪುದೋಱಿಸು: ಏಱಿನೆ ಸೂಱಿಗೊಡು ನುಡಿವೀ ನುಡಿಯಲ್ಲದೆ ಮತ್ತಮಾಸನುದೋಱುವ ಬಲ್ಪುದೋಱಿಮೆರ್ದೋಱುವ ಕಯ್ಪುಸರುಗಳೆಮ್ಮನುಂತೇಱುವು (ಕಂಶಕಾ. ೬-೨೦). ಬಲ್ಪುದೋಱ್ : ಪಗಲಿರುಳೆನ್ನದೆನ್ನೊಳೆ ಕಡಂಗುವನೆನ್ನೊಳೆ ಬಲ್ಪುದೋರ್ಪಂ . . . ಕರಂ ಮುಳಿಸಿಲ್ಲ ಕಾಯ್ದು ಕೆಮ್ಮಗೆ ಬಳಸಂದು ಕೊಂದವನಕಾರಣದಿಂ ಮೊಱೆಯೋ ಮನೋಭವಾ (ಅಂಪು. ೧೨-೩೯).

[ಬಲ್ಪು + ತೋಱು]

**ಬಲ್ಪೊಂಬಳೆ** (ನಾ). ಅಡಕೆ, ತೆಂಗು ಮುಂತಾದ ಮರಗಳಲ್ಲಿ ಬಿಡುವ ದೊಡ್ಡ ಹೊಂಬಾಳೆ,–ಹೂಗೊಂಚಲು: ಬಲ್ಪೊಂಬಳೆಯಿಂ ಬಳ್ಕಿತ್ತು ಕಾಂಗು . . . ಕಂಜಕಿಂಜಲ್ಕದಿಂ ಕಣ್ಗೊಳಿಸಿತ್ತಬ್ಜಾಕರಂ ತಂಪಲೆವ ಮಲಯಮಂದಾನಿಲಾಂದೋಳದಿಂದಂ (ಕಾರೀಂಚ. ೭೭೬).

[ಬಲ್$_2$ (< ಬಲ್ಲಿತು$_1$) + ಪೊಂಬಳೆ (< ಪೊಂಬಾಳೆ$_1$)]

**ಬಲ್ಪೊಱೆ, ಬಲುಹೊಱೆ** (ನಾ). ಬಹಳವಾದ ಹೊರೆ ; ಅಧಿಕವಾದ ಭಾರ: ಪೊಡವಿಯ ಪೊತ್ತ ಬಲ್ಪೊಱೆಯನೊಲ್ದಿೞಿಪಲ್ ಸಬಲಂ ಖಳರ್ಕಳಂ ಕಡಿಕಡಿದೊಟ್ಟಿ ಮೆಟ್ಟಿ ಜೆಂಹಗನಂ ವಿಜಯಾಂಶುಪೃದ್ಧಿ ದ್ರಾಂಗುಡಿಯಿಡೆ (ಶಿಶಿ. ೨-೦೦); ಬಡಗಣ ಗಡಿಗಾಱನವರ್ ಗುಡುಗಾಡಿಸಿ ಗೋಲಕೊಂಡ ವಿಜಯಾಪುರಮಂ ಕಡಿದು ಮರಾಟರ ಪಡೆಯಂ ಪೊಡವಿಯ ಬಲ್ಪೊಱೆಯನಿೞಿಪಿ ಬಣ್ಣಿಗೆವಡೆವರ್ (ಅಕ್ರಿಶಿ. ೨-೦೬). ಬಲುಹೊಱೆ: ತೋಳ ಬಲುಹೊಱೆಗಿಲಸಿ ಕೆಲಬರು ಮೇಲೆ ನಮ್ಮಯ ಹಗೆಗೆ ಕೆಲಬರು ಕಾಳಗದ ಕಾಮರ್ಮುಕನೃಪಾಲರ ನೆರವಿಯಾದೆಯೆಂದ (ಕುಮ್ಮಾ. ೩-೦೪); ಬಾರಿಸಿದ ಬಲುಹೊಱೆಯ ಬಂಡಿಗಳೋರಣಿಸಿದವು ಪಯಣದಲಿ ಕರ್ಪೂರ ಕಸ್ತೂರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ (ಕುರಕಾ. ೦-೬-೩).

[ಬಲ್$_2$ (< ಬಲ್ಲಿತು$_1$) + ಪೊಱೆ]

**ಬಲ್ಪೊಟ್ಟು** (ನಾ). ಬಹಳ ಕಾಲ; ಹೆಚ್ಚು ಸಮಯ : ಒಂದು ಮಾತಾಡದಯ ಕುಳ್ಳನ್ ಬಲ್ಪೊಟ್ಟು (ಅಕ್ರಶಾ. ೦೩-೨೬೬).

[ಬಲ್$_2$ (< ಬಲ್ಲಿತು$_1$) + ಪೊಟ್ಟು]

**ಬಲ್ಪಂಟ** (ನಾ). ಮಹಾ ಪರಾಕ್ರಮಿ,–ಯೋಧ: "ಉರ್ಕಾಳ್, ಕೂರಾಳ್, ತುಱುಗಾಳ್, ಬಲ್ಲಾಳ್, ಬಲ್ಪಂಟ–ಈ ೫ ಪರಾಕ್ರಮಮುಳ್ಳಂ" (ಕಶಶಾ. ೫೬-೨೬೯) ; ಪುಣ್ಯದಿಂ ದೊರೆಕೊಂಡ ಜೈನಧರ್ಮಮನೊಲ್ಲದೆ ಬಿಟ್ಟೊಡೆ . . . ಪುಲ್ಪಂಟನಂ ನಂಬಿ ಬಲ್ಪಂಟನಂ ಬಿಡುವ ಪಗೆಗಾಱನುಮಂ . . . ಪೋಲ್ವೆನೆಂದು ಪರಿಚ್ಛೇದಿಸಿ (ಧರ್ಮಾಪು. ೯-೫೦); ಬಡಿಹೋರಿ ಬಲ್ಪಂಟನೆಂಬ ಒಡನುಡಿ ಬಲ್ಪುಡಿ ಬಡದೈವಕಲ್ಲದೆ ಬಡಶಬ್ದ ನಿನ್ನ ಪೊಂದುವದೆ (ಕಶಶಾಂ. ೭೨-೬೩); ಬೂತುಗ ಮತ್ತು ಅವನ ಮಗ ಮಾರಸಿಂಹರಂತಹ ಸಚ್ಚಿನವ ರಾದ ಬಲ್ಪಂಟರು ಆ ಸಾಮ್ರಾಜ್ಯವನ್ನು ಎತ್ತಿ ಹಿಡಿಯಲು ಪ್ರಯತ್ನ ಮಾಡಿದುದರಿಂದ ರಾಷ್ಟ್ರಕೂಟರ ಪಟ್ಟವು ಮುಂದೆ ಕೆಲವು ವರುಷ ಜೀವ ಹಿಡಿದುಕೊಂಡಿತು (ಕಶಿಆ. ೨೯). [ಬಲ್$_2$ (< ಬಲ್ಲಿತು$_1$) + ಬಂಟ$_1$]

**ಬಲ್ಪಂಡಿ** (ನಾ). ದೊಡ್ಡ ಗಾಡಿ : ಬಡಿಕೋಲ್ ಕಿಗ್ಗಟ್ಟು . . . ಸಾಳುವಂ ಕೂಳಿ ಗಾಳಂ ಗಿಡುಗಂ ಬಲ್ಪಂ [ಪಾಂ. ಲ್ಪಂ]ಡಿಯೊಳ್ ದೀಹದ ಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವೀಥ್ಯಾಟವಿಗೆ ನಡೆದು ದುದ್ಯತ್ಕಿರಾತಪ್ರಜಾತಂ (ಗಂಳ. ೦-೬೯).

[ಬಲ್$_2$ (< ಬಲ್ಲಿತು$_1$) + ಬಂಡಿ$_1$]

**ಬಲ್ಪಂದಿ** ' ಬಲ್ವಂದಿ$_2$ ' ನೋ.

**ಬಲ್ಪಂದಿಕಾಱ** ' ಬಲ್ವಂದಿಕಾಱ ' ನೋ.

**ಬಲ್ಪಗೆ** ' ಬಲ್ವಗೆ$_2$ ' ನೋ.

**ಬಲ್ಪಜ** (ನಾ). ೧. ದನಗಳಂ ತಿನ್ನದ ಒಂದು ಬಗೆಯ ಒರಟುಹುಲ್ಲು : "ಹೆಚ್ಚುಲಿಹುಲ್ಲು, ಬಲ್ಪಜ, ಗಂಜಳದ ಹೂ" (ಶಸ್ಸಿ. ೩೯); ನೊದೆ ನಾಣಲ್ಪತ್ತ ಬಲ್ಪಜ ಧಾನ್ಯಂಗಳುಂ ಮಿಗಿಲಾಗಿ ಸಂಗ್ರಹಂಗೆಯ್ಯಬೇಕು (ಶಾರಶಾಂ. ೫೭೬-೬೬). ೨. (ಆಲಂ) ಕೆಲಸಕ್ಕೆ ಬಾರದುದು : ನಿರುಪಯುಕ್ತವಾದುದು : ಈ ಬಲ್ಪಜಕ್ಕೆ ಮನಸ್ಸಿನ ಶಾಂತಿ ಕಳೆದು ಕೊಳ್ಳಬಾರದು (ಕೂಶಿ). [ಸಂ.]

**ಬಲ್ಪಜೆ** (ನಾ). (?) : ಕುಜನಸಂಗದಿ ಕೇಡು ಸುಜನರ್ಗೆಂಬಾ ನೀತಿ ತ್ರಿಜಗಮಱಿಯೆ ಕಾಣಲಾಯ್ತು ಮರುಳು ಪ್ರಣಿಘ್ರಾಣದೊಳ್ಪಜವಿದೆ ಇದಕೆ ಬಲ್ಪಜೆಯೇಕೆ (ಕೃಕವೀ. ೦-೨೨೯); ಹೊರಳಿ ಬಲ್ಪಜೆಯಿಂದ ತನ್ನಯ ಬಿರಿದ ಬಿಡಿಸುವೆನೆನುತ ಭೋಂಕನೆ ಪರಿದು ಬಂದರು ಭಾಳನೇತ್ರರ ಮಹಿಮನಿದ್ದೆಡೆಗೆ (ಕಂಕಶಾ. ೦೯-೩). [?]

**ಬಲ್ಪಯಕೆ** (ನಾ). ಅತಿಯಾದ ಅಪೇಕ್ಷೆ; ಬಹಳವಾದ ಆಸೆ; ಹೆಬ್ಬಯಕೆ : ದಣಾಯಕರೆ, (ಬಲ್‌ಬಯಕೆಯಿಂದ) ಮತ್ತೆ ನನ್ನ ಶ್ರೀವಿರೂಪಾಕ್ಷನ ಪಂಪಾಪುರಕ್ಕೆ ಹೋಗಬೇಕೆಂಬ ತುಡಿತ ದಿನದಿನಕ್ಕೂ ಬಲಿಯುತ್ತಿದೆ (ಕುಂಗಶ. ೦೩); ಬಹುದಿನದ ಬಲ್ಪಯಕೆ ಈಡೇರಿತು (ಕಳಬು. ೨೨೦).

[ಬಲ್$_2$ (<ಬಲ್ಲಿತು$_1$) + ಬಯಕೆ$_1$]

**ಬಲ್ಪಱ** (ನಾ). ಭೀಕರವಾದ ಬರಗಾಲ ; ಬಹಳವಾದ ಕ್ಷಾಮ ; ದುರ್ಭಿಕ್ಷ : ಬಹುಧನಧಾನ್ಯಾವಳಿಯನೊಪ್ಪಿಸನೆ ಬಲ್ಪಱದೊಳ್ ಘನಶರಣತತಿಗೆ (ವೃಶಶಿ. ೬-೩೬). [ಬಲ್$_2$(<ಬಲ್ಲಿತು$_1$) + ಬಱ]

**ಬಲ್ಪಟಲ್** (ಕ್ರಿ). ಅತಿಯಾದ ಆಯಾಸವನ್ನು ಹೊಂದು ; ಬಹಳ ದಣಿ: ಸಪ್ತಾಶ್ವಂ ನಿಚ್ಚಪಯಣದೊಳ್ ಬಲ್ಪಟಲ್ದಶ್ವಸಪ್ತಕಮಂ ಕಡಲೊಳ್ ಮುಯ್ಯಗರ್ಚಿ ನೀರ್ಗುಡಿಸಲ್ಕೆಂದು ಸಾರಥಿಯ ನೇರ್ಪಡಿಸಿ ತಾಂ ತೇರಿನಿೞಿ ದನೆನೆ ಪಡುವಟ್ಟೆನೆಡೆಯೊಳ್ ಮೆಲ್ಲನೆ ಮೆಯ್ಗರೆಯಲೊಡಂ (ರಾಜಶೇಕ್ಕ ೨೨-೩). [ಬಲ್$_2$ (<ಬಲ್ಲಿತು$_1$) +ಬಟಲ್$_1$]

**ಬಲ್ಬಿಗುರ್** (ನಾ). ಅತಿಯಾದ ಭಯ ; ಬಹಳವಾದ ಅಂಜಿಕೆ : ಬಲ್‌ಬಿಗುರೊ ಎನ್ನೆರ್ದೆಯನಿಱಿಗುಂ (ಐಕೃಶ್ರ. ೦೦-೨೨೨); ಬಲ್‌ಬಿಗುರಿಂದಂ ಮತಿಗೆಟ್ಟವಳನ್ ಕಾಡಿಪುದು ? (ಐಕೃಶ್ರ. ೪೦-೬೩೩).

[ಬಲ್$_2$(<ಬಲ್ಲಿತು$_1$) + ಬಿಗುರ್$_2$]

**ಬಲ್ಬಿರುದು** (ನಾ). ದೊಡ್ಡ ಬಿರುದು ; ಪ್ರಸಿದ್ಧವಾದ ಹೆಸರು : ಸುರರ ಸೂಳೆಯರನೆಲ್ಲರಂ ಸೆಱೆವಿಡಿದು ತನಗೆ ಸರಿಯಿಲ್ಲೆಂದು ಬಲ್ಬಿರುದಿನ ಕಾಳೆಯಂ ಪಿಡಿಸಿ ಬಲದಿಂ ಚತುಸ್ಸಾಗರದ ವೇಳೆಯ ಧರಾಮಂಡಲಂಗಳಂ ಸಂತಸದೊಳಾಳೆಯಿಂಧಾಸುರಂ (ಕರಾಪು. ೪೭-೦೨); ಪುರದ ಲಗ್ಗೆಗೆ ಬಿಟ್ಟ

ತುರುಕರನಿಱಿದು ಬಲ್ಬಿರುದ ಮೆಱೆದ ನರಸೇಂದ್ರ (ಕಂಪರಿ. ೧೪ ಗೂಡ೩೩).

[ಬಲ್$_2$(<ಬಲ್ಲಿತು$_1$)+ಬಿರುದು]

**ಬಲ್ಬಿಸಿಲ್** 'ಬಲ್ವಿಸಿಲ್' ನೋ.

**ಬಲ್ಬಿಸಿಲು** ' ಬಲ್ವಿಸಿಲ್ ' ನೋ.

**ಬಲ್ಬು** (ನಾ). ವಿದ್ಯುತ್ತನ್ನು ಬೆಳಕನ್ನಾಗಿ ಮಾರ್ಪಡಿಸಿ ಹೊರಚೆಲ್ಲುವ ಗಾಜಿನ ಬುರುಡೆ ; ವಿದ್ಯುದ್ದೀಪದ ಬುರುಡೆ : ಈ ತಾಮ್ರದ ತಂತಿಗಳ ತುದಿಗಳು ಬಲ್ಬಿನ ಹೊರಗೆ ಇರುವ ಎರಡು ಸೀಸದ ಬೊಟ್ಟುಗಳಿಗೆ ಸಂಬಂಧಿಸಿವೆ (ಭೌತಶಾ. ೩೭೩); ಬೆಳಕು ಬೆಳಕನು ಕೂಡಿ ಆಡುತಿರೆ ಬಲ್ಬು ಹೊರೆ ; ಈಗ ಬಲ್ಬಿಗೆ ಬಲ್ಬು ಕಾತರಿಸಿತು (ಕಡಂ. ೭೨-೦೩).

[←ಇಂ. Bulb]

**ಬಲ್ಬೆಟ್ಟ**, ಬಲುಬೆಟ್ಟ (ನಾ). ದೊಡ್ಡ ಬೆಟ್ಟ ; ಅಗಾಧವಾದ ಪರ್ವತ : ಮಾರಿ ಕವಿದುದು ಸೇನೆ ಮಂಜು ಬಲ್ಬೆಟ್ಟಮಂ ಪರಿವೇಷ್ಟಿ ಪಂದದಿಂ (ಕಅವು. ೨೮-೨೩). **ಬಲುಬೆಟ್ಟ** : ಮತ್ತಿದೇನೆಂಬುದಿಯೊಳಗೆ ತಲೆಯೆತ್ತುತ್ತಿದೆ ಬಲುಬೆಟ್ಟವಿದು ತಾ ಕೃತ್ರಿಮವೊ ಸಹಜವೊ (ಕೂಕಂ. ೩-೦-೯); ಒಡನೆ ಕಪಿ ಬಲುಬೆಟ್ಟವನು ಸಿಡಿಲೆಱಗುವವೊಲೆಱಗಿದನು ರಕ್ಕಸನ (ಕೂಕಾ. ೬-೨೨-೦೬).

[ಬಲ್$_2$(<ಬಲ್ಲಿತು$_1$)+ಬೆಟ್ಟ$_1$]

**ಬಲ್ಬೆಡಗು**, ಬಲುಬೆಡಗು (ನಾ). ವಿಶೇಷವಾದ ಅಂದ ; ಅತಿಯಾದ ಸೊಗಸು : ಮೌಕ್ತಿಕಗಳ ಮುಡಿವಲೆ ಮೆಱೆವ ಬಾವುಲಿಯ ನಿಡು ಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಬೆಡಗಾಗಿ ಮೆಱೆದರರ್ತಿಯಲಿ (ಕಂಪರಿ. ೨೯-೬೨). **ಬಲುಬೆಡಗು** : ನಾನಾ ಬಗೆ ಪಡುರಸಾನ್ನಗಳ ಪಾಕ ಗಳ ಕಡುಚೆಲ್ವ ಗೃಹಗಳುಂದರಮನೆಯೊಳು ಬಲುಬೆಡಗ ಬಿಱುದುವರ್ತಿ ಯಲಿ (ಕಂಪರಿ. ೭-೯೭). [ಬಲ್$_2$(<ಬಲ್ಲಿತು$_1$) +ಬೆಡಗು$_1$ (<ಬೆಡಂಗು)]

**ಬಲ್ಬೆದೆ** (ನಾ). ಅತಿಯಾದ ಕಾಮಾತುರ ; ಬಹಳವಾದ ಕಾಮೇಚ್ಛೆ : ಇತ್ತ ಸೆಳೆದೊಯ್ಯುವುದು, ಹತ್ತಿರಕೆ ' ಬಾ ' ಎಂದು ಚಿತ್ರವನು ಬಲ್ಬೆ ದೆಯ ತೆರೆ ಅದೊಂದು (ಹಾಕಾಲ. ೦೨-೬). [ಬಲ್$_2$ (<ಬಲ್ಲಿತು$_1$)+ಬೆದೆ]

**ಬಲ್ಬೆಱಗು** (ನಾ). ಬಹಳವಾದ ಆಶ್ಚರ್ಯ ; ಅತಿಶಯವಾದ ಸೋಜಿಗ : ದಿಟವೊರೆವೆ ಬಲ್ಬೆಱಗನೊಂದನ್ (ಅಂತಿಗೂ. ೦೦-೨೨೪).

[ಬಲ್$_2$ (<ಬಲ್ಲಿತು$_1$) + ಬೆಱಗು$_1$]

**ಬಲ್ಬೊಬ್ಬೆ**, ಬಲುಬೊಬ್ಬೆ (ನಾ). ಬಹಳವಾದ ಗದ್ದಲ ; ಅತಿಯಾದ ಚೀರಾಟ,—ಕೋಲಾಹಲ : ನಿಬ್ಬರದೆ ಬರ್ಪ ಹಯಬಲದಬ್ಬರಣೆಗೆ ಕೊರ್ಬುಗೆಳೆದುದಿರ್ಕೇರಿಗೆ ಬಲ್ಬೊಬ್ಬೆಗೆ ಸೀರೆಯ ಮುಂ ತವೆ ತಬ್ಬಿಬ್ಬಂ ತಾಳ್ದಿ ತೂಟ್ಟಿತಾಳ್ದನ ಸಿರಿಯಂ (ಜಕಬಿ. ೨-೯೭). **ಬಲುಬೊಬ್ಬೆ** : ಬಲುಬೊಬ್ಬೆಯಲಿ ನೆಲನದಿರ ನಡೆದುದು ಸೇನೆ ಕಲಶೋದ್ಭವನ ನೇಮದಲಿ (ಕುಮಾರವ್ಯಾ. ೯-೦೩) ; ಬಲುಬೊಬ್ಬೆ ಸಿಡಿಲು ಖಡ್ಗಗಳ ತೊಳಪು ಮಿಂಚು ಸಲೆ ತುರಗದ ದನಿ ಗುಡುಗು (ಕಂಪರಿ. ೦೬-೦೦೦).

[ಬಲ್$_2$ (<ಬಲ್ಲಿತು$_1$) + ಬೊಬ್ಬೆ]

**ಬಲ್ಭಾರ**, ಬಲುಭಾರ (ನಾ.) ಹೆಚ್ಚಾದ ಭಾರ ; ಅತಿಯಾದ ತೂಕ : ಹೆಮ್ಮರನಿರ್ದೇನದಱಿಂದಲೆತ್ತಬಹುದೇ ಬಲ್ಭಾರಮಂ ಸನ್ನೆ ಸಾವಿರ ಕಾಲಾಳಿನ ಸತ್ವಮೈ (ಸೋಮೇಶ. ೭೬). **ಬಲುಭಾರ** : "ಭಾರಣೆಯೆನೆ ಬಲುಭಾರಂ" (ಶಾಶಿ. ೩೯). [ಬಲ್$_2$ (<ಬಲ್ಲಿತು$_1$) + ಭಾರ]

**ಬಲ್ಭುಜ** (ನಾ). (ಅಲಂ) ಹಿರಿಮೆ; ಔನ್ನತ್ಯ: ಭುಜಬಲಿಯೋಗೀಂದ್ರ ನೆಂತಿರ್ದನೆಂದನು ರಜತಗಿರಿಯ ಬಿಟ್ಟು ಬೇಱೆ ಗಜವಿಪಿನದೊಳಿರ್ದ ನಾತನ ತಪದ ಬಲ್ಭುಜವ ಚಿತ್ತ್ಯಸಂದರವರು (ಶಕಶ. ೩೪-೯).

[ಬಲ್$_2$ (<ಬಲ್ಲಿತು$_1$) + ಭುಜ]

**ಬಲ್ಮಂತ್ರಿ** (ನಾ). ಸಮರ್ಥನಾದ ಮಂತ್ರಿ : ದೂರದರ್ಶಿಯಂತೆ ಮೇಲನಱಿವನುಂ ಬಲ್ಮಂತ್ರಿಯಂತೆ ಪ್ರಮಾದರಹಿತನುಂ . . . ರಾಜ ಸೇವಕನಂತಡಕವಂತನುಮಪ್ಪುದು (ಧರ್ಮಾಮೃ. ೩-೯೯).

[ಬಲ್$_2$ (<ಬಲ್ಲಿತು$_1$) + ಮಂತ್ರಿ]

**ಬಲ್ಮತ್ತಿ** (ನಾ). ಒಂದು ಬಗೆಯ ಮತ್ತಿಮರ : ಪಾದರಿ ತಾಱೆ ತಂಡಸು ಚಿಳಿಲ್ ಬಲ್ಮತ್ತಿ [ಪಾಠಾಂ. ಬಿಳಿಲ್ಬಲ್ಮತ್ತಿ] ಬೇವತ್ತಿ . . . ಕಕ್ಕಿಮ್ಮರಂ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಶಾರ್ಙ್ಗಕ. ೦೨-೩೮). 'ಬಿಳಿಮತ್ತಿ' ಪರಾ.

[ ? + ಮತ್ತಿ$_1$ (<ಮಱ್ಱು) ]

**ಬಲ್ಮನುಶ್ಯ**, ಬಲುಮನುಸ್ಯ (ನಾ). = ಬಲುವಾನಿಸ : ಬೆ(ಂ)ಣ್ಣೆ ಯೂರ್ಪ್ಪ(ಂ)ನ್ನೆರಡಱ ಬಳಿಯ ಬಾಡಂ ಹಱುಹೆಯಿಂ ಬಡಗಲು ಪಾಂಡ್ಯ ದೇವನ ಬಲ್ಮನುಶ್ಯರು ಬೆ(ಂ)ಣ್ಣೆಯೂರ ಚಂದುಗಿದೇವನುಂ ಕಾಳಗೌಡನುಂ (ಸೌಇಇ. IX-i, ೩೩೭-೯ ; 1220). **ಬಲುಮನುಸ್ಯ** : ಆ ರಾಯನ ಮನೆಯ ಸಂಧಿವಿಗ್ರಹಿ ಲಖಣ್ಣನವರ ಬಲುಮನುಸ್ಯ ದೇವಪ್ಪ ಹರಿಯಪ್ಪ ನವರು ಹಡವಳಿಕೆ ನಾಡಿಂಗೆ ಸರ್ವ್ವಾಧಿಕಾರಿಗಳಾಗಿದಲ್ಲಿ (ಎಕ. VII, ಶಿವಮೊ. ೦೯-೬ ; 1309). [ಬಲ್$_2$ (<ಬಲ್ಲಿತು$_1$) + <ಮನುಷ್ಯ ]

**ಬಲ್ಮನೆ** (ನಾ). ದೊಡ್ಡದಾದ ಮನೆ ; ಮಹಾಸೌಧ : ಚಂದಳಿರಾಂತಶೋಕೆ ಮಣಿಮಂಟಪಂ . . . ಎಳೆಮೊಗ್ಗೆಗಳೊಪ್ಪುವ ಮಲ್ಲಿಕಾ ತಾ ವೃಂದಮೆ ಮುತ್ತು ತೆತ್ತಿಸಿದ ಬಲ್ಮನೆ ಕೇತಕಿ ಸುತ್ತುವೇಲಿ ಕಕ್ಕುಂದರಿ ಯಾಂತ ಕೋಟೆ ಮದನಂಗೆನೆ ಕಂಗೊಳಿಸಿರ್ದುದಾ ವನಂ (ವೃಶಶಿ. ೯-೩೪).

[ಬಲ್$_2$ (<ಬಲ್ಲಿತು$_1$) + ಮನೆ]

**ಬಲ್ಮನ್ನೆಯ** (ನಾ). ಹೆಚ್ಚು ಮನ್ನಣೆಯನ್ನು ಪಡೆದ ವ್ಯಕ್ತಿ ; ದೊಡ್ಡ ಮುಖಂಡ : ಸಲೆ ಪೋಪ ಬರ್ಪ ಬಲ್ಮನ್ನೆಯರ ಕನ್ನೆಯರ ಸುಳಿಸುಳಿವು ಕಣ್ಗೊಪ್ಪುವಂದಣದ ಗೊಂದಣದ ಕಳಕಳದ ವಾದ್ಯರವದಬ್ಬರದ ನಿಬ್ಬರ ದಿಶಾ ಪುರಂ ರಂಜಿಸಿದುದು (ಕಲಕು. ೦೦-೩೩).

[ಬಲ್$_2$ (<ಬಲ್ಲಿತು$_1$) + ಮನ್ನೆಯ]

**ಬಲ್ಮರ**, ಬಲುಮರ (ನಾ). ದೊಡ್ಡದಾದ ಮರ ; ಮಹಾವೃಕ್ಷ : ದಾಡೆಯಂ ಮಸೆದು . . . ಮಿಾಂಟುತ್ತೆ ಕಂದಂಗಳಂ ಕೆಡಪುತ್ತುಂಗ ದೊಳಿರ್ದ ಬಲ್ಮರಗಳಂ ಬಂದತ್ತದೊಂದೆಕ್ಕಲಂ (ರಾಜಶೇ. ೩-೯೯). **ಬಲುಮರ** : ಸಿಡಿದು ಹಾಱಿದ ಹಸ್ತದುಱುಬೆಗೆ ಬುಡಸಹಿತ ಬಲುಮರ ಧರಾತಳಕುಡಿದು ಬಿದ್ದವು (ಕೂಶಾ. ೦-೦೦-೦೪).

[ಬಲ್$_2$ (<ಬಲ್ಲಿತು$_1$) + ಮರ$_1$]

**ಬಲ್ಮಳೆ**, ಬಲುಮಳೆ (ನಾ). ದೊಡ್ಡಮಳೆ ; ಭಾರಿ ಮಳೆ : ಎಱಂಕವನಿ ಬಲ್ಮಳೆಯುವೊಲೊಪ್ಪುವುದು (ಎಇ. XIII, ೩೩೦-೩೦ : 929) ; ಮಹಾರಥ ತುರುಗ ಕಾಲಾಳಿಂದ ಶಸ್ತ್ರಾಸ್ತ್ರಗಳ ಬಲ್ಮಳೆಯು ಸುರುಯಿತಿದೆ (ರಾಜಶು. ೩-೦೩). **ಬಲುಮಳೆ** : ಕೋಲ ಬಲುಮ[ಪಾಠಾಂ. ವ]ಳೆಗೊಡ್ಡಿ ಹರಿಗೆಯ ಮೇಳಯುವ ಮಱೆಗೊಂಡು ಬೇಚರರಾಳು ನಿಂದೆಚ್ಚತು ನಿಹಾರದಲರ್ಜುನನ ರಥವ (ಕುಮಾರವ್ಯಾ. ೨೦-೨೩) ; ಬಲುಬೊಬ್ಬೆ ಸಿಡಿಲು . . . ಸಲೆ ತುರಗದ ದನಿ ಗುಡುಗು ಖಳರವಯವ ಕಾಲಮೇಘವೆಂಬಿನ ಬಲುಮಳೆಗಳ ಕರೆದುವು (ಕಂಪರಿ. ೦೬-೦೦೦).

[ಬಲ್$_2$ (<ಬಲ್ಲಿತು$_1$) + ಮಳೆ (<ಮೞೆ) ]

**ಬಲ್ಮಾವಂತ** (ನಾ). ದಕ್ಷನಾದ ಮಾವುತ : ತೊಟ್ಟನೆ ಪೊಂದಿದ ಕುದು ರೆಯ ತಟ್ಟಂ ಕಂಡೆಣೆದು ನೂಂಕಿ ಬಲ್ಮಾವಂತರ್ ಬಿಟ್ಟಕ್ಕಿದರಾನೆಗಳಂ (ಕಲ್ಯಾ. ೨೮೦). [ಬಲ್$_2$ (<ಬಲ್ಲಿತು$_1$) + ಮಾವಂತ]

**ಬಲ್ಮಿಂಚು** (ನಾ). ೧. ಹೆಚ್ಚಿನ ಪ್ರಕಾಶ. ೨. (ಅಲಂ) ತುಂಬ ಕಾಂತಿ ಯಿಂದ ಕೂಡಿದ ವ್ಯಕ್ತಿ : ಮಂಚಿಸಿ ಬಲೆಯೊಳ್ ಪ್ರಪಂಚವೆಲ್ಲ ಸೆಳದು ಕಂಚಿಪಟ್ಟಣದಿ ಬಲ್ಮಿಂಚಾಗಿದ್ದನೆ (ಕುಕಂದ. ೨-೩೨-೨).

[ ಬಲ್$_2$ (<ಬಲ್ಲಿತು$_1$) + ಮಿಂಚು$_2$ ]

**ಬಲ್ಮಿಡಿ** (ನಾ). ದೊಡ್ಡದಾದ ಮಿಡಿ : ತುಱುಗಿರ್ದ ಬಲ್ಮಿಡಿಯ ತೂಗುಂ ಗೊಂಚಿನೊಳ್ ಪಾಯ್ದು ಬಂಡಲೆಸುತ್ತಿರ್ಪ ಶುಕಾಳಿ ತಮ್ಮ ಬೆಸದೊಳ್ ತಂತಮ್ಮ ಅಂತಃಕಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದು ವಿಮ್ಮಾವುಗಳ್ (ಅಂಶ. ೦೦-೯೯) ; ಅಲರೆಸವೆಳದಳರೆಲ್ಯಾರಲ್ಲಿಲೆ ಬಲ್ಮಿಡಿ ವಿಸುವ ಪಚ್ಚೆಗೋಡಲವಾಳಿ ಕಜ್ಜಲತಿಲಕವೊಗೆ ತೋರ್ಪುದು ಸಲೆ ಸೊಗಯಿಸಿ ಬಾಲನಂದದಿಂ ಮಾಕಂದಂ (ಶಬಸಾರ. ೫-೭೬).
[ಬಲ್$_2$ (<ಬಲ್ಲಿತು$_1$) + ಮಿಡಿ$_4$]

**ಬಲ್ಮಿಣೆ** 'ಬಲ್ಮೀಳ' ನೋ.

**ಬಲ್ಮೀಳ.** ಬಲುಮಿಣೆ, ಬಲ್ಮಿಣೆ (ನಾ). ದೊಡ್ಡದಾದ ಮಿಣೆ ; ಬಲವಾದ ಹಗ್ಗ : ಅಳವಟ್ಟಿಯದೆ ಕೋಟಿಯ ತೆನೆಗಳೊಳೆತ್ತಂ ಸುತ್ತಿ ನೇಲ್ವ ಬರುದರ ಕರುಳಂ ತಳದಿಂ ಪಿಡಿದಡರ್ದರ್ ಬಲ್ಮೀಳ [ಪಾಠಾಂ. ಲ್ಮೆಳ] ಯಂ ಪಿಡಿವಡರ್ವ ಮಾಟ್ಕೆಯಿಂ ಮೆಯ್ಗಲಿಗಳ್ (ಜಗನ್ನಾಥ. ೬-೦೫೦). **ಬಲುಮಿಣೆ :** ಈಸ ಬಲಿ ಬಲುಮಿಣೆಯು ಬಿಗಿಯೆನುತ ಮೇಲೆ ಮೇಲೆಬ್ಬರದ ಘೋಳಾಘೋಳಿ ಘಲ್ಲಿಸೆ ದೆಸೆಯಲತಿರಥಜಾಲ ಕವಿದುದು ಕದನಕೌತೂಹಲರ ಕೇರಿಯಲಿ (ಕುಮಾ.ಭ. ೬-೦೨); ಎತ್ತಿದಿರಿ ಬಲು ಮಿಣೆ[ಪಾಠಾಂ. ಳ]ಯಲಿವನನು ಸುತ್ತಿ ಸಿಂಧುರಘಟೆಗಳಿಂದೆಳೆಸುತ್ತ ಕೊಂಡೊಯ್ಯೆನಲು ಹಮ್ಮಿದರಾನೆಯಲಿ ಕಪಿಯ (ತೊರವೆ. ೫-೬-೩). **ಬಲ್ಮಿಣೆ :** ಬಹಳ ಪಾಶಗಳಂ ಬೀಸಿ ತೊಡಗಿ ಕೆದವಲ್‌ವೇಳ್ಕುಮೆಂದು ಬಲ್ಮಿಣೆಗಳಂ ತವೆಮತವಗೆ ಕಯ್ಗೊಳಲಾಂತು . . . ಕೋಳಾಹಳದೊಳಿಱು ಬದರ್ ವೃಷಪತಿಯಾಸಂ .(ಕಂಠ. ೪೪-೦೩).
[ಬಲ್$_2$ (<ಬಲ್ಲಿತು$_1$) + ಮಿಣ$_1$]

**ಬಲ್ಮುಗುಳ್** (ನಾ). ದೊಡ್ಡದಾದ ಮೊಗ್ಗು ; ದಪ್ಪವಾದ ಕುಟ್ಮಲ: ನೆಗಟ್ಟುದು ದೇವವಾಂದುಭಿರವಂ ಸುರನಂದನದಿಂ ಪೊದಟ್ಟ ಬಲ್ಮುಗುಳ್ಗಳ ತಂದಲಂದು ಕವಿತಂದುದು (ಶಂಕರಾ. ೦೯-೦೯); ಅಸುಗೆಯ ನಾಗಕೇಸರದ ಬಲ್ಮುಗುಳಂ ಬಿಱಿಯೊತ್ತಿ ತುಂಬಿ ಚುಂಬಿಸೆ (ಶಾಂತಿಪು. ೬-೫೬); ನೆಗೆದುದು ಜಾಲದಂತೆ ಪೊಸಮಲ್ಲಿಯ ಬಲ್ಮುಗುಳೊಪ್ಪೆ . . . ವಾರ್ಧಿ ಪೆರ್ಚುಗೆಯ ನವಚೆ ತಾಳ್ದನದಿತೋದಯವಂ ಹಿಮಕಾಲಚಂದ್ರಮಂ(ಅನಂತ.೯-೪).
[ಬಲ್$_2$ (<ಬಲ್ಲಿತು$_1$) + ಮುಗುಳ್$_1$]

**ಬಲ್ಮುಡಿ.** ಬಲುಮುಡಿ (ನಾ). ೧. ಕೂದಲಿನ ದೊಡ್ಡ ಗಂಟು ; ದೊಡ್ಡ ತುರುಬು : ಸಾರ್ದೆಳಸಿ ಪಗಿಲ್ತ ಕೇಶಿಯನೆ ಬಲ್ಮುಡಿ ತೋಱೆ (ಕಥಾ. ೬-೧೫); ಬಳಲುಮುಡಿ ಬಲ್ಮುಡಿಯ ಸೋಲ್ಮುಡಿಯು (ಶಬರ. ೨೪-೦೬). ೨. ದೊಡ್ಡದಾದ ಜಟೆ ; ದಟ್ಟವಾದ ಕೂದಲು : ಬಾಂಬೊಳೆ ತಳ್ತ ಕೆಂಜಡೆಯ ಬಲ್ಮುಡಿ ತಾಳ್ದ ಶಶಾಂಕಲೇಖೆ . . . ಬಗೆಗೊಳ್ಳ ಸುಣ್ಣಗೆ ಪರಾಭವಮಶೂಲಮೃಗಾಂಕಪಾಣಿಯುಂಕಂ ಬಿಡದೊಪ್ಪು ವಿದ್ರಿಜೆ ವಿರಾಜಿಪ ರಂಜಿಸಿದಂ ಮಹೇಶ್ವರಂ (ಶಬಕಂ. ೧-೬೯). **ಬಲು ಮುಡಿ :** ೧. ನಿಜಾಗಾರುಳ್ ನಿವಿರ್ದ ಕಣ್ಬಲುಮುಡಿ . . . ಸಳಿ ತೊಳಸಿಯ ನಡು ಮೆಱೆಯ ಮೆಱೆವಳು ನೀಱೆ (ಶಂಕರಾ. ೨೪-೦೦೬).
[ಬಲ್$_2$ (<ಬಲ್ಲಿತು$_1$) + ಮುಡಿ$_3$]

**ಬಲ್ಮುತ್ತು** (ನಾ). ದೊಡ್ಡದಾದ ಮುತ್ತು; ದಪ್ಪವಾದ ಮೌಕ್ತಿಕ : ಬಲ್ಮುತ್ತಿನ ಬಳಗವಱಿ ಮೆಲ್ಮುಗುಳಂತೆ ಪೊಳೆವ ಬೆಳ್ಪಿಸವಲರ್ಗೋ ಚಲ್ಮುಸುಕಿ ಪರಿಮಳದ ಗೊಂಚಲ್ಮುಸುಕಿದುದಲ್ಲಿ ಮಾಧವಿಯ ಪಾದಪ ದೊಳ್ (ಶಾಂತೀಶ. ೫-೦೦೦). [ಬಲ್$_2$ (<ಬಲ್ಲಿತು$_1$) + ಮುತ್ತು$_1$]

**ಬಲ್ಮುನಿಸು.** ಬಲುಮುನಿಸು (ನಾ). ಅತಿಯಾದ ಕೋಪ; ಬಹಳವಾದ ಸಿಟ್ಟು : ಮತ್ತಿನ ಮಾನ್ಯರೊರೆದ ಕೃತಿಯಾ ಸಲ್ಲಲಿತಮನೇನನ್ನದ ತಮ್ಮಯ ಬಲ್ಲತನವನೇ ಮೆಱೆವಣ್ಣಂಗಳ ಬಲ್ಲತನದ ಬಾಯೊಳು ಬಳಹರಿ ಬಲ್ಮುನಿಸುದಳೆದು ಹೊಗಲಿ (ಶಬಸಾ. ೦-೦೩). **ಬಲುಮುನಿಸು :** ಹಲವು ಪರಿಯಿಂದಿಂತು ನವಿಸುವನಲಸುವಂ ಪ್ರಾರ್ಥಿಸುವಂ . . . ಬಲು ಮುನಿಸು ನಿಮ್ಮಿಂದವಲ್ಲದೆ ತಿಳಿಯದೆನುತಂ ಬಾಲಲಿಂಗನವಸ್ಥೆಗೊಳುತಿರಲು (ಅನಂ. ೯೭-೯೭); ಎನ್ನೊಳು ಬಲಿದ ಬಲುಮುನಿಸನೆಲ್ಲವ ಕಳೆದು ಸಲಹೆಂದೆ ನುತ ಸಂಪ್ರಾರ್ಥನೆಯ ಮಾಡಿದನು (ತಿಮ್ಮ.ಕ. ೦-೦೦೯). 'ಬಲ್ಮುಳಿಸು' ಪರಾ. [ಬಲ್$_2$ (<ಬಲ್ಲಿತು$_1$) + ಮುನಿಸು$_1$]

**ಬಲ್ಮುಸು** (ನಾ). ಒಂದು ಬಗೆಯ ದೊಡ್ಡ ಆಕಾರದ ಕಪಿ,-ಮುಸಂ : ತರಳರ್ವರ್ತ್ರಗೆ ಕಪಲ್ಗೊಂಬಾ ಶವಣಕೋಲಳಿ ಶುಕ ಪಟುತತಿಯಾಗಿ ಬಳಸಿರ ಲೊಂದು ಬಲ್ಮುಸು ನರೆಗಡ್ಡವ ತಳೆದ ದೀಕ್ಷಿತನಂತಾಯ್ತು (ಕ್ರೀಡಾ. ೬-೨೪). [ಬಲ್$_2$ (<ಬಲ್ಲಿತು$_1$) + ಮುಸು$_1$]

**ಬಲ್ಮುಸುಡು** (ನಾ). ದೊಡ್ಡದಾದ ಮೂತಿ ; ಹಿರಿದಾದ ಮುಖ : ಕುಸಿದ ಸಿರಂ ಕಿಲಕ್ಕಿಲಿದ ಬಲ್ಮುಸುಡುರ್ಬಿದ ಮೆಯ್ಯ ರೋಮಂ . . . ತಳ್ಳಗುರ್ವಿಸೆ ಮಲೆದುರ್ಕಿ ಗರ್ಜಿಸಿ ಕರಂ ಪರಿತಂದುದು ಪಂದಿ ಕಾಯ್ಪಿನಿಂ (ಶಾಂಶಂ. ೪-೯). [ಬಲ್$_2$ (<ಬಲ್ಲಿತು$_1$) + ಮುಸುಡು]

**ಬಲ್ಮುಳಿಸು** (ನಾ). = ಬಲ್ಮುನಿಸು : ಪಗೆ ಕಯ್ಗೆವಂದು ಬರ್ದುಕಾಡಿದ ಬಲ್ಮುಳಿಸಿಂ ವೃಕೋದರಂ ಅಂತು ಕಳಿಂಗರಾಜ ಮತ್ತಮಾತಂಗಘಟೆಗಳ ಮೇಲೆ ಮುಳಿಸಂ ಕಳೆವೆನೆಂದು ಸಿಂಹನಾದದಿನಾರ್ದು . . . ದಿಗ್ಗಜಮಂ ಪೋಲ್ವ ಗಜಂಗಳಂ ಪಲವುಮಂ ಕೊಂದಂ ಮಱುಂನ್ನಂದನಂ (ಶಂಕರಾ. ೧೦-೦೦೦); ಇನ್ನೆಮಗಗಮ್ಮ ನಲಕ್ಷ್ಮನದೃಶ್ಯನಾಗಿ ನಿ ನೆನಸುವುಗಲ್ದ ಬಲ್ಮುಳಿಸು ನಲ್ಲನ ಕಾಲ್ವಿಡಿಯಲ್ಕೆ ಮಾಣ್ಗುಮೇ (ಅನಂ. ೬-೦೦೭); ಬಿರಯಿಗಳಂಚೆ ಕೊಡದರ ಕಲ್ಲಿರ್ದ ಪವ್ವನೆ ಸೀಟ್ . . . ಬಲ್ಮುಳಿಸಿಂದಮುಗಳ್ಮೆವೆತ್ತ ನಲ್ಲರ ಬಗೆ ಬಳ್ಕೆ ಜೇವೊಡಮ ಬಲ್ಲುಲಿ ನೀಳ್ಪುದು ಕರ್ಪುವಿಲ್ಲನಾ (ಶಬ್ದಮ. ೩೦೦). [ಬಲ್$_2$ (<ಬಲ್ಲಿತು$_1$) + ಮುಳಿಸು$_1$]

**ಬಲ್ಮುಱಿ** (ನಾ). ಬಹಳ ಚೂರು ; ಅನೇಕ ಚೂರು : ಬಾಳ ಬಲ್ಮುಱಿಯುಂ ನೆತ್ತರ ಪೂರಮುಂ ನೆಗೆದು ಕಣ್ಗಿಂಬಾಯ್ತು ಬಾನೆಂಬ ಕಂಗೆಱೆ ಬೆಂಡೆದರ್ದ ಕಲಂಕ ಮಿಮ್ಮಿಡುಕುವಂತತ್ಯುಗ್ರಸಂಗ್ರಾಮದೊಳ್ (ಅಶಂಪು. ೦೯-೪). [ಬಲ್$_2$ (<ಬಲ್ಲಿತು$_1$) + ಮುಱಿ$_1$]

**ಬಲ್ಮೆ,** ಬಲುಮೆ (ನಾ). ೧. ಬಲ; ಶಕ್ತಿ; ಸಾಮರ್ಥ್ಯ; ಪರಾಕ್ರಮ : ಇನಿತೊಂದು ನುಡಿದ ಬಲ್ಮೆಯು ನಿನಗಿಲ್ಲದೊಡೆ,ಕೆ ನಿನ್ನನಾಳ್ದಂ ನಿನ್ನಂ ಮನ ವೊಲ್ದು ನಚ್ಚಿಯಟ್ಟಿದನಾ,ಕಳಂ ದೂತನಿಂತು ನುಡಿಯಲ್ವೇಟ್ಕುಂ (ಆದಿಪು. ೦೯-೬೩); ಜೀವಮದೊಂದೆ ದೇಹವೆರಡಿಂತಿವರ್ಗೆಂಬಭಿಶಂಕೆಯುಂ ಧರಿತ್ರೀವಳಯಕ್ಕೆ ಮಾಡುವುದು ತಮ್ಮೊಳವಂದಿರ ನಲ್ಮೆ ಬಲ್ಮೆ ಶೋಭಾ ವಹ ಮೂರ್ತಿ ಕೀರ್ತಿ . . . ಸದ್ಭಶಸ್ಸರೂಪದಿಂ (ಅಜಿತಪು. ೬-೩೫) ; ಮೊಱೆಗೆ:ೞ ಮಥನನು ಸಂಗ್ರಾಮದೊಳಿಂದು ತಱಿದು ಬೀಡರ ಬಲ್ಮೆ ಯನು ಮುಱಿವ ವಿಳೆಯುವ ತಾರೆಂದವನರಸನ ನೆಱೆ ಧೀರನಾಗಿ ಬೇಡಿ ದನು (ಜಗನ್ನಾಥ. ೬-೨೫). ೨. ಪರಿಣತಿ ; ನೈಪುಣ್ಯ ; ಪ್ರಗಲ್ಭತೆ : ಈ ಬರೆದ ಶ್ಲೋಕವಂ ಬಿಂಬಾಕ್ಕನೊಂದು ದಿವಸಂ ಕಂಡಿದು ನೀತಿ ಶಾಸ್ತ್ರದ ಬಲ್ಮೆಯಲ್ಲಿಂದುಮಂ ಸೀಂಟೆ ತಾಸಿತೆಂದು ಬರೆದಂ (ಶಬ್ದಾ.ಣ. ೦೪೪-೦೩); ತಪ್ಪದೀ ಲಲನೆ ತತ್ಸ್ವಯಂಪ್ರಭೆಯ ನೋಟಸ್ಸೊಡಿ: ಚಿತ್ರ ಮೀಂತಿದಾಕೆಯುದೆ ಬಲ್ಮೆ ಪೇಟು ಪೆಜರ್ಗಮಿಂತುಟೊಂದವಕ್ಕುಮೇ (ಅಜಿತ. ೪-೬) ; ಕವಿಮಾರ್ಗದೊಳಂ ಪೊಸ ದೇಸಿಯ ನುಡಿಗಳೊಳಂ ಪೊಸೆಯಿಪ ಬಲ್ಮೆಗೆ ಚತುರ್ಮುಖಂ ಕವಿರತ್ನಂ (ಗದಾಯು. ೦-೬೯). ೩. ಶ್ರೇಷ್ಠತೆ ; ಉತ್ತಮಿಕೆ: ಪೊಸದೇಸಿಯೊಳೊಂದಿದ ಮಾರ್ಗಮೊಳ್ಪುವೆತ್ತಿಸದಿರೆ ಪೇಟ್ಟು ರಂಜಿಸದೆ ಕಿಮ್ಮನೆ ಬಲ್ಮೆ [ಪಾಠಾಂ. ಲ್ಮೆ]ಗೆ ಮುಯ್ಯನಾಂಪುದೇ (ಶಬಸಾರ. ೦-೧೯). ೪. ಹಿರಿಮೆ; ಮಹಿಮೆ: ಪತಿತರ ಪಾವನವೆನಿಸುವ ಬಲ್ಮೆ ಯೊಳತಿಶಯಮಡೆದ ತೀರ್ಥಗಳು ಸತಿಯರ ಪಾದಸಂಸ್ಪರ್ಶದಿಂ ತಮ್ಮ ದುಷ್ಕೃತವ ಕಳೆಯಲೆಳಸುವುವು (ಶಾಂ. ೨-೬). ೫. ಏಳಿಗೆ; ಉನ್ನತಿ ;

ಅಭಿವೃದ್ಧಿ : ಅನುದಿನವು ತನ್ನ ದೇಶದ ಬಲ್ಮೆಗಾಗಿ ತನು ಮನ ಧನಗಳನು ಅರ್ಪಿಸುತ ಭಕ್ತಿಯಿಂದ (ಕುಹ. ೧೫-೩). ೬. ಶ್ರೇಷ್ಠವಾದುದು; ಉತ್ತಮವಾದುದು; ಮೇಲಾದುದು : ಕವಿಯೇ ಸರ್ವರೊಳುತ್ತಮಂ . . . ರಸಗಳೊಳ್ ಶೃಂಗಾರವೇ ಬಲ್ಮೆ (ಸೋಪಮಂ. ೯). ೭. ಬಲಾತ್ಕಾರ; ಒತ್ತಾಯ ; ಜುಲುಮೆ : ಸುಖಾಸನಾರೂಢ ತನ್ನನಿಯನ ಬಲ್ಮೆಯುಲ್ಲದ ನಲ್ಮೆಯು ಪರಮಪದವನೋರೊರ್ವರೊಳ್ ನುಡಿವ ಕೆಳದಿಯರ ನುಡಿಯು ನಾಲಿಸುತ್ತುಂ ನಿಜನಿವಾಸಕ್ಕೆ ಬಿಜಯಂಗೆಯ್ದು (ಸುಕುಹ. ೪-೭೬); ನಿಮ್ಮರ ಕೋಪಂ ಒಡಿದೊತ್ತಿ ಸೂಳೆಯರೊಳುಗ್ರಾಟೋಪದಿಂ ಬಲ್ಮೆಯಿಂ ನೆರೆವಂ ಭೂಭುಜನಂದನಂ (ರಘುಕಾವ್ಯ. ೨-೩೮). ೮. ಬೆಂಬಲ : ಒತ್ತಾಸೆ : ಗಂಡನ ಬಲ್ಮೆಯೊಳತ್ತಮಾವಂದಿರ ಗಂಡನನವರ ಬಲ್ಮೆಯೊಳು ಅಂಡಲೆಯದೆಯನಿಬರನನುಸರಿಸುವ ಪೆಂಡಿರ ಜಸ ಪೆರ್ಚುವುದು (ಹಂಬ. ೪-೩). ೯. (ಅಲಂ) ಔಚಿತ್ಯ ; ಯೋಗ್ಯವಾಗಿರುವಿಕೆ : ಕನ್ಯೆಯಿದಲರ್ಗೆ ಯಾಜಿಡಿಗೆ ಶಶಿಬಿಂಬಕ್ಕೆ ರನ್ನಳ್ಕೆ ಪೊನ್ನ ಕಳಸಕ್ಕೆ ತಿಳಿಗೊಳಕೆ ಮಿಗೆ ಚೆನ್ನೆಸವ ಬಗಸಗಣ್ಣಳಸವಾನನವಧರಕುಚಯುಗ್ಮಮೆಸೆವ ನಾಭಿ ಮುನ್ನಮೇ ಸರಿಯೆಂಬ ಬಲ್ಮೆ ಪೊಣಿವಾಜಧಿಕವೆನ್ನಲುಚಿತಂ ತಥ್ಯವೆನಲೆಸೆದಳಾ ಚೆಲ್ವ ಕನ್ನೆ (ರಾಜಶಂ. ೩-೯೬). ಬಲುಮೆ : ೧. ಬಲುಮೆ ಮಿಗೆ ಜನಪದಿಗಳ ಮೇಲಲವಡಿಪ ಶಿಬಿರಂಗಳಂ ಭೂತಳಕೆಳಿಯ ನೊಕಿಸುತಿವೆಲ್ಲಂ ನುಚ್ಚುನುಱಿ ಮಾಡಿ (ಚಕಥ. ೩೦-೬೨) ; ಬಲುಮೆಯಿಂ ನೂಂಕಿ ದಟ್ಟಿಪೆವೆಂದೊಡೆಮ್ಮಿಂದ ಬಲವಂತರಿಲ್ಲ (ತಿರುಪತಿ. ೪-೬೦) ; ಬಲುಮೆಯುಳ್ಳಡೆ ಕಾದು ನಿನ್ನಂ ಕೊಲದೆ ಬಿಡೆನು (ಚಂಪಾ. ೧-೪-೨೩). ೨. ರಾಯ ನಿನಗಾವಿಂದು ದಿಟ ಸಿದ್ಧಾಯವನು ನಾವ್ಮತ್ರವಲ್ಲದೆ ವಾಯುಜನ ಫಲುಗುಣನ ಬಲ್ಲಿನ ಬಲುಮೆ ಗಂಡಿದೆವೆ (ಕುಮ್ಯಾ. ೯-೫೦) ; ತಿಳುಹು ಧರ್ಮಜ ಸಕಲಧರ್ಮಾವಳಿಯ ಸಾರವನೆನಲು ಯಕ್ಷನ ಬಲುಮೆಗವನೀಪಾಲನತಿಪರಿತೋಷದಲಿ ನುಡಿದ (ಕುಮ್ಯಾ. ೨೩-೨೩). ೩. ಜಲಮಣಿಯ ಬೆಡಗನಿಕ್ಕಬಹುದೆ ಬಯಲ ಬಂಧಿಸಬಹುದೇ ಬಲುಮೆಯ ರಸಿಕಕ್ಕೆ ಸಲೆ ನಿಲಯ ಉಂಟೇ ಇದು ಸಲ್ಲಲಿತ ಇದಱ ಬಲುಮೆಯ ಹೇಳಾ (ಪೋಭವತಾ. ೧೫-೪೬೪) ; ಗಿರಿಜೆಯರ ಸಂಗಱಿಯಬಾರದ ಪರಮಮಾಹೇಶ್ವರರ ವಿಸ್ಮಯಚರಿತವಂ ವರ್ಣಿಸುವ ದಾನೇತಱವನಂತಾಗಿ ಸರಸದಿಂ ಕೀರ್ತಿಸಿದೆನಾ ಭಕ್ತರನೆ ಮತ್ತನ್ಯತವನಱಿಯೆನು ನಿರುತದಿಂದೀವೊಂದು ಬಲುಮೆಯೊಳಾದ ಪೆಂಪಿಂದ (ಬಸಕು. ೬೦-೭೭). ೪. ಜಲದೊಳಾಡುತ್ತಿರಲು ಕಂಡನು ನಳಿನವದನೆಯನಾ ಗುಹಾಸುರ ಬಲುಮೆಯಲಿ ರಮಿಸಿದನು (ಸಂಕಹ. ೨೬-೧೦೩) ; ಎಲ್ಲವನು ಅಱಿದಿಹರೆ ಬಲ್ಲೆನೆಂದೆನಬೇಕು ಅಲ್ಲಲ್ಲಿಗೊಂದನಱಿದುಲಿಯ ಬಲುಮೆಗೆ ಕಲ್ಲು ಹೊತ್ತಂತೆ (ಕಿವಜ್ಞ. ೪೫೨). ೮. ಎನ್ನ ದೇಹದಲಿ ಒಲಿದು ನೀನಿರೆ ನಿನ್ನ ಸಲುಗೆಯ ಬಲುಮೆಯಲಿ ಬರಸಳೆವೆ ಮುಕ್ತಿಯ ಲಲನೆಯನು ತಳುವಿಲ್ಲ (ಶಂಶಾ. ೫೯). 'ಬಲುಮೆವಿಡಿ' ಪರಾ.

ಬಲ್ಮೆ ಮಾಡು, ಬಲುಮೆ ಮಾಡು — ೧. ಭದ್ರಗೊಳಿಸು ; ಬಿಗಿಗೊಳಿಸು ; ಬಲಪಡಿಸು : ಪುರದುರ್ಗಂಗಳ ಬಲ್ಮೆ ಮಾಡದೆ ಪ್ರಜಾಕ್ಷೋಭಂಗಳಂ ನೋಡದೆ . . . ಮದನಂಗಾಳಾಗಿಹಂ ಲೋಕದೊಳ್ ದೊರೆಯೋ ಸೊಕ್ಕಿದ ಕೋಣನ್ಯೆ (ಸೋಮಂ. ೩೩). ೨. ಬಲಾತ್ಕಾರ ಮಾಡು ; ಒತ್ತಾಯ ಮಾಡು : ನಮ್ಮ ಮೇಲೆಯೇ ಇಷ್ಟು ಬಲುಮೆ ಮಾಡಲಿಕ್ಕೆ ನಾವೇನು ಅಂಥಾದ್ದು ಆತನಿಗೆ ಮಾಡಿದ್ದೇವು (ತುಂಂಜಾ. ೬. ೨-೩೪). [ಬಲ್$_2$ (<ಬಲ್ಲಿತು$_1$) + — ಮ್ಮೆ]

ಬಲ್ಮೆಕಾಱ 'ಬಲ್ಮೆಗಾಱ' ನೋ.

ಬಲ್ಮೆಗಾರ 'ಬಲ್ಮೆಗಾಱ' ನೋ.

ಬಲ್ಮೆಗಾಱ, ಬಲುಮೆಕಾಱ, ಬಲುಮೆಗಾಱ, ಬಲ್ಮೆಕಾಱ, ಬಲ್ಮೆಗಾರ (ನಾ). ೧. ಬಲವುಳ್ಳವನು ; ಪರಾಕ್ರಮಿ : ಇರ್ಮಡಿ ಬಲ್ಮೆಗಾಱರುಂ ಕಲ್ದು ಕೀಟಗ್ಗೆಯ್ದುದಱಿಂ ಹೊಂತಕಾಱಗಳನಿಬರುಂ ಬಿಂದೆಗೆಯೆ (ಶಶಿಂ. ೧೬೪-೬). ಬಲುಮೆಕಾಱ : ೧. ಅಳುಕಿದರು ಮನುಮಥನ ಗರುಡಿಯ ಬಲುಮೆಕಾ[ಪಾಠಾಂ. ಗಾ]ಱರು ಬಂದಳಗ್ಗದ ನಳಿನಮುಖಿ ಬಹುಜನದ ಮನಕಚ್ಚರಿಯನೊದವಿಸುತ (ಕುಮ್ಯಾ೩. ೦-೨೬) ; ತೊಲೆಗಳೊಳಗೆ ದಳಗಳ ಪೆಟ್ಟ ಲಂಘಿಪ ಬಲುಮೆಕಾಱರ ಮೇಲೆ ನೊಕಿ ತಲೆ ಮೈ ಕೈ ಕಾಲೊಳು ಗೂಟಗಳು ಮಾಡಿ ಸಲೆ ತೊಱದರು ಜೀವಗಳನು (ಕಂಠಹ. ೧೯-೬೦). ಬಲುಮೆಗಾಱ : ೧. ಎಲೆ ಧರ್ಮಸುತ ಕೇಳಿಂತೂರ್ವನೆ ರಾಜಬಲವನೆಲ್ಲವ ಬಱಕೆಯ್ಯ ಬಲುಮೆಗಾಱರ ಬಲ್ಲಹನು ಜರಾಸಂಧ ನೊರಿದು ಕರ್ಣನ ಕರೆಸಿದನು (ಕರ್ಣಪ. ೬-೧). ಬಲ್ಮೆಕಾಱ : ೨. ಶ್ರೇಷ್ಠನಾದವನು ; ಮಹಿಮಾವಂತ : ತೋಱದ ಚಿಂತೆಯ ನಿಮಿಷಮಾತ್ರದಿ ಕಡೆಗಾಣಿಸುವತಿಶಯರೂಪಾ ಜಾಱದೆ ನನ್ನಂತರಂಗದೊಳಿರು ಬಲ್ಮೆಕಾಱಾ ಚಿದಂಬರಪುರುಷಾ (ಚಕಹ. ೫೫-೧೦೭). ೩. ಚತುರನಾದವನು ; ಚಾಣಾಕ್ಷ : ತಾಂಬೂಲವಸ್ತ್ರಭೂಷಣವಿತ್ತು ನಮಿರಾಜ ತುಂಬಿದ್ದ ಜನವ ಬೀಳ್ಕೊಟ್ಟು ಮುಂಬಾಗಿಲೆಡೆ ಮುಟ್ಟ ಹೋಗಿ ತಿರುಗಿ ಬಂದನೇಂ ಬಲ್ಮೆಕಾಱನೊ ಮಂತ್ರಿ (ಚಹ. ೩೯-೬೫). ಬಲ್ಮೆಗಾರ : ೩. ನಿನಗಿನ್ನೂ ಸಿದ್ಧಿ ಸದಿರುವುದು — ಬಲ್ಲ ಬಲ್ಮೆಗಾರನ ಉತ್ಕಟೋಪಭೋಗದ ಪ್ರಥಮಸಮಾಗಮ (ಮುಂತ್ರಕ. ೨೯-೦೦). [ಬಲ್ಮೆ + — ಗಾಱ (< — ಕಾಱ)]

ಬಲ್ಮೆಗೈ (ಕ್ರಿ). ಒತ್ತಾಯ ಮಾಡು; ಬಲವಂತ ಮಾಡು : ಅಂಜಲೇತಕೆಲೆ ಬಸವಣ್ಣ ನೀಂ ಕೊಟ್ಟ ಘನಲಿಂಗವಂ ಕೊಂಡಡಂಗಿದನಿಮಿಷನಂದ ಮೆನಗಿಲ್ಲ ಬಲ್ಮೆಗೈವವನಲ್ಲವಿದಾ ಲಿಂಗಲಕ್ಷಣಂಗಳನಾದೊಡೆ ಎನಗೆ ತಿಳಿಪು (ಚೆಬಪು. ೬-೭). [ಬಲ್ಮೆ + ಗೈ (< ಕೆಯ್$_1$)]

ಬಲ್ಮೆದೆ (ನಾ). ದೊಡ್ಡ ಮೆದೆ : ನೆಲ್ಲ ರಾಶಿಗಳಷ್ಟು ಹೊನ್ನ ರಾಶಿಗಳುಂಟು ಹುಲ್ಲ ಹೆಬ್ಬಣಬೆಗಳಷ್ಟು ಜಲ್ಲಿಪಟ್ಟೆಗಳ ಬಲ್ಮೆದೆಯಿದ್ದುವವನೊಂದು ಹುಲ್ಲಿಗೆ ಕಡೆಗಂಡು ಬಿಟ್ಟ (ಚಹ. ೩೦-೧೨).
[ಬಲ್$_2$ (< ಬಲ್ಲಿತು$_1$) + ಮೆದೆ$_1$]

ಬಲ್ಮೆಯತ್ (ನಾ). ದೊಡ್ಡ ದೇಹ ; ನಿಡಿದಾದ ಶರೀರ : ಬಟ ದೋಃಬಿದ್ದೆಯ ಬಳ್ಳಳಬಳೆದಾ ಬಲ್ಮೆಯ್ಯ ಕೂಡೆ ಪೆರ್ಚಿದ ಕೈಯಂ ಒಳಪುಗಿಸಲೆನ್ನ ಕಾತ್ರೆರ್ದೆಗೊಳಗಕ್ಕಿಮ ಖರ್ವತನುವ ಕರುಣಾಹಸ್ತಂ (ಕಸ್ತಂಂ. ೩೦). [ಬಲ್$_2$ (<ಬಲ್ಲಿತು$_1$) + ಮೆಯ್$_2$]

ಬಲ್ಮೆವಂತ (ನಾ). ೧. ಶಕ್ತಿವಂತ; ಬಲಶಾಲಿ; ಸಮರ್ಥ : "ಶಕನ್, ಶಕಾನಃ, ಶಕ್ತಃ, ಶಕ್ತಿವಾನ್, ಈ ೪ ಬಲ್ಮೆವಂತಂ" (ಕಾಶಕ್ಕ. ೨೦೯). ೨. ಚತುರ; ನಿಷ್ಣಾತ; ಜಾಣ : ಬಲ್ಮೆವನ್ನನ ಮುದ್ದುನುಡಿಗಳ ಕಟ್ಟಳಸಿನ ತುಮುಲಕೋಲಾಹಲದ ವಿಕಾರಾಭಾಸವನ್ನು ಸೂಕ್ಷ್ಮಿಸಿದು (ಮುಂತ್ರಕ. ೧೧೦-೪). [ಬಲ್ಮೆ + — ವಂತ]

ಬಲ್ಮೆಳೆ. ಬಲುಮೆಳೆ (ನಾ). ಗಿಡಬಳ್ಳಿಗಳ ದಟ್ಟವಾದ ಪೊದೆ; ಒತ್ತಾಗಿ ಬೆಳೆದ ಗಿಡ ಮರಗಳ ಗುಂಪು,— ಪೊದರು : ನೆವವಿಟ್ಟು ಮೊರೆವಣಗಳಂ ತವಕದಿನಂದಱಸುವಂತೆ ಬಲ್ಮೆಳೆಗೊಲ್ಲುತ್ಸವದಿಂ ಮೆಲ್ಲನೆ ಪೋದಂ ಯುವತಿಯನೊಡಗೊಂಡು ಶಬರಕಾಮುಕನೊರ್ವಂ (ಉದ್ಭಟ. ೨-೭೩). ಬಲುಮೆಳೆ ; ಸುಮಹಾರಥರ ಹೊದಱಲಿ ಹೊಕ್ಕನುರಿ ಬಲುಮೆಳೆಯ ಹೊಕ್ಕಂತೆ (ಕುಮ್ಯಾದ್ರೋ. ೨-೩೦). [ಬಲ್$_2$ (<ಬಲ್ಲಿತು$_1$) + ಮೆಳೆ]

ಬಲ್ಮೊಗ (ನಾ). ಗಡುಸಾದ ಮುಖ; ಗಂಭೀರವಾದ ಮುಖ : ಅತಿಬಳಮಹಾರಾಜಂ . . . ಪೆಱರ ಮಾರ್ಗದೊಳಿರ್ದಪಲ್ಲದೆ ತಱಸಂದು ನೆಗಬಲೆಂದು ಮೇಲ್ಮೆಗೆಯ್ಯದೆ ಬಲ್ಮೊಗಂ[ಪಾಠಾಂ. ಬಲುಮೊಗಂ] ಮಾಡಿ ತನ್ನಳಿಯಂದಿರ ಮೊಗಮಂ ನೋಡಿ . . . ಎಂಬುದುಂ (ತುಳುಶಾ. ೨-೮೫). [ಬಲ್$_2$ (< ಬಲ್ಲಿತು$_1$) + ಮೊಗ]

ಬಲ್ಮೊರಡಿ (ನಾ). ದೊಡ್ಡ ಪರ್ವತ; ಭಾರಿ ಬೆಟ್ಟ.

ಬಲ್ಮೊರಡಿಯ ಕನ್ನೆ = ಪರ್ವತರಾಜನ ಮಗಳು ; ಗಿರಿಜೆ; ಪಾರ್ವತಿ : ಮುನ್ನೀರಣುಗಿ ಮುರಾರಿ ಬಲ್ಮೊರಡಿಯ ಕನ್ನೆ ಕಪರ್ದಿ ವಾಗ್ದೇವಿಸ ನ್ನುತಬಿದಿಗಳೊಪ್ಪಿದವೋಲೊಪ್ಪಿದರತ್ಕುನ್ನತಿಕೆಯೊಳಾ ಪ್ರಿಯರು (ಶ್ರೀಚಾಂ. ೧೦-೬೬). [ಬಲ್$_2$ (<ಬಲ್ಲಿತ್ತು$_1$) + ಮೊರಡಿ$_1$]

**ಬಲ್ಮೊರೆ** (ಕ್ರಿ). ಜೋರಾದ ಝೇಂಕಾರವನ್ನು ಮಾಡು : ವಿಸು ಪಲರಂಬುಗಳರ್ಕಿಂ ಬೆಸಕೆಯ್ಯಡೆ ವಾಲೆವ ಬೀರರಂ ಪರಿದೆಂಟುಂದೆಸೆ ಗಳೊಳಂ ಕಾಣೆವೆನಿಪ್ಪ ಸರದೆ ಬಲ್ಮೊರೆವುವೀಗಳಾಜಿಡಿ ಸೆವದಿಂ (ಅಕ್ಕಾಚ. ೦೬೩). [ಬಲ್$_2$ (< ಬಲ್ಲಿತ್ತು$_1$) + ಮೊರೆ$_1$]

**ಬಲ್ಮೊಲೆ**, ಬಲುಮೊಲೆ (ನಾ). ತುಂಬಿದ ಸ್ತನ ; ತೋರವಾದ ಕುಚ : ನೆಟ್ಟನೆ ಮೊಗ ನೋಡಿ ಮುದ್ದಿಪ ತರಳನ ಪುಟ್ಟ ಕೈಗಳ ತಂದು ತನ್ನ ಬಟ್ಟ ಬಲ್ಮೊಲೆಗಡರ್ಚುವಳು (ಜೋಚಕ. ೦೦-೩೬); ಅಡರ್ದ ಬಾಸೆಯ ಬಲ್ಮೊಲೆ ಗಳ ಥಳಥಳಿಪ ನುಣ್ಗೊರಲ . . . ತುಂಬಿಗಳ ಪೋಲ್ವ ಸುಳಿಗುರುಳ್ಗಳ ಪೆಣ್ಗಳೀರ್ದರಂದರಸನೊಡ್ಡೋಲಗದೊಳು (ಜಂಪು. ೬-೦೨). **ಬಲುಮೊಲೆ** : ಬಲುಮೊಲೆಯ ಸೋಂಕಿನಲಿ ಶಾಂತರ ತಲೆಕಳೆಕ ಮಾಡುವವು ಕಡೆಗಣ್ಣಾಲ ಗಿನಲಿ ಕೊಯ್ಯುತ್ತುವೆವು ವಿಜಿತೇಂದ್ರಿಯರ ಮನವ (ಉತ್ಕಾಕಾ. ೦೯-೦೪); ಬಲುಮೊಲೆಯಬಾಸೆಗಳ . . . ಪುಳಿನ ಜಘನಸ್ಥಳದ ದಾನವಸತಿಯರಿರ್ದರ ದೊಂದು ತಾಣದಲಿ (ಕೂರಚಾ. ೩-೨-೬೯); ನಳಿತೋಳ ಸಳಿನಡು ಬಲು ಮೊಲೆಯ . . . ಮುತ್ತುದೊಡವಿನ ಚೆಲುವೆ ವಾಗುರಿ ಮುಡದಿಯಾ ವಿಂಧ್ಯಕಗೆ (ಶಾಕ್ಕಚಾ. ೩-೦೦). [ಬಲ್$_2$ (< ಬಲ್ಲಿತ್ತು$_1$) + ಮೊಲೆ$_1$]

**ಬಲ್ಮೊಸರ್** (ನಾ). ಗಟ್ಟಿಯಾದ ಮೊಸರು : ಅಜ್ಜಯುತಮಪ್ಪುದಂ ಮೆಲ್ಲನೆ ತೊಡೆಯೊಳ್ ಪೋಪವಂಗೆ ತಪ್ಪದನಿಕ್ಕಿದೇತಿಕ್ಕಿದ ಗಟ್ಟಿಗೊಂಡ ಬಲ್ಮೊಸರಂ ಕೋಡು ಪುದುಳಿಸಿ ನಿಂದ ಬಟೆಕ್ಕುಂ (ರರಾಚಸಕ್ಕು. ೦-೦೯೪). [ಬಲ್$_2$ (< ಬಲ್ಲಿತ್ತು$_1$) + ಮೊಸರ್]

**ಬಲ್ಮೊಳಗು** (ನಾ). ಜೋರಾದ ಗುಡುಗು : ಪೊಳೆವ ಮಿಂಚುಗಳ್ಗೆಸೆ ತೇಜಿಗಳವಲ್ಲ ಬಲ್ಮೊಳಗುಗಳಿವ್ವಸೆ ರಥಚಕ್ರಧ್ವನಿಗಳಲ್ಲ . . . ಕಂಗೊಳಿಪ ಕಾವರ್ಗಾಗಿಲ್ಕೆಸೆ ಕೃಷ್ಣನಲ್ಲಂಬವೋಲ್ಮೊಳುಗುಗಳೆ ಮೈದೋಚ್ ಕಂಡು ಕಲಿಸಿಂಹದಾತಿದಿರಾದನನುಸಾಲ್ವನು (ಕೃಬಿಚಾ. ೬-೩೦). [ಬಲ್$_2$ (< ಬಲ್ಲಿತ್ತು$_1$) + ಮೊಳಗು$_2$ (< ಮೊಬಗು$_2$) ]

**ಬಲ್ಮುಪಹಾರ** (ನಾ). ಬಲಿಯಾಗಿ ಅರ್ಪಿಸುವ ನೈವೇದ್ಯ : ಈ ಚತು ಸ್ಸೀಮೆಯುಮಾನೊಳಗಾಗೆ ಒಡೆಯ ದೊಡ್ಡವಾಡಿಯ ಕಲ್ಲ ಬಾಳೆಚ್ಚಿ ಭಟಾರಂಗೆ ಬಲ್ಮುಪಹಾರಕ್ಕೆ ದೇವಭೋಗವಾಗಿ ಕೊಟ್ಟುದು (ಎಕ. IX (s). ಕಂಗಳೂ. ೦೫೦-೩೧; 828). [ ಸಂ. ]

**ಬಲ್ಲ**$_1$ 'ಬಲ್$_1$' ಪರಾ.

**ಬಲ್ಲ**$_2$ 'ಬಲ್ಲೆಯ' ನೋ.

**ಬಲ್ಲ**$_3$ (ನಾ). ಒಂದು ಊರಿನ ಹೆಸರು; ಈಗಿನ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನಲ್ಲಿದೆ: ಸ್ವಸ್ತಿಶ್ರೀ ಇಜೆಪ ನೊಳಂಬ ಪೃಥಿವೀರಾಜ್ಯಂಗೆಯ್ಯುತ್ತಿರೆ ಬಲ್ಲದ ತುಱುಗೊಳ್ದೋಡೆ ಕೊಬ್ಬೆಯಯ್ಯರಿದುಂ ಬಲಿವಯಂ ತುಱುವನಿಕ್ಕಿ (ಎಕ X. ಮುಳಬಾ. ೩೨-೨ ; ಸು. ೯೫೦); ಬಲ್ಲದ ಲೆಂಕ ಮಾನೆಮುದ್ದಮಲ್ಲಯಂ . . . ತುಱುವಂ ಕಟ್ಟಿ ಕಾದು ಸತ್ತು ಸಗ್ಗಿಯಾದಂ (ಕ್ಕಅಶ. ೦೯೨೬, ೯೬-೪; 10ನೆಯ ಶಕ). [?]

**ಬಲ್ಲಂಕ** (ನಾ). ದೊಡ್ಡ ಯುದ್ಧ : ತಳಿಯಾಗಲಿ ಹೂಡಿ ಬಲ್ಲಂಕವಾದುದು ಬಲುಹಾದುದು ಪಿಳ್ಳಗೋಂಟೆ ಎಲುವಿನ ಕಟ್ಟನ ಸೊಡರು ತಿಂಥಿಣಿಯಾಗಿ ತಳತವು ತೆನೆತನೆಗಳಲಿ (ಪಾಗಳು. ೦೬-೩). [ಬಲ್$_2$ (<ಬಲ್ಲಿತ್ತು$_1$) + ಅಂಕ$_2$]

**ಬಲ್ಲಂಗಿ** (ನಾ). ಒಂದು ಬಗೆಯ ಸಸ್ಯ : (ವೈಶಿಕ. ೬೩-೦೨೮೮); (ಸಸ್ಯಕೋ. ೦೦೮). 'ಬಲ್ಲಗಿ' ಪರಾ. [?]

**ಬಲ್ಲಂತಿಕೆ** 'ಬಲ್$_1$' ಪರಾ.

**ಬಲ್ಲಕುಂದ**, ಬಲ್ಲಕುಂದೆ (ನಾ). ಒಂದು ನಾಡಿನ ಹೆಸರು : ಶ್ರೀಮತ್ತ್ರೈ ಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾನಡಿದೇವರು ಕೊಂಗಳಿಯ ಯ್ಯಾಱುಂ ಕದಂಬಳಿಗೆಸಾಸಿರಮುಂ ಬಲ್ಲಕುನ್ದ ಮೂನೂಱುಂ . . . ಸುಖಸಂಕಥಾವಿನೋದದಿನಾಳುತ್ತುಮಿರೆ (ಎಕ. XI. ದಾಚಿಚ. ೨೦-೯; 1046).

**ಬಲ್ಲಕುಂದೆ** : ಶ್ರೀಮದಿಜುವ ನೊಳಂಬಾಧಿರಾಜಂ ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಂ ಕೆಂಗಳೆಯ್ಯೆನೂಱುಂ ಬಲ್ಲಕುನ್ದೆಮೂನೂಱುಂ . . . ಸುಖದಿನಾಳುತ್ತುಮಿರೆ (ಎಕ. XVI. ೨೮-೦೨; 1010). [ ? + ಕುಂದ$_3$ ]

**ಬಲ್ಲಕುಂದೆ** 'ಬಲ್ಲಕುಂದ' ನೋ.

**ಬಲ್ಲಗ** 'ಬಲಿಗೆ' ನೋ.

**ಬಲ್ಲಗಿ** 'ಬಲಿಗೆ' ನೋ.

**ಬಲ್ಲಡಗು** (ನಾ). ಉತ್ತಮವಾದ ಅಡಗು ; ಶ್ರೇಷ್ಠವಾದ ಮಾಂಸ : ಬಲ್ಲಡಗಿಲ್ಲದೊಡುಣಸಣಮಿಲ್ಲೀ ಪ್ರಭುಗೆನುತಮುವನ ತೊಡೆಯಡಗನೆ ತಳ್ವಿಲ್ಲದವಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿಪು. ೬-೯೬). [ಬಲ್$_2$ (<ಬಲ್ಲಿತ್ತು$_1$) + ಅಡಗು$_2$]

**ಬಲ್ಲಡವಿ** (ನಾ). ಗಹನವಾದ ಅರಣ್ಯ; ದಟ್ಟಡವಿ: ಬೀಡಿಂಗೆ ಬೀಡುವಿಡಲ್ ನೆಲನುಮೊಲೆಗಲ್ಗಳ್ಗೆ ಬೆಟ್ಟುಗಳುಂ ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ . . . ಆ ಪಡೆಗೆ ನೆಱೆಯುವನಿಸಿ . . . ಬಂದು (ಶಂಕಚಾ. ೯-೦೦೪ ವ); ತಾಂಗಿಮುದು ಗಾಳಿಯುಂ ದೆಸೆಯುಂ ಗವಸಣಿಸಿದ್ದು ಮೇಗೆ ಮೊಗೆದಾ ಗಸಮುಂ ನುಂಗಿದುದೆನೆ ಕಟ್ಟಲಿಸಿ ಕಱಂಗಿದ ಬಲ್ಲಡವಿ ಕಣ್ಗೆ ಪಡೆದು ದಗುರ್ವರ್ಂ (ಶಂಚಾಪು. ೬-೦೧೪). [ಬಲ್$_2$ (<ಬಲ್ಲಿತ್ತು$_1$) + ಅಡವಿ]

**ಬಲ್ಲಣಿ** (ನಾ). ದೊಡ್ಡ ಸೈನ್ಯ; ಭಾರಿ ದಂಡು : ತುರಗದಟಂಗಳ ನೊಡ್ಡಿದ ಕರಿಘಟೆಯಂ ಪಱಿಯ ನಿರ[ವಿ]ಯಂ ಬಲ್ಲಣಿಯಂ ಧುರದೆಡೆಯೊ [ಳ]ಱೆದು ಗೆಲ್ದಂ (ಎಕ. X. ೦೫೦-೦೦ ; 916); ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣಿಗಳ್ ಪಳಂಚಿ ಪಾಯಿಸುವ ದಟಕ್ಕಗುರ್ವಸೆಯೆ ನೂಂಕಿವ ಬಲ್ಲಣಿಗೆತ್ತಮೆಯ್ದೆ . . . ತುಱುಗಾಜಿರಂದಿನಿಸು ಬಲ್ಲಲನಾ ದುದದೊಂದು ಕಾಳಗಂ (ಶಂಕಚಾ. ೯-೯೬); ಕಾಲ್ಗಾಪಿನ ಬಲ್ಲಣಿಯೊಳ್ ಬಲ್ಗೆಯ್ಪುದಿನಿಱಿದು ಮಡಿಯೆ ನೆತ್ತರ ತೂಱೆಗಳ್ ಗಲ್ಗಲನೆ ಪರಿಯೆ (ಶಂಚಾಕನ. ೦೩-೬೪). [ಬಲ್$_2$ (<ಬಲ್ಲಿತ್ತು$_1$) + ಅಣಿ$_3$]

**ಬಲ್ಲತನ** 'ಬಲ್$_1$' ಪರಾ.

**ಬಲ್ಲಪ** (ನಾ). ಒಬ್ಬಾತನ ಹೆಸರು : ಶ್ರೀಧರಯ್ಯ ಬರೆದ ಪೇಣಿಗಳಂ . . . ಮೋಣಿಗಳಂ ಪೊಗಿ ಪೊಗಚಿಲ್ಲಂಗೆಱೆಯೊಳ್ ತಾಜ್ಞಡಕೊಳ್ಳೆನೆಸ್ವಾ ಬಲಗರ್ವದೆ ಬಲ್ಲಪನಲ್ಲಿಗೋಗಿ ಕಾಮ್ಯೊಚಿಸ್ಗಿಡೆಯಾಗದನ್ನು ನಡಿದಾಪ್ಪಿನ ಮೆಚಿಸಿಕೊಣ್ಣಾರ್ (ಎಕ. V. ಬೇಲೂರು. ೦೨೩-೪೦; 952); ಸ್ವಸ್ತಿಶ್ರೀ ಸಕ ನೃಪ ಕಾಲಾತೀತ ಸಂವತ್ಸರಂಗ ೯೦೮ ನೆಯ ವರ್ಷದ ವ್ಯಯಸಂವತ್ಸರ ಪ್ರವರ್ತಿಸೆ ಬಲ್ಲಪಂ ಗಂಗವಾಡಿಗೆ ಬನ್ದ ಕಾಲದೊಳಗೆಯುರಿಂ ರಾಜ್ಯಂಗೆಯೆ (ಎಕ. III. ಹುಣಸ. ೩೫-೩; 986). [ ? + ಅಪ (<ಅಪ್ಪ$_1$) ]

**ಬಲ್ಲಭ** 'ಬಲ್ಲಹ$_1$' ನೋ.

**ಬಲ್ಲಯ್ಯ** (ನಾ). ಒಬ್ಬಾತನ ಹೆಸರು : ಸುಙ್ಕದ ಬಲ್ಲಯ್ಯಂ ದೇಗುಲಕ್ಕೆ ಕೊಟ್ಟ ಪನ್ನೆರಡು ಮತ್ತರು ಕೆಯ್ಯುವ . . . ಕೊಟ್ಟು ಬಿಡಿಸಿದೋಂ (ಕೌಶಾ. XI-i$_1$- ೯೨.೨೦; 971); ಬಲ್ಲಯ್ಯ ಅಮ್ಮಯ್ಯ ರಾ ಯ್ಯ ಕೇಸವ ಸಾಹಣಿಯ ಸಿರಿಯಣ್ಣ (ಎಕ. VII, ಹನ್ನಗಿ. ೩೨-೩೩; ಸು. 1050?). [ ? + ಅಯ್ಯ$_1$ ]

**ಬಲ್ಲರಕ್ಕಸಿ** 'ಬಲರಾಕ್ಷಸಿ' ನೋ.

**ಬಲ್ಲರಿಕೆ** 'ಬಲ್$_1$' ಪರಾ.

**ಬಲ್ಲಲಮರ** (ನಾ). ಒಂದು ಬಗೆಯ ಮರ : ಕೆಂಪುಂಮುಣುಪೋಣಿಯ

ವೊಳಗೆ ಬಲ್ಲಲವುರನ ಅಡಿಯುಲು (ಎಕ. VIII. ತೀರ್ಥಹ. ೨೦೮-೨೬. 1415).
[? + ಮರ$_1$]

**ಬಲ್ಲವ$_1$** 'ಬಲ್$_1$' ಪರಾ.

**ಬಲ್ಲವ$_2$** (ನಾ). ೧. ಅಡಿಗೆಯವನು. ೨. ಅಜ್ಞಾತವಾಸದ ಕಾಲದಲ್ಲಿ ಭೀಮನು ವಿರಾಟನಗರದಲ್ಲಿ ಅಡುಗೆಯವನಾಗಿದ್ದಾಗ ಹೊಂದಿದ್ದ ಹೆಸರು : ಭೀಮನು ನಾನು 'ಬಲ್ಲವ' ನೆಂಬ ಹೆಸರಿಟ್ಟುಕೊಂಡು ವಿರಾಟನ ಹತ್ತಿರವಿರೋಣವೆಂದಿದ್ದೇನೆ . . . ಎಂದನು (ಕಕಭಾ. ೦೮೪). [ಸಂ.]

**ಬಲ್ಲವತಿ** (ನಾ). ಒಂದು ಊರಿನ ಹೆಸರು (?) : ತ್ಯೆಲಪನ ವ× × ×ನ ಕಳಿಗದಲ್ ಬಲ್ಲವತಿಯು ಬ್ರಹ್ಮನೊಡನೆ ಕ× × × ಪಂಚಲ ದೇವನ್ ಸಾಲ್ಲಿ ಬ್ರಹ್ಮನಂ ಕಟುಪಿ (ಪ್ರಾಕಂ. ೦೪೪೨; ೨-೪; 973). [?]

**ಬಲ್ಲವರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀಪುರುಷಮಹಾರಾಜರ್ ಪೃಥುವೀರಾಜ್ಯಂಕೆಯೆ ಬಲ್ಲವರಸರ ಬಾಳದುಳ್ ಸೀಯು × × × ರಣಾಧ್ವರ × ಸಳನಾಡಾ ಬಾಗೆಯುವೆಱಿದು ವಿಟ್ಟೊದನ್ (ಎಕ. XVI. ತುಮಕೂ. ೯೩-೭; ಸಂ. 780) ; ಬಲ್ಲವರಸರ್ ರೋಣದ ಮಹಾಜನಕೆ (ಎಇ. XIII. ೦೬೩-೭; 874). 'ವಲ್ಲವರಸ' ಪರಾ. [<ವಲ್ಲಭ + ಅರಸ$_1$]

**ಬಲ್ಲವಿಕೆ** 'ಬಲ್$_1$' ಪರಾ.

**ಬಲ್ಲವಿಕೆತನ** 'ಬಲ್$_1$' ಪರಾ.

**ಬಲ್ಲಸಿ** (ನಾ). ಬಲವಾದ ಕತ್ತಿ : ಪಾರವುರಂ ಮೂಱೂರ ಮುಕ್ಕೂಡಲಲ್ಲಿ ಪೊಲಸೀಮೆ ಕೂಡಿತ್ತುಂ ಕಡೆಕೊಳಂದ ಮಣ್ಣಗಪ್ಪೊಂಬಾಗಲಂ ಕೊಡಲಿಯುಂ ಬಲ್ಲಸಿಯ ಕಮ್ಮಱಿಂ ಮುಟ್ಟಗೆರಿಯೊಡೆಯೊಂ ಒದಲ ಪೋಲೆಯುಂ ಮಾಡ್ಗಳಂ (ಪ್ರಾಕಂ. ೦೯೩೪. ೩೮-೨೨; 11ನೆಯ ಶತ). [ಬಲ್$_2$ (<ಬಲ್ಲಿತು$_1$)+ ಅಸಿ$_2$]

**ಬಲ್ಲಹ$_1$, ಬಲ್ಲಭ, ವಲ್ಲಹ** (ನಾ). ೧. ಒಡೆಯ ; ಯಜಮಾನ : "ಆಣ್ಮಂ, ಎಱೆಯಂ, ಬಲ್ಲಹಂ— ಈ ೩ ಅಧಿಪತಿಗೆ ಪೆಸರ್" (ಕಶಸಾ. ೬೦-೩೨೦) ; ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಗಂ ಲೆಕ್ಕವಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ (ಪಂಪಭಾ.೦೪-೩೩) ; ತೊತ್ತಿಂಗೆ ಬಲ್ಲಹನೆಂಗಿಗರೆ ಪದವಿಯ ಮಾಡದೆ ಮಾಣ್ಬನೆ (ಜಗಹ. ೪೬೪). ೨. ರಾಜ ; ದೊರೆ : ಬಲ್ಲಹನ ಬೆಸದೊಳೊಱಟರ ಮಲ್ಲಂ ದಲ್ಲನ ತನೂಭವಂ ಕರಹಟದಿಂ ಮಲ್ಲಪನು ಬೆನ್ನಟ್ಟಿದ ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ (ಆಶಪು. ೦-೯೩) ; ಬಲ್ಲಹನುಂ ಸಾಮಂತರುಮೆಲ್ಲಾ ಪ್ರಜೆಯುಂ ಶಿವಂಗೆ ಭಕ್ತರೆ ಜೈನಂ ಪೊಲ್ಲಪ್ಪ ಕತದೆ ಕೈಕೊಳಲೊಲ್ಲ ನರ್ಾಡವರ್ಗಳದಱಿನೆಂಬಮರ್ೊಖರ್ (ಸಮಸ. ೦೩-೦೩) ; ಹಲಕಗೆ ನಾಡು ನಾಡುಗಳು ಬಲ್ಲಹನುತ್ತಮವಸ್ತುವಿಸ್ತೃತಂ (ಎಇ. XIII. ೩೦೭-೬೩; 1125). ೩. ಪರಾಕ್ರಮಿ ; ಸಾಹಸಿ ; ವೀರ ; ಶೂರ : ಪರಮ ಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ . . . ಇದಾರರಸನಿದಾರ ಬಲ್ಲಹನಿದಾರ ಕರೀಂದ್ರನಿದಾರ ಸಿಂಹವೆಂದಿರದಮರ್ದಪ್ಪಿದಳ್ (ಜಗಪ. ೩-೩೯). ೪. ಗಂಡ ; ಪತಿ : ಬರುತಾ ಬಲ್ಲಹನೇಱಿದ ಗಾಲಿಯ ಸರದ ಶಕುನಿಮಂಚದ ಮೇಲೆ . . . ಒಪ್ಪಂಬಡೆದಿರ್ಪ ಅರಸಂಚೆಯ ಕಿಱುದುಪ್ಪುಳುಮಾಸಂ ಹರಿಸದಿನೇಱಿದಳಂಗೋದ್ಯಮನಡರ್ದರಗಿಳಿ ಹೂಡಿದ ಹೂದೇರೇಱುವ ರತಿಯಂಬಂದದೊಳು (ಚಯುಕಾ. ೨-೩೬) ; ಜಲನಿಧಿಯೆಂದು ಸಂದ ಪೊಱವೆಣ್ಗಳ ಬಲ್ಲಹನೆಂದುಮೇಱೆಗಿಯಂ ತಳೆದಿರೆ (ಕಕಾ. ೦-೩೭). ೫. ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಲ್ಲಹಂ ಪ್ರಿಥುವಿರಾಜ್ಯಙ್ಗೆಯ್ಯೆ (ಎಇ. VI. ೦೬೭-೦ : 793) ; ಸ್ವಸ್ತಿಶ್ರಿ ಕನ್ನರ ಬಲ್ಲಹ ದಳಿಗವಟಗೆಯಾನಾನೆ (ಎಕ. X (S). ಮುಳಬಾ. ೦೮೭-೨ ; ಸಂ. 860) ; ನೆಲದ ನೇಸಱ ಉಳ್ಳನೆಗ ಬಿಟ್ಟ ಇದು ಬಲ್ಲಹನ ದತ್ತಿ (ಸೌಇಇ. IX-I. ೩೪-೭ : ಸಂ. ೪ನೆಯ ಶತ) . **ಬಲ್ಲಭ :** ೫. ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದಂ ಪದಡಕ್ಕೆ ದಳಿಧ್ವಜ ಸಾಮ್ರಾ × × × ಮಹಾಮಹಾ ಸಾಮನ್ತಾಧಿಪತಿ ಶ್ರೀ ಬಲ್ಲಭ× × × ಹಾ ರಾಜಾಧಿರಾಜ (ಎಕ. II. ೩೩-೨ ; ಸಂ. 800). **ವಲ್ಲಹ :** ೫. ಸ್ವಸ್ತಿಶ್ರೀ ಶ್ರೀಪುರುಷ ರಾಜಂಕೆಯೆ ಸಿಯಗೆಲ್ಲರಾ ಮನೆಮಗತ್ತಿನ್ ಬಲ್ಲಹನಾ ಬೆಸಸಿ ಗಂಗರ ವಲ್ಲಹ × × ಮಾನಿಱಿದು ಸತ್ತ (ಎಕ. XVI. ತುಮಕೂ. ೮೮-೮ ; ಸಂ. 776) ; ಶ್ರೀ ಶಿವಮಾರ ಸೀಯಗೆಲ್ಲಕ್ಕ್ರ್ಗಮೊಗೆ ಊರೊಳ್ ವಲ್ಲಹನಂ ಬಾಳದುಳ್ ಕಮ್ಮುತುರ್ವರುಂ × × ಎಱಿದು ವಿಟ್ಟೊದನ್ (ಎಕ. XVI. ತುಮಕೂ. ೦೯-೨: ಸಂ. 780). ಬಲ್ಲಹರ ಬಲ್ಲಹ=ಒಡೆಯರಿಗೆ ಒಡೆಯನಾದವನು ; ಮಹಾಪ್ರಭು : ಬಲ್ಲಹರ ಬಲ್ಲಹನವಿರ ತೋತ್ತಪ್ಪಲ್ಲಮುಖಕಮಳಂ (ಬಸಪು. ೮-೧) ; ಬಲ್ಲಹರ ಬಲ್ಲಹನೆ ನೀನೇ ಬಲ್ಲೆ ಕರುಣಿಪುದೆಮಗೆ ಲಕ್ಷ್ಮೀವಲ್ಲಭನ ಲೀಲಾವತಾರಕಥಾಪ್ರಸಂಗವನು (ಜಕಾಗ. ೦೦-೦೯). [<ಪ್ರಾ. ವಲ್ಲಹ. / ಸಂ. ವಲ್ಲಭ]

**ಬಲ್ಲಹ$_2$** (ನಾ). (?) : ಒಂದು ಕಲ್ಲಿನ ಗವಿಯಿಂದ ಬಲ್ಲಹವಾದೀತು ದಿವ್ಯಸಾಲೆ ಪಟ್ಟದ ಬಿದುನೂರು ಹೊಟ್ಟಾಗಿ ಹೋದೀತು ದಿವ್ಯಸಾಲೆ ಮುಂದೆ ಪಟ್ಟಕ್ಕೆ ವೀರವಸಂತನು ಬರುತಾನೆ ದಿವ್ಯಸಾಲೆ (ಕಾಂಸಂ. ೬೦-೨೦). [ ? ]

**ಬಲ್ಲಳತಟ್ಟೆ** 'ಬಲ್ಲಾಳದಟ್ಟೆ' ನೋ.

**ಬಲ್ಲಳದಟ್ಟೆ** (ನಾ.) ಒಂದು ಬಗೆಯ ಬಟ್ಟೆ : ಕಟ್ಟುವಣ್ಣದ ಪಟ್ಟೆ ಬಲ್ಲಳದಟ್ಟೆ [ಪಾಠಾಂ. ಪಟ್ಟೆ] ಭೂಸಲೆ ಮೇಘವಣ್ಣದ ಪಟ್ಟೆ . . . ಇವು ಮೊದಲು ಥರಥರದೊಳಂದೆಮ್ಮವರುಗಳು ಪಡೆದೊದವಿಸಿದಯಾ ವಿವಿಧ ಪಟ್ಟಾವಳಿಗಳುಂಟು (ಬಸಪು. ೦೦-೨೭). [ಬಲ್ಲಳ ? + ದಟ್ಟಿ$_1$]

**ಬಲ್ಲಾಣಿಕಾಱ** (ನಾ). ಶ್ರೇಷ್ಠನಾದ ರತ್ನಪರೀಕ್ಷಕ : ವಾಣಿ ಮಹಿಯಂ ಬರೆವಳ್ . . . ಕ್ಷೋಣಿ ವಿಶ್ವಾಸಿಯಾಗಿಹಳ್ ವ್ಯೋಮದೊಳಗೆ ಬಲ್ಲಾಣಿಕಾಱ ಧನಂಜಯ ಜಯಕ್ಕೀಶಾನ್ಯ ಹೂಣಿಗನೆನಲ್ಕದುಪಾತ್ರ್ಯತನ ಗೃಹಾಂತರದಿ ನಡೆವನ್ರ್ಹಡಿವರುನ್ನತ (ಸಿಂಗರಾ. ೪-೦೭). [ಬಲ್$_2$ ( < ಬಲ್ಲಿತು$_1$) + ಆಣಿಕಾಱ]

**ಬಲ್ಲಾಣೆಪೊಟಲ್** (ನಾ). ಒಂದು ಊರಿನ ಹೆಸರು : ಬಲ್ಲಾಣೆಪೊಟಲ ಪೊಲ ನಡದ ಪುರುಷರ್ ಕೞಿಗೋಡ ರಣವಿಕ್ರಮಗಾಮುಣ್ಡರುಂ . . . ಬರದರುಂ ಇ ಪೊಲನಂ ನಡಯಿಸಿದೋರ್ (ಎಕ. XVI. ಗುಬ್ಬಿ. ೬೩-೩೪: 788). [ಬಲ್ಲಾಣೆ ? +ಪೊಟಲ್$_2$]

**ಬಲ್ಲಾತ** (ನಾ). ಒಂದು ಬಗೆಯ ಮರ ; ಗೇರುಮರ : ನೀ ಬಲ್ಲಾತ ನಾದೊಡರಣ್ಯದೊಳಗೆ ಕುಜಾತನಾಗಿರದಿಲ್ಲಿಗೇತಕೆ ಬಂದೆ ಪೇಳೆನಲು (ಶಂಕರಾ. ೦೦-೨೦). ☞ ಇಲ್ಲಿ 'ಬಲ್ಲ + ಆತ' ಎಂಬರ್ಥದ ಶ್ಲೇಷೆಯಿದೆ. [<ಸಂ. ಭಲ್ಲಾತ]

**ಬಲ್ಲಾನೆ** (ನಾ). ಬಲಿಷ್ಠವಾದ ಆನೆ; ಭಾರಿ ಆನೆ : ಬಲ್ಲಾನೆಯ ಮೆಟ್ಟಿನಡಿಯ ತೆಂಗಿನಕಾಯಂತೆ ರಥಂಗಳ್ ಜಜ್ಜರಿವೋದುವು ಪಡಿದಟ ದೊಳ್ (ರಾಮಾಶ್ವ. ೭೭೦-೦೭). [ಬಲ್$_2$ (<ಬಲ್ಲಿತು$_1$) + ಆನೆ$_1$]

**ಬಲ್ಲಾಯ** (ನಾ). ಮಿಗಿಲಾದ ಪರಾಕ್ರಮ ; ಹೆಚ್ಚಾದ ಸಾಮರ್ಥ್ಯ : ನಿಡಿಯರ್ ಬಲ್ಲಾಯದ ಬಲ್ಲಡಿಗರ್ ಮಂದಿರ್ದರಯ್ವರಾಲದ ಕೆಱಗಿಂತೊಡರ್ದರ್ ನಮ್ಮಯ ಭಕ್ಷದೊಳಡು ಪಣ್ಣಡು ಪೋಗು ನೀನುಮಾನುಂ ತಿಂಬಂ (ಪಂಪಭಾ. ೩-೦೨). [ಬಲ್$_2$(<ಬಲ್ಲಿತು$_1$) + ಆಯ$_2$]

**ಬಲ್ಲಾಳ್** (ನಾ). ಬಲಿಷ್ಠನಾದವನು ; ಶೂರ ; ಪರಾಕ್ರಮಿ : "ಉಕರ್ಗಳ್ . . . ಬಲ್ಲಾಳ್, ಬಲ್ಪಂಟಂ — ಈ ೫ ಪರಾಕ್ರಮ ಮುಳ್ಳಂ" (ಕಶಸಾ. ೩೮-೨೬೪); ಈ ಗಿರಿದುರ್ಗಮಂ ದಾಂಟಿ ಬಂದ ಬಲ್ಲಾಳ್ದಿವ್ಯನಕ್ಕೆ ದಿವ್ಯಪ್ರಭಾವನಕ್ಕುಮುಮೋಘನಕ್ಕುಮುದಱ್ನೀತನೊ

ದಿರ್ಪ ಕಾದುವ ಮರುಳ್ತನಂ ಬೇಡ (ಆದಿಪು. ೦೪-೩೭ ವ): ಚಾವಡಿಯ ಬಾವುಲಿಯ ಬಲ್ಲಾಳ್ಗಳ ಮುಂದೆಶ್ಚಿದ ಪಂಪರಿಯ ಪತಾಕಾವಳಿಯ ಸೂಳಱದು . . . ಭೂಮಿ ಬೆಸಲಾದಂತೆ ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ (ಗಂಶ. ೬-೩೩ ವ); ಊರಾಳ ಬಲ್ಲಾಳ ಪೆರ್ಗಡೆ ಮಾಸಾವಂತ ಮನ್ನೆಯ ರಾಯರ್ ಮುಂತಪ್ಪ ನಾಡೊಡೆಯರ್ . . . ತಾಮುಂ ಪಡೆವೆರಸಿ ಕುದುರೆಯ ಕಾವಲ್ಗೊದವಿ ಪೋದರ್ (ರಾಜಶೇ. ೩೦-೦೪). [ಬಲ್₃ (<ಬಲ್ಲಿತು₁) + ಆಳ್₃]

**ಬಲ್ಲಾಳ** (ನಾ). ಅರಸನ ಕೈ ಕೆಳಗಿನ ಒಬ್ಬ ಅಧಿಕಾರಿ : ಈಗ ಹಳ್ಳಿ ಹಳ್ಳಿಗಳಲ್ಲಿ ಪಟೇಲರು ಇರುವ ಹಾಗೆ ಆ ಕಾಲದಲ್ಲಿ ಗ್ರಾಮಕ್ಕೊಬ್ಬ ಗುರಿಕಾರನಿದ್ದನು. ಇಂಥ ನಾಲ್ಕಾರು ಮಂದಿ ಗ್ರಾಮ ಗುರಿಕಾರರ ಮೇಲೆ ಮತ್ತೊಬ್ಬ ಅಧಿಕಾರಿ ಇದ್ದನು, ಇವನಿಗೆ ಬಲ್ಲಾಳ ಎಂದು ಹೆಸರು (ಕೋಟಿಚೆ. ೦); ಪಂಜುರ್ಲಿಭೂತ . . . ಒಂದು ದಿನ ಸಂಜೆಯಾಗುವ ತನಕ ಕಾದು ಕುಳಿತಿತು. ಆ ಊರಿನ ಬಲ್ಲಾಳರ (ಜೈನ ಶ್ರೀಮಂತರು) ಮನೆಗೆ ಸಂಜೆಯ ವೇಳೆ ದನ ಕರುಗಳನ್ನು ಅಟ್ಟಿಕೊಂಡು ಹೋಗುವ ಸಮಯವನ್ನು ಹೊಂಚುಹಾಕಿತು (ತುಳುಗೀ. ೬೨). [< ಬಲ್ಲಾಳ್]

**ಬಲ್ಲಾಳಗಿತ್ತಿ** (ನಾ). ಗಟ್ಟಿಗಿತ್ತಿ ; ಗಡುಸುಗಾರ್ತಿ : ಗಂಡಸಿಕ್ಕಿದ ಪಡಿಯನೊಲ್ಲದೆ ಬೆಲ್ಲಗೂಳಿಗಾಸೆ ಮಾಡಿ ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಶಿಶಪ. ೨೦-೦೩).
[<ಬಲ್ಲಾಳ್ + – ಗಿತ್ತಿ]

**ಬಲ್ಲಾಳದಟ್ಟಿ, ಬಲ್ಲಳತಟ್ಟಿ, ಬಲ್ಲಾಳದಡ್ಡಿ, ಬಲ್ಲಾಳ್ದಟ್ಟಿ** (ನಾ). ೧. ಒಂದು ಬಗೆಯ ತೆರೆ,—ಪರದೆ : ☞ ಹೊಯ್ಸಳಸಂತತಿಯ ಬಲ್ಲಾಳರಾಜರ ಕಾಲದಲ್ಲಿ ಪ್ರಸಿದ್ಧವಾಗಿದ್ದ ಒಂದು ಬಗೆಯ ತೆರೆಯಿರಬಹುದು: ಅಂತು ಬಂದು ಈರ್ವರುಂ ಬಲ್ಲಾಳದ[ಶಾಶಾಂ. ತ]ಟ್ಟಿಯ ದ್ವಾರವಟ್ಟದೊಳ್ ನಿಂದಿರ್ದ ದೌವಾರಿಕಂಗೆ ದಾರನುಂ ಶಿವನುಂ ಎಂಬ ಬೇಡರ್ ಬಂದಿರ್ದಪರೆಂದರಸಂಗಱಪೆನಲ್ (ಪುಣ್ಯಾಸ್ರ. ೩-೬೪೩); ಲಾವಂಚ ಬಲ್ಲಾಳದಟ್ಟಿಯಿಂ ವಿರಚಿಸಿದ ಪಾನೀಯಶಾಲೆ (ಲೀಲಾ. ೨-೦೨). **ಬಲ್ಲಳತಟ್ಟಿ** : ಸೌಂದರಗೆ ಕೈಗೊಟ್ಟು ತುಂಬುರ ಮಹಾಮಂತ್ರಿ ಸಂದಣಿಯ ತೊಲಗಿಸುತ ತದ್ಗೃಹದ ಮಾಂದಳಿರ ಪಂದಲಂ ಪೊಕ್ಕು ಲಾವಂಚದ ಬಲ್ಲಳತಟ್ಟಿ[ಟ್ಟಿ]ಯಾ ಮಱಯೊಳುಱ ಬೆವರುತ ನಿಂದಿರ್ದ ಪರವೆಯುಂ ಕಾಣಿಸಲು (ಸೌಂದಪು. ೯-೬೮). **ಬಲ್ಲಾಳದಡ್ಡಿ** : ಮೇಲುಕಟ್ಟಿನ ದಿವ್ಯಚಿತ್ರದುಕೂಲನಿಚಯದ ಲಾಮಚದ ಬಲ್ಲಾಳದಡ್ಡಿಗಳೆಡೆಗೆಡೆಗೆ ರಂಜಿಸುವ ಪಟ್ಟಿಗಳ ಮೇಲುವೊದಕೆಯ ಕರ್ಪುರದ ಹೊಂಬಾಳೆಗಳ ಮಲಯಜದ ಕಂಬದ ಸಾಲುಗಳಲೊಪ್ಪಿದುದು ಚಪ್ಪರವೆರಡು ಯೋಜನದ (ಕುಮಾ್ಯ.೮.೦೨-೦೦); ಮಂಟಪದ ಚೌಮೂಲೆಯಗಲದ ಲಾಮಚದ ಬಲ್ಲಾಳದಡ್ಡಿಯ ಬಹಳರತ್ನವಿತಾನದುಬ್ಬರದ ಮೇಲುಕಟ್ಟಿನ ಮಲಯಜ ಸ್ತಂಬಾಳಿಗಳ ಮಣಿಪುತ್ರಿಕೆಯ ಸಮಪಾಳಿಯಲಿ ಸೊಗಸಿದುದು ಚಪ್ಪರವೆರಡುಯೋಜನದ (ಕೊರಟಾ. ೦೪-೦೭). **ಬಲ್ಲಾಳ್ದಟ್ಟಿ** : ಚೆಲ್ವಿಂಗಡಪಾದ ಪಾದರಿಯೊಳ್ ಕೋದು ಬಳೆದ ಪೊಂಗೇದಗೆಯ ಬಲ್ಲಾಳ್ದಟ್ಟಿಯಿಂದೊಳಗೆ . . . ಅಶೋಕಭೂಜರಾಜಿಯಂ ರಾಜವಿದ್ಯಾಧರನಲಂಕರಿಸುವುದುಂ (ಕಾಕೋ. ೯-೨೯ ವ). ☞ ತಟ್ಟಿ ಮತ್ತು ದಡ್ಡಿ ಎಂಬ ಶಬ್ದಗಳು ಒಟ್ಟಾಗಿಯೇ ಬರಬೇಕಾಗಿದ್ದರೂ ಬೇರೆ ಬೇರೆಯಾಗಿ ಉಲ್ಲೇಖಿತವಾಗಿವೆ. ಅವುಗಳ ಜ್ಞಾತಿಶಬ್ದಗಳಂ ಒಂದೇ ಆಗಿರುವುದರಿಂದ ಇಲ್ಲಿ ಈ ಶಬ್ದಗಳನ್ನು ಒಟ್ಟಾಗಿಯೇ ಕೊಡಲಾಗಿದೆ. [ಬಲ್ಲಾಳ₁+ತಟ್ಟಿ₁]

**ಬಲ್ಲಾಳದಡ್ಡಿ** 'ಬಲ್ಲಾಳದಟ್ಟಿ' ನೋ.

**ಬಲ್ಲಾಳಿಕೆ, ಬಲ್ಲಾಳ್ಕೆ** (ನಾ). ೧. ಶೌರ್ಯ : ಸಾಮರ್ಥ್ಯ: ಪರಾಕ್ರಮ: ಕೆಡುವಂತಿದ್ದೀತೇ ಕೌರವನ ರಾಜ್ಯ ಮುಡಿವಂತಿದ್ದೀತೆ ರಾವಣನ ಬಲ್ಲಾಳಿಕೆ ಪರಸ್ತ್ರೀ ಲಕ್ಷ್ಮೀದೇವಿಗೊಲಿದು ಒಂದು ನಿಮಿಷದಲ್ಲಿ ಮಡಿದ (ಸಕಲೇಶ. ೯-೦೩); ಕಲಿತನದಿಂ ಕಡೆದಂತೆ ಗರುವಿಕೆಯಿಂ ಕರುವಿಟ್ಟಂತೆ ಗಂಡಗರ್ವದಿಂ ಕಂಡರಿಸಿದಂತೆ ಬಲ್ಲಾಳಿಕೆಯಿಂ ಬಣ್ಣವಿಟ್ಟಂತೆ ತಿಣ್ಣವಾದೊಡ್ಡುಂ (ಅಕಂಪು. ೨-೨೬೫). ೨. ಬಲವಂತ; ಒತ್ತಾಯ : ಬಲಾತ್ಕೃತಂ–ಬಲ್ಲಾಳ್ಕೆ(ಳಿಕೆ)ಯಿಂ ಮಾಡಲ್ಪಟ್ಟುದುಂ (ಶಬ್ದಮ. ೨೬-೦೦); ಕೊಲುವುದಾ ವಿಷವುಂಡವರನೇ ಕೊಲುವುದಿದು ನಿರನುಷ್ಠಯುಲಿ . . . ಬಲುಹು ಬಲ್ಲಾಳಿಕೆಯುಲುಂಡಡೆ ಕೊಲುವುದಿಪ್ಪತ್ತೊಂದು ಕುಲವನು (ಶಿಶಾಗ. ೦೦-೯೩-೯೬). **ಬಲ್ಲಾಳ್ಕೆ** : ೨. ಬಲಾತ್ಕಾರಸ್ವಭಾವಃ – ಬಲ್ಲಾಳ್ಕೆಯುಂ ಮಾಳ್ಪ ಸ್ವಭಾವಂ (ಶಬ್ದಮ. ೬-೩೯).
[ಬಲ್ಲಾಳ್ + – ಇಕೆ]

**ಬಲ್ಲಾಳ್ಕೆ** 'ಬಲ್ಲಾಳಿಕೆ' ನೋ.

**ಬಲ್ಲಾಳ್ತನ** (ನಾ). ೧. ಶೌರ್ಯ ; ಪರಾಕ್ರಮ ; ಸಾಮರ್ಥ್ಯ : ಮೇಗಿಲ್ಲದ ಬಲ್ಲಾಳ್ತನದಾಗರಮೆನೆ ನೆಗಟ್ದ ತತ್ಪೃಥಾನಂದನರುದ್ಯೋಗದ ಚಾಗದ ಯಾಗದ ಭೋಗದ ಪೆಂಪುಮಗೆ ಸುಯೋಧನಂ ಬೆಱಗಾದಂ (ಪಂಭಾ. ೬-೬೭); ಮಲ್ಲಾಮಲ್ಲಿಯೊಳಾನ್ತರಿಮಲ್ಲರನಾಹವದೊಳೆಂತ್ತಿ ಗೋಳ್ಸರಿಗೊಳ್ವೀ ಬಲ್ಲಾಳ್ತನದಿನ್ದಾಹವಮಲ್ಲನ ಭುಜಾದಣ್ಣಮೆನಿಸಿ ಧ(ಂ)ಲ್ಲಂ ನೆಗಟ್ದಂ (ಶಾಶಾ. XI–i, ೩೨-೮, 1007); ಕಾಣೆರೆ ತನ್ನ ಬಲ್ಲಾಳ್ತನವಂ (ರಾಜಶೇ. ೩೬-೮). ೨. ಬಲಾತ್ಕಾರ; ಬಲಪ್ರಯೋಗ; ಒತ್ತಾಯ: ಸುಬಾಹುವೆಂಬ ತನ್ನ ಹಿರಿಯ ಮಗಂ ತನ್ನೊಡನೆ ತೊಱಯಲ್ ಬಗೆದಿರ್ದೊನಂ ಬಾರಿಸಿ ಬಲ್ಲಾಳ್ತನದಿಂ ರಾಜ್ಯಪಟ್ಟಂಗಟ್ಟಿ (ವಡ್ಡಾರಾ. ೦೯೯-೨೨); ಬಲ್ಲಾಳ್ತನದೊಳೆನ್ನನನುಭವಿಸಲ್ ಬಂದೊಂ ನೀನುಂ ಮಹಾಶ್ರಮಗುರುವಯ್ ಎನ್ನಂ ಕಾವುದೆಂದೆನಲೊಡಂ (ಶಾಂತಿಪು. ೬-೬೩೫); ನಿಷ್ಕರುಣೆಯಾಗಿ ಪೋಪೆನೆಂಬ ಬಗೆಯುಳ್ಳೊಡನಿಬರುಮಂ ಕೊಂದು ಪೋಗೆಂದು ಮರದಾನೆಯುಂ ಕಂಬಕ್ಕೆ ತರ್ಪಂತೆ ಲಲ್ಲೆಗೆಯ್ದು ಬಲ್ಲಾಳ್ತನದಿಂ ಪಟ್ಟಮಂ ಕಟ್ಟಿ (ಧರ್ಮಾಮೃ. ೦೦-೦೩೫).
[ಬಲ್ಲಾಳ್+ – ತನ]

**ಬಲ್ಲಾಳ್ತನಂಗೆಯ್** (ಕ್ರಿ). ಬಲಾತ್ಕಾರ ಮಾಡು ; ಒತ್ತಾಯಮಾಡು : ಎನಗಾರ್ಬಲ್ಲಿದರೆಂದು ಗಂಡುಗೆಡದೊರ್ವಂ ದೇವ ಚಕ್ರಿಕಿ ಸಾಧನಸಮ್ಮೋಹನದಿಂದಮೆನ್ನ ಮಗಳಂ ಬಲ್ಲಾಳ್ತನಂಗೆಯ್ದು ನಿನ್ನ ನರಾಧೀಶ್ವರನಕ್ಕೆ ಬರ್ಕೆ ಕಾಡೆನೆಂದೊಟ್ಟೈಸಿ ಕೈಕೊಂಡು ನಿಂದು (ಸುಕುಮಾ. ೬-೯೨). [ಬಲ್ಲಾಳ್ತನ + ಕೆಯ್₁]

**ಬಲ್ಲಾಳ್ದಟ್ಟಿ** 'ಬಲ್ಲಾಳದಟ್ಟಿ' ನೋ.

**ಬಲ್ಲಿಗೆ** (ನಾ). ಸಂಕೋಲೆ (?) : ತೊಡರೆಡಗಾಲೊಳೊಪ್ಪುವುದು ಬಲ್ಲಿಗೆಯಂ ಮದಧನ್ವಿಗಿಕ್ಕೆ ಬಲ್ಪೊಡರಿಸುವೊಂದು ಭಂಗಿಯೊಳೆ ಪೊದೊಡರೊಳ್ ತೊಡರ್ದಿರ್ದ ಪಾಟಿಗಳ್ ತೊಡರ ತೊಡರ್ಪನೊಳ್ ತೊಡರಲ್ಪಾದ ಭಾಷೆಯಮಾತ್ಯಲಂಜಿ ಕಾಲ್ವಿಡಿದವೊಲಿಪ್ಪುವೇಂ ಕುವರಲಕ್ಷ್ಮಚಮೂಪತಿ ಗಿಂತಿದೊಪ್ಪದೇ (ಎಕ. V, ಶೀಂಶಾಕು. ೦೦೨-೬೦ ; ಸು. 1220 ?); ಮೇಲೆ ಸಾಱುವ ಡೌಡೆಯ ದನಿಗಂ ಕೆಳಗೆಸೆಯೆ ತೆಮಳ್ದು ಕುಪ್ಪಳಿಸು ವಂದುಗೆಯ ತೊಡರ ಬಲ್ಲಿಗೆ ಬಲ್ಲುಲಿಗಂ . . . ರಾಜಾಂಗಣದೊಳ್ ಪಣ್ದು ಬಂದು, ನಿಂದ ಯಾಮಸಾಮಸ್ತೋಮಮನಿತುಂ ಬಾಯ್ವಿಟ್ಟು ಬಿದಱ ಬೆಸಗೆಟ್ಟೋಡೆಯುಂ (ಅಕಂಪು. ೨-೨೯ ವ).

[ ?. /ತಮಿ. ವಲ್ಲಿಕ್ಕೈ = ೧. ಒಂದು ಬಗೆಯ ಕಿವಿಯ ಆಭರಣ. ೨. ಕುದುರೆಯನ್ನು ಕಟ್ಟುವ ಹಗ್ಗ]

**ಬಲ್ಲಿತು₁, ಬಲ್ಲಿತ್ತು₁** (ನಾ). ೧. ಗಟ್ಟಿಮುಟ್ಟಾದುದು ; ಬಲಿಷ್ಠವಾದುದು : ಪ್ರಬಲವಾದುದು : ಕಲಹಂಸೆಗಳ್ ಬಲ್ಲಿತಪ್ಪುದೊಂದು

ದಕ್ಕಂ ತಂದದಟರಡು ಕಡೆಯುವಂ ತಾವಡಕ ಕರ್ಚಿ . . . ಬರುತ್ತು (ತಂಕಕಂ. ೦೫೭-೦೫) ; ತಲೆ ಬಲ್ಲಿತೆಂದು ಕಲ್ಲನೆ ಹಾಯು ಬೇಡ ಹೋಗೆಲೊ ಪಾಪಿ ಮನ್ಮಥ ಮನೆಗೆ(ಮೋಹಕ. ೬-೨೩); ತಲೆ ಬಲ್ಲಿತೆಂದು ಕಲ್ಲುಂ ಪಾಯ್ವುಲಾ ಕಲಿಯಾಗಿ ಸಮರದೊಳ್ಕಾದಿದೊಡೆ ನಿನಗಿಲ್ಲಿ ಗೆಲವಹುದೆ (ಕೃಕಂಸಾ. ೪-೦೯) ; ೨.ದೃಢವಾದುದು ; ಸ್ಥಿರವಾದುದು : ಅದೃಢಂ ಮಾರ್ತಂಡನಿಂ ನಿಪ್ಪೊಸತು ಹಿಮುಗುವಿಂ . . . ಬೆಂದುದಂಗಾರನಿಂ ಚಿತ್ರದ ಮಾಟಂ ಸೌಮ್ಯನಿಂ ಬಲ್ಲಿತು ಸುರಗುರುವಿಂ ಸುಂದರಂ ಶುಕ್ರನಿಂ ತಟ್ಟಿದುದಕ್ಕಂ ಮಂದನಿಂ (ಕಾಕಂ. ೪-೦೨). ೩. ಶ್ರೇಷ್ಠವಾದಂದು ; ಉತ್ತಮ ವಾದುದು ; ಒಳ್ಳೆಯದು : ಪಿರಿಯರ ನುಡಿಯಂ ಬಲ್ಲಿತನೆ ನಂಬಿ ಬೇಂಟೆಯನೊಲ್ಲದೆ ದಟ್ಟಿರ್ದ ಬಿಯದರೊಪ್ಪಿದರ್ (ಕಬ್ಬಿಕಾ. ೨೨೩). ೪. ಸಾಂದ್ರವಾದುದು ; ದಟ್ಟವಾದುದು ; ನಿಬಿಡವಾದುದು : ಬಲ್ಲಿತಪ್ಪಡವಿಯೊಳು ಸೀಳ್ನಾಯಿ ಕೊಲ್ಲಲಾರ್ಯನಸ್ಮರಣೆಯಿಂದಿರೆ ಮಲ್ಲಿಕಾರ್ಜುನ ಕಾಯ್ದೊಯ್ದನು ಮಹಾಕೂಟಪುರವರಕೆ (ಬಸಕೀಪು. ೬-೮). ೫. ಕಠಿಣವಾದಂದು ; ಕಷ್ಟಕರವಾದುದು : ಕರೆಳ ಕರಿ ಕೈಕೊಂಡುದರೆಯುಟ್ಟಿತು ಮಹಾಂಬರ ಜೆಲ್ಲಿತಿದು ದೆಸೆದೆಸೆಗೆ ಚೌಪಟಮಲ್ಲಗಿಲ್ಲರ ಪಾಡೆ ನಮ್ಮದು ಬಲ್ಲಿತಹುದುಸುರಿಲ್ಲದೊಡಲಿನ ಚೆಲುವು ಫಲವೇನು (ಕುಮ್ಮಾರವ್ಯ. ೩-೨೩). ಬಲ್ಲಿತ್ತು₁ : ೧. ಪಡೆದಂ ಬ್ರಹ್ಮೇಂದ್ರುತೆಯುಂ ಗಡಮಾತಂ ಬಗೆದು ನೋಡೆ ನಾರಕನತ್ತಲ್ ಗಡ ದೇವನೆತ್ತ ಕರ್ಮವೆ ಕಡು ಬಲ್ಲಿತ್ತದಟ ತಿರಿವದೇಂ ಬಹು ವಿಧವೋ (ಅಂಪು. ೩-೯೭); ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ ಎದೆಂದೂ ಅಳಿಯೆನೆಂದು ಗುಡಿಗಟ್ಟದೆಯಲ್ಲಾ (ಬಸವ. ೦೬೩); ಜಳಸಂಭೂತದೊಳೆಂತು ಹಸ್ತಿಮಕರಂ ಬಲ್ಲಿತ್ತಿಕಾಭಾಗದೊಳು ಸ್ಥಳ ಸಂಭೂತದೊಳಂತೆ ಕೋಟಿಭಟಸತ್ತೋದುಭಾಸಿ ಭೇರುಂಡನಿಂದಿಳೆ ಭೇರುಂಡನಿನಗ್ಗಿಕುಂ (ಕಶಿ. I. ೫೩-೯೩; 1180). (ಗು). ೬. ಬಲಿಷ್ಠವಾದ ; ಶಕ್ತಿಶಾಲಿಯಾದ ; ಬಲವುಳ್ಳ : ತುಕಾರ ದ:ಕಾರಂಗಳೆ ಕಡೆಯಾಗಿ ಪಲವು ಗ:ಣವಚನಂಗಳೊಳವು ಅವಟೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ದೊಡ್ಡಿತ್ತು ; ಬಲ್ಲಿತ್ತು — ಎಂಬಂತೆ ನೋಡಿಕೊಳ್ವುದು (ಶಬ್ದಮ. ೩೩ ಕ್ರಿಯೋ) ; ಒಳ್ಳಿತ್ತು ಕಿಯ್ಯೊರಾಪ್ಪೊಳ್ಳದುವುದಜನ್ನ ಬಲ್ಲಿತ್ತು ಕಲಿಗೆ [ವ] ವಿಪರೀತಾ ಪುರಾಕೃತ ವಿಲ್ಲಿ ಸನ್ನಿಕ್ಕುಮುದು ಬನ್ನ (ಎಕ. X. ೬೦-೭ ; ಸು. ೭೫ಹು ೫೪).

ಬಲ್ಲಿತಾಗಿ = ಚೆನ್ನಾಗಿ; ಉತ್ತಮವಾಗಿ ; ಶ್ರೇಷ್ಠವಾಗಿ : ವಿಪುಲ ವಿದ್ಯಮಂ ಬಲ್ಲಿತಾಗಿಯು ಶಿಕ್ಷಿಪಾತ ಬಂದುಕನೆನಲ್ (ಕಾಶುಂ. ೯೭). ಬಲ್ಲಿತ್ತಟ ಕೋಡು ಕೂರಿತು, ಬಲ್ಲಿತ್ತಟ ಕೋಡುಂ ಕೂರಿತು = (ಎತ್ತು) ಬಲಿಷ್ಠವಾದಂದರ ಕೊಂಬು ಚೂಪಾಗಿರುವುದು.—ಮೊನಚಾಗಿರು ವುದು; ಬಲಿಷ್ಠರಾದವರು ಹೇಗೆ ನಡೆದುಕೊಂಡರೂ ಅದನ್ನು ಪ್ರಶ್ನಿಸುವಂತಿಲ್ಲ ಎಂಬ ಭಾವ : ಗುರು ದೇವೇಂದ್ರ ಮುನೀಂದ್ರ ನಿಂದ್ರನವಿತಂ ದೇವಂ ಕಥಾನಾಯಕಂ ಪುರುದೇವಂ ಕಥೆಯುಂ ತದಾದಿ ಪುರುಷಪುಸ್ತುತ್ಯಜನ್ಮಾಳಿ ಬಂಧುರವೆಂದಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬಿತ್ತುದಿನ್ನಿರು ಬಲ್ಲಿತ್ತಟ ಕೋಡು ಕೂರಿತದನಂತಿಂತಂತೆನಲ್ಕ ರ್ಮವೋ (ಆಂಪು. ೦-೨೫) ; ತಜೆಸುದು ಚಕ್ರವರ್ತಿಗೆ ನೆಟದಾಂತಂ ವಾಸುದೇವನುಜಿದಿರು ಬಲ್ಲಿತ್ತಟ ಕೋಡು ಕೂರಿತಾರಿದಜಿಯದರಾರಳ ವನಂತವೀರ್ಯನ ಶೌರ್ಯಂ (ಶಾಂತಿಪು. ೯-೯೫), ಉಜಿದಿಮರನಾಂತು ತಜೆಸಂದಿಜೇವರುವಿಲ್ಲವರು ಪೊಯ್ಯ ವಸ್ತುವುಮದು ತಾಂ ಪೆಜರದಣ ಮಲ್ಲ ಬಲಿತ್ತಟ ಕೋಡುಂ ಕೂರಿತದಜಾನದನಾರ್ ಒಡಿವರ್ (ಶೀಲಪು. ೦೦-೦೦೫). ಬಲ್ಲಿತ್ತು ಮಾಡು = ೧. ಬಲಪಡಿಸು; ಬಲಿಷ್ಠಗೊಳಿಸು; ಶಕ್ತಿಶಾಲಿಯಾಗಿ ಮಾಡು : ಬಡಕಪ್ಪಡಿ ತನ್ನಿಪ್ಪಾ ಗುಡಿಸಂ ಬಲ್ಲಿತ್ತು ಮಾಟ್ಪನೆಲ್ಲಂದದಿನೆಂದೊಡೆ ದೇವನಗಲದಿಪ್ಪಾ ಪಶುವಂ ಕಡೆಯಲ್ಕಣ ವಿನಾಯದಂತು ರಕ್ಷಿಸವೇಡಾ (ಸಮುಶ. ೯-೬೨). ೨. ದೃಢಗೊಳಿಸಂ; ಸ್ಥಿರಪಡಿಸಿಕೊಳ್ಳು; ಗಟ್ಟಿಮಾಡಿಕೊಳ್ಳು: ಬಳಸಂಪನ್ನರನಾಸೆಗೆಯ್ಗ ಚತುರಂಗಾನೀಕಮಂ ಕೂಡಿ ಕೊಳ್ಳುಗ್ಗಳವಂ ಗಂಡುಮನಪ್ಪ ಕೆಯ್ಗ ಮನವಂ ಬಲ್ಲಿತ್ತು ಮಾಟ್ಕೆಂದುಮಾನೆಳೆಯಂ ಕಾದಿದೊಡಲ್ಲದೀಯನಜಾರ್ದಿ(ಶಂಕಮಾ. ೯-೯೦). ಬಲ್ಲಿದ = ೧. ಬಲಿಷ್ಠನಾದವನಂ; ಪರಾಕ್ರಮಿ : "ಬಲವಾನ್" ಅಂಸಳಃ —ಈ ೨ ಬಲ್ಲಿದಂ" (ಹಲಾಯು. ೩೩-೨೨೬) ; ನಿಮ್ಮಂ ಕರಂ ನಟ್ಟಿ ಸಂಗರಮಂ ಬಲ್ಲಿದರೊಳ್ ಪೊಣರ್ಚಿದಂ (ಶಂಕಶಾ. ೦೦-೯); ಬಲ್ಲಿದರೊಡನೆ ಬವರವಾದರೆ ಗೆಲಲುಂಟು ಸೋಲಲುಂಟು (ಬಸವ. ೦೫೦); ಹೋಳಲಜೆಯೆನು ನಿನ್ನವನ ಕಟ್ಟಾಳುತನವನು ದೇವ ದೈತ್ಯರ ಕಾಳೆಗದಲಿವನಂತೆ ಬಲ್ಲಿದರಿಲ್ಲ ಬಿಲ್ಲಿನಲಿ (ಕುಮ್ಮಾಕ. ೦೩-೦೯೦). ೨. ಧನವುಳ್ಳವನು; ಶ್ರೀಮಂತ; ಧನಿಕ : ಸ್ವಾಮಿ ಭೃತ್ಯಸಂಬಂಧದ ದೆಸೆಯುಂ ಬಡವರ್ ಬಲ್ಲಿದರೆಂಬ ದೇಶಭಾಷೆಯುಂ . . . ಅಪಮೃತ್ಯುವಿನ ಸತ್ಯಭಾಧೆಯ ಗಂಧಾಗಂಧಮು ವಿಲ್ಲ (ಶಾಂತಿಪು. ೬-೧೦೨ ವ): ಬಲ್ಲಿದನ ಹಗೆಹ ತಗೆವನ್ನಬರ ಬಡವನ ಹರಣ ಹೋದ ತೆಱನಂತಾಯಿತ್ತು (ಶುಹಾರೇ. ಶ. ೩೩-೬೦) ; ದೈವದೊಲ್ಮೆ ಯಿರಲಾ ಕಾಲಾನುಕಾಲಕ್ಕೆ ತಾಂ ಬಡವಂ ಬಲ್ಲಿದನಾಗನೇ (ಶೀಲಕೋಶ. ೩೫) ೩. ತಿಳಿದವನಂ; ಜ್ಞಾನಿ : ವರಾಂಗರಸನಾ ವೃಷಣೇಕ್ಷಣ ಶುಕ್ಲಸತ್ತ್ವ ಮಾಭ್ಯಂತರಮಾವ ಲಕ್ಷಣಮುಮಿಂತಿವೆ ಬಲ್ಲಿದನೋದಿನಿಪ್ಪದೊಳ್ (ಕೋಶೋಶ. ೦೦-೬೩); ಬಲ್ಲಿದರೆಂಬ ಅಜುಹಿರಿಯರೆಲ್ಲ ತಾಮಸಕ್ಕೊಳಗಾಗಿ ವಿಮಾನಕೇತನನ ಬಲೆಗೆ ಸಿಲುಕಿ ಮಾಯೆಯ ಬಾಯ ತುತ್ತಾದರಲ್ಲಾ (ಅಶಶಂ. ೦೬೫-೬೯೬); ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ ಬಲ್ಲಿದರು ಇದ್ದು ಬಲವಿಲ್ಲ (ಸರ್ವಜ್ಞ. ೨೯). ೪. ಶ್ರೇಷ್ಠನಾದವನು; ಉತ್ತಮನಾದ ವನು; ಮಹಾತ್ಮ : "ಅಗ್ಗಳೆಯನೆನಲ್ ಬಲ್ಲಿದಂ" (ಕಾಶಂ. ೦೬) ; ಪೊಲ್ಲದುಗೆಯ್ದನೆಂದು ನಹುಷಾಜಗರಂ ಪಿರಿದಪ್ಪ ದೈನ್ಯದಿಂ ಬಲ್ಲಿದನಪ್ಪಗಸ್ತ್ಯ ಮುನಿಯೊಳ್ ದಯೆಯಂ ಪಡೆಯಲ್ಕೆ ಬಂದವೋಲ್ . . . ಎಲ್ಲರ ಚಿತ್ತದೊಳ್ ಪಿರಿದುಮೊಂದಭಿಶಂಕೆಯನುಂಟುಮಾಡುಗುಂ (ಕಾದಂಬ. ೦೦೩) : ನೀನು ಜಗಕ್ಕೆ ಬಲ್ಲಿದನು ಆನು ನಿನಗೆ ಬಲ್ಲಿದನು ಕಂಡಯ್ಯಾ (ಬಸವ. ೯೦೩); ಅಲ್ಲಿಗಧಿಪತಿ ಭೀಮನೃಪ ಗುಣದಲ್ಲಿ ನಯದಲಿ ವೀರ್ಯ ವಿತರಣದಲ್ಲಿ ಚಾತುರ್ಯದಲಿ ಸೌಭಾಗ್ಯದಲಿ ಧೈರ್ಯದಲಿ ಬಲ್ಲಿದನು ತಾನಾಗಿ (ನಳಚ. ೦-೨೯). (ಗು). ೫. ಬಲಿಷ್ಠವಾದ; ಶಕ್ತಿಶಾಲಿಯಾದ : ಭಲ್ಲರ ರಭಸಕೆ ನಿಲ್ಲದೆ ಬಲ್ಲಿದ ಕಲಿವಂದಿಯೊಂದು ಕಟ್ಟುಬಟ್ಟೆಯಿಂ ಮೆಲ್ಲನೆ ಪೊಱಡುತ್ತಿರೆ (ಜೀವಂಧ. ೯-೯೯). ೬. ಉತ್ತಮವಾದ; ಶ್ರೇಷ್ಠವಾದ; ಒಳ್ಳೆಯದಾದ : ಬಲ್ಲಿದಾಹಾರ ಭಯ ಶಾಸ್ತ್ರನಲ್ಲಿ ಭೇಷಜವೆಂಬವಿವು ಎಲ್ಲಕಾದಿಯ ದಾನಮಾರ್ಗ (ಜಶಪು. ೯೭-೩೩). ೭. ಉತ್ತಮನಾದ; ಶ್ರೇಷ್ಠನಾದ : ನಲಿದು ಮುಂದೆ ಬುದತಿರಥನಪ್ಪ ನಂಬಿಯಣ್ಣನಂ ನಡುವೆ ಕುಳ್ಳಿರಿಸಿ ನೀನರಸು ನಾವೆಲ್ಲಂ ಪರಿವಾರವೆಂದಲ್ಲಿಯ ಬಲ್ಲಿದ ಬೆವಹಾರಿಗಳ ಮಕ್ಕಳೆಲ್ಲಂ ನೆರೆದು . . . ಪುರದ ತಿರುವೀಥಿಯೊಳು ನಡೆತಪ್ಪಾಗಳು (ಶಂಚಿಶ. ೨-೧೯). ಬಲ್ಲಿದ = ತಿಳಿದವಳಂ; ಪಂಡಿತ; ಜ್ಞಾನಿ : ಘಟಿಕಾಶತ (ಒಂದು ಗಂಟೆಗೆ ನೂರು) ಶ್ಲೋಕಗಳನ್ನು ರಚಿಸುವಲ್ಲಿಯೂ ಅವರು ಬಲ್ಲಿದೆಯರಾಗಿದ್ದರು (ಕಂಶಿಳ.೪ –೨).

[ < ಬಲ್₁ ]

ಬಲ್ಲಿತು₂, ಬಲ್ಲಿತ್ತು₂ (ಅ). ೧. ಬಲವಾಗಿ; ಹೆಚ್ಚಾಗಿ; ಅತಿಶಯ ವಾಗಿ : ಒಲ್ಲೆವೆಂದರು ಬೇಡವೆಂದರವರು ನೀನು ಬಲ್ಲಿತು ಎಗೆ ಆರವಾಗ ವಲ್ಲಭಗಿದಿರುತ್ತರವ ಕೊಡಲಾಗದೆಂದೆಲ್ಲರೆಬಿಗಿದರು ನೃಪತಿ (ಜೈಮಿ. ೯-೨೩). ಬಲ್ಲಿತ್ತು₂ : ೨. ಬಿಗಿಯಾಗಿ; ಭದ್ರವಾಗಿ : ಆ ಮಹಾತ್ಮರ . . . ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು . . . ಕಂಬದೊಳೆ ಬಲ್ಲಿತುಗಟ್ಟಿ

ಬಟೆಯುಮವನಾ ಮಾಡದ ಪೆಸಗಸ್ಸೆಟೆಯುಲಿಕ್ಕಿ (ತುಳುವಿಷ. ೧೦-೯೩ ಪ).
[ < ಬಲ್ಲಿತು₁ ]

**ಬಲ್ಲಿತುದೋಱು** (ಕ್ರಿ). ಶೌರ್ಯವನ್ನು ತೋರು : ಸಾಮರ್ಥ್ಯವನ್ನು ಪ್ರದರ್ಶಿಸು : ಎಲ್ಲರು ತಪಸಿಗೆಯ್ದುದರು ನೀನೊಬ್ಬ ನಮ್ಮೆಲ್ಲರರ್ತಿಯ ಸಲಿಸಣ್ಣಾ ಬಲ್ಲಿತುದೋಱಿದಿರಣ್ಣಾನಿಗೆಱೆಗೆಂದು ಗಲ್ಲವ ಪಿಡಿದಲುಗಿದಳು (ಛಚಿ. ೫೦-೦೬). [ ಬಲ್ಲಿತು₁ + ತೋಱು ]

**ಬಲ್ಲಿತ್ತು₁** 'ಬಲ್ಲಿತು₁' ನೋ.

**ಬಲ್ಲಿತ್ತು₂** 'ಬಲ್ಲಿತು₂' ನೋ.

**ಬಲ್ಲಿದ** 'ಬಲ್ಲಿತು₁' ಪರಾ.

**ಬಲ್ಲಿದೆ** 'ಬಲ್ಲಿತು₁' ಪರಾ.

**ಬಲ್ಲುಗ** (ನಾ). ೧. ಒಬ್ಬಾತನ ಹೆಸರು : ಸಾಹಸಮೇನನೂನವೋ ಬಸದಿ ಯೋಜರ್ ಹಲಯಾಮ್ನೋಜರಾ ಮಗಂ ಬಲ್ಲುಗು ಮಾಡಿದಂ (ಎಕ. V, ಕೇರೂರು. ೦೨೩-೯೯; ೧೬೦); ಕಾಮಲೆನಾರಿ ಸಕಳಕಳಾಮಹಿತೆಗೆ ನೆಗಳ್ದ × ರಗಂ ಬಲ್ಲುಗನೆಂಬೀ × × × ಧೈರ್ಯ್ಯರಖಿಳದಿಶಾಮಂಚಳದತ್ತ ಕೀರ್ತ್ತಿಗಳ್ ನುತರಾದರ್ (ಎಕ. VII, ಶಿಕಪೂ. ೩೩-೬೭; 1167). ೨. ಒಂದು ಸ್ಥಳದ ಹೆಸರು (?) : ಸಾಸ್ತ್ರಳಿಗೆಯ ಬೀರ ಸಾನ್ತರನ ಮೇಲೆ ನಡೆವಯ್ತಿತ್ತು ನಾಡೊಳಗಣ ಬಲ್ಲುಗದೊಳ್ಪಟ್ಟಿದ್ದನ್ನು ಗೆದೆಯ ಪನ್ನೆರಡಱ ನಾಟ್ಟಾಗ್ಗವುಣ್ಣ ಸೀಬಳ್ಳಿಯಱೆಹಯ್ಯನ ಜೇಷ್ಠಪುತ್ರ ನಂಗಮ್ಮನ ಮಗ ಜೋಗಯ್ಯಂಗೆ ದಯಗೆಯ್ದು ಕೊಟ್ಟ ಸ್ಥಿತಿ ಯಾವುದೆನ್ದಡೆ (ಎಕ. VIII, ಸೊರಬ. ೯೬೬-೦೬; ೨೨೧). [<ಬಲ್¹]

**ಬಲ್ಲುಜ್ಜುಗ** (ನಾ). "ಮಹೋದ್ಯೋಗ, ದೊಡ್ಡ ಕಾರ್ಯ"(ಶ್ರಕಕ). 'ಬಲ್ಲುಜ್ಜುಗಿ' ಪರಾ. [ಬಲ್₂(<ಬಲ್ಲಿತು₁)+ಉಜ್ಜುಗ]

**ಬಲ್ಲುಜ್ಜುಗಿ** (ನಾ). ದೊಡ್ಡ ಕಾರ್ಯವನ್ನು ಮಾಡುವವನು : ದೊಡ್ಡ ಕೆಲಸವನ್ನು ಮಾಡುವವನು : ಕಡುಟಾಗಿ, ಕಡುಗೆಲಸಿ, ಪುಸಿಬಾದಿ, ಬಲ್ಲುಜ್ಜುಗಿ (ಶಕ್ತಾಸು. ೩೨೯ ಶ್ರಯೋ). [ಬಲ್ಲುಜ್ಜುಗ+ —ಇ₃]

**ಬಲ್ಲುಲಿ** (ನಾ). ೧. ಬಲವಾದ ಧ್ವನಿ; ಜೋರಾದ ಶಬ್ದ : ಕೋಗಿಲೆಗಳ್ ಪೊಸಮಾಮರಂಗಳೊಳ್ ಬಲ್ಲುಲಿಯಿಂದೆ ಬಗ್ಗಿಸುತುಮಿಂತಿದೆ ಬಂದುದು ಸುಗ್ಗಿ(ಶಕ್ಕಾಶಾ. ೬೩); ಬಱಸಿಡಿಲ ಬಲ್ಲುಲಿಯವೊಲು ಬೊಬ್ಬಿಱಿದು ಬಿಡುಬಿಡು . . . ಆಯುಧವಿಲ್ಲದೆನ್ನೊಡನೊಱಗಿದನ ಒದ್ದೊಯ್ಯುದಧಟೇ ಯೆಂದು ತಾಗಿದಳು (ಶಾಕ್ಕಶಾ. ೦೬-೩೫); ಭುಭುಭೂಭೂ ಎಂದು ಪೂರಯಿಪ ಶಂಖದ ಧಟಂ ಧಟಂ ಧಟವೆಂದು ಮೊಟಗುವ ಭೇರಿಯ ತುತ್ತುತ್ತುರೆಂದು ಸೂಳಯಿಪ ಪೆರ್ಗಾಳೆಯ ಬಲ್ಲುಲಿಯೊಳ್ ಮಾಪೂಜೆ ಸಮಸಂದುದು (ರಾಪಶಾಕ್ಕ. ೬೬-೬). ೨. ಪ್ರಸಿದ್ಧವಾದ ಮಾತು : ಹೊಗಳಿಕೆಯ ಮಾತು : ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ ನೆಲನಂ ಮತ್ತಿನ ಮಾನಿಸರ್ ಪೊಗಟಲೇನಂ ಬಲ್ಲರೆಂಬೊಂದು ಬಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮನಿಪ್ಪಾ ನಾಡು ಚೆಲ್ವಾಯ್ತು (ಶಕ್ಕಶಾ. ೦೯). [ಬಲ್₂(<ಬಲ್ಲಿತು₁)+ಉಲಿ₂]

**ಬಲ್ಲೆ₁** (ನಾ). ದಟ್ಟವಾದ ಮೆಳೆ,—ಪೊದೆ : ಬಿಗಿದು ಪುಗಲ್ಕರಿದೆಲ್ಲಿಯುಂ ಮೊಗೆದ ಮರಂ ಪೊದಱು ಬಳ್ಳಿ ಗಿಡುಮೆಂಬಿವಱಿಂ ಮಿಗಿಲೆಸಿಪ ಬಲ್ಲೆ ನಗ ಸಾನುಗಳೊಳದಂತಾವ ಮೆಯ್ಯೊಳಂ ಪುದಿದಿರ್ಪಂ (ಕಾವ್ಯಾವ. ೯೭); ಆ ಮರಗಳನ್ನು ಸುತ್ತಿ, ತಾವೂ ಗಗನಕ್ಕೇರಿ, ಎಲೆಗಳನ್ನು ಬಿಡಿಸಲು ಯತ್ನಿಸುತ್ತಿರುವ ಬೀಳಲುಗಳಿಂದ, ಕಾಡು ಒಂದು ದೊಡ್ಡ ಬಲ್ಲೆಯಾಗಿ ಕಾಣುವುದು (ಹಾಂಕ್ರ. I. ೬೦); ಒಂದೆಡೆ ಎದುರಿಗೆ ಬಲೆಯಂತಹ ಸೀಗೆಯ ಬಲ್ಲೆ, ಇನ್ನೊಂದೆಡೆ ಕೊಡೆ ಆಕಾರದ ಬಳ್ಳಿಗಳು (ಶಾಕಿರಿ. ೬೩).
[ದೇ.₃ ತಮಿ. ವಲ್ಲೈ; ತುಳು. ಬಲ್ಲೆ]

**ಬಲ್ಲೆ₂** 'ಬಲ್ಲೆಯ' ನೋ.

**ಬಲ್ಲೆ₃** (ಅ). ಬಳಿಕ; ಮತ್ತೆ; ಅನಂತರ : ಮತ್ತಂಬರ್ಥದೊಳುಸಿರ್ವರ್ ಬಿತ್ತಗರಾ ಬಲ್ಲೆ ಬಟಗಳಂ (ಶಪಾರ. ೩೦೯). [?]

**ಬಲ್ಲೆತ್ತು** (ನಾ). ಬಲಿಷ್ಠವಾದ ಎತ್ತು; ಬಲವಾದ ವೃಷಭ: "ಮಹೋಕ್ಷಃ, ಉಕ್ಷತರಃ—ಈ ೨ ಬಲ್ಲೆತ್ತು" (ಹರಿಸಾಪು. ೯೯-೧೦); ಎಲ್ಲರ ಸುಂಕ ಯೆತ್ತು ತೊತ್ತು ಭಂಡಿ ಬಲ್ಲೆತ್ತು ಎನ್ನ ಸುಂಕ ಎಲ್ಲರ ಪರಿಯಲ್ಲ (ಸಂಕಸಂ. ೪. ೬೯೯-೦೬೪೩) ; ಬಲವದ್ಧಾಕ್ಷೇಶ್ವರನ ರೂಪಗ್ಗಳಿಪ ಬಲ್ಲೆತ್ತುಗಳನೇ ಹೆಗಲ್ದೊಗಲಿಸಿ ಬಂಡಿಯೊಳಗ್ರುದಲಿ ಕೇಳಿಕೆಗಳೊತಗೂಡಿ (ಬಸಪು. ೫೬-೬). [ಬಲ್₂(<ಬಲ್ಲಿತು₁) +ಎತ್ತು₂ (<ಎಱು₁)]

**ಬಲ್ಲೆಯ₁**, ಬಲ್ಲ₂, ಬಲ್ಲೆ₂, ಬಲ್ಲೆಹ, ಭಲ್ಲೆಯ, ಭಲ್ಲೆಹ(ನಾ). ಒಂದು ಬಗೆಯ ಆಯುಧ ; ಈಟಿ ; ಭಲ್ಲೆ : ಮೂದಲಿಸಿ ಬಂದ ಮನ್ನೆಯ ರಾವುತರಂ ಬಲ್ಲೆಯ ಪಟ್ಟಸದೊಳುಂಡಿಗೆಯೊತ್ತಿಬಿಟ್ಟು ನಿಚ್ಚಟದ ರಾವುತರು ಲಚ್ಚಣಂದೆಗೆದು ಮುಂಗುಡಿಯ ರಾವುತರು ಭಂಗಿಸಿ ತಿವಿದು (ಶುಳಿಕ.ಹ ೨೨೬-೦೯); ತೂಗುತ್ತಿಹ ತೋಮರಂ ಜಡಿವ ಕಕ್ಕಡೆ ಸಲ್ಲೆಹ ಬಲ್ಲೆಯಂ[ಶಾಕಾಂ. ಸಲ್ಲಿಪ ಬಲ್ಲೆಹಂ]ಗಳತ್ಯುತ್ಕಟಮಾಗೆ ಬಂದು ಸಮರಾಂಗಣದೊಳ್ ತಲೆ ಮುಟ್ಟುದಂದು ಮೂವತ್ತೆರಡಾಯುಧಂಬೆರಸು ವಾರಣವಾಹನ ವೀರ ಸಾಧನಂ (ಪುಣ್ಯಾಸ್ರ. ೨-೫೬); ಕರದ ಬಲ್ಲೆಯ [ಶಾಕಾಂ. ಹ]ದಿಂದ ವಾಲಿಯ ವರಕುಮಾರನ ತಿವಿಯೆ ಹಲಕನ ಸರಿಸದಲ್ಲಿ ಮೊನೆದೋಱಿತುಗುಳುವ ರಕುತ ಧಾರೆಯಲಿ (ತೊರಿರಾ. ೬-೪೦-೫೦). ಬಲ್ಲ₂ : ಇವನನ್ನಂ ನೆರೆದಪ್ಪನೆನ್ನಿದಿ ರೊಳಾತ್ಮಶ್ರೀಯನಂದಾರ್ಪಿನಿಂದವೆರೆಬ್ಬಲ್ಲದಿನಬ್ಜನಾಭನಿಸೆ (ಜಗಪು. ೦೪-೦೦೦). ಬಲ್ಲೆ₂ : ಹೂಡಿದ ತೇರು ಕೂಡಿದ ಆನೆ ಕುದುರೆಯು ಗಾಢದ ರಾಯ ರಾವುತರು ನೀಡಿದ ಹರಿಗೆ ಕರದ ಬಿಲ್ಲು ಈಟಿಯ ಜೋಡಿಸಿ ತೊಟ್ಟ ಬಲ್ಲೆಗಳು (ಹಂಸಾಂ. ೦-೬೩). ಬಲ್ಲೆಹ : ಓಡ ಕುದುರೆಯ ಮೇಲೆ . . . ದೆಸೆವರಿವ ಅಸುರಾವುತ ಚೊಲ್ಲೆಹವ ಬಲ್ಲೆಹವ ಹಿಡಿದು ಮುಗುಳುನಗೆ ಯವಳಲ್ಲಿ ಏಱೆ ತಿವಿಯೆ ಚೊಲ್ಲೆಹದ ಬಲ್ಲೆಹ ಮುಱಿದು . . . ಅವಳ ಕಿಸಲಯರಸಕ್ಕೊಳಗಾದ (ಕೋಲಶಾಂ. ೨೯-೦೦); ನಿಲ್ಲಲೆಗೆ ಸೈರಂಧ್ರಿ ಕಾಮನ ಬಲ್ಲೆಹದ ಬಲುಗಾಯ ತಾಗಿತು ಬಲ್ಲೆ ನೀನೌಷಧಿಯ ರಕ್ಷಿಸಿಕೊಂಬು ದೆನ್ನೊಡಲ (ಕುವ್ಯಾವಿ. ೨-೦೯), ಲಲನೆಪುರುಪಚಾರದ ನುಡಿ ಕಿವಿಯೊಳು ಬಲಿದ ಬಲ್ಲೆಹವಾಯಿತಾಗ (ಕಂಪಶ. ೯-೦೬೩). ಭಲ್ಲೆಯ : ವರ್ಗ ಚತುರ್ಥಾಕ್ಷರಂಗಳ್ಗೆ ಘಟೆಯಂ . . . ಭಲ್ಲೆಯಂ, ಭಾವಂ (ಶಪುದ. ೦೩ ಶ್ರಯೋ); ಅಲಗಿನೊರಸೊರಸಿಲ್ಲ ಕೈವ್ಯಾಗಳಲ್ಲಿ ಮುಳುಗಿದ ಬಾಣವಿಲ್ಲಗ್ಗಳಿಸಿ ನೊಸಲಲಿ ಮುಱಿದ ಭಲ್ಲೆಯವಿಲ್ಲ . . . ನೀ ಮುನ್ನಳುಕಿ ಕೈದುವ ಹಾಯ್ಕಿದ್ದೆ ಸರಿಯಲ್ಲ ನಿನಗೆಂದ (ಕುವ್ಯಾಪಿ. ೩-೩೫); ಬಲ್ಲವರ್ ಹರಿಗೆ ಪಟ್ಟಿಯ ಶೂಲ ಶಲ್ಲೆಹ ಭಲ್ಲೆಯ ಬಲವಂತೆಯರ ಎಲ್ಲರ ತಱುಬಿ ಹರ್ಷವ ಹತ್ತಿ ಹೇಳ್ದಳು ಫುಲ್ಲಶರಾತ್ಮಸಂಭವಗೆ (ಪೋಹಶ. ೩೩-೭೯). ಭಲ್ಲೆಹ : ಅಂತರಾಂತರದ ಬಾಗಿಲ ಚಾವಡಿಯೊಳು ತಿಂತಿಣಿಸುವ ಪಟುಭಟರು ಕುಂತ ಕಠಾರಿ ಭಲ್ಲೆಹ ಖಡುಗವನಾಂತು ಸಂತಸದಲಿ ಕಾದಿಹರು (ಕಂಪಶ. ೨-೬೭) ; ಕುಂತ ತೋಮರ ಖಡ್ಗ ಸುರಗಿ ಭಲ್ಲೆಹಗಳ ಕಾಂತಿ ಮುಸುಕೆ ಚೌದೆಸೆಯ ಹೊಂತಕಾಱಗಳಾಗ ರಾಯ ಮೋಹರದಲ್ಲಿ ಪಂತದೊಳೆಸೆದರುಬ್ಬಿನಲಿ (ಕಂಪಶ. ೦೩-೨೦).
[<ಸಂ. ಭಲ್ಲ./ ತಮಿ. ವಲಯ, ವಲ್ಲೈಯ್ಯ ; ತೆಲು. ತುಳು. ಬಲ್ಲೆ]

**ಬಲ್ಲೆಹ** 'ಬಲ್ಲೆಯ' ನೋ.

**ಬಲ್ಲೆಹಕಾಱ** (ನಾ). ಮಾತಿನ ಯುದ್ಧ ಹೂಡುವವನು ; ವಿತಂಡವಾದಿ : ಸೊಲ್ಲಿನ ಮಾತಿಗೆ ಬಲ್ಲೆನೆಂದು ಹೋರುವ ಬಲ್ಲೆಹಕಾಱ ರಿಗೆಲ್ಲಿಯದೋ ಮುಕ್ತಿ (ಪೋಲವಶ. ೦೦೩-೪೦೨).
[ಬಲ್ಲೆಹ (< ಬಲ್ಲೆಯ) + — ಕಾಱ]

**ಬಲ್ಲೆಳೆ** (ನಾ). ಗಟ್ಟಿಯಾದ ಎಳೆ ; ಬಿಗಿಯಾದ ದಾರ : ವಾಹತಸಹಿತಂ

. . . ನಂದಿವೃಕ್ಷಃ— ಓ ನಂದಿ ಎಂಬುವ ಮರದ ಹೆಸರು, ಬಸವನ ಗಿಡ" (ಸಿದ್ಧಾಂಶಿ. ೧೯೦). [< ಬಸವ+ಗಿಡ ( < ಗಿಡು)]

**ಬಸವನ ಪತ್ರೆ** (ನಾ). ಗರಿಕೆ, ಬಿಲ್ವ ಮುಂತಾದ ಎಲೆ; ಎಸಳು: ಕಣದಲ್ಲಿ 'ಶಂಕರಗಂಡ'ನ ರಾಶಿಯ ಸತ್ತಲೂ . . . ಬಸವನ ಪತ್ರೆಯ ಬಣವೆಗಳ ಕೋಟೆಕಾವಲು (ಕಳಚು. ೨೩೬). [< ಬಸವ + ಪತ್ರೆ]

**ಬಸವನ ಪಾದ** (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಬಸವನ ಪಾದ, ಕುಳಿಆಚಲು (ವೃ ತಿ. ೦೨–೨೦೯); ಬಸವನ ಪಾದ ಗಂಟೆಹೂ, ತುಂಬೆ ಮತ್ತು ಚೆಂಡುಹೂಗಳನ್ನು ಅಂದವಾಗಿ ಜೋಡಿಸಿದ್ದರು (ಕಕ್ಕ. IV, ೩೬). ೨. ಒಂದು ಬಗೆಯ ಮರ: ಬಸವನ ಪಾದ, ವಿಸ್ತಾರವಾಗಿ ಬೆಳೆಯುತ್ತದೆ, ಕಟ್ಟಿಗೆಯು ಕೆಲಸಕ್ಕೆ ಬರುವುದಿಲ್ಲ (ಕಣಾಗ. ೯೪). ೩. ಒಂದು ಬಗೆಯ ಜೋಳ: ಬಸವನ ಪಾದ, ಪುಲ್ಗರ . . . ಕೊಡವೂಕನ ಜೋಳ ಈ ಯೆಂಟು ಜಾತಿ (ಜೋಳ)ಗಳನ್ನು . . . ಬಿತ್ತುವರು (ಕಣಾಗ. ೨೬೦). [< ಬಸವ+ಪಾದ]

**ಬಸವನ ಸುಳಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಇರುವಂತಿಗೆ ಬಸವನ ಸುಳಿ ಪರಿಮಳಿಸುವ ಪಚ್ಚೆದವನ . . . ಬಂದುಗೆ ಪರಿಪರಿಯ ಸುಗಂಧಕುಸುಮದಳಕುಳವಿರ್ಕುಂ (ಹಂಪ್ಪಾಕ. ೬–೯೩). [< ಬಸವ + ಸುಳಿ₂ (< ಸುಟ್ಟು)]

**ಬಸವನ ಹಳ್ಳಿ** (ನಾ). ಒಂದು ಊರಿನ ಹೆಸರು: ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮ್ಮಾಡಿಗಾಮುಣ್ಡ ಮುಗುಳಿಯ ನಾಗಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ.XV, ಕೇಂಊರು. ೪೦೮–೦೦; 971). ▶ ಇದು 'ಬಸವನ ಪಳ್ಳಿ' ಎಂಬುದರ ಅಪಲಿಖಿತವಿರಬಹುದೆ? [< ಬಸವ+ಹಳ್ಳಿ (< ಪಳ್ಳಿ₁)]

**ಬಸವಯ್ಯ** (ನಾ). ಒಬ್ಬಾತನ ಹೆಸರು: ಪೊಡ್ಡುಸ್ಸದ ಬಾರಾನ್ದರವಯ್ಯ ತಗಡೂರ ಕಳಿಯ ಕಾಳಿಗದೊಳ ಬಸವಯ್ಯನ ಮುನ್ದೆ ಕಾದಿ ಸತ್ತು ಸಗ್ಗೆಯ್ದ (ಎಕ. X, ಬ್ಯಾಂಗ್. ೯೯–೬; ಸು. 950); ಮಣ್ಣಂ ಬಳಸಿದ ಪ್ರಭುಗಳ್ ಪೆರ್ಮ್ಮಾಡಿಗಾಮುಣ್ಡ ಮುಗುಳಿಯ ನಾಗಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ. XV, ಕೇಂಊರು. ೪೦೮–೦೦; 971). [ ಬಸವ + ಅಯ್ಯ₆₁ ]

**ಬಸವಸೆಟ್ಟಿ** (ನಾ). ಒಬ್ಬಾತನ ಹೆಸರು: ಬಸವಸೆಟ್ಟಿಯ ಮಗಂ ಚಬ್ಬಸೆಟ್ಟಿ (ಎಕ. IX, ಕೊರ್ತ್ರ. ೯–೬; 918); ನಲ್ಲಪುರುಗಸೆಟ್ಟಿಯ ದೊಗ್ಗಬ್ಬೆಯ ಮಗಂ ಸುಪುತ್ರಂ ಪುಟ್ಟಿದ ಬಸವಸೆಟ್ಟಿ (ಎಕ. III (R), ಹೆಗ್ಗ ದ. ೩೬–೯; 1020). [ಬಸವ + ಸೆಟ್ಟಿ]

**ಬಸವಳಿ** 'ಬಸವಟಿ' ನೋ.

**ಬಸವಳಿಸು** (ಕ್ರಿ). ಆಯಾಸಗೊಳ್ಳುವಂತೆ ಮಾಡು; ಬಳಲಿಸು; ದಣಿಸು: ಬಸವಳಿಸದ . . . ಹಸಗೆಡಿಸದೆ ಹುದುಗಿಸದೆ ಬಸಿಜೊಳು ಬಂದ ಪೆಣ್ಮಕ್ಕಳ ಮಜುಕವ ಸೋಕೆಯರೆಡೆಯೊಳೆಸಗುವುದು (ಹಂಪ. ೯–೨೫): ವಿಚಾರ ತರಂಗಗಳು ಮುತ್ತಿ ಬಸವಳಿಸಿದವು (ಪಿಂಚ್ಚ. ೯೩). [ಬಸವಳಿ (< ಬಸವಟಿ) + –ಸು₁]

**ಬಸವಟಿ** 'ಬಸವಟಿ' ನೋ.

**ಬಸವಿ** (ನಾ). ೧. ದೇವರ ಹೆಸರಿನಲ್ಲಿ ದೇವಾಲಯದ ಸೇವೆಗಾಗಿ ಮೀಸಲು ಬಿಟ್ಟ ಹುಡುಗಿ; ▶ ತಂದೆತಾಯಿಗಳು ತಮಗೆ ಒದಗಿದ ಯಾವುದೋ ದುರ್ಭರಸಂದರ್ಭದಲ್ಲಿ ತಮ್ಮ ಮಗಳನ್ನು ದೇವರಿಗೆ ಅರ್ಪಿಸುವುದಾಗಿ ಹರಕೆ ಹೊತ್ತು ಚಿಕ್ಕಂದಿನಲ್ಲಿಯೇ ಮೀಸಲು ಬಿಡುತ್ತಾರೆ. ಈ ದೇವದಾಸಿ ಸಂಪ್ರದಾಯವು ಪ್ರಾಚೀನವಾದುದು. ಕೆಲವು ಕಡೆ ಇಂತಹವರನ್ನು 'ದೇವದಾಸಿ'ಯರೆಂದೂ 'ಜೋಗಿತಿ'ಯರೆಂದೂ ಕರೆಯುತ್ತಾರೆ. ಇಂದು ಈ ಪದ್ಧತಿಯು ಶಿಥಿಲಗೊಂಡು ತನ್ನ ಗೌರವವನ್ನು ಕಳೆದುಕೊಂಡು ಹೀನಾಯದ ಸ್ಥಿತಿಗೆ ಇಳಿದಿರುವುದನ್ನು ಕಾಣಬಹುದು: ಹಾಡುವ ಮಹಾದೇವಿ ತಾಳದ ಮಾಳಜ್ಜ ದೇವರ ಬಸವಿಯರು (ಎಕ. XII, ಗುಬ್ಬಿ. ೨೯–೯೬; 1470); ಬಸವಿಯರೊಳು ಪಾತಕಿನಿಯರೊಳು ಮತ್ತಸತಿಯರೊಳು ಕೆಳೆಗೊಳದ ಪೊಸತಿಲ ಪೊಜಗಡಿಯಿಡದೊಳ್ಪೆಂಡಿರ ಜಸವಿಳ್ಳ ಜಗವ ಪರ್ಬುವುದು (ಶಿಶಾ. ೯–೯೩). ೨. ಸೂಳೆ; ವೇಶ್ಯೆ: ಇದ್ದೊಬ್ಬ ಮಗಳು ಊರ ಬಸವಿಯಾದಳು (ಕಕಲ. II, ೯೩೩): ನಾಕೇ ನಾಕು ದಿವಸದಾಗೆ ಈ ಕಾಸಿಂಬೀನು ಬಸವಿ ಆಗಿ, ಬಿಕಾರಿ ಆಗಿ ರೋಗದಿಂದ ಸಾಯ್ತಾಳಲ್ಲ ಅಂತ ಎದೆ ಒಡೆದುಕಿತು (ಕಂಗಾ. ೦೬೯). 'ಊರುಬಸವಿ', 'ಬೀದಿಬಸವಿ' ಪರಾ. ೩. ದೇವರ ಹೆಸರಿನಲ್ಲಿ ಮೀಸಲು ಬಿಟ್ಟ ಹಸು: ಬಸವಿ ಬಸವನ ಕೊಂದ ಪಾಪಕೆ ಹೋಹರು ಯಂದು ಬರದ ಸಾಸನ (ಎಕ. IX, ಕಕ್ಕಡ. ೬೬–೨೬; 1661), ದೇವರ ಹೆಸರಿನ ಮೇಲೆ ಬಿಟ್ಟ ಬಸವ, ಬಸವಿಗಳು ಕಾಲಗತಿಯನ್ನು ಹೊಂದಿದರೆ ಅವುಗಳನ್ನು ಕೊಂಬು ತಮಟೆ ವಾದ್ಯಸಮೇತ ತಗೆದುಕೊಂಡು ಹೋಗಿ ಸಮಾಧಿ ಮಾಡಿ ಅದರ ಮೇಲೆ ಗಿಡವನ್ನು ನೆಡುತ್ತಿದ್ದರು (ಹುಟ್ಟಿಕ. ೬೦).

**ಬಸವಿ ಬಿಡು** = ಅವಿವಾಹಿತತರುಣಿಯನ್ನು ದೇವರ ಸೇವೆಗಾಗಿ ಮೀಸಲಾಗಿಡು; ದೇವದಾಸಿಯನ್ನಾಗಿ ಮಾಡು: ನಿನ್ನನ್ನು ಬಸವಿ ಬಿಡುವುದಾಗಿ ಹೇಳಿದ್ದೇನೆ (ದೇವಕಂ. ೦೦೭).

[ಬಸವ + –ಇ₃./ ತಮಿ. ವಚಿವಿ; ತೆಲು. ಬಸಿವಿ]

**ಬಸವಿತ್ತಿ** (ನಾ). = ಬಸವಿ ೧: ಆ ಮಠವ ಬೋಹರಿಸುವ ಬಸವಿತ್ತಿಯ ಜನ ಒಂದಕ್ಕಂ ವರಿಸ ಒ[ಂದ]ಕ್ಕಂ ಅಕ್ಕಿ ಮೂಡೆ ಎರಡೂ ಹಾನೆ ಹತ್ತು (ಸೌಇಇ. IX–ii, ೪೦೭–೬೮; 1378). [ಬಸವ + – ಇತ್ತಿ]

**ಬಸವೆ** (ನಾ). = ಬಸವಿ ೧: ಇವಳು ಬೈತಲೆ ಕಲಕದಂತೆ ತಿದ್ದಿಕೊಳುತ್ತ ಮಿಮಳು ಹಗಲೆಲ್ಲ ತೊಳೆವುತ ತೀಡಿಕೊಳ್ಳುವಳು ಸೂಳೆ ಬಸವೆಯ ತೆರದೆ (ಮಲ್ಲಕ. ೨–೨೦); ಈ ಹನುಮಂತದೇವರಿಗೂ ಅನೇಕ ಕಸಬೆಯರೂ, ಬಸವೆಯರೂ ತಾಳಿಯನ್ನು ಕಟ್ಟಿಕೊಳ್ಳುತ್ತಾರೆ (ಕಪ್ಪಚ. ೯೦); ಬೀದಿಬೀದಿಗೆ ಬಸವೇರಲ್ಲ ಕಸಬೇರೋ: ಅವರು ನಾಯಿಪಾಡಿನ ನರಕದ ಕಿಂಡಿ ಅವರ ತವರೂರು (ಆಕಲು. ೨೬೬–೧೯). [ಬಸವ + –ಎ₁]

**ಬಸವೇಱು** (ಕ್ರಿ). ಪರವಶತೆಯು ಅಧಿಕವಾಗು: ಎಲ್ಬ್ದು ನಿಂದೆಡೆಗೊಂಡು ಪೊರ್ದಿ ಕೈಲಾಗಿತ್ತು ತೋಳ್ಗೋಳ್ಗಳ ತೊಡಕಿನೊಳಂ ಬಾಟ್ಟು ಸೊಗಕೆ ಮೆಯ್ಪುಸವೇಱದಂತೆ ಪೊದಟ್ಟು ಕದುಬುದಾಳ್ದುವುದು (ಕಶಿಪಿ. ೬–೦೩೬ ಪಾಂಗಕ್ಕ). [ಬಸ₁ + ಏಱು₁ (< ಏಱ್₁)]

**ಬಸಳೆ** 'ಬಸಲೆ₁' ನೋ.

**ಬಸಿ₁** (ಕ್ರಿ). ಬಸಿದು, (ಭೂತಕೃ). ೧. ಒಸರು; ಸ್ರವಿಸು; ಜಿನುಗು: ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊವಟ್ಟ ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಂ ಸಮಿತಾನನಾಬ್ಜೆ ಬೆಚ್ಚನೆ ಬಸಿವಿಂದುಕಾಂತಕರಸಂಕುಳಮೊಯ್ಯನಪುಂಕ ಸೋಂಕೆ (ಅಂಪು. ೯–೯೯). ಬಸಿಯೆ ಜಳಬಿಂದು ಕೇಶಪ್ರಸರಮನೆಡಗಿಯ್ಯೊಳಡಸಿ ಪಿಡಿದೆಸೆದುದು ಕಾಱುಸುವವೊಲಂಗಜನಸಿಯುಬ್ಬಸಮಾಗಿರೆ ಪೀರ್ದ ವಿರಹಿಜನಜೀವನಮಂ (೦ಆಚ. ೧೯–೬); ಆ ಘರ್ಮದಿಂ ಬಸಿವಂಗಂ ಪಣೆಗೊಂಡು ಪತ್ತಿದಳಕಾನೀಕಂ . . . ಚಿಲ್ಲಂ ಬೀಜ (ಶಂಸುಪ. ೦೦–೦೫೦); ೨. ಪಾತ್ರೆಯನ್ನು ನಿಧಾನವಾಗಿ ಬಗ್ಗಿಸಿ ಅದರಲ್ಲಿರುವ ಬೆಂದ ಅನ್ನ, ತೊಳೆದ ಅಕ್ಕಿ ಹಾಗೂ ತರಕಾರಿ ಮುಂತಾದುವುಗಳು ತಳದಲ್ಲೇ ನಿಂತು ಮೇಲಿನ ಗಂಜಿ, ನೀರು ಮುಂತಾದುವನ್ನು ಸೋರಿ ಹೋಗುವಂತೆ ಮಾಡು: "ಬಸಿ-ಗಲನೇ (ಬಸಿಯು), ಶಾಕ, (ಹರಿತ ಪಾಕ). ದಂಡಮಧ್ಯಯೋ (ದಂಡಿಗೆಯ ಮಧ್ಯಭಾಗ)" (ಕಮ); ಬಳಸಿ ರಾಜಾನ್ನದಕ್ಕಿಯನು . . . ಅಕ್ಕಿಗಚ್ಚಂ ಬಸಿದು (ಸೂಶಕಾ. ೩–೨);

ಪಾತ್ರ ತುಂಬ ನೀರಿಟ್ಟು ಅಕ್ಕಿ ಹಾಕಿ ಬೆಂದ ಅನಂತರ ನೀರನ್ನೆಲ್ಲ ಬಸಿದು ತೆಗೆಯುವುದು ಸಾಮಾನ್ಯವಾಗಿ ಅನ್ನ ತಯಾರಿಸುವ ವಿಧಾನವಾಗಿದೆ (ಅಡುಗೆ. ೬೪). ೩. ಧಾರೆಯಾಗಿ ಬೀಳು ; ಸುರಿ : ಪೆರ್ಗೆಸಱಿಸಿರ್ಪುದು ಬಟ್ಟೆ ಪೋದವಿದಱಿನೊಳ್ ಪೆರ್ಬುಂದಿಗಳ್ ನೆತ್ತರುಂ ಬಸಿವುತ್ತಿರ್ಪುದು ಪೋದ ವಿಕ್ಕಿ ಮಾಱಿಯುಂ ಪುಲ್ಲಟ್ಟೆಯೊಳ್ ಪುಲ್ಲೆಗಳ್ (ಕಾದಂಪೂ. ೧೩೬); ಬಸಿವ ಸೊರ್ಕಿಂದಾನೆಗಳ ಮಾಜಿವದನದಿಂದೊಸರ್ವ ಲಾಲಾಜಲದಿಂದ ಬೆಸಮಾಕ್ಕೆ ಕೊಗುವ ಮೈಬೆಮರಿಂದಾ ಬೀದಿ ಕೆಸರ್ವಡೆದಿಹುದನವರತ (ಕುಮಾರಾ. ೪-೧೦೭). ೪. ಬೆವರು ಸುರಿ : ರಿಪುಬಂದಿಕಾಱನೊಳೇಱ ಸೂಱಿಗೆ ಬಂದು ಬಸಿವುತ ಪೋದರನಿಬರು ಬೈದು ರವಿಸುತನ (ಕುಮಾರವ್ಯಾ. ೬-೩೦); ಭೂಸುರರು ಮಧ್ಯಾಹ್ನಕಾಲದಲಿ ಹಸಿದು ಬಸಿದು ಬಂದರೆ ಮನೆಗೆ ಬೇಸತ್ತು ನಮಗೆ ಗತಿಯಿಲ್ಲ ಹೋಗೆಂದು ಹಸನಾಗಿ ಉಂಬುವುದು ಅದು ಮಡಿಯೊ (ಪುರಂದ.ದಾ. ೩-೬೨-೪). ೫. ಸುರಿಸು : ಈ ಬಾಳ ಮೇಲ್ ಬಿಟ್ಟು ನೆತ್ತರನ್ ಬಸಿವನನ್, ಬಂದು ಮೊದಲೆತ್ತಲ್ ಏಕಲವ್ಯಂಗಱಿವೆ ಆಟ್ಟು ಆರಾನುಮನ್ (ಅಶ್ವತ್ಥಾ. ೩೩-೬೪೬). ೬. ತೊಡೆ ; ಒರೆಸು: ಎಮದುಱುಗಲಿನಿಱುವ ತೋರ ಕಣ್ಬನಿಗಳಂ ಬಸಿಯುತ್ತುಮನ್ನಿಂತೆಂದಂ (ಕಾದಂಪೂ. ೯೯೩). ೭. (ಅಲಂ) ಕುಗ್ಗು; ಕಡಮೆಯಾಗು : ವೈರಾಗ್ಯದೇಟ್ಗೆಯಂತೆಯುಂ ಶ್ರೀವೈಷ್ಣವರ ಭಾಗ್ಯದಂತೆಯುಂ ತೋರ್ಪ ಶ್ರೀರಾಮಾನುಜರಡಿಗಳಿಗೆ ನೇಸಱ ತೇಜದೊಳ್ಪಸಿಯದ ತಣ್ಪಂ ಬೆರಸಿದಂತಿರ್ಪ ಮೆಯ್ವೊಗರುಂ . . . ಆಗಿ (ಕಳಶಂ. ೧೧೯-೧೧). ೮. ಇಲ್ಲದಂತೆ ಮಾಡು; ನಾಶವಾಗಿಸು : ಅದಱಿಂದೆ ಎಂದಿಂಗಮೆಡೆವಱಿಯದೀ ನೋವು ಎರ್ದೆಗೊಱಿದು ಬಸಿದಪುದು ಬಲ್ಮೆಯನ್ (ಅಶ್ವತ್ಥ. ೨-೩೨).

ಬಸಿದುಕೊಳ್ಳು = ೧. ಪಾತ್ರೆಯ ಬಂಡದಲ್ಲಿರುವ ಗಟ್ಟಿಯಾದ ಪದಾರ್ಥಗಳ ಮೇಲೆ ನಿಂತ ನೀರು, ಎಣ್ಣೆ ಮೊದಲಾದ ದ್ರವ ಪದಾರ್ಥಗಳನ್ನು, ನಿಧಾನವಾಗಿ ಪಾತ್ರೆಯನ್ನು ಓರೆ ಮಾಡಿ ಸುರಿ: ಬೇವಾಗ ಗಂಜಿಯ ಬಸಿದುಕೊಂಡು . . . ಮೃದುವಾಗಿ ಮಾಡಿದುದು ತಾ ಶುದ್ಧಮಪ್ಪೋದನಂ (ಸೂಪಶಾ. ೩-೨) ; ಪುತ್ರಜೀವಿಕೆಯಾಳನ್ನು ಚೆನ್ನಾಗಿ ಕುಟ್ಟಿ . . . ಇದರೆಂಟು ಮಡಿ ನೀರು ಹುಯ್ದು . . . ಹದವ ನೋಡಿ, ಬಸಿದುಕೊಂಡು (ಸಕಲ. ೬೦). ೨. ದ್ರವಪದಾರ್ಥವನ್ನು ಕುಡಿ : ಹಣಮಂತ . . . ಹೊಟ್ಟೆಗೆ ಏನೂ ಬಸಿದುಕೊಳ್ಳಲಿಲ್ಲ (ಕಂಸಾ.೧೪); ಬಂದ ತಪ್ಪಿಗೆ ಒಂದಿಷ್ಟು ಕಾಫಿಯನ್ನಾದರೂ ಬಸಿದುಕೊಂಡು ಹೋಗೋಣವೆಂದ್ಕೊಂಡು ಕುಳಿತುಕೊಳ್ಳಲು ಸ್ಥಳ ಹುಡುಕಿದೆ (ಅಂಕೂ. ೨೪). ಬಸಿದು ಬೀಟ್, ಬಸಿದು ಬೀಳು = ೧. (ರಕ್ತ ಸುರಿದು) ನಿಶ್ಶಕ್ತಿಯಿಂದ ಕುಸಿದು ಬೀಳು : ಪರಾಂಗನೆಯಂದೊಡೆ ಸಾಮ್ಯಮಲ್ಲವೆಂದೊಡೆ ತಲೆ ಹೋಗಿಯುಂ ಬಸಿದು ಬೀಟದೆ ಸೈರಿಸರಲ್ತೆ ಕಾಮುಕರ್ (ಅಕಂಪೂ. ೧೧-೩೩); ಬಸಿದು ಬೀಳ್ವ ಕಬಂಧದಲಿ ಹೆಣವಸುರಾದುದು ನೆಲನಿದೆಲ್ಲಿಯು ವಿಷಮ ವೀರರೂ ಮರ್ಛಿಯೆನುತ ಮಾರೀಚ ಬೆಱಗಾದ (ತೊರವೆ. ೦-೧೧-೧೪). ೨. ಉಕ್ಕಿ ಹರಿ : ಒಸೆದು ನಿನ್ನವರೆಂದು ಬಗೆವರೆ ಬಸಿದು ಬೀಳುವ ಕೃಪೆಯ ನೀ ತೋಱಿಸೆಯಿದೇನ್ನೆ ಕೃಷ್ಣೆಯೆಂದೊಱಲಿದಳು ನಳಿನಾಕ್ಷಿ (ಕುಮಾರವ್ಯಾ.ಸ. ೧೪-೧೨೭). ೩. ಕಳಚಿ ಬೀಳು : ಒಡಲು ಬೀಳಲಿ ಮೇಣು ತಮ್ಮದಿರಡವಿಯಲಿ ಹಾಯಿಕ್ಕಿ ಹೋಗಲಿ ಮಡದಿ ಮುನಿಯಲಿ ಬಸಿದು ಬೀಳಲಿ ಧರಣಿ ಕುರುಪತಿಗೆ (ಕುಮಾರವ್ಯಾ೦. ೪-೧೨). ಬಸ್ಸು ಎಸರು = ಬೇಳೆ ಅಥವಾ ಕಾಳಿನೊಂದಿಗೆ ತರಕಾರಿ, ಸೊಪ್ಪು ಮುಂತಾದುವನ್ನು ಬೇಯಿಸಿ, ಅದರ ಸಾರವನ್ನು ಬಸಿದುಕೊಂಡು ಮಾಡುವ ಸಾರು : ಹಸಿ ಅವರೆಕಾಳು, ಸೊಪ್ಪು ಸೇರಿಸಿ ಮಾಡಿದ್ದ ಬಸ್ಸು ಎಸರು ಮುದ್ದೆಗೆ ಬಹಳ ರುಚಿಯಾಗಿತ್ತು (ಕೂ೦). ಬಸ್ಸು ಸಾರು = ಬಸ್ಸು ಎಸರು : ರಾಗಿ ಮುದ್ದೆ, ಅವರೆಕಾಳು ಬಸ್ಸುಸಾರು ಮಾಡಿದ್ದೀನಿ (ಕೂ೦).

[ದೇ.॥ ತಮಿ. ವಚಿ, ವಟ್, ವಟ್ಟು; ತುಳು. ಬಸಿ, ಬಚ್ಚು; ತೆಲು. ವಡಿಯು]

ಬಸಿ$_2$ (ಕ್ರಿ). ೧. ಹರಿತಗೊಳಿಸು; ಚೂಪು ಮಾಡು ; ಮಸೆ : "ಬಸಿ—ಗಲನೇ (ಬಸಿಯು) ಶಾತ, (ಹರಿತ ಮಾಡು) ದಂಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಕಮಧಾ); ಆತನಂ ಶ್ಮಶಾನಕ್ಕೆಟಿದುಕೊಂಡು ಪೋಗಿ ದರ್ಕಂ ಬಸಿದು ಸೂಲದೊಳಿಕ್ಕುವಾಗಳ್ (ವಡ್ಡಾರಾ. ೭೪-೨೯); ಬೆತ್ತಗಣ್ಣಿವಲೆಯಂ ಸುಮಕಟ್ಟುವ ಬೆಟ್ಟುಗೂಂಟಮಂ ಬಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ (ಚಂದ್ರಪ್ರ. ೩-೩೪). ೨. ಚೂಪಾಗಿರು; ಹರಿತವಾಗಿರು : ಒಡಲುರಿವನ್ನೆಗಂ ಬಸಿದ ಶೂಲದೊಳಿಕ್ಕಿ (ರತ್ನಾಕರಶ. ೦೨-೨೩೬); ಬಸಿದಸಿಯ ದಸಿಯನನುಕರಿಪ ಸೂಜಿಗೊಂಬುರ್ಚಿ ಸೀಳ್ದ ಬಸುಱಿಂ ನಿಸದಂ ಬಿಸುನೆತ್ತರ ಪೊನಲುಂ ಕರುಳ ಸೋಗೆಯುಂ ಕವಿದುಮವನಿಗಾ ಯತಿಪತಿಯಾ (ಧರ್ಮಾಮೃ. ೩-೬); ಬಸಿದ ಕೋಡಿನ ಸಲಗನೆಸೆವ ಕೋಣಂಗಳಿಂ ಮಸಗಿ ವಿಸಟಂಬರಿದು ಕರ್ಚುವುಷ್ಟ್ರಂಗಳಿಂ (ಸಾಳ್ವಭಾ. ೪-೦೩೯ ರಗಳೆ).

ಬಸಿ$_3$ (ನಾ). ೧. (ಮರ, ಲೋಹ ಮೊದಲಾದುವುಗಳಿಂದಾದ) ಗೂಟ, ಶೂಲ ಮುಂತಾದ ಹರಿತವಾದ ಸಾಧನ : ಪೂಱಿಸಿದ ಗಾಲಿಯೊಳಂ ನಿಱಿಸಿದ ಬಸಿಯೊಳಂ ಪೂಸಿದ ಡೆಂಕಣಿಯೊಳಂ . . . ಕೈಗೆಯ್ದು (ಅಕಂಪೂ. ೧೧-೫೨ ವ). ೨. ಮುಳ್ಳು; ಕಂಟಕ : ಪರಮಂಗೆ ಗುಗ್ಗುಳದ ಕಂಬಿಯುಂ ತರುತಿರಲು ಚರಣಮಂ ಬಸಿ ತಾಗಲು ಹರ ಶಬರವೇಷದಿಂ ಬಂದು ಬಸಿಯಂ ಕೀಳೆ (ರಾಜಶೇ. ೯-೩೪ ವ). ೩. ತಕ್ಕಡಿಯಲ್ಲಿರುವ ದಂಡಿಗೆಯ ಮಧ್ಯಭಾಗ : "ಬಸಿ—ಗಲನೇ (ಬಸಿಯು) ಶಾತ, (ಹರಿತ ಮಾಡು) ದಾಡಮಧ್ಯಯೋಃ (ದಂಡಿಗೆಯ ಮಧ್ಯಭಾಗ)" (ಕಮಧಾ). [<ಬಸಿ$_2$./ತಮಿ. ವಚಿ, ವಯ್; ತೆಲು. ವಸಿ ; ಕೊತ. ವಚ್; ಗೊಂಡಿ. ವಾಯು]

ಬಸಿ$_4$ (ನಾ). ಬಟ್ಟಲಿನಲ್ಲಿರುವ ದ್ರವವು ಕೆಳಗೆ ಚೆಲ್ಲದಂತೆ ಬಟ್ಟಲಿನ ಅಡಿಯಲ್ಲಿ ಇಡುವ ಸಣ್ಣ ತಟ್ಟೆ; ಸಾಸರು : ಏಳು ಬಿಂದಾದ ಕಪ್ಪು ಬಸಿಗಳನ್ನು ತಕೊಂಡು ಒಳಗೆ ಹೋದನು (ಕಂದುಬಿ. ೯೬ ); ಅಮೇರಿಕದಲ್ಲಿ . . . ಮಕ್ಕಳು ಹೋಟೇಲಿನಲ್ಲಿ ಕಪ್ಪು, ಬಸಿ ತೊಳೆದು ಹಣ ಸಂಪಾದಿಸಿ, ಅದರಿಂದ ಓದುತ್ತಾರಂತೆ (ಸ್ವಕ್ಷಹೂ. ೦೩೪).

[← ಮಾರಾ. ಬಸೀ, ಬಶೀ./ಪೋರ್ಚು. ಬಸಿಯಾ]

ಬಸಿಗಲ್ಲು (ನಾ). ಚಂದ್ರನ ಪ್ರಕಾಶದಿಂದ ಕರಗಿ ನೀರು ಬಿಡುವುದೆಂದು ನಂಬಲಾದ ಕಲ್ಲು; ಚಂದ್ರಕಾಂತಶಿಲೆ : ಬೆಳುದಿಂಗಳಲ್ಲಿ ಬಸಿಗಲ್ಲ ನೀಡಿ ತಿಂಗಳನು ತಣಿಸಬಹುದೆ ? (ಮುಕ್ತಕಂ. ೦೬-೦೪).

[ ಬಸಿ$_1$ + ಕಲ್ಲು (< ಕಲ್$_3$) ]

ಬಸಿಗಳ್ (ನಾ). ಒಂದು ಬಗೆಯ ಮದ್ಯ ; ತಿಳಿಹೆಂಡ : ರಸವಣಿಯನುಂಡ ಗೊರವಿತಿ ಪೊಸತಾಶೀರ್ವಾದವುಳ್ಳುದೊಂದೆಂದಾಗಳ್ ಬಸಿಗಳ್ಳಂಗೆ ಮಹೇಶರ ಪಸಾದ ಸುರುಕವಡೆ ಕವಡೆ ಹರಿವೋ ಎಂದಳ್ (ಸೂಕ್ತಿಸು. ೦೩-೨೦). [ಬಸಿ$_1$ + ಕಳ್$_3$]

ಬಸಿಗೆ 'ಬೈಸಿಕೆ' ನೋ.

ಬಸಿತ (ನಾ). (ರಕ್ತವು) ಧಾರೆಯಾಗಿ ಇಳಿಯುವಿಕೆ : ಕಂದ ನೆತ್ತರ ಬಸಿತ ಹಿಂಚಿಹುದೆ ? ಉಸಿರೆ ಏತಕೊ ? (ಹರಿಶ್ಚ. ೪೦-೦೩೩).

[ಬಸಿ$_1$ + — ತ$_3$]

ಬಸಿದಲೆ (ನಾ). ನೆತ್ತರು ಸುರಿಯುತ್ತಿರುವ ತಲೆ : ಅಲ್ಲೊಬ್ಬ ತರುಣಿ ಪಕ್ಕೆಯ್ಯ ಕತ್ತಿ ಬಸಿದಲೆಯೊಂದು ಕರದಿಂ ಬೀಳೆ ಬತ್ತಲಿರಲು (ಕೋಲಾ. ೬-೨೯).

[ ಬಸಿ$_1$ + ತಲೆ$_1$ ]

ಬಸಿದು$_1$ 'ಬಸಿ$_1$' ಪರಾ.

ಬಸಿದು$_2$ (ನಾ). ೧. ಹರಿತವಾದುದು ; ತೀಕ್ಷ್ಣವಾದುದು : "ಬಸಿದೆಂದು ಕೂರಿತಕ್ಕುಂ" (ಶಬ್ದಮಂ. ೩೦). ೨. (ಅಲಂ) ತೀಕ್ಷ್ಣವಾದ

ನಡೆವಳಿಕೆ : ಬ[ಪಾಠಾಂ. ದಿ]ಸಿದುಮಾಸಿದುವಂ ತೋಱೆ ನುಡಿದೊಡಂ ಬಡಸಿದರ್ (ಅಜಿತ. ೨-೧೦೧ ಕ).

ಬಸಿಯಂ = ಉಗ್ರನಾದ ವ್ಯಕ್ತಿ ; ಕ್ರೂರಿ: ಅಸಿಯಂ, ಬಸಿಯಂ, ಕರಿಯಂ (ಕಜಪ. ೧೩೨ ಕೃತೋ). [<ಬಸಿ₂]

ಬಸಿಮೂಗ (ನಾ). ಯಾವಾಗಲೂ ನೀರು ಸೋರುತ್ತಿರುವ ಮೂಗುಳ್ಳವನು : ಬಸಿ[ಪಾಠಾಂ. ಸಿ]ಮೂಗಂ ಪಿತ್ತವಿತ್ತಭೋಗಿ ಕುನಖಂ ಮೆಲ್ಪಿಂದೆ ಬಲ್ಪಿಂದೆ ಸಾಧಿಪ ಸಾಧ್ಯಂ ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗೇಹಜಂ (ಜಾತಕ. ೧೩-೯).
[ಬಸಿ₂+ಮೂಗು + – ಅ₇]

ಬಸಿರಾಸು 'ಬಸಿಱಾಸ್' ನೋ.

ಬಸಿರಿ₁ 'ಬಸಿಱ್' ನೋ.

ಬಸಿರಿ₂ 'ಬಸರಿ' ನೋ.

ಬಸಿರು 'ಬಸಿಱ್' ನೋ.

ಬಸಿರ್ಗುತ್ತ₁, ಬಸಂಗುತ್ತ (ನಾ). ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ ; ಅತಿಸಾರ : "ಬಸಿರ್ಗು[ಪಾಠಾಂ. ಬಸುರ್ಕು]ತ್ತ ಮತಿಸಾರವಕ್ಕು" (ಖಗೇಂ. ೧೦೧-೩) ; ಅತಿಸಾರಕಿಯಂ(ಬವನಂ) ಬಾದು ಬಸಿರ್ಗುತ್ತವಪ್ಪವಂ (ಕರ್ಣಾಯು. ೯೯-೯೩೨). ಬಸುಗುತ್ತ : ಕೋಣನ ಹೇಱಿಂಗೆ ಕಬ್ಬು ಬಸುಗುತ್ತಬಡವಂತೆ ತಾವು ನಂಬರು ನಂಬುವ ವಡ ನಂಬಲೀಯರು (ಬಸವ. ೬೬೩) ; ನಿನ್ನೆ ಕಮ್ಮಾರ ಚಂದನ ಮನೆಯೊಳ್ಟ ಸೂಕರವದ್ದುವವನುಂಡ ಬಳಿಕ ಬಸುಗುತ್ತದಿಂದಣಿಯರಂ ಬಳಲುತಿಹೆ. ಬಸಿದು ನೋನೋಯುತಿದೆ (ಕೃಜಾ. ೬೬-೬). [ಬಸಿಱ್ + ಕುತ್ತ]

ಬಸಿರ್ಪೂಸು (ಕ್ರಿ). ಮಗುವು ಗರ್ಭದಲ್ಲಿರುವಾಗಲೇ ಹೊಟ್ಟೆಯನ್ನು ಸವರುತ್ತ ಇಂತಹವರಿಗೇ ಮದುವೆ ಮಾಡಿಕೊಡುವುದಾಗಿ ಮಾತು ಕೊಡು : ಏನಂಗೋದ್ಭೂತ ಮಾತಾಪಿತೃಗಳ ನಿನಗನ್ನಂ ಬಸಿರ್ಪೂಸಿ ಪೆತ್ತರ್ (ಅಬಿಪು. ೦೯-೩೯) ; ಅಳಿಯಂ ನಿನಗೆ ಬಸಿರ್ಪೂಸಿ ಪೆತ್ತ ನಿನ್ನಂ ಆದೇಗಳ್ ನಿಮ್ಮಮ್ಮನ ಪಿರಿಯರುಂ ಸತ್ಯಭಾಮೆಯುಂಬಳಾಕೆಯ ಮಗಂ ಭಾನುಕುವರಾರಂಗೆ ಕಂಡಲೆಂದು ಮಹಾವಿಭೂತಿಯಿಂದೊಯ್ವೊಪ್ಪ್ರರ್ (ಅಂಜಾ. ೯-೩ ಕ) ; ಓಪೋವನ್ನಂ ಕುರುನ್ನವದೇವಿ ಬಸಿರ್ಪೂಸಿ ಪೆತ್ತೊಡಾ ಹಂಗೇನುದ್ಭಾವೋಗ್ರದುರಿತಫಲದಿಂದಾ ವಿಭು ಗಂಟಾದೊಡಾಗೆ ಮಱುಗುತ್ತಿರ್ದಂ (ಅಂಜಾ. ೯-೯) ; ಏಡೆಯೊಳ್ ಕೂಡಿದ ನಣ್ಪೆ ಮುನ್ನಮೆ ಬಸಿಱ್ಪೂಸಿರ್ದು ಕಾ[ಪಿಂದವಿಂ]ತ್ತೊಡೆ (ಅಂಜಾ. ೦೯-೬).
[ಬಸಿಱ್ + ಪೂಸು₁]

ಬಸಿರ್ಪೆಂಡತಿ (ನಾ). ಗರ್ಭಿಣಿಯಾದ ಹೆಂಗಸು ; ಬಸಿರಿ : ಒರ್ವಳ್ ಪೊಸತ್ತಾವಕಿ ಬಸಿರ್ಪೆಂಡತಿ ಪೇಳಾನ್ಸಾಮಿನಿಯಿಂಬೊಳ್ ಕರ್ದಿಂ ಗಳರುಳೊಳ್ ಕಟ್ಟಲೆಯೊಳ್ ನಿರ್ಗ್ರಂಥವಪ್ಪ ರೂಪಂ ಕಂಡು ಬೆರ್ಚಿದೊಡಾಕೆಗೆ ಬಸಿಱ್ಟದತ್ತು (ಅಪ್ರಾ. ೯೨-೬೦).

ಬಸಿರ್ಪೆಂಡಿರ್ (ಬಹುವ) : ಇದನಱದೊಂ . . . ಸಾಸಿರ್ವರ್ಬಸಿರ್ಪೆಂಡಿರುಮ ಸಾಯಿರಕಿಱಯುಮನಱೊನ ಲೋಕಕ್ಕೆ ಸಲ್ಲು (ಶಾಸ. IX-1, ೯೦-೦೯ ; 977). [ ಬಸಿಱ್ + ಪೆಂಡತಿ (< ಪೆಂಡಿತಿ) ]

ಬಸಿವನಿ (ನಾ). ಸೋರುವ ಹನಿ, – ತೊಟ್ಟು : ಬಟ್ಟ ಜಡೆಕಳಶದಿಂ ತೊಟ್ಟಡುವ ಬಸಿವನಿಯ ನುಚ್ಚನೆ ಸ್ಮೃತಿ ನೀಲ್ಮೇಘದಿಂ ಸುರಿವುತಿಹ ಬಟ್ಟವ ಶೀತಗಳ ಬಲ್ಪಿಂದುಗಳಿಯನಲುಯುಳಿವುತಿರಲೈತರುತ್ತ (ಅಜಿತ. ೦೪-೯೯). [ಬಸಿ₁ + ಪನಿ]

ಬಸಿವಾಯ್ (ನಾ). (ರಕ್ತ, ಜೊಲ್ಲು ಇತ್ಯಾದಿ) ದ್ರವ ಒಸರುತ್ತಿರುವ ಬಾಯಿ :. ಹಾಯಿದವು ನರಿ ಬಾಯಿಗಳು ಕುಟುವಾಯಲೆಳಲುವ ಕರುಳಿನಲಿ ಬಸಿವಾಯ ರಕುತದಲೋಡಿದವು ರಣಭೂತ ದೆಸೆದೆಸೆಗೆ (ಅಪ್ರಾಕ್ರೋ. ೦-೨೦). 'ಬಸಿವಾಯು' ಪಾ. [ಬಸಿ₁ + ಬಾಯ್]

ಬಸಿವಾಯ (ನಾ). ಯಾವಾಗಲೂ ಜೊಲ್ಲು ಸುರಿಯುತ್ತಿರುವ ಬಾಯುಳ್ಳವನು : ಬಸಿ[ಪಾಠಾಂ. ಸ್ರ]ವಾಯಂ ಕವಿ ವಾಗ್ಮಿ ದೀರ್ಘ ಮುಖಕಂಠಂ ಧಾರ್ಮಿಕಂ . . . ಧನುರ್ಗೇಹಜಂ (ಜಾತಕ. ೦೩-೯).
[ಬಸಿವಾಯ್ + – ಅ₇]

ಬಸಿಱ್, ಬಸಿರು, ಬಸಿಱು, ಬಸುರು, ಬಸುಱ್, ಬಸುಱು (ನಾ). ೧. ಹೊಟ್ಟೆ ; ಉದರ : ಜಠರ : "ಬಸಿಱುದರಂ ಜಠರಂ ಕುಕ್ಷಿ ಸಮಾಹ್ವಂ" (ಅಭ್ಯಕೋ. ೬೮-೬); ಈತಂಗೆ ನೀಂ ಬಸಿಱ್ ತೀವೆ ಬಡ್ಡಿಸದಿರ್ (ಚಪ್ರಾ. ೬೬-೩); ಬಸಿಱ ತೆಳ್ಪಡತ್ತ ಮೊಗಂ ಬೆಳ್ಪೇಱದುದೇ ಕುಚಚೂಚುಕಂ ಮಸುಳ್ದುವೇ (ಅಜಿ. ೬-೪೦); ದುಷ್ಟಬುದ್ಧಿ . . . ಕಟ್ಟೆನೆಂದು ದಾಯಂ ಬಸಿಱಂ ಪೊಯ್ದುಕೊಂಡು . . . ನುಡಿಯೆ (ಅಂಜಾ. ೦೬೦-೬). ೨. ಭ್ರೂಣವನ್ನು ಒಳಗೊಳ್ಳುವ ಕೋಶ ; ಗರ್ಭ: ಖಳನಲ್ಲೀ ಮಸುಮತಿಯೊಳ್ಗಾಂಧಾರಿಯ ಬಸಿಱಂ ಮೇಣ್ಣಗುಟೆ ಪೋಗಿ ಪೊಕ್ಕರ್ದಪನೋ (ಗದಾಯು. ೬-೨೦); ಆ ತಮ್ಮ ಕಂಡು ಮುಳಿದೆನಗೆ ಪಶುವಿನ ಬಸಿಱೊಳ್ ಬರ್ಪುದೆಂದು ಶಾಪಮನೀಯೆ (ಅಂಜಾ. ೬೦-೦೬); ಬಸಿರ್ಪೊಕ್ಕು ಬಣ್ಣವೇಱುವ ದಿಸದಾಕ್ಷಿನಿನವ್ಯತಮಾಂಟೆ ಪಂಪಿಡಿದಪೆದರ್ (ಆಕ. ೯-೩). ೩. ಗರ್ಭವನ್ನು ಧರಿಸಿರುವ ಸ್ಥಿತಿ: ಗರ್ಭಿಣಿಯಾಗಿರುವಿಕೆ : ಪಾಯದಿರೊತ್ತಿ ಮೂಱುತಿಂಗಳ ಬಸಿಱೀಕೆ ಪಾಯ್ದೆಯೆನಗಿರ್ಪಣ ಮೋಡಿದುದಿಂದು ನೋಡ ಬಾಯಲಾಡುದು ಹಾರದಿರ್ ಮೊಗಮನಿತ್ತ ನುತಂ ಬೆಱಗಾಗೆ ಕೂಡಿದರ್ (ಅಕ್ಷಾ. ೯೯೯ ಹೂಕೃ ಕ); ಇನಿತುಂ ಪೊಟ್ಟಂ ಬಸಿಱೊಳಪ್ಪ ಬಯಕೆಗಳ್ಗಿವೆ ಕಾರಣಂಗಳೆನಿಸಲ್ಕ ಬಯಕೆಗಳಂ ಬಯಸುತಿರ್ದಳ್ (ಪುಕ್ಕೃ.೬-೯೯ ಕ). ೪. ಅಂತರ್ಯ ; ಅಂತರಂಗ ; ಒಳಗು: ಬಸಿಱೊಳ್ ಜಗತೀತ್ರಯುಮುಮನೊಸೆದಿಟ್ಟೋರಂತ ಕಾದ ಪಂಪಿನ ನಿಮ್ಮಾ ಬಸಿಱಂ ಪೊಕ್ಕಿಮ್ಮಯ್ಯರನಸುರಕುಳಾಂತಕ ಕಡಂಗಿ ಕಾವುದು ಪಿಂದೆ: (ಅಂಜಾ. ೯-೦೬). ಬಸಿರು : ೨. ಕೊಲೆಗೀಡುಪಾಡದೇಶಾದ ಮರ್ಕಳನ್ನು ಹೆರುವ ಬಸಿರು ಬೇಡ (ಅಜಕ್ಕ. ೩೯). ೪. ನಿರಾಶೆಯ ಬಸಿರಿನಲ್ಲಿಯೇ ಆಶೆಯ ಬೀಜವಿದೆ – ಬಿತ್ತಿ ನೋಡು ! (ಕವ್ಯೋ೧೦.೪೨-೬); ಪಡುವಲ ಕಡಲಿನ ಮಿಂಚನು ಗುಡುಗನು ನುಂಗಿ ಬಸಿರಿನಲಿ, ಮುಡಿಗೆದರಿ ಮುಂಗಾರುಸುರಿಯಲು ರಕ್ಕಸವಕ್ಷಿಗಳಿಕ್ಕುತ ಬಂದಳು ಬಲುಗದರಿ ! (ಕ್ಷಜ್ಞಾ. ೩೯-೦). ಬಸಿಱು : ೨. ದಾಕ್ಷಾಯಣಿ ತನ್ನ ಬಸಿಱೊಳ್ ಬರ್ಪವರಮಂ ಬಯಸಿ ಮೇಣೆ ತಪದೊಳಿರಲ್ (೧೦೪. ೦ ಆಶ್ವಾಸಕ) ; ಬಸಿಱೊಳಗೆ ಶಿಶುವನು ಅದಾರು ಸಲಹಿದವರು (ಪ್ರಭುಲಿ. ೨-೪೭ ೩). ೪. ಸಿಸುವಾಗಿ ಪಾಪಾಲದೆರೆಯೊಳೊಱಗಿ ತನ್ನ ಬಸಿಱೊಳೀರೇಳುರೋಕಗಳ ಪಸರವ ತೋಱಿ ಬಲ್ಲರ ಬಗೆಗೊಳಿಸುವ ಪೊಸಬಜ್ಜವಳಗೆಱಗುವೆನು (ಅಜಿತ್ಯ. ೦-೨೦). ೫. ವಂಶ; ಮನೆತನ : ಧರೆಯ ಕಾಡಿಯರ ಕುಲ ಶಿರೋಮಣಿಗಳೆನಿಪ ಗೌಡರ ಬಸಿಱೊಳೊಗೆ[ದ] ಸುಮುಹೂರ್ತದೊಳು (ಸಿದ್ಧಾ. ೦-೩೨). ಬಸುರು : ೨. ಬಸುರಿನಿಂ ಪಡೆಯಲಾರದೆ ವ್ಯಥೆಯೊಳಿಪ್ಪ ವಧುಗೆಸೆವ ಸುತನಂ ನಿಜಪದೋದೇದಿವಿಪಾವುತಂ (ಸುಜಾತ. ೬-೦ ಹೂಕೃ). ೩. ಬಸುರು ಬಂದಾಕ್ಷಣ ಹಸುರುಶಾಲೆ ಸಿಕ್ಕೀತೇ? (ಗಾದೆ). ೬. ಭ್ರೂಣ ; ಪಿಂಡ : "ಗರ್ಭ ೯, ಭ್ರೂಣ ೯ – ೨ ಗರ್ಭದ ಪೆಸರು, ಬಸುರು" (ಆಭ್ಯಾಂ. ೦೩೯). 'ಬಸುರಿಳಿ' ಪಾ. ಬಸುಱ್ : ೧. ಮನುಷ್ಯರ ಪಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಹಾಡಾಡದ ಕೂಳಂಬಲಿಯನಾಯ್ದು ತುಱುಕುವ ಹೇಸಿದೈವಂಗಳ ಬೆ.ರಬೇಡಿ ನಿರರ್ಥ ಕಿಡಬೇಡ (ಬಸವ. ೩೩೬). ೨. ಪುಟ್ಟಿದ ತಾಣಕ್ಕೊಲವಂ ಪುಟ್ಟಿಸಲೊಡರಿಸುವ ಕಿಚ್ಚು ಕೇಟ್ ಕ್ರಿಮಿ ಕುತ್ತಂ ಪುಟ್ಟುವವೊಲ್ ದುಷ್ಕೃತದಿಂ ಪುಟ್ಟಿದರೀ ಪಾಪಕರ್ಮನೆನ್ನಯ ಬಸುಱಂ (ಅಭಿಂಜಾ. ೪೯೨).ಬಸುಱು :

೧. ಬಸುಱ ಬಗಿ ಕರುಳನಾಗಿ . . . ಮೂಳೆಯಂ ಮುಱಾಯೆನುತ್ತ ಹಗ್ಗನ್ನಿಗಳ ತಲೆದಡವಿ ಹಾಸವಂ ತಿವಿದು ಕವಿದರು ಬೇಡರಡ್ಡೆಸೆಯೊಳು (ಜಕಣ. ೬-೫೨) : ಉಗುಳುಗುಳು ದುಶ್ಶಾಸನನ ನೀನುಗುಳು ಮುಗುಳನ್ನಾರ ಬಸುಱನು ಹೊಗುವೆ (ಕುಮ್ಮಾ. ೪. ೨೦-೨೩); ಅಸುರರುರು ಬಲ್ಲಿಹದ ಶಿವಿಗುಳ ಬಸುಱ ಬಾದಣದುರ್ಚುಗಾರುಳಿನ . . . ಕೋಡಗದ ಸರಗಳ ಸಂದಣಿಯ ಸಂಭ್ರಮವೆಸೆದುದ್ದೈ (ಕೊಣಶಾ. ೬-೪೦-೧೩). ೪. ಬಸು [ಹಾಹಾ. ಸಿ]ಱೊಳಗೆ ಬ್ರಹ್ಮಾಂಡಕೋಟಿಯು ಮಸಗಿಸಿದ ಪರಮಾತ್ಮ ನೀನೆಂದುಸುರುತಿವೆ ವೇದಗಳು (ಕಂಹಾ. ೨೩).

ಬಸಿರಿರು = ಗರ್ಭವನ್ನು ತಾಳು : ವಿದ್ಯಾನಂದನನ್ನು ಆಗ ಬಸಿರಿದ್ದೆ. ಆಗ ನನಗೆ ಏಳನೆಯ ತಿಂಗಳು (ಕ್ಕ.ತಿ. ೬೪). ಬಸಿಱು ಪೊಸೆ, ಬಸುಱು ಹೊಸೆ = (ಹೊಟ್ಟೆಕಿಚ್ಚು, ಸಂಕಟ, ತಿರಸ್ಕಾರ ಮೊದಲಾದ ಭಾವಗಳಿಂದ) ಹೊಟ್ಟೆಯನ್ನು ಕಿವಿಚಿಕೊಳ್ಳು: ಸಂತತಿಗೆ ಪಿರಿಯ ಮಕ್ಕಳ ನಾಂ ತಳೆಯದೆ ಪಡೆವೆನೆಂದೊಡನ್ನಿಂ ಮುನ್ನಂ ಕುಂತಿಯ ಪಡೆದಳ್ ಗರ್ಭದ ಚಿಂತೆಯದಿನ್ನೇವುದೆಂದು ಬಸಿಱಂ ಪೊಸೆದಳ್ (ಹಂಕಳ. ೦-೦೨೯); ಅಜ್ಞಾನಿಗಳಪ್ಪರ ತಪದೊಳ್ ಫಲವಿಲ್ಲೆಂದು ಬಸಿಱಂ ಪೊಸೆದು ನಕ್ಕು (ಧರ್ಮಾಮೃ. ೨-೨೨೮); ಧಗಿಲು ಭುಗಿಲೆನುತ ಮಾಮುಸಳದಿಂ ಮಸಗಿ ತೂನೆದು ಬಸುಱು ಹೊಸೆದು ಹೊಯ್ದು ನೆಲನಂ ತಿರುಗಿ (ಶಿರರ. ದೀ. ೦೮-೯). ಬಸಿಱ ಕುತ್ತ = ಅತಿಯಾಗಿ ಭೇದಿಯಾಗುವ ಒಂದು ಬಗೆಯ ರೋಗ ; ಅತಿಸಾರ : ಗ್ರಹದಂತೆ ಪೀಡೆಯಂ ಮಾಱ್ಪುದು ಬಸಿಱ ಕುತ್ತದಂತೆ ಸವೆಯಿಸುವುದು (ಧರ್ಮಾಮೃ. ೯-೦೭೩). ಬಸಿಱಾರೆ = ಹೊಟ್ಟೆ ತುಂಬುವಂತೆ : ಪಾಯ್ಸರಾತಿಯ ಮೆಯ್ಯ ನೆತ್ತರಂ ಕಂಡು ಸೂಱೇಸಿನೊಳವನ ನೆತ್ತರೊಕ್ಕೊಡಂ ತನಗೆ ಬಸಿಱಾರೆ ಕುಡಿಯಲುಂ ದ್ರೌಪದಿಯ ಕೇಶಪಾಶಮಂ ತೊಯ್ದು ಮುಡಿಯಲುಂ ನೆಱೆಯದು (ಕುಕಶಾ. ೦೨-೦೯೬ ಶ). ಬಸಿಱೊಡೆ, ಬಸುಱೊಡೆ = ೧. ಮೈಯಿಳಿ ; ಗರ್ಭಪಾತವಾಗು : [ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯುವುದು] ಆನೆರೆ ತಿಗಡೆಯಿಂ ಬಸಿಱೊಡೆವುದು (ಧರ್ಮಾಮೃ. ೯-೦೦೯). ೨. ಹೊಟ್ಟೆಯನ್ನು ಸೀಳು,—ಭೇದಿಸು : ವಿಷ್ಣುವ ಅಕ್ಷಿಯಲ್ಲಿ ಧರಿಸಿದೆ ಬ್ರಹ್ಮನ ಬಾಯಲ್ಲಿ ಧರಿಸಿದೆ . . . ಬಾಯಲ್ಲಿದ್ದವನ ಬಸುಱೊಡೆಯ ಹೊಯ್ದು (ಕೋಶಕಶಾ. ೦೬೬-೬೩೯). ಬಸುರು ನಿಲ್ಲು = ಗರ್ಭವು ಉಳಿ ; ಮೈಯಿಳಿಯದಿರು : ಮದುವೆಯಾಗಿ ಹತ್ತಾರು ವರ್ಷಗಳ ನಂತರ ಅವಳಿಗೆ ಮೊದಲ ಸಲ ಬಸುರು ನಿಂತಿತು (ಬಳಕೆ). ಬಸುಱ ಕಿಚ್ಚು = ಹೊಟ್ಟೆಕಿಚ್ಚು ; ಅಸೂಯೆ : ಬಸುಱ ಕಿಚ್ಚ [ಹಾಹಾ. ಬಸುಱಕಿಚ್ಚ]ನು ಬೆಳೆಯಿಸುವ ನುಡಿಯುಸುರಲೇಕವರು (ಹಾಶ್ಮಹಾ. ೨೦-೦೩). ಬಸುಱ ಹೊಯ್ಯು = ಹೊಟ್ಟೆಯನ್ನು ಬಡಿದುಕೊಳ್ಳುವಿಕೆ : ಕಂಡರಡಯುಲಿ ಬಿರನ ನಗರದ ಹೆಂಡಿರುಗಳಕ್ಕಿಗಳ ತಳುಕಿನ ಮಂಡೆಗಳ ತೋಳುಗಳ ಬಾಯ್ಗಳ ಬಸುಱ ಹೊಯ್ಲುಗಳ (ಕೊಶಿರಾ. ೬-೬-೨). ಬಸುಱಾಗು, ಬಸುರಾಗು = ಗರ್ಭ ನಿಲ್ಲು; ಗರ್ಭವನ್ನು ಧರಿಸು : ಚೀರೀಗೆ ಬಸುಱಾಯಿತ್ತ ಕಡೆ ಬಾಳೆಗೆ ಫಲವಾಯಿತ್ತ ಕಡೆ (ಬಸವ. ೬೬೯); ಆ ಕಾಂತೆಗೆ ಬಸುಱಾಗಿ ತೀವಿ ನವಮಾಸಂ ನಿಶ್ಚಿಂತಂ ಬೆಸಲಾಗಲ್ ಪ್ರೀತಿಯಿಂತಂ ತನ್ನಾಲಯಕ್ಕೆ ಕರಸಿದನಾಗಳ್ (ಧರ್ಮಾಶ. ೬-೦೩): ಬಸುಱಾಗ ವವಳ ಬಾಳುವೆಯು ಬೇಸಿಗೆಯ ಬಿಸಿಲು ಕಾವಂತೆ (ಸರ್ವಜ್ಞ. ೧೩೮೮); ದಾಕ್ಷಿಣ್ಯಕ್ಕೆ ಬಸುರಾಗಿ ಹೆರುವುದಕ್ಕೆ ಠಾವಿಲ್ಲ (ಗಾದೆ). ಬಸುಱ ಉರಿ = ಹೊಟ್ಟೆ ಉರಿ : ಬಿಸುಣತ್ವದಲಿ ನಿಂದ್ಯೆಯ ಪಾತಕದಿಂದ ಬಸುಱ ಉರಿಯುತ್ತೊ ಶಿವನೆ (ಅಭ್ಯಂಶ. ೨-೦೯). ಬಸುಱ ಮಾಡು = ಗರ್ಭ ಧರಿಸುವಂತೆ ಮಾಡು : ಹಸನಾದ ಹಣ್ಣ ಮೇಲೆ ಕುಸುಮದ ತಂದಿಕ್ಕಿ ಶಶಿಮುಖಿಯರಿಗೆಲ್ಲ ಬಸು[ಹಾಹಾ. ಸಿ]ಱು ಮಾಡಿದನೀತ (ಪ್ರಶಂಶ. ೦-೯೦-೨).

[ದೇ.॥ ತಮಿ. ವಾಲ. ವಯಱು; ತುಳು. ಬಸುರಿ, ಬಸುರು]

ಬಸಿಱಾನ್, ಬಸಿರಾನು (ಕ್ರಿ). ಗರ್ಭವನ್ನು ಧರಿಸು ; ಬಸುರಾಗು; ಗರ್ಭಧಾರಣೆ ಮಾಡು : ರತಿದೇವಿ ಬಸಿಱಾಂತು ಪಡೆದ ದುಃಖವ ಸುತವತಿಯಾಗಿ ನೋಳ್ಪ ಸಂತಸವ ವಿಂತಿಗೆಯ್ವವೆನು (ಕೋಹಶ. ೦೬-೩೯). ಬಸಿರಾನು : ಅವುಮ ಬಸಿರಾಂತ ಮತ್ಕ್ಯಾಲಸವೃದ್ಧಿ ಕಾರಣೆಯು ಧರ್ಮಪತ್ನಿಯನಾಳಿದೆಂ (ಚಾಳಿಶಂಕ. ೯೯-೦೫೩). [ಬಸಿಱು (<ಬಸಿಱ್) + ಆನ್$_1$]

ಬಸಿಱ್, ಬಸಿರಿ$_1$, ಬಸುರಿ$_1$, ಬಸುಱ್ (ನಾ). ಗರ್ಭಿಣಿ; ಗರ್ಭವತಿ : ಬಸಿಱ್ ಹೆಂಡತಿ ಮಗನ ಮದುವೆ ನಾಳೆ . . . ಸಾಯರುಱಿನು (ಪ್ರಶಂಶ. ೨-೬೦-೩); ಈ ಬಸಿಱಿಯರೊಳ್ಪಿನಿಂ ಬಯಸುವರ್ ಬಸಿಱೊಳ್ ನೆಲೆಗೊಂಡ ಬಾಲನೊಂದಸಿಲದ ಪಾಂಗಿನಿಂದಿಳಿಯೊಳೆಂಬರ ನಾಲ್ಕುದಿಯುಕ್ಕೆ ನಿಕ್ಕುವಂ (ಚಳಿ. ೯-೯). ಬಸಿರಿ$_1$ : ಸರೋಜ ಮನೆಗೆ ಬಂದು ಎರಡು ವರ್ಷವಾದ ಮೇಲೆ ಬಸಿರಿಯಾದಳು (ಬಿಚಾಗ. ೪); ಬಸಿರೀ ಆಗದಿದ್ದರೆ ಹೆಣ್ಣಿಗೆ ಉದ್ಯುಕ್ತಿಕಾರಿಯನ ರಸವನ್ನು ಕುಡಿಸುತ್ತಿದ್ದರು (ಜಬ್ಬಿ. ೦೩). ಬಸುರಿ$_1$ : ಕಾಯ್ಯಾ ಬಸುರಿ ರೋಹದುಃಖದ್ವಂದ್ವದಲಿ ಬೆಂದು ಮಣೆ ಪುರಕೆ ಪ್ರೀತಿರುಗಿ ಬಂದಳತಿಭೀಷಣಮನಃಸ್ಥಿತಿಯಲಿ! (ಕಹ್ಯಾಂಗ-೬೯-೦೬೩೩); ಗೌರಿಯು . . . ಈಗ ಐದನೆಯ ಬಾರಿ ಬಸುರಿಯಾಗಿದ್ದಳು (ಕುಂಗಾಬು. ೨೩). ಬಸುಱ್ : ಹುಸಿಗೂಸು ಬಸುಱ್ ಬಾಣತಿ ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ ತಿರಿದುಂಬ ಮಾರಯ್ಯ . . . ಕೇತಯ್ಯಗಳೆಂಬ ನೂಱುಮಡಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೩೩೬); ಎಲ್ಲಿಯುಂ ಕೇಳ್ದಱಿಯೆವಿಂತಹ ದುರ್ಲಭದ ಬಸುಱ್ಯರನು (ಬಸಪು. ೩-೦೬).

[ ಬಸಿಱ್ + — ಇ$_2$ / ವಾಲ. ವಯಱ್; ತುಳು. ಬಸುರಿ ]

ಬಸಿಱಳಿ 'ಬಸಿಱ್ಱಳಿ' ನೋ.

ಬಸಿಱ್ಱಳಿ, ಬಸಿಱಳಿ, ಬಸುರಿಳಿ (ಕ್ರಿ). ಮೈಯಿಳಿ; ಗರ್ಭಪಾತವಾಗು : ಒರ್ವಳ್ ಪೊಸಕ್ರಾಂತಿ ಬಸಿಱ್ವೆಂಡತಿ ವೇಳಾಸ್ವಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕಟ್ಟಿರೆಯೊಳ್ ನಿರ್ಗ್ರಂಥವಪ್ಪ ರೂಪು ಕಂಡು ಬೆರ್ಚಿದೊಡಾಕೆಗೆ ಬಸಿಱ್ಱಳಿದತ್ತು (ಪಂಚತಂ. ೯೨-೦೩); ಮತ್ತೊಂದು ಶಿಶುವೆಂಬುದುಂ ಬಸಿಱ್ಱಳಿದುದೆಂಬಂತೆ ಗರ್ಭದಿಂ ತೆಗೆದುಯ್ದು ರೋಹಿಣಿಯ ಗರ್ಭದೊಳ್ ನಿಱಿಸಿದಂ (ಆಗಿ. ೩-೩ ಶ). ಬಸಿಱಳಿ : ಬಸಿಱಳಿವ ಸಂಕಟದ ಬಲುಬೇನೆಯ ಭ್ರಾಂತಿನಿಂ ಮೈಮಱದು ಕಂಡ ಕನಸ್ಸೆಸೆ (ಸಿಕ್ಕಶಾ. ೨-೬) ; ಬಸಿಱಳಿದು ತದ್ದುಃಖಮಂ ನೀಗಿ ಜೀವಿಸಿದರಸುರಾಂಗಿಮುಖ್ಯಸುರರದಱನಿಜರಾಮರರೆನಿಸಿದರ್ (ಸಿಕ್ಕಶಾ. ೦೦-೨೨೩). ಬಸುರಿಳಿ : ನಾಲ್ಕು ದಿನಗಳ ಹಿಂದೆ ಬಸುರಿಳಿದು ಹೋದದ್ದರಿಂದ ಅವಳಿಗೆ ವಿಶ್ರಾಂತಿ ಬೇಕಾಗಿದೆ (ಬಳಕೆ). [ಬಸಿಱು + ಇೞ್]

ಬಸಿಱು ಬಸಿಱ್ ' ನೋ.

ಬಸಿಱುಬೇನೆ (ನಾ). ಹೊಟ್ಟೆಯ ನೋವು; ಉದರಶೂಲೆ : ಸುಗಂಧಿಯ ಬೇರು, ಗುರುಗುಂಜಿಯ ಬೇರು, ಆಳಲೇಕಾಯಿ ಚೂರ್ಣ ಇವು ಎಲ್ಲವನ್ನೂ ಸಮಾನಂಗೊಂಡು ಬೆಲ್ಲದಲ್ಲಿ ಇಕ್ಕಿ ಮೆಲ್ಲಲು ಗರ್ಭಿಣಿಯ ಬಸಿಱುಬೇನೆ ಮಾಣ್ಗುಂ (ಶಿಕ್ಕಶ. ೦೦೩).

[ಬಸಿಱು (<ಬಸಿಱ್) + ಬೇನೆ$_1$]

ಬಸು (ನಾ). ಆಪ, ಧ್ರುವ, ಸೋಮ, ಧರ್ಮ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ ಎಂಬ ಎಂಟು ಮಂದಿ ವಸುಗಳಲ್ಲಿ ಒಬ್ಬ ವಸು ; P ಈ ಹೆಸರುಗಳು ಕಲ್ಪಭೇದದಿಂದ ವ್ಯತ್ಯಾಸ ಹೊಂದಂತ್ತಾವೆ : "ಬಸುಗಳ್ದೇವರೊಳ್" (ಕಜಾರಂ. ೯೧).

[<ಸಂ. ವಸು]

ಬಸುಗುತ್ತ 'ಬಸಿಱ್ಕುತ್ತ' ನೋ.

**ಬಸುದೇವ** (ನಾ). ಒಬ್ಬಾತನ ಹೆಸರು : ಶ್ರೀ ಚಿಕುರಾವರವಿಯು ಗುರುವರ ಸಿಷ್ಯರ್ ಸರ್ಬಣನ್ದಿ ಅವನ್ ಶ್ರೀಬಸುದೇವನ್ (ಎಕ. II,೩೬: ಶು. 760). [ಬಸು + ದೇವ]

**ಬಸುಮ** (ನಾ). ಬೂದಿ ; ಭಸ್ಮ: "ಬಸುಮ — ಭಸ್ಮ(ನ್)" (ಕರ್ನಕೋ. ೨೯) ; ಬಸುವುದ ಸಿರಿಯೊಡಲ ಪೆರೆಯುಗಿದ ಪಾವಿನ ತೊಡರ ಸಿಂಗರದ . . . ವರಮಶಿವನಿರುತಿರ್ದನನುಪಮರತ್ನಪೀಠದಲಿ (ಅಕಂಚಾ. ೦-೨-೦೩) ; ಗಳರವದ ಮಂತ್ರಗಳ ಬಗೆಬಗೆಯೊಳುಚ್ಚರಿಸು ತಡಿಗಡಿಗೆ ನಸುನಗೆಯ ಬಸುಮವಮಂ ತೂಪಿರುವುತೆ ಮಿಗೆ ಹಸ್ತತಾಡನಗಳೆತ್ತು ಸ್ವರಭೂತಮಮಂ ನಗಿಸಿ ನುಡಿಸುತ (ಹಂಕಾರಾ. ೩-೬-೩೩). [<ಸಂ. ಭಸ್ಮನ್]

**ಬಸುರಿ₁** 'ಬಸಿಱ್' ನೋ.

**ಬಸುರಿ₂** 'ಬಸರಿ' ನೋ.

**ಬಸುರಿಕೋಡು** (ನಾ). ಒಂದು ಊರಿನ ಹೆಸರು : ದಕ್ಷಿಣತಃ ಬಸುರಿಕೋಡುನಾಮಗ್ರಾಮಃ (ತ್ರೈಅಂ. ೦೬೩, ೪೦-೬೯; 951).

[ಬಸುರ್₂ (<ಬಸರಿ) + ಕೋಡು₁]

**ಬಸುರಿಳಿ** 'ಬಸಿಱುಟ್' ನೋ.

**ಬಸುರು** 'ಬಸಿಱ್' ನೋ.

**ಬಸುಱ್** 'ಬಸಿಱ್' ನೋ.

**ಬಸುಱು** 'ಬಸಿಱು' ನೋ.

**ಬಸುಱುಟಿಸು** (ಕ್ರಿ). ಮೈಯಿಳಿಸು; ಗರ್ಭಪಾತವಾಗುವಂತೆ ಮಾಡು : ಬಸುಱುಟಿಪ ಪುತ್ರವಧೆಗುದ್ದು ಸತಿಗೆ ದುರ್ಗತಿಗೆ ಕರ್ಮಚಾಂಡಾಳಿಗೆ ರಕ್ಕಸಿಗೆ ನೆಲೆಯಕ್ಕುಮುಚ್ಚಿಸುವಸಿಪತ್ರವನಪ್ರವೇಶದುರ್ಗತಿದುಃಖಂ (ಶಶಾರ. ೩೦೦). [ಬಸುಱ್ (<ಬಸಿಱ್) + ಇಟಿಸು]

**ಬಸುಱು** 'ಬಸಿಱ್' ನೋ.

**ಬಸುಱುಚ್ಚು** (ನಾ). ಹೊಟ್ಟೆಯಿಂದ ಜಾರಿ ಬಿದ್ದ ಮಾಂಸಖಂಡ ಮುಂತಾದುವು : ಇಕ್ಕಡಿಯ ಬಸುಱುಚ್ಚುಗಳ ನರಸೊಕ್ಕು ಡೊಳ್ಳಾಸದ ಮಹಾಭಯವೆಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುವ್ಯಾದ್ರೋ. ೦೬-೨೬) ; ಇಕ್ಕಡಿಯ ಬಸುಱುಚ್ಚುಗಳ ನರಸುಕ್ಕುಗಳ ನಾಟಕದವೊಲು ಕೈಯಿಕ್ಕಿದಾನೆಯ ಹಿಂಡು ಮುಱಿದುದು ನಿಮಿಷಮಾತ್ರದಲಿ (ಕುವ್ಯಾಗ. ೨-೨೯). P 'ಉರ್ಚು' ಎಂಬುದಕ್ಕೆ ನಾಮಾರ್ಥದಲ್ಲಿ ಪ್ರಯೋಗಗಳು ದೊರೆತಿಲ್ಲ. [ಬಸುಱು (< ಬಸಿಱ್) + ಉಚ್ಚು₁ (< ಉರ್ಚು)]

**ಬಸುಱುದುಂಬು** (ಕ್ರಿ). ಹೊಟ್ಟೆ ತುಂಬು ; ತೃಪ್ತಿಗೊಳ್ಳು ; ತಣಿ : ಬಸುಱುದುಂ[ಪಾಠಾಂ. ತುಂ]ಬದಿರಲ್ಕೆ ನಂಬಿಯು ಬೆಸನದಿಂದೆಡೆಯಾಡಿ ಯಾತನ ದೆಸೆಯೊಳುಣಲಿಲ್ಲದೆ . . . ಹಸಿದು ಬಂದಾ ಚೀರವಂ (ಚಕಕ. ೦೩-೨೩). [ಬಸುಱು (< ಬಸಿಱ್) + ತುಂಬು₁]

**ಬಸುಱುಶೂಲೆ** (ನಾ). = ಬಸಿಱುಬೇನೆ : ಯಷ್ಟಿಮಧುಕ, ದ್ರಾಕ್ಷಿಹಣ್ಣು, ಇವಂ ಹಸುವಿನ ಹಾಲು ಬಿಟ್ಟು ಅರೆದು ಹಾಲಲ್ಲಿ ಕಾಸಿ ಹಸುವಿನ ತುಪ್ಪದಲ್ಲಿ ಕುಡಿಯೆ ಹೃದಯಶೂಲೆ, ಯೋನಿಶೂಲೆ, ಬಸುಱುಶೂಲೆ, ಜ್ವರ, ವಾತಗುಲ್ಮ, ಬಾಣಂತಿಯರ ಎಲ್ಲಾ ರೋಗಗಳೂ ಮಾಣುವುವು (ಏಶ್ವಂ. ೦೦೬). [ಬಸುಱು (< ಬಸಿಱ್) + ಶೂಲೆ₁]

**ಬಸೆ, ವಶಿ** (ನಾ). ೧. ಹೆಣ್ಣಾನೆ; ಪಿಡಿ: "ಬಸೆ ಪೆಣ್ಣಾನೆಯು" (ಕರ್ಣಾಶ. ೨); ಕಾಲೊಳ್ ತೊಡರ್ದುತ್ಪಲದಳವಾಲಿಗಳುಲಿ ಗೆಜ್ಜೆಯೆನಿಸೆ ಮಾಂಗಾಯೆನೆ ಕರ್ಣಾಲಂಬಿ ಕಮಳಮುಕುಳಂ ಬಾಲೇಭಂ ಬಸೆ[ಪಾಠಾಂ. ಸೆಳೆ]ಯ ಪೆಱಗೆ ಬಂದುದು ಕೊಳದಿಂ (ಅಂಚಾಕ. ೬-೦೬) ; ಓವನ ಪಡಿಮೊಗದೊಳ್ ತುಂತುಱುಂ ತೂಱಿ . . . ಬಾಷ್ಪಪ್ಲುತಾಲೋಕೆ ಶೋಕಾತುರ ದುಃಖೋದ್ರೇಕದಿಂದಂ ಬಸೆ ಪರವಸೆ ಬೀಸಿತ್ತು ಕರ್ಣಾಗ್ರದಿಂದಂ (ಅಂಚಾಕ. ೬-೨೦ ; ಹೂಕ್ತಿಸು. ೩-೩೬ ನೋ). ೨. ಗೊಡ್ಡಾಕಳು ; ಬರಡುದನ : ಬಸೆ = ನೆಣ, ಹೆಣ್ಣಾನೆ, ಗೊಡ್ಡಾಕಳು (ಕಮರ. ೨೩೬ ೩೩೬). ವಶಿ : ೧. ಕಾಡಿನ ಕರಿಯು ವಶಿಗಳ ಕೂಡ ನೀರೊಳು ವಿಹಾರಿಸುವಂದದಲಿ (ರಳಾಪಂ. ೦೬-೬೮). [< ಸಂ. ವಶಾ]

**ಬಸೆ₂** (ನಾ). ಕೊಬ್ಬು ; ನೆಣ : "ಬಸೆ — ವಸಾ = ಕೊಬ್ಬು" (ಕರ್ನಕೋ. ೨೯) ; ಅಲ್ಲಿ . . . ಬಸೆಯೆ ತುಪ್ಪಂ ನಾಯ್ಗಳೆ ಪರಿವಾರಂ ಮದ್ಯಮೆ ಪುರುಷಾರ್ಥಂ (ಕಾದಂಚಾ. ೬೯೩); ನೆಣನ ಬಸೆಸಹಿತಡಗು ಸುರಿದವು ಕಡಿದ ಹರಿದುದು ರಕುತದರೆವೊನಲು (ಕುವ್ಯಾಗ. ೬-೩); ಬೇಡರ್ ಸವಿಯಡಗಂ ಬಸೆಯಂ ನೆತ್ತರಂ . . . ಮತ್ತಂ ಚವುರಿಯಂ ಪೊತ್ತು ನಗರಿಗೆ ಮರಲ್ದುವರ್ವಾ ನಡುವಟ್ಟೆಯೊಳ್ (ರಾಮಾಕ್ಕ. ೬೯-೨೦). [< ಸಂ. ವಸಾ]

**ಬಸೆಗ** (ನಾ). ಒಂದು ಬಗೆಯ ವಿಮಾನು : ಹಣ್ಣಲಂ ಬಸೆ [ಪಾಠಾಂ. ಸಿ]ಗ ಗಿಜಿಲಿ ಬಂಗಡೆ . . . ಅನೆಮೊಗನಂಬ ಪರಿಪರಿಯ ಮಿಾನ್ಗಳಂ ಗುದಿಗೆಯ್ದರು (ಹಕಚಾ. ೩-೯೩). [?. / ಹಿಂ. ಬಸಾ]

**ಬಸೆನಡೆ** (ನಾ). ಹೆಣ್ಣಾನೆಯ ನಡಗೆ : ಬಲವುರಿಸಂಕುಗೊರಲ ಬಸೆನಡೆಯ ಬೆಳ್ದಲ್ಗೆಯ್ಯ . . . ಬಾಲೆಯೊರ್ವಳ್ . . . ಪೊಂಬಟ್ಟಲನೆತ್ತಿ ಬರುತುಮಿರ್ದಳ್ (ರಾಮಾಕ್ಕ. ೯೬-೨೯). [ಬಸೆ₁ + ನಡೆ₂]

**ಬಸ್ಕಿ** 'ಬೈಸಿಕೆ' ನೋ.

**ಬಸ್ಕಿಹೊಡೆ** 'ಬೈಸ್ಕಿಹೊಡೆ' ನೋ.

**ಬಸ್ತ** (ನಾ). ಗಂಡಾಡು; ಹೋತ: "ಅಜಃ, ಸ್ತುಭಃ, ಬಸ್ತಃ, ಛಾಗಃ, ಛಗಳಕಃ, ಛಗಃ — ಈ ೬ ಹೋತು" (ಹಲಾಯು. ೯೬-೦೨೨) ; ದುಸ್ತರ ಮೆಂದೇವೈಸದೆ ಹಸ್ತಗತಂ ಮಾಡಿ ಮೌಲ್ಯಮಂ ಕೊಂಡರವರ್ ವಿಸ್ತರ ಕಾಯದವೇಲುಂ ಬಸ್ತಂಗಳನಲ್ಲಿ ಬಸ್ತಪಾಲನ ಕೆಯ್ಕೊಳ್ (ಮಹಾಪೇ. ೯-೦೨೬); ದಕ್ಷನ ಬೆಂದ ಮುಖ ಬಸ್ತಾಸ್ಯವಾಗಲಿ (ಏರಣಗ. ೪-೩-೩೩). [ಸಂ.]

**ಬಸ್ತಕ** (ನಾ). ೧.= ಬಸ್ತ : ಬೆದೆಯಾದ ತಾಯನೇಱುದುದದು ಸೊರ್ಕಿದ ಗೂಳಿ ತಾಯನೇಱುತ್ತಂಬಂದವೆ ಮತ್ತಮೊಂದು ಬಸ್ತಕಮುದನಿಱಿಯಲ್ ಸತ್ತು ಪೊಕ್ಕುದಜೆಯೊಳ್ಜೀವಂ (ಹುಕೋಕ. ೩-೩೯). ೨. ಒಂದು ಬಗೆಯ ಉಪ್ಪು : "ರೌಮಕ, ಬಸ್ತಕಂ — ೨ ಸೌಭರಿ ದೇಶದಲ್ಲಿ (ರುಮ)ಎಂಬ ಗಣಿಯೊಳಗೆ ಹುಟ್ಟುವ ಉಪ್ಪು, ಚೌಳುಪ್ಪಿಗೆ ಹೆಸರುಗಳೆಂದು ಕೆಲವರನ್ನುವರು" (ಸಿದ್ಧಾಂತಿ. ೨೬೩). [ಸಂ.]

**ಬಸ್ತಪಾಲ** (ನಾ). ಆಡುಗಳನ್ನು ಕಾಯುವವನು, — ಮೇಯಿಸುವವನು : ದುಸ್ತರಮೆಂದೇವೈಸದೆ ಹಸ್ತಗತಂ ಮಾಡಿ ಮೌಲ್ಯಮಂ ಕೊಂಡರವರ್ ವಿಸ್ತರಕಾಯದವೇಲುಂ ಬಸ್ತಂಗಳನಲ್ಲಿ ಬಸ್ತಪಾಲನ ಕೆಯ್ಕೊಳ್ (ಮಹಾಪೇ. ೯-೦೨೬). [ಸಂ.]

**ಬಸ್ತಾನ** (ನಾ). ಠಿಕಾಣಿ ಹೂಡುವುದು ; ಜೀವನವ್ಯವಸ್ಥೆಯನ್ನು ಮಾಡುವುದು : ಮುಂದೆ ಏಳೆಂಟು ವರ್ಷಗಳಲ್ಲಿ ನಮ್ಮ ಬಸ್ತಾನ ಸರಿಯಾಗಿ ಕುಳಿತು ಅಪ್ಪನ ಕಣ್ಣ ಮುಂದೆಯೆ ನಮ್ಮ ಸ್ವಂತದ ಮನೆಯಾಯಿತು (ಸ್ವ.ಚಿ. ೯೬೯); ಅಂತೂ ನಮ್ಮ ಬಸ್ತಾನ ಕೂತಂಗ್ಹಾಯಿತು (ಶಕಕೋ. ೦೩).

[← ಪಾರ. ಬಸ್ತನ್ = ಕಟ್ಟು ; ಮರಾ. ಬಸ್ತಾನ್, ಬಸ್ತನ್]

**ಬಸ್ತಿ₁** 'ಬಸದಿ' ನೋ.

**ಬಸ್ತಿ₂** (ನಾ). ೧. ಪಿಚಕಾರಿ. ೨. ಪಿಚಕಾರಿಯ ಸಹಾಯದಿಂದ ದ್ರವ ಅಥವಾ ಅನಿಲವನ್ನು ಮಲನಾಳದ ಒಳಹೊಗಿಸಿ ಮಲ ವಿಸರ್ಜನೆ ಮಾಡಿಸುವುದು ; ಎನೀಮಾ ಕೊಡುವುದು : ಕೋಷ್ಠ ಶುದ್ಧಿಯ ಸಲುವಾಗಿ ಬಸ್ತಿಯನ್ನು ಕೊಡಬೇಕೆಂದು ಮಾಡಿದರು . . . ಅರ್ಥಾತ್ ಈ ಪ್ರಯೋಗವು ನೀರಿನಲ್ಲಿ ಸಬಕಾರ ಮತ್ತು ಉಪ್ಪು ಹಾಕಿ ಕೊಡುವದರಲ್ಲಿ ಬಂದಿತು (ಪ್ರಕೃಚಿ. ೦೯೩). ೩. ಹೊಕ್ಕುಳಿನ ಕೆಳಭಾಗ.

[ಸಂ. / ಹಿಂ. ವಸ್ತಿ ; ಮರಾ. ಬಸ್ತಿ, ಬಸ್ತೀ]

**ಬಸ್ತಿಕ** (ನಾ). [ಯೋಗ]ಹಠಯೋಗದ ಆರು ಬಗೆಯ ಅಂಗಗಳಲ್ಲಿ ಒಂದು : ಆಧಾರಕುಂಚನದಿಂದಾದಂ ಪೊಡೆವೊಕ್ಕ ನೀರನೆ ಕುಳಿತಿಯನುಮಂ ಕ್ರಿಯದಂ ನೌಳಿಕದಿಂದಂ ಬಾಧವಡೆಯದಂತೊಡರಿಪನಾ ಬಸ್ತಿಕವಂ (ಬ್ರ.ಕೂಕು. ೩-೦೧೩).

[ಸಂ. ಬಸ್ತಿಕ = (ಹೊರಕ್ಕೆ ಜಗ್ಗಿದಾಗ ಮೊನೆಯು ದೇಹದಲ್ಲೇ ಉಳಿಯುವ) ಒಂದು ಬಗೆಯ ಬಾಣ]

**ಬಸ್ತಿಗೆ** (ನಾ). = ಬಸ್ತಿಕ : ಧೌತಿಯುಮಾ ಬಸ್ತಿಗೆಯುಮಂ ನೇತಿ ತ್ರಾಟಕ ಕಪಾಲಭಾತಿಯುಮಿಳೆಯೊಳ್ ನೂತನನೌಲಿಕವೆಂಬಾ ಪೂತವಮುನಿ ಗಳೊರೆದಱುವಗೆ ಕರ್ಮಂ ಪೇಳೆಗುಂ (ಬ್ರ.ಕೂಕು. ೩-೦೧೦).

[ <ಬಸ್ತಿಕ ]

**ಬಸ್ತು** (ನಾ). ೧. ಸಾಮಾನುಗಳ ಗಂಟು. – ಮೂಟೆ : (೬). ೨. (ವ್ಯವಸ್ಥಿತವಾದ) ಕಾಗದ ಪತ್ರಗಳ ಕಟ್ಟು ; ದಫ್ತರು : (ಕ್ಕ.ಗಿ. IV, ೬೬೪).

**ಬಸ್ತು ಕಟ್ಟು** = ಬೇರೆ ಕಡೆಗೆ ರವಾನಿಸಲು ಅನುಕೂಲವಾಗುವಂತೆ ವಸ್ತುಗಳನ್ನು ಜೋಡಿಸಿ ಕಟ್ಟು : ರೇಷ್ಮೆಯನ್ನು . . . ವ್ಯಾಪಾರಸ್ಥಳಗಳಿಗೆ ಕಳುಹಿಸುವುದಕ್ಕೆ ಯೋಗ್ಯವಾದ ರೀತಿಯಲ್ಲಿ ಬಸ್ತು ಕಟ್ಟುವುದು ಮುಂತಾದ ವಿಚಾರಗಳಲ್ಲಿ ಇಂಡಿಯಾದೇಶದವರಿಗೆ ಶಿಕ್ಷಣ ಕೊಡಲು ಒಂದು ಪ್ರಯೋಗಕ್ಷೇತ್ರವನ್ನು . . . ಸ್ಥಾಪಿಸಿದರು (ಛಾಗ್ಯ೩. ೩೪).

[ ← ಪಾರ. ಹಿಂ. ಮರಾ. ಬಸ್ತಾ]

**ಬಸ್ಸು** (ನಾ). ನಿಗದಿಯಾದ ವೇಳೆ ಹಾಗೂ ಸ್ಥಳಗಳಲ್ಲಿ ಸಂಚರಿಸುವ, ಅನೇಕಜನರು ಕೂಡಬಹುದಾದ, ಪೆಟ್ರೋಲ್ ಮುಂತಾದ ಇಂಧನ ಗಳಿಂದ ಚಲಿಸುವ ವಾಹನ ; ಮೋಟಾರುಬಂಡಿ : ಉಃಪ್ಪೆಂದು ಹೊಗೆ ಸೂಸಿ ಇನ್ನು ಬಸ್ಸೋ ಕಾರೊ ಏನಾದರೂ ಸರಿಯೆ, ಓಡಿತಲ್ಲಿಯೆ ಬುದ್ಧಿ (ಅರಳು. ೦೧೬-೩) ; ನೋಡು, ಮೋಡದ ಬಸ್ಸು ಭರಭರ ತುಂಬಿ ಕೊಂಡೇ ಸಾಗಿವೆ ಯಾವ ಗಿರಿಶಿಖರದಲಿ ಜಾತ್ರೆಯೋ (ಕಂಠಮ. ೧೧-೪).

[←ಇಂ. Bus]

**ಬಸ್ಸುನಿಲ್ದಾಣ** (ನಾ). ಪ್ರಯಾಣಿಕರು ಹತ್ತಲು, ಇಳಿಯಲು ಅನುಕೂಲವಾಗುವಂತೆ ಸಾರಿಗೆ ಬಸ್ಸುಗಳು ನಿಲ್ಲಲು ಗೊತ್ತು ಪಡಿಸಿರುವ ಸ್ಥಳ : ಮನೆಯಿಂದ ಹೊರಟ ಗಣಪತಿ ಸೀದಾಬಸ್ಸು ನಿಲ್ದಾಣಕ್ಕೆ ಬಂದ (ಪಕ್ಕ೩. ೨೦೬). [ಬಸ್ಸು + ನಿಲ್ದಾಣ]

**ಬಹ** 'ವರ್' ಪರಾ.

**ಬಹತ್ತರನಿಯೋಗ** 'ಬಾಹತ್ತರನಿಯೋಗ' ಪರಾ.

**ಬಹದರ್** 'ಬಹಾದುರ್' ನೋ.

**ಬಹದರ** 'ಬಹಾದುರ್' ನೋ.

**ಬಹದರಿ** 'ಬಹಾದುರೀ' ನೋ.

**ಬಹದರಿವರಹ** 'ಬಹಾದ್ದುರಿವರಹ' ನೋ.

**ಬಹದರು** 'ಬಹಾದುರ್' ನೋ.

**ಬಹದ್ದರ** 'ಬಹಾದುರ್' ನೋ.

**ಬಹದ್ದುರಿ** 'ಬಹಾದುರೀ' ನೋ.

**ಬಹದ್ದೂರ್** 'ಬಹಾದುರ್' ನೋ.

**ಬಹದ್ದೂರ** 'ಬಹಾದುರ್' ನೋ.

**ಬಹದ್ದೂರಿ** 'ಬಹಾದುರೀ' ನೋ.

**ಬಹರಿ** (ನಾ). ದಂಡನಾಯಕ (?) : ಮಸಣಿತಮ್ಮ ನವಂಗ ವೀರ ಮಸಣನು ಹೊಯಿದು ಹೊಯಿಕುಟ್ಟಾಡಿ ಉಭಯ ಬಲ್ಲಣ ಬಹರಿಯ ಯೇಱಿದ ಕುದುರೆಯನುವಿಱಿದ ಕಾಲಾಳನು ತಿವಿದು ಸುರಲೋಕ ಪ್ರಾಪ್ತನಾದನು (ಎಕ. VI. ಕಕ್ಕ್ತು. ೩೬-೦೦ ; 1292). [?]

**ಬಹರಿಚ** (ನಾ). = ಬಹರಿ (?) : ರಾಜಾಧಿರಾಜ ರಾಜಪರಮೇಶ್ವರ ಕೃಷ್ಣರಾಯ ಮಹಾರಾಯನ ಮನೆಯ ಕುದುರೆ ಬಹರಿಚನ ಮಲಿಸಟರ ಮಗ ಚಂನಣಸಟರು (ಎಕ. IX(೩). ಕಂಡು. ೬೪-೬ ; 1528).

[ < ಬಹರಿ ?]

**ಬಹಲ, ಬಹಳ** (ಗು). ೧. ಅಧಿಕವಾದ ; ಅಪಾರವಾದ ; ಹೇರಳ ವಾದ. ೨. ದಟ್ಟವಾದ ; ಸಾಂದ್ರವಾದ. ೩. ಗಟ್ಟಿಯಾದ ; ದೃಢವಾದ. ೪. ವಿಸ್ತಾರವಾದ ; ಅಗಲವಾದ. ೫. (ಬಣ್ಣದಂತೆ) ಕಡುವಾದ ; ಗಾಢವಾದ. ೬. (ಧ್ವನಿಯಂತೆ) ಕಠೋರವಾದ ; ಬಿರುಸಾದ. ೭. (ಬಾಲದಂತೆ) ಪೊದೆ ಯಾಗಿರುವ. **ಬಹಳ** : ೧. ಅತಿಬಹಳದಹ್ಯಮಾನಕಾಳಾಗುರುಧೂಪ ಧೂಮಯಷ್ಟಿಘಟಿತಘನಶ್ಯಾಮಲಪ್ಯೋಮತಲಧೂಪಂಗಳಿಂದಂ . . . ಅರ್ಚಿಸಿ (ಅಜಿತ. ೨-೩೨ ಕ); ತುಂಬುರಂ . . . ಕೋಟಿವಂಕುಟವರ್ಧನರಿಂ ಬಹಳ ಗೊಂದಣಾಸ್ಥಾನನಾಗಿರ್ದ ನರಸಿಂಗಮೊನೆಯರ್ಗೆ ಸಾದರದಿಂ ಮಯ್ಯಿಕ್ಕಿ ಕಯ್ಯಂ ಮುಗಿದು (ಚಂಪಿ. ೪-೬೬) ; ಹೇಳಲೇನದ ಬಹಳ ದುಗುಡದ ಪಾಳೆಯವೊ ನಿನ್ನಾತನೋಲಗಶಾಲೆಯೋ ನಾವಱಿಯೆವು (ಕುಮ್ಮಾ೪. ೦-೦೪). ೨. ಕೇಸರಿಯ ಲೀಲಾಭಾಪವಿಲ್ಲದ ಬಹಳ ಕಾನನವೋ . . . ಪಾಳೆಯವೆನುತ ಬರುತಿರ್ದ (ಕುಮ್ಮಾದ್ರೋ. ೬-೬). (ನಾ). ೮. ಹೆಚ್ಚು ; ಅಧಿಕ : ಮನೆಯಲ್ಲಿ ಮಂದಿ ಬಹಳ ಹೊನ್ನಿನ ಪೆಚ್ಚ ಘನವು (ಕಂಪಖ. ೬-೦೧೩) ; ಬಂಗಾಲ, ಮಲಯಾಳ, ಮೈಸೂರು ಮುಂತಾದ ಪ್ರಾಂತಗಳಲ್ಲಿ ಹುಲಿಗಳು ಬಹಳ (ಹುಂಜರು. ೪-೩೩). ೯. ಒಂದು ಬಗೆಯ ಕಬ್ಬು.

**ಬಹಳ ಮಾಡಿ** = ೧. ಹೆಚ್ಚಾಗಿ ; ಬಹುಮಟ್ಟಿಗೆ : ಸೋಲಾಪುರದಲ್ಲಿ . . . ನಾವು ಯಾವಾಗಲು ಬಹಳ ಮಾಡಿ ಇರುವ ಸ್ಥಳವು ಇದೆ (ಹುಂಬಂಣ್ಣ. ೨೪). ೨. ಬಹುಶಃ ; ಬಹುತೇಕ : ಆಗ ಬಹಳ ಮಾಡಿ ಬೆಳಗಿನ ಎಂಟು ಗಂಟೆಯಾಗಿರಬೇಕು (ಇಕ್ಕ೪. ೩೭). ೩. ವಿಶೇಷವಾಗಿ ; ಮುಖ್ಯ ವಾಗಿ : ಇದು ಬಹಳ ಮಾಡಿ ಪ್ರಾಣಿಗಳ ಮನೋಧರ್ಮವೇ (ಉಹಾ೪. ೦೩೬). **ಬಹಳಷ್ಟು** = ಬಹುಮಟ್ಟಿಗೆ ; ಆದಷ್ಟು : ಹೀಗೆ ಅನಿಸುವುದ ರಿಂದಲೇ ಸಂಸಾರದೊಳಗೆ ಬಹಳಷ್ಟು ಪ್ರಚ್ಛನ್ನವಾದ ನಿರಾಶೆಯು ಹತ್ತಿಕ್ಕಿ ದಂತಾಗಿ ಹದುಗಿಕೊಂಡಿದೆ (ಕ್ರಶಂರ. ೩೪) ; ಮಹಾಸ್ವರರ ಮನಸ್ಸು ಈಗ ಬಹಳಷ್ಟು ಹಗುರವಾಗಿತ್ತು (ಹುಂರುದಾ. ೭೨). [ಸಂ.]

**ಬಹಲಿ** 'ಬಹಾಲ್' ನೋ.

**ಬಹಲಿಕೆ, ಬಹಳಿಕೆ** (ನಾ). ಅತಿಶಯತೆ ; ಆಧಿಕ್ಯ : ಮೊಳಸಿನನಿಲಿಂದು ಗಿರಿಗೆಯನೆಳೆದೊರ್ಗ್ಗಣ್ಮೋಳಿಲೊಳೊಳಗೆ ಪೊಱಗೆ ಮೆಱೆವೊಳ್ಪಳವಡ ಚಾರಿಪ ಬಹಲಿಕೆಯುಳವಿದು ಕೇವಲಮೆ ಕೀರ್ತಿನಾರಾಯಣನ (ಎಕ. II. ೦೩೩-೯೬ ; ೧೧೩೭). **ಬಹಳಿಕೆ** : ವಿಹಗಕುಳಂಗಳಂ ನೆರಪಿ ಕೂಜನದೇಟಿಗ್ಗೆ ಮನೋಜರಾಜ್ಯಮಂ ಬಹಳಿಕೆಯಿಂದೆ ಮಾಡಿವಡಿಸಿ . . . ಆತ್ಮಮನ್ಮಥ ಗೃಹಮನದೇಂ ಕಟಲ್ಚುವರೊ ಯವ್ವನಮತ್ತೆಯರಲ್ಲಿ ನಲ್ಲರೊಳ್ (ಕ್ರಕ್ಕ. ೨-೯೨) ; ಗಜದಳದ ಬೃಂಹಿತದ ಬಹಳಿಕೆ . . . ಭಡಾಳಿಸಲೊಡ್ಡಿದರು ಮಂಡಳಿಸಿ ಮೋಹರವ (ಕುಮ್ಮಾಉ. ೬-೦೪). [ಬಹಲ + – ಇಕೆ]

**ಬಹಲು** 'ಬಹಾಲ್' ನೋ.

**ಬಹಳ** 'ಬಹಲ' ನೋ.

**ಬಹಳಿಕೆ** 'ಬಹಲಿಕೆ' ನೋ.

**ಬಹಳಿತ** (ಗು). ೧. ವಿಶೇಷವಾದ ; ಅತಿಶಯವಾದ : ನಿಜವರೂಥದ ಲಂದು ಕೌರವವಿಜಯಮಾರುತಿ ಹೊಕ್ಕು ರಿಪುಭೂಭುಜರನರೆಯಟ್ಟಿದನು ಬಹಳಿತ ಸಿಂಹನಾದದಲಿ (ಕುಮ್ಮಾದ್ರೋ. ೦೩-೦೭) ; ರಘುಪ್ರಭವ . . . ಸೂತಮಾಗಧವಂದಿಸಂದೋಹ ಬಿರುದನುಚ್ಚಾರಿಸಲು ಮಾರುತಿ ಧಿರುರಿ

ಪಾಯಪಥಾರನಲು ಬಂಧುರದ ಬಹಳಿತ ಸೇತುವಿದ್ದೆಡೆಗಾಗಿ ನಡೆತಂದ (ಕೊಶಿಾ. ೬-೩-೩). ೨. ದಟ್ಟವಾದ ; ಸಾಂದ್ರವಾದ. ೩. ಪ್ರಬಲವಾದ ; ಬಿರುಸಾದ. [ಸಂ. ಬಹಳಿತ]

**ಬಹಳಿಸು** (ಕ್ರಿ). ಹೆಚ್ಚಾಗು ; ಅಧಿಕವಾಗು : ಸಿಹಿ ಪಿರಿದಾದಲ್ಲಿ ಹುಳಿಗೊಡುವಳು ಹುಳಿ ಬಹಳಿಸಲುಪ್ಪುದೋಱುವಳು (ಅಚಿಕ. ೧೦-೫೦). [ಬಹಳ ( = ಬಹುಲ) + — ಇಸು]

**ಬಹಾದರ್** 'ಬಹಾದುರ್' ನೋ.

**ಬಹಾದರಿ** 'ಬಹಾದುರೀ' ನೋ.

**ಬಹಾದರೀವರಹ** 'ಬಹಾದ್ದುರಿವರಹ' ನೋ.

**ಬಹಾದುರ್**, ಬಹದರ್, ಬಹದರ, ಬಹದರಂ, ಬಹದ್ದರ, ಬಹದ್ದೂರ್, ಬಹದ್ದೂರ, ಬಹಾದರ್, ಬಹಾದ್ದರ್, ಬಹಾದ್ದರ, ಬಹಾದ್ದುರ, ಬಹಾದ್ದೂರ್, ಬಹಾದ್ದೂರ, ಬಾದರ್, ಬಾದುರ, ಬಾಧುರ, ಭಾಹದರು (ನಾ). ೧. ವೀರ ; ಶೂರ ; ಸಾಹಸಿ : (ೆ). ೨. ಯೋಧ ; ಸೈನಿಕ : (ೆ). ೩. ಮೊಗಲ್‌ರಾಜರು ಗಣ್ಯವ್ಯಕ್ತಿಗಳಿಗೆ ಕೊಡುತ್ತಿದ್ದ ಒಂದು ಬಿರುದು : ಶ್ರೀಮಾನ್‌ಮಹಾರಾಜರಾಜಾ ಸಾಹೇಬ್ಬಹಾದುರವರು, ಇದರಡಿ ಕಂಡಂತೆ ಕಾನೂನನ್ನು ಏರ್ಪಡಿಸಿರುತ್ತಾರೆ (ಗ್ರಾಮೂಳ. ೦೪). **ಬಹದರ್** : ೩. ಹೈದರಲ್ಲಿಖಾನ್‌ಬಹದರವರು ಕೊಟ್ಟ ದರ್ಮಕ್ಕೆ ಮಾಗನೂರ ಗ್ರಾಮಶಾಸನ (ಎಳ. XI. ಚನ್ನಿಕ. ೦೩೩-೬ ; 1761) : ಮುದ್ದುಕೃಷ್ಣಾಜಮ್ಮಣ್ಣೀಯವರು ನಂಜರಾಜಬಹದರವರು (ಎಳ. X, ಕೆಚಿಮು. ೨೯೦-೬ ; ಸು. 1828). **ಬಹದರ** : ೩. ಹೈದರಲ್ಲಿ ಬಹದರನು (ಸೌಇಎ. ೦೯೩೪. ಸೀಂ. ೦೩೩-೦೪ ; 1759). **ಬಹದರು** : ೩. ಯಾ ಹೈದರಲ್ಲಿಖಾನರ ಹಿರೇರು ಪೂರ್ವದಲ್ಲಿ ಅರಬ್ಬದೇಶದಿಂದ . . . ಬಿಜಾಪುರದ ಸಂಸ್ಥಾನಕ್ಕೆ ಬಂದು ಅಲ್ಲಿನ ಬಹದರಲ್ಲಿ ನೌಕರೀ ನಿಂತು (ಹೈದಿ. ೨೦). **ಬಹದ್ದರ** : ೧. ಕಲ್ಲ್ಯಾನ ಬಿಡಿಸಿಗೊಂಡು ಹೋಗೂ ಬಹದ್ದರ ಅವರ ಹಿಂಡಿನ್ಯಾಗ ಯಾವನೂ ಇಲ್ಲ (ಗ್ರಾಮೂಯು. ೨೯೪) ; ಭಾರಿ ಜಮೀನುದಾರರು ಕೂಡ ಈಗ ಅನ್ನಾನ್ನಗತಿಯಾಗಿ ಕೇವಲ ಅರ್ಧ ಹೆಸರಿನ ಬಹದ್ದರರಾಗಿ ಆತ್ಮವಂಚನೆಯನ್ನೇ ಮಾಡಿಕೊಳ್ಳುತ್ತಿರುವರು (ಕಜಂ. ೦೯೩). **ಬಹದ್ದೂರ್** : ೧. ನೀವು ದೊಡ್ಡ ಬಹದ್ದೂರರು ಅಕ್ಷಯುಬಾಬು ! (ಕೀಶ್ರಕ್ಕ. ೨೦೩). ೩. ಶ್ರೀಮುಮ್ಮಡಿಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ. ಸಿಯುಎಸ್ಐಯವರ ಪಿತೃಗಳಾದ ಮಹಾರಾಜರು ಖಾಸ ಚಾಮರಾಜಒಡೆಯರವರ ಜ್ಞಾಪಕಾರ್ಥ ಇದು ಸ್ಥಾಪಿತವಾಗಿದೆ (ಎಳ. VI (R). ಶ್ರೀಣಂಗ. ೩೬-೦ ; 1868 ?) ; ಟೀಪು ಸುಲ್ತಾನ ಬಹದ್ದೂರ್‌ರವರು ತಮ್ಮ ಕಡೆಯಿಂದ ಒಂದು ಕಾಗದ, ಮೀರಸಾದಕನ ಕಡೆಯಿಂದ ಒಂದು ಕಾಗದ . . . ದೋಸ್ತಿ ಮಾಡುವ ಬಗ್ಗೆ ನಂಬಿಗೆ ಭಾಷೆ ಹಾಕಿ ಬರಿಸಿ (ರಾಕೇಂದ್ರ. ೬೪). **ಬಹದ್ದೂರ** : ೧. ಕಂಚಿನ ತಂಬಿಗೆ, ಮಸಿಬುಡ್ಡಿ . . . ಪುಸ್ತಕ ಇತ್ಯಾದಿ, ಇತ್ಯಾದಿ—ಹೆಂಡತಿಯ ವ್ಯೆ ಮುಖಕ್ಕೆ ಗುರಿಯಿಟ್ಟು ಬೀಸಿ ಎಸೆಯುವ ಬಹದ್ದೂರರೂ ಇದ್ದಾರೆ (ಹುಕ್ಕುಹು. ೦೨). (ಗು). ೪. ಸಮರ್ಥವಾದ; ಪ್ರಬಲವಾದ : ಮಹಾದೇವನು ನಮಗೆ ಕೊಟ್ಟು ಇರುವಂಥಾ ಒಂದು ನಾಲಿಗೆಯನ್ನು ಇಂಗ್ರೇಜ ಬಹದ್ದೂರ ಸರಕಾರದ ಸ್ನೇಹ ಮಾಡುವಾಗ್ಯೆ, ಅವರಿಗೆ ಕೊಟ್ಟು ಇದ್ದೇವೆ (ರಾಕೇಂದ್ರ. ೬೩). **ಬಹಾದರ್** : (ೆ). **ಬಹಾದ್ದರ್** : ೩. ಜನರಲ್ ಮೆಂಡರೂಸ್‌ಸಾಹೇಬ್‌ಬಹಾದ್ದರವರು . . . ಬಂಗಾಳದ ಲಾರ್ಡ್‌ಕಾರನ್ವಾಲೀಸ್‌ಸಾಹೇಬ್‌ಬಹಾದ್ದರವರ ಫೌಜಿನ ಸಂಗಡ ಕೂಡಿ, ಒಟ್ಟಾಗಿ ಗಟ್ಟ ಹತ್ತಿ ಬಂದು, ಬೆಂಗಳೂರ ಮೊಕ್ಕಾಮಿನಲ್ಲಿ ಇಳುಕೊಂಡರು (ರಾಕೇಂದ್ರ. ೬೦). **ಬಹಾದ್ದರ** : ೧. ಹುಡುಗೆ ತಕ್ಕಂತೆ, ಅವನು ಬಹಾದ್ದರನೇ ಆಗಿರುವನು (ಕಳ್ಳ. ೩). ೪. ಮೊದಲು ಕೊಡಗಿನ ಮಹಾರಾಜರ ಕಡೆಯಿಂದ ಮಿತ್ರತ್ವಸಂಬಂಧವಿಟ್ಟು ಶಾಶ್ವತವಾಗಿ ನಡದು ಬರಬೇಕು ಎಂಬುದಾಗಿ, ಭಾಷಾಪತ್ರಿಕೆ ಬರೆಸಿ, ಇಂಗ್ರೇಜಬಹಾದ್ದರಕಂಪನಿ ಸರಕಾರದಲ್ಲಿ ಮಡಗಿ ಇದೆ (ರಾಕೇಂದ್ರ. ೬೪). **ಬಹಾದ್ದುರ** : ೪. ಹತ್ತು ಪಾಲು ಹೆಚ್ಚಾಗಿ ಇನ್ನೂ ಇಂಗ್ರೇಜಬಹಾದ್ದುರಕುಂಪನಿ ಸರಕಾರಕ್ಕೆ ಸಹಾಯ ಮಾಡಬೇಕು ಎಂಬುದಾಗಿ, ನಾವು ನಿಶ್ಚೈಸಿ ಇದ್ದೇವೆ (ರಾಕೇಂದ್ರ. ೦೨೬). **ಬಹಾದ್ದೂರ್** : ೧. "ಬಹಾದ್ದೂರ್ = ಶೂರ" (ಜಾಕಳೋ. ೨೦). **ಬಹಾದ್ದೂರ** : ೪. ಈ ಪೂರ್ವೋತ್ತರವೆಲ್ಲಾ ಇಂಗ್ರೇಜಬಹಾದ್ದೂರ ಸರಕಾರಕ್ಕೆ ಬರದು ಕಳುಹುತ್ತೇವೆ (ರಾಕೇಂದ್ರ. ೯೫). **ಬಾದರ್** : ೩. ನವಾಬುಹೈದರಲಿಖಾನ್‌ಬಾದರವರು ಪೃತ್ವೀಸಾಮ್ರಾಜ್ಯಂಗೆಯುತ್ತಿರಲು (ಎಳ. IX. ಚನ್ನಪ. ೦೬-೬; 1767). **ಬಾದುರ** : ೩. ವುಭಯದಳ ಪೂಜ್ಯಲಿಂಗವೊಡೆದಳವಿಭಾಡ ಬಾದುರಮಲುಕ ಸಪ್ತಾಂಗಹರಣಯೇನು ಮುಲಮಂದ ಪಾರ್ಥಿಕಮಲ್ಲ . . . ಮುಂಮ್ಮಡಿಹೊಟ್ಟಂಣನಾಯಕರ್‍ಯನವರು ಮಾಡಿಸಿದಂತಾ ಶಾಸನಾ (ಮೈಆರ. ೦೯೩೮, ೯೪-೦೬; 1700). **ಬಾಧುರ** : ೨. ಹಸ್ತಿಗಳ ಸಾಲಿಂದ ಸಾಲ್ಗೆಳನೆತ್ತಿಸಿದ ಬಾಧುರರ ರಣದೊಳು ವಿಸ್ತರಿಸಲುಸದಳಗಳಾದವು ರಾಯಬಲವೆಲ್ಲ (ಕುಂಶ್ಮಾ. ೬-೨೪). **ಭಾಹದರು** : ೩. ಮಹಾರಾಜರಾಜಕೃಷ್ಣರಾಜವೊಡೇರಭಾಹದರು . . . ಬರಸಿ ಕಳುಹಿಸ್ತ ನಿರೂಪ (ಎಳ. VI, ಕೊಪ್ಪ. ೯೬-೦೯; 1811).

[←ಪಾರ. ಬಹಾದುರ್; ಹಿಂ. ಬಹಾದುರ್, ಬಹಾದರ್; ಮರಾ. ಬಹಾದೂರ್, ಬಹಾದರ್, ಬಹಾದ್ದರ್]

**ಬಹಾದುರೀ**, ಬಹದರಿ, ಬಹದ್ದುರಿ, ಬಹದ್ದೂರಿ, ಬಹಾದರಿ, ಬಹಾದ್ದರಿ, ಬಹಾದ್ದೂರಿ (ನಾ). ೧. ಬಹದ್ದೂರ್ ಹೈದರನ ಕಾಲದಲ್ಲಿ ಟಂಕಿಸುತ್ತಿದ್ದ ಒಂದು ಬಗೆಯ ಚಿನ್ನದ ನಾಣ್ಯ : ಬ್ರಿಟಿಶಸರಕಾರದ ಅಮಲಿನ ಆರಂಭದಲ್ಲಿ . . . ೧೮ ಪ್ರಕಾರದ ವರಹಗಳು ಅಥವಾ ಹೊನ್ನುಗಳು ನಡಿಯುತ್ತಿದ್ದವು. ಅವುಗಳ ವಿವರ—೧ ಗಜಪತಿ (ವಿಜಯನಗರದ ಅರಸರದು)... ೨ ಬಹಾದುರೀ (ಹೈದರನದು) ರೂ. ೪, ಆ. ೮ (ಕಾಗಿ. ೨೬೦). **ಬಹದರಿ** : (ಗು). ೨. ಬಹದ್ದೂರನಿಗೆ ಸಂಬಂಧಿಸಿದ; ಮೊಗಲ್‌ದೊರೆಗೆ ಸೇರಿದ : 'ಬಹದರಿವರಹ' ಪರಾ. **ಬಹದ್ದುರಿ** : ೩. ಭಾರಿಯಾದ; ಮಹತ್ತ್ವದ : ಅದು ಬೇವಾರಸು ಬಹದ್ದುರೀ ಸುದ್ದಿಯಾದದ್ದರಿಂದ ತಾವು ಅದನ್ನು ವಹಿಸಿಕೊಂಡು ವರ್ಧಮಾನಕ್ಕೆ ತಂದರೆಂದು, ನನ್ನ ಊಹೆ (ಕಿಂಡ. ೩೬೪). **ಬಹದ್ದೂರಿ** : ೪. ಯೋಗ್ಯವಾದ; ಸಮರ್ಥವಾದ : ಅವನ ಎತ್ತೂ ಹಾಗೆಯೇ ಬಹದ್ದೂರಿ (ಹೌಹಾ. ೪೦). **ಬಹಾದರಿ** : ೨. 'ಬಹಾದರೀವರಹ' ಪರಾ. **ಬಹಾದ್ದರಿ** : ೪. 'ಬಹಾದ್ದರಿತನ' ಪರಾ. **ಬಹಾದ್ದೂರಿ** : ೫. ಅಧಿಕಾರ : ಮನಸ್ಸು ಋತುವ್ಯತ್ಯಾಸವನ್ನು ಗೆದ್ದು ಅದನ್ನು ನಿಶ್ಚೀತನವಾಗಿ ಮಾಡಿ ಒಂದು ಬಹಾದ್ದೂರಿ ನಡಸುವಂತಿದೆ (ಖಿಂಠ. II, ೪೦೬).

[←ಪಾರ. ಹಿಂ. ಬಹಾದುರೀ ; ಮರಾ. ಬಹಾದರೀ, ಬಹಾದುರೀ, ಬಹಾದೂರೀ]

**ಬಹಾದ್ದರ್** 'ಬಹಾದುರ್' ನೋ.

**ಬಹಾದ್ದರ** 'ಬಹಾದುರ್' ನೋ.

**ಬಹಾದ್ದರಿ** 'ಬಹಾದುರೀ' ನೋ.

**ಬಹಾದ್ದರಿತನ** (ನಾ). ದಕ್ಷತೆ ; ಸಾಮರ್ಥ್ಯ : ಬೆಳ್ಳಾರೆಕೋಟೆ, ಮೂಡ ಕೊಡೆಯಾಲದ ಕೋಟೆ ಸಮಾಚಾರ ಬರಸಿದ್ದು ಕೇಳಲಿಲ್ಲ. ಬಲುಚಾತುರ್ಯ, ಧೈರ್ಯ, ಬಹಾದ್ದರಿತನ ಸಹಾ ತೋರಪಟ್ಟಿತು (ರಾಕೇಂದ್ರ. ೦೬೦). [ಬಹಾದ್ದರಿ (<ಬಹಾದುರೀ) + — ತನ]

**ಬಹಾದ್ದುರ** 'ಬಹಾದುರ್' ನೋ.

**ಬಹಾದ್ದುರಿವರಹ,** **ಬಹದರಿವರಹ,** **ಬಹಾದರೀವರಹ** (ನಾ). ಬಹದ್ದೂರ್ ಹೈದರನ ಕಾಲದಲ್ಲಿ ಟಂಕಿಸಲಾಗುತ್ತಿದ್ದ, ಅಂದಿನ ನಾಲ್ಕು ಅಥವಾ ಐದು ರೂಪಾಯಿಗಳಿಗೆ ಸಮಾನವಾದ ಒಂದು ಬಗೆಯ ಚಿನ್ನದ ನಾಣ್ಯ : ಮರುಕ್ಷಣದಲ್ಲಿ ಐದನೂರುಬಹಾದ್ದುರಿ ವರಹಗಳ ಥೈಲಿ ಝಣ್ಣೆಂದು ಬಿತ್ತು ಜೋಯಿಸರ ಬೊಗಸೆಗೆ (ಕೃಕೃಹೊ. ೩೬). **ಬಹದರಿವರಹ :** ಇಂಗ್ಲಿಷ್ ಸರ್ಕಾರಕ್ಕೆ ಸಲ್ಲಬೇಕಾದ ವಗದಿತು ವಿಷಯದಲ್ಲಿ ಈ ರಾಜ್ಯವು ತತ್ಕಾಲಕ್ಕೆ ಕ್ಷೀಣದಶೆಯಲ್ಲಿದ್ದ ಕಾರಣ ಮೊದಲನೆಯ ವರ್ಷದಲ್ಲಿ ೭ ಲಕ್ಷ ಬಹದರಿವರಹಕ್ಕೆ ಬದಲಾಗಿ ೭ ಲಕ್ಷ ೮೦ಸಾವಿರಯಿವರಹವನ್ನು ಅಂಗೀಕರಿಸಲಾಗುವುದು (ಮೈಹಾಶಂ. II, ೦೦). **ಬಹಾದರೀವರಹ :** (೩). [ಬಹಾದ್ದುರಿ (<ಬಹಾದುರೀ) + ವರಹ]

**ಬಹಾದ್ದೂರ್** 'ಬಹಾದುರ್' ನೋ.

**ಬಹಾದ್ದೂರ** 'ಬಹಾದುರ್' ನೋ.

**ಬಹಾದ್ದೂರಗಡಿ** (ನಾ). ಸಮರ್ಥನಾದ ವ್ಯಕ್ತಿ; ದಕ್ಷ: ವಕೀಲರು ಬಹಾದ್ದೂರಗಡಿ ; ಸರದಾರ ಮನಸ್ಸಾ (ಶಕ್ತ್ಯ. ೧೯೩).

[ಬಹಾದ್ದೂರ (<ಬಹಾದುರ್)+ಗಡ್ಡಿ(ಪ ← ಮರಾ. ಗಡಿ=ಮನುಷ್ಯ)]

**ಬಹಾದ್ದೂರಿ** 'ಬಹಾದುರೀ' ನೋ.

**ಬಹಾರ್** (ನಾ). ೧. ಮೋಜು; ತಮಾಷೆ; ಗಮ್ಮತ್ತು : ಚದುರಂಗದ ಆಟವು ಎಂಥಾ ಬಹಾರ್ ನಡೆದಿರುತ್ತದೆ ! (ಕೋಹಿಜ. ೭೦). ೨. [ಸಂಗೀತ] ಒಂದು ರಾಗದ ಹೆಸರು: ಬಹಾರ್, ದಾಗೇಶ್ವರಿ, ಪೂರಿಯಾ, ದರ್ಬಾರಿ, ಕಮಾಚ್‌ರಾಗಗಳು ಉನ್ಮಾದವನ್ನೂ . . . ಗುಣಪಡಿಸುವುದೆಂಬ ಭಾವನೆ ಉತ್ತರಭಾರತದಲ್ಲಿದೆ (ಶಸಂರ. ೩೪೯).

[ ← ಪಾರ. ಹಿಂ. ಬಹಾರ್ ; ಮರಾ. ಬಹಾರ್, ಬಹರ್ ]

**ಬಹಾಲ್,** **ಬಹಲಿ,** **ಬಹಲು** (ನಾ). ೧. ಪೂರ್ವಸ್ಥಿತಿಗೆ ತರುವಿಕೆ ; ಯಥಾಸ್ಥಿತಿಗೆ ತರುವಿಕೆ : ಇನಾಂಜಮೀನುಗಳು ಬಹಾಲ್ ಆಗುವಾಗ್ಗೆ ಸರಕಾರದಲ್ಲಿ ಈಗ್ಯೂ ಮೂಲಸನದುಗಳು ಫೈಲಿನಲ್ಲಿ ಅವೆ (ಜಾಹು. ೨೩೯). **ಬಹಲಿ :** ೨. ಸಂಸ್ಥೆ, ಸ್ಥಾನ, ಕಚೇರಿ ಮೊದಲಾದುವುಗಳಲ್ಲಿನ ವ್ಯವಸ್ಥೆ : (೩). **ಬಹಲು:** ೩. ಇನಾಮು ; ಭಕ್ಷೀಸು.

**ಬಹಲ್ ಮಾಡು, ಬಹಲು ಮಾಡು**=೧. ಪೂರ್ವಸ್ಥಿತಿಗೆ ತರು; ಯಥಾಸ್ಥಿತಿಗೆ ತರು : ಹಿಂದೆ ಸರ್ಕಾರಕ್ಕೆ ದಾಖಲಾಗಿದ್ದ ಅನೇಕ ದೇವಾದಾಯ ಬ್ರಹ್ಮಾದಾಯ ಭೂಮಾನ್ಯಗಳನ್ನು ಬಹಲ್ ಮಾಡಿ ಪ್ರಯಾಣಕರ ಅನುಕೂಲಕ್ಕೋಸ್ಕರ ಅಲ್ಲಲ್ಲಿ ಕೆಲವೆಡೆ ಅನ್ನಸತ್ರಗಳನ್ನು ಏರ್ಪಡಿಸಿದರು (ಮಹಾಶಂ. II. ೩೩). ೨. ಭಕ್ಷೀಸು ಕೊಡು : ಇನಾಮು ಕೊಡು : ನಮ್ಮ ದೌಲತ್ತನ್ನು ಬಹಲು ಮಾಡುವುದಕ್ಕೆ ಅದನ್ನು ನಮಗೆ ಯಾರೂ ಕೊಟ್ಟಿಲ್ಲ. ಅದನ್ನು ನಮಗೆ ಕೊಟ್ಟ ಈಶ್ವರ ದೊಡ್ಡವನು (ಶಕ್ತ್ಯಶಾ. ೬೯). ಬಹಲಿಯಿಡು=ಬಹಲ್‌ಮಾಡು ೧ : ಅನಂತರ ಅಳಿದ ಅವರ ಪುತ್ರರು ಕಂಠೀರವಮಹಾರಾಜರು ಪಟೇಲರ ಇನಾಮನ್ನು ಜಪ್ತಿ ಮಾಡಿ ಇತರ ಗ್ರಾಮನೌಕರರ ಇನಾಮನ್ನು ಬಹಲಿಯಿಟ್ಟರು (ಮೈಹಾಶಂ. II. ೨೪).

[ ←ಪಾರ. ಮರಾ. ಬಹಾಲ್; ಹಿಂ. ಬಹಾಲ್, ಬಹಾಲೀ ]

**ಬಹಿ** (ನಾ). ಹೊರಗು : ಕಾಯದಲ್ಪಸುಖಕ್ಕೆ ಘನನಿಶ್ರೇಯಸಕೆ ಬಹಿಯಾಗಬೇಡ (ಕಾಶಂಕ. ೦೨-೩೩). [ <ಸಂ. ಬಹಿರ್ ]

**ಬಹಿಃಕರಣ** (ನಾ). ಪ್ರಕಟವಾಗುವುದು; ಅಭಿವ್ಯಕ್ತಿ: ನಾವು ಕಲಾಕೃತಿ ಎಂದು ಏನಾವುದನ್ನು ಕರೆಯುತ್ತೇವೆಯೋ, ಆ ಚಿತ್ರವೋ, ಗೀತವೋ, ಶಿಲ್ಪವೋ—ಅದು ಪಸಿದ್ಧರೂ ಪ್ರತಿಭಾನದ ಬಹಿಃಕರಣದ ರೂಪವಾದುದು (ಸಾಂತಕ. ೭೯). [ಸಂ.]

**ಬಹಿಃಕರಿಸು** (ಕ್ರಿ). ೧. ಅಭಿವ್ಯಕ್ತಪಡಿಸು; ತೋರ್ಪಡಿಸು: ತರುಣ ಕಳಂಕಮನಂತಃಕರಣದೊಳಾಂತಮುಳವೃತ್ತಿಯಂ ಕೂಡೆ ಬಹಿಃಕರಿಪಂತೆ ಮಹಾರಜನಾಂಬರಮಂ ಕಳೆದೇಕೆ ಧವಳಪಟಮಂ ಪೊದೆದಾ (ಜಗಿ. ೦೨-೯೦). ೨. ಹೊರಹಾಕು ; ಹೊರದೂಡು : ಇರಿಸಿ ತಮೋಗುಣಮಂ ಮಿಕ್ಕ ರಜಸ್ಸತ್ವಂಗಳಂ ಬಹಿಃಕರಿಸುವವೊಲ್ ಅರ್ಧ್ಯಾರ್ಧರಪಾಂಡುರದಶನರುಚಿಗಳಾನನದಿನೊಗೆಯೆ ಲಾಂಗಲಿ ನುಡಿದಂ (ಜಗಿ. ೦೫-೬೦).

[ ಬಹಿಃಕರಣ + – ಇಸು ]

**ಬಹಿಃಕ್ಷೇತ್ರ** (ನಾ). ಹೊರಭಾಗ; ಹೊರವಲಯಂ : ಆ ಯಜ್ಞದ ಸೂತ್ರಪ್ರಕಾರದಿಂ ಮುಖಶಾಲೆಯಂ ಬಹಿಃಕ್ಷೇತ್ರದೊಳ್ಸಲೆ ರಚಿಸಿ (ಕೃಬಚಾ. ೬-೭). [ಸಂ.]

**ಬಹಿಃಪುರ** (ನಾ). ಊರಿನ ಹೊರಭಾಗ ; ಹೊರವಲಯಂ: ವನಜವನರಾಜಿಕೂಜದ್ವನವಿಹಗವಿರಾಜಿ ಪುರಬಹಿಃಪುರಕೇಳೀವನದೊಡವು ರತಿಯು ಪೊಸಜೌವನದೊಡವೆನೆ ನೆಱೆಯೆ ಪೊಗಲಾವಂ ನೆಱೆವಂ (ಶಂಶಾಕಶಾ. ೦-೦೦೦). [ ಸಂ. ]

**ಬಹಿಃಪುಷ್ಕರ** (ನಾ). ಹೊರಭಾಗಕ್ಕೆ ಚಾಚಿಕೊಂಡಿರುವ ಸೊಂಡಿಲು ಳ್ಳುದು : ಅಗಾಧಸ್ರವಂತೀಪ್ರದಾಂತರ್ಜಲದೊಳ್ ನಿಷ್ಕಂಪತಾಂಗಂ ಮುಚಾಗಿದುದು ಬಹಿಃಪುಷ್ಕರಂ ಹಸ್ತಿಯೂಥಂ (ಶಂಕ್ರಕ. ೬-೬೯).

[ ಸಂ. ]

**ಬಹಿಕರಿಸು** (ಕ್ರಿ). ದೂರಮಾಡು; ಬಹಿಷ್ಕರಿಸು: ಯಶೋರಮೆ ನಾಚಿ ತಲೆಗೊಡಹಿ ಬಹಿಕರಿಸದಿಹಳೇ . . . ವಿಚಾರವ ಮಹಿಸದಳಿವರ ಸತಿಯನು (ಕೊಅಶಾ. ೩-೪-೩೯). [ <ಬಹಿಷ್ಕರಿಸು ]

**ಬಹಿತ್ರ, ಬಾಹಿತ್ರ, ಬೈತ್ರ, ಭೈತ್ರ**(ನಾ). ತೆಪ್ಪ; ಹರಿಗೋಲು: "ತರಣಿ ಬಹಿತ್ರಮುಂ" (ಶಬ್ದಕೋ. ೦೨೦-೧೭) ; ಗಗನತಲಜಲಧಿಯೊಳ್ ಬಹಿತ್ರದಂತೆ ಪರಿವ ಸೂರ್ಯಪ್ರಭನೆಂಬ ದೇವನ ವಿಮಾನಮಂ ನೋಡಿ (ಆಂಕ್ರ. ೩-೯೩ ವ) : ಏನೊಟ್ಟಿರ್ಪವೊ ಪೋಲ್ತು ದಿವ್ಯಜನಿತೃತ್ರಂಗಳ್ ಬಹಿತ್ರಂಗಳಂ (ಪುಶ್ರ್ಕ. ೨-೬೯). **ಬಾಹಿತ್ರ :** ಪುತ್ರರೇ ದುಃಖಾರ್ಣವಕೆ ಬಾಹಿತ್ರ ಸತ್ಕುಲನಾದನಕ್ಕಾ ಬೈತ್ರಮಾಸಂ (ಶಂಕಾ. ೦೩-೦೭). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೈತ್ರ:** ಬಡಿಗೊಂಡು ಮಸಗಿ ಬೈತ್ರಮನೊಡೆವ ಮಹಾಮಕರದಂತೆ ಕರಿಘಟೆಗಳನಾರ್ದಡಿಯಂ ಬಡಿದಾನಮೆರಸಾಗಡ ಕೊಂದಂ ಕ್ಷೇಮಧೂರ್ತಿಯಾ ಪವನಸುತಂ (ಶಂಕಾ. ೦೨-೬೮): ಜ್ವಲಿಪ ಪೊಂದೇರ್ಗಳೇ ಬೈತ್ರಂಗಳ್. . . ಎಸೆವ ಮದದಂತಿಗಳೆ ಶೈಲಜಾಲವೆನೆ ಜಲನಿಧಿಯೊಲೊಪ್ಪಿದುದು ರಣರಂಗ (ಶಾಂಕಕ್ಕೃ. ೦೩-೩೦); ಗುಂಡುಗಳು ಭಾರ ಬೈತ್ರಕ್ಕೆ ಲೋಕಕ್ಕೆ ಕೊಂಡೆಯನೆ ಭಾರ (ಸತ್ಕಶ. ೦೯೩೦). **ಭೈತ್ರ:** "ಪೋತಃ, ಪ್ರವಹಣಃ—ಈ ೨ ಭೈತ್ರಂ" (ಶಶಾಹು. ೦೦೬-೩೩) ; ಆ ಭುವನತ್ರಯವಿಜಯಿಯುಪ್ಪ ರೂಪಾತಿಶಯದೊಡನಮಳ್ಕಳೆದಂತೆ ಬಳೆದ ನಿಸರ್ಗಶೌಚಾದಿಗುಣಂಗಳಿಂ ದಿಣ್ಣಂಡಿಕ್ಕಿದ ಭೈತ್ರಮುಮಂ . . . ಪೋಲ್ತು (ಶಾಂಕ್ರ. ೦೦-೯೨ ವ); ತಲ್ಲಿಂಗಳೋರಂತೆ ನಮಿಸಿ ಬೀಳ್ಕೊಂಡು ಭೈತ್ರಮನೇಱೆ . . . ಆ ನಾವಿಕಂ ಪಡಂಗಂ ತಡಿಯನುಚಿ ಸೇರಿಸಿ (ಶಕ್ರಶಾ. ೦೦-೦೫೧). [ < ಸಂ. ವಹಿತ್ರ ]

**ಬಹಿರ, ಬಹಿರು** (ನಾ). ೧. ಹೊರಗು; ಬಹಿರಂಗ : ಹೆಜ್ಜೆಹೆಜ್ಜೆಗೆ ಕೃಷ್ಣ ಕೃಷ್ಣ ಅಜ್ಞಾನಭ ನಾರಾಯಣ ಮೂಜಗತ್ಪತಿಯೆಂದು ಸ್ತೋತ್ರ ನಿರ್ಲಜ್ಜವಾಗಿ ಪಠಿಸುತ ರಜ್ಜುಪಾಣಿಯ ಬಹಿರದಿಂದ ನಿರ್ವ್ಯಾಜಭಕುತಿಲಿ ನೋಡಿದೆ (ಶೀಶಶು. ೩೨); ಅನ್ಯರ ಕಣ್ಣಿಗೆ ಬಲುರಮ್ಯವಾಗಿ ಪಾವನನೆನಿಸಿಕೊಂಡೆ ಬಹಿರದಲ್ಲಿ ಬಣ್ಣವಲ್ಲದೆ ಲೇಶ ಅಂತರಶುಚಿ ಇಲ್ಲಾ (ಶಶಾಸು. ೬೬-೩). **ಬಹಿರು :** ೨. ಬಯಲು ಪ್ರದೇಶ : ಹೇಹದೊಳಗಿರ್ದರಿಗೆ ತದ್ವಿಧಿಗ್ರಾಹಗೊಳಿಸೈತರಲು ಬಹಿರಿಗೆ ಮೋಹರಿಸೆ ಚತ್ತೀರ ಅಕ್ಷೋಹಿಣಿಯುಃ ನಿಜಸೇನೆ (ಶಶಾ. ೯೩೨-೯೬); ಪುರದ ಪರಬಹಿರಿನೊಳು ದೂಸನು ವಿರಚಿಸಲು (ಶಶಾ. ೬೮-೬೦). [<ಸಂ. ಬಹಿಸ್

**ಬಹಿರಂಗ** (ನಾ). ೧. ಹೊರಗಿನ ಅವಯವ,-ಅಂಗ : ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ . . . ಇದೆ ಅಂತರಂಗಶುದ್ಧಿ ಇದೆ ಬಹಿರಂಗಶುದ್ಧಿ (ಬಸವ. ೨೪೫). ೨. ಹೊರಗಿನದು ; ಹೊರಭಾಗಕ್ಕೆ ಸೇರಿದುದು : ಆ ವಿಭುಗಾದುದಂದು ವಿಶದಂ ಬಹಿರಂಗಮುಮಂತರಂಗಮುಂ (ಶಾಂತಿಪು. ೯-೩೩). ೩. ಹೊರಗಡೆ ; ಹೊರಭಾಗ : ಅಂತರಂಗದಲ್ಲಿ ಜ್ಞಾನ ಬಹಿರಂಗದಲ್ಲಿ ಕ್ರಿಯೋಪಚಾರ ಇರುತಿರಲಿಕ್ಕಾಗಿ ಏಕಭಾವವೆನಿಸಿಕೊಂಬುದಯ್ಯಾ (ಸಿದ್ಧೇಶ. ೬೨-೩೯); ಎನ್ನೊರ್ವಗದೆ ಬಹಿರಂಗದಿಂ ತೆರಳ್ವುದು ನೀತಿಯಲ್ಲ (ಕೃಷ್ಣರಾಜ. ೪-೬೫). ೪. ಹೊರಗಿನ ಪ್ರದೇಶ,-ಎಡೆ : ಅಯ್ಯೋ ಆ ಬಟ್ಟಬಯಲಿನ ಹಾಳು ಬಹಿರಂಗದಲ್ಲಿ, ಕೋಗಿಲೆಯದೊಂದು ಕರ್ರಗೆ ಹವಣಿ ಕೂತಿತ್ತು (ಕೋಗಿಲೆ. ೩-೬೯). ೫. ಇಂದ್ರಿಯಗೋಚರವಾದುದು : ಪ್ರತ್ಯಕ್ಷ : ಬಹಿರಂಗದಲ್ಲಾದರೋ ಕೋಟಿಸೂರ್ಯಪ್ರಕಾಶಮಾನವಾದ ಪಾಂಡುರಂಗನ ಪ್ರತ್ಯಕ್ಷದರ್ಶನವಾಯಿತು (ಕಥಾ. ೪೪೪). ೬. ಮುಚ್ಚುಮರೆಯಿಲ್ಲದ ಸ್ಥಿತಿ ; ಎಲ್ಲರಿಗೂ ತಿಳಿದಿರುವಂತಹುದು ; ಸರ್ವವಿದಿತ : ಬಹಿರಂಗವಾಗಿ ಕಣಕುವಷ್ಟು ಧೈರ್ಯಗೊಂಡ ಕಡುಮೂರ್ಖರನ್ನು ತಾಮಸವಿಲ್ಲದೆ ಶಿಕ್ಷಿಸಿದನಕ ಭಿಕ್ಷೆತಕ್ಕೊಳ್ಳಲಾರೆನೆಂದು ಚಂಚಲನೇತ್ರರು ಹಟಹಿಡಿದರು (ಚಾಗೆಂ.ಪ. ೩೪); ಈ ವಿಷಯ ಬಹಿರಂಗಕ್ಕೆ ಬರಲು ಹೆಚ್ಚು ಸಮಯವೇನೂ ಬೇಕಾಗಿಲ್ಲ (ಆಡು).

**ಬಹಿರಂಗಭಕ್ತಿ**=(ಅಂತರಂಗದಲ್ಲಿ ಇಲ್ಲದೆ) ಹೊರಗಡೆಯಲ್ಲಿ ಮಾತ್ರ ತೋರಿಸುವ ಭಕ್ತಿ; ಬೂಟಾಟಿಕೆಯ ಭಕ್ತಿ : ತೋರಿದನು ಬಹಿರಂಗಭಕ್ತಿಯ ಕ್ರೂರಕಪಟಿಯು (ಜೈಮಿ.ಪು. ೪೦-೩೩). **ಬಹಿರಂಗ ಮಾಡು**=ಹೊರಗಡಹು : ಪ್ರಕಟಿಸು : ಯಾವುದೇ ಗುಟ್ಟಿನ ವಿಷಯವನ್ನು ಬಹಿರಂಗ ಮಾಡಬಾರದು (ಆಡು). **ಬಹಿರಂಗವಾಗು**=ಎಲ್ಲರಿಗೂ ತಿಳಿಯುವಂತಾಗು : ಪ್ರಚಾರಗೊಳ್ಳು : ಗುಟ್ಟು ಬಹಿರಂಗವಾದ ಮೇಲೆ ಬಹಿಷ್ಕಾರವಾದರೇನು ? ಪ್ರಾಯಶ್ಚಿತ್ತವಾದರೇನು ? (ಗಾದೆ). **ಬಹಿರಂಗ ವಿಚಾರಣೆ**=ಎಲ್ಲರ ಸಮಕ್ಷಮದಲ್ಲಿ ನಡೆಸುವ ವಿಚಾರಣೆ ; ಸಾರ್ವಜನಿಕವಿಚಾರಣೆ : ಹಲವಾರು ಮಂದಿ ಸೇರಿ ನಡೆಸಿದ ಬಹಿರಂಗ ವಿಚಾರಣೆಯಲ್ಲಿ ಆತನ ಮೇಲಿನ ಆಪಾದನೆಯು ಸಾಕ್ಷ್ಯಾಧಾರಗಳಿಲ್ಲದೆ ಬಿದ್ದು ಹೋಯಿತು (ಆಡು). [ಸಂ.]

**ಬಹಿರಂಗಪಡಿಸು** (ಕ್ರಿ). ಪ್ರಕಟಪಡಿಸು : ಹೊರಗೆಡಹು : ಆ ಗಂಡಹೆಂಡಿರು ತಮ್ಮ ಬಡತನಕ್ಕೋಸುಗ ಸರ್ವಾಭರಣಸಹಿತವಾಗಿ ದೊರೆತ ಮಗುವಿನ ವಿಷಯವನ್ನು ಬಹಿರಂಗಪಡಿಸಲಾರದಿದ್ದರು (ಕಾಲ. ೯). ಮದ್ರಾಸಿನ ಸಭೆಯೊಂದರಲ್ಲಿ ಸ್ವಾಮಿಗಳು ತಾವು ಚಿಕ್ಕಾಗೋದ ಸರ್ವಧರ್ಮಸಮ್ಮೇಳನಕ್ಕೆ ಹೋಗುವುದಾಗಿ ಬಹಿರಂಗಪಡಿಸಿದರು (ಕರ್ಮಗಾ. ೪೬). [ಬಹಿರಂಗ+ಪಡಿಸು]

**ಬಹಿರಕರ್ಮ** (ನಾ). ಪ್ರಾಕೃತಿಕವಾದ ಮಲಮೂತ್ರ ವಿಸರ್ಜನೆ ಮುಂತಾದ ಕ್ರಿಯೆ ; ಪ್ರಾತರ್ವಿಧಿ : ತ್ವರಿತದಿಂ ಬಹಿರಕರ್ಮವ ತೀರ್ಚಿ (ಸಸಕೋ. ೧೬-೩); ಬಹಿರಕರ್ಮವ ತೀರ್ಚಿ ತವಕದಿಂ ಲೀಲೆಯಿಂದಂಗ ಮಜ್ಜನಗೈದು (ಸಸವೋ. ೨೩-೬೧). [ಬಹಿರ+ಕರ್ಮ]

**ಬಹಿರರ್ಥಸಿದ್ಧಿ** (ನಾ). ಹೊರಗಿನ ಉದ್ದೇಶದ ಸಾಧನೆ : ವಿಜ್ಞಾನಂ ವಿಜ್ಞಾನಾಂತರಗ್ರಾಹಕಮಕ್ಕುಮಪ್ಪೊಡಾವ ಮಾಟ್ಕಿಯೊಳ್ ವಿಜ್ಞಾನಾಂತರಮಪ್ಪುದಾ ಮಾಟ್ಕಿಯೊಳೆ ಬಹಿರರ್ಥಸಿದ್ಧಿಯಾಗಿ ಸರ್ವಪ್ರತ್ಯಯನಿರಾಲಂಬನವಾದಂ ಕಿಡುಗುಂ (ಆದಿಪು. ೨-೦೦ ವ). [ಸಂ.]

**ಬಹಿರಾತ್ಮ** (ನಾ). ೧. ಹೊರಗಿನ ಆತ್ಮ,—ಜೀವ; ಶರೀರ : ತತ್ತ್ವಜೂಯತ್ತಂ ಬಹಿರಾತ್ಮಂ ಕಾಯಂ ಪ್ರತ್ಯುಪ್ತಸಪ್ತಧಾತುನಿಬದ್ಧಂ (ಪಸ್ತುಕೋ. ೬೧-೨೬). ೨. [ಜೈನ] ಅಂತರಾತ್ಮ, ಬಹಿರಾತ್ಮ ಮತ್ತು ಪರಮಾತ್ಮ ಎಂಬ ಮೂರು ಬಗೆಯ ಆತ್ಮಭೇದಗಳಲ್ಲಿ ಒಂದು : "ಇಂದ್ರಿಯಸುಖದಲ್ಲೇ ಆಸಕ್ತ ಮತ್ತು ಶರೀರಾದಿಗಳೇ ತಾನು ಎಂದು ತಿಳಿಯುವವ" (ಕೈಪಕೋ. ೦೬೪) : "ಕೋಮಲವಾದ ಮೈಯು, ಮಕ್ಕಳು ಮೊದಲಾದ ಕ್ಷಣಿಕವಿಷಯಗಳಲ್ಲಿಯೇ ಆತುರಗೊಂಡು ಮಗ್ನನಾಗಿರುವ ಜೀವವು, ತನ್ನದು ಪರರದು ಎಂಬ ಭೇದಭಾವವನ್ನು ಕಲ್ಪಿಸುತ್ತ ಹೋಗುವುದು" ಇದು ಬಹಿರಾತ್ಮನ ಲಕ್ಷಣವು (ಕೈಪಕ. ೩೬೭). [ಸಂ. ಬಹಿರಾತ್ಮನ್]

**ಬಹಿರಾವರಣ** (ನಾ). ಹೊರಗಿನ ಆವರಣ,—ಆಚ್ಛಾದನೆ,-ಮುಸುಕು : ಆತ ನಿರ್ಲೋಭನೂ ವಿಚಿತ್ರನೂ ಆದ ವ್ಯಕ್ತಿ, ಆತನ ಬಹಿರಾವರಣ ಕಳಚಿಹೋದಂತಿತ್ತು (ಪಾಂಡ II, ೪೯); ಈ ಪ್ರೇಮಕ್ಕೆ ಬಹಿರಾವರಣಗಳ ಅಣೆಯಿಲ್ಲ (ರಾಮೂಕ. ೦೦೨). [ಸಂ.]

**ಬಹಿರಿಂದ್ರಿಯ** (ನಾ). ಕಿವಿ, ಕಣ್ಣು, ಚರ್ಮ, ನಾಲಗೆ ಮತ್ತು ಮೂಗು ಎಂಬ ಐದು ಹೊರಗಿನ ಇಂದ್ರಿಯಗಳು; ಬಾಹ್ಯೇಂದ್ರಿಯ : ತರಣಿಮಂಡಲದಲ್ಲಿ ದೃಷ್ಟಿಯನಿರಿಸಿ ಬಹಿರಿಂದ್ರಿಯದ ಬಳಕೆಯ ಮರೆದು ವೇದಾಂತದ ರಹಸ್ಯದ ವಸ್ತು ತಾನಾಗಿ ಇರಲು (ಕುವ್ಯಾಕೃಷ್ಣ. ೦೪-೨೨). [ಸಂ.]

**ಬಹಿರಿಗೆ** (ನಾ). ಊರಿನ ಹೊರಗಿನ ಪ್ರದೇಶ,—ಬಯಲುಪ್ರದೇಶ : ತನ್ನ ಭಂಡಾರಸಹಿತಂ ಸ್ತ್ರೀಯರ್ಕಳುವೆರಸು ಗಾಂಧರ್ವದತ್ತೆಯುಂ ಮುಂತಾ[ನುಮಿಪಾ] ವಿಮಾನಂಗಳನೇಱಿ . . . ಪಯಣಂಬಂದು ಚಂಪಾಪುರಮನೆಯ್ದಿ ಪುರಬಹಿರಿಗೆಯೊಳ್ ಬೀಡಂ ಬಿಟ್ಟಿರ್ದು (ಜೀಹಕ. ೯-೪೦) ; ಪುರಬಹಿರಿಗೆಯೊಳ್ ಬಿಟ್ಟಿರ್ದ ಪಿರಿಯ ಬೀಡಂ ಕಂಡು (ಜೀಹಕ. ೯-೩ ವ)

[ಈ ಶಬ್ದವನ್ನು ಸಂಸ್ಕೃತ ವ್ಯಾಕರಣಸೂತ್ರದ ಮೂಲಕ ಸಾಧಿಸುವುದು ಕಷ್ಟ]

**ಬಹಿರು** 'ಬಹಿರ'ನೋ.

**ಬಹಿರುದ್ಯಾನ** (ನಾ). ಊರ ಹೊರಗಿನ ಉದ್ಯಾನ : ಬಹಿರುದ್ಯಾನಾಂತರದೊಳ್ ಸಹಸೋದಿತಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಂರ್ಗಸೆ ಪಡೆದತ್ತಹರ್ನಿಶಂ ಪರ್ಚನಂತರಂಗಕ್ಕನ್ನಾ (ಕಬಾ. ೦-೩೬); ಬಹಿರುದ್ಯಾನದ ಕೆಲದೊಳ್ . . . ಮಾಡಿಸಿದಂ ಗೃಹಮಹತ್ತರಂ ನಿಮಿಷದಿಂ ಸ್ವಯಂವರಗೃಹಮಂ (ಶಂರಾಪೂ. ೯-೩೪). [ಸಂ.]

**ಬಹಿರ್ಗತ** (ಗು). ೧. ಹೊರಹೊಮ್ಮಿದ ; ಪ್ರಕಟಗೊಂಡ. (ನಾ). ೨. [ನಾಟ್ಯ] ಆವರ್ತಿತ, ನತ, ಉತ್ಕ್ಷಿಪ್ತ, ಉದ್ವಾಹಿತ, ಪರಿವರ್ತಿತ, ನಿಸ್ಸೃತ, ಪರಾವೃತ್ತ, ತಿರಶ್ಚೀನ, ಬಹಿರ್ಗತ ಮತ್ತು ಕಂಪಿತ ಎಂಬ ಕಣಕಾಲುಗಳ ಹತ್ತು ಬಗೆಯ ಚಲನೆಗಳಲ್ಲಿ ಒಂದು : "ಜಂಘೆಯನ್ನು ಪಕ್ಕಕ್ಕೆ ನೀಡುವುದು" (ಲಾಸ್ಯರಂ. ಗದ್ಯಾನುವಾದ. ೨೬೪) ; ಮಿಗೆ ಪಾರ್ಶ್ವಕ್ಕಂ ನೀಡುತ್ತೊಗೆದತಿ ಪಸರಿಸೆ ಬಹಿರ್ಗತಾಖ್ಯಂ (ಲಾಸ್ಯರಂ. ೨-೦೪೬). ೩. ಹಿಮ್ಮಡಿಗಳ ಎಂಟು ವಿಧವಾದ ಚಲನೆಗಳಲ್ಲಿ ಒಂದು : ಉತ್ಕ್ಷಿಪ್ತ, ಪತಿತ, ಉತ್ಕ್ಷಿಪ್ತಪತಿತ, ಅಂತರ್ಗತ, ಬಹಿರ್ಗತ, ಮಿಥೋಯುಕ್ತ, ವಿಮುಕ್ತ, ಅಂಗುಲಿಸಂಗತ—ಈ ಎಂಟು ಪಾರ್ಷ್ಣಿಯ ಭೇದಂಗಳ್ (ಲಾಸ್ಯರಂ. ೩-೦೦೦ ವ). ೪. ಐದು ವಿಧವಾದ ಹರಡಿನ ನ್ಯಾಸಗಳಲ್ಲಿ ಒಂದು ವಿಧ : ಅಂಗುಷ್ಠಸಂಶ್ಲಿಷ್ಟ, ಅಂತರ್ಯಾತ, ಬಹಿರ್ಗತ, ಮಿಥೋಯುಕ್ತ, ವಿಯುತ—ಈ ಐದು ಹರಡಿನ ಭೇದಂಗಳ್ (ಲಾಸ್ಯರಂ. ೩-೧೧೦ ವ). [ಸಂ.]

**ಬಹಿರ್ದಾಹಿನಿ** (ನಾ). (ಹೊರಮೈಯನ್ನು ಸುಡುವ) ಒಂದು ಬಗೆಯ ಆಯುಧ : ಬಿಲ್ಲು ತಿರು ಹವೆ . . . ಅಂತರ್ದಾಹಿನಿ ಬಹಿರ್ದಾಹಿನಿ ಆಕಾಶಗಾಮಿನಿ . . . ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾಧಿಸಾಧನವಿಶೇಷಂಗಳಿಂದಲೂ (ವಿವೇಕ. ೨೬೩). [ಸಂ. ಬಹಿರ್ದಾಹಿನೀ]

**ಬಹಿರ್ದೃಷ್ಟಿ** (ನಾ). ೧. ಹೊರನೋಟ,-ದೃಷ್ಟಿ. ೨. ಹೊರಗಿನದನ್ನು

ಪರೀಕ್ಷಿಸಿ ನೋಡುವ ದೃಷ್ಟಿಯುಳ್ಳವನು ; ಹೊರನೋಟವುಳ್ಳವನು : ಅಂತರ್ದೃಷ್ಟಿಗಳು, ಬಹಿರ್ದೃಷ್ಟಿಗಳು, ಅವತಾರದೃಷ್ಟಿಗಳು, ಸರ್ವದೃಷ್ಟಿಗಳು ಎಂದು ಭಗವದ್ರೂಪದರ್ಶನವಿಭಾಗದಿಂದ ಮನುಷ್ಯರು ಬಹಿರ್ದೃಷ್ಟಿಗಳು (ಹಿಂದಶಾ. ೨೧೦). [ಸಂ.]

**ಬಹಿರ್ದೆಸೆ** (ನಾ). ಶೌಚಕ್ರಿಯೆ : ಬಹಿರ್ದೆಸೆಗೆ ಹೋಗಿರುವವರು ಇನ್ನೂ ಬಂದಿಲ್ಲ (ಬೂಹಿ). [< ಸಂ. ಬಹಿರ್ದಿಶಾ]

**ಬಹಿರ್ದೇಶ** (ನಾ). ೧. ಹೊರಭಾಗ ; ಹೊರವಲಯ : ರಾಜಶೇಖರ ರಾಜೇಂದ್ರಂ ರಾಜವೀಥಿಯಂ ದಾಂಟಿ ಪುರಬಹಿರ್ದೇಶದ ವೈಹಾಳಿಯ ಬಯಲ್ಗೆ ಸಂಭ್ರಮದಿಂ ಬರೆ (ರಾಜಶೇ. ೦೩-೮೩ ವ). ೨. ಬೇರೆಯ ದೇಶ : ಹೊರನಾಡು. ೩. ಹಳ್ಳಿ, ಊರುಗಳಿಲ್ಲದ ಸ್ಥಳ. ೪. ಮಲಮೂತ್ರವಿಸರ್ಜನೆ ; ಶೌಚಕ್ರಿಯೆ : ಪೀಠಾಲಿಯು . . . ಬಹಿರ್ದೇಶಕ್ಕೆ ಹೋಗಿ ಬಂದ ನಂತರ ಹಾಜರಾಗುವೆನು ಎಂದು ಹೇಳಿದನು (ಕೂಶಾಕ. ೩೬೬) ; ಅವಳ ಮಾತನ್ನು ಅಲ್ಲಿ ಬಹಿರ್ದೇಶಕ್ಕೆಂದು ಹೋಗಿದ್ದ ವೃದ್ಧಲ್ಲಚಂದ್ರನ ತಂದೆ ಕೇಳಿಕೊಂಡು ಮನೆಗೆ ಬಂದು ಹೆಂಡತಿಗೆ ಹೇಳಿದರು (ಕಾಗಿಕ. ೬೩). [ಸಂ.]

**ಬಹಿರ್ದ್ವಾರ** (ನಾ). ೧. ಹೊರಬಾಗಿಲು ; ಮುಂದಿನ ಬಾಗಿಲು. ೨. ಬಾಗಿಲಿನ ಹೊರಗಿರುವ ಪ್ರದೇಶ ; ಹೊರಅಂಗಳ. [ಸಂ.]

**ಬಹಿರ್ಭಾಗ** (ನಾ). ಹೊರಭಾಗ ; ಹೊರಗಡೆ : ಎಯ್ದೆ ಬಹಿರ್ಭಾಗದೊಳ್ ನಿಂದು ವಿಶ್ವಸೇನಮಹಾರಾಜಂಗೆ ಪೊಡೆವಿಟ್ಟು ಬೇಗಸಪ್ಪಶೋಭೆಯಂ ಗೆಯ್ಕಲ್ವೇಳ್ಟಿಟ್ಟುವುದುಂ (ಶಾಂತಿಪು. ೦೦-೬೬ ವ) ; ಆ ಹಯಂ ಬಳಿಕ ದಕ್ಷಿಣದಿಶಾಮುಖಮಾಗಿ ಮಾಹಿಷ್ಮತೀಪಟ್ಟಣದ ಬಹಿರ್ಭಾಗದುಪವನದೆಡೆಗೆ ನಡೆತಂದುದು (ಜೈಮಿಭಾ. ೬-೦೧). [ಸಂ.]

**ಬಹಿರ್ಮಂಡಲ** (ನಾ). ಒಬ್ಬ ರಾಜನ ಸ್ವಂತ ಅಧಿಕಾರಕ್ಕೆ ಹೊರತಾದ ರಾಜ್ಯ ; ಶತ್ರುರಾಜ್ಯ : ನಿನಗರಸ ಬಹಿರ್ಮಂಡಲ [ಶಾಸಂ. ೪] ಮನೆ ಸಮುಚಿಲ್ಕನಿತು ಬರಿಸಮುಂ ಪೋದವು ಕೇಳಿನಿಸಂತರ್ಮಂಡಲಸಾಧನ ಮುಂಟೆಂದಡಳುಪಿದುದುಮಾ ನಿನ್ನಲ್ಟುವವೇ (ಅಜಪು. ೦೧-೦೩). [ಸಂ.]

**ಬಹಿರ್ಮುಖ** (ಗು). ೧. ಮನಸ್ಸು ಹೊರಮುಖವಾಗಿರುವ ; ಬಾಹ್ಯವಿಚಾರಗಳಲ್ಲಿ ಆಸಕ್ತಿಯಿಂದ ಕೂಡಿದ. ೨. ಮುಖವನ್ನು ಬೇರೆಡೆಗೆ ತಿರುಗಿಸಿ ಕೊಂಡಿರುವ; ವಿಮುಖವಾದ. (ನಾ). ೩. ಬಾಹ್ಯ ವಿಷಯಗಳಲ್ಲಿ ಅನುರಕ್ತವಾದ ಸ್ಥಿತಿ : ಅಜ್ಞಾನದಿಂದ ಆವರಿಸಲ್ಪಟ್ಟವನಾಗಿಯೂ ವಿಷಯಾದಿಗಳಿಂದ ಬಾಧಿತನಾಗಿಯೂ ಬಹಿರ್ಮುಖವಾದ ಮನಸ್ಸುಳ್ಳವನಾಗಿಯೂ ವ್ಯವಹಾರ ಮಾಡುತ್ತಿದ್ದೇನೆ (ಪುಣ್ಯಾಕ. ೩೮೦). ೪. ವಿಮುಖನಾದವನು : ತಾಂ ಪಿತೃವಿತ್ತಮದೋನ್ಮತ್ತನಾಗಿ ಧರ್ಮದೊಳ್ ಬಹಿರ್ಮುಖನುಂ ಅರ್ಥದೊಳನ್ಯಾಯೋಪಾರ್ಜಿತಾರ್ಥನುಂ . . . ಆಗಿ (ಕುಂತಕಂ. ೨೬-೬). [ಸಂ.]

**ಬಹಿರ್ಯಾನ** (ನಾ). ೧. ಹೊರಹೋಗುವುದು. ೨. [ಜೈನ] ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಎಂಟನೆಯ ಕ್ರಿಯೆ ; ☞ ಮಗು ಹುಟ್ಟಿದ ಎರಡು, ಮೂರು ಅಥವಾ ನಾಲ್ಕನೆಯ ತಿಂಗಳಲ್ಲಿ ಅನುಕೂಲವಾದ ಶುಭದಿವಸದಂದು ಮಗುವನ್ನು ಪ್ರಸೂತಿಗೃಹದಿಂದ ಹೊರಕ್ಕೆ ಕರೆದುಕೊಂಡು ಹೋಗುವುದು ; ಉಪನಿಷ್ಕ್ರಮಣ : ದ್ವಾದಶಾಂಗದೊಳ್ ಪೇಟ್ದಾದಾನ ಪ್ರೀತಿ ಸುಪ್ರೀತಿ ಧೃತಿ ಮೋದಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ . . . ತ್ಯಾಗ ನಿವೃತ್ತಿಯೆಂಬಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಅಜಪು. ೦೩-೦೫ವ) ; ಆದಾನಮುಂ . . . ಬಹಿರ್ಯಾನಮುಂ ನಿಷದ್ಯೆಯುಂ . . . ಅಗ್ರನಿವೃತ್ತಿಯುಮೆಂದಾದಾನಾದಿ ನಿರ್ವಾಣಪರ್ಯಂತಮಪ್ಪ ಯ್ವತ್ತುಮೂಱುಗರ್ಭಾನ್ವಯಕ್ರಿಯೆಯೊಳ್ (ಶಾಂತಿಪು. ೨೦೨). [ಸಂ.]

**ಬಹಿರ್ಲಾಪಿ** (ನಾ). ಒಂದು ಬಗೆಯ ಪದ್ಯಬಂಧ : ಪ್ರಶ್ನೆ ಅಥವಾ ಶ್ಲೋಕಗಳಲ್ಲಿರುವ ಶಬ್ದಗಳಿಂದ ಬೇರೆಯಾವ ಕಡೆ ಉತ್ತರವನ್ನು ಹುಡುಕಿ ಹೇಳುವುದು ; ☞ ಇದು ಅಂತರ್ಲಾಪಿಗೆ ವಿರುದ್ಧವಾದುದು : ಒಂದು ಸಜ್ಜೆವನೆಯೊಳೊರ್ವಕ್ಕರಿಗಬೋಜಂಗಂ ಸೊರ್ಕಿ ಜವ್ವನಿಗೆ ಸಕ್ಕದದ ಬಹಿರ್ಲಾಪಿಯುಂ ಪೇಳ್ದಂ (ರಾಜಶೇ. ೧೧-೧೬೦ ವ). [ಸಂ. ಬಹಿರ್ಲಾಪಿನ್]

**ಬಹಿರ್ಲೇಪ** (ನಾ). ಹೊರಗಿನ ವಿಷಯದಲ್ಲಿ ಮನಸ್ಸು ಆಸಕ್ತವಾಗಿರುವುದು : ಅನುರಾಗನುಂ ವಿರಾಗಮುಮುಳ್ಳ ವಿಷಯಗಳು ಯೆನಿಪ ವಿಷಯಂಗಳಂ ಪಿಡಿವಲ್ಲಿ ಬಿಡುವಲ್ಲಿ ಮನದೊಳನಿಸಂ ಬಹಿರ್ಲೇಪವಂತರ್ಲೇಪವೆಂಬುಭಯಮುಮಭಾವದಿಂದನವರತ ಪರಶಿವಾದ್ವೈತನಿಷ್ಠೆಯೊಳು ನಿಂದ (ಅಣ್ಣಾ. ೩೭-೯೩). [ಸಂ.]

**ಬಹಿರ್ವಣ** (ನಾ). ಊರ ಹೊರಗಿನ ಉದ್ಯಾನ, ತೋಟ : ಅಣಿಯರಮಂಬರ್ದಸಮಂತರ್ವಣದ ಬಹಿರ್ವಣದ ಕಂಪು ಪೋಪೆಬ್ಬಿಪಡೆ ಪಟ್ಟಣವಿರ್ಪುದು ಮದಿಲೊಳ್ಮಂತಿಣಿಯಿನೆ ಪರಿವೇಳ್ದ ಬಳಿಕಮಂ ಕಟ್ಟಿದಪೊಲ್ (ಅಪಂಪು. ೦-೬೬). ☞ ಇದು ಪ್ರಾಸಕ್ಕಾಗಿ ಮಾಡಿಕೊಂಡ ರೂಪ. [<ಸಂ. ಬಹಿರ್ವನ]

**ಬಹಿರ್ವನ** (ನಾ). = ಬಹಿರ್ವಣ : ಗಿರಿಂಬಜ . . . ಬಹಿರ್ವನದೊಳಗಣ ಬಾಲಚೂತಾಂಕುರಮಂ ಬಲವಾದು (೧೯೪. ೩-೧೦೩ ವ). [ಸಂ.]

**ಬಹಿರ್ವರ್ತನೆ** (ನಾ). ಹೊರಗಿನ ನಡವಳಿಕೆ ; ಬಾಹ್ಯ ವ್ಯವಹಾರ : ಬಹಿರ್ವರ್ತನೆಯಲ್ಲಿ ಕಾಣುವ ಅಂಶಗಳನ್ನೇ ತೆಗೆದುಕೊಂಡು ತನ್ನ ನೂತನವಾದವನ್ನು ರೂಪಿಸಿದನು (ಶಿಕ್ಷಪ. ೪೨೮). [ಸಂ. ಬಹಿರ್ವರ್ತನ]

**ಬಹಿರ್ವಳಿಯ** (ನಾ). ಮೂಲವ್ಯಾಧಿಯಲ್ಲಿ ಒಂದು ಬಗೆ ; ಗೂದೆ ಹೊರಬರುವ ರೋಗ : ವಿಷಮಾಸನದಿಂದ . . . ಮೇಲೆ ಮೇಲೆ ಭೋಜನವ ಮಾಡುವುದರಿಂದ ಮೂಲವ್ಯಾಧಿಯಕ್ಕುಂ. ಅದರ ಪ್ರಕಾರ— ಇರುದೆಸೆ, ಬಿಸಿಯು ರಕ್ತ ಅಪಾಟಕ್ಕಳಿದು ಬಂಧವಾಗಿ ಸಂಗ್ರಹಿಸಿ ಅಂತರ್ವಳಿಯು, ಬಹಿರ್ವಳಿಯುಂ ಎಂದು ಬಂದೆರಡು ಪ್ರಕಾರಮಕ್ಕು. ಅದು ರಕ್ತ ಒಡೆಯದೆ ಗುದದೊಳು, ಗಟಾಗಿಯಿಕ್ಕುಂ, ಅಂತರ್ವಳಿಯು ಉಪವಾಸದಿಂದ, ಕಠಿಣಾಸನದಿಂದ ಮಲ ಶುಷ್ಕವಾಗಿ ಪೊತ್ತು ರಕ್ತ ಒಡೆಯದೇ ಮೊಳೆಗಳು ತೋರ್ಕು. ಗೂದೆ ಹೊರಪಟ್ಟು ಬಹಿರ್ವಳಿಯುಮಕ್ಕು (ಖಗೇಂ. ೦೧೦). [ ? ]

**ಬಹಿರ್ವಾಸ** (ನಾ). (ಹೆಗಲ) ಮೇಲೆ ಹಾಕಿಕೊಳ್ಳುವ ವಸ್ತ್ರ : ಕಂಗೊಳಿಸುವ ಧವಳಬಹಿರ್ವಾಸಮಂ ತೊಟ್ಟು ಕಣ್ಗಳೊಳು ಕರುಣಾಮೃತರಸವ ತುಂಬಿ ಸರ್ವರಂ ಸಲಹುವ ಯತೀಶನಾರೆ (ಶಿವ್ಯೇಪು. ೦೩-೩೩) ; ದಂಡಂ ಭಸಿತಾಧಾರಂ ಬಹಿರ್ವಾಸಮುಂ ಮುಂದಿರ ಲಿಂಗಾಂಗಸಂಯುಕ್ತಯೋಗಿಪ್ರಸರಂ ಬಂದಿರ್ದುದು (ಶೃಕಶ. ೩-೯೯). [ಸಂ. ಬಹಿರ್ವಾಸಸ್]

**ಬಹಿರ್ವೇದಿ** (ನಾ). ಯಜ್ಞಶಾಲೆಯ ಹೊರ ಜಗಲಿ : ನೆರೆದುದವನೀಪಾಲಜನಸಾಗರ ಬಹಿರ್ವೇದಿಯ ಮಹಾಚಪ್ಪರದೊಳಗೆ ತಂತಮ್ಮ ಸಿಂಹಾಸನಸಗಾಢದಲಿ (ಕುವ್ಯಾಸ. ೬-೨೯) ; ಬರ್ಹಿ ಸಮಿಧಾಜ್ಯ ತಿಲ ವ್ರೀಹಿ ಚರುವಾದಿಯಾದ ಯಜ್ಞಸಂಭಾರಮನಿರಿಸಿ ಅಂತರ್ವೇದಿ ಬಹಿರ್ವೇದಿ ಆಹವನೀಯಗಾರ್ಹಪತ್ಯದಕ್ಷಿಣಾಗ್ನಿಯ ರಚಿಸಿ (ರಜಾಪ. ೮-೩೪ ವ). [ಸಂ.]

**ಬಹಿಶ್ಶಂಕೆ** (ನಾ). = ಬಹಿರ್ದೇಶ ೪ : ಒಬ್ಬ ಹಡ್ಡನು ಅಡಕೆಯ ಬಾಯೊಳಿಟ್ಟು ಎಲೆಯ ಕೈಯೊಳ್ಪಿಡಿದು . . . ಬಹಿಶ್ಶಂಕೆಗೆ ಪೋಪಲ್ಲಿ ಎಡಹಿ ಬಿದ್ದು ಎಲೆ ಅಡಕೆಯೊಳು ಬೀಳೆ ತಾನು ಬಿದ್ದು ಆ ಪಟ್ಟಣವ ಬೈವುತ್ತಿರಲು (ಕೃರಶೂ. I, ೨೬೨). [<ಸಂ. ಬಹಿಶ್ಶಂಕಾ]

**ಬಹಿಷ್ಕರಿಸು** (ಕ್ರಿ). ೧. ಬಹಿರಂಗಪಡಿಸು ; ಪ್ರಕಟಿಸು : ಮೆಲ್ಲ

ವೆಲ್ಲನೆ ಪಾತಂದೆಗೆವಸಂತಃಕರಣದಲ್ಲಿರ್ದುದಂ ಬಹಿಷ್ಕರಿಸಬೇಕೆಂದೆನುತ ಬಲ್ಲಂಗೆ ಬಲ್ಲಹಂ ಚೆನ್ನಬಸವೇಶ್ವರಂ ವಿನಯಸಂಪ್ರೀತಿವೆರೆದ ಸೊಲ್ಲಿನಿಂದ . . . ಇಂತೆಂದನು (ಕಂಥ. ೭-೨೬). ೨. ಪ್ರಕಟಿಸಿ ಕೊಳ್ಳು : ಗೋಚರಿಸು : ಅಖಂಡಪರಿಪೂರ್ಣಜ್ಯೋತಿಯೇ ವ್ಯೈದಾಳಿ ನಿಃಕಳಂಕ ಮಲ್ಲೇಶ್ವರನಾಗಿ ಬಹಿಷ್ಕರಿಸಿ ರುದ್ರಪ್ರಮಥಗಣಂಗಳೊಡಗೂಡಿ ಪ್ರಕಟವಾದ ಮಾರಪ್ಪನ ಪರಮಾನಂದ ಮೇರೆಗಳೆದ ಮಹಾಸಾಗರದಂತೆ ಹರಿಯಿತು (ಶೂನ್ಯಸಂ. ೭೪ ಕೃಷ್ಣಾಪನ). ೩. (ಯಾವುದಾದರೂ ಧಾರ್ಮಿಕದೃಷ್ಟಿಯಿಂದ ತಪ್ಪುಮಾಡಿದ ವ್ಯಕ್ತಿಯನ್ನು ಜಾತಿ, ದೇಶ ಮೊದಲಾದುವುಗಳಿಂದ) ಹೊರಹಾಕು : ಧಾರ್ಮಿಕವಾಗಿ ಸಮಾಜದಿಂದ ದೂರಮಾಡು : ಇವಳ ಮನೆಗೆ ಹೋಗಬಾರದು. ತಾವು ಮೀರಿ ಹೋಗುವಿರಾದರೆ ಜನರು ತಮ್ಮನ್ನೂ ಬಹಿಷ್ಕರಿಸುವರು (ಕಥಾ. ೪೦೪). ೪. ಹೊರದೂಡು ; ತಿರಸ್ಕರಿಸು : ಪಶುಪಕ್ಷಿಗಳನ್ನು ಸಂರಕ್ಷಿಸುವ ನೀವು ಮಾನವಪ್ರಾಣಿಗಳನ್ನು ಬಹಿಷ್ಕರಿಸುತ್ತೀರಿ (ರಮಣಗಾ. ೫೩). [<ಬಹಿಷ್ಕಾರ + – ಇಸು[3]]

**ಬಹಿಷ್ಕಾರ** (ನಾ). ೧. ಹೊರದೂಡುವಿಕೆ : ಹೊರಹಾಕುವಿಕೆ. ೨. (ಯಾವುದಾದರೂ ಧಾರ್ಮಿಕದೃಷ್ಟಿಯಿಂದ ತಪ್ಪು ಮಾಡಿದ ವ್ಯಕ್ತಿಯನ್ನು ಜಾತಿ, ದೇಶ ಮುಂತಾದುವುಗಳಿಂದ) ಬಹಿಷ್ಕರಿಸುವಿಕೆ: ಊರಿನವರು . . . ದಾಸನಿಗೆ ಬಹಿಷ್ಕಾರಪತ್ರವನ್ನು ತರಿಸಿ ಶುಭಸ್ವೀಕಾರದ ದಿವಸ ಅದನ್ನು ಓದಿಸಿದರು (ಕಥಾ. ೪೦೫) : ವಿಠಲಪಂತ್ ಸಂಸಾರಿಯಾದದ್ದು ಎಂದರೆ ಸಮಾಜದ ಬಹಿಷ್ಕಾರಕ್ಕೆ ತುತ್ತಾದದ್ದು ಎಂದು (ಭಾರರ. ೨೯೨).

**ಬಹಿಷ್ಕಾರ ಕೊಡು** = ಸಮಾಜದಿಂದ ಹೊರಗೆ ಹಾಕು : ಮುಸಲ್ಮಾನನಾದನೆಂದು ಆತ್ಮೀಯರೆಲ್ಲರೂ ಅವನಿಗೆ ಬಹಿಷ್ಕಾರ ಕೊಟ್ಟು ಶುದ್ಧವಾಗಿ ತ್ಯಜಿಸಿಬಿಟ್ಟರು (ಕಹಾಕಂ. ೩೪). **ಬಹಿಷ್ಕಾರ ಹಾಕು** = ಬಹಿಷ್ಕಾರ ಕೊಡು : ನನ್ನ ದಾಸನಿಗೆ ಬಹಿಷ್ಕಾರ ಹಾಕಿದರೆ ನಿನ್ನ ಬಳಿ ನಾನಿರುವೆನೆ ? (ಕಥಾ. ೪೦೫) ; ಶೃಂಗೇರಿಯ ಗುರುಗಳಿಗೆ ಈ ಸುದ್ದಿ ತಲುಪಿ ಇಡಿಯ ಅಗ್ರಹಾರಕ್ಕೇ ಬಹಿಷ್ಕಾರ ಹಾಕಿದರೆಂದೂ ಪ್ರತೀತಿ (ಸಂಸ್ಕಾರ. ೦೫). [ಸಂ.]

**ಬಹಿಷ್ಕಾರಿ** (ನಾ). ಹೊರಹಾಕಲ್ಪಟ್ಟವನು ; ಬಹಿಷ್ಕೃತನಾದವನು : ಚೋರನನು . . . ಸಮಯವಿಕಾರಭೇದಿಯಾನಿಂತಜೀವರನು ಕಂತು ಮನ್ನಿಸದೆ ದೂರದಲಿ ವರ್ಜಿಸುವುದು ಬಹಿಷ್ಕಾರಿಗಳು ಸರ್ವಕ್ಕವರುಗಳು (ಶಾಂಪುರಾ. ४-४೭). P ಸಂಸ್ಕೃತದಲ್ಲಿ ಇದಕ್ಕೆ ಕರ್ತೃ ಅರ್ಥ ಮಾತ್ರ ಇದೆ. [ಸಂ. ಬಹಿಷ್ಕಾರಿನ್]

**ಬಹಿಷ್ಕೃತ** (ಗು). ೧. ಬಹಿಷ್ಕಾರಕ್ಕೊಳಗಾದ; ಹೊರದೂಡಲ್ಪಟ್ಟ: ನುತವಶೀಕೃತ ಭರ್ಗ ನಿಶ್ಶ್ರಿತ ಮಹೇಶ್ವರ ಭಕ್ತವರ್ಗ ಸುಹಿತ ಘನಪ್ರತಿವೀರವಾರ್ಗ ಬಹಿಷ್ಕೃತ ಸ್ವರ್ಗ (ಬಸಪು. ೩೬-೬೮). (ನಾ). ೨. ಸಮಾಜದಿಂದ ಹೊರಹಾಕಲ್ಪಟ್ಟವನು ; ಬಹಿಷ್ಕಾರಕ್ಕೆ ಒಳಗಾದವನು. [ಸಂ.]

**ಬಹಿಷ್ಕೃತೆ** (ನಾ). ಹೊರಕ್ಕೆ ದೂಡಲ್ಪಟ್ಟವಳು: ಬಹಿಷ್ಕಾರಕ್ಕೊಳಗಾದವಳು : ತನ್ನದೆಂದು ಕರೆಯಬೇಕಾಗಿದ್ದ ಮನೆಯಲ್ಲೇ ಬಹಿಷ್ಕೃತೆಯಾಗಿ (ಚಾಕ್ರಂ. ೨೦೯). [ಸಂ. ಬಹಿಷ್ಕೃತಾ]

**ಬಹಿಷ್ಠೆ** (ನಾ). ಹೊರಗಾದವಳು ; ಮುಟ್ಟಾದವಳು : ರಜಸ್ವಲೆ : ನಾನು ಬಹಿಷ್ಠೆಯಾಗಿದ್ದೇನೆ. ಒಂದೇ ಬಟ್ಟೆಯಲ್ಲಿದ್ದೇನೆ (ಶಕಭಾ. ೯೬) : ಬಹಿಷ್ಠೆಯಾಗಿದ್ದ ದ್ರೌಪದಿಯನ್ನು . . . ಸೆಳೆದುಕೊಂಡು ಬಂದು ಸಭಿಕರ ಮುಂದೆ ನಿಲ್ಲಿಸಿದನು (ಜೀಕೃಶ. ೦೦೬). [ಸಂ. ಬಹಿಷ್ಠಾ]

**ಬಹಿಷ್ಪ್ರಜ್ಞ** (ನಾ). ಹೊರಪ್ರಪಂಚದ ಅರಿವುಳ್ಳವನು; ಬಾಹ್ಯಜ್ಞಾನವುಳ್ಳವನು : ಜಾಗೃತಾವಸ್ಥೆಯೇ ಮೊದಲನೆಯದು. ಇದಕ್ಕೆ ಸಂಬಂಧಪಟ್ಟಂತೆ ಐದುವಿಷಯಗಳನ್ನು ಹೇಳಿದೆ: –೧. ಬಹಿಷ್ಪ್ರಜ್ಞ–ಬಾಹ್ಯಜ್ಞಾನವುಳ್ಳವನು (ಜೀವಾಕ್ಕ. ೦೨೭). [ಸಂ.]

**ಬಹಿಸ್ತಟ** (ನಾ). ಹೊರಗಡೆಯ ದಡ : ಹೊರದಂಡೆ : ಪೂಗವನಂಗಳಿಂದೆಲೆಯ ಬಳ್ಳಿಗಳಿಂ ತೆಂಗಿನಲ್ಲಿನಲ್ಪಡಂಗಾಗೆ ಬಹಿಸ್ತಟಂ ಪುದಿದ ತಾವರೆವಳ್ಳಿಯ ನಳ್ಪಿನಿಂ ಪಸುರ್ವಾಗೆ (ಮಲ್ಲಿಪು. ೨-೪೫). [ಸಂ.]

**ಬಹಿಸ್ಥ** (ನಾ). [ಜ್ಯೋತಿ] (ರಾಶಿಚಕ್ರದ) ಹೊರಭಾಗ : ಉರಗನಿಂದೆ ತಾರೆ ಮುಖದೊಳ್ ನಿಲೆ ಮೂಜುನಿರಕ್ಕೆ . . . ಬಹಿಸ್ಥವಾಜು ತಳ್ತಿರೆ ತೆನೆ ನಂಜು ಕಾಡಿಗೆ ವಿಶೇಷಫಲಂ ಕಡುಸಣ್ಣಮಾಕ್ಕುಂ (ಅಟ್ಟಮ. ೯-೨). [ಸಂ.]

**ಬಹು** (ಗು). ೧. ಹೆಚ್ಚು ; ಅಧಿಕ ; ಬಹಳ. ೨. ದೊಡ್ಡದಾದ : ಹಿರಿಯ. (ನಾ). ೩. ಅಧಿಕವಾದುದು : "ಪ್ರಭೂತಂ . . . ಬಹುಳಂ, ಬಹು . . . ಭೂರಿ– ೧೨ ಅಧಿಕವಾದದ್ದರ ಹೆಸರುಗಳು" (ಸಿದ್ಧಾಂತ. ೩೪೦).

**ಬಹುಮಟ್ಟಿಗೆ**=ಬಹಳವಾಗಿ ; ಬಹುತೇಕ : ಹೀಗೆ ಬಹುಮಟ್ಟಿಗೆ ಎಲ್ಲ ಸಾರಜನಕವೂ ಸೂರ್ಯನ ಸುತ್ತಲಿನ ಮೇಘದಲ್ಲೇ ಉಳಿಯಿತು (ಭೂಹುಟ್ಟು. ೩೦) ; ಅವರ ಅನುಭವ ಪಾಂಡಿತ್ಯಗಳನ್ನು ಒಳಗೊಂಡ ಈ ಗ್ರಂಥ ಬಹುಮಟ್ಟಿಗೆ ನಿರ್ದುಷ್ಟವಾಗಿದೆ (ಗೃಹಂ. IV ಮುನ್ನು೨). **ಬಹುಮಟ್ಟು**=ಬಹುಮಟ್ಟಿಗೆ : ಇಷ್ಟರಲ್ಲೂ ಬಹುಮಟ್ಟಿನ ಸಾಮ್ಯವೂ ಇದೆ (ಜಗದಾ. ೦೦೬). [ಸಂ.]

**ಬಹುಕಳಿ** (ನಾ). ಮಲ್ಲಯುದ್ಧದ ಒಂದು ಪಟ್ಟು.–ವರಸೆ: ರಂಗಮಂ ಪೊಕ್ಕು ಭುಜಾಸ್ಫಾಳನಂ ಗೆಯ್ವುದ್ದೊಡೆ . . . ಪೊಕ್ಕಮರ್ದು ಸಮಲತಾ ಬಹುಕಳಿ ಕತ್ತರಿಗಳಿಂ ಗಾಯಮಜಾದೊತ್ತಿ ನೋಡಿ (ಬಂಹಂ. ೩-೩೦ ವ). [ ? ]

**ಬಹುಕುಟುಂಬಿ** (ನಾ). ದೊಡ್ಡಸಂಸಾರವುಳ್ಳವನು : ಮನೆ ತುಂಬ ಮಕ್ಕಳು ಮೊಮ್ಮಕ್ಕಳನ್ನು ಪಡೆದ ಬಹುಕುಟುಂಬಿಯಾದವನು (ಶಂಖಾಂಕ. ೬೨). [ಸಂ. ಬಹುಕುಟುಂಬಿನ್]

**ಬಹುಕುಳ** (ಗು). ಅನೇಕ : ಅಧಿಕವಾದ : ಅಳವಡಿಯದ ಭಾಷೆ ಬಹುಕುಳವಾದ ನುಡಿ ಇಂತೆರಡವು ನುಡಿ ಹುಸಿಯಾಯ್ತು (ಅಶಕಂ. ೩೦-೦೩೦). [ಬಹು + ಕುಳ[3]]

**ಬಹುಗ್ರಾಹಿ** (ನಾ). [ವೈದ್ಯಶಾ] ಅನೇಕ ರೋಗಗಳನ್ನು ವಾಸಿ ಮಾಡುವಂತಹುದು : ಬಹುರೋಗನಾಶಕ : ಮದನಕಾಮೇಶ್ವರೀ ಗುಳಿಗೆ . . . ಹಸುವಿನ ತುಪ್ಪದಲ್ಲಿ ವಾತನಾ. ಕಬ್ಬಿನ ಹಾಲಲ್ಲಿ ತ್ರಿದೋಷಹರ. ಲವಂಗದ ಪುಡಿಯಲ್ಲಿ ಬಹುಗ್ರಾಹಿ (ವೈಕಿ. ४೦). [ಸಂ. ಬಹುಗ್ರಾಹಿನ್]

**ಬಹುಚಾರಿ** (ನಾ). ಅತಿಶಯವಾಗಿ ಚಲಿಸುವಿಕೆ. — ತಿರುಗುವಿಕೆ : ಕ್ರೂರನೆನಿಸಿ ಶಾಂತನೆನಿಸಿ ಮತ್ತೊಮ್ಮೆಮ್ಮೆ ವೀರನೆನಿಸಿ ಹೇಡಿಯೆನಿಸಿ ನಾರಿಯೆನಿಸಿ ನಲ್ಲನೆನಿಸಿ ಹಂಸನ ಬಹುಚಾರಿಯಾಡುವುವು ಕರ್ಮಗಳು (ಭರತ. ೩೬-೦೦೦). [ಸಂ. ಬಹುಚಾರಿನ್]

**ಬಹುಚಾಳಿ** (ನಾ). [ನಾಟ್ಯ] ನೃತ್ಯದ ಒಂದು ಪ್ರಕಾರ : ಪೇಜಿವಂಗ ಪ್ರತ್ಯಂಗೋಪಾಂಗ ಬಹುಚಾಳಿ ಪರದೇಶಿಕೋಲಚಾರಿಗಳ ಪಿಂದಂಗಹಾರ ಮಂಡಲ ರಕ್ಷೇತ್ರ ಬಿರುದಿನ ನಾಟ್ಯಮಾಡಿದರು (ಶಂಸಪು. ೮-೩೩). [ಬಹು + <ಚಾಳಿ[1]]

**ಬಹುತೆ** (ನಾ). ೧. ಒಂದಕ್ಕಿಂತ ಹೆಚ್ಚು ಸಂಖ್ಯೆಯಿಂದ ಕೂಡಿದುದು : ಮುನ್ನಿನ ಎಲ್ಲ ಕಬ್ಬ ಎಂದು ಬಹುತೆಯನ್ನು ಸೂಚಿಸುವಾಗ ಪಂಪನು 'ಕವಿರಾಜಮಾರ್ಗ'ಕ್ಕಿಂತ ಹಿಂದಿನ ಕಾವ್ಯಗ್ರಂಥಗಳನ್ನು

ಮನದಲ್ಲಿ ಇಟ್ಟಿರಬಹುದು (ಕಮಿಷ. ೨೬). ೨. [ವ್ಯಾಕ] ಬಹುವಚನ : ಏಕತೆಯೆ ತನಗೆ ಬಹುತೆಯನಾಕರಿಸದು ಜಾತಿ ತಾಂ (ಕಮರ, ೦೩೯). [ಸಂ. ಬಹುತಾ]

**ಬಹುತೇಕ** (ಅ). ೧. ಅನೇಕ; ಹೆಚ್ಚಾದ : ಭಾರತದ ಬಹುತೇಕ ಜನರು ಗ್ರಾಮಾಂತರಪ್ರದೇಶದಲ್ಲಿ ವಾಸಿಸುತ್ತಾರೆ (ಭೂಗೋ. ೬೦೭) ; ಬಹುತೇಕ ನದಿಗಳು ಅನಂತಕಾಲದಿಂದ ಹರಿಯುತ್ತಿವೆ (ಕಕಾ. ೨). ೨. ಪ್ರಾಯಶಃ ; ಬಹುಶಃ : ಮಧ್ಯಾಹ್ನ ಬಹುತೇಕ ನಿಮ್ಮನ್ನು ಹೆದರಿಸಿ ಬಂದದ್ದೇ . . . ಇವರ ಮುಂದೆ 'ಶಿಪಾಯಿ ರಸು' ಕೊಡೆಯುತ್ತಿದ್ದ (ಕುಚಿಟಾ . ೬೪); ಕನ್ನಡದಲ್ಲಿ ಇಂದು ಬಹುತೇಕ ಎರಡನೆಯ ಹಾದಿಯ ಮೇಲೆ ಪ್ರಯತ್ನಗಳು ನಡೆದಿವೆ (ಜನಾ. ೨೧). [←ಮರಾ. ಬಹುತೇಕ್]

**ಬಹುತ್ವ** (ನಾ). [ವ್ಯಾಕ] ಬಹುವಚನ : ಜಾತಿವಿಭಾಗವುಂ ಬಗೆದು ವೇಳೆ ಬಹುತ್ವಮನೇಕವಾಕ್ಯಸಂಜಾತಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ (ಕಶಾ. ೦-೦೦೯) ; ಅವಚೊಳ್ ದ್ವಿತ್ವಬಹುತ್ವಂ ಬವರಿಸೆ ತಕ್ಕಿರ್ದುವಲ್ಲಿ ಗಳ್ ಶಬ್ದಂ (ಕಾವ್ಯಾ. ೮೭) ; ಏಕ ದ್ವಿತ್ವ ಬಹುತ್ವಮನೇಕ ದ್ವಿಬಹುತ್ವವಸ್ತುಗಳೊಳಾಚರಿಪರ್ (ಕಮರ. ೯೪). [ಸಂ.]

**ಬಹುದು** 'ವರ್' ಪರಾ.

**ಬಹುದುಃಖ** (ನಾ). ೧. ಅತಿಶಯವಾದ ಅಳಲು.– ಸಂಕಟ: ಅವರು ಬಹುದುಃಖದಿಂದ ಆ ಮಾತನ್ನು ಹೇಳಿದರು (ಕಂ). ೨. ಒಂದು ನರಕದ ಹೆಸರು: ಬಹುದುಃಖ . . . ಮಹಾದುಃಖವೆಂಬೈದು ಮಂ ತ್ರಿನರಕಂಗಳಿಂ (ಶಬ್ದಮ. ೦೮೦). [ಸಂ.]

**ಬಹುದ್ವಿಷ** (ನಾ). ಅನೇಕ ಶತ್ರುಗಳನ್ನುಳ್ಳವನು ; ಬಹುಜನದ್ವೇಷಿ: ಸುರಗುರುದ್ವಿಜವೈರಿ ಬಹುದ್ವಿಷಂ ಭಯೋಪೇತನಧಾರ್ಮಿಕಂ ವಿಕಳ ತಂತ್ರನನಿಶ್ಚಿತಮಂತ್ರನಾಗಳುಂ ಭೀತಪರಿಗ್ರಹಂ (ಶಂಕರಂ. ೩೨೦-೮). [ಸಂ.]

**ಬಹುಧಾನ್ಯ** (ನಾ). ೧. ಸಮೃದ್ಧವಾದ ಧಾನ್ಯ,–ಕಾಳು: ಹುಬ್ಬಿನೊಳಗಳ ಬಹುಧಾನ್ಯದ ತೆನೆ (ಮುದ್ದುಗುಂ. ೪. ೨೩೮-೮೩). ೨. ಅರುವತ್ತು ಸಂವತ್ಸರಗಳಲ್ಲಿ ಹನ್ನೆರಡನೆಯದು : ಅಭಿನವ ನಿಘಂಟನಭಿನವಮಂಗ ನಿರ್ಮಿಸಿದನಂಬರಾಂಬಕವಹ್ನಿಯೇಕೈಕಶಕದ ಬಹುಧಾನ್ಯದಲ್ಲಿ (ತುಂಗಶಾ. ೦೩೩-೩೬) ; ಆ ವರ್ಷವೇ ಪ್ರಭವ . . . ಬಹುಧಾನ್ಯ . . . ಅಕ್ಷಯ ವೆಂದರುವತ್ತು ತೆರನಾಗಿಹುದು (ಶಬ್ದಮ. ೩೨೦). [ಸಂ.]

**ಬಹುನಾಯಕತ್ವ** (ನಾ). ಹಲವರಿಂದ ನಡೆಸುವ ಆಧಿಪತ್ಯ : ಇದೆಲ್ಲ ಬಹುನಾಯಕತ್ವದ ಫಲ. ಆದ್ದರಿಂದ ನಿಮ್ಮಲ್ಲಿ ಒಬ್ಬನನ್ನು ನಾಯಕನನ್ನಾಗಿ ಮಾಡಿಕೊಳ್ಳಿರಿ (ಕಕ. ೬.೩೬). [ಸಂ.]

**ಬಹುನೂತ್ನ** (ಗು). ಹೆಚ್ಚು ನವೀನವಾದ ; ಅತ್ಯಂತ ಹೊಸದಾದ.– ನೂತನವಾದ : ಬಹುನೂತ್ನಕೇತನಚ್ಛಾಯಾನಿವಾರಿತರೋಷ್ಣಮನನಿಂದಿತ ಸುಂದರರಾಜಮಾರ್ಗಮಂ . . . ಪುಗೆ ನೃಪೇಶ್ವರಕನ್ಯಕೆಯುಂ ಕುಮಾರನುಂ (ಕಾಂತಿಕ. ೬-೯). [ಬಹು + ನೂತ್ನ]

**ಬಹುಪತಿತ್ವ** (ನಾ). ಒಬ್ಬನಿಗಿಂತ ಹೆಚ್ಚು ಗಂಡಂದಿರನ್ನು ಹೊಂದಿರುವಿಕೆ : ವಿವಾಹವಿಚ್ಛೇದ, ವಿಧವಾವಿವಾಹ, ವಿಧುರವಿವಾಹ ಬಹುಪತ್ನೀತ್ವ ಮತ್ತು ಬಹುಪತಿತ್ವಗಳಲ್ಲಿ ಕೆಲವಕ್ಕಾದರೂ ಅವಕಾಶ ಕೊಡಬೇಕು (ಶಿಕಾ. ೨೩೮). [ಸಂ.]

**ಬಹುಪತ್ನೀತ್ವ** (ನಾ). ಒಬ್ಬಳಿಗಿಂತ ಹೆಚ್ಚು ಪತ್ನಿಯರನ್ನು ಹೊಂದಿರುವಿಕೆ : ಬಹುಪತ್ನೀತ್ವವು ಅಂದಿನ ರಾಜತ್ವಕ್ಕೆ ಸಾಮಾನ್ಯ ರೂಢಿ ಮಾತ್ರವಲ್ಲ, ಅದೊಂದು ಹಿರಿಮೆ (ಕಾರದ. ೯೮೦). [ಸಂ.]

**ಬಹುಪಾದಿ** (ನಾ). ಅನೇಕ ಕಾಲುಗಳನ್ನುಳ್ಳ ಪ್ರಾಣಿ : ಬಹುಪಾದಿಗಳು (Myna Pada) ಈ ವರ್ಗದ ಪ್ರಾಣಿಗಳಲ್ಲಿ ೯–೧೫೦ ಜೊತೆ ಉಪಾಂಗಗಳಿರುತ್ತವೆ (ಪ್ರಾಣಿಶಾ. ೨೨೦); ಪಾಲಿಪೊಡ (ಬಹುಪಾದಿ) . . . ಹೊಟ್ಟೆಯ ಹುಸಿಕಾಲುಗಳಿವೆ (ಜೀವಿಕ. ೦೨೮). [ಸಂ. ಬಹುಪಾದಿನ್]

**ಬಹುಪುಷ್ಪ** (ನಾ). ೧. ಪಾರಿಜಾತದ ಗಿಡ. ೨. ಹವಳದ ಗಿಡ. [ಸಂ.]

**ಬಹುಪುಷ್ಪಿ** (ನಾ). ಒಂದು ಬಗೆಯ ಸಸ್ಯ ; ಆವರಿಕೆಯ ಗಿಡ : "ಬಹು [ಪಾಠಾಂ. ರಜ]ಪುಷ್ಪಿ ಆವರವೆನಲ್ಕಾವರೆಯೆನಿಕ್ಕು" (ತುಂಗಶಾ. ೯೦-೩೦). [ಸಂ. ಬಹುಪುಷ್ಪೀ]

**ಬಹುಪ್ರಜ** (ನಾ). ೧. ಅನೇಕ ಮಕ್ಕಳಿರುವವನು: ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ ಸತ್ಪುತ್ರವಿತ್ತಾಢ್ಯವೊಂದಿರೆ ತತ್ಪಂಚಮದೊಳ್ ಬಹುಪ್ರಜನರಾತಿಸ್ಥಾನದೊಳ್ ಕೂಡೆ ನಿಷ್ಠುರಂ (ಜಾತಕ. ೧೮-೬). ೨. ಹಂದಿ. ೩. ಮುಂಜಹುಲ್ಲು. [ಸಂ.]

**ಬಹುಭಾರ್ಯ** (ನಾ). ಅನೇಕ ಹೆಂಡತಿಯರನ್ನು ಪಡೆದವನು : ಇನಜ . . . ವೃಷರಾಶಿಯೊಳ್ ನೆಲಸೆ ಮರ್ಜ್ಯಂ ಸ್ವಲ್ಪವಿತ್ತಂ ವಧೂಜನಮಿತ್ರಂ ಬಹುಭಾರ್ಯಂ (ಜಾತಕ. ೧೬–೩೨). [ಸಂ.]

**ಬಹುಭಾರ್ಯಾಯೋಗ** (ನಾ). [ಜ್ಯೋತಿ] ಹಲವು ನಕ್ಷತ್ರಗಳ ನಿರ್ದಿಷ್ಟ ಸ್ಥಾನಬಲದಿಂದ ಜಾತಕನಿಗೆ ಉಂಟಾಗುವ ಬಹುಪತ್ನೀತ್ವ : ಜೋಯಿಸರು ಮಗುವಿನ ಜಾತಕವನ್ನು ನೋಡಿ ಈ ಮಗುವಿಗೆ ಬಹುಭಾರ್ಯಾಯೋಗವಿದೆಯೆಂದು ಹೇಳಿದರು (ಕಂ). [ಸಂ.]

**ಬಹುಭಾಷಣ** (ನಾ). ಅತಿಯಾಗಿ ಮಾತನಾಡುವಿಕೆ ; ವಾಚಾಳತನ : ಶೇಷವಾಸುಗಿ ಬಹಳನುತಬಹುಭಾಷಣಂಗಳನತಿಗಳೆದೆಸೆದಶೇಷಮಹಿಮಾಮೂರ್ತಿ ಕಂಡೆನು ನಿಮ್ಮ ಪದಯುಗವ (ಶಕು. ೩೦-೬೦). [ಸಂ.]

**ಬಹುಭಾಷಿ** (ನಾ). ಹೆಚ್ಚು ಮಾತನಾಡುವವನು ; ವಾಚಾಳಿ : ನೀನಪ್ಪೊಡೆ ಬಹುಭಾಷಿ (ಶಂಕರಂ. ೦೩೦-೦೯); ಸಭೆಯೊಳು ಮೇಲೆದ್ದು ಕುಣಿವನು ಬಹುಭಾಷಿ ಹಿಂದುಳಿವನು ಮಿತಭಾಷಿ (ತಂಶಾಸ. ೨೦೩-೬೪). [ಸಂ. ಬಹುಭಾಷಿನ್]

**ಬಹುಭೂಮಿಕ** (ನಾ). ೧. ಅನೇಕ ಅಂತಸ್ತುಗಳನ್ನು ಪಡೆದಿರುವುದು; ಹಲವು ಮಹಡಿಗಳನ್ನುಳ್ಳದು. ೨. ಹೆಚ್ಚು ಭೂಮಿಯನ್ನು ಹೊಂದಿರುವವನು; ದೊಡ್ಡ ಜಮೀನುದಾರ. ೧, ೨ : ಬಗೆಯೆ ಬಹುಭೂಮಿಕಂ ಮಾನಗುಣೋನ್ನತಿಸಂಯುತಂ ಮಹಾಭೋಗಾ ತನ್ನಗವಾಕ್ಷನಾವಳಿಯುಂ ಹರ್ಮ್ಯಗೃಹಾಳಿಯುಮೆಂದೊಡೊಳ್ಪನೇವಣ್ಣಿಪುದೋ (ಚಂದ್ರಪ್ರ. ೩-೦೮). [ಸಂ.]

**ಬಹುಮಂಜರಿ** (ನಾ). ಒಂದು ಬಗೆಯ ಸಸ್ಯ; ಕೃಷ್ಣತುಳಸಿ : "ತುಳಸಿಯದು ಸುರಸಿ ಬಹುಮಂಜರಿಯೆನಿಕ್ಕು ಕಪ್ಪಾಗಿರಲು" (ತುಂಗಶಾ. ೩೯-೨೬). [ಸಂ. ಬಹುಮಂಜರೀ]

**ಬಹುಮತ** (ಗು). ೧. ಗೌರವಕ್ಕೆ ಪಾತ್ರವಾದ. ೨. ಅನೇಕ ಬಗೆಯ ಅಭಿಪ್ರಾಯಗಳನ್ನು ಹೊಂದಿರುವ. (ನಾ). ೩. ಅಧಿಕಸಂಖ್ಯೆಯ ವ್ಯಕ್ತಿಗಳ ಅಭಿಪ್ರಾಯ : ಅವರ ಪಕ್ಷದ ಬಹುಮತವು ಕಡಿಮೆಯಾಗುತ್ತ ಬಂದಿತ್ತು (ಹಳ್ಳಿಶಾ. ೯೨); ಒಟ್ಟು ಸದಸ್ಯರಲ್ಲಿ ಮೂರನೆಯ ಎರಡು ಭಾಗಕ್ಕೆ ಕಡಿಮೆಯಿಲ್ಲದಷ್ಟು ಜನಗಳ ಬಹುಮತದಿಂದ ಆ ಸಂಕಲ್ಪವು ತೀರ್ಣವಾಗಿಲ್ಲದ ಪಕ್ಷದಲ್ಲಿ (ಭಾರಾಪ. ೩೦). [ಸಂ.]

**ಬಹುಮತಿ** (ನಾ). ಅತಿಶಯವಾದ ಗೌರವ: ಮನೆಯಾತ ಅವನಿಗೆ ನಾಲ್ಕು ಸಾವಿರ ಹೊನ್ನು ಕೊಟ್ಟು ಹಲವಾರುರಥಗಳನ್ನೂ ಬಹುಮತಿಯಾಗಿ ಕೊಟ್ಟನು (ಕಥಾಸ. ೦೦೬) ; ಪ್ರಪಂಚದಲ್ಲೆಲ್ಲ ಸಾಹಿತ್ಯದಲ್ಲಿ ಪ್ರಮುಖರಾದ ಒಬ್ಬೊಬ್ಬರಿಗೆ ದೊರೆಯುವ 'Nobel Prize' ಎಂಬ ಬಹುಮತಿಯು ಶುಲ್ಕ ದೊರೆಯಿತು (ಕರ್ನಾಶಾ. ೬೨). [ಸಂ.]

**ಬಹುಮತಿಸು** (ಕ್ರಿ). ಗೌರವಿಸು; ಮನ್ನಿಸು : ನೀಂ ಮುಟ್ಟಿದ ನಂದನೆಯಂ ಬಹುಮತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯ ವಿಮಾನ್ಯಂ (ಶಾಕುಂತ. ೬೮-೧೨೦) [ಬಹುಮತ + -ಇಸು]

**ಬಹುಮತೆ** (ನಾ). ಗೌರವಾರ್ಹಳಾದ ಹೆಂಗಸು; ಮಾನ್ಯೆ: ಎಲೆ ಪತಿಗಳೆ, ಪತಿಗೆ ಬಹುಮತೆಯಾಗಿ ಬಾಳು (ಶಾಕುಂತ. ೦೦೨-೨೬). [ಸಂ. ಬಹುಮತಾ]

**ಬಹುಮಾನ** (ನಾ). ೧. ಅತಿಶಯವಾದ ಗೌರವ; ವಿಶೇಷವಾದ ಮರ್ಯಾದೆ: ಕಣ್ಣು ಕಟ್ಟಿ ಮೇಲೆ ಕಡುರೂಪ ಚಲ್ವಿಕೆಯ ಬಣ್ಣ ಗುಂದಿದ ಮೇಲೆ ಬಹುಮಾನವೆ (ಕಪಚ. ೩೬-೧); ಮಗಳೇ, ಪತಿಯ ಬಹುಮಾನಸೂಚಕವಾದ ಮಹಾದೇವೀಶಬ್ದವನ್ನು ಹೊಂದು! (ಶಾಕುಂತ. ೫೦-೧೧). ೨. ಪಾರಿತೋಷಕ; ಇನಾಮು; ಉಡುಗೊರೆ: ದೊಡ್ಡವರು ಬಡವರಿಗೆ ಉಚಿತವಾಗಿ ಕೊಡುವುದನ್ನು ಬಹುಮಾನ ಎನ್ನುತ್ತಾರೆ, ಬಡವರು ದೊಡ್ಡವರಿಗೆ ಉಚಿತವಾಗಿ ಕೊಡುವುದನ್ನು ಮರ್ಯಾದೆ ಎನ್ನುತ್ತಾರೆ (ಕಂಜಕಂ. ೧೧); ತಮ್ಮ ರತ್ನಹಾರವನ್ನು ಬಹುಮಾನವಾಗಿ ಕೊಡುವೆವೆಂದು ಮಹಾರಾಜರು ಘೋಷಿಸಿದ್ದಾರೆ (ಶಾಐಕ. ೩೭). [ಸಂ.]

**ಬಹುಮುಖ** (ನಾ). ೧. ಏಕಮುಖವಾಗಿಲ್ಲದಿರುವುದು; ಚಂಚಲವಾಗಿರುವುದು : ಹೀನಮುಖ ಬಹುಮುಖ ಪರಾಙ್ಮುಖ ದೀನಮುಖ ವಾಚಾಲ ವಾಙ್ಮುಖವಜ್ಞಾನಮುಖವಂತರ್ವಿಮುಖ ಬಹಿರ್ಮುಖದ ಕಾರ್ಯದಲಿ ಆ ನರೇಂದ್ರನ ವರ್ತನಕೆ ದುಸ್ಥಾನವಾಗದೆ ಬಿತದು (ಉವ್ಯಾಅ. ೬-೩೭). ೨. ಅನೇಕ ಬಗೆ; ರೀತಿ : ಅವನ ಬಹುಮುಖವಾದ ಜ್ಞಾನದಾಹವನ್ನೂ ತೀಕ್ಷ್ಣವಾದ ಗ್ರಹಣಶಕ್ತಿಯನ್ನೂ ನೋಡಿ ಅವಳು ದಿಗ್ಭ್ರಮೆಗೊಂಡಿದ್ದಳು (ಪುನರು. ೩೨೬). [ಸಂ.]

**ಬಹುಮುಖಿ** (ನಾ). ಏಕಚಿತ್ತವಿಲ್ಲದವನು; ಚಂಚಲಮನಸ್ಸಿನವನು : ಗುಹೇಶ್ವರನೆಂಬ ಲಿಂಗಸಾರಾಯ ಬಹುಮುಖಿಗಳಿಗೆ ತೋರದು (ಅವಚ. ೫೪-೨೫೦); ಮಾನ್ಯರ ಮನದ ಮನ್ನಣೆಯನರಿದಿಪ್ಪುದೇ ವ್ರತ . . . ಇಂತಲ್ಲದೆ ಜಗವ ಸಿಕ್ಕಿಸುವ ಬಹುಮುಖಿಗಳಿಗೆಲ್ಲಿಯದೋ ಮುಕ್ತಿ (ಮೋಕಮಾ. ೩೩-೦೩೬). [ಸಂ. ಬಹುಮುಖಿ]

**ಬಹುಮೂತ್ರ** (ನಾ). ಅತಿಯಾಗಿ ಮೂತ್ರವಿಸರ್ಜನೆಯಾಗುವ ಒಂದು ಬಗೆಯ ರೋಗ : ಆವರಿಕೆ:—ಈ ಚಿಗುರು ಅರೆದು . . . ಎಮ್ಮೆ ಮೊಸರಲ್ಲಿ ತೆಗೆದುಕೊಳ್ಳೆ, ಬಹುಮೂತ್ರ ಗುಣ(ಅವೈಶಿ. ೨); ಬಹಳವಾದ ಆಯಾಸಪಡುವುದರಿಂದಲೂ . . . ಮಲಮೂತ್ರಾದಿಗಳ ವೇಗವ ತಡೆಯುವುದರಿಂದಲೂ ಈ ೮ ಪ್ರಕಾರದಿಂದ ಬಹುಮೂತ್ರರೋಗವುಂಟಾಗುತ್ತಿಹುದು (ಸಕವ್ಯ. ೩೭೮). [ಸಂ.]

**ಬಹುರೂಪ** (ಗು). ೧. ಅನೇಕ ರೂಪಗಳುಳ್ಳ. (ನಾ). ೨. ಅನೇಕರೂಪ : ಹಲವು ಆಕಾರ : ಇಂದ್ರಜಾಲಿಗನಂತೆ ವಿಯದವನೀದಿಗ್ಭಾ[ಗ]ದೊಳ್ ತನ್ನ ರೂಪೆ ರೂಪಾಗಿ ಬಹುರೂಪದಿಂ ಕಾದುತ್ತಿರ್ದ ಸುರಂ . . . ಪೆಜತೆಗೆದು ಪೋಗಿ (ಶಾಂತಿಪು. ೬-೩೯ ವ) : ಉಪಮಾನಕಥನವೊಂದಱಿನುಪಮೇಯಮನಱಿವುದದು ಸಮಾಸೋಕ್ತಿ ನಿಷೇಧಪದಂ ತಾನಂ ಬಂತಾಗೆ ಪೇಳ್ವುದಾಪೇಕ್ಷಮಕ್ಕುಮದು ಬಹುರೂಪಂ (ಕಾವ್ಯಾವ. ೬೯೭). ೩. ಅನೇಕ ವೇಷಗಳನ್ನು ಧರಿಸಿ ಆಡುವ ಒಂದು ಬಗೆಯ ನಾಟಕ ಪ್ರದರ್ಶನ : ಅಪ್ಪಾ ಬೊಪ್ಪಾ ಚಿಕ್ಕ ಚೋಹವಂ ತೊಟ್ಟು . . . ತಪ್ಪಿ ಹಜ್ಜೆಯನಿಕ್ಕಿ ಆಡುತ್ತಿದ್ದ ರೇಕಣ್ಣಪ್ರಿಯನಾಗಿನಾಥನಲ್ಲಿ ಹೊತ್ತು ಹೋಗದ ಬಹುರೂಪವ (ಸವಚ. II; ೩೩೩-೩); ಈತ, ಚಿತ್ರವಿಚಿತ್ರವಾದ ಬಹುರೂಪಗಳನ್ನಾಡಿ ಭಕ್ತರನ್ನು ತಣಿಸುವ . . . ಕಾಯಕವನ್ನು ಕೈಗೊಂಡ (ಕವಿಕೋ. XI. ೯೯೨). ೪. ಅನೇಕ ರೂಪಗಳನ್ನು ಧರಿಸುವವನು; ಬಹುವೇಷಧಾರಿ: ಕಂದರ್ಪನ ಕೊಂದು ನಿಂದು ನಾಟ್ಯವನಾಡಿದಂದಂದಿನ ಬಹುರೂಪನಾಹೋ (ಶಿಪಗೀ. ೦೬೯-೯೬೩). ೫. ಓತಿಕೇತ; ಗೋಸುಂಬೆ. ೬. ಸೂರ್ಯ. ೭. ಒಂದು ಬಗೆಯ ಮರದ ಅಂಟು; ಸಜ್ಜರಸ : "ಯಕ್ಷಧೂಪಃ . . . ಬಹುರೂಪಃ—೫ ಸಜ್ಜರಸದ ಹೆಸರುಗಳು" (ಸಿದ್ಧಾಂಶಿ. ೨೦೭). ೮. ಶಿವ. ೯. ಬ್ರಹ್ಮ. ೧೦. ವಿಷ್ಣು. ೧೧. ಮನ್ಮಥ. ೧೨. ಕೂದಲು. [ಸಂ.]

**ಬಹುರೂಪಿ** (ನಾ). ೧. ಹಲವು ರೂಪಗಳಿಂದ ಕೂಡಿದುದು : ದೇಹ ಬಹುರೂಪಿ— ಶೈವಲದಂತೆ (ಹರಿಹೂ. ೦೩೯). ೨. ಹಲವು ರೂಪಗಳಿಂದ ಕೂಡಿದವನು; ಬಗೆಬಗೆಯ ಸೋಗು ಹಾಕುವವನು : ಕಣಿಯಲಾಱದೆ ಸೋತಾಕ್ಷಣದೊಳು ಬಹುರೂಪಿ ಕಱುಗಾಯಿಸಿದನು (ಕೃಕಿಕೂ. I. ೨೨೨). [ಸಂ. ಬಹುರೂಪಿನ್]

**ಬಹುರೂಪಿಣಿ** (ನಾ). ೧. ವಿಧವಿಧವಾದ ವೇಷವನ್ನು ಧರಿಸುವವಳು; ನಟಿ. ೨. ದೊಂಬರವಳು : "ಬಹುರೂಪಿಣಿ ಕೊಲ್ಲಟಗಿತ್ತಿಯು" (ಕಕುಹೂ. ೯೩). ೩. [ಜೈನ] ಒಂದು ಬಗೆಯ ಮಾಯಾವಿದ್ಯೆ; ತಾನು ಬಯಸಿದ ರೂಪವನ್ನು ಧರಿಸಬಹುದಾದ ವಿದ್ಯೆ : ಸುತಾರಾರೂಪಧಾರಿಣಿಯಾಗಿ . . . ಪಟ್ಟಿರ್ದ ಬಹುರೂಪಿಣಿಯೆಂಬ ಅಶನಿಘೋಷನ ಘೋಷಣವಿದ್ಯೆಯುಮನದಂ ಸುತಾರೆಗೆತ್ತು (ಶಾಂತಿಪು. ೬-೩೯ ವ); ಸಾಧಿಸಿ ಬಹುರೂಪಿಣಿಯಂ ಸಾಧಿಸುವಂ ಪಗೆಯಂ (ಶಂಗಾಪು. ೦೯-೬೨). [< ಸಂ. ಬಹುರೂಪಿಣೀ]

**ಬಹುರೂಪೆ** (ನಾ). ಅಗ್ನಿಯ ಏಳು ನಾಲಗೆಗಳಲ್ಲಿ ಒಂದು; "ಯಾಗಕರ್ಮದಲ್ಲಿ (ಸಾತ್ವಿಕ): ಹಿರಣ್ಯಾ, ಕನಕಾ, ರಕ್ತಾ, ಕೃಷ್ಣಾ ಸುಪ್ರಭಾ, ಬಹುರೂಪಾ, ಅತಿರಕ್ತಾ (ತಂತ್ರಸಾರ ಶಕದ್ರು, VI. ೨೬೦-೨೬೧; ಅಭಿರ. ೧೩-೭೮)" (ಕ್ರೀನಕ್ಕ. ೦೩೬) : "ಬಹುರೂಪವತಿರಕ್ತಮಸಿತರಕ್ತಂ ಸದಂಶುಹಿರಣ್ಯಮಾ ಕನಕವರ್ಚಿಯೆಸಲಗ್ನಿಯಲ್ಲಿಹವೇಟುನಾಲಗೆಗಳಕ್ಕು" (ಮಂಗರಾ. ೦೯-೬). [ಸಂ. ಬಹುರೂಪಾ]

**ಬಹುಲ, ಬಹುಳ** (ಗು). ೧. ಅನೇಕ; ಯಥೇಷ್ಟ : ಬಹುಲರೋಗಂಗಳಿಂ ನವವಂ ಭೃತ್ಯರಂ ನೋಯಿಸುತ ಹಿಡಿದ ಚಲವಂ ಬಿಡದವಂ (ಜೀಕೃಕು. ೯-೨೨-೯೬); ಕವಚ ಶೀರ್ಷಕ ಹಾರವಂ, ಬಹುಲನಾನಾರವಂ ಕೀಲಿಸಿತು ಕಿವಿಗತಿಕಠೋರವಂ ! (ಜಕ್ಕಾಂಗ. ೬೨-೨೨೩೬). ೨. ಹೆಚ್ಚಾದ; ಅಧಿಕವಾದ : ಬಹುಲಕರುಣಾಸಮುದ್ರ ಹಲಗೆಯ ಗುರುವೆ (ಜೀಕೃಪು. ೨-೦೦-೩). ೩. ದಟ್ಟವಾದ; ನಿಬಿಡವಾದ; ಸಾಂದ್ರ. ೪. ದಪ್ಪವಾದ; ಸ್ಥೂಲವಾದ : (+). ೫. ಕರಿಯ ಬಣ್ಣದ; ಕಪ್ಪಾದ. (ನಾ). ೬. ಚಾಂದ್ರಮಾನ ತಿಂಗಳಿನ ಎರಡನೆಯ ಅರ್ಧ ಭಾಗ; ಕೃಷ್ಣ ಪಕ್ಷ : ವಿತತಾಷಾಢದ ಬಹುಳ[ಶಾಕಾಂ.೪] ಪ್ರತಿಪದ್ದಿನದಂದು ಕೀರ್ತಿ ನೆಗಟ್ದಿರೆ (ಅಂಪು. ೯-೬೬). ೭. ದಪ್ಪಗಿರುವವನು : "ಪೀವರನೆನಲ್ ಸ್ಥೂಲನೆನೆ ಬಹುಲನೆನೆ (ಪೀನನೆನೆ) ದೊಡ್ಡಿತಪ್ಪವನೆನಿಕ್ಕುಂ" (ಮಂಗರಾ. ೬೮-೦೧). ೮. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಮೂರನೆಯದು; ಕೃತ್ತಿಕೆ. ಬಹುಳ: ೧. ಅಗುರ್ವಾರ್ಥಿಯಂ ಕಿಟ್ಟಡಿಕುಂ ನಾನಾಮರಾಳೀಬಹುಳಕಳಕಳಧ್ವಾನಸಂತಾನದಿಂದಂ (ಜಗಾ. ೨-೦೩). ೬. ದಿವಸನಾಥಾದಿ ಗ್ರಹಶ್ರೇಣಿ ಸೌಮ್ಯಗಣಂ ಜೊನ್ನದೊಳನ್ಯರುಂ ಬಹುಳದೊಳ್ ನಿರ್ವ್ಯಾಜದಿಂ ಬಲ್ಲಿದರ್ (ಜಾತಕ. ೨-೦೦). ೮. "ಕೃತ್ತಿಕೆ ಬಹುಳವೆನಿಕು" (ಮಂಗರಾ. ೦೨-೬). ೯. ಅಧಿಕ್ಯ; ವಿಪುಲವಾಗಿರುವುದು : "ಪ್ರಭೂತಂ. . . ಬಹುಳಂ, ಬಹು. . . ಭೂರಿ—೧೨ ಅಧಿಕವಾದದ್ದರ ಹೆಸರುಗಳು" (ಸಿದ್ಧಾಂಶಿ. ೩೭೦); ಹೀಗೆ ಪಾಮರ ಬಹುಳವಾದ 'ಸಕಲಾಪನೀತಳಜನವೇ' ಅರಿಕೇಸರಿಯನ್ನು ಕುರಿತು ಪ್ರಾರ್ಥಿಸಿಕೊಂಡಿತು (ಪಾರೋಪ. ೦೯೩). [ಸಂ.]

**ಬಹುಲತೆ, ಬಹುಳತೆ** (ನಾ). ೧. ವಿಪುಲವಾಗಿರುವಿಕೆ; ಅಧಿಕ್ಯ ;

ಹೆಚ್ಚಳ. ಬಹುಳತೆ: ೨. ವಿಶೇಷತೆ ; ಅತಿಶಯತೆ: ಮುತ್ತಿನ ಮಕುಟ ವಿಡಿದೆನಿಸಲಾರ್ತುದತಿಬಹುಳತೆಯಿಂ (ಆಕಥೆ. ೯-೫೬). ೩. [ವ್ಯಾಕ] ಎರಡು ರೀತಿಗಳಲ್ಲಿ ವಿಶೇಷವಾದ ಅರ್ಥವುಳ್ಳುದು : ಬಹುಳತೆ ಯತ್ವ ವತ್ವ ದೊಳ್ ಸಂಸ್ಕೃತಕ್ಕೆ ತಾನಿಲ್ಲೆಂದುಂ (ಶಮದ. ೩೩). [ಸಂ. ಬಹುಲತಾ]

**ಬಹುಲತ್ವ, ಬಹುಳತ್ವ** (ನಾ). ೧. =ಬಹುಲತೆ ೧. ಬಹುಳತ್ವ : ೨. = ಬಹುಲತೆ ೩ : ಸಂಸ್ಕೃತದೊಳ್ ಯತ್ವ ವತ್ವಂಗಳ್ಗೆ ಬಹುಳತ್ವ ವಿಲ್ಲ, ನಿತ್ಯಂ (ಶಮದ. ೩೩ ವೃತ್ತಿ). [ಸಂ.]

**ಬಹುಲವೆಳ್ಳಂಗ** (ನಾ). ಒಬ್ಬಾತನ ಹೆಸರು : ಶ್ರೀಣಮ್ಮಡಿಪೆರ್ಮ್ಮಾಡಿ ಯಾಚಾರಿ ಬಹುಲವೆಳ್ಳಂಗನ ಶೀಘ್ರಲಿಖಿತಂ (ಎಕ. III, ಸಂಕಶವ. ೦೬೩-೦೩; 977). [?]

**ಬಹುಲಾಯಿ** (ನಾ). [ಸಂಗೀತ] ಶಾರೀರಕ್ಕೆಂದು ವರ್ಣಿಸಲಾಗಿಂವ, ವಿಶಿಷ್ಟರೀತಿಯ ಪಲುಕನ್ನು ಹೊಂದಿರುವ ಠಾಯ (?) : ಗೀತಿ ಜತಿ ಜೋಕೆ ನಯಂ ಬಹುಲಾಯಿ ದೇಸೆ ಪೆಲ್ಲಣೆ ಕಳೆಯೊಬಿವಂ ಮೆಚಿದು ಬಾಜಿಸಿದಂ ಮುರವೈರಿ ವಾಸವಂ (ಹರಿವ. ೩-೩). [?]

**ಬಹುಲಿಮ** (ಗು). ಹೇರಳವಾದ ; ಸಮೃದ್ಧವಾದ : ಚಿತ್ರಕ್ಕೆ ಮಾಡಿ ತ್ತೊಲವಂ ತಾರುಣ್ಯಮಾಸಾಧಿತಬಹುಲಿ[ಪಾಠಾಂ. ಹಳಿ]ಮಲಾವಣ್ಯಶೋಭಾ ವರೇಣ್ಯಂ (ಕಂಪ್ರಥ. ೯-೭). [ಸಂ.]

**ಬಹುಲೆ, ಬಹುಳೆ** (ನಾ). ೧. ಹಸು; ಗೋವು. ೨. ದೊಡ್ಡ ಏಲಕ್ಕಿ ಗಿಡ : "ಪೃಥ್ವೀಕಾ, ಚಂದ್ರಬಾಲಾ, ಏಲಾ, ನಿಷ್ಕುಟೀ, ಬಹುಲಾ- ಇ ದೊಡ್ಡ ಏಲಕ್ಕೀ ಹೆಸರುಗಳು" (ನಿಘಂಟು. ೦೯೦). ೩. ನೀಲಿಗಿಡ. ೪. ಆರು ತಾರೆಗಳುಳ್ಳ ಒಂದು ನಕ್ಷತ್ರಪುಂಜ; ಕೃತ್ತಿಕಾನಕ್ಷತ್ರ : "ಕೃತ್ತಿಕಾಃ, ಬಹುಲಾಃ—ಈ ೨ ಕೃತ್ತಿಕೆ" (ಹಲಾಯು. ೯-೩೦) ಬಹುಳೆ : ೪. "ಬಹುಲಾಃ—ಕೃತ್ತಿಕಾನಕ್ಷತ್ರ, ಗೋವುಗಳು" (ನಿಘಂಟು. ೯೦೬).

[ಸಂ. ಬಹುಲಾ]

**ಬಹುವಚ** (ನಾ). ಅತಿಯಾಗಿ ಮಾತನಾಡುವವನು ; ವಾಚಾಳಿ : "ಬಹುವಚಂ ಗಟಬಹುವವನಕ್ಕು" (ಮಂಗರಾ. ೬೩-೨೦). [ಸಂ.]

**ಬಹುವಚನ** (ನಾ). ೧. ಒಂದಕ್ಕಿಂತ ಹೆಚ್ಚು ಸಂಖ್ಯೆಯುಳ್ಳುದು. ೨. [ವ್ಯಾಕ] ಒಂದಕ್ಕಿಂತ ಹೆಚ್ಚಿನ ಸಂಖ್ಯೆಯನ್ನು ಸೂಚಿಸುವ ಪದ: ಏಕವಚನಕ್ಕೆ—ಒವನೇನ್, ಅಲೇನ್, ಅದೇನ್, ಬಹುವಚನಾರ್ಥಕ್ಕೆ— ತತ್ಪರಿಜನಾಲಾವಂಗಳೇನ್ (ಶಮದ. ೬೯ ಪ್ರಯೋ); ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ಹೇಳುವುದು ಬಹುವಚನ (ಕೃಶಿಕ. ೩೩). [ಸಂ.]

**ಬಹುವಾರಕ** (ನಾ). ಒಂದು ಬಗೆಯ ಸಸ್ಯ ; ಚಳ್ಳೆ : "ಶೇಲುಃ ... ಬಹುವಾರಕಃ—ಈ ಚಳ್ಳೆಮರ" (ನಿಘಂಟು. ೦೦೬); ಬಹುವಾರಕ ಗಾಯತ್ರಿಯ ವಿಹಿತಾರಿಷ್ಟಾಮೃತಾಗ್ನಿಮುಖಿಗಳ್ಗೆಳಗುಂ (ಹರಿಶ್ಚ. ೬-೭೦). [ಸಂ.]

**ಬಹುವಾರ್ಷಿಕ** (ನಾ). ಅನೇಕ ವರ್ಷಗಳು ಇರುವಂತಹುದು : ಅಕ್ಕಿಲೇ ಜಯ; ಆಕರ್ಷಣೀಯವಾದ ಹೂ ಬಿಡುವ ಅಲಂಕಾರಸಸ್ಯ. . . ಇವು ಬಹುವಾರ್ಷಿಕಗಳಾದ್ದರಿಂದ ಫಲವತ್ತಾದ ಮಣ್ಣು ಅಗತ್ಯ (ಕಾಕೋ. I, ೦೬೦). [ಸಂ.]

**ಬಹುವಿಕೆ** (ನಾ). ಹೆಚ್ಚಳ; ಅತಿಶಯತೆ : ಬಿಂಕಂ ಲುಳಿವಡೆಯೆ ಲುಳಿ ನವಣಿವಡೆಯೆ ನವಣೆ ಬಹುವಿಕೆವಡೆಯೆ (ಅಪಂಪು. ೨-೨೫೪).

[ಬಹು + —ಇಕೆ]

**ಬಹುವಿತ್ತ** (ನಾ). ೧. ಅಧಿಕವಾದ ಸಂಪತ್ತು. ೨. ಧನಿಕ; ಶ್ರೀಮಂತ : ಬಹುತನಯಂ ಬಹುವಿತ್ತಂ. . . ಮಹಿತನಯಂ ನೆಲಸಿರೆ ಮೃಗಗೃಹ ದೊಳ್ ತನ್ನನುಜನೆನಿಸುಗುಂ (ಜಾತಕ. ೦೬-೨). [ಸಂ.]

**ಬಹುವ್ರೀಹಿ** (ನಾ). ೧. ಹೆಚ್ಚು ಬತ್ತವನ್ನು ಹೊಂದಿರುವುದು. ೨. [ವ್ಯಾಕ]ಸಮಾಸಗಳಲ್ಲಿ ಒಂದು; ಸಮಾಸದಲ್ಲಿ ಸೇರಿರುವ ಎರಡು ಪದಗಳ ಅರ್ಥವೂ ಮುಖ್ಯವಾಗದೆ ಬೇರೊಂದು ವಸ್ತುವನ್ನು ಹೇಳು ವುದೇ ಸಮಾಸದ ಅರ್ಥವಾದಾಗ ಆಗುವ ಸಮಾಸ :ದ್ವಿಪದಂ ಮೇಣ್ ಬಹುಪದಮನ್ಯಪದಾರ್ಥದೊಳೊಂದಿ ನಿಲೆ ಬಹುವ್ರೀಹಿ (ಆಪ್ರಾ.ವ. ೨೦೬); ಎರಡುಂ ಪದಂ ಮೇಣ್ ಪಲವುಂ ಪದಂ ಅನ್ಯಪದಾರ್ಥಮಂ ಬಯಸುತ್ತಿರೆ ಬಹುವ್ರೀಹಿಯಕ್ಕುಂ (ಶಮದ. ೦೬೩ ವೃತ್ತಿ); ಅನ್ಯಪದವು ವಿಶೇಷ್ಯವಾಗಿ ಅನೇಕ ಪದಗಳಿಗೆ ಆಗುವ ಸಮಾಸವು ಬಹುವ್ರೀಹಿ (ಕೃಶಿಕ. ೨೨). [ಸಂ.]

**ಬಹುಶಃ** (ಅ). ಬಹಳ ಮಾಡಿ; ಬಹುಪಟ್ಟಿಗೆ : ದ್ವಾರದ ಮೇಲಿರುವ ಶಾಸನಗಳಿಂದ ಬಹುಶಃ ಕ್ರಿ.ಶ. ೯೫೦ರಲ್ಲಿ ಕಟ್ಟಿರಬಹುದೆಂದು ಹೇಳಬಹುದು (ಹೊಯ್ಸಾಶಾ.೨೦೬); ಬಹುಶಃ ದೇವದಾಸಿಯರ ವೃತ್ತಿಯು ಒಂದು ರೀತಿಯಲ್ಲಿ ತಲೆಯಿಂದ ತಲೆಗೆ ಹರಿದುಕೊಂಡು ಬರುತ್ತದೆ (ಕಶಾಶಿ. ೦೬೩).

[ಸಂ. ಬಹುಶಸ್]

**ಬಹುಶಿಲ್ಪಿ** (ನಾ). ಅನೇಕಕಲೆಗಳನ್ನು ಬಲ್ಲವನು : ಧಾರ್ಮಿಕಂ ತ್ಯಾಗಿ ವೀರ್ಯಸಮೇತಂ ಬಹುಶಿಲ್ಪಿ. . . ಧನುರ್ಗೇಹಜಂ (ಜಾತಕ. ೧೭-೯).

[ಸಂ. ಬಹುಶಿಲ್ಪಿನ್]

**ಬಹುಶ್ರುತ** (ನಾ). ೧. ಅನೇಕ ಶಾಸ್ತ್ರಗಳನ್ನು ಕೇಳಿ ಅರಿತವನು; ವಿದ್ವಾಂಸ ; ಪಂಡಿತ : ಅತಿಗಂಭೀರಮೃದೂಕ್ತಿ ವಕ್ತ್ರದೊಳೊಂತಂ ಬಟ್ಟೊಪ್ಪೆ ಕೇಳ್ದಂ ಬಹುಶ್ರುತನಲ್ಲಶ್ರುತನೆನ್ನದಾರ ಕಿವಿಗಂ ನುಣ್ಪೆಂಬಿ ನೊಳ್ ಕೂಡೆ ಪೇಟಲ್ (ಚಂಶೇಖ. ೦-೮); ಪರಿಮೃತನಾವನೆ ವಿಶ್ರುತ ಬಹುಶ್ರುತೋದಾತ್ತಯಶಂ (ಸುಕುಮಾ. ೨-೦೨). ೨. ವೇದಗಳನ್ನು ಚೆನ್ನಾಗಿ ಬಲ್ಲವನು; ವೇದಪಾರಂಗತ. [ಸಂ.]

**ಬಹುಸುತ** (ನಾ). ಅನೇಕ ಮಕ್ಕಳುಳ್ಳವನು: ಬಹುಸುತನುಪಚಿತತನು ಸಂಗ್ರಹಶೀಲಂ ಮಚ್ಚೆಸಾರನಕ್ಕುಂ (ಲೋಕೋಪ. ೧೦-೬೭). [ಸಂ.]

**ಬಹುಸೂತಿ** (ನಾ). ೧. ಹಲವು ಮಕ್ಕಳನ್ನು ಹಡೆದ ಹೆಂಗಸು. ೨. ಹಲವು ಬಾರಿ ಕರು ಹಾಕಿದ ಹಸು: "ಬಹುಸೂತಿಃ, ಪರೇಷ್ಟುಕಾ—೨ ಅನೇಕ ಹೆಂಗಿಗಳನ್ನು ಈದ ಆಕಳು" (ನಿಘಂಟು. ೨೯೩). [ಸಂ.]

**ಬಹುಳ** 'ಬಹುಲ' ನೋ.

**ಬಹುಳಗ್ರಹಣ** (ನಾ). ವಿಸ್ತಾರವಾದ ಅರ್ಥವನ್ನು ತಿಳಿದು ಕೊಳ್ಳುವುದು : ಅದುಮೆಂಬ ಬಹುಳಗ್ರಹಣದಿಂದಾಕಾರಾಂತಮಲ್ಲದ ಕಾರಾಂತಮುಂ ಹ್ರಸ್ವಮಪ್ಪೇತ್ವಮಂ ಪಡೆದೊಡಂ ಲಿಂಗಮಕ್ಕುಂ (ಶಮದ. ೩೬ ವೃತ್ತಿ). [ಸಂ. ಬಹುಲಗ್ರಹಣ]

**ಬಹುಳತೆ** 'ಬಹುಲತೆ' ನೋ.

**ಬಹುಳತ್ವ** 'ಬಹುಲತ್ವ' ನೋ.

**ಬಹುಳಪಕ್ಷ** (ನಾ). ಕೃಷ್ಣಪಕ್ಷ: ಸೌಮ್ಯವತ್ಸರದ ಶ್ರಾವಣಬಹುಳಪಕ್ಷದಶಮಿ ಜೀವವಾರದೊಳಾದಿವ್ಯಪಬೇಂದ್ರಾವತಾರದ ಬಸವಚರಿತೆ ಸಮಾಪ್ತ ವಾಯಿತ್ತು (ಬಸಪು. ೬೦-೯೨). [ಸಂ. ಬಹುಲಪಕ್ಷ]

**ಬಹುಳವೃತ್ತಿ** (ನಾ). = ಬಹುಲತೆ ೩ : ವಿದಿತಸ್ವರದಿನನಾದೇಶದ ಸಹಜ ವ್ಯಂಜನಂಗಳಿಂ ಪರದ ಪವರ್ಗದ ನೆಲೆಗಕ್ಕುಂ ವತ್ವಂ ಪದವಿಧಿಯೋಳ್ ಬಹುಳವೃತ್ತಿಯಿಂ ವಾಕ್ಯದೊಳಂ (ಶಮದ. ೬೬). [ಸಂ. ಬಹುಲವೃತ್ತಿ]

**ಬಹುಳಸ್ಥಿತಿ** (ನಾ). = ಬಹುಲತೆ ೩: ಇರೆ ವರ್ಗಪ್ರಥಮಂಗಳ್ ಪರದೊಳ್ ಚಟವರ್ಗಮುಬಿಯೆ ತಮ್ಮ ತೃತೀಯಾಕ್ಷರಮಕ್ಕುಂ ಪದವಿಧಿಯೊಳ್ ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯುಂ (ಶಮದ. ೬೩).

[ಸಂ. ಬಹುಲಸ್ಥಿತಿ]

**ಬಹುಳೆ** 'ಬಹುಲೆ' ನೋ.

**ಬಹೂಕ್ತಿ** (ನಾ). = ಬಹುವಚನ ೨ : ಸೊಗಯಿಪವುಗೆಕೆಗಳನ್ನೊಕ್ತಿಗೆ ವಿಧ್ಯರ್ಥಕ್ಕೆ ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳಮಮೆಂದೊಗೆ ತರ್ಕುಂ ಯುಗಪದುಕ್ತಿಯೊಳ್ ಕ್ರಮದಿಂದಂ (ಶಮದ. ೨೨೯). [ಸಂ.]

**ಬಹೂದಕ** (ನಾ). ಹಂಸ, ಪರಮಹಂಸ, ಕುಟೀಚಕ ಮತ್ತು ಬಹೂದಕ ಎಂಬ ಸಂನ್ಯಾಸಿಗಳ ನಾಲ್ಕು ಗುಂಪುಗಳಲ್ಲಿ ಒಂದು ಗುಂಪಿಗೆ ಸೇರಿದವನು; ತೀರ್ಥಯಾತ್ರಾಕ್ಷೇತ್ರಗಳಿಗೆ ಪ್ರವಾಸ ಮಾಡುವ ಸಂನ್ಯಾಸಿ; ಪರಿವ್ರಾಜಕ: ಈಶ್ವರಧ್ಯಾನತತ್ಪರನಾಗಿ ಏಕಾನ್ನವನೊಲ್ಲದೆ ಬಂಧುಪುತ್ರಾದಿಗೃಹಮಂ ಪುಗದೆ ಬೇಱೆ ಏಳುಮನೆಯಲ್ಲಿಯು ಭಿಕ್ಷಾನ್ನಮಂ ತಂದನುಭವಿಸುತ್ತೆ ಸಹಜಮಾಯಿನಾಗಿವರ್ತಿಸನೇ ಬಹೂದಕನಪ್ಪಂ (ಶಬೇಳ. ೦೨೬). [ಸಂ.]

**ಬಹೂಪಮಾನ** (ನಾ). [ಕಾವ್ಯಮೀ] ಒಂದಕ್ಕಿಂತ ಹೆಚ್ಚು ಉಪಮಾನಗಳನ್ನು ಕೊಡುವ ಒಂದು ಅಲಂಕಾರ: ಮಲಯರುಹ ಶಿಶಿರಕರಶೀತಲಿಕಾಕರಕೇಂದುಕಾಂತಜಲಶೀತಳಮೀ ಲಲನಾಲಿಂಗನಸುಖಕರವಿಲಾಸವೆಂಬುದು ಬಹೂಪಮಾನವಿಕಲ್ಪಂ (ಕಾಂಗಾ. ೩.೮೦). [ಸಂ.]

**ಬಹೂಪಮೆ** (ನಾ). = ಬಹೂಪಮಾನ: ಬಹೂಪಮೆಗೆ—ಶರದಂಬುದಮಂ ಗಂಗಾತರಂಗಮಂ ಸಿಂಧುವಾರಕುಸುಮಶ್ರೀಯುಂ ಹರಹಾಸವಿಳಾಸಮನನುಕರಿಸುವುದತಿವಿಶದಕೀರ್ತಿ ತೋಳ್ಪೊಪ್ಪುವನಾ (ಕಾವ್ಯಾ.ಕ. ೬೩೪). [ಸಂ. ಬಹೂಪಮಾ]

**ಬಹ್ವಾರಂಭಪರಿಗ್ರಹ** (ನಾ). [ಜೈನ] ಪಂಚಮಹಾಪಾತಕಗಳಲ್ಲಿ ಒಂದು; ಬಹಳ ಪ್ರಯತ್ನದಿಂದ ಧನವನ್ನು ಸಂಗ್ರಹಿಸುವುದು: ಬಹ್ವಾರಂಭಪರಿಗ್ರಹವಿಹ್ವಲನಿಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರದೊಳಗಿರ್ಪನ ಚಿತ್ರಾಹ್ವದವೊಲ್ ಮಱುಗದೇಂ ಸುಖಿಂಬಡೆದಪನೇ (ಅಜಿತ. ೩-೬೪). [ಸಂ.]

**ಬಹ್ವಾರಂಭಪಾರಿಗ್ರಹ** (ನಾ). = ಬಹ್ವಾರಂಭಪರಿಗ್ರಹ: ಆ ಜೀವಘಾತಾನೃತವಚನ ಪರಾರ್ಥ ಪಹಾರಾನ್ಯನಾರೀಗಮಬಹ್ವಾರಂಭಪಾರಿಗ್ರಹವೆನಿಸುವವಯ್ದುಂ ಮಹಾಪಾತಕಂಗಳ್ಗೆ ಮನಂದಂದೊಂಗೆ ಸಂಸ್ಕೃತ್ಯುದಧಿತಟಮಧ್ಯಾಸನ್ನಂ (ಸುಕುಮಾ. ೮-೯೩). [ಸಂ.]

**ಬಹ್ವಾಶಿ** (ನಾ). ೧. ಅತಿಯಾಗಿ ತಿನ್ನುವವನು; ಹೊಟ್ಟೆಬಾಕ; (೩.) ೨. ಅತಿಯಾಗಿ ತಿನ್ನುವಂತಹುದು: ಬಹ್ವಾಶಿಯಪ್ಪ ತುರಗಂ ವಿಹ್ವಲನಾಗಿರ್ದ ಮೇಯದಿರ್ದೊಡಂ . . . ಮರಣಭಯಂ (ಅಶ್ವಶಾ. ೩-೯೨). [ಸಂ. ಬಹ್ವಾಶಿನ್]

**ಬಳ₁** 'ಬಳ್ಳ' ನೋ.

**ಬಳ₂** 'ಬಲ'₂ ನೋ.

**ಬಳ₃** (ನಾ). ಒಂದು ಬಗೆಯ ಕೊಡುಗೆಯ ಭೂಮಿ (?): ಬಮ್ಮಗಾವುಣ್ಡನ ಬಳದಿಂ ಬಡಗ (ಶಾಇ. XI–i. ೦೦೯-೩೦; 946); ಮೂನೂಱುಮ್ಮತ್ತು ಮತ್ತರ್ಕ್ಕಿಸುಕಾಡುಮನ್ನು ಬಳಕ್ಕೆ ಸಾಯಿರದ ನೂಱುಮತ್ತರಾಗಿ (ಶಾಇ. IX–i, ೬೮-೦೬; 992); ಅದಱ ಹತ್ತಸಿನ ತನ್ನ ಬಳದೊಳಗೆ ಬಮ್ಮರ್ಯ್ಯಂ ವಿದ್ಯಾದಾನಕ್ಕೆ ಕೊಟ್ಟ ಮತ್ತರ್ಪ್ಪತ್ತೆರಡು (ಶಾಇ. IX–i, ೦೦೯-೦೯; 1046); ಗುರುಗಳ ಮನೆಯ ಸ್ಥಳ ಬಿಯಾಳ ಕೇತಿಸೆಟ್ಟಿಯ ಬಳದಲು ಮನೆ ಎಡು ಮುದ್ದಯ್ಯನ ಬಳ್ಳದಲು ಮನೆ (ಎಕ. XI, ಹೊಳಲ್ಕೆ. ೩೬.೬೬; 1220). [?]

**ಬಳಬುದ್ಧಿ** 'ಬಲಬುದ್ಧಿ' ನೋ.

**ಬಳಂಜ** 'ಬಣಜ' ನೋ.

**ಬಳಂಜಿಗ** 'ಬಣಜಿಗ' ನೋ.

**ಬಳಂಜು** 'ಬಣಜು' ನೋ.

**ಬಳಂಬೆ** 'ಬಣಂಬೆ' ನೋ.

**ಬಳಕೆ** 'ಬಟಕೆ' ನೋ.

**ಬಳಕೆಗಾರ** 'ಬಳಕೆಗಾಱ' ನೋ.

**ಬಳಕೆಗಾಱ, ಬಳಕೆಗಾರ** (ನಾ). ೧. ಹೆಚ್ಚು ವ್ಯವಹಾರದಲ್ಲಿರುವವನು; ನಾಡಾಡಿ; ಸಾಮಾನ್ಯಮನುಷ್ಯ: ಆ ಕ್ಷತ್ರಿಯಕುಲರತ್ನಗಾಹಾರವುಂಟು ಮಲವಿಲ್ಲ ಮೂತ್ರವಿಲ್ಲೆಂದರೀ ಲೋಕದ ಬಳಕೆಗಾಱರ ಪೇಳ್ವ ತೆಱನೆ (ಚೆಕ. ೧-೨೩); ಅವನ ನೆಲೆ ಮೋಕ್ಷಗಾಮಿಗೆ ಗಮ್ಯವಲ್ಲದೆ ನಾಡ ಬಳಕೆಗಾಱಗೆ ಗೋಚರವೆ (ಚೆಕ. ೯೧-೦೬). ೨. ಪದಾರ್ಥಗಳನ್ನು ಕೊಂಡುಕೊಳ್ಳುವವನು; ಗ್ರಾಹಕ: ಬಳಕೆಗಾರರ ಅನುಕೂಲಕ್ಕಾಗಿ ರಜಾದಿನಗಳಲ್ಲೂ ಆ ಅಂಗಡಿಯನ್ನು ತೆರೆದಿರುತ್ತಾರೆ (ಶಿಷ್ಟ). [ಬಳಕೆ (< ಬಟಕೆ) + –ಕಾಱ]

**ಬಳಕೆಮಾತು** 'ಬಳಕೆವಾತು' ನೋ.

**ಬಳಕೆವಾತು, ಬಳಕೆಮಾತು** (ನಾ). ೧. ಆಡುಮಾತು; ರೂಢಿಯ ಮಾತು: ಆಂಡಯ್ಯನ ಭಾಷೆ ಕನ್ನಡಜಿಲ್ಲೆಗಳ ಬಳಕೆವಾತಿಗೆ ಸಂಬಂಧಪಟ್ಟುದು (ತಮಾ. ೦೨೯); ಈ ರೀತಿ ಬಳಕೆಮಾತಿನಲ್ಲಿ ತಿಳಿವಿನ ತುತ್ತತುದಿಯನ್ನು ಮುಟ್ಟಿದ ಈ ವಚನಕಾರರ ವಾಗ್ವಿಲಾಸ ಕನ್ನಡಕ್ಕೆ ಮಿಶ್ಯವಾದ ಕಾಣಿಕೆಯೇ ಸರಿ (ಸುವಚ. ೧೦೩). ೨. ಪರಿಚಯದ ಮಾತು,-ನುಡಿ; ಸಲುಗೆಯ ಮಾತು: ನಂಟನ ಬಳಕೆವಾತಿನ [ಪಾಠಾಂ. ನಂಜಿನ ಬಳಗವೀತನ] ಬಂಧುಕೃತ್ಯದ ಬಳವಿಗೆಯೊಳೀ ನಿನ್ನ ಮಗನನು ಬೇಡಿಕೊಳಲೇಕೆ (ಕುವ್ಯಾ.ಉ. ೬೦೩. ೦೦-೦೬). **ಬಳಕೆಮಾತು**: ೧. ಬಳಕೆವಾತಿನಲ್ಲಿರುವ ಎಷ್ಟೋ ಶಬ್ದಗಳು ನಿಘಂಟಿನಲ್ಲಿ ಸೇರಿಸಲಾಗದೆ ಕಾಲಕ್ರಮೇಣ ಅವುಗಳು ಮರೆಯಾಗಿ ಬಿಡುತ್ತವೆ (ಶಿಷ್ಟ). [ಬಳಕೆ (< ಬಟಕೆ) + ಮಾತು₁]

**ಬಳಕೆವೆರು** (ಕ್ರಿ). ರೂಢಿಯಾಗು; ಅಭ್ಯಾಸವಾಗು: ನೋಡೆ ರಹಸ್ಯದೊಳ್ ಬಳಕೆವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮೆನಿಪ್ಪ ಮಂದಿರದವೋಲ್ ಕಾಣ್ಬೆಂ ಜನಾಕೀರ್ಣಮಂ (ಶಾಕುಂತ. ೬೯-೦೦೦). [ಬಳಕೆ (< ಬಟಕೆ) + ಪೆರು₁ (< ಪೆಱು₁)]

**ಬಳಗ₁, ಬಣಗ₁** (ನಾ). ೧. ಗುಂಪು; ಸಮೂಹ: "ಬಂಬಲ್ . . . ಬಳಗಂ . . . ಗೊಂದಣ (ಉಂದಲ್) ಈ ೧೪ ಸಮೂಹಂ" (ಕಚಾ. ೩೬-೨೨೨); ಅಟ್ಟಿದಟ್ಟುದ ಕರಿಘಟೆಗಳ ಬಳಗದಿನುಚ್ಚಳಿಸಿ ಮೊರೆವ ನೆತ್ತರ ತೆರೆಗಳ್ (ಪಂಪಭಾ. ೧೧-೩೬); ಕರುಳನಣಲೊಳಗಡಸಿ ನಲಿದುದು ಮರುಳ ಬಳಗ (ಕುವ್ಯಾ.ಶ. ೫-೩೨). ೨. ರಾಶಿ; ಒಟ್ಟಿಲು: ಎಳದಳಿರ ಬಳಗದೊಳ್ ಪೊರಳ್ದು ಪೊರಳ್ದು (ಗಿರಿ. ೩-೦೨೩ ಕ). ೩. ಒಂದೇ ಮನೆ ಅಥವಾ ಒಂದು ವಂಶಕ್ಕೆ ಸೇರಿದವರು; ನೆಂಟರಿಷ್ಟರು; ಪರಿಜನ: ದೇವದೇವ ಅನಾಥನಾಥ ಅನಿಮಿತ್ತಬಂಧುವೆ ತಾಯ್ತಂದೆ ಬಂಧು ಬಳಗವೆ (ಬಸವ. ೨-೩೪); ಜ್ವಲನಕೊಂಡವನಿಕ್ಕಿಕೊಂಡೀ ಬಳಗವೆಲ್ಲಂ ಒಂದು ಪೇರುರಿಯೊಳಗೆ ಬೀಳುವೆವು (ಚಕ್ರ. ೩೩-೨೬); ಕಾಗೆಯುಗುಳನು ಕಂಡು ಕೂಗುವದು ಬಳಗವನು (ಸರ್ವಜ್ಞ. ೬೩೩); ಮದುವೆಗೆಂದು ಪರಊರಿನ ನಮ್ಮ ಸಮೀಪದ ಬಳಗದವರೆಲ್ಲ ಬರಹತ್ತಿದರು (ಆಕೋಂ. ೯೦). ೪. ದಟ್ಟಣೆ; ಸಾಂದ್ರತೆ: ಕಾದಲರ ಪುರುಡಿನೆಸಕದೊಡನೆ ಇರುಳ ಬಳಗುಬಡಬಡಾಗೆಯುಂ (ಕಂಪ್ರಶ. ೬-೬೨ ಕ). **ಬಣಗ₁**: ೧. ಮಿಗೆ ಮನೋಹರಮಾದ ಬೆಳ್ಳಕ್ಕಿಗಳ ಬಣಗಮೋಯೆನಲು ತೋರಿತ್ತಗಣಿತಾಮಲತಾರಕಾಸಂದೋಹಮಂಬರದಿ (ಕೃಕಚ. ೯-೩೩). [ದೇ.॥ ತಮಿ. ವಲಙ್ಙ=ದೊಡ್ಡ ಕುಟುಂಬ; ತುಳು. ಬಳಗ; ತೆಲು. ಬಲಗ]

**ಬಳಗ₂** (ನಾ). ನೊಗದಿಂದ ಎತ್ತು ನುಣುಚಿಕೊಳ್ಳುವಿಕೆ; ತಪ್ಪಿಸಿಕೊಳ್ಳುವಿಕೆ: 'ಬಳಗವಿಕ್ಕು' ಪರಾ.

ಬಳಗ ಹಾಕು = ನೊಗದಿಂದ ಎತ್ತು ತಪ್ಪಿಸಿಕೊಳ್ಳು: ಎತ್ತು ಬಳಗ ಹಾಕಿ ನಿಂತು ಬಿಟ್ಟಿತು (ಶಿಷ್ಟ). ಬಳಗಾ ತೆಗೆ = ಬಳಗ ಹಾಕು: "ಹೆಗಲು ಕೊಡದಿರು" (ಶಾಪಶಕೋ. ೨೧). [ದೇ.॥ ತಮಿ. ವಟುಕ್ಕು]

**ಬಳಗಜವಳಿ** (ನಾ). ನಂಟರಿಷ್ಟರಿಗೆ ಕೊಡುವ ಬಟ್ಟೆಯ ಉಡುಗೊರೆ: ಬಳಗಜವಳಿಗೆಂದು ಬಂದ ಚೀನದುಕೂಲದ ಹುರಾವಳಿಯ ಪಲವು ದಿಂಡು ಗಳುಮಂ (ರಕ್ಷಾಕ್ರು. ೩-೨೫೨). [ಬಳಗ$_{1}$+ಜವಳಿ$_{1}$]

**ಬಳಗದೊತ್ತು** (ನಾ). [ವೀಶೈ] ಶರಣಸಮೂಹಕ್ಕೆ ದಾಸನಾದವನು: ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯಾ (ಬಸವ. ೩೩೩). [ಬಳಗ$_{1}$+ತೊತ್ತು (<ತೊಟ್ಟು)]

**ಬಳಗಧಾರೆ** (ನಾ). ಒಂದು ಬಗೆಯ ವಿವಾಹವಿಧಿ ; ಮದುವೆಯಲ್ಲಿ ಕನ್ಯಾದಾನ ಮಾಡುವಾಗ ನಂಟರಿಷ್ಟರೆಲ್ಲ ಸೇರಿ ಎರೆಯುವ ನೀರಿನ ಧಾರೆ : ಒಕ್ಕಲಿಗರಲ್ಲಿ ಬಳಗಧಾರೆಯ ಪದ್ಧತಿಯುಂಟು (ರೂಢಿ). [ಬಳಗ$_{1}$+ಧಾರೆ]

**ಬಳಗಮಿಕ್ಕು, ಬಳಗವಿಕ್ಕು** (ಕ್ರಿ). ನೊಗದಿಂದ ಎತ್ತು ತಪ್ಪಿಸಿ ಕೊಳ್ಳು : ಆ ಧೂರ್ತನೆಟ್ಟನಂದವುನೆ ಮಾಡಿ ಮರ್ಯಾದೆಯೊಳೊರ್ವ ಯೊಡಂಬಟ್ಟುಂ ಒಮ್ಮೆಯೊಡಂಬಡದೆಯುಂ ಬಳಗಮಿಕ್ಕಿ ಕಾಡಿದೊಡೆ (ಶಂಕರ. ೩೩-೮೨). **ಬಳಗವಿಕ್ಕು** : ನಡವೆಟ್ಟುಗಳ್ ಬಳಗವಿಕ್ಕಿರೆ ಕಳ್ತಿರಿ ನಕ್ಕುಮುಚ್ಚಿಗಂ (ಅದ್ಭುತ.೯-೩೦). [ಬಳಗ$_{2}$+ ಇಕ್ಕು]

**ಬಳಗವಿಕ್ಕು** ' ಬಳಗಮಿಕ್ಕು ' ನೋ.

**ಬಳಗಾರ** ' ಬಳೆಗಾಱ ' ನೋ.

**ಬಳಗಾಱ** ' ಬಳೆಗಾಱ ' ನೋ.

**ಬಳಗಾಱಗಣ** (ನಾ). [ಜೈನ]ಶ್ರವಣರ ಪಂಗಡಗಳಲ್ಲಿ ಒಂದು : ಬಳಗಾಱಗಣದ ಮೇಘನನ್ದಿಭಟ್ಟಾರಕರ ಶಿಷ್ಯರಪ್ಪ ಕೇಶವನನ್ದಿ ಅಷ್ಟೋಪವಾಸಿ ಭಟಾರರ ಬಸದಿಗೆ . . . ಕೊಟ್ಟ ಗಟ್ಟಿ ಮತ್ತರಯ್ದು (ಇಆ. IV, ೦೫೦-೦೩; 1048). [ಬಳಗಾಱ (<ಬಳೆಗಾಱ)+ಗಣ]

**ಬಳಚು** 'ಬಟ್ಟು' ನೋ.

**ಬಳಜ** 'ಬಲಜ' ನೋ.

**ಬಳತ** 'ವಣತ' ನೋ.

**ಬಳದಡಿ** (ನಾ). ಒಂದು ಬಗೆಯ ಆಯುಧ ; ದೊಡ್ಡಬಡಿಗೆ : ಹೇಱುವ ಬಿಱುಗಲ್ಲು ಬಳದಡಿ ವರಶಕ್ತಿ ಪಾಱುಂಬಳೆ ಶೂಲದಿಂದೆ ಏಱುಗಾಣಿಸಿ . . . ಗಾಱುಮಾಡಿದರು ರಕ್ಕಸರು (ಕೋಶಚ. ೩೯-೨೩); ಬಿಲ್ಲಂಬು ಬಾಕು ಬಳದಡಿ ಕೊಡಲಿ ಮುಸಗತ್ತಿ (ಗುರುಚಾ. ೩-೩೦). [ಬಳ$_{3}$(=ಬಲ$_{3}$)+ದಡಿ$_{1}$]

**ಬಳದೇವ** ' ಬಲದೇವ ' ನೋ.

**ಬಳಪ, ಬಳಹ** (ನಾ). ೧. ವಿಗ್ರಹ ಪಾತ್ರೆ ಮುಂತಾದುವುಗಳನ್ನು ಮಾಡಲು ಬಳಸುವ ಒಂದು ಬಗೆಯ ಮೃದುವಾದ ಬಿಳಿ ಕಲ್ಲು: " ಬಳಪವದುದು ಶುಭ್ರೋಪಲಂ " (ಶಬ್ದಮ. ೦೦೬-೦೫) ; ತಂಬುಲದ ಸೊರ್ಕು ದೊರೆಕೊಳೆ ತಿಂಬುದು ಬಳಪಮಂ (ಲೋಕೋಪ. ೦೦-೯೯) ; ಬೆಳ್ನವಿರ್ ತುಱುಗಿ ನಿರಂತರಂ ಬಳಪವಂ ತೊಡೆದಂತಿರೆ (ಸೂಕ್ತಿ ಸು. ೩-೩೬). ೨. ಕಪ್ಪುಹಲಗೆಯ ಮೇಲೆ ಬರೆಯಲು ಮೃದುವಾದ ಬಿಳಿಯ ಕಲ್ಲಿನಿಂದ ತಯಾರಿಸುವ ಲೇಖನಸಾಧನ : ಪಡದ ಧನಕ್ಕೆ ಲೆಕ್ಕಮಿಡಲಿಂದ್ರನಗಂ ಬಳಪಂ ಧರಾತಳಂ ಕಡಿತಮುಹೀಶ್ವರಂ ತಗುಳೆ ಬಾಚಿಸುವೊಂ (ಶಾಂತಿಪು. ೯-೦೯೭) ; ನಿರ್ಮಳಫಳಕಂ ನೇರಿರ್ದೊಡಂತದು ತೆಗೆದದಱೊಳ್ ಬಳಪದಿನಾಗಳ್ ಬರೆದಂ ಲಳನೆಯ ರೂಪಾತಿಶಯಮಂ (ರಣ್ಣ. ೬-೩೦೮); ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ (ಕುವ್ಯಾ. ೦-೦೫). **ಬಳಹ** : ೧. "ಶ್ವೇತಧಾತುಃ—ಬಳಹ" (೬ಶಂ. ೦೫೦) ; ಕಾಕಿಣೀ ಹಿರಣ್ಮಯೋರ್ವಾ = ಬಳಹಮುಂ ಪೊನ್ನುಮೆಂಬವಱ ಮುಟ್ಟುಹಂ ಸೂರುಳ್ (ಶೇತವಾ. ೨೭-೩೨). ೨. ಸ್ಮರತಾಪದಿಂ ಬೆದಱಿ . . . ಧಾತ್ರಿ ಯೊಳ್ಬಳಹದಿಂ ಬರೆದಂ ಸತಿರೂಪನೊಪ್ಪುವಂತಿರೆ (ರರ್ಜುಕ. ೩-೨೨).

ಬಳಪದ ಕಲ್ಲು = ಬರೆಯಲು ಸಾಧನ, ಒಡವೆ, ಮೂರ್ತಿ ಮುಂತಾದುವುಗಳನ್ನು ಮಾಡಲು ಉಪಯೋಗಿಸುವ ಮೃದುವಾದ ಬಿಳಿಕಲ್ಲು : ನೀಲಗಿರಿಯಿಂದ ತರಿಸಿದ ಹಸುರುಕಲ್ಲು, ಅಮೃತಶಿಲೆ, ಬಳಪದ ಕಲ್ಲು . . . ಬೈಕ್ಕಿಯ ಇತ್ಯಾದಿ ಶಿಲೆಗಳಿಂದ ಆಭರಣಗಳನ್ನು ತಯಾರಿಸು ತ್ತಿದ್ದರು (ಶಾಕರ. ೦೯) ; ಈ ಬಳಪದ ಕಲ್ಲಿನ ಮುಚ್ಚಳದ ಮೇಲಿನ . . . ಲಿಪಿಯಿಂದ ಹೊರಡುವ ಅರ್ಥದ ವಿಚಾರದಲ್ಲೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ (ದ್ರಾ೬೦. ೩೦). ಬಳಪದೋಲೆ, ಬಳಹದ ಓಲೆ, ಬಳಹ ದೋಲೆ = ಬಳಪದ ಕಲ್ಲಿನಿಂದ ಮಾಡಿದ ಕರ್ಣಾಭರಣ : ಜಾದಿಯಂ ಮುಡಿದು ಮುತ್ತಂ ತೊಟ್ಟು ಬೆಳ್ಮಡಿಯನುಟ್ಟು ಬಳಪದೋಲೆಯನಿಟ್ಟು . . . ಕೈಗೈಯೆ (೮೦ಶಾವ. ೭-೩೩ ವ); ಚಿತ್ರದ ಕಂಕಣಂ ಬಳಪದೋಲೆ ಕುರುಳ್ಗಳೆವಟ್ಟ ಕಾಡ ಹೂ. . .ಮನಂಗೊಳೆ ಪುಳಿಂದಿಯರೊಪ್ಪುವರಾ ಮಹಾದ್ರಿಯೊಳ್ (ರಕಳು. ೯-೨೬) ; ಹಳದಿಯ ಸೀರೆಯನುಟ್ಟು ಬಳಹದ ಓಲೆ ಕಿವಿಯಲ್ಲಿ ಇಕ್ಕಿ (ಸರ್ವಜ್ಞ. ೮೭-೯೯೯); ಕಿವಿಯಲಿಕ್ಕಿದ ಬಳಹದೋಲೆ ಹಳದಿಯ ಉಡುಗೆ (ಬಸರ. ೯-೧೦೦).

[ದ್ರಾ.॥ ತಮಿ. ಪಲಪ್ಪಮ್, ವಲಪ್ಪಮ್; ಮಲ. ವಲಪ್ಪಮ್ ; ತುಳು. ಬಳಪು, ಬಲವು; ತೆಲು. ಬಲಪ, ಬಲ್ಪ]

**ಬಳಪಂಗೊಳ್** (ಕ್ರಿ). ಲೇಖನದ ಸಾಧನವನ್ನು ಹಿಡಿದು ಕಾವ್ಯ ಮುಂತಾದುವನ್ನು ರಚಿಸು : ಸವಣಂ ಬಳಪಂಗೊಳೆ ಗಾಂಡಿವಿ ಬಿಲ್ಗೊಳೆ . . . ಕೌರವಾರಿ ಗದೆಗೊಳೆ ಪೊಣರ್ಕೆಗಾಪಂ ನಿಲ್ವಂ (ಕಬಿರ. ೦೬೬ ಕ್ರಹೊ). [ಬಳಪ + ಕೊಳ್$_{1}$]

**ಬಳಪಂದೊಡೆ** (ಕ್ರಿ). ಬಳಪದ ಕಲ್ಲಿನಿಂದ ಬಿಳಿಯ ಬಣ್ಣವನ್ನು ಲೇಪಿಸು : ಕತ್ತರಿಸಿದ ಗಡ್ಡಮಿಟ್ಟ ತಿಲಕಂ ಬಳಪಂದೊಡೆದೋಲೆ ದೇಸೆಯುಂತಿರೆ ಸುಲಿಪಲ್ ತಳತ್ತಳಿಸಿ ತಂಬುಲಮಂ ಪೊಳಕುತ್ತ (ರರ್ಜಕೀ. ೩-೩೦). [ಬಳಪ + ತೊಡು$_{1}$]

**ಬಳಬಳ$_{1}$** (ನಾ). (ದ್ರವಪದಾರ್ಥವು ಮೇಲಿನಿಂದ ಕೆಳಕ್ಕೆ ಬೀಳು ವುದನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಬಳಬಳನೆ' ಪರಾ.

**ಬಳಬಳ$_{2}$** (ಅ). ಅಧಿಕವಾಗಿ; ಅತಿಶಯವಾಗಿ : ಪರಿಪಕ್ವಫಳಪ್ರಚಾರದಿಂ ಬಳಬಳ ಬಳ್ಳುವಾಂಬ್ರವನದಿನ್ದೆ . . . ಈಕ್ಷಿಪಗ್ಗತಿಮನೋಹರವಲ್ತೆ (ಶಿಇಆ. IX-i, ೨೯೬-೦೫; 1177).

**ಬಳಬಳನೆ** (ಅ). ಒಂದು ಅನುಕರಣಾವ್ಯಯ: ಸಂದುಕಳಾಸಂಗಳು ತಪ್ಪಿ ಅಸ್ಥಿಗಳು ಬಳಬಳನುದುರಲು (ಕಕ್ಕಪ. ೪. ೯೯-೦೯೦); ನೃಪವನರಮನೆಗೆ ಬಳಬಳನಾಗಳೆ ಸ್ವರ್ಗಲೋಕದ ಹೂಮಳೆಗಱೆದುದು ಚೆಲ್ಲಿದಂತೆ (ಶರಕ. ೩-೦೦೬). [ಬಳಬಳ$_{1}$ + — ಅನ್$_{1}$]

**ಬಳಬಳಿಕೆ, ಬಳಬಳಿಕ್ಕೆ** (ನಾ). [ನಾಟ್ಯ] ಒಂದು ಬಗೆಯ ನೃತ್ಯಭಂಗಿ : ಆ ನಿಲವಿನ ನಿರ್ವಾಹಮಂ ಗತಿಯ ಗಾರವಮಂ ಚಾರಿಗಳ ಚೆಂದಮಂ . . . ಬಳಬಳಿಕೆಯ ಚಂಚುರತೆಯಂ . . . ತೋಱುತ್ತುಮಿರೆ (ಕುಮುಬಾ. ೭-೩೩ ವ). **ಬಳಬಳಿಕ್ಕೆ** : ಚಾಳೆಯದೋಜೆಗಳ್ ಬಳಬಳಿಕ್ಕೆಗಳಾಂತಿರೆ. . . ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂತಪು. ೯-೯೦). [?]

**ಬಳಬಳಿಕ್ಕೆ** 'ಬಳಬಳಿಕೆ' ನೋ.

**ಬಳಮದ್ದು** 'ಬಲಮದ್ದು' ನೋ.

**ಬಳಮರ್ದಿಕ್ಕು** (ಕ್ರಿ). ಉಗ್ರವಾದ ಮಾದಕದ್ರವ್ಯವನ್ನು ಕುಡಿಸು : ತದ್ವಮಿಶಾರಿಯ ಬಲದ ತೋಳ್ಪಱಿದು ಬೀ[ಟ್ವಂ]ತಾತಂ ಬೀ[ಟ್ವು] ದುಮುಂಬರಚರಶ್ರೀಕಾಂತೆಗೆ ಬಳಮರ್ದಿಕ್ಕುವಂತಾತನಿಕ್ಕುವುದಂ ಕಂಡು (ಶಾಂತಿಪು. ೯-೨೩ ವ). [ಬಳಮರ್ದು (< ಬಲಮರ್ದು) + ಇಕ್ಕು]

**ಬಳಮರ್ದು** 'ಬಲಮರ್ದು' ನೋ.

**ಬಳಮದುರ್ಕಾಜಿ** (ನಾ). ಉಗ್ರವಾದ ಮಾದಕದ್ರವ್ಯವನ್ನು ತಯಾರಿಸುವವನು : ಕಾಮದೇವನೆಂಬ ಬಳಮದುರ್ಕಾಜಿನ ಮಾಡಿದ ಮರ್ದಿನಂತೆ ಬಳಿದು ವಳಂಬಡದು (ಶಂಶಶಾ. ೯-೬೭ ವ).
[ಬಳಮದುರ್ (< ಬಲವಮದುರ್) + – ಕಾಜಿ]

**ಬಳಯಿಸು** 'ಬಳೆಯಿಸು' ನೋ.

**ಬಳಯುತ** 'ಬಲಯಂತ' ನೋ.

**ಬಳರಿ** 'ಭಟಾರಿ' ನೋ.

**ಬಳಲ್** 'ಬಟಿಲ್' ನೋ.

**ಬಳಲಕೊಪ್ಪ** (ನಾ). ಒಂದು ಊರಿನ ಹೆಸರು : ಸಂನಕೊಪ್ಪದ ಬಸ್ತಿಯಿನ್ನಾ ಬಡಗಲು ಬಳಲಕೊಪ್ಪದ ಕೆಜೆ × × ಕಲು ಸರುಹ ಸಹ ಬಿಟ್ಟರು (ಎಕ. VII. ಶಿಕಮೊ. ೦೦೯-೪೦: ೯೫೦ ೯). [? + ಕೊಪ್ಪ]

**ಬಳಲಿಕೆ** 'ಬಟಿಲ್ಕೆ' ನೋ.

**ಬಳಲಿಸು** 'ಬಟಿಲಿಸು' ನೋ.

**ಬಳಲು** 'ಬಟಿಲ್' ನೋ.

**ಬಳಲುಗಚ್ಚೆ** (ನಾ). ಜೋತಾಡುವಂತೆ ಕಟ್ಟಿದ ಕಚ್ಚೆ : ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುಶ್ಮಾ. ೦೩-೦೩); ಉಟ್ಟ ಧೋತ್ರದ ಬಳಲುಗಚ್ಚೆಯ [ಪಾಠಾಂ. ತಳರುಗಾಸೆಯ] ಸೃಷ್ಟಿಗಚ್ಚರಿರೂಪಿನಲಿ . . . ಬಾದನಾ ಬುತುವರ್ಣನೋಲಗಕೆ (ಶಳಕ. ೬-೨೯). [ಬಳಲು (< ಬಟಲ್) + ಕಚ್ಚೆ]

**ಬಳಲುಗೈ** (ನಾ). ತೂಗಾಡುವ ಕೈ : ವಣಿವಯಭದ್ರಭವನಾವಳಿಗಳ ನಿಲಜನ ಬಳಲುಗೈಸೋಂಕಿನಲಿ ನೆಲಕಪ್ಪಳಿಸಿ ಬದ್ದವು (ಕೊರಶಾ. ೩-೬-೦೭).
[ಬಳಲು (<ಬಟಲ್) + ಕೈ (< ಕಯ್)]

**ಬಳಲುಗೊರಳು** (ನಾ). ಜೋತುಬಿದ್ದ ಕೊರಳು,– ಕುತ್ತಿಗೆ : ಬಳಲುಗೊರಳಲಿ ದೀಳುತಿರ್ದವು ಬೆಳುವ ಗಿಳಿ ಕಬ್ಬಕ್ಕಿ . . . ಕೋಟೆಗಳವನಿಯಗಲದಲಿ (ಕೊರಶಾ. ೬-೬-೦೭).
[ಬಳಲು (<ಬಟಲ್) + ಕೊರಳು (< ಕೊರಲ್)]

**ಬಳಲುಡಿಗೆ** (ನಾ). ಜೋಲುವ ಉಡಿಗೆ; ನೇತಾಡುವ ಬಟ್ಟೆ : ಆ ಸಮಯದಲಿ ಬಂದನೊಬ್ಬನು ಭೂಸುರನು . . . ಬಾಸರದ ಬಳಲುಡಿಗೆ ಮಟ್ಟಿಯ ಧೂಸರದ ಮೈದೊಡಿಗೆ ಮೆಹಿಯ (ಕುಶ್ಮಾ. ೨೦-೦೩).
[ಬಳಲು (< ಬಟಲ್) + ಉಡಿಗೆ (< ಉಡುಗೆ)]

**ಬಳಲುನೋಟ** (ನಾ). ದಣಿದ ದೃಷ್ಟಿ; ಆಯಾಸಗೊಂಡ ನೋಟ : ಬಳಲುನೋಟಗಳೋರೆನೋಟವಾಗವೆಂದೊಳುನೋಟವರಿಸು ಪಾಡಿದಳು (ಶಠಕ. ೦೦-೪೦). [ಬಳಲು (<ಬಟಲ್) + ನೋಟ]

**ಬಳಲುಮುಡಿ** 'ಬಟಿಲ್ಮುಡಿ' ನೋ.

**ಬಳಲುಹೆಜ್ಜೆ** (ನಾ). ದಣಿದ ಹೆಜ್ಜೆ; ಸೋತ ಹೆಜ್ಜೆ : ನೀಲಿಕನ್ನಡಕದ ಮುದುಕ ಬಳಲುಹೆಜ್ಜೆ ಹಾಕುತ್ತ ಹೊರಗೆ ನಡೆದನು (ಪ್ರಶಪು. ೨೨೯).
[ಬಳಲು (< ಬಟಲ್) + ಹೆಜ್ಜೆ (< ಪಜ್ಜೆ)]

**ಬಳಲೊಡಲ್** (ನಾ). ತೆಳ್ಳಗಿರುವ ಶರೀರ; ಕೃಶೋದರ : ಬಳಲೊಡಲ ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ಕಾಚೂಕ್ಮ. ೧೬-೨೯).
[ಬಳಲ್ (< ಬಟಲ್) + ಒಡಲ್]

**ಬಳಲ್ಕೆ** 'ಬಟಿಲ್ಕೆ' ನೋ.

**ಬಳಲ್ಕೆಗಳೆ** 'ಬಟಿಲ್ಕೆಗಳೆ' ನೋ.

**ಬಳಲ್ಗಾಮಿಲೆ** (ನಾ). ಹೆಚ್ಚು ಆಯಾಸವನ್ನುಂಟುಮಾಡುವ ಒಂದು ಬಗೆಯ ಕಾಮಾಲೆರೋಗ : ಮೂಕತ್ವ, ಕಾಮಾಲೆ, ಊದುಗಾಮಿಲೆ, ಬಳಲ್ಗಾಮಿಲೆ, ಕುಂಭಕಾಮಿಲೆ (ಕುಳಶ. ೩೨೭).
[ಬಳಲ್ (<ಬಟಲ್) + ಕಾಮಿಲೆ (< ಕಾಮಾಲೆ)]

**ಬಳಲ್ಗಿವಿ** (ನಾ). ಜೋತು ಬಿದ್ದ ಕಿವಿ : ವಡೆ ಗೋಳಟ್ಟುದಾನೆಕುದುರೆಗಳೊರೆವ ಕಂಬನಿ ಬಳಲ್ಗಿವಿಗಳಿಂ ಜೋಲ್ದವು (ಕೃಏಕಾ. ೦೩-೩೦).
[ಬಳಲ್ (< ಬಟಲ್) + ಕಿವಿ]

**ಬಳಲ್ಚು** (ಕ್ರಿ). (ದ್ರವ ಮೊಂತಾದುವನ್ನು) ಬಳಿದುಕೊಳ್ಳು; ಬಳಿದಂ ಕೊಡಿಸು; ಬಾಚಿಂ: ಮಿಸುವ ಮಿಂಚಿನೊಳಗೆ ಸುಳಿವ ಬಣ್ಣಮಂ ಬಳಲ್ಚಿಕೊಂಡು ಚಿತ್ರಕಾಶರಾಶಿಯೆನಿಪ . . . ವಿಭೂತಿ (ಹಊರ. ೯-೩); ಎಳವಳಿಕೆ ಬೆಳ್ಳಗಳಂ ಬಳಲ್ಚಿ ಶಶಿರುಚಿಯೊಳೆರೆಯಿಟ್ಟಂದದಿನೇಂ ತೊಳಗಿದುದೋ . . . ಸದ್ಯೋಜಾತವದನಂ (ಶಾಕಾಂ. ೩-೩). [ಬಳಲ್ ? + – ಚು]

**ಬಳಲ್ದುಟುಬು** (ನಾ). ಜೋತಾಡುವ ಮುಡಿ : ಪೂಗಳು ಮುಡಿಯುದ ಬಳಲ್ದುಟುಬು . . . ಸಿಂಗರಕೆ ಮಿಗಿಲಾಯ್ತುವನಿಸುತೆಗೆ ಮುತುಮುತಿಯಾಗಲು (ಕೃಏಕಾ. ೦೪-೨೩).
[ಬಳಲ್ (< ಬಟಲ್) + ತುಱುಬು (< ತುಱುಂಬು)]

**ಬಳಲ್ನಡು** (ನಾ). ಸಣ್ಣ ಸೊಂಟ; ಬಡನಡು : ಬಿಣ್ಮೊಲೆಯ ಬಡವಾಸೆಯ ಬಳಲ್ನಡುವಿನ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ಕಾಚೂಕ್ಮ. ೧೬-೨೩). [ಬಳಲ್ (< ಬಟಲ್) + ನಡು]

**ಬಳಲ್ನುಡಿ** (ನಾ). (ಅಲಂ) ನೋವಿನಿಂದ ಕೂಡಿದ ಮಾತು : ಕೊಟ್ಟಬೀಳ್ಗಲ್ಲದೆ ಮಾತಾಡೆನೆಂಬ ಬಳಲ್ನು [ಪಾಠಾಂ. ಬಳಲುನು; ಅಳಲ್ನು, ನಳಲನು]ಡಿಯುಂ ಕೇಳ್ದು ಶಿವಂ ಕೌತುಕಂಬಟ್ಟು (ಶಂಶಿಕ. ೦೨-೬೩).
[ಬಳಲ್ (< ಬಟಲ್) + ನುಡಿ]

**ಬಳಲ್ಮಿಡಿ** (ನಾ). ತೂಗಾಡುವ ಹೀಚು ಕಾಯಿ : ಬಳಲ್ಮಿಡಿಗಳಲ್ಲಿ ಬಲ್ಮಿಡಿಕಾಯ್ಗಳ್ . . . ತನಿವಣ್ಗೊಳಿವ್ಮಾವಸೆದುದು (ಶಕೃಶ. ೨-೩-೦೩).
[ಬಳಲ್ (< ಬಟಲ್) + ಮಿಡಿ]

**ಬಳಲ್ಮುಡಿ** 'ಬಟಿಲ್ಮುಡಿ' ನೋ.

**ಬಳಲ್ಮೊಗ** (ನಾ). ಆಯಾಸಗೊಂಡಂತಿರುವ ಮುಖ : ಎಸವ ಬಳಲ್ಮೊಗಮುಷ್ಣಮನುಸಿರ್ವುಸಿರನುರಾಗವೇಱುವಕ್ಷಿದ್ವಿತಯಂ . . . ತನು ಮನೋಹರಂ ಮಾನಿನಿಯಾ (ಗಂಶ. ೨-೨೦).
[ಬಳಲ್ (< ಬಟಲ್) + ಮೊಗ]

**ಬಳವಂತ** 'ಬಲವಂತ' ನೋ.

**ಬಳವಡಿಕೆ** (ನಾ). ಒಂದು ಬಗೆಯ ಸಸ್ಯ : ಅಡಕುಪುಟ್ಟನ ಗಿಡ, ಬಳವಡಿಕೆ . . . ರಕ್ತಪುರ್ನರ್ನವ (ಶ್ಮಕಿಗ. ೦೩-೨೩೦). [?]

**ಬಳವತ್ಸೈನ್ಯ** 'ಬಲವತ್ಸೈನ್ಯ' ನೋ.

**ಬಳವದ್ವೈರಿ** 'ಬಲವದ್ವೈರಿ' ನೋ.

**ಬಳವಳಿಸು** (ಕ್ರಿ). (?) : ಜಳಲವಮಿರ್ದ ಬೆಂಚೆಗೆ ತುಷಾತುರದಿಂ ಪರಿತಂದು ತೀರದೊಳ್ ಘಳಿಲನೆ ಕಾಲನೂಱಿ ಮೊಗಮಂ ನೆಱೆ ನೀಡಿ ತದೀಯ ಪಂಕವಾಃಖ್ಯಳದ ಮಹೋಷ್ಣಮೋಷ್ಣಪುಟಮಂ ಸುಡೆ ಸಾರ್ದು ಬರಿರ್ದ ಮೋಱೆಯಂ ಬಳವಳಿಸುತ್ತುಮಿರ್ದುದು ಸಮಂತು ಮೃಗೌಘಮದಾ ನಿದಾಘದೊಳ್ (ಕುಶುಚಾ. ೬-೦೨೬ ; ಶಾಂತಿಕ್ಮ. ೦೨-೨೩ ನೋ.). 'ಅಳವಟಿಸಂ' ಹೋ. [ ಇದು 'ಕಳವಳಿಸು' ಎಂಬುದರ ಅಪಲಿಖಿತವಿರಬಹುದೆ ? ]

**ಬಳವಿ** (ನಾ). ೧. ಬೆಳವಣಿಗೆ ; ವೃದ್ಧಿ : ತಿಂಗಳ ಬಳವಿಯನುಚ್ಚತರಂಗಾಂಬುಧಿ ಬಳೆವ ತೆಱದಿನನುದಿನದಿಂದಂ ತಿಂಗಳ ಬಳವಿಯನಂತಾ ಶೃಂಗಾರಾಂಬುಧಿಗೆ ಗರ್ಭವೇಂ ಬಳೆದತ್ತೊ (ಸುಕುಮಚಾ. ೦೦-೦೩) ; ತನುಜನ ಬಳವಿಯನೆ ನೋಡಿ ಜನಕಂ ನಲಿದಂ (ಶಬುರ. ೨೦೬ ಪ್ರಯೋ) ; ಮಾಡಿದುದು ಚಿಂತಾಕ್ರಾಂತತೆಯನೆಮಗೀ ಮಗಳ ಬಳವಿ (ಪರ್ಶಪು. ೯-೩೯). ೨. ವ್ಯಾಪ್ತಿ; ಹರಹು : ಕಮ್ಮನೂರ ಬಳವಿಯೊಳು ಅಯ್ಗಣ್ಣುಗಂ ಬೆಪ್ಪಲೆ (ಎಕ. XIV. ಎಡಕೊ. ೧೬-೦೦ ; 1079) ; ಬೆಳತಿಗೆಗಣ್ಣ ಬಳವಿಗಿದುವೆ ಗುಜು

ಯೆಂದು ಕುಱುಪನಿಕ್ಕುವಂತೆ ಕೊನೆಗೊಡಂಕೆಯೊಳ್ ತೋರಮುತ್ತಿನ ಮುಗುಳಂ ತೆಗಳ್ಚಿಯುಂ (ಚಂದ್ರ.ಕ. ೬-೩೬ ಪ). ೩. ಆಕ್ರಮಣ ; ಮುತ್ತಿಗೆ : ಜಾನ್‌ಕಸ್ತೂರಿಯು ಕೊಡಗುಜನರ ಬಳವಿಗೆ ಸಿಕ್ಕಿ ಜಗಳವಾಡಿ ಬಹಳ ಜನಕ್ಕೆ ಜಾಯ ಜಖಮಿ ಆದ್ದರಿಂದ ಲಾಚಾರಾಗಿ (ಹಕೊಂಕ್ರ. ೪೦). [ ಬಳ್ಳಿ + — ವಿ ]

**ಬಳವಿಗೆ** (ನಾ). ೧. ಬೆಳವಣಿಗೆ ; ವೃದ್ಧಿ : "ಸಚರ ನರರಲ್ಲಿ ಬಳೆದಂ ಬಳವಿ ಬಳವಿಗೆಯೆ ರುಚಿರವಮಕ್ಕುಂ" (ಸಂಜೀವ. ೨೭) ; ಮಕ್ಕಳಂ ಪಡೆದವರ ಕೂಸಾಟಮವರ ಬಳವಿಗೆಯವರ ಹರೆಯದ ವಿಳಾಸಮುಂ ನೋಡಲಿವು ಮಾಱು ಮುನ್ನಂ ನೋನದವರ್ಗೆಂತು ಸಂಭವಿಪುದು (ಶಬ್ದ.ಸ. ೩-೦೦). ೨. ಅಭಿವೃದ್ಧಿ ; ಏಳಿಗೆ ; ಶ್ರೇಯಸ್ಸು : ಭಕ್ತನ ಬ[ಹಾಕಂ. ಬೆ]ಳವಿಗೆಯ ಮಾಡಿದನುಪೋಯೆಂದುದು ಸುರಸ್ತೋಮ (ಉದ್ಭ.ಕ. ೬-೦೯). ೩. ಅತಿಶಯ ; ಅಧಿಕ್ಯ ; ಹೆಚ್ಚಳ : ಇಳೆಯ ಸುಧರ್ಮಮಾರ್ಗದಲ್ಲಿ ನಲವಿಂದ ಪಾಲಿಸುತಿರ್ದರು ಹರಿಭಕ್ತಿ ಬಳವಿಗೆಯೊಳು ನಲಿದಾಗ (ಕಂಸವ. ೩-೦೫). [ಬಳವಿ + — ಗೆ]

**ಬಳವಿವಡೆ** (ಕ್ರಿ). ಹೆಚ್ಚಳವನ್ನು ಹೊಂದು ; ಅಧಿಕವಾಗು : ಕೆಚ್ಚು ವಿರ್ದ ಮಚ್ಚುಮನುರ್ಚಿಪೋದ ಮೇಳಮುಮನಳವಿಗಟಾದಲಂಪುಮಂ ಬಳವಿವಡೆದಟ್ಟುಱುಮನೋಱೋರ್ವರೊಳ್ ನೆಱೆದು (ಅಂಕ. ೪-೩೧ ವ). [ಬಳವಿ + ಪಡ್]

**ಬಳವೈರಿ** 'ಬಲವೈರಿ' ನೋ.

**ಬಳಸಿಗ** (ನಾ). ಕವಚವನ್ನು ತೊಟ್ಟವನು : "ಬಳಸಿಗಂ — ಕುಪ್ಪಸಿಗಂ" (ಕಮದ. ಪ. ೩೬ ಟಿಪ್ಪ) ; ಬಳಸಿಗಂ ಮೊಳೆ ತಾಳಂ . . . ಯಿಱುಕುಳಿ ಯಿಮಾದಿಯಾಗಱು ಕುಳನಂ (ಕಮದ. ೨೬). [ಬಳಸು + — ಇಗ]

**ಬಳಸು** (ಕ್ರಿ). ೧. ಸುತ್ತುವರಿ ; ಸುತ್ತುಗಟ್ಟು : ಶ್ರೀ ತಳ್ಮರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ (ಕಬಿರ. ೦-೦) ; ಪಲವು ವಿಮಾನಂಗಳಂ ವಿಗುರ್ವಿಸಿ ಕ್ಷಪಣಕನ ವಿಮಾನದ ಮುಂದೆ ಬಳಸಿಯುಂ ಪೋಪಂತು ಮಾಡಿಯಾಕಾಶಮೆಲ್ಲಮಂ ವಿಮಾನಮಯಮಾಗೆ ವಿಗುರ್ವಿಸಿ (ವಡ್ಡಾ.ಆ. ೬೪-೬) ; ನೆರೆದರಸುಮಕ್ಕಳ ನಿಡುಗಣ್ಣಳ ಬಳಗಮೆಂಬೆಗೆ ತನ್ನಯ ಮೆಯ್ಯೊಳ್ ನಡೆ ಬಳಸಿ ಪಲರುಮುಂಬಂ ತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ (ಕಂಸಹ. ೩-೩೦) ; ಆಗಳಾ ಕೊಳನ ಬಳಸಿ ಬಂದು ನಿರ್ಭರವಾಗಿ ಬೊಬ್ಬಿಱಿದಬ್ಬರಂಗೆಯ್ದು (ಗದಾಯು. ೬-೦ ವ). ೨. ಸುತ್ತುಹಾಕು ; ಅಲೆ : "ಬಳಸು — ಭ್ರಮಣ. ಕಂಚುಕಾಂಗಯೋಃ (ಯುದ್ಧಕವಚ)" (ಕಮದ) ; ಅವರೋದುವ ಕ್ಷೇತ್ರದೆ ಬಳಸಿಯುಂ ನೋಡಿಸುವುದೆಂದು ಪೇಳ್ದೊಡೆ (ವಡ್ಡಾ.ಆ. ೦೬೬-೨೨). ೩. ತಿರುಗು ; ಹೊರಳು : ಹೊಳೆಯ ಸುಳಿಯಲ್ಲಿ ಸಿಕ್ಕಿದ ಹುಲ್ಲು ಬಳಸುವದಲ್ಲದೆ ಅಳಿವುದಿಲ್ಲ ಮುಳುಗುವುದಿಲ್ಲ (ಕೋಕಿಶಾ. ೦೩೦-೩೦೬). ೪. ಸುತ್ತಿ ಹೇಳು : ಮುನ್ನವೆ ಮುಟ್ಟಿ ನುಡಿಯದೆ ಪೋಪೊಗಿದನೆ ಬಳಸಿ ಕನ್ನೆದು ಶಂಕೆಯಿಂ ಕಿಡಿಸಿ ಮತ್ತವಿಂತೆಂದಳ್ (ಕಂಸಹ. ೪-೩೬ ವ).

ಬಳಸುಬಳಸು, ಬಳಬಳಸು (ದ್ವಿರುಕ್ತಿ) : ಹಲವು ಸೂಳ್ ಕೈ ಮುಟ್ಟಿ ಸವಿಸುತ ಬಳಸಿಬಳಸಿ ಬಳಿಕ ಹೊಡವಡುತ (ಬಸಕ. ೩೬-೨೩) ; ಅನಿರೀಕ್ಷಿತವಾಗಿ ಅನೇಕಾನೇಕ ವಿಷಯಗಳು ಅವನ ಮನಸ್ಸನ್ನು ಬಳಬಳಸಿ ಹಾದು ಹೋದುವು (ಬಸಿರು. ೦೩೦). ಬಳಸಿ ಹೇಳು = ಸುತ್ತಿ ಹೇಳು ; ನೇರವಾಗಿ ಹೇಳದಿರು : ಹಾಗ್ಯಾಕೆ ಬಳಸಿ ಹೇಳ್ತೀಯೋ ಮುನಿಯ ? (ವಚನಾ. II. ೧೦೩). [ಬಳ್ಳಿ + — ಸು./ತುಳು. ಬಲಿಪು, ಬಳಿಪು]

**ಬಳಸು** 'ಬಟಸು' ನೋ.

**ಬಳಸು** (ನಾ). ೧. ಆವರಿಸುವಿಕೆ ; ಮುತ್ತುವುದು ; ಸುತ್ತುವರಿಯುವಿಕೆ : ಅಶ್ವತ್ಥಾಮಂ ಭೀಮೋದ್ದಾಮಶ್ಯಾಮಜಳಧರವಿಮುಕ್ತ ಶರಾವಳಿಯ ಬಳಸಂ ಕಂಡು ಮುಗುಳ್ನಗೆ ನಕ್ಕು (ಕಂಸಹ. ೦೨-೬೮ ವ) ; ಬೆಳಗುಗಳ ಬಳೆದ ಬಳಗದ ಬಳಸುಗಳೊಳಗೊಳಗೆ ತೊಳಗಿ ಪೊಳೆ ಪೊಳೆದೊಳಗುಚ್ಚಳಿಸಿ . . . ತಳರ್ದರ್ತ್ಯಾಗಗಳ್ (ಕಾವ್ಯಾ.ಕ. ೨೩). ೨. ಸುತ್ತುವಿಕೆ ; ಭ್ರಮಣ : ಚಾಪಂ ಕುಟಿಲತೆಗೆಟ್ಟು ಚಕ್ರವಳಯದ ಬಳಸಂ ಮಾಂಕರಿಸಿ ಬಿಲ್ಲ ಕೊಪ್ಪು ಕೊಡಂಕೆಯ ಕೊಪ್ಪಿನವೊಲಮರೆ (ಶಾಂತಿ. ೪-೯೩). ೩. ಸುತ್ತುಗಟ್ಟುವಿಕೆ: ಎಳವಳ್ಳಿಯ ಬಳಸಿಂಗೊಳಗಾದಸುಗೆಯ ಚೊಂಪಂಗಳೊಳ್ (ಕಬ್ಬಿಗ. ೦೨೫) ; ದಂತಪಂಕ್ತಿಯ ನಡುವೆ ಎಂತಿಪ್ಪದದು ಜಿಹ್ವೆ ಅಂತು ದುರ್ಜನರ ಬಳಸಿನಲಿ ಸಜ್ಜನನು ನಿಂತಿಹನು (ಸರ್ವಜ್ಞ. ೬೨೦). ೪. ಸುತ್ತಿ ಕಟ್ಟುವ ಸಾಧನ : ಎಂಟುಂ ದೆಸೆಯ ದೇವತೆಗಳೆ ಗೊಳ್ಗಾಗಿಯುಂ ವಾಸುಗೆಯೆ ಬಳಸಾಗೆಯುಂ (ಶಾ. IV. ೩೦-೦೦ ; 1000 ?) ; ಲೋಕವಂಳಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ ಫಣಕುಳಂಗಳೇ ದಾರವಾಗಿ (ಎಕ. VII. ಶಿಕಾ. ೦೦೬-೩೦ ; 1054). ೫. ಸುತ್ತುಮುತ್ತು ; ಆಸುಪಾಸಂ : ಮಾಧವಿಯ ಮಂಡಪದ ಬಳಸಿನೊಳಗೆ ಪಳುಕಿನ ಕುಂಭದೊಳಂ . . . ಕಪ್ಪುರದ ಬೀಯದ ಬಾಯಿನದ ವಿಲಾಸಮುಚ್ಚರಿಯಪಗೆ (ಅಕಂಪು. ೬-೩ ವ) ; ಸಡಗರದಿ ಮಹಿಳಾನಿಕರ ಬಂದುದು ಸತಿಯ ಬಳಸಿನಲಿ (ಜೈಮಿನಿ. ೬-೩೦). ೬. ಆವರ್ತ ; ಸುತ್ತು : 'ಮೂಱುವಳಸು' ಪರಾ. ೭. ನೇರವಾಗಿ ಹೇಳದಿರುವಿಕೆ ; ಸುತ್ತು ಮಾತು : ನೇರವಲ್ಲದ ಮಾತು : ಬಳಸಿನೊಳೇಂ ತಿಂಬುದು ಮಾತುಳುಂಗವಕ್ರಪ್ರಯುಕ್ತಮಧುಮಂ ಬೇಗಂ ಕಳೆಗುಂ ಮುಸಗಿದಪಾನ್ಸಾನಿಳನಂ (ಕೋಟೀಶ. ೪-೦೯೬) ; ಎತ್ತುವುದೆ ಮಂತ್ರಮಿನ್ನಾ ಸುತ್ತುಂಬಳಸುಗಳ ನುಡಿಯವು (ಸುಕಾಪ. ೦೦-೬೬) ; ಸುತ್ತೇಕೆ ಬಳಸೇಕೆ ನೆಟ್ಟನೆ ಮಾತಾಡು (ಇಂಚಾಕ. ೨೩೯-೬೬). 'ಸುತ್ತು ವಳಸು' ಪರಾ. ೮. (ಊಟ ಮೊದಲಾದ ವಿಷಯಗಳಲ್ಲಿ) ಸರದಿ ; ಸಲ ; ಬಾರಿ : ಅವರ ಮನೆಯ ಔತಣದಲ್ಲಿ ನಾಲ್ಕು ಬಳಸು ಬಡಿಸಿದರು (ರೂಢಿ). ೯. ಕವಚ ; ಚಿಲುಖತ್ತು : "ಬಳಸು ಭ್ರಮಣ, ಕಂಚುಕಾಂಗಯೋಃ (ಯುದ್ಧಕವಚ)" (ಕಮದ).

[ < ಬಳಸು ]

**ಬಳಸು** 'ಬಟಸು' ನೋ.

**ಬಳಸುಗ** (ನಾ). ಸಂತ್ಯಾಡುವವನು ; ತಿರಂಗುವವನಂ : "ಪ್ರೀಣ. ಪ್ರಯಾಣಃ — ಈ ೨ ಬಳಸುಗಂ" (ಕಾಕ್ಷ. ೬೯೪). [ಬಳಸು + — ಗ]

**ಬಳಸುಗೆಯ್ಮೆ** (ನಾ). ಸುತ್ತಿ, ಬಳಸಿ ಮಾಡುವ ಕೆಲಸ ; ನೇರವಾಗಿ ಮಾಡದ ಕಾರ್ಯ : ನಿನ್ನ ಸೇನೆಯನೆನಗೆ ತೋರ್ದು, ನಾನದಂ ದೊರೆಗೊರವ ಬಳಸುಗೆಯ್ಮೆಗೆ ಬರಿದೆ ದಣಿಯದಿರ್ (ತ್ರೈಣಕಶಾ. ೬೦೬-೦೬೭). [ಬಳಸು + ಗೆಯ್ಮೆ (< ಕೈಮೆ)]

**ಬಳಸುದಾರಿ** (ನಾ). ಸುತ್ತಾದ ಹಾದಿ ; ಹತ್ತಿರವಲ್ಲದ ಮಾರ್ಗ ; ನೇರವಲ್ಲದ ದಾರಿ : ಬಳಸುದಾರಿಯಲಿ . . . ಮುಂಬರಿಯುತಿದೆ ರಾಯನ ಸವಾರಿ ! (ಹಕರ. ೪-೪) ; ದಿವ್ಯಿಗಳನ್ನು ಅಲ್ಲಿಂದ ಸಾಗಿಸುವ . . . ಉದ್ದೇಶದಿಂದ ಬಳಸುದಾರಿಯನ್ನು ತುಳಿದಿದ್ದ (ಐಕಶಾ. ೯೪). [ಬಳಸು + ದಾರಿ]

**ಬಳಸುದೊಂಗಲ್** (ನಾ). ಸುತ್ತಿರುವ ಕುಚ್ಚು, — ಗೊಂಡೆ : ದೇವಿಯರ್ಗೇಂ ಕೊಱತೆ ಪಾಂಡ್ಯಸತಿಯರ ತೊಂಡಲ್ದೀವಿದ ಘನರತ್ನಂಗಳ್ ಪಾವುಗೆಗಳ ಬಳಸುದೊಂಗಲಿಡೆಯೊಳ್ ತೋರ್ಕುಂ (ಕಳಿಂ. ೩-೩೬). [ಬಳಸು + ತೊಂಗಲ್]

**ಬಳಹ** 'ಬಳಪ' ನೋ.

**ಬಳಹರಿ** 'ಭಟ್ಟಾರಿ' ನೋ.

**ಬಳಾಕ** 'ಬಲಾಕ' ನೋ.

**ಬಳಾಕೆ** 'ಬಲಾಕೆ' ನೋ.

**ಬಳಾಢ್ಯ** 'ಬಲಾಢ್ಯ' ನೋ.

**ಬಳಾಧ್ಯಕ್ಷ** 'ಬಲಾಧ್ಯಕ್ಷ' ನೋ.

**ಬಳಾರ** 'ಭಟಾರ' ನೋ.

**ಬಳಾರಿ** 'ಭಟಾರಿ' ನೋ.

**ಬಳಾಹಕ** 'ಬಲಾಹಕ' ನೋ.

**ಬಳಾಹಿತ** (ನಾ). ಇಂದ್ರ; ದೇವೇಂದ್ರ: ಬಳಾಹಿತಮುಖಾಮರನತೇ ಗಳಾನ್ವಿತಹಲಾಹಲಭಿಲೇಶಯ ಕಳೇವರವಿಳಾಸದೆ ಕಳಂಕರಹಿತೇ (ಛಾಅಕೀ. ೧೧-೦೧೧). [ಸಂ. ಬಲಾಹಿತ]

**ಬಳಿ₁** 'ಬಟ್₁' ನೋ.

**ಬಳಿ₂** 'ಬಟ್₃' ನೋ.

**ಬಳಿ₃** 'ಬಲಿ₃' ನೋ.

**ಬಳಿಕ** 'ಬಟಿಕು' ನೋ.

**ಬಳಿಕಜಿ** (ನಾ). ಒಂದು ಊರಿನ ಹೆಸರು: ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಬಳಿಕಜಿಯ ಕೀಟೀರಿಯ ಬೇರುಂಗಾಲಂ ಒಕ್ಕಲೊಳೊನ್ದು ಪೊಜಿಯುಂ ಸಲ್ವದು (ಎಕ. III. ಸಂಜಿಜ. ೦೮೪-೦೦; 977). [ಬಳಿ₁ + ಕಜಿ]

**ಬಳಿಕೋಲು** (ನಾ). ಬಿಲದೊಳಗೆ ಹೊಕ್ಕ ಪ್ರಾಣಿಗಳನ್ನು ಈಚೆಗೆ ಬರುವಂತೆ ಮಾಡಲು ಆ ಪ್ರಾಣಿಗಳು ಹೋದ ಕಡೆ ಹಾಕಿ ತಿವಿಯಲು ಕೋಲು: ಬಳಿಕೋಲು ಹಾಕಿ ನೋಡಿದಾಗ ಒಚೇಲಿ ಗೊತ್ತಾತು! (ಕುಶಕು. ೬೬). [ಬಳಿ₂ (<ಬಟ್₃) + ಕೋಲು₁ (< ಕೋಲ್₁)]

**ಬಳಿಕ್ಕ** 'ಬಟಿಕಂ' ನೋ.

**ಬಳಿಕ್ಕಂ** 'ಬಟಿಕಂ' ನೋ.

**ಬಳಿಗಳುಹಿಸು** (ಕ್ರಿ). ಊರಿಗೆ ಬಂದ ಆಪ್ತೇಷ್ಟರನ್ನು (ಊರಿನ ಹೊರಗಿನ ಜಲಾಶಯದ ವರೆಗೆ ಜೊತೆಯಲ್ಲಿ ಕರೆದುಕೊಂಡು ಹೋಗಿ) ಬೀಳ್ಕೊಡು: ಲಲಿತಲತಾಂಗಿ ಶಶಿಪ್ರಭೆಯಸು ಬಳಿಗಳು ಓಸಿ ಜಯವರ್ಮನೃಪತಿ ಲಲನೆ ಜಯಶ್ರೀದೇವಿ ಸಹಿತಿ ತನ್ನ ಪೊಳಲ ಪೊಕ್ಕನು (ಶಂಕೃಸಾಂ. ೦೪-೬೩). [ಬಳಿ₂ (< ಬಟ್₃) + ಕಳುಹಿಸು]

**ಬಳಿಗೆಲಸ** (ನಾ). ಹತ್ತಿರವಿದ್ದು ಮಾಡುವ ಸೇವಾಕಾರ್ಯ; ಉಳಿಗ: "ಸೇವನಂ, ಸೇವನೀಯಂ, ಸೇವಿಃ, ಸೇವ್ಯಂ, ಸ್ಯೆವ್ಯಂ — ಈ ೫ ಬಳಿಗೆಲಸಂ" (ಕಾಶಕ್ಕೃ. ೦೦೩); ಹಲವು ಸೂಳೋರಂತೆ ನಂಬಿಯು ಬಳಿಗೆಲಸವ ಮಾಡಲಾಜದೆ (ಬಸಪು. ೦೬-೦೨); ಬಾರೈ ಬಳಿಗೆಲಸ ಕಿನ್ನರು ನೀನೆಮಗಲ್ಲದಾವ್ವರಲಿ (ಕೂಕಕಾ. ೩-೩-೬). [ಬಳಿ₂ (< ಬಟ್₃) + ಕೆಲಸ]

**ಬಳಿಗೆಲಸಿ** (ನಾ). ಹತ್ತಿರವಿದ್ದು ಸೇವೆ ಮಾಡುವ ವ್ಯಕ್ತಿ: ನಂಬಿಯು ಸಂಗಡಿಗನೋ . . . ಬಳಿಗೆಲಸಿಯೋ ಮಲ್ಲಿಕಾರ್ಜುನಪಂಡಿತರ ಮನೆಯ (ಬಸಪು. ೯೬-೪೬). [ಬಳಿಗೆಲಸ + — ಇ₃]

**ಬಳಿಗೆಲಸಿಗ** (ನಾ). = ಬಳಿಗೆಲಸಿ: "ವಾಸಯನ್ = ಬಳಿಗೆಲಸಿಗಂ" (ಕಾಶಕ್ಕೃ. ೨೫೩). [ಬಳಿಗೆಲಸ + — ಇಗ]

**ಬಳಿಗೊಳ್** 'ಬಟಿಗೊಳ್' ನೋ.

**ಬಳಿಚಿಸು** 'ಬಟ್ಚಿಸು' ನೋ.

**ಬಳಿಚು** 'ಬಟ್ಚು' ನೋ.

**ಬಳಿಜಸ** (ನಾ). ವಂಶದ ಕೀರ್ತಿ: ಪಗೆ ಪಳಿಗಳೆರಡಂ ತೀರ್ಚಿ ಬಳಿಜಸವನೆನ್ನ ಪೌರುಷತೇಜವಂ ಬಿಡದೆ ಸಾಧಿಸಿರ್ಪೆನ್ (ಶ್ರೀರಾಪಟ. ೬೫೨-೪೦೩). [ಬಳಿ₂ (< ಬಟ್₃) + ಜಸ₁]

**ಬಳಿತ** (ನಾ). ಬಳಿಯುವಿಕೆ; ಲೇಪಿಸುವಿಕೆ: "ಲೇಪನಂ, ಲೇಪನೀಯಂ . . . ಲಿಪ್ತಃ — ಈ ೫ ಬಳಿತಂ" (ಕಾಶಕ್ಕೃ. ೨೦೪). [ಬಳಿ₁ (< ಬಟ್₁) + — ತ₂]

**ಬಳಿದಪ್ಪು** 'ಬಟಿದಪ್ಪು' ನೋ.

**ಬಳಿದೊತ್ತು** 'ಬಟಿದೊಟ್ಟು' ನೋ.

**ಬಳಿದೊಳ್ತು** 'ಬಟಿದೊಟ್ಟು' ನೋ.

**ಬಳಿನಕಲು** (ನಾ). ಮೂಲಪ್ರತಿಗೆ ಹತ್ತಿರವಾದ ಪ್ರತಿ: ಬಹು ಸಂಖ್ಯೆಯ ಸ್ವಹಸ್ತ ಪ್ರತಿಗಳು ಇಲ್ಲವೆ ಅವುಗಳ ಬಳಿನಕಲುಗಳು ಅಥವಾ ಪ್ರಾಚೀನಪ್ರತಿಗಳು ನಾಶವಾಗಿ ಬಿಟ್ಟದ್ದು (ಛಾರಕ. ೩೮). [ಬಳಿ₂ (< ಬಟ್₃) + ನಕಲು]

**ಬಳಿನಡೆ** (ನಾ). ವಂಶಪಾರಂಪರ್ಯವಾದ ನಡವಳಿಕೆ.— ಆಚರಣೆ: ಆಚಣ್ಣಾದೇವಣ್ಣಗಳು ಬಳಿನಡಗೆ ಕೊಟ್ಟ ಗ ೩ ಪು× ×ಯಮ್ಮ ಬಳಿನಡಗೆ ಕೊಟ್ಟ ಗ ೬ (ಎಕ. VI. ಕಡೂರು. ೩೫-೦೦; 1217). [ಬಳಿ₂ (<ಬಟ್₃) + ನಡೆ₂]

**ಬಳಿನೀರ್** 'ಬಟಿನೀರ್' ನೋ.

**ಬಳಿನೀರು** 'ಬಟಿನೀರ್' ನೋ.

**ಬಳಿನೀರ್ಗುಡಿ** 'ಬಟಿನೀರ್ಗುಡಿ' ನೋ.

**ಬಳಿನೀರ್ಗೊಳ್** (ಕ್ರಿ). = ಬಟಿನೀರ್ಗುಡಿ: ಮೊಲೆಯುಂಬ ಲಿಂಗಮುಂ ಮುಟ್ಟಿಯಧರಾಮೃತವನೊಲಿದು ಬಳಿನೀರ್ಗೊಂಡ ತಪ್ಪಿಂದಲರೆ ಮೆಯ್ಯುನಾದ (ತೀಶಪು. ೮-೦). [ಬಳಿನೀರ್ (< ಬಟಿನೀರ್) + ಕೊಳ್₁]

**ಬಳಿಬರು** 'ಬಟಿವರ್' ನೋ.

**ಬಳಿಭುಕ್ಕು** 'ಬಲಿಭುಕ್ಕು' ನೋ.

**ಬಳಿಮಾರಿ** (ನಾ). ವಂಶಕ್ಕೆ ಮಾರಕವಾದ ವ್ಯಕ್ತಿ: ಉಳಿದರ್ಗೇಯಾದ ತಾನೇ ಕಾಲಯಮನಂತಕ್ಕುಗ್ರಮಂ ತಾಳ್ದಿದಾ ದಳವಾಯೇ ಬಳಿಮಾರಿಯ್ಯ (ಸೋವಚಕ. ೬೯). [ಬಳಿ₂ (<ಬಟ್₃) + ಮಾರಿ₂]

**ಬಳಿಮುಖ** 'ಬಲಿಮುಖ' ನೋ.

**ಬಳಿಯ** 'ಬಟಿಯ' ನೋ.

**ಬಳಿಯಂ** 'ಬಟಿಕಂ' ನೋ.

**ಬಳಿಯಟ್ಟು** 'ಬಟಿಯಟ್ಟು' ನೋ.

**ಬಳಿಯಣ** 'ಬಟ್₃' ಪರಾ.

**ಬಳಿಯಿಸು, ಬಳಿಸಂ** (ಕ್ರಿ). ೧. ಕಸವನ್ನು ಗುಡಿಸಂವಂತೆ ಮಾಡು; ನೆಲವನ್ನು ಸ್ವಚ್ಛ ಮಾಡಿಸು. ೨. (ಬಣ್ಣ ಮೊದಲಾದುವನ್ನು) ಹಚ್ಚುವಂತೆ ಮಾಡು; ಹಚ್ಚಿಸು: ಏಳು ರೇಶ್ಮೆ ಬಟ್ಟೆಯ ತುಂಡುಗಳ ಮೇಲೆಯೂ ಸಪ್ತರಂಜನದ ಏಳು ಬಣ್ಣಗಳನ್ನು . . . ಬಳಿಯಿಸಿ (ಕ್ಷೋಅಪ. ೨೫೫). **ಬಳಿಸು**: ೧. ಹರಿಯ ದಾಸರಿಗಿನ್ನು ಸರಿಯುಂಟೆ . . . ಮಂಸಣಿಯಾ ಕೈಯ ಕಸ ಬಳಿಸುವರು (ಕ್ರಕೀಂದ. ೦-೦೫೩-೦). [ಬಳಿ₁ (<ಬಟ್₁) + — ಇಸು₃]

**ಬಳಿರಿಪು** 'ಬಲಿರಿಪು' ನೋ.

**ಬಳಿವಟ, ಬಳಿವತ್ರ** (ನಾ). ಒಂದು ಬಗೆಯ ತೆರಿಗೆ (?): ಆ ಶಾಂತಿ ಗ್ರಾಮದ ಸಿದ್ದಾಯದ ಮೊದಲ ಹೊಂನೊಳಗೆ ಆಯ್ದು ಹೊಂನನು ಅವರ ಸಮಸ್ತ ಬಳಿವಟ ನೋಡಿ (ಪ್ಯಾಅಂ. ೧೧೯೦.೩-೨೯; 1216). **ಬಳಿವತ್ರ**: ಒಕ್ಕಲೊಳೊನ್ದು ಪೊಜಿಯುಂ ಕಯ್ಯುಂ ಪದಿಕ್ಕೊರ್ಗಂ ಭತ್ತಮುಂ ವಿಷಸಲಂ ಬಳಿವತ್ರಮುಂ ಸಲ್ವದು (ಎಕ. III. ಸಂಜಿಜ. ೦೮೪-೦೦; 977). 'ಬಳಿ₃' ಪರಾ. [?]

**ಬಳಿವತ್ರ** 'ಬಳಿವಟ' ನೋ.

**ಬಳಿವರ್** 'ಬಟಿವರ್' ನೋ.

**ಬಳಿವರಿ** (ಕ್ರಿ.) ಸಮೀಪಕ್ಕೆ ನುಗ್ಗು; ಹತ್ತಿರಕ್ಕೆ ಧಾವಿಸು : ಚೆಲ್ಲಿದರೆ ಬಳಿವರಿದು ಚೌಪಟಮಲ್ಲ ಹೊಕ್ಕನು ಹೊಯ್ದು ಗದೆಯಲಿ ಘಲ್ಲಿಸಿದನು (ಕುಮಾ.ದ್ರೋ. ೧೫-೩೦). [ಬಳಿ$_{2}$ (<ಬಟಿ$_{3}$) + ವರಿ$_{1}$]

**ಬಳಿವರು** 'ಬಟಿವರ್' ನೋ.

**ಬಳಿವಿ** (ನಾ). (?) : ವಿವಿಧಮಣಿಕಿರಣಚಯದಿಂದವನಿಪನಂ ಬಳಿದು ಕೊಟ್ಟ ನರ್ಥಿಜನಕ್ಕಾ ದಿವಿಜೇಂದ್ರಂ ಬಳಿವಿಯ ಮಂತ್ರವಾದಿಯೆನೆ ನೆರೆದ. ಮಕುಟ ಬದ್ಧಸಮಾಜಂ (ಶಾಂತಿಪು. ೧೦-೧೦).

[☞ ಇದು 'ಜಳವೆ = ದಂಡ' ಎಂಬುದರ ಅಪಲಿಖಿತವಿರಬಹುದು]

**ಬಳಿವಿಡಿ** 'ಬಟಿವಿಡಿ' ನೋ.

**ಬಳಿವೆಳಗು** (ನಾ.) ಹತ್ತಿರದ ಬೆಳಕು : ಬಳಿವೆಳಗಿನ. . .ಬೆಳ್ವೆಳಗಿನ ಬೆಳಸಿನ ಸಿರಿಯೆನೆ ತೊಳತೊಳಗಿದುದು ಮೂರ್ತಿ ಚಂದ್ರಪ್ರಭನಾ (ಕಮ್ಮಾಸು. ೧೪೦ ಪ್ಯಾ.ಪ್ಯಾ.). [ಬಳಿ$_{2}$ (<ಬಟಿ$_{3}$) + ಬೆಳಗು$_{2}$]

**ಬಳಿವೊರ್ದು** (ಕ್ರಿ). ಸಮೀಪಿಸು ; ಜೊತೆಗೂಡು : ರಾಹು ತೊರೆ ದೊಡನೆ ಶಶಿಯಂ ರೋಹಿಣಿ ಬಳಿವೊರ್ದಿದಂತೆ . . . ಸೇರ್ದಯೆನ್ನಯ ಬಳಿಯಂ (ಶಾಂತೀಶ. ೧೦೯-೧೬೩). [ಬಳಿ$_{2}$ (<ಬಟಿ$_{3}$) + ಪೊರ್ದು$_{1}$]

**ಬಳಿಶರ** (ನಾ). ಒಂದರ ಹಿಂದೆ ಒಂದು ಬರುವ ಬಾಣ : ನೂಱುಶರ ದಲಿ ಬಳಿಶಿಖಿ ನಾನೂಱಱಲಿ ಬಳಿಶರಕೆ ಬಳಿಶರವಾಱುಸಾವಿರದಿಂದ ತಱಿದನು ಪಾರ್ಥನಂಬಲವ (ಕುಮಾ.ಗ. ೨-೦೯).

[ಬಳಿ$_{2}$ (< ಬಟಿ$_{3}$) + ಶರ]

**ಬಳಿಸರಳು** (ನಾ). = ಬಳಿಶರ : ಸರಳನೆಚ್ಚನು ಸರಳನಾ ಬಳಿಸರಳು ಮುಂಚಿದುದಾ ಸರಳ ಬಳಿಸರಳು ಮುಂಚಿದುದು (ಕುಮಾ.ಕ. ೩-೦೯); ಬಳಿಸರಳ ಸಂಧಾನದಲಿ ಬಳಿಕುಳಿಕಲಿನ ರಕ್ಕಸರ ಜವಪುರದೊಳಗೆ ಹೊಗಿಸಿದನು (ತೊರವ. ೦-೧೧-೨೨).

[ಬಳಿ$_{2}$ (<ಬಟಿ$_{3}$) + ಸರಳು$_{1}$ (<ಸರಲ್$_{1}$)]

**ಬಳಿಸಲ್** 'ಬಟಿಸಲ್' ನೋ.

**ಬಳಿಸಲಿಸು** (ಕ್ರಿ). ಹಿಂದೆ ಬರು; ಅನುಸರಿಸು : ರಿಪುಜಾಲವನು ನೀ ಖಂಡಿಗೆ ಬಹವಾವು ಬಳಿಸಲಿಸಿ (ಕುಮಾ.ದ್ರೋ. ೬-೨೬).

[ಬಳಿ$_{2}$ (<ಬಟಿ$_{3}$) + ಸಲಿಸು]

**ಬಳಿಸಾರ್**, **ಬಳಿಸಾರು** (ಕ್ರಿ). ಹತ್ತಿರ ಬರು ; ಸಮೀಪಿಸು : ತುಂಬಿ ಕವಿವಾವ್ರಮನಭ್ರಮೆ ಗೆತ್ತು ಕೇಕಿಮಂಡಳಿ ಬಳಿಸಾರ್ದು ನರ್ತಿಸುಗುಂ (ಕಾಶಿಂ. ೨-೪೭); ಅಕ್ಕಟಾ! ಎಂದೊಬ್ಬನಳಲಿ ಬಳಿಸಾರ್ದು . . . ಕರೆದಂ (ಶಾಬೋಕ. ೯೬-೧೯೩). **ಬಳಿಸಾರು** : ಏನನೊ ನುಡಿಯುತಲಿರುವಳದೇ ನೆಂದು ಬಳಿಸಾರಿ ಮೆಲ್ಲನೆ ಕೇಳು (ಹಂಶಾಕ. ೧೩೬-೨೪).

[ಬಳಿ$_{2}$ (<ಬಟಿ$_{3}$) + ಸಾರ್$_{1}$]

**ಬಳಿಸಾರು** 'ಬಳಿಸಾರ್' ನೋ.

**ಬಳಿಸಾಲು** (ನಾ). ಅಕ್ಕಪಕ್ಕದ ಪಂಕ್ತಿ ; ಸಮಾನಾಂತರದ ಸಾಲು : ಹರಗಬಲ್ಲೆನು ಬಿತ್ತಬಲ್ಲೆನು ಅರಿದು ಬಳಿಸಾಲುಗಳ ಹೊಡೆವೆನು (ರೀತಶಾ. ೬-೧೯). [ಬಳಿ$_{2}$ (<ಬಟಿ$_{3}$) + ಸಾಲು$_{2}$ (<ಸಾಲ್$_{3}$)]

**ಬಳಿಸು** 'ಬಳಿಯಿಸು' ನೋ.

**ಬಳಿಸೇರು** (ಕ್ರಿ). = ಬಳಿವೊರ್ದು : ಆ ವ್ರತಕ್ಕೆ ದೀರ್ಘಾಯುವಾದ ನೀವು ಬಳಿಸೇರಿ ತಮ್ಮನ್ನು ಆದರಿಸಬೇಕೆಂದು ದೇವಿಯವರು ಆಜ್ಞಾಪಿಸು ವರು (ಶಾಕುಂತ. ೨೯-೩). [ಬಳಿ$_{2}$ (<ಬಟಿ$_{3}$) + ಸೇರು$_{1}$ (<ಸೇರ್)]

**ಬಳಿಸೇವೆ** (ನಾ). = ಬಳಿಗೆಲಸ : ರಾಜಂಗೆ ಬಳಿಸೇವೆಗೆಯ್ವರೊಳು ನಚ್ಚಿನವರಾರು (ಶಾಕಾ. ೦೬-೩೯೯). [ಬಳಿ$_{2}$ (<ಬಟಿ$_{3}$) + ಸೇವೆ$_{1}$]

**ಬಳಿಹರ** 'ಬಲಿಹರ' ನೋ.

**ಬಳು** (ನಾ). ಒಂದು ಅಳತೆ (?) : ಮೂಡಣ ಹೆಗ್ಗಡ್ಡ ಅದಱ ಮೇಗಣ ಕೊಡಂಗೆ ಎರಡಱಲ್ಲಿಯು ಮೂಡೆ ೨ ಬಂಣಟೆ ಮೂಡೆ ೨ ಮುಂಡಿನ ಮಾಡುವ ಬಳು ಮೂಡೆ ೧ ಚಿಕ್ಕಬಿಟ್ಟುವ ಕೊಡಂಗೆ ಮೂಡೆ ೧ (ಎಕ. XXVII, ೦೬೨-೪೯; 1266). [?]

**ಬಳುಂಕು** 'ಬೆಳ್ಕು$_{1}$' ನೋ.

**ಬಳುಕಿಸು** 'ಬಳ್ಕಿಸು' ನೋ.

**ಬಳುಕು$_{1}$** 'ಬೆಳ್ಕು$_{1}$' ನೋ.

**ಬಳುಕು$_{2}$** 'ಬೆಳ್ಕು$_{2}$' ನೋ.

**ಬಳುಕುನಡೆ** (ನಾ). ತೊನೆಯುತ್ತಾ ನಡೆಯುವುದು : ವಿಲಸಿತದ ವಿಘುವಿಂಗೆ ದಟ್ಟಡಿ ಬಳುಕುನಡೆ ಮೆಲ್ನಡೆಗಳೆಂಬಿವು ತಿಳಿವವರ ಮನಸಿಂಗೆ ಮಱಿ ತಾನಲ್ಲವೇ (ತೊರವ. ೦-೮೭೬). [ಬಳುಕು$_{1}$ (<ಬೆಳ್ಕು$_{1}$) + ನಡೆ$_{2}$]

**ಬಳುಕುನೀರು** (ನಾ). ಒಂದು ಬಗೆಯ ತೆರಿಗೆ : ಕಳುವಡೆ ನಾರಡೆ ಬಳುಕುನೀರು ಊರಸಂಕೆ ಮೊದಲಾದ ಹಲ ಉಪಾಧಿಗಳು ಸಹ . . . ಅನುಭವಿಸಿಕೊಂಡು (ಸೌಇಇ. IX-ii, ೯೩೬-೬; ಕು. 1471). [?]

**ಬಳುಕುಮೈ** (ನಾ). (ಒಯ್ಯಾರದಿಂದ) ತೊನೆಯುವ ಶರೀರ : ಕೈಮುಗಿವ ಪ್ರಮದೆಯರ ಕಾಕಣಗಳಲುಗುತ್ತ ಕುಂಬಿಡುವ ಬಳುಕು ಮೈಗೆಚ್ಚರಿಕೆಯುಲಿಯೆ (ಮುರಿಡಿ. ೩೦-೪).

[ಬಳುಕು$_{1}$ (<ಬೆಳ್ಕು$_{1}$) + ಮೈ (<ಮೆಯ್$_{2}$)]

**ಬಳುವಟ್ಟೆ** (ನಾ). ಕಾಡುದಾರಿ : ನಾಯಿಗಳ ಹಾಗೆ ಬಳುವಟ್ಟೆ ತಿರು ಗಾಡಿಕೊಂಡು ಇರುವುದು (ಮೂಳೆಕ್ಕ. ೨೬). [< ಪಳುವಟ್ಟೆ]

**ಬಳುವಳ** 'ಬಳ್ವಳಂ' ನೋ.

**ಬಳುವಳಿ** 'ಬಟಿವಟಿ$_{1}$' ನೋ.

**ಬಳುವಳಿಕೊಡು** 'ಬಟಿವಟಿಗೊಡು' ನೋ.

**ಬಳುವಳಿಗೊಡು** 'ಬಟಿವಟಿಗೊಡು' ನೋ.

**ಬಳುವೆ** (ನಾ). (?) : ಸುಳಿದವಾಸ್ತಿ ಕರ್ಪುರದ ಪ್ರಜ್ವಲಿಪ ಮಾಣಿಕ ದೀಪ್ತಿಗಳ ವಸ್ತ್ರ[ಪಾಠಾಂ. ಬಲು]ಗಳವೆಗೂಳಿನ ಬಳುವೆಗಳಲುಪ್ಪುಗಳ [ಪಾಠಾಂ. ಬಳುವೆಯುಪ್ಪರತಿಯು] ಸೂಸಿಕೆಯು ಕಳಕಳದೊಳೊಪ್ಪಿಮದು ಪಾರ್ಥಿವನಿಳಯವು (ತೊರವ. ೬-೫೫-೦೬); "ಭೀತರ ಸೋಲಕು ತಗೆ ಯಂಂವ ಒಂದು ವಿಧಿ" (ತೊರವ. ೬೦೫). [?]

**ಬಳೆ$_{1}$**, **ವಳೆ$_{1}$** (ಕ್ರಿ). ೧. (ಮಾನವ, ಪ್ರಾಣಿ, ಪಕ್ಷಿ ಮೊದಲಾದಂವು ಶಾರೀರಿಕವಾಗಿ ಅಥವಾ ವಯಸ್ಸಿನಲ್ಲಿ ಅಥವಾ ಮಾನಸಿಕವಾಗಿ) ವೃದ್ಧಿಯಾಗು; ವರ್ಧಿಸು : ಕೂಸಿಂಗೆ . . . ಎರಟೂಱುತಿಂಗಳಿಂಗೆ ತಾಯ್ ಕಟಿದೊಡೆ ಬಂದ ನಂಟರೆ ನಡವೆ ಬಳೆದೊಡೆ (ಕಮ್ಮಾಗಾ. ೬೩-೦೬); ಆ ಕಾಲದೊಳ್ ನಾನೆನ್ನ ಮಾವಂ ಕೊಂತಿಭೋಜನ ಮನೆಯೊಳ್ ಬಳೆವಂದು (ಪಂಪಭಾ. ೦-೦೦೬ ವ); ಆ ಕಪಿ ಶಿಶುಂ ತಾಪಸರ ಸಮೀಪದೊಳೆ ಬಳೆವ ಕಾರಣದಿಂ ತತ್ತ್ವವೇದಿಯಪ್ಪುದಱಿಂ (ಪಂಪಕಂ. ೦೯೩-೦೪); ಫಳರಸದಿ ಬೆಳೆವ ನವಶಾಲೀವನಂಗಳಿಂ ತನಿವಾಲನುಂಡು ಬಳೆವರಗಿಳಿ ಗಳರ್ಕಿನಿಂ (ಪಂಪರ. ೬೦. ೨-೧೧); ಶಶಿ ಮೂಡಿ ಬಳೆದನಾಗಸದೊಳು (ಸೌಂದರ. ೯-೨೬೯). ೨. ಗಿಡ, ಮರಗಳು ವೃದ್ಧಿಯಾಗು; ಸಸ್ಯಗಳು ಬೆಳೆ : ದೆಸೆಗಳಂ ತಡವರಿಸಿಕೊಳ್ವಂತೆ ಬಳ್ಳಿಳ ಬಳೆದು ಸೊಗಯಿಸುವ ಪೆರ್ಮರಂಗಳಿಂದಂ . . . ಅತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು (ಪಂಪಭಾ. ೬-೨೯ ವ) ; ಬಾನುದ್ದಂ ಬಳೆದಿರ್ದ ಪೆರ್ಮರದ ತುಟ್ಟ ತುದಿಯು ಕೊಂಬನೆತ್ತಿ ಟಪ್ಪಯಾಸದಿಂದಂ (ಶಾಕಾಂ. ೪೬-೦೦). ೩. ಹುಟ್ಟು ; ಮೊಳೆ ; ಅಂಕುರಿಸು : ವಿರೋಧಿಮದೇಭಮಸ್ತಕ ಸ್ಥಳಜಳರಾಶಿಯೊಳ್ ಬಳೆದ ನಿರ್ಮಳನಿರ್ವ್ರಣವೃತ್ತಮೌಕ್ತಿಕಾವಳಿಯನೆ ತರ್ಪುದು (ಪಂಪಭಾ. ೧೦-೪೬); ಎಳವೆಱ ಬಳೆಯುವ ಗಗನಸ್ಥಿ (ಸುಕ್ತಿಕ. ೩-೦೦೦). ೪. (ಭಯಂ, ಕೋಪ, ಆಶ್ಚರ್ಯ, ಅನುರಾಗ ಇತ್ಯಾದಿ

ಭಾವನೆಗಳು) ಉಂಟಾಗು; ಮೂಡು : ಬಗೆಯೊಳಗೆ ಬಳೆದ ಭೀತಿಯ ವಿಗೆ ಭವದಾಸ್ಥಾನಭೂಮಿಯಂ ಪುಗುಗೆ (ಅಜಿತ. ೦೪-೨೨); ಅದ ಮುಂಳಿ ಸಿಂದವಾಗಳ್ ಮೋದುವ ಬಗೆ ಬಳೆಯೆ (ಶಂಶಕಾ. ೨-೬೨); ಬಳೆದ ಹೃದಯಾನುರಾಗದಿನೀಶನಾಗಳ್ ನಿಜಪ್ರಧಾನಂ ಪ್ರಜ್ಞಾಬಳನ ತನಯಂಗೆ ಮೇಧಾವಿಳನೆಂಬುಚಿತಾಭಿಧಾನವಂ ತಾನಿತ್ತಂ (ಚಂಪುಚಾ. ೬-೦೦೭); ಆ ಮುಂಕುಂದನ ದಿವ್ಯನಾಮಪ್ರೇಮರಸಕಿದು ಸಿದ್ಧಿಯೆಂದೆನಲಾ ಮಹಾಸ್ಥಾನದಲಿ ಬ[ಹಾಶಂ. ಬೆಳೆದುದು ಬೆಲಗು ಬಿಂಕದಲಿ (ಕುಪ್ಪಾ.ಶ. ೫೫-೩). ೫. (ಗಾತ್ರದಲ್ಲಿ) ಬೆಳವಣಿಗೆಯನ್ನು ಹೊಂದಂ; ದೊಡ್ಡದಾಗಂ ತೋರವಾಗು : ನಿನ್ನನಾ ತನ್ನಯತ್ರಂ ಬಳೆದುತ್ತುಂಗಸ್ತನಂ ವಣ್ಣರದೆ ಬಳಸಲ್ (ಅಜಿತ. ೯-೨೦); ಎನಿತ್ತನಿತ್ತಂಬುಜಪತ್ರನೇತ್ರೆಯಾ ಘನಸ್ತನಂಗಳ್ ಬಳೆಗುಂ ಕಿರಾತೆಯಾ (ಕಾವ್ಯಾ.ಶ. ೩೭೯); ಚೂಚುಗಂ ತರ್ಗಿದವು ನಾಥ ಪೂಜಿಪೊಣ್ಮತಸಿಯ ನಡುವುಂ ಬಳೆದುದು (ಕಂಪ. ೯-೦೦). ೬. ಪೈರಿನಿಂದ ತುಂಬು : ಬಹುಪೋಷದಿವಮ್ಮಿವ ಸಹಕಾರದ ಸೊನೆಯ ಸೋನೆ ಬಳೆಯೆಸೆ ಬಳೆಗುಂ ಮಹಿ (ಪಾಂಶಪ. ೦-೬೦); ಪಸಿದೆಮ್ಮೆ ಬಳೆದ ಕೆಯ್ಯಂ ಪೊಕ್ಕಂತೆ (ಪರ್ಜನ್ಯ. ೬-೯೩). ೭. ಎತ್ತರವಾಗು; ನೀಳವಾಗು; ಔನ್ನತ್ಯವನ್ನು ಹೊಂದು: ಬಳೆಯಲ್ಕನ್ನೆದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ವೆ ಮುಕ್ಕು ಳಿಸಲ್ಕಂಬುಧಿ ಸಾಲ್ದುದಿಲ್ಲ (ಶಂಶಕಾ. ೯-೨೦); ಆವ ನಗಂ ಮತ್ತಮಮದೆಂದು ದೀಗಿ ಬಳೆದಂತಿರ್ಕುಂ ಜಿನಸ್ನಾನಪಾವನವಾ ನಿರ್ಜರನಿರ್ಜರೋಜ್ವಲಮಣಿ ಶ್ರೀಕಂದರಂ ಮಂದರಂ (ಆದಿಪು. ೦-೩೩); ಮಾಯಕಾಂತನ ಮೂಲಶಕ್ತಿಯ ತೋಳಿನ ಬಳೆದು ತೋಳಸಿದ (ಕೋಶಕ. ೦೦-೬೭); ಅಗಲಕ ಭೂಮಂಡಲ ಕಿಱುದುಬ್ಬಲು ಮಿಗೆ ಕಾಳದಷ್ಟದಿಕ್ಕೆಂಬು ನಗುತಾಗ ಮೇಲಕ್ಕೆ ಬಳೆದೋಲು ಹೊಂಗೋಂಟಿ ಗಗನಮಂಡಲವ ಮುಟ್ಟಹುದು (ಕಂಶಂ. ೬-೯). ೮. ಉದ್ದವಾಗು; ಲಂಬವಾಗು; ಚಾಚು: ಬಳೆದ ಜಡೆ ನಿಮಿರ್ದ ಬಳ್ಳಿಗಳೊಳೆ ಪೆಣೆದು ವಿಷೋರಗಾಸಲರ್ಚಿಗಳಿಂದಂ ವಿಳಿರ್ದುವೆ (ಅಜಿ. ೦೪-೦೪೨); ಪೆಗಲ್ವರಂ ಬಳೆದು ರಂಜಿಸುಗುಂ ಜಡೆಗಳ್ವ್ಯಗ್ರಾಕ್ಷಿಯಾ (ಕಾದಂಪೂ. ೬೬೯); ಬೋಳಾದ ತಲೆಯ ರೋಮಂ ಮೇಲೆಸಿಸಿದ ಬೆರಲ ಮುಱಿದ ಸೆಳ್ಳುಗುರುಂ ಸಲ್ಲೀಲೆಯೊಳೆ ಬಳೆವ ತಱಿದಿಂ (ಧರ್ಮಾಮೃ. ೯-೯೦); ಬಳೆದೆಸೆದಿರ್ಪ ಸೆಳ್ಳುಗುರ ಮಾಯ್ದೊಳೆಪಿಂ ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದಳಾಕೆ (ಕಬ್ಬಿಗ. ೬೪). ೯. ಹೆಚ್ಚಾಗು; ಅಧಿಕವಾಗು : ಬಳೆದ ತಮಮುಂಬ ಕರಡಮು(?) ನಳವಲ್ಲದೆ ಸುಟ್ಟುಕಿಡಿಸಲೆಂದು . . . ಅರ್ಕನುದಯಂಗೆಯ್ದಂ (ಕಾಕೃಶಾ. ೩೬೦ ಹೂರ್ವ್ರ೪); ಅನಲಂ . . . ನೀಳ್ದು ಬಳೆದವರ್ಗೆಸೆ ಪರ್ವಿದನಾ ವನಾಂತಮಂ (ಶಂಶಕಾ. ೫-೯೩); ದಿವದಿವಸಂಗಳಿಂ ಕುಂದುವುವಲ್ಲದೆ ಬಳೆಯವಾಯುವುಂ ವಪುವುಂ (ಅಜಿತ. ೨-೬೯); ಬೇಸಗೆಯಿಂದ ಬಳೆದ ಬಿಸಿಲಿನೊಳು ಬೆಂದು . . .ನಿಂದನು ಮರದ ನೆಳಲೊಳು (ಜಿಬ. ೨-೬೨). ೧೦. ಹೆಚ್ಚಿಸಂ; ಅಧಿಕಗೊಳಿಸು; ದೇವವಾತ್ಸಕವೆನಿಪ್ಪ ಪೂಲಂ ನವಗಂಧಶಾಲಿಯಂ ಬೆಳೆವುದು ರಮ್ಯನಂದನವನಾಳಿ ವಿಯೋಗಿಜನಕ್ಕೆ ಬೇಟವಂ ಬಳೆವುದು ನಾಡ ಕಾಡ ಬೆಳಸಿಂ ಬೆಸಾವಿಷಯಾಂತರಾಳದೊಳ್ (ಶಂಶಕಾ. ೦-೩೯). ೧೧. ಹಬ್ಬು; ವ್ಯಾಪಿಸಂ; ಹರಡು : ಕೆಯ್ಯುತ್ತಿ ನಿಂದಿರೆ ಪತ್ರಿತ್ತು ಸಮಸ್ತಧಾತ್ರಿ ವಳಯಕ್ಕೆಂದುಂ ದಿಶಾದಂತಿಗಳ್ವರೆಗಂ ತಂದೆಯಾ ಕೀರ್ತಿಯೇ ಬಳೆದುದೋ (ಗದಾಯು. ೦-೦೨); ಸಕಲಲೋಕಂಗಳೊಳ್ ಶಿವಭಕ್ತಿ ಬಳವುತಿರ್ಪುದು ದಿನದಿನಕ್ಕೆ (ಶಬಪು. ೬-೬). ೧೨. ಅಭಿವೃದ್ಧಿಯಾಗು; ಏಳಿಗೆಯನ್ನು ಹೊಂದು; ಪ್ರಗತಿ ಹೊಂದು : "ಬಳೆ-ಪ್ರವೃದ್ಧೌ, ಕಾಚಭೂಷಣೇ ಚ" (ಶಮರಾ ); ಇಂಚೆಯ ಪಸವಿನ ಬಡದ ಕಳಿಚಿನ ದಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಂಚಿಯು ಕೆಯ್ಪುಡಿಯವೊಲಾದುವಾ ನಾಡೂರ್ಗಳ್ (ಶಂಶಕಾ. ೬-೩೦); ವೆಣ್ಣಾ ಪೆತ್ತವರ ಬಳಗ ಬಳೆವುದು ಬೇಗ ವೆಣ್ಣಾ ಪೆತ್ತವರು ಪೆರ್ಚುವರು (ಹಂಂ. ೫-೯). ೧೩. ನೆರವೇರು; ನಡೆ : ಬೆಳೆದುದು ಹಿಮವರ್ಷದೆ ರಾತ್ರಿಳಿತೆಯೆನಲ್ ಬಳೆದುವಿರುಳ್ಗಳೊಳ್ ಸುರತಂಗಳ್ ಬಳೆದುವು ದಂಪತಿಶತದೊಳ್ ಬಳೆವಿನೆಗು ಮದನನಾಜ್ಞೆಯುಂ ಭುಜಬಲಮುಂ (ಜಗಂ. ೦೯-೦೩); ಎಲೆ ಸಖಿ, ನಿನಗೆ ಸುಖಮಜ್ಜನ ಬಳೆಯುತ್ತೆ ? (ಶಾಕುಂತ. ೫೦-೦೫). ೧೪. ಸಂಪಾದಿಸಂ; ಪಡೆ; ಹೊಂದು : ಇಳೆಯೊಳೆದ ಹೇಳುವರ ಕೇಳ್ವರ ಬಳಗವಾಕ್ಷಣ ಪುಣ್ಯರಾಶಿಯು ಬಳೆವುದೆಂಬುದನಱಿದು ಭಾರತಕೃತಿಯ ಹೇಳುವೆನು (ಸಂಶಕ. ೦-೨೮). ವಳೆ₁ : ೨. ಎಟ್ಟದಿನ್ನರು ನರಮೊಕರಮನೊಡೆದೊಡೆಪ್ಪಡತ್ತದು ಪುಣೆಸೂರ್ಪ್ಪೆಲ ನೆಲ್ಲುವಣ್ಣಯು ವಳೆವದು (ಮ್ಯಸೆಂ..೦೯೩೦. ೩೬-೮; ೩ನೆಯ ಶ೫).

ಬಳೆವಳೆ (ದ್ವಿರುಕ್ತಿ) : ತನ್ನಹಾಶಿಕಯವಿಶುದ್ಧಗರ್ಭಾವಾಸದೊಳಾ ಸಮುಸ್ತಗುಣನಿವಾಸಂ ನೆಲಸಿ ಬಳೆವಳೆಯೆ (ಧರ್ಮಾಮೃ. ೦೩-೬೩ ಪ).

☞ 'ಬಳೆ' ಮತ್ತು 'ಬೆಳೆ' ಎಂಬ ಎರಡುಂ ಧಾತುಗಳ ಬಗ್ಗೆ ಕನ್ನಡದಲ್ಲಿ ಪೂರ್ವಕವಿಗಳು, ವಿದ್ವಾಂಸರು ಅನುಸರಿಸುತ್ತಿದ್ದ ಒಂದು ಪದ್ಧತಿಯಿದ್ದಂತೆ ಕಾಣುತ್ತದೆ. ಕೇಶಿರಾಜನಂ–"ಬೆಳೆಯೆಂಬ ಧಾತು ಸಸ್ಯಾವಳಿಯೊಳ್ ಬಳೆಯೆಂಬ ಧಾತು ಮಿಕ್ಕೆಡೆಯೊಳ್ ಸಂಗಳಿಕುಂ" ಎಂದು ಹೇಳಿದ್ದಾನೆ. ಅದೇ ಅಭಿಪ್ರಾಯವನ್ನು 'ಕರ್ನಾಟಕ ಸಂಜೀವನಂ' ಎಂಬ ನಿಘಂಟಿನ ಕರ್ತೃವಾದ ಶೃಂಗಾರಕವಿಯಂ "ಅಚರಂಗಳಲ್ಲಿ ಬೆಳೆದುದು ಬೆಳಸೆನಿಕ್ಕುಮಾ ಸಚರನರರಲ್ಲಿ ಬಳೆದಂ ಬಳವಿ ಬಳವಿಗೆ ರುಚಿರಮಕ್ಕುಂ" ಎಂದಂ ವಿವರಿಸುತ್ತಾನೆ. ಶೃಂಗಾರಕವಿಯ ' ರುಚಿರಮಕ್ಕುಂ ' ಎನ್ನುವ ಶಬ್ದ ಗಮನಾರ್ಹ. ಆದರೆ ಈ ಎರಡು ಶಬ್ದಗಳ ನಡುವೆ ಇದ್ದಿರಬಹುದಾದ ವ್ಯತ್ಯಾಸವು ಬಹುಕಾಲದ ಹಿಂದೆಯೇ, ಅಂದರೆ ವಡ್ಡಾರಾಧನೆ ಮತ್ತು ಪಂಪಭಾರತಗಳ ಕಾಲದಿಂದಲೂ ಮರೆಯಾಗಿರಬೇಕು. ಆದರೆ ಕೇಶಿರಾಜನ ಹೇಳಿಕೆಯನ್ನು ಗಮನದಲ್ಲಿಟ್ಟುಕೊಂಡು 'ಬಳೆ' ಮತ್ತು 'ಬೆಳೆ' ಉಲ್ಲೇಖಗಳನ್ನು ಬೇರೆಬೇರೆಯಾಗಿ ಕೊಟ್ಟಿದೆ. 'ಬೆಳೆ₁' ಪರಾ. [ದೇ.॥ ತುಳು. ಬಳಂಪುನಿ]

ಬಳೆ₃, ವಳೆ₃ (ನಾ). ೧. ವರ್ತುಲ; ಮಂಡಲ; ವೃತ್ತ : 'ಅಗ್ಗಿವಳೆದೆಣ್ಣೆ', 'ಬಳಸು₁', 'ಬಳಗಚ್' ಪರಾ. ೨. ಕೈಗೆ ತೊಡುವ (ಗಾಜು, ಚಿನ್ನ ಇತ್ಯಾದಿಗಳ) ವರ್ತುಲಾಕಾರದ ಆಭರಣ; ಕಂಕಣ : "ಬಳೆ-ಪ್ರವೃದ್ಧೌ, ಕಾಚಭೂಷಣೇ ಚ" (ಶಮರಾ); ಬಳೆಯ ವೇಜನಾನೆ ಮೆಟ್ಟಿದಂತೆ ನುರ್ಚುನುಱುಚು ನವಾವುಂಕಿ (ಶಂಶಕಾ. ೬-೬೩ ಪ); ಬಳೆಯೆ ಸರ್ವವಿಭೂಷಣಕ್ಕೆ ಮೊದಲ್ಕೆ (ಸೋಮೇಶ. ೦೯); ಕಿಣಿಕಿಣಿಗಿಣಿರೆಂಬ ಕರದ ಕಂಕಣ ಬಳೆ (ಪುರಂದ. ೨-೬೨-೨). ೩. ಕಾಲಿನಲ್ಲಿ ಧರಿಸುವ ಕಡಗ : 'ಕಾಲ್ಬಳೆ' ಪರಾ. ೪. ತೋಳಿಗೆ ಧರಿಸುವ ಆಭರಣ; ತೋಳು ಬಂದಿ; ವಂಕಿ : ತೊಟ್ಟು ತೀವಿ ಬಳೆಯಂ ನಿಡುದೋಳ್ಗಳೊಳ್ (ಕಾವ್ಯಾ.ಶ. ೩೬೨); ಖವಖವಿಸುವ ತೋಳ ಬಳೆಯ ಕಾವಲಯನೇತ್ರೆಯರೆಸೆದರು (ಕಂಶಂ. ೨೯-೪೩). 'ತೋಳ್ಬಳೆ' ಪರಾ. ೫. ಗಂಟಲ ಮಾಳಿ,–ಎಲುವು: ಪಗೆವರ ಗಂಟಲ ಬಳೆಯನೊಡೆದು ಕಳೆವುದನನುಕರಿಸುವಂತೆ ತೀವಿ ತೊಟ್ಟ ಮುಂಗೈಯ ಬಳೆಗಳನೊಡೆದು (ಶಂಶಕಾ. ೬-೦೦೦ ಪ). ೬. ಕತ್ತಿನ ಸುತ್ತಲೂ ಇರುವ ವಳಯಾಕಾರದ ಮೂಳೆ : ಕರಿಗಳ ಗಡಣ ಕೆಡೆದವು ಮಸ್ತಕದ ಬಳೆ ಹಱಿದು ಕಳಚಿದವು (ಕುಪ್ಪಾದ್ರೋ. ೬೦೨. ಶಂ. ೨೬೨-೫); ಮತ್ತೆ ಕೊರಳಾ ಬಳೆಯೊಳು ಬಳೆಯಂತೆ ತಿರಿಗಿಸಿ ರಾಯನ ತಲೆದೂಗಿಸಿದರು ಗಾಯಕರು (ಶರಕ. ೦೨-೯೩). ೭. ಪರಿಧಿ; ವಲಯಂ; ಸುತ್ತು:

ತಲೆ ತಿರುಗಿ ತುಟಿಯೊಣಗಿ ಕಂಗಳ ಬಳೆ ಮರಳೆ ಬಸವಳಿಯೆ ಸಾರಥಿ ತೂಲಗಿಸಿದನಾ ರಥವನು (ಕುಮಾ.ಭಾ. ೩-೩೩). ೮. ವರ್ತುಲಾಕಾರದ ಒಂದು ಬಗೆಯ ಆಯುಧ: ಚಕ್ರ : 'ಪಾಟುಂಬಳೆ' ಪರಾ. ೯. ರಥ, ಬಂಡಿ ಮೊದಲಾದುವುಗಳ ಚಕ್ರದ ಹೊರಭಾಗಕ್ಕೆ ತೊಡಿಸುವ ಕಬ್ಬಿಣದ ವರ್ತುಲಾಕಾರದ ಸಾಧನ, – ಕಬ್ಬಿಣದ ಪಟ್ಟಿ : ಜೋಲ್ವ ಬಳ್ಳಿಗೊಂಬಿನ ಬಳೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚಲ್ವಿನ ನಡೆತಂದುವಂದಸುಗೆಯೆಂಬ ನೆಗಟ್ಟಿಯ ತೇರ್ಗಳೆತ್ತಲುಂ (ಶಬ್ದ.ಚಿ. ೨೦೩) ; ಕೀಲಚ್ಚು ಬಳೆ ಮೊಳೆಯನಾರೈದು ಸಿಂಧವಂ ನೆಗಪಿ ... ಸೂತನಿದಿರಾಗಿ ತಂದಿರಿಸಿದ ತೇರ ತೇಜಿಗೆ ನಮಿಸುತ (ಕಂಪ್ತ. ೧೬-೩೩): ಮೊಳೆ, ಕೊಂಡಿ, ಬಳೆ ಮುಂತಾದ ಸಾಮಾನು ಕಮ್ಮಾರರು ಮಾಡುತ್ತಾರೆ (ಮುಂಬಯಿ. ೧-೦೦೬). 'ನೇಮಿ₂' ಪರಾ. ೧೦. ಆನೆಯ ಕೋರೆಗಳಿಗೆ ಅಥವಾ ಎತ್ತು ಮುಂತಾದ ಪ್ರಾಣಿಗಳ ಕೊಂಬುಗಳಿಗೆ ತುದಿಯಲ್ಲಿ ತೊಡಿಸುವ ಅಲಂಕಾರದ ಸಾಧನ ; ಅಣಸು : ಇದಿರಾದರಿಭೂಪಾಲರ ಮದದಾನೆಯ ಕೋಬಿನಸವ ದಂತದ ಬಳೆಯಂ ಬಿದುವಿನ ಮುತ್ತಿನ ಹಾರಮನೊದವಿಸಿ ಜಯಸಿರಿಗೆ ತುಡಿಸುವಂ ನರಸಿಂಗಂ (ಕರ್ನಾ.ಸು. ೦-೦೬). 'ಬಳೆವೋಗು' ಪರಾ. ವಳ್ಳೆ : ೧೧. (ಕುದುರೆಯ ತುಂಟುತನವನ್ನು ತಡೆಹಿಡಿಯಲು ಕಟ್ಟುವ) ಸೊಂಟಪಟ್ಟಿ ; ತಂಗುಪಟ್ಟಿ : "ವಳೆಯನಲ್ ಕುದುರೆವಳೆಯಂ" (ಶಬ್ದಮಂ. ೯೩).

**ಬಳೆಯಾಕೆ** = (ಬಂಗಾರದ) ಕಂಕಣ ಇತ್ಯಾದಿ ಆಭರಣಗಳನ್ನಿಟ್ಟು ಒಲಿಸಿಕೊಂಡವಳು ; ಬಂಗಾರದವಳು : ತೂರಾವ್ರರುಷಸಾನ್ವರನ ಬಳೆಯಾಕೆ ತಮ್ಮಬ್ಬೆಯ ಸನ್ಮಾ × × ಉತ್ತಂ ಈ ಕಲ್ಲ ಬಸದಿಯುಂ ಒನ್ದು ದೇವಾರಪೂಮಂ ಮಾಡಿಸಿದಳ್ (ಎಕ. VIII, ಸಗರ. ೯೩-೬; ಸು. ೯೫೦). [ದೇ.ಜ ತಮಿ. ವಳೈ, ವಳೈಯಲ್ ; ಮಲ. ವಳ; ತೊದ. ಪಳ್; ಕೊಡ. ತುಳು. ಬಳೆ]

**ಬಳ್ಳಿ₂** 'ಬಲ್ಲೆ' ನೋ.

**ಬಳೆಕಣ್** 'ಬಳೆಗಣ್' ನೋ.

**ಬಳೆಗ** (ನಾ). (?) : ಪುತ್ತೂರುಡೆ ಶಿವಮಾರಮ್ಮಂ ದುಣ್ಣಗೆರ್ಗ್ಗಂ ನಲ್ಲತ್ತೂರೊಡೆ ಒಗ್ಗಮನೆ ಬಳೆಗಮುಂ ಅಯ್ದೂಮ್ಪು ಮೆದಕಟಿಯುಂ ಎಟ್ಟೂಮ್ಪು ಬಾಳೆ ತೋಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೦-೯ ; ಸು. ೬೦೦ ?). [?]

**ಬಳೆಗಣ್**, ಬಳೆಕಣ್ (ನಾ). ೧. ಬಳಭಾಗದಲ್ಲಿ ವೃತ್ತಾಕಾರವಾದ ಬಿಳಿಯ ರೇಖೆಯುಳ್ಳ ಕುದುರೆಯ ಕಣ್ಣು : ಬಳೆಗಣ್ಣಂಜರ್ ಪಾಟುಂಬಳೆಯುಂದದ ಬಿಳಿಯ ರೇಖೆ ಕಣ್ಣೊಳ್ ತೋಱಲ್ ಬಳಸಿರೆ ಲೋಚನಯುಗಳಂ ಬಳೆಗಣ್ಣಾದಂದು ಶುಭದಮೊಂದಱೊಳಶುಭಂ (ಅಶ್ವಶಾ. ೨-೩೬). **ಬಳೆಕಣ್** : ೨. ಸುತ್ತಲೂ ಹಳ್ಳ ಬಿದ್ದಿರುವ ಕಣ್ಣು ; ಗುಳಿಗಣ್ಣು (?) : ಬಳೆಕಣ್ಪೆರ್ದುಟಿವು ಕಣ್ಪಾಯ್ಪುಳಿಯಾಯ್ತು ಬರ್ದಿಯುಳಿವು ಪೆತ್ತುದ[ಟ]ವೋಪಿನೆಗಂ ಬಳಸಿ ಬಲವಂದು ನೋಡುವಯೆಳವೆಂಡಿರನವರೊಳಪ್ಪ ನಿನಗೇಱಪ್ಪಂ (ಆತ್ಮ. ೨-೯೩). [ಬಳ್ಳಿ₃ + ಕಣ್]

**ಬಳೆಗಳೆ** (ಕ್ರಿ). ಗಂಟಲ ಮೂಳೆಯನ್ನು ನೆಗ್ಗು : ಕುಳಿಯೊಳಿಕ್ಕುವ ಮುದುಡಿ ಮುಚ್ಚಿ ಮುಗ್ಗುವ ಮುಳಿವ ಬಳೆಗಳವ ಹೋಳ್ವ ಸೀಳ್ವಾಱುಸುವ . . . ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೪). [ಬಳ್ಳಿ₃ + ಕಳೆ₁]

**ಬಳೆಗಾತಿ** (ನಾ). ಬಳೆಯನ್ನು ಮಾರುವವಳು : ಬಳೆಗಳ ಕುಱುಹು ಕಂಡುದು ಚಿತ್ರ ನೀವೇನು ಬಳೆಗಾತಿಯರೊಯೆಂದಳೊಲಿದು (ಭರತ. ೯೩-೨೦). [ಬಳ್ಳಿ₃ + – ಕಾತಿ₁]

**ಬಳೆಗಾರ** 'ಬಳೆಗಾಱ' ನೋ.

**ಬಳೆಗಾರ್ತಿ** (ನಾ). = ಬಳೆಗಾತಿ : ಮಾಲೆಗಾರ್ತಿ, ಬಳೆಗಾರ್ತಿ, ಗೆಲ್ಲಗಾರ್ತಿ (ರಾಜಶೇಖ. ೦೯೯ ಉದಾ) ; ಮಾಲೆಗಾರ್ತಿ . . . ಹಾಲಗಾರ್ತಿ, ಬಳೆಗಾರ್ತಿ (ಶಮದ. ೨೦೯ ಪ್ರಯೋ). [ಬಳೆಗಾಱ + – ತಿ₁(< – ಇತ್ತಿ)]

**ಬಳೆಗಾಱ**, ಬಳಗಾರ, ಬಳಗಾಱ, ಬಳೆಗಾರ (ನಾ). ೧. ಬಳೆಯನ್ನು ಮಾರುವವನು : ಹರಿಬಲರಲ್ಲಿಂ ತಳರ್ದಾದರದಿಂ . . . ಬಳೆಗಾಱರ ತಂಬುಲಿಗರ ಮಣಿಗಾಱರ ಗಾದಿಗರಾಪಣಂಗಳೊಳ್ ನಡೆತಂದರ್ (ಆಗಪು. ೬-೦೯) ; ಎಳವೆರಲ್ಗಳ ಚಿಟುಕೊತ್ತಿ ಕೈದೊಡಿಸುವ ಬಳೆಗಾಱರಿಂದಗಾಸ್ಕಿಲದಿ (ಸೋಜಶೇ. ೩-೨೩). ೨. [ಜೈನ] ಒಂದು ವಂಶದ ಹೆಸರು ; ಶ್ರವಣರ ಪಂಗಡಗಳಲ್ಲಿ ಒಂದಾದ ಬಳಗಾರಗಣದ ಗುರುಗಳನ್ನು ಹೊಂದಿದ ಒಂದು ವಂಶವೆಂದು ಒಂದು ಅಭಿಪ್ರಾಯವಿದೆ : ಬೆಳುಗರನಾಡೊಳ್ ಪುಟ್ಟಿದ ಬಳೆಗಾಱರ ಕುಲದೊಳೆಱೆದಜಿತಶಾಸನವಂ ಬೆಳಗುವ ಚಕ್ರೇಶ್ವರಮಂಡಳೇಶ್ವರಂ ಬೆಸಸೆ (ಅಜಿತ. ೧೨-೯೯). **ಬಳೆಗಾರ** : ೨. ಶ್ರೀಮತ್ಸ್ವಶ್ಯಕುಲತಿಲಕಂ ಬಳೆಗಾರಮಹೋದಧಿ ಕುರುಳಕಾಮಸೆಟ್ಟಿ (ಕಾಶಿಇ. IX – i. ೬೦-೬; 931) ; ಬಡಗಲು ಬಳಗಾರ ಬಳಿಯವರ ಗಡಿಯಿಂದಂ (ಕಾಶಿಇ. IX – ii. ೯೨೯-೦೩; 1401). **ಬಳಗಾಱ** : ೩. ಒಂದು ವಂಶದ ಹೆಸರು ; ಬಳೆಗಾರರ ವಂಶಿತನ : ಬಳೆಗಾಱರ ಕೋಟರು ಪುನುವಲವಳ್ಳಿಯಲಿಟ್ಟು ಪುಯ್ಯಲಂ ಪಂದು ಮಾರ್ಬ್ಬಲಮಂ ತಳ್ತಿಱಿದು ಸ್ವರ್ಗಾಲಯಕೆ ಸನ್ದಂ (ಎಕ. VIII ಸೊರಬ. ೩೩೦-೩: ೯೭೦). **ಬಳೆಗಾರ** : ೧. ಬಳೆಗಾರ ಮಣಿಗಾರ ಬಿಚ್ಚೋಲೆಯನ್ನು ಮಾರುವರು (ನಶಶೋ. ೨-೯೬); ಬಳೆಗಾರಸೆಟ್ಟಿ ಹೋಗಯ್ಯ ನನ್ನ ತವರಿಗೆ (ಜಾಕಪ. ೬೩);ಬಳೆಗಾರನ ಅಂಗಡೀಲಿ ಬಾಳೇಹಣ್ಣು ಸಿಕ್ಕೀತೇ? (ಗಾದೆ). [ಬಳ್ಳಿ₃+-ಕಾಱ]

**ಬಳೆಗಾಱಿಕೆ** (ನಾ). ಬಳೆಯನ್ನು ಮಾರುವ ಉದ್ಯೋಗ : ಒಲೆಕಾಱಿಕೆ, ಕಂಚುಗಾಱಿಕೆ, ಬಳೆಗಾಱಿಕೆ (ಶಬ್ದಾನು. ೯೩೦ ವ್ಯಾಖ್ಯಾ). [ಬಳೆಗಾಱ +–ಇಕೆ]

**ಬಳೆಗೈ** (ನಾ). ಬಳೆಗಳನ್ನು ಧರಿಸಿದ ಕೈ : ಬಳೆಗೈಯತ್ತಿ ಬಗಸೆಗಣ್ಣಳ ಕೋಮಲೆಯರ್ಪಾಱಿಸುತೀಕ್ಷಿಪ ಕಡೆಗಣ್ಸಳಗೆಸೆದುವು (ಜಯಚಾ. ೦-೯೦). [ಬಳ್ಳಿ₃+ಕೈ₁ₐ (<ಕೆಯ್₃)]

**ಬಳೆಗೊಯ್** (ಕ್ರಿ). ಕೊರಳ ಸುತ್ತಲೂ ಇರುವ ಮೃದ್ವಸ್ಥಿಯನ್ನು ಕತ್ತರಿಸು : ಊರುರ ಮೂಳೆಯಂ ತಿಂಬಗುರು ಮಯಗರಿಯ ತನಿಗೊಂಬಂ ಬಳೆಗೊಯ್ಯಲ್ ಪೂಣ್ದು ತುದಿಯೊಳೋಡಿ ಪೋಪ ಧೀರುವಪ್ಪ ಪಣಾದ ಕಾಱಣಂತೆ (ಚಾಂಡಿ. ೮-೯೮ ಪ). [ಬಳ್ಳಿ₃+ಕೊಯ್₁]

**ಬಳೆಗೋ** (ಕ್ರಿ). ೧. ಬಳೆಯನ್ನು ತೊಡಿಸಂ, – ಹೊಂದಿಸಂ. ೨. (ಅಲಂ) ಸೋತು ಹೋಗು; ಸೋಲೊಪ್ಪು : ತಗಯುಲ್ ಜೈಮಿನಿ ತಿಪ್ಪಿಕೊಂಡು ಪರಿಯುರ್ ವೈಶೇಷಿಕಂ ಪೋಗದುಣ್ಣಗೆಯೊತ್ತಲ್ ಸುಗತಂ ಕಡಂಗಿ ಬಳೆಗೋಯಲ್ ಕಕ್ಷಪಾದಂ . . . ತಾಳ್ದಿತು ಗೋಪನಣ್ಣಿ ದಿಗಿಭ ಪೊರ್ದ್ದಾಸಿ ಗಂಧದ್ವಿಪಂ (ಎಕ. II, ೬೯-೯೯; ಸು. 1100). ೩. ವಶಪಡಿಸಿಕೊಳ್ಳು ; ಹತೋಟಿಗೆ ತರು: ಬಳೆಗೋದುದು ಕೀರ್ತಿದಿಶಾಕಳಭಂಗಳ ನಿಗ್ಗವಂಗಳೊಳ್ ರಿಪುಕಾಂತಾಪಳಿಯೊಳ್ ಭವತ್ಪ್ರತಾಪಂ ಬಳೆಗಳೆಯಿಸೆ ತಾನದಕ್ಕೆ ಮಚ್ಚರಿಸುವವೋಲ್ (ಯುಶೋಚ. ೩-೯). [ಬಳ್ಳಿ₃+ಕೋ₁]

**ಬಳೆತೊಡಿಸು** 'ಬಳೆದೊಡಿಸಂ' ನೋ.

**ಬಳೆತೊಡು** 'ಬಳೆದೊಡು' ನೋ.

**ಬಳೆದೊಡಿಸು**, ಬಳೆತೊಡಿಸು (ಕ್ರಿ). ೧. ಕೈಗೆ ಬಳೆಗಳನ್ನು ತೊಡಿಸಂ. ೨. ವೇಶ್ಯೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಮೊದಲು ಕೈಗೆ ಬಳೆತೊಡಿಸುವ ವಿಧಿಯನ್ನು ಆಚರಿಸಂ : ಪೆಱರ ಪೆಂಡಿರ್ಗೆ ಬಳೆದೊಡಿಸುವ ಪೆಂಡಿರಂ ಕೊಟ್ಟು ಮಾನ್ಯಂಬಡೆವ . . . ಕಟ್ಟಿಗ್ಗರಂತೆ (ಧರ್ಮಾಮೃ. ೯-೦೬೨); ಬಳೆದೊಡಿಸಲೆಂದು ಸುದತಿಯ ಕೆಳೆಯನದೋರ್ವಂ ಕರಕ್ಕೆ ಕಯ್ನೀಡೆ (ಗಿರಿಜಾ. ೯-೦೩೬). **ಬಳೆತೊಡಿಸು** : ೩. ಚೊಚ್ಚಲುಗರ್ಭಿಣಿಯಾದವಳಿಗೆ

ಏಳನೆಯ ತಿಂಗಳಲ್ಲಿ ನಡೆಸುವ ಸೀಮಂತಸಮಾರಂಭವನ್ನು ಆಚರಿಸು: ಆಗ ನಾನು ಚೊಚ್ಚಿಲ ಬಸಿರು . . . ಬಳೆತೊಡಿಸುವ ಶಾಸ್ತ್ರವಾಡಿ ನಮ್ಮ ತಾಯಿ ನನ್ನನ್ನು ಕಳಿಸಿದರು (ಶಾಂಕುಚು. ೬೭). [ಬಳೆ₂+ತೊಡಿಸು]

**ಬಳೆದೊಡು**, ಬಳೆತೊಡು (ಕ್ರಿ). ೧. ಕೈಗೆ ಬಳೆಗಳನ್ನು ಹಾಕಿಕೊಳ್ಳು: ಎಳೆಯಂ ಕೋಳ್ವಟ್ಟುಂ ಮುಂ ಬಳೆದೊಟ್ಟುಂ ಮುಟ್ಟುಗೆಟ್ಟುವಿರ್ದೀಗಳ್ ಬಳ್ವಳನೆ ನುಡಿದಪುದೆ (ಹಂಶಪಾ. ೦೨-೦೬೬); ಗಂಡುಗೆಟ್ಟು ಬಳೆದೊಟ್ಟು ಬೃಹನ್ನಳೆಯಾಗಿ ಪಾರ್ಥನಿರ್ದಿರ್ದಪುವೆಮನಲ್ಕೆ ಪಾರ್ಥನದು ರಂಭೆಯ ಶಾಪಮೊ ತನ್ನ ಪಾಪವೋ (ಗದಾಯು. ೩-೩೦); ಕ್ರಿಯಾಸಪಾಸಕ್ಕೆ- ಬಳೆದೊಟ್ಟಂ; ಕೆಳೆಗೊಂಡಂ (ಕವಿರ. ೦೬೬ ಕೃಷೋ); ಹಲವು ಬಳೆಗಳ ಕೈಯ ಫಲಫಲಿರನುವುದು ಒಂಟಿ ಬಳೆದೊಟ್ಟ ಕೈ ಪಾನಿ (ಶಂಚಾಚ. ೨೦೦-೯೦). **ಬಳೆತೊಡು**: ೧. ನಿನ್ನಯ್ಯನೇಂ ಬಳೆತೊಟ್ಟು ನಟ್ಟುವನೋ? ದಿಟ್ಟನಿಂದೆಂದಾಡೊಡಂ ಪಂದೆ ಪುಟ್ಟುವುದೆ? (ಶಬ್ದಾಂಗ. ೫೦-೨೦೯೬). ೨. (ಆಲಂ) ಸೋಲನ್ನು ಒಪ್ಪಿಕೊಳ್ಳು: ನಾನೇನು ಬಳೆತೊಟ್ಟು ಕೂತಿಲ್ಲ (ಒಂ). [ಬಳೆ₂+ತೊಡು₁]

**ಬಳೆದೋಳ್** (ನಾ). ಬಳೆಯ ಆಕಾರದ ಆಭರಣವನ್ನು ಧರಿಸಿದ ತೋಳು: ವನಲಕ್ಷ್ಮಿಗೆ ಸಕಲವಿಲಾಸಿನಿಯರ್ ಬಳೆದೋಳ್ಗಳಿಂದೆ ಚಾತುರಮಿಕ್ಕಳ್ (೧೦೪. ೨-೯೬); ನವನರ್ತನದ ಹಸನಿಗಂ ಬಳೆದೋಳ ಭಾಗ್ಯಸಿಧಿ ಹುಲಿಯುಗುರ ಸುಲಭಿಗಂ (ಚಿಶರ. ೦-೧೫೦). [ಬಳೆ₂+ತೋಳ್]

**ಬಳೆಮುರಿ** (ನಾ). ಒಂದು ಬಗೆಯ ಸಕ್ಕರೆ: ಸೊಟ್ಟಿ ಸಕ್ಕರೆ ಬೆಲ್ಲ ಬಳೆಮುರಿ ತವರಾಜ . . . ದ್ರಾಕ್ಷಿವಣ್ಗಳ ಹೊಚಿ ಸಾಲಿಟ್ಟವು ಕೊಟ್ಟಿಗೆ ಯೊಳಗೆ (ಶಂಕಾಸಾಂ. ೧೦-೩೩); ಬಳೆಮುರಿ ಸಕ್ಕರೆಯನು ಬಟ್ಟವಾಳೊಳು ಕಲಸಿ ಹೊಂಬಟ್ಟಲನೆತ್ತಿ ಲಲನ ನಲ್ಲನ ಕೈಗೆ ನೀಡುವಳು (ಚಿಶ. ೦೦-೩೦). [ ? ]

**ಬಳೆಯವಾಡ** (ನಾ). ಒಂದು ಪ್ರದೇಶದ ಹೆಸರು: ಒನ್ನವಾಡ ಗುಂಗ ವಾಡ ಒಳೆಯವಾಡರೆರ್ನಾಡಾಳ ಸಿಯಲಾಬಿಸಾವಿ ಸರ್ಬರಸ ಕೊಟೋರ್ (ಭೃಹಂ. ೦೧೬೯, ೦೦೬-೦; ಸ. ೪೭೦). [ ? + ಬಾಡ₁ ]

**ಬಳೆಯಿಸು**, ಬಳಯಿಸು, ಬಳಸು (ಕ್ರಿ). ೧. ಗಿಡ, ಮರಗಳು ವೃದ್ಧಿಯಾಗುವಂತೆ ಮಾಡು; ಬೆಳೆಸು: ಬಹುಪೋಷಣದಿಮ್ಮಾವಿನ ಸಹಕಾರದ ಸೊನೆಯ ಸೋನೆ ಬಳೆಯಿಸೆ ಬಳೆಗಂ ವುಹಿಯೆನೆ ಬಣ್ಣಿಸುವ ಪಿತಾಮಹಂ ಗಮಂದಿಡೆಗ್ಗ ಮೊಗ್ಗೆ ನಿನಗಮುದೆನಗಂ (ಶಾಂತಿಪು. ೦-೬೦); ಆ ಕಳಮಧಾತ್ರಿ ಕಣಿಶಜಾಲಕಲಿತಪಯಃಪ್ರತಾನದಿಂ ಬಳೆಯಿಸೆ ನಿರ್ವ್ಯಾಕುಳಮೆನೆ ರಾಜಶುಕಾನೀಕಶಿಶುಪ್ರತತಿ ಬಳೆವುದುಚಿತಸ್ಥಿತಿಯಿಂ (ಶಂಕ್ರಪು. ೦-೯೭). ೨. ಅಭಿವೃದ್ಧಿಗೊಳಿಸು; ಏಳಿಗೆ ಹೊಂದುವಂತೆ ಮಾಡು: ಪಲವು ಧರ್ಮಂಗಳ ಬಳೆಯಿಪುದಾಯಾಸಫಲವ ಭೋಗಿಪುದಾನಂದ (ಹರಿ. ೨-೩೭). ೩. ಹೆಚ್ಚಿಸು; ಅಧಿಕಗೊಳಿಸು: ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಬಳೆಯಿಸಿದತ್ತು . . . ಮಂಗ್ಗು ಪುಳಕೋದಯಮಂ ಪಡೆದತ್ತು (ಆದಿಪು. ೦೦-೦೯೬), ಇಲ್ಲದ ತಪ್ಪಂ ಕಲ್ಪಿಸಿ ಮೆಲ್ಲನೆ ಮುಳಿದೊಲ್ದು ಕೂರ್ಮೆಯಂ ಬಳೆಯಿಸುತಂ ಪಲ್ಲವಕರ್ವೆರಸಿಸೆ ದರ್ಸಲ್ಲೀಲೆಯನಾಂತು ಲೋಲೆಯರ್ ಮುದದಿಂದಂ (ಅಧ್ಯಟ. ೦೦-೬೦); ದೇವಪೂಜೆಯ ದೇವರಿಗೆಱಗುವುದು . . . ತನ್ನ ಭಾವಶುದ್ಧಿಯ ಬಳೆಯಿಪುದು (ಹರಿ. ೬-೯). ೪. ಉಂಟುಮಾಡು; ಹುಟ್ಟಿಸು: ಚಕ್ರೇಶ್ವರಂ ವಾರ್ಧಿಭೂತಲನಾಥಂಗನುರಾಗಮಂ ಬಳೆಯಿಸಲ್ಕಘ್ರ್ಯ ಕ್ರಿಯಾತಂಡುಲಂಗಳೆವೆಂದ್ದಾದರದಿಂದೆ ಕೊಂಡನವಜಿ್ೞಳ್ ಪತ್ರೆಂಟು ರತ್ನಂಗಳಂ (ಆದಿಪು. ೦೨-೦೨೦). ೫. ಬಾಚು; ನೀಡು: ಆ ಕೇಶಿಯಂ ಮುಂಜಕೇಶಿ ವಾರ್ತೊಂಡು ಕರವಂ ತೂಂತಿ ತದಾಸ್ಯದೊಳ್ ಬಳೆಯಿಸಲ್ ತದ್ವರ್ಧನೋದ್ರೇಕದಿಂ ಸರೆಗಳ್ ಬಿಗಿ ನೇಲೆನೆಲ್ಗರೆಯ (ಜಗ. ೪-೯೧). ೬. ನಡೆಸು; ನೆರವೇರಿಸು: ಜರುಗಿಸು: ಉತ್ಪಾತಶಾಂತಿಃಪೌಷ್ಟಿಕಕ್ರಿಯೆಗಳಂ ಮಹಾಬ್ರಾಹ್ಮಣರಿಂದಂ ಬಳೆಯಿಸಿ (ಶಂಶಪಾ. ೦-೧೩೬ ಪ). ೭. [ಗಣಿತ] ಗುಣಿಸು; ಗುಣಾಕಾರ ಮಾಡು: ಕೊಳೆಗವೆನಿತಾದೊಡಂ ನೀಂ ಬಳೆಯಿಸು ನಿಧಿಯುಗ್ಮದಿಂದೆ ಖಂಡಂಗ ಮಕ್ಕಂ ಬಳೆಯಿಸು ನಿಧಿಯಿಂದರ್ಧಿಸುಯಿಲೆಯೊಳು ವರುಷಕ್ಕೆ ಬಳ್ಳ ಖಾಡುಗವುಕ್ಕುಂ (ವ್ಯವಗ. ೩ಕ್ಕಾರಿಣ). **ಬಳಯಿಸು**: ೧. ಎಳನೀರಿಂ ನಾಳಿಕೇರಂ ಬಳಯಿಸೆ ಕದಳೀಷಂಡವುಂ . . . ಸೊಗಯಿಸುತುಂ ತತ್ಪುರೋದ್ಯಾನಷಂಡಂ (ಶುಕ್ಲಪು. ೨-೪೯); ಅಂಗಜಾ ಪರ್ವಿಸಿದ ಲತೆ ಸುಧಾಸೂತಿ ಪೀಯೂಷಧಾರಾಂಬುವೆ ಪೊಯ್ಯಾರಾಗೆ ಮುದ್ದಿಂ ಬಳ[ಕಾಣಂ.೪]ಯಿಸಿ ದೆಳದೆಂಗೆಯ್ದೆ ಮಂದಾನಿಲಂ ತೋಂಟಪೆಸಂಗೆಯ್ದ ಬೃಚಿಂ ಪೆರ್ಚಿಸಿದ ವಿಚಕಿಳಂ ರಯ್ಯಂ (ಶಂಕ್ರಪು. ೦-೮೭); ಕೆಳೆಯ ಪಗೆಯೊಡನೆ ಪಗೆಯಂ ಬಳ[ಕಾಣಂ.೪]ಯಿಪುದಂ ಬಿಟ್ಟು ಕೂಸುಗೊಟ್ಟನುನಯಮಂ ಬಳ[ಕಾಣಂ.೪]ಯಿಸುವುದು (ಶಂಚಾಚ. ೦೫-೩೬): ಉಗುರ್ಗಳ ಚೆಲ್ವಿಕೆ ಯಿಂದುದುರಾಜಿಯ ಮೊಗಗಡಿಸುತ ಪಲ್ಕಿನ ಒಗುವಿಂಗೆಯಂ ಬಳಯಿಸುತ ಬೆಳ್ದಿಂಗಳ ಬಗೆಗಾರ್ತಿಯರೆಯ್ದಿದರು (ಶಂಕಾಸಾಂ. ೩೬-೧೮). ೪. ಕುಸುಮಪಾವಳಿಯಂ ತಳೆಯದ ನಿನ್ನ ಜಟಲ್ಮಾಡಿ ಬಳಯಿಸಿದವುದೆನ್ನ ಮನಕೆ ಖೇದಮನೀಗಳ್ (ಕಾದಂಪೂ. ೩೬೬); ದಳಿತಲಸತ್ಕುಂದದ್ಯುತಿ ಯುಲಂಕೃತಾಶೇಷಭುವನವಾ ನೃಪನ ಯಶಂ ಬಳಯಿಪುದರಿನೃಪ ವನಿತೋಜ್ಜ್ವಳಮುಖಚಂದ್ರಂಗೆ ಮಳಿನತೆಯನಿದು ಚಿತ್ರಂ (ಶರ್ಶಪು. ೦-೭೯). ೭. ಪೊಡ . . . ಬಳಯಿಸು ಏಕಂಮೊಡರಿಪ ವಾಕ್ಯಂಗಳ್ ತಾ ಪೊಡವಿಯ ಸರರ್ಗ್ಗೆಲ್ಲ ಗುಣೆಯಿಸೆಂಬುದು ನಿರತಂ (ವ್ಯವಹಾ. ೦೦-೦೦). **ಬಳಸು**: ೩. ವಿಲಾಸಮನಲ್ಪರ್ಚಿಸುತುಂ ಮುಳಿಸಂ ನೆಗಟುತ್ತುಂ ವಿಕಸಿತ ಮೋದಮಂ ಬಳಸುತುಂ ಸತಿ ಕಾಂತೆಯರಾದಮೊಪ್ಪಿದರ್ (ಅಧ್ಯಟ. ೦೦-೬೯). [ಬಳೆ₁+ — ಇಸು₃]

**ಬಳೆವೋಗು** (ಕ್ರಿ). ಆನೆಯ ದಂತದ ತುದಿಗೆ ಅಳವಡಿಸಿದ ಅಣಸು ಕಳಚಿ ಬೀಳು: ಕಟ್ಟಿದಿರೊಳೆ ನೂಂಕಿದಾನೆಗಳ ಕೋಡುಗಳಂ ಬಳೆವೋಗೆ ಪೊಯ್ದುಂ (ಶಂಶಪಾ. ೦೦-೯೦). [ಬಳೆ₂+ ಪೋಗು₁ (<ಪೋ₁)]

**ಬಳಸು** 'ಬಳೆಯಿಸು' ನೋ.

**ಬಳೋನ್ಮತ್ತ** 'ಬಲೋನ್ಮತ್ತ' ನೋ.

**ಬಳ್ಕಿಸು**, ಬಳುಕಿಸು (ಕ್ರಿ). ಬಾಗುವಂತೆ ಮಾಡು; ಬಾಗಿಸು: ಫಲಭರದಿಂದೆಱಗುವ ಚೂತಲತಿಕೆಯಂತಿರೆ ಕುಚದ್ವಯಂ ಬಳ್ಕಿಸೆ . . . ಲಲನೆ ಭೂಪತಿಗೆ ಪೊಡಮಟ್ಟಳ್ (ಕುಸುಮಾ. ೬-೯೬); ಕ್ಷೋಣಿಯಂ ಪದುಮದೆಚ್ಚಿ ಬಳ್ವಳ ಬಳ್ಕಿಸುತ್ತಿರೆ . . . ನೃತ್ಯಮನಾಡಿದಂ ಸುರನಾಯಕಂ (ಅಜಿಪು. ೦೯-೬೦); ಕೈಯಂ ಮುಗಿದು ಬಳ್ಕಿಸಿ ನಡುವನೊಯ್ಯನೆ ನೆಗಹಿ ಮುನ್ನಿನ ತನ್ನ ಭಾವದಲಿ ಸೇರಿ (ಚಿಕಪು. ೪-೦೨). **ಬಳುಕಿಸು**: ಪಾಸುಗಿಯ ಬಳುಕಿಸುವ ತಾರೆಗಳ ತಱಿದಗಿವ ಗರ್ವಿತ ಗೌರವರನರ್ಬುದಷಸಂಗದವೀರ ತೋಱಿಸಿ ಮೆಚ್ಚಿಸಿದನು (ಕೂರಿಶಾ. ೪-೬-೨೦).

[ಬಳ್ಕು₁ (<ಬೆಳ್ಕು₁) + — ಇಸು₃]

**ಬಳ್ಕು₁** 'ಬೆಳ್ಕು₁' ನೋ.

**ಬಳ್ಕು₂** 'ಬೆಳ್ಕು₂' ನೋ.

**ಬಳ್ಕುಡಿ** 'ಬಕ್ಕುಡಿ₁' ನೋ.

**ಬಳ್ಕುಡಿಗೆಯ್** 'ಬಕ್ಕುಡಿಗೆಯ್' ನೋ.

**ಬಳ್ಕುವೋಗು** (ಕ್ರಿ). ನಡುಕವನ್ನು ಹೊಂದು; ನಡುಗು: ನಯಹೀನರ್ಪಡಿದೊತ್ತಿ . . . ನಿರ್ದಯದಿಂ ಒಡಿಸಿ ಬಳ್ಕುವೋಪಿನೆಗ ಮೆಲ್ಪಂ ತಾಪಿನಂ ಮೇಗೆ ಮೂಗಿಯ ಮೂಗಂ ತಲೆವಾರ ಕೊಯ್ದು (ಸುಕುಮಾ. ೬-೨೪). [ಬಳ್ಕು₂(<ಬೆಳ್ಕು₂)+ಪೋಗು₁(<ಪೋ₁)]

**ಬಳ್ಳುಱು** 'ಬೆಳ್ಳುಱು₁' ನೋ.

**ಬಳ್ಳ** 'ಬಾಟ್₁' ಪರಾ.

**ಬಳ್ವಳ₁** (ನಾ). ೧. ಹೆಚ್ಚಳ; ಅತಿಶಯ; 'ಬಳ್ವಳಿಕೆ' ಪರಾ. ೨. ಹಿರಿದಾದುದು: "ಬಳ್ವಳಮೆಂದು ಪಿರಿದಾಗಿ ಬೆಳೆದುದು" (ಕಕಾ. ೬೦-೬೦೩). ೩. ವಿಸ್ತಾರವಾದುದು; ವಿಶಾಲವಾದುದು: ಆತನ ಪಡೆಗೆ ನಡೆಯಲೆಡೆ ಮಾಡಿದಂತೆ ಬಳ್ವಳವಾದ ದೆಸೆಗಳುಮಾತನ ವಿಜಯಸ್ತಂಭಕ್ಕೆ ತಡೆಯದೆ ಪಾಯಲ್ವೇಟ್ಟು ಮುಂಬಂತೆ ನೆಲೆಯಾದ ಮಹಾನದಿಗಳುಂ . . . ತನ್ನ ಬಲಂ ಪ್ರಕಟಂಮಾಡೆ (ಆಪು. ೧೧-೩ ವ).

**ಬಳ್ವಳ₂** 'ಬಳ್ವಳಂ' ನೋ.

**ಬಳ್ವಳಂ.** ಬಳುವಳ, ಬಳ್ವಳ₂ (ಅ). ಹೆಚ್ಚಾಗಿ : ಅಧಿಕವಾಗಿ : ಅತಿಶಯವಾಗಿ : ಪರಿಕಿಪೊಡಗ್ನಿಗವಾಕಿಯ ವಿರಹಾಗ್ನಿಗವಿಲ್ಲ ಭೇದ ಮಲ್ಲಿಗೆಯೊಡೇಂ ಕರ್ಪೂರದ ರಜಕ್ಕಂ ವೀಜನದೆರಲ್ಗಮುದು ಕಿಪದ ಬಳ್ವಳಂ ಬಳಿನಪುದೇ (ಶಂಪ್ರಕು. ೩-೧೨೯); ಬಲ್ಲಿದೆ ಬಳ್ವಳಮುಣ್ಮಿ ಬೆರ್ವೆಯೊಳ್ಪಡಂ ಬಿಡಿದು ನೇತ್ರಂ ಕಂಡದಂತಾಗಿ ಗಲ್ಲಲನಾಗಳ್ಕೊರಮಟ್ಟಿ ಸಂದಿರದು ತೀರಂ ಮಾತ್ರಿಯಯುಟ್ಟಿಗದಿಂ (ಶಂಪ್ರಕು. ೦೬-೦೩); ಬಳುವಳ : ಕಿಡ ವಳಿಗಳು ಬಳುವಳ ಬಳಿಯ ತಳುವಸಿಕ್ಕೊಗೀವುಳಾಂಗವುಂ ಜವಜವಾಗೆ ಬೆಳೆದುದೆ(ದು) ಗರ್ಭ್ಯಂ (ಕಿಶ. 1. ೨೩-೩೦ ; 1186) : ಸಳನಳಿಸಿ ಬಳು [ತಾಶಂ. ಳ]ವಳ ಬೆಳೆದೆಳಲತೆಯು ತಾಂಬೂಲಲತೆಯು . . . ನಂದಕಲತೆಯು ಶಿಂತಿಣಿಯುಂ ಸಲ್ಲಲಿತಪಾವ ವಲ್ಲೀವನಪ್ರದೇಶದೊಳ್ (ಧರ್ಮಾಕ. ೦-೫೩ ವ). **ಬಳ್ವಳ₂** : ಪದ್ಮಬಾಂಧವಂ ಬಳ್ವಳ ನೀಡಿದಂ ಕರಸಹಸ್ರಮಂ (ಆಪು. ೬-೬೯) : ಅಳ್ವ ರಿಪುಪಂಶರಥಮಂ ಬಳ್ವಳ ಬಗೆವೊಗೆದ ತನ್ನ ವಿಕ್ರಮದಹನಂ ತೀಳ್ವಲಮಂ ಸರ್ವಾರ್ಥನಂದನಂ ಸಿದ್ಧಾರ್ಥಂ (ವರ್ಧಮಾ. ೧೧-೩೨); ಬಳ್ವಳ ಬೆಳೆದ ಬಾಳೆಯತೋಟದ ಬಾಟ್ಕೊಂಪಂಗಳುಮಂ (ಅರ್ಥಕೇ. ೩-೦೦ ವ). [< ಬಳ್ವಳ₁]

**ಬಳ್ವಳನೆ** (ಅ). ಅಧಿಕವಾಗಿ ; ಹೆಚ್ಚಾಗಿ: ತುಂಬಿ: ಎಳೆಯುಂ ಕೋಳ್ಪಟ್ಟಂ ಮಂಡಂ ಬಳೆದೊಟ್ಟಿಂ ಮುಟ್ಟುಗಟ್ಟುವಿರ್ದೀಗಳ್ ಬಳ್ವಳನೆ ಸಾಸಿದಪುದೆ (ಶಂಶಬಾ. ೦೨-೦೭೭) : ಬಳ್ವಳನೆ ಬಳೆದ ಸಿಪರುಚಿಗಳ್ಪೆರಸುಜ್ಜ್ವಲಶಿಲಾತಳಂ ಮನಸಿಜಂ ಬೆಂಕೊಳ್ವಪೆಯಿಸರ್ಧಚಂದ್ರಂಗೊಳ್ವಂತೆಸೆದಿರ್ದುದರ್ಧಚಂದ್ರಾಕೃತಿಯಿಂ (ಆತಪು.೯-೩೩) : ಅಂಬುದನಿಸದಾಡಂಬರ ಮಂಜರದೊಳಳುಂಬಮಾಗಳೆಸೆದವುದನೆ ಬೇಗಂ ಬಳ್ವಳನೆಸೆದುದು ಭೂರಿಂಬಿಸಮಾ ಮುನಿಸುಬಾಷ್ಪವಿಪ್ರಮುನಿನದಂ ( ಸುಕುಮಾ. ೦೨-೩೯).
[ ಬಳ್ವಳ₂ ( < ಬಳ್ವಳಂ ) + — ಅನೆ₁]

**ಬಳ್ವಳಿಕೆ** (ನಾ). ೧. ಅಧಿಕವಾದ ತೂಗಾಟ : ಅತಿಶಯವಾದ ಬೀಸಾಟ : ತನ್ನ ಬಾಯ್ದೆರೆಯೊಳಾಲದ ಪಣ್ಣನ ಪೆಯ್ಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು (ಆಪು. ೦೨-೩೮) ; ತಳರ್ದುದು ಕರ್ಣತಾಳಪವನಾಹತಿಯಿಂ ಜಳರಾಶಿ ಕೆಮ್ಮ ಬಳ್ವಳಿಕೆಗೆ ದಿಗ್ಗಜಂ ದೆಸೆಯೆನಿಪತ್ತ ತೆರಳ್ದುವು (ಶಂಶಬಾ. ೦೦-೭೦). ೨. ಅಧಿಕವಾದ ಚಲನವಲನ : ಕಿಡುತಂದುದು ಮನದಡಿಯುಮೆ ನುಡಿಯು ತೊಪಲ್ ಪಿರಿಗಿ ಪೋಯ್ತು ತವೆನಡಿಯೊಳ್ ಬಲ್ಲಿದರ್ದುದು ಬಳ್ವಳಿಕೆಗೆ ತನುವೆಡೆ ಗೊಟ್ಟುದು ನಾಡೆ ಶೈಶವಾತಿಕ್ರಮದೊಳ್ (ಶಂಪ್ರಕು. ೯-೨). ೩. ವಿಸ್ತಾರವಾದುದು : ವ್ಯಾಪ್ತವಾದುದು : ಬಿಳ್ವ ಪುಳಕ . . . ವೈವರ್ಣತ್ವ ಎನಿಸಿ ತಾಳ್ದ ಮೊಗಂ ತವಕಿಪ ತನು ತೂಗಂಗೊಳ್ವಂಗಂ ಹರ್ಷಜಲಂ ಕೀವಿವ ಬಳ್ವಳಿಕೆಯ ನೋಟಂ ಕಣ್ಗೊಪ್ಪಿದುವಾ ನೃಪವಿಭೂಸನದೊಳು (ಜಯಾನ. ೬-೩೦). [ ಬಳ್ವಳ₁ + — ಇಕೆ ]

**ಬಳ್ವಳಿಕೆವಡೆ** (ಕ್ರಿ). ವಿಸ್ತಾರವಾಗು; ಪೃಥುಲವಾಗು : ನಡೆ ನೋಟ್ಟರ ಕಡೆಗಣ್ಣಿಂ ಕಡುಸಲ್ಲರ ಮನಸಮಂಪೊಸವನೆ ಪೊತ್ತೃವು ಪುರದೊಳ್ ಮದದ ಬರ ಮೊಲೆಯುಸಲ್ಲದೊಡುಡಿಯದೆ ಬಳ್ವಳಿಕೆ [ತಾಶಂ. ಬಳನಳಿಕೆ, ಬಳು ವಳಿಕೆ]ವಡೆದ ಬಡನಡು ಭರದಿಂ (ಲೀಲಾವ. ೭-೦೦; ಅರ್ಥಕೇ. ೯-೨೨ ನೋ).
[ಬಳ್ವಳಿಕೆ + ಪಡೆ₁]

**ಬಳ್ವಳಿಸು** (ಕ್ರಿ). ದೊಡ್ಡದಾಗಿ ಬೆಳೆ; ಹಿರಿದಾಗು: ಶಬರನ ಬೀಸುಂಬಲೆಯ ಪಾಸಮನಿಸಿ ಬಳ್ವಳಿಪ . . . ಲಾಂಗೂಲಲತೆಯೊಳಂ (ಶಾಳಿ. ೦೦-೩ ವ): ಗುಲ್ಮಕಂಟಕ ವಿಕೀರ್ಣಮಾಗಿ ಬಳಸಿ ಬಳ್ವಳಿಪ ಬಾಟ್ಕೇಲಿಗನತಿದೂರದೊಳ್ (ಕುಕ್ಕು. ೨-೬೦ ವ).
[ಬಳ್ವಳ₁ + — ಇಸು₃]

**ಬಳ್ಳ₁**, ಬಳ₁ (ನಾ). ೧. ಒಂದು ಅಳತೆಯ ಪ್ರಮಾಣ; ನಾಲ್ಕು ಸೇರಿನ ಅಳತೆ: ಆ ಎರಡು, ನಾಲ್ಕು, ಹತ್ತು ಅಥವಾ ಹನ್ನೆರಡು ಸೇರಿನ ಅಳತೆಗಳು ಬಳ್ಳವೆಂಬ ಹೆಸರಿನಲ್ಲಿ ಬೇರೆ ಬೇರೆ ಕಡೆಗಳಲ್ಲಿ ಪ್ರಚಾರದಲ್ಲಿದೆ : "ನಾಲ್ಕು ಸೊಲ್ಲಗೆ ಮಾನವಾವು ನಾಲ್ಕಗೆ ಬಳ್ಳವುವು ನಾಲ್ಕೆನಲು ಕೊಳಗ" (ಪುಂಗಣಾ. ೦೦೯-೦೦); ಧಾನ್ಯಂಗಳೊಳೆಲ್ಲಂ ಪೊಂಗೆರದು ಬಳ್ಳದಾ ಕೊಟ್ಟಂತಾಗಿ (ಕೌಶಾ. IX-i, ೮೯-೦೯; 1036); ಕಂಡುಗ ಕೊಳಗ ಬಳ್ಳ ಮಾನ ಸೊಲ್ಲಗೆಯುನಿತು ಮೊದಲಾಗಿ (ಸಿಕ್ಕೂ. ೯-೭೦). ೨. ಧಾನ್ಯವನ್ನು ಅಳೆಯುವ ಸಾಧನ; ನಾಲ್ಕು ಸೇರು ಹಿಡಿಸುವ ಒಂದು ಸಣ್ಣ ಕೊಳಗದಾಕಾರದ ಸಾಧನ : ಸಟ್ಟಿಯ ಬಳ್ಳಂ ಕಿಱುದು (ಶಂಶಕಾ. ೦೨-೦೬೩): ಬಳ್ಳದ ಬಾಯಂತೆ ಒಂದೇ ಮನದ ಮಾಡಿ (ಶಕಕ. ೭೩೫); ನಿಮ್ಮ ಸಟ್ಟಿಯ ಮಾತೊಳ್ಳದುವು ಬಳ್ಳಂ ಕಿಱುದು (ಧರ್ಮಾಕು. ೬-೨೩೨). ೩. ತಟ್ಟೆ; ತಳಿಗೆ : ಊಟಕ್ಕೆ ಬಳ್ಳ ಹಾಕಿದ್ದಾರೆ (ಬೂಶ). **ಬಳ₁** : ೧. ಸಬಿಗಿನೊಳಂದೊರ್ಬಳ್ ನೆಲ್ಲಂ ಕಟ್ಟಿಕೊಂಡವಂ ಪೊಬಿಮುಟ್ಟಂ (ದಿಳು. ೦೨-೦೦೬); ಸಲಿಕೆಯ ಹಾಗೆಯುಲಿ ಭತ್ತ ಬಳ ೩೦ ಲೆಕ್ಕದ ಮೂಡೆ (ಕೌಶಾ. ಮಂಗಳಕು. ೪೬೩-೨೯: 1312).
[ದೇ.೩ ತಮಿ. ಮಲ. ವಳ್ಳಮ್. ತುಳು. ತುಲು. ಬಳ್ಳ]

**ಬಳ್ಳಂಗೆಱೆ**. ಬಳ್ಳಗೆಱೆ, ಬಳ್ಳವಗೆಱೆ (ನಾ). ಒಂದು ಕೆರೆಯ ಹೆಸರು : ಬಳ್ಳಂಗೆಱೆಕ್ಷೇತ್ರಂ ಸಹಸ್ರವಲ್ಲೀಮಾತ್ರ ಕ್ಷೇತ್ರಂ ದತ್ತಂ (ಎಕ. XIII. ೦೯೩-೦೦ : ೯೦೭). **ಬಳ್ಳಗೆಱೆ** : ಉತ್ತರತ ಬಳ್ಳಗೆಱೆಯ ಪಡುವ (ಎಕ. XII. ೦೬-೯೬; ೯೧೩). **ಬಳ್ಳವಗೆಱೆ** : ಬರತ ಕೆಱೆಯ ಮೂಡ ಕಡಗೋಡೆ ಬಳ್ಳವಗೆಱೆಯ ಮೂಡಣ ಕಡೆಗೋಡೆ (ಮೈಆರಿ. ೦೯೦೯. ೦೨-೬೭; ೯೦೦). [ಬಳ್ಳ ? + ಕೆಱೆ]

**ಬಳ್ಳಂಗೊಱೆ** (ಕ್ರಿ). (ಬಳ್ಳದಷ್ಟು) ದೊಡ್ಡದಾಗಿ ಕೊರೆದು ರಂಧ್ರ ಮಾಡು : ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೊಱೆವುದುಂ ಬಾಯಂ ಬಳ್ಳಂಗೊಱೆವುದುಂ (ಸುಕುಮಾ. ೦೨-೯೭ ವ).
[ಬಳ್ಳ + ಕೊಱೆ₁]

**ಬಳ್ಳಗೆಱೆ** 'ಬಳ್ಳಂಗೆಱೆ' ನೋ.

**ಬಳ್ಳಜ್ಜ** (ನಾ). ಒಬ್ಬಾತನ ಹೆಸರು : ಕೊಪುಗೆಱೆಯ ಗಾವುಂಡ ಬಳ್ಳಜ್ಜನಸ್ಸು[ಮ]ಡಿಸಿದ ದೇಗುಲಕೆ ಬಿಟ್ಟ ಕೆಯು . . . ಕಱೆದು [ಕೊ]ಣ್ಬರಪ್ಪಡೆ ಕವಿಲೆಯುವ ಕಱುನಟಿದರ ಲೋಕಕೆ ಸಲ್ಗು (ಕಾಶಾ. XI — i. ೪೩-೭; ೯೩೩). [? + ಅಜ್ಜ₁]

**ಬಳ್ಳನ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ಗಣೀಗೂರಾ ನರಿವೆವರು ಬೆಳ್ಳಮಣಿಯರುಂ ಸಿನ್ನಿಗೂಲಾ ಪುಟ್ಟರುಂ ಬಳ್ಳನರುಂ ಪಸುನ್ನಾಯ ಕಬ್ಬಾತರು ಬಿರದರುಂ ಇ ಪೊಬಿನಾ ಸಡಯಿಸಿದೋರ್ (ಎಕ. XVI ಗುಬ್ಬಿ. ೬೩-೫೯; ೭೩೮). [?]

**ಬಳ್ಳವಗೆಱೆ** 'ಬಳ್ಳಂಗೆಱೆ' ನೋ.

**ಬಳ್ಳವಳ್ಳಿ** 'ಬಱಿವಟ್₁' ನೋ.

**ಬಳ್ಳವಾಡಿ** (ನಾ). ಒಂದು ಊರಿನ ಹೆಸರು : ಬಬ್ಬುದು ಬಳ್ಳವಾಡಿ

ನೆಟ್ ನಂಬಿರ್ದುದಾರುಹತಂ ಜಿನೇಂದ್ರನಂತಿರ್ದ ಮಹಾನುಭಾವರ್ × × × (ಕಮದ. ೨೯ ಪ್ರಯೋ). [ಬಳ್ಳ, + ಪಾಡು₂]

**ಬಳ್ಳವಿನಾಡು** (ನಾ). ಒಂದು ಸ್ಥಳದ ಹೆಸರು : ಇದರ್ಕ್ಕೆ ಪನ್ನಿನಾಡಯ್ಯೂಱುಂ ಮಯ್ಯೂಱ್ನೆರ್ಡೆಟ್ಟತ್ತು ಬಳ್ಳವಿನಾಡು ಸಾಕ್ಷಿ (ಎಕ. IV, ಕಡೂರು, ೯–೨೩; ಸು. ೨೨೦ ?); ಬಳ್ಳವಿನಾಡ ಹಡಿಯವೊಳಲು (ಎಕ. V ಬೇಲೂರು. ೩೬–೬೨; 1117). [ಬಳ್ಳವಿ, + ನಾಡು]

**ಬಳ್ಳಿ** (ನಾ). ೧. ಹಬ್ಬಿ ಬೆಳೆಯುವ ಸಸ್ಯ; ಹಂಬು; ಲತೆ : "ಲತಾ, ಪ್ರತಾನಿನೀ . . . ಪ್ರತತಿಃ—ಈ ಐದು ಬಳ್ಳಿ (ಹಲಾಯು. ೩೦–೨೬); ಬಳ್ಳಿಯುಂ ಕೊರಲೊಳ್ ತಗುಳ್ಚಿಯೆಟಲೆ ಪಿಡಿದುಕೊಂಡು (ವಡ್ಡಾರಾ. ೦೨೦–೮); ತವರಾಜದ ಸಸಿಯ ಮೇಲೆ ಸುಯಿ ಬಳ್ಳಿಯನಡರಿಸುವಂತೆ (ಕಂಚಿ. ೦೯–೩೯); ಪಡೆಸು ಕಾಲ್ದುಳಿಗಾಗ ಗಿಡು ಬಳ್ಳಿ ಪೆಮ್ಮರ ಪುದಿಯಾಗಿ (ಕಂಚಿ. ೦೨–೬). ೨. ವೀಳೆಯದೆಲೆಯ ಬಳ್ಳಿ; ನಾಗವಲ್ಲಿ: ಚನ್ದ್ರತೇಜಭಟ್ಟಾರರ್ಗ್ಗೆ ಮೂವಿನೂರ್ಒಳ್ ಬಗೆಗ[ನು] ಕೊಟ್ಟಂ ಸಾವಿರಂ ಬಳ್ಳಿಯು ತೋಣ್ಟದ ಸಾಮ್ಯಮು ಮುಗಿನ ಕಾಡಮ್ಮನುಂ ಎಱಿನಾಗನುಂ ಕಪ್ಪನುಂ ಮಾದನುಂ ಒಕ್ಕಲ್ಗನಂಗೆಯ್ಯೆ (ಎಕ. XXVI, ೬೨–೦೩; ೯೦೮); ಪನ್ನಿರ್ವರ್ಗತ್ತರು ಸಾಯಿರ ಬಳ್ಳಿಯ ಎಳಕ್ಕಿಯ ತೋಣ್ಟಮುಮತ್ ಕೊಟ್ಟರ್ (ಎಕ. XI. ಹಿರ್ರದು. ೨೬–೦೬; 947 ?); ಸಾಯಿರ ಬಳ್ಳಿಯ ತೋಂಟಮಂ ದೇವರ್ಗ್ಗೆ ಕೊಟ್ಟರ್ (ಎಕ. XII. ೨೩೬–೬; 950). ೩. ಹಗ್ಗ; ಕಣ್ಣ : ಎಳೆತಂದು ಕಡೆಗೋಲ್ವಳ್ಳಿಯಲಿ ಕೈಗಟ್ಟಿ ಕಂಬದಲಿ ಬಂಧಿಸಿದಳು (ಜಾಳ್ಳಿಕಾ. ೨೦–೦೩); ಮೇವಿಗೆ ಬಿಟ್ಟಿದ್ದ ಹಸು ಕತ್ತಲಾದರೂ ಮನೆಗೆ ಬರಲಿಲ್ಲವಂತೆ. ಕೈಯಲ್ಲಿ ಬಳ್ಳಿ ಹಿಡಿದು ಮಂಜರೇ ಹಕ್ಕಲ ತುಂಬ ಹುಡುಕಾಡಿದರು (ದೀಹಹೋ. ೩೬). ೪. ಸುತ್ತು; ಕೊಂಕಾದ ಭಾಗ : ಒಂದು ಬಳ್ಳಿ ಚಕ್ಲಿ ಕೊಡು, ಚಹಾದ ಜೋಡಿ (ಗಂಹೂಯು. ೫೦). ೫. ದೀರ್ಘದ ಗುರುತು ಮುಂತಾದ ಕಾಗುಣಿತ : ಬಿಂದುವಿನೊಂದು ಕೋಳ ತಲೆಕಟ್ಟಿನ ಪೊರ್ಕುಟ ಚಿಲ್ವ . . ಬಳ್ಳಿಯೊಳೊಡಂಬಡುತಿರ್ಪ ನಯಂ (ಕುಶ್ರವ. ೦೯–೩೬); ನಾತರ ಅವರು ಕಾಕ ಬಳ್ಳಿ ಕಲಿಸಿದರು (ಸ್ವಕಿಶ. ೦೨೦). ೬. ಸಂಬಂಧ; ನಂಟು : ತಮ್ಮಂ ಸಯ ಬಳ್ಳಿಯುಂ ನಿಗಳಮುಂ ತ[ಳ್ತ್ರ]ಂದುವುಂ ಬಳ್ಳಿ ಸಂಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹನಶೃಂಖಲೆ ಪಾಱಿಲ್ ತಪೋವನಕ್ಕೆ ತಳರ್ದು (ಶಾಂತಿಪು. ೯–೦೦೬). ೭. ವಂಶದ ಕುಡಿ; ಸಂತಾನ : ನಿನ್ನ ಬಳ್ಳಿ ಹಬ್ಬುತ್ತದೆ, ಧಾರ್ಮಿಕವಾಗಿ ಬಾಳು (ಹಕ್ಕಿ. ೯); ಹಾಲುಂಡ ತವರೀಗೆ ಏನೆಂದು ಹಾಡಲೆ ಹೊಳೆದಂಡೆಲಿರುವ ಕರಕೀಯ ಕುಡಿಯಂಗ ಹಬ್ಬಲಿ ಅವರ ರಸಬಳ್ಳಿ (ಜನಗೀ. ೩೩). ೮. (?): ಶ್ರೀಲೋಕಪಾಲೇಶ್ವರಕಂ ಪಾಱ್ ಬಳ್ಳಿ (ಇಕ. X. ೧೬೩–೬; 733).

**ಬಳ್ಳಿಬಳ್ಳಿ** (ದ್ವಿರುಕ್ತಿ) = ೧. ಹಬ್ಬಿಕೊಂಡಿರುವಿಕೆ; ವ್ಯಾಪಿಸಿರುವಿಕೆ; ಹಬ್ಬುಗೆ : ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳ ಬಳೆದೆಳೆದಳಿಸುವ ಪೊಸ ಕೆಂದಳಿರ ಗೊಂದಳದೊಳ್ (ಅಜಿತ. ೦೦–೬೦ ವ). ೨. ಆಧಿಕ್ಯ; ಅತಿಶಯ; ಹೆಚ್ಚಳ: ರತ್ನಭೂಷಣದ ಚೆಲ್ವನುರಾಗದ ಬಳ್ಳಿವಳ್ಳಿಯುಂ ಹೃದಯದೊಳೆರ್ದು ಪರ್ಬಿಸುವುದುಂ (ಸುಕುಕ. ೯–೬೯). ೩. ಸಮೂಹ; ಗುಂಪು : ಒಳಪಟ್ಟು ಬರ್ಪ ಶಾಖದ ಬಳ್ಳಿ[ಪಾಠಾಂ. ಳ್ಳಿ]ವಳ್ಳಿಗಳುಮಂ (ಅಜಿತ. ೦೨–೬೯ ವ). ೪. ಪರಂಪರೆ : ಅದಿರದೆ ಮೋಹವಿರೋಧಿಯ ಪುದಿದೊದವಿದ ಬಳ್ಳಿವಳ್ಳಿಯಂ ಪಱಿದು (ಶಾಂತಿಪು. ೬–೯೬); ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇಟಿಗೆ ಪಱಿಗಿದಿಲ್ಲನಿಪ್ಪ ತಿಶಯುರೂಪುಶಕ್ತಿಗಳಿವಲ್ಲವೆ ಹಾನಿಯ ಬಳ್ಳಿವಳ್ಳಿ ನಿಶ್ಚಿತಂ (ಶಾಂತೀಪು. ೩೩೯). ಬಳ್ಳಿಗುರುಡ=ಒಬ್ಬನ ಕೈಯನ್ನು ಹಿಡಿದ ಇನ್ನೊಬ್ಬನಂತೆ ಸಾಲಾಗಿ ನಿಂತ ಕುರುಡರಲ್ಲಿ ಒಬ್ಬ : ಮೂಢಮತಿಯಿಂದ ಕಾಡ ಲಿಂಗವ . . . ಪೂಜಿಸುವ ಶಿಷ್ಯನು ಬಳ್ಳಿ ಗುರುಡನ ಕಯ್ಯ ಬಳ್ಳಿಗುರುಡವಿಡಿದು ಕಾಣದೆ ಡೊಂಗುರವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗುಂಡದಲ್ಲಿ ಬೀಳುವರು (ಶಕಸಾ. I. ೯೬); ಜನಾಂಗವು ಬಳ್ಳಿಗುರುಡರಂತೆ ಮುನ್ನುಗ್ಗದೆ ಅದರ ಸಿದ್ಧಾಂತಗಳ ಸಾಧಕ ಬಾಧಕ ಪ್ರಮಾಣಗಳಂತ ಒರೆಹಚ್ಚಿ ವಿಚಾರಮಾಡಿ (ಕೂಕಾದ. ೦ ಎರಡು ಮಾತುಗಳು). [< ಸಂ. ವಲ್ಲೀ. / ತಮಿ. ಮಲ. ವಳ್ಳಿ; ತುಳು. ಕೊಡ. ಬಳ್ಳಿ; ತೆಲು. ವ್ರಲ್ಲಿ]

**ಬಳ್ಳಿಕಾಂಗು** 'ಬಳ್ಳಿಗವುಂಗು' ನೋ.

**ಬಳ್ಳಿಕ್ಕು** (ಕ್ರಿ). ನಾಯಿ, ನರಿ ಮೊದಲಾದುವು ಅರಚು,— ಬಗುಳು,— ಊಳಿಡು : ಬೀದಿಯನರೆವ ಶುನಕಸಮುದಯಂ ಬಳ್ಳಿಕ್ಕಿದುವು ಕೂಡೆ (ಶ್ರೀರಾಮಾ. ೯೬೦–೦) ; ಬಳ್ಳಿಕ್ಕುತಿದೆ ಪೊಳ್ಳು ಜಂಬುಕಂ ಸಿಂಗದಿದಿರಿನಲಿ ! (ಜಕ್ಕಾಂಗ. ೬೯–೨೧೯೦). 'ಬಳ್ಳಿಡು' ಪರಾ. [ಬಳ್ಳು₂ (<ಬಗುಳ್ಳು₂) + ಇಕ್ಕು]

**ಬಳ್ಳಿಗಂಟಕ** (ನಾ). (ಮುಳ್ಳಿನ) ಬಳ್ಳಿಯಲ್ಲಿರುವ ಮುಳ್ಳು : ಒಳ್ಳಿಣಿಸೊಳ್ಪಿಂಡಿರ ಭೋಗಿಪೆನೆಂಬೊಳ್ಳಿತಪ್ಪೆನ್ನೀ ತನುಗೆ ಬಳ್ಳಿಗಂಟಕ ಮಾದುದೀ ಮುಪ್ಪೆಂದಾಗ ತಳ್ಳಂಕವಡೆದನಾ ನೃಪತಿ (ಶ್ರೀಚಾಂ. ೦೯–೩೨). [ಬಳ್ಳಿ + ಕಂಟಕ]

**ಬಳ್ಳಿಗತ್ತಿ** (ನಾ). ಬಳ್ಳಿಯಂ ಹಾಗೆ ಬಳುಕುವ ತೆಳುವಾದ ಕತ್ತಿ: ಆ ಬಳ್ಳಿಗತ್ತಿಯೇನಾದರೂ ಅವನ ಕಯ್ಯಲ್ಲಿದ್ದುಬಿಟ್ಟರೆ (ಕುಂತ್ರಶ. ೯೦–೨೨). [ಬಳ್ಳಿ + ಕತ್ತಿ]

**ಬಳ್ಳಿಗರುಳು** (ನಾ). ಬಳ್ಳಿಯ ಹಾಗೆ ಸುತ್ತಿಕೊಂಡಿರುವ ಕರುಳು : ಬುಳ್ಳನಂ ಹೊಳ್ಳಿಸಿತು . . . ಬಳ್ಳಿಗರುಳುಚ್ಚಿದುದು (ಸಾಳ್ವಭಾ. ೩–೩೩). [ಬಳ್ಳಿ + ಕರುಳು (< ಕರುಳ್)]

**ಬಳ್ಳಿಗವರ್ತೆ** (ನಾ). ವೀಳೆಯದೆಲೆಯ ಮೇಲೆ ಹಾಕುತ್ತಿದ್ದ ತೆರಿಗೆ : ಈ ವಿಷಯದ ವಿನ್ನಾಣಿಗಳು ಬಳ್ಳಿಗವರ್ತ್ತೆಯುನಃಬಿಬಿದ ಆಚಾರಿಯ (ಇಕ. X. ೦೬೯–೬; 7ನೆಯ ಶತ). [ಬಳ್ಳಿ + ಕಪರ್ತೆ₂]

**ಬಳ್ಳಿಗವುಂಗು, ಬಳ್ಳಿಕಾಂಗು, ಬಳ್ಳಿಗೌಂಗು** (ನಾ). ಬಳ್ಳಿಗಳು ಹಬ್ಬಿಕೊಂಡಿರುವ ಅಡಕೆಮರ : ಬಳ್ಳಿಗವುಂಗು ತಳ್ತೆಲೆವಳ್ಳಿಯ ಕಟ್ಟಲೆಯನಲೆವ ಸೊಡಗರ್ಡಿಗಳಂ (ಅಜಿತ. ೦೦–೬೩); ರಾಜಪುವು ಬಳ್ಳಿಗವುಂಗಿನ ತಟ್ಟ ಬಳ್ಳಿಮಾವಿನ ಮನೆ (ಶಾಂತಿಪು. ೬–೦೩೦). ಬಳ್ಳಿಕಾಂಗು: ಕಾಯ್ತ ಬಳ್ಳಿಕಾಂ[ಪಾಠಾಂ. ಗೌಂ]ಗಿನ ಪಸುರ್ವಂದರುಮಂ ಪಣ್ತ ಮಧುರದ್ರಾಕ್ಷೆಯ ಬಾಟ್ವಂದರುಮನಿರ್ಕಲದೊಳಿಕ್ಕಿ (ಅರ್ಜಶೀ ೩–೦೦ ವ). ಬಳ್ಳಿಗೌಂಗು : ಎಳಲತೆ ತಳ್ತ ಚಂದನದ ಸಾಲೆಳ ವಳ್ಳಿಗಳಂಡುಗೊಂಡು ಗೊಂದಳಿಸಿದ ಬಳ್ಳಿಗೌಂಗು . . . ಮೆಱೆವುದು (ಸೂಕ್ತಿಸು. ೯–೩೨). [ಬಳ್ಳಿ + ಕವುಂಗು]

**ಬಳ್ಳಿಗಱಿಕೆ** (ನಾ). ಬಹಳ ಉದ್ದವಾಗಿ ಹಬ್ಬಿ ಬೆಳೆಯುವ ಹುಲ್ಲು : "ಗಂಡೋಲಿಃ, ಶಕುಲಾಕ್ಷಕಃ – ಈ ೨ ಬಳ್ಳಿಗಱಿಕೆ" (ಶಾಕಂ. ೦೦೨). [ಬಳ್ಳಿ + ಕಱಿಕೆ (<ಕಱುಕೆ)]

**ಬಳ್ಳಿಗಾಮೆ** 'ವಳ್ಳಿಗಾಮೆ' ನೋ.

**ಬಳ್ಳಿಗಾವಣ** (ನಾ). ಬಳ್ಳಿಗಳಿಂದ ರಚಿತವಾದ ಮಂಟಪ; ಲತಾಗೃಹ : ಬೀಡುಮಾಣಿಗಳೊಳಿಕ್ಕಿದ ಬಳ್ಳಿಗಾವಣಂಗಳೊಳು ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ (ಕಂಕಾ. ೨–೯೬ ವ); ಬಗ್ಗವಳ್ಳಿಯ ಬಳ್ಳಿಗಾವಣದೊಳಿಯಂ ಸೊಗಯಿಪ್ಪ ಸಮ್ಯಗ್ಗವಾಕ್ಷದ ವಂಕದಾರದ ಕೇತಕಿರ್ಗಯಿನೊಂದಿ ನಿಂದು (ಶಾಂತಿಪು. ೩–೬೯). [ಬಳ್ಳಿ + ಕಾವಣ₁]

**ಬಳ್ಳಿಗಾವೆ** 'ವಳ್ಳಿಗಾಮೆ' ನೋ.

**ಬಳ್ಳಿಗುರುಳ್** (ನಾ). ಬಳ್ಳಿಯಂತೆ ಕೊಂಕಾಗಿರುವ ಕೂದಲು;

ಗುಂಗುರುಕೂದಲು ; ಅವಳ ಪೆಱನೊಸಲನಲೆವ ಬಳ್ಳಿಗುರುಳೊಳ್ ತೊಡಂಕಿದ ಕಣ್ ಕಣ್ಣವಲೆಯೊಳ್ ಕೆಡೆದೆರಲೆಯಂತಡಿಯಿಡಲಾರ್ತುದಿಲ್ಲ (ಶೃಕಾ. ೬೮). [ಬಳ್ಳಿ + ಕುರುಳ್₁]

**ಬಳ್ಳಿಗೋಳಿಸು** (ಕ್ರಿ). ಸಂಬಂಧವನ್ನುಂಟು ಮಾಡು ; ಹೊಂದಿಸು : ಮತ್ತಮಾ ರಾಗಂಗಳಂ ಪಾಡುವಲ್ಲಿ ಗ್ರಾಮವರ್ಜಂಗಳಂ ತೊಱೆದು ಜನ್ಯಜನಕಂಗಳಂ ಬಳ್ಳಿಗೋಳಿಸಿ (ಅಭಿಚ. ೨೪೬). [ಬಳ್ಳಿ + ಕೋಳಿಸು]

**ಬಳ್ಳಿಗೊಂಗು** 'ಬಳ್ಳಿಗವುಂಗು' ನೋ.

**ಬಳ್ಳಿಗ್ಗಮ** (ನಾ). ಒಂದು ಊರಿನ ಹೆಸರು : ಸ್ವಿಮ್ಮನೂರ ಕಿಳ್ಳಿಮ್ಮನ್ ಅಣ್ಣುಗಿಯ ರಟ್ಟಿಗನ್ ಬೆದೆಮಟ್ಟಿಯಾಲಮ್ಮನ್ ಬಳ್ಳಿಗ್ಗಮಯ ಗಾಮುಣ್ಣನ್ (ಎಕ. VIII. ಸೊರಬ. ೦೦-೦೩; ಸು. ೮೦೦).

[ಈ ಇದು 'ಬಳ್ಳಿಗಾವೆ' ಎಂಬುದರ ಅಪಲಿಖಿತ]

**ಬಳ್ಳಿಡು, ಬೊಳ್ಳಿಡು** (ಕ್ರಿ). ೧. = ಬಳ್ಳಿಕ್ಕು : ಲಿಂಗನಿಷ್ಠಾಹೀನರು ಓದಿ ಹಾಡಿದರೆ ನಳ್ಳಿಗುಳ್ಳೆಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗುಳಿದಂತೆ (ಸಿದ್ಧೇಶ. ೬೪-೨೦೯). ೨. (ನಾಯಿ, ನರಿಗಳ ಹಾಗೆ) ಅರಚು; ಕೂಗಾಡು; ಬೊಬ್ಬಿಡು : ಕೊಟ್ಟರೆ ಹರಸುವೆನು ಕೊಡದಿದ್ದರೆ ಬಳ್ಳಿಟ್ಟು ಬಗುಳುವಂಥ ಭ್ರಷ್ಟದಾಸನು ನಾನು (ಪುರಂದರ. ೬೪-೨೩); ಹರಿಹರನ ಹರಣಕ್ಕೆಂದು ಬಳ್ಳಿಟ್ಟು ಬೊಗಳುತ್ತ ಒಂದು ಪ್ರಾಂತರದೊಳು ಹದುಳಮಿಹನು (ಹಾಹರ. ೦೯-೬೬). **ಬೊಳ್ಳಿಡು** : ೨. ಬಳ್ಳಿಯ ಮಾತಿಂಗೆಯುಳ್ಳೊಡವೆ ಕೊಡಸೆಂದು ಬೊಳ್ಳಿಟ್ಟು ಬೊಗಳಿ ಹುಸಿದು ಸಾಲವ ನುಂಗಿ ಇಲ್ಲೆನುತಲಿಹನು (ಸರ್ವಜ್ಞ. ೦೬೯೯).

[ ಬಳ್ಳು₂ (<ಬಗುಳು₂) + ಇಡು₁ ]

**ಬಳ್ಳಿತುಱುಚಿ** 'ಬಳ್ಳಿದುಱುಚಿ' ನೋ.

**ಬಳ್ಳಿದಲೆಯ** (ನಾ). (ಬಳ್ಳಿಯಂ ಹಾಗೆ ಹಬ್ಬಿರುವ) ಅನೇಕ ತಲೆಗಳ ವ್ಯಳ್ಳವನು; ರಾವಣ : ಬಳ್ಳಿದಲೆಯನ ತರಳನಾಗಲೆ ಬಂದನಿಂದ್ರಾರಿ (ತೊರವೆ. ೦೯-೩). [ ಬಳ್ಳಿ + ತಲೆ₁ + — ಅ₂ ]

**ಬಳ್ಳಿದುಱುಚಿ, ಬಳ್ಳಿತುಱುಚಿ** (ನಾ). ಒಂದು ಬಗೆಯ ಔಷಧೀ ಸಸ್ಯ; ಹಬ್ಬಿ ಬೆಳೆಯುವ ತುರಚಿಗಿಡ : "ಯಾಸಃ, ಯವಾಸಃ, ದುಃಸ್ಪರ್ಶಃ, ಧನ್ವಯಾಸಃ . . . ದುರಾಲಭಾ–ಈ ೧೦ ಬಳ್ಳಿದುಱುಚಿ" (ಚಾತಕಾ. ೦೦೯) ; ಬಳ್ಳಿದುಱುಚಿಯ ಬೇರು . . . ಅರೆದು ಪೂಸಲು ನಸುಗುನ್ನಿಯ ವಿಷ ಶಮನವಹುದು (ವೃದ್ಧಜ. II, ೨೪೯) ; ಬಳ್ಳಿದುಱುಚಿ ನೆಱೆಬೇವು ಮುಸ್ತೆ (ಜ್ಞಾನ. ೩-೩೨) ; ಬಳ್ಳಿದುಱುಚಿ ನೆಱೆ ಮುಳ್ಳುನೆಗ್ಗಿಲು ಕಾಡಕಳ್ಳಿ . . . ಬೆರೆದು (ಕಂಕಬ. ೦೮-೩೯). **ಬಳ್ಳಿತುಱುಚಿ** : ಬಳ್ಳಿತುಱುಚಿಯ ಬೇರ ಒಳ್ಳಿತಾಗಿಯ ಹಣಿದು ಬೆಳ್ಳಿಯ ರಸದಿ ಬೆರೆಯಲ್ಕೆ ಹೇವ ತಾ ಬಳ್ಳದಲಿ ಬಕ್ಕು (ಸರ್ವಜ್ಞ. ೦೯೬೪). 'ತುರಚಿಬಳ್ಳಿ' ಪರಾ. [ಬಳ್ಳಿ + ತುಱುಚಿ]

**ಬಳ್ಳಿಬರೆ** (ಕ್ರಿ). (ದೀರ್ಘ ಮುಂತಾದ) ಕಾಗುಣಿತವನ್ನು ಬರೆ : ವಾಧ್ಯೇರ ಮನೆ ಕಾಗದ ಪುಸ್ತಕ ಓದುವ ಹುಡುಗರು ತಲೆಗೆ ಒಂದು ದುಡ್ಡನ್ನೂ, ಹಲಗೆ ಬರೆಯುವವರು ಮೂರು ಕಾಸನ್ನೂ, ನೆಲದ ಮೇಲೆ ಬಳ್ಳಿಬರೆಯುವವರು ಎರಡು ಕಾಸನ್ನೂ ತಂದು ಪಂತರಿಗೆ ಆ ದಿವಸ ಕೊಟ್ಟು ಶಾರದಾಪೂಜೆಯನ್ನು ಮಾಡಿದರು (ಮುದ್ದಣ. ೩೪). [ಬಳ್ಳಿ + ಬರೆ₁]

**ಬಳ್ಳಿಬೆಳಗು** 'ಬಳ್ಳಿವೆಳಗು' ನೋ.

**ಬಳ್ಳಿಮಾಡ, ಬಳ್ಳಿವಾಡ** (ನಾ). ಬಳ್ಳಿಗಳಿಂದ ರಚಿತವಾದ ಮನೆ; ಲತಾಕುಂಜ : ಮೂಪತ್ತೆರಡು ಬಳ್ಳಿಮಾಡಂಗಳುಮಂ ಮಾಡಿಸಿ (ಶಬ್ದಾ. ಶಾ. ೯೩-೨೦); ಸುರತಸುಖದ ಬಳ್ಳಿವಳ್ಳಿಯೆನಿಪ ಬಳ್ಳಿವಾಡದಿಂ ಮಹಾವಿನೋದನೀಡದಿಂ (ಶಂಕರಾ. ೧-೩೬ ಶಕ) ; ನಲವಿಂದಂ ಬಳ್ಳಿಮಾಡಂಗಳೊಳ್ ಗುಡಿಯಂ ಬೇಗನ ಕಟ್ಟಿಂ (ಕ್ಷ್ಮಾ. ಶಾ. ೩೨೨). **ಬಳ್ಳಿವಾಡ** : ರತ್ನದೀಧಿತಿಯೊಳೊಂದಿ ಪಳಯುವ ಬಳ್ಳಿವಾಡದಿಂ ಕಳಸದ ಮತ್ತವಾರಣದ ಶೋಭೆಗಂ (ಆದಿಪು. ೪-೩೪) : ಬಿರಿಯುಗುಳಿನೊಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ (ಜಗನ್ನಾ. ೬೦-೦೬) ; ನಂದನವನಂ ದ್ರಾಕ್ಷಾರಸಾಲಂಗಳಂ ಮಿಂಚುಂದೀವಿಗೆ ಬಳ್ಳಿವಾಡಮೆಸೆಯೆ (ವ್ಯ. ಸೂ. ೪-೬೬). [ಬಳ್ಳಿ+ಮಾಡ₁]

**ಬಳ್ಳಿಮಾವು** (ನಾ). ಬಳ್ಳಿಗಳು ಹಬ್ಬಿರುವ ಮಾವಿನ ಮರ : ರಾಜಿಪುವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾವಿನ ಮನೆ ಬಳ್ಳಿಮಲ್ಲಿಗೆಯ ಮಂಟಪಂ (ಶಾಂತಿಪು. ೬-೧೬೦) ; ಇಮ್ಮಾವಿನ ಬಳ್ಳಿಮಾವಿನೆಳಮಾವಿನ ಸೊಂಪೆಸೆಗುಂ ವನಾಂತದೊಳ್ (ಜಗಜ. ೦೯-೨೬) : ಮಲ್ಲಿಗೆ ನಡೆವಂಚೆಗಳಂ ತಳೆದಿರ್ಪ ಬಳ್ಳಿಮಾವಿನ ಸಾಲ್ಗಳ್ (ಕ್ಷ್ಮಾ. ಶಾ. ೦೦೩). [ಬಳ್ಳಿ + ಮಾವು]

**ಬಳ್ಳಿಮಿಂಚು** (ನಾ). ಬಳ್ಳಿಯ ಹಾಗೆ ಕವಲಾಗಿ ಕೋರೈಸುವ ಮಿಂಚು ; ಕೋಲುಮಿಂಚು : ನೆಗೆದುದು ಬಾಳ್ಗೊಗೆ ಕಾರಮುಗಿಲ್ ಬಳ್ಳಿಮಿಂ[ಚಿನಿಂದು]ಳ್ಕುವವೋಲ್ (ಶಂಕರಾ. ೦೦-೫೯); ಅರ್ಧರ್ತ್ರತ್ತ್ರಲುಂ ಬಳ್ಳಿಮಿಂಚುಂ ತಳೆದಾಶಾಮಂಡಲಂ ಕಟ್ಟನೆ ಕುನಿಯ ಜಳಸ್ಫೀತ ಜೀಮೂತಜಾತಂ (ಜಗಜ. ೯-೦೪) ; ಬಂದರಲೋರ್ವಳಿ ಬಳ್ಳಿಮಿಂಚಿನ ಮಂದಿಯಲಿ (ಕುಮಾರ. ೯-೦೩). [ಬಳ್ಳಿ + ಮಿಂಚು₂]

**ಬಳ್ಳಿವರಿ** (ಕ್ರಿ). ಬಳ್ಳಿಯ ಹಾಗೆ ಹಬ್ಬು,–ವಿಸ್ತಾರವಾಗು,–ಹರಡು : ಬೆಟ್ಟದ ಮೇಲೊಂದು ದಳ್ಳುರಿ ನಿಮಿರಿ ಬಳ್ಳಿವರಿದು ಆಕಾಶಕ್ಕಡರಿ ಜಗದೊಳ್ಪಸರಿಸಿ ಸಪ್ತಸಮುದ್ರಂಗಳ ನುಂಗಿತ್ತು (ಅರಚ. ೩೩-೯೬) ; ಮೂಡಿದುದು ನೆಯ್ದಿಲ ಬೆಳ್ಪು ಮುಡಲ್ಪುದಚ್ಚಮೆಲ್ಲಂಗಳ ಬಳ್ಳಿವರಿದತ್ತೆಳವಂದಿರ ಕಣ್ಣ ಬೆಳ್ಪು (ಅಜಾತ. ೨-೨೦) ; ಸೆಜ್ಜೆವನೆಯ ಸಿರಿಮಂಚದೊಳ್ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿ ನಿಮಿರೆ(ಗಿರಿಜ. ೩-೦೦೩ ಶ). [ಬಳ್ಳಿ + ಪರ್₂]

**ಬಳ್ಳಿವಲೆ** (ನಾ). ಬಳ್ಳಿಯಂ ಹಾಗೆ ಇರುವ ಬಲೆ : ತಳ್ಳಿವಲೆ ಬಳ್ಳಿವಲೆ ತೊಡಕುವಲೆ . . . ಮಂದಸಿನ ವಲೆಯು ಹೊಱೆಗಳ ಬೇಡವಡೆ ನೆರೆದುದು (ಹರಿಶಾ. ೩-೬) ; ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳಿಂಬಿವಂ ಬೀಸರಂಬುಗದೆ ಬಿರ್ಚಿ ಬೀಸಿದಾಗಳ್ (ಗಾಂಭೀ. ೩-೦೦೯ ಶ). [ಬಳ್ಳಿ + ಬಲೆ₁]

**ಬಳ್ಳಿವಾಡ** 'ಬಳ್ಳಿಮಾಡ' ನೋ.

**ಬಳ್ಳಿವಾಯ್** (ಕ್ರಿ). ಬಳ್ಳಿಯು ಹಬ್ಬುವಂತೆ ಸಾಲುಗಟ್ಟಿ ನುಗ್ಗು,–ಸಾಲಾಗಿ ನುಗ್ಗು : ಸಪ್ತಚ್ಛದ ಗಂಧದ ಸೊವಡು ಮುಟ್ಟೆ ಮದಕರಿಕುಳಮೋವದೆ ಬಳ್ಳಿವಾಯ್ದು ಗರಿ ತುಳ್ಕಿದ ಗಿರಿ ಪಂಮತ್ತ ಪರಿದು ಮರವಾಯ್ದುಕ್ಕಂ (ಶಾಂತಿಪು. ೯-೧೯೦). [ಬಳ್ಳಿ + ಪಾಯ್₁]

**ಬಳ್ಳಿವಿಡಿ** (ಕ್ರಿ). ಬಳ್ಳಿಯನ್ನು ಆಧಾರವಾಗಿ ಹಿಡಿ : ದುರಾರೋಹಮುಮಾದೊಡಂ ಬಗೆಯದೆ ಬಳಸಿದ ಬಳ್ಳಿವಿಡಿದಡರ್ದೇಱೆ (ಶಾಂತೀಶ್ವ. ೦೩೩).

[ಬಳ್ಳಿ + ಪಿಡಿ₁]

**ಬಳ್ಳಿವೆರ್ಚು**(ಕ್ರಿ). ಬಳ್ಳಿಯು ಹಬ್ಬುವಂತೆ ವ್ಯಾಪಿಸು; ಹರಡು :ಆಕಾಶಗಂಗಾ ಪ್ರವಾಹಮನಾಧಾರತೆಯಿಂದವನಿಗಲ್ಲೊಕ್ಕಿತೆಂಬಂತೆ ಒರೊಂದೆಡೆಯ ಬಯಲೊಳ್ ಬಳ್ಳಿಂಗೆಡೆದು ಬಳ್ಳಿವೆರ್ಚಿಯುಂ (ಚಂದ್ರಪ್ರ. ೬-೮೪ ಶ).

[ಬಳ್ಳಿ + ಪೆರ್ಚು₁]

**ಬಳ್ಳಿವೆಳಗು, ಬಳ್ಳಿಬೆಳಗು** (ನಾ). ಬಳ್ಳಿಯಂತೆ ಹಬ್ಬಿದಂತೆ ಹರಡಿರುವ ಕಾಂತಿ : ನನೆಗೆಜಪ ತುಂಬಿ ಗಱಿಯನೆ ಕೊನೆವೆಳಗಿಂ [ವೆರಲಿಂ] ನಿಮಿರ್ವ ಬಳ್ಳಿವೆಳಗುರ್ದಿದ ಕಾಲನೆ ಗಱಿಗಟ್ಟುವುದತನುಗೆ ನನೆಗಟ್ಟುವ ನೆವದೆ ಪುಷ್ಪಲಾವೀನಿವಹಂ (ಧರ್ಮಾ. ೦-೬೩) ; ಸುಣ್ಣಗೆಗನೀವ ಪೊಂಬಟ್ಟೆಯ ಬಳ್ಳಿವೆಳಗಂ ಕಱೆವ ಬೆಳ್ವಟ್ಟೆಯ . . . ಮೇಲ್ಕಟ್ಟಿನ ಬೆರಕವೆಳಗು ಮಂಟಪದೊಳಗಂ ಪೊಱಗಂ ತಳ್ಕನೆ ತೀವೆ (ಗಿರಿಜ. ೦೦-೨೮ ಶ) : ಹರಿದು ಹಬ್ಬುವ ಬಳ್ಳಿವೆಳಗಿನ ಮುಱಿವು ಮಂಡಳಿಸಿದುದು (ಕುಮಾರ. ೬-೬೩). **ಬಳ್ಳಿಬೆಳಗು** : ಒರೆನೋಟದ ಬಳ್ಳಿಬೆಳಗುಗಳ. . . ಗರುವೆಯರಡಱಿದರು ದ್ರುಪದಾತ್ಮಜೆಯ ದಂಡಿಗೆಯ ಬಳಸಿನಲಿ (ಕುಮಾರ. ೦೩-೦೦೦).

[ಬಳ್ಳಿ +ಬೆಳಗು₁]

**ಬಳ್ಳಿವಳ್ಪು** (ನಾ). ಬಳ್ಳಿವೆಳಗು : ಗುಗೆ ಬಬಲ್ಬವೋಲ್ಮೆಲತೆ ಬೆಳ್ಳಿಯ ಬೆಟ್ಟದ ಬಳ್ಳಿವಳ್ಪು ಬೆಳ್ಗೆಗೆಡೆದೊಪ್ಪ (ಅರ್ಜನ. ೨-೬೦); ಕಡುನೆಗೆದಬ್ಬರಂ ವೊಱಗಿಸಂತಿರೆ ಬಿಲ್ಲೊಳಪರ್ಕವೆತ್ತ ಕನ್ನಡಿಗಳ ಬಳ್ಳಿವೆಳ್ಪು ಟಡುವಿಂಬಿನ ಪೋಲಿರೆ ... ಮುಟಿಯಂ ಕಟಿದರ್ ವಿಗೆ ಬಿಲ್ಲ ಬಲ್ಲಹರ್ (ಶಬ್ದಾ. ೨೬೬). [ಬಳ್ಳಿ + ಬೆಳ್ಪು₂]

**ಬಳ್ಳಿಸುಂಡೆ, ಬಳ್ಳಿಸೊಂಡೆ** (ನಾ). (ಬೇಲಿಗಳ ಮೇಲೆ ಹಬ್ಬುವ, ಕೆಂಪಾದ ಹಣ್ಣು ಬಿಡುವ) ಒಂದು ಬಗೆಯ ಸಸ್ಯ : "ಕರ್ಣಕಾ— ಬಳ್ಳಿಸುಂಡೆ" (ಓಷಧಿ. ೨೦): ಬಳ್ಳಿಸುಂಡೆಯು ಸಹಮೂಲವು ಮಂಗರವಳ್ಳಿ ರಸಂಗಳು ಸಹಿತ (ಖಗೇಂ. ೦೯); ಗರುಗದ ಸೊಪ್ಪು ಕುರುಟಿಗೆ ಸೊಪ್ಪು ಹೊನಗನ್ನೆ ಬಳ್ಳಿಸುಂಡೆ ಇದರ ರಸವನು . . . ಅಭ್ಯಂಗವ ಮಾಡಿಸಲು ಪಕ್ಷಿಗ್ರಹ ದೋಷ ಶಮನವಹುದು (ವೈದ್ಯಸಾ. II. ೦೯). **ಬಳ್ಳಿಸೊಂಡೆ** : ಹೀರೆಕಾಯಿ, ಬಳ್ಳಿಸೊಂಡೆ . . . ಜ್ವರದವರಿಗೆ ಪಥ್ಯ ದ್ರವ್ಯಗಳೆಂದು ಮತಾಂತರದಲ್ಲಿ ಹೇಳಲ್ಪಟ್ಟದೆ (ಸೂಪ. ೦೦೨); ಬಳ್ಳಿ ಸೊಂಡೆ ಬೇರು ಸರುಪಲಬೇರು ಕಡವದ ಬೇರು (ಲೋಕೋಪ. ೨-೨). [ಬಳ್ಳಿ + ಸುಂಡೆ₁]

**ಬಳ್ಳಿಸೊಂಡೆ** 'ಬಳ್ಳಿಸುಂಡೆ' ನೋ.

**ಬಳ್ಳಿಹಾಲೆ** (ನಾ). ಬಳ್ಳಿಯಾಗಿ ಹಬ್ಬುವ ಹಾಲೆ ಸಸ್ಯ : "ಮಧು ಪರ್ಣಿಕಾ—ಬಳ್ಳಿಹಾಲೆ" (ಶಾಬ್ದಾ. ೨-೨-೬೦ ಪ). [ಬಳ್ಳಿ + ಹಾಲೆ₂ (< ಪಾಲೆ₂)]

**ಬಳ್ಳಿಹುಸಿಕ** (ನಾ). (ಬಳ್ಳಿ ಹಬ್ಬುವ ರೀತಿಯಲ್ಲಿ) ಅನೇಕ ಸುಳ್ಳು ಹೇಳುವವನು; ಬಹಳ ಸುಳ್ಳುಗಾರ : ಒಳ್ಳೆನೆಂದಂಗೆ ಕಡುಪಾಪಿಯುವ ನೆಂದಂಗೆ ಬಳ್ಳಿಹುಸಿಕಂ ಬಜಿಯ ಕೋಪಿಯುವನೆಂದಂಗೆ ಶಿವಭಕ್ತಿಡಂಬ ನೆಂದೆನಿಸಲಾಱೆಂ (ಶಿಮ. ರೀ. ೨೦-೦೩). [ಬಳ್ಳಿ + ಹುಸಿಕ (< ಪುಸಿಕ)]

**ಬಳ್ಳು₁** (ನಾ). ನರಿ; ಜಂಬುಕ : "ಜಂಬುಕಂ ಸೃಗಾಲಂ ನರಿ ಫೇರವಮುಜಿಗೆ ಬಳ್ಳು" (ವಸ್ತುಕೋ. ೪೦-೩); ಇಂದ್ರಜಾಲಿಗನಂತುರಿಯುಸುಗುಟ್ಟ ಬಳ್ಳು ಗಳಂ (ಕಾವ್ಯಸಾ. ೩೨೯ ಕೂರ್ಮ); ಆಕಾಶಕ್ಕೆ ಬಾಯಂ ತಜಿದೂಳ್ದ ಬಳ್ಳುಗಳುಮಂ (ಪಂಪಭಾ. ೦೩-೯೬ ವ); ಬಳ್ಳೊರಲ್ದುದು ಮುಂದೆ ಮಾರ್ಗವಂ ದಾಂಟಿದುದು ಕುಳ್ಳಿರ್ದ ಮೃಗಮೆದ್ದು (ಕೈಮಿಥಾ. ೦೯-೩). [ದೇ. ‖ ಮಲ. ವವ್ವಾಯಿ, ವವ್ವಾಲಿ]

**ಬಳ್ಳು₂** 'ಬಗುಳ್ಳು' ನೋ.

**ಬಳ್ಳುಗರೆ, ಬೊಳ್ಳುಗರೆ, ಬೋಳುಗರೆ** (ಕ್ರಿ). ೧. (ನಾಯಿ, ನರಿಗಳ ಹಾಗೆ) ಅರಚು ; ಬೊಬ್ಬಿಡು : ಮುತ್ತ ಮುದು ನರಿಯಂತೆ ಬಳ್ಳು ಗರೆವರ್ಕಲರು ಕತ್ತೆಯಂತರಚಿ ಕಾಳ್ಗೆಡೆವುತಿರ್ಪರ್ಕಲರು (ಶಬರಂ. ಹ. ೨೬೬-೦೦); ಕೊರವಳ್ ಪಲ್ಲಿಂ ಬಳ್ಳುಗರೆವಳ್ ಕನಪರಿಸಿ ಬಳ್ಳುಗರೆವಳ್ (ಸೂಕ್ತಿ ಸು. ೬-೪೪೯); ನೀ ಬಳ್ಳುಗರೆಯಲು ದಡಿಗ ಹಾಲಿನ ಸವಿಯ ನೋಡುವೆ (ಕಾರಂ. ೦೬-೪೪). **ಬೊಳ್ಳುಗರೆ** : ೧. ಹುಚ್ಚುನಾಯಿ ಕಚ್ಚಿದುದರಿಂದ ಅವನು ನಾಯಿಯಂತೆಯೇ ಬೊಳ್ಳುಗರೆಯುತ್ತಿದ್ದನು (ರೂಢಿ). **ಬೋಳುಗರೆ** : ೨. = ಬಳ್ಳಿಕ್ಕು : ಸೂರನ ಬೊಳ್ಳುನಾಯಿ ಬೋಳು ಗರೆಯಿತು (ಮುಕವು. ೩೩). [ಬಳ್ಳು₂ (< ಬಗುಳ್ಳು₂) + ಕರೆ₁]

**ಬಳ್ಳುಗೆಡೆ** (ಕ್ರಿ). = ಬಳ್ಳುಗರೆ ೧ : ಕಡಿತಲೆಯ ನಾಯಕರ್ ಕೆಯ್ಯೆಂಡು ಬಳ್ಳುಗೆಡೆದ[ಪಾಠಾಂ. ಬಳುಗೆಡೆದಿ, ಬಳ್ಳುಗೆಡೆ ]ಕೈವಾಜು ವಾಜ (ಪಂಪಭಾ. ೦೦-೬೦ವ); ಕೊಳ್ಳಿಗಳಂ ಬಿಡದೋವದೆ ಬೀಸುವ ಬಳ್ಳು ಗೆಡೆದು ಬಿಸುವುಡಿಯಂ ಸೂಸುವ . . . ಮರುಳ ನೆರವಿಗಿನಿಸಪ್ಪಡಮಗಿ ಯದೆ (ವರ್ಧಮಾ. ೦೩-೨೦ ಠಗಳ); ಎಲವೊ ರಕ್ಕಸ ಬಳ್ಳುಗೆಡೆಯದಿರುಳಿದು ಹೋದರೆ ನೀನು ವೀರನು (ಕಾರಂ. ೨೨-೨೯). [ಬಳ್ಳು₂ (<ಬಗುಳ್ಳು) + ಕಿಡ₂]

**ಬಳ್ಳುಪಿಳ್ಳಿ** (ನಾ). ನರಿಯ ಮರಿ : ರಣದೆ ಮೈಸೋಲದ ಸಾಲದ ಬಾಲ ನೊರ್ವನಂ ಬಳ್ಳುಪಿಳ್ಳಿಯನೆಂತಂತು ಕೊಂಡುಯ್ವುದಿದಾವ ನ್ಯಾಯಂ ? (ರಾಜಶೇ. ೦೫೬-೦೦). [ಬಳ್ಳು₁ + ಪಿಳ್ಳೆ]

**ಬಳ್ಳೆ₁** (ನಾ). ಒಂದು ಬಗೆಯ (ಮಾದಕತೆಯನ್ನುಂಟು ಮಾಡುವ) ಸೊಪ್ಪಿನ ಬಳ್ಳಿ: "ಕುಶಲತೆಯೆನಲ್ ಬಳ್ಳೆ" (ಶಬ್ದಮ. ೪೩-೯೬); ಬಳ್ಳೆ ಭಂಗಿ ನುಗ್ಗೆ ಉಳ್ಳಿ ಮೊದಲಾದ ಇವನೆಲ್ಲವ ಬಿಡಬೇಕು (ಬಸವಪು. ೬೪); ಬಳ್ಳೆ ಬೆಲ್ಲವತ್ತದ ಕಾಯಿ ಸೋರೆಯ ಕಾಯಿ ಅತ್ತಿ ಅರಳಿ ಆಲ ಬಸುರಿ ಗೋಣಿ . . . ಕಳವಿಗೆಯ ಹಣ್ಣುಮಂ ತೊಱೆವುದುಂ (ಕವಾರ. ೪೪). [ <ಬಳ್ಳಿ./ತಮಿ. ವಳ್ಳೈ=ಬಿಳಿಪಂಬು ]

**ಬಳ್ಳೆ₂** 'ಬಾಟಿಲ್' ನೋ.

**ಬಳ್ಳೊಳ್ಳಿ** 'ಬಟಿವಟಿ₁' ನೋ.

**ಬಜಿ, ಬರ₁, ಬರನು, ಬಜಿನ್, ಬಜಿನಂ** (ನಾ). ೧. ಕ್ಷಾಮ; ದುರ್ಭಿಕ್ಷ: ಇಂಚಿಯ ಪಸವಿನ ಬಜಿದ ಕಳೆಂಚಿನ ಡಾವರದ ಬಾಧೆಯಿಲ್ಲದ ಪದದೊಳ್ . . . ಏರಿಂಚಿಯ ಕಯ್ವಿಡಿವೊಲಾದುವಾ ನಾಡೂರ್ಗಳ್ (ಶಂಕಠಾ. ೬-೩೦); ಎಲೆ ಮುನೀಶ್ವರ ಬಜಿಗಳಾದುವು ಮಳೆಗಳಿಲ್ಲದೆ ವರುಷ ಹನ್ನೆರಡಾಯ್ತು (ಶಾರಂ. ೦-೩೬). ೨. ಒಣಗಿರುವುದು; ಶುಷ್ಕವಾಗಿರುವುದು; ಬತ್ತಿ ದುದು : ಕಟ್ಟುಜಿದ ಬಜಿದ ಬಾಯಾಯ್ತುರಿಯಂ ಗೆಲಲಾರ್ಪೊಡೆ ಪೋರ್ಪೊಡೆ . . . ಅಂತು ಸಂಕಿವರೊಳರೇ (ರಾಜಶೇ. ೦೫೬-೦೬). ೩. ತಾಪ ಹೆಚ್ಚಾದುದು : ವಿರಹಾನಳನಿಂ ನೆಱೆ ಬಜಿವಾಗಿರೆ ಪಡುನೇಸ ಜಿಳಗಳುರ್ದುವಗಲ್ದು ಚಕ್ರವಾಕದ್ವಂದ್ವಂ (ಸೂಕ್ತಿಸು. ೬-೩೦). ೪. ಅತ್ಯಾಸೆ ; ಅತ್ಯಪೇಕ್ಷೆ : ದಿವ್ಯಸ್ವರೂಪನಂ . . . ಕಂಡನ್ನ ಕಂಗಳ ಬಜಿ ಹಿಂಗಿತ್ತಿಂದು (ಮುಕಾರೀ. ಶ. ೩೨-೬೬); ಧರಾಜನದ ಕಣ್ಣ ಬಜಿ ತಿಳಿದವು (ಸಿದ್ಧರಾ. ೬-೪೩) ; ಇರ್ವರ ಬಾಳ ಬಾಯ್ಗಳ ಬಜಿಂ ಪಿಂಗಲ್ಕೆವೇಡಂ (ಅಜಿತಪು. ೦೩-೩೦). **ಬರ₁** : ೧.ಮಳೆ ಬಂದರೆ ಬೆಳೆ, ಇಲ್ಲವಾದರೆ ಬರ (ಗಾದೆ.೩); ಈ ಬರದೊಡನೆ ಅನೇಕ ಪಿಡುಗುಗಳೂ ಪ್ರಾರಂಭವಾದವು (ಕಳಹು. ೦೦೦). ೫. ಅಭಾವ ; ಕೊರತೆ : ಸಕ್ಕರೆ ಬರ ಬಿದ್ದಾಗ ಕಾಫಿಗೆ ಉಪ್ಪು ಸೇರಿಸಿ ಕುಡಿಯುವಿರಾ (ಹುಚ್ಚುಹು. ೩೬). **ಬರನು**: ೫. ಭಕ್ತಿ ಬರನಾದೀತು ಸತ್ಯಾವ ತಪ್ಪಾರು (ಎಂಡಾ. ೦೨೦-೦೨). **ಬಜಿನ್** : ೧. ಮರನೊಳ್ ದೆವೇಂದ್ರಚಾಪಂ ನೆಗೆದಿರೆ ಬೆಳೆಗುಂ ಧಾತ್ರಿಯೊಳ್ ಮುಂದೆ ಸಸ್ಯೋ ತ್ಕರನಾಶಂ ವಾರಿಯೊಳ್ ಪುಟ್ಟಿರೆ ಬಜಿನೊಗೆಗುಂ (ಲೋಕೋಪ. ೪-೨೬) ; ಅಂತು ಬಜಿನಜಿಯಟ್ಟೆ ಕಂದಮೂಲಫಲಂಗಳಂ ಮೆಲ್ದು ಜೀವಿಪೆವೆಂದು ಕೆಲಂಬರ್ . . . ಆರಣ್ಯಕ್ಕೆ ಬಂದು (ಧಶಕು. ೩-೦೨ ವ). ೨. ನಾಲ್ವೆರಲುದ್ದ ದೊಳಗೆ ಕತ್ತರಿಸಿಕೊಂಡೀರ ಪಲಸಿನಕಾಯಂ ಹುಳಿಯುಪ್ಪುವೆಜಿದ್ದು ಮೊಸರಂ ಕಲಸಿ ಬಜಿನಾಗುವಂತಟ್ಟು (ಸೂಪಶಾ. ೩-೬೦). ೪. ಎನ್ನ ಗುರು ವಿನ್ನೆಂದು ಬಿಜಯಂಗೈದು ಕರುಣದಲಿ ಕಣ್ಣ ಬಜಿನನು ತಿಳುಹಿ . . . ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ (ಪ್ರಭುಲೀ. ೨೨-೩). ೫. ಬಯಕೆಯೊಳು ಬಜಿಸಾಮಂ ಮೌನದೊಳು ನುಡಿಯುಮಂ . . . ಬಯ್ತು ಡುತೆ (ತಿರುಮರೀ. ೬-೯). ೬. (ಆಲಂ) ಇಲ್ಲವಾದುದುಂ; ಹಾಳಾದುದುಂ: ನಾಶವಾದುದುಂ : ಬಜಿತುದು ಧೈರ್ಯವಾರ್ಧಿ ಬಜಿನಾದುದು ಪೆರ್ಚಿದ ಶಕ್ತಿ ಬಿಂಕಮುಂ ತೊಱೆದುದು ಚಿತ್ತವೃತ್ತಿ (ಜಗಂ. ೪-೯೯). **ಬಜಿನು** : ೪. ತಿಜುನಗೆವೆರಸಿ ರಾಮನ ನೋಡುವಳು ಕಣ್ಣ ಬಜಿನೆಲ್ಲ ಬಜಿತು ಹೋಹಂತೆ (ಭರತ. ೩-೬೬).

**ಬಜಿಬಜಿ, ಬಜಿಬಜಿಗು, ಬಜಿಬಜಿನು** (ದ್ವಿರುಕ್ತಿ) : ಬಜಿಬಜಿಯಾಗಿ ಬಾಯ್ ಬತ್ತುವೊಡಂ. . . ಸಾಯ್ವುಂ ತುರಗಂ (ಅಶ್ವಶಾ. ೬-೩೬): ಬಜಿತು ಬಸಿವ ಕಂಬನಿಯಿಂದ ನಾಂದಿರ್ದ ಗಜಗಳು ವಿರಹಾಗ್ನಿಯಿಂದ ಬಜಿಬಜಿ ಗಾದವು (ಶಂಪ್ರಸಾಂ. ೦೬-೦೯) ; ಬಜಿಬಜಿನಾಗೆ ತಾಳಿಸಿದಸುರ್ವರೆಯುಂ ರವಿ

(ಅಜಿತ. ೯-೦೩); ಬೇಗೆಯ ಬೆಂಕೆಯಿಂ ಕರಂ ಬಱಿಬಱಿನಾಗಿ ತಾಳಿಸಿದವೊಲ್ ಕರಿವೋದುವು ಬೆಂದು ಬೆಟ್ಟುಗಳ್ (ಶಾಂತಿ. ೯-೬೯). ಬಱಿಬಱಿಂ ಬತ್ತು. ಬಱಿಬಱಿ ಬತ್ತು – ಪೂರ್ತಿ ಒಣಗು; ಸಂಪೂರ್ಣವಾಗಿ ಶುಷ್ಕವಾಗು : ಬೆಂದು ಬೆಂಡಳ್ದು ಬಱಿಬಱಿಂ ಬತ್ತಿ . . . ಕೋಟರೆಗೊಳುತಿರ್ಪ ಕಾನನಕಾಲದಿಂ (ಗಿರಿ. ೯-೨೬ ೮); ಕೆಱೆ ಬತ್ತಿ ಬೀಡೇಳೆ ಬಱಿಬ[ಪಾಠಾಂ. ವ]ಱಿಂ ಬತ್ತೆ ಪಥಿಕರ ಬಾಯ್ಗಳು . . . ಬೇಸಗೆ ಬಂದುದು (ಕುಸುಮಾ. ೬-೬೩); ಅಱೆಯೆಂ-ಪಾಱಲ್ ಬಾಯುಂ ಬಱಿಬಱಿ ಬತ್ತಿತ್ತು (ಗಾದಂಕು. ೦೯೦); ಬಱಿಬಱಿ ಬತ್ತೆ ಬಾಯ್ . . . ಚಂದ್ರನಖಿ ಶೋಕರಸಾಕುಳಚಿತ್ತೆಯಾಗಿ (ಕಂರಾಮ ೯-೪೦).

[ದೇ.೩ ತಮಿ. ಮಲ. ವಱುಮ್; ತುಳು. ಬರ ; ತೆಲು. ವರವು ]

**ಬಱಿಂ** (ಪ್ರ). 'ವರೆಗೆ', ಎಂಬರ್ಥದಲ್ಲಿ ಬಳಕೆಯಾದ ಪ್ರತ್ಯಯ : ಉಟ್ಟಿಗೆರಡುವರಿಸಬಟ್ಟೆವರಿಯರ ಪತ್ತುವರಿಸಂಬಱಿಂ ಮಾತ್ರವರ್ಣಂ ಉಟ್ಟಿಗೂರ್ವಱಿನ್ನು ಮೂಣಲಾಗ ತಮ್ಮ ಸ್ವೇಚ್ಛೆಯೊ[ಳಂ] ನೆಟ್ಟುದು (ಶಾಸ. XI-i ೯೩-೦೯, ೯೭೦). [೬ ಇದು 'ಬರಂ' ಎಂಬುದರ ಅಪಲಿಖಿತ]

**ಬಱಿಗಾಲ. ಬರಗಾಲ** (ನಾ). ದುರ್ಭಿಕ್ಷಕಾಲ ; ಕ್ಷಾಮಂ : ಬಱಿಗಾಲದ ಕಱೆಯಾಂತ ನೆಱೆ ಬತ್ತಿದ ಬಾಯುಂ . . . ಬೆನ್ನಂ ಪತ್ತಿದ ಬಸಿಱುಬೆರಸು ಬರ್ಪ ವೃದ್ಧ ತಾಪಸನಂ ಕಂಡು (ಹರಿಶ. ೬೩-೬) ; ಬಱಿಗಾಲದ ಬೆಳಸಿನಂತೆ ಮಱಿಗಾಲದ ಬಿಸಿಲಂತೆ . . . ಸಂಶಯಕ್ಕೆಡೆಯಾದರ್ಥಮುಮಂ (ರಾಜಶೇ. ೯-೨೩). **ಬರಗಾಲ :** ಅವರು ಬರಗಾಲ ಮತ್ತು ಕಷ್ಟಕಾಲ ಸಮಯಗಳಲ್ಲಿ ದೀನದರಿದ್ರರನ್ನೂ ಸಾಮಾನ್ಯ ಜನರನ್ನೂ ಸಂತೈಸುವುದರಲ್ಲಿ . . . ಹಿಂದೆ ಮುಂದೆ ನೋಡಿದವರಲ್ಲ (ಸಸ್ಮ. ೯೩) ; ಬರಗಾಲವಿಲ್ಲದ ದಕ್ಷಿಣದೇಶಕ್ಕೆ ಅವರು ಹೊರಟರು (ಕಕ. ೯-೦೦೦) ; ಬರಗಾಲವು ಬಂದು ರೈತರು ದಣಿದಿದ್ದಾರೆ (ಶ್ರೀರಾಮ. ೦೬೮). [ಬಱಿ + ಕಾಲ]

**ಬಱಿಗೇಡು** (ನಾ). ಕ್ಷಾಮದಿಂದ ಉಂಟಾಗುವ ಕೇಡು, – ಹಾನಿ : ಆ ಮಂಡಳನೂ ಬಾನಗೇಡು ಬಱಿಗೇಡು ಎಂನದೆ (ಶಾಸ. ೦೯೩೨. ಶಾಸನ. ೩೦೩-೨೨ ; 1293) ; ಬಾನಗೇಡು ಬಱಿಗೇಡು ಯೆಂನದೆ ೧೨ ಮುಡಿ ಅಕ್ಕಿಯನೂ . . . ನಡಸಿ ಬಹರು (ಶಾಸ. IX-ii, ೯೯೯-೩೫ ; 1488). 'ಬಾನಗೇಡು' ಪರಾ. [ಬಱಿ + ಕೇಡು]

**ಬಱಿಗೋಡಿ** (ನಾ). ನೀರು ಬತ್ತಿಹೋದ ಕೋಡಿ : ಮಿಗೆ ಬಿಸಿಲ ಬೇಗೆಯನು ಬಱಿಗೋಡಿಗಳ ಮೀನ್ಗಳು ದಿನದಿನಕೆ ಮೈದೆಗೆಯದನುಭವಿಸುತ್ತ ಕುದಿಕುದಿಕುದಿದು ಮಗ್ಗಿದವು (ಕೆಶಾಗ. ೦೦-೦೯-೦೭). [ಬಱಿ + ಕೋಡಿ]

**ಬಱಟಿ. ಬೆರಣಿ, ಬೆಱಟಿ, ಬೆಱಣಿ, ಬೆಱಣೆ, ಬೆಱಳಿ** (ನಾ). ೧. (ಇಂಧನವಾಗಿ ಉಪಯೋಗಿಸುವ) ತಟ್ಟಿ ಒಣಗಿಸಿದ ಸಗಣಿ ; ಕುರುಳು : ತರ್ದುಗಳಟ್ಟುಗುಂ ಬ[ಪಾಠಾಂ. ಬೆ]ಱಟಿಯೊಳುರ್ದಿ ನೆಲಾವರೆಯ ಬೇರ ನಾಮುಳಕಮುಮಂ . . . ಪೂಸೆ ದಿನಪಂಚಕದೊಳ್ (ಕರುಕ. ೨೬೦ ಪ್ರಯೋ). **ಬೆರಣಿ :** ೧. "ಕರೀಷಂ-ಸಗಣಿ, ಬೆರಣಿ" (೬ಕಥ. ೨೦); ಅವರಿಕೆಸೊಪ್ಪು . . . ಸಹ ಇದರಲ್ಲಿ ರಾವ ಹಿಂಡಿ ಬೆರಣಿ ಬೂದಿಯ ಕಲಸಿ ನೆತ್ತಿಬಾಯಿಗೆ ಒತ್ತಿದಾಕ್ಷಣವೇ ರಕ್ತವಾಂತಿ ನಿಲ್ಲುವುದು (ಸಸ್ಯ. ೦೬೮) ; ಬೆರಣಿಯನ್ನು ಪುಡಿ ಮಾಡಿ ಚಕಮಕಿಯನ್ನು ಹೊಡೆದು ಬೆಂಕಿಯನ್ನು ಮಾಡಿದಳು (ಕೇಶೀಶ. ೬೬); ಬಿದ್ದ ಬಳೀಲಿ ಬೆರಣಿ ಆಯಬೇಕು ಇದ್ದ ಬಳೀಲಿ ಇರಬೇಕು (ಗಾದೆ). **ಬೆಱಟಿ :** ೧. ಅಂದು ಗೋವರ್ಧನಗಿರಿಯನಿಳೆಗೊಂದು ಬೆಱಟಿಯನಿಳುಹುವಂತಿಳುಹಿದನು ಮುರವೈರಿ (ಶಾಲ್ಯಶ. ೨೦-೬೬). **ಬೆಱಣಿ :** ೧. ಬೆಱಣಿಯ ನಾಯಲ್ಲದೆ ಅಟ್ಟಿಣ್ಣ ತಱಿಹಿಲ್ಲವೆನಗೆ (ಬಸವ. ೨೬೦) ; ತನಯನುಂ ತನ್ನೊಡನೆ ಬರುತಿರೆ ಜನನಿ ಬೆಱಣಿಯನಾಯ್ದುಕೊಂಡಾ ಮನೆಗೆ ಬರುತಿರೆ (ಅಸಪು. ೯೬-೯). ೨. ಸಗಣಿ ; ಗೋಮಯ : ಪುಳ್ಳಿ ಬೆಱಣಿ [ಪಾಠಾಂ. ಬೆರಟ]ಯೊಳಗಣ ಪುಳುವಂ ಸಾರ್ಯಸುವಲ್ಲಿ ದಯೆಯಿಂದಾರೈವುದೆನಿಪ್ಪ ಮನೆಗಳಲ್ಲದೆ ತೀರ್ಥಂ (ಸಪುಶ. ೬-೯೯); ಉದಧಿಯೊಳ್ ಬೆಱಣಿಯಂ ಹಾಕಿದಂತಾಯ್ತು ಜಿತಶತ್ರುಭೂಪನ ವಾಹಿನಿ (ಸಮ್ಯಕ್. ೬-೩೨). **ಬೆಱಣೆ :** ೧. ಆ ಶಂಕರಾನಂದಂಗಂ ಪಂಚಪಾಯಸವ ಲೇಸಪ್ಪ ಭಕ್ಷ್ಯಗಳ ಬೆಱಣೆ ಮುಳ್ಳುಂ ದೃಢಯು ಪಾಷಾಣದೊಡಕಗಳನೊಡಗೂಡಿ ಗಡಣಿಸಲು (ಗುರುರಾ. ೬-೯೨). **ಬೆಱಳಿ :** ೩. (ಆಲಂ) (ಸಗಣಿಯ ಬಿಲ್ಲೆಯಂತೆ) ಅಗಲವಾಗಿರುವುದು : ದೊಡ್ಡದು : 'ಬೆಱಳಿವಲ್' ಪರಾ.

[ದೇ.೩ ತಮಿ. ನರಟ್ಟಿ, ಪರಾಟ್ಟಿ, ವಱಳಿ; ಮಲ. ವರಡಿ, ವರಳಿ, ವಱಟಿ; ತುಳು. ಬೆಜಂಟ್; ತೆಲು. ವರಟ]

**ಬಱಡ** (ನಾ). ೧. ನಿರುಪಯೋಗಿಯಾದ ವ್ಯಕ್ತಿ; ಕೆಲಸಕ್ಕೆ ಬಾರದವನು : ಬಱಡನಿವನೀ ದೈವದೊಡನಬ್ಬರಿಸಿದೊಡೆಯೊ ಇಬ್ಬರಭ್ಯಂತರವನಿವರಱಿಯರೆ ಮುನೀಂದ್ರರು (ಕುಮಾವ್ಯಾಸ. ೯-೩೧). ೨. ಬುದ್ಧಿಯಿಲ್ಲದಿರುವವನು; ದಡ್ಡ; ಅವಿವೇಕಿ : ವಶಗ್ರೀವಪುರದ ಹನನವು ಪುರದ ಹನನಿಂ ದೊರಕುವುದಲಾಯೆಂಬ ಬುದ್ಧಿಗೆ ಬಱಡನಾಗಿ ಬಳಿಕ್ಕ ರಕ್ಕಸರಾಯನಿಂತೆಂದ (ತೊರರಾ. ೩-೮-೬). ೩. ಜಿಪುಣ : ತ್ಯಾಗಿಯುಂ ಬಱಡಂ ಬಾಲರ ಮುದ್ದು ಬಂಜೆ . . . ಜಱೆಯರ್ (ಸೋಮೇಶ. ೧೫). ೪. ಪುಂಸತ್ವವಿಲ್ಲದವನು; ಷಂಡ : ಬಱಡರು ಬಾಳರನ್ನದೆ ಪೋಪವರ ಕೈವಿಡಿದು ಕೊಂಡೊಯ್ದು ತೋಳ ತೆಕ್ಕೆಯೊಳಿರಿಕಿ ನಿವಿಹಕ ವೇಳವಿಸಿ ಹಣಗೊಂಡು ಹೋರುವ ಖೂಳರಂಬಾಕೆಯರ ಕಂಡಸುರಾರಿ ನಗುತಿರ್ದ (ಅಕ್ರೂಚ. ೬-೬೩). [ಬಱಡು + – ಅ./ ತಮಿ. ವಱಟನ್]

**ಬಱಡಾವು** (ನಾ). ಗೊಡ್ಡು ಹಸು : ಬಂಜೆಯಾದ ಆಕಳು : ಸುರಧೇನು ಚಿಂತಾಮಣಿ ಕಲ್ಪವೃಕ್ಷವ ಬಱಡ[ದಾ]ವು ಕಲ್ಮರವೆನಿಸಿ ಮುರಹರ ತ್ಯಾಗವ ಕುಡುತಿರ್ದ ಲಕ್ಷ್ಮೀವರನಾದ ಕಾರಣದಿಂದ (ಸೋಹಕ. ೦೭-೩೬). 'ಗೊಡ್ಡಾವು' ಪರಾ. [ಬಱಡು + ಆವು]

**ಬಱಡಿ, ಬರಡಿ** (ನಾ). ೧. ಹೆಣ್ಣಿನ ಸತ್ವವಿಲ್ಲದವಳಂ; ಸ್ತ್ರೀತ್ವವಿಲ್ಲದವಳಂ : ಗೊಡ್ಡಿ : ಬರಡ[ಬಱಡಿ]ಗೆ [ಪಾಠಾಂ. ಬರಗಡೆ]ಯೋಱಿದಂದಡಿಯ ಸೂಲವನೇಱಿದನೊತ್ತೆಗೊಟ್ಟವಂ ಕರೆದಭಿಮಾನವಂ ಪೆಱರ್ಗೆ ಕೊಟ್ಟನಟ್ಕಱಿದುಯ್ದು ರಾಗದಿಂ (೦೯ರಾಶ. ೨-೦೦೦). ೨. ಮಕ್ಕಳಾಗದೆ ಇರುವವಳು; ಬಂಜೆ : ಬಱಡಿಯ ಕೈಯಲ್ಲಿ ಮಕ್ಕಳಿದ್ದಡೆ ತೊರೆವುದೆ ಮೊಲೆ (ಶೋಕಶ. ೨೩-೦೦೦). **ಬರಡಿ:** ೧. ಬಸುರಿ ಬಾಣತಿಯರು ಶಿಶುವ ಮುದ್ದಾಡುವ ಶಶಿಮುಖಿಯರು ಒಟ್ಟಿಯಿಹರು ಅಸಿಯಾಳು ಬಂಜೆ ಬರಡಿಯೆಂಬ ನುಡಿಗಳ ಘುಸಣೆಯಿಲ್ಲವು ಸೀಮೆಯಲಿ (ಹುರೀಶಾಂ. ೦-೩೮).

[ಬಱಡ + – ಇ./ತಮಿ. ವಱಟಿ]

**ಬಱಡು, ಬರಡು** (ನಾ). ೧. ನಿಸ್ಸಾರವಾದುದು; ವ್ಯರ್ಥವಾದುದು; ಪೊಳ್ಳು : ಮನೋಮುದಂ ಬಱಡನಿಸಿತ್ತು ಮತ್ತುಸಿರ್ವುದೇನೊ ವಿಧಿಪ್ರತಿಬಂಧಕಾರ್ಯವಂ (ರಶಶ. ೩-೩೬); ದೇವಯಾನಿಯ ಬಯಕೆ ಬಱಡಾಯ್ತು (ಸಂಶಕ. ಕಂ. ೩೨೯); ನರರ ತುತಿಸಿ ನಾಲಿಗೆ ಬಱಡಾಯಿತಲ್ಲ (ಪುರಂದ. ೦-೨೯-೦). ೨. ನಿಸ್ಸಾರನಾದವನು : ನಿರ್ವೀರ್ಯ : ದುರ್ಬಲ : ಬ[ಪಾಠಾಂ. ಜ]ಱಡುಗಳು ನೀವೀ ಜನಾರ್ದನನೂರಿಗೆ ಬಹಿರೇ . . . ಹೋಗಿಯೆಂದನು ಭೂಪರಿಗೆ ಭೀಷ್ಮ (ಕುಮಾವ್ಯಾಸ. ಉದ್ಯೋ. ೦೦-೩೩). ೩. ಗೊಡ್ಡು ಹಸು; ಬಂಜೆದನ : ನೀನೊಲಿದರೆ ಬಱಡು ಹಯನಹುದಯ್ಯಾ (ಬಸವ. ೬೬) ; ಸುರಧೇನು ಬಱಡಾದೊಡಿನ್ನೆಂತು ಮಾಡುವೆಂ (ಜಾಗೀರ. ದೀ. ೨೬೦-೦) ; ಕಱೆಯದ ಬಱಡುಗಳು ಹಯನಾದುವು (ಪ್ರಭುಲೀ. ೬-೨೫). (ಗ್ರಾ). ೪. ನಿಸ್ಸಾರವಾದ: ಪೊಳ್ಳಾದ : 'ಬಱಡುಮನ' ಪರಾ. ೫. ಗೊಡ್ಡಾದ; ಬಂಜೆಯಾದ: ಮುಂದೆ ಕಟ್ಟಿರ್ದೀ ಬಱಡುಪಶುವಿಂದೆ ಹಾಲಂ ಏಗೆ ಪಡೆವೆ (ಜಾಶ. ೯-೨೬). **ಬರಡು :** ೧. ನನ್ನ ಜೀವನ ಬರಡು (ಹಬ್ಬ. ೮೬); ಇಂದ್ರಿಯಾನು

ಭವರ ಎಲ್ಲೆಯುನು ಮೀಂದ ಭಾವನೆಗಳು . . . ಬರೀ ಜಳ್ಳು, ಬರಡು (ಕಱೋ. I, ೬೬೭) ; ಕೃತಿಯಾಗಿ ನಿಲ್ಲದ ಜ್ಞಾನ ಬರಡು (ಭೂಪಾಠ. ೩೩). ೩. ಕೊರಡು ಕೊನರುವುದು ಬಲು ಬರಡು ಹಯನಹುದು (ಕೃಹಾಕ. ೧೦-೨೬) ; ಬರಡು ಹಯನಾಗಿ ಕರುವ ಪಡೆದೀತು ಅವು (ಕೂಡುಗಾಣ. ೧೪-೩). [ದೇ. ॥ ತವಿ. ವಱಟು ; ಮಲ. ವಱಡು ; ತುಳು. ಬರಡು]

**ಬಱುಡುಗಱೆ** (ಕ್ರಿ). (ಗೊಡ್ಡು ಹಸವಿನ ಹಾಲು ಕರೆಯುವಂತೆ) ನಿಷ್ಪ್ರಯೋಜಕವಾದ ಕೆಲಸವನ್ನು ಮಾಡು : ವ್ಯುತ್ಪನ್ನವಿನ ಬಾಯು ತುತ್ತಾಗುತಿರ್ದಂ ದೇವ ಕತ್ತಲೆಯೊಳಗೆ ಬಱುಡುಗಱೆವುತಿರ್ದಂ ದೇವ (ರಾಗೀಶ. ಶೀ. ೨೬೦-೦೪). [ಬಱುಡು + ಕಱೆ₁]

**ಬಱುಡುಮನ** (ನಾ). ಭಕ್ತಿ, ಶ್ರದ್ಧೆ, ಪ್ರೀತಿಗಳಿಲ್ಲದ ಅಂತರಂಗ : ವರರ ಸತಿಯುನನಂಗರತಿಯುಲಿ ಬೆರಸಿತಿಲ್ಲ . . . ದೈವದ್ವಿಜರ ಪೂಜೆಯುಲಿ ಬಱುಡುಮನವನು ಮಾಡಿತಿಲ್ಲ (ಕೊಕಿಂ. ೧-೩-೦೪). [ಬಱುಡು + ಮನ]

**ಬಱುಡೆ**, ಬರಡೆ (ನಾ). = ಬಱಿಡಿ ೨ : ಬಱುಡೆಯಲ್ಲಾಕೆ ಮರೀಚಿರಾಜನ ನೊಬ್ಬ ಹಿರಿಯು ಪುತ್ರನ ಪೆತ್ತಳೆಹುದು (ಹಹ. ೩೪-೬೦). **ಬರಡೆ** : ಗಂಡಂಗೆ ಮಮಕಾರವಿರಲು ಬರಡೆಯಾದರು ಭಾಗ್ಯಲಕ್ಷ್ಮಿಯೆಂಪಿಹಳು (ಕೆಂಳ. ೧೦೪-೬). [ಬಱುಡ + — ಎ₂]

**ಬಱುನ್** 'ಬಱು' ನೋ.

**ಬಱುನು** 'ಬಱು' ನೋ.

**ಬಱುಪ** (ನಾ). ಆತ್ಮಪೇಕ್ಷೆ ; ಅತ್ಯಾಸೆ : ಸಾಱೆ ಬಱಲ್ದ ಮೆಯ್ಗೆ ಚೇತರಕೆಯುಲರ್ಚಿ ಬಾಯ್ಗೆ ಬಱುಪಂ ಪರಿಸುತ್ತಿರೆ ಪೋದ ಕೂಟವುಂ ಪರಿವಿಡಿಗೆಯ್ಯೆ ಚಿತ್ರವೆಳಸಿತ್ತು ರತಾಂತಸುಖಾಂತಮೋವರಾ (ಕಂದ್ರಪ್ರ. ೬-೬೦). [< ಬಱು]

**ಬಱಲು**, ಬರಲು, ಬರ್ಲ (ನಾ). ೧. (ಎಲೆ, ಹೂವು, ಮೊದಲಾದುವುಗಳು ಇಲ್ಲದ) ಒಣಗಿ ಕಡ್ಡಿಯಾದುದು ; ಬೋಳಾದುದು : 'ಬಱಲುಗೊಳ್' ಪರಾ. ೨. ಒಣಗಿದ ಕಡ್ಡಿ : ಕಲ್ಲಿಂದಿಟ್ಟು ಕರಂ ಬಡಿಯಿಂದವೆ ನಿಲ್ಲದೆ ಬಡಿದು ಬಱಲ ಬರ್ಲ್ಪೊಯ್ಯಿಂದೆಲ್ಲೆಡೆ ಬಾಸುಳೆನೇಳಿಸಿ (ಕಮಾಶಾ. ೦೩-೪೦) ; ಲಂಡಯನು ಹಿಡಿತರಿಸಿ ನುಡಿದಾ ಬಾಯೊಳು ಮಣ್ಣುತುಂಬಿಸಿ ಬಱಲ ತರಿಸಿ . . . ಮೆಯ್ಯುರಂ ಹುಣ್ಣು ಹುಣ್ಣಾಗುವಂತೆ ನೆಱೆ ಕೊಲಿಸಬೇಕು (ಸಪ್ತ್ಯಾಶ್ರೀ. ೬-೩೬). **ಬರಲು** : ೨. ಬಂಬಲೀ ಮರದ ಬರಲಿನಿಂದ ಕೈಗೆ ಬಂದಂತೆ ಹೊಡೆದನಂತೆ (ಹೊಸ್ಸ. ೦೬೬) ; ಅವನನ್ನು ಅಲ್ಲಿಯೇ ಒಂದು ಮರಕ್ಕೆ ಬಿಗಿದು ಹುಣಸೆಯ ಬರಲುಗಳಿಂದ ಮನ ಬಂದಂತೆ ಬಡಿಯುಹತ್ತಿದನು (ಕಗಧ್ಯ. ೩೬) ; ಒಂದು ಬುಟ್ಟಿ ಕುಳ್ಳು, ಒಂದು ಕಟ್ಟು ಬರಲು ಕೊಟ್ಟು ಕಳಿಸಿದನು (ಚಿತ್ಸಹೂ. ೧೪). ೩. ಒಣಗಿದ ಕಡ್ಡಿಗಳ ಕಟ್ಟು ; ಕಸಬರಿಗೆ : ಪೊರಕೆ. ಬರಲು (Broom. ೩೦೪೩). **ಬರ್ಲ** : ೨. ಒಣಗಿದ ಮುಳ್ಳುಗಳು, ಬರ್ಲಗಳು, ಟೊಂಗೆಗಳು ಸಾಮ್ರಾಜ್ಯದ ಸೀಮೆಯನ್ನು ಭದ್ರಪಡಿಸಿದ್ದವು (ಪಂಚಾಪು. ೭೨). [ಬಱು + — ಅಲು(< — ಅಲ್₂)]

**ಬಱಲುಗೊಳ್** (ಕ್ರಿ). (ಎಲೆ, ಹೂವು ಮೊದಲಾದುವುಗಳಿಲ್ಲದೆ ಗಿಡವು) ಬೋಳಾಗು : ಅಱಲುಗೊಂಡ ಕೆಱೆಗೆ ತೂಱೆ ಬಂದು ಹಾಯ್ದಂತೆ ಬಱಲುಗೊಂಡ ಸಱಿಗೆ ಮಳೆ ಸುರಿದಂತಾಯಿತ್ತು (ಮುಹಾರಿ. ೩. ೨೪-೭೩). [ಬಱಲು + ಕೊಳ್₁]

**ಬಱಸಿಡಿಲ್**, ಬರಸಿಡಿಲು, ಬಱಸಿಡಿಲು (ನಾ). ೧. ಮಳೆಯಿಲ್ಲದೆಯೇ ಹೊಡೆಯುವ ಸಿಡಿಲು ; ಅಕಾಲದಲ್ಲಿ ಬೀಳುವ ಸಿಡಿಲು : ಬಱಸಿಡಿಲ್ ಪೊಡೆದು ಪ್ರಿಯಸೇನೆ ಸತ್ತಳ್ (ವಡ್ಡಾರಾ. ೬೬-೨೪) ; ಬಱಸಿಡಿಲ್ ಪೊಡೆಯೆ ಕಿಡದ ಶಾಲತರುಗಳಂತಿರ್ದ ನಾಲ್ವರ್ ತಮ್ಮಿಂದಿರುಮಂ ಕಂಡು ಬೆಕ್ಕಸಂಬಟ್ಟು (ಪಂಪಭಾ. ೬-೭೩ ವ) ; ಕಲ್ಪಾಂತರ ಬಱಸಿಡಿಲೆಯ್ದಂದು ಪೊಪ್ಪುಳ್ಳಿಲಂ ಕಂಪಿಸುವಂತೆ (ಶಾಂತಿಪು. ೬೦೦). **ಬರಸಿಡಿಲು** : ೧. ಮರುತಾತ್ಮಜನ ಬೆದರಿಸಿದಳೇನೆಂಬೆ ಕಾಮಾರ್ಗಿಲ ಬರಸಿಡಿಲು ಪೋಲ್ವ ಬಿರುನುಡಿಗಳಿಂದ (ಕುಂಪಾಂಭ. ೩-೩-೩) ; ಪ್ರಳಯಕಾಲದಲ್ಲಿ ನಡೆಯುವಂತೆ ಬರಸಿಡಿಲು ರಾಜರ ಸವಿಪಪದಲ್ಲಿಯೇ ಬಿತ್ತು (೬೩೪. ೩). ೨ (ಅಲಂ) ಅನಿರೀಕ್ಷಿತವಾದ ಹೊಡೆತ, — ಆಘಾತ : ಇಲ್ಲದೆ ಹೋದರು ತಂದೆ ಬರಸಿಡಿಲೆರಗಿದ ಹಾಗಾದ ನಾನಾಗ (ಶಿಂಹಕ. ೨೨-೯೩). **ಬಱಸಿಡಿಲು** : ೧. ಕಾಲವಲ್ಲದ ಕಾಲ ಬಱಸಿಡಿಲೇಳಿಗೆಯುಲುಬ್ಬಿದ್ದು ಮಲ್ಲರ ಪಾಳೆಯವ ನೆಱಗುವುದ ನಾನದ ಕಂಡೆ ಸ್ವಪ್ನದಲಿ (ಕುಮ್ಮಾರಿ. ೬೩೪. ೪-೨೨) ; ಹೊಡೆಸಿದ ಪಟಹ ನಿಸ್ಸಾಳ ಭೇರಿ ಪಱೆ ಬಱಸಿಡಿಲಿನಂತಾಯ್ತು (ಕೌಶಿಕ. ೦೪-೦೦) ; ಬಱಸಿಡಿಲಂತೆ ಭಾರಿಯ ಭೇರಿ ಸೂಳೈಸೆ (ಹಹ. ೨೩-೩೦). [ಬಱು + ಸಿಡಿಲ್₂]

**ಬಱಸಿಡಿಲು** 'ಬಱಸಿಡಿಲ್' ನೋ.

**ಬಱಹಾಳೆ** (ನಾ). ಒಣಗಿ ತರಗಾದ ಅಡಕೆಯ ಹಾಳೆ : ವಿಜಯಾರ್ಧಶೈಲದೊಳ್ಕಿದ ಪಡಿಯ ನಾಳೆ ಹೋಳ್ಮಿಡಿ ಬಿಡುವೆನೊಣಗಿದ ಬಱಹಾಳೆಯನೊಡೆಯ ಹೊಯ್ದಂತೆ (ಹಹ. ೨೪-೩). [< ಬಱು + ಹಾಳೆ₁ (< ಪಾಳೆ₁)]

**ಬಱಹು** (ನಾ). ಕ್ಷಾಮ ; ದುರ್ಭಿಕ್ಷ: ವ್ಯಾಧಿಯಲ್ಲಿ ಕ್ಲೇಶದಲ್ಲಿ ಬಱಹಿನಲ್ಲಿ ಹಗೆಗಳ್ ಕೊಲುಬಂದಲ್ಲಿ ಅರಮನೆಯ ದ್ವಾರದಲ್ಲಿ ಶ್ಮಶಾನದಲ್ಲಿ ತನಗಾದವರೇ ಬಂಧುಗಳ್ (ಹಂತಕಂ. ೬೨-೦೪) ; ಪಱಿಯ ಬಱಹಿನಲ್ಲಿ ಅವಗ್ರಾಹ, ಅವಗ್ರಹ ಎನಿಸುಗು (ವಾಹಂ. ೪). [ಬಱು + — ಹು₂ ( < ಪು₂)]

**ಬಱಿ** 'ಬಱು' ನೋ.

**ಬಱಿಕಯ್** 'ಬಱುಗೆಯ್₂' ನೋ.

**ಬಱಿಕೆಯ್** 'ಬಱುಗೆಯ್₁' ನೋ.

**ಬಱಿಕ್ಕೆ** 'ಬಱುಗೆಯ್₁' ನೋ.

**ಬಱಿಗಂಟು** (ನಾ). ೧. ಒಳಗೆ ಏನೂ ಇಲ್ಲದ ಗಂಟು ; ಬೆಲೆಯಿಲ್ಲದ ಗಂಟು. ೨. ಪೊಳ್ಳಾದ ಸಂಬಂಧ ; ಸುಳ್ಳು ಸಂಬಂಧ.—ನಂಟು : ಬಱಿಗಂಟು ಬಱಿಪಾತು ಸುಳ್ಳುಸುದ್ದಿಯ ಹೇಳಿ ಹಿರಿಯುವಾಗ ನಂತೊಡಲ ಹೊರಕೊಂಬೆ ಮನವೆ (ಕುಂಂಡ. ಣಾ. ೨-೦೦-೪). [ಬಱಿ (<ಬಱುದು) + ಗಂಟು]

**ಬಱಿಗಲ್ಲು**, ಬರುಗಲ್ಲು (ನಾ). (ಮಣ್ಣಿಲ್ಲದಿರುವ) ಕಲ್ಲಿನಿಂದ ಕೂಡಿದ ನೆಲ; ಹರಳುಹರಳಾಗಿರುವ ಕಲ್ಲಿನ ನೆಲ : ನಿಜಗುರುಳಬಲೆ ನಿನ್ನಯ ದಿವ್ಯದೇಹವ ಬಱಿನೆಲದೆಡೆಯಲ್ಲಿ ಹರಹಿ ಬಱಿಗಲ್ಲ ಗಾಯದಿ ಮಿಡುಕುವ ನಾಗರಮಱಿಯಂತೆ ಹೊರಳಬೇಡ (ಕೋಹಕ. ೩೩-೪೪). **ಬರುಗಲ್ಲು** : ಬರುಗಲ್ಲ ಗಾಯದ ಮರಿನಾಗರದ (ಕಂಳ. ೦೨೩-೦೦). [ಬಱಿ (<ಬಱುದು) + ಕಲ್ಲು (<ಕಲ್₂)]

**ಬಱಿಗಾಲು** 'ಬಱುಗಾಲು' ನೋ.

**ಬಱಿಗುಟ್ಟು** (ಕ್ರಿ). ಬರಿದು ಮಾಡು ; ಇಲ್ಲವಾಗಿಸು : ಮಕ್ಕಳು ಹುಟ್ಟಿ ಕಡೆಯಲಿ ವಂಶವನು ಬಱಿಗುಟ್ಟದಲ್ಲದೆ ಮಾಣರು (ಕಹಾಗ. ೩-೦-೨೦). [ಬಱಿ (<ಬಱುದು) + ಕುಟ್ಟು₁]

**ಬಱಿಗೂಟ್** 'ಬಱುಗೂಟ್' ನೋ.

**ಬಱಿಗೆಂಡ** 'ಬಱುಗೆಂಡ' ನೋ.

**ಬಱಿಗೆಯ್** 'ಬಱುಗೆಯ್₁' ನೋ.

**ಬಱಿಗೆಱೆ** 'ಬಱುಗೆಱೆ' ನೋ.

**ಬಱಿಗೈ₁** 'ಬಱುಗೆಯ್₁' ನೋ.

**ಬಱಿಗೈ₂** 'ಬಱುಗೆಯ್₂' ನೋ.

**ಬಱಿಗೋಪ** (ನಾ). ವ್ಯರ್ಥವಾದ ಕೋಪ : ಗನ್ನದಿಂ ಬಱಿಗೋಪವುಂ

ತಾಳ್ದು ರ್ಖುಂಕಿಸುತೆ (ಶಿರಂ. ೮೮. ೦೩-೦೨). [ಬಱಿ (<ಬಱಿದು) + ಕೋಪ]

**ಬಱಿತನ** (ನಾ). ಬರಿದಾದುದು ; ಹುರುಳಿಲ್ಲದುದು : ಶರಣರೆಂತೆಹರೆಂಬು ದನೊಲ್ದು ನೋಡದೀ ಬಱಿತನವುಕ್ಕಿ ಚಾಪಲದ ಗೌರವದಿಂ ಫಲವೇಂ (ಶಕಳ. ೦-೬೨). [ ಬಱಿ (<ಬಱಿದು) + — ತನ ]

**ಬಱಿದಲೆ** 'ಬಱುದಲೆ' ನೋ.

**ಬಱಿದು,** ಬರಿದು(ನಾ). ೧. ಏನೂ ಇಲ್ಲದಿರುವುದು ; ಶೂನ್ಯ ವಾದುದು : ಪೇಚರವುಹೀಚರಕೋಟಿಗೆ ಬಾಯಿನಂಗಳಂ ತೀವಿವಿಶೇಷ ಕೋಶಗೃಹವುಂ ಬಱಿದಾಗಿರೆ ಕೊಟ್ಟು (ಶಾಂತಿಪು. ೬-೦೯) ; ಎನಿತು ಕುರು ಕ್ಷೇತ್ರಧೊಳೆಡೆಯನಿತುಂ ಬಱಿದಿಲ್ಲದಂತು ಶವಶತದಿಂ ತಕ್ಕನೆ ತೀವೆ (ಗದಾಯು. ೭-೬೩) ; ದಿವಸಗಳಿಯಿಂ ಕಿಱುಗುಪ್ಪೆಗಳೆಲ್ಲಮುಮಂ ಬಱಿದಾಗೆ ಮಾಡಿ (ಶಂಕಶಂ. ೨೬೪-೦೦). ೨. ವ್ಯರ್ಥವಾದುದು ; ನಿರರ್ಥಕ ವಾದುದು ; ಪೊಳ್ಳು : ಬಱಿದಲ್ತು ಮೆಚ್ಚು ಶೌಚಂ ಕಿಱಿದಲ್ತು (ಸೌ೨೨. XI-i, ೪೦-೨೬ ; ೯೬೦). **ಬರಿದು** : ೨. ಜಗಕ್ಕೆಸಯೆ ಶಿವಾಲಯ ವಮಂ ಮಾಡಿಸುವಂಗೆ ನೊಳಂಬವಟ್ಟಮೆಂಬುದು ಬರಿದೇ (ಸೌ೨೨. IX-i, ೪೯-೬೬ ; 1076 ?).

ಬಗ್ಗಬಱಿ, ಬಗ್ಗಬರಿ, ಬಚ್ಚಬಱಿ (ದ್ವಿರುಕ್ತಿ) : ಭರ್ಗನಂ ಕಾಣುತ್ತ ಬಗ್ಗಬಱಿಯಾದಳು (ಶಂಪ್ರ. ೦೯-೨೭) : ಪುಡಿಪುಡಿಯಾಗಿ ಹಾಱುವವು ರಥಂ ಗಳು ಒಡಲು ಬಗ್ಗಬಱಿಯಾಗಿ ಕೆಡೆವುವು ಹಯ (ಜ್ಞಾಶತ. ೩೦-೦೪) ; ಗಡಿ ಪೊಯ್ಯಲಿನಿಂದ ತಾಂ ಬಗ್ಗಬರಿಯಂ ತೂಱ್ವಮ್ಬಡಿ ಕೌರವಾನುಜರ ಸದೆದಗ್ಗಳೆಯರಂ ಪೊಯ್ದು ದುಶ್ಶಾಸನಂ ರಥವ ಪರಿಸಿದಂ ಪಟುತರದೊಳು (ಲಕ್ಷ್ಮೀಶಾ. ೮-೪-೭); ಕಳಕಳವಿದೇನೆಂದು ನೆರೆಯಂಗಡಿಯ ಮುಂದಣಂಗಡಿಯ ವರದರಂ ಕೀಡು ಬೆಸಗೊಳ್ವ ಬಚ್ಚಬಱಿ[ಶಾಶಾಂ. ಪಚ್ಚುಪಸಿ]ಯೆಗ್ಗರುಮಂ . . . ನೋಡಿ (ಗದಾಯು. ೯-೪೮). **ಬಚ್ಚಬಱಿದಾಗು, ಬಚ್ಚಬರಿದಾಗು**= ಏನೂ ಇಲ್ಲದಂತಾಗು ; ಶೂನ್ಯವಾಗು : ಹೊಱಗೆಲ್ಲವ ತೂಱಿದೊಳಗೆ ನಿರ್ಮಲವಾಗಿ ಮೆಱೆವವರುಂಟು ಲೋಕದೊಳು ಹೊಱಗೆಲ್ಲವಿದ್ದೊಳ ಗೇನುವಿಲ್ಲನೆ ಬಚ್ಚಬಱಿದಾದರಾರು ನಿನ್ನಂತೆ (ಭರತ. ೨-೩೯); ದೇಶ ಕೋಶಗಳೆಲ್ಲಾ ಬಚ್ಚಬರಿದಾಗಿ, ಅವರೂ ಅವನಂತೆಯೇ ನಾಡಾಡಿಗಳಾಗುವ ದುರವಸ್ಥೆಗುರುಳ್ದಿರುವುದು ಪ್ರತ್ಯಕ್ಷಪ್ರಮಾಣವಾಗಿದೆ (ವಂಶ್ರಕ. ೦೯-೨೩) . **ಬಚ್ಚಬಱಿಯ, ಬಚ್ಚಬರಿಯ** = ಕೇವಲವಾದ; ಅಷ್ಟುಮಾತ್ರದ : ಕೂಡಲಸಂಗಮದೇವಾ ನಿಮ್ಮ ಶರಣರು ಸ್ವತಂತ್ರರು ಎನ್ನ ಬಚ್ಚಬಱಿಯ ಬಸವನೆನಿಸಯ್ಯಾ (ಬಸವ. ೮೦೪) ; ಮಾಡಿಸಿ ಸಂಗವನು ನೋಡಿಸು ನಿನ್ನವರ ಕೊಡಿಸು ಬಚ್ಚಬರಿಯ ಭಕ್ತಿ ನನಗಿನ್ನು ನೀಡು ಪಾದೋದಕ ಪ್ರಸಾದವ (ಸಿದ್ಧಕೃ. ೪೯-೩೦). **ಬಱಿದು ಮಾಡು** = ಖಾಲಿ ಮಾಡು; ಇಲ್ಲದಂತೆ ಮಾಡು : ಕುಡಿಪೆಂಪಿ ಲಪನಾಪ್ಪಿಯನೀಗಡೆ ತೋಳೊಳ್ ತುಳ್ಕೆ ಬಱಿದು ಮಾಱಿನ್ನೊ ಪೇಟಿಬ್ (ಅಂಜ. ೧೨-೮೬). **ಬಱಿಯ**, **ಬರಿಯ**=೧. ಕೆಲಸಕ್ಕೆ ಬಾರದವನು ; ನಿರುಪಯುಕ್ತ : ವರಧರ್ಮ ಮನುತ್ಸವದಿಂ ಸ್ಥಿರಮನದಿಂ ಕೇಳಲೊಲ್ಲದಾತನೆ ಕಿಱಿಯಂ ವರಧರ್ಮ ಮನಱಿವಿಂದಂ ಸ್ಥಿರಮನನಾಗಱಿಯಲೊಲ್ಲನಾತನೆ ಬಱಿಯಂ (ಧರ್ಮಾಮೃ. ೨-೦೬೩). ೨. ಖಾಲಿಯಾದ ; ಬೋಳಾಗಿರುವ : ಬಱಿಯ ಗೋಡೆಯ ಮೇಲೆ ಬರೆದ ಚಿತ್ರವ ಕಂಡು ಮಱುಗಿ ಮಾಡುವುದೇನು (ಮೋಹತ.೯-೦೭). ೩. ವ್ಯರ್ಥವಾದ : ಬಱಿಯ ಕಾರ್ಪಣ್ಯದಲಿ ಮೇಘದ ಮಱಿಯ ಹೊಕ್ಕರೆ ರಾಹು ಬಿಡುವನೆ (ಕುಮಾರವ್ಯಾ. ೨-೪೪) ; ಬರಿಯ ಮಾತಿನಲ್ಲಿ ಕಾಲ ಕಳೆಯಬೇಡ (ರೂ೦). ೪. ಅಷ್ಟು ಮಾತ್ರದ ; ಕೇವಲ : ನವಮಾಸಂ ತೀವಿ ಬಱಿಯ ಮುಂಡವಂ ಬೆಸಲೆಯಾಗಿ (ಧರ್ಮಪ. ೯-೩೨ ವ) : ಬಱಿಯ ಬಾಯಿಯಲಿ ನಿನ್ನ ಹೊಗಳುವ ಭಟ್ಟನಾರು (ಸಂಶಶ. ೪-೨೦). [ದೇ.॥ ತಮಿ. ವಱಿತ್ತು]

**ಬಱಿದೂಱು** 'ಬಱುದೂಱು' ನೋ.

**ಬಱಿದೆ,** ಬರಿದೆ (ಅ). ವ್ಯರ್ಥವಾಗಿ : ಸುಮ್ಮನೆ : ಆತನೊತ್ತಂಬದಿನಾಂ ತೊಡಾಂ ಬಱಿದೆ ತಪ್ಪದೆನೆಂದು ಕಿರೀಟ ತನ್ನ ಬಿಲ್ಲಂ ಬಿಸುಟರ್ದೊಡೆ (ಶಂತಭಾ. ೦೦-೬೪); ಅಮರಾಪಗೆ ಕೆಱಗೆ ನಿಂದ ಜಿನಬಿಂಬದ ಮೇಲಮರ್ದಿರೆ ಪರಿತಂದುದಱಿಂದಮ ಪಾವನವಾಯ್ತು ಬಱಿದೆ ಪಾವನಮಾಯ್ತೇ (ಸಮಂತ. ೨-೩೩); ನಂಬರು ನೆಚ್ಚರು ಬಱಿದೆ ಕರೆವರು (ಬಸವ. ೦೦೬). **ಬರಿದೆ** : ಕೌತುಕಕೆ ಬೆಚ್ಚಿದಿರ್ ಬರಿದೆ (ಶಬ್ದಾಂಗ. ೨೩-೬೪೨). [<ಬಱಿದು]

**ಬಱಿದೇರು** (ನಾ). ಯಾವ ಅಲಂಕಾರವಿಲ್ಲದ ಮತ್ತು ಯಾರೂ ಕುಳಿತಿಲ್ಲದ ಬರಿಯ ರಥ; ಬರಿದಾದ ತೇರು : ನಿನ್ನೊಳಿರ್ದಪುದು ಬಱಿದೇರೆನ್ನ ಕೈಯೊಳಿದೆ ಪನ್ನಗಾರಿಧ್ವಜ ಕಿರೀಟಗಳ್ವೆರಸಿರ್ದ ಸನ್ನುತ ಸ್ಯಂದನಂ ನೋಡು (ಜೈಮಿಭಾ. ೨೭-೪೩).

[ಬಱಿ (<ಬಱಿದು) + ತೇರು, (<ತೇರ್)]

**ಬಱಿದೋಱಿ** 'ಬಱುದೋಱಿ' ನೋ.

**ಬಱಿನುಡಿ** 'ಬಱುನುಡಿ' ನೋ.

**ಬಱಿಪಾತು** 'ಬಱುವಾತು' ನೋ.

**ಬಱಿಮಾಯೆ** (ನಾ). ಕೇವಲ ಕಣ್ಕಟ್ಟು,–ತಂತ್ರ : ಎಲವೂ ಬಱಿಮಾಯೆ ಗಳನಸಗಿ ಪೇಸಲದೊಳ್ಸರಗಪಂ ಕೊಂಡು ಬಾಂದಳಕಡರ್ದೊಡೆ ನಿನ್ನನು ಉಳುಹುವರೆ (ಜೈಮಿಭಾ. ೪-೧೩). [ಬಱಿ(<ಬಱಿದು)+ಮಾಯೆ]

**ಬಱಿಮುಳಿಸು** (ನಾ). ಹುಸಿ ಕೋಪ : ಮುರುಹು ಮುದ್ದು ವಿನೋದ ಠಕ್ಕುಪಚಾರ ಬಱಿಮುಳಿ[ಶಾಶಾಂ. ನಿ]ಸು . . . ಎಂಬೀ ಪರಿಪರಿಯ ಮಾಯೆಗಳ ಮಹಿಳಾಜನ ವಿರಾಜಿಸಿತು (ಕೂರಿರಾ. ೦-೩-೬೨).

[ಬಱಿ (<ಬಱಿದು) + ಮುಳಿಸು]

**ಬಱಿಮೆಯ್,** ಬರಿಮೈ, ಬಱಿಮೈ (ನಾ). ೧. ಬತ್ತಲೆ ದೇಹ ; ನಗ್ನ ಶರೀರ: ಎಲೆಗೇ ನೀನೆಲ್ಲರೊಂದಂದದಿನಿರೆ ಬಱಿಮಯ್ಯಿಂದವಿರ್ಪಂ ತಾಟಕ್ಕಂ (ಶಂಶ್ರಕೃ. ೬-೬೩). **ಬರಿಮೈ** : ೧. ಬರಿಮೈ ತಣ್ಣಗೆ, ಮನದಲಿ ಬಿಸಿ ಹಗೆ (ಶಂಜಿತ. ೦೩೨) ; ಕಿಡಿಗೇಡಿ ಮಗು ! ಬರಿಮೈಯಿಂದ ಮಂಜಿನಲ್ಲಿ ಶಿರುಗುತ್ತಿದೆ ! (ಎಂಜಿ. ೦೭). **ಬಱಿಮೈ** : ೨. ಅಲಂಕಾರರಹಿತವಾದ ಮೈ,–ಶರೀರ : ಕೃಷ್ಣನಾಮಸ್ಮರಣೆ ಮಾಡುತ ಮರುತಸುತನಾ ಕರ ವಿಡಿದು ಬಱಿಗಾಲು ಬಱಿಮೈಯಿಂದ ಬರುತಿರಲು (ಸಂಶಶ. ೨೦-೦೦೩).

[ಬಱಿ (<ಬಱಿದು) + ಮೆಯ್]

**ಬಱಿಮೈ** 'ಬಱಿಮೆಯ್' ನೋ.

**ಬಱಿಯಾಟ,** ಬರಿಯಾಟ (ನಾ). ಕೇವಲ ಆಟ,–ಕ್ರೀಡೆ : ಮುನ್ನ ಬಱಿಯಾಟಂಗಳಂ ಬೆಳಗನ್ನ ಕಾಡಿದಡೆನ್ನ ಜಠರವದಿನ್ನು ತುಂಬದು (ಬಸಕೃ. ೦೩-೨೪). **ಬರಿಯಾಟ** : ಯುವಕರ್ಗೆ ಪಯಣವೇದರೆ ಏನು ? ಬರಿ ಯಾಟವೈಸೆ ! (ಶಂಕ್ರಸ. ೬೬). [ಬಱಿ (<ಬಱಿದು) + ಆಟ]

**ಬಱಿವಾತು** 'ಬಱುವಾತು' ನೋ.

**ಬಱಿವಾತುಗಾಱ** (ನಾ). ವ್ಯರ್ಥವಾದ ಮಾತುಗಳನ್ನಾಡುವವನು : ಪೊಱಮಿಂಚುಗೈವನಂ ಬಱಿವಾತುಗಾಱನಂ. . . ತೊಱಿಯದುದೆಗ್ಗತನ ವಲ್ಲೇ (ಶಾಕಶ. ೦೦-೬೨). [ಬಱಿವಾತು (<ಬಱುವಾತು) + —ಗಾಱ]

**ಬಱಿವಾಯ್** 'ಬಱುವಾಯ್' ನೋ.

**ಬಱಿಸೂಱಿ** 'ಬಱುಸೂಱಿ' ನೋ.

**ಬಱಿಸೂಱಿಗೈ** (ಕ್ರಿ). ವ್ಯರ್ಥವಾಗಿ ಸೂರೆಮಾಡು; ಅನ್ಯಾಯವಾಗಿ ಹಾಳುಮಾಡು : ಇಟ್ಟ ಮರಂಗಳಂ ಒಟ್ಟಿದ ಕಲ್ಗಳಂ ದೈವಮೆಂದು ಪೆಸರಿಟ್ಟು ಕೊಂಡಾಡಿ ವರಮಾಗುವೆಂಬಾಸೆಯಿಂ ತಮ್ಮೊಳರ್ಥವಂ ಬಱಿಸೂಱಿಗೈವರ್ (ಶದ್ಮಶಾ. II, ೮೩೦ ವ).

[ಬಱಿಸೂಱಿ (< ಬಱುಸೂಱಿ) + ಗೈ (< ಕಿಯ್)]

**ಬಚ್‌ಸೆಜ್ಜೆ** (ನಾ). ಖಾಲಿಯಿರುವ ಕರಡಿಗೆ : ಗಳದ ಬಚುಸೆಜ್ಜೆಯಲಿ ಲಿಂಗವು ನೆಲಸಿದುದು (ಏಕಪ್ರ. ೩೯ ಸೂಕತ). [ಬಚ್ (<ಬಚುದು) + ಸೆಜ್ಜೆ₁]

**ಬಚ್‌ಹುಂಡ** (ನಾ). ನಿರುಪಯುಕ್ತನಾದವನು; ನಿಷ್ಪ್ರಯೋಜಕ : ಬಚ್‌ಹುಂಡನ ಗಡಿವಾಡದಲ್ಲಿರಿಸಿದಂತೆ ಒಡೆಯರಿಲ್ಲದ ಮನೆಯ ತುಡುಗುಣಿ ಹೊಕ್ಕು ಗಡಬಡಿಯ ಮಾಡಿದಂತೆ (ಸಕಪ. I, ೨೦೫–೭೮೦).
[ಬಚ್(<ಬಚುದು) + ಹುಂಡ]

**ಬಚು**, **ಬರಿ₂**, **ಬರು₄**, **ಬಚ್** (ಸಪೂರೂ) 'ಬಚುದು' ಎಂಬ ನಾಮವಾಚಕಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಚುಗಾಲು', 'ಬಚುಗಿವಿ' ಪರಾ. **ಬರಿ₂** : 'ಬರಿಗಾಲು', 'ಬರಿಮನ' ಪರಾ. **ಬರು₄** : 'ಬರುಗನಸು', 'ಬರುಮರುಕ' ಪರಾ. **ಬಚ್** : 'ಬಚ್‌ಗಾಲು', 'ಬಚ್‌ದಲೆ' ಪರಾ. [<ಬಚುದು]

**ಬಚುಂಟು**, ಬೆರಟು, ಬೆಚುಂಟು, ಬೆಚುಟು₁ (ಕ್ರಿ). ೧. (ಕಾಲ್ಬೆರಳಿಂ ಅಥವಾ ಕೈಬೆರಳಿನಿಂದ) ಕೆರೆ ; ಗೆಬರು; ಗೀರು : ಮತ್ತವಾ ಹಸ್ತಿ . . . ಭೂಮಂಡಲಮನುಂಡಿಗೆ ಸಾಧ್ಯಂ ಮಾಡಿ ಬಡಮೆಂದಪಾವು ಮಂದದಿಂ ದಕ್ಷಿಣವಾದದಿಂ ಮೇದಿನಿಯಂ ಬಚುಂಟುತ್ತುಂ (ಶಾಕ್ತಸ್ಕೃ. ೬–೪೪ ಪ). ೨. ಕೆದಕು ; ಬೆದಕು : ಪೇಟಲ್ಪಾರದ ಮನದೊಳ್ ಪೂಟಲ್ಪಾರದ ಬಚುಂಟ[ಪಾಠಾಂ. ಟಿ] ಕೇಳ್ದವರಾರುಂ ಬಾಟಲ್ಪಾರದ ಕನಸಂ . . . ಕಂಸಂ ಕಂಡಂ (ಅರ್ಜನೇ. ೬–೬೬); ಪೊಗೆಯಡಂಗೆಗವಿದ ದೂವೆಯಂತಿರ ಬಚುಂಟಿದೊಡೆ ಬಸಿಯನುಗುಟ್ಟ ಕಪ್ಪುರದ ನುಣ್ಣಲ ಜಗುಲಿಯುಂ (ಪರ್ತಿಪ್ತ. ೩–೬೩ ಪ). ೩. ಚಿವುಟು ; ಜಿಗುಟು : ತಂದೆಯ ಮಡಿಲುಂದಿದಲ್ಲಿಗೆಪೋಗಿ ಬಚುಂಟ[ಪಾಠಾಂ. ಬೆಚುಂಟ] ಎಟ್ಟಿ ಪೊಟ್ಟಳಿಗೆಯಂ ತಂದೆಗೆ ಕೊಟ್ಟಳ್ (ವಡ್ಡಾರಾ. ೦೭–೨೩). ೪. ಕೆಣಕು ; ಕೆರಳಿಸು : ಕಾಮನ ತೋಳೊಳಿರ್ದ ರತಿ ಶಂಭುಕುಮಾರನುಮಂ ಬಚುಂಟಳೇ (ಅಕಂತೃ. ೦೦–೪೫). **ಬೆರಟು** : ೧. ಬೆರಟಿದೊಡಂಗುಟದಿಂ ಪೊನ್ನೊರೆದೋರ್ವರ್ವರೆ ಕಡಲ್ಗೆ ಪಡಿಯೆಂಬಿನೆಗಂ ಪಂಕಾಲೆತ್ತಂ ಪರ್ವಿರೆ (ರಶುಕ್ಕ. ೦–೪); ಐದು ಕುದುರೆಗಳು . . . ನೆಲವನ್ನು ಮುಂಗಾಲಿನಿಂದ ಬೆರಟುತ್ತಿದ್ದುವು (ಅಂಚಾಂ. ೨೦). **ಬೆಚುಂಟು** : ೧. ಭೂಭಾಗ ಮನತ್ಕುತ್ಸಾಹದಿಂ ದಕ್ಷಿಣ ಖುರದೆ ಬೆಚುಂಟಿತ್ತು ದಿವ್ಯಾಶ್ವಮಾಗಳ್ (ಸಾಹಂಪು. ೪೬೩); ಉಗುರಿನಿಂದಂಟ ಬೆಚುಂಟಿಯುಂಜನಮುದಕ್ಕುಂ . . . ತಾನಿದೆಂಬಂತಿರೀ ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆಚ್ ದಟ್ಟಯ್ಸಿಸ್ತನಿತ್ತಂ ತವಂ (ಗಂಕ. ೪–೭೩); ಅಂಗದಿಬ್ಬದಿಗಳನುಬುಂಗಿ ಬೆಚುಂಟ . . . ಪಲ್ಗಿರಿದು ಗೋಲಾಂಗೂಲಂ ಪುರ್ಬಿಕ್ಕಿ ನಗಿಸುವವಲ್ಲಿ ವಟುಕಪಳವ (ಪುರೀಕ್ಷ. ೩–೦೩). **ಬೆಚುಟು₁** : ೧. ನೆಲನ ತಟ್ಟ ಬೆಚುಟುವ ಪದಂ ನೆಗೆದಲ್ಲೆ ಬೆಂಗರ್ದರ್ ದಾಲದಿಂ . . . ಜಿಗೊಂಕಿಟ್ಟು ಹರಿಯಿತ್ತು (ಪಕಾ. ೩–೯೦); ಕಾಲಲ್ಲಿ ನೆಲನಂ ಬೆಚುಟುತ . . . ಬಾಲಪನೆತ್ತಿ ಬೀಸುತ್ತ (ಅಕಫ. ೩೨–೨೩); ಕಯ್ಯುಡಿಯನೊಳ್ಳುಗುರಿಂ ಬೆಚುಟುತ್ತ ಬೆಳ್ಳಗಂ ಸಮನಿಸೆ ಕಾಲ್ಪೆರಲ್ ಬರೆಯೆ ಭೂಮಿಯನಿರ್ದಳದೊಂದು ಚಿಲ್ಮಿನಂ (ರಸ. ೪–೦೩೩). ೩. ಕೇರಿಯೊಳ್ಳಮುಕಮುಗೆ ಬೆಚುಟುತಂ ಕೆರಟುತಂ ಸನ್ನೆಯಿಂ ಮುಗುಳ್ನಗುವರು (ಪಾಂ. ೩–೬೬). ೪. ತಿರುಗಿ ನೋಡಿದ ಬೇತಾಳನ ಬೆಚುಟ ಪರ್ಬ್ಬೊರದೌಡುಗುರ್ಚಿಯುಂಜಿಸುತ ತರಹರದಿಂದ ನಿಟ್ಟುಸುತಿರ್ದನಾ ಭೂಪರನು (ಕ್ರೀಹಾಂ. ೬–೪೬). ೫. ಕೀಳು ; ಎಬ್ಬು : ಬೆರಲೊಂದು ಬೊಗ್ಗಿಸುತ್ತವನ ಫಾಳಾಕ್ಷಿಯಂ ಬೆಚುಟ ತಗೆವುತ ಬಾಯ್ಗೆ ಹಾಕಿಕೊಳಲು (ಅಕ್ಕಪು. ೬–೨–೩೪) ; ತನ್ನ ಮುಂದೆ ಮಸಣಿಯೆಯೆನುತ ಪಣೆಗಣ್ಣ ತೆಗೆಯ ಬೆರಳಿಂದದಂ ಬೆಚುಟ ನುಂಗಲ್ಕಹುಂಕರಿಸಿರ್ದನೆಂದು ಪೊಗಳಲ್ ಮಸಣಿಯಿಂದೆ ಬಳಿಕಾತಂಗೆ ಪಣೆಗಣ್ಣನುಗುಳಿಸಿದನು (ಕಂಸ. ೩೩–೩೪). 'ಪರಡ್ಡು' ಪರಾ.

[ದೇ.೩ ತಮಿ. ವಣ್ಣು, ವಚುಕು ; ತಲು. ಬಚುಟು, ಬರಟು, ಬರಕು]

**ಬಚುಕಟಿ**, **ಬಕ್ಕಟ**, **ಬರ್ಕಟ** (ನಾ). ನಿಷ್ಪ್ರಯೋಜಕವಾದುದು ; ನಿರರ್ಥಕವಾದುದು : ತ್ರಿವಿಧದ ಹುಚುಯಲ್ಲಿ ಅಡಿಯನಿಕ್ಕಿ ಅಡಗೊಡ್ಡಿದಂತೆ ಬದ್ದಿರುತ್ತ ಮಾತ್ರಜಾಕೆಯ ಮಾತನಾಡಿದಡೆ ಅದು ಬಚುಕಟಿ [ಪಾಠಾಂ. ಟಿ]ಯೆಂಬರು (ಜಾಚೂಶ್ವು. ೪. ೩೩೬–೦೪); ಇಂತೀ ಬಚುಬರ ಅರ್ಚನೆ ಹುರಿಯ ಬೊಂಬೆಯಂತ ಇಂತಿ: ಅಜುಗುಜುಗಳ ಪೂಜೆ ಬಚುಕಟಿಯಂತೆ (ಜುಸ್ತಮು. ೪. ೨೨೨–೩೩); ಬೆಳಗದ ಕಂಚು ತೊಳೆಯದ ಕಂಭ ವಕ್ಕ ಕಳಿಯದ ಫಲ ನೆಚ್ಚಯರಿಯದವನ ಸತ್ಕ್ರಿಯೆ ಮಾಟ ಬಚುಕಟಿ ಹೋಯಿತ್ತು (ಸವಶ. ೦೨೯–೬೩೨). **ಬಕ್ಕಟ** : ಆತ್ಮಜರಾಶ ಬಕ್ಕಟಪಕ್ಕ ದೆಂಬಳವಳಗೆಗೊಳಲಾಗವನಿನಾಯಕನು (ಜಾಮು. ೨೬–೩೬). **ಬರ್ಕಟ** : 'ಬರ್ಕಟಬಯಲ್' ಪರಾ. [ಬಚು (<ಬಚುದು) + ?]

**ಬಚುಕಾಯ** (ನಾ). [ವೀಶೈ] ಇಷ್ಟಲಿಂಗವನ್ನು ಧರಿಸಿದವನು : ಹಲವು ಕೊಂಬಿಂಗೆ ಹಾಯಬೇಡ ಬಚುಕಾಯಕ್ಕೆ ನೀಡಬೇಡ (ಚಿಕ. ೬೨೨); ಅಂಗದ ಮೇಲೆ ಲಿಂಗವುಳ್ಳವರ ಮನೆಯ ಹೊಗಿಸಲಾಗದು ಬಚು[ಪಾಠಾಂ. ಬಚ್]ಯ]ಕಾಯ್ಗಳಿಗೆ ನೀಡಲಾಗದು (ಕನ್ನಪ. ೪. ೬೬೯–೦೪೩೦) ; ಹುಸಿ ಡಂಭಕ ದುರ್ಮೂರ್ತಿ ಬಚುಕಾಯನಿಗೆ ಅಖಿಂಡೇಶ್ವರ ಎಂತು ಮಚ್ಚುವನು (ಅಖಂಡೇ. ೯೬–೦೩). [ಬಚು ( < ಬಚುದು) + ಕಾಯ]

**ಬಚುಗ** (ನಾ). ಹಣ ಇಲ್ಲದವನು ; ಬಡವ ; ದರಿದ್ರ : ಮಾತ್ರವನ ವಿತ್ತದೊಳಗಿನಿತುಳಿಯದಂತೆಲ್ಲವಂ ಕವರ್ದುಕೊಂಡು ಬಚುಗನಂ ಮಾಡಿ (ಕೀರವ. ೬–೪೪). [ಬಚು ( < ಬಚುದು) + — ಗ₃]

**ಬಚುಗಯ್** 'ಬಚುಗೆಯ್' ನೋ.

**ಬಚುಗಾಲು**, ಬರಿಗಾಲು, ಬರುಗಾಲು, ಬಚ್‌ಗಾಲು (ನಾ). ಪಾದ ರಕ್ಷೆಗಳನ್ನು ಧರಿಸದ ಕಾಲು ; ಜೋಡು ಮೆಟ್ಟದಿರುವ ಕಾಲು ; ಬರಿಯ ಕಾಲು : ದಂತಿಯಿಂದಿಳಿದು ನಡೆದಚುಯದವ ಬಚುಗಾಲೊಳೆ ತಡಿಯನಿಡುವೆ (ಜಕಾ. ೯–೩). **ಬರಿಗಾಲು** : ಕಾಲೇಜಿಗೆ ಬರಲು ಬರಿಗಾಲಿನಲ್ಲಿ ಮೈಲುಮೈಲಿಗಳ ದೂರ ನಡಿಗೆ (ಕಂಗಪ. ೦೨೩); ಎಂಟು ವರುಷದ ಮಗ ಹೊಂಟಾನ ಬರಿಗಾಲ ಬಂಟರಂಗ ಗಿರಿಯ ಏರೂತ (ಸಿದ್ಧಪು. ೩–೩೨): ಈ ಮುಳ್ಳುನೆಲದ ಮೇಲೆ ಬರಿಗಾಲಿನಲ್ಲಿ ಏಕೆ ನಡೆಯುತ್ತೀಯೆ (ಶುಕ್ಕಮು. ೬೬). **ಬರುಗಾಲು** : ಕೊಳಗದಪ್ಪಲೆಯನ್ನು ಹೊತ್ತ ಬರುಗಾಲಿನ ಹೆಂಗಸರಿಬ್ಬರು . . . ಹೊರಗೆ ಬಂದರು (ಕೃಪಕು. ೬೪). **ಬಚ್‌ಗಾಲು** : ಕೃಷ್ಣನಾಮಸ್ಮರಣೆಮಾಡುತ ಮರುತಸುತನಾ ಕರವಿಡಿದು ಬಚುಗಾಲು ಬಚ್‌ಮೈಯಿಂದ ಬರುತಿರಲು (ಸಂಕಪ. ೨೦–೦೦೩); ಕರೆಯದಲೆ ಬರುವವನ ಬರೆಯದಲೆ ಓದುವನ ಬಚುಗಾಲಿನಿಂದ ನಡೆವವನ ಕರತಂದು ಕೆರದಿ ಹೊಡೆಯೆಂದ (ಸರ್ವಜ್ಞ. ೦೫೦೦).
[ ಬಚು ( < ಬಚುದು) + ಕಾಲು₁ ( < ಕಾಲ್₁) ]

**ಬಚುಗಿವಿ** (ನಾ). (ಒಡವೆಯನ್ನು ಧರಿಸದಿರುವ) ಕಿವಿ : ಬರಿದಾದ ಕಿವಿ : ಬೋಳಾದ ಕಿವಿ : ಹಾರಪದಕವಿದ್ದು ಬಚುಗಿವಿಯಾದ ಶೃಂಗಾರ ರವ್ವ್ಯಾವೆ ಹೇಳಿರೆಂದ (ಛಕಕ. ೩೬–೩೦). [ಬಚು ( < ಬಚುದು) + ಕಿವಿ₁]

**ಬಚುಗುತ್ತ** (ನಾ). ಬರಿಯ ರೋಗ ; ಸದಾ ಇರುವ ರೋಗ : ಕಟಕ ಹುರುಡು ಮಾಡಲೆ . . . ಕಲಹ ಸಟೆ ಬಚುಗುತ್ತಗಳನು ಮಾಡಿ ಬೆಲೆವೆಣ್ಗೆ ವಿಟರು ಸೋಲುವರ ಧನವನು (ಗುರುಪಾ. ೦–೦೦೩); ಕೊಜಬಾಟ ಹೋರಟೆ ಕಲಹ ಬಚುಗುತ್ತ ಬಯಲೊಲ್ಮೆಗಳ ಮಾಡಿ[ಪಾಠಾಂ. ಬಚುಗುತ್ತು ಬಯಲೊಬ್ಜಿಗಳ ಮಾಡಿ] ಬೆಲೆವೆಣ್ಣ ತೆಜುವರ ಧನವ ಬಲ್ಲವರು (ಕಂಪಾಸಾಂ. ೨೬–೬೮). [ಬಚು ( < ಬಚುದು) + ಕುತ್ತ₂]

**ಬಚುಗೊಟ್**. ಬಚ್‌ಗೊಟ್ (ನಾ). (ಸಾರು ಅಥವಾ ಮಜ್ಜಿಗೆ ಬೆರಸದ) ಅನ್ನ ; ಬರಿಯ ಅನ್ನ : ಬಚು[ಪಾಠಾಂ. ಜು] ಗೂಬನುಂಜ

ಸಿಪ್ಪುಗಡಿಯುಂ ಕಳಿಯುಂ ಕೂಟನುಂಬ ಆಯಂಬಿಲವುಮೆಂದಿವಂ ತನ್ನ ಶಕ್ತಿಯಿಂ ಮಱಸದಾವುದಂ ಮಾಡಿದೊಡಂ ಪ್ರೋಷಧೋಪವಾಸಮಂ ಬೆರಡನೆಯ ಶಿಕ್ಷಾವ್ರತಮಕ್ಕುಂ (ಧರ್ಮಾ. ೩೦೬). **ಬಱಿಗೂಟಿಸ್ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ಬಱು (<ಬಱಿದು) + ಕೂಟ್$_1$]

**ಬಱುಗೆಂಡ**, ಬಱಿಗೆಂಡ (ನಾ). ಉರಿಯಿಲ್ಲದ ಕೆಂಡ; ಬರಿಯ ಕೆಂಡ : ಬಱು[ಪಾಠಾಂ. ಱಿ]ಗೆಂಡದೊಳ್ ಸುಟ್ಟಡಗು ಬೂದಿಕೆಯೆನಿಕ್ಕು (ಚುಂಗಕಾ. ೬೪-೪). **ಬಱಿಗೆಂಡ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಬಱು (<ಬಱಿದು) + ಕೆಂಡ]

**ಬಱುಗೆಯ್$_1$**, ಬರಿಗೈ$_1$, ಬಱಿಕೆಯ್, ಬಱಿಕೈ, ಬಱಿಗೆಯ್, ಬಱಿಗೈ$_1$ ಬಱುಗೈ (ಕ್ರಿ). ೧. ಇಲ್ಲದಂತೆ ಮಾಡು; ನಾಶಮಾಡು; ಸಂಹರಿಸು: ಅಲಘುಸಾಹಸಿ ಹೊಡೆದ ಗಾಯಕೆ ಖಳರ ಮುಂಡಗಳಾಡುತಿರ್ದುವು ಬಲವ ಬಱಿಗೆಯ್ದು (ಕೌರಾ. ೨೦-೪೨). **ಬರಿಗೈ$_1$ :** ೨. ಬರಿದುಗೊಳಿಸು ; ನಿಷ್ಫಲಗೊಳಿಸು : ಬರಿಗೈಯೆ ನಾ ನಿನ್ನ ಬಯಕೆಯನು (ಕುಮಾರವ್ಯಾ. ೧೨೪). **ಬಱಿಕೆಯ್ :** ೧. ಮಱಿದೊಱಗಿರ್ದ ಕಾಕಬಲಮೆಲ್ಲವಂ ಬಱಿಕೆಯ್ದು (ಶಂಕಕಂ. ೨೦೨-೨೦) ; ಅದಟರನಾನ್ತು ಕೊಲ್ವದಟನಣ್ಮಿದರಂ ಬಱಿಕೆಯ್ದು . . . ನಿತ್ತರಿಪ ಕಾದುವ ಮೆಯ್ಗಲಿಯಾದ್ಧರಿತ್ರಿಯೊಳ್ (ಶಾಸ. XX, ೬೪-೨೪ ; 1112). ೨. ಬಾಯ್ಬಿಯ ಮಾತುಗಳಂ ಬಱಿಕೆಯ್ವ ಚರ್ಚೆಯಲ್ಲ (ಅಪಂಪು. ೦-೩೬). **ಬಱಿಕೈ :** ೧. ಒಂದೆರಡೆಂದು ಸಲುಗೆಗೆ ಸಲಿಸಿ ಬಂದೈನೂಱ ಬಱಿಕೈದು (ಕುಮಾರವ್ಯಾ. ೩-೬೮); ಹುಬಲವ ಬಱಿಕೈವುತಿರ್ದುದು ಹರಿಬದತಿಬಲ ಖಳಕದಂಬಕ ಮಸಮಸವಾರದಲಿ (ಕೌರಾ. ೬-೩೦-೭). ೨. ಮಾರುತಾಸುರನ ಭಾರಣೆಯ ಬಱಿಕೈವ ವೀರರದಾರು (ಜಿನಾಗ. ೨-೩-೦೮). **ಬಱಿಗೆಯ್ :** ೧. ತಲೆ ನಡುಗುತಿರ್ದುಪೆನ್ನದೆ ತರದಿಂ ಬಱಿಗೆಯ್ಯುತಿರ್ದ ಮಾಯ್ದುಱಗುಲಿಕರ್ವೇಡನಲ್ಲಿ ಮುದುಗಿಳಿಗಳುಮಂ (ಶಾಂಪು. ೦೭೪) ; ಪೊಯ್ದು ಪೊಯ್ದು ಭರದಿಂ ಬಱಿಗೆಯ್ದನಭೇದ್ಯವಿಕ್ರಮಂ (ನೇಮಿಗೋ. ೩೩-೦೬). **ಬಱಿಗೈ$_1$ :** ೧. ಎಲವೊ ನಿನ್ನಯ ಬಲವನೆಲ್ಲವ ತುಳಿದು ಬಱಿಗೈವನ್ನಬರ ನೀಸುಳಿದು ನೋಡಾ (ಸಂಪಕ. ೬-೦೦೦) ; ಚಾರಿಪರಿದನು . . . ಪಡೆಯ ಬಱಿಗೈದು (ಕೌರಾ. ೨೨-೭). **ಬಱುಗೈ :** ೧. ಥಟ್ಟುಗೆಡಹಿದನೇನನೆಂಬೆನು ಪಡೆಯ ಬಱುಗೈದ (ಕೌರಾ. ೩೩-೦೮). [ಬಱು (<ಬಱಿದು) + ಕೆಯ್$_1$]

**ಬಱುಗೆಯ್$_2$**, ಬರಿಕೈ$_1$, ಬರಿಗೈ$_2$, ಬರುಗಯ್, ಬಱಿಕಯ್, ಬಱಿಗೈ$_2$, ಬಱುಗಯ್ (ನಾ). ಆಹಾರ, ಹಣ, ಹಣ್ಣು ಹಂಪಲು ಆಯುಧ ಇತ್ಯಾದಿಗಳನ್ನು ಹೊಂದಿರದ ಕೈ ; ಖಾಲಿಕೈ : ಬರಿದಾದ ಹಸ್ತ; ರಿಕ್ತಹಸ್ತ . ವಿಜಯಸ್ತ್ರಿರೆ ಸರ್ವಾಂಗಂ ಬಱುಗೆಯ್ಯುಂ ಬಯಲ ನೀಗುತ್ತಿರೆ (ಕಲ್ಯಾಣ. ೨-೦). **ಬರಿಕೈ$_1$ :** ತೂಳಲಿ ಶೋಧಿಸಿ ಬಳಲಿ ಬಂದು ಬರಿಕೈಯಾದುದೆನುತ ಚಿಂತಿಸಿ (ವಂಕಾರಾ. ೫-೫-೦). **ಬರಿಗೈ$_2$:** ಇವಕ್ಕೆ ಬಲಿಬಿದ್ದು ಅನೇಕರು ಬರಿಗೈಯಾಗಿದ್ದಾರೆ (ಖಿಕಕ್ಕ. ೨೨): ಹೀಗೆ ಬರಿಗೈಲಿ ಮರಳುವದು ನನಗೆ ಎಳ್ಳಷ್ಟೂ ಸರಿ ಕಾಣುವುದಿಲ್ಲ (ಅಂಗಾಹ. ೫೪) : ಆನಂದ ಇತ್ತೀಚಿಗೆ ಬರಿಗೈಯಿಂದ ಮನೆಗೆ ಹೋಗಲಾರದೆ ಬಾರಿಬಾರಿಗೂ ನೊಂದುಕೊಳ್ಳುತ್ತಾನೆ (ಕೇಮೋಕ. ೨). **ಬರುಗಯ್ :** 'ದೇಹ' ಎಂದು ಸೇರೆಗಯ್ಯನ್ನೆತ್ತಿದ ಆರೂ . . . ಬರುಗಯ್ಯಿಂದ ಹಿಂದಿರುಗಿದರಿಲ್ಲ (ಕಲ್ಯಾ. ೪೨-೨). **ಬಱಿಕಯ್ :** ಮನಸಿಜನಾತ್ಮಜ ಬಱಿಕಯ್ಯೊಳಿರ್ಪುದು ಸಸುಮತಪಲ್ಲ (ಜೋಹಕ. ೩೩-೬೦). **ಬಱಿಗೈ$_2$ :** ಸಂಬಂಧಿಗಳಪ್ಪರಲ್ಲಿಗೆ ಬಱಿಗೈಯಿಂ ಪೋಗಲಾಗದೆಂಬರ್ (ಶಂಕಕಂ. ೨೮೦-೨); ಕೆಱನಂ ಕಾಣದ ಬಾಟ್ಟೆ . . . ದುರ್ಮಾರ್ಗರೊಳ್ ಸ್ನೇಹಮುಂ ಬಱಿಗೈಯುಂ ಸುಱಿವಂತೆತ್ತ (ಗಾಜಕೋಕ. ೦೭); ಬರುತೇನು ತಂದೆ ಬಱಿಗೈಲಿ ಬಂದೆ (ಪುರಂದ. ೨-೫೩-೧). **ಬಱುಗಯ್ :** ಬಱುಗಯ್ಯೊಳಿ ಗುರ್ದಯುಂ ಪುಡುಕುನೀರೊಳರ್ದಯುಂ (ಅಪು. ೦೦-೦೦ ಶ).

**ಬರಿಕೈಯಲ್ಲಿ ಮೊಳಹಾಕು**, **ಬರಿಗೈಯಲ್ಲಿ ಮೊಳಹಾಕು**=ಹಣವಿಲ್ಲದೆ ಖರ್ಚಿಗೆ ಯೋಜನೆ ಹಾಕು : ಬರಿಕೈಯಲ್ಲಿ ಮೊಳಹಾಕಿದರೆ ಪುರುಷಾರ್ಥವೇನಿದೆ (ಜಾಗ್ರತೆ. ೦೦೩) ; ಅವುಗಳನ್ನೆಲ್ಲ ಕಂಡುಹಿಡಿದು ಕನ್ನಡಿಗರಿಗೊಟ್ಟಸುವ ಶಕ್ತಿಯಾಗಲಿ, ಬರಿಗೈಯಲ್ಲಿ ಮೊಳಹಾಕುವ ನಮ್ಮಂಥ ವ್ಯಕ್ತಿಗಳಿಗಲ್ಲಿಂದ ಬರಬೇಕು (ಶಾಕೋಕ. ೧೪೭). **ಬರಿಗೈಲಿ ಬರು** = ಕೆಲಸವಾಗದೆ ಹಿಂತಿರುಗು : ನಿಷ್ಫಲನಾಗಿ ಹಿಂದಿರುಗು : ಹೋಗಿ ಬಂದವರು ಬರಿಗೈಲಿ ಬಂದರು (ಕುಲ್ಯಕ. ೬೪). **ಬಱಿಗೈಯವರು**=ಹಣವಿಲ್ಲದವರು; ದರಿದ್ರರು : ನಾವು ಬಱಿಗೈಯವರು ಬರಲಿಮಾಗಾವುದಲ್ಲಿಯ ಕೆಲಸ (ಕುಮಾರ. ೦-೪೩). [ಬಱು (<ಬಱಿದು) + ಕೆಯ್$_2$]

**ಬಱುಗೆಱೆ$^3$**, ಬರಿಗೆರೆ, ಬಱಿಗೆಱೆ$^3$ (ನಾ). ನೀರಿಲ್ಲದೆ ಖಾಲಿಯಾಗಿರುವ ಕೆರೆ : ಕೆಱೆಯು ಬಱುಗೆಱೆ$^3$ಯಾಗಲೀಕ್ಷಿಸಿ (ಸಾಳ್ವಭಾ. ೩೦-೩೬). **ಬರಿಗೆರೆ :** ಬರಿಗೆರೆಯೊಳಗೊಂದು ಬಕಪಕ್ಷಿ ಕುಳಿತಂತೆ (ಸಿಂಪರಿಶಿ. ೬-೦೩೪). **ಬಱಿಗೆಱೆ$^3$:** ಕೆಱೆ$^3$ ನೆಱೆ$^3$ ನೀರ್ ತವುತರೆ ಬಱಿ$^3$[ಪಾಠಾಂ. ಱು]ಗೆಱೆ$^3$ಯಾದುವು . . . ಕಾಲವಶವುದೇನಾಗಿಸದೋ (ಜಗ. ೦೭-೬೪). [ಬಱು (< ಬಱಿದು)+ಕೆಱೆ$^3$]

**ಬಱುಗೈ** 'ಬಱುಗೆಯ್$_1$' ನೋ.

**ಬಱುಗೊಂದೆ** (ನಾ). ಕ್ಷುಲ್ಲಕವಾದ ಪಶು; ಹೀನಜಂತು : ಇನ್ನೆಬರಂ ಕಮಗೆ ಜಗಂ ತೋಡಾಗದೆಂದು ಸೂರ್ಕೆನುರ್ಕೆ ಬಱುಗೊಂದೆ ಪಂದೆರಾಯರಂ ಕಾಡಿ ಬೇಡಿ ಕೂಡಿದ ಜಾಳಿಗೆವೊನ್ನಂ ಕೋಳುಗೊಂಬೆಂ (ರಾಜಶೇಕ್ಕ. ೦೨೬-೨೮). [ಬಱು (<ಬಱಿದು) + ಗೊಂದೆ$_1$]

**ಬಱುಜಗಳ** (ನಾ). ವ್ಯರ್ಥವಾದ ಕಲಹ; ಒಣಗುದ್ದಾಟ: ಅಕಟಕಟ ಬಱುಜಗಳಗೋಪ ಜಾಣೆತಿವಳು (ಕಳಿ. ೬-೨೮೦).

[ಬಱು (< ಬಱಿದು) + ಜಗಳ (< ಜಗಲ)]

**ಬಱುಜೋಗಿ** (ನಾ). ನಿಷ್ಪ್ರಯೋಜಕನಾದ ಜೋಗಿ : ಪೋ ಪೋಗಿರ ! ಬೂದಿಯು ಬಱುಜೋಗಿಯನುಱಿದತ್ತಂ (ರಾಜಶೇಕ್ಕ. ೬೧ ೨೬).

[ಬಱು (< ಬಱಿದು) + ಜೋಗಿ$_1$]

**ಬಱುದಲೆ**, ಬರಿದಲೆ, ಬರಂದಲೆ, ಬಱಿದಲೆ (ನಾ). ೧. ಬೋಳುದಲೆಯುಳ್ಳವನು ; ಲೋಚುಮಾಡಿಕೊಂಡ ತಲೆಯುಳ್ಳವನು ಜೈನ ಸಂನ್ಯಾಸಿ : ಪೆಱರಂ ದೂಱುವರೊಳ್ ತಱನಱಿಯದೆ ನುಡಿವವರೊಳ್ . . . ಪುರುಡಿಗರೊಳ್ ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ (ಧರ್ಮಾಮೃ. ೬-೨೦೩). **ಬರಿದಲೆ:** ೨. ಏನನ್ನೂ ಧರಿಸದೆ ಇರುವ ತಲೆ; ಬೋಳುತಲೆ: ಹಿಂದೆ ಟೋಪಿ ಅಥವಾ ಮುಂಡಾಸಿಲ್ಲದೆ ಬರಿದಲೆಯಲ್ಲಿ ಯಾರೂ ಓಡಾಡುತ್ತಿರಲಿಲ್ಲ (ಕೂ೦). **ಬರುದಲೆ:** ೩. ಕೂದಲು ಬೆಳೆಯದಿರುವ ಅಥವಾ ಮುಂಡನ ಮಾಡಿಸಿಕೊಂಡ ತಲೆ ; ಬೊಕ್ಕತಲೆ : ಆ ಬೋಳ ಚಾಮರಾಜನ ಬರುದಲೆಯನ್ನು (ಸುಗುಗಂ. ೮೨-೦೩). **ಬಱಿದಲೆ:** ೨. ತೆಂಕಲಲಿ ಬಱಿದಲೆಯುಲಿಹರು (ಶರಕ್ಕ. ೦೬೦೬).

[ಬಱು (< ಬಱಿದು) +, ತಲೆ$_1$]

**ಬಱುದೂಱು**, ಬಱಿದೂಱು (ನಾ). ಮಿಥ್ಯಾಪವಾದ : ಅಱುಹಿನವರು ಬಂದು ಕಾಱಿಯ ಕೊಂಡೊಯ್ದರೆ ಬಱುದೂಱೀತಕೋ (ಅಕಹಂ. ೩೦೦-೦೩೦೭). **ಬಱಿದೂಱು :** ಅರಱಯದಂತದಱೊಳಗೆ ಹೃದಯಾರ ಎಂದದಿ ನೀನಿರಲು ಬಱಿದೂಱು ಜೀವನಿಗುಂಟೆ (ಹಂಶಾ. ೬೪).

[ಬಱು (<ಬಱಿದು) + ದೂಱು$_2$]

**ಬಱುದೊಡಂಬೆ** (ನಾ). ಹೂವಿರದ ಬರಿಯ ತೊಟ್ಟು : ಮಾವಿನ ಪೊಸ ಗೊಂಚಲೊಳ್ ಬಱುದೊಡಂಬೆಗಳಿರ್ಪುವೆ ಕಟ್ಟು ಸೂಸೆಯುಂ (ಅಜಿತ. ೦೦-೪). [ಬಱು (<ಬಱಿದು) + ತೊಡಂಬೆ$_2$]

**ಬಱುದೊಱೆ³**, ಬಱಿದೊಱೆ³ (ನಾ). ೧. ನೀರಿಲ್ಲದೆ ಬರಿದಾಗಿರುವ ತೊರೆ.—ಹೊಳೆ. ೨. (ಆಲಂ) ಮರೀಚಿಕೆ: ನೀನೆನ್ನ ಪರಿ ಬಱು[ಪಾಠಾಂ. ಱಿ]ದೊಱೆಯಾಲೋಲಾಡಿಸದೆ ನೀ ಹಸಿದಿರಿಸಿ ಹಾರುವನ (ಶಿಶಾಗ. ೯-೪-೩೯). ೩. ವ್ಯರ್ಥವಾದುದು: ನಿಷ್ಪ್ರಯೋಜಕವಾದುದು: ಕಾಮೋಕ್ಷಿಯಲಿ ಪಡೆದ ಹೊಟ್ಟೆ ಬಱುದೊಱೆಯಾಯಿತೇ . . . ಹಾಯೆಂದೊಟ್ಟವೊಱಲಿ ದಳಬಲ (ಕೂಕಿಂ. ೨-೪-೫೭). ೪. ನಾಶ: ಅಳಿವು : ಕುದುರೆ ಬಱುದೊಱೆಯಾಯ್ತು ಕರಿಯು ಹಿಂಡಡಗಿದುದು (ಕಾಪು. ೨೯-೩೦). **ಬಱಿದೊಱೆ³** : ೧. ಅಱಿವು ತಲೆಕೆಳಗಾಯ್ತು ಧೈರ್ಯದ ನಿಱಿಗೆ ನಗೆಗೆಡೆಯಾಯ್ತು ಲಜ್ಜೆಯ ಹೊಱಿಗೆ ಬಱಿದೊಱೆಯಾಯ್ತು (ಕುವ್ಯಾಶಿ. ೨-೧೨). ೩. ನಿಮ್ಮಾ ಕಾತ ಶಂಕರ ಕೊಟ್ಟ ನಿರುತದ ಮಾತು ಬಱಿದೊಱೆಯಾಗದು (ಸಂಛಕ. ೩೦-೩೭). [ಬಱು (<ಬಱಿದು) + ತೊಱೆ₃]

**ಬಱುದೊಱೆವೊಗು** (ಕ್ರಿ). ೧. ನೀರು ಬತ್ತಿದ ತೊರೆಗೆ ಇಳಿ. ೨. (ಆಲಂ) ಫಲ ದೊರಕದ ಕೆಲಸಮಾಡು ; ವ್ಯರ್ಥವಾದ ಶ್ರಮವನ್ನು ಹೊಂದು : ಮಾಯದ ಸಂಸಾರವ ನಚ್ಚಿ ಮಾಯಕ್ಕೆ ಕಟ್ಟು ಬಱುದೊಱೆವೊಪೆಡ (ಬಸವ. ೬೨೯). [ಬಱುದೊಱೆ³ + ಪೊಗು]

**ಬಱುದೊಱೆವೋಗು**, ಬಱಿಂದೊಱೆಹೋಗು (ಕ್ರಿ). (ನೀರು ಬತ್ತಿದ ಹೊಳೆಯಂತೆ) ವ್ಯರ್ಥವಾಗು : ನಿಷ್ಪ್ರಯೋಜಕವಾಗು : ಕರಣದಿಚ್ಛೆಗೆ ಹರಿದು ನರಕದಲ್ಲಿ ನೆರೆದು ಬಱುದೊಱೆವೋಗದೆ ಮಱೆಯದೆ ಪೂಜಿಸು (ರೇವಾಶ. ೩೫-೬೯); ಬಱುದೊಱೆವೋದುದು ಕೆಱೆಗಂ ದೇಗುಲಕಮಾಗದುೞಿದವರರ್ಥಂ (ಎಕ. V. ಬೇಲೂರು. ೧೯೪-೯೯; 1161); ಬಱುದೊಱೆವೋದುದೆನ್ನಯ ವಿವೇಕಂ (ವೃಷಾ. ೩೦-೩೩). **ಬಱುದೊಱೆಹೋಗು** : ಮೋಹನ ಮೊಲೆ ಮುದ್ದುಮೊಗದ ಭಾವಕಿಯರ ಲಲ್ಲೆನುಡಿಯೆಂಬ ನಯಗತ್ತಿ ಎಲ್ಲರ ಹೃದಯವ ಕೊಱೆವುತ್ತಿದೆ ನೋಡಾ . . . ಬಲ್ಲತನ ಬಱುದೊಱೆಹೋಯಿತ್ತು (ಸಿದ್ಧೇಶ. ೯೦-೧೧೬).
[ಬಱುದೊಱೆ³ + ಪೋಗು₁ (<ಪೋ₁)]

**ಬಱುದೊಱೆಹೋಗು** 'ಬಱುದೊಱೆವೋಗು' ನೋ.

**ಬಱುನುಡಿ**, ಬಱಿನುಡಿ (ನಾ). ಬರಿಯ ಮಾತು : ಒಣಮಾತು : ಒಡವುಟ್ಟಿದರೆಂಬೀ ಬಱುನುಡಿವಡೆವರ್ಪಱಿದಿರ್ಕೆ ಮಱುಮಯ್ಯೊಳದಾರೊಡವುಟ್ಟುವರ್ (ಶಾಂತೀಶ್ವ. ೦೪-೨೨೦); ನಂಬದೊಡೆ ಬಱುನುಡಿಯೊಳಾದ ಫಲವೇನು (ಭರತೇ. ೬-೯). **ಬಱಿನುಡಿ** : ದಿಟವೀರನೇ ಕೂರಲಗಿನಲಿ ಮಾತಾಡು ಬಱಿನುಡಿ ಭಂಡತನ (ಕುವ್ಯಾದ್ರೋ. ೦೯-೩).
[ಬಱು (<ಬಱಿದು) + ನುಡಿ₂]

**ಬಱುನೆನಹು** (ನಾ). ಬರಿಯ ನೆನಪು : ಬಱುನೆನಹು ಸ್ವಪ್ನಂ (ಮುಂಗಾರ. ೯೯-೩). [ಬಱು (< ಬಱಿದು) + ನೆನಹು (<ನೆನಪು)]

**ಬಱುನೋಟ** (ನಾ). ಬರಿಯ ದೃಷ್ಟಿ,—ನೋಟ : ಬಱುನೋಟದನೆಪಸರಿಸುವಾ ಮೋಹವಿಂತೀಕವರೊಳೆನಗೇಂಬಾ ಹದನನಱಿವಡೆ (ಶಾಶ್ವತಾ. ೯-೫೦). [ಬಱು (< ಬಱಿದು) + ನೋಟ]

**ಬಱುಬ** 'ಬಱುವ' ನೋ.

**ಬಱುಬೆಸನಿಗ** (ನಾ). ಬರಿಯ ದುರಭ್ಯಾಸಗಳುಳ್ಳವನು; ದುಶ್ಚಟಗಳುಳ್ಳವನು : ಪಸಗೆಟ್ಟುರವಣಿಸುವ ಬಱುಬೆಸನಿಗನೊಳ್ಪಸಗೆ ಸಂದು (ಅನಂ. ೬-೦೯೩). [ಬಱು (< ಬಱಿದು) + ಬೆಸನಿಗ]

**ಬಱುಮಂಡೆ** (ನಾ). ಏನನ್ನೂ ಧರಿಸದಿರುವ ತಲೆ; ಬೋಳುತಲೆ: ಬಱುಮಂಡೆ ಬಳಿದ ದಾವನ್ನ ಸುಲಿದ ಪಲ್ಲು ಮಿಱುವ ಸಬಳಕೈಕತಿ ಮೆಱೆಯೆ ಸುಳಿಗೆರೆಯತ್ತಂದರು (ಕುಮಾರಾಂ. ೦೯-೨೦).
[ಬಱು (<ಬಱಿದು) + ಮಂಡೆ]

**ಬಱುಮನ**, ಬರಿಮನ (ನಾ). ಭಕ್ತಿ, ಶ್ರದ್ಧೆ, ಪ್ರೀತಿಗಳಿಲ್ಲದ ಅಂತರಂಗ: ಅಮರ್ದರ್ ಬಸವಣ್ಣನಂ ಬಂದಿವಿಡಿಯಲ್ಕೆಂದು ಬಱುಮನದ **ಹೊಱ** ವಿಭೂತಿಯನಲ್ಲಿ ಕೀವಿಟ್ಟು (ಬಸವ. ೯-೪೩). **ಬರಿಮನ**: ಬರಿಮನಸಲ್ಲದಣ್ಣಾ! ಬಲ್ಲವರೊಳೆಲ್ಲಗೈವನೆ ಮನುಜನಣ್ಣಾ (ಕುಂಕು. ೩೭-೭).
[ಬಱು (<ಬಱಿದು) + ಮನ]

**ಬಱುಮಾಟ** (ನಾ). ಶ್ರದ್ಧೆಯಿಲ್ಲದ ಕೆಲಸ : ಮನಸ್ಸಿಲ್ಲದ ಕಾರ್ಯ : ಶ್ರೀ ಗುರುವಿನುಪದೇಶವಿಲ್ಲದೆ ಹೋಗಿ ದೇವಾರ್ಚನೆಯ ಮಾಡಿದೊಡೇಗುವುದು ಬಱುಮಾಟ ನಿಷ್ಫಲವೆಂದಳಾ ವಿಮಳೆ (ಕೃಷುಂ. ೭-೩).
[ಬಱು (<ಬಱಿದು) + ಮಾಟ₁]

**ಬಱುಮಾತು** 'ಬಱುವಾತು' ನೋ.

**ಬಱುವ**, ಬಱುಬ (ನಾ). ೧. ಬರಿಯ ಕೈಯಲ್ಲಿರುವವನು; ನಿರಾಯುಧ; ಅಸಹಾಯಕ : ಬಱುವಂ ಸಾರಥಿಯಿಲ್ಲ ಮಯ್ಗೆ ಮಱೆಯುಂ ತಾನಿಲ್ಲದೆಂತೀಗಳಾನಿಱುವೆಂ (ಶಂಕಶಾ. ೦೨-೨೦೬); ಬಱುವನನಾಜಿಶ್ರಾಂತನಂ ಯಶೋಧನನಿಱಿಯಂ (ಕಾಂತೀಶ. ೯-೫೦). ೨. ದರಿದ್ರ ; ಬಡವ ; ನಿರ್ಗತಿಕ : ಕಿಱಿಯಂ ಮಾತ್ರಂ ಧನದಂ ಬಱುವಂ [ಪಾಠಾಂ. ಱಿಯಂ]ತೊಱೆದಂ ಗೃಹಸ್ಥನೆನ್ನದೆ ಮುಂ ಬಿಟ್ಟಱಿಸಿ ಕೊಲುತಿರ್ಪ ಜವನೆಂಬಱಿಕೆಯ ಪ್ರಗೆವಂಗದಂತು ಪಂಗಿಗನಪ್ಪಂ (ಆದಿಪು. ೯-೭೭); ಅಱಿವಿಲ್ಲದೆ ಮತ್ತಲ್ಲಂ ನೆಱೆದಿರ್ದೊಡಮೇನೊ ಬಱುವನಾತಂ ದಿಟದಿಂ (ಶೀತಿಸಂ. ೨-೩೦೦) : ಜರೆಯ ನರೆಯ ಮಡಲ್ತು ಸೆರೆದುಱುಗ್ಗಲ ಸುಕರ್ಮದೊವಲ ಅಸಿದೊಡಲ ಬಱುವಂ ಜೋಗಿಯಂ ಮಾಲಿಸುತ್ತಂ (ರಾಮಾಶ್ವ. ೫೯-೦೬). **ಬಱುಬ** : ೧. ಬಱುಬಂ ಪೊಯಿಲ್ವೆತ್ತಂತೇನುಮನಱಿಯದೆ . . . ನಡನಡಂಗಿ (ಶಂಕಶಾ. ೬-೭೦ ವ) ; ಬ[ಱುಬ]ನನೇಳಿದನಂ ಮೆಯ್ಯುಱಿಯದೊನಂ ಬೆರಲಸಳಿವ ಕರ್ಚಿದೊನಂ ಕಾಲ್ಗೆಱಗಿದನನಿಱಿಯಲಾಗದು (ಶಂಹಂ. ೦೦-೦೯). ೨. ಅದು ಒಡೆಯರೊಡವೆಯಲ್ಲದೆ ಬಱುಬಂಗೆ ಅರಗದು [ಪಾಠಾಂ. ಬಱುಬರಿಂಗರಗದು] (ಕೋಂಶಾಂ. ೩೭); ಬಱುಬನು ನಿಧಿಗಂಡ ತೆಱನಂತೆ ಸಂತಸದೊಱೆಯೊಳಾಳುತಲೇಳುತಿರ್ದರ್ (ಪುರಾಶ. ೦೦-೯೩). ೩. ತಿಳಿವಳಿಕೆಯಿಲ್ಲದವನು : ಅಜ್ಞಾನಿ : ಬಱುಬರನಱಿ³ ಬಲ್ಲರೆಂಬ . . . ನೆಱೆ³ ಜಾಣರು (ಕುಮಾರಾಂ. ೩೫-೮೬) : ಬಲ್ಲವನೀತ ಬಱುಬ [ಪಾಠಾಂ. ಡವ]ನೀತ ಚಪಳೀಕನೆಲ್ಲಶಾಸ್ತ್ರಂಗಳಱಿವನು ಬಲ್ಲಿದನೀತ ಬಡವನೆಂದು ಪೂಜಿಪಗೆಲ್ಲಿಯು ಶೀಲ (ಅಮುಂ. ೯-೦೦೬).
[ಬಱು (< ಬಱಿದು) + — ಅ₇]

**ಬಱುವಣ್ಣನೆ** (ನಾ). ಅರ್ಥವಿಲ್ಲದ ವರ್ಣನೆ : ಬರಿಯ ವಿವರಣೆ : ಪುರುಳಿಲ್ಲದ . . . ಬಱುವಣ್ಣನೆಯ ಬೇಸಱಿಕೆಯು ಪಾಟ್ಟಿಟ್ಟವಂ ಪೊಳ್ಳೆಂದೆ ನುಡಿದೆಂ (ರಾಮಾಶ್ವ. ೦೬೯-೯)
[ಬಱು (< ಬಱಿದು) + ಬಣ್ಣನೆ]

**ಬಱುವನೆ** (ನಾ). ಹಾಳುಮನೆ : ಗೃಹಿಣಿಯೊಳ್ ಸುಗುಣವಿಲ್ಲದೊಡೆ ಗೃಹಮುದು ಬಱುವನೆಯು (ಶೀತಿಸಂ. ೩-೨೨).
[ಬಱು (<ಬಱಿದು) + ಮನೆ]

**ಬಱುವಾತು**, ಬರಿಮಾತು, ಬಱಿಮಾತು, ಬಱಿವಾತು, ಬಱುಮಾತು (ನಾ). ಕೆಲಸಕ್ಕೆ ಬಾರದ ಮಾತು; ವ್ಯರ್ಥವಾದ ಮಾತು: ಮಾತಱಿಯದ ಮಾತು ತಮ್ಮ ಬಱುವಾತುಗಳೊಳ್ ಪುದಿದು (ಶಂಕಶಾ. ೪-೯೫) : ವಾಕ್ಯನೊಳಿಲ್ಲ ಮೇಣಪ್ ಪರಿಚಯಂ ಬಗೆ ಮೊಕ್ಕಳಮುಂತುಟಲ್ತೆ ಗಂಟಿಕ್ಕುಪರೇಜಲಾದ ಬ[ಪಾಠಾಂ. ಬ]ಱುವಾತುಗಳು (ಸೂಕ್ತಿಸು. ೦-೩೭). **ಬರಿಮಾತು** : ಬರಿಮಾತಿನಿಂದ ಏನು ಪ್ರಯೋಜನ ? (ರೂಢಿ). **ಬಱಿಮಾತು** : ಈ ಸವಿಾರಜನೀಗ ಹೃದಯನಿವಾಸಮಾರುತನಜ ಹರೀಶ್ವರರೋಸರದ ಬಱಿವಾತದಲ್ಲಿದು ವೇದಮಂತ್ರವೆಂದ (ಶೂರಂ. ೯-೦೨-೦೩). **ಬಱಿವಾತು** : ಬಱಿವಾತನಿನಿಸು ಪೊಟ್ಟಂ ಮೆಱೆವಿನೆಗಂ ಗಟವಲೇಕೆ

ಯಾವ ಕಾಲವಾದರೂ ಬರಗಾಲವೇ ಇಲ್ಲ (ಶ್ರೀಚಕ್ರ. ೦೬೬). **ಬಾಗಾಯಿತಿ** : ಪೆಣ್ಣಸ್ನು ಗಂಟು ಹಾಕಿಕೊಳ್ಳೋದು, ಒಂದು ಬಾಗಾಯಿತ ಜಮೀನಿನ ಖರೀದಿ ಮಾಡಿದ ಹಾಂಗ (ಕಳ್ಕರ್ಕ. ೬೨). **ಬಾಗಾಯಿತು** : ಜಲಾಧಾರದಿಂದ ಕಬ್ಬು, ತೆಂಗು, ಅಡಿಕೆ, ವೀಳ್ಯದೆಲೆ ಮುಂತಾದ ಬೆಳೆ ತೆಗೆಯುವಂತಾ ಭೂಮಿಯನ್ನು ಬಾಗಾಯಿತುಯೆಂದು ಹೇಳುವುದು (ಕೊಬಿಆ. ೩೩) ; ಮತ್ತೊಂದು ಜಾತಿಯ ಪೈರಿಗೆ ವರ್ಷವೆಲ್ಲಾ ನೀರು ಅಷ್ಟೋ ಇಷ್ಟೋ ಬೇಕಾಗುತ್ತದೆ. ಇದನ್ನು ತೋಟದ ಪೈರು ಅಥವಾ ಬಾಗಾಯಿತು ಎನ್ನುತ್ತಾರೆ (ಕಿಲ್ಲಾ. ೩೬೪). **ಬಾಗಾಯ್ತು** : ತರಿ ಬರಿದಾಯ್ತು, ಖುಷ್ಕಿ ಶುಷ್ಕವಾಯ್ತು, ಬಾಗಾಯ್ತು ಹೋಗಾಯ್ತು (ಗಾದೆ). [← ಹಿಂ. ಬಾಗಾತೀ ; ಮರಾ. ಬಾಗಾಈತ್, ಬಾಗಾಯತ್]

**ಬಾಗಾಯಿತಿ** 'ಬಾಗಾಯತ' ನೋ.

**ಬಾಗಾಯಿತು** 'ಬಾಗಾಯತ' ನೋ.

**ಬಾಗಾಯ್ತು** 'ಬಾಗಾಯತ' ನೋ.

**ಬಾಗಾರ** 'ಭಾಗಾಹಾರ' ನೋ.

**ಬಾಗಿ**₁ 'ಬಾಗ್ಗಿ₁' ನೋ.

**ಬಾಗಿ**₂ 'ಬಾಗು₂' ನೋ.

**ಬಾಗಿನ** 'ಬಾಯನ' ನೋ.

**ಬಾಗಿನಕೊಡು** 'ಬಾಯಿನಂಗೊಡು' ನೋ.

**ಬಾಗಿನಾಡು** (ನಾ). ಒಂದು ನಾಡಿನ ಹೆಸರು : ಕಿಸುಕಾಡೆಪ್ಪತ್ತುಂ ಬಾಗಿನಾಡೆಪ್ಪತ್ತುವಂ ಬೂತುಗಂಗೆ ಕನ್ನರದೇವಂ ಮೆಚ್ಚುಗೊಟ್ಟಂ (ಎಕ. III. ಮುಂಡ್ಯ. ೪೧–೨೦ ; 950). [ ಬಾಗಿ₁ (< ಬಾಗ್ಗಿ) + ನಾಡು ]

**ಬಾಗಿಲ್**, ಬಾಗಿಲ, ಬಾಗಿಲು (ನಾ). ಪ್ರವೇಶಮಾರ್ಗ ; ದ್ವಾರ : "ದ್ವಾಃ, ದ್ವಾರಂ, ಪಳಜಂ— ಈ ೩ ಬಾಗಿಲ್" (ಕಾಬಾಯು. ೩೦–೧೩) ; ಗುಹೆಯ ಬಾಗಿಲಂ ಬಿರಿದೊಂದು ಸಿಲೆಯಂ ತಂದಿಟ್ಟು ಮುಚ್ಚಿ (ವಡ್ಡಾರಾ. ೦೨೨–೨೦) ; ಬಸಂತದೋಳ್ ಬಸದಿಯ ಬಾಗಿಲಂ ತೆರೆದ ಮಾಟಕ್ಕೆ ಯೋಳಿರ್ದುವು ಮಾವುಗಳ್ (ಆಂಪು. ೦–೩೩) ; ಸಮುತ್ತುಂಗಶಿಖರಂಗಳ್ ನಾಲ್ಕುಂ ದೆಸೆಯೊಳುಮಾಗಿ ಬಾಗಿಲೊಂದೆಯಾಗಿರ್ಪುದು ಗುಹ್ಯಾಖ್ಯಂ (ಶಂಕಸಂ. ೨೦೩–೦೪). **ಬಾಗಿಲ** : ಕಾದಿ ಹಿರಣ್ಯಕನ ಕರುಳ ಕೊರಳೊಳಗೆ ಧರಿಸೀಳು ಕಾಯ್ದು ಬಲಿ ಬಾಗಿಲದೊಳು ಭೇದಿಸಿ ಭೂಮಿ ತ್ರಿಪಾದದಿಂದಳೆಬೇಕು (ತುರಂಗ. ೫–೦೩೯–೨). **ಬಾಗಿಲು** : ಆವಾವ ಭಾವದಲ್ಲಿ ಮಾಡಿ ಕೂಡಿಹೆವೆಂಬರ ಬಾಗಿಲ ತೋರಯ್ಯ (ಬಸವ. ೩೬೨) ; ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ (ಕುಮಾರವ್ಯಾ. ೫–೪೦) ; ತುಂಬಿರುವ ಪಟ್ಟಣಕೊಂಭತ್ತು ಬಾಗಿಲು (ಪುರಂದ. ೦–೦೬೨–೦).

**ಬಾಗಿಲ ಕಾ, ಬಾಗಿಲ ಕಾಯ್, ಬಾಗಿಲ ಕಾಯು** = ೧. ದ್ವಾರಪಾಲಕನಾಗು : ನಿರ್ಜರಪತಿ ವಿಷ್ಣು ಬಾಗಿಲ ಕಾದಿರ್ಪ ಸಜ್ಜನಸಂಪತ್ತು ಬಡವ (ಮೋಹಕ. ೩೦–೦೫). ೨. ಬಿನ್ನಹಮಾಡಿಕೊಳ್ಳಲೆಂದು ಬಾಗಿಲ ಬಳಿ ಬಂದು ನಿಂತಿರು : ಹರಿಯಜ ಮುನಿಗಳೆಲ್ಲರೂ ನಿಜ ನಿಮ್ಮ ಬಾಗಿಲ ಕಾಯ್ದಿರ್ದಹರು (ಬಸವ. ೭೯೨) ; ಹರಿಯ ಬಾಗಿಲ ಕಾಯ್ದು ಬಲಿ ಭಾಗ್ಯವಂತನಾದ ಹರನ ಬಾಗಿಲ ಕಾಯ್ದು ಬಾಣನಳಿದ (ಪುರಂದ. ೨–೬೩–೧) ; ಬಾಗಿಲ ಕಾಯುವರು ಕಡುಮೂರ್ಖರಿಂತಿದ ನಮಗೆ ಮನ್ನಿಪುದು (ಸೌಂಕಶ. ೬–೪). **ಬಾಗಿಲ ಸಜ್ಜೆ** = ಅಗಸೆಬಾಗಿಲ ಮೇಲಿನ ಗೋಪುರ ; ಬಾಗಿಲಂ ಪಾಡ : ಬಿರಿದಾಗಿ ಬಾಗಿಲ ಸಜ್ಜೆಯುಭ್ರುವ ವ್ಯಾಪಿಸಿದುವು ಶುಭ್ರುವಿಡಿದು (ಕಂಶಿ. ೬–೦೩).

[ದೇ. ॥ ತಮಿ. ವಾಯಿಲ್ ವಾಯಲ್, ವಾಚಲ್ ; ಮಲ. ವಾಕಿಲ್ ; ತುಳು. ಬಾಕಿಲು · ತೆಲು. ವಾಕಿಲಿ ; ಕೋಲಾ. ವಕಲ್; ನಾಯ್ಕಿ. ವಾಕಲ್ ]

**ಬಾಗಿಲ** 'ಬಾಗಿಲ್' ನೋ.

**ಬಾಗಿಲಾಯ್ತು** (ನಾ). ಬಾಗಿಲು ಕಾಯುವವನು ; ದ್ವಾರಪಾಲಕ ; ಪಡಿಹಾರ : ಬಾಗಿಲಾಯ್ತುಂ, ಅಚ್ಚುಳಾಯ್ತುಂ, ಕಲ್ಲಾಯ್ತುಂ (ಶಬ್ದಾನು. ೪೨೩ ಕ್ರಿಯೋ). [ಬಾಗಿಲ್ + –ಆಯ್ತು]

**ಬಾಗಿಲು** 'ಬಾಗಿಲ್' ನೋ.

**ಬಾಗಿಲುಗಟ್ಟಳೆ** (ನಾ). (ಯಾವುದಾದರೊಂದು ಸಾರ್ವಜನಿಕ ಕಾರ್ಯಕ್ಕೆ) ಪ್ರತಿಯೊಂದಂ ಮನೆಯವರೂ ಇಂತಿಷ್ಟು(ಹಣವನ್ನು) ತೆರಬೇಕೆಂಬ ನಿಯಮ : ಬೆಳುಗುಳದ ತೀರ್ತ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತರಾಜ್ಯದೊಳಗುಳ್ಳಂತಹ ಜೈನರಾ ಬಾಗಿಲು ಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣ ಕೊಟ್ಟು . . . ಕೀರ್ತ್ತಿಯನೂ ಪುಣ್ಯವನೂ ಉಪಾರ್ಜ್ಜಿಸಿಕೊಂಬುದು (ಎಕ. II. ೪೯೪–೨೬ ; 1368). [ಬಾಗಿಲು (<ಬಾಗಿಲ್) + ಕಟ್ಟಳೆ₁]

**ಬಾಗಿಲುಗಾಹಿ** (ನಾ). = ಬಾಗಿಲಾಯ್ತು : ಕೂಡಲ ಸಂಗನ ಶರಣರ ಬಾಗಿಲುಗಾಹಿ ನಾನಾಗಿರ್ದು ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನೆ (ಬಸವ. ೦೦೫–೩೦೪). [ಬಾಗಿಲು (<ಬಾಗಿಲ್) + ಕಾಹಿ]

**ಬಾಗಿಲುಜೋಳ** (ನಾ). ಪ್ರತಿಯೊಂದು ಮನೆಯವರೂ (ದೇವರ ಕಾರ್ಯಂಕ್ಕಾಗಿ) ಇಂತಿಷ್ಟು ಜೋಳವನ್ನು ಕೊಡಬೇಕೆಂಬ ನಿಯಮ : ಸ್ಥಾನಪೂಜೆ ಬೆಳುಗೊಡೆ ಬಾಗಿಲುಜೋಳ ತಳಾಜಗೂಲಿ ಅಸ್ತನ್ನಾಯ ಮಿಂತಿನಿತುಮಂ ಸರ್ಬ್ಬಮಾನ್ಯವಾಗಿ ಹಡದು ದೇವರ ಪೂಜಾರಿಗಂ ೬ವಿಲಿಗವಿರಲು ಮ[ರ]ವಾಗಿ ಬಿಟ್ಟರು (ಕೌಇ೩. XV. ೦೦೦–೪೪ : 1165). [ಬಾಗಿಲು (<ಬಾಗಿಲ್) + ಜೋಳ]

**ಬಾಗಿಲುತಡೆ** 'ಬಾಗಿಲುದಡೆ' ನೋ.

**ಬಾಗಿಲುದಡೆ**, ಬಾಗಿಲುತಡೆ (ಕ್ರಿ). (ಮದುವೆಯ ಸಂದರ್ಭದಲ್ಲಿ, ವಧೂವರರು ಪರಸ್ಪರ ಹೆಸರಂ ಹೇಳುವವರೆಗೂ ಒಳಗೆ ಬರದಂತೆ ವರನ ಸಹೋದರಿಯರು) ಬಾಗಿಲಲ್ಲಿ ತಡೆಗಟ್ಟಿ ನಿಲ್ಲು ; ಹಾಗೆ ತಡೆಗಟ್ಟುವ ಶಾಸ್ತ್ರವನ್ನು ಆಚರಿಸು : ಕುವರರ ಮದುವೆಯೊಳ್ ಬಾಗಿಲುವಡೆದಾಗ ಕುವರಿಯರ್ಗಿತ್ತ ಭೂತಳವ (ಭರತೇ. ೪೪–೨೮). **ಬಾಗಿಲುತಡೆ** : ಬಾಗಿಲು ತಡೆದ ಅಕ್ಕನನ್ನು ತವ್ಮ ಕೇಳಿಕೊಳ್ಳುತ್ತಾನೆ (ಜನ್ನೂರು. ೯೩). [ಬಾಗಿಲು (<ಬಾಗಿಲ್) + ತಡೆ₁]

**ಬಾಗಿಲುವಾಡ** 'ಬಾಗಿಲ್ವಾಡ' ನೋ.

**ಬಾಗಿಲ್ಗೋಲು** (ನಾ). ಬಾಗಿಲಿಗೆ ಹಾಕುವ ಅಗುಳಿ : ಭೂರಮಣ ದ್ವಾರಸ್ಥರಂ ಕರೆದು ನಿಂದು ಬಾಗಿಲ್‌ಕೋಲ ತೆಗೆಯದಿರಿ ನಮ್ಮರಿಕೆಯಿಂದಲ್ಲದೆ ವಿಪ್ರರಿಂಗೆಸಲು ಕೈಗೊಂಡು ಕಾದಿರಲ್ಕೇಲುಭಟರು (ತುರಂಗ. ೬–೩೦). [ಬಾಗಿಲ್ + ಕೋಲು₁ (<ಕೋಲ್₁)]

**ಬಾಗಿಲ್ಗಾಪು** (ನಾ). ಬಾಗಿಲಿನಲ್ಲಿ ಇರುವ ಕಾವಲು : ಬಂದ ದೆಸೆಯಂ ಪೋದ ದೆಸೆಯುನಾರುಂ ಕಾಣದಂದದಿಂ ಪಲವು ಬಾಗಿಲ್ಗಾಪುಗಳನುಳಿದು . . . ಪೋಪುದಿದು ಪರಿಭಾವಿಸೆ ಸಂದಲ್ಪಿಕಾಜಿರೊಳಗಂಟಿ (ಶದ್ಗರಾ. ೫–೩೦); ಬಾಗಿಲ್ಗಾಪಿನ ಪಡಿಯರತಿಯರು ಬಾಗಿ ತುಳಿಲ್ಗೆಯ್ವಾಗ ಒಡತಿಯ ಮುಖವನ್ನು ನೋಡುತ್ತಿದ್ದರು (ಸಂಶ. ೨೦೦). [ಬಾಗಿಲ್ + ಕಾಪು]

**ಬಾಗಿಲ್ಗಾಯ್** (ಕ್ರಿ). ಬಾಗಿಲನ್ನು ಕಾಯು ; ದ್ವಾರಪಾಲಕನಾಗು : ಬಾಗಿಲ್ಗಾಯ್ವುದಿದಯ್ಯಗಳೋಜೆಯೆ (ಅಕ್ಕರೇ. ೫–೩೨); ಬಾಗಿಲ್ಗಾಯ್ವರ್ ತಾವುರುತರದ ಕೋಟಾಕವಾಟಂಗಳಂ ದಲ್ (ಹಾಲಾಸ್ಯ. ೩–೨–೦೫). [ಬಾಗಿಲ್ + ಕಾಯ್₁ (<ಕಾ₁)]

**ಬಾಗಿಲ್ಮಾಡ** 'ಬಾಗಿಲ್ವಾಡ' ನೋ.

**ಬಾಗಿಲ್ವಾಡ**, ಬಾಗಿಲುವಾಡ, ಬಾಗಿಲ್ಮಾಡ, ಬಾಗಿಲ್ವಾಡು (ನಾ). ೧. ಹೆಬ್ಬಾಗಿಲು ; ಪುರದ್ವಾರ ; ಗೋಪುರ : ಸಾಕೇತನಗರಮಂ ಬಳಸಿದ

ಕನಕಪ್ರಾಕಾರದ ಬಾಗಿಲ್ವಾಡಂಗಳೊಳಂ (ಅಂಕ್ಪ. ೦೬ ೩೭ ವ): ಇಳಿಯರ್ಮ್ನ ಕರುಣರಸಂ ಶೀವಿದ ಲಲಿತತರ್ಪಮದಾಗಲ್ಕರಮನೆ ತೊಳಗುವ ಬಾಗಿಲ್ವಾಡಪಂದಿಜ ತೋಂಬೆಂಜವೊಲೊಪ್ಪಿದುದು (ಜಯಸಾ. ೧-೬೩). **ಬಾಗಿಲುವಾಡ:** "ಗೋಪುರಂ, ಪುರದ್ವಾರಂ – ಈ ೨ ಬಾಗಿಲುವಾಡಂ" (ಹಂಚಯು. ೪೮-೧೩೩): ಹಿಂತೆ ಪತಿಹಿತವೆ ಸಹಿತಂ ಬರುತಭವನತ್ತ ಪುರದ ಬಾಗಿಲುವಾಡಮಂ ಪೊಕ್ಕಮದಲು ಕಂಡು (ಜಹರ. ೮೮. ೩೮-೬). ೨. ಅಗಸೆಬಾಗಿಲಿನ ಮೇಲಿನ ಉಪ್ಪರಿಗೆ: ಮಾಡ ಗೋಪುರ ಮದಿಲ್ ಮಾಳಿಗೆ ಬಾಗಿಲುವಾಡ ದೇಗುಲಗಳನೇಱಿ ನೋಡಿದವರ್ಪುರಸತಿಯರು (ಶಶಕ. ೩೬-೩೯). ೩. ಬಾಗಿಲಿನ ಚೌಕಟ್ಟು: ಹೊಸಮನೆಗೆ ಇಂದು ಬಾಗಿಲುವಾಡವನ್ನು ಇಟ್ಟರು (ಕ೭ಶ). **ಬಾಗಿಲ್ವಾಡ:** ೧. ಧಾರಿಣಿಮಹಾದೇವಿಯಯ್ಯೂರ್ವರರಸಿಯರ್ಕಳುಂ. . . ಒಂದು ಬಾಗಿಲ್ವಾಡದ ಪೊಱಗಣ ದೆಸೆಯೊಳ್ ತಂತಮ್ಮ ವಾಹನಂಗಳಿಂದಿೞಿದು (ವಡ್ಡಾರಾ. ೬೦-೧೩): ಗಂಗೆ ಜಮುನೆಗಳಿಂದೊಪ್ಪುವ ದ್ವಾರಜಗತೀತಳಂಗಳಂ ತೋಱುತ್ತುಂ ಎರಡನೆಯ ಬಾಗಿಲ್ವಾಡಮಂ ಪೊಕ್ಕು (ಶಾಂತಿಪು. ೩-೦೬ ವ). ೨. ಉಗ್ರಸೇನಮಹಾರಾಜನುಮಂ. . . ಪೊಱಲ ಬಾಗಿಲ್ವಾಡದ ಮೇಗಸಿಪಂಜರದೊಳ್ಸೆಱೆಯಿಟ್ಟು (ಹಂಹಂ. ೫-೯೩ ವ). **ಬಾಗಿಲ್ವಾಡು:** ೧. ಸತತಂ ಪೊಂಗಳಸದ ದೀಧಿತಿಯುನ್ನತಿಗಳ್ಕೆ ಬಳ್ಕೆ ಕೆಲಸಾರ್ದು ದಿವಾಪತಿ ದಕ್ಷಿಣಗತ್ಯುತ್ತರಗತಿಯಾದಂ ಪೊಸಬ್ಬರಳವೆ ಬಾಗಿಲ್ವಾಡಂ (ಜಗಹ. ೯-೧೦೬). [ಬಾಗಿಲ್ + ಮಾಡ₁]

**ಬಾಗಿಲ್ವಾಡು** 'ಬಾಗಿಲ್ವಾಡ' ನೋ.

**ಬಾಗಿಸು₁** (ಕ್ರಿ). ೧. ಬಾಗುವಂತೆ ಮಾಡು; ಬಗ್ಗಿಸು; ಮಣಿಸು: ಕಲಿಯಂ ದೇವಾಗಾರದ ಪಳಯಿಗೆ ದೂರದೆ ಬಾಗಿಸುವನ್ನಿಕ್ಕರ್ಪಳ್ಳಿ ಪಾತೋದ್ಧೃತಂ (ಶಾಶಾಇ. IX–i. ೦೩೬-೯೩: 1090); ನಿಮ್ಮಡಿಯ ನೆನಹೆ ಕೊರ್ವಿದರಿವಾದಿಗಳ ಮೂಗನರಿದು. . .ಬಾಗಿಸದೆ ತಲೆಯ: (ಪಮ್ಮರಾ. ೯-೨೯); ಮಳೆಗೆ ತೆರಳದ ಕೋಡ ಬಾಗಿಸಿ ಕಲಿವೃಷಭ ಹೊಗುವಂತೆ ದ್ರೋಣನ ಬಲುಸರಳ ಸರಿವಳೆಗೆ ದಂಡೆಮನೊಡ್ಡಿ ದಳವುಳಿಸಿ (ಕುವ್ಯಾದ್ರೋ. ೦೩-೦೨). ೨. ಸೋಲಿಸು; ಪರಾಜಯಗೊಳಿಸು: ನಾಗಪುರದರಸುಗಳ ಮಕ್ಕಳ ಬಾಗಿಸಿತು ಬಿಲುವಿದ್ಯೆ ಲೋಕದ ಭೋಗಿನೃಪರತ್ನಜರ ವಿದ್ಯೆಯದೇಕಲವ್ಯನಲಿ ಬಾಗಿ ಹೋಯಿತು (ಸಂಕಶ. ೦೬-೦೨೦). ೧. ೨: ಕರವೀರವರ್ಗಮುಂ ಬಾಗಿಸಿದರದಟರಂತಿರದೆ ಪುನ್ನಾಗಮುಂ ಪತ್ತಿ ರಂಜಿಸಿದರ್ಚಮರ ಮಾವುತಿಗರಂತೆ (ಕೃಏಚಶಾ. ೯-೨೨). [ಬಾಗು₁ + – ಇಸು₃]

**ಬಾಗಿಸು₂** (ಕ್ರಿ). ೧. ಸೀಳು; ಹೋಳು ಮಾಡು: ತವಕದೆ ಬಳಿಯೆಲೆಯ . . . ಪಿರಿದು ಕೆಂಬಲ್ಲಿಂದ ಬಾಗಿಸಿಯಾತಗೆ ಪರಮಪ್ರೀತಿಯಿಂಲೂಡುವುದು (ಕೆಂಪಹಾ. ೬ ೦೧೦). ೨. ಭಾಗ ಮಾಡು; ವಿಭಾಗಿಸು: ಭೃಂಗಬಂತಲವನು ಬಾಗಿಸಿ ನಿಬಿಲ ಗೋಪಾಂಗನೆಯರು ಜಡೆವೆಣೆಯೆ (ಸೋಹಕ. ೦೯-೯೨). ೩. [ಗಣಿತ] ಭಾಗಾಹಾರ ಮಾಡು: ಭಾಗಿಸು: ಲೆಪ್ಪಿ ಬಂದದೆ ಬಾಗಿಸಿ ಕೊಟ್ಟರೆ (ಬಾಸ್ಕರ. ೦೩-೩). [ಬಾಗ₁ + – ಇಸು₃]

**ಬಾಗಿಸೂತ್ರ** (ನಾ). ಒಂದು ಬಗೆಯ ಸಸ್ಯ: "ಬಾಗಿಸೂತ್ರ, ಗಂಟಲಿಂಪಣ, ಬಾರ್ಬರಿ, ದೊಡ್ಡ ಮರದರಿಶಿನ, ಪೊಪ್ಪವಲ್ಲಿ" (ಸಸ್ಯಕೋ. ೨೦); ದೊಡ್ಡಮರದ ರಿಶಿನ, ಬಾಗಿಸೂತ್ರ (ವೃಕಿಗ. ೦೩-೨೦೧). [?]

**ಬಾಗು₁** (ಕ್ರಿ). ೧. ಮಣಿ; ಬಗ್ಗು: ದೇವೋತ್ತಮಾಂಗಂಗಳುಂ ಬಾಗಿದುವು (ಅಂಕ್ಪ. ೬-೩೯); ಫಳಭಾರದಿಂದೊಲೆದು ತೂಗಿ ಬಾಗುವ ಮರಂ (ಹಕಳಾ. ೬-೪೦); ಚಿನ್ನ ಪಣ್ಯೊನೆಯ ಭರದಿಂ ಸನ್ನತಮಾಗಿರ್ದ ಬಾಟೆಸಿ ಯೊಳ್ ವಿಳಿಗರ್ಗಂ ತನ್ನ ಶಿಶುವಿಂಗೆ ಮೊಲೆಯಂ ಮನ್ನಿಸಿ ಬಾಗಿರ್ದು ಕೊಡುವ ಬಾಲೆಯ ತೆಱದಿಂ (ಧಾರಕು. ೦-೦೦೬). ೨. ಡೊಂಕಾಗು; ಡೂಗಾಗು; ವಕ್ರವಾಗು: ಗುಡಿಲಂತೆ ಬಾಗಿದ ಬೆನ್ನುಂ (ರರ್ಮಾಖು. ೯-೬೩); ಹಲ್ಲು ಹೋಗಿ ಬೆನ್ನು ಬಾಗಿ ಅಸ್ಥರಿಗೆ ಹಣಗಾಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೩೦): ಆಗದು ತಪಕ್ಕೆ ವಿಘ್ನಂ ಬಾಗಿದ ಬೆನ್ನುಡುಗಿದಾರಮಡುಗಿದ ಜಘನ ತೂಗುವ ತಲೆ ಕೆಂಪಿಪ ಕೈ (ದರ್ಮಾಶ. ೩-೯೬): ಬಾಗಿದ ಪುರ್ಬ ಹಾವರೆಯಸಳಿನೇಳಿಪ ನಿಡುಗಣ್ (ಪೊಃಹಕ. ೦೮-೬೨). ೩. ಎರಗು: ವಂದಿಸು: ನಮಸ್ಕರಿಸು: "ಬಾಗೆಜಗು ಮೊಗ್ಗು ತಲಗ್ಗೆ ಯಿಸ್ಸಲ್ . . . ವಂದನಾರ್ಥ" (ಶಬಸಂ. ೦೬೯): ಪುರನೇಂದ್ರನಾ ಪದಯುಗದೊಳ್ ಮನೋಮುದದೆ ಬಾಗುವೆಂ (ಶಬಿನ. ೨-೦೧೯); ಅಂಗದಪರ್ಣನೆಂಬ ಗಂಧರ್ವಂ . . . ಬಾಗಿದಂ ಪದಯುಗಕ್ಕರೂಢಸರ್ವಜ್ಞನಾ (ಸಂಪಶಾ. ೩-೩೯). ೪. ಬಗ್ಗಿಸು; ಮಣಿಸು; ಬಾಗಿಸು: ನಾಣ್ಚಿ ತಲೆಯಂ ದಾಗಿ ನೆಲನಂ ಬರೆಯುತ್ತುಂ (ಶಂಪಶಾ. ೪-೬೯ ವ): ಉದ್ವೃತ್ತಗೋತ್ರಾಭಿಮುಖಿಂ ವಜ್ರಾಘಾತಮಾದಂತೆ ಸಿಗ್ಗಾಗಿ ತಲೆಯಂ ಬಾಗಿ (ಗದಾಯು. ೩-೬೪ ವ); ಕರಪ ಮುಗಿದು ಸಜ್ಜನರಿಗೆ ಶಿರ ಬಾಗಿ ಚರಿಸುತಿರಿಬ್ಬರಿಂಕೆ (ಪುರಂದ. ೨-೧೩-೨). ೫. ಪಾತ್ರೆಯನ್ನು ಬಗ್ಗಿಸಿ ಅನ್ನದ ಗಂಜಿಯನ್ನು ಬಸಿ: ಪುಷ್ಪವಾಸನೆಯ ಮೆಲ್ಪಿನ ತಣ್ಪಿನ ಕಂಪಿನಲಂ ಪೊಪ್ಪುಟ ಪೋಗುತಿರ್ಪ ತಂಡುಲಂಗಳಂ ಕಳೆದುಕೊಂಡು ಬಾಗಿದೋಗರಮನಾ ರೋಗಿಸುವಂ (ಸುಕುಮಾ. ೦೦-೩೪ ವ): ಕುದಿ ಬರಲೊಯ್ಯನೆ. . . ಅಗುಬ್ಬಿಗೆ ಹವನಂ ತೆಗೆದೊತ್ತಿ ನೋಡಿ ಬಾಗಿದಳಾಗಳ್ (ಅಳು. ೦೨-೧೨೨): ಅನ್ನ ಬೆಂದದ್ದು ಹೆಚ್ಚಾಗಿ. ಬೋಸವಾಗಿದೆ. ಬಾಗಿದರೆ ತಿಳಿಯೇ ಇಲ್ಲ (ಮಂಕಮ. ೨೨). ೬. (ಅಲಂ) ವಿನಯದಿಂದ ವರ್ತಿಸು: ತಗ್ಗಿ ನಡೆ: ಸಗ್ಗು: ತಾಗಿ ಬಾಗವ ಮರುಳುತನದು ದ್ಯೋಗವಿದಕೇನೆಂಜಿಸಕಟಕಟೀಗಲದ್ದುದು ಕೌರವಾನ್ವಯವೆಂದನಾ ದ್ರೋಣ (ಕುವ್ಯಾಶೀ. ೦-೯): ಪಿರಿಯರ ಸೇವೆಗೆಯ್ . . . ಪರಿಜನಮಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಣಳಂತಿರಲ್ ಗರತಿಯರಪ್ಪರ್ (ಶಾಕುಂತ. ೩೭-೯೩).

**ಬಾಗಿಕೊಂಡಿರು** = (ಅಲಂ) ವಿನಯದಿಂದಿರು: ನಮ್ರತೆಯಿಂದಿರು: ಬೇಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದಡೆ ಬೇಡಿದ ಪದವಿಯನೀವ . . . ಕೂಡಲ ಸಂಗಮದೇವ (ಬಸವ. ೦೬೯).

**ಬಾಗೊತ್ತು** = ಬಾಗುವಂತೆ ಒತ್ತು: ಬಾಗಿಸು: ಪೂಗಣೆಯನ ಚಾಮರವಂ ಸೀಗುರಿಯಂ ಪಿಡಿವಳಂತೆ ಸೆಳೆಗೊಂಬುಗಳಿಂ ಬಾಗೊತ್ತಿ ಗುಜ್ಜುಮಾವಿನ ಪೂಗೊಂಚಲನುಡಿದು ಪಿಡಿವಳಿವರಸೊರ್ವಳ್ (ಲೀಲಾವ. ೦೩-೬೨); ಎತ್ತಿದನು ಬಾಗೊತ್ತಿದನು ಕೊರಳಿಗೆ ತೊಡಿಸಿದನು ಶಿರುವ (ಕುವ್ಯಾಆ. ೦೫-೨೭): ಹಂಸಧ್ವಜಂ. . .ರಥವೇಱಿ ಬಾಗೊತ್ತಿ ನಿಜಚಾಪಮಂ ಜೇಗೈದು ಪಡೆಸಹಿತ ಫಲುಗುಣಂಗಿದಿರಾದನು (ಲಕ್ಷ್ಮೀಜೈ. ೦೯-೨೪). 'ಬಗ್ಗು₁' ಪರಾ.

[ದೇ.II ತಮಿ. ವಾಙ್ಕು. ವಾಕ್ಕು: ಮಲ. ವಾಙ್ಙು: ತುಳು. ಬಾಗು, ಬಾಂಗು; ತೆಲು. ವಂಗು; ಕೊಡ. ಬಾಕ್; ಕೋಲಾ. ವಂಗ್]

**ಬಾಗು₂, ಬಾಗ್ಗಿ₂, ಬಾಗೆ₂** (ನಾ). ೧. (ಆಯುಧ ಮುಂತಾದುವುಗಳ ತುದಿಯ) ಕೊಂಕಾದ ಭಾಗ: ನಾರಿಸುತನ ಆಸ್ಫೆಕೆಗೊಂಬವನ ಬೇರಿನ ಬಿಲ್ಲು ನುಂಗಿತ್ತು ಬಿಲ್ಲಿನಾ ಬಾಗಿನಲ್ಲಿ ಇವರೆಲ್ಲರು ಸಿಕ್ಕಿದರು (ಸೋಮೇಮಾ. ೦೧೦-೬೦೭); ತಾಗಿ ಕಡಿದೊಟ್ಟಿದನು ಕೊಡಲಿಯ ಬಾಗಿನಲಿ ಬಹು ಚಾತುರಂಗವ (ಸಂಕಶ. ೨೬-೬೮): ಆಗಸದ ಬಾಗು ಚಂದ್ರಮನ ಗುಂಡಿನ ನಣ್ಪು, ಸಾಗರದ ತೆರೆವಂಕು, ಗಿಡಬಳ್ಳಿ ಬಳುಕು . . . ಯಾ ಸೃಷ್ಟಿಯಿಂ ನಮ್ಮೊಳಾಗಿಹುದು ರೂಪರುಚಿ (ಮಂಕ್ತಃ. ೨೦೬). ೨. ನದಿಯ ತಿರುವಿನಲ್ಲಿ ಇರುವ ಜಮೀನು, ಗದ್ದೆ. ತೋಟ ಮುಂತಾದ ಫಲವತ್ತಾದ ಪ್ರದೇಶ: ಅಳಿಯುಲ್ಲಬಬ್ಬವನವಿಲ್ಲು ದ್ಯಾನಸಂತಾನಮಿಲ್ಲದ ಬಾಗಿಲ್ಲ (ಶಾಂತಿಕು. ೯-೦೩೩); ಆಗ್ನೇಯದೊಳಿಱಿಯ

ಬಾಗುಂ . . . ಪಡುವ ಪೂವಿನ ಕೆಱೆಯುಂ ಬುರುಲ ಬಾಗುಂ (ಶಾಶಾ. IX-i, ೦೩೦-೪೩ ; 1058) ; ಮಾಬಲಯ್ಯನ ಬಳದ ಮರೆಯ ಸೋಂಕಿನ ಬಾಗಿನ ಬಟ್ಟೆಯಿಂ ಮೊಱೆದಣ ಮೆಯ್ಮ ಕೆಂಪು (ಕಶಿ. 11, ೯-೨೫ ; 1076). ೩. ಸಂದುಗೊಂದು ; ಮೂಲೆ : ಕೆಲ್ಲೆ ಕುಹರದ ಕೋಣೆ ಬಾಗು ಗಳ್ಳಲ್ಲವನು ಹೊಕ್ಕರಿಸಿ ತೆರಳಚಿದನು ಮಹಾಧನವ (ಕುಮಾ.ಭಾ. ೩-೮೭) ; ಓರಬಾಗಿನ ಕುಟುವ ಕೊಳ್ಳದ ಗೌಂಕರನಪ್ಪಳಿಸಿ ಮಲೆಯ ವಿಹಾರಿಗಳ ಬಱಿಗೈದು ತುಂಬಿಸಿದನು ಸುವಸ್ತುಗಳ (ಕುಮಾ.ಭಾ. ೯-೭೦). ೪. [ಸಂಗೀತ] ಧ್ವನಿಯ ವಲುಕು.—ಬಳುಕು : ಉದ್ದ ನೀಚ ಸ್ಥಾಯ ಸಂಚಾರ ಠಾಯ ಬಾಗು ಸುಬದ್ಧಾಬದ್ಧಾದ್ವಾವಿಂಶತಿ ಶ್ರುತಿಯೇಕವಿಂಶತಿ ಮೂರ್ಛನೆ ಗಳೆಸೆಯೆ . . . ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೭ ಹ) ; ಆ ವಧು ಠಾಯ ಬಾಗು ವೋಹ ಚಾಳಿಯುಮಂ ನೆಱೆ ಮಾಡಿ ತೋಡಿ ವೇಳಾವಳಿ ದೇಶಿ ಗುಜ್ಜರಿಪರಾಳಿಗಳಿಂದಮ ನಾಡೆ ಪಾಡುತುಂ (ರಶೀಚ. ೩-೯೦). ಬಾಗಿ₁ : ೨. ಪಡುವ ಬಾಗಿಯು ಪೊಳಗೆ (ಶಾಶಾ. ೦೯೩೦, ಉಡುಪಿ. ೩೯೬-೦೯; 1414). ಬಾಗೆ₁ : ೨. ತೆಂಕಣ ಬಾಗೆಯ ತೊಱೆವಳಿ ನಾಡ ಜಿಳತ್ತ್ರಾಯ ಮೂಳೆಗದ್ದೆ ಬೆದ್ದಲು ಚತುಸ್ಸೀಮೆಯೊಳುಸುಳ್ಳದನು ಸರ್ವಮಾನ್ಯದ ಕೊಡಗೆಯಾಗಿ . . . ಶಿಲಾಶಾಸನವ ಮಾಡಿಕೊಟ್ಟೆವು (ಎಕ. IX, ಕಂಗೆರೆ. ೮೮-೦೨ ; 1303) ; ಚಿಕ್ಕಣ್ಣಗಳ ಬಾಗೆಯೊಳಗೆ ಬೀಯಣ್ಣನ ಹೊಲ (ಎಕ. IX (ಹ).ಕಂಗೆರೆ. ೦೬೯-೦೦; 1424). [< ಬಾಗು₁]

**ಬಾಗುಂಜಿ** 'ಬಾಗುಜಿ' ನೋ.

**ಬಾಗುಜಿ**, ಬಾಗುಂಜಿ, ಬಾಬಿಂಜಿ, ಬಾವಂಚಿ, ಬಾವಂಜಿ, ಬಾವುಜಿ, ಭಾವಂಚಿ, ವಾಕುಚಿ, ವಾಗುಂಜಿ, ವಾಗುಚಿ (ನಾ). ಒಂದು ಬಗೆಯ ಔಷಧೀಸಸ್ಯ ; ಸೋಮವಲ್ಲಿ : "ಚಂದ್ರಮುಷ್ಟಿ, ಬಾಗುಜಿ" (ಅಕಾಶ. ೦೦-೦೦) ; "ಕಾಳಮೇಷಿ—ಕರಿಯ ಕಿಗಡೆ, ಕರಿಯ ಜೀರಗೆ, ವಾಂಜಿಷ್ಟ, ವಾಗುಜಿ ?" (ಟಕಾಂ. ೪೦). **ಬಾಗುಂಜಿ** : ಚಿತ್ರಮೂಲ ಬಾಗುಂಜೀ ಬೀಜ ಇವನು ಗೋಮೂತ್ರದಿಂದ ಅರೆದು ಲೇಪಿಸಲು ಕುಷ್ಟ . . . ಶಮನ (ವೈದ್ಯಸಾ. I, ೩೯೩) ; ಬಾಗುಂಜಿಬಿತ್ತುವಾಕಳೆತುಪ್ಪದಲಿ ಕುಡೆ ಕುಷ್ಟ ತಾ ಕೆಡುಗುಂ (ಪಾಕ್ಶಾಂ. ೨೦) ; ಚಿತ್ರಮೂಲ ಬಾಗುಂಜೀ ಬೀಜ ಇವನು ಗೋಮೂತ್ರದಿಂದ ಅರೆದು ಲೇಪಿಸಲು ಕುಷ್ಟ ಹರ (ಶಿಕ್ಷಾಶಿ. ೦೪೫). **ಬಾಬಿಂಜಿ** : ಗುಲ್ಲಕಂಚಿ, ಬಾಬಿಂಜಿ (ವೈಶಿಸಿ. ೨೫-೪೭೯). **ಬಾವಂಚಿ** : ಹೀರಿಯ ಮತ್ತು ಬಾವಂಚಿಯು ಮಲಭೇದಕ (ಅಶ್ವಾಂಗ. ೦೬೫-೫ ಟೀಕು) ; ಬಾವಂಚಿ ಗಿಡ, ಕಾರ್ಬೋಕ್ಸ್ ಬೀಜ (ವೈಶಿಸಿ. ೬೫-೦೭೦೩). **ಬಾವಂಜಿ** : ತಗಟೆಯ ಬೀಜ ಬಾವಂಜಿಯ ಬೀಜ . . . ಇವೆಲ್ಲವಂ ತವ್ವೊಳು ಸರಿಯಾಗಿ ಕೊಂಡು ಚೂರ್ಣವಂ ಮಾಡಿ (ಶಿಕ್ಷಾಶಿ. ೯೨). **ಬಾವುಜಿ** : "ವಾಕುಚಿಯೆನಲು ಬಾವುಜಿಯೆನಿಕ್ಕು" (ಕುಂಗರಾ. ೩೭-೨೦). **ಭಾವಂಚಿ**: ಏಲಕ್ಕಿ ಲವಂಗ . . . ಭಾವಂಚಿಯಲೆರಸದಿಂದರದು . . . ಕಲಸಿ ಕೊಡಲು ಜ್ವರಾತಿಸಾರ ಗ್ರಹಿಣಿ ಸಹ ಗುಣಮಕ್ಕುಂ (ಶಕಶ್ವ. ೩೦೯). **ವಾಕುಚಿ**: "ಅವಲ್ಗುಜ, ಸೋಮರಾಜಿ . . . ವಾಕುಚಿ, ವಾಗುಚಿ, ಪೂತಿಫಲಿ" (ಶಾಶಂ. ೬). **ವಾಗುಂಜಿ** : ಸಾಸಿವೆಯ ಗಿಡದ ಅಗಿಲು, ಬಿಳಿಯ ಗುರುಗುಜಿ, ವಾಗುಂಜಿಯ ಬೀಜ, ಪ್ರತ್ಯೇಕ ೪ ತೂಕ(ಶಿಕ್ಷಾಶಿ. ೨೮). **ವಾಗುಚಿ** : ಮೇಲಿನ 'ನಾಚಿರಾ' ಪ್ರಯೋಗವನ್ನು ನೋಡಿ.
[<ಸಂ. ವಾಕುಚೀ./ಹಿಂ. ಬಕುಚೀ, ಬಾಬಚೀ; ಮರಾ. ಬಾವಚೀ]

**ಬಾಗುಮರಿಗೆ** (ನಾ). ಅನ್ನದ ಗಂಜಿಯನ್ನು ಬಸಿಯುವ ಪಾತ್ರೆ: ಅನ್ನದ ಹಿತ್ತಾಳೆಚರಿಗೆಯನ್ನು ಒಲೆಯ ಪಕ್ಕದಲ್ಲಿಟ್ಟಿದ್ದ ತಾವ್ರದ ಬಾಗುಮರಿಗೆಗೆ ಎತ್ತಿ ಇಳಿಸಿ . . . ಅನ್ನ ಬಸಿಯಲು ಅಣಿಯಾಗುತ್ತಿದ್ದಳು (ಹುಲಿಯ. ೩೦೦). [ಬಾಗು₂ + ಮರಿಗೆ (< ಮರಗೆ)]

**ಬಾಗುಪಡೆ** (ಕ್ರಿ). ಕೊಂಕನ್ನು ಹೊಂದು ; ವಕ್ರತೆಯನ್ನು ಪಡೆ : ಎಡೆಯಾದ ನೀಡಡಿ ಶರೀರದೊಡನತಿಬಾಗುವಡೆದೆಡದ ಮೆಯ್ ನೆಗೆದ ಬಲದ ಕಟಿ ನಾರಿಯಂ ತುಡುಕಿ ಕರ್ಣದ ಕಡೆಗೆ ಸೆಳೆದ ಕೈ . . . ದೃಷ್ಟಿ ಮುಷ್ಟಿ ಶರಸಂಧಾನವನುವಾಗೆ ಕೆಡೆಕೆಡೆಯೆಸುತ್ತೆ ಕೊಂಕಿದೆಚ್ಚನು (ಶಶಾ. ೬-೨೯). [ಬಾಗು₁ + ಪಡ್ಡ]

**ಬಾಗುಳ್** 'ಬಾಗುಳ' ನೋ.

**ಬಾಗುಳ**, ಬಾಕುಳ, ಬಾಗುಳ್ (ನಾ). ೧. ಮನಸ್ಸಿನ ಗೊಂದಲ; ಕಳವಳ ; ಚಿಂತೆ : "ಬಾಗುಳಂ ವ್ಯಾಕುಲದೊಳ್" (ಶಶಾಂ. ೬೮); ಬಯಕೆಯ ಬಾಗುಳಮಾ ಕಾಂತೆಯೊಳೆಂತದು ನೆಗಟ್ಬದಿಲ್ಲಣಂ ತೃಷ್ಣಾರ್ತಿ ಕ್ಷಯಕರನಿರೆ ತಾಂ ಗರ್ಭಾಶಯದೊಳ್ ತೋಱುಗುಮ ದೋಹದಂಗಳ ವೊಂದುಂ (ವರ್ಧಮಾ. ೦೦-೬೨); ಪೊಗುವೋಗೆಂದೆನ್ನನಟ್ಟಿಯ . . . ಬಾಗುಳದೆ ಹುಲುನರಂಗೊವ್ವುವ ಕೀಳುನುಡಿಗಳಿಲಿ ಬೇಗುದಿಯನೆನೆ ಗಿತ್ತರದರಿಂ ಬೇಗ ಬಂದೆನು (ರಾಶುಸಂ. ೩-೫-೦೩). **ಬಾಕುಳ** : ೨. ತೀವ್ರವಾದ ಅಪೇಕ್ಷೆ; ಉತ್ಕಟವಾದ ಬಯಕೆ: ನೋಡುವ ಕಣ್ಗೆ ಮೆಯ್ಯುವಿಯ ವೞಡುವ ಕೂರುಗುರ್ಪೊಯ್ಯೆ ಮೆಯ್ಯೊಳ್ ನೀಡುವ ಬಾಯ ಬಾಕುಳಕೆ ಪಲ್ಲಟಮಾಡುವ ಬಯ್ದೆ ಬಯ್ಗುಳ್ ಬೇಡುವ . . . ಗಂಡು ಹೆಣ್ ತಡಂ ಮಾಡುಗುಂ (ಅಶಂಕ. ೬-೫೦). ೩. ಆಸೆ ಪಡುವವನು ; ಆಸಕ್ತ : ತನಿಗಳ್ಪ ತವಕಿಗಂ ಬಾಡಿನ ಬಾಕುಳನೀತನೆಂದು ಲೋಹದ ರಸಮಂ ತನು ಕುಡಿಯೆ ಕುಡಿಯಿಪರ್ (ಅಶಂಕ. ೯-೩೫). **ಬಾಗುಳ್**: ೧. ಗಾಳೆ ಚಿಮರ್ತಂದು ನೇಸಱಿಜ್ ಕಂಗಳನಾದಂದು ಅಮರ್ದು ನಂಜಾದಂದು ನಿನಗೆ ಬಾಗುಳ್ (ರಾಮಾಕ್ಯ. ೦೦-೫೦). ☞ ಈ ಶಬ್ದರೂಪ ವಿಚಾರಣೀಯ ವಾದುದು. [< ಸಂ. ವ್ಯಾಕುಲ]

**ಬಾಗುಳಿ**, ಬಾಕುಳಿ (ನಾ). ೧. ಹೆಬ್ಬಯಕೆ ; ಲೋಲುಪತೆ ; ಅತ್ಯಾಸಕ್ತಿ : "ಬಾಗುಳಿಯೆನಲ್ಕತ್ಯಾಸೆ" (ಕಶ. ೬೬). ೨. ಅಧಿಕವಾಗಿ ಬಯಸುವ ವ್ಯಕ್ತಿ; ವ್ಯಸನಿ : ಬಾಗುಳಿಗಳು ಏಸು ನೆರೆದಿರ್ದೊಡೆ ಏನು ಕೂಗಿಸುವೆನು ಕಾಗೆಯಂತೆ (ಪ್ರಾಶಕ. ೦೯-೦೦೦). **ಬಾಕುಳಿ** : ೧. "ಬಾಕುಳಿ, ಪೊಗಸು, ಪಸಂ, ಇಚ್ಚೆ—ಈ ೪ ಇಚ್ಛೆ" (ಕಶಾ. ೩೬-೨೩೩): ಕೊಸಱುವ ಲಾಗು ಕೂಡಿ ತಣಿವಿಲ್ಲದ ಬಾಕುಳಿ ಗುಂಡುಬ್ಬೆಯು ಪೊಸಯಿವ ಬೇಟಮಂ ಬೆಳಸುವಿಷ್ಟೆಯು ಜತ್ರಿ ತಾನೆ ಲೋಕದೊಳ್ (ಸೂಕ್ತಿಸು. ೯-೪೦೦) ; ಒಕುಳಿಯ ನೆವದಿಂದ ತಕ್ಕೆಯ ಬಾಕುಳಿಗಳುರವಣಿಸಿತೇ (ಕುಮಾರ. ೭-೮೩); ಮಜಾಂಬಿ ಮೇಲಜ್ಯದೆ ಅಲಗಳ್ ಬಾಯ ಬಾಕುಳಿಯಿಂದೆ ತುಳಿದು ಸಲ್ಲಲಿತಕುಸುಮಪೋದವಮಂ ಪೀರ್ವುವೋ (ಅಶಾಕ. ೨-೦-೦೦). ೨. ಮತ್ತೊರ್ವರ್ ಬೆಸನದ ಬಾಕುಳಿ (ಅಶಾಕ. ೦೯-೪೨೫); ಪುಣ್ಯಲೋಭ ಭಕ್ತರ ಬಾಕುಳಿ ಶರಣರ ಸೂಱೆ (ಬಸವ. ೯-೨೫).
[< ಬಾಗುಳ]

**ಬಾಗುರ್** (ನಾ). ಬಲೆ ; ಜಾಲ : ವಾಗುರಾ—ಬಾಗುರ್ (ಕನ್ನಾಕು. ೦೪೮ ವ್ಯಾಖ್ಯಾ). [< ಸಂ. ವಾಗುರಾ]

**ಬಾಗೆ₁**, ಬಾಗಿ₁ (ನಾ). ೧. ಒಂದು ಬಗೆಯ ಮರ; ಶಿರೀಷ ; ಸಿರಿಸಲ ಮರ : "ಶಿರಿಸವೆನೆ ಬಾಗೆ" (ಕುಂಗರಾ. ೩೩-೦೬); ಬಾಗೆಯಂತೆ ನಿಷ್ಫಲನಾಗಿ ಅಶೋಕೆಯಂತೆ ನಿಷ್ಫಲನಾಗಿ . . . ಎಲ್ಲಾ ಪಲಿಗಳೊಳಗಾದ್ಯೆ (ರಶೀಚಕು. ೨-೦೦೫) ; ಬಾಗೆಯನೊತ್ತಿ ಹಿಡಿದ ಕುಂದಂ ಕೃಷ್ಣಾಗರು ವಿಡಿದುಡುಪಳ್ಳಿಗಳಿಂದಾ ಪೂಗಣೆಯನ ಜಯಾನಾಲಯವೆನೆ ವಸವತಿಪಾವನ ವಾಯ್ತು (ಶಬುಕಾ. ೦೫-೪೪). ೨. ಒಂದು ಊರಿನ ಹೆಸರು : ಬಾಗೆಯಬೃತ್ತುವಂ (ಎಇ. IV, ೫೫-೨೭ ; 975); ಶ್ರೀಮತ್ ಕೇತಲ ದೇವಿಯರ್ ತದ್ದ್ವಾಪಿಸಾಸಿರದೊಳಗಣಬಾಗೆಯಂ ಬಾಡದ ಮಂಪಣ ಬಾಗೆಯಮುಖ್ಯತ್ರಜ ಬಿಡಾರಮುತ್ತವಾಮಗ್ರಹಾರಂ ಪೊನ್ನವಾಡಮಂ . . . ಆಳುತ್ತಮಿರೆ (ಎಕ. XIX. ೨೮೩-೬; 1054). **ಬಾಗಿ₁** : ೧. ಕೋಸಲ

ದೇಶದಲ್ಲಿ ಪುಟ್ಟುವ ವಜ್ರವು ಬಾಗೀಹೂವಿನ ವರ್ಣದಿಂದಿರುವದು (ಶ್ರೀಗಂ೨. ೩೬೪-೨೩) : ಮರಗಳು ಪೆಸವ, ಹೆಬ್ಬಲಸು . . . ತೇಗ, ಕೋಲುತೇಗ, ಬಾಗಿ, ಬಿಲ್ವಾರ, ದಿಂಡಿಗ (ಚನ್ನುವು. ೨೬೬).

[ದೇ. ॥ ತಮಿ. ವಾಕೈ; ಮಲ .ವಾಕ; ತುಳು. ಬಾಗೆ]

**ಬಾಗೆ$_2$** 'ಬಾಗು$_2$' ನೋ.

**ಬಾಗೆ$_3$** 'ಬಾಗ' ನೋ.

**ಬಾಗೆಯ** (ನಾ). ಒಬ್ಬಾತನ ಹೆಸರು : ಸಿರಿನಾಡಾ ಬಾಗೆಯುವೆಜಾದು ವಿಟ್ಟಾನ್ (ಎಕ. XVI. ತುಮಕೂ. ೯೩-೬ : ಸು. 780).

[ಬಾಗೆ$_1$ + ಅಯ್ಯ$_1$ (<ಅಯ್ಯ$_1$)]

**ಬಾಗೆಯೂರ್** (ನಾ). ಒಂದು ಊರಿನ ಹೆಸರು : ಬಾಗೆಯೂರ ಬಲ್ಲಹನೆಱ ನೊಳ್ವಿಯಾನ್ . . . ಪಡೆವುಳಿಱಿದು ಸತ್ತನ್ (ಎಕ. XVI. ತುಮಕೂ. ೯೩-೬ : ಸು. 780) ; ಇದಕ್ಕೆ ಸಕ್ಷಿ ಜಮ್ಮೂರ ಪೆವ್ಮಾಡಿ ಗಾವುಣ್ಡನು ಬಾಗೆಯೂರ ಕವ್ಮಾಜಗಾವುಣ್ಡನು (ಎಕ. V. ಚನ್ನರಾ. ೨೩೦-೧೨ : ಸು. 925). [ಬಾಗೆ$_1$ +ಊರ್]

**ಬಾಗೆವಾಡಿ** (ನಾ). ಒಂದು ಊರಿನ ಹೆಸರು ; ೦ ಬಸವಣ್ಣನವರ ಜನ್ಮಸ್ಥಳವಾದ, ಈಗಿನ ವಿಜಾಪುರಜಿಲ್ಲೆಯ ಬಸವನ ಬಾಗೆವಾಡಿ: ಸಿ[ರ್ಮ]ಲಗೆ ಪೂರ್ವ್ವದಿಗ್ಭಾಗೇ ಕೃಷ್ಣಾಬೇಣ್ಣ್ಯ್ಯೋ ಕ್ಷೇತ್ರರ ಪಥೇ ಬಾಸುರಿಕೋಡು ಇಂಗಳಸರ ಬಾಗೆವಾಡಿ ಸಾವುಳವಾಡಿಗೆ ಒಡ್ಡವುಡಿಗೆ ಮಧ್ಯವತ್ರಿ[ಣಿ] ಒಪ್ಪರಗೆನಾವುಗ್ರಮೋ (ಕನಿಶಾ. XI — i. ೬-೦೮ : 802) ; ಅಗ್ರಹಾರಂ ಬಾಗೆವಾಡಿಯೊಳಗೆಸೆದಿರ್ಪ ಅಗ್ರೇಶ್ವರಂ ಕಮ್ಮೆಕುಲ ದಿಂದೆ ಪೆಂಪೆಸೆದಿರ್ಪ ವಿಪ್ರನಿರ್ಪಂ (ಬಸಪು. ೦-೯೭). [ಬಾಗೆ$_1$ + ವಾಡಿ$_2$]

**ಬಾಗೇಶ್ರೀ**, ಬಾಗೇಶ್ವರಿ (ನಾ). [ಸಂಗೀತ] ಒಂದು ರಾಗದ ಹೆಸರು : ಹತಭಾಗ್ಯೆಯಾದ ಚಿತ್ರಾಂಗದೆ ತನ್ನ ಪೂರ್ವಕತೆಯನ್ನು ಬಾಗೇಶ್ರೀಯಲ್ಲಿ ತೋಡಿಕೊಳ್ಳುತ್ತಾಳೆ (ಕೃಕೃಹೂ. ೩೨೯). **ಬಾಗೇಶ್ವರಿ** : ಬಾಗೇಶ್ವರಿ ಪೂರಿಯಾ ದರ್ಬಾರಿ ಕಮಾಚ್ ರಾಗಗಳು ಉನ್ಮಾದವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಭಾರತ. ೪೯೯).

[←ಹಿಂ. ಬಾಗೇಸರೀ; ಮರಾ. ಬಾಗೇಶ್ರೀ, ಬಾಗೇಸರೀ, ವಾಗೇಶ್ವರೀ]

**ಬಾಗೇಶ್ವರಿ** 'ಬಾಗೇಶ್ರೀ' ನೋ.

**ಬಾಚಂಗೆ** 'ಬಾಚಣಿಗೆ' ನೋ.

**ಬಾಚಣಿಗೆ**, ಬಾಚ್ಣಗೆ, ಬಾಸಣಿಗೆ$_1$ (ನಾ). ೧. ಒಂದು ಬಗೆಯ ಮರ : ಈಚಿಗಿಡ, ಅಗ್ನಿಮಂದ, ತಕ್ಕಿಲೆ, ಬಾಚಣಿಗೆಮರ (ಮೈಶಿರಿ. ೬೯-೨೩೦೦). ೨. ಕೂದಲನ್ನು ಹಿಕ್ಕುವ ಒಂದು ಬಗೆಯ ಸಾಧನ ; ಹಣಿಗೆ ; ಕಂಕತಿಕೆ : ಅಣಾದು ವೀಳೆಯದೆಲೆಗೊಡುತ ಬಾಚಣಿಗೆ ಬೊಕ್ಕಸವಾಂತು ಬಲುಸಂದಣಿಸುತಾಳೀಜನ ನಡೆಯಿತಾ ಬಾರಾಜವಿನ್ಯರಕೆ (ಸವತ್ಕು. ೯-೫೭) ; ತಲೆಯ ಕೂದಲೆಲ್ಲಾ ಬಾಚಣಿಗೆ ಕಾಣದೆ ಗಾಳಿಯಲ್ಲಿ ಹಾರಾಟದ ಅಭ್ಯಾಸ ನಡೆಸುತ್ತಿವೆ (ಅಂಕೂ. ೦೦೬). **ಬಾಚಂಗೆ** : ೧. ಬಾಚಂಗೆ (ಪನಿಯಾರ) —ಎತ್ತರವಾದ ವೃಕ್ಷವು, ಇದರ ಕಟ್ಟಿಗೆಯಿಂದ ಹಣಿಗೆಗಳನ್ನೂ ಕರಡಿಗೆ ಮುಂತಾದ ಶೋಭಿಸು ಒಡವೆ ಗಳನ್ನೂ ಮಾಡುತ್ತಾರೆ (ಕಳಾಗ. ೯೪). **ಬಾಸಣಿಗೆ** : ೨. ಕಾಳಾಂಜಿ ಕೈಪಿಡಿ ಬಾಸಣಿಗೆ ಬಂಧುರದಾಲವಟ್ಟ ಚಾಮರದ . . . ನಾರಿಯ ರೈದಿದರು (ಕಂಸಪ. ೯-೬೮) ; ರನ್ನದ ಬಾಸಣಿಗೆ ಚಿನ್ನದ ಸೀರಣಿಗೆ ಕೈಕಟ್ಟನವ ಕಟಿಸರಿಗೆ ಸೀರೆಯ ತಾಯಿ ಸಮ್ಮುಪ್ಪ ಕಳುಪ್ವಾಳೀ (ಗಾರಕ. ೦೦). [ಬಾಚು (<ಬಾರ್ಚು) + ಹಣಿಗೆ./ತುಳು. ಬಾಚಣಿಗೆ]

**ಬಾಚಣಿಸು$_1$**, ಬಾಸಣಿಸು$_1$ (ಕ್ರಿ). ಕೂದಲನ್ನು ಹಿಕ್ಕು.— **ಬಾಚು** : ಕುರುಳ ಬಾಚಣಿಸುತಲಿ ಬೈತಲಿಸರವು ಮುತ್ತಿನ ಬೊಟ್ಟು . . . ಇಟ್ಟು ಶೃಂಗರಿಸೆ (ವಂದಿಂ. ೩-೬೯) ; ಹದ್ವಾರವಿಂತು ಕಡುಚೆಲುವೆಸೆಯ ತತ್ಪುರದ ಮಧ್ಯ ಭೂದೇವಿ ಸಿಸ್ಸಸ್ತಕವ ಬಾಚಣಿಸಿ ತಿದ್ದಿದ ಸುಬೈತಲೆಯು ರೇಖೆ ಯೆನಿಸೆ (ನವಮೋ. ೨-೨೯). **ಬಾಸಣಿಸು$_1$** : ರುಕ್ಮಿಣಿಸತ್ಯಭಾಮಾದೇವಿಯರ್ ಕುರುಳ ಬಾಸಣಿಸಿ ಪೂವಿಡಿಕಿಯಾದು ಪರ್ಜಿಡವೆಣೆದರು (ಮೋಹಕ. ೦೮-೯೦): ಶ್ರೀತಳೋದರಿಯ ಕೇಶವ ಬಗಿದು ಬಾಸಣಿಸಿ ಬೈತಲೆಯ ತೆಗೆದು ತಿದ್ದಿದರು (ನವಮೋ. ೨೩-೦೨). [<ಬಾಚಣಿಗೆ + — ಇಸು$_1$]

**ಬಾಚಣಿಸು$_2$** 'ಬಾಸಣಿಸು$_2$' ನೋ.

**ಬಾಚಿ$_1$** (ನಾ). ಮರವನ್ನು ಕೆತ್ತಲು, ಬಡಗಿಗಳು ಬಳಸುವ ಅಗಲ ಬಾಯಿಯ ಒಂದು ಬಗೆಯ ಕಬ್ಬಿಣದ ಸಾಧನ : "ದುಡಿಯೇನೆ ಬಾಚಿ" (ಮಂಗರಾ. ೧೦೪-೮) ; ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ಚಿಱಿದುಂ (ಧರ್ಮಾಮೃ. ೩-೬೩) ; ಬಾಚಿಯೊಳು ಕೆತ್ತುವ ಕತ್ತಿಯಿಂ ಕಡಿವ ಕರಗಸದಿ ಕೊಱೆವ ರೌರವದ ನರಕಂ ಭಯಂಕರವಾದುದು (ಸಿದ್ಧರಾ. ೯-೨೫). 'ಕೈಬಾಚಿ' ವರಾ.

[<ಸಂ. ವಾಶೀ, ವಾಸೀ./ತಮಿ. ವಾಚ್ಚಿ, ವಾಯ್ಚ್ಚಿ ; ಮಲ. ವಾಚ್ಚಿ ; ತುಳು. ಬಾಚಿ, ಬಾಜಿ ; ತೆಲು. ಬಾಡಿಸ]

**ಬಾಚಿ$_2$** (ನಾ). ಮೈಜೋಡು; ಕಂಚುಕ : "ಆ ವಾರವಾಣಕಂ ಕಂಚುಕಂ ಚೋಳಕಂ ಕುಪ್ಪಸಂ ಬಾಚಿಯುಕ್ಕುಂ" (ಶಬ್ದಮ. ೦೦೦-೨೯). [?]

**ಬಾಚಿಸು$_1$** (ಕ್ರಿ). ೧. (ಕಸವನ್ನು) ಒಟ್ಟಾಗುವಂತೆ ಸೇರಿಸು; ಗೋರಿಸು: (೬). ೨. ಹಣಿಗೆಯಿಂದ ಕೂದಲನ್ನು ಹಿಕ್ಕುವಂತೆ ಮಾಡು : ಶಾಂತಿಯೇನೋ . . . 'ಅಕ್ಕ' ನಿಂದ ತಲೆ ಬಾಚಿಸಿಕೊಳ್ಳಲು ಒಪ್ಪಿದಳು (ವಾತ್ಸಲ್ಯ. ೫೬). [ಬಾಚು (<ಬಾರ್ಚು) + — ಇಸು$_1$]

**ಬಾಚಿಸು$_2$**, ಬಾಜಿಸು$_1$ (ಕ್ರಿ). ಓದು ; ವಾಚಿಸು : ವಾಚಕನೋಲೆಯರ್ಥ ಮನಱಿಯದೆ ವಿಪರೀತಮಾಗಿಂತೆಂದು ಬಾಚಿ[ಶಾಸಂ. ಜ]ಸಿದಂ (ಶಬ್ದಾನು. ೬೫-೦೭); ಯುವರಾಜನೃಪಂ . . . ರಾಜಾದೇಶವನಾಸ್ಥೆಯಿಂ ನೋಡಿ ತಾಂ ಬಾಚಿಸಿದಂ (ಕಾದಂಬ. ೨೫೭); ಒಂದಂ ಬಾಚಿಸುತಿರೆ ಮತ್ತೊಂದಂ ಬೆಸಗೊಳ್ವಂ . . . ಇದು ಕಾವ್ಯಮಂ ಏಳಂ ಕೇಳ್ವಂದಂ (ಸೂಕ್ತಿಸು. ೦-೩೩). **ಬಾಜಿಸು$_1$** : ಅದಂ ಸಂಧಿವಿಗ್ರಹಿ ಕೊಂಡು . . . ಅತಿಮಧುರೋದ್ವಾಪಿತಗಂಭೀರನಾದದಿಂ ಬಾಜಿಸಿದಂ (ಅದಿಪು. ೦೯-೯೬); ಸಂಧಿವಿಗ್ರಹಿ ರಾಜಾಜ್ಞೆಯಿಂ (ರಾಜಶ್ರೇಷ್ಠಿಯಾ) ಲೇಖವುಮನಿಂತೆಂದು ಬಾಜಿಸಿದಂ (ಚಾವುಂಡ. ೦೫೩); ಬರೆಯಲುಂ ಬಾಜಿಸಲುಂ ಬಲ್ಲ ಶಬ್ದ ಸಂಸ್ಕಾರವುಳ್ಳಾತನಾಗದೇಸಿಗೆಗ್ಗೆ ನಿತ್ಯಸ್ಥಿತಿಯೊನ್ದು ಪೊಟ್ಟಬಾಹಾರಮುಂ ವರಿಷಕ್ಕೊನ್ದು ಕಪ್ಪಡವುಮನಿಕ್ಕಿಯೋದಿಸಿ (ಎಇ. XX. ೬೮-೨೬: 1012).

[< ಬಾಜನೆ$_1$ + — ಇಸು$_1$]

**ಬಾಚು** ' ಬಾರ್ಚು ' ನೋ.

**ಬಾಚುಗಱು** (ನಾ). ತಲೆ ಬಾಚಿಕೊಳ್ಳುವ ವ್ಯಕ್ತಿ; ಶೃಂಗಾರದಲ್ಲಿ ಆಸಕ್ತನಾದ ವ್ಯಕ್ತಿ : ಲೋಚನೊಳಗಿರ್ದಂತು ಬಾಚುಗಱುವಾದನೇ ವಾಚಾಲರೊಳಗಿರ್ದನಾಚಾರಿಯಾದನೇ (ಹಾಗೀಶ. ದೇ. ೩೫೩-೬).

[ಬಾಚು (< ಬಾರ್ಚು) + ಕಱು$_1$]

**ಬಾಚುಮುದ್ದೆಬೆಲ್ಲ** (ನಾ). ಉಂಡೆಬೆಲ್ಲ : ಒಳ್ಳೆಯ ಬಾಚುಮುದ್ದೆಬೆಲ್ಲ ಒಂದು ತಟ್ಟೆಯಲ್ಲಿತ್ತು (ಶುಕತು. ೦೦೫).

[ಬಾಚು (<ಬಾರ್ಚು) + ಮುದ್ದೆ$_1$ + ಬೆಲ್ಲ]

**ಬಾಚುವಲೆ** (ನಾ). (ಬೇಟೆಯಲ್ಲಿ ಪ್ರಾಣಿ, ಪಕ್ಷಿಗಳನ್ನು ಒಟ್ಟಾಗಿ ಗೋರಲು ಸಾಧ್ಯವಾಗುವಂತೆ ಹೆಣೆದ) ಒಂದು ಬಗೆಯ ಬಲೆ : ಬಡಿಗೆವಲೆ ಬಾಚುವಲೆ ಗಾಢವಲೆ ಗೂಢವಲೆ ಮಡಿಕೆವಲೆ ಮಂದನಿನ ವಲೆಯು ಹೊಱಿಗಳ ಬೇಡವಡೆ ನೆರೆದುದು (ಹಕಾ. ೩-೬).

[ಬಾಚು (< ಬಾರ್ಚು) + ಬಲೆ$_1$]

**ಬಾಜಂತ್ರಿ**, ಬಜಂತ್ರಿ (ನಾ). ಒಂದು ಬಗೆಯ ಚರ್ಮವಾದ್ಯ : ತ್ರಿಸಂಧ್ಯ

ಯೊಳಂ ಸಂಜೆವಜಿಯುಂ ಬಾಜಂತ್ರಿಯುಂಣ ಹಜಿಕಾಜಿಗೆ[ರ]ಯ್ಮತ್ತರು ಹಂಸೆರಡು (ಶಾಸಕ. ೯೬-೦೦೦; 1178). **ಬಜಂತ್ರಿ:**, ಬಜಂತ್ರಿಗಳು ಡಮುರುಗವು . . . ವೊರವುತಿರ್ದವು ಸರ್ವವಾದ್ಯವು ಸಲಘೋಷದಲಿ (ಪ್ರಾ.ಕಾಂ. ೦೩-೨೯); ಬಜಂತ್ರಿಯ . . . ಒಡಕುದನಿ ಕಿವಿಯನ್ನು ಗದ್ದುಕ್ಕಿಸಿಬಿಟ್ಟಿತು (ಕೃ.ಶಿ. ೬). [← ಮರಾ. ವಾಜಂತ್ರೀ/ಸಂ. ವಾದಿತ್ರ]

**ಬಾಜಣೆ** 'ಬಾಜನ್ನೆ' ನೋ.

**ಬಾಜನ್ನೆ** (ನಾ). ಓದು; ಓದುವಿಕೆ; ವಾಚನ: ಬರೆವದ ಬಲ್ಮೆ ಬಾಜನೆಯ ಬಿನ್ನಣಮೊಪ್ಪುವ ಲೆಕ್ಕದೋಜೆ ಸಂಕರಸುತಸೊಳ್ಸರಸ್ವತಿಯೊಳಂಬುರುಹಾಸನನೊಳ್ಮಿಚಾರಿಸಲ್ಕೊರೆ ಸರಿಪಾಟಿಯೆಂದು ನಿಖಿಳೋರ್ಬ್ಬರೆ ಬಣ್ಣಿಸುತಿರ್ಪ್ಪದೆಂದೊಡೇಂ ಓರಿಯನೊ ಸಿಂಗಂ (ಎಕ. VII, ಶಿಕಾ. ೦೨೯-೨೯; 1077); ಚಕಾರಕ್ಕೆ ಜಕಾರಂ . . . ವಾಚನಾ_ಬಾಜನೆ (ಚಂ.ಕ. ೨೩೩ ವೃತ್ತಿ). 'ಬಾಜನೆಗಟ್ಟು' ಪರಾ. [< ಸಂ. ವಾಚನ]

**ಬಾಜನ್ನೆ**, ಬಾಜಣೆ (ನಾ). ವಾದ್ಯಗಳನ್ನು ನುಡಿಸುವಿಕೆ, — ಬಾರಿಸುವಿಕೆ: ಆಟಂ ಬಾಜನೆ ಗಾಡಿಗಳ್ ಪಸದನಂ ಬೆಳ್ದಿಂಗಳೋಲ್ಪಾತು ಕೊಂಡಾಟಂ ಕತ್ತುರಿ ಕಪ್ಪುರಂ . . . ಎಂದಿಂತಿವಂ ಚೇಟಕ್ಕಾಗರಮೆಂಬೆನಣ್ಣ (ಶಾಬ್ದ.ಕ. ೬೬೬); ಪಾಡುವ ಸುರಗಣಿಕಾಜನಮಾಡುವ ದೇವಾಂಗನಾಜನಂ ಬಾಜನೆಯುಂ ಮಾಡುವವರಿ ಜನಂ ತೇಂಕಾಡಿಸುವುದು ರಾಗರಸದೊಳ ಮರನ ಸಭೆಯಂ (ಅಜಿತ. ೦೨-೯೦); ನಾಡಿಗೆ ನಾಡೇ ಉರಿಯುತ್ತಿರುವಾಗ ಎಲ್ಲಿಯ ಹಾಡುಗಾರಿಕೆ? ಬನ್ನವೇ ಅನ್ನವಾದಾಗ ಎಲ್ಲಿಯ ಬಾಜನೆ? (ಸ್ವ. ೦). **ಬಾಜಣೆ:** ಪರುಟವಣೆಯ ಗಾನದ ನಚ್ಚಣೆಯ ಬಾಜಣೆಯ ಬಿಜ್ಜೋದರರ ಗಂದರರಚ್ಚರರ ಗಜಬಜಂ ತೆರ್ಳಸಿದ . . . ದೇವಾಂಗನೆಯರ ಗೊಂದಣಂ (ರಾಚಚ್ಕ. ೬೬-೨೯). [< ಸಂ. ವಾದನ]

**ಬಾಜನೆಕಾಜ** (ನಾ). ವಾದ್ಯವನ್ನು ನುಡಿಸುವವನು; ವಾದಕ; ವಾದನಕಾರ: ರಾಜಸುತೆಯನು ತಜ್ಜಾತಿಗೆ ಕುಡುವುದೊಂದೋಜೆಯ ಮಿಜಿ ದುಷ್ಕುಲದ ಬಾಜನಕಾಜಿಗೆ ಕುಡುವುದುಚಿತವೆ (ಶಬಸಂ. ೦೨-೬೩). [ಬಾಜನ್ನೆ + — ಕಾಜ]

**ಬಾಜನೆಗಟ್ಟು** (ನಾ). ಒಂದು ಬಗೆಯ ಕಾವ್ಯ: ಪಲತೆಜದ ಪದ್ಯದಿಂದಂ ಲಲಿತವಚೋರಚನಾನಿಚಯಪದ್ಧತಿಕೆಗಳಂ ಸಲೆ ನಿಲೆ ಸಮುದುದು ಸರಸಾಖಿಲ ವರ್ಣನಮಾಡೊಡಮವೆ ಬಾಜನೆಗಬ್ಬಂ (ಶಾಬ್ದ.ಕ. ೯೩೩); ಕನ್ನಡದ ಪಟ್ಟಿಗೆ ಪಾಡು, ಮೆಲ್ಪಾಡು, ಬಾಜನೆಗಬ್ಬಗಳಿದ್ದುವು (ಕಶಾಕ. ೨೯೯). [ಬಾಜನ್ನೆ + ಕಬ್ಬ₁]

**ಬಾಜವಣೆ** 'ಬಜಾವಣೆ' ನೋ.

**ಬಾಜಾ**, ಬಾಜ್ಯೆ (ನಾ). ೧. ಊದುವ ಅಥವಾ ಬಾರಿಸುವ ವಾದ್ಯ: ಆ ಹಾಡ್ಯಾಗ ಬಾಜಾ ತಗೋತೀನಿ (ಏಪ್ರಿ.ಕ. ೦೯೬). ೨. ವಾದ್ಯಗಳನ್ನು ಬಾರಿಸುವಿಕೆ; ವಾದನ: ಬೇಂಡು ಬಜಂತ್ರಿ ಎರಡೂ ಬಾಜಾ ಶುರುಮಾಡಿದವು (ಕೃ.ಶಿ. ೯). **ಬಾಜ್ಯೆ:** ೧. 'ಬಾಜೆಬಜಾವಣೆ' ಪರಾ. **ಬಾಜಾ ಬಜಂತ್ರಿ** — ಹಲವಾರು ಬಗೆಯ ವಾದ್ಯಗಳ ಮೇಳವಾದನ: ರಾಜರಾಜೇಶ್ವರಿ ಕಂಪೆನಿ ಬಹಳ ವೈಭವದಿಂದ ಬಾಜಾಬಜಂತ್ರಿ ಮಾಡಿಸಿಕೊಂಡು ಬೆಂಗಳೂರಿಗೆ ಬಂತು (ಚಟಾ. ೯೯).

[← ಹಿಂ. ಮರಾ. ಬಾಜಾ / ಸಂ. ವಾದ್ಯ]

**ಬಾಜಾಣೆ** (ನಾ). ನಾಲ್ಕಾರು ಬಗೆಯ ಧಾನ್ಯಗಳನ್ನು ಹುರಿದು ಕೊಡಿಸಿ ಮಾಡಿದ ಹಿಟ್ಟು; ಈ ಇದರಿಂದ ತಾಲೀಪಟ್ಟು, ಕೋಡುಬಳೆ ಮೊದಲಾದ ತಿಂಡಿಗಳನ್ನು ಮಾಡುತ್ತಾರೆ: ಗಿರಿಕ್ಕಾಗ ಬೇಸಿದ ಬಾಜಾಣಿ ಜಗಟ ಇರಾಕಿಲ್ರಿ (ಜಾಬ. ೩).

[← ಮರಾ. ಭಾಜಣೇ, ಭಾಜಾಣೇ]

ಬಾಜಾರ್ '**ಬಾಜಾರ**' ನೋ.

**ಬಾಜಾರ**, ಬಜಾರ್, ಬಜಾರ, ಬಜಾರು, ಬಾಜಾರ್, ಬಾಜಾರು (ನಾ). ದಿನಸಿ ಮುಂತಾದ ಪದಾರ್ಥಗಳನ್ನು ವ್ಯಾಪಾರ ಮಾಡುವ ಸ್ಥಳ; ಪೇಟೆ; ಮಾರುಕಟ್ಟೆ: ಪುರದ ಬಾಜಾರದೈಶ್ವರ್ಯಮಂ ಪೊಗಳಲಳವೆ (ಗುರುಚಾ. ೦-೨೯); ಪುರದ ಬಾಜಾರದಿಂದೈತಂದರಾನಂದದಿಂ (ಚುಚಾ. ೦೯-೦೦೦); ರೇವತಿ ಗಂಡನಿಂದ ಇಪ್ಪತ್ತು ರೂಪಾಯಿಗಳನ್ನು ಪಡೆದುಕೊಂಡು ಸಾಮಾನುಗಳನ್ನು ತರಲು ಬಜಾರಕ್ಕೆ ನಡೆದಳು (ಚುತ್ತ್ರಿ.ಕ. ೬೦). **ಬಜಾರ್:** (ವ್ಯಾಗಕ. IV. ೬೬೯). **ಬಜಾರ:** ಬಾಜ ಬಜಾರವು ಬಯಲೆದ್ದು ಹೋದೀತು (ಎಜಶಾ. ೦೨೬-೨೯). **ಬಜಾರು:** ಬಜಾರಿನಲ್ಲಿ ಕಬ್ಬಿಣದ ಧಾರಣೆ ಹೇಗೆ ಏರುತ್ತಿದೆ ಬಲ್ಲಿರಾ? (ಕಾಮಗಾಂ. ೦೦೩). **ಬಾಜಾರ್:** ಚಾರುತರದ ಬುರುಜಿನೊಳು ಬಾಜಾರ್ ಹೂಡ್ರೇ (ಕಾಂಕ. ೨೩). **ಬಾಜಾರು:** ಸರಹದ್ದಿನ ಬೆಟ್ಟ ಪರಿಯಂತ್ರ ಲಷ್ಕರಿನ ಬಾಜಾರು ಇಳಿಸಿ ಇದ್ದರು (ರಾಜೇಂದ್ರ. ೧೩೯); ಬಾಜಾರಿನಲ್ಲಿ ಅಕ್ಕಿ ತುಟ್ಟಿ (ಮುಂಬಯಿ. ೩-೨೩೯).

[← ಪಾರ. ಹಿಂ. ಮರಾ. ಬಾಜಾರ್]

**ಬಾಜಾರಬೀದಿ** (ನಾ). ಪೇಟೆಯ ಬೀದಿ: ಮಹಾಲಿಂಗೇಂದ್ರಂ . . . ಮಂಟಪವನಿಳಿದು ಬಾಜಾರಬೀದಿಯೊಳ್ಕೈದಲು (ಮಚಾಂ. ೨೯-೩೯).

[ಬಾಜಾರ + ಬೀದಿ]

**ಬಾಜಾರಮುಖ್ಯ** (ನಾ). ಪೇಟೆಯ ಮುಖಂಡ; ವರ್ತಕಪ್ರಮುಖ: ಲಲಿತ ತೊಂಬತ್ತೆಂಟು ಬಾಜಾರಮುಖ್ಯರ್ಗೆ ಗೆಲವಿನಿಂ ವೀಥಿಗಳ ಶೃಂಗರಿಸ ಪೇಳ್ದೆಂದು ದಲಿತದಿಂ ಬಸವರಸ ಪೇಳಲು (ಪ್ರಚು. ೯-೦೬).

[ಬಾಜಾರ + ಮುಖ್ಯ]

**ಬಾಜಾರಿ**, ಬಜಾರಿ (ಗು). ೧. ಪೇಟೆಗೆ ಸಂಬಂಧಿಸಿದ; ವ್ಯಾಪಾರ ವಿಷಯಕವಾದ. ೨. ನೀಚ; ಕೀಳುಮಟ್ಟದ: ನಿಜಗಂಡನ ಸಂಗವನೊಲ್ಲದೆ ಭುಜಗರ ಸಂಗವ ಮಾಡುವ ಬಾಜಾರಿ ತೊತ್ತಿಗೆಲ್ಲಿಯದೋ ನಿಜ ಮುತ್ತೈದಿತನ (ಕಕಾ. I. ೩೩೩). **ಬಜಾರಿ:** ೩. ಕಳಪೆಯಾದ; ಅತಿಸಾಮಾನ್ಯವಾದ: ಎಣ್ಣೆಯಲ್ಲಿ ಕರಿದಿದ್ದ ವಡೆ, ಹಳಸಿದ ಕೊಬ್ಬರಿ ಮಿಠಾಯಿ, ಬಜಾರಿ ಷರಬತ್ತು ಅವುಗಳ ಕೆಲಸ ಅವು ಮಾಡಿದ್ದವು (ಶಾಂಕ. ೨೬). (ನಾ). ೪. ಮಾನಗೆಟ್ಟ ಹೆಣ್ಣು; ಸೂಳೆ; ಬೀದಿಬಸವಿ: ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲಾಟದ ಬಜಾರಿಗೆ ಸ್ವತ್ತು ಸೇರುವಂತೆ ಮಾಡಬಾರದು (ಹುಚ್ಚಿಕ. ೦೯೭); ನನ್ನ ಚಾರಿತ್ರ್ಯದ ಬಗ್ಗೆ ಮಾತನಾಡಿದಳೇ ಈ ಮಾಊರು ಕಾಸಿನ ಬಜಾರಿ? (ಕುಮುದಾ. ೦೯೩).

[← ಹಿಂ. ಮರಾ. ಬಾಜಾರೀ]

**ಬಾಜಾರು** 'ಬಾಜಾರ' ನೋ.

**ಬಾಜಿ** (ನಾ). ೧. ಪಣವನ್ನಿಟ್ಟು ಆಡುವ ಗಂಜೀಫ, ಇಸ್ಪೀಟು ಮುಂತಾದ ಆಟ; ದ್ಯೂತ; ಜೂಜು: ಸಾಕುಸಾಕು ಬಾಜಿಯ ಬಿಟ್ಟು ತೊಲಗಿರಿ (ಕಮುಕು. ೨೦). ೨. ದ್ಯೂತಕ್ಕೆ ಒಡ್ಡುವ ಪಣ ಅಥವಾ ವಸ್ತು: ಅವ್ರೇನೂ ಬಾಜೀ ಮಡಗ್ತೇಕಾದ್ದಿಲ್ಲ (ಕಮ್ಮುಕು. ೨೨). 'ಬಾಜಿಕಟ್ಟು' ಪರಾ. [← ಪಾರ. ಹಿಂ. ಮರಾ. ಬಾಜೀ]

**ಬಾಜಿಕಟ್ಟು** (ಕ್ರಿ). ೧. ಜೂಜಿನಲ್ಲಿ ಪಣವಿಡು, — ಪಣಕಟ್ಟು: ಯಾರು ಗೆಲ್ಲುತ್ತಾರೆ, ಯಾರು ಸೋಲುತ್ತಾರೆ ಎಂಬುದಾಗಿ ಅನೇಕರು ಬಾಜಿ ಕಟ್ಟಿದ್ದರು (ಅಚು. ೦); ಇಬ್ಬರು ಸ್ನೇಹಿತರು ಬಾಜಿಕಟ್ಟಿ ಅದರ ಅರ್ಥವನ್ನು ನಿರ್ಣಯಿಸುವ ಭಾರವನ್ನು ವಹಿಸಿಕೊಂಡರು (ಪಂಕ. II. ೯೦). ೨. ಒತ್ತೆಯಾಗಿ ಒಡ್ಡು; ಒಪ್ಪಿಸು: ಇವರು ಒಂದು ಹಗಲೆಲ್ಲ ಅನ್ನ ನೀರು ಇಲ್ಲದೆ ತಮ್ಮ ಪ್ರಾಣವನ್ನೇ ಬಾಜಿಕಟ್ಟಿ ಹಿಂಬಾಲಿಸಿದ ಮೇಲೆ, ಕಳ್ಳರು . . . ಮೊಕ್ಕಾಂ ಮಾಡಿದರು (ಕಕಾ. IX. ೬೩).

[ಬಾಜಿ + ಕಟ್ಟು₁]

**ಬಾಜಿಗ** (ನಾ). ವಾದ್ಯಗಾರ ; ವಾದಕ : ಮೊಳಗಿತು ಬಾಜಗರಲ್ಲಿ ಬಾಜಿಸಲ್ ಶುಭವಾದ್ಯ (ಜಿನಾಕ. ೯೨-೭೭).
[<ಬಾಜಾ + – ಇಗ./ತುಳು. ಬಾಜಿಗೆ]

**ಬಾಜಿಸು₁** 'ಬಾಚಿಸು₁' ನೋ.

**ಬಾಜಿಸು₂**, **ಬಾರಿಸು₂** (ಕ್ರಿ). ವಾದ್ಯವನ್ನು ನುಡಿಸು.–ಧ್ವನಿಮಾಡುವಂತೆ ಬಡಿ : ದೇವಲೋಕದ ಪಟಹಂಗಳಂ ಬಾಜಿಸುತ್ತಂ . . . ಇಂತೆಂದು ಪೇಟ್ದಿಡಿದಂ (ಪಞ್ಚಾತಂ. ೪೪-೭) ; ಸುರಸುದತಿ ಪೆಱರ್ ವೆಱದು ಬೀಣೆಯುಂ ಬಾಜಿಸಿದರ್ (ಅಂಪು. ೭-೨೦) ; ಆ ಸುರದ್ರುಮಕುಸುಮ ಕೊಯ್ಕದೆ ಸೂಸಿದವು ಬಾಜಿಸದೆ ಮೊಳಗಿದವಾ ಸುರಾನಕವು (ಶಾಕ್ಕ್ತಾ. ೩೭-೬). **ಬಾರಿಸು₂** : ದಾರಿಸುವ ಕೆಂಬು ಮದ್ದಳೆ ಘಂಟೆಯೊಂದುಗೆಯ ಘೋರತರರಭಸದಲಿ . . . ಎಯ್ದುಂದರು (ಸಿದ್ಧರಾ. ೬-೯೪) ; ರಾಜಕುಮಾರಿ ವೀಣೆಯನ್ನು ಬಾರಿಸಲಾರಂಭಿಸಿದಳು (ಬಾಣಿ. ೧೦).
[ಬಾಜನ್ನೆ + – ಇಸು₂./ತುಳು. ಬಾರಿಸು; ತೆಲು. ವಾಯಿಂಚು]

**ಬಾಜೀಬಂದು** 'ಬಾಜುಬಂದ' ನೋ.

**ಬಾಜು**, **ಬಾಜೂ** (ನಾ). ೧. ತೋಳು ; ಭುಜ. ೨. ಪಕ್ಕ; ಮಗ್ಗುಲು; ಪಾರ್ಶ್ವ : ವಿಕ್ರಮನ ಬಾಜುಯಲ್ಲಿ ತಾನೂ ಮಲಗಿ ನಿದ್ರೆಯಂ ಗೆಯ್ಯಲು (ವಿಕ್ರಮಾ. ೦೩); ಮರವ್ನ ಯಾರದೋ ಮಾರ್ಗಪ್ರತೀಕ್ಷೆ ಮಾಡುತ್ತ ತನ್ನ ಮನೆಯ ಬಲ ಬಾಜುವಿನ ಕಟ್ಟೆಯ ಮೇಲೆ ನಿಂತಿದ್ದಾಳೆ (ಗಂಗಾಗ. ೬೪). ೩. ಪಕ್ಷ ; ಪರ : ಆ ಮುಂದಿಹದ್ದು ತನ್ನ ಮಗನ ಬಾಜು ಹಿಡಿದು ನನ್ನನ್ನು ದೂಡಬೇಕೆಂದ (೩೬ಪತಾ. ೭೮) ; ಅವರು ಚಂದ್ರಭಾಗಕ್ಕನ ಬಾಜು ಹಿಡಿದು . . . ಭೀಮಾರೀ ಹಾಕಿದರೆ ಚಂದ್ರಭಾಗಕ್ಕನ ಪಾಡು ನಾಯಿ ಪಾಡಾಗುತ್ತಿತ್ತು (ಮೂರುರಾ. ೬೬). **ಬಾಜೂ** : ೨. ಆನೆಗೆ ಬಾಜೂ ಘಂಟೆಗೆ ಕಬ್ಬಿಣದ ಸರಪಣಿ ಸಹಾ ಪೋಣಿಸಿರುವ ಹಿತ್ತಾಳೆ ಸರಪಣಿ ೧ (ಎಪಿ. XIV. ಹುಣಸ. ೨೫೨-೯೩; 1847); ಎಡಬಲದ ಎರಡು ಬಾಜೂದಲ್ಲಿಯೂ ಒಡ್ಡುಹಾಕಿಸಬೇಕು (ಕೃಷಿಶ್ರ. ೩೩) ; ವಿವಾಹಕಾಲದಲ್ಲಿ ಅಂತಃಪಟವನ್ನು ಹಿಡಿದಿರುತ್ತಾರೆ. ಕೊನೆಗೆ ಚಪ್ಪಾಳೆ ಹೊಡೆದ ಕೂಡಲೆ ಬಾಜೂಕ್ಕೆ ಸರಿಸುತ್ತಾರೆ (ಭಾರಸಂ. ೩೨೩). ೪. ದಿಕ್ಕು ; ಕಡೆ : ಭಾಳ ದಿನಾ ಆತು ನೀವು ಈ ಬಾಜೂಕು ಬಂದು ! (ಬಿರ್. ೬೬೨).
[←ಪಾರ. ಹಿಂ. ಮರಾ. ಬಾಜೂ]

**ಬಾಜುಬಂದ**, **ಬಾಜೀಬಂದು**, **ಬಾಜುಬಂದಿ**, **ಬಾಜುಬಂದು**, **ಬಾಜೂಬಂದು** (ನಾ). ಸ್ತ್ರೀಯರು ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ; ತೋಳುಬಂದಿ : ಕೈಗಳಲ್ಲಿ ರತ್ನಜಡಿತ ಕಂಕಣಗಳು, ಭುಜದಲ್ಲಿ ಬಾಜುಬಂದಗಳು ಒಪ್ಪುತ್ತಿದ್ದವು (ಚಿಕಾ. ೦೦೬); ವಜ್ರದ ಬೆಂಡೋಲೆ ಮುತ್ತಿನ ಕಂಠಿ ಬುಮ್ಮ ಬಾಜುಬಂದ ನಾಗಮುರಿಗೆ (ಸಿದ್ಧಶ್ರೀ. ೧೯-೬೬). **ಬಾಜೀಬಂದು** : ನಾಗಮುರಿಗೆ, ವಂಕಿ, ಬಾಜೀಬಂದು . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮುಕುಮ. ೩೪). **ಬಾಜುಬಂದಿ** : ವಂಕಿಯು ಭಾವುರಿ ಕಂಕಣಗಳುಲಿಯೆ ಬಾಜುಬಂದಿ ನೆರವಿನ ಮಣಿ ಸಿರಿಯೆ (ಕುಕೀಲೋ. ೦೨೬). **ಬಾಜುಬಂದು** : ತೋಳಗೊಂಕಿ ಬಾಜುಬಂದು ಗೊಂಡೆಗಳು (ಕವಿಕ. ೨೮೬). **ಬಾಜೂಬಂದು** : ತೋಳಿಗೆ ಬಾಜೂಬಂದು, ಕತ್ತಿನಲ್ಲಿ ಅಡ್ಡಿಕೆ (ಹುಲ್ಲ. ೯೦).
[←ಪಾರ. ಹಿಂ. ಬಾಜೂಬಂದ್ ; ಮರಾ. ಬಾಜುಬಂದ, ಬಾಜೂಬಂದ]

**ಬಾಜುಬಂದಿ** 'ಬಾಜುಬಂದ' ನೋ.

**ಬಾಜುಬಂದು** 'ಬಾಜುಬಂದ' ನೋ.

**ಬಾಜೂ** 'ಬಾಜು' ನೋ.

**ಬಾಜೂಬಂದು** 'ಬಾಜುಬಂದ' ನೋ.

**ಬಾಜೆ₁** 'ಬಾಜಾ' ನೋ.

**ಬಾಜೆ₂** (ಗು). ಚಿಲ್ಲರೆಬಾಬುಗಳನ್ನೊಳಗೊಂಡ ; ಸಾದಿಲ್ವಾರಿಗೆ ಸೇರಿದ : ಚಿಲರ ಬಾಜೆಬಾಬು ಬೇರೀಜು ಮೇರೆ (ಪ್ಮಿಲಿ. ೧೯೩೮. ೨೦-೦೬; 1817) ; ಬಾಜೆಬಾಬುಗಳು ಸಹಾ ಯಾವತ್ತೂನ್ನೂ . . . ಅನುಭವಿಸು ವದೂ (ಪ್ಮಿಲಿ. ೧೯೩೯, ೯೨-೯೬ ; 1825). [ ← ಮರಾ. ಬಾಜೇ]

**ಬಾಜೆಬಜಾವಣೆ** (ನಾ). ಹಲವಾರು ಬಗೆಯ ವಾದ್ಯಗಳ ಮೇಳ ವಾದನ : ಮದುಮಕ್ಕಳನ್ನು ಬಾಜೇಬಜಾವಣೆಗಳೊಂದಿಗೆ ಮೆರೆಯಿಸುತ್ತ . . . ನಿಬ್ಬಣ ಹೊರಡಿಸಿದರು (ಹೂರಿ. ೦೪).
[ಬಾಜೆ₁ (< ಬಾಜಾ) + ಬಜಾವಣೆ]

**ಬಾಟಲಿ** 'ಬಾಟಲು' ನೋ.

**ಬಾಟಲು**, **ಬಾಟಲಿ** (ನಾ). ಗಾಜಿನ ಸೀಸೆ ; ಕುಪ್ಪಿ : ಎಳು ಬಾಟಲು ಬ್ರಾಂದಿ ಮೊದಲೇ ತರಿಸಿ ಇಟ್ಟುಕೊಂಡಿದ್ದೆವು (ಶಂಗಾಕೆ. ೬). **ಬಾಟಲಿ** : ನನ್ನ ಶಾಂಪೇನ್ ಬಾಟಲಿ ಎಲ್ಲಿ ಆದ ? (ಮೋಹಿನಿ. ೫೬) ; ಬಾಟಲಿ ಕೊಟ್ಟು ಕಳಿಸಿರಿ. ಔಷಧ ಕೊಡುವೆ (ಅಕೋಳ. ೨೪). [← ಇಂ. Bottle]

**ಬಾಟಾ** 'ಭಾಟಾ' ನೋ.

**ಬಾಟಾಮಾರ್ಗ** 'ಭಾಟಾಮಾರ್ಗ' ನೋ.

**ಬಾಟಿ** (ನಾ). ೧. ಒಂದು ಬಗೆಯ ರೊಟ್ಟಿ : ಎಲ್ಲರೂ ದೂರದಲ್ಲಿ ಬದಿಯಲ್ಲಿ ಕುಳಿತು ಬಾಟಿ ತಿನ್ನುತ್ತಿದ್ದರು (ಹೂಸಮೇ. ೨೮೪). ೨. ಜೋಳದ ತೆನೆ : ಸುಗ್ಗಿಯ ಪೂರ್ವದಲ್ಲಿ ಕೂಲಿಕಾರ ಜನರು . . . ಹೊಲಗಳಲ್ಲಿಯ ಬೆಳೆಗಳನ್ನು ಕೊಯ್ದು, ಬಾಟೀ ಮಾರಿ ಬಹಳ ರೊಕ್ಕ ಗಳಿಸುವರು (ಕಥಾಗ. ೯೩೪) ; ನಾನು ಕೈಯಲ್ಲಿ ಕುಡಗೋಲು ಹಿಡಿದು ಬಾಟಿ ಕೊಯ್ಯುವವ (ಬಾಣಂ. ೫೦). [ ← ಹಿಂ. ಮರಾ. ಬಾಟೀ]

**ಬಾಟು** (ನಾ). ಎತ್ತರದಲ್ಲಿ ಸಪಾಟಾಗಿದ್ದು, ವ್ಯವಸಾಯಯೋಗ್ಯ ವಾಗಿರುವ ಭೂಮಿ : ಸ್ಥಳದ ಪೂರ್ವದ ಮಾನ್ಯ ಆಯ ಸ್ವಾಮ್ಯ ಬಾಟು ಬೋಟು ಸಹ ತೂಗುಗಟ್ಟಿಕೆ ಸಲುವ ಉಪಗ್ರಾಮರ್ ಹಳಿ ಸಹ . . . ಅನುಭವಿಸಿಕೊಣ್ಣು (ಎಪಿ. XII. ತುರ್ವ೧. ೯೩-೬; 1634 ?).
[← ಹಿಂ. ಭಾಟ್, ಭಾಠ್ ; ಮರಾ. ಭಾಟ್]

**ಬಾಟೆ** 'ಭಾಟಾ' ನೋ.

**ಬಾಡ**, **ಬಾಡ**, **ವಾಡ**, **ವಾಡೆ₂** (ನಾ). ೧. ಹಳ್ಳಿ ; ಗ್ರಾಮ : ಇಂತಗ್ರಾಸನಮನುಣುತ್ತಮಬುವತ್ತುಬಾಡಮನಾಳುತ್ತಂ ಸುಖಸಂಕಥಾ ವಿನೋದದಿಂ ಕಾಲಂ ಸಲೆ (ಪಞ್ಚಾತಂ. ೦೬೩-೦೨) ; ಅವರ್ಗೀವುದೊಳ್ಳು ನಿಲೆ . . . ಅಯ್ದು ಬಾಡವಂ (ಪಂಪಭಾ. ೯-೯೩) ; ಸಂಧಿಗೆಯುಲ್ಕೆ ಬೇಡಿದರೆ ಪಾಂಡುತನೂಭವರಯ್ದುಬಾಡವಂ (ಗದಾಯು. ೩-೨೦). ೨. ಒಂದು ಊರಿನ ಹೆಸರು : ಕಟುಯೂರ ಜಾದಿಯೂರ ಕೊಡಂಗನೂರ ಬಾಡದ ಮಹಾಜನವುಂ (ಎಪಿ. XI. ಚಿತ್ರದು. ೬೪-೨೮; 968) ; ಕದಂಬಳಿಗೆ ಸಾಸಿರದ ಬಳಿಯಗ್ರಹಾರ ಬಾಡದ ಶ್ರೀನಾರಾಯಣದೇವರ್ಗ್ಗೆ ನಿವೇದ್ಯಕ್ಕೆ . . . ಬಿಟ್ಟ ಗಟ್ಟಿಯ ಕವ್ಮ ೨೩೩ (ಎಪಿ. XI. ದಾವಣ. ೦೧೦-೦೩; 1060). ೩. ಕೆಲವು ಊರಿನ ಹೆಸರುಗಳ ಕಡೆಯಲ್ಲಿ ಸೇರುವ ಶಬ್ದ : 'ಗಂಗವಾಡ' ಪರಾ. **ಬಾಡೆ** : ೪. ಮನೆ ; ನಿವಾಸ : ಅವಳು ಆ ರಾತ್ರಿ ನೆಲಕ್ಕಿ ಬಾಡೆಯಲ್ಲಿ ಬೆಳಗುತ್ತಿದ್ದ ದೀಪಕ್ಕೆ ನಮಸ್ಕರಿಸಿ . . . ಮಟ್ಟಿಲಿಳಿದಳು (ಹುಂಡಾ. ೦೩). ೫. ಹಜಾರ : ನಡುಮನೆ : ಅತ್ತ . . . ಗಂಡನನ್ನೂ ಮಗನನ್ನೂ ಕರೆದುಕೊಂಡು ಬಂದು ಬಾಡೆಯಲ್ಲಿ ಊಟಕ್ಕೆ ಕುಳಿತರು (ಮುಸಳಾ. ೯೯). **ವಾಡ** : ೬. ದನಗಳ ಹಟ್ಟಿ ; ಕೊಟ್ಟಿಗೆ : ವಾಡ-ವಾಡಿ ಪದಕ್ಕೆ ಗೋವುಗಳ ಹಟ್ಟಿ, ಎಂದರ್ಥ (ಕವಾರಟ. ೯೯). 'ಕೊಂಡವಾಡ' ಹೋ. **ವಾಡೆ₂** : ೪. ಅವರು . . . ಹಳೇ ಹುಬ್ಬಳ್ಳಿಯ ಒಂದು ಮೂಲೆಯೊಳಗಿನ ಒಂದು ವಾಡೆಯಲ್ಲಿ ಒತ್ತಟ್ಟಿಗಿನ ಒಂದು ಕೋಣೆಯನ್ನು ಬಾಡಿಗೆ ಹಿಡಿದರು (ಮೋಚಿಜ. ೩).

೭. (ಅರಸರು, ಜಮೀನುದಾರರು ಮುಂತಾದವರು ವಾಸಿಸುವ) ಭವ್ಯವಾದ ಗೃಹ ; ಪ್ರಾಸಾದ ; ಭವನ : ದೊಡ್ಡ ವಾಡೆಯಂತಿಪ್ಪ ಮನೆ ಅವರದು. ಅದಕ್ಕೊಂದು ಮಹಾದ್ವಾರ (ಸಮುಜೀ. ೦೨೪) ; ವಾಡೆಯ ಹೆಬ್ಬಾಗಿಲಿನ ಭವ್ಯವಾದ ಹೊಸ್ತಿಲನ್ನು ಅವಳಿನ್ನೂ ದಾಟಿರಲಿಲ್ಲ (ಗ್ರಾಮಾಯ. ೬). 'ವಾಡ್ಕಿ' ಪರಾ.

[< ಸಂ. ವಾಟ./ತಮಿ. ವಾಟ್ಟಿ. ಮಲ. ವಾಡ ; ಕೊಡ. ಬಾಡ ; ತೆಲು. ವಾಡ = ಮನೆಗಳ ಸಾಲು. / ಮರಾ. ವಾಡ, ವಾಡಾ]

**ಬಾಡಗ** (ನಾ). ತೋಟ ; ವನ : "ವಾಟಕಮೆನೆ ಬಾಡಗವುದು" (ಶಮಂ. ೦೮). [< ಸಂ. ವಾಟಕ]

**ಬಾಡಗೆ, ಬಾಡಿಗೆ, ಭಾಡಿಗೆ** (ನಾ). ಮನೆ, ಕೊಠಡಿ, ಯಂತ್ರ ಮೊದಲಾದುವುಗಳನ್ನು ನಿಯಮಿತ ಅವಧಿಗೆ ಉಪಯೋಗಿಸಿಕೊಳ್ಳುವವನು, ಅವುಗಳ ಒಡೆಯನಿಗೆ ಕೊಡಬೇಕಾದ ಹಣ : "ಭಾಟಕಃ, ಅವಕ್ರಯಃ–ಈ ೨ ಬಾಡಗೆ" (ಹಲಾಯು. ೯೮-೯೦೪) ; ಕೆಯ್ಯ ಗುತ್ತಗೆಯಿಂ ಮನೆಯ ಬಾಡಗೆಯಿಂ ವಿಶೇಷಂ ಗದ್ಯಾಣ ಧರಣವಾಗಿಯುಳೆದಡೆ ಪಸಿದು ಬಂದವರ್ಗಂಬಲಿಯ ಸತ್ರವಂ ನಡೆಯಿಸುವರು (ಕಶಾಸ. XX, ೦೦೦–೫೯; 1130) ; ಬಾಡ[ಹಾಕಾ. ಡಿ]ಗೆಯು ಮನೆಗೆ ಹೊಯಿದಾತರೇಶಕ್ಕೆ (ಶೋಕೆಮ. ೬-೨೪) ; ಕೊಳೆಚೆಯುದಕಕೆ ಕೊಂಬುದೇ ಹಜಗೋಲ ಬಾಡಗೆಯ (ಶುಪ್ಪಾ.ಳ. ೨೭-೪೦). **ಬಾಡಿಗೆ** : ರೋಗರ ಕಾರ್ಯಕ್ಕೆ ಬಿಡಿದು ಕೊಳ್ವ ಬಾಡಿಗೆಯು ಮನೆಗೆ ತಿವಿದುಕೊಳ್ವ . . . ಕಟ್ಟಿಗ್ಗರಂತೆ (ಭರ್ತೋಜು. ೯-೦೬೨); ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ (ಪುರಂದ. ೦-೦೫-೦) ; ಬಾಲಕರಿಲ್ಲದ ಬಾಲೆಯದು ಯಾತರ ಜನ್ಮ ಬಾಡಿಗೆ ಎತ್ತು ದುಡಿದ ಹಾಗೆ (ಜಸಾ.ಜಾ. ೭೪). **ಭಾಡಿಗೆ** : ಪೊಂದು ತೇಣ ಮನೆಗೆ ಮಾಡಿದ ಯರಡು ವಸರದ ಭಾಡಿಗೆಯುಂದ . . . ದಿನ ೧ ಕೆ ಸೊಲ್ಲಿಗೆ ತೆಂಗಿನ ಯೆಂಣೆ (ಕಶಾ. III-1. ೦೪-೩೦; 1545); ಸಾಹೇಬರು . . . ಆ ಜಾಗಾ ಭಾಡಿಗೆಗೆ ಪಡಕೊಂಡರಂತೆ (ಅಕಜಾ. ೦೦೪).

[< ಸಂ. ಭಾಟಕ./ತಮಿ. ವಾಟಕ್ಕೆ; ಮಲ. ವಾಡಕ. ತುಳು. ಬಾಡಿಗೆ, ಬಾಡಾಯಿ; ತೆಲು. ಬಾಡಿಗೆ, ಬಾಡಿಗ. ಬಾಡುಗ./ಮರಾ. ಭಾಡೇ]

**ಬಾಡಗೆಕಾಜಿ** (ನಾ). ಕೂಲಿಗೆ ಗೊತ್ತುಮಾಡಿಕೊಂಡ ಆಳು ; ಹಣವನ್ನು ಕೊಟ್ಟು ನೇಮಿಸಿಕೊಂಡವನು : ಬಾಡಗಕಾಜಿ ನನ್ನ ಸ್ತ್ರೀಯೆನಲು ತವರೂರಲ್ಲಿರ್ದ ಜಾರ ನನ್ನ ಸ್ತ್ರೀಯೆನಲು . . . ಅವಳ ಸೀಳಿ ಎರಡು ಹೆಣ್ಣುಗಳ ಮಾಡಿಯುವರಿಬ್ಬರಿಗೆ ಕೊಟ್ಟು (ಕೃಕಸೂ. I, ೩೩೬). [ಬಾಡಗೆ + – ಕಾಜಿ ]

**ಬಾಡಗೆಗೊಳ್** (ಕ್ರಿ). ಬಾಡಿಗೆಯನ್ನು ಕೊಡುವ ಕರಾರಿನಿಂದ ವಸ್ತುವನ್ನು ಪಡೆ : ಕೆಲವತ್ತಂ ಬಾಡಗೆಗೊಂಡು ಭಂಡಮಂ ಪೇಱ . . . ಪೆರ್ವಟುವಿನೊಳ್ ಬಟ್ಟಲ್ಲಿ (ಶಂಹಿ. ೯-೦೦ ವ). [ಬಾಡಗೆ+ಕೊಳ್]

**ಬಾಡಬ** (ನಾ). ೧. ಕುದುರೆ ; ಅಶ್ವ : ಶ್ರೀರಾಮಚರಿತಮಂ ಕೇಳಿಸಲೊಡಂ ಬಾಡಬಂಗಂ ಬಾಡಬಕ್ಕಂ ವಿಮೋಚನಮಕ್ಕುಂ (ಶಾಶವಿ. ೦೬–೯). ೨. ಕಡಲೊಳಗಿರುವ ಕುದುರೆಯ ಮುಖದಿಂದ ಹುಟ್ಟಿದುದೆಂದು ನಂಬಲಾದ ಬೆಂಕಿ; ಔರ್ವಾನಳ; ಕಡಲ್ಗಿಚ್ಚು : "ಔರ್ವಃ, ಸಮುದ್ರವಹ್ನಿಃ, ಬಾಡಬಃ, ಬಡಬಾಮುಖಃ — ಈ ೪ ಸಮುದ್ರದ ಕಿಚ್ಚು" (ಹಲಾಯು. ೦೩-೬೦); ಭವಗರ್ವರಸಜೀವನಿಧಿಬಾಡಬ ಉಮಾವಲ್ಲಭ (ಶೀಕೃ.ಕೃ. ೩-೦೦-೦); ನೊರಜು ಬಾಡಬನುವರವಂಪುದೆ (ಅಶ್ವ.ಳ. ೨೩-೦೪). ೧. ೨ : ಆ ಮಹಾರ್ಣವಂ . . . ಮದ್ಯಜಸ್ಥಾನಮಾಗಿಯುಂ ಬಾಡಬೋಪಭೋಗಯೋಗ್ಯಮುಂ . . . ಎನಿಸಿದುದು (ಶಗಮ. ೦–೪೪ ವ). ೩. ಹಾರವ; ಬ್ರಾಹ್ಮಣ ; ವಿಪ್ರ : "ಬ್ರಾಹ್ಮಣಂ ಬಾಡಬಂ ಭೂಮಿದೇವಂ ದ್ವಿಜಂ" (ಶುಂಗಶಾ. ೬೩-೦); ಆ ಕಲ್ಲಿದೇವಯ್ಯ

. . . ಆ ಬಾಡಬರ್ಗಿಂತೆಂದು ನುಡಿದನು (ಬಸಪು. ೩೩–೩೬); ಘೋರನೆಬಂದು ತುಱುಗಿರ್ದ ಜನರು ಬಾಡಬರು ವೈಷ್ಣವರು ತನತನಗಿದು ಚೋದ್ಯವೆನುತ ಪೇಗಿಸ ಕೋಪ ಕೊನರಿತು ಭೈರವಾಂಕನಿಗೆ(ಭೈರವೇ. ೩–೩೦). ೪. [ಕಾಮಶಾ] ರತಿಕ್ರೀಡೆಯಲ್ಲಿ ಒಂದು ಬಗೆ : 'ಬಾಡಬಕರಣ' ಪರಾ. [ಸಂ.]

**ಬಾಡಬಕ** (ನಾ) = ಬಾಡಬ ೪ : ಅಗಲಿರ್ದ ಸ್ತ್ರೀ ತನ್ನಯ ಯೋನಿಯ ಇರ್ದಿಶೆಯಂ ಸಂಪುಟಂಗಳಿಂ ಪುರುಷನ ಲಿಂಗವೇಳದಿರ್ದೊಡೆಯಲ್ಲಿ ಈ ಸ್ತ್ರೀಯಿಶಾ ಕರಣದಿಂದೊತ್ತಲ್ಕೆ ರವಿಸೋದು ಬಾಡಬಕಂ (ಕಾಮಶಾ. ೨೬೩). [ಸಂ.]

**ಬಾಡಬಕರಣ** (ನಾ). = ಬಾಡಬ ೪ : ಪುರುಷನ ವಶಾಕಿಯೊಳಗಿರೆ ಮಾಗುಳ್ದು ಮಲಗಿರ್ದ ಗುರುಕುಚೆಯುತನುಗ್ರಹದೆರಡುಕಡೆಯೊಳು ಒಂದಿದೊತ್ತಲವಗೆಸ್ಟಮಿರವಣಿಸಿ ನೆರವುತಿಪ್ಪರವದೇ ಬಾಡಬಕರಣಂ (ಶಪಶ. ೯-೦೪). [ಸಂ.]

**ಬಾಡಬಕ್ಕ, ಬಾಡಬಾಕ, ಬಾಡಬಾಕು, ಬಾಡುಬಕ್ಕೆ, ಬಾಡುಬುಕ್ಕ** (ನಾ). ೧. ಒಂದು ಬಗೆಯ (ದ್ವಿದಳಧಾನ್ಯದ) ಬಳ್ಳಿ: "ಬಾಡಬಕ್ಕ, ಬಾಡುಬುಕ್ಕಬಳ್ಳಿ" (ಶಸ್ತ್ರ.ಶಿ. ೦೦೦); (ವೃ.ಶಿಗಿ. ೬೩-೦೬೦೪). ೨. ಒಂದು ಬಗೆಯ ಮುಳ್ಳುಗಿಡ : ಚರ್ವಿತಚರ್ವಣಲಬ್ಧವಾದ ವರ್ಣನೆಗಳನ್ನು ತುರುಕಿ, ಸಾಹಿತ್ಯ ಸೀಗೆ ಗಜ್ಜುಗ ಬಾಡಬಕ್ಕಗಳ ಕಗ್ಗಾಡಾಗುವಂತೆ ಪರಿವರ್ತಿಸುತ್ತಾರೆ (ಶಂಶುಂಶ. ೯೯). **ಬಾಡಬಾಕ** : ೧. ಬಾಡಬಾಕನ ಸೊಪ್ಪಂ ನೀರಿಂ ಅರೆದು ಎಣ್ಣೆಯಾಗಲಿ ಹಸುವಿನ ತುಪ್ಪವಾಗಲೀ ಕೂಡಿಸಿ ಅಜುದಿನ ಕೊಂಡರೆ ಅಂಡವಾತ ಮಾಣ್ಗುಂ (ಅಶ್ವ.ಶಿ. ೬೩). **ಬಾಡಬಾಕು** : ೨. ಬೆತ್ತ ಕೆಂಜಿಗೆ ಸೀಗೆ ಗಜುಗ ಬಿದಿರು ಮುಳ್ಳುಮುತ್ತುಗ ಬಾಡಬಾಕುಗಳು (ಕ್ಷಾ.ಸಕ. ೦೦-೨೩). **ಬಾಡುಬಕ್ಕೆ** : ೨. 'ಬಾಡುಬಕ್ಕೆ ಮುಳ್ಳು' ಎಂಬ ಚೂಪಾದ ಕೊಕ್ಕೆಯ ಮುಳ್ಳುಂಟು. ಇದಕ್ಕೆ ಮೈ ತಾಗಿದರೆ ಒಂದಿಷ್ಟಾದರೂ ಬಾಡು ಕಿತ್ತು ಬರದೆ ಇರುವುದಿಲ್ಲ (ಪಹ್ನೂರು. ೩೪೬). **ಬಾಡುಬುಕ್ಕ** : ೧. "ಬಾಡಬಕ್ಕ, ಬಾಡುಬುಕ್ಕಬಳ್ಳಿ" (ಶಸ್ತ್ರ.ಶಿ. ೦೦೦). [ ? ]

**ಬಾಡಬಾಕ** 'ಬಾಡಬಕ್ಕ' ನೋ.

**ಬಾಡಬಾಕು** 'ಬಾಡಬಕ್ಕ' ನೋ.

**ಬಾಡಬಾಗ್ನಿ** (ನಾ). = ಬಾಡಬ ೨ : ಹಿಡಿದು ಬಲುಹಿಂ ಕಡಲ ಕುಡಿಸುವ ಬಾಡಬಾಗ್ನಿಯನು (ಕೌಶಿಕ. ೦೩–೯೨); ಕಾಲಾಗ್ನಿ ಬಾಡಬಾಗ್ನಿ ಪಾಷಾಣಾಗ್ನಿ ವೈದ್ಯುತಾಗ್ನಿ ಸೂರ್ಯಾಗ್ನಿ ಎಂಬ ಸೂಕ್ಷ್ಮಬಿಂದುರೂಪ ಪಂಚಾಗ್ನಿ ಧ್ಯಾನಯುಕ್ತನಾಗಿ (ಅಶೀಳ. ೦೨೬). [ಸಂ.]

**ಬಾಡಬಾನಲ, ಬಾಡಬಾನಳ** (ನಾ). = ಬಾಡಬ ೨. **ಬಾಡಬಾನಳ** : ಪರಸೈನ್ಯಸುಭಟಮಹಾರ್ಣವಕೆ ಬಿಡು ನಿನ್ನ ವಿಶ್ವವಬಾಡಬಾನಳನ (ಶುಪ್ಪಾ.ಕ್ರೋ. ೦-೦೬). [ಸಂ.]

**ಬಾಡಬಾನಳ** 'ಬಾಡಬಾನಲ' ನೋ.

**ಬಾಡಬೇಯ** (ನಾ). ಎತ್ತು; ವೃಷಭ : "ಉಕ್ಷಾ . . . ಬಾಡಬೇಯಃ, ಶಾಕ್ವರಃ — ಈ ೧೧ ಯೆ(ಎ)ತ್ತು" (ಹಲಾಯು. ೪೯–೦೦೬). [ಸಂ.]

**ಬಾಡವ** (ನಾ). ೧. ಕುದುರೆ; ಅಶ್ವ : ಬಾಡವಂಗಳಂ ಹಂಸೆಗಳಂ . . . ಅಂಬರಚರೇಶ್ವರ ಪ್ರಭು ಮಗಳ್ಗೆ ಬಟ್ಟವಟ್ಟೆಗೊಟ್ಟಂ (ಶರ್ಣವಃ. ೩–೯೯). ೨. = ಬಾಡಬ ೨ : ಕೃತ್ರಿಮಸೌಪ್ಯದಿಂ ಸಲಿಲಮುಮಂ ಬಾಡವನು ಮನೊಳಕೊಂಡ ಕಡಲನರಸಂ ಪೋಲ್ಗುಂ (ಅಂಜಾಪ. ೯-೬) ; ಥಾಂಧಿಯೊಳಡಗಿ ನಿದ್ರಿಪ ಬಾಡವವೊ ತೃಷ್ಣೆ (ಶುಂಕುಳ. ೨೬೬). ೧. ೨ : ಧುರದೊಳ್ ಶೂದ್ರನೂರ್ಜಿತಶಾತ್ರಚಯದಿಂ ಧೈರ್ಯಾಶ್ರಮಕ್ಷತ್ರಿಯುಂ ಪರಸೈನ್ಯಾಂಬುಧಿ ಬಾಡವಂ ದಲ್ ಅದಜೆಂ ತಾಂ ವರ್ಣಸಾಂಕರ್ಯಮಂ ನರಸಿಂಹಂ

ತಳೆದಿರ್ದನ್ (ಎಪಿ. V. ಕೇಲೂರು. ೧೪೩-೪೦; 1161). ೩. ಬ್ರಾಹ್ಮಣ; ವಿಪ್ರ : "ಬ್ರಾಹ್ಮಣಃ, ಬಾಡವಃ, ವಿಪ್ರಃ . . . ದ್ವಿಜಃ — ಈ ೧೦ ಬ್ರಾಹ್ಮಣಂ" (ಕಠಾಯು. ೬೩-೨೩೭). [ಸಂ.]

**ಬಾಡವಾಗ್ನಿ** (ನಾ). = ಬಾಡಬ ೨ : ತವೆ ಕಡಿಯಲ್ಕೆಣೆಯದು ಬಾಡವಾಗ್ನಿ ಪೋಗೆಂದು ಕುಂಭಸಂಭವಕೋಪಾಗ್ನಿ ವಿಯತ್ತಳದಿಂ ಕಿಡಿ ವಿಡುತುಮಿರ್ಪವೊಲ್ಪವನನವರಜಳನಿಧಿಗಿಟ್ಟಿದಂ (ಜಗನ್ನಾ. ೬-೦೪). [ಸಂ.]

**ಬಾಡವಾನಳ** (ನಾ). = ಬಾಡಬ ೨ : ಬಾಡವಾನಳಾವಿಳಜಳವುಂ ಮನಂ ಬಯಸಿ ನೋಡಿದರ್ನರ್ಣವಮಂ ಗುಣಾರ್ಣವಂ (ಶಂಕಠಾ. ೪-೨೩). [ಸಂ. ಬಾಡವಾನಲ]

**ಬಾಡವೆ** (ನಾ). ಬ್ರಾಹ್ಮಣ ; ಹಾರವ : ಕನ್ನಡ ಯಾತ್ರಿಕರು ಪಂಢರ ಪುರಿಗೆ ಹೋದಾಗ ಅಲ್ಲಿನ ಬಾಡವೆಗಳು ಅದೇ ಸ್ತಂಭವನ್ನು ದಾಸರ ಸ್ತಂಭವೆಂದು ತೋರಿಸುತ್ತಾರೆ (ಕಅಂ. ii, ಋಟ್ಟು೩). [ಸಂ. ಬಾಡವ]

**ಬಾಡಿಗೆ** 'ಬಾಡಗೆ' ನೋ.

**ಬಾಡಿಗೆದಾರ** (ನಾ). (ಮನೆ ಮೊದಲಾದುವನ್ನು) ಬಾಡಿಗೆಗೆ ಹಿಡಿದಿರುವವನು : ಈ ಸಲ ಬಾಡಿಗೆದಾರರ ಪೈಕಿ ನಾರಾಯಣನು . . . ತುಂಬಾ ಕಂಗಾಲಾಗಿ ಹೋಗಿದ್ದನು (ಶಂಕಟು. ೦೨೨). [ಬಾಡಿಗೆ (< ಬಾಡಗೆ) + — ದಾರ್]

**ಬಾಡಿಗೆಮನೆ** (ನಾ). ಬಾಡಿಗೆ ಕೊಡುವ ಕರಾರಿನಿಂದ ಪಡೆದ ಮನೆ : ಶ್ಯಾಮಲಾಲರು . . . ಕಲಕತ್ತೆಯ ಬಾಡಿಗೆಮನೆಯಲ್ಲಿ ಹೆಂಡತಿ ಬೇಗ ರೊಡನೆ ವಾಸಿಸುತ್ತಾರೆ (ಶಂಅಂ. ೦೪೪) ; ಬಾಡಿಗೆಮನೆ, ಕೂಡಿಕೆಹೆಂಡರು (ಗಾರೆ). [ಬಾಡಿಗೆ (< ಬಾಡಗೆ) + ಮನೆ]

**ಬಾಡಿಸು**, **ವಾಟಿಸು** (ಕ್ರಿ). ೧. ಸೊಪ್ಪು, ತರಕಾರಿ, ಮಾಂಸ ಮುಂತಾದುವನ್ನು ಬಾಣಲಿಯಲ್ಲಿ ಹಾಕಿ ಬೆಂಕಿಯ ಮೇಲಿಟ್ಟು ಹುರಿ.— ತಾಳಿಸು : ಚಮ್ಮಟಿಗೆಗಂಶುಕಟ್ಟುಗಳಾಗಿ ಬೆಟ್ಟದರ್ ಬಾಡಿಸು ವೇಜ ಬಾಡಿಸುವ ಹೇಱುವ ಕಟ್ಟುವ ಕುಟ್ಟುವಾವಗಂ ಹೂಡುವ ದುಃಖದಿಂ ತಿರಿಕಜಾತಿಯ ಕೋಟಲೆ ಕುಂದದೊರ್ಮೆಯುಂ (ಅಪಂತ. ೯-೪೩); ಪಿಸಿತ ವನು ಕತ್ತರಿಸು ಹುರಿ ಹುರಿ ಕಾಸು ತಾಳಿಸು ಬಾಡಿಸು (ಶಾಗಪ. ೦೩-೪೩); ಈ ಕಾಯಿಪಲ್ಯಗಳನ್ನು . . . ಬೇಯಿಸುವುದು ಬೇಕಿಲ್ಲ, ಒಗ್ಗರಣೆ ಹಾಕಿ ಬಾಡಿಸಿದರೆ ಸಾಕು ! (ಪಸುಹೂ. ೩೦೦). ೨. ಕಳೆಗುಂದಿಸು ; ಒಣಗಿಸು ; ಕಂದಿಸು : ತೇಜಂ ಬಾಡಿಸುತಿರ್ಪ ರೇಪಿಯೊ ಚಿರಂ ಬಾಟ್ಯಾಸಿಯಿಂದೀ ಮಹಾರಾಜನೀರ್ಕ್ಷಿಡುವ ತೀವ್ರತೇಜದ ಮಹಾಸಪ್ತಾರ್ಚಿಗಂಡುಂ ಮಹಾ ತೇಜಂ ಭಾಸ್ಕರನಸ್ತದೊಳ್ ಕೆಡೆವುದುಂ ಕಂಡುಂ ಮಹೋಳ್ಕಂ ಜ್ವಳತ್ತೇಜಂ ಬೀಱ್ವುದುಗಂಡುಮುದ್ಧತಮಹಾಮೋಹಾಂಧಕಾರಾಂಧಕರ್ (ಅರ್ಜಚ. ೪-೩೪). ೩. ಹಪ್ಪಳ, ಉಪ್ಪಿನಕಾಯಿ, ಚಕ್ಕಣ ಮೊದಲಾದ ಪದಾರ್ಥ ಗಳನ್ನು (ಆಹಾರ ಅಥವಾ ಕಳ್ಳಿನೊಂದಿಗೆ) ನಂಜಿಕೊಳ್ಳು : ಉಪದಂಶಃ, ಅವದಂಶಃ, ಭಕ್ಷಣಂ— ಈ ೩ ಕುಡಿವುತ್ತ ಬಾಡಿಸುವುದು (ಕಠಾಯು. ೩೪-೦೬೩) ; ಕುಂಟಣಿಮಂ ನೋಣೆಗಬ್ಬೆ ತಿಂಗೆ ಬೇಗುರುಟಿ ಬಳಾರಿ ಬಾಡಿಸುಗೆ (ಅಚಾಪ. ೨-೦೦೬) ; ಮೊಸರನ್ನ ಉಂಡ ಮೇಲೆಯೂ ಹಾಗೆಯೆ ಪಲ್ಲೆಕಾಯಿ ಬಾಡಿಸುತ್ತ, ಅವು ತೀರಿದ ಮೇಲೆ ಬರಿಯ ಉಪ್ಪನ್ನೆ ಬಾಡಿಸುತ್ತ . . . ಕುಳಿತಾಗ ಬಡಿಸುವವರ ಹುಚ್ಚುನಗೆ ಕಂಡಾಗ ನನ್ನ ಊಟ ಮುಗಿದುದರ ಕಲ್ಪನೆ ಬಂದುದೂ ಗೊತ್ತಿದೆ (ಮುಂಗಾರು ೬೩). **ವಾಟಿಸು** : ೧. ಪೆರ್ಗೊಣಂಗಳಿಂ ತಗುಳ್ದೂಱಿಸಿಯುಂ ಕಾವಲಿಯೊಳಿಕ್ಕಿ ವಾಟಿಸಿಯುಂ ಇಂತನೇಕವಿಧದಂಡನೆಗಳಿಂ ದಂಡಿಸಿಯುಂ ಸೈರಿಸಲಾಱದೆ (ವಡ್ಡಾರಾಧ. ೩-೬೩). [ಬಾಡು₂ + — ಇಸು₁./ತೆಲು. ವಾಡಿಂಚು]

**ಬಾಡು₁** (ಕ್ರಿ). ೧. (ಹೂವು, ಚಿಗುರು ಮುಂತಾದುವುಗಳು) ಒಣಗು ; ಮುರುಟು : "ಬಾಡು—ಮ್ಲಾನೇ, ಮಾಂಸೇ ಶಾಕೇಚ" (ಕಶಬ್ದಾ. ೫) ; ಸಸ್ಯಾವಳಿ ಸುಗಿದುಗಿದು ಕೂಡೆ ಬಾಡಿರ್ದುದು (ಅಂಕ್ಕ. ೦೦-೬೬) ; ಹೂ ಬಾಡಿದಲ್ಲಿ ಪಂಪುಳವನಱುವರೆ (ಚಿಕ. ೦೨೭) ; ಕಟ್ಟಿಯುಮೇನೊ ಮಾಲೆಗಾಱನ ಪೊಸಬಾಸಿಗಂ ಮುಂಡಿವ ಭೋಗಿಗಲ್ಲದೆ ಬಾಡಿ ಪೋಗದೇ (ಅಪಂತ. ೦-೯೩) ; ಭಯದಲಿ ಬಾಡುವುವಲೇ ರಿಪುನೃಪಾಲರ ಮುಖಜಯಾಬ್ಜ (ಕುಮ್ಯಾಕ. ೦೨-೬೩). ೨. ಕಳೆಗುಂದು ; ಕಾಂತಿಗುಂದು ; ಮಂಕಾಗು : ಇಂದೆಮ ಗುಣಾಳ್ಕೆ ಬಗೆಯಲ್ಲುಮವಾಸುಗೆಯ್ದಪ್ಪಮೆಂದು ಪರಿಚ್ಛೇದಿಸಿ ನುಡಿದೊಡೆ ಬನ್ನನೆ ಮೊಗಂ ಬಾ[ಪಾಠಾಂ. ಮಾ]ಡಿ ಭಟಾರರಂ ವಂದಿಸಿ ಪೋಗಿ (ಚಕ್ರಾಆ. ೬೦-೦೦); ಈ ಮೊಗಮಿದಿಂತೇತರ್ಕೆ ಬಾಡಿರ್ದುದು (ಅಂಕ್ಕ. ೩-೨೩); ಅರಾತಿ ನೃಪವಕ್ತ್ರಾಬ್ಜಂ ಕರಂ ಬಾಡುಗುಂ (ಅದ್ಭುಕ. ೦೨-೬೨). ೩. ಸೊರಗು ; ಕಂಗ್ಗು : ಇಂತೀಕೆ ಬರ್ದಿ ಬಂಬಳಂಬಾಡಿ ಬಾಡಟಿದುದ್ದೆಗಂಬಟ್ಟಿರ್ದ (ಚಕ್ರಾಆ. ೩೯-೬) ; ಬಾಡಿ ಬಾಡಟಿದು ಬಟಲ್ದು ಜೋಲ್ದಿರವು . . . ಕನ್ನಡಿಸಿದಪ್ಪುವು ಕನ್ನೆಯ ಕನ್ನೇಟವಂ (ಶಂಕಠಾ. ೪-೬೦) ; ಹೊಡಿದಂದಿನ ತೋಳ ತೆಗಹಿನ ಬಾಡಿದುತ್ಸಾಹದ ವಿತಾಳದ ಬೀಡಿಕೆಯ ಬೇಳುವೆಗೆ ಬೆಬ್ಬಳೆವೋದನಾ ಪಾರ್ಥ (ಕುಮ್ಯಾಕ. ೦೯-೦೦).

[ದೇ. ೩ ತಮಿ. ವಾಟು, ವಾಟ್ಟು ; ಮಲ. ವಾಟುಕ, ವಾಟ್ಟುಕ; ತುಳು. ಬಾಡು ; ಕೊಡ. ದಾಡ್ ; ತೆಲು. ವಾಡು ; ಪರ್ಜಿ. ವಾಡ್]

**ಬಾಡು₂** (ನಾ). ೧. ಅಡಗು ; ಮಾಂಸ : "ಅಡಗು, ಬಕ್ಕು, ಬಾಡು— ಈ ೩ ಮಾಂಸಂ" (ಕಠಾ. ೩೨-೦೨೬) ; ಲೇಸಾಗಿ ಬೆಂದ ಬಾಡಂ ಬಾಸಣಿಸಿಟ್ಟದನೆಯಮೃತಮಂತಿಗಟ್ಟಿಸಿದಂ (ಜುಕೋಶ. ೩-೬೦) ; ಸಗರ್ವಿ ಛೀವುನ ಬಾಡ ಕೊಯ್ಕೊಯ್ದು ಮರುಳ ಬಳಗವ ತಣಿಸಿದಡೆ ಹಿರಿಯರಸರಲಿ ಸಂಧಾನಪೆಂಬೈ (ಕುಮ್ಯಾಗ. ೩-೨೪) ; ಜೀಮೂತವಾಹನ . . . ತನ್ನೊಡಲ ಬಾಡ ಗರುತ್ಮನಿಗಿತ್ತು ಸತ್ಕೀರ್ತಿಯ ನಾಡೊಳು ಪಡೆದುದನಱಿಯಾ (ಕೋಹಕ. ೩-೩೬) ; ಸೂಕ್ಷ್ಮದಿ ಬಾಲ ಹೆಮ್ಮಾರಿ ಕಾಲಿನಂತೋಡದಿದು ; ಹಲ್ಲಕೊಲು ಕಡಿಯದಿದು ; ನಾಲಗೆಯು ತಿರ ಬಾಡ ಸವಿ ತಿಳಿಯದು (ಕುಪ್ತ. ೯೩-೬). ೨. ತರಕಾರಿ; ಕಾಯಿಪಲ್ಯ : ಹೆಡಗೆಗೆ ಪೊಂದು ಹಿಡಿ ಬಾಡು (ಕೂಲಕ್ಷಟ. ೦೯೩೩. ಇಂತ. ೯೬-೦೦ : ೯). 'ಬಾಡುಕಾಯ್' ಪರಾ. ೩. ಊಟದ ಮಧ್ಯೆ ಮಧ್ಯೆ ನಂಜಿ ಕೊಳ್ಳಲು ಬಳಸುವ ಹುರಿದ ಅಥವಾ ಕರಿದ ಮಾಂಸ, ತರಕಾರಿ ಮುಂತಾದುವುಗಳಿಂದ ಮಾಡಿದ ಪದಾರ್ಥ : ತುಪ್ಪಮುಂ ಪಲವುಂ ತೆಱದ ಬಾಡು[ಪಾಠಾಂ. ಶಾಕಂ]ಗಳುಂ ತುಯ್ಯಲುಂ . . . ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ (ಚಕ್ರಾಆ. ೬೬-೦೬) ; ಆ ಪರದಂ ಕೂಟಂ ಕಲಸಿ ಪಲವುಂ ಬಾಡುಮರೆಸಿ ಕೂಟನೊಂದು ದಳಿಂಬದ ಕಪ್ಪಡದೊಳ್ ಕಟ್ಟಿ ಕೊಟ್ಟಡೆ (ವಾಚಂ. ೦೯-೩೦ ೮). [ದೇ. ೩ ತಮಿ. ವಾಟ್ಟು; ತುಳು. ಬಾಟಣೆ]

**ಬಾಡು₃** (ನಾ). ೧. ತೆರೆ ; ಮರೆ : ಕೃಷ್ಣನುಯಿಲ್ಲಿ ಪೋದನುಯೆನುತೆ ನಲ್ಲೆಯರು ಕೈಗಳನು ಹೊಸಕೊಳುತ ಬಾಡ ಮರೆಯಲ್ಲಿ ಮರೆಗೊಂಡಿರ್ಪ ನೆಂದು ಪೊಕ್ಕರಸಿ ಕಾಪ್ಪೆಲ್ಲ[ವಲ್ಲಿ] ಕಾಣದೆ ಮರಳಿ ಬಂದು (ಚಚಕೋ. ೦೦ ೩೪). 'ಪಂಬಾಡು' ಪರಾ. ೨. ಗುಡಾರ ; ತಂಬು : ಸುತ್ತು ವಳೆಯುವರ[ರಿ] ಶುಭ್ರಪಚ್ಚಡಗಳಲಿ ರಚಿತ ಪೊಸಬಾಡನುರೆ ಬಂಧಿಸಿದರು (ಪಪಕೋ. ೩೯-೬೬). [← ತೆಲು. ಬಾಡು / ಮರಾ. ಬಾಡ್]

**ಬಾಡುಂದಳಿರ್** (ನಾ). ಒಣಗಿದ ಎಲೆ ; ಮುರುಟಿದ ಚಿಗುರು : ಬಟ್ಟೆವೋಪರ್ಬಟಲ್ಕೆಗಟೆದುದನಱಿವುವ ಬಾಡುಂದಳಿರ ಪಾಸಿಗಳುಮಂ (ಕಾದಂಚಾ. ೨೬೬). [ಬಾಸು₁ + ತಳಿರ್₂]

**ಬಾಡುಕಟ್ಟು** (ಕ್ರಿ). (ಹೊಲಗದ್ದೆಗಳ ರಕ್ಷಣೆಗಾಗಿ ಸುತ್ತಲೂ ಬಾಡಿದ ಸೊಪ್ಪು, ರೆಂಬೆ ಮುಂತಾದುವುಗಳಿಂದ) ಬೇಲಿಯನ್ನು ಕಟ್ಟು : ಗಿಡಗಳು ದೊಡ್ಡವಾಗುವವರೆಗೂ ಸುತ್ತಲೂ . . . ಈಚಲುಬರಿಗಳಿಂದಾ

ಗಲಿ ಕರಕಲ ಕಟ್ಟಿಗೆಯ ಬರಿಗಳಿಂದಾಗಲಿ ತಟ್ಟಿಗಳನ್ನು ಹೆಣೆದು ಸುತ್ತಲೂ ಬಾಡು ಕಟ್ಟದ ಹಾಗೆ ಕಟ್ಟಿ ಬಾಟು ಮಾಡಬೇಕು (ಕೃಷಿಶ್ರ. ೦೬೩).

[ ಬಾಡು$_4$ (ಪ್ರಾ-ತುಳು. ಬಾಡು = ಬೇಲಿ) + ಕಟ್ಟು$_1$ ]

**ಬಾಡುಕಾಯ್**, ಬಾಡುಕಾಯಿ (ನಾ). ತರಕಾರಿಯಾಗಿ ಉಪಯೋಗಿಸುವ ಕಾಯಿ : ಬಾಡುಕಾಯೆಂಬಿವು ಭಂಡಿಗೆ ಹತ್ತು ತಲೆವೊಜಿಗೆ ನಾಲ್ಕಕ್ಕಂ (ಎಪಿ. XIX, ೩೬-೪೦ ; 1135); ಶಾಕಶಾಕಟಂ, ಶಾಕಶಾಕಿನ — ಈ ೨ ಬಾಡುಕಾಯ ತೋಂಟಂ (ಹಲಾಯು. ೨೭-೯); ಮಾರುವ ಹೆಡಗೆಯ ಹಣ್ಣುಹಂವಲ್ ಬಾಡುಕಾಯ್ಗೆ ಹಿಡಿಬಾಡು ಹಿಡಿಹಣ್ಣಂ ಕೊಟ್ಟರ್ (ಎಪಿ. V, ೨೦-೬೯; 1161). ಬಾಡುಕಾಯಿ: [ಬೋವ]ಕ್ಕಳು ತಂದು ಮಾರುವ ಬಾಡುಕಾಯಿಗೆ ತಿಪ್ಪೆಸುಂಕವ ಕೊಟ್ಟರು (ಶಾಇ. XX. ೨೧೪-೭೬; 1228).

[ಬಾಡು$_2$ + ಕಾಯ್$_4$]

**ಬಾಡುಕಾಯಿ** 'ಬಾಡುಕಾಯ್' ನೋ.

**ಬಾಡುಣಿ** (ನಾ). ಮಾಂಸವನ್ನು ತಿನ್ನುವಂಥದು; ಭೂತ; ಪಿಶಾಚಿ : ಓತಂ ಓಡಿದಿರ್ದೊಡೆಯುರ ಬಾಡುಣಿಗಳ ಕೂಡಿ ಬೆತ್ತಲೋಡಾಡಿಯು ನೀಂ ಬೇಡಿದ ವರಗಳ ನೀಡುವೆ (ಶಂಪ. ೪-೦೦). [ಬಾಡು$_2$+ —ಉಣಿ]

**ಬಾಡುಬಕ್ಕ** 'ಬಾಡಬಕ್ಕ' ನೋ.

**ಬಾಡುಬುಕ್ಕ** 'ಬಾಡಬಕ್ಕ' ನೋ.

**ಬಾಡುಮೋಱೆ** (ನಾ). ಮಂಕಾದ ಮುಖ; ಕಾಂತಿಹೀನವಾದ ಮುಖ : ಭೀತಿಯಲಿ ಬಾಡುಮೋಱೆಯನೆತ್ತಿ ಕೈಗಳ ನೀಡಿ ಕಂಗಳ ಮುಚ್ಚಿ . . . ಬೆಚ್ಚಿದನಡಿಗಡಿಗೆ ಭೀಮ (ಕುಮಾ. ೦೦-೪೬). [ಬಾಡು$_1$ + ಮೋಱೆ]

**ಬಾಡೆ** 'ಬಾಡ' ನೋ.

**ಬಾಣ**$_1$ 'ಬಾಣೆ' ನೋ.

**ಬಾಣ**$_2$, ವಾಣ$_1$ (ನಾ). ಒಬ್ಬಾತನ ಹೆಸರು: 'ಬಾಣರಸ', 'ಬಾಣಸಾಮಿ' ಪರಾ. ವಾಣ$_1$ : ಪ್ರತಿಪನ್ನಮಂದರಂ ವಾಣಸ್ಕನ್ನಯಪುರಂದರಂ . . . ಶ್ರೀಮನ್ಮಹಾಪ್ರಧಾನಂ ಕಡಿತವೆರ್ಗ್ಗಡೆ (ಶಾಇ. ೭-೩-೨೬೩; 1062). 'ವಾಣರಸ' ಪರಾ.

**ಬಾಣನ ಪಳ್ಳಿ** = ಒಂದು ಊರಿನ ಹೆಸರು : ದೇವಕೊಮಾರನುಂ ಧೋರನುಮಿಬ್ಬಾರರಪೆ ಬಾಣನ ಪಳ್ಳಿಯ ಕೊಣ್ಣಾ ಶ್ರೀ ಕೇಸಿಗ × × × ತಡೆಸಿಟುಯುಲು ಕಟ್ಟಿನ್ ಕಟ್ಟು ವುರ್ದ್ಧಿ ಕೊಟ್ಟ ಸ್ಥಿತಿಕ್ರಮವೆಂತಾವೇಡೊಡೆ (ಎಕ. III, ಶ್ರೀರಂಗ. ೧೪೪-೦೨; 904 ?). **ಬಾಣರವಾಡಿ** = ಒಂದು ಸ್ಥಳದ ಹೆಸರು : ಗಂಗವಾಡಿ ತೊಮ್ಭತ್ತಱುಸಾಸಿರವುಂ ಬಾಣರವಾಡಿ ಪನ್ನಿರ್ಚ್ಛಾಸಿರದ ಬಳಂಜಮೆಲ್ಲ ನೆರೆದು (ಎಕ. X (೩). ಮುಳಬಾ. ೨೦೬-೩; ಸು.950).

**ಬಾಣ**$_3$ (ನಾ). ೧. ಬಿಲ್ಲಿಗೆ ಹೂಡಿ ಬಿಡುವ ಅಸ್ತ್ರ; ಅಂಬು; ಕಣೆ : "ಚಿತ್ರಪುಂಖಂ ಮಾರ್ಗಣಂ ಬಾಣಂ . . . ಕಾಂಡವೆಂದೆನಲ್ಕಂಬೆನಿಕ್ಕು" (ಶಬ್ದಮಣಿ. ೩೭-೪೯); ಗುಣಾರ್ಣವಂ ಮತ್ತಮೈಂದ್ರ ವಾರುಣವಾಯವ್ಯಾಗ್ನೇಯಪಾರ್ವತಾದಿ ಬಾಣಂಗಳಂ ತುಡೆ (ಪಂಪಭಾ. ೨-೭೬ ೫); ಐದುಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ (ಕುಮಾ. ೦೫-೨೪) ; ವನಜಾಕ್ಷಿ . . . ನಂದನದ ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆಬಾಣ ತಾಗಿದ ಹುಲ್ಲೆಯಂತೆ (ರಾಜಶ. ೪-೬೯). ೨. ಶಬ್ದ; ಸದ್ದು : ಶಬರಲು ಬಾಣಮಯ ಬಾಣಮಯ ಬಾಣಮಯವಾಗಿ ಕಾವನಂ ಕಣ್ಗೆಸೆದುದು (ಪಶಾ. ೫-೦೪). ೩. ಬೆಂಕಿ; ಅಗ್ನಿ : ಮೇಲಿನ 'ಹುಚಾ' ಪ್ರಯೋಗವನ್ನು ನೋಡಿ. ೪. ಒಂದು ಬಗೆಯ ಸಸ್ಯ; ನೀಲಿಗೋರಂಟಿ : "ನೀಲೀ, ಝಿಂಟೀ, ಬಾಣಃ — ಈ ೩ ಕರಿಯ ಗೋರಂಟೆ" (ಹಲಾಯು. ೪೪-೩೨). ೫. ಈಶ್ವರ ಸಂಕೇತವಾದ ಲಿಂಗಾಕೃತಿಯಲ್ಲಿ ಪಾಣಿಪಟ್ಟಲಿನ ಮೇಲೆ ಕಾಣುವ ರುಬ್ಬುಗುಂಡಿನಾಕಾರದಲ್ಲಿರುವ ಭಾಗ : ಅವರು ಶಿವಲಿಂಗದ ಬಾಣವೇ ಪುರುಷಚಿಹ್ನೆಯೆಂದೂ ಅದರ ಕೆಳಗಿರುವ ಯೋನಿಯೇ ಶಕ್ತಿಯೆಂದೂ ಹೇಳುತ್ತಾರೆ (ಭಾರತ. ೨೦೬). ೬. ಶಿವಭಕ್ತನಾದ ಒಬ್ಬ ರಾಕ್ಷಸರಾಜ; ಬಲೀಂದ್ರನ ಮಗ : ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ (ಬಸವ. ೭೪೦); ಸಂಬಂಧಿ ಬಾಣನಂ ಹಾರೈಸುವೊಡೆ ನಿನ್ನ ಬೇಗೋಲೆಗೆ ಶಿವನಿಪ್ಪ ಕಾರಣವುಮಂಗಕ್ಷವೋ ಪ್ರಾಪ್ತವೆಂದು ಹರಿ ತನ್ನ ಸುತನಂ ಜಱೆದನು (ಕೃಶಾ. ೭-೪೦). ೭. ಹುಲ್ಲು : ತೃಣ. ೮. ಹರ್ಷವರ್ಧನನ ಕಾಲದಲ್ಲಿ ಕಾದಂಬರೀ. ಹರ್ಷಚರಿತಗಳೆಂಬ ಕಾವ್ಯಗಳನ್ನು ಬರೆದ ಒಬ್ಬ ಪ್ರಸಿದ್ಧ ಸಂಸ್ಕೃತಕವಿ : ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗಬ್ಜೋದ್ಭವಂ ಬಾಣಂ ಬಾಣೆಯೆನಿಪ್ಪದೊಂದು ಪೆಸರಂ ಮುನ್ನಿತ್ತಂ (ಕಾದಂಭ. ೩). ೯. ದೀಪಾವಳಿ ಮುಂತಾದ ಹಬ್ಬದ ದಿನಗಳಲ್ಲೂ ಸಂತೋಷಸಮಾರಂಭಗಳಲ್ಲೂ ಹಾರಿಸುವ ಹೂಬಾಣ ಮುಂತಾದ ಸಿಡಿಮದ್ದು : ಬುದ್ಬುದ ನಾನಾ ಚಿತ್ರಭಿ ತೋರುವ ಬಾಣ ಬಿರಸು ಬಹಳಿನಲಿ (ಜಪಾ. ೦೧೩-೭): ಹಗಲುಬತ್ತಿಯು ಬಾಣಬಿರಸು ಮಹತಾಪುಗಳು (ಕೃಕಾ. ೩-೦೦); ಬಾಣ ಬಿರುಸು ರಂಭೋಲುಪಾದ್ಯ (ಹುಬ್ಬಿಪ. ೧೦). ೧೦. ಒಂದು ಬಗೆಯ ಬಟ್ಟೆ-ವಸ್ತ್ರ. ೧೧. [ಗಣಿತ]ಐದು ಎಂಬ ಸಂಖ್ಯೆಯ ಸಂಕೇತ: ಕ್ಷೋಣೀಶ ವಾಯು ದಿನೇಶ ರುದ್ರನುಂ ಬಾಣಸ್ಥಾನದೊಳಾಗೆ ವಿಶ್ವಮುಂ ಬಾಣಂ ನಿಲ್ಲಿರೆ ಸಂದುದಲೆ ಕಲ್ಯಾಣಾ (ರಾಜೋಂಬಿ. ೨-೦೦೨): ಹಿಮಕರ ಬಾಣೇಂದುವಾಗಲಾ ಪುಷ್ಪತೆಯಂ ವಿಪ್ರ ೧ ಕೆ ತಾವರೆಪುಷ್ಪ ೯ ಕೊಡುತ್ತಿರಲು (ಬಾಸ್ಕರ. ೦೬-೬): "ಎಲ್ಲ ಶರದೊಳು ತೃಣದೊಳಸುರನೊಳು ಗೋರಟೆ[ಶಾಖಾಂ.. ಗದೆ]ಯೊಳುಂ ಬಾಣಶಬ್ದಮಕ್ಕುಂ" (ಮಂಗರಾ. ೦೪೯-೪೦): "ಪುಲ್ಲು ವಸನ ದೈತ್ಯ ಸಂಖ್ಯೆ ಶರ ಗೋರಟೆ ಎಂಬವು ಬಾಣ ವಾಚಕಂ" (ನಾನಾರ. ೬). ೧೨. [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ಅಕ್ಷರವೃತ್ತ : 'ಬಾಣವೃತ್ತ' ಪರಾ.

[ಸಂ.]

**ಬಾಣಂತನ** 'ಬಾಣಂತಿತನ' ನೋ.

**ಬಾಣಂತಿ** 'ಬಾಳಂತಿ' ನೋ.

**ಬಾಣಂತಿಕಾಯಿ** (ನಾ). ಪಗಡೆಯಾಟದಲ್ಲಿ (ಬಾಣಂತಿಯಂತೆ) ಪೇಲವವಾಗಿರುವ ಕಾಯಿ ; ಹಳದಿಕಾಯಿ : ದುಗಾವನೆಸೆ ಭಾರಗಳನಿಡುಯುದು ನೆಗೆದು ಹೊಯ್ ಬಾಣಂತಿಕಾಯ್ಗಳ ಚಿಗುಟಬಿಡು ಹಸುರ (ಕಂಸಕಾ. ೪೮-೭೦). [ ಬಾಣಂತಿ (<ಬಾಳಂತಿ) + ಕಾಯಿ$_4$ (<ಕಾಯ್$_4$) ]

**ಬಾಣಂತಿಖಾರ** (ನಾ). ಬಾಣಂತಿಗೆ ಪ್ರತಿದಿನ ತಿನ್ನಲು ಕೊಡುವ, ಪುಷ್ಟಿಕರವಾದ ಔಷಧೀದ್ರವ್ಯಗಳಿಂದ ಕೂಡಿದ ಒಂದು ಬಗೆಯ ಖಾರಪದಾರ್ಥ : ಮೆದುವಲ್ಲ ಸಿಹಿಯಿಲ್ಲ ಹಾಲುಬಾಯಿಯುವೋಲು ಬಾಣಂತಿಖಾರವೂ ಬಾಳು (ಶಂಪಾಕ. ೫೬-೨೪).

[ಬಾಣಂತಿ (<ಬಾಳಂತಿ) +ಖಾರ$_1$ (<ಕಾರ$_2$)./ಮರಾ. ಬಾಳಂತಕಾಢಾ]

**ಬಾಣಂತಿಜ್ವರ** (ನಾ). ಸಾಮಾನ್ಯವಾಗಿ ಹೆರಿಗೆಯಾದ ಹತ್ತು ದಿನಗಳಲ್ಲಿ ಬಾಣಂತಿಗೆ ಬರುವ ಜ್ವರ : ಜನನಾಂಗಗಳ ಸೋಂಕುರೋಗ ಬಾಣಂತಿ ಜ್ವರಕ್ಕೆ ಬಹಳಷ್ಟು ಪ್ರಮುಖ ಕಾರಣ (ಶರೀರ. XII, ೨೬).

[ಬಾಣಂತಿ (<ಬಾಳಂತಿ) + ಜ್ವರ]

**ಬಾಣಂತಿತನ**, ಬಾಣಂತನ, ಬಾಲಂತಿತನ (ನಾ). ೧. ಹೆರಿಗೆಯಾದವಳಿಗೆ ಮಾಡುವ ಆರೈಕೆ—ಉಪಚಾರ : ನನ್ನ ಬಾಣಂತಿತನ ಮಾಡಿದವಳು ಅತ್ತೆಯೋ (ಸ್ವಪ್ತಿಶ. ೬೬) ; ಎರಡನೇ ಬಾಣಂತಿತನಕ್ಕಾಗಿ ತವರೂರಿಗೆ ಹೋಗಬೇಕೆಂದು ರಮಾದೇವಿಯ ಮನಸ್ಸಿನಲ್ಲಿತ್ತು (ಸ್ವಾಂಬಿ. ೨೨೪). **ಬಾಣಂತನ** : ೧. ಬಾಣಂತನ ಯಾರು ಮಾಡುವರಪ್ಪಾ ? ತಾಯನ್ನೂ ದೂರ ಮಾಡಿದ್ದಾನೆ (ಶೀಕಾ. ೨೩೦) ; ತನ್ನ ಬಾಣಂತನಕ್ಕೆ ತನ್ನ ತಾಯಿ,

ವಾತ್ಸಲ್ಯದೇವಿ ಬರಬಹುದೇ ? (ವಾತ್ಸಂ. ೩೭). ೨. ಬಾಣಂತಿಯಾಗಿರುವಿಕೆ : ಇಂಥಾ ದಿನಗಳಲ್ಲಿ ವರ್ಷಕ್ಕೊಂದು ಬಾಣಂತನವು ಬೇರೆ ! (ಶ್ರಜಸ. ೫). ಬಾಲಂತಿತನ : ೧. ಬಾಲಂತಿತನಕ್ಕಾಗಿಯೇ ಎಂದು ಬೇವಿನ ಗಿಡದ ಬುಡದಲ್ಲಿ ಹಾಕಿದ ಗುಡಿಸಲಿನಲ್ಲಿ ತಾಯಿ ಶಚೀದೇವಿಯಿಂದ ಅವತರಿಸಿದನು (ಗೌರಾಂಗ. ೬). [ಬಾಣಂತಿ (<ಬಾಳಂತಿ) + – ತನ]

**ಬಾಣಂತಿಬೋಳ** (ನಾ). ಬಾಣಂತಿಯರಿಗೆ ಔಷಧಿಯಾಗಿ ಕೊಡುವ ಕರಿಬೋಳ ಎಂಬ ಸಸ್ಯದ ಅಂಟು : ಲವಂಗಪತ್ರ ೧/೨ ಹಾವು. ಬಾಣಂತಿಬೋಳ ೧/೨ ಹಾವು . . . ಇಡಿದು ವಸ್ತ್ರಗಾಳಿತವಂ ಮಾಡಿ . . . ತಾರೆಕಾಯಿಪ್ರಮಾಣವಂ ತೆಗೆದುಕೊಳ್ಳಲು ಸಮಸ್ತಪೈತ್ಯವ್ಯಾಧಿ . . . ಪರಿಹರವಕ್ಕುಂ (ಸಕಶ್ಯ. ೦೩೫).
[ಬಾಣಂತಿ(<ಬಾಳಂತಿ) + ಬೋಳ್ತ(<ಬೋಟ್ರ). /ತುಲಾ. ಬಾಳಂತ ಬೋಳ]

**ಬಾಣಂತಿಸನ್ನಿ** (ನಾ). ಬಾಣಂತಿಗೆ ಜ್ವರದಿಂದುಟಾಗುವ ಸನ್ನಿಪಾತ : ತಾಯುವ:–ಈ ಬೇರಂ ನರವುೂತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಹರ (ಏಶ್ವತ. ೪); ಪುತ್ರಜೀವಿ ತಿರುಳು, ಬೇವಿನ ಬೀಜದ ತಿರುಳು . . . ನಿಂಬೆಹುಳಿಯಲ್ಲರೆದು ನಾಲಗೆಗೆ ಲೇಪ ಮಾಡೆ ಸುಖಸನ್ನಿ ದೋಷಂ ಮಾಣ್ಗುಂ ; ಬಾಣಂತಿಸನ್ನಿ, ತಲೆಯ ಪಿತ್ತ ಸಹ ಕೆಡುಗುಂ (ಸಕಶ್ಯ. ೦೬೦). [ಬಾಣಂತಿ (<ಬಾಳಂತಿ) + ಸನ್ನಿ]

**ಬಾಣಂತಿಸೂಳೆ, ಬಾಣತಿಸೂಳೆ** (ನಾ). ಇನ್ನೂ ಬಾಣಂತಿಯಾಗಿರುವ ವೇಶ್ಯೆ ; ಕೂಸುಳ್ಳ ಸೂಳೆ : ಹೆತ್ತ ಶಿಶುವಿಂಗಲ್ಲ ವಿತ್ತವನಿತ್ತ ವಿಟನಿಂಗಲ್ಲದೆಡೆಯಾಡುತ್ತಲಿಹ ಬಾಣಂತಿಸೂಳೆಯ ಚೇಷ್ಟೆಯಿಂದದಲಿ ವ್ಯರ್ಥವಾಗಿಯೆ ಕೆಡುವನಕಟಾ ಮರ್ತ್ಯನೆತ್ತಲು ಮುಟ್ಟ (ಅಪ್ಪು ಕ. ೨-೦೦೬). ಬಾಣತಿಸೂಳೆ : ಬಾಣತಿಸೂಳೆಯಂತೆ ಸಿಡಿಮಿಡಿಗೊಂಡು ತಳಾಡನಂ ಕಂತ ಕಳ್ಳನಂತೆ ಕುಸಿದು (ಕರ್ಣಾಮೃ. ೩-೨೩).
[ಬಾಣಂತಿ (<ಬಾಳಂತಿ) + ಸೂಳೆ₁]

**ಬಾಣಗೆಱೆ³** (ನಾ). ಒಂದು ಕೆರೆಯ ಹೆಸರು : ಅನ್ತೆ ಬಸ್ದು ಬಾಣಗೆಱೆಯ ಏರಿಯ ಮೇಗಣಂ (ಎಕ. III. ತಂಜಸ. ೦೩೯-೨೨; 915 ?).
[ಬಾಣಗ₁ + ಕೆಱೆ³]

**ಬಾಣಗತ್ತಲು** (ನಾ). ಕಣೆಗಳ ದಟ್ಟಣೆಯಿಂದುಂಟಾದ ಕತ್ತಲೆ : ಹತ್ತು ಬಿಲ್ಲಲಿ ಸರಳ ಸುರಿದನದೆತ್ತ ನಭ ದೆಸೆಯೆತ್ತ ರಾಘವನೆತ್ತಲಂಬರ ವಣೆಯ ಮುಸುಕಿತು ಬಾಣಗತ್ತಲದು (ತೊರೆರಾ. ೨೨-೯೩). 'ಮೊಲಗಟ್ಟಲೆ' ಪರಾ. [ಬಾಣ₁ + ಕತ್ತಲು (<ಕಟ್ಟಲೆ) ]

**ಬಾಣಗಾಱ** (ನಾ). ಬಿಲ್ಲಿಗೆ ಕಣೆಗಳನ್ನು ಹೂಡಿ ಬಿಡುವವನು : ರಾಜರು ರಕ್ಕಸವಾಂತರು ಲಾಳಿ ಬಲ್ಲೋಜರು ವೆಟಲಂಬಿನವರು ತೇಜೋಮಯ ಬಾಣಗಾಱರೇಱಿತು ಖಗರಾಜನೆಱಂಕೆಯಿಕ್ಕೆಲದಿ (ಪೋಶತ. ೩೬-೯೨). [ಬಾಣ₁ + – ಕಾಱ]

**ಬಾಣಗೇಹ** (ನಾ). ಕಣೆಗಳನ್ನಿಡುವ ಚೀಲ ; ಬತ್ತಳಿಕೆ ; ಮೂಡಿಗೆ : ಬಾಣಗೇಹನದ್ಯಂಬುಧಿಕಾನನಂ ಶರಧಿ ಎಂದೆನಿಕುಂ (ನಾನಿರ. ೦೨). [ಸಂ.]

**ಬಾಣಜಾತ** (ನಾ). ಕಣೆಗಳ ಸಮೂಹ : ಮುರಹರನ ಮೊಮ್ಮನಾಂ ಬೆಚ್ಚುವೊಡೆ ಬಿಡು ಹಯವನಲ್ಲದೊಡ ನೋಡೆನ್ನ ಬಾಣಜಾತವನು (ಕೃಮಿಜಾ. ೨೫-೨೦). [ಸಂ.]

**ಬಾಣಜಾತೆ** (ನಾ). ಬಾಣಾಸುರನ ಮಗಳು; ಅನಿರುದ್ಧನ ಹೆಂಡತಿ ಯಾದ ಉಷೆ : ಬಾಣಜಾತವನೀಗ ನೋಡಲಿರ್ದಪುದೆ ನೀಂ ಬಾಣಜಾತೆಯ ರಮಣನು (ಕೃಮಿಜಾ. ೨೫-೨೦). [ಸಂ. ಬಾಣಜಾತಾ]

**ಬಾಣತಟ್ಟರ** (ನಾ). ಒಬ್ಬಾತನ ಹೆಸರು : ಬಾಣರಸರ್ ಪ್ರಿಥುವೀ ರಾಜ್ಯಂಗೆಯೆ ವಿಜಯಿತ್ತನಾಳು ಬಾಣತಟ್ಟರನ್ ತನ್ನ ಆಳು ಉಗೆ ಪೋಗಿ ಮಱುಬಪ್ಪೊಂಗೆ ಕುಂತಿಆಲದಲಿ ಕುದುರೆ ಏಱಿ ಬರುತಿರೆ ಗಣಮುತ್ತರ್ ಎಚ್ಚೊಡೆ . . . ತಟ್ಟು ಸತ್ತ (ತೌಇಇ. IX-I. ೬-೯; ೨೨ನೆಯ ಶತ). [?]

**ಬಾಣತಿ** 'ಬಾಳಂತಿ' ನೋ.

**ಬಾಣತಿಸೂಳೆ** 'ಬಾಣಂತಿಸೂಳೆ' ನೋ.

**ಬಾಣದಾಯಕ** (ನಾ). (ಯುದ್ಧದಲ್ಲಿ ಯೋಧನಿಗೆ) ಕಣೆಗಳನ್ನು ತಂದು ಕೊಡುವವನು : ಹಡಪಿಗ ಚಮರ ಬಾಹೆಯ ಬಾಣದಾಯಕರ ಕರೆದು ಮನ್ನಿಸಿ . . . ರಣಸುಮ್ಮಾನದಲಿ ಹೊಗರೇಱಿದನು ಕರ್ಣ (ಕುವ್ಯಾ ಕ. ೨೦-೩). [ಸಂ.]

**ಬಾಣಧಿ** (ನಾ). = ಬಾಣಗೇಹ : ಅಂತಮೋಘಬಾಣಮಂ ಬಾಣಧಿಯಿಂದುರ್ಚಿಕೊಂಡು ಪುರುಪರಮೇಶ್ವರಪುತ್ರಂ ಭರತೇಶ್ವರಚಕ್ರವರ್ತಿ ಬಂದಿರ್ದಂ (ಆಪು. ೦೨-೯೬ ವ) ; ಲುಬ್ಧಕರ್ತಂಡದ ಸುತ್ತಿ ಮುತ್ತಿ ಗೊಲೆಗೊತ್ತಿದನೇ ಧನುವಂ ಸರಲ್ಗಳಂ ಕೊಂಡನೆ ದಿವ್ಯಬಾಣಧಿಯಿಂ . . . ಜನಾರ್ದನಂ (ಕಂಠಾಮೃ. ೬-೦೦೫). [ಸಂ.]

**ಬಾಣಪಂಚಕ** (ನಾ). ಐದು ಕಣೆಗಳನ್ನುಳ್ಳವನು ; ಕಾಮ ; ಮನ್ಮಥ : ಬಾಣಪಂಚಕಭಸ್ಮಧಾರಣ ಪರಾಕು (ಶತಪಂ. ೨೯-೯೦); ಬಾಣಪಂಚಕಗಿತ್ತು ಚೆಲ್ವನು . . . ಜಾಣರೆಲ್ಲರ್ಗೊಡೆಯನಾದ ನಿರ್ವಾಣಲಕ್ಷ್ಮೀಕಾಂತನೀಗೆ ಮಗಿಪ್ಪಸಿದ್ಧಿಯನು (ನಾಗಕ. ೦.೦). [ಸಂ.]

**ಬಾಣಪೀಠ** (ನಾ). ಈಶ್ವರಸಂಕೇತವಾದ ಲಿಂಗಾಕೃತಿಯಲ್ಲಿ (ಅಭಿಷೇಕದ ನೀರು ಹರಿದು ಹೋಗಲು ಅನುಕೂಲವಾಗುವಂತೆ) ಲಿಂಗದ ಸುತ್ತಲೂ ಇರುವ ತಗ್ಗಾದ ಪೀಠ : ಸ್ಫುರಿತರುಚಿರಸ್ಫಟಿಕಲಿಂಗವು ಬಾಣಪೀಠದಲಿ ಸ್ಫುರಿತರುಚಿರಸ್ಫಟಿಕಪೀಠಕೆ ಸುರುಚಿರೋನ್ನತ ಬಾಣಲಿಂಗವು ಕರಮೆಸವುತಿರೆ ಸುಪ್ರತಿಷ್ಠಿತವಾದವೆಯಿತೆಂದು (ಏಕಕ. ೫೬-೬೬). 'ಬಾಣಲಿಂಗ' ಪರಾ. [ಸಂ.]

**ಬಾಣಪ್ರಯೋಗ** (ನಾ). ಕಣೆಯನ್ನು ಎಸೆಯುವುದು,-ಬಿಡುವುದು : ಬಾಣಪ್ರಯೋಗದಲ್ಲಿ ಲಾಘವ . . . ವಿಕ್ರಮ ಇವು ಯಾವುವರಲ್ಲೂ ಅರ್ಜುನನು ನನಗೆ ಸಮನಲ್ಲ (ವಕಥಾ. ೨೯೩). [ಸಂ.]

**ಬಾಣಬೆಟ್ಟು** (ನಾ). ಎತ್ತರದ ಪ್ರದೇಶದಲ್ಲಿರುವ ಗದ್ದೆ : ಬಾಣಬೆಟ್ಟನಲ್ಲಿ ಬಿದ್ದು ಸುಟ್ಟು ಸಾಯು ಅಂತಿಯಾ ? (ಕರಾಪ. ೩೬).
[ಬಾಣ₁ (< ಬಾಣೆ) + ಬೆಟ್ಟು₃ (<ಬೆಟ್ಟ). / ತುಳು. ಬಾನೆಬೊಟ್ಟು]

**ಬಾಣರಸ, ವಾಣರಸ** (ನಾ). ಒಬ್ಬಾತನ ಹೆಸರು : ಮಹಾರಾಜರು[೦] ಬಾಣರಸರುಂ ಸೋರೆವಟ ಕೋಟ್ಟಿಂ(ಕೋಟ್ಟೆ) ಯಿಟ್ಟಲ್ಲಿ (ಎಇ. XXIV. ೦೯೦-೫; ಸು. 886) ; ಪೊಮ್ಬಲ್ಲವೊಡೆಯಮೂರ್ಗ್ಗೆ ಪಾಡಿಯೊಳೊಡ್ಡಿ ಬಾಣರಸರುಳ್ ಕಾದಿ ಪಲರನಿಱಿದು ಬಿಟ್ದು ಬೀರಲೋಕಮೆಯ್ದಿದ (ಎಕ. X. ಕೋಲಾರ. ೬೯-೦೦ ; ಸು. 890). ವಾಣರಸ : ಸ್ವಸ್ತಿಗುವಳಾಲಂಗೊಂಗುಂ ವಾಣರಸ ಆಳೆ (ಎಕ. X. ಮುಳಬಾ. ೨೬೫-೦; ಸು. 860).
[ಬಾಣ₃ + ಅರಸ₁]

**ಬಾಣರಾಸ** (ನಾ). ಒಬ್ಬಾತನ ಹೆಸರು : ಸಮ್ರುತಿಹಾಂಃಕೃಷ್ಣಮಹಾ × × × ಮತ್ ಬಾಣರಾಸರ್ ಗಜ್ಜನಜು × × × ಳುತಿರೆ (ಎಕ. X (s). ಬಾಗೇಪ. ೯೬-೩; ಸು: 820).
[p ಇದು 'ಬಾಣರಸ' ಎಂಬುದರ ಅಪಲಿಖಿತ]

**ಬಾಣರಾಸಿ** 'ಬಾರಣಾಸಿ' ನೋ.

**ಬಾಣಲಿ, ಬಾಂಡಲಿ, ಬಾಂಡಲೆ, ಬಾಂಡ್ಲಿ, ಬಾಂಡ್ಲೆ, ಬಾಣಲೆ, ಬಾಳಣಿ, ಬಾಳಲಿ** (ನಾ). ಆಹಾರಪದಾರ್ಥಗಳನ್ನು ಕರಿಯಲು ಅಥವಾ ಹುರಿಯಲು ಬಳಸುವ, ಬಳಪದ ಕಲ್ಲು ಅಥವಾ ಲೋಹದಿಂದ ಮಾಡಿದ, ಅಗಲಬಾಯಿಯ ಒಂದು ಸಾಧನ : "ಅಂಬರೀಷಃ, ಭ್ರಾಷ್ಟ್ರಃ– ೨ . . . ಹುರಿಯುವ ಹೆಂಚು, ಬಾಣಲಿ"

(ಶಿವ್ಯಾಂಶಿ. ೨೫): ಕ್ಷೋಣಿಯೊಳ್ ಬಿಸಿಲಿಂದ ಕಡುಗಾದ ಬಾಣಲಿಯನ್ನೆಯೊಳಬುದಿ ಹೂಣಿಸಿ ಕುದಿಗೊಂಡು ಮರಳ್ವುದು ವನಚರಶ್ರೇಣಿ ಬೆಂದದ್ದು ತೇಲಿದಾವು (ಕೋಕಶ. ೧೯-೪೩); ಬೀದಿ ಮಗ್ಗುಲಲ್ಲಿ ಬಾಣಲಿ ಇರಿಸಿಕೊಂಡು ಕರೀತಾರಲ್ಲಾ ಅಂಬೊಡೆ, ಅದರ ಹೆಸರು ಕೇಳಿದರೆ ಸಾಕು ಅವಳಿಗೆ ಬಾಯಲ್ಲಿ ನೀರು (ಹೊಗೂಂ. ೪೨). ಬಾಂಡಲಿ : ಬಾಂಡಲಿಯೊಳಗೆ, ಕಾದಿರುವ ಎಣ್ಣೆಯೊಳಕ್ಕೆ ಆಹಾರವನ್ನು ಹಾಕಿ ಕರಿಯಬಹುದು (ಗೃಹಂ. ೩೪). ಬಾಂಡಲೆ : ಏನು ಕಪ್ಪು, ಎಂತಹ ಆಕಾಶ_ಬಾಂಡಲೆಯನ್ನು ಮೇಲೆ ಕವಚಿದಂತೆ, ಏನು ನೀರವತೆ! (ಹಾಮಾಕ. ೧೦೩). ಬಾಂಡ್ಲಿ: "ಬಾಣಲಿ (ಲೆ, ಬಾಂಡ್ಲಿ) ಭ್ರಾಷ್ಟ್ರ" (ಕದ್ಯಕೋ. ೩೦). ಬಾಂಡ್ಲೆ: ಕಾವಲಿ, ಬಾಂಡ್ಲೆ ಇಟ್ಟುಕೊಂಡು (ಚಿಕಬು. ೨). ಬಾಣಾಲೆ : "ಅಂಗಾರಶಕಟಿಯೆಂದರೆ ಬಾಣಾಲೆಯೆಂಬಿಕ್ಕು" (ಹುಂಗಾ. ೬೩-೨೪); ಸಂಪಿಗೆ ಹೂಗಳನ್ನು ಬಾಣಾಲೆಯಲ್ಲಿ ಹೊಗೆ ಹೋಗದ ರೀತಿಯಲ್ಲಿ ಬಿಳಾವರ್ತಿ ಹುರಿದು ನಯವಾಗಿ ಅರೆದು ಜೇನುತುಪ್ಪದೊಡನೆ ಕೊಟ್ಟರೆ ಕೆಮ್ಮು ಹೋಗುವುದು (ಕಕ್ಕಿ. ಹು. ೪೬೩); ಅವರ ಹೊಗಳಿಕೆ ಕೇಳಿ ಎದೆ ಕಾದ ಬಾಣಾಲೆ! (ಕಕಬೂ. ೬೬-೯). ಬಾಳಣೆ : ಅವರ ನಾದಿನಿ ಅವರಿಗೆ ಹುಚು ಬಾಳಣೆ ಮುಂತಾದವುಗಳನ್ನು ತರಹೇಳಿದ್ದಳು (ಕೃಶಿ. ೩೪೨). ಬಾಳಲಿ: "ಖಾದ್ಯಪ, ಪಿಷ್ಟಪಚನ_ಎಣ್ಣೆಯಲ್ಲಿ ಹಿಟ್ಟನಡುವ ಬಾಳಲಿ" (ಜಾಕಕಾ. ೬).

[ದೇ. ॥ ತಮಿ. ವಾಣಲಿ, ವಾಣಾಲಿ; ತುಳು. ಬಾಣಲೆ; ತೆಲು. ಬಾಣಲಿ]

**ಬಾಣಲಿಂಗ** (ನಾ). ೧. ನರ್ಮದಾನದಿಯಲ್ಲಿ ದೊರಕಿದುದೆಂದು ಭಾವಿಸಿ, ಶಿವಲಿಂಗವೆಂದು ಪೂಜಿಸುವ ಒಂದು ಬಗೆಯ ಬಿಳಿಯ ಶಿಲೆ : ಸ್ಫುರಿತರುಚಿರಸ್ಫಟಿಕಲಿಂಗವು ಬಾಣಪೀಠದಲಿ ಸ್ಫುರಿತರುಚಿರ ಸ್ಫಟಿಕಪೀಠಕೆ ಸುರುಚಿರೋನ್ನತ ಬಾಣಲಿಂಗವು ಕರಮೆಸೆವುತಿರೆ ಸುಪ್ರತಿಷ್ಠಿತ ಪಾದವೆಯುತೆಂದು (ಐಪ್ರು. ೩೬-೩೩); ವಾರಣಾಸಿಯಿಂದ ಬಾಣಲಿಂಗವನು ತರಿಸಿ ವಿಶ್ವೇಶ್ವರ ಲಕ್ಷ್ಮೀನಾರಾಯಣದೇವರ ಪ್ರತಿಷ್ಠೆಯನು ಮಾಡಿಸಿ (ಎಕ. X, ಗೌರಿಬಿ. ೩೯-೭ ; ೧೪೦೮). ೨. [ವೀಶೈ] ಒಂದು ಲಿಂಗಾಕೃತಿಯ ಹೆಸರು : ಸ್ವಯಂಭುಲಿಂಗ, ಬಾಣಲಿಂಗ, ಚರಲಿಂಗ, ಸಂಕೀರ್ಣಲಿಂಗ ಮತ್ತು ಪ್ರಾಣಲಿಂಗವೆಂಬ ಐದು ಬಗೆಯ ಲಿಂಗಗಳಲ್ಲಿ ಒಂದು : ಸೆಜ್ಜೆಂಗಿನಲಿ ಕಟ್ಟಿರ್ದ ಬದನೆಯ ಕಾಯಿ ನಿಮಿಷದಲಿ ಸಂಗಮೇಶ್ವರ ಬಸವರಾಜನ ಸಂಗಭಾವದಿ ಬಾಣಲಿಂಗ ಸುರಂಗಮಾದುವು (ಚಪು. ೯-೩); ಶೈವಸಿದ್ಧಾಂತಸಮ್ಮತಮಾದ ಪಂಚಲಿಂಗಾರ್ಚನದೊಳು ಸ್ವಯಂಭುಲಿಂಗ ಬಾಣಲಿಂಗ . . . ಪ್ರಾಣಲಿಂಗವೆಂಬೈದಜೊಳಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನತತ್ಪರರಾಗಬೇಕೆಂದು ನಿಶ್ಚಯಿಸಲಕ್ಕುಂ (ಶಿಕೀಕ. ೧೦೨). 'ಪಂಚಲಿಂಗ' ಪರಾ. [ಸಂ.]

**ಬಾಣಲೆ** 'ಬಾಣಲಿ' ನೋ.

**ಬಾಣವರ್ಷ** (ನಾ). ಅಂಬುಗಳ ಮಳೆ.—ವೃಷ್ಟಿ : ಅಶ್ವತ್ಥಾಮನು ಅರ್ಜುನನಿಗೆ ಅಡ್ಡವಾಗಿ ಬಂದು ಮೇಘವು ಮಳೆಗರೆದಂತೆ ಅವನ ಮೇಲೆ ಬಾಣವರ್ಷವನ್ನು ಕರೆದನು (ಕಕಾ. ೨೦೩). [ಸಂ.]

**ಬಾಣವೃತ್ತ** (ನಾ). [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ವರ್ಣವೃತ್ತ: ಸಭರಯಂ ಬರೆ ಬಾಣವೃತ್ತಮಕ್ಕುಂ (ಛಂಬು. ೮೦). [ಸಂ.]

**ಬಾಣವೃಷ್ಟಿ** (ನಾ). = ಬಾಣವರ್ಷ : ಇಷ್ಪರೊಳ್ ಪ್ರಸಾದಸೌಮ್ಯದೃಷ್ಟಿಯಲ್ಲದೆ ವಿಶ್ವಪತಿ ಪೇಳು ಬಾಣವೃಷ್ಟಿ ಬೀಳ್ವುದೆ (ಶಾಕುಂತ. ೪೭ ೪೩೦). [ಸಂ.]

**ಬಾಣಶಯನ** (ನಾ). ಕಣೆಗಳ ಹಾಸುಗೆ : ಶರಶಯನ : ಭೀಷ್ಮ . . . ನೋವಿನ ಕಳಕಳಿಕೆ ಧೃತಿಗೆಡದೆ ಪವಡಿಸಿದನು ಬಾಣಶಯನದಲಿ (ಕುವ್ಯಾಭೀ. ೧೦-೨೬). [ಸಂ.]

**ಬಾಣಸ, ಬಾಣಸು** (ನಾ). ೧. (ಅಧಿಕಸಂಖ್ಯೆಯ ಜನರ ಭೋಜನ ಕೂಟಕ್ಕೆ ಉಪಯೋಗಿಸುವ) ದೊಡ್ಡ ಅಡುಗೆಮನೆ.—ಪಾಕಶಾಲೆ : "ಬಾಣಸ(ಸು) — ಮಹಾನಸ = ಪಾಕಶಾಲೆ" (ಕದ್ಯಕೋ. ೩೦) : ಅರ್ಣವದೊಳ್ ನೀಂ ಮತ್ಸ್ಯನಾಗಲೆನಂದು ಸಮುದ್ರವಿಸಿದನಪ್ಪೊಡದಂ ಗಾಣವಿಕ್ಕಿ ಬಾಣಸಕ್ಕೊಪ್ಪಿಸನೇ (ಆಗಿಪು. ೧೬-೩೪); ಅವರನೊತ್ತಿಟ್ಟ ಮನೆಯನೇಪೂಗಳ್ವಿನದು . . . ಅಂತಕನ ನಗರ ಮೃತ್ಯುವಿನ ಬಲುಬಾಣಸದ ಹಂತಿ (ಕಕಾ. ೧೨-೨). ೨. ಅಡುಗೆ ; ಪಾಕ : ಸಿರಿಯಾಳನ ಮಗನ ಬಾಣಸವ ಮಾಡಿಸಿ ಉಣಲೊಲ್ಲದೆ ಕಾಡಿದೆ (ಬಸವ. ೬೪೦); ಸಿಡಿಲುವಕ್ಕಿಯ ಪಕ್ಷಪನು ಕಿತ್ತಡಬಳದ ಬಾಣಸವ ಮಾಡುವ ಕಡುಗಲಿಗಳಾರುಂಟು (ತ್ರಕುಂ. ೮-೦೩); ಹೆಸ್ತಾಗಿ ಬಾಣಸದ ಪವಣಱಿದುದಿಲ್ಲಲಾ (ಕೃರಾಭಾ. ೨-೩೦). 'ಬಾಣಸಗ್ಗೆ' ಪರಾ. ೩. ಅಡುಗೆಯ ಕೆಲಸ.—ಕಸುಬು : ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು (ಬಸವ. ೩೩೦). ೪. ಉಣಿಸು ; ಆಹಾರ ; ಭಕ್ಷ್ಯ : ಇಂದಿನ ಬಾಣಸಕ್ಕೆನ್ನಂ ನಿವೇದಿಸಿದಂ ದೇವರ್ ಕೈಕೊಳ್ಗೆಂ (ಸಂಕಹೊ. ೦೯೩-೩); ಅಂಜಬೇಡ ಮಹಾಸುಸನ ಬಾಣಸದ ಬೀಯಕೆ ರಮಣ ಪೊಂಟೆಮಗೆ (ಕುವ್ಯಾಶ. ೦-೦೯); ಬರೆಯಲಿ ಜವನುಂಡು ಚೆಲ್ಲಿದ ಪರಿಪರಿಯ ಬಾಣಸಗಳೆಸೆದಿಹ ಹರಿಯಣದವೊಲು ಕಣ್ಗೆ ಕೌತುಕವಾಯ್ತು ರಣಭೂಮಿ (ಲಾಕ್ಷಶ. ೨೦-೨೩). ೫. ಅಡುಗೆಮಾಡುವವನು ; ಅಡುಗೆಯವನು : ವಣಿಗ್ವರರ್ ಗಂಧಿಗರ್ ಬಾಣಸರ್ ತಾಂಬೂಲಿಗರ್ . . . ಜೂದುಗಾರರ್ ಮುಖ್ಯರೊದಗಿ ಬರುತಿರ್ದರ್ (ಕಪು. ೪೭-೪೦). ಬಾಣಸು : ೧. ನೃಪೇಂದ್ರತನುಜಾತರ್, ನಿಶ್ಚಿತಂ ಪೊಕ್ಕರ್ ಪಡೆದ ಕೃತಾಂತನ ಬಾಣಸುವೊಲಿರ್ದ ಮಾರಿಯ ಮನೆಯುಂ (ಯಶೋಚ. ೦-೩೩); ಲಲಿತ ದೋಣದ ವಿವಿಧ ಭಕ್ಷ್ಯಾವಳಿಯ ಬಾಣಸಿನೊ[ಪಾಠಾಂ. ಸದ್ಮೊ]ಳಗೆ ಬಂದಳು ಮತ್ತಗಜಗಮನೆ (ಕುವ್ಯಾಶಿ. ೩-೩೬). ೨. ಪಿರಿಟಂ . . . ನಿನ್ನ ನಾಳ್ನೆಂದು ಬಾಣಸಿನ ಕರಣಕ್ಕೆ ನಿರೂಪಣಂಗೆಯ್ದಂ (ಕುಕಥಾ. ೬-೩೪ ಪ); ಅಂತು ಮನೆಗಟ್ಟ ಬಾಣಸಿನ ಕೂಟಿಲ್ಲಮನುಂಡುಮವ್ಯಾ ಮಸಿವು ಪೋಗದೆಂದದರಿಸಿ ಚೋದ್ಯಂಬಟ್ಟು (ಶಿಂಪು. ೯-೨೬ ಪ); ಅದೊಂದು ನೀಲಪರ್ವತಂ . . . ನಿಚ್ಚವಯಣಾಬರ್ಪ ಯಾತ್ರೆಯ ಜನರ ಬರ್ದಿನ ಪಗಲೂಟದ ಬಾಣಸಿನಾವಿಗೆಯ ತನಿಗೆಂಡದೋವರಿಯೆಂಬಂತು ತಟತಟನೆ ಪೊಳೆವ ರಂಗು ಮಾಣಿಕದಗಟ್ಟಿಯಿಂ . . . ಮನೋಜ್ಞಂ (ಕುವ್ಯಾಶಿ. ೬೨ ೨೩).

ಬಾಣಸದ ಭವನ = ಅಡುಗೆಮನೆ ; ಪಾಕಶಾಲೆ : ಸ್ವೈರಿಸರು ಬಾಣಸದ[ಪಾಠಾಂ. ಸಿನ] ಭವನದ ನಾರಿಯರು ದುರ್ಜನರು (ಕುವ್ಯಾಶಿ. ೩-೪೦); ಹನ್ನೆರಡುಯೋಜನತರದ ಭೋಜನಶಾಲೆಗಳು ವಿಸ್ತರಿಸಿದವು ಬಾಣಸದ ಭವನಂಗಳು ಸುವೀಥಿಯಲಿ (ಕೊಶಕಾ. ೦-೬-೭). ಬಾಣಸದ ಮನೆ, ಬಾಣಸಿನ ಮನೆ=ಬಾಣಸದ ಭವನ : ಬಾಣಸದ ಮನೆ–ರಸವತಿ, ಪಾಕಸ್ಥಾನ, ಮಹಾನಸ " (ಹಾಕಾ. ೬), ಗುಹೇಶ್ವರ ನಿಮ್ಮ ಶರಣ ಕಟ್ಟಿದಿರ ಬಾಣಸದ ಮನೆಗೆ ಬಂದನು (ಅಪಂ. ೦೯೩-೬೬೨); " ಪಾಕಸ್ಥಾನಂ, ರಸವತೀ, ಮಹಾನಸಂ__ಈ ೩ ಬಾಣಸಿನ ಮನೆ " (ಕಹಾಯು. ೪೯-೦೪೦); ಸಹಸ್ರಸಿಂಹಬಲನೆನಿಪ ಸಿಂಹಬಲನ[ನ್ನ]ತ್ರಮಾದೊಳೆ ಕೊಂದು ಜವಂಗೆ ಬಾಣಸುಗೆಯ್ದಂದಿನಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದಂ (ಕುಕಥಾ. ೬-೬೯ ಪ); ಕೆಳವಳದ ಕರಣದ ಮುಗುದೆ ಬಂದಳು ಬಾಣಸಿನ ಮನೆಗೆ (ಕುವ್ಯಾಶಿ. ೩-೪೩). ಬಾಣಸದ ಶಾಲೆ = ಬಾಣಸದ ಭವನ : ಮೃತ್ಯುವಿನ ಬಾಣಸದ ಶಾಲೆಯೋ ಸಮರಾಂಗಣವೊ (ಕೊಶಕಾ. ೬-೩೬-೪೩).

[< ಸಂ. ಮಹಾನಸ. / ಪ್ರಾ. ಮಹಾಣಸ. / ತೆಲು. ಬಾನಸ]

**ಬಾಣಸಂಧಾನ** (ನಾ). ಬಿಲ್ಲಿನ ಹೆದೆಗೆ ಕಣೆಯನ್ನು ಹೂಡುವುದು ; ಶರಸಂಧಾನ : ಕರ್ಣನು ಎರಡು ಸಾರಿ ಗುರಿಯಿಟ್ಟು ಬಾಣಸಂಧಾನ ಮಾಡುವುದಿಲ್ಲ (ಕಕಾ. ೨೪೯). [ಸಂ.]

**ಬಾಣಸಗಿತ್ತಿ** (ನಾ). ಅಡುಗೆಯ ಕೆಲಸ ಮಾಡುವವಳು; ಅಡುಗೆಯವಳು : ಶೂಲಧರ ನಿಮ್ಮುದಬಳಂ ಸಿರಿಯಾಳ ಬಾಣಸಗಿತ್ತಿ ಚಂಗಳೆ (ಶಶೃ. ೯-೯೦). [ಬಾಣಸ + –ಗಿತ್ತಿ]

**ಬಾಣಸಗೈ**, ಬಾಣಸುಗೆಯ್, ಬಾಣಸುಗೈ (ಕ್ರಿ). ಅಡುಗೆ ಮಾಡು; ಆಹಾರವನ್ನು ಸಿದ್ಧಪಡಿಸು : ಅನಲ ಬಾಣಸಗೈಯಸೋ ತಿಥಿವಿಸವ ಸುರಗುರುವುಪುಸುರನೋ (ಕೌರಿಂ. ೬ ಸಂ. ೭೦೦). **ಬಾಣಸುಗೆಯ್** : ಸಪಸ್ರಸಿಂಹಬಲನೆನಿಪ ಸಿಂಹಬಲನ[ಸ]ತ್ರಮದೊಳ್ ಕೊಂಡು ಜವಂಗೆ ಬಾಣಸುಗೆಯ್ವಂದಿನಿಂದದೊಳ್ ಬಾಣಸಿನ ಮನೆಯೊಳ್ ಬಂದಿರ್ದಂ (ಪಂಪಭಾ. ೯-೭೬ ವ); ಪಿರಿಯಣ್ಣನ ನನ್ನಿಯನಾದರದಿಂ ಕಾಯಲ್ಕೆ ಪೆರ್ಗಿ ಬಾಣಸುಗೆಯ್ದಿಂ ಕುರುವಂಶಜ ಕೇಳ್ ನಿನ್ನೀ ಶರೀರವಮಾಂಸದೊಳೆ ಮರುಳ್ಗೆ ಬಾಣಸುಗೆಯ್ವೆಂ (ಗದಾಯು. ೬-೩೯). **ಬಾಣಸುಗೈ** : ಅಗ್ನಿ ವೊಗರ್ಗೆ ಬಾಣಸುಗೈದು ನಿಚ್ಚಯುಂಯ್ಯ ಜನ್ನದುರಿಯ ನಡುಬೀದಿಯೆನೆ ಮುಗಿಲುದ್ದವೊಂದಿದ ಕರ್ಪೂರಗೆಯಿಂ . . . ತೋರ್ಪ ತಪೋವನವೊಂದು ಕಣ್ಗೊಳಿಸಲ್ (ರಾಜಶೇಕ್ಷ. ೬೯-೨). [ಬಾಣಸ + ಗೈ (< ಕೆಯ್[1])]

**ಬಾಣಸಮನೆ** 'ಬಾಣಸವನೆ' ನೋ.

**ಬಾಣಸವನೆ**, ಬಾಣಸಮನೆ (ನಾ). = ಬಾಣಸ ೧ : ಜವನ ಕಣಜವೊ ಮೇಣು ಲಯಮೃತ್ಯುವಿನ ಬಾಣಸವನೆಯೊ (ಕಶರಾ. ೬-೦೩-೯೩). **ಬಾಣಸಮನೆ** : ಮರ್ತ್ಯಪೇಬುವದು ಕರ್ತಾರನ ಕಮ್ಮಟವು ಮತ್ತೆ ಅಚ್ಚನ ವೊಳೆ ಬಾಣಸಮನೆ ದೇವನ ಸೊತ್ತಿಹುದು ನೀನೇನು ಕೊಟ್ಟೆ ಬಸವ (ಸಿದ್ಧಶೃ. ೩೦-೯೯). [ಬಾಣಸ + ಮನೆ]

**ಬಾಣಸವಿದ್ಯೆ** (ನಾ). ಅಡುಗೆಯ ವಿಧಾನವನ್ನು ತಿಳಿಸುವ ಕಲೆ ; **ಪಾಕವಿದ್ಯೆ** : ಹದ್ದು ಕಾಗೆಯ ಮನೆಯ ಬಾಣಸವಿದ್ಯೆಯಮ್ಮದು ಯಮನ ನಿಳಯಕೆ ಬದ್ದಿನರು ನೀವು (ಕುವ್ಯಾಉ. ೯-೨೩). [ಬಾಣಸ + ವಿದ್ಯೆ]

**ಬಾಣಸವಿರು** (ಕ್ರಿ). ಅಡುಗೆಯ ಕೆಲಸಕ್ಕಿರು : ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜವೆನುತ ಬೊಬ್ಬಿಡುತಿದ್ದುದರಿಬಲವು (ಕುವ್ಯಾದ್ರೋ. ೩-೯೩). [ಬಾಣಸ + ಇರು[1] (< ಇರ್[1])]

**ಬಾಣಸವರ್ಗಡೆ**, ಬಾಣಸಿವರ್ಗಡೆ, ಬಾಣಸುವೆಗ್ಗಡೆ, ಭಾಣಸವರ್ಗಡೆ, ಭಾಣಸುವರ್ಗಡೆ(ನಾ). ಪಾಕಶಾಲೆಯ ಮೇಲ್ವಿಚಾರಕ,–ಮುಖ್ಯಸ್ಥ : ಶ್ರೀಮಹಾಪ್ರಧಾನ ಬಾಣಸವರ್ಗ್ಗಡೆ ಮನೆವೆಗ್ಗಡೆ ದಣ್ಣನಾಯಕನನನ್ನ ಪಾಳಯ್ಯಂಗಳ ಪೆರ್ಗ್ಗಡೆ ಸಿರಿಪತಿನಾಯಕಂ . . . ಮೂಜುಗವ್ಯಾಣ ವೊನ್ನಂ ಬಿಟ್ಟರ್ (ನಾಂದೇಡ್. ೦೯–೦೦; 1116). **ಬಾಣಸಿವರ್ಗಡೆ** : ಶ್ರೀಮಂನ್ಮಹಾಪ್ರಧಾನಂ ದಣ್ಣನಾ[ಯ]ಕ ಬಾಣಸಿವರ್ಗ್ಗಡೆ ಅನನ್ತ ಪಾಳಯ್ಯಗಳ [ಪ(ತ)]ತುಪಾದಪದ್ಮೋಪಜೀವಿ (ಕಇ. IV, ೩-೦೨ : 1114). **ಬಾಣಸುವೆಗ್ಗಡೆ** : "ಪೌರೋಗವಃ, ಸೂದಾಧ್ಯಕ್ಷಃ – ಈ ೨ ಬಾಣಸುವೆಗ್ಗಡೆ" (ಹಲಾಯು. ೬೦-೨೬೭). **ಭಾಣಸವರ್ಗಡೆ** : ಶ್ರೀಮನ್ಮಹಾಪ್ರಧಾನಂ ಭಾಣಸವರ್ಗ್ಗಡೆ ಮನೆವೆರ್ಗ್ಗಡೆ ಪ(೦)ನ್ನಾಯದಧಿಷ್ಠಾಯಕನ ನನ್ನಪಾಳಯ್ಯದಣ್ಣನಾಯಕರು . . . ಸುಂಕವಂ ಸರ್ವ್ವಾಯ ಶುದ್ಧಿಯಿಂ ಬಿಟ್ಟರು (ಕೌಇಇ. IX – i, ೦೫೩-೬೬ ; 1083): ಶ್ರೀಮನ್ಮಹಾಪ್ರಚಂಡದಂಡನಾಯಕಂ ಭಾಣಸವೆರ್ಗ್ಗಡೆ ಅನನ್ತಪಾ[ಳ]ದಂಡನಾಯಕಂಗೆ ಬಿನ್ನಪಂಗೆಯ್ದು . . . ಬಿಟ್ಟ ಧರ್ಮ್ಮಮೆಂತೆಂದ[ಡೆ] (ಕೌಇಇ. XI – ii, ೧೯೦-೬; 1100). **ಭಾಣಸುವರ್ಗಡೆ** : ಶ್ರೀಮನ್ ಮಹಾಪ್ರಧಾನಂ ಭಾಣಸುವೆರ್ಗ್ಗಡೆ ಅನನ್ತಪಾಳರಸನ ದೆಸೆಯಿಂಸವರೆಯಿಂ . . . ಬಿಟ್ಟಿಲವೆರಡಾಜಾಸೂಜುವುಂ ಮಂಷ್ಪನಿಗ್ರಹಸಿಷ್ಟಪ್ರತಿಪಾಳನದಿಂದಾಳುತ್ತಮಿರ್ದ್ದು (ಎಇ. XVIII, ೦೯೦-೪: 1104) ; ಶ್ರೀಮನುಮಹಾಪ್ರಧಾನಂ ಭಾಣಸುವೆರ್ಗ್ಗಡೆ ಮನೆವೆರ್ಗ್ಗಡೆ ಸೇನಾಧಿಪತಿ ದಂಡನಾಯಕನ ನನ್ನಪಾಳಯ್ಯಂಗಳು... ಧಾರಾಪೂರ್ವ್ವಕವಾಗಿ ಕೊಟ್ಟು (ಕೌಇಇ. IX – i, ೨೨೪-೦೭; 1130). [ಬಾಣಸ + ಪೆರ್ಗಡೆ[1]]

**ಬಾಣಸಾವಿ** (ನಾ). ಒಬ್ಬಾತನ ಹೆಸರು : ಬೆಣ್ಣೂರ ಕರ್ವ್ವಣಿ ಬಾಣಸಾವಿ ಮಗನ್ ಪುಣಿಕ್ಕಾಮನ್ . . . ಸತ್ತನ್ (ಎಕ. X, ಬೌಂಗ್. ೪೩-೩; ಸು. ೫೫೦೪). [ಬಾಣ[2] + ಸಾವಿ[1]]

**ಬಾಣಸಿ** (ನಾ). ಅಡುಗೆ ಮಾಡುವ ಕೆಲಸಕ್ಕೆ ನಿಯುಕ್ತನಾದವನು : ಅಡುಗೆಯವನು : "ಬಾಣಸಿಯೆನಲ್ ಅಡಿಗವಳಂ" (ಕಕುತ. ೨೦೬); ಬಾಣಸಿಯಾನು ಭೀಮನ ಮನೆಯವನು (ಕುವ್ಯಾವಿ. ೦-೨೨) ; ಭೂಮಿ ತಾನೋ ವಾರಿ ತಾನೋ ವ್ಯೋಮಚರ ಬಾಣಸಿಯು ತಾನೋ (ಐಜಗ. ೦೦-೦೩-೦೩).

[ಬಾಣಸ + –ಇ[3]. / ಸಂ. ಮಹಾನಸೀ. / ಪ್ರಾ. ಮಹಾಣಸಿ. / ತಮಿ. ವಾನಟಿ ; ತೆಲು. ಬಾನಸೀಂಡು]

**ಬಾಣಸಿಗ** (ನಾ). = ಬಾಣಸಿ : "ಆರಾಳಿಕಃ, ಸೂಪಕಾರಃ, ಸೂದಃ, ವಲ್ಲವಃ – ಈ ೪ ಬಾಣಸಿಗಂ" (ಹಲಾಯು. ೬೦-೨೬೩); ಬಾಣಸಿಗಂ ಬಂದು ಬೋನಮೆತ್ತಿಯೋಗರವಾಜಿದಪ್ಪುದೆಂದು ಪೇಟ್ದೊಡೆ (ಶಬ್ದಾಶಾ. ೪೬-೦೬); ವಿರಾಟಂ . . . ತನ್ನ ಬಾಣಸಿಗನಾಗಿರ್ದ ವಲ್ಲಲನಂ ಕರೆದು ಪೇಟ್ವಾಗಳ್ (ಪಂಪಭಾ. ೯-೩೩ ವ); ಎಸರನಿಡುವ . . . ಕಂಚುಗರ್ಚುವ ಬೆಸನಂ ಬೆಸನಲ್ಲದೆ ಮತ್ಸ್ಯನೃಪಬಾಣಸಿಗಂಗಾಂತ್ತರಲವೊ ನಿನಗೀ ಬೆಸನಂ (ಗದಾಯು. ೬-೫೭). [ಬಾಣಸ + –ಇಗ]

**ಬಾಣಸಿಗತನ** (ನಾ). ಅಡುಗೆಯವನ ಕೆಲಸ ; ಬಾಣಸಿಗನ ಕಾರ್ಯ : ಬಾಣಸಿಗತನಕ್ಕೆ ಸಂದು ವಿಂಗೆ ಮತ್ಸ್ಯನೃಪಂಗುಣಲಿಕ್ಕಿ ಭೀಮ ಜೀವಿಸಿದನು (ಕಜೇಂ. ೦೭). [ಬಾಣಸಿಗ + – ತನ]

**ಬಾಣಸಿಗಿತಿ** 'ಬಾಣಸಿಗಿತ್ತಿ' ನೋ.

**ಬಾಣಸಿಗಿತ್ತಿ**, ಬಾಣಸಿಗಿತಿ (ನಾ). = ಬಾಣಸಗಿತ್ತಿ : ಆ ಸತ್ಯಭಾಮೆಯ ಯತಸನ್ನೆ ಬಾಣಸಿಗಿತ್ತಿಯಾಗಿರ್ದೊಂದುದಿವಸಂ . . . ಪಂಚಾಶ್ಚರ್ಯಂ ನೆಗಟ್ (ಶಾಪುಂಶ. ೦೯೩). **ಬಾಣಸಿಗಿತಿ** : ಪೂಜಾರಿ ಬಾಣಸಿಗಿತಿ ದವಸಿಗ × × × ತೋಟಿಗಂ ಸಂಕಿಮಯನೊಳಗಾಗಿ ಜೀರ್ಣ್ಣೋದ್ಧಾರಕಂ ವಿತ್ತಿ ಮಾಣವತ್ತು (ಎಕ. XII, ಗುಬ್ಬಿ. ೦೯-೬೨ ; 1140) ; ಬಿಡದವ್ವತಾನ್ನವ ನೊಜಲ್ದು ಬಾಣಸಿಗಿತಿವೊಲ್ ಕುಡುತಿರ್ದಳ್ (ಶಾವ್ಯಾಪ. ೩೩೦).

[ಬಾಣಸಿಗ + – ಇತ್ತಿ]

**ಬಾಣಸಿಗೆ**, ಭಾಣಸಿಗೆ (ನಾ). = ಬಾಣಸಗಿತ್ತಿ : ಕಿಜುಕಟೆ ಸೆಗ್ಗಿತನ ಬಾಣಸಿಗೆಯಾಕೆಯ ಪಿರಿಯ ಮಗಂ × × ಟಿಯಕ್ಕಂ (ಎಕ. VIII, ಹನಹ. ೪೩-೩; ಸು. 950); ಬಾಣಸಿಗೆಯರ್ . . . ಹಯ್ಯಂಗವೀನವುಮನರಸಂಗು ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೦೦-೨೯ ವ). **ಭಾಣಸಿಗೆ** : ನಿವೇದ್ಯಮನಡುವ ಭಾಣಸಿಗೆಗೆ ವಾತ್ತುರ್ಗೆ (ಕಇಇ. ೯-೩-೩೨೩; 1085). [ಬಾಣಸಿಗ + – ಎ[1]]

**ಬಾಣಸಿತನ** (ನಾ). = ಬಾಣಸಿಗತನ : ಬಾಹುಕನು . . . ತುರಗನಿಕರದ ಶಿಕ್ಷೆಯಲಿ ಮಂದಿರದ ಬಾಣಸಿತನದ ಕೆಲಸದಿ ನೆಜೆ ನಿಪುಣನೆಂದೆನಿಸಿಕೊಂಡಿಹ ನೃಪನ ಸಭೆಯೊಳಗೆ (ನಳಚ. ೯-೦೯) ; ಅಗ್ನಿಯು ಅನವರತಂ ಬಾಣಸಿತನವಂ ಕೈಕೊಂಡಿರ್ಪನು (ಕುಳಸ. ೦೪೪). [ಬಾಣಸಿ + – ತನ]

**ಬಾಣಸಿವರ್ಗಡೆ** 'ಬಾಣಸವರ್ಗಡೆ' ನೋ.

**ಬಾಣಸು** 'ಬಾಣಸ' ನೋ.

**ಬಾಣಸುಗೆಯ್** 'ಬಾಣಸಗೈ' ನೋ.

**ಬಾಣಸುಗೈ** 'ಬಾಣಸಗೈ' ನೋ.

**ಬಾಣಸುವೆಗ್ಗಡೆ** 'ಬಾಣಸವರ್ಗಡೆ' ನೋ.

**ಬಾಣಹತಿ** (ನಾ). ಅಂಬಿನ ಹೊಡೆತ,– ಪೆಟ್ಟು : ದೇವ ನಿಜೋಗ್ರ ಬಾಣಹತಿಯಿಂ ತಲೆಗಳ್ ಗಗನಕ್ಕೆ . . . ಪಾಜುತಿರ್ಪನಂ . . . ರಾವಣನಂ ರಘುಪ್ರಭವರೂಪದೆ ಮರ್ದಿಸಿದೈ ಜನಾರ್ದನಾ (ಜಗಂ. ೦-೬೦);

ಬಾಣಹತಿಗಕ್ಕುಡಿಸಿ ರಾಜ್ಯಶ್ರೀಣಿ ಜರುಗಿತು (ಉತ್ತ್ವಾ. ೨೪-೪೨). [ಸಂ.]

**ಬಾಣಹರ** (ನಾ). ಬಾಣನೆಂಬ ರಾಕ್ಷಸನನ್ನು ಕೊಂದವನು ; ಕೃಷ್ಣ : "ಮುರಹಿರಣ್ಯ ಕಂಸಮಧುಕೇಶಿಬಲಿಬಾಣಹರನೆನಲು . . . ಕೃಷ್ಣ" (ಮುಂಗಯ. ೬-೦೩). [ಸಂ.]

**ಬಾಣಾಗ್ನಿ** (ನಾ). ಬಾಣದಿಂದ ಉತ್ಪತ್ತಿಯಾಗುವ ಬೆಂಕಿ : ಆ ಮಹಾರಿಪುಭಯಮಂಉರನೀಗಳೆನಗಾಗಿ, ತನ್ನೊಳಿದ ಕೈಹಿಡಿದಬಲಿಗಾಗಿ, ಶೋಷಿಸನೆ ಶರಧಿಯಂ ಬಾಣಾಗ್ನಿಯಿಂ ? (ಶ್ರೀರಾಮಾ. ೩೦೩-೪೪೩). [ಸಂ.]

**ಬಾಣಾಯಿತ** (ನಾ). (ಬಿಲ್ಲಿಗೆ) ಅಂಬನ್ನು ಹೂಡುವವನಂ; ಬಿಲ್ಲುಗಾರ : ಕಠಾರಾಯಿತರ ಬಾಣಾಯಿತರ ಮಲ್ಲಜಟ್ಟಿಗಳ . . . ಮೊತ್ತಮೊತ್ತರದ ಶಿಂಥಿಣಿಯನೊಪ್ಪರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಜಸರ. ೬-೨೩). [ಬಾಣ, + – ಆಯಿತ (< – ಆಯ್ತ)]

**ಬಾಣಾರಸಿ** 'ಬಾರಣಾಸಿ' ನೋ.

**ಬಾಣಾಶ್ರಯ** (ನಾ). ಅಂಬಿಗೆ ಆಶ್ರಯಸ್ಥಾನವಾದುದಂ ; ಬತ್ತಳಿಕೆ : "ತೂಣೀರಂ, ಉಪಾಸಂಗಃ . . . ಬಾಣಾಶ್ರಯಃ, ಕಳಾಪಃ — ಈ ೮ ಮೂಡಿಗೆ" (ಹಲಾಯು. ೬೬-೩೦೦). [ಸಂ.]

**ಬಾಣಾಸನ** (ನಾ). ೧. ಬಿಲ್ಲು; ಧನುಸ್ಸು : "ಧನು ಕೋದಂಡಂ ಬಾಣಾಸನಮಸ್ತ್ರಂ ಕಾರ್ಮುಕಾಖ್ಯಮದು ಚಾಪಂ" (ಪನ್ನ್ಯಕೋ. ೬೩-೦೭) ; ಪಂಚವಿಂಶತ್ಯನ್ವಿತಸಪ್ತಶತಬಾಣಾಸನೋಚ್ಛ್ರಿತನಂ ನಲಿನಪ್ರಮಾಣಃ ಯುಪ್ಪನುವಾಗಿ . . . ಪುಟ್ಟಿ (ಅಂಕ್ಯ. ೬-೩೬ ಪ) ; ಬಾಸಗೆಸಿದ ಮದನನ ಬಾಣಾಸನದವೊಲೆಸೆವ ಚಾರುರುಚಿಂಪಾಣದೊಳುದ್ಯಾಸಿನಿಯರ್ ನೃಪಸುತನ ವಿಳಾಸಿನಿಯರ್ ಬಂದರೇಜೆ ಪೊನ್ನಂದಣಮಂ (ಭ್ಯಕ್ಷ್ಯ. ೩-೨೦). ೨. ಬಿಲ್ಲಿನ ಹಗ್ಗ; ನಾರಿ : ವಿನುತ ಶಿವಪದವೆಂಬ ಬಾಣಾಸನವನೇಱಿಸಿ ತಿರುಗುವಿಂದ್ರಿಯವನಿಪ ಬಲು ಸಾರಂಗವಂ ನಿವಿಷಕೆ ಪಡೆಯುಲೆಚ್ಚು (ಜಸಕ್ಕ. ೪೪-೩೩). [ಸಂ.]

**ಬಾಣಿ**[1] 'ಪಾನೆ' ನೋ.

**ಬಾಣಿ**[2] (ನಾ). ೧. ಮಾತು ; ವಚನ ; ನುಡಿ. ೨. ಶಬ್ದ ; ಧ್ವನಿ. ೩. ಮಾತಿನ ಅಧಿದೇವತೆ ; ಸರಸ್ವತಿ ; ವಾಣಿ : "ಬಾಣ ಬಿಜ್ಜವೆಣ್ಣಿಂ ಬಾಸೆವೆಣ್ಣ ಸರಸತಿಯುಮೆನೆ ವಾಣಾಯಕ್ಕುಂ" (ಕಕ್ಕ. ೯) ; ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗುದ್ಭೋದ್ಯವಂ ಜಾಣಿಂ ಬಾಣಿಯೆನಿಪ್ಪದೊಂದು ಪೆಸರಂ ಮುನ್ನಿತ್ತಂ (ಕಾದಂಬ. ೩) ; ಬೀಣೆ ಪೊತ್ತಗೆಗಳಂ ಪೊತ್ತ ಕೈಯ ಚೆಲ್ವೆ ! ಸುವ್ವಿ ! ಸುವ್ವಿ ! ಬಾಣಿ (ರಾಮಾಶ್ವ. ೬೬-೬). [< ಸಂ. ವಾಣೀ]

**ಬಾಣಿಗ**, ಬಾಣಿಗ್ಗ, ವಾಣ್ಣಿ, ವಾಣಿಯ್ಯ (ನಾ). ೧. ವ್ಯಾಪಾರ ಮಾಡುವವನು ; ವ್ಯಾಪಾರಿ : ಬಾಣಿಗ ಬೀಮಯ್ಯನ ಮಗ . . . ಸಾಂನ್ನಯ್ಯ ಕೊಟಗಮ್ಮನ್ನು ತುಜುವ ಕೊಣ್ಣು ಪೋಪಾಗ (ಪ್ರಕಂ. ೦೯೧೦. ೨೩-೦೦; 1030) ; ಬಾಣಿಗರ ಬೆಳ್ಳಿಗವುಣ್ಣನ ಮಗ ಬಿಟ್ಟಿಗಾವುಂಡನು . . . ನಡಿಸಿದ ಕಲ್ಲ ಗಾಣ (ಪ್ರಕಂ. ೦೯೩೩. ೬೬-೬ ; 1179) ; ಚಲುಡೋಜನ ಬರಹ ಸಮಸ್ತ ಬಾಣಿಗರ ಒಪ್ಪ (ಎಕ. III, ಮಳವ. ೨೦-೨೦ ; 1388). **ಬಾಣಿಗ್ಗ** : ೧. ಸಮಸ್ತ ಬಾಣಿಗ್ಗರ ಅರುಹನಹಳ್ಳಿಯ ಬಾಗಿಗಾಗಿ ನಟ × × × (ಎಕ. III, ಮಳವ. ೨೦-೦೩; 1388). **ವಾಣ್ಣಿ** : ೨. ವ್ಯಾಪಾರ ಮಾಡುವ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಮಾರವಾಡೀ ಬ್ರಾಹ್ಮಣರು . . . ಹಲಕೆಲವರು ಮಾರವಾಡೀವಾಣೀ ಜನರಲ್ಲಿ ಅಡಿಗೆ ಮಾಡುವರು (ಕಬಗ. ೯೪) ; ಸಿಂಪಿ, ವಾಣಿ (ಬಣಜಿಗ), ಕುಣಬಿ (ಒಕ್ಕಲಿಗ) ಮುಂತಾದವರು ಶ್ರೀಪ್ರಸಾಧುಗಳಿಂದು ಎಲ್ಲಿಂದ ಮನ್ನಣೆ ಪಡೆದಿರುವರು (ಕರ್ನಾಸಂ. ೯೩). ೩. ವ್ಯಾಪಾರದ ಸರಕು : 'ಹಸುರುವಾಣಿ' ಪರಾ. ☞ ಈ ಶಬ್ದದ ರೂಪದಲ್ಲಿ ಮರಾಠಿಯ ಪ್ರಭಾವವಿದ್ದಂತೆ ಕಾಣಬರುತ್ತದೆ. **ವಾಣಿಯ್ಯ** : ೧. ವಾಣಿಯರುಂ ವಾರಸ್ತ್ರೀಜಾಣರುಗಳ್ . . . ಶಿಲ್ಪಿಗರ್ ಪೊಜಿಮಟ್ಟರ್ (ಸೂಕ್ತಿಸು. ೦೬-೨೬) ; ಶೌರ್ಯನಗರದ ವಾಣಿಯರು ಹೊಕ್ಕಿಱಿದು ಹೋಗಾಡಿದರು ಪತಿರಿಣವ (ಉತ್ವಾ. ೨೪-೪೩) ; ವಾಣಿಯರ್ ಚಿನ್ನವರದರ್ ದೂಸಿಗರ್ . . . ಜೂಜುಗಾಱರ್ ಮುಖ್ಯರೊಡಗಿ ಬರುತ್ತಿರ್ದರ್ (ಕಲಕು. ೯೬-೯೦). 'ಬನಿಯ' ಪರಾ.

[< ಸಂ. ವಾಣಿಜ./ಪ್ರಾ. ವಾಣಿಅ./ಮರಾ. ವಾಣಿಯಾ. ವಾಣೀ./ತಮಿ. ವಾಣಿಯನ್, ವಾಣಿಕನ್ ; ತೆಲು. ವಾಣಿಜುಡು]

**ಬಾಣಿಗ್ಗ** 'ಬಾಣಿಗ' ನೋ.

**ಬಾಣಿನೋಟ** (ನಾ). ಸರಸ್ವತಿಯ ದೃಷ್ಟಿ.–ಕಟಾಕ್ಷ : ಚಂಚಳಿಸುವ ಭಾವವಾಂತೆಡೆಗಳೊಳ್ ನೆಲೆನಿಲ್ಲ ಬೆಡಂಗಿನಿಂದಮೇಂ ಬಳೆದುವೊ ಬಾಣಿನೋಟದವೊಲೀ ಚಿಕದೇವನ ತಾನದೊಳ್ಪುಗಳ್ (ಚಿಧಿ. ೯-೦೨೩).

[ಬಾಣಿ, + ನೋಟ]

**ಬಾಣೆ**. ಬಾಣ, (ನಾ). ಗದ್ದೆಯ ಸಮಿಪದಲ್ಲಿರುವ, ಸಾಮಾನ್ಯವಾಗಿ ಕುರುಚಲುಗಿಡಗಳಿಂದ ತುಂಬಿರುವ ಕಾಡುಪ್ರದೇಶ : (ಕೊಂಗ್ನಾ. ೦೩೦) ; ಕಾನ, ಬಾಣೆ, ಕುಮುಕಿ, ದರ್ಕಾಸ್ತ್, ತೋಡು, ಕೆರೆ ಇವುಗಳ ವಿಸ್ತೀರ್ಣಗಳೆಲ್ಲ ಬಾಯಿ ಪಾಠ (ಕರುಳ. ೬). **ಬಾಣ**, : 'ಬಾಣಬೆಟ್ಟು' ಪರಾ.

[ದೇ. ॥ ತುಳು. ಬಾಣೆ, ಬಾನೆ ; ಕೊಡ ಬಾಣೆ]

**ಬಾತ** 'ಬಾ,' ಪರಾ.

**ಬಾತಖಾನಿ**, ಬಾತಾಖಾನಿ (ಗು). ೧. ಹರಟೆ ಹೊಡೆಯುವ ಸ್ವಭಾವದ : ಆ 'ಬಾತಖಾನಿ' ಮಹಿಮೆಗೆ ತನ್ನ ಮಾತು ಕೇಳುವವರು ಒಬ್ಬರು ಬೇಕು (ಶಾಲೀನು. ೦೦೩). **ಬಾತಾಖಾನಿ** : ೨. ಹರಟೆ ಹೊಡೆಯುವ ಸ್ವಭಾವವುಳ್ಳ ವ್ಯಕ್ತಿ ; ನಿರರ್ಥಕವಾಗಿ ಮಾತನಾಡುವ ವ್ಯಕ್ತಿ : "ಬಾತಾಖಾನಿ = ಮಾತುಗಂಟಿ" (ಕಾನಕೋ. ೨೦).

[← ಮರಾ. ಬಾತೇಖಾನೀ]

**ಬಾತಮಿ** 'ಬಾತಮೀ' ನೋ.

**ಬಾತಮಿದಾರ** 'ಬಾತಮೀದಾರ' ನೋ.

**ಬಾತಮೀ**, ಬಾತಮಿ, ಬಾತ್ಮಿ, ಬಾತ್ಮೆ (ನಾ). ೧. ವರ್ತಮಾನ ; ಸುದ್ದಿ ; ಸಮಾಚಾರ : ಈ ಬಾತಮೀ ತಿಳಿದು ನವಾಬರು ಪಟ್ಟದ ದಂಡಿನ ಮೇಲೆ ಬಿದ್ದು . . . ಪತ್ತೆಮಾಡಿದರು (ಹೈಅಠ. ೩೦). **ಬಾತಮಿ** : ೧. ಯಾರಾದರೂ ಈ ಬಾತಮಿಯನ್ನು ಹೊರಡಿಸಿದರೇ ಎಂದು ಸಂಶಯವು ಆತನ ಮನಸ್ಸಿಗೆ ಥಕ್ಕನೆ ಹೊಳೆಯಿತು (ಎಧಿನ್ನ. ೦೨೬) ; ಒಂದೆರಡು ಸಲ ನನ್ನಿಂದ ಬಾತಮಿಯನ್ನು ಹೊರಡಿಸುವ ಬೇಡಿನಿಂದ . . . ಕೇಳಿ ನೋಡಿದ್ದ (ಐಹಚ. II. ೧೯). ೨. ಬೇಹು ; ಗೂಢಚರ್ಯೆ : ಇವರನ್ನು ನವಾಬರ ಕಡೆ ಬಾತಮಿ ಕುದುರೆಯವರು ಹಿಡಿದು ಹೈದರಲ್ಲಿಯ ಸಮಿಪಕ್ಕೆ ಕರೆದು ತಂದರು (ಹೈಅಠ. ೬೬). **ಬಾತ್ಮಿ** : ೧. ತೀರ ತಾಜಾ ಬಾತ್ಮಿ ಯಾವುದರಲ್ಲಿ ಇದೆ ? (ಗಾಳಿಕ. ೩೭). **ಬಾತ್ಮೆ** : ೨. ದುಷ್ಮಾನರ ಲಷ್ಕರಿನ ಬಾತ್ಮೆ ಸಮಾಚಾರ ತರಿಸಿಕೊಡಬೇಕು (ರಾಕೇಂದ್ರ. ೦೬೦).

[ ← ಮರಾ. ಬಾತಮೀ. / ಸಂ. ವಾರ್ತಾ ? ]

**ಬಾತಮೀದಾರ**, ಬಾತಮಿದಾರ, ಬಾತ್ಮಿದಾರ, ಬಾತ್ಮೀದಾರ (ನಾ). ೧. (ವರ್ತಮಾನಪತ್ರಿಕೆ ಮುಂತಾದುವುಗಳಿಗೆ) ಸುದ್ದಿ, ಸಮಾಚಾರಗಳನ್ನು ಸಂಗ್ರಹಿಸಿ ತಿಳಿಸುವವನು ; ಸುದ್ದಿಗಾರ ; ವರದಿಗಾರ : ಎಲ್ಲ ಪತ್ರಿಕೆಗಳವರೂ, ಬೇರೆಬೇರೆ ಪ್ರದೇಶಗಳಲ್ಲಿ ಬಾತಮೀದಾರರನ್ನು ನಿಯಮಿಸಿರುತ್ತಾರೆ (ಕೂಠ). ೨. ಬೇಹುಗಾರ ; ಗೂಢಚಾರ : "ಯಥಾರ್ಹಃ, ವರ್ಣಃ . . . ಗೂಢಪುರುಷಃ — ೭ ಬಾತಮೀದಾರನ ಹೆಸರುಗಳು, ಗೂಢಚಾರನು, ವೇಷಧಾರಿಯಾಗಿ ಕಪಟದಿಂದ ತನ್ನನ್ನು

ತಿಳಿಯಪಡಿಸದೇ ಹೊಂಚಿ ವಿಷಯವನ್ನು ತಿಳಿದು ತಂದರಿಕೆ ಮಾಡುವ ದೂತನು" (ಸಿದ್ಧಾಂತಿ. ೨೩೧). **ಬಾತಮಿದಾರ**: ೧. "(ಸಂಗತಿ) ಹೇಳುವವನು ; ವರ್ತಮಾನ ಕೊಡುವವನು ; ಬಾತಮಿದಾರ" (Informant. ಇಂಶಿ). ೨. ಗೊಲ್ಲರವನು ದುರ್ಗಕ್ಕೆ ಹೋಗಿ ದಕ್ಷಿಣ ಪ್ರಾಂತದ ಬಾತಮಿದಾರನ ಸಮೇತ ದೊರೆಯ ಸನ್ನಿಧಾನದಲ್ಲಿ ಈ ಸಂಗತಿಯನ್ನು ಅರಿಕೆಮಾಡಿದನು (ಶಿಕ್ರಶಾ. ೬೩). **ಬಾತ್ಮಿದಾರ**: ೧. ಸಾಕ್ಷಿಗಳು ಬಾತ್ಮಿದಾರರು ಎಲ್ಲಾ ಬಂದಿದ್ದಾರೋ ? (ಶೀರಷೋ. ೩೦); ಪತ್ರಿಕಾಬಾತ್ಮಿದಾರರ ಆಸೂಯೆಯಿಂದ ಆ ವಿಷಯವು ಬರಲಿಲ್ಲವೆಂದು ಸಮಾಧಾನ ಮಾಡಿ, ರಾಯರ ಮನಸ್ಸಿಗೆ ಶಾಂತಿಯನ್ನುಂಟುಮಾಡಲು ಪ್ರಯತ್ನಿಸಿದೆ (ರಾಹುಕ. ೬೩). **ಬಾತ್ಮೀದಾರ**: ೧. ಒಬ್ಬಿಬ್ಬ ಸಂಪಾದಕರು ಬಗಲಿಗೆ ಇರಲಿ ; ಕೊನೆಗೆ ಬಾತ್ಮೀದಾರ (ಅಕಾ. ೩೧೬-೯) ; ಅದರಲ್ಲಿ ಸಮ್ಮೂರಿನ ಬಾತ್ಮೀದಾರನಿಂದ, ರಾಯರ ವಿಷಯವಾಗಿ ಈ ರೀತಿ ಬರೆದಿತ್ತು (ರಾಹುಕ. ೬೩).

[ಬಾತಮಿ + – ದಾರ್ , / ಮರಾ. ಬಾತಮೀದಾರ್]

**ಬಾತಾಖಾನಿ** 'ಬಾತಖಾನಿ' ನೋ.

**ಬಾತಾಳಿಸು** (ಕ್ರಿ). ಕಿರಿಚು; ಅರಚು ; ಒರಲು : ಕೇಳಿ ದಶಕಂಧರನು ಕೋಪ ಚಡಾಳಿಸಲು . . . ತೋಳುಬಲುಹನು ನೋಡೆನುತ ಬಾತಾಳಿಸಲು (ಅನಂರಾ. ೦-೦೦-೨೦); ತೊಡಕಿ ಕಾದುವ ಸಂಘಟನಸುವನು ತುಡುಕೆನುತ ಬಾತಾಳಿಸುತಲಾ ವ್ಯಥನ ಭೂತಗಣಂಗಳೆಸಲುರುಬಿದರು ಕಪಿವರರು (ಅನಂರಾ. ೬-೦೦-೬೨). [ ← ತೆಲು. ಬಾತಳಿಂಚು, ಬಾತಲಿಂಚು]

**ಬಾತು₁** 'ಬಾ₁' ಪರಾ.

**ಬಾತು₂** (ನಾ). ಊತ ; ಬಾವು : ಉಡಿಯಿಂದ ಮೇಲೆ ಬಾತು ಉಂಟಾಗಿ ಹಣ . . . ಅಪಾನಪ್ರದೇಶ, ಗುಹ್ಯಪ್ರದೇಶಗಳಲ್ಲಿ ಬಾತುವುಂಟಾಗಿ ಇಹಣ . . . ಈ ರೀತಿಯುಳ್ಳರಲು ಆತನು ಸರ್ವಥಾ ಜೀವಿಸುವುದಿಲ್ಲ (ವೈದ್ಯಸಾ. I. ೩೩೫). 'ಬಾತುಗಾಲು' ಪರಾ.

[< ಬಾ₁ / ತುಳು. ಬಾತ್ = ಊದು]

**ಬಾತು₃** (ನಾ). ಒಂದು ಬಗೆಯ ನೀರುಹಕ್ಕಿ : "ಬಾತೆನೆ ತಾಂ ಕೋಳಿಯೊಂಬುದರ್ಥಂ" (ಶಾಕಿ. ೨೧); ಚಿಮ್ಮುವ ಬಾಲದ ಬಾತುಗಳು . . . ಉದ್ದಕಾಲಿನ ಬಾತುಗಳೂ ಈ ಗುಂಪಿಗೆ ಸೇರುವುವು (ಕಂಕೋ. XII. ೨೬).

[ ←ಅರ. ಬತ್; ಪಾರ. ಬತಕ್; ಹಿಂ. ಬತ್, ಬತಕ್, ಬತಖ್; ಮರಾ. ಬತಕ್, ಬದಕ್. / ತಮಿ. ವಾತ್ತು; ಮಲ. ಬಾತ್ತು; ತುಳು. ಬಾತ್, ಬತ್ತ್; ಕೊಡ. ಬಾತ್; ತೆಲು. ಬಾತು. /ಪೋರ್ಚ್. ಪಾತೊ]

**ಬಾತುಕೋಳಿ** 'ಬಾತುಗೋಳಿ' ನೋ.

**ಬಾತುಗಾಲು** (ನಾ). ಊತ ಬಂದ ಕಾಲು ; ಬಾವಿನಿಂದ ಕೂಡಿರುವ ಕಾಲು ; ನಿತ್ರಾಣವಾದ ಬಿಳಿಯ ಬದುರಿಯೂ ಬಾತುಗಾಲಿನ ಬಚಕಲ ಕುಮರಿಯೂ . . . ನಿಧಾನವಾಗಿ ಸಾಗುತ್ತಿದ್ದುದರಿಂದ ಅವನು ಅಪರಿಚಿತ ವ್ಯಕ್ತಿಯನ್ನು ಮಾತಾಡಿಸಬೇಕೆಂದು ಕಾತರನಾಗಿದ್ದನು (ಪುಕರು. ೨೬೩).

[ಬಾತು₂ + ಕಾಲು₁ (< ಕಾಲ್₁)]

**ಬಾತುಗೋಳಿ, ಬಾತುಕೋಳಿ** (ನಾ). = ಬಾತು₃ : ಬಾತುಗೋಳಿ ಹಾಂಗ ಬಾತೀದ ಜಾತ್ಕಲ್ಲ (ಜಾನಪದ. ೪೬-೦೩). **ಬಾತುಕೋಳಿ** : "ಕಾರಂಡ, ಕಾರಂಡವ – ಕಾಗೆಯ ಹಾಗೆ ಇರುವದೊಂದು ಪಕ್ಕಿ, ಬಾತುಕೋಳಿ" (ಗಂಗಾಮ. ೬೦); ಯಂತ್ರದ ಬಳಿಯ ನೀರಿನಿಂದ ಬಾತು ಕೋಳಿಗಳ ಕೇಕಾರವ ಕೇಳಿಸುತ್ತಿತ್ತು (ಪುಕರು. ೨೯೭).

[ಬಾತು₃ + ಕೋಳಿ₁ (< ಕೋೞ್₁) ]

**ಬಾತೆ** 'ಬಾಬ್ತು' ನೋ.

**ಬಾತೆಗೆಡು** 'ಬಾರ್ತಗೆಡು' ನೋ.

**ಬಾತೇಗೇಡಿ** (ನಾ). ಬದುಕು ಕೆಟ್ಟವನು ; ಹಾಳಾದವನು : ಬಾತೇಗೇಡಿಗಳೆ ಪ್ಪೋಲೀಕಸಿತು ರೋಷವೆರೆ ಪಾತಕರನಟ್ಟದಟ್ಟದು ಮೂದಲಿಸಲೇಕೆ ಸಲೆ (ಹಾಮಂಕ. ೯-೨೦೩). [ಬಾತೆ (< ಬಾಬ್ತು) + ಕೇಡಿ₁]

**ಬಾತ್ಮಿ** 'ಬಾತಮಿ' ನೋ.

**ಬಾತ್ಮಿದಾರ** 'ಬಾತಮೀದಾರ' ನೋ.

**ಬಾತ್ಮೀದಾರ** 'ಬಾತಮೀದಾರ' ನೋ.

**ಬಾತ್ಮೆ** 'ಬಾತಮಿ' ನೋ.

**ಬಾದಣ₁** 'ಬಾದವಣ' ನೋ.

**ಬಾದಣ₂** (ನಾ). ತಟ್ಟೆ; ತಳಿಗೆ : ದೇವವಿತತಿ ಚಂದಿರನ ಬಾದಣದಿಟ್ ದಮೃತಸೇವನೆಯ ಮಾಡುತಿರೆಯೊಸರ್ದುದೋ ಎಯ್ದುವೊಲು ಕಳಂಕಾಂಕ ನೆಸೆದಿರೆ ಜೊನ್ನಮುಟ್ ವರ್ಬಿತು (ಸಿದ್ಧೇಪು. ೦೩-೨೦). [< ಸಂ. ಭಾಜನ]

**ಬಾದಣಂಗೈಸು** (ಕ್ರಿ). ತೂತು ಬೀಳುವಂತೆ ಮಾಡು : ದನುಜೇಂದ್ರ ನಂಗವ ಬಾದಣಂಗೈಸಿದರು ಶಿವಶಿವ ಶೂಲ ಚಕ್ರದಲಿ (ಅಂಡಾಂ. ೯೦-೨೩).

[ಬಾದಣ₁ (< ಬಾದವಣ) + ಕೈಸು (<ಕೆಯ್ಸು) ]

**ಬಾದಣಗಂಡ** (ನಾ). ಬಿರುಕು ಬಿಟ್ಟ ಗಾಯದ ಮಾಂಸ : ಬಾಗಿ ಮುರಿದವುಡಿ ಕೆಡವುವ ಮೊಗು ಬಿಗಿದು ಬಾದಣಗಂಡವ ಬಿಡೆಕಾಟ್ ಒರಿ ಹಿಂಡುವ ಕಂಠ . . . ಮೆಟ್ಟಿಯೆ ಕರಿಗಳಂ ಕೆಡ್ಪುದುವು ಸಿಂಹಂಗಳು (ಕಕಾ. ೩-೩೭). [ಬಾದಣ₁ (< ಬಾದವಣ) + ಕಂಡ₁]

**ಬಾದಣಗೊಳಿ³** (ಕ್ರಿ). ೧. ತೂತಾಗುವಂತೆ ಕೊರೆ; ರಂಧ್ರಮಾಡು : ನೀ ಬಟ್ಟೇಕೆ ಚುಚ್ಚುವೆ ಕಾಸಿ ಬಾದಣಗೊಳಿದ ಘಾಯದಲಿ (ಕುಮ್ಮಾ. ಗ. ೬-೩೯); ಬಾದಣಗೊಳಿದು ಪಾತಾಳಕಿಳಿದು ಭೋಗಾಪತಿಯ ಮುತ್ತಿದರು (ಸಿದ್ಧೇಪು. ೯-೯೭). ೨. ರಂಧ್ರವಾಗು ; ತೂತಾಗು : ರಣದೊಳು ಖಾನಖಾನರ ಮೆಯ್ಗಳು ಬಾದಣಗೊಳಿದವು (ಕುಣಾಪಾಂ. ೪೩-೫೭); ಇಭ ನಕ್ರಪತಿಗಳ ಪರವುಸತ್ತ್ವೋತ್ಕರ್ಷವೆಂತುಟೊ ಗಿರಿ ಬರಿಯ ಧರೆ ದೆಸೆಗೆ ಬಾದಣಗೊಳಿಯೆ ವದಹತಿಗೆ (ಹರಿಗ. ೬-೩-೬).

[ಬಾದಣ₁ (< ಬಾದವಣ) + ಕೊಳಿ³₁]

**ಬಾದಣದಲೆ** (ನಾ). ತೂತು ಬಿದ್ದ ತಲೆ : ಸೂಕರನ ದಾಡೆಗಳಿಟ್ಟಿತದಂಗದ ಬಳಿಯ ಬಾದಣದಲೆಯ ಭಟರದೆ ದೇವ ನೋಡು (ಕೂಕಾ. ೬-೨೦-೬೦).

[ಬಾದಣ₁ (< ಬಾದವಣ) + ತಲೆ₁]

**ಬಾದಣದೆಗೆ** (ಕ್ರಿ). ತೂತುಮಾಡು; ರಂಧ್ರವನ್ನು ಕೊರೆ : ಜೀವಂ ನೆಗೆದು ತಾಗಿ ನಡುನೆತ್ತಿಯಂ ಬಗಿದು ಬಾದಣದೆಗೆದು ಮೇಗುದರ್ದು ಗಗನಕ್ಕೆ ದಂಡಾಯುಮಾನದುರಿಯಾಗಿ ನೆಗೆಯಲ್ಕೆ (ಸಿದ್ಧರಾ. ೯-೩೯).

[ಬಾದಣ₁ (< ಬಾದವಣ) + ತೆಗೆ₁]

**ಬಾದಣವಾಗಿಲು** (ನಾ). ರಂಧ್ರದ ದ್ವಾರ; ಬಿಲದ ಬಾಯಿ : ಇಂದು ನಿನ್ನೈಶ್ವರ್ಯಲಕ್ಷ್ಮೀ ಕ್ಕಿರಿದು ಭಂಡಾರವಂದಿರವೊಗಲ್ವಂತೆ ಗಡ ಸಾರ್ಚಿರಲು ತಿರುಗುವಂದಗಂಡೊಳಹೊಗಿಸಲಭವ ನಿರ್ಮಿಸಿದ ಬಾದಣವಾಗಿಲದು ಕನ್ನವೆ (ಸಿಂಗಿರಾ. ೦೬-೦೩).

[ಬಾದಣ₁ (< ಬಾದವಣ) + ಬಾಗಿಲು (< ಬಾಗಿಲ್) ]

**ಬಾದಣಿಸು, ಬಾದಳಿಸು** (ಕ್ರಿ). ತೂತಾಗು ; ರಂಧ್ರವಾಗು : ಬಾದಣಿಸಿ ದೇಹಂಗಳ ಬಾಯೊಳು ಕಾದ ಬಾರಂಗಗಳನೆಳೆಗೆ ಕೋಲು ವಾಮ ದೊಳೆಯ್ದು ಹಿಡಿದರು ತೈಲಧಾರೆಗಳ (ಕುಜ್ಞಾಭಾ. ೩-೯೦). **ಬಾದಳಿಸು** : ಬಿಲ್ಲ ನಾರಿಯ ನೀವಿ ರೆಯ್ಯೋಗ್ಯೆಸುಲಲ್ಲಿ ತುಳುಕ ಮೇದಿನಿಯು ನಡುಗಲಬಲ ಗಳಲುಗೆ ಖಗರ ಹೃದಿ ಬಾದಳಿಸೆ (ಕಪರು. ೨೯-೦೩).

[ಬಾದಣ₁ (< ಬಾದವಣ) + – ಇಸು₃]

**ಬಾದಮಿ** 'ಬಾದುಬ್ಬೆ' ನೋ.

**ಬಾದಮ್ಮ** (ನಾ). ಒಬ್ಬಾತನ ಹೆಸರು: ಬಾಗುಗುಳಿಯ ಮಹಾಜನ ಅಯ್ನೂರ್ವರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದಗೂಟನಿತ್ತೂರ್ (ಸೌಇಇ. IX-i. ೩೯-೬ ; ಸು. 10ಶತಮ ೩೩). [? + ಅಮ್ಮ₁]

**ಬಾದರ್** 'ಬಹಾದುರ್' ನೋ.

**ಬಾದರ** (ಗು). ೧. ಎಲಚಿಮರಕ್ಕೆ ಸಂಬಂಧಿಸಿದ. ೨. ಹತ್ತಿಯಿಂದ ಮಾಡಿದ. ೩. ಒರಟಾದ; ನಯವಿಲ್ಲದ. (ನಾ). ೪. ಹತ್ತಿ ಮತ್ತು ಅದರ ಗಿಡ; ಅರಳೆ: "ಬಾದರಂ ಪಿಚವ್ಯಾಖ್ಯಮುಜಾಗೆ ಪಿಚು ಕಾರ್ಪಾಸಂ" (ಅಸ್ತುಕೋ. ೩೬-೩೦). ೫. ಹತ್ತಿಯಿಂದ ತಯಾರಿಸಿದ ಬಟ್ಟೆ: "ಕಾರ್ಪಾಸಂ, ಬಾದರಂ—ಈ ೨ ಹತ್ತಿಯಿಂದಾದ ಸೀರೆ" (ಕಣಾಮು. ೯೦-೩೯೬). ೬. ಎಲಚಿಗಿಡ ಮತ್ತು ಅದರ ಹಣ್ಣು; ಬೋರೆ. ೭. ನೀರು; ಜಲ. ೮. [ಜೈನ] ಸೂಕ್ಷ್ಮವಲ್ಲದುದು; ಸ್ಥೂಲವಾದುದು: ಸುಗಮಸಂಜ್ವಲನದ ಮುನಿಸೊಮ್ಮೆ ಹವ್ಮೊಮ್ಮೆ ತೆಗೆದುಹೋದುವು ಮುಂದೆ ಲೋಭ ಏಗೆ ಸೂಕ್ಷ್ಮದೊಳು ನಿಂದುದದು ಬಾದರಗೂಡಿ ಜಗುಳಿತು ಮಾಯ ಲೆಕ್ಕಿಸದೆ (ಹಕ. ೩೯-೬೩). 'ಬಾದರರೂಪ' ಪರಾ. ೯. (ಹಾಲು, ನೀರು ಇತ್ಯಾದಿ ದ್ರವ ಪದಾರ್ಥಗಳಂತೆ) ವಿಭಾಗ ಹೊಂದಿದ ಮೇಲೆ ಮೂರನೆಯ ವಸ್ತುವಿನ ಸಹಾಯವಿಲ್ಲದೆ ಏಕರೂಪವಾಗುವ ಪುದ್ಗಲಸ್ಕಂಧ: ಅಂತರ್ಮುಹೂರ್ತನಿರುದ್ಧಾಶೇಷಮನೋವಾಗ್ಬಾದರಕಾಯಯೋಗಸೂಕ್ಷ್ಮಕಾಯಯೋಗಪರಿಣತಂ (ಅಪು. ೧೬-೪೯ ವ); ಬಾದರಸೂಕ್ಷ್ಮೈಕೇಂದ್ರಿಯ ದ್ವಿತ್ರಿಚತುರಿಂದ್ರಿಯಸಂಜ್ಞಾಸಂಜ್ಞಿಗಳು ಅದವು ಪರ್ಯಾಪ್ತಾಪರ್ಯಾಪ್ತದ ಭೇದದಿ ಜೀವಸಮಾಸ (ಧ್ಯಾರತ್ನ. ೩-೩). ೧೦. ಜೀವಾದಿತತ್ತ್ವಗಳಲ್ಲಿ ವಿವಕ್ಷಿತವಾಗಿರುವ ಹದಿಮೂರು ಪ್ರಕೃತಿಗಳಲ್ಲಿ ಒಂದು: ಸ್ವಕೀಯಚರಮಸಮಯದೊಳನ್ಯತರವೇದನೀಯ . . . ಬಾದರ ಯಶಸ್ಕೀರ್ತಿರುಚ್ಚೈರ್ಗೋತ್ರತೀರ್ಥಕರನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಅಪು. ೧೬-೪೯ ವ); ಚರಮ ಸಮಯದೊಳ್ ಪರಿಶಿಷ್ಟಾನ್ಯತರವೇದನೀಯ ಮನುಷ್ಯಾಯುರ್ಮನುಷ್ಯ ಗತಿ ಪಂಚೇಂದ್ರಿಯ ಜಾತ್ಯಾನುಪೂರ್ವಿತ್ರಸನಾಮಬಾದರಪರ್ಯಾಪ್ತಕ ಸುಭಗಾದೇಯಯಶಸ್ಕೀರ್ತಿ ತೀರ್ಥಂಕರನಾಮೋಚ್ಚೈರ್ಗೋತ್ರಂಗಳೆಂಬ ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ (ಶಾಂಪು. ೧೬-೬೦ ವ). 'ಪ್ರಕೃತಿ' ಪರಾ. [ಸಂ.]

**ಬಾದರಕೃಷ್ಟಿ** (ನಾ). [ಜೈನ] "ಅನಿವೃತ್ತಿಕರಣಗುಣಸ್ಥಾನದಲ್ಲಿ ಸಂಜ್ವಲನಕ್ರೋಧ–ಮಾನ–ಮಾಯಾ–ಲೋಭಗಳ ಅನುಭಾಗಗಳನ್ನು ಕಡಿಮೆಮಾಡಿ ಸ್ಥೂಲಖಂಡ ಮಾಡುವುದು" (ಅಪು. ೭೭ ಕೃಪಾರಿಭಾಷಿಕ ಶಬ್ದಕೋಶ): ಬಾದರಕೃಷ್ಟಿಕರಣಕಾಲಪ್ರಮಾಣಮೇನೆಂದೊಡೆ (ಭೂಪಾ. ೩೩-೩೩). [ಸಂ.]

**ಬಾದರರೂಪ** (ನಾ). [ಜೈನ] ಸೂಕ್ಷ್ಮವಲ್ಲದ ರೂಪ; ಸ್ಥೂಲವಾದ ರೂಪ: ಪದಪು ಜಿನೇಂದ್ರಪಾದಕಮಲಂಗಳೊಳಾವಗಮಾಗೆ ಕರ್ಮಬಂಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ ಬಾದರರೂಪದಿಂದೆ ಕೊಲ್ಲದ ಪರನಾರಿಗಾಟಿಸದ ಕಳ್ಳದಸತ್ಯದೊಳೊಂದದಾಗಳುಂ ಕುದಿವಪತೃಷ್ಣೆಯಂ ಕುಸಿದು ಮಾಣಿಸುವಯ್ದು ಮಣುವ್ರತಂಗಳಂ . . . ತಾಳ್ದಿ (ಅಂಪು. ೬-೭). [ಸಂ.]

**ಬಾದರಸೂಕ್ಷ್ಮ** (ನಾ). [ಜೈನ] "ಸ್ಥೂಲರೂಪವಾಗಿ ಕಂಡರೂ ಯಾವ ಪುದ್ಗಲಗಳನ್ನು ಭೇದಿಸಲಿಕ್ಕೂ ಅವುಗಳಲ್ಲಿ ಛಿದ್ರವನ್ನು ಮಾಡುವುದಕ್ಕೂ ಅಸ್ತ್ರಗಳನ್ನು ಹಿಡಿಯುವುದಕ್ಕೂ ಬರುವುದಿಲ್ಲವೋ ಅವು ಬಾದರಸೂಕ್ಷ್ಮಗಳು" (ಕೃಪರಿ. ೩೩). [ಸಂ.]

**ಬಾದರಸ್ವರೂಪ** (ನಾ). = ಬಾದರರೂಪ: ಅಲ್ಲಿ ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟುವಿಕಲ್ಪಮಾದುತ್ತರ ಪ್ರಕೃತಿಗಳುಮನೊಳಕೊಂಡನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ (ಸುಕುಚಪು. ೬-೨೬ ವ). [ಸಂ.]

**ಬಾದರಾಯಣ** (ನಾ). ಬ್ರಹ್ಮಸೂತ್ರ ಮತ್ತು ಮಹಾಭಾರತಗಳನ್ನು ಬರೆದವನೆಂದು ನಂಬಲಾದ ಒಬ್ಬ ಮಹರ್ಷಿ; ವ್ಯಾಸ; ಕೃಷ್ಣದ್ವೈಪಾಯನ; ಈ ಋಷಿಯು ಬದರೀವನದಲ್ಲಿ ಆಶ್ರಮವನ್ನು ಹೂಡಿ ತಪಸ್ಸನ್ನಾಚರಿಸುತ್ತಿದ್ದ ಕಾರಣ ಈ ಹೆಸರು ಬಂದಿದೆಯೆಂಬ ನಂಬಿಕೆಯಿದೆ: ದ್ವಾಪಾರದಲಿ ಭಾವಜಜನಕನಾವಿರ್ಭವಿಸಿದ ತ್ರಿಜಗವಱಿಮಲು ಬಾದರಾಯಣನೆಂಬ ನಾಮದಲಿ (ಐಕಪು. ೩೯-೩೩); ಶಾಲಿಹೋತ್ರಾಶ್ರಮಾವನಸಿಬರು ಬೀಳುಕೊಂಡರು ಮತ್ತೆ ಕಂಡರು ಬಾದರಾಯಣನ (ಕುಭ್ಯಾಅ. ೦೦-೦); ಹ್ಯಾಂಗೆ ನೀ ದಾಸನಾದಿ ಪ್ರಾಣ . . . ಬಾದರಾಯಣಕೃತ ಭಾಗವತ ಕೇಳದೆ (ಕಸಳ. ೦೦೬-೯).

ಬಾದರಾಯಣಸಂಬಂಧ = (ಅಲಂ) ಕಲ್ಪಿತವಾದ ಅಥವಾ ಅತ್ಯಂತ ದೂರದ ಸಂಬಂಧ; ಬಹುದೂರದ ನಂಟುತನ: ಚೌಲಕರ್ಮಕ್ಕೂ ಸ್ತ್ರೀಯರ ನಗ್ನಚಿತ್ರಗಳಿಗೂ ಯಾವ ಬಾದರಾಯಣಸಂಬಂಧವೋ ಕಾಣೆ (ನಾಡಗಿ. ೨೬೬); ಅವರು ಮನೆ ಬಿಟ್ಟು ಹೋಗುವುದಕ್ಕೂ ನನ್ನ ವಿದ್ಯೆಗೂ ಇರುವ ಬಾದರಾಯಣಸಂಬಂಧವಾವರೂ ಯಾವುದು? (ಧಾರಕ. ೦೦೦). [ಸಂ.]

**ಬಾದರಾಯಣಸಿದ್ಧಾಂತ** (ನಾ). ಬಾದರಾಯಣಮಹರ್ಷಿಯಿಂದ ರಚಿತವಾದ ವೇದಾಂತಸೂಕ್ತಿ: ಈ ವಾದದಲ್ಲಿ . . . ಪುರುಷಾರ್ಥಕ್ಕೆ ಲೋಪವಿಲ್ಲವೆಂಬುದು ತಾತ್ಪರ್ಯವಾಗುತ್ತದೆ. ಬಾದರಾಯಣಸಿದ್ಧಾಂತದಲ್ಲೂ ಇದೇ ತಾತ್ಪರ್ಯವು (ಹಿಂದಪಾ. ೬೩). [ಸಂ.]

**ಬಾದರಾಯಣಸೂತ್ರ** (ನಾ). = ಬಾದರಾಯಣಸಿದ್ಧಾಂತ: ಈ ಬ್ರಹ್ಮಸೂತ್ರಕ್ಕೇ ಬಾದರಾಯಣಸೂತ್ರ, ವೇದಾಂತಸೂತ್ರ, ಶಾರೀರಕಮೀಮಾಂಸಾ, ಬ್ರಹ್ಮಮೀಮಾಂಸಾ ಎಂಬ ಹೆಸರುಗಳು ಬಂದಿವೆ (ಭಾರಕ. ೩೮೦). [ಸಂ.]

**ಬಾದಲಿ₁, ಬಾದ್ಲಿ, ಬಾಲ್ದಿ** (ನಾ). (ನೀರನ್ನು ಸೇದಲು ಅಥವಾ ತೆಗೆದು ಕೊಂಡು ಹೋಗಲು ಬಳಸುವ) ಒಂದು ಬಗೆಯ ಪಾತ್ರೆ: ಬಾದಲಿಯ ಮೇಲೆ ಬಾದಲಿ ಬಿಸಿನೀರು ತಾ, ತಣ್ಣೀರು ತಾ ಎಂದು ಇವನ ಆಜ್ಞೆ ಇರತಕ್ಕದ್ದೆ! (ಗಾಳಕ. ೯೩). **ಬಾದ್ಲಿ**: ಚನ್ನಿ . . . ಬಾದ್ಲಿಯನ್ನು ನೀರಲ್ಲಿ ಮುಣುಗಿಸಿದಳು (ಹೊಸಕ. ೬೩). **ಬಾಲ್ದಿ**: ಕೆಲವೇಳೆ ಬಾಲ್ದಿ ತೆಗೆದುಕೊಂಡು ಸಸಿಗಳಿಗೆ ನೀರು ಹಾಕುತ್ತಿದ್ದೆವು (ಕಂಳ. ೨೨); ಸೊಸೆ ಬಾಲ್ದಿಯಲ್ಲಿ ನೀರು ತಂದು, ಒದ್ದೆಬಟ್ಟೆಯಿಂದ ನೆಲವನ್ನೊರಸಿದಳು (ಬಾಳಿಗ. ೯೨).

[ ←ಹಿಂ. ಬಾಲಟೀ, ಬಾಲ್ಟೀ; ಮರಾ. ಬಾದಲೀ, ಬಾರಡೀ, ಬಾಲಟೀ, ಬಾಲಡೀ, ಬಾಲದೀ, ಬಾಲ್ಟೀ./ಇಂ. Bucket]

**ಬಾದಲಿ₂** (ಗು). ಜರತಾರಿಯ; ಕಲಾಬತ್ತಿನಿಂದ ಕೂಡಿದ: ಯಾರ ತಲೆಯ ಮೇಲೆ ನೋಡಿದರೂ ಗಾಂಧಿಟೊಪ್ಪಿಗೆಯ ಬದಲು 'ಬಾದಲಿ' 'ಕೋಟಿ' ಪಟಕಗಳೇ ಕಾಣಹತ್ತಿದವು (ಬಾಕ್ಕ್ರೀ. ೪).

[ ← ಹಿಂ. ಬಾದಲಾ = ಜರತಾರಿ; ಮರಾ. ಬಾದಲೀ ]

**ಬಾದವಣ, ಬಾದಣ₁, ಬಾದಳ** (ನಾ). ೧. (ಮನೆಯಲ್ಲಿ ಗಾಳಿ, ಬೆಳಕು ಬರುವುದಕ್ಕಾಗಿ ಮಾಡಿರುವ) ಗವಾಕ್ಷ: "ಬಾದವಣಂ ವಾತಾಯನಂ ಗವಾಕ್ಷಂ ಜಾಳಂ" (ವಸ್ತುಕೋ. ೯೭-೦೦). ೨. ತೂತು; ರಂಧ್ರ: 'ಬಾದವಣಂಬೋಗು' ಪರಾ. **ಬಾದಣ₁**: ೧. ನೃಪತಿಯ ಪ್ರಾಸಾದದ ಶಿಖರದ ಮಧ್ಯಪ್ರದೇಶಮಂ ಬಾದಣ[ಪಾಠಾಂ. ವ]ದಂತಿರೆ ಛಿದ್ರಂ ಮಾಡಿ (ವಡ್ಡಾರಾ. ೦೩೬-೦೯); ಕುದುರೆ ಕೆಟ್ಟವರ್ ಬಾದಣಮಂ ನೋಡಿದ

ರೆಂಬಂತೆ ನಾಣ್ಣುಡಿಯಂ ನನ್ನಿ ಮಾಡಿ (ಧರ್ಮಾಮೃ. ೧೨-೬೩); ಸೂಳೆಗೇರಿಯೋವರಿಸು ಬಾದಣದಿನೊಗೆವ. ಅಗುರುಪಿನ ಕರ್ಬೊಗೆಯ ಸುರ್ಬಿನೊಳ್ ತಳ್ತೊಯ್ಯು (ಶಂಕ್ರಪು. ೬-೯೬ ವ). ೨. ಬಸದಿ ಬಾದಣ ಬಾಯ್ಕಿಟ್ಟು ದುಜಿದುಜಿನೊಗುವ ಬಿಸಿನೆತ್ತರಂ ಕುಡಿದು (ಶಶಾ. ೬-೧೬); ಜೋಡನೊಡೆದಾಯ್ದೂಂಬು ಧರಣಿಯೊಳಾಡಿದವು ಗುಳ ಸರಿದ ಉರಿಗಳ ತೋಡಿ ನೆಟ್ಟವು ಬದ್ದರಂಗಳ ಬಾದಣದ ಕೊಚೆದು (ಕುಮ್ಮಾರ. ೮-೯೭); ಬೆಟ್ಟಕ್ಕೆ ಬಾದಣವ ತೆಗೆದಂತೆ ಛಾಯಾವಿರೆ (ಶ್ರಕುಪ್. ೩-೬೯). **ಬಾದಳ:** ೧. ಆ ಮನೆಗೆ ಒಂಬತ್ತುವಾಗಿಲು ಈಡ ಬಿಂಗಳವೆಂಬ ಗಾಳಿಯು ಬಾದಳ (ಗಣಾ. ೧೩-೩); ಅನುನಯದೆ ಹಣಿಹಣಿಕಿ ನೋಡುತ್ತ ಬಾದಳದೆ . . . ಕಳ್ಳರೆಸದರ್ ತಮದೊಳು (ಕಚುಪ್. ೦-೩-೬೨). ೨. ಬಲುಗಜಕ್ಕೆ ಬಾದಳ ದಲ್ಲಿ ಹಾದಿಯುಂಟೆ (ಜನ್ಮಶಾ. ೪. ೭೦-೭೭). [<ಸಂ. ವಾತಾಯನ]

**ಬಾದವಣಂಬೋಗು** (ಕ್ರಿ). ರಂಧ್ರವಾಗು; ತೂತಾಗು: ಪೂಗಣೆಯಿಂ ಬಾದವಣಂಬೋಗಿರೆ ಹೃದಯಂ (ಶಬ್ದಪು. ೬-೦೩).
[ಬಾದವಣ + ಪೋಗು₁ (< ಪೋ₁)]

**ಬಾದಶಹ** 'ಪಾತಶಹ' ನೋ.

**ಬಾದಶಾಹ** 'ಪಾತಶಹ' ನೋ.

**ಬಾದಷಹ** 'ಪಾತಶಹ' ನೋ.

**ಬಾದಷಹಜಾದೆ** (ನಾ). (ಮುಸಲ್ಮಾನ) ದೊರೆಯ ಮಗಳು; ರಾಜ ಕುಮಾರಿ: ಬಾದಷಹಜಾದೆಯರು ಮದುವೆಯ ಕಟ್ಟಿಗೆ ಸಿಕ್ಕಿ ಸಂಕಟಪಡ ಬೇಕಾಗಿಲ್ಲ (ಬಂಕಿಮ. ೨೪೬). [←ಪಾರ. ಹಿಂ. ಬಾದಶಾಹ್‌ಜಾದೀ]

**ಬಾದಷಾಹ** 'ಪಾತಷಾಹಿ' ನೋ.

**ಬಾದಳ** ' ಬಾದವಣ ' ನೋ.

**ಬಾದಳಗಂಡಿ** (ನಾ). ಗವಾಕ್ಷಿಯ ಕಂಡಿ, ರಂಧ್ರ: ಬಾದಳಗಂಡಿಯೊಳಗೆ ಕಂಡನಸ್ತಾದ್ರಿಗಾದಿತ್ಯಬಿಂಬ ಸಾರ್ದುದನು (ಛಸ. ೦೦-೦೨೬).
[ಬಾದಳ (<ಬಾದವಣ) + ಕಂಡಿ₁]

**ಬಾದಳಗೊಯಿ** (ಕ್ರಿ). ತೂತಾಗುವಂತೆ ಕತ್ತರಿಸು; ರಂಧ್ರವಾಗುವಂತೆ ಕೊಯ್ಯು: ಸುರಗಿಯಿಂ ಕಿತ್ತು ಹಡುಗೋಲ ತೊಗಲಂ ಹಡುಯಲಿಜಿದು ಬಾದಳಗೊಯಿದುಯೆಲವೂ ನಿನ್ನಮ ಹರಿಯ ಚರಣದೊಳಗುದಿಸಿದುದು ದಿಟವಾದೊಡವರೆಲ್ಲರಂ ರಕ್ಷಿಸಂದೆನುತಿರೆ (ಗುರುಚ. ೦೩-೧೨).
[ಬಾದಳ್ (<ಬಾದವಣ) + ಕೊಯಿ (< ಕೊಯ್)]

**ಬಾದಳಿಸು** ' ಬಾದಣಿಸು ' ನೋ.

**ಬಾದಾಮಿ₁**, ಬಾದಾವಿ (ನಾ). (ಚಾಲುಕ್ಯರ ರಾಜಧಾನಿಯಾಗಿದ್ದ) ಒಂದು ಊರಿನ ಹೆಸರು: "ಬಾದಾಮಿ-ವಾತಾಪಿ = ಒಂದು ಪಟ್ಟಣ" (ಕನ್ನಕೋ. ೩೦); ತೊಜೆಗಲ್ಲು ಬಾದಾಮಿ ಮುದಿಗಲ್ಲು ಕೊಪಣದ ತಜಿಯಿನ ರಾಜ್ಯವೆಲ್ಲವನು ಇಜಿದು ಕೆಡಿಸುತ (ಕುರಣಾಂ. ೦೮-೯೮); ಶ್ರೀತಾವರಗೆರೇ ರಾಜ್ಯೇ ಗ್ರಾಮಂ ಬಚ್ಚನಹಾಳುಕಂ ಗ್ರಾಮಂ ತತ್ಸೈವ ಬಾದಾಮಿದೇಶೇ ಖ್ಯಾತಾಭಿದಂ ವರಂ (ಎಕ. III (R). ಸಂಖ್ಯೆ. ೦೦೨-೨೦; 1576); ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಸುಪ್ರಸಿದ್ಧ ಅತ್ಯಂತ ಪ್ರಾಚೀನ ಕೋಟೆ ಯೆಂದರೆ ಬಾದಾಮಿಯ ಕೋಟೆ (ಕಶಾಕ. ೨೪೬). **ಬಾದಾವಿ:** ಬಾದಾವಿಯ ಸಿದ್ಧಾಯದೊಳಗೆ ಹತು(ತ್ತು) ಗದ್ಯಾಣ ಪೊನ್ನು . . . ಬಿಟ್ಟರು (ಇಅ. VI. ೦೯೦-೨೩; 1139). ೨ ಕ್ರಿ. ಶ. ಏರಡನೆಯ ಶತಮಾನದ ಟಾಲೆಮಿಯು ಬಾದಾಮಿಯನ್ನು 'ಬದಿಯ ಮೈಯಿ' (Badia maioi) ಎಂಬ ಹೆಸರಿನಿಂದ ಸೂಚಿಸಿರುವುದರಿಂದ, ಆರನೆಯ ಶತ ಮಾನದ ಜಯಸಿಂಹನಿಗಿಂತ ಹಿಂದೆಯೇ ಇದು ಪ್ರಮುಖಸ್ಥಳ ವಾಗಿದ್ದಿತೆಂದು ಎಇ. XXVII. ೨ನೆಯ ಶಾಸನದ ವಿವರಣೆಯಿಂದ ತಿಳಿದುಬರುತ್ತದೆ. [← ತಮಿ. ವಾತಾಪಿ, ವಾತಾವಿ]

**ಬಾದಾಮಿ₂**, ಬದಾಮಿ, ಬದಾಮು (ನಾ). ಒಂದು ಬಗೆಯ ಮರ ಮತ್ತು ಕಠಿಣವಾದ ಕವಚವುಳ್ಳ ಪೌಷ್ಟಿಕವಾದ ಅದರ ಬೀಜ: ಕತ್ತರಿಸಿದ ಕಬ್ಬು ಬಾದಾಮಿ ಬಾಗುಂಬಿಯು ಅತ್ತಿ ಪನ್ನೇರಳೆ ನೆನೆಗಡಲೆಯು (ಬಿಚೆಲ. ೦೪೯-೨): ಮುದಿಕುರುಡಿ ಪೋಗೆಯನು "ಬಾದಾಮಿ, ಕೋ" ಯೆನುತ ಪರಿವಿದಿಂ ಮೊಮ್ಮಗೆ ಕೊಡಲು ಸಿಹಿಯಹುದೆ? (ಪುಂಲುಕ. ೬೬೩). **ಬದಾಮಿ:** ಬದಾಮಿಯ ಅಗಿಗಳನ್ನು ಒಂದು ವರ್ಷಪರಿಯಂತರ ಚನ್ನಾಗಿ ಬೆಳಸಿ ಬೇರೆ ಒಂದು ಕಡೆಗೆ ತಗ್ಗುಗಳನ್ನು ತಯಾರುಮಾಡಿ ಅಗಿಗಳನ್ನು ಕಿತ್ತಿ ಹಚ್ಚಬೇಕು (ಕೃಷ್ಯ. ೧೬೦). **ಬದಾಮು:** ಈ ಹಡಗಗಳಲ್ಲಿ ಅರಬಸ್ತಾನದಿಂದ ಉತ್ತುತ್ತಿ, ಖರ್ಜೂರ, ದಾಳಿಂಬ, ಬದಾಮು . . . ಪಿಸ್ತೆ ಮುಂತಾದ ಸರಕುಗಳು ಬರುತ್ತವೆ (ಕಚುಗ. ೩೦೬); ಹುಣಚಿ ಬದಾಮು ಮುಂತಾದ ಫಲವೃಕ್ಷಗಳು (ಮೈಸೂರು. ೬-೨೬೬).
[← ಪಾರ. ಬಾದಾಮ್; ಹಿಂ. ಬದಾಮ್, ಬಾದಾಮ್; ಮರಾ. ಬದಾಮ್, ಬಾದಾಮ್, ಬಾದಾಮಿ. / ತಮಿ. ವಾತುಮೈ; ಮಲ. ಬಾದಾಮ್; ತುಳು. ಬಾದಾಮ್, ಬದಾಮು; ತೆಲು. ಬಾದಮು, ಬಾದಾಮು, ಬಾದಾಮುಮು]

**ಬಾದಾಮಿಮಾವು** (ನಾ). (ಬಾದಾಮಿಯ ಆಕಾರದ) ಒಂದು ಬಗೆಯ ಉತ್ತಮಜಾತಿಯ ಮಾವು: ಬಾದಾಮಿಮಾವು ಇತರ ಮಾವಿನ ಹಣ್ಣುಗಳಿಗಿಂತ ಸಿಹಿಯಾಗಿರುತ್ತದೆ (ಕಾಥ). [ಬಾದಾಮಿ₂ + ಮಾವು]

**ಬಾದಾಮಿಹಲ್ವ** (ನಾ). ಬಾದಾಮಿಬೀಜದಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ: ದುರೋಟ್, ಬಾದಾಮಿಹಲ್ವ . . . ಗರಮಾ ಗರಂ ಬಾದೂಷಾ — ಏನು ಕೊಡಲಿ ಸಾರ್ (ಮಹಾಂ. ೪೬); ಅವಲಕ್ಕಿ, ಬಾದಾಮಿಹಲ್ವ, ಕೋಸುಂಬರಿ (ರೂಹಿಂ. ೦೭).
[ ಬಾದಾಮಿ₂ + ಹಲ್ವ (< ಹಲ್ವಾ) ]

**ಬಾದಾಮಿಹಾಲು** (ನಾ). ಬಾದಾಮಿಯ ಪುಡಿಯನ್ನು ಮಿಶ್ರಮಾಡಿ ಕಾಯಿಸಿದ ಹಾಲು: ಮೇಜೊಂದರ ಮೇಲಿದ್ದ ಬಾದಾಮಿಹಾಲು ಅಲ್ಲೇ ಆರಿ ತಣ್ಣಗಾಗಿತ್ತು (ಕೀಲುಗೊಂ. ೪೬); ಗೋವಿಂದಪ್ಪನ ಬಾದಾಮಿಹಾಲು ಬಟ್ಟರ ಹೊಟ್ಟೆಗೆ ಮತ್ತೇನೂ ಬದ್ದಿರಲಿಲ್ಲ (ಮಹಾಂ. ೩೦).
[ ಬಾದಾಮಿ₂ + ಹಾಲು₁ (<ಪಾಲ್₁) ]

**ಬಾದಾವಿ** ' ಬಾದಾಮಿ₁ ' ನೋ.

**ಬಾದಿ** (ನಾ). ಭಾರ; ಹೊರೆ: ಬದುಕು ಬಾದಿ ಇದು ಅನಾದಿ ಹಿಡಿದ ಹಾದಿ ಲೇಸೋ (ಕ್ರಿಂಕಗ. ೯-೨೦); ಹಣ ಹೊರುವವನಿಗೆ ರೋಮ ಬಾದಿಯೇ? (ಗಾದೆ). [←ತುಳು. ಬಾದಿ = ಭಾರವಾದ]

**ಬಾದಿಪೊಡ್ಡಿ** (ನಾ). ಒಬ್ಬಾಕೆಯ ಹೆಸರು: ಗೋಯಿನ್ದಪೊಡ್ಡಿಯ ಮಗಳು ಬಾದಿ(?ಳ)ಪೊಡ್ಡಿಯೆಪ್ಪೊಳ್ . . . ಅಶ್ವರಥ[c]ಗೊಟ್ಟೊಳ್ (ಇಅ. XI. ೦೨೩-೪; ಸು. 778). [ಬಾದಿ₂ + ಪೊಡ್ಡಿ]

**ಬಾದಿಶರ್ಮ** (ನಾ). ಒಬ್ಬಾತನ ಹೆಸರು: ಪುನ ಬಾದಿಶರ್ಮ್ಮನಾ ಏಕ್ಕಂಶಃ (ಇಅ. VII. ೦೬೦-೬೬; ೦೦೪). [ಬಾದಿ₂ + ಶರ್ಮ]

**ಬಾದು₁**, ವಾದು (ನಾ). ೧. ಮಾತು; ನುಡಿ: ಬಾದೇನಾ ಮದೀಯ ಕರ್ಮಫಳೋದಿತಸಂತಾಪರೂಪಪಾವಕಳಾಪಚ್ಛೇದನಕರಮಾಯ್ತು ಭವ ತ್ಪಾದಪ್ರಕ್ಷಾಳನೋದಕಂ ಮುನಿನಾಥಾ (ಶಂಶಾ. ೬-೦೩); ಆದರಿಸಿ ಭವ್ಯ ಜನಮು ಸೋದರರಿವರೆಂದು ತಮ್ಮ ಸುಕೃತದ ಫಲದೊಳಾದಿಯನೀವ ಜೈನರು ಬಾದಿನೊಳೇನನ್ಯಸಮಯದವರಿತ್ತಪರೆ (ಕಪುಚ. ೪-೬೬); ಓದಿ ನೊಳಂ ರೂಪಿನೊಳಂ ಬಾದಿಂ ನಮ್ಮೂರೋರ್ವ ಮುನಿಗಳವೊಲೀ ಮೇದಿನಿಯೊಳಿಳರೆ (ಧರ್ಮಾಮೃ. ೪-೦೦೬). ೨. ಚರ್ಚೆ; ತರ್ಕ; ವಾದ: ಬಾದಿನೊಳವೋದಿನೊಳಂ ವಿಬುಧಾಳಿಯುಂ ತೊಡಲ್ವಾಡುವ ಕೀರವೀ ಪೊಸ ಪಡಂಗಿಲೆಯೊಪ್ಪುವ ನಂದನಂಗಳೊಳು . . . ರಂಜಿಕುಂ (ಕರ್ಣಾ. IX-i,

೧೦೬ ೨೪ ; ಸು. 1087) : ತರ್ಕದೊಳ್ ಬಾದುಂ ಬರ್ಗುಡಿಗುಟ್ಟಿ ಪೊಟ್ಟು ವಡೆದೆಂ (ಸುಕುಮಾ. ೩-೯೩) : ಆದಿಯಾಗಿಪ್ಪುರ್ದಾರ್ಹತಸಮಯಕ್ಕೆ ಮೂಲ ಸಂಘಂ ಕೊಣ್ಡಕುನ್ದಾನ್ವಯಂ ಬಾದುವೇತದಂ ಬಳಯುವುದಲ್ಲಿಯ ದೇಸಿಗ ಗಣದ ಪುಸ್ತಕಗಚ್ಛದ . . . ಗಂಗಮಸೂಂವತಿ (ಎಕ.11. ೬೩-೩೦ ; 1118). 'ಬಾದುಗುಟ್ಟು'. ' ಬಾದುಗೆಯ್ ' ಪರಾ. ೩. ಭಾಷೆ ; ಶಪಥ : ಬಾದುಂಟೊದು ಪತ್ರನೆಯ ತಲೆಯುಮಂ ನೇರ್ದಾಗಳ್ (ಶಮತ. ೨೪೦ ಕ್ರಮೋ). ೪. ಜೊತೆ ; ಜೋಡಿ : ತಿಬ್ಬಕಲ್ಲಾಡುವ ಬೊಟ್ಟುವೋರಿಸುವ ಸಂಡಂ ಪೊಪ್ಪು ಬಾದಿಂಗೆ ಕೈನಿಬ್ಬದರ್ದಾಡುವ . . . ಸಾನಾಕ್ರೀಡೆಯಿಂದಿ ವರ್ರುಂ ತಡಿಸುದು (ಸುಕುಮಾ. ೨-೬). 'ಬಾದುಗೈ' ಪರಾ. ವಾದು : ೨. ಇಲ್ಲಿ ಪ್ರಸಾದವಂ ಕುಡದಿರ್ದ ಬಳಿವಿಡಿದು ಅಲ್ಲಿ ಪ್ರಸಾದವಂ ವಾದಿನಿಂದಂ ಪಡೆವ . . . ಎನ್ನ ಪ್ರಸಾದಸಾಮರ್ಥ್ಯವಂ ತೋಱುತಂ ಮಾನ್ಯನೆಯೋಳಿಲ್ಲೆಗೈತವಪ್ಪುದು (ಅಕ. ೦-೮೦). 'ವಾದುಗುಟ್ಟು' ಪರಾ. ೩. ಮೂದಲಿಕೆ ; ನಿಂದೆ: ಸೇದುವರಳಿನ ತಿರುವಿನಂಬಿನ ವಾದಿನಸುಗೆಯ ಬಿರುದರಗ್ಗದ ಕೈದುಕಾಱರು ಕೆಣಕಿದವುರರ ಪೊಟ್ಟ ತೂಱಿದರು (ಸುಪ್ತಾಕ. ೬-೨೬). [<ಸಂ. ವಾದ. / ತಮಿ. ವಾತು ; ತೆಲು. ವಾದು]

ಬಾದು₂ (ನಾ). ೧. (ಉಕ) ವ್ಯರ್ಥವಾದುದು ; ನಿಷ್ಪ್ರಯೋಜಕ ವಾದುದು : ಈ ಹೆಣ್ಣುಮಕ್ಕಳ ಬುದ್ಧಿ ಅಂದರ ವ್ಯವಹಾರಕ್ಕೆ ಬಾದು (ಕಮು. ೫೬). ೨. (ಸಂಖ್ಯೆ, ಪಟ್ಟಿ ಮುಂತಾದುವುಗಳಿಂದ) ಕಳೆದುದು ; ವಜಾಮಾಡಿದುದು : (೬).

ಬಾದಮಾಲು = ವಿಕ್ರಯವಾಗದ ಉಳಿದ ಸರಕು ; ನಿಷ್ಪ್ರಯೋಜಕ ವಾದ ಮಾಲು : ಅಂಗಡಿಯಲ್ಲಿ ಉಳಿದ ಬಾದಮಾಲಿನ ಪ್ರಮಾಣ ದಿಂದ, ಆ ಅಂಗಡಿಗೆಂದು ಸರುಕಗಳನ್ನು ಕೊಳ್ಳುವವನ ದತ್ತ್ತನ ಜಾಣತನಗಳನ್ನು ತಿಳಿದುಕೊಳ್ಳಬಹುದು (ಶಕ್ಕಿ.ಅ. ೦೨೯). ಬಾದಾಗು = ೧. ವ್ಯರ್ಥವಾಗು ; ನಿರರ್ಥಕವಾಗು : ಒಂದು ವರ್ಷಂತೂ ಬಾದಾತು. ಇನ್ನು ಮುಂದಿನ ವರುಷರ . . . ಪರೀಕ್ಷಾಕ ಕೂಪವ (ಅನ್ನ. ೯೬). ೨. ಊನವಾಗು ; ವಿಕಲವಾಗು : ನಡುವಿನ ಸ್ಥಿತಿಯಲ್ಲಿ ಶಳವು ಹೆಚ್ಚಾಗಿ ಒಮ್ಮೊಮ್ಮೆ ರೋಗಿಯ ಯಾವುದಾದರೊಂದು ಅವಯವವೇ ಬಾದಾಗುತ್ತದೆ (ಗೃಹವ್ಯ. ೯೭). ೩. ಶೂನ್ಯವಾಗು ; ತೆರವಾಗು : ಖೋಲಿಗಳೆಲ್ಲಾ ಬರಬರತಾ ಬಹಳ ಬಾದಾಗಲಿಕ್ಕ ಹತ್ಯಾವರೆಪಾ (ಶಾಹಿ:ಕಾ. ೪೦). [← ಅರ. ಬಅದ್ ; ಹಿಂ. ಬಾದಿ; ಮರಾ. ಬಾದ್]

ಬಾದುಚಿ 'ಬಾದುಬ್ಬೆ' ನೋ.

ಬಾದುಗುಟ್ಟು, ವಾದುಗುಟ್ಟು (ಕ್ರಿ). ವಾದಮಾಡು ; ತರ್ಕಮಾಡು ; ಚರ್ಚಿಸು : ಪರವಾದ ಪೋರ್ಸ್ಗೆ ಬರ್ಪಂತಿರೆ ತನ್ನೊಳ್ ಬಾದುಗುಟ್ಟಿ ಸರಡಿಂಬರ್ ಬಿತ್ತರಿಸಿದ ವಿಕ್ರಿಯೆಯೊಳ್ಪಂತಿರೆ ಸಹಜಾತಿಶಯದಿಂದೆ ಸೊಬಗಂ ಸೋಲ್ವರ್ (ಅನಂಪು. ೬-೧೦). ವಾದುಗುಟ್ಟು : ವಾದುಗುಟ್ಟ ನಶೇಷಶಾಸ್ತ್ರವನಾದರಿಸನು . . . ವೈಯಾಕರಣನವನು (ಶಶಾಂಗ. ೩-೪-೩೦); ವಾದುಗುಟ್ಟದೆ ಕೊಡು ಮಗನೆ (ಶಶಾಂಗ. ೯-೨-೯೨). [ಬಾದು₁ + ಕುಟ್ಟು₁]

ಬಾದುಗೆಯ್, ಬಾದುಗೈ, ವಾದುಗೆಯ್ (ಕ್ರಿ). ೧. = ಬಾದುಗುಟ್ಟು: ಇರ್ವರುಮೊಂದುದಿವಸಮಜಿತಂಜಯಸೊಡನೆ ಪೋಗಿ ತತ್ಪುರೋಪ ವನದೊಳಿರ್ದ ಮತಿಸಾಗರಮುನಿಪತಿಯೊಳ್ ಬಾದುಗೆಯ್ದು (ಅಂಕ್ತಿ. ೩-೭೩ ವ) ; ಬಿಡೆ ಬಾದುಗೆಯ್ದೊಡರಿಸುವ ತಮ್ಮ ಕಡುಪಿಂದೆ . . . ಹಾಸ ಬೀಭತ್ಸಾದಿ ನಾನಾರಸಂಗಳಿಂದೊಂದಿದ ಜರದ್ರವಿಳಧಾರ್ಮಿಕಜನಂಗಳಿಂ (ಶಾಂತಿಂಪು. ೨೭೦); ಎಕ್ಕೆಯ ಬೇರ್ . . . ಅರೆದು ಲೇಪಿಸೆ ವೃಶ್ಚಿಕಮೂಜಿ ದೊಂದು ಶಾಣಕ್ಕೆ ಬಟಿಕ್ಕಮುಗ್ರಮುನಿಸಿರ್ಪ ವಿಷಂ ಕಿಡುಗುಂ ಜನಂಗ ಳೆಕ್ಕೆಗೆ ಬಾದುಗೆಯ್ದು ಕಿಪುವಂತಿರೆ ಲೋಕದ ಪಕ್ಷಪಾತದಿಂ (ಖಮರ. ೪೪-೬೨). ಬಾದುಗೈ : ೨. ಜೊತೆಗೂಡು ; ಸೇರು : ಹೆಣೆದು ಕೊಳ್ಳು : ಅದು . . . ಸೀಳ್ಳುವರಿದಡ್ಡಂಬಾಳ್ಳುಳ್ಳಿಗೊಂಬುಗಳೊಳ್ ಬಾದುಗೈದು ಬಳೆದು ಮುಗಿಲಂ ಮುಟ್ಟಿ ಪುಗುಳ್ವಂತೆ ಸಸಬಾಗಿ ನಿಂದ ಕೀಟ್ಗೊಂಬುಗಳೊಳಂ . . . ಸೊಗಯಿಸಿದುದು (೦೬೦೩ವ. ೯-೪೦ ವ). ವಾದುಗೆಯ್ : ೧. ಸ್ಕಂದಕುಮಾರಭ್ರಾಪಿಯೊಡನೆ ವಾದುಗೆಯ್ದು ಸೋಲ್ದೊಡೆ (ವಡ್ಡಾರಾ. ೧೬೬-೨೨) ; ಶೂನ್ಯವಾದಿಗಳ್ . . . ಮತಿಸಾಗರ ಮುನಿಪತಿಯೊಳು ವಾದುಗೆಯ್ದು (ಶಾಪುಂತ. ೨೨). [ಬಾದು₁ + ಕೆಯ್₁]

ಬಾದುಗೈ 'ಬಾದುಗೆಯ್' ನೋ.

ಬಾದುಬೆ 'ಬಾದುಬ್ಬೆ' ನೋ.

ಬಾದುಬ್ಬೆ, ಬದುಬೆ, ಬಾದವಿ, ಬಾದುಂಬೆ, ಬಾದುಬೆ, ಬಾದುವೆ, ಬಾದುವೆ, ಬಾಳುಬೆ (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಅದರ ಅತಿ ಪ್ರಾಚೀನರೂಪ ಕ್ರಿ. ಶ. ೮೭೭ರ ಶಾಸನದಲ್ಲಿರುವ ಬಾದುಬ್ಬೆ ಎಂಬುದು. ಕಾಲಕ್ರಮದಲ್ಲಿ ಇದರ ಬೆಳವಣಿಗೆ ಬಾದುಬ್ಬೆ > ಬಾದುಂಬೆ > ಬಾದುಬೆ, ಬಾದುವೆ > ಬಾದವಿ ಎಂದಿರುವಂತೆ ತೋರು ತ್ತದೆ. ಸಾಹಿತ್ಯದಲ್ಲಿ ಈ ಪದ ಹೆಚ್ಚಾಗಿ ಬಳಕೆಯಾಗಿಲ್ಲ (ಕಪ್ಪ.ಅ. ೪೪). ೨. ವೈಶಾಖಮಾಸದ ಅಮಾವಾಸ್ಯೆಯಂದು ಆಚರಿಸುವ ಒಂದು ಹಬ್ಬ-ಉತ್ಸವ : ಅಂತಹ ಹಬ್ಬಗಳಲ್ಲಿ ಮುಖ್ಯವಾಗಿ ಮೂರು ಹಬ್ಬ ಗಳನ್ನು ಶಾಸನಗಳು ಹೆಸರಿಸಿವೆ—ಬಾದುಬ್ಬೆ, ದೀಪಾವಳಿ, ಕಾರ ಹುಣ್ಣಿವೆ. ಈ ಮೂರು ಹಬ್ಬಗಳು ಇಂದಿಗೂ ಉಳಿದುಕೊಂಡಿವೆ (ಕಆ. ೦೯೬). ಬದುಬೆ : ೨. ಬವಱೆಯ ಅಮಾವಾಸೆಯಂದು ಸ್ವಸ್ತಿಶ್ರೀಮತು ದಣ್ಡ ನಾಯಕಂ . . . ವಿನಾಯಕರ್ಗ್ಗೆ ಬಿಟ್ಟ ಕರಿಯ ಕೆಯಿ (ಸೌಇಇ. VIII. ೩:೫೦ ; 1090). ಬಾದವಿ, ಬಾದುಂಬೆ : ೧. ಸಾಯಿರಖಂಡುಗವಂ ಬೆಳದಾವೊಕ್ಕಲ ಮಗನದೊಂದು ಗಂಬಮನೊಯಿದಿಟ್ಟಾವೂರಿನ ಬಾದುಂಬೆಗೆ ಸಾಯಿರಮಂ ಬೆಳದನೆಂದು ನುಡಿವಮೂರ್ಖರ್ (ಕಸುಶ. ೯-೯೨); ಪೆಟ್ಟೆಯುಂ ಗೋಕುಳವಂ ಗಿರಿಪ್ರಕರವಂ ಬಾದುಂಬೆಯುಂ ಶಾಂತಿಯುಂ . . . ದೈವಂಗಳಿಂದಿಂತು ಕೂರ್ತೆಜಗುತ್ತಿರ್ಪವರೆಂತು ಮುಕ್ತಿವಡೆವರ್ (ಕಅಕ. I. ೦೩೪ ಶ್ರೀರೋಕ್ಷಕೂರಾಮಟಿಸ್ತೋತ್ರ) : ಬಾದುಂಬೆ ದೇಶ್ಯವೋ ಅನ್ಯದೇಶ್ಯವೋ ಎಂಬುದನ್ನು ನಿರ್ಣಯಿಸುವುದಕ್ಕೂ, ಅದು ಯಾವ ದೇವತೆಯೆಂಬುದಕ್ಕೂ ಇದುವರೆಗೆ ದೊರೆತಿರುವ ಸಾಕ್ಷ್ಯಗಳು ಸಾಲವು (ಕಪ್ಪ.ಅ. ೫೩). ೨. ದೀಪಾವಳಿ ಬಾದುಂಬೆ ಕಾರ ಪುಣ್ಣಮೆಯೆಂಬೀ ಮಹಾಪರ್ವ್ವಗಳೊಳ್ (ಬೊಂಕಶಾ. ೦೯೩೪, ಶಾಸಂ. ೬೦-೯೭ ; ೯). ೩. ಬಾದುಂಬೆಯೆಂಬ ದೇವತೆಯ ವಿಗ್ರಹವಿರುವ ಒಂದು ಸ್ಥಳದ ಹೆಸರು (?) : ಬಳ್ಳಿಗೊಳನೆ ಮೋರೆ ಯಲ್ಲಿಂ ಪಡುವಲು ಬಾದುಂಬೆಯುನಿಂ ಬಡಗಲು ಪೂದೋಂಟ ಕಂಬ ನಾಲ್ವತ್ತುಮನಾ ದೇವರ ಪೂಜೆ ಪುನಸ್ಕಾರಕ್ಕಂ . . . ಜೀರ್ಣೋದ್ಧಾರಕ್ಕೆ ವೇದು ಕೊಟ್ಟರು (ಎಕ. VII. ಶಿಕಾ. ೦೨೬-೪೦ ; 1019) ; ಅಲ್ಲಿಯ ಬಾದುಂಬೆಯುನಿಂ ಬಡಗಣ ಗದ್ದೆಕಟ್ಟು (ಎಕ XIV. ೨೭೩-೯೩ ; 1173). ಬಾದುಬೆ : ೧. ವಟವಾರವೆ ಬಾದುಬೆ ಶತ್ರುಸಾಲವಂ ದೇವವಿನಿ ವಿರ್ಮ್ಮಿತಂಗಳೆನೆ ಮಾಡಿಸಿ[ದೀ]ಶ್ವರನೇಂ ಕೃತಾರ್ತ್ಥನೋ (ಕಇ. V. ೨೦-೩೪ ; 1080) ; ಪಡುವ ಚಂದಣಗೇರಿಯೆಕ್ಕಸಂದಿಯಿಂ ಬಡಗವಾರಿಯಿಂ ಮೂಡಣ ಮನೆಯು ನಿವೇಶನಮಂ ಬಾದುಬೆಯು ದೇಗುಲದಿಂ × × × (ಸೌಇಇ. XIV. ೦೨೯-೯೯ ; 1176) : ಬಸನಬ್ಬೆ ಬಳಿ ಬಾದುಬೇ ಕಿನಿಸಂಬರಿ [ಪಾಠಾಂ. ಬಾದುಮ ಕಿನಿಸಂಬಲಿ, ಬಾದುಂಬೆ ಕಿನಿಸಂಬಲಿ] ಜಲದ ಜಕ್ಕಿ ಜಾತ್ರೆಯ ದೈವಂ ಮನೆದೈವಮೆಂಬಿವೆಲ್ಲಂ ಜನಭಕ್ತಂಗೆಡದ ಕಾಲ ಕಪ್ಪಿಂ ಲಪ್ಪಂ (ಕಸಾರ. ೪೬೯). ೨. ಬಲಂ ಗೊಣ್ಡು ಸಮಸ್ತ ಪೋದನಪುರ ಗ್ರಾಮಾಧಿಪಂ ಸಂತ ಬಾದುಬೆ ದೀಪಾವಳಿ ಕಾರ ಪುಣ್ಣಮೆಯೆನಿಪ್ಪೀ ಮೂಱುಪರ್ವ್ವಂಗಳೊಳ್ (ಸೌಇಇ. XI-1. ೫೨-೬೬ ; 1007) ; ಬಾದುಬೆ ಕಾರ ಪುಣ್ಣಮಿ ದೀಪಾಳಿಗೆ ಮೂಱುಪರ್ವ್ವ

ದೊಳಂ ಪ್ರತ್ಯೇಕವೊನ್ದು ಗದ್ಯಾಣ (ಎಇ. XX. ೬-೩೫; 1012). **ಬಾದುಮೆ:** ೧. ಹರವಲ್ಲಿಕಾರ್ಜುನಂಗಪ್ಪವೂಜೆಯ ಕೊಟ್ಟ ಪವಸೂತ್ರದೊಳಗಿರ್ದ ಬಾದುವೆ[ಹಾಕಾಂ. ದುಮಿ, ದುವೆ, ಧುವೆ]ಯ ಕಟ್ಟ . . . ಕೈಲಾಸಕ್ಕೆ ಹೊ.೧ (ಸಿದ್ಧಶಾ. ೬-೩೦) : ಸೊನ್ನಲಿಗೆಯ ಮಲ್ಲಿಕಾರ್ಜುನದೇವಸ್ಥಾನದ ಒಳವಲಯದಲ್ಲಿ ("ಪರಿಸೂತ್ರ") ಬಾದುಮದೇವತೆ ಇದ್ದಳೆಂಬುದು ಇದರಿಂದ ತಿಳಿಯಬರುತ್ತದೆ (ಸಂಕೋಶ. ೦೩೩). **ಬಾದುವೆ:** ೧. ಕ್ರಿ. ಶ. ೧೨೦೩ರ ಶಾಸನದಲ್ಲಿ 'ಬಾದುವೆಯ ನಾಯಕ' ಎಂಬ ವ್ಯಕ್ತಿಯ ಹೆಸರಿದೆ . . . ಇಲ್ಲಿ ಬಾದುವೆದೇವತೆಯ ಹೆಸರನ್ನು ಕಾಣಬಹುದು (ಸಂಕೋಶ. ೦೩೩). ೪. ಬಾದುಬ್ಬೆಯೆಂಬ ದೇವತೆಯ ದೇವಸ್ಥಾನ : × × × ಕುಡಿಸುದೆ ಬಿಟ್ಟಿಂ ಅಯ್ದು ಬ್ರಹ್ಮಪುರಿಯ ಬಾ[ದು]ವೆಯ ಕಾಹಳೆಗಳ ಕೈಯಲು × × × ಮಂ ಪಾದಪ್ರಕ್ಷಾಲನಂ ಮಾಡಿ ಧಾರಾಪೂರ್ವಕವಾಗಿ ಬಿಟ್ಟರು (ಕ್ರೋಇ. XV. ೬೨-೩೭ ; 1186). **ಬಾಳುಬೆ :** ೧. ಪಶ್ಚಿಮದೊಳ್ಪುಷ್ಕರಿಣಿ ವಾಯುವ್ಯದೊಳ್ಗೋಣೇಶ್ವರದೇವರ ತೋಂಟಂ ಉತ್ತರದೊಳ್ ಬಾಳುಬೆಯೇರಿ (ಎಕ. VIII. ಸಾಗರ. ೦೦೯-೭೦ ; 1042) : ಸಾಗರತಾಲ್ಲೂಕಿನ ಶಾಸನವೊಂದರಲ್ಲಿ 'ಬಾಳುಬೆಯೇರಿ' ಎಂದಿದೆ. ಈ 'ಬಾಳುಬೆ' ಎಂಬುದು ಬಹುಶಃ 'ಬಾದುಬೆ' ಎಂದಿರಬೇಕು (ಸಂಕೋಶ. ೦೩೩).

**ಬಾದವಿಅವಮಾಸೆ** = ಬಾದುಬ್ಬೆಯ ಉತ್ಸವ ನಡೆಯುವ ವೈಶಾಖಮಾಸದ ಅಮಾವಾಸ್ಯೆ : ವೈಶಾಖಮಾಸದ ಅಮಾವಾಸ್ಯೆಗೆ 'ಬಾದವಿಅವಮಾಸೆ'ಯೆಂದು ಉತ್ತರಕರ್ಣಾಟಕದ ರೂಢಿಯ ಹೆಸರು (ಕಾ.ಪಿ. ೯೬); ಬಾದವಿಅವಮಾಸೆಯಲ್ಲಿ ಬಾದಾವಿಯಲ್ಲಿ ಬನಶಂಕರಿಪೂಜೆ ನಡೆಯುತ್ತದೆ (ಕಾ.ಪಿ. ೩೦). **ಬಾದವಿಾನೈವೇದ್ಯ**=ವೈಶಾಖದ ಅಮಾವಾಸ್ಯೆಯಂದು ಆಚರಿಸುವ ಬಾದುಬ್ಬೆಯ ಹಬ್ಬದಲ್ಲಿ ಮಾಡುವ ಎಡೆ: ನದಿಯಿಂದಲಾಗಲಿ ಹೊಲದಿಂದಲಾಗಲಿ ಐದು ಚಿಕ್ಕ ಕಲ್ಲುಗಳನ್ನು ಆಯ್ದು ತಂದು ... ಮನೆಯ ಯಜಮಾನ ಅವುಗಳನ್ನು ಪೂಜಿಸಿ ಹೂರಣದ ಹೋಳಿಗೆಯ ನೈವೇದ್ಯ ಮಾಡುವನು . . . ಪ್ರತ್ಯೇಕವಾದ ಎಡೆಯಲ್ಲಿ ಬಡಿಸುವ ಈ ನೈವೇದ್ಯವನ್ನು 'ಬಾದವಿಾನೈವೇದ್ಯ' ಎಂದು ಹೇಳುವರು (ಸಂಕೋಶ. ೦೩೮). **ಬಾದುಂಬೆಯ ಕಟ್ಟ**=ಬಾದುಬ್ಬೆಯೆಂಬ ದೇವತೆಯ ಹೆಸರಿನಲ್ಲಿರುವ ಕೆರೆ (?): ಬಾದುಂಬೆಯ ಕಟ್ಟೆಯಿಂ ಮೂಡ ಹಿರಿಯೋಣಿಯಿಂ ಬಡಗ ಕೆಂಗಾಡು ಮತ್ತರೆರಡು (ಕ್ರೋಇ. IX-i. ೩೨೯-೩೫; 1209). **ಬಾದುಬ್ಬೆಯ ಪರ್ವ, ಬಾದುಂಬೆಯ ಪರ್ವ**=ವೈಶಾಖದ ಅಮಾವಾಸ್ಯೆಯಂದು ಉತ್ತರಕರ್ಣಾಟಕದಲ್ಲಿ ಆಚರಿಸುವ, ಬಾದುಬ್ಬೆಯೆಂಬ ದೇವತೆಯ ಒಂದು ಹಬ್ಬ : ಆ ನಗಿಸಿದ ಪಗರಣಿಗಂಗೆ ಪಿರಿದು ಕಸವರವಸಿತ್ತೊನ್ದಿಂದಿತ್ತ ಬಾದುಬ್ಬೆ[ಹಾಕಾಂ. ಒಬ್ಬೆ]ಯ ಪರ್ವಮುಂ ಪಗರಣದಾಟಪಾಟಮುಮಾದುವು (ಕಕ್ಕಾ.ಶಾ. ೦೦೬-೨೦) : ಬಾದುಬ್ಬೆಯ 'ಪರ್ವ'ದನ್ದು ಪೆರ್ಗ್ಗಡೆ ಗೊಪಗರಣದ ದ್ರವ್ಯಮಣ್ಣತ್ತು (ಕ್ರೋಇ. ೯೬-೦೮-೨೯ ; 932) : 'ಬಾದುಂಬೆಯ ಪರ್ವ'ವೆಂದು ಶಾಸನಗಳಲ್ಲಿ ಹೇಳಿರುವ ಹಬ್ಬ ಈ ದೇವಿಯ ಜಾತ್ರೆಯ ಕಾಲವೆಂದು ತೋರುತ್ತದೆ (ಕಾ.ಪಿ. ೩೦). **ಬಾದುಬ್ಬೆಯ ಪಾಳು, ಬಾದುಂಬೆಯ ಪಾಳು**=ಬಾದುಬ್ಬೆಯೆಂಬ ದೇವತೆಯ ದೇವಸ್ಥಾನಕ್ಕೆ ಬಿಟ್ಟ ಭೂಮಿ,—ಜಮೀನು : ಶ್ರೀಮತ್ರತ್ನಪುರುಷಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಕಿಸುಕಾಡೆಪ್ಪತ್ತರೊಳಗಿಯ ಬಾದುಬ್ಬೆಯ ಪಾಳನವರ ವಿದ್ಯಾರ್ತ್ಥಿತಪೋಧನರ ಗ್ರಾಸಕ್ಕಂ ದೇವರ ಪೂಜೆಗಂ . . . ಶ್ರೀ ಬಲ್ಲವರಸಕ್ಕೊಟ್ಟರ್ (ಕ್ರೋಇ. XI-i. ೬೦೩-೨೯; 1075); ಈ ದೇವಿಗಾಗಿ ಬಿಟ್ಟ ಭೂದತ್ತಿಗಳಿಗೆ 'ಬಾದುಂಬೆಯ ಪಾಳು' ಎಂಬ ಹೆಸರಿತ್ತೆಂದು ಊಹಿಸಬಹುದು (ಕಾ.ಪಿ. ೩೦). **ಬಾದುಬ್ಬೆಯಮಾವಾಸ್ಯೆ, ಬಾದವಿಾಅಮಾವಾಸ್ಯೆ, ಬಾದುಂಬೆಅಮಾವಾಸ್ಯೆ,** **ಬಾದುಂಬೆಯಮಾವಾಸ್ಯೆ** = ಬಾದವಿಅಮವಾಸೆ : ಜಯಸಂವತ್ಸರದ ಬಾದುಬ್ಬೆಯಮಾವಾಸ್ಯೆ ಸೂರ್ಯ್ಯಗ್ರಹಣದನ್ದು . . . ಶ್ರೀಖಣ್ಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನೈಯ್ದು (ಕ್ರೋಇ. XI-i. ೯೨-೩೦; 1064): ಈಗಲೂ ಆ ಅಮಾವಾಸ್ಯೆಯನ್ನು 'ಬಾದವಿಾಅಮಾವಾಸ್ಯೆ' ಎಂದು ಕರೆಯುತ್ತಿರುವುದು, ಆ ದಿನ ಬನಶಂಕರಿಗೆ ವಿಶೇಷಪೂಜೆ ನಡೆಯುವುದು—ಇವೆಲ್ಲಾ ಬನಶಂಕರಿ (=ಬನದಬ್ಬೆ) ಮತ್ತು ಬಾದುಬ್ಬೆ ಒಂದೇ ಎಂಬುದನ್ನು ಸೂಚಿಸುವುದಿಲ್ಲವೇ ? (ಸಂಕೋಶ. ೦೩೮); ವೈಶಾಖ ಬಹುಳಅಮಾವಾಸ್ಯೆಯನ್ನು ಬಾದುವೆ, ಬಾದುಂಬೆಅಮಾವಾಸ್ಯೆ ಯೆನ್ನುವರು. ಈ ಅಮಾವಾಸ್ಯೆಯ ದಿವಸ ಬಾದಾಮಿಯ ಬನಶಂಕರಿಯ ಉತ್ಸವ ನಡೆಯುತ್ತದೆ (ಕಾಪ್ರ. ೯೬); ಬಾದುಂಬೆಯಮಾವಾಸ್ಯೆಯಾದಿವಾರಂ ಸೂರ್ಯ್ಯಗ್ರಹಣದಂದು . . . ಎಲೆಯ ಪೇಜಿನ ಸುಂಕಮಂ ದೇವಸಿಂಗಜೀಯರ ಪುತ್ರಂ ನೀಲೇಶ್ವರಪಣ್ಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ಬ್ಬಕಂ(ಂ)ಮ್ಮಾಡಿ ಕೊಟ್ಟಂ (ಕ್ರೋಇ. IX-i, ೦೯೬-೨೦; 1119). **ಬಾದುಬ್ಬೆಯ ಹಬ್ಬ**=ಬಾದುಬ್ಬೆಯ ಪರ್ವ : ಬಾದುಬ್ಬೆಯ ಹಬ್ಬವು ಮೂಲತಃ ಜೈನರ ಹಬ್ಬ ಎಂದು ಸಾಧಿಸುವ ಪ್ರಯತ್ನವಿದೆ. ಆದರೆ ನಮಗೆ ಮುಖ್ಯವಾದದ್ದು ಈಗಿನ ರಂಜಾನ್ ಹಬ್ಬದಲ್ಲಿನಂತೆ ಬಾದುಬ್ಬೆಯ ಹಬ್ಬದಲ್ಲಿಯೂ ವೇಷಗಳನ್ನು ಕಟ್ಟುತ್ತಿದ್ದರು ಎಂಬುದು (ಸಂಕೋಶ. ೦೩೩). **ಬಾದುಮೆಯ ಮದುವೆ**=ಬಾದುಬ್ಬೆಯೆಂಬ ದೇವತೆಯ ಮದುವೆ; ಅಸಂಭವವಾದುದು : ಗೀಜಗನ ಗೂಡು ಕೋಡಗದಣಲ ಸಂಚಿ ಬಾದುಮೆಯ ಮದುವೆ ಬಾವುಲ ಬಿದ್ದಿನಂತೆ ಜೂಜುಗಾಜಿನ ಮಾತು ಬೀದಿಯ ಗುಂಡನ ಸೊಬಗು ಒಡಿನೊಳಗಗೆಯ ಹೊಯ್ದಂತೆ (ಬಸಕ. ೬೩೬); 'ಬಾದುಮೆಯ ಮದುವೆ' ಎಂಬುದು 'ಗಣಪತಿಯ ಮದುವೆ' ಎಂಬ ಉಕ್ತಿಗೆ ಸಮಾನವಾದುದು (ಸಂಕೋಶ. ೦೩೮). ❖ ಈ ಶಬ್ದದ ವ್ಯುತ್ಪತ್ತಿಯ ಬಗೆಗೆ ಬೇರೆಬೇರೆ ಊಹೆಗಳಿವೆ. ಶ್ರೀ ಪಿ. ಬಿ. ದೇಸಾಯಿಯವರು 'ವಸಂತಾಂಬೆ' ಎಂಬುದರಿಂದಲೂ ಶ್ರೀ ಡಿ. ಎಲ್. ನರಸಿಂಹಾಚಾರ್ ಅವರು 'ಭದ್ರಾಂಬೆ' ಎಂಬುದರಿಂದಲೂ ಮತ್ತು ಡಾ. ಎಂ. ಚಿದಾನಂದಮೂರ್ತಿಯವರು 'ಬನದಬ್ಬೆ' ಎಂಬುದರಿಂದಲೂ ಈ ಶಬ್ದವು ಬಂದಿರಬೇಕೆಂದು ಊಹಿಸಿದ್ದಾರೆ.

[ ? ]

**ಬಾದುಮಯ** 'ಬಾದುಮಯ್ಯ' ನೋ.

**ಬಾದುಮಯ್ಯ, ಬಾದುಮಯ** (ನಾ). ೧. ಒಂದು ದೇವತೆಯ ಹೆಸರು (?) : ಅರಗಿನ ರೂಪನುರಿಯ ಕೊನೆ ಪತ್ತಿದಂತಾಗೆ ಬಾದುಮಯ್ಯನ ಮೆಯ್ಯಂ ಬಜಿಸಿಡಿಲು ಪೊಡೆದಂತಾಗೆ (ಕಂಚಾರ. ಹ. ೧೦೩-೦೩); ನಮ್ಮ ದೇವರು ಮಾರಿ ಮಸಣಿ ಬೀರ ಮೈಲಾರ ಉಡಿಸಿಕಾರಿ ಬಾದುಮಯ್ಯ ವೀರನ ಬಿಡಲಾಜಿ (ಕೃಕಸೂ. I. ೨೦೪). **ಬಾದುಮಯ** ; ೨. ಒಬ್ಬಾತನ ಹೆಸರು (?) : ಆದಕೆ ಒಡೆಯ ಮಲೆಯರ ಪಾಂಸಿಯರೂ ಬಾದುಮಯಂಗೆ ಮತ್ತರು ೨ (ಕಂಕ್ಕಾಶಾ. ೩೬-೪೦; 1049).

[ಬಾದುವೆ(<ಬಾದುಬ್ಬೆ) + ಅಯ್ಯ$_1$]

**ಬಾದುಮೆ** 'ಬಾದುಬ್ಬೆ' ನೋ.

**ಬಾದುರ** 'ಬಹಾದುರ್' ನೋ.

**ಬಾದುವೆ** 'ಬಾದುಬ್ಬೆ' ನೋ.

**ಬಾದುಶ** 'ಪಾತಶಹ' ನೋ.

**ಬಾದೂಷಾ** (ನಾ). ಒಂದು ಬಗೆಯ ಸಿಹಿತಿಂಡಿ : ಜಿಲೇಬಿ, ದರೋಟ್ . . . ಬಜ್ಜಿ, ಗರಮಾಗರಂ ಬಾದೂಷಾ—ಏನು ಕೊಡಲಿ ಸಾರ್ ? (ಬುಶಾಂ. ೩೬). [← ಹಿಂ. ಬಾಲೂಸಾಹೀ, ಬಾಲೂಶಾಹೀ]

**ಬಾದೆಯ** (ನಾ). ಒಬ್ಬಾತನ ಹೆಸರು : ಶ್ರೀಗಜ್ಜಮಹಾವಾಯ್ಯರಾ

ಮಗನಸ್ಸಾದೆಯನ್ನಿರಟ್ಟಿ ತುಱುಗೊಳೊಳ್ಳಾದಿ ತುಱುವನಿಕ್ಕಿಸಿ ಸುರಲೋಕದ ಭೋಗಿ ಆದನ್ (ಎಕ. IX. ಹೊಸಕೋ. ೬೪-೨; ಸು. ೭೨೦).
[? + ಅಯ್ಯ₁ (<ಅಯ್ಯ₁)]

**ಬಾದೆಯಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮೂಡಲ ದೇಶಕ್ಕೆ ಹೋದ್ಮೆಲ್ಲೊ ಗೀಜುಗ ಬಾದೆಯಹುಲ್ಲ ತಂದ್ಮೆಲ್ಲೊ ಗೀಜುಗ (ಜಾಕಥ. ೦೪). [? + ಹುಲ್ಲು (<ಪುಲ್)]

**ಬಾದೋವೋಜ** (ನಾ). ಒಬ್ಬಾತನ ಹೆಸರು : ಬಾದೋವೋಜ ಮಾಡಿದ (ಎಕ. VIII. ಸೊರಬ. ೯-೬; ಸು. ೩೦೦). [? + ಓಜ₁ (<ಒವಜ್ಝ)]

**ಬಾದ್ಲಿ** 'ಬಾದಲಿ₁' ನೋ.

**ಬಾಧ** (ನಾ). ೧. ನೋವು ; ವೇದನೆ. ೨. ಕಷ್ಟ ; ತೊಂದರೆ. ೩. ಹಿಂಸೆ; ಕಾಟ; ಕಿರುಕುಳ. ೪. ಕೆಡುಕು ; ಹಾನಿ. ೫. ಅಪಾಯ; ಆಪತ್ತು. ೬. ತಡೆ ; ಅಡ್ಡಿ. ೭. ವಿರೋಧ ; ಪ್ರತಿಷೇಧ. ೮. [ನ್ಯಾಯಶಾ] ಹೇತ್ವಾಭಾಸದಲ್ಲಿ ಹೇಳಿರುವ ವ್ಯಭಿಚಾರ, ವಿರುದ್ಧ, ಸತ್ಪ್ರತಿಪಕ್ಷ, ಅಸಿದ್ಧಿ ಮತ್ತು ಬಾಧ ಎಂಬ ಐದುಬಗೆಯ ದೋಷಗಳಲ್ಲಿ ಒಂದು : ಸವ್ಯಭಿಚಾರ ವಿರುದ್ಧ ಸತ್ಪ್ರತಿಪಕ್ಷ ಅಸಿದ್ಧಿ ಬಾಧಗಳೆಂಬ ಹೇತ್ವಾಭಾಸದೋಷಗಳಿಲ್ಲದಿರುವಿಕೆಯುಂ (ಅಜಿಳ. ೦೬); ಬಾಧ ಎಂದರೆ ಪ್ರಮಾಣಜ್ಞಾನದ ವಿಷಯವು ಅಸತ್ ಎಂದು ಸಿದ್ಧಿಸೋಣ (ಜಾಕಕ್ಕ. ೩೨೩). ೯. ಮನುಷ್ಯನು ಆಚರಿಸಬೇಕಾದ ನಾಲ್ಕುಬಗೆಯ ಆಶ್ರಮಗಳ ವಿಷಯದಲ್ಲಿರುವ ಮೂರು ರೀತಿಯ ಮತಗಳಲ್ಲಿ ಒಂದು : ಆಶ್ರಮವಿಷಯದಲ್ಲಿ ಬಾಧ ವಿಕಲ್ಪ ಸಮುಚ್ಚಯವೆಂದು ಮೂರು ಮತಗಳಾದವು. ಬಾಧಪಕ್ಷವು ಜೈಮಿನಿ ಸಮ್ಮತವು (ಹಿಂದಜಾ. ೦೩೪). [ಸಂ.]

**ಬಾಧಕ** (ನಾ). ತೊಂದರೆ ; ಕಷ್ಟ : ಒಬ್ಬನಿಗೆ ತಲೆ ಸರಿಯಿಲ್ಲ ಅನ್ನುತ್ತಾರೆ. ಏನು ಬಾಧಕ ಅದರಿಂದ ? (ಕುಚೆಕ್ಕ. ೨೫೦) ; ಅಳದಿದ್ದರೆ ಮಗುವಿನ ಶರೀರವೃದ್ಧಿಗೆ ಬಾಧಕವೆಂದು ವಿಕಾಸವಾದಿಗಳ ಮತ (ಕೇಜಾಕ್ಕ. ೦೬೦). [ಸಂ.]

**ಬಾಧಾಕರ** (ನಾ). ತೊಂದರೆಯನ್ನುಂಟುಮಾಡುವುದು ; ಉಪದ್ರವಕಾರಿಯಾದುದು : ದೃಷ್ಟಾದೃಷ್ಟಬಾಧಾಕರಮಿದುವೆ ಪರಪ್ರೇಯಸೀಪ್ರೇಮಂ (ಶಂಶಾಕಹ. ೦೦-೬೦). [ಸಂ.]

**ಬಾಧಿಸು** (ಕ್ರಿ). ೧. ಕ್ಲೇಶಪಡಿಸು ; ಸಂಕಟಪಡಿಸು : ತೂಲೆ ಬಾಧಿಸುತಿಪ್ಪ ಸಂಕಟಕಾಜಿದಿಳೆಯೊಳು ದೊಪ್ಪದೊಪ್ಪನೆ ಕೆಡೆದು ಹೊರಳುತ ಮಿಗೆ ನರಳುತಿರಲು (ಜಕತು. ೯೯-೨೬) ; ಪಾತಕದ್ರೋಹಿಗಳ ಮುಂದಲೆಯ ಪಿಡಿದೆಳೆದುಕೊಂಡೊಯ್ದು ಕೈಕಾಲ ಸಂದುಗಳ ಬಿಡಿಸಿ ಕೊಜೆದಿಜೆದಂದು ಬಾಧಿಸುವುದು (ಶಾತ್ತಿ. ೩೬-೯೦); ರಮಣೀಯವಾದ ಆ ಗಿರಿಯನ್ನು ನೋಡಿ ರಾವಣನ ಮನಸ್ಸನ್ನು ಆ ವ್ಯಥೆ ಬಾಧಿಸುವುದು ನಿಂತುಹೋಯಿತಂತೆ (ಸಕಚಾಟೋ. ೦೦೦). ೨. ಪೀಡಿಸು ; ಹಿಂಸೆಮಾಡು : ಸಾಧುಗೆ ಸಾಧು ಮಾಧೂ(ಧು)ರ್ಯ್ಯಂಗ್ನ(ಂಗೆ) ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ (ಇಕ. X. ೬೦-೩; ೭ನೆಯ ಶ೩); ಹೆಜರ ಬಾಧಿಸುವುದು ತನು ಕೆಡುವನ್ನಕ್ಕ ಮಾಣದು (ಬಸಕ. ೦೦) ; ಬಾಧಿಸುವುದೀ ದೇಹಮಂ ನರೆ ತೆರೆಗಳೆನ್ನು (ಕೃಬಿಚಾ. ೦೦-೩೬). ೩. ನಿಗ್ರಹಗೊಳಿಸು ; ದಂಡಿಸು : ಸಾಧಿಸುವೊಡಮಸ್ಮಚಯುಮನಿನ್ನುಂ ತನುವಂ ಬಾಧಿಸು ತಪೋಗ್ನಿಯಿಂದಾರಾಧಿಸು ನೀಂ ಮಗನೆ ದುರಿತಹರನಂ ಹರನಂ (ಶಂಕಕಾ. ೬-೬).
[ಬಾಧ + — ಇಸು₃]

**ಬಾಧುರ** 'ಬಹಾದುರ್' ನೋ.

**ಬಾಧೆ** (ನಾ). ೧. ನೋವು ; ವೇದನೆ : "ಪೀಡಾ, ಬಾಧಾ . . . ಆಭೀಲಂ, ೯ ಸಾಮಾನ್ಯವಾಗಿ ದುಃಖದ ಹೆಸರುಗಳು" (ಸಿದ್ಧಾಂತಿ. ೬೩). ೨. ಹಿಂಸೆ; ಕಾಟ ; ಕಿರುಕುಳ : ಇಂಚೆಯ ಮಾವಿನ ಬಜದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬೆಳೆದು ವಿರಿಂಚಿಯು ಕೆಯ್ಯಿಡಿವೊಲಾದುದಾ ನಾಡರ್ಗಳ್ (ಶಂಕಕಾ. ೯-೩೦) ; ಜನವೆಲ್ಲ . . . ದೇಶದೊಳಗಾದ ಖಗಮೃಗದ ಬಾಧೆಯನು ಧರಣೀಶನೆನಿಸುವ ಹಂಸ್ಭಂದ್ರರಾಯಂಗೆ ತಮ್ಮಾಸಮೀವಂತೆ ಬಿನ್ನೈಸುತ್ತ ಕೈಮುಗಿಯುತಿರ್ದರು (ಕಕಾಕ. ೩-೬೩); ಇನ್ನು ಕೆಲವರು ಇದು ಪಿಶಾಚಿಯ ಬಾಧೆಯೆಂದೂ ಹೇಳತೊಡಗಿದರು (ಕಾಟೂಕ. ೦೪ ಕಥಾಸಾರ). ೩. ಅಪಾಯ ; ಆಪತ್ತು. ೪. ನಿಷೇಧ ; ನಿರೋಧ : "ಆಪತ್ತಿನೊಳು ನಿಷೇಧದ ಬಾಧೆಯೆಂದೆಂಬುದು" (ಮುಂಗಜಾ. ೦೪೩-೨೬). ೫. ಅಡಚಣೆ ; ಅಡ್ಡಿ. ೬. [ನ್ಯಾಯಶಾ] ವಾದದಿಂದ ಖಂಡಿಸುವಿಕೆ ; ಆಕ್ಷೇಪಣೆ. [ಸಂ. ಬಾಧಾ]

**ಬಾಧೆಬಡಿಸು** (ಕ್ರಿ). ಸಂಕಟಪಡಿಸು ; ಹಿಂಸಿಸು : ಋಣವೆಂಬ ಸೂತಕವು ಬಹುಬಾಧೆಬಡಿಸುತಿದೆ ಗುಣನಿಧಿಯೆ ನೀ ಎನ್ನ ಕಡೆಹಾಯಿಸಯ್ಯ (ಪುರಂದ. ಭಾ. ೨-೨೨ ಕಲ್ಪಿತ). [ಬಾಧೆ+ಪಡಿಸು]

**ಬಾಧ್ಯ₁** (ಗು). ೧. ನೊಂದ ; ವೇದನೆಗೊಳಗಾದ. ೨. ಪೀಡೆಗೊಳಗಾದ : ಹಿಂಸೆಗೊಂಡ. ೩. ವಿರುದ್ಧವಾದ ; ಹೊಂದಿಕೆಯಾಗದ : ಪ್ರಕಟಂ ವಾಂಧಿವೇಲ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ ನಿಲ್ಲ ತೆಱದಿಂದೀ ಸೃಷ್ಟಿಗನ್ಯೋನ್ಯ ಸೈನಿಕ ಸಂಗ್ರಾಮದೆ ಬಾಧ್ಯಬಾಧತೆ ಪುಟ್ಟಲ್ ನಿಲ್ವನಾನಿಂತು ಸೃಷ್ಟಿ ಕರಂ ಪರ್ಚದೆ ದೇವ ತಾಳ್ದು ನಿಲಲಾಜೆಂ ತನ್ಮಹಾಭಾರಮಂ (ಜಗಪು. ೦-೪೦). ೪. ಪ್ರತಿಭಟಿಸಲು ಯೋಗ್ಯವಾದ ; ವಿರೋಧಿಸಲು ತಕ್ಕುದಾದ. ೫. ಅಸಂಬದ್ಧವಾದ ; ಅಸಂಗತವಾದ. [ಸಂ.]

**ಬಾಧ್ಯ₂** (ನಾ). ೧. (ಆಸ್ತಿಯ ಮೇಲಿರುವ) ಹಕ್ಕು. — ಸ್ವಾಮ್ಯ : ತಂದೆಯ ಆಸ್ತಿಯ ಮೇಲೆ ಮಗನಿಗೆ ಬಾಧ್ಯವುಂಟು (ಲೂಪ). ೨. ಕಟ್ಟು ; ಬಂಧನ ; ಸಂಬಂಧ : "ಬಧನಂ, ಬಧನೀಯಂ, ಬಧ್ಯಂ, ಬಾಧ್ಯಂ. ಈ ೪ ಕಟ್ಟು" (ಜಾಕಕ್ಕ. ೦೬೦). ೩. ಹಕ್ಕನ್ನು ಹೊಂದಿರುವ ವ್ಯಕ್ತಿ ; ಸ್ವಾಮ್ಯವನ್ನು ಪಡೆದಿರುವ ವ್ಯಕ್ತಿ : ಹ್ಯಾಗಾದರೂ ಹೆಣ್ಣುಮಕ್ಕಳು ನೆರೆಮನೆಗೆ ಬಾಧ್ಯರಾಗುವರು (ಕಜಾಕೂ. IV, ೬). ೪. ಹೊಣೆಗಾರಿಕೆಯನ್ನು ಹೊಂದಿದ ವ್ಯಕ್ತಿ ; ಜವಾಬ್ದಾರ : ಮಂಡಲೇಶ್ವರರಾದ ಶ್ರೀರಂಗರಾಯರು ನಮ್ಮನ್ನು ರಕ್ಷಿಸಲು ಬಾಧ್ಯರಾಗಿದ್ದಾರೆ (ಶ್ರೀಜಾಚು. ೦೨೬). ೫. ಆಸ್ತಿ ; ಸ್ವತ್ತು : "ದಾಯ-ಬಾಧ್ಯ" (ಗಂಗಾಕು. ೦೬೩).

ಬಾಧ್ಯಪಡು=ಸಂಬಂಧಪಡು ; ನಂಟುತನವನ್ನು ಹೊಂದು : ಅಜಿಂಖಾನನೂ ದಿಲ್ಲಿಯಲ್ಲಿಯೂ ಆಗ್ರಾದಲ್ಲಿಯೂ ಇದ್ದ ಉಮರಾಗಳೂ ಲುತ್ಫಉನ್ನೀಸಗೆ ಬಹಳ ಬಾಧ್ಯಪಟ್ಟವರಾಗಿದ್ದರು (ಕಜಾಕೂ. ೬೬).

[< ಸಂ. ಬಾಂಧವ್ಯ?./ ತಮಿ. ಪಾತ್ತಿಯಮ್; ಮಲ. ಬಾಧ್ಯಮ್; ತುಳು. ಬಾಧ್ಯ=ಸಂಬಂಧಿಸಿದ; ತೆಲು. ಬಾಧ್ಯಮು]

**ಬಾಧ್ಯತನ** (ನಾ). ಒಡೆತನ ; ಹಕ್ಕು; ಅಧಿಕಾರ : ಸ್ವಾಮ್ಯ=ಬಾಧ್ಯತನ, ಒಡೆಯತನ (ಗಂಗಾಕು. ೪೯೯). [ಬಾಧ್ಯ₂ + —ತನ]

**ಬಾಧ್ಯತೆ** (ನಾ). ೧. ಸಂಬಂಧ ; ನಂಟುತನ : ಈ ಬಾಧ್ಯತೆಯನ್ನು ಪಂಡಿತರು ಅನುಗ್ರಹಿಸಬೇಕು (ಜಾಂಕಜಾ. ೬೬). ೨. (ಆಸ್ತಿಯ ಮೇಲಿರುವ) ಹಕ್ಕು ; ಅಧಿಕಾರ : ರಾಜ್ಯದ ಮೇಲೆ ನ್ಯಾಯವಾಗಿದ್ದ ತನ್ನ ಬಾಧ್ಯತೆಯನ್ನು ಸ್ಥಿರಪಡಿಸಿಕೊಂಡನೆಂದೂ ವ್ಯಕ್ತವಾಗುತ್ತದೆ (ಕಜಾಗಿ. ೦೩೬); ಲಾಜೆಯನ್ನು ಎತ್ತಿ ವಧುಗಳ ಬೊಗಸೆಗಳಿಗೆ ತುಂಬುವ ಬಾಧ್ಯತೆ ವಧುಗಳ ಸೋದರರಿಗೆ ಮಾತ್ರ ಸೇರಿದ್ದು (ಜಾಂಕಜಾ. ೦೦೦). ೩. ಹಕ್ಕಿಗೆ ಒಳಗಾಗಿರುವುದು ; ಸ್ವಾಮ್ಯಕ್ಕೆ ಒಳಪಟ್ಟುದು : ಬಾಧ್ಯತೆಗೆ ಬಾಧ್ಯನಾದರೆ ಚೋದ್ಯವೇನು? (ಗಾದೆ). ೪. ಹೊಣೆಗಾರಿಕೆ; ಕರ್ತವ್ಯ : ಒಪ್ಪಂದಗಳು ಮತ್ತು ಇತರ ಅಂತರರಾಷ್ಟ್ರೀಯ ಕಾನೂನುಗಳಿಂದ ಉದ್ಭವಿಸಿದ ಬಾಧ್ಯತೆಗಳು(obligations) ತೃಪ್ತಿಕರವಾಗಿ

ಗೌರವಿಸಲ್ಪಡುವಂತಹ ವಾತಾವರಣವನ್ನು ಕಾಪಾಡಿಕೊಂಡು ಬರಬೇಕು (ಅಂತಃಸಂ. ೧೫). [ಬಾಧ್ಯ$_2$ + –ತ್ವ$_3$]

**ಬಾಧ್ಯತ್ವ** (ನಾ). ಕಳೆದುಕೊಳ್ಳುವಿಕೆ; ನಿರರ್ಥಕಗೊಳಿಸುವಿಕೆ : ಬಾಧ್ಯತ್ವ ವೆಂದರೆ ತನ್ನ ಶಕ್ತಿಯನ್ನು ಕಳೆದುಕೊಳ್ಳುವಿಕೆ, ಅಷ್ಟೆ (ದ್ವೈತಾದ್ವೈತ. ೦೬೯). [ ಸಂ. ]

**ಬಾಧ್ಯಸ್ತ** (ನಾ). ೧. ಹಕ್ಕನ್ನುಳ್ಳ ವ್ಯಕ್ತಿ ; ಅಧಿಕಾರವಿರುವ ವ್ಯಕ್ತಿ : ಗಂಡಸುಮಗ ಹುಟ್ಟಿದರೆ . . . ತಾನೂ ಸಕ್ಕರೆ ಹಂಚಲು ಬಾಧ್ಯಸ್ತನಲ್ಲವೇ ? (ಗಂಪಜಾಹು. ೨೩೬). ೨. ಹಕ್ಕುದಾರ; ಒಡೆಯ : (*). ೩. (ಯಾವುದಾದರೂ ಒಂದು ಕರ್ತವ್ಯವನ್ನು ಮಾಡಲು) ನಿಯೋಜಿತನಾದವನು : ಹೊಣೆಗಾರ: (*). 'ಬಾಧ್ಯಸ್ಥ' ಪರಾ. [ ಬಾಧ್ಯ$_2$ + –ಸ್ತ ]

**ಬಾಧ್ಯಸ್ಥ** (ನಾ). ಹಕ್ಕುದಾರ ; ಉತ್ತರಾಧಿಕಾರಿ : ಚೊಚ್ಚಲ ಮಕ್ಕಳಾದ ಆಲ್ಬರ್ಟ ಎಡ್ವರ್ಡ ಎಂಬವರು ಚಕ್ರವರ್ತಿನಿಯವರ ಪಟ್ಟಕ್ಕೆ ಬಾಧ್ಯಸ್ಥರು (ಮಾಂಉಹು. ೪-೫); ರಾಂಪುರದಲ್ಲಿ ದೂರದ ನೆಂಟರು, ಬಾಧ್ಯಸ್ಥರು ಇದ್ದಾರೆ ಅಂತ ಯಾರೋ ಹೇಳಿ ಇಲ್ಲಿಗೆ ಕಳಿಸಿದರಂತೆ (ಮರೀ. ೯೦). 'ಬಾಧ್ಯಸ್ತ' ಪರಾ. [ಬಾಧ್ಯ$_2$ + –ಸ್ಥ]

**ಬಾನ್**$_1$ (ಕ್ರಿ). ಮಡಕೆ, ಕುಡಿಕೆ ಮುಂತಾದುವುಗಳನ್ನು ಮಾಡು ; ಕುಂಬಾರನ ಕೆಲಸವನ್ನು ಮಾಡು : "ಬಾನ್-ಕುಲಾಲಕರಣೇ, ಆಕಾಶ, ಗೋಮಯಪಿಂಡಪುಂಜಯೋಃ (ಸಗಣಿಯ ಉಂಡೆಯ ರಾಶಿ)" (ಶಮದಾ); ತಾನಕ್ಕರೆಯಿನೊಪ್ಪಿ ಬಾಂದೊಡವೆಯೊಡೆವನೇ ಪಿಂಗಿಸಿಪ ಕಾಲಂ ? (ಗಿರಿಜಾ. ೦೨೩-೪೩).

[ದೇ.॥ ತವಿ. ಮಣ್ಣು, ಪನ್ನೆ=ಆಕಾರ ಕೊಡು ; ಮಲ. ಮನಯು, ಮನಿಯು ; ತೆಲು. ವಾನು ; ಪರ್ಜಿ. ವಾನ್]

**ಬಾನ್**$_2$, **ಬಾಂ**$_1$, **ಬಾನು**$_1$ (ನಾ). ೧. ಮಡಕೆ, ಕುಡಿಕೆ ಮುಂತಾದುವು : 'ಬಾನಿಗ' ಪರಾ. ೨. ಮಣ್ಣಿನ ಪಾತ್ರೆಗಳ ರಾಶಿ ; ಮಡಕೆ, ಕುಡಿಕೆಗಳ ಒಟ್ಟಿಲು : (*). ೩. (ಒಣಗಿದ) ಸಗಣಿಯ ರಾಶಿ ; ಬೆರಣಿಯ ರಾಶಿ: "ಬಾನ್—ಕುಲಾಲಕರಣೇ. ಆಕಾಶ, ಗೋಮಯ ಪಿಂಡಪುಂಜಯೋಃ (ಸಗಣಿಯ ಉಂಡೆಯ ರಾಶಿ)" (ಶಮದಾ). **ಬಾಂ**$_1$ : ೧. 'ಬಾಂಬ' ಪರಾ. **ಬಾನು**$_1$ : ೨. "ಸಗಣಿಪಿಂಡದ ಪುಂಜದಲ್ಲಿ ಪ್ರಕಾಶದೊಳ್ ವಿಂಗೆ ಕುಂಬದೊಟ್ಟಿಲೊಳ್ ಬಾನು" (ಕನ್ನಡಸಂ. ೦೦೦). ೩. ಮೇಲಿನ 'ಶಬ್ದಮಂ' ಪ್ರಯೋಗವನ್ನು ನೋಡಿ. [<ಬಾನ್$_1$]

**ಬಾನ್**$_3$, **ಬಾಂ**$_2$, **ಬಾನ**$_2$, **ಬಾನು**$_3$ (ನಾ). ೧. ಆಕಾಶ ; ಗಗನ : "ಆಗಸಂ . . . ಮುಗಿಲ್ವಟ್ಟೆ, ಬಾನ್—ಈ ೬ ಆಕಾಶಂ" (ಕಕಶಾ. ೪೯-೯೦); ನಾರವನೆಯ್ದೆ ನೋಡಿ ಬಾನೊಳ್ಳುಣಿವಾಡೆ ದೇವತತಿ ನೋಡೆ (ಶಾಂತಿಪು. ೩ ೬೯) ; ಆಗಳ್ ಬಾನಶ್ಚಣಿನರಬ್ಬಟಿಸಿ ಸುರಿದತ್ತು ರಾಮನ ಸಿರದೊಳ್ (ಅದ್ಭುತ. ೩೬-೨೦) ; ಬಾನಾಚೆಯಿಂ ವಿಶ್ವಸತ್ತ್ವ ತಾನಿಳಿದಿಳೆಗೆ ನಾನೆನುವ ಜೀವನದಿ ರೂಪುಗೊಂಡಿಹುದೋ ? (ಮಂಉಳಿ. ೦೩೬). ೨. ಸ್ವರ್ಗ : 'ಬಾನಂದ'. 'ಬಾನಾಳ್ಕೆ' ಪರಾ. ೩. ಆಕಾಶದಿಂದ ಸುರಿಯುವ ಮಳೆ : 'ಬಾನಗೇಡು' ಪರಾ. **ಬಾಂ**$_2$ : ೧. ಪೋಂಗಾಲಿ ವಿಜುಗೆ ಪಟಯಿಗೆ ಬಾಂಗೆ ಪೆಡಂಮಗುಟಿ . . . ರಥಂಗಳ್ ಪಂದುವು ಬಳಾಬ್ಧಿ ನಕ್ರಾಕೃತಿಯೊಳ್ (ಜಗಂ. ೬-೬೨) ; ಜೋಡಿಸುವೋ ತುರಗವಂ ತನ್ನ ತೇರ್ಗಂದು ಗಾಡದಿಂ ಬಾಂಗೆತ್ತಿಕೊಂಡೊಯ್ಯುದಿರನಬ್ಜಸಖಂ (ಕೃಷ್ಣಾ. ೪-೦೯) ; ಆಗಳಸುರುಳ್ವ ಬಾಂಗಿಟ್ಟನೀ ಮೊರೆಯಂ (ಗಿರಿಜಾ. ೦೨೦-೨೪). ೨. 'ಬಾಂಬಸು', 'ಬಾಂಬೆಣ್' ಪರಾ. **ಬಾನ**$_2$ : ೧. ಬಾನ ದೊಳಾಗಸವಟ್ಟೆಗರ್[ಪಾಠಾಂ. ಬಾನೊಳು ಸಗ್ಗವಟ್ಟೆಗ, ಬಾನೊಳಾಗಸ ವಟ್ಟೆಗ] ನೆಲದೊಳು ಮಾನವಬಲ ಕೆಕ್ಕಿಜಿದು ಸಾನುರಾಗದೊಳೆಯ್ದಿತು ಪುಂಡರೀಕಿಣಿಗಾ ನರನಾಥನೊಂದಾಗಿ (ಶ್ರೀಕಾಂ. ೦೪-೦೬) ; ಬಾನದಿಂದಿಳಿದು ಬಂದಾ ಬಾಲಭಾಸ್ಕರನೀ ನೆಲದೊಳು ನಡೆವಂತೆ (ಪ್ರಶಂಶ. ೨-೬೩) ; ಇಟ್ಟೆರಡಡಿಯುಂ ಯತಿಗತಿ ಪುಟ್ಟದೆ ಬಾನವನೊರಲ್ದು ನಿಟ್ಟಿಸಿ ಹಸಿರಿಂದಟ್ಟಿಸಿ ಹಲಗೆಯ ತೊಟ್ಟನೆ ಪಟ್ಟಿರಿಸುವ ಹೊಟ್ಟುಗಬ್ಬಿಗಂ ಕಬ್ಬಿಗನೇ (ಅಜಿತಾ. ೬೦). **ಬಾನು**$_3$ : ೧. ತನ್ನ ದಾಂಗುಡಿಯ ಗೊನೆ ಬಾನು ಮಣ್ಣೊಂದಾಗಿ ಒಂದಾಗಿ ಕೆಲವಾಗಿ ಇರುವ ಹರುಷಿನ ತುಂಬ . . . ಎಂಬಿಚಿತ್ರ ಒಂದೇ ಬಿಂಬ (ಮಂಉಳಿ. ೩೨-೩) ; ನಿನ್ನ ಬಾಳ ಬಾನಿನಲ್ಲಿ ಗುಡುಗು ಸಿಡಿಲುಗಳಷ್ಟೇ ಇಲ್ಲ ಇಂದ್ರಚಾಪವೂ ಇದೆ (ಕರ್ಮಪ. ೨-೦೬). ೨. ಬಾನ್ ಕೊಂಡ ಕೃಷ್ಣನ್. ನೆಲನೆಲ್ಲಮನ್ ಗೆಲ್ದು, ಬಾನುವನ್ ಕೊಂಡ ಕೃಷ್ಣನ್ । (ಹೊಂಗಳು. ೨೯-೦೦).

**ಬಾನಗಣ್ಣು**=ಸೂರ್ಯ: ಬಾನಗಣ್ಣನ ಬಿಸಿಯ ಹಸಿಯಪರದಲೆ ಕುಡಿದು ಬೆಳಕ ನೀರಡಿಕೆಯನು ಪುಟ್ಟಿಸುವದು (ಸೂರ್ಯಕಾ. ೦೩). **ಬಾನ ಜೊಡರ್** =ಆಕಾಶದ ದೀಪ ; ಸೂರ್ಯ ; "ನೇಸರ್ಬು" (ಶಶಂ. ೬. I. ೯). **ಬಾನದರ್** = ದೇವತೆಗಳು ; ಸುರರು : ಬಾನದರುಘೋಷೆಯಿಂದು ಪೊಗಳೆ ಪರ್ಬಿನವನು ಕೃಶಾನು ಪೊಕ್ಕಂತೆ ಸಂಹರಿಸಿದಂ ಸತ್ಯಸಂಧಾನಿ ಗಾಂಗೇಯಂ (ಲಕ್ಷ್ಮೀಶಾ. ೪-೬). **ಬಾನವರ್**=ಬಾನದರ್ : ಬಾನವರೊರ್ಬ ಕಾಡಲ್ ಮನೆಯನ್, ತಪ್ಪದೆ ಕಾಡುಗುಮದಟಾ ಕಾಟವನ್ (ಅಂತಗಿಂ. ೨೬-೩೫೯): ಸಟೆಯ ಕರೆದಪರ್ ಬಾನವರ್, ಪ್ರವಿಮಾತ್ಮಕನ್ ಮುನ್ನಣಿಕೆಯುಳ್ಳವನ್ ಎಂದು (ಶಿವ್ವಕ್ರ. ೬.೦೦೬). **ಬಾನುದ್ದಂ**=ಆಕಾಶದ ವರೆಗಿರುವ ಎತ್ತರ; ಆಕಾಶದಷ್ಟು ಉದ್ದ : ಬಾನುದ್ದಂ : ಏನಾಯ್ತು (ಕಶಂ. ೬೯ ಪ್ರಯೋ); ಬಾನುದ್ದಂಬರವೊಗೆದಂದೇನೆಸೆದುದು ರತ್ನವಪ್ರಂ (ಪುಣ್ಯಾಸ್ರ. ೦೦-೨೩): ತಣಿವೀವುದು ಬಾನುದ್ದಮಪ್ಪ ಪೇರೊಡಲವರ್ಗಂ (ಶಬ್ದಾಮ. ೫೫೨ ವ್ಯಾಖ್ಯಾ). **ಬಾನುದ್ದವಾಗು**=(ಅಲಂ) ಅತಿಯಾಗಿ ಗರ್ವಿಸು.— ಅಹಂ ಕಾರಪಡು : ಆನುಂ ಬುಧರೊಡನೆ ನೃಪಾಸ್ಥಾನದೊಳರ್ದಪ್ಪನೆಂದು ಕುಕವಿಕದಂಬಂ ಬಾನುದ್ದಮಪ್ಪುದೇಕುದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ. (ಅಂತಾಶ. ೦-೨೬). [ದೇ.॥ ತವಿ. ಮಲ. ವಾನ್, ವಾನವನ್ ; ತುಳು. ಕೊಡ. ಬಾನ, ಬಾಣ ; ತೆಲು. ಕೋಲಾ. ನಾಯ್ಕಿ. ವಾನ; ಕೋತ. ವಾನ್ ; ಪರ್ಜಿ. ವಾನಿ]

**ಬಾನ**$_1$ 'ಪಾನೆ' ನೋ.

**ಬಾನ**$_2$ 'ಬಾನ್$_3$' ನೋ.

**ಬಾನಂಗುಳಿಗೆ** (ನಾ). (ಒಣಗಿದ) ಸಗಣಿಯ ಉಂಡೆ ; ಬೆರಣಿ : ನಕಾರಕ್ಕೆ — ವಿಮಾನಂಬುಬು, ಬಾನಂಗುಳಿಗೆ (ಕಶಂದ. ೦೬೨ ಪ್ರಯೋ). ℗ 'ಶಮದ. ನ. ೧೮೩ ಅಡಿಟಿ' ಯಲ್ಲಿ ಈ ಶಬ್ದಕ್ಕೆ 'ನಕ್ಷತ್ರ' ಎಂಬ ಅರ್ಥವನ್ನು ಕೊಡಲಾಗಿದೆ. 'ಬಾಂಗುಳಿಗೆ' ಪರಾ. [<ಬಾನ್$_2$+ಗುಳಿಗೆ$_1$]

**ಬಾನಂಗುಟಿ**$_1$ 'ಬಾಂಗುಟಿ' ನೋ.

**ಬಾನಂಗುಟಿ**$_2$ (ನಾ). (?) : ಪುಟ್ಟಿ ಬಾಯಚ್ ಬೇಕರಿಯೋದಂತಿರ್ದ ಬಾನಂಗುಟಿ[ಪಾಠಾಂ. ಬಾನಂಗುಳಿ, ಬೆನ್ನಂಗುಳಿ] ಗಿಟಗಿಟಜಂತ್ರಂಬೊ ಲಾಗಿರ್ದ ಮೈ ಮೆಯ್ಸರಿ ಚಿದ್ರೂಪಕ್ಕೆ ಪಕ್ಕಾಗಿರ ಚರಿಗೊಡಲ್ಪಂದ ನೊರ್ವಂ ಮುನೀಂದ್ರಂ (ಅರ್ಜಶೀ. ೬-೨): ℗ "ಇಲ್ಲಿ ಬರುವ ಬಾನಂಗುಳಿ ಎಂಬುದು ಮೈಯ ಒಂದು ಭಾಗವಿರಬಂತೆ ತೋರುತ್ತದೆ" (ಶಂಪರ. ೪೯೦). [ ? ]

**ಬಾನಂಗುಟಿಗೆ** ? (?). (?) : ತಾನುಂ ಹಿಡಿಂಬೆಯುಂ . . . ಕೂಳಿಲ್ಲದಿಂ ತೇಗಿಯುಂ ಪಸಿಗೆವರಿದುಂ ಬವಳಿವರಿದುಂ ಬಾನಂ[ಪಾಠಾಂ. ಸಂ] ಗುಟಿಗೆವಡೆದುಂ ಸೂಲ್ವರಿದುವಾಡುವಾಗಳುಭಯಬಲಂಗಳ್ ಬೆಕ್ಕಸಂ ಬಟ್ಟು ನೋಡಿ (ಶಂಶಾಶಾ. ೦೨-೦೫೫ ವ) ; "ಬಾನಂಗುಟಿಗೆ — ಒಂದು

ಬಗೆಯ ನಡಿಗೆ" (ಕಂಶರಾ. ೬೦೬); "ಬಾನುಗುಳಿಗೆವರಿದುಂ–ನಕ್ಷತ್ರ ಮಂಡಲಕ್ಕೆ ನೆಗೆದೂ" (ಕಂಶೂ. ೯೯೯).

**ಬಾನಂಚು** (ನಾ). ಭೂಮಿಯೂ ಆಕಾಶವೂ ಸೇರುವಂತೆ ಕಾಣುವ ಭಾಗ : ಕ್ಷಿತಿಜ : ದಿಗಂತ : ಕಣ್ಣು ತುಂಬುವ ಹೊರೆ ಬಾನಂಚಿಗೆ (ಕಿಂಕು. ೨೦ ೦೪). [ಬಾನ್₃ + ಅಂಚು₂]

**ಬಾನಂದ** (ನಾ). ಸ್ವರ್ಗದ ಸೊಬಗು; ದೇವಲೋಕದ ಮನೋಹರತೆ: ಬಾನಂದವನು ಸವಿದ ಸುಖದ ಯುಮುಭೂವರ್ . . . ಕಲೆತೆಲ್ಲ ಬಾದುರ್ (ಹೊಂಗಳು. ೩೦–೧೨). [ಬಾನ್₃ + ಅಂದ]

**ಬಾನಕ್ಕಿ** 'ಬಾನ್ನಕ್ಕಿ' ನೋ.

**ಬಾನಗಡಿ** 'ಭಾನಗಡಿ' ನೋ.

**ಬಾನಗಿತ್ತಿ** 'ಬೋನಗಿತ್ತಿ' ನೋ.

**ಬಾನಗೇಡು** (ನಾ). ಆಕಾಶದಿಂದ ಸುರಿಯುವ ಮಳೆಯಿಂದ ಉಂಟಾಗುವ ತೊಂದರೆ; ಅತಿವೃಷ್ಟಿಯಿಂದಾಗುವ ಕೆಡುಕು: ಆ ಮಂಡಚನುಂ ಬಾನಗೇಡು ಬಜಗೇಡು ಎಂಬದೆ (ಕ್ಕೆಇ. ೦೯೩೩, ಉಡುಪಿ. ೩೦೬ ೨೨; 1293): ವರುಷಂಪ್ರತಿ ಬಾನಗೇಡು ಬಜಗೇಡುಯಿಂಸದೆ ೧೨ ಮುಡಿ ಅಕ್ಕಿಯನೂ . . . ನಡಸಿ ಬಹರು (ಕ್ಕೆಇ. IX – ii, ೯೯೯–೩೩ ; 1434).

[ಬಾನ್₂ (<ಬಾನ್₃) + ಕೇಡು]

**ಬಾನಲ್** (ನಾ). ೧. ಧಾರೆ; ಪ್ರವಾಹ : ಪೊವಟ್ಟ ಕಣ್ಬನಿಯ ಬಾನಲ ತಣ್ಣಸದೊಳ್ ಪಗಲ್ಪು ಪಾವಸೆಗೊಳೆ ಕಾರ ತಂದಲೊಳಗುಂದಲೆಯಾಗಿರೆ ನಟ್ಟು ಸೋರ್ವ ಪಾಟ್ಟಸದಿಯ ಪೆಣ್ಣ ಜೋಹದವೊಲೊಪ್ಪಿದಳೊರ್ವ ಳನಂಗರಾಗದಿಂ (ಕಾಂತಿಕ. ೯–೯೯); ಕಣ್ಣೀರ ಬಾನಲ್ಗಳಿಂ ಬಸಿವಸ್ಕಂ . . . ಪಿಸುಣಾಡಿತ್ತ ಸಮಸ್ತನಸ್ಥಹತಿಯಂ ತತ್ಕಾಮಿನೀರೂಪಕಂ (ಲೀಲಾವ. ೯–೦೯೩) ; ಕಪೋಲದೊಳ್ ಬಳೆಯಿಸೆ ಬಾನಲಂ ಸುರಿವ ಬಾಷ್ಪಜಲಂ ಕರುಣಾರ್ದ್ರಹಾರವಂ ಬಳೆಯಿಸೆ ಬಾಯ ಬತ್ತುಗೆಯನೀರ್ದೆಗೆಟ್ಟುಬಿತಂ . . . ಬಿಟ್ಟಳಂದಜತಸೇನೆ ನೃಪಾಲಪದಾಬ್ಜಮೂಲದೊಳ್ (ಕಂಶೃಕಿ. ೩–೦೦). ೨. ನಿಂತ ನೀರು; ಕಂಟೆ; ಬೆಂಚೆ : ನಾನಲ ಬಾನಲ ನೀರಂ ಮೀನೊಲ್ಲುಂ ರಾಜಹಂಸನೊಲ್ಲುಮೆ (ಬುಲ್ಲಕಿ. ೦೩–೦೦೩): ಮೆಳೆಯುಮಂ ನಾನಲುಮಂ ಬಾನಲುಮಂ ಸಡಿಂಬಮನಿಡಿಂಬಮಂ . . . ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬–೦೩ ವ). ೩. (ಕಣ್ಣೀರು, ಬೆವರು ಇತ್ಯಾದಿಗಳ ತೇವದಿಂದ) ಕದಡಿರುವ ಸ್ಥಿತಿ ; ಮಸುಕಾಗಿರುವಿಕೆ : "ಬಾನಲೆನೆ [ಜಾತಾಂ. ಬಾಸುಳೆನೆ] ಮಸುಳಿದುದುಂ" (ಕಕು. ೬೦) ; ಉಸ್ಕೆ ಬೆವರ್ ನಸುಬಾನಲಾದ ಬೊಟ್ಟಿಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಕಂಶೃಕಿ. ೯–೭೨) : ತಾಟುಂಬಟುಯಟ್ಟ ಚುಂಬುಬಿಮಂ ಕಡೆಗಣ್ಣೆಯ ಬಾನಲಾದ ಬೊಟ್ಟು (ಕಪುಶ. ೦೭೨ ಪ್ರಯೋ) ; ಚಿತ್ರಭುವನಾದ ವಾಂಕಿನಿಂದ ಬಾನಲಾಗಿ, ರಣಧೀರನಿಗೆ ಅನಿಮಿಷಾಕ್ಷಿಯಾಗಿರುವಳು (ಪುಂಶೃ. ೦೯೩–೬). 'ಬಾನಲ್ಗೊಳ್'. 'ಬಾನಲ್ಪೊರೆ' ಪರಾ.

[ದೇ.ತ ತಮಿ. ವಾನಲ್ = ವ್ಯವಸಾಯದ ಭೂಮಿ, ಸಮುದ್ರ. ಒಂದು ಬಗೆಯ ಸಸ್ಯ ; ಮಲ. ವಾನಲ್ = ಒಂದು ಬಗೆಯ ಸಸ್ಯ]

**ಬಾನಲೆ** (ಕ್ರಿ). ಆಕಾಶದಲ್ಲಿ ತಿರುಗು, –ಸುತ್ತಾಡು: ಗಾಳಿ ಬಾನಲೆಯುತ್ತಿದೆ ದೆಸೆಗೆಟ್ಟು ತಿರುಕನಂತೆ (ಗೋಕುಂ. ೦–೦೩).

**ಬಾನಲೆವರ್** = ಆಕಾಶದಲ್ಲಿ ಸಂಚರಿಸುವವರು ; ದೇವತೆಗಳು : ಬನ್ನಿ, ಓ ಬಾನಲೆವರೆ, ನಮ್ಮ ತೋಟಕೆ, ನಂದನವನೆ ಮಾಸುವಿ ದಿವ್ಯ ತೋಟಕೆ (ಕಾಶೇ. ೨೦–೦). [ಬಾನ್₃ + ಅಲೆ₁]

ಬಾನಲ್ಗೊಳ್ (ಕ್ರಿ). ಮಸುಕಾಗು ; ಕಾಂತಿಹೀನವಾಗು : ಬೆಳ್ಳೀಜ್ ಬಾನಲ್ಗೊಂಡ ವದನಮಂಡಲವುಂ ... ಜಡತೆಗೆಡೆಯಾದ ಯಾನಮುಂ ಪೆರಸು ಮೆಲ್ಲನಲ್ಲಿಗೆ ವಂದು (ಕುಮುಪ. ೦೩–೯೩ ವ). [ಬಾನಲ್ + ಕೊಳ್₁]

**ಬಾನಲ್ಪೊರೆ** (ಕ್ರಿ). (ಕಣ್ಣೀರಿನ) ಧಾರೆಯಿಂದ ಕೂಡಿಕೊಳ್ಳು : ವ್ಯಸ್ತಫ್ಯಂಗಾಳಕಂ ಪ್ರಸ್ಪಲಿತತೋಯದ್ವೇಣಿ ಬಾನಲ್ಪೊರೆದಪಾಳಕಪೋಳ[ಸ್ಥಳಂ] . . . ಕಣ್ಪೊಳೆ ತಳಿರ್ವಸಿಯೊಳ್ಕಾಂತೆಯಂತಿರ್ದಳಾಗಳ್ (ಕಾಂತಿಕ. ೦೦ ೬೯). [ಬಾನಲ್ + ಪೊರ್₂]

**ಬಾನಲ್ವರಿ** (ಕ್ರಿ). ಧಾರೆಯಾಗಿ ಸುರಿ. – ಹರಿ : ಬಲ್ಪಿನನುರ್ಚಿ ಕೋಡೊಳಿರೆ ನೆತ್ತರರೋಮಗೆಯಿಂ ನಲಕ್ಕೆ ಬಾನಲ್ವರಿವನ್ನೆಗಂ ಪ್ರಹತದಿಂಡಿಜದತ್ತಿದೊಡಗೃಹಸ್ತದೊಳ್ (ಕಾವ್ಯಾವ. ೬೮); ಕಣ್ಣೀರೆ ಬಾನಲ್ವರಿದು ಬೆಳಪ ಮೈ ವೈಯ್ಯ ಸಂತಾಪದಿಂ ಬಾಡುವ ಪಕ್ಷ್ಮಂ (ಜಗ. ೦೦–೩) ; ಆ ನುಡಿಗೇಳುತಾಸಂದಾಶ್ರು ಕಣ್ಪೊಳು ಬಾನಲ್ವರಿದುದು (ಕಜಾಶಾಂ. ೩೬–೯೦).

[ಬಾನಲ್ + ಪರಿ₂]

**ಬಾನಳ್ಳಿ** (ನಾ). ಒಂದು ಹಳ್ಳಿಯ ಹೆಸರು : ಬಾನಳ್ಳಿಯ ಬನ್ನಿಯಮ್ಮ ಸೆಟ್ಟಿಯ ಮಗ ಮೆಮ್ಮಣ್ಣ (ಎಕ. IV(ಸ), ಶಾಮಹಾ. ೦೦೩–೪ ; 10ನೆಯ ಶತ). [ ? + ಪಳ್ಳಿ (<ಪಳ್ಳಿ₁)]

**ಬಾನಾಡಿ** (ನಾ). ಆಕಾಶವನ್ನು ಮುಟ್ಟುವಂತೆ ಕಾಣುವಷ್ಟು ಎತ್ತರಕ್ಕೆ ಹಾರಾಡುವ ಒಂದು ಬಗೆಯ ಪಕ್ಷಿ : ಟಿಟ್ಟಿಭ : "ಬಾನಾಡಿಯೆಂದು ಟಿಟ್ಟಿಭಂ" (ಕಶಾ. ೩೦–೯೬) ; ಶುಕಂ ಬಾನಾಡಿ . . . ರತ್ನಬಿಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೩–೩೯) ; ಈ ದೃಷ್ಟಿಯಿಂದ ಶೆಲ್ಲಿ ಕವಿಯ ಬಾನಾಡಿ (Skylark) ಒಂದು ಹಕ್ಕಿ ಮಾತ್ರವಲ್ಲ ; ಅದೊಂದು ಚೈತನ್ಯ (ಕಾಂಡಸ. ೩೩). [ಬಾನ್₃ + –ಆಡಿ₁]

**ಬಾನಾವರ** (ನಾ). ಒಂದು ಬಗೆಯ ಸಸ್ಯ: ಬಾನಾವರ, ನೀರುಸಲ್ಲಿ, ಹಸಿ (ಕೃಶಿಇ. ೩೯–೬೭೩). [?]

**ಬಾನಾಳ್ಕೆ** (ನಾ). ಸ್ವರ್ಗದ ಆಳ್ವಿಕೆ.– ರಾಜ್ಯಭಾರ : ಸರ್ವಜೀವಂಗಳುಂ ಮುಕ್ತಿಯಂ ಕಾಣ್ಗೆ . . . ಸಾವುದೆಲ್ಲಾ ಸತ್ತು, ಬಾನಾಳ್ಕೆ ಪೊಣ್ಗೆ (ಹೊಂಗಳು. ೩೮–೨೦). [ಬಾನ್₃ + ಆಳ್ಕೆ]

**ಬಾನಿ**₁ 'ಬಾನೆ' ನೋ.

**ಬಾನಿ**₂, **ಭಾನಿ** (ನಾ). ಗಾಯನದ ರೀತಿ.–ಪದ್ಧತಿ : ಆ ರಾಗವನ್ನು ಹಾಗೆ ಹಾಡಬಹುದೆಂದು ಅವನು ತಿಳಿದಿರಲಿಲ್ಲ. ಆ 'ಬಾನಿ' ಅವನಿಗೆ ತುಂಬ ಹಿಡಿಸಿತ್ತು (ರಾಗಿತ. ೦೩೬). **ಭಾನಿ** : ನಿಮ್ಮ ಭಾನಿ ನೋಡಿದರೆ ನಿಮಗೆ ಕರ್ನಾಟಕಸಂಗೀತ ಚೆನ್ನಾಗಿ ಬರುತ್ತೆ ಎಂದು ಕಾಣುತ್ತೆ (ರಾವಶನಿ. ೯೦).

[←ಹಿಂ. ಬಾನಾ ; ಮರಾ. ಬಾಣೀ]

**ಬಾನಿಗ** (ನಾ). ಮಡಕೆಯನ್ನು ಮಾಡುವವನು ; ಕುಂಬಾರ : ನಾಗಪಣ್ಣೆ ತರ ಮಕ್ಕಳು ಮಲ್ಲಪನವರು ಕಾಳಿಭಕ್ತನ ಪಂಕಳು ಪೂರಾಪಳಿ ಬಾನಿಗ ಕಾಲಭಕ್ತಗೆ . . . ವಿಕ್ರಮಸಂವತ್ಸರದ ಕಾರ್ತಿಕ ಶು ೧ ಪರಿಯುಸ್ಪರ × × × (ಎಕ. III, ಮಳವ. ೦೦೯–೦೯ ; 1338) ; ಒಳ್ಳಾರಿಗು. ಬಾನಿಗು, ಪಟ್ಟಣಿಗು (ಕಶಾ.ಸು. ೯೦೯ ಪ್ರಯೋ). [ಬಾನ್₂ + – ಇಗ]

**ಬಾನು**₁ 'ಬಾನ್₂' ನೋ.

**ಬಾನು**₂ 'ಪಾನೆ' ನೋ.

**ಬಾನು**₃ 'ಬಾನ್₃' ನೋ.

**ಬಾನುಲಿ** (ನಾ). ೧. ಆಕಾಶದಲ್ಲಿ ಕೇಳಿ ಬರುವ ಶಬ್ದ : ಅಶರೀರವಾಣಿ: ನೀರಡಿಸಿದುದರಿಂದ . . . ಕೊಳದೊಳಗೆ ಕಾಲಿಟ್ಟನು. ಅಷ್ಟರಲ್ಲಿ ಒಂದು ಬಾನುಲಿಯು ಕೇಳಬಂದಿತು (ಹುಕ್ಷಶ್ರ. ೨) ; ನನ್ನ ದೇಹದ ಬೂದಿ ಯೊಳಗೊಂದಿನಿತು ಗಂಗೆಯ ಸೇರಲಿ. ಅಲ್ಲ ಧಾರ್ಮಿಕಸಂಬಿಕೆಯು ; ಅದು ನನ್ನ ಬಾಲ್ಯದ ಬಾನುಲಿ (ನಂಜು. ೩೩–೨). ೨. ರೇಡಿಯೋ ; ಆಕಾಶವಾಣಿ : ಅದು ಸಂಗೀತಕಚೇರಿ ಇಲ್ಲವೆ ಬಾನುಲಿ ಇವುಗಳಿಂದ ಕೇಳಿ ಬರುವ ಸಂಗೀತವಲ್ಲ (ಕಶ. ೩೦) ; ಬಾನುಲಿಯೋ ಕಂಪಿಸಿ ವಿಶ್ವವೆಲ್ಲ

ರ್ಘೋಷಿಸಿ ಏನನರ್ಥ ಏನನರ್ಥ ಎಂದು ಕೂಗಿಕೂಗಿತು (ಸೂರ್ಯಕಾ. ೦೦-೯). ೩. ನಿಸ್ತಂತುವಾರ್ತಾಪ್ರಸರಣವನ್ನು ಮಾಡುವ ಕೇಂದ್ರ : ಆಕಾಶ ವಾಣೀನಿಲಯ ; ರೇಡಿಯೋಕೇಂದ್ರ : ಬಾನುಲಿ ಅಧಿ ಉಪಅಧಿಕಾರಿ ಗಳಿಗೆ ಮಾತಿಗೊಮ್ಮೆ ಕೈಮುಗಿದು ನಗಲು ಸಹ ಸವುಡಿಲ್ಲದಾಯಿತು (ಹುಚ್ಚು‌ಪು. ೦೯) ; ಬಾನುಲಿಯಲ್ಲಿಯ ತನ್ನ ಕಾರ್ಯಕ್ರಮವನ್ನು ಮುಗಿಸಿ ಕೊಂಡು ಮರುದಿನ . . . ರಹೀಮ ಊರಲ್ಲಿದ್ದ (೩೦೯೪. ೬೩).

[ಬಾನ್$_3$ + ಉಲಿ$_1$]

**ಬಾನುಲಿಕೇಂದ್ರ** (ನಾ). = ಬಾನುಲಿ ೩ : ದೆಹಲಿಯ ಬಾನುಲಿಕೇಂದ್ರ ದೊಳಿರುವರು ಆ ರಾಮಕೃಷ್ಣನೆನುವವರು (೨೦ಚಾಶ. ೩೯-೭೦) ; ಬಾನುಲಿ ಕೇಂದ್ರದ ಮಂತ್ರಿಗಳೀದ ಹಿಡಿದು . . . ಪ್ರತಿಯೊಬ್ಬರಿಗೂ ಪತ್ರಗಳನ್ನು ತಂದ (ಹುಚ್ಚು‌ಕು. ೦೬). [ಬಾನುಲಿ + ಕೇಂದ್ರ]

**ಬಾನೆ** 'ಪಾನೆ' ನೋ.

**ಬಾನೆಡೆ** (ನಾ). ಗಗನಸ್ಥಳ; ಆಕಾಶ : ಎಸ್ಕೊಡೆಯನ ಬಲ್ಪಂ . . . ಬಾನೆಡೆಯೊಳ್ ಸುಟಿದಾಡುವರೇನಱಿಯರೆ (ಕಬ್ಬಿಗಕಾ. ೦೬೭) ; ಏನೆಂಬೆ ನತುಳಸಂತೋಷಮುಂ ರೋಷಮುಂ ಬಾನೆಡೆಗೆ ನೆಗೆವ ಬೊಬ್ಬಾಟಮುಂ ಘಾಟಮುಂ . . . ದೇವಾಸುರರೊಳೆಸೆದುದು (ಜಂಪು. ೪೩-೩೬).

[ಬಾನ್$_3$ + ಎಡೆ$_3$]

**ಬಾನೆರೆಯ** (ನಾ). ದೇವತೆಗಳ ಒಡೆಯ ; ದೇವರಾಜ : ಪಣೆಯುಂಮೆನು ಮಾತಾಯಿ. ಬಾನೆರೆಯನೆರಗುವೆನು (ಶಶಿರ. I. ೪೮೩).

[ಬಾನ್$_3$ + ಎರೆಯ (< ಎಱೆಯ)]

**ಬಾನೊಡತಿ** (ನಾ). ದೇವತೆ; ಅಪ್ಸರೆ : ಮುಡಿ ಮುಗಿಲ್ಮಿಣ್ಮಿಂಚುಗುರು ತಾರೆ ಮೊಗ ಸಸಿ ಬಡನಡುವಾಗಸವಾಗೆ ಕಡುರಯ್ಯಮಾದಳು ಯ್ಯಲಿಯೊಳೊರ್ವಳು ಬಾನೊಡತಿ[ಪಾಠಾಂ. ಲಿ]ಯಂತೆ (ಕುರಾಹಾಂ. ೨೮-೩೩).

[ಬಾನ್$_3$ + ಒಡತಿ]

**ಬಾನೊಡಲ** (ನಾ). ಆಕಾಶವೇ ದೇಹವಾಗುಳ್ಳವನು; ಸ್ವರೂಪರಹಿತ : ನುಡಿವುದು ಪುದ್ಗಲ ಕೇಳ್ವುದು ಪುದ್ಗಲ ಕಡೆಗೆ ಪುದ್ಗಲ ಸ್ನೇಹ ಕೋಪ ಪಡಿದಿಪ ಸೂಂಕೆ ಸನ್ನಿದೆಯೊಳಿರಯ್ಯ ಬಾನೊಡಲಾ ಚಿದುಬರಪುರುಷ (ಶಕತ. ೪೬.೦೨೩). [ಬಾನ್$_3$ + ಒಡಲ್ + — ಅ$_7$]

**ಬಾನ್ಕೆ** (ನಾ). "ಕುಂಬಾರಿಕೆ" (ಕೃಕಣ್ಮ) : ಬಾನ್ಕೆ, ಆನ್ಕೆ, ಸೀನ್ಕೆ (ಕಬ್ಬಾ. ಸು. ೩೩೭ ಕೃಪೋ). [ಬಾನ್$_1$ + — ಕೆ]

**ಬಾನ್ನವಿರ** (ನಾ). ಆಕಾಶವೇ ಕೂದಲಾಗಿರುವವನು ; ವ್ಯೋಮಕೇಶ ; ಶಿವ : "ಎಣ್ಮೆಯ್ಯಂ . . . ಬಾನ್ನವಿರಂ, ದಪ್ಪಕವಗೆಯುಂ . . . ಅಬ್ಬೊಗು — ಈ ೩೩ ಈಶ್ವರಂಗೆ ಪೆಸರ್" (ಕಶಾ. ೦-೯೭) ; ಬೆಳ್ವುಸುವಳಿದೆಸೆದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱಿದಂ (೩೩೬. ೩-೯) ; ಬಾನ್ನವಿರನ ತಲೆಯೊಸಡರ್ದುಂ ಪಾರ್ವತಿಗೆ ಸವತಿ ಯಾಗಿಯುಂ . . . ಪಾತಾಲದತ್ತಣ್ಗೆ ಪೋದ ತ್ರಿಪಥಗೆ ಕಾಣಿಸಿಕೊಂಡಳ್ (ಬಾಪರಾ. ೩೦-೦೦). [ಬಾನ್$_3$ + ನವಿರ್ + — ಅ$_7$]

**ಬಾನ್ನಿಗಾರ್ಲಕುಪ್ಪೆ** (ನಾ). ಒಂದು ಸ್ಥಳದ ಹೆಸರು : ಅಸ್ತೆ ಬನ್ನು ಬಾನ್ನಿಗಾರ್ಲಕುಪ್ಪೆಯ ಪಾಟಿಒಬ್ಬೆಯ ಸನ್ನು ಪಾದರಿಯುಳ್ ಕೂಡಿತ್ತು (ಪ್ರ. ಆ. ೦೯೩೭.೦೦೬-೯೯ ; 720). [?]

**ಬಾನ್ನೀಱೆ** (ನಾ). ಸ್ವರ್ಗಲೋಕದ ಹೆಣ್ಣು ; ಅಪ್ಸರೆ : ಪಡದಿ ಬಾನ್ನೀಱೆಯೊರ್ವಳ್ ಚಂಚಲವೃತ್ತಿಯಿನತ್ತಮಿತ್ತಂ ನೋಟ್ಟ ಳ್ (ಅಜಿತಪು. ೦-೯). [ಬಾನ್$_3$ + ನೀಱೆ]

**ಬಾನ್ನುಡಿ** (ನಾ). = ಬಾನುಲಿ ೧ : "ಎಲ್ಲೆ ರಾಯ . . . ಇವಳಂ ಮನೆಗುಯ್ಯು ಮಗಳೆಂದೆ ಪಾಲಿಸು" ಎಂದು ಬಾನ್ನುಡಿಯೊಂದಾದುದು (ಅಪ್ಪು. ೩೦-೨೭). [ಬಾನ್$_3$ + ನುಡಿ$_2$]

**ಬಾನ್ಬಟ್ಟೆ, ಬಾಂಬಟ್ಟೆ** (ನಾ). ಆಕಾಶದ ದಾರಿ ; ಅಂತರಿಕ್ಷಮಾರ್ಗ : ಗಿರಿಶನೊಡವೆರಸಿ ಗಿರಿಜಾತೆ ಬಾನ್ಬಟ್ಟೆಯೊಳು ಬರುತಲಿ (ಕೌಂಡಿ. ೦೨-೩೦); ಬಾನ್‌ಬಟ್ಟೆಯರೆವ ಬರ್ದಿಲರಾ ಚಾಚರೆಯೋಳೆಗಳಂ ಕಳೆತಿರ್ದ ಶಿಖರ ಗಾತ್ರದ ಪರ್ದುಮುದಿಯನಂ ಕಂಡದಕೆ 'ಶಕುನಿಶಿಲೆ' ಪೆಸರಿಟ್ಟರನ್ವರ್ಥಮಂ (ಶ್ರೀರಾಪ. ೩೬೩-೩೮). **ಬಾಂಬಟ್ಟೆ** : ಇಂದಿರವಿಲ್ಲ ಮಾಂಗನೆಸಮಂ ಬಾಂಬಟ್ಟೆಯೊಳ್ ಬೀಱ ಕಣ್ಗೆತ್ತಂ ಸೋಲಮನೀವ ರತ್ನವಸರಂ ಚೆಲ್ಲಾದುದಾ ಬೀದಿಯೊಳ್ (ಜ್ಞಾಕಾ. ೩೬) ; ಆಸಜ ತೊಲಗಿವ ಜಲಪುಂಟಿ ಬಾಂಬಟ್ಟೆಯೊಳು (ಜಾಗಳು. ೦-೩೩). [ಬಾನ್$_3$ + ಬಟ್ಟೆ$_1$]

**ಬಾನ್ಬರೆಹ** (ನಾ). (ಆಲಂ) ವಿಧಿಲಿಖಿತ ; ದೈವಸಂಕಲ್ಪ : ಆ ಭಯಂಕರ ಗಗನಶರಣಮಂ ನೋಡಿ, ದೊರೆ ದಶರಥಂ ತನ್ನ ಕೊನೆಗಿದೆ ಬಾನ್‌ಬರೆಪ ಮೆಂದು ಬಗೆದು . . . ಒರೆದನಿಂತಟು (ಶ್ರೀರಾಪ. ೩೭-೩೩).

[ಬಾನ್$_3$ + ಬರೆಪ]

**ಬಾನ್ಬೆಳಕು** (ನಾ). ಆಕಾಶದ ಬೆಳಕು ; ಗಗನದ ಕಾಂತಿ : ಕಂಡರಾ ಬಿಡುಗಣ್ಣಾ ಬೆಳಕನ್, ಪೊಳದು ಪೊಳೆಯಿಸುತಿರ್ಪ ಬೀಳಿಯ ಬಾನ್‌ಬೆಳಕನ್ (ಹೊಂಗಳು. ೩೬-೦೨). [ಬಾನ್$_3$ + ಬೆಳಕು$_3$ (<ಬೆಳಗು$_1$)]

**ಬಾನ್ಮಣಿ, ಬಾಮ್ಮಣಿ** (ನಾ). ೧. ಸೂರ್ಯ : "ತಾವರೆಗೆಳೆಯಂ, ಪಗಲ ಬೊಜಂಗಂ . . . ಬಾನ್ಮಣಿ . . . ಗರಂಗಳಾಣ್ಮಂ — ಈ ೧೧ ಸೂರ್ಯನ ಪೆಸರ್" (ಕಶಾ. ೪೬-೨೮) ; "ಬೆಂಗದಿರಂ . . . ಬಾನ್ಮಣಿ ಪಿಂಗದೆ ತಾಂ ನೇಸಱೆಂದು ತಾವರೆಗೆಳೆಯಂ" (ಕಶಿಕಂ. ೪೦). **ಬಾಮ್ಮಣಿ** : ೨. (ಬೇಡಿದುದನ್ನು ಕೊಡಬಲ್ಲುದೆಂದು ಭಾವಿಸಲಾದ) ಸ್ವರ್ಗ ಲೋಕದ ಒಂದು ರತ್ನ ; ಚಿಂತಾಮಣಿ : ಮದನನ ಬಾಗದೇಳ್ಗೆಯನ ಭೀಕ್ಷಿಸಿ ಬಾಮ್ಮರವಂದು ನಾಡೆ ನಿಂದುದು ಬೆದರ್ದತ್ತು, ಬಾಂಬಸು ಕರಂ ಮಿಗೆ ಬಾಮ್ಮಣಿ ಕಲ್ಲಿದೆಂದು ತೋರ್ದುದು ಜಗದಲ್ಲಿ (ಶಂದ್ರಕ್ಕು. ೦೫-೦೯೩).

**ಬಾನ್ಮಣಿಗಣ್ಣ** = ಸೂರ್ಯನನ್ನು ಕಣ್ಣಾಗುಳ್ಳವನು ; ಶಿವ : ಬಾನ್ಮಣಿಗಣ್ಣನು . . . ನೆಲದಳಿದನಾಗಿಯಾಣ್ಮಂ ಸಿದ್ಧನಂದೀಶ ರಕ್ಷಿಸುಗೆ ಬಿಡದೆಮ್ಮನು (ರಾಶಿ. ೦-೯). [ಬಾನ್$_3$ + ಮಣಿ$_1$]

**ಬಾನ್ಮೀನ್** (ನಾ). (ಆಕಾಶದ) ನಕ್ಷತ್ರ ; ತಾರೆ : ತಾರೆ, ಓ ಬಾನ್ ಮಿನ್ನುಗಳ ಮೇಟೀ ! (ಅಂತಿಗೂ. ೩೦-೦೦೬೩). [ಬಾನ್$_3$ + ಮೀನ್$_1$]

**ಬಾನ್ಮೀನ** (ನಾ). = ಬಾನ್ಮೀನ್ : ನನ್ನಲ್ಲಿ ಏನೊ ಮಿಸುಗುತ್ತಲಿಹುದು ಬಾನ್‌ಮೀನ ಮಿಣುಕುವಂತೆ (ಕೃಷ. ೯-೮). [ಬಾನ್$_3$ + ಮೀನ]

**ಬಾನ್ವಕ್ಕಿ, ಬಾನಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಬಾನಾಡಿ : ನರ್ತಿಪ ನವಿಲು ಕೊಂಡಾಡುವ ಬಾನ್ವಕ್ಕಿ ಪತಿಯ ಬೇಡುವ ಗಿಳಿವಿಂಡು ದೈನ್ಯದಿಂ ಬಿನ್ನಹ ಮಾಡುತಿರ್ದುವು ಮನ್ಮಥಗೆ (ಕೊಂಹಕ. ೩-೩೯). **ಬಾನಕ್ಕಿ** : ಬಾನಕ್ಕಿಯು ಬೇರೆ ತರದಿಂದ ತನ್ನ ಗೂಡು ಕಟ್ಟಿಕೊಳ್ಳುತ್ತದೆ (ಮುಂಜಿಯ. ೩-೦೦೯); ಸುಗ್ಗಿಯೆಡೆಗೆಯುದ್ದಾ ಬಾನಕ್ಕಿಯಂತೆ (ಗೂರಿಪ್ಲಕಾ. ೪೯-೩೩೪). [ಬಾನ್$_3$ + ಪಕ್ಕಿ]

**ಬಾಪು** 'ಬಾಪ್ಪು' ನೋ.

**ಬಾಪುರಿ, ಬಾಪೂರಿ, ಬಾಪ್ಪುರಿ, ಬಾಹುಪುರಿ, ಬಾಹುರಿ** (ನಾ). ತೋಳಿ ನಲ್ಲಿ ಧರಿಸುವ ಒಂದು ಬಗೆಯ ಆಭರಣ ; ಕೇಯೂರ : "ಬಾಪುರಿ (ಬಾಹುರಿ)—ಬಾಹುಪೂರ(_ಯು) = ಕೇಯೂರ" (ಶಬ್ದಕೋ. ೩೦) ; ಕಂಕೆ ಲ್ಲಿಯ ಕರ್ಣಪೂರಮದಿಮ್ಮೂರ್ತ್ಯೆಯ ಬಾಪುರಿ ಮೆಱೆವ ಪೂವಿನ ಸಂತೆ ಕರಂ ಮನೋಹರಂ (ಕೃಕಂ. ೯-೮೩) ; ಅಳವಡಿಸಿ ತೋಳ ಬಾಪುರಿ ಬಂದಿ ಭುಜ ಕೀರ್ತಿಗಳನು (ಪಪೂ. ೦೦-೨೮). **ಬಾಪೂರಿ** : ಗೌರವ್ವ ಉಟ್ಟಿಹಳು ಭರಜರಿ ಹೊನ್ನ ಹಾರ ತೋಳಿಗೆ ಒಂಕಿ ಬಾಪೂರಿ (ಜಿಪ್ಪ. ೦೯-೩೦) ; ಹರಡೇ ಕಂಕಣ ಕಮಲಾದೇವೀ ಒಂಕೀ ಬಾಪೂರೀ ನೆಟ್ಟಿನೊಳಗೇ ಕುಪುಸಾಪೂ (ಹುಬ್ಬಿಕ. ೦೩೩). **ಬಾಪ್ಪುರಿ** : ಬಾಲೆಯ ಕಡಗ ಕಂಕಣ

ತೋರ ಬಾಪ್ಪುರಿ ಮೇಳ್ಕೈಸಿರೆ ತನುವಿನೊಳು (ಕಳಶಾಕಾ. ೭ ೬೭). **ಬಾಹುಪುರಿ** : ಪೊಳೆವ ರತ್ನದ ಬಾಹುಪುರಿ ಭುಜಕೀರ್ತಿ ತೋಳ್ಸರಳೆ . . . ಥಳಸಿ ಕಳೆವುವೆನು (ಗೀತಗೋ. ೬-೪) ; ವಜ್ರದ ಕಡಗಗಳಂ ರತ್ನಬಾಹುಪುರಿ ಉಂಗುರಗಳು . . . ತರಿಸಿ ಅವರನ್ನು ತಾನೇ ಅಲಂಕರಿಸಿ (ಮುದ್ರಾಮಂ. ೦೦೪). **ಬಾಹುರಿ** : ರನ್ನಬಾಹುರಿಯು ಕರಮೆಸೆವ ಜಗ್ಗುಣಿತಕಂಕಣ ಬೆರಳ ಮುದ್ರಿಕೆ ಚಿಳ್ಳುಗುರ ಸಿಂಗರವಿಡಾಯದೊಳ್ (ಅನಂತಾ. ೬ ೭-೧೪) ; ಬಿಂಕದೊಡ್ಯಾಣ ಬಾಹುರಿ ಪಿಲ್ಲಿ ಮಂಟಿಕ ಕುಂಕುಮಾಂಗದಿಯು ಥಳಿಸುತಿಹುದು (ಶಂಕರಕಾ. ೦೯೯). 'ಬಾಹುಪೂರಕ', 'ಬಾಹುಪೂರಯ' ಪರಾ.

[<ಸಂ. ಬಾಹುಪೂರ./ ತೆಲು. ಬಾಹುಪುರಿ]

**ಬಾಪುರೆ** 'ಬಾಪ್ಪುರೆ' ನೋ.

**ಬಾಪೂರಿ** 'ಬಾಪುರಿ' ನೋ.

**ಬಾಪ್ಪು**, ಬಾಪು, ಬಾಪ್ಪು, ಭಾಪು, ಭಾಪ್ಪು (ಅ). ಶೌರ್ಯ, ಸಾಹಸಗಳನ್ನು ಕುರಿತು ಮೆಚ್ಚುಗೆ, ಸಂತೋಷ, ಅಭಿನಂದನೆ ಮುಂತಾದುವುಗಳನ್ನು ಸೂಚಿಸುವಾಗ ಬಳಸುವ ಒಂದು ಶಬ್ದ : ಪೊಗಳಲ್ ಬಾಪ್ಪುಪ್ಪುಕೆಯ್ವಂ ನೃಪಗುಣಗಣಮಂ ರಟ್ಟಕಂದರ್ಪ್ಪದೇವಂ (ಎಕ. XIII, ೩೪೦:೬ ; ೪೧೮) ; ಅರೆ ಪೋಯುಜ ಬಾಪ್ಪೆಂದು ಪರಿಗಸ ಗುರು ಪೊಗಟ್ಟಂ (ಶಂತಕಾ. ೨-೭೦) ; ಸ್ಥಿರನೆ ಬಾಪ್ಪುಮುರಾದ್ರಿಯಿಂದಧಿಕ ಗಭೀರನೆ ಬಾಪ್ಪು (ಪ್ಯಅಂ. ೦೯೯೩, ೦೩-೪; 1170). **ಬಾಪು** : ಉತ್ತುಂಗಂ ಬಾಪೆಂದು ಧಾತ್ರಿ ಕೈಮುಗಿವಿನೆಗಂ ಉಪವಾಸದೊಳ್ಪೆಗೆಟ್ಟಂ ಪ್ರೋಷಧೋಪವಾಸನೆಂಬ ನಾಲ್ಕನೆಯ ಶ್ರಾವಕನಕ್ಕಂ (ಧರ್ಮಾಮೃ. ೩-೦೩೮) ; ಬಾಪು ಭಾಗ್ಯವೆ ನರಜನ್ಮದೊಳು ಬಂದು ಗುರುಕರುಣವಂ ಪೊತ್ತು ಹರಕಿಂಕರನಾಗಿ ಶರಣರ ಬರವಂ ಪಡೆದೆಂ (ಏಕರ. ೬-೯೮). **ಬಾಪ್ಪು** : ಆ ಶೇಷನಂ ತಾಂ ಪಡೆಯಂ ಬಾಲುಬರಂ ಬಾಜ್ಪಮುವು ಮಾಲೆವರಾಗ್ಗೆಲ್ಲಪಂ . . . ಎಕ್ಕಲಕ್ಷೋಣಿಪಾಳ (ಎಕ. VIII, ಸೊರಬ. ೦೩೬-೪೦ ; 1145). **ಭಾಪು** : ಒಬ್ಬರೊಬ್ಬರ ವಿಧಿಯನೊಮ್ಮಿಂಗೆ ಕೈಗೊಳ್ಳ ಉರ್ವಿಶ ಸೊಡ್ಡಳಾ ಭಾಪು ಭಾಪುರೆ (ಸರ್ವಜ್ಞ. ೦೬೩-೭೭೩) ; ಪೂತು ಸಾರಥಿ ಭಾಪು ಮಝುರೇ ಸೂತ ಧಿರುಧಿರು ಎನುತ ರಥಿಕವ್ರಾತವಿಗೆ ಬೋಳೈಸಿಕೊಂಡರು ಹಯದ ವಾಘೆಗಳ (ಕುಮಾ.ಭಾ. ೪-೪೩); ದಶಾಸ್ಯನ ಪದವಿಘಾತಿಗೆ ಪೂತು ಮಝು ಭಾಪೆಂದುದಮರಗಣ (ತೊರವೆ. ೦-೦೫-೩೦). **ಭಾಪ್ಪು** : ಅಂಬರದೊಳ್ ನಿಂದು ಗಜಪ್ರಿಯಾಂಬರಚರರ್ ಜೀಯಯ್ಯ ಭಾಪ್ಪೆಂದು ಜೀಂಕರಿಪನ್ನಂ ವನದಂತಿ ಪೋರ್ವುದು ನಿಷಾದ್ಯಾರೂಢದಿಂ ಪೋರ್ವೊಲ್ (ಜಾತಿಕು. ೩-೦೦೦); ಭಾಪ್ಪನೆ ಪಂಚಾಚರಣಂಗಳಿಂ . . . ದಯೆಗೆಯ್ಗೆ ಸೂರಿಗಳಶೇಷರ್ ನವ್ಯೋಳಾಚಾರವಂ (ಜಿನಮ. ೦-೩).

**ಬಬಾಪ್ಪು, ಭಾಪುಭಾಪು, ಭಾಪ್ಪುಭಾಪ್ಪು** (ದ್ವಿರುಕ್ತಿ): ವಂದಿಜನ ಕಲ್ಪಕುಜಾತನೆನಲ್ಕೆ ಸಾಲ್ದು ಲಕ್ಷ್ಮೀನಿಳಯಂ ಬಬಾಪ್ಪೆಸದನೀ ಕಲಿಯಿಂದರ ಬಾಚಿಭೂಮಿಪ (ಕಶಾಇ. IX–i, ೨೨೬-೨೯; 1132); ವಿಳಸದ್[ಉ] ಭೋಗಾವತಿಯನೆರೆ (ಸ)ಲೆ ಭೋಗಿಗಳಿಂ ಬಬಾಪ್ಪು ಮಾಳಗೆ ರಯ್ಯಂ (ಎಕ. XV. ೩೨೦-೩೩; 1172); ಅಭಿನವಭಂಗಿಯೊಳರಿಯಂ ವಿಭು ಮಡಿಪಿದೆ ಭಾಪುಭಾಪೆನುತ್ತುತ್ಸವದಿಂ ನಭದೊಳ್ ಮುನಿಪತಿ ನಾರದಂ . . . ಪರಿಗಿಂತೆಂದಂ (ಜಗಂ. ೩-೪೮); ಗಗನದಿ ಸುರರು ಕೊಂಡಾಡಿದರು ರಾವುತರರಸನಹುದೋ ಭಾಪುಭಾಪೆಂದುದು ಸಮಸ್ತಜನ (ನಳಕ. ೬-೬); ಸಂಗರರಂಗಭೂಮಿಯೊಳ್ಪರಿದುದು ಭಾಪ್ಪುಭಾಪ್ಪು ಮಝು ಭಾಪ್ಪೆನಲಂಚನ ಗಂಧವಾರಣಂ (ಎಕ. VIII, ಸಾಗರ. ೦೦೯-೨೭; 1079).

**ಬಾಪ್ಪುರಿ** 'ಬಾಪುರಿ' ನೋ.

**ಬಾಪ್ಪುರೆ, ಬಾಪುರೆ, ಭಪ್ಪುರೆ, ಭಾಪುರೆ** (ಅ). ಶೌರ್ಯ, ಸಾಹಸಗಳನ್ನು ಕುರಿತು ಹೊಗಳುವಾಗ ಬಳಸುವ ಒಂದು ಕೊಂಡಾಟದ ನುಡಿ : ಬಾಪ್ಪುರೆ ಸಿಂಗಂ ಭಬ್ಬ(ಪ್ಪ)ಸೇಬ್ಬ(ಪ್ಪ)ಂ ಸು(ಶು)ಚಿ ಸು(ಶು)ಭ ಚರಿತಂ ಧಾತ್ರಿಯೊಳು ಪುಣ್ಯಪುಂಜ[ಂ] (ಎಇ. XVIII. ೩೯-೦೩; ೪೪೪); ನಾನಾಜಿಪಮಯತತಿಗೆ . . . ತನ್ನಗ್ಗೆಗಯೆನೆ ಏದಿತ್ತಜ್ಞಾಸ್ತಿತಂ ಮಾಡಿದಂ ಬಾಪ್ಪುರೆ ಪವ್ಮನುದತೇಜಂ (ಕಶಾಇ. XI–i, ೦೦೬-೭ ; 1075); ಭಲಾ! ಭಲಾ! ಭಲಾ! ಬಾಪ್ಪುರೇ! (ತಂಜಪುಸ. ೪೩-೦೪). **ಬಾಪುರೆ** : ಬಾಪು[ಶಾಕಾಂ. ಪುೞ]ರೆ ಲೋಕೋತ್ತರಪರಾರ್ಥತಪ್ರತಮದಂ ಬಣ್ಣಿಪ್ಪನೇವಣ್ಣಿಪಂ (ಸಮಾಕ. ೪-೭೧); ಶಿವ ಶಿವ ಮಹಾದೇವ ಬಾ[ಶಾಕಾಂ. ಭಾ]ಪುರೇ ಸೌಂದರಾ (ಮಹಿಕ. ೧೭ ೦೯೩). **ಭಪ್ಪರೆ** : ಭಪ್ಪರೆ ! ಎರಡು ಪೆಟ್ಟಿನ ಕಣ್ಣಾಉಪಯೋಗಿಸಿದ್ದಕ್ಕೂ ಸಾರ್ಥಕ ಆಯ್ತು (ತಂಜಾಬ. ೩೨); ಭಪ್ಪರೇ ವಿದ್ಯಾಪ್ರವೀಣ! (ರಂಧವ. ೨೦೩). **ಭಾಪುರೆ** : ಭಾಪುರೇ ಕಾವ್ಯನಾಥಂ ಗಿರಿಜಾನಾಥಂ (ಗಿರಿಕ. ೧-೩೩); ಭಾಪುರೇ ಕೌರವಸಂಹಾರ್ಯಪವೆನುತ ಮಕುಟವ ತೂಗಿದನು ಪಾರ್ಥ (ಕುಮಾ.ಭಾ. ೦೪-೩೪); ಸಮ್ಯಕ್ಪಸಮ್ಯದಿ ಬಿಡದೆಸುವ ಚಾಪಗಾಜರ ಪೊಗಳ್ದರು ಭಾಪುರೆ ಮಝು ಭಾಪುರೆಯೆಂದು ಸಗ್ಗಿಗರು (ಶಂಕ್ರಸಾಂ. ೮-೪೧). 'ಬಾಪ್ಪು' ಪರಾ. [<ಬಾಪ್ಪು./ತೆಲು. ಬಾಪುರೆ, ಬಾಪುರೇ ]

**ಬಾಬಂದಿ** (ನಾ). ಒಂದು ಬಗೆಯ ತೆರಿಗೆ: ಬಾಳ್ಗೆಯೂರೊಡೆಯಂ ಪಶುಪತಿ ಭಟ್ಟಜ್ಗೆ ಬಾಬನ್ದಿಯ ಸಂಬನ್ಧದ ರಾಜದ್ರವ್ಯಮಾದುದೆಲ್ಲಮಂ ಬಿಟ್ಟರ್ (ಕಶಾಇ. IX–i. ೬೬-೦೦; ಸು. ೪೫೮). [ ? ]

**ಬಾಬತ್** 'ಬಾಬತ್ತು' ನೋ.

**ಬಾಬತು** 'ಬಾಬತ್ತು' ನೋ.

**ಬಾಬತ್ತು, ಬಾಬತ್, ಬಾಬತು** (ನಾ). ವಿಷಯ ; ಸಂಗತಿ : ಇನ್ನೊಂದಷ್ಟು ಖರ್ಚಿನ ಬಾಬತ್ತಿದೆ (ಸಂಸ್ಕಾರ. ೦೨೩) ; ನಲ್ಲಿ ದೀಪ ಇವುಗಳ ಬಾಬತ್ತೆಲ್ಲಾ ನಿಮಗೇ ಸೇರಿದ್ದು (ರಂಗಿರ. ೪೨). **ಬಾಬತ್** : ಮೊದಲು ಈ ಬಾಡಿಗೆ ಬಾಬತ್ ಫೈಸಲ್ ಮಾಡಿ (ರಂಗಿರ. ೩). **ಬಾಬತು** : ಫಸಲಿನ ಮಾರಾಟದಿಂದ ಸಿಗುತ್ತಿದ್ದ ದ್ರವ್ಯ ಇತರ ಬಾಬತುಗಳಿಗೆ ವ್ಯಯವಾಯಿತು (ಶಾಸಗಿ. ೩೨); ನಿನ್ನ ಮುಖದ ಗೆಲವು ನೋಡಿದರೆ ಅದೇನೋ ಭಾರೀ ಬಾಬತೇ ಇದ್ದಾಗಿದೆ (ನಡೆವಾ. I. ೩೩೩).

[←ಅರ. ಪಾರ. ಹಿಂ. ಬಾಬತ್ ; ಮರಾ. ಬಾಬತ್, ಬಾಬದ್]

**ಬಾಬಯ್ಯ** (ನಾ). ಅಂಗೈ ಅಥವಾ ಪಂಜದ ಆಕಾರದಲ್ಲಿರುವ ಒಂದು ಪ್ರತೀಕ ; P "ಮಧ್ಯ ಇರಾನ್ ಮತ್ತು ಮೆಸೊಪೊಟೇಮಿಯವನ್ನು ಆಳಿದ ಉಮಯ್ಯಾಡಿ ಸಂತತಿಯವರು ಅಲಿಸಂತತಿಗೆ ಭಕ್ತಿಯಿಂದ ನಡೆದುಕೊಂಡು ಕರ್ಬಲದ ದುರಂತಪ್ರಕರಣದ ನೆನಪಿಗಾಗಿ ಕೂಟ ಕೂಡುವುದಕ್ಕೆ ಪ್ರೋತ್ಸಾಹ ಕೊಟ್ಟರು . . . ಇದೇ ರೀತಿ ಇಂಡಿಯದಲ್ಲೂ ವರ್ಷಂಪ್ರತಿ ಕೂಟಗಳು ಏರ್ಪಟ್ಟವು. ಆದರೆ, ಶೋಕಮೂಲವಾದ ಈ ಕೂಟಗಳು ಬರಬರುತ್ತ, ಇಂಡಿಯದಲ್ಲಿ ಉತ್ಸವಸಂದರ್ಭವಾಗಿ ಪರಿಣಮಿಸಿಬಿಟ್ಟವೆ. ಆದರೆ, ಹುಲಿಯ ವೇಷ ಕರ್ಬಲದಲ್ಲಿ ಸತ್ತು ಕೆಡೆದ ವೀರರ ದೇಹವನ್ನು ಕಾದುವೆಂದು ಹೇಳುವ ಹುಲಿಗಳಿಗೂ, ಅಲಾವಹ್ ಅಥವಾ ಹೊಂಡ ಪಾಳಯದ ಹಿಂಭಾಗದಲ್ಲಿ ಹಾಕಿದ್ದ ಬೆಂಕಿಗೂ, ಪಂಜ ಅಥವಾ ಕೈ ಆಕಾರದ ಗುಡಿ (ಬಾವುಟ) ಮುಹಮ್ಮದ್, ಅಲಿ, ಫಾತಿಮ, ಹಸನ್ ಮತ್ತು ಹುಸೇನರಿಗೂ ಚಿಹ್ನೆಯಾಗಿರಬಹುದು" (ಇಸ್ಲಾಂಸಂ. ೩೬೯): ಮುಸ್ಲೀಮರು ಹಿಂದೂಗಳ ಮಧ್ಯ ಬೀದಿಯಲ್ಲಿ ಸಣ್ಣಕುಂಡವನ್ನು ತೋಡಿ, ಎದುರಿಗಿದ್ದ ಕೃಷ್ಣಾಚಾರಿಯ ಮನೆಯ ಜಗುಲಿಯ ಮೇಲೆ ಅಂಗೈ ಆಕಾರವಿರುವ ಬಾಬಯ್ಯನ ಬೆಳ್ಳಿಯ ವಿಗ್ರಹಗಳನ್ನು ಸ್ಥಾಪಿಸಿ, ಹೂವು, ಗಂಧ, ಚಂದನದಿಂದ ಪೂಜಿಸುತ್ತಿದ್ದರು (ಮುಗಮಾಂ. ೦); ಬಾಬಯ್ಯನ ಹಸ್ತಗಳನ್ನು ಕೆರೆಯಲ್ಲಿ ತೊಳೆದು ಅಲ್ಲಿ

ದಾಯಿ' ಪಾಡುತ್ತಾ ಅವನು ಬರುವಾಗ . . . ಹಿಂದುಗಳ ಕಣ್ಣಿನಲ್ಲೂ ನೀರು ಬಗುತ್ತಿತ್ತು (ಊರುಕೇ. ೩೦).

ಬಾಬಯ್ಯನ ಜಲ್ದಿ = ಮೊಹರಂ ಹಬ್ಬದ ಕೊನೆಯ ದಿನದ ಉತ್ಸವ : ಹಿಂದೆ ಹೆಮ್ಮಳ್ಳಿಯಲ್ಲಿ ಬಾಬಯ್ಯನ ಜಲ್ದಿ ಎಂದರೆ ಹಿಂದುಗಳಿಗೆ ಒಂದು ದೊಡ್ಡ ಹಬ್ಬ (ಬುಗಮೂಂ. ೧). 'ಜಲ್ದಿ' ವರಾ. ಬಾಬಯ್ಯನ ಹಬ್ಬ = ಬಾಬಯ್ಯನ ಜಲ್ದಿ : ಬಾಬಯ್ಯನ ಹಬ್ಬದ ಸಂದರ್ಭದಲ್ಲಿ ಹುಲಿವೇಷದ ಜೊತೆಗೇ ಬರುವ ಮತ್ತೊಂದು ಮನರಂಜನೆಕಲೆ ಕರಿಬೇವಿನ ಸೊಪ್ಪಿನ ವೇಷ (ಕಈಕ. ೦೬೯).

[ಬಾಬ್ಮ (ಫ್ರ ← ಪಾರ. ಹಿಂ. ಮರಾ. ಬಾಬಾ) + ಅಯ್ಯ₁]

ಬಾಬರ (ನಾ). ಒಂದು ಬಗೆಯ ಸಿಹಿಯ ಭಕ್ಷ್ಯ: ನೆಱೆ ಸಣ್ಣಗೋದುವೆಯ ಹಿಟ್ಟ ಸಿಹಿವಾಲೊಳಗೆ ನುಱುಗುವಂದದಿ ಕಲಸಿ ಹೆಚ್ಚೆಟ್ಟ ತೋರದೊಳು ಕೊಱೆದ ಕರಟಕ ತುಂಬಿ ಪೊಡೆಯುದೊಲು ತುಪ್ಪದೊಳಗಡಲು ಚಿಲುಮುರಿಯಾದುದು ಎಱೆಯಪ್ಪದಂತೆ ಬೇಯಿಸಲು ಬಾಬರವಾಯ್ತು ಬಱವೊಸರು ಕನೆಯನದಱೊಳು ಕಲಸಿ ಪುಂಡಯಾತಱೆಯ ಪಾವುಡವಾಯ್ತು ದೋಸೆಯುಂದದಿನಡಲು ತಾನೆ ಬಾಬ[ಪಾಠಾಂ. ಬಾ]ರ ಮಾದುದು (ಸೂಶಶಾ. ೦-೩೩).

[ ?./ಹಿಂ. ಬಾಬರ್ = ಒಂದು ಬಗೆಯ ಮಿಠಾಯಿ ]

ಬಾಬರಿ (ನಾ). ಒಂದು ಬಗೆಯ ಸಸ್ಯ : "ಕಗ್ಗೊಜಲೆ ಬಾಬರಿ ಕ್ಷುದ್ರ ಪತ್ರಂ" (ಮಂಗರಾ. ೩೬-೨೭). [ ?./ಪಾರ. ಬಾಬಾರೀ = ಕರಿಮೆಣಸು : ಮರಾ. ಬಾಬರೀ = ತೃಣಧಾನ್ಯ]

ಬಾಬಿಂಜಿ 'ಬಾಗುಜಿ' ನೋ.

ಬಾಬ್ತು₁ (ನಾ). ೧. ವಿಷಯ ; ಸಂಗತಿ : ವಿಳಾಸದಾರ ಸಿಗಲಿಲ್ಲ ಎನಿಸುವುದು ಅಷ್ಟೇನೂ ಖರ್ಚಿನ ಬಾಬಲ್ಲ (ಏಕಾಂಗಿ. ೨೦೦): ಅಲ್ಲಿಯವರೆಗೆ ಅದು ಕೇವಲ ಖರ್ಚಿನ ಬಾಬು (ಅಕೋಕ. ೭೪). ೨. ವಸ್ತು; ಪದಾರ್ಥ : ನಮ್ಮ ಶಾಯಿಯವರು ಇನ್ನೂ ಕೆಲವು "ಬಾಬು"ಗಳನ್ನು ಹೆಚ್ಚಾಗಿ ಬೇಡಿದರೂ ಅವುಗಳನ್ನು ಸುಬ್ಬರಾಯರು ಕೊಡಲೊಪ್ಪದ್ದರಿಂದ ಮಾಧವನ ಮದುವೆಯು ನಿಶ್ಚಯವೇ ಆಗಿಹೋಯಿತು (ಕೋಕಬು. ೨೨೬). ೩. ವಿಭಾಗ; ಬಾಬತ್ತು : ಈ ವರ್ಷ ಆ ಬಾಬುಗಳಿಂದಲೂ ಹಣ ಬಂದಿಲ್ಲ ಪ್ರಭೂ (೧೧೧೫. ೦೬೯): ಸೊಸೆಗೆ ಮರದ ಬಾಗಿಣ ಮೊದಲಾದ ಬಾಬುಗಳಿಂದ ಸಿಗುವ ಸಂಭಾವನೆಯ ಲೆಕ್ಕವನ್ನೂ ಆಚಾರ್ಯರು ಹಾಕಿದರು (ಹುಪಕ. ೭೪). ೪. ಸುಂಕ; ತೆರಿಗೆ : ಈ ಜನಗಳು . . . ಕಾಣಿಕೆ ಕಡ್ಡಾಯ ಮನೆದೆರಿಗೆ ಮುಂತಾದ ಬಾಬುಗಳನ್ನು ಕೊಡಕೆಲಸವಿಲ್ಲ (ಮೈಹಾಅಂ. I, ೦೦೬); ರೈತರನ್ನು ತಗ್ಗಿಸುವ ನಿಮಿತ್ತವಾಗಿಯೂ, ಅರಮನೆಗೆ ಕೂಡಿ ಬರುವಂತೆಯೂ, ಹೆಚ್ಚಾಗಿ ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು (ಮೈಹಾಅಂ. I, ೦೨೪). ೫. ಪರಿಪಾಠ; ಕ್ರಮ; ವಾಡಿಕೆ : ಜೀರಿಗೂ (ಹೂಗಾರ) ಒಕ್ಕಲಿಗನ ಕಣದಲ್ಲಿ ರಾಶಿಗೆ ಪತ್ರಿ ಹೂದಂಡೆಗಳನ್ನು ಕೊಡುವ ಬಾಬಿದೆ (ಕಕ್ಷಾ. ೦೬೪). ೬. ರೂಢಿಯಾಗಿ ಕೊಡುವ ಪದಾರ್ಥ; ಮಾಮೂಲು : ತುಂಬುವ ರಾಶಿಯಲ್ಲಿ ತಟ್ಟೆಯ ತುಂಬ ಜೋಳವನ್ನು ಒಕ್ಕಲಿಗನು ಹೂಗಾರನಿಗೆ 'ಬಾಬು' ಎಂದು ಕೊಡುವ ವಾಡಿಕೆಯು ಈಗಲೂ ಇರುವುದು (ಕಕ್ಷಾ. ೦೬೪); ಹನ್ನೆರಡು ಕಸಬಿನವರೂ ತಮ್ಮ ತಮ್ಮ ಬಾಬಿಗಾಗಿ ಹೊರಗಡೆ ಕಾದಿರುವರು (ಸುವಕಂ. ೩೦).

ಬಾಬುವಾರು = ಆಯಾ ವಿಷಯಗಳ ಪ್ರಕಾರ : ಆರು ಬಾಬುಗಳಲ್ಲಿ ಕ್ರಿಮಿನಲ್ ಕೋರ್ಟ್ ಕಾನೂನಿನ ಅರ್ಥವನ್ನು ಹೇಗೆ ತಿರುಗುಮುರುಗು ಮಾಡಿತ್ತೆಂಬುದನ್ನು . . . ಬಾಬುವಾರಾಗಿ ಅವನು ಸಮರ್ಥಿಸಿದನು (ಕೃಪರು. ೩೩೩). [←ಅರ. ಹಿಂ. ಮರಾ. ಬಾಬ್]

ಬಾಬ್ತು₂, ಬಾಬೂ (ನಾ). (ಸಭ್ಯಗೃಹಸ್ಥ, ಮಹಾಶಯ ಎಂದು ಮುಂತಾಗಿ ಒಬ್ಬ ವ್ಯಕ್ತಿಯನ್ನು ಸೂಚಿಸಲು) ಗೌರವಸೂಚಕವಾಗಿ ಬಳಸುವ ಪದ : ನಯನಜೋರದ ಜಮೀನುದಾರರು ಒಂದಾನೊಂದು ಕಾಲಕ್ಕೆ ಬಾಬು ಎಂಬುದಾಗಿ ವಿಶೇಷ ವಿಖ್ಯಾತರಾಗಿದ್ದರು (ಇಕೃಕ. ೦೨೯); ಬಂಗಾಲಿ ಬಾಬುಗಳು ಒಳಗಿದ್ದಾರೆ (ಕಾರಕ. ೦೩೩). ಬಾಬೂ : 'ಬಾಬೂಜಿ' ವರಾ. [←ಹಿಂ. ಮರಾ. ಬಂಗಾಲಿ. ಬಾಬೂ]

ಬಾಬುಗಾರ (ನಾ). ಆಯಾ ವಿಭಾಗದ ಕೆಲಸಕ್ಕೆ ಸಂಬಂಧಪಟ್ಟ ವ್ಯಕ್ತಿ : ಅವನಿಗೆ ಎಲ್ಲ ಆಯಗಾರರೂ, ಬಾಬುಗಾರರೂ ಬರಲೇ ಬೇಕು (ಕಕ್ಷಾ. ೬೬). [ ಬಾಬ್ತು₁ + — ಗಾರ (< — ಕಾಱ) ]

ಬಾಬುಜಿ, ಬಾಬೂಜಿ (ನಾ). = ಬಾಬ್ತು₂ : ಆ ರಮಣಿಯು ಎದ್ದು ನಿಂತು, "ನಮಸ್ಕಾರ ಬಾಬುಜಿ!" ಎಂದಳು (ಇಕೃಕ. ೦೬೩). ಬಾಬೂಜಿ: ಈ ಜನವೆಲ್ಲ ನಿಷ್ಕರುಣಿಗಳು ಬಾಬೂಜಿ (ಕಾರಕ. ೬೬).

[ಬಾಬ್ತು₂ + — ಜಿ]

ಬಾಬುದಾರ (ನಾ). = ಬಾಬುಗಾರ : ಪ್ರಿಯಜನರು, ಅತಿಥಿಗಳು, ಪೂಜ್ಯಮಂಡಲಿಯು, ಬಾಬುದಾರರು ಇವರೆಲ್ಲರನ್ನು ಅರಸನು ಸಂತೋಷಪಡಿಸಿದನು (ಕುಳಸೀ. ೯೯); ಬಗೆಬಗೆಯ ಬಾಬುದಾರರು ತಮ್ಮ ತಮ್ಮ ಕರ್ತವ್ಯಗಳಲ್ಲಿ ತಲ್ಲೀನರಾದರು (ಗಂಗಾಚಾ. ೯೯). [ಬಾಬ್ತು₁ + — ದಾರ್₁]

ಬಾಬೂ 'ಬಾಬ್ತು₂' ನೋ.

ಬಾಬೂಜಿ 'ಬಾಬುಜಿ' ನೋ.

ಬಾಬೂನ (ನಾ). ಒಂದು ಬಗೆಯ ಔಷಧೀಸಸ್ಯ : ಬಾದರನ ಬೋಯ್ತು ಬಾದ್ಯಾನ, ಬಾಬೂನ (ಕುಂಪಾಸ. ೦೬೬).

[←ಪಾರ. ಬಾಬೂನಹ್ ; ಹಿಂ. ಬಾಬೂನಾ ; ಮರಾ. ಬಾಬುನಾ]

ಬಾಬೆಹುಕುಮತ್ (ನಾ). ಧರ್ಮದರ್ಶಿಗಳ ಸಭೆ : ಸರ್ಕಾರದವರಿಂದ ನಿಯಮಿಸಲ್ಪಟ್ಟ ಧಾರ್ಮಿಕಕಲಹವಿಮರ್ಶನಸಂಘದವರ ರಿಪೋರ್ಟು ಬಾಬೆಹುಕುಮತ್ ಅಂದರೆ ಕೌನ್ಸಿಲ್‌ದವರಿಂದ ಅನುಮೋದಿಸಲ್ಪಟ್ಟು (ಗುರುರ. ೯೬). [ ← ಹಿಂ. ? ]

ಬಾಮ (ನಾ). ಸೊಗಸು ; ವಿಲಾಸ : ಅವರೊಳೊರ್ವಳ್ . . . ತನ್ನೊಂದು ಬೆಡಂಗಿನ ಬಾಮದಿಂ ಬಳ್ಳಿ ಬಾಗಿ ಕುಪ್ಪಸಮಂ ಸಡಿಲ್ಚಿದಳ್ (ರಾಜಶೇಖ. ೦೨೩-೦೪) ; ಆ ಸುಶೀಲೆ ಬಾಗಿ ಬಾಮದಿಂ ಬಲ್ಲಿದರ್ಗೆಂದಳ್ (ಅದ್ಭುತ. ೩೬-೩). [< ಸಂ. ಭಾವ. /ತಮಿ. ವಾಮ; ತುಳು. ಬಾಮ]

ಬಾಮ್ಮಣಿ 'ಬಾನ್ಮಣಿ' ನೋ.

ಬಾಮ್ಮರ (ನಾ). (ಬೇಡಿದುದನ್ನು ಕೊಡಬಲ್ಲುದೆಂದು ಭಾವಿಸಲಾದ) ಸ್ವರ್ಗಲೋಕದ ಒಂದು ಮರ ; ಕಲ್ಪವೃಕ್ಷ : ಏನೆಮಗಾ ಬಾಂಬಸುವಿಂದೇನೆಮಗಾ ಬಾಮ್ಮರಂಗಳಂ ಬರ್ಪುದು (ಆಕೃಕ. ೪೦-೦೩) ; ಸಂಕಿನ ಪಾಱಂಬಳೆಯ ಬಾಮ್ಮರದ ಪಟಯಿಗೆಯ ತಾವರೆಯಂಸದ ಬಜ್ಜರದ ಮೆಯ್ಪುರಿವತ್ತ ನುಣ್ಗೆಱೆಗಳಿಂದೆಸೆವ ಕೆಂದಳಿರ್ಗಳಮಂ . . . ಕೂರ್ತು ನೋಡುತ್ತಿರ್ದೊಡಂ (ಕಕಂ. ೩೬-೪). [ಬಾಂ₁ (< ಬಾನ್₁) + ಮರ₁]

ಬಾಯ್, ಬಾಯಿ₁ (ನಾ). ೧. ಮನುಷ್ಯರ ಹಾಗೂ ಪ್ರಾಣಿ, ಪಕ್ಷಿಗಳ ಮುಖದಲ್ಲಿ, ಆಹಾರ ಪಾನೀಯಾದಿಗಳನ್ನು ಸೇವಿಸುವುದಕ್ಕೂ ಶಬ್ದದ ಉದ್ಗಾರಗಳಿಗೂ ಸಹಾಯಕವಾಗಿರುವ ಒಂದು ಅವಯವ; ವಕ್ತ್ರ : ತಾಳತರುವಿತತಿಯೊಳ್ ಬೇತಾಳಂಗಳ್ ಮೊಱೆದು ತೆಱೆದು ಬಾಯ್ಗಳ್‌ನಾ ಪಾತಾಳಬಿಲಂಗಳವೋಲ್ . . . ಕಱೆಯೆ ಭಯಮಯ ನಾದಂ (ಕಶಾ. ೩-೦೯೩) ; ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮಾಡಿ ಕಳ್ಳ ಬೆಳ್ಳಿವಟ್ಟಲ್ ಬಾಯೊಳ್ ಚೆಚ್ಚಂತಿರೆ ಸತಿ ಶಶಿಯ ಕಚ್ಚ ನೆಲಕ್ಕಿಟ್ಟಂದ ರಾಹುವಂ ನೆಱೆ ಪೋಲ್ವಲ್ (ಕಾವ್ಯಸಾ. ೬೩೩ ಶೂದ್ರಕ) ; ಪಾತಾಳಗಣಂ ಗಳವೆತ್ತಂ ತಾಳುಗೆವರೆಗಂ ತೆಱೆದ ಬಾಯನನುಕರಿಸಿರ್ಕುಂ (ಅಂಕ್ರ. ೦೨-೬೮). ೨. ಪಾತ್ರೆ, ಚೀಲ ಮೊದಲಾದುವುಗಳ ತೆರೆಯುವ

ಭಾಗ : (ಕ). ೩. ಕೆರೆಯ ತೂಬು, ಬಚ್ಚಲು, ಮೋರಿ ಮೊದಲಾದುವುಗಳ ಹೊರತುದಿ.– ಕಂಡಿ : (ಕ). ೪. ಚರ್ಮವಾದ್ಯದ ಮೇಲುಭಾಗ : (ಕ). ೫. ಹುಣ್ಣು, ಗಾಯ ಮೊದಲಾದುವುಗಳ ಬಿರುಕು.–ತೂತು : ಮೇಲ್ವಾಯ್ದು ಪೊಯ್ದುತ್ತು ಕೈಯೇಱಿಡೆಯಿಂ ಬಾಯೇೞ ಬಾಯಿಂದೊಡನೆ ರುಧಿರಮುಂ ಕಂಡಮುಂ ಸೂಸುವನ್ನಂ ಸಿಡಿಲೆಂಬಾಶಂಕೆಯಿಂ ಪೆಣ್ಬುಲಿ ಪಡೆದು ಮೃಗೀರಕ್ಷಾಸೇವಾನುರಕ್ತಂ (ಶಂಭಾ. ೩-೫೩) ; ಏಱ ಬಾಯ್ಗಳ ತಳತ ಖಂಡದ ಸೂಱೆಗೊಂಡವು ಹಿಂದಣಂಬುಗಳು (ಕುಮ್ಯಾ.ದ್ರೋ. ೦೪-೩೬). ೬. ಪ್ರವೇಶದ್ವಾರ ; ಬಾಗಿಲು : ಹುತ್ತಕ್ಕೆ ಏಸು ಬಾಯಾದರೇನು ಸರ್ಪನಿರ್ಪುದು ಒಂದೇ ಸ್ಥಾನ (ಬಸವ. ೮೩೦) ; ಏಟುಬ್ಬಾಗುತ್ ಥೇಬಾಯ್ಗಿಂದುವಲ್ ವಾಱುಡದ ಓ ಮುನ್ನಗದಿರೇ ! (ಕಂತಿಗೂ. ೩-೯೩). ೭. ಚೂರಿ, ಕತ್ತಿ, ಕೊಡಲಿ ಮೊದಲಾದುವುಗಳ ಅಂಚು;–ತುದಿ : ಎನ್ನಯ ಸಂತತಿಗಾಗಿರ್ದ ನಿನ್ನನೆ . . . ಕರವಾಳ ಬಾಯ್ಗುಮುಂಬಿನ ಮೊನೆಗಂ ಮಹಾರಥರ ತಿಂತಿಣಿಗಂ ಪಿಡಿದೆಂತು ನೂಂಕುವೆಂ (ಪಂಪಭಾ. ೧೧-೯೦); ಬೆಲ್ಲದ ಮೋಹಕ್ಕೆ ಸುರಗಿಯ ಬಾಯ ಧಾರೆಯ ನೆಕ್ಕುವಂತಾನುಂ (ರಘೂಕಥ್ಯ. ೬-೦೭೩); ಜಮದಗ್ನಿರಾಮನು . . . ಪರಶುಗೊಡಲಿಯ ಬಾಯ ಮಸೆವುತ ಬಂದು ಭೂಪನ ದಾಯಿಗರ ಹರೆಗಡಿದು ಹಿಡಿದನು ಕಾರ್ತವೀರ್ಯಾರ್ಜುನನ (ಸಂಭಕ. ೨೬-೩೦). ೮. ನುಡಿ ; ಮಾತು ; ವಚನ : ಬಲ್ಲರ ಬಾಯಂ ಪೊಕ್ಕೋದಿ ಕಲ್ತ ಕವಿ ಸಕಲಮುಮುಂ (ಅರ್ಣವ. ೦-೩೪) ; ಬಾಯಲಿ ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ (ಕುಮ್ಯಾ.ದ್ರೋ. ೩-೩೩).

ಬಾಯಿ₁ : ೧. "ವದನಂ ಮುಖಂ . . . ಆಸ್ಯಂ ಪೋೞ್ ಬಾಯಿಯೆನೆ ಕಪೋಳಂ" (ಚುಂಗಣ. ೯೩-೦) ; ಒಱಲುವವರರ ಬಾಯಿ ಕೈಗಳ ಮೊಱೆಯ ತೆಗುಸಿ . . . ನಂದೀಶ್ವರನು ಹೊಕ್ಕನು ಹೊಯ್ದು ದಾನವರ (ಕುಮ್ಯಾ.ಶ. ೭-೨೯) ; ಅಡಸಿ ಗಿರಿಯನು ನುಂಗುವ ವೀರನ ಬಾಯಿ ಹಿಡಿಯದೆ ಪಣ್ಣಲಗಳನು (ಕಂಪಣ ೦೪-೬೩). ೨. ಅಷ್ಟೊಂದು ಹತ್ತಿ ತುಂಬಿದರೆ ದೀಬಿನ ಚೀಲದ ಬಾಯಿ ಹೊಲಿಯುವುದು ಹೇಗೆ ? (ಕೂಶ). 'ಬಾಯಿಕಟ್ಟು' ಪರಾ. ೪. ವುಷ್ಕರಂ . . . ಡೋಲು, ಮದ್ದಳೆ, ಢುಡಾ ಮುಂತಾದ ವಾದ್ಯಗಳ ಬಾಯಿ (ಸಿದ್ಧಾಂತ. ೯೦೭). ೬. ಅರಮನೆಗೆ ಆರು ಬಾಯಿ (ಗಾದೆ). ೭. ವರದಾನ ಹೃದಯದಲ್ಲಿ ಎರಡು ಬಾಯಿ ಅಲಗನ್ನು ಹಾಕಿ ತಿರುವಿದಂತಾಯಿತು (ಜಮಿಂತ. ೮). ೮. ಬಿನ್ನಹಕೆ ಬಾಯಿಲ್ಲವಯ್ಯ ಅನಂತ ಅಪರಾಧ ಎನ್ನಲ್ಲಿ ಇರಲಾಗಿ (ಕೃಕಂದ. ೨-೦೫೦ ಕಲ್ಲೆ) ; ಈ ವಿಷಯವನ್ನು ಸವತಿಯಾದ ಅವಳೊಡನೆ ನಾನೇ ಪ್ರಸ್ತಾಪಿಸಲು ನನಗೆ ಬಾಯಿ ಬಾರದು (ಕಜಾ. ೦೩) ; ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದು (ಗಾದೆ). ೯. (ಅಲಂ) ಮಾತನಾಡುವ ಚಾತುರ್ಯ ; ವಾಕ್ಚಾತುರ್ಯ : ಬಾಯಿಯುಳ್ಳವನಾದರೆ ಬರದಲ್ಲಿಯಾದರೂ ಬದುಕಿಯಾನು (ಗಾದೆ).

ಬಾಯಂ ಬಡಿ, ಬಾಯ ಬಡಿ = ಇನ್ನೊಬ್ಬರಿಗೆ ಮಾತನಾಡಲು ಅವಕಾಶ ಕೊಡದಂತೆ ಮಾತಾಡು; ವಾದಿಸು : ಮಾದೇವನ ಪೊದ್ದ ಬಟ್ಟೆಯಂ ತಿಳಿಯದವರ್ ವೇದಗಳೊಳಗುಳ್ಳುದೆಲ್ಲಂ ಮಾದೇವನ ಚರಿತ ಮೆಂದು ಬಾಯಂ ಬಡಿವರ್ (ಸಶಾಶ. ಅಪುಬಂಧ. I, ೩೭೪-೫೦) ; ಪೆಱರ ಬೈಗುಳಂ ಸೈರಿಸುವುದರಿಂದೊ ಪೆಱರೊಡನೆ ಬಾಯಂ ಬಡಿವುದರಿಂದೋ (ರಘೂಕಥ್ಯ. ೬-೫೦); ಬಲ್ಲಿದ ನೀನೆಂದು ಬಡವರ ಬಾಯ ಬಡಿಯದಿರಚ್ಚ ಜೀಕ (ಕೃಕಂದ. ೦-೦೩೦-೦). ಬಾಯಂ ಬಿಡು, ಬಾಯ ಬಿಡು = ೧. ಪ್ರಲಾಪಿಸು; ಅಸಹಾಯಕತೆಯಿಂದ ಹಲುಬು; ಹಳಹಳಿಸು : ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಿಂಗಳ್ಕಿ . . . ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ (ಕಂಶಕಾ. ೩-೯೮ ಕ); ಸೇದೆವಟ್ಟು ಬಾಯಂ ಬಿಟ್ಟು ಕಾ[ಪಟ್ಟಾದು] (ಗದಾಯು. ೯-೨೦ ವ); ಆ ಯುವತಿ ಮೃತವಾಗೆ ಮಱುದಿನ ತಾಯಿ ತಂದೆಯರಳುತ್ತೊಱಲುತಂ ಬಾಯ ಬಿಡುತಂ ಕೊಂಡು ಬಂದೆಯ್ತಂದು (ಬಸಪು. ೩೨-೯೨); ಬಾಯ ಬಿಟ್ಟುದು ಸೇನೆ ಕೌರವರಾಯನಾವೆಡೆ ದಳಕೆ ಬಲುಗೈನಾಯಕರು ಕೃಪ ಗುರುಸುತರು ಕೈಗೊಟ್ಟರೇ ಹಗೆಗೆ (ಕುಮ್ಯಾ.ಶ. ೦೨-೨೮). ೨. (ಅಭಿಲಾಷೆ ಪೂರೈಸುವುದನ್ನು) ನಿರೀಕ್ಷಿಸು : ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ (ರಘೂಕಥ್ಯ. ೦-೦೩೦); ಪಾರ್ಥಿವಶರಾಗ್ನಿಯಿಂ . . . ಎಷ್ಟುನುಳುಹೆಂದು ಫಣಿಕುಲಂ ಬಾಯ ಬಿಡಲು (ಕೃಜಿಭಾ. ೨೯-೩೭). ೩. ಬೆರಗಾಗು ; ಆಶ್ಚರ್ಯಪಡು; ದಿಗ್ಭ್ರಾಂತಿ ಹೊಂದು : ಚೆಕ್ಕಸಂಬಟ್ಟು ಬಾಯಿ ಬಿಟ್ಟರ್ ಭೀಷ್ಮರ್ (ಕುಭಾ. ೨೯೦ ಪ್ರತಿಣ); ಬಲ ಬಾಯ ಬಿಡೆ ಚಿಗಿದಿಂಬು ಕಡಿದುದು ಕರ್ಣನಂದನನ (ಕುಮ್ಯಾ.ಶ. ೨೦-೩೩). ೪. ಸ್ಪಷ್ಟವಾಗಿ ನುಡಿ ; ಪ್ರಕಟಪಡಿಸು: ಕಾಯುವಳಿದರು ಅಂತರಂಗವ ಬಾಯ ಬಿಡರು (ನಳಚ. ೩-೨೩). ೫. ಬಿರಿ ; ಸೀಳು ; ಬಿರುಕು ಬಿಡು : ಅರಸ ಕೇಳಾಶ್ಚರ್ಯವನು ಗಜಪುರದೊಳಗೆ ನೆಲ ಬಾಯ ಬಿಟ್ಟುದು (ಕುಮ್ಯಾ.ಸ. ೦೩-೯೦). ಬಾಯ ಕಟ್ಟು = ಮಾತಿಗೆ ಸಿಕ್ಕಿಸು ; ಮಾತಿಗೆ ಕಟ್ಟುಬೀಳಿಸು : ಸೂರುಳಿಸಿ ನೆಱೆ ಬಾಯ ಕಟ್ಟಿ ಹಣವಂ ಕೊಳಲು ಕಲಿವುದೆಂದೊಬ್ಬ ಕುಂಟಣಿ ಮಗಳ ಬೋಧಿಸಿದಳು (ಸೋಮಶ. ೨-೯೦). ಬಾಯ ಕಲ್ಲಿ = ದನಗಳಂ ಬೆಳೆಗಳನ್ನು ಮೇಯದಂತೆ ನಿರ್ಬಂಧಿಸುವುದಕ್ಕಾಗಿ ಅವುಗಳ ಬಾಯಿಗೆ ಕಟ್ಟುವ ಹೆಣಿಕೆಯ ಬಲೆ ; ಬಾಯಿಕುಕ್ಕೆ : ದಾಸಧರ್ಮ ಮಾಡಿ ಉಳಿದ ಹುಡುಗರ ಗಾದಿಯ ಕಾತಿಯಿಂದ ನಾಮಿಪ್ಪರೂ ಹಗ್ಗ, ಬಾಯ ಕಲ್ಲಿಗಳನ್ನು ಮಾಡಿದ್ದೆವು (ಸ್ವ.ಕಿತ. ೩೯೦). ಬಾಯ ತುತ್ತು = ಬಾಯಿಗೆ ಸೇರಬೇಕಾದ ಕಬಳ: ಆ ತಾಪಸಾಗ್ರ್ಯನ ಬಾಯ ತುತ್ತಿದನೀ ಪವನಸುತ ತಂದನಱಿಯದೆ (ಕುಮ್ಯಾ.ಆ. ೬೦೩. ೯-೨೨); ತುಡುಗುಣಿಗಳಿ ವದಿರು ನಭೋಗ್ರಕೆ ಸಿಡಿದು ಹವಿಗೊಂಬಮರನಿಕರದ ಹೆಡಕ ಬಾಗಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೂಶರಾ. ೦-೦೦-೮). ಬಾಯ ಬಡಕ, ಬಾಯ ಬಡಿಕ, ಬಾಯ ಬಡುಕ = ಬಡಾಯಿ ಕೊಚ್ಚಿಕೊಳ್ಳುವವನು: ಬಾಯ ಬಡಕ[ಪಾಠಾಂ. ಬಾಯಿಬಡಿಕ]ರು ಬಗುಳಿದೊಡೆ ಪರಿಮಾಯಿತಕೆ ಪಾಸಟಿಯೆ (ಕುಮ್ಯಾ.ಸ. ೯-೪೭); ಬಾಯ ಬಡಿಕರು ಬಂದ ಬಣ್ಣಿಗೆಯೆಸಗಿ ಬಗುಳುವರು (ಕೃಮ್ಯಾ.ಕಾ. ೦೯-೨೯); ಬಾಯ ಬಡುಕಸದೆಂದಿರದೆ ಸಮರಾಯತದಿ ನೋಡೆನ್ನ ಭುಜಬಲದಾಯತದ ರಣಕೌಶಲವ ನೀನು (ಕೂಣಗದು. ೦೪-೨೦). ಬಾಯ ಬಡಾಯಿ = ಜಂಬದ ಮಾತು : ಕೇರಿಯವರ ಮುಂದೆ ವೇಳೆ ಅವೇಳೆಯಲ್ಲಿ ಬರಿಯೆ ಬಾಯ ಬಡಾಯಿ ಹೊಡೆಯುತ್ತಿದ್ದರು (ಕುಂಕರಾ. ೭೦). ಬಾಯ ಬಿಯಗ, ಬಾಯ ಬೀಗ, ಬಾಯ ಬೀಯಗ = ೧. ಮಾತನಾಡದಂತೆ ಮಾಡಿದ ತಡೆ.— ಕಟ್ಟು : ದೇಪರ್ಕಳ ಬಾಯ ಬಿಯಗಮಂ ಕಳೆಯಿಸುವೆ (ಅಪಂಕ್ತಿ.೦೩-೩೩). ೨. (ಹರಕೆಯನ್ನು ಹೊತ್ತು) ಬಾಯಿಗೆ ಚುಚ್ಚಿ ಸಿಕೊಳ್ಳುವ ತಂತಿಯ ಸಾಧನ : ಬೇವಿನುಡಿಗೆ ಬಾಯ [ಪಾಠಾಂ. ಯಿ] ಬೀಗದಿಂ ನಿನ್ನಡಿದಾವರೆಗಳಿಗೆಱಗುವೆನು (ಕುಂದಶಾಂ. ೨೩-೬೬). ೩. ಮಾತಿನಿಂದ ಹೇಳಲಾಗದುದು; ವಚನಾತೀತವಾದುದು: ನಿಗಮದ ಬಾಯ ಬೀಯಗವೀ ಮುಕುಂದನನಱವರಾರು (ಕುಮ್ಯಾ.ಸ. ೯-೯೭); ವೇದ ಶ್ರುತಿಯ ಬಾಯ ಬೀಯಗ . . . ಸಜ್ಜನಸಮಾಧಿಗಳ ಭೇದಕ್ಕೆ ನಿಲುಕದ ಶ್ರೀಕೃಷ್ಣರಾಯನ ಪಾದವ ಕೂರ್ತು ಪೇಳ್ವೆತೆಯು (ಪೋಪಶ. ೯-೦). ಬಾಯ ಬೊಬ್ಬೆ = ಕೂಗಾಟ ; ಕೇಕೆ : ನಾಯಕರ ಕಡೆನುಡಿವ ಬೈಗುಳ ಬಾಯ ಬೊಬ್ಬೆಯ ಕೈಯ ಹೊಯ್ಲುಗಳ ದಾಯಿಗರಲೇ ಎನುತ ಮೂದಲಿಸಿ ದನು ತಮ್ಮೊಳಗೆ (ಕುಮ್ಯಾ.ಶ. ೨-೦೩) ; ಬಾಯ ಬೊಬ್ಬೆಯ ಬಿರುಬುಗಳಲಡಹಾಯ್ದೋಡುವ ನಿಖಿಳಮೃಗಸಮುದಾಯವನು ಸಂಹರಿಸುತಿರ್ದುದು ಶಬರಸಂದೋಹ (ಕೂಶರಾ. ೩-೩-೦೫). ಬಾಯಲಿ ಬೆರಳನಿಡು=

(ಶರಣಾಗತಿಯ ಸೂಚಕವಾಗಿ) ಬಾಯಲ್ಲಿ ಬೆರಳನ್ನಿಟ್ಟುಕೊಳ್ಳು : ಕೈಯ ಕೈದುವನಿಳುಹಿ ಬಾಯಲಿ ಬೆರಳನಿಟ್ಟುದು ವೈರಿವಾಯದಳ (ಕುವ್ಯಾದ್ರೌ. ೩-೦೯). **ಬಾಯಿ ಲೆಕ್ಕ** = ಮನಸ್ಸಿನಲ್ಲಿಯೇ ಲೆಕ್ಕ ಮಾಡಿ, ಬಾಯಲ್ಲಿ ಉತ್ತರವನ್ನು ಹೇಳಬಹುದಾದ ಲೆಕ್ಕ ; ಲೇಖನಿ, ಬಳಪ ಮುಂತಾದುವುಗಳ ಸಹಾಯವಿಲ್ಲದೆ ಮಾಡುವ ಲೆಕ್ಕ ; ಮೌಖಿಕವಾದ ಲೆಕ್ಕ : ಕೇಂಬ್ರಿಜ್ಜಿನಲ್ಲಿ ಬಾಯಿ ಲೆಕ್ಕ ಕೇಳಿದ ಹಾಗೆ ರ್‍ಯಾಂಗ್ಲರ್ ಮಹಾಜನರು ನನಗೆ ತಿಳಿಸಿಲ್ಲ (ಗಾಳಿಪ. ೦೬೯). **ಬಾಯಲ್ಲಿ ಅಕ್ಕೀಕಾಳು ಹಾಕಿಕೊಳ್ಳು**=ಆಗಬೇಕಾಗಿದ್ದ ಕೆಲಸವಾಗದೆ ದೀರ್ಘನಿರೀಕ್ಷೆಯಲ್ಲಿ ಇರು : ನಾವೆಲ್ಲರೂ ಮುಂದೇನಾಗುವದೋ ಎಂದು ಬಾಯಲ್ಲಿ ಅಕ್ಕೀಕಾಳು ಹಾಕಿಕೊಂಡು ಕುಳಿತೆವು (ಕುಣಬಿ. ೬೪). **ಬಾಯಲ್ಲಿ ನೀರೂರಿಸು**=ಆಸೆ ಹುಟ್ಟಿಸು ; ಅಪೇಕ್ಷೆಯನ್ನುಂಟುಮಾಡು : ಅಂಬಾಸಮುದ್ರದ ಶಾಸನ . . . ಬಾಯಲ್ಲಿ ನೀರೂರಿಸುವಂಥ ಭಕ್ಷ್ಯಭೋಜ್ಯಗಳನ್ನು ಹೆಸರಿಸುತ್ತದೆ (ಶಾಸನ.೩೬) **ಬಾಯಲ್ಲಿ ನೀರೂರು**=ಅಪೇಕ್ಷೆಯುಂಟಾಗು : ಆ ಕಾಲದಲ್ಲಿ ಕವಿಗಳು ಚಕ್ರವರ್ತಿಗಳ ಜೊತೆ ಕುಳಿತು ಊಟ ಮಾಡುತ್ತಿದ್ದರು. ಅದರ ನೆನಪಾದಾಗಲೆಲ್ಲಾ ಬಾಯಲ್ಲಿ ನೀರೂರುತ್ತದೆ (ಅಕ್ರಮ. ೯೩). **ಬಾಯಾರೆ** = ೧. ಬಾಯಿಗೆ ತೃಪ್ತಿಯಾಗುವಂತೆ; ಬಾಯಿ ತುಂಬ; ವಚೋಕ್ತಿಯಲಿ ಬಾಯಾರೆ ನುತಿಸಿನುತಿಸಿ (ಜಕ್ಕ. ೬-೨೬) ; ಶಾಸ್ತ್ರಿಗಳೂ ಹಿರಿಯರೂ ಆತನಿಗೆ ಬಾಯಾರೆ ಹುಟುಕಿಯಾಡಿದರು (ಗೋರ್‍ಕ್ಕಿ. VIII. ಜುಟ್ಟು). ೨. ಬಾಯಿಬಿಟ್ಟು; ಸ್ಪಷ್ಟವಾಗಿ ; ಖಚಿತವಾಗಿ : ನಾನು ಬಾಯಾರೆ ಕೇಳುವುದಕ್ಕಿಂತ, ಆತ ಸಂತೋಷದಿಂದ ತಾನಾಗಿ ಕೊಡುವುದನ್ನು ಕೊಂಡರೆ ಭೂಷಣ (ಶಾಕುಂತ. ೨೦೦). **ಬಾಯಿ ಕೆಡು**=(ರೋಗ ಮೊದಲಾದುವುಗಳ ಪರಿಣಾಮವಾಗಿ) ನಾಲಗೆಗೆ ರುಚಿ ತಿಳಿಯದಂತಾಗು : ಬಾಯಿ ಕಟ್ಟು ಹೋಗಿ ತಿನ್ನಲು ಏನೂ ಸೇರುವುದಿಲ್ಲ (ರೂಢಿ). **ಬಾಯಿಗೆ ಬೀಗ**=ಮಾತಿಗೆ ಹಾಕಿದ ತಡೆ.–ಪ್ರತಿಬಂಧ : ಬಾಯಿಗೆ ಬೀಗವಾಯಿತಲ್ಲ ಖಳರ (ವೈಕುಂಠ. ೨-೨೦); ಅವಳ ತಾಯಿ ಎಷ್ಟೋ ಸಲ ಗದ್ದರಿಸಿ ಅವಳ ಬಾಯಿಗೆ ಬೀಗ ಹಾಕುತ್ತಾಳೆ (ಇಕ್ಕೇ. ೬೨). **ಬಾಯಿಗೆ ಬೀಳು** = ೧. ತುತ್ತಾಗು ; ಬಲಿಯಾಗು : ನಾನು . . . ತೋಳಗಳ ಬಾಯಿಗೆ ಬೀಳುತ್ತೇನೆ (ಕಾವ್ಯಸ. ೭); ಬಾಧೆಪಡುವ ಬಾಳಿಗಿಂತ ಬಕನ ಬಾಯಿಗೆ ಬೀಳೋದುತ್ತಮ (ಗಾಂಧಿ). ೨. ಜನರ ನಿಂದೆಗೆ ಗುರಿಯಾಗು ; ಜನಾಪವಾದಕ್ಕೆ ಒಳಗಾಗು : ಇದ್ದುದನ್ನು ಇದ್ದಂತೆ ಹೇಳಲು ಹೋಗಿ ಅವನು ಎಲ್ಲರ ಬಾಯಿಗೆ ಬೀಳುತ್ತಾನೆ (ರೂಢಿ). **ಬಾಯಿಗೆ ಮಣ್ಣು ಬೀಳು**=ಏನೂ ಉಳಿಯದಿರು ; ಎಲ್ಲವೂ ಹಾಳಾಗು : ಇನ್ನು ನನ್ನ ಜೀವನದ ಬಾಯಿಗೆ ಮಣ್ಣು ಬಿದ್ದು ಹೋಗುವುದು (ಸ್ವಪ್ನಶೀ. ೧೦೦). **ಬಾಯಿಗೆ ಮಣ್ಣು ಹಾಕು** = ಪೂರ್ತಿಯಾಗಿ ಗತಿಗೆಡಿಸು ; ನಿರ್ಗತಿಕಸ್ಥಿತಿಗೆ ಇಳಿಸು : ಇದ್ದದ್ದನ್ನೆಲ್ಲಾ ಲೂಟಿ ಮಾಡಿ, ಅವನ ಬಾಯಿಗೆ ಮಣ್ಣುಹಾಕಿದ (ರೂಢಿ). **ಬಾಯಿಗೆ ಹಾಕು**=ಲಂಚ ಕೊಡು : ಆ ಗುಮಾಸ್ತನ ಬಾಯಿಗೆ ಹಾಕದೆ ಈ ಕೆಲಸ ಆಯಿತು (ರೂಢಿ). **ಬಾಯಿಯಿಲ್ಲದವ** = ಅಗತ್ಯ ಬಿದ್ದಾಗ ತನ್ನ ಅಭಿಪ್ರಾಯವನ್ನು ತಿಳಿಸಲಾಗದವನು : ಈ ಕಾಲದಲ್ಲಿ ಬಾಯಿಯಿಲ್ಲದವ ಬದುಕಲು ಸಾಧ್ಯವಿಲ್ಲ (ರೂಢಿ). **ಬಾಯಿ ಹಾಕು** = ೧. ತಿನ್ನುವುದಕ್ಕೆಂದು ಬಾಯಿಯಿಡು : ಗಬಕ್ಕಂತ ಸಿಂಹ ಕರುಳಿಗೆ ಬಾಯಿ ಹಾಕೋಹಾಗೆ ಒಂದೇ ಉಸಿರಿಗೆ ಆ ಚಿತ್ರ ಎಳಕೊಂಡು . . . ತುಕ್ಡ ತುಕ್ಡ ಮಾಡಿ ಹಾಕಿದ್ಲು (ಶಾಗಿವ. ೪೦) ; ಹಸು ಬಂದು ಸಸಿಗೆ ಬಾಯಿ ಹಾಕಿತು (ರೂಢಿ). ೨. ಬೇರೆಯವರ ಮಾತಿನಲ್ಲಿ ಮಧ್ಯೆ ಪ್ರವೇಶಿಸು ; ಬೇರೊಬ್ಬರ ಮಾತಿನಲ್ಲಿ ತಲೆ ಹಾಕು.—ತೂರಿಸು : ಬೇರೊಬ್ಬನು ಮಾತಾಡುವಾಗಲೂ ಮಾತಾಡುವ ಅಪೇಕ್ಷೆ ತೋರಿಸುವಾಗಲೂ ನಾವು ನಡುವೆ ಬಾಯಿ ಹಾಕಬಾರದು (ಮುಂಬಯಿ. ೪-೯೬); ಈವರೆಗೆ ತುಟಿ ತೆರೆಯದಿದ್ದ ವೀರಣ್ಣ ಈಗ ನಡುವೆ ಬಾಯಿ ಹಾಕಿದ (ಶಾಕುಂತ್ರ. ೯೩). **ಬಾಯ್ಗೆವರ್, ಬಾಯಿಗೆ ಬರು, ಬಾಯ್ಗೆ ಬರ್** = ೧. ಮಾತಿನಲ್ಲಿ ಹತೋಟಿಯಿಲ್ಲದಿರು : ಈ ಪಾರ್ವಂಗಕ್ಕಟ ಮೆಯ್ಯೊಳೊಂದು ಮರುಳುಂಟಕ್ಕುಂ ಎಂದು ಬಾಯ್ಗೆ ವಂದುದನೆ ನುಡಿಯೆ (ಹಂಪಕಾ. ೬-೬೫ ವ); ಮಹಾತ್ಮನ ವಚನಕ್ಕುತ್ತರಮಂ ಕುಡಲಾಱದೆ ಬಾಯ್ಗೆವಂದಂತೆ ನುಡಿದವಂ (ರಕ್ಷೋಮ್ನು. ೯-೦೬೨) ; ಹಿಂದೆ ಗೆಳಹುವನಿವನು ಬಾಯಿಗೆ ಬಂದ ಪರಿಯಲಿ (ಕುಮಾವ್ಯಾ. ೦-೧೦) ; ಕಾಗೆ ಬಾಯ್ಗೆ ಬಂದುದಂ ಗಟಪಿದೊಡೆ (ಹರಿಹರ. ೦೯೯-೪೦) ; ಬಾಯ್ಗೆ ಬಂದ ತೆಱದಿಂ ಪೆಱರೆಂದೊಡೆ ಕೇಳ್ದು (ಶಂಖರಮ. ೦೩-೬೨). ೨. ಕಂಠಪಾಠವಾಗಿರು ; ಉರುಹೊಡೆದಿರು : ಸಂತರ ಎಲ್ಲ ಗೀತೆಗಳೂ ಬಾಯಿಗೆ ಬರುತ್ತವೆ (ದೂರಕ. ೬೩). ೩. ದಕ್ಕು; ಲಭಿಸು : ಕೈಗೆ ಬಂದದ್ದು ಬಾಯಿಗೆ ಬರಲಿಲ್ಲ (ಗಾದೆ). **ಬಾಯ್ಮಾಡು, ಬಾಯಿ ಮಾಡು**=೧. ಪ್ರತಿಜ್ಞೆ ಮಾಡು ; ಶಪಥಮಾಡು : "ಬಾಯ್ಮಾಡು (ಬಾಯ್ + ಮಾಡು)—ಪ್ರತಿಜ್ಞಾಯಾಂ" (ಕಶಬ್ದಾ); ಅಶ್ವತ್ಥಾಮಂ . . . ಹಸ್ತಿನಪುರದೊಳ್ ಪಾಂಡವರಿರ್ದರೆ ಗೆತ್ತುಮಲ್ಲಿಗೆ ನಿಟ್ಟಾಲಿಯಾಗಿ ದಾಳಿಯನಿಟ್ಟು ಮುಟ್ಟಿವಂದು ಬಾಯ್ಮಾಡಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸರಂ ಕೊಂದು (ಹಂಪಭಾ. ೦೩-೦೦೬ ವ). ೨. ಕೂಗಾಡು ; ಗಲಾಟೆ ಮಾಡು : ಸುಮ್ಮನೆ ಬಾಯಿಮಾಡಿ ಏನಾಗಬೇಕಾಗಿದೆ ? (ಕಡುಕ. ೨೦೬). **ಬಾಯ್ವಾಯ್**= ಮುತ್ತು; ಚುಂಬನ: ಬಾಯ್ವಾಯೊಳಾವಟ್ಟಿಱೊಂದೊದವಿ ತಂಬುಲಮಂ ಕೊಳಲ್ ಮಱೆದು ನೀನಿರ್ದಂದಮೇಂ (ಅಂಕ. ೬-೨೩) ; ಹೃದಯ ಮನಿತ್ತಪನಾ ಸಮಯದೊಳೆನೆ ಬಾಯ್ವಾಯೊಳಿತ್ತ ತಂಬುಲಮನಲಂ ಪೊದವಲ್ಕೆ ಪರಸಿ ಬೀಟ್ಕೊಳಿಸಿದನೆಂತಾನುಂ ನಿಜಾತ್ಮಜನನಧಿರಾಜಂ (ಕಾರಂಉ. ೩೦೦). [ದೇ. || ತಮಿ. ಕೋತ. ಪರ್ಜಿ. ವಾಯ್; ಮಲ. ವಾಯ್, ವಾ ; ತುಳು. ಬಾಯಿ; ಕೊಡ. ಬಾಯ್; ತೆಲು. ವಾಯಿ; ಕುರುಖ್. ಬಾಈ ; ಬ್ರಾಹುಈ. ಬಾ]

**ಬಾಯಕ್ಕಿ** (ನಾ). ಬಾಯಿಗೆ ರುಚಿಯಾದ ಆಹಾರ; ಮೃಷ್ಟಾನ್ನ (?): ಬಾಯಕ್ಕಿಯ ಬೇಡುವವರೆಲ್ಲರೂ ಬಡವಾಯಿವಂತರ ನೋವು ಬಲ್ಲರೆ ಹಿ[ಶಾಕಾಂ. ಹ]ಸಿವ ಪಿಹಂಗ ಪಶುವಿನ ನೋವ ಬಲ್ಲುದೆ (ಹೂಕ್ರಸಂ. ೩೦೬-೦೯). [ಬಾಯ್ + ಅಕ್ಕಿ]

**ಬಾಯಸ, ಬಾಗಿನ, ಬಾಯಿನ** (ನಾ). ಮದುವೆ, ಹಬ್ಬ, ವ್ರತ ಮುಂತಾದ ಶುಭಪ್ರಸಂಗಗಳಲ್ಲಿ ಮುತ್ತೈದೆ, ಬ್ರಾಹ್ಮಣ ಮೊದಲಾದವರಿಗೆ ಕೊಡುವ (ಆಹಾರಪದಾರ್ಥ ಇತ್ಯಾದಿಗಳ) ಕಾಣಿಕೆ : ಉಪಾಯನ: ಬಲಿ ಬಾಯನಂಗಳುಂ ಮಂಗಲತೂರ್ಯ ಮುಮೆಸೆಯೆ . . . ಗೋಪಕಾಂತೆಯರ್ ನೆರೆದಾಗಳ್ (ಜಗಿಂ. ೬-೨೬); ಸುತನಂ . . . ವಿಜಯಾವತೀಮಹಾಸತಿ ಪಡೆದಳ್ ಸಮಂತಿರದೆ ಬರ್ಪುದು ಬಾಯನಕೆ (ಕುಸುಮಾ. ೬-೦೦೬); ಮುನಿಕಾಮಿನಿಯರ್ಗೆಂದು ಕಟ್ಟಿದ ಬಾಯನಂಗಳಂ ಮಱತೆನಲಾ ! (ರಾಜಶೇಖ. ೨೬-೨೩). **ಬಾಗಿನ** : ಹರನರಸಿ ಗೌರಿಗೆ ಸಮರ್ಪಿಸಿ ಹರುಷದಿಂ ಬಾಗಿನವನೀಯೆಂದುಱುವ ವೇದವ್ಯಾಸಮುನಿ ಗಾಂಧಾರಿಗಱುಹಿದನು (ಸಪುಹ. ೨೦-೩); ಬಾಗಿನಕ್ಕಾಗಿ ಚಕ್ಕುಲಿ ಉಂಡೆಗಳು ಮುಂತಾದ್ದು ತುಂಬಾ ಇತ್ತು (ಅಂಕಿಹಂ. II. ೭) ; ಅರಮನೆಯಿಂದ ಮೊರದ ಬಾಗಿನ ತೆಗೆಸಿಕೊಂಡು ಬಂದಿದ್ದೇನೆ (ಚಾರು. ೬೪). **ಬಾಯಿನ** : ಮಣಿಮಯಭಾಜನಂಗಳೊಳ್ ತ್ರಕ್ಕನೆ ತೀವಿದ ಪಂಚರತ್ನದ . . . ಕಪ್ಪುರದ ವಳಿಕಿನ ಬಾಯಿನಂಗಳಂ ದಿಱು (ಅಂಕ. ೯-೬೪ ವ); ರನ್ನದ ಬಾಯನಕ್ಕ ಪಲವಂದದ ಚಂದದ ಸೀರೆಗೆನ್ನುವರ್ತನ್ನವರೆನ್ನದಿತ್ತು (ಪುಷ್ಪ. ೪-೦೦೯) ; ಕೂಡಲಸಂಗಮದೇವರಿಗೆ ಚೀಲಾಳನೆಂಬ ಬಾಯ[ಶಾಕಾಂ. ೧]ನವನಿಕ್ಕಿದರೆ ಹೇಳಾ (ಬಸವ. ೦೩) ; ಶಾಕಿನಿಯರನು ಕರೆಯಿಸಿ ನಿನ್ನ ಕಯ್ಯಲಿ ಧುರದೊಳಗೆ ಬಾಯನವ ಕೊಡಿಸುವೆನು (ಕುವ್ಯಾಸ. – ೦೦೩.

೦೬-೯೬). 'ಉಪಾಯನ' ನೋ.

[< ಸಂ. ವಾಯನ. / ಪ್ರಾ. ವಾಯಣ. / ತುಳು. ಬಾಯನ, ವಾಯನ ; ತೆಲು. ವಾಯನ]

**ಬಾಯರು** 'ಬಾಯಾಱು₁' ನೋ.

**ಬಾಯಳಿ** 'ಬಾಯಟಿ' ನೋ.

**ಬಾಯಱಿಕೆ** 'ಬಾಯಾಱಿಕೆ' ನೋ.

**ಬಾಯಱು** 'ಬಾಯಾಱು₁' ನೋ.

**ಬಾಯಟಿ**, ಬಾಯಳಿ (ಕ್ರಿ). ೧. ಬಾಯಿಯಿಂಹರಿದು ಹೋಗು, ಸೀಳಿ ಹೋಗು : ಆಯದ ನೀರೊಳಗೆ ತನ್ನನಡಸಿದ ನೆಗಲಂ ಬಾಯಟಿ ವಿನಮಿಸುಯುಮರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ಟಂ (ಪಂಪಭಾ. ೨-೭೦). ೨. ಬಾಯಿ ಸೋಲು ; ಬಾಯಿ ಬಿದ್ದುಹೋಗು: ಸಂದೋಧನೆ ದೀರ್ಘೋಕ್ತಿಯೊಳಿಂಬಾಗಿರೆ ಬರ್ಬುಮದನೆ ಪಲವೆಡೆಗಳೊಳಿಂದುಂ ಬಲ್ಲವರಿಡದಿರ್ದಾದಂ ಬಾಯಟುದೊಳ್ಪವೋಲ್ ಕರಂ ವಿರಸತರಂ (ಶಬ್ದಮ. ೨-೨೩) ; ಭಾನುಮತಿ ಬಾಯುಟಿದು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು (ಪಂಪಭಾ. ೬-೩೩ ವ) ; ಹಾಹಾರವದಿಂ ಶೂಲಾಗ್ರದೊಳ್ ಬಾಯುಟಿದೊಳಱುವಿನಂ ಕೊಲ್ವುದಂ ಕನ್ನೆ ಕಂಡಳ್ (ಸುಕುಮಾ. ೬-೩೫). ೩. ಗೋಳಾಡು ; ದುಃಖಿಸು : ಇಂತುಟಟು ಸಂಸೃತಿಧರ್ಮಮೇಕೆ ಬಾಯುಟುವುದದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ (ಆದಿಪು. ೩-೫೩); ತವಳಿಕೆ . . . ಕಾದಂಬರಿ ಯನುಬಟಿದೆತ್ತ ಪೋಪೆಯೆಂದು ಬಾಯಟಿದು ಪಳವಿಸುತ್ತಮಿರ್ದಳ್ (ಕಾದಂಬ. ೫೭೪) ; ಗಾಂಗೇಯರ ಮಾತುಗೇಳದಟಿದಂ ಕುರುರಾಜ ನದರ್ಕೆ ದುಃಖದಿಂ ಬಾಯಟಿಯಲ್ಕೆವೇಡ (ಗದಾಯು. ೦೦-೦೨). ಬಾಯಳಿ : ೩. ಕಾವುದೆಂದೊಱಲುತ್ತುಂ ಬಾಯಳಿವ ಮದನನಂ ಕಾತ್ಯಾಯನಿ ದಯೆಯಿಂದೆ ನೋಡಿ ನಯದಿಂ ನುಡಿದಳ್ (ಗಿರಿಜಾ. ೯-೦೬) ; ಒರ್ಮಬಳಿ . . . ಮೊಱೆಯಿಟ್ಟೊಱಲಿ ಬಾಯಳಿಯುತ್ತಿರ್ದಳೆ (ಶಾಂತಿಪು. ೯-೫೨). ೪. ಕಿರಿಚು; ಬೊಬ್ಬೆ ಹಾಕು : ಸತ್ಕೃತಿಯನು ಒಳಗಱಿಯದೆ ಪೊಱಗಱಿಯದೆ ಕುಕವಿ ಗಳಳಿಕೆಯಿಬ್ಯುತಿಹರು ಬಾಯಳಿದು (ಸುರಾಣಾಂ. ೦-೭೭). ೫. ಬಾಯಿಬಿಡು ; ಬಾಯಿ ತೆರೆ : ಆ ಮೃಗನೇತ್ರಿಯು ರೂಪಳವ ಬಣ್ಣಿಸಲು ಬಾಯಳಿದು (ಸುದಾಸ. ೨೯-೦೦೬) ; ಪೋಯೆಂದು ಬಂದೆವ್ವ ಕೊರಳ ತಕ್ಕಿಸಿಕೊಂಡು ಬಾಯಳಿದುಟಿ ಹಲುಬುವರು (ಶಶಿ. ೬೩-೯೭) ; ಮದಮುಖನೆ ಬಾಯಳಿದು ಪೇಳಲೇಂ ನಮ್ಮಂಗವಂ ಪರಿಕಿಸು (ಕೋದಂಡ. ೨೩-೨೪). ೬. (ನಾಚಿಕೆ ಅಥವಾ ಸಂಕೋಚದಿಂದ) ಮಾತಾಡಲಾಗದಿರು ; ಮಾತು ತೋಚದಿರು : ತಲೆಗುತ್ತಿ ಕಡುನಾಣ್ಚಿ. . .ಭೂಪಾದಿಗಳ್ ಬಾಯಳಿವುತಿರಲು (ಕದ್ರ. ೬-೬೯). [ಬಾಯ್ + ಅಟಿ₁]

**ಬಾಯಾಚಾರ** (ನಾ). ಹೊರಗಿನ ನಡವಳಿಕೆ : ಬೂಟಾಟಿಕೆ ; ಕಪಟಾಚರಣೆ : ತಾವು ಕುಂಪನಿಗೆ ಬಾಯಾಚಾರ ದೋಸ್ತಾರರಾದ್ದರಿಂದ, ಇದಕ್ಕಿಂತ ಅಧಿಕವಾಗಿ ಬರದು ಕಳುಹತಕ್ಕದಿಲ್ಲವಷ್ಟೆ (ರಾಜೇಂದ್ರ. ೬೭); ತಾವು ನಾವು ದೋಸ್ತಾರರಾದ್ದರಿಂದಾ ಬಾಯಾಚಾರಕ್ಕೆ ಸಲುವಾಗಿ ಬಹಳ ಫಲವಾಗಿ ಇರುವಂಥಾದ್ದು ವರ್ತನೆ ಆಗಿ ಇರಬೇಕು (ರಾಜೇಂದ್ರ. ೦೬೦).

[< ಸಂ. ಬಾಹ್ಯಾಚಾರ]

**ಬಾಯಾಡಿಸು** (ಕ್ರಿ). ಆಸ್ವಾದಿಸು ; ರುಚಿ ನೋಡು : ಸತ್ಯ ಲೋಕದಲಿ ಶ್ರಿದಶರಾಜಿ ಬಾಯಾಡಿಸಿದರಗ್ಗದ ಧ್ರುವಾದಿಗಳನು (ಜನ್ನಾ.ಸ. ೬-೩೯); ಬಾಯಾಡಿಸುತ ಬಣ್ಣಿಸುತ ಕೈಗಳ ನೀಡಿ ಬಹುವಿಧಭಕ್ಷ್ಯ ಭೋಜ್ಯಂಗಳನು ಜತರದಲಿ ಕೂಡಿದನು ಗೋಪಬಗೆ ಹರುಷವ ಮಾಡಿದನು (ಹರಿಕಥಾ. ೦೦-೨೨-೨೬); ಚಿರೋಟಿಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು. ಇಂಥ ಸಂದರ್ಭದಲ್ಲಿ ಇವನ್ನು ಬಾಯಾಡಿಸುವುದರಿಂದ ಬಹಳ ಪ್ರಯೋಜನವಿದ್ದಿತು (ಕರ್ಣಾಟ. ೦೨೩). [ಬಾಯಾಡು + — ಇಸು₁]

**ಬಾಯಾಡು** (ಕ್ರಿ). ಆಹಾರವನ್ನು ಅಗಿ, — ಜಗಿ : ಬಾಯಾಡಿದರ ಕ್ರಿಯಾಡೀತು (ಗಾದೆ). 'ಬಾಯಾಡಿಸು' ಪರಾ. [ಬಾಯ್ + ಆಡು₁]

**ಬಾಯಾನ್** (ಕ್ರಿ). ೧. ಬಾಯಿ ನೀಡು ; ಬಾಯೊಡ್ಡು : ಪಕ್ಕಿ ಸೋವ ವರಸ್ತ್ರೀಯರ . . . ತಂಬುಲಕೆ ಬಾಯಾಂಪುದದಿಂ ಬಂದು ಪಾಯ್ವುವು ಕೀರಾಳಿಗಳಲ್ಲಿ ಪಾವುರವಧೂಬಿಂಬಾಧರಕ್ಕಾವಗಂ (ಧರ್ಮಾಮ. ೨-೨೯). ೨. ಆಸೆ ಪಡು ; ಹಾತೊರೆ : ನಮ್ಮ ಉದಾರಾತಿಥ್ಯಕ್ಕೆ ಬಾಯಾಂತು ಹೌತರುತ್ತಿರುವ ಆ ತಿರಿಕೂಳ ತೆಲುಂಗರೊಡೆಯನಿಗೆ ಉತ್ತರವೇನು (ಮುಂತ್ರಕ. ೦೯-೦೯). [ಬಾಯ್ + ಆನ್₁]

**ಬಾಯಾರ್**, ಬಾಯಾರು₁ (ಕ್ರಿ). ೧. ಕೂಗಾಡು ; ಬೊಬ್ಬಾಟ ಮಾಡು ; ಆರ್ಭಟಿಸು : ವರರುಚಿಭಟ್ಟನಂ ಪಲರ್ ದುಷ್ಟರೊಂದಾಗಿ ಪೊಲೆಯನೆಂದು ಗೆಲೆ ಬಾಯಾರ್ವರಂದೊಡುಬಿದರಳವಾವುದು (ಪಂಪಶಂ. ೦೪೬-೦೬); ಧರ್ಮಬುದ್ಧಿ ತತ್ಕ್ಷಾರ್ಯೆಗಿಡಲ್ಬುಡಿದು ನೀಂ ಗೆಲೆ ಬಾಯಾರ್ದು ಪೋಗಲ್ವಡೆಯೆ ವಿಚಾರಂಗೆಯ್ಯಂ (ಪಂಪಶಂ. ೦೬೦-೯). ೨. ಆಕ್ರಂದಿಸು ; ಪ್ರಲಾಪಿಸು ; ರೋದಿಸು : ಗರಳಭಯದಿಂದೆ ಬಾಯಾರ್ವರಂ ಚೀರ್ವರಂ . . . ಚಂದ್ರ ಚೂಡಂ ಕಂಡನು (ಕಬ್ಬಿ. ೨೨-೦೬); ನಡೆಗೊಳಲ್ ಕಂಡು ಬಾಯಾರ್ವಳಂ ಚೀರ್ವಳಂ . . . ಭರತಾವರಜನಗಲ್ದು ಅಡಿಗಡಿಗೆ ತಿರುತಿರುಗಿ ನೋಡುವಂ ಬಾಡುವಂ (ಕೃಷ್ಣ. ೦೯-೬೦). ಬಾಯಾರು₁ : ೩. ಬಾಯಿಬಡಿ ; ಅಲ್ಲಗಳೆ : ಬೆಟ್ಟಕ್ಕೆ ಬೇಗೆಯಿಕ್ಕಿದನಿವಂ ಸಾಲವುಂ ಕೊಟ್ಟುದಿಲ್ಲೆಂದು ಬಾಯಾರಿದನಿವಂ . . . ಬಟ್ಟೆಯಂ ಬಡಿದು ಬಾಳಿದನಿವಂ (ಕಬ್ಬಿ. ೫೬-೩೬).

[ಬಾಯ್ + ಆರ್₁]

**ಬಾಯಾರಿಕೆ** 'ಬಾಯಾಱಿಕೆ' ನೋ.

**ಬಾಯಾರು₁** 'ಬಾಯಾರ್' ನೋ.

**ಬಾಯಾರು₂** 'ಬಾಯಾಱು₁' ನೋ.

**ಬಾಯಾಲ್** (ಕ್ರಿ). ಬಾಯಿಗೆ ಬಂದದ್ದು ಆಡು ; ಮನಸ್ವಿಯಾಗಿ ಮಾತನಾಡು : ಕಂಡುದ ನುಡಿದನು ಸ್ತುತಿಯನ್ನದಿರು ಲೇಸ ಕಂಡು ಬಾಯಾಲ್ವನು ಕವಿಯೇ (ಧರ್ಮ. ೨-೬೨). [ಬಾಯ್ + ಆಲ್]

**ಬಾಯಾಳಿ** (ನಾ). ಅತಿಯಾಗಿ ಮಾತನಾಡುವ ವ್ಯಕ್ತಿ: 'ಬಾಯಾಳಿತನ' ಪರಾ. [ದೇ.॥ ತಮಿ. ವಾಯಾಟಿ ; ತುಳು. ಬಾಯಾಳಿ, ಬಾಯಡಿ]

**ಬಾಯಾಳಿತನ** (ನಾ). ಅತಿಯಾಗಿ ಮಾತಾಡುವ ಸ್ವಭಾವ : ಅವಳು ಅತಿಕೋಪಸ್ವಭಾವವುಳ್ಳವಳೂ ಬಾಯಾಳಿತನವುಳ್ಳವಳೂ ಆದುದರಿಂದ . . . ಅವಳನ್ನು ಗಯ್ಯಾಳಿಗೌರಿಯೆಂದು ಕರೆಯುತ್ತಿದ್ದರು (ಕಥೆ. ೯೯).

[ ಬಾಯಾಳಿ + — ತನ ]

**ಬಾಯಾಱಿಕೆ**, ಬಾಯಱಿಕೆ, ಬಾಯಾರಿಕೆ (ನಾ). ೧. ನೀರಿಗಾಗಿ ಬಾಯಿ ಒಣಗುವುದು, — ಗಂಟಲು ಒಣಗುವುದು : ತೃಷೆ ; ನೀರಡಿಕೆ : ದೇಶಾಂತ್ರಿಯಾದವ ತಿಗುಣೆ ಚಿಕ್ಕುಟ ಪಸಿವು ಬಾಯಾಱಿಕೆ ಗಂಜಿದರಂತಹುದು (ಶೀಲಶ. ಹ. ೩೬೬-೦೪) ; ಮಂಗಮಗಿಪ ಪರಿಮಳವನಿಕ್ಕಲದು ನವ್ಯೋದಕಂ ಬಾಯಾಱಿಕೆ[ಶಾಂತಿ. ಯಱಿಕೆ, ಯಱಿತೆ]ಯಂ ಕೆಡಿಪುದು (ಸೂಕ್ತಿಸ. ೨-೯೩). **ಬಾಯಱಿಕೆ** : ೧. ಬಾಯ್ದೆಱೆಯನೊಲ್ಲದ ಕದರ್ಪಂಕಿ ಕದರ್ಪಂಕಿ ಓರ್ದು ಓರ್ದೊಡನಡಸಿರ್ಪ ಬಾಯಱಿಕೆಯಂ ತವಿಪೆಂ ಸವಿ ಪಂಪುಗೊಂಬಿನಂ (ಕಥಾ. ೬-೨೦೨). **ಬಾಯಾರಿಕೆ** : ೧. ತೃಷ್ಣೆಯೆಂದೊಡಂ ದಾಹಮೆಂದೊಡಂ ಬಾಯಾರಿಕೆಯೆಂದೊಡಂ ನೀರಡಿಕೆಯೆಂದರಿವುದು (ಸಸಿಪ. ೨೬೨); ಬಹಳ ದೂರ ನಡೆದು ಬಂದಿದ್ದೀಯೆ. ನಿನಗೆ ಬಾಯಾರಿಕೆಯಾಗಿರಬೇಕು (ಶೀಲಾ. ೦೦) ; ಬಾಯಾರಿಕೆ ಬಂದಾಗ ಬಾವಿ ತೋಡಿದ ಹಾಗೆ (ಗಾದೆ). ೨. ನೀರಡಿಕೆಯನ್ನು ಓಂಗಿಸುವ (ಎಳನೀರು, ಪಾನಕ ಮೊದಲಾದ) ಪಾನೀಯ ಅಥವಾ ಬೆಲ್ಲದೊಡನೆ ಕೊಡುವ

ನೀರು ಇತ್ಯಾದಿ : ನಾರಾಯಣನು . . . ಒಂದು ಲೋಟ ಬಾಯಾರಿಕೆ ಯನ್ನು ತಾನೇ ತಂದು ಕೊಟ್ಟನು (ಪುಂಗಾಪು. ೬೪) ; ಬಂದವರಿಗೆ ಬಾಯಾರಿಕೆ ಕೊಡುವುದು ಬೇಡವೆ ? (ದೇವಹೂ. ೧೬೦) ; ಆತ ಒಂದಷ್ಟು ಹೊತ್ತು ಅಲ್ಲೇ ವಿರಮಿಸಿದ. ಬಾಯಾರಿಕೆ ಕೇಳಿದ (ಮೂಕಜ್ಜಿ. ೩೩). [ಬಾಯಾರು$_1$ + – ಇಕೆ./ತುಳು. ಬಾಯಾರಿಗೆ]

**ಬಾಯಾರಿಸು** (ಕ್ರಿ). ಬಯಕೆಯನ್ನು ಹುಟ್ಟಿಸು : ಆತ್ಮೇಶ್ವರನ ದಿಟ್ಟಿಗೆ ರೂಹುಗಾಣಿಸಿ ಬಾಯಾರಿಸುತ್ತ ಬಾಣತಿರೂಹಿಂದೆ ಬಂದಳು ಪರಿಸೀಲವೇಗ ತೊಟ್ಟಿಲ ಕಟ್ಟುವೆಡೆಗೆ (ನೋಹತ. ೦೬-೪೬). [ಬಾಯಾರು$_1$ + – ಇಸು$_3$]

**ಬಾಯಾರು$_1$**, ಬಾಯಾರು, ಬಾಯ್ಯಾರು$_2$ (ಕ್ರಿ). ೧. ಬಾಯಿ ಒಣಗು : ನೀರಡಸು ; ದಾಹವುಂಟಾಗು : ಅರಗಿನ ಪುತ್ಥಳಿಯನುರಿ ಕೊಂಡಡೆ ಉದಕ ಬಾಯಾರಿ ಬಳಲುತ್ತಿದೆ ಆಗೆಯುಂ ಭೋ ಭಾವಿಯನಗೆಯುಂ ಭೋ (ಅವತಂ. ೬-೩೦); ಬಾಯಾರಿತು ಎಂದು ಬಾವಿನೀರಿಗೆ ಪೋದೆ ಬಾವಿಲಿ ಜಲ ಬತ್ತಿ ಬಿಡಿದಾಯ್ತು (ಶ್ರೀರಂರ. ೪-೬೩-೦). ೨. ಹಂಬಲಿಸು ; ಹಾರೈಸು : ತೀವ್ರವಾಗಿ ಅಪೇಕ್ಷಿಸು : ಚಸ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ನೋಡಿ ಬಾಯಾರುತ್ತಿಹೆನು (ಮಹಾದೇ. ಬ. ೧೪೧-೩೨೦) ; ನಾಡು ಜನ್ಮವ ತಿರುತಿರುಗಿ ಬಾಯಾರಿ ಕಾವಿಸಲೀತನಂದದ ನೀಜಿದುಂಟೇ ನಳಿನಭವ ನಿರ್ಮಿಸಿದ ಸೃಷ್ಟಿಯಲಿ (ಕೂರರಾ. ೩-೩-೩೬). ೩. ಗಾಬರಿಯಾಗು ; ದಿಗಿಲುಗೊಳ್ಳು : ಬಾಯಾರಿದಿರಿ ಕಳ್ಳೇಜುಕಾಜಿನ ಕರುಳ ಹರಹುವೆನು (ಕುಮಾರವ್ಯಾ. ೦೬-೩೦); ಬಾಯಾರಿದುದು ಜನಕೆ ಲಯ ದೋಜಿದುದು ಜಗಕೆ (ಕರಾ. ೩೦-೪). ೪. ಆಯಾಸಗೊಳ್ಳು; ಬಳಲು : ಮಿಥ್ಯಾದೃಷ್ಟಿಗಳ್ . . . ಕುಚರ್ಚೆಗಳಿಂ ಬಾಯಾರ್ಪೊಡಂ ಸಜ್ಞಾನಮಿಲ್ಲದೆ ದರ್ಶನಮಂ ಪೊರ್ದದೆ ಮೋಕ್ಷಮಂ ನೈದಲ್ಪಾರದು (ಧರ್ಮಾಮೃ. ೭-೩೨) ; ದೂರದಲ್ಲಿರ್ದನೆಂದು ಆಸು ಬಾಯಾರಿ ಬಳಲು ತ್ರಿರ್ದನಯ್ಯ (ಮಹಾದೇ. ೪. ೦೦೦-೨೩೬); ಬಾಯಾರಿ ಚೀಜಿ ಚಿತ್ರಾಂಗದೆ ಹಲುಬಲು (ಜೈಮಿಭಾ. ೨೪-೦). **ಬಾಯಾರು** : ೧. ಒಣಗಿಹೋಗು : ಪರುಣಶರ ಬಾಯಾರಿತು ನೀರಡಿಸಿದುದು (ಕುಮಾರವ್ಯಾ: ೦೯-೯೮).

**ಬಾಯಾರು$_2$** : ೧. ಬಳಲಿ ಬಾಡಿ ಬಾಯಾರಿ ಹಸಿದ ತ್ರೋಳನು ಹರಿವ ಹಳ್ಳವನೆ ಸಾರಿ ತೃಷೆಯ ಕಳೆಯಲು ನೀರಿಗಿಳಿಯೆ (ಕುಪ್ಪ. ೦೨-೧) ; ಪ್ರೇಮಲತೆ ಬಾಯಾರಿ ಕಾತರಿಸಿತಾವುದನೊ ತಾನರಿಯದುದ ಬಯಸಿ (ಚಿತ್ರಾಂಗ. ೭-೦೭೩). ೨. ಯುವತಿ ಪುರುಷನ ಬಯಸಿ ಬಾಯಾರು ವದನರಿದುಯುವಳ ಸತ್ಕಾರ್ಯ ತನ್ನಿಂದ ತಡೆದಿದೆಯೆನುತ ರವಿಯಸ್ತಮಯಮಾಗಲು (ನವಮೋ. ೨೬-೬). ೩. ನುಡಿ ನನ್ನಿಯೊಂದೆನಲ್ ಬಡವ ಬಾಯಾರಿದಂ (ಕಾಂಚೀ. ೧೬೦-೩೩೬). ೪. ವೀರವಿಕ್ರಮವಿಜಯರೆಂದಾಗೆ ದೈನ್ಯದಲಪಾರಚಿಂತೆಯೊಳು ಬಾಯಾರುವರೆ ದೇವ ನೀಂ (ವಂಕಾರಾ. ೪-೦-೨೩). [ ಬಾಯ್ + ಆರು$_1$ ]

**ಬಾಯಾರು$_3$**, ಬಾಯರು (ನಾ). ೧. = ಬಾಯಾರಿಕೆ ೧: ಬಾಯಾರಿದ ಪರುಷ್ಪನೀಗರ್ಡಿಯಲು ಮತ್ತು ಬಾಯಾರು ಹೆಚ್ಚುವಂದದೊಳು (ಶರತ. ೬೩-೩೯). **ಬಾಯರು** : ೨. = ಬಾಯಾರಿಕೆ ೨ : ಮನೆಗೆ ಬಂದು ಬಾಯರು ಕೊಡಿ ಅಂದಾಗ ಬರಿ ನೀರು ಕೊಟ್ಟರೆ ಸೂರನ ಮುಖ ಸಪ್ಪಗೆ ಆಗುತ್ತದೆ (ಮರಮ. ೩೬). ೩. (ಕರಾ) ದನಕರುಗಳಿಗೆ ಕಂಡಿಯಲು ಇಡುವ. ತವಡು ಬೆರಸಿ ಕುದಿಸಿದ ನೀರು : ದನಗಳು ಹಟ್ಟಿಯನ್ನು ಸೇರುತ್ತವೆ . . . ಅವಕ್ಕೆ ಪ್ಯೆಗೆಯಲ್ಲಿರುವಾಗಲೇ ಅಕ್ಕಚ್ಚು, ಬಾಯರು ಹಾಕಿ. ಬಳಿಕ ಸ್ನಾನ ಮಾಡಿ . . . ಕಾಲುದೀಪ ಉರಿಸಬೇಕು (ಮರಮ. ೧೨). [< ಬಾಯಾರು$_1$]

**ಬಾಯಿ$_1$** 'ಬಾಯ್' ನೋ.

**ಬಾಯಿ$_2$** (ನಾ). ೧. ಹೆಂಗಸರ ಹೆಸರಿನ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ (ತಾಯಿ ಅಥವಾ ಅಮ್ಮ ಎಂಬರ್ಥದ) ಪದ : ಹಾಗೆಯೇ ಒರಗಿಕೊಂಡ ಕಮಲಾಬಾಯಿಗೆ ಕ್ರಮೇಣ ಎಚ್ಚರಾಗಿತ್ತು (ಸಮುದ್ರ. ೯೩೯). ೨. ಮನೆಯ ಒಡತಿ ; ಯಜಮಾನಿ : ಆಚಾರ್ಯರು ಬಂದ ಮೇಲೆ 'ಬಾಯರು' ಒಬ್ಬರ ಬೇಕೇ ಬೇಕು (ಶ್ರೀರಂಗ. ೧೮೦) ; ಬಾಯಿ, ರಾಯರು ಎರಡು ಊಟ ಕಳಿಸಿದ್ದಾರೆ (ಕಪ್ಪುಹು. ೨೮). ೩. ಹೆಂಗಸು ; ಸ್ತ್ರೀ : ಪುರಾತರ ಬಾಯಿಯೊಬ್ಬಳನು ಪಾತ್ರ ತಿಕ್ಕಲು ಗೊತ್ತುಮಾಡಿದೆ (ಸ್ವ.ತಿ. ೨೩೩). ೪. ಸಂಗೀತ. ನೃತ್ಯಗಳಿಂದ ಜೀವಿಸುವವಳು ; ಪಾತ್ರದವಳು ; ವೇಶ್ಯೆ : ಇಷ್ಟು ಪ್ರಸಿದ್ಧ 'ಬಾಯಿ' ಯ ಮನೆಯಲ್ಲಿ ಸಂಗೀತಸಾಮಗ್ರಿಯೊಂದೂ ಕಾಣಲಿಲ್ಲ (ಶ್ರೀಕಾಂತ. II, ೧೪೧). [ ← ಹಿಂ. ಮರಾ. ಬಾಈ ]

**ಬಾಯಿಕ** (ನಾ). ಒಬ್ಬಾತನ ಹೆಸರು : ಆಯದ ಮೆಯ್ಗಲಿ ಬಾಯಿಕ ನೆಮ್ಮ ನೆಗಟ್ತಿಯಂ ಪ್ರಕಟಿಸಿದನ್ ಶ್ರೀದಯಿತನ ಬಾಯಿಕನ ಮನೋದಯಿತೆಗೆ . . . ತಾಮೂದರ್ ತನಯರ್ ಪೇಟಲ್ ಮಾದುವರಂ ದೋಯಿಲಮ್ಮನೆಮ್ಮರ್ ಪೆಸರಿಂ (ಎಕ. II, ೧೩೯-೨ ; ಸು. ೪೬೦). [ ? ]

**ಬಾಯಿಕಟ್ಟು$_1$** ' ಬಾಯ್ಕಟ್ಟು$_1$' ನೋ.

**ಬಾಯಿಕಟ್ಟು$_2$** ' ಬಾಯ್ಕಟ್ಟು$_2$' ನೋ.

**ಬಾಯಿಕಡಾಣೆ** (ನಾ). ಕುದುರೆಯ ಬಾಯಿಗೆ ಹಾಕುವ ಕಡಿವಾಣ : " ಕವಿಕಾ, ಖಲೀನಃ– ೨ ಬಾಯಿಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿ ಕಡಾಣೆ, ಕಣಿಕೆ " (ನಿಘಂ.ಶಿ. ೨೩೦). [ಬಾಯಿ$_1$ (< ಬಾಯ್) + ಕಡಾಣೆ]

**ಬಾಯಿಕಲು** ' ಬಾಯ್ಕಲ್ ' ನೋ.

**ಬಾಯಿಕಲ್ಲಿ** (ನಾ). (ದನಗಳ ಬಾಯಿಗೆ ಕಟ್ಟುವ) ಬಾಯಿಕುಕ್ಕೆ : "(ಕಚ್ಚದಂತೆ, ತಿನ್ನದಂತೆ, ತೋಡದಂತೆ, ಪ್ರಾಣಿಗಳ ತಲೆಗೆ ಕಟ್ಟುವ) (ಬಾಯಿ)ಕುಕ್ಕೆ, ಬಾಯಿಕಲ್ಲಿ " (Muzzle. ೩೦೪೩). [ಬಾಯಿ$_1$ (< ಬಾಯ್) + ಕಲ್ಲಿ$_1$]

**ಬಾಯಿಕಲ್ಲು** ' ಬಾಯ್ಕಾಲ್ ' ನೋ.

**ಬಾಯಿಕಾಲು** 'ಬಾಯ್ಕಾಲ್' ನೋ.

**ಬಾಯಿಕುಕ್ಕೆ** (ನಾ). = ಬಾಯಿಕಲ್ಲಿ : ಆಡಿಕೊಳ್ಳುವ ಬಾಯಿಗಳಿಗೆ ಬಾಯಿಕುಕ್ಕೆ ಹಾಕುವುದಕ್ಕಾದೀತೆ ? (ಶಳುಮ. ೬೮). [ಬಾಯಿ$_1$ (<ಬಾಯ್) + ಕುಕ್ಕೆ$_1$]

**ಬಾಯಿಕೊಚ್ಚು**, ಬಾಯ್ಕೊಚ್ಚು (ಕ್ರಿ). ತನ್ನನ್ನು ತಾನೇ ಹೊಗಳಿಕೊಂಡು ಮಾತಾಡು; ಜಂಬ ಕೊಚ್ಚಿಕೊಳ್ಳು; ಬಡಾಯಿ ಕೊಚ್ಚು: ಸೊಸೆಯನ್ನು ಹೊಟ್ಟೆಯ ಮಗಳಿಗಿಂತ ಹೆಚ್ಚಾಗಿ ನೋಡಿಕೊಂಡಿದ್ದೇನೆ . . . ಎಂದು ಬಾಯಿಕೊಚ್ಚಿಕೊಂಡರು (ಕಸ್ತೂ. ೧೦). **ಬಾಯ್ಕೊಚ್ಚು** : ಚೆಂಬೊನ್, ಕಬ್ಬೊನ್, ಬೆಳ್ಳಿ, ಬಂಗಾರಂಗಳನ್, ನಾನಲ್ಲದಾರ್ ತೋರ್ದಪರಯ್ ಬಱದೆ ಬಾಯ್ಕೊಚ್ಚುವನನುಚಿದು ಆರುಮಲ್ತೆಂದೆ ಬಗೆದಪೆನ್ (ಶಬ್ದ.ತ್ರ. ೨೬-೩೬೦). [ಬಾಯಿ$_1$ (< ಬಾಯ್) + ಕೊಚ್ಚು$_1$]

**ಬಾಯಿಕೊಬ್ಬು** 'ಬಾಯ್ಗೊಬ್ಬು' ನೋ.

**ಬಾಯಿಕೋಲು** 'ಬಾಯ್ಕಾಲ್' ನೋ.

**ಬಾಯಿಗರೆ** (ಕ್ರಿ). ನುಡಿ ; ಧ್ವನಿ ಮಾಡು : ಪಿರಿದು ರಂಜಿಸುವುದಂತದ ಜೊಂಪುಗ್ಗಡಿಸುವ ಗೊರವ ಬಂದುದ ಬಾಯಿಗರೆವ ಅರಗಿಳಿ (ಸೌಂದರ. ೦-೬೪). [ಬಾಯಿ$_1$ (<ಬಾಯ್) + ಕರೆ$_1$]

**ಬಾಯಿಗಾಳೆಗ** 'ಬಾಯ್ಗಾಳೆಗ' ನೋ.

**ಬಾಯಿಗೂಡಿಸು** (ಕ್ರಿ). ಹೊಂದಿಸು ; ಸರಿಗೊಳಿಸು : ಲೆಕ್ಕ ಬಾಯಿ ಗೂಡಿಸುವ ಬಗೆ ಇದಲ್ಲ (ತಕ್ತಳ. ೨೩೦). [ಬಾಯಿಗೂಡು (<ಬಾಯ್ಗೂಡು) + – ಇಸು$_3$]

**ಬಾಯಿಗೂಡು** 'ಬಾಯ್ಗೂಡು' ನೋ.

**ಬಾಯಿಚಪಲ** (ನಾ). ತಿನ್ನುವ ಬಯಕೆ ; ಜಿಹ್ವಾಚಾಪಲ್ಯ : ಬಾಯಿ ಚಪಲದವರು ಏನಾದರೂ ಮಾಡಿಕೊಂಡು ತಿಂದದ್ದು ಪತ್ತೆಯಾದರೆ ನಂದಾದೀಪದ ಖರ್ಚನ್ನೆಲ್ಲಾ ಅವನೊಬ್ಬನೇ ದಂಡವಾಗಿ ತೆರಬೇಕಾಗಿತ್ತು (ಹುಚ್ಚಿಷ. ೨೦). [ಬಾಯಿ₁ (<ಬಾಯ್) + ಚಪಲ]

**ಬಾಯಿಚಿಕ್ಕ** (ನಾ). = ಬಾಯಿಕಡಾಣಿ : "ಕವಿಕಾ, ಖಲೀನಃ — ೨ ಬಾಯಿಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣಿ, ಕಡಿಣಿಕೆ" (ಸಿದ್ಧಾಂತಿ. ೨೩೦). [ಬಾಯಿ₁ (< ಬಾಯ್) + ಚಿಕ್ಕ₂ (< ಸಿಕ್ಕ₁)]

**ಬಾಯಿಚ್ಚೈ** (ನಾ). = ಬಾಯಿಚಪಲ : ಕೊರ್ಲ್ನೆಯ್ಯಾ ಪ್ರಾಣಗಳ ಮೆಲ್ಲನೆಯ್ಯಾ ಬಾಯಿಚ್ಚೈಗೆ (ಜನಪ. ೬೩೩). [ಬಾಯಿ₁ (<ಬಾಯ್) + ಇಚ್ಚೈ]

**ಬಾಯಿಜಾಳಿಗೆ** (ನಾ). = ಬಾಯಿಕಲ್ಲಿ : ಇವೆಗಳಿಗೆ ಸಹಿತ ಬಾಯಿಜಾಳಿಗೆ ಹಾಕಲಿಕ್ಕೆ ಸುರೂ ಮಾಡ್ಯಾರ! (ಜಾಜೀ. ೬) ; ಎಡೆಕುಂಟೆ ಹೊಡೆಯುವಾಗ ದನಕ್ಕೆ ಬಾಯಿಜಾಳಿಗೆ ಹಾಕಬೇಡವೆ? (ಅದೇ). [ಬಾಯಿ₁ (<ಬಾಯ್) + ಜಾಳಿಗೆ₁]

**ಬಾಯಿಜ್ವರ** (ನಾ). (ಸಾಮಾನ್ಯವಾಗಿ ಬೇಸಗೆಯಲ್ಲಿ) ದನಗಳಿಗೆ ಬರುವ ಒಂದು ಬಗೆಯ ಬಾಯಿಹುಣ್ಣು : ಈ ಎಮ್ಮೆಗೆ ಒಂದು ಸಲ ಕಾಲುಜ್ವರ ಬಾಯಿಜ್ವರ ಆಯಿತು (ಹೇಜಿಪಾಠ. ೬೪). 'ಕಾಲುಜ್ವರ' ನೋ. [ಬಾಯಿ₁ (< ಬಾಯ್) + ಜ್ವರ]

**ಬಾಯಿಡಬ್ಬು** (ನಾ). ಮಾತಿನ ಆಡಂಬರ ; ಒಡಾಯಿ : ಶೀನಮಯ್ಯರ ಹತ್ತಿರ ಅಪಾಟ ರೂಪಾಯಿ ಎಲ್ಲಿಂದ ಬರಬೇಕು? ಸುಮ್ಮನೆ ಬಾಯಿ ಡಬ್ಬಿಗೆ ಹೇಳಿರಬೇಕು (ಹುರುಪು. ೦೩೪). [ಬಾಯಿ₁ (< ಬಾಯ್) + ಡಬ್ಬು₄ (< ದಂಬ)]

**ಬಾಯಿತಪ್ಪು₁** (ಕ್ರಿ). ಮಾತಾಡುವಾಗ ಎಚ್ಚರವಿಲ್ಲದಿರು ; ಅಜಾಗರೂಕತೆಯಿಂದ ಬಾಯಿ ಬಿಡು : ಇಂದಿರೆಯು ಒಂದು ದಿನ . . . ಬಾಯಿತಪ್ಪಿ "ಇದು ಕಾಲಾದಿಪ್ಪಿಯ ದಶಾಯಿತಿ!" ಎಂದು ಬಿಟ್ಟಳು (ಇಂದಿರಾ. ೦೦೪) ; ನಾನು ಬಾಯಿತಪ್ಪಿ ಒಂದು ಹೇಳುವುದಕ್ಕೆ ಬದಲು ಇನ್ನೊಂದು ಹೇಳಿದ್ದೆ (ಪುರ್ಗದ. ೬೩). [ಬಾಯಿ₁ (<ಬಾಯ್) + ತಪ್ಪು₁]

**ಬಾಯಿತಪ್ಪು₂** (ನಾ). ಎಚ್ಚರ ತಪ್ಪಿ ಆಡುವ ನುಡಿ ; ಅರಿವಿಲ್ಲದೆ ಹೊರಬರುವ ಮಾತು : (ಕ). [< ಬಾಯಿತಪ್ಪು₁]

**ಬಾಯಿತೀಟೆ** (ನಾ). ಇತರರನ್ನು ದೂರಬೇಕೆಂಬ ಆತುರ, —ಆಡಿಕೊಳ್ಳಬೇಕೆಂಬ ಚಾಪಲ್ಯ : ಈಗಲೆ ನಮ್ಮ ಮೇಲೆ ಕತ್ತಿ ಕಠಾರಿ ಹಿಡಿದು ಎಷ್ಟೋ ಜನ ನಿಂತಿದ್ದಾರೆ. ಅವರ ಬಾಯಿತೀಟೆಗೆ ಗ್ರಾಸ ಒದಗಿಸಿದ ಹಾಗಾಗುತ್ತೆ (ಹಬ್ಬ. ೩೦). [ಬಾಯಿ₁ (< ಬಾಯ್) + ತೀಟೆ (<ತೀಂಟೆ₁)]

**ಬಾಯಿತೆಗೆ** 'ಬಾಯ್ದೆಗೆ' ನೋ.

**ಬಾಯಿತೆರೆ** 'ಬಾಯ್ದೆರೆ₁' ನೋ.

**ಬಾಯಿದುತ್ತು** 'ಬಾಯ್ದುತ್ತು' ನೋ.

**ಬಾಯಿದೆರೆ₁** 'ಬಾಯ್ದೆರೆ₁' ನೋ.

**ಬಾಯಿದೆರೆ₂** 'ಬಾಯ್ದೆರೆ₂' ನೋ.

**ಬಾಯಿಧಾರೆ** 'ಬಾಯ್ದಾರೆ' ನೋ.

**ಬಾಯಿನ** 'ಬಾಯನ' ನೋ.

**ಬಾಯಿನಂಗುಡು** 'ಬಾಯಿನಂಗೊಡು' ನೋ.

**ಬಾಯಿನಂಗೊಡು, ಬಾಗಿನಕೊಡು, ಬಾಯಿನಂಗುಡು** (ಕ್ರಿ). ಬಾಗಿನವನ್ನು ನೀಡು ; ಉಪಾಯನವನ್ನು ಕೊಡು : ಆಗಳಾ ಶಿವದೇವಿ ಮಹಾದೇವಿಯುಂ ಕನ್ಯಕಾಕದಂಬದಂಬಿಕಾನಿಕುರುಂಬಮುಂ . . . ತಕ್ಕನೆ ಶೀವಿದ ಕನಕರಜತಭಾಜನಸಮಾಜಮಂ ಭೂಜನಂ ಪೊಗಟ್ ಬಾಯಿನಂಗೊಟ್ಟು (ಹರಿಚ. ೧೪-೩೩ ವ) ; ಬಾಯಿನಂಗೊಟ್ಟು ನಾನಾನವರತ್ನಸ್ವರ್ಣವಸ್ತ್ರಂಗಳಿನಖಿಳಜನಂ ಕೂಡೆ ಸಂಪನ್ನಮಪ್ಪನ್ನಂ (ಕುಸುಮಾ. ೯-೦೩). **ಬಾಗಿನಕೊಡು** : ಮುತ್ತೈದೆಯರಿಗೆ ಬಾಗಿನಕೊಡುವ ಶಾಸ್ತ್ರವನ್ನೂ ಮಾಡಿ ಆಯಿತು (ಶಿಳು. ೬೩). **ಬಾಯಿನಂಗುಡು** : ಮನಮಾದು ಮನದನ್ನನ ಬೆನ್ನನೆ ಪೋಗಿರೆ ತನ್ನ ಬಸನದಿಂದಮಳಿಲ್ವಂ ಮನಮಂ ಬಿಡೆ ಬಳೆಯಿಪ ಬೆಳ್ಳನಮಿದು ಪಾಟ್ಟನೆಗೆ ಬಾಯಿನಂಗುಡುವಂದಂ (ಕಂದ್ರಪು. ೮-೮೯). [ಬಾಯಿನ (<ಬಾಯನ) + ಕೊಡು₁]

**ಬಾಯಿನಂದೀವು** (ಕ್ರಿ). ಉಪಾಯನವನ್ನು ತುಂಬಿ ಸಿದ್ಧಪಡಿಸು ; ಬಾಗಿನವನ್ನು ತುಂಬಿಡು : ರಂಗವಲಿಯಿಕ್ಕುವ ಕಾಲ್ಪಗಳೊಳ್ವ ಬಾಯಿನಂದೀವುವ . . . ನಾನಾವಿಧಮಂಗಳಾಚರಣದಕ್ಷೆಯರಿಂ ಪತಿಪತ್ನಿಯರ್ಕಳಿಂ ತೀವಿ ಪಪಾವಳೀಕಹೃದಯಾಸ್ಪದಮಾಯ್ತು ವಿವಾಹಮಂಡಪಂ (ಕರ್ಣಪು. ೬-೩). [ಬಾಯಿನ (<ಬಾಯನ) + ತೀವು]

**ಬಾಯಿನೀರು** 'ಬಾಯ್ನೀರ್' ನೋ.

**ಬಾಯಿಪಂತ** (ನಾ). ಕೇವಲ ಮಾತಿನ ಜರ್ಬು : ನೋಡನ್ನ ಕೈಚಳಕವ ಬಾಯಿಪಂತವನಾಡುವರಾವಲ್ಲ (ಮೋಹಿತ. ೪೯-೦೯). [ಬಾಯಿ₁ (<ಬಾಯ್) + ಪಂತ₁]

**ಬಾಯಿಪಾಠ** (ನಾ). ೧. ಉರು ಹೊಡೆಯುವುದು ; ಕಂಠಪಾಠ : ರಂಗನು ಪ್ರಾಥಮಿಕಶಾಲೆಯ ಅಭ್ಯಾಸವನ್ನು ಮುಗಿಸುವ ಹೊತ್ತಿಗೆ ಅವನಿಗೆ ಅನೇಕ ದೇವರ ಸ್ತೋತ್ರಗಳು ಬಾಯಿಪಾಠವಾದವು (ರಂಗರೋ. ೦೪) ; ಹಸ್ತಪ್ರತಿಗಳನ್ನು ಓದಿ ಓದಿ ಇವನಿಗೆ ಅವು ಬಾಯಿಪಾಠವಾಗಿತ್ತು (ಕನ್ನಸಂ. ೨೬) ; ಬೇಕಾದರೆ ನಿಮ್ಮ ಬಾಯಿಪಾಠ ಪ್ರಕಾಶನಿಗೇ ಒಪ್ಪಿಸಿ (ಪುರಾ. ೦೪೩). ೨. ಉರುಹೊಡೆದು ಕಂಠಗತ ಮಾಡಿಕೊಳ್ಳಬೇಕಾದ ಪದ್ಯ, ಕೋಷ್ಟಕ ಮೊದಲಾದುವು : ವಾಸುದೇವನು ಬೆಳೆಯುತ್ತ ಬಂದ ಹಾಗೆಲ್ಲ . . . ಅಕ್ಷರಾಭ್ಯಾಸವಾಯಿತು. ಬಾಯಿಪಾಠಗಳನ್ನು ಬಹುಬೇಗನೆ ಕಲಿತನು (ಶಾರತ. ೨೩೦).

**ಬಾಯಿಪಾಠ ಮಾಡು** = ಉರು ಹೊಡೆ ; ಕಂಠಪಾಠ ಮಾಡು : ಇಬ್ಬರಲ್ಲಿ ಯಾರೂ . . . ಲಕ್ಷಣಗ್ರಂಥಗಳನ್ನು ಬಾಯಿಪಾಠ ಮಾಡಿ ಪ್ರತಿ ವಿಷಯಕ್ಕೂ ಒಂದು ಶ್ಲೋಕವನ್ನುದಾಹರಿಸಬಲ್ಲವರಲ್ಲ (ಗಾನಳ. ೩೯). [ಬಾಯಿ₁ (<ಬಾಯ್) + ಪಾಠ₁]

**ಬಾಯಿಬಡಕ** 'ಬಾಯ್ಬಡಿಕ' ನೋ.

**ಬಾಯಿಬಡಿ** 'ಬಾಯ್ಬಡಿ' ನೋ.

**ಬಾಯಿಬಡಿಕ** 'ಬಾಯ್ಬಡಿಕ' ನೋ.

**ಬಾಯಿಬಡಿಕತನ** 'ಬಾಯ್ಬಡಿಕತನ' ನೋ.

**ಬಾಯಿಬಡುಕ** 'ಬಾಯ್ಬಡಿಕ' ನೋ.

**ಬಾಯಿಬಡುಕಿ** 'ಬಾಯ್ಬಡಿಕಿ' ನೋ.

**ಬಾಯಿಬಿಡು** 'ಬಾಯ್ಬಿಡು' ನೋ.

**ಬಾಯಿಬೀಗ, ಬಾಯ್ಬೀಯ್ಯಗ, ಬಾಯ್ಬಾಗ** (ನಾ). ೧. (ಹರಕೆ ಹೊತ್ತ ಭಕ್ತರು) ಬಾಯಿಗೆ ಚುಚ್ಚಿಸಿಕೊಳ್ಳುವ ತಂತಿಯ ಸಾಧನ : ಬಾಯಿ ಬೀಗ ಅಕ್ಕಸಾಲಿಗನಿಂದ ಮಾಡಿಸಿದ ಸಣ್ಣ ಬೆಳ್ಳಿಯ ಕಡ್ಡಿ. ಚಟ್ಟಕವಾಗಿರುತ್ತದೆ. ಒಂದು ಕಡೆಯ ಮೊನೆ ತುಂಬಾ ಹರಿತವಾಗಿದ್ದು ಚೂಪಾಗಿರುತ್ತದೆ. ಮತ್ತೊಂದು ಕಡೆ ಒಂದು ತೂತಿರುವಂತೆ ಗುಂಡಗೆ ಮಾಡಿಸಿರುತ್ತದೆ (ಜೋಕಿದೇ. ೪೩) ; ದೇವರಿಗೆ ಬೇವಿನುಡುಗೆ ನಗನಾಣ್ಯ ಮಾಡಿಸಿಕೊಡುವುದಾಗಿ . . . ಬಾಯಿಬೀಗ ಚುಚ್ಚಿಸಿಕೊಳ್ಳುವುದಾಗಿ ಹರಕೆ ಕಟ್ಟಿಕೊಳ್ಳುತ್ತಾರೆ (ಜಂಜಂಕ. ೧೩೪) ; ಕೆಲವು ಹೆಂಗಸರು ಬಾಯಿಬೀಗದ ಹರಕೆ ಮಾಡಿಕೊಂಡಿರುತ್ತಾರೆ. ಅಂಥವರು ಬೆಳಗಿನಿಂದ ಉಪವಾಸವಿದ್ದು, ರಂಗದಲ್ಲಿ ಗುಡಿಗೌಡನಿಂದ ಬಾಯಿಬೀಗ ಚುಚ್ಚಿಸಿಕೊಂಡು, ದೇವರ ಹಿಂದೆ ಕೈಯಲ್ಲಿ ಹೊಂಬಾಳೆ ಹಿಡಿದು ಹೋಗುತ್ತಾರೆ (ಜನ್ನೂರು. ೩೦).

**ಬಾಯ್ಬಿಯ್ಯಗ :** ೨. (ಅಲಂ) ಬಾಯಿಯ ತಡೆ.—ಹತೋಟಿ : ಸದ್ದು ! ಸಿಂಗಾರಿ ! ಬಾಯ್ಬಿಯ್ಯಗವಿರಲಿ ! (ಪಟ್ಟಿ. ೩೯-೦). **ಬಾಯ್ಬೀಗ :** ೧. ಚಿಕ್ಕ ಚಿಕ್ಕ ಹುಡುಗರೂ ಕೂಡ ಬಾಯ್ಬೀಗ ಚುಚ್ಚಿಸಿಕೊಂಡಿದ್ದರು (ರೂಢಿ). [ಬಾಯಿ₁ (< ಬಾಯ್) + ಬೀಗ₁]

**ಬಾಯಿಬೂಟಕ** (ನಾ). ಡಂಭಾಚಾರದ ಮಾತು : ಸಾಟಿಯಿಲ್ಲೀಕೆಗೆ ಜಗತ್ತಿನ ಕೋಟಲೆಯನಪಹರಿಪಳುರೆ ಬಾಯಿಬೂಟಕದ ನುಡಿಯಲ್ಲ ಸತ್ಯವಿದು (ಕಾಶೀಮ. ೦-೧೧೨). [ಬಾಯಿ₁ (<ಬಾಯ್) + ಬೂಟಕ]

**ಬಾಯಿಮಾತು** ' ಬಾಯ್ಮಾತು ' ನೋ.

**ಬಾಯಿಮುಚ್ಚು** 'ಬಾಯ್ಮುಚ್ಚು' ನೋ.

**ಬಾಯಿಲೆಕ್ಕ** (ನಾ). ಮನಸ್ಸಿನಲ್ಲಿಯೇ ಬಿಡಿಸಿ, ಬಾಯಿಮಾತಿನಲ್ಲಿಯೇ ಉತ್ತರಿಸಬೇಕಾದ ಗಣಿತಪ್ರಶ್ನೆ,—ಲೆಕ್ಕ : ಗಣಿತ, ಬಾಯಿಲೆಕ್ಕ, ಮುಂತಾದುವುಗಳಿಲ್ಲದರಲ್ಲೂ ಈ ಹುಡುಗಿಯು ಪ್ರಥಮತರಗತಿಯಲ್ಲಿ ತೇರ್ಗಡೆಯಾದಳು (ರೂಢಿ). [ಬಾಯಿ₁ (<ಬಾಯ್) + ಲೆಕ್ಕ₂]

**ಬಾಯಿವಿಡು** 'ಬಾಯ್ವಿಡು' ನೋ.

**ಬಾಯಿವೆಣ್ಣೆ** 'ಬಾಯ್ವೆಣ್ಣೆ' ನೋ.

**ಬಾಯಿಸವಿ** 'ಬಾಯ್ಸವಿ' ನೋ.

**ಬಾಯಿಸು** (ಕ್ರಿ). ಉಬ್ಬುವಂತೆ ಮಾಡು : ಊದಿಸು : ಧನಂಜಯ ವಾಯುವೆಂಬುದು ತಾನು ನಿಕ್ಷೇಪಿಸುವಂತಹ ದೇಹವಾದರೆ ಆ ದೇಹವನ್ನೆಲ್ಲ ಉಕ್ಕಿಸಿ ಬಾಯಿಸಿ ಊದಿಸಿ ಒಡಿಸಿ ಭೌತಿಕಾಗ್ನಿಯ ಕೂಡಿ ಹೋಗುವುದು (ಶತಕ. II, ೯೭) ; ಆ ದಿನ ಹುಸೇನಿ . . . ಸೋವುನ ಕಪಾಳವನ್ನು ಬಾಯಿಸಿದನು (ರಂಗರೋ. ೯೬) ; ಆ ದೇಶಪಾಂಡೆಯ ಕೆನ್ನೆ ಬಾಯಿಸ ಬೇಕಾಗಿತ್ತು (ಹಮ್ಮಿರ. ೨೦೩). [ಬಾಯು (<ಬ್ಬಾ) + – ಇಸ್ಸು]

**ಬಾಯಿಹಗ್ಗ** (ನಾ). =ಬಾಯಿಕಡಾಣಿ : "ಕವಿಕಾ, ಖಲೀನಃ — ೨ ಬಾಯಿ ಹಗ್ಗ, ಬಾಯಿಚಿಕ್ಕ, ಲಗಾಂ, ಬಾಯಿಕಡಾಣಿ, ಕಣಿಕೆ" (ಸಿದ್ಧಾಂತಿ. ೨೩೦). [ಬಾಯಿ₁ (<ಬಾಯ್) + ಹಗ್ಗ (<ಪಗ್ಗ)]

**ಬಾಯಿಹುಣ್ಣು** (ನಾ). ಬಾಯಿಬೊಕ್ಕೆ ; ಬಾಯಿಯಲ್ಲಿ ಏಳುವ ಹುಣ್ಣು : ನಿರ್ನಿದ್ರೆ, ನೂತಿ, ಬಾಯಿಹುಣ್ಣು, ಗಂಟಲುಹುಣ್ಣು, ಕಾವುಗಣ್ಣುಗಳಿಗೆ ಇದು ಸಂಜೀವನ (ಅಶಿ. ೯). [ಬಾಯಿ₁ (<ಬಾಯ್) + ಹುಣ್ಣು (<ಪುಣ್)]

**ಬಾಯು** 'ಬ್ಬಾ₁' ನೋ.

**ಬಾಯುಗಿ** (ನಾ). ದಂತಕ್ಷತ (?) : ತೆಬಿಪಜಿದೋಪನಪ್ಪಿದೊಡೆ ಮೆಯ್ಯುಜಿವಪ್ಪು ಸಡಿಲ್ದುದಕ್ಕೆ ಮೆಯ್ಯುಜಿವ ಪೊದಟ್ಟ ಬಾಯುಗಿಗೆ ಮೆಯ್ಯುಜಿವಂತದು ಮೆಲ್ಲನಾಗೆ ಮೆಯ್ಯುಜಿವ . . . ಎಡೆ ಸಾವ ಪುಟ್ಟು ವೆಡೆಯಾದುದವಳ್ಗೆ ರತಾತಿರೇಕದೊಳ್ (ಲೀಲಾವ. ೦೩-೨೦) ; ತವದ ಕಾಮೋದ್ರೇಕದಲಿ ಕೂಡುವ ಸಮುಪ್ರಣಯಿಗಳ ನಿಡುಗಣ್ಗಳೆವೆಗಳರೆ ಮುಗಿವುತಿರೆ ... ಸವಿವ ಬಾಯುಗಿಯಡಗೆ ಮೈಮಿಗೆ ಬೆವರ ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆಯೆನಲೀರ್ವರು ಮಾಚಿದರೊಡಲ (ಹಾಳ್ಮಾ. ೦೬-೪೭). [ಬಾಯ್ + ಉಗ್ಗಿ]

**ಬಾಯುಪಚಾರ** (ನಾ). ಕೇವಲ ಬಾಯಿಮಾತಿನ ಮನ್ನಣೆ ; ಹೃತ್ಪೂರ್ವಕವಲ್ಲದ ಗೌರವ ; ಬರಿ ಬಾಯಿಮಾತಿನ ಸತ್ಕಾರ : ಅವರು ಬಾಯುಪಚಾರಕ್ಕಾದರೂ ಬನ್ನಿ ಎಂದು ಕರೆಯಲಿಲ್ಲ (ರೂಢಿ). [ಬಾಯ್ + ಉಪಚಾರ]

**ಬಾಯೂರಿಸು** (ಕ್ರಿ). ೧. ಬಾಯಲ್ಲಿ ನೀರು ಸುರಿಸು. ೨. (ಅಲಂ) ಅತಿಯಾಗಿ ಹಂಬಲಿಸು,—ಬಯಸು : ಕೆಲವು ಜನ ಅವಳನ್ನು ವರಿಸಲು ಬಾಯೂರಿಸುತ್ತಿದ್ದರು (ಋಷಿಕೂ. ೪). [ಬಾಯ್ + ಊರಿಸ್ಸು]

**ಬಾಯೆಣಿಕೆ** (ನಾ). ಉದ್ಗಾರ ; ಉದ್ಘೋಷ : ಕಾಯುಗಟ್ಟಿತು ಭೀತಿ ಬರುವಿನ ಬಾಯೆಣಿಕೆ ಬಯಲಾಯ್ತು ಜೀವದ ಬೀಯಕಿವರಜಿದರು (ಕುಮಾರಾ. ೬-೬೦). [ಬಾಯ್ + ಎಣಿಕೆ]

**ಬಾಯೆತ್ತು** (ಕ್ರಿ). (ಮಾತಾಡಲೆಂದು) ಬಾಯಿ ತೆರೆ ; ಬಾಯಿ ಬಿಡು : ಮತ್ತೆಯುಂ ಪರಸಮಯಿಗಳು ಬಾಯೆತ್ತಲಂಜಿಂತೆಂದರು (ಬಸವು. ೩೩-೬೦) ; ಬಾಯೆತ್ತದಂತೆ ನುಡಿವುತೆ ಕಾಯಜರಿವು ಭಕ್ತ ನೆಲ್ಲರಂ ಗೆಲೆ (ವೃಷಶಿ. ೩೭-೩೩) ; ಕೋಲಾಹಲವ ಸಂತವಿಸಲವಂ ಎನಿತೊ ಸಲ ಬಾಯೆತ್ತ ಮಾತೋದು ಕೇಳಿಸದೆ . . . ಕಲಕಲವೆ ಎದ್ದುದ್ದು ನಡುವೆ ತವಿವಂದು (ಗೂಳ್ಳೂಶಾ. ೬-೦೮೦). [ಬಾಯ್ + ಎತ್ತು₁]

**ಬಾಯೆಸಳ್ ?** (ನಾ). ಬಾಯಿ ಹುಣ್ಣು : ಬಿಸುಸುಯ್ಯೆ ಬಾಯ್ ಕರಂ ಕೆಂಪೆಸದಿರ ಬಿಡ ಲೋಳೆ ಸುರಿಯೆ ಬಾಯ(ಎ)ಸಳದನೋಡಿಸುವೊಡೆ ಕಾಗೆಯ ಗಜಿಯಿಂ ಬಿಸುನೀರೊಳ್ ಕರ್ಚಿ ತೊಡೆಗೆ ಕಟುಕತ್ರಯವಂ (ಲೋಕೋಪ. ೯-೦೯೯). [ಬಾಯ್ + ಎಸಳ್?]

**ಬಾಯೊದರು** (ಕ್ರಿ). ಕೂಗು ; ಕಿರಿಚು : ವಾನರದಳಂ ಬೆದರಿ ಬಾಯೊದರಿ ದೆಸೆದೆಸೆಗೆ ಕೆದರ(ತ್ರೀರಾಮಾ. ೮೦೩-೧೦೧). [ಬಾಯ್ + ಒದರ್ರು₂ (<ಒದಱು₂)]

**ಬಾಯೊರಸು** (ಕ್ರಿ). ಸ್ಪರ್ಶವನ್ನು ಪಡೆ (?) : ಇಜಿಯದ ವೀರವಂ ಪೊಗಳೆ ಮೆಚ್ಚುವ ರಾಯರ ಗಂಡ ಯಾವ ಸೊಂಪಜಿಯದೆ ಕೀರ್ತಿಸರ್ ಬರಿದೆ ಓಗ್ಗುವ ರಾಯರ ಗಂಡವೊಂಮ್ಮೆ ಬಾಯೊರಸದೆ ಪೆಂಣ್ಗಳಂ ಸೊಬಗರೆಂದವ ರಾಯರ [ಗಂಡ]ನೆಂದು ಬೊಬ್ಬಿಜಿಉದು ಕೀರ್ತಿ ಡಿಂಡಿಮಮುಂಖಂ ಜಗದೊಳ್ ವಿಜಯಕ್ಷಿತೀಂದ್ರನಾ (ಎಕ. XI, ಚಿತ್ರದು. ೩-೬ ; ?). [ ? ]

**ಬಾಯೊಜಿ** (ಕ್ರಿ). ೧. ಬಾಯಲ್ಲಿ ನೀರು ಸುರಿ : ಆ ಸಿಂಹಂ ಪುಜಿಬ ಗುತ್ತಂಬಟ್ಟು ಗೋಂಕರ ಕಟ್ಟೆಯಂ ಬಯಸಿ ಬಾಯೊಜಿತು ತನಗನುಚರ ನಪ್ಪುದೊಂದು ನರಿಗೆ ಪೇಟ್ದುದುಂ (ಪಂಚತಂ. ೨೬೨-೨೦) ; ಮಿಸುಪ ಪುಳಿಗೆ ಬಾಯೊಜಿತು ಬಾತಂತಿರೆ ತಿಂದು ಕೈಗರ್ಚಿ (ಪುಷ್ಪಾಸ್ತ್ರ. ೩-೯೬ ಪ). ೨. ಬಯಸು ; ಹಂಬಲಿಸು ; ಹಾತೊರೆ : ನವಯೌವನಕ್ಕೆ ರತಿ ಬಾಯೊಜಿಯೆ . . . ಹದಿನಾಜು ಹರೆಯುಮಾದಾಗಲ್ (ಶಂಖರ. ೩-೦೬) ; ಶೃಂಗಾರ ವೀರಕ್ಕೆ ಬಾಯೊಜಿತೀ ತಸ್ಕರಜಾರವೀರವಿಟವೇಶ್ಯಾಕಾಮ್ಯಮಂ ಕೇಳ್ದು ಮೆಚ್ಚಿ ಮಚಿಪರ್ . . . ಭೂಪರ್ (ಚನ್ನಾಕ. ೯೭). [ ಬಾಯ್ + ಒಜಿ₁ ]

**ಬಾಯ್ಕಟ್ಟು₁, ಬಾಯಿಕಟ್ಟು₁** (ಕ್ರಿ). ೧. ಬಾಯಿಚಪಲವನ್ನು ನಿರೋಧಿಸು ; ಪಥ್ಯ ಮಾಡು ; ಅಪಥ್ಯವಾದ ಆಹಾರವನ್ನು ಸೇವಿಸದೆ ನಿರ್ಬಂಧದಲ್ಲಿರು : ಅವರು ವೈದ್ಯರು ಹೇಳಿದಂತೆಲ್ಲ ಚೆನ್ನಾಗಿ ಬಾಯ್ಕಟ್ಟಿ ಖಾಯಿಲೆಯನ್ನು ಬೇಗ ವಾಸಿಮಾಡಿಕೊಂಡರು (ರೂಢಿ). ೨. ವಾದದಲ್ಲಿ ಎದುರಾಳಿಯನ್ನು ಬಾಯ್ಮುಚ್ಚುವಂತೆ ಮಾಡು ; ನಿರುತ್ತರಗೊಳಿಸು ; ಬಾಯ್ಬಡಿ : ಅಣ್ಣ ಇಷ್ಟು ಬಾಯ್ಕಟ್ಟಿ ಬಿಟ್ಟ ಮೇಲೆ ಪಾಪ ಅವನೇನು ಮಾಡಿಯಾನು ? (ರೂಢಿ). ೩. ಮಂತ್ರ ಮಾಟಗಳಿಂದ ಮನುಷ್ಯನ ಅಥವಾ ಪ್ರಾಣಿಯ ಬಾಯನ್ನು ತೆರೆಯಲಾಗದಂತೆ ಮಾಡು,—ಮುಚ್ಚಿಸು : (೪). **ಬಾಯಿಕಟ್ಟು :** ೨. ನಾನು ಯಾವಾಗಲೂ ಪ್ರಶ್ನಿಸುತ್ತೇನೆ ; ಆಗ ನೀವು ಹೀಗೆ ಹೇಳಿ ನನ್ನ ಬಾಯಿಕಟ್ಟುತ್ತೀರಿ (ಋತಾಗತ. ೭೬) ; ಎಲ್ಲರೂ ಸೇರಿಕೊಂಡರು ತೆನ್ನಾಲಿ ಹೇಳಿದ್ದು ಸುಳ್ಳು ಅಂತ ಬಾಯಿಕಟ್ಟುವುದಕ್ಕೆ (ತಪ್ಪೊಕು. ೩೮೩). ೪. ಮಾತಾಡಲು ಅವಕಾಶವಿಲ್ಲವಾಗು : ಅಪ್ಪಾಜಿಗೆ ಬಾಯಿಕಟ್ಟಿತು. ಆದರೂ ಕಡೆಯದೊಂದು ಪ್ರಯತ್ನ ಮಾಡಲು ಬಯಸಿದ (ಹರಿಪ. ೬೪). ೫. ಮಡಕೆ ಅಥವಾ ಪಾತ್ರೆಗಳ ಬಾಯಿಗೆ ಬಟ್ಟೆಯನ್ನು ಕಟ್ಟು : ಮಡಬಟ್ಟೆಯಿಂದ ಮಡಿಕೆಯ ಬಾಯಿಕಟ್ಟಿ, ವಿಭೂತಿಕಟ್ಟು ಹಾಕುತ್ತಾಳೆ (ಪಪ್ಪೂರು. ೪೨). [ಬಾಯ್ + ಕಟ್ಟು₁]

**ಬಾಯ್ಕಟ್ಟು₂**, ಬಾಯಿಕಟ್ಟು₂ (ನಾ). ೧. (ನಾಯಿ, ಎತ್ತು ಮೊದಲಾದ ಪ್ರಾಣಿಗಳಿಗೆ) ಬಾಯಿ ತೆರೆಯಲಾಗದಂತೆ ಮುಖಕ್ಕೆ ಅಳವಡಿಸುವ ಬಂಧನ ; ಪ್ರಾಣಿಯ ಬಾಯಿಗೆ ಕಟ್ಟುವ ಕುಕ್ಕೆ.–ಚೀಲ : ಸೆಳಿಗೋಲು ಒಂದಟ್ಟಿದು ಕೆಲಹು ನಾಯಿಗಳ ಬಾಯ್ಕಟ್ಟು ಒಳಿಯಿಂದಿವು ಮೆಜೆಯಿ ನಡೆದು (ಶಶಪು. ೩೦-೯). ೨. ಮಾಟಮಂತ್ರಗಳಿಂದ ಬಾಯಿ ಮುಚ್ಚಿಸು ವಿಕೆ.–ಬಾಯಿ ತೆರೆಯದಂತೆ ಮಾಡುವಿಕೆ : (?). ಬಾಯಿಕಟ್ಟು₂ : ೩. ಮುಚ್ಚಳದಂತೆ ಪಾತ್ರೆಗಳ ಬಾಯಿಗೆ ಬಿಗಿದ ಬಟ್ಟೆಯ ಕಟ್ಟು : ಎಕ್ಕದ ಮೊಗ್ಗು ೧ ಬಳ್ಳವಂ ಒಂದು ಮಡಕೆಯಲ್ಲಿ ಹಾಕಿ ನೀರು ಹಾಕಿ ಪಾವಡ ಕಟ್ಟಿ ಹೆಳತಿಗೆ ಅಕ್ಕಿಯನ್ನು . . . ರೊಟ್ಟಿ ಮಾಡಿ ಆ ಬಾಯಿಕಟ್ಟಿನ ಮೇಲಿಟ್ಟು ಬೇಯಿಸಿ ತೆಗೆದು (ಸಕವೈ. ೨೦೭). [ಬಾಯ್ + ಕಟ್ಟು₂]

**ಬಾಯ್ಕಡಿಗೊಳ್** (ಕ್ರಿ). ಔಡುಗಚ್ಚು ; ಹಲ್ಲುಕಡಿ : ಮಿಗೆ ಮಾತಾಡ ದಿರೇಟಿದಿರ್ ಮಿಡುಕದಿರ್ ಮೇಲ್ವಾಯದಿರ್ ಸೊರ್ಕದಿರ್ ನಗದಿರ್ ಬಾಯ್ಕಡಿಗೊಳ್ಳದಿರ್ (ಆದ್ರಿಶಾ. ೧೬೭). [ಬಾಯ್ + ಕಡಿ₁ + ಕೊಳ್₁]

**ಬಾಯ್ಕಲ್** 'ಬಾಯ್ಕಾಲ್' ನೋ.

**ಬಾಯ್ಕಾಲ್**, ಬಾಯಿಕಲು, ಬಾಯಿಕಲ್ಲು, ಬಾಯಿಕಾಲು, ಬಾಯಿ ಕೋಲು, ಬಾಯ್ಕಲ್, ವಾಯ್ಕಾಲು (ನಾ). ಕಾಲುವೆ ; ನಾಲೆ : ಅನ್ತೆ ಬಸ್ತು ಕಳಲಾ ಬಾಯ್ಕಾಲುಳ್ ಕೂಡಿ . . . ಅನ್ತೆ ಬಸ್ತು ತೋಜಿ ಯುಳ್ ಕೂಡಿತ್ತು (ಪ್ರಿಆಂ. ೧೯೩೭. ೩೩–೨೯ ; ಸು. 700 ?). ಬಾಯಿಕಲು: ಮೂಡಲು ದಿಬ್ಬ ಬಡಗಲು ಪಳ್ಳ ಪಡುವಲು ಬಾಯಿಕಲು ತೆಂಕಲು ಭಂಡಿ ವಟ್ಟೆ (ಶಾಇಇ. IX–i. ೧೬೩–೬೮ ; 1099) ; ತೆಂಕಲು ಕಜುಂಬಗದ್ದೆಯ ಬಾಯಿಕಲು (ಶಾಇಇ. IX–i. ೩೭೩–೩೩ ; 1226). ಬಾಯಿಕಲ್ಲು : ಹಿರಿಯ ತುಂಬಿನ ಬಾಯಿಕಲ್ಲ ಮೂಡ ದೆಸೆಯ ಮೊದಲೇರಿಯ ಗದ್ದೆ (ಪ್ರಿಆಂ. ೧೯೩೭. ೦೭–೯೬ ; 1190) ; ತುಂಬಿನ ಬಾಯಿಕಲ್ಲಿಂದು ಪಡುವಲು ಮೇರೆ (ಎಕ. XVI. ತಕ್ಮಾ. ೭೦–೦೭ ; 1235) ; ಮಿಡಿಚ್ಚಿಯ ಬಾಯಿಕಲ್ಲಿಂ ತೆಂಕಲು ಕೋಡಿಯ ಗೋವಿಂದ ಶಣಂಗಿನ ಮೂಡಲು ಗದ್ದೆ ಮತ್ತರು ೧ (ಶಾಇಇ. IX–1. ೩೭೦–೪೮ ; 1259). ಬಾಯಿಕಾಲು : ವರುಶಕ್ಕೆ ಗದ್ಯಾಣಂ ಮೂವತುವನುವು್ ಆ ಕೆಜೆಗೆ ಆ ತುವ್ವಿಂಗೆ ಆ ಬಾಯಿಕಾಲಿಗೆ . . . ಆ ಮಹಾಜನಂಗಳು ನಡಸುತೆ ಬಹರು (ಎಕ. VI, ಕಡೂರು. ೯೨–೦೬ ; 1269 ?). ಬಾಯಿಕೋಲು : ಮಂಚಣನ ಕೆಜೆಯ ತಾಯಿವಳದಿಂದಾ ಬಡಗಲು ಅಲಕಟಿಗೆ ಹೋದ ಬಾಯಿಕೋಲಿಂ ದೇವಿಹೊಲದ ಕಟ್ಟೊಬೆಯಿಂ ಅಲಕಟ ಹೊಳೆಗೆಜೆಯಿಂ ಮೂಡಲು ಮಿಂತೀ ಚತುಃ ಸೀಮೆಯ ಹೊಳಗಣ ಭೂಮಿ (ಎಕ. XIV, ಎಳಂದೂ. ೦೯೭–೦೩ ; 1631). ಬಾಯ್ಕಲ್ : ಬೂಚಿಸೆಟ್ಟಿಯ ಕೆಜೆಯ ಪಡುವಣ ಬಾಯ್ಕಲ್ಲ ಬಳಿವಿಡಿದು ಹುಣಸೆಯ ಬಾಯ್ಕಲ್ಲಿಂ ತೇಲು ಗದ್ದೆ ಮತ್ತರು ೨ ಹೊಸಗೆಜೆಯ ಬಾಯ್ಕಲ್ಲಿಂ ಮೂಡಲು ಗದ್ದೆ ಕಮ್ಮ ೬೦೦ (ಶಾಇಇ. IX–i. ೧೯೩–೪೦ ; 1079). ವಾಯ್ಕಾಲು : ಮೂಡಲು ಪಳ್ಳ ವಾಯ್ಕಾಲು (ಕೃಆಸಿ. ೩–೭–೨೯ ; 1088). 'ಕಾಲ್ವಾಯ್' ಪರಾ.

[ಬಾಯ್ + ಕಾಲ್₂./ತಮಿ. ವಾಯಕ್ಕಾಲ್ ; ಮಲ. ವಾಯ್ಕಾಲ್]

**ಬಾಯ್ಕುಟುಕು** 'ಬಾಯ್ಗುಟುಕು' ನೋ.

**ಬಾಯ್ಕುಟ್ಟು** 'ಬಾಯ್ಗುಟ್ಟು' ನೋ.

**ಬಾಯ್ಕೇಳ್** (ಕ್ರಿ). ಮಾತು ಕೇಳು ; ಆಜ್ಞಾಧಾರಕನಾಗು ; ವಿಧೇಯ ನಾಗಿರು : ಆಳುವಮೆಃಮಜುಸಾಸಿರನುಮಾನ್ ಚಿತ್ರವಾಹನನಃಳುತ್ತ್ರಂ ಬಾಯ್ಕೇಳದಿರೆ ಮುನಿದು ಕೊಲ್ಲಿ ಪಲ್ಲವ ನೊಟುಂಬ ನೊಜುಂಬರಾದಿತ್ಯನನ್ ವೆಸನಲ್ (ಎಕ. VIII. ಸೊರಬ. ೦೦–೩ ; ಸು. 800) ; ಅರಸುಗಳೆಲ್ಲಂ ಬಾಯ್ಕೇಳ್ದರೆಂದುಮಾಪಾರಾಂತರಂಗಳ್ಕೆದುವೆದುಂ ಧರಣಿತಳಂ ಕೀರ್ತಿಸ (ಅಂಪು. ೦೯–೯೯) ; ವರುಣಂ ಬಾಯ್ಕೇಳನೆಂಬೀ ಮುನಿಸನುವಿಸೆ ಮೇಲೆತ್ತಲೆಂದೀಗಳೆಮ್ಮಂ ಬರವೇಟ್ಟಿಂ ದಾಸವೆಂದ್ರುಂ (ಶಂರಾಪಊ. ೦೦–೨೦೩).

**ಬಾಯ್ಕೇಳ್ದೊಂ** = (ಜಲದುರ್ಗ ಮುಂತಾದುವುಗಳನ್ನು) ವಶ ಪಡಿಸಿಕೊಂಡವನು : ಏಂತಾನುಂ ಸ್ಥಳ ಜಳದುರ್ಗಂ ತವೆ ಬಾಯ್ಕೇಳ್ದೊ ನೀತನದೆ ದಿಗ್ವಿಜಯಯಾತ್ರಂತೋತ್ಸವಂ (ಶಾ:ಶಾಂ. ೩–೦೧೦).

[ಬಾಯ್ + ಕೇಳ್]

**ಬಾಯ್ಕೇಳಿಕೆ** (ನಾ). ಬಾಯಲ್ಲಿ ಹೇಳುವ ಮಾತು (?) : ಪರಾಕು ; ಸ್ವಾಗತದ ಮಾತು (?) : ಪಾಳಲಗ್ಗಾಡಿ ಓಕರುತಿ ಬಾಯ್ಕೇ [ಶಾಅಂ. ಯೋ]ಳಿಕೆ ಮಾಂದಳರ ಕಂಪು ದೀವಿಗೆಯನೆ ಭೂಪಾಳು ಬರೆ ಕೋಳಿಪ ಪನಪಾಳಿನವೂಲ್ಕೆಂದೆ ಬಂದುದಂದು ವಸಂತಂ (ಹುಚೂತ. ೯–೨).

[ಬಾಯ್ + ಕೇಳಿಕೆ₁]

**ಬಾಯ್ಕೇಳಿಸು** (ಕ್ರಿ). ಗೆದ್ದುಕೊಳ್ಳು ; ವಶಪಡಿಸಿಕೊಳ್ಳು ; ತನ್ನ ಆಜ್ಞೆಗೆ ಒಳಪಡಿಸಿಕೊಳ್ಳು : ಆ ಮುನಿರಾಜು ಕರ್ಮುಂಗಳಂ ಗಾಳಿಸಿದಂ ಈ ರಾಜರಾಜಂ ಷಟ್ಖಂಡಮಂಡಲಮಂ ಬಾಯ್ಕೇಳಿಸಿದಂ (ಆಪು. ೬–೨೧ ವ) ; ಮಾಳವಪತಿ . . . ಲೀಲೆಯೊಳೆ ಪೀರದಿರೊಳೆ ಬಾಯ್ಕೇಳಿಸುವಂ ಗಡ ಸಮಸ್ತವಸುಧಾತಳಮಂ (ದಶರ್ಮಾಮ್ಮ. ೦೦–೨೨೯) ; ರಣಪಥೂವಲ್ಲಭಂ ದೇಶ ದೇಶಂ ಗೆಲ್ಲುತದಟನಿಂ ಬಾಯ್ಕೇಳಿಸುತೆ, ಚಂಡಜವದಿಂದಮಿತ್ರನ್ಗೆ ಸುರ್ಗಾತಿಹಂ (ಶಶ್ಶಾಂಗ. ೭೦–೦೯೯). [ಬಾಯ್ಕೇಳ್ + – ಇಸು₃]

**ಬಾಯ್ಕೊಡು** (ಕ್ರಿ). ಬಾಯಿ ಬಿಡು ; ಬಾಯಿ ತೆರೆ : ಬಿಕ್ಕಿ ಬಿಕ್ಕಿ ಅತ್ತಳು ; ಎದ್ದು ಕುಳಿತಳು ; ಬಾಯ್ಕೊಟ್ಟು ಗೋಳಿಟ್ಟಳು (ಬಿಡ್ಕಾ. ೬).

[ಬಾಯ್ + ಕೊಡು₁]

**ಬಾಯ್ಕೊರ್ಚು** 'ಬಾಯಿಕೊಚ್ಚು' ನೋ.

**ಬಾಯ್ಗಳೆ** (ಕ್ರಿ). ಬಾಯಿ ಬಿಡು; ಬಾಯಿ ತೆರೆ : ಸುಂಗಲೆಂದು ಬಾಯ್ಗಳೆದು ಬರ್ಪನಿರಿದಿರೊಳ್ ಪಲ್ಲಿಜಮುತ್ತೆ (ಅದ್ಭುತ. ೯೭–೬). [ಬಾಯ್ + ಕಳೆ₁]

**ಬಾಯ್ಗಾಳೆಗ**, ಬಾಯಿಗಾಳಿಗ (ನಾ). ಬರಿಯ ಮಾತಿನ ಯುದ್ಧ ; ವಾಕ್ಕಲಹ: ಆ ಬಿಲ್ಗಾಳೆಗಮುಂದೇ ಬಗೆದಂ ಬಾಯ್ಗಾಳೆಗಮನೀಗಳಜಂದಂ (ಶಾಂತಿಪು. ೯–೩೦ ವ). ಬಾಯಿಗಾಳೆಗ : ಕಕ್ಕ ಮಾಡುವುದು ಮಗನಿಗೇನು ತ್ತಿರಲಿಲ್ಲ, ಮಗನದು ಕಕ್ಕನಿಗಾಗುತ್ತಿರಲಿಲ್ಲ. ಯಾವಾಗಲೂ ಬಾಯಿಗಾಳಗ ನಡೆದಿರುತಿತ್ತು (ಕ್ರೀಪೂಕ್ಕ. ೬).

[ಬಾಯ್ + ಕಾಳೆಗ]

**ಬಾಯ್ಗುಟುಕು**, ಬಾಯ್ಕುಟುಕು (ನಾ). ಒಂದು ಸಲ ಬಾಯಿ ತುಂಬ ಹಾಕಿಕೊಳ್ಳುವಷ್ಟು ಆಹಾರ ; ಒಂದು ತುತ್ತು : ಸಲಿಸುವೆಂ ಇವರಸುವ ಬಾಳ ಬಾಯ್ಗುಟುಕೆಂದು (ವೀರಶ. ಹ. ೯೩೩–೨೬). ಬಾಯ್ಕುಟುಕು : ಕೊಡು ತಂದೇ, ಇನ್ನೊಂದೇ ಒಂದೇ ಬಾಯ್ಕುಟುಕು (ಅರಳ. ೩–೦೦).

[ಬಾಯ್ + ಕುಟುಕು₁]

**ಬಾಯ್ಗುಟ್ಟು**, ಬಾಯ್ಕುಟ್ಟು (ಕ್ರಿ). ಹರಟು ; ಗಳಹು: ಪಂಪಾ ಸನ್ನಿಧಾನದ ಸಮುಖದಲ್ಲಿ ಹಾಗೆ . . . ಆ ಸಲ್ಗೆಯಿಂದ ಬಾಯ್ಗುಟ್ಟಿದಿರಿ (ಶಬ್ದಶ. ೧೮೯–೦೬). ಬಾಯ್ಕುಟ್ಟು : ಪುಟ್ಟುಂಗುರುಡಂ ಕಾಣ್ಬನೆ ಬಟ್ಟೆಯುಮನಮಳಾಕ್ಷನಂತೆ ಸದ್ಗುರ್ಪ್ಪಿಯ ಬಾಯ್ಕುಟ್ಟದೆ ಕಾಣ್ಗುಂ ಧರ್ಮದ ಬಟ್ಟೆಯ ನೆಜೆ ಕಾಣಲಜಿವ[ಯ]ಸಕ್ಕು ಮದಾಂಧಂ (ಅರ್ಥನೇ. ೯–೩೩).

[ಬಾಯ್ + ಕುಟ್ಟು₁]

**ಬಾಯ್ಗೂಟ** (ನಾ). ಮುತ್ತಿಡುವಿಕೆ ; ಚುಂಬನ : ಬಾಯ್ಗೂಟದೊಳ ಟ್ಟಕಿಅ ಪಡೆದು ಕೂಟದೊಳಣ್ಮದ ಬೆಚ್ಚ ತಟ್ಕೆಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಬಂ (ಕಂಶಠಾ. ೩–೬೨); ಮಸವ ನಸುಲಜ್ಜೆಯುಂ ಮಾಣಿಸಿದುದು ಬಾಯ್ಗೂಟದಿಂಪು (ಕಂದ್ರಪು. ೬–೮೩).

[ಬಾಯ್ + ಕೂಟ₁]

**ಬಾಯ್ಗೂಡು**, ಬಾಯಿಗೂಡು (ಕ್ರಿ). ೧. ಒಕ್ಕೊರಲಾಗು; ಏಕಕಂಠ ವಾಗು : ನೋಡಿದರಾನಂದಿಸಿದರು ಪೌರರು ಬಾಯ್ಗೂಡಿ ಬಣ್ಣಿಸಿ

ಪೊಗಳದರು (ಕುಂಠಸಾಂ. ೬-೦೪೬). ೨. (ಆಯುಧ ಮೊದಲಾದುವುಗಳ) ಬಾಯಿ ಅಥವಾ ಧಾರೆ ಹರಿತವಾಗು,– ಮಸೆದು ತೀಕ್ಷ್ಣವಾಗು : ಬಾಯ್ಗುಗ್ಗಿಡಿದುದಾ ಕುಸುಮಾಸ್ತ್ರನ ಚಕ್ರವಿದೆಂಬೆಸಕಮನಾಳ್ದತ್ತು ಪಸದನಂ ದ್ರೌಪದಿಯಾ (ಪಂಪಭಾ. ೩-೯೭). ೩. ಮುದ್ದಿಸು ; ಚುಂಬಿಸು: ಸಾರ್ಚಿ ಬಾಯ್ಗೂಡಿ ವಿಲಾಸದಿಂ ಕಿಲಿವ ಪಾರಿವಂ . . . ಕುಕಿಲ್ವ ಪಿಕಂ ವಿಯೋಗಿಗೇಂ ಮಾಡದೆ ಪೋಕುಮೇ ಮದನನಂಡಲೆಯಂ (ಕಾಕಾಂ. ೦-೩೨); ಇಲ್ಲಿ ಬಾಯ್ಗೂಡಿದವದಿಲ್ಲಿ ಸರಸಕ್ಕೆಳಸಿ ಕೂಡಿದವು (ವಂಶಾಅ. ೩-೨-೨೯). ೪. (ಲೆಕ್ಕ ಖರ್ಚು ಮುಂತಾದುವು) ಹೊಂದಾಣಿಕೆಯಾಗು ; ಸರಿದೂಗು : ಇಷ್ಟು ವೆಚ್ಚಗಳು ಬಾಯ್ಗೂಡಿಯೂ ಉಳಿತಾಯವಿತ್ತು (ಕ್ರೀಪುತ್ರ. ೨೪೪). **ಬಾಯಿಗೂಡು** : ೩. ಮಡಿಸಿದೆಲೆಯ ಗಳಿಗೆಯ ಕೆಂಬಲ್ಲುದಿಗಡಸಿ ಬಾಯೊಳು ಬಾಯಿಗೂಡಿ ತುಡುಕುತ್ತ ಸವಿಮುತ್ತ ನಿವಗೀವ ಪುಣ್ಯವ ಪಡೆವುದೆಂದಿಗೆ ನಾನು (ಕೇಶಿಪ. ೯-೦೨೫). ೪. ಖರ್ಚು– ಜಮಾ ಬಾಯಿಗೂಡಿತು (ಒಂಕಚ. I. ೦೭೩). [ಬಾಯ್ + ಕೂಡು₁]

**ಬಾಯ್ಗಿಡು** (ಕ್ರಿ). ೧. ಬಾಯಿ ರುಚಿಯಿಲ್ಲದಾಗು, –ರುಚಿಗೆಡು : (೪). ೨. ಕಳವಳಿಸು ; ದುಃಖಿಸು : ಕುತ್ಸಿತರ್ . . . ಪರೀಷಹಂಗಳಡಸಿ ದಂದುದೆಸೆಗೆಟ್ಟು ಬಾಯ್ಗೆಟ್ಟು ಮಱುಗುತ್ತಿರ್ಪರ್ (ಧರ್ಮಾಮೃ. ೦-೦೬೪). 'ಬಾಯಟಿ' ಪರಾ. ೩. ಕೆಟ್ಟ ಮಾತನ್ನಾಡು ; ದೋಷಾರೋಪಣೆ ಮಾಡು (?) : ಉನ್ಮತ್ತವಪ್ಪ ವಿಶ್ವಾಸಘಾತುಕಂಗೆ ವಂದಿಸಿ ನಿಂದಿಸುವಂಗೆ ಹಿಂದೆ ಮುಂದೆ ಬಂದುದ ಬಾಯ್ಗಿಡುವಂಗೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಸಂಧಿಸನವರಿಗೆ (ವಚನಪ. ೨೬೦-೯೬). [ಬಾಯ್ + ಕೆಡು₁]

**ಬಾಯ್ಗಿಯ್** (ಕ್ರಿ). ದೊಡ್ಡ ಧ್ವನಿ ಮಾಡು ; ಅಬ್ಬರಿಸು : ವರಾಹರೂಪದ ಮೂಕದಾನವಂ . . . ಬಾ[ಯ್ಗಿ]ಯೆ ದಿಗ್ಗಜಂ ಪೆಱಗಿಟ್ಟುವಾಂ [ತ]ರದ ತೆಟ್ಟನೆ ದಾಡೆಗುಟ್ಟೆ ಕಟಲ್ದು ತಾರಗೆಗಳ್ ನಭಂಬೆರಸು ಬಿರ್ದುವು (ಪಂಪಭಾ. ೮-೦೫) ; ಇನ್ನು ನಿಮ್ಮ ಸಟೆಗಳ ಸರಗಳನ್ನು ಪವಣಿಸಿ ಬಾಯ್ಗ್ಗಿಯ್ದು ಕತೆಗುಟ್ಟಿರಿ (ಕಲ್ಯಾ. ೩೦-೦೨). [ಬಾಯ್ + ಕೆಯ್₁]

**ಬಾಯ್ಗೇಡಿ** (ನಾ). ಬಾಯಿಗೆ ಬಂದಂತೆ ಮಾತಾಡುವವನು,– ಗಳಹುವವನು : "ಜಲ್ಪಾಕ, ವಾಚಾಲ, ಬಹುಗರ್ಹ್ಯವಾಕ್-ಬಾಯ್ಗೇಡಿ" (ಚಾಕಚಾ. ೪). 'ಬಾಯ್ಗೇಡಿತನ' ಪರಾ. [ಬಾಯ್+ಕೇಡಿ₁]

**ಬಾಯ್ಗೇಡಿತನ** (ನಾ). ಬಾಯಿತೀಟೆ ; ಬಾಯಿಚಪಲ : ಬಾಯ್ಗೇಡಿತನದೊಳೇನೆಂದಾದೊಡಂ ಜರೆದು ಬಯ್ದುಮೇ ಪಟುಭಟರ್ (ಶಬರ. ೪೯-೦೩). [ಬಾಯ್ಗೇಡಿ + – ತನ]

**ಬಾಯ್ಗೊಬ್ಬು**, ಬಾಯಿಕೊಬ್ಬು (ನಾ). ಮಾತಾಡದೆ ಇರಲಾಗದಂತಹ ಚಪಲ : ಬಾಯಿತೀಟೆ : ಬಾಯ್ಗೊಬ್ಬಿನಿಂದಲನ್ಯರನು ಜಱೆಯಲಾಗದು (ತಮ್ಮಣಾಂ. ೬-೦೭) ; ವಂದೆಗಳ ಬಾಯ್ಗೊಬ್ಬು ಪಿಂದೆ ನಾರಿಯ ರೆಡೆಯೊಳ್ (ಅದ್ಭುತ. ೪೬-೦೦). **ಬಾಯಿಕೊಬ್ಬು** : ಬಯ್ವ ಜನರು, ಜರಿವ ಜನರು, ಅವರಿಗೇನು, ಬಾಯಿಕೊಬ್ಬು ನೋವ ತಗೆವರೆ ? (ಕೆಂಶೋ. ೬೦-೨೦). [ಬಾಯ್ + ಕೊಬ್ಬು₂ (<ಕೊರ್ವು₂)]

**ಬಾಯ್ಗೊಲೆ** (ನಾ). ಬಾಯಿಂದ ಕಚ್ಚಿ ಕೊಲ್ಲುವಿಕೆ : ಕಯ್ಗೊಲೆ ಬಾಯ್ಗೊಲೆ . . . ಕೋಲ್ಗೊಲೆಯಂ ಕಲಿವ ಕಡುಬಿನ್ನಣಂಬಡೆದು ಕಟ್ಟಾಳ್ಗಳನೆಬೆತ್ತಿಂತು ಗಜಾರೋಹಣಧುರೀಣರಾದಾ ಧೋರಣರ್ ನೆರೆ ನೆರೆದು (ಕಾಕಚ. ೬-೦೦ ಆ). [ಬಾಯ್ + ಕೊಲೆ₂]

**ಬಾಯ್ಗೊಳ್** (ಕ್ರಿ). ೧. ಧ್ವನಿಮಾಡು ; ಕೂಗು : ತಳಿತ ಪಾಲ್ಮರನೇಱ ಪಿಂಗಲಿ ಬಳಿದು ಬಾಯ್ಗೊಂಡವು ಸರಾಗದಿನೊಲಿದು ದಂಪತಿ ತಾಱನಿತ್ತುವು ಕರಿಯ ಹಕ್ಕಿಗಳು (ಕೋಠಾ. ೦-೬-೬). ೨. ಬಾಯಲ್ಲಿ ಸೇರು; ಬಾಯಿಮಾತಾಗು : ಮಹಾಕವಿಯಾದ ಅವನ ಹೆಸರನ್ನೊಂದಿದ ಆ ನಾಮವು . . . ಮತ್ತಿನವರ ಬಾಯ್ಗೊಂಡು ರೂಢವಾದುದಾಗಿರಬೇಕು (ಶಾಶೋಇ. ೦೬೨). [ಬಾಯ್ + ಕೊಳ್₁]

**ಬಾಯ್ಚಳಕ** (ನಾ). ಮಾತಿನಲ್ಲಿರುವ ಚಾಲಾಕು,– ಜಾಣ್ಮೆ,– ಕೌಶಲ ; ವಾಕ್ಚಾತುರ್ಯ : ಕೈಚಳಕ ಬಾಯ್ಚಳಕದಿಂದ ಸಮಾಜದ ದುಡ್ಡನ್ನು ಹೀರಿ ಸ್ವಾರ್ಥ ಸಾಧಿಸುತ್ತಿರುವ ಶೀಲಭ್ರಷ್ಟರ ಕುಲ, ಯಾವ ಕುಲ ? (ಹುತ್ತಕ್ರ. ೦೬೯). [ಬಾಯ್ + ಚಳಕ₁]

**ಬಾಯ್ಚು** 'ಬಾರ್ಚು' ನೋ.

**ಬಾಯ್ಚೆರೆ** 'ಬಾಯ್ದೆಱೆ₁' ನೋ.

**ಬಾಯ್ದಂಬುಲ** (ನಾ). ಬಾಯಲ್ಲಿಯ ತಾಂಬೂಲ; ಎಂಜಲು : ನಿನಗೆ ಕಿಂಕರವೆರಡು ಸಂತತಿಯೆನಿಸಲೊಲ್ಲದೆ ನೀನು ದುರಿಯೋಧನನ ಬಾಯ್ದಂಬುಲಕೆ ಕೈಯಾನುವರೆ ಹೇಳು (ಕುವ್ಯಾಉ. ೦೦-೯). [ಬಾಯ್ + ತಂಬುಲ]

**ಬಾಯ್ದಣಿ** (ಕ್ರಿ). ಬಾಯಿ ಸೋತುಹೋಗು : ಬಾಯ್ದಣಿಯೆ ಬೈಗುಳಿನಲುಭಯದಳ ಕಯ್ದುಗಾಱರು ನೀಗಿದರು ನಿಜಪತಿಯ ಹಣರುಣವ (ಕುವ್ಯಾಕ. ೦೯-೦೦). [ಬಾಯ್ + ದಣಿ₁ (< ತಣಿ₁)]

**ಬಾಯ್ದಾರ** (ನಾ). ಚೀಲ, ಹಸಿಬೆ ಮೊದಲಾದುವುಗಳ ಬಾಯನ್ನು ಕಟ್ಟುವ ದಾರ : ಚಿನ್ನದ ಚೀಲಕ್ಕೆ ರನ್ನದ ಬಾಯ್ದಾರ (ಜಗೀಕ. ೨೦). [ಬಾಯ್ + ದಾರ₁]

**ಬಾಯ್ದಾರೆ** (ನಾ). ಕತ್ತಿ, ಕುಡುಗೋಲು ಮೊದಲಾದುವುಗಳ ಹರಿತವಾದ ಅಂಚು : "ಬಾಯ್ದಾರೆಗಳೆಂದಸಿಧಾರೆಗಳೊಳ್" (ಕಪಾಠ. ೩೯); ಬಾಯ್ದಾರೆ ನಿಲೆ ಕುಮಾರಂ ಪೊಯ್ದೊಡೆ . . . ಪಱಿದುದಾ ವಂಶವನಂ (ಕಂಠಾಮಾ. ೯-೨೩); ಬಾಳ ಬಾಯ್ದಾರೆಯ ಸೋಂಕಿಂದು ಕದಳೀದಳಸ್ಪರ್ಶನಕ್ಕೆ ದರ್ಪಂಗೆಟ್ಟೊಪ್ಪಂಗುಂದುತ್ತುಂ (ಗಿಂಠ. ೪-೦೦೬೮). [ಬಾಯ್ + ದಾರೆ₁]

**ಬಾಯ್ದುಂಬಿಸು** (ಕ್ರಿ). ಬಾಯಲ್ಲಿ ಗಿಡಿ, – ತುರುಕು : ಬಿಸಿಯ ಮಳಲಂ ತರಿಸಿ ಬಾಯ್ದುಂಬಿಸಿದಮಂ ನಾನು (ಚಕಪು. ೦೦-೧೯). [ಬಾಯ್ + ತುಂಬಿಸು]

**ಬಾಯ್ದುತ್ತು**, ಬಾಯಿದುತ್ತು (ನಾ). ಬಾಯಿಗೆ ನೀಡುವ ಆಹಾರ; ಬಲಿ ; ಆಹುತಿ : ಶಸ್ತ್ರಾವಳಿಯ ಬಾಯ್ದುತ್ತುಗಳ ಸೆಳೆಯದಿರೆಂದರುಬ್ಬಿ ನಲಿ (ಕುವ್ಯಾಕ. ೨-೦೮). **ಬಾಯಿದುತ್ತು** : ಕಾಲನ ಬಾಯಿದುತ್ತಾಗಿ ಸತ್ತು ಹುಟ್ಟುವರೆಲ್ಲ . . . ಎತ್ತ ಬಲ್ಲರು ಲಿಂಗ ಭೋಗೋಪಭೋಗಿ ಶರಣನ ಲಿಂಗಸುಖವ ? (ಷೋಸ್ತಾಶಾ. ೦೩೨ ತ್ರಸ್ತಾವಚ). [ಬಾಯ್ + ತುತ್ತು₂]

**ಬಾಯ್ದೆಗೆ**, ಬಾಯಿತೆಗೆ (ಕ್ರಿ). ೧. ಬಾಯನ್ನು ತೆರೆ ; ಬಾಯಿ ಬಿಡು : ಸುರಿವ ಖಂಡದ ರಕುತಧಾರೆಗೆ ತರತರದಿ ಬಾಯ್ದೆಗೆದು ಶಾಕಿನಿಯವರ ಸಮೂಹವು ಬಳಿಯಲೈದಿತು ಪಾರ್ಥನಂದನನ (ಕುವ್ಯಾದ್ರೋ. ೬-೯೦) ; ಅಗಣಿತಾತ್ಮಕನೆನಿಪ ಹರಿಚರಿತಗಳನಂತವ ಮುನಿವರನು ಬಾಯ್ದೆಗೆದು ಪೇಳಲು ಶೇಷಗೆಯು ಶ್ರುತಿನಿಕರಕಳವಲ್ಲ (ಕಠಾಗ. ೦೦-೯-೨). ೨. ಬಿರಿ; ಬಿರುಕುಬಿಡು : ಅರಮನೆಯೊಳಗೆ ನೆಲ ಬಾಯ್ದೆಗೆದುದು (ಶಾಲ್ಮಶಾ. ೨೦-೩೪). ೩. ಅರಳು : ವಿಕಾಸವಾಗು : ಮುಗಿದು ದಬ್ಬಾಳಿ ಬಾಯ್ದೆಗೆದುದುತ್ಪಲನಿಕರಮುಗಲ್ದುದು ರಥಾಂಗಕುಲಂ (ಶಂಕು. ೪೯-೨೯). **ಬಾಯಿತೆಗೆ** : ೪. ಮಾತನಾಡಲು ಆರಂಭಿಸು: ಸಭೆಯಲ್ಲಿ ಆ ಹಿರಿಯರು ಬಾಯಿತೆಗೆದ ಕೂಡಲೆ ಜನಸಂದಣಿ ತನ್ಮಯತೆಯಿಂದ ಆಲಿಸಿತು (ಲೂಕ). [ಬಾಯ್ + ತೆಗೆ₁]

**ಬಾಯ್ದೆರೆ₁** 'ಬಾಯ್ದೆಱೆ₁' ನೋ.

**ಬಾಯ್ದೆರೆ₂** 'ಬಾಯ್ದೆಱೆ₂' ನೋ.

**ಬಾಯ್ದೆಱಸು** (ಕ್ರಿ). ೧. ಬಿರಿಯುವಂತೆ ಮಾಡು ; ಬಿರುಕು ಬಿಡುವಂತೆ ಮಾಡು : ಬಳಥಾರಂ ಭೂಮಿಯಂ ಬಾಯ್ದೆಱಸೆ . . . ಪರ್ವಿತ್ತ ಮರಪಥಮನಾ ಸೈನ್ಯಧೂಳೀಕವಿಸ್ರಂ (ಜಗೆ. ೦೩-೦೧). ೨. (ಆಸೆಯಿಂದ) ಬಾಯಿಬಿಡುವಂತೆ ಮಾಡು ; ಹಂಬಲಿಸುವಂತೆ ಮಾಡು : ಗಾಳಿಯೊಳಹ್ಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ ಬಾಳೆ ಬಾಯ್ದೆಱ[ಱ]ಸುವವು ಬಿರಿವಣ್ಣನ ರಸಾಪಳಿಗೆ ಬಾಲಕಿನ್ನರಿಯರನು (ಕೊರಶಾ ೩-೩-೧೩). [ಬಾಯ್ + ತೆಱಸು (< ತೆಱೆಯಿಸು)]

**ಬಾಯ್ದೆಱೆ**[1], ಬಾಯಿತೆರೆ, ಬಾಯಿದೆಱೆ[1], ಬಾಯ್ತೆರೆ, ಬಾಯ್ದೆರೆ[1] (ಕ್ರಿ). ೧. ಬಾಯನ್ನು ತೆಗೆ,— ಬಿಚ್ಚು ; ಬಾಯಿಬಿಡು : ಆ ವಿಟ್ಟು ಪೋ ಬಾಯ್ದೆಱೆದತ್ತು (ಶಾಂತಿಪು. ೯-೧೨) ; ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆಱೆಯೆನಯ್ಯಾ (ಏಕತ. ೯) ; ಮೂಱ ಬಾಯ್ದೆಱೆದಳೋ ಮಹಾದೇವ (ಕುಮ್ಮಾರ್ಕ್ರೋ. ೫೦-೨೯೩-೦೦). ೨. ನುಡಿ ; ಮಾತಾಡು : ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಶಂಕಶಾ. ೬-೬೬) ; ಮತಿವಂತಂಗರ್ದೆದೆಱೆದನಲ್ತೆ ಬಾಯ್ದೆಱೆದಾತಂ (ಶಾಂತಿಪು. ೨-೩೬) ; ಬಾಯ್ದೆಱೆಯಲಂಜತು ಸಭೆ (ಏಕಾಗ. ೯-೯-೦೯). ೩. ಬೇಡಿಕೊಳ್ಳು ; ಅಂಗಲಾಚು ; ಯಾಚಿಸು : ಹುಯ್ಯಲ ಕಂಡು ಬಿರುತೋಡಿ . . . ಬಾಯ್ದೆಱೆವವಂ ರಾಜನೇ ಹಗರಣದ ರಾಜನಲ್ಲದೆ (ಕಂಪು. ೬-೧೨). ೪. ಬಯಸು ; ಹಂಬಲಿಸು : ಪುದಿದುರಿಗಣ್ಣನಾಣೆಯುನದೇವೊಗಟ್ಟಿಂ ಮುಗುಳೆಂದು ಮುಟ್ಟಬಾರದು ಬನಮೆಂದು ಬಾಯ್ದೆಱೆಯಬಾರದು ಸಂಪಗೆಯೆಂದು ಸೂಡಬಾರದು (ಕಬ್ಬಿಗ. ೦೯೬) ; ಸುತನ ಬರವಿಗೆ ಬಾಯ್ದೆಱೆದ ತೆಱದಿ ಪರಮಸತಿಗಾಗುಳಿಕೆ ಬಂದುದು (ಏಕಪ. ೬-೨). ೫. ಅರಳು; ವಿಕಾಸವಾಗು : ಮಱುಗಿದವು ಕೋಕ ಕೋಕನದಂಗಳಾಗ ಬಾಯ್ದೆಱೆದುವು ಚಕೋರ ಕೋರಕಕುಮುದರಾಜಿಗಳ್ (ಕೈಏಶಾ. ೨೬-೦೯). **ಬಾಯಿತೆರೆ** : ೧. ರುಕ್ಮಿಣಿಯೂ ಗರ ಬಡಿದವಳಂತೆ ಬಾಯಿ ತೆರೆದುಕೊಂಡು ನೋಡುತ್ತಿದ್ದಳು (ಕರ್ಮಸ. ೨೦೬). ೨. ಭಾವ ಬಾಯಿ ತೆರೆಯುವ ಸ್ಥಿತಿಯಲ್ಲಿರಲಿಲ್ಲ (ಶಾರದಾ. ೯೨). ೩. ಎರಡನೆಯವರಿಗೆ ನಾನು ಎಂದೂ ಬಾಯಿ ತೆರೆದವನಲ್ಲ (ಮುಂಬಯು. ೯-೯೩). ೪. ಪ್ರತಿಯೊಬ್ಬನೂ ಲಂಚಕ್ಕಾಗಿ ಬಾಯಿ ತೆರೆದು ಕೊಂಡಿರುವಾಗ, ನನ್ನೊಬ್ಬನಿಂದ ಲಂಚನಿರ್ಮೂಲನ ಹೇಗೆ ತಾನೆ ಸಾಧ್ಯ? (ಪ್ರಶಕು. ೫೬೭). **ಬಾಯಿದೆಱೆ**[1] : ೧. ಪ್ರಾಣಪದವಾದಿರವಿಗಲ್ಲದೆ ಬಾಯಿದೆಱೆಯದು ಕರಮಸೆವ ಸಿಂಪೋಂದು ನೆನವುತವಿಃಹುದು ಮಳೆಗಳಿಗೆ (ಏಕಪು. ೩೦-೨೯). **ಬಾಯ್ತೆರೆ** : ೧. ಜಯಸೇನನು ಮಾಧವಿಯೆಂದು ಹೇಳುವುದಕ್ಕೆ ಬಾಯ್ತೆರೆಯುವಷ್ಟರಲ್ಲಿ ಅವಳು . . . ಮಾತಾಡಬಾರದೆಂದು ಸಂಜ್ಞೆ ಮಾಡಿದಳು (ಪುಕಸ. ೯೭) ; ಗಳಗಳನೆ ಬಾಯ್ತೆರೆದು ಶಾಯಿಯಳುತಿಹಳು (ಕಾಒಶ. ೦೬೨-೩೬೩). ೨. ಸಯ್ಯಿರ್ಪುದೀಗ ನೀಂ ಬಂದಾಗ ನೋಳ್ಪಂ ಕಯ್ಯುಡಿಯೊಳಕಲಿರ್ಪುದೊಳ್ಕಿತನೆ ಬೀಳ್ಕೊಂಡ ಬಾಯ್ತುರಯದೆಯೊ ಕಾಳು (ಕಾಒಶ. ೦೯೩-೩೦೩). ೫. ಚೆಂದೆಂಗು ತಲೆದೂಗೆ ಕೆಂದಳಿರ್ ಬಾಯ್ತುರೆಯೆ (ಕಾಒಶ. ೬೭-೦೦೩). **ಬಾಯ್ದೆರೆ**[1] : ೧. ಬಹುಗುಣಿತ ಜನಗಣದ ಸಂಸ್ತುತಿಯ ಧವಳಧಾರಾಸ್ವಾತಿವರ್ಷಕ್ಕೆ ಬಾಯ್ದೆರೆಯುತಿನ್ನ ಹೃದಯದ ಭಕ್ತಿಶುಕ್ತಿಯಲಿ ಮುತ್ತುಗಳ ರಚಿಸಿ ಕೋದಿಹೆ ವರಣಮಾಲೆಯಂ (ಕಕ್ಯಾಂಗ. ೩೭-೦೦೦೩) ; ಕಟ್ಟಿಳಲ ಬಿಚ್ಚಿ ಕರು ಕರೆಯೆ ಬಾಯ್ದರೆದು (ಕಾಒಶ. ೬೭-೦೦೭). ೨. ದಾರಿಗನು ಬಾಯ್ದರೆಯುವುದರೊಳಗಾಗಿ ಮೂವರು ಸೈನಿಕರೂ, ಸೈನ್ಯಾಧಿಪತಿಯೊಬ್ಬನೂ. . . ಮುಂದೆ ನಿಂತರು (ಪುಕಸ. ೬). ೪. ಕುದಿಯಿಲ್ಲದೆ ಎಸರಿಲ್ಲದೆ ಕಸಂಕಿಗೆ ಬಾಯ್ದರೆದವು (ಕಂಮು. ೨೩-೯). [ಬಾಯ್ + ತೆಱೆ[1]]

**ಬಾಯ್ದೆಱೆ**[2], ಬಾಯಿದೆಱೆ[2], ಬಾಯ್ದೆರೆ[2] (ನಾ). ೧. ಬಾಯನ್ನು ತೆರೆದಿರುವ ಸ್ಥಿತಿ; ತೆರೆದ ಬಾಯಿ : ಲಲನೆ ಮುದ್ದಾಡುತ್ತ ಬಾಯ್ದೆಱೆಯೊಳಗೆ ಕಾಣಲೆ ಸಕಲಭುವನಾವಳಿಯನು (ಏಕಾಗ. ೨-೩-೨೩). ೨. ತುಟಿ ; ಅಧರ : ಮಿಸುಗುವ ತನ್ನ ಬಾಯ್ದೆಱೆಯೊಳಿಾಲದ ವಣ್ಣನೆ ಮೈಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸಳೆಗೊಂಬನೆ ಪೋಲ್ತು ನೋಡ ಮಾನಸಯಣಮಲ್ಲಳೀಕೆ (ಅಂಪು. ೦೨-೩೬) ; ಬಾಯ್ದೆಱೆಯಂ ಧವಳಿಸೆ ನಿಜದಂತಕಾಂತಿಸಂತಾನಂಗಳ್ ಪೂರ್ಣೇಂದುವದನೆ . . . ನೆಱೆ ನುಡಿದಳ್ (ಮುಲ್ಲಪು. ೯-೬೭); ಮಾತನಾಡಿದ ಬಾಯ್ದೆಱೆಯ ಚೆಲ್ವನೆ ಕಂಡು ಸೋತನೀಶ್ವರ ಮನದೊಳಗೆ (ಪೋಹಕ. ೨೩-೦೯). ೩. ಬಿರುಕು; ಬೀಡೆ : ಎರೆಯ ಭೂಮಿಯ ಬಾಯ್ದೆಱೆ ಧಾನ್ಯಮಾನ್ಯರ ಕರೆವ ಗೋಳಿಗೆ ಗಂಡು ಮೊರೆವ (?) . . . ನಾಮಾಂಕಿತ ವರವೃಕ್ಷ ವಿಪಿನದೊಳಿಹವು (ಸೋಹಕ. ೭-೩). ೪. ಬಾಗಿಲು ; ದ್ವಾರ : 'ಚೆಂಬಾಯ್ದೆಱೆ' ಪರಾ. **ಬಾಯಿದೆಱೆ**[2] : ೫. ಬಾಯಿ ; ವದನ ; ಮುಖ : ಬಾಯಿದೆಱೆಯ ನಾಣೆಯಾಯ ತಪ್ಪದ ಗೀತಗಾಯಕಿಯರುಗಳೊಪ್ಪಿದರು (ಪೋಹಕ. ೦೩-೯೯). **ಬಾಯ್ದೆರೆ**[2] : ೧. ಭರದಿಂದ ಯಕ್ಕಲನ ಹೊಕ್ಕಿರಿದು ಕರಡಿ ಬಾಯ್ದರೆಯು ಮುಸುಡಂ ಮುರಿಯಲಿಕ್ಕಿ (ಪಪಮೋ. ೦೬-೨೩). ೨. ಮೊನೆಯ ನಗೆ ಬಾಯ್ದರೆಯು ಸೊಂಪ ಬೀರಿದುವು (ಕಾಒಶ. ೬೯-೧೨೦). ೬. ಬಾಯಿಮಾತು : ಬರೆಯದೆ ಇರುವ ಬಾಯ್ದರೆಯಾಗಿ ಹರಿದು ಬಂದ ಮತೀಯ ಆಚರಣೆಗಳ ಕಟ್ಟಳೆಗಳು, ಹಾಡುಗಳು, ಗಾದೆಗಳು ಸಹ ಸಹಾಯ ಮಾಡಬಹುದು (ಶಾಶಗೀ. ೫೦) ; ನನಗೆ ನಿಮ್ಮ ಆಸ್ತಿಯಿಂದ . . . ತೊಂದರೆಯಿಲ್ಲವೆಂಬುದು ಖಾತ್ರಿಯಾದ ಬಳಿಕ ಮಾತ್ರ ಕೊಟ್ಟೇನು. ಅದು ಬಾಯ್ದರೆ (ಪುಂಗಯು. ೦೯೯). [ಬಾಯ್ + ತೆಱೆ[2]]

**ಬಾಯ್ದಾರೆ**, ಬಾಯಿಧಾರೆ, ವಾಯಿಧಾರೆ (ನಾ). = ಬಾಯ್ದಾರೆ : ಕಠೋರದ ಮೊರಹುಗಳ ಬಾಯ್ದಾರೆಗಳ ಕಿಡಿಹೊರಳಿಗಳ ಹೊಗರಂಬು ಹೊಕ್ಕವು ಪಾಂಡುಸೈನ್ಯದಲಿ (ಕುಮ್ಮಾರ್ಕ್ರೋ. ೨-೩೩). **ಬಾಯಿಧಾರೆ** : ಈ ಉಭಯದ ತಟಿಗಾಜಿದೆ ಹೊತ್ತು ಹೋರುವ ಮಾತಿನ ಕತ್ತಿಯ ಬಾಯಿಧಾರೆಯು ಘಾಯಕ್ಕೆ ಇನ್ನೇತಱ ಮದ್ದು (ಸೋಳಪಾ. ೯೯-೦೬೦); ತಳಿತ ಹೊಗರಿನ ಬಾಯಿಧಾರೆಯ ಹೊಳಹುಗಳ ಹೊಗರಂಬು ಕವಿದವು (ಕುಮ್ಮಾರ್ಕ್ರೋ. ೫-೦೩). **ವಾಯಿಧಾರೆ** : ಹೊಳೆವ ಕೆಂಗಂಪುಗಳ ಮಹಾಳಿಯ ಲಲಿತರತ್ನದ ರೋಚಿಗಳ ಗಜಗಲಿಸುವಂಬಿನ ವಾಯಿಧಾರೆಯ ಕಿಡಿಯ . . . ಜ್ವಾಲೆಗಳೆನಲು ಹೊಕ್ಕನು ಮಹಾಹವವ (ಕುಮ್ಮಾರ್ಕ್ರೋ. ೫೦. ೨೯೯). [ಬಾಯ್ + ಧಾರೆ]

**ಬಾಯ್ನೀರ್**, ಬಾಯಿನೀರು (ನಾ). ೧. ಬಾಯಲ್ಲಿ ಬರುವ ನೀರು; ಜೊಲ್ಲು ; ಲಾಲಾರಸ : ಪಱಾದಶಿಯೊಳಿಲ್ಲದುದರ್ಕೆ ಬಾಯ್ನೀರೊಱೆತ್ತು ಬಣ್ಣಂಗುಂದುವರ್ (ಕಕಪಂ. ೯-೦೨). **ಬಾಯಿನೀರು** : ೨. ಬಾಯಲ್ಲಿ ನೀರು ಸುರಿಯುವಿಕೆ : ಶ್ವಾಸವು, ಕೆಮ್ಮು, ಬಾಯಿನೀರು . . . ಇನಿತುಂ ಕರ್ಣಿಕ ಸನ್ನಿಪಾತವೆಂದರಿವುದು (ಕಪ್ರ. ೦೬೦). [ಬಾಯ್ + ನೀರ್./ತಮಿ. ವಾಯ್ನೀರ್]

**ಬಾಯ್ನುಡಿ** (ನಾ). ಹುರಿಯ ಬಾಯಿಮಾತು ; ಬಾಯಿಬಡಾಯಿ : ನಿನ್ನನ್ನರಂ ಬಾಯ್ನುಡಿಯ ಬೀರರನ್ನೆನಿತೊ ಕಂಡಿಹೆನೊ ನಾಂ (ಕಕ್ಯಾಂಗ. ೬೯-೨೦೬೦). [ಬಾಯ್ + ನುಡಿ]

**ಬಾಯ್ಪರೆ** ' ಬಾಯ್ಪಱೆ ' ನೋ.

**ಬಾಯ್ಬಡಕ** 'ಬಾಯ್ಬಡಿಕ' ನೋ.

**ಬಾಯ್ಬಡಿ**, ಬಾಯಿಬಡಿ (ಕ್ರಿ). ೧. ಇನ್ನೊಬ್ಬರಿಗೆ ಮಾತಾಡಲು ಅವಕಾಶವಿಲ್ಲದಂತೆ ದಬಾಯಿಸಿ ಮಾತನಾಡು; ಇತರರು ಮಾತನಾಡದಂತೆ ಮಾಡು : ಪೊಡವಿಯೊಡೆತನವೆಮ್ಮದೆಂದು ಬಾಯ್ಬಡಿವರೇ (ಸೌಂದಪು. ೪-೬೭). ೨. ಬಡಾಯಿ ಕೊಚ್ಚಿಕೊಳ್ಳು : ವ್ಯಥಾಭಿಮಾನದಲಿ ಹಣಾಕಿ ಬಾಯ್ಬಡಿದೇನಹುದು ಕೈಗುಣವ ತೋಱಿರೆ

(ಕುವ್ಯಾ.ಸ. ೦೦-೩೯). **ಬಾಯಿಬಡಿ :** ೧. ಗುಣ ಮಾತನಾಡಿತು ಹಣ ಬಾಯಿಬಡಿಯಿತು (ಇಂಕಾಶ. ೫೦೩-೨) ; ಗಿರಾಕಿಗಳ ಬಾಯಿ ಬಡಿದ ಹಾಗೆ ಹೆಂಡ್ತಿ ಬಾಯಿಬಡಿಯೋಕೆ ಬರಬೇಡಿ (ಹೇಪುಕೊ. ೬) ; ತಪ್ಪ ಮಾಡುವುದು ಮೇಲೆ ಬಾಯಿಬಡಿಯುವುದು (ಕೂಕಳಾ. ೩೦).

[ಬಾಯ್+ಬಡಿ₁]

**ಬಾಯ್ಬಡಿಕ**, ಬಾಯಿಬಡಕ, ಬಾಯಿಬಡಿಕ, ಬಾಯಿಬಡುಕ, ಬಾಯ್ಬಡಕ (ನಾ). ೧. ಬಡಾಯಿ ಕೊಚ್ಚಿಕೊಳ್ಳುವವನು : ಒತ್ತಿ ನೀನೆನ್ನಂ ಬಲುಹು ಮಾಡುತ್ತ ಕಾಡಲದೆಂತು ಬಹುದಾನೆತ್ತಲ್ಕೆ ನೀನೆತ್ತಲೇತಜ ಮಾತು ಬಾಯ್ಬಡಿಕ (ಜಕವು. ೪೦-೯೬); ಬಟೀಯು ಬಾಯ್ಬಡಿಕನೇ ಶಿಶುಪಾಲನೀ ಪರಿ ನಡೆವುದೇಕೈ ಹರಿಯೊಡನೆ ಸಮಬೆಸನ ಬಿಂಕದಲಿ (ಕುವ್ಯಾ.ಸ. ೦೦-೬೬); ಕತ್ತ ಹಿಡಿದೀಗಳೀ ಬಾಯ್ಬಡಿಕನಂ ನೂಂಕು (ಕಂಕು. ೩೦-೨೩). (ಗು). ೨. (ಇನ್ನೊಬ್ಬರಿಗೆ ಮಾತನಾಡಲು ಅವಕಾಶ ಕೊಡದಂತೆ) ಬಹಳ ಮಾತನಾಡುವ ; ಅತಿಯಾಗಿ ಹರಟುವ : ಕೆಡುವೀ ಪ್ರಪಂಚವಂ ನಿತ್ಯವೆಂದೆಂಬ ಬಾಯ್ಬಡಿಕ ಮೀಮಾಂಸಕಾ ನೀಂ ಸುಮ್ಮನಿರ್ (ಹರ್ಮ್ಯಾ. ೦೦-೦೯) ; ಬಾಯ್ಬಡಿಕ ಹೆಂಗುಸ ಕೊಲುವೆನೆನುತುಗ್ಗಡದ ಕೋಪದಲೆತ್ತಿದನು ಖಡೆಯವ ನಸುರೇಂದ್ರ (ಕೂರಾ. ೩-೩-೩೬). **ಬಾಯಿಬಡಕ :** ೧. ನಾನು ಬಾಯಿ ಬಡಕನಲ್ಲದುದರಿಂದ ಜಗಳವನ್ನು ಬಯಸುವುದಿಲ್ಲ (ಹೋಲಡು. ೩೯); ಇದನ್ನು ತಿಳಿದೂ ತಿಳಿದೂ ತಾನು ಅಂಧಶ್ರದ್ಧೆಯ ಬಾಯಿಬಡಕರ ಬಾಲ ವಾಗಬೇಕೇ ? (ಏಕ್ಕಾ. ೬೯); ಬಾಯಿಬಡಕ ಬರದಲ್ಲಿ ಗೆದ್ದ (ಗಾದೆ). **ಬಾಯಿಬಡಿಕ :** ೧. ಹತ್ತಿರಕೆ ಕರೆವರು ಬಾಯಿಬಡಿಕರ ಜಗದ ಭಂಡರನು ಅರಸುಗಳು ದುಶ್ಶೀಲರೆಂಬುದನರಿಯದೇ ಜಗ (ಕುವ್ಯಾ.ದ್ರೋ. ೦೩-೬) ; ಬಾಯಿಬಡಿಕನಲಾ ವೃಥಾ ರಾಧೇಯ ಮದವೇಕಿನ್ನು . . . ನೀನುಳಿವಾಯತಿಕೆಯಿನ್ನೆಂತು (ಕುವ್ಯಾ.ಶ. ೨೬-೮). ೨. ಆಯತಿ ಹೆಣ್ಣು ಗಳೇನು ಗಹನವೆಂಬ ಬಾಯಿಬಡಿಕ ತವಕಿಗಳ ತಾಯಿ ನೀ ಕೆಡೆಮೆಟ್ಟು (ಮೋಹತ. ೨೬-೯೬). **ಬಾಯಿಬಡುಕ :** ೧. ರಾಯ ಬನ್ನವಿವಿದನೊಂದ ಚಿತ್ರಸೇನ್ನ ಬಾಯಿಬಡು[ಪಾಠಾಂ. ಡಿ]ಕನೆನ್ನದಿರು (ಕುರಾಜಾಂ. ೦೯-೬೦); ವರ್ಣಾಶ್ರಮಗಳಿಂದ ದೇಶ ಹಾಳಾಯಿತೆಂಬ ಬಾಯಿಬಡುಕರೂ ಬಹಳ (ಕಹಂ. VIII ಪುಟಸಂ೩). **ಬಾಯ್ಬಡಕ :** ೧. ಮಾತು ಹಡೆಯುವುದೆಲ್ಲ. ಮೌನಗರ್ಭದ ಬದುಕು ಬಾಯ್ಬಡಕಗೇನು ಗೊತ್ತು! (ಅಕಳು. ೩೬೯-೦೬); ಅಂಥಾ ಕಥೆಗಳಲ್ಲಿ ಅರ್ಥಕ್ಕರ್ಥ ಸಂಪ್ಯೆ ಊರ ಬಾಯ್ಬಡಕರ ಕಪೋಲ ಕಲ್ಪಿತವೆಂಬುದೇನೂ ಸುಳ್ಳಲ್ಲ (೬ಕ್ಕಿಉ.೩೯). ೨. ಕೊನೆಗೆ ಬಾಕ್ಕೀದಾರ, ಇಲ್ಲವೋ ಬಾಯ್ಬಡಕ ಸಾಯ್ಕಲ್‌ಸ್ವಾರ- (ಅಕಳು. ೩೪೭-೦೦).

[ಬಾಯ್ + — ಬಡಿಕ₂]

**ಬಾಯ್ಬಡಿಕತನ**, ಬಾಯಿಬಡಿಕತನ (ನಾ). ಜಂಬದಿಂದ ದಬಾಯಿಸಿ ಮಾತಾಡುವಿಕೆ ; ಜಂಬಕೊಚ್ಚಿಕೊಳ್ಳುವಿಕೆ : ಫಢ ವಿಕಾರವೆ ನವ್ವೊಡನೆ ಬಾಯ್ಬಡಿಕತನವೇ ಕುರುಮಹೀಪತಿಯೊಡನೆ ಹುಟ್ಟಿದೆಯಾದ ಕಾರಣ ಬಿಟ್ಟವು (ಕುವ್ಯಾ.ಸ. ೦೯-೯೬) ; ಗಂಡುತನವೇನಾಯ್ತು ಹೆ.ಕೆಳ ಭಂಡ ನೀ ಬಾಯ್ಬಡಿಕತನದಲಿ ತೊಂಡುಗೆಡೆವರೆ (ಕಾಕಾ. ೨೦-೫೦); ಅವ ನಿನ್ನಿಂದ ಬಾಯಲಿ ಬಲ್ಲಿದನು ಬಾಯ್ಬಡಿಕತನದಲಿ ಬಗುಳಿ ಬಾಲವನು ಕೊಳ್ಳಿಗಿಡಿಯಲಿ ಸುಡಿಸಿಕೊಂಡವ (ಕೂರಾ. ೬-೦೦-೩೬). **ಬಾಯಿಬಡಿಕತನ :** ಹಿರಿದು ರಕ್ಷಿಸಿದೊಡತಿಯೆಂದಾನರಿಯದುಸುರಿದೆ ನಿಮಗಿನಿತು ನಿಷ್ಠುರತೆಯಾದಡೆ ನಮಗಿದೇಕೀ ಬಾಯಿಬಡಿಕತನ (ಕೂರಾ. ೨-೦-೩೦). [ಬಾಯ್ಬಡಿಕ+—ತನ]

**ಬಾಯ್ಬಡಿಕಿ**, ಬಾಯಿಬಡುಕಿ (ನಾ). ಇನ್ನೊಬ್ಬರಿಗೆ ಮಾತನಾಡಲು ಅವಕಾಶವಿಲ್ಲದಂತೆ ದಬಾಯಿಸಿ ಮಾತನಾಡುವವಳು : ಕೊಡ ಸಮರ್ಥರ ಬೇಡಿದುದ ನೀವ್ ನುಡಿದು ತಪ್ಪುವರಲ್ಲಲೇ ಬಾಯ್ಬಡಿಕಿ ಯಿವಳೆಂದೆನ್ನರೆಲೆ (ಕೂರಾ. ೨-೨-೬). **ಬಾಯಿಬಡುಕಿ :** ರಿಪುರಾಯರಿಗೆ ದಾಸತ್ವವಾಗಲು ಬಾಯಿಬಡುಕಿ[ಪಾಠಾಂ. ಬಾಯ ಬಡಿಕ]ಯದಾರೊಡವೆ ತದ್ದಾಸ ಧನವಲ್ಲ (ಕುವ್ಯಾ.ಸ. ೦೩-೦೨). [ಬಾಯ್ಬಡಿಕ+ — ಇ₂]

**ಬಾಯ್ಬಡಿಕೆ** (ನಾ). = ಬಾಯ್ಬಡಿಕೆ : ನಿರ್ಬುದ್ಧಿವಂತೆ ಬಾಯ್ಬಡಿಕೆ . . . ಮಧುಗೋಷ್ಠಿಗೋರ್ಬಳೆಡೆಯಾಡುತಿರೆ ಕಂಡಾ ವಿದೂಷಕಂ ಸರ್ಬವದೊಳೆ ಲ್ಲರಂ ನಗಿಸುತಿವಳೀಗ ಹಸ್ತಿನಿಯೆಂದುಸಿರ್ದನು (ಕಂಕು. ೦೦-೨೩) ; ಹೆಣ್ಣೆ ವಾದಿಸಬೇಡ ಬಲ್ಲೆ ಬಾಯ್ಬಡಿಕೆಯೆಂದಳು ಖಿದ್ರು ಖಾತಿಯಿಂದ (ಕುರಂಗ. ೩-೨೦). [ಬಾಯ್ಬಡಿಕ + —ಎ₂]

**ಬಾಯ್ಬಿಡು** 'ಬಾಯ್ವಿಡು' ನೋ.

**ಬಾಯ್ಬಿಯ್ಯಗ** 'ಬಾಯಿಬೀಗ' ನೋ.

**ಬಾಯ್ಬೀಗ** 'ಬಾಯಿಬೀಗ' ನೋ.

**ಬಾಯ್ಮಚುಕ** (ನಾ). ಅಭಿವ್ಯಕ್ತಿಗೊಳ್ಳುವ ಪ್ರೀತಿ, —ವ್ಯಾಮೋಹ : ಸೂಳ್ವಡೆದ ಕೂಟಂ ಪಲ್ಲಟಂಬಾಯ್ವ ಬಾಯ್ಮಚುಕಂ ತಾಂಗಿಗಟಲ್ವ ನಾಣಳಿತನಂ . . . ಅಳುಂಬಂ ಕೂಟದೊಳ್ ನಲ್ಲರಾ (ಕಂವೃಕು. ೮-೬೬).

[ ಬಾಯ್ + ಮಚುಕ ]

**ಬಾಯ್ಮಾತು** ' ಬಾಯ್ವಾತು ' ನೋ.

**ಬಾಯ್ಮಿಡುಕು** (ಕ್ರಿ). ಧ್ವನಿ ಮಾಡು; ಮಾತಾಡು: ಬಟೆದೆ ಬಾಯ್ಮಿಡು ಕದಿರಿ ಮಟೆಯೊಳಡಗಿಡಗಿಬ್ಬರೊಂದಾಗಿ ನುಡಿಯದಿರಿ (ಸೌಂದಕು. ೦-೩೯).

[ಬಾಯ್ + ಮಿಡುಕು₁]

**ಬಾಯ್ಮುಚ್ಚು**, ಬಾಯಿಮುಚ್ಚು (ಕ್ರಿ). ೧. ಬಾಯಿ ಬಿಡದಿರು ; ಮಾತಾಡದಿರು ; ತೆಪ್ಪಗಿರು : ಬಾಯ್ಮುಚ್ಚಿರಲ್ ಚೆಲ್ವ ಪೆಣ್ (ಅಕ್ಕಸ್ವಾ. ೦೨-೨೩೩). **ಬಾಯಿಮುಚ್ಚು :** ೧. ಹಣ್ಣನ್ನು ತರುವಾಗ ಬಾಯಿಮುಚ್ಚಿಕೊಂಡಿರಬೇಕು ಅನ್ನುತ್ತೀಯಾ ? (ವುಂಕಳ. ೦೨೪). ೨. ಬಾಯಿ ಮುಚ್ಚಿಸು ; ಬಾಯನ್ನು ಕಟ್ಟು : ಮಾಯೆ ಎನ್ನ ಕಾಯು ವನ್ನುಪಾಯದಿಂದ ನೋಯಿಸಿ ಬಾಯಿಮುಚ್ಚಿ ಕೊಲ್ಲುತ್ತಾಳೆ ಕಾಯೊ ಲಕ್ಷ್ಮಿಯರಸನೆ (ಪುಂದ. ೦-೧೬೬ ಕಲ್ಪ೬). [ಬಾಯ್ + ಮುಚ್ಚು₁]

**ಬಾಯ್ಮೋಸ** (ನಾ). ಮಾತಿನ ತಪ್ಪು ; ಉಕ್ತಿದೋಷ : ಅನಿವರೊಳ್ ವ್ಯವಹರಿಪುದರ್ಕೆನಗೆ ತಿಳಿವಂತೆ ನಿರವಿಸಿ ರಾಯಸವಂ ದಯೆಗೆಯ್ವುದು ಇದಟಿಸೊಳೀನಾನುಂ ಕೆಯ್ಮೋಸ ಬಾಯ್ಮೋಸಂಗಳಳ್ಳೊಡವೊಲ್ಲೆಯಿಂ ಸೈರಿಪುದು (ಅಕವಂ. ೨೬-೯). [ಬಾಯ್ + ಮೋಸ]

**ಬಾಯ್ವಲ** (ನಾ). ಮಾತಿನ ಶಕ್ತಿ ; ವಾಗ್ಬಲ : ಚಲವಂ ತೋಳ್ವಲವುಂ ನೃಪಾಳನಳವಂ ನಾವಿನ್ನು[ಟಿ]ನ್ದೆಯ್ದಿ ಬಾಯ್ವಲದಿಂ ಬಣ್ಣಿಸದಿರ್ದ್ದ [ಳ]ಣ್ಣ (ಕಇಅ. ೨-೨-೪೦; 1058); ಪಲವುಂ ಮತಂಗಳಂ ಬಾಯ್ವಲದಿಂದಂ ಬಾದುಗೆಯ್ವ ಬಸನದೆ ಮೊಟ್ಟರ್ ಕೆಲಬರದನೊಲುವರೊಲ್ಲರ್ ಪಲರೆಂತುಂ ಮೋಕ್ಷಮಾರ್ಗಮಂ ಜಿನಮತಮಂ (ಶಮಶ. ಅನುಬಂಧ. I, ೩೬೩-೬೬). [ಬಾಯ್ + ಬಲ₁]

**ಬಾಯ್ವಸ** (ನಾ). ಬಾಯಿಯ ಉತ್ಕಟವಾದ ಅಪೇಕ್ಷೆ : ಬಾಯ್ವಸವೋಡ ದಂತಡರೆ ಚುಂಬಿಸಿಯುಂ ಬಗೆದೆಂತು ತಳ್ತೊಡಂ ಮೆಯ್ವಸವೋದದಷ್ಟು ಗಡ ಕಣ್ವಸವೋದದಿದೆಂತು ನೋಡೆಯುಂ (ಅರ್ಥಸಂ. ೬-೩).

[ಬಾಯ್ + ಪಸ₁]

**ಬಾಯ್ವಟಿ**, ಬಾಯ್ಬರೆ (ನಾ). ಬಾಯಿಂದ ಮಾಡುವ ಶಬ್ದ; ಬೊಬ್ಬೆ : ಸುರಿಗೆ ಶುಭುಂಲಗತ್ತಿಗೆ ಕರಗಂ ತಲೆವಂಡೆ ಮರುಳ ಬಾಯ್ವಟಿ ಪಟೆಯಾಗಿರ ಕಳದೊಳಿಯುಲಿರ್ದುವು ನೆರೆದು ನಿಶಾಚರರ ತಕ್ಕಿನೆಕ್ಕತುಳಂಗಳ್ (ಕಾವ್ಯಾ.ಶ. ೬೬). **ಬಾಯ್ಬರೆ :** ನಾನಾಶಕುಂತವ್ರಜಂ . . . ಪಾಮರಿಯ ಬಿರುದನಿಗೆ ಕೈವರೆಗೆ ಬಾಯ್ಬರೆಗೆ ಕಲ್ಲವಣೆ ಗೊಂದಿನಿತು ಪೆಳರಿ ಗಾರಾಗುತುಂ . . . ತೊಡಗಿದಪವನ್ನೊರ್ಮೆ ನೆಲ್ಲೀಮಿಗೆ

(ಶಬ್ದಾ.ಆಗ. ೫೪-೦೧೫೦). 'ಕೆಯ್ವಡಿ' ಪರಾ. [ಬಾಯ್+ಪಡಿ₁]

**ಬಾಯ್ವಡಿಗುಟ್ಟು** (ಕ್ರಿ). ಬಾಯಿಂದ ಜೋರಾಗಿ ಶಬ್ದ ಮಾಡು ; ಬೊಬ್ಬೆಯಿಡು : ಘಟೋತ್ಕಚನ ತಲೆಯಂತೆ ಮಾರುಳ ಕಾಳೆಗಕ್ಕಾರ್ವ ಸೂಲದ ತಲೆಗಳಂ ತಮ್ಮಟ್ಟೆಯಾಟಕ್ಕೆ ಬಾಯ್ವಡಿ[ಪಾಠಾಂ. ಯ್ವಡಿ] ಗುಟ್ಟುವ ಸಿಡಿದಲೆಗಳುಮಂ (ಅರ್ಜುನ. ೩-೪೦ ವ). [ಬಾಯ್ವಡಿ+ಕುಟ್ಟು₁]

**ಬಾಯ್ಮಾತು**, ಬಾಯಿಮಾತು, ಬಾಯ್ಮಾತು (ನಾ). ೧. ಬರಿ ಮಾತು ; ಶುಷ್ಕವಾದ ನುಡಿ ; ತೋರಿಕೆಯ ಮಾತು : ಈ ಬಾಯ್ಮಾತಿನೊಳೇ ವಂದಪುದಮ್ಮಣ್ಣಿ ಕಾದುಕೊಳ್ (ಶಂಕರಾ. ೦೨-೦೯೩). **ಬಾಯಿಮಾತು** : ೧. ನನ್ನ ಕನ್ನಡಾಭಿಮಾನವು ಬರೀ ಬಾಯಿಮಾತಿನಲ್ಲೇ ಉಳಿಯಿತು (ಕಂಗಾಳ್ಕ. II, ಮುನ್ನುಡಿ). ೨. ಮುಖತಃ ಹೇಳಿದ ಮಾತು ; ವ್ಯಕ್ತವಾಗಿ ನುಡಿದ ಮಾತು : ಬಾಯಿಮಾತಿನ ದಾಯದೊಳು ಶಮಗಾಯಿತೆಂದೇ ಹಂಕರಿಸಿ . . . ತರಣಿಯೋಪಾಯುಪರಿಯದವರಿಂಗೂರೆ ಯದಿರು ಮಾಯಹರ ಚಿತ್ಕಾಯ ಘನಗುರುರಾಯ ವಚನವನು (ಗಗಶಾ. ೦೬-೨) ; ಅವಳ ಬಾಯಿಮಾತಿನಲ್ಲಿ ಅರ್ಥವೊಂದಾದರೆ, ಕಣ್ಣಿನ ಭಾಷೆಯ ಅರ್ಥವೇ ಬೇರೆಯಾಗಿತ್ತು (ಪುಷರು. ೩೨೨). **ಬಾಯ್ಮಾತು** : ೧. ನಾವೀಗ ಬಾಯ್ಮಾತಿನ ಗೌಡಿಕೆಯನ್ನೂ ಸ್ವಪ್ರತಿಷ್ಠೆ ಯನ್ನೂ ಮೆರೆಸುವುದರಲ್ಲಿ ಮುಳುಗಿದ್ದೇವೆ (ಸ್ಮ್ರತಿ. ೩೬೦).

[ಬಾಯ್ + ಮಾತು₁]

**ಬಾಯ್ವಿಡು**, ಬಾಯಿಬಿಡು, ಬಾಯಿವಿಡು, ಬಾಯ್ಬಿಡು (ಕ್ರಿ). ೧. ಬಾಯನ್ನು ತೆರೆ ; ಬಾಯಿ ತೆಗೆ : ಕರಿಗಳ್ ಭೀಮಂ ಒಡಿದಡದರ್ಱೊಡೆ ಬಾಯ್ವಿಟ್ಟಲ್ಲದಗಾದುವು (ಶಂಕರಾ. ೨-೩) ; ನೀಂ ಭಕ್ತಿಯಂ ಮಾಡಿದ್ದೆ ನಿನ್ನಯ ಕೂರ್ಮೆಯೆಲ್ಲಿತೆನುತಂ ಬಾಯ್ವಿಟ್ಟು ಪುಯ್ಯಲ್ಟಿದಳ್ (ಕಾದಂಬ. ೬೬೨) ; ಪೆರ್ಗೆ ಮೇಟಲಂಜ ಬಜ್ಜಿಯಂ ಮಾಗಿಯ ಕೋಗಿಲೆಯಂತೆ ಬಾಯ್ವಿಟ್ಟಾಡದೆ (ಧರ್ಮಾಮೃ. ೦-೧೫೬). ೨. ಮಾತನಾಡು ; ನುಡಿ : ತಾಯಿ ಮೋರೆಯ ನೋಡಿಯೇನಾದುದೆಂದೊಡಂ ಬಾಯ್ವಿಡದೆ ಹಾಸನೋಸರಿಸಿ ಮಲಗಿದಳು (ಶಾಂತೀಶ. ೧೩೨-೨೫೦). ೩. ಆಶ್ಚರ್ಯ ಪಡು ; ಬೆರಗಾಗು : ಪೋಡಶಯುಕ್ತಿ ವರ್ಗತ್ತುದರ್ಕೆ ಬಾಯ್ವಿಟ್ಟರೆ ವಿಪ್ರಕೋಟಿ . . . ಯಮನಂದನನೇಂ ಕೊರೆದೆಲ್ಲದಿತ್ತನೋ (ಶಂಕರಾ. ೬-೪೯). ೪. (ನೋವಿನಿಂದ) ನರಳು ; ಚೀರು ; ಕಿರಿಚು : ನೊಂದು, ಬಾಯ್ವಿಡದಿನಿಸಪ್ಪೊಡಂ ಪೆಳಬಿದಳ್ಕದೆ . . . ಬಟ್ಟುವಿರ್ದ ನೆಲೆಯಂ ಕಿಲವನ್ನದಗಂಧಸಿಂಧುರಂ (ಶಂಕರಾ. ೦೦-೪೯) ; ಪಟ್ಟಿರ್ದ ನಾಯ ನಡುವಂ ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದುದು ತಿನೆ ಬಾಯ್ವಿಟ್ಟು ಲಲಿತಾಂಗನಿಡಿದಂ ಕೆಟ್ಟೆನೆನುತ್ತೋಡುವಾತನಂ ಮತ್ತೊರ್ವಂ ತಾಂ ಕಂಡು (ಧರ್ಮಾಮೃ. ೨-೩೬). ೫. ಮರುಗು ; ಸಂಕಟಪಡು ; ದುಃಖಿಸು : ಮತಿಗೆಟ್ಟಿರ್ದಗುಟ್ಟು ಬಟಲ್ದಟಲ್ದು ಬಾಯ್ವಿಟ್ಟು ಕುಯೋನಿಯೊಳ್ ತಿರಿದು ಪೋದುವು ಕಾಲಮನಂತಂ (ಸುಕುಮಾ. ೦೦-೬೨) ; ತಾಯ್ ಸತ್ತ ಶಿಶುವಿನಂತೆ ಬಾಯ್ವಿಡುತ್ತುಂ (ಧರ್ಮಾಮೃ. ೬-೦೪೪) ; ಘುಂಡೋದರಿ . . . ಬಸುಱ ಹೊಡೆದಳಲುತ್ತ ಗರಾವಿಕೆಗಟ್ಟು ಹೊರಳಿ ದಳಕಟ ಬಾಯ್ವಿಡುತ (ತೊರವೆ. ೩೬-೦). ೬. (ದೈನ್ಯದಿಂದ) ಬೇಡಿಕೊಳ್ಳು ; ಯಾಚಿಸು : ಇನಿಸಟ್ಟು ನೋಡಿ ನುಡಿಯೆಂದೆನಿತಂ ತಲೆಬಿದಂ ಕಪಿಂಜಲಂ ದೆಸೆದೆಸೆಗಂದು ಬಾಯ್ವಿಡುತಮಿರ್ದುದನಾಲಿಸಿದಂ (ಕಾದಂಬ. ೪೮೬) ; ತಂದೆ ಕರುಣಿಸು ವಿಶಾಪವನೆಂದು ಬಾಯ್ವಿಡುವ ಮಂದಮತಿಗಳಿಗೆ ದೊರಕದ ಲೇಸನೀಯಬೇಕು (ಸಿದ್ಧರಾ. ೦-೨೩) ; ಗತಿವಿಹೀನೆಗೆ ಕೃಷ್ಣ ನೀನೇ ಗತಿಯೆನುತ ಬಾಯ್ವಿ [ಪಾಠಾಂ. ಯ್ಬಿ]ತಲು ಲಜ್ಜಾಸ್ಥಿತಿಯನುಳುಹಿದ ದೈವ ನೀ ವ್ಯದೋಬಾದ್ಯ ತನಗೆ (ಕುಮಾವ್ಯಾ. ೨-೦೬). ೭. ಬಯಸು ; ಹಂಬಲಿಸು : ಘನದುಃಖಂಗಳನೆಯ್ದೆ ಮಾಟ್ಟ ವನಿತಾಸೌಖ್ಯಕ್ಕೆ ಬಾಯ್ವಿಟ್ಟು ದುರ್ಮಾನುಜಂ ಸಿಕ್ಕಿ ವಿಶೇಷದಿಂದೆ ಬಟಬುತ್ತಿರ್ಪಂ ದಲುತ್ತಜ್ಞನೆಂದೆನಿಪಂ ಬಾಯ್ವಿಡನಂಬುವೆಂಬ ಬಗೆಯಿಂ ಗಾಂಪಂ ಮರೀಚಿಜಲಕ್ಕನಸುಂ ಬಾಯ್ವಿಡುಮಂ ಪರೀಕ್ಷಕನದಕ್ಕಿಂ ತಾದೊಡಂ ಬಾಯ್ವಿಡಂ (ಶಾರಕ. ೩-೪೯). ೮. ಬಿರಿ ; ಬಿರುಕು ಬಿಡು ; ಸೀಳು : ನೆಲಂ ಮೊಟಿಗೆ ಕಂಪಿಸೆ ಬಾಯ್ವಿಡೆ ಬೆಟ್ಟು ಬೀಟಿ ಮಂದಿರಮಾಡಿದಟ್ಗಿ ತರ್ಗೆ . . . ಘನಾಗಮಡೊಳ್ ವಿನಿಂದಿತಂ (ಶಾಂತೀಶ. ೬-೬೪). ೯. ಚಿದರು ; ಸಿಡಿದುಹೋಗು : ಮಂದರದ ಘಾರಾಘಾರಿಯಲಿ ಬಾಯ್ವಿಡುವ ಕಡಲಂತೆ ಅರಿವರೂಥಿನಿ ಕದಡಿ ತಳಿತವು (ಕುಮಾವ್ಯಾ. ೦೨-೦೯). **ಬಾಯಿಬಿಡು** : ೨. ಅವನ ಆಗಿನ ಮನಸ್ಥಿತಿ ಯನ್ನು ಸರಿಯಾಗಿ ಅರಿತವಳ ಹಾಗೆ ತುಂಗಕ್ಕ ಮೆಲ್ಲನೆ ಬಾಯಿ ಬಿಟ್ಟಳು (ಮೂಕರು. ೪೨) ; ತಮ್ಮ ಯಜಮಾನ ಬಾಯಿ ಬಿಡುವುದನ್ನೇ ನಿರೀಕ್ಷಿಸುತ್ತ ರೈತರು ಅವನನ್ನೇ ನೋಡುತ್ತಿದ್ದರು (ಕಿಷರು. ೩೬೯) ; ಬಾಯಿ ಬಿಟ್ಟರೆ ಬಣ್ಣಗೇಡು (ಗಾದೆ). ೬. ಪಡೆದೊಡವೆಯ ಧರ್ಮಕೆ ಈಯುವವ ಬಾಯಿಬಿಡುವುದೆ ಪರರಿಗೆ ಸಾಕ್ಷಿ (ಪುರಂದ. ೨-೦೬-೨) ; ಭೃಷ್ಟದೈವಕೆ ಬಾಯಿಬಿಟ್ಟಲ್ಲಿ ಫಲವಿಲ್ಲ (ಸರ್ವಜ್ಞ. ೦೯೩). ೭. ಮುನ್ನೂಱುಮತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು ಅದು ಸ್ವಾತಿಗಲ್ಲದೆ ಬಾಯ್ದೆಱೆಯದು ಕೇಳು ಕೇಳಾ ತಂದೇ ಎಲ್ಲವಕ್ಕೆ ಬಾಯಿ ಬಿಟ್ಟರೆ ತಾನೆಲ್ಲಿಯ ಮುತ್ತಪ್ಪುದೊ (ಬಸವ. ೩೦೪) ; ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ ಹರಿ ಕೊಡದ ಕಾಲಕ್ಕೆ ಬಾಯಿಬಿಡುವ್ಯಲ್ಲೊ ಪ್ರಾಣಿ (ಪುರಂದ. ೦-೪೬ ಪಲ್ಲವಿ). ೧೦. ಗೌಪ್ಯವಾದುದನ್ನು ಬಯಲು ಮಾಡು,— ರಟ್ಟುಮಾಡು : ಇವನು ತಂದೆ ತಾಯಿ ಬಂಧು ಬಳಗದ ಹೆಸರನ್ನು ಬಾಯಿಬಿಡ (ಪಕಂಬಾ. II, ೬೩೬). **ಬಾಯಿವಿಡು** : ೧. ತುರಗದಟಿಂ ಪಡಲ್ವಡೆ ಕಡಂಗಿ ಘಟಾವಳಿ ತಾಗಿ ಮತ್ತ ನಿತ್ತರಿಸದೆ ಭೀತಿಯಿಂ ಪೆಳಱಿ ಬಾಯಿವಿಡೆ (ಎಕ. VIII. ಸಾಗರ. ೦೦೯-೨೬ ; 1042). **ಬಾಯ್ಬಿಡು** : ೧. ಒಡಿವ ಪುಲಿ ಕರಡಿ ಬಾಯ್ಬಿಡುವ ಭೂತಂಗಳೆಸುಗುಡಿವ ಪಾವುಗಳಟ್ಟಿ ಸುಡುವ ಕಾಳ್ಕಿಚ್ಚುಳಿಯಗೊತವು (ಕೈವಲ್ಯ. ೪-೨೬) ; ಬಾಯ್ಬಿಟ್ಟು ಹೇಳುವು ದಿಲ್ಲವೇಕೆ, ನಿನಗೀಗ ಬಾಯ್ಗೆ ನೀರು ಬಂದು ಮನ ಸೋತಿದೆಯೆಂದು ? (ಇಕ್ಕೇರಿ. ೨೬೯). ೫. ಸಂಸೃತಿದುಃಖದಿಂದೆ ಬಾಯ್ಬಿಟ್ಟು ಪಲುಂಬುವೆಲ್ಲ ಜನಮಂ ನಡೆ ನೋಡಿ (ಉದ್ಭಟ. ೦೦-೩೪) ; ಇರುಳು ತಸ್ಕರಬಾಧೆಯಲಿ ಭೂಸುರರು ಬಾಯ್ಬಿಡುತ್ತಿದೆಯಿಂದ್ರಪ್ರಸ್ಥಪುರವರವ (ಕುಮಾವ್ಯಾ. ೦೯-೨) ; ಹೆಂಡಿರುಗಳ ಬಿಟ್ಟೋಡಿದವರ . . . ಗಂಡನ ಬಿಟ್ಟು ಬಾಯ್ಬಿಡುತ್ತಿದ್ದ ಹೆಂಗಳಂಡಲೆಗಳನೇವೇಳ್ವೆ (ಶಂಕರಾ. ೦೦-೩೨). ೬. "ಬಾಯ್ಬಿಡು (ಬಾಯ್+ಬಿಡು)—ದೈನ್ಯೇ" (ಶಬ್ದಮ) ; ಬಟ್ಟಲ ಪಿಡಿದು ಬಾಯ್ಬಿಟ್ಟು ಕೇಳಿದರಿಲ್ಲ ಅಟ್ಟಡವಿಗೆ ಅತ್ತರಿಲ್ಲ (ಪುರಂದ. ಶಾ. ೨-೩೨-೩). ೭. ನೀನೊಲ್ಲ ದೆನೊಲ್ಲದಿರ್ದೊಡಮೇಂ ನಾನೆರಡಿಲ್ಲದೊಲ್ದೆ [ಲ್ದೆ]ನದಱಿಂ ಬೇಱಾರ ಬೇಟಕ್ಕೆ ಬಾಯ್ಬಿಡಲಾಱೆಂ (ಅನಂತ. ೦೦-೯೩). [ಬಾಯ್ + ಬಿಡು₁]

**ಬಾಯ್ಪೂಸು** (ಕ್ರಿ). ೧. ಬಾಯನ್ನು ಸವರು, — ಒರೆಸು. ೨. (ಆಲಂ) ಬಾಯಿ ಮುಕ್ಕಳಿಸು : ಸಮಕಟ್ಟಿಱಿಯದೆ ಹರಿಗರ್ಭ ಮೆತ್ತಿ ನಿಂದಿರ್ದ ಯಜ್ಞಮದು ಮೊದಲೊಳ್ ಶಾಸಮರ್ದಮಮರ್ದಿ [ರದೆ] ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್ (ಶಂಕರಾ. ೬-೯೩) [ಬಾಯ್ + ಪೂಸು₁]

**ಬಾಯ್ವೆಣ್ಣೆ**, ಬಾಯಿವೆಣ್ಣೆ (ನಾ). ನವಜಾತಶಿಶುವಿಗೆ ತಿನ್ನಿಸುವ ಬಜೆ ಮತ್ತು ಬೆಣ್ಣೆಗಳ ಮಿಶ್ರಣ: ಆತನುಂ ಚಂದ್ರಭುಕ್ತನೆಂದು ಪೆಸರನಿಟ್ಟು ಬಾಯ್ವೆಣ್ಣೆಯೊಡನೆ ಕಿಱುಕಿಱಿದೆ ನಂಜನೂಡಿ ಬೞಕೆ ಬಳೆದೊಡಾ ಹಾರದೊಳೊಡಲ್ ತಗುಳ್ದೊಂ (ವಡ್ಡಾರಾ. ೦೬೬-೨೪) .; ತಿರುತಲೆಯೂರ ಶಿವನ ಪ್ರಸಾದಮಂ ತಂದು ಬಾಯ್ವೆಣ್ಣೆಯುಕ್ಕಿದರತಿಸ್ವಾದುಮಂ (ಉದ್ಭಟ.

ಹ. ೨೦-೩) ; ಶಂಕರಶಿಶುಗೆ ಪರಮಪ್ರಸಾದದಿಂ ಬಾಯ್ವೆಣ್ಣೆಯಟ್ಟು ವೊಲೆಗೊಟ್ಟು (ಕರ್ಣಾ. ೨-೬೭). ಬಾಯಿವೆಣ್ಣೆ : ಊರೊಡೆಯ ಸಾಚರಸರು ಕರುವರ ಕಲ್ಲಗಾವುಂಡಂಗೆ ಬಾಯಿಬೆಣ್ಣೆಗೆ ಕೊಟ್ಟ ಮನೆ (ಕೊಲ್ಹಾ.ಶಾ. ೦೩-೩೮ : 1166). [ಬಾಯ್ + ಬೆಣ್ಣೆ]

**ಬಾಯ್ವೆಸ** (ನಾ). (ರತಿಕ್ರಿಯೆಯಲ್ಲಿ ಮಾಡುವ) ಚುಂಬನ ಮುಂತಾದ ಬಾಯಿಯ ಕೆಲಸ : ಮೆಯ್ವೆಸದಿಂ ಕೆಯ್ವೆಸದಿಂ ಬಾಯ್ವೆಸದಿಂ ಮಂತ್ರ ತಂತ್ರದಿಂದಂ ಸುಖಮಂ ಮೆಯ್ವಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ದನೆಟ್ಟುವೊಜಂಗಂ (ಕಾವ್ಯಾವ. ೬೭). [ಬಾಯ್ + ಬೆಸ₁]

**ಬಾಯ್ವೊಟಿ ?** (ನಾ). (?) : ತೋಳ ವಾಯಸದ ಮೊಲದ ಕರಡಿಯಾ ಸೊಲದೊಂದಿರದ ಬೆಂದ ಮೊರಡಿಯಾ ನರಿಯ ಕೋಡಗದ ಗೂಗೆ(ಬೆ) ಯಂದಮಂ ಮರೆಯ ಪಾಟ್ಮನೆಯ ಬಾಯ್ವೊಟಿಯಂದಮಂ . . . ಪೋಲ್ದೊಡಿಲ್ಲ ಮಟಿ (ಜಗ್ಗಮು. ೬-೮೨). [?]

**ಬಾಯ್ಸನ್ನೆ** (ನಾ). ಬಾಯಿಯ ಸಂಜ್ಞೆ ; ಮುಖದ ಇಂಗಿತ : ಕೈಸನ್ನೆ ಯಿಂದ ಕಾತರದಿಂದ ಪೊಯ್ವನು ಬಾಯ್ಸನ್ನೆಯಿಂದಾನು ಬೈವ ಮೈಸನ್ನೆ ಯಿಂದ ಚಿತ್ರದೊಳೊಡಗೂಡುವೆನ್ನೆಸರಲನ ಸಮರೂಪ (ಕುಮಾರಾಮ. ೨೬-೧೭೦). [ಬಾಯ್ + ಸನ್ನೆ]

**ಬಾಯ್ಸವಿ, ಬಾಯಿಸವಿ** (ನಾ). ೧. ಬಾಯಿಗೆ ಸಿಹಿಯಾದುದು,— ಮಧುರವಾದುದು : ಚಾರ ಚೋರ ವೀರರ ಕಥೆಯಾ ಬಾಯ್ಸವಿಯ ಮಾತುಗಳಂ ಬಟಿಕೆಯ್ವ ಚರ್ಚೆಯಲ್ಲ (ಅವಂತಿ. ೦-೩೬). ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು (ಕಮಠ. ೬೮ ಕ್ರಿಯೆ). ೨. ಬಾಯಿಗೆ ರುಚಿಯೆನಿಸುವ ಪದಾರ್ಥ ; ಪ್ರಿಯಂವಾದ ಖಾದ್ಯವಸ್ತು : ಕಲ್ಲ ಗವಿಯೊಳಗೊಕ್ಕ ಬಾಯ್ಸವಿಯ ನಾಲಗೆಯಿಂದೊಕ್ಕನೆ ಸವಚುತ ಮುಂಗಾರ ವನಿಯೊಳು ಮಿಕ್ಕಿರ್ದವಾ ಪುಲಿವಿಂಡು (ಅಪಂಚ. ೦೨-೪೦); ಹಸಿವಿಗೆ ಬಾಯ್ಸವಿ ಬೇಡ, ನಿದ್ದೆಗೆ ಹಾಸಿಗೆ ಬೇಡ (ಗಾದೆ). ಬಾಯಿಸವಿ : ೨. ಬಾಯಿಸವಿಗೆ ತಿಂದು ನಾಯಿಸಾವು ಸತ್ತ (ಗಾದೆ). [ಬಾಯ್+ಸವಿ₂]

**ಬಾಯ್ಸೋವು** (ನಾ). ಬಾಯಿಗೆ ಸಿಕ್ಕ ಬೇಟೆ,—ಬಲಿ : ಕೋಟಿಕೋಟಿ ಜನ, ವರ್ಷದ ಪೂವು, ತುರುಗಿತು ಜವರಾಯನ ಬಾಯ್ಸೋವು ! (ಪಾಕಾಶ. ೩೩-೦೦೦). [ಬಾಯ್+ಸೋವು₂ (<ಸೋವು₁)]

**ಬಾರ್₁** (ಕ್ರಿ). ೧. (ಚರ್ಮವನ್ನು) ಸುಲಿ ; ಕೀಳು : ಕಡಿಯಲ್ಲಲೊಗ್ಗಂ ಕರ್ಕಿ ವಂದೊವಲಂ ಬಾರ್ದುಂ ಸಾರ್ದುಂ ನಲಿವ ಕಾಗೆ ಗೂಗೆಗಳಂ. . . ನರಿ ನಾಯ್ಗಳ್ ಪಗಲುಮಿರುಳುಂ ಕಾವಲಿರ್ದುವು (ರಾಜಶೇಖ. ೬೭-೦೬). ೨. ಚರ್ಮವನ್ನು ಸುಲಿದು ತೆಳುವಾದ ಉದ್ದನೆಯ ಪಟ್ಟಿಗಳನ್ನು ತಯಾರಿಸು : "ಬಾರ್—ಚರ್ಮವಲ್ಲೀಕರಣೇ (ಚರ್ಮವನ್ನು ಪಟ್ಟಿಯಾಗಿ ಮಾಡು) ದ್ರುವದ್ರುವ್ಯನಿರ್ಮುಕ್ತೌ (ಸುರಿ)" (ಕವುಲಿ); ನೇರ್ದಂ, ಬಾರ್ದಂ, ಗೋರ್ದಂ, ನೋರ್ದಂ ತಾನೆಂದೊಡಂ ಗುರೂಪಧೆಯಿನಿತುಂ (ಶಮತ. ೯೦). ೩. (ಮಣ್ಣನ್ನು) ಅಗೆದು ತೆಗೆ,—ಬಾಚು : ದರಿಗೊಂಡೀಡಿಬಿ ದಾಡಾಚುತುಂ ಕೊಣಕುತುಂ ಬಾರುತ್ತುಮೊಲ್ಗಿಡೋಲದರದಿಂ ಮೇದಳ ಪುಲ್ಗಳಂ ತೊರೆದು ಪಾಲ್ಗಳ್ ಕೆಚ್ಚಲಿಂದೆಚ್ಚು ಪಾಯ್ಪರೆ ಪಟ್ಟಿರ್ದುವು. . . ಕಾಡ್ಮರ್ಮಗಳ್ (ಜಗು. ೯-೨೩). ೪. (ನೀರು ಮೊದಲಾದ) ದ್ರವ ವಸ್ತುವನ್ನು ಬಸಿ,— ಸುರಿ : "ಬಾರ್—ಚರ್ಮವಲ್ಲೀಕರಣೇ (ಚರ್ಮ ವನ್ನು ಪಟ್ಟಿಯಾಗಿ ಮಾಡು) ದ್ರುವದ್ರುವ್ಯನಿರ್ಮುಕ್ತೌ (ಸುರಿ)" (ಕವುಲಿ). ೫. ತಲೆಗೂದಲನ್ನು ಹಣಿಗೆಯಿಂದ ಹಿಕ್ಕು,— ಬಾಚು : 'ಬಾರ್ಚು' ಪರಾ.

[ದೇ. ॥ ತಮಿ. ವಾರ್, ವಾರು; ಮಲ. ತೆಲು. ವಾರು; ತುಳು. ಬಾರು]

**ಬಾರ್₂**, ಬಾರ್₂, ಬಾರು₁ (ನಾ). ೧. ತೊಗಲು ; ಚರ್ಮ : ಮೀರೊಳ್ ನೀರಿಲಿವನಲ್ಲ ಪಂದಿಯ ಬಾರಂ ಕೊಚಿದದಬ ನೆತ್ತರೊಳ್ ನೀರಿಳಿಪೆಂ (ಸೂಕ್ತಿಸು. ೬-೨೨೬). ೨. ಚರ್ಮದ ಪಟ್ಟಿ : ಸೊಗಯಿ ಪ್ಪೊಳ್ಗೊಡೆ ನೋಯೆ ಸೂತ್ರದೆಟಿವೋಲ್ ನೀಳ್ದಿರ್ದ ಬಾರಂತೆ ತೋರ್ಪು ಗಿಯುಂ ಪುಣ್ಯಮಯಮಾಗಿ ಮಾಡಿ ಬಿದಿ ಮುಂ ಜಂಘಾಪ್ರಮಾಣಕ್ಕೆ ಸೂಲ್ದಿಗೆ ದಂತಿರ್ಪ ಸುವೃಣಾವಳಿಗಳಂ ನಲ್ಲಂಗೆ ಕಣ್ಗೆತ್ತು ತಂ ನಗುತುಂ ಸಾರ್ದು ಸವಂಗವಮಂ ಕಳಿಯಿಸುತ್ತಿರ್ಪಾಕೆ ಕಣ್ಗೊಪ್ಪಿದಳ್ (ಕಾವ್ಯಾವ. ೯೦೦); ಗೀರ್ವಾಣಮುನಿ ಪೂಜಿಮುತುತ್ತುಂ ಸಾಣೆಯ ಬಾರಂತೆ ಪೋದ ಕೆಯ್ಗೊಳೆ ಮಗುಟ್ಟದಂ (ಅಪಂಚ. ೧೩-೨೩). ೩. ಚರ್ಮದ ತೆಳುವಾದ ಪಟ್ಟಿ ಯಿಂದ ಮಾಡಿದ ಬಾಯಿಹಗ್ಗ ; ಲಗಾಮು : ನಕುಳನುಮಂಕವಣೆ ಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೊರ್ವ ಕೀಲಾಳಂ ಪಿಡಿಯಿಸಿ ಕೊಂಡು ಬಂದು ವಿರಾಟನಂ ಕಂಡು (ಪಂಪಭಾ. ೮-೩೯ ವ). ಬಾರ್₂ : ೪. ಚರ್ಮದ ಹಗ್ಗ,— ಮಿಳಿ : ಸುತ್ತಿದ ಮುಪ್ಪುರಿಯ ಬಾರಿ ಕಡ್ಡಣಿಗೆಯು . . . ಕಲಿವೀರ ಬಾಹುಕ ಬರುತ್ತುಂ (ಹಕಾಶ. ೧೧-೦೬); ನೂಲ ಹರಿಗೆಯು ಹೆಗಲ ಬಾರಿಯ . . . ಭಲದಂಕರಾವುತರೊಪ್ಪಿ ನೋಡಿದರು (ಕುಮಾರಾ. ೨೯ ೪-೩೬). ಬಾರು₁ : ೧. ತಳವಾಜನುಟ್ಟ ಸೀರೆಯ ಸುಲಿದ ನಾಚಿ ಹೋದರೆ ಮನೆಯ ಗಂಡ ಬೆನ್ನ ಬಾರನೆತ್ತಿದ (ಜನಪ. ೦೦೦) ; ಬಾಲಬ್ರಹ್ಮಚಾರಿಯ ಬಾರನೆತ್ತಿತ್ತ ಕಂಡೆ (ಅವತಾ. ೧೩-೯೨೬) ; ಕರ್ಣನೆ ಕೊರಳ ಬಾರಲಿ ನಿಲುಕಿಸುವೆನೀ ಶರಸಲಾಕೆಗಳ (ಕುಮಾರವ್ಯಾ. ೨೯-೨೬). ೨. ಮಾಸಾಳ್ಗಳ ಬಾರ ಸಂಕಲೆಯ ತೊಡರ ತೋಟಿಯ ಕಠಾರಾಯಿತರ . . . ಮೊತ್ತದೊತ್ತರದ ಶಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕ ದಾಸ್ಥಾನದೊಳು (ಏಕಕ. ೬-೨೨) ; ಬಾರ ಸಂಕಲೆ . . . ಕೈಹಾರೆ ಕೂರಂಕುಶದ ಬಿರುದರು ಹೊದ್ದಿದರು ಗಜವ (ಕುಮಾರಾ. ೯-೬೦). ೩. ಉಗ್ರಾಣಗಳಲ್ಲಿ ನೂಲೇಣಿ, ಹೊರಜಿ, ಮಿಣಿ, ಬಾರು . . . ಬತ್ತಳಿಕೆ ಗಳ ಎಲ್ಲ ವಿಚಾರವನ್ನು ಬಿಡಿಬಿಡಿಯಾಗಿ ನೋಡುವನು (ಸಷ. ೯೮) ; ಕಡಿವಾಳಕ್ಕೆ ಬಾರಿಲ್ಲದೆ ಇದ್ದುದರಿಂದ . . . ಹುಲ್ಲುಸರವಿಯನ್ನು ಗಂಟು ಹಾಕಿ ಕಟ್ಟಿದರು (ವಗಗ. ೯೯). ೪. ಉದ್ದ ; ನೀಳ : (*). ೬. ಸಾಲು ; ಪಂಕ್ತಿ : (*). ೬. ಚರ್ಮದ ಮೇಲೆ ಪೆಟ್ಟಿನಿಂದಾಗುವ ಪಟ್ಟೆಯಾಕಾರದ ಗುರುತು ; ಬಾಸುಂಡೆ : ಸೊಸೆಯ ಮೈ ಮೇಲಿನ ಬಾರುಗಳನ್ನು ನೋಡಿ ಮಗನನ್ನು ಕರೆದು : "ಕಡಬಿನಂತ ಬಾರು ಏಳುವ ವರೆಗೆ ಬಡಿಯಬೇಕೆ ?" ಎಂದು ಸಿಟ್ಟು ಮಾಡಿದಳು (ಕನ್ನಡಾ. ೬೩).

ಬಾರಗುಣೆ = ಬಾರುಕೋಲು : ಬಾರಗುಣೆಯಿಂದ ಅವನ ಬೆನ್ನಿಗೆ ಬಲವಾಗಿ ಏಟುಗಳನ್ನು ಕೊಟ್ಟು ಚಕ್ಕಡಿಯನ್ನು ಹೊಡೆದುಕೊಂಡು ನಡೆದನು (ಬಿದ್ದಣಾ. ೯೦). ಬಾರುಕಾಲವನು = ಉದ್ದವಾದ ಕಾಲು ಗಳಿರುವವನು ; ದಾಪುಗಾಲು ಇಡುವವನು : "ಊರ್ಧ್ವಜ್ಞುಃ, ಊರ್ಧ್ವಜಾನುಃ—೨ ಉದ್ದವಾದ ಮೊಳಕಾಲುಳ್ಳವನು, ಬಾರುಕಾಲ ವನು" (ಸಿದ್ಧಾಂತ. ೦೯೦).

[<ಬಾರ್₁./ತಮಿ. ಮಲ. ವಾರ್; ತುಳು. ಬಾರ; ತೆಲು. ವಾರು]

**ಬಾರ್₃**, ಬಾರು₃ (ನಾ). ೧. ಬಂದೂಕು, ತೋಪು ಮೊದಲಾದುವು ಗಳಿಗೆ ತುಂಬುವ ಸಿಡಿಮದ್ದು : (*). ೨. ಬಂದೂಕಂ, ತುಪಾಕಿ ಮೊದಲಾದುವುಗಳನ್ನು ಮದ್ದು ಗುಂಡು ತುಂಬಿಸಿ ಉಡಾಯಿಸಲು ಅಣಿಗೊಳಿಸಿರುವಿಕೆ : ಬಂದೂಕು ಬಾರಾದವು (ಸಕಶ. ೬೦). ೩. ತುಪಾಕಿ ದಳ ; ಬಂದೂಕುಸಿಪಾಯಿಗಳ ಪಡೆ : (ಕೃಷ್ಣಗ. II, ೩೯೩). 'ಬಾರ್ಸಿ ಪಾಯಿ' ಪರಾ. ಬಾರು₃ : ೧. "ಯಾವುದಾದರೂ ಒಂದಕ್ಕೆ ತುಂಬ ಬೇಕಾದ ಪದಾರ್ಥದ ನಿಯತವಾದ ಮೊತ್ತ (ಮಾ. ಬಂದೂಕಿಗೆ ತುಂಬುವ ಸಿಡಿಮದ್ದು; ಬಂದೂಕಿನ ಬಾರು)" (charge. ೨೮೩). ೩. ಬಾರು :— ಬಾರಿನವರ ಸಂಖ್ಯೆಯು . . . ಹೆಚ್ಚಿ ಇಂಗ್ಲೀಷ್‌ಪದ್ಧತಿಯಂತೆ ಕವಾ ಯಿತು ಕ್ರಮದಲ್ಲಿ ಸುಶಿಕ್ಷಿತವಾಗಿತ್ತು (ಮುಹಾಪು. II, ೩೦). ೪. ತುಪಾಕಿ

ಮೊದಲಾದುವುಗಳ ಸ್ಫೋಟ : (೩). ೫. ಹೊಗೆಸೊಪ್ಪು 'ತಿನ್ನು'ವು ದಕ್ಕೆ ಪೂರ್ವಸಿದ್ಧತೆಯಾಗಿ ಬಾಯಿಗಿಟ್ಟುಕೊಳ್ಳುವ ವೀಳ್ಯದ ಕವಳ: ಚಹಾ–ತಂಬಾಕದ ಬಾರು ಇಲ್ಲದೆ ಅವರಿಗೆ ನಡೆಯುತ್ತಿರಲಿಲ್ಲ (ಬೀಶಹ. II, ೯೦). ೬. ನೋಂದಣಿ ; ದಾಖಲೆ : 'ಬಾರನಿಸಿ' ಪರಾ.

ಬಾರಕೋತು = ಕಾಲುದಳದ ಯೋಧರ ವಾಸಸ್ಥಾನ,–ಪಾಳೆಯ : (೩). ಬಾರು ಮಾಡು = ೧. ಸಿಡಿಮದ್ದನ್ನು ಬಂದೂಕಿಗೆ ತುಂಬಿ ಉಡಾಯಿಸಲು ಅಣಿಮಾಡು : ತನ್ನ ಬಾರು ಮಾಡಿದ ಬಂದೂಕನ್ನೆತ್ತಿ ಅದರ ಹಣೆಗೆ ಗುರಿ ಇಕ್ಕಿದನು (ಬಂಗಾಹ. ೩). ೨. ವೀಳ್ಯವನ್ನು ಸಿದ್ಧಪಡಿಸು,–ಅಣಿ ಮಾಡು : ರಾಜಮಹಿಳಾ . . . ತಂಬಾಕದ ಬಾರು ಮಾಡುತ್ತ ನಿರ್ಣಾಯಕ ಅಭಿಪ್ರಾಯ ಕೊಟ್ಟರು (ಬೀಶಹ. I, ೬). ೩. (ದಾಖಲೆ) ಪುಸ್ತಕದಲ್ಲಿ ಬರೆದು ಸೇರಿಸು; ನೋಂದುಮಾಡು : (೩).
[← ಮರಾ. ಬಾರ್]

**ಬಾರ್₄**, ಬಾರು₁ (ನಾ). ೧. ಗಟ್ಟಿಯಾಗಿಯೂ ಉದ್ದವಾಗಿಯೂ ಇರುವ ಲೋಹ, ಮರ, ಸಾಬೂನು ಮೊದಲಾದುವುಗಳ ತುಂಡು : ಒಂದು ಬಾರ್ ಸಾಬೂನು ತಂದು ಈ ಬಟ್ಟೆಗಳನ್ನೆಲ್ಲ ಒಗೆಯಬೇಕು (ಕೂಹ). ೨. ಮಾದಕಪಾನೀಯಗಳನ್ನು ಅಥವಾ ಖಾದ್ಯ ವಸ್ತುಗಳನ್ನು ಒದಗಿಸುವ ಸ್ಥಳ; ಪಾನಶಾಲೆ : ಮಧುಪಾನದ ಸಲಕರಣೆಗಳನ್ನಿಡುವು ದಕ್ಕೂ ನಾಲ್ಕು ಜನ ಸ್ನೇಹಿತರು ಸೇರುವುದಕ್ಕೂ ಅನುಕೂಲಿಸುವಂತೆ ಒಂದು ಸಣ್ಣ 'ಬಾರ್' ಏಕೆ ಕಟ್ಟಬಾರದು ? (ಯೋಚಿತ್ರ. ೨೯) ; ಒಂದೆರಡು ದಿನದೊಳಗಾಗಿ . . . ಹಡಗಿನ "ಬಾರ್" ನಲ್ಲಿ ಕುಳಿತುಕೊಳ್ಳುವ ಚಟ ಬರುತ್ತದೆ (ಅಪೂಶ. ೧೦). **ಬಾರು₁** : ೧. ನನಗೆ ಎರಡು ಬಾರು ಸಾಬೂನು ಬೇಕು (ಕೂಹ). ೩. (ಕಿಟಕಿ, ಬಾಗಿಲು ಮೊದಲಾದುವುಗಳಲ್ಲಿ ತಡೆಗಾಗಿ ಉಪಯೋಗಿಸುವ) ಕಂಬಿ ; ಸರಳು : ಕಿಟಕಿಗಳಿಗೆ ಉದ್ದುದ್ದವಾಗಿ ಬಾರುಗಳನ್ನು ಅಳವಡಿಸುವುದುಂಟು (ಕೂಹ).
[← ಇಂ. Bar]

**ಬಾರ್‌ಕಛೇರಿ**, ಬಾರಕಚೇರಿ (ನಾ). ಹಿಂದೆ ಮೈಸೂರು ಅರಸರ ಆಡಳಿತಕಾಲದಲ್ಲಿದ್ದ ಹದಿನೆಂಟು ಕಚೇರಿಗಳಲ್ಲಿ ಒಂದು ; ಕಾಲ್ದಳದ ವಿಷಯವನ್ನು ನೋಡಿಕೊಳ್ಳುವ ಕಚೇರಿ : ೧. ದಿವಾನ್‌ಕಛೇರಿ . . . ೧೨. ಬಾರ್‌ಕಛೇರಿ (ಕುಹಾವಂ. II, ೩೯). **ಬಾರಕಚೇರಿ** : ಶ್ರೀಮದ್ರಾಜಾಧಿರಾಜ ಕೃಷ್ಣರಾಜಒಡೆಯರವರು ಅವರ ಬಾರಕಚೇರಿ ಬಕ್ಷಿ ಗುಲಾಮ ಮಹಮ್ಮದಖಾನ್ರಿಗೆ ಪುತ್ರ ಪವುತ್ರಪಾರಂಪರ್ಯವಾಗಿ ನಡೆಯುವ ಮ್ಯರಿಗೆ ಕೊಟ ಸರ್ವಮಾನ್ಯವಾದ ನಾಚನಹಳ್ಳಿ ಗ್ರಾಮದ ಯಲ್ಲಿಕಲ್ಲು (ಎಕ. III, ಮೈಸೂರು. ೩೬–೬ ; ಸು. 1826 ?). 'ಅಠಾರಾ ಕಚೇರಿ' ಪರಾ. [ ಬಾರ್₃ + ಕಛೇರಿ (<ಕಚೇರಿ) ]

**ಬಾರ₁** (ನಾ). ಬಾಗಿಲು ; ದ್ವಾರ : ದರ ದಾರ ಬಾರಮಕ್ಕುಂ ಪರದಾ ದ್ವಾರಕ್ಕೆ ಪೂರ್ವದೊಳ್ ತದ್ಭವವಾಗಿರೆ ಸಿರಿಯು ವಂಕ ವಾಣಿಯುಮಿರೆ ಕಂಟಿಯುಮುಚಿತವಿಧಿ ವಿಕಲ್ಪವಿಧಾನಂ (ಕಮಚ. ೨೯೬) ; ಶ್ರೀದ್ವಾರ—ಸಿರಿಯದರ, ಸಿರಿಯದಾರ, ಸಿರಿಯಬಾರ. ವಕ್ರದ್ವಾರ—ವಂಕದರ, ವಂಕದಾರ, ವಂಕಬಾರ (ಶಮದ. ೨೯೬ ಪ್ರಯೋ). 'ದಾರ₂' ಪರಾ.
[ < ಪ್ರಾ. ಬಾರ, ವಾರ ; ಹಿಂ. ಬಾರ./ಸಂ. ದ್ವಾರ ]

**ಬಾರ₂** (ನಾ). ತೂಕ ; ಭಾರ : "ಬಾರ (ರು)_ಭಾರ" (ಶಬ್ದಕೋ. ೫೦).
[ < ಸಂ. ಭಾರ ]

**ಬಾರ₃**, ಬಾರಹ, ಬಾರಾ (ನಾ). ೧. ಒಂದು ಸಂಖ್ಯೆ ; ಹನ್ನೆರಡು : ಬಾರಹವೆಂಬುದು ದ್ವಾದಶದ ಪ್ರಾಕೃತರೂಪ ; ಬಾರ ಎಂದರೆ ಹದಿನೆರಡು (ಶಬಪಾ. ೨೬೯). 'ಬಾರಮಾಹೆ' ಪರಾ. ೨. ಲೆತ್ತದಾಟದಲ್ಲಿ ಬೀಳುವ ಹನ್ನೆರಡರ ಗರ : ದುಗನು ಪಂಚಕ ಬಾರವೆರಡತ್ತಿಗೆಯು ಬೇಡಿ ದಡಲ್ಲಿ ಬೀಳ್ವುದು ವಿಗಡ ಪುಷ್ಕರ ನೃಪನ ಗೆಲಿದನು ಹಲಗೆಯೊಂದಬಿಲಿ (ನಳಚ. ೯–೨೯). **ಬಾರಹ** : ೧. ನಾರಿ ಸಹಿತಾ ಪತಿ ಚರಿಸುವುದು ಬಾರಹ ದ್ವಿಜರಿಂಗೆ ಭೋಜನ ಭೂರಿಭೂಷಣ ವಸನ ತಿಲದಾನಾದಿ ಸತ್ಕೃತಿಯಾ (ಶಿಚಾಗ. ೬–೧೭–೦೬). **ಬಾರಾ** : ೧. ನಿನ್ನಂಥ ಬಾರಾ ಹಜಾರ ಮಂದಿನ್ನ ಬಗಲಾಗ ಹಾಕೀನ್ನಾನು (ಚಾಂಹಾಡು. ೬೯). ೩. ಹನ್ನೆರಡು ಘಂಟೆ: ಇದೆಲ್ಲಾ ಉದ್ಯೋಗ ನಡಿಯೋದು ರಾತ್ರಿ ಬಾರಾದಿಂದ ನಸುಕು ಹರಿಯೋ ತನಕ (ಅಶ್ವ. ೨೩೩).

ಬಾರಖೂನ್ ಮಾಫ್, ಬಾರಾಖೂನಿ ಮಾಫ್ = ಎಷ್ಟು ತಪ್ಪು ಮಾಡಿದರೂ ಕ್ಷಮಿಸುವುದು : ತಮ್ಮ ಅನುಗ್ರಹಕ್ಕೆ ಪಾತ್ರರಾದವರಿಗೆ 'ಬಾರಖೂನ್ ಮಾಫ್, ಏನು ಉಪಕಾರವನ್ನಾದರೂ ಮಾಡಿ ಕೊಟ್ಟುಬಿಡುವರು (ಕಂಶಿ. ೯೦) ; ಒಮ್ಮೊಮ್ಮೆ ಬಾರಾಖೂನಿ ಮಾಫ್ ಅಂತೂ ಅನಬೇಕಾಗತದ (ಕಥಂಜ. ೩೨).
[← ಹಿಂ. ಬಾರಹ್, ಬಾರಾ; ಮರಾ. ಬಾರಾ]

**ಬಾರಂಗಧ್ವಜ** (ನಾ). (?) : ಮದನಕೈಯಿದರ ಬೊದಿಗೆಯು ಬಾರಂಗಧ್ವಜ ಕದಳಿಗೊನೆ ಕಬರಿದ ಸುರೋವೆ ಚಿತ್ರದ ಭಿತ್ತಿ ಪುದಿಪ ನವರತ್ನಗಳ ದೀಪ್ತಿ (ನಳಚೋ. ೨–೬೦). [ ? + ಧ್ವಜ ]

**ಬಾರಂಗಿ** (ನಾ). ಒಂದು ಬಗೆಯ ಔಷಧೀಸಸ್ಯ ; ಅಂಗಾರವಲ್ಲಿ ; ಬ್ರಾಹ್ಮಿ : ಬಾದಣಿಸಿದೇಹಗಳ ಬಾಯೊಳು ಕಾದ ಬಾರಂಗಿಗಳನಳತೆಗೆ ಕೋದು ಪಾಮದೊಳೆಯ್ದೆ ಹಿಡಿದರು ತೈಲಧಾರೆಗಳ (ಕುವ್ಯಾಭಾ. ೩–೯೦) ; ತಡಸಿ ಸುವರ್ಣ ಬಿಳಿಯ ಬಾರಂಗಿ ಗಿಡವು ಕಗ್ಗಲೆ ಕಂಪು ಪರಿಮಳಯುಡಿಗಡಿಗೆ ರಸದಾ ಮಡುಗಳು (ಪಂಚಾಂ. ೬–೦೬). [ < ಸಂ. ಭಾರಂಗೀ ]

**ಬಾರಕಚೇರಿ** 'ಬಾರ್‌ಕಛೇರಿ' ನೋ.

**ಬಾರಗಿರಿ** 'ಬಾರ್ಗೀರಿ' ನೋ.

**ಬಾರಗೀರ** 'ಬಾರ್ಗೀರ್' ನೋ.

**ಬಾರಗೀರು** 'ಬಾರ್ಗೀರ್' ನೋ.

**ಬಾರಗುತ್ತು** 'ಬಾರ್ಗುತ್ತ' ನೋ.

**ಬಾರಗೆಯ್** (ಕ್ರಿ). (?) : ಕ್ಷೀರ ದಧಿ ಮಧು ಘೃತಂ ಸಿತ ನಾಗರಂ ಮರಿಚ ಜೀರಕಂ ಲವಣವೆ{ಮ್ಬ}ಲ್ಲಾ ದಶಾಮೃತಸಾರಪೂರಕಳಸಂ ನಾಲ್ಕು ಕನಕ ಪುಷ್ಪಾನ್ವಿತ ತಮಾಂಧಕಳಸಂ ಪೀಲಿಯಿಂ ಬಾರಗೆಯ್ದೊಂದಗ್ರಜಲಭರಿತ ಮಾಗೆ ಮಂದಾರಮಂಜರಿವಿಡಿದ ಹದಿಮೂಱು ಕಳಸಮಿಂತೀರೊಂಭತ್ತಿನ್ನುಳಿದ ವಿಭವವೀ ಪರಿಯಾದ ನೇಮದಿಂ ನಡಸಂದಳು (ಸಿದ್ಧಾ. ೩–೭). "ಅಂದವಾಗಿಸು (?) " (ಸಿದ್ಧಾ. ಕೋಶ). [ ? ]

**ಬಾರಡ** (ನಾ). ಚರ್ಮದ ಪಟ್ಟಿ : "ಕಟ್ಟಿಗೋಲ್ ಬಾರಡಮದಕ್ಕು" (ಕುಂಗಣಾ. ೦೦೨–೩). [ ದೇ.೩ ತಮಿ. ವಾರಾಟ್ಟೈ ]

**ಬಾರಣ** (ನಾ). ಆನೆ : ದಾರುದಾರುಣನು ದಾನವಾರಿವಾರಿತಲೋಕನು ಬಾರ ಬಾರಣಮುಂ ನೋಡಾ ಸಾರಸಾರಾಂಬುದಾಭಮಂ (ಕವಿರಾ. ೨–೧೩೨).
[ < ಸಂ. ವಾರಣ ]

**ಬಾರಣಾಸಿ** 'ಬಾರಣಾಸಿ' ನೋ.

**ಬಾರಣಾಸಿ**, ಬಾಣರಾಸಿ, ಬಾಣಾರಾಸಿ, ಬಾರಣಸಿ, ಬಾರ್ಣಾಸಿ, ವಾಣರಾಸಿ, ವಾರಣಶಿ, ವಾರಣಾಸಿ (ನಾ). ಗಂಗಾನದೀತೀರದಲ್ಲಿರುವ ಪ್ರಸಿದ್ಧವಾದ ಯಾತ್ರಾಸ್ಥಳ; ಕಾಶಿ ಕ್ಷೇತ್ರ; ಇದು ವರುಣಾ ಮತ್ತು ಅಸಿ(ಅಥವಾ ಅಸೀ)ಯೆಂಬ ಎರಡು ನದಿಗಳನ್ನು ಒಳಗೊಂಡಿದೆಯೆಂದು ಪ್ರತೀತಿಯಿದೆ : ಇ ದರ್ಮಕ್ಕೆ ಬಕ್ರ ಬಪ್ಪೊಂ ಬಾರಣಾಸಿಯುೞ್ ಸಾಸಿರ್ವರ್ ಪಾರ್ವರುಂ ಸಾಸಿರಂ ಕವಿಲೆಯುಂ ಕೊನ್ದ ಪಾತಕನಕ್ಕೆ (ಪ್ರ್ಯಇಂ. ೬೬೩೬, ೩೬–೪೨ ; ಸು. 550) ; ಇದನಟಿದುಣ್ಣೋನುಂ ಕೊಣ್ಣೋನುಂ ಪಸುವುಂ ಪಾರ್ವರುಂ ಕಿಟಿಯುಂ

ಆರವೇಯುಂ ಬಾರಣಾಸಿಯುಮುಮನಟ್ಟಿದೊಂ (ಎಕ. III, ಶ್ರೀರಂಗ. ೦೪೬-೦೬; ಸು. ೯೦೦ ?). **ಬಾಣರಾಸಿ :** ದುದ್ಧರಸಂ ಮಾಡಿಸಿದ ತೋಟ³ ಗಟ್ಟಿಯುಂ ಮಹಾಕೊಣ್ಡವಂ ಬಾಣರಾಸಿಯುಲು ಹಸುವುಂ ಹಾರುವನಂ ಕೊಂದ (ಎಕ. I (R), ೬೨-೫೫; 1096) ; ಇದನಳಿದಂ ಬಾಣರಾಸಿಯುಮುಮಂ ಕವಿಲೆಯುಮುಮಂ ಲಿಂಗವುಂ ಕಿತ್ತು ಬ್ರಹ್ಮತಿಗೆ ಸನ್ದಂ (ಎಕ. III, ಪಂಕವ. ೯೪-೦೦; 1113) ; ಇದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರೋರ್ವ್ವಿಯೊಳ್ ವಾಣರಾಸಿಯೊಳೇಳ್ಕೋಟಿಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊನ್ದುದೊನ್ದಯಸಂ ಸಾಗ್ಗ್ರಂ (ಎಕ. II, ೬೩-೯೯; 1118). **ಬಾಣಾರಸಿ:** ಇದನಟಿವಂಗೆ ಕವಿಲೆಯುಂ ಬಾಣಾರಸಿಯುಂ ಅಟಿದ ಪಾತಕಂ (ಎಕ. I (R), ೬೯-೦೦; 10ನೆಯ ಶತ). **ಬಾರಣಾಸಿ:** ಇದನಟಿವೊ ಬಾರಣಾಸಿಯನಟಿದೊ ಪಾತಕಂ (ಕ. II, ೩-೦೯ ; 859). **ಬಾಣಾರ್ಸಿ :** ಇದನಟಿದೋಂ ಬಾ[ಣಾರ್]ಸಿಯುಂ ಕವಿಲೆಯುಮುಮನಟಿದೋಂ (ಎಕ. IV (R), ಕಾಮರಾ. ೬೦-೦೦ ; ೧೫ನೆಯ ಶತ). **ವಾಣರಾಸಿ :** ಈ ಧರ್ಮ್ಮವುಮನಳಿದಂ ವಾಣರಾಸಿ ಕುರುಕ್ಷೇತ್ರದೊಳ್ ಸಾಸಿರಕವಿಲೆಯುಂ ಸಾಸಿರಬ್ರಾಹ್ಮಣರನಳಿದ ಪಂಚ ಮಹಾಪಾತಕನಕ್ಕು (ಎಕ. XIX, ೦೯೯-೨೯ ; 1079). **ವಾರಣಾಶಿ :** ಇದಕ್ಕಾರಾನುಂ ಪ್ರತಿಬಂಧಕರಾಗಿ ಕಿಡಿಸಿದರಪ್ಪಡೆ ವಾರಣಾಶಿಯುಲು ಕವಿಲೆಯಂ ವಧಿಯಿಸಿದ ದೋಷವುಮನೆಯ್ದುವರು (ಕೆಇಕ. ೩೬-೯೯-೨೦ ; 1134). **ವಾರಣಾಸಿ :** . ಅಟಿದೊನ್ವಾರಣಾಸಿಯೊ ಸಾಸಿರ್ವ್ವಪಾರ್ವ್ವರುಂ ಸಾಸಿರ ಕವಿಲೆಯುಮನ್ಕೊನ್ದ ಪಞ್ಚಮಹಾಪಾತಕನಕ್ಕು (ಎಕ. V (R), ತಿರುಮ. ೪೬-೬ ; ೮ನೆಯ ಶತ) ; ಗಂಗೆಯೊಳು ಮಿಂದು ಭೂಸುರವಾರಣಾಸಿಯುಂ ಹೊಕ್ಕು (ಪಕ್ಷಕಾ. ೦೦-೩೩).

[< ಸಂ. ವಾರಣಸೀ, ವಾರಾಣಸೀ, ವಾಣಾರಸೀ, ವರಾಣಸೀ]

**ಬಾರಣೆ** (ನಾ). ಊಟ ; ಪಾರಣೆ : ಬಾಯೊಳ್ಳಿಗೆದ ಹಲ್ಲ ನೋಳ್ಪುದೊಂದೆ ಕ್ಷಣದಿ ನುಂಗಿ ಬಾರಣೆಯ ಸವನಿಸುವೆನು (ಶಾರ್ಙಗು. ೬೬) ; ಹುಲಿರಾಯನು ಓಲಸರಿಯು ಬಾರಣೆಗಾಗಿ ಹೊರಟನೆಂಬುದು ಅವರಿಗೆ ಗೊತ್ತಾಯಿತು (ಅರಣ್ಯ. ೨೩) ; ಪಶುಪಕ್ಷ್ಯಾದಿಗಳನ್ನೂ ನೀವು ಮನುಷ್ಯರು ಶಕ್ತಿಯುಕ್ತಿಗಳಿಂದ ಬಡಿದು ಬಾರಣೆ ಮಾಡುತ್ತೀರಂತೆ (ಹಗಂ. ೯೦). 'ಪಾರಣೆ₁' ನೋ. [← ತುಳು. ಬಾರ್ಣೆ. / ಸಂ. ಪಾರಣಾ]

**ಬಾರದ** (ನಾ). ಒಂದು ಮನೆತನದ ಹೆಸರು : ಇದಕ್ಕೆ ಸಕ್ಕಿ ಮುದಿರೆ ಬೂವಯ್ಯ ಬೆಳ್ಳನ ಕರುಕುಡಿ ಬಾರದರೆಚ³ಯುಮ್ಮ ಕಿದಟಿಯರಯ್ಯಪ (ಎಕ. IV, ಹುಣಸೂ. ೯೨-೦೨ ; ಸು. 920). [?]

**ಬಾರದಾನ, ಬಾರದಾನು** (ನಾ). ೧. ವ್ಯಾಪಾರದ ಸರಕುಗಳನ್ನು ತುಂಬಲು ಬಳಸುವ ಚೀಲ, ಡಬ್ಬಿ, ಪೀಪಾಯಿ ಮೊದಲಾದುವು: ಬಾರದಾನಗಳನ್ನು ತಿರುಗಿ ಕಳುಹಿಸುವುದಕ್ಕೆ ಬಹಳ ಸಾರಿ ಪತ್ರ ಬರದಿದ್ದು ಇನ್ನೂ ಯಾಕೆ ರವಾನೆ ಮಾಡಲಿಲ್ಲ ? (ಕುಂಬವ್ಯಾ. ೬ ಕೃತ್ಯಾಣಕ). ೨. ಗೋಣಿತಟ್ಟು ; ಗೋಣಿಚೀಲ : ಹೆಗಲಿಗೊಂದು ಬಾರದಾನ ಒಗೆದುಕೊಂಡು, ದಂಡಪಾಣಿಯಾಗಿ ಗೃಹತ್ಯಾಗ ಮಾಡಿದೆವೆಂದರೆ ತೀರಿತು, ಮರಳಿ ನಮ್ಮ ಗೃಹಾಭಿಗಮನ ಅಪರಾಹ್ನ ಎರಡಕ್ಕೆ (ಬೀಕಹ. II, ೦). **ಬಾರದಾನು :** ೧. ಒಂದೊಂದು ಸಾಮಾನು ಒಂದೊಂದು ವಿಧವಾಗಿ ಕಟ್ಟಿ ಬರುವದರಿಂದ, ಅವೆಲ್ಲವುಗಳ ಬಾರದಾನು ಅಥವಾ ಹೊರಗಿನ ಆವರಣ ಒಂದೇ ತರವಾಗಿರುವದಿಲ್ಲ (ಕುಂಬವ್ಯಾ. ೬).

[← ಪಾರ. ಬಾರ್ದಾನ್ ; ಹಿಂ. ಬಾರದಾನಾ ; ಮರಾ. ಬಾರದಾನ್]

**ಬಾರದಾನು** 'ಬಾರದಾನ' ನೋ.

**ಬಾರದೂರ್** (ನಾ). ಒಂದು ಊರಿನ ಹೆಸರು : ಬಾಣಶರ್ಮ್ಮಣೇ ತೇಗಟ್ಟೂರ್ವ್ವಿಷಯೇ ಬಾರದೂರ್ನ್ನಾಮಗ್ರಾಮಸ್ಸರ್ವ್ವಪರಿಹಾರೋಪೇತ ಉದಕಪೂರ್ವ್ವನ್ದತ್ತಃ (ಕೃಆಂ. ೦೯೯೯, ೦೩-೩೯; ಸು. 725). [? + ಊರ್]

**ಬಾರನಿಸಿ** (ನಾ). ೧. ದಾಖಲೆಗಳನ್ನು ನೋಂದುಮಾಡಿ, ಅದರ ಮೇಲೆ ನೋಂದಿಸಲಾಗಿದೆಯೆಂದು ಬರೆಯುವ ಅಧಿಕಾರಿ : ನೋಂದಣಿಯ ಅಧಿಕಾರಿ : ಹೊರಟು ಹೋಗಲಿದ್ದ ಬಾರನಿಸಿಯಿಂದ ಕಾಗದಪತ್ರಗಳ ಚಾರ್ಜ್ ತೆಗೆದುಕೊಂಡೆ (ಬಂಗಾರ. ೬೯). ೨. ನೋಂದಣಿ ಮಾಡುವ ಕೆಲಸ, – ಹುದ್ದೆ : "ಬಾರನಿಸಿ ಕಾರಕೂನ್" ಸ್ಥಳಕ್ಕೆ ನನ್ನ ನೇಮಕವಾಗಿತ್ತು (ಬಂಗಾರ. ೬೯).

[← ಪಾರ. ಬಾರನಿವಿಶೀ ; ಮರಾ. ಬಾರನಿಶೀ, ಬಾರನಿಸೀ, ಬಾರನೀಸ್]

**ಬಾರಮಾಹೆ** (ನಾ). ಹನ್ನೆರಡುತಿಂಗಳು : ಯಿಾ ನಿರೂಪ ಸ್ವಳಕೆ ತಲಪಿದ ತಾರೀಖಿನಾರಭ್ಯ ಸಾಲ್ಲಿಯಾನಾ ಯೆರಡು ಖಿಸ್ತಿನ ಮೇರಿಗೆ ಬಾರಮಾಹೆ ಬಜಿನ್ಸ ಕೊಡತಕದು (ಮ್ಯಆಂ. ೦೯೩೯. ೨೬-೦೨; 1830). [ಬಾರ್₃ + ಮಾಹೆ]

**ಬಾರವಟ್ಟಿಗೆ, ಭಾರವಡ್ಡಿಗೆ** (ನಾ). ಬಾಗಿಲಿನ ಚೌಕಟ್ಟು ; ಬಾಗಿಲುವಾಡ: ಬಕುಳದ ಬೋದಿಗೆಗಳಿಂ ಬಂಧುರಕದ ಬಾರವಟ್ಟಿಗೆಗಳಿಂ ಕೇತಕಿಯ ಕಂಟವಲಗೆಗಳಿಂ . . . ಕಂಪಿನ ಕಡಾರವುಂ ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪವಮಂ ಪೊಕ್ಕು (ಕುಸುಮಾ. ೦೨-೦೩೬ ವ). **ಭಾರವಡ್ಡಿಗೆ :** ಶ್ರೀರನ್ನದಂಡನಾಯಕರ ಪಟ್ಟಸಾಹಣಿ ಮಣ್ಡಲಸಾಹಣಿ ಮಾಡಿಸಿದ ಭಾರವಡ್ಡಿಗೆ (ಎಕ. XIV, ಎಳಂದೂ. ೦೬೨-೨; 1243).

[< ಸಂ. ದ್ವಾರಪಟ್ಟಿಕಾ]

**ಬಾರವಿಗೊಂಡ** (ನಾ). ಒಬ್ಬಾತನ ಹೆಸರು : ಶ್ರೀಬಾರವಿಗೊಣ್ಡಃ ನರಸಿಂಘ ಆತನ ಭ × × × ಬಾಜಿಯ ನನ್ದಿವರ್ಮನ ಮಗಂ ಶ್ರೀಮಾನ್ ಸತ್ಯಮಂಗಲದ ಚೋ × × (ಎಕ. IX, ಹೊಸಕೋ. ೦೦೬-೨; ಸು. ೯೦೦ ?).

[ಬಾರವಿ₁ + ಗೊಂಡ₁ (< ಗಾವುಂಡ)]

**ಬಾರಸ** (ನಾ). ೧. ಹನ್ನೆರಡು : "ಬಾರಸ – ದ್ವಾದಶ = ಹನ್ನೆರಡು" (ತದ್ಭಕೋ. ೩೦). 'ಬಾರಸನಾಮ' ಪರಾ. ೨. ಜನನವಾದ ಹನ್ನೆರಡನೆಯ ದಿನದಂದು ಮಗುವಿಗೆ ಮಾಡುವ ನಾಮಕರಣದ ಉತ್ಸವ : ಬಾಲುಗೆ ಬಾರಸವ[ಪಾಠಾಂ. ಬಾರಸೆಯ, ದ್ವಾದಶ] ಮಾಡಿ ಕೊಟ್ಟಲೊಳಿಕ್ಕಿ ಏಲೇಶನೆಂದು ನಾಮವ ಕೊಟ್ಟು (ಸಿದ್ಧರಾ. ೯-೨೬). 'ಬಾರಸಂಗೆಯ್' ಪರಾ.

[< ಪ್ರಾ. ಬಾರಸ. / ಹಿಂ. ಬಾರಸ ; ಮರಾ. ಬಾರಸಾ. / ಸಂ. ದ್ವಾದಶ]

**ಬಾರಸಂಗೆಯ್** (ಕ್ರಿ). ಹುಟ್ಟಿದ ಹನ್ನೆರಡನೆಯ ದಿನದಂದು ಮಗುವಿಗೆ ನಾಮಕರಣದ ಉತ್ಸವವನ್ನು ಮಾಡು: ಬಾರಸಂಗೆಯ್ದೊಡೆ ಬೋವಂಗೆ ಪಣ ಮೂಱು ತಳಾರಂಗೆ ಪಣ ಮೂಱು (ಕೃಆಂ. ೦೯೩೬, ೨೬-೩೩; 872).

[ಬಾರಸ + ಕೆಯ್₁]

**ಬಾರಸನಾಮ** (ನಾ). ದೇಹದ ಮೇಲೆ ಧರಿಸುವ ಹನ್ನೆರಡು ನಾಮ: ಕಿಸುವೊನ್ನ ಬಟ್ಟಗೊಡೆ ಬಾರಸ[ಪಾಠಾಂ. ಭಾರಸ, ಭಾಸುರ]ನಾಮದ ಬೊಟ್ಟು . . . ಬಗೆವುಗೆ ಬಂದನಂದು ಬಲಿಯಲ್ಲಿಗೆ ವಾಮನನಾಗಿ ಕಾವುದುಂ (ಅರಕಿ. ೬-೨೩). [ಬಾರಸ + ನಾಮ]

**ಬಾರಸಿ, ಬಾರಸೆ** (ನಾ). ಚಾಂದ್ರಮಾನ ಪಕ್ಷದ ಹನ್ನೆರಡನೆಯ ದಿನ ; ದ್ವಾದಶಿ : ಮಾಘಬಹುಳಬಾರಸಿ ವಿಶ್ವಯೋಗದೊಳ್ ತ್ರಿಜಗನ್ನಾಥರಂ ಪುಟ್ಟೆ (ಶಾಕ್ಯಂತಿ. ೦೩೩):. ವ್ಯಯಸಂವತ್ಸರದ ಪುಷ್ಯದ ಬಹುಳದ ಬಾರಸಿಯ ಕುಜನ ವಾರದೊಳ್ (ಎಕ. VII, ಶಿಕಾ. ೬೬-೨; 1227 ?). **ಬಾರಸೆ :** ಆರಯ್ಯೆ ಬಿದಿಗೆ ಸಪ್ತಮಿ ಬಾರಸೆಯೆಂಬವಱೊಳರ್ಕಸುತ ಕುಜ ದಿನ. ಕೃದದ್ವಾರಂಗಳುಂ ತ್ರಿಪಾದದ ತಾರೆಗಳುಂ ಕೂಡೆ ತಾಂ ತ್ರಿಪುಷ್ಕರಯೋಗಂ (ಲೋಕೋಪ. ೦-೨೦); ರೇವತಿಯುಗ ಭಾದ್ರಪಾ(ಪ)ದದೆರಡಷ್ಟಮಿ ಬಾರಸೆ ವಾಯುರಿಕ್ಷೆಯಂದತಿಶಯಮಾಗಿ ಗಾಳಿ ಬಿಡೆ ಬೀಸಿದೊಡಾಸಡಿಯಂದು ಮತ್ತೆ ಭೂನುತಮೆನೆ ನಾಡೆ ಪೆರ್ಮಳೆಗಳಪ್ಪುವು (ಜಲ್ಪಕು. ೯-೯೦).

[< ಪ್ರಾ. ಬಾರಸೀ. / ಮರಾ. ಬಾರಶೀ. / ಸಂ. ದ್ವಾದಶೀ]

**ಬಾರಸೆ** 'ಬಾರಸಿ' ನೋ.

**ಬಾರಹ** 'ಬಾರ್₃' ನೋ.

**ಬಾರಹೆ** (ನಾ). ಒಂದು ಬಗೆಯ ಕೊಳಲು : ರಾಗಸಾಗರನೆಂಬ ವಾಸು ಕಾರಂ ಭಾಸುರತೆವಡೆದ ಬಾರಹೆಯೆಂಬ ವಾಸವಂ ಕಳೆದುಕೊಂಡು . . . ಆದಿಗ್ರಾಮ ರಾಗಛ್ಛಾಯೆ ಸುಚ್ಛವಿಯಿಂ ಪುದಿದು ತೋರ್ಪ (ಚಂಪೂಚ್ಯ. ೬-೯೩ ವ). [ ? ]

**ಬಾರಾ** 'ಬಾರ್₃' ನೋ.

**ಬಾರಾಅಲುತೆ** 'ಬಾರಾಬಲೂತಿ' ನೋ.

**ಬಾರಾಂದರವಯ್ಯ** (ನಾ). ಒಬ್ಬಾತನ ಹೆಸರು : ಪೊಂಕುನ್ನದ ಬಾರಾನ್ದರವಯ್ಯ ತಗಡೂರ ಕೆಳೆಯ ಕಾಳೆಗದೊಳ್ ಬಸವಯ್ಯನ ಮುನ್ದೆ ಕಾದಿ ಸತ್ತು ಸಗ್ಗಯದ (ಎಕ. X. ಚಿಂಗ್. ೯೯-೨; ಸು. 950). [? + ಅಯ್ಯ₆₁]

**ಬಾರಾಗೀರ** 'ಬಾರ್ಗೀರ್' ನೋ.

**ಬಾರಾಬಂಗಾಲಿ, ಬಾರಾಬಂಗಾಳಿ** (ನಾ). ೧. "ಮೋಸಗಾರ" (ಹಾಕಕೋ. ೨೨). ೨. ಮೋಸಗಾರಿಕೆ; ತಂತ್ರಗಾರಿಕೆ : 'ಬಾರಾಬಂಗಾಲಿವಿದ್ಯೆ' ಪರಾ. ೩. "ಜಿಪುಣ, ಜೀನ, ಕೈಬಿಡದವ" (ಕಕಾಕೋ. ೯೨೦). **ಬಾರಾಬಂಗಾಳಿ** : ೨. ಏನೇನೊ 'ಬಾರಾಬಂಗಾಳಿ' ಮಾಡಿ ಹುಡುಗನನ್ನು ಒಪ್ಪಿಸಿಕೊಂಡು ಬಂದಿದ್ದೇನೆ (ಶಿಳಕು. ೩೯). ೪. ತೀರ ಮೇಲಿನ ನ್ಯಾಯಾಸ್ಥಾನ ; ಸುಪ್ರೀಂಕೋರ್ಟು ; ☞ ಈಸ್ಟ್ಇಂಡಿಯಾ ಕಂಪನಿಯವರ ಆಡಳಿತಕಾಲದಲ್ಲಿ ಕಲಕತ್ತೆಯ ಸುಪ್ರೀಂಕೋರ್ಟು ಕೊಟ್ಟಕೊನೆಯ ಅಪೀಲ್‌ಕೋರ್ಟಾಗಿತ್ತು. ಹಳ್ಳಿಯ ಪಂಚಾಯಿತಿ ನ್ಯಾಯಾಲಯದಿಂದ ಈ ಕೋರ್ಟಿನವರೆಗೆ ಹನ್ನೆರಡು ಕೋರ್ಟುಗಳಿದ್ದುವು : ನೀನು ಏನು ಬೇಕಾದರೂ ಮಾಡು, ನಾನು ಬಾರಾಬಂಗಾಳಿ ನೋಡಿ ಬಿಡುತ್ತೇನೆ (ಜೂ೨).

[ಬಾರಾ (< ಬಾರ್₃) + ಬಂಗಾಲಿ]

**ಬಾರಾಬಂಗಾಲಿವಿದ್ಯೆ, ಬಾರಾಬಂಗಾಳಿವಿದ್ಯೆ** (ನಾ). ಮೋಸಗಾರಿಕೆ : ಕಪಟವಿದ್ಯೆ : ಅದೇನಾ ಹುಡುಗ 'ಬಾರಾಬಂಗಾಲೀವಿದ್ಯೆ' ಕಲ್ತಿದ್ದನೋ ಏನೋ ದೇವರೇ ಬಲ್ಲ ! (ಹಾಗಿಕ. ೪೬). **ಬಾರಾಬಂಗಾಳಿವಿದ್ಯೆ** : (೧).

[ಬಾರಾಬಂಗಾಲಿ + ವಿದ್ಯೆ]

**ಬಾರಾಬಂಗಾಳಿ** 'ಬಾರಾಬಂಗಾಲಿ' ನೋ.

**ಬಾರಾಬಂಗಾಳಿವಿದ್ಯೆ** 'ಬಾರಾಬಂಗಾಲಿವಿದ್ಯೆ' ನೋ.

**ಬಾರಾಬನೂತಿ** 'ಬಾರಾಬಲೂತಿ' ನೋ.

**ಬಾರಾಬನೋತಿ** 'ಬಾರಾಬಲೂತಿ' ನೋ.

**ಬಾರಾಬಲುತೆ** 'ಬಾರಾಬಲೂತಿ' ನೋ.

**ಬಾರಾಬಲೂತಿ, ಬಾರಾಅಲುತೆ, ಬಾರಾಬನೂತಿ, ಬಾರಾಬನೋತಿ, ಬಾರಾಬಲುತೆ** (ನಾ). ಹನ್ನೆರಡು ಜನ ಆಯಂಗಾರರಾದ ಗ್ರಾಮಾಧಿಕಾರಿಗಳು ; ☞ "ಗೌಡ, ಶಾನುಭೋಗ, ಪಂಚಾಂಗಿ, ತಳವಾರ, ತೋಟಿ, ನೀರ್ಗಂಟಿ, ಅಗಸ, ನಾಯಿಂದ, ಕುಂಬಾರ, ಲೋಹರ, ಬಡಗಿ, ಅಗಸಾಲೆ" (ಮೈಗೆ. IV, ೬೬೪). ಈ ಪಟ್ಟಿಯ ಹೆಸರುಗಳಲ್ಲಿ ವ್ಯತ್ಯಾಸವಿರುತ್ತದೆ : ಇನಾಮುದಾರರು ಬಾರಾಬಲೂತಿ ಜನರು ತಮಗೆ ಸರಕಾರದಿಂದ ಜಾರಿಯಾಗಿರುವ ಭೂಮಿ ಅಲ್ಲದೆ ಜಾಸ್ತಿ ಭೂಮಿ . . . ಅನುಭವಿಸುತ್ತ ಇರುವಂಥಾದ್ದು ಸಹ ಚೆನ್ನಾಗಿ ದರಿಯಾಫ್ತು ಮಾಡಿ (ಮಹಾಪ. II, ೬೦); ಗ್ರಾಮಗಳಲ್ಲಿ ಸೇಕದಾರ, ಶಾನುಭೋಗ, ಗೌಡ, ಬಾರಾಬಲೂತಿಯವರು ಇವರೆಲ್ಲಾ ಹೀಗಿನಂತೆಯೇ ಇದ್ದರು (ಹಾಳೆಗಾ. ೫೪). **ಬಾರಾಅಲುತೆ** : "ಬಾರಾಅಲುತೆ–೧೨ : ಗಾಣಿಗ, ವೀಳೆಯದೆಲೆ ಮಾರುವವನು, ವಯ್ಸ್ಯನು, ತೋಟಗಾರ, ಜಂಗಮ (ಶಿವಾಲಯದ ಅರ್ಚಕ), ಕಲೆಗಾರ, ಬುಡುಬುಡಿಕೆಯವನು, ಈಕಾರೆಯವನು, ಕುಂಬಾರ, ತಳವಾರ, ಅಕ್ಕಸಾಲೆ, ಚೌಗಲೆ (ಪಟೇಲನ ಕೆಳಗೆ ಕೆಲಸ ಮಾಡುವವನು)" (ಶ್ರೀವಕ್ಕ. ೨೯೧). **ಬಾರಾಬನೂತಿ** : ೧೨ ಕೈವಾಡ ಬಾರಾಬನೂತಿ ಸಹ ಯಿಟ್ಟುಕೊಂಡ್ದು ದೇವತಾಶೇವೆ ವಗ್ಯೆರೆ ನಡಶಿಕೊಂಡ್ದು ಹೋಗಲುಳ್ಳವರು (ಮೈಅಂ. ೦೯೨೯. ೯೬-೨೬ ; 1593). **ಬಾರಾಬನೋತಿ** : ಊರ ಈ ನೌಕರರ ಸಂಖ್ಯೆಯು ಸಾಧಾರಣವಾಗಿ ಹನ್ನೆರಡು ಇರುವದರಿಂದ ಇವರ ಸಂಘಕ್ಕೆ ಬಾರಾಬನೋತಿಯೆನ್ನುವರು (ಕುಹಾಕ. ೦೬೦). **ಬಾರಾಬಲುತೆ** : "ಬಾರಾಬಲುತೆ– (i) ನಂಬಿ, ರೆಡ್ಡಿ, ಕರಣ, ಪುರೋಹಿತ, ತಳವಾರ, ಬಡಗಿ, ಕಮ್ಮಾರ, ಕುಂಬಾರ, ಅಗಸ, ಕ್ಷೌರಿಕ, ಹೊಲೆಯ, ಮಾದಿಗ (ಕಂಕ. ೬೯೦). (ii) ಬಡಗಿ, ಕಮ್ಮಾರ, ಹೊಲೆಯ, ಮಾದಿಗ, ಕುಂಬಾರ, ಚಮ್ಮಾರ, ಅಗಸ, ನಾಯಿಂದ, ಪುರೋಹಿತ, ಮುಲ್ಲಾ, ಗೊರವ, ಬೆಸ್ತ" (ಶ್ರೀವಕ್ಕ. ೨೯೦).

[ ← ಮರಾ. ಬಾರಾಬಲೂತೀ, ಬಾರಾಬಲುತೇ]

**ಬಾರಾಭಾಯಿ** (ನಾ). (ಆಡಳಿತದ ನಿರ್ವಹಣೆಗಾಗಿ ನೇಮಕವಾದ) ಹನ್ನೆರಡು ಜನ ; ☞ ನಾರಾಯಣರಾವ್‌ಪೇಶ್ವೆಯ ವಧೆಯ ನಂತರ ನಾನಾಫಡಣವೀಸ, ಸಖಾರಾಮಬಾಪೂ ಮೊದಲಾದ ಹನ್ನೆರಡು ಜನ ಮುತ್ಸದ್ದಿಗಳು ರಾಜ್ಯಭಾರ ನಡಸಿದರು. ಇದಕ್ಕೆ 'ಬಾರಾಭಾಯಿ ಕಾರಭಾರ'ವೆಂಬ ಹೆಸರಾಯಿತು : ರಾಜರ ಕಾಟ ಕಾಯಿಗಳು ಹೆಚ್ಚುತ್ತಾ ಬಂದ ಹಾಗೆಲ್ಲಾ ಬಿಗಿಯಾದ ದರಬಾರನ್ನು ನಡಿಸುವುದಕ್ಕೆ ಅಗತ್ಯವಾದ ಏರ್ಪಾಡುಗಳನ್ನು ಮಾಡಿ ಬಾರಾಭಾಯಿಗಳನ್ನು ನೇಮಿಸಿ ಮರಾಟೆಸಂಸ್ಥಾನವನ್ನು ವಿಸ್ತರಿಸಿ ಉದ್ಧಾರ ಮಾಡಿದವರು ಪೇಶ್ವೆಗಳಲ್ಲವೆ ? (ಮುಸಂಗ. ೩೦).

[←ಮರಾ. ಬಾರಾಭಾಈ, ಬಾರಭಾಈ]

**ಬಾರಾಮಾರ್ಗ, ಭಾರಾಮಾರ್ಗ** (ನಾ). ೧. ಹೆದ್ದಾರಿ; ರಾಜಮಾರ್ಗ : ಅವರಿಬ್ಬರೂ ಬಾರಾಮಾರ್ಗದ ಮಗ್ಗುಲ ಮಾಲೀಕನ ಕಾಡಿನಲ್ಲಿ. . . ಕುದುರೆಯ ಹಿಂಡನ್ನು ಮೇಯಿಸುವ ಸಲುವಾಗಿ ಅಟ್ಟಿಕೊಂಡು ಹೋಗುತ್ತಿದ್ದರು (ಪುಸಕು ೨೯೩). ೨. "(ಒಂದು ದೇಶದ ಮೂಲಕ ಹಾದು ಹೋಗಲು ತೆರುವ) ಸಾಗಣೆಸುಂಕ, ಹೆದ್ದಾರಿಯ ಸುಂಕ" (೬ಸಂಗ್ರಾ. ೦೩೨) : ಕಾಕೋಲು ಬುಚಯ್ಯನ ವಹಿತಾ ಬಾರಾಮಾರ್ಗದ ಮುಂಡಿ ಶಿಲದಯನ ವಹಿತಾ (ಎಕ. X (8), ಕೋಲಾರ. ೨೩೯-೯೯; 1761); ಬಾರಾಮಾರ್ಗದ ವೀರತ್ತ್ಯೆಯಶೆಟ್ಟರು ಹನಿಕೆ ಚೆನ್ನದೇವರು ಬಿಗ ದೇವನಹಳ್ಳಿ ನಿರಂಜನಯ್ಯ . . . ಮೊದಲಾದ ೫೬ ದೇಶದ ಬಾರಾಮಾರ್ಗದವರು ಬರಸಿಕೊಟ್ಟ ದಾನದ ವರದಿ ಕ್ರಮ (ಎಕ. IX (8), ಹೊಸಕೋ. ೦೩೬-೨; 1771). **ಭಾರಾಮಾರ್ಗ** : ೨. ಸ್ಥಳ ಪರಸ್ಥಳದ ಚತುರ್ದಿಕ್ಕು ಐವತ್ತಾರುದೇಶದ ಭಾರಾಮಾರ್ಗದ ದೇಶದವರು (ಎಕ. X (8), ಕೋಲಾರ. ೨೩೯-೦೦; 1761). 'ಭಾಟಾಮಾರ್ಗ' ಪರಾ. [ ? + ಮಾರ್ಗ]

**ಬಾರಾಸುಂಕ** (ನಾ). = ಬಾರಾಮಾರ್ಗ ೨ : ಇನ್ತೀ ಧರ್ಮವನುತ್ತರಾಯಣಸಂಕ್ರಾನ್ತಿ ನಿಮಿತ್ತದಿಂ ಕೊಟ್ಟು ಬಾರಾಸುಂಕದ ಭೇಣಿ ಕಾಣಿಕ್ಕೆಡಸದೆ . . . ತಪ್ಪದೆ ಪ್ರತಿಪಾಳಿಸುವರು (ಕಇಅ. ೩೬-೯೯-೦೬: 1134). [ ? + ಸುಂಕ₁]

**ಬಾರಿ₁, ವಾರಿ₁** (ನಾ). ೧. ಸಲ : ಸರದಿ ; ಸಾರಿ : ಪಶುಗಳ ಮೆಯ್ಯೊಳೆನಿತು ರೋಮಮುಂಟನಿತು ಬಾರಿ ತಾಂ ಕೊಲಿಸಿಕೊಂಬಂ ವೃಥಾ ಪಶುವಧೆಯಂ ಮಾಡಿದವಂ (ಕಂಕಕಂ. ೬೨-೧೬); ಎನಿತು ಬಾರಿ ಪಲಾಯನದ ಸಿರಿ ನಿನಗೆ ಸೇರಿತು (ಕುಮಾರರಾ. ೦೮-೯೩); ಬಲಗೊಂಡನುಜರ್ ಮೂಱು ಬಾರಿ ತನ್ನೊಳು ತಾನು ಗೆಲವೇರ್ ಮುನಿಗಣರ್ವರಿಗೆ ನಲಿದೆಱಗಿದನು (ಜಿಕ. ೩-೬೦). ೨. ಆಹುತಿಯಾಗುವ ಸರದಿ ; ಬಲಿಯಾಗುವ ಪಾಳಿ : ವಾಳಿನ ಬಾರಿಯಮ್ಮ ಮೇಲೆ ಬಂದುದು (ಕಂಕಾ. ೩-೨೩ ವ);

ಅಬ್ಬಾ ನಿಮ್ಮ ಮನೆಗೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಂ (ಕಾಚಸಂ. ೩೮-೨೩ ಪ); ಎನಗೆ ಬಂದುದು ತಾಯೆ ನಾಳಿನ ದಿನದ ಬಾರಿ (ಕುಪ್ರಾ.೯. ೧೦-೦೨). ೩. ಬಲಿ; ಆಹುತಿ : ಆತನಂ ಪವಮಾನಸೂನು ಬಾರಿಯ ನೆವದಿಂ ಪೋಗಿ ಕೀನಾಶಂಗಾಪೋಶನಮನಿತ್ತು ಮತ್ತಂ ಬರೆ (ಕಾಚಕು. ೯-೩೨ ಪ); ಎಲ್ಲರುಮಿರ್ದು ಮಾಡಿದೊಡೆ ಮಾಡಿದ ಬಾರಿಯ ಸೂಟಿ ನಿಯೋಗದಿಂದಲ್ಲಿಯ್ಯುವಂತೆ ಬಂದು ಬಟಿಕಾ ಮನೆಯಲ್ಲಿಗೆ ಬಂದುದು (ಕಾಚಸಂ. ೩೮-೨೩). ೪. ಬಾಯಿ; ದವಡೆ : ಬೇಟದುಬ್ಬಿದಿಗವಾನಾಂತ ನಲ್ಲಳ ಮುಖಾಂಬುಜವಮಂ ನಡೆ ನೋಡಿ ನೋಡಿ ಸಾಯದೆ ಬರ್ದು ಕಾಡಿದಂ ಜವನ ಬಾರಿಯೊಳಂ ಬರ್ದುಕಾಡದಿರ್ಕುಮೇ (ಅಂಕು. ೦೨-೨೫); ಪೆಂಡತಿಯ ಮಾಗನಕಾರಣದಿನರಿವವನಂ ಜವನ ಬಾರಿಗಟ್ಟುವುದೆ ಧರ್ಮಂ (ಶಂಕಸಂ. ೬೮-೯); ಅರಣ್ಯದೊಳ್ ಚರಿಯಿಪ ರೌದ್ರರಾಕ್ಷಸರ ಬಾರಿಗೆ ಬಿಟ್ಟಳೋ ಕಾಂತೆ (ಕುಸುಕಾ. ೧೯-೦೦೯). ೫. ದಾಳಿ; ಆಕ್ರಮಣ; ಲಗ್ಗೆ : ತಳ್ತಜ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬರ್ದುಕಿ ಬಂದಂದ ಮಿದಾರಳವು (ಸುಕಷು. ೬-೨೯); ನೀನಾ ನಿಷ್ಠುರನ ಕೆಯ್ಯೊಳೆರಡಿಲ್ಲದೆ ಪೇರಾನೆಯ ಬಾರಿಗೆ ಬಿರ್ದ ಶ್ವಾನನ ತೆಱದಂತೆ ಬಾಧೆಗೊಳಗಾಗಿರ್ಪೆ (ರಕೂರ್ನು. ೬-೧೫೦); ಇನನಿದಿರಟ್ಟ ಕಾಮರ್ಗಿಲ ಬಾರಿಗೆ ಬಿಟ್ಟನೊ ತಳ್ತ ಬಳ್ಳಿಮಿಂಚಿನ ಬಲೆಯಲ್ಲಿ ಸಿಕ್ಕಿದನೊ . . . ಘನಜಳಧಾರೆಯಿಂ ಕರಗಿ ಹೋದನೊ (ಅವಂಕು. ೯-೦೩). ೬. ಅಧೀನ ; ವಶ ; ಹತೋಟಿ : ಪೊದೆದ ಮಡಿ ಬಟೆಯಂ ಧೂಳಿಯೊಳ್ ಮಾಸಿಯಸಗನ ಬಾರಿಯೊಳ್ ಬಿರ್ದು ನಿಗ್ರಹಕ್ಕೊಳಗಪ್ಪಂತೆ ಚವಳರ್ . . . ದುಃಖಂಬಡುವರ್ (ರಕೂರ್ನು. ೯-೩೮); ಭೀಮ ಧರಿತ್ರೀಭೃತ್ಸನುಜೆ ನಳನೃಪಂಗೆರ್ದೆದೆತ್ತು ಕರಂ ಚಿತ್ತಭವನ ಬಾರಿಗೆ ಬಂದಳ್ (ದಪುಷ್ಕ. ೩-೦). ೭. ಕಪಿಲೆಬಾವಿಯ ಬಳಿ(ನೀರು ಎಳೆಯುವ) ಎತ್ತುಗಳು ಕೆಳಗೆ ಇಳಿಯುವುದಕ್ಕಾಗಿರುವ ಇಳಿಜಾರುಪ್ರದೇಶ : ಮೊಟ್ಟೆಯ ಬಾಂಯ ಕಡೆಗೆ ಮಣ್ಣು ಭರತಿ ಹಾಕದೆ ಗುಣಗಲ್ಲುಗಳನ್ನು ಅಥವಾ ಗರಸುಮಣ್ಣನ್ನು ಹಾಕಿ . . . ಮೊಟ್ಟೆಯ ಬಾರಿಯನ್ನು ತಯಾರು ಮಾಡಿ ಮೊಟ್ಟೆಯನ್ನು ಸಾಗಿಸಬೇಕು (ಕೃಶಿಶ್ರ. ೦೦೯); ಬಾವಿಗೊಂದು ಹೊಸ ಮೊಟ್ಟೆಯಾಗಿದೆ; ಬಾರಿಯಾಗಿದೆ (ಬಾಬಂ. ೧೩), ವೇಗ ನೀಗುವ ಈರ್ಷೆಯಿಂದ ಧಡಧಡನೆ ಬಂದ ಬಸವಂತಿ, ಬಾರಿಯ ಮೇಲಿಂದಲೇ ನೀರಿಗೆ ಧುಮುಕಿದಳು (ಬೀಕಪ. II. ೦೯೯). ೮. ಕಾಮೋದ್ರೇಕ ; ಬೆದೆ : ಪುಲಿಯ ಪೋಗು ಬಾರಿಯಂ ಸನ್ನೆಯಂ ನೂಱಾವಮರ್ಚುವ ನಿಲ್ವೆಡೆಯಂ ಬಗೆಯಂ ತೆಗೆಯನಲ್ಲಾಟಮಂ . . . ನೀಂ ಬಲ್ಲೆ ಬೇಂಟೆಕಾಱರೊಲ್ಲೆಲ್ಲಮಾನೆ ಬಲ್ಲೆಂ (ಶಂಕಪಾ. ೫-೯೩); ಹಸು ಬಾರಿಗೆ ಬಂದಿದೆ, ಹೋರಿ ಕೊಡಿಸಬೇಕು (ಬೂ೨). ೯. ಕೂಟ ; ಸುರತ : ಆ ಮುದುಪಂ ಗಡ ಕೊಟ್ಟನೊತ್ತಿಯುಂ ಗರಗರನಾಯ್ತು ಬಲ್ಮೆ ಮುದು ಗೂಗೆಯ ಬಾರಿಗೆ ಕೈನೆ ತಾನೆ ಮೃಗರದೆನಗೊತ್ತಿಗೊಟ್ಟ ಸುಖ ಮಾಟ್ಕೆಮೆ ವಟ್ಟದನಕ್ಕ ಬಟ್ಟಮೆಂ (ಸೂಕ್ತಿಸು. ೬-೧೨೨) ; ಅವನ ಬಾರಿಯೊಳ್ ಮಗಳ ಮೆಯ್ ಕಳೆಯೋಱುವುದೊಳ್ಳಿಗಂ ಪೊರ್ದಿರ್ಪುವುದೋಱೆಯುರ್ಕುವುದು (ಕಕಾ. ೬-೯೬). ವಾರಿ$_1$ : ೧. ವಾರಿ ಇಲ್ಲದ ಸುಂಕ ದಾರಿಗೆ ದಾರಿಯೇ ? (ಗಾದೆ). ೨. ಬಿರುದರ ಗೋವ ವಾರಿಗೆ ತಪ್ಪುವ ಳಂಕರ ಗಂಡ (ಎಕ. VII. ಶಿಕಾ೩೦. ೦೯೯-೮ ; 1161).

ಬಾರಿಬಾರಿ (ದ್ವಿರುಕ್ತಿ) : ಬಾರಿಬಾರಿಗೆ ಪಾತಿವ್ರತ್ಯವ ಬೋಧಿಸೆ ಜಾರೆಗದಱ ನಿಜ ಸೂಗೂಲೆತ (ಕೃಶಂದ. ೦-೦೩೬-೦); ಆ ರಣದೋಲೀಶಿವನ ಸ್ಯಂದನಸಹಸ್ರಮಂ ಬಾರಿಬಾರಿಗೆ ಕತ್ತರಿಸಿ ಕೆಡಹಿ ಫಲುಗುಣಂ ಪೂರೈಸಿದಂ ದೇವದತ್ತಮಂ (ಕೃಏಕಾ. ೨೫-೩೯); ಇಂದ್ರನೂ ಜಯಂತನೂ . . . ಬಾರಿಬಾರಿಗೂ ಸೋತು ಓಡಿ ಹೋಗಲಿಲ್ಲವೆ ? (ಕೃವಾಲು. ೦೬೭).

[ದೇ.೫ ಕೊಡ. ಬಾರೀ ; ತೆಲು. ಬಾರಿ./ಹಿಂ. ಬಾರ್; ಮರಾ. ಬಾರ]

ಬಾರಿ$_2$ ' ಬಾರ್$_2$ ' ನೋ.

ಬಾರಿ$_3$ (ನಾ). ಆನೆಯನ್ನು ಹಿಡಿಯಲು ಮಾಡುವ ಉಪಾಯ : ಗಂಧ ಹಸ್ತಿಯೊಡನೆ ಬಾರಿ [ತಮಿಳ. ಚಾಲಿ, ಬಾಳಿ, ಬಾಲಿ, ಬಾವಿ]ಯೊಳ್ ಮೂಾವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯಂ ಸೇದೆಗೆಡಿಸಿ ತನ್ನ ಬಸಕ್ಕೆ ಮಾಡಿಯೇಱ (ಶತ್ತಾ.ಶಾ. ೩೯-೦೯) ; ತೋರದೆರೆ ಮುರಿಯ ಮೂಡುವ ವಾರಣಮಂ ಪೋಲ್ಪುದಡಸಿ ನಿಡುಗೆಯ್ಯಂ ಭಂಡಾರಿಸಿ ಮೆಡಱಿದ ತಳಿಯಂ ಬಾರಿಯುಮಂ ಮುಱಿಯೆ ಪೊಯ್ದು ಪೊಱಮಡು ವಿಭಮಂ (ಅರ್ಜುನಪ. ೩-೦೦೩). ' ಕೆಡ್ಡಾ ' ಹೋ. [< ಸಂ. ವಾರೀ]

ಬಾರಿಕ (ನಾ). ೧. ಸರದಿಯನ್ನು ತಿಳಿಸುವವನು : ಬಾಯಾಳೆಂಬ ಬಳ್ಳಮಂ ಬಾರಿಕನಂ ಮಾಡಿ ಪಲಕಾಲಂ ಸಲುತುಮಿರ್ಪುದುಂ (ಕೊಂಕಶಂ.೪೮-೦೨) : ಬಾರಿಕಂ ಬಂದು ಪಾರ್ವನಂ ಕಾಣದಬ್ಬಾ ನಿಮ್ಮ ಮಗನ ಮೇಲೆ ಬಾರಿ ಬಂದುದು ನಾಳೆ ರಕ್ಕಸನಲ್ಲಿಗಟ್ಟಂ ಎಂದು ಪೇಟ್ಟು ಪೋದಾಗಳ್ (ಕಾಚಸಂ. ೩೮-೨೩ ಪ) ; ಬೊಬ್ಬೆಯಿಂ ಪೇಳ್ದ ಬಾರಿಕನ ನುಡಿಯಂ ಕೇಳ್ದು ತಬ್ಬಿಬ್ಬು ಗೊಂಡು (ಅಕ್ಕಶಾ. ೩೯-೬). ೨. ಗ್ರಾಮದ ಕಾವಲುಗಾರ : ಸಾಸಿರ್ವರ ಬಾರಿಕಂಗೆ ಮನೆದೆಱ (ಇಎ. ೦೯೯೬, ಹಾವಗಲ್ ೨೫೦-೩೩ ; 993) ; ಬಂಟ ಸಾಸಿರ್ವರ(ರುಂ) ಬಾರಿಕಂಗೆ ಮನೆದೆಱ ಬಿಟ್ಟ ಬೆಸಕೂಳ್ದಿಱ ಮೊದಲಾಗೆ ಸರ್ವ್ವಮಾನ್ಯವಾಗೆ ಬಿ[ಟ್ಟ]ರ್ (ಕಇ. II. ೬-೩೩ ; 1072).

[ಬಾರಿ$_1$ + − ಕ$_3$]

ಬಾರಿಕಾರ (ನಾ). ಹಳ್ಳಿಯನ್ನು ಕಾವಲು ಕಾಯುವವನು ; ಗ್ರಾಮದ ಕಾವಲುಗಾರ : ಮನೆಯಲ್ಲಿ ನಿತ್ಯ ಕಸ ಮುಸುರೆಯನ್ನು ಮಾಡುವ ತಳ ವಾರ, ಬಾರಿಕಾರರಿಂದ ಮದುವೆ ಮುಂಜಗಳನ್ನು ಮಾಡಿಸುವ ಪುರೋಹಿತರ ವರೆಗೂ . . . ಬೇರೆ ಬೇರೆ ಮನೆತನಗಳಿರುವವು (ಶಕಶಾ. ೦೫೭).

[< ಬಾರಿಕ + −ಕಾರ$_1$ (< − ಕಾಱ)]

ಬಾರಿಕೆ, ಬಾರೀಕೆ (ನಾ).=ಬಾರಿಕಾರ : ಬಾರಿಕೆ_ಈತನು ಗೌಡನ ಅಪ್ಪಣೆ ಯಂತೆ ಹಳ್ಳಿಯಲ್ಲಿ ಮುಸುರೆ ತಿಕ್ಕುವದು, ಹಿಲಾಲು ಹಿಡಿಯುವದು ಮುಂತಾದ ಕೆಲಸ ಮಾಡುವನು (ಕುಶಾ. ೦೬೨). ಬಾರೀಕೆ : ತೋಟಿ— ತಳವಾರ, ವೆಟ್ಟಿ, ಬಾರೀಕೆ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಸೂಕ. ೦). [< ಬಾರಿಕ. / ತೆಲು. ಬಾರಿಕವಾಡು]

ಬಾರಿಗುಱಿ (ನಾ). ಬಲಿಯಾಗಿ ಕೊಡುವ ಕುರಿ ; ಆಹುತಿಯಾಗಿ ಕೊಡುವ ಕುರಿ : ಕುತ್ತಮಂ ಕಿಡಿಸುವ ನಿಮಿತ್ತದಿಂ ಚಂಡಿಕೆಗೆ ಓಂಡಮ ನಿಟ್ಟುಂ ಮಾರಿಗೆ ಬಾರಿಗುಱಿಯನಿತ್ತುಂ . . . ಇಂತನೇಕಪ್ರಕಾರಂಗಳಿಂ ರೌದ್ರದೇವತೆಗಳಂ ಪಿಡಿದು ದುರ್ಗತಿದುಃಖದಿಂದಾಳುತ್ತಂ ಮುಬುಗುತ್ತ ಮಿರ್ಪರ್ (ಕಶಾರ. ೯೬೩). [ಬಾರಿ$_1$ + ಕುಱಿ$_3$]

ಬಾರಿಗೆ (ನಾ). ಕಸ ಗುಡಿಸುವ ಸಾಧನ ; ಪೊರಕೆ : ಹನುಮಂತಪ್ಪನು . . . ಅಡುಗಮನೆಯನ್ನು ಬಾರಿಗೆಯಿಂದ ಸ್ವಚ್ಛವಾಗಿ ಗುಡಿಸಿದನು (ರಕ್ತ್ರ. ೦೦೩). ' ಬೋಹರಿಗೆ ' ಪರಾ. [ ? ]

ಬಾರಿದಿ (ನಾ). ವೇಶ್ಯೆ ; ಸೂಳೆ : ಮೊಳ ಬಟ್ಟೆಗೆ ದೇಹವನ್ನು ಮಾರುವ, ಮಾರಿಕೊಂಡ ಬಾರಿದಿಯಾಗಿದ್ದಾಳೆ (ಒಕಹು. ೨೦೦).

[← ಹಿಂ. ಬಾರತಿಯ. / ಸಂ. ವಾರಸ್ತ್ರೀ]

ಬಾರಿಯಿಕ್ಕು (ಕ್ರಿ). (ಸರದಿಯ ಪ್ರಕಾರ) ಕಾವಲಿಡು ; ಕಾವಲು ಹಾಕು : ಅರಸನಪ್ಪಣೆಯಾಯಬೂರ ಸೀರೆಯನೆಲ್ಲ ಗಿರಿಯಂತೆ ಮಡಿವಳಯ್ಯನ ಮುಂದೆಯೊಟ್ಟುತ್ತೆ ಕರಿ ತುರಗ ರಥ ಪತ್ತಿ ಮುಂತಾದ ಬಹುಬಲವ ಬಾರಿಯಿಕ್ಕುತ್ತ ಭಟರು ಮಾರುಳಸಗ ಭೂವರಗೆ ನೀನಿದಿರೆ . . . ಎನ್ನಲು (ಪ್ರಕುಪು. ೬-೮೨). [ಬಾರಿ$_1$ + ಇಕ್ಕು]

ಬಾರಿಯಿಡು (ಕ್ರಿ). ಬಲಿಯಾಗಬೇಕಾದ ಪ್ರಾಣಿಯ ಸರದಿಯನ್ನು ಗೊತ್ತುಮಾಡು ; ಸರದಿಯ ಮೇರೆಗೆ ಬಲಿಯನ್ನು ತೆಗೆದಿಡು :

ಫಣರಾಜಂ ಬಾರಿಯಿಟ್ಟಟ್ಟದೊಡನಂದಿನದಿಂ ಬರ್ಪ ಸರ್ಪಂಗಳಂ ಬಲ್ಕಣಿ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ ಬಲಂ ಕೇಳಿರೇ (ಶಾಪಾ.ಕ. ೧೦೦). [ ಬಾರಿ$_1$ + ಇಡು$_1$ ]

**ಬಾರಿಲುಮಕ್ಕಿ** (ನಾ). ಒಂದು ಬಗೆಯ ಭೂಮಿ : ಬಾರಿಲುಮಕ್ಕಿಯ ಗದ್ದೆಗೆ ಇಕ್ಕಿ ಹೊಸ್ತ . . . ಏಳು ಭೆಯದ ಬತ್ತ ಇಂನೂಜಿ ಮೂವತ್ತು ಇಕ್ಕಿದಂ (ಎಕ. ೪. ಹಾಸನ. ೩೮-೦೭ ; ಸು. 1000 ?). [ ? + ಮಕ್ಕಿ$_1$ ]

**ಬಾರಿಸು$_1$** (ಕ್ರಿ). ೧. ಚಾವಟಿಯಿಂದ ಹೊಡೆ ; ಚರ್ಮದ ಪಟ್ಟಿಯಿಂದ ಏಟುಕೊಡು : ಆರು ಬಾರಿಪ್ಪೆನಾರಂ ನಿನಗೆಜಿಗಿಪಂ. . .ಬೆಸಸು ಬೆಸಸು (ಅರ್ಜನೀ. ೬-೬೯) ; ತುಡುಗುಣಿಗಳವದಿರು ನಭೋಗ್ರಕೆ ಸಿಡಿದು ಹವಿಗೊಂಬವುರನಿಕರದ ಹೆಡಕ ಬಾರಿಸಿ ಬಾಹುತಿರ್ದರು ಬಾಯ ತುತ್ತುಗಳ (ಕೂಕರಾ. ೧-೧೧-೬). ೨. ಜೋರಾಗಿ ಏಟು ಕೊಡು ; ಬಿಗಿ : ರೋಷಗೊಂಡ ಇನ್ಸ್‌ಪೆಕ್ಟರ್ ಅವನ ಕೆನ್ನೆಗಳಿಗೆ ಬಾರಿಸಿದ (ಆತ್ಮಾಕ್ತ. ೦೧೯). [ ಬಾರ್$_2$ + — ಇಸು$_3$. / ತುಳು. ಬರ್ಜು ]

**ಬಾರಿಸು$_2$** (ಕ್ರಿ). ೧. ನಿರೋಧಿಸು ; ಪ್ರತಿಬಂಧಿಸು : ದೇವತೆಗಳ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆ ಮಾಡಲಾಗದೆಂದು ಬಾರಿಸಿ (ಶಬ್ದಾರಾ. ೯೧-೨೯); ಕಡುಕೆಯ್ದು ಕೃತಾಂತನಿಂತು ನಿರ್ನೆರವೆುಚಿದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪರೇ (ಅಂಕೃ. ೩-೯) ; ಇಸ್ಸರ್ ಬಾರಿಸಿದೊಡಂ ಪಡಣದೆ ದುಷ್ಪರನೊಳಕೊಂಡು ಕಟ್ಟರ ಕಥೆಗಳಂ ಪೇಟ್ವಿಂ (ಸಂಶಕಂ. ೦೨೨-೦೨). ೨. ಎಚ್ಚರಿಕೆ ಕೊಡು,—ನೀಡು: ಈ ರೂಪೆಂಬುದು ಭುವನಜನಾಥ್ಯಂ ಚಕ್ರಿಜನನಿಷೇವಿತಮಿದಜಿೞ್ ಸಾರದಳಿಪೆಂದು ಪೆಳ್ವನ ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ (ಅಂಕೃ. ೯-೯೩); ಅಂದೆನ್ನಂ ನೀಂ ಬಾರಿಸಿದುದು ಸನ್ನಿದವಾಯ್ತುನ್ನಿದರ್ಕೆ ಪೇಟ್ಗೆಯ್ವೆಂ (ಸಂಶಕಂ. ೬೯-೦೬); ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ (ಭುಕ್ತ್ವಕೃ. ೭-೩೩). ೩. ಪರಿಹರಿಸು ; ನಿವಾರಿಸು : "ಬಾರಿಸೆಂದು ನಿವಾರಿಪುದು" (ಕಶಶಾ. ೭೦-೬೦೦) ; ಚಂದ್ರಾಂಶುಚಂದ್ರಕಾಂತದ್ರವ ಕರ್ಪೂರ ಮೃಣಾಲಾದಿಗಳುಂ ಬಾರಿಸಲ್ಕಾಜವೆ ದಲವನ ದಾಹಜ್ವರವಂ (ಅಂಕೃ. ೨-೮೩). ೪. ಹೀಯಾಳಿಸು ; ಧಿಕ್ಕರಿಸು : ಕ್ಷೀರೋದವಾರಿಧಾರಾಪೂರದ ಚೆಲ್ವಿಂಗೆ ಸೆಣಸುವಂತಘನತನೀಹಾರದ ಬೆಳ್ಪನೆ ಬಾರಿಸಿ ಪಾಂಡುಕ ಶಿಲಾತಲಂ ಸೊಗಯಿಸುಗುಂ (ಅಂಕೃ. ೬-೬೯) : ಕೀರ್ತಿ ದಿಗ್ವಲಯಭಿತ್ತಿಯ ನೋವದೆ ಬಾರಿಸಿತ್ತು ಭಾಸುರರುಚಿಯಿನ್ದೆ ಚನ್ದ್ರಮನ ಚನ್ದ್ರಿಕೆಯಂ (ಎಕ. ೪. ಅರಸೀ. ೦೨೭. ೩೭: 1185); ನೇರಿತೆಳವಾಟಿಗಂಬಮನೋರಂತಿರೆ ನುಣ್ಣುವೆತ್ತು ಸೋಲಿಪ ಚೆಲ್ವಿಂ ಬಾರಿಸಿ ಸೊಬಗಿಂಗೆತ್ತಿದ ತೋರಣಗಂಬಂಬೊಲಿರ್ದುವಾಕೆಯ ತೊಡೆಗಳ್ (ಶಬ್ದಾಕಾ. ೭೩). ೫. ಬಿಡು ; ತೊರೆ ; ತ್ಯಜಿಸು : ಬಾರಿಸುತಿಂದ್ರಿಯಜ್ಞಾನವ ಪ್ರಾಣಾಪಹಾರಿಯಾಗಿರ್ದ ಕ್ಷುಧೆಯೊಳು ಸಾರನಿಜಾತ್ಮಭಾವನೆಯೆಂಬಮೃತಾಹಾರವ ಕೊಳುತಿರ್ದ ರೊಲಿದು (ಶಾಂತೀಶ. ೪-೬೩). [< ವಾರಿಸು]

**ಬಾರಿಸು$_3$** 'ಬಾಜಿಸು$_2$' ನೋ.

**ಬಾರೀಕ** (ಗು). ದಪ್ಪವಾಗಿಲ್ಲದ ; ತೆಳುವಾದ : ತುಂಬುಗಲ್ಲ. ಬಾರೀಕ ಮಾಸೆ. ಭರ್ತಿ ಆಳು (ಹೊಸಕ್ಕ. ೭೯).

[←ಪಾರ. ಹಿಂ. ಮರಾ. ಬಾರೀಕ್]

**ಬಾರೀಕಿ** 'ಬಾರಿಕಿ' ನೋ.

**ಬಾರು$_1$** 'ಬಾರ್$_2$' ನೋ.

**ಬಾರು$_2$** 'ಬಾರ್$_3$' ನೋ.

**ಬಾರು$_3$** 'ಬಾರ್$_4$' ನೋ.

**ಬಾರುಕೋಲು** 'ಬಾರ್ಕೋಲು' ನೋ.

**ಬಾರುಗಿ** (ಕ್ರಿ). ಚರ್ಮವನ್ನು ಎತ್ತು,—ಸುಲಿ : ಒದೆದುಗುರಿಂದೆ ಬಾರುಗಿದುದೆಯ್ದದೆ ಕುತ್ತಿದಳಿಟ್ಟಿ ಕಂಟಕೌಘದಿನಳಿ ಪಾಜಿದವ್ವಳಿಸಿ ಕೆಂದಳದಿಂದೊಳಪೊಯ್ದು ಪೊಯ್ದುದೆಯ್ದದೆ . . . ಕಡೆಗಣ್ಣಿಂ ಪಡೆದಳೋಪನನೋಪಳನಂಗಯುದ್ಧದೊಳ್ . (ಲೀಲಾವ. ೦೩-೨೦).

[ ಬಾರ್$_2$ + ಉಗಿ$_1$ ]

**ಬಾರುಗುತ್ತ** 'ಬಾರ್ಗುತ್ತ' ನೋ.

**ಬಾರುಗುತ್ತು** 'ಬಾರ್ಗುತ್ತ' ನೋ.

**ಬಾರುಗೋಲು** 'ಬಾರ್ಕೋಲು' ನೋ.

**ಬಾರುದಾರಿ** (ನಾ). ಚರ್ಮದ ಮೇಲೆ ಬಿದ್ದ ಪೆಟ್ಟಿನ ಗುರುತು; ಬಾಸುಂಡೆ : ಪರಗಯ್ಯನು ಕಟ್ಟಿ ಬಿಜ್ಜನ ಚೇರ ಬಂದನು ಹೆಚ್ಚಿ ಬಡಿಯಲು ಬಾರುದಾರಿಗಳು ಎದ್ದು ಗುರುಗಳ ಬೆನ್ನಿನ ಮೇಲೆ (ಸಂಬಂಧಿ. ೩-೨೭). [?]

**ಬಾರುಸಿಪಾಯಿ** 'ಬಾರ್ಸಿಪಾಯಿ' ನೋ.

**ಬಾರುಳಿ** (ನಾ). (?) : ನೋಟ್ಟ ತರಳಲೋಚನವ ಸರಳಾಪಾಂಗಂ ಹರಿಣೀ, ಭಾವವಂ ಮನಂಗೊಳಿಸಿ ನಿಜಿದಳಿರ್ದೋಂಗಲಂ ತೆಗೆಯೆ ಬಾ[ಶಾತಾಂ. ಬಾ] ರುಳಿಯಂ ದನಿಗೆಯ್ದಶೋಕೆಯೊಳ್ ಕಿಜುಮುಗುಳ್ಗೊಂಜಿಯಂ ತಳೆದು ಪೂವಿನ ಬಿಲ್ ನನೆಯಂಬು ಕೆಯ್ಯೊಳಚ್ಚಿಜೀದಿರೆ ಮೋಚಕಚ್ಛವಿಯ ತಾವರೆಗಣ್ಣಾಳ್ ಗಾಳುವಣ್ಣಳೀಂ ಮುಟ್ಧರೊ ಕೀಳಿಶೈಲಶಿಖರಾವಳಿಯೊಳ್ ಶಬರೀವಿಲಾಸವಂ (ಅಸಂಕೃ. ೬-೦೭). [?]

**ಬಾರೂತ್** 'ಬಾರೂದು' ನೋ.

**ಬಾರೂದು, ಬಾರೂತ್** (ನಾ). ತುಪಾಕಿಗಳಿಗೆ ತುಂಬುವ ಮದ್ದು ; ಸಿಡಿಮದ್ದು : ಮತ್ತೊಂದು ಜಹಜಿನಲ್ಲಿ ಬಾರೂದಿಗೆ ಬೆಂಕಿ ಹತ್ತಿ ಬೆಂದುಹೋಯಿತು (ಕಾಶೀಂಚರ್ರ. ೦೫೦) ; ಒಂದೆರಡು ಕಡೆ ಪೋಲೀಸು ಠಾಣೆಗಳಿಂದ ಕೋವಿ, ಬಾರೂದುಗಳು ಕಾಣೆಯಾಗಿವೆ (ಗೂಂಡಾರ. ೩). **ಬಾರೂತ್** : ಬಾರೂತ್ ಜನಗಳು, ಎಂದರೆ . . . ಖಾಸಾಬಾರು, ಕಂದಾಚಾರ ವಗ್ಯೆರೆ ಜನರಿಗೆ ಸೇರಿಸಿಕೊಂಡು ನಿಂತರು (ಕತ್ತಾ. ೬೯).

[← ಪಾರ. ಹಿಂ. ಮರಾ. ಬಾರೂದ್, ಬಾರೂತ್]

**ಬಾರೆ** 'ಬೋರೆ$_2$' ನೋ.

**ಬಾರೆತ್ತು** (ಕ್ರಿ). ಚರ್ಮವನ್ನು ಕೀಳು; ತೊಗಲನ್ನು ಸುಲಿ : ಬಾರೆತ್ತಿ ಸೀಳೆಯುಂ ಗುಗ್ಗುಳಂಬೊತ್ತಿಸೆಯುಂ ಅಸಗವೊಯಲ್ಗೊಯ್ಕೆಯುಂ (ಆತ್ಮಕೃ. ೧೧-೧೧ ವ) ; ಮಾದಿಗನಂತೆ ಬಾರೆತ್ತುವರ್ ನಾಯುಂತೆ ಕಚ್ಚಿ ತಗೆವರ್ (ರವರ್ಣಾಮ್ಮ. ೩-೬೩) ; ಮಡದೀ ಹೆಡತಲೆವರಂ ಬಾರೆತ್ತುವುದುಂ ಕೂರಸಿಗಳಿಂದೆತ್ತಿ ಕುತ್ತುವುದುಂ (ಶಾಂತೀಶ್ವ. ೯-೦೦೦ ವ).

[ಬಾರ್$_2$ + ಎತ್ತು$_1$]

**ಬಾರೇಟು** (ಕ್ರಿ). ಹೊಡೆತದಿಂದ ಚರ್ಮದ ಮೇಲೆ ಬಾಸುಂಡೆ ಬರು : ತೋರವಮುಡಿವಿಡಿದು ಕುಡಿಯಂ ನಾರಂ ಸದೆವಂತೆ ತದೆದು ಬೀಟಿಯ ಕಾಲಿಂ ಬಾರೇಟ್ ಬದಿಯನೊದೆದೊಡೆ ಕೇರು ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್ (ಹುಕೂಕ. ೨-೩೦) ; ಎನಗಿನ್ನಾರಾಸೆಯಾರ್ಕಾವರಾರ್ಶರಣೆಂದಾ ಕಳಕಂಠನಾದೆ ಬಸಿಜಿಂ ಬಾರೇಟ್ವಿನಂ ಮೋದಿದಳ್ (ಅಸಂಕೃ. ೦೦-೯೬).

[ಬಾರ್$_2$ + ಏಟು$_1$]

**ಬಾರ್ಕೋಲು, ಬಾರುಕೋಲು, ಬಾರುಗೋಲು** (ನಾ). ಚರ್ಮದ ಹೆಣಿಕೆಯುಳ್ಳ ಚಾವಟಿ : ತುದಿಯಲ್ಲಿ ಚರ್ಮದ ಪಟ್ಟಿಗಳನ್ನು ಹೊಂದಿಸಿದ ಚಾವಟಿ ; ಬಾರುಗುಣಿ (ಉಕ) : ಹೇರು ಕಟ್ಟಾಗ ಬಾರ್ಕೋಲ ನಾ ಮರೆತೆ . . . ನಮ್ಮೆತ್ತು ಮುಂದೆ ಮುರ್ಹಚ್ಚಿ ತೂಯೊಲ್ಲೊ (ಹಳ್ಳಿಪಾ. ೩೩). **ಬಾರುಕೋಲು** : ಬಂಡಿಕಾರಣ್ಣನ ಬಂಡಾಟ ನೋಡಿರೊ. ಬಾರುಕೋಲವನ ಬಲಗೈಲಿ (ಹಳ್ಳಿಹು. ೯೬); ಬಿರುಗಾಳಿ ಮೈದುಂಬಿ, ಆಗಸದ ಮೂಲೆಮೂಲೆಯಲಿ ಸಿಡಿಲು ಮಿಂಚಿನ

ಬಾರುಕೋಲು ಬೀಸಿ (ಕಂಠೀ. ೧೨-೦೯). **ಬಾರುಗೋಲು :** ಬಂಡಿಗಾರ ತನ್ನ ಬಾರುಗೋಲನ್ನು ನಡುವಟ್ಟಿಯಲ್ಲಿ ಸಿಕ್ಕಿಸುತ್ತ . . . ನುಡಿದನು (ಪ್ರಪಹು. ೩೬೦). [ಬಾರ್₂+ಕೋಲ್ಉ (<ಕೋಲ್₁)]

**ಬಾರ್ಗಿರ್** 'ಬಾರ್ಗೀರ್' ನೋ.

**ಬಾರ್ಗೀರ್**, ಬಾರಗೀರ, ಬಾರಗೀರು, ಬಾರಾಗೀರ, ಬಾರ್ಗಿರ್ (ನಾ). ಕುದುರೆದಳದ ಸಿಪಾಯಿ; ಅಶ್ವಾರೋಹಿಯೋಧ: 'ಬಾರ್ಗೀರ್‌ಕಛೇರಿ' ಪರಾ. **ಬಾರಗೀರ :** ಹತ್ತು ಮಂದಿ ಸಿಲೇದಾರರೂ ನಾಲ್ವತ್ತು ಮಂದಿ ಬಾರಗೀರರೂ ಅವರನ್ನು ಹಿಂಬಾಲಿಸಿದ್ದರು (ಕಪಾಂ. ೯೬). **ಬಾರಗೀರು :** ಅರವತ್ತು ಸಾವಿರ ಕುದುರೆಗಳಿಗೆ ಜೀನು ಹಾಕಿ ಸವಾರರು ಏರಿಕೊಂಡು ಯುದ್ಧಕ್ಕೆ ಹೊರಡಲು ಈ ಕ್ಷಣ ಸಿದ್ಧವಾಗಿದಾರೆ. ಬಾರಗೀರು ಸೇರಿ ಇದಕ್ಕೆ ಎರಡರಷ್ಟು ಫೌಜು ಇದೆ (ಮುಸುರ. ೯೯). **ಬಾರಾಗೀರ :** ದರ್ಬಾರದಲ್ಲಿ ಬಾದಶಹನು ನಮ್ಮನ್ನು ಒಬ್ಬ ಬಾರಾಗೀರನಂತೆ ಭಾವಿಸಿ, 'ದೂರ ನಿಂತುಕೊಳ್ಳುವಂತೆ ಸಂಜ್ಞೆ ಮಾಡಿದನು (ಛತ್ರಶ. ೦೯೨). **ಬಾರ್ಗಿರ್ :** ಇಂಗ್ಲಿಷ್ ಕಂಪೆನಿಕ್ಕಾವಲ್ರಿಯ ಪದ್ಧತಿಯಂತೆ ಏರ್ಪಟ್ಟ ೫೦೦ ಮಂದಿ ಸವಾರರು ಕ್ಲೋಸ್‌ಪೇಟೆಯಲ್ಲಿ ಮೊಕ್ಕಾಂ ಮಾಡಿದ್ದರು. ಇವರಿಗೆ ಬಾರ್ಗಿರ್ ಎಂಬ ಹೆಸರು ಕೊಟ್ಟಿತ್ತು (ಮಹಾಪ. II. ೯೬). [← ಪಾರ. ಬಾರ್ಗೀರ್ ; ಮರಾ. ಬಾರ್ಗೀರ್, ಬಾರಗೀರ್ ; ಹಿಂ. ಬಾರಗೀರ್]

**ಬಾರ್ಗೀರ್‌ಕಛೇರಿ** (ನಾ). ಹಳೆಯ ಮೈಸೂರು ಸರಕಾರದ ಅಠಾರಾ ಕಛೇರಿಗಳಲ್ಲಿ ಒಂದು; ಅಶ್ವದಳದ ಕಚೇರಿ: ಕಛೇರಿಗಳು-೧. ದಿವಾನ್‌ಕಛೇರಿ. . . ೪. ಬಾರ್ಗೀರ್‌ಕಛೇರಿ (ಮಹಾಪ. II. ೩೬).
[ಬಾರ್ಗೀರ್+ಕಛೇರಿ(<ಕಚೇರಿ)]

**ಬಾರ್ಗೀರಿ**, ಬಾರಗಿರಿ (ನಾ). ಕುದುರೆ ದಳದ ಕೆಲಸ; ಅಶ್ವಾರೋಹಿ ಸೈನಿಕರ ವೃತ್ತಿ: ಅಶ್ವಸೇನೆಯಲ್ಲಿ ಬಾರ್ಗೀರಿಯವರೂ ಸಿಲೇದಾರರೂ ಎಂದು ಎರಡು ಬಗೆಯವರಿದ್ದರು (ಛತ್ರಶ. ೦೩೨). **ಬಾರಗಿರಿ :** ಬಾಗಿಲ ಕಂದಾಚಾರದ ಚಾವಡಿ— ಇಲ್ಲಿ ಸವಾರರು, ಬಾರಿನವರು, ಬಾರಗಿರಿಯವರು . . . ಮುಂತಾದವರ ಲೆಕ್ಕವನ್ನು ಬರೆವಂತೆ ಗೊತ್ತುಮಾಡಿದರು (ಮಹಾಪ. I. ೦೯೭). [← ಮರಾ. ಬಾರಗಿರೀ]

**ಬಾರ್ಗುತ್ತ**, ಬಾರಗುತ್ತು, ಬಾರುಗುತ್ತ, ಬಾರುಗುತ್ತು (ನಾ). ಒಂದು ಬಗೆಯ ಜೂಜು; ಪಣವೊಡ್ಡಿ ಆಡುವ ಒಂದು ಬಗೆಯ ಆಟ: ನೆತ್ತಂ ಚದುರಂಗಂ ಬಾರ್ಗುತ್ತಂ ಕಡಬೊಂಟಿ ಗೊಟ್ಟಿ ಜೂದೆಂಬಿವ ನಾಡುತ್ತವಿರಲಾಗದು (ಸಮಕ. ೬-೯೦). **ಬಾರಗುತ್ತು :** ವಾರನಾರಿಯ ಕೊತ್ತ . . . ಬಾರಗುತ್ತು ನಿಯೋಗ ಜೂಜಿನ ಧನ ಸುಭಾಷಿತವು ಏಬುವಾಬು ವಿವಾಹ ರತಿಯುಪಕಾರ ನೆಗಳದ ರಾಜಕಾರ್ಯವಿಚಾರನಾ ಹದ ತಪ್ಪಿ ತಪ್ಪುಗಂ (ಜೀಪಂಚ. ೯-೭೭); ಧೂರ್ತಾಂತರಾತ್ಮಜರು . . . ತಂ ತಮಗೆ ಬಾರಗುತ್ತಾದಿ ಬಹು ಜೂಜುಗಳನಾಡುತಿಹರು (ಪಹ್ಯಪೋ. ೨-೯೯). **ಬಾರುಗುತ್ತ :** ಲೆತ್ತ ವಗಡ ರಾಯಬೊಗರಿ ಸೊಲ್ಲೆಹ ಬಾರುಗುತ್ತದೊಪ್ಪಿಯ ಸರಿಬೆಸದಿ ವಿತ್ತನಾಶವ ಮಾಡುವ ಜೂದುಗಾಜರ ಮೊತ್ತವಿರ್ದುದು ಮನೆಮನೆಗೆ (ಪೋಹಕ. ೨೦-೨೩). **ಬಾರುಗುತ್ತು :** ಜೀಯ ಜೂಜಿನ ಬಾರುಗುತ್ತಿದು ನಿಮ್ಮ ಚಿತ್ತಕೆ ಬಹಡೆ ಮಾಡುವವು (ಕುವ್ಯಾಖ. ೯-೬೨); ಹೊಣೆ ಬಾರುಗುತ್ತು ಕಬ್ಬಿನ ಹಣೆದಂ ಏರಿದೊತ್ತೆ ಗೊಂಬ ಸೂಳೆಯ ಸಂಗಂ ಕ್ಷಣದೊಳ್ ಕೊಲ್ಲದೆ ಮನುಜನ ತೃಣದಿಂ ಕಡೆ ಮಾಡದಿಹವೆ (ಶೀಪಾ. ೨೯೬). [?]

**ಬಾರ್ಚು**, ಬಾಚು, ಬಾಯ್ಚು, ಬಾಸ್ಕು (ಕ್ರಿ). ೧. ಎಳೆದುಕೊಳ್ಳು; ಸೆಳೆ; ಗೋರು: ಅಸುವಂ ತೀರ್ಚಿ ಕೆಲವರ ಮಹಾ ಡ್ರೂಂಕಾರದಿಂದಂ ತಳರ್ಚಿ ಕೆಲವರನೊಡನೆ ವಾಳಾಗ್ರದಿಂದಿರದೆ ಬಾರ್ಚಿ ಕೆಲಬರನಿಂತು ಭಂಗವಂ ಮಾಡುತ್ತಿರ್ಪರುತಿರ್ದನು (ಕಂಠೀ. ೧೧-೦೯). ೨. ಉತ್ಕಟವಾದ ಬಯಕೆಯಿಂದ ತಬ್ಬಿ ಹಿಡಿ.— ಬಾಚಿ ಹಿಡಿ; ಸೆಳೆದಪ್ಪಿಕೊಳ್ಳು: ಪೆರ್ಚುವೆತ್ತಪರಂಜಗಳಶವನಷ್ಟವಿಧಾರ್ಚನೆಯಿಂದ ಸತ್ಕರಿಸಿ ಬಾರ್ಚಿ ಕೈವಿಡಿದನು ಮಾಂದಳಿರಿಗೆ ಪಣ್ಣ ಸಾರ್ಚಿದಂತೊಪ್ಪಿತಾ ಭಾವ (ಜಿಕ. ೦೬-೬೩). ೩. ಒಟ್ಟುಗೂಡಿಸು; ರಾಶಿಮಾಡು: "ಬಾರ್ಚು-ಪುಂಜೀಕರಣೇ (ರಾಶಿ ಮಾಡು)" (ಕಮಿಂಡಾ). ೪. ತಲೆಗೂದಲನ್ನು ಹಣಿಗೆಯಿಂದ ಹಿಕ್ಕು.— ಸಿಕ್ಕು ಬಿಡಿಸಿ ಓರಣಗೊಳಿಸು: ಪಸರಿಸಿ ಪಂದಲೆಯಂ ಪೆಟ್ಟಿಸಿ ವೈರಿಯ ಪಲ್ಲ ಪಣಿಗೆಯಿಂ ಬಾರ್ಚಿ ಪೊದಟ್ಟಿ ನೊಸಗೆಯಿನವನ ಕರುಳ್ಗಳಿ ಪೊಸವಾಸಿಗ ಮಾಗೆ ಕೃಷ್ಣೆಯಂ ಮಾಡಿಯಿಸಿದಂ (ಶಂಕರಾ. ೦೨-೦೩೩); ಮದಿರಾರಸದಿಂದಂ ಬಾರ್ಚಿದರೋ ಪೇಟಿಸಿಸಿ ಪೊಳೆವ ತಲೆದುಡಿಗೆಯ ರನ್ನದಿನೊಸರ್ವ ರಾಗ ರುಚಿಯಂ ಪುದಿದೆಸೆದುದು ಕೇಶಪಾಶವಮಾ ಕಾಮಿನಿಯಾ (ಕಾದಂಕ. ೨೦). **ಬಾಚು :** ೧. ಸಪ್ತಕುಲಪರ್ವತಂಗಳನೋರ್ವ ಬಾಚಿಯಂಗ್ಯೆಯೊಳಾಂತು ಓರಂತೆ ತಿರಿಕಲ್ಲನಾಡುತ . . . ಗಹಗಹಿಸುವಂ ಬಾಲಲೀಲೆಯ ಕುಮಾರಂ (ಶೀಕೃಪು. ೩-೨೦-೯೯); ನಿದ್ರಾಂಗನೆ ಕರುಣೆ ತೋರಿ ಆಕೆಯನ್ನು ಬಾಚಿ ತಬ್ಬಿದಳು (ಕೂಸಪ. ೨೦೦); ಜಗದ ಒಲವನೆಲ್ಲ ಬಾಚಿ ಜ್ವಲಿಸುವಳೀ ಜರ್ಬರಾ! (ಅಕೀ. ೦೯-೩). ೨. ನಯದೊಳ್ಪನೇ ಬಳಸಿ ಕೈಚಾಚಿ ಬಾಚಿದಿರಿ ಬಳಿಗೆ (ಅಮಕಂ. ೨೨-೦೯). ೪. ಕಲಿಭೀಮ ಮಾಡಿದ ರಹಪನದನೇ ನೆಂಬೆನೈ ಕೂಂಹ ಕಚಾರಿಯ ಹುಸೆಗೆಯುಲಿ ಬಾಚಿದನು ಸಿರಿಮುಡಿಯ (ಕುವ್ಯಾಖ ೨೨-೯೦). ೫. ಕಿತ್ತುಕೊಳ್ಳು; ದೋಚು: ಭಟನು ನಾನಿರಲುಭಯರಾಯರ ಕಟಕದೊಳಗಿನ್ನಾವನೆಂದುಬ್ಬಟೆಯ ನುಡಿಗಳ ನುಡಿದು ಬಾಚಿದೆ ಕೌರವನ ಧನವ (ಕುವ್ಯಾಖ. ೬-೦೯); ತುಡುಗುಣಿಗಳವದಿರು . . . ಹವಿಗೊಂಬವರನಿಕರದ ಹೆಡಕ ಬಾರಿಸಿ ಬಾಚುತಿರ್ದರು ಬಾಯ ತುತ್ತುಗಳ (ಕೊಕರಾ. ೦-೦೦-೮); ನಾನಾ ಪರಿಯಲರಮನೆಯ ರೊಕ್ಕವಂ ತಿಂದು ಹೊಳ್ಳಿಸಿ ಬಾಚಿ ದಕ್ಷಿಣೆಯ ನೆವದೊಳಗೆ (ಕುರಂಗ. ೩೭-೦೯). ೬. ಒಟ್ಟುಗೂಡು; ಗುಂಪಾಗು: ಈ ಚತುರ್ದಶ ಭುವನಜೀವರ ಸ್ವೋಚಿತವೃತಪುಣ್ಯವೆಲ್ಲವು ಬಾಚಿ ಪುಟ್ಟಿತು ಕಾಮಧೇನುವಿನಂಗಮಧ್ಯದಲಿ (ಸಂಕಥ. ೩-೨೯); ಕಡಲೆಡೆಯೊಳಿರ್ದ ವಿಗಿಲಾಣಿಮುತ್ತುಗಳ್ ಬಾಚಿ ಬರಲುರ್ವರೆಗೆ ಮಗುಳೊಗುವ ಬಗೆಯೊ . . . ಎನೆ ಬೆಳ್ಸರಿ ಶರತ್ಸಮಯದೊಳ್ ಮೆರೆದವು (ಸಂಶಂಕಾ. ೨೨-೫೬). **ಬಾಯ್ಚು :** ೪. ಮಾನಿನಿಯರುಂ ಪೊಸೆದು ತಲೆಗರೆದು . . . ಬಾಯ್ಚು ಬೈತಲೆಯ ತೆಗೆದು (ಪಕಪೋ. ೯-೩). **ಬಾಸ್ಕು :** ೨. ಪ್ರಿಯದಿಂ ಬಾಸಿ ಪಿಡಿದೈತಂದು ಕುಳಿತರು ತುವ್ವಳಾಸನದಿ (ಪಂಚಮಹಾ. ೨೦೬-೩೬).
[ಬಾರ್₁ + — ಚ್ಉ./ತುಳು. ಬರ್ಚು, ಬಾಚು]

**ಬಾರ್ಣಾಸಿ** 'ಬಾರಣಾಸಿ' ನೋ.

**ಬಾರ್ತೆ** 'ಬಾಟ್ತೆ' ನೋ.

**ಬಾರ್ತೆಗಿಡು** 'ಬಾರ್ತೆಗೆಡು' ನೋ.

**ಬಾರ್ತೆಗೆಡು**, ಬಾತೆಗೆಡಂ, ಬಾರ್ತೆಗಿಡು (ಕ್ರಿ). ಅವಮಾನ ಹೊಂದು; ಹೀಯಾಳಿಕೆಗೊಳಗಾಗು: ಕೊಳದೊಳಗೆ ಪೊಕ್ಕು ಮೊಗ್ಗುರದೈ ಚೀ ಖಲ್ಲನೆನೆ ಬಾರ್ತೆಗೆಟ್ಟುವಮೂಲ್ಯಯಶೋರತ್ನಮೆಂಬುದಂ ಮಾಡುವನೇ (ಗದಾಯು. ೭-೨೪); ದಾನವರುಪಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಪಾದ ಬರ್ದಿಲರ್ಗೆ ನಾರಾಯಣಂ . . . ಪಡಿನುಡಿದಂ (ರಾಘುಕ್ಕ. ೦೯-೬). **ಬಾತೆಗೆಡು :** ಯಾಗದಗ್ರದೊಳ್ ಬಾತೆಗೆಟ್ಟಳನು ಪಟ್ಟಿರಿಸಿ (ಐಕೋಕೃ. ೯-೭೫). **ಬಾರ್ತೆಗಿಡು :** ನಡೆಗಿಡೆ ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇರ್ಪಡುಗಿಡೆ ಸತ್ಯಶೌಚಗುಣಸಂಪದವೇಳದನಾದಂ (ಶಂಕರಾ. ೯-೫೫). [ಬಾರ್ತೆ (<ಬಾಟ್ತೆ) + ಕೆಡ್ಉ]

**ಬಾರ್ತೆಗೆಯ್** 'ಬಾಟ್ತೆಗೆಯ್' ನೋ.

**ಬಾರ್ಘ** 'ಬಾಷ್ಪ' ನೋ.

**ಬಾರ್ಲಿ** (ನಾ). ಒಂದು ಬಗೆಯ ಧಾನ್ಯ : ಕ್ರಿ.ಪೂ. ೫೦೦೦ರಲ್ಲಿ ಈಜಿಪ್ಟಿನಲ್ಲಿ ಗೋಧಿಯನ್ನೂ ಬಾರ್ಲಿಯನ್ನೂ ಬೆಳೆಯುತ್ತಿದ್ದರು (ಶಿಲ್ಪಶಾ. ೪೬೪) ; ಬಾರ್ಲಿ . . . ಇದನ್ನು ಜವೆಗೋದಿ ಎಂದು ಕರೆವುದುಂಟು (ಕಾಶಕೋ. XII, ೩೯). [←ಇಂ. Barley]

**ಬಾರ್ಸಿಪಾಯಿ**, ಬಾರುಸಿಪಾಯಿ (ನಾ). ತುಪಾಕಿಯನ್ನು ಹಿಡಿದು ಕಾಲ್ನಡಿಗೆಯಿಂದ ಸಾಗುವ ಪದಾತಿ : "ಪದಾತಿಃ, ಪತ್ತಿಃ . . . ಪದಿಕಃ—೭ ಕಾಲುನಡೆಯ ಭಟರ ಹೆಸರುಗಳು, ಬಾರ್‌ಸಿಪಾಯಿಗಳು" (ಸಿದ್ಧಾಂತಿ. ೨೩೬). **ಬಾರುಸಿಪಾಯಿ** : ದಳವಾಯಿ ನಂಜರಾಜಅರಸಿನವರ ಅಧಿಕಾರದಲ್ಲಿ ಬಾರುಸಿಪಾಯಿಗಳು ೧,೦೦೦ ಮಂದಿ ಮಾತ್ರ ಖಾಯಮ್ಮಾಗಿದ್ದರು (ಮಹಾತಾಂ. II. ೦೮). [ಬಾರ್[3] + ಸಿಪಾಯಿ]

**ಬಾರ್ಹತ** (ನಾ). ಹೆಗ್ಗುಳ್ಳದ ಕಾಯಿ ; ಬೃಹತೀಫಲ : "ಅಶ್ವತ್ಥಂ, ವೈಣವಂ, ಪ್ಲಾಕ್ಷಂ, ನೈಯಗ್ರೋಧಂ, ಐಂಗುದಂ, ಬಾರ್ಹತಂ . . . ಕ್ರಮವಾಗಿ ಅಶ್ವತ್ಥಾದಿ ವೃಕ್ಷಗಳ ಫಲಗಳಿಗೆ ಹೆಸರುಗಳು" (ಸಿದ್ಧಾಂತಿ. ೧೦೩). [ಸಂ.]

**ಬಾರ್ಹಸ್ಪತ್ಯ** (ಗು). ೧. ಬೃಹಸ್ಪತಿಗೆ ಸಂಬಂಧಿಸಿದ. (ನಾ). ೨. ಬೃಹಸ್ಪತಿಯಿಂದ ರಚಿತವಾದ ಶಾಸ್ತ್ರ. ೩. ಬೃಹಸ್ಪತಿಯ ಅನುಯಾಯಿ. ೪. ಕಾಲವನ್ನು ಅಳೆಯುವ ಒಂದು ಬಗೆಯ ಲೆಕ್ಕಾಚಾರ : ಆ ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ ನಾಕ್ಷತ್ರ ಸಾವನಭೇದದಿಂದೈದು ತೆಱನಾಗಿರ್ಪುದು (ಶಬ್ದಮ. ೩೨೦); ಪರಿ ಇಡಾ ವತ್ಸರನು . . . ಬಾರ್ಹಸ್ಪತ್ಯ ಸೌರಭ ಚಾಂದ್ರಮಸಾಯನಿಸಿ ಇರುತಿಹ (ಜಿನಾರ. ೩-೪೦). ೫. ಅಗ್ನಿ. ೬. [ಜ್ಯೋತಿ] ಒಂದು ನಕ್ಷತ್ರದ ಹೆಸರು ; ಪುಷ್ಯನಕ್ಷತ್ರ. [ಸಂ.]

**ಬಾಲ[1]**, ಬಾಳ[4] (ನಾ). ೧. ಪ್ರಾಣಿಗಳ ಹಿಂಭಾಗದಲ್ಲಿ ಗುಹ್ಯಾಂಗವನ್ನು ಮುಚ್ಚುವಂತಿರುವ ಹಾಗು ಅಲುಗಾಡಿಸಬಲ್ಲ ಉದ್ದವಾದ ಚಾವಟಿಯಂತಹ ಅಂಗ ; ಲಾಂಗೂಲ ; ಪುಚ್ಛ : "ವಾಳಧಿಯು ಲಾಂಗೂಲ ಮೆನೆ ಬಾಲವೆಸರಕ್ಕು" (ಚಂಗಾಳ. ೬೧-೦೩) ; ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ . . . ಕೊಂಡುದು (ಪಂಪಭಾ. ೬-೦೭) ; ನಾಯ ಬಾಲಮಂ ಕಾಸಿ ತಿರ್ದಿದೊಡಂ ಕೊಂಕು ಮಾಣದಹಗೆ (ಶಬ್ದಮ. ೧೦೩-೨) ; ಹೊನ್ನ ಹುಳಿವ ಕಂಡು ನರಿ ತನ್ನ ಬಾಲವ ಹುಣ್ಣುಮಾಡಿಕೊಂಡರೆ ಹೋಲಬಹುದೆ (ಬಸವ. ೨೬೬). ೨. ಕೂದಲು. **ಬಾಳ್[4]**: ೧. ವಾಲ—ಬಾಳ (ಶಬ್ದಮ. ೨೯೮ ಕ್ರಿಯೋ).

**ಬಾಲ ಅಲ್ಲಾಡಿಸು** = ೧. ಬಾಲವನ್ನು ಅಲುಗಾಡಿಸು : ಅವನನ್ನು ಕಂಡ ಕೂಡಲೇ ಆ ನಾಯಿಯು ಬಾಲ ಅಲ್ಲಾಡಿಸುತ್ತಾ ಅವನ ಬಳಿಗೆ ಬಂದು (ಮುಂಗಾರು. ೪-೦೦೭). ೨. (ಅಲಂ) ಇನ್ನೊಬ್ಬ ವ್ಯಕ್ತಿಯು ಹೇಳಿದುದಕ್ಕೆಲ್ಲ ಒಪ್ಪಿಗೆ ನೀಡು : ಮುಂದಾಳುಗಳ ಎದುರಿನಲ್ಲಿ ಬಾಲ ಅಲ್ಲಾಡಿಸುತ್ತಿರುವುದೆ ಅವನ ಕಸುಬಿನ ಗುಟ್ಟು (ರೂಢಿ). **ಬಾಲಕೊಳ್ಳಿ**= (ಹನುಮಂತನನ್ನು ನೆನಪಿಸುವ) ಒಂದು ಬಿರುದು : ಪಟಹನುರುವ ಬಾಲಕೊಳ್ಳಿ ಚಟುಕು ಜೇಗಟೆ ಚೋಹ ಜಗಜಾಪು ಚೆಂಡು ನಿಟಿಲದ ನೇತ್ರದ ಬಲುಬಿರುದಿನ ಬಲುಭುಜರಲ್ಲದಿಲ್ಲವವನಿಗೆ (ರಾಜಶೇ. ೦೪-೯೨). **ಬಾಲ ಬಡಿ**= ಅನುಗ್ರಹ ಸಂಪಾದನೆಗಾಗಿ ಅನುನಯದಿಂದ ವರ್ತಿಸು.—ಅನುಚರನಂತೆ ನಡೆ : ದೈವವಶದಿಂದ ಒಂದು ವೇಳೆ ಕಾಲೀಪದನು ತನ್ನ ವಶವರ್ತಿಯಾಗಿ ಬಾಲ ಬಡಿಯುತ್ತ ಬಂದಿದ್ದರೆ ಇಂದು ಶೈಲೇಂದ್ರನ ಲಜ್ಜೆಗೆ ಸೀಮೆಯೇ ಇರುತ್ತಿರಲಿಲ್ಲ (ಇತ್ಯಾ. ೩೬೮). **ಬಾಲಬಡುಕ** = (ಅಲಂ) ಅನುಚರ ; ಹಿಂಬಾಲಕ; ಅನುಯಾಯಿ : ಆಂಗ್ಲೇಯ ಬಾಲಬಡುಕರಂತಿದ್ದ ರಂಗನಾಥ, ನಾಗೇಂದ್ರ . . . ಮುಂತಾದವರು ಸ್ವರಾಜ್ಯ ಬಂದ ನಂತರ . . . ಶುದ್ಧ ಖಾದಿಧಾರಿಗಳಾದರು (ಪಂಚಶಂ. ೯೩). **ಬಾಲ ಬಿಚ್ಚು** = (ಅಲಂ) ಚೇಷ್ಟೆ ಮಾಡು; ಕಿತಾಪತಿ ಮಾಡು : ಇವ ಬಾಲಾ ಬಿಚ್ಚಿದರ ಸಾಕು, ಕೊಯ್ದು ಒಗೀತೀವಿ (ಜುಂಜ್ಹ. ೬೪). **ಬಾಲ ಮಡಿಚು** = (ಅಲಂ) ಸೋತುಹೋಗು ; ಸುಮ್ಮನಾಗು : ನಾವು ಹೊಗಸರೇ ಇದ್ದುದಾದರೂ ಗೋವಿಂದಯ್ಯ ಬಾಲ ಮಡಿಚಿ ಹೋಗಲಿಲ್ಲವೇ ? (ತ್ಯಾಗಜ. ೦೬೦). **ಬಾಲಸುಡುಕ** = ಬಾಲವನ್ನು ಸುಡಿಸಿಕೊಂಡವನು ; ಹನುಮಂತ : ಹೇಳಲೇನದನವನ ವಿಧಿಯನು ಕೇಳಿತಿಲ್ಲವಲಾ ಕಪೀಂದ್ರನ ಪಾಳಯವ ಹೊಗಗೊಡದೆ ಕಪಿಪ್ರೋತಂಗಳು ಬ್ಬಿಜಿದು ಬಾಲಸುಡುಕನ ತ್ವರೆರಲಾ ಕಟ್ಟಿಯೂಳಿಗವು ನಮಗಾಯ್ತು (ತೊರವ. ೬-೧೦-೪೯). **ಬಾಲ ಹಿಡಿ** = ಹಿಂಬಾಲಿಸು ; ಅನುಸರಿಸು : ಸುಮ್ಮನೆ ಕಣ್ಣು ಮುಚ್ಚಿಕೊಂಡು ದುರ್ಯೋಧನನ ಬಾಲ ಹಿಡಿದು ಹೋಗುತ್ತ ಪಾಂಡವರನ್ನು ಸದಾ ದ್ವೇಷಿಸುತ್ತಿರುವ ಈ ಕರ್ಣನೊಬ್ಬನೆ ನನ್ನ ಎದೆಗಿಚ್ಚಾಗಿದ್ದಾನೆ (ಪಕಜಾ. ೨೬೦) ; ಗೆದ್ದ ಎತ್ತಿನ ಬಾಲ ಹಿಡಿ (ಗಾದೆ). ☞ ಈ ಉಲ್ಲೇಖದಲ್ಲಿ ಸೂಚಿಸಿರುವ ಎರಡು ಅರ್ಥಗಳೂ ಸಂಸ್ಕೃತಕೋಶಗಳಲ್ಲಿ 'ಬಾಲ' ಉಲ್ಲೇಖಕ್ಕೆ ಇರುವುದಾದರೂ ಇದು 'ವಾಲ' ಎಂಬುದರ ತದ್ಭವವೆಂದು ಪರಿಗಣಿಸಿದೆ.

[<ಸಂ. ವಾಲ]

**ಬಾಲ[2]**, ಬಾಳ[5] (ಗು). ೧. ಬಲಿಯದ ; ಎಳಸಾದ : ಬಾಲ ಮೃಣಾಳಮಂ ಒಡಿದು ಕೀಟ್ಟವೊಲಶ್ರಮದಿಂ ಮನೋಭವವ್ಯಾಲಗಜೇಂದ್ರದಂತಯುಗಳಂಗಳನೇಕಯೊ ಕಿಟ್ಟಂ (ಪಂಪಭಾ. ೬-೫೦). ೨. ಚಿಕ್ಕ ವಯಸ್ಸಿನ; ಎಳೆಯ: ಬಾಲಜಾಯಿಲನೀಂದ ವೇದವನೋಳಿಯಿಂದೋದಿಸನೆ ಹಾವಿನ ಹಾಳ ಕಲಿದೇವಂ (ಬಸವ. ೩೩-೩೩) ; ಬಾರಯ್ಯ ನಮ್ಮ ಮನೆಗೆ ಬಾಲಗೋಪಾಲ (ತೀರಂರ. ೩-೦೦೩ ಅವತಲ್ಲಾಂ). ೩. ಆದೇ ಉದಯವಾಗಿ (ಸೂರ್ಯ ಅಥವಾ ಚಂದ್ರನಂತೆ) ಬೆಳೆಯುತ್ತಿರುವ ; ಏರುತ್ತಿರುವ. ೪. ಬಾಲಿಶವಾದ ; ಹುಡುಗಾಟಿಕೆಯ ; ಮಕ್ಕಳಾಟಿಕೆಯ. ೫. ದಡ್ಡತನದ ; ತಿಳಿಗೇಡಿಯಾದ. (ನಾ). ೬. ಬಲಿಯದುದು ; ಎಳಸಾದುದು : ಮೂಲಕಂ ಬಾಲಂ ದೋಷಹರಮಬಾಲಂ ದೋಷಕರಂ (ಶಾಂತಿಪು. ೯-೦೨೮ ವ). ೭. ಮಗು ; ಶಿಶು : ಆತನುಂ ಬಾಲನಾಕಾಂಕ್ಷೆ ಗಚ್ಚರಿವಡುತ ಮೌನವಿರೆ (ಶ್ರೀನಾಮ. ೨೦-೩೩೮). ೮. ಹುಡುಗ ; ಬಾಲಕ: "ಬಾಲಃ, ಬಾಲಕಃ—ಈ ೨ ಹುಡುಗಂ" (ಶಬ್ದ್ಮ. ೦೯೭);ನಾನುಂಡು ಇದ್ದದ್ದು ಬಾಲರಿಗುಣಲಿಕ್ಕೆ ಮೇಲಿಟ್ಟು ಮುಚ್ಚಿಡೋ ಎನ್ನ ಗುಡ (ತೀರಂತ. ೩-೦೩೬-೬). ೯. ಪ್ರಾಣಿಗಳ ಮರಿ ; ಪೋತ. ೧೦. ದಡ್ಡ; ಮೂರ್ಖ. **ಬಾಳ[5]** : ೧. ಮುತ್ತಿನ ಸೂಸಕಂಗಳಿಂ ಬಾಳಮೃಣಾಳಮೊಂದೆ ಕರ್ದು ಕಲ್ಬಗೆಗುಂ ಕಳಹಂಸಪೋತಕಂ (ಪಂಪಪು. ೨-೬೭). ೭. "ಬಾಳಃ, ಪಾಕಃ, ಅರ್ಭಕಃ . . . ಡಿಂಬಃ — ಈ ೯ ಮಗವು" (ಹಲಾಯು. ೮೩-೩೯೦) ; ಬಾಳನ ಸಾಸಾಪುಟದೊಳ್ ಮೇಳಿಸೆ ದುಗ್ಧೋದಬಿಂದುಸಂದೋಹಂಗಳ್ ಲೀಳೆಯಿನಾಂತುಸಿರ್ದೊಡೆ ಕಡುಗಾಳಿಯ ತಳಿಗೆಗಳಂತೆ ಪಾಱಿದರಮರರ್ (ಆದಿಪು. ೪-೬೩). ೮. ಬಾಳಂ ನಿಜಾನುಜಂ ರಣಲೋಳಂ ಸಲೆ ದ್ರುಪದನನ್ನದರ್ಜುನನು ತತ್ಕಾಳಸುತನಟ್ಟಿ ಪೋಗಿ ವಿಶಾಳಬಳಂ ಕಾದಿ ಕಟ್ಟಿತಂದೊಪ್ಪಿಸಿದಂ (ಜಗನ್ನಾ. ೯-೫೦). ೧೦. "ವೈಧೇಯಃ, ಬಾಲಿಶಃ, ಬಾಲಃ, ಜಡಃ . . . ಮಾತೃಶಾಸಿತಃ — ಈ ೧೧ ಅಱಿಯದವಂ" (ಹಲಾಯು. ೩೬-೦೮೦). [ಸಂ.]

**ಬಾಲಂಗಚ್ಚಿ** 'ಬಾಲಗಚ್ಚೆ' ನೋ.

**ಬಾಲಂಗೋಚಿ**, ಬಾಲಂಗೋಸಿ (ನಾ). ೧. ಗಾಳಿಪಟದ ತಳಕ್ಕೆ ಕಟ್ಟುವ ಉದ್ದವಾದ ಪಟ್ಟಿ ; ಬಾಲಂಗಚ್ಚೆ : ಗಾಳಿಪಟ ಮೇಲೇರಲು ಬಾಲಂಗೋಚಿ ಅಗತ್ಯ (ರೂಢಿ). ೨. ಉದ್ದವಾದ ಪಟ್ಟಿ ; ದೀರ್ಘವಾದ

ಯಾದಿ : ಉದಾಹರಣೆಗಳ ಬಾಲಂಗೋಚಿ ಬೆಳೆಯುತ್ತಲೇ ಹೋಗುತ್ತಿತ್ತು (ಶಾಹೀಜ್. ೯೦೯). **ಬಾಲಂಗೋಸಿ** : ೧. ಬಣ್ಣದ ಕಾಗದ ಬೇಕು . . . ಬಿದಿರಿನ ಕಡ್ಡಿಗಳು. ಒಂದು ಸಣ್ಣ ಬಾಲಂಗೋಸಿ ಪಟ್ಟು ಅಂಟು ಬೇಕು (ಅಪಪ್ರ. ೨-೨೦). [ಬಾಲ$_1$ + ಗೋಚಿ]

**ಬಾಲಂಗೋಸಿ** 'ಬಾಲಂಗೋಚಿ' ನೋ.

**ಬಾಲಂತಿತನ** 'ಬಾಣಂತಿತನ' ನೋ.

**ಬಾಲಕ**, ಬಾಳಕ$_3$ (ಗು). ೧. ಎಳೆಯ ವಯಸ್ಸಿನ ; ಶೈಶವಾವಸ್ಥೆಯ: ಚಿಕ್ಕಂದಿನ : 'ಬಾಲಕತನ' ಪರಾ. (ನಾ). ೨. ಮಗು ; ಶಿಶು : "ಶಿಶು ಪೋತ ಬಾಲಕ ಶಾಬ ಡಿಂಬವರ್ಭಕ ಪಾಕವೆನೆ ಪಡೆದ ಕೂಸೆನಿಕ್ಕು" (ಪಾಂಗಣ. ೯೦-೮) ; ಬಾಲಕನಮೃತಮೆ ಕೆಯ್ಯುಂ ಕಾಲುಂ ಬಳೆವಂತ ಮಧುರಗಂಭೀರಂ . . . ಎನಿಸಿದಂ ಕಿಱಿಯಂದುಂ (ಶಾಂತಿಪು. ೬-೦೧೬) ; ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ಬಾಡೀಗಿ ಎತ್ತು ದುಡಿದಂಗ (ಗರತಿ. ೧೦೬). ೩. ಹುಡುಗ ; ಕುಮಾರ : ಕಾಳೆಗದೊಳಂಗೈಸಲಮ್ಮದೆ ಬಾಲಕನ ನೂಕಿದಿರಲಾ ನಿಮ್ಮಾಳುತನವನು ತೋಱಿದಿರಲಾ (ಕುಮ್ಮಾದ್ರೋ. ೯-೨೪). ೪. ಮೂರ್ಖ; ತಿಳಿಗೇಡಿ. **ಬಾಳಕ**$_3$ : ೨. ಅಪೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್ ಕಾಲಮಂ ಬಱಿದೆ ಕಳೆದೆಂ (ವರ್ಧಾ.ರಾ. ೨೬-೨೪); ಪುಂಡರೀಕನೆಂಬ ಬಾಳಕನಂ ಸಂತಾನಪಾಲನಾರ್ಥಂ ನಿಜಸಿ (ಅಂಪು. ೯-೬೦ ವ). [ಸಂ.]

**ಬಾಲಕತನ** (ನಾ). ಚಿಕ್ಕಂದು; ಬಾಲ್ಯ : ಬಾಲಕತನದಲ್ಲಿ . . . ಕಾಳಿಯ ಮಡುವ ಕಲಕಿದ ಕಾರಣ ಕಾಲು ನೊಂದಿತೆ ನಿನಗೆ ರಂಗಯ್ಯ (ಪುರಂದ. ೩.೦೦-೩). [ಬಾಲಕ + –ತನ]

**ಬಾಲಕಾಲ**, ಬಾಳಕಾಲ (ನಾ). ಚಿಕ್ಕಂದು; ಬಾಲ್ಯಾವಸ್ಥೆ : ಮೃಗಶೃಂಗನೆಂಬೊ ತಾಪಸಕುಮಾರನಾತಂ ಬಾಲಕಾಲಪರಿಗೃಹೀತತಾಪಸಾಚರಣಂ (ಶಾಂತಿಪು. ೬-೯೩ ವ). **ಬಾಳಕಾಲ** : ಮದದಂತಿದಂತದೊಳೆ ಕಟ್ಟಿದ ತೊಟ್ಟಿಲಿಂ ನಪುದಿಂದಮೇಱಿ[ಸೆ] ಬಾಳ[ಪಾಠಾಂ. ಟ್ಟ]ಕಾಲದೊಳ್ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಶಂಪರಾ. ೧-೯೩) ; ನಡೆದುದು ಬಾಳ[ಪಾಠಾಂ. ಟ್ಟ]ಕಾಲದೊಳೆ ತೊಟ್ಟನಗಂಕದ ಶೌಚವೀಗಳೋಗಡಿಪುದೆ (ಶಂಕರಾ. ೦೦-೯೭). [ಸಂ.]

**ಬಾಲಕಿ**, ಬಾಳಕಿ (ನಾ). ೧. ಹುಡುಗಿ; ಕನ್ನೆ : ಕೈಯ ಬಟ್ಟಲ ಹಾಲಿಗಂ ತಾಂ ಕೈಯ ನೀಡುತ್ತೀಂಟೆ ಬಾಲಕಿ ಅಯ್ಯನಂ ಬಿಟ್ಟೊದಱಲು (ಜಕಪ್ರ. ೦೯-೩೨). ೨. ತರುಣಿ ; ಯುವತಿ : ಗರ್ಭಂ ಬಳೆಯದ ಬಾಲಕಿಯ ಬಸಿಱನರ್ಥಕವಲ್ತೇ (ಮಲ್ಲಿಪು. ೩-೧೦೦೦) ; ಬಾಲಕಿಯರಲರ್ಗಣ್ಣಾಳ್ ಸಂಲಾಲಿತ ಲಾವಣ್ಯರಸಮಯಾಪ್ಯಾಕರದೊಳ್ ಬಾಳೆಯ ಮಿಾಂಗಳ ತೆಱದಿಂ ಲೀಲೆಯೊಳಂ ಪೊಳೆದು ತಳೆದವತಿಚಪಳತೆಯಂ (ಶಾರಪ್ರ. ೨-೩೦); ನಿಶಾಚರಿಯರಲ್ಲವೇ ಸರಕಾಸುರನ ಮನೆಯ ಬಾಲಕಿಯರು (ಕೃಬಾಪಾ. ೨-೩೯). **ಬಾಳಕಿ** : ೨. ಬಾಳಕಿಗಳನಿಚಯನಾಳಂ ಬಾಳಕಿಗಾ ರೋಮರಾಜಿ ರಂಜಿಸುತಿರ್ಕುಂ ನೀಳದ ಕಾಂಚೀಮಧ್ಯದ ನೀಳದ ನೆಗೆದುಮ್ಮುಖ ಪ್ರಭಾರೇಖೆಯ ಪೋಲ್ (ಜಗಂ. ೦೦-೨೯); ಉಡೆ ಬಾಳಕಿಯರ ಪಱಕೈ ದುಡುಕಿಂದಂ ಪಱಿದ ಮುಂಜ . . . ಬದ್ದೆಯರುಡಿಸಿದೊಡುಡಕಲ್ತ ಕೊವರನಭಿನವಮದನಂ (ಅಸಂಪು. ೦-೩೯). [ಬಾಲಕ + –ಇ$_2$]

**ಬಾಲಕೇಲಿ**, ಬಾಲಕೇಳಿ, ಬಾಳಕೇಳಿ (ನಾ). ೧. ಮಗುವಿನ ಆಟ; ಬಾಲಲೀಲೆ ; ಮಕ್ಕಳಾಟ : (೯). **ಬಾಲಕೇಳಿ** : ೧. ದಾರಕರೂಪದೆ ಜನವೃಂದಾರಕನೊಡನೊಡನೆ ಬಾಲಕೇಳಿಗಳಂ ವೃಂದಾರಕರೆ ಮಾಡಿ ದುರಿತವಿದಾರಕನ ಮನಕ್ಕೆ ಮಾಡಿದರ್ ಸಂತಸಮಂ (ಅಜಪು. ೩-೬೨); ಎನಿತೊಳವು ಬಾಲಕೇಳಿಗಳನಿತಱೊಳಂ ಮುದ್ದುವಡೆದು ಮನೆಯಂಗಣದೊಳ್ ಮನವೊಸೆದಾಡುವ ಮಕ್ಕಳ ವಿನೋದವಮಂ ಕಾಣ್ಬ ದಿವಸಮೆಂದಾದ

ಪುದೋ (ಸುಕುಮಾ. ೯-೧೦೦). ೨. ಮೂರ್ಖತನದ ನಡವಳಿಕೆ : ನೆಱಿ ಕೇಳಿದೈ ಕೌರವನ ೀದನದ ಬಾಲಕೇಳಿಗಳ (ಕುಮ್ಮಾದ್ರೋ. ೦-೦). **ಬಾಳಕೇಳಿ** : ೧. ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಶಂಶಾ. ೨-೯); ಸುತ ನಿನ್ನ ಬಾಳಕೇಳಿಯನತಿಮುದದಿಂ ನೋಡಿ ಹರ್ಷವಂ ತಳೆಯಲ್ ಸಂಸ್ಕೃತ ನೋಂತೆನಿರ್ಪೆ ಸಲ್ (ನೇಮಿಪು. ೬-೦೯೦). [ಸಂ.]

**ಬಾಲಕೇಳಿ** 'ಬಾಲಕೇಲಿ' ನೋ.

**ಬಾಲಕ್ಕಿ** (ನಾ). ಉದ್ದವಾದ ಪುಚ್ಛವಿರುವ ಒಂದು ಬಗೆಯ ಪಕ್ಷಿ : ಹಾರುತ್ತಿರುವ ಬಾಲಕ್ಕಿಗಳಿಂದ ಬಾನೆಲ್ಲ ಸುಗ್ಗಿಯ ಸ್ವರ್ಗದಂತೆ ಕಾಣಿಸುತ್ತಿದೆ (೧೮ಚಾ. ೩). [ಬಾಲ$_1$ + <ಪಕ್ಕಿ]

**ಬಾಲಕ್ರೀಡೆ**, ಬಾಳಕ್ರೀಡೆ (ನಾ). = ಬಾಲಕೇಲಿ ೧ : ಬಾಲಕ್ರೀಡೆಯೆ ಪೂತನಾ ಬಕಮುಖಿವ್ಯಾಪಾದನಂ (ವಶ್ವಂ. ೩-೦೦). **ಬಾಳಕ್ರೀಡೆ** : ಬಾಳಕನಾಗಿ ಬಱಿಕ್ಕಾ ಬಾಳಕ್ರೀಡೆಗಳನೆಯ್ದೆ ತೋಱಿ ಸಮಂತಾ ಲೀಳಾನಿಧಿ ನಿಜರೂಪಂ ಬಾಳಂ ತಳೆದಿರಲ್ (ನೇಮಿಪು. ೬-೦೯೦).

[ಸಂ. ಬಾಲಕ್ರೀಡಾ]

**ಬಾಲಗಚ್ಚೆ**, ಬಾಲಂಗಚ್ಚೆ (ನಾ). ೧. ಹಿಂಭಾಗದಲ್ಲಿಯ ಕಚ್ಚೆ ; ಹಿಂಗಚ್ಚೆ : ಕೆಂದಳಿರ್ಗೊಂಚಲ ಚೆಲ್ಲಣಂ ಪ್ರವಾಳಲತೆಯ ಬಾಲಗಚ್ಚೆ ಬಲ ಕಿಕ್ಕಿದ ಚಂಪಕಮಾಲೆ ಶೋಭೆಯಂ ಬಳೆಯಿಸೆ ನಿಂದ ಸಚ್ಚಣಿಯ ಭಾವಮನಾವನೊಜಲ್ಲಿ ನೋಡಿದಂ (೮೦ಲಾವ. ೦೦-೬೩) ; ಬದ್ದಿಗೆಯ ತೊಂಗಲ್ದಗೆದು ಬಿಗಿದಬಲ್ಲ ಬಾಲಗಚ್ಚೆಯ ವಿಳಸದ ಸೆಱಗಂ ಸೆಳೆದಳ್ಳಿಱಿಯೆಯುಂ (ಅನಂಪು. ೦೦-೮೩ ವ) ; ಸಕಲರತ್ನರಚನೆಯಿಂ ಸಲ್ಲಲಿತಮಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯುಂ ಪಳಚ್ಚನೆ ಮೆಱೆವ ಬಾಲಗಚ್ಚೆಯ ಬೆಳ್ಪಿಂಗಳಂ ಬೀದಿವರಿಯಿಸುವ ಪೊಸಮುತ್ತುಗಳ ಮೊತ್ತದಿಂ . . . ಮಂಡಿತಮಾದ ಮುಂಡನದ ತಂಡದಿಂ (ಶಾಂತೀಶ್ವ. ೬-೯೩ ವ). **ಬಾಲಂಗಚ್ಚೆ** : ೨. ಗಾಳಿಪಟದ ತಳಕ್ಕೆ ಅಳವಡಿಸಿರುವ ಬಾಲದಂತಹ ಬಟ್ಟೆಯ ಅಥವಾ ಹುರಿಯ ತೆಳುವಾದ ಪಟ್ಟಿ : (೯) .೩. (ಅಲಂ) ಯಾವಾಗಲೂ ಹಿಂಬಾಲಿಸಿಕೊಂಡು ಬರುವವನು ; ಅನುಯಾಯಿ; ಹಿಂಬಾಲಕ: ಕೆಲವು ರಾಜಕಾರಣಪಟುಗಳಿಗೆ ಅನೇಕ ಬಾಲಂಗಚ್ಚೆಗಳಿರುತ್ತಾರೆ (ರೂಶ). [ಬಾಲ$_1$ + ಕಚ್ಚೆ]

**ಬಾಲಗೀಸು** (ಕ್ರಿ). ೧. (ಗಾಡಿಗೆ ಹೂಡಿದ ಎತ್ತನ್ನು ವೇಗಗೊಳಿಸಲು) ಬಾಲ ಹಿಡಿದು ಎಳೆದು ತಿರಿಚು ; ಬಾಲವನ್ನು ಮುರಿ. ೨. (ಅಲಂ) ಪ್ರೇರಿಸು ; ಎತ್ತಿ ಕಟ್ಟು ; ಪ್ರಚೋದಿಸು : ಈ ಗಾಣಿಗನ ಎಲುವು ಇಷದ ಹಾಗೆ ದುಡಾಯಿಸು – ಎಂದು ಬಚ್ಚನ ಬಾಲಗೀಸಿ ಬಿಟ್ಟಿದ್ದೇನೆ ! (ಹಹಸ. ೬೬). [ಬಾಲ$_1$ + ಕೀಸು$_1$]

**ಬಾಲಗುರಿ** (ನಾ). (ಬಾಲವು ಉದ್ದವಾಗಿರುವ) ಒಂದು ಬಗೆಯ ಕುರಿ : ದೊರೆ ಸೀಮೆಹಸು, ಬಾಲಗುರಿ, ಸೀಮೆಕುದುರೆ ಮುಂತಾದುವುಗಳನ್ನು ಸಾಕಿದ್ದ . . . ಬಾಲಗುರಿರೊಪ್ಪವೂ ಇತ್ತು (ನಪ್ಪೂರು. ೩).

[ ಬಾಲ$_1$ + ಕುರಿ$_3$(<ಕುಱು$_3$) ]

**ಬಾಲಗ್ರಹ** (ನಾ). ಎಳೆಯ ವಯಸ್ಸಿನ ಮಕ್ಕಳಿಗೆ ಬರುವ ಒಂದು ಬಗೆಯ ಭೀಕರವಾದ ಅಪಸ್ಮಾರರೋಗ ; ಮಕ್ಕಳಿಗೆ ಈ ಬಗೆಯ ಪೀಡೆಯನ್ನುಂಟುಮಾಡುವ ಒಂಬತ್ತು ಬಗೆಯ ಗ್ರಹಗಳುಂಟೆಂದು ಭಾವಿಸಲಾಗಿದೆ. "ಸ್ಕಂದ, ಸ್ಕಂದಾಪಸ್ಮಾರ, ಶಕುನೀಗ್ರಹ, ಪೂತನಾಗ್ರಹ, ಅಂಧಪೂತನಾಗ್ರಹ, ಶೀತಪೂತನಾ, ರೇವತೀ, ಮುಖಮಂಡಿಕಾಗ್ರಹ, ನೈಗಮಗ್ರಹ (ಸಂಸ್ಕೃತ. ಸಂ. ೧೬೭)." (ಶ್ರೀಚಕ್ರ. ೨೯೦). [ಸಂ.]

**ಬಾಲಗ್ರಾಸ** (ನಾ). ಎಳೆಯ ಹುಲ್ಲು,—ಮೇವು : ಘರ್ಮಕಾಲಂ ಸಮನಿಸಿರೆಯುಮೆತ್ತಲುಂ ಬಾಲಗ್ರಾಸಾಳಿಗಳಿಂ ವರ್ಷರ್ತುವೊಲ್ದಿಳ್ಪರ್

ಪೋಲೆಡಕಂದಿರ್ದತ್ತು ಪಾನೀಯಪೂರಂ (ಶಿಷ್ಯಕೃ. ೩-೨.೩೩).

[₱ ಇದು 'ಬಾಲಘಾಸ' ಎಂದಿರಬಹುದೇ ?]

**ಬಾಲಘಾತಿನಿ** (ನಾ). ಮಕ್ಕಳನ್ನು ಕೊಲ್ಲುವವಳು : ಈತನೆ ಗಡ ವಿಷಸ್ತನ್ಯೆಯಾದ ಬಾಲಘಾತಿನಿಯಾದ ಪೂತನಿಯೆಂಬ ರಕ್ಕಸಿಯನೆಡೆಗೆಡಹಿ . . . ನಿಂದಿರ್ಪ ಬೆಡಂಗನು ನೋಡಿರಯ್ಯ (ಕಗಿ. ೬೭). [ಸಂ. ಬಾಲಘಾತಿನೀ]

**ಬಾಲಚಂದ್ರ**, ಬಾಳಚಂದ್ರ (ನಾ). ೧. ಶುಕ್ಲಪಕ್ಷದ ಪ್ರಾರಂಭದಲ್ಲಿ ಕಾಣುವ ಚಂದ್ರ ; ಬಿದಿಗೆಯ ಚಂದ್ರ : ಬಾಲಚಂದ್ರನ ಸೂಡ ದಂದು . . . ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು (ಅಪಂಶೀ. ೨-೩). **ಬಾಳಚಂದ್ರ** : ೨. (ಜೈನಮುನಿಯಾದ) ಒಬ್ಬ ಕನ್ನಡ ಕವಿಯ ಹೆಸರು : ಅಧ್ಯಾತ್ಮಕಳಾಧರನುಜ್ಜಳಕೀರ್ತಿ ಬಾಳಚಂದ್ರ ಮುನೀಂದ್ರಂ (ಎಕ. II. ೨೪೯-೬೯ ; ಶು. 1180) ; ಧರಣೀಚಕ್ರದೊಳತಿ ಚಿತ್ರಂ ಕವಿಚಕ್ರಪ್ರಿಯನೆನಿಸಿ ಬಾಳಚಂದ್ರಂ ನೆಗಳ್ದಂ (ಪಾರ್ಶ್ವಪು. ೦-೬೬). [ಸಂ.]

**ಬಾಲಚಮೂ** (ನಾ). 'ಸ್ಕೌಟ್' ಎಂಬ ದಳ; ಸ್ಕೌಟುದಳ ; ₱ ಶಾಲೆ ಗಳಲ್ಲಿ ಮಕ್ಕಳಿಗೆ ಪಠ್ಯೇತರವಿಷಯಗಳಲ್ಲಿ ತಿಳಿವಳಿಕೆ ಕೊಡಲು ಪಾಶ್ಚಾತ್ಯದೇಶದಲ್ಲಿ 'ಬಾಡನ್‌ಪಾವೆಲ್' ಎಂಬ ಪ್ರಸಿದ್ಧ ಪುರುಷನಿಂದ ೧೯೦೮ರಲ್ಲಿ ಇದು ಸ್ಥಾಪಿತವಾಯಿತು : ಮಕ್ಕಳ ಜೀವನದಲ್ಲಿ ಪರಿಣಾಮಕಾರಿಯಾಗುವಂತೆ ಶಿಕ್ಷಣವೀಯುವ ಸಂಘಸಂಸ್ಥೆ ಗಳಲ್ಲಿ . . . ಬಾಲಚಮೂ, ರೆಡ್‌ಕ್ರಾಸ್, ರೋಟರಿ ಸಂಘ, ಯುನೆಸ್ಕೋ ಮುಂತಾದುವು ಪ್ರಧಾನವಾದುವು (ಶಿಕ್ಷರ. ೩೩). [ಸಂ.]

**ಬಾಲಚಾರ** (ನಾ). ಸ್ಕೌಟುದಳಕ್ಕೆ ಸೇರಿದ ಹುಡುಗ : ಅಗ್ರಚಾರ (ಸ್ಕೌಟ್) ಬಾಲಚಾರನಿಗಿಂತ (ಬಾಯ್‌ಸ್ಕೌಟ್) ಭಿನ್ನ (ಕಶಂಕೋ. I. ೦೯೬); ನಾಣಿ ನಮ್ಮ ಊರಿಗೆ ಒಬ್ಬ ಬಾಲಚಾರ (ಪಮ್ಮೂರ. ೩೯). [ಸಂ.]

**ಬಾಲಚಿಕ್ಕಿ** 'ಬಾಲಚುಕ್ಕಿ' ನೋ.

**ಬಾಲಚುಕ್ಕಿ** 'ಬಾಲಚುಕ್ಕಿ' ನೋ.

**ಬಾಲಚುಕ್ಕಿ**, ಬಾಲಚಿಕ್ಕಿ, ಬಾಲಚುಕಿ (ನಾ). (ಸೌರವ್ಯೂಹದಲ್ಲಿದ್ದು ಆಗೊಮ್ಮೆ ಈಗೊಮ್ಮೆ ಅಡ್ಡವಾಗಿ ಬಂದು ಕಾಣಿಸಿಕೊಳ್ಳುವ) ಬಾಲದಂತೆ ಗುಂಜುಗುಂಜಾದ, ಪ್ರಕಾಶವಾದ ಪಟ್ಟೆಗಳನ್ನುಳ್ಳ ಉಲ್ಕೆ ; ಧೂಮಕೇತು; ₱ ಇದು ಉತ್ಪಾತಸೂಚಕವೆಂಬ ನಂಬಿಕೆಯಿದೆ : ಸೂರ್ಯನೂ, ಸೂರ್ಯನ ಸುತ್ತಲೂ ತಿರುಗುವ ಗ್ರಹಗಳೂ. ಬಾಲಚುಕ್ಕಿಗಳೂ ಇವುಗಳಿಗೆ . . . ಎಂದು ಹೆಸರು (ಭೂಗೋಳ. ೯). **ಬಾಲಚಿಕ್ಕಿ** : ಈಗ ನಾವು ನೋಡುವ ಬಾಲಚಿಕ್ಕಿಗಳ ಸ್ಥಿತಿಯಂತೆ ಆ ಕಾಲದಲ್ಲಿ ಭೂಮಿಯು ಸ್ಥಿತಿಯಿತ್ತೆಂದು ಹೇಳಬಹುದು (ಮುಂಜಾನು. ೬-೨೯೨). **ಬಾಲಚುಕಿ** : ನಭದೊಳ್ಕೆಡೆವಿಡದೆ ತುಂಬಿದ ಪಸುರುರದಯಿಕೆ ಬಾಲಚುಕ್ಕಿಗಳು (ಶೃಹ್ಯಾ.ಕ. ೨-೨೩) ; ೧೫೭೭ರಲ್ಲಿ ಒಂದು ಬಾಲಚುಕ್ಕಿಯು ಕಾಣಿಸಿತು (ಶಿಲ್ಪಿಪಾ. ೦೦೦). [ಬಾಲ್ಕ + ಚುಕ್ಕಿ]

**ಬಾಲಜ್ವರ** (ನಾ). ರೋಗಿಗೆ ಆಗ ತಾನೇ ಪ್ರಾರಂಭವಾಗಿರುವ ಜ್ವರ : ರಾಸ್ನೆ . . . ಬೆಳ್ಳುಳ್ಳಿ ಇವುಗಳನ್ನು ಕುಟ್ಟಿ ಅರೆದು ಕೊಡಲು ವಾತದೋಷಜ್ವರ ಮತ್ತು ಬಾಲಜ್ವರ ಸಹ ಪರಿಹಾರವಾಗುವುವು (ಸಕವೃ. ೦೦೯). [ಸಂ.]

**ಬಾಲತನ** (ನಾ). ಚಿಕ್ಕಂದು ; ಎಳವೆ : ಬಾಲ್ಯ : ನಿಮಗಾನುಜು ವುದೆನ್ನ ಬಾಲ[ಶಾತಂ. ಲ್ಯ]ತನದಿಂನಂದಾದುದೆದಾದುದೇ ನಿಮಗಾ ನಂಪದೊಡಂಜಸಲ್ ನೆಣಿವೇನೇ ತ್ರೈಲೋಕ್ಯಮಂ ಯುದ್ಧದೊಳ್ (ಶಂಪಾ. ೦೦-೦೪೯); ಬಾಲತನವೇನೂಗಾಯವೆ ಕಟ್ಟಾಳುತನವಾಭರಣ ವವನೀಪಾಲಸುತರಿಗೆ (ಕುಮಾರರಾಮ. ೩-೪೦). [ಬಾಲ್ಕ + -ತನ]

**ಬಾಲತನಯ** (ನಾ). ಒಂದು ಬಗೆಯ ಮರ ; ಕಗ್ಗಲಿಮರ ; ಖದಿರ ವೃಕ್ಷ : "ಗಾಯತ್ರೀ, ಬಾಲತನಯಃ, ಖದಿರಃ, ದಂತಧಾವನಃ – ೪ ತರೆಯದ ಮರದ ಹೆಸರು; ಕಗ್ಗಲೀಮರ" (ಸಿದ್ಧಾಂತಿ. ೦೨೩). [ಸಂ.]

**ಬಾಲತಪ** (ನಾ). [ಜೈನ] ಶುದ್ಧವಾದ ದರ್ಶನವಿಲ್ಲದೆ, ವ್ಯರ್ಥವಾದ ದೇಹದಂಡನೆಯೊಡನೆ ಆಚರಿಸುವ ತಪಸ್ಸು ; ಮೂರ್ಖತನದ ತಪಸ್ಸು : ಮಿಥ್ಯಾದರ್ಶನೋಪೇತತಪಂ ಬಾಲತಪಂ ನಿಕೃತಿಬಹುಲವ್ರತ ಧಾರಣಂ ಅನುಪಾಯಕಾಯಕ್ಲೇಶಪ್ರಚುರಂ ಎಂಬಿವು ಮೊದಲಾಗೊಡೆ ಯವು ದೇವಾಯುಷ್ಯಾಸ್ರವಕಾರಣಂಗಳಪ್ಪುವು (ತತ್ತ್ವಸೂ. ೩೩೩). [ಸಂ.]

**ಬಾಲತೆ**, ಬಾಳತೆ (ನಾ). ೧.=ಬಾಲತನ : ಬಾಲತೆಯೊಳ್ ದರ್ಶನಮುಮಂ ಮೇಲೆನಿಸೀ ವ್ರತಮುಮೊಡನೆ ಸಂಭವಿಸಿದುವು (ಧರ್ಮಾಮೃ. ೩-೨೦). **ಬಾಳತೆ** : ೧. ಬಾಳತೆಯಂ ಕಳಿಪಿ ಸುದಂಬೋಲೀಧರಾನತಪದಂ ಕುಮಾರತೆಯಂ ಸಲ್ಲೀಲಾನಿಧಾನನಾಂತಂ . . . ಭಾಸುರರೂಪಾ (ನೇಮಿಪು. ೯-೯). ೨. ಹುಡುಗುತನದ ವರ್ತನೆ ; ಬಾಲಿಶವೃತ್ತಿ : ಪಾಲಿಪುದು ವಿನಯಮಂ ಬಾಳತೆಯನುಳಿವುದಿದನೇಳಿಸದಿರೆಂದು ಸೌಮಿತ್ರಿ ನುಡಿದಂ (ಕುಮುರಾ. ೬-೦೦೬). [ಸಂ. ಬಾಲತಾ]

**ಬಾಲತ್ವ**, ಬಾಳತ್ವ (ನಾ). =ಬಾಲತನ : ಬಾಲತ್ವದೊಳಂ ಗುಣಮಣಿ ಮಾಲಿನಿ ಶಿಶುಸುಜಾತಿ . . . ಜನಪತಿಗೆ ವಿನಯವಿನಮಿತ್ರಯಕ್ಕುಂ (ಶಾಂತಿಪು. ೯-೬೭) ; ಬಾಲತ್ವದಿಂದೆಲ್ಲಿಯುಂ ವಿನಯೋಲ್ಲಂಘನಮಾದುದಿಲ್ಲ (ಗದಾಯು. ೩.೬) ; ಬಾಲತ್ವದೊಳಮುದಾತ್ತಗುಣಾಲಯಮೆನಿಸಿದ ತನೂಜಮುಖಚಂದ್ರಮನಂ ಲೀಲೆಯಿಂನೀಕ್ಷಿಸಿ ದಶರಥನೋಲಾಡಿದನಧಿಕ ರಂಗರಸವಾರಿಧಿಯೊಳ್ (ಶಂರಾಮ. ೩ ೦೩೨). **ಬಾಳತ್ವ** : ಗಗನಕ್ಕೀಡಾಡಿ ವಾಮೇತರಾಯತಹಸ್ತಾಗ್ರದೊಳಾಂತು ತಳ್ದುದುದೞಿಂ ಬಾಳತ್ವದೊಳ್ ಕೋಟಿಕಾಂತಿತಮಾ ಕಲ್ ತಿರಿಕಲ್ ತ್ರಿಪ್ರಷ್ಠಮಹಿವೇಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೩-೨೬); ಬಾಳತ್ವದೊಳಂದಗಮುಂ ಬಳಿಸದೀ ಕೃಷ್ಣನಳಿಯನಲ್ಲನೆ ಶೌರ್ಯಾಭೀಳನರತಸುಜನಲ್ಲನೆ ಪೇೞೆಮಿದೇಂ ಗಹನಮನಗೆ ಬೆಸಸಿಂ ನೃಪತೀ (ನೇಮಿಪು. ೦೨-೩೩). [ಸಂ.]

**ಬಾಲದುಡಿಗೆ** 'ಬಾಲದೊಡಿಗೆ' ನೋ.

**ಬಾಲದುಡುಗೆ** 'ಬಾಲದೊಡಿಗೆ' ನೋ.

**ಬಾಲದೆರಿಗೆ** 'ಬಾಲದೆಱಿಗೆ' ನೋ.

**ಬಾಲದೆಱಿಗೆ**, ಬಾಲದೆರಿಗೆ (ನಾ). ದನಕರುಗಳ ಮೇಲೆ ಹಾಕುತ್ತಿದ್ದ ತೆರಿಗೆ; ₱ ದನಕರುಗಳ ಗಣನೆಯು ಸಮಯದಲ್ಲಿ, ಬಾಲಗಳ ಎಣಿಕೆ ಯಿಂದ ಕಾಲ್ನಡೆಯ ಸಂಖ್ಯೆಯನ್ನು ಸೂಚಿಸುವ ಪರಿಪಾಠವಿದ್ದಿರ ಬಹುದು : ಪಳ್ಳಿಗರ ಜಾತಿದೆಱಿಗೆ ಬಾಲದೆಱಿಗೆ ನಾಮಗಾಣಿಕೆ ಗೋಪಾಲಸ್ವಾಮಿವರ್ತನೆ ಸುಂಕಕ್ಕೆ ಸಲ್ಲುವ ಪಟ್ಟಡಿಯೇರುಸುಂಕ (ಎಕ. III. ಶ್ರೀರಂಗ ೦೦೦-೧೬೩; 1724). **ಬಾಲದೆರಿಗೆ** : ಈಚಲುಕಂದಾಯ ಬಾಲದೆರಿಗೆ ಹೊರಾದಾಯ ಚರಾದಾಯ . . . ಈ ಸಂಖ್ಯೆಯು ಮಹಾಜನ ರಿಗೂ ಯಥಾಂಶವಾಗಿ ನಿರ್ವಿವಾದವಾಗಿ ಸಲುವದು (ಎಕ. III, ತಿರುಮ. ೩೩-೦೩೬೮; 1748); ಕುರಿದೆರಿಗೆ ಬಾಲದೆರಿಗೆ ಹುಲ್ಲುಹಣ (ಮೈಕಂ. ೦೯೩೬. ೨೯-೦೯; 1820). 'ಬಾಲವಣ' ಪರಾ. [ಬಾಲ್ಕ + ತೆಱಿಗೆ]

**ಬಾಲದೊಡಿಗೆ**, ಬಾಲದುಡಿಗೆ, ಬಾಲದುಡುಗೆ (ನಾ). ಮಕ್ಕಳಿಗೆ ತೊಡಿಸುವ ಆಭರಣ : ತಾಲಿ ಕಡಗು ಜನ್ನಸರವು ತೋಳಬಂದಿ ಯೆನಿಪ್ಪ ಚೆಲ್ವಿನ ಬಾಲದೊಡಿಗೆಗಳ್ . . . ತಂದಪೆವು (ಅಪು. ೦೯-೯); ಈತನರ್ಜುನನರಮನೆಯೊಳಭಿಜಾತನೆನಿಪಭಿಮನ್ಯುವನು ಸಂಪ್ರೀತಿಯಿಂ ದಪ್ಪಿದನು ಕೊಟ್ಟನು ಬಾಲದೊಡಿಗೆಗಳ (ಕುಮ್ಯಾಭಾ. ೨೦ ೦೦). **ಬಾಲದುಡಿಗೆ**: ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತು (ಶಂಕಶಂ. ೦೫೬-೮); ಇಂತು ಸಕಲಸೌಂದರ್ಯಮಂ ಬೀಱುವ ಬಾಲದು [ಶಾತಂ. ದೊ]ಡಿಗೆ

ಮೆಸಂ ಲೀಲೆ ಮಿಕ್ಕು (ಗಂಗ. ೩-೬೯ ವ). **ಬಾಲದುಡುಗೆ:** ಜಾತ್ಯುಪೇತಮಂ ಮಾಡಿ ತದನಂತರಮನೇಕಬಾಲದುಡುಗೆಗಳಂ ತುಡಿಸಿ ತಾಯು ತಂದೆಗೆ ನಂದನನಂ ಕೊಟ್ಟುಮಿಂಡಳಂ . . . ನಿಜನಿವಾಸಕ್ಕೆ ಪೋದಂ (ಪುಣ್ಯಾಸ್ರ. ೦೦-೦೬ ವ). [ಬಾಲ₂ + ತೊಡಿಗೆ (<ತೊಡುಗೆ)]

**ಬಾಲಪಂಡಿತಮರಣ** (ನಾ). [ಜೈನ] ಐದು ಬಗೆಯ ಮರಣಗಳಲ್ಲಿ ಒಂದು; ❖ "ಸಮ್ಯಕ್‌ದರ್ಶನಜ್ಞಾನ, ಏಕದೇಶಚಾರಿತ್ರಗಳನ್ನು ವಶಮಾಡಿಕೊಂಡಿರುವ ದೇಶವ್ರತಿಯ ಮರಣ" (ಕೃಪಕೋ. ೦೬೩) : ಸಮ್ಯಗ್ದರ್ಶನ ಸಂಯಮಾಸಂಯಮಚಾರಿತ್ರಂಗಳಂ ತನಗೆ ವಶಂಮಾಡಿ ನೆಗಟ್ಟ ಸಂಯತಾಸಂಯತನ ಸಾವು ಬಾಲಪಂಡಿತಮರಣಂ (ವಡ್ಡಾರ. ೩೬೬). [ಸಂ.]

**ಬಾಲಪತ್ರ** (ನಾ). ಕಗ್ಗಲಿಮರ; ಖದಿರವೃಕ್ಷ. [ಸಂ.]

**ಬಾಲಪಾಶ್ಯೆ** (ನಾ). ೧. ಸ್ತ್ರೀಯರು ಬೈತಲೆಗೆ ಧರಿಸುವ ಒಂದು ಬಗೆಯ ಆಭರಣ. ೨. ಒಂದು ಬಗೆಯ ಆಭರಣ ; ಜಡೆಬಿಲ್ಲೆ. [ಸಂ. ಬಾಲಪಾಶ್ಯಾ]

**ಬಾಲಪುಳು**, ಬಾಲಪುಳು (ನಾ). ಬಜ್ಜಲುಹರಿ ಮೊದಲಾದ ಕೊಚ್ಚೆ ಸ್ಥಳಗಳಲ್ಲಿ ಹಾಗೂ ಗೊಂಡಗಟ್ಟಿದ ಅಕ್ಕಿ ಮೊದಲಾದುವುಗಳಲ್ಲಿ ಹರಿದಾಡುವ ಚಿಕ್ಕ ಬಾಲವುಳ್ಳ ಹುಳು : ಪುರಾಣಿಕನೊಡಲು ಬಿಕ್ಕನ ಬಿರಿದುವಾಗಿ ಬಾಲಪುಳುಗಳ ರಾಶಿಯಾಯಿತ್ತು (ಬಸವ. ೩೭-೨೦). **ಬಾಲಹುಳು :** ಅಪಕಾರವಿಲ್ಲದಿಹಂತಹ ಪುರಾತನರ ಮನೆಯ ಬಚ್ಚಲ ಬಾಲಹುಳುವಾಗಿ ಹುಟ್ಟಿಸಮ್ಮಾ (ಸವಚ. ೬-೩೦) : ಜಾತಿಪೂರ್ವವ ಎತ್ತಿ ನುಡಿಸುವ ಪಾತಕರ ಬಾಯಲ್ಲಿ ಬಾಲಹುಳುಗಳು ಸುರಿಯದ ಮಾಣ್ಬವೆ ಹೇಳಾ (ಅಂಬಿಗ. ೦೦೬-೪೦). [ಬಾಲ₁ + ಪುಳು (<ಪುಳು)]

**ಬಾಲಬಂದು**, ಬಾಳಬಂದು (ನಾ). ೧. ಸರಳವಾದುದು : ಸುಲಭವಾದುದು : (ಕ). ೨. ಒಂದು ಬಗೆಯ ಲಿಪಿ : ದೇವನಾಗರೀ ಲಿಪಿ. **ಬಾಳಬಂದು** :(ಕ). [←ಮರಾ. ಬಾಳಬೊಧ, ಬಾಳಬೋಧ]

**ಬಾಲಬಾಲಮರಣ** (ನಾ). [ಜೈನ]ಐದು ಬಗೆಯ ಮರಣಗಳಲ್ಲಿ ಒಂದು ; "ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ, ತಪಸ್ಸುಗಳೆಂಬ ಆರಾಧನೆಗಳಲ್ಲಿ ಒಂದೂ ಇಲ್ಲದ ಮಿಥ್ಯಾದೃಷ್ಟಿಯ ಸಾವು" (ಕೃಪಕೋ. ೦೬೩) : ಬಾಲಬಾಲಮರಣಂ ಬಾಲಮರಣಂ ಬಾಲಪಂಡಿತ ಮರಣಂ ಪಂಡಿತಮರಣಂ ಪಂಡಿತಪಂಡಿತಮರಣಮೆಂದಿಂತು ಪಂಚ ಪ್ರಕಾರ ಮಕ್ಕುಂ . . . ಚತುರ್ವಿಧಾರಾಧನೆಗಳೊಳೊಂದಾರಾಧನೆಯುಮಿಲ್ಲದ ಮಿಥ್ಯಾದೃಷ್ಟಿಯ ಸಾವು ಬಾಲಬಾಲಮರಣಂ (ವಡ್ಡಾರ. ೩೬೬). [ಸಂ.]

**ಬಾಲಬೋಧೆ** (ನಾ). ೧. ಚಿಕ್ಕಮಕ್ಕಳಿಗೆ ಕೊಡುವ ಆರಂಭದ ಪಾಠ. ೨. ಮಕ್ಕಳಿಗೆ ಓದು ಕಲಿಸುವುದಕ್ಕಾಗಿ ಬಳಸುವ ಪ್ರಾಥಮಿಕ ಪುಸ್ತಕ: ಬಾಲಪಾಠದ ಪುಸ್ತಕ: (ಕ). [ಸಂ. ಬಾಲಬೋಧಾ]

**ಬಾಲಬ್ರಹ್ಮಚಾರಿ** (ನಾ). ಚಿಕ್ಕಂದಿನಲ್ಲಿಯೇ ಸಂನ್ಯಾಸವನ್ನು ಸ್ವೀಕರಿಸಿದವನು : ಬಾಲಬ್ರಹ್ಮಚಾರಿಯು ಬಾರನೆತ್ತಿತ್ತ ಕಂಡೆ ಭಕ್ತರೆಲ್ಲರೂ ಸತ್ತು ನೆಲಕಿಕ್ಕಿತ್ತ ಕಂಡೆ (ಅವತಂ. ೯೩-೪೩೬). [ಸಂ. ಬಾಲಬ್ರಹ್ಮಚಾರಿನ್]

**ಬಾಲಭಾವ** (ನಾ). ಬಾಲ್ಯ ; ಎಳೆತನ : ಆ ಬಾಳಕೇಳಿಗಳ ಬಳಿಯಿಂ ಬಾಲಭಾವಮಂ ಪಿಂಗಿಕ್ಕಿ ಯೌವನಪ್ರಾದುರ್ಭಾವಕ್ಕಿದಿರಾಗಿ (ಜಾಂತಿಪು. ೧೦-೪೦ ವ) ; ಕಳಾಗುಣಾ ಪೊದಟ್ಟಳವಪ ಬಾಲಭಾವದೊಳ್ ಭಾವಕಯರ್ ಬಳೆವರ್ ನಿರಂತರಂ (ಕಮತ. ೦೬೩ ಪ್ರಕೋ). [ಸಂ.]

**ಬಾಲಭಾಷಿತ** (ನಾ). ಹುಡುಗುತನದ ಮಾತನ್ನಾಡುವವನು: ಅರ್ಥವಿಲ್ಲದ ಮಾತನ್ನಾಡುವವನು : ಬೀಳುಕೊಂಡಿರೇ ಸಾಕು ಭೀಮನು ಬಾಲಭಾಷಿತನಾದನೇ ಭೂಪಾಲ ಕೌರವನೆಂಬಿನೇ ಮೊದಲಿಗನು ಮೂರ್ಖರಿಗೆ (ಕುಮಾವ್ಯಾ. ೦೦-೩೬). [ಸಂ.]

**ಬಾಲಭಾಷೆ** (ನಾ). ೧. ಮಕ್ಕಳ ಮಾತು : ಅಪ್ರಬುದ್ಧವಾದ ಭಾಷೆ : ರಂಗನು . . . ತನ್ನ ಬಾಲಭಾಷೆಯಲ್ಲಿ ಏನೇನೋ ಬರೆದು ಮಹಾದೇವಯ್ಯನವರಿಗೆ ತೋರಿಸಿ ತಿದ್ದಿಸಿಕೊಳ್ಳುತ್ತಿದ್ದನು (ರಂಗಣ್ಣ. ೩೪). ೨. ಪ್ರಾಕೃತ ಭಾಷೆ : ಪ್ರಾಕೃತಭಾಷೆಗೆ ಸಾರಸ್ವತವೆಂತಲೂ ಬಾಲಭಾಷೆಯೆಂತಲೂ ಹೆಸರುಗಳುಂಟು (ಪುಂಡರಿಂದ. ೪-೦೩೩). ೩. (ಅಲಂ) ಬಾಲ್ಯದಲ್ಲಿ ಕಲಿತ ವಿದ್ಯೆ : ಚಾಪದ ಚಾರುವಿದ್ಯೆಯ ನಿಪ್ಪೊಳಜಿ ದುದ ನಿಮಗೆ ತೋಜಿಸುವೆ ಸ್ಮರಿಸುವುದೀ ಬಾಲಭಾಷೆಗೆ ವೈರುಂಭವ ಬಿಡುವುದು (ಕುವ್ಯಾ. ೬-೩೩). [ಸಂ. ಬಾಲಭಾಷಾ]

**ಬಾಲಮಂಡನ** (ನಾ). = ಬಾಲದೊಡಿಗ : ಭುವನೈಕಮಂಡನನೊಳೇ ನೆಸದಿರ್ದುದೂ ಬಾಲಮಂಡನಂ (ಆಜಿಪು. ೩.೬೦). [ಸಂ.]

**ಬಾಲಮರಣ** (ನಾ). [ಜೈನ]ಐದು ಬಗೆಯ ಮರಣಗಳಲ್ಲಿ ಒಂದು : ಅಜ್ಞಾನ ಅಥವಾ ಅವಿವೇಕದಿಂದ ತಂದುಕೊಳ್ಳುವ ಸಾವು : ಸಮ್ಯಗ್ದರ್ಶನಾರಾಧನೆಯನುಳ್ಳಸಂಯತ ಸಮ್ಯಗ್ದೃಷ್ಟಿಯ ಸಾವು ಬಾಲಮರಣಂ (ವಡ್ಡಾರ. ೩೬೬) ; ಯಾವುದೋ ಕ್ಷುದ್ರದೇವತೆಗೆ ಹರಕೆ ಹೊತ್ತು ಉಪವಾಸ ಮಾಡಿ ಸಾಯುವುದು, ವಿಷಪಾನ ಮಾಡಿ ಅಥವಾ ನೀರಲ್ಲಿ ಮುಳುಗಿ ಸಾಯುವುದು, ಇರಿದುಕೊಂಡು ಸಾಯುವುದು—ಇವುಗಳನ್ನು "ಬಾಲಮರಣ "ವೆಂದೂ (ಬಾಲ = ಅಜ್ಞಾನಿ, ಅವಿವೇಕಿ), ಸಲ್ಲೇಖನವನ್ನು " ಪಂಡಿತಮರಣ "ವೆಂದೂ ಕರೆಯುತ್ತಾರೆ (ಕಶಾಶ. ೯೨). [ಸಂ.]

**ಬಾಲಮೆಣಸು** (ನಾ). (ತೊಟ್ಟು ಉದ್ದವಾಗಿರುವ) ಒಂದು ಬಗೆಯ ಮೆಣಸು : "ಚವಿಕೆ, ಗಂಧಮೆಣಸು, ಬಾಲಮೆಣಸು, ಬಾಲಮೆಣಸು , ಕಪ್ಪರಜಿನ್ನಿ" (ಸಕ್ಕರ ೦೦೬) : ಕಾಳುಗಳು . . . ಪಕ್ವವಾಗುತ್ತಿದ್ದಂತೆ ಫಲಾವರಣದ ಬುಡ ಅಸಾಧಾರಣವಾಗಿ ಬೆಳೆಯುವುದರಿಂದ ಪ್ರತಿಕಾಳಿಗೂ ಒಂದು ತೊಟ್ಟು (ಬಾಲ) ಹೊರಟಂತೆ ಭಾಸವಾಗುತ್ತದೆ. ಆದ್ದರಿಂದಲೇ ಇದಕ್ಕೆ ಬಾಲಮೆಣಸು ಎಂಬ ಹೆಸರು (ಕಂಕೋ. XII. ೩೩). [ಬಾಲ₁ + ಮೆಣಸು (<ಮೆಣಸು)]

**ಬಾಲರಕ್ಷೆ** (ನಾ). ದುಷ್ಟಗ್ರಹ ಅಥವಾ ಭೂತಬಾಧೆಯಾಗದಂತೆ ಮಕ್ಕಳಿಗೆ ಕಟ್ಟುವ ತಾಯಿತ, ದಾರ ಮೊದಲಾದ ಪ್ರತಿಬಂಧಕ ಸಾಧನ. [ಸಂ. ಬಾಲರಕ್ಷಾ]

**ಬಾಲರಸ** (ನಾ). [ವೈದ್ಯಶಾ] (ಮಕ್ಕಳ ಹಳೆಯ ಜ್ವರ, ಕೆಮ್ಮು, ಶೂಲೆ ಇತ್ಯಾದಿಗಳಿಗೆ ಕೊಡುವ ಗಂಧಕ, ಸೋನಾಮುಖಿ ಮುಂತಾದುವುಗಳ ಮಿಶ್ರಣದಿಂದ ತಯಾರಿಸುವ) ಒಂದು ಬಗೆಯ ಔಷಧ : ಮಣಿಶಿಲಾಸಿದ್ಧರಸವು ಸಮವಾಗಿ ಕರಗಿಸಲು ಬಾಲರಸವಾಗುವುದು (ಗಂರತ್ನ. ೯-೦). [ಸಂ.]

**ಬಾಲರಾಕ್ಷಸ** 'ಬಲರಾಕ್ಷಸ' ನೋ.

**ಬಾಲರಾಕ್ಷಸಿ** 'ಬಲರಾಕ್ಷಸಿ' ನೋ.

**ಬಾಲರ್ಷಿ** (ನಾ). ಋಷಿಸತ್ವವುಳ್ಳ ಬಾಲಕ : ನನ್ನೊಳೆನ್ನೆಗೇಂ ಕಡಮೆ, ಪೇಳವ್ವ, ನಿನ್ನ ಬಾಲರ್ಷಿ ಭರತನ ಕೂರ್ಮೆ? (ಶ್ರೀರಾಮಪ. ೩೩-೦೩೩). [ಸಂ.]

**ಬಾಲಲೀಲೆ** (ನಾ). = ಬಾಲಕೇಳಿ : ಶಿಶುವಾಗಿ ಬಾಲಲೀಲೆ ತೋಱಿದೆ (ಪುರಂದ. ೩-೬೪-೩) ; ಕಂದನಾಡುವ ಬಾಲಲೀಲೆಯಂ ನೋಡಿ . . . ಪ್ರೀತಿಯಂ ಪಡೆವರ್ (ಕೃಮಜಾ. ೦೬-೨೦). [ಸಂ. ಬಾಲಲೀಲಾ]

**ಬಾಲವ** (ನಾ). [ಜ್ಯೋತಿ] ಹನ್ನೊಂದು ಬಗೆಯ ಕರಣಗಳಲ್ಲಿ ಎರಡನೆಯದು ; ಒಂದು ಬಗೆಯ ಕಾಲಮಾನ : ಬವ ಬಾಲವ ಕಾಲವ ತೈತಿಲ ಗರಜೆ ವಣಜೆ ಭದ್ರೆಗಳೆಂಬಿವೇಳುಂ ಚರಕರಣಂಗಳು . . . ವರ್ತಿಸುತ್ತಿಹವು (ಎಜೋಶ. ೨೬೩) ; ಚರ ಮತ್ತು ಸ್ಥಿರ ಎಂದು ಕರಣ ಎರಡು ವಿಧ. ಬವ ಬಾಲವ ಕಾಲವ ತೈತಿಲ ಗರಜೆ ವಣಜೆ ಭದ್ರೆ ಈ ಏಳು ಚರಕರಣಗಳು (ಜಾತಕ. ಶಂ. ೩-೩೬೬). 'ನಾಗವ' ಪರಾ. [ಸಂ.]

**ಬಾಲವಂದ, ಬಾಳವಂದ** (ನಾ). ಮಕ್ಕಳಿಗೆ ತೊಡಿಸುವ ಉಡುಪು, ಆಭರಣ ಇತ್ಯಾದಿ ; ಮಕ್ಕಳ ಉಡುಗೆ ತೊಡುಗೆ : ಅರಳಿಲೆಯತ್ತಿ ಕಾಯ್ ಪುಲಿಯುಗುರ್ . . . ಗೊಂದಳಿಸಿರೆ ಬಾಲವಂದದ ತೆರಳ್ಕೆಯಿ ನಚ್ಚುಕನಾದವೊಪ್ಪಿದಂ (ಸೂಕ್ತಿಸು. ೬-೬೩). **ಬಾಳವಂದ** : ಬಾಳವಂದಂಗಳ ನೊಯ್ಯನೆ ತುಡಿಸಿದಾಗಳಾ ಶಿಶು ಜಿನಶಿಶುವೆಂಬನಗವೋಂ ಮನಂಗೊಳಿಸಿ ದನೋ (ಸುಕುಮಾ. ೦೦-೩೯) ; ಅರಳೆಲೆ . . . ನೂಪುರಂ ವರವಲಯಂ ಗಳೆಂಬ ಪಲವಂದದ ಚಂದದ ಬಾಳವಂದವೊಪ್ಪಿರೆ ಪಿತೃಮಾತೃಗಳ್ಗೆ ಪಡೆದರ್ ತನಯರ್ ನಯನೋತ್ಸವಂಗಳಂ(ಶಾಂತೀಶ. ೬-೦೪೦).
[ ←ಹಿಂ. ಬಾಲಾಬಂದ./ ಸಂ. ಬಾಲಬಂಧ ]

**ಬಾಲವಕರಣ** (ನಾ). = ಬಾಲವ : ಬಾಲವಕರಣಕ್ಕೆ ವನಂ ಳ ಗಳಿಗೆ ಮೇಲೆ ತ್ಯಾಜ್ಯ (ಛಾಸ್ಕರ. ೬೦-೫). [ಸಂ.]

**ಬಾಲವಣ** (ನಾ). = ಬಾಲದೆಱಗೆ : ಬಾಲವಣಮುಮಾಯಿಲದೆಱ ಗಳುಮನ್ನೆಲದ ನೇಸಱ ಉಳ್ಳನ್ನೆಗ ಬಿಟ್ಟ (ಶಾಸನ. XI–i. ೫೪-೬ ; ೩೫ ೫೩ ?) ; ಬಾಲವಣಾ ಬೇಡುವನೊಂದೆ ಗೊಂದೆಗಂ (ಕವಿರ. ೬೬ ಕೃಯೋ).
[ ಬಾಲ$_1$ + ವಣ$_3$ ]

**ಬಾಲವಣದೆಱ** (ನಾ) = ಬಾಲದೆಱಗೆ: ಚಿಕ್ಕ ಬೆಳುಗಲಿಯ ಹೊಗೆದೆಱ ಬಾಲವಣದೆಱಯೊಳಗೆ ಎಳ್ಳೇಶ್ವರದೇವರ ನಂದಾದೀವಿಗೆಗೆ ವರುಷ ನಿಬಂದ್ದಿಯಾಗಿ ಕೊಟ್ಟ ವ ೨ (ಎಕ. XV. ಹೊಳೆನ. ೯೪-೦೦; 1237).
[ ಬಾಲವಣ + ತೆಱ$_3$ ]

**ಬಾಲವತಿ, ಬಾಳವತಿ** (ನಾ). ಹೆರಿಗೆಯಾಗಿ ಇನ್ನೂ ಆರೈಕೆಯನ್ನು ಹೊಂದುತ್ತಿರುವವಳು ; ಬಾಣಂತಿ : ಮಾಡಿದರ್ . . . ಬಾಲವತಿ ಗಂದಭಿಷೇಕವಸಂಗನಾಜನಂ (ಶಾಂತೀಶ್ವ. ೪.೩೨). **ಬಾಳವತಿ** : ಮಾಡಿವರ್ . . . ಬಾಳವತಿಗುಂದಭೀಷೇಕಮನಿಂತು ಕಾಂತೆಯರ್ (ಸುಕುಮಾ. ೬-೬೮). 'ಬಾಳಂತಿ' ಪರಾ [ಸಂ. ಬಾಲವತೀ ]

**ಬಾಲವದ್ದೆ** (ನಾ). ಬಾಲ್ಯಾವಸ್ಥೆಯಲ್ಲಿರುವವನು ; ಹಸುಮಗು (?): ಬಾಲವದ್ದೆಯಂ ಕೂಸಂ ಸಿಸುವನವ್ಯಕ್ತನಂ ವಿಸುಟ್ಟಿಂತು ತಪಂಬಟ್ಟ ಪಾಪ ಕರ್ಮ ದಯೆಯಿಲ್ಲದೊಂ ನಿಷ್ಕರುಣಿ ಎಂದು ಬಯ್ದರ್ (ವಡ್ಡಾರಾ. ೯೩-೦೦); ಮಗನೆ ನೀನಿನ್ನುಂ ಕೂಸನ್ಯ ಬಾ:[ಪಾಠಾಂ. ಳ]ವದ್ದೆ . . . ಪಶ್ಚಾ ತ್ಯಾಲದೊಳ್ ತಪಂಬಡುವುದೆಂದೊಡೆ (ವಡ್ಡಾರಾ. ೧೦೪-೬). "ಮಂಗಳ ಕರನಾದ ಬಾಲಕ ? " (ವಡ್ಡಾರಾ. ಟಿಪ್ಪಣಿ. ೨೪೬). [ಬಾಲ್ಯ + ? ]

**ಬಾಲವಧ** (ನಾ). ಮಕ್ಕಳ ಕೊಲೆ ; ಶಿಶುಹತ್ಯೆ : ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ (ಗದಾಯು. ೯-೩೯). [ ಸಂ. ]

**ಬಾಲವಿಧವೆ** (ನಾ). ಚಿಕ್ಕವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡ ವಳು : ಹೀಗೆಯೇ ಇನ್ನೊಬ್ಬ ಬಾಲವಿಧವೆಯಿದ್ದಳು (ಹುಮುಂಚಿ. ೬೫).
[ ಸಂ. ಬಾಲವಿಧವಾ ]

**ಬಾಲವೂರು, ಬಾಳವೂರು** (ನಾ). ಒಂದು ಊರಿನ ಹೆಸರು ; ಈಗಿನ ಧಾರವಾಡಜಿಲ್ಲೆಯ ಹಾನಗಲ್ಲು ತಾಲ್ಲೂಕಿನ ಬಾಳೂರು : ಪಾನು ಜ್ಜಲ್ ಕಿಱುವಳ್ಳಿ ಬಾಲವೂರು . . . ಗ್ರಾಮಾನ್ ವಧ್ಯೇ (ಎಇ. VIII, ೨೬ : 758). **ಬಾಳವೂರು** : ಬಾಳವೂರು ಇತ್ಯೇತೇಷಾಂ ಗ್ರಾಮಾಣಾಂ (ಎಇ. ೪. ೨೦೪-೬೪; 757). [ ? + ಊರು$_3$ (<ಊರ್) ]

**ಬಾಲಶಯ್ಯೆ** (ನಾ). (ಮಗುವನ್ನು ಮಲಗಿಸುವ) ತೊಟ್ಟಿಲು : "ಶೈಶವಿ ಬಾಲಶಯ್ಯೆಯೆನೆ ತೊಟ್ಟಿಲಕ್ಕುಂ " (ಮಂಗರಾ. ೬೦-೦೬).
[ ಸಂ. ಬಾಲಶಯ್ಯಾ ]

**ಬಾಲಶಶಿಮೌಳಿ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು : ಶಿವ : ಪ್ರಮಥರಱಿಯದೆ . . . ಆಧ್ಯರಱಿಯದೆ ಬಾಲಶಶಿಮೌಳಿ ಕ್ಷಮೆ ಯುಳಿದು . . . ಭಕ್ತ್ಯಕಭಾವದ ಸಮತೆಯೊಳಿದಿಬ್ಬರನು ಮಡಗಿದ ಬೆಡಗು ಲೇಸಾಯ್ತು (ಚಕ್ರ. ೪೬-೧೦); ನಿಮ್ಮ ನೆಱ ಕಟ್ಟಾಡಿದರ ಬಾಯ್ ಹುಳುವುದೆಂದನು ಬಾಲಶಶಿಮೌಳಿ (ಚನ್ನಬ. ೦೬-೨೫).
[ ಸಂ. ಬಾಲಶಶಿಮೌಲಿನ್ ]

**ಬಾಲಶಿಕ್ಷೆ** (ನಾ). ಚಿಕ್ಕ ಮಕ್ಕಳ ಶಿಕ್ಷಣ ; ಬಾಲಕರಿಗೆ ಕೊಡುವ ವಿದ್ಯಾ ಭ್ಯಾಸ : ಬಾಲಶಿಕ್ಷೆಗಂ ವಿನ್ಯಾಸದ ವಖ್ಯಾಣಕ್ಕಂ ವೃತ್ತಿಯ ಭೂಮಿಯೊಳಗೆ ಬಿಟ್ಟ ಭಟ್ಟವೃತ್ತಿಯೊಂದು (ಶಾಸನ. XX. ೯೬-೬೦ ; ?). [ಸಂ. ಬಾಲಶಿಕ್ಷಾ]

**ಬಾಲಸಂಗಡ** (ನಾ). ೧. ಕುಸ್ತಿಯ ಒಂದು ಪೇಚು; ಮಲ್ಲಯುದ್ಧದ ಒಂದು ವರಸೆ. ೨. ಕತ್ತಿವರಸೆಯಲ್ಲಿ ಒಂದು ಬಗೆ : ಬಾಲಕರೊಡನೆ ಕೂಡಿದಂಥಾ ಗೋಣೆಯಿದಕ್ಕೆ ಬಾಲಸಂಗಡಯೆಂಬ ಹೆಸರು (ಐಶ್ವಬೀ. ೨-೪೦).
[ ←ಹಿಂ. ಬಾಲಸಂಗಾಡಾ, ಬಾಲಸಿಂಗಡಾ ; ಮರಾ. ಬಾಳಸಾಂಗಾಡಾ ]

**ಬಾಲಸನ್ಯಾಸಿ** (ನಾ). ಚಿಕ್ಕವಯಸ್ಸಿನಲ್ಲಿಯೇ ಸಂನ್ಯಾಸಿಯಾದವನು : ಉಡುಪಿಯಲ್ಲಿ ಬಾಲಕೃಷ್ಣನ ಪ್ರತಿಷ್ಠೆಯೂ ಬಾಲಸನ್ಯಾಸಿಗಳ ಪೂಜಾ ಪದ್ಧತಿಯೂ . . . ಭಕ್ತಿಯ ಸಾಕ್ಷಿಯಲ್ಲದೆ ಬೇರೆ ಅಲ್ಲ (ಶಾರದ. ೨೯೬) ; ಬಾಲಸನ್ಯಾಸಿ ಕಟ್ಟಿರೆ ಖೂಳನಾಯಿಗಿಂತ ಕಡೆ (ಗಾದೆ).
[ <ಸಂ. ಬಾಲಸನ್ಯಾಸಿನ್ ]

**ಬಾಲಸರ** (ನಾ). ಗಾಳಿಪಟಕ್ಕೆ ಕಟ್ಟುವ ಉದ್ದವಾದ ಪಟ್ಟಿ : ಬಾಲಂ ಗಚ್ಚಿ ; ಬಾಲಂಗೋಸಿ : ಪಟ ಬಾಲಸರ ಕೂಡಿದ್ದರೇನು ಸೂತ್ರ ಕಿಂಚಿತ್ತು ತಪ್ಪಿದಡೆ ಅದು ಮೇಚರತ್ವದಲ್ಲಿ ಅಡಲಜೀಯದು (ಮೋಹನತರ. ೩೬-೦೫೬) ; ಪಟದೊಳಗಣ ಬಾಲಸರಕ್ಕೆ ಪ್ರತಿಸೂತ್ರ ನೇಣಂಟೆ (ಪಂಚೇಶ. ೨೬೯-೨೦). [ ಬಾಲ$_1$ + ಸರ$_3$ ]

**ಬಾಲಹುಳು** 'ಬಾಲಪುಳು' ನೋ.

**ಬಾಲಳಿ** (ನಾ). ಎಳೆಯ ದುಂಬಿ ; ಮಱಿದುಂಬಿ : ' ಬಾಲಳಿಗುರುಳು ' ಪರಾ. [ಸಂ. ಬಾಲಲಿ]

**ಬಾಲಳಿಗುರುಳು** (ನಾ). ಮಱಿದುಂಬಿಯಂತೆ ಕಪ್ಪಾಗಿರುವ ಕೂದಲು : ಸುಳಿಗುರುಳವರುಂಗುರಗುರುಳವರು ಬಾಲಳಿಗುರುಳವರು . . . ಆ ಕುವರಿಯ ಬಳಿವಿಡಿದ್ದೆದಿತೊಗ್ಗಿನಲಿ (ಮೋಹತ. ೨೪-೦೦).
[ ಬಾಲಳಿ+ಕುರುಳು$_1$ (<ಕುರುಳ್$_1$) ]

**ಬಾಲಾಖಾನೆ** (ನಾ). ಉಪ್ಪರಿಗೆ ; ಮೇಲ್ಮಾಡ ; ಮಹಡಿ : ಅರಮನೆ ಯೊಳಕ್ಕೆ . . . ಎಡಪಾರ್ಶ್ವದ ಬಾಲಾಖಾನೆಯಲ್ಲಿ ಮಹಾರಾಜರವರು ನವರತ್ನಾಲಂಕೃತವಾದ ದಂತದ ಸಿಂಹಾಸನದ ಮೇಲೆ ಮುಹೂರ್ತ ಮಾಡಿಸಿದ್ದರು (ಮಹಾವಂ. II, ೩೫). [←ಪಾರ. ಹಿಂ. ಬಾಲಾಖಾನಾ]

**ಬಾಲಾಟ** (ನಾ). ಮಗುವಿನ ಆಟ ; ಬಾಲಕೇಳಿ : ಬಲು ಪರಿ ಒಂದೊಂದು ಬಾಲಾಟದಲಿ ನಲಿದು ಒಲಿಮೆಯಿಂದಲಿ ನೋಡ ಬಂದ ಯೌವನಸ್ತ್ರೀಯರ ನಿಲಿಯ ಬಿಡಿಸಿ (ವಿಷ್ಣುತಾ. ೦೯-೩). [ಬಾಲ್ಯ+ಆಟ]

**ಬಾಲಾತಪ, ಬಾಳಾತಪ** (ನಾ). ೧. ಆಗ ತಾನೆ ಉದಯವಾದ ಸೂರ್ಯನ ಬೆಳಕು ; ಎಳೆಬಿಸಿಲು; ಬಲಿಯದಿರುವ ಬಿಸಿಲು : ಹರಿ ಚಂದನವಿಚ್ಛುರಿತಾಂಗರಾಗನತಿರುಚಿರಹಾರನೇನೆಸಿದನೊ ಸಿರ್ಝರಮುಂ ಬಾಲಾತಪಮುಂ ಬೆರಸಿರ್ದದ್ರೀಂದ್ರನಂತೆ ಪಾಂಡ್ಯನೃಪೇಂದ್ರಂ (ಶಾಂತಿಪು. ೫-೦೩೮) ; ಪೆರ್ಮ್ದುಂಬಿಗಳ್ಪಾಯ್ದು ಪುಷ್ಪರಸಾಸಾರದ ತುಂತುಱಿಂದೆಱ ನಾಂದಾಂದೋಳಿತಾಶೋಕಮಂಜರಿಯಂ ಸಾರ್ವವು ಪಲ್ಲವೋಲ್ಲಸಿತಮುಂ ಬಾಲಾತಪಭ್ರಾಂತಿಯಿಂ (ಮಲ್ಲಿಕಾ. ೨-೩೬). **ಬಾಳಾತಪ** : ೧. ಮಾತ್ತೂರ್ವಳ ಲೋಚನಕುಮುದಂ ಮುಗಿದುವು ಕುಮುದಿನಿಗಳ್ ಬಾಳಾ ತಪಕ್ಕೆ ಮೊಗವಿಪಸುದಪೊಲ್ (ಮಲ್ಲಿಕಾ. ೬-೦೨೪). ೨. ಕಿರುಪ್ರಕಾಶ ; ಮಂದಕಾಂತಿ : ಅರಿಕೇಸರಿಯ ಪಾದತಳಂಗಳಡಿಗೆಱಗಿದರನರಪಾಲರ ಮಕುಟಮಾಣಿಕ್ಯಮರೀಚಿಜಾಲಬಾಳಾತಪಂಗಳನಲಿದು ಕೆಂಕಮಾದಂತಾದುವು (ಪಂಪಭಾ. ೨-೩೯ ವ). [ಸಂ.]

**ಬಾಲಾಭ್ಯಾಸ** (ನಾ). ಚಿಕ್ಕವಯಸ್ಸಿನಲ್ಲಿ ಮಾಡುವ ಸಾಧನೆ: ಬಾಲಾಭ್ಯಾಸವ ಮಾಡಹೋದರೆ ಎನ್ನ ಸುರಿಗೆ ಎನ್ನ ಸಟ್ಟಿತ್ತು ಎಂತಯ್ಯಾ ಕಲಿಯೊಡನೆ ಶ್ರವವ ಮಾಡುವೆನು (ಬಸವ. ೬೨೪). 'ಬಾಲಸಂಗಡ' ಪರಾ. [ಸಂ.]

**ಬಾಲಾರಿಷ್ಟ** (ನಾ). = ಬಾಲಗ್ರಹ. [ಸಂ.]

**ಬಾಲಾರ್ಕ, ಬಾಳಾರ್ಕ** (ನಾ). ಅದೇ ತಾನೆ ಹುಟ್ಟಿದ ಸೂರ್ಯ; ಉದಯರವಿ: ತದಂಗನಾಂಕತಲದೊಳ್ ಬಾಲಾರ್ಕನಂ ಪೋಲ್ತು ಭಾಸುರ ತೇಜೋಧಿಕನಪ್ಪ ಬಾಲಸನೊಜಲ್ದುಟ್ಟುರ್ತು ನೋಡುತ್ತಮಿರ್ದರುಮಂ ಮಾಣಮ . . . ಬಲಗೊಂಡು (ಅಂಕ. ೬-೪೪); ದಿನದೇವಿ ತಾಂ ಬಾಲಾರ್ಕಕಲಶದೀವಂಬಿಡಿದು ಹೊತ್ತರೆಯ ಹೊಸ್ತಿಲಂ ದಾಂಟುತಿರೆ, ಸೇರ್ದುದಾ ತೇರಯೋಧ್ಯೆಯ ನಾಡಿನೆಲ್ಲೆಯಂ (ಶ್ರೀರಾಮಾ. ೯೬-೯೯೬). **ಬಾಳಾರ್ಕ**: ಪೇಲಿಯ ತವಾಳವನವಮಂ ಕಾಳದ ಕಟ್ಟಲೆಯ ಗೆತ್ತು ಮುತ್ತಿರ್ದುವಕ್ಕುಂ ಬಾಳಾರ್ಕಬಿಂಬಶತಂ (ಮಲ್ಲಿಕಿ. ೦೨-೧೨೬). [ಸಂ.]

**ಬಾಲಾಶೋಕ** (ನಾ). ೧. ಎಳೆಯ ಅಶೋಕವೃಕ್ಷ. ೨. ತರುಣಿಯರಿಗುಂಟಾಗುವ ದುಃಖ; ಯುವತಿಯರಿಗಾಗುವ ಶೋಕ: ೧, ೨: ಬಾಲಾಶೋಕಂ ವಿಗ್ರಹಲೀಲೆ ರಜೋವಿಕೃತಿ . . . ಇಲ್ಲ ಬನದೊಳ್ಲದೆ ಜನದೊಳ್ (ಕೃಷ್ಣಕ. ೩-೨೮).
[ಸಂ. (ಬಾಲ+ಅಶೋಕ: ಬಾಲಾ+ಶೋಕ)]

**ಬಾಲಾಸು** (ನಾ). ಭಾರ ಹೇರುವುದಕ್ಕೆ ಮುಂಚೆ ಎತ್ತು, ಕುದುರೆ ಮುಂತಾದುವುಗಳ ಬೆನ್ನಿನ ಮೇಲೆ ಹಾಕುವ ಬಟ್ಟೆಯ ತಡಿ: ಒಳ್ಳೆ ಒಳ್ಳೆ ಎತ್ತುಗಳ ತಲಾಸು ಮಾಡಿಸಿ ಕವುದಿ, ಗೋಣಿ, ಬಿಗಿ, ಬಾಲಾಸು ಸಹಾ ತಯಾರು ಮಾಡಿಸಿ . . . ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿದರು (ರಾಕೇಂದ್ರ. ೬೬). [←ಪಾರ. ಬಾಲಾಸ್]

**ಬಾಲಿಕೆ, ಬಾಳಿಕೆ** (ನಾ). ೧. ಹುಡುಗಿ; ಬಾಲಕಿ: ಬಾಲಿಕೆ[ಪಾಠಾಂ. ಲಕಿ]ಮುಗ್ಧೆ ತಕ್ಕುದಜ್ಜಯಳ್ ಪಲರಂ ಪೆಱಗಿಕ್ಕಿ ಸೂಡಿದಳ್ ಮಾಲೆಯಂ (ಶಂಗಾಪು. ೬-೯೬). ೨. ಚಿಕ್ಕ ಗಾತ್ರದ ಏಲಕ್ಕಿ. ೩. ಉಸುಕು; ಮರಳು. ೪. ಶ್ರೇಷ್ಠವಾದ ನೆಲ್ಲಿಯ ಮರ: ರಾಯನೆಲ್ಲಿ; ಅರನೆಲ್ಲಿ (?): "ಅರನೆಲ್ಲಿ ಬಾಲಿಕೆ[ಪಾಠಾಂ. ಲಕಿ]ಯನಿಕ್ಕು" (ಮಂಗರಾ. ೬೬-೦೯). **ಬಾಳಿಕೆ**: ೧. ಶಿಖಂಡಿಯು ಕೇಳಿ ನಮ್ಮಾ ಮಾನ ಹೋಗುವು ದೆನುತ ರಾತ್ರಿಯಲಿ ಆಲಯುವ ಬೀಳ್ಕೊಂಡು ಗಹ್ವರದೊಳು ವನಕ್ಕೆ ತರಲು ತುಂಬುರು ಬಾಳಿಕೆಯ ಕಂಡಂದು ದುಗುಡವಿದೇನು ಹೇಳೆಂದ (ಸಂಭವ. ೦೩-೬೦). [ಸಂ. ಬಾಲಿಕಾ]

**ಬಾಲಿಶ** (ಗು). ೧. ಮಗುವಿಗೆ ಸಂಬಂಧಿಸಿದ; ಶಿಶುಸಹಜವಾದ; ಬಾಲಸ್ವಭಾವದ. ೨. ದಡ್ಡತನದ; ಜ್ಞಾನಹೀನವಾದ: ಹೀಗೆ ಸ್ಥಿರವಾಗಿ ಬಂದ ಬಾಲಿಶ ಭಾವನೆಗಳ ಪುಂಜವಾದ ಅಂತಃಕರಣವು ವ್ಯಕ್ತಿ ವ್ಯಕ್ತಿಗೂ . . . ಕಾಲಕಾಲಕ್ಕೂ ಬೇರೆಯಾಗುತ್ತದೆ (ಏಕಾಪಾ. ೩೦); ಮೊದಲು ಅರಿವು, ವಿಚಾರಶಕ್ತಿ ಎಂಬುದೇ ಇಲ್ಲ. ಕೇವಲ ಬಾಲಿಶ ಕಲ್ಪನೆ; ಒರಟು ತರ್ಕ (ಅಧ್ಯಕ್ಷ. XXIX ಪ್ರಸ್ತಾವನೆ). ೩. ಎಚ್ಚರಗೇಡಿಯಾದ; ಅಜಾಗರೂಕತನದ. ೪. ಮಕ್ಕಳಾಟಿಕೆಯ; ಹುಡುಗುತನದ. (ನಾ). ೫. ಮಗು; ಶಿಶು: "ಮಗುವಿನಪ್ಪೆಯುಂ ಬಾಲಿಶನೆಂಬುದು" (ಪಂಪಾಧ. ೦೬೪-೨೦); "ಬಾಲನೊಳ್ ಬಾಲಿಶನೆಂದೆಂಬುದು" (ಮಂಗರಾ. ೧೯೦-೦೦). ೬. ಮೂಢ; ತಿಳಿಗೇಡಿ; ಮೂರ್ಖ: ಅಜ್ಞಜನಂಗಳ್ ಬಾಲಿಶರೆಂದಜಿತರ್ ಪೇಳ್ಗುಂ (ಶಿಷ್ಟಪ್ರ. ೧-೪-೦೩೪); ಬಾಲಿಶರ ನುಡಿಗಳಿಂ ಮರುಳಾಗಿ ಸಂತತಿಯ ಕಾಲವಶಗೆಯ್ವಲೇಂ ಜೀಯ (ಸಂಕಾರಾ. ೬-೪-೨೦); ಬಾಲ ಬಾಲಿಶರು ಗುರುಪೀಠಗಳನೇರಿದರು (ಹುಚೋರ. ೩೪-೨೨). ೭. ಹುಡುಗಾಟ; ಮಕ್ಕಳಾಟ: ಎಸ್ಸ ಮೋಹನ್ನ ಪೊನ್ನ ಪಳುಕಿನ ಕೋಲ ಬಾಲಿಶವುಂ ನೋಡು (ರಾಷ್ಟ್ರಕ. ೦೬೦-೧೨). ೮. ದಿಂಬು; ಮೆತ್ತೆ. [ಸಂ.]

**ಬಾಲಿಶತೆ** (ನಾ). ದಡ್ಡತನ; ಮೂಢತೆ: ಜಗತಿಯುದ್ದಂಡ ರಣಪಂಡಿತ ಸುರೇಂದ್ರಸುತನಿಗೆ ಸಿಲುಕಿದೀ ರಾಜ್ಯ ತನಗೆಂತಪ್ಪಸಿತೆಂಬ ಬಗೆಯನರಿಯದೆ ಪೋದ ಬಾಲಿಶತೆಗೊಳಗಾದನುಪಕೃತಿಯನೆಣಿಸದಾದ (ಸಂಕಾರಾ. ೪-೦೪-೬). [ಸಂ. ಬಾಲಿಶತಾ]

**ಬಾಲಿಶತ್ವ** (ನಾ). = ಬಾಲಿಶತೆ: ಎಲೆ ಮೂಢ ಬಾಲಿಶತ್ವದ ನುಡಿಗಳು ಮನ ಬಂದ ತೆರದೊಳುಸಿರಿದೆ (ಸಂಕಾರಾ. ೬-೨೬-೬೬). [ಸಂ.]

**ಬಾಲು** (ನಾ). ರಬ್ಬರು, ಪ್ಲಾಸ್ಟಿಕ್ಕು ಮುಂತಾದುವುಗಳಿಂದ ಮಾಡಿದ ಆಟದ ಗುಂಡನೆಯ ವಸ್ತು; ಚೆಂಡು: ಬಾಲು ನಮ್ಮ ಗೋಲಿನ ಒಳಗೆ ಬಂದು ಬಿದ್ದಿತ್ತು (ಶಾಕಿಮು. ೬೬). [← ಇಂ. Ball]

**ಬಾಲೆ, ಬಾಳೆ** (ನಾ). ೧. (ಹದಿನಾರುವರ್ಷದ ಒಳಗಿನ) ಹುಡುಗಿ: ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೋಲ್ಯೆಯೆಂದೀತು ಧರಿತ್ರಿಯೊಳಪ್ಪರ್ ನಾಲ್ವರ್ ಕಾಂತೆಯರ್ (ಮದನ. ೬-೦): ಸರಿ ಬರಿಸ ವಿರಾಜಿಸಲಿ ಬಾಲೆ (ಬಸವ. ೩-೪). ೨. ಯುವತಿ; ತರುಣಿ: ಬಾಲೆಗೆ ಗುಣಕಾಂತಿ ವಯೋಲೀಲೆಗೆ ವಿನಯಪ್ರಧಾನಗುಣಗಣಗೆಣೆ ಭೂಪಾಲಂ (ಶಾಂತಿಪು. ೩-೦೩೩); ಬಾಲೆಯು ಕಡೆಗಣ್ಣೋಟವೆ ಸಾಲದೆ ಸನೆಗೆಣೆಗೆಳೀವುವು (ಶಂಗಾಪು. ೩-೪೪); ಕೇಳೆಲೆ ಬಾಲೆ! ಬಾಲೇಂದು ಫಾಲೆ! (ರಾಷ್ಟ್ರಕ. ೬-೦). ೩. ಮಗು; ಶಿಶು: ಬಾಲೇನ ತೊಟ್ಟಿಲಿಗೆ ಮಲಗಿಸಕ್ಕ ಮುಂಚೆ ಮೈಗೆ ಎಣ್ಣೆ ಹಚ್ಚಿದ ಅಂತಾ ಕಾಣ್ಣದೆ (ಮರಳು. ೯೬೦). ೪. ಒಂದು ಬಗೆಯ ಮಲ್ಲಿಗೆ. ೫. ಒಂದು ಬಗೆಯ ಸಸ್ಯ: "ಬಾಲೆ, ಸೊಟಗೆ, ಸೋಟಿಗೆ" (ನಸ್ಸಕ. ೯೯); ಸೊಟಗೆ, ಬಾಲೆ (ವೃಕ್ಷಶಿಗಿ. ೩೩-೧೦೬೩). ೬. ಸಣ್ಣ ಗಾತ್ರದ ಏಲಕ್ಕಿ. ೭. ಅರಿಸಿನ. ೮. ತೆಂಗಿನ ಕಾಯಿ. **ಬಾಳೆ**: ೨. ಕೇಳಿರ ಕಂಕಭಟ್ಟನೆ ಯುಧಿಷ್ಠಿರನಾ ವಲಲಂ ವೃಕೋದರಂ ಬಾಳೆಯರಂ ದಲಾಡಿಪ ಬೃಹಂದಳೆ ಫಲ್ಗುಣನಂ (ಸಂಭವ. ೯-೬); ತೋಳ ನಖವ್ರಣಕೆಳ ೧[ದ] ಬಾಳೆಗಳ್ ನೋಟ್ಟ ಬಾಳೆ ಕಣ್ಮೇನೆಂಬಾಳೋಳಮನೊಡರಿಸೆ ಸಲೆ ನೃಪಮಾಳೆಗೆ ಪಡೆದಳ್ ಮೃಗಾಕ್ಷಿ ಪರಿಸಂಭ್ರಮಮಂ (ಶಾಂತಿಪು. ೮-೯೩).
[ಸಂ. ಬಾಲಾ]

**ಬಾಲೆಮರ** (ನಾ). ಒಂದು ಬಗೆಯ ಮರ: "ಬಾಲೆಮರ, ಮಲ್ಲಲಿ, ಅಬನಾಸ, ಕರೀಮರ" (ನಸ್ಸಕ. ೩೦); (ವೃಕ್ಷಶಿಗಿ. ೫೦-೩೯೯). [ಬಾಲೆ+ಮರ]

**ಬಾಲೆವೆಣ್ಣು** (ನಾ). = ಬಾಲೆ ೨: ತೋಳೊಳೊಪ್ಪುವ ಸರ ತಾತಿ ಹೊಂಬಳೆಗಳ ಬಾಲೆವೆಣ್ಣುಗಳೈದಿದರು (ಸಂಶಪ. ೨೦-೦೬).
**ಬಾಲೆವೆಂಗಳು** (ಬಹುವ): ಹೊಸಹರೆಯದ ಹೊಮ್ಮಿನ ಬಾಲೆವೆಂಗಳು ಜಸವಡೆದೆಸೆದರೇನೆಂಬೆ (ಕುಸಾ. ೨೪-೪೦). [ಬಾಲೆ+ಪೆಣ್ಣು(<ಪೆಣ್)]

**ಬಾಲೇಂದು** (ನಾ). = ಬಾಲಚಂದ್ರ ೧: ಕೇಳೆಲೆ ಬಾಲೆ! ಬಾಲೇಂದು ಫಾಲೆ! (ರಾಷ್ಟ್ರಕ. ೬-೦). [ಸಂ.]

**ಬಾಲೇಂದುಗೆಱೆ** (ನಾ). [ಕಾಮಶಾ] ಬಾಲಚಂದ್ರನ ಆಕಾರದ ನಖಕ್ಷತದ ಗುರುತು; ಅರ್ಧಚಂದ್ರಾಕೃತಿಯ ನಖಕ್ಷತದ ಗುರುತು: ಒಪಳ ಗುರುಕುಚಯುಗಳದ ಪುಂಡ್ರೇಕ್ಷುಚಾಪ ಕಣ್ಣಟ್ಟು ನಿಟ್ಟಿಸಲು ಸ್ಥಾಪನವಡೆದಿರ್ದ ಬಾಲೇಂದುಗೆಱೆ ಸುಸ್ವರೂಪವಾಗಿರ್ದುದೇನೆಂಬೆ (ಸೋಹಚ. ೦೬-೩೦). [ಬಾಲೇಂದು+ಗೆಱೆ]

**ಬಾಲೇಂದುಧರ** (ನಾ). ಬಾಲಚಂದ್ರನನ್ನು ಧರಿಸಿದವನು; ಶಿವ: ಅಕ್ಕಟಿಂ ಬಾಲೇಂದುಧರನೊಳು ಪೊಕ್ಕು ಪೊಕ್ಕಲರ್ದಲರ್ದು ಕೂಡುತ ಸೊಕ್ಕಿ ತಲ್ಲಿಂಗದೊಳಗಿಂತು ವಿಲೀನನಾಗಿರ್ದು (ಚಾಕ. ೩೩-೪). [ಸಂ.]

**ಬಾಲೇಯ** (ಗು). ೧. ಬಲಿ ಕೊಡಲು ಯೋಗ್ಯವಾದ. ೨. ಮಕ್ಕಳಿಗೆ ಯೋಗ್ಯವಾದ, –ಉಚಿತವಾದ. ೩. ಕೋಮಲವಾದ; ಮೃದು

ವಾದ. (ನಾ). ೪. ಕತ್ತೆ : "ಬಾಲೇಯಮಾ ಗರ್ದಭಂ ಚಕ್ರೀವತ್ಸರಂ ರಾಸಭಮ ಕತ್ತೆಯಕ್ಕುಂ" (ಮಂಗರಾ. ೩೩-೬). [ಸಂ.]

**ಬಾಲೇಯಶಾಕ** (ನಾ). ಒಂದು ಬಗೆಯ ಸಸ್ಯ : "ಹಂಚಿಕಾ . . . ಬಾಲೇಯಶಾಕಃ, ಬರ್ಬರಃ, ವಂದಕಃ — ೯ ಭಾರಂಗೀ ಹೆಸರುಗಳು" (ಸಿದ್ಧಾಂತಿ. ೦೩೨). [ಸಂ.]

**ಬಾಲೋತ್ತರ** (ನಾ). "ಬಾಲಿಶನುಡಿ. ಹುಡುಗತನದ ಮಾತು" (ಬೋಳವಾ.ಸ. ೬೦೬) : ಹಸಿವ ಕೊಂದೆನೆಂದು ಘೃತ ಹಾಲು ಸಕ್ಕರೆ ಹಣ್ಣುಕಾಯಿ ಮುಂತಾದ ಫಲಾಹಾರವ ಕೊಂಡು ಫಲಕ್ಕೆ ಬಾಲಿವೆಂಜ ಬಾಲೋತ್ತರವ ನುಡಿದು ಬಾಲಹರಾದವೆಂಬ ಗೆಲ್ಲಗೂಳಿಗಳು ಕೇಳಿರೋ (ಬೋಳವಾ. ೩೭-೨೪೯). [ಸಂ.]

**ಬಾಲ್ಕನಿ** (ನಾ). ೧. ಮನೆಯ ಗೋಡೆಯಿಂದ ಮುಂಚಾಚಿಕೊಂಡು, ಕಂಬಗಳ ಆಧಾರದಿಂದ ನಿಂತಿರುವ (ಕಟಕಟೆಯುಳ್ಳ) ಭಾಗ : ರಾಮಕೃಷ್ಣ ಹಾಗು ಜಾನಕಿಯರು ತಮ್ಮ ಕೋಣೆಯ ಹೊರಗಿನ ಬಾಲ್ಕನಿಗೆ ಬರುವಾಗ ಅತ್ಯಂತ ಉಲ್ಲಸಿತ ಮನಃಸ್ಥಿತಿಯಲ್ಲಿದ್ದರು (ಅಕೋಲ. ೦೨೬); ರೇಣು ಅಲ್ಲಿಂದ ಮೇಲಕ್ಕೆದ್ದು ಬಾಲ್ಕನಿಯೆಡೆಗೆ ಸರಿದುಹೋದಳು (ಹೇಮಂತ. ೨೪೩). ೨. ಚಿತ್ರಮಂದಿರ ಅಥವಾ ನಾಟ್ಯಮಂದಿರಗಳಲ್ಲಿ ಪ್ರೇಕ್ಷಕರು ಕುಳಿತುಕೊಳ್ಳುವುದಕ್ಕಾಗಿ ನಿರ್ಮಿಸಿದ ಮೇಲಟ್ಟದ ಪ್ರದೇಶ : ಶ್ರೀಧರ ಬಾಲ್ಕನಿಗೆ ತಾನೇ ಟಿಕೇಟು ತೆಗೆದ (ದೂಪಿಶ್ಯ. ೦೦೬).

[←ಇಂ. Balcony]

**ಬಾಲ್ದಿ** 'ಬಾದಲಿ₁' ನೋ.

**ಬಾಲ್ಯ** (ನಾ). ೧. ಚಿಕ್ಕಂದು ; ಎಳವೆ ; ಶೈಶವ : ಚಕ್ರಿಗೆ ಬಾಲ್ಯಕ್ಕನು ರೂಪಕ್ರಮವಾಯ್ತೆನಿಸಿ ಮುಕ್ತಿಸುಡೆವಣಿಯಸಗುಂ (ಜಗಂ. ೩-೪೬); ಹುಟ್ಟಿದ ಒಂದು ವರ್ಷ ತೊಡಗಿ ಹದಿನಾರು ವರ್ಷ ಪರ್ಯಂತಕ್ಕೂ ಬಾಲ್ಯವೆನಿಸಿಕೊಂಬುದು(ಶಬ್ದ. ೦೩). ೨. ಹುಡುಗುತನದ ಅವಿವೇಕ : ಮೂರ್ಖತನ. ೩. ವಿನಯ ; ನಮ್ರತೆ. [ಸಂ.]

**ಬಾಲ್ಯವಿನೋದ** (ನಾ). =ಬಾಲಕೇಲಿ ೧ : ಭುವದೀಯಮನೋಹರಬಾಲ್ಯ ವಿನೋದಾಮೃತದೊಳೆಯ್ದೆ ತೀವಿದ ಮತ್ಸ್ವಾಂತವನಿಂತೀ ವಿಷದಿಂ ತೀವುವುದೇ ಶ್ರೀವತ್ಸವತ್ಸಪತ್ನಾ (ಜಗಂ. ೩-೯೨). [ಸಂ.]

**ಬಾಲ್ಯವಿವಾಹ** (ನಾ). ಎಳೆಯ ವಯಸ್ಸಿನಲ್ಲಿ ಮಾಡುವ ಮದುವೆ ; ವಯಸ್ಸಿಗೆ ಬರುವ ಮುನ್ನವೇ ಮಾಡುವ ಮದುವೆ : ಹಿಂದೆ ಬಾಲ್ಯವಿವಾಹಗಳು ನಡೆಯುತ್ತಿರಲಿಲ್ಲ (ಕಾರಂ. ೩೯೦); ಬಾಲ್ಯವಿವಾಹ ಒಳ್ಳೆಯದಲ್ಲ (ಶಿಶು. ೬೪). [ಸಂ.]

**ಬಾಲ್ಯಾವಸ್ಥೆ** (ನಾ). ೧. ಚಿಕ್ಕಂದು; ಬಾಲ್ಯಕಾಲ : ಬಾಲ್ಯಾವಸ್ಥೆಯ ಪ್ರಾರಂಭದ ಹೊತ್ತಿಗೆ ಜ್ಞಾಪಕಶಕ್ತಿ ತಕ್ಕಮಟ್ಟಿಗೆ ಬೆಳೆದಿರುತ್ತದೆ (ಶಂಶೋ. XII, ೭೬). ೨. ಪ್ರಾರಂಭದ ಹಂತ,-ಸ್ಥಿತಿ : ಈ ಸಂಘದ ಕಾರ್ಯಯೋಜನೆಗಳು ಇನ್ನೂ ಬಾಲ್ಯಾವಸ್ಥೆಯಲ್ಲಿವೆ (ಬೂ).

[ ಸಂ. ಬಾಲ್ಯಾವಸ್ಥಾ ]

**ಬಾವ** 'ಭಾವ₁' ನೋ.

**ಬಾವಂಚಿ** 'ಬಾಗುಜಿ' ನೋ.

**ಬಾವಂಜಿ** 'ಬಾಗುಜಿ' ನೋ.

**ಬಾವಂತಿ** 'ಭವಂತಿ' ನೋ.

**ಬಾವಟೆ** 'ಬಾವುಟ' ನೋ.

**ಬಾವಡಿ** (ನಾ). ಸೋಪಾನವುಳ್ಳ ಅಗಲವಾದ ಬಾವಿ ; ಹೊಕ್ಕರಣೆ ; ಪುಷ್ಕರಿಣಿ : 'ಬಾವಡಿದಸವಂದ' ಪರಾ.

[ ←ಹಿಂ. ಮರಾ. ಬಾವಡೀ, ಬಾವಲೀ ]

**ಬಾವಡಿದಸವಂದ** (ನಾ). "ಬಾವಿ, ಕೊಳ ಮುಂತಾದವನ್ನು ಅಗೆಯಿಸುವ ಹಾಗು ಅವುಗಳನ್ನು ನಡೆಸಿಕೊಂಡು ಹೋಗುವ ಕಾರ್ಯಕ್ಕಾಗಿ ಕೊಡಲಾಗುತ್ತಿದ್ದ ದ್ರವ್ಯಾದಾಯ" (ಕಶಂಗ್ರಾ. ೯೨). 'ದಶಬಂಧ' ಪರಾ. [ ಬಾವಡಿ + ದಸವಂದ (<ದಶಬಂಧ) ]

**ಬಾವಡೆ** (ನಾ). ಮಣ್ಣಿನ ಮುಚ್ಚಳ : ಶಿಮ್ಮ ಒಂದು ಬಾವಡೆಯಲ್ಲಿ ಗಂಜಿಯನ್ನು ಎತ್ತಿಕೊಂಡು ಹೊರಗೆ ಬರುತ್ತಾನೆ (ಚೋಮನ. ೬೨).

[ ←ತುಳು. ಬಾವಡೆ ]

**ಬಾವಣಯ್ಯ** (ನಾ). ಒಬ್ಬಾತನ ಹೆಸರು : ಬರೆದಂ ಬಾವಣಯ್ಯಂ (ಎಕ. I. ೨೬-೮೭ ; ೯೪೪). [ ? + ಅಯ್ಯ₁ ]

**ಬಾವಣಿಕೆ** (ನಾ). ಆದರ ; ಗೌರವ : ಬಾವಣಿಕೆಯಿಲ್ಲದ ನೆಂಟರ ಮನೆಗೆ ಹೋಗಬಾರದು (ಬೂ). [< ಭಾವನ್ನ]

**ಬಾವಣಿಸು** (ಕ್ರಿ). ಆದರಿಸು ; ಗೌರವಿಸು : ಇಂಕರನಾದರೂ ಬಾವಣಿಸ ಬೇಕಲ್ಲ ನನ್ನ ಮಾತಾ ? (ನಲೆಮಂ. ೦೭). [ಬಾವಣಿಕೆ + —ಇಸು₁]

**ಬಾವನಂಟ** (ನಾ). ಸೋದರಿಯ ಗಂಡ ; ಭಾವ : ಬಾವನಂಟ ಬಂದಾಗಲೂ ಹಾಲು ಚೆಲ್ಲೋದು ಬಿಡಲಿಲ್ಲ (ಗಾರೆ).

[ಬಾವ (< ಭಾವ₁) + ನಂಟ]

**ಬಾವನ್ನ₁** (ನಾ). ಒಂದು ಸಂಖ್ಯೆ ; ಐವತ್ತೆರಡು : ಶಿಳಿವುದಜಯಿತಾಂ ಬಿಕಿಯ ಬಾವನ್ನಾದಿ ಸಂಜ್ಞೆಯಿಂದೆನುತಲಾಕೃತಿಯಿಂಗಡೊಳು . . . ಅವ ರ್ಗಳು ಯೋಚಿಸಲು ಬಾವನ್ನ ತತ್ವಳಾರೂಪರಹರ್ (ಶೀಶ್ರೆಪು. ೭-೬-೦೭). ಬಾವನ್ನಮೂರ್ತಿ = ಶಿವನ ಐವತ್ತೆರಡು ಮೂರ್ತಿಗಳು : ಸೃಷ್ಟಿಗಳ ನವಿನಯದ ಬಾವನ್ನಮೂರ್ತಿಗಳ ಭೇದಮಂ ನಂಜುಂಡಮೂರ್ತಿ ನೋಡ ವಿವರಿಸಿದನಾ ಹಲಗೆಯಾರ್ಯನು (ಶೀಶ್ರೆಪು. ೦-೬-೯೯). P ಸಾದಾಖ್ಯಗಳು ೫, ಶಿವನ ಅಷ್ಟತನುವಿನ ಅಧಿದೈವಗಳು ೮, ಶಿವನ ಲೀಲಾ ಮೂರ್ತಿಗಳು ೨೫, ರುದ್ರರು ೧೧. ಅವಯವಮೂರ್ತಿಗಳು ೩-ಹೀಗೆ ೫೨ ಕಲೆಗಳು ಅಥವಾ ಮೂರ್ತಿಕಲೆಗಳೆಂದು ವಿಶೈಷ್ಯ. ೧-೬-೪೪ರಲ್ಲಿ ಹೇಳಿದೆ. ಬಾವನ್ನರು = "ಬುದ್ಧಿಶಾಲಿಗಳು, ವೀರರು" (ಶವಂ. ಕೋಶ. ೯೯೩) : ಕಣ್ಣಾರೆ ಕಂಡೆ ನಾ . . . ಅಘಪರರೂಪಾಗಿ ಅಗಣಿತವಹ ಘನಮಹಿಮಾರನು ಬಗೆಗೊಳ್ಳದೆ ಬಾವನ್ನರ ಸಂಗವನೊಗೆದು ಈಡಾಡುವ ಓಜೆಪಂತರನು (ಶವಂ. ೦೩೩-೬೮೫); "ಐವತ್ತೆರಡು ಅಕ್ಷರ ಗಳು" (ಶವಂ. ಪ್ರಾ.ಬ್ಯಾ. ೯೨೬).

[ < ಪ್ರಾ. ಬಾವನ್ನ. ಬಾವಣ್ಣ. / ಹಿಂ. ಬಾವನ : ಮರಾ. ಬಾವನ. ಬಾವನ್ನ]

**ಬಾವನ್ನ₂** (ನಾ). (ಉತ್ತಮಬಗೆಯ) ಚಂದನ : ಶ್ರೀಗಂಧ : "ಸಿರಿಕಂಡಮೆಂದುಂ, ಬಾವನ್ನಮೆಂದುಂ ಮಲಯಜಂ" (ಕಶಾ. ೩೦-೬೦) ; ಬಾವನ್ನದ ವೃಕ್ಷ ಊರೊಳಗಿದ್ದಡೇನು ಅಡವಿಯೊಳಗಿದ್ದಡೇನು ಪರಿಮಳ ವೊಂದೆ (ಶಪ್ರವ. ೯. ೯೬-೦೦೬) ; ಜಾತಿಬಾವನ್ನದಲಿ ಸರ್ಪದ ಭೀತಿ ಸತ್ಪುರುಷರಿಗೆ ದುರ್ಜನಭೀತಿ (ಕುಮ್ಮಾ. ೬-೯೯).

[ ← ಮರಾ. ಬಾವನ್ನ. ಬಾಪನ. ಬಾವನಾ]

**ಬಾವನ್ನವೀರ** (ನಾ). ೧. ಐವತ್ತೆರಡು ಸಂಖ್ಯೆಗಳಿರುವ ದೇವತೆಗಳ ಒಂದು ಗುಂಪು,-ದೇವತಾಸಮೂಹ. ೨. ಮಹಾವೀರ ; ಪರಾಕ್ರಮಿ : ಅಪ್ಪಾದಶಪಟ್ಟಣಾಧಿಷ್ಠಿತ ಪಂಚಮಟ್ಟಗಾದಿ ಬಾವನ್ನ ವೀರಂ ಶಾಸನಪಟ್ಟಸಾಲಿಗಪಮಯಮುದಿತಲಲಾಟಪಟ್ಟಂ ವೈರಿಘರಟ್ಟಂ (ಸೌಇಇ. IX-i. ೭೮-೯೨: 1045) ; ಏಂದೊರೆಯಸ್ಸಿರ್ಣೆಡಿಂಬದ ನಾಡೆಯ ಬಾವನ್ನವೀರರೊಳ್ಮೆಚ್ಚರದಿಂ ಕಾದುವನಾರ್ (ಶಾಶ. ೯೭-v-೩೩ ; 12ನೆಯ ಶತ) ; ಬಾವನ್ನವೀರ ಕಂಸನ ಕಡುಗೈಗೇಳಿದಾ ವಸುಧಾಮಂಡಲದ ಚಾವಡ ಚಾವಡಿಯೊಳಗುಳ್ಳ ವೀರಭಟಾವಳಿ ಬಂದು ಸೇರಿದುದು (ನೇಮಿಸಂ. ೦೪-೨).

[← ಹಿಂ. ಬಾವನಬೀರ ; ಮರಾ. ಬಾವನ್ನವೀರ ]

**ಬಾವರಿ** (ನಾ). [ಜೈನ] (ದುಂಬಿಯು ಮಧುವಿನ ಸಂಗ್ರಹಕ್ಕಾಗಿ ಹೂಗಳನ್ನು ಹುಡುಕಿಕೊಂಡು ಸುತ್ತುವಂತೆ) ಜೈನಮುನಿಗಳು ಭಿಕ್ಷೆಗಾಗಿ ಶ್ರಾವಕರ ಮನೆಗಳನ್ನು ಕುರಿತು ಹೋಗುವುದು ; ಚರಿಗೆ ಹೋಗುವುದು: ಮಾಧುಕರಿ : ಜಿನಮುನಿಚರ್ಯಾಯೋಗ್ಯಮಲ್ಲದ ಕಾಲದೊಳ್ ಭಾ[ಬಾ]ವರಿಯಂ ನೋಡಿ ತಾಂ ಭೋಜನಮಂ ಮಾಡ್ದು ಕಾಲಾತಿಕ್ರಮಮುಮಂ (ಕಕ್ಕ್ವ್ಕ್ರ. ೨೯೯) ; ಜನಮೆ ಜನಕ್ಕೆ ಬಾವರಿಗೆ ಬಂದಪ್ಪೊಲಾಮುದು ತಂಡತಂಡದಿಂ . . . ಸಾಧುಜನಸಂಗಮಮಾಗಮನಪ್ರಪಂಚದೊಳ್ (ಆಪಂಪು. ೩-೩೧) ; ಅರಸನಸುಜ್ಞಾನಿಯಿಂದರಸಿ . . . ಯತಿಗಳ್ಗೆ ನಮೋಸ್ತು ಗೆಯ್ದು ಬಾವರಿಯನೊಡರ್ಚವೇಟ್ಕುಮೆನೆ (ಧನ್ಯಕು. ೯-೬).

[ < ಸಂ. ಭ್ರಾಮರೀ ]

**ಬಾವರಿಗೊಡು** (ಕ್ರಿ). ಚರಿಗೆಗಾಗಿ ಹೊರಡು ; ಮಾಧುಕರಿವೃತ್ತಿ ಮಾಡು: ಆ ಸುರವಂದಿತ ಕೈಯೆತ್ತಿ ನಾನಾದೇಶಗಳಲ್ಲಿ ವಿಹರಿಸಿ ಕೌಶಂಬಿಪುರಕೆ ಭಾ[ಬಾ]ವ[ಪಾಠಾಂ. ಭವಾ]ರಿಗೊಟ್ಟು ವೃಷಭದತ್ತಸೆಟ್ಟಿ ಮನೆಯೊಳಗಿರ್ದ (ವರ್ಧಪು. ೧೧-೬೩). [ಬಾವರಿ + ಕೊಡು₁]

**ಬಾವರಿಯಿಡು** (ಕ್ರಿ). = ಬಾವರಿಗೊಡು : ಸಾಗರದತ್ತಮುನಿಗಳು ಲೋಕವಂದ್ಯರು ಭಿಕ್ಷೆಗೆಂದು ಆ ಕೇರಿಯೊಳು ಬಾವರಿಯಿಡಲ್ (ಜೀವಂಧಸಾಂ. ೬-೨೦). [ಬಾವರಿ + ಇಡು₁]

**ಬಾವರಿವುಗು** (ಕ್ರಿ). = ಬಾವರಿಗೊಡು : ನಿಮ್ಮ ತಂದೆವಿರ್ . . . ಪೊಟಲೊಳಗೆ ಚರಿಗೆವೊಕ್ಕು ಬಾವರಿವುಗುತ್ತು[ಪಾಠಾಂ. ತಿರಿಯುತ್ತುಂ, ತಿರುಗುತ್ತುಂ] ಬಂದು ನಿಮ್ಮ ಮನೆಯಂ ಪೊಕ್ಕು ಪೂಜಿಮುಟ್ಟು ಪೋದರ್ (ವಡ್ಡಾರಾ. ೧೬-೨೯). [ಬಾವರಿ + ಪುಗು (< ಪೊಗು)]

**ಬಾವಲ್** 'ವಾವಲ್' ನೋ.

**ಬಾವಲಿ₁** 'ವಾವಲ್' ನೋ.

**ಬಾವಲಿ₂** 'ಬಾವುಲಿ₂' ನೋ.

**ಬಾವಲಿ₃** (ನಾ). ಒಂದು ಬಗೆಯ ತೆರಿಗೆ : ಹರುಗೋಲ ಹಣ ಬಾವಲಿ ಬಿಣಾಡ . . . ಸರ್ವಬಾಧೆ ಪರಿಹಾರಕ್ಕೆ ಗದ್ಯಾಣ ಗ ೧೧ ವರಹ (ಮೈಆಇ. ೦೯೩೪, ೨೭-೨೨; 1430). [?]

**ಬಾವಲು** 'ವಾವಲ್' ನೋ.

**ಬಾವಾ** (ನಾ). ಊರೂರು ಅಲೆಯುವ ಜಟಾಧಾರಿಯಾದ ಜೋಗಿ.– ಬೈರಾಗಿ : ಈ ಬುಕಗಳ ಉಪಯೋಗವನ್ನು ಭಿಕ್ಷುಕರು ಬಾವಾ ಬೈರಾಗಿಗಳು ಇನ್ನೂ ಮಾಡಿಕೊಳ್ಳುತ್ತಾರೆ (ಹಮ್ಮಿ. ೯) ; ಮುಂದ ಹೋಗುವಾಗ ಒಬ್ಬ ಬಾವಾ ಭೆಟ್ಟಿ ಆದನಂತ (ಅಮಿ. ೯೬). [←ಮರಾ. ಬಾವಾ]

**ಬಾವಾಜಿ** (ನಾ). = ಬಾವಾ : ನಾನು ಅನೇಕ ಸಲ . . . ಭಿಕ್ಷುಕರನ್ನು ಬಾವಾಜಿಗಳನ್ನು ನೋಡಿದ್ದೇನೆ (ಗಾಳಿಗು ೬೩); ಬಾವಾಜಿಗಳಂತೆ ಜಟಾಧಾರಿಯಾದೆನು (ಅಂಬುಮು. ೬೨). [←ಮರಾ. ಬಾವಾಜೀ]

**ಬಾವಿ, ಭಾವಿ₁, ವಾವಿ₁** (ನಾ). ಭೂಮಿಯ ಒಳಗಿರುವ ನೀರನ್ನು ತೆಗೆದುಕೊಳ್ಳುವುದಕ್ಕಾಗಿ ಅಗೆದು ಮಾಡಿದ ಕೂಪ : "ಅಂಧುಃ, ಕೂಪಃ—ಈ ೨ ಬಾವಿ" (ಹಲಾಯು. ೨೧೩-೬೨) ; ನೀರಂ ತರಲ್ಕೆಂದು ಬಾವಿಗೆವೋದಾಕೆಯುಂ ಕಂಡರಸನಲೆ ಕೂಸೆ ನೀರಂ ಕುಡಿಯಲೆಳ್ಸಿಯಾ ಎಂದೊಡೆ (ವಡ್ಡಾರಾ. ೧೧೦-೨೩) ; ರಸರಸದ ಬಾವಿ ಮನೆಮನೆಗೆ ಬೇಟಿ ಕಿಸುಗಲ್ಗಳ ರಜದ ಕಣಿವೆರಸು ತೋಟ (ಶಂಕರಸಾ. ೯-೧೦); ಮಟಿಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರಸಡಕ ನೀರ್ವೊಯ್ದಂ (ಶಂಕಸಾ. ೦೨೬-೨). **ಭಾವಿ₁** : ಅನುರಾಧ ಭಾನು . . . ಉತ್ತರೆಯೆಂಬ ನಿತಟಿಳೊಳಂ ವಿಧಿಯಿಂ ವರುಣನನರ್ಚಿಸಿ ಭಾವಿ ತೋಡೆ ಶುಭಮಂ ಮಾಳ್ಕುಂ (ಲೋಕೋಪ. ೩-೨); ಎಲ್ಲೆಡೆಯೊಳಂ . . . ಮಟಿ ಸುರಿದೊಡಂ ನೀರ್ ಪುಣ್ಯಮಿಲ್ಲದ ಸ್ಥಾನಮಂ ಪರಿಹರಿಸಿ ಬಂದು ತೊಟಿ ಕೆಟಿ ಭಾವಿಗಳೊಳ್ ತೀವುವಂತೆ (ಧರ್ಮಾಮೃ. ೩-೦೨೬). **ವಾವಿ₁** : ವಾವಿಯುಂ ಬಡಗ ತೋಂಟ ೧ (ಕೌಇ. IX–i, ೨೦೦-೩೦ ; 1125).

**ಬಾವಿ ಮುಟ್ಟುವದು** = ಬಾಣಂತಿಯು ಹತ್ತು ದಿನ ಕಳೆದ ಮೇಲೆ ಮೈಲಿಗೆಯನ್ನು ಕಳೆಯುವುದಕ್ಕಾಗಿ. ಊರಿನ ಬಾವಿಯ ಕಟ್ಟೆಯ ಬಳಿಗೆ ಹೋಗಿ ಗಂಗೆಯ ಪೂಜೆ ಮಾಡುವುದು : "ಹಡೆದ ಮೇಲೆ ಬಾಣತಿಯು ಗಂಗೆಯ ಪೂಜಿಸುವದು" (ಜಾನಕೋ. ೨೨). **ಬಾವಿ ಮೆಟ್ಟುವದು** = ಬಾವಿ ಮುಟ್ಟುವುದು: "ಹಡೆದ ಮೇಲೆ ಬಾಣತಿಯು ಗಂಗೆಯ ಪೂಜಿಸುವದು" (ಜಾನಕೋ. ೨೨). 'ಪ್ರೊಟಿ ಮೆಟ್ಟು' ಪರಾ. [<ಸಂ. ವಾಪಿ]

**ಬಾವಿಗಪ್ಪು** (ನಾ). (ಆನೆಯನ್ನು ಹಿಡಿಯಲು ತೋಡುವ) ಆಳವಾದ ಕುಳಿ ; ಬಾವಿಯಂತಹ ಹಳ್ಳ : ತೆರೆದ ಬಿಂಬಾಧರವು ನೃಪಮಂತಿಯ ಗಜಗತಿಗೆ ಸತಿಯಾಗವ ಬಾವಿಗಪ್ಪಿನ ಕಾವಿಮಣ್ಣಾಗೆ (ಶ್ರೀಲಾವಪ. ೬೮-೩೯೬).

[ಬಾವಿ + ಕಪ್ಪು₃]

**ಬಾವಿಗೆ** (ನಾ). = ಬಾವಿ : 'ಪಟಿವಾವಿಗೆ' ಪರಾ. [<ಸಂ. ವಾಪಿಕಾ]

**ಬಾವಿದೋಡು** (ಕ್ರಿ). ಬಾವಿಯನ್ನು ಅಗೆ : ಕಿಚ್ಚಟ್ಟಿದ್ದ ಬಟಿಕ ನಂದಿಸ ಲಚ್ಚಗದು ಬಾವಿದೋಡುವಂತಿರೆ ಕಣ್ಣಾಂ ಮುಚ್ಚಿ ಜಪಿಯಿಸುವ ರಾಘವ ನೆಚ್ಚಂಬು ಕಾಯಲಾರ್ಪುವೇ ದೇವತೆಗಳ್ (ಪಂಪರಾಮ. ೦೪-೧೧೧).

[ಬಾವಿ + ತೋಡು₁]

**ಬಾವು** (ನಾ). ೧. (ಪೆಟ್ಟು, ಖಾಯಿಲೆ ಮುಂತಾದುವುಗಳಿಂದ ಉಂಟಾಗುವ) ಊತ : ಉಬ್ಬು ; ಶೋಫ : ತಗರಂ ಕೊಕ್ಕಳಿ . . . ಹರಿದ್ರಾದ್ವಂದ್ವಮಿವಾ ಪೇಟ್ಟ ಮರ್ದುಗಳಂ ಪುತ್ತಿಸ ಮಣ್ಣುಮಂ ಕದಡಿ ಕಾಸಿಟ್ಟಿದ್ದ ಪೊಯ್ಯಾವ ಬಾವುಗಳುಂ ತೀರ್ಗುಗುಂ (ಲೋಕೋಪ. ೯-೨೪೦); ನೊಸಲ ಬಿಸಿಗಣ್ಣನೇಚಿಂದು ಶಿವಲಿಂಗಮಂ ಮುಸುಕಿ ಬೆಳೆದುತ್ತಮಾಗ ಪಸು ಬಾವೆಂ[ಪಾಠಾಂ. ಹೇ]ದು . . . ರಂಕಿಸಿ ನೋಡಲಮ್ಮದೊಯ್ಯನೆ ದೂರದಿಂದೆ ದೀವಿಗೆವಿಡಿದು ದಿಟ್ಟಿಸಿವರು (ಸಿದ್ಧರಾ. ೨-೪). ೨. ಹುಣ್ಣು ; ಕುರು : ವ್ರಣ : ಪಿರಿಯದು ದೋಷಮಿಲ್ಲದತಿನಿರ್ಮಲಮಪ್ಪುದುಮಂ ಜಲೂಕನೋಗಡಿಸದೆ ಬಾವು ತರ್ದು ತುಚಿಮುಳ್ಳ ತ್ರಿದೋಷದ ಪಾಣಮಂ ಕರಂ ಪಿಡಿವುದು (ಜೀವಸಂ. ಕಾ. ೦. ೨೩೯-೦೧); ನಾರುಬೇಳೆಸೊಪ್ಪು, ಕಕ್ಕೆಯ ತಿಗುಡು, ನವಣೆಅಕ್ಕಿ ಇವಂ ಅಕ್ಕಿಗಟ್ಟನಲ್ಲಿ ಅರೆದು ಪೂಸೆ ಬಾವು ಮಾಣ್ಗುಂ (ಏಕ್ಕಿ. ೬೬). 'ಬಾಮ್ಮ' ಪರಾ. [ಬ್ಯಾ₁ + –ವು]

**ಬಾವುಂಜಿಗೆ** 'ಬಾವುಜಿಗೆ' ನೋ.

**ಬಾವುಗ** (ನಾ). ಗಂಡುಬೆಕ್ಕು ; ಗಡವಬೆಕ್ಕು : ಬಲುಕಾಲ ಮುದ್ದಿಸಿ ಕಲಿಸಿ ಮಾತುಗಳ ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು (ಭುರಂದ. ೯-೦೯೩-೯) ; ಮುಳಿಗೆ ಹಂದರ ಹೊಲ್ಲ ಗಿಳಿಗೆ ಬಾವುಗ ಹೊಲ್ಲ (ಸರ್ವಜ್ಞ. ೦೪೧೬).

[ದೇ.॥ ತೆಲು. ಬಾವುರು, ಬಾವುರುಗಾಂಡು, ಬಾವುರುಗಾಡು, ಬಾವುರು ಪಿಲ್ಲಿ, ಬಾವುರಂಪಿಲ್ಲಿ ; ಪರ್ಜಿ. ಬಾವ್ಕಿ ; ಕುಇ. ಬಾಬಡಿ, ಬಾಬಲ್ಲಿ ; ಮರಾ. ಬಾವಗಾ]

**ಬಾವುಜಿ** 'ಬಾಗುಜಿ' ನೋ.

**ಬಾವುಜಿಗೆ, ಬಾವುಂಜಿಗೆ. ಬಾಹುಜಿಗೆ** (ನಾ). ಒಂದು ಬಗೆಯ ಸಸ್ಯ : ಕಾಡುಜೀರಿಗೆ : "ವಾಕುಚೀ—ಸೋಮವಲ್ಲಿ. ಬಾವುಜಿಗೆ" (೬ಶಂ. ೦೩೦); ಅವಿಸಲೆಯೊಳ್ ಚಗಚ್ಚೆಯ ಬಾವುಜಿಗೆಯ ಬಿತ್ತನಲ್ಲಿ ನಿಶೆಗಂಧಕಮೆಂಬೀ ವಸ್ತುವನರೆದೊಂದಿರೆ ಲೇಪಿ(ಪಿ)ಸಿದೊಡೆ ಚಿಬ್ಬನುರ್ಬು ಪರ್ಬದೆ ಕಿಡುಗುಂ (ಲೋಕೋಪ. ೯-೦೦೨) ; ರಜನಿ ಸುದಾರ್ವಿ ಬಾವುಜಿಗೆ ಬೇವಿನ ಬಿತ್ತು . . . ನಿಜದೆ ಸಮಾನಮಾಗರೆದು ಲೇಪಿಸೆ . . . ಉಗ್ರವಿಷಂ ಪರೆಗುಂ (ಖಮದ. ೦೪-೦೪). **ಬಾವುಂಜಿಗೆ** : "ಅವಲ್ಗುಜಃ, ಸೋಮರಾಜೀ . . . ಪೂತಿಫಲೀ—ಈ ೮ ಬಾವುಜಿಗೆ" (ಪಾಠಾರಾ. ೦೦೯). **ಬಾಹುಜಿಗೆ** :

"ಅವಲ್ಗುಜ . . . ಪೂತಿಫಲೀ—ಆ ಬಾಹುಜಿಗೆಯು ಪೆಸರುಗಳು" (ಸಿದ್ಧಾಂತ. ೦೩೩). [ < ಬಾವುಜಿ ]

**ಬಾವುಟ**. ಬಾವಟೆ. ಬಾವುಟೆ (ನಾ). ಧ್ವಜ : ಪತಾಕೆ ; ನಿಶಾನೆ : ಏರಿಸಿ, ಹಾರಿಸಿ ಕನ್ನಡದ ಬಾವುಟ (ಕಕ್ಕಸಾ. viii ಕ್ರಿಸ್ತಾಬ್ದ) : ಎತ್ತಿ ಕಟ್ಟಿದ ಬಾವುಟಗಳು ಪಟಪಟನೆ ಹಾರುತ್ತಿದ್ದವು (ಕಕಾಕ. ೦೩). **ಬಾವಟೆ** : ಛಾರಿಂಗಾಳಿಯ ಬಾವಟೆ ಹಾರೆ, ಮೊಳಗಿಸಿ ಮಿಂಚು ಬೆಳಗಿಸಿ, ತೇರ ನಡೆಯಿಸಿ ಸರಿವೆನ್ನ (ಕಒಕ್ತ. ೩೦-೧೧). **ಬಾವುಟೆ** : ಎದುರಿಗೆ ನೋಡು ರಾಠೋರ ಸೇನಾಪತಿಯ ಕೆಂಪುಬಾವುಟೆಯು ಕಾಣುತ್ತದೆ (ಕಶಿಒಮೊ. ೪೦). [ ← ಮರಾ. ಬಾವಟಾ. ಬಾವಹಟಾ, ಬಾಹುಟಾ]

**ಬಾವುಟೆ** 'ಬಾವುಟ' ನೋ.

**ಬಾವುದಿವಸ** (ನಾ). "ಬಲಿ ಕೊಡುವ ದಿವಸ—ವ್ರತದ ಪಾರಣೆ ದಿನ" (ಜಚನಂ. ಕೋಶ) : ಅಷ್ಟೋಪವಾಸಸಮರ್ಥಾಷ್ಟಮಿಯೆಂಬಿನ ವಷ್ಟಮಿಯ ಬಾ[ಪಾಠಾಂ. ನಾ]ವುದಿವಸಮಂ ನೋಂತೀವೆ ಜ್ಯೇಷ್ಠಪುತ್ರಕನೆ ಬಿಸುಡಿದಂ (ಜಚನಂ. ೨೩೨-೩೨). [ಬಾವು₁ + ದಿವಸ]

**ಬಾವುದೆವಸ** (ನಾ). = ಬಾವುದಿವಸ : ನಾಳೆ ಬಾವುದೆವಸ[ಪಾಠಾಂ. ಬಾವದಿವಸ, ಬಾಯುದೆವಸ, ಬಾಲುದೇವಸ]ದೊಳ್ ದೇವತೆಗೆ ಪರಕೆಗುಡುವ ವಿಭಾತನನಿಂದಿನ ದೆವಸಂ ಕಾದಿರಿಂ (ಜಚನಂ. ೩೬-೩೬೩). [ಬಾವು₁ + ದೆವಸ]

**ಬಾವುಲಿ₁** 'ವಾವಲ್' ನೋ.

**ಬಾವುಲಿ₂**, ಬಾವಲಿ₂, ಬಾಹುಲಿ (ನಾ). ೧. ಕಾಲಿನ ಒಂದು ಆಭರಣ ; ಕಾಲ್ಗಡಗ ; ಪೆಂಡೆಯ : ಪಗಲ ಕೈದೀವಿಗೆಯ ಕಾಲ ಹಾಹೆಯ ಮೊತ್ತದ ಬಾವುಲಿಯ ಮಾಲೆದೊಡರ ಮಾಸಾಳ್ಗಳ ಮಂತಣದೊಳಂ (ಗಂಕ. ೨-೦೦೫ ವ) ; ಚರಣದ ತೊಡರ ಮೊಳಗಿನ ಬಾವುಲಿಗಳಲಿ ಘಣಘಣಧ್ವನಿಯ ನಿಡಿಯೊಡಲ . . . ದಾನವನವನ ಹೆಜ್ಜೆಗೆ ನೆಗ್ಗಲ್ಕೆ ತಂದ (ಕುಮ್ಮಾರಾಮ. ೦೩-೪೧) : ಕಾಲಲಿ ಕಿರುಗೆಜ್ಜೆ ನೀಲದ ಬಾವುಲಿ (ಪುರಂದ. ೦-೦೧೦-೩). ೨. ಕಿವಿಯ ಒಂದು ಆಭರಣ; ಕಿವಿಯ ಹಾಲೆಯ ಮೇಲುಭಾಗದಲ್ಲಿ ನೇತಾಡುವಂತೆ ಇಟ್ಟುಕೊಳ್ಳುವ ಮುತ್ತು, ಹರಳುಗಳನ್ನು ಜೋಡಿಸಿದ ಉಂಗುರದಂತಿರುವ ಚಿನ್ನದ ಆಭರಣ : ಮೌಕ್ತಿಕಗಳ ಪುಡಿವಲೆ ಮೆಱೆವ ಬಾವುಲಿಯ ನಿಡುಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಪೆಡಗಾಗಿ ಮೆಱೆವರಶಿಯಲಿ (ಕಂಕಶ. ೨೪-೯೨) : ಕಿವಿಯೊಳ್ ಮಾತನಾಡುವವೊಲಂತ ನವಿಲು ಗಿಣಿ ಬಾವುಲಿ ಗಳನ್ನಿಟ್ಟು (ಶಿಗಿಂಂ. ೨೦೦-೬) : ಕಿವಿಯಲ್ಲಿ ಹರಳು ಮುತ್ತಿನ ಬಾವುಲಿ (ತಿರುಗು. ೬೩). **ಬಾವಲಿ₂** : ೨. ಕಿವಿಯಲ್ಲಿ ಹರಳಿನ ಬಾವಲಿ, ಬಣೆಯ ಮೇಲೆ ತಿಲಕ (ಕುಂಹಿಂ. ೦೩೨) ; ಬಲಗಿವಿಯಲ್ಲಿ ಮುತ್ತು ಕಳಚಿ ಹೋದ ಬಾವಲಿಯ ಚಿನ್ನದ ಉಂಗುರವೊಂದು ತೂಗಾಡುತ್ತಿತ್ತು (ಜನಪ. ೨೬). **ಬಾಹುಲಿ** : ೨. ಥಳಥಳಿಸುವ ಬಾಹುಲಿ . . . ಕಂಕಣ ದಿಂದ ಬಲುಸೊಬಗಾಂತನರಶಿಯಲಿ (ಕಂಕಶ. ೨೩-೬೧).

[ದ್ರಾ.೩ ತಮಿ. ಪಾವಿಲಿ; ತುಳು. ಬಾವಲಿ, ಬಾವೊಲಿ; ತೆಲು. ಬಾವಿಲಿ./ ಸಂ. ಬಾಲೀ]

**ಬಾವುಲಿಗಾಱ** (ನಾ). ಬಿರುದಿನ ಕಾಲ್ಗಡಗವನ್ನು ತೊಟ್ಟವನು ; ಬಿರುದಾಂಕಿತನಾದ ವೀರ : ಹಿಣಿಲ ಬಾವುಲಿಗಾಱರಾವೆಡೆ ಛಾಪೆಯತಿ ಬಳರು (ಕುಮ್ಮಾಗಿಲ. ೪-೩೪). [ಬಾವುಲಿ₂ + — ಕಾಱ]

**ಬಾವುಲು** 'ವಾವಲ್' ನೋ.

**ಬಾವೆಮಣ್ಣು** (ನಾ). ಒಂದು ಬಗೆಯ ಮೆದುವಾದ ಮಣ್ಣು : ಅಗೆವ ಎಲ್ಲ ಕಡೆಗಳಲ್ಲೂ ಕಲ್ಲುಗಳಿರಲಿಲ್ಲ. ಕೆಲವು ಕಡೆ ಬಾವೆಮಣ್ಣು (ಬಾಳಿಗ. ೮೨). [ ← ತುಳು. ಬಾವೆಮಣ್]

**ಬಾಶಿಗ** 'ಬಾಸಿಗ' ನೋ.

**ಬಾಷೀಕಾಗದ** (ನಾ). (ಛಾಪಾಕಾಗದವಲ್ಲದ) ಸಾದಾಕಾಗದ : ಅಸಲು ಜಂಗಡಿ ಸಹ ಸಂತೆಂದು ಒಳ್ಳೇ ಬಾಷೀಕಾಗದದಲ್ಲಿ ರಶೀತಿ ಬರೆದು . . . ಕಳುಹಿಸಿಬಿಟ್ಟನು (ಕಹಾಮಿಂ. IV, ೪೩).

[ಬಾಷೀ₀ + ಕಾಗದ. / ತುಳು. ಬಾಶಿಕಾಗಜಿ]

**ಬಾಷ್ಕಳ₁** (ನಾ). ೧. ಋಗ್ವೇದದ ಒಂದು ಶಾಖೆ. ೨. ಶತೋಪನಿಷತ್ತು ಗಳಲ್ಲಿ ಒಂದು : ಶ್ರೀರುದ್ರಬೃಹದಾರಣ್ಯಕ . . . ಬಾಷ್ಕಳ [ಪಾಠಾಂ. ಭಾಷ್ಕಳ, ಭಾಸ್ಕಳ] . . . ಮೊದಲಾದವೇ ಉಪನಿಷತ್ತುಗಳು (ವಿವೇಕ. ೩).

[ಸಂ. ಬಾಷ್ಕಲ]

**ಬಾಷ್ಕಳ₂** (ನಾ). ೧. ಸುಳ್ಳು; ಹುಸಿ ; ಅಸತ್ಯ : ಪತಿ ವಿಸರ್ಜಿಸಿದಾಕೆ ಗಾವುದಿನ್ನಧಿಕಾರ ಮೃತಿಯ ನಿಷ್ಕೃತಿ ಮಗನೆ ಬಾಷ್ಕಳವೆ ಕೇಳ್ ಏಸುನಿ ಹುತವಹನನಲ್ಲಿಟ್ಟರಪ್ಪದೆಲೆ ಕಡೆಯಾಣೆಯಂತಿದಂ ಗ್ರಹಿಸು ನೀನು (ಕರಿಚ. ೧೬-೦೬). ೨. ನಡತೆಯಲ್ಲಿ ಅಥವಾ ಮಾತಿನಲ್ಲಿ ಹಿಡಿತವಿಲ್ಲದಿರುವುದು ; ಸ್ವೈರವೃತ್ತಿ ; ಸ್ವಚ್ಛಂದವರ್ತನೆ. ೩. ಅಸಭ್ಯತೆ : ಎಂಥ ಬಾಷ್ಕಳ ಮಾತಾಡತೀ ನಿಂಗೀ. ಜನಲಜ್ಜಾ ನಿನಗ ಎಳ್ಳಷ್ಟೂ ಇಲ್ಲಲ್ಲಾ (ಕಕೃಕೃ. ೨೦೬). ೪. ಅಪ್ರಾಮಾಣಿಕನಾದ ವನು : ಏನಪಾ ರಾಮಾಚಾರಿ, ನೀ ಏನು ಬರೇ ಬಾಷ್ಕಳ ಕಾಣತೀದಿ (ತಿರುಗು. ೪೬). [← ಮರಾ. ಬಾಷ್ಕಲ, ಬಾಷ್ಕಳ, ಬಾಸ್ಕಳ]

**ಬಾಷ್ಕಳಂಗೆಯ್** (ಕ್ರಿ). ಅಸಂಬದ್ಧವಾಗಿ ಮಾತನಾಡು ; ಗಳಹು : ಕೇಳಲೆ ನಿರೀಶ್ವರ ಸಾಂಖ್ಯವಾದಿ ನೀಂ ಮತ್ತತ್ವದಿಂ ಭಾಷ್ಕಳಂಗೆಯ್ವುದಿರ್ (ಅರಾಕ. ೩-೬-೦೨). [ಬಾಷ್ಕಳ₂ + ಕೆಯ್₁]

**ಬಾಷ್ಕಳಗೆಡೆ** (ಕ್ರಿ). = ಬಾಷ್ಕಳಂಗೆಯ್ : ಎಲ್ಲಾ ಜಾತಿಗೂ ನಾವೇ ಮಿಗಿ ಲೆಂದು . . . ಬಳ್ಳಿಟ್ಟು ಬಾಷ್ಕಳಗೆಡೆವುತ್ತಿಪ್ಪರಿ ನೋಡಾ (ಸವಚ. ೦೬೫-೩೦೯) ; ಮನೆಯಲಿ ಸೂಳೆಯರ ಮುಂದೊದಱ ಬಾಷ್ಕಳಗೆಡೆವ ಬಂದೀಗ ಕೋಲನಿಕ್ಕದೆ ಗಾಯವಡೆಯದ ಕಾಲುವೇಗವ ತೋಱದೊಡೆ ನಿನ್ನೋಲಗದೊಳೆಂತಕಟ ನಾಚದೆ ಕುಳ್ಳಿತಿಹೆಯೆಂದ (ಕುಮ್ಮಾವಿ. ೬-೨೪) : ವೀರಭದ್ರೇಶ್ವರನ ಬೋಧೆಯಂ ಕೇಳದಾ ನಾರಸಿಂಹಂ ಕೊಬ್ಬಿ ಭಾ [ ಬಾ ] ಷ್ಕಳಂಗೆಡೆದು . . . ಜಱೆವುತ್ತಿರ್ದಂ (ಏಕ್ಕೃತಿ. ೩-೩-೨೪). [ಬಾಷ್ಕಳ₂+ಕೆಡೆ₂]

**ಬಾಷ್ಪ** (ನಾ). ನಂಜು ; ವಿಷ : ಗಾಯ ಬಾಷ್ಪವೇರಿ ತುಂಬಾ ನೋವಾಗಿದೆ (ರೂಢಿ). [← ತೆಲು. ಬಾಸಟ. / ಮರಾ. ಬಾಸಟ, ಬಾಸೂಟ]

**ಬಾಷ್ಪ** (ನಾ). ೧. ಕಣ್ಣೀರು ; ಅಶ್ರು: "ಅಶ್ರು, ಬಾ(ಷ್ಪಂ)ಷ್ಪಂ, ರೋದನ, ನಯನಜಳಂ, ಅಸ್ರಂ—ಈ ೫ ಕಣ್ಣ ನೀರ್" (ಕರಾಹು. ೬೬-೩೬೫) ; ಕುಚಾಂತರದೊಳ್ ಕೋಗೊಂಡು ಮೋಹಪಲ್ಲಿಗೆ ಬಿದಿ ತಿರ್ದಿ ಸುತ್ತಿಸಿದ ನೀರ್ಗೊಣೆಯಾದುದು ಬಾಷ್ಪಮೋಪಳಾ (ಕಾಂಕಿತ. ೮-೯೨) ; ಕ್ಷಣದೊಳೊದಗುವ ಬಾಷ್ಪಲುಳಿತೇಕ್ಷಣನು ಬಂದನು ಮನೆಗೆ (ಕುಮ್ಮಾಶ. ೩-೨೫). ೨. ಹಬೆ ; ಆವಿ : ಹವೆಯೊಳಗೆ ತೊಯ್ದ ವಸ್ತ್ರಗಳನ್ನು ಬಿಚ್ಚಿ ಹರವಿದರೆ, ಅವುಗಳಲ್ಲಿಯ ನೀರು ಬಾಷ್ಪರೂಪದಿಂದ ಹಾರಿ ಹೋಗಿ ವಸ್ತ್ರಗಳು ಒಣಗುತ್ತವೆ (ಕುಂಂಶಹು. ೩-೦೩೪). ೩. ಒಂದು ಬಗೆಯ ಸಸ್ಯ. [ಸಂ.]

**ಬಾಷ್ಪಜಲ** (ನಾ). ಕಣ್ಣೀರು : ಅಕ್ಷಿಗಳ್ ಬಾಷ್ಪಜಲಪುಶಮಿತರಜಿಗಳ್ (ಜಗಿಂ. ೩-೬೬). [ಸಂ.]

**ಬಾಷ್ಪವಾರಿ** (ನಾ). = ಬಾಷ್ಪಜಲ : ಅನವರತಬಾಷ್ಪವಾರಿಧಾರಾಪೂರ ಪರಿವಾರಿತಪಲ್ಲವನೇತ್ರೆಯುಂ (ಗಣಾಯು. ೧-೫೫ ವ) ; ವಿಲೋಲಲೋಚನೆ ಯಕಟ ನೆನೆದಳು ಬಾಷ್ಪವಾರಿಯಲಿ (ಕುಮ್ಮಾವಿ. ೩-೩೪). [ಸಂ.]

**ಬಾಸ** (ನಾ). ಒಬ್ಬಾತನ ಹೆಸರು : ಶ್ರೀ ಬಾಸ (ಎಳ. II. ೪೨೨ ; ಸು. 1000) ; ಶ್ರೀ ಬಾಸನಣ್ಣನ ದಣ್ಣೆ (ಎಳ. II, ೪೩೩-೦ ; ಸು. 1000). 'ಬಾಸಬೆ' ಪರಾ. [?]

**ಬಾಸಂತಿ** (ನಾ). ಒಂದು ಬಗೆಯ ಮಲ್ಲಿಗೆ : ವಾಸಂತಿ : ವಾಸಂತೀ – ಬಾಸಂತಿ (ಕಮರ. ೨೩೯ ಶ್ರಿಪ.೪೦) ; ಉಪವನದಲಾಡುತ ಬಾಲೆಯರು ಬಾಸಂತಿ ಮರುಗ ತಮಾಲ ಮಾಲತಿ ಮಲ್ಲಿಗೆಗಳ ಮನೋಜ್ಞಸೌರಭದ ಲೋಲಭೃಂಗಾವಳಿಯ ಗೀತವನಾಲಿಸುತ (ಜೈಭಾಗ. ೯-೨೦-೦೩).
[<ಸಂ. ವಾಸಂತೀ]

**ಬಾಸಂಬಳ್ಳಿ** (ನಾ). ಒಂದು ಊರಿನ ಹೆಸರು: ಪಡುವಣ ತೊರೆವಳ್ಳಿಯ ಬಾಸಂಬಳ್ಳಿಯೂರ ಮುನ್ನಣ ಕಟ್ಟೆಯೊಳಿಸಾಬ್ಬ ನಮ್ಮಸ್ವಮಂನ್ದೇವ ಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೦೫ ; ಸು. ೯೯೦ ?).
[ಬಾಸ + ಪಳ್ಳಿ$_1$]

**ಬಾಸಗವುಂಡ** 'ಬಾಸಗಾವುಂಡ' ನೋ.

**ಬಾಸಗಾವುಂಡ**, ಬಾಸಗವುಂಡ (ನಾ). ಒಬ್ಬಾತನ ಹೆಸರು: ಉಬ್ಬಂಗಿಯ ಕೋಟೆಗೆ ರಾಜಾದಿತ್ಯನ ಕಾಳೆಗಕೆ ಚಣ್ಣಡೆ ಬಾಸಗಾವುಣ್ಡನ್ಗೆ ಕೊಟ್ಟ ಕೊಡನ್ಗೆ (ಎಕ. XV, ಬೇಲೂರು. ೩೦೬-೯ ; 971). **ಬಾಸಗವುಂಡ** : ಉಪ್ಪರವಳ್ಳಿಯ ಬಾಸಗವುಣ್ಡನ ಬಿಟ್ಟಿಗವುಣ್ಡನ ಮಗಂ ಬಿಟ್ಟಯಣ್ಣ (ಎಕ. VI, ಕಳಸ. ೩೬-೯; 1012). [ಬಾಸ+ಗಾವುಂಡ (<ಗಾವುಂಡ)]

**ಬಾಸಟ** (ನಾ). (ಆಯುಧಗಳನ್ನು ಹರಿತಗೊಳಿಸುವುದರಿಂದುಂಟಾದ) ಹೊಳಪು : ಕಾಂತಿ : ಕಂತು ಒಡಿದ ಖಡ್ಗಕೆ ಬಾಸಟವೇಱುವಂತೆ ಜವ್ವನವೇಱಿದಳು (ಶ್ರೀಪಾಂ. ೩-೪೦); ಆ ತನುಜಾತೆಗೆಣ್ಣೆಯನೊತ್ತಿಸಿದಳು ಪ್ರೀತಿಯಿಂದಂಗಭವನ ಪುಷ್ಪಬಾಣಕ್ಕೆ ಓತು ಬಾಸಟಮಿಕ್ಕುವಂತೆ (ಜೀವಂಸಂ. ೨೩-೨೨೩) ; ಸ್ಮರಗಜಕುತ್ತಮಮದವೇಱುವವೊಲ್ ಸುರಭಿಶರಕೆ ಬಾಸಟವೇಱುವವೊಲು ಹರಿಣಧರಗೆ ಹದಿನಾಱು ಕಲೆಗಳೇಱುವವೊಲ್ ... ವಿದ್ಯಾಧರರಾಯನ ಮಿಸುಕುವ ರೂಪಿಗೆ ಹೊಸಹರೆಯಂ ಬಂದುದು (ಜಯಾಕಾ. ೦೩-೭). [?]

**ಬಾಸಟವಿಡು** (ಕ್ರಿ). ಮಸೆದು ಕಾಂತಿಗೊಳಿಸು : ಅಂಗೋದ್ಭವನೆಂಬ ಮಹಾಸಾಹಸಿಗಂಗೊಲಿದು ರತಿ ಬಾಸಟವಿಟ್ಟಲರ್ಗಯ್ದಂ ಕುಡುವಂತೆ (ಜಯಾಕಾ. ೦೪-೨೨). [ಬಾಸಟ+ಇಡು$_1$]

**ಬಾಸಣ**, ಬಾಸಣೆ (ನಾ). ೧. ಹೊದಿಕೆ ; ಮುಸುಕು : ಆಚ್ಛಾದನ : ಚರಣದ ಧೂಳಿ ಬಾಂದೊಱೆಗೆ ಬಾಸಣವಾಗಿರೆ . . . ಅದ್ಭುತಮಾಹವ ಭೂಮಿಗಪ್ಪಿನಂ (೧೦ಕ. ೩-೭೭): ಪಂಚರಂಗದ ಚೂಣೆಕೆ, ಬಿಳಿಯ ಬಟ್ಟೆಯ ಬಾಸಣ . . . ರತ್ನಾವಳಿಗಳಿಂದ ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (೧೬ವ. ೦೨೩). ೨. ಯಾವುದಾದರೂ ವಸ್ತುವನ್ನು ಒಳಗೊಳ್ಳುವ ಸಂಪುಟ ; "ಬುಟ್ಟಿ ; ಪೆಟ್ಟಿಗೆ ; ಪಾತ್ರೆ" (ಕ್ರಕಂ). ೩. ಜ್ಞಾನ ; "ತಿಳಿವಳಿಕೆ" (ಕ್ರಕಂ). **ಬಾಸಣೆ** : ೧. "ಬಾಸಣೆಯೆನೆ ಮುಸುಂಕಿ [ಪಾಠಾಂ. ಮಾಸಣೆಯೆನೆ ಮಿಸುಂಕಿ]ದರ್ಥಂ" (ಕಶಬ್ದ. ೬೧); ತೊಳಲ್ವ ಮಂಜಿನ ತಪ್ಪಲೊಳಗೆ ತನ್ನೊಡಲ ಮರೆಗೊಳಿಪ ಹೂವುಲ್ಲುಗಳ ಬಾಸಣೆಯೊಳು ಸುಳುಹು ಕಾಣಿಸಟಲರ ತಳುವ ಬಣ್ಣವ ಚಲ್ಲ ತಳಿವ ಮಿಸುನಿಯ ಮಿಂಚುಹುಳುವೊ ನೀನು ? (೧೯೭೦. ೩-೫೭).
[<ಸಂ. ವಾಸನ./ಪ್ರಾ. ವಾಸಣ./ಹಿಂ. ಮರಾ. ಬಾಸನ ; ಗುಜ. ವಾಸಣಾ]

**ಬಾಸಣೆ** 'ಬಾಸಣ' ನೋ.

**ಬಾಸಣಿಗೆ$_1$** 'ಬಾಜಣಿಗೆ' ನೋ.

**ಬಾಸಣಿಗೆ$_2$** (ನಾ). ಹೊದಿಕೆ ; ಆಚ್ಛಾದನ ; ಮುಸುಕು : ಪೊಸಮುತ್ತಿನ ಬಾಸಣಿಗೆಯೊಳ್ ಬಾಸಣಿಸಿದ ಬಿರಿಮುಗುಳ್ಗಳೊಳ್ (ಶಂಶಭಾ. ೫-೫ ವ) ; ಇರ್ಪುಪೊರೆದ ಮುಗುಳದ ಬಾಸಣೆ[ಪಾಠಾಂ. ಣ]ಗೆಯಂ ಕಳೆದು (ಕಾರಂಲಾ. ೦೬೮) ; ಸ್ಮರನಲರ್ವಿಲ್ಲ ಬಾಸಣೆ[ಪಾಠಾಂ. ಬಾಣಸಿ]ಗೆಯಂ ಕಳೆವಂತೆ ಮುಸುಂಕನೋಸರಿಸೆ (ಲೀಲಾವ. ೦೩-೦೨). [< ಬಾಸಣ]

**ಬಾಸಣಿಗೆಗಳೆ** (ಕ್ರಿ). ಮುಸುಕನ್ನು ಓಸರಿಸು: ಗವಸಣಿಗೆಯನ್ನು ತೆಗೆ : ಶಂಖಮಂ ಬಾಸಣಿಗೆಗಳೆದು . . . ವಿಕ್ರಮಾರ್ಜುನಂಗೆ ಕೊಟ್ಟು (ಶಂಶಭಾ. ೬-೩ ವ). [ಬಾಸಣಿಗೆ$_2$+ಕಳೆ$_1$]

**ಬಾಸಣಿಸು$_1$** 'ಬಾಜಣಿಸು$_1$' ನೋ.

**ಬಾಸಣಿಸು$_2$**, ಬಾಚಣಿಸು$_2$ (ಕ್ರಿ). ೧. ಆವೃತವಾಗು : ಆ ಸಭೆಯು ಮನೇಱಿದ ಸಿಂಹಾಸನವುಮನೊಡನೆ ಬೆಳಗೆ ಬೆಳಗಿಂದೆ ಜಗಂ ಬಾಸಣಿಸಿ ದುದೆನೆ ಸಕಲಸುರಾಸುರಪತಿಯುರದೊಳೆಸೆದುದಿಂದ್ರಚ್ಛಂದಂ (ಆದಿಪು. ೯-೭). ೨. ಹೊದಿಸು ; ಮುಚ್ಚು : ಕರಡಿಯ ತೊವಲಂ ಕಾಡಿಗೆಯೊಳರ್ದಿ ವಿಧಾತ್ರಂ ಲೋಕಮಂ ಬಾಸಣಿಸಿದನೆಂಬಂತಪ್ಪ ಕತ್ತಲೆಯೊಳ್ (ಧರ್ಮಾಮೃ. ೦೨-೨೦). ೩. ಆವರಿಸು ; ಹಬ್ಬು : ಆ ಸುಗಂಧಕಪದುಮಪರಿಮಳ ಬಾಸಣಿಸುತೀ ಜನಮನೋವಿನ್ಯಾಸವನು (ಕುವ್ಯಾಕ. ೧೦-೩). ೪. ಧರಿಸು ; ತೊಟ್ಟುಕೊಳ್ಳು : ಎಕ್ಕಡವ ಬಾಸಣಿಸಿ ಪದತಳಕೆ ಶೀತಸುವಾಸವನು ತೆಗೆದುಟ್ಟು . . . ಎಲೆಪನೆಯ ಹೊಱವಂಟನಾ ರಾಮ (ತೊರರಾ. ೩-೯-೩೪). ೫. ರಕ್ಷಿಸು ; ಕಾಪಾಡು : ಸ್ಥಾಣುಗಾದಿಯು ಹಳೆಪುರಣಕಸೆ ಪ್ರಾಣವಂ ಬಾಸಣಿಸಲಱಿಯದ ಹೂಣಿಗರು ಜಾಣರುಗಳಭವನೊಳಗಲದವಿರಳರು (ಶಾವಂಕ. ೯-೦೦). **ಬಾಚಣಿಸು$_2$** : ೨. ಕರಿಮೊಗಂ ಸುಂಡಲದಿಂ ಸ್ತನ್ಯಪಾನಂಗೈವುತಿರಲ್ . . . ಸೆರಗ ಬಾಚಣಿಸಿಪಗಜೆ ಸಲಹಾ (ವಿವಮೋ. ೬-೨). [ಬಾಸಣ + — ಇಸು$_3$]

**ಬಾಸಬೆ** (ನಾ). ಒಬ್ಬಾಕೆಯ ಹೆಸರು : ತಾಮ್ಮೆಱಿವ ಕದಮ್ಬನಗ್ಗಳದ ಬಾಸಬೆಗಾದನೇಂ ಪುತ್ರನುತ್ತಮನ್ನರದಿಕೆ ನೋನ್ತು ಮೂಱುದಿಸವುಂ ಸುರನಾಗಿದನಿನ್ತು ರಾಚಯಂ (ಎಕ. XV, ಹೊಳೆವ. ೬೭-೦೦ ; ಸು. 950).
[ ಬಾಸ + ಅಬೆ (<ಅಬ್ಬೆ$_1$ ) ]

**ಬಾಸರ$_1$** 'ವಾಸರ$_1$' ನೋ.

**ಬಾಸರ$_2$** (ಗು). ೧. ಬಿಳಿಚಿಕೊಂಡ ; ಪೇಲವವಾದ : ಮಿಡಿದು ಪಾಮ್ಪುಪುದಳ್ಪೆರ್ದೆ ಬತ್ತೆ ತೊಂಡೆವಾಯ್ ಬಾಸರವರ್ಣಮಾಯ್ತು (ಅಸಂಶು. ೯-೦೦). ೨. ಮ್ಲಾನವಾದ ; ನಿಸ್ತೇಜವಾದ : ಕಿದಱಿದ ಕೇಶಬಂಧದ ಮಲಿನವೇಷದ ಬಾಸರದ ಶಶಿಮುಖದ ಸೂಸುವ ಸುಯ್ಲ ಸಂದಣಿಯ ಬೇಸಱಿನ ಬೆಱಗಿನಲಿ (ಶಿಭಾಗ. ೯-೦೩-೨೭). (ನಾ). ೩. ಕಾಂತಿ ; ಮೆರುಗು; ಶೋಭೆ : ಮೃದುಪದಪಂಕಜಂ ನಡೆದು ಕೆಂಪು ಮರಲ್ದು ನಿಶಾರುಣಾಂಶು ಪಾಸಿದ ದುಗುಲಕ್ಕೆ ಬಾಸರದ ಮಾಸರವುಂ ಕುಡೆ ಬಂದ ಯೋಗಿರೂಪದ ನಿಧಿಯು (ಅಶಂಕು. ೯-೦೫) ; ಒಪ್ಪುವ ಯಜ್ಞಸೂತ್ರಕಂ ಕಿವಿಯ ತೊಳಂಚಿಯುಟ್ಟುಡೆಯ ಬಾಸರಮಿಕ್ಕಿದ ದರ್ಭೆ ಶೋಭೆವೆತ್ತ ವಿರಳಕೂರ್ಚಂ . . . ಒಪ್ಪೆ (ಸುಕಾವೇ. ೦೦-೬೭). ೪. ಶುಭ್ರವಸ್ತ್ರ : ಉಟ್ಟ ಬಾಸರದ ಬಂಬಲ್ ದೊಳ್ಳು ಚೆಲ್ವಾಗೆ ಸಂಭಿನ್ನಶ್ರೋತ್ರ ಧರಾಮರಂ ನೃಪತಿಗಾಶೀರ್ವಾದಮಂ ಮಾಡಿದಂ (ಶಾಂತೀಶ್ವ. ೨-೪೪); ಉಟ್ಟ ಬಾಸರ ಬಳಲುಗಚ್ಚೆಯನಟ್ಟಹಾಸದ ಜನದ ನಗೆಗಳ ನಟ್ಟವಿಗ ನೋಸರಿಸಿ ಸಭೆಯಲಿ ಮೆಲ್ಲನೈತಂದ (ಕುವ್ಯಾಕ. ೧೨-೦೫). [<ಸಂ. ಭಾಸ್ವರ]

**ಬಾಸಳು** 'ಬಾಸಂಟಿ$^2$' ನೋ.

**ಬಾಸಾಳ** 'ಬಾಸಂಟಿ$^2$' ನೋ.

**ಬಾಸಾಳು** 'ಬಾಸಂಟಿ$^2$' ನೋ.

**ಬಾಸಿಂಗ** 'ಬಾಸಿಗ' ನೋ.

**ಬಾಸಿಕಾಱ** (ನಾ). ದೇವಸ್ಥಾನದ ಪರಿಚಾರಕ (?) : ಬೀಹುಳಿಯರೆನಿ ಬರಾವಡಂ ಮೆಯಲು ವಿ ೧೦ ಬಾಸಿಕಾಱಂ ವ ೧ × × × (ಕಾತ್ರ. XV, ೩೯-೦೦ ; 1148). [ ಬಾಸಿ$_?$ + — ಕಾಱ ]

**ಬಾಸಿಕೆ** (ನಾ). (?) : ಸೂಸುವ ಕಣ್ಣ ಕೆಂಪು ಪೊಸಬಾಸುಟ ಮೈ ಜಡೆ ಬಿಟ್ಟ ಮಂಡೆ . . . ಕಿಱುಲಜ್ಜೆ ತೊದಳ್ನುಡಿ ದೋರವಲ್ಲು ಕೈ ಬಾಸಿಕೆ

ಕೊಪ್ಪು ಮುಂದಲೆ ಕಱುಗಿದ ಕೆಂದುಟಿಯೊಪ್ಪೆ ಬರ್ಪ ಸಂತೋಷದ ಲೇಸು ಬಾಷಣಸಿತಾ ಕವಿರಾಜಕಲಾವಿಲಾಸನಾ (ಕಾವ್ಯಸಾ. ಫುಟ. ೨೩೩). [?]

**ಬಾಸಿಗ**, ಬಾಷಿಗ, ಬಾಸಿಂಗ (ನಾ). ೧. (ಹೂವಿನ) ಮಾಲೆ, ದಂಡೆ : "ಬಾಸಿಗವೊಂದು ಪೂವಮಾಲೆ" (ಶಬ್ದಮ. ೬೩-೪೦೭) ; ಸೂಡಿದ ಪಾರಿಜಾತದ ನಮೇರುವ ಬಾಸಿಗವೊಯ್ಯನೊಯ್ಯನಿರ್ಪೊಡಿದುದು (ಆದಿಪು. ೩-೩) ; ಕಟ್ಟಿಯುಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೆ (ಅಜಿತಪು. ೦-೯೩) ; ಪಂದಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ಲುಲಿಯ ಬಂದಿಗೆ . . . ಇಪ್ಪೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೩೩೩). ೨. ವಿವಾಹಸಮಯದಲ್ಲಿ ವಧೂವರರ ಹಣೆಗೆ ಕಟ್ಟುವುದಕ್ಕಾಗಿ (ಚಿನ್ನ, ಮುತ್ತು, ರತ್ನಗಳಿಂದ ಅಥವಾ ಕಾಗದ, ಬೆಂಡುಗಳಿಂದ) ರಚಿಸಿದ, ಎಡಬಲಕ್ಕೆ ಗೊಂಚಲುಗಳನ್ನುಳ್ಳ ಒಂದು ಬಗೆಯ ಅಲಂಕಾರಸಾಧನ : ಪೊಳೆವ ಬಾಸಿಗಕೆ ಹದಿನಾಱು ವಂಡೆ (ಅಪಶಂ. ೨೯೬-೦೩೦೯); ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ (ಮಹಾದೇ. ೩. ೬೭-೬೯) ; ಮಗ ಸೊಸೆಗೆ . . . ಸಿಂಗರಗೆಯ್ದು ರನ್ನದ ಬಾಸಿಗವನು ಕಟ್ಟಿದರು (ಕೋಹತ. ೦೩-೬೭). **ಬಾಷಿಗ** : ೨. ಬಣ್ಣದ ಸೊಡರು ಮೌಕ್ತಿಕಗಳ ಗೂಡೆಯು ಸಡಗರದ ಪುತ್ಥಳಿಯು ವಿರಚಿತ ರತುನಬಾಷಿಗದ . . . ಗಂಧಾಕ್ಷತೆ ಯಗಿಲುಗಳೆಸೆದವು (ಅಂಬಿಕಾ. ೯೬-೩೦). **ಬಾಸಿಂಗ** : ೧. ಮಿಂದು ದಳಿಂಬ ಮನುಟ್ಟುಂ ಚಂದನಮಂ ಪೂಸಿ . . . ನವಕುಸುಮದಾಕೃತದಿಂದಂ ಬಾಸಿಂಗವು ನಿವಿರಿ ಕಟ್ಟಿದ ಬಟೀಕಂ (ಅಟ್ಯಮ. ೯-೨೩); ಅದುಟುಳ್ಳ ಭಟರು ಸೂಡುತೆ ಬಾಸಿಂಗ ಡೌಡೆ ಚೀಗಟೆ ದನಿಮಾಡಿಸುತ್ತಿದಿದರು (ಕೋಹತ. ೩೩.೩೭). ೨. ಆಗಮೋಕ್ತಿಯಲಿ ಬಾಸಿಂಗವ ಸೂಡಿದರ್ . . . ಪರಮ ಶೋಭನದಿಂದೆ ಮದುವೆಯಂ ಮಾಡಿದರ್ (ಕೋಹತ. ೯೨-೬೨): ಆಸೆಯಿಲ್ಲದ ದೋಸೆ ಮಿಸೆಯಿಲ್ಲದ ಮೋಟ ಬಾಸಿಂಗವಿರದ ಮದುವೆ ಇವು ಮೂಱು ಹೇಸಿ ಕಾಣಯ್ಯ (ಸರ್ವಜ್ಞ. ೦೯೬೨).

ಬಾಸಿಂಗಬಲ = ಬಾಸಿಂಗವನ್ನು ಕಟ್ಟುವ ಯೋಗ ; ಮದುವೆಯ ಯೋಗ : ಬಾಸಿಂಗಬಲ ಬರಲು ಬಾಸೆ ಕೊಡುವೆನು ತಂಗಿ (ಕನ್ನಜಾ. ೬೯). 'ಕಂಕಣಬಲ' ಪರಾ.

[ದೇ.॥ ತಮಿ. ವಾಚಿಕ್ಕೈ; ತುಳು. ಬಾಸಿಂಗ, ಬಾಶಿಂಗ, ಭಾಷಿಂಗ ; ತೆಲು. ಬಾಸಿಕ./ಮರಾ. ಬಾಶಿಂಗ, ಬಾಸಿಂಗ ]

**ಬಾಸಿಗಂಗಟ್ಟು** (ಕ್ರಿ). ೧. ಹೂಮಾಲೆಯಂನ್ನು ಹೆಣೆ ; ಹೂದಂಡೆಯನ್ನು ಕಟ್ಟು : ಬಾಸಿಗಂಗಟ್ಟುವನಂತು ಕಟ್ಟುವುದು ಕಬ್ಬಮನುಬ್ಬಿನ ಮಾಗೆ ಕಬ್ಬಿಗಂ (ಲೀಲಾವ. ೦-೬೨). ೨. ಮದುವೆಯ ಕಾಲದಲ್ಲಿ ಬಾಸಿಗವನ್ನು ಧರಿಸು : ಬಾಸಿಗಂಗಟ್ಟಿದ ಶೀರ್ಷದಿಂದೆಱಗಿದಂ ವಸುದೇವಂ (ನೇಮಿ. ೨-೩೦) ; ಮುತ್ತಿನ ಬಾಸಿಗಂಗಟ್ಟಿ ನಂದಿಯಂ ಮೃಡನೇಱಿದಂ (ಶಂಕ. ೩೬-೯). [ ಬಾಸಿಗ + ಕಟ್ಟು$_1$ ]

**ಬಾಸಿಗಹುವ್ವು** 'ಬಾಸಿಗಹೂ' ನೋ.

**ಬಾಸಿಗಹೂ**, ಬಾಸಿಗಹುವ್ವು (ನಾ). ಮಾಲೆಯಾಗಿ ಕಟ್ಟಿದ ಹೂವು ; ಹೂವಿನ ಹಾರ : ಶ್ರೀಗೊಮ್ಮಟದೇವರ ನಿತ್ಯಾರ್ಚನೆಗೆ ೨೦ ಬಾಸಿಗ ಹೂವಿಂಗೆ ಶ್ರೀಮನ್ಮಹಾಮಣ್ಡಳಾಚಾರ್ಯ್ಯರು . . . ಕೊಟ್ಟ ದತ್ತಿ (ಎಕ. II. ೨೩೬-೩; 1196 ?). **ಬಾಸಿಗಹುವ್ವು**: ಯಿ ಮರಿಯಾದೆಯಲು ಕುನ್ದವೆ ೬ ಬಾಸಿಗಹುವ್ವನಿಕ್ಕುವರು (ಎಕ. II. ೨೯೩-೦೯; 1274 ?). [ ಬಾಸಿಗ + ಹೂ$_2$ (< ಪೂ$_2$) ]

**ಬಾಸು$_1$** (ಕ್ರಿ). ಮಲವಿಸರ್ಜನೆ ಮಾಡು : "ಬಾಸು — ಪುರೀಷೋತ್ಸರ್ಗೇ" (ಶಮದ) ; ಬಾಸುತಂ ಹೇಸುತಂ ಮೂಸುತಂ (ಜಗನ್ನಾ. ೩೩-೦೩); ಲವಂ . . . ಮೂಸಿಯುಂ ಬಾಸಿಯುಂ ಮೋದುಂ ಪಾಯ್ದುಂ ವನವಂ ಮನಮಂತುಟಾಜ ಪುಡಿಗುಟ್ಟಿ ಕಿಚಿಕಿಲ್ವ ಪಯಪಂ ದಿಟ್ಟಿಸಿ (ರಾಮಾಶ್ವ. ೨೩೨-೧೦).

[ದೇ.॥ ತಮಿ. ಪಾಚನ = ಭೇದಿ; ತೆಲು. ಪಾಸನ = ಮಲವಿಸರ್ಜನೆ]

**ಬಾಸು$_2$** 'ಬಾರ್ಚು' ನೋ.

**ಬಾಸುಂಡೆ** 'ಬಾಸುಟಿ' ನೋ.

**ಬಾಸುಂದಿ**, ಬಾಸುಂದೆ (ನಾ). ಹಾಲನ್ನು ಗಟ್ಟಿಯಾಗುವಂತೆ ಕುದಿಸಿ ಅದರಲ್ಲಿ ಸಕ್ಕರೆ, ಬಾದಾಮಿ, ದ್ರಾಕ್ಷಿ ಮೊದಲಾದುವುಗಳನ್ನು ಬೆರಸಿ ಮಾಡುವ ಮಂದದ್ರವವಾದ ಒಂದು ಬಗೆಯ ತಿನಿಸು : ಮನೆಯಲ್ಲಿ ತಾನೇ ನಿಂತು ಬಾಸುಂದಿ ಪೂರಿ ಅಡಿಗೆ ಮಾಡಿ ಕಮಲೆಯು ಬಯಕೆಯೂಟ ಆರಂಭಿಸಿದಳು (ಶತಾಕ. ೦೦೦); ಕರ್ನಾಟಕ ಕ್ಲಬ್ಬಿನಲ್ಲಿ ಇಂದು "ಬಾಸುಂದೀ ಪುರಿ"ಯಿತ್ತು (ಸಮುಜೀ. ೧೦೦). **ಬಾಸುಂದೆ** : ಕಾರ್ಯದರ್ಶಿಯು . . . "ಬಾಸುಂದೆ, ಪುರಿ" ಯಾಗಬೇಕೆಂದು ನಿರ್ಣಯಿಸಿದ್ದನು (ಸಮುಜೀ. ೦೦೦).

[← ಮರಾ. ಬಾಸುಂದೀ. ಬಾಸುದೀ. ಬಾಸೋಂದೀ]

**ಬಾಸುಂದೆ** 'ಬಾಸುಂದಿ' ನೋ.

**ಬಾಸುಗಿ** 'ವಾಸುಗಿ' ನೋ.

**ಬಾಸುರಕಬ್ಬು** (ನಾ). ಒಂದು ಬಗೆಯ ಕಬ್ಬು : "ಇಕ್ಷ್ವಾಳಿಕ :— ಬಾಸುರಕಬ್ಬು. ಹೆಗ್ಗಬ್ಬು. ಈಶ್ವರಿ" (೬ತಧಿ. ೦೩).

[ ಬಾಸುರ$_0$ + ಕಬ್ಬು$_2$ (< ಕರ್ವು$_1$) ]

**ಬಾಸುರಿಕೋಡು** (ನಾ). ಒಂದು ಊರಿನ ಹೆಸರು : ಬಾಸುರಿ ಕೋಡು ಇಂಗಳಸರ ಬಾಗೆವಾಡಿ ಸಾಮಳವಾಡಿಗೆ ಒಡ್ಡವೊಡಿಗೆ ಮಧ್ಯವತ್ತಿ[F] ಪಿಪ್ಪರಗೆನಾಮಗ್ರಮೋ . . . ದತ್ತಿ (ಸೌಇಇ. XI-i, ೯-೦೭; 862). [ ? ]

**ಬಾಸುಳ್** 'ಬಾಸುಟಿ' ನೋ.

**ಬಾಸುಳ** 'ಬಾಸುಟಿ' ನೋ.

**ಬಾಸುಳಿ** 'ಬಾಸುಟಿ' ನೋ.

**ಬಾಸುಳು** 'ಬಾಸುಟಿ' ನೋ.

**ಬಾಸುಳುವಡೆ** (ಕ್ರಿ). ಮೈ ಮೇಲೆ ಬಾಸುಂಡೆಗಳನ್ನು ಬರಿಸಿಕೊಳ್ಳು : ಬಳಿಮ ಮೂಱೆಯುಂ ತೋಳೊಳಗೆ ನೆಲಮೊಲೆಗಳಲಿ ಕೊರಳಲಿ ಬರೆದು ಬಾಸುಳುವಡೆದು ಮುಸುಕಿಟ್ಟು ಮಲಗಿದಳರಸ ಕೇಳು (ಶಾಳ್ವಭಾ. ೨೯-೧೯).

[ ಬಾಸುಳು (< ಬಾಸುಟಿ) + ಪಡೆ$_1$ ]

**ಬಾಸುಳಿ** 'ಬಾಸುಟಿ' ನೋ.

**ಬಾಸುಳೇಳು** 'ಬಾಸುಟೇೞ್' ನೋ.

**ಬಾಸುಟಿ**, ಬಾಸಳು, ಬಾಸಾಳ, ಬಾಸಾಳು, ಬಾಸುಂಡೆ, ಬಾಸುಳ್, ಬಾಸುಳ, ಬಾಸುಳಿ, ಬಾಸುಳಂ, ಬಾಸುಳಿ (ನಾ). ಗೀರಿದ ಅಥವಾ ಹೊಡೆದ ಪೆಟ್ಟಿನಿಂದ ಚರ್ಮದ ಮೇಲೆ ಉದ್ದವಾಗಿ ಉಬ್ಬಿಕೊಳ್ಳುವ ಗುರುತು : ವಿಳಿವರ್ಷಿಯ ಪಱಿಯ ಪೊಸಬಾಸುಟ ಕರರುಹರೇಖೆ ತುಱುಗಿ ರತನಾಟ್ಯಪರಿಸ್ಫಳಿತಕ್ಕೆ ಮುಳಿದು ದಂಪತಿಗಳ ನಂಗಜನಟನ ಸೆಳೆವ ಬಾಸುಟನಿಳಿಕುಂ (ಆದಿಪು. ೦೨-೦೩) ; ಎಲ್ಲರ ಮೆಯ್ಗಳೊಳಂ ತಳುವಿಲ್ಲದೆ ಬಾಸುಟ್ಗಳೊಗೆಯೆ (ರಮಾಕವ್ಯ. ೩-೨೦೩); ವಿರಹ ದಿನಬಲ್ದು ಬಸಮೞಿದು ಪೋದೆ ತನ್ನುರದೊಳ್ ಬಾಸುಟ ತಳ್ಪ ಶೋಕ ಶಿಖಿಯಂ ಕಟಲ್ಬಲಂಮೊಟ್ಟಿದಸುಗೆದಳಿರು ಪೋಲ್ಕುಂ (ಕಾವ್ಯಾವ. ೨೦೦). **ಬಾಸಳು** : ಬಾಳಿಯ ಸುಳಿಯ ಕಟ್ಟಿಗೆಕೋಲೊಳವ ಹೊಯ್ದು ನೇಳೇಳು ಮಾಲೆಗೋಡಾಡಿ ಆ ಲೇಸುವೆಂಗಳ ಮೈಗೆ ಬಾಸಳು ಪುಷ್ಪಮಾಲೆಯಂ ತೆದ್ದುವಾಕ್ಷಣವೆ (ಭಾಪ. ೪೯-೬೯) ; ಓಡಿತಂದೊಡನನಿಬರಾಕ್ಷಣ ನೋಡದೆಡ ಬಲಗಳನು ದೈತ್ಯರ ತ್ರಾಡನೆಯ ಬಾಸಳಿನ ತಲೆಬೋಳುಗಳ ಯೇರಿನಲಿ (ಅಂಬಿಕಾ. ೪೦-೪೯) ; ಬೆತ್ತದೇಟಿಗೆ ಭಾಸಳು ಎದ್ದಿದ್ದುವು (ಕೂಶಕಾ. ೨೯).

**ಬಾಸಾಳ :** ವಂಡಿತನಿಗೆ ತನ್ನ ಕೆನ್ನೆಯ ಮೇಲೆ ಮೂಡಿದ ಬಾಸಾಳದ ನೆನಪಾಯಿತು (ಸವಜೀ. ೧೨೦೬); ಅವಳ ಬೆನ್ನು ಗಲ್ಲಗಳ ಮೇಲೆ ಬೆತ್ತದ ಬಾಸಾಳಗಳು ಮೂಡಿದ್ದುವು (ದೇಶರಾ. ೦೩). **ಬಾಸಾಳು :** ಸಿಕ್ಕವರ ಬೆನ್ನಿಗೆ ಬಾಸಾಳು (ಚಾಜಿಂ. ೩೪); ಕೈಕಾಲುಗಳ ಮೇಲೆ ಬಾಸಾಳು ಮೂಡಿದ್ದಲ್ಲದೆ ಅವನ ಹಣೆಯಿಂದ ರಕ್ತವು ಸುರಿಯತೊಡಗಿತು (ಸಜೀ. ೨೩). **ಬಾಸುಂಡೆ :** ಬಾಸುಂಡೆ ಬರುವಂತೆ ಸೆಳೆದ (ಅಕಲ. ೦೯೭–೦೦); ನೀವು ಈ ಅರಿಯದ ಕಂದನಿಗೆ ಬಾಸುಂಡೆ ಬೀಳುವಂತೆ ಹೊಡೆದಿದ್ದೀರಿ (ಕಂದನ. ೯೬). **ಬಾಸುಳ್ :** ನೋಡಯ್ಯ ಮಗನೆ ಎನ್ನಯ್ಯ ಮಯ್ಯ ಬಾಸುಳಂ (ಚಾಶರ. ೦೬೭–೨೩); ಬಾಸುಳಂ ತೋರದಂದದಿ ಬೆರಳ್ಪೊಡೆತವಂ ಕೊಡು (ಬಂಗಾರಾ. ೩–೨–೯೦). **ಬಾಸುಳ :** ನೊಂದನೆಂದು ಮಯೂರನ ಸಂತೈಸಿ ಬಾಸುಳವ ನೋಡುವ ನೆವದಿಂದ ಕುಪ್ಪಸವ ಕಳೆದು ನೋಳ್ಪಾಗ ಮಯೂರನ ಮೈ ಸುವರ್ಣವಾಗಿರೆ (ಕೃರಸೂ. I, ೯೩). **ಬಾಸುಳಿ :** ಆರಿಕಾಲಚೋಳನಾಳ್ಗಳ ಭರದಿಂದಂ ಹೊಡೆದೊಡಿಲ್ಲ ಬಾಸುಳಿಯೆಂದುಂ (ಕೃರಶ. ೦೩–೨೮). **ಬಾಸುಳು :** ತಟಿದ ಬಾಸುಳ ಬರಿಯು ಮುಸುಕುವ ನೊಣದ ಹುಣ್ಣುಗಳ . . . ಕುಟುಹನಡಗಿಸಿಕೊಂಡು ಹಸ್ತದ ನಿಟಿಗೆಯಲಿ ನೆಟಿ ಸುಳಿದನಾ ಪ್ರಭುಲಿಂಗ ಲೀಲೆಯಲಿ (ಪ್ರಭುಲೀ. ೨೨–೪೯). **ಬಾಸುಳೆ :** ಮಯೂರನಂ ನರಪ ತಾನೆಸೆದು ಬಾಸುಳೆಯ ನೋಡುವ ನೆವದಿ ಶರಿರಮಂ ಮುಟಿಸೆ ಸುವರ್ಣದಂತಿರಲು (ಚಾರಿತಾ. ೨–೯೦); ಬೆತ್ತದಿಂ ಬಡಿಯೆ, ಬಾಸುಳೆಗಳಂ . . . ನೆತ್ತರೊಡಮೂಡಿದೊಡಮವನೊಂದು ಮಾತನೆತ್ತಿಲ್ಲ! (ಗೂರ್ಖ್ಗೊಕ್ಕೆ ೯೭–೨೯೬).

[ದೇ.೫ / ಪ್ರಾ. ಭಾಸುಂಡ = ಹೊರಸೆಳೆಯುವುದು]

**ಬಾಸುಟೀಟ್**, ಬಾಸುಳೇಳು (ಕ್ರಿ). ಮೈಮೇಲೆ ಬಾಸುಂಡೆಯೇಳು.— ಬಾರೇಳು : ಮೈ ಬಾಸುಟೀಟ್ವನ್ನೆಗಂ ಪಟಿದತ್ತಕ್ಕಟ ಪೊಕ್ಕು ಕೇದಗೆಯ ಪೂಗೊಂಬ್ಕುಳ್ಕೆ (ಸೂಕ್ತಿಸು. ೦೦–೬೦). **ಬಾಸುಳೇಳು :** ಹೊಯ್ಲಿನ ಬಿಟುಸಿನಲಿ ಬಾಸುಳೆದ್ದಾ ತನುಗಳಂ ನಸುಮುಟ್ಟಿ ನೋಡುತ ಹೆದಟುತೊಡುತ್ತ (ಬಸವ. ೩೨–೦೦); ಅರಿದು ನೆತ್ತರಗಾಣದಲಗಿದು ನೆಟಿ ಬಗಿಯೆ ಮೈ ಬಾಸುಳೇಳದ ಹುರಿ ಬಲಿದ ನೇಣ್ ಸೋಂಕಿದೊಡ ಹೊಗೆ ಮಸಗದೆದೆಗಿಚ್ಚು (ಕುಮಾರ. ೬–೦೦). [ಬಾಸುಟ್ + ಏಟ್$_1$]

**ಬಾಸೆ$_1$** (ನಾ). ಎದೆಯ ಮಧ್ಯಭಾಗದಿಂದ ಹೊಕ್ಕುಳ ಮೇಲು ಭಾಗದ ವರೆಗೆ ರೇಖಾಕೃತಿಯಾಗಿರುವ ತೆಳುಕೂದಲಿನ ಸಾಲು.— ರೋಮರಾಜಿ : "ನಾಭಿಯು ರೋಮ ಬಾಸೆಯೆನಿಸಿಕ್ಕು" (ಕಂಗರಾ. ೯೯–೩); ಆಕೆಯ ಬಾಸೆಗಳುಂ ಪಗವರ ಬಾಟ್ಬಾಸೆಗಳುಮೊಡನೊಡನಸಿಯವಾದುವು (ಕಂಶಹಾ. ೦–೦೯೦ ವ); ಭ್ರೂಲತೆಯ ಬಿಲುಗಳ ಕಟಾಕ್ಷದ ಕೋಲ ಹೊದೆಗಳ ಬಾಸೆಗಳ ಕರವಾಳಗಳ . . . ಮನ್ಮಥನಾಳು ನಡೆದುದು ದ್ರೌಪದಿಯ ದಂಡಿಗೆಯ ಬಳಸಿನಲಿ (ಕುಮಾರ. ೦೩–೪೯).

**ಬಾಸೆ$_2$**, ಭಾಸೆ (ನಾ). ೧. ಜನರು ತಮ್ಮ ಅಭಿಪ್ರಾಯವನ್ನು ಇತರರಿಗೆ ತಿಳಿಸಲು ಉಪಯೋಗಿಸುವ ಪದಪ್ರಯೋಗ ; ಭಾಷೆ : "ಬಾಸೆಯೆ ಭಾಷೆ" (ಕರ್ಣಾ. ೬೪); ಭಾಷಾ–ಬಾಸೆ (ಶಮದ. ೨೩೫ ಪ್ರಯೋ). ೨. ಕನ್ನಡ, ತಮಿಳು ಇತ್ಯಾದಿ ಬೇರೆಬೇರೆ ಮಾತು.—ವಾಙ್ಮಯ : ಆತನನಾಳಿಗಳ್ ಬಾಸೆಯೊಳಿಂತೆಂದರ್ (ಶಂಕರಾ. ೯–೧೩ ವ); ಕೆಲದೊಳಿರ್ದ ವಿದಗ್ಧಸೌಂದರಿಯೆಂಬ ವಿಳಾಸಿನಿ ಅರಸಿಯ ಮನಮನರಿದು ಆಕೆಯ ಬಾಸೆಯೊಳಿಂತೆಂದಳ್ (ಶರ್ಮಾಕ. ೯–೦೯೯). ೩. ಆಣೆ; ಶಪಥ; ಪ್ರತಿಜ್ಞೆ: ದೇವಿ ತನ್ನಯ ತನುವಂ ನಿಲೆ ಪಿಡಿವ ಬಾಸೆಯಂ ಮಾಡುಗುವೋ (ಶಾಂತಿಪು. ೬೬೯). ೪. ವಚನ; ವಾಗ್ದಾನ : ಬಾಸೆಯಂ ಬೇಡಿ ನಾನರಚುವಂದೆನ್ನ ಕಯ್ಯೊಳಾರ್ವರಸಿಟ್ಟರೀ ಗಿರಿಕೆಯನ್ನ? (೧೯೦೦. ೩೦–೩). **ಭಾಸೆ:** ೪. ಒಲ್ದ ಮಾಟ್ಕೆಯಿಂ ಭಾಸೆಯನಿತ್ತು ಪುಚ್ಚಳಿವರಲ್ಲದೆ ಭಾಸೆಯನುದ್ಧರಿಪ್ಪರೇ (ಎಶಿ. V, ಬೇಲೂರು. ೦೦೨–೦೦೨; ಸು. 1220 ೯).

**ಬಾಸೆಯ ಕೊಡು** = ಮಾತು ಕೊಡು; ವಚನ ಕೊಡು; ಭಾಷೆ ನೀಡು : ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ ಜೀವನಿಗೆ (ಪೋಶಕ. ೩–೬೦). **ಭಾಸೆಗೆ ತಪ್ಪು**=ಆಡಿದ ಮಾತನ್ನು ನಡೆಸದಿರು; ಕೊಟ್ಟ ಮಾತಿಗೆ ತಪ್ಪು; ಭಾಷೆಗೆ ತಪ್ಪು: ಭಾಸೆಗೆ ತಪ್ಪುವಂಕದ ನೆಗಟ್ಚೆಯ ಲೆಂಕರ ಗಂಡಂ (ಎಶಿ. V, ಬೇಲೂರು. ೦೦೨–೦೦೨; ಸು. 1220 ೯). [<ಸಂ. ಭಾಷಾ]

**ಬಾಸೆಗೆಡು** (ಕ್ರಿ). ಕೊಟ್ಟ ಮಾತಿಗೆ ತಪ್ಪು; ವಚನಭ್ರಷ್ಟನಾಗು : × × × ಬಾಸೆಗೆಟ್ಟೊಡೆ × × × (ಶಾಶ. IX–i. ೨೨–೦೦; 923). [ಬಾಸೆ$_2$ + ಕೆಡು$_1$]

**ಬಾಸೆಗೊಡು** (ಕ್ರಿ). ವಚನ ಕೊಡು; ಮಾತು ಕೊಡು : ಎಲೆ ತುಕ ನೀನಾವನನೀ ಲಲನೆಗೆ ಪತಿಗೆಂದು ತರ್ಪೆಯಾತನೆ ನಿನ್ನುಜ್ವಲಸಖಿಗೆ ಭರ್ತೃವೆಂದೆನಲೊಲವಿಂದಂ ಬಾಸೆಗೊಟ್ಟು ಕಟುಪಿವರನ್ನಂ (ಉದ್ಭಟ. ೬–೦೨೨); ಸುಭುಜಂ ಪಗೆರಾಯರಂ ಕೊಲ್ವೆನೆಂಬಾಸೆಯಿಂ ಬಾಸೆಗೊಟ್ಟು ತನ್ನ ಪಡೆಯಂ ಕೊಂಚೆಗಟ್ಟಿನ ಕೋಟೆಯಂತೆ ಸಮೆದು (ರಾಮಾಶ್ವ. ೯೯–೨೭). [ಬಾಸೆ$_2$ + ಕೊಡು$_1$]

**ಬಾಸೆದೋಱು** (ಕ್ರಿ). ಮಾತಾಡು; ಧ್ವನಿ ಮಾಡು : ಆ ಶಶಿಮುಖಿ ಮಾಗಿಯ ಕೋಗಿಲಂದದಿ ಬಾಸೆದೋಱದೆ ಸುಮ್ಮನಿರಲು (ಜ್ಞಾನಸಿ. ೨–೬೯). [ಬಾಸೆ$_2$ + ತೋಱು]

**ಬಾಸೆಯಿಲಿ** (ನಾ). ಸುಳ್ಳು ಹೇಳುವ ವ್ಯಕ್ತಿ : ಮೋಸಮನೀವ ಬಾಸೆಯಿಲಿಗಳ್ ದ್ರವಿಡಾಂಗನೆಯರ್ (ಶಶಿ. ೩–೦೬೩). [ಬಾಸೆ$_2$+–ಇಲಿ$_3$]

**ಬಾಸೆವಕ್ಕಿ** (ನಾ). ಮಾತನ್ನಾಡುವ ಹಕ್ಕಿ ; ಗಿಳಿ: ಮೊರೆವ ಕುಕಿಲ್ದ ಪಾಡುವ ಬಾಸೆವಕ್ಕಿಗಳ ಗಜಬಜದಿಂ . . . ತಪೋವನಮೊಂದು ಕಣ್ಗೊಳಿಸಲೊಡಂ (ರಾಮಾಶ್ವ. ೬೯–೬). [ಬಾಸೆ$_2$ + ಪಕ್ಕಿ]

**ಬಾಸೆವತ್ತಳೆ** (ನಾ). ಆಶ್ವಾಸನೆಯ ಪತ್ರ ; ಸಹಾಯದ ವಾಗ್ದಾನ ಕೊಡುವ ಪತ್ರ : ಇದು ನಿಶ್ಚಿತಂ ಇನಿತಟಿಗೊಳವರುಪಟಳಕ್ಕೆ ಬೆಚ್ಚವೆಮ್ಮಂ ನಚ್ಚಿರ್ಪುದು – ಎಂದನಿಬರುಂ ಕಳುಹಿದ ಬಾಸೆವತ್ತಳೆಗಳನಿತ್ತು ಬಿನ್ನವಿಪುದುಂ (ಶಶಿಪು. ೯೩–೩); ಈ ಬಾಸೆವತ್ತಳೆಯು . . . ಕಾಕತಾಳೀಯದ ಫಲಸಿದ್ಧಿಯಾಗಿ. ನಮಗೆ ಬಹಳಮಟ್ಟಿಗೆ ಉಪಕಾರವಾಗುವುದು (ಪಟ್ಟಿ. ೬೩–೦೬). [ಬಾಸೆ$_2$ + ಪತ್ತಳೆ$_1$]

**ಬಾಸೆವಾಲ** (ನಾ). ರೋಮಮಯವಾದ ಬಾಲ (?) : ಕೇಸಕಾಯದ ನಿಡಿದ ನಿಳಿಕೆಯ ದೀರ್ಘತರ ಬಾಸೆವಾಲಂ ಮಿಳಿರೆ ನೇತ್ರತ್ರಯಂಗಳೊಂದೇ ಸಮಯದಿಂ ವಿಸ್ಫುಲಿಂಗಂಗಳ ಸೂಸುತಿರೆ ದಿವ್ಯಶಾರಭರೂಪದಿಂ ಬಾಸಂಗಳಿಗೆ ಭಯಭ್ರಾಂತಿಯಂ ತಳೆದು . . . ದುಷ್ಟನರಕೇಸರಿ ಗಗನದೊಳಿರೆ ಮೇಗಣ್ಕೆ ಜಿಗಿದು ಪಕ್ಷಂಗಳಿಂದಪ್ಪಳಿಸಿದಂ (ರಾಶಕ.೦೯–೦೦). [ಬಾಸೆ$_1$+ಬಾಲ$_1$]

**ಬಾಸೆವೆಣ್**, ಬಾಸೆವೆಣ್ಣು (ನಾ). ವಾಗ್ದೇವತೆ; ಸರಸ್ವತಿ : "ನುಡಿವೆಣ್, ಬಾಸೆವೆಣ್ . . . ಸಾರದೆ, ಸರಸತಿ – ಈ ೬ ಸರಸ್ವತಿಗೆ ಪೆಸರ್" (ಕಶಾ. ೯೬–೦೬); ಬಾಸೆವೆಣ್ಣೊಂದೊಲ್ಮೆದಾಳ್ದಿ ವಾಕ್ಸಿದ್ಧಿಯಂ ಪಡೆದು ನಿನ್ನಂ . . . ರತಿಯಿಂ ನೂರ್ಮಡಿ ಮಿಗಿಲೆನಿಸಿ ಬಣ್ಣಿಪೆಂ (ರಾಮಾಶ್ವ. ೬೦–೨). **ಬಾಸೆವೆಣ್ಣು :** "ನಿರುತಂ ತಾಂ ಬಾಸೆವೆಣ್ಣು ಶಾರದೆಯುಕ್ಕುಂ" (ಕವಿಕಂ. ೩೦).

**ಬಾಸೆವೆಣ್ಣನಿಯ** = ಸರಸ್ವತಿಯ ಪತಿ ; ಬ್ರಹ್ಮ : "ಪೊಂಬೊಡೆಯಂ . . . ಬಾಸೆವೆಣ್ಣನಿಯ . . . ಬ್ರಹ್ಮಗೆಸೆವ ನಾಮಂ" (ಕರ್ಣಕ. ೯); ಬಾಸೆವೆಣ್ಣನಿಯ ಕೇಳ್ ಭೂಸುರಗರ ಸಲಹುವರೆ ವಾಸಿಯಿಂದುದಯಿಸುವೆ ವಸುಮತಿಯೊಳು (ವಂಶಾರಾ.೦–೨–೦೬). [ಬಾಸೆ$_2$ + ಪೆಣ್]

**ಬಾಸೆವೆಣ್ಣು** 'ಬಾಸೆವೆಣ್' ನೋ.

**ಬಾಸೆಹೀನ** (ನಾ). ಕೊಟ್ಟ ಮಾತಿಗೆ ತಪ್ಪುವವನು : ವಚನಭ್ರಷ್ಟ : ಬಾಸೆಹೀನನ ಹೆಣವನೀಶನಿವಾಸದೊಳಗಿರಿಸುವುದನುಚಿತಂ (ಜಕಪು. ೨೯-೨೮). [ಬಾಸೆ + ಹೀನ]

**ಬಾಸ್ತಿಮಲ್ಲಿಗೆ** (ನಾ). ಮಲ್ಲಿಗೆಯಲ್ಲಿ ಒಂದು ಬಗೆ ; ಕಸ್ತೂರಿಮಲ್ಲಿಗೆ : ಬಾಸ್ತಿಮಲ್ಲಿಗೆ, ಕಸ್ತೂರಿಮಲ್ಲಿಗೆ (ವೈ.ಶಾ. ೯೬-೯೬೭). 'ಬಾಸಂತಿ' ಪರಾ. [ಬಾಸ್ತಿ೦ + ಮಲ್ಲಿಗೆ]

**ಬಾಹ** 'ವರ್' ಪರಾ.

**ಬಾಹಟ** (ನಾ). ೧. ಒಬ್ಬ ಪ್ರಾಚೀನವೈದ್ಯನ ಹೆಸರು. ೨. ಆ ವ್ಯಕ್ತಿಯು ಬರೆದ ವೈದ್ಯಗ್ರಂಥ: "ಅಷ್ಟಾಂಗಹೃದಯಮೆಂಬ ವೈದ್ಯಗ್ರಂಥ" (ಖಗೇಂ. ಟಿಪ್ಪಣಿ) : ಸಾಮುದ್ರಿಕಂ. . .ಬಾಹಟಂ[ಶಾಲಾಂ ಲಂ] ಸುಸ್ರುತಾ ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ . . . ನೆಟಿಯೆ ಕಲ್ಪಿಸಿ (ಖಗೇಂ. ೯-೦). ೩. ವೈದ್ಯಶಾಸ್ತ್ರ : ನ್ಯಾಯ ವೈಶೇಷಿಕ . . . ಬಾಹಟ . . . ಧರ್ಮ ವೇದಾಂತ ಸಿದ್ಧಾಂತಗಳಲ್ಲಿ . . . ಸದ್ಯುಕ್ತಿನಿರೂಪಕರಾದ ವಾದಿಗಳಿಂ (ಏಪೀಅ. ೨೨೬): ಮಾನವರಿಗೊಂದೆಣಿಸ ಲಪ್ಪುದನೂನವಿಲ್ಲದ ಬಾಹಟದ ಸಂಜ್ಞಾನಿಬಂಧನ ಪೀಠಿಕೆಯನು ಕರ್ನಾಟಕ ಭಾಷೆಯಲಿ (ಏಪೀಅ. ೦೬-೩೨). ೪. [ಸಂಗೀತ] (?) : ಗತಿ ಸಂಗತಿ ವಡೆಯ ಗಮಕಂ ಗಾರವಂಬಡೆಯ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಡೆ ರಂಗರಕ್ತಿ ಬೇಗವಣೆತು ತರಹರಂ ಸುಳಿವೊಟ್ಟಜಿ ದಾಳವಾಳಂ ಪದಿರ್ಪೊಡೆ ಕೊಂಕು ಕಮ್ಮಣೆ ಪೆಸರಂ ಬೆಡಂಗು ವಡೆದು ಪಾಡುತ್ತಿರೆಯುಂ (ಕಾಂತೀಶ. ೦೬-೬೬ ಪ). [ಸಂ.]

**ಬಾಹಣ** (ನಾ). ಬರುವಿಕೆ ; ಆಗಮನ : ಪಿಂಗ್ಳಲನಾಗಿಹ ತತ್ತ್ವ ಗ್ರಂಥವ ಹೇಳಿ ವಸ್ತುವಾಗಿ ಪರದು ಹೇಗೆ ಬೊಗ್ಗುವಡವೆ ಮಾಡಬಾಹಣ ವಲ್ಲದೆ ಬೊಗ್ಗು ಕಟ್ಟಗೆಯಾಗದಾಗೆ (ಕಡಾಕೊ. ೯೯-೫) ; ಅದು ಹೋಪಣ ಬಾಹಣಿಲ್ಲವಮ್ಮಾ (ಶಡಾಪ ೭೬-೯) : ಸೊಗಸಿನಾಟಕೆ ವಗಲೆಯಿರುಳೆ ಪೋಗಿ ಬಾಹಣವಾಗಿರುತಿಪ್ಪಾ (ಕಕ್ಕೋಳ. ೬-೭).

[< ಬರ್ (< ವರ್) + – ಅಣ]

**ಬಾಹತ್ತರ** (ನಾ). ಒಂದು ಸಂಖ್ಯೆ : ಎಪ್ಪತ್ತೆರಡು : ಸೋಮನಾಥಲಿಂಗ ನಿಮಗೆನ್ನ ಕಾಯ ಮುಂತಾಗಿ ಬಾಹತ್ತರ ಡಿಂಗರಿಗರಯ್ಯ (ವಚಸಂ. ೨೩೩-೪೫).

**ಬಾಹತ್ತರನಿಯೋಗ**, **ಬಹತ್ತರನಿಯೋಗ** = ರಾಜ, ರಾಣಿಯರಿಗೆ ಎಪ್ಪತ್ತೆರಡು ಬಗೆಯ ಸೇವೆ ಮಾಡುವವರ ಸಮೂಹ : ಅಲ್ಲಿಗಲ್ಲಿಗೆ ಗುಜುಗುಜುಗೊಂಡು . . . ಮಾಜುಗುವ ಬಾಹತ್ತರನಿಯೋಗದಧಿಕಾರಿ ಗಳುಮಂ (ಕರ್ಣಪಾ. ೩-೯ ಪ); ದರ್ಪಣದ ಹಡಪದ ಶಂಖದ ಬಿಂಕದ ಬಾಹತ್ತರನಿಯೋಗಂ (ಶಂಕರ. ೬-೦೭); ಭೂವರಂ ಬಹತ್ತರನಿಯೋಗವನು ಪುರಜನವಲ್ಲಮಂ ಬರಿಸಿ ಇಂತೆಂದನು (ಸಪ್ಪಕ. ೨-೯೦). **ಬಾಹತ್ತರ ನಿಯೋಗಾಧಿಪತಿ**, **ಬಾಹತರಿನಿಯೋಗಾಧಿಪತಿ** = ರಾಜ, ರಾಣಿಯರ ಎಪ್ಪತ್ತೆರಡು ಬಗೆಯ ಸೇವಾಕಾರ್ಯಗಳಿಗೆ ನಿಯಮಿತರಾದ ಗುಂಪಿನ ಪ್ರತಿಯೊಬ್ಬ ವ್ಯಕ್ತಿ : ಸರ್ವಾಧಿಕಾರಿ ಸೇನಾಧಿಪತಿ ಬಾಹತ್ತರ ನಿಯೋಗಾಧಿಪತಿ ಸಕಳಲಕ್ಷ್ಮೀಪತಿ (ಕಶಾಇ. IX-i. ೩೧೭-೯; 1225) : ಪರಮವಿಶ್ವಾಸಿ ಬಾಹತರಿನಿಯೋಗಾಧಿಪತಿ ನಿಯೋಗಯೋಗಂಧರನುಂ (ಎಕ. XVI. ತಕ್ಕ್ಸ. ೬೦-೦೧; 1235). **ಬಾಹತ್ತರನಿಯೋಗಿ**=ಬಾಹತ್ತರ ನಿಯೋಗಾಧಿಪತಿ : ಚಾಳುಕ್ಯಚಕ್ರೇಶ್ವರಕಟಕ ಬಾಹತ್ತರನಿಯೋಗಿ ನಿವಾ ಹಾರಾಧ್ಯನುಂ (ಎಇ. XV. ೫೦-೧೯ : 1060); ಮಕ್ಕಳ ದೆಸೆಯವರನೋಲ ಗಿಸುವರ ಬಾಹತ್ತರನಿಯೋಗಿಗಳ ನಂಬುವುದುಚಿತವೇ (ಕುವ್ಯಾ. ೬-೩೩).

[< ಪ್ರಾ. ಬಾಹತ್ತರ./ಸಂ. ದ್ವಿಸಪ್ತತಿ./ಹಿಂ. ಬಹತ್ತರ್ : ಮರಾ. ಬಹಾತ್ತರ್, ಬಾಹತ್ತರ್]

**ಬಾಹತ್ತರನಿಯೋಗ** 'ಬಾಹತ್ತರ' ಪರಾ.

**ಬಾಹಪ್ಪಳಿಸು** (ಕ್ರಿ). ತೋಳುಗಳನ್ನು ಚಪ್ಪರಿಸು ; ಸೆಡ್ಡುಹೊಡೆ : ಬಾಹಾಸ್ಫಾಲನಮಾಡು : ಮಲೆತು ನಿಂದು ಅಖ್ಖಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುಡೋಱಿಸಿದ ಮಲ್ಲನನುರ್ಬಿತ್ತೊಯ್ಯನೊಳಪೊಕ್ಕು (ಗಂಕ. ೨-೦೦೩ ಪ) ; ಒಲಿದು ಮುದದಲಿ ಭೀಮ ಬಾಹಪ್ಪಳಿಸಿದನು (ಕುವ್ಯಾ. ೦೦-೨೦); ಗಾಢಮುಷ್ಟಿಯೊಳೌಕಿ ಬಿಡದಲ್ಲಾಡಿಸಿದನಾ ಧನುವ ನದು ಕೈಗೂಡದಿರೆ ಕೈದೆಗೆದು ಬಾಹಪ್ಪಳಿಸಿ ಬೊಬ್ಬಿಱಿದ (ಕೊರಂ. ೦-೦೩-೦೬). [ಬಾಹು + ಅಪ್ಪಳಿಸು]

**ಬಾಹರವುಟ** (ನಾ). (?) : ಬತ್ತೀಸಕಡಿಯ ಬಾಹರವುಟದ ಗುಳವದ ಕಣಂಗಳ ಕುಳಿಶದಳಂ (ಅನಂತ. ೦೯-೬ ಪ). [?]

**ಬಾಹಲ್ಯ** (ನಾ). ಅಗಲ ; ವಿಸ್ತಾರ : ತ್ರಿಭುವನಭವನಕಳಶಾಯ ಮಾನಮುಂ ಯೋಜನದ್ವಿತಯಾಂತ್ಯಬಾಹಲ್ಯಮುಮಷ್ಟಯೋಜನಮಧ್ಯ ಬಾಹಲ್ಯಮುಂ . . . ಸ್ಫಾಟಿಕಶಿಲಾತಲದ ಮೇಗರ್ಧಯೋಜನಬಾಹಲ್ಯದಿಂ ಘನೋದಧಿಯಿರ್ಕುಂ (ಸುಕುಮಾ. ೦೦-೭೩ ಪ); ಸೀಮಂತಕಾಭಿಧಾನೇಂದ್ರಕಂ ಕ್ರೋಶೈಕಬಾಹಲ್ಯಂ . . . ತತ್ಪಕೀರ್ಣಕನಿಕರಂ ತದುಭಯಬಹಲ ಕಲಿತಸಂಖ್ಯಾಬಾಹಲ್ಯಂ (ಕತ್ಯಸ್ಪ. ೦೨೦). [ಸಂ.]

**ಬಾಹಾಬಲ** (ನಾ). ತೋಳ್ಬಲ; ಭುಜಶಕ್ತಿ: ಪಲರಾ ವಂಶಜರವನೀತಲಮಂ ಪಾಳಿಸಿದರ[ಳ]ವಿನದಟಿನ ಬಾಹಾಬಲದ ಕಲಿತನದ ಚಾಗದ ನೆಲೆಯ[ನಿಸಿ] ದುವಾರವೀರಗುಣಗಣನಿಳಯರ್ (ಕಶಇ. ೨-೨-೦೬ ; 1038). [ಸಂ.]

**ಬಾಹಾವಿಹೀನತ್ವ** (ನಾ). ತೋಳುಗಳಿಲ್ಲದಿರುವಿಕೆ ; ಭುಜಗಳಿಲ್ಲ ದಿರುವಿಕೆ : ವಿಚಾರವಿಲ್ಲದುಲಿಯಲ್ ಬಾಹಾವಿಹೀನತ್ವದಾಯಾಸಂ ಬಂದುದು (ಶಾಪಶ. ೨೯). [ಸಂ.]

**ಬಾಹಾಸ್ಫಾಲನ**, **ಬಾಹಾಸ್ಫಾಳನ** (ನಾ). (ಕದನಕ್ಕೆ ಸಿದ್ಧವಾಗಿರುವುದನ್ನು ಸೂಚಿಸಲು) ತೋಳುಗಳನ್ನು ಚಪ್ಪರಿಸುವುದು ; ಸೆಡ್ಡು ಹೊಡೆ ಯುವುದು : ಕುವರನ ಬಾಹಾಸ್ಫಾಲನರವಮುರ್ಬಿಸೆಯಗಿದು ಪಾಡಿ ಬಿಡದೊದಱುತ್ತಿರ್ದಪೊಲಾದುದು ತದ್ಗಹ್ವರನಿವಹಪ್ರಭವಾತಿಭೀಷಣಂ ಪ್ರತಿಘೋಷಂ (ಶಂರ್ಕೃ. ೩-೭೭). **ಬಾಹಾಸ್ಫಾಳನ** : 'ಬಾಹಾಸ್ಫಾಳನಂ ಗೆಯ್' ಪರಾ. [ಸಂ.]

**ಬಾಹಾಸ್ಫಾಲನಂಗೆಯ್**, **ಬಾಹಾಸ್ಫಾಳನಂಗೆಯ್** (ಕ್ರಿ). ತೋಳು ಗಳನ್ನು ಚಪ್ಪರಿಸಿಕೊಳ್ಳು ; ಭುಜಗಳನ್ನು ತಟ್ಟಿಕೊಳ್ಳು : ಸಂತಸದೆ; ಬಾಹಾಸ್ಫಾಲನಂಗೆಯ್ದು ದಿಗ್ವಲಯಂ ಮಾರ್ದನಿಯುಟ್ಟಪೋಲ್ ಗಜಱಿದಂ ಚಾಳುಕ್ಯಕಂಠೀರವಂ (ಗದಾಯು. ೬-೯೭) ; ಓರೊರ್ವರುದೀರ್ಣರೋಷಾ ವೇಶಪರುಷಪಾಟಲಿತಕಟಾಕ್ಷದಿನದರೆ ನೋಡಿ ಬಾಹಾಸ್ಫಾಲನಂಗೆಯ ಲೊಡನೆ (ಕಂಕಂ. ೯-೬೦ ಪ). **ಬಾಹಾಸ್ಫಾಳನಂಗೆಯ್** : ಅಲ್ಲಿ ಪರಿಪರಿದಾಡಿ ಮುಂತೆ ಬಾಹಾಸ್ಫಾಳನಂಗೆಯ್ದು ಕುಣಿದಾಡಿ (ಏಶಕ. ೯-೪೦).

[ಬಾಹಾಸ್ಫಾಲನ + ಕೆಯ್$_1$]

**ಬಾಹಾಸ್ಫಾಳನ** 'ಬಾಹಾಸ್ಫಾಲನ' ನೋ.

**ಬಾಹಾಸ್ಫಾಳನಂಗೆಯ್** 'ಬಾಹಾಸ್ಫಾಲನಂಗೆಯ್' ನೋ.

**ಬಾಹಿ** (ನಾ). ದೇವಸ್ಥಾನದ ಹೊರಗಿನ ಪರಿಚಾರಕರಲ್ಲಿ ಒಬ್ಬ : ಬಾಣಸದ ಅಪ್ಪಣೆ ಐದಕ್ಕಂ ಗದ್ಯಾಣಂ ಇಪ್ಪತ್ತು ಬಾಹಿಯವರು ಐದಕ್ಕಂ ಗದ್ಯಾಣಂ ಇಪ್ಪತ್ತು ಮಾಲೆಗಾಱರು ಹತ್ತೂ ಅರ್ಧಕ್ಕಂ ಗದ್ಯಾಣಂ ನಾಲ್ವತ್ತ ಎರಡು (ಎಕ. III. ತಿನ. ೭೭-೯೩ ; 1270). [?]

**ಬಾಹಿಗೆ** (ನಾ). ಹೊರಭಾಗ : ಹೊರವಲಯ : ಪೊಱಲಂ ಪೊಱಮಟ್ಟು ಪುರದ ಬಾಹಿಗೆಯನೆಯ್ದುವಾಗಳ್ ಗಾಂಗೇಯದ್ರೋಣಕೃಪವಿದುರಾದಿ ಗಳ್ ಕೊಂತಿವೆರಸೆಯ್ದೆವಂದು (ಪಂಪಭಾ. ೭-೨೦ ಪ). [< ಸಂ. ಬಾಹ್ಯಕ]

**ಬಾಹಿತ್ಥ** (ನಾ). ಆನೆಯ ಕುಂಭಸ್ಥಳದ ಕೆಳಗಿನ ಹಣೆಯ ಪ್ರದೇಶ : ಕರಮಂ ಸಂ[ಜೋ]ಗಮಂ ಕುಂಭಮನುರವಣೆಯಂ ಗ್ರಾಹಮಂ ಕರ್ಣ

ಜಾಲಾಂತರವುಂ ನಿರ್ಯಾಣವುಂ . . . ಪುಷ್ಕರವುಂ ಬಾಹಿಸ್ತ[ತ್ರ]ಮುಂ ಭೋಜನಘಟವುಮಿನ್ನಿತರಾಂತವುಂ ಕೂಡೆ ತೀರೇ ಶರಸಂಘಾತಂಗಳುಚ್ಚುಟ್ಟಿರೆ ಕಿಪದು ವಿಘಾನೀಕಂ (ಪರ್ವಚರಿ. ೯-೬೯).

[<ಸಂ. ವಾಹಿತ್ಥ. /ಶ ಸಾಸ್ಕೃತದಲ್ಲಿ 'ವಾಹಿಸ್ಥ' ಎಂಬ ಶಬ್ದರೂಪವೂ ಇರಬಹುದೆಂದು ಕೋಶಗಳಲ್ಲಿ ಹೇಳಿದೆ]

**ಬಾಹಿತ್ರ** 'ಬಹಿತ್ರ' ನೋ.

**ಬಾಹಿರ** (ಗು). ೧. ಹೊರಭಾಗಕ್ಕೆ ಸೇರಿದ. ೨. ಹೊರದೂಡಲಾದ; ಬಹಿಷ್ಕೃತವಾದ. (ನಾ). ೩. ಹೊರಭಾಗ ; ಹೊರವಲಯ : ಬಹಿಃಪ್ರದೇಶ : ಕಟ್ಟಿದ ಮುಟ್ಟು ಬಾಹಿಂಗೆ ಕಿಟ್ಟೊಡವಂದುದು (ಶಂತ್ರಪ. ೯-೯೨) ; ಬಾಹಿರದ ಪಾಳ್ದೇಗುಲದೊಳಗೆ ಸಾವಿರ ಸೊಡರು ಗಳನೆತ್ತಿ ಭಜಿಸುವ ನೇಮವಾತಂಗೆ (ಬಸವಪು. ೩೦-೩೪). ೪. ಹೊರತಾದುದು; ಸಂಬಂಧವಿಲ್ಲದುದು : ಅತೀತವಾದುದು : ಆ ತಪ್ಪುಶೀರ್ಷಾನ ವೇನೆಂದರೆ. ಭಾರತದ ಪ್ರಾಚೀನ ತತ್ತ್ವಜ್ಞಾನ ಬೌದ್ಧಿಕತತ್ತ್ವಜ್ಞಾನಕ್ಕೆ ಬಾಹಿರ ವೆಂಬುದು (ತತ್ತ್ವಜ್ಞಾ. ೯) ; ಪುಣ್ಯಪಾಪಗಳಿಂದ ಬಾಹಿರವಾದ ... ಬ್ರಹ್ಮವೆ ನನ್ನ ಗಮ್ಯ (ಪಶವ. I, ೬೪೦). ೫. ಅಯೋಗ್ಯವಾದುದು : ಬಾಹಿರವ ಕಳೆದು ಎಡೆನಾಣ್ಯವನಾಳಿದು ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವನಯ್ಯಾ (ಶಿವತ. ೨೭-೭೭). ೬. ಅನರ್ಹ : ಅಯೋಗ್ಯ: ಭರತವಂಶದ ಬಾಹಿರರು ನಿಮ್ಮರಸುಗಳು (ಕುವ್ಯಾಭಾ. ೬-೨೨) ; ಕ್ಷಿತಿಗೆ ಬಾಹಿರನಾದೆನ್ನ ಜೀವಿತವ ಹಿಡಿದಿರಲಾಜಿಸು (ಕಾಭಾರ. ೨೨-೬೩). ೭. ಕ್ಷುದ್ರ : ಅಲ್ಪ : ಹೀನ : ವಚನಿಸಿ ಪಾವದಿಹ ಬಾಹಿರರು ನಾವಲ್ಲ (ಕುವ್ಯಾದ್ರೋ. ೧-೯೦) ; ಅಂತಕನ ಬಚ್ ಫಲ್ಲಣಗೆ ಬೆದಬುವರ ಬಾಹಿರರಂತೆ ಮರಣದಲಿ (ತಿಭಾಗ. ೨-೦-೨೯). [ಸಂ.]

**ಬಾಹಿರಂಗ** (ಗು). ೧. ಹೊರಭಾಗಕ್ಕೆ ಸಂಬಂಧಿಸಿದ : ಬಾಹ್ಯದ ; ಬಹಿರಂಗದ. (ನಾ). ೨. ಹೊರಗೆ ಕಾಣುವಂಥದು : ರಾಕ್ಷಸರ ವಧೆಗಾ ಸುಲಭ ತನ್ನಿಚ್ಛೆಯಲ್ಲಿ ಜನಿಸಿಯೆ ನಳಿನನಾಭನು ಬಾಹಿರಂಗದ ರೂಪ ಧರಿಸುವನು (ತಿಭಾಗ. ೦೦-೩೬-೬೩). ೩. (ಆಲಂ) ತೋರಿಕೆ ; ಆಡಂಬರ : ಮೋಹಮುಳ್ಳೊಡೆ ತಪ್ಪತ್ಯಲಪ್ಪೂಂತ ಘನಕಟಾಪದೊಳ್ಕಡಪ ಸುವನೇ ತಂದೆ ತನಯನಂ ಬಾಹಿರಂಗದ ಶೋಕವೆಂದು ಜಜಿಪುದೆ ಲೋಕಂ (ಕೃಬಾಶ್ರ. ೦೩-೩೬). [ಸಂ.]

**ಬಾಹಿರಗಿತ್ತಿ** (ನಾ). ವೇಶ್ಯೆ : ಸೂಳೆ : ಕೃತ್ರಿಮದ ರೂಪುಗಳು ಬಾಹಿರಗಿತ್ತಿಯರು (ಬಸವು. ೪೦.೩೩). [ಬಾಹಿರ + – ಗಿತ್ತಿ]

**ಬಾಹಿರತನ** (ನಾ). ಅಯೋಗ್ಯತನ : ನಿನಗೆ ಸಾರಥಿಯಾದ ಬಾಹಿರತನವೇ ತಾನದು ಸಾಲದೇ (ಕುವ್ಯಾಕ. ೯-೩೭). [ಬಾಹಿರ + – ತನ]

**ಬಾಹಿರವಟ್ಟ** (ನಾ). ಹೊರಗಿನವರ ನಾಣ್ಯ ವಿನಿಮಯಕ್ಕಾಗಿ ಕೊಡ ಬೇಕಾದ ಸೋಡಿ : ಪಟ್ಟಣದೊಳು ಜನ ಕೊಟ್ಟ ಹಣವನೆಡವಟ್ಟ ಬಾಹಿರ ವಟ್ಟವೆಂದು ದಿಟ್ಟತನದೆ ಪೆಸರಿಟ್ಟು ವಟ್ಟವ ಕೊಂಬ ಸೆಟ್ಟಿಗಳಿರುತಿಹರಲ್ಲಿ (ಅಂಶಕ. ೩-೫೩). [ಬಾಹಿರ + ವಟ್ಟ]

**ಬಾಹಿರಸುಂಕ** (ನಾ). ಒಂದು ಬಗೆಯ ತೆರಿಗೆ : ಮೂಜಲಿ× ×ಕೊಳಲಿ ಬಾಹಿರಸುಂಕವಿಲ್ಲ (ಕಶಾಇ. XX, ೨೦೩–೦೦ ; ೧). [ಬಾಹಿರ + ಸುಂಕ$_1$]

**ಬಾಹಿರಾತ್ಮ** (ನಾ). ನೀಚವ್ಯಕ್ತಿ ; ದುಷ್ಟಾತ್ಮ : ಬಾಹಿರಾತ್ಮರು ಗೌಳತಾಪಸರೋಹಿಲುಮ್ಮನು ಹುಗದಪಗೆ ಶಿವಗೇಹದಲಿ ಹಗಲೆಯ್ದಿ ಕಾವಲನಿರಿಸಿ . . . ಬಾಗಿಲ ಕದವನುಜಿ ಮೋಹಿ ಬೀಯಗವಿಕ್ಕಿಯುನಿಬರು ಗಹಗಪಿಸಿ ನಗುತ (ಬಸವು. ೫೩-೯೬). [ಸಂ. ಬಾಹಿರಾತ್ಮನ್]

**ಬಾಹು$_1$**, ಬಾಕು$_1$ (ನಾ). ೧. (ಪೆಟ್ಟು, ಖಾಯಿಲೆ ಮೊದಲಾದುವು ಗಳಿಂದ ಉಂಟಾಗುವ) ಊತ ; ಉಬ್ಬು ; ಶೋಫ : "ಶೋಫಃ . ಶ್ವಯಥುಃ —ಈ ೨ ಬಾ(ವು) ಹು" (ಅಂಶನು. ೯೬-೪೪೯) ; ಮುರುಳ ವಾನ್ನಣೆಯಂತೆ ಬಾಹಿನ ಮೊಳ್ಳಿನಂತೆ ಸೂಳೆಯು ಕರೆಪದಂತೆ . . . ಕದೆ ಮೊಳ್ ಪೇಸುವಪಥಮುಮಶೋಭೆಯುಮಾಗದೆ ಪೋಗದು (ಕರ್ಣಾಮೃ. ೬-೧೨೨) ; ತೊಜಿಗಣಗಿಲೆಗಳನೊಂದಿರೆ ಮುಟುಗಿಸಿ ಕಟ್ಟಿಯಿಂದವುಂತದು ಕಟ್ಟಲೊಡಂ ನೆಜಿಯುಡುಗುಂ ಬಾಹು ವಿಷಂ ಪಜಿಪಡುಗುಂ (ಪಶುವ. ೦೬–೭೦). ೨. ಹುಣ್ಣು ; ವ್ರಣ : ವೇದವತಿಯು ರೋಗ ದೊಳೊಂದು ಬಾಹು ಪುಟ್ಟಿ ಪೊಲ್ಲರಲ್ಲದರಂ ಪೊಲ್ಲರೆಂದು ನುಡಿದೊಡೀ ಬಾಹಾದುದೆಂದೆಲ್ಲರ್ಗಂ ತಿಳಿಯ ಪೇಟ್ದು (ಶಂಜಾಶರಿ. ೦೬–೩೬ ವ).

**ಬಾಕು**, : ೧. ಮಂಡಲವಿತಕ್ಕೆ ಆರುವೇಗ. ಅದರಲ್ಲಿ ಮೊದಲ ವೇಗ ಮುಖ ದಲ್ಲಿಯು ದೇಹದಲ್ಲಿಯು ಹಳದಿವರ್ಣವನು ಮೈಯಲ್ಲಿ ಬಾಕನು ಉಂಟು ಮಾಡುವದು (ಅಶ್ವಶಾ. ೯-೩) ; ನತುಮಳಗೊಲದಲ್ಲಿ ಚಂದ್ರಯ್ಯಗೌಡರ ಮೈಗೆ ಬಾಕು ಬಂದಿತು (ಕಾನೂರು. ೩೯೩). 'ಬಾವು' ಪರಾ.

[ಬಾ$_1$ + – ಹು$_2$ (< – ವು$_2$)]

**ಬಾಹು$_2$** (ನಾ). ೧. ತೋಳು ; ಭುಜ : "ದೋರ್ಬಾಹು ಭುಜಬೆನಲು ತೋಳಿಂಗೆ ನಾಮಂ" (ಅಂಗರಾ. ೯೩-೬) ; ದಿಕ್ಕರಿಕರಾನುಕಾರಿಗಳಪ್ಪ ಬಾಹುಗಳಿಂದಮೋರೊರ್ವರಂ ತೆಗೆದಪ್ಪಿ (ಶಂಶಶಾ. ೯-೩೩೪); ಖಳನ ಬಾಹುವ ನೊದೆದು ತುಜಿಬಿಗೆ ನಿಲುಕಿ ಕುಸುಬಿದನು (ಕುವ್ಯಾಅ. ೨೨-೩೩). ೨. ಹನ್ನೆರಡುಅಂಗುಲದ ಒಂದು (ಉದ್ದಳತೆಯ) ಪ್ರಮಾಣ. ೩. [ಜ್ಯೋತಿ] ಆರ್ದ್ರಾನಕ್ಷತ್ರ. ೪. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮು ನಯನ ಕರ್ಣ ಕರ ಪದ . . . ಬಾಹು ಕಿವಿಗಳೆರಡಱ ನಾಮಂ (ವೃಚಿಕಾ. ೯-೨). ೫. [ರೇಖಾಗ]ರೇಖಾಕೃತಿಗಳ ಹೊರಮೈಯನ್ನು ರಚಿಸುವ ರೇಖೆ ; ಭುಜರೇಖೆ : ಎರಡು ತ್ರಿಭುಜಗಳ ಕೋಣಗಳು ಪರಸ್ಪರ ಸಮವಾಗಿದ್ದರೆ, ಅವುಗಳ ಪರಸ್ಪರ ಬಾಹುಗಳು ಒಂದೇ ಪ್ರಮಾಣದಲ್ಲಿರುತ್ತವೆ (ಗಣಿತ. ೦೯). [ಸಂ.]

**ಬಾಹುಗಡಿ** (ನಾ). ಮುರಿದ ತೋಳು ; ತುಂಡಾದ ತೋಳು : ಕಂಧರ ಗಡಿ ಬಾಹುಗಡಿ ಹಸ್ತಗಡಿ ನೇರುದದ ನಡುತೊಡೆಗಡಿಯ ವೃಂದಾರಕ ವಿರೋಧಿಗಳು ಬಿದ್ದರು ಕಾಮನಂದನಬಾಣಗಳಿಂದೆ (ತೋಶಚ. ೩೬-೨೨).

[ಬಾಹು$_2$ + ಕಡಿ$_3$]

**ಬಾಹುಗತ್ತರಿ** (ನಾ). ಮಲ್ಲಯುದ್ಧದ ಒಂದು ಪಟ್ಟು ; ತೋಳು ಗಳಿಂದ ಪಟ್ಟಿಗೆ ಸಿಕ್ಕಿಸಿ ಹಿಡಿಯುವುದು : ತಾಡಾಕಿ ಪಿಡಿದು ತೊಡೆಗಳಂ ನಡುವಂ ಚೂರ್ಕರಿಸಿ ಬಾಹುಗತ್ತರಿಯಿಂ ಗಳಪನೊತ್ತುವುದುಂ (ಮಾನಸೋ. ೬–೩೬ ವ). [ಬಾಹು$_2$ + ಕತ್ತರಿ$_2$]

**ಬಾಹುಜ** (ನಾ). ೧. ಕ್ಷತ್ರಿಯ ; ಪಾರ್ಥಿವ ; ಶ ವಿಷ್ಣುವಿನ ತೋಳಿನಿಂದ ಕ್ಷತ್ರಿಯರು ಹುಟ್ಟಿದರೆಂಬ ಪೌರಾಣಿಕನಂಬಿಕೆಯಿದೆ : ಕಾದಿ ಸಾವುದು ಮೇಣು ರಿಪುಭಟನಾದವನ ನೆತ್ತಿಯಲಿ ಸಬಳವ ಕೋದು ಕೊಂಬುದು ನೆಲನನಿದು ಬಾಹುಜರ ಮಕ್ಕಳಿಗೆ (ಕುವ್ಯಾಅ. ೦-೯) ; ವೈಹಾಳಿಯನುಟಿದು ಬಾಹುಜನಿವಹಂ ಬೀಡಂ ಪುಗುತರೆಯುಂ (ಆವುಾಕ. ೨೨-೦೮) ; ಕಾಮುವುದು ಬಾಹುಜರ ಧರ್ಮ (ನಾಗಂ. ೩೯–೦೩). ೨. ಗಿಳಿ. [ಸಂ.]

**ಬಾಹುಜಿಗೆ** 'ಬಾವುಜಿಗೆ' ನೋ.

**ಬಾಹುತಳ** (ನಾ). ಕುಸ್ತಿಯ ಒಂದು ವರಸೆ ; ಎದುರಾಳಿಯನ್ನು ತೋಳಿನ ಒಳಗೆ ಸಿಕ್ಕಿಸಿಕೊಳ್ಳುವುದು,– ಹಿಡಿಯುವುದು : ಭುಜಗ ಬಂಧಂ ತೋರಹಸ್ತಂ ಶಿರೋವಳಯಮುಂ ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಜಿದರ್ (ಕಶಶೆಂ. ೯-೬೩ ವ). [ಸಂ. ಬಾಹುತಲ]

**ಬಾಹುದಣೆ** (ನಾ). ಮಲ್ಲಯುದ್ಧದ ಒಂದು ಪಟ್ಟು,– ವರಸೆ : ಪಾಸಗೆ ವನ್ನಿಮುಟ್ಟಿ ಚಟ್ಟು ಸಿರಣವಟ್ಟಿ ಬಾಹುದಣೆ ಖಮ್ಮರಿ ಕತ್ತರಿ . . . ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಶಂಪ್ರಶು. ೩-೬೩) ;

ತಿರುಣಿ ಕುಳಾಡೆ ಬಾಹುಗ್ಗ[ದ]ಣೆ ಸುಭಾಹುಡೆ . . . ಪಟ್ಟಿಕತ್ತರೆಗಳ ನಿಪ್ಪ ಪಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ತ್ರಿಶೃಷಿ. ೨೬-೦೬). 'ದಣಾವಟ್ಟಿ' ಪರಾ. [ಬಾಹು$_{1}$ + ದಣ್ಣೆ]

**ಬಾಹುದೇಕ್ಕೆ** (ನಾ). ತೋಳಿನ ತೆಕ್ಕೆ ; ಬಾಹುಬಂಧನ : ಭರತೇಶ . . . ಶ್ರೀಹಂಸಾಭಯೆಂದೊಡನೆದ್ದು ಕುಳಿತನಾ ಬಾಹುದೆಕ್ಕೆಯ ಪಟ್ಟದರಸಿ ಆ ಹೊತ್ತಿನೊಳೆ ರಾಯನಳುವ ಕನಸ ಕಂಡು ದೇಹ ಕಂಪಿಸುತಿರ್ದಳೊಡನೆ (ಭರ. ೬೬-೦೦). [ಬಾಹು$_{2}$ + ತೆಕ್ಕೆ$_{1}$ (<ತಟಕ್ಕಿ)]

**ಬಾಹುಪುರಿ** 'ಬಾಪುರಿ' ನೋ.

**ಬಾಹುಪೂರ** (ನಾ). ತೋಳಿನನಲ್ಲಿ ಧರಿಸುವ ಒಂದು ಬಗೆಯ ಆಭರಣ; ಕೇಯೂರ : " ಬಾಹುರಿಕೆಯೆನಲ್ಕೆ ಬಾಹುಪೂರಕೆ [ಶಾಕಾಂ. ರಕ್ಷೆಗೆ] ನಾಮಂ " (ಶಾಕಿ. ೩೩); ಬಂದುಗೆಯ ಬಾಹುಪೂರಮುಮಂ ದಾಡಿಮಿಬೀಜದ ಕರ್ಣಾವತಂಸಮುಂ . . . ವಿಗೆ ಸೊಗಸಂ ಮೂಡಿಸೆ (ಗಿರಿ. ೭-೦೦ ವ); ಸಲ್ಲಲಿತಕಾಂತಿಯ ಕಳಲ್ವುವ ಭುಜಗಳಿಂದುರಗಬಾಹು ಪೂರಗಳಿಂದಲವಿರತಂ ವಿಶ್ವತೋಬಾಹು ಸಿಂಹಾಸನಾಗ್ರದೊಳು ಕಣ್ಗೊಳಿ ಸಿರ್ದನು (ಸಂಡಿಷೂ. ೩-೬). [ಸಂ.]

**ಬಾಹುಪೂರಕ** (ನಾ).= ಬಾಹುಪೂರ : ಒದವಿದ ನವ್ಯಲತಾಮಧ್ಯದ ಕುಸುಮಾಳಿಯೊಳೆ ಮೊರೆವ ಮಜೀದುಂಬಿಗಳು ಮುದದಿಂ ಕೀಲಿಪವೋಲ್ ನೀಲದ ರವೆಯುದ ಬಾಹುಪೂರಕಂಗಳನಿತ್ತರ್ (ಗಿರಿ. ೦೦-೩೬); ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹು ಪೂರಕದವೋಲ್ ಭುಜದೊಳ್ ಸಲಿವಂತು . . . ಪಾಲಿಸಿದನುರ್ವರೆಯಂ ಕಲಿ ಸೋಯಿಬಲ್ಲಹು (ಎಕ. VI. ಕಡೂರು. ೦೨-೨; 1233). [ಸಂ.]

**ಬಾಹುಪೂರಯ**(ನಾ).= ಬಾಹುಪೂರ : "ಕೇಯೂರವೆನೆ ಬಾಹುಪೂರಯ ಮಕ್ಕು" (ಮಂಗರಾ. ೦೦೦-೩೬); ಬಾಹುಪೂರಯುಮಂ ತೋಳ್ಗೆ ಕೈ ಕೊಳಿಸಿ (ಬಸವ. ೬-೦೯); ಪದಕದ ಬಾಹುಪೂರಮುದ ತೊಳತೊಳಗುವೆ ಮಾಣಿಕದ ಕರ್ಣಪೂರದ ಮಕಾಮುದ್ರಿಕೆಗಳ್ . . . ಸೊಬಗಸಡುಯಿಸ್ಚನ ಪ್ರತಿಮನವನೀಸನು (ಚಕಶಾ. ೯-೨). [<ಸಂ. ಬಾಹುಪೂರಕ]

**ಬಾಹುಬಲ** (ನಾ). ತೋಳಿನ ಬಲ ; ಭುಜಶಕ್ತಿ : ಬಾಹುಬಲವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಕಾಂತಿಪು. ೯-೪೦ ವ); ಬಾಹುಬಲ ಬಲವಲ್ಲ ದೈವ ದ್ರೋಹಿಗಳಿಗೆ (ಕುಮ್ಮಾ.ಅ. ೦೩-೦೯) ; ಭರತಖಂಡದ ಆಧುನಿಕ ದುರ್ಗತಿಗೆ ಪ್ರಧಾನಕಾರಣ ಬಾಹುಬಲದ ಅಭಾವ (ಬಿಂಕಸ.೯೬೬). [ಸಂ.]

**ಬಾಹುಬಲಿ** (ನಾ). ೧. ಬಾಹುಬಲವುಳ್ಳವನು. ೨. ಆದಿತೀರ್ಥಂಕರನ ಎರಡನೆಯ ಮಗ : ಇಂತಾದೊಡೆಮಗೆ ಬಾಹುಬಲಿಯ ಸಮರಸಂಘಟ್ಟ ದೋಹಳಮಿದು ದರಿದ್ರಂಗೆ ಹೀನಗರ್ಭದೋಹಳದಂತಾದುದು (ಆಂಪು. ೦೪-೨೦೨ ವ). [ಸಂ. ಬಾಹುಬಲಿನ್]

**ಬಾಹುಬಳೆ** (ನಾ). = ಬಾಹುಪೂರ : ಬಾಹುವಳಯ — ಬಾಹುಬಳೆ (ಕಬುದ. ೨೪೯ ಪ್ರಯೋ). [<ಸಂ. ಬಾಹುವಲಯ]

**ಬಾಹುಮುರಿ** (ನಾ). = ಬಾಹುಪೂರ : ಶರೀರಕ್ಕೆ ಆನಂದಕರವಾಗಿ . . . ಅರಸುಗಳ ಮನಸ್ಸೆಂಬ ಸಮುದ್ರಕ್ಕೆ ಕಿರೆಯೋಪಾದಿಯಲ್ಲಿ ಪ್ರಕಾಶಿಸುವುದೇ ಬಾಹುಮುರಿಯ ಗುಣಗಳು (ಸಕಶ್ಮ. ೩೯) ; ಪೂರ್ವದ ಕವಿಗಳು . . . ರಾಜರು ಧರಿಸುವ ಕಿರೀಟ, ಭುಜಕೀರ್ತಿ, ಎದೆಹಾರ, ಬಾಹುಮುರಿ . . . ಮಂಜೂರಿ ಮುಂತಾದುವುಗಳನ್ನೂ ಬಣ್ಣಿಸಿರುವರು (ಹುಬ್ಬಕ. ೬೩). [ಬಾಹು$_{2}$ + ಮುರಿ$_{3}$ (< ಮುರಿವು)]

**ಬಾಹುಮೂಲ** (ನಾ). ಕಂಕುಳು ; ಬಗಲು : "ಕಕ್ಷಂ, ಬಾಹುಮೂಲಂ- ಈ ೨ ಕೌಂಕುಳು" (ಅಲಾಮು. ೬೬-೩೬೦); ಎಮೆಯಿಕ್ಕದೆ ನೋಡುವ ನರರಮರರ ಕಣ್ಗಳೊಗೆನಗರಾಜನ ಬಯ್ಯಾಟ್ಟಮರ್ದಂ ಕೊಳೆ ತಳಿದು ನಾಭಿಮೂಲಮುಮಂ ಬಾಹುಮೂಲಮುಮಂ ಸುರವಧುವಾ (ಆಂಪು. ೯-೩೩) ; ಒಂದು ಸರಸಿಯ ತಡಿಯಲಳವಡೆ ನಿಂದು ಸಂವರಿಸಿದನು ಗದೆಯನು ಬಾಹುಮೂಲದಲಿ (ಕುಮ್ಮಾ.ಗ. ೯-೭). [ಸಂ.]

**ಬಾಹುರಕೆ** 'ಬಾಹುರಕ್ಕೆ' ನೋ.

**ಬಾಹುರಕ್ಕೆ**, ಬಾಹುರಕೆ (ನಾ). ೧. ಯೋಧರು ತೋಳಿಗೆ ರಕ್ಷಣೆ ಯಾಗಿರಲೆಂದು ತೊಡುವ ಕವಚ ; ಭುಜತ್ರಾಣ : ಗುರು ಕವಚ ಕರ್ಣಂ ಬಾಹುರಕ್ಕೆ ಸುರಸಿಂಧುನಂದನಂ ಸೀಸಕಂ (ಗದಾಯು. ೨-೨೬) ; ಎಕ್ಕತುಳಕ್ಕಿಜೆವ ವೈರಿ ಸಿನ್ನಿಕ್ಕಿದ ವಜ್ರದುಮ್ಪುರಕೆ ಸಿಂಸಕವೊನ್ನಿದ ಬಾಹುರಕ್ಕೆ ತಾವಕ್ಕಟ ತಾಯ ಉಟ್ಟ ನಿಜಿ ಬಿಟ್ಟ ಸಿರಂ ಮುಗಿದಿರ್ದ್ದ ಕಯ್ ಸಮುನ್ನಿಕ್ಕಿದ ಕೈದು ಹೊಕ್ಕ ಜಳ . . . ಆಜಿಯೊಳ್ (ಎಕ. VI. ಕಡೂರು. ೩೩-೩೯ ; 1130) ; ನುಗ್ಗಾದ ಗುಳವನು ಬಿರಿದ ಸೀಸಕ ಬಾಹುರಕ್ಕೆಯ ಮುಜಿದ ಬಲ್ಲೆಹದ ಅರೆಗಡಿದ ಬಿಲ್ಲುಗಳ . . . ಮುಕ್ಕಾದ ಕೈದುವ ತರಿಸಿ ಕಳುಹಿಸುತಿರ್ದನತಿರಭಸದಲಿ ಕಲಿದ್ರೋಣ (ಕುಮ್ಮಾ.ದ್ರೋ. ೦೫-೦೬). ೨. ಆನೆಯ ಎರಡು ಪಕ್ಕಗಳಿಗೂ ರಕ್ಷೆಯಾಗಿ ಕಟ್ಟುವ ರಂಚೆ ; ಪಕ್ಕರಕ್ಕೆ: ಮದಜಳದ ಕವಡಂ ಕದರಿ ಕೆದಱುವ ಕರ್ಣ ಚಾಮರದ ಕತ್ತಲೆಸಿರ್ದಿನ ಬಾಹ[ಹು]ರಕ್ಕೆಯುಃ (ಆಪು. ೧೯-೬ ವ). ☞ ಇದು 'ಪಕ್ಕರಕ್ಕೆ' ಎಂಬ ಶಬ್ದ ಮತ್ತು ಅರ್ಥಗಳ ಸಾಮ್ಯದಿಂದ ಆದ ಪ್ರಯೋಗವಿರಬಹುದು. **ಬಾಹುರಕೆ**: ೧. ಕರತುಷಾರದ ಲಿವರು ವೋಜೆಯ ತಿರುಹೆ ನನೆದವು ಬಾಹುರಕೆ ಹಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು (ಕುಮ್ಮಾ.ದ್ರೋ. ೩-೪೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. [<ಸಂ. ಬಾಹುರಕ್ಷಾ]

**ಬಾಹುರಕ್ಷೆ** (ನಾ). = ಬಾಹುರಕ್ಕೆ ೧ : ಜೋಡು ಸೀಸಕ ಬಾಹುರಕ್ಷೆಗಳ ಮುರುಹಿ ಬಿಗಿದನು . . . ರಥವೇಜಿದನು ಕಲಿದ್ರೋಣ (ಕುಮ್ಮಾ.ದ್ರೋ. ೯-೦೩) ; ವೀರಪಟ್ಟದ ಬಾಹುರಕ್ಷೆಗಳಿಂದ ಖಳಸಿದ (ಕಾಶಿ. ೪೦-೨). [ಸಂ. ಬಾಹುರಕ್ಷಾ]

**ಬಾಹುರಿ** 'ಬಾಪುರಿ' ನೋ.

**ಬಾಹುರಿಕೆ** (ನಾ). ಬಾಹುಪೂರ : ಕೇಯೂರ : "ಬಾಹುರಿಕೆಯೆನಲ್ಕೆ ಬಾಹುಪೂರಕೆ [ಶಾಕಾಂ. ರಕ್ಷೆಗೆ] ನಾಮಂ" (ಶಾಕಿ. ೩೩). [< ಬಾಹುರಿ]

**ಬಾಹುಲ** (ಗು). ೧. ಅನೇಕವಾದ ; ಅಧಿಕವಾದ. (ನಾ). ೨. ಹೆಚ್ಚಳ ; ಆಧಿಕ್ಯ ; ವಿಪುಲತೆ. ೩. ಕಾರ್ತೀಕಮಾಸ. ೪. ಬಾಹುರಕ್ಷೆ. ೫. ಅಗ್ನಿ. [ಸಂ.]

**ಬಾಹುಲಿ** 'ಬಾವುಲಿ$_{2}$' ನೋ.

**ಬಾಹುಲೇಯ** (ನಾ). ಕಾರ್ತಿಕೇಯ ; ಸ್ಕಂದ. [ಸಂ.]

**ಬಾಹುಲ್ಯ**, ಬಾಹುಳ್ಯ (ನಾ). ೧. ಹೇರಳ ; ಆಧಿಕ್ಯ. ೨. ಮಹತ್ತ್ವವುಳ್ಳುದು ; ಘನವಾದುದು ; ಕೃತಿ ಬಾಹುಲ್ಯವಪ್ಪುದೆಂದವ ಬುಧರು ಬಲ್ಲಂತನೇಕರೊರೆದಿಹರು (ಕೃಕ್ಷಃ. ೧.೨೨). ೩. ವಿಸ್ತಾರ : ಚಿತ್ರೆಯೆಂಬ ಧಾತ್ರಿ ಮೊದಲ್ಗೊಂಡು ಕೆಟಗಶೀತಸಹಸ್ರೋತ್ತರಲಕ್ಷಯೋಜನಬಾಹುಲ್ಯ ಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕುಂ (ಸುಕುಮಾ. ೦೦-೪೦ ವ). **ಬಾಹುಳ್ಯ**: ೧. ಸಂಗ್ರಹಣದ ಬಾಹುಳ್ಯ ನಮ್ಮ ಶಕ್ತಿಗೆ ಮೀರಿದು ದೆನ್ನಿಸಿತು (ಹಸುಪೊ. ೦೦೨). [ಸಂ.]

**ಬಾಹುವಳನ** (ನಾ). ತೋಳುಗಳ ಚಲನೆ : ಆಕೆಯಾರ ನವವಿಧ ಬಾಹು ವಳನದಿಂದೆಲಲತೆಯ ಬಳ್ಳಿ ಚಳಿಸಿದಂತೆಯುಂ . . . ಅತಿಮನೋಹರಮಾಗೆ (ಸಂದ್ರಪು. ೧೨-೦೯೮ ವ). [ಸಂ. ಬಾಹುವಲನ]

**ಬಾಹುವಳಯ** (ನಾ). = ಬಾಹುಪೂರ : ಬಾಹುವಳಯ — ಬಾಹುಬಳೆ (ಕಬುದ. ೨೪೯ ಪ್ರಯೋ). [ಸಂ. ಬಾಹುವಲಯ]

**ಬಾಹುವಿಕ್ರಾಂತ** (ನಾ). ತೋಳಿನ ಬಲ ; ಬಾಹುಬಲ : ಚಳುಕ್ಯರುನ್ನತಿ

ಯದಾಗ್ರ್ಗಂ ಬನ್ನಸಲ್ಪಾರದೆಂಬಿನೆಗಂ . . . ಭೂತಳಮನಾಳ್ದರ್ಬಾಹು ವಿಕ್ರಾಂತದಿಂ (ಶಾಸ. ೨-೨-೨೬ ; 1053) ; ಪತಿಗೇಕಚ್ಛತ್ರದಿನ್ನಾಳಿಸನೆ ವಸು[ಧೆ]ಯಂ ಬಾಹುವಿಕ್ರಾನ್ತದಿಂ ಚಾಳಿತ ಚೋಳಂ (ಶಾಸ. ೯-೨-೦೫೦ ; 1058). [ಸಂ.]

**ಬಾಹುವಿಕ್ಷೇಪ** (ನಾ). =ಬಾಹುವಳನ : ಮೂಪತ್ತೆರಡುಂ ತೆಱದ ಚಾರಿ ಚಾರಿಸ ತವಮ್ದೊಳ್ ಪತ್ತಿಸಿದುವು ದೃಷ್ಟಿಗಳಂ ಪತ್ತುಂ ತೆಱನೆನಿಪ ಬಾಹುವಿಕ್ಷೇಪಂಗಳ್ (ಮಲ್ಲಿಪು. ೬-೩೦). [ಸಂ.]

**ಬಾಹುವೀರ** (ನಾ). ತೋಳಿನ ಬಲದಿಂದ ಶೂರನೆನಿಸುವವನು ; ಭುಜ ಬಲಶಾಲಿ: ಕ್ಷತ್ರಿಯನು ಬಾಹುವೀರ, ವಚನವೀರನಲ್ಲ (ವಚನ. ೬೮). [ಸಂ.]

**ಬಾಹುಳ್ಯ** 'ಬಾಹುಲ್ಯ' ನೋ.

**ಬಾಹೆ** (ನಾ). ೧. ಹೊರಭಾಗ ; ಹೊರವಲಯ : ಕೊಂದು ದನುಜನ ಪೆಣನ ಬಂಡಿಯು ಹಿಂದೆ ಬಂಧಿಸಿ ಪುರದ ಬಾಹೆಗೆ ತಂದುಬಿಟ್ಟನು (ಕುಮ್ಯಾಕ. ೦೦-೩೯) ; ಅರಸ ಪುರದ ಬಾಹೆಯೊಳಿರೆ ಜೀವಂಧರ ಪರಸೇನೆಯ ತಱಿದು ತಱಿವಿಂಡ ತಾನೊರ್ವನೆ ತಿರುಪುವನೆಂದಿರದೆ ನೆನೆದನೆದೆಯೋಳಗೆ (ಜೀವಂಸಾ. ೨೩-೨೯) ; ನಿಜ ಚತುರಂಗವನು ನೆರಹಿದನು ನೃಪನಾ ಪುರದ ಬಾಹೆಯಲಿ (ಉರಿರಾ. ೬-೩೩). ೨. ಬದಿ ; ಮಗ್ಗುಲು ; ಪಾರ್ಶ್ವ: ತನ್ನಿಳಯವು ನ್ನೊಳಪುಗುವ ಕಾಂತೆಯರ ಹಂತಿಯೆಸೆಯುತ್ತು ಬಸದಿಯ ಬಾಹೆಬಾಹೆ ಗಳೊಳು (ಸೋಬಸ. ೪-೯೨) ; ತುರಗವ್ರಸಾವಿರಸಹಿತ ಮೋಹರಿಸಿ ನಿಂದನು ಶಕುನಿ ಥಟ್ಟಿನ ಬಲದ ಬಾಹೆಯಲಿ (ಕುವ್ಯಾಗ. ೦-೪) ; ತನ್ನಯ ಬೆರಲು ಮಣಿಮುದ್ರಿಕೆಯು ತೆಗೆದಂಬುರುಹಮುಖಿ ಸುತಗಿಟ್ಟು ತೂಲಗಿ ದೊಳೊಂದು ಬಾಹೆಯಲಿ (ಜೀವಂಚ. ೩-೩೪). [< ಸಂ. ಬಾಹ್ಯ]

**ಬಾಹ್ಯ** (ಗು). ೧. ಹೊರಗಿನ ; ಹೊರಗಡೆ ಇರುವ : ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ ನೆಗಟ್ದು (ವಡ್ಡಾರಾ. ೦-೯). ೨. (ಊರಿನ ಅಥವಾ ಪ್ರದೇಶದ) ಹೊರಗಿರುವ ; ಹೊರಭಾಗದಲ್ಲಿರುವ. ೩. ಬಹಿಷ್ಕೃತವಾದ : ಹೊರದೂಡಿದ ; ನಿಷಿದ್ಧವಾದ. (ನಾ). ೪. ಹೊರಭಾಗ : ಹೊರವಲಯ : ಭರದಿ ನಂದಿಗ್ರಾಮ ಬಾಹ್ಯದಲುರಿವ ದಳ್ಳುರಿಗೆಡು ಚಿಂತೆಯ ತಾಳ್ದ ಹನುಮಂತ (ತೊರಾಂ. ೯೯-೩೫). ೫. ಹೊರಗಡೆ ; ಬಹಿರಂಗ : ಒಳಗೆ ಪೊಳೆದನು ಬಾಹ್ಯದಲಿ ಪ್ರಜ್ವಲಿಸಿದನು (ಕುಮ್ಯಾಉ. ೯-೬೪) ; ಬಿಡು ಬಾಹ್ಯದೊಳು ಡಂಭವ (ಕೃಕವ. ೬೨-೭ ಪಲ್ಲವಿ). ೬. ಹೊರಗಿನದು ; ಬಹಿರಂಗಕ್ಕೆ ಸಂಬಂಧಿಸಿದುದು : ಬಾಹ್ಯವಾದ ಉಪಪ್ಲವ ಒದಗಿದಾಗ ಕೌಟಿಲ್ಯಾದಿ ನೀತಿಜ್ಞರು ರಾಜರಿಗೆ ಮಾರ್ಗದರ್ಶಿಗಳಾಗಿದ್ದಾರೆ (ಪುಷ್ಪಾಂ. ೧೦೬ ಅಡಿ೪). ೭. ಹೊರಗಿನವನು ; ಅಪರಿಚಿತ ; ಹೊಸಬ. [ಸಂ.]

**ಬಾಹ್ಯತಪ** (ನಾ). [ಜೈನ] ದೇಹವನ್ನು ದಂಡಿಸಿ ಕರ್ಮನಿರ್ಜರೆಯನ್ನು ಸಾಧಿಸುವ ತಪಸ್ಸು : ಅಂತು ಬಾಹ್ಯತಪದೊಳಸಹ್ಯಮಾನಸಾಹಸನಾಗಿ ಮತ್ತಮುತ್ತರತಪದೊಳುತ್ತರೋತ್ತರಂ ನೆಗಟ್ದು (ಸುಕುಮಾ. ೯-೦೯ ವ) ; ಅನಶನ ಅವಮೋದರ್ಯ ವೃತ್ತಿಪರಿಸಂಖ್ಯಾನ ರಸಪರಿತ್ಯಾಗ ವಿವಿಕ್ತಶಯ ನಾಸನ ಕಾಯಕ್ಲೇಶ ಎಂಬಿವಾಱುಂ ಬಾಹ್ಯತಪಂಗಳು (ಚಾರಿ. ೩೬೬). [ಸಂ.]

**ಬಾಹ್ಯದರ್ಶನ** (ನಾ). ಹೊರಗಿನ ನೋಟ ; ಹೊರಗಣ್ಣಿಗೆ ಗೋಚರ ವಾಗುವ ದೃಶ್ಯ : ಭಯಾಕುಳಿ . . . ಬಾಹ್ಯದರ್ಶನಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿಪೋಗಿ ತಣ್ಣೆಲರಲೆಪಿಂದೆ ಮೂರ್ಛೆ ದಿಳಿದಳ್ (ಶಂರಾಮಾ. ೯-೦೦೦). [ಸಂ.]

**ಬಾಹ್ಯಪ್ರದರ್ಶನ** (ನಾ). ಹೊರಗೆ ಗೋಚರವಾಗುವಂತೆ ಮಾಡುವಿಕೆ; ಪ್ರಕಟವಾಗಿ ತೋರ್ಪಡಿಸುವಿಕೆ: ಒಳಿತಿಗೆ ಬಾಹ್ಯಪ್ರದರ್ಶನಯೋಗ್ಯ ವಾದ ಶಕ್ತಿಯಿಲ್ಲವಾದರೂ ಆಂತರಿಕಶಕ್ತಿಯಿದೆಯೆಂದು ಸಮಾಧಾನಪಟ್ಟು ಕೊಳ್ಳಬಹುದು (ಅಧ್ಯಶ್ರೀ. LXVII ೬೦೬೪). [ಸಂ.]

**ಬಾಹ್ಯಪ್ರಪಂಚ** (ನಾ). ಹೊರಜಗತ್ತು : ಹಿಮಚೂಳಂ ಯಮಕೋಪ ಲಿಲನುಪಸರ್ಗಂಗೆಯ್ಯೆ ಬಾಹ್ಯಪ್ರಪಂಚಮನಾತ್ಮಾಶ್ರಿತಮಂ ಬಿಸುಟ್ಟರ್ (ಶಾಂತಿಪು. ೯-೨೩). [ಸಂ.]

**ಬಾಹ್ಯಪ್ರಮಾಣ** (ನಾ). ಹೊರಗಿನ ಆಧಾರ; ಬೇರೆಯ ಪ್ರಮಾಣ : ಬಾಹ್ಯಪ್ರಮಾಣಗಳಿಂದ ಆಂಡಯ್ಯನ ಕಾಲಪರಿಮಿತಿಯು . . . ೧೨೬೩ ಎಂದಂತಾಯಿತು (ಕಾಪಿಸ. ೦೫೩). [ಸಂ.]

**ಬಾಹ್ಯಮತಿ** (ನಾ). ಇಂದ್ರಿಯಗೋಚರವಿಷಯಗಳಲ್ಲಿರುವ ಆಸಕ್ತಿ : ಅನಘನೊಳ್ ನಿರವಸ್ಥನೊಳೊಡವೆರೆದು ಬಾಹ್ಯಮತಿಯಜಿತೆರ್ದಂ (ಕಬಿಕಾ. ೨-೧೦೩). [ಸಂ.]

**ಬಾಹ್ಯರತ** (ನಾ). [ಕಾಮಶಾ] ಸಂಭೋಗಕ್ಕೆ ಪೂರ್ವಭಾವಿಯಾಗಿ ಕಾಮೋದ್ದೀಪನಕ್ಕಾಗಿ ನಡೆಸುವ ನಖಕ್ಷತ, ದಂತಕ್ಷತ, ಆಲಿಂಗನ, ಚುಂಬನಾದಿ ಕ್ರಿಯೆ : ಆಲಿಂಗನ ಚುಂಬನ ದಂತಕ್ಷತ ತಾಡನ ಚಪೇಟನ ಆಕರ್ಷಣ ಮರ್ದನ ಮೊದಲಾದ ಕೃತ್ಯಗಳೆಂಬ ಬಾಹ್ಯರತವಂ ತಿಳಿದು ಸುರತವಂ ಮಾಳ್ಪುದು (ಕಾಮಶಾ. ೨೨೦); ಈ ಉಭಯರತದೊಳು ಬಾಹ್ಯರತ ಮೊದಲು ಮಾಡಬೇಕು ಆ ಬಾಹ್ಯರತದೊಳು ಆಲಿಂಗನ ಮೊದಲು ಮಾಡಬೇಕು (ಕಾಕುಶಾ. ೨೨೦). [ಸಂ.]

**ಬಾಹ್ಯವ್ಯಾಪಾರ** (ನಾ). (ದೇಹದ) ಹೊರಗಿನ ಚಟುವಟಿಕೆ : ನಿದ್ದೆಯ ಹೊತ್ತಾಯಿತೆಂದರೆ ಶರೀರದ ಬಾಹ್ಯವ್ಯಾಪಾರಗಳು ಮೆಲ್ಲನೆ ನಿಲ್ಲುತ್ತವೆ (ಮುಂಬಯಿ. ೯-೧೫೦). [ಸಂ.]

**ಬಾಹ್ಯಶೌಚ** (ನಾ). ದೇಹದ ಹೊರಭಾಗದ ಶುದ್ಧಿ ; ಬಹಿರಂಗಶುದ್ಧಿ : ಮೃತ್ತಿಕಾಜಲಾದಿಗಳಿಂದ ಶರೀರದ ಮಲವಂ ನಿವೃತ್ತಿಸುವುದರ ಪೆಸರು ಬಾಹ್ಯಶೌಚವೆನಿಸುವುದು (ಮುಮುಕ್ಷುದ್ವಿತೀಯಸೋಪಾನ) ಮೃಜ್ಜಲ ದಿಂದಾ ಮಾಡೋಣ ಯಿದು ಬಾಹ್ಯಶೌಚವು (ಉತ್ಕೃಷ್ಟ. ೨೨-೨). [ಸಂ.]

**ಬಾಹ್ಯಸಂಭಾವ್ಯತೆ** (ನಾ). ಗ್ರಂಥಸಂಪಾದನೆಯಲ್ಲಿ ಕವಿಪಾಠವು ಅಕ್ಷರ ಭ್ರಾಂತಿ ಇತ್ಯಾದಿ ವಿಧಾನಗಳಿಂದ ಹೇಗೆಯೋ ಕೆಟ್ಟಿದೆ ಎಂಬುದನ್ನು ಸ್ಪಷ್ಟವಾಗಿ ತೋರಿಸುವಿಕೆ : ಯೋಜಿತಪಾಠಾಂತರವು . . . ಇತರ ಪಾಠಾಂತರಗಳೊಡನೆ ಸಾಂಪ್ರದಾಯಿಕ ಅಥವಾ ಪರಂಪರಾಗತಪಾಠದಲ್ಲಿ ಉಳಿದಿರುವಂಥದಾಗಿದ್ದರೆ ನಮ್ಮ ಊಹಾಪಾಠಕ್ಕೆ ಅಂತಸ್ಸಂಭಾವ್ಯತೆ ಮತ್ತು ಬಾಹ್ಯಸಂಭಾವ್ಯತೆ (Extrinsic probability) ಈ ಎರಡರ ಬೆಂಬಲವೂ ಇದೆಯೆಂದು ಹೇಳಬಹುದು (ಭಾರಕ. ೭೩). [ಸಂ. ಬಾಹ್ಯಸಂಭಾವ್ಯತಾ]

**ಬಾಹ್ಯಸೌಂದರ್ಯ** (ನಾ). ಹೊರನೋಟಕ್ಕೆ ಕಾಣುವ ಚೆಲುವು : ಮಾನವನು ಸತ್ಯದ ಕಡೆಗೆ ಗಮನಿಸದೆ ಕೇವಲ ಬಾಹ್ಯಸೌಂದರ್ಯಕ್ಕೆ ದಾಸನಾಗಿ ಅದರ ವ್ಯಾಮೋಹದಿಂದ ನರಳುತ್ತಿರುವನು (ಕಲ್ಯಾ. ೧). [ಸಂ.]

**ಬಾಹ್ಯಸ್ಥ** (ಗು). ೧. ಹೊರಗಿರುವ. (ನಾ). ೨. ಹೊರಗೆ ಇರುವುದು; ಹೊರಗೆ ಗೋಚರವಾದುದು: ತೀರ ಬಾಹ್ಯಸ್ಥವೂ ವ್ಯಕ್ತವೂ ಗಾಢವೂ ಆದ . . . ಆಂಗ್ಲಕಾವ್ಯಗಳನ್ನು ವಿವೇಚಿಸಿದ್ದಾರೆ (ನವ್ಯಕಾ. ೦೦೬). [ಸಂ.]

**ಬಾಹ್ಯಾರ್ಥಸಿದ್ಧಿ** (ನಾ). ಪ್ರಕೃತಕ್ಕೆ ಸಂಬಂಧಪಡದ ಅರ್ಥವನ್ನು ಉಂಟುಮಾಡುವುದು, – ವ್ಯಕ್ತಪಡಿಸುವುದು : ವಿಜ್ಞಾನವ್ಯತಿರಿಕ್ತ ಸಾಧನವಾಕ್ಯೋಪನ್ಯಾಸದಿಂ ಸಾಧಿಸುವೊಡಾ ವಾಕ್ಯಮೆ ಬಹಿರರ್ಥ ಮಪ್ಪುದಱಿಂ ಬಾಹ್ಯಾರ್ಥಸಿದ್ಧಿಯುಕ್ಕುಂ (ಆದಿಪು. ೨-೦೦ ವ). [ಸಂ.]

**ಬಾಹ್ಯಾಳಿ** (ನಾ). ಕುದುರೆಗಳನ್ನು ಓಡಾಡಿಸುವ ಸ್ಥಳ; ಕುದುರೆ ಸವಾರಿಯ ಮೈದಾನ, – ಬಯಲು : ಸಂಚಾರಿತತುರಗಪಂಕ್ತಿಯಳ ಗ್ರಾಹ್ಯಾಳಿಗಳೆನಿಪ ಬಾಹ್ಯಾಳಿಗಳುಂ ಅನುದಿನವಿನೋದಿತಾನೇಕಕರಿಗಳೆನಿಸು ವಾನೆವಱಿಗಳುಂ . . . ತನಗನೂನಶೋಭೆಯುಂ ಪಡೆಯೆ (ಶಾಂತಿಪು. ೯-೨೨ ವ). 'ವೈಹಾಳಿ' ಪರಾ. [<ಸಂ. ವಾಹ್ಯಾಲೀ]

**ಬಾಹ್ಯೋಪಕರಣ** (ನಾ). ಹೊರಗಿನ ಸಾಧನ: ಕೃಷ್ಣಶುಕ್ಲಮುಂತಲು ಅಭ್ಯಂತರೋಪಕರಣಮಕ್ಕುಂ ಅಕ್ಷಿಪತ್ರಪಕ್ಷ್ಮದ್ವಯಾದಿ ಬಾಹ್ಯೋಪಕರಣಾ (ಕರ್ನ್ನಕ್ರಿ. ೯೬). [ಸಂ.]

**ಬಾಹ್ಯೋಪವನ** (ನಾ). (ಊರಿನ) ಹೊರವಲಯದಲ್ಲಿರುವ ತೋಟ: ಹಯವರಸಮಾರೂಢನಾಗಿ . . . ಬಾಹ್ಯೋಪವನಕೆ ಬರಲು (ಕೃಹುಕಥಾ. ೨೯-೯೯). [ಸಂ.]

**ಬಾಹ್ಲಿಕ** (ನಾ). ೧. ಒಂದು ದೇಶದ ಹೆಸರು: ದ್ರವಿಳ ಕಾಶ್ಮೀರ ಬಾಹ್ಲಿಕ ಭೋಟಭೂ ಕಾಂಬೋಜ . . . ಕೇರಳಮುಖಾಪಾರದೇಶಂ ಗಳೊಳಿಸವ ಜಂಗಮವು ಭಕ್ತಾಳಿ (ಬಸವ. ೬-೧೯). ೨. ಆ ದೇಶದ ರಾಜ ಮತ್ತು ಪ್ರಜೆ: ಬಾಹ್ಲಿಕ ಶೂರಸೇನ ಕಳಿಂಗ ಸಲಿ ಗಾಂಧಾರ . . . ದಂತವಕ್ತ್ರರು ಬಂದರೊಗ್ಗಿನಲಿ (ಕುವ್ಯಾಸ. ೬-೪). ೩. ಆ ದೇಶದ ಕುದುರೆ. ೪. ಕುಂಕುಮಕೇಸರಿ. ೫. ಇಂಗು. [ಸಂ.]

**ಬಾಹ್ಲೀಕ** (ನಾ). ೧.=ಬಾಹ್ಲಿಕ ೧: ಲಾಳಚೋಳವರಾಳಯವಬಂಗಾಳ ಬಾಹ್ಲೀಕ . . . ನಿಷಧ ವಿದರ್ಭಧರಣೀಪಾಲಸಂತತಿ ಸಂದಣಿಸಿದುದು ಸಾಕೇತನಗರಿಯಲಿ (ತೊರರಾ. ೦-೬-೦೬). ೨.=ಬಾಹ್ಲಿಕ ೨: ಬಾಹ್ಲೀಕ ಸ್ವಾಂತ ಕುಂತ ಪರಾಕು (ಹರಿಕಥಾ. ೩-೦ ವ). ೩.=ಬಾಹ್ಲಿಕ ೩: ಬಿಸಕಾಂಭೋಜಕ ಬಾಹ್ಲೀಕ ಸೈಂಧವಾರಟ್ಟ ತ್ರಿಶಿಲಂ ವಾನೇಯಂ ಪೆಸರ ಕ್ಷೇತ್ರದ ಹಯಕಾ ಪೆಸರೆ ಪೆಸರ್ (ಅಭಿಧಾ. ೬-೬೬). ೪. = ಬಾಹ್ಲಿಕ ೪: "ಕುಂಕುಮಮಂ, ಕಾಶ್ಮೀರಜನ್ಮ, ಅಗ್ನಿಶಿಖಂ, ವರಂ, ಬಾಹ್ಲೀಕಂ . . . ಚಂದನಂ—೧೧ ಕುಂಕುಮದ ಹುವ್ವಿನ ಹೆಸರುಗಳು, ಕುಂಕುಮಕೇಸರಿ" (ನಿಘಂ.೬೦. ೨೦೩). ೫. = ಬಾಹ್ಲಿಕ ೫: "ಸಹಸ್ರವೇದಿ, ಜತುಕಂ, ಬಾಹ್ಲೀಕಂ, ಹಿಂಗು, ರಾಮಠಂ—೫ ಹಿಂಗು, ಇಂಗಿನ ಪೆಸರುಗಳು" (ನಿಘಂ.೬೦. ೨೬೫). [ಸಂ.]

**ಬಾಳ್₁** 'ಬಾಟ್₁' ನೋ.

**ಬಾಳ್₂** 'ಬಾಟ್₃' ನೋ.

**ಬಾಳ್₃**, ಬಾಳ₁, ಬಾಳಿ, ಬಾಳು₃ (ನಾ). ೧. ಕತ್ತಿ: ಖಡ್ಗ: ಬಾಳಾ ಮೇಲ್ಮಿಖ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ಸಲ್ವಪೋಲ್ ಸಾಲಾಪ್ಯಾಲ ತಪೋಗ್ರದಿನ್ತು ನಡದೊಂ ನಾಲ್ಕಿಣ್ಣುಸಂವತ್ಸರಂ. . . ಪೆಗ್ಗೋರಪಂ ಸಮಾಧಿ ನೆಱೆದೊನ್ (ಎಪಿ. II, ೨೨-೦; ಕು. 700); ನಾಗಗುಟ್ಟರಸರ್ . . . ಬಾಳಂ ಕಿಟ್ಟು ನಡದು ಪಲರನಿಱಿದು ಸತ್ತೊಡೆ (ಎಪಿ. X. ಕೋಲಾರ. ೨೦೦-೦೦; ಕು. 890 ?); ಮಸೆದುದು ಮದನನ ಬಾಳ್ (ಶಂಕಥಾ. ೩-೯೬). ೨. ಉಳುಮೆ; ವ್ಯವಸಾಯ: 'ಇರ್ವಾಳ್' ಪರಾ. ೩. ನೇಗಿಲಿನ ಗುಳ. ಬಾಳ್ಕು: ೪. ಕಾಳಗ; ಯುದ್ಧ; ಕದನ: ಶ್ರೀ ಜುದ್ದನ್ . . . ಊರೊಳ್ವಲ್ಲಹನಾ ಬಾಳದುಳಿಱಿದು ವಿಟ್ಟೋನ್ (ಎಪಿ. XVI. ಶುಹುಕೂ. ೯೦-೨; ಕು. 780); ಬಲ್ಲವರಸರ ಬಾಳದುಳ್ . . . ಬಾಗೆಯ ಪೆಱದು ವಿಟ್ಟುನ್ (ಎಪಿ. XVI. ಶುಹುಕೂ. ೯೩-೪; ಕು. 780). ಬಾಳ: ೪. ಬಾಗೆಯೂರ ಬಲ್ಲಹನೇಱ ನೊಳ್ಳಿಯಾನ್ ಪೈರಾಳ್ ಸಭಪದ ರುಳ್ ಕೊವುಳವೂರ ಬಾಳಿಯೊಳ್ ಪೊಣ್ಣಿಡಿಕ್ಕಿಜ್ಜಿಯ ತಮ್ಮಳಿ ಪಡೆ ಯುಳಿಱಿದು ಸತ್ತನ್ (ಎಪಿ. XVI. ಶುಹುಕೂ. ೯೨-೧೦; ಕು. 780). **ಬಾಳು₃**: ೧. ಸಂಗನ ಶರಣರ ಭಕ್ತಿ ಬಾಳಬಾಯ ಧಾರೆ (ಬಸವ. ೨೦೦); ಬಾಳ ಬಾಚಿದಳವಳನಗೆ ಗೋಣಾಳಿಗೊಡ್ಡಿದ ಬಂದಿಯಲಿ ತುದಿ ನಾಲಗೆಗೆ ನರಸುಕ್ಕನಿಕ್ಕಿದಳವಳು ತನಗೆ (ತೊರರಾ. ೨-೨-೩೮); ತೋಳ ನೀಡಿದಳು ಮನ್ಮಥನೊಱೆಯಿಂದುರ್ಚಿ ಬಾಳ ನೀಡಿದನೊಯಿಂಬಂತೆ (ಛಲಕ. ೦೨-೬೬).

**ಬಾಳ್ವಾಳ್** (ದ್ವಿರುಕ್ತಿ): ಬಾಳ್ವಾಳ್ಗಳ ಘಟ್ಟಣೆಯೊಳ್ ಬಳ್ವಳ ಬಳಿ ದೊಗದು ನೆಗೆವ ಕಿಡಿಗಳ ಬಂಬಲ್ಗಳ್ವೆರಸು ಪೊಳೆದು ನೆಗೆದುದು ಬಾಳ್ವೊಗೆ (ಶಂಕಥಾ. ೧೦-೩೯). **ಬಾಳಬಟ್ಟು** = (?): ಆತನ ಕಲದೊಳ್ ಬಾಳ ಬಟ್ಟುಂ [ಪಾಠಾಂ. ಬಾಳಪಟಂ] ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪ ಕುಮಾರರಣಿಯ ನಡುವೆ ಪೊನ್ನ ರಥಮನೇಱ ನಿಂದಾತನೆನ್ನ ತಮ್ಮಂ ಕೃತವರ್ಮಂ (ಶಂಕಥಾ. ೦೦-೩೭ ವ). **ಬಾಳವಣ್ಣ**, ಬಾಳ ಬಣ್ಣ=(ತೊಳೆದ) ಕತ್ತಿಯ ಬಣ್ಣ: ನೀಲಿಬಣ್ಣ: ತೊಡರ್ದಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ ನೊಸಲೊಳೊಡಂಬಡುವರಳೆಲೆಯಿಮಿಱಿಂ ಚೆಲ್ವಿಡಿದಿರ್ದುದು ಬಾಳಕೇಳಿ ಧವರ್ಮಾತ್ಮಜನಾ (ಶಂಕಥಾ. ೨-೪); ಪುಳಿ ಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಂ (ಶಂಕಥಾ. ೬-೬೦). **ಬಾಳುಗತ್ತಿ** = ಉದ್ದವಾದ ಕತ್ತಿ; ನೀಳವಾದ ಖಡ್ಗ: ಜಾಡಿಯ ಹರಿಗೆ ಸಿಂಗಾಡಿ ಕಠಾರಿ ನೀಡುವ ಬಾಳುಗತ್ತಿಗಳ ಪಾಡುಪಂಥದ ಸುಭಟರು ಕೋಟೆಯನಾಗ ರೂಢಿಯೊಳಗೆ ಕಾದಿಹರು (ಕಂಸಬ. ೦೦-೧೯೬). ● ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ. ಕೊಡವ ಭಾಷೆಯಲ್ಲಿ 'ಬಾಳಿಕತ್ತಿ' ಶಬ್ದಕ್ಕೆ 'ಉದ್ದವಾದ ಕತ್ತಿ' ಎಂಬರ್ಥವಿದೆ.

[ದೇ.॥ ತಮಿ. ಮಲ. ಕೋತ. ವಾಳ್; ತುಳು. ಬಾಳು; ತೆಲು. ವಾಲು]

**ಬಾಳ₁** 'ಬಾಳ್₃' ನೋ.

**ಬಾಳ₂**, ಬಾಳು₄ (ನಾ). ಒಂದು ಬಗೆಯ ಸಂಗಂಧದ ಬೇರು; ಮುಡಿವಾಳ; ಲಾಮಂಚ: "ಬಾಳಮೊಂದುಂ ಲಾಮಂಚಂ" (ಕಕಶಾ. ೩೪-೦೬೪); ಕುಳಿರ್ಪ ಬಾಳದ ಬೇರ್ಗಳ ಕೇರ್ಗಳಿಂ . . . ಒಪ್ಪಿ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಅಾದಂಣಾ. ೧೩೬); ಬಾಳದ ಕಂಪು ಬಾಳ್ಪನುಗುವಾಜಿಡಿಯಾಜಿಷಿ ಹಂಸೆ ಹಿಂಸ . . . ಬಾಲಿಕಗಾದುದೀ ವಿರಹ ದಿಂದೆ (ಉದ್ಭಟ. ೬-೩೬). 'ಬಾಳವೇರ್' ಪರಾ. **ಬಾಳು₄**: ಬಾಳು ಜವಾಜಿ ಕುಂಕುಮಕೇಸರಿ ಅಡಕೆಯ ಹೇರು ಮೆಣ್ಣಸ ಭಾರ . . . ಮುನ್ನಾದ ಸಮಸ್ತಬೆಪಹಾರಕೆ (ಎಪಿ. XII, ತಿಪಟೂ. ೭೬-೧೯; 1370). 'ಕರಿಯ ಬಾಳ', 'ಮುಡಿವಾಳ' ಹೋ. ● ಸಂಸ್ಕೃತದ 'ಬಾಲ' ಶಬ್ದಕ್ಕೆ ಮೇಲೆ ಸೂಚಿಸಿರುವ ಅರ್ಥವು ಕೋಶಗಳಲ್ಲಿ ಸಿಗುವು ದಾದರೂ ಇದನ್ನು ದೇಶ್ಯಶಬ್ದವೆಂದು ಪರಿಗಣಿಸಲಾಗಿರುವುದ ರಿಂದ 'ಬಾಲ' ಉಲ್ಲೇಖದ ಜೊತೆಯಲ್ಲಿ ಇದನ್ನು ಪರ್ಯಾಯ ಪದವಾಗಿ ಕೊಟ್ಟಿಲ್ಲ.

**ಬಾಳ₃** (ನಾ). ಹಣೆ; ನೊಸಲು: "ಬಾಳ–ಭಾಲ=ಹಣೆ" (ಕರ್ನ್ನಕೋ. ೬೦); ಒಪ್ಪಿದುದೆನಸುಂ ಕಂದರ್ಪನ ವಿಮಳರುಚಿವಿಶಾಲಂ ಬಾಳಂ (ಕುಸುಮಾ. ೬ ೦೦೩); 'ಬಾಳದೊಳೆಸೆವ ಮುತ್ತಿನ ಬೊಟ್ಟ ತಳೆದಿಹ ಸೀಲಾ ಳಿಕೆಯರೊಪ್ಪಿದರು (ಕುಮಾರ. ೬-೦೦೩). [<ಸಂ. ಭಾಲ]

**ಬಾಳ₄** 'ಬಾಲ₁' ನೋ.

**ಬಾಳ₅** 'ಬಾಲ₂' ನೋ.

**ಬಾಳಂಗೆಣಸೆ** (ನಾ) ಒಂದು ಬಗೆಯ ಸಸ್ಯ: ಬಾಗುಂಜಿಬೀಜ, ಗೀರು ಗೊಟ್ಟೆ, ಬಾಳಂಗೆಣಸೆ ಇವಂ ಸರಿಯಾಗಿ ತೂಗಿಕೊಂಡು . . . ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಗ ಮೂರು ತೂಕವನ್ನು ಕಲಸಿ ಕೊಡುವುದು (ಜಿವ್ವ. ೪೦). [?]

**ಬಾಳಂತಪಣ** (ನಾ). ೧. ಹೆರಿಗೆ; ಪ್ರಸೂತಿ: ಫಲ್ಗೂಬಾಯಿ ಕಮಲೆ ಯನ್ನು ಮುಂಬಯಿಗೆ ಆಮಂತ್ರಿಸುತ್ತ . . . ದವಾಖಾನೆಯಲ್ಲಿಯೇ ಬಾಳಂತಪಣ ಮಾಡಿಸಿಕೊಳ್ಳಲು ಸಲಹೆಯಿತ್ತಳು (ಶ್ರೀಚಾರ. ೧೯೨). ೨. ಬಾಣಂತಿಗೆ ಮಾಡುವ ಶುಶ್ರೂಷೆ: ಬಾಣಂತನ.

[ ← ಮರಾ. ಬಾಳಂತಪಣ ]

**ಬಾಳಂತಿ**, ಬಾಣಂತಿ, ಬಾಣತಿ (ನಾ). ಹೆರಿಗೆಯಾಗಿ ಇನ್ನೂ ಆರೈಕೆ ಯನ್ನು ಹೊಂದುತ್ತಿರುವವಳು; ಹಡೆದವಳು; ಪ್ರಸೂತೆ:

ಬಾಳಂತಿಗೆ ಮಂತ್ರಪೂರ್ವಕಮುಂ ಸುಖೋಷ್ಣಮುಮಪ್ಪ ಜಲಂಗಳಂ ಮಿಯಿಸಿಜೀದು (ಕಾವ್ಯಾವ. ೯೨). **ಬಾಣಂತಿ** : "ಪ್ರಸೂತೆಯೆನೆ ಬಾಣಂತಿ ಯುಕ್ಕು" (ಮಂಗರಾ. ೯೨-೬): ಕಳಮಾಕ್ಷತಚೂರ್ಣಂ ಪೋಣ್ ನೆಲಗುಂಬಳ ಮಿಂಚಳೊಳೊಂದನೆರ್ವೆಯ ಪಾಲಿಂ ಕಲಸಿ ಕುಡಿಯುಸುಗೆ ತೊರೆ(ಜ್)ಗುಂ ಪೋಲೆಗಳ್ ಬಾಣಂ(ಳಂ)ತಿಗೆಚ್ಚು ಬಾಲ್ ಪಾಯ್ವನೆಗಂ (ಕರ್ಣಕೋಶ. ೬-೧೮೨); ಬಾಣಂತಿಯೆಂಬೋ ಬಗೆಯ ನೀನಜಿತು ಬಾರೆಂದು ಕರೆಪೋಮಬಿತವೆ ರಂಗ (ಹರಿಂತ. ೩-೪೩ ಪಲ್ಲ): ಗೌರಿ ಚೊಚ್ಚಿಲು ಬಾಣಂತಿ (ಮಂಗಣಿಮು. ೨೩). **ಬಾಣತಿ**: ಬಸುಜೀ ಬಾಣತಿ ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ . . . ಕೇತಮ್ಮಗಳೆಂಬ ನೂಜುಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲವೆ (ಬಸವ. ೩೩೭); ಎರಡೆಡೆ ಯೊಳೋಲಗವೆಂತು ನಿನಗಳವಡುವುದಿದು ಬಾಣತಿಯ ಸೂಳೆಯ ಪಡಪಿ ನಂದದಲಿ (ಬಸವು. ೩೩-೦೨); ಕೂಸುಳ್ಳ ಸೂಳೆಗೆ ಹೇಸದೊತ್ತ್ರಿಯ ಕೊಟ್ಟು ಕೂಸತ್ತು ಸಲ್ಲ ಬೇಸತ್ತು ಬಾಣತಿಯು ವೀಸಕ್ಕು ಬೇಡ (ಸರ್ವಜ್ಞ. ೧೪೦೬).

[ದೇ.॥ ಮಲ. ಪಣ್ಣ; ತುಳು. ಬಾಣಂತಿ; ತೆಲು. ಬಾಲಿಂತ. ಬಾಲೆಂತ./ ಸಂ. ಬಾಲವತೀ./ಮರಾ. ಬಾಳಂತ, ಬಾಳಂತೀಣ]

**ಬಾಳಂಬಾಕಂತಿ** (ನಾ). ಒಬ್ಬಾಕೆಯ ಹೆಸರು : ನವಿಲೂರ ಗಣದ ಬಾಳಂಬಾಕನ್ತಿಯರ ಮಗಳ್ ವಿಜಕ್ಕಂ ಪರೋಕ್ಷವಿನಯಂಗೆಯ್ದು ಕಲ್ಲ ನಿರಿಸಿದಳ್ (ಎಕ. VI. ಕಡೂರು. ೧೩೪-೮೩; 961). [ಬಾಳಂಬಾ + ಕಂತಿ]

**ಬಾಳಕ₁** 'ಬಾಟುಕ' ನೋ.

**ಬಾಳಕ₂** (ನಾ). = ಬಾಳ₂ : "ಪ್ರೀಬೇರಂ, ಬಾಳಕಂ, ಜಳಂ — ಈ ೩ ಕರಿಯ ಬಾಳಂ" (ಹಲಾಯು. ೧೦೨-೪೬೩): ಮಗಧ ಕತ್ತುರಿಯಿಂ ಮಳಯಂ ಶ ಚಂದನಂ ಲಾಳನ ಬಾಳಕಂ ನೆಟಿಯುವೆಂದು ಚರರ್ ಸಲೆ ಬಿನ್ನಪಂಗಳಂ ಕೇಳಸುತಿರ್ಪರೋಲಗದೊಳಂ ವಿಭು ಸಂಕಮದೇವಭೂಪನಾ (ಎಕ. VII. ಶಿಕಾರಿ. ೯೩-೦೫; 1179: ಶಾಕಮಂ. ೬೦೦ ನೋ). [< ಬಾಳ₂]

**ಬಾಳಕ₃** 'ಬಾಲಕ' ನೋ.

**ಬಾಳಕಾಲ** 'ಬಾಲಕಾಲ' ನೋ.

**ಬಾಳಕಿ** 'ಬಾಲಕಿ' ನೋ.

**ಬಾಳಕೇಳಿ** 'ಬಾಲಕೇಲಿ' ನೋ.

**ಬಾಳಕ್ರೀಡೆ** 'ಬಾಲಕ್ರೀಡೆ' ನೋ.

**ಬಾಳಗಟ್ಟು** 'ಬಾಳ್ಗಟ್ಟು' ನೋ.

**ಬಾಳಚ** (ನಾ). ಒಬ್ಬಾತನ ಹೆಸರು : ಬಾಚಗಾವುಣ್ಡ ಕಂಭಯ್ಯನು ಕಳ್ಳವುಣಯೂರ ಮಹಾಜನಮುಂ ಗೊಗಿಯಪುರದ ಬಾಳಚನು . . . ಸಾಕ್ಷಿ (ಎಕ. XI. ಚಿತ್ರದು. ೩೦-೨೨; ೯೬೪). [?]

**ಬಾಳಚಂದ್ರ** 'ಬಾಲಚಂದ್ರ' ನೋ.

**ಬಾಳಣೆ** 'ಬಾಣಲಿ' ನೋ.

**ಬಾಳತೆ** 'ಬಾಲತೆ' ನೋ.

**ಬಾಳತ್ವ** 'ಬಾಲತ್ವ' ನೋ.

**ಬಾಳನಯನ** (ನಾ). ೧. ಹಣೆಯಲ್ಲಿ ಇರುವ ಕಣ್ಣು. ೨. ಹಣೆಯಲ್ಲಿ ಕಣ್ಣುಳ್ಳವನು; ಭಾಳನೇತ್ರ : ಶಿವ : ಬಾಳನಯನನದೇನು ಕಾರಣ ಹೇಳಿದನು ಋತುಪರ್ಣಗರುಹುವದೆಂದು ಈ ಕಥೆಯ (ಕಂಬಣಾ. ೩-೩೭).

[< ಸಂ. ಭಾಲನಯನ]

**ಬಾಳಪರ್ಣ** (ನಾ). ಲವಂಗ : "ಬಾ[ಕಾಕಾಂ. ಭಾ, ೮೪]ಳಪರ್ಣಂ ಲವಂಗ ಮೆನಿಕ್ಕು" (ಮಂಗರಾ. ೪೨-೪೦). [?]

**ಬಾಳಬಂದು** 'ಬಾಲಬಂದು' ನೋ.

**ಬಾಳ ಬಟ್ಟು** 'ಬಾಳ್₃' ಪರಾ.

**ಬಾಳ ಬಣ್ಣ** 'ಬಾಳ್₃' ಪರಾ.

**ಬಾಳಮತಿ** (ನಾ). ಹುಡುಗುಬುದ್ಧಿಯುಳ್ಳವನು; ಅವಿವೇಕಿ; ಮೂರ್ಖ : ಆ ಕೊಳನನಂ ಬಾಳಮತಿ ಪುರುಷರತ್ನದ ಪೇಳಿಗೆಯಂ ಮುಚ್ಚುವಂತೆ ಮುಚ್ಚುವನಗದು (ಶಾಂತಿಪು. ೬-೫೦). [ಸಂ. ಬಾಲಮತಿ]

**ಬಾಳಮೃತಿ** (ನಾ). ತಿಳಿವಳಿಕೆಯಿಲ್ಲದೆ, ಬಾಲಿಶಬುದ್ಧಿಯಿಂದ ತಂದು ಕೊಂಡ ಮರಣ. — ಸಾವು : ಅತಿವಯನಾಗಿ ಬಾಳಮೃತಿಯಿಂದಟ್ ದುಂದಿನ ಮೂರ್ಖವೃತ್ತಿ ಪಂಡಿತಮೃತಿಯಿಂದಮಲ್ಲದದು ನೀಗದು ಪೊಗೆನಗೆ (ಶಾಂತಿಪು. ೭-೪೦). [ಸಂ. ಬಾಲಮೃತಿ]

**ಬಾಳರ** (ನಾ). ಗರಗಸದ ಹಲ್ಲುಗಳನ್ನು ಹರಿತಗೊಳಿಸಲು ಬಳಸುವ, ಎರಡು ಅಲಗುಳ್ಳ ಅರ : ಗಾಳದ ಡೊಂಕಿಯುಗ್ರಮನೆ ಬಾಳರನಿಂ ಪಿಡಿವರ್ಪುವಾಪ್ರ್ರಮಂ ಜಾಳಿಸಿ ಜಾಲಮುಂ ಬಿಸಿಲೊಳಿಕ್ಕುವ ಬೆಂಕೆ ಯೊಳೊಡ್ಡಿ ಕಾಸಿ ಕೂಡಾಳಿಸಿ ಸಂದುಕೋಲನುಡಿಗಟ್ಟುವ ಕೆಂಗಜಿಯಂ ಸಲಾಳಿಯೊಳ್ ಪೋಳಿಸಿ ಸುತ್ತುತಿರ್ಪ ಶಬರರ್ಕಳಿನಿಂತೆಸೆದತ್ತು ಪಕ್ಕಣಂ (ಶಾಂತೀಶ. ೩-೬೪). [← ತಮಿ. ವಾಳರವ್]

**ಬಾಳರಾಕ್ಷ** 'ಬಲರಾಕ್ಷಸಿ' ನೋ.

**ಬಾಳಲಿ** 'ಬಾಣಲಿ' ನೋ.

**ಬಾಳವಂದ** 'ಬಾಲವಂದ' ನೋ.

**ಬಾಳವಚ್ಚ** (ನಾ). = ಬಾಲವಂದ: ರಕ್ಕಿವಣೆ ಪುಲಿಯುಗುರ್ . . . ಪೊಕ್ಕಳಗಾಡಿಗೆ ಜಪ್ಪ ಸೊಡರ್ವಕ್ಕಿನ ಬೊಟ್ಟೆಂಬ ಬಾಳವಚ್ಚದಿನೆಸನು (ಪುಷ್ಪದ. ೪-೪೪). [ಬಾಳ್₅ (= ಬಾಲ₂) + ಪಚ್ಚ₂]

**ಬಾಳವಣ್ಣ** 'ಬಾಳ್₃' ಪರಾ.

**ಬಾಳವತಿ** 'ಬಾಲವತಿ' ನೋ.

**ಬಾಳವಾಳಿಗೆ** (ನಾ). ಒಂದು ಬಗೆಯ ತೆರಿಗೆ : ಮನೆವಾರ್ತೆ ಹಣ ಕಾಹು ಕಾಣಿಕೆ ಕಡಾಯ ಬಾಳವಾಳಿಗೆ ಉಡುಗರ ಉಲುಪ ಮನೆದೆರ ಅಳಿಉ ಅನ್ಯಾಯ ಮುಂತಾದ ಸರ್ವಬಾಧೆಯು (ಎಕ. ೧೦. ೧೯೩೪, ೩೮-೨೪: 1433).

[?]

**ಬಾಳವಿದ್ಯೆ** (ನಾ). ಬಾಲ್ಯದಲ್ಲಿ ಕಲಿತ ವಿದ್ಯೆ: ಎಮ್ಮ ಕಂಡುಂ ಕೇಳ್ದು ಮಜಿಯುವ ವಸ್ತುಗಳೆಲ್ಲ ಗಾಂಧರ್ವಮೆಂಬುದೆಮ್ಮ ಬಾಳವಿದ್ಯೆಯುದ ಜೀಳಿಯಮ್ಮಂ ರಂಜಿಸುವನ್ನರ್ ಪ್ರೌಢರಿಲ್ಲ (ಶಾಂತಿಪು. ೨-೨೦ ವ).

[ಸಂ. ಬಾಲವಿದ್ಯಾ]

**ಬಾಳವೂರು** 'ಬಾಲವೂರು' ನೋ.

**ಬಾಳವೇರ್** (ನಾ). ಬಾಳದ ಬೇರು; ಲಾವಂಚದ ಬೇರು: ಕೆಂದಳಿರ ಪಂದರೊಳಗಣ ಬಾಳವೇರ ಈರ್ಗಟ್ಟಿನೋವರಿಯೊಳಗೆ (ಚಂದ್ರಪ್ರ. ೬-೬೩).

[ಬಾಳ₂ + ಬೇರ್₁]

**ಬಾಳಾಂಬಕ** (ನಾ). = ಬಾಳನಯನ ೨: ಬಾಳಾಂಬಕನ ಭಕ್ತನಾಗಿ ಭಕ್ತಿಯ ತಾಳಲಜೀಯನೆಂದಡೆ ಅದು ಬಾಲನ ಚಿತ್ರದ ಲೀಲೆಯಂತೆ (ಸೋಮೇಶಾ. ೨೪-೯೯). [< ಸಂ. ಭಾಲಾಂಬಕ]

**ಬಾಳಾಕ್ಷ** (ನಾ). = ಬಾಳನಯನ ೨: ಹಾಲು ಸಕ್ಕರೆ ತುಪ್ಪ ಹಾಲನ್ನ ಸವಿದಂತೆ ಬಾಳಾಕ್ಷ ಪೇಳ್ದಾನು (ಕಂಪ. ೩-೦೦). [< ಸಂ. ಭಾಲಾಕ್ಷ]

**ಬಾಳಾತಪ** 'ಬಾಲಾತಪ' ನೋ.

**ಬಾಳಾಯಿ** (ನಾ). ಒಂದು ಬಗೆಯ ಮರ; ತುವ್ವಿಮರ: ಬಾಳಾಯಿ (ತುವ್ವಿ) . . . ಇದರ ಕಟ್ಟಿಗೆಯು ಗಟ್ಟಿ, ಜಿಗುಟುಳ್ಳದ್ದು, ತಾಳಿಯುಳ್ಳದ್ದು; ಆದಾಗ್ಯೂ ಇದಕ್ಕೆ ಬಹಳ ಬೆಲೆ ಬರುವದಿಲ್ಲ. ಘನಪೂಟಿನ ತೂಕ ೩೦ ೧ರಿಂದ ೭೦ ಪೌಂಡುಗಳ ವರೆಗೆ. ಇದರ ಹಣ್ಣು ಗಳನ್ನು ಜನರು ಪ್ರೀತಿಯಿಂದ ತಿನ್ನುವರು (ಕರಾಗ. ೪೪). [?]

**ಬಾಳಾರ್ಕ** 'ಬಾಲಾರ್ಕ' ನೋ.

**ಬಾಳಾಳ್** (ನಾ). ಖಡ್ಗವಿದ್ಯೆಯನ್ನು ಬಲ್ಲವನು; ಪರಾಕ್ರಮಿ :

ಸಿಂಗದೀಕ್ಷರ್‌ಬ್ಬಾಳಾಳ್ ಅರಟ್ಟೀತಿರಾರ್ ಕೂಡಲೂರ್ ಆಳಿ (ಪ್ರ.ಅಂ. ೦೪೧೬, ೦೩-೪; ಸು. 720). [ಬಾಳ್$_3$ + ಆಳ್$_3$]

**ಬಾಳಿ** 'ಬಾಳ್$_3$' ನೋ.

**ಬಾಳಿಕೆ$_1$** 'ಬಾಟ್ಕೆ' ನೋ.

**ಬಾಳಿಕೆ$_2$** 'ಬಾಲಿಕೆ' ನೋ.

**ಬಾಳಿಸು** 'ಬಾಟಿಸು' ನೋ.

**ಬಾಳು$_1$** 'ಬಾಟ್$_1$' ನೋ.

**ಬಾಳು$_2$** 'ಬಾಟ್$_3$' ನೋ.

**ಬಾಳು$_3$** 'ಬಾಳ್$_3$' ನೋ.

**ಬಾಳು$_4$** 'ಬಾಳ್$_2$' ನೋ.

**ಬಾಳುಕ** 'ಬಾಟುಕ' ನೋ.

**ಬಾಳುಗುಳಿ** 'ಬಾಟ್ಗುಳಿ' ನೋ.

**ಬಾಳುಗೇಡಿ** (ನಾ). ಜೀವನವನ್ನು ಹಾಳುಮಾಡುವವನು ; ಬದುಕನ್ನು ಕೆಡಿಸುವವನು : ನೆಟ್ಟನೆಲೆ ಧೃತರಾಷ್ಟ್ರನೃಪ ನೀನಿಟ್ಟ ಕಿಚ್ಚಿದು ಪಾಪಿ ಮಗನನು ಹುಟ್ಟಿದಂದೇ ಬಿಸುಡದಾದವು ಬಾಳುಗೇಡಿಯನು (ಕುಮ್ಯಾ.ಭಾ. ೯-೪೯). [ಬಾಳು$_2$ (< ಬಾಟ್$_3$) + ಕೇಡಿ$_1$]

**ಬಾಳುಗೇಡು** (ನಾ). ಬದುಕಿಗೆ ಕೇಡು ತರುವಂತಹುದು ; ಜೀವನವನ್ನು ಹಾಳುಮಾಡುವಂತಹುದು : ಆಳುಕೂಳುಗಳ ಮೇಳವಿಲ್ಲದ ಮನೆಯು ಬಾಳುಗೇಡು (ಸರ್ವಜ್ಞ. ೦೧೯೯). [ಬಾಳು$_2$ (<ಬಾಟ್$_3$) + ಕೇಡು]

**ಬಾಳುಡಿ** (ನಾ). ಖಡ್ಗದ ತುಂಡು; ಕತ್ತಿಯ ತುಂಡು : ನೆಣದೊಳ್ಗೆ ಸಟ್ಟೊಳ್ ಜಗಿಲ್ತುಗುರ್ವಡರೆ ನಿರಂತರಂ ಪೊಳೆವ ಬಾಳುಡಿ ಸುಯ್ವ ನವವ್ರಣಂಗಳೊಳ್ ಪೊಡರೆ ಪೊಡಟ್ಟುದದ್ಭುತಭಯಾನಕಮಾಹವರಂಗಭೂಮಿಯೊಳ್ (ಶಂಕಪು. ೦೦-೫೩) ; ಬಾಳುಡಿ ಪಾಱಿ ಬೀೞೆ ಪಗಲುಳ್ಳದ ಪೋಲ್ . . . ಭಯಂಕರಮಾಯ್ತು ತುರುಗಸಂಗರಂ (ಶಂಖಾಮಿ. ೦೩-೬೩). [ಬಾಳ್$_3$ + ಉಡಿ$_2$]

**ಬಾಳುತ್ತಾರ** (ನಾ). ಉಂಬಳಿಯಾಗಿ ಕೊಟ್ಟ ಭೂಮಿ : ಯಾಗ ಉತ್ತಾರವ ಕೊಟ್ಟ ಭೂಮಿ ಸಹ ಬಾಳುತ್ತಾರವಾಗಿ ವಿಂಗಡಿಸಿ ಕೊಡ ಹೇಳಿ (ಎಕ. IX (ಶ), ಶಂಗಳೂ. ೦೩೦-೪ ; ಸು. 1700). [ ಬಾಳು$_2$ (<ಬಾಟ್$_3$) + ಉತ್ತಾರ ]

**ಬಾಳುದಲೆ** 'ಬಾಟ್ದಲೆ' ನೋ.

**ಬಾಳುದಲೆವಿಡಿ** ' ಬಾಟ್ದಲೆವಿಡಿ ' ನೋ.

**ಬಾಳುಬೆ** 'ಬಾದುಬ್ಬೆ' ನೋ.

**ಬಾಳುಮನೆ** 'ಬಾಟ್ಮನೆ' ನೋ.

**ಬಾಳುವೆ** 'ಬಾಟ್ವೆ' ನೋ.

**ಬಾಳೆ$_1$** 'ಬಾಟಿ$_1$' ನೋ.

**ಬಾಳೆ$_2$** (ನಾ). ಒಂದು ಬಗೆಯ ಉದ್ದವಾಗಿರುವ ಮೀನು : ಪೇಟ್ದಿನಿಸನಾಂ ಮಗುಟ್ದಾಗಳೆ ಸೂಸಿ ಕಣ್ಣಾ ನೀರೊಡನೊಡನುಣ್ಮೆ ಕುಂಕುಮದೊಳ್ದಿದ ಬಾಳೆಗಳನ್ನವಾಗಿ ಕೆಂಪಡರ್ದಲರ್ಗಣ್ಗಳಿಂದುಗುಟ್ದು ನೋಡಿದುದಂ ನೆನೆವೇಂ ಮೃಗಾಕ್ಷಿಯಾ (ಅಂಫ. ೦೨-೨೪); ಬಾಲಕಿಯ ಲರ್ಗಣ್ಗಳ್ . . . ಬಾಳೆಯ ಮೀಂಗಳ ತೆಜದಿಂ ಲೀಲೆಯೊಳೇಂ ಪೊಳೆದು ತಳೆದವತಿಚಪಳತೆಯಂ (ಪಾರ್ಶ್ವ. ೨-೩೦) ; ತೊಡೆಯುಮೆಸೆವಕ್ಷಿಯುಂ ಬಾಳೆಯುಂ ಬಾಳೆಯುಂ ನಡುವುಂ ಸುವಾಣಿಯುಂ ಹರಿಯುಮಂ ಹರಿಯುಮಂ ಬಿಡದೆ ಪೋಲ್ತಿರೆ ಮೆಱೆವ ಕಾಂತೆಯರ್ . . . ಸೊಗಯಿಸಿದರು (ಕ್ಷೀ.ಬಿಭಾ. ೬-೨೩). [ದೇ.॥ ತಮಿ. ವಾಳೈ; ಮಲ. ವಾಳ; ತುಳು. ಬಾಲೆ; ಕೊಡ. ಬಾಳ್; ತೆಲು. ವಾಲುಗ, ವಾಲುವ]

**ಬಾಳೆ$_3$** 'ಬಾಲೆ' ನೋ.

**ಬಾಳೆಕಂಬ** 'ಬಾಳೆಗಂಬ' ನೋ.

**ಬಾಳೆಕೊನೆ** 'ಬಾಳೆಗೊನೆ' ನೋ.

**ಬಾಳೆಗಂಬ**, ಬಾಳೆಕಂಬ (ನಾ). ಬಾಳೆಗಿಡದ ತಾಳು.—ಕಾಂಡ : ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊಳ್ ಭಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿ ಪುಟ್ಟಿದಂದು . . . ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ (ರಾಜಶೇ. ೬-೨೬). **ಬಾಳೆಕಂಬ** : ಚಪ್ಪರ ಕಟ್ಟುವುದಕ್ಕೆ ಇನ್ನೂ ಎರಡು ದೊಡ್ಡ ಬಾಳೆಕಂಬಗಳನ್ನು ತರಬೇಕು (ಕೂಜ). [ಬಾಳೆ$_1$ (<ಬಾಟಿ$_3$) + ಕಂಬ$_1$ (<ಕಂಭ)]

**ಬಾಳೆಗಣ್** (ನಾ). ಮೀನಿನ ಆಕಾರದ ಕಣ್ಣು : ಚಂಚತ್ಕಾಂಚನಾಬ್ಜಾಸ್ಯಮಂಡಳವಿಂಬಾಗಿರೆ ಬಾಳೆಗಣ್ಪೊಳೆಯೆ . . . ಸರಿದ್ವಧು ರಥಾಂಗೋರೋಜೆ ಕಣ್ಗೊಪ್ಪಿದಳ್ (ಕೃಷಪು. ೯-೮) ; ಪೊಳೆದೊಪ್ಪೆ ಬಾಳೆಗಣ್ ಬಿಸಜಮುಖಿ ಮರುಚ್ಛಲಿತವೋಂದೆ (ಕಲಿಕಂ. ೨-೩೬). [ಬಾಳೆ$_2$ + ಕಣ್]

**ಬಾಳೆಗೊನೆ**, ಬಾಳೆಕೊನೆ (ನಾ). ಬಾಳೆಯಕಾಯಿ ಅಥವಾ ಹಣ್ಣುಗಳ ಗೊಂಚಲು : ಜವರ, ನಿಂಗ, ಜೋರಿ ಮುಂತಾದವರು ಕಾಯಿ, ಕೊಬರಿ, ಬಾಳೆಗೊನೆಗಳನ್ನು ಹೇಳದೆ ಕೇಳದೆ ಚಾವಡಿಗೆ ತಂದು ಒಪ್ಪಿಸುತ್ತಾರೆ (ನಮ್ಮೂರು. ೧೯೬). **ಬಾಳೆಕೊನೆ** : ಬಾಳೆಕೊನೆ ತರಾಕೆ ಹೇಳಿದಾರೇನು ನಿಸ್ಸಾಹುಕಾರರು ? (ಮಲೆವ. ೨೮೪). [ಬಾಳೆ$_1$ (<ಬಾಟಿ$_3$) + ಗೊನೆ$_3$ (< ಗೊನ್ಸೆ$_2$)]

**ಬಾಳೆದೊಡೆ** (ನಾ). ಬಾಳೆಕಂಬದಂತೆ ದುಂಡಗೆ, ನುಣುಪಾಗಿ ಇರುವ ತೊಡೆ : ಪಸುಗೆಳಿಪಾತಿನ ಬಾಳೆದೊಡೆಯ ಬಣ್ಣಿಗೋಲ . . . ನೀಱೆಯ ನಪಲಾವಣ್ಯದ ಸಿರಿಯನದೇನಂ ಬಣ್ಣಿಪೆನು (ಜಯನೃ. ೬-೬೩); ಪೇರೆದೆ ಹೊನ್ನ ಸೆಳೆನಡು ಬಾಳೆದೊಡೆ ಮೆಱೆದೆನ್ನರಂ ಸೋಲಿಸುವ ಜವ್ವನವಾಂತನಾಕುವರ (ಶಾಕ್ಕ.ಶಾ. ೯-೬): ಬಾಳೆದೊಡೆಯ ಕೊನಬುಗಾತಿಯುಳ ಕೊಸರಿರಂಗಾಯೆಂಬ ವನಿತೆ ತಾ ವಶವಪ್ಪಳೆಂದೊ (ಕಕನಾಂ. ೨೨-೧೦). [ಬಾಳೆ$_1$ (<ಬಾಟಿ$_3$) + ತೊಡೆ$_2$]

**ಬಾಳೆಮೀನ್**, ಬಾಳೆಮೀನು (ನಾ). = ಬಾಳೆ$_2$ : ಅದನೊಂದು ಬಾಳೆಮೀನ್ನುಂಗಿ ಗರ್ಭಮಂ ತಾಳ್ದಿದೊಡೆ (ಶಂಕಪು. ೦-೬೩ ವ): ಕಣ್ಣನೀರಿಬ್ದುದುವು ಬಾಳೆಮೀನ್ ಜಲಮನಟ್ಟಿಸಲಾಜದೆ ಕಾಱುವಂತೆವೋಲ್ (ಕಾವ್ಯಸಾ. ೬೦೦). **ಬಾಳೆಮೀನು** : ಸೂಳೆ ಸೂತ್ರದ ನೇಣಾ ಗಾಳವಾಕಿದು ಮೊಗವ ಮೇಳಯ್ಸುವವಳು ಸಲೆ ಬೆಂಡು ಮಿಂಡ ತಾ ಬಾಳೆಮೀನು (ಸರ್ವಜ್ಞ. ೦೯೯೯). [ಬಾಳೆ$_2$ + ಮೀನ್$_2$ /ತಮಿ. ವಾಳ್ಮೀನ್; ತುಳು. ಬಾಲೆಮೀನ್]

**ಬಾಳೆಮೀನು** ' ಬಾಳೆಮೀನ್ ' ನೋ.

**ಬಾಳೆಲೆ** ' ಬಾಟಿಲೆ ' ನೋ.

**ಬಾಳೆವಣ್** ' ಬಾಟಿವಣ್ ' ನೋ.

**ಬಾಳೆವಸುಳೆ** (ನಾ). ಬಾಳೆಮೀನಿನ ಮರಿ : ಬಾಳೆವಸುಳೆದಿಟ್ಟಿಯ ಬಂಧಕಿಯರ ಜಾಳಂ ನಡೆತಂದುದು (ಜಯನೃ. ೦೩-೬೯). [ಬಾಳೆ$_2$ + ಪಸುಳೆ]

**ಬಾಳೆಹಣ್ಣು** ' ಬಾಟಿವಣ್ ' ನೋ.

**ಬಾಳ್ಕಟ್ಟು** ' ಬಾಳ್ಗಟ್ಟು ' ನೋ.

**ಬಾಳ್ಕೆ** ' ಬಾಟ್ಕೆ ' ನೋ.

**ಬಾಳ್ಗನಸು** (ನಾ). (ಆಲಂ) ಜೀವನದಲ್ಲಿ ಒಳ್ಳೆಯದನ್ನು ಬಯಸಿ ಕಲ್ಪಿಸಿಕೊಂಡಿರುವ ಬದುಕಿನ ಭವಿಷ್ಯ: ಹಿಂದಾವ ಮುದಿಯು ನೆಯ್ . . . ಸುಖದಮಾಗಿರ್ದತ್ತೊ ತಾನದ ಇಂದು ಸೂಡಿನೊಲ್, ಕೆಟ್ಟಾಸೆ ಬೀಡಿನೊಲ್, ಬಾಳ್ಗನಸುಗಳೆಲ್ಲ ಕೊನೆಯ ಸುಡುಗಾಡಿನೊಲ್ ಕಾಣುತಿರೆ (ಶ್ರೀರಾಮಾ. ೦೦೯-೦೪೦). [ಬಾಳ್$_2$ (< ಬಾಟ್$_3$) + ಕನಸು]

**ಬಾಳ್ಗಚ್ಚುರ್** 'ಬಾಳ್ಗಟ್ಟು' ನೋ.

**ಬಾಳ್ಗಚ್ಚುರ್ಗೊಡು** 'ಬಾಳ್ಗಟ್ಟುಗೊಡು' ನೋ.

**ಬಾಳ್ಗಟ್ಟು**, ಬಾಳಗಟ್ಟು, ಬಾಳ್ಕಟ್ಟು, ಬಾಳ್ಗಚ್ಚುರ್, ವಾಳ್ಗಟ್ಟು (ನಾ). ಯುದ್ಧದಲ್ಲಿ ಪರಾಕ್ರಮವನ್ನು ತೋರಿದುದಕ್ಕಾಗಿ ಯುದ್ಧಾಂತ್ಯದಲ್ಲಿ ವೀರನ ಕತ್ತಿಯನ್ನು ತೊಳೆದು, ಕೊಡುವ ಮಾನ್ಯ: ಕೇಕಯಪಲ್ಲವರಂ ಕಾದೆಱಿದು ವೆತ್ತಜಯನಾ ವಿಜಆರಸನ್ಗೆ ಬಾಳ್ಗಟ್ಟು ಪಲ್ಮಡಿಉ ಮೂೞಿವಳ್ಳಿಉಂ ಕೊಟ್ಟಾರ್ (ಪ್ರಕ. ೦೯೬೬, ೧೬-೦೨ ; ಸು. 450); ಬಾಳ್ಗಟ್ಟು ಕೊಟ್ಟೊದು ಅಯ್ಯುಗ್ಗ . . . ಕಲನಿ (ಎಕ. XVI, ತುಮಕೂ. ೯೪-೪ : ಸು. 780) ; ಅವರ ಮಾವು ತಿವು ವೆುದೆಯುಮಾದವಾಡಿಯ ಬಾಳ್ಗಟ್ಟು ಕೊಟ್ಟೊ (ಪ್ರಕ. ೦೯೬೦, ೯೯-೪ ; ಸು. 886). **ಬಾಳಗಟ್ಟು** : ನಾಗಗುಟ್ಟರಸಂ ತಮ್ಮ ಏಱಿದ ಕುದುರೆಯುಮ್ಮಗುಟಿ ಅಟ್ಟಿ ಬಾಳಂ ಕಿಟ್ಟು ನಡದು ಪಲರನಿಱಿದು ಸತ್ತೊಡೆ ಬೆಳ್ವಪ್ಪುರವಿ ವಾ×ಬಾಳಗಟ್ಟು ಆಗೆ ಕೊಟ್ಟೊದು (ಎಕ. X, ಕೋಲಾರ. ೨೦೦-೦೩ : ಸು. 890 ?). **ಬಾಳ್ಕಟ್ಟು**: ಬಲವಾನ್ನಾಳ್ದಿ ಎಱಿದು ಬಿಟ್ಟರ್ ಬಿಟ್ಟೊಡೆ ಮೆಚ್ಚಿ ಲಕುನ್ದವಾ ಬಾಳ್ಕಟ್ಟು ಕೊಟ್ಟ (ಎಕ. X (ಶ), ಶಾಗೀಶ. ೬೬-೯ ; 820). **ಬಾಳ್ಗಚ್ಚುರ್** : 'ಬಾಳ್ಗಚ್ಚುರ್ಗೊಡು' ಪರಾ. **ವಾಳ್ಗಟ್ಟು** : ಶಾನ್ತನೂರೂ ಎರೆಡಿಯೂರುಉಂ ವನ್ದು ತೂವ್ಪುಕಟನಿಯುಂ ಅವರ ಮನೆಯುಂ ವಾಳ್ಗಟ್ಟುಂ ಪ್ರಸಾದಙ್ಗೆಯ್ದಾರ್ (ಎಕ. X, ಮುಳಬಾ. ೨೫೫-೦೨ ; ಸು. 750) ; ಮೂಱುಕೊಡೆ ಅಣ್ಣಿಯರ್ಪಿಣ್ಣನೂರಾ ಏಱಿಸುಳ್ಳಿಱಿದು ಬಿಜ್ಜಾರ್ ಕ[ನ್ನ]ರಸರುಳ್ ಇದರ್ಕೆ ಚಿವಾನಿ ಕಳನಿ ವಾಳ್ಗಟ್ಟು ಕೊಟ್ಟೊದು ರೋಣವೊಡೆಯೊಗೆ ಕೊಟ್ಟರ್ (ಎಕ. XVI, ತುಮಕೂ. ೯೬-೩; ?).

[ಬಾಳ್$_5$ + ಕಟ್ಟು]

**ಬಾಳ್ಗಟ್ಟುಗೊಡು**, ಬಾಳ್ಗಚ್ಚುರ್ಗೊಡು (ಕ್ರಿ). ಯುದ್ಧದಲ್ಲಿ ಶೌರ್ಯವನ್ನು ತೋರಿದುದಕ್ಕಾಗಿ ಮಾನ್ಯವಾಗಿ ಭೂಮಿಯನ್ನು ಕೊಡು ; ನೆತ್ತರುಕೊಡುಗೆಯನ್ನು ಕೊಡು : ಆತಂಗೆ ಬಾಣವಿದ್ಯಾಧರಂ ಮೆಚ್ಚಿ ಬಾಳ್ಗಟ್ಟುಗೊಟ್ಟುದು (ಕಾಇಶ. IX-i, ೪-೦೦; ಸು. 9 ನೆಯ ಶತ). **ಬಾಳ್ಗಚ್ಚುರ್ಗೊಡು** : ನೀತಿಮಾರ್ಗ್ಗ ಪೆರ್ಮಾನಡಿಗಳು ನೊಳಬಪ್ಪಾಧಿರಾಜರು ಸೂರೂರಂ ಬಾಳ್ಗಚ್ಚುರ್ಗೊಟ್ಟರ್ (ಎಕ. X, ಕೋಲಾರ. ೬೯-೦೩ ; ಸು. 890). [ಬಾಳ್ಗಟ್ಟು + ಕೊಡು$_1$]

**ಬಾಳ್ಗೀಟ್** (ಕ್ರಿ). ಖಡ್ಗವನ್ನು ಹಿರಿ ; ಕತ್ತಿಯನ್ನು ಒರೆಯಿಂದ ಕೀಳು : ಸಂಗ್ರಾಮವಿದ್ಯಾನ್ವಿತರ್ × × × ಯಂ ಪತಿ ಕೋಗಿಯೂರ ಬಯಲೊಳ್ಬಾಳ್ಗಿಟ್ಟುಕೊಣ್ಡಿಯ್ದುದಂ (ಎಕ. XIV, ಎಡತೊ. ೩೧-೯; ಸು. 900) ; ಅನಿಬರುಂ ಬಾಳ್ಗಿಟ್ಟು[ಶಾಕಾಂ. ತ್ತು] ಮೇಲ್ವಾಯ್ದೊಡರ್ಬಿಸೆ ತಿಣ್ಣಂ ತೆಗೆದರ್ಧಚಂದ್ರಶರದಿಂ ಸೂಟ್ ಸೂಟಿಕೊಳ್ಚಾಗಳ್ಚಿಸಿದಂತಿರ್ದುದುರುಳ್ದ ಕೌರವಶಿರಃಪದ್ಮಂಗಳಿಂ ಕೊಳ್ಗುಳಂ (ಪಂಪಭಾ. ೦೨-೦೯೩); ಬಾಳ್ಗಿತ್ತು ಮಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ (ಅಜಪು. ೦-೩೬).

[ಬಾಳ್$_3$ + ಕೀಟ್$_1$]

**ಬಾಳ್ಗುಡತೆ** (ನಾ). (ರಾಜರು ಧರಿಸುತ್ತಿದ್ದ) ಅಧಿಕಾರಸೂಚಕವಾದ ಅಂಗಿ : ತೊಟ್ಟ ಮಹಾರಾಜಮುದ್ರೆಯ ಬಾಳ್ಗುಡುತೆಗೂ, ಹಿಡಿದ ವೀರದಣ್ಣನ ಕಯ್ಯುವಿಗೂ ಕಟ್ಟೀಪವು ಜಕ್ಕುಳಿಕೆಯು ಅಪಮಾನವು ಅಡಸಿ ಮಸಗುವಂತೆ-ನೀವು ಕುಬುದ್ಧಿಯನೆಣಿಸಿ (ಚಿಕ್ಕ. ೨೦೪-೦೪).

[ಬಾಳ್$_2$ (< ಬಾಟ್$_3$) + ಕುಡುತ್ತೆ$_3$ (< ಕುಡತಿ)]

**ಬಾಳ್ಗುಳಿ** 'ಬಾಟ್ಗುಳಿ' ನೋ.

**ಬಾಳ್ಗೆಡು** (ಕ್ರಿ). ಜೀವನವನ್ನು ಹಾಳುಮಾಡಿಕೊಳ್ಳು : ಕೆಟ್ಟೆನೋ ! ಕಂಗೆಟ್ಟೆನೋ ! ಮನೆಗೆಟ್ಟೆನೋ ! ಬಾಳ್ಗೆಟ್ಟೆನೋ ! (ಶ್ರೀನಾಮ. ೭೦೪-೦೨೦).

[ಬಾಳ್$_2$ (< ಬಾಟ್$_3$) + ಕೆಡು$_1$]

**ಬಾಳ್ಗೆಳೆಯ** (ನಾ). ಬಾಳಿನುದ್ದಕ್ಕೂ ಸ್ನೇಹಿತನಾಗಿರುವವನು : ವತ್ಸ ! ಕಾಣದು ಕಣ್ಗೆ ! ಬಗೆಗೆ ಸುಳಿದಿರೆ ಬರವು ಬಾಳ್ಗೆಳೆಯನೊರ್ವನಾ ! (ಶ್ರೀರಾಮಾ. ೨೮೮-೯೭). [ಬಾಳ್$_2$ (< ಬಾಟ್$_3$) + ಕೆಳೆಯ]

**ಬಾಳ್ಗೊಲೆ** (ನಾ). ಜೀವಹಾನಿ : ಪ್ರಾಣಹತ್ಯೆ : ಗಳಹದಿರು ಕೆಲಬಲದ ಹಂಗಿಗ ಬಳಕೆಯೇ ಘಡ ಸೂತಸುತ ಬಾಳ್ಗೊಲೆಯ ಬಾಹಿರ ಬಸುಗ ಬೆದಱಿಸಿ ಬಱಿದೆ ಬೆಱೆತೆಯುಲ (ಕುಮ್ವಾ. ೧೧-೨೩) : ನಿರ್ಜನ ನಿಶಾವೇಳೆಯಲಿ ಚಿತ್ರ, ಕ್ಷಾತ್ರಕುಲರಮಣಿ. ಬಾಳ್ಗೊಲೆಗುಜ್ಜುಗಂಗೈದು . . . ಶಶಿತಾರೆಗಳಿಗೆ ಬಿನ್ನೈಸಿದಳ್ ಕೈಮುಗಿದು (ಚಿತ್ರಾಂಗ. ೬೩-೦೬೬).

[ಬಾಳ್$_2$ (< ಬಾಟ್$_3$) + ಕೊಲೆ$_2$]

**ಬಾಳ್ತರ** (ನಾ). ತಾಳಿಕೆ : ಬಾಳಿಕೆ : ಬೆತ್ತದ ಸಂದೂಕ ನೂರುವರ್ಷ ಬಾಳ್ತರ ಬರುತ್ತದೆ (ಕುಂಕಿಣ. ೦೯೩). [← ತುಳು. ಬಾಳ್ತರ]

**ಬಾಳ್ತಿ** 'ಬಾಟ್ತಿ' ನೋ.

**ಬಾಳ್ತಿಗ** (ನಾ). ಮನೆವಾರ್ತೆಗಾರ : ನಮ್ಮಯ ಮನೋವಿಧಾನಗಳನ್ನು ನಮಗೆ ಕೈಗೂಡಿಸಿ ಕುಡುವುದು . . . ನಿಮ್ಮಂತಹ ಕುಲಕ್ರಮಾಯುಕ್ತವಾದ ಸ್ವಧರ್ಮನಿಷ್ಠೆಯ ಬಲ್ಲ ಬಾಳ್ತಿಗರಿಂಗೆ ಬಿರುದಾಗಿದೆ (ಚಿಕ್ಕ. ೧೯೯-೦೭). [ಬಾಳ್ತಿ (< ಬಾಟ್ತಿ) + — ಗ$_2$]

**ಬಾಳ್ತಿಗೆಯ್** 'ಬಾಟ್ತಿಗೆಯ್' ನೋ.

**ಬಾಳ್ದಲೆ** 'ಬಾಟ್ದಲೆ' ನೋ.

**ಬಾಳ್ದಲೆಗೊಳ್** 'ಬಾಟ್ದಲೆಗೊಳ್' ನೋ.

**ಬಾಳ್ದಲೆವಿಡಿ** 'ಬಾಟ್ದಲೆವಿಡಿ' ನೋ.

**ಬಾಳ್ದುದಿ** (ನಾ). ಖಡ್ಗದ ಮೊನೆ ; ಕತ್ತಿಯ ತುದಿ : ಬಾಳ್ದುದಿ ಪೊಲಿರ್ಪ ನಖದಿಂ ಸೀಳ್ದಸುರನ ಕುಕ್ಷಿಯಂ . . . ಬೇಳ್ದಂ ನಿಜವಿಕ್ರಮಾಗ್ನಿಯೊಳ್ ನರಸಿಂಹಂ (ಅಪ್ಪಕ. ೦-೩-೨೬೦). [ಬಾಳ್$_3$ + ತುದಿ]

**ಬಾಳ್ಬೀಟ್** (ಕ್ರಿ). (ಅಲಂ) ಶತ್ರುವಿನ ಖಡ್ಗಕ್ಕೆ ಸಿಕ್ಕಿ ಸಾಯು : ತುಱುವನಿಕ್ಕಿಸಿ ರಣದೊಳ್ಬಾಳ್ಬೀಟ್ಟೊ ಸುಗತಿಯ ಪಡೆದನ್ (ಎಕ. VIII, ಸೊರಬ. ೨೦೯-೦೪ ; 965). [ಬಾಳ್$_3$ + ಬೀಟ್$_1$]

**ಬಾಳ್ಮಿ** 'ಬಾಟ್ಮಿ' ನೋ.

**ಬಾಳ್ಮೊದಲ್** 'ಬಾಟ್ಮೊದಲ್' ನೋ.

**ಬಾಳ್ಮೊನೆ** (ನಾ). = ಬಾಳ್ದುದಿ : ಬಾಳ್ಮೊನೆ : ವಾಟ್ಮನೆ (ಶಬ್ದಮ. ೬೩ ಕ್ರಯೋ); ದಾದಿ ಬಟಿ ಪಸುಳೆಯನ್ ಬಾಳ್ಮೊನೆಗೆ ಚುರ್ಚಿದನ್ (ಅಕ್ಕಾ. ೩-೯೬). [ಬಾಳ್$_3$ + ಮೊನೆ]

**ಬಾಳ್ವಂದರ** 'ಬಾಟ್ವಂದರ್' ನೋ.

**ಬಾಳ್ವನೆ** 'ಬಾಟ್ವನೆ' ನೋ.

**ಬಾಳ್ವಲ** (ನಾ). ಖಡ್ಗಬಲ ; ಆಯುಧಬಲ : ಪರವಿಗ್ರಹದ ಮೇಲಣ ತೋಳ್ವಲಮುಮಂ ನಿಜವಿಗ್ರಹದ ಮೇಲಣ ಬಾಳ್ವಲಮುಮನೋಸರಿಸದೆ ಸುತ್ತಿಱಿದ ಮುತ್ತಿದ ಬೀಡಂ ತೆಗೆಯಿಸಿ ಮುಗುಟ್ದು ಬರ್ಪಾಗಳ್ (ಅಜಿತ. ೦೨-೨೬ ವ) ; ಆಳ್ವಲದ ತೋಳ್ವಲದ ಬಾಳ್ವಲದ ಗರ್ವದಿಂದುರ್ವಿ ಮಲೆತ ಗರ್ವಿತೋರ್ವೀಶಬಳಮನೆಟ್ಟಟ್ಟಿ (ಪುಷ್ಪಕ. ೩-೩೦ ವ). [ಬಾಳ್$_3$+ಬಲ್$_3$]

**ಬಾಳ್ವಲಿ** (ನಾ). ಪ್ರಾಣದ ಬಲಿದಾನ,—ಆಹುತಿ : 'ಬಾಳ್ವಲಿಗುಡು' ಪರಾ. [ಬಾಳ್$_2$ (< ಬಾಟ್$_3$) + ಬಲಿ$_3$]

**ಬಾಳ್ವಲಿಗುಡು** (ಕ್ರಿ). ಪ್ರಾಣವನ್ನು ಆಹುತಿ ಕೊಡು,—ಬಲಿಯಾಗಿ ಅರ್ಪಿಸು : ಈ ನಮ್ಮ ನಾಯಕರ ಶರಭಾವತಾರದ ಪ್ರಚಣ್ಡಮೂರ್ತಿಗೆ ಬಾಳ್ವಲಿಗುಡಬೇಕು (ಮಂತ್ರಕ. ೯೯-೨೩).

[ಬಾಳ್ವಲಿ + ಕುಡು$_1$ (< ಕೊಡು$_1$)]

**ಬಾಳ್ವಿಕೆ** 'ಬಾಟ್ವಿಕೆ' ನೋ.

**ಬಾಳ್ವಡಿ$_1$** (ಕ್ರಿ). ಜೀವಧಾರಣೆ ಮಾಡು ; ಬದುಕು : ಮತ್ತೊಂತೊ

ಬಾಳ್ವಡಿದು ಬಂದರೊಡಗೂಡಿ (ಕಾಂಬಿಕ. ೯೬-೧೪೪).

[ಬಾಳ್₃ (< ಬಾಟ್₃) + ಒಡಿ₁]

**ಬಾಳ್ವಡಿ₂** (ಕ್ರಿ). ೧. ಕತ್ತಿಯನ್ನು ಹಿಡಿ ; ಖಡ್ಗವನ್ನು ಹಿಡಿ. ೨. (ಆಲಂ) ಯುದ್ಧಮಾಡು ; ಸೆಣಸು : ಬಾಳ್ವಡಿದಾರ್ ಬಾಟ್ವಪ್ಪರಾತನಿದಿರೊಳ್ ಪಗೆವರ್ (ಕಬ್ಬಿಗ. ೪೪). [ಬಾಳ್₃ + ಒಡಿ₁]

**ಬಾಳ್ವೀಡು** (ನಾ). ಬಾಳುವ ಮನೆ ; ಮೂಲಾಶ್ರಯ ; ನೆಲೆವನೆ : ಸಿಂಹಪುರ ಕಂತುವಿನ ನೆಲೆವೀಡು ಸೊಬಗಿನ ಸಂತತಿಯು ಶಾಯ್ವೀಡು ಲಕ್ಷ್ಮಿಯ ಸಂತಸದ ಬಾಳ್ವೀಡೆನಿಸಿ ಶೋಭಿಪುದು ಸೊಬಗಾಗಿ (ನಾಳ್ಕಾ. ೩-೦). [ಬಾಳ್₁ (< ಬಾಟ್₁) + ಬೀಡು₂]

**ಬಾಳ್ವೆ** 'ಬಾಟ್ವೆ' ನೋ.

**ಬಾಳ್ವೆಗೆಡಿಸು** (ಕ್ರಿ). ಬಾಳುಗೇಡು ಮಾಡು ; ಬದುಕನ್ನು ಹಾಳು ಮಾಡು : ಇದಿರಾದರಂ ಬಾಳ್ವೆಗೆಡಿಸುತ್ತಸುಂಗೊಂಬೆನೀ ಬ್ರಹ್ಮಾಂಡಮುಂ ಪೊಳ್ವೆಂ (ಕಲಪು. ೩೦-೦೦). [ಬಾಳ್ವೆ (< ಬಾಟ್ವೆ) + ಕೆಡಿಸು₁]

**ಬಾಳ್ವಿಣ** 'ಬಾಟ್ವಿಣ' ನೋ.

**ಬಾಳ್ವೆಳೆ** (ನಾ). (ಹೊಲಗದ್ದೆಗಳ) ಬೆಳೆಯುತ್ತಿರುವ ಪೈರು ; ಹಸುರಾಗಿರುವ ಬೆಳೆ: ಬೆಳ್ವೆಳಗಿನ ಬಾಳ್ವೆಳೆಯಂ ತಳ್ವದೆ ಬಾಂಬೊಲದೊಳರುಣಕರ ಶಿಖಿಶಿಖೆ ಪಾಳೆಳ್ವಿಸಮಳುರ್ದುಜಿ ಚಿಂತೆಯನಾಳ್ವಂತೆವೊಲೋಪಧೀಶ್ವರಂ ಕಳೆಗೆಟ್ಟಂ (ಧಾಕಕೀ. ೦೨-೧೩). [ಬಾಳ್₁ (< ಬಾಟ್₁) + ಬೆಳೆ₂]

**ಬಾಳ್ವೇಲಿ** 'ಬಾಟ್ವೇಲಿ' ನೋ.

**ಬಾಳ್ವೊಗರ್** (ನಾ). ಕತ್ತಿಯ ಹೊಳಪು, -ಕಾಂತಿ : ಧರಣೀರಕ್ಷಣ ಮಾತ್ರಾಕ್ಷರಮಂ ವಿದ್ವಿಷ್ಟಸೈನ್ಯಮಾರಣಮಂತ್ರಾಕ್ಷರಮಂ ಪೊನ್ನೊರೆಯಿಂದಂ ಬರೆದಂತಾ ನೃಪನ ತೋಳ ಬಾಳ್ವೊಗರಸೆಗುಂ (ಪುಲ್ಲಕ. ೩-೦೩).

[ಬಾಳ್₃ + ಪೊಗರ್]

**ಬಾಳ್ವೊಗು** (ಕ್ರಿ). ವೈವಾಹಿಕಜೀವನವನ್ನು ಮೊದಲು ಮಾಡು ; ಸಾಂಸಾರಿಕಜೀವನವನ್ನು ಪ್ರಾರಂಭಿಸು : ಮದುವೆಯಾಗು : ಪಳೆಯ ರೋಗಕ್ಕೌಷಧಂಗೊಳಲ್ ನವರೋಗಮೊಲಿದು ಬಂದಂತೆ ಮೊದಲಾಣ್ಮನೊಲ್ಲೆಂದೊರ್ವ ಬಲವಂತನಂ ಬಯಸಿ ಬಾಳ್ವೊಗಲ್ ಬಡಿವ ಗಂಡಂ ದೊರಕಿದಂತೆ (ಕಂಪು. ೩೩-೭). [ಬಾಳ್₂ (< ಬಾಟ್₃) + ಪೊಗು]

**ಬಾಳ್ವೊಗೆ** (ನಾ). ಕತ್ತಿಗಳು ಪರಸ್ಪರ ತಾಗಿದಾಗ ಅವುಗಳ ಘರ್ಷಣೆಯಿಂದ ಹೊರಡುವ ಹೊಗೆ : ಬಾಳ್ವಾಳ್ಗಳ ಘಟ್ಟಣೆಯೊಳ್ ಬಳ್ಳಳಳೆದೊಗೆದು ನೆಗೆದ ಕಿಡಿಗಳ ಬಂಬಲ್ಗಳ್ವೆರಸು ಪೊಳೆದು ನೆಗೆದುದು ಬಾಳ್ವೊಗೆ [ಕಾರ ಮುಗಿಲ್] ಬಳ್ಳಿವಿಂ[ಚನಿಂದು]ಳ್ಕುವವೊಲ್ (ಶಂಶಕಾ. ೧೦-೪೪). [ಬಾಳ್₃ + ಪೊಗೆ₁]

**ಬಾಜಿಕೊಟ್ಟೆ** (ನಾ). ಬೆಳೆಯುವ ಪೊದೆ, ಕಂಟಿ ಮೊದಲಾದುವುಗಳಿಂದ ರಚಿಸಿದ ಬೇಲಿ : ಉತ್ತರಸ್ಯಾನ್ ದಿಶಿ ಬಾಜಿಕೊಟ್ಟ (ಪ್ರಜಾ. ೦೭೨೧, ೬೦-೯೬ ; ೭೯೯).

[☞ ಇದು 'ಬಾಟಿಕೊಟ್ಟೆ' ಎಂಬುದರ ಅಪಲಿಖಿತವಿರಬಹುದು]

**ಬಾಟ್₁**, **ಬಾಳ್₁**, **ಬಾಳು₁** (ಕ್ರಿ). ಬದ್ದು₁, ಬರ್ದು₂, ಬಳ್ದು, ಬಟ್ದು (ಭೂತನ್ಯೂ). ೧. ಬದುಕು; ಜೀವಿಸು : ಪತ್ರಿ ಪ್ರವಾದಫಲಕಮನತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯನೆ ಬಟ್ದಳಿಂತು ಬಾಟ್ವುದೆ ಚೋದ್ಯಂ (ಕಾಂಅ. ೨-೩೭); ಅರಾತಿಗಳ್ಗಳ್ಳಿ ತನ್ನ ಕುಲವಮುಂ ಚಲವಮುಂ ದೊರೆಯುಂ ಕಿಡೆ ಬಾಟ್ಟಂ ಗಂಡ ರೂಪಿನೊಳ್ ಗಂಡನಲ್ಲು ಪೆಂಡತಿಯ ವಲಂ (ಆಂಕ್ಷ. ೦೨-೯೩) ; ಸಮಸಂದತನ್ನ ಸಂತತಿಗೆ ಮಕ್ಕಳುಳ್ಳೊಡೆ ಬಟ್ದು ಬಾಟ್ವುಳ್ [ಕ್ಷಿ]ತಿಯೊಳ್ ಸಮಸಂದೆಸೆಗುಮೆ ಸಂತತಿಗೆ ಮಕ್ಕಳಿಲ್ಲದಲ್ ಬರ್ದುದೇಂ ಬಾಟದುದೇಂ (ಸುಕುಮಾ. ೯-೦೦೪) : ಸುಖದಿಂ ಅನುಭವಿಸಿಕೊಂಡು ಸರ್ವಮಾನ್ಯವಾಗಿ ಬದ್ದು ಏಹಿರಿ (ಪ್ರಜಾ. ೦೧೩೪, ೩೦-೨೩ ; ೧೬೪೦). ೨. ಹೊಟ್ಟೆ ಹೊರೆ: ಉದರನಿರ್ವಾಹ ಮಾಡು ; ಉಪಜೀವನ ನಡೆಸು : ಜೀವಿತಮಂ ಕೊಂಡು ಬಾಟ್ವೆನೆಂಬವಂ ಪ್ರಾಣಮಂ ಕುಡಲ್ವೇಟ್ಕುಂ (ಶಂತಕಂ. ೩೨-೦೦). ೩. ನೆಮ್ಮದಿಯಾಗಿರು ; ಸುಖದಿಂದ ಜೀವಿಸು; ಸಂತುಷ್ಟವಾಗಿರು: ಒಕ್ಕಲೆಗರ ಮಾತುಗೇಳದಿರು ಬಾಟ್ವೆನವಿಂದ್ರಿಯವರ್ಗದಿಚ್ಛೆಯಂ ಸಲಿಸಿ . . . ಬಿಚ್ಚತಂ ನಲಿವುದು (ಆಂಕ್ಷ. ೨-೯) ; ನಾಲಿಗುಳ್ಳನೆ ಬಾಟ್ಗುಂ (ಕಾಶಾಶೂ. ೨೦ ಶ್ರದೂ.); ಬಾಟ್ವ ಮನೆಗೊಂದು ಬಗುಳ್ವುದು ಬೇಟ್ಕುಮೆನ್ಸಿರೇ? (ಕಸಂಪು. ೦-೪೦). ೪. ಒಕ್ಕಲಾಗು ; ನೆಲಸು ; ವಾಸಮಾಡು : "ಬಟ್ದಂ (ಬಾಟ್ದಂ)=ಜೀವಿಸಿದಂ ; ಒಕ್ಕಲಾದಂ" (ಶಮದ. ಹಾ. ೦) ; ಬಿಸಿಗೂರುಳ್ಳಾಟ್ವ ಪ್ರಜೆಗಳ್ಗಂ ಕೊಟ್ಟೊಡದು ಕಟ್ಟಾಣೆ ಮರ್ಯಾದಿ ಕಾರಾಳ್ವಿಗೊಟ್ಟಾರ್ (ಎ.ಕ. IX (೩), ಮಾಗಡಿ. ೦೨೯-೯ ; ಪು. ೬೦೦). ೫. (ಆನೆಯನ್ನು) ನೆಲೆಯಾಗಿ ನಿಲ್ಲಿಸು: 'ಬಾಟಿಸು', 'ಬಾಟ್ಗಂಬ' ಪರಾ.

**ಬಾಳ್₁**: ೧. ಕವಿಮ್ಮಿ ಕುಪುಬ್ಬತ್ತಿ ಇದಲನೊಲೆಯಿಸಿ ಮುಗ್ಗಿ ಬಳ್ವಂ ನಿತಾಂತಂ ಕಿಡೆವಲ್ಲಿಂ ಮುನ್ನ . . . ರಕ್ಷಿಪ್ಪದೆನ್ನಂ (ಕಿಣ್ಣಿಕ. ೩೬); ಮೋಹನರೂಪನೆ ನಿನ್ನ ಬಿಟ್ಟೀಪರಿಯಲಿ ಬಾಳ್ವೆ ಜೀಯ (ಮೋಹತ. ೬-೦೩). ೩. ಸಪ್ತಋಷಿಗಳ್ ನುಡಿದಾಪ್ತವಚನಂ ಕರ್ಣರಸಾಯನಮಾಗೆ ಗಿರಿರಾಜಂ ಕೇಳ್ದು ಬಾಳ್ದು ಸಂದಣಿಸಿದ ಪುಳಕದಿಂ ದಳವೇಜ್ (ಗಿಂಕ. ೦೦-೨೬ ವ). ೬. ಬಾಳುವೆಮಾಡು ; ಒಗೆತನವಮಾಡು ; ದಾಂಪತ್ಯಜೀವನವನ್ನು ನಡೆಸು : ಮನಿತ ನಿನ್ನಂ ಬಾಳಲೀಯೆವು ಮನೆಯೊಳಿರವೇಡೀಗ ಹೊಡಿವಡುಸಿನಗೆ ನಾವಂಜುವೆವು (ಕಸಪು. ೩೨-೨೦).

**ಬಾಳು₁**: ೧. ಬಾಣಾತ್ಮಸಂಭವೆಯಿಲ್ಲದಾನೊರ್ವ ಬಾಳೆನು (ಮೋಪಕ. ೩೪-೨೩). ೩. ತಾ ಬಾಳಲಾಜದೆ ವಿಧಿಯ ಬೈದನೆಂಬ ನಾಣ್ನುಡಿಯಾಯಿತ್ತಲ್ಲ ಬಸವಣ್ಣ (ಕೂಸ್ವಸಂ. ೦೦೬-೭೭) ; ಆಯುಷ್ಯವಂತನೆ ಬಾಳು ದನುಜನಿಕಾಯದುಮಸ್ತಕಶೂಲ ಬಾಳೆನು ತಾಯತಾಂಚಿಕ ಹರಸೆ ಮಾರುತಿ ಪದವ ವಿವರಿಸಿದ (ಕೌಶಿಂಗ. ೯೩-೩); ಸೊಕ್ಕಾನೆ ಸಿಂಗದೊಳ್ ಕದನವ ಕಟ್ಟಿಕೊಂಡೊಕ್ಕಲಾಗಿರ್ದು ಬಾಳುವುದೇ (ಮೋಪಕ. ೩೩-೨೯). ೬. ಎಳೆವಣ್ಣಳೇ ಕೃತಿಗೇಳೆ ತಮ್ಮನಿಯುರನೆಳವೆಯೊಳಳವುಗಡಿಸದೆ ಬೆಳಿಸಿಂದು ಬಾಳುವರು (ಹಂಶಿ. ೦-೩೩). ೭. ಬೆಲೆಯಾಗು ; ಬೆಲೆ ತರು : ಸಂತೆಯಲ್ಲಿ ಒಂದು ರೂಪಾಯಿ ಬಾಳುವ ಜೋಡು ಶ್ರೀಮಂತನ ಮೂಲಕವಾಗಿ ಎರಡು ರೂಪಾಯಿ ಬಾಳೀತೆಂಬುವ ಹಾಗಲ್ಲ (ಮುಂಶಂಹು. ೩-೦೨೦).

ಬರ್ದಂ, ಬರ್ದೊಂ = ಬದುಕಿದವನು ; ಬಾಳಿದವನು : ಬರ್ದರೊಳಾನೆ ಬ[ರ್ದಂ] [ಶಾಶಂ. ರ್ದಂ] (ಶಂಶಕಾ. ೯-೬೩) ; ಕಲ್ಲೆರ್ದೆತನದಿಂ ದೆನ್ನಂತು ಬರ್ದನಾವನುಮೊಳನೇ (ಗದಾಯು. ೩-೨೬) ; ಶಾಂತಮನುತಾಪಮನಾಜಿಸಿತಂ[ದುದಂ]ದು ಬರ್ದೊಂ ಪರೆದಿರ್ದವೊಲ್ ಮುನಿಗೆ ಕಲ್ಮಲೆ ಬಲ್ಮಲೆಯಂ ನಿದಾಘದೊಳ್ (ಶಾಂತಿಪು. ೯-೦೦೬).

[ದೇ. ॥ ತಮಿ. ವಾಟ್; ಮಲ. ವಾಟು; ತುಳು. ಬಾಳು; ಕೋತ. ವಾಲ್]

**ಬಾಟ್₂** (ಕ್ರಿ). ೧. ಸೀಳು ; ಹೋಳು ಮಾಡು : ಕರಗಸಂಗಳಿಂದಂ ಮರನಂ ಪೋಟ್ವಂತೆ ಕಯ್ಯಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿಯದ್ದಂ ಬಡಿದು ಬಾಟ್ಪುದುಂ (ಪಕ್ಕಾರ. ೦೨೭-೦೩). ೨. (?) : ಬಾಟುಕಂ—ಸೀಳ್ದೊಣಗಿ ಬಾಟ್ದ ಶಾಕಂ (... ಪಾ. ೦).

**ಬಾಟ್₃**, **ಬಾಳ್₂**, **ಬಾಳು₂** (ನಾ). ೧. ಬದುಕು ; ಇರವು ; ಜೀವನ : ಅವುದು ನಿನ್ನ ... ಗಮೆಮ್ಮ ಬಾಟನಿತೆ ನೀನಿಂತಿರ್ದೊ ಡಾವಾಸೆಯೋ (ಅಂಕ್ಷ. ೩-೨೩) ; ... ದ ಶಂಕಾತಂಕದ ಸುತ್ತಿನೊಳಗುಂಬಿದುಬಿ ನವೆಮ ಬಾಟುಂ ಬಾಟೇ (ಪಂಕಾತ್ಮ. ೦೩-೩೪) : ನೀನೆಂತೊ ಮುಳಿವೆಯೊಳ್ ಪಜಿರೊಡನುಸಿರ್ದು ಗುಟ್ಟಂ ಬಿಟ್ಟೊಡೆಮ್ಮನ್ನರ ಬಾಟ್ ಪಾಟಕ್ಕುಂ (ಧಾವಾಶ್ಕ. ೦೦೬-೦೭). ೨. ನೆಮ್ಮದಿ

ಯಾದ ಬದುಕು; ಸುಖಜೀವನ: ಪಜಿಪಟ್ಟ ಪಗೆವರಂ ನೆಟ್ ಪಜಿವಡಲಣುವಿಾಜುವವರನವರ್ಗಳ ಬಾಳ್ಗೊಳ್ ನಿಜ್ಅಸರ್ ಬಗೆದ್ರ (ಕುಪ್ರಾ. ೯-೯೩); ನೆಲನ ಈ ಗೆಂಟಟಿಗೆ, ಬಟಿಯಿರದ ಬಾಳಿರದ ಸಿದಿಯದೀ ಬಾಳ್ಗೆ ವೆಟ್ಟಿದೆವು ಬಂದು ಕಟ್ಟಕಡೆಗೆ (ಐರ್ವತ್ರ. ೦-೦). ೩. ದಾಂಪತ್ಯಜೀವನ; ಸಂಸಾರ: ಸ್ನೇಹವಿಲ್ಲದ ಕೋಡುಂ ಮೋಹವಿಲ್ಲದ ಬಾಳುಂ ಭಕ್ತಿಯಿಲ್ಲದ ಕೊಂಡಾಟವುಮುಂ ಶಕ್ತಿಯಿಲ್ಲದ ಸೆಣಸುಂ. . . ಒಪ್ಪಲಾರ್ಕುವೆ (ಚರ್ಚಾನ್ಯ. ೦-೬೩). ೪. ಜೀವನಾಂಶ; ಜೀವಿತ: ಶಸ್ತ್ರಂಗಳಂ ಬಲ್ದೊಂಗಾ ಮಂತ್ರಿಪದವಿಯುಂ ಬಾಳುವುಂ ಪ್ರತಿಪತ್ತಿಯುಮುಂ ಕೊಟ್ಟುದಂ ಕೇಳ್ದು (ವಡ್ಡಾ. ೨-೨೩). ೫. ಜೀವ; ಪ್ರಾಣ: 'ಬಾಳ್ಗೆಣ' ಪರಾ. ೬. (ಜೀವಿತಕ್ಕಾಗಿ) ಕೊಡುವ ಭೂಮಿ: ಗಾಡಿಯಮ್ಮನಾ ಬಾಳುಂ ಪ್ರತಿಪಾಳಿಸ ನಿಲೆ ಪಡೆದೊಂ (ಎಕ. VII. ೨೦೩-೦೫; 874). ೭. ಹಸುರಿನಿಂದ ಕೂಡಿದುದು; ಹಸುರಾದುದು: 'ಬಾಳ್ಗೊಂಪ' ಪರಾ. ೮. ಹಸಿಯಾದುದು; ತೇವವುಳ್ಳದು: 'ಬಾಳ್ಗೆಣ' ಪರಾ. ಬಾಳ್₂: ೧. 'ವುದುವಾಳ್₂' ಪರಾ. ೫. 'ಬಾಳ್ಗೊಗ್ಗಲೆ' ಪರಾ. ಬಾಳ್₃: ೧. ಬಾಳೆ ನೋಡಕಟಕಟ ಎನಗಿದು ಬಾಳೆ (ಚನ್ನ. ೧೩-೧೦); ಸೇವಾಪರನ ಬಾಳು ನಿರರ್ಥವವನಿಯಲಿ (ಜೀನಂತ. ೯-೯೯); ಉತ್ತಮಮಾನವನ ಬಾಳೂ, ಬದುಕೂ ಇರಬೇಕು ನದಿಗಳಂತೆ (ಕವಂ. ೦೭). ೩. ಬಾಳಿಲ್ಲದವಳ [ಓ]ಲೆಯುಂತಾಯಿತ್ತೆನಗೆ (ಚಿತ. ೨೧೬); ನನ್ನ ಬಾಳು ತಪ್ಪಿಸಿದ ನನ್ನ ಗಂಡನ ವಂಶದ ಹೆಣ್ಣುಮಕ್ಕಳು ಚೆನ್ನಾಗಿ ಬಾಳದೆ ಇರಲಿ (ಬಿಳ. ೨೨). ೬. ಹಿತ್ತಿಲ ಕೇರಿಯ ಉತ್ತರೇಸ್ವರ ದೇವರ ಬಾಳೊಳು ಹೂದೋಟದಿಂ ಪಡುವಲು (ಶಾಇ. IX-i. ೩೭೦-೩೩; 1269); ಅನ್ತು ಮೂಱ ಗಿನ ಹ ೨೦ ಗದೆಯೂ ಆ ಬಾಳಿಂಗೆ ಬಂದ ತೋಟ ಮನೆಯೂ (ಸೌಇ. XI-ii. ೪೦೭-೨೬; 1364); ಧರಣಿದೇವಂಗಳು ಧನಿಯರ ಕಯ್ಯಲು ಧಾರಾಪೂರ್ವ್ವಕವಾಗಿ ಕೊಂಡ ಬಾಳಿನ ವಿವರ (ಶಾಇ. IX-ii. ೪೦೭-೫; 1366).

**ಬಾಳದಿರಿಕೆ** = ಭಿಕ್ಷೆಯನ್ನು ಬೇಡಿ ಜೀವಿಸುವಿಕೆ, –ಬದುಕುವಿಕೆ: ಏಳುಧರಣಿಯುನಾಳುವರಸನಂ ಪೊಲೆಯನಿಗೆಯಾಳುಮಾಡಿದೆ ಪಂಚನರ ಸಾರ್ವಭೌಮರಿಗೆ ಬಾಳದಿರಿಕೆಯನಿತ್ತೆ ಶಂಭುಲಿಂಗೈಕ್ಯರೊಳು ಕೀಲಿಸಿದೆ ಪ್ರಾರಬ್ಧಭೋಗನೀತಿಯನು (ಕೃಶಂ. ೩-೦೦-೩). **ಬಾಳು ಮಾಡು** = ದಾಂಪತ್ಯಜೀವನವನ್ನು ನಡೆಸು; ಬಾಳುವೆ ಮಾಡು: ನೋಡು. ನೀನಿನ್ನೂ ಹುಡುಗಿ, ಅದರಲ್ಲೂ ಗಂಡನ ಮನೇಲಿ ಸುಖವಾಗಿ ಬಾಳು ಮಾಡ್ತಾ ಇರೋಳು (ಹಾಗ. ೬). [<ಬಾಳ್₁]

**ಬಾಳಗಾವುಂಡ** (ನಾ). ಒಬ್ಬಾತನ ಹೆಸರು: ಬಾಳಗಾವುಣ್ಡ ಕಂಭಯ್ಯನು ಕಳ್ಳವುಣಾಯೂರ ಮಹಾಜನವುಂ (ಎಕ. XI. ಚಿತ್ರದು. ೫೦-೨೦; 968). [ಬಾಳ್₀ + ಗಾವುಂಡ (< ಗಾಮುಂಡ)]

**ಬಾಳಿಕೆ** 'ಬಾಳ್ಕೆ' ನೋ.

**ಬಾಳಿಗೆ** 'ಬಾಳ್ಕೆ' ನೋ.

**ಬಾಳಿಮೆ** 'ಬಾಳ್ಮೆ' ನೋ.

**ಬಾಳಿಸು,** ಬಾಳಿಸು (ಕ್ರಿ). ೧. ಬದುಕಿಸು; ಉಜ್ಜೀವಿಸು: ರಸ[ಂ] ತೀವ ಮೆಯ್ಗೆ ತಕ್ಕ ಪ್ರತೀಕಾರದ ಮದರ್ಗಳಂ ಮಾಡಿಯಾತನಂ ಬಾಳಿಸಿ ಕಟುಪಿದಂ (ಕಪ್ರಾ. ೦೯೭-೦೯); ಎನ್ನಿಂ ಮುನ್ನದೊನ್ನ ಮಗಂ ಸತ್ತನಾತನಂ ಬಾಳಿಸಲ್ವೇಟ್ಕುಂ (ಶಾಪುಂತ. ೯-೭). ೨. ಸಲಹು ಕಾಪಾಡು: ಅರುಮಂ ತಂತಮ್ಮ ಪುಣ್ಯಮೆ ಬಾಳಿಸುಗುಂ (ಶಂಕಂ. ೩-೦೭ ಕ). ೩. ಜೀವನವನ್ನು ಸಾಗಿಸಲು ಅವಕಾಶ ಮಾಡಿಕೊಡು; ಬಾಳಲು ಅನುಕೂಲ ಮಾಡಿ ಕೊಡು: ಅಯ್ಯರುಮನಪ್ಪುಟ್ ಯೂರೊಳೆ ಬಾಳಿಸು (ಶಂಕಾ. ೦೨-೯೮); ಪೆರ್ಗ್ಗಡೆ ಮಾಚಯ್ಯ ಮಾಪ್ಪಲದ ಗಾವುಣ್ಡ ಗಜಿಯ ವೆಟ್ಟಿಟ್ಟಡೆ ಬಾಳಿಸಿದ ಸ್ಥಿತಿಕ್ರಮವಾವುದೆನ್ಗೊಡೆ (ಎಕ. IV (R). ಶಾಮರಾ. ೦೩೮-೯; 965). ೪. (ಆನೆಯನ್ನು) ನೆಲೆಯಾಗಿ ನಿಲ್ಲುವಂತೆ ಮಾಡು: ನೀಳ್ದ ತೋಳ್ ಮೆಜೆವುವು ಪೇರುರದೊಳ್ ನೆಲಸಿದ ಲಕ್ಷ್ಮೀಕರಿಣಿಗೆ ಬಾಳಿಸಿದ ರನ್ನದಮಳ್ಗಂಬದವೋಲ್ (ಹುಕೋಚ. ೨-೬).

**ಬಾಳಿಸು:** ೩. ನೀವು ಪ್ರೀತಿಯಿಂದ ನನ್ನನ್ನು ಬಾಳಿಸುವುದು ನನಗೆ ಬೇಕು (ಕನ್ನ. ೨೦೨). [ಬಾಳ್₁ + –ಇಸು₁]

**ಬಾಳುಕ,** ಬಾಳಕ₁, ಬಾಳುಕ (ನಾ). ಸಂಡಿಗೆಯಂತೆ ಕರಿದು ನಂಜಿ ಕೊಳ್ಳಲೂ ಅಗತ್ಯ ಬಿದ್ದಾಗ ತರಕಾರಿಯಂತೆ ಬಳಸಲೂ ಅನುಕೂಲವಾಗುವಂತೆ ಸೀಳಿ ಅಥವಾ ಹೆಚ್ಚಿ, ಉಪ್ಪು ಬೆರಸಿ ಒಣಗಿಸಿದ ಮೆಣಸಿನಕಾಯಿ, ತರಕಾರಿ ಮೊದಲಾದುವು: "ಬಾಳುಕಂ = ಸೀಳ್ದೊಣಗಿ ಬಾಡ್ದ ಶಾಕಂ" (ಕಶಬ್ದ. ಹೂ. ೦). **ಬಾಳಕ₁:** ನೊರೆಸಂಡಗೆಯನು ಹುರಿಸಂಡಗೆಯನು ಬಾಳಕವನು ತಪ್ಪದೆಲ್ಲಾ ಸಾಧನವನು ಸಂಪರಿಸಿ ತಂದು (ಸಿದ್ಧರಾ. ೬-೩೨); ಪರಿಪರಿಯುಪ್ಪಿನಕಾಯಿ ಹಪ್ಪಳ ಸವಿವೆರಸಿದ ಬಾಳಕವ . . . ತರುಣಿಯರಡೆಮಾಡಿದರು (ಕೆಂಪಂ. ೬-೮೯); ಪಡುವಲ ಕಾಯಿ, ಬದನೆಕಾಯಿ, ಅವರೆಕಾಯಿ, ಹಾಗಲಕಾಯಿ ಇತ್ಯಾದಿ ತರಕಾರಿಗಳ "ಬಾಳಕ" ಮಾಡಿಟ್ಟುಕೊಂಡರೆ ಬೇಕಾದಾಗ ಕರಿದು ಊಟದ ಸಮಯದಲ್ಲಿ ಉಪಯೋಗಿಸಬಹುದು (ಅತುಸಾ. ೦೦೭). 'ಬಾಳ್ಕ' ಹೋ. **ಬಾಳುಕ:** ಉಪ್ಪಿನಕಾಯ್ ಪಳಿದ್ಯ ಕಚ್ಚರಿ ಬಾಳುಕಂಗಳೊಪ್ಪುವ ಪಕ್ವಫಲ ರಸಾಯನದ ಸೀಕರಣೆಗಳನು . . . ಉಟ್ ನೀಡಿಸಿದನಾ ಮಹಾಚರಕೊಲ್ಲು ಚೆನ್ನಬಸವೇಶ ನಂದು (ಕಚಿತ್ರ. ೩-೬೦); ರಸರಸಾಯನ ಸಾರ್ಗಳುಪ್ಪುಗಾಯ್ಬಾಳುಕಂ ಕಸು ಕಚ್ಚಡಿ ಪಾಲ್ಗೊಸರ್ಗಳಪು ಬಗೆಗೊಳಿಸಿ ಪೊಸತೆನಿಸಿರಲ್ಸವಿದನಚ್ಯುತಂ (ಕೃಚಿಚ. ೬-೯೯); ಸಂಡಗೆಯ ಬಾಳುಕಗಳಂ ಕಲಸೋಗರಂಗಳನು . . . ನೈವೇದ್ಯಮುಂ ಮಾರ್ತಂಡಕೋಟಿಪ್ರಭೆಯ ಬೆಳಗುವಗರ್ಪಿಸಿವರೊಲಿದು (ಕಂಕಡಾ. ೨-೬೦).

**ಬಾಳುಕಮಾಗು** = (ಅಲಂ) (ಚಿಂತೆಯಿಂದ) ಸತ್ತ್ವಹೀನವಾಗು; ಬೆಂಡಾಗು: ಒಂಭತ್ತುತಿಂಗಳ್ ಬತ್ತಿ ಬಾಳುಕವಾಗಿ ಪೊತ್ತ ಬೇನೆಯುಂ ಸತ್ತ ಬೇನೆಯುಮುಮಂ ನೀಗಲಾಟಂ (ಅಠರ್ನೇ. ೭-೩೩ ಚ). [ದೇ. ॥ ತುಳು. ಬಾಳಕ, ಬಾಳುಗ]

**ಬಾಳೆ,** ಬಾಳಿ₁ (ನಾ). ಅಗಲ ಹಾಗೂ ಉದ್ದವಿರುವ ಎಲೆಗಳಿದ್ದು, ಒಂದು ದಂಟಿಗೆ ಒಂದೇ ಗೊನೆ ಬಿಡುವ ಒಂದು ಬಗೆಯ ಹಣ್ಣಿನ ಗಿಡ; ಕದಳಿ: "ರಂಭಾ ಮೋಚ ಕದಳಿಯೆನಲು ಬಾಳೆಯಕ್ಕುಂ" (ಚುಂಗರಾ. ೪೯-೯); ಭೀಮಸೇನಂ . . . ಬಾಳೆಯ ಚೆಲ್ವನಪ್ಪ ಬನಮಂ ಕಾಡಾನೆ ಪೊಯ್ದಂತೆ ಪೊಯ್ದುನಿಸುಂ ಮಾಣದೆ ನೀಚಕೀಚಕನಿಕಾಯಧ್ವಂಸನಂ ಮಾಡಿದಂ (ಕಂಚಚಾ. ೬-೬೦); ಬಾಳೆಯ ವಣ್ಣದೊಂದು ರುಚಿ ನೇಟಿಲು ಪಣ್ಣೊಳಗುಂಟೆ (ಕರ್ಣಾಕ್ನು. ೯-೦೨೬). **ಬಾಳಿ₁:** ಬಾಳೆ ತೋಟ್ಟುಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X. ಕೋಲಾರ. ೨೪೦-೫; ಶ. 800 ?); ಕಬ್ಬು ಬಾಳೆ ಹಲಸು ನಾರಿವಾಳಕ್ಕ ಸಿಹಿನೀರನೆಟಿದವರಾರಯ್ಯ (ಮಹಾದೇ. ೩. ೦೦-೩); ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ (ಶಂಚಿಕ. ೦೯-೦೬).

**ಬಾಳೆಕಂದು** = ಬಾಳೆಯ ಸಸಿ: ಕಂಬ ತರುವುದು ಎಂದರೆ ಒಂದು ಬಾಳೆಕಂದು ಕಡಿದು ಅದನ್ನು ತೊಳೆದು ಪೂಜೆ ಮಾಡಿ . . . ಅದಕೆ ಹೊಂಬಾಳೆ ಸಮೇತ ಕಟ್ಟುವುದು (ಕಮ್ಮಕು. ೯೩). **ಬಾಳೆಕಾಯಿ** = ೧. ಬಾಳೆಗಿಡದ ಕಾಯಿ; ಪಕ್ವವಾಗದ ಬಾಳೆಹಣ್ಣು: ಬಾಳೆ ಕಾಯಿಯ ಪಲ್ಯ ಎಂದರೆ ನನಗೆ ಇಷ್ಟ (ಊಡ). ೨. (ಸೀರೆಯನ್ನು ಉಡುವಾಗ) ನಿರಿಗೆಗಳನ್ನು ಬಾಳೆಕಾಯಿಯ ಆಕಾರದಲ್ಲಿ ಮೇಲಕ್ಕೆ ತಿರುವಿ, ಸೊಂಟದಲ್ಲಿ ಮಡಿಸಿ ಸಿಕ್ಕಿಸಿದ ಸೀರೆಯ ಅಂಚು:

ಬಾಳೆಕಾಯಿಯಲ್ಲಿ ಸಿಕ್ಕಿಸಿಟ್ಟುಕೊಂಡಿದ್ದ ದುಡ್ಡು ಭದ್ರವಾಗಿಯೇ ಇದೆ (ಜಾಂ). ೩. (ಉಕ) ಬಾಳೆಯ ಹಣ್ಣು: ಪೇಟೆಗೆ ಹೋಗಿ ಬೇಗನೆ ದೇವರ ಪೂಜೆಗೆ ನಾಲ್ಕು ಬಾಳೆಕಾಯಿ ತೆಗೆದುಕೊಂಡು ಬಾ (ಜಾಂ). ಬಾಳೆದಿಂಡು = ಬಾಳೆ ಗಿಡದ ಕಾಂಡದ ಒಳಭಾಗ: ಬಾಳೆದಿಂಡನ್ನು ಅಡಿಗೆಗೆ ಉಪಯೋಗಿಸುತ್ತಾರೆ (ಜಾಂ). ಬಾಳೆಪಟ್ಟೆ = ಬಾಳೆಕಂಬದ ತೊಗಟೆ,— ಸಿಪ್ಪೆ: ಫಲಗಳ ವೃಕ್ಷಗಳ ಬಿತ್ತಗಳಂ ಚೆನ್ನಾಗಿ ಕಳಿತ ಬಾಳೆಹಣ್ಣುಗಳಿಂದಾ ಬಾಳೆನಾರುಗಳಿಗೆ ಲೇಪವಂ ಮಾಡಿ ಆ ಪಟ್ಟೆಗಳಲ್ಲಿಯಿರಿಸಿ ಮೇಲುಗಡೆ ಬಾಳೆಪಟ್ಟೆಗಳಂ ಮುಚ್ಚಿ (ಸೌಗಂಧಿ. ೪೨೬-೦೦).

[ದೇ. ॥ ತಮಿ. ವಾೞೈ; ಮಲ. ವಾೞ; ತುಳು. ಕೊಡ. ಬಾಳೆ]

**ಬಾೞಿಪಣ್** 'ಬಾೞಿವಣ್' ನೋ.

**ಬಾೞಿಲೆ**, ಬಳ್ಳಿ೨, ಬಾಳೆಲೆ (ನಾ). ಬಾಳೆಯ ಗಿಡದ ಎಲೆ ; ಕದಳೀ ಪತ್ರ: ಬಾೞಿಲೆಯುಂ ತಿಂದು ಪಣ್ಣಂ ತಿಂದೆನೆಂಬಂತೆ (ರಭಸಾಭ್ಯು. ೦೩-೦೬೦) ; ಪಚ್ಚನೆ ಬೆಳೆದ ಬಾೞಿಲೆಯ ಪೊಸಕಾವಣವಾಗೆ . . . ಸಮೆ ದೊಂದೋಲಗದ ಶಾಲೆಯೊಳ್ (ರಾಜಶೇ. ೩೬-೨೩). **ಬಳ್ಳಿ೨** : ಅಣ್ಣಯ್ಯಾ ಬಳ್ಳಿ ಹಾಕಿದ್ದಾರೆ, ಉಣ್ಣಕ್ಕೆ ಬರಬೇಕಂತೆ (ಜಾನಪದ. ೬೨೬); ಸಾಲಾಗಿ ಬಳ್ಳಿ ಹಾಕಿದ್ದರು ಒಳಗೆ (ಕೃಷ್ಣ. ೧೩೦). **ಬಾಳೆಲೆ** : ತುಪ್ಪ ಮಜ್ಜಿಗೆ ಬಾಳೆಲೆ ತಾಂಬೂಲ ಮುಂತಾಗಿ (ಕೊಂಕಣ. ೧೯೯೦. ಶಮಟಿ. ೦೦೩-೨೬ ; 1476); ಒಪ್ಪಿರೆ ಬಾಳೆಲೆಯಲ್ಲಿ ಭಕ್ಷ್ಯಭೋಜ್ಯಾದಿಗಳಂ ಗಡಣಿಸಿ . . . ದೇವರಾರೋಗಿಪುದೆಂದೊಡನುಸಿರ್ದು ಕೆಯ್ಮುಗಿದಳೊಲ್ದುಡುಪತಿಮುಖಿ (ವೃತ್ತ.೩೬-೨೩); ಬಾಲಕರಿಲ್ಲದ ಬಾಲಿದ್ಯಾತರ ಜನ್ಮ . . . ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದಂಗ (ಗರತಿ. ೦೦೬). [ಬಾೞ್ + ಎಲೆ೧]

**ಬಾೞಿವಣ್**, ಬಾಳೆವಣ್, ಬಾಳೆಹಣ್ಣು, ಬಾೞಿಪಣ್ (ನಾ). ಬಾಳೆಯ ಹಣ್ಣು ; ಕದಳೀಫಲ : 'ನಲ್ವಾೞಿವಣ್' ಪರಾ. **ಬಾಳೆವಣ್** : ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ ಪಚ್ಚೆಯಂ ಬಾಳೆ ವಣ್ಣೊಳ್ಪೊನೆಯಂ (ರಾಜಶೇ. ೦೦-೨). **ಬಾಳೆಹಣ್ಣು**: ಬಾಳೆಹಣ್ಣು, ತುಪ್ಪ ಮುಂತಾದುವುಗಳನ್ನು ಸೇರಿಸಿ ಮಾಡಿದ ಬೂಪ ತಟ್ಟೆಯಲ್ಲಿರುತ್ತದೆ (ಪಪ್ಪೂರು. ೯೯); ಬಾಳೆಹಣ್ಣು ತಿನ್ನು ಬಾರೋ ಎಂದರೆ ಸುಲಿದು ಇಟ್ಟಿದ್ದೀಯಾ ಎಂದ (ಗಾದೆ). **ಬಾೞಿಪಣ್** : ಬಾೞಿಪಣ್ಗನಿದಪ್ಪುದೆಂತು ಸಹಜಂ ಸಕ್ಕರೆಗೆ ಸಿಹಿಯಾಗಿರ್ಪುದೆಂತು ಸಹಜಂ . . . ಅಂತೆ . . . ಭಕ್ತಿಯುಂ ಸಹಜಮಾಗಿರ್ಕುಂ (ರಭಸಾಭ್ಯು. ೯-೯೦).

[ಬಾೞ್ + ಪಣ್೨]

**ಬಾೞೊಟ್ಟಿ**, ವಾೞೊಟ್ಟಿ (ನಾ). ಬೆಳೆಯುವ ಪೊದೆ, ಕಂಟಿ ಮೊದಲಾದುವುಗಳಿಂದ ರಚಿಸಿದ ಬೇಲಿ ; ಹಸುರುಬೇಲಿ : ಅಂತೆ ಪಂದು ಮುಂಜಳ್ತೊಣಿ ಬಾೞೊಟ್ಟಿಎ ಸಂದು (ವ್ಯಶಾಂ. ೦೯೨೬. ೦೦೬-೯೯ ; 726). **ವಾೞೊಟ್ಟಿ**: ಅಂತ ಬಂದು ಬಾನ್ನಿಗಾರ್ಲಕುಪ್ಪೆಯ ವಾೞೊಟ್ಟಿಯ ಸಂದು ಪಾದರಿಯುಳ್ ಕೂಡಿತ್ತು ಸೀಮೆ (ವ್ಯಶಾಂ. ೦೯೨೬. ೦೦೬-೩೦ ; ಜು. 726). [ಬಾೞ್೧ + ಒಟ್ಟಿ (< ಒಟ್ಟಿ)]

**ಬಾೞ್ಕೆ**, ಬಾಳಿಕೆ೧, ಬಾಳ್ಕೆ, ಬಾಳ್ವಿಕೆ, ಬಾೞಿಕೆ, ಬಾೞಿಗೆ (ನಾ). ೧. ಬದುಕು ; ಜೀವನ : ಅಂಥನಾದನಾಗ್ ಶರಣನಗನ್ನ ಬಾೞ್ಕೆಯೆ ನಿರರ್ಥಕಂ (ಶಾಂತಿಪು. ೯೦೨) ; ಸತ್ತೊಡೆ ಪುಟ್ಟರೆ ತನಗಿದೇಕೆ ಬಾೞ್ಕೆಯ ಮೋಹಂ (ರಭಸಾಭ್ಯು. ೯-೩೦) ; ಪಾಪಪುಣ್ಯಾದಿಜಿವಿಂದಿರದಾತನ ಬಾೞ್ಕೆ ನಿಷ್ಫಲಂ (ಜಶಿಷ. ೦೯-೨೩). ೨. ಉಸಿರು ; ಜೀವ ; ಪ್ರಾಣ : ಶಾರದಂಗಳ ಜಸದೇೞ್ಗೆ ಲಕ್ಷ್ಮಿಯ ಮುಗುಳ್ನಗೆ ಜೊನ್ನದ ಬಾೞ್ಕೆ ರತ್ನಸಂಕುಳ ದಧಿದೈವಮೆಂದೆಸೆದುದುಜ್ವಳಮೌಕ್ತಿಕಹಾರಮಂಡಲಂ (ಶಾಂತಿಪು. ೦೦೬) ; ಒಕ್ಕನಿನಿಯಂ ತನ್ನಿಕ್ಕೆಯಂ ಬಾೞ್ಕೆಯುಂ (ಅರ್ಜನ. ೩-೬೦). ೩. ಜೀವನಕ್ಕೆ ಹಿತವಾದುದು ; ಪ್ರಯೋಜನವುಳ್ಳುದು : ಪದಿನೆಂಟುಂ ದೋಸಮುಂ ಪೊರ್ದದಾಡಿದ ಮಾತೆಲ್ಲರ ಬಾೞ್ಕೆಯಪ್ಪ ಜೀವಿನೊಳ್ ಮೂಲೋಕಮಂ ಕಾಣ್ಬ . . . ಅರುಹಂತಂ ನಲ್ಮೆಯಿಂ ಮಾೞ್ಕೆ ಬೇಡಿಮದುದಂ ತನ್ನಜಿಪಟ್ಟಿಗರ್ (ಆದಿಪು. ೩೯೯). ೪. ಬದುಕಿನ ಅವಧಿ ; ಸಮಗ್ರಆಯುಷ್ಯ : ಅನಿಮಿಷದವಂತಿ 'ಮಾಳಪಮನಾಳ್ವ ವೃಷಭಾಂಕನೃಪನ ಬಾೞ್ಕೆಯ ಸಿರಿಯಾತನ ದಿವಸದ ಭೋಗದನಿತಿಲ್ಲನೆ ಪರದನ ಪಿರಿಯ ಸಿರಿಯೆನಜಿಯೆಂ ಪೊಗಟಲ್ (ಸುಕುಮಾ. ೯-೬೩). **ಬಾಳಿಕೆ೧** : ೧. ಮೇಲನಜಿಯದ ನೃಪನ ಬಾಳಿಕೆ ಗಾಳಿಗೊಡ್ಡಿದ ಸೊಡರು (ಕುಮಾ.ಸ. ೦-೩೦) ; ಮಾನವಿಲ್ಲದ ಬಾಳಿಕೆಗಿಂತ ಸಾವು ಲೇಸು (ಮುಂಡಾ. ೯-೦೯೦). ೪. ಹೂಸಕದ ಶೌರಿಯದ ಬಾಳಿಕೆಯೇಸು ದಿನವೈ (ಕುಮಾ.ರಾ. ೬-೨೦) ; ತನುವಿದು ತಾಮಾರಸಭಾಧವನ ಬಾಳಿಕೆ ತನಕ ಶಾಶ್ವತವೆ (ಕೊರಡ. ೩-೬-೩೪). ೫. ಗೃಹಸ್ಥಜೀವನ ; ದಾಂಪತ್ಯ ಜೀವನ : ಸತಿಸುತಕೂಟ ಭಯವೆಂದು ಬಾಳಿಕೆಯನತಿಗಳೆದು ಮರಳಿಯು ಬೋಳುಮಂಡೆಯ ಕೀರ್ತಿಗೋಸುಗ ಕೋಳುಹೋದನೆ ರಾಮನು (ಕೃಷ್ಣಲೀ. ೦೩-೩). ೬. ಹೆಚ್ಚುಕಾಲ ಕೆಡದೆ ಇರುವಿಕೆ ; ಚೆನ್ನಾಗಿ ಉಳಿಯುವಿಕೆ : ತಾಳಿಕೆ : ಅಡುಗೆಮನೆಯ ಸಲಕರಣೆಗಳು . . ., ಒಳ್ಳೆಯ ತರಗತಿಯವುಗಳಾಗಿರಬೇಕು. ಇವುಗಳಿಗೆ ಕ್ರಯ ಹೆಚ್ಚಾದರೂ ಹೆಚ್ಚು ಕಾಲ ಬಾಳಿಕೆ ಬರುತ್ತವೆ (ಅಡುಗೆ. ೩೨) ; ರೆಯಾನ್‌ಬಟ್ಟೆ . . . ಇದು ತಕ್ಕಮಟ್ಟಿಗೆ ಬಾಳಿಕೆ ಬರುತ್ತದೆ (ಗೃಹ. ೬೦). ೭. ದತ್ತಿ ಕೊಟ್ಟ ಜಮೀನು ; ಮಾನ್ಯದ ಭೂಮಿ : ಹಿರಿಯತು ಲೋಕ ಬೆಟ್ಟಂಬ ಬಾಳಿಕೆಯನು ಬಾಳಿ ಬಂದಲ್ಲಿ ಅಲ್ಲಿಯ ತೆರು [ಸಿ]ದ್ದಾಯ ಬಡ್ಡಿ ವಾಸಿ ಹೊಂನು ಭತ್ತವನು ಕಾಲಕಾಲಕೆ ನಡಸತೀರದೆ ಯಿರಲಾಗಿ (ಶಾಸನ. IX—ii, ೯೬೦-೦೨; 1465) ; ಮುಂದಕ್ಕೆ ನಿಂಮ ಬಾಳಿಕೆಯಲು ಪಟ್ಟಲಬಿದ ಕಾರು ಬತು ಬಳ್ಳ ೩೦ (ಶಾಸನ. IX—ii, ೯೬೦-೦೬ ; 465). **ಬಾಳ್ಕೆ** : ೨. ವಿರೋಧಿಯ ಬಾಳ್ಕೆ ತನ್ನದೆ ಮ್ಮುದನೆನೆ ಪೆರ್ಮೆಯಿಂ ತಳೆದನೋ ನೃಪರೊಳ್ ನೃಪತೈಲಶಾಸ್ತ್ರಂ (ಎಕ. VIII. ಸಾಗರ. ೦೩೬-೦೩; 1159). ೪. ಜವನುಮಾತನ ಬಾಳ್ಕೆಯ ಲೆಕ್ಕದೋಲೆಯುಂ ತೊಡದು ಬಿಸುಟ್ಟನೆಂದಜಿವುದು (ಶಾಸನ. IX—i, ೨೯೬-೩೦; 1177). ೫. ದುಗುಡದಿ ಬಾಳ್ವ ಗೃಹಸ್ಥರ ಬಾಳ್ಕೆಯ ನಗುವಂತೆ ನಗುತ ನಡೆದರು (ಅಶ. ೨೦-೩೩); ಬಿಟ್ಟನೆ ರಘುಶ್ರೇಷ್ಠ ನೆನ್ನನು . . . ನೆಗಳ್ದ ಬಾಳ್ಕೆಗೆ ಸಂಚಕಾರವಂ ಕೊಟ್ಟನೆ (ಕೃಷ್ಣ. ೦೯-೦೩). **ಬಾಳ್ವಿಕೆ** : ೧. ಛೀ ನನ್ನ ಬಾಳ್ವಿಕೆಯ, ಛೀ ನನ್ನ ಚೆಲ್ವಿಕೆಯ (ಕೃಷ್ಣಾಕು. ೨-೨೦).'ಅಳ್ವಿಕೆ' ಹೋ. **ಬಾೞಿಕೆ** : ೧. "ಜೀವನ ಮೆಂಸಲು ಬಾೞಿಕೆ" (ಶಬ್ದಮ. ೦೦೨-೦). **ಬಾೞಿಗೆ** : ೭. ಜಡ್ಡೂರಾಳ್ಗೆ ಯೆಬ್ಬೆತ್ತರ್ಕ್ಕಂ ಬಳ್ಳಿಗಾಮೆಯ ಬಾೞಿಗೆ ಸಹಿತ ನಾಟ್ನಾಪೂಜ್ಗೆಯ್ದು (ವ್ಯಶಾಂ. ೦೯೨೯, ೬೩-೬ ; 984). [ಬಾೞ್೧ + —ಕೆ]

**ಬಾೞ್ಗೊಡು** (ಕ್ರಿ). ಉಪಜೀವನಕ್ಕಾಗಿ ಭೂಮಿಯನ್ನು ದಾನವಾಗಿ ಕೊಡು,—ವೃತ್ತಿಯನ್ನು ಕಲ್ಪಿಸು : ಕರಣಗ್ರಾಮಮನೀ ಮಾಮರಕ್ಕೆ ಮಧು ಬಾೞ್ಗೊಟ್ಟು ಕಿಸುವಲಗೆಗಳಂ ಬರೆದಿತ್ತಿದ ಶಾಸನಕೇಂ ದೊರೆಯಾದುವೊ ಸೊನೆಯ ಪನಿ ಪಗಿಲ್ತೆಳದಲಿರ್ಗಳ್ (ಮಲ್ಲಿಪು. ೬-೩೦).

[ ಬಾೞ್ + ಕೊಡು೧ ]

**ಬಾಳ್ಗಂಬ** (ನಾ). ಆನೆಯನ್ನು ನೆಲೆಯಾಗಿ ಕಟ್ಟಲು ಕಂಬದಂತೆ ಉಪಯೋಗಿಸುವ ಮರ ; ಆಲಾನಸ್ತಂಭ : ಅಂಬುಜಸೂತ್ರ ಮೆಂಬ ಪೆಣೆದಾವಣಿಯುಂ ಪಱಿದಾವಲೆಂಬ ಬಾಳ್ಗಂಬಮನೊತ್ತಿ ಕಿಟ್ಟು . . . ಸೋವುದು ಸಮೀರಣವಾರಣಂ (ಕಾವ್ಯಾವ. ೬೯೯); ಆ ಮಹಾಮದೇಭಂ . . . ಬೀಡಿಂಗೊರ್ಗಾವುದರದಿ ಬಾಳ್ಗಂಬದೊಳ್ ಸೆಱೆಗೆಯ್ದುವಿರ್ದೊಂದುದಿವಸಂ ಕ್ರೋಧಿನಿಯೆಂಬ ಸಪ್ತಮದಾವಸ್ಥೆಯಿಂದಾದ ಮನದ ಮಸಕದಿನಸವಸದೆ ನೆಲದ ನಾಲಗುಂ ಕೀೞ್ವಂತೆ

ಬಾಳ್ಗಂಬವುಂ ಕಿಟ್ಟು (ಚಂದ್ರ.ಪು. ೯-೦೦೦ ವ); ಅವಳ . . . ಸುಣ್ಣೊಡೆಯೆಂಬ ಪೊಂಬಾಳ್ತಿಯ ಬಾಳ್ಗಂಬವುಲರ್ಗಣ್ಣೆಯನೆಂಬ ಸೊರ್ಕಾನೆಯಂ ತೊಲಗಲೀಯದೆ ನಿಲಿಸೆಯುಂ (ಕಬ್ಬಿಗ. ೦೨೩).

[ ಬಾಳ್$_1$ + ಕಂಬ$_1$ ( < ಕಂಭ) ]

**ಬಾಳ್ಗುಡಿ** (ನಾ). (ಅಲಂ) ಚಲಿಸುತ್ತಿರುವ ಕುಡಿ ; ಚಂಚಲವಾದ ಚಿಗುರು: ಬಳ್ಳಿವ ಬಹುಳಹಿಂಸಾವಿಷವುವಿಷವಲ್ಲಿಯ ಬಳೆದ ಬಾಳ್ಗುಡಿಯೆನೆ ಬೆಡಂಗುವಡೆದ ಲೋಳಲಾಂಗೂಲಲತೆಯೊಳಂ . . . ಭಯಂಕರ ಮಾಡುದು (ಪರ್ತು. ೦೦-೩ ವ). [ ಬಾಳ್$_3$ + ಕುಡಿ$_2$ ]

**ಬಾಳ್ಗುದಿ** (ನಾ). ಜೀವಂತವಾಗಿ ಅನುಭವಿಸುವ ಅತಿಯಾದ ಹಿಂಸೆ ; ಪ್ರಾಣಸಂಕಟ : ತೋ[ಕೋ]ಳ್ಗುದಿ ಬಾಳ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಯ್ತುರಡುಂಬಲುಂಗಳೊಳ್ (ಅವಂಪು. ೦೦-೯೬). [ ಬಾಳ್$_3$ + ಕುದಿ$_3$ ]

**ಬಾಳ್ಗುಳಿ**, ಬಾಳುಗುಳಿ, ಬಾಳ್ಗಳಿ (ನಾ). ಒಂದು ಊರಿನ ಹೆಸರು : ಬಾಳ್ಗುಳಿಯೂರ ಬೊಜಜ್ಗೀಶ್ವರದೇವರ ಪಬ್ಬದಭೂಮಿ ಎಡೆಯೊಳೆ ರಾಶಿಕವಾಗಿಟ್ಟೊಡೆ ಬಡಿಸಿ (ಎಇ. IV (R), ಚಾಮರಾ. ೧೦೯-೧; 10ನೆಯ ಶತ). **ಬಾಳುಗುಳಿ** : ಬಾಳುಗುಳಿಯ ಮಹಾಜನ ಅಯ್ದುದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದಗೂಬನಿತ್ತೂರ್ (ಸೌಇಇ. IX-i, ೩೯-೭; ಸು. 10ನೆಯ ಶತ). **ಬಾಳ್ಗಳಿ** : ಬಾಳ್ಗಳಿಯೂರೊಡೆಯಂ ಪಶುಪತಿಭಟ್ಟರ್ಗಿ ಬಾಬನ್ಣಿಯ ಸಂಬನ್ಧದ ರಾಜದ್ರವ್ಯಮೂದುದೆಲ್ಲವಂ ಬಿಟ್ಟರ್ (ಸೌಇಇ. IX-i, ೬೬-೦೦ ; 956) ; ಶ್ರೀಮತುಹರಿಶ್ಚಂದ್ರ ದತ್ತಿಯ ಮಹಾಗ್ರಹಾರಂ ಬಾಳ್ಗಳಿಯೂರೊಡೆಯ ಪ್ರಮುಖವಿಶೇಷಮಹಾಜನಂ ( ಸೌಇಇ. IX-i, ೨೩೩-೦೯ ; 1143 ) ; ಶ್ರೀವೀರಬಲ್ಲಾಳದೇವರು ಶ್ರೀಮತುಹರಿಶ್ಚಂದ್ರ ದತ್ತಿಯಗ್ರಹಾರ ಬಾಳ್ಗಳಿಯ ನೆಲೆವೀಡಿನೊಳು . . . ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದು (ಸೌಇಇ. IX-i, ೩೦೯-೩೨ ; 1193).

[ಬಾಳ್$_3$ + ಕುಳ್ಬು]

**ಬಾಳ್ಜೊಂಪ** (ನಾ). (ಹಸುರಾದ) ಬಳ್ಳಿಗಳ ಮಂಟಪ; ಲತಾಕುಂಜ : ಮನಮೊಲ್ದಾತನ ಗಾಡಿಯಂ ದಲವುರುಂಗಂಡಾಕೆಗಳ್ ಪೂವಿನಂಬಿನ ಕೋಳ್ಗಂ . . . ಬಾಳ್ಜೊಂಪಕ್ಕಮೊಂದೊಂದೆ ತಣ್ಣನಿಯೊಳ್ ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು. ೦-೬೩); ಬಾಳ್ಜೊಂಪವೋ ಕೋಗಿಲೆ ಗಿಳಿಯೋ ಕಂಡಿರೆ ಪೇಟೆಮಮ್ಮ ಪತಿಯುಂ (ಸುಕುಮಾ. ೧೨-೨೦); ಅಸುಕೆಯ ಕೇದಗೆಗಳ ಬಾಳ್ಜೊಂಪಂ ಪಸರಿಸಿ ಪಡೆದ್ದುದು ಚಿತ್ತದಲಂಪಂ (ಅಪಂಪು. ೦೦-೦೬ ಕಗಳ). [ಬಾಳ್$_3$ + ಜೊಂಪ$_1$]

**ಬಾಳ್ತೆ**, ಬಾತೆ, ಬಾರ್ತೆ, ಬಾಳ್ತ್ಯೆ, ವಾಳ್ತೆ (ನಾ). ೧. ಬದುಕು ; ಬಾಳುವೆ ; ಜೀವನ : ಸ್ಥಿತಿನೊತ್ತಂಬರಂ ಪೊಗರ್ವೆತ್ತಂಗದ ಸಿಂಗರಂ ಸೊಗಸುನೊಪ್ಪಂ ಬಾಳ್ತೆಯೊಂದೇಟ್ಟರಂ ಮಿಗುತೇಂ ಬಂದಪುವು (ಶಬ. ೬-೨೩೮) ; ಪಗೆದೊರೆಗಳುಮೊಂದಿದರಾ ಬರ್ದಿಲನಾಡ ಬಾಳ್ತೆಯ ಸಿರಿಯಂ (ಅಪ್ರತಿ. ೦೭-೦೩). ೨. ಉಪಯೋಗ ; ಪ್ರಯೋಜನ : "ಬಾಳ್ತೆ ಪ್ರಯೋಜನಂ" (ಶಮದ. ಶಂ. ೦) ; ಕಿಡುಗುವೆ ರಾಜ್ಯಂ ರಾಜ್ಯದ ತೊಡರ್ಪದೇವಾಳ್ತೆ (ಶಂಶಲಾ. ೦-೬೨); ದೃಷ್ಟವ್ಯ ದರ್ಶನಫಲ ಲೋಚನಮೆಂಬಂತೆ ನೋಡುವುದೆ ಬಾಳ್ತೆ (ಶಾಂತಿ. ೯-೬೬ ವ) : ನಾಲಗೆಯುಮಂ ನಲ್ಲನುಮನೊಲ್ಲದ ಪಣ್ಣ ಸವಿಯುಂ ಪಣ್ಣ ರೂಪುಮೇಂ ಬಾಳ್ತೆ (ಅರ್ಥಶೀ. ೩-೦೦ ವ). ೩. ಇಷ್ಟವಾದುದು ; ಬೇಕಾದುದು ; ಬಯಸಿದುದು : ಎಮಗೆ ಮರ್ದು ಬಾಳ್ತೆಯುಪ್ಪೊಡೆಮಗಾಮೆ ಮರ್ದಂ ಬಲ್ಲೆವೆಮಗದು ಬಾಳ್ತೆಯಲ್ತು (ವಡ್ಡಾರಾ. ೬೯-೨೮) : ನಿಮಗೆ ಬಾಳ್ತೆಯಪ್ಪುದಂ ಬೇಡಿಕೊಳ್ಳಿಂ (ಶಂಶಲಾ. ೩-೬೦ ವ). ೪. ಉಪಯುಕ್ತವಾದುದು ; ತಕ್ಕುದು ; ಯೋಗ್ಯವಾದುದು : "ಬಾಳ್ತೆಯೆನೆ ಯೋಗ್ಯಂ" (ಶಂಶಬ. ೨) : ಎಮಗೊಂದು ಪೇಟು ಮಣ್ಣು ಬಾಳ್ತೆಯಾಗೆ ತರಿಸಿಕೊಂಡೆವೀಯಾಳ್ದ ಮಣ್ಣಮಾಗೆ ಬಾಳ್ತೆಯಲ್ತು ನಿಮ್ಮ ನಿಮ್ಮ ತಂದ ಮಣ್ಣಂ ಕೊಂಡು ಪೋಗಿಂ (ವಡ್ಡಾರಾ. ೦೬೯-೯) : ಈ ವ್ರತಂ ನಮಗೆ ಬಾಳ್ತೆಯಲ್ಲಿದೆ ಬಿಡುವುದು (ಶೀಬಶಿ. ೯-೦೬ ವ). ೫. ಯೋಗ್ಯನಾದವನು ; ತಕ್ಕಹನು : ಅರಸಿಯರ್ಕಳಿಲ್ಲಂ . . . ನುಡಿವ ಮಾತುಗಳಂ ಜಿನದತ್ತೆ ಕೇಳ್ದು ಕಿನಿಸಿ ಇನ್ನಾತನೆನಗೆ ಬಾಳ್ತೆಯಲ್ಲನೆಂದು ತನ್ನ ಮಾಡದಿಂ ಪೊಱಮಟ್ಟು . . . ಪೋಗಿರ್ದೊಳ್ (ವಡ್ಡಾರಾ. ೦೦೦-೨೩). ೬. ಕೆಲಸ ; ಕಾರ್ಯ ; ಉದ್ಯೋಗ : ಬಾಳ್ತೆಯುಳ್ಳೊಡೆ ನೀನೆ ಬರ್ಪನ್ನಂತುಬಾದುದ ಪೇಟ ನೀಂ ಬಟಿಯಟ್ಟಲಾಗದೆ (ಶಂಶಲಾ. ೧೨-೯೯) ; ಬಸನದ ಬಾಳ್ತೆಗಪ್ಪೆಡೆಗಳಿಲ್ಲದೆ ನಲ್ಲರ್ . . . ಮನದೊಳ್ಮೊಟಲ್ದುಅಸುಮರ್ಬನದೊಳ್ ಕೃತಕಾಚಲಂಗಳಂ (ಚನ್ದ್ರ. ೨-೬೩) ; ಏಬಾಳ್ತೆಗೆ ಬಂದರಲ್ಲಿಗಿವರೆಂದಾರಯ್ವಂ (ಶಬಶಿ. ೦-೬೭). ೭. ಅಗತ್ಯ ; ಅವಶ್ಯಕತೆ : ಎಂದಾನುಂ ನಿನಗೆ ಬಾಳ್ತೆ [ಶಾಶಂ. ತೆ]ಯಾದುದೆನ್ನಂ ನೆನೆವುದು (ವಡ್ಡಾರಾ. ೦೩೯-೦೧). **ಬಾತೆ** : ೧. 'ಬಾತೆಗೇಡಿ' ನೋಡಿ. ೨. ಸಿಂಗದ ನಡು ಮುಱಿಯಲಾ ಸಿಂಗವೇನು ಬಾತೆ ಸುಂಡಿಲು ಮುಱಿದರೆ ಗಜವೇನು ಬಾತೆ (ಬಸವ. ೬೬೯) ; ದಯವಿಲ್ಲದವನ ಭಕ್ತಿ ಏತಕ್ಕೆ ಬಾತೆ (ಗಣಾಶಾ. ೦೬೦-೩) ; ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿಹಾರವಾಗೆನ್ನ ಮನವ ಕ್ಷಣದಲಿ ಬೀಱುಗೊಂಡುದು (ಶಂಸಬ. ೬-೦೬೯). ೩. ನಿನ್ನ ಧನಗಿನವೆನಗೆ ಬಾತೆಯೆ ಎನ್ನ ಸೊಬಗಂ ನೋಳ್ಪೆಯಾದಡೆ ಹೊನ್ನನೀಗಳೆ ಬಿತ್ತಿಸುವೆನೇ ಬೀದಿಬೀದಿಯಲಿ (ಬಸಪು. ೨೯-೦೯). ೪. ಮಕ್ಕಳನು ಪಡೆಪಡೆ ಸುನೀತಿಗೆ ತಕ್ಕುದಲ್ಲದೆ ಒಡಲ ಕೇಡಿನ ಮಕ್ಕಳೇತಕೆ ಬಾತೆ (ಸಶಗ. ೯-೯-೩೬). **ಬಾರ್ತೆ** : ೨. ನೀನೀ ಸಾಮ್ರಾಜ್ಯಮನಾವಗಂ ಕೈಕೊಳ್ವುದೆನಗಿದೇನುಂ ಬಾರ್ತೆಯಲ್ಲ (ಶಾಪುಂಶಿ. ೯೯) ; ಧರ್ಮಾರ್ಥಂಗಳಿಗೆ ಶಾಸ್ತ್ರಂ ಬಾರ್ತೆ ಕಾಮಕ್ಕೆ ಶಾಸ್ತ್ರಂ ನೀಪ್ರಯೋಜನಂ (ಶುರತಿ. ೦-೩೬ ವ) ; ಪರಿವಾರವಿಲ್ಲದ ರಾಯನ ಸಿರಿಯ ದೇಶಕ್ಕೆ ಬಾರ್ತೆ (ಬಸೋಪು. ೧೯-೩೭). ೪. ಅಲ್ಲಿರ್ದ ಕೊರಗಿ ದುಸ್ಸಹ ವಿರಹಶಯನರಚನೆಗೆ ಬಾರ್ತೆಯಾಗಲಾಱೆವೆಂದಗಿದು ಮೆಯ್ದುಗಿದವೆಂಬಂತೆ ತಾವರೆಗಳ್ ಮುಗಿಯೆ (ಶಾದಂಶಾ. ೬೭೩) ; ಹರದನ ಬಡ್ಡಿಗೊಟ್ಟೊಡವೆ ರಾಜಕುಮಾರನ ತೇಜದೇಟ್ಗಿ . . . ಚಿನ್ನಪೊಂಗರ ಕುಡಿಮುಱಿಜಂಗು ನಿಡುಬಯ್ತಲೆ ಬಾರ್ತೆಯೆ (ಅಪಂಪು. ೬-೯೯). ೫. ಮಱಿಗೆ ಪಂದರಂ ಕಾಯದೆ ನೀಳ್ದೊದವಿದ ಜಸಮನುಪಾರ್ಜಿಸದಧಮನದೇತರ್ಕೆ ಬಾರ್ತೆ (ಆದಿಪು. ೦೨-೯೭) ; ಭಕ್ತಿಯಿಲ್ಲದವನೇತರ್ಕಂ ಬಾರ್ತೆಯಲ್ಲಂ (ಶಂಶಶಂ. ೯೨-೨೦). ೬. ಬೆಸನಂ ಪಾರ್ವುವು ಮಂತ್ರದೇವತೆಗಳಾದೇಬಾರ್ತೆಗಂ ಬೇಗಮಾಗಸದೊಳ್ ವಿದ್ಯೆಗಳೆಯ್ದೆ ಬರ್ಪುವು (ಆದಿಪು. ೦-೬೯). ೭. ಆಂ ಪದ್ಮನಗರದೊಳಿರ್ಪೆಂ ನೀಮೆತ್ತಾನುಂ ಬಾರ್ತೆಯುಪ್ಪೊಡಲ್ಲಿಗೆ ಬನ್ನಿಂ (ಶಂಶಶಂ. ೦೦೦-೦). ೮. ಬದುಕಿನ ಕ್ಲೇಶ ; ಜೀವನದ ಜಂಜಾಟ : ವಿಟಿನೋಲ್ಲಂಘನ ಸಿಂಧುಯಾನ ನಗಕೂಟಾರೋಹಣ ಕ್ಲೇಶಮಂತ್ರಪದಧ್ಯಾನ ಬಿಲಪ್ರವೇಶರಸವಾದಾಯಾಸದೊಳ್ ಬಾರ್ತೆ ತೀರ್ದಪುದೇ (ಆದಿಪು. ೦೬-೭). **ಬಾಳ್ತ್ಯೆ** : ೧. ಬಾಳ್ತ್ಯೆಯೊಳ್ ಸಲ್ಪೆಯೆನೆ ತೊನೆಯುತಿವೆ ಚೆಲ್ವಂ (ಕಾಬೂರ. ೭೦-೦೨೩). ೨. ಕಾಡ ಕಾಪಿನವರ್ಗೆ ದೂರಿದೊಡೆ ಬಾಳ್ತ್ಯೆಯೇಂ (ಕಾಬೂರ. ೯೯-೭೨). **ವಾಳ್ತೆ** : ೯. ಸುದ್ದಿ ; ಸಮಾಚಾರ : 'ವಾಳ್ತೆಗೊಳ್' ನೋಡಿ.

**ಬಾತೆಗೆ ಬರು** = ಉಪಯೋಗವಾಗು : ಬಾತೆಗೆ ಬಾರದ ವಸ್ತು ಬಹಳಿದ್ದರೇನು (ಕುರಂದ. ೩-೦೯೩ ಶಲ್ಯ). **ಬಾರ್ತೆ ಮಾಡು** = ಬಯಸು ;

ಇಷ್ಟಪಡು : ಪುದ್ಗಳವಮನೆ ಪಾಟಸುವರ್ . . . ಪುದ್ಗಳಮಂ ಬಾರ್ತೆ ಮಾಡಿ ಪೊರೆಯರ್ ಜೈನರ್ (ಸಮಪ. ೬-೫೦). ಬಾಟ್ಕಿಯಾಗು = ಬಾತೆಗ್ಗೆ ಬರು : ಅರಸುಗೆಯ್ವಾತಂಗೆಂತಪ್ಪನುಂ ಬಾಟ್ಕಿಯಾಗದನಿಲ್ಲಂ (ಶಂತಕಂ. ೩೪-೦೦). [ಬಾಟ್¹ + — ತ್ಕಿ]

**ಬಾಟ್ಕಿಗೆಯ್**, ಬಾರ್ತೆಗೆಯ್, ಬಾಳ್ತಿಗೆಯ್ (ಕ್ರಿ). ೧. ಬಯಸು ; ಇಷ್ಟಪಡು : ಇಂದುಗತಿಯಂತೆ ರಾಜ್ಯಮನೊಂದರ್ಕಂ ಬಾಟ್ಕಿಗೆಯ್ಕು ದಾವನೂ ತೊಡೆದಂ ಮಂದರಧೈರ್ಯಂ ನೃಪಂ (ಶಂಠಾಪೂ. ೬-೨೪). ೨. ಲೆಕ್ಕಿಸು ; ಗಮನಿಸು : ಗಣನೆಗೆ ತರು : ಅರ್ಣವವೇಖಲೆಯುಂ ಧರಿತ್ರಿಯುಂ ಬಗೆಯನೆ ಬಾಟ್ಕಿಗೆಯ್ಕನೆ ಜರತ್ತೃಣಲಾಘವವೆಂದೆ ರಾಘವಂ (ಶಂಠಾಪೂ. ೬-೦೦೨) ; ಅರಮನೆಯುಂ ವಧೂವಿತತಿಯುಂ ಸುತರಂ ಪರಿವಾರಮುಂ . . . ಬಾಟ್ಕಿಗೆಯದಾ ಮಹಿಪಂ ಪೊಜವಟ್ಟಂ (ಶಂಪ್ರಪು. ೨-೬೬). **ಬಾರ್ತೆಗೆಯ್** : ೨. ಶ್ರುತಮಂ ಕಯ್ಕೊಳ್ಳಳಾಚಾರಮನವ ಧರಿಸಲ್ ಸತ್ಯಮಂ ಬಾರ್ತೆಗೆಯ್ಮಳ್ . . . ಸಿರಿಯುನಅೞಿವುತಂ ಬಣ್ಣಿಪಂ ಗಾಂಪನಲ್ಲೇ (ಶಾದಂಪೂ. ೫೯೮) : ಈ ರಾಜೇಂದ್ರಸೌಂದರ್ಯಮಂ ನೆರವುಬಳಅಚಿತ್ತಸಂಬೋಹಸಕ್ಕಾವುದುಮಿಂ ಪೇಟೇವುದೆಂದು . . . ಪುಂಸ್ಕೋಕಿಲಾಲಾಪಮುನಲಿವಲರಂ ಬಾರ್ತೆಗೆಯ್ಕಂ ಮನೋಜಂ (ಪುಲ್ಲಪು. ೩-೨೪) ; ಬಗೆಯುವ ಬಾರ್ತೆ[ಪಾಠಾಂ. ಟ್ಕಿ]ಗೆಯ್ಕುದೊಲವಂ ಪ್ರತಿಪಾಳಿಸ ದಾಳದೋರ್ಪ ಬಳ್ಕೆಗೆ ಬೆಸವಿರ್ಪ . . . ಅಂಗನೆಗೆ ಕೂರ್ತವನಗ್ಗದ ಕಟ್ಕಿಯಲ್ಲನೇ (ಪಾರ್ಶ್ವಪು. ೦೦-೬೪). **ಬಾಳ್ತಿಗೆಯ್** : ೧. ನಿನ್ನವ ರೊಲ್ದುಂಡುಳುಪಿರ್ದ ಶ.ಷಮನಗುಂಟೆಂದುಮಾ ಶೇಷಮಂ ಸವಿದಾನಂದ ಮನಾಳ್ದು ವಿಕ್ಕ ಸುಖವೊಂದಂ ಬಾಳ್ತಿಗೆಯ್ಕಂ (ವೃಷಪ. ೬-೦೩). [ಬಾಟ್ಕಿ + ಕೆಯ್₁]

**ಬಾಟ್ದಲೆ**. ಬಾಳುವಲೆ, ಬಾಳ್ವಲೆ (ನಾ). ೧. ಜೀವಂತವಾಗಿ ಸಿಕ್ಕಿರುವ ಸೆರೆ : ಮಲೆಪರ್ ಮಂಡಳಿಕರ್ ಕಟುಂಬರದಟರ್ ವೀರರ್ಕಳುಂ ತಮ್ಮ ಬಾಟ್ದಲೆಯುಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು ಮೂಏಟ್ಟ ಯೊಕ್ಕಲವೋಲಿಂ ಬೆಸಕೆಯ್ಯೆ ಸಂತಮಿರುತಂ ಕುಂತೀಸುತರ್ ತಮ್ಮ ತೋಳ್ವಲವಂ ನಚ್ಚರೆ (ಶಂಪಭಾ. ೯-೦೦) ; ಪೋ ಬಾಟ್ದಲೆಯಿಂದೂ ಪ್ಪುವನೇ ಬಗೆಯಿಂ ನೀರೂರಿರ್ದೊಡಿಂತುಂ ಕೊಲ್ಲೆಂ (ಶಂಶಾಪು. ೦೨-೦೮೩); ಪಂಧುವಿನ ಕುಮಾರಂ ಹಿರಣ್ಯನಾಭಂ ಬಲದೇವನ ಮಜೆಯಂ ಪೊಕ್ಕುಬಿಪ್ಪನುಮಾತನ ಬಾಟ್ದಲೆವೆರಸು ಬಂದು ವಸುದೇವನ ಪಾದಾರ ವಿಂದಕ್ಕೆ ತಾಳಧ್ವಜನುಂ ತಾರ್ಕ್ಷ್ಯಧ್ವಜನುಂ ಪೊಡಮಟ್ಟು (ಪುಕಾಶೀ. ೬-೩೯. ಪ). **ಬಾಳುದಲೆ** : ೧. ಬಾಳುದಲೆಗಳನರಿದು ಹೋಮವ ಬೆಳಗುವೆನು (ಕೇಆಪು. ೨-೨೬). ೨. ಅಗ ತಾನೆ ಕತ್ತರಿಸಿ ಹಸಿರಕ್ತ ವನ್ನು ಸುರಿಸುತ್ತಿರುವ ತಲೆ ; ಹಸಿತಲೆ ; ಪಂದಲೆ : ಬಾಳುದಲೆಸಹಿತ ನಡೆತಂದು ಭೃತ್ಯಂ ಶಿರವ ಚೋಳರಾಯನ ಬಲದ ಕೈಗೆ ಕುಡೆ (ಶಿಪಶಂ. ೯-೪೦); ತಲೆಯ ತರಹೇಳಂತಕನ ಬಾಳ್ವಲೆಯ ತರಹೇಳ ಜನನತಳಕೆ ನಿಲಿಸಪೇಳಮುಲೆಂದ್ರುನಗರವನು (ಕೊರಶಂ. ೬-೨-೦೦) ; ಅ ಹರಿಯುಜಸುರೇಂದ್ರಾಬ್ದ್ಯರಂ ಬಾಳ್ದಲೆಗಳಂ ಕೋಟೆಸುಳಿದವರ ಪೊದೆಗಳಂ ಸೀಳ್ದಿಕ್ಕುವೆಂ (ಶಂಕಪು. ೩೧-೦೯). **ಬಾಳ್ವಲೆ** : ೧. ಬಲವ ಮುಡಿದು ಕಲುಗೋಟೆಯ ನೃಪನ ಬಾಳ್ದಲೆಯ ಖಂಡಿಸಿದುದನಜೆಯ (ಶಂಸವ. ೮೪-೦೩೬). [ಬಾಟ್¹ + ತಲೆ₁]

**ಬಾಟ್ದಲೆಗೊಳ್**, ಬಾಳ್ದಲೆಗೊಳ್ (ಕ್ರಿ). ಜೀವಂತವಾಗಿ ಸೆರೆ ಹಿಡಿ... ಕೈದುಮಾಡು : ರಘುವೀರಂ ಲಕ್ಷ್ಮಣಂ ರಾಷ್ಟ್ರಕಂಟಕನಂ ಬಾಟ್ದಲೆ ಗೊಂಡನುಯ್ದುನಿಭಮಂ ಪೆಚಾನನಂ . . . ಮಾಕೊರ್ಣಂಡು ಕೊಂಡುಯ್ವ ಪೋಲ್ (ಶಂಠಾಪೂ. ೬-೬೨). **ಬಾಳ್ದಲೆಗೊಳ್** : ಚಟ್ಟನಂ ಮುತ್ತಿ ಬಾಳ್ದಲೆಗೊಂಡು (ಶುಂಪಾ. XI, ೨೩೦-೦೯ ; 1060) ; ವಿಕ್ರಮ ಭೂಪಂ . . . ಅನ್ಯ ಭೂ(ಮಿ)ಪರಂ ಬಾಳ್ವೆರಸೆಯ್ದು ಬಾಳ್ವರಸು ಬಾಳ್ದಲೆ ಗೊಣ್ಡನ್ (ಎಕ. XI, ದಾವಣ. ೩-೬ ; 1121); ಬಲರಾಮನನು ಬಾಳ್ದಲೆಗೊಂಡವನ ಕರತಳದ ಹಲಾಯುಧಸಹಿತ ಛಲದಂಕ ಕೇಳ್ಕಿನ್ನ ತರಿಗೆಯ ಹಳ್ಳಿಯೊಳುಳುವೊಕ್ಕಲ ಮಾಡುವೆವು (ಶೇಖಸಂ. ೨೬-೬೯). [ಬಾಳ್ದಲೆ + ಕೊಳ್₁]

**ಬಾಟ್ದಲೆದರ್** (ಕ್ರಿ). ಜೀವಂತವಾಗಿ ಸೆರೆಹಿಡಿದು ತರು : ಇಂದ್ರನ ಮಗನಪ್ಪ ಜಯಂತನನಿಂದ್ರಜಿತ್ಕುಮಾರಂ ಬಾಟ್ದಲೆದಂದೀಯೆ ರಾವಣ ನಧಯಘೋಷಣೆಯುಂ ಮಾಡಿಸಿ (ಶಂಠಾಪೂ. ೦೦-೩೦೦ ವ); ಚಕ್ರಧರಂ . . . ಧುರದೊಳ್ ಬಾಟ್ದಲೆದಂದಂಬರಚರರಂ ಕರೆದು ಪೇಟ್ದು ಪೇಟ್ದುದು ಗೆಯ್ವಂತಿರೆ ಕೊಟ್ಟು ದಕ್ಷಿಣಶ್ರೇಣಿರಾಜ್ಯಮಂ ಕಟಿಪಿದಂ (ಪರಪು. ೬-೬೪). [ಬಾಟ್ದಲೆ + ತರ್]

**ಬಾಟ್ದಲೆವಿಡಿ**, ಬಾಳುವಲೆವಿಡಿ, ಬಾಳ್ವಲೆವಿಡಿ (ಕ್ರಿ). = ಬಾಟ್ದಲೆ ಗೊಳ್ : ಪಜೆಯುಂ ಬೀರದಿನಾ ಗೊರವನೆಯ್ದಿ ಬಾಟ್ದಲೆವಿಡಿದಂ (ಶಪ್ರಕಾ. ೦೯೬) : ದೆಸೆಗೆ ಬಿಟ್ಟಾ ರಾಯರ ಬಾಟ್ದಲೆವಿಡಿದು ಜಯ ಕಾಂತೆಗೆ ತೊಪ್ಪಿರಂ ಮಾಡುತುಂ (ರಾಜಶೇಕ್ರ. ೪೯-೦೬). **ಬಾಳುದಲೆವಿಡಿ**: ದೇವಗುಹೇಶ್ವರನ ಬಾಳುದಲೆವಿಡಿದೆ (ಅವಸಂ. ೬೬-೩೬೩). **ಬಾಳ್ದಲೆವಿಡಿ** : ಕಮಪನಗ್ನಿಯನಟ್ಟಿ ಬಾಳ್ದಲೆವಿಡಿವಧಮುಘೋಷಣೆಯ ಮಾಡಿಸಿದೊಡನೆ ತತ್ಪತ್ತನವ ಪೊಕ್ಕು (ಶಾಳ್ವಭಾ. ೨೬-೩೦). [ಬಾಟ್ದಲೆ + ಪಿಡಿ₁]

**ಬಾಟ್ದಾಣ** (ನಾ). ಬದುಕುವ ಸ್ಥಳ : ವಾಸಸ್ಥಳ : ನೀರ್ಗಂಡಿ, ಒರ್ಗಲಿ. ಕೂಟ್ಗಟ್ಟೆ. ಬಾಟ್ದಾಣಂ (ಶಪ್ಪಾಪ. ೯೦ ಪ್ರದೋ). [ಬಾಟ್₁ + ತಾಣ]

**ಬಾಟ್ನೆಣ** (ನಾ). ದೇಹದಿಂದ ಅದೇ ತಾನೆ ಹೊರಬಿದ್ದ ನೆಣ ; ಹಸಿಯ ಕೊಬ್ಬು : ಕರುಳ್ಪಿಣಲ ಪೊದಟ್ಕೆ ರುಂಡದಡಕಿಲ್ ನರದುರ್ಬು ಕಪಾಲದೊಳ್ ಬಾಟ್ನೆಣದೆಡೆ ಖುಂಡದಿಂಡೆ ಬಿಸುನೆತ್ತರ ಪೆರ್ಮೊನಲರ್ಬಿ ಸಲ್ಕೆ ಮಾರ್ಗಣಗಣಘಾತದಿಂ ಕವಿಸಿದಂ ವಿರೋಧಿಸೈನ್ಯಮಂ (ಶಗಪ. ೬-೬೪) [ಬಾಟ್₃ + ನೆಣ]

**ಬಾಟ್ಕೆ**, ಬಾಳ್ಕೆ, ಬಾಟಿಮೆ (ನಾ). ೧. ಬದುಕು ; ಜೀವನ : ಅನಟುವು ಬಾಟ್ಕೆಗಳೆದಯೊಳ್ ನಿಂದಿರ್ಪೆಂ (ಚಿತ್ರಗೋ. ೨೬-೨೦). **ಬಾಳ್ಕೆ** : ೧. ಅವ ಕೀರ್ತಿಯಂ ಪೊತ್ತು ಮೃತಜೀವರಂಧದೊಳ್ಪಾವಿರ್ದ ಬಾಳ್ಕೆಯಂ ಸುಡಲಿ (ಶುರಂಗ. ೬೪-೬) ; ಕಯ್ಯಾರಿಸಿದ ಬಿರುದಾವಳಿಯ ಸಪ್ಮೋಹಸಕ್ಕೆ ನೀನೇ ಕರಗಿ, ಬೇರೊಂದಚ್ಚಿನ ಬಾಳ್ಕೆಗೆ ಮಾರ್ಪಡುವುದೆ, ಶ್ರೀಮನ್ಮಹಾಶಯ? (ಚಟ್ಕಿಅ. ೨೦೪-೦೨) ; ಅರ್ಥಹೀನಂ ಬಾಳ್ಕೆ ಒಲುಮೆಯಿಲ್ಲದಿರೆ (ಶತ್ಕಾಂಗ. ೬೬-೦೬೪). **ಬಾಟಿಮೆ** : ೨. ವೃತ್ತಿ : ಅರಸನಾತಂಗಾದಮಾನು ಮೊಸೆದು ತಂದೆಯ ಬಾಟಿದಗ್ಗಳ ಬಾಟಿಮೆಯಂ[ಪಾಠಾಂ. ಬಾಳಂದ ಬಾಳಂ] ಮಾಡಿದಂ (ವಡ್ಡಾರಾ. ೦೬೩-೨). [ಬಾಟ್₁ + — ಮೆ₁]

**ಬಾಟ್ಕೊದಲ್**, ಬಾಳ್ಕೊದಲ್ (ನಾ). ೧. (ಬದುಕಿಗೆ) ಬಂಡವಾಳ ವಾದುದು; ಮೂಲಧನವಾದುದು : ಮದುವೆಗಿದು ಪೆತ್ತ ಮಕ್ಕಳಿಗಿದು ಬಾಟ್ಕೊದಲೆನ್ನದುಳ್ಳುದಂ ಸವಣರ್ಗಿಕ್ಕಿದಪಂ (ಸಮಪ. ೩-೯೬). ೨. ಬದುಕಿಗೆ ಆಧಾರವಾದುದು; ಜೀವನಸರ್ವಸ್ವ : ಅದು ಸುಖದೊಂದು ಪಿಂಡವಮದು ಪುಣ್ಯದ ಪುಂಜವಮದಂಗಜಂಗೆ ಬಾಟ್ಕೊದಲದು ಚಿತ್ತಜಂಗೆ ಕುಲದೈವಂ (ಅಪು. ೨-೬೪); ಕವಿಗಳ್ಗಿದು ಕೆಯ್ಗನ್ನಡಿ ಕವಿತೆಗೆ ಬಾಟ್ಕೊ ದಲುದಾತ್ತವಾಗ್ದೇವತೆಗುಂವೃಪಹೇತು (ಕಾವ್ಯಾ.ಶ. ೯); ಬದಿ ಮೇರೆದಪ್ಪಿ ನಿಷ್ಕರುಣದೆ ನಿಮ್ಮ ಬಾಟ್ಕೊದಲನಕ್ಕಟ ವಂಚಿಸಿ ಕೊಂಡು ಪೋದನೇ (ಶರ್ಶಪು. ೯-೬೦). ೩. ತವರು ; ನೆಲೆವೀಡು ; ಮೂಲಾಶ್ರಯ : ಒದವಿದ ಕೋಟಲೆಗಳ ಬಾಟ್ಕೊದಲೆನಿಸಿದ . . . ನನ್ನೀವೊಡಲಂ ನಿಲಿಸಿ ದುದರ್ಕೇನಾಸುಮೊಂದು ನೆವಮುಸಿರ್ದಪ್ಪೆ (ಶಾದಂಪೂ. ೪೩೩): ಅದು

ಪಿರಿದು ಸಿರಿಯ ಬಾಟ್ಮೊದಲದು ಟಾಗುವ ಭೋಗದಾಗರಂ (ಯಶೋ. ೦-೬೩). **ಬಾಳ್ಮೊದಲ್** : ೨. ಪುರು[ಷಾ]ರ್ತ್ಥವ ನೆಲೆ ಸತ್ಯದ ಕರು ಪರಹಿತಲಕ್ಷ್ಮಿಗೆಕ್ಕೆದಾಣಂ ಸೌಚಾಚಾರದ ಬಾಳ್ಮೊದಲೆಂನಡೆ. ನರನೆಂಬುದು ಸಿಂ[ಗನ]ಣುಗನಂ ಶೋಭನನ (ಶಾಸ. XX. ೬೬-೨೬; 1118).

[ಬಾಟ್$_3$ + ಮೊದಲ್$_1$./ತವಿ. ವಾಟ್ಮುತರ್=ದೇವರು, ಸೃಷ್ಟಿಕರ್ತ]

**ಬಾಟ್ಮೊಸರ್** (ನಾ). (ಒಗ್ಗರಣೆ ಹಾಕಿದ) ಗಟ್ಟಿಮೊಸರು : ಇದು ಬಾಟ್ಮೊಸರಿದು ಕಲಲಿಂತಿದು ರುಚಿವೆತ್ತಿರ್ದ ಪಾನವಿದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬದೀಬಿ ತಂದೆಣೆದರಬಲೆಯರ್ ಸಿರ್ಪುಗಳಿಂ (ಸುಕುಮಾ. ೦೦-೩೧); ಸಮೆದೆಂ ಮೊಸರಂ ಬಾಟ್ಮೊಸರುಮನಾಂ ಘನವಾಗಿ ತಂದೆಂ (ಅರ್ಜನ. ೬-೬೩). [ಬಾಟ್$_1$ + ಮೊಸರ್]

**ಬಾಟ್ವಂದರ್**, ಬಾಳ್ವಂದರ (ನಾ) – ಬಾಟ್ಮೊಂಪ : ಕಾಯ್ಕು ಬಳ್ಳಿ ಗೊಂಗಿನ ಪಸುರ್ವಂದರುಮಂ ಪಣ್ತು ಮಧುರದ್ರಾಕ್ಷೆಯು ಬಾಟ್ವಂದರು ಮಾಸಿಕೊಲದೊಳಿಕ್ಕಿಸಿ (ಅರ್ಜನ. ೩-೨೦ ವ). **ಬಾಳ್ವಂದರ** : ಕೆಂದಳಿರ ತುಱುಗಲಿಂದೊಪ್ಪಂಬೆತ್ತ ಚಾಲಸಹಕಾರದ ಬಾಳ್ವಂದರಂಗಳೊಳ್ . . . ಪಳುಕಿನ ವೇದಿಕೆಯೊಳ್ಳಿಂದು (ಪಾಗಳು. ೨-೨೫ ವ). [ಬಾಟ್$_3$+ಪಂದರ್]

**ಬಾಟ್ವಣ** (ನಾ). ಜೀವಂತವಾಗಿರುವ ಧನ,– ಸಂಪತ್ತು : ಎನ್ನ ಕೊಂಡಾಟದ ಬಾಟ್ವಣಮೆ ! (ರಾಮಾಶ್ವ. ೪೪-೦೦). [ಬಾಟ್$_3$ + ಪಣ್ವ]

**ಬಾಟ್ವನೆ**, ಬಾಳುಮನೆ, ಬಾಳ್ವನೆ(ನಾ). ತವರುಮನೆ; ಮೂಲಾಶ್ರಯ: ಕನರ್ಗೊನರಿರ್ಕೆ ನುಣ್ದಳಿರ ಬಾಟ್ವನೆ ಕೆಂದಳಿರಿರ್ಪ ಬೀಡು . . . ನಸು ದೋರೆವಣ್ಣು ತಾಯ್ವನೆ ಪೊಸವಣ್ಣು ಗೊತ್ತಿವೆನೆ ಕಣ್ಣೆಸದಿರ್ದುದಡೊಂದು ಮಾವುರಂ (ಕರ್ನಾ. ೦೦೦); ಪಾರ್ವರ ಬಂಚಿದಜನ ಬಾಟ್ವನೆಯೆಂಬೊಂದು ನೆಗಟ್ತೆಗಡರ್ವಾಗಿ ಸಂದ ಅಹಿಚ್ಛತ್ರಪುರವರದ ರಾಯನ ಮನ್ನಣೆಯ ಬಿರ್ದಂ ಕೈಕೊಂಡು (ರಾಮಾಶ್ವ. ೬೩-೨೩). **ಬಾಳುಮನೆ**: ಖೂಳನೆಂಬೆನೆ ಸಕಲ ಕಲೆಗಳ ಬಾಳುಮನೆ ಗಡ ನಿನ್ನ ಬುದ್ಧಿ ವಿಶಾಲವಂತಿ ನೀನೆಂಬೆನೇ ಜಗದಜ್ಞ ರಥಿದೈವ (ಕುಮಾ.ವ. ೦೩-೬೩). **ಬಾಳ್ವನೆ** : ನೆಲವೆಣ್ ಪೊಂಬಳಸನ್ನೆಟ್ಟನೆ ಪಡೆದರ್ವರ್ಗೀಪೊಲ್ ಪಾಲ್ಗೊಜ್ಜನೆದ ತನೆ ಸುಜನರ ಬಾಳ್ವನೆ ಕಳವಾಸ ನಿಡಿದೆನೆಯೆಸಗುಂ (ಅಧ್ಯಶ. ೨-೨೬). [ಬಾಟ್$_3$ + ಮನೆ]

**ಬಾಟ್ವಿ**, ಬಾಳುವೆ, ಬಾಳ್ವೆ (ನಾ). ೧. ಜೀವನ ; ಬದುಕು : ಉಬಿದಿರ್ವಂತೆಮಗಾವ ಗರ್ವವಿಜ್ಜೆಯಲ್ಲೇಡೆಮ್ಮನೆಮ್ಮುಳ್ಳುದಂ ನೆಱೆ ಕೊಂಡೆಮ್ಮಯ ಬಾಟ್ವಿಯೊಳ್ ನಿಱಿಸುವಂ ನೀಂ (ಶಂಕರಾ ೬-೩೦); ಅವಬ ಬಾಟ್ವಿ ಇಂದಿನದಲ್ಲ, ನಿನ್ನೆಯದುಮಲ್ಲ, ಎಂದೆಂದಿನದು (ಅಂತಗೂ. ೨೦-೪೪೦). **ಬಾಳುವೆ** : ೧. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗ ನಂತೆ ಎನ್ನ ಬಾಳುವೆ (ಬಸವ. ೩೩); ಅರ್ಥವಿಲ್ಲದ ಸಿರಿಯ ಸಡಗರ ಅರ್ಥ ಯಿಲ್ಲದ ಬಾಳುವೆಗಳಿವನರ್ಥಪಾರುಂಪರ (ಕುಮಾ.ಉ. ೪-೩೬) ; ಬಾಳುವೆಯ ಗೂಡೊಳಿಕೆ ತಕ್ಕುದನೆಂದು ಮೃತ್ಯು ತಾನಿಕ್ಕಿ ಮೊಯಿಗ್ಗರೆಯಿತನಗರಿವೆ ? (ಗೀತಂ. ೩೦-೦). ೨. ಸಂಸಾರ; ದಾಂಪತ್ಯಜೀವನ : ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡಾ ಮದವಳಿಗೆ ಇದು ನಮ್ಮ ಬಾಳುವೆ ಮದವಳಿಗೆ (ಜನಪ. ೬೬೭) ; ಅವಳು . . . ಮತ್ತೆ ಕೈ ಹಿಡಿದವನ ಕೂಡ ಬಾಳುವೆ ಮಾಡಹತ್ತುವಳು (ಕಳ್ಳಜಾ. ೦೨೩). ೩. ಜೀವಮಾನ ; ಆಯುಷ್ಯ : ಬದುಕಿನ ಅವಧಿ : ಏಸು ದಿನವೀ ಜಗದ ಬಾಳುವ (ಕುಮಾ.ಶಾ. ೦೪-೩೨). ೪. ಅಭಿವೃದ್ಧಿ : ಕಾನನದಡವಿಯಲ್ಲಿ ಕಿಚ್ಚು ಬಾ[ಧಾತಾ. ಬ]ಳುವೆಯಾಗಿ ಎಕ್ಕೊಡ ಒಱಲುವ ಬಳ್ಳುವಿನಂತಿಪ್ಪರಯ್ಯಾ ಮಾನುಜರು ನರವಿಂಧ್ಯದೊಳಗೆ (ಬಸವ. ೨೨೭) ; ಕೇಳದಲು ಹರುಪದಲಿ ಪುತ್ರಕರೇಳಿಗೆಯ ಮುತ್ತ್ರಿದೆಶನದಲಿ ಬಾಳುವೆಯ ಕೈಕೊಂಡೆನೆಂದಳು ನಗುತ ಗಾಂಧಾರಿ (ಸಂಶಶ. ೨೦-೭). **ಬಾಳ್ವೆ** : ೧. ಏನಾ ದೊಡೇನೋ ಮಕ್ಕಳ ಹಡೆಯದರ ಬಾಳ್ವೆ ಹೆಣಕೆ ಸರಿ (ಸಮ್ಮಳ. ೩-೯); ಸಕಲ ಪ್ರಾಣಿಗಳ ಪ್ರಯತ್ನವು ಬಾಳ್ವೆಗಾಗಿ, ಸಾವಿಗಾಗಿಯಲ್ಲ (ಜೀವಾಶ್ವ. ೨೮೪). ೩. "ಆಯುಸ್ = ಆಯುಷ್ಯಂ, ಬಾಳ್ವೆ" (ಶಾಶಕ್ಕ. ೦೦೯).

ಬಾಳುವೆ ಮಾಡು, ಬಾಳ್ವೆಮಾಡು = ದಾಂಪತ್ಯಜೀವನ ನಡೆಸು ; ಒಕ್ಕತನ ಮಾಡು : ಇಂಥವರೊಡನೆ ತಾನು ಇಲ್ಲಿಯವರೆಗೆ ಹೇಗೆ ಬಾಳುವೆ ಮಾಡಿಕೊಂಡು ಬಂದೆಯೆಂದು ಅವಳೇ ಆಶ್ಚರ್ಯ ಪಟ್ಟಳು (ಹಳ್ಳಿಹಾ. ೯೦); ಯಾರೊಡನಾದರು ಬಾಳುವೆ ಮಾಡುವೆನಳಿವೆಣ್ಣಿನೊಡನಾಟ ಬೇಡ (ಬಂಡಾಶ. ೨೦೨-೯೬) ; ಗಂಡನ ಮನೆಯಲ್ಲಿ ಆರು ತಿಂಗಳ ಕಾಲ ಬಾಳ್ವೆ ಮಾಡಿದ ಗಂಗತ್ತೆಯನ್ನು 'ಆಟ' ತಿಂಗಳಲ್ಲಿ ತವರುಮನೆಯವರು ಪದ್ಧತಿಯಂತೆ ಕರೆದೊಯ್ಯುವರು (ಒಕ್ಕಲಾ. ೦). [ಬಾಟ್$_1$ + – ವೆ]

**ಬಾಟ್ವಿಣ**, ಬಾಳ್ವಿಣ (ನಾ). ಜೀವವಿದ್ದರೂ ಸತ್ತಂತಿರುವ ವ್ಯಕ್ತಿ ; ಜೀವಚ್ಛವ : ಪಂದಲೆಯೋಳಿದೋರಣದ ಸೀಯದರಂ ಪೊಸದೊವೆ ದೂಪ ತೂಗುಂದಲೆ ಬಾಟ್ವಿಣಂ ಪೊಡರ ಬಳ್ಳುವ ಸಮ್ಮನ ಸೂಲಿವಾಲ ದೊಳ್ ಸಂದಣಿಯಾಗಿ ನೇಲ್ಪ ಪೆಣನೊಂದಿರ ನಿಂದುರಿಯುಯ್ಯುಲೇಱೆ ಕೈರಂದಱಯುಲ್ಕೆ ಮಾಡಿದಡೆ ಮಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೩೬) ; ವಿಜಯಸಪ್ಪುರೀಶನಂ ಬಾಟ್ವಿಣನೆಂಬಿನಂ ಪಿಡಿದು ಕೆಯ್ಸೆಱೆ ಗೊಂಡುಱೆ ಪಾಡುಸಂತದಿಂ ಬಾಟ್ವನಭೇದ್ಯವಿಕ್ರಮನೆನಲ್ ಮೆಱೆವಂ ಚಿಕದೇವಭೂವರಂ (ಗೀತಗೋ. ೬೩-೦೪). **ಬಾಳ್ವಿಣ** : ಕಂಗೆಟ್ಟು ಬಾಯ್ಬಿಟ್ಟು ಕಲುಮವರನಾಗಿ ಕಂಡು ಮತಿಗೆಟ್ಟು ದೆಸೆಗೆಟ್ಟು ಬಾಳ್ವಿಣನಾಗಿ (ಕಾ.ಶ. ೭೬. ೦೪೬-೦೪) ; ಬದುಕಲೆಳಸಿದರಿಂತು ಬಾಳ್ವಿಣಗಳಾಗಿ ! (ಜಕ್ಕಸ. ೦೩). [ಬಾಟ್$_1$ + ಪೆಣ]

**ಬಾಟ್ವೇಲಿ**, ಬಾಳ್ವೇಲಿ (ನಾ). = ಬಾಟ್ಕೋಟೆ : ಪೂತ ಚೂತವನಮೆ ಬಾಟ್ವೇಲಿಯಾಗೆ . . . ಅಶೋಕೋದ್ಯಾನಮಧ್ಯದೊಳ್ (ಶಾಂತಿಪು. ೪-೯೩ ವ) ; ಆ ವನಕ್ಕಿಕ್ಕಿದ ಬಾಟ್ವೇಲಿಯಂತೆ . . . ನವ ಫಲಂಗಳಿಂ ನೆಱೆದೊಪ್ಪುವ ಮಾತುಲುಂಗದ ಪೊದಱುಗಳುಮಂ (ಶಂಕರಂ. ೦೦೭-೦೨) ; ನಂದನಕ್ಕೆ ಬಾಟ್ವೇಲಿಯಾದ ಕೇದಗೆಯ ಬನದ ಬಳಸಿನೊಳಗೆ ಶಿವನೆರವಣ್ಣನಂ ಹರಿಯ ಹಾದರವಬ್ಬಜನೊಲ್ದು ಲಜ್ಜೆ ಹಾಱುಬೆ ನನೆವಿಲ್ಲ ಬಲ್ಲಹನ ಶೌರ್ಯಮುಮಂ (ಶಂಅಶ. ೦-೯೦ ವ). **ಬಾಳ್ವೇಲಿ** : ಕಂಜಾಸ್ತ್ರನ ವನದುರ್ಗದಂತಾಯ್ತುಪರಂಜಿಗೇದಗೆಯ ಬಾಳ್ವೇಲಿ (ಶ್ರೀಚಾಂ. ೦-೬೪); ಸುತ್ತಿದ ಜಲಜಾತಿ ಮಿಸುನಿಗೇದಗೆಯ ಚೆಲ್ವೆತ್ತ ಬಾಳ್ವೇಲಿ (ಪಾಗಳು. ೨-೩೨). [ಬಾಟ್$_1$ + ಬೇಲಿ]

**ಬಾಟ್ಸಬ** (ನಾ). = ಬಾಟ್ವಿಣ : ಎಲೆಲೆ ಸಮ್ಮಂಗುಂದಿದ ಪುಚ್ಚಟಿಯ ಬಾಟ್ಸಬಮೆ ! (ರಾಮಾಶ್ವ. ೦೦೨-೦೩). [ಬಾಟ್$_1$ + ಸಬ (<ಶಬ)]

**ಬಿಂ**, ಬಿಮ್ಮು$_2$ (ನಾ). ಶೂನ್ಯತೆಯನ್ನು ಸೂಚಿಸುವ ಒಂದು ಅನುಕರಣಶಬ್ದ : (೯). **ಬಿಮ್ಮು$_2$** : ಒಂದೆ ನಿಮಿಷದ ಆಯು ಮಾರುಚಣಪೆ ಕತ್ತಲೆಯು ಬಿಮ್ಮೆಂಬ ಕತ್ತಲೆಯು (ಶಂಸೋ. ೬೦-೯). 'ಬಿಮ್ಮುಗಱ' ಪರಾ.

ಬಿಂಬಿಡ್ಮೆನ್ = ನಿರ್ಜನವಾಗಿರು ; ಬಿಕೋ ಎನ್ನು : ಬಿಂಬಿಡ್ಮೆಂಬ ಪೇರಡವಿಯಂ ನೋಡಿ ಜಳಜಮುಖಿ ನಾಡೆಯುಂ ತಲ್ಲಣದಿಂ ಭೋರೆಂದು ಸುಯ್ಯು (ಭಾರ್ಧಾಸ್ನು. ೩-೫೩).

**ಬಿಂಕ$_1$** (ನಾ). ೧. ಗರ್ವ ; ಜಂಬ ; ಸೊಕ್ಕು : "ವಕ್ಕಿಮಂ, ಬಿಂಕಂ . . . ಆಟಟು — ಈ ೭ ಗರ್ವಂ" (ಕಕಶಾ. ೩೬-೨೪೦) ; ಆ ದ್ರುಪದಜೆಯೊಳ್ ನೆರೆದೊಸಗೆಗೆ ತಮ್ಮ ಬೀರಮಂ ಬಿಂಕಮುಮಂ ತೆಱಮಂ ತೆಲ್ಲಂಟಿಯುಮಂಪರಿಕೇಸರಿಗಾಗಲೀವಪೋಲ್ ಬೆನ್ನಿತ್ತರ್ (ಶಂಶಾ. ೩-೬೨) ; ಬೇಡಿದ ಶರಣರ್ಗಿಲ್ಲೆನ್ನದೀವೆನೆಂಬ ಗೀತದೊಳಗಣ ಬಿಂಕದ ಬಿರುದಂ ಕೇಳ್ದು ನಿನ್ನೊಳೊಂದಂ ಬೇಡಿ ಬಂದೆಂ (ಬಸರ. ೦೨-೪೬) ; ಕಡಲು ಪರಿಪರುಣಾಂಬುಜಲಧಿಗೆ ಬಿಡಿಸಿದವು ಬಿಂಕವನು ಶಿವಶಿವ ನುಡಿವ ಕವಿ

ಯಾರಿನ್ನು ಪಾರ್ಥಕುಮಾರನಾಹವವ (ಕುಮಾರವ್ಯಾ. ೩-೬). ೨. ರೀವಿ; ಗತ್ತು : ಗಾಂಭೀರ್ಯ : ಬಿಂಕದಿಂ ಬಲಗೆಲದೊಳ್ ನೆಗಟ್ಟಿವಡೆ ದಿರ್ಪರಸಂಚೆಯ ಪಿಂಡು (ಕಬ್ಬಿಗ. ೧೨೮) : ಆವ ಬಿಂಕವೋ ಎಡಗಾಲ ಗದ್ದುಗೆಯ ಮೇಲೂರಿ ಮಾಡಿಹ . . . ರೀವಿಯೊಳೆಸೆದನಾ ರಾಯ (ಶರಷ. ೧-೩೦). ೩. ಹೆಮ್ಮೆ ; ಸ್ವಾಭಿಮಾನ : ಬಿಡೆ ನಿನ್ನ ಪಾದವ ಬಿಂಕವಿನ್ನೇಕೊ ಕೊಡು ಮನದಿಷ್ಟವ ಕೋಪವಿದೇಕೊ (ಪುರಂದರ. ೧-೨೩ ಕಲ್ಲಿ) : ಲಂಕಾದುರ್ಗಕೆ ಸರಿಯೆಂದಾವೂರ ಬಿಂಕದೆ ಕೊಂಡಾಡು ತಿಹರು (ಕಂಠೀ. ೦೬-೭೨) ; ಗಂಡನ ಬಿಂಕ ಹೆಂಡತಿಯು ವೈನ್ಯವನ್ನೇ ಬಯಸುತ್ತದೆ (ಮುಹಾಗ. ೨೯). ೪. ಬೂಟಾಟಿಕೆ ; ಡಂಭಾಚಾರ : ಬಾಯ ಬಿಂಕದ ಸವಿನುಡಿಯನಾ ರಾಯರಾಡಿದರಲ್ಲಿ (ನಳಚ. ೩-೬೦) : ನಾವು ಯೋಧರು, ನೋವನ್ನೂ ಸಹಿಸಬಲ್ಲೆವು, ಸಂತೋಷವನ್ನೂ ಸಹಿಸ ಬಲ್ಲೆವು. ಈ ಎರಡೂ ನಿಮಗೆ ಸಾಧ್ಯವಿಲ್ಲ. ಇದೊಂದು ಬಿಂಕ (ಕಾಂಕು. ೬೯). ೫. ಆಡಂಬರ : ಡೌಲು : ಪಾತ್ಸ್ಯವು ರಣ ಧೂಳಿಪಾಸನ ಬಿಂಕದೆ ಬೀಳ್ಕೊಟ್ಟನಾಗ (ಕಂಠೀ. ೧೦-೯). ೬. ಒಯ್ಯಾರ; ಬೆಡಗು ; ಬಿನ್ನಾಣ : ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್ . . . ಆ ಬಿಂಕಮಾ ತರಳಾಪಾಂಗವಿಲಾಸಂ . . . ಏಂ ಮನಂಗೊಳಿಸಿತೋ ಚಾಳುಕ್ಯಕಂದರ್ಪನಾ (ಗದಾಯು. ೯-೩೦) ; ನಳಿತೋಳ್ಗಳ್ ಮುತ್ತಿನ ಸರಿಗೆಯನಾಂತಸೆಯೆ ಕಾಂತೆ ಬಿಂಕಮನಾಂತಳ್ (ಜಗಚ. ೨೦-೧೧೬) : ನಿನ್ನ ನಡೆವ ಬಿಂಕವ ಗಾಡಿಯುಮಂ . . . ಆ ನಿನ್ನ ಕಿಱುನಗೆಯ ಬಗೆಯುಮಂ ಕಂಡು ಸೋಲ್ತು ಮೆಚ್ಚಿದೆನಲ್ತೆ ! (ರಾಜಾಶೇ. ೩೬-೯). ೭. ಸೊಬಗು : ವಿಲಾಸ : ಸೊಗಸು : ಶ್ರೀವತ್ಸಾಂಕನ ಸುಲಲಿತ ಯಾನದ ಬಿಂಕಮನನುಕರಿಸಿ ತೋಱುತಿರ್ದಳದೊರ್ಪಳ್ (ಜಗಚ. ೫-೨೦): ನಿಡುಪುರ್ಬಿಂಗಂ ಕರ್ವಿಲ್ಲ ಬಿಂಕಮಂ ಸುಂಕವಿಕ್ಕಿದಂತೆ . . . ಶೃಂಗಾರಕ್ಕೆ ಸೀಮೆಯಾಗಿಪ್ಪಳ್ (ಪುಣ್ಯಾಸ್ರ. ೨-೩೨ ವ); ಬಿಂಕದಿಂದಲಿ ಕೊಳಲೂದುತ್ತ ಪಾಡುತ್ತ ಪಂಕಜಾಕ್ಷನು ಬಂದ ಕಾಣಿರೇನೆ (ಪುರಂದರ. ೧-೧೯೦-೩). ೮. ಓರಿಮೆ ; ಮೇಲ್ಮೆ : ಅತಿಶಯತೆ : ಶಂಕರಂಗೆ ಸಕಲ ಮುಷ್ಪನಾದಿ ಪೂಜೆಯುಂ ನಿಮಿರ್ಚೆ ಬಿಂಕದಿಂದೆ ಕನಕರತ್ನರಾಶಿಗಳನೆ ಪತ್ತೆ ಸಾರ್ಚೆ (ಮಹಿರ.ಹ. ೨೨೦-೧೧) ; ಅರಸನಭ್ಯುದಯಮನು ಭೀಮನ ಧರಧುರವನ ರ್ಜುನನ ಬಿಂಕವನು ... ಕಂಡೆದೆ ಬಿರಿದುದು (ಕುಮಾರವ್ಯಾ. ೦೨-೫೯): ಸಾಸಿರದ ಬಿಂಕದ ಕರಿ ಹತ್ತು ಕೂಡಿದ ಬಲುಪಾಜನಂಕುಶಖಾನ ತೋಱಿದನು (ಕಂಠೀ. ೧೧-೯೫). ೯. ಸಾಹಸ: ಪರಾಕ್ರಮ; ದಿಟ್ಟತನ : ಬಿಂಕದಿಂದ ಸಿಯಾ ಜಡಿದು (ಶಶಿ. ೦೬-೦೮); ಮನ್ನಣೆಯ ಬಿಲ್ಲ ಗುರುವಿನ ಬಿಂಕ ಬಯಲಾಯ್ತಲ್ಲಿಯೆಂಬಪಕೀರ್ತಿ ಹೊಱುವುದು (ಕುಮಾರವ್ಯಾ. ೦೩-೧೧). ೧೦. ಅಟ್ಟಹಾಸ; ಆಟೋಪ : ಧರಾಧೀಶರಾಗಳ್ ಪೊಣರಲ್ ರಾಜೇಂದ್ರ ಹಮ್ಮೀರನ ತುರಗಿನಿಯಂ ಮುತ್ತಿದರ್ ಬಿಂಕದಿಂದಂ (ಹಮ್ಮೀರ. ೩-೫). ೧೧. ಜಂಬದ ಮಾತು ; ಹೆಮ್ಮೆಯ ನುಡಿ : ಧನವ ಕೊಟ್ಟನು ತನುವ ಕೊಟ್ಟನು ಮಾನವ ಕೊಟ್ಟನು ಕೊಟ್ಟನೆಂಬೀ ಬಿನುಗು ಬಿಂಕವ ನಾಡಲಾ ಧನ ತನು ಮನಂಗಳನು ನಿನಗೆ ಕೊಟ್ಟವರಾರು (ತ್ರಿಶಂಕು. ೦೬-೯೯). ೧೨. ಶಸ್ತ್ರಪ್ರಯೋಗದಲ್ಲಿ ಒಂದು ರೀತಿ,-ಬಗೆ : ಬಿಂಕಂ ಭ್ರಮರೀಜ್ವಾಲೀಢಮಾಕಿರ್ಣತೆ ... ಬೆಡಂಗೆಂದನಿತಱ ವೈಚಿತ್ರ್ಯದಿಂ ತಾನೆ ಶಸ್ತ್ರಾಗಮಶಿಕ್ಷಾಚಾರ್ಯನೆಂಬೊಂದೆಸಕದಿನೆಸೆದಂ ನಾಡೆ ಕಂದರ್ಪ ದೇವಂ (ಕುಸುಮಾ. ೭-೬೯). 'ಬಿಗಿ$_1$ ಪರಾ.

[ದೇ. ‖ ತುಳು. ತೆಲು. ಬಿಂಕ]

**ಬಿಂಕ$_3$** 'ಬಿಂಗ$_1$' ನೋ.

**ಬಿಂಕಂಗುಂದು** (ಕ್ರಿ). ಶಕ್ತಿಯು ಕುಂದು: ಪರಾಕ್ರಮವು ಕಡಮೆಯಾಗು : ಬಾನ್ಪಟ್ಟೆಯೊಳ್ ಬಿಱುಪಿಸಿಲ್ ಬೆನ್ನಂ ಸುಡೆ ಬಿಂಕಂಗುಂದಿ ಬಳಲ್ದು ಬರ್ಪ ಗರುಡದಂಪತಿಗೆ ತಂಪಂ ಪರೆಪಲೆಂದು ... ರಂಜಿಪ ಪರ್ಣ ಪಾಳಿಯನೇಳ್ಗಿಪೆತ್ತ ತಾಳಭೂರುಹದಿಂ ... ಮಹಾಗಹನಮೊಪ್ಪಿರ್ದುದು (ಶಬ್ದಂ. ೩-೩೫ ವ). [ಬಿಂಕ$_1$ + ಕುಂದು$_1$]

**ಬಿಂಕಂಗೆಡಿಸು** (ಕ್ರಿ). ಗರ್ವವು ನಾಶವಾಗುವಂತೆ ಮಾಡು; ಅಹಂಕಾರವನ್ನು ತಗ್ಗಿಸು : ಬದಿಗವೆಱೆಯ ಬಿಂಕಂಗೆಡಿಪಧರಂ ... ಒಪ್ಪಿದುವಾ ಸತಿಗೆ (ಜಯನೃ. ೨-೬). [ಬಿಂಕಂಗೆಡು + – ಇಸು$_3$]

**ಬಿಂಕಂಗೆಡು** (ಕ್ರಿ). ಗರ್ವವು ನಾಶವಾಗು ; ದರ್ಪವು ಅಳಿದುಹೋಗು : ಅಹಂಕಾರವಡಗು : ಪೊಡವೀಶಬ್ರ್ಯೇತಿಯಿಂದಂ ಸೆಡವರಡಗುವ ಕ್ರೊರ್ಯೀಡುವಕ್ರೊರ್ಯಂಕಿ ಬಿಂಕಂಗೆಡುವರ್ (ಎಕ. XI. ಚಿತ್ರದು. ೨-೮೭ 1356). [ ಬಿಂಕ$_1$ + ಕೆಡು$_1$ ]

**ಬಿಂಕಂಬಡೆ** (ಕ್ರಿ). ಸ್ವಾಭಿಮಾನದಿಂದ ಕೂಡಿರು : ಅತ್ಯಂತ ಚತುರ ಚಿತ್ರಕನೊರ್ವಂ ಬಿಂಕಂಬಡೆದೈತಂದು ಕಂತುನಿಭಂಗಭಿವಂದಿಸಿ (ಜಯನೃ. ೩-೪). [ಬಿಂಕ$_1$ + ಪಡೆ$_1$]

**ಬಿಂಕಂಬೆಱು** (ಕ್ರಿ). ೧. ವಿಲಾಸದಿಂದ ಕೂಡಿರು : ಸೊಗಸನ್ನು ಹೊಂದಿರು : ಬಿಂಕಂಬೆತ್ತಸೆವಂಚೆಯುಂ ಸಂಕುಳಮುಂ ತೊಂಡುಗೆಡೆವ ಶುಕಶಾರಿಕೆಯುಂ ಸೊಂಕಿ ಬಲವಂದು ತೀಡುವ ತೆಂಕಣಗಾಳಿಯುಮಿವೇಂ ಮನಂಗೊಳಿಸಿದುವೋ (ಕಾವ್ಯಾ.ಶ. ೦೮): ಬಿಂಕಂಬೆತ್ತಿರೆ ಪಸ್ತನಖಾಂಕುರದೊಳ್ ಬಾಹುಶಾಖೆಯೊಳ್ ದಿವಿಜನಟೀಸಂಕುಳಮಂಮನುಗತಿಯಿಂದಂ ಕುರಶಾಖಾಭಿನಯಮನೇಂ ತೋಱಿದುದೋ (ತಂತ್ರಕು. ೧೨-೮೯೨) : ಬಿಂಕಂಬೆತ್ತರ ಮಕ್ಕಳ ತಂಪದ ಮಂತ್ರಿಗಳ ಗೊಂದಣದತಿಚತುರ ಕವೀಂದ್ರರ ಬಲುಸಂದಣೆಯೊಳು . . . ಓಲಗವಿರ್ದಂ ಜಯಭೂಪರನು (ಜಯನೃ. ೩-೦). ೨. ಉಬ್ಬು: ಸಡಗರಿಸು : ಉತ್ಸಾಹಿಸು : ಬಿಂಕಂ ಬೆತ್ತುಬಿಱಬೆಂದಾಡುತ್ತಂ ಆಡುವ ಗುಂಪಯ್ಯನ ಪೊಸನೃತ್ಯಂ (ಕಂಠೀ. ೦೩೦-೨೯). ೩. ಗರ್ವಿಸು : ಜಂಬಪಡು : (ಕ). [ಬಿಂಕ$_1$+ಪೆಱು$_1$]

**ಬಿಂಕಕಾತಿ** 'ಬಿಂಕಗಾತಿ' ನೋ.

**ಬಿಂಕಕಾರ್ತಿ** 'ಬಿಂಕಗಾರ್ತಿ' ನೋ.

**ಬಿಂಕಕಾಱ** (ನಾ). ಅಹಂಕಾರಿ: ಗರ್ವಿಷ್ಠ: ಬರುದಿನ ಬಿಂಕಕಾಱರ ಮಾಸಿಗರನಲ್ಲೆನಿಸುವಲ್ಲಮನೆಂಬ ಪೆಸರೆನಗೆ (ತ್ರಿಶಂಕು. ೫-೦೩). [ಬಿಂಕ$_1$ + – ಕಾಱ]

**ಬಿಂಕಗಾತಿ, ಬಿಂಕಕಾತಿ** (ನಾ). ೧. ಒಯ್ಯಾರಿ; ಬಿನ್ನಾಣಗಿತ್ತಿ : ಕನ್ನಡಿಗಿಂಡಿ ಬಿಜ್ಜಣಿಗೆಗಳ ಪಿಡಿದೂಳಿಗಗೈವ ಬಿಂಕಗಾತಿಯರಾ ಪೊಡವಿಯಾಣ್ಮನ ಪೊದ್ದಿಹರು (ಹಂಬ. ೦-೦೬) ; ಗರುವ ನೋಟದ ಬಿಂಕಗಾತಿ . . . ಸೋಗೆಗಣ್ಣುಗಳಿಂದ ಕರೆದಳಾ ಕಾಮುಕರರಸಿ (ಸೌಂದರ. ೩-೦೦). **ಬಿಂಕಕಾತಿ:** ೧. ಕರಜಾಣ ನಿನ್ನೋವನೆಂದು ಸಿರಿವೆಣ್ಣು ಕಿವಿ ಸಾರ್ದು ಸೂಚಿಸು ತ್ತೋಲೈಸಿ ಬರೆ ಬಂದಳಾ ಬಿಂಕಕಾತಿ (ಶಶಿ. ೭೮-೦೦೯). ೨. ಸೊಕ್ಕಿನವಳು; ಗರ್ವದ ಹೆಂಗಸು : (ಕ). [ ಬಿಂಕ$_1$ + – ಕಾತಿ$_6$ ]

**ಬಿಂಕಗಾರ್ತಿ, ಬಿಂಕಕಾರ್ತಿ** (ನಾ). = ಬಿಂಕಗಾತಿ ೧ : ನಲವಿಂದಮೊಡನೊಡನಡಿಯಿಟ್ಟರ್ ನೆರೆದು ಬಿಂಕಗಾರ್ತಿಯರರೆಬರ್ (ಕಬ್ಬಿಗ. ೯೩) ; ನಡೆಯ ಬೆಡಗಿನ ಬಿಂಕಗಾರ್ತಿ[ ಪಾಠಾಂ. ಕಾತಿ ]ಯರ್ . . . ನಡೆ ತಂದರು (ಕಂಠೀ. ೯೩-೩೩). **ಬಿಂಕಕಾರ್ತಿ** : ಬಿಂಕಕಾರ್ತಿಯರಲ್ಲಿ ಕಡುಗಾಡಿ ವೆತ್ತಿರುತಿಹರು (ಶುರಾಸಾಂ. ೩-೩೩); ಜಡೆಯ ಗೊಂಡೆಯ ಬಿಗಿದೊತ್ತಿ ಕಟ್ಟಿದ ಜವದಾಡೆ ಚಿತ್ರಕಳಸಿ ಬಿಂಕಕಾ[ಪಾಠಾಂ. ಗಾ]ರ್ತಿ ಬಬ್ಬಿಯರವ ನೊತ್ತಿನೊಳೆಯ್ತಂದರಂದು (ಶುರಾಸಾಂ. ೧೮-೦೯).

[ಬಿಂಕ$_1$ + – ಕಾಱ + – ತಿ$_1$ (< – ಇತ್ತಿ$_1$)]

**ಬಿಂಕಣ** 'ಬಿಜ್ಜಣ' ನೋ.

**ಬಿಂಕಣಗಿವಿ, ಬಿಂಕಣ್ಣಗಿವಿ** (ನಾ). ಬೀಸಣಿಗೆಯಂತೆ ದೊಡ್ಡದಾಗಿರುವ ಕಿವಿ : 'ಬಿಂಕಣಗಿವಿಯ' ಪರಾ. **ಬಿಂಕಣಿಗಿವಿ** : ಒರ್ವನೆಯ ಬಿಂಕಣ

ಗಿವಿಯ ಮೂಗೊಂಕುಮೂಗಿನ ಪೇರೊಡಲ ಇಲಿದೇರ ಬೆಸಕ ! ಇದೆ ಮಣಿಮಂ (ರಾಮಾಶ್ವ. ೬೬-೨೦). 'ಬಿಂಕಣಗಿವಿಯ' ಪಠಾ.

[ ಬಿಂಕಣ (<ಬಿಜ್ಜಣ) + ಕಿವಿ₃ ]

**ಬಿಂಕಣಗಿವಿಯ,** ಬಿಂಕಣ್ಣಗಿವಿಯ (ನಾ). ಬೀಸಣಿಗೆಯಂತೆ ದೊಡ್ಡ ದೊಡ್ಡ ಕಿವಿಗಳುಳ್ಳವನು; ಗಣಪತಿ : "ಕರಿಮೊಗಂ . . . ಬಿಂಕಣ [ ಪಾಠಾಂ. ಣೆ ]ಗಿವಿಯಂ, ತಂದೆಯು ತಂದೆಯಿಲ್ಲದವಂ — ಈ ೭ ವಿನಾಯಕಂಗೆ ಪೆಸರ್" (ಕಕಶಾ. ೯೭-೯); "ಬಿಜ್ಜವಳಂ . . . ಬಿಂಕಣಗಿವಿಯನು ಮೂಷಕದೇರನೆನೆ ವಿನಾಯಕನ ನಾಮಂ" (ಕನ್ನಕೈ. ೩). **ಬಿಂಕಣಿಗಿವಿಯ :** ಬಿಂಕಣಿಗಿವಿಯನೆ ಪಾಲಿಪುದಂಕುಶಧರ ದಯದಿ (ಕುಮಾರಾ· ೧). [ ಬಿಂಕಣಗಿವಿ + –ಅ₅ ]

**ಬಿಂಕಣಿ** 'ಬಿಜ್ಜಣ' ನೋ.

**ಬಿಂಕಣಿಗಿವಿ** 'ಬಿಂಕಣಗಿವಿ' ನೋ.

**ಬಿಂಕಣಿಗಿವಿಯ** 'ಬಿಂಕಣಗಿವಿಯ' ನೋ.

**ಬಿಂಕಣೆ** (ನಾ). ಒಯ್ಯಾರ ; ಒನಪು : ತೊಟ್ಟ ಸಿಂಗಾರದ ಕೊಂಕು ಬಿಂಕಣೆ ರಸ ತೊಟ್ಟಿಡುವಂತೆ ಲಾವಣ್ಯ ಮುಟ್ಟಿ ಕಂಡುವ ವೈಯ ಪೇಗಳಿದ್ದರು (ಭರತ. ೧೨-೬೦). [ ಬಿಂಕ₁ + – ಅಣೆ₄ ]

**ಬಿಂಕತನ** (ನಾ). ಗರ್ವ; ಸೊಕ್ಕು: ಬೇಡಿದರೆ ಕೊಡದಿಹಗೆ ಕಡುಬಿಂಕ ತನವೇಕೆ ಪಾಡಲರಿಯದವಂಗೆ ಪ್ರೌಢತನವೇಕೆ (ಪುರಂದ· ೨-೩೨-೧).

[ ಬಿಂಕ₁ + –ತನ ]

**ಬಿಂಕಪಡು** (ಕ್ರಿ). ಗರ್ವಿಸು; ಅಹಂಕಾರ ಪಡು; ಸೊಕ್ಕು : ಇತರ ಬಂಧುಜನರೂ ಸೇನಾಪತಿಗಳೂ ತಮ್ಮಿಂದಲೇ ಈ ದ್ವಾರಕಿಯು ಉಳಿದಿರುವುದೆಂದು ಬಿಂಕಪಡುವರು (ಶ್ರೀಭಾಗ· XV· ೦೬). [ಬಿಂಕ₁+ಪಡು₁]

**ಬಿಂಕೆಯ** (ನಾ). ಒಬ್ಬಾತನ ಹೆಸರು : ಕನ್ನರವಲ್ಲಹಂ ಪೃಥುವೀರಾಜ್ಯಂಗೆಯ್ಯೆ ಬಿಂಕೆಯ ನಾಡಾಳೆ (ಎಕ. VIII. ಸೊರಬ· ೬೭-೬; ೯೪೦).

[ಠ ಇದು 'ಬಂಕೆಯ' ಎಂಬುದರ ಅಪಲಿಖಿತವಿರಬಹುದು].

**ಬಿಂಗ₁,** ಬಿಂಕ₂, ಬಿಂಗು (ನಾ). ೧. ಒಂದು ಬಗೆಯ ದೊಡ್ಡ ಜಾತಿಯ ತುಂಬಿ ; ಭ್ರಮರ : "ಅಳಿಯಿಂದುಲರ್ವಕ್ಕಿ . . . ಬಿಂಗ ಬಂಡುಣಿಯೆಲಂಚಿಣಿಯುಂ ಪಡಿಮೆ ಚಿತ್ರವಿಹಗಕ್ಕೆ ನಾಮಂ" (ಕಬ್ಬಿಗ· ೨೬); ಭೃಂಗ- ಬಿಂಗ ; ಭೃಂಗಾರ — ಬಿಂಗಾರ (ಶಮದ. ೨೬೬ ವೃತ್ತಿ). ೨. ಒಂದು ಬಗೆಯ ಖನಿಜ ; ಕಾಗೆಬಂಗಾರ; ಅಭ್ರಕ : ಜಲವಿಹಗಾವಳಿ ಜಲಚರಜಾಲಂ ನೆಱೆ ಚಿತ್ರಿಸೆ ಜಳಕನೆಸೆವ ತೆಳುವಳಿಕಿನ ಬಿಂಗದ ಮೇಲ್ಲಟ್ಟೊಪ್ಪಿದುದು (ಜಗನ್ನಾ. ೯-೬) ; 'ಬಿಂಗದ ಕುಪ್ಪಿಗೆಗಿಳಿವ ಕುಂಕುಮದ ನಿರಂಗಧಿ ತಾಂಬೂಲರಸವ ನುಂಗುವಾಗಿದಿರಿಗೆ ತೋಱುವುದರಸನ ನುಂಗೊರಳೇನ ಚಲ್ವೆವನು (ಭರತ. ೭-೩೩): ಬುದ್ಧಿಯೆನಿಸುವ ಕರಣವನು ಭವಸಿದ್ಧವಾಗಿಹುದಾತ್ಮನಡಿಯೊಳಗಿರ್ದು ತೋಱುತ ಬಯಲೊಳೆಸೆಯುವ ಬಿಂಗದಂದದಲಿ (ಅನ್ನಭೂ. ೭-೯). ೩. ಒಂದು ಬಗೆಯ ಬಳ್ಳಿ : "ಪಡಿಮೆಯೊಳಗಭ್ರಕದೊಳಂ ಲತೆಯೊಳಂ ಬಿಂಗ" (ಕಬ್ಬಿಗ· ೮೯). **ಬಿಂಕ₂:** ೨. ಫಿರಂಗಿಶೂಲೆಗೆ : – ರಸ, ಗಂಧಕ ... ಗೇರ ಹರಳ ಕುಟ್ಟಿ ಬೀಜವ ತೆಗೆದು ಬಿಂಕದ ಹಾಗೆ ಕಾಸಿ (ವೈದ್ಯಶಿ. ೬೯): ಅದರಲ್ಲಿ ಬಿಂಕದ (Mica) ಹುಡಿಗಳು, ಕೆಲವು ಬೆಣಚು(Felspar)ಗಲ್ಲು ಇವೆಲ್ಲ ಥಳಿಸುವುವು (ಕಾಂಚ. I. ೦೪೬): ಇದು ಒಂದು ಕರಡಿಯಂತಿದ್ದು. ಒಳಗಡೆಯಲ್ಲಿ ಎರಡು ರಬ್ಬರ್ ಬಳಿಗಳ ನಡುವೆ ಸೆಳೆದು ಹಿಡಿಯಲ್ಪಟ್ಟ ಒಂದು ಬಿಂಕದ ಪರೆಯಿಂದ ಕೂಡಿರುತ್ತದೆ (ವಿಜ್ಞಾ೭. ೨). **ಬಿಂಗು :** ೨. " ಬಿಂಗು (ಗ)–ಭೃಂಗ = ಅಭ್ರಕ " (ತದ್ಭಕೋ. ೩೦); ಇಂಗು ಕರ್ಪೂರವಕ್ಕು ಬಿಂಗು ಬಜ್ಜರವಕ್ಕು . . . ಕರ್ಪೂರ ತಾ ಹಿಂಗುವ ದಿನಕೆ (ಸರ್ವಜ್ಞ ೬೯೨). [< ಸಂ. ಭೃಂಗ]

**ಬಿಂಗ₂** (ನಾ). ದೋಷ; ಕುಂದು; ಹುಳುಕು.

ಬಿಂಗ ಬಿಡಿಸು = ಹುಳುಕನ್ನು ಹೊರಹಾಕು, – ಹೊರಪಡಿಸು : ತಂಗಿಯಾದರೂ ನಮಗೆ ಅನುಕೂಲಿಲದ್ದರೆ ಆ ಗೋವಿಂದನ ಬಿಂಗ ಬಿಡಿಸುತ್ತಿದ್ದೆ (ರಕ್ತಕ್ರಾ. ೨೯೨). [←ಮರಾ. ಬಿಂಗ]

**ಬಿಂಗೆಕ್ಕೆ** (ನಾ). ಅಭ್ರಕದಂತೆ ನುಣುಪಾದ ಕಪೋಲ, ‑ ಕೆನ್ನೆ : ಬಿಲ್ಪುರ್ಬಿನ ಬಿಂಗೆಕ್ಕೆಯ ಬಿಂಬಾಧರದ . . . ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೯೬-೨೨). [ಬಿಂಗ₁+ಕೆಕ್ಕೆ]

**ಬಿಂಗರ** 'ಬಂಗಾರ' ನೋ.

**ಬಿಂಗಳಿ** (ನಾ). ದುಂಬಿಯ ಜಾತಿಗೆ ಸೇರಿದ ಒಂದು ಬಗೆಯ ಹುಳು; ಜೀರುಂಡೆ : " ಬಿಂಗಳಿ = ಭೃಂಗಾರೀ=ಜೀರುಂಡೆ " (ತದ್ಭಕೋ. ೩೦).

[<ಸಂ. ಭೃಂಗಾರೀ]

**ಬಿಂಗಾರ** 'ಬಂಗಾರ' ನೋ.

**ಬಿಂಗಾರಿ₁** (ನಾ). ಜಂಬಗಾತಿ ; ಅಹಂಕಾರಿ ; ಸೊಕ್ಕಿನವಳು : ಹ್ಯಾಗೆ ಹೊಂಟಳು ನೋಡು ಬಿಂಗಾರಿ (ರಂಗಗೀ. ೬೯).

[< ಬಿಂಕ₁. / ತುಳು. ಬಿಂಗಾರಿ. ಬಿಂಗಿರಿ, ಬಿಂಗ್ರಿ=ದುರಭಿಮಾನವುಳ್ಳ]

**ಬಿಂಗಾರಿ₂** 'ಬಂಗಾರ' ನೋ.

**ಬಿಂಗಿ** (ನಾ). ೧. ಶಿವನ ಪ್ರಮಥಗಣಗಳಲ್ಲಿ ಒಬ್ಬ; ಭೃಂಗಿ : ಬಿಂಗಿಯ ಕುಣಿತಮನೀಕ್ಷಿಸಿಯಂಗನೆ ನಗೆಯುಂಗುಳ್ವ ತಚ್ಚರ್ಕಂಪದ ಕಂಪಿಂಗೆಳಸಿ ಮುಡಿಗೆ ಮುಸುಱಿದ ಭೃಂಗಂಗಳ್ ನೆಗೆದ ಪೀಲಿಗೊಡೆಯೆನೆ ತೋರ್ಕುಂ (ರಾಜ. ೨-೯೭) : ೮ಂಗಳ ಮುಚ್ಚಿ ತೆಱೆವುತ ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರತ. ೦೯-೩೩). ೨. (ಅಲಂ) ನಿರ್ಗತಿಕವ್ಯಕ್ತಿ ; ದರಿದ್ರ : ಅವನೂ ಬಿಂಗಿಯಂತೆ ಬರಿಗೈಯಲ್ಲಿ ಬಂದು ನಿಂತು ಅವಳ ಸ್ನೇಹಭಿಕ್ಷೆಗೆ ಕೈ ಚಾಚಿರಲಿಲ್ಲ (ಕೂಪಿಸ· ೬೦) ; ನಾನು ಭೂಷಣವಾಗಿರುತೀನಿ ನೀನು ಹೀಗೆ ಕೋರಿ ಸುತ್ತಿಕೊಂಡು ಬಿಂಗಿಯ ಹಾಗೆ ನಿಂತಿರು (ಶಾಂಗಿ· ೯೦). ೩. ಹುಚ್ಚ ; ಮರುಳ : ಬಂಗಾಳದರಸೀತ ನೋಡೆಂದರೀಕ್ಷಿಸಿ ಮುಂಗಡೆಗೆಯ್ದಿದಳೊಡನೆ ಸಿಂಗಾರ ಮುಱುಕು ವಿಡಾಯ ಹಾಱುತು ಹೊಸಬಿಂಗಿಯುತಿರ್ದನಾ ನೃಪತಿ (ಭರತ. ೩೩-೯೪) ; ಏ ಬಿಂಗಿ, ನಾನು ಯಾರು ಅಂತ ಮಾಡಿದ್ದೀ ? ನಿನ್ನ ಅಜ್ಜಿ ಇದ್ದಳಲ್ಲ ? ಅವಳು ನನ್ನ ತಂಗಿ (ಮರಮ. ೯೭೩). [< ಸಂ· ಭೃಂಗಿನ್]

**ಬಿಂಗು** 'ಬಿಂಗ₁' ನೋ.

**ಬಿಂಗುಂಡು** 'ಬಿಣ್ಗುಂಡು' ನೋ.

**ಬಿಂಗುಂಡುಗೊಳ್** (ಕ್ರಿ). ಭಾರವಾದ ಗುಂಡಿಗೆ ಸಿಕ್ಕಿಕೊಳ್ಳು : ಬಿಂ[ಬಿಂ]ಗುಂಡುಗೊಂಡ ಗಂಡಗತ್ತರಿಯ ಸಂಸರ್ಗದರ್ಗಳಮನಮರೆ ಸಾರ್ಚಿಯುಂ (ಕುಕ್ಕುಕ. ೭-೬೯ ವ). [ಬಿಂಗುಂಡು(< ಬಿಣ್ಗುಂಡು)+ಕೊಳ್₁]

**ಬಿಂಗುಸುಬು** (ನಾ). ಅಭ್ರಕದ ಪುಡಿಯಿಂದ ಕೂಡಿದ ಮರಳು,– ಉಸುಕು : ನನಸು ಕನಸುಗಳ ದರ್ಶನವನೇಂ ತರಲಾರೆ, ಬಿಂಗುಸುಬು ಬಂಗಾರದಿರವನೊರೆವಂತೆ ? (ಗೀಐಂ. ೨೭-೨೦).

[ ಬಿಂಗು (<ಬಿಂಗ₁) + ಉಸುಬು (< ಉಸುಕು) ]

**ಬಿಂಗೆ** (ನಾ). ( ? ) : ಕಂಪಿಸಿದನಡಿಗಡಿಗೆ ತಲ್ಲಣಿಸಿ ಕುರುನೃಪತಿಯು ಬಿಂಗೆಯಾಗಿರುತಿರಲ್ಗುರ್ವಗಿರಿ ಜರಿದು ರಕ್ತಂಗಳನ್ನೊಸರುತಿರೆ ದ್ರೋಣ ಕೌರವ ರಾಯನಿಂಗಿತವನರಿದು . . . ಇಲ್ಲಿ ನೀವಿದ್ದೇನು ಫಲವೆನಲು (ಕುರುಕ್ಷೇ. ೨೦-೦೪). [?]

**ಬಿಂಜ** (ನಾ). ೧. ಮಹೇಂದ್ರ, ಮಲಯ, ಸಹ್ಯ. ಶುಕ್ತಿಮಾನ್, ಋಕ್ಷವಾನ್, ವಿಂಧ್ಯ ಮತ್ತು ಪಾರಿಯಾತ್ರ ಎಂಬ ಏಳು ಕುಲ ಪರ್ವತಗಳಲ್ಲಿ ಒಂದು ; ಉತ್ತರ ಹಿಂದೂಸ್ಥಾನ ಮತ್ತು ದಖನ್ನಿನ ಮಧ್ಯದಲ್ಲಿರುವ ನೀಳವಾದ ಪರ್ವತಗಳ ಸಾಲು ; ವಿಂಧ್ಯ : "ಬಿಂಜಮೆನೆ ವಿಂಧ್ಯಂ" (ಕಬ್ಬಿಗ. ೬೯) ; ಬಿಂಜವಡವಿಯೊಳಗೆಲ್ಲಂ ನಂಜಿನ

ಮುಳಿಗೊಂಡು ಬಿಟ್ಟ ತೆಱನಾಯ್ತು (ಕಾದಂಪೂ. ೧೬.೨) ; ಮುಂದಿರ್ಪುದು ಬಂಜವಡವಿ ಪಸುಳೆಮಕ್ಕಳಿರ್ಬರ್ ಸಹಿತಂ . . . ಪರ್ವತಕ್ಕೆ ಪೋಪ ಸಂಬಂಧಮೇನೆನೆ (ಕುಮಾವ್ಯಾ. ೧೨-೩೨ ವ). ೨. ಕಾಡು; ಅಡವಿ : ಅರಣ್ಯ : "ಪಟುವೆಂದುಂ ಬಂಜವೆಂದುಂ ಅಡವಿ" (ಕಕಾ. ೩೦-೯೧) : ಅಲ್ಲಿ ನೆರೆದ ಪೆರ್ವಡೆ ಪಯಣಂಬೋಪಾಗಳೆಲೆಯಿಂಕ್ಕಿದ ಬಂಜಮೆ ನಡೆವಂತೆ ಧನುರ್ಬಲಂ ನಡೆಯೆ (ಶಂಹರಿ. ೧೧-೬೨ ವ) ; ನೇಸಱಿವೆಳಗಿಗೆ ವೆಜ್ಜಗೊಡದೆ ಬೆಳೆದಿರಲಾ ಬಂಜಂ ಭೀಕರತರಮಾಯ್ತು (ಜಯನೃ. ೧೩-೨೪) : ನಂಜಿಡಿದ ಭರಣಿಯಂತೋ ಮಹಾಮಾಯೆಗಳ ಬಂಜದಂತೋಯೆಂಬವೂಹೆಗಳವಡದಂತೆ ಕಂಜೋದ್ಭವಾಂಡಮೊಪ್ಪಿರ್ದುದೇಂ ಸಾಂದ್ರಾಂಧಕಾರದೊಳ್ (ಚೆಶಿಪು. ೪೬-೧೯). ೩. (ಆಲಂ) ಸಮೂಹ; ರಾಶಿ ; ಒಟ್ಟಿಲು : ನೆಲಂ ಬೆಸಲೆಯಾದಂತೆ ಬರ್ಪ ಬೇಡವಡೆ ರಸೆಯಿನೊಗೆವಸುರರ ಪಡೆಯಂತೆಯುಂ . . . ನಡೆವ ನಂಜಿನ ಬಂಜದಂತೆಯುಂ . . . ಅಗುರ್ವುಮದ್ಭುತಮುಮಾದುದು (ಶಂಖಪು. ೪-೩೪ ವ).

ಬಂಜದೋಜ = ಅಗಸ್ತ್ಯ : ವಿಂಧ್ಯಪರ್ವತವು ಮೇರುವಿನ ಔನ್ನತ್ಯದೊಂದಿಗೆ ಸ್ಪರ್ಧಿಸಿ ಮೇಲೇರಿದಂತೆಲ್ಲಾ ಭೂಮಿಯ ಸಮತೂಕವು ತಪ್ಪಿತು. ಆಗ ದೇವತೆಗಳ ಪ್ರಾರ್ಥನೆಯಂತೆ ಅಗಸ್ತ್ಯನು ದಕ್ಷಿಣಕ್ಕೆ ಬಂದಾಗ ವಿಂಧ್ಯವು ಗೌರವದಿಂದ ಅವನಿಗೆ ಮಣಿಯಿತು ಮತ್ತು ಅಗಸ್ತ್ಯನ ಮಾತಿನಂತೆ ಹಾಗೆಯೇ ಬೆಳೆಯದೆ ಉಳಿಯಿತು. ಹೀಗಾಗಿ ಅಗಸ್ತ್ಯನು ವಿಂಧ್ಯಪರ್ವತದ ಗುರುವಾದನು ಎಂಬ ಪೌರಾಣಿಕ ಕಥೆ ಇದೆ : ರಾಜಪರಮೇಶ್ವರಂಗೆ ಬೆಳ್ಳಗೆಯೊಳ್ ಬಂಜದೋಜ ನೋಜೆಯಿಂ . . . ಪಡಿನುಡಿದಂ (ರಾಮಾಶ್ವ. ೦೪-೨). [<ಸಂ. ವಿಂಧ್ಯ]

**ಬಂಜಾಡಿ** (ನಾ). ಒಂದು ಬಗೆಯ ತೆರಿಗೆ ( ? ) : ಕುಡುಕೂರ ಗ್ರಾಮದ ಒಳಗೆ ಅಂಣಹ[ತ್ವಾ]ರನು ಸ(೦)ಮ್ಮ ಅರಮನೆಗೆ ತೆಱುವ ಬಂಜಾಡಿಯ ಅಧಿವಾಸದ ಒಳಗೆ ತಂನ ಹದಿಮೊದಲು ಅಪ್ಪಣೆಯ ಬಗೆಯಿಂದ ಕಾಟಿಗ ಶಿಶಿ (ಶಾಇಇ. IX–ii. ೪೬೦-೧೪; 1467). [ ? ]

**ಬಂಡಿಗ** (ನಾ). ಒಂದು ಬಗೆಯ ಸಸ್ಯ : "ಅರುಣಮೂಲಮೆನೆ ಬಂಡಿಗ ಮಕ್ಕ" (ವಂಗರಾ. ೩೩-೦೪) ; ಮರಮಿಂದ್ರವಾರುಣಿಯ ಬೇರ್ ಮರತರಮೂ ಬಂಡಿ(ದಿ)ಗಂ . . . ಪರಿಪರಿಕುಂ ವಿಷದುರುಪ ಪುಣ್ಣಳಂ ತತ್‌ಕ್ಷಣದಿಂ (ಖಮದ. ೧೬-೧೦೩). [<ಸಂ. ಭಂಡಕ]

**ಬಂಡಿವಾಲ** 'ಬಂಡಿವಾಳ' ನೋ.

**ಬಂಡಿವಾಳ, ಪಿಂಡಿವಳ, ಪಿಂಡಿವಾಳ, ಬಿಂಡಿವಾಲ** (ನಾ). ಒಂದು ಬಗೆಯ ಆಯುಧ; ಈಟಿ : ಮಧ್ಯಮನಿಷಾದಿಗಳ್ ಮಧ್ಯಮನಿಷಾದಿಗಳೊಳಸಿ ಮುಸಲ ಕಣೆಯ ಕಂಪನ ಮುಸುಂಡಿ ಬಂಡಿವಾಳ . . . ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆಚ್ಚುಮಿಟ್ಟುಮಿಱಿದುಂ ಪೊಯ್ದು ಸಾತ್ತ್ವಿಭಯಂಕರಾಕಾರಮಾಗಿ ಕಾದುವಾಗಳ್ (ಶಂಕಾಪು. ೦೩-೬೬ ವ) ; ಪಟಳದಲಿ ಗದೆಯಲಿ ಬಂಡಿವಾಳ[ಶಾಕಾಂ. ಲ]ದಲಿ ಪರಿಪರಿಯ ಚಿತ್ರದ ಚಮತ್ಕೃತಿ ಕರವ ತೋಱಿಸಿದನು (ಕುವ್ಯಾಶ. ೬-೨೯). **ಪಿಂಡಿವಳ** : ಚಕ್ರ ಪರಶು ಪಿಂಡಿವಳಂ ಪೇರ್ಬಾಳು . . . ಘಳಕಂಬಿಡಿದಮರರ್ ನೆರೆದುದು (ಜೀಜೀಚ. ೩೩-೩೦). **ಪಿಂಡಿವಾಳ** : "ಯಷ್ಟಿಃ, ಪಟ್ಟಿಶಕಃ . . . ಪಿಂಡಿವಾಳಃ, ಗದಾದಂಡಃ, ಚಕ್ರಂ — ಇವು ಮೊದಲಾಗುಳ್ಳುವು ಕೆಯ್ದುಗಳ ಭೇದಂಗಳ್" (ಶಠಾಯು. ೬೮-೩೨೨) ; ಪಿಡಿ ಬಡಿ ಕಟ್ಟು ಸೂಂಕು . . . ಗಾಣದೊಳ್ ಪಿಟಿ ಪಿಸುಳ್ದಿರೆ [ಪೋ]ಟಿಸು ಪಿಂಡಿವಾಳದೊಳ್ (ಸಂಕುಪಾ. ೬-೩೨) ; ಪಿಡುಗ ತೋಮರ ಪರಶುಗಳ ಕಕ್ಕಡೆಯ ಕುಂತದ ಪಿಂಡಿವಾಳದ ಕಡುಗಲಿಗಳುಱೆ ಮಗ್ಗಿದರು ತಗ್ಗಿದುದು ಯಮಲೋಕ (ಕುವ್ಯಾದ್ರೋ. ೪-೩೮). **ಬಿಂಡಿವಾಲ** : ಶೂಲ ಧಮರುಗ ಬಂಡಿವಾಲಗಳಿಂದೆ (ಕೂಳ್ಗವಾ. ೪೪-೬). [ <ಸಂ. ಭಿಂದಿವಾಲ]

**ಬಂದ** (ನಾ). ೧. ಗುಂಪು ; ಸಮೂಹ : "ಬಂಬಲ್, ತಾಱುಗಲ್, ವಂಗಡಂ, ಗಡಣಂ, ಮೊಗ್ಗರಂ, ಬಂದಂ . . . ಗೊಂದಣ (ಉಂದಲ್) —ಈ ೪೦ ಸಮೂಹಂ" (ಕಕಾ. ೫೬-೨೨೨) ; ಅಸಂಗನ ಬೇಂಟೆಯ ಬಂದದಂದದಿಂ ಬರೆ ಪೊಸಸುಗ್ಗಿ ಕೆಯ್ಗಟ್ಟಿಯೆ ಕಣ್ಗೆಸೆದಿರ್ದುವು ನಂದನಾಳಿಗಳ್ (ಶಾಂತಿಪು. ೬-೧೨೪) ; ಬಂದವ ಹಱಿದು ನಿಂದು ಹಾಡಿರೋ ಚೆಣಿತಿಯರಿರಾ (ಸರ್ವಾ. ೪೮-೨೫೫) ; ಜೇನೆಯ್ಗಳಂ ತರ್ಪುದಕ್ಕೆ ಪೊಗೆಗೊಂಡು ಪೊಱಮಡುವ ಬೇಡರ ಬಂದಮೊಪ್ಪಿತಾ ಪೆಕ್ಕಣದೊಳು (ಸಮ್ಯಕೌ. ೧೦-೨೬). ೨. ಒಟ್ಟಿಲು : ರಾಶಿ ; ಮೊತ್ತ : ದೆಸೆದೆಸೆಯ ಕಟ್ಟಲೆಯ ಬಂದವೊಂದುಗೂಡಿ ಗುಂಡುಗೊಂಡು . . . ಬಾಂದಳಮನೇಱಿ ಪೋಪುವೆನೆ (ರಾಮಾಶ್ವ. ೬೨-೦೨).

[ < ಸಂ. ಬೃಂದ. / ತೆಲು. ಬಂದ ]

**ಬಂದಂಗೊಳ್** (ಕ್ರಿ). ಒಟ್ಟಾಗು ; ಕೂಡು ; ಸೇರು : ಬಂದಂಗೊಂಡಿಹ ಕಾಲ್ವೆ ಮಾರಿಕಣಮೇ ಜಾತಂಗಳೆಲ್ಲೆಲ್ಲಿಯುಂ ಸಂದೊಳ್ಪಟ್ಟದ ಪಾಂಗನಾಂತು ಪರಿಗುಂ (ಪ್ರಸೂಮ. ೦-೪೮). [ ಬಂದ + ಕೊಳ್₁ ]

**ಬಂದಣಿಕೆ** ' ಬಂದಣಿಕೆ ' ನೋ.

**ಬಂದರೆ, ಬಂದಾರಿ** (ನಾ). ಒಂದು ಬಗೆಯ ಮರ : ಬಂದರೆ ಬೀಜವನ್ನು ನೀರಲ್ಲರೆದು ತೆಗೆದುಕೊಳ್ಳಲು ಮೂಲವ್ಯಾಧಿಯ ರಕ್ತ ನಿಂತು ಗುಣಮಕ್ಕುಂ (ಸಳವ್ಯ. ೨೮೮). **ಬಂದಾರಿ** : ದೊಡ್ಡತೊಪ್ಪೆಮರ, ದೊಡ್ಡಮರ, ಬಂದಾರಿಮರ, ದಲ್ಲಿಮರ, ಬಟ್ಟಗ (ವೃಶಿಗ. ೪೩-೮೮೫). [?]

**ಬಂದಲಿ, ಬಂದಿಲು** (ನಾ). ಚಿಕ್ಕ ಮಕ್ಕಳ ಮುಂಗೈಗೆ ತೊಡಿಸುವ ಒಂದು ಬಗೆಯ ಆಭರಣ : ಗೋದಕ್ಕ ಕೂಸಿಗೆ ಬಂಗಾರದ ಬಂದಲಿ, ಜರದ ಕುಂಚಿಗೆ ಎಲ್ಲಾ ತಂದಿದ್ದರು (ವೃಹ. ೨೦೦) ; ದತ್ತೂನ ಬಂದಲಿ ಮುರಿಸಿ ಟಿಳಕರಿಗೆ ಎರಡು ತೊಲೆಯ ಉಂಗುರ ಮಾಡಿಸಿದ್ದ (ಸ್ವಕೃಪ. ೧೬೪). **ಬಂದಿಲು** : ತರುಣಾಂಗೆ ಬಂದಿಲರಳೆಲೆ ಗೆಜ್ಜೆ . . . ಪೊತ್ತುಳ ಘಾಂಟೆ ಮೊದಲಾದ ಮಣಿದೊಡಗಳ ಹರುಷದಿನಲಂಕರಿಸಿ (ರಾಶಿಚ. ೨-೪೬); ಬಂದಿಲರಳೆಲೆ ಗೆಜ್ಜೆಯನ್ನು . . . ಮಣಿಮಯಮುದ್ರೆಗಳ ಬೆರಳ್ಗಳಿಗಪಾರ್ಚಿ (ಶಶಮೋ. ೦೨-೦೮). [← ಮರಾ. ಬಂದಲೀ, ಬಂದಲೇ, ಬಂದುಲೇ]

**ಬಂದಲು** (ನಾ). ಒಂದು ಬಗೆಯ ಹೂವು : ದೇವರಿಗಾಗಿ ಒಂದು ಬಂದಲನ್ನು ಕೊಯ್ಯಬಹುದು (ಹಳ್ಳಿಕ. ೬೨). 'ಬಂದಿಗೆ' ಪರಾ. [?]

**ಬಂದಾರಿ** 'ಬಂದರೆ' ನೋ.

**ಬಂದಿ** (ನಾ). ಒಂದು ಬಗೆಯ ಆಭರಣ : ಮಕ್ಕಳ ಬಯಸಿ . . . ಹರಿಗೆ ಪಟ್ಟದ ಹರಕೆ ತೊಟ್ಟಿಲ ಹರಕೆ ಬಂದಿಯ ಹರಕೆವಿಡಿದಿಹರರಸಿ ಕೌಸಲೆದೇವಿ ಕೈಕೆ ಸುಮಿತ್ರೆಯರು (ಕೌಶರಾ. ೦-೩೩); ಕೆಂದ ಪೀತಾಂಬರವ ಸುಧೆ ಉಟ್ಟಿರುವಳು ಅಂದಮುಡಿಗೆ ಮುತ್ತಿನ ಸೊಂಡಿಲ ಬೈತಲ ಬಂದಿ ಬಿಜವರ ಬಲು ಚೆಂದ (ಸಿದ್ಧಕೃ. ೧೯-೬೦).

[ ?. / ತೆಲು. ಬಂದೀ = ಮುಂದಲೆಯ ಆಭರಣ. / ಹಿಂ. ಮರಾ. ಬಂದೀ = ಕೆನ್ನೆಸರಪಳಿ]

**ಬಂದಿಗ** (ನಾ). ಗುಂಪಿನಲ್ಲಿರುವ ಕ್ಷುದ್ರದೇವತೆ (?) : ಕೆಮ್ಮಗಿದೇಕೆ ನಾಡ ಪಲಪಂದದ ನಂದಿದ ಬಂದಿಗರ್ಕಳಂ ನೀಮ್ಮರುಳಾಗಿ ದೇವರಿವರೆನ್ದು ವರಂ ಮಱಿಗೆಟ್ಟು ನಿಸ್ಸನೇಕಮ್ಮ ತೊಳಲ್ವಿದಪ್ಪೆ ಭವಕಾನನದೊಳ್ ಗ್ರೋಪ್ಮಟದೇವನಂ ನೆನೆಯ ನೀಗುವೆ ಜಾತಿಜರಾದಿದುಃಖಮಂ (ಎಶಿ. ೫೩. ೨೩೪-೪೦; ಸು. 1180). 'ವೃಂದಾರಕ' ಹೋ. [ಬಂದ + —ಇಗ]

**ಬಂದಿಗ** (ನಾ). ೧. ಬಾವಿಯಿಂದ ನೀರನ್ನು ಸೇದಲು ಮತ್ತು ಸೊಂಟದಲ್ಲಿಟ್ಟುಕೊಂಡು ಹೊರಲು ಅನುಕೂಲವಾದ ಸಣ್ಣ ಕಂಠವುಳ್ಳ, ಗುಂಡನೆಯ ಲೋಹದ ಪಾತ್ರೆ ; ಕೊಡಪಾನ ; ಕೊಡ : ಬೆಳಕಿನಿಂದಗ್ಘವಣೆಯಂ ಕಂಗೊಳಿಸಿ ತುಂಬಿದ ಹೊನ್ನ ಬಂದಿಗೆಗಳನಿರಿಸಿ

ಲಲಿತಾಂಗಿ . . . ಧೂಪಾರತಿಯನೀಯೆ (ಬಸಪು. ೧೨-೩೪); ಪಂದಲೆಯೊಂದು ಬಾಸಿಗಂ ನೆತ್ತರ ತಳ್ತ ಬಲ್ಲಲೆಯ ಬಂದಿಗೆ ಪಾವುಗೆ ಪಂಚಮುಸ್ವನಂ ಚಿತ್ತದ ಕೋಲಿವೊಂದಿ ನಿಲೆ ಸಾಧಕೆ ಬತ್ತಲೆ ಬರ್ಪಳೊಪ್ಪಿದಳ್ (ಶಾಸ್ತ್ರ. ೩೩೩) ; ತಾರಕ್ಕ ಬಿಂದಿಗೆ ನಾ ನೀರಿಗ್ಹೋಗುವೆ ತಾರೀ ಬಿಂದಿಗೆಯು ಬಿಂದಿಗೆ ಒಡೆದರೆ ಒಂದೇ ಕಾಸು ತಾರೀ ಬಿಂದಿಗೆಯ (ಪುಲಂದ. ೧-೯೯ ಕಲ್ಪಿತ). ೨. ಗುಂಡನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು: ಸುಗಂಧರಾಜ ಕನಕಾಂಬರಿ ಬಂದಿಗೆ ನಾಗಲಿಂಗಪುಷ್ಪ ನೀಲಾಂಬರಿ . . . ಸೂರ್ಯಕಾಂತಿ ಪುಷ್ಪ ಗಳು (ಸಿದ್ಧಪು. ೨೮-೯೦).

[ದೇ. ॥ ಮಲ. ವಿಸ್ವ; ತುಳು. ಬಿಂದಿ = ಸಣ್ಣ ಮಣ್ಣಿನ ಮಡಕೆ; ತೆಲು. ಬಿಂದಿಯು, ಬಿಂದೆ. / ಮರಾ. ಬಿಂದಗಾ]

**ಬಂದಿಲು** 'ಬಿಂದಲಿ' ನೋ.

**ಬಂದಿಸು** (ಕ್ರಿ). ಸೊನ್ನೆಯಿಡು ; ಬಿಂದುವಿನ ಗುರುತುಮಾಡು: ಬರೆದು ಕುಂಡಲಿಚಕ್ರಮಂ . . . ನಿಜೇಷ್ಟಗೃಹದೆಡೆಗೆ ಪೇಟಿಕ್ಕಿದೆಗಳಂ ಬಿಂದಿಸಿ ಪೇಟದೆಡೆ ಶರದಿ ರೇಖೆಯನಂತವು ಸರಿಯಾಗಿ ಸರಿಗಳೆವುದು (ಜಾತಕ. ೧೧-೨). [ಬಿಂದು + — ಇಸು]

**ಬಿಂದು** (ನಾ). ೧. (ಯಾವುದಾದರೂ ದ್ರವದ) ಹನಿ : ತೊಟ್ಟು : "ಬಿಂದುವೆನೆ ಸುರಿವ ಹನಿಯಕ್ಕು" (ಹುಂಗನಾ. ೦೨೪-೦೫); ಅಜಿದಡೆ ತಾವರೆಯೆಲೆಯ ಬಿಂದುವಿನಂತೆ ಅಂಗಲೇಪವಿಲ್ಲದೆ ಗೊಹೇಶ್ವರಲಿಂಗ ವನಜಾಯಬೇಕು (ಅವಕಂ. ೨೬೩-೦೨೧೦); ಹಿಂಡುಹಿಂಡಾಗಿ ನೊಣಗಳು ಬಂದು . . . ಪಾಯಸದ ಬಿಂದುಗಳನ್ನು ನಿರಾತಂಕವಾಗಿ ಹೀರಿದ ದೃಶ್ಯವನ್ನು ವಿಸ್ಮಿತನೇತ್ರಗಳಿಂದ ನಾನು ನೋಡಿದ್ದು ಇಂದಿಗೂ ನೆನಪಿದೆ (ವಂಟಿರು. ೪೩). ೨. ಚುಕ್ಕೆ; ಬೊಟ್ಟು : ಹಣೆಮಲ್ಲಿ ಚಂದ್ರಕುಂಕುಮಬಿಂದುವನ್ನಿಟ್ಟು (ಕಲ್ಯಾಂಗ. ೦೯-೩೦೪); ಬಿಂದು ವಿಸರಗಳನುವು,ವಂಕು ಸರಲಗಳನುವು ಬಿಂದ ಕಣ್ಣಿಗೆ ವರ್ಣವಿವಿಧಗಳನುವು (ಕುಂಕುಕ. ೪೪೬). ೩. ಗುರುತು ; ಚಿಹ್ನೆ. ೪. ಆನೆಯ ಮೈಮೇಲಿನ ಬಿಳಿಯ ಮಚ್ಚೆ.—ಚಿಬ್ಬು: "ಬಿಂದು, ಪದ್ಮಕಂ — ಈ ೨ ಚಿಬ್ಬು" (ಹಲಾಯು. ೩೭-೬೬); ಸೂಕ್ಷ್ಮಬಿಂದುಲುಜಿ[ರ]ನುಂ ಕಾಳಂಗವನಸಂಭೂತನುಮನೇಕಲಕ್ಷಣೋಪೇತನುಮಪ್ಪ ತ್ರಿಭುವನಾ ಭರಣಮೆಂಬಾನೆಗಂ . . . ತ್ರಿಭುವನತಿಲಕಮೆಂಬ ಕುದುರೆಗಂ ಪಟ್ಟಂಗಟ್ಟ (ಕಂಕಣಾ. ೦೯-೨೦ ಪ). ೫. ಶುಕ್ಲ ; ವೀರ್ಯ ; ರೇತಸ್ಸು : ಬಾಯೆ ಭಗವಾಗಿ ಕೈಯ ಇಂದ್ರಿಯವಾಗಿ ಹಾಕುವ ತುತ್ತುಗಳೆಲ್ಲಾ ಬಿಂದು ಕಾಣಿರೋ (ಅವಕಂ. ೦೦೩-೯೬೯) ; ಬಿಂದುವೂ ಮೂತ್ರವೂ ಒಂದೆ ನಾಳದಿ ಬಕ್ಕು ಒಂದ ಬಟ್ಟೊಂದ ತಡೆದಿಹರೆ ಪರಬೊಮ್ಮಮಮ ತಾನಕ್ಕು (ಸರ್ವಜ್ಞ. ೩೩೬). ೬. ಹುಟ್ಟಿದ ಮಕ್ಕಳನ್ನು ಕಳೆದುಕೊಂಡಿರುವವಳು ; ಮಕ್ಕಳಿಲ್ಲದಿರುವವಳು : "ನಶ್ಯತ್ರಸೂತಿಃ, ಬಿಂದುಃ — ಈ ೨ ಮಕ್ಕಳ್ ಬಾಬದವಳ್" (ಹಲಾಯು. ೬೦-೩೩೪) ; "ಮಕ್ಕಳುಜಿ ಸಾವ ಸತಿ ಬಿಂದುವಕ್ಕು" (ಹುಂಗನಾ. ೬೯-೩). ೭. ಹುಬ್ಬುಗಳ ನಡುವಿನ ಜಾಗ, ಎಡೆ. ೮. [ವ್ಯಾಕ] (ಯೋಗವಾಹಗಳಲ್ಲಿ ಒಂದಾದ) ಅನುಸ್ವಾರದ ಚಿಹ್ನೆಯಿಂದ ಗುರುತಿಸುವ ವರ್ಣ : ಅನುಸ್ವಾರ: ಸೊನ್ನೆ : ಬಿಂದು ವಿಸರ್ಗಂ ವ್ಯಂಜನವೊಂದಿದ ದತ್ವಕ್ಕರಂ ಪದಾಂತ್ಯಂ ದೀರ್ಘಂ ಬಂದೊಡಜಿ ವನಜಮುಖಿ ಗುರುವೆಂದು (ಛಂದೋಂಬು. ೧-೩೩); ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟ ಚೆಲ್ವು . . . ವಿಸರ್ಗದೊಳ್ಪೊಂದಿರಲಕ್ಕರಕ್ಕೆ ಬರೆವಂ . . . ಮಾದಿರಾಜವಿಬುಧಂ (ಪುಷ್ಪಪು. ೦೯-೩೪); ಬಿಂದುವನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತುವೂಲಃ ವೃತ್ತತೆಯಿಂ ಸಂದಿರ್ಪುದು (ಕಮಿಕ. ೧೧). ೯. [ಕಾವ್ಯಮಿಮಾ] ನಾಟಕದ ಕಥಾವಿನ್ಯಾಸದಲ್ಲಿ ಗೌಣವಾಗಿದ್ದ ಘಟನೆಯೊಂದು ಒಮ್ಮೆಲೇ ಪ್ರಾಮುಖ್ಯವನ್ನು ಪಡೆಯುವುದು : ಬೀಜಂ ಬಿಂದು ಪತಾಕೆ ಪ್ರಕರಿ ಕಾರ್ಯಮೆನೆ ಪಂಚವಿಧಂ ನಿಪುಣಕವಿರಚನೆಯೊಳ್ ಸಪ್ರಪಂಚದಿಂದೊಂದಿ ತೋಱುಗುಂ ಸಂಧ್ಯಂಗಂ (ಕಾವ್ಯಾವ. ೯೫೬). ೧೦. [ಕಾಮಶಾ] ದಂತಕ್ಷತಗಳಲ್ಲಿ ಒಂದು ; ನಲ್ಲಳ ತುಟಿಗಳ ಮೇಲೆ ಒತ್ತಿದ ನಲ್ಲನ ಹಲ್ಲಿನ ಗುರುತು : 'ಬಿಂದುಮಾಲೆ' ಪರಾ. ೧೧. [ತತ್ತ್ವಶಾ] ಪ್ರಪಂಚದ ಸೃಷ್ಟಿಗೆ ಕಾರಣವಾದ ನಾದ, ಬಿಂದು ಮತ್ತು ಕಳೆಗಳೆಂಬ ಮೂರು ಅವಸ್ಥೆಗಳಲ್ಲಿ ಎರಡನೆಯದು: ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು . . . ಲೋಕದ ಸಂದೇಹಿಗಳೆತ್ತ ಬಲ್ಲರೈ (ಬೇಂಶಾವ. ೬೩-೦೩೨) ; ಈ ಪಟ್ಟಸ್ಥಲಂ ತಪ್ಪೊಳೆರಡೆರಡು ಕೂಡುತ ಮೂಱು ತೆಜನಾಗಿ ಕಳೆ ನಾದ ಪರಬಿಂದುವೆಂದು ಭೇದಿಸಿದಾದಿಪ ಶಿಕನ ಚರಣಾಂಬುಜಕ್ಕೆ ಶರಣು (ಅಶಂ. ೩೦-೦೯) ; ತನು ನಾದಂ ಗುರು ಲಿಂಗಂ ಮನಮುಂ ಪರ ಬಿಂದು (ಹರಿಶ್ಚ. ೩-೩೪). ೧೨. [ವೀಶೈ] ಮೂರು ತತ್ತ್ವಗಳಲ್ಲಿ ಒಂದಾದ ಪಾಶದ ಐದು ವಿಭಾಗಗಳಲ್ಲಿ ಒಂದು: ಶೈವ ಸಿದ್ಧಾಂತದಲ್ಲಿ ಪಾಶವು ಐದು ವಿಧವಾಗಿದೆಯೆಂಬ ವಿವರಣೆ ಇದೆ. ಮಲ, ರೋಧಶಕ್ತಿ, ಕರ್ಮ, ಮಾಯಾ, ಬಿಂದು ಅಥವಾ ಮಹಾಮಾಯ ಎಂಬಿವೇ ಪಾಶದ ವಿಭಾಗಗಳು (ಶಾಕತ. ೨೦೦). [ಸಂ.]

**ಬಿಂದುಕ** (ನಾ). [ಚಿತ್ರಶಾ] ಚಿತ್ರಗಳಿಗೆ ಬಣ್ಣ ಹಾಕುವ ಅನಿಲಕ, ಪತ್ರಕ, ಬಿಂದುಕ, ಧೂಮ್ರಾವರ್ತಕ, ಉದ್ವರ್ತನ ಮತ್ತು ಚಿತ್ರ ಪ್ರವರ್ತನಗಳೆಂಬ ಆರು ಬಗೆಯ ಕ್ರಮಗಳಲ್ಲಿ ಒಂದು : ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಮುದ್ವರ್ತನಂ ಚಿತ್ರಪ್ರವರ್ತನ ಮೆಂಬಾಱುಂ ತೆಱದಣ್ಮೆಯುಮಂ . . . ಪಂಥುವಿಸಿ ನೋಡಿ (ಮಲ್ಲಿತ್ಥ. ೨-೪೨). [ಸಂ.]

**ಬಿಂದುಗಳೆ** (ಕ್ರಿ). ದ್ರವಿಸುವಂತೆ ಮಾಡು ; ಕರಗುವಂತೆ ಮಾಡು (?): ತೀವಿದಮೃತಮಂ ತುಳುಂಕಿಡುಂ ಚಂದ್ರಿಕೆಯಂ ಬಿಂದುಗಳೆದಂ . . . ಎಸುತ ಭೋಂಕನೆ ಸಂಕಲಿಯನತ್ತಲಿಪರ ಮನೆಗೊಯ್ವರ್ (ನೇಂರಕ. ೦೨-೬೨). [ಬಿಂದು + ಕಳೆ]

**ಬಿಂದುಚಕ್ರ** (ನಾ). [ವೀಶೈ] ಚಕ್ರವು ರಥವನ್ನು ನಡೆಸುವಂತೆ ಪ್ರಪಂಚದ ವ್ಯವಹಾರವು ನಡೆಯುವುದಕ್ಕೆ ಕಾರಣವಾದ ಶಿವಶಕ್ತಿ : ಕಾಲಚಕ್ರ ಕರ್ಮಚಕ್ರ ನಾದಚಕ್ರ ಬಿಂದುಚಕ್ರದೊಳಗೆ ಹುಟ್ಟದ ಯೋನಿಯಿಲ್ಲ ಮುಟ್ಟದ ನೆಲನಿಲ್ಲ (ತಪ್ಪಕ. ೪. ೩೩೪-೦೦೩೨). [ಸಂ.]

**ಬಿಂದುಚ್ಯುತಕ** (ನಾ). [ಕಾವ್ಯಮಿಮಾ]ಇರುವ ಬಿಂದುವನ್ನು ಬಿಡುವುದೂ ಇರಬೇಕಾದ ಬಿಂದುವನ್ನು ಸೇರಿಸುವುದೂ ಸಾಧ್ಯವಾಗುವ ಒಂದು ಪ್ರಹೇಳಿಕೆಯ ಪ್ರಕಾರ: ಸೊಗಯಿಸುಗುವಿಂದ್ರನೀಲಮಣಿಸನ್ನಿಭದೊಳ್ ವಿಗೆ ಜಳನಿಧಿಯೊಳಗುದಿತದಿಂದಿರದವೂಲ್ಪೆಗಡಿತಧವಳಮೂರ್ತಿಗೆ ಘನ ವಳಯಸದಗ್ದ ಗಗನದೊಳುಟಿಮಟಾದು ವಿಶಾಳಿಕಾಶಾವಳಿಯಂ (ಬಿಂದು ಚ್ಯುತಕಂ) (ಕಾವ್ಯಾ. ೨-೦೯೭). [ಸಂ.]

**ಬಿಂದುಚ್ಯುತಿ** (ನಾ). = ಬಿಂದುಚ್ಯುತಕ : ಪೇಟಿಪ್ಪಿಂ . . . ಆ ವರ್ಣ ವ್ಯತ್ಯಯುವುಮಂ ಬಿಂದುಚ್ಯುತಿಯಂ ಭಾವಿಸಿದೊರ್ನುಡಿಯಂ (ಕಾವ್ಯಾ. ೨-೦೯೨). [ಸಂ.]

**ಬಿಂದುಜ** (ನಾ). (ನೀರಿನ) ಹನಿಯಿಂದ ಹುಟ್ಟಿದುದು : ಅಂಡಜ ಪಿಂಡಜ ಬಿಂದುಜ (ಜರಾಯುಜ) ಉದಯವಾಗದಂದು . . . ಪರಾಪರ ವಸ್ತು ನೀನೊಬ್ಬನೇ ಇದ್ದೆಯಯ್ಯಾ (ಸಿದ್ಧೇಷ. ೬-೨೦). [ಸಂ.]

**ಬಿಂದುಪಾಶ** (ನಾ) — ಬಿಂದು ೧೨: ಆ ಷೇಶಪದಾರ್ಥವು ಪಶುಬಂಧಲಕ್ಷಣ ಮುಳ್ಳುದಾಗಿ ಪಶುಕೋಟಿಯಂ ಜಿಡದೆ ವ್ಯಾಟಿಸಿ ಶಿವಾಧೀನಮಾಗಿ ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನಪಾಶವೆಂದು ಪಂಚಪ್ರಕಾರಮಾಗಿರ್ಪುದು (ಶಿವೇಶ. ೧೬೩) [ಸಂ.]

**ಬಿಂದುಮಂತ** (ನಾ). ೧. ಹನಿಗಳಿಂದ ಕೂಡಿರುವುದು. ೨. [ವ್ಯಾಕ] ಅನುಸ್ವಾರಸಹಿತವಾದುದು : ಆ ಸಮುಚಿತಬಿಂದುಸ್ಥಿತಿ ಬಿಂದುಮಂತ ಶಬ್ದಕ್ಕೆ ಬಿಂದುಲೋಪಂ ಬಹುಳಂ (ಶಮದ. ೨೬೩). [ಸಂ. ಬಿಂದುಮತ್]

**ಬಿಂದುಮತಿ** (ನಾ). [ಕಾವ್ಯವಿ]ಬಿಂದು ಪದ್ಯದಲ್ಲಿ ಇರುವ ಪ್ರಸಕ್ತವಾದ ಅರ್ಥವನ್ನು ಸೂಚಿಸುವಲ್ಲಿ ಬಿಂದುವನ್ನು ಅಧಿಕವಾಗಿ ಉಪಯೋಗಿಸಿ ಚಮತ್ಕಾರದಿಂದ ರಚಿಸುವ ಪದ್ಯ : ಒಂದು ಬಗೆಯ ಒಗಟಿನ ಪದ್ಯ. [ ಸಂ. ]

**ಬಿಂದುಮಾಧವ** (ನಾ). ವಿಷ್ಣುವಿನ ಹೆಸರುಗಳಲ್ಲಿ ಒಂದು : P ಕಾಶೀಕ್ಷೇತ್ರದಲ್ಲಿ ನೆಲೆಸಿರುವ ವಿಷ್ಣು: ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ (ಕೃತಂತ. ೧-೪೬-೩); ವಿಶ್ವೇಶ್ವರ . . . ಬಿಂದುಮಾಧವ ಮುಂತಾದ ಎಲ್ಲ ದೇವರುಗಳ ದರ್ಶನವಾಯಿತು (ಗಂಪೂವಿ. ೬). [ಸಂ.]

**ಬಿಂದುಮಾಲೆ** (ನಾ). = ಬಿಂದು ೧೦ : ವೃತ್ತವಾಗಿರೆ ತುಟಿಯನೊತ್ತಲದೆಯಧರಮಣಿ ಚಿತ್ರಭವಗೃಹ ನಿಟಿಲಕಕ್ಷದಲ್ಲಿ ತಳ್ತಿಸೆಯ ಪಲ್ವಜ್ಜಿ ಮತ್ತಗುರೊಳೆಳೆಯುಲದು ಬಿತ್ತರವ ಮಣಿಮಾಲೆ ಬಿಂದುಮಾಲೆ (ಜಸವ. ೭-೩೦). [ ಸಂ. ಬಿಂದುಮಾಲಾ ]

**ಬಿಂದುವಿಡು** (ಕ್ರಿ). ಹನಿಯಿಡು ; ತೊಟ್ಟಿಕ್ಕು ; ಒಸರು : ತಮಾಲ ಪಲ್ಲವಮಂ ಪಿಡಿದು ತನ್ನ ಬಿಂದುವಿಡುವ ಮೊಗದ ಬೆಮರಂ ಬೀಸುವಂತೆ ಮುಮಿರ್ದಳ್ (ಕಾದಂಬ. ೪೦) : ಬಿಂದುವಿಡುವಿಂದುಮಣಿಜಲಪುತ್ರಿಕೆಗಳಿಂ ಕೆಂಪಿಡುವ ಕಂಕೆಲ್ಲಿಯ ಪಲ್ಲವಾಸ್ತರಣಂಗಳಿಂ . . . ಹಿಮಗೃಹಮಂ ಸಮೆದು (ಕುಸುಶಾ. ೧೩-೪೬ ವ). [ಬಿಂದು + ಇಡು]

**ಬಿಂಪು** 'ಬಿಣ್ಪು' ನೋ.

**ಬಿಂಬ** (ನಾ). ೧. ಸೂರ್ಯ ಅಥವಾ ಚಂದ್ರನ ಸುತ್ತಲೂ ಇರುವ ಪ್ರಭಾವಲಯ,– ಪರಿವೇಷ : " ಮಂಡಲಂ, ಬಿಂಬಂ — ಈ ಎರಡು ಚಂದ್ರಮಂಡಲದ ಪೆಸರ್ " (ಹಲಾಯು. ६-४४) ; ಬಿಂಬದಧಿದೈವಮರ್ಕನ ಬಿಂಬದೆ ತಳರ್ದಿಳಿದುದಿಂತಿದದ್ಭುತಮೆಂಬರಂಗೆಂಬಿನವಿನಬಿಂಬದ ದೆಸೆಯಿಂ ಬಂದಿಳಿದಿನನಮಲಕಾಂತಿಮುನೀಂದ್ರಂ (ಆಗು. ೩ ೩೨); ಬಿಂಬದೊಳಗಿರ್ಪ ಜಿನಪತಿಬಿಂಬಕ್ಕೆಳೆಯಿಂದೆ ಪೆರ್ಚೆ ಕಣ್ಣಿಂ ಜಲ್ಲಿಗಿಂದ್ರಂ ಬಗಿದ ಪೊನ್ನ ಕಾಹಳೆಯೆಂಬಿನಮೆಸೆದಂ ಮೃಗಾಂಕನಧೋದಯದೊಳ್ (ಅಸಂಪು. ೭-೫೦). ೨. ಮಂಡಲಾಕಾರವಾದುದು ; ವೃತ್ತತೆಯನ್ನುಳ್ಳುದು. ೩. ಪ್ರತಿರೂಪ ; ಪ್ರತಿಚ್ಛಾಯೆ ; ಪಡಿನೆಳಲು : ಅದಱ ಪರಾರ್ಧ್ಯನೀಲಮಣಿಕುಟ್ಟಿಮಭೂತಳದರ್ಪಣೈಕಬಿಂಬದೊಳಹಮಿಂದ್ರದಿವ್ಯತನು ಬಿಂಬಿಸೆ ರೂಪಿದು ಬಿಂಬಮಿಂತಿದೆಂಬುದನಱಿಯಲ್ಕೆ ಬಾರದು (ಶಾಂತಿಪು. ೯-೧೨೨). ೪. ಕನ್ನಡಿ ; ದರ್ಪಣ. ೫. ವಿಗ್ರಹ ; ಮೂರ್ತಿ ; ಪ್ರತಿಮೆ : ಕಂಬದಿನೊ ಬಿಂಬದಿನೊ ಮೋಕ್ಷವಮರಿಂಗಾಯ್ತು ಸಿಂಬಳದಿ ನೊಣ ನೀನು (ಮುಂಕುಶ. ४६३); ಬಿಂಬದೊಳಗಮಿತಸತ್ತ್ವ ಒಡದಿಡುವ ಭಕ್ತಿಯಿಂಬು ಕಿಂಚಿನ್ಮತಿಗೆ (ಮುಂಕುಶ. ४४೦). ೬. ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು ; ತೊಂಡೆ: "ಬಿಂಬ ತೊಂಡೆಯಕ್ಕುಂ" (ಮುಂಗರಾ. ೩६-೨೩); ಬಿಂಬದ ಪಕ್ವಮಾದ ಫಳಮೆಂಬಿನಮಿಾ ಜಗದಲಿ ಚೆಲ್ವನಾಲಂಬಿಸಿದತ್ತು ಮಾನಿನಿಯ ಸಾರಮೆನಿಪ್ಪಧರಂ (ಚಾರಪು. ೨-४६). ೭. ಓತಿಕೇತ. ೮. ಕಾಮನ ಬಿಲ್ಲು. ೯. ಕಿರಣ; ರಶ್ಮಿ. ೧೦. ಗಗನ; ಆಕಾಶ. ೧೧. ಮಳೆ; ವೃಷ್ಟಿ. ೧೨. ಬಟ್ಟೆ; ವಸ್ತ್ರ " ಅಂಬರಂ ವೃಷ್ಟಿ ಸುವೃತ್ತ ಬಿಂಬಿಕೆ ನಭಂ ಪ್ರತಿರೂಪ ಮಯೂಖಮಿಂದ್ರಚಾಪಾಷ್ಟಕಮಿಂತು ಬಿಂಬಮೆನಿಸಿರ್ಕುಂ" (ನಾನಾರ. ೭೦). ೧೩. ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು : ಕಾಮಿಕ, ಯೋಗಜ . . . ಚಂದ್ರಜ್ಞಾನ, ಬಿಂಬ . . . ವಾತುಲಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಶಾರದ. ೭೨). 'ಬಿಂಬಾಗಮ' ಪರಾ. [ಸಂ.]

**ಬಿಂಬಕಲ್ಪನೆ** (ನಾ). ಮಾತಿನಿಂದ ಹೊಳೆಯುವ ಚಿತ್ರವನ್ನು ಮನಸ್ಸಿನಲ್ಲಿ ಸೃಷ್ಟಿಸಿಕೊಳ್ಳುವುದು : ಮಕ್ಕಳ ಬಿಂಬಕಲ್ಪನೆಯ ರೀತಿಯಲ್ಲೂ ಭಿನ್ನತೆ ಕಾಣಬಹುದು . . . ಕೆಲವರಿಗೆ ಸ್ಥಾವರರೂಪದ ಬಿಂಬಕಲ್ಪನೆಯಲ್ಲಿ ಚತುರತೆಯಿದ್ದರೆ ಮತ್ತೆ ಕೆಲವರಿಗೆ ಚಲನ ಬಿಂಬಕಲ್ಪನೆಯಲ್ಲಿ ಹೆಚ್ಚಿನ ಚಾತುರ್ಯವಿರುತ್ತದೆ (ಕಿಶೋರ. ೯೪). [ಸಂ. ಬಿಂಬಕಲ್ಪನಾ]

**ಬಿಂಬಗ್ರಾಹಕ** (ನಾ). ಪ್ರತಿಚ್ಛಾಯೆಯನ್ನು ಬಿಂಬಿಸುವ ಯಂತ್ರ ಸಲಕರಣೆ : ಛಾಯಾಗ್ರಾಹಿ ; ಕ್ಯಾಮೆರಾ : ಅವೆ . . . ಬಿಂಬಗ್ರಾಹಕಗಳಲ್ಲಿ (ಕ್ಯಾಮರಾ) ಮುಖ್ಯ ಸುಧಾರಣೆಗಳನ್ನು ಮಾಡಿದುದಲ್ಲದೆ . . . ಕೂಲಂಕಷಶೋಧನೆ ನಡೆಸಿದ (ಕವಿಕೋ. I. ३६४). [ ಸಂ. ]

**ಬಿಂಬಗ್ರಾಹಿ** (ನಾ). = ಬಿಂಬಗ್ರಾಹಕ : ವಿಮಾನಗಳಲ್ಲಿ ಬಿಂಬಗ್ರಾಹಿಗಳನ್ನು (ಕ್ಯಾಮರ) ಕೊಂಡೊಯ್ದು ಅಂತರಿಕ್ಷದಿಂದ ಬಂದು ಭೂಪ್ರದೇಶದ ಛಾಯಾಚಿತ್ರಗಳನ್ನು ಪಡೆದು . . . ನಕ್ಷೆಯನ್ನು (ಟಾಪೋಗ್ರಫಿಕ್ ಮ್ಯಾಪ್) ತಯಾರಿಸಬಹುದು (ಕವಿಕೋ. I, ೦೨೦). [ ಸಂ. ಬಿಂಬಗ್ರಾಹಿನ್ ]

**ಬಿಂಬಪ್ರತಿಬಿಂಬಭಾವ** (ನಾ). ೧. ಬಿಂಬಕ್ಕೂ ಪ್ರತಿಬಿಂಬಕ್ಕೂ ಇರುವ ಪರಸ್ಪರಸಂಬಂಧ : ಈ ಸಂಬಂಧವನ್ನು ದೃಗ್ದೃಶ್ಯಭಾವ, ಬಿಂಬಪ್ರತಿಬಿಂಬಭಾವ, ವ್ಯಂಗ್ಯ ವ್ಯಂಜಕಭಾವ, ಭೋಗ್ಯಭೋಕ್ತೃಭಾವವೆಂದು ಬುದ್ಧ್ಯಾರೋಹಕ್ಕಾಗಿ, ಮನಸ್ಸಿಗೆ ಮನದಟ್ಟಾಗುವುದಕ್ಕಾಗಿ ನಿರೂಪಿಸಿರುವರು (ಬಿಂದಗಾ. ೧೦೨). ೨. [ಕಾವ್ಯವಿ] "ಪರಸ್ಪರ ಸಾದೃಶ್ಯದಿಂದ ಅಭಿನ್ನವೆಂದು ಹೇಳಬಹುದಾದ ಭಿನ್ನಭಿನ್ನ ಧರ್ಮಗಳನ್ನು ಉಪಮಾನೋಪಮೇಯಗಳಲ್ಲಿ ಬೇರೆ ಬೇರೆಯಾಗಿ ಗ್ರಹಿಸಿರುವುದಕ್ಕೆ 'ಬಿಂಬಪ್ರತಿಬಿಂಬಭಾವ' ವೆಂದು ಪ್ರತೀತಿ " (ಕೃಬಿ೨. ೨೩೭ ಅಡಿಟಿ). [ ಸಂ. ]

**ಬಿಂಬಫಲ**, ಬಿಂಬಫಳ (ನಾ). ತೊಂಡೆಹಣ್ಣು : ಬಿಂಬಫಲಾಧರಂ ಪವಳಮಂ . . . ಪೋಲ್ತಿರೆ (ಧರ್ಮಾಮೃ. ೭-೨೦೯) ; ಬಿಂಬಫಲೋಪಮಾನರದನಚ್ಛದಮಂ ನಸುಗಚ್ಚಿ (ಸೂಕ್ತಿಸು. ೭-೭೪) : ಬಿಂಬಫಲಮಂ ಸಮಂತಧರವೆಂದು . . . ಪಂಬಲಿಸಿ ಮಮ್ಮಲ ಮಱುಗುತಿರ್ದನು (ಗುರುಚ. ೧೦-೩೩). **ಬಿಂಬಫಳ** : ಬಿಂಬಫಳರುಚಿಯಂ ಬಗೆಯದರುಣಾಧರೋನ್ನತಿಯ . . . ಕಂಬುಕಂಧರೆಯರು ನೆರೆದರು (ಬಸವ. ೩-೨೩) ; ಬಿಂಬಫಳಮಂ ಕಂಡ ರಾಜಶುಕಿಯಂತೆ ಬಿಂಬಾಧರಮಂ ಕರ್ದುಂಕಿ (ರಾಜಶೇ. ೧೧-೦೪೦ ವ). [ ಸಂ. ]

**ಬಿಂಬಫಳ** 'ಬಿಂಬಫಲ' ನೋ.

**ಬಿಂಬಲಿ** 'ಬಿಳಿಂಬಿ' ನೋ.

**ಬಿಂಬಾಗಮ** (ನಾ). ಇಪ್ಪತ್ತೆಂಟು ಶೈವಾಗಮಗಳಲ್ಲಿ ಒಂದು : ಆ ಸಿದ್ಧಾಂತಭೇದಂಗಳಾವುವೆಂದೊಡೆ ೧. ಕಾಮಿಕಾಗಮ ೨. ಯೋಗಜಾಗಮ . . . ೨೦. ಬಿಂಬಾಗಮ . . . ೨೮. ವಾತೂಲಾಗಮವೆಂಬವೇ ಇಪ್ಪತ್ತೆಂಟು ದಿವ್ಯಾಗಮಂಗಳಕ್ಕು (ಶಿವೇಶ. ೩೩). [ಸಂ.]

**ಬಿಂಬಾಧರ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ತುಟಿ : ಪುಳಿಜೊಳಲೆದ ಪವಳದ ಬಟ್ಟನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮಸಂಗರಾಗರಸಮಾರುಳಿಯಂತಾದುದು (ಶಂಶಪೂ. ೨-३६ ವ) : ಮೆಱೆವ ರತುನಾವಳಿಯ ಬಿಂಬಾಧರಮಯೂಖವಲಿ . . . ಒಪ್ಪಿದಳು ದೇವಿ (ಕೌಶಿಚ. ೨-३). [ ಸಂ. ]

**ಬಿಂಬಾಧರೆ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಯುಳ್ಳವಳು : ಬಿಂಬಾಧರೆಯರ್ ಬಂದಲರಂಬಂ ಕತ್ತುರಿಯ ಸಾಣೆಯಿಕ್ಕುವ ತೆಱದಿಂದಂಬುಜವಳಸದೃಶಾಂಬಕದಂಬಕಿಗಂಜನವನೆಚ್ಚಿದರ್ (ಗೀಶ. ೦೦-४೧) ; ರಾಜಶುಕಸಲ್ಲಾಪಾಂಗಶೃಂಗಾರೆ ಭಾಸುರಬಿಂಬಾಧರೆ (ಹರಿಚ್ಛ್ವರ. ೨-೭೨). [ ಸಂ. ಬಿಂಬಾಧರಾ ]

**ಬಂಬಿ** (ನಾ). (?) : ಸಲೆ ನಿಲೆ ಮಾವು ಪೂವು . . . ಗಿಳಿವಿಂಡು ಬಂಡು ಕೋಗಿಲೆ ಗೊಲೆ ತುಂಬಿ ಬಿಂಬಿ ಸುಬಿಗೇರ್ದಗೆ ಚಾದಗೆ ಕಂಪು ಸೊಂಪ ಗುಂದಲೆಯೆನೆ ರಮ್ಯಮಾ ವಿಷಯದುರ್ಗಗಳ್ ಸಂದನವೃಂದವೆತ್ತಲುಂ (ಧ್ವಕೃತಿ. ೨-೨೩). [ ? ]

**ಬಂಬಿತ** (ಗು). ಪ್ರತಿಫಲಿತವಾದ ; ಪ್ರತಿರೂಪವುಂಟಾದ : ಮತ್ತುಂ ರತ್ನಪ್ರತಿಬಿಂಬಬಂಬಿತಮಣಿದೀಪಪ್ರತಿಬಿಂಬದಂತಾಸಂ . . . ತನ್ನ ಬೆಳಗೆ ಬೆಳಗಾಗೆ ಶುದ್ಧಗರ್ಭಾವಾಸದೊಳ್ ಜಿನಾರ್ಭಕಂ ಬಳೆಯೆ(ಶಾಂತಿಪು. ೯-೩೦೯ ವ); ಶಿತಿಕಂಠನಾಮಪೂರಿತವಾಕ್ಯಶ್ರುತನಿರೀಕ್ಷಿತನಯನ ಮಣಿ ಮುಕುರಮಧ್ಯಬಿಂಬಿತವದನಂ (ಶಶಿಕಾ. ೯-೩೮). [ ಸಂ. ]

**ಬಂಬಿಸು** (ಕ್ರಿ). ೧. ಪ್ರತಿರೂಪವನ್ನು ತೋರಿಸು ; ಪ್ರತಿಫಲಿಸು : ಅದಱಪರಾರ್ಧ್ಯ ನೀಲಮಣಿಕುಟ್ಟಿಮಭೂತಳದರ್ಪಣೈಕಬಿಂಬದೊಳಿಹಮಿಂದ್ರ ದಿವ್ಯತನು ಬಿಂಬಿಸೆ ರೂಪಿದು ಬಿಂಬಮಿಂತಿದೆಂಬುದನಱಿಯಲ್ಕೆ ಬಾರದು (ಶಾಂತಿಪು. ೯-೦೨೨); ಕರ್ಣೋತ್ಪಲಂಗಳ್ ಕಪೋಲಬಿಂಬಗಳೊಳ್ ಬಿಂಬಿ ಸೆಯುಂ (ಕಾದಂಬ. ೬೭) ; ಬಿಂಬಿಸುವ ಶಶಿಬಿಂಬದಿಂ ಪ್ರತಿಬಿಂಬಿಸುವ ಮುಖಬಿಂಬದರ್ಪಣ (ಐಕಥೆ. ೫-೨೩). ೨. ಸ್ಪಷ್ಟವಾಗಿ ತಿಳಿಯುವಂತೆ ಮಾಡು : ವಿಶದೀಕರಿಸು : ವಿವರಿಸು : ಶೇಷಪ್ಪ . . . ತಾನೀಗ ನಡೆದಿರುವುದು ಕೇವಲ ಗೌಡಿತಿಯ ಕಲ್ಯಾಣಕ್ಕಾಗಿ ಎಂಬುದನ್ನು ಬಿಂಬಿಸಿದ (ಗ್ರಾಮಾಯ. ೩೩೩); ಈ ಮಾತನ್ನು ಹೇಗಾದರೂ ಮಾಡಿ ಶೈಲೇಂದ್ರನಿಗೆ ಬಿಂಬಿಸಬೇಕಾದರೆ ಕಾರ್ಲೀಪದನ ಮಾನ ಹಗುರಾಗುತ್ತಿತ್ತು (ಇಪ್ಪಿ. ೩೧೩). ೩. ತೋರಿಸು ; ಪ್ರಕಟಿಸು : ಅವರ ಹೃದಯದ ವಿಶಾಲ ಮಾರ್ಗವನ್ನು ಬಿಂಬಿಸುವದೇ ಈ ತಿರುಗಾಟದ ಅರ್ಥವಾಗಿದೆ (ರಂಗಗೊ. ೬೦); ಕೃಪೆಯನು ಬಿಂಬಿಸಿ. ಬಾಳನು ತುಂಬಿಸಿ. ತೋಟದೊಳರಳಿದ ಹೂ ತಾನಾದುದು ಶ್ರೀಮದ್‌ಭಗವದ್ಗೀತೆ (ಅನಿಕೇ. ೩೨-೦೯). ೪. ತೋರು; ಕಾಣು; ಪ್ರಕಟವಾಗು : ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ ಪಜ್ಜೆಯಿಡುವುದು ಭಾವೆಯರು (ಹರಿಶ. ೮-೩೭). [ಬಿಂಬ + — ಇಸು]

**ಬಿಂಬೋಷ್ಠ** (ನಾ). = ಬಿಂಬಾಧರ : ಅಬ್ಜಪತ್ರಾಕ್ಷಿಯ ಸವರತಿಸರ್ವಸ್ವ ಬಿಂಬೋಷ್ಠಮಂ ಮುದ್ರಿಪಡುವೈ ರೋಲಂಬ ನೀನೇ ಕೃತಿ ನಿಜವರ ಸುತ್ರಾಮಣಾ ಕಟ್ಟಿವರ್ಲ್ಲೇ (ಶಾಕುಂತ. ೦೦-೨೯). [ಸಂ.]

**ಬಿಂಬೋಷ್ಠಿ** (ನಾ). = ಬಿಂಬಾಧರೆ. [ಸಂ. ಬಿಂಬೋಷ್ಠೀ]

**ಬಿಂಬೋಷ್ಠೆ** (ನಾ). = ಬಿಂಬಾಧರೆ : ಈ ಬಿಂಬೋಷ್ಠೆಯಂ ಸರ್ವದಷ್ಟೆಯ ನೆನಗೆ ಮದುವೆಮಾಟ್ಟರಪ್ಪೊಡೆ ನಾಳೆ ನೇಸರ್ಮೂಡದ ಮುನ್ನಮೆ ವಿವಾಹಾರಂ ಮಾಡಿದಪ್ಪೆಂ (ಸುಕುಮಾ. ೭-೯ ವ). [ಸಂ. ಬಿಂಬೋಷ್ಠಾ]

**ಬಿಂಬ್ಲಿ** 'ಬಿಳಿಂಬಿ' ನೋ.

**ಬಿಕ್** (ನಾ). ಒಂದು ಅನುಕರಣಶಬ್ದ : ಬಿಕ್ಕಂ ಕಂಡಿಲಿಯಂತಿರೆ . . . ಮಾರ್ಕೊಳ್ಳದೆ ಮಾರ್ನುಡಿಯದೆ ಬಿಕ್ಕೆನ್ನದೆ ಮಿಡುಕದಿರ್ದರ್ (ಸುಕುಮಾ. ೨-೨೦).

**ಬಿಕನಾಶಿ** 'ಬಿಕನಾಸಿ' ನೋ.

**ಬಿಕನಾಸಿ, ಬಿಕನಾಶಿ** (ಗು). ೧. ಅಲ್ಪವಾದ ; ಕ್ಷುದ್ರವಾದ : ಅವಳು ಆ ಒಂದು ಬಿಕನಾಸಿ ಎಂಟಾಣೆಯ ತುಂಡು ಕದ್ದಳು ಅಂತ ಗೊಜ್ಜು ಗೊಡಸಾರು ತಿನ್ನುವ ಗತಿಗೆ ಬಂದುಬಿಡಿತ್ತಾ ಅನ್ನುತ್ತೀಯೇನೇ (ಚದರಂ. I, ೩೨೦). (ನಾ). ೨. ತಿರುಪೆಯಿಂದ ಬದುಕುವ ವ್ಯಕ್ತಿ ; ಭಿಕ್ಷುಕ : ಉಳಿದ ಭಕ್ತರೆಲ್ಲ ಬೇಡುವುದಕ್ಕೇ ಹುಟ್ಟಿದ ಬಡ ಬಿಕನಾಸಿಗಳು (ಶರಶ. ೯೨೦); ಇವನಾರೊ ಸಂನ್ಯಾಸಿ, ಅತ್ತೊಬ್ಬ ಬಿಕನಾಸಿ (ಗಂಗಾತ. ೬೦-೦). ೩. ಅಲ್ಪವ್ಯಕ್ತಿ; ಕ್ಷುದ್ರವ್ಯಕ್ತಿ; ಹೀನವ್ಯಕ್ತಿ : ಮಾಡಿ ಮಾಡಿ ಮಡಿಯೆಂದು ಮೂವರ್ಮಾರು ಹಾಋಶಿ ಮಡಿಯಲ್ಲಿ ಬಂತೆ ಬಿಕನಾಸಿ (ಕ್ಷರಂದ. ೦-೦೦೩ ಪಲ್ಲವಿ); ಆ ಬಿಕನಾಸಿಯ ಮನೆಗೆ ! ನನ್ನ ಮುಂದೆ ಲಕ್ಷವರಹ ಸುರಿದರೂ ಅವಳ ಮನೆಗೆ ನಾನು ಕಾಲಿಕ್ಕುವುದಿಲ್ಲ (ಮಹಾಗ. ೬೩). ೪. ಲೋಭದಿಂದ ಕೂಡಿದ ವ್ಯಕ್ತಿ ; ಕೃಪಣ : ಬಿಕನಾಸಿಗಳ್ಗೆ ಫಲಿಸುವುದೆ ನಿರತಿಶಯ ದಾನಶೌಂಡನ ಭಜನ (ಕೊಟ್ಟೂರು. ೪-೬). **ಬಿಕನಾಶಿ** : ೨. ಕಂಚ ದಿಕ್ಕಿಲ್ಲದ ಬಡವ, ಮನೆ_ಮಾರು ತೊರೆದ ಬಿಕನಾಶಿ (ಗ್ರಾಮಾಯ. ೨೦೦). ೩. ಆ ಮೈಸೂರು ಬಿಕನಾಶಿಯ ಸಹವಾಸ ಅವಳಿಗಿನ್ನೂ ಸಾಕಾಗಿಲ್ಲವೇನು ? (ರೂಪಕ. ೦೩೨).

[< ಸಂ. ಭಿಕ್ಷಾಶಿನ್. /ತುಳು. ಬಿಕ್ಕನಾಸಿ. ಬಿಕ್ನೇಸಿ ; ತೆಲು. ಬಿಕಾಸಿ]

**ಬಿಕರಿ, ಬಿಕ್ರಿ** (ನಾ). ಮಾರಾಟ ; ವಿಕ್ರಯ : ಸಕಲಿಮಾಲುಗಳು ಬಿಕರಿಗೆ ಬರುತ್ತಿವೆ (ಕಟಕೋ. I, ೩೩೦); ಅಂಟುರೋಗದಿಂದ ಮೃತಪಟ್ಟ ದನಗಳನ್ನು . . . ಚರ್ಮದ ಆಶೆಗಾಗಿ ಬಿಕರಿ ಮಾಡುತ್ತಾರೆ (ಗ್ರಾಮಾಯ. ೦೨೦). **ಬಿಕ್ರಿ** : ಅವರ ಮನೆ ಬಿಕ್ರಿಗೆ ಬಂದಿದೆ (ರೂ).

[← ಹಿಂ. ಬಿಕರೀ, ಬಿಕ್ರೀ; ಮರಾ. ವಿಕರೀ, ವಿಕರಾ./ಸಂ. ವಿಕ್ರಯ]

**ಬಿಕರಿದಾರ, ಬಿಕ್ರಿದಾರ** (ನಾ). ಮಾರಾಟ ಮಾಡುವವನು ; ವ್ಯಾಪಾರಿ : (೬). **ಬಿಕ್ರಿದಾರ** : ಕೊಂಬಿನ ಊದುವ ಕಡೆಗೆ ಅಂಗೈಯೊತ್ತಿ ಅದರ ಬಾಯಿಯನ್ನು ಅಂಗಡಿ ಬಿಕ್ರಿದಾರನಿಗೆ ಒಡ್ಡುವರು (ಕಂಠಿ. ೩೯).

[ಬಿಕರಿ + — ದಾರ್₁]

**ಬಿಕಾರಿ, ಭಿಕಾರಿ** (ನಾ). ೧. ಭಿಕ್ಷೆ ಬೇಡುವವನು; ತಿರುಕ : ಮುನೀಶ್ವರನ ಪರಭಾಗಮುಂ ಸುಕಾಳಲಂ ಕಂಡವರಾರೆಂದು ಬೆಸಗೊಳೆ ಸಹದೇವಿಯೆಂದಳಾ ತನೊರ್ವ ಬಿ[ಶಾಂಆ. ಭಿ]ಕಾರಿಯನೇನಂ ಬೆಸಗೊಂಡಪೆಯೆನೆ (ಪುಣ್ಯಾಸ್ರ. ೬-೬೦ ವ) : ಅಲುಂಬದ ಡುಬಿಗನಂ ಬಿಕಾರಿಯುಂ ಬೆಸನಿಗನಂ . . . ಕಸಗಳೆದಿತ್ತು ಮನ್ನಿಪರಮಕ್ಕಳ ಪಟ್ಟಿಗೆ ತಂದು ಸೊರ್ಕಿಸಾ (ಕಳಚು. ೬-೦೦೯) ; ಹೊಟ್ಟೆಗಿಲ್ಲದ ಬಿಕಾರಿಗಳು ಹೊಟ್ಟೆಗಾಗಿ ತರತರನಾಗಿ ಅಂಗ ಲಾಚಿಕೊಳ್ಳುವರು (ಶಿಶಾಕ. ೩). **ಭಿಕಾರಿ** : ೨. ಗತಿಯಿಲ್ಲದವನು ; ನಿರ್ಗತಿಕ : ಇದ್ದ ಬಿದ್ದ ಮಕ್ಕಳನ್ನೆಲ್ಲಾ ಕಳೆದುಕೊಂಡು ಭಿಕಾರಿಗಳಾದ ನಿನ್ನ ಅನಾಥ ತಾಯಿ ತಂದೆಗಳನ್ನು ನೆನೆಸಿಕೊಂಡರೆ ಸಂಕಟವಾಗುತ್ತದೆ (ವಚಶಾ. ೩೦೬) ; ನಾನು ಭಿಕಾರಿ, ದುಡಿಮೆಯಿಲ್ಲದ ಭಿಕಾರಿ . . . ಬಡತನದ ಭೂತ ಬಡಿದ ಭಿಕಾರಿ (ಮುಂಗಾಮು. ೩೦). (ಗು). ೩. ಕೀಳಾದ ; ತುಚ್ಛವಾದ : ಜಕಣಿಯು ಜಲದೇವರು ಮೊದಲಾದ ಭಿಕಾರಿದೈವಗಳ ಪೂಜಿಸದವರು (ಕ್ಷರಂದ. ೦-೦೯೩-೩).

[<ಪ್ರಾ. ಭಿಖಾರಿ./ ಸಂ. ಭಿಕ್ಷಾಚಾರಿನ್./ ಹಿಂ. ಭಿಕಾರೀ, ಭಿಖಾರೀ./ ಮರಾ. ಭಿಕಾರೀ]

**ಬಿಕಾರಿತನ** (ನಾ). ಬಡತನ; ದಾರಿದ್ರ್ಯ; ಕಂಗಾಲುತನ : (೬).

[ಬಿಕಾರಿ + — ತನ]

**ಬಿಕೋ** (ನಾ). (ಶೂನ್ಯತೆಯನ್ನು ಸೂಚಿಸುವ) ಒಂದು ಅನುಕರಣ ಶಬ್ದ : ತೊಟ್ಟಿಲಿಲ್ಲದೆ ಕೊಟಡಿ ಬಿಕೋ ಅಂತ ಕಾಣುತ್ತದೆಯಲ್ಲ ! (ಮಹಾಗ. ೨೩೦).

**ಬಿಕೋ ಎನಿಸು**=ಶೂನ್ಯವಾಗಿ ತೋರು ; ಬರಿದಾಗಿರು ; ಖಾಲಿ ಯಾಗಿ ಕಾಣಿಸು : ಮಗ ಸೊಸೆಯರು ಇಲ್ಲದೇ . . . ಅವರ ಮನಸ್ಸಿಗೆ ಬಿಕೋ ಎನಿಸುತ್ತಿತ್ತು (ಶಾಂಶಿ. ೦೨೩). **ಬಿಕೋ ಎನ್ನು**=ಬಿಕೋ ಎನಿಸು : ನಿರ್ಜೀವವಾಗಿ ಬಿಕೋ ಎನ್ನುತ್ತಿರುವ ಈ ಊರನ್ನು ನೋಡಲಾರೆ (ವಚಶಾ. ೩೬೦).

**ಬಿಕ್ಕ₁** (ನಾ). (ಸುಮಾರು ಹತ್ತುವರ್ಷ ವಯಸ್ಸಿನ) ಆನೆಯ ಮರಿ : ಹರಿಣರಿಪುಗೆ ಬಿಕ್ಕಪೋತಕಳಭಕುಳಮಾರಣಕೋಳಾಹಳಮಾನೆದಿಂಬಂಗಾವೆ ದೆವಳಿಗೆಯೆಂಬಂತಕ್ಕುಂ (ಶಾಂತಿಪು. ೩-೩೬ ವ); ಅಪಹಸಿತ ಬಿಕ್ಕಪೋತಕಳಭಜ [ ವ ]ನಕಲ್ಯಾಣಯೂಥತರಪ್ರಾಯಗಜಯೂಥಕೋಳಾಹಳಾರಾವದೊಳ್ (ವರ್ಧಮಾ. ೩-೬೨ ವ). [<ಸಂ. ವಿಕ್ಕ]

**ಬಿಕ್ಕ₂** (ನಾ). ಒಂದು ಅಳತೆಯ ಪ್ರಮಾಣ (?) : ಹಂನೆರಡು ೧೨ ಬಿಕ್ಕ ಹುಣಸೆಯಲ್ಲಿ (ಇ. ೧೧೯೭, ಹಾಸನಗ್. ೨೨೯–೨೯;೪). [?]

**ಬಿಕ್ಕಟ್ಟು** 'ಬಿಗಿಗಟ್ಟು' ನೋ.

**ಬಿಕ್ಕಡಿಸು** 'ಬಿಕ್ಕುಳಿಸು' ನೋ.

**ಬಿಕ್ಕನೆ** (ಅ). ತಟ್ಟನೆ; ಸರಕ್ಕನೆ : ಭಕ್ತ ವಿರಕ್ತರೆಂದು ಆತ್ಮತೇಜಕ್ಕೆ ಬಿಕ್ಕನೇಱ ಬರಿವೃತ್ತ ಇಂತೀ ಕೆಟ್ಟ ಕೇಡ ನೋಡಿ . . . ರಾಜೇಶ್ವರ ಲಿಂಗವು . . . ಅಂಜ ನಷ್ಟವಾಗಿ ಹೋದ (ಶರಣ. ೦೨೦–೬೨೦); ಬಿಕ್ಕನೆ ನೆಱ ಬಿರಿದರು . . . ಶೋಕೋದ್ರೇಕವರವಶರು (ಶಾಸಂಕ. ೬–೬೨); ಭೂವಿ ಬಿಕ್ಕನೆ ಸೀಳಿತು: ಕೂರ್ಮನ ಬೆನ್ನು ಹೋಳಿಗೆವಡದುದು ಬಲುಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಪೋತಕ. ೦೯–೪೭.

ಬಿಕ್ಕಬಿಕ್ಕನೆ (ದ್ವಿರುಕ್ತಿ) : ಸವಿಸವಿದು ಬಿಕ್ಕಬಿಕ್ಕನ ಸವಿನೋಡನ್ನಾಣೆ ಯೆಂದು ರಕ್ಕಸಿಗವುದಂ ಸವಿದೋಱ ನೆತ್ತರೆಲ್ಲಂ ತವೆ ಮುಳಿಸಿಂದವನ ಕರುಳ ಪಿಣಲಂ ನೊಣೆದಂ (ಶಂಶಕಾ. ೦೨–೦೩೮). ಬಿಕ್ಕನೆ ಬಿಱ, ಬಿಕ್ಕಬಿಱ, ಬಿಗ್ಗಬಿಱ=ತಟ್ಟನೆ ಸೀಳು,—ಒಡೆ : ವೃಕೋದರಂ . . . ಡೊಕ್ಕನೆ ಸುರಿಗೆಯೊಳುರಮಂ ಬಿಕ್ಕನೆ ಬಿರಿಯಿಱದು (ಶಂಶಕಾ. ೦೨–೦೩೩) ; ನಮ್ಮ ಕೂಡಲಸಂಗಮದೇವನಲ್ಲದೆ ಪರದೈವಂಗಳು ಮನಕ್ಕೆ ಬಂದುವೆ ಬಿಕ್ಕನೆ ಬಿರಿವ ದೈವಂಗಳು (ಬಸವ. ೩೬೨) ; ಕೋಪದಲಿ ಪವನಜ ಖಳನ ನೆತ್ತಿ ಬಿಕ್ಕಬಿರಿಯೊಲು ತಿವಿಯೆ (ಶಾಂಡಕ. ೪೩–೦೨) ; ಅಗ್ಗ ಸೂರೆ ಅನ್ನವೆಂದು ಬಿಗ್ಗಬಿರಿಯ ಉಂಡಳು (ಗಾದೆ). [ಬಿಕ್ + — ಅನೆ₁]

**ಬಿಕ್ಕಲ** (ನಾ). ಮಾತನಾಡುವಾಗ ತೊದಲುವವನು ; ಉಗ್ಗ: ಅವನು ಬಿಕ್ಕಲ. ಅವನ ಮಾತುಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟ ವಾಗುತ್ತದೆ (ಊಶಿ). [ಬಿಕ್ಕಲು (<ಬಿಕ್ಕುಳು) + — ಅ₁]

**ಬಿಕ್ಕಲಂ, ಬಿಕ್ಲಂ** (ನಾ). ಓದು, ಬರಹವನ್ನು ತಿಳಿಯದವರಿಗೆ ಬೇರೆ ಯಾವರು ಪತ್ರ ಇತ್ಯಾದಿಗಳಲ್ಲಿ ಬರೆದುಕೊಟ್ಟ ಬರಹ, – ಒಕ್ಕಣೆ : 'ಬಿಕ್ಕಲಂದಾರ' ಪರಾ. ಬಿಕ್ಲಂ : ಆ ಹಳ್ಳಿಯಲ್ಲಿ ಅತನೇ ಹಳ್ಳಿಗರಿಗೆ ವ್ಯವಹಾರಗಳನ್ನು ನಡೆಸಲು ಬಿಕ್ಲಂಗಳನ್ನು ಬರೆದು ಕೊಡುವ ವಾಡಿಕೆ (ಊಶಿ). [←ಪಾರ. ಮರಾ. ಬಿಕಲಂ]

**ಬಿಕ್ಕಲಂದಾರ** (ನಾ). ಓದು, ಬರಹ ಬಾರದವರಿಗೆ ಪತ್ರ ಇತ್ಯಾದಿ ಗಳನ್ನು ಬರೆದು ಕೊಡುವವನು : ಈ ಪತ್ರದ ಬಿಕ್ಕಲಂದಾರರು ಚೆನ್ನಾಗಿ ಬರೆದಿದ್ದಾರೆ (ಊಶಿ). [ಬಿಕ್ಕಲಂ + — ದಾರ₁]

**ಬಿಕ್ಕಲು** 'ಬಿಕ್ಕುಳು' ನೋ.

**ಬಿಕ್ಕಳಿಕೆ** 'ಬಿಕ್ಕುಳಿಕೆ' ನೋ.

**ಬಿಕ್ಕಳಿಸು** 'ಬಿಕ್ಕುಳಿಸು' ನೋ.

**ಬಿಕ್ಕಳು** 'ಬಿಕ್ಕುಳು' ನೋ.

**ಬಿಕ್ಕಿ** (ನಾ). ಒಬ್ಬಾತನ ಹೆಸರು : ಕಳ್ಳವುಣಸೆಯ ರಟ್ಟನು ಬಿಕ್ಕಿಯು . . . ಸಾಕ್ಷಿ (ಎಕ. XI, ಚಿತ್ರದು. ೬೪–೨೩, 968) ; ಕುಪ್ಪಯ್ಯನುಂ ಚನ್ನನುಂ ಬಿಕ್ಕಿಯುಂ ತವುಮ್ಮತ ಮೂವರುಂ ಕಲ್ಲ ನಿಱಸಿದರ್ (ಎಕ. VIII, ಸೊರಬ. ೪೩೪–೬ ; 973). [?]

**ಬಿಕ್ಕಿಗ₁** (ನಾ). ಮಾವುತ : ಪಿತ್ತಾಧಿಕನಂತೆ ಬೀಸೆಸುತ್ತುಂ ಬಿಕ್ಕಿಗನಂತೆ ತಿವಿಯೆನುತ್ತುಂ (ಧರ್ಮಾಮೃ. ೨–೬೦). [ಬಿಕ್ಕು₁ + — ಇಗ]

**ಬಿಕ್ಕಿಗ₂** (ನಾ). (?) : ಮನ ಮಾಡಿ ಬಿಕ್ಕಿಗನ ಮೊಗವ ನೋಡಿದನು, ಆ ಹೊತ್ತಿಗೆಯೊಳೊಂದೋದ ನೋಡಿದನು (ಶಂಕ. ೬೪). [?]

**ಬಿಕ್ಕಿಗಿಡ** (ನಾ). ಒಂದು ಬಗೆಯ ಸಸ್ಯ : ಬಿಕ್ಕಿಗಿಡ, ದಿಕಾವಲಿ, ಕಂಬಿಮೇಣ (ಮೈಶಿಗ. ೩೬–೬೬೦). [ಬಿಕ್ಕಿ₂ + ಗಿಡ (<ಗಿಡು)]

**ಬಿಕ್ಕಿಯಣ್ಣ, ಬಿಕ್ಕಿಯಣ** (ನಾ). ಒಬ್ಬಾತನ ಹೆಸರು: ಅತಂಗೆ ಬಿಕ್ಕಿಯಣ್ಣಂ ಮಾತೆ[ಗೆ] ಸತ್ಪುತ್ರಂ(ಎಕ. XI, ಚಿತ್ರದು. ೬೪–೯ ; 968).

**ಬಿಕ್ಕಿಯಣ** : ಶ್ರೀಮತ್ ದಿಲೀಪರಸ ಪೃಥಿವೀರಾಜ್ಯಂಗೆಯ್ಯುತ್ತಿರ ಚೊಕ್ಕಯ್ಯಜ್ಞಂ ಅಜಬ್ಬೆಗಂ ಪುಟ್ಟಿದಂ ಬಿಕ್ಕಿಯಣಂ(ಎಕ. XII, ಶಿರಾ. ೩೩–೩ ; 948). [ಬಿಕ್ಕಿ + ಅಣ್ಣ₁]

**ಬಿಕ್ಕಿರಾಣಕ** (ನಾ). ಒಬ್ಬಾತನ ಹೆಸರು : ಶ್ರೀ ಬಿಕ್ಕಿರಾಣಕೇನ ಪುರಿಕರ ನಗರೇ ಶ್ರೀಶಂಖಜಿನಾಲಯಾಂತರ್ವರ್ತ್ತಿಯತ್ಕಾರಿತಂ (ಇಂಆಂ. XX, ೩–೨೬ ; 723). [ಬಿಕ್ಕಿ + ರಾಣಕ₁]

**ಬಿಕ್ಕಿರು** (ನಾ). ಸೊಳ್ಳೆ; ಮಶಕ : ಲಿಖಿತದುರ್ಗಾಸ್ತೋತ್ರಪಟ್ಟಿಕಾವ್ರಾತದಿಂ ತಲೆದೂಗಿ ಬಿಕ್ಕಿರಿನವೊಲ್ಮೊರೆವ ಗೀತದಿಂ (ಕಾದಂಬರಿ. ೨೬೦).

[p ಇದು 'ಚಿಕ್ಕಡು' ಎಂಬುದರ ಅಪಲ್ಲಿಖಿತವಿರಬಹುದು]

**ಬಿಕ್ಕಿಸು** (ಕ್ರಿ). (ದುಃಖಾತಿರೇಕದಿಂದ) ಗದ್ಗದಧ್ವನಿಯನ್ನು ಹೊರ ಡಿಸು ; ಬಿಕ್ಕಳಿಸು : ಸೀರೆಯ ಸೆರಗನ್ನು ಮುಖದ ಮೇಲೆ ಸರಿಸಿ ಕೊಂಡು ಮತ್ತೆ ಬಿಕ್ಕಿಸಲಾರಂಭಿಸಿದಳು (ಶಂಸಂ. ೩೩).

[ಬಿಕ್ಕು₁ + — ಇಸು₁]

**ಬಿಕ್ಕು₁** (ಕ್ರಿ). ೧. ಶ್ವಾಸಾಂಗಗಳು ಅನೈಚ್ಛಿಕವಾಗಿ ಇದ್ದಕಿದ್ದಂತೆ ಸಂಕೋಚಗೊಂಡು, ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಒಂದು ಬಗೆಯ ವಿಲಕ್ಷಣವಾದ ಶಬ್ದವುಂಟಾಗು ; ಬಿಕ್ಕುಳಿಕೆಯುಂಟಾಗು ; ಬಿಕ್ಕಳಿಸು : ಕೆಲರ್ ಕುದುಗುಳಿರಕ್ಕಸರ್ ಬಿಸುಗೆಗಳ್ವೆರಸುಗ್ರಮಹಾಗಜಂಗಳಂ ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಟುರಂಗಳಂ (ಶಂಶಕಾ. ೦೨–೮) ; ಜನಂ . . . ಬಿಕ್ಕುವ ತೇಂಕುವ ತೇಗುವ ಕಂಟಳಿಸುವಖಿಳವಿಕೃತಿಗೆ ಸಲ್ಲಂ (ಪುಷ್ಪಪು. ೦೨–೬೯). ೨. (ದುಃಖ, ಭಯ ಅಥವಾ ಸಂತೋಷಾತಿರೇಕಗಳಿಂದ) ಮಾತು ತಡವರಿಸು ; (ಭಾವಾತಿರೇಕದಿಂದ) ಗದ್ಗದಿಸು : ಬಿಸ್ಮಯಂಗೆಯ್ದು ಪೊಕ್ಕಲಿಗನಂತೆ ಬಿಕ್ಕುತ್ತುಂ (ಧರ್ಮಾಮೃ. ೦–೦೬೯) ; ಅಬಲೆ . . . ಗದ್ಗದ ಸ್ವನದಿಂ ಬಿಕ್ಕುತುಮಿಕ್ಕದಳ್ ಬಿಡದೆ ಭೋರೆಂಬಾತ ಬಾಷ್ಪಾಂಬುವಂ (ಕುಸುಮಾ. ೦೩–೯೭) ; ಬಿಕ್ಕಿದನು ಬಿರಿಬಿರಿದು ಸರೆಗಳು ಮುಕ್ಕುಱಕಿದವು ಕೊರಳ ಹೃದಯದೊಳೊಕ್ಕಲಿಕ್ಕಿತು ಶೋಕಪಾವಕವಾ ನೃಪಾನುಜನ (ಕುಮಾ.ರಾ. ೨೦–೩೩). ೩. ಮೇಲುಸಿರು ಬಿಡು ; ಏದುಸಿರು ಬಿಡು : "ಬಿಕ್ಕು–ಉಚ್ಛ್ವಾಸೇ, ಮಾಂಸಭೇದೇ ಚ"(ಶಮದ); ನಯನಜಲಂಗಳುಣ್ಣು ಪೊಡೆ ಬಿಕ್ಕುವೊಡಂ ತನು ಸೇದೆಗೆಟ್ಟು ಬೆಂಕಿಯನೊಳಗೊಳ್ಳೊಡಂ ಜ್ವರಿತನೆಂದಱದು . . . ಉಪಯೋಗಿಸಿದಂದು ಮುಟ್ಟುಗಂ (ಲೋಕೋಪ. ೯–೨೦೩) ; ಬಿಱಸಿನಲಿ ಖಳ ತಿವಿದೊಡಂಗದ ಬಿರಿದು ಬಿಕ್ಕಿದ ಬದ್ದನಾಕ್ಷಣ ಮರಳಿ ಚೇತರಿಸುತ್ತ . . . ತಿವಿದನು (ಕೌರವ ೩೬–೩೦) ; ಹೊಕ್ಕುದಾ ಸಮಯದಲಿ ಸುಂಡಿಲ ಸೆಕ್ಕುಗಳ ಖಂಡೆಯವ ಗಜವಳ ಬಿಕ್ಕಲಿಕೆ ಬೆರಸಿದುದು ರಣರಥರಾಜಿ (ಕೊರರಾ. ೩–೬–೦೩). ೪. (ಉಸಿರು ಬಿಡುವಾಗ) ಅಳ್ಳೆಯು ಹೊಡೆದುಕೊಳ್ಳು : ಬಿಗಿವೆದೆ ಬಿಕ್ಕುವಳ್ಳೆ . . . ಬಿಗಿದ ಗಂಟಲಿನ ಮುಕ್ಕುಳಿಸಿದಕ್ಕಿಗಳೆಸೆವ ಸತಿಯಳು ಸೀಗೆ ಯೊಳಗಣ ಬಾಳಿಗೆಣೆಯಾದುದು (ಹಕಾ. ೦೨–೦೩). ೫. ಹೊರ ಹೊಮ್ಮು; ಹೊರಸೂಸು ; ಪ್ರಕಟಗೊಳ್ಳು : ಪೊರಳ್ದ ಪೆಣದಿಃ ಬಿಡೆ ಬಿಕ್ಕುವ ಮಸ್ತಕೌಘದಿಂ ಕೆದಱದ ಮಾಂಸದಿಂದೆ . . . ಜವನುಂಡು ಕಾಱದವೊಲಿರ್ದುದು ಮಾರ್ಗಮದೆತ್ತ ನೋಟ್ಟೊಡಂ (೬೮ಶವ. ೬–೬); ಮೃಗಶಿಶಿರೆಯ ಮಳೆಯಂತೆ–ದೈವೇಚ್ಛೆಗೆರಗಿ ಹುಗಿದ ಚಿಂತೆಯು ಹೊರಗೆ ಬಿಕ್ಕಿದುದು ಕರಗಿ (ಕುಪು. ೩೩–೬). ೬. (ಬಾಣ ಮುಂತಾದುವನ್ನು) ಪ್ರಯೋಗಿಸು : ರಿಪುಗಳನ್ನೊರೆಸಿ ಕೂರ್ಗಣೆಗಳ ಬಿಕ್ಕಿ ರಣಮುಡಲಕೆ ಚತುರಂಗಸೇನೆಯೊಳ್ ಪೊಕ್ಕು (ಶುರಂಗ. ೩೦–೨). ೭. ಚೆಲ್ಲು ; ತೂರು : ಕಡಿಕಡಿದು ಕೆಡಹಿದರ್ ಕುರಿಕೋಳಲಕ್ಕಮಂ ಬಿಕ್ಕಿದರ್ ಬೂದಿಯಂ (ಶ್ರೀತಾಮ. ೬೬೦–೨೪೦); ನಿನ್ನನ್ನು ನನ್ನ ಕತ್ತಿಯ ಒಂದೇ ಪೆಟ್ಟಿಗೆ ತುಂಡರಿಸಿ

ರಣಹದ್ದುಗಳಿಗೆ ಬಿಕ್ಕುತ್ತಿದ್ದೆ (ಶ್ರೀಣಾಯ. ೩೩೬). ೮. ಪ್ರಕಟಪಡಿಸು : ವ್ಯಕ್ತಪಡಿಸು : ಸೊಕ್ಕು ಕೌರವಕುನ್ನಿ ನಮ್ಮೊಳಗೆ ಪೌರುಷವ ಬಿಕ್ಕಿದನೆ (ಕುಕಂಗ. ೩೩-೨೭). ೯. ಹೊಡೆ ; ಬಡಿ : ಸದೆದು ದಾಡೆಯ ತಿರುಹಿ ಕಿತ್ತನು ಬಿಕ್ಕಿದನು ಬಿದುವಿನಲಿ ಬಲುಗದೆಯ (ಕುವ್ಯಾಗ. ೧-೩೭). ೧೦. ಧ್ವಂಸಗೊಳಿಸು ; ನಾಶಪಡಿಸು : ಆಹವದೊಳಿವ್ವೊಡನೆ ಕಕ್ಕಸವನು ಮಾಡಿದೊಡವರನು ಯುವೆಯಿಕ್ಕದ ಮುನ್ನ ಬಿಕ್ಕುವೆವು (ತ್ರಿಕುಶಾಂ. ೦೩-೦೬೩). ೧೧. (ಮಾತನ್ನಾಡುವಾಗ) ತೊದಲು,– ಉಗ್ಗು : ಅವನು ಮಾತನಾಡುವಾಗ ತುಂಬ ಬಿಕ್ಕುತ್ತಾನೆ (ದೂರಾ).

ಬಿಕ್ಕಿ ಬಿಕ್ಕಿ ಅಳು=ಗದ್ಗದಿಸುತ್ತ ಅಳು : ಐದು ವರ್ಷದ ಕೂಸಂ ನಿಚ್ಚಣಿ ಎಂಬ ದೇವತೆ ಹಿಡಿದೊಡಾ ಕೂಸು . . . ಬಿಕ್ಕಿ ಬಿಕ್ಕಿ ಅಳುಗು (ಪಾಂಡ. ೦೩೨-೦೩) ; ಕೃಷ್ಣರಾಯರು . . . ಬಿಕ್ಕಿ ಬಿಕ್ಕಿ ಅಳುತ್ತ ಕಡೆಗೆ ಮುಖವನ್ನು ತಿರುಗಿಸಿಕೊಂಡರು (ಮಹಾಗ. ೨೩೨) ; ಬಿಕ್ಕಿ ಬಿಕ್ಕಿ ಅತ್ತರೆ ಬೀಸುವ ಕಲ್ಲು ತಿರುಗೀತೇ ? (ಗಾದೆ).

[ದೇ. ॥ ತಮಿ. ಮಲ. ವಿಕ್ಕು ; ತುಳು. ಬಿಕ್ಕ್ಯ ; ಕೊಡ. ಬಿಕ್ಕ್ ; ತೆಲು. ವೆಕ್ಕು ; ಕುರುಖ್. ಬೆಕ್ಕ್ನಾ]

ಬಿಕ್ಕು₂, ಬಿಕ್ಕಳ್ (ನಾ). ೧. ಶ್ವಾಸಾಂಗಗಳು ಅಸ್ವೈಚ್ಛಿಕವಾಗಿ ಇದ್ದಕ್ಕಿದ್ದಂತೆ ಸಂಕೋಚಗೊಂಡು ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ, ಗಂಟಲಿನಲ್ಲಿ ಹುಟ್ಟುವ ಒಂದು ಬಗೆಯ ವಿಲಕ್ಷಣ ಶಬ್ದ ; ಬಿಕ್ಕಳು : ಇಕ್ಕುತಿರ್ಪುಸಿರ್ ತಡೆದೊಡಮಿಲ್ಲ ಬಿಕ್ಕು ಬಿಡದೊತ್ತಿದೊಡಂ ತಳ್ಸಂದೊಡಿಲ್ಲ . . . ಇಂತು ಕೆಟ್ಟುಪೋಪೊಡಲಿದಕೇಕೆ ಕಾವಾ (ಶಂಶಾಕ. ೩೩-೬೩); ವಾಯು ಕ್ಷೀಣವಾದರೆ ಗುರುತು, ದೇಹದಲ್ಲಿ ಬಳಲಿಕೆ . . . ಶ್ಲೇಷ್ಮ ಹೆಚ್ಚುವದು ; ಬಿಕ್ಕು ಉಂಟಾಗಿಹುದು (ವೈದ್ಯಸಾ. I. ೨೪). ೨. (ದುಃಖ, ಅಳು, ಭಯ, ಸಂತೋಷಾತಿರೇಕಗಳಿಂದ) ಧ್ವನಿಯಲ್ಲುಂಟಾಗುವ ನಡುಕ ; ಗದ್ಗದ : ತನ್ನೊಳಗೆ ತೆಕ್ಕನೆ ಶೀವಿ ತೆರೆ ಮಸಗುವ ಶೋಕರಸಮುರ್ಕಿ . . . ವಿಬಿಕ್ಕು ನೆಗೆವ ಬಿಕ್ಕಿನೊಳ್ ಬೆರಸಿ (೧೦೪. ೬-೭೭ ವ); ಇರೆ ಕಂಡು ಸುವಿವೇಕಗುರುವ ಪುಳಕಂಗಳುಬ್ಬರಿಸಿ . . . ಬಿ[ಪಾಠಾಂ. ವಿ]ಕ್ಕು ವಿಕ್ಕು . . . ಸ್ವೈಗೆಡದನು (ಪುನೋಲ. ೦-೩೨); ಬಿಕ್ಕು ಬಿಕ್ಕನೆ ತೋಜಿ ಇಕ್ಕುವಳು ಕಣ್ಣೀರ (ಸರ್ವಜ್ಞ. ೦೯೨೪). ೩. ದುಃಖ ; ಸಂಕಟ : ಗುಣವಂತಿಯು . . . ಕಳವಳವನ್ನು ಜಯಂತನು ಸಂಪೂರ್ಣ ಅರಿತನು. ಆದರೆ ಅದಕ್ಕೆ ಅನುಕೂಲವಾಗಿ ಮಾತಾಡಿ ಇನ್ನಷ್ಟು ಬಿಕ್ಕು ತಂದುಕೊಡುವುದು ಬೇಡಾಯಿತು (ಜಯಂತ. ೩೨೬). ೪. ತೊದಲು ; ಉಗ್ಗು : ಅವನಿಗೆ ಬಿಕ್ಕು ಇರುವುದರಿಂದ ಮಾತನ್ನಾಡಲು ಕಷ್ಟಪಡಬೇಕಾಗುತ್ತದೆ (ದೂರಾ). ಬಿಕ್ಕಳ್: ೧. ಬರಿಗಂಡಂ ಪಿಣಲೀಜ಼ಿ ರೋಮಾವುಡಿದಿರ್ದೆನ್ನಾಗೆ ಮುಂಗಾಲಗಲ್ತಿರೆ ಬಿಕ್ಕಳ್ವೆ . . . ಪೆನೋರ್ಗೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕೀಕರಂ ಸೂಕರಂ (ಶಂಕ್ರಪು. ೩-೬೦).

[<ಬಿಕ್ಕು₁/ತಮಿ. ವಿಕ್ಕು; ಮಲ. ವಿಕ್ಕು, ವಿಕ್ಕಲ್; ತುಳು. ಬಿಕ್ಕ್]

ಬಿಕ್ಕು₃ (ನಾ). ಮಾಂಸ ; ಅಡಗು : "ಬಿಕ್ಕು-ಉಚ್ಯಾಸೇ, ಮಾಂಸ ಭೇದೇ ಚ" (ಶಮದಾ) ; ಚೋಳನ ಕಾರಡಗಿಂಗೆ ವಂಗಭೂಪಾಳನ ಬಿಕ್ಕುಗಂಧುಸುವಾಳನ ವಮೊಳೆಗೆ ಕಾಯ್ದುದ್ದು ಖಳ್ಗವಾಕಾಳಿಯಡುತ್ತುರ್ಪ ನಿಕ್ಕುವಳು ನಾಲಗೆಯಂ ನರಸಿಂಗಭೂಪನ (ಎಕ. IV (ಐ), ಹುಣಸೂ. ೩೯-೦೬; 1162); ಅಗುರ್ಬಿಪ ಬಿಕ್ಕಿನಿಂದಮೊಟ್ಟಿದ ನೆಣದಿಂ . . . ಕೆತ್ತುತಿರ್ಪ ಖಂಡದೆ ಜವನುಂಡು ಕಾಱಿದವೊಲಿರ್ದುದು ಮಾರ್ಗಮಾದೆತ್ತ ನೋಟಿಸ್ಕೊಡಂ (ಅಜಿತಪ. ೬-೬) ; ಮಾಳೆ ಬಿಕ್ಕುಗಳ ಸಂದಣಿ . . . ಕಾಳಿಜಗಳೆಕ್ಕಿಕ್ಕಿ ತದ್ರಣರಂಗದೆಲ್ಲೆಡೆಯೊಳುಂ ಶೀವೆ ಬಲುಮೆರಲ್ ಪೂಣರ್ದುವು (ಶಂಕ್ರ. ೯೮-೫೩). [ದೇ. ॥ ತಮಿ. ವಿಟಕ್ಕು. /ಸಂ.ವೃಕ್ಕ, ವೃಕ್ಕಾ]

ಬಿಕ್ಕು₄, ಬಿಚ್ಚು₃ (ನಾ). ೧. ಬೌದ್ಧಸಂನ್ಯಾಸಿ : ತಕ್ಷಶಿಲಾನಗರದಲ್ಲಿ ಮಹಾಯಾನಪಂಥದ ಬೌದ್ಧ ಬಿಕ್ಕುಗಳು ನೆಲೆಸಿಕೊಂಡು ತಮ್ಮ ಮತವನ್ನು ಬೋಧಿಸತೊಡಗಿದರು (ಶಾಂತ್ರ. II, ೩೦೩). ಬಿಚ್ಚು₃ : ೨. ಸಂನ್ಯಾಸಿ ; ಭಿಕ್ಷು : " ಬಿಚ್ಚುವೆನಲ್ಕೆ ಭಿಕ್ಷು " (ಕರ್ಣಾಪ. ೩೩): ಭಿಕ್ಷು-ಬಿಚ್ಚು (ಶಮದ. ೨೬೨ ಕ್ರಿಯೋ). [<ಪ್ರಾ. ಭಿಕ್ಖು/ಸಂ. ಭಿಕ್ಷು]

ಬಿಕ್ಕುಂದನಿ (ನಾ). ನಡುಗುವ ಧ್ವನಿ ; ಗದ್ಗದ : ಸಿಂಗಾರವ್ವ :— (ಎದ್ದು ಹೋಗಿ . . . ನಸೆದಿಟ್ಟಯ ಬಿಕ್ಕುಂದನಿಯಿಂದ) (ಶಬ್ದ. ೯೬-೨೦). [ಬಿಕ್ಕು₁ + ದನಿ₁]

ಬಿಕ್ಕುಳಿಕು ' ಬಿಕ್ಕುಳಿಕೆ ' ನೋ.

ಬಿಕ್ಕುಳಿಕೆ, ಬಿಕ್ಕಳಿಕೆ, ಬಿಕ್ಕುಳಿಕು (ನಾ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಹುಟ್ಟುವ ಒಂದು ಬಗೆಯ ವಿಲಕ್ಷಣವಾದ ಶಬ್ದ ; ಬಿಕ್ಕಳು : ನಿವಿರ್ಚೆ ಬಿಕ್ಕುಳಿಕೆ ಮೆಯ್ಯ್ ಮುಯ್ಯ್ವಾಗೆ ಕಂಪಕ್ಕೆ ದಲ್ ಕುರುರಾಯಂ ಗದೆವೊಯ್ಲಿನಿಂದಿಳೆಗೆ ಬಟ್ಟಂ ಬಿಟ್ಟು ಬಿದ್ದಂದದಿಂ (ಗಪರ. ೯-೦೯೦). ಬಿಕ್ಕಳಿಕೆ : ೧. ಹಿಕ್ಕೆಯ ಬಾಷ್ಪಮದೆಂತೆನೆ ಬಿಕ್ಕಳಿಕೆಗಳಕ್ಕುಮಕ್ಷಿಯೊಳ್ ತಿಮಿರಂ ತುಂಬಿಕರ್ಣಂ (ಖಮದ. ೦೩-೯೦) ; ದವನ, ಜೀರಿಗೆ, ಶುಂಠಿ ಇವಂ ಜೇನುತುಪ್ಪದಿಂದ ಅರೆದು ಕೊಳ್ಳಲು ಬಿಕ್ಕಳಿಕೆ ಮಾಣ್ಗುಂ (ಖವೈ.ಶ. ೦೪೦) ; ಓಮವನ್ನು ಸುಟ್ಟು ಮಸಿಯನ್ನು ಸಕ್ಕರೆಯೊಡನೆ ಕಲಸಿ ಕೊಟ್ಟರೆ ವಾಂತಿ ಬಿಕ್ಕಳಿಕೆ ನಿಲ್ಲುವುದು (ಸಕವ್ಯ. ಶಂ ೯೪೭). ೨. (ದುಃಖ, ಅಳು, ಸಂತೋಷ, ಭಯ ಮುಂತಾದುವುಗಳಿಂದ) ಧ್ವನಿಯಲ್ಲುಂಟಾಗುವ ನಡುಕ,–ಗದ್ಗದ: ಅದನ್ನು ನೆನಸಿಕೊಂಡ ಯಶೋದೆಗೆ ಪುನಃ ಬಿಕ್ಕಳಿಕೆ ಆರಂಭವಾಯಿತು (ವಾತ್ಸಲ್ಯ. ೦೦) ; ಅವಳ ಅಳು ನಿಂತಿತ್ತು ; ಬಿಕ್ಕಳಿಕೆ ಮಾತ್ರ ನಿಂತಿರಲಿಲ್ಲ (ಪ್ರಸರು. ೦೦೦). ಬಿಕ್ಕುಳಿಕು : ೨. ಧರ್ಮಜನು ತಂದೆ ನಿನಗಿಂತಧಿಕದುಃಖವ ತಂದೊದಗಿಸಿದೆ ಎನ್ನನೀಗಲಿ ಕೊಂದು ಕರುಣಿಸೆನುತ ಬಿಕ್ಕುಳಿಕಿನಲಿಯಳಲಿದನು (ತಿಮ್ಮಸ್ತ್ರೀ. ೨-೯೩). [ಬಿಕ್ಕುಳು + –ಇಕೆ]

ಬಿಕ್ಕುಳಿಸು, ಬಿಕ್ಕಡಿಸು, ಬಿಕ್ಕಳಿಸು (ಕ್ರಿ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಒಂದು ಬಗೆಯ ವಿಲಕ್ಷಣಶಬ್ದವುಂಟಾಗು ; ಬಿಕ್ಕು : ಕೂಕಿಡುವ ಕುಕಿಲ್ವ ಬಿಕ್ಕುಳಿವ ತೇಗುವ ತನ್ನ ತೊಡಂಕದೆಯ್ದೆ ನೂರ್ಖಡಿ ಮಾಡೊಳ್ ಪಳಂಚಲೆಯೆ ಡಕ್ಕೆಯೊಳಟ್ಟಜವಾಗೆಯಾಡಿದಳ್ (ಶಂಕಷಾ. ೯-೯೦). ೨. (ದುಃಖ, ಭಯ, ಸಂತೋಷಾತಿರೇಕಗಳಿಂದ) ಮಾತು ತಡವರಿಸು.– ಗದ್ಗದಿಸು : ಸಿಕ್ಕಿದ ನಲ್ಲಳು ಮುನಿದ ನಲ್ಲನ ಮುಂದೆ ಬಿಕ್ಕುಳಿಸುತ ನುಡಿವಂತೆ ಲೆಕ್ಕ ಟವಣೆಯಾಗಿ ಕೊರಳು ಕುಣಿದು ದನಿಯಿಕ್ಕುವ ರಾಗ ರಂಜಿಸಿತು. (ಶರಕ. ೫-೬೩). ೩. ಕಾರು ; ಕಕ್ಕು : " ಬಿಕ್ಕುಳಿಸು – ಉದ್ಗಾರೇ " (ಶಮದಾ). ಬಿಕ್ಕಡಿಸು: ೨. ಚಿಕ್ಕೋರು ಸುಮ್ಮನೆ ಬಿಕ್ಕಡಿಸಿಕೊಂಡು ಬಿಕ್ಕಡಿಸಿಕೊಂಡು ಅಳ್ತಾನೇ ಇದ್ರು (ಶಿಂಗಾಳ್. ೩೨೯). ಬಿಕ್ಕಳಿಸು : ೨. ರಂಗನು ಬಿಕ್ಕಳಿಸುತ್ತ ನಡೆದ ಸಂಗತಿಯನ್ನೆಲ್ಲ ವಿವರಿಸಿದನು (ಶಂಗರೋ. ೯೦) ; ಪರದೆಯ ಹಿಂದೆ ಮಾತ್ತೆ ಬಿಕ್ಕಳಿಸುವ ಶಬ್ದ ಕೇಳಿಸಿತು (ಕುಸಾಷ. ೦೦೪).

[ಬಿಕ್ಕುಳು + – ಇಸು₁]

ಬಿಕ್ಕುಳು, ಬಿಕ್ಕಲು, ಬಿಕ್ಕಳು (ನಾ). ೧. ಶ್ವಾಸದ್ವಾರವು ಥಟ್ಟನೆ ಮುಚ್ಚಿಕೊಂಡಾಗ ಗಂಟಲಿನಲ್ಲಿ ಉಂಟಾಗುವ ಒಂದು ಬಗೆಯ ವಿಲಕ್ಷಣಶಬ್ದ; ಬಿಕ್ಕುಳಿಕೆ : ಕವುಳು . . . ಶುಂಠಿ ಹಿಪ್ಪಲಿ ಇವ ಚೂರ್ಣವ ಮಾದಿ ಜೇಲದ ಹಣ್ಣಿನ ರಸದಲ್ಲಿ ಅರೆದು ಗುಳಿಗೆಯ ಮಾಡೆ ಬಿಕ್ಕುಳು ಪೋಕುಂ (ಖವೈ.ಶ. ೦೩೪). ೨. (ದುಃಖ, ಸಂತೋಷ, ಕೋಪ, ಭಯ, ಮುಂತಾದುವುಗಳಿಂದ) ಧ್ವನಿಯಲ್ಲುಂಟಾಗುವ ನಡುಕ,— ಗದ್ಗದ : ಎತ್ತಿ ಹಾಯ್ದುವ ಕೊರಳ ಬಿಕ್ಕುಳ ಕೆತ್ತುವಧರದ

ರೋಷದಲಿ ಹೊಗೆ ಸುತ್ತಿದುರಿವಾತ್ತುಗಳ ಸೂಸಿನರವನಿಪನ ಮೇಲೆ (ಕುವ್ಯಾ.ಕ. ೯-೦೯); ನಿವಿಡಾಶ್ವರಕುಲಲಲಾಮನು . . . ಇಳಿವ ಕಂಬನಿಗಳಲಿ ಕಂಪಿತಗಳದ ಬಿಕ್ಕುಳಿನಿಕ್ಕೆಯಲಿ ಮಕ್ಕಳನು ಕೈವರ್ತಿಸಿ ಕಕುತ್ಸ್ಥಾನ್ವಯನ ಬೀಳ್ಕೊಂಡ (ತೊರರಾ. ೧-೦೭-೨); ಉಕ್ಕಿದುದು ಮೇಲುಸಿರು ಕಂಠದ ಬಿಕ್ಕುಳಿನ ಭೀತಿಯುಲಿ ತನ್ನೊಂದಕ್ಕರಿನ ಮನದೊಳಗೆ ರಾಮನ ನೆನೆದನಾ ಹನುಮ (ವ್ಯಕರಾಕಾ. ೩-೭೯). ೩. ಪ್ರಾಣ ಹೋಗುವ ಸಮಯದಲ್ಲಿ ಗಂಟಲಿನಲ್ಲಿ ಉಂಟಾಗುವ ಗದ್ಗದ: ಈ ಐದು ಬಿಕ್ಕುಳುಗಳು ಮುಖ್ಯ ನವರಿಗೂ ಬಹಳವಾಗಿ ಸ್ತ್ರೀಸಂಗವುಳ್ಳವರಿಗೂ ವ್ಯಾಧಿಯಿಂದ ಕ್ಷಯಿಸಿದ ದೇಹದವರಿಗೂ . . . ಮರಣಕ್ಕೆ ಕಾರಣವಾಗಿ ಕಾಣಿಸಿಕೊಂಬುದು (ಸಕವ್ಯ. ೨೪೦). 'ಬಿಕ್ಕುಳುರೋಗ' ಪರಾ. ಬಿಕ್ಕಲು: ೩. ಶ್ಲೇಷ್ಮದಿಂದ ತಡೆಯಲ್ಪಟ್ಟ ಪ್ರಾಣವಾಯು . . . ಐದು ಪ್ರಕಾರವಾದ ಬಿಕ್ಕಲುಗಳ ಉಂಟುಮಾಡುವದು (ವೈದ್ಯಸಾ. I. ೦೩೩). ೪. ಉಗ್ಗು; ತೊದಲು: ಶೇಷಣ್ಣನವರಿಗೆ . . . ಹಾಡಲು ಬಹಳ ಉತ್ಸಾಹ; ಆದರೆ ಬಿಕ್ಕಲು. ಹಾಡಲು ಸಾಧ್ಯವಿಲ್ಲದೆ ಬಹುವಾಗಿ ನೊಂದುಕೊಳ್ಳುತ್ತಿದ್ದರು (ಸಂಗೀತಂ. ೨೬೯). ಬಿಕ್ಕಳು: ೧. ಚಂದನಾದಿಚೂರ್ಣ . . . ಮೆಲ್ಲಲು ತೃಷೆ, ಛರ್ದಿ, ಬಿಕ್ಕಳು, ಪಿತ್ತ, ಭ್ರಮೆ, ಅರೋಚಕ ಇವು ಗುಣ (ವೈಕ.ಶಿ. ೨೬). ೨. ಉಕ್ಕುವುವಳಲದನೊಯ್ಯನಾಜಿಸುವನು ಬಿಕ್ಕಳು ಬಹುದ ನಿಲ್ಲಿಸುವ (ಶಠಕ.೦೭-೦೯).

[ದೇ. ತಮಿ. ವಿಕ್ಕುಳ್, ವಿಕ್ಕಲ್, ವಿಕ್ಕಿಳ್; ತೆಲು. ವೆಕ್ಕಿಲಿ, ಎಕ್ಕಿಲಿ]

**ಬಿಕ್ಕಳುಬೇನೆ** (ನಾ). ಉಸಿರಾಟದ ತೊಂದರೆಯಿಂದ ಅಧಿಕವಾಗಿ ಬಿಕ್ಕಳಿಕೆ ಉಂಟಾಗುವ ಒಂದು ಬಗೆಯ ರೋಗ: ಶೀನು ಬಿಕ್ಕುಳು ಬೇನೆ ನಾನಾಹಾನಿ ಬಳಿಕುದ್ದಾರಗಳು ಏನೇನೊ ವೈಕಾರಗಳುದಾಸದ ವಾಯುವಿನ ಧರ್ಮ (ಗಗಶಾ. ೯-೬೩). [ಬಿಕ್ಕಳು + ಬೇನೆ]

**ಬಿಕ್ಕುಳುರೋಗ** (ನಾ). = ಬಿಕ್ಕುಳುಬೇನೆ: ಐದು ತೆರನಾದ ಬಿಕ್ಕುಳು ರೋಗದಲ್ಲಿ ಕ್ಷುದ್ರ, ಅನ್ನಜ ಎಂಬೆರಡು ವಿಧವಾದ ಬಿಕ್ಕುಳುರೋಗವೆ ಅಸಾಧ್ಯವಾಗಿ ಪ್ರಾಣವನಪಹರಿಸುತ್ತ ಇಹುದು (ಸಕವ್ಯ. ೨೪೦).

[ಬಿಕ್ಕುಳು + ರೋಗ]

**ಬಿಕ್ಕೆ$_1$** 'ಬಿಟಿಕ್ಕೆ' ನೋ.

**ಬಿಕ್ಕೆ$_2$**, ಬಿಚ್ಚೆ (ನಾ). ತಿರುಪೆ; ಭಿಕ್ಷೆ: "ಬಿಕ್ಕೆ ಭಿಕ್ಷೆಯೆಂ" (ಕರ್ಣಾಶ. ೬೨); ಬಿಡತನದ ಬೇನೆಯನು ರಾಗದಿಂ ಪಾಡಿ ಜೋಡುಕೈಗಳ ಪನೌನದ್ಯನ್ಯದಿಂ ನೀಡಿ ಬೇಡಿದನು ಬಿಕ್ಕೆಯನು (ಕಗದ್ಯ. ೭೯); ಭಕ್ತ ಬೇಡಲು ಬಿಕ್ಕೆ ಇತ್ತ ತೆರನಾದುದೌ! (ತಂಲಿಶ. ೩೯). ಬಿಚ್ಚೆ: 'ಬಿಚ್ಚೆಕಾರ' ಪರಾ.

ಬಿಕ್ಕೆ ಬೇಡು = ಯಾಚಿಸು; ಭಿಕ್ಷೆಯನ್ನು ಕೇಳು; ತಿರಿ: ಬ್ರಿಟಿಶ ರಲ್ಲಿ ಸ್ವರಾಜ್ಯದ ಬಿಕ್ಕೆ ಬೇಡಲು, ನಾವು . . . ವರ್ಣಾಶ್ರಮವನ್ನು ನಾಶ ಮಾಡಬೇಕೆ? (ಯುಕ್ತಕ್ರ. ೯೩); ಹೀಗೆ ಸ್ವಾರ್ಥ ಬಿಟ್ಟು ಧರ್ಮಾತ್ಮನಾದರ ನಾಳೆ ಬಿಕ್ಕೆ ಬೇಡಬೇಕಾದೀತು (ಕುರುಕಾ. ೧೩೮). [<ಸಂ. ಭಿಕ್ಷಾ]

**ಬಿಕ್ಕೆಯಣ** 'ಬಿಕ್ಕೆಯಣ್ಣ' ನೋ.

**ಬಿಕ್ರಿ** 'ಬಿಕರಿ' ನೋ.

**ಬಿಕ್ರಿದಾರ** 'ಬಿಕರಿದಾರ' ನೋ.

**ಬಿಕ್ಲಂ** 'ಬಿಕ್ಕಲಂ' ನೋ.

**ಬಿಗಡ$_1$** 'ಬೇಗಡ್ಡ' ನೋ.

**ಬಿಗಡ$_2$** (ನಾ). ಕಷ್ಟ; ತೊಂದರೆ; ಕೇಡು: ಇವರಿಗೆ ಬಗಡಾವ ಮಾಡಿ ಲಡಾಯಿಗೆ ನಿಲ್ಲಬೇಕು (ಮರಚ. ೨೦-೦೩).

[← ಹಿಂ. ಬಿಗಾಡ್; ಮರಾ. ಬಿಗಡ, ಬಿಗಾಡ, ಬಿಘಡ, ಬಿಘಾಡ]

**ಬಿಗಡಾಯಿಸು, ಬಿಗಡಿಸು, ಬಿಘಡಾಯಿಸು** (ಕ್ರಿ). ೧. ಹದಗೆಡು; ಕೆಟ್ಟುಹೋಗು: ಇನ್ನು ಮುಂದು ಸಲ್ಲಾ ಬಿಗಡಾಯಿಸಿದರೆ . . . ನಮ್ಮ ದವಲತ್ತನ್ನು ಮುಳುಗಿಸಿಬಿಟ್ಟಾರು (ರಾಜೇಂದ್ರ. ೦೦೨); ಶ್ರೀಕೃಷ್ಣದೇವ ರಾಯನ ಆಳ್ವಿಕೆಯ ಅನಂತರದಲ್ಲಿ ರಾಜಕೀಯಪರಿಸ್ಥಿತಿ ತುಂಬಾ ಬಿಗಡಾಯಿಸಿತ್ತು! (ಹೇಮಕೂ. ೦೦೯). ೨. ಬಿಗಿಯಾಗು; ಗಡುಸಾಗು: ಫವುಜು ಜಮೀಯತ್ತು ಆಯಿತು ಜಿರಪುಲಿದವರು ಬಿಗಡಾಯಿಸಿಕೊಂಡೆ ಹೋಗಿ ಯಿದ್ದರು (ಮರಚ. ೬೯-೯); ಚೀಂಕ್ರನ ಧ್ವನಿ ಬಿಗಡಾಯಿಸಿತು (ಮರಿಮ. ೪೬೩). **ಬಿಗಡಿಸು**: ೩. ಕೆರಳಿಸು; ಕೋಪಗೊಳಿಸು: ಭಾಗಾನಗರದವರ ಬಗೆಯ (?) ಪೆದೂರ ಲಿಂಗಪ್ಪಂ ಬಿಗಡಿಸಿ ಬಂದಿರಲು (ಕೆಳನೃ. ೯-೦೯). **ಬಿಘಡಾಯಿಸು**: ೧. ನಮ್ಮ ಕುಟುಂಬದ ಪ್ರಕೃತಿ ಬಿಘಡಾಯಿಸೇದ (ಸಮತೀ. ೯೩).

[ಬಿಗಡ್ಡಾ (← ಹಿಂ. ಬಿಗಡನಾ; ಮರಾ. ಬಿಗಡಣೇ, ಬಿಘಡಣೇ) + — ಇಸು$_3$]

**ಬಿಗಡಿಸು** 'ಬಿಗಡಾಯಿಸು' ನೋ.

**ಬಿಗಿ$_1$** (ಕ್ರಿ). ೧. (ಹಗ್ಗ, ಸರಪಳಿ ಮುಂತಾದುವುಗಳಿಂದ) ಕಟ್ಟು,— ಬಂಧಿಸು: "ಬಿಗಿ—ಬಂಧನೇ, ಹಯಪರಿಕರೇ ಚ" (ಶಮಂದ); ಹಗಲು ಗಳನಿಕ್ಕಿ ಬಿಗಿದಡೆ ನಾಯ ಬಾಲವದು ಬಳಿಕ ನೀಳಕೆ ಸಸಿನವಹುದೇ (ಶಕಶ. ೬೦-೯೯); ಮುತ್ತಿನ ಗದ್ದುಗೆ ಗರುಡನ ಹೆಗಲಿನೊಳೆತ್ತಿಸಿ ಬಿಗಿದು ಹಲ್ಲಣಿಸಿ ಅತ್ಯಂತ ಸೌಖ್ಯವ ಮಾಡಿ ಸಂತಸದಿಂದೆ ಪತ್ತಿದ ಶ್ರೀಕೃಷ್ಣರಾಯ (ವೇಶಹಶ. ೩೬-೩೭); ದೊಳುಹೊಟ್ಟೆಗೆ ನಾಗರ ಬಿಗಿದವನೇ . . . ದಯಮಾಡಯ್ಯಾ ದಂತಾಯುಧನೇ (ಗಕೀಶ.೦-೦೨). ೨. ಭದ್ರಪಡಿಸು; ಸಡಿಲವಾಗದಂತೆ ಮಾಡು; ಅಳ್ಳಕವಾಗಿಲ್ಲದಂತೆ ಮಾಡು: ಗುಲ್ಮದಂತೊತ್ತುವರ್ ಪೊಚ್ಚಿಜಸಂತೆ ಬಿಗಿದು ಟಟ್ಟುವರ್ (ರಮ್ಮಾಶ್ಯ. ೩-೭೩); ವಿಜಯವೀಣೆಯಂ ಕೊಂಡು . . . ತಂತ್ರಿಯಂ ಬಿಗಿದುರ ದೊಳ್ ಸಾರ್ಚಿ (ಶಂಹಂ. ೨-೩೦ ವ); ಬಿಗಿದ ಬೀಯಗ ಬದ್ದರದ ಬಂಡಿಗಳು (ಕುವ್ಯಾ.ಕ. ೦೭-೨೯). ೩. ಅವಕಾಶವಿಲ್ಲದಂತೆ ಒತ್ತಿ ಹಿಡಿದಿರು,— ಅಮುಕಿ ಹಿಡಿದಿರು; ಸಡಿಲವಾಗಿಲ್ಲದಿರು; ಹತ್ತೆಯಾಗಿರು: ಈ ಪ್ರಿಯಂವದೆಯು ಬಿಗಿಯಾಗಿ ಕಟ್ಟಿದ ವಲ್ಕಲದಿಂದ ನನ್ನ ಎದೆಯು ಬಿಗಿಯುತ್ತಿರುವುದು (ಶಾಕುಂತ. ೯-೬); ಈ ಅಂಗಿ ಮಗುವಿಗೆ ಬಿಗಿಯುತ್ತದೆ, ಹಾತಲಾಗುವುದಿಲ್ಲ (ರಂಶಿ). ೪. ವಸ್ತ್ರಮುಂತಾದುವನ್ನು ಉಡಲು ಭದ್ರವಾಗಿ ಕಟ್ಟು,— ಬಂಧಿಸು: ಸಪುರ ಬೀಳಿದಂ ಬಿಗಿದುಡಿಸಿ ಬೆಳಗುವ ದುಕೂಲಮಂ ಪೊದಯಿಸಿ (ಸಂಪಿರ. ೦೦-೪೩); ಕಂಸನರಸುಮಕ್ಕಳ್ಗಿಲ್ಲಮುಡಲುಂ ತುಡ[ಲುಮ]ಟ್ಟಿ ಸಂದಂಗಂ ಕೃಷ್ಣಂಗಮುಚಿವು ಪುಟ್ಟೆ ಕಲಿಗಂಟಿಕ್ಕಿ ತೆರಳ್ದಿ ಬಿಗಿದುಟ್ಟು ಪೊಯಿಕಯ್ಯ ನೆಂಬಂತಿರ್ದಂ (ಶಂಹಂ. ೩-೯೬ ವ); ಬಿಗಿದ ಗಂಡುಡಿಗೆಯಲಿ . . . ಸಸುನಗೆ ಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು (ಕುವ್ಯಾದ್ರೋ. ೯-೯೯). ೫. ಹೊಂದಿಸು; ಅಳವಡಿಸು: ಬಿಗಿದ ಸಾರಂಗದ ಮೇಲ್ಕಟ್ಟಿನೊಳಂ ಮಾಂಗಾಯ ಫಲಾವಳಿಗಳೊಳಂ . . . ಎಸೆವ ಮುಂಜಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನಪ್ರತಿಕೃತಿ ಯಿಂದರ್ಚಿಸಿ (ಕಾರಂಜ. ೬೪೦); ಬಿಗಿದ ರತ್ನಲ್ಲರಿ ಮುಂಗಿಲ ಹೊಸಕ್ಕದುಗಳ ಮಿಂಚಿನ . . . ತನಿಹೊಗರಿಜುದು ಪರಬಲದ ಕಡುವೇಸಗೆಗೆ ಕವಿದುದು ರಾಜಹಂಸಪ್ರಕರವೋಸರಿಸೆ (ಕುವ್ಯಾದ್ರೋ. ೦.೯೩); ಬಿಗಿದ ಬಂಗಾರಿಗಳ ವಿಸುನಿಯ ಜಗಲಿಗಳ . . . ವಿಲಾಸದಲಿ ಸೊಗಸಿತಾ ಮಂಟಪ (ತೊರರಾ. ೦-೦೩-೬). ೬. ರಚಿಸು; ನಿರ್ಮಿಸು: ಸಳಸು ರಿಪುಸಂಹಾರ ಕಾಲಾನಳನು ಕಾರುಣ್ಯದಲಿ ಬಿಗಿದನು ಜಲನಿಧಿಗೆ ಸೇತುವನು (ತೊರರಾ. ೬-೩ ಸೂಚನ); ಲೋಲಲೋಚನೆ ಬಳಲಿದುದ ಕಾಣುತ ವನಪಾಲರು ಪಕ್ಷಪಾತದಲಿ ಬಾಲೇಂದುಕಾಂತಸೋಪಾನದ ಬಿಗಿದ ವಿಶಾಲಸರಸಿಯ ತೋಜಿದರು (ಮೋಹತ. ೯-೯೦). ೭. ಕೂಡು; ಸೇರು: ಬಿಗಿದ

ಹುಬ್ಬಿನ ಭೀಮು ಹೊಕ್ಕನು ಗದೆಯ ತಿರುಗಿಸುತ (ಕುಮಾ.ದ್ರೋ. ೨-೬೨) : ಕರ ನಡುಗೆ ಮೈ ಬಲಿಯೆ ಹುಬ್ಬುಗಳುಚಿ ಬಿಗಿಯೆ . . . ವೀರಾವೇಶದಲಿ ಮಸಗಿದನು ಕಲಿಭೀಮ (ಕುಮಾ.ಕ. ೧೨-೧೦). ೮. ಕೂಡಿಸು ; ಸೇರಿಸು : ಹುಬ್ಬುಗಳನುಚಿ ಬಿಗಿದೌಡನೊಡೆಯೊತ್ತಿ . . . ಹೊಂಗಿದನಧಿಕರೋಷದಲಿ (ಕುಮಾ.ದ್ರೋ. ೧೯-೦೩) ; ರಘುಗರ್ಘುಗಿಸುದುದಾ ಉಭಯಕಾವೇರಿಯ ಬಿಗಿದೊಪ್ಪುತಿಹ ದಿವ್ಯಸೇತು (ಕಂನಂ. ೩-೬೦). ೯. ಗಾಢವಾಗು ; ಗಟ್ಟಿಯಾಗು ; ಬಲವಾಗು : ನಿನ್ನೀದಂ ಕೊಲಿಸತ್ತ್ವವಟಿ ಕೋಟ್ಕಳನಾದಮಾನುಂ ಬಿಗಿದಪ್ಪಿಕೊಂಡು ಸತ್ತುದರ್ಕೆದು ಕಾರಣಂ (ಶಬ್ದಾ.ಅ. ೩೯-೦೬) ; ಬಿಗಿದಮರ್ದಿರ್ದ ತೋಳ್ ಸಡಿಲೆ ಜೋಲೆ ಮೊಗಂ . . . ಮಜಸೊಳ್ದಿದಂದದೊಳೆ ಜೋಲ್ದ ನಿವೇಶನನಾ ಲತಾಂಗಿ ತೊಟ್ಟಿಗೆ ಕೊಳೆನೋಡಿ (ಕಂಕರ. ೨-೦೯) ; ಇಲ್ಲೀಗ ಕಂಡೆನಾದಡೆ ಚರಣದಲ್ಲಿ ದೊಪ್ಪನೆ ಬಿದ್ದು ಬಿಗಿದು ತಕ್ಕೈಸಿ . . . ತಲ್ಲೀಯವಪ್ಪೆನು (ಸಿದ್ಧರಾ. ೨-೩೩). ೧೦. ಬಿರುಸಾಗು ; ಕಠಿಣತೆಯನ್ನು ಹೊಂದು : ಕೇಳಂಗನೆ ನಿನ್ನ ಬೀಗಿ ಬಿಗಿದಿರ್ದ ಕುಚದ್ವಯಮಧ್ಯದಲ್ಲಿ ತಾಂ ಪಿಂಗದೆ ನಟ್ಟು ದಿಟ್ಟಿಯನವಂ ಕಿಟಿಲೆಂದನುಗೆಯ್ದು ತೂಗಿದಂ (ಅರಿತ. ೦೨-೦೩) ; ಬಿಗಿದೊಗೆವ ಕುಚದ್ವಂದ್ವವಿಂತಾಗವೇಡಾ ನಳಿತೋಳಿಂತಾಗವೇಡಾ (ಗದಾಯು. ೯-೬೦) ; ಬಿಗಿದುತ್ತುಂಗಕುಚಂ ಕದಕ್ಕದಿಸೆ ಹಾರಂ ತೂಗೆ (ಜಗಿ. ೧೦೦-೧೦೦೦). ೧೧. ಆವರಿಸು ; ಕವಿ ; ಮುಸುಕು : ಧಾರುಣಿಯೊಳುತ್ಪಾತ ಬಿಗಿದುದು (ಕುಮಾ.ಶ. ೦೩-೪೨) ; ಕತ್ತಲೆ ಬಿಗಿದುದವನೀತಳವ ಪೆಟ್ಟಿಗೆ ಮುಚ್ಚಿದಂದದಲಿ (ತಳಕ. ೩-೪೩). ೧೨. ಕವಿಯುವಂತೆ ಮಾಡು ; ಮುಚ್ಚು : ಭೀಮಸೇನನ ತಟಿಬಿ ನಿಂದನು ಭೀಷ್ಮ ಬಿಗಿದನು ಸರಳಲಂಬರವ (ಕುಮಾ.ಭೀ. ೬-೩). ೧೩. ಮುಚ್ಚಿಕೊಳ್ಳು : ಮೇಲುಗಾಣದ ಪಾರ್ಥನೆಂಬೀ ಕಾಳುಮೂಳನ ವಿಧಿಯನೇಪರಿವೇಳುವೆನು ಹರಿಯೆನುತ ಕಂಗಳನೆವೆಗಳಲಿ ಬಿಗಿದ (ಕುಮಾ.ಭೀ. ೩-೬೦) ; ರಾತ್ರಿಯೆಲ್ಲಾ ನಿದ್ರೆ ಒರದೆ ಈಗ ಕಣ್ಣು ಬಿಗಿಯುತ್ತಾ ಇದೆ (ರೂಢಿ). ೧೪. ಕುಂದಣಿಸು ; ಕೆಚ್ಚು : ಬಿಗಿದ ಮರಕತಮಣಿಯ ನೆಲಗಟ್ಟುಗಳ . . . ಲೋವೆಗಳ ಕಾಂತಿಯ ಲಳಿಯ ಲಹರಿಯೊಳಿದ್ದನವರಾರಿ (ಕುಮಾ.ಸ. ೩-೨೯) ; ಪಳುಕಿನಜಿಯಲಿ ಬಿಗಿದ ಬೀದಿಯ ನೆಲನ ನಿಳಯಶ್ರೇಣಿಗಳ ನುಜ್ಜ್ವಲಿಪ ಚಂದ್ರೋಪಲದ ಘನಸೋಪಾನಸಂಗ್ರಗಳ . . . ಪಸರದಿನೆಸೆದುದಾ ಪುರ (ತೊರವ. ೦-೯-೦೯). ೧೫. ಸಿದ್ಧಪಡಿಸು ; ಸಜ್ಜುಗೊಳಿಸು : ತವದೊಣೆಗಳಂ ಬಿಗಿದು ಗಾಂಡೀವವನೇಱಿಸಿ ನೀವಿ ಜೇವೊಡೆದು (ಕಂಪಕಾ. ೬-೩೬ ಕ); ಶಿವನ ಬೇಡಿದ ಶರವ ತೆಗೆ ಗಾಂಡಿವವ ಬಿಗಿ . . ಬವರಕೇಳೇಳು (ಕುಮಾ.ದ್ರೋ. ೪-೨೩). ೧೬. ಉಸಿರು ಅಥವಾ ಸ್ವರವು ಸಹಜವಾಗಿ ಹೊರಬರದಂತೆ ಕಂಠವು ಉಬ್ಬಿ ಕಟ್ಟಿಕೊಳ್ಳು,– ಅಡ್ಡಿ ಹೊಂದು : ಒಗುವ ಕಂಬನಿಗಳಲಿ ಕಂಠವ ಬಿಗಿದ ಸೆರೆಗಳ ಸೇದು ವಕ್ಕಿಯ ವಿಗತಪರಿತೋಷಿತನು ಪಾವನತರರಿಗಿಂತೆಂದ (ತೊರವ. ೦-೪-೬) : ಗೆಳೆಯರು ಬಿಗಿದ ಕಂಠದಿಂದಲೇ ಅವರನ್ನು ಬೀಳ್ಕೊಟ್ಟರು (ರೂಢಿ). ೧೭. ನಿರೋಧಗೊಳಿಸು ; ಅಂಕೆಯಲ್ಲಿಟ್ಟುಕೊಳ್ಳು ; ಹಿಡಿತದಲ್ಲಿರಿಸು : ಆತ್ಮನಂ ಭೇದಿಸಿ ಪ್ರಾಣವಾಯು ನಾಡಿಗಳನಱಿತು ಹಿಡಿವ ಭೇದವಂ ತಿಳಿದು ತೆಗೆವ ಬಿಗಿವ ಸಂಚವಂ ಕಂಡು . . . ಆತ್ಮಲಿಂಗದಲ್ಲಿ ಸಂಯೋಗವ ಮಾಡುವುದಾತ್ಮಯೋಗ (ಅರವ. ೨೯-೯೬) ; ಪ್ರತ್ಯಾಹಾರ:, ಉಪಾದಾನಂ . . . ಇಂದ್ರಿಯಗಳನ್ನು ಹಿಂದಿರುಗಿಸಿ ನಿಗ್ರಹಿಸುವಿಕೆ, ಆಶೆಯನ್ನು ಬಿಡದೆ ಬಿಗಿದು ಹಿಡಿಯುವಿಕೆ (ಸಿದ್ಧಾಂತ. ೩೬೦) ; ಹುಲ್ಗರಿಯ ಬಳವಿಗೆಯ ಬಿಗಿದುಸಿರೂಳಾಲಿಸುತ . . . ಎಲೆ ಅಹಂಭಾವ, ನಿಷ್ಠುರಿವೆಯೊ ಇಲ್ಲದಂದದೊಳು ತೊಲಗುತಿಹುದಿಲ್ಲಲಾ ನಿನ್ನ ಹೇವ (ಪುರಿಪೀ. ೩೩-೦). ೧೮. ಹೊಡೆ ; ಬಡಿ ; ಥಳಿಸು : ಎಲ್ಲಿ ಸಿಕ್ಕಿದರಲ್ಲಿ ಬಿಗಿವರು . . . ಒಡನೆಗೆವರು ನಿಂದು ಕಾದುವರು (ಮೋಹತ. ೧೨-೯೬) : ಅವನಕ್ಕ ಅವನನ್ನು ಎಳೆದು ಹಾಕಿ ನಾಲ್ಕು ಚೆನ್ನಾಗಿ ಬಿಗಿಧರಂತೆ (ಹೊಸಕ್ಕ. ೦೦೪). ೧೯. (ಹೊಟ್ಟೆ ಬಿರಿಯುವಂತೆ) ತುಂಬು,– ಭರ್ತಿಯಾಗು : ತನ್ನ ಉದರಂ ಬಿಗಿಯೆ ಗಜ್ಜನೆ ತೇಗುತಂ (ಐಸತ್ತ. ೨೩-೩೦). ೨೦. ಸೆಟೆದುಕೊಳ್ಳು ; ಸೆಡೆ : ಬಿಗಿದ ನರಗಳ ತೆಱೆದ ನೊರೆವಾಯ ಉಱುಗಿ ಬಾಗಿದ ಶಿರದ . . . ಹೇಸಿಕೆಯು ನಾತವಧಿಕಭಯಂಕರವು (ಐಸತ್ತ. ೪೬-೩೬) ; ಬಿಗಿದ ಸರಂಗಳುಬ್ಬರಿಪ ಬಲ್ಪಸಿಱ್ . . . ನಾತವಂ ನೆಗಳ್ವ ತದಂಗಕಾರ್ದೆಱಗಿ ರಘುವೆಮ್ಮೆನುತೋಡುವ ಮಕ್ಷಿಕಾಳಿಗಳ್ (ಪ್ರಶಂ. ೩೦-೩೩). ೨೧. ಸೆಳೆತದಿಂದ ಕೂಡಿರು ; ಎಳೆತವನ್ನು ಹೊಂದಿರು : ಗಾಯ ಒಣಗುತ್ತಾ ಬಂದಿರುವುದರಿಂದ ಬಿಗಿಯುತ್ತಿದೆ (ರೂಢಿ); ಅನಾರೋಗ್ಯದಿಂದ ಮೈ ಬಿಗಿಯುತ್ತಿಧೆ (ರೂಢಿ). ☞ ಈ ಪದವು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ. 'ಏಟು ಬಿಗಿ, ಭಾಷಣ ಬಿಗಿ' ಇತ್ಯಾದಿ.

**ಬಿಗಿಬಿಗಿ** (ದ್ವಿರುಕ್ತಿ) : ಅಚಲಿತಭಕ್ತನು . . . ಹೊಳಚಿ ತಂದಾ ಸೆಕ್ಕೆಗಳನೊಳಗೊಳಗೆ ಶೋಧಿಸಿ ತನ್ನ ಕಂಬಿಯ ನೆಲಹಿನಿತ್ತರದಲ್ಲಿ ಸುತ್ತಲಾಸೆಕ್ಕೆ ಬಿಗಿಬಿಗಿದು (ಐಸತ್ತ. ೪೩-೨೩) ; ಬಗಸೆಗೈಗಳಲಿ ನೀರ್ವಿಡಿವುತು ಶ್ರೀರಂಗೇಶ ಸೊಗಸುಗಾತಿಯರ ಮೇಲಿಡಲು ಒಗುವ ನೀರ್ಪೊಱಮ್ಮಸ್ಯರಿಸದೆ ಶ್ರೀಹರಿಯನು ಬಿಗಿಬಿಗಿದಪ್ಪಿದರಾಗ (ಕಂಶಂ. ೩೩-೦೨೩).

**ಬಿಗಿದುಕೊಳ್, ಬಿಗಿದುಕೊಳ್ಳು** = ೧. ಭದ್ರವಾಗಿ ಕಟ್ಟಿಕೊಳ್ಳು : ತನ್ನ ತೊಟ್ಟ ದಿವ್ಯಾಭರಣಂಗಳೆಲ್ಲವಂ ಕಳೆದು ದಿವ್ಯಶರಧಿಗಳು ಬಿಗಿದುಕೊಂಡು (ಕಂಶಕಾ. ೪-೦೨ ಪ). ೨. ಬಿಗುಮಾನವಾಗಿರು : ಬಿಗಿಯಲ್ಲಿರು : ಇವತ್ತು ಹೀಗೆ ಯಾಕೆ ಬಿಗಿದುಕೊಂಡಿದ್ದೀಯೆ ಶಾಂತಾ ? (ಮೂರುದಾ. ೦೬೪) ; ಅವನೊಮ್ಮೆ ತನ್ನ ಮುಖ ನೋಡಿದರೆ ಸಾಕು . . . ಬಿಗಿದುಕೊಂಡ ಮುಖ ಹಸನ್ಮುಖವಾಗುತ್ತದೆ (ಕುಸುಸಂ. ೦೬೦). **ಬಿಗಿದು ಬರು** = ಗಂಟಲಿನ ಸೆರೆಗಳು ಉಬ್ಬು ; ಗದ್ಗದವಾಗು : ಕಂಠವು ಬಿಗಿದು ಬಂತು. ಮುಂದೆ ಮಾತು ಹೊರಡದಾಯಿತು. (ಬೆಳಕ್. ೦೪).

[ದೇ.|| ತಮಿ. ಪಿಕಿ ; ತುಳು. ಬಿಗಿ ; ತೆಲು. ಬಿಗಿಯು]

**ಬಿಗಿ₂** (ನಾ). ೧. ಭದ್ರವಾಗಿರುವಿಕೆ ; ಗಟ್ಟಿಯಾಗಿರುವಿಕೆ : ಅವರ ಹಾಸಿಗೆಯ ಗಂಟು ಬಿಗಿಯಾಗಿಧೆ (ರೂಢಿ). ೨. ಬಲವಾಗಿರುವಿಕೆ ; ದುರ್ಬಲವಲ್ಲದಿರುವಿಕೆ : ಬಾವಿಯಿಂದ ನೀರು ಸೇದುವ ಹಗ್ಗ ಬಿಗಿಯಾಗಿರಬೇಕು (ರೂಢಿ). ೩. ಸಡಿಲತೆಯಿಲ್ಲದಿರುವಿಕೆ ; ಅಳ್ಳಕವಾಗಿಲ್ಲದಿರುವಿಕೆ : ನಿಱಿಯ ಬಿಗಿ ಪೈಸರಿಸೆ ಪೆಣ್ಮಾಚಿದಂಚಿದುಪ್ಪುಳ್ಪಾಸಿಗೆಳೆದೊಯ್ದೀನಿಯನಂ ಬಲ್ಪಿನಿಂದೆ (ಶ್ರೀಶಾ. ೧೦-೦೯) ; ದೊಡ್ಡಪನು ತೊಟ್ಟುಕೊಂಡ ಅಂಗಿಯು ಅವನ ಮೈಗೆ ಬಹಳ ಬಿಗಿಯಾಗುತ್ತಿತ್ತು (ಮುಂಬಯಿ. ೪-೯೯). ೪. ಮಜಬೂತಾದುದು : ಅವರ ಮನೆಯ ಬಾಗಿಲು ಬಿಗಿಯಾಗಿದೆ (ರೂಢಿ). ೫. ಕಟ್ಟುಪಾಡು ; ಭದ್ರತೆ ; ವ್ಯವಸ್ಥೆ : ಲಂಚ ಕಡಮೆಯಾಗಬೇಕಾದರೆ ಆಡಳಿತದಲ್ಲಿ ಬಿಗಿ ಮತ್ತು ದರ್ಪ ಹೆಚ್ಚಾಗಿರಬೇಕು (ಹಂಪಸಂ. ೦೬೩). ೬. ಕಟ್ಟುನಿಟ್ಟು ; ಬಿಗುವು : ಆ ಮಾತಿನಲ್ಲಿ ಬಿಗಿಯಿರದೆ ಸರಳಪ್ರಸನ್ನತೆ ಇದ್ದುದನ್ನು ಅರಿತು ಕೊಂಡು (ಶಕಂಶಾ. ೦೯) ; ಅವರ ಸ್ವಭಾವ ಬಿಗಿ. ಆದರೆ ಹೃದಯ ವಿಶಾಲವಾದದ್ದು (ಪುರು. ೧೯೯). ೭. ಕಷ್ಟ ; ಕಠಿಣ ; ಜಟಿಲ : ಈ ಭಾವಸಂವೇದನೆಯೋ ಭ್ರಮೆಯೋ ಆ ಬುದ್ಧಿವಾದವೇ ಭ್ರಮೆಯೋ ಎಂಬುದನ್ನು ಹೇಳುವುದು ಬಿಗಿ (ಸಾಹಿ. ೦೦೯) ; ವೀಣಾ ಬಾರಿಸಲಿಕ್ಕೆ . . . "ರೂಢೀ ಮಾಡಿದರ, ಅಷ್ಟೇನೂ ಬಿಗೀ ಅಲ್ಲ" (ಗಂಗಾಸಾ. ೯೪). ೮. ಮನಸ್ಸು ಬಿಚ್ಚಿ ಮಾತನಾಡದಿರುವುದು ; ಬಿಗುಮಾನ :

ಹುಡುಗರ ಹತ್ತಿರ ಅವನು ಬಹಳ ಬಗಿಯಾಗಿರುತ್ತಿದ್ದ (ಕಾಲಕು. ೨೦೯); ಆಕೆ ಬಂದಾಗಿನಿಂದ ಮನೆಗೆ ಹೋಗುವವರೆಗೂ ಬಹಳ ಬಿಗಿಯಲ್ಲೇ ಇದ್ದರು (ಅದೇ). ೯. ಕುದುರೆ, ಎತ್ತು ಮುಂತಾದ ಪ್ರಾಣಿಗಳ ಜೀನನ್ನು ಭದ್ರಪಡಿಸಲು ಅವುಗಳ ಒಡಲಿಗೆ ಕಟ್ಟುವ ಚರ್ಮದ ಪಟ್ಟಿ; ತಂಗುಪಟ್ಟಿ: "ಕಾಮಂಕರದೊಳೆಟ್ಟಿನ ಪಟ್ಟಿಯಲ್ಲಿ ಬಂಧನದೊಳಂ ದೊರೆಕೊಳ್ವ ಬಗಿಯೆಂಬ ಶಬ್ದವು" (ಕಬ್ಬಿಗ. ೬೨).೧೦. ಎರಡುತೋಳು ಗಳಲ್ಲಿ ಹಿಡಿಯಬಹುದಾದಷ್ಟು ಸೊಪ್ಪು, ಹುಲ್ಲು ಇತ್ಯಾದಿಗಳ ಕಟ್ಟು,—ಹೊರೆ: ಒಂದು ಬಿಗಿ ಹುಲ್ಲು ಕೊಡು (ಅದೇ). ೧೧. ಕುಸ್ತಿಯ ಒಂದು ವರಸೆ; ಮಲ್ಲಯುದ್ಧದ ಒಂದು ಪಟ್ಟು: ಬಿಡದೆ ಬಗಿಗಳ ಬಿಡಿಸಿ ಕಳಚುವರೊಡನೆ ... ಬಿನ್ನಣ ಬಿಡಿಕೆಗಳ ಬಂಧದಲಿ ಹೆಣಗಿ ದರುಭಯಪಟುಭಟರು (ಅಂತಿಮ. ೦೬-೨೦). ೧೨. [ಸಂಗೀತ] ತಂತೀ ವಾದ್ಯದಲ್ಲಿ ನಾದವನ್ನು ಹೆಚ್ಚಿಸುವ ಆರುಬಗೆಯ ಸಾಧನಗಳಲ್ಲಿ ಒಂದು: ಬಿರಟೆ ಚಕ್ಕು ಸನ್ನೆ ಬಿಗಿ ಜಬ್ಬು ಜೀವಾಳವೆಂಬಾಱು ಬಗೆಯಾದ ನಾದಕಟ್ಟುಗಳಿಂ ತಂತ್ರಿಗಳಂ ಪರಿಸಿ (ಶಿವಲೀ. ೨೪೭).

ಬಿಗಿಬಂದು=ಭದ್ರವಾದ ಕಟ್ಟುಪಾಡು; ಸುವ್ಯವಸ್ಥೆ: ತೊಗರೆಯ ತೊಗೆ ಲೇಸು ತಿಗುರಿಗೆ ಮೊಳೆ ಲೇಸು ... ದೊರೆಗಳಿಗೆ ಬಿಗಿಬಂದು ಲೇಸು (ಸರ್ವಜ್ಞ. ೬೨೨). ಬಿಗಿಬಂದು ಮಾಡು=ಭದ್ರವಾಗಿ ಅಳವಡಿಸು; ಭದ್ರಪಡಿಸು: ರಂಧ್ರಗಳಲ್ಲಿ ಕಬ್ಬಿಣದ ಸಳಿಯು ಹಾಯ್ದು ಹೋಗಿ ಪತ್ರಗಳನ್ನೆಲ್ಲ ಸೂಚಿಯು ಕವಚಕ್ಕೆ ಬಿಗಿಬಂದು ಮಾಡಲು ಬರುವಂತೆ ಒಂದು ಬಗೆಯ ಯಾಂತ್ರಿಕವ್ಯವಸ್ಥೆಯಿರುತ್ತದೆ (ಗ್ರಂಥಾಂ. ೯೯). ಬಿಗಿ ಮಾಡು = ಭದ್ರಗೊಳಿಸು: ಹೀಗೆ ಬಿಗಿ ಮಾಡಿದ ನಂತರ ಅಕ್ಷರ ಮತ್ತು ಪಡಿಯಚ್ಚುಗಳ ಮುಖಭಾಗವನ್ನು ಕುಂಚ(Brush)ದಿಂದ ಚೊಕ್ಕಟಗೊಳಿಸಬೇಕು (ಮುದ್ರಣ. ೩೬). [< ಬಿಗಿ$_1$./ ತಮಿ. ತೆಲು. ಬಿಗಿ]

**ಬಗಿಕಟ್ಟು** 'ಬಿಗಿಗಟ್ಟು' ನೋ.

**ಬಗಿಕಲ್ಲು** (ನಾ). ಕಮಾನಿನ ಕಟ್ಟಡವನ್ನು ಮೇಲುಭಾಗದಲ್ಲಿ ಸೇರಿಸುವ ಕಲ್ಲು; ನೆತ್ತಿಗಲ್ಲು: (ಶಿಲ್ಪಶಾ. ೩೦). [ಬಿಗಿ$_1$+ಕಲ್ಲು (<ಕಲ್$_3$)]

**ಬಗಿಗಟ್ಟು**, ಬಿಕ್ಕಟ್ಟು, ಬಿಗಿಕಟ್ಟು (ನಾ). ೧. ಕಟ್ಟುಪಾಡು; ಬಿಗಿಯಾದ ನಿಯಮ,—ಅಂಕೆ: ತಮ್ಮ ನಾಡನ್ನು ಒಂದು ಬಿಗಿಗಟ್ಟಿನಲ್ಲಿ ಇಟ್ಟುಕೊಂಡು ಬಾಳುತ್ತಿದ್ದ ತಮಿಳರ ಬೇರಿಗೇ ಬಿಸಿನೀರನ್ನು ಎರೆದು ... ಜಯಭೇರಿಗಳನ್ನು ಬಾರಿಸಿದರು (ಸಹಿ. ೦೬೨). ಬಿಕ್ಕಟ್ಟು: ೨. ಭದ್ರವಾದ ಕಟ್ಟು,—ಬಂಧನ: ಬಿಕ್ಕಟ್ಟಿದು ಬಿಕ್ಕಟ್ಟು ಚೌಕಟ್ಟಿನ ಗುಟ್ಟು (ಅರಳು. ೪೦೩-೦೨). ೩. ಕಷ್ಟ; ತೊಂದರೆ: ಆ ಗುಡ್ಡದ ಮೇಲಿಂದ ಆಚೆ ಕಡೆಗೆ ಹೋಗಬೇಕಾದರೆ, ಜೀವಕ್ಕೆ ಅಪಾಯಪಡಿಸುವಂಥ ಬಿಕ್ಕಟ್ಟಿನ ಘಟ್ಟಗಳುಂಟು (ಮುಂಬಯಿ. ೩-೦೬); ಹರಿಕುಲಿಶನಿಗೆ ಬಿಕ್ಕಟ್ಟಿನ ಪರಿಸ್ಥಿತಿಯೊದಗಿತು (ಕುಡಿಸ. ೦೦೦). ೪. ಸಂದಿಗ್ಧಪರಿಸ್ಥಿತಿ; ಇಕ್ಕಟ್ಟು: ಚಾರುಪೊನ್ನೇರನು ... ರಾಷ್ಟ್ರಕೂಟಸಾಮ್ರಾಜ್ಯದಲ್ಲಿ ಬಿಕ್ಕಟ್ಟು ತಲೆದೋರಿದಾಗ ತನ್ನ ನಿಷ್ಠೆಯನ್ನು ತಲಕಾಡುಗಂಗರ ಕಡೆಗೆ ಸರಿಸಿದನು (ಪೊನ್ನಂ. ೨೬); ಇಂಥ ಬಿಕ್ಕಟ್ಟಿನಲ್ಲಿ ಧೈರ್ಯದಿಂದ ನೀವು ಇದ್ದೀರಲ್ಲ! (ಬಿದಿರು. ೬೩). ಬಿಗಿಕಟ್ಟು: ೫. ಸಾಹಿತ್ಯಿಕರಚನೆಗಳಲ್ಲಿ ಇರುವ ಗಾಢವಾದ ಸಂಬಂಧ,—ಹೊಂದಾಣಿಕೆ: ಇವುಗಳಲ್ಲಿ ಬಿಗಿಕಟ್ಟೂ ಇಲ್ಲ, ಹೊಸತನವೂ ಇಲ್ಲ (ಹಾಹಿ. ೬): ಈ ಪ್ರಸ್ತಾರದ ಮತ್ತು ಲಯದ ಬಿಗಿಕಟ್ಟಿಲ್ಲದ ಕೀರ್ತನೆಗಳು ಸಹಜಮನೋಹರವಾದ ಗೇಯತೆಯನ್ನು ಪಡೆದುದು ಹರಿದಾಸಸಾಹಿತ್ಯದ ವೈಶಿಷ್ಟ್ಯವೆಂದು ತೋರುತ್ತದೆ (ಕಹಾ. ೨೪೬). [ಬಿಗಿ$_2$ + ಕಟ್ಟು$_2$. / ಪ್ರಾಕೃ. ಬಿಕಟ]

**ಬಗಿಗೊಳಿಸು** (ಕ್ರಿ). ೧. ಎಳೆದು ಭದ್ರಗೊಳಿಸು; ಬಿಗಿಮಾಡು: ನಿರೂಪಣೆ ... ಒಂದು ಎಳೆಯಿಂದ ಇನ್ನೊಂದು ಎಳೆಯನ್ನು ಬಿಗಿಗೊಳಿಸುವ ಹೆಣಿಕೆಯ ರೀತಿಯಂತೆ ... ನಡೆಯುತ್ತದೆ (ಹೊಸಕ. ೨೯೩). ೨. ಬಂದೋಬಸ್ತು ಮಾಡು; ಕಟ್ಟುನಿಟ್ಟಾಗಿರುವಂತೆ ಮಾಡು: ಸಿಂಹಾಸನವನ್ನೇರಿದ ಕೂಡಲೇ ಆಡಳಿತವನ್ನು ಬಿಗಿಗೊಳಿಸಿ ಸಮಸ್ತ ಅಧಿಕಾರವನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡನು (ಕ್ರೈಲೇಪ. ,೪). [ಬಿಗಿ$_2$ + ಕೊಳ್$_1$ + — ಇಸು$_3$]

**ಬಗಿತ** (ನಾ). ೧. ಕಟ್ಟಿದುದು; ಕಟ್ಟು: ಬೇಕಾದಾಗ ಸುಲಭವಾಗಿ ಈ ಬಿಗಿತವನ್ನು ಸಡಿಲಿಸಿ ಬೇರೆ ಪತ್ರಗಳನ್ನು ... ಸೇರಿಸಿಕೊಳ್ಳಲು ಬರುವಂತೆ ಇರುತ್ತದೆ (ಗ್ರಂಥಾಂ. ೯೪). ೨. ಗಟ್ಟಿ; ಭದ್ರ: ಕರವು(ವು)ಡಿ ಸಾಸಿವೆ ಲೋಯಿಸರದ ತಿರುಳೆಂಬವನಿಟ್ಟಡಸಿ ಬಿಗಿತಾಗಿ ಕಟ್ಟಲ್ ನಿಡುಪೊಂಗುಡಿದಿರ್ದ ಕೆಯ್ಗ ಭಂಗಂಬಡುಗುಂ (ಕೂಲೀಕಾಲ. ೯-೧೩). ೩. ಗಟ್ಟಿಯಾಗಿ ಕಟ್ಟುವಿಕೆ; ಭದ್ರಗೊಳಿಸುವಿಕೆ: ಬಿಗಿತಂ ಬಿಗಿತಂಗಳ್ (ಶಬ್ದಾನು. ೩೩೪ ವ್ಯಾಖ್ಯೆ); ಉಪನಾಹಃ, ನಿಬಂಧನಂ—೨ ವೀಣೆಯ ತಂತಿ ಕಟ್ಟುವ ಬಾಯಿಗೂ ಬಿರಡೆಗಳಿಗೂ ಕಟ್ಟಿನ ಬಿಗಿತಕ್ಕೂ ಹೆಸರುಗಳು (ನಿಘಂಟು. ೩೯). ೪. ಎಳೆತ; ಸೆಳೆತ: ಬೆನ್ನು ಬಿಗಿತದಿಂದ ಯಾವ ಕೆಲಸವನ್ನೂ ಮಾಡಲಾಗಲಿಲ್ಲ (ಅದೇ). ೫. ಹೊಡೆತ; ಪೆಟ್ಟು; ಏಟು: ಅವರು ಎರಡು ಬಿಗಿತ ಬಿಗಿದು ಹುಡುಗನನ್ನು ಕರೆತಂದರು (ಅದೇ). [ಬಿಗಿ$_1$ + — ತ$_2$]

**ಬಗಿತರ್ಬು** (ಕ್ರಿ). ಗಾಢವಾಗಿ ಆಲಿಂಗಿಸು; ಬಿಗಿಯಾಗಿ ಅಪ್ಪು: ತೊಳ್ತಾಕೆ ಬಿಗಿತರ್ಬಿ ಮಗುವನೊತ್ತಿಟ್ಟದರ ಬಾಯಲ್ಲಿ ಸೇರ್ದ ಮಣ್ ಗಟ್ಟಿಯಂ ತೆಗೆವಂತೆ (ಶಾಂಪ. ೩-೪೭). [ಬಿಗಿ$_1$+ತರ್ಬು$_1$ (< ತಬ್ಬು$_1$)]

**ಬಗಿನೇಣು** (ನಾ). ಕಟ್ಟುವ ಹಗ್ಗ: ವಿಗಡದ ಪುಲಿ ಕರಡಿಗಳ ಬಿಗಿನೇಣ ಪಱಿದು ಕಾದುವ ವೀರರ ಮೊತ್ತ ಸೊಗಸ ಬೀಱುದುದೊಲಗದೆ (ಕಂಪಪ. ೨೦-೯೮). [ಬಿಗಿ$_1$ + ನೇಣು (< ನೇಣ್$_1$)]

**ಬಗಿಪಡಿಸು** (ಕ್ರಿ). ಭದ್ರಗೊಳಿಸು: ಜೋಡಿಸಿದ ಮೊಳೆಗಳ ಕರಡುಪ್ರತಿಯನ್ನು ತೆಗೆದು ... ಮುದ್ರಣಕ್ಕೆ ಅಣಿ ಮಾಡುವಂತೆ ಚೇಸ್‌ನಲ್ಲಿ ಬಿಗಿಪಡಿಸಬೇಕು (ಮುದ್ರಣ. ೩೭). [ಬಿಗಿ$_2$ + ಪಡು$_1$ + — ಇಸು$_3$]

**ಬಗಿಪು** (ನಾ). ೧. ಬಂಧನ; ಬಿಗಿತ; ಕಟ್ಟು: ಕರ್ಮಬಂಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ (ಅಂತ್ಯ. ೬-೭); ಪದಮುಲರ್ಗಳೆಂದದಿಂ ಬಂಧದ ಬಿಗಿಪಿನೊಳೊಂದಿ ನಿಲೆ ಸಮುಜ್ವಲಕಾಂತಿ (ವರ್ಧಮಾ. ೦.೦೦); ಕೋಳ ಬಿಗಿಪೊಂದಿರೆ ಕೋಡುತಳಂಗಳಂ ಸಮಂತೊಡನೊಡನಪ್ಪಿದರ್ ಭರದ ಕಾಳಸಯಂತಿರೆ ತಮ್ಮೊಳಿರ್ವರುಂ (ಕಾವ್ಯಸಾ. ೬೩೬). ೨. ದೃಢತೆ: ದಾರ್ಢ್ಯ; ಗಟ್ಟಿತನ: ಬಿಗಿಪು ಸಡಿಲ್ದು ಪಲ್ಗಳಿಸುಂ ಚಲಿಸುತ್ತಿದೆ ಮೆಯ್ಯ ನುಣ್ಪೊವಲ್ ... ಸುರ್ಕುತಿದೆ (ಕಳಾ. ೬-೨೯೪). ೩. ಬಿರುಸು; ಕರ್ಕಶತೆ: ಬಿಗಿಪಿಂ ಬಿಣ್ಪೊಲೆ ಪೊಂಗಿ ಪೊಣ್ಮೆದೊಡಂ (ಕಳಾ. ೬-೨೩೯). [ಬಿಗಿ$_1$ + — ಪು$_2$]

**ಬಗಿಮುಷ್ಟಿ** (ನಾ). (ಅಲಂ) ಭದ್ರವಾದ ಹಿಡಿತ; ಬಿಗಿಯಾದ ಹತೋಟಿ: ಈ ಬಿಗಿಮುಷ್ಟಿಯಲ್ಲಿರುವ ಮೈಸೂರು ಭದ್ರವಾಗಿಯೇ ಉಳಿಯುವುದು (ಬಾಳಿಕ. ೦೪). [ಬಿಗಿ$_2$ + ಮುಷ್ಟಿ$_2$]

**ಬಗಿಮೊಗ** (ನಾ). ಬಿಗಿದುಕೊಂಡಿರುವ ಮುಖ: ಅರುಣತಿವತ್ತ ಮೆಯ್ಯಾಗಿ ಮೊಗು ... ಚಿತ್ರಿತವೇತ್ರದಂಡಮೊಪ್ಪಿರೆ ಸಹವಾಸಿಗಳ್ ತಳರ್ದರಾತ್ಮ ನಿಯೋಗನಿವಿಷ್ಟನಿಷ್ಠಿತರ್ (ಶಾಂತೀಶ್ವ. ೦೩-೯೮). [ಬಿಗಿ$_1$ + ಮೊಗ]

**ಬಗಿಮೊಳೆ** (ನಾ). ೧. (ಕೀಲನ್ನು) ಭದ್ರಪಡಿಸುವ ಮೊಳೆ,—ಆಣಿ: ಗುಡಿಯೊಡೆಯಂಗೆ ಕಂಭವೊಂದು ಬಿಗಿಮೊಳೆಯೆಂಟು ಕಂಭಕ್ಕೆ ಕಟ್ಟಿದ ಆಧಾರದಾರವೈದು (ಮುಸುಗುಂ. ೪. ೩೩೦-೩೭). ೨. "ಹಡಗುಕಟ್ಟಡದಲ್ಲಿ ಉಪಯೋಗಿಸುವ ಒಂದು ತೆರದ ಬಿಗಿಮೊಳೆ" (Dump. ಇಂಕಾ). [ಬಿಗಿ$_1$ + ಮೊಳೆ$_2$]

**ಬಿಗಿಯಪ್ಪು** (ಕ್ರಿ). ಗಾಢವಾಗಿ ಆಲಿಂಗಿಸು. _ ತಬ್ಬು : ಕಳಿದುವು ಮೆಯ್ಯ ಸುಯ್ಯ ಪದವೆಂಕೆಗಳಂ ಬಿಗಿಯಪ್ಪಿದವ್ವುಗಳ್ (ಶಂಶಕಾ. ೩-೨೬); ಬಾ ಸುತಯೆನುತ ತೆಗೆದು ಬಿಗಿಯಪ್ಪಿ (ಶದ್ವಕಾ. ೩-೦೬) ; ಹಸುಳೆ ಯದಟನ ನುಡಿಯ ಕೇಳಿದು ನಸುನಗುತ ಧರ್ಮಜನು ಘನಪೌರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ (ಕುವ್ಯಾದ್ರೋ. ೯-೩೬).

**ಬಿಗಿಯಪ್ಪಿಕೊಳ್** = ಬಿಗಿಯಪ್ಪು : ನೀಱಿಸ ಕರ ಬಿಗಿಯಪ್ಪಿಕೊಂಬೆನು ದೆಚ್ಚಂತೆ (ಕಂಪಹ. ೯-೧೦೬). [ಬಿಗಿ$_1$ + ಅಪ್ಪು$_1$]

**ಬಿಗಿಯಿಸು**, ಬಿಗಿಸು (ಕ್ರಿ). ೧. ಕಟ್ಟು ; ಬಂಧಿಸು : ತ್ರಿಗುಣಿಸೆ ನಯನವಿಭೂಷಾಂಶುಗಳಲಗಿನ ರುಚಿಯನಲಗನೆರಡುಂ ಕೈಯೊಳ್ ತ್ರಿಗುಣಿಸಿ ಚಿತ್ರಂಬಡೆದಳ್ ಬಿಗಿಯೆ ಕುಚಂ ಬಿಗಿಯಿಪಂತು ಕಂತುಗೆ ದೋಣೆಯಂ (ಜಗಂ. ೩-೧೬). **ಬಿಗಿಸು** : ೨. ಕಟ್ಟಿಸು ; ಬಂಧಿಸು ವಂತೆ ಮಾಡು : ಕಳ್ಳರಿರ್ಕ್ಕೆಗಳಂ ಬಿಗಿಸಿ ತೊದಲಂ ನುಡಿಸಿ ಸುಳ್ಳು ನಾಲಗೆಯ ನಡುಗಿಸುತರವನೆರಗುಂ (ಜಾಜೀಚ. ೭೭-೦೯೦). ೩. ನಿರ್ಮಿಸು ; ರಚಿಸು ; ಕಲ್ಪಿಸು : ನಗರದುಪಕಂಠದಲಿ ಕೋಟೆಯ ಬಿಗಿದು ಬಡಿಸಿದನದ್ವರಕೆ ಸಲುವಗಣಿತಾಖಿಳವಸ್ತುಗಳ ನೆರಹಿದನು ನರನಾಥ (ಕೊರಚಾ. ೦-೭-೯). ೪. ಕುದುರೆಗೆ ತಂಗುಪಟ್ಟಿಯನ್ನು ಕಟ್ಟಿ ಸಿದ್ಧಪಡಿಸು : ಚಂದ್ರಹಾಸಂ . . . ಬಳಿಕ ಬಿಗಿಸಿ ನಿಜವಾಜಿಯಂ ಬಂದಡರ್ದನು (ಕೈಜೀಚಾ. ೩೦-೯೩). ೫. ಹೊಡಸು ; ಥಳಿಸುವಂತೆ ಮಾಡು : ಅವನಿಗೆ ನಾಲ್ಕು ಬಿಗಿಸಿದರೆ ಸರಿ ಹೋಗುತ್ತಾನೆ (ಕೂಆ).

**ಬಿಗಿಸಿಕೊಳ್ಳು** = ೧. ಕಟ್ಟಿಸಿಕೊಳ್ಳು : ಕಾಳಗದೊಳೆಲ್ಲರನಿಕ್ಕಿ ಪಟ್ಟುವ ಬಿಗಿಸಿಕೊಂಡವರಲ್ಲವೇ (ಕುವ್ಯಾಕ. ೯-೯೯). ೨. ಹೊಡೆಸಿಕೊಳ್ಳು; ಪೆಟ್ಟು ತಿನ್ನು : ನೀನು ಹೀಗೆ ಒಂದೇ ಸಮನೆ ಹಠ ಹಿಡಿದರೆ ಚೆನ್ನಾಗಿ ಬಿಗಿಸಿಕೊಳ್ಳುತ್ತೀಯೇ (ಕೂಆ). [ಬಿಗಿ$_1$ + –ಇಸು$_1$]

**ಬಿಗಿಯುಡುಪು** (ನಾ). ಸಡಿಲವಾಗಿಲ್ಲದಿರುವ ತೊಡುಗೆ ; ಮೈಗೆ ಅಂಟಿಕೊಂಡಿರುವ ಉಡುಗೆ : ಬೇಸಿಗೆಯಲ್ಲಿ ಬಿಗಿಯುಡುಪುಗಳನ್ನು ಧರಿಸಿದರೆ ತುಂಬ ಸೆಕೆಯಾಗುತ್ತದೆ (ಕೂಆ). [ಬಿಗಿ$_1$ + ಉಡುಪು]

**ಬಿಗಿಯುಡೆ** (ನಾ). = ಬಿಗಿಯುಡುಪು : ಅವಳು . . . ರೇಷ್ಮೆಯ ಬಿಗಿಯುಡೆಯನ್ನು ಧರಿಸಿದ್ದಳು (ಕೃಪಕು. ೯೩೦). [ಬಿಗಿ$_1$ + ಉಡೆ$_1$]

**ಬಿಗಿವಡು** (ಕ್ರಿ). ಕಟ್ಟಲ್ಪಡು ; ಜೋಡಣೆಯಾಗು : ಬಲಗಡೆಗಾಗಿ ಬಾಗಿ ಬಿಗಿವಟ್ಟುಜಿಸ್ ಬಟ್ಟಿತೆಂಬಿನವುಲ್ಲರ ಸರಂಗಳೊತ್ತರಿಸೆ (ಶಶಿಪ. ೩-೭). [ಬಿಗಿ$_2$ + ಪಡು$_1$]

**ಬಿಗಿವಡೆ** (ಕ್ರಿ). ೧. ಬಂಧನಕ್ಕೊಳಗಾಗು ; ಸೆರೆ ಸಿಕ್ಕು; ಕಟ್ಟುಬೀಳು : ಅಡವಿಯಲಿ ಫಣಿಭೋಗದಲಿ ಬಿಗಿವಡೆದು ಬಳಲಿದ ಭೀಮಸೇನನ ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ (ಕುವ್ಯಾಅ. ೦೬ ಸೂಚಕ); ರಾವಣಸುತನಿನುಬುಜಭವಾಸ್ತ್ರದಲಿ ಬಿಗಿವಡೆದನಾ ಹನುಮ (ಕೊರಚಾ. ೩-೭ ಸೂಚಕ). ೨. ಅಳವಡಿಕೆಯಾಗು ; ಹೊಂದಿಕೊಂಡಿರು : ಮುಂಗು ರುಳೊಳು ಬಿಗಿವಡದಿಹ ಮಣಿಯ ಕುಚ್ಚುಗಳ . . . ಕಡುಚೆಲುವೆಯರೆಸೆದಿಹರು (ಕಂಪಹ. ೬-೦೦೯). ೩. ಉಬ್ಬು; ಗರ್ವಿಸು : ದೊರೆಕೊಂಡ ಪೊಸಸೊಗದ ಸುಗ್ಗಿಯ ಸುರ್ಗಿನೊಳ್ ಬಿಗಿವಡೆದಗ್ಗದ ಸಗ್ಗದ ಜೋಸೆಯ ರೊಂದು ನೆರವಿಯೊಳ್ ದೇಸಿಯಿಂ ಬೆರೆದಾಗಳುಂ ಬಿನದಿಸುತ್ತಿ (ರಾಪಟಾಶ್ಚ. ೦೩೭-೦೭). ೪. ಕಠಿಣವಾಗು; ದೃಢವಾಗು : ಸತ್ಕ್ಷೋಮ ಲಾಂಗಿಯ ಪೇರುರದಿ ಹೇಮಾಬ್ಜಮುಕುಳಸ್ತನ ಬಿಗಿವಡೆದಿರೆ ಭಾವುಕ ಗೊಂಡು ವೀಕ್ಷಿಸಿದ (ವೋಶಕ. ೦೭-೩೭). [ಬಿಗಿ$_2$ + ಪಡೆ$_1$]

**ಬಿಗಿವಾತು** (ನಾ). ಗಂಭೀರವಾದ ಮಾತು : ಬಿಗಿವಾತು ಮೆಲ್ವಾತು ನಗೆವಾತು . . . ಸೊಗವಾತುಗಳಿಂದ ಸೊಗಸ ಕಿವಿಗೆ ಸೂಸುವುದು (ಶಶಿಪ. ೬-೦೫೭ ಸಾಂಗತ್ಯ). [ಬಿಗಿ$_2$ + ಮಾತು$_1$]

**ಬಿಗಿವಿಡಿ**, ಬಿಗಿಹಿಡಿ (ಕ್ರಿ). ೧. ತಡೆ; ನಿಗ್ರಹಿಸು; ಹತೋಟಿಯಲ್ಲಿಟ್ಟುಕೊಳ್ಳು : ನೀನಡಕವಿರವೇಟ್ಟುಂ ; ಸಿಡಿಲ್ದುಗುವ ಸೊರ್ಕನುಡಿ ಬಿಗಿವಿಡಿಯವೇಟ್ಟುಂ (ಐದ್ವಶ್ರ. ೦೮-೩೫೩). **ಬಿಗಿಹಿಡಿ** : ೧. ಪರರ ರೀತಿಗೆ ಹರಿವ ಮನವನ್ನು ಬಿಗಿಹಿಡಿದು . . . ವರಸನಾತನಧರ್ಮವೇ ಮಾನ್ಯವೆಂದದನು ಧರಿಸಿ ತರೆಯಲ್ಲಿ ಮರೆಯದೆ ಪೂರ್ವಿಕರನು (ಕಪ್ರ. ೦೫-೩) ; ಅವಳು ಉಕ್ಕಿ ಬರುತ್ತಿದ್ದ ನಗುವನ್ನು ಪ್ರಯಾಸದಿಂದ ಬಿಗಿಹಿಡಿದಳು (ತ್ರಿಪಕು. ೩೨೨). ೨. ಗಟ್ಟಿಯಾಗಿ ಹಿಡಿದುಕೊಳ್ಳು : ಭದ್ರವಾಗಿ ಹಿಡಿ : ಈ ಕುದುರೆಯೇರಿ, ಲಗಾಮು ಬಿಗಿಹಿಡಿದು ಸವಾರಿ ಮಾಡುವುದಷ್ಟು ಸುಲಭವಲ್ಲ (ಕಂಕು. ೩೦-೨೦).

**ಬಿಗಿ ಹಿಡಿದುಕೊಳ್ಳು** = ಅಂಕೆಯಲ್ಲಿಡು; ಹಿಡಿತಕ್ಕೆ ತರು : ಅವಳು . . . ಮನಸ್ಸನ್ನು ಬಿಗಿ ಹಿಡಿದುಕೊಂಡು ರೋಗಿಯ ಪರೀಕ್ಷೆ ಮಾಡ ಹೊರಟಳು (ಕಂಕು. ೯೯). [ಬಿಗಿ$_1$ + ಪಿಡಿ$_1$]

**ಬಿಗಿವೊಂದು** (ಕ್ರಿ). ಬಿಗಿಕಟ್ಟಿನಿಂದ ಕೂಡಿರು ; ಬಿಗಿಯಾದ ಬಂಧವನ್ನು ಹೊಂದು : ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರ ಕಾವನೊಲವಿಂದೊರೆದೆಂ (ಕಬ್ಬಿಕಾ. ೦೬). [ಬಿಗಿ$_2$ + ಒಂದು$_1$]

**ಬಿಗಿಸು** 'ಬಿಗಿಯಿಸು' ನೋ.

**ಬಿಗಿಹಿಡಿ** 'ಬಿಗಿವಿಡಿ' ನೋ.

**ಬಿಗು** 'ಬಿಗುವು' ನೋ.

**ಬಿಗುಗಟ್ಟು** (ನಾ). ಬಲವಾದ ಕಟ್ಟು; ಬಿಗಿಯಾದ ಬಂಧನ : ಜಗದ ಜಂಜಡದ ಕವಡುಮಾಯೆಯ ಬಿಗುಗಟ್ಟಂ ಕಟ್ಟುವಡೆದಾಂ . . . ಬಲ್ಲಿದರ ನೆರೆಯ ಮಾಜೆಯ ನೆರವಂ ಪಾರುತುಮಪೂರ್ಣದಾದೆಂ (ರಾಷಾಚ್ಚ. ೧೧೯-೬). 'ಬಿಗಿಗಟ್ಟು' ಪರಾ. [ಬಿಗು (<ಬಿಗುವು) + ಕಟ್ಟು$_2$]

**ಬಿಗುಡು** (ನಾ). ಬೇನೆ ; ನೋವು : ಉಪ್ಪುನೀರಂ ದಿನಂಪ್ರತಿ ಪಾಕತನದಿಂದ ತಪ್ಪದೇ ಹೀರಿದಾ ತರೆಬಿಗುಡು ಗಗನದೊಳಗೊಪ್ಪದಿಂ ಪರಿವ ದೇವಾಪಗೆಯ ಮಧುರತರವಾರಿಯ ಹೀರಿ ಹೀರಿ ಚಪ್ಪರಿಸಿವಲ್ಲದೇ ಹೋಗ ದೆಂದೆನುತುಮಾ ನೆಪ್ಪಿಂಗೆ ತದ್ವನಧಿಯಿಂದ ವಡಬಾಗ್ನಿಯೇ ಉಪ್ಪರಿಸಿ ನೆಗೆವಂತೆ ಉಷ್ಣಕಿರಣಂ ಮೂಡಿ ನೆಗೆದುದಂಬರತಳಕ್ಕೆ (ಸಪ್ಪುಶಾ. ೦೨-೯). 'ಬಿಗಡ$_2$' ಪರಾ. [ಬಿಗು (≤ ಬಿಗುವು) + – ಡು$_1$]

**ಬಿಗುನಡೆ** (ನಾ). ಕುದುರೆಯ ಒಂದು ಬಗೆಯ ನಡಗೆ : "ರೇಚಿತಂ— ಬಿಗುನಡೆ, ಜಾರುನಡಿಕೆ, ನೀಡುನಡಿಕೆ" (ಸಿದ್ಧಾಂ೬. ೨೫೦). [ಬಿಗು$_1$+ನಡೆ$_1$]

**ಬಿಗುಪು**, ಬಿಗುಹು (ನಾ). ೧. ಭದ್ರವಾದ ಜೋಡಣೆ ; ಬಿಗಿಯಾದ ಸೇರುವೆ : ಕೂಪಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ ಕೀಲ್ ಕಟಲೆ ಬಿಗುಪು ಬಿಟಲೆ . . . ನಾವಿಕಾಜನಮೆರ್ದೆಗೆಟ್ಟು ಬಾಯ್ಬಿಟ್ಟು ಸುಯ್ದು (ಕಂಹಂ. ೯-೦೯ ವ); ಇಸೆ ಬಗೆಯನುರ್ಚಿ ಧೈರ್ಯದ ಬೆಸುಗೆಯ ಬಿಗುಪಂ ಸಡಿಲ್ಚಿ (ಕೃಕಹಂ. ೨೬-೨೦). ೨. ದೃಢತೆ ; ಬಿರುಸುತನ : ಭವಪಾಶದ ಪುದಿದ ಬಲ್ಕಟ್ಟು ಸಡಿಲುವ ತೆಱದಿ ಸಡಿಲಲಂಗದ ಬಿಗುಪು ಗರ್ಭಿಣಿಗೆ ನವಮಾಸ ಪೂರ್ಣವಾದುದು (ಚಾಪಕಂ. ೩-೫೬). ೩. ಶಿಸ್ತು : ಕತ್ತೆತ್ತಿಕೊಂಡು ಸಿಪಾಯಿಗಳಂತೆ ಬಿಗುಪಿನಿಂದ ನಡೆಯುತ್ತಿದ್ದರು (ಕಶ್ಯಕ. ೦೯). ೪. ಗರ್ವ; ಠೀವಿ; ದರ್ಪ : ದುರ್ಬಲಂ ನಿನ್ನ ಒಳ್ಪೞೆವು ಇಲ್ಲಿ. ಏತಕೆನೆ, ಬೇರಿಶಾರಯ್ಕೆಯಿಲ್ಲದ ಬಱಿಬಿಗೆಯು ಬಿಗುಪೊಂದೆ ವ್ಯರ್ಥಂ (ಐದ್ವಶ್ರ. ೫೯-೦೦೭೩). ೫. ರಭಸ; ಜೋರು : ಬಲ್ಲು ಲೇಸು ಗೆಲವರಿದೆಂಬಂತೆ ಬಿಗುಪು ಲೇಸು ಕಳನ ಮೇಗಿರಿದೆಂಬಂತೆ (ಧರ್ಮಾಮೃ. ೬-೮೦); ಕಾಳಗವೇ ಜೀವಾಳವಾಗಿರುವ ಬಯಲಾಟದಲ್ಲಿ, ಬಯಲಿನಲ್ಲಿ ಕುಣಿತ, ಬಡಿದು ರೂಢಿಯಾದ ಈ ವಾದ್ಯಕಾರರ ಕೈಗೆ ಬಿಗುಪು ಹೆಚ್ಚು ; ಅಬ್ಬರ ಹೆಚ್ಚು (ಹುಕ್ಷಂ. ೯೦). **ಬಿಗುಹು** : ೧. ವಾನರರು ಹೊಜಿಲೆಡೆಗೆಡೆಗೆ ಜಱಿವಾ ಮಣ್ಣ ಬೆಟ್ಟಂಗಳ ಬಿಗುಹದೆನಿತು

(ಬಸವ. ೦೯-೪೦) : ನಗಂಗಳ ಬಿಗುಹು ಸಡಿಲಿತು ಧರಣಿ ನೆಗ್ಗಿತು (ಕುಮಾರವ್ಯಾ. ೬-೩೩) ; ಉಗುರುಸೋಂಕಿನಲಬುಜಜಾಂಡದ ಬಿಗುಹು ಬಿಡುವುದು (ಹರಿಶ. ೬-೯-೧೦). ೨. ಆರು ಮರುಳಾಗರು ವಧೂಟಿಯು ತೋರವೊಲೆಗಳ ಬಿಗುಹನೀಕ್ಷಿಸಿ (ಐಶ್ವ. ೧೦-೬); ತಳಿತ ರೋಮದ ತೋಳ ಬಿಗುಹಿನ ಕಲಿಗಳಿದ್ದುದು ಕಲಿತ ಘನ ರೌದ್ರಾತಿರೇಕದಲಿ (ಹರಿಶಾ. ೬-೧೦-೬). ೩. ಪಿಸುಣೆಗರ ಒಂದು ಪರಿ ವಾರವ ದರ್ಬಾರಿನ ಸುತ್ತಲೂ ಅದರ ಬಿಗುಹನ್ನು ಶಿಥಿಲ ಮಾಡಲು ಸುಳಿದಾಡುತ್ತಿದೆ (ಹರಿಶ. ೬೩). ೪. ಬಿಗುಹಿನೊಳ್ ಕೆಲಕೆಲಬರಂ. . . ಮೃದೆಗುಹಿನೊಳ್ ಕೆಲಕೆಲಬರಂ ಮರುಳ್ಮಾಡುತೀಶ್ವರನಡಿಯಿಡುತ್ತಿರ್ದನು (ಕಂಠೀ. ೦೯-೩೩) ; ಬಿಗುಹ ಬಿಡಿಸುವೆನಿಂದಿನಾಜಿಯೆ ೦ಳ್ನೀನು ಮೈದೆಗೆಯ ದಿರು (ಕುರು೦ಕ. ೬೩-೪೯). ೫. ಕರತಳದ ಬಿಗುಹಿಗೆ ಕುಲಮಹೀಧರ ಕಳಲಿದವು (ಹರಿಶಾ. ೬-೩-೦೩). ೬. ಬಿಗುಮಾನ ; ಬಿಂಕ : ಮುಸುಡ ಬಿಗುಹಿನ ಸೆಳೆದಡಾಯುಧ ಹೊಸಪರಿಯ ಬಿರುದುಗಳ ಗಜರಥವಿಸರ ಮಧ್ಯದಲಿಂಟುಸಾವಿರರಥಿಕರೌಂಕಿದರು (ಕುಮಾರವ್ಯಾ. ೦-೩೭); ದೇಸಾಯ ಕೊಟ್ಟರೀ ಕಿಟ್ಟಿಯನ್ನು ಬಿಗುಹಿನ ಆದರದಿಂದ ಸ್ವಾಗತಿಸಿದರು (ಗಂಧಾಯಿ. ೯೯). ೭. ಜೊತೆ ; ಸಂಬಂಧ : ಹೊಗಳಬಟ್ಟರ ಸಾಲ ಕೈದೀವಿಗೆಯ ಹಜಳಾರವದ ಲಗ್ಗೆಯ ಬಿಗುಹಿನಲಿ ಕುರುರಾಯ ಬಂದನು ರಾಜಮಂದಿರಕೆ (ಕುಮಾರವ್ಯಾ. ೫-೩). ೮. ಸೆಳೆತ ; ಹಿಡಿತ ; ವಶ : ಮೇಲುಸುರ ಬಿಕ್ಕುಳಿನ ಬಿಗುಹಿನ ತಾಳಿಗೆಯ . . . ನರನಾಥ ತಗೆದಪ್ಪಿದನು ಫಲುಗುಣನ (ಕುಮಾರವ್ಯಾ. ೦೯-೦); ಅಲಿನ್ನವರು ಮೈದೆಗೆವರುಲ್ಕಾಪಾತಭೀತಿಯ ಬಿಗುಹಿನಲಿ ಬಹಳಪ್ರತಾಪವದೆಂತೊ ದಶರಥನ (ಹರಿಶಾ. ೦-೩-೨೩); ಶೋಕದ ಬಿಗುಹಿನಲಿ ಚಂದಾದ ಮಾತೆಯ ನಗೆಮೊಗದಿ ನಗಿಸುತ್ತಲೊಡಬಡಿಸಿದನು ಶೋಕವನು (ಕೃಷ್ಣಾಶಾ. ೬-೨೬). ೯. ಕುದುರೆಯ ಜೀನನ್ನು ಬಿಗಿಗೊಳಿಸಲು ಸೊಂಟಕ್ಕೆ ಕಟ್ಟುವ ಪಟ್ಟಿ ; ತಂಗುಪಟ್ಟಿ : ಬಿಗುಹನೀಜಿ [ಹಾಕಿ. ಬಿಗಿದು ತಿಕ್ಕಿ]ಸಿ ಹಯಗಳನು ಜೀಂಚಿಗಳ ಹಮ್ಮಿರರಾನೆಯಲಿ (ಕಳಕ. ೯-೩೭). ೧೦. ಅಲಿಂಗನ ; ಅಪ್ಪುಗೆ : ಬೆಸುಗೆ ಬಿಗುಹುಳು ಕೊತ್ತಳಲಿಗಳ ರುಪ ವಸರುವನಜಿಯುವಾರದು ವಿಗಡವಿಟರುಗಳ (ಕುಮಾರವ್ಯಾ. ೦೩-೨೫). [ಬಿಗು + — ವ್ಪು]

**ಬಿಗುಹೇರು** 'ಬಿಗುವೇಱು' ನೋ.

**ಬಿಗುಹೇಱು**, ಬಿಗುವೇರು, ಬಿಗುಹೇರು, ಬಿಗುಹೇಱು (ಕ್ರಿ). ೧. ಬಿಗಿಯಾಗು ; ಹಿಡಿದುಕೊಳ್ಳು : ಮೊಗುರಿದೋಱಿ ಏಱಿ ನವಿರುಂ ಸೆರೆಗಳ್ ಬಿಗುವೇಱೆ (ಜಗನ್ನಾ. ೦-೯೪). ೨. ಗಾಢವಾಗು ; ತೀವ್ರವಾಗು : ಅಪ್ಸರದೊರ್ಬೊರ್ಗೊರ್ಬ ಮತ್ತಂ ಬಿಗುವೇಱುತಿರ್ಪುದು (ಹಂಪ್ರತ್ತಿ. ೬-೪೯); ಸಂದರ್ಭದೊಳ್ ಕ್ರಮದಿಂ ಬಿಗುವೇಱಿ ಬರ್ಪುದುಂ ಕ್ರಮದಿಂದಿಱಿ ತರ್ಪುದುಂ ಸಮಾಧಿಯೆನಿಪುದು (ಅಪ್ರತಿ. ೯-೦೯). **ಬಿಗುಹೇರು** : ೩. ಕಾಠಿಣ್ಯವನ್ನು ಪಡೆ ; ಕರ್ಕಶತೆಯನ್ನು ಹೊಂದು : ದಿನದಿನಕ್ಕೆ ಬಲಿಯಲುದರಂ ತುಂಗಕುಚ ಬಿಗುವೇರಿದವು ಅಕ್ಷಿ ಜಡನಾದವು (ಧರ್ಮನಾ. ೦-೯). **ಬಿಗುಹೇರು** : ೨. ಸೇರುವೆಯ ಸನ್ನಾಹದಿಂ ಬಿಗುಹೇರಿ ಮೊಳಗುವ ಮೊಳಗುಗಳ ವಿಸ್ತಾರದಿಂ ಬಲುನೇರದಿಂ ಕಾಣಿಸಿತು ವರ್ಷರುತು (ಕಾವೇಚು. ೩೩-೯೦). ೪. ಗರ್ವಿಸು ; ಸೊಕ್ಕೇರು : ಬಿಗುಹೇರಿ ಮೈಮುರಿದು ನಿಲ್ಲಲಾಗದು ಮನಸ್ಸು ತೆಗೆದ ಹಾಗೆಲ್ಲ ಮಾತುಗಳಾಡಲಾಗದೀಪಗೆಯಿಂದ (ಕೃಷ್ಣ. ೯-೯). **ಬಿಗುಹೇಱು** : ೨. ಖತಿ ಬಿಗುಹೇಱಿ ಹಲುಹಲುದಿನುತ ಕಂಗಳಲುರಿಯನುಗುಳುತ . . . ಜನಪತಿಯ ಹಣೆಯೊಡೆಯಲಿಡೆ (ಕುಮಾರವ್ಯಾ. ೯-೦೯) ; ನಗೆನುಡಿ ನೋಟ ಸರಸಗಾನದೊಳು ಹೊತ್ತುಗೆದೆಗೆವಾಗ ಲೊಬ್ಬರೊಬ್ಬರಿಗೆ ಬಿಗುಹೇಱುತಿದ್ದುದು ತವಕ (ಕಠಕ. ೦೦-೬೩). ೩. ಬಿಡೆಯವಿಲ್ಲದ ಕುಚ ಬಿಗುಹೇಱಿ ರುತುಕಾಲವಡೆದ ಪುಷ್ಪಿಣಿಯ ರೊಪ್ಪಿದರು (ಸೋಹಕ. ೦೬ ೫೨) ; ನೀರೊಳು ನನೆದಾಗ ಬಿಗುಹೇಱಿ ವೃತ್ತಾಕಾರದೊಳುನ್ನುಖವಡೆದು ಚಾರುತರದ ಮೊರೆ ಮೆಱೆದುವು ಮೇಲಕ್ಕೆ ಪಾಱುವ ಕೋಕಗಳಂತೆ (ಕಂಸವ. ೨೩ ೦೩೨). ೫. ಉಬ್ಬು ; ಉತ್ಸಾಹಿಸು : ಬೊಬ್ಬಿಱಿತದಲಿ ಬಾಹುಪ್ಪಳಿಸಿ ಬಿಗುಹೇಱಿದನು ಹನುಮ (ಹರಿಶಾ. ೫-೯-೨) ; ತನುವ ಸಗ್ರಂಥದೊಳಿರಿಸಿ ನಿರ್ವಾಣವ ವಿನುತಾತ್ಮನೊಡಗೂಡಿ ನೋಡಿ ಜನಿಸಿದ ಸುಖದಿಂದ ಪರಿಪೂರ್ಣನಾಗಿ ಬಿಮ್ಮನೆ ಬಿಗುಹೇಱಿರ್ದನಾಗ (ಜಕಶ. ೦೯-೬೧). [ಬಿಗು(ಪು+ಏಱು$_1$ (<ಏಱ$_1$)]

**ಬಿಗುಮಾನ** (ನಾ). ಮನಸ್ಸು ಬಿಚ್ಚಿ ಮಾತನಾಡದಿರುವಿಕೆ ; ಅತಿಯಾದ ಸ್ವಾಭಿಮಾನ ; ದೊಡ್ಡಸ್ತಿಕೆ : ಮಾನ್ಯರಾದವರನ್ನು ಬಿಗುಮಾನ ಬಿಟ್ಟು ಗೌರವಿಸಬೇಕು (ಧಕಶಾ. ೩೩೪) ; ಪ್ರಾಣೇಶಾಚಾರ್ಯರಿಗೆ ಉತ್ತರ ಹೊಳೆಯಿತು. ಆದರೆ ಹೇಳಲು ಬಿಗುಮಾನ (ಸಂಸ್ಕಾರ. ೧೦೩) ; ಸಿರಿವಂತಿಕೆಯ ಬಿಗುಮಾನವೂ ಪರಂಪರಾಗತವಾದುದೇನೋ ! (ಅಕೋಣೀ. ೪೩). [ದೇ.॥ ತೆಲು. ಬಿಗುವುಮಾನ, ಬಿಗಿಮಾನ]

**ಬಿಗುಮೊಗ** (ನಾ). ಪ್ರಸನ್ನತೆಯಿಲ್ಲದ ಮುಖ ; ಕೋಪದಿಂದ ಕೂಡಿದ ಮುಖ : ಆ ಕಟ್ಟಾನೆ ಭೋರನೆ ಬಿಟ್ಟ ಕಣು ಬಿಗುಮೊಗದಿನಿದಿರಾಯ್ತು (ಶಾಕ್ಕಶಾ. ೦೩-೦೩). 'ಬಿಗಿಮೊಗ' ಪರಾ. [ಬಿಗು (< ಬಿಗುವು) + ಮೊಗ]

**ಬಿಗುರ್$_1$**, ಬಿಗುರು$_1$ (ಕ್ರಿ). ಬಿಗುರ್ತ(ಭೂತಕೃ). ಬಿಗುರ್ತು (ಭೂತನ್ಯೂ). ಬಿಗುರ್ಪ, ಬಿಗುರ್ವ (ವರ್ತಕೃ). ೧. ಹೆದರು ; ಅಂಜು ; ಭಯಪಡು : "ಬಿಗುರ್—ಭಯೇ" (ಶಮನ) ; ತಕ್ಕಿನ ಕುಂಭಸಂಭವ ನದೀಜ ಕೃಪಪ್ರಮುಖಪ್ರವೀರರಕ್ಕಯಿನೊರ್ವರೊರ್ವರೆ ಬಿಗುರ್ತಿರ ದಾಂತು ನಿಶಾತಬಾಣಜಾಲಕ್ಕೆ ಸಿಡಿಲ್ದು ಜೋಲ್ದು ಸೆರಗಂ ಬಗೆದೋಡಿದರ್ (ಪಂಪಭಾ. ೬-೦೦೬); ಕಂಠೀರವರವಮಂ ಕೇಳಲೊಡನೆ ಬೆಳ್ಳಾಗಿ ಬಿಗುರ್ತು ರಾಗಮಳಿದು (ಗಿಂಕ. ೦-೦೨೬ ಪ) ; ದಿಕ್ಕುದಿಕ್ಕಿಂಗೆ ಪರಿದು ಬಲಮುನಿತುಂ ಬಱಿದಾದುದಂ ಕಂಡು ಬೆರ್ಚಿ ಬಿಗುರ್ತು (ಚಳಿವ. ೨-೧೦೩). ೨. ಕುಗ್ಗು ; ಕುಸಿ ; ಸೊರಗು : ತಮ್ಮನನಾಗಳಂಬರವರೇಶ್ವರನೆನ್ನೆಗೆ ಕಾಪುವೇಱಿ ತಮ್ಮುದ್ಮನದೊಳ್ ಬಿಗುರ್ತು (ಶಾಂತಿಪು. ೯-೨) ; ಬಲಭಾರಕ್ಕೆ ಬಿಗುರ್ತು ಸುಯ್ಯೆ ಫಣಿರಾಜಂ (ಪಂಪಾಭಾ. ೯-೩೯) ; ಇಂತಸಮಾಸ್ತ್ರವ್ಯಥೆಯಿಂ ಬಿಗುರ್ತಬಲೆ ಮೆಯ್ಯಕ್ಕಿರ್ದಳಾ ಶಯ್ಯೆಯೊಳ್ (ಕುಸುಮಾ. ೦೩-೧೦೬). ೩. ಗರ್ವಿಸು ; ಸೊಕ್ಕು ; ಕೊಬ್ಬು : ಬಿಗುರ್ತೀ ಕೌರವರ್ ಕೂಡೆ ನೂರ್ವರುಮಂ ಕೊಲ್ವೆಂ (ಪಂಪಭಾ. ೭-೬೫) ; ಪಿರಿದೊಂದಜ್ಞಾನದಿಂ ಯವೌವನವಿಕಳತೆ ಮೈದೋಱಿ . . . ತತ್ಕರಣಕ್ಕಾಳಾಗಿ ಹಾಳಾಗುತೆ ಬಱಿದೋಱಿಪೋದೆಂ ಬಳಲ್ದೆಂ ಬಿಗುರ್ತೆಂ (ರಕ್ಷಕ. ೫). ೪. ಎದುರು ನಿಲ್ಲು ; ವಿರೋಧವನ್ನು ವ್ಯಕ್ತಪಡಿಸು ; ವಿರೋಧಿಸು : ಚಕ್ರಿಗೆ ಬಿಗುರ್ಪ ಮಾಂಡಲಮೊಳವೇ (ಪರ್ಗಪು. ೯-೬೪); ಬಿಗುರ್ತೆಯ್ತಂ ದೊಡಂ ಕೋಪದಿಂ ಕೊಲಲಕ್ಕುಂ ಗೆಲಲಕ್ಕುಂ (ಜೀವಸಂ. ೨೨೯-೯೦). ೫. ಬಾಡು ; ಮ್ಲಾನವಾಗು ; ಕಣ್ಣ ನೀರಡಿಗಡಿಗುಣ್ಮಿ ಪಾಯ್ವರೆ ಮುಖೇಂದು ಬಿಗುರ್ತಿರೆ (ಅಜಿತ. ೬-೦೨೧); ಮಧುಕರಧ್ವನಿಯುನಲರ್ವಿಲ್ಲ ಜೇವೊಡೆಯ ರವಮೆಂದು ಕಿವಿಯಿತ್ತು ಕೇಳಲುಮ್ಮಳಿಸಿ ತಮ್ಮೊಳ್ ಬಿಗುರ್ವ ಬಿರಯಿಗಳುಂ (ಕೃಷ್ಣಕು. ೨-೪೯ ಪ). ೬. ಆಶ್ಚರ್ಯಪಡು ; ದಿಗ್ಭ್ರಾಂತವಾಗು : ಪಕ್ಕಿ ಸೋವವರ ಸ್ತ್ರೀಯರ ಸೀಯನಪ್ಪ ನುಡಿಯುಂ ಕೇಳ್ದಾಗಳಂತಾತ್ಮಗರ್ವವನೀಡಾಡಿ ಬಿಗುರ್ತು ತಂಬುಲಕೆ ಬಾಯಾಂಪಂದದಿಂ ಬಂದು ಪಾಯ್ದುವ್ವು ಕೀರಾಳಿಗಳಲ್ಲಿ ಪಾಮರ ವಧೂಬಿಂಬಾಧರಕ್ಕಾಗ (ಧರ್ಮನಾ. ೨-೨೯). ಬಿಗುರು$_1$ : ೪. ಅಕ್ಕಾಜಿಯದೇವಗೆಯೊಳ್ ಬಿಗಿದಪ್ಪುವಳೋ ಬಿಗುರದೆ ಮೊಗವಿಟ್ಟು ಮೊಗದೆ ಮುದ್ದಾಡುವಳೋ (ಕಳವ. ೬-೨೩೪) ; ಬಗೆಯೊಳ್ಬಲ್ಪು ಕಟಲ್ದೊಡಂ

. . . ಮೆಯ್ಯುಂ ಪಾರಂಬರ್ದೊಡಂ ಬಗುರುತ್ತೀಸಳವೊಂದಿ ನಿಂದಳಪ ಚಾರಂ ಐರ್ವುದಂದಾರ್ತಿನಿಂ (ಕಳಿಧ. ೬-೨೩೦). 'ಬೆಗಡು$_1$', 'ಬೆಗಟು$_1$' ಪರಾ.

**ಬಗುರ್$_2$**, ಬಗುರು$_2$ (ನಾ). ೧. ಭಯ ; ಅಂಜಿಕೆ ; ಹೆದರಿಕೆ : "ಅಗುರ್ವು, ಬಗುರ್, ಬೆಗರ್ . . . ಅದಿರ್ಪು – ಈ ೧೧ ಭಯಂ" (ಕಶಾ. ೩೬-೨೨೩). ೨. ಆಶ್ಚರ್ಯ ; ಬೆರಗು : (*). ೩. ಭಯಂಕರ ವಾದುದು : (*). **ಬಗುರು$_2$** : ೧. ಚೋದ್ಯಮೋಂ–ಬಗುರ ಬೀರಿದ ಬೀರಮೊ ? ಐಲ್ಲ ಬಿಜ್ಜೆಯೊ ? (ಗಿರಿಜಾ. ೩೨-೯) ; ಬಗುರಿಂದ ಬಾಯ್ಬಿಗಿದು ಗಾಳಿ ಬೀಸುವಳು (ಕಾಲಾಲಿ. ೦೬೦-೩೩೩). ೨. "ಬಗುರೆನಲ್ ಬೆರಗು" (ಕಶಿ. ೭೯). ೩. 'ಬಗುರುಗಂಡೆಯ' ಪರಾ. [<ಬಗುರ್$_1$]

**ಬಗುರಿಸು** (ಕ್ರಿ). ಅಂಜಿಸು; ಹೆದರಿಸು ; ಭಯಗೊಳಿಸು : ಬಗುರಿಪ ವಹ್ನಿಜ್ವಾಲಾಖ್ಯಗತಿಗಿವರೀ ಸಲ್ಲಂ (ವಿಕ್ರಮಾ. ೬-೦೪೭) ; ರವಿತನಯನ ದೂತರಾದೊಡಂ ಬಗುರಿಸಲಣ್ಮವರೆ (ವಿಕ್ರಮಾ. ೦೦-೪೩).

[ಬಗುರ್$_1$ + – ಇಸು$_3$]

**ಬಗುರು$_1$** 'ಬಗುರ್$_1$' ನೋ.

**ಬಗುರು$_2$** 'ಬಗುರ್$_2$' ನೋ.

**ಬಗುರುಗಂಡೆಯ** (ನಾ). ಭಯಂಕರವಾದ ಕತ್ತಿ; ರೌದ್ರವಾದ ಖಡ್ಗ : ಬಗುರುಗಂಡೆಯ ಪಚ್ಚ ರನ್ನವಾಹಾರ ಪಡು ಬೆಗಡು ನಗೆ ವೈಶ್ವನರ ವಿಂದ ಸುಪು ಕಸ್ತೂರಿಯೊಗುವಿಗೆಯೊಳಾಂತು ಸುರಿಗಿಯ ಪುಚ್ಚಕಾಗ್ರ ದೊಳಗಿಹನೆಂಬರಶಿಬುರ್ಧರಳು (ಶ್ರೀಕುಪ್ಪ. ೦-೩೮).

[ಬಗುರು$_2$ (<ಬಗುರ್$_2$) + ಕಂಡೆಯ$_1$ (< ಖಂಡೆಯ$_2$)]

**ಬಗುರೇಟ್** (ಕ್ರಿ). ಹೆದರಿಕೆಯಿಂದ ಕೂಡು ; ಅಂಜು : ಬಗುರೆಟ್ಟ ಬಗಯಿಂತು ಬಗೆಗಂ (ಚಿತ್ರಕ. ೦೦-೨೨೩). [ಬಗುರ್$_2$+ ಏಟ್$_1$]

**ಬಗುರ್ತ** 'ಬಗುರ್$_1$' ಪರಾ.

**ಬಗುರ್ತು** 'ಬಗುರ್$_1$' ಪರಾ.

**ಬಗುರ್ಪ** 'ಬಗುರ್$_1$' ಪರಾ.

**ಬಗುರ್ಪಿಟ್** (ಕ್ರಿ). ಉಬ್ಬರವು ಕಡಮೆಯಾಗು ; ಮದವಿಳಿ : ಪೊಸವಸಲಾದ ಪೆಣ್ಗಳ ಜವ್ವನದ ಬಗುರ್ಪಿಟ್ಟದು ತಿಳಿವಂತೆ ತೊಟ್ ಮೆಡಿರ್ಗುರ್ಕಿನುಬ್ಬರಮುಡಂಗಿ ತಿಳಿದುದು (ರಾಜಶಾಕ್ಯ. ೬೩-೯).

[ಬಗುರ್ಪು+ಇಟ್]

**ಬಗುರ್ಪು** (ನಾ). ೧. ಭಯ; ಅಂಜಿಕೆ : ದೇವ ನಿನ್ನ ಧಾಟಿಯೊಳ್ಪರಾಟಿ ಗಳ್ಬಗುರ್ಪಿನಿಂ . . . ಅಳ್ಕಿ (ಅಪ್ಪಕ. ೨೯-೨). ೨. ತೀವ್ರತೆ; ಆಧಿಕ್ಯ ; ಹೆಚ್ಚಳ : ರಾವಣಾರಿ ಬಾಗುಬಿಟೊಂದು ಬಗುರ್ಪಿಂ ತಲೆ ತಿಣ್ಣಮಾಗೆ . . . ಲಕ್ಷ್ಮಣನಂ ಕರೆದು (ರಾಮಾಶ್ವ. ೨೩-೩). ೩. ಸೊಕ್ಕು ; ಮದ : 'ಬಗುರ್ಪಿಟ್' ಪರಾ. ☞ 'ಬಗಿಪು' ಶಬ್ದರೂಪದ ಸಾಮ್ಯದಿಂದ ಈ ರೂಪವನ್ನು ಮಾಡಿರುವ ಸಾಧ್ಯತೆಯಿದೆ. [ಬಗುರ್$_1$+ –ಪು]

**ಬಗುರ್ಪುಗೊಳ್** (ಕ್ರಿ). ಹೆದರು; ಭಯಪಡು : (ಹಿಂದಿರುಗಿ ನೋಡಿ ಬಗುರ್ಪುಗೊಂಡು) (ಚಿತ್ರಗೋ. ೨೨-೦೪). [ಬಗುರ್ಪು+ ಕೊಳ್$_1$]

**ಬಗುರ್ವ** 'ಬಗುರ್$_1$' ಪರಾ.

**ಬಗುರ್ವರಿಜ** (ನಾ). ಭಯಂಕರವಾದ ರೂಪವುಳ್ಳವನು ; ಭೈರವ : "ತೇಟ್ಟೀರಂ, ಬಗುರ್ವರಿಜಂ – ಈ ೨ ಭೈರವಂಗೆ ಪೆಸರ್" (ಕಶಾ. ೪೭-೯); ಬಿಗುರ್ವರಿಜಂ, ಹುಳಿಗಂ, ಕೊಂಡಂ, ಗುಳಿಕಂ ಮುಂತಪ್ಪ ಭೂತ ವೇತಾಳುಗಳ ಮರುಳ್ವಡೆವೆರಸು . . . ನಡೆತಂದು (ರಾಜಶಾಕ್ಯ. ೦೪೦-೦೭).

[ಬಗುರ್$_2$ + ಪರಿಜು + – ಅ$_7$]

**ಬಗುರ್ಪು** (ನಾ). ೧. ಭಯ ; ಹೆದರಿಕೆ : "ಮಲ್ಲಬು ಬೆಜ್ಜರ ಬೆಚ್ಚಳ ತಲ್ಲಬು ಬಗುರ್ವಗುರ್ವದಿರ್ಪು . . . ಭಯನಾಮ" (ಕಶಿಪಿಂ. ೦೦೯) ; ವಿಧುಂತುದಂ ಸವಿಮಾಪವರ್ತಿಯಾದೊಡಂ ದಿನಕರಂ ಬಗುರ್ವನಾನಲ್ಲಿಲ್ಲ (ಶರಿತ. ೦೦೪-೩). ೨. ಬೆರಗು ; ಆಶ್ಚರ್ಯ : "ಬಿಕ್ಕುಡಿ ಬಗುರ್ವಗುರ್ವು ಬೆಬ್ಬಳ . . . ಮಲ್ಲಬುಮೆನಲ್ಕೆ ಬೆಡಗಪ್ಪ ಭಾವಂ" (ಕಶ್ಯಕ್ತೆ. ೪೦).

[ಬಗುರ್$_1$ + – ವು]

**ಬಗುವು**, ಬಗು (ನಾ). ೧. ಬಿಗಿಯಾದ ಕಟ್ಟು, – ಬಂಧನ : ಎಲುವಿನ ಪಂಜರ ನರಗಳ ಬಗುವು ತೊಗಲಿನ ಹೊದ್ದಿಕೆ (ಪ್ರಕಂತ. ೦-೦೫೦-೩); ಬಂಧನಂಗಳ ಬಗುವು[ಶಾಕಾಂ. ಹು] ಬಿಡೆ(ಶಂಕಿ. ೪೭-೩೦). ೨. ಬಿಗಿ ; ಹಿಡಿತ ; ಹತೋಟಿ : ತನ್ನ ರಾಜಮಂಡಲದಲ್ಲಿಯೂ ಬಗುವು ತಪ್ಪಿಹೋಗಿದೆ (ಶ್ರೀರಾಯ. ೩೦೦) ; ಗೋವಿಂದಮಾಸ್ತರರ ಬಗುವಿಲ್ಲದ ಆಡಳಿತವೇ ಅದಕ್ಕೆ ಕಾರಣ (ಶಾಕಂ. ೦೦). ೩. ಗತ್ತು ; ಠೀವಿ ; ಬಿಂಕ : ಬಂಧು ಬಂದರೆ ಎನ್ನ ಬಗುವ ಬಿಂಕವ ತೋಟ್ ಬಂದೋಡ್ವರ್ಶ್ವೆ ಎನ್ನ ಬೇಕೆಂದು ಕೋಣಿದೆ (ಪುರಂದ. ೨-೯-೦) : ಬಲವಂತನೇಬೊ ವೆಗ್ಗಳ ಗರ್ವಿಕೆಯೊ ಸಕಲಲೋಕ ನಿನ್ನ ವಶವೆಂಬೊ ಬಗ[ಗು]ವೊ (ಮೋಕ್ಷಿಂ. ೨೦-೦) ; ರಾಯರು ಬಗುವಿನಿಂದ ಉತ್ತರ ಕೊಟ್ಟರು (ಸವಜೀ. ೪೦). ೪. ಬಿಗಿಯಾದ ಬಂಧ, – ರಚನೆ : ಅವರ ಹಾಡುಗಳಲ್ಲಿ ಅಲ್ಲಲ್ಲಿ ಅಶ್ಲೀಲಪ್ರಯೋಗಗಳು ಕಂಡುಬಂದರೂ . . . ತುಚ್ಛಶೃಂಗಾರವೆಂದು ನಿರಾಕರಿಸಕೂಡದು. ಹಾಗಾದರೆ ಆ ಹಾಡಿನ ಬಗುವೆ ಸಡಿಲಾಗುವುದು (ಕಪ್ಪಶಾ. ೯೩). **ಬಗು** : ೧. ಬಗು ಹಿಂದುಗಡೆಯಿಂದ [ಶಾಕಾಂ. ಬಗುಹಿಂದ ಗದೆಯಿಂದ] ಸಡಿಲಿಸಲು ಸಡಿಲದಿರೆ ಬಗುಹೇರಿ ಭೀಮ ಮಂದರಗಿರಿಗೆ ಸರ್ಪನಾ ತೆಗೆನೇಣದೆಂಬ ಮಾರಿಯಾದೆಯಲಿ ಬಗುಹತ್ತಿ ಕಣ್ಣಾಲಿ ಮೋಲ್ಸಿಕ್ಕಿತು (ಕುರಂಗ. ೩೦-೩೦). ೫. ಬಿಗಿಯಾದ ಸೇರುವೆ : ಕುಲಾಚಲಾದ್ರಿಗಳ ಬಗು ಸಡಿಲೆ ರಣಭೇರಿಗಳ್ಮೊಳಗಿದುವು (ಕುಕಂಗ. ೬೩-೦). ೬. ವ್ಯಗ್ರತೆ ; ಅಪ್ರಸನ್ನತೆ ; ಕೋಪ : ' ಬಗುಮೊಗ ' ಪರಾ.

[ದೇ.॥ ತಮಿ. ಪಿಕು, ಪಿಕುವು ; ತುಳು. ತೆಲು. ಬಿಗು, ಬಿಗುವು]

**ಬಗುವುಗುಂದು** (ಕ್ರಿ). ದರ್ಪವಿಲ್ಲದಾಗು ; ಠೀವಿಯನ್ನು ಕಳೆದು ಕೊಳ್ಳು : ದುಗುಡದಿಂ ಬಂದು ಪೊಕ್ಕನು ಬೀಡ ಬಲ್ಲಾಳ ಬಗುವು [ಶಾಕಾಂ. ಹು]ಗುಂದಿದ ಬಿಂಕದೊಳು (ಕುಶಾಶಾಂ. ೦೩-೦೩೩).

[ಬಗುವು + ಕುಂದು$_1$]

**ಬಗುಹಡಗು** (ಕ್ರಿ). ತೀವ್ರತೆಯು ಕುಗ್ಗು : ರಣದೇಳುವೆಯ ಬಗುಹಡಗಿದ ಪೊಲನಿಬರು ತವತವಗೆ ನಾಚಿದರು ಕೋಲಾಹಳೆ ಪವನಜನ (ಕಾಶ್ಯಕ. ೩೩-೦). [ಬಗುಹು (<ಬಗುವು) + ಅಡಗು$_1$ (<ಅಡೇಗು$_1$)]

**ಬಗುಹತ್ತು** (ಕ್ರಿ). ಬಂಧನವು ತೀವ್ರವಾಗು : ಬಗು ಹಿಂದುಗಡೆಯಿಂದ ಸಡಿಲಿಸಲು ಸಡಿಲದಿರೆ . . . ಬಗುಹತ್ತಿ ಕಣ್ಣಾಲಿ ಮೋಲ್ಸಿಕ್ಕಿತು (ಕುಪ್ರಗ. ೩೦-೩೦). [ಬಗು (< ಬಗುವು) + ಹತ್ತು$_1$ (< ಪತ್ತು$_1$)]

**ಬಗುಹಿಕ್ಕು** (ಕ್ರಿ). ಬಿಗಿಮಾಡು ; ಗಟ್ಟಿಗೊಳಿಸು : ಕುಂಬಳದ ಕಾಯ ಮೇಲಣ ಹಸುರ ಕೆತ್ತಿ ಹಲ್ಲೆಯ ಮಾಡಿ ಕುಯಿದು ಜಾವಡೆಯಿಂದವೊತ್ತಿ ನೀರಂ ಹಿಂಡಿ ಕಟ್ಟಿ ಬಗುಹಿಕ್ಕಿ (ಸೂಕಶಾ. ೩-೩೦).

[ಬಗುಹು (<ಬಗುವು)+ ಇಕ್ಕು]

**ಬಗುಹು** 'ಬಗುವು' ನೋ.

**ಬಗುಹುಕಾಱ** (ನಾ). ದರ್ಪವುಳ್ಳವನು ; ಗರ್ವಿಷ್ಠ : ಬೆಳ್ನುಡಿಯಿಂದ ಬಗುಹುಕಾಱರ ಬಲ್ಮೆಯಿಂದ ಬಗೆಗಾಱರನೆದೆಗೆಡಿಸುವರಲ್ಲಿಯ ಬಗುಹ ಗಂಗಳ ಬಾಲೆಯರು (ಕುಶಾಶಾಂ. ೪-೦೦೩).

[ಬಗುಹು (< ಬಗುವು) + – ಕಾಱ]

**ಬಗುಹುಗುಂದು** (ಕ್ರಿ). ದೃಢತೆಯನ್ನು ಕಳೆದುಕೊಳ್ಳು ; ಕಾಠಿಣ್ಯ ವಿಲ್ಲದಿರು : ಹೊಯ್ವಳ್ಕೆ ಬಗುಹುಗುಂದಿದ ಕುಚಂ ಬೆಳರ್ತ ಮುಖ (ಶಶಕಾ. ೪-೩೩). [ಬಗುಹು (< ಬಗುವು) + ಕುಂದು$_1$]

**ಬಿಗುಹುಗೊಳ್** (ಕ್ರಿ). ಬಿಗಿದುಕೊಳ್ಳು ; ಸೇರು ; ಒಂದಾಗು : ಕುಡಿಮಿಸೆಗಳು ಕೌಚಿದವಂಗ ಕಾಹೇಚಿದುದು ಕಡುಹಿನಲಿ ಬಿಗುಹುಗೊಂಡುಪ್ಪರಿಸಿದವು ಹುಬ್ಬುಗಳು (ಕೊರಠಾ. ೨-೩-೬). [ಬಿಗುಹು (< ಬಿಗುಪು) + ಕೊಳ್$_1$]

**ಬಿಗುಹೇರು** 'ಬಿಗುಪೇಱು' ನೋ.

**ಬಿಗುಹೇಱು** 'ಬಿಗುಪೇಱು' ನೋ.

**ಬಿಘಡಾಯಿಸು** 'ಬಿಗಡಾಯಿಸು' ನೋ.

**ಬಿಘಾ** 'ಬಿಘೆ' ನೋ.

**ಬಿಘೆ**, ಬಿಘಾ (ನಾ). (ಇಪ್ಪತ್ತೈದು ಗುಂಟೆಗಳಿಂದಾದ) ಜಮೀನಿನ ಒಂದು ಅಳತೆ : ೧ ಬಿಘೆಯೆಂದರೆ ಸುಮಾರು ೧ ⅔ ಯಿಂದ ೧⅔ ಯೆಕರು ಆಗುತ್ತದೆ (ಕಆಗ. ೨೧೦) ; ಒಂದು ಬಿಘೆಯಲ್ಲಿ ಸರಾಸರಿ ಎಷ್ಟು ಉತ್ಪತ್ತಿಯಾಗುತ್ತದೆಂಬುದನ್ನು ಗೊತ್ತುಮಾಡುವುದು (ಅಕ್ಬರ. ೦೨೩) : ತಮ್ಮ ಭೂಮಿ ಹೋದರೆ ಎಷ್ಟು ಹೋದೀತು ? ಇನ್ನೂರು ಬಿಘೆಗಳಿಗಿಂತ ಹೆಚ್ಚು ಹೋಗಲಿಕ್ಕಿಲ್ಲ (ಕೋಅಶ. ೨೦೩). **ಬಿಘಾ :** ಅವನು . . . ನೂರು ಬಿಘಾ ಭೂಮಿಯನ್ನೂ 'ಮುಲ್ಲಾಜಮಾಸ್ಪ್' ಎಂಬ ಬಿರುದನ್ನೂ ಪಡೆದನು (ಡಾಂಆವ. ೩). [←ಮರಾ. ಬಿಘಾ ; ಹಿಂ. ಬೀಘಾ]

**ಬಿಚವಾ**, ಬಿಚ್ವ (ನಾ). ಒಂದು ಬಗೆಯ ಔಷಧಪದಾರ್ಥ: ಸೂರ್ತಿವಣಾದ ಮೇಲೆ ಕಮ್ಮತ್ತು ಆಗತಕ್ಕ ಜೀನಸುಗಳು. ೧. ಅಕ್ಕಲಖಾರ . . . ೧೬. ಬಿಚವಾ (ನಿರಗುಂಡಿ) (ಷುಂಂಬಿಷ್ಯಾ. ೦೨೨). **ಬಿಚ್ವ:** ಬಿಚ್ವ . . . ಬೀಜಬಂದ (ಸೂರ್ತಿ ಚವಾಳ ಮಣ) (ಷುಂಂಬಿಷ್ಯಾ. ೦೬೭). [?]

**ಬಿಚಾಣಿ** 'ಬಿಚಾನ' ನೋ.

**ಬಿಚಾನ**, ಬಿಚಾಣಿ, ಬಿಛಾನಾ (ನಾ). ಹಾಸುಗೆ, ಚಾಪೆ ಮುಂತಾದ ಹಾಸುವ ಸಾಧನ : (೩). **ಬಿಚಾಣಿ :** ಹಾಸಲಿಕ್ಕೆ ಒಂದು ಬಿಚಾಣಿ, ಹೊದೆಯಲಿಕ್ಕೆ ಒಂದು ಚಾದರ — ಇಷ್ಟಿದ್ದರೆ ಸಾವಿರ ಊರು ತಿರುಗೇವು (ಓೂ). **ಬಿಛಾನಾ :** ನಡೀರಿ, ಎತ್ರಿ ಬಿಛಾನಾ (ಸಕೂರ. ೦೩). [←ಪಾರ. ಬಿಛಾನ್; ಹಿಂ. ಬಿಚಾನಾ; ಮರಾ. ಬಿಛಾನಾ, ಬಿಛೋನಾ ; ಬಂಗಾಲಿ. ಬಿಚಾನ್ ; ಒರಿಯಾ. ಬಿಚಾಇನ]

**ಬಿಚಾಯಿತ** 'ಬಿಛಾಯತ' ನೋ.

**ಬಿಚಿಗದವ್ವಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಗೊಗ್ಗಿಯ ಮನೆ ಮಗತಿ ಬಿಚಿಗದವ್ವಸೆಟ್ಟಿ ಉತ್ತಮಗಳ್ಳಂ ಕೃ(ಮ)ದೊಳೆ ನಿಲೆ (ಎಕ. III. ಮೈಸೂರು. ೭೩-೨ : ಸು. ೯೧೧ ?). [? + ಸೆಟ್ಟಿ]

**ಬಿಚುವಾ**, ಬಿಚ್ಚ್ವ, ಬೀಚ್ವಾ (ನಾ). ಚೇಳಿನಾಕಾರದ ಒಂದು ಬಗೆಯ ಕತ್ತಿ : ಒಂದೊಂದು ಜನಕ್ಕೆ ಬಾರುಬಂದೂಕು ಒಂದು . . . ಬಿಚುವಾ ಒಂದು, ಈ ಸೋರೆ ಎರಡುಜನಕ್ಕೂ ಜಂಗಿಸಾಮಾನು ಕೊಟ್ಟು (ಣಾಕೇಂಪ್ರ. ೦೦೩). **ಬಿಚ್ಚ್ವ :** ತೋಳಿನಲ್ಲಿ ಹುಡುಕಿ ನೋಡಿದ್ದರೆ ಚೇಳಿನ ಹಾಗೆ ಬಾಗಿಕೊಂಡಿದ್ದ ಒಂದು ಬಿಚ್ಚ್ವ ಎಂಬ ಕಠಾರಿ ಸಿಕ್ಕುತ್ತಿತ್ತು (ಶಾಠಿಅ. ೩೭). **ಬಿಚ್ವಾ :** ಶಿವಾಜಿಯು . . . ಅಂಗಿಯ ಬಲತೋಳಿನೊಳಗೆ ಬಿಚ್ವಾ ಎಂಬಾಯುಧವನ್ನು ಬಚ್ಚಿಟ್ಟುಕೊಂಡು . . . ಅಫ್ಜುಲ್‌ಖಾನನನ್ನು ನೋಡುವುದಕ್ಕೆ ಹೊರಟನು (ಛತ್ರಶಿ. ೩೭). [←ಮರಾ. ಬಿಚವಾ ; ಹಿಂ. ಬಿಛೂಆ. /ಪ್ರಾ. ವಿಚ್ಚುಅ =ಚೇಳು]

**ಬಿಚ್ಚಂಡ** 'ಬಿಚ್ಚಂದ' ನೋ.

**ಬಿಚ್ಚಂದ**, ಬಿಚ್ಚಂಡ (ನಾ). ಬಹುಮಹಡಿಗಳುಳ್ಳ ಮಹಲು, ಅರಮನೆ ಮುಂತಾದುವು : "ಬಿಚ್ಚಂದ(ಡ) — ವಿಚ್ಛಂದ — ಮುಖಮಂಟಪಗಳ ಸೌಧ ; ಮಂತ್ರಾಲಯ" (ಶದ್ಮಕೋ. ೩೦) : ವಿಛ್ಛಂದ — ಬಿಚ್ಚಂದ (ಕಮುದ. ೨೫೭ ಪ್ರಯೋ). **ಬಿಚ್ಚಂಡ :** ದತ್ವಕ್ಕೆ ದತ್ವಂ — ವಿಚ್ಛಂದ — ಬಿಚ್ಚಂಡ (ಕಮುದ. ೨೬೭ ಪ್ರಯೋ). [<ಸಂ. ವಿಚ್ಛಂದ]

**ಬಿಚ್ಚಡಿ** (ನಾ). ದಾಪುಗಾಲು ; ದೊಡ್ಡ ಹೆಜ್ಜೆ (?) : ಕುಂಟನ ಪೊಲು ಕೊಂಕಡಿಗಳನಿಡುತಂ ತುಂಟನ ಪೊಲು ಬಿ[ಶಾಶಂ. ಬೆ]ಚ್ಚಡಿಗಳನಿಡುತಂ ಹೆಳವನವೊಲು ಪೊಳಕಾಲಿಕ್ಕುತ್ತಂ (ಶ್ರಂಗಾರ. ೦೯-೨೭). [ಬಿಚ್ಚು$_{1?}$ + ಅಡಿ$_1$]

**ಬಿಚ್ಚಣಿಗೆ** (ನಾ). ಸ್ವಚ್ಛಂದವಾದ ಅಭಿನಯ.— ಹಾವಭಾವ : ಪಾಠಕರ ಸಫಾಟದಿಂ ನಚ್ಚಣಿಗರ ಬಿಚ್ಚಣಿಗೆಯಿಂ ಗಾಣರ ಗಮಕದಿಂ . . . ಮಹೋನ್ನತವೈಭವಮನೊಳಕೊಂಡುದ್ಭಟರಾಜೇಂದ್ರಚಂದ್ರಮ ನೋಲಗಂ ವಿರಾಜಿಸುತ್ತಿರ್ದುದು (ಉದ್ಭಟ. ೨-೦೩ ವ). [<ಬಿಚ್ಚು$_1$]

**ಬಿಚ್ಚತ** (ನಾ). ೧. ವಿಸ್ತಾರ ; ಹರಹು ; ವಿಶದ : ಓಹಿಲದೇವಂ ನಲವಿಂ ಮಱಿಚಂದರಹಚ್ಚನನೊಚ್ಚತ ಮಚ್ಚಿದ ಬಿಚ್ಚತದಿಂ ತುತಿಸೆ (ಶಾದ್ಮಲೆ. ೩-೩೯) ; ಶ್ರೀಪಾದಕ್ಕೆ ಸಮಕ್ಷದಲ್ಲಿ ಬಿಚ್ಚತವಾಗಿ ಬಿನ್ನಯಿಸಿಕೊಳ್ಳುವೆನು (ಷಂತ್ರಕ. ೦೨೩-೨೨). ೨. ಅಧಿಕವಾದುದು ; ಹೆಚ್ಚು : (೩). ೩. ಅನಿರ್ಬಂಧ ; ಸ್ವೇಚ್ಛೆ : ಅಚ್ಚರಕನ್ನೆಯರೊಳ್ ಸರಾಗದಿಂ ಬಿಚ್ಚತವಾಗಿ ಕೂಡಿ ಸುಖಿಮಿರ್ಪರನಿಂದಿತದೇವಲೋಕದೊಳ್ (ಜೀವಸಂ. ೯೯-೦೦). ೪. ನೆಮ್ಮದಿಯುಳ್ಳವನು ; ಸುಖಿ : ಅಂತು ಜನವೆಲ್ಲಂ ಪಗಲ ತಾವರೆಯಂತೆ ಬಿಚ್ಚತರಾಗಿ . . . ಶೃಂಗಾರ ಮಾಡುವುದುಂ (ರರ್ಷುಕ್ಷು. ೬-೨೦೩). [< ಸಂ. ವಿಸ್ಸೃತ]

**ಬಿಚ್ಚತಂ** (ಅ). ೧. ಸ್ವೇಚ್ಛೆಯಾಗಿ ; ಅನಿರ್ಬಂಧಿತವಾಗಿ : ಬಾಲ್ಯದ ಮಿಂದ್ರಿಯವರ್ಗದಿಚ್ಛೆಯಂ ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು (ಅಂಕ್ಷ. ೨-೯); ಪರಮೋತ್ಸವದಿಂ ಪಟಿಗುಟ್ಟಿ ಬಿಚ್ಚತಂ ಕುಣಿದುವು ಭೂತಕೋಟಿ (ಶಂಠಾಷಾ. ೦೦-೧೯೯); ಬಿಚ್ಚತಂ ನಲಿವ ಮದಕಳಾಪಿಗಳ ಪೊತ್ತುಮಂ ಚಿತ್ರಜನ ವಿಚಿತ್ರಫಲಕಾಯತವಪ್ಪಜಮೆಂದಾತಂಕಮನೊಂದುತುಂ (ಳುಸುಷಾ. ೦೨-೦೩೬ ವ). ೨. ಸುಲಭವಾಗಿ ; ನಿರಾತಂಕವಾಗಿ ; ಸರಾಗವಾಗಿ : ಮುಂ ಮಹಿಯೆಲ್ಲಮಂ ಶಿಶಿರರಾಜನೆ ಬಿಚ್ಚತಮಾಳ್ದಂ (ಶಂಶಠಾ. ೫-೩೦); ಬಿಚ್ಚತಂ ಬತ್ತೀಸಕೋಟಿ ಸಮುಚ್ಚಯದ ಧನವನು ಗಳಿಸಿದನು (ಶಾಳ್ಶಾ. ೦೭-೯೩). ೩. ಅಧಿಕವಾಗಿ; ಯಥೇಚ್ಛವಾಗಿ : ಹರಿನ್ಮಣಿಮರೀಚಿಮೇಚಕಿತಸಾನು ಭಾಗಂಗಳೊಳ್ ಕುರಂಗತತಿ ಬಿಚ್ಚತಂ ಪಸಲೆಗೆತ್ತು ಕಾರ್ದಾಸೆಯಿಂ ನಿರರ್ಥ ಜನಿತಶ್ರಮಂ ಬಳ[ಲ್ದು]ಕದ[ವ]ಲ್ಲಿಯುಮಂ ಪುಲ್ಲುಮಂ ಗಿರೀಂದ್ರದೊಳ[ಗ]ಲ್ಲಿ ಮೇಯು[ವು] ಹರಿನ್ಮಣಿಭ್ರಾಂತಿಯಿಂ (ಪರ್ಶಷಾ. ೫-೫೭) ; ಕರೀಂದ್ರೋತ್ಕರಂ . . . ಚಿತ್ರದೊಳಾದ ಮೋಹಮುಚ್ಚುಡಿದಿರೆ ಬಿಚ್ಚತಂ ಕಡುಪನೊಲ್ಲದೆ ನಿಂದುದದೊಂದು ಠಾಣದೊಳ್ (ಪುಣ್ಯಾ. ೦೦-೭೮) ; ಧೂಮಸಂಪಾದಿತ ಕಾಳಿಮಾಂಕಿತ ನಭಸ್ಥಳಮೆಂದುವಿದೆಂದು ಬಿಚ್ಚತಂ ಮೇದಿನಿ ಮೆಚ್ಚಿ ಬಣ್ಣಿಪುದು ಪೊಂಬೊಳಲಂ (ಶಾಸಾ. XV. ೬೩-೦೨ ; 1189). ೪. ನೆಮ್ಮದಿಯಾಗಿ ; ಸುಮ್ಮನೆ : ಬಿಚ್ಚತಮಿರ್ದು ಕಣ್ಣಾ ಮಸವೋಡುವಿನಂ ಸಲಿ ನೀನೆ ನೋಡ (ಶಾಷ್ಯಾಶ. ೯೯೯). ೫. ಗಟ್ಟಿಯಾಗಿ ; ಗಾಢವಾಗಿ ; ನಿಜೇಶನಂಕದಿನೀಳೆಶನ ಕಾಂತೆ ಚಿಚ್ಚರಮೆರ್ದು ಬಿಚ್ಚತಮಪ್ಪಿದಳ್ (ಅಸಂಪು. ೨-೯೩). [<ಬಿಚ್ಚತ]

**ಬಿಚ್ಚತಿಕೆ**, ಬಿಚ್ಚತಿಕ್ಕೆ, ಬಿಚ್ಚತಿಗೆ (ನಾ). ೧. ವಿಸ್ತಾರ ; ವ್ಯಾಪ್ತಿ ; ಹರವು ; ವೈಶಾಲ್ಯ : (೩). ೨. ನೆಮ್ಮದಿ ; ಸಮಾಧಾನ : ಪಗಲಂದಿರುಳಾದೊಡೆ ರಾಜ್ಯಮಾದವೋಲ್ ಪೆರ್ಚಿ ಮನಕ್ಕೆ ಬಿಚ್ಚತಿಕವಂದಿರೆ (ಶಂಶಠಾ. ೬-೭೩) ; ಆತನ ತನುಜಾತರಪ್ರಮಿತಶಾಸ್ತ್ರವಿಶಾರದರಾದೊರಕ್ಕುಮೆಂಬನಿತನೆ ಮೆಚ್ಚಿ ಬಿಚ್ಚತಿಕೆಯಿಂ ಪರಿಭಾವಿಸದೀ ದುರಾತ್ಮ ದುರ್ಜನರ್ಗೆ ನಿಕೃಷ್ಟದುಷ್ಪರಿವರ್ಗಾನೊಪೆದಿತ್ತನುದಾತ್ತವೃತ್ತಿಯಂ (ಸುಕುಮಾ. ೨-೨೭). ೩. ಅಡ್ಡಿಯಿಲ್ಲದಿರುವುದು; ನಿರಾತಂಕ: "ವಿಶ್ರಂಭಃ—ಬಿಚ್ಚತಿಕೆ" (ಜಾತಿವಾ. ೨೬-೦೦). ೪. ಅತಿಶಯತೆ ; ಹೆಚ್ಚುಗಾರಿಕೆ : ನೆಱಿಯ ನೆಗತ್ರ್ವಮೆತ್ತುದು ನಿಯೋಗಮಗುಂದಲೆಯಾಯ್ತು

ತೇಜ ಮಬ್ಬಿಜಿದುದು ಮಿಕ್ಕ ಬಿಚ್ಚತಿಕೆಸ × ವವಮಾದುದು (ಶಾ. v. ೦೯-೩೭ ; 1099). ೫. ಸಲಿಗೆ ; ಅಪ್ಪತೆ : ಜಲಜಾತಾಕ್ಷನೊಳಾಕೆ ಬಿಚ್ಚತಿಕೆಯುಂ ಮಾಡಲ್ ಬಟಿಕ್ಕಂ ಕಳಾನಿಲಯಂ ಮಾಡಿದನೊಲ್ದು ಚುಂಬನ ಪರಿಷ್ವಂಗಪ್ರಪಂಚಂಗಳಂ (ಜಗಾ. ೦೦-೦೧೦). ಬಿಚ್ಚತಿಕ್ಕೆ : ೩. ಅಮಾತ್ಯರಂ ಕರೆದು . . . ಭೂಮಂಡಳಮಂ ಪಚ್ಚು ಬಿಚ್ಚತಿಕ್ಕೆಯಿನಾಳ್ವಂತವರಂ ನಿಯೋಜಿಸಿ (ವೀಚಿಚು. ೩-೯೩ ವ) ; ಬಾಯ್ಗೆ ವಂದಂದದೊಳಿಂದೊಡೆಂದು ದನೊಡಂಬಡಿಪಿಚ್ಚೆಯ ಬಿಚ್ಚತಿಕ್ಕೆ . . . ಇಂಗೊರಲ ಮೆಲ್ಲುಲಿಯೊಪ್ಪುದುದು (ಕಂದ್ರ.ಕು. ೬-೬೬). ೪. ಮಸೆವುದು ಮಾಸಲಿರ್ದ ಪಟವೇಟ ಮನಿಚ್ಚೆಯ ಬಿಚ್ಚತಿಕ್ಕೆಯುಂ ಪೊಸಯಿಪುದು (ಚಾಂತಿಪು. ೬-೯೦). ೬. ಹೃದಯವೈಶಾಲ್ಯ ; ಧಾರಾಳತನ : ಆನೊಂದು ಬೇಡಿದಪೆಂ ನೀನದನೆನಗೀವುದಣ್ಣಾ . . . ಮೋಸಂಗೊಡಿರದೆ ಬಿಚ್ಚತಿಕ್ಕೆಯೊಳಿನಿಸಂ (ರರ್ಮಾವ್ಯ. ೨-೦೬೮). ಬಿಚ್ಚತಿಗೆ : ೪. ಅಂತು ಮುಟ್ಟಿ ಮೂರಿಲಿಸಿ ಪೆಟ್ಟನಿಂದೆಚ್ಚ ಬಿಚ್ಚತಿಗೆ[ಶಾತಾಂ. ರಿಕೆ]ಗೊಚ್ಚತಂ ಕೆಳರ್ದು (ಅಪಂಕ. ೦೯-೦೬ ವ). [ಬಿಚ್ಚತ + — ಇಕೆ]

ಬಿಚ್ಚತಿಕ್ಕೆ 'ಬಿಚ್ಚತಿಕೆ' ನೋ.

ಬಿಚ್ಚತಿಗ (ನಾ). ಶ್ರೇಷ್ಠನಾದ ವ್ಯಕ್ತಿ : ಚೆಚ್ಚರಿಗಂ ಪರಿವಾಯುಂ ತುಚ್ಚಳನತ್ಯುಗ್ರಕೋಪ ಮೂರ್ಖಿ ಕಿಸಚಿಕ್ಕೊಳ್ಕಿಚ್ಚಡುವನೆನಿಪ ಖಳನುಂ ಬಿಚ್ಚತಿ[ಶಾತಾಂ. ರಿ]ಗನೆನಿಕ್ಕುಮೊಂದಿ ಜೈನರ ಕೆಲದೊಳ್ (ಸಮಕ. ೬-೦೦೬). [ಬಿಚ್ಚತ + — ಇಗ]

ಬಿಚ್ಚತಿಗೆ 'ಬಿಚ್ಚತಿಕೆ' ನೋ.

ಬಿಚ್ಚನೆ (ಅ). ೧. ಅಗಲವಾಗಿ ; ವಿಶಾಲವಾಗಿ ; ದೊಡ್ಡದಾಗಿ : ಆತಂ ಕ್ರೋಧಾನಲದಿನೆನ್ನನುರಿಪುವಂತು ಕಿಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ (ಶಾಂತಂ.ಉ. ೦೦೨); ಬಿಸುನೆತ್ತರನೆತ್ತಂ ಸೂಸು ವಂತ ಬಿಚ್ಚನೆ ಬಿಟ್ಟರ್ದೆರದಂ ಕಣ್ಗಳೊಳವರೊರ್ಬರನೊರ್ಬರ್ನಂಗುವಂತೆ ನೋಡಿದರೆನಸುಂ (ಗದಾಯು. ೬-೯); ಬಿಚ್ಚನೆ ಬಿಟ್ಟ ದಿಟ್ಟಿ ಸಿಡಿಲಂ ಕೀಟ್ಟಾಡೆ ಬಂದೆಯ್ದಿ . . . ತಾಗಿದುದವದ್ಭುತಸ್ವನಿತಮೆಂಬನ್ನಂ ಬೃಹದ್ಬೃಂಹಿತಂ (ಶಂರಾವಿಜ. ೦೩-೬೬). ೨. ತಟ್ಟನೆ; ಕೂಡಲೆ : ಎಸೆವೀ ಬ್ರಹ್ಮಾಂಡಮಂ ಬಿಚ್ಚನೆ ಬಿರಿಯಿಸುತುಂ ವಾರ್ಧಿಯುಂ ಕೂಡೆ ತುಳ್ಕಾಡಿಸುತುಂ . . . ಪರ್ವಿತ್ತುರ್ವಿಂ ತಳೆದೊಗೆದ ಗಂಭೀರಭೇರೀನಿನಾದಂ (ಶಾಂತೀಶ. ೦೫-೩೯). ೩. ರಭಸವಾಗಿ ; ವೇಗವಾಗಿ : (*). [<ಬಿಚ್ಚತ + —ಅನೆ]

ಬಿಚ್ಚಲರ್ (ನಾ). ಅರಳಿದ ಹೂವು : ಮಕರಂದಮಂ ಭ್ರಮರಾವಳಿಗೆ ಮಾಜದೊಲಿದಿತ್ತು ಮೆಱೆವ ಬಿಳ್ದಾವರೆಯ ಬಿಚ್ಚಲರ್ಗಳ್ ಪರ್ಚ ನೋಡು (ಕೃಪಿಚಾ. ೩-೩೪). [ಬಿಚ್ಚು₁ (<ಬಿರ್ಚು) + ಅಲರ್₁]

ಬಿಚ್ಚಳ₁, ಬಿಚ್ಚಳೆ (ನಾ). ಹರಹು; ವಿಸ್ತಾರ; ವೈಶಾಲ್ಯ : "ಬಿಚ್ಚಳ ಮುಮೆನಲ್ ವಿಸ್ತರಾರ್ಥಮಕ್ಕುಂ" (ಶಬಕಿಂ. ೦೯೩). ' ಬಿಚ್ಚಳಿಸು ' ಪರಾ. ಬಿಚ್ಚಳೆ : ನರನೆಚ್ಚ ಕೆಂಗಣೆಗೋಲ ಬಿ[ಶಾತಾಂ. ಜ]ಚ್ಚಳೆಯ ಪೊಸಮಸೆಯ ನಿಚ್ಚಳದ ನಿಡುಸರಲ್ಪಿಚ್ಚಿದವು . . . ಕೊಚ್ಚಿದವು ಪರಬಲವನು (ಕೈಪಿಚಾ. ೦೩-೦೬). [<ಬಿತ್ತರ./ಸಂ. ವಿಸ್ತರ]

ಬಿಚ್ಚಳ₂ 'ಬಿಜ್ಜಣ' ನೋ.

ಬಿಚ್ಚಳಿಕೆ (ನಾ). ೧. ಹರಹು ; ವೈಶಾಲ್ಯ : "ಬಿಚ್ಚಳಿಕೆಯಿಂದು ವಿಸ್ತಾರಮಕ್ಕುಂ" (ಕಕ್ಕೃ. ೦೭) ; "ಬಿತ್ತರಮೆನಲ್ ಬಿಚ್ಚಳಿಕೆಯೆನಲು ವಿಸ್ತಾರಮಕ್ಕು" (ಕಚ. ೬೦). ೨. ಧಾರಾಳತನ ; ಹೃದಯವೈಶಾಲ್ಯ: ದಾನಧರ್ಮಾನುರಾಗಮುಂ ಬಿಚ್ಚಳಿಕೆಯುಂ ಪಾಪಕ್ಕಂ ಪಟಿಗಮುಂಜು ವುದುಂ . . . ಅಖಂಡಿತಚಾರಿತ್ರರಾಗಿ ನೆಗೞ್ವುದುಂ ತಪೋಭಾವನೆಯುಂ ಮೆಂದಿವಱಿಂ ಸಾತಾವೇದನೀಯಾಸ್ರವಮಕ್ಕುಂ(ಶಬಾರ. ೯೯). ೩. ನೆಮ್ಮದಿ; ಸಮಾಧಾನ : ಅನುನಯದಿಂ ಬಿಚ್ಚಳಿಕೆವೆರಸಿ ಮನದೊಳ್ ಮೆಚ್ಚಿ ಮಹೇಶ್ವರನನಲ್ಲಿ ಚಿಂತಿಸುತಿರ್ದಂ(ಇಶ. XX. ೬೯-೬; ೪೩ಯು ೩೪). ೪. ಹರಡಿರುವುದು ; ಚೆದರಿರುವುದು : (*). [ಬಿಚ್ಚಳ₁ + — ಇಕೆ]

ಬಿಚ್ಚಳಿಕೆಗೆಯ್ (ಕ್ರಿ). ವಿಸ್ತಾರವಾಗಿ ನಿರೂಪಿಸು : ಸೌಂದರ್ಯ ಶಾಲಿತನಯಂಗೆ ನೃಪಂ ಯುವರಾಜಪಟ್ಟಮಿತ್ತುಸುಭವಮಂ ಬಿಚ್ಚಳಿಕೆ ಗೆಯ್ದುದುಜಿತಂ ತನುಜಾ (ಕನುಮಾ. ೦೨-೯೭). [ಬಿಚ್ಚಳಿಕೆ + ಕೆಯ್₁]

ಬಿಚ್ಚಳಿಸು (ಕ್ರಿ). ೧. ಹಬ್ಬು : ಹರಡು ; ಪಸರಿಸು : ಸ್ಫುರಿತ ಕಮನೀಯಂಗಳಾಗಿ ಬೆಳತಿಗೆಬೆಳಗನಿರದೆಂಟುದೆಸೆಗಳೊಳ್ ಬಿಚ್ಚಳಿಸಿ ಥಳಥಳಿಸುತಿರಲ್ (ಅರಾಕ. ೯-೩-೯) ; ಸೌದಾಮಿನಿಯು ಕರೆಗೆಟ್ಟದ ಪ್ರತುಮೆಯುಂದದೊಳಗಜೆಯುಚ್ಚರಿಯು ಬಿಚ್ಚಳಿಸುತಿಸೆದಳಾಗ (ಪಂದಿಮಾ. ೬-೩). ೨. ವಿಸ್ತಾರಗೊಳಿಸು; ವ್ಯಾಪಿಸುವಂತೆ ಮಾಡು : ನಿಚ್ಚಲುಂ ಬಿಚ್ಚಳಿಸಲ್ ವಿಖ್ಯಾತನಾದಂ (ಮೊಂಕಶಾ. ೦೯೩೬, ೦೪ ೯೪೮ ೦೦-೦೩ ; ?). ೩. ಅತಿಶಯಗೊಳಿಸು; ದೊಡ್ಡದು ಮಾಡು : ತಮ್ಮ ಪಂಡಿತಿಕ್ಕೆ ಯನಱಿಪಿದೊಡೆ ಸಭೆಯೊಳಿರ್ದ ಪಂಡಿತಜನಮೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗಟ್ಬೊಡೆ (ವಡ್ಡಾರಾ. ೯-೨೬) ; ಸಭಾಸದರ್ ಮೆಚ್ಚಿ ಬಿಚ್ಚಳಿಸಿ ಪೊಗಟ್ಬಿನಂ (ಸುಕುಮಾ. ೬-೩೭ ವ). ೪. ಬಿತ್ತರಿಸು; ವಿಶದೀಕರಿಸು; ವಿವರಿಸು : ನಾಯಿಕಾನಿಕುರುಂಬಮುಮಂತವರ ತೆಱನುಮಂ ಬಿಚ್ಚಳಿಪೆಂ (ಛಸರ. ೩-೭೦ ಸೂತ್ರ) ; ನಿಗಮಾಗಮಪುರಾಣವಾಣಿಗಳಿಂ ಸಹಜಸಿದ್ಧಶಿವಾಧಿಕ್ಯಮಂ ಬಿಚ್ಚಳಿಸುತ್ತುಂ (ವೃಷಂ. ೩೭-೦೩೨ ವ). ೫. ಅಧಿಕವಾಗಿ ಹೊಗಳು.— ಪ್ರಶಂಸಿಸು: ಆತಂಗೆ ಮೆಚ್ಚಿ ಬಿಚ್ಚಳಿಸಿ ತನ್ನಂಗಚಿತ್ರಮುಮಂ ಕೆಲವು ಬಾಟುಮಂ ಕೊಟ್ಟು (ವಡ್ಡಾರಾ. ೦೬೨-೬); ತದನಂತರಮೇ ಲೋಕಾಂತಿಕಾಮರವೃಂದಂ ಬಂದು ಬಿಚ್ಚಳಿಸಲೊಡಂ ವಜ್ರಕ್ಕೆ ಬಳಮಿತ್ತಂತೆ ವಜ್ರಸೇನಮಹಾರಾಜಂ . . . ತವಂಗೊಂಡಂ (ಆದಿಪು. ೬-೨೩ ವ); ಸುರರಂಬರದೊಳ್ ತಗುಳ್ದು ಬಿಚ್ಚಳಿಸೆ ನದೀಶನುಚ್ಚಳಿಸೆ ಕಾದಿದನೇಂ ಕಲಿಯೋ ಗುಣಾರ್ಣವಂ (ಪಂಪಭಾ. ೦೦-೯೩). ೬. ಹೆಚ್ಚಾಗು ; ಅಧಿಕಗೊಳ್ಳು : ಪೊರೆವ ಪೆಣ್ದಂಬಿಯ ಬಿಚ್ಚಳಿಪ ಪರಭೃತದ ಕಳಕಳದೊಳ್ ಮಸುಳ್ದುದು ದಿವಿಜಯುಗಲಕಲಕಲ ನಿಸದಂ (ಅದಿಪು. ೬-೯೯); ಸಾಹಸಂ ಬಿಚ್ಚಳಿಸಲು ಕೊಡಲಿಯಿಂ ಖಂಡಿಸಿದನಾ ತನ ಶಿರಸ್ಸನು (ಅರಾಕ. ೨-೨-೨೦). ೭. ಸಂತೋಷಪಡು; ಹರ್ಷಗೊಳ್ಳು: ತಳಿರ್ತಳಮಾವು ಮಾವಿನಂಕುರವನೆ ಕರ್ಚಿ ಬಿಚ್ಚಳಿಪ ಕೋಗಿಲೆ ಕಂಪನವುಂಕಿ ಪೊತ್ತು ನಿತ್ತರಿಪೆರಲೆಂಬವೇವುವೊ (ಶಂಕಶಾ. ೩-೦೦); ನಡುವ ಸರಲ್ ಸರಲ್ಗೊಳೆ . . . ಮೆಯ್ಗೊಣರ್ಚುವ ಮಹಾರಥರಾಜಿಯೊಳಂತ ಗುರ್ವಿನಚ್ಚುಡಿದಿರೆ ಕಾದಿ ಬಿಚ್ಚಳಿಸಿದರ್ ಬಿಸುನೆತ್ತರ ಸುಟ್ಟುರಿ ಸೂಸುವನ್ನೆಗಂ (ಶಂಕಶಾ. ೦೦-೦೦೯). ೮. ಶೋಭಿಸು; ಪ್ರಕಾಶಿಸು; ಹೊಳೆ: ನಿಚ್ಚಣಿಯರನು ನೋಡುತ್ತಿರರೆ ಬಿಚ್ಚಳಿಪ ಚೆಂಬೊನ್ನ ಸೊಬಗಿನ ಸ್ವಚ್ಛವಾದಾ ಸಿದ್ಧಮಂಡಪಮೆಯ್ದಿ (ಶಾಲ್ಯಶಾ. ೯-೩೨).
[ ಬಿಚ್ಚಳ₁ + — ಇಸು₃ ]

ಬಿಚ್ಚಳೆ ' ಬಿಚ್ಚಳ₁ ' ನೋ.

ಬಿಚ್ಚಾಲೆ ' ಬಿಚ್ಚೋಲೆ ' ನೋ.

ಬಿಚ್ಚಾಳು (ನಾ). ಸ್ವಾತಂತ್ರ್ಯವುಳ್ಳವನು ; ಬಿಡುಗಡೆ ಹೊಂದಿದವನು: ಚನ್ನವಮ್ಮಾಜಿಯುಂಮಾಳೋಚಿಸಿ ತಮ್ಮ ರಾಷ್ಟ್ರಕಾಗಿಯವಂ ಬಿಚ್ಚಾಳಾಗಿ ಪೋದುದಹುದಾವಾಳುತ್ತಿರ್ಪಳೆಯೊಳ್ಳೆವೆಂದರುಹಿಸಿದಳ್ (ಕಳಕ್ಷ. ೯-೬೯).
[ ಬಿಚ್ಚು₂ + ಆಳು₃ (<ಆಳ್₃) ]

ಬಿಚ್ಚಿಸು ' ಬಿರ್ಚಿಸು ' ನೋ.

ಬಿಚ್ಚು₁ ' ಬಿರ್ಚು ' ನೋ.

ಬಿಚ್ಚು₂ (ನಾ). ೧. ಸಡಿಲವಾಗುವಿಕೆ : (*). ೨. ಸಡಿಲಗೊಂಡುದು : (*). ೩. ಸರಳತೆ : ' ಬಿಚ್ಚುಗನ್ನಡ ' ಪರಾ. ೪. ವಿರಳಗೊಳಿಸುವ

ಸಾಧನ : ಮುಚ್ಚಿರಿಸುವರ ಬಿಚ್ಚು ಕುಜನರ ಬೆಚ್ಚು ಶಾಂತಿಯು ಹೆಚ್ಚು ಧೂರ್ತರ ಕೊಚ್ಚು ಕಲಿತನದುಚ್ಚು ಸುಖಕಣೆ ಮುಚ್ಚುಮರೆಯಿಲ್ಲ (ಆಕಫ. ೨೯-೯೬) ; ಜಾರರ ಚೋರರ ಬಿಚ್ಚು ಸಂತತಂ ಕುವಲಯದ ಮನೋವಿಲಾಸದ ಮಚ್ಚು (ಕಕಮೋ. ೦೬-೨೯). (ಗು). ೫. ಬಿಡಿಯಾದ ; ಚಿಲ್ಲರೆಯಾದ : ' ಬಿಚ್ಚುರೊಕ್ಕ ' ಪರಾ. [ <ಬಿಚ್ಚು$_1$ ]

**ಬಿಚ್ಚು₃** ' ಬಿಕ್ಕು₄ ' ನೋ.

**ಬಿಚ್ಚು₄** ' ಬಿಜ್ಜು₂ ' ನೋ.

**ಬಿಚ್ಚುಕಣ್ಣು** ' ಬಿಚ್ಚುಗಣ್ ' ನೋ.

**ಬಿಚ್ಚುಕತ್ತಿ** ' ಬಿಚ್ಚುಗತ್ತಿ ' ನೋ.

**ಬಿಚ್ಚುಗಣ್**, ಬಿಚ್ಚುಕಣ್ಣು, ಬಿಚ್ಚುಗಣ್ಣು (ನಾ). ಅಗಲವಾಗಿ ತೆರೆದಿರುವ ಕಣ್ಣು : ಎಚ್ಚು ಹಾಯ್ದಂಬುಗಳು ಭೂತದ ಬಿಚ್ಚುಗಂಗಳ ಕೊಂಡದುರಿಯಲಿ ಬಚ್ಚಿಸಿದ ಗಜ ಸ್ವೇದು ಸೀಕರಿಯೋಗಿ ನಿಮಿಷದಲಿ (ಕುವ್ಯಾ.ಗ. ೯-೦೬) ; ಅನಿಲಜನ ಕರಪುಟದಿ ಮಿರುಗುತಿರ್ದಪತಂಸಮಂ ಬಿಚ್ಚುಗಣ್ಗಳಿಂ ನೋಡುತಿರ್ದು (ಶ್ರೀಣಾಕಚ. ೩೨೩-೬೦೫). ಬಿಚ್ಚುಕಣ್ಣು: ಅವಳನ್ನು ಬಿಚ್ಚುಕಣ್ಣಿನಿಂದ ನೋಡುತ್ತ . . . ಎಂದಳು (ಬೇಂಕ್. ೦೦೦). ಬಿಚ್ಚುಗಣ್ಣು: ನೀರಲುಗಿ . . . ಸಾವಿನಲ್ಲಿ ತೆರೆದ ಬಿಳಿಯ ಬಿಚ್ಚುಗಣ್ಣು, ಪಾಚಿಯ ಮೂಲಕ ಕಂಡಿತು (ಹೊಸಕ್ಕ. ೦೬೯).

[ ಬಿಚ್ಚು$_1$ (<ಬಿಚ್ಚು) + ಕಣ್ ]

**ಬಿಚ್ಚುಗಣ್ಣು** ' ಬಿಚ್ಚುಗಣ್ ' ನೋ.

**ಬಿಚ್ಚುಗತ್ತಿ**, ಬಿಚ್ಚುಕತ್ತಿ (ನಾ). ಒರೆಯಿಂದ ಹೊರತೆಗೆದ ಕತ್ತಿ ; ಹಿರಿದ ಕತ್ತಿ : ಹರಿಗೆ ಬಿಚ್ಚುಗತ್ತಿಯು ಹೊಳೆವ ಕಟಿಯು ಮುಂಡುಗಳ ಬಲುಗಳ ಮಧ್ಯದ ಸರ್ವಸಂಭ್ರಮದೊಳು ಮಳೆಯಾಳವವನೀಶ ಬಂದ (ಕೆಂಪಪ. ೨೦-೬೩) ; ಬಿಚ್ಚುಗತ್ತಿಪಹರೆಯವರು ಬಲುಜಾಗರೂಕತೆಯಿಂದ ಕಾವಲು ಕಾಯುತ್ತಿದ್ದಾರೆ (ಬೇಂಕ್. ೯). ಬಿಚ್ಚುಕತ್ತಿ : ಬಿಚ್ಚುಕತ್ತಿಗಳಂ ಪಿಡಿದು (ಸೌಗಂಧಿ. ೨೬೨-೦೦) ; ಅಪ್ಪಭಟರು . . . ಬಿಚ್ಚುಕತ್ತಿಗಳನ್ನು ಹಿಡುಕೊಂಡು ನಿನ್ನ ಸುತ್ತಲು ಸಡೆದು ಬರುವರೆ ? (ಕೃಪಾಸ. ೦೦) ; ಬಿಚ್ಚುಕತ್ತಿಗಳನ್ನು ಕೈಲಿ ಹಿಡಿದು ಮುಂದೆ ನುಗ್ಗಿದರು (ರಾಜಕಥೊ. ೩೯). [ಬಿಚ್ಚು$_1$ (<ಬಿಚ್ಚು) + ಕತ್ತಿ ]

**ಬಿಚ್ಚುಗನ್ನಡ** (ನಾ). ಸರಳವಾದ ಕನ್ನಡ : ತಿಳಿಗನ್ನಡ : ಒಮ್ಮೆ ಕಂಡನೆಂದರೆ ಆಗ ಆಗುವ ಆನಂದವನ್ನು ಬಿಚ್ಚುಗನ್ನಡದಲ್ಲಿ ಬಣ್ಣಿಸಿದ ವಚನಗಳನ್ನು ನೋಡಿ ! (ಕಶ್ರಪ. I. ೦೬೩). [ಬಿಚ್ಚು$_2$ + ಕನ್ನಡ$_1$ ]

**ಬಿಚ್ಚುಗಯ್ದು** (ನಾ). ಒರೆಯಿಂದ ಸೆಳೆದ ಆಯುಧ : ಮಲ್ಲರಾಜನನ್ನು ಬೆನ್ನಟ್ಟಿ ಬಂದ ಬಿಚ್ಚುಗಯ್ದುಗಳ ತನ್ನವರನ್ನು ಕೆಯ್ಸನ್ನೆಯಿಂದ ಹಿಂದಕ್ಕೆ ಕಳಿಹಿಬಿಡುವನು (ಬಕುಗಂ. ೩೪-೦೪).

[ಬಿಚ್ಚು$_1$ (<ಬಿಚ್ಚು) + ಕಯ್ದು (<ಕೆಯ್ದು) ]

**ಬಿಚ್ಚುಜಡೆ** (ನಾ). ಬಿಚ್ಚಿಕೊಂಡಿರುವ ಜಟೆ ; ಹರಡಿಕೊಂಡಿರುವ ಜಟೆ : ಮೆಚ್ಚಿದನು ಮದನಾರಿ ಹೋಮದ ಕಿಚ್ಚು ತುಡುಕದ ಮುನ್ನ ತೆಗೆದನು ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನು ಘಟನ (ಕುವ್ಯಾ.ಗ. ೯-೨೬). [ಬಿಚ್ಚು$_1$ (<ಬಿಚ್ಚು) + ಜಡೆ$_1$ ]

**ಬಿಚ್ಚುನುಡಿ** (ನಾ). ಮುಚ್ಚುಮರೆಯಿಲ್ಲದ ಮಾತು ; ಸ್ಪಷ್ಟವಾದ ನುಡಿ ; ನೇರವಾದ ಮಾತು : ಅವರ ಬಿಚ್ಚುನುಡಿಗಳನ್ನು ನಾನು ಪ್ರೀತಿಸಿದೆ (ಜಾಘೋಂ. ೯೯) ; ' ಎನ್ನ ತಪ್ಪು ಅನಂತಕೋಟಿ ; ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ ! ' ಎಂಬ ಬಿಚ್ಚುನುಡಿ (ಸಾಹಿಕಂ. ೩).

[ಬಿಚ್ಚು$_1$ (<ಬಿಚ್ಚು) + ನುಡಿ$_2$]

**ಬಿಚ್ಚುಪೇಣಿ** (ನಾ). ಒಂದು ಬಗೆಯ ಸಿಹಿತಿಂಡಿ : ಬೆಂದುದಂ ಪಿಡಿದು ತೆಗೆದಿರಿಸಿಯುತ್ತಮದ ಸಕ್ಕರೆಯನದಿ ಪದರ್ಗಳೊಳು ತುಂಬಲದು ಬಿಚ್ಚುಪೇಣಿಯಾಯ್ತು (ಸೂಶಾ. ೦-೯೯). [ ಬಿಚ್ಚು ? + ಫೇಣಿ ]

**ಬಿಚ್ಚುಫಿರಂಗಿ** (ನಾ). "ದೊರೆಯು ಸಂಗಡ ತೆಗೆದುಕೊಂಡು ಹೋಗುವ ಆಯುಧ" (ಕಕ್ರಪಾ. ೨ ಅಕುಬಂಧ) : ಓಬಳ್ನಾನಾಯಕನಿಗೆ ಪಟ್ಟವಾಯಿತು. ಇವನಿಗೆ ಬಿಚ್ಚುಫಿರಂಗಿ ಹಿಡಿಸಿದರು (ಕಕ್ರಪಾ. ೦೬).

[ ಬಿಚ್ಚು ? + ಫಿರಂಗಿ ]

**ಬಿಚ್ಚುಫೇಣಿ** (ನಾ). = ಬಿಚ್ಚುಪೇಣಿ : ಈಪೋಪಾದಿಯಲ್ಲಿ ಎಲ್ಲ ಫೇಣಿಗಳನೂ ಅಟ್ಟು ಇರಿಸಿ ಎಲ್ಲ ಪದರಿನೊಳಗೆ ಸಕ್ಕರೆಯ ತುಂಬಿ ತಳಿವುದು. ಇದರ ಹೆಸರು ಬಿಚ್ಚುಫೇಣಿ ಎನಿಸಿಕೊಂಬುದು (ಸೂಶಾ. ೦-೯೯ ಅಡಿ). [ ಬಿಚ್ಚು ? + ಫೇಣಿ ]

**ಬಿಚ್ಚುಮನಸ್ಸು** (ನಾ). ಮುಚ್ಚುಮರೆಯಿಲ್ಲದ ಹೃದಯ ; ತೆರೆದ ಮನಸ್ಸು : ಪದ್ಮಾಕರ ಬಿಚ್ಚುಮನಸ್ಸಿನಿಂದ ಮಾತನಾಡತೊಡಗಿದ (ರತ್ನಗೋ. ೨೨) ; ಒಬ್ಬರನ್ನೊಬ್ಬರು ಬಿಚ್ಚುಮನಸ್ಸಿನಿಂದ ಮೆಚ್ಚಿಕೊಂಡುದು ಜನರಿಗೆ ಮಹದಾನಂದವಾಯಿತು (ಸಂಗೀಕ. ೩೦).

[ ಬಿಚ್ಚು$_1$ (<ಬಿಚ್ಚು) + ಮನಸ್ಸು ]

**ಬಿಚ್ಚುಮಾತು** (ನಾ). = ಬಿಚ್ಚುನುಡಿ : ನಿನ್ನ ಬಿಚ್ಚುಮಾತನ್ನು ನಾನು ಮೆಚ್ಚುತ್ತೇನೆ (ದೂಠಕ. ೦೦೩) ; ಇದನ್ನು ಬಿಚ್ಚುಮಾತಿನಿಂದ ಶ್ರೀಮದಾನಂದತೀರ್ಥರು . . . ಉಪದೇಶಿಸಿದ್ದಾರೆ (ಶಾರದ. ೨೬೧).

[ ಬಿಚ್ಚು$_1$ (<ಬಿಚ್ಚು) + ಮಾತು$_1$ ]

**ಬಿಚ್ಚುಮೊಗ್ಗೆ** (ನಾ). ಅರಳಿದ ಮೊಗ್ಗು : ಹೌದು ಧಣಿಯೆ, ನಾ ಬಿಚ್ಚುಮೊಗ್ಗೆ, ನನಗಿಲ್ಲ ಸೆರಗುಮುಚ್ಚು (ಮುಕ್ತಕಂ. ೨೯-೩).

[ ಬಿಚ್ಚು$_1$ (<ಬಿಚ್ಚು) + ಮೊಗ್ಗೆ ]

**ಬಿಚ್ಚುರಥಿಕ** (ನಾ). ಏಕಾಕಿಯಾಗಿ ಕಾದಬಲ್ಲ ರಥಿಕ : ಹೆಚ್ಚಿ ವೀರಾವೇಶದಲಿ ಬಹ ಬಿಚ್ಚುರಥಿಕರನಾಯ್ದು ಧೈರ್ಯದ ಕಚ್ಚೆ ಮುಚ್ಚಿವನು (ಕುವ್ಯಾಕ. ೦೩-೨೨). [ ಬಿಚ್ಚು$_2$ + ರಥಿಕ ]

**ಬಿಚ್ಚುರೊಕ್ಕ** (ನಾ). ಚಿಲ್ಲರೆ ಹಣ ; ಪುಡಿಗಾಸು : ಬಿಚ್ಚುರೊಕ್ಕ ವಿರಲಿಲ್ಲ. ಗುಮಾಸ್ತ ರೂಪಾಯಿ ಮುರಿಸಿಕೊಂಡು ಬರಲು ಹೋದ (ಶ್ರೀತಾಕ್ರ. ೦೯೬). [ ಬಿಚ್ಚು$_2$ + ರೊಕ್ಕ ]

**ಬಿಚ್ಚುವ** (ನಾ). ಸಂನ್ಯಾಸಿ ; ಭಿಕ್ಷುಕ : ಒರ್ವ ರಸವಾದಕನೆಂಬ ಬಿಚ್ಚುವಂ [ಕಾಣಂ. ಭಿಕ್ಷುಕಂ] . . . ಎಂದೊಡೆ (ವಡ್ಡಾರಾ. ೦೬೬-೦೦); ಆ ಬಿಚ್ಚುವಂ . . . ತನ್ನೊಳವಧಾರಿಸಿ (ಸುಕುಮಾ. ೩-೬ ವ).

[ < ಸಂ. ಭಿಕ್ಷುಕ ]

**ಬಿಚ್ಚೂರಿಗೆ** (ನಾ). ಒಂದು ಬಗೆಯ ಭಕ್ಷ್ಯ : ಮಂಡಗೆ ಪೇಣಿ ನಲ್ಗೈದ ಲಡ್ಡುಗೆಯ ಬಿಚ್ಚೂರಿಗೆಗಳಂ ಬಡ್ಡಣಿಸಿದರಂಗನೆಯರು (ಮದೇಕು. ೦೬-೨೯) ; ಗಾರಿಗೆ ಲಡ್ಡುಗೆ ಬೀಸೂರಿಗೆ ಬಿಚ್ಚೂರಿಗೆ . . . ಮಧು ಸಕ್ಕರೆಗಳ ಸಾರಂಗಳ ಸುಳಿವಾಳೆಯ ದೊನ್ನೆಯೊಳಾರೈದೆರೆದರ್ಸವಿಗಾತಿಯರ್ (ಮದೇಕು. ೦೯-೫೬).

[ಬಿಚ್ಚು ? + ಹೂರಿಗೆ (<ಪೂರಿಗೆ)]

**ಬಿಚ್ಚೆ** ' ಬಿಕ್ಕೆ$_2$ ' ನೋ.

**ಬಿಚ್ಚೆಕಾರ** (ನಾ). ಭಿಕ್ಷುಕ ; ತಿರುಪೆಯವನು : ಈ ಬಿಚ್ಚೆಕಾರ ಭಿಕಾರಿ ರಾಯ . . . ಕೊಸವ . . . ವೃದ್ಧಜಂಬುಕ (ಮಂತ್ರಕ. ೦೦೦_೦೪).

[ಬಿಚ್ಚೆ (< ಬಿಕ್ಕೆ$_2$) + – ಕಾರ$_1$ (< – ಕಾಱ) /ತಮಿ. ಪಿಚ್ಚೈಕ್ಕಾರನ್]

**ಬಿಚ್ಚೋಗರ** (ನಾ). (ಹೂವಿನಂತೆ) ಉದುರುದುರಾಗಿರುವ ಅನ್ನ ; ಮಿದ್ದೆಯಾಗಿಲ್ಲದ ಅನ್ನ : ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸರು . . . ರಸರಸಾಯನವ ಚಪ್ಪರಿದು ನೀರ್ಮಜ್ಜಿಗೆ ಹಸಗೆಯ್ಯಿರಲೀಂಟಿದರು (ಪೋಹಕ. ೩-೩೬). [ಬಿಚ್ಚು$_1$ (< ಬಿಚ್ಚು) + ಓಗರ]

**ಬಿಚ್ಚೋಲೆ**, ಬಿಜ್ಜೋಲೆ (ನಾ). (ಮುತ್ತೈದೆಯರು) ಕಿವಿಗೆ ಆಭರಣವಂತೆ ಧರಿಸುವ ತಾಳೆಗರಿಯ ಸುರುಳಿ : ಬಿಚ್ಚೋಲೆ ಹರಿಹು ಹೆಜ

ತಿಲಕಂ ಕಂಗಳನಲಸದೆ ಕೇದಗೆವೂಗಳೊಳಿತ್ತಂ ಮಾಡಿ ತೊಟ್ಟನಬಲೆಯರೆಲ್ಲಂ (ಸೂಕ್ತಿಸು. ೦೦-೩೦); ಮಡಿಚಿ ಬಿಚ್ಚೋಲೆಗಳ ಬಣ್ಣದ ಪೊನ್ನ ನೂಲುಂಗಳ ಗಿರಿಗಳೇ ಫಲವಾದುವಾ ಸುರಕರಿಯ ಸೋಂಪಿಯು ದಾನಕೆ (ಸಂಕಶ. ೨೦-೨೦); ತಾನೆ ಐರದಾಳಿಯ ಬಿಚ್ಚೋಲೆಯ ಚಂದನದ . . . ಕರುಡವಂ ಕೈಯೊಳ್ಕೊಂಡು (ರಾಮಾಶ್ವ. ೨೯-೦೬). **ಬಿಚ್ಚಾಲೆ :** ಶ್ರೀರಂಗವ್ವನು ಆಭರಣಗಳನ್ನೆಲ್ಲಾ ಪರಿತ್ಯಜಿಸಿ ಅರಿಶಿನ ಕುಂಕುಮವನ್ನು ಇಟ್ಟುಕೊಂಡು ಬಿಚ್ಚಾಲೆಯನ್ನು ಧರಿಸಿಕೊಂಡು . . . ಹೇಳಿ ಕಳುಹಿಸಿದಳು (ಶ್ರೀರಾಯ. ೩೭೦); ಮದುವೆಯಾಗಿದ್ದರೆ ಹೆಂಡತಿಯು ಅರಿಶಿನಕುಂಕುಮ ಒಳೆ ಬಿಚ್ಚೋಲೆಯನ್ನು ತೆಗೆಸುತ್ತಿದ್ದರು (ದೂರಿಸ. ೨೬೯).

**ಬಿಚ್ಚೋಲೆ ಗೌರವ್ವ, ಬಿಚ್ಚೋಲೆಯ ಗೌರವ್ವ** = ಯಾವ ಆಭರಣಗಳನ್ನೂ ಹಾಕಿಕೊಂಡಿರದ ಬಡಮುತ್ತೈದೆ : ಅವಳು ಬಿಚ್ಚೋಲಿ ಗೌರವ್ವನಂತೆ ಮದುವೆಮನೆಗೆ ಹೊರಟಿದ್ದಳು (ರೂಢಿ); ತಾಯಿಯ ಜಂಬ ಆಡಂಬರಗಳನ್ನೇ ಅರಿಯದ ಬಳೆ ಬಿಚ್ಚೋಲೆಯ ಗೌರವ್ವ (ದೂರಿಸ. ೯೩).

[ಬಿಚ್ಚು$_1$ (< ಬಿರ್ಚು) + ಓಲೆ . / ತುಳು. ಬಿಚ್ಚೋಲೆ]

**ಬಿಚ್ಚುವ** 'ಬಿಚುವಾ' ನೋ.

**ಬಿಚ್ವ** 'ಬಿಚುವಾ' ನೋ.

**ಬಿಚ್ವಾ** 'ಬಿಚುವಾ' ನೋ.

**ಬಿಛಾನಾ** 'ಬಿಚಾನ' ನೋ.

**ಬಿಛಾಯತ, ಬಿಚಾಯಿತ, ಬಿಛಾಯಿತ** (ನಾ). ದಲ್ಲಾಳಿ ; ಕಮಿಷನ್ ಏಜೆಂಟ್ : ಇಲ್ಲಿ ಲೋಕಬಂದ ಜೇನಸಗಳ ಒಡವೆ ಬಹಳ, ಅಂತ ನಮ್ಮ ಬಿಛಾಯತರು ಇದು ಧ್ಯಾನದಲ್ಲಿ ತಂದು (ಮುಂಬವ್ವಾ. ೩೦). **ಬಿಚಾಯಿತ :** ಪರವೂರಿಂದ ಬಂದ ಬಿಚಾಯಿತರು ಊರಿನೊಳಗಿನ . . . ಅಂಬೋಣ ಏನಿರುವದು ಇದನ್ನು ಕೇಳಿಕೊಂಡು ಅದರಂತೆ ವ್ಯವಸ್ಥೆಯನ್ನು ಮಾಡುವದು (ಮುಂಬವ್ವಾ. ೨೩೦). **ಬಿಛಾಯಿತ :** ಈ ವಾಹಿತಿಯು ಬಿಛಾಯಿತರಿಗೆ ಬಹು ಅಗತ್ಯ ಇರತಕ್ಕದ್ದು (ಮುಂಬವ್ವಾ. ೨೯).

[← ಮರಾ. ಬಿಛಾಯತ್, ಬಿಛಾಇತೀ, ಬಿಛಾಯತೀ]

**ಬಿಛಾಯಿತ** 'ಬಿಛಾಯತ' ನೋ.

**ಬಿಜ** 'ಬಿಜಯ' ನೋ.

**ಬಿಜಅ** (ನಾ). ಒಬ್ಬಾಕೆಯ ಹೆಸರು : ಪೊಳಲಿನಾಡುಳ್ಕೊಟಿಯೂರು ಬರಗೂರು ಬಿಜಅ ಮಾದೇವಿಯಾಳುತ್ತಿರೆ (ಎಕ. XII. ತಿರು. ೨೯-೩೬; ಸು. ೬೦೦).

[< ಸಂ. ವಿಜಯಾ]

**ಬಿಜಯ, ಬಿಜ** (ನಾ). ೧. ವಿಜಯ ; ಗೆಲುವು : "ಬಿಜಯ (ಬಿಜ)— ವಿಜಯ=ಗೆಲುವು" (ತದ್ಭಕೋ. ೩೦). ೨. ಪ್ರಯಾಣ ಮಾಡಿ ಬರುವುದು ; ಆಗಮನ ; ಬರವು : ಮಾಡುವುದು: ನೀವ್ ಬಿಜಯವಲ್ಲಿಗೆ (ಸಂಕಶ. ೦೬-೩೦) ; ವರದರಾಜದೇವರ ತೇಕಲ ಪಟ್ಟಣಕೆ ಬಿಜಯಂ ಮಾಡ್ಸಿಕೊಂಡು (ಎಕ. X (೩). ಮುಳಬಾ. ೩-೦೬; 1430). ೩. ತೆರಳುವಿಕೆ; ಹೊರಡುವಿಕೆ ; ನಿರ್ಗಮನ : ಬಿಜಯಮೆಸಗಲಿಕೆಪ್ಪುಗಂಪುಜ್ಞೆಯೀಂ (ಶರಚ. ೩-೦೩). ❂ ಇದು ಸಾಮಾನ್ಯವಾಗಿ ರಾಜರು, ಗುರುಗಳು, ಹಿರಿಯರು ಮುಂತಾದವರ ಆಗಮನ, ನಿರ್ಗಮನಗಳಿಗೆ ಅನ್ವಯಿಸುವ ಗೌರವಸೂಚಕವಾದ ಶಬ್ದ. ೪. (?) : ಆ ಊರ ಬಿಜಯರು ಕಂಮಾಜರು ಅಗಸಾಲೆಯರು ನಾಯಿಂದರು (ಎಕ. IV (II). ಎಳಂದೂ. ೦೩೪-೯ ; ೧೬ನೆಯ ಶ). ಬಿಜ : ೧. ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ.

**ಬಿಜಯ ಮಾಡಿಸು, ಬಿಜ ಮಾಡಿಸು** = ೧. ಬರುವಂತೆ ಮಾಡು; ಕರೆತರು : ಸರಸ್ವತೀಮಂದಿರದೊಳಗೆ ಅವರನ್ನು ಬಿಜಯ ಮಾಡಿಸು (ಶರೀವ. ೦೦೩) ; ಆಗ ಹುಜೂರ್‌ಸವಾರಿ ಬಿಜಯ ಮಾಡಿಸುವುದೆಂದರೆ ಬಹಳ ದೊಡ್ಡ ಉತ್ಸವ (ಕಿಂಪ. ೬೯). ೨. (ಉತ್ಸವದಲ್ಲಿ ದೇವರ ವಿಗ್ರಹ ಮುಂತಾದುವುಗಳಂತೆ) ತೆಗೆದುಕೊಂಡು ಹೋಗು ; ಸಾಗಿಸಿಕೊಂಡು ಹೋಗು ; ಒಯ್ಯು : ಆ ಶ್ವೇತವರಾಹಸ್ವಾಮಿಯ ಪ್ರತಿಮೆಯನ್ನು ಬಿಜ ಮಾಡಿಸಿಕೊಂಡು ಶ್ರೀರಂಗಪಟ್ಟಣವನ್ನು ಸೇರಿದರು (೬ಶಕ. ೯೯); ಛತ್ರಕ್ಕೆ ಈಶ್ವರದೇವರ ಉತ್ಸವಮೂರ್ತಿಯನ್ನು ಬಿಜ ಮಾಡಿಸಿಕೊಂಡು ಹೋದರು (ಗರುಡಾ. ೦೩೧). ೩. ಬರು ; ಆಗಮಿಸು : ಭರತಪ್ರಭುಗಳ ಸವಾರಿ ಬಿಜ ಮಾಡಿಸುತ್ತಿದೆ (ಹುಟ್ಟಿಕ. ೦೬೨) ; ಮಹಾರಾಣಿಯವರು . . . ಕೈಸಾಲೆಗೆ ಬಿಜ ಮಾಡಿಸಿದರು (ಹುಟ್ಟಿಕ. ೬). **ಬಿಜಯ ಮಾಡು, ಬಿಜ ಮಾಡು** = ೧. ದಯಮಾಡು ; ಬರು ; ಆಗಮಿಸು : ಈಯಟವಿಯಲಿ ದುಷ್ಟಮೃಗಸಮುದಾಯವಿದೆ . . . ಬೇಂಟೆಗೆ ಬಿಜಯ ಮಾಡು (ಕೂರರಾ. ೩-೩-೬) ; ದ್ವಿಜತಿಲಕ . . . ನಿಜಶಿಷ್ಯನಂ ಕೂಡಿಕೊಂಡು ಮುಖಮಂಟಪಕೆ ಬಿಜಯ ಮಾಡಿದ ಕಜ್ಜವಾವುದು (ಕೃಂಬಶಾ. ೨೬-೩೨) ; ನಿಜವಾಗಿ ತೆರಳಬೇಕಾಯಿತಾದಡೆ ಜೀಯ ಬಿಜ ಮಾಡಿ ಬೆನ್ನಾಂತುಕೊಂಬೆ (ಕೋಹಶ.೩೬-೩೬); ಶ್ರೀ ಜ್ಞಾನಸಂಬಂಧರನ್ನು ಮನೆಗೆ ಬಿಜ ಮಾಡುವಂತೆ ಮಾಡಿರಿ (ಪುರಾಂ. ೦೬೦). ೨. ತೆರಳು ; ನಿರ್ಗಮಿಸು ; ಹೊರಡು : ನಿಮ್ಮ ಪದ ದರುಶನದಿ ಧನ್ಯನು ಬಿಜಯ ಮಾಡುವುದೆನುತ ಕಂದೆಲ್‌ದೀಕ್ಷಿಸಿದನಂ ದುಭಯಸೈನಿಕವ (ಕುವ್ಯಾದ್ರೋ. ೦೫-೬೦); ನಿರುತದಾರೋಗಣೆಯ ಮಾಡಿಯೆ ಮರಳಿ ಬಿಜ ಮಾಡು (ಸಂಕಶ. ೨೬-೧೩) ; ಆಶ್ಚರ್ಯವನು ತೋರುವೆ ಬಂದಿರಾದರೆಯೆನಲು ಬಿಜ ಮಾಡೆಂದು ಮುನಿವನ ಕೂಡೆ ಹೊಜಿಮಟರು ಕುಮಾರಕರು (ಕಾಶಿಂ. ೦-೯೬). ೩. ಆರಂಭವಾಗು ; ಮೊದಲಾಗು : ಈ ಸೂತ್ರಸಮುದಾಯ ಮತ್ತು ಇದರೊಂದಿಗೆ ಉಪನಿಷತ್ತುಗಳು ಮತ್ತು ಭಗವದ್ಗೀತೆ ಈ ಮೂರೂ ಸೇರಿ ವೇದಾಂತಶಾಸ್ತ್ರದ ಆಧಾರಶಿಲೆಯೆನಿಸಿದೆ. ವೇದಾಂತವು ಬಿಜ ಮಾಡುವುದು ಇಲ್ಲಿಂದಲೇ (ಶಾಅದ. ೨೩೦).

[< ಸಂ. ವಿಜಯ]

**ಬಿಜಯಂಗೆಯ್, ಬಿಜಯಂಗೆಯಿ, ಬಿಜಯಂಗೈ, ಬಿಜಯಂಗೈಯಿ** (ಕ್ರಿ). ೧. ಬರು ; ದಯಮಾಡು ; ಆಗಮಿಸು ; ಚಿತ್ತೈಸು : ಭಟ್ಟಾರಾ ಕಿತ್ತ್ಯಯ್ಯಂಗಳನೆಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱ ನೀಮುಂ ಬಿಜಯಂಗೆಯ್ಯಿಮೆನೆ (ವಡ್ಡಾರಾ. ೬೦-೦೩) ; ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡವಂ ಸಮೆದಿಟ್ಟನಲ್ಲಿಗೆ ಬಿಜಯಂಗೆಯ್ಯಿಂ (ಪಂಪಭಾ. ೩-೨ ವ) ; ಎಲೆ ದೇವಾ ಭೀಷ್ಮರಿತ್ತಲಿರ್ದಪರಿತ್ತ ಬಿಜಯಂಗೆಯ್ಯಿಂ (ಗದಾಯು. ೩-೩೬ ವ). ೨. ಹೊರಡು ; ತೆರಳು ; ನಿರ್ಗಮಿಸು ; ಹೋಗು : ಎಮ್ಮ ಪಾಸಿದ ಚಿತ್ರಪಟವೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಳಿಗಂಗಳಾಗಳೆ ತೊಡರ್ಗುಮುಸಿರದೆ ಬಿಜಯಂಗೆಯ್ಯಿಂ (ಆದಿಪು. ೩-೯೯ ವ) ; ದೇವ ನೀಮಿಂ ತಡೆಯದೆ ಬಿಜಯಂಗೆಯ್ಯು ದೌಚಿತ್ಯಂ (ಕುಸುಮಾ. ೯-೦೦೩) ; ವಿಮಳವ್ಯೋಮಕೇಶನು ನಗುತ ಬಿಜಯಂಗಯ್ಯಲನುವಾದ (ಕುಡಿಕ್ಕಿಕ. ೭-೧೦). ೩. ಇರು ; ವಿರಾಜಿಸು : ಇಂತು ಬಂದು . . . ಗಿರಿಜೆ ಭರದಿಂ ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ (ಗಿಂಳ. ೯-೯೯). **ಬಿಜಯಂಗೆಯಿ :** ೧. ಆ ಶಂಕರಪ್ರತಿಮಾನ ಸಪಿತಭಯಂಕರಂ ಬಿಜಯಂಗೆಯಿದನಿಂದು (ಚತ್ತು ೩೦-೬). **ಬಿಜಯಂಗೈ :** ೧. ಸಿರಿಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೦-೩೩) ; ಕರುಣೆ ಬಿಜಯಂಗೈದು ಮೃತ್ಯುವಿಸೂರಿವ ಗಂಟಲೊಳಿಳವ ತನ್ನನು ಬರಸೆಳೆದನಂ ದಮಳವಾರ್ಕಂಡೇಯಮುನಿ ನುಡಿದ (ಕುವ್ಯಾಆ. ೦೯-೦೬); ನೀವು ಬಿಜಯಂಗೈವಡಧಿಕೃತಪಾವನರಲೇ (ಕೂರರಾ. ೦-೩ ೩೦). ೨. ಹರಂ ಕರುಣದಿಂ ನೋಡಿ ಬಸವನ ಚಿತ್ತದೊಳ್ ಪೊಕ್ಕು . . . ನೆಲಂ ಮೆಚ್ಚಿ ಮಾಱದಪೆಂ ಎಂದು ಬೆಸಸಿ ನಿಜಲಿಂಗಕ್ಕೆ ಬಿಜಯಂಗೈವುದುಂ (ಬಸರ. ೩-೩೨); ಹರನ ಕರುಣದ ಹದನನೀತಂಗೊರೆದು ಶತರುದ್ರೀಯವನು ವಿಸ್ತರಿಸಿ ಬಿಜಯಂ

ಗೈದನಾ ಮುನಿಪತಿ ನಿಜಾಶ್ರಮಕೆ (ಶಾಶ್ವ.ಚ್ರಿ. ೧೯-೫೪). **ಬಿಜಯಂಗೈಯಿ :** ೨. ನಮಗೆ ನಿಮಗಿನ್ನಾಪ ಪಂಜಡ ಬೇಡ ತಪದ ಫಲಾವಳಿಯೆ ಸಾಕಿನ್ನು ಬಿಜಯಂಗೈಯಿ ನೀವು (ಕೊರಾ. ೦-೦೬-೦೬).

[ಬಿಜಯ + ಕೆಯ್₁]

**ಬಿಜಯಂಗೆಯಿ** 'ಬಿಜಯಂಗೆಯ್' ನೋ.

**ಬಿಜಯಂಗೆಯಿಸು** 'ಬಿಜಯಂಗೆಯ್ಸು' ನೋ.

**ಬಿಜಯಂಗೆಯ್ಸು**, ಬಿಜಯಂಗೆಯಿಸು, ಬಿಜಯಂಗೈಯಿಸು, ಬಿಜಯಂಗೈಸು (ಕ್ರಿ). ೧. ಕರೆದು ತರು ; ಬರುವಂತೆ ಮಾಡು : ಜಂಗಮವ ಕಂಡು ಗೃಹಕ್ಕೆ ಬಿಜಯಂಗೆಯ್ಸಿ ತಂದು (ಶಬ್ದವ. ೪. ೩೯-೭೯); ಅವರ್ಗಳನೀಗ ಬಿಜಯಂಗೆಯ್ಸಿ ತಹೆ (ಬಸಪು. ೬-೪೨) ; ಅರಸನನುಜರು ಸಹಿತ ಮುನಿಮುಖ್ಯರನು ಕಂಡಿದಿರೆದ್ದು ಚರಣದೊಳೆಱಗಿ ಬಿಜಯಂಗೆಯ್ಸಿ ತಂದನು ತಳಿರ ಮಂಟಪಕೆ (ನಳಚ. ೦-೦೦). ೨. ಒಳಹೊಗುವಂತೆ ಮಾಡು; ಪ್ರವೇಶಿಸುವಂತೆ ಮಾಡು : ಪಾರ್ವತಿಯಂ ಪರ್ವತರಾಜಂ ಪುಷ್ಪಕದೊಳ್ ಬಿಜಯಂಗೆಯ್ಸಿ ತಾನುಂ ಕುಳ್ಳಿರ್ದು (ಗಿರಿಜಾ. ೫-೦೨ ವ) ; ಸಜ್ಜಾಮಂದಿರಕೆ ಸಡಗರಿಸಿ ಮಾಯೆಯನಲ್ಲಮನನೊಲಿಸಿ ತಂದು ಬಿಜಯಂಗೆಯ್ಸಿದರು ಬಳಿಕಿಂದುಮುಖಿಯರು (ಪ್ರಭುಲಿಂ. ೫-೪೪). **ಬಿಜಯಂಗೆಯಿಸು :** ೧. ಋಷಿಕುಮಾರನಂ . . . ಒಲವಿನಿಂದ ಬಿಜಯಂಗೆಯಿಸಿ ಕರೆತಂದು (ಕಾವ್ಯಾಟ. ೨-೨೨ ವ) ; ದಯಾಳುವಂ ಬಿಜಯಂಗೆಯಿಸಿ ತಂದೊಳಗೆ ಕುಳ್ಳಿರಿಸಿ (ಬಸಪು. ೫೨-೪). **ಬಿಜಯಂಗೈಯಿಸು :** ೧. ಸೌಂದರವತಿಯಂ . . . ಒಯ್ಯನೆ ಕನಕಾಂದೋಳನದೊಳ್ ಬಿಜಯಂಗೈಯಿಸಿಕೊಂಡೆಟ್ಟಿಂದುಪವನಮಂ ಪೊಕ್ಕು (ಕಾವ್ಯಾಟ. ೬-೩೩ ವ). **ಬಿಜಯಂಗೈಸು :** ೧. ಹರಿಯು ಬಿಜಯಂಗೈಸಿ ತಂದಸುರರನು ಭಂಗಿಸಿ ಯಜ್ಞಕರ್ಮವ ಧರಿಸಿ ಸುಖಿಯಹೆನು (ಕೌಶಿಕಾ. ೧-೭೮) ; ಬಂದನತಿಹರುಷದಲಿ ಮುನಿಕುಲವೃಂದದೊಡನೈತರಲು ರಘುಕುಲನಂದು ಬಿಜಯಂಗೈಸೆ ತಂದನು ರಾಜಮಂದಿರಕೆ (ರಾಮಕ. ೩೪-೦೨೬). ೨. ಮತ್ಸ್ಯದೇವರನೊಯ್ದು ಗಂಗೆಯಲಿ ಒಯ್ದು ಬಿಜಯಂಗೈಸೆ ಗುಗೆಯನ್ನೈದೆ ತುಂಬಿದನೊಂದು ರೂಪಿಲಿ (ಸಂಶಕ. ೪-೬).

[ಬಿಜಯ + ಕೆಯ್ಸು₁]

**ಬಿಜಯಂಗೈ** 'ಬಿಜಯಂಗೆಯ್' ನೋ.

**ಬಿಜಯಂಗೈಯಿ** 'ಬಿಜಯಂಗೆಯ್' ನೋ.

**ಬಿಜಯಂಗೈಯಿಸು** 'ಬಿಜಯಂಗೆಯ್ಸು' ನೋ.

**ಬಿಜಯಂಗೈಸು** 'ಬಿಜಯಂಗೆಯ್ಸು' ನೋ.

**ಬಿಜಯಿತ**, ಬಿಜಯಿತ್ತ, ಬಿಜಯ್ತ, ಬಿದಿಯಾಯ್ತ, ಬಿದೆಯಿತ್ತ, ಬೆಜಯಿತ್ತ (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಿಜಯಿತನು ಮರಿಯಪೆಯೊಳ್ ಭಗವತಿಯಂ ಪದಿಷ್ಟಗೆಯ್ಸಿದೊಡೆ (ಪ್ರಕಾ. ೧೯೨೯. ೩೮-೦ ; ೭ನಯ ೫೫). **ಬಿಜಯಿತ್ತ :** 'ಬಿಜಯಿತ್ತಯ್ಯ' ಪರಾ. **ಬಿಜಯ್ತ :** ಗವಟಿ[3] ಬಿಜಯ್ತನ ನಟ್ಟ ಬೆಲ್ಲಪಾತ್ರದ ಮರಂಗಳ್ (ಎಕ. III (R), ತಂಜಾವ. ೨೩೯-೦೩; ಸು. 10ನೆಯ ಶತ). **ಬಿದಿಯಾಯ್ತ :** ಬಿದಿಯಾಯ್ತ ತುಱುವ ನಿಕ್ಕಿಸಿ ಕಾದು ಸತ್ತು ದಿವನೇಱಿದಂ (ಎಕ. II, ೩೯೪-೯; 884 ?). **ಬಿದೆಯಿತ್ತ :** ಪೆರ್ಬಟ್ಟಕ್ಕಂ ಬಿದಿರೂರ ಅಗ್ಗಳವಿಳವಲ್ಲಿ ಅಂಕಕೆ ಕಾದಿದ ಬಿದೆಯಿತ್ತ ಸತ್ತನ್ (ಎಕ. X, ಶ್ರೀನಿವಾ. ೨೭-೨೯; 870). **ಬೆಜಯಿತ್ತ :** ಬೆಜ[ಯಿ]ತ್ತನ್ . . . ಆನೆಯುಳ್ ಕುದುರೆಯುಳ್ ತಾಗಿ ಪಲರನಿಱಿದು ಸತ್ತೊಡೆ (ಎಕ. X, ಮುಳಬಾ. ೨೨೮-೬; ಸು. 890 ?). [< ವಿಜಯಾದಿತ್ಯ]

**ಬಿಜಯಿತಗಾವುಂಡ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ . . . ಬಿಜಯಿತಗಾವುಣ್ಡನುಂ ಬನ್ನಗಾವುಣ್ಡನುಂ (ಎಕ. XI, ಹೊಳಲ್ಕೆ. ೩೦-೦೦ ; 964) ; ಬಿಜಯಿತಗಾವುಣ್ಡನ ಮಗಂ ಅಮ್ಮಡಿಗಾವುಣ್ಡಂ (ಪ್ರಕಾ. ೧೯೩೦. ೪೩-೫; 994). [ಬಿಜಯಿತ + ಗಾವುಂಡ (< ಗಾಮುಂಡ)]

**ಬಿಜಯಿತಮಂಗಲ** (ನಾ). ಒಂದು ಸ್ಥಳದ ಹೆಸರು : ಶ್ರೀಮನ್ನೊಳಂಬಾಧಿರಾಜರ್ ಪೃಥಿವೀರಾಜ್ಯಂಗೆಯ್ಯುತ್ತಿರೆ ಚೋಟಿ ಬಿಜಯಿತಮಂಗಲದ ನೊಳಂಬನ ದಣ್ಡಂ ಕಾದು ಪೆಜಿಡ್ಡಿಟಿಯೊಳ್ನೊಳಂಬರಸ ಕಾದಿ ಸತ್ತಂ (ಎಕ. IX, ಹೊಸಕೋ. ೪೭-೬; ಸು. 980 ?). [ಬಿಜಯಿತ + ಮಂಗಲ]

**ಬಿಜಯಿತಾಚಾರಿ** (ನಾ). ಒಬ್ಬಾತನ ಹೆಸರು : ಬೆಸಂಗೆಯ್ವಂ ಕೊಯತೂರ ಬಿಜಯಿತಾಚಾರಿಯ ಮಗಂ ವಿಕ್ರಮಾದಿತ್ಯಂ (ಎಕ. X, ಮಾಲೂರು. ೧೦೬-೯; ಸು. 950). [ಬಿಜಯಿತ + ಆಚಾರಿ]

**ಬಿಜಯಿತ್ತ** 'ಬಿಜಯಿತ' ನೋ.

**ಬಿಜಯಿತ್ತಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಬಿಜಯಿತ್ತಯ್ಯಂ ಮಾದಾಮತ್ತರಸರಾ ಪೊಟಲಮ್ಮನಾ ಮೇಗೆಟ್ಟು (ಎಕ. X, ಶ್ರೀನಿವಾ. ೪೦-೧; ಸು. 900). [ಬಿಜಯಿತ್ತ (< ಬಿಜಯಿತ) + ಅಯ್ಯ₁]

**ಬಿಜಯಿಸು** (ಕ್ರಿ). ಬರು; ಆಗಮಿಸು; ದಯಮಾಡು : ಲಂಕೇಶ್ವರಂ ಶ್ರಮನಿವಾರಣಾರ್ಥಂ ಪುರಕೆ ಬಿಜಯಿಸಿದನು (ಶ್ರೀರಾಮಪು. ೬೦೦-೨೫೯): ಲಕ್ಷ್ಮಿ, ಪಡಸಾಲೆಯಿಂದ ದೇವರ ಮನೆಗೆ ಬಿಜಯಿಸಿದ ಭಾಸವಾಯಿತು (ರಂಕಹ. II. ೧೯೦). [ಬಿಜಯ + – ಇಸು₃]

**ಬಿಜಯ್ತ** 'ಬಿಜಯಿತ' ನೋ.

**ಬಿಜಲಿ** (ನಾ). ೧. ಮಿಂಚು; ವಿದ್ಯುತ್ತು : ಈ ನಿನ್ನ ಹುತುಗೆಯಂತೂ ಕೇವಲ ಬಿಜಲಿಯಾಗಿದ್ದಾಳೆ – ಬಿಜಲಿ (ಹಂಸಾ. ೪೫). ೨. ವಿದ್ಯುದ್ದೀಪ: ಅದು ಸಂಜೆಗೆ ಬಿಜಲಿಗಳನ್ನು ಹಚ್ಚಿದಾಗ ಆಟದ ಚಪ್ಪರ . . . ಒಳ್ಳೆ ಸಿಂಗಾರವಾಗಿ ಕಾಣುತ್ತಿದ್ದಿತು (ಭುವನ. ೦೫೬).

[ ← ಹಿಂ. ಮರಾ. ಬಿಜಲೀ. / ಪ್ರಾ. ವಿಜ್ಜುಲಿಯಾ]

**ಬಿಜವರ** (ನಾ). ಒಂದು ಬಗೆಯ ಆಭರಣ : ಕಂದ ಪೀತಾಂಬರವ ಸಂಧೆ ಉಟ್ಟಿರುವಳು ಅಂದಮುಡಿಗೆ ಮುತ್ತಿನ ಸೊಂಡಿಲ ಬೈತಲ ಬಿಂದಿ ಬಿಜವರ ಬಲುಚೆಂದ (ಸಿರ್ಯಪು. ೧೯-೬೦).

[ ← ಮರಾ. ಬಿಜವರಾ. ಬಿಜೋರಾ]

**ಬಿಜಾಗರಿ** (ನಾ). ತಿರುಗಣೆ; ತಿರುಪುಮೊಳೆ ; ಕೀಲು : ಅದರ ಮೇಲೆ ತಲೆಯು ಹಿಂದೆ ಮುಂದೆ ಮಣಿಯುವ ಹಾಗೆ (ಬಿಜಾಗರಿಯಂತೆ) ಕೂಡ್ರಿಸಲ್ಪಟ್ಟಿದೆ (ಮುಂಬಯಿ. ೬-೩೦೨): ಬಿಜಾಗರಿಯನ್ನು ಟೆಲಿಗ್ರಾಫ್ ಸುತ್ತಿನ ತಂತಿಗೆ ಜೋಡಿಸಿರುತ್ತಾರೆ (ವಿಜ್ಞಾನಿ. ೨೩); ಬೀಗ, ಬಿಜಾಗರಿ, ಅರ, ಕೊಡತಿ ಮೊದಲಾದ ಸಾವಿರಾರು ಸಲಕರಣೆಗಳಿದ್ದುವು (ಅಪೂಕ. ೬೭).

[← ಮರಾ. ಬಿಜಾಗರೀ, ಬಿಜಾಗರೇ. / ತುಳು. ಬಿಜಾಗ್ರಿ, ಬಿಜಾಕ್ರಿ, ಬಿಜಿಗ್ರಿ]

**ಬಿಜೆಕ್**, ಬಿಝಿಕ್ (ನಾ). ಒಂದು ಬಗೆಯ ಇಸ್ಪೀಟು ಆಟ ; ಇಬ್ಬರು ಅಥವಾ ನಾಲ್ವರು ಸೇರಿ ಆಡುವ ಆಟ; ಕಪ್ಪು ರಾಣಿ ಮತ್ತು ಕೆಂಪು ರಾಜರನ್ನು ಸೇರಿಸಿ ಅಂಕಗಳನ್ನು ಆಡುವ ಆಟ : ಗಂಜೀಫಾ ಆಡೂ ಹಾಂಗಿಲ್ಲಾ, ಬಿಜೆಕ್ ಆಡೂ ಹಾಂಗಿಲ್ಲಾ (ತಿರುಗು. ೩೫); ಮಧ್ಯಾಹ್ನಕ್ಕ ಬಿಜೆಕ್ಕಿಗೆ ಬರತೀವಲ್ಲ್ಯೋ ? (ತಿರುಗು. ೪೫). **ಬಿಝಿಕ್ :** ನಿನಗೆ ಬಿಝಿಕ್ ಬರುವುದೋ (ಗಾಳಿಕ. ೦೯) ; ಈ ಮಿತ್ರರನ್ನು ಕರೆದುಕೊಂಡು ಎರಡನೇ ಕೋಣೆಯಲ್ಲಿ ಬಿಝಿಕ್ ಆಡಲಿಕ್ಕೆ ಹೋಗುತ್ತೇನೆ (ಮೋಹಿನೀ. ೫೯). [← ಮರಾ. ಬಿಜೆಕ್, ಬಿಝಿಕ್./ಇಂ. Bezique]

**ಬಿಜಿಲು** (ಗು). ಗಜಿಬಿಜಿ : ದೊಳ್ಳ ಹೆಬ್ಬಾಗಿಲಲ್ಲಿ ಕಾಣಿಸಿಕೊಂಡು ಬಿಜಿಲು ಬಿಜಿಲು ಮಾತಿನಲ್ಲಿ "ಅಂಬಿನಕ್ಕೂ ಬಂದಿಲ್ಲಂತೆ" ಎಂದನು (ಮರಳು. ೩೭೬).

[?]

**ಬಿಜ್ಜ₁** (ನಾ). ಒಬ್ಬಾತನ ಹೆಸರು : ಸತ್ಯಳ್ಗೆ ಎಬ್ಬತ್ತುಜ್ಜೊ[ಳೆ] ಬಿಜ್ಜಂ ನಾಲ್ಗಾ[ವು]ಣ್ಡುಗೆಯೆ (ಸೌಇಇ. XX, ೦೫-೦೦; 904); ಮುಂ ಬಿಜ್ಜನಂ [ಶಾಸಂ. ವಜ್ರಿಯಂ ?] ಕಾದರಿಗನುಟಿದರಂ ಕಾವುದೇಂ ಚೋದ್ಯ

ಮಾಯ್ತು (ಶಂಶಅ. ೦೦-೬೦); P "ಬಿಜ್ಜನಂ=ವಿಜಯಾದಿತ್ಯನೆಂಬ ರಾಜನನ್ನು" (ಶಂಶಅ. ೪೦೦).

ಬಿಜ್ಜನ ಬಂಟ=ಒಂದು ಬಿರುದು : ಬಲಪದರುನ್ರಿಪತಿ ನಿಷ್ಕಂಟಂ ಬಿಜ್ಜನ ಬಂಟಂ (ಎಕ. VIII. ತೀಗ. ೦೦೯-೦೦; 1042). [<ಬಿಜಯ]

**ಬಿಜ್ಜ₂, ಬೆಜ್ಜ₂** (ನಾ). ಒಂದು ಬಗೆಯ ತೆರಿಗೆ : ಬೆಳುದಂಡ ಎಸೆ ಒಸಗೆ ಬಿಜ್ಜ ಬಿಡಾರವತ್ತ್ಯಗಾಯಿ ಮೊದಲಾಗಿ ಆಉದೂ ಸಲ್ಲ ಸರ್ವ್ವಮಾನ್ಯವಾಗಿ (ಕಇ. I, ೩೪-೩; 1483 ?); ತುಳುವದ ಶಾಸನಗಳಲ್ಲಿ ಬರುವ ತೆರು ವಣಗಳು: ತೆರು. . . ಒಸಗೆ, ಬಿಜ್ಜ, ಬಿಡಾರ (ತುಳುಇಾ. ೨೬೦). **ಬೆಜ್ಜ₂**: ಆ ಮಳಲೂರ ಪಟ್ಟಣದ ಹೊಜಕೇರಿಗೆ ಸಲುವ ಬೆಜ್ಜನೂ (ಎಕ. IX (S). ಹಳ್ಳ. ೦೫೨-೦೦; 1535 ?). [ ? ]

**ಬಿಜ್ಜಣ, ಬಿಂಕಣ, ಬಿಂಕಣೆ, ಬಿಚ್ಚೆಳ್ಳ₂, ಬಿಜ್ಜಣೆ, ಬಿಜ್ಜಲ, ಬಿಜ್ಜಳ, ಬೀಜನ, ವಿಜ್ಜನ** (ನಾ). ಬೀಸಣಿಗೆ; ವೀಜನ; ಪಂಕ : "ಬಿಜ್ಜಣವೆನ ಲಾಲವಟ್ಟಂ" (ಕಕಾ. ೦೫೨); ಹಿಮಾನಿಲನಿಂ ನಿವಿರುವ ಪೊಂಬಾಳೆಯ ಸುಳಿಯೆಲೆಯ ಬಿಜ್ಜಣಂಗಳಿಂ . . . ಹಿಮಗೃಹವಂ ಸಮೆದು (ಶಬಸುಚಾ. ೦೩-೪೬ ವ); ಸೊಗಸಿ ತಂಗಾಳಿಗೊರೆವೆಲೆಯಿಂದ ಬಿಜ್ಜಣವೆಸಗಿ . . . ಬಾಳೆಗಳ್ ಮೆರೆದುವು (ಕದ್ವರಾ. ೮-೩೫). **ಬಿಂಕಣ** : "ಬಿಂಕಣ (ಣೆ)— ವ್ಯಜನ" (ಕಶ್ಮಕೋ. ೩೦ ). 'ಬಿಂಕಣಗಿವಿಯ' ಪರಾ. P 'ಬಿಂಕಣ' ಶಬ್ದಕ್ಕೆ ಬೇರೆಯ ವ್ಯುತ್ಪತ್ತಿ ಸಾಧ್ಯವಿದೆಯೆ ಎಂಬುದು ಪರಿಶೀಲ ನಾರ್ಹ. **ಬಿಂಕಣೆ** : 'ಬಿಂಕಣಗಿವಿ' ಪರಾ. **ಬಿಚ್ಚೆಳ್ಳ₂** : ಸೂಳಾ ದೊಯ್ಯನೊಯ್ಯನೆ ಮಹೀಧರನಂದನರೊಲ್ದು ಬೀಸುವಾ ಬಾಳದ ಪೊಚ್ಚ ಬಿಚ್ಚಳದ ತಂಬೆಲರಿಂಬಿಗೆ ಮೆಯ್ಯನಿತ್ತು . . . ಉದ್ಭಟದೇವನೊಪ್ಪಿದಂ (ಉದ್ಭಟ. ೨-೦೦೩). **ಬಿಜ್ಜಣೆ** : ಅನಂತಮೆನಿಪ್ಪ ವೃತ್ತಪದನದ ಲಕ್ಷ್ಮಿಯತ್ತಿ ಕೈನೀಡಿ ಬೀಸುತ್ತಲಿಹ ಬಿಜ್ಜಣೆಯ ವೊತ್ತಮೆಂಬಂತಿರ್ದುದು (ಶುಕ್ಲಾಂಗ. ೩-೬). **ಬಿಜ್ಜಲ** : ಚೂರ್ಣ ಹಿಮತಾಂಬೂಲ ಪರ್ಣ ಪೂಗಂಗುಡುವೆಲರ್ ನಯದ ಬಿಜ್ಜಲದ ವರ್ಣನೆಯ ಸತಿಯರೊಳು ಮಾರ್ನಡೆದಳರಸಿ (ಶಾಪಶಂ. ೪-೨೦). **ಬಿಜ್ಜಳ** : ಬಿಜ್ಜಳ ಹಡಪ ಚಾಮರ ಗಿಂಡಿ ಕಳಾಂಜಿ . . . ಮುಕುರ ಬಾಚಣಿಗೆಯ ಕಜ್ಜದರೊಳಗಿರ್ದರು ಸುತ್ತ (ಸೂಶಕೋ. ೨೩-೨೬); ಗಂಧದಣ್ಣಿಗೆ ಬಿಜ್ಜಳದೆಲರಿಗೆ ಪರಿಮಳಿಸುವ ಪನ್ನೀರ್ಗೆ ಒರಿದು ಬಯಸುತವರಿರ್ವರೆಸೆದರಾಗ (ಕಂಪಶ. ೦೦-೩೨). **ಬೀಜನ**: ಹಿಮರೋಚಿಯ ತಣ್ಣರ್ದಿಗಳ್ಗೆ ಶೀತಶೀತಳಿಕೆಯ ಬೀಜನಕ್ಕೆ ಗುಜಿಯಾಯ್ತು [ವಿ]ಯೋಗಿಜನಂ ಬಸಂತದೊಳ್ (ಪರ್ವತಾ. ೦೦-೪೪). **ವಿಜ್ಜನ** : 'ವಿಜ್ಜನಸತಿ' ಪರಾ.

ಬಿಜ್ಜಣದೂಳಿಗ =ಬೀಸಣಿಗೆ ಹಿಡಿದು ಬೀಸುವ ಸೇವೆ, _ಊಳಿಗ : ಅಂಗಮರ್ದನದ ಬಿಜ್ಜಣದೂಳಿಗನತಾಂತ ಭೃತ್ಯರಿಂದಂಚಿತ ಚಿಕ್ಕದೇವನರ ನಾಯಕನಾ ಸಭೆಯೊಳ್ ವಿರಾಜಿತಂ (ಚಿದೇಶಂ. ೨-೬೬).

[< ಸಂ. ವೀಜನ./ ಪ್ರಾ. ವಿಜ್ಜ=ಗಾಳಿ ಹಾಕುವುದು,_ಬೀಸುವುದು]

**ಬಿಜ್ಜಣಂದಳೆ** (ಕ್ರಿ). ಬೀಸಣಿಗೆಯನ್ನು ಹಿಡಿ: ಹಸ್ತಕಂಜದಿಂ ಕರದಂಡಿ ಬಿಜ್ಜಣಂದಳೆದು ಬೀಸಿ ಮುದಂಬಡೆ (ಶಿಪ್ಪಪು. ೩-೬-೬೦). [ಬಿಜ್ಜಣ+ತಳೆ₁]

**ಬಿಜ್ಜಣವಿಕ್ಕು, ಬಿಜ್ಜಳವಿಕ್ಕು** (ಕ್ರಿ). (ಬೀಸಣಿಗೆಯಿಂದ ಬೀಸುವಂತೆ) ಗಾಳಿ ಹಾಕು : ಗಾಳಿ ಬೀಸು : ಗಜಗೆಡಜ ಕೊಡೆವಿಡಿದು ನಿಂದುವು ಬಿಸಿಲ್ಗೆ ನವಿಲೆಣಿಕೆಯಂ ಬೀಸಿ ಬಿಜ್ಜಣವಿಕ್ಕಿತಂಚೆ (ಕೃಪಾಶಾ. ೨೬-೩೬); ಆ ಪಾಂಥರೊಳು ಮಂದಾನಿಲಂ ಕಳರಾಂತು ಬಿಜ್ಜಣವಿಕ್ಕಿದುದು (ಕಂಕರಾ. ೨-೧೯). **ಬಿಜ್ಜಳವಿಕ್ಕು**: ಬಳಲಿದಗೆಸೆವ ಗಜಿಯಿಂದ ಬಿಜ್ಜಳವಿಕ್ಕಿದವು ಶಿಖಿವಿಸರಂ (ಪಂಚಶಾ. ೨೦-೨೬). [ಬಿಜ್ಜಣ + ಇಕ್ಕು]

**ಬಿಜ್ಜಣೆ** 'ಬಿಜ್ಜಣ' ನೋ.

**ಬಿಜ್ಜಣಿಗ** (ನಾ). ಬೀಸಣಿಗೆಯಿಂದ ಗಾಳಿ ಹಾಕುವವನು,_ ಬೀಸುವವನು : ಹಡಪದವರಂ ಬಿಜ್ಜಣಿ [ಗಕಾಂ. ೪]ಗರನಾ ಕಳಾಂಜಿ ವಿಡಿವರಂ . . . ಎಳೆವಕ್ಕಳ ಕಡುವಿಲಾಸದೊಳವರ್ಕಿಸಿ ಕೊಟ್ಟು (ತಿಪು. ೩-೯೩). [ಬಿಜ್ಜಣ + — ಇಗ]

**ಬಿಜ್ಜಣಿಗೆ, ಬಿಜ್ಜಳಿಗೆ, ವಿಜ್ಜಣಿಗೆ** (ನಾ). = ಬಿಜ್ಜಣ : "ಬಿಜ್ಜಣಿಗೆ. ಆಲವಟ್ಟಂ — ಈ ೨ ತಾಲವೃಂತಂ" (ಕಶಾ. ೬೨-೬೫೨) : ಪೊಸ ತಳಿರ್ಗಳ ಬಿಜ್ಜಣಿಗೆಯಿನೆಸಿವಲರ್ಗಳಿನೊಗೆವ ಘರ್ಮಜಲಮಂ ಪೀರ್ದಾ ಜಿಸಿದುವು . . . ಲತಾಂಗಿಯರ್ಗ್ (ಆದಿಪು. ೦೦-೬೩); ಅಂತು ಕಂತು ಸಂತಾಪಕ್ಕೆ ಪಕ್ಕಾಗಿ . . . ಬೀಸುವ ಕುಂಜುಮೆಯ ಬಿಜ್ಜಣಿಗೆಯೊಳಂ ಪಾಸುವ ಬಾಳಪ್ರವಾಳತಳ್ಪತಳದೊಳಂ . . . ಶಿಶಿರೋಪಚಾರಚಾತುರತ್ವಂ ಮೆರೆಯೆ (ಅನಂಪು. ೦೦-೨೯ ವ). **ಬಿಜ್ಜಳಿಗೆ** : ಅಹಿಗಳಂ ಸಂತೈಸಿ ಬಿಜ್ಜಳಿಗೆಯಾ ಮೇಲೆ ಬೀಸುತ್ತಲರುಣಿಸನಿತ್ತು ಸಂತೈಸಿ (ಪೀಕೃಪು. ೭-೩-೦); ವಿಳಿರ್ವರಳದಳಿರ್ಗೊಂಗಲ ಬಿಜ್ಜಳಿಗೆಯಂ . . . ಎಲರಿಂ ಕುಳಿರ್ದುದು ಮೆಯ್ ಬನದೊಳೊಯ್ಯನಾ ಅರಮಗನಾ (ಕಶಾ.ಪು. ೬೩ ವ್ಯಾ.ಪ್ರಾ.). **ವಿಜ್ಜಣಿಗೆ** : ಸೊರಗುವಗೆಯ ತಿಳಿದಳವಳಿದು ವಿಜ್ಜಣಿಗೆ ಬೀಸಿದುದು ನಿನಗೆ ವಿಗೆ ಬೇಸಜಾದುದಕಟಾ (ಶಳಶ. ೪೯). 'ಬಿಜ್ಜಣ', 'ಬೀಸಣಿಗೆ' ಪರಾ. [ < ಸಂ. ವ್ಯಜನಕ. / ತುಳು. ಬಿಜ್ಜಣಿಗೆ]

**ಬಿಜ್ಜಣಿಸು** (ಕ್ರಿ). (ಬೀಸಣಿಗೆಯಂತೆ) ಅತ್ತಿತ್ತ ಒಲೆದಾಡು,_ ತೂಗಾಡು : ಕುಕ್ಕಿದಡುಗುರಳಿ ಬಿಜ್ಜಣಿಪ ಲಂಘನೆಗುದಯಗಿರಿಗಸ್ತಾದ್ರಿ ದಡದಡಿಪ . . . ಸಿಂಗಣಿಕಗಳನರ್ಬುದವನತಿಬಲ ತಾರ ತೋರಿಸಿದ (ಕೂರರಾ. ೪-೬-೨೩). [ಬಿಜ್ಜಣ + — ಇಸು]

**ಬಿಜ್ಜಲ** 'ಬಿಜ್ಜಣ' ನೋ.

**ಬಿಜ್ಜವಳ** 'ಬಿಜ್ಜವಳ್ಳ₁' ನೋ.

**ಬಿಜ್ಜಳ** 'ಬಿಜ್ಜಣ' ನೋ.

**ಬಿಜ್ಜಳವಿಕ್ಕು** 'ಬಿಜ್ಜಣವಿಕ್ಕು' ನೋ.

**ಬಿಜ್ಜಳಿಗೆ** 'ಬಿಜ್ಜಣಿಗೆ' ನೋ.

**ಬಿಜ್ಜಾದರ, ಬಿಜ್ಜೋದರ, ವಿಜ್ಜಧರ** (ನಾ). ೧. ದೇವತೆ; ವಿದ್ಯಾಧರ: ಆ ಡಂಗುರದನಿಗೇಳಿ ಬಿಜ್ಜಾದರನಾದ ನರೇಂದ್ರನಂದನರು . . . ಗತಿ ಯುದ್ಧವ ಮಾಡುವೆವೆಂದೆಯ್ದಿದರು (ಪೀಜಸಂ. ೩-೩೩). **ಬಿಜ್ಜೋದರ**: ೧. "ಅಮರ್ದರ್ಣಿಸಗಳ್ . . . ಬಿಜ್ಜೋದರರ್ . . . (ಬೋಳೆಯರ್) — ಈ ೯ ದೇವರ್ಕಳ ಪೆಸರ್" (ಕಕಾ. ೯೬-೧೯); ವಿದ್ಯಾಧರ–ಬಿಜ್ಜೋವರ (ಕಮದ. ೨೩೯ ಪ್ರಯೋ); ನರರ ಬಿಜ್ಜೋದರರ ಸುರರ ಮುನಿವರರ ಮನದಬಲುರಿ ಒರಿದಾಗೆ (ರಾಮಾಕ್ಷ. ೦೨-೦೬). **ವಿಜ್ಜಧರ** : ೨. ಒಬ್ಬಾತನ ಹೆಸರು : ಶ್ರೀಮದುಗ್ಗಮರರ ಪೊ ಇತ್ತರ್ ವಿಜ್ಜಧರರ ದೇಗುಲ (ಎಕ. VI. ಕಂಳ. ೩೦-೨; ಸು. 750). [ < ಸಂ. ವಿದ್ಯಾಧರ]

**ಬಿಜ್ಜಾದರಿ, ಬಿಜ್ಜೋದರಿ** (ನಾ). ವಿದ್ಯಾಧರ ಸ್ತ್ರೀ; ಹೆಣ್ಣುದೇವತೆ : ಆದರದಿಂ ಪುಣ್ಯನಿಧಿ ನಿನ್ನ ಕಂಡು ಬಿಜ್ಜಾದರಿಗೀಗರೆಯ್ದಿದವು (ಪ್ರಿಶಾಂ. ೩-೩). **ಬಿಜ್ಜೋದರಿ** : "ಬಿಜ್ಜೋದರಿಯರೆ ವಿದ್ಯಾಧರಿಯರ್" (ಕಕಾ. ೬೪) ; ಮುಗಿಲೆಡೆಯೊಳೆಡೆವಿಡದಡೆಯಾಡಿ ಬಟ್ಟಿದ ಬಿಜ್ಜೋದರಿ ಯರ್ಕಳಳವಟ್ಟಗೆದಾಣಮೆಂಬಂತಸೆವಲನೀರ್ಗಳಂ ಪೊತ್ತಾಗಸದೆಡೆಗಡರ್ವ ಚೆಂದೆಗಿನ ಮರಂಗಳೊಳಂ (ಕಶಾ. ೩೦); ಇಲ್ಲೆ ಹುಟ್ಟಲುಬಹುದು ಗಂಗೆಯುಂ ಇಲ್ಲೆ ಬಿಜ್ಜೋದರಿಯುಂ (ಚಾಪಶ. ೨೦-೬). [<ಸಂ. ವಿದ್ಯಾಧರೀ]

**ಬಿಜ್ಜು₁** (ನಾ). (ಅತಿಯಾಗಿ ತಿನ್ನುವ) ಒಂದು ಬಗೆಯ ಪಕ್ಷಿ : ವಾರಿವ ಕೌಡೆ ಬಿಜ್ಜು ಹೊಂಗಟಿ ಚರಣಾಯುಧರು ಗಿಡುಗ ಗೀಜಗನಾ ಗಿಳಿ ಕಾಡ ಗುಬ್ಬಿಗಳ್ ಬರುತಿರೆ (ಶಪ್ಪಶಾ. ೬-೨೦೩); ಪಕ್ಷಿಗಳ ಗೂಡು ಗುಂಪುಗಳ ಗುಯಿರ್ಡುವ ಗಿಡುಗ ಲಗಡು ಬಿಜ್ಜುಗಳಂ (ಶ್ರೀಗಂ. ೩೦-೬).

[ದೇ. ೩ ಕೋಶ. ವಿಜ್]

**ಬಿಜ್ಜು₂, ಬಿಚ್ಚು₄** (ನಾ). ೧. ಸಿಡಿಲು ; ಕೂಸು ಉಣ್ಣುತ್ತಿರಲಾಗಿ ಆಕಾಶದ ಬಿಜ್ಜು ಹೊಯಿದತ್ತಿತ್ತು . . . ಆ ಬಿಜ್ಜು ಹೊಟ್ಟೆಗೆಯ್ದುದೆ ಅಪ್ಪ ಅಪ್ಪೆ ಎನ್ನುತ್ತಿದ್ದಿತ್ತು (ವಡಾರಾಧನೆ. ೪. ೨೩೨-೨೪). ೨. (ಅಲಂ) ಹಾನಿ ಕೆಡುಕು: ಎಲ್ಲರಿಗಿಂತಲೂ ಹೆಚ್ಚಾಗಿ ತಾವು ಮೇಲಕ್ಕೆ ಏರಬೇಕೆಂದು ಯತ್ನ ಮಾಡುವಾಗ, ಏನೋ ಒಂದು ಬಿಜ್ಜು ಬಡಿದು ಅವರು ಕೆಳಕ್ಕೆ ಬೀಳುತ್ತಾರೆ (ಸುಭಾಷ. ೨೩೬). **ಬಿಚ್ಚು₄** : ೧. ಚಕ್ರಾರನೆ ಒಂದು ಸಿಡಿಲು ಬಡಿಯಿತು . . . ಆ ಅಧಿಕಾರಿಯು ತಾನೇ ಆ ಸ್ಥಳಕ್ಕೆ ಬಂದು ನೋಡಿ ಬಿಚ್ಚು ಬಡಿದು ಆ ಹಗರಣವೆಲ್ಲಾ ಆಯಿತೆಂದು ನಿಷ್ಕರ್ಷೆ ಮಾಡಿಕೊಂಡು (ಅರೂಟಿ. ೦೬೯).

[<ಪ್ರಾ. ವಿಜ್ಜು, ವಿಜ್ಜುಆ./ಹಿಂ. ಬಿಜ್ಜು; ಮರಾ. ವೀಜ್; ಪಂಜಾಬಿ. ಬಿಜ್ಜು; ಸಿಂಧಿ. ವಿಜು]

**ಬಿಜ್ಜೆ, ವಿದ್ದೆ** (ನಾ). ೧. ತಿಳಿವಳಿಕೆ : ಜ್ಞಾನ ; ವಿದ್ವತ್ತು : "ಬಿಜ್ಜೆಯೆಂದು ವಿದ್ಯಂ" (ಶಶಸಾ. ೫೭-೨೪೦); ಉದ್ಯೋಗ—ಉಜ್ಜುಗ ; ವಿದ್ಯಾ—ಬಿಜ್ಜೆ (ಕವಿರಾ. ೨೫೯ ಕ್ರಿಯೋ); ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ ಬಿಜ್ಜೆಯ ಬೇರ್ . . . ಅನುವಾತುವನ್ನು ಬಿಸೆಲ್ನೆಯೆನೆ ಚಿಕ್ಕದೇವ ನೆಸೆದಂ (ಅಕ್ರಿ. ೦೩-೨೦). ೨. ಕಲಿಕೆ; ವಿದ್ಯೆ; ಶಿಕ್ಷಣ: ಸುಗಜಾಶ್ವರೋಹಣಭರವಿರಿಂಚಿಯೆನಿಪ್ಪ ಬಿಜ್ಜೆಯ ಕಲಿತನಾ ಕುವರ (ಸಾಳ್ವಭಾ. ೪-೫); ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದ್ಯಸೆ (ಹರಿ. ೦-೨೯). ೩. ಜಾಣ್ಮೆ ; ಪ್ರೌಢಿಮೆ ; ಚಾತುರ್ಯ ; ಕೌಶಲ : ಅಲರುವಿಲ್ಲನ ಬಿಜ್ಜೆಯೆಂಬಗ್ಗಲದ ಬಿನ್ನಣಿ ಸವೆದ ನರಪುತ್ಥಳಿಗಳೆನಿಸಿದರಂತು ನಿಂದಖಿಳಾವನೀಶ್ವರರು(ಸಾಳ್ವಭಾ. ೩೦-೬೩); ಭಿಗುರ ಬೀರಿದ ಬೀರವೊ ? ಬಲ್ಲ ಬಿಜ್ಜೆಯೊ (ಗಿರಿಜಾ. ೫೨-೮). ೪. [ಜೈನ] ದೇಹವನ್ನು ಮಾರ್ಪಾಟುಗೊಳಿಸುವ ಶಕ್ತಿ ; ವೈಕುರ್ವಣವಿದ್ಯೆ : ದೇವಕೋಟಿಗಳ ಬಿಜ್ಜೆಗಳೊಳ್ ತೊಡರ್ದೇಕೆ ಪೋವನೀ ದೊರೆಯನನಾಳ್ದನಂ ಪಡೆವುವಾಯುವುದಾವುದೊ ಜನ್ಮಜನ್ಮದೊಳ್ (ಆದಿಪು. ೪-೭೫) ; ನಾಲ್ಕುಂ ತೆರದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ (ಕಬ್ಬಿಗ. ೦೯೬). **ವಿದ್ದೆ** : ೧. "ವಿದ್ದೆ—ವಿದ್ಯಾ" (ಶಬ್ದಸೋ. ४೦); ಓದದೋದಲಾಪುದ ವಿದ್ದೆ ಸಲ್ಲದ ಚದುರ್ ಸಜೆ ಕಲ್ಲದ ಕಲ್ಪಿ (ಶಂಕರಶಾ. ४-೯೫); ಶ್ರೀಗೆ ವಿಜಯಕ್ಕೆ ವಿದ್ದೆಗೆ ಚಾಗಕ್ಕದಟಿಂಗೆ ಜಸಕೆ ವಂಟಿಂಗನಿಶಕರ್ಮಗರಂ (ಎಕ. II, ೦೩೩-೭೪; ೧೧೨) ; ಅವರವರುಗಳ ವಿದ್ದೆಯು ನೋಡಿ ಮೆಚ್ಚಿ ಸದ್ಭಾವರದಿಂದುಡುಗೊರೆಯಿತ್ತು (ಪೋಹಕ. ೦೯-೦೩). ೨. ಗುರುಗಳೆನಗಂ ಭಾರದ್ವಾಜಂಗದೊರ್ವರೆ ವಿದ್ದೆಯೊಳ್ ಪುರುಡು ಪರಿದುಂಟು (ಶಂಕರಾ. ೦೨-೦೯); ತದಂಬಿಕೆ ಲಸದ್ವೈರಾಗ್ಯಸಂಯುಕ್ತ ಸಂಜಾತಾನಂದದಿನಿತ್ತು ವಿದ್ದೆಗಳನಾ ಇಂತ್ಯಂಗೆ (ಶೀಲತ. ೩-೨೨).

[<ಪ್ರಾ. ವಿಜ್ಜಾ./ಸಂ. ವಿದ್ಯಾ]

**ಬಿಜ್ಜೆಗ** (ನಾ). ೧. ವಿದ್ವಾಂಸ ; ಪಂಡಿತ : 'ಬೇದಬಿಜ್ಜೆಗ' ಪರಾ. ೨. ಚತುರ ; ಕುಶಲ ; ಜಾಣ : ಸರಭಸದಿಂದೆರಟ್ಟಿಲದ ಬಿಲ್ವಡೆಯೊಳ್ ಸಲೆ ಬಲ್ಲ ಬಿಜ್ಜೆಗರ್ ಸುರತನಡಾತರ್ಕೊಳ್ವ . . . ಬೇಗವಾದೆತುಟೊ (ಶಾಂತಿಪು. ೬-೭೭). [ಬಿಜ್ಜೆ + —ಗ್ಯ]

**ಬಿಜ್ಜೆಗಲ್, ಬಿಜ್ಜೆಗಲಿ** (ಕ್ರಿ). ವಿದ್ಯೆಯನ್ನು ಕಲಿ ; ಶಿಕ್ಷಣವನ್ನು ಹೊಂದು : ಆವಗಂ ಬಿಜ್ಜೆಗಲ್ವುದುಂ ಬಿನಯಂದೋರ್ಪುದುಂ . . . ಜಯಮಂ ಸಂಪಾದಿಪುದುಂ ಮೊದಲಾದೊಳ್ಗೆಯ್ತದೊಳೆ ಪುತ್ತ್ರಗಳೆಯುತ್ತ (ಶಕಾ. ೩-೦೪). **ಬಿಜ್ಜೆಗಲಿ** : ಹಿರಿಯರ ಮಗಳೆಂದು ಬಿಜ್ಜೆಗಲಿತೆನೆಂದು . . . ಬೆಳೆಯದನುಸರಿಸುವುದಾತ್ಮವಲ್ಲಭನ (ಹರಿ. ೩-೩೦).

[ಬಿಜ್ಜೆ + ಕಲ್₁]

**ಬಿಜ್ಜೆಗಲಿ** 'ಬಿಜ್ಜೆಗಲ್' ನೋ.

**ಬಿಜ್ಜೆಗಲಿಸು** (ಕ್ರಿ). ಶಿಕ್ಷಣ ಕೊಡು ; ವಿದ್ಯೆಯನ್ನು ಹೇಳಿ ಕೊಡು : ನಿನಗೆ ಬಿಜ್ಜೆಗಲಿಸಿದ ಬೊಜ್ಜುಹಾರುವ, ಆ ಗಾವಿಲ, ಹಾಳಾಗಿ ಹೋಗಲಿ ! (ತಂಪ್ರಕ. ४೦-೦೯). [ಬಿಜ್ಜೆಗಲ್ + — ಇಸು₁]

**ಬಿಜ್ಜೆಗುಜಾಹು** (ನಾ). ವಿದ್ಯೆಯ ಗುರುತು.– ಚಿಹ್ನೆ : ಗುತ್ತಿಗೆವಿಡಿದಂತೆ ನೆಜೆ ಸಾಧಿಸಿದಜಾಪತ್ತುನಾಲುಕು ಬಿಜ್ಜೆಗುಜಾಹ ಪ್ರತ್ಯಾಲಿಪ್ತೆಯರ ಪರಿಕೆಯ ನೋಡು ಚಿತ್ತಯಿಸೆಂವರಂಗಾಗೆ (ಮೋಹತ. ೧೬-೦೦).

[ಬಿಜ್ಜೆ + ಕುಜಾಹು (<ಕುಜಾಪು)]

**ಬಿಜ್ಜೆವರು** (ನಾ). ಒಂದು ಊರಿನ ಹೆಸರು : ಬನ್ದಗಾವುಣ್ಡನುಂ ಕೊಳ್ಳವಗಾವುಣ್ಡನುಂ ಗಾವುಣ್ಡ ಗಣ್ಡಯ್ಯನುಂ ಬಿಜ್ಜೆವರುವಿನ್ದ ಮುಮ್ಮನೆಜೆಯಮ್ಮನುಂ (ಎಕ. XI, ಹೊಳಲ್ಕೆ. ४೦-೦೧; ೯೫೪).

[☞ ಇದು 'ಬಿಜ್ಜೆವರ' ಎಂದಿರಬಹುದೆ ?]

**ಬಿಜ್ಜೆವಳ, ಬಿಜ್ಜವಳ** (ನಾ). ೧. ವಿದ್ಯಾವಂತ : ಪಂಡಿತ : ವಿದ್ವಾಂಸ : ಸರಸತಿಯುಡಿದಳೆಗ್ಗೆ ತಲೆದುಡುಗೆಯೆಂನೆ ಪೆಸರ್ವಡೆವ ಬಿಜ್ಜೆವಳಿಂ ಸಮೆದ ಕಾವವ ಗೆಲ್ಲಂ ವೆಜೆಯುತ್ತಿರ್ಪುದು (ಕಬ್ಬಿಗ. ४೯೯); ಪೊಜಗಣ ತೋಪುಗಳೊಳಂ ಬಿಜ್ಜೆವಳರ ನೆರವಿಗಳೊಳಂ . . . ತವ್ಮ ಚಾರರಂ ನೆಲೆಗೊಳಿಸಿ (ಧಾರಶಾಂ. ೪३೫-೭೦); ನಾನಾ ನಾಡುಗಳಿಂದೆ ಬಿಜ್ಜೆವಳರುಂ ಕೃಗೈಯ್ತುದೊಳ್ವಾಣರುಂ ತೇನಂತೇನಮೆ ಬಂದು ಬೀಡುಗೊಳುತಂ (ಪ್ರಸೂಪು. ೦-४೯). ೨. ವಿದ್ಯೆಯ ಅಧಿದೇವತೆ ; ಗಣಪತಿ : "ಕರಿಮೊಗಂ, ಇಲಿದೇರಂ, ಎಡಗೆರ್ಗೇಡಿ, ಬಿಜ್ಜೆವಳಂ . . . ತಂದೆಯ ತಂದೆಯಿಲ್ಲದವಂ ಈ ೭ ವಿನಾಯಕಂಗೆ ಪೆಸರ್" (ಶಶಸಾ. ೪೭-४). **ಬಿಜ್ಜವಳ**: ೨. "ಬಂಕಣಗಿವಿಯನನೆ ಬಿಜ್ಜವಳನೆಸಲ್ ವಿಘ್ನೇಶಗಭಿಧಾನವು" (ಕಶಕ. ೮೦).

[ಬಿಜ್ಜೆ + —ವಳ]

**ಬಿಜ್ಜೆವಳ್ತಿ** (ನಾ). ವಿದ್ಯಾವತಿ ; ಪಂಡಿತೆ : ಕಿರಿದು ಪೊಳ್ತೀ ನೆಲದೊಳಾಂ ಬಿಜ್ಜೆವಳ್ತಿಯರೆನಿಸಿದುದರ್ಕೆ . . . ಮೆಚ್ಚಂ ಪಡೆಯದಿರ್ದೊಡೆಮಗೆ ಪೆಸರ್ವಾಸಿಯಿಲ್ಲಂ (ಮಲಾಪ. ೬-೦೯).

[ಬಿಜ್ಜೆವಳ+<—ಇತಿ₁ (< —ಇತ್ತಿ)]

**ಬಿಜ್ಜೆವೆಣ್ಣು** (ನಾ). ವಿದ್ಯೆಯ ಅಧಿದೇವತೆ ; ಸರಸ್ವತಿ : "ಬಾಣಿ ಬಿಜ್ಜೆವೆಣ್ಣುಂ ಬಾಸೆವೆಣ್ಣು ಸರಸತಿಯುಮೆಂನೆ ವಾಣಿಯಕ್ಕುಂ" (ಕಬ್ಬಿಗ. ೯). [ಬಿಜ್ಜೆ+ವೆಣ್ಣು (<ಪೆಣ್)]

**ಬಿಜ್ಜೋದರ** 'ಬಿಜ್ಜಾದರ' ನೋ.

**ಬಿಜ್ಜೋಧರಿ** 'ಬಿಜ್ಜಾದರಿ' ನೋ.

**ಬಿಝುಕ್** 'ಬಿಜಿಕ್' ನೋ.

**ಬಿಟಿ** 'ಬಿಟ್ಟಿ₁' ನೋ.

**ಬಿಟೆ** 'ಬಿಟ್ಟಿ₁' ನೋ.

**ಬಿಟೋಜ** (ನಾ). ಒಬ್ಬಾತನ ಹೆಸರು : ಕಲಿಮಿಟ್ಟಯ್ಯನ ಲಿಖಿತ ಬಿಟೋಜನ ಸಿಲಾಕಪ್ಪ (ಎಕ. ೦೯೨೯, ೭೮-೧೫; ೯೬೪).

[<ಬಿಟ್ಟ₂+ಓಜ₁ (<ಒಜ್ಜ)]

**ಬಿಟ್ಟ** 'ಬಿಡು₁' ಪರಾ.

**ಬಿಟ್ಟಪು** (ನಾ). ಬಿಗಿ; ದಾರ್ಢ್ಯ ; ಅಡವು (?) : ಸಜೆಗೊಂಡ ಪೆರ್ಬಸಿಱ್ ಬಿಟ್ಟಪುಗಟ್ಟ. ತೋಳ್ ತೊಡೆ ತೆರಳ್ದ ಪೊಗಂ ನೆರೆ ಮತ್ತೆ ಮಾಣಿಕೇ ಬಿಟ್ಟೆಯ ಚಿಕ್ಕಣಿಕ್ಕೆ ಪೊಸ ಬರ್ಬರ ಸೂಳೆಯರಾಳಿಗೊಂಬುದಂ (ಸೂಕ್ತಿಸು. ೬-४೬೪). [?]

**ಬಿಟ್ಟರಸ** (ನಾ). ಒಬ್ಬಾತನ ಹೆಸರು : ಸಿಡಿಯನೂರ ಗಾವಿಂಗಗೆಯ್ತಮಿದೊ ಊರ ಬಿಟ್ಟರ[ಸ] ರ[ಸ]ಪಟಿಗೆಯ ಗಂಗರ ಕಾಳೆ × × × (ಇಂಆ. XX. ೦೦-४; ೪ ಶದು ಕಕ). [ಬಿಟ್ಟ₂+ಅರಸ₁]

**ಬಿಟ್ಟಿ₁, ಬಿಟಿ, ಬಿಟೆ, ಬಿಟ್ಟೆ** (ನಾ). ೧. ಸಂಬಳವಿಲ್ಲದೆ ಮಾಡುವ ಕೆಲಸ ; ಪುಕ್ಕಟೆ ಕೆಲಸ : ನಾಡ ಗಾದೆಯ ಬಿಟ್ಟಿಯಿಂದ ಕಟಕವ ಕಂಡೆನೆಂಬು

ದೆನಗಾಯ್ತೆನುತ್ತೆಱಗಿದಂ ಭೂನಾಥನು (ಶಶಕಾ. ೩-೬೯); ಪಂಪಾಕ್ಷೇತ್ರಮಂ ಕಾಣ್ಬುದನಂತತಪಃಫಲವಿಲ್ಲದೆ ಸಮನಿಸದು ನೀಂ ಬಟ್ಟೆಯಿಂ ಬಂದು ಕಟಕಮಂ ಕಂಡ ತೆಱನಾಯ್ತು (ಉದ್ಭಟ. ೩-೩೨ ವ); ಬೆಸಸುತಂ ತವೆ ಬಟ್ಟಿಯಂ ಮಾಡಿಸಿಕೊಳುತ ಬಡಕಲಸವಂ ಸಂತಸದಿ ಮಾಡಿಸಿ ಮಾಡಿ ಬದುಕುವವು (ಜಕಪು. ೨೩-೦೮). 'ಮೂಱುವಿಟ್ಟಿ' ಪರಾ. ೨. ಕೆಲಸ; ಕಾರ್ಯ; ವೃತ್ತಿ : ಅಷ್ಟವಿಧಾರ್ಚನೆ ಷೋಡಶೋಪಚಾರವನು ಅರಸಱಿಯದ ಬಟ್ಟಿಯ ಮಾಡುವೆನು (ಏಕಪ. ೩೭೧); ಎನ್ನ ಮಾಟ್ಟಿ ಬದಗೇಂ ಪಱಿತಾದುದೆ ಬೇಡ ಕೆಮ್ಮಗಂ ಮನೆಗುಸುಟೀಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಟ್ಟಿಯೋ (೦೦ಶಾವ. ೨-೦೧೯); ಕಾಯಕ ಯಾವುದಾದರೇನು ? ಶಿವನ ಬಟ್ಟಿಯೆಂದು ಮಾಡುವ ಮಾಟವೆಲ್ಲ ಕಾಯಕ (ಶುಂಗಕ. ೬). ೩. ಪುಕ್ಕಟೆ ; ಉಚಿತ : ಸಿಟ್ಟು ಸಡವಿಲ್ಲದೆಯೆ ಬಟ್ಟೆ ದುಡಿದವ ಕೋಣ (ಅರಳು. ೩೯೭-೬) ; ಈ ಮನೆ ೧೮,೦೦೦ ಕ್ಕೆ ಮುಗಿದರೆ ಬಟ್ಟೆ ಆದ ಹಾಗೆ (ಹೋರಕು. ೨೯) ; ಚಟ್ಟಿದಿನ ಬಟ್ಟೆಗೂ ಹೋಗಬೇಡ (ಗಾದೆ). ೪. ವ್ಯರ್ಥವಾದುದು; ನಿರುಪಯುಕ್ತವಾದುದು : 'ಬಟ್ಟಿವೇಟ್' ಪರಾ. ೫. ಒಂದು ಬಗೆಯ ಸುಂಕ: ನೀರುಣಿಸುಂಕಂ ಬಟ್ಟಿ ಮೊದಲಾಗಿ ಎಲ್ಲವುಂ ಬಟ್ಟೀವೆವ್ (ಕೌಇಇ. XI-i, ೦೩-೩; 873) ; ನಕರಕ್ಕಂ ಮಹಾಜನಕ್ಕಂ ಗಾವುಣ್ಡಗಳ್ಗಂ ಪೇರ್ಗಾವುಂಡಸ್ವಾಮಿಕ್ಕಂ ಬಟ್ಟಿಯಿಲ್ಲ (ಕೌಇಇ. IX-i, ೭೭-೪೩; 992). ಬಟಿ : ೫. ಮನೆವಣ ಸೊಲಗೆ ಬಟಿಯನ್ನಿಷ್ಟು ಸರ್ವಮಾನ್ಯವಾಗಿ ಸ್ವರುಚಿಯಿನ್ದ ಕೊಟ್ಟರು (ಎಕ. 1. ೩೦-೬; ಸು. 13ಕಡು ೩೩) ; ಹಳದು ಹೊಸ್ತು ಗ್ರಾಮ ವೆಚ ಬಟಿ ಬಿರಾಡ ಸೊಲ್ಲಗ ಅಉದೂಯಿಲ್ಲ (ಎಕ. X. ಹುಳಿಬಾ. ೦೭೨-೦೫; 1496). ಬಟಿ : ೫. ಏರುಗಾಣಿಕೆ ಕಾಣಿಕೆ . . . ಬಟಿ ಮೊದಲಾಗಿ ಎಲ್ಲವನು ಸರ್ವಮಾನ್ಯವಾಗಿ ಬಿಟ್ಟೆಉ (ಎಕ. IX. ಹೊಸಕೋ. ೯-೦೦; 1581). ಬಟ್ಟಿ : ೫. ಜೋಲಕಾವುಣ್ಕ ಜಡೆದೆರ್ಲ ೯ ಪ ೩ ೧೧ ಬಟ್ಟಿಯ ಭು ೧೬ಕ್ಕಂ ಗ ೨ ಎತ್ತಿಲು ಪುತ್ರರ ವ.೫ (ಎಕ. XVI. ಜಕ್ಕನಾ. ೬೧-೨೦; 1330).

ಬಟ್ಟಗಂಟು = ಯಾವ ಬಗೆಯ ಶ್ರಮವೂ ಇಲ್ಲದೆ ದೊರೆತ ಹಣ; ಪುಕ್ಕಟೆಯಾಗಿ ಲಭ್ಯವಾದ ದುಡ್ಡು : ಬಟ್ಟಗಂಟು ಸಿಕ್ಕಿದರೆ ತೆಗೆದುಕೊಳ್ಳುವುದು ಸರಿಯೇ ? (ಬೂ೩). ಬಟ್ಟಬೇಗಾರಿ = ಯಾವ ಪ್ರತಿಫಲವೂ ಇಲ್ಲದೆ, ಪುಕ್ಕಟೆಯಾಗಿ ಮಾಡುವ ಕೆಲಸ : ಬಲವಂತದಿಂದ ಬಟ್ಟಬೇಗಾರಿಯಲ್ಲಿ ಹೊಲಗದ್ದೆಗಳ ಮಾಡಿಸಿಕೊಂಡು ಯಿದ್ದಾಗ್ಯೂ (ಕುಹಾಕಂ. II. ೩೯) ; ಹೆಣ್ಣುಗಂಡು ಆದಿಯಾಗಿ ಇವರ ಅರಮನೆಯಲ್ಲಿ ಬಟ್ಟಬೇಗಾರಿ ಚಾಕರಿಯನ್ನು ಮಾಡಿ ಮಾಡಿ ಮುಪ್ಪಾಗುತ್ತಾ ಇದ್ದರು (ಸಂತುಕ. ೦); ಧನಿಯರ ಬೇಸಾಯ ಬಟ್ಟಬೇಗಾರಿ ಇದ್ದದ್ದೇ (ಚಕಿಂಗ. ೩೩). ಬಟ್ಟಿಯ ಮಾನಿಸ = ಹಣ ಪಡೆಯದೆ ಕೆಲಸಮಾಡುವವನು ; ಬಿಟ್ಟಿಯಾಳು : ಪ್ರಕಾಶಾಪ್ರಕಾಶರೂಪಂಗಳಾದ ತೇರಾನೆಕುದುರೆಕಾಲಾಳ್ಗಳುಂ ಬಟ್ಟಿಯ ಮಾನಿಸರುಂ ಗೂಢಚರರುಂ (ಕಾಂತಾಂ. ೩೭೬-೩೯). ಬಟ್ಟಹಣ = ಬಟ್ಟಗಂಟು : ಸುಲಭವಾಗಿ ಸಂಪಾದಿಸಿದ ಬಿಟ್ಟಿಹಣದ ಮಾಲೀಕತ್ವವನ್ನು ಸೂಚಿಸುವ ದುಂದುವೈಭವ ಆ ವಾತಾವರಣದಲ್ಲಿ ತುಂಬಿ ತುಳುಕುತ್ತಿತ್ತು (ಭುಸಕು. ೨೦೦). [< ಪ್ರಾ. ವಿಟ್ಟಿ / ಸಂ. ವಿಷ್ಟಿ]

ಬಟ್ಟಿ₂ 'ಬಿಟ್ಟು₂' ನೋ.

ಬಟ್ಟಿಕೂಳು 'ಬಿಟ್ಟಿಗೂಳು' ನೋ.

ಬಟ್ಟಿಕೆಲಸ 'ಬಿಟ್ಟಿಗೆಲಸ' ನೋ.

ಬಟ್ಟಿಗ (ನಾ). ೧. ಒಬ್ಬಾತನ ಹೆಸರು : ನರಸಿಂಘಅಮ್ಮ × × × ಳಥುಙ್ಗಮರಾ ಬಟ್ಟಿಗ ಗೋನಾಥನಾ[ಗುಟಿ]ಪೋತ ಬಮ್ಮ (ಕೌಇಇ. XI-i. ೦೪-೦೬; 869 ); ಬಿಟ್ಟಿಗ ಸಟ್ಟವುಣ್ಣುಗೆಯ್ಯೆ (ಎಕ. VIII. ಸೊರಬ. ೨೦೨-೩; 966). ೨. ಹೊಯ್ಸಳರ ಒಬ್ಬ ಪ್ರಸಿದ್ಧರಾಜನ ಹೆಸರು ; ವಿಷ್ಣುವರ್ಧನ : ವೀರಾರಿನೃಪಾಳರಂ ಬಂಗಿಸಿದಂ ಮೂಱುವಿಟ್ಟಗಂ ಬಿಟ್ಟಿಗಂ (ಎಕ. VIII (R). ಹಾಸನ. ೦೫೬-೨೩ ; ೧).

[ಬಿಟ್ಟಿ₂ (< ಬಿಟ್ಟು₂) + – ಗ₂]

ಬಿಟ್ಟಿಗೂಳು, ಬಿಟ್ಟಿಕೂಳು (ನಾ). ಪುಕ್ಕಟೆಯಾಗಿ ಲಭ್ಯವಾಗುವ ಆಹಾರ : ಅರಮನೆಯ ಬಿಟ್ಟಿಗೂಳಿಂದ ಕೊಬ್ಬಿ ಉಬ್ಬಿದ ತನ್ನ ಊಳಿಗದವರಿಗೆ ಸಶ್ರಮದ ಕಾರ್ಯಕಲಾಪಗಳು ಸ್ವಲ್ಪಮಟ್ಟಿಗಾದರೂ ಅಳವಡಿಕೆಯಾಗಿ (ಚಿಲ್ಲಿ೩. ೦೬೯-೩). ಬಿಟ್ಟಿಕೂಳು : ಅಷ್ಟೈಶ್ವರ್ಯವು ವ್ಯಪ್ಪಾನ್ನವಿರುತಿರೆ ಬಿಟ್ಟಿಕೂಳನು ತಿನ್ನಲ್ಯಾಕಯ್ಯ (ಜಾನಗೀ. ೩೬); ತಮ್ಮ ಮನೆಯಲ್ಲಿ ಬಿಟ್ಟಿಕೂಳು ಉಣ್ಣಬೇಕು, ಹುಡುಗನಿಗೆ ಪಾಠ ಹೇಳಿಕೊಡಿರಲಿ ಎಂಬ ಭಾವನೆಯೂ ಇರಲಿಲ್ಲ (ಮರಳಿ. ೯೨).

[ಬಿಟ್ಟಿ₁ + ಕೂಳು₂ (< ಕೂಟ್₁)]

ಬಿಟ್ಟಿಗೆಯ್, ಬಿಟ್ಟಿಗೈ, ಬಿಟ್ಟಿಗೆಯ್ (ಕ್ರಿ). ಪ್ರತಿಫಲವಿಲ್ಲದೆ ಸೇವೆ ಮಾಡು; ಬಿಟ್ಟಿಯಾದ ಕೆಲಸಮಾಡು : ಉಜ್ವಲವೀರಶೈವಭಕ್ತಂ ಬಿಟ್ಟಿಗೆಯ್ಯದಿರೆ ತಳುವದಾತನ ಸೊಸ್ನಲಿಗೆಯಿಂದೆ ಪೋಗೆಂದು ಸಿದ್ಧರಾಮಯ್ಯ ನುಡಿಯೆ (ಹಾಸೋಕು. ೦೦-೨೯). ಬಿಟ್ಟಿಗೈ : ಅಷ್ಟದಿಕ್ಪಾಲಕರು ದನುಜಗೆ ಬಿಟ್ಟಿಗೈವುದ ಕಂಡನಂಗವ (ಕಾಶಿಖಾ. ೧೬-೧೩). ಬಿಟ್ಟಿಗೆಯ್ : ಅನ್ತಪರಮಂಡಲಿಕರೆಲ್ಲ ತಂತಮ್ಮ ವಸ್ತುವಾಹನಂಗಳಂ ಕೊಟ್ಟು ಕಂಡು × × ಬಿಟ್ಟಿಗೆಯ್ಯುತ್ತಮಿರೆ (ಕೌಇಇ. XX. ೯೯-೨೬; 1076). [ಬಿಟ್ಟಿ₁ + ಕೆಯ್₁]

ಬಿಟ್ಟಿಗೆಯ್ಮೆ (ನಾ). ಪ್ರತಿಫಲವಿಲ್ಲದ ಊಳಿಗ ; ಪುಕ್ಕಟೆ ಕೆಲಸ : ಆವಗಂ ಜಗಮನೊಗಯಿಪ ಬಿಟ್ಟಿಗೆಯ್ಮೆ ಇವಳೊಲ್ದು ನಿಟ್ಟಿಪ ದಿಟ್ಟಿಯಿಂ ಸಫಲಮೆಂದೆನಿಸಿರ್ಕುಂ (ತಳಕು. ೦೦೯-೦೬).

[ಬಿಟ್ಟಿ₁ + ಗೆಯ್ಮೆ (< ಕೈಮೆ₁)]

ಬಿಟ್ಟಿಗೆಲಸ, ಬಿಟ್ಟಿಕೆಲಸ (ನಾ). = ಬಿಟ್ಟಿಗೆಯ್ಮೆ : ಹಿಂದೆ ನಿನ್ನೊಳು ಪುಟ್ಟಿದುದು ಮೊದಲಿಂದುತನಕೊಂದಡಕೆ ಹಂಗಿನೊಳೊಂದೆನುಸಿಕನೆ ನಿನ್ನ ನಾನೋಲೈಸಿದೆನು ಹೊದ್ದಿ ಕುಂದದಲಸದೆ ಬಿಟ್ಟಿಗೆಲಸಕೆ ಸಂದು ಮಾಡುತ್ತಿರ್ದಡೆ (ಜಕಪು. ೬೦-೩೭). ಬಿಟ್ಟಿಕೆಲಸ : ಸಂಸ್ಥಾನದಲ್ಲಿ ಬಿಟ್ಟಿಕೆಲಸ ಮಾಡಿದರೂ ಅದಕ್ಕೆ ಸರಿಯಾದ ರಿಯಾಯತಿಯು ದೊರಕುತ್ತಿದ್ದಿತು (ಬುಹಾ೩. ೦೬೦). [ಬಿಟ್ಟಿ₁ + ಕೆಲಸ]

ಬಿಟ್ಟಿಗೈ 'ಬಿಟ್ಟಿಗೆಯ್' ನೋ.

ಬಿಟ್ಟಿದೇವ (ನಾ). ಹೊಯ್ಸಳರ ಒಬ್ಬ ಪ್ರಸಿದ್ಧರಾಜನ ಹೆಸರು : ವಿಷ್ಣುವರ್ಧನ : ಸಕುವರ್ಷ ೧೦೧೭ ಯುವಸಂವತ್ಸರದ ಸೋಮವಾರ ಸಂಕ್ರಾಂತಿಯಲು ಬಿಟ್ಟಿದೇವ . . . ಬ್ರಹ್ಮೇಸ್ವರದೆವರ್ಗ್ಗೆ ಬಿಟ್ಟ ಗದ್ದೆ ಕಣ್ಡುಗ ೧೫ (ಎಕ. VI (R). ಕೃಷ್ಣರಾ. ೩೭-೬; 1095); ಮಹಾಮಣ್ಡಳೇಶ್ವರ ಪೊಯ್ಸಳ ಬಿಟ್ಟಿದೇವನ ದಣ್ನಾಯಕ (ಎಕ. VII. ಶಿವಮೊ. ೦೨-೩ ; 1120).

[ಬಿಟ್ಟಿ₂ (<ಬಿಟ್ಟು₂) + ದೇವ]

ಬಿಟ್ಟಿಬೆಸ 'ಬಿಟ್ಟಿವೆಸ' ನೋ.

ಬಿಟ್ಟಿಬೆಸಕೆಯ್ 'ಬಿಟ್ಟಿವೆಸಗೆಯ್' ನೋ.

ಬಿಟ್ಟಿಬೆಸನ 'ಬಿಟ್ಟಿವೆಸ' ನೋ.

ಬಿಟ್ಟಿಯಾಳ್, ಬಿಟ್ಟಿಯಾಳು (ನಾ). ಸಂಬಳವಿಲ್ಲದೆ ದುಡಿಯುವವನು; ಪುಕ್ಕಟೆಯಾಗಿ ಕೆಲಸ ಮಾಡುವವನು : ಓ! ಬಿಟ್ಟಿಯಾಳ್ಗಳುಂ ಬಿಟ್ಟಿಂತಾಗದೆ! ಎಂತೀತಂಗಳ್ ಪೋಗಲಾರ್ಪರ್ (ಕಾಮಾಕ್ಕ. ೧೦೬-೨೩). ಬಿಟ್ಟಿಯಾಳು : ಬಿಟ್ಟಿಯಾಳು ಆದರೆ ಹಟ್ಟಿ ಕಟ್ಟಬಾರದೇ ? (ಗಾದೆ).

[ಬಿಟ್ಟಿ₁ + ಆಳ್₃]

ಬಿಟ್ಟಿಯಾಳು 'ಬಿಟ್ಟಿಯಾಳ್' ನೋ.

ಬಿಟ್ಟಿಯೆಸಗು (ಕ್ರಿ). ಪ್ರತಿಫಲವಿಲ್ಲದೆ ದುಡಿ,-ಕೆಲಸ ಮಾಡು: ತವಿವಾಲಿಂ ಘೃತದಿಂ ಕರುಳೆನಸುಂ ಬಾಲ್ಯದೊಳೆ ನಾಂದುದಿಲ್ಲದಱಿಂ ತಾನೆನಿತು

ತಿರಿದುಂಡೊಡಂ ಪಸಿವನುಗಿಡದಿರೆ ಬಸಿರ್ಗೆ ಬಿಟ್ಟಿಯೆಸಗಿವನಲ್ತೆ (ವ್ಯಕಾ. ೯-೧೦೭). [ಬಿಟ್ಟಿ$_1$ + ಎಸಗು$_1$]

**ಬಿಟ್ಟವಿಡಿ**, **ಬಿಟ್ಟಿಹಿಡಿ** (ಕ್ರಿ). ಸಂಭಾವನೆಯಿಲ್ಲದೆ ಒತ್ತಾಯದಿಂದ ಕೆಲಸ ಮಾಡಿಸು ; ಪುಕ್ಕಟೆಯಾಗಿ ದುಡಿಸಿಕೊಳ್ಳು: ಭೂತದಯಾರಹಿತ ನೀ ಬಿಟ್ಟವಿಡಿವುದು ಯೋಗ್ಯವಲ್ಲ (ಶಿಶುಗ. ೩-೭-೪೦). **ಬಿಟ್ಟಿಹಿಡಿ** : ನಮ್ಮನ್ನು ಬಿಟ್ಟಿಹಿಡಿದು ನಮ್ಮ ಕೈಲಿ ಈ ತೋಟದಲ್ಲೆಲ್ಲ ಅಗತೆ ಮಾಡಿ ಸುತ್ತಾರಂತೆ (ಘಟ್ಟಿರ. ೨೦). [ಬಿಟ್ಟಿ$_1$ + ಪಿಡಿ$_1$]

**ಬಿಟ್ಟವೆಸ**, **ಬಿಟ್ಟಿಬೆಸ**, **ಬಿಟ್ಟಿಬೆಸನ** (ನಾ). = ಬಿಟ್ಟಿಗೆಯ್ಮೆ : ಪೊಲೆಯರುಂ ವಪಾದಿಗರುಂ ಕೀಲಿಗರುಮೆನಿಸಿ ಬಿಟ್ಟವೆಸಂಗಳಂ ಮಾಡಿ (ಪಶಾಕ. ೨೬೩). **ಬಿಟ್ಟಿಬೆಸ** : ಗಂಗಸಿದ್ದಾಯ ಹೊಱಗಾಗಿ ಆಯ ದಾಯ ಬಿಟ್ಟಿಬೆಸ ಹಡುವವಗೇಂಗೆ ಪರಿಹಾರವಂ ಬಿಟ್ಟ (ಎಕ. I, ೮೭–೦೩ : 1175); ಬಿಟ್ಟಿಬೆಸ . . . ಇದು ದೈಹಿಕಶ್ರಮರೂಪವಾದ ತೆರಿಗೆ (ಕಶಾಅ. ೯೦೦). **ಬಿಟ್ಟಿಬೆಸನ** : ಎಲ್ಲ ಮಾನ್ಯಂಗಳಂ ಭಕ್ತರ್ಗೆ ಸಾರ್ಚುತಂ ಬಿಟ್ಟಿಬೆಸನಂ ಶಿವನ ಭಕ್ತರ್ಗೆ ಮಾಡುತಂ (ಅಳಿ. ೮೬. ೯೯–೦೩). [ಬಿಟ್ಟಿ$_1$ + ಬೆಸ$_1$]

**ಬಿಟ್ಟವೆಸಗೆಯ್**, **ಬಿಟ್ಟಿಬೆಸಕೆಯ್** (ಕ್ರಿ). ಸಂಭಾವನೆಯಿಲ್ಲದೆ ದುಡಿ ; ಪುಕ್ಕಟೆಕೆಲಸ ಮಾಡು : ಜೀಯೆನುತನುದಿನವಯ್ದೆ ಬಿಟ್ಟವೆಸಗಯ್ವುದ ಬೆಟ್ಟಗರಿಲ್ಲ (ಎಕ. XI. ದಾವಣ. ೮೫–೬ : 1143). **ಬಿಟ್ಟಿಬೆಸಕೆಯ್** : ಘೋಷಾಕಾರಸಂಗ್ರಹಾಕರಗೋಪ್ರಜಂಗಳುಮಾನವನಾಳ್ದ ತೆಱಗೊಳ್ದ ಬಿಟ್ಟಬೆಸಕೆಯಿಸಿಕೊಳ್ವ ಭೋಗಿವ ನಿಯೋಗಂಗಳುಮನಿಂತು ಮಾಡಿ (ಅಪು. ೯-೬೩ ವ). [ಬಿಟ್ಟವೆಸ + ಕೆಯ್$_1$]

**ಬಿಟ್ಟವೇೞ್**, **ಬಿಟ್ಟಿಹೇಳು** (ಕ್ರಿ). ೧. ವ್ಯರ್ಥವಾದುದನ್ನು ಹೇಳು : ಕೆಲಸಕ್ಕೆ ಬಾರದುದನ್ನು ನಿರೂಪಿಸು, — ತಿಳಿಸು : ಕಾವ್ಯ ಲಕ್ಷಣದೊಳೊಳ್ಪಳವಟ್ಟಿರೆ ಪೇೞ್ವುದಲ್ಲದೇಕಾರಣವಯ್ಯ ಕೆಮ್ಮಗಿರಲಾಗದೆ ಕಬ್ಬ[ವ] ಬಿಟ್ಟವೇ[ೞ್ವು]ದೇ (ಜಂತಂ. ೦-೦೦). **ಬಿಟ್ಟಿಹೇಳು** : ೨. ಕೆಲಸಕ್ಕೆ ನಿಯಮಿಸು, — ಗೊತ್ತುಪಡಿಸು : ಲಿಂಗಕ್ಕೆ ಇಲ್ಲೆಂಬ ಜಂಗಮಕ್ಕೆ ಇಲ್ಲೆಂಬ ಬಂದ ಪುರಾತರಿಗೆ ಇಲ್ಲೆಂಬ ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹಣ ಬಿಟ್ಟಿಹೇಳಿತ್ತ (ಬಸವ. ೨೨೨). [ಬಿಟ್ಟಿ$_1$ + ಪೇೞ್]

**ಬಿಟ್ಟವೊಱು** (ಕ್ರಿ). ಪುಕ್ಕಟೆಯಾಗಿ ಕಾರ್ಯಭಾರವನ್ನು ಹೊರು, — ವಹಿಸಿಕೊಳ್ಳು : ರಾಜ್ಯಭಾರಮಂ ಬಿಟ್ಟವೊತ್ತವಂ ಕಲ್ಲ ಭಾರವ ನೀಡಾಡುವಂತೀಡಾಡಿ (ರರ್ಧಾಮ್ಮ. ೯-೬೨). [ಬಿಟ್ಟಿ$_1$ + ಪೊಱು]

**ಬಿಟ್ಟವೋಗು** (ಕ್ರಿ). ಪುಕ್ಕಟೆಕೆಲಸಕ್ಕೆ ಹೋಗು : ಎಲ್ಲವನ್ನು ಬಿನ್ನವಿಸಿ ಪಟ್ಟಾದೆ:ಪಾರ್ಥರವ ಸೋದಿಸಿಂದೇ ಹೋಗಿ ನಾಳೆ ಬಹುದೆಸಲವರು ಮೇದಿನಿಯ ನಾಣ್ನುಡಿಯ ವಾರಣಸಿಯ ಬಿಟ್ಟವೋದರೆಂದೆಂಬುದೆನ ಗಾಯ್ಪೆಂದು ಹರುಷ ಮಿಗಲಾ ಪುರಕ್ಕೈತಂದರು (ಸಿದ್ಧರಾ. ೯-೦೭). [ಬಿಟ್ಟಿ$_1$ + ಪೋಗು$_1$ (< ಪೋ$_1$)]

**ಬಿಟ್ಟಿಹಿಡಿ** 'ಬಿಟ್ಟವಿಡಿ' ನೋ.

**ಬಿಟ್ಟಿಹೇಳು** 'ಬಿಟ್ಟವೇೞ್' ನೋ.

**ಬಿಟ್ಟು$_1$**, 'ಬಿಡ್ಡು$_1$' ಪರಾ.

**ಬಿಟ್ಟು$_2$**, **ಬಿಟ್ಟೆ$_2$**, **ವಿಟ್ಟು**, **ವಿನ್ನು** (ನಾ). ೧. ಒಬ್ಬಾತನ ಹೆಸರು : ವಂಶಿಗ ಬಿಟ್ಟ ಕೃತಂ (ಇಇ. IX, ೬೯–೪೦ ; ೮ ಶಪು ೬೩). **ಬಿಟ್ಟೆ$_2$** : ೧. 'ಬಿಟ್ಟಿಗ', 'ಬಿಟ್ಟಿದೇವ' ಪರಾ. **ವಿಟ್ಟು** : ೨. ತ್ರಿಮೂರ್ತಿಗಳಲ್ಲಿ ಒಬ್ಬ ; ವಿಷ್ಣು : "ವಿಟ್ಟು - ವಿಷ್ಣು" (ಶಾಶಕೋ. ೪೦) ; ವಿಟ್ಟುವುಂ ಬ್ರಹ್ಮನುಂ ಕಣ್ತಲೆಗಳಂ ಶಿವಗೆ ಕೊಟ್ಟು ಡಿಂಗರಿಗರಾದವರವಸೀಶಂಗೆ ಪಡಿಗಟ್ಟುವರೆ (ಕಂಪು. ೩೨-೨೪). **ವಿನ್ನು** : ೨. "ವಿನ್ನು—ವಿಷ್ಣು" (ಗುಂಪೋ. ೦೩೦); ಜನ್ಮಾಂತರದೆ ಮಾಡಿದ ನನ್ನ ದುಷ್ಕರ್ಮಾನುಸಾರವೆ ವಿನ್ನುವಿನ ಸುತನೀಗ ಪೊಸದಾದ ಶಯನವಂ ಮಾಡಿ ಸನ್ನುತಾಂಗಿಯನೊಯ್ದು . . . ಸಮಾಕೌಶಲ್ಯಮನೆ ತೋರಿಸಿದನು (ರಭಾಮಂ. ೯-೯೬). [<ಸಂ. ವಿಷ್ಣು]

**ಬಿಟ್ಟುಳಿ** (ನಾ). (?) : ಅಮರೆ ಮಾಡಿದ ಬಿಟ್ಟುಳಿಯ ಕಕ್ಕುಂಬ ತೊಡಂಬೆಯು ಮೂಡಿಗೆಯು ಕವಳಿಕೆಯು ಕಂಡಪಟಂಗಳುಮಂ ಪಲವು ತೆಱದ ಪಲವುಂ ಪೊಱೆಯಾಗಿ ಕಟ್ಟಿದ ಬಲೆಗಳುಮಂ . . . ಅಳವಿಯೊಳ್ ಕೂಡಿ ನಡೆಯಲ್ವೇಟ್ಟು ಬೇಂಟೆವಸದನಗೊಂಡು (ಶಂಶಕಾ. ೩-೪೭ ವ). [?]

**ಬಿಟ್ಟೆ** 'ಬಿಟ್ಟು$_1$' ನೋ.

**ಬಿಟ್ಟೆಗೆಯ್** 'ಬಿಟ್ಟಗೆಯ್' ನೋ.

**ಬಿಟ್ಟೇಱು**, **ಬಿಟ್ಟೇಱು$_2$** (ನಾ). (ಕೈಯಿಂದ ದೂರದವರೆಗೆ ಎಸೆಯುವ) ಉದ್ದವಾದ ಈಟಿ ; ಎಸೆಯೀಟಿ : "ಬಿಟ್ಟೇಱು ಮೊದಲಾದುದು ಕಯ್ಯಿಂ ಬಿಡಲ್ಪಡುವುದು ಪಾಣಿ(ಕರ)ಮುಕ್ತಮೆಂಬುದು" (ಹಲಾಯು. ೬೬-೪೦೪) ; ವೀರರೊಳ್ ಕೂಡಿ ಪರಿಗೆಯುಂ ಬಿಟ್ಟೇಱುಂ ಬೆರಸಿರ್ಪಂತೆ (ರರ್ಧಾಮ್ಮ. ೦೧–೨) ; ಬಿಟ್ಟೇಱುಟ್ಟಿ ಸಖಂ ಚಕ್ರ ಪರಶು . . . ಘಳಕಂಬಿಡಿದಮರರ್ ನೆರೆದುದು (ಅಜೀತ. ೨–೪೦); ಇಟ್ಟ ಸಲ್ಲೆಹ ಸಬಳ ಬಿಟ್ಟೇಱುಟ್ಟಿಗಳ ಮಳೆ ಸಾದಿದವು ಕಾದಿದರು ಚೂಣಿಯಲಿ (ಕುಮ್ಮಾರ. ೦೯-೦೦); ಈಟಿಯಲಿ ಬಿಟ್ಟೇಱಿನಲಿ ಹೊಗುವ ಹರಿಕದಂಬವ ಹೊಡೆವುತಿಱುವುತ ಜರಿಯಗೆಡಹಿದರು (ತೊರರಾ. ೬-೦೦-೦೦). **ಬೆಟ್ಟೇಱು$_2$** : ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ ಖಡ್ಗದಿಂ ಪೂಣಿಸಿ ಪೊಯ್ದುಂ ಬೆಟ್ಟೇಱುಗಳಿಂ ಪರಿತಂದಿಟ್ಟುಂ . . . ಸೈರಿಸಲಾಱದೆ (ರರ್ಧಾಮ್ಮ. ೩-೬೩).

ಬಿಜ್ಜಲ ಬಿಟ್ಟೇಱು, ಬಿಜ್ಜಬಿಟ್ಟೇಱು= (?) : "ಬಿಜ್ಜಲ ಬಿಟ್ಟೇಱು= ಹಿರಿಯ ಬಿಟ್ಟೇಱು" (ಕಮದ. ಶಂ. ೨); "ಬಿಜ್ಜ[ಪಾಠಾಂ. ಜ್ಜೆ] ಬಿಟ್ಟೇಱಿಂದು ಹಿರಿಯ ಬಿಟ್ಟೇಱಿನಿಕ್ಕುಂ" (ಕಮ್ಮಕೈ. ೯೬).

[ದೇ.॥ ತಮಿ. ವಿಟ್ಟೇಱು, ವೆಟ್ಟೇಱು ; ಮಲ. ವಿಟ್ಟೇಱು]

**ಬಿಟ್ಟೇಱುಕಾಱ** (ನಾ). ಉದ್ದವಾದ ಈಟಿಯನ್ನು ಹಿಡಿದಿರುವವನು : ಐಶ್ವರ್ಯಮದಮೆಂಬ ಬಿಟ್ಟೇಱುಕಾಱರ್ವೆರಸು ಬಲಮದಮೆಂಬ ಕಟ್ಟಿಗೆಕಾಱರ್ವೆರಸು . . . ನಿಲ್ಲದೆಲ್ಲಿಯುಂ ಬೆನ್ನಟ್ಟ ತಗುಳ್ದು (ರರ್ಧಾಮ್ಮ. ೦೦-೮೭ ಅಂತಸ್ಥ) ; ನಿಗಳಂಕಮಲ್ಲಂ ಭುಜಬಳವೀರಂ ಕೊಟ್ಟೋಜುವ ಬಿಟ್ಟೇಱುಕಾಱರ ಗಣ್ಡಂ (ಎಕ. VI, ಕಡೂರು. ೩೯–೨೦ ; 1148).

[ಬಿಟ್ಟೇಱು + —ಕಾಱ]

**ಬಿಡ** (ನಾ). ಒಂದು ಬಗೆಯ ಉಪ್ಪು ; ಡೋಣೆಯುಪ್ಪು : "ವಾಕ್ಯಂ, ಬಿಡಂ . . . ತೊಳೆದು ಕಾಯಿಸಿ ತೆಗೆದ ಉಪ್ಪು, ಡೋಣೆಉಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯುಳಿಸಿದ ಕೃತ್ರಿಮಲವಣಕ್ಕೂ ಬಿಡಾಲವಣಕ್ಕೂ ಪೆಸರುಗಳು" (ಸಿಡ್ಡಾಂಶಿ. ೨೯೩); ಸುರದಾರು ಸೈಂಧವಂ ಜಳಧರಂ ಬಿಡಂ ಬೇಟಲಕ್ಕಿ ಸದ್ಯಃಕ್ಷಾರಂ ಸುರಭಿಜಳಮೆಣ್ಣೆಯೆಂಬಿವನಿರದಟ್ಟಿಱೆ ನಸ್ಯಮಂ ಕಟಲ್ಗಂ ಸಂಬಂ (ಲೋಕೋಪ. ೯-೨೨೪). [ಸಂ.]

**ಬಿಡಕಿ** (ನಾ). ಗಳಹುವವಳು ; ಜಗಳಗಂಟಿ ; ಗಯ್ಯಾಳಿ : ಮಗಳಿಗೆ ದುಡಕಿಯು ಕಟಕಟಿ ಬಲು ಜೋರ ನಿನ್ನಂಥ ಬಿಡಕಿಗೆ ಹೆಣ್ಣಲ್ಲಕಿಗೆ ಹೆಣ್ಣಲ್ಲಶಿಗೆ (ಜನಾಗೀ. ೯೨) ; ಕೆಲವರು ಬಿಡಕಿಯರು ಮಾತ್ರ 'ಅಯ್ಯೋ . . . ಮದಲಿಂಗಿತ್ತಿಯೋ ನೋಟಾನೆ ಹೇಳ್ತಾರೆಯೋ ತುಂಬಿದ ಸಭೆಯಾಗ' ಎಂದು ಮೂತಿ ತಿರುವಿದರು (ಕಳುಮ. ೩೬). [< ಬಿಡ್ಡು$_1$]

**ಬಿಡತ** (ನಾ). [ಸಂಗೀತ] ಮೃದಂಗವನ್ನು ಬಾರಿಸುವಾಗ ಎರಡು ಹೊಡೆತಗಳ ನಡುವೆ ಇರುವ ಅವಧಿ, — ಕಾಲಮಾನ : ಚಮತ್ಕಾರ ಲಾಗು ಪಿಡಿತ ಬಿಡಿ[ದ]ತಗಳ ಮೋಹನವನ್ನು ತೋಱಿ ನುಡಿಸಿದ ಮಾರ್ದಂಗಿಕನು (ಗೋಮಟೇ. ೭-೦೭). [<ಬಿಡು$_1$ + —ತ$_2$]

**ಬಿಡತಿ** 'ಬಿಡದಿ' ನೋ.

**ಬಿಡದಿ**, **ಬಿಡತಿ** (ನಾ). ೧. ಅತಿಥಿಗಳ ಬಿಡಾರಕ್ಕೆಂದು ತೆರವು

ಮಾಡಿರುವ ಮನೆ ; ಬಿಡಾರ : ಮಡದಿ ನಿಃಯೆನ್ನ ವದನೆ ಬಾಯೆಂದು ನಡದಾರು ಖಳನಾ ಬಡದಿಗೆ (ವಾರಿಕೀ. ೬೩-೧೭) : ಯುಧಿಷ್ಠಿರನು . . . ಬಡದಿಯಲ್ಲಿ ತಂಗಿ ಶ್ರಮಪರಿಹಾರ ಮಾಡಿಕೊಂಡ (ಶ್ಯಾಕಥ. ೧೨೦). ೨. ತಂಗುವಿಕೆ ; ಮೊಕ್ಕಾಮು ; ವಾಸ್ತವ್ಯ : ನಮ್ಮ ಬಡದಿಗೆ ಬೇರೆ ಮನೆಯನ್ನು ಏರ್ಪಾಟು ಮಾಡಿರಬೇಕು (ಶಾಂತ್ರ. ೬೩). ಬಡತಿ : ೧. ನಮ್ಮನ್ನು ನಿಜವಾದ ಆದರದಿಂದ ಸತ್ಕರಿಸಿ, ಅವನ ಭಾರಿ ಹೊಸ ತೊಟ್ಟಿಮನೆಯಲ್ಲಿನ ಮುಖ್ಯಭಾಗವನ್ನು ನಮಗೆ ಬಡತಿ ಮಾಡಿ ಕೊಟ್ಟ (ಕಂಷ. ೩೩೪).

ಬಡದಿ ಬಿಡು = ಬಿಡಾರ ಹೂಡು; ತಂಗು : ಸುಲ್ತಾನರು ಚಿತ್ರದುರ್ಗ ದಲ್ಲಿಯೇ ಬಡದಿ ಬಿಟ್ಟಿದ್ದರು (ದೌಂಶ. ೨೦೪) ; ಎಲ್ಲರೂ ಬಡದಿ ಬಿಟ್ಟಿದ್ದ ಮನೆಗೆ ಪ್ರಯಾಣ ಮಾಡಿದರು (ಷೂಲಕಶ. ೦೩೪). ಬಡದಿ ಮನೆ, ಬಡದಿಯ ಮನೆ = (ಮದುವೆ ಮೊದಲಾದ ಸಂದರ್ಭಗಳಲ್ಲಿ) ಅತಿಥಿಗಳ (ವಿಶೇಷವಾಗಿ ಬೀಗರ) ಬಿಡಾರಕ್ಕಾಗಿ ತೆರವು ಮಾಡಿರುವ ಮನೆ: ಬಡದಿಮನೆಯಲ್ಲಿ ಸರಿಯಾದ ವ್ಯವಸ್ಥೆಯಿಲ್ಲ (ಷುಃಕಾ. ೩೭) ; ಲಲನೆ ಲಕುಮಿಯು ಸಹಿತ ವೇಂಕಟನಿಲಯನನ್ನೈದಿಸುತ ಬಡದಿಯ ಮನೆಯೊಳಿಕ್ಕಿ ಸಿದನು (ಅಕಾರಿ. ೧೬-೯೯) ; ಬಡದಿಯ ಮನೆಯಲ್ಲಿ ಇವನ ಅತ್ತೆ ಮತ್ತು ಇವನ ತಾಯಿಯವರು ಮಾತನಾಡುತ್ತಿದ್ದುದು (ಅಂಗಶಾ. ೧೭).

[<ಬಿಡು₁ + — ದಿ./ತಮಿ. ಮಲ. ವಿಟುತಿ ; ತೆಲು. ವಿಡಿದಿ]

**ಬಡದಿವುಳಿಗ** (ನಾ). ಬಿಡಾರದಲ್ಲಿ ಸಲ್ಲಿಸುವ ಸೇವೆ,—ಊಳಿಗ : ಬಡದಿವುಳಿಗದ ಲಿಂಗಣ ಮಡಿವುಳಿಗದ ದೊಡ್ಡಯ (ಎಕ. XIV. ಗುಂಡ್ಲುಪೇ. ೦೪೬-೩೫ ; 1087). [ಬಡದಿ + <ಊಳಿಗ]

**ಬಡಯ₁** 'ಬಿಡೆಯ'₁ ನೋ.

**ಬಡಯ₂** 'ಬಿಡೆಯ₂' ನೋ.

**ಬಡಯ₃** 'ವಿಡಾಯ' ನೋ.

**ಬಡಲವಣ** (ನಾ). ಒಂದು ಬಗೆಯ ಉಪ್ಪು ; ದೋಣಿಯುಪ್ಪು : "ಕೃತ್ರಿಮಕಂ – ಬಿಡಲವಣ" (೬೫೦. ೩೬). [ಸಂ.]

**ಬಡವೆ** (ನಾ). ಬಿರುಕು ; ಸೀಳು ; ಸಂದು : ಕಲ್ಲ ಬಡವೆಯೊಳಿರ್ದ ಪಣವಿನಂತೆ ಸಿಡಿಲೊಳಗಿರ್ದ ಸಕ್ಕರೆಯಂತೆ (ಧರ್ಮಾಮೃ. ೦೩-೦೬೫).

[ದೇ.॥ ತಮಿ. ವಿಟವು, ವಿಟಪ್ಪು ; ಮಲ. ವಿಟವು]

**ಬಡವೆಳಗು** (ನಾ). ಹೊರಹೊಮ್ಮುವ ಕಾಂತಿ,— ಪ್ರಭೆ : ಎಡೆಯಾಡು ವಬಲೆಯೆರಡರುಚಿತಳಿರನು ಪಡೆದು ನೀಲದ ನೆಲನುಗುರ ಬಡವೆಳಗಿಂ ದಲರಾಗಿ ನೋಡುವರಕ್ಷಿಗೊಡರಿಪುದದುವೆ ಸತ್ಪಲವ (ಚರಕ. ೫-೪೪).

[? + ಬೆಳಗು₂]

**ಬಡಾಡಿ** 'ಬೀಡಾಡಿ' ನೋ.

**ಬಡಾಡಿಗ** (ನಾ). ಕೀಳಾದ ವ್ಯಕ್ತಿ; ಹೀನವಾದ ವ್ಯಕ್ತಿ: ಹಾದರದೆ ಮುಪ್ಪುಗೊಂಡಾ ಬಡಾಡಿಗ ಪೆಣ್ಗಳಾದರದೆ ಕಂಥಾಕಮಂಡಲುಗಳಂ ಬಳಿಯ ಸೀರೆಯಂ ಧರಿಸಿಕೊಂಡು (ಮಹಾಂಕೀ. ೦೩-೨೩).

[ಬಡಾಡಿ (< ಬೀಡಾಡಿ) + — ಗ₂]

**ಬಡಾಯ** 'ವಿಡಾಯ' ನೋ.

**ಬಡಾರ** 'ಬೀಡಾರ' ನೋ.

**ಬಿಡಾರುವಾರ, ಬಿಡಾರ್ವರ** (ನಾ). ಚರ ಹಾಗೂ ಸ್ಥಿರ ಆಸ್ತಿಗಳನ್ನು ಭೋಗಕ್ಕೆ ಪಡೆಯುವುದು, — ವಾರಕ್ಕೆ ಮಾಡಿಕೊಳ್ಳುವುದು : ಹದಿನಾರು ಹಾನೆ ಗದೆಯನು ಬಿಡಾರುವಾರವಾಗಿಯಿರಿಸಿ (ಕಶಾಇ. ೦೯೩೦, ಕುಂದಾಪುರ. ೬೬೫-೬೫; 1467) ; ಆ ಜಂನಕೆ ಉಂಟಾದ ಸೀಮೆ ಸಾಮ್ಯ ಯಿಪ್ಪನೂ ಬಿಡಾರುವಾರವಾಗಿ ಮಾಡಿಕೊಂಡು ದುಗ್ಗಣ ಸೆಟಿಯರು ಕೊಟ್ಟ ಅರ್ಥ ಕಾಟಿ ಗ ೭೫೧ (ಕಶಾಇ. IX-ii, ೪೬೫-೪೫ ; 1472) ; ಈ ದಃಶರದ ಗ್ರಾಮಿಣ ಅಣಾಉಡುವರು ಕೊಟ್ಟ ಬಿಡಾರುವಾರದ ಪತ್ರದ ಕ್ರಮವೆಂತೆಂದರೆ (ಕಶಾಇ. IX-ii. ೬೩೫-೦೫ ; 1554). **ಬಿಡಾರ್ವರ** : ತೊಳಹನ ಕಯ್ಯಲೂ ಬಿ[ಡಾ]ರ್ವ್ವರ ವಾಗ ಒಡಿವ [ಸುಗೆ] ಚಿತುವ ಬದಿರ ಗದ್ದೆಯು ಮೇಲಿಕ್ಕಿದ ಪಾಣ್ಯಗದ್ಯಾಣಂ (ಕಶಾಇ. VII. ೩೬೦-೦೪ ; 1140). [< ಬಿಡಾರ + ಆರುವಾರ]

**ಬಿಡಾರ್ವರ** 'ಬಿಡಾರುವಾರ' ನೋ.

**ಬಿಡಾಲ, ಬಿಡಾಳ** (ನಾ). ೧. ಬೆಕ್ಕು; ಮಾರ್ಜಾಲ : "ಮಾರ್ಜಾಲಂ ಬಿಡಾಲಂ . . . ಓತುವೆನೆ ಬೆಕ್ಕೆನಿಕ್ಕುಂ" (ಪಂಗರಾ. ೯೯-೦೦); ಆ ಕಾಗೆ ಸತ್ತು ಬಿಡಾಲನಾದುದಾ ಬಿಡಾಲಂ ಮುನ್ನಿನ ಕುಕ್ಕುಟನಂ ತಿಂದುದು (ಕಂಪಾಪು. ೦೫-೩೬ ಪ). ೨. ಕಣ್ಣುಗುಡ್ಡೆ. **ಬಿಡಾಳ** : ೧. ಬಿಡಾಳಕ್ಕಂ ಪಾಲ ಕಾಪನಿತ್ತವೊಲಾಯ್ತು (ಶಾರ್ಙ್ಗ. ೩-೦೦೫). [ಸಂ.]

**ಬಿಡಾಳ** 'ಬಿಡಾಲ' ನೋ.

**ಬಿಡಿ, ಬಿಡು₁** (ನಾ). ೧. ಒಂದು; ಒಂಟಿಯಾದುದು : 'ಬಿಡಿತನ', 'ಬಿಡಿಮುತ್ತು' ಪರಾ. ೨. ಪ್ರತ್ಯೇಕವಾದುದು; ಭಿನ್ನವಾದುದು; ಬೇರೆಯಾದುದು : ಚರಣಕಾಂಡಂಗಳ್ಗೆ ಬಿರಿಮುಗುಳ ಬಿಡಿಗಳಿಟ್ಟಳವಾದ ಪಾಯುವಟ್ಟಂಗಳನವರ್ಚಿಯುಂ (ಶಾಂತೀಕ್ವ. ೫-೦೨೬ ಪ); ಆಯ್ದುಕೊಂಡರೆ ಸಾಕು ಸಾವಿರ ಬಿಡಿಗಳಲೊಬ್ಬೊಬ್ಬರೊಂದೊಂದರಂತೆ ಸಂತೋಷಪಡುವನು (ಇಂಕಾಶ. ೬೦-೯೦). ೩. ಒಂದು ಊರಿನ ಹೆಸರು : ಅಸ್ವಯ ಸುಗ್ಗಯ್ಯನು ಬಿಡಿ ಪೊನ್ನಯ್ಯನುಂ ಅಲ್ಲಮ್ಮನುಂ ಐಯ್ಯರಜೋಗನುಂ ಇನ್ನಿನಿಬರುಂ ಸಾಕ್ಷಿಯಾಗೆ ಕೊಟ್ಟರ್ (ಎಕ. XI.ಕೂಕ್ಲಿ. ೩೦-೦೩; 964). **ಬಿಡು₂** : ೨. ' ಬಿಡುಗೆಲಸ', ' ಬಿಡುಮುತ್ತು ' 'ಬಿಡುವೆಸರ್', 'ಬಿಡುವೊನ್' ಪರಾ.

**ಬಿಡಿಬಿಡಿ** (ದ್ವಿರುಕ್ತಿ): ಬಿಡಿಬಿಡಿಯಾದ ಹಾಳೆಗಳನ್ನು ಒಟ್ಟಿಗೆ ಸೇರಿಸಿ ಕಟ್ಟಿದು (ಲೂ). [ದೇ.॥ ತಮಿ. ವಿಟ್; ಮಲ. ವಿಡು ; ತೆಲು. ವಿಡಿ]

**ಬಿಡಿಕಸಬಿ** (ನಾ). ಪ್ರತ್ಯೇಕವಾಗಿ ಕೆಲಸ ಮಾಡುವ ವ್ಯಕ್ತಿ : ಕೈಗಾರಿಕೆಗಳನ್ನೆಲ್ಲ ಬಿಡಿಕಸಬಿಗಳ ಅಡ್ಡಕಸಬಿಗಳ "ಕೈ" ತಪ್ಪಿಸಿ ದೊಡ್ಡ ಪ್ರಮಾಣದಲ್ಲಿ ಅದೇ ಕಸಬಿಗಳನ್ನು ಕೂಲಿಗೆ ಇಟ್ಟು ನಡೆಯಿಸಬಾರದೇಕೆ ? (ಮೂವಾರ. ೯೭). [ಬಿಡಿ + ಕಸಬಿ₂]

**ಬಿಡಿಕಾರು** (ನಾ). ಪ್ರತ್ಯೇಕವಾಗಿ ಮಳೆಯ ನೀರಿನಿಂದ ತೆಗೆದ ಫಸಲು (?) : ಉಳುಕೊಳುವ ಭೂಮಿಯಲು [ಬ]ಯಲು ಬಿತ್ತು ಬಿಡಕಃಡು ಮು ೫೦ × × × [ದ್ದ] ಬಿಡಿಕಾರು ಮಾ೦ ೨ (ಕಶಾಇ. ೦೯೩೯, ಕುಂಗಳೂರು. ೯೬೦-೦೩; 1329). [ ಬಿಡಿ + ಕಾರು₂ (< ಕಾರ್₂) ]

**ಬಿಡಿಕಾಸು** 'ಬಿಡಿಗಾಸು' ನೋ.

**ಬಿಡಿಕೆ** (ನಾ). ೧. ಬಿಡಬೇಕಾದುದು; ತ್ಯಾಜ್ಯ : ಒಂದು ಹೇಳಿಕೆಯಲ್ಲಿ ಅತ್ಯುಕ್ತಿಗಾಗಿ ಬಿಡಬೇಕಾದ ಭಾಗ; ಬಿಡಿಕೆ ; ಕಳೆತ ; ತ್ಯಾಜ್ಯಾಂಶ (Discount. ೩೦೬೩). ೨. ಬೇರೆಯಾಗುವುದು; ಬೇರ್ಪಡುವುದು. ೩. ಜಟ್ಟಿಕಾಳಗದಲ್ಲಿ ಒಂದು ಘಟ್ಟ,— ವರಸೆ : ಬಡದೆ ಬಿಗಿಗಳ ಬಿಡಿಸಿ ಕಳಚುವರು . . . ಅಡಿಮುಗುಚಿಯುಪ್ಪರಿಸಿ ಬಿನ್ನಣ ಬಿಡಿಕೆಗಳ ಬಂಧದಲಿ ಹೊಗಾಗಿದರುಭಯಪಟುಭಟರು (ಅಂಬಿಕಾ. ೦೩-೨೦).

[ಬಿಡು₁ + — ಇಕೆ]

**ಬಿಡಿಗಮ್ಮಟ** (ನಾ). ಪ್ರತ್ಯೇಕನಾದ ಕೆಲಸಕ್ಕೆ ಗೊತ್ತುಮಾಡಿರುವ ಟಂಕಸಾಲೆ (?) : ಉಣ್ಣಿಗೆಯ ಕಮ್ಮಟದಲು ತಿಂಗಳಿಗೆ ಸ ಒನ್ದು ಬಿಡಿಗಮ್ಮಟದಲು ತಿಂಗಳಿಗೆ ಹ ೧ (ಎಕ. XII. ಶಿರಾ. ೩೭-೨೦; ಸು. 1040). [ಬಿಡಿ + ಕಮ್ಮಟ]

**ಬಿಡಿಗಾಸು, ಬಿಡಿಕಾಸು** (ನಾ). ೧. (ಹಿಂದೆ ಬಳಕೆಯಲ್ಲಿದ್ದ) ತಾಮ್ರದಿಂದ ಮಾಡಿದ ಒಂದು ಅತಿ ಸಣ್ಣ ನಾಣ್ಯ; ಚಿಕ್ಕಾಸು.

೨. ಚಿಲ್ಲರೆಹಣ: ಪುಡಿಗಾಸು : ರಸೀತಿ ಕೊಡದೇ ಇದ್ದರೆ ಒಂದು ಬಡಿಗಾಸು ಬಿಚ್ಚಲು ಅವನು ಸಿದ್ಧನಿರಲಿಲ್ಲ (ಪ್ರಾರ್ಗಳ. ೬೯); ಅವರು ಕೊಡುವ ನಾಲ್ಕು ಬಡಿಗಾಸುಗಳ ಮೇಲೆ ಅವನು ಬದುಕಬೇಕಿತ್ತು (ಬಿಚಾಕ್ಕಾ. ೩೩). ಬಡಿಕಾಸು : ೨. ಕೆಲಸ ಮಾಡಿ ರೂಪಾಯಿ ಸಂಪಾದಿಸಬಹುದಾದ ಕಡೆ ಕೆಲಸ ಮಾಡದೆ ಬಡಿಕಾಸು ಬಂದರೂ ಅವನಿಗೆ ತೃಪ್ತಿ (ಹೋಅಕ್ಕು. ೬೩). [ ಬಡಿ + ಕಾಸು₂ ]

**ಬಡಿಗಾಳು** (ನಾ). ಒಂದಕ್ಕೊಂದು ಅಂಟಿಕೊಂಡಿರದೆ ಬೇರೆಬೇರೆ ಯಾಗಿರುವ ಕಾಳು : ಬಡಿಗಾಳು ಬದ್ಧ; ಇಡಿಹಣ್ಣು ಸಿದ್ಧ, ಬಯಲಲ್ಲಿ ಇರುವ ಬುದ್ಧ (ಅಳಉ. ೯೨೬-೯). [ಬಡಿ + ಕಾಳು₂ ( < ಕಾಟ್ಟು₂)]

**ಬಡಿತನ** (ನಾ). ಏಕಾಂತತೆ; ಒಂಟಿತನ : ಬಡಿತನದ ಬಿಕ್ಕಟ್ಟಿನಲ್ಲಿ ಇಡಿತನದ ಒಕ್ಕಟ್ಟು ಹುಟ್ಟಿಸುವ ಹುಟ್ಟೇ ಬಳಗ (ಒಕಾಮುಂ. ೬೩).

[ಬಡಿ + – ತನ]

**ಬಡಿತೆ** 'ಬ್ರಿದುತೆ' ನೋ.

**ಬಡಿದರ** (ನಾ). ಸಗಟುಮಾರಾಟದವರಿಂದ ಪದಾರ್ಥಗಳನ್ನು ತಂದು ಬಿಡಿಬಿಡಿಯಾಗಿ ಮಾರುವಾಗ ಹಾಕುವ ಬೆಲೆ : ಬಡಿದರದ ಅಂಗಡಿಯ ಮಾತು ಬೇರೆ, ಈ ಅಂಗಡಿಕಾರನು ತನ್ನ ಸರಕುಗಳನ್ನು ದೊರಕಿಸುವುದು ಇಡಿಯ ದರದ ಅಂಗಡಿಗಳಿಂದ . . . ಪೂರೈಸುವದು – ಪುಡಿಗಿರಾಕಿಗಳಿಗೆ (ತಕ್ಕಿ. ೨೨). [ ಬಡಿ + ದರ₃ ]

**ಬಡಿದಳ** (ನಾ). ಒಂದಕ್ಕೊಂದು ಸೇರಿಕೊಂಡಿರದೆ ವಿರಳವಾಗಿರುವ ಪಕಳೆ : ಹೂವುಗಳು ಬಡಿದಳಗಳಿಂದ ಕೂಡಿದ್ದರೆ ಅವುಗಳನ್ನು ಬಡಿದಳದ ಹೂವುಗಳೆಂದು (Polypetalous) ಕರೆಯುತ್ತಾರೆ (ಸಸ್ಯಶಾ. ೫೭).

[ಬಡಿ + ದಳ₂ ( =ದಲ)]

**ಬಡಿದಿವಸ** (ನಾ). ಯಾವ ಬಗೆಯ ಉತ್ಸವವಾಗಲಿ, ವಿಶೇಷವಾಗಲಿ ಇಲ್ಲದ ದಿನ : ಉಡುಪಿ ಶ್ರೀಕೃಷ್ಣನ್ನ ಬಡಿದಿವಸದಾಗೆ ತೋರಿಸಿದಿರಿ (ಹಹಿಕ್ಕೊಂಡ. ೨೨). [ಬಡಿ + ದಿವಸ]

**ಬಡಿನುಡಿ** (ನಾ). ಪ್ರತಿಯೊಂದು ವಚನವೂ ಬೇರೆ ಬೇರೆಯಾಗಿಯೆ ಉಪಯೋಗವಾಗುವಂತೆ ರಚಿತವಾಗಿರುವ ಪದ, ವಚನ ಇತ್ಯಾದಿ: ಬಡಿನುಡಿಯ ಬಂಟ, ಸತ್ಯವಾದಿ, ಸರ್ವಜ್ಞಕವಿಗೆ ಗಂಗಪ್ಪ ಮನಸೋತಿ ದ್ದಾರೆ (ಜಾಪಜಾ. ೦೫೫). [ಬಡಿ + ನುಡಿ₂]

**ಬಡಿಬಿಲ್** (ನಾ). ಒಂದು ಬಗೆಯ ಜೂಜಾಟ : ನೆತ್ತ ಚದುರಂಗ ವಗಡೆಯು ಚಿತ್ರಾಯಂಬೈದುದಾಯ ಬಡಿಬಿಲ್ ಸೊಗುಳಿಯುತ್ತಮ ರಾದರು ಅಡಲ್ವಿತ್ತಲೆಯುಹ ಭಂಗ ಬಪ್ಪನೆಂಬುದು ಪುಸಿಯೇಂ (ಚೀತಾ. ೬೦೦). [ ? ]

**ಬಡಿಬೇಸಟಿಜು** (ನಾ). ಅನಾದರ; ಅಲಕ್ಷ್ಯ; ಉದಾಸೀನ : ಸೋರ್ಕಿ ನರ್ಕಿನ ಬಿಡಿಬೇಸಟಿಂ ನೆರೆಯೊಳೆಭವರ್ವಣದೊಳ್ಪರ್ ಮುನಿಗಳು ಲೆಕ್ಕಿಸದೆ ತಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾವಚಕ್ಕ. ೦೪೬-೨೦).

[ಬಡಿ + ಬೇಸಟು₂]

**ಬಡಿಮುತ್ತು**, ಬಿಡುಮುತ್ತು (ನಾ). ಪೋಣಿಸದೆ ಬಿಡಿಯಾಗಿರುವ ಮುತ್ತು; ಒಂಟಿಮುತ್ತು : ಕ್ಷೀರಸಾಗರದಲ್ಲಿ ನಿರುತ ಬಿಡುಮುತ್ತಿ ನಕ್ಷತೆಯ ಸುರಿಸಿದವೋಲು (ಪಚಚೋ. ೦೦-೫೫). ಬಿಡುಮುತ್ತು: ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಮುವ ಬೆಳಗು ಪೊಳೆವ ದುಗುಲದ ಪಸೆಯೊಳ್ ತೊಡರ್ದಿರೆ ಪೆಱತಲ್ಲದೆ ಪಾಲ್ಗಡಲೆನಿಸಿದುದು (ಅಂತ್ರ. ೬-೦೬) ; ಕಾವಿಲ್ಲದ ಕರ್ನೆಯ್ದಿಲ ಪೂವಿಂ ಬಿಡುಮುತ್ತು ಬಡದೆ ಬಿಡುತಂದಪುವೆಂಬೀ ವಿಸ್ಮಯಮಂ ಮಾಡಿದುವಾ ವನಿತೆಯ ನೀಳ್ದ ಕಣ್ಗಳುಂ ಕಣ್ಬನಿಯುಂ (ಋಕ್ಷತ್ರ. ೪-೦೬) ; ಬಿಡುಮುತ್ತಿನ ಮಣಿಗದ್ದುಗೆಯೊಳಾಗ ಕಡುನೀಲಿ ಕಣ್ಗೊಪ್ಪಿದಳು (ಶ್ರೀಚಾ೦. ೨-೦೯). [ಬಡಿ + ಮುತ್ತು₃]

**ಬಡಿಮೊಳೆ** (ನಾ). (ಮುದ್ರಣದಲ್ಲಿ ಬಳಸುವ) ಬಿಡಿಬಿಡಿಯಾದ ಮೊಳೆ, – ಅಚ್ಚು : ಸರ್ವಸಮರ್ಪಕವಾಗಿ ಬಿಡಿಮೊಳೆಗಳಿಂದ ಮುದ್ರಿಸು ವುದನ್ನು ಕಂಡುಹಿಡಿದವನು ಗೂಟೆನ್ಬರ್ಗ್ (ಮುದ್ರ ೪. ೯). [ಬಿಡಿ+ಮೊಳೆ₂]

**ಬಡಿಯ**₁ 'ಬಿಡೆಯ₂' ನೋ.

**ಬಡಿಯ**₂ 'ವಿಡಾಯ' ನೋ.

**ಬಡಿಯುತ್ತರ** (ನಾ). ಸಂಬಂಧವಿಲ್ಲದ ಮಾತು: ಅಸಂಬದ್ಧವಾದ ಮಾತು : ದಾನವೇಶ ರೋಷದಿಂ ಬಿಡಯವಿಲ್ಲದೆ ಸಭಾಂತರದಿ ಬಿಡಿ ಯುತ್ತರವ ನುಡಿಯಬಹುದೇ (ಪಪಪೋ. ೨೭-೩೩). [ಬಿಡಿ + ಉತ್ತರ]

**ಬಡಿಸರಳು** (ನಾ). ಒಂದೊಂದಾಗಿ ಬಿಟ್ಟ ಅನೇಕಬಾಣಗಳ ವರ್ಗ : ಕಡುಗಿ ನೂಕುವ ಕದನರಾಗಿಗಳೊಡನೆ ಕಾದುವ ಪಾರ್ಥತನಯನ ಬಿಡಿ ಸರಳು ಬೀಱಿದವು ರಮಣರನವರವಧುಗಳಿಗೆ (ಕುವ್ಯಾದ್ರೋ. ೫-೬೬).

[ಬಿಡಿ + ಸರಳು₁ ( < ಸರಲ್₁)]

**ಬಡಿಸು**, ವಿಡಿಸು (ಕ್ರಿ). ೧. ಕಳಚು ; ಸಡಿಲಿಸು; ಕಳೆ : ನಿನ್ನ ಪಡ ಗೆಯ್ಗ[ಟ್ಟ]ಂ ಶರದಿಂ ಬಿಡಿಸಿದನಲ್ಲದೆ ಸರಿತ್ಸುತಂ ಬಸ್ಪವಿನ್ನವೆಂಬುವು ಮೊಳವೇ (ಶಂಕಶಾ. ೬-೫೩) ; ವಕುಳದ್ರುಮಕಂ ಮಾಲತಿಗಂ ಮದುವೆ ಮಾಡಿದೆಂ ಬಿಡಿಸವರ್ಕೆ ನೀಂ ಕಂಕಣಮಂ (ಕಾರಂಶಾ. ೫೯೩); ಈ ಕಟ್ಟುಗಳಂ ಬೇಗಂ ಬಿಡಿಸೆಂದು [ಪಾಠಾಂ. ಬಿಡೆಂದು] ಬಿಡಿಸಿಕೊಂಡು ಪೋದಳ್ (ಶಂಕಶಂ. ೬೬-೦೬). ೨. ಹೋಗಲಾಡಿಸು; ನಿವಾರಿಸು: ನುಡಿಸಿದನೆನ್ನಂ ನಲ್ಲಂ ಬಿಡಿಸಿ ದನೆನ್ನಂತರಂಗದನುತಾಪವಮಂ (ಶಶರಾ. ೩-೨೩೫); ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ . . . ಬಲ್ಲೆಂ (ಶಂಕಶಾ. ೫-೯೩ ಕ); ಎನ್ನ ಸುತ್ತಿದ ಮಾಯಾಪ್ರಪಂಚವ ಬಿಡಿಸಾ ನಿಮ್ಮ ಧರ್ಮ (ಬಸವಾರಿ. ೩. ೦೯-೨೯); ಎನ್ನ ಗರ್ವಾಂಧಕಾರವ ಬಿಡಿಸಿ ರಕ್ಷಿಸು (ಪುರಂದ. ೨-೯ ಪಲ್ಲ). ೩. ಬಿಡುಗಡೆ ಮಾಡು ; ವಿಮೋಚನೆಗೊಳಿಸು ; ಬಂಧಮುಕ್ತವನ್ನಾಗಿ ಮಾಡು : ಅಂತಪ್ಪೊಡೆ ನಿನ್ನಂ ಕಾವ ಗಂಧರ್ವರೆ ಬಿಡಿಸುಗೆ ಪೋಗೆಂದು ಪೊಯ್ದಂ ದುರಾತ್ಮಂ (ಶಂಕಶಾ. ೯-೬೦) ; ಈ ಕರುಣಿ ಸಾವಿರಹೊನ್ನನಾದಡೆ ಕೊಟ್ಟು ಕುಱಿಯಂ ಬಿಡಿಸದಿರನು (ಬಸವ್ರ. ೨೮-೦೬); ಖೂಳ ಬಿಡಿಸಾ ಭೀಮಸೇನನ ತೋಳುವಲೆಯೊಳಿ ಸಿಕ್ಕಿದನು ಭೂಪಾಲನು (ಕುವ್ಯಾ೫. ೦೩-೫೮). ೪. ಅಗಲಿಸು; ಬೇರ್ಪಡಿಸು; ಪ್ರತ್ಯೇಕಿಸು : ಬಿಡಿಸಿ ಭುಜಂಗಿಯ ತಟ್ಟಂ ಒಡಿದುಯ್ವಂತೆಳೆಯ ಮಲಯಜಾತಮನಳಿಪಿಂ ತೊವರ್ದಾ ಖಚರಿಯ ತಟ್ಟಂ ಬಿಡಿಸಿ ನೃಪಾತ್ಮಜನನೊರ್ವನುಯ್ದಂ ಖಚರಂ (ಅರ್ಜನ ೬-೯); ಬಲಿದ ಮುಳಿಸಂ ತಿಳುಹಲಿಕೆಯುಮ್ಮಳವಿಯಲ್ಲಿನು ತಾತ್ಮಜನ ಕೈಗಳನೆರಡನೊಯ್ಯನೆ ಬಿಡಿಸಿ (ಬಸವ್ರ. ೪೬-೨೩). ೫. ತೆಗೆದು ಹಾಕು; ವಜಾ ಮಾಡು : "ನಿಮ್ಮ ಅಗಸನನ್ನು ಬಿಡಿಸಿ ನೋಡಿರಿ" ಎಂದು ನಾನು ಸಲಹೆ ಮಾಡಿದೆ (ದೀಕ್ಷ್ಯ. ೨೬). ೬. ಕೀಳು; ಕಿತ್ತು ಹಾಕು : ಬಿಱುಗಾಳಿಂಗೆ ಕಿದಱಿರ್ಪಸಿಯ ಹೂಗಳನು ಬಿಡಿಸದೆ . . . ನವಪರಿಮಳದ ಬಿರಿಮುಗುಳ್ಗಳನವಿಕಳಾತ್ಮನು ಸೆಜ್ಜೆದುಂಬಲು ತವಕದಿಂ ತವೆ ಕೊಯ್ದುಕೊಂಬು (ಬಸವ್ರ. ೨೨-೯); ಅದನ್ನು ಬಿಡಿಸಿ, ತಂದು ಆರಿಸಿ ಕಾಳು ಬೇರೆ ಮಾಡುತ್ತಾರೆ (ಮುಂಂಬಯ. ೪-೨೬). ೭. ಕತ್ತರಿಸು; ಕಡಿ; ಛೇದಿಸು: ದುರುಳ ನುಡಿದನ ನಾಲಗೆಯ ನಿಡುಸೆಳೆಯ ಬಿಡಿಸುವೆ (ಕುವ್ಯಾ೪. ೦೨-೪೦); ನಿನ್ನ ಗಂಟಲ ಬಳಿಯ ಬಿಡಿಸುವ ಮೃತ್ಯುವಿದೆ ನೋಡಿತ್ತ ತಿರುಗು (ತೊರರಾ. ೦-೦೦-೦೩); ಮುಳಿದು ಕೊಂಡೊಯ್ದೊಡೆ ಜವನ ಗಂಟಲ ಬಳಿಯ ಬಿಡಿಸುವೆಸು (ಜೈಮಿನಿ. ೨೭-೨೨). ೮. ಲೆಕ್ಕ, ಒಗಟು ಮುಂತಾದುವುಗಳಲ್ಲಿಯ ಸಮಸ್ಯೆಗೆ ಉತ್ತರವನ್ನು ಕಂಡುಹಿಡಿ,– ಸಮಸ್ಯೆಯನ್ನು ಬಗೆಹರಿಸು : ನೀವಿಕ್ಕಿದ ತೊಡಕ ಬಿಡಿಸಬಾರದು ನೀ ಬಿಡಿಸಿದ ತೊಡಕನಿಕ್ಕಬಾರದು (ಸಿದ್ಧ ೪. ೪. ೦೦೬-೩೫೫); ಸಮಗಿದರಿದರಿದು ನಮ್ಮಳವಲ್ಲ ಆಸುರದ ತೊಡಕಿದಂ ಬಿಡಿಸ ಬಲ್ಲವರಿಲ್ಲ (ತಿರುಳ. ದೀ. ೨೯-೮);

ಪರೀಕ್ಷೆಯಲ್ಲಿ ಎಲ್ಲ ವಿಷಯಗಳನ್ನು ಚೆನ್ನಾಗಿ ಬಿಡಿಸಿದ್ದನು (ಬಯಂಕ. ೬೬). ೯. (ಹಾಸುಗೆ, ಚಾಪೆ, ಬಟ್ಟೆ ಮೊದಲಾದುವನ್ನು) ಹಾಸು ; ಹರಡು ; ಹರವು : ಹಂಸಾವಳಿ ಗಜಾವಳಿ ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ [ಚೆ]ಂಪದೊಳಿರಿಸಿ ತರತರದಿಂ ಬಿಡಿಸಿ (ಜಗ. ೬-೦೩); ಬಿಡಿಸುತ್ತುಂ ಬೆಳ್ಪುರವಂ . . . ಸಡಿಲಿಸು ಘಾಸಮನೆನುತುಗ್ಗಡದಿಂ ಮುತ್ತಿದುದು ಪುಲ್ಲೆಯಂ ಭಿಲ್ಲಾಘಂ (ಉದ್ಭಟ. ೨-೬೦). ೧೦. (ಚಿತ್ರ, ರಂಗವಲ್ಲಿ ಮುಂತಾದುವುಗಳನ್ನು) ಬರೆ ; ರೇಖಿಸು ; ಚಿತ್ರಿಸು : ಆಗಿನ ಕಾಲದಲ್ಲಿ ಚೀನಿಯರು . . . ಹೂ, ಹಕ್ಕಿ, ನಿಸರ್ಗದ ದೃಶ್ಯ ಮೊದಲಾದುವನ್ನು ಬಿಡಿಸುತಿದ್ದರು (ಜಾಂಶ್ರ. II, ೬೮೦); ಚಿತ್ರ ಬಿಡಿಸುವುದು ಮಕ್ಕಳಿಗೆ ಬಹು ಪ್ರಿಯವಾದ ಒಂದು ಹವ್ಯಾಸ (ಕಶಕೋ. VII. ೩೯೩). ೧೧. ಕೊರೆ ; ಕಂಡರಿಸು ; ಕೆತ್ತು : ಅಲ್ಲಿ ನಿತ್ಯಮಹ ಮೆಂಬುದು . . . ಭಕ್ತಿಪೂರ್ವಕದಿಂ ಶಾಸನಂ ಬಿಡಿಸುವುದುಂ ಮುನಿಜನಂಗಳಂ ಪೂಜಿಸುವುದುಮಕ್ಕುಂ (ಅಪು. ೦೨-೦ ವ); ಇಷ್ಟನ್ನೂ ಅಭಿನ್ನಕಲ್ಲಿನಲ್ಲಿ ಕೆತ್ತಿ ಸುತ್ತಲೂ ಅಂಚಿನಲ್ಲಿ ಪ್ರಭಾವಳಿ ಬಿಡಿಸಿದೆ (ಶೋಕರು. ೯). ೧೨. (ಅತಿಥಿಗಳು) ಬೀಡು ಬಿಡುವಂತೆ ಮಾಡು ; ತಂಗಲು ಅನುವು ಮಾಡಿಕೊಡು ; ವಸತಿಗೊಳಿಸು : ಗಂಗಾಸಿಂಧುಮಧ್ಯಕ್ಷಿತಿಪತಿಗಳುಮಿಾ ಠಾಣದೊಳ್ ಬಂದು ಕಾಣ್ಬರ್ ಪಲರೆಂದೆಂತಲ್ಲಿ ಚೆಲ್ವಾಗಿರೆ ಬಿಡಿಸಿದನುರ್ವೀಶ್ವರಂ ತನ್ನ ಬೀಡಂ (ಆಪು. ೦೩-೨೦); ಅರಮನೆಯೊಳ ವರವರ ಹವಣಾದರಸುಗಳ ನೆಲೆ ಬಿಡಿಸಿ ವಾಣಿಜವರನು ನಾಂದೀಮುಖದ ಬಳಿಕೊಂದಿಸಿದನೊಲವಿನಲಿ (ಜೀವಂಕ. ೭-೪೪); ಪೊಡೆಸು ಭೇರಿಯನಿಂದೆ ನಡೆಸು ಮತ್ಸ್ಯನ್ಯಮಂ ಬಿಡಿಸು ಪಾಳೆಯವನು (ಕಂಪು. ೪೭-೨೨). ೧೩. ನೆಲೆಗೊಳಿಸು ; ಇರಿಸು ; ಇಡು : ಅಲ್ಲಿ ಜಲಕೇಳಿಯಾಡುವ ಗಾಡಿಕಾರ್ತಿಯರಂ ಕಾಡಲೆಂದೊಕ್ಕಿಗಳಂ ತಂದು ಬಿಡಿಸಿಯವರ್ಕೆ ಪಾಲನೆಲೆದು ಸಡೆಪುತಿರ್ಪನ್ನೆಗಂ (ಹಂಕಹಂ. ೧೨೩-೦೯) ; ಆ ಸುರನರ ಭುಜಂಗಮರಿತ್ತ . . . ವಸ್ತುಗಳ ಸರಯುವಿನ ತೀರದಲಿ ಯೋಜನವೆರಡ ಅಳತೆಯ ವಿಶ್ವಕರ್ಮೋದ್ಧರಣರಮ್ಯಾಗಾರದಲಿ ಬಿಡಿಸಿದನು ಭೂಪಾಲ (ತೊರರಾ. ೦-೭-೩). ೧೪. ಸಂಬಂಧವನ್ನು ಕಳೆದುಕೊಳ್ಳು ; ಅಗಲು : ಅರಸನುಮಂ ಸ್ವಜನಪರಿಜನಬಂಧುವರ್ಗಮುಮಂ ಬಿಡಿಸಿ ಶ್ರೀವರ್ಮರೆಂಬಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು (ವಡ್ಡಾರಾ. ೬೪-೨೮); ಎನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಖೇಚರಂ ಬಿಡಿಸಿದನಾಪ್ತರಂ ಬಿಡಿಸು ವಂತಿರೆ ಮೋಹದ ಬಳ್ಳಿವಳ್ಳಿಯುಂ (ಆದಿಪು. ೨-೩೦) ; ಗಂಧರ್ವರಾಜ ನಂದನೆಯಿಂ ತನ್ನನೆಂತಾನುಂ ಬಿಡಿಸಿ ಬೀಟ್ಕೊಂಡು ನಿಜಸ್ಕಂಧಾವಾರಕ್ಕೆ ಪೋಗಲೆಂದು ತದೀಯಭವನಮಂ ಪೊರಮಟ್ಟು (ಕಾದಂಬ. ೨೩೩). ೧೫. ಸಡಿಲಗೊಳಿಸು ; ಸುಗಮವಾಗಿಸು : ಕೈದುಕಾರರ ಬಿಗುಹು ಘನ ನೀ ಹೊಯ್ದು ಮೊದಲಲಿ ಬಿಡಿಸು ಬಳಿಕಾನೈದಿ ನಿನ್ನನು ಕೂಡಿಕೊಂಬೆವು (ಕುವ್ಯಾದ್ರೋ. ೪-೪೪) ; ಮಾಧವನ ಸಮ್ಮುಖವ ಬಿಡಿಸುವ ಸುದಂಡಧಾರಿಗಳು ಪೊಲಿದುಗ್ಗಡಿಸಲು (ವವಮೋ. ೦೦-೦೬). ೧೬. (ಸಿನಿಮಾ, ನಾಟಕ ಮುಂತಾದುವಕ್ಕೆ) ಪುಕ್ಕಟೆಯಾಗಿ ಪ್ರವೇಶಿಸಲು ಅವಕಾಶವಾಗುವಂತೆ ಮಾಡು : ಇವತ್ತು ನಮ್ಮನ್ನು ಬಿಡಿಸುತ್ತೀರಾ ನಾಟಕಕ್ಕೆ ? (ವಾಕೋಂ. ೦೬೨). ೧೭. ನೀಡು ; ಕೊಡು : ಬಳಿಯಕ್ಕಿಯುಂ ಸೊಲ್ಲಗೆಯುಂ ಬಿಟ್ಟಿಯುಂನುತ್ತಪ್ಪಮುಮನೆಲ್ಲಾ ಕಾಲಕ್ಕಂ ಸರ್ವ್ವಬಾಧಾಪರಿಹಾರವಾಗಿ ಬಿಡಿಸಿದರ್ (ಎಕ. III, ಶ್ರೀರಂಗ. ೦೪೬-೦೪ ; ಸು. ೯೦೦?) ; ಶ್ರೀಮತ್ತ[ದ್ಮ]ಬ್ಬರಸಿಯತ್ತರ್ವಮ್ಮ ಬಸದಿಗೆ ದಾನಸಾಲೆಗೆ ಬಿಡಿಸೆ (ಸೌಇಇ. XI—i, ೩೮-೭ ; 950). ೧೮. ಚಿತ್ರಿಸಿ, ಕಸೂತಿಮಾಡು : ಕೌಶೇಯ — ತೆರಳೆಯ ಹುಟು ಮುಕುಲಾಕಾರದಿಂದ ಮಾಡಿದುದ ಬಿಡಿಸಿ ನೆಯ್ದ ಸೀರೆ (ಶಾಶರಾ. ೬) **ವಿಡಿಸು** : ೧೭. ಇಗ್ಗಲಿಯೂರಾ ಗವತೆಯ ವಿಡಿಸಿದರ್ (ವ್ಯಆರ. ೦೯೩೦. ೪೦-೬ ; ೩ವಯ ೯೬).

**ಬಿಡಿಸಿ ನೋಡು** = ವಿಶ್ಲೇಷಿಸು ; ವಿವರವಾಗಿ ಪರಿಶೀಲಿಸು : ಅದರ ಇತಿಹಾಸವನ್ನು ನೋಡುವುದಕ್ಕೆ ಮುಂಚೆ ನಿಟ್ಸೂರನ್ನು ಬಿಡಿಸಿ ನೋಡುವ (ಅಟ್ಟೆಶಾಂ. ೨). [ಬಿಡು₁ + – ಇಸು₃]

**ಬಿಡಿಹೂ, ಬಿಡಿಹೂವು** (ನಾ). ಮಾಲೆಯಾಗಿ ಕಟ್ಟದಿರುವ ಹೂವು ; ಪ್ರತ್ಯೇಕಪ್ರತ್ಯೇಕವಾಗಿರುವ ಹೂವು : ಸ್ವಲ್ಪ ಬಿಡಿಹೂಗಳನ್ನು ಬೇರೆ ತೆಗೆದಿಡು (ಕೂತ). **ಬಿಡಿಹೂವು** : ಬಿಡಿಹೂವಾದರೂ ಮುಡಿಗಿ ಮುಡಿದುಕೊಳ್ಳಬಾರದೇ ? (ಗಾದೆ.) [ಬಿಡಿ + ಹೂ₂ (<ಪುಷ್ಪ)]

**ಬಿಡಿಹೂವು** 'ಬಿಡಿಹೂ' ನೋ.

**ಬಿಡಿಹೋರೆ** (ನಾ). ಒಬ್ಬನೇ ಮಾಡುವ ಕೆಲಸ, —ವೃತ್ತಿ, —ಕಸಬು : ಕೈಕಸಬುಗಾರರು ತಮ್ಮ ಬಿಡಿಹೋರೆಗಳನ್ನು ಬಿಟ್ಟು ಕಾರಖಾನೆ, ಗಿರಣಿ ಮುಂತಾದ ಪ್ರಚಂಡಸಂಘಟನೆಯ ಒಳಕೀಲುಗಳಾಗಿ ದುಡಿಯತೊಡಗುವರು (ಮಾಜಾರ. ೧೦೦). [ಬಿಡಿ + ಹೋರೆ₂]

**ಬಿಡು₁, ಎಡು** (ಕ್ರಿ). ಬಿಟ್ಟ, ವಿಟ್ಟ₁ (ಭೂತಕೃ). ಬಿಟ್ಟು₁ (ಭೂತನ್ಯೂ). ೧. ತೊರೆ ; ತ್ಯಜಿಸು : ಪರಲೋಕವಿಲ್ಲದಂದು ತಲ್ಲೋಕಸುಖಾನುಭಾವನಾಪೇಕ್ಷೆಯಿನೈಹಿಕಸುಖವಿಮುಖನಾಗಿ ಶರೀರಾರ್ಥವ್ಯಯಂ ಮಾಡುವಾತಂ ಕಯ್ಯದಂ ಬಿಟ್ಟು ಕಾಲದರ್ಕೆಜಗುವಾತನಂ ಪೋಲ್ಕುಂ (ಅದಿತ್ಯ. ೨-೯ ವ) ; ಪಗೆ ಸಮಿಾಪವಾದೆಡೆಯಲ್ಲಿರಲಾಗದು ಯುದ್ಧಂ ಮಾಡಲಾಗದು ಆ ದೇಶಮಂ ಬಿಟ್ಟು ಪೋಪುದು (ಹಂಕಹಂ. ೩೯-೨೩); ಪದ್ಮವ್ಯೂಹದಲಿ ಹೊಕ್ಕಾಳು ಮರಳಿದಡಸ್ತ್ರವಿದ್ಯಾಭಾಳಲೋಚನನೆಂಬ ಬಿರುದನು ಬಿಟ್ಟೆ ನಾನು (ಕುವ್ಯಾದ್ರೋ. ೪-೯). ೨. ಅಡ್ಡಿಯಿಲ್ಲದಿರು; ತಡೆಯಿಲ್ಲದಿರು: ಎಲೆಲೆ ದೊರೆ ಸಿಕ್ಕಿದನು ಸಿಕ್ಕಿದನಳಿದುದೋ ದ್ರೌಪದಿಯ ಸಿರಿಯೆಂಬುಲುಹ ಕೇಳುತ ಪಾರ್ಥ ಬಂದನು ಬಿಟ್ಟ ಸೂಠಿಯಲಿ (ಕುವ್ಯಾದ್ರೋ. ೨-೩). ೩. ಕಟ್ಟಿನಿಂದ ಸಡಿಲಗೊಳಿಸು ; ಹಿಡಿತದಿಂದ ಕಳಚು ; ವಿಮೋಚನೆಗೊಳಿಸು ; ಬಿಡುಗಡೆ ಮಾಡು : "ಬಿಡು-ವಿಮೋಚನೇ" (ಶಮದ); ಒಂದಂ ಕ್ರಿಯಾವಿಶೇಷಣಮಂ ದೊರೆಕೊಳಿಸಯ್ಯು ಪೇಳದದಟೊಳೆ ಪೆಜತಂ ಸಂಧಿಸಿ ಪೇಟ್ದೊಡೆ ಕೃತಿಯೊಳಗೊಂದಿರದೆರಡಕ್ಕೆ ಬಿಟ್ಟ ಕಬಾವಂ ಪೋಲ್ಗುಂ (ಕಾರಾ. ೨-೯); ಕೊಂದೊಡೇವಂದಪುದೆಂದು ದುರ್ಯೋಧನನಲ್ಲಿಗೆ ಪೋಗೆಂದು ಕಟ್ಟಿದ ಕಟ್ಟುಗಳಂ ಬಿಟ್ಟು ಕಳೆದೊಡೆ ಜಯದ್ರಥಂ ಸಿಗ್ಗಾಗಿ (ಪಂಪಭಾ. ೭-೬೨ ವ) ; ತಂಗಿನ ಪೊಸನೇಣೆಂದದಬಿಂದಿಂಗಳ್ವರಮಡಸಿ ಕಂಬಿಯಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ರರ್ಜಾವ್ಯ. ೨-೯೨). ೪. ಕಳಚಿಕೊಳ್ಳು; ಬೇರೆಯಾಗು; ಉಚ್ಚು; ಸಡಿಲವಾಗು: ಮಾಯಾಪಾಶ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲಸಂಗಮದೇವನೆಂತೊಲಿವನಯ್ಯಾ (ಬಸವ. ೨೦೨); ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು ಹೇಳಿನಲು ರಂಜಿಸಿತು ದೀಪಾಳಿ (ಕುವ್ಯಾದ್ರೋ. ೦೫-೩೪). ೫. (ಉಸಿರು ಮುಂತಾದುವನ್ನು) ಹೊರಹಾಕು; ಸೂಸು; ಹೊರಹೊಮ್ಮಿಸು : ನಾಸಿಕದಿ ಬಿಡುವಾನಿಲಂ ರೇಚಕಮೆನಿಕ್ಕು (ಮುಂಗರಾ. ೦೬-೦೪); ಕುಲಶೈಲಂಗಳಾಸಱಿಂ ಕಂದರದ ಮೊಗದಿಂದೆ ಬಿಡುವ ಬಿಸುಸುಯ್ಯಲರ್ ಬಂದಪ್ಪುದೆನಲ್ಕೆ ರ್‍ಝಳದಿಂ ಬಿಡದೆ ಬೀಸುತಿರ್ದುದು ಗಾಳಿ ಬೇಸಗೆಯೊಳು (ಕ್ಷೈಜಾಶ. ೦೫-೩). ೬. (ನಾಯಿಯನ್ನು) ಮೇಲೆ ನುಗ್ಗಿಸು, – ಛೂ ಬಿಡು : ಸೀಳ್ನಾಯ್ಗಳಂ ಬಿಡು ಕೋಲಂ ತುಡು (ಕಾದಂಪೂ. ೦೬೦) ; ಒಂದು ಮೊಲಕ್ಕೆ ನಾಯನೊಂಬತ್ತ ಬಿಟ್ಟಂತೆ ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ (ಬಸವ. ೩೬). ೭. ತೆಗೆ ; ತೆರೆ; ಅಗಲಿಸು : ಅಂತು ಕಾದೆ ವಿದ್ವಿಷ್ಟವಿದ್ರಾವಣನ ಮೊನೆಯುಂಬಿನಂಬೇಱಿಂಗಳ್ಕಿ . . . ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ

(ಶಂಕರಾ. ೩-೯೮ ವ) ; ಬಿಡುಗುಂ ಬಾಯುಂ ನೆಲದೊಳ್ ಪಡುಗುಂ . . . ವಸುಭೂತಿ ಧೈರ್ಯವಿಲ್ಲದೆ ಮನದೊಳ್ (ರತ್ನಾಕ. ೦-೦೫೭): ಬಿಟ್ಟ ಕಣ್ಣ ಬಿಗಿದ ಹುಬ್ಬ ಬ್ರಹ್ಮರಂಧ್ರದಲ್ಲಿ ಕಟ್ಟ ಗುಡಿಯ ಕೂಡಲಸಂಗಮದೇವ ಹಿಡಿವಚ್ಚದ (ಬಸವ. ೬೧೪). ೮. ವಾಹನ, ಕುದುರೆ ಮುಂತಾದುವನ್ನು ಓಡಿಸು, ನಡೆಸು : ತನ್ನ ಸಂಗಡದವರುಂ ಪರಿಗ್ರಹಮುಮೆಯ್ತರಲಾಱದೆ ಒಂದೆ ನಿಲ್ವಿನಂ ಕಡುಪಿನೊಳಂದು ಬಿಟ್ಟನತಿಶೀಘ್ರದೆ ವಾಜಿಯನಾ ನೃಪೋತ್ತಮಂ (ಕಾದಂಪೂ. ೬೨೦); ನೀನಾ ಪಶುವಂ ಬಿಡುವ ಪೊಡೆವ ಕಳಕಳಮಂ ಕೇಳ್ದು ಪಾರ್ವನೆಟ್ಟಿತ್ತೊಡೆಸ್ಸ ಕಾರ್ಯಮಂ ಕಿಡುಗುಂ (ಶಂತಶಂ. ೨೪೭-೧೪): ಬಿಡು ರಥವನಾ ದ್ರೋಣನಿದಿರಲಿ (ಕುಮಾರವ್ಯಾ. ೨-೩೩). ೯. (ಬಾಣ, ಈಟಿ ಮುಂತಾದುವನ್ನು) ಎಸೆ ; ಹಾಕು ; ಪ್ರಯೋಗಿಸು : ಮತ್ತಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ಯೆಯೊಳ್ (ಎಇ. XIII, ೩೩೨-೪೦ ; ೯೨೯) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ ಧನುರ್ಗುಣದಿಂದಂ ಬಿಡುವಲ್ಲಿ ನೂಱು (ಗದಾಯು. ೩-೩) ; ತುಡುವಾಗಳೊಂದು ಬಿಲ್ಲಿಂ ಬಿಡುವಾಗಳು ಲಕ್ಕ . . . ಅಪ್ಪುವು ಗಡ ಪಾರ್ಥನ ಬಾಣವೆಂಬರ್ (ಸವುಶ. ೦೦-೦೬೦). ೧೦. ಉಳಿ ; ಹೊರತು ಪಡಿಸು : ಭಟ್ಟರೆ ಕೇಳಿಂ ನಿಮ್ಮಂ ಬಿಟ್ಟು ಕಲಕರ್ಣಲಜರೊಳರೆ (ಧರ್ಮಾಮೃ. ೦-೦೨೦) ; ಹರನಿಂದುರ್ವಿಗೆ ದೈವವೇ ಕಿರಣಕಿಂದುಂ ಬಿಟ್ಟು ಸೊಂಪುಂಟೆ (ಸೋಮೇಶ. ೬). ೧೧. ನಿರ್ಲಕ್ಷಿಸು ; ಗಣ್ಯಿಸದಿರು : ಈ ನಡುಗುವುವಲ್ಲವೇ ತೊಡೆ ನಿತಂಬದ ಬಣ್ಣಿಸೊಳೇವುದಕ್ಕ ಪೋ ಬಿಡು ಕಟಿಸೂತ್ರವಂ (ಶಂಕರಾ. ೩-೯೭): ಗುಣದೋಷಮನಱಿದವಱೊಳ್ಗುಣಮಂ ಕೈಕೊಂಡು ದೋಷಮಂ ನೆಱೆ ಬಿಡುವಾ ಗುಣವಂತನ ಮುಂದೋದುಗೆ (ಸವುಶ. ೦-೬೩). ೧೨. ಬಿಡಾರ ಹಾಕು ; ತಂಗು ; ನೆಲಸು ; ವಸತಿ ಮಾಡು : ಮಹಾರಾಜರು[ಂ] ಬಾಣರಸರುಂ . . . ಸಮಸ್ತಬಲಂ ಬೆಱಸಿ ಬಿಟ್ಟೊಡೆ (ಎಇ. XXIV. ೦೯೧-೮ ; ಸು. 886) ; ಆರಾನುಂ ಬಿಟ್ಟೆವೋಪರ್ ಬೀಡಂ ಬಿಟ್ಟಿರ್ದರ್ ನಿಱಿಸುವರ್ (ಪಮ್ಪಾರಾ. ೯೯-೩): ಹರಿಗನಾ ಕುರುಕ್ಷೇತ್ರದೊಳಂತೇನುಂ ಮಾಣದ ಬಿಟ್ಟುದನಾ ಸೆಗಟ್ಟಿ ಸುಯೋಧನಂಗೆ ಚರರಱಿಪುವುದುಂ (ಶಂಕರಾ. ೧೦-೧) ; ಎಲ್ಲಿಯುಂ ದುರ್ಯೋಧನನನಱಸಿ ಕಾಣದೆ ವಿಸ್ಮಯಂಬಟ್ಟವನ ಬಿಟ್ಟ ಬೀಡಿಂಗೆ ನಿಟ್ಟುರಿಗೊಂಡು (ಗದಾಯು. ೬-೨೮ ವ). ೧೩. ಅವಕಾಶ ಕೊಡು ; ಆಸ್ಪದ ಮಾಡಿಕೊಡು : ತನ್ನ ಪ್ರಕೃತಿ ಬಿಡದಿರಲ್ ಅಱಿಕೆಯೇನಂ ಮಾಡುವುದು (ಶಂಕಶಂ. ೦೯-೨) ; ಆವರವರ ಸ್ವಸ್ಥಾನಂಗಳ ಸಲುಗೆಯನಱಿದು ಬಿಡುತ್ತಿದ್ದ ಕೂಡಲಸಂಗಮದೇವರಲ್ಲಿ ಬಸವಣ್ಣನ ಕಾಲವೇಳೆಯನಱಿದು (ಸರ್ವಶ. ೬೦-೪೮೩). ೧೪. ಕೊಡು ; ನೀಡು : ಕಿಟ್ಟಾನದೇವಕೆ ಎಲ್ಲವಾನ್ಸರ್ವಪರಿಹಾರಂ ಬಿಟ್ಟ (ಎಕ. VI, ಕೊಪ್ಪ. ೩೯-೬ : 676?) ; ಪುನ್ನಾಡಱುಸಾಸಿರಕ್ಕ ಎಱೆಯರ್ ಸೆಲಕ್ಕಿ ಸೊಲ್ಲಗೆ ಬಿಟ್ಟು (ಎಕ. III, ನಂಜನ. ೨೬-೩ ; ಸು. 810) ; ನೈಷ್ಠಿಕತಪೋಧನರ್ಗ್ಗೆಂ ಬಿಟ್ಟ ಮತ್ತರ್ ೪ (ಶಾಇಇ. XI-i, ೦೦೦-೦೫; 1064). ೧೫. ಸುರಿಸು; ಚೆಲ್ಲು: ವಿಡಿದೊಡೆ ತನಿಗ[ರ್ಪು] ರಸಂ ಬಿಡುವುವು (ಶಂಕರಾ. ೦-೩೬); ಬಿಟ್ಟೆಸೆದುದು ಪೊಱವಾಱಿಂ ಮುಟ್ಟದ ತರುಣೀಸುಗಂಧಕೇಶಂ ತೆಗೆದಿಂ ಕಟ್ಟದಪರೆಂದು ಬಾಷ್ಪಂ ಬಿಟ್ಟೊಡನೆ ಬಿಟಿಲ್ದು ಪಟ್ಟುಪೋಲಳಿರವದಿಂ (ಅಂಜನಾ. ೦೪-೦೩). ೧೬. ಸುರಿ ; ಹುಯ್ಯು : ಎರಕಕ್ಕ ಬಿಟ್ಟ ಕರುವಿನಂತೆ ಮಱುಗುತ್ತಂ (ರತ್ನಾಕ. ೦-೦೬೨); ಖಡುಗವಡಪ್ವಾಯ್ಲುಗಳಲಡುವುದ್ದಡಸಿದರು ಸೂಕರನ ತುಪ್ಪದ ತೊಡೆದರಿಱಿದೇಱಿನೊಳು ಬಿಟ್ಟರು ತೈಲಧಾರೆಗಳ (ಕುಮಾರವ್ಯಾ. ೫-೪೨). ೧೭. ಚಿತ್ರಿಸು ; ಬರೆ : ಹೆಂಗಸರು ಮನೆ ಮುಂದೆ . . . ಆಕರ್ಷಕವಾಗಿ ರಂಗೋಲಿ ಬಿಡುತ್ತಾರೆ (ವೋಠರೇ. ೨೩). ೧೮. ಶಿಲೆಯಲ್ಲಿ ಕೆತ್ತಿಸಿ ದಾನಮಾಡು : ಜಿನಗೃಹಂಗಳ್ಗೆ ತನ್ನ ಮನೆಯಂ ಗಂಧಪುಷ್ಪಾಕ್ಷತಾದಿಗಳನುಯ್ವುದುಂ . . . ಶಾಸನಂಗಳಂ ಬಿಡುವುದುಂ ಮುನಿಜನಂಗಳ್ಗೆ ಪೂಜಿಸುವುದುಂ ಚತುರ್ವಿಧದಾನವೆಂಬುದು (ಶಾಪುಂಪು. ೨೦೦). ೧೯. ಹೋಗಲು ಅನುಮತಿಸು ; ಬೀಳ್ಕೊಡು ; ನಿರೂಪ ಕೊಡು : ಎನ್ನ ಪಂಬಲನಿದಂ ಬಿಸುಡಿಂ ಬಿಡಿವೆಂದು ಖೇಚರಂ ಬಿಡಿಸಿದನಾಪ್ತರು ಬಿಡಿಸುವಂತಿರೆ ಮೋಹದ ಬಳ್ಳಿವಳ್ಳಿಯಂ (ಆದಿಪು. ೨-೩೦): ಬಹುಕಳಾಳಾಪಂಗಳಂ ಕಲ್ತು ಬರ್ಪಪಮೋಘಂ ಬಿಡಿಪೆಂಬುದಂ (ಸುಕುಮಾ. ೨-೩೫). ೨೦. ಗಳಹು ; ಆಡು ; ನುಡಿ : ತೊಟ್ಟಜೋಹಕೆ ತಕ್ಕ ನುಡಿಗಳ ಬಿಟ್ಟವಲ್ಲದೆ ನಿಮ್ಮ ರಾಯನ ಕಟ್ಟಲಾಪವೆ (ಕುಮಾರವ್ಯಾ. ೨-೫೨). 'ಬಿಡಕೆ' ಪರಾ. ೨೧. ಕೆಳಕ್ಕೆ ಇಳಿಬಿಡು: ನೇತಾಡುವಂತೆ ಮಾಡು ; ಜೋಲಾಡಿಸು : ವಾಯುರಥಂ ಪ್ರಭಾವತಿವೆರಸು ಸಿದ್ಧಕೂಟಚೈತ್ಯಾಲಯದ ಮುಂದಿರ್ದು ಬಿಟ್ಟಮಾಲೆಯಂ ನೆಲಂ ಮುಟ್ಟಲೀಯದೆ ಮೇರುವಂ ತ್ರಿಪ್ರದಕ್ಷಿಣಂಗೆಯ್ದು ಕೊಳಲಾಱದೆ (ಶಾಪುಂಪು. ೬೪) : ಬಿಡೋ . . . ಪರದೇನಾ (ಶಾಯುಕ. ೬೪). ೨೨. ಕ್ಷಮಿಸು : ಕಕ್ಕಸದಿಂ ಕಾದಿ ಹಿಮ್ಮೆಟ್ಟಿ ಗಜಮಱಿವೊಕ್ಕಡೆ ಬಿಡನೊದ ನಗುತ (ಮೋಹತ. ೩೪-೩೯). ೨೩. ಹಾಸು ; ಹರಡು : ಒಂದು ಹರಿಣ ತನ್ನಯ ಪರಿಸ್ಪಂದಸಹಿತೆಯುದ್ದಿರೆ ಪರಿಪರಿವ ಕಾಳ್ಕಿಚ್ಚು ಮುಂದುಗಡೆ . . . ಬಿಟ್ಟ ಬೆಳ್ಳಾರಬಲೆಯೆಡಗಡೆ . . . ಈ ಅನುವರವನು ಮಾಣಿಪರಿಲ್ಲ (ಸಪ್ಮಕಾ. ೨-೪೭). ೨೪. ತೊಡಗಿಸು ; ಆರಂಭಮಾಡಿಸು : ನಾಲ್ಕು ಆಳುಗಳನ್ನು ಈ ಕೆಲಸಕ್ಕೆ ಬಿಟ್ಟರೆ ಬೇಗ ಮುಗಿಸಬಹುದು (ಕೂಶ). ೨೫. (ಸಾಲದಲ್ಲಿ ಅಥವಾ ವ್ಯಾಪಾರ ಮಾಡುವಾಗ ವಸ್ತುಗಳ ಬೆಲೆಯಲ್ಲಿ) ರಿಯಾಯಿತಿ ತೋರಿಸು ; ಸೋಡಿ ಕೊಡು : ಸಾವಿರಾರುರೂಪಾಯಿಗಳ ವ್ಯಾಪಾರ ಮಾಡಿರುವಾಗ ಹತ್ತು ರೂಪಾಯಿಯೂ ಬಿಡುವುದಿಲ್ಲವೆಂದರೆ ಹೇಗೆ ? (ಕೂಶ).

ವಿಡು : ೧. ವಿದ್ರುಮಾಧರ ಶಾನ್ತಿಸೇನಮುನೀಶನಾಕ್ಕವಿ ವೆಳ್ಗೊಳಅದ್ರಿ ಮೇಲಶನಾದಿ ವಿಟ್ಟುಪುನರ್ಭವಕ್ಕೆಱೆ ಅಗಿ (ಎಕ. II, ೩೦-೪ ; ಸು. 650). ೬. ಕೆಟಿಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ ಒಬಿಯ ಪನ್ನಿಗೆ ವಿಟ್ಟೊಡೆ ಪನ್ನಿಯುಂ ನಾಯುಮೊಡಸತ್ತುವು (ಎಕ. III, ಮಂಡ್ಯ. ೪೦-೦೦; 950). ೧೪. ಸಟ್ಬಿಜ್ಜದರ್ ವಿಚಾರಸರುಂ ಪಲ್ಲಡಿಗೆ ಕುಱುವಿಟ್ಟಡಿಪಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ (ಮ್ಯಾಆಂ. ೦೯೩೬, ೦೬-೦೫ : ಸು. 450) ; ಅನುಜೊ ಇನ್ದು ಕನಲ್ಗೊಳಿ ನನ್ದಿಯಾಲರಾ ವಿಟ್ಟುದು ಪಡೆವೈಲಾಮು ಅಮಸಪಾಲುಂ (ಎಕ. VI, ಚಿಕ್ಕಮ. ೫೦-೩ : ಸು. 480 ?) ; ಶಿವಮಾರಂ ಪ್ರಿಥುವೀರಾಜ್ಯಂಕೆಯ ವೆಡಿರುನ್ ಸ್ವರ್ಗಕ್ಕೇಱೆಯ ಮರಿಯಾಡಿ ಕೊಟ್ಟಾನ್ ಸೇಬೆಗೆ ವಿಟ್ಟಾರ್ (ಎಕ. IV (R), ತಗ್ಗಡ. ೧೫೬-೪ : ಸು.790).

ಬಿಟ್ಟ ಬಾಯಿ, ಬಿಟ್ಟ ವಾಯ್ = (ಆಶ್ಚರ್ಯ, ಭಯ ಮುಂತಾದುವುಗಳಿಂದ) ತೆರೆದ ಬಾಯಿ : ಭಗವಂತನ ಮಹಿಮೆಯನ್ನು ದಾಸರು ಹೃದಯಂಗಮವಾಗಿ ವರ್ಣಿಸುತ್ತಲಿದ್ದಾಗ ನೆಟ್ಟ ಕಣ್ಣು ಬಿಟ್ಟ ಬಾಯೂ ಆಗಿ ಜನರು ಕೇಳುತ್ತಲಿದ್ದರು (ರಾಜಾಪ. ೨೫೨); ಬಿಟ್ಟ ವಾಯ್ ಬಿಟ್ಟಂತಿರೆ ಬಂದಾಕ ಪೊಕ್ಕಳಿರದರಮನೆಯಂ (ಶಾಂತಿಪು. ೪-೦೦೩). ಬಿಟ್ಟಾಡಿಕೊಳು = ಮನಸ್ವಿಯಾಗಿ ನಿಂದಿಸು ; ಮನ ಬಂದಂತೆ ತೆಗಳು : ಬಿಟ್ಟಾಡಿಕೊಳುವ ವೈರಿಯ ಮನೆ ಮುಂದೆ ಬಿಚ್ಚುಗತ್ತಾಗಿ ಪೊಳೆದೇನು (ಹವಾಶ. ೨೨-೧೨). ಬಿಟ್ಟಿಕ್ಕು = ಮೇಲೆ ನುಗ್ಗುವಂತೆ ಮಾಡು ; ಚೋದಿಸಂ : ವಿರೋಧಿಸಾಧನಘಟಾಳಿಯನೋಡಿಸಲಾಗಳಾರ್ದು ಬಿಟ್ಟಿಕ್ಕಿದರುಗ್ರಸಿಂಧುರಘಟಾವಳಿಯಂ ಮುಳಿಸಿಂ ನಿಷಾದಿಗಳ್ (ಶಂಕರಾ. ೧೦-೯೨) : ಅಣೆದಿಭಮಂ ಕೀಱಿ ಬಿಟ್ಟಿಕ್ಕಿ (ಶಾಂತಿಪು. ೫-೩೮). ಬಿಟ್ಟು ಕೊಡು = ೧. ತೊರೆ ; ತ್ಯಜಿಸು ; ಬಿಟ್ಟುಬಿಡು : ಅದನ್ನು ಬೇಗ ಬಿಟ್ಟುಕೊಟ್ಟು . . . ಹೊಸಸಮಾಜದೊಂದಿಗೆ, ಬಾಳಿನೊಂದಿಗೆ ಬೆರೆಯಬೇಕು (ಹೊಸಕ್ಷಿ. ೨೬೪); ಬ್ರಿಟಿಶ್

ಸರಕಾರವು ದಯಪಾಲಿಸಿದ 'ಸರ್' ಪದವಿಯನ್ನು ಠಾಕೂರರು ಬಿಟ್ಟು ಕೊಟ್ಟರು (ರವೀಣಾ. ೬೬). ೨. ನೀಡು ; ಕೊಡು ; ದಾನಮಾಡು : ಅಯ್ಯಪಮಂಗಳದ ಪೂರ್ವ್ವಮರ್ಯ್ಯಾದೆಯು ಬಳನಂ ಬಿಟ್ಟು ಕೊಟ್ಟಂ (ಎಕ. XI. ಹಿಂಯೂ. ೧-೨೬ ; 975) ; ಕೂಚಿಭಟ್ಟಾರರ ಕಾಲನ್ ಕಚ್ಚಿ ಧಾರೆಯನೆಱೆದು ಬಿಟ್ಟು ಕೊಟ್ಟರ್ (ಎಕ. IV, ಶಾಮಾ. ೦೬-೦೭ ; ಸು. 1000 ?) ; ಶ್ರೀಸ್ವಯಂಭುಸೋಮೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಬಿಟ್ಟು ಕೊಟ್ಟರ್ (ಸಾಇಇ. XX. ೯೯-೬೨ ; 1076 ?) ; ರಾಜ್ಯವನ್ನು ಈಗಾಗಲೇ ಬಿಟ್ಟುಕೊಟ್ಟಿದ್ದೇನೆ (ವಕಳ. ೪). ೩. ಹೋಗಲು ಅಪ್ಪಣೆ ಕೊಡು : ಬೀಳ್ಕೊಡು : ನನಗೆ ತಪಸ್ಸಿನ ಮೇಲೆ ಮನಸ್ಸಾಗಿದೆ . . . ನನ್ನನ್ನು ಬಿಟ್ಟುಕೊಡಿ (ವಕಳ. ೬೬೯). ೪. ಓಡಿಸು; ಹರಿಯ ಬಿಡು: ಮನಸ್ಸನ್ನು ಲಂಗು ಲಗಾಮಿಲ್ಲದ ಕುದುರೆಯಂತೆ ಬಿಟ್ಟುಕೊಟ್ಟು . . ಆಡಂಬರದ ಆಟಗಳನ್ನು ಕಟ್ಟುತ್ತೇವೆ (ವಾರಾಕ್ಕ. ೦೦೭). ೫. ಉಳಿಸು ; ಇರಗೊಡು : ಈ ರಾಜರು ಬಿಟ್ಟುಕೊಟ್ಟಿರುವುದರಿಂದ ನಾನು ಬದುಕಿದ್ದೇನೆಯೋ? (ವಕಳ. ೯೪). ೬. ಮನಸ್ಸಿನಲ್ಲಿರುವ ವಿಷಯ ವನ್ನು ಬಹಿರಂಗಗೊಳಿಸು,— ರಟ್ಟುಮಾಡು: ನಾನೆಲ್ಲ ಗುಟ್ಟನ್ನು ಅವನಿಗೆ ಬಿಟ್ಟುಕೊಟ್ಟೆ (ಅಂಹೂ. ೩೯). ೭. ಪಕ್ಷದಿಂದ ಹೊರತುಮಾಡು: ಪಕ್ಷ ವಹಿಸದಿರು : ಜೀವದ ಗೆಳೆಯನಲ್ಲವೇ — ಒಬ್ಬರಿಗೊಬ್ಬರು ಬಿಟ್ಟು ಕೊಡುವವರಲ್ಲ (ಮೂರುದಾ. ೦೪೦). ಬಿಟ್ಟು ಬಿಡು = ೧. ತೊರೆ; ತ್ಯಜಿಸು : ಅವನು ಅದನ್ನು ಅಡವಿಗೆ ಒಯ್ದು ಬಿಟ್ಟು ಬರಬೇಕೆಂದು ನಿಶ್ಚಯಿಸಿ ಅದರ ಸರ್ಪಳೀ ಬಿಚ್ಚಿಹೋದನು (ಋುಂಅಹು. ೨-೨೦). ೨. ಗಣನೆಗೆ ತೆಗೆದುಕೊಳ್ಳದಿರು; ಕಡೆಗಣಿಸು: ಆ ವಿಷಯವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಬಿಟ್ಟುಬಿಡು (ರೂಢಿ). ಬಿಟ್ಟು ಹೋಗು = ೧. (ಒಂದು ಸ್ಥಳದಿಂದ) ನಿರ್ಗಮಿಸು ; ಹೊರಡು : ನಿನಗೆ ಇಲ್ಲಿರಲು ಇಷ್ಟ ವಿಲ್ಲದಿದ್ದರೆ ಬಿಟ್ಟು ಹೋಗಬಹುದು (ರೂಢಿ). ೨. ಇಲ್ಲವಾಗು : ಸ್ವರದ ಮುಂದೆ ಸ್ವರವು ಬಂದರೆ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟು ಹೋಗುತ್ತದೆ (ಷಡ್ಯವ. ೦೭). ಬಿಡಬೀಸು = ಕಡೆಗಣಿಸು ; ತಿರಸ್ಕರಿಸು ; ಬಿಟ್ಟು ಬಿಡು : ಎನ್ನ ಬಿಡಬೀಸದಿರು ಕಂಡಾ ಲಿಂಗವೇ (ಶಿವಗೀ. ೩೭-೦೬೪); ಬಿಡಬೀಸದಿರು . . . ಕಡೆಗೆ ಸದ್ಗುರುವೆ (ರೇಣುಕೋ. ೪. ೦೪-೨೪). ■ ಈ ಧಾತುವು ಹಲವು ಶಬ್ದಗಳ ಜೊತೆಗೂಡಿ ವಿಶಿಷ್ಟ ವಾದ ಧಾತುವಾಗಿ ವಿಧವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ. ಕಾಯಿಬಿಡು, ಕೈಬಿಡು, ಮನೆಬಿಡು, ಹಾದಿಬಿಡು, ಹೂ ಬಿಡು ಇತ್ಯಾದಿ. [ದೇ.॥ ತಮಿ. ಮಲ. ವಿಟು; ತುಳು. ಬುಡು; ತೆ... ವಿಡು; ಗೊಂಡಿ. ವಿರ್ಸಾನ; ಬ್ರಾಹೂಈ. ಬಿಟ್ಟಿಂಗ್]

**ಬಿಡು₂** 'ಬಿಡುವು' ನೋ.

**ಬಿಡು₃** 'ಬಿಡಿ' ನೋ.

**ಬಿಡು₄** (ಅ). 'ಛೆ' ಎಂಬರ್ಥದಲ್ಲಿ ನಿಪಾತಾವ್ಯಯದಂತೆ ಬಳಸುವ ಒಂದು ಶಬ್ದ: ಕಲಿತನದಿಂದಂ ಲೋಗರ್ ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ (ರಘುಶ್ಮು. ೦-೦೭೬); ಬಿಡು ಮರೀಚಿಯ ತೊಱೆಗೆ ಹಬು ಗೋಲಿಡುವವರುಂಟೇ (ಕುವ್ಯಾದ್ರೋ. ೯-೩೯). [ < ಬಿಡು₁]

**ಬಿಡುಕುಳ** (ನಾ). ಪ್ರತ್ಯೇಕವಾಗಿರಿಸಿದ ಜಾತಿ ; ಬೇರೆಯಾಗಿರಿಸಿದ ಕುಲ : ಹರಿಜನರ ಚೋಮ, ಪಾತಿರ ಅಪ್ಪ ಮತ್ತು ಮೋದರ ಮುದ್ದ ಮೊದಲಾದವರಂತೆ ತಾನೂ ಬಿಡುಕುಳದ ಮಗನಂತಿದ್ದಾನೆ ! (ಚುಸಕೊ. ೦೦). [ಬಿಡು₂ ( < ಬಿಡುವು) + ಕುಳ್ಳ (= ಕುಲ)]

**ಬಿಡುಗಂಡಿ** (ನಾ). ಕೆರೆ, ಕಟ್ಟೆ ಮುಂತಾದುವುಗಳಲ್ಲಿ ನೀರು ಹೊರ ಹೋಗುವುದಕ್ಕಾಗಿ ಮಾಡಿರುವ ಕಂಡಿ ; ತೂಬು : ಸಸಿನವಹ ಕೊತ್ತಳದ ಸಾಲಿನ ನುಸುಳುಗಂಡಿಯ ಮುರುಹುಗಳ ಮುಂದೆಸೆವ ಕಲು ಮುಳುಮೇಲಿ ಬಿಡುಗಂಡಿಗಳನೀಕ್ಷಿಸಿದ (ಮೃಗಾಕಾ. ೨-೦೩); ನಾಲೆಯಲ್ಲಿ ಬರುವ ಹೆಚ್ಚು ನೀರನ್ನು ಹೊರಕ್ಕೆ ಸಾಗಿಸುವ ಬಿಡುಗಂಡಿಗಳು ಎರಡು ವಿಧವಾಗಿವೆ (ಶಿಲ್ಪಶಾ. ೩೯೦). [ಬಿಡು₁ + ಕಂಡಿ₁]

**ಬಿಡುಗಟ್ಟು** (ನಾ). (ಕರಾ) ಸಾಲದ ಹಣದ ಮೇಲೆ ಸಮಯಕ್ಕೆ ಸರಿ ಯಾಗಿ ತೀರಿಸದೆ ಇದ್ದಾಗ ಹೆಚ್ಚಾಗಿ ಪಡೆಯುವ ಬಡ್ಡಿ ; ದುಬಾರಿ ಬಡ್ಡಿ: (ಕಸಂಗ್ರಾ. ೦೭೬). [ಬಿಡು₂ ( < ಬಿಡುವು) + ಕಟ್ಟು₂]

**ಬಿಡುಗಡೆ** (ನಾ). ೧. ಬಂಧನದಿಂದ ಪಾರಾಗುವಿಕೆ ; ವಿಮೋಚನೆ : ಆ ಉಭಯದ ಬಿಡುಗಡೆಯನಱಿದು ಅಡಗಿಯಲ್ಲದೆ ಸ್ವಯಂಭುವಲ್ಲ (ಸೋಲಿಮಾ. ೨-೩) ; ಕರುಣೆಯ ಸ್ಪರ್ಶವಿಲ್ಲದ ಕಟ್ಟಳೆಯ ಪ್ರಭುತ್ವಕ್ಕೆ ನಾನು ಒಳಗಾದರೆ ಕರ್ಮದಿಂದ ನನಗೆ ಬಿಡುಗಡೆ ಎಂದೂ ಸಾಧ್ಯವಿಲ್ಲ (ಕಕ್ಕಶ್ರಾ. ೩೩೭). ೨. ಮೋಕ್ಷ ; ಕೈವಲ್ಯ ; ಮುಕ್ತಿ : ಕಡೆಯಿಲ್ಲ ಮೊದಲಿಲ್ಲ ತಡೆ ಬಿಡುಗಡೆಯಿಲ್ಲ (ಶರಶೋ. ೪-೬-೬) ; ಮೋಕ್ಷವೆಂದರೆ ಬಿಡುಗಡೆಗೆ ಹೆಸರು (ಶರಶ. ೬೨-೯). ೩. ಸ್ವಾತಂತ್ರ್ಯ; ಸ್ವತಂತ್ರತೆ : ಮುಂದೆಯುದು ತೋರುವುದು ಬಿಡುಗಡೆಯ ಹಬ್ಬದಲಿ ! (ಕಾಂತಿಅ. ೬-೪). ೪. ಅಂತ್ಯ ; ಕೊನೆ ; ಮುಕ್ತಾಯ : ನಡುಹೊಳೆಯ ಹಱಿಗೋಲ ಮೂಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು (ಕುವ್ಯಾಶೀ. ೯-೩).

[ ಬಿಡು₁ + ಕಡೆ₃ ]

**ಬಿಡುಗಣ್**, ಬಿಡುಗಣ್ಣು (ನಾ). ೧. (ಅಗಲವಾಗಿ) ತೆರೆದ ಕಣ್ಣು ; ಬಿಟ್ಟ ಕಣ್ಣು: ಬಿಡುಗಣ್ ಬಿಡುವಾಯ್ . . . ಅಱುಗೆಱೆಯೆಂಬಿವು ಪಡೆ ಯುವು ಬೆಂದುವನುದಂತವೃತ್ತಿಯನಾಳ್ದಂ (ಕಹುದ. ೦೭೦) ; ಬಾಯ್ಗಳಂ ಬಿಡುವ ಬಿಡುಗಂಗಳ ಸುಜಾಣೆಯರ್ ಸಲೆ ದಶಾವಸ್ಥೆಯೊಳ್ ಕಣ್ಗೆಸದರು (ಕಿವಪು. ೦೯-೩೦). ೨. (ಆಲಂ) ದಿವ್ಯದೃಷ್ಟಿ: ಗಿಡಿದ ಕತ್ತಲೆಯ ಗುಹೆ ಯೊಳಡಗಿರ್ದರಾ ಅಸುರರ್ ಕೇಳ್ದರಾ ವಾಟಮಂ ಪಲ್ಮೊರೆದು, ಕಣ್ಣರಿಯೆ ಕಂಡರಾ ಬಿಡುಗಣ್ಣ ಬೆಳಕನ್ (ಹೊಂಗಳು. ೩೭-೦೦). **ಬಿಡುಗಣ್ಣು** : ೧. ಮೊಗದ ಹೊಗರವಗಡಿಸೆ ಸುಯಿಲಲಿ ಹೊಗೆಯು ಹೊದಱಂಕುರಿಸೆ ಬಿಡು ಗಣ್ಣುಗಳೊಳೊಕ್ಕುದು ಕೆಂಪು ಸೊಂಪಡಗಿತು ಮಾಖಿಸ್ನೇಹ (ಕುವ್ಯಾಶೀ. ೬-೨೦) ; ಶಾಂತೆಯೂ . . . ಕುಳಿತುಕೊಂಡು ಬಿಡುಗಣ್ಣುಗಳಿಂದ ಮನೆಯ ನಾಲ್ಕು ಮೂಲೆಗಳನ್ನೂ ನೋಡುತ್ತಿದ್ದಳು (ಶಂತಿ. ೪೬). ೩. ರೆಪ್ಪೆ ಹೊಡೆಯದಿರುವ ಕಣ್ಣು ; ಅನಿಮಿಷನೇತ್ರ : ದೇವತೆಗಳು . . . ಬೆವರಿಲ್ಲದ ಮೈ, ಬಿಡುಗಣ್ಣು, ಬಾಡದ ಮಾಲಿಕೆ, ಭೂಮಿಯನ್ನು ಮುಟ್ಟ ದಿರುವುದು, ಈ ದೇವತೆಗಳ ವಿಶೇಷಚಿಹ್ನೆಗಳನ್ನು ತೋರಿದರು (ವಕಳ. ೦೪೦). 'ಬಿಡುಗಣ್ಣ' ಪರಾ. [ ಬಿಡು₁ + ಕಣ್ ]

**ಬಿಡುಗಣೆ** (ನಾ). ನಡುವೆ ಬಿಡುವಿಲ್ಲದಂತೆ ಪ್ರಯೋಗಿಸುವ ಬಾಣ ; ಏಕಪ್ರಕಾರವಾಗಿ ತೊಡುವ ಕಣೆ : ವಡಬಗೌತಣವಿಕ್ಕುವರೆ ಕಡ ಲೊಡೆಯಗಹುದು ಸಮರ್ಥನಲ್ಲಾ ಬಿಡುಗಣೆಯ ಬೀಱುವರೆ ಕಟಕಾ ಚಾರ್ಯನು (ಕುವ್ಯಾದ್ರೋ. ೬-೦೯). [ಬಿಡು₂ ( < ಬಿಡುವು) + ಕಣೆ₁]

**ಬಿಡುಗಣ್ಣ** (ನಾ). ೧. ತೆರೆದ ಕಣ್ಣುಳ್ಳವನು ; ಅಗಲವಾಗಿ ಕಣ್ಣು ಬಿಟ್ಟಿರುವವನು : ಪೊಂಜೊಡರು ತೂಗಿದೊಲು ನೆಲ ಬಾನ ತಳ್ಳೆಯಲಿ ನೇಸರನು ಬಿಡುಗಣ್ಣನಾಗುತ್ತಿರಲು . . . ಸ್ವರ್ಣಮಂದಿರದ ಛಾಯೆ ಯೊಲು ಬೆಟ್ಟ ಕಾನು ಗಂಭೀರಗುಂಭದಲಿ ಮೈದುಂಬಿ ನಿಂತಿಹವು (ಕಾವೇ. ೦-೩). ೨. ರೆಪ್ಪೆ ಬಡಿಯದಿರುವವನು ; ಬಿಟ್ಟ ಕಣ್ಣುಳ್ಳ ವನು ; ದೇವತೆ : "ಗಾಳಿವಟ್ಟೆಗರ್ . . . ಬಿಡುಗಣ್ಣರೆನೆ ನಿರ್ಜರರ್ಗ ಮರ್ದ ನಾಮಮಕ್ಕುಂ" (ಕಕ್ಕಶ. ೦೦೦) ; ಬೇಡುವರನು ಮನ್ನಿಪ ಬಿಡು ಗಣ್ಣರ ನಾಡೆಱೆಯನ ಮಗನಂತೆ ಗಾಡಿವಡೆದ ರೂಪಿನ ಗರುವನ ನೀ ನೋಡು ಕಳಿಂಗನನಬಲೆ (ಜಮಂಶಾಂ. ೦೦-೮೯).

**ಬಿಡುಗಣ್ಣರೆಱೆಯ** = ದೇವತೆಗಳ ಒಡೆಯ ; ಶಿವ : ಬಿಡುಗಣ್ಣ

ರಜೆಯಿಂ ವಿಶ್ವನಾಥಂ ಪ್ರಸನ್ನನಾದಂ ಭಕ್ತರುಘೆಯುಘೆಯೆನೆ (ಶರ್ವಾ. ೬-೩೫). [ಬಿಡುಗಣ್ + —ಅ₇]

**ಬಿಡುಗಣ್ಣು** 'ಬಿಡುಗಣ್' ನೋ.

**ಬಿಡುಗಯ್**, ಬಿಡುಗೈ (ನಾ). ತೆರೆದ ಕೈ ; ಮುಕ್ತಹಸ್ತ : ಮಹತ್ಕಾರ್ಯಕ್ಕೆ ಉಜ್ಜುಗಿಸಲೆಡೆಗೊಳ್ಳುವ ಸಾಹಸಾತ್ಮನು ಇಂತಹ ಕೋಟಿ ಸಾಧನಗಳನ್ನು ಬಿಡುಗಯ್ಯಿಂದ ಸೂಸಿ ವ್ಯವಸಾಯ ಮಾಡಬೇಕು (ಶಂಕ್ರಶ. ೨೬-೧೦). **ಬಿಡುಗೈ** : ಸಾಹಿತ್ಯ ಸಂಗೀತಗಳಿಗೂ ಬೇಕಾದಷ್ಟು ಬಿಡುಗೈ ಉತ್ತೇಜನ ದೊರೆಯುತ್ತಿತ್ತು (ರಂಗನಾ. ೨೦೭).
[ ಬಿಡು₁ + ಕಯ್₂ (<ಕೆಯ್₂) ]

**ಬಿಡುಗಾವಲಿ** (ನಾ). ೧. (ಗದ್ದೆ, ತೋಟ ಮೊದಲಾದುವುಗಳಿಗೆ) ನೀರು ಹರಿಯಲು ಮಾಡಿರುವ ತೋಡು ; ಕಾಲುವೆ : ಗದ್ದೆಯ ನೆಲ್ಲಿಗೆ ಕೆರೆಯ ನೀರು . . . ಬೇಕಾದಾಗ ಬಿಡುಗಾವಲಿಯಿಂದ ಬಿಡುವ ದುಂಟು. ಬಿಡುಗಾವಲಿನೀರಿನ ಭೂಮಿಯಾದರೆ ಪ್ರತಿವರ್ಷಕ್ಕೆ ಎರಡು ಸಾರೆ ನೆಲ್ಲು ಬೆಳೆಯಾಗುವದು (ಕೃಷಿಶ್ರ. ೫೪).
[ಬಿಡು₁ + ಕಾವಲಿ₃ (<ಕಾಲ್ವಾಯ್)]

**ಬಿಡುಗಿವಿ** (ನಾ). ಆಭರಣವಿಲ್ಲದೆ ಬರಿದಾಗಿರುವ ಕಿವಿ ; ಬರಿಗಿವಿ : ಬಿಡುಗಿವಿ ಮಿಂಚುವೆತ್ತ ಸುಲಿಪಲ್ ಕುಣಿದಾಡುವ ಕುಂತಳಂ ನೊಸಲ್ಪಿಡಿದ ಬೆಮರ್ (ಸೂಕ್ತಿಸು. ೩-೨೦೦). [ಬಿಡು₂ (<ಬಿಡುವು) + ಕಿವಿ₃]

**ಬಿಡುಗು** (ನಾ). ಎರಚುವಿಕೆ ; ಇರಿಸಿಲು ; ಎರಚಲು : ಮಿಂಚಿನ ಕಡುಗು ಕತ್ತಿಯು ಬೆಡಗು ಮಳೆನೀರ್ ಕರಿಕರಾಯುತದೀ ಬಿಡುಗು (ಕೃಕರ್ಣಾ. ೨-೬೮). [ಬಿಡು₁ + ?]

**ಬಿಡುಗುರುಳು** (ನಾ). ಬಿಚ್ಚಿರುವ ಕೂದಲು ; ಕೆದರಿದ ಕೇಶ : ತುಱುಬು ಜಡೆಯೊಳು ಬಿಡುಗುರುಳು ಇವೆಲ್ಲವೂ ರುದ್ರನ ಅಡಿವೆಜ್ಜೆಯ ಕುಱುಹು (ಸರ್ವಶ. ೦೨೩-೬೬೭); ಮೊಗದೊಳ್ ಮುಸುರ್ವ ಬಿಡುಗುರುಳ ಬೆನ್ನೊಳ್ ನಟ್ಟ ಸರಳ ತಬ್ಬಿಬ್ಬಿಸುವ ನಡೆನುಡಿಗಳ . . . ಸರ್ವದಿಕ್ಪಾಲರೋಟಂ ಗಾಣುತಜನಾಗ್ರಹೀದಾಳ್ದನು (ಶಂಫು. ೪೪-೨೪).
[ಬಿಡು₁ + ಕುರುಳು₁ (<ಕುರುಳ್₁)]

**ಬಿಡುಗುಱಿತನ** (ನಾ). ಮಂದೆಯನ್ನು ಬಿಟ್ಟು ಒಂಟಿಯಾಗಿ ಹೋಗುವ ಕುರಿಯ ನಡವಳಿಕೆ : ಹಾ ನುಡಿಯುದಿರು ನಿಲು ಬಿತಾ ಮಹನೇನ ಬೆಸಸಿದುದಕೆ ಹಸಾದವು ನೀನು ನಡೆ ಪಾಳೆಯಕೆ ಬಿಡುಗುಱಿತನವ ಮಾಣೆಯುಲ ಮೌನವಮುದ್ರೆಯ ಹಿಡಿ (ಕುಮಾರಾಂ. ೦೦-೩೭). [ಬಿಡು₁ + ಕುಱಿತನ]

**ಬಿಡುಗೂದಲು** (ನಾ). = ಬಿಡುಗುರುಳು : ಆಕೆಯ . . . ಬಿಡುಗೂದಲನ್ನು ಚಿತ್ರಿಸಿದ ಬಗೆ, ಅವುಗಳನ್ನು ಹೊಂಬಣ್ಣದಿಂದ ಮಿನುಗಿಸಿದ ಬಗೆ ಈತನ ಕಲಾನೈಪುಣ್ಯವನ್ನು ಎತ್ತಿ ತೋರಿಸುತ್ತವೆ (ಆಭೂಶ. ೨೯೩).
[ಬಿಡು₁ + ಕೂದಲು (<ಕೂಂದಲ್)]

**ಬಿಡುಗೆ** (ನಾ). ೧. ತ್ಯಜಿಸುವುದು ; ದೂರ ಮಾಡುವುದು : "ತ್ಯಜನಂ . . . ತ್ಯಕ್ತಿಃ, ಈ ೫ ಬಿಡುಗೆ" (ಕಾಶಕ್ಕೆ. ೬೪). ೨. ಬಿಡುಗಡೆ ; ವಿಸರ್ಜನೆ : "ಮುಚ—ಪ್ರಮೋಚನೇ. ಬಿಡುಗೆಯೊಳ್" (ಕಾಶಕ್ಕೆ. ೨೬೪); ಹಿಪ್ಪಲಿ . . . ಏಲಕ್ಕಿ, ಸೈಂಧವ ಇವುಗಳ ಚೂರ್ಣಿಸಿ ಜೇನುತುಪ್ಪ, ಸಕ್ಕರೆವೆರಸಿ ನಾಭಿಯಿಂದ ಕೆಳಕ್ಕೆ ಲೇಪಂಗೈಯಲು ಜಲ, ಮಲ ಬಿಡುಗೆ (ವೈದ್ಯಸಾ. I, ೪೬೦). ೩. ನಿವಾರಣೆ : "ಪರಿಹಾರಃ—ಬಿಡುಗೆ" (ಕಾಶಕ್ಕೆ. ೦೩೭). ೪. (ಬರಬೇಕಾದ ಹಣದಲ್ಲಿ ತೋರಿಸುವ) ರಿಯಾಯಿತಿ : ನೋಡಿ: ಎತ್ತಿನ ವ್ಯಾಪಾರದಲ್ಲಿ ಎಷ್ಟು ಬಿಡುಗೆ ಬಿಟ್ಟುಕೊಟ್ಟರು? (ಜೂ). ೫. ನಿರೂಪ ; ಅಪ್ಪಣೆ : 'ಬಿಡುಗೆಗೊಡು' ಪರಾ.೬. ಅವಕಾಶ ; ಆಸ್ಪದ : 'ಬಿಡುಗೆವಡು' ಪರಾ. [ಬಿಡು₁ + —ಗೆ]

**ಬಿಡುಗೆಗುಡು** ' ಬಿಡುಗೆಗೊಡು ' ನೋ.

**ಬಿಡುಗೆಗೊಡು**, ಬಿಡುಗೆಗುಡು (ಕ್ರಿ). ೧. ಹೋಗಲು ಅನುಮತಿ ಕೊಡು, —ಅವಕಾಶಕೊಡು ; ಬೀಳ್ಕೊಡು : ಕೆಡುವ ದೇಹವನಿನ್ನು ತಪದಲ್ಲಿ ವೆಚ್ಚಿಸಿ ಕೆಡದ ಸಿದ್ಧಿಯ ಮಾಳ್ಪೆನದಕೆ ಬಿಡುಗೆಗೊಡೆಂದು ಸಾಷ್ಟಾಂಗವೆಱಗಿದವನು ಪೊಡವೀಶನೆದೆ ದಿಗಿಲೆನಲು (ಶರತ. ೩೦-೯೩); ಸರ್ವರಿಗೆ ಕೈವೀಸಿ ಬಿಡುಗೆಗೊಟ್ಟರವುನೆಯೊಳಗೆ ತಾ ಹೊಕ್ಕನಾ ಕಡು ಗಾಡಿಕಾಱನು (ಶರತ. ೬೨-೯೬). **ಬಿಡುಗೆಗುಡು** : ೨. ಬಿಡುಗಡೆಯನ್ನು ಮಾಡು ; ವಿಮೋಚನೆಗೊಳಿಸು ; ಬಿಟ್ಟು ಬಿಡು : (ಕಟ್ಟುವಟ್ಟವನಿಗೆ ಬಿಡುಗೆಗುಡುವವನು) (ಶಬ್ದಿತ. ೦೦೩-೭). [ಬಿಡುಗೆ + ಕೊಡು₁]

**ಬಿಡುಗೆಗೊಳ್** (ಕ್ರಿ). ಹೊರಡಲು ನಿರೂಪ ತೆಗೆದುಕೊಳ್ಳು ; ಬೀಳ್ಕೊಳ್ಳು : ಬಿಡುಗೆಗೊಂಡರು ವೃದ್ಧವ್ರತಿಕರು ಭರತೇಶನಡಿಗಳ ಗೆಱಗಿ ಭಕ್ತಿಯೊಳು (ಶರತ. ೦೬-೦೨೪). [ಬಿಡುಗೆ + ಕೊಳ್₁]

**ಬಿಡುಗೆಗೊಳಿಸು** (ಕ್ರಿ). ಬಂಧನದಿಂದ ಹೊರಹಾಕು ; ಸೆರೆಯಿಂದ ಹೊರಗೆ ಕಳಿಸು : ಆ ವೃದ್ಧ ವೇಂಕಟಾದ್ರಿನಾಯಕನನ್ನು ಕಾರಾಗೃಹದಿಂದ ಬಿಡುಗೆಗೊಳಿಸುವ ಸನ್ನಾಹದಲ್ಲಿ ಈ ದುರ್ದ್ರೋಹನದ ಚಿಹ್ನೆಗಳನ್ನೆಲ್ಲ ಮರೆಯುವೆನು (ಸುಗುಣಂ. ೦೦೭-೦೪). [ಬಿಡುಗೆಗೊಳ್ + —ಇಸು₃]

**ಬಿಡುಗೆಚ್ಚಲು** (ನಾ). ಹಾಲಿನಿಂದ ತುಂಬಿರುವ ಕೆಚ್ಚಲು ; ತೂರೆದ ಕೆಚ್ಚಲು : ಈ ಉಷೆ ನರ್ತಕಿ ಚಿತ್ರಾಂಬರಧಾರಿ ಬಿಡುಗೆಚ್ಚಲ ಧೇನು ವಿನೊಲು ಎದೆ ತೋರಿ . . . ಬರುವಳು ಲೋಕಕೆ ಜ್ಯೋತಿಯನೆರೆದು ! (ಸೌಂದ. ೯೭) [ಬಿಡು₁ + ಕೆಚ್ಚಲು (<ಕೆಚ್ಚಲ್)]

**ಬಿಡುಗೆಲಸ** (ನಾ). ಬಿಡಿಯಾದ ಕೆಲಸ ; ಪ್ರತ್ಯೇಕವಾದ ಕೆಲಸ : ತೊಡರಿಸಿ ಪೊಸದಳಿರ್ದೊಂಬೆದೋರಣಗಳ ನಡೆಮುಡಿಗಳನಳವಡಿಸಿ ಬಿಡುಗೆಲಸದ ಪೆಣ್ಗಳೆಡೆಯಾದರಿಮಿನ್ನಡೆಯುಮೊಂದವರನಟ್ಟುವುದು (ಶಶಿಧ. ೬-೩೫ ಸಾಂಗತ್ಯ). [ಬಿಡು₃ (<ಬಿಡಿ) + ಕೆಲಸ]

**ಬಿಡುಗೆವಡು** (ಕ್ರಿ). ಅವಕಾಶ ಹೊಂದು ; ಆಸ್ಪದವನ್ನು ಪಡೆ : ಅರಸಿಯರೆಲ್ಲರು ಮುಂಡಿಬಾಗಿ ಚಿಂತಿಸುತಿರಲು ಎಡೆನರೆಹಾಯ್ದು ಪಾಟಿಯ ರಾಣಿಯೊರ್ವಳು ಬಿಡುಗೆವಟ್ಟಂತು ನುಡಿದಳು (ಶರತ. ೫೪-೬೨).
[ಬಿಡುಗೆ + ಪಡು₁]

**ಬಿಡುಗೇಶ** (ನಾ). = ಬಿಡುಗುರುಳು : ಹಾಸಿ ಹರಹಿದ ತೋಳುಗಳ . . . ಬಿಡುಗೇಶದನುಜನ ಕಂಡು ದೊಪ್ಪನೆ ಕೆಡೆದನವನಿಯಲಿ (ಕೂರರಾ. ೬-೪೭-೬೭); ಸಿಖಿ ಗರಿಯ ಗೆದರ್ದಂತೆ ಬಿಡುಗೇಶದೋನೆ ಮನೆಯೊಕ್ಕು ಬರೆ ಕಾಣುತ್ತಲಿ (ಪವವನೋ. ೨೬-೩೨). [ಬಿಡು₁ + ಕೇಶ]

**ಬಿಡುಗೈ** 'ಬಿಡುಗಯ್' ನೋ.

**ಬಿಡುಗೊಡೆ** (ನಾ). ದಾನವಾಗಿ ಬಿಟ್ಟು ಕೊಟ್ಟುದು ; ಕೊಡುಗೆ : ಪಳಿಥ ಬಿಡುಗೊಡೆಯಾಗಿ ಬಿಟ್ಟ ಗ ೨೧೪ ವ ೬ (ಎಕ. VI, ಕಡೂರು. ೪೯-೩೩ ; 1291). [ಬಿಡು₁ + ಕೊಡೈ]

**ಬಿಡುಗೊಳ್** (ಕ್ರಿ). ಬಿಡುಗಡೆ ಹೊಂದು ; ವಿಮೋಚನೆಗೊಳ್ಳು : ಚೆನ್ನೆಯ ಕಂಠಾಲಿಂಗನದಿಂ ನೆಱೆ ಬಿಡುಗೊಂಡು ಪೊರಳ್ವ ತಾರಾವಳಿಯಿಂದೇಂ ನೇಹದೆ ಸಂತೈಕುಂ ತನ್ನವೊಲಿರ್ಪನ್ನ ತನುವನೊಳ್ಗೆಕದಿಯ ಪೋಲ್ (ಏಕ್ರಗೋ. ೫೪-೬೦). [ಬಿಡು₂ (<ಬಿಡುವು) + ಕೊಳ್₁]

**ಬಿಡುಜಡೆ** (ನಾ). ತುರುಬು ಕಟ್ಟದೆ ಇಳಿಬಿಟ್ಟಿರುವ ಹೆರಳು,—ಜಡೆ : ಬಿಡುಜಡೆಯ ಬಿದುಮೊಗದ ಬಿಂದೆಸಳ್ಗಣ್ಣ ಬಿಲ್ಬುರ್ಬಿನ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೪೯-೨೦).
[ಬಿಡು₁ + ಜಡೆ₁]

**ಬಿಡುತರ್** (ಕ್ರಿ). ೧. ವಿಮೋಚನೆಯಾಗು ; ಬಿಡುಗಡೆ ಹೊಂದು : ನವನಿರ್ಯತ್ಸಹಕಾರವಾರಿ ಮದವಂ ತತ್ಪಲ್ಲವಂ ಕರ್ಣಪಲ್ಲವಮಂ . . .

ಎಯ್ದೆ ಪೋಲೆ ಬಿಡುತಂದುಗುರ್ದ್ವಿಪಂ ಬಂದು ತಾಂಗುವುದೆಂಬಂದೆಳಮಾವಿನೊಳ್ ದ್ವಿಪಪುಗೆತ್ತೇಂ ಸೊರ್ಕಾರ್ ಸ್ಮೈರ್ತಿರ್ಕುಮೋ (ಶಾಂತಿಪು. ೯-೧೪೨) ; ವಿನತಾತ್ಮಜನಂ ಕಂಡಂ ವಿನತಾತ್ಮಜನಿಂದೆ ನಾಗಪಾಶಂ ಬಿಡುತಂದನಿರುದ್ಧನಾಗಿ ಮುಂದಿರ್ದನಿರುದ್ಧನನಾಗಳ್ಚಿಱಂ ಪ್ರದ್ಯುಮ್ನಂ (ಜಗಪು. ೧೮-೬೦). ೨. ಬಿಚ್ಚಿಹೋಗು ; ಕಳಚಿಕೊಳ್ಳು : ಕಚಬಂಧಂ ಬಿಡುತಂದು ನೀವಿ ಶಿಥಿಲತ್ವಂಬೆತ್ತು . . . ಕಣ್ಗೆಸೆಯೆ ಬಂದರ್ . . . ಕಾಂತೆಯರ್ (ಜಗಪು. ೦೯-೬೫) ; ಮುಡಿ ಬಿಡುತಂದು ಸೂಸೆ ಮುಗುಳಂ (ರಾಜಶೇ. ೬-೧೧). ೩. ಹೊರಸೂಸು ; ಹೊರಚೆಲ್ಲು : ಪರಚಕ್ರಭೂಪರಟ್ಟಿದ ಕರಿಗಳ್ ಬಿಡುತರ್ಪ ಮದದ ಪೊನಲಿಂದೆತ್ತಂ ನರಲೋಕಚಂದ್ರನಾ ಮಂದಿರದೊಳಗೆಲ್ಲ ಕಾಲವುಂ ಕೆಸಱಕ್ಕುಂ (ಕವಿರಾ. ೩-೦೮೫) ; ಬಿಡದೆ ಬಿಡುತರ್ಪ ಸಹಕಾರದ ಸೊನೆಯ ಸೋನೆಯೊಳಂ . . . ಪಾಡುವವೆ ಣ್ದುಂಬಿಯ ಮಂದ್ರನಾದದಿಂ ಶ್ರುತಿಸುಭಗಮಾಗೆ (ಮಲ್ಲಿಕಾ. ೩-೦೦೦) ; ತಂಗೊಳದ ಬಿಡುತರ್ಪ ಪುಷ್ಪವಾಸನೆಯಿಂದ ಪಥಶ್ರಮವಡಗಿಪ್ಪುವೇನ ಬಣ್ಣಿಸುವೆ (ಕೇಶವ. ೩-೦೦೯)

[ಬಿಡು$_1$ + ತರ್]

**ಬಿಡುತೆ**, ಬಿಡಿತೆ (ನಾ). ೧. ಬಿಡುಗಡೆ; ಬಂಧನರಾಹಿತ್ಯ; ಸ್ವಾತಂತ್ರ್ಯ: ನಲವಿನ ಕೊಲೆ ಬಿಡುತೆ ಬತ್ತಿತ್ತು (ಶಾಂತಿಸು. ೨೨-೩೦೫). 'ಬಿಡುತೆಗೊಳ್ಳು', ' ಬಿಡುತೆಯಾನ್ ' ಪರಾ. ೨. ಅವಕಾಶ ; ಆಸ್ಪದ : ಲಂಘನೆಲಾಗು ಬಿಡುತಗಳ ಬಿಡುಬಿನಿಂ ಕುಡಿಮಿಂಚು ಪೊಡವಿಯೊಳು ಕುಡಿದೋಱಿತು (ವಿಶ್ವ. ೩೫) ; ಕಾರ್ಯಕರ್ತಮಂಡಲಿ ಮೊದಲಾದ ಕೆಲವು ಅಧಿಕಾರ ಸ್ಥಾನಗಳಲ್ಲಿ ಒಂದು ವರ್ಷ ಅಥವಾ ಒಂದು ಸಾರಿ ಇದ್ದವರು ಪುನಃ ಇರಬೇಕಾದುದಿಲ್ಲವೆಂಬ ಬಿಡುತೆಯು ಏರ್ಪಾಟೂ ಇತ್ತು (ಸೋಕ್ರ್ರತು. ೦೩).

**ಬಿಡಿತೆ** : ೩. (ಬಾಣ ಮುಂತಾದುವನ್ನು) ಬಿಡುವಿಕೆ ; ಪ್ರಯೋಗಿಸುವಿಕೆ ; ಎಸೆತ : ಸರಳಿನ ಬಿಡಿತ ಬನ್ನಣಗಳನು ತೋರುವೆವು (ಅಂಬಿಕಾ. ೩೦-೦೩). ೪. ಸ್ವಚ್ಛಂದತೆ ; ಸ್ವೇಚ್ಛೆ : ಸೊಲ್ಲಿನ ಹಿಡಿತ ಬಿಡಿತಗಳೆಲ್ಲ ತ್ರಿಜಗದೊಡೆಯ ತಾ ಬಲ್ಲ (ಗಗಕಾ. ೨-೧೯).

[ಬಿಡು$_1$ + — ತ್ತೆ]

**ಬಿಡುತೆಗೊಳ್ಳು** (ಕ್ರಿ). ಬಿಡುಗಡೆ ಹೊಂದು ; ಮುಕ್ತಿಯನ್ನು ಪಡೆ : ಏಕಣ್ಣ ಕೆಳರಿಪಿರ್, ಇದೆ ತಾನೆ ಮೇಲೆ ಮೇಲೊತ್ತಿ ಬರ್ಪಬಲಿಂದೆ ಬಿಡುತೆಗೊಂಡಿದ್ದಳನ್ ? (ಅಕ್ಷಾಕ್ತಾ. ೩೨-೬೦೭); ದೋಣಿ ಹೊರಟುನಿಂತಿದೆ ಎಂಬ ಮಾತು ಬಿಡುತೆಗೊಂಡ ಚೇತನದ ನಿಲುವನ್ನು ಧ್ವನಿಸುತ್ತದೆ (ಕಂಶೇ. ೨೫೨).

[ಬಿಡುತೆ + ಕೊಳ್ಳು$_1$ (<ಕೊಳ್$_1$)]

**ಬಿಡುತೆಯಾನ್** (ಕ್ರಿ). = ಬಿಡುತೆಗೊಳ್ಳು : ಕೇಡಿಂದೆ ನಾನ್ ಬಿಡುತೆಯಾಂತುದೋ ಪೇರ್ನಲಿವು (ಅಂತಿಗೂ. ೨೦-೪೨೨). [ಬಿಡುತೆ + ಆನ್$_1$]

**ಬಿಡುತೆವೆಱು** (ಕ್ರಿ). = ಬಿಡುತೆಗೊಳ್ಳು : ರಾಣಿಯ ಕಯ್ಯೊಳ್ಪಿಂದಿಗೆ ಸಿಲ್ಕಿ ಪುಣ್ಯದಿಂದಮಾಂ ಬಿಡುತೆವೆತ್ತು ಈ ಕಣ್ಣಾಳಿಂದಮೆ ನಿನ್ನಂ ನೋಡಿದೆಂ (ಬಾತ್ರಗೋ. ೩೩-೦೫). [ಬಿಡುತೆ + ಪೆಱು$_1$]

**ಬಿಡುದಂಬುಲ** (ನಾ). (ನಿರ್ದಿಷ್ಟವ್ಯಕ್ತಿಗಾಗಿ) ಮೀಸಲಾಗಿಟ್ಟ ತಾಂಬೂಲ : ಪಲತೆಱದ ತೊಡುಗೆ ಬಿಡುದಂಬುಲಮೊಳ್ಪಿನಸುಗಳನೆಯ್ದೆ ಸಲಿಸುಗೆ ಕೂರ್ತಂತಲಸದೆ ಸಂಭೋಗದೊಳಂ ಪಲವುಂ ಬನದದೊಳವರ್ಗೆ ಕಳೆವುದುಃ ಪೊತ್ತಂ (ಮುರಶಿ. ೮-೬೩). [ಬಿಡು$_1$ + ತಂಬುಲ]

**ಬಿಡುದಲೆ** (ನಾ). ಕೂದಲು ಕೆದರಿದ ತಲೆ ; ಬಿಟ್ಟ ಮಂಡೆ : ಬಿಡುದಲೆಯ ಬಿಟ್ಟ ಬಾಯ್ಗಳ ಬಱತ ಬಸುಱ . . . ಭೂತವೇತಾಳಪಡೆ ಸುತ್ತಿ ಮುತ್ತಿ ಬೊಬ್ಬಿಟ್ಟು ಝಳಂಕಿಸಿದವು (ಜಕಾಕಾ. ೦೨-೩೨) ; ಬಿಡುದಲೆಯ ಬಸಿವೇಱುಗಳ ಶೋಣಿತದ ನರಳುವಾರೋಹಕರ . . . ಭಂಗವನೇನನೆಂಬೆನು (ಕುಮಾರವ್ಯಾ. ೦೮-೩೯). [ಬಿಡು$_1$ + ತಲೆ$_1$]

**ಬಿಡುದಾಣ** (ನಾ). ಇಳಿದುಕೊಳ್ಳುವ ಸ್ಥಳ ; ತಂಗುದಾಣ ; ಬಿಡಾರ : ಮಂಗಳಿವೇಡಂ ಬಿಡುದಾಣಂ ತನಗೆನೆ ಜಸಮಂ ತಾಳ್ದಿದಂ ಕೃಷ್ಣರಾಜಂ (ಕೌಇ. XX. ೦೩೩-೦೬; 1067) ; ಪಾಂಡುಪುತ್ರರಲ್ಲಿಂದೆಟ್ಟು ತಮ್ಮ ಬಿಡುದಾಣಕ್ಕೆ ಪೋಪುದುಂ (ಮಹಾಶೇ. ೧೦-೧೯ ವ); ಬಿಡುದಾಣವನೆಯ್ದುಚ್ ಪಡೆವಳನಂ ಕಳುಪಿದಳ್ ನಿತಂಬಿನಿ ಕಡುಪಿಂ (ನಳಚಂ. ೭೦೩).

[ಬಿಡು$_1$ + ತಾಣ]

**ಬಿಡುದಾರ** (ನಾ). ಬರಿದಾದ ದಾರ ; ಮಣಿ ಕಳಚಿದ ಎಳೆ : ಮಡದಿ ಜಾನಕಿ ರತುನವಿಲ್ಲದೇ ಮೈಯೊಂದು ಬಿಡುದಾರವಾಯ್ತಲ್ಲೊ ತಮ್ಮಾ (ಜಾರ್ನಪಸು. ೬೬). [ಬಿಡು$_2$ (< ಬಿಡುವು) + ದಾರ$_1$]

**ಬಿಡುದೇವಸ್ವ** (ನಾ). ದೇವಾಲಯಕ್ಕೆ ದತ್ತಿಯಾಗಿ ನೀಡಿದ ಆಸ್ತಿ: ದೇವರ ಸೇವೆ ನಡೆಸುವುದಕ್ಕಾಗಿ ಮಾಡಿದ ದಾನ : ಯಿ ಧರ್ಮಕೆ ಧಾರೆಯನೆಱದು ಆಚಂದ್ರಾರ್ಕಸ್ಥಾಯಿಯಾಗಿ ಬಿಡುದೇವಸ್ವವಾಗಿ ಸರ್ವಮಾನ್ಯವಾಗಿ ಕೊಟ್ಟೆವಾಗಿ ಸುಖದಿಂ ಭೋಗಿಸೂದು (ಕೌಇ. IX-ii, ೪೫೦-೦೭; 1447) ; ಆ ದೇವರಿಂಗೆ ನಡವ ಅಂಗರಂಗ ನೈವೇದ್ಯ ಮುಂತಾದ ಧರ್ಮಗಳಿಗೆ ಬಿಡುದೇವಸ್ವವಾಗಿ ಕ್ಷೇತ್ರಂಗಳ ಬಿ[ಟ್ಟು] (ಕಇ. III-i, ೬-೦೩; 1527). [ಬಿಡು$_1$ + ದೇವಸ್ವ]

**ಬಿಡುನಾಯ್** (ನಾ). ಸ್ವೇಚ್ಛೆಯಾಗಿ ತಿರುಗುವ ನಾಯಿ ; ಬೀದಿನಾಯಿ : ಕೊರಲೊಳ್ ಕಟ್ಟಿದ ಮಾಲೆಯ ಸಿರಿಖಂಡದ ತಳ್ಪಿನೊಂದು ಬಿಡುನಾಯ್ಬರ ಸಾದರದಿಂದನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗನುಣೆ ಕಂಡು ದಱಿಂ ಪ್ರತಹೀನರ್. . . ಅತಿಕಷ್ಟರಪ್ಪರವನಿಯೊಳತಿಥಿಗಳಿನ್ನನ್ನದಾನಮಂ ಕುಡುಮೆಡೆಯೊಳ್ (ಅಂಪು. ೦೫-೪೨). [ಬಿಡು$_2$ (<ಬಿಡುವು) + ನಾಯ್]

**ಬಿಡುನುಡಿ** (ನಾ). ಅಡ್ಡಿಯಿಲ್ಲದ ಮಾತು ; ತಡೆಯಿಲ್ಲದ ಮಾತು : ಮತ್ತೋರ್ವರ್ ಪುರುಡಿನಿಂ ಪುಟ್ಟಿದ ಮುಳಿಸಂ ತಿಳಿಪಲೊಡರಿಸಿದ ವಲ್ಲಭಂಗೆಡಗುಡದ ಬಿಡುನುಡಿಯಂ ನುಡಿದು (ಕಂದ್ರಪು. ೬-೬೬ ವ); ಬಿಡುನುಡಿಗಳ ಬಿತ್ತರಿಸುವ ಬಿಡದೆ ಕಾದುವ ಗಂಡ ಪೆಂಡಿರನೇತಕೆ ಪಡೆದನಕಟ ಪದ್ಮಭವನು (ಹಂಶಿ. ೬-೯): ಸೊರ್ಕಿಂ ಗಟ್ಟುವರಗಿಳಿಯ ಬಿಡುನುಡಿಯ ಭಂಗಿಯಂತೆ, ಕರ್ಣರಸಾಯನಮಾಗೆ ಶ್ರೀರಾಮನಂ ಪಾಡಿ ಪೊಗಟ್ಟುಗಾಯಕಸಂದೋಹದಿಂ . . . ಕೇರಿಗಳ್ ಸೊಗಯಿಸೆ (ರಾಮವಿಕ. ೨೩-೦೩).

[ಬಿಡು$_2$ (<ಬಿಡುವು) + ನುಡಿ$_2$]

**ಬಿಡುಪಡು** 'ಬಿಡುವಡು' ನೋ.

**ಬಿಡುಬಿಸಿಲು** (ನಾ). ತಡೆಯಿಲ್ಲದ ಬಿಸಿಲು : ಒಂದು ಬೀಜವ ಬಿತ್ತಿವಡೆ ಮೂರು ಫಲವಾಯಿತ್ತು . . . ಅದು ಬಿಡುಬಿಸಿಲಿನಲ್ಲಿ ಒಣಗೆ ಪಡಿಪುಪ್ಪಕ್ಕೆ ಮೂಗಳವಾಯಿತ್ತು (ವಚನಶಾ. ೨೦೭-೬೬೧).

[ ಬಿಡು$_2$ ( < ಬಿಡುವು ) + ಬಿಸಿಲು ( < ಬಿಸಿಲ್ ) ]

**ಬಿಡುಬೀಸು** (ನಾ). ೧. ನಿರ್ಬಂಧವಿಲ್ಲದುದು ; ಯಾವ ಕಟ್ಟಿಗೂ ಒಳಪಡದುದು ; ಸ್ವಚ್ಛಂದವಾದುದು : ಆ ಸ್ವಾತಂತ್ರ್ಯದಲ್ಲಿ ನಮ್ಮ ಮನಸ್ಸು ಬಿಡುಬೀಸಾಗಿತ್ತು (ಹಂಸರ. II, ೯೦). ೨. ವಿಶಾಲವಾದುದು; ವಿಸ್ತಾರವಾದುದು ; ಹರವು : ನಮ್ಮ ಮನೆ ಬಿಡುಬೀಸಾಗಿದೆ (ರಾಮಾಶ. ೬೫); ಅವಳು . . . ಕೋಣೆಯ ಬಿಡುಬೀಸಾದ ಸ್ಥಳದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಸುತ್ತಾಡುತ್ತಿದ್ದಳು (ಶುನರು. ೦೯೩).

[ಬಿಡು$_2$ (<ಬಿಡುವು) + ಬೀಸು$_2$]

**ಬಿಡುಬು** (ನಾ). [ನಾಟ್ಯ]ಒಂದು ಭಂಗಿ (?): ಅಡಿದೊಡರ್ವನಿದು ಪಡೆಪು ನಡುಬಳಸಿಯನುಗೊಳಿಸಿ ಜಡಿವವ್ರೋಲೆಯನೊಡಂಬಡಿಸಿ ಒಡನೆ ಲಂಘನೆಲಾಗು ಬಿಡುತಗಳ ಬಿಡುಬಿನಿಂ ಕುಡಿಮಿಂಚು ಪೊಡವಿಯೊಳು ಕುಡಿದೋಱಿತು (ವಿಶ್ವ. ೩೫). [ ? ]

**ಬಿಡುಮಂಡೆ** (ನಾ). = ಬಿಡುದಲೆ : ಹಸುರುಮೈ ಹಾವಿನಾಭರಣ ಬಿಡುಮಂಡೆ . . . ಕೆಂಪಿನ ಪುಷ್ಪಸರಪೊಪ್ಪುವಾ ಹೊಸ ಏಮೆಯ

ಯಮುದಳಿ . . . ಅಜಿತೆಯೆಂಬೆಂಟು ಹೆಸರೆಸೆವ ದೇವಾಂಗನೆಯರು (ಸಿದ್ಧರಾ. ೪-೯) ; ತರಹರಿಕೆ ಕೈಗೂಡದವನೀಶ್ವರನು ಕೌಸಲೆಸಹಿತ ಬಳಲುವ ಶಿರದ ಬಿಡುಮುಂಡೆಗಳ . . . ಕಟ್ಟಳಲಿಕೆಯಲ್ಲೈದಿದನವನಿಜಾಪತಿಯು (ತೊರರಾ. ೨-೩-೩೩); ಆರು ಅಳುಬಿದವರುಗಳು . . . ತೆಂಕಮುಖವಾಗಿ ಬಿಡುಮುಂಡೆಯಲ್ಲಿ ಸುರಾಪಾನವಂ ಸೇವಿಸಿ ಹೋದವನ ಪಾಪಕೆ ಹೋಹರು (ಎಕ. XI. ದಾವಣ. ೦೦೬-೨೬, 1528). [ಬಿಡು$_1$ + ಮುಂಡೆ]

**ಬಿಡುಮಂದಿ** (ನಾ). ಕೆಲಸಕ್ಕೆ ತೊಡಗಿಸಿದ ಜನ ; ಕೆಲಸಕ್ಕೆ ಬಿಟ್ಟ ಜನ : ಕರದ ಕುಡುಗೋಲು ತಡಿಕೆ ಮುಕ್ಕರಿ ಸಹ ಬಹ ಕಾವಮಾಟದ ಬಿಡುಮಂದಿಗೆ ಲೆಕ್ಕವಿಲ್ಲ (ಕಂಪಹ. ೦೦-೪೦). [ಬಿಡು$_1$ + ಮಂದಿ$_1$]

**ಬಿಡುಮಿದುಳ್** (ನಾ). (ತಲೆಯಿಂದ) ಹೊರಚೆಲ್ಲಿದ ಮಿದುಳು : ಬಿಡುಮಿದುಳ ರಾಶಿಗಳ ರಚನೆಯು ರಾಜಹಂಸೆಗಳ . . . ಸರಸಿಯ ನಡುವೆ ನಲಿನಲಿದಾಡುತ್ತಿರ್ದುದು ಭೀಮುವನದಂತಿ (ಕುಮಾರವ್ಯಾ. ೦೨-೨೩) ; ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡೆಗೆಡೆದು ಬೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣಿ ಕಣ್ಗೆಸೆದುದು (ಕಂಠೀ. ೩೯-೩೪) ; ಬಿಡುಮಿದುಳ ತುಂಡದಿಂ ತಂಡದಿಂ ರುಂಡದಿಂ ಮುಂಡದಿಂ . . . ಎಡೆವಿಡದೆ ಸತ್ತರಿಂದಿಡಿದಿರ್ದುದು (ಕೈಮಿಭಾ. ೦೨-೪೪).

[ಬಿಡು$_1$ + ಮಿದುಳ್]

**ಬಿಡುಮುಡಿ** (ನಾ). ೧. ತುರುಬು ಕಟ್ಟದಿರುವ ಕೂದಲು ; ಬಿಚ್ಚಿರುವ ತಲೆಗೂದಲು : ಸ್ಮರಕೃತಕಾಚಲಶಿಖರಾಂತರಲತೆ ಮೇಲ್ವಾಯ್ದುದೆಂದು ಸೋಗೆಯ ಬಣ್ಣಂ ಧರೆಗೆಬಗುವಂತದೊರ್ವಳ್ ಮರಾಗಿ ಬಿಡುಮುಡಿಯಿನೆಸೆದು ಬಿಡಿಯಿಂದಿಟ್ಟಿದಳ್ (ಜಗರು. ೦೪-೩೯) ; ನಿಕ್ಕುವಂ ಪೆಣ್ಣ ಇವಳ್. ಸರಸಕಮಲಮೆ ಮೊಗಂ: ಮೀನೆ ಕಣ್: ಪಾವಸೆ ಬಿಡುಮುಡಿ (ರಾಮಾಶ್ವ. ೯-೦೦). ೨. ಕೆದರಿದ ತಲೆ ; ಓರಣವಾಗಿ ಬಾಚದಿರುವ ಕೂದಲು : ಬಿಡುಮುಡಿಯ ಸುರಿವ ಕಂಬನಿವೊನಲ . . . ಮಡದಿಯುರ ದನಿಯನಾಲಿಸಿ ಪರ್ಣಶಾಲೆಯು ಪೊಚಿಮಟ್ಟನು (ಹಕರಾ. ೬-೨೬) ; ಒಡನೆ ಬಂದರು ಕಂಬನಿಯ ಬಿಡುಮುಡಿಯ ಹಾಹಾರವದ ರಭಸದ ನಡೆಯಲಖಿಳವಿಲಾಸಿನಿಯರು ಸಹಸ್ರಸಂಖ್ಯೆಯಲಿ (ಕುಮಾರವ್ಯಾ. ಸ. ೦೪-೬೪). ೩. ಸಡಿಲವಾಗಿ ಹಾಕಿದ ತುರುಬು ಅಥವಾ ಜಡೆ : "ಬಿಡುಮುಡಿ=ತುದಿಯಲ್ಲಿ ಮಾತ್ರ ಗಂಟುಹಾಕಿರುವ ಕೂದಲು" (ಶ್ರೀಕಂ). [ಬಿಡು$_1$ + ಮುಡಿ$_3$]

**ಬಿಡುಮುತ್ತು** 'ಬಿಡಿಮುತ್ತು' ನೋ.

**ಬಿಡುರಥ** (ನಾ). ಹರಿಯುವ ರಥ ; ಮುನ್ನುಗ್ಗುವ ತೇರು : ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿ ಹಾಯ್ಸುವ ಬಿಡುರಥವ ತಲೆವರಿಗೆಯಲಿ ತವಕಿಸುವ ಕಾಲಾಳ ಕಡಿದನಂಬಿನೊಳಾಗಜವನಾ ಕಡುಹಯವನಾ ರಥವನಾ ಮಂಗಡದ ಕಾಲಾಳುಗಳನೊಂದು ಮಿಘಳಿಗೆ ಮಾತ್ರದಲಿ (ಕುಮಾರವ್ಯಾ. ಕ. ೦೩-೨೩) ; ಅಶ್ವವನಶ್ವದಿಂದಪ್ಪಳಿಸುತೊಡಹಾಯ್ದು ಬಿಡುರಥವ ರಥದಿಂದ ಹೊಯ್ದುಬ್ಬಿ ಹುಡಿಗೆದರುತಟಿಯಟ್ಟಿ ಸದೆದನು (ತೊರರಾ. ೩-೬-೦೯). [ಬಿಡು$_1$ + ರಥ]

**ಬಿಡುರನ್ನ** (ನಾ). ಬಿಡಿಯಾದ ರತ್ನ : ಕಡೆಗರ್ಘ್ಯಶಾಂತಿಧಾರೆಯ ಮಾಡಿ ಮಿಸುನಿವೂ ಬಿಡುರನ್ನಗಳ ವೃಷ್ಟಿಮಾಡೆ (ಶರಕ. ೩೪-೨೪).

[ಬಿಡು$_3$ (<ಬಿಡಿ) + ರನ್ನ (<ರತುನ)]

**ಬಿಡುಲವಣ** (ನಾ). ಒಂದು ಬಗೆಯ ಕ್ಷಾರ ; ಡೊಣೆಯುಪ್ಪು : ಒಡಲೊದವಿ ಬಾತು ತೋರ್ಪೊಡೆ . . . ಆಡಿನ ಪಾಲಂ ಬಿಡುಲವಣಮುಮಂ ಕರಿಬು ತೊವರಿಯಶನಮೆ ಪಥ್ಯಂ (ಲೋಕೋಪ. ೯-೦೬೪); ಬಿಡುಲವಣ ಜೀರಕ ಚವ್ಯಲವಣ ಸಂವರ್ಚಕಮುಮ್ಮೃತಂ ಶ್ಲೇಷ್ಮವಾತಶೂಲಾಪಹರಂ (ಅಶ್ವಶಾ. ೦೦-೦೦). [< ಬಿಡಲವಣ]

**ಬಿಡುವಕ್ಕಲು** (ನಾ). ಪ್ರತಿಯೊಂದು ಒಕ್ಕಲು ; ಪ್ರತ್ಯೇಕವಾದ ಒಕ್ಕಲು : ತಳವಾರ ಮುಖಾಂತ್ರ ಬಾಹ ಬಿಡುವಕ್ಕಲ ತೆರು (ಎಕ. VII, ಶಿವಮೊ. ೩-೨೬ ; 1671). [ಬಿಡು$_3$ (<ಬಿಡಿ) + <ಒಕ್ಕಲು$_2$]

**ಬಿಡುವಡು**, ಬಿಡುಪಡು (ಕ್ರಿ). ಬಿಡುಗಡೆಯನ್ನು ಹೊಂದು; ಸ್ವತಂತ್ರವಾಗು; ಮುಕ್ತವಾಗು : ಜನಕಂ ತನ್ನ ಪುಣ್ಯದೊಳಡ್ಡಮಂ ಧಾರೆಯುಸೆಜುವುದುಂ ಪಾಪಿಗಳೆಲ್ಲರ್ ಬಿಗಿವಟ್ಟ ನರಕಬಾಧೆಯಿಂ ಬಿಡುವಟ್ಟು . . . ಬರ್ದಿಲರ ನಾಡಂ ಪುಗುತಂದರ್ (ರಾಮಾಶ್ವ. ೦೦೬-೬). **ಬಿಡುಪಡು** : ಬಿಡುಪಟ್ಟ ನೊಸಲ ನುಣ್ಗುರುಳ ಸಾಲಿಂದೆಂದು ಬೆಡಗಾಗಿ ನಿಂದಿರ್ದರಾಗ (ಶರತ. ೦೪-೦೨). [ಬಿಡು$_2$ (<ಬಿಡುವು) + ಪಡು$_1$]

**ಬಿಡುವಡೆ** (ಕ್ರಿ). = ಬಿಡುವಡು : ಅಣೆಗಟ್ಟನಲ್ಲಿ ತುಂಬಿ ತುಳುಕುವ ಜೀವನಪ್ರವಾಹವು ಕಡಿಯಲ್ಲಿ ಬಿಡು(ಮೋಕ್ಷ)ವಡೆದು ಹರಿದು ಸಾಗರದಲ್ಲಿ ಸಂಗಮಪಡೆದು ಶಾಂತವಾಗುತ್ತಿದೆ (ಪಾಡೋಜ. ೩೩೪).

[ಬಿಡು$_2$ (<ಬಿಡುವು) + ಪಡೆ$_1$]

**ಬಿಡುವನಿ** (ನಾ). ಸುರಿಯುತ್ತಿರುವ ಕಂಬನಿ,— ಕಣ್ಣೀರು : ಒಡನೆ ಕಳುಹುತ ಬಂದನಾ ನೆಲದೊಡೆಯನನುಜರುಸಹಿತ ನಯನದಿ ಬಿಡುವನಿಯ ಸಾಲಿನಲಿ ನನೆದರು ಬಂದು ಕಿಚಿದೆಡೆಯ (ಕುಮಾರವ್ಯಾ. ೪-೩೩); ಹರಿನಂದನನ ಲಲನೆಯ ಲೋಚನದ ಬಿಡುವನಿಯನಂಶುಕದಗ್ರದಿಂದೊರಸಿದನು (ತೊರರಾ. ೪-೩-೨೬). [ಬಿಡು$_1$ + ಪನಿ$_2$]

**ಬಿಡುವನೆ** (ನಾ). ಇಳಿದುಕೊಂಡಿರುವ ಮನೆ ; ಬಿಡಾರ : ಮಹಾರಾಜನು . . . ಆ ವೇಶ್ಯೆಯ ಬಿಡುವನೆಗೆ ಎರಡುಸಾರಿ ಬಿಜಯ ಮಾಡಿದ್ದನು (ಮುಂತ್ರಕ. ೦೩೦-೦೯). [ಬಿಡು$_1$ + ಮನೆ]

**ಬಿಡುವಯಣ** (ನಾ). ಪ್ರಯಾಣಮಧ್ಯದಲ್ಲಿ ತಂಗುವಿಕೆ ; ಉಪ್ಪಯಣ : ಬಿಟ್ಟ ಪಯಣದೊಳು ಬಿಡುವಯಣಮಿಲ್ಲದೆ ದಾಳಿಯಿಟ್ಟು (ಸಮ್ಯಕ್ತ್ವ. ೨-೦೦). [ಬಿಡು$_1$ + ಪಯಣ]

**ಬಿಡುವರಿ** (ನಾ). ಸ್ವೇಚ್ಛೆಯಾಗಿ ನುಗ್ಗುವುದು ; ಅಡೆತಡೆಯಿಲ್ಲದೆ ಸಾಗುವುದು : ಗಿಡುಮರನ ಸೆಳೆಸೆಳೆದು ಬಿಸುಡುತ ಬಿಡುಮರಿಯ ಬೀದಿಗಳಲಟ್ಟಿದವು . . . ಕಟಿಪಡೆಯ ಕೊಂದವು ಕೋಟಿಸಂಖ್ಯೆಯಲಾ ಮದೇಭಚಯ (ತೊರರಾ. ೬-೩೨-೩). [ಬಿಡು$_2$ (<ಬಿಡುವು) + ಪರಿ$_3$]

**ಬಿಡುವಲೆ** (ನಾ). ಒಂದು ಬಗೆಯ ಬಲೆ ; ಅಗಲವಾಗಿ ಹಾಸುವಂಥ ಬಲೆ : ಬಿಡುವ[ಪಾಠಾಂ. ವೆ]ಲೆ ಸೊರ್ಕುಮರ್ದು ಪದವಿಲ್ . . . ಗಿಡಗ ಮೊಪಿಪ್ಪಿವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೩-೩೨); ನಿಡುವಲೆ ಸಾಲ್ವಲೆ ಬಿಡುವಲೆಗಳನಿಪ್ಪುವೆಸೆದುವಾ ಬೇಂಟೆಗರೊಳ್ (ಕಬಿಕಂ. ೩-೨೪). [ಬಿಡು$_1$ + ಬಲೆ$_1$]

**ಬಿಡುವಾಯ್**, ಬಿಡುವಾಯಿ (ನಾ). ಅಗಲವಾಗಿ ತೆರೆದ ಬಾಯಿ : ಬಿಡುವಾಯ್ ತುಡುಜೊಡರಬುಗೆಚಿಯೆಂಬಿವು ಪಡೆಯವು ಬಿಂದುವನುದಂತವೃತ್ತಿಯನಾಳ್ದಂ (ಕವಿರ. ೧೩೦) : ಹೆಬ್ಬಲ್ಲ ಬಿಡುವಾಯ ಜೋಲ್ವ ಕೆನ್ನಾಲಗೆಯ ಗಬ್ಬಿನಾಯ್ಗಳ ಹಾಸನುಗಿದು ಬಿತೆ ಪಂದಿಗಳನಬ್ಬರಿಸಿ ತುಡುಕಿದುವು (ಕೈಮಿಭಾ. ೨೯-೪೬). **ಬಿಡುವಾಯಿ** : ಬ್ರಹ್ಮಹತ್ಯೆಕಾರೊಡಲಿಂ ತಾ ಬಿಡುವಾಯಿಯಿಂ ಕಪ್ಪರವಂ ಪಿಡಿದೊಡನೊಡನೆಯ್ದಿ ಸುರಪನಂ ಪೀಡಿಪುದು (ಹಾರಿಶ್ಚ. ೦-೨-೨೩). [ಬಿಡು$_1$ + ಬಾಯ್]

**ಬಿಡುವಾಯಿ** 'ಬಿಡುವಾಯ್' ನೋ.

**ಬಿಡುವಾರು** (ನಾ). ಬೇಟೆಯ ಒಂದು ಸಾಧನ (?) : ಪೆರ್ಬಲೆ ಬಿಡುವಾರು ಗೋಡುವಲೆಯೆಂಬಿನಿತಂ ಪೊಟಿಗಟ್ಟ ಕಾನನಸ್ಥಲದೊಳಗಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ (ರಶಳು. ೨-೦೦೩). [?]

**ಬಿಡುವೀಳೆಯ** (ನಾ). = ಬಿಡುದಂಬುಲ : 'ಬಿಡುವೀಳೆಯುದಂಬುಲ' ಪರಾ. [ಬಿಡು$_1$ + ವೀಳೆಯ]

**ಬಿಡುವೀಳೆಯದಂಬುಲ** (ನಾ). = ಬಿಡುದಂಬುಲ : ನಿಡುಸುಯ್ದು ಧಾಳಿಯ ಬಳಿಕೆ ಚೆಂದುಟರಸರ್ಪೊಡನೆ ಬಿಜೆಯ್ತುದು ಕರ್ಪುರದ ಬಿಡುವೀಳೆಯದಂಬುಲ ವಿರಹಾಗ್ನಿಗೆ ಪುಡಿವಟ್ಟುದೇನ ಬಣ್ಣಿಸುವೆ (ಕಂಸಪ. ೯-೧೭೨).
[ಬಿಡುವೀಳೆಯ + ತಂಬುಲ]

**ಬಿಡುವು**, ಬಿಡ್ವು (ನಾ). ೧. ವಿರಾಮ; ವಿಶ್ರಾಂತಿ : ಗುರುಗಳ ಪರಿಚರ್ಯೆಯನ್ನು ಯಥಾವಿಧಿಯಾಗಿ ಮಾಡಿ ಮುಗಿಸಿದನಂತರವೇ ಅವನಿಗೆ ಬಿಡುವು ಸಿಕ್ಕುತ್ತಿತ್ತು (ಚಾಚಿ. ೪೦೦); ಬಿಡುವಸು ಕೊಟ್ಟಂಥ ಹೊಲದೊಳು ಬೆಳೆದರೆ ಹುಲುಸಾಗಿ ಬಲಿಪುದು ಕಾಳು (ಇಂತಾಶ. ೧೪೦–೯೩); ಆಫೀಸಿನಲ್ಲಿ ಬಿಡುವಿಲ್ಲದ ಕೆಲಸ (ಮಗಪಡ. ೦೩೪). ೨. ರಜೆ; ಸೂಟಿ : ಅವರು ಈ ಮೂರು ಬಿಡುವಿನ ದಿನಗಳನ್ನು ಬಹು ಸುಖವಾಗಿ ಕಳೆಯಲಿದ್ದರು (ಆಪೂಲೀ. ೦೨೬); ನನ್ನ ಬಿಡುವು ಇನ್ನೆರಡು ವಾರವಿದೆ (೧೧ಚಾ. ೫); ಈ ದಿನ ಶಾಲೆಗೆ ಬಿಡುವು (೪ಪತ್ರ. ೩-೦). ೩. ಅಂತರ; ಅವಕಾಶ; ಆಸ್ಪದ : ಪಿಡಿದ ಜವನಿಕೆಯ ಮುಱಿಯೊಳ್ ಕುಡುಮಿಂಚಿನ ಬಳ್ಳಿ ಮುಗಿಲ ತೆಳ್ಪೊಱೆಯೊಳ್ ಕಣ್ಗೆಡಱುವೊಲಡರೆ ತೋರ್ದುವು ತೊಡವಿನ ಬಿಡುವುಂ ಬಿಡೌಜನಂಗಚ್ಛವಿಯುಂ (ಅಸಂಕ್ಷ. ೫–೯೯); ಬವರಸವೆಯದೆ ತೇಜಿಗಳ ಬಲು ಜವವು ಜಾಱದೆ ಬಿಡುವ ತಿವಿದರೆ ಸವಗವುಚ್ಚಳಿಸುಪವು (ಕುವ್ಯಾ. ೮–೬೬) : ಕಾರ್ಯಭಾರವು ಬಹಳವಾಗಿದ್ದುದರಿಂದ ಇತ್ತಕಡೆ ಬರಲು ಬಿಡುವೇ ಸಿಕ್ಕಲಿಲ್ಲ (ಅಶಿ. ೦೮೩). ೪. ಮನೆಗಳಿಲ್ಲದ ವಿಶಾಲವಾದ ಪ್ರದೇಶ; ಬಯಲು : ಮಂದಿರ ಪ್ರಾಕಾರ ಸೋಪಾನದೊಳು ಕುಳಿತು ಪಡುವ ಬಿಡುವಿನ ಸೊಗಸು ಮಿಗಿಲ ಕಾಣೆ (ಮರಿಲೀ. ೪೬–೯). ೫. ಸುರಿಯುವಿಕೆ; ಧಾರೆಯೆರೆಯುವಿಕೆ : ವಿದೂರಜಂಗಳ ಕೊಡಂಗಳ ಬಿಡುವಿನಿಂ ಘೃತಾಭಿಷೇಕಮನತಿ ಸಂತೈಸುವಂತೆಯುಂ . . . ಅಭಿನಯಿಸುತ್ತುಂ (ಅನಂತ್ಕ. ೫-೬೦ ವ). **ಬಿಡ್ವು₂** : ೧. ಈಚೀಚೆಗೆ ಬಿಡು ಸಿಗೋದೇ ಅಪರೂಪವಾಗಿದೆ (ಒಆ೦). ೬. ಬಿಡುಗಡೆ; ಅನಿರ್ಬಂಧತೆ : 'ಬಿಡುವಡು', 'ಬಿಡುವಡೆ' ಪರಾ. ೭. ಸ್ವಚ್ಛಂದತೆ; ಸ್ವೇಚ್ಛೆ : 'ಬಿಡುನಾಯ್', 'ಬಿಡುಸೂಳೆ' ಪರಾ. ೧೪. ಬರಿದು; ಖಾಲಿ; ಪೋಳು : 'ಬಿಡುಗಿವಿ', 'ಬಿಡುದಾರ' ಪರಾ. ೯. ದಾನ : ಕೊಡುಗೆ (?) : ಚೊಕ್ಕನಾಥದೇವರಿಗೆ ಸಲುವಂತಾ ದಿನಕಟ್ಟಲೆಯುಲು ಕರಡಿಯ ಪಳಿಯ ಚತುಸೀಮೆಯೊಳಗಾದ ಬಿಡುಗಳಿಗೆ ಸಲುವ ಗ್ರಾಮ ೧ ಜ ಮುಗ್ಗದೆಜ[3] (ಎಳ. IX (೩). ೨೦ಗಳೂ. ೦೬೨–೩: 1408).

ಬಿಡುವಾಗು = ಅವಕಾಶವುಂಟಾಗು : ಆಸ್ಪದವಾಗು : ಇನ್ನು ಮವನನ ಬೀಯಗಕೆ ಬಿಡು [ಕುಣಾಂ. ಡ]ವಾದ್ರಿ ನಿನಗೆಲೆ ರಸಿಜ (ತೊರರಾ. ೪-೫-೧೩).
[ಬಿಡು₁ + — ಪು./ಮಲ. ವಿಟ; ತೆಲು. ಬಿಡುವು]

**ಬಿಡುವುಗೊಳ್** (ಕ್ರಿ). ಸ್ವತಂತ್ರನಾಗಿರು; ಯಾವ ಕಟ್ಟಿಗೂ ಸಿಕ್ಕದಿರು : ವಿನ್ನ ಪಕ್ಷಧರ ಚತುಷ್ಪಾದಿಯಿದು . . . ಪಾಯ್ವುದುಂ. ಮನೆಯೊಳಗಿವಬಿ ಗೊತ್ತಿನೊಳ್ ಬಗೆಯೊಸೆದು ಬಿಡುವುಗೊಂಡಪುದು (ಬದ್ಧಕೃ. ೨೨–೪೩೬).
[ಬಿಡುವು + ಕೊಳ್₁]

**ಬಿಡುವೆಣ್**, ಬಿಡುವೆಣ್ಣು (ನಾ). (ಯಾವುದಾದರೂ ಸೇವೆಗಾಗಿ) ವಿಪಾಸಲಾಗಿ ಕೊಟ್ಟ ಯುವತಿ; ಸಖಿ : ಕೊಡುವ ಪಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಗಂ ಲೆಕ್ಕವಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದುಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ (ಕಂಶಭಾ. ೦೧–೫೫); ವಿಬಾಡಿವ ರೂಪು ಜವ್ವನ ಬಿಡುವೆಣ್ಗಳೊಳ್ ಬೇಟದ ಮಾಳ್ಪುದನ್ನಾಯ ಕೂಟಕೆ ತರಣಿ ಬಂದರೆ ವೃಂದನೆಂಪು ಕವಾಟವ ಮುಗಿದುಮಭೋಜ (ಪೋಹಿಪ. ೦೫–೬); ಬಿಸವಕ್ಕೆಗಣವುಂ ಸಾರುವ ಬಿಡುವೆಣ್ಗಳ್ ಪೊಂಗದೆ ಪನಗಿ ನಡೆವ ಬೆಸವೆಣ್ಗಳ್ . . . ಮನೆವೆಣ್ಗಳ್ ಸೊಗಸಿದುದಾವುದಯದೊಳು (ಜಯುಕಾ. ೦೨–೦೫). **ಬಿಡುವೆಣ್ಣು** : ಬಿಡುವೆಣ್ಣುಗಳ ನಿಳಯಮೆನಿಸಿ ಮೆಱೆದಿಹುದಾ ದುರ್ಗದ ಕಲಕಲರವ ರಾಜವೀಥಿ (ಕುಂದಾಣಾಂ. ೪-೦೦೬); ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣುಗಳ ಮಂಗಡವಾ ಪುರದೊಳೊಪ್ಪಿದುದು (ರಾಮವು. ೩–೯೬); ಬೆಲೆವೆಣ್ಣು ಬೆಸವೆಣ್ಣು ಮನೆವೆಣ್ಣು ಬಿಡುವೆಣ್ಣು . . . ಭೂಲಲನೇಶನ ನೋಡಿದರು (ಗೊಪ್ಪಕ. ೦-೬೫). [ಬಿಡು₁ + ಪೆಣ್]

**ಬಿಡುವೆಣ್ಣು** 'ಬಿಡುವೆಣ್' ನೋ.

**ಬಿಡುವೆಸರ್** (ನಾ). ಬೇರೆಯ ಹೆಸರು; ಪರ್ಯಾಯನಾಮ : ಒಡವುಟ್ಟಿದ ಕೌಸ್ತುಭಮಣಿಯೊಡನಿರಲೆಂಗೆಂದು ಬಿಟ್ಟು ವಿಷ್ಣುವಿನುರವಂ ಬಿಡುವೆಸರ್ಗೆ ಪದ್ಮನಾಭನ ಬೆಡಂಗಿನುರದಲ್ಲಿ ಲಕ್ಷ್ಮಿ ಸಲೆ ನೆಲಸಿರ್ಪಳ್ (ಅರ್ದನೇ. ೦–೯೨). [ಬಿಡು₃ (<ಬಿಡಿ) + ಪೆಸರ್]

**ಬಿಡುಪೊನ್** (ನಾ). ಹಂಚಲು ಅನುಕೂಲವಾದ ಬಿಡಿಯಾದ ನಾಣ್ಯ.–ಹೊನ್ನು : ಅರ್ಥಿಸಂತತಿಗೀಯಲ್ ಬಿಡುಪೊನ್ನುಮನಾಳ್ಗಟ್ಟುವ ತೊಡರೊಳ್ ತೊಡರ್ದಿರ್ದರರಸುಮಕ್ಕಳ್ ಕೆಲಬರ್ (ಕಂಶಭಾ. ೧೦–೩೬).
[ಬಿಡು₃ (<ಬಿಡಿ) + ಪೊನ್]

**ಬಿಡುಸೂಳೆ** (ನಾ). ಒಬ್ಬನಿಂದ ಪರಿತ್ಯಕ್ತಳಾಗಿ ಸ್ವೇಚ್ಛೆಯಾಗಿ ಬಾಳುವ ಸೂಳೆ.—ವೇಶ್ಯೆ : ಈಗ ಒಬ್ಬರ ಸೂಳೆ ಇನ್ನು ಅವರು ಬಿಟ್ಟರೆ ಬಿಡುಸೂಳೆಯಾಗಿ ಕಂಡವರನ್ನೆಲ್ಲ ಮೋಹಿಸಬೇಕೇ ? (ಹಳ್ಳಹಾ. ೨೬); ಈ ಹಾದಿಬಿಟ್ಟವರನ್ನು ಸಾಮಾನ್ಯವಾಗಿ 'ಬಿಡುಸೂಳೆ'ಯರೆಂದು ಊರಲ್ಲಿ ಕರೆಯುತ್ತಾರೆ (ಹುಮುಂಠ. ೭೯); ನಾಳೆ ಎರಡು ಹೊತ್ತಿನ ಅನ್ನಕ್ಕೆ ತೊಂದರೆಯಾಗಿ ಮಗಳು ಬಿಡುಸೂಳೆಯಾಗಿ ಬಾಳುವುದು ಅವಳಿಗೆ ಇಷ್ಟವಿಲ್ಲ (ದೀಪಹೂ. ೪೬).
[ಬಿಡು₁ + ಸೂಳೆ₁]

**ಬಿಡುಹ** (ನಾ). ತ್ಯಜಿಸುವಿಕೆ; ತೊರೆಯುವಿಕೆ : ಆವಂಗದಿಂ ಧನ ಬರಲು ಬಿಡುಹವೆ ನಿರಾಶತ್ವ (ಕಿವಗೀ. ೫೬–೨೬೪).
[ಬಿಡು₁ + — ಹ₂ (< — ಪ₂)]

**ಬಿಡುಹು** (ನಾ). ಬಿಡುಗಡೆ; ಅನಿರ್ಬಂಧತೆ : ತುಡುಕುವಂಕುಶದಿಂದ ಮುನ್ನಿಳಿಯೊಡೆಯೆ ಗಜ ಗಾಢಿಸಿದವರಸರ ಬಿಡುಹು ತಪದೆಡಗಲುಸಬಗೆದುವು ವಿಗಡ ಪಾಯದಳ (ಕುವ್ಯಾಲೀ. ೨–೨).
[ಬಿಡು₁ + — ಹು₂ (< — ಪು₂) ./ ತೆಲು. ವಿಡುಪು]

**ಬಿಡೆ₁** (ನಾ). (ಕರಾ) ಹಣ್ಣಿನ ಒಳಭಾಗದ ಒಂದೊಂದು ಖಂಡ; ತೊಳೆ : ಹಲಸಿನ ಹಣ್ಣಿನ ಬಿಡೆಗಳನ್ನು ಜೇನುತುಪ್ಪದಲ್ಲಿ ಅದ್ದಿಯದ್ದಿ ಯಥೇಷ್ಟವಾಗಿ ತಿಂದು ತೇಗಿದನು (ಗಂಗಾಪ. ೨೦). [< ಬಿಡಿ ? ]

**ಬಿಡೆ₂** (ಅ). ೧. ವಿಶೇಷವಾಗಿ; ಅತಿಶಯವಾಗಿ : ಕಪಿಂಜಳಂ ಬಾಯಬಿಬ್ಬಿದಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಗಲ್ (ಕಾದಂಪೂ. ೧೦೬); ಬಿಡೆ ಬಗ್ಗಿಸೆ ಮಧುವಿಕಾರಿ ಕೋಗಿಲೆ ಕಿಸುಗಣ್ಣುವೆ ನೀಂ ವಿಜಾತಿಯೊಳ್ಗಿನಮುಟೀ (ಮಲ್ಲಪು. ೩–೩೯); ಮಿಗೆ ಮುನ್ನಂ ಕಂಡವೋಲಿರ್ದಪುದು . . . ಈ ಪಾದಂ ಬಿಡೆ ಪೊರದೀ ತುಂಬಿ (ಕಬ್ಬಿಗಾ. ೦೦೬). ೨. ರಭಸವಾಗಿ; ತೀಕ್ಷ್ಣವಾಗಿ; ಜೋರಾಗಿ : ಒಡನೆ ಕಾಳಗ ಬಯಿಸಿದ ಘೋಟಬಯಿಲರ್ಪ್ಪ ಜಪಿಂಗೆ ಮಾರ್ಬ್ಬಲಂ ಬಿಡೆ ಕಡಿಕಯ್ದು ನೂಂಕಿ ಕಿಡೆ (ಎಕ. II. ೦೩೬–೭; ಶು. ೪೪೦). ೩. ನಿಸ್ಸಂದೇಹವಾಗಿ; ನಿಜವಾಗಿ; ಖಂಡಿತವಾಗಿ; ಸ್ಪಷ್ಟವಾಗಿ : ಎರಡನೆಯ ಪುರಮಥನಯೆನಿಸುವ ವಸಿಷ್ಠ ಮುನಿಪನ ಮೊಮ್ಮನು ಬಿಡೆ ಪರಾಶರನು ನಾನು (ಹಕೆಳ. ೫–೬೫). ☞ ಈ ಅವ್ಯಯವು ಅನೇಕ ಕ್ರಿಯಾಪದಗಳೊಡನೆ ಸೇರಿ ಅನೇಕ ಅರ್ಥಗಳನ್ನು ಕೊಡುತ್ತದೆ. [< ಬಿಡು₁?]

**ಬಿಡೆಯ₁**, ಬಿಡಯ₁ (ನಾ). ೧. ಬಿಡುವು; ಅವಕಾಶ; ಪುರುಸೊತ್ತು : ನಿಮ್ಮ ವನದೊಳಗಕೆ ಬಿಡೆಯವ ಕಾಣೆನು (ಕುವ್ಯಾಶ. ೦೩–೨೬); ಜಗತೆ ನಿಮ್ಮಡಿವಡಿಯಲಲ್ಲಿಯ ಬಿಡೆಯ ಮಾಯೆಯ ಸಡಕಿನೊಳು ಸಿಲುಕಿ (ಮುರೀಕೃ. ೨೬–೪). ೨. ಎಡೆ; ಅಂತರ : ಬಿಡೆಯವಿಲ್ಲದ ಕುಚ ಬಿಗುಹೇಱಿ

ರುತುಕಾಲವಡದ ಪುಷ್ಪಿಣಿಯರೊಪ್ಪಿದರು (ಪಂಪಭಾ. ೦೬-೩೨). **ಬಿಡಯ್ಯ₁** : ೨. ನಿನ್ನಾತ್ಮನೊಡಲುಗೊಂಡಿರ್ಪ ತನಕ್ಕೆಕ್ಕವದಕೆ ಬಿಡಯುವೆಂತಲ್ಲದಱ ನೋಡಲುವಾಧಿಕದಳಿವ ವಡೆಯಬೇಕು (ಶುಶಿರೀ. ೬-೯೭). ೩. ವಿರಾಮ; ವಿಶ್ರಾಂತಿ : ಬಿಡಯವಿಲ್ಲದ ಹೊನ್ನಂಡಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ಪೋಹಶ. ೦೯-೬೦). ೪. ತಣಿವು ; ತೃಪ್ತಿ : ದಣಿಯದಾತನ ಬೆರಳು ನಾರಾಯಣರವದ ವೀಣೆಯಲಿ ಹೃದಯಾಂಗಣದ ಸೀಮೆಗೆ ಬಿಡಯ ವಾಗದು ಕೃಷ್ಣನವದ ಕೇಳಿ (ಕುವ್ಯಾ.ಕ. ೦-೨೪). [< ಬಿಡುವು]

**ಬಿಡೆಯ್ಯ₂**, ಬಿಡಯ್ಯ, ಬಿಡಿಯು, ಭಿಡಿಯು, ಭಿಡೆ, ಭಿಡೆಯ (ನಾ). ೧. ದಾಕ್ಷಿಣ್ಯ; ಸಂಕೋಚ : ನೀನೇ ಕೆಣಕಿದವನೇ ಶಿವಶಿವಾ ರಾವಣತನೂಭವ ನೆಂಬ ಬಿಡೆಯಕೆ ಸೈರಿಸಿದೆನ್ನೆಸೆ (ತೊರಕಾ. ೬-೦೪-೮) ; ಅವನೊಬ್ಬಗೆ ಚಿತ್ತ ದಲಿ ವರರ ಠಾವೆನಿಪ್ಪಾ ಬಿಡೆಯವಿಲ್ಲ (ಶಿಕಿಸ ೦೦-೩-೦೨) ; ಬಿಡೆಯವಿದೇ ತರ್ಕೀ ಪರಿ ಕುಡುವಂದದೆ ಕೊಟ್ರೊಡಾನೆ ಕೊಂಬವನುಸಿರಾ (ಶಕಿಂ. ೬-೩೩). **ಬಿಡಯ್ಯ** : ೧. "ಬಿಡಯುವೆನಲ್ ದಾಕ್ಷಿಣ್ಯಂ" (ಶಕುಂ. ೨೦೨) ; ಕಡು ಜಾಣಂ ಕಲೆಯೊಳ್ ಸಮಂತು ಕುಶಲಂ ಸಂಗೀತಸಾಹಿತ್ಯದೊಳ್ . . . ಅಂ ಬಿಡಯಕ್ಕೆನ್ನನಿದಂ ದರೆಲ್ಲರುಸಿರ್ವರ್ ಶ್ರೀ 'ಚಿಕ್ಕದೇವೇಂದ್ರನೊಳ್ (ಚಿತ್ರಗೋ. ೩-೭). **ಬಿಡಿಯ** : ೨. ಲಜ್ಜೆ; ನಾಚಿಕೆ : ದಾನವೇಶ ರೋಷದಿಂ ಬಿಡಿಯವಿಲ್ಲದೆ ಸಭಾಂತರದಿ ಬಿಡಿಯುತ್ತರವ ನುಡಿಯಬಹುದೆ (ಶಶಿಮೋ. ೨೭-೬೩). **ಭಿಡಿಯ** : ೧. ಭಿಡಿಯಾ ಸಲ್ಲದು ಎನಗೆ ಕೊಡದ ವ್ಯಾಲೆ ತೀರಿ ಬಡಿವಾರವೇನು ಭಯಬಡುವ ನಾನಲ್ಲ (ಪೋತ್ಸುರಿ. ೨೦-೩). ೩. ಪ್ರೀತಿ ; ಪ್ರೇಮ : ಅವಳ ಮುಂದೆನ್ನಾ ಭಿಡಿಯಾವಿಟ್ಟಾನೆ ಮರ್ಯಾ ಗಳಾಡಿ ಬಿಟ್ಟಾನೆ (ಕ್ರೀಕ್ಕಶಾ. ೨೪). **ಭಿಡೆ** : ೧. ಇವರು ಭಿಡೆ ವ್ಯಕ್ತಪಡಿಸಿ ದಾಗ . . . ಬಲವಂತಗೊಳಿಸಿದ (ಶುಶುರುದಾ. ೯) ; ಗಾಬರಿಯ ದನಿಯಲ್ಲಿ ನುಡಿದರು ಬರಿಯೇ ಭಿಡೆಗಾಗಿ (ಅಶೋಲೀ. ೦೩೦); ನಿನಗೆ ಭಿಡೆ ಅನಿಸದಿದ್ರ . . . ಬೋಲೀ ಖಾಲೀ ಮಾಡಿಸಿಕೊಡತೀನಿ (ಗೀತುಗ. ೯). ೨. ಮಾಯಾ ಪಾಶ ಬಿಗುಹೇಟ್ ಮಱುಗಿದನು ಭಿಡೆಯನು ಮಱೆದನು (ಕೌಶಿಂ. ೬-೩೦). **ಭಿಡೆಯ** : ೧. ರಾಯರು ಅಕ್ಕನ ಭಿಡೆಯಕ್ಕೊಳಗಾದರು (ಕಶಿಂ. ೩೬೪); ಅನಾಥಬ್ರಾಹ್ಮಣನ ಭಿಡೆಯ ಯಾತಕೆ (ಕವಾಗಳ. ೩೦೦).

**ಭಿಡೆ ಬಿರಸತ್ತು** = ದಯೆ ಮತ್ತು ದಾಕ್ಷಿಣ್ಯ : ಪೆಜತ್ತಾಯರಿಗೆ ಭಿಡೆ_ಬಿರ ಸತ್ತಿಲ್ಲವೆಂದು ನನಗೆ ಖಾತ್ರಿಯಾಯಿತು (ಗಂಗಾಶ. ೦೧). **ಭಿಡೆ ಮುರವತ್ತು** = ಭಿಡೆ ಬಿರಸತ್ತು : ಯಾವ ಭಿಡೆ-ಮುರವತ್ತುಗಳಿಗೆ ಒಳಗಾಗುವುದಿಲ್ಲ (೦೦ಕ. ೨) ; ನಿನ್ನ ಭಿಡೆ-ಮುರವತ್ತುಗಳನ್ನು ಅಡ್ಡ ಹಾಕಿ ನಮ್ಮನ್ನು ಬಿಡಿಸುವುದಾದರೆ . . . ಹೇಳುವೆವು (ಇಂದುಕು. ೬೩).

[ < ಪ್ರಾ. ವಿಡ್ಡಾ./ಸಂ. ವ್ರೀಡಾ./ತುಳು. ಬಿಡೆ ]

**ಬಿಡೆಯ್ಯ₃** 'ವಿಡಾಯು' ನೋ.

**ಬಿಡೆಯಂಬಡೆ** (ಕ್ರಿ). ಸೊಗಸನ್ನು ಪಡೆ ; ಶೋಭಿಸು : ಕುಡಿದು ಕೊರಲ್ಪರಮುವರ್ದಂ ಕಡುಬಿಡೆಯಂಬಡೆದು ನಡೆವ ಪೊಸಬೆಳ್ಗಿಲಂತಡಿ ಯಿಡುವಳ್ (ಕಶಿಂ. ೯-೮). [ಬಿಡೆಯ್ಯ₃ (< ವಿಡಾಯ) + ಪಡೆ₁]

**ಬಿಡೋಜ** (ನಾ). ಇಂದ್ರ; ದೇವೇಂದ್ರ : ರೇವಂತನ ರೇಖೆಯಂ ಬಿಡೋಜನೋಜೆಯನೀಶ್ವರನ ದಕ್ಷತನಮಂ ತನ್ನೊಳಳವಡಿಸಿ (ಕೃಷ್ಣಾಸ್ರ. ೬-೩೦ ಪ). [ < ಸಂ. ಬಿಡೌಜಸ್ ]

**ಬಿಡೌಜ** (ನಾ). = ಬಿಡೋಜ : '' ಪುರುಹೂತಂ. . .ಬಿಡೌಜಂ ಕೌಶಿಕಂ ಹರಿ ಪಾಕಶಾಸನಂ . . . ತುರಾಷಾಡ್ಮರುತ್ವಾನೆನಲ್ಕೆ ಸುತ್ರಾಮನಕ್ಕುಂ'' (ಶುಂಗಣಾ. ೦೨-೦) ; ವಿಭವಜಿತಬಿಡೌಜಂ ರೇಚಕಾಂತಾಮನೋಜಂ (ಶುಡಕಿ. ೦-೦೩) ; ಕುಡಲಱಿಯಂ ನಿಮಗೆಂತುಂ ಬಿಡೌಜನಾ ಪಾರಿಜಾತ ಕುಜವಮಂ (ಜಗಿಂ. ೦೩-೨೭). [ ಸಂ. ಬಿಡೌಜಸ್ ]

**ಬಿಡೌಜವಧು** (ನಾ). ದೇವೇಂದ್ರನ ಹೆಂಡತಿ ; ಶಚೀದೇವಿ : ಆಗಳ್ ಬಿಡೌಜವಧು ವಿಧುಮುಖಿ ನೂರ್ಮಡಿಸಿದ ಹರ್ಷೋತ್ಕರ್ಷತೆಗೆಡೆಯಾಗಿ ಮರಾಳಯಾನದಿಂ ಪೊಱಮಟ್ಟಳ್ (ಪೇಟುಪು. ೯-೦೦೩). [ಸಂ.ಬಿಡೌಜವಧೂ]

**ಬಿಡೌಜಸ** (ನಾ). = ಬಿಡೋಜ.

**ಬಿಡೌಜಸರ್** (ಬಹುವ) = ಇಂದ್ರನ ಕಡೆಯವರು; ದೇವತೆಗಳು: ನೇಹೆಯುದಿಂದಿಱದೆತ್ತಿ ನಿಜೌಜಮನೆ ಬಿಡೌಜಸರ್ಗೆ ತೋರ್ಪಂತಸುಹೃದ್ರಾಜ ಯನೆ ವಾಜಿವಾಹಕರಾಜಿ ಮಹಾಜಿಯೊಳ್ ತಳರ್ದುದದ್ಭುತಮೊಗೆಯಲ್ (ರಾಶಕೀ. ೬-೬೩). [ ಸಂ. ಬಿಡೌಜಸ್ ]

**ಬಿಣ್**, ಬಿಂ (ಸಪೂರೂ). ಬಿಣ್ಣಿತು ಎಂಬ ನಾಮವಾಚಕಕ್ಕೆ ಸಮಾಸ ಗಳಲ್ಲಿ ಬರುವ ಆದೇಶರೂಪ : 'ಬಿಣ್ಗೆಚ್ಚಲ್', 'ಬಿಣ್ಪು' ಪರಾ. ಬಿಂ : 'ಬಿಂಗುಂಡು', 'ಬಿಂಪು' ಪರಾ. [ < ಬಿಣ್ಣಿತು ]

**ಬಿಣಕು** (ನಾ). (?) : ಫಣಗಳನು ಹೊಲೆವೀರಬಾಹುವು ಬಿಣಕುಗಳ ಮಾಡಿ ಥರಥರದ ಚೇಷ್ಟೆಗಳ ತೋರಿಸಿ ಪುರದ ವೀಧಿಯೊಳಾಗ ಬಂದನು (ಹಶುತ. ೦೦೩). [ ? ].

**ಬಿಣಮ್ಮ** (ನಾ). ಒಬ್ಬಾತನ ಹೆಸರು : ಶ್ರೀಧರಡೌವೇರವುತ್ರಸ್ಯ ಬಿಣಮ್ಮದ್ವೇದಿ (ಇಆ. XVIII. ೩೬೭-೦೭; ಶಿಶಿಸು ಕಕ). [ ? + ಅಮ್ಮ₁ ]

**ಬಿಣಯಿತ** (ನಾ). ಒಬ್ಬಾತನ ಹೆಸರು : ಶ್ರೀದಸವಮ್ಮರಸರ ಮಂಗ ಬಿಣಯಿತನಾಳೆ (ಎಳ. XI. ಕಗಳ೩. ೦೩-೦ ; ಸು. 1010 ?).

[ ೯ ಇದು 'ವಿನಯಾದಿತ್ಯ' ಎಂಬುದರಿಂದ ಬಂದಿರಬಹುದು]

**ಬಿಣಕೆ** (ನಾ). ಒಂದು ಬಗೆಯ ಸಸ್ಯ : ''ಬಿಣಕೆ ಬಲವತಿಯಕ್ಕು'' (ಮಂಗರಾ. ೯೨-೩೭). [ ? ]

**ಬಿಣಲು** 'ಬೀಳಿಲ್' ನೋ.

**ಬಿಣ್ಗುಂಡು**, ಬಿಂಗುಂಡು (ನಾ). ಬಂದರಿನಲ್ಲಿ ಹಡಗನ್ನು ನಿಲ್ಲಿಸುವುದ ಕ್ಕಾಗಿ ಹಡಗಿಗೆ ಸೇರಿದಂತೆ ಇಳಿಬಿಡುವ ದಪ್ಪವಾದ ಕಬ್ಬಿಣದ ಗುಂಡು ; ಲಂಗರು : ಅಂತು ಬಿಣ್ಗುಂ[ಕಾಕಾಂ. ಬಿಂಗುಂ, ಬೀಟ್ಗುಂ] ಡಿಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂತ ತನ್ನ ರಥಮುಂ ಕಂಡು (ಅಂತ್ಯ. ೦೨-೬೩ ಪ) ; ಆ ಭುವನತ್ರಯವಿಜಯಿಯಪ್ಪ ರೂಪಾತಿಶಯ ದೊಡನವಳ್ಬೆಳೆದಂತೆ ಬಳೆದ ನಿಸರ್ಗ ಶೌಚಾದಿಗುಣಂಗಳಿಂ ಬಿಣ್ಗುಂಡಿಕ್ಕಿದ ಭೃತ್ರಮುಮಂ . . . ಪೋಲ್ತು (ಕಾಂತಿಪು. ೦೦-೯೨ ಪ). **ಬಿಂಗುಂಡು** : ಭೃತ್ರಕ್ಕೆ ಬೆಂ [ ಬಿಂ ] ಗುಂಡನಿಕ್ಕಿದಂತಿರಬೇಕು ಹಿರಿಯರು (ಅವಕಂ. ೬೯-೩೩೩). 'ಬೀಟ್ಗುಂಡು' ಪರಾ. [ ಬಿಣ್ (< ಬಿಣ್ಣಿತು) + ಗುಂಡು ]

**ಬಿಣ್ಗುಂದು** (ಕ್ರಿ). ಗರ್ವವು ಇಳಿ; ಸೋಲು : ಮೂದಲಿಸಿ ನುಡಿಯಲಾಗಿ ಬಿಣ್ಗುಂದಿ ತಿರುಗಿ ಶಿವನಂ ಪತ್ರುವಂ ಬೇಡೆ (ಕೇಶಿಪು. ೯-೪೦). [ ಬಿಣ್ ( < ಬಿಣ್ಣಿತು) + ಕುಂದು₁ ]

**ಬಿಣ್ಗೆಚ್ಚಲ್** (ನಾ). ಹಾಲು ತುಂಬಿ ದಪ್ಪಪುಷ್ಟವಾಗಿರುವ ಕೆಚ್ಚಲು: ಬಿಣ್ಗೆಚ್ಚಲಿಕ್ಕಿ ಕೊಡವಾಲ್ಗಱೆಯದಾವಿಲ್ಲ ನುಣ್ಣಾಡಿವತ್ತಿರದ ಪಶುಪಕ್ಷಿ ಮೃಗಮಿಲ್ಲ ಕಣ್ಗೊಳಿಪ ರಾಮರಾಜ್ಯದೊಳ್ (ಕ್ಕಏಕಾ. ೦೬-೦೩). [ಬಿಣ್ (<ಬಿಣ್ಣಿತು) + ಕೆಚ್ಚಲ್]

**ಬಿಣ್ಗೊನರ್** (ನಾ). ದಪ್ಪವಾದ ಚಿಗುರು,-ಕುಡಿ : 'ಬಿಣ್ಗೊನರ್ಗಿಱು' ಪರಾ. [ಬಿಣ್ (< ಬಿಣ್ಣಿತು) + ಕೊನರ್₁]

**ಬಿಣ್ಗೊನರ್ಗಿಱು** (ಕ್ರಿ). ಗಟ್ಟಿಯಾಗಿರುವ ಚಿಗುರೆಂದು ಭಾವಿಸಂ,- ಭ್ರಮಿಸಂ : ಪಣ್ಗೆತ್ತು ಸವಿದುಟಿಯ ಬಿಣ್ಗೊನರ್ಗೆತ್ತು ಬೆರಳ್ಗಳ ಸೋವುವ ಪೆಣ್ಗಿಳಂ ಬಗೆಯದಾ ನುಣ್ಗೆಳಗಳೆಸೆವವು (ಗುರುಪ. ೨-೦೩). [ಬಿಣ್ಗೊನರ್ + ಗಿಱು]

**ಬಿಣ್ಗೊನೆ** 'ಬಿಣ್ಗೊಲೆ' ನೋ.

**ಬಿಣ್ಗೊಲೆ**, ಬಿಣ್ಗೊನೆ (ನಾ). ಹೂವು, ಹಣ್ಣುಗಳಿಂದ ತುಂಬಿರುವ ಗೊನೆ ; ದೊಡ್ಡ ಗೊಂಚಲು ; ದಪ್ಪವಾದ ಗೊನೆ : ತೂಗಿ

ಬ[ಶಾಕಾಂ.ಪ]ಣ್ಗೊಲೆಯಿಂ ಬಳ್ಳುವ ಕೌಂಗು ಕಾಯ್ದುಜುಗಲಂ ಪೇಜಾರ್ದ ಚೆಂದೆಂಗು . . . ಎಸಗುಂ ವಿದ್ಯಾಧರೋದ್ಯಾನದೊಳ್ (ಅಂಪು. ೦-೬೭) ; ಬಣ್ಗೊಲೆ[ಶಾಕಾಂ. ನೆ]ಯಿಂ ತೂಗಿ ತೊನೆವ ಕ೦ಂಗಂ ತನ್ನತ್ತಣ್ಗೆ ಬರೆ ತಗೆವ ತಜಿದಿಂ ಕಣ್ಗೊಳಿಸಿದುದೆಳಸ ನಾಗಲತೆ ದಾಂಗುಡಿಯಿಂ (ಕಾವ್ಯಾ.ಶ. ೨೦೬). **ಬಣ್ಗೊನೆ :** ಕುದುರೆಯ ಪಂದಿಯ ವಿಪ್ಪೆಯೊಳೊದವಿದ ಕರ್ಚಿಂದೆ ಸೂಜಿಯಿಂ ಕಾಸಿ ಬಟ್ಕಿದಟಿಳ್ ಬಾಟೆಯ ಗೊನೆ ಪುಟ್ಟಿದೆಡೆಯಸಜಿ ದೂಜಿ ಪಿರಿಯ ಬಣ್ಗೊನೆಯಕ್ಕುಂ (ಲೋಕೋಪ. ೬-೨೬) ; ಬಣ್ಗೊನೆ ಗಳನ್ನೊನದಾಡುವ ಕ೦ಂಗು ಬೇಗ್ಗ್ನಳನ್ನುಜುಗಿರೆ ಕಾಯ್ತು ಬಕ್ಕೆ (ಎಕ. XI, ದಾವಣ. ೩೫-೩೭ ; ಸು. 1160) ; ಪಣ್ಣಾಯ್ತ್ ತೀವಿದ ಬಾಟೆಯ ಬಣ್ಗೊನೆ . . . ಪಥಿಕರ ಕಣ್ಗೊಳ್ಪಂ ಮನಕೆ ಬಯಕೆಯಂ ಪುಟ್ಟಿಸುಗುಂ (ಪಂಪ್ರಾ. ೦-೦೦೬). [ಬಣ್ ( < ಬಣ್ಣಿತು ) + ಗೊನೆ]

**ಬಣ್ಣಿತು, ಬಣ್ಣಿತ್ತು** (ನಾ). ೧. ಹೊರೆ ; ಭಾರ ; ತೂಕ : "ಭಾರಕೆ ಬಣ್ಪು ಬಣ್ಣಿತಕ್ಕು" (ಕಲ್ಯಾ. ೬೨) ; ಲಲನೆಯರ್ಗಂಗರಾಗವದು ದುರ್ವಹಂ . . . ಕಣ್ಮಲರ್ಗೆ ಕಾಡಿಗೆ ಬಣ್ಣಿತು ಪಾದಪಂಕಜ ಕ್ಕಲತೆಗೆ ಭಾರಮೆಂದೊಡಜಿಯಿಂ ಪೊಗಟಲ್ ಸುಕುಮಾರವೃತ್ತಿಯಂ (ಕಾದಂಪೂ. ೦೦೦೬) ; ತನುಲೇಖೆಗೆ ಚಂದನದಣ್ಪು ಬಣ್ಣಿತೆಂಬಲಸವದಕ್ಕ ಲಕ್ತಕರಸಂ ಪೊಜೆಯೆಂಬನಿತೊಂದು ಚಿತ್ರಮಾ ಲಲನೆಗೆ ದೇವಕೀವನಿತೆ ಗಾದುದು ನಿರ್ಭರಪೂರ್ಣಗರ್ಭದೊಳ್ (ಜಗಂ. ೨-೯೯) ; ಬಣ್ಣಿತೇನೆಮಗೆ ನಿಮಗೆ ಬಂಧುತನದೊಂದು ಬಣ್ಣಿಗೆಯಿರಲಿ (ಧರ್ಮ. ೩೫-೯೬). ೨. ದೊಡ್ಡದು ; ಗಾತ್ರವಾದುದು ; ಭಾರಿಯಾದುದು : ಬಣ್ಣಿತು ಕೊನೆ, ಬಣ್ಗೊನೆ (ಶಬ್ದಾ.ಮ. ೩೩೪ ಪ್ರಯೋ). **ಬಣ್ಣಿತ್ತು :** ೧. ತನ್ನ ಕಯ್ಯ ಕಳಶವಂ ಬಳ್ಳಿಯೊಳ್ ಕಟ್ಟಿ ನೀರಂ ತೆಗೆವಾಗಳದು ಪುಲಿ ಒಡಿದು ನೇಲ್ವುದುಮದು ಕಯ್ಗೆ ಬಣ್ಣಿತ್ತಾದೊಡದಂ ನೋಟ್ಪೆ ನೆಂದು . . . ತೆಗೆಯೆ (ಪಂಚತಂ. ೦೦೯-೪) ; ನುಣ್ಣಿತ್ತು ; ತಣ್ಣಿತ್ತು ; ಬಣ್ಣಿತ್ತು (ಶಮಂದ. ೬೭ ಪ್ರಯೋ). ೨. ಬಣ್ಣಿತ್ತಾದಲರ್ಜೊಂಪದ ಕಂಪಂ ಹಣ್ಣಾ ಹದುಳದಿಂದಾಂತಳಸುತ್ತಂ . . . ಸುಳಿಗೆಲರಾ ಬನದೊಳ್ (ಅಭ್ಯರ್. ೨-೨೦).

ಬಣ್ಣತಂಬಡೆ=ಘನತೆಯನ್ನು ಹೊಂದು ; ಗೌರವಾಸ್ಪದವಾಗಿರು : ಬಣ್ಣಿತಂಬಡೆದ ಭವ್ಯೋತ್ತಮರ್ ಕಡು ಮುನಿದು ಬಣ್ಣಗೆಡಿಸುವರೆ ತಮ್ಮ ವರೊಂದುವೇಳೆಯೊಳ್ತಪ್ಪಮಾತಂ ನುಡಿದೊಡೆ (ಸಮ್ಯಕ್ತ್. ೦೦-೩೩). ಬಣ್ಣದಂ = ಘನತೆಯುಳ್ಳವನು : ಲಘುಪಾತ್ರನಾಗಿ ಕಾಗೆಯ ಕೊರ ಲೊಳ್ಕಟ್ಟಿದೊಡ ಪಾಜುವವನುಂ ನೆಟ್ಟನೆ ಬಣ್ಣದನೆನಿಕ್ಕುಮಾರ್ಹತದಿಂದಂ (ಸಮುಶ. ೦೩-೩೩) ; ಗಾರುಡಮೊಂದನೆ ಕಲ್ಲದನ್ನೆವರೆಗಂ ಜನಕೆಲ್ಲಂ ವಿದ್ಯೆ ಯಿಂದೆ ಬಣ್ಣದನಲ್ಲಂ (ಧರ್ಮಾಮೃ. ೦೨-೦೦೩).

**ಬಣ್ಣಿತ್ತು** 'ಬಣ್ಣಿತು' ನೋ.

**ಬಣ್ದೊಡೆ** (ನಾ). ದಪ್ಪವಾದ ತೊಡೆ ; ತೋರವಾದ ಊರು : ಬಣ್ದೊಡೆಯ ಬಡವಾಸೆಯ ಬಳ್ಳುಡುವಿನ . . . ಬೆಡಂಗಿನ ಬಾಲೆ ಯೊರ್ವಳ್ . . . ಬರುತುಮಿರ್ದಳ್ (ರಾಮಾಶ್ವ. ೧೯-೨೩) ; ಬಿಡಯದೆ ಕಂಭಮೇಜಿ ಬಜಿಕ್ಕಿ ಬಿಗಿಪಂತಿರೆ ಸುತ್ತಿ ಪಾಯ್ವ ಬಣ್ದೊಡೆಗಳನುರ್ಬಿ ಪೆರ್ಚಿಕೆಯ ಪೋಲ್ ಬೆಸೆಗೊಂಡು ಪೊದಟ್ಟ ತೋಳ್ಗಳಿಂ . . . ಜಟ್ಟಿಗರ್ ಗರುಡಿಗೋವಳನೀ ನೃಪನೆಂದು ವಂದಿಪರ್ (ಕಕಶ. ೪-೦೫೬).

[ಬಣ್ ( < ಬಣ್ಣಿತು) + ತೊಡೈ]

**ಬಣ್ನುಡಿ** (ನಾ). ಕೆಚ್ಚಿನ ಮಾತು ; ವೀರೋಕ್ತಿ : ನೀಮೆ ಬಿಲ್ಲಾಳ ಬಲ್ಲಾಳರಪ್ಪನ ಮೊನೆಯೊಳೆ ಹಯಮಂ ಕೊಳ್ವುದು ರಾಮನಂ ತೋಜಿದ ಸಂಧಿಗೊಂದೆಂ ಬಣ್ನುಡಿಗೆ ಬೆಜಗಾಗಂ (ರಾಮಾಶ್ವ. ೦೯೩-೦೩).

[ಬಣ್ (< ಬಣ್ಣಿತು) + ನುಡಿ]

**ಬಣ್ಪಡರು** (ಕ್ರಿ). ದೊಡ್ಡದಾಗು : ಬೆಳೆ ; ವೃದ್ಧಿಸು : ತಿಣ್ಣಮೊಲಿ ಬಣ್ಪಡರ ಕಾಲ್ಪೆಂದಗಶಿಗಲಸೆ . . . ಪೊಸಗಾಡಿವತ್ತಿರ್ದಳೇ ವಣ್ಣಿಸುವೆಸು (ಕೈಪಿಟಶ. ೦೬-೩೪). [ಬಣ್ಪು + ಅಡರು₁ ( < ಅಡರ್) ]

**ಬಣ್ಪರಿ** (ನಾ). ಪ್ರಾಣಿಗಳು ಬೇಟೆಗೆ ಗಾಢವಾಗಿ ಸಿಕ್ಕಿ ಬೀಳುವ ಜಾಗ.– ಪ್ರದೇಶ : ಹರಿಣೇಕ್ಷಣೆ ದೀವದಾ ಹರಿಣನೇಂ ಪೆರ್ಗಾಡಿದಿ: ಬೀಡು ಬಣ್ಪರಿಗಳ್ನೇಣ್ಪರಿ ಶಂಬರಾರಿ ಶಬರಂ ಪುಲ್ಲಂಬು ಕೆಲ್ಲಂಬು ಮದ್ದಿರ ಹಾವಸ್ಥಿತಿ ಗೋರಿಗೋರಗೆಯನಿಪ್ಪಂತಾದುದು (ಅಪಂಪು. ೧೦-೯೨).

[ಬಣ್ (<ಬಣ್ಣಿತು) + ಪರಿ₃]

**ಬಣ್ಪು₁**. ಬಿಂಪು (ನಾ). ೧. ಭಾರ ; ಒಜ್ಜೆ ; ತೂಕ : "ಬಣ್ಪಿಂದಪಂ, ತಿಣ್ಣಮೆಂದುಂ ಭಾರಂ" (ಶಕಶಾ. ೬೯-೫೬೬) ; ಎಣಿಕೆಗಳುಂಬಮುಂ ಪಿರಿದುಮಾದ ಪದಾತಿವರೂಥವಾಜಿವಾರಣಬಲದಿಂದಮಿರ್ದುಡಿಸೆ ಧಾತ್ರಿಯ ಬಣ್ಪಿನಗೆಂದಿನಂದವಲ್ಲಣಕಮಿದೆಂದು . . . ಬೇಸಜಿಂ ತಿಣುಕಿದನಾನಲುವ್ಮಳಿಸಿ ಶೇಷನಶೇಷಮಹೀವಿಭಾಗಮಂ (ಪಂಶಭಾ. ೯-೯೯); ನಡು ನಡುಗೆ ಬಿಗಿದೊಗೆದ ಪೆರ್ಮೊಲೆಯ ಬಣ್ಪಿನಿಂ . . . ಚೆಲ್ವೆಸೆಯೆ ಕರಮೆಸೆದರಬಲೆಯರ್ (ಅಶಪು. ೪-೭ ಪಳ). ೨. ದೊಡ್ಡ ಗಾತ್ರ, – ಆಕಾರ : ಸ್ತನದ ಬಣ್ಪನೆ ನೋಡಿ ಮನಮಿಕ್ಕುವರ್ ವಿಟರ್ ಕನಕಪಂಕಜದ ಬಿರಿಮುಗುಳ ನನೆ ನೋಡಿ ಮನಮಿಕ್ಕುವಂತೆ ಮಜಿದುಂಬಿ (ಉತ್ತರಪು. ೦೦-೯೪). ೩. ದೃಢವಾದುದು ; ಮಜಬೂತಾದುದು: ಗಟ್ಟಿಯಾದುದು : (?). ೪. ಅತಿಶಯ ; ಆಧಿಕ್ಯ; ಹೆಚ್ಚಳ: ಭೂತಳ (ಲ)ಸತಿಗೊಳ್ವನಾಳ್ದ ನವಮೇಖಳೆಯೆಂಬ ಸಮುದ್ರದಂತೆ ಕೊಂಡಲಿ ಗೆಜೆಯೊಪ್ಪಿ ತೋಜುವುದೆನೆ ಬಣ್ಪನೊಳಾವರಿಸಿರ್ದ್ದ ಪೆಂಪಿನೊಳ್ (ಎಕ. XIII, ೩೩೦-೩೪ ; ೧೨೨೦) ; ನಿನ್ನ ಪೆಂಪಿನ ಬಣ್ಪಂಗದಾರ್ ಮರುಳ್ಗೆ ಳಸರ್ (ಕಾದಂಪೂ. ೦೦೦) ; ಈಗಳಾತನ ಪುರುಷಾರ್ಥದ ಪುರುಳುಂ . . . ಪರಾಕ್ರಮದ ಬಣ್ಪುಂ ಕರತಳಾಮಳಕಮಾಗಿರ್ದಪ್ಪುದು (ಪಂಚತಂ. ೬೫-೨೦). ೫. ವೈಭವ ; ಆಡಂಬರ : ತನ್ಮಹಾರುದ್ರಗಣಭರಮನೀ ನಾಳ್ಗಳರಸುಗಳ ಬಣ್ಪಂ ಶಿವನ ಸಭೆಯಲ್ಲದಾವ ಲೋಕಂದಲೆದೊಡಂ ಮುಳ್ಗಿ ಬೀಳವೆ ಸಕಲ ದಿಗ್ಗಜಂಗಳ್ (ಪಂಪು. ೨೯-೩೩). ೬. ಹಿರಿಮೆ ; ಮಹತ್ತ್ವ ; ಗುರುತ್ವ : ಮುಂದಣ ಕಜ್ಜದ ಬಣ್ಪುಮನಜುದುಭೋರುಹ ನಾಭಂ ಶಂಭದಂಭೋಧರಧ್ವನಿಯಿನಿಂತೆಂದಂ (ಪಂಚತಂ. ೬-೨೨ ಶ) ; ಕಂಡಿಹೆಯಾ ಈ ಸೂಕ್ಷ್ಮದ ಈ ಭವ್ಯತೆ ಬಿಣ್ಪ (ಕರುಣ್ವಾ. ೬೯-೦೬). ೭. ಘನತೆ ; ಗೌರವ ; ದೊಡ್ಡಸ್ತಿಕೆ : ಇಂದುಗುಪಶಾಂತತೆ ಮೇರುಗೆ ಬಣ್ಪು ತನ್ನದೊಂದಿರವಿನೊಳಾದುವೆಂಬಿನಮುದಾರಗುಣಪ್ರಕರಂಗಳಿಂದ ಳಂಕರಿಪ ನಿಜಪ್ರಭಾವಮಹಿಮೋನ್ನತಿಯಿಂದೆಸೆದಂ ಮುನೀಶ್ವರಂ (ಕಾದಂಪೂ. ೨೯೩); ನೀಮಪ್ಪೊಡೆ ಪೆಂಪಿನೊಳಂ ಬಣ್ಪನೊಳಂ ಸಾಹಸದೊಳಂ ಮರುತಂಗೆ ಪಿರಿಯರ್ (ಪಂಚತಂ. ೨೫೯-೦೪) ; ಸಲೆ ಮೆಜೆವುದಿಂತು ಹಿಮವನ್ನಗೇಂದ್ರಂ ಪೂರ್ವಜಲಧಿ ಪಶ್ಚಿಮವಾರ್ಧಿಗಳ ಕೂಡಿಕೊಂಡು ನಿರ್ಮಲಶಿವನ ಮಾವ ನೆನಿಸುವ ಬಣ್ಪಿನಿಂದೆಸೆವುದು (ಶಾವಕಂ. ೨-೨). ೮. [ಛಂದ] ಉಚ್ಚಾ ರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ ; ದೀರ್ಘಾಕ್ಷರ ; ಗುರು : "ಕೊಂಕು ಬಣ್ಪನೆ ಗುರುವಲಾ" (ಶಬ್ದಮಂ. ೩೬) ; ಬರೆ ವಕ್ರಂ ಶಿಖಿಯೊಂದು ಕೊಂಕುಕಡೆಯಿಂದಾ ಮಾರುತಂ ವ್ಯೋಮವೊಪ್ಪಿರೆ ಬಣ್ಪಂತೆರಡಾದಿಯೊಳ್ (ಛಂದೋಂಬು. ೦-೩೯). **ಬಿಂಪು:** ೪. ಕೆಂಪ ಕಾಜಿದವಾಲಿಗಳು ಮೈ ಕಂಪಿಸಿದುದದಗಡಿಗೆ ರೋಷದ ಬಿಂಪಿನೊಳು ತಗ್ಗಿದನು ಗುಟಕ್ಕಿದನು ಹುಬ್ಬುಗಳ (ತೊರವೆರಾ. ೬-೨೬). ೫. × × × ಪುರಿ ಪೆಂಪಿನಲು ಧರಣಿ ಬಿಂಪಿನಲು ಜಳರಾಸಿ ಗುಂಪಿನಲು × × ದೇವನಂತಿಪ್ಪರ್ × × × (ತ್ರಿಶ್ರಾ. XV, ೩೯-೩೦ ; ೧೧೪೮). ೯. ಗಾಢತೆ ; ತೀವ್ರತೆ : ರ್ಘೂಂಟಿಸುವ ಸಿರಿಮೊಗದ . . . ನಿಜ

ರಾಜತೇಜದ ವಿಪುಳವೇದನೆಯು ಬಿಂಪಗಿಪ ಬೇಸಱಿನ ತುಱುಗಿದ ತಂಪಿನ ಗ್ಗಳಿಕೆಯ ವಿಘಾತಿಯಂ ಕ್ಷೋಂಪಿಸಲಿ ಹುದುಗಿದ ಪುಟೇಶನ ಕಂಡನಾ ಪಾರ್ಥ (ಕುವ್ಯಾಕ. ೧೬-೩) : ಕುಸುಂಪುಸೌರಭಸಾಂದ್ರದಿಕ್ತಟದ ಬಿಂಪು ದುರ್ಧರವಾಯಪು (ಶಿಶಾಗ. ೧೦-೩-೩೩). [ಬಿಣ್ + -- ಪು]

**ಬಿಣ್ಪುಗೊಳ್** (ಕ್ರಿ). ಅಧಿಕವಾಗು ; ಹೆಚ್ಚಾಗು : ತೀವ್ರವಾಗು : ಜನಿಯಿಸಿದತ್ತು ಚಿತ್ರವತಿದೇವಿಗೆ ಗರ್ಭಮದಿಂತು ನಾಡೆಯುಂ . . . ಜನಿ[ಯಿಸೆ] ಬಿಣ್ಪುಗೊಂಡಲಸವಾ ನಿಜನಿರ್ಮಳಚಿತ್ತವೃತ್ತಿಯೊಳ್ (ಕುಸುಪು. ೦೨-೨೩). [ಬಿಣ್ಪು + ಕೊಳ್$_1$]

**ಬಿಣ್ಪುವೇಱು** (ಕ್ರಿ). ಭಾರವಾಗು : ತರೆ ಪುಸಗಿ ಬಾಷ್ಪಜಳಮೊತ್ತರಿಸೆ ಮೊದಲ್ ನಾಂದು ಬಿಣ್ಪುವೆತ್ತಮೆದೊಱೆಯುಂ ಭರದಿಂ ತಾಂಗಿ ನಿಜಾದ್ರ್ರಾಂ ತರಂಗಭರಮುಂ ನಿವೇದಿಪಂತೀಕ್ಷಿಸಿದಂ (ವರ್ಧಕ. ೯-೬೭). [ಬಿಣ್ಪು+ಪೆಱು$_1$]

**ಬಿಣ್ಪೇಱು** (ಕ್ರಿ). ೧. ಭಾರವಾಗು ; ತೂಕದಿಂದ ಕೂಡಿರು : ನನೆಯಂ ಪೂಗೊಂಚಲಂ ಪೂತ್ತು ನಟ್ಟನೆ ಬಿಣ್ಪೇ[ಶಾಕಾಂ. ೪೨]ಱಿದ ಬಳ್ಳಿಗೊಂಬು . . . ಚೆಲ್ವಾದುದಿವಮ್ಮಾವಿನೊಳ್ (ಕವ್ಯಾಕ. ೬೨). ೨. ಹೆಚ್ಚಾಗು ; ಅಧಿಕಗೊಳ್ಳು : ಆಳೀಜನಂ ಮಾಟ್ಪ ಶಿಶಿರೋಪಚಾರದ ತಣ್ಪಂಗೆ ಬಿಣ್ಪೇಱುವ ವಿರಹಾಗ್ನಿಯಿಂದಂ ಕಂದಿ ಕುಂದಿ (ಅದ್ಯಲ. ೭-೩೦ ವ). ೩. (ಅಲಂ) ಸಡಗರಿಸು : ಉತ್ಸಾಹಗೊಳ್ಳು : ವಿದ್ವಜ್ಜನಂ ನೆರದಿಂಪೇಱೆ ನೆಗಟ್ದ ಬೀರಪಡೆಗಳ್ ಬಿಣ್ಪೇಱೆ . . . ಪಟ್ಟಪಣೆಯಂ ತಾನೇಱಿದಂ ಸದ್ಗುಣಾಕರಂ (ಶಕಶ. ೨-೫೩).

[ಬಿಣ್ಪು + ಏಱು$_1$ (<ಏಱ್$_1$)]

**ಬಿಣ್ಪೊಱೆ** (ನಾ). ಭಾರವಾದ ಹೊರೆ ; ತೂಕವಾದ ಹೊರೆ : ಕೂಸಿನ ತಲೆಯೊಳ್ ಬಿಣ್ಪೊಱೆಯನಿಟ್ಟವೋಲಸುಖಕರಂ (ಕವಿರಾ. ೨-೭) ; ನಟ್ಟ ಕೂರ್ಗಣೆಯು ಬಿಣ್ಪೊಱೆಯಿಂದೆ ಬಟಿಲ್ದಂ . . . ಸಿಂಧುಜಂ (ಶಂಕರಾ. ೦೧-೪೩) : ಇಂತೀ ದುಃಖದ ಬಿಣ್ಪೊಱೆಗಾನಲ್ ಪೆಗಲನ್, ಓ ಸ್ವಾಸ್ ಎನ್ನಯ ತಪ್ಪೇನ್ (ಶಿಕ್ಷ್ಯಕ್ರ. ೩೦-೬೩೦). [ಬಿಣ್ (< ಬಿಣ್ಣಿತು) + ಪೊಱೆ]

**ಬಿಣ್ಪಡು** (ಕ್ರಿ). ದೊಡ್ಡದಾಗು ; ಗಾತ್ರವಾಗಿ ಬೆಳೆ : ಪಣೆಗಟ್ಟು ಪೊಂಬೊಟ್ಟನೆಡಗಟ್ಟಿಯಾ ದಿಟ್ಟೆ ಬಿಣ್ಪಟ್ಟ ಪೊಲೆಗೆ ತೊಟ್ಟುಪಿಡಿಗೆ ಪಟ್ಟೆ ನೆಱೆದುಟ್ಟುಕೊಂಡೊಟ್ಟಜದ ಪಟ್ಟಣಗಿರಿಟ್ಟೆಡೆಯು ಬಟ್ಟೆಯಂ ಮೆಟ್ಟೆ ಬರೆ(ಶ್ರೀರಾಮ. ೯-೯). [ಬಿಣ್(<ಬಿಣ್ಣಿತು) + ಪಡು$_1$]

**ಬಿಣ್ಮಾಣಿಕ** (ನಾ). ದೊಡ್ಡದಾಗಿರುವ ಮಾಣಿಕ್ಯ: 'ಬಿಣ್ಮಾಣಿಕವಡೆ' ಪರಾ. [ಬಿಣ್ (<ಬಿಣ್ಣಿತು) + ಮಾಣಿಕ]

**ಬಿಣ್ಮಾಣಿಕವಡೆ** (ಕ್ರಿ). ದೊಡ್ಡದಾದ ಮಾಣಿಕ್ಯವನ್ನು ಹೊಂದು : ಮುಱಿದುಂಬಿಗಳ್ ಪಂಚಮದ ನುಣ್ಚರಕ್ಕೆ ಬಿಣ್ಮಾಣಿಕ[ಕ]ವಡದ ನೂಪುರಕಲಾಪ ತುಲಾಕೋಟಿಮಂಜರಿಕಾಪುಂಜಸಿಂಜಾನದೊಳಂ (ಅಸಂಶು. ೩-೯೩ ವ). [ಬಿಣ್ಮಾಣಿಕ + ಪಡೆ$_1$]

**ಬಿಣ್ಮಾಲೆ** (ನಾ). ದೊಡ್ಡ ಹಾರ: ಭಾರವಾದ ಹಾರ : ಗೋಣ್ಮೊದಲ ನೆಲುದಲೆಯು ಬಿಣ್ಮಾಲೆಗಳ್ಗಿತ್ತ ತಣ್ಮೆಯ್ಯುವೆಟ್ಟಮುಗಳಿಣ್ಮಸೆನಿಸಿದ ಸ್ಮರನ ಮಣ್ಮಾಡಿದುಱೆ ಸೊಕ್ಕು ಪೊಣ್ಮದಾನೆಯು ಸೀಳ್ದು ಪಣ್ಮೆಱೆವ ನೀಕ್ಷಿಸಿಡನು (ಪಂಪಪಾ. ೦೬-೦೩). [ಬಿಣ್ (<ಬಿಣ್ಣಿತು) + ಮಾಲೆ]

**ಬಿಣ್ಮೊಲೆ** (ನಾ). ದೊಡ್ಡ ಮೊಲೆ; ಶ್ರೋರವಾದ ಸ್ತನ : ಬಿಣ್ಮೊಲೆಯು ಮಿಗೆ ಬಟ್ಟಪೊಲೆಯ ತಂಗಾಯ್ಮೊಲೆಯು ಸುಣ್ಮೊಲೆಯು . . . ವೈಸಿಕದೊಳುಣ್ಮುವ ಗುಣಂಗಳ ಮಹಾಪ್ರೌಢವನಿತಯರ್ ಕಣ್ಗೆಸೆವರಲ್ಲಿಗಲ್ಲಿ (ಕಿರಿಪು. ೦೦-೨೮) : ಮೇಲುದಂ ಬಿಣ್ಮೊಲೆಗಳನೋಸರಿಸೆ ನಿಜೇಯು ಬಿಗಿ ಪೈಸರಿಸೆ ಪೆಣ್ಮಂಚಪಂಚೆಮುಪ್ಪುಳ್ವಾಸಿಗಳೆದೊಪ್ಪುಳನಿಯುನಂ ಬಟ್ಟಿನಂದ (ಕೃಪಂಶಾ.೦೦-೦೯). [ಬಿಣ್ (< ಬಿಣ್ಣಿತು) + ಮೊಲೆ$_1$]

**ಬಿತ್ತ** 'ಬಿಟ್ತು' ನೋ.

**ಬಿತ್ತಣ, ಬಿತ್ತನೆ. ಬಿತ್ತಾಣ** (ನಾ). ೧. ಬೀಜವನ್ನು ಭೂಮಿಯಲ್ಲಿ ಬಿತ್ತುವಿಕೆ : [ಕೆಂಪೊಣ್ಮಳ್] ಪರಂಬಡೆವಂತೆ ಬಿತ್ತಣದಂತೆ ಸಸಿಯಂತೆ (ಧರ್ಮಾಮ್ಯ. ೧೨-೨೯). ೨. ಬೀಜ : ಬಿತ್ತ : ಕುಂಬಳದ ಹಣ್ಣಿನ ತೊಕ್ಕು ಪಿಳಗಣ ನುಣ್ದು ಬಿತ್ತಣಗಳ ಸಹ ತೆಗೆದು (ಸಕಪು. ೨೨೩). **ಬಿತ್ತನೆ** : ೧. ಭೂಮಿಯನ್ನು ಸಮ ಮಾಡಿದ ನಂತರವೇ ಬಿತ್ತನೆ ಮಾಡಬೇಕು (ವ್ಯವಪ. ೨೦) : ಮಳೆಯಿಲ್ಲದೆ ಬಿತ್ತನೆಯ ಕಾಲ ಮುಗಿಯಿತು (ಜನಪಾ. ೩೮). **ಬಿತ್ತಾಣ** : ೧. ಈ ಪುರವಲಿ ಗೌಡು ಭೂಮಿ ಅಯ್ದು ದಿನದ ಬಿತ್ತಾಣ ಈ ದೇವರಿಗೆ ಸೋತ್ರುಪ ತೆತ್ತುಕೊಮ್ಬರು (ಎಕ. XI. ಚಿತ್ರದು. ೩-೩೬; 1356). [ಬಿತ್ತು$_1$ + — ಅಣ]

**ಬಿತ್ತನೆ** 'ಬಿತ್ತಣ' ನೋ.

**ಬಿತ್ತರ, ವಿತ್ತರ** (ನಾ). ೧ ವಿಸ್ತಾರ : ಹರಹು : ವ್ಯಾಪ್ತಿ : "ಬಿತ್ತರ ಮೆಸಲ್ . . . ವಿಸ್ತಾರಮಾಕ್ಕುಂ" (ಕಶಿ. ೮೦) : ಸಂಪತ್ತಿನ ಬಿತ್ತರದೆತ್ತಿವ ಮಾತ್ರಿನ ಮಂತವಿಗೆ ಪೊಬಲ ಮನೆಗಳೊಳೆಲ್ಲಂ (ಶಂಶಕಾ. ೩-೨) : ಈ ಕಾವ್ಯಮಂ ಬಿತ್ತರದಿಂ ತಾನೊಲ್ದು ಪೇಳ್ದಂ ಶಿವಕವಿ ಹರದೇವಂ (ಗಂಕ. ೦-೩೩). ೨. ಅತಿಶಯತೆ : ಹೆಚ್ಚಳ ; ಆಧಿಕ್ಯ : 'ಬಿತ್ತರಂಬಡೆ'. 'ಬಿತ್ತರಿಕೆ' ಪರಾ. ೩. ಪೀಠ ; ಆಸನ : 'ಬಿತ್ತರಂಗೆಯ್' ಪರಾ. ೪. ಒಯ್ಯಾರ ; ಬೆಡಗು : 'ಬಿತ್ತರಿ್ಸ' ಪರಾ. **ವಿತ್ತರ** : ೧. ಅರಸಿಯರ ಸುಕುಮಾರಕರನಾದರಿಸಿ ಮಧುರರಸೋಕ್ತಿಯಲಿ ವಿತ್ತರದ ನುಡಿಗಳ ನುಡಿದು (ಕುವ್ಯಾಕ. ೬೦೩-೦೭-೪೩). [< ಸಂ. ವಿಸ್ತರ./ಪ್ರಾ. ವಿತ್ಥರ]

**ಬಿತ್ತರಂಗೆಯ್** (ಕ್ರಿ). ೧. ವಿವರವಾಗಿ ಹೇಳು.— ನಿರೂಪಿಸು : ಮೃಡನಿಂತು ಬಿತ್ತರಂಗೆಯ್ಯು ರುದ್ರಾಕ್ಷಿಯಂ ತೊಡಿಸಲು (ಸೌಂದರ್ಯ. ೬-೩೮). ೨. ಆಸನವಾಗು ; ಪೀಠವಾಗು : ಯೋಗಾಭ್ಯಾಸಂಗೆಯ್ವ ಯೋಗೀಂದ್ರ ಬೃಂದಕ್ಕೆ ಯೋಗಾಸನಮಾಗಿ ಸುತ್ತುಗೊಂಡು ಬಿತ್ತರಂಗೆಯ್ವಂತಿರ್ದ ಭೋಗೀಂದ್ರವೃಂದಮುಮಂ (ಶಂಕಶಂ. ೦೦೯-೯). [ಬಿತ್ತರ + ಕೆಯ್$_1$]

**ಬಿತ್ತರಂಗೊಳಿಸು** (ಕ್ರಿ). ವಿವರವಾಗಿ ನಿರೂಪಿಸು : ವಿಶದೀಕರಿಸು : ರಹಸ್ಯಮನಾದೊಡಂ ತಮ್ಮ ಮನದೊಳ್ಮರೆಮಾಜದೆ ಬಯಲ್ಗೆಯ್ದು ಬಿತ್ತರಂಗೊಳಿಸಲಿ ಎಂದು ಶಾಪವಮನಿತ್ತು (ಶಾರಶಾಂ. ೨೨-೬); ನಿಗಮಾಂತಾರ್ಥವ ಬಿತ್ತರಂಗೊಳಿಸುವ ಗ್ರಂಥಂಗಳಂ (ವ್ಯಾಕೂಮ. ೦-೧೩).

[ಬಿತ್ತರ + ಕೊಳ್$_1$ + — ಇಸು$_3$]

**ಬಿತ್ತರಂಬಡೆ. ಬಿತ್ತರವಡೆ** (ಕ್ರಿ). ೧. ವಿಸ್ತಾರವನ್ನು ಹೊಂದು: ದೊಡ್ಡದಾಗು : ಧವಳತೆಯನಾಂತ ಮುಗಿಲ ಮೊತ್ತಮೊತ್ತಲುಂ ಬಿತ್ತರಂಬಡೆಯೆ (ಶಾರಪು. ೯-೬೬ ವ) : ತಳೆಗುಂ ತೋರ್ಕೆಯು ಬಿತ್ತರಂಬಡೆದು ಬಿತ್ತಿತ್ತಂಬಮ್ರೋಲಿರ್ದ ಪೆಬರ್ಗಳೆ (ಶಾಕುಂತ. ೦೦೧-೧೬೦). ೨. ಅತಿಶಯವಾಗು; ಶ್ರೇಷ್ಠತೆಯನ್ನು ಪಡೆ : ಸಂಪಗೆಯ ಮುಗುಳನಗೆಗಳಿಂ ತೆತ್ತಿಸಿ ಬಿತ್ತರಂಬಡೆದ ಜವಳಿವಡಿಗಳೊಳಂ (ಚಂದ್ರಕ. ೭-೯೩ ವ): ಸೂಳಱಿದೇಱುವ ಸುತ್ತೇಱುವ ಬಿತ್ತರಂಬಡೆದ ವಾಹಳಿತನದೊಳ್ (ರಾಜಶೇ. ೬-೦೦ ವ). **ಬಿತ್ತರವಡೆ** : ೧. ಬಿತ್ತರವಡೆಮೀ ಪಟ್ಟಣದೊಳಗೊರ್ವನುತ್ತಮನಾಯಕ ನಿಹನು (ಕಂಸಪ. ೯-೪೩). ೨. ಮೃತದೇಳ್ಗೆಯಿಂತು ಬಿತ್ತರವಡೆದುದೊ ಎನೆ ಸತಿಯರು ಜಸವಡೆದಿಹರು (ಹರಿಬ. ೨-೦೯). [ಬಿತ್ತರ + ಪಡೆ$_1$]

**ಬಿತ್ತರಂಬೆಱು. ಬಿತ್ತರವೆಱು** (ಕ್ರಿ). ೧. = ಬಿತ್ತರಂಬಡೆ ೧ : ಕಟ್ಟಿಲೆಯ ಕಾರಾಗಾರದಂತೆ ಬಿತ್ತರಂಬೆತ್ತು ಬೆಚ್ಚತಂ ಪರ್ವಿದ ತಮಾಳ ಮಾಳಾಪರಂಪರೆಗಳಂ (ಚಂದ್ರಕ. ೦-೦೦೩ ವ). **ಬಿತ್ತರವೇಱು** : ೨. = ಬಿತ್ತರಂಬಡೆ ೨ : ನವೀನಚೀನದಿಂ ಬಿತ್ತರವೆತ್ತ ಮೇಲ್ಗುಡಿ . . .ವಿರಾಜಿತ ಮಾಮಾಪು ವಿವಾಹಗೇಹದೇಳ್ (ರಾಜಶೇ. ೯-೨). [ಬಿತ್ತರ + ಪೆಱು$_1$]

**ಬಿತ್ತರವಡೆ** 'ಬಿತ್ತರಂಬಡೆ' ನೋ.

**ಬಿತ್ತರವೇಱು** 'ಬಿತ್ತರಂಬೆಱು' ನೋ.

**ಬಿತ್ತರಿ$_1$** (ನಾ). ಗದ್ದುಗೆ ; ಸಿಂಹಾಸನ : "ಪಟ್ಟವಣೆಯೆಂದುಂ, ಬಿತ್ತರಿಯೆಂದುಂ ಸಿಂಹಾಸನಂ" (ಕಶಾ. ೬೦-೩೨೩): ಅಬ್ಜದಳೆಯಲೆಗಳ ಬಿತ್ತರಿಗಳೊಳರಸಿಯರ್ ನೆವ್ವಿ (ಶಾಂತಿಪು. ೯-೩); ಈ ಪಟ್ಟದ ಬಿತ್ತರಿಯನ್ನು ನೀನು ಆರೋಹಣ ಮಾಡಬೇಕು (ಚಲ್ಲಿ. ೧೦೦-೦೦). [< ಬಿತ್ತರ]

**ಬಿತ್ತರಿ$_2$** (ನಾ). ಬೆಡಗುಗಾತಿ; ಒಯ್ಯಾರಿ : ಬಿ[ಪಾಠಾಂ. ಭಿ]ತ್ತರಿಯರಿದೆ ಗತ್ತರಿಯರಾ ಪೊತ್ತು ಹಾದರಗಿತ್ತಿಯರು ಪ್ರಹ್ಮತ್ಕಾತಿಯರು (ಬಸವು. ೪೦-೩೩) ; ಕೆಲರು ಬಿತ್ತರಿಯರು ಅತ್ತೆಮಾವಂದಿರಂ ಮರೆಯಿಸಿ (ಸೌಗಂಧಿ. ೦೮೬-೩). [ಬಿತ್ತರ + — ಇ$_2$./ತೆಲು. ಬಿತ್ತರಿ]

**ಬಿತ್ತರಿಕೆ** (ನಾ). ೧. ವಿಸ್ತಾರವಾದ ನಿರೂಪಣೆ : ಸಂಚದೊಳ್ ಸುಸಂಚನೆನಿಸಿ ಕರಂಗಳ ಬಹುರೇಖೆಯ ಚಾರಣೆಯ ಧಿಕ್ಕವಣೆಯ ನೇವಣೆ ಬೊಲ್ಲವಣೆಯ ಬೆಡಂಗು ಬಿತ್ತರಿಕೆಯುಂ ಬೀಜಾ ಬಾಜಿಸುತ್ತಿರಲುಂ (ಶಾಂತೀಶ್ವ. ೬-೯೩ ವ). ೨. ಅತಿಶಯ ; ಆಧಿಕ್ಯ ; ಹೆಚ್ಚುಗಾರಿಕೆ : ತಸ್ಸುರವುನುರ್ಚಿದೊಡಚ್ಚುಂದಟ್ಟನೆಚ್ಚ ಬಿತ್ತ[ಪಾಠಾಂ. ಚ್ಚ]ರಿಕೆಗಮಾತೆಱಂ ಮುರಿದ ದಂತಿಗಪೂ ವಸದೊಳ್ ವನೇಚರಂ (ಸೂಕ್ತಿಸು. ೩-೦೩೮). [ಬಿತ್ತರ + — ಇಕೆ]

**ಬಿತ್ತರಿಗೆ$_1$** (ನಾ). ಪೀಠ : ಆಸನ : "ಬಿತ್ತರಿಗೆ—ವಿತರ್ದಿಕಾ = ವಿಷ್ಟರ" (ಕರ್ಣಕೋ. ೩೦); ಬೊಂದರಿಗೆ ಪಟ್ಟಿಯ ಬಿತ್ತರಿಗೆ ಕರಂ ಪೆರ್ಚುವ ಮಹಿಮೆಯನೆಯ್ದೆ ನಿವಿರ್ಚೆ (ಪಂಪಭಾ. ೦೪-೨೪); ಬಿತ್ತರದ ಬಿತ್ತರಿಗೆಯೊಳೊತ್ತರದ ಗಾದಿಯನೊಪ್ಪಿರ್ದ ರಾಮಂ . . . ಪೇಟಿಂದೊಡೆ (ರಾಮಾಶ್ವ. ೦೪೨-೮). [<ಸಂ. ವಿತರ್ದಿಕಾ]

**ಬಿತ್ತರಿಗೆ$_2$** (ನಾ). ಒಂದು ಬಗೆಯ ಸಸ್ಯ : (ಮೃಶಿಗ. ೨೦-೩೬೦). [?]

**ಬಿತ್ತರಿತನ** (ನಾ). ಒಯ್ಯಾರ; ಬೆಡಗು : ಏಳೇ ಸಾಕು ನಿನ್ನ ಬಿತ್ತರಿತನ (ಮಾಮುರಾ. ೦೪೬). [ಬಿತ್ತರಿ$_2$ + — ತನ]

**ಬಿತ್ತರಿಸು** (ಕ್ರಿ). ೧. ವಿಸ್ತರಿಸು ; ಹರಡು : "ಬಿತ್ತರಿಸು—ವಿಸ್ತಾರೇ" (ಶಮುದಾ) ; ಆದಱಿಂದೆನ್ನ ರಾಜ್ಯೋದಯಂ ಬಿತ್ತರಿಸುತ್ತಿರ್ಕುಂ (ಅಕಪು. ೦೨-೩) : ಪರಿಮಳಮನೆಣ್ದೆಸೆಗೆ ಬಿತ್ತರಿಸುವ ನಸೆಗಣೆಗಳಿಂದೆ ಗಿರಿಪತಿತನಯಾ ವಿರಹಾತಪಮೊಗೆಯುಲ್ (ಗಿರಿಕ. ೬-೬೦) ; ಅನಂತಸತ್ತ್ವ . . . ಬಿತ್ತರಿಸುತಿಹುದು ಹೊಸಹೊಸತನವನೆಡೆವಿಡದೆ ನಿತ್ಯನಿತ್ಯವು (ಮುಂಕುಕ. ೯೨). ೨. ವಿವರಿಸು; ನಿರೂಪಿಸು: ಕೇಳ್ವಂಗೆ ಬಿತ್ತರಿಪಂಗಾದ ಮಳುಂಬವಲ್ತೆ ಭಗವಜ್ಜನ್ಮಾಭಿಷೇಕೋತ್ಸವಂ (ಆದಿಪು. ೬-೦೮೦); ನೀವೆತ್ತಣವರೇನೆಂದು ನಿಮ್ಮಭಿಧಾನವೇನಹುದು ಬಿತ್ತರಿಸಿ ಹೇಳು (ಕುವ್ಯಾಸ. ೩-೩೦); ಮುನ್ನಂ ಶೇಷಂ ವಾತ್ಸ್ಯಾಯನಂಗೆ ಪೇಟ್ದನವನೆಯ ನಿನಗೆ ಬಿತ್ತರಿಪೆಂ (ರಾಮಾಶ್ವ. ೩-೦೦). ೩. ಹಿರಿಮೆಯನ್ನು ಪಡೆ : ಇತ್ತಲಾ ಸಭೆಯೊಳಗೆ ಸಿಂಹಾಸನದ ಮೇಲೆ ಬಿತ್ತರಿಪ ಕನಕಮಣಿ ಭದ್ರಾಸನದ ಮೇಲೆ ಸಕಲನೃಪ ರಾಜಪುತ್ರರ ನಡುವೆಯೊಪ್ಪಿದಂ (ನಂಬಿರ. ೩-೯೮). ೪. ಸಿದ್ಧಪಡಿಸು : ಅಣಿಮಾಡು; ಲವಲಪಿಕೆಯುಂ ಪರಿಯಣಮುಂ ಬಿತ್ತರಿಸಲುಂ . . . ಪೇಟ್ದುಗಳ್ (ಆದಿಪು. ೬-೨೦ ವ): ಬಿತ್ತರಿಸಲ್ಕೆವೇಟಾ ಪರೂಥೋತ್ಕರಮುಂ ಬಲಿದೊಡ್ಡವೇಟ್ ಪದಾತಿಯುಂ (ಕಾವ್ಯಾವ. ೪೦೩). ೫. ವ್ಯಕ್ತವಾಗು; ಗೋಚರಿಸು: ತತ್ಕಪೋಲದೊಳ್ಬಿತ್ತರಿಸಿದುವು ಕೊನರ್ತ ಬೆಮರ ಬಿಂದುಗಳಾಗಳ್ (ಕಾದಂಪೂ. ೭೫೭). ೬. ಕೊಂಡಾಡು ; ಕೀರ್ತಿಸು : ಹರಿ ಹರ ಹಿರಣ್ಯಗರ್ಭರನುರವಣೆಯಿಂ ಗೆಲ್ದ ಕಾಮನಂ ದೀಪ್ತತಪೋಭರದಿನ್ನುರಿಪಿದರೆನೆ ಬಿತ್ತರಿಸದರಾರ್ ವೀರಣನ್ದಿಸ್ಯೆದ್ಧಾನ್ತಿಕರಂ (ಎಕ. II. ೦೪೦-೦೬೩; 1145). [ಬಿತ್ತರ + — ಇಸು$_3$]

**ಬಿತ್ತಲಂಡೆ** 'ಬಿತ್ತಲಟ್ಟೆ' ನೋ.

**ಬಿತ್ತಲಟ್ಟೆ. ಬಿತ್ತಲಂಡೆ** (ನಾ). ಒಂದು ಬಗೆಯ ತೆರಿಗೆ (?): ಕೆಱೆಯ ಕೆಟಿಗೆ ತಲೆರಾಸಿಯಲಿ ಬಿತ್ತಲಟ್ಟೆಯುಂ ಖಣ್ಡಗಗಟ್ಟಿದ್ದಯುಂ ಕೆಱೆಗೆ ಸಲ್ಲು (ಸೌಇಇ. IX– i, ೨೬_೬: 10ನೆಯ ಶತ). **ಬಿತ್ತಲಂಡೆ** : ಕಲ್ಲಳೂರ ಕೆಱೆಯ ಕೆಟಿಗಾಟ್ಟ ಬಿತ್ತಲಣ್ಡೆಯುಂ ಕೆಱೆಗೆ ಇಕ್ಕದನನ್ದ ವಾರಣಾಸಿಯುಂ ಕವಿಲೆಯುಮನಳಿದ ಪಾಪಕ್ಕೆ ಸಲ್ವಂ (ಸೌಇಇ. IX–i. ೩೪–೯ ; 10ನೆಯ ಶತ). [?]

**ಬಿತ್ತವಟ್ಟ** 'ಬಿತ್ತುವಟ್ಟ' ನೋ.

**ಬಿತ್ತಾಣ** 'ಬಿತ್ತಣ' ನೋ.

**ಬಿತ್ತಿ** (ನಾ). ಗೋಡೆ : "ಬಿತ್ತಿ — ಭಿತ್ತಿ = ಗೋಡೆ" (ಕರ್ಣಕೋ. ೩೦): ಬಿತ್ತಿಯೊಳಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ . . . ನೋಡಿ (ಕಬ್ಬಿಗ. ೯೩) : ಭರ್ಗಸಖನ ಬಂಡಾರದ ನವರತ್ನವರ್ಗದ ಬಿತ್ತಿಗಳಿಂದ ದೀರ್ಘವಡೆದು ದಿವ್ಯಕಾಂತಿಯ ಬೀಱುತ ದುರ್ಗಾಮಂಟಪವಿದ್ದುದು (ಕಂಪವಿ. ೬–೩೩). [< ಸಂ. ಭಿತ್ತಿ]

**ಬಿತ್ತಿಕೆ. ಬಿತ್ತಿಗೆ$_1$** (ನಾ). =ಬಿತ್ತಣ ೧ : ಮಾಟಕೂಟವೆಂಬ ಹೊಲದಲ್ಲಿ ಪಾಪ ಪುಣ್ಯವೆಂಬ ಬೀಜದ ಬಿತ್ತಿಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು (ಮೋಳಿಮಾ. ೦೦೪–೪೦೩) ; ಗೋದಿಯ ಬಿತ್ತಿಕೆಯಕ್ಕಿಂತಲೂ ಸ್ವಲ್ಪ ಅಗಲವಾಗಿ ನಾಲ್ಕು ಬೆರಳು ಅಂತರಕ್ಕೊಂದು ಬೀಜ ಬೀಳುವಂತೆ ಬಿತ್ತಬೇಕು (ಕೃಷಿಶ್ರ. ೯೨). **ಬಿತ್ತಿಗೆ$_1$** : ಬಿತ್ತಿಗೆಯ ಬಿತ್ತೊಂದುಳಿಯದಂತೆ ಬಂಧುರವಾಗಿ ನಾಂಟ ಕಂಗೊಳಿಸುತಿರ್ದವು (ಮಲ್ಲಿಕ. ೧೨–೦೦) ; ನವಬೀಜದ ಹೊಸ ಬಿತ್ತಿಗೆಗಾಗಿ ಬಿಡಬೇಕು, ಹೊಲ ಬಿಡಬೇಕು (ಹ್ರದಸ. ೩೩–೩) ; ಒಂದು ಹಳ್ಳಿ ಬೆಳೆದರೆ ಹತ್ತು ಹಳ್ಳಿಗಳಲ್ಲಿ ಬಿತ್ತಿಗೆಯಾಗುತ್ತಿರಲಿಲ್ಲ (ಮತ್ತುಮ. ೩). [ಬಿತ್ತು$_1$ + — ಇಕೆ]

**ಬಿತ್ತಿಕ್ಕು** (ಕ್ರಿ). ಬೀಜವನ್ನು ಎರಚು ; ಕಾಳುಗಳನ್ನು ಬಿತ್ತು : ತೆತ್ತಿಸಕೋಟಿ ನಿರ್ಜರರು ಮುತ್ತಿನ ತ್ಯಾಗವ ಕೊಟ್ಟಂತೆಯೂಲಿಕಲ್ ಬಿತ್ತಿಕ್ಕಿ ಬಿರ್ದುದುರ್ವಿಯಲಿ (ಮೋಹತ. ೪–೩೮). [ಬಿತ್ತು$_2$ (< ಬಿಟ್ಟು) + ಇಕ್ಕು]

**ಬಿತ್ತಿಗ** 'ಬಿತ್ತಗ' ನೋ.

**ಬಿತ್ತಿಗಪೆಣ್** 'ಬಿತ್ತಗವೆಣ್' ನೋ.

**ಬಿತ್ತಿಗವೆಣ್** 'ಬಿತ್ತಗವೆಣ್' ನೋ.

**ಬಿತ್ತಿಗೆ$_1$** 'ಬಿತ್ತಿಕೆ' ನೋ.

**ಬಿತ್ತಿಗೆ$_2$** (ನಾ). ಪೌಢಿಮೆ ; ಚದುರೆ : ಒರ್ವ ಬಿತ್ತಿಗೆಯಂ ನಿಟ್ಟಿಸಿ ನೀರಡಿಕೆಯಂ ತೀರ್ಚೆ ತೆಱನಾವುದೆಂದು ಬೆಸಗೊಳಲ್ (ಶಬರ. ೦೦೬–೩). [ಬಿತ್ತಿಗ (< ಬಿತ್ತಗ) + — ಎ$_2$]

**ಬಿತ್ತಿಸು** (ಕ್ರಿ). ಬೀಜವನ್ನು ನಾಟಿಸು : ಕೇತಿದೇವನು ಸಸಿನೆ ಬಿತ್ತಿಸಿ ಸಾಲು ಸಾವಿರವಾಗಿ ಬೆಳೆದನಲಾ (ಬಸವು. ೬೦–೦೯) : ಅರಿನೃಪರನು ಕೊಂದು ಪುರವ ಪಾಳ್ಗೈದಾಗ ಹರಳ ಬಿತ್ತಿಸಿದರೇನೆಂಬೆ (ಕಂಪವಿ. ೩–೦೬). [ಬಿತ್ತು$_1$ + — ಇಸು$_3$]

**ಬಿತ್ತು$_1$. ವಿತ್ತು$_1$** (ಕ್ರಿ). ೧. ಬೀಜ ಹಾಕು; ಬೀಜಾವಾಪ ಮಾಡು : "ಬಿತ್ತು—ಬೀಜಸ್ಥಾಪನೇ, ಬೀಜೇ ಚ". (ಶಮುದಾ) ; ಸುಕ್ಷೇತ್ರವಲ್ಲದ ನೆಲದೊಳ್ ಬಿತ್ತಿದ ಫಲಮಂ(ಮುಂ) ಬಿತ್ತೆಂದುಂ ಫಲಮಾಗಲಾಱವು (ಕಾವುಂಕು. ೦೩೬); ಹೊಳ್ಳ ಬಿತ್ತಿ ಫಲವನಱಸುವಂತೆ (ಮುಹಾರೀ. ಬಿ. ೩೬.೦೪೦); ಹುರಿದು ಬಿತ್ತಿದ ಬೀಜ ಮೊಳೆವುದೆ (ಭರತ. ೨–೩೩). ೨. ಪ್ರಕಟಪಡಿಸು; ಹರಡು : ಸತ್ಕೀರ್ತಿಯಂ ಧರೆಯೊಳ್ ಬಿತ್ತುವಗಡ್ಡದುಡ್ಡು ಜಱಿ ಪರ್ಗಿಷ್ಟಾರ್ಥದಾನಂಗಳುಂ . . . ಈಕ್ಷಿಸಲ್ ದೊರೆಗಳ್ಗೆತ್ತಣ ನೀತಿಯೈ (ಸೋಮೇಶ. ೬೦) ; ಚರ್ಮಭಸ್ತ್ರಿಕೆಯನೊಂದಂ ಚೆಂದಮಪ್ಪಂತೆ ನಿರ್ಮಿಸಿದೆಂ ಲಕ್ಷ ಸುವರ್ಣಮಂ ಕಱಿವುದೆಂಬಿ ಸುದ್ದಿಯಂ ಬಿತ್ತಿದೆಂ (ಧರ್ಮಾ. ೯–೦೩೬);

**ವಿತ್ತು$_{1}$** : ೧. ಒಕ್ಕಲಿತ್ತಸಂಕೈಯ್ವನಾ ವಿತ್ತಿವಲ್ಲಿ ವೆಳೆಯಾದ ಕೆಡುಗೆ (ಎಕ. VII. ಶಿಕಾ೦. ೦೩೪-೦೭ : ೯೮೫). [ದೇ.॥ ತಮಿ. ವಿತ್ತೈ. ವಿತ್ತು : ಮಲ. ವಿತ್ತ ; ತೊದ. ಒಕ್ತ್ ; ಕೊಡ ಬಿತ್ತ್ ; ತುಳು. ಬಿತ್ತು, ಬುತ್ತು; ತೆಲು. ವಿತ್ತು; ಕೋಲಾ. ನಾಯ್ಕಿ. ಪರ್ಜಿ. ಗದಬ. ವಿತ್]

**ಬಿತ್ತು$_{2}$** 'ಬಿಟ್ಟಿ' ನೋ.

**ಬಿತ್ತುಕಟ್ಟು** (ನಾ). ಕೆರೆಯ ಜೀರ್ಣೋದ್ಧಾರಕ್ಕಾಗಿ ಬಿಟ್ಟ ಭೂಮಿ ಮೊದಲಾದುವನ್ನು ಮತ್ತು ಅವುಗಳ ಆದಾಯವನ್ನು ಬಿಟ್ಟುಕೊಡುವುದು : ತಿರುವಯ್ಯನ ಮಗಂ ಚನ್ನಸೇಕರಂ ಮಣ್ಣಿಗಲ್ಲ ಕೆಱೆಗೆ ಬಿತ್ತುಕಟ್ಟ ಬಿಟ್ಟಂ(ಎಕ. X. ಮುಳಬಾ. ೧೯೬-೯: ಸು. 950); ಬಂಗವಾಡಿಯ ಕೆಱೆಗೆ ಬಿತ್ತುಕಟ್ಟು ಬಿಟ್ಟುದು (ಎಕ. X, ಕೋಲಾರ. ೨೯೮-೩೩: ಸು. 950); ಶ್ರೀವತ್ಸಬಯ್ಯಂ ಬಿದಿರೂರನಾಳುತ್ತಿರ್ದು ಕೆಱೆಗೆ ಬಿತ್ತುಕಟ್ಟಂ ಬಿಟ್ಟ (ಎಕ. X. ಮುಳಬಾ. ೭೨೬-೦೮; 961). 'ಬಿತ್ತುವಟ್ಟ' ಪರಾ.

[ಬಿತ್ತು$_{2}$ (<ಬಿಟ್ಟು) + ಕಟ್ಟು$_{2}$]

**ಬಿತ್ತುಗಟ್ಟಣೆ** (ನಾ). = ಬಿತ್ತುಕಟ್ಟು : ಆಸಂದಿಯ ಬಯ್ಯುಳದ ಬಿತ್ತುಗಟ್ಟಣೆಯ ಗ ೧ ವ ಕೊಟ (ಮೈಅ೦. ೦೯೩೭. ೩೦-೨೩ ; 1162) ; ಬಿತ್ತುವಾಟವೆಂದೂ. ಬಿತ್ತುಕಟ್ಟೆಂದೂ. ಬಿತ್ತುಗಟ್ಟಣೆಯೆಂದೂ ಕೆಲವೆಡೆಗಳಲ್ಲಿ ಕರೆದಿರುವರು (ಸಂಭಾನ. ೨೦೦).

[ಬಿತ್ತು$_{2}$ (<ಬಿಟ್ಟು) + ಕಟ್ಟು$_{1}$ + –ಅಣೆ$_{4}$]

**ಬಿತ್ತುಪಾಟ** 'ಬಿತ್ತುವಟ್ಟ' ನೋ.

**ಬಿತ್ತುಬೀಜ** (ನಾ). ಬಿತ್ತುವ ಬೀಜ ; ಬೀಜವರಿ : ನಾಲ್ಕುಮೂಡೆ ಬಿತ್ತುಬೀಜದ ಗದೆಯನು × × ಕಾಣಿಕೆ ಕಡ್ಡಾಯ ಅಱುದೂಯಿಲ್ಲ (ಕಾಇ. IX-ii. ೪೨೩-೦೩; 1401). [ಬಿತ್ತು$_{1}$ + ಬೀಜ]

**ಬಿತ್ತುಬೀಟಿಲ್** (ನಾ). ಬೀಜವನ್ನು ಬಿತ್ತುವ ಭೂಮಿ : ಬಿತ್ತುಬೀಟಿ ಮೂಗೊಳ ಗಟ್ಟಿಯುಂ ಮೂಗೊಟಿ ಪೊಳಂ ಬಿಟ್ಟರ್ (ಎಕ. X, ಶಿಂತಾಮ. ೧೩೩-೩; ಸು. 1000). [ಬಿತ್ತು$_{1}$+ಬೀಟಿಲ್$_{2}$ (<ಬೀಡು$_{2}$)]

**ಬಿತ್ತುವಟ್ಟ**, ಬಿತ್ತವಟ್ಟ, ಬಿತ್ತುಪಾಟ, ಬಿತ್ತುವಾಟ (ನಾ). = ಬಿತ್ತುಕಟ್ಟು : P "ಬಿತ್ತುವಟ್ಟವೆಂದರೆ ಕೆರೆಯ ಹಿಂದಿನ ತರೀ ಜಮೀನಿನಲ್ಲಿ ಬಿತ್ತು ಅಥವಾ ಬೀಜವರಿಯ ಮೇಲೆ ವಟ್ಟ ಎಂದರೆ ಪಾಲು ಎಂದರ್ಥ" (ಸಂಶಾವ. ೨೦೦) : ಮೂಡಣ ಕೆಱೆಯಂ ಕಟ್ಟಿಸಿ ಮೂಱು ಕೆಱೆಯ ಬಿತ್ತುವಟ್ಟವಂ ಪಡೆದಂ (ಎಕ. IX. ಶಿಂಗೇರಿ. ೭೯-೬ : ಸು. ೫೭೧) ; ಊರುವಮ್ಮತಾಪಸವು ವರುಣಶಿವಬಟಾರರುಮಿಬ್ಬು ಕೆಱೆಗೆ ಬಿತ್ತುವಟ್ಟ ಕೊಟ್ಟು (ಕಾಇ. IX-i. ೨೪-೩೯ ; ೧೩೬) ; ಊರೊಕ್ಕಲು ಒಬ್ಬೊಬ್ಬನೂ ಒಂದು ಕೊಳಗ ಬಿತ್ತುವಂಗೆ ಒಂದು ಪಡಿ ನೆಲ್ಲನ್ನು ಬಿತ್ತುವಟ್ಟವಾಗಿ ಕೊಡಬೇಕೆಂಬ ಆಣತಿ ಕಳಿದ ವರುಷ ಶಾಸನವಾಯಿತು (ಸಪಶಿ. ೦೬೭) ; ಊರಿನ ಜನ ಸೇರಿ ಕೆರೆಗಾಗಿ ಒಂದು ಜಮೀನನ್ನು ಬಿಡುತ್ತಿದ್ದರು. ಬಹುಶಃ ಇದನ್ನೇ ಬಿತ್ತುವಾಟ ಅಥವಾ ಬಿತ್ತುವಟ್ಟ ಎಂದು ಶಾಸನಗಳಲ್ಲಿ ಕರೆದಿರುವುದು (ಕಶಾಂ. ೯೩೪). **ಬಿತ್ತವಟ್ಟ** : ಹೊಲದವರೆಯ ನೆಟ್ಟು ಸೊಡಗೆಯ ಸುಲಿವಲ್ಲಿ ತಳಲು ಬಲಿದು ಒಡೆದುದಿಲ್ಲ ಬಿತ್ತವಟ್ಟಕ್ಕೆ ಪೊದರೆ ಕೊಳೆ ಹೋಯಿತ್ತು (ಶಿಶಿಂಕಶಾ. ೨೬೩-೬೦೭) : ಬಿತ್ತಿದ ಬೆಳೆಯ ಪೃಥ್ವಿ ನುಂಗಿದಾಗ ಬಿತ್ತ[ಪಾಠಾಂ. ಬಿತ್ತಿದ]ವಟ್ಟವೆಂತಪ್ಪುದೊ (ಗುತ್ತವಂ. ೨೦೩-೭) : ಹೊತ್ತ ಕೊಂಗವ ಆಳೆಹುವರಿಲ್ಲ ಸಡ್ಡೆಗೆ ಮೂಱು ಕವೆ ಪೊಂದೆ ಬಿತ್ತವಟ್ಟ ಮೊರಕ್ಕ ಮೂಱು ಗೋಟು (ಕಲ್ಯಾಶಾಂ. ೦೦೨-೭). **ಬಿತ್ತುಪಾಟ** : ಪನ್ನಿಕ್ಕರ್ಣಿಗ ಮಣ್ಣು ಬಡಗ ದಡಿಯ ಬಿತ್ತುಪಾಟವುಮಂ ಕೊಟ್ಟರ್ (ಎಕ. XII, ಶಿರಾ. ೯-೪೦ : 1072). **ಬಿತ್ತುವಾಟ** : ಚಿತ್ತಸ್ಯ ಕೆಱೆಯನ್ ಕಟ್ಟಿಸಿ ನಾಲ್ಕಳಮೆಯ ಭಾಗಂ ಬಿತ್ತುವಾಟಂ ಕೆಱೆಗೆ ಕುಡುವುದು (ಎಕ. XI. ಹಿರಿಯೂ. ೩೩-೭; ಸು. 890); ಕೆಱೆಯ ಬಿತ್ತುವಾಟಮುಂ ಕೆಱೆಗೆ ಕೊಡದಂಬ್ಬಮನುಮಸ್ತೆ (ಮೈಅ೦. ೧೯೩೯, ೭೭-೦೦ ; ೯೧೩) ; ದುರಸ್ತು ಮಾಡಿಸಲು ಬಿಟ್ಟುಕೊಡುತ್ತಿದ್ದ ಭೂಮಿಯನ್ನೇ 'ಬಿತ್ತುವಾಟ' ಎಂದು ಶಾಸನಗಳು ಕರೆದಿರುವುದು (ಕಶಾಅ. ೩೭೮).

[ಬಿತ್ತು$_{2}$ (<ಬಿಟ್ಟು) + ಪಟ್ಟ$_{2}$]

**ಬಿತ್ತುವರಿ** (ನಾ). ಒಂದು ನಿರ್ದಿಷ್ಟ ಅಳತೆಯ ಜಮೀನಿಗೆ ಬಿತ್ತಲು ಬೇಕಾಗುವಷ್ಟು ಬೀಜದ ಪ್ರಮಾಣ : ಊರೊಕ್ಕಲು ಒಬ್ಬೊಬ್ಬನೂ ಒಂದು ಕೊಳಗದ ಬಿತ್ತುವರಿಗೆ ಒಂದು ಪಡಿ ನೆಲ್ಲನ್ನು ಬಿತ್ತುವಟ್ಟವಾಗಿ ಕೊಡಬೇಕೆಂಬ ಆಣತಿ ಕಳೆದ ವರುಷ ಶಾಸನವಾಯಿತು (ಸಪಶಿ. ೦೬೭).

[P 'ಇದು ಬೀಜವರಿ' ಎಂಬ ಶಬ್ದಸಾಮ್ಯದಿಂದ ಆದ ರೂಪ]

**ಬಿತ್ತುವಾಟ** 'ಬಿತ್ತುವಟ್ಟ' ನೋ.

**ಬಿತ್ತುಹ** (ನಾ). ಬಿತ್ತುವಿಕೆ : ನೆಲದಲ್ಲಿ ತಾವರೆಯಂ ಬಿತ್ತುವಮಂ . . . ಕುರುಡಂಗೆ ಕನ್ನಡಿಯಂ ತೊಱುಪಮಂ (ಪಂಚತಂ. ೨೩೭-೯).

[ಬಿತ್ತು$_{1}$ + – ಹ$_{2}$(< – ಪ$_{2}$)]

**ಬಿತ್ತಿಗ**, ಬಿತ್ತಿಗ (ನಾ). ೧. ಪಂಡಿತ ; ಬಲ್ಲಿದ ; ವಿದ್ವಾಂಸ : "ಬಿತ್ತಿಗಂ–ಪ್ರೌಢಂ" (ಶಮಂದ. ಶಿ. ೨) : ಬಿತ್ತವೇಱುವರೆ ಶರೀರಶೋಭಸಗ್ಗೆಯ ಬಿತ್ತಿಗರಿಳೆಯೊಳಿಹಂತೆ ಬಿತ್ತಿದ ಮದವ ಪೆಂಗಳೊಳಾಡಿ ಕಳೆದು ರಾಜೋತ್ತಮನಿಪನಾತ್ಮನೊಳಗೆ (ಶರಕ. ೦೦-೦೨೪) ; ಬಿತ್ತಿಗರೊಳ್ ಬಿಜ್ಜೆಯ ನೊಾತೆರ್ದಪುಗೆ ಕಲ್ವರನಿತ್ತು ತಿಳಿವು ಪೂಣ್ಕುಗುವುವರೊಳ್ (ಒತಿವಂ. ೨-೨೬೭). ೨. ನಿಪುಣ ; ಚತುರ: ಕಂಗಱಿಯ ಮೊನೆಯಂಬುಗಳ್ ಕಣ್ಣಱಿಯಿಸಿವವು ಪೊಣರ್ಪ ಬಿಲ್ಲ ಕಡುಬಿತ್ತಿಗರಂ (ಹಂಶಥಾ. ೧೦-೭೩). **ಬಿತ್ತಿಗ** : ೨. ಮಾರ್ಪರಿದು ಬಿಲ್ಲ ಬಿತ್ತಿಗರೊರ್ವೊರ್ವರಿಸಿ ಕಣೆಗಳ್ಗರ್ಚಿ ಪೋದುವು ನೆಱಿಸಂ (ಹಂರಾವಿ. ೦೩-೪೦) : ಶರಾಳಿಯಂ ಕಱೆವರಾಪಪದೊಳ್ ಕಡುಬಿಲ್ಲ ಬಿತ್ತಿಗರ್ (ಅದ್ಭುತ. ೪-೭೮).

[ಬಿತ್ತ$_{0}$ (P ← ತಮಿ. ವಿತ್ತೈ$_{y}$ = ವಿದ್ಯೆ) + –ಗ$_{2}$]

**ಬಿತ್ತಿಗವೆಣ್**. ಬಿತ್ತಿಗಪೆಣ್. ಬಿತ್ತಿಗವೆಣ್ (ನಾ). ಪ್ರೌಢೆಯಾದ ಹೆಣ್ಣು ; ಜಾಣೆ ; ಚತುರೆ : "ಬಿತ್ತಿಗಪೆಣ್ಣೆಂದು ಪ್ರೌಢೆ" (ಕಶಿಶಾ. ೬೨-೩೭೯) ; "ಬಿತ್ತಿಗಪೆಣ್ಣನೆ ಪ್ರೌಢೆಗೆ" (ಕಬಿಕಂ. ೧೬೩). **ಬಿತ್ತಿಗಪೆಣ್** : ಗಣಿಕೆ ಬಿತ್ತಿಗಪೆಣ್ಣೊಳೊರ್ವಳತಿ ಸ್ನೇಹದಿಂದೈತರುತ (ರುಕ್ಮಾಂಗ. ೩-೪೧). **ಬಿತ್ತಿಗವೆಣ್** : "ಬಿತ್ತಿಗವೆಣ್ಣನಲ್ ಪ್ರೌಢ" (ಕಬ್ಬಿಕೈ. ೨೭) : "ಬಿತ್ತಿಗವೆಣ್ಣನಲ್ ಪ್ರೌಢೆಯುಂ" (ಕಆರ. ೭೮). [ಬಿತ್ತಿಗ + ಪೆಣ್]

**ಬಿತ್ತೋಣ** (ನಾ). ಬಿತ್ತನೆ ಮಾಡುವಿಕೆ ; ಬಿತ್ತುವಿಕೆ : ಒಂದು ವರ್ಷ ಹವ ತಪ್ಪಿ ಬಿತ್ತೋಣದರಿಂದಾಗಲಿ ಅಥವಾ ಮಳೆಯು ಹೆಚ್ಚು ಕಡಿಮೆಯಾಗುವದರಿಂದಾಗಲಿ . . . ಒಂದು ವರ್ಷ ಬೆಳೆಯದೆ ಹೋದರೆ ಆ ಪದಾರ್ಥಗಳು ನಮ್ಮ ದೇಶದಲ್ಲಿ ಅಗುವುದಿಲ್ಲವೆಂದು ಬಿಟ್ಟು ಬಿಡಲಾಗದು (ಕೃಷಿಕ. ೬೦). [ಬಿತ್ತು$_{1}$ + – ಓಣ]

**ಬಿದಣ** (ನಾ). (?) : ವ್ಯಾಧಿಯೊಳು ನೊಂದು ಸತು ಬಗ್ಗಿ ಕಣ್ಣಳ ಮುಚ್ಚಿ ಹಾದಿಗಾಣದರು ಹಿರಿಯರೆಯಲ್ತು ಹಿರಿಯಳೆಮ್ಮಕ್ಕ ಮಾಪದೇವಿಯೆಂನುತಂ ಮೇದಿನಿಯೊಳತಿಬಿದಣಗೊಂಡು ಕರಪುರಿ ಹೆಚ್ಚಿ (ಶ್ರಬಾಶು. ೬. ೭೮). [?]

**ಬಿದಾಗಿ** (ನಾ). ಬೀಳ್ಕೊಡುವಾಗ ಕೊಡುವ ಕಾಣಿಕೆ, ಸಂಭಾವನೆ : ಸಲ್ಲ ತಕ್ಕ 'ಬಿದಾಗಿ'ಯ ಆಸೆಯನ್ನು ತೊರೆದು ದಾರಿ ಸಿಕ್ಕತ್ತ ಕಾಲಿಗೆ ಬುದ್ಧಿ ಹೇಳಿದರು (ಗ್ರಾಮಾಯ. ೫೬).

[← ಹಿಂ. ಬಿದಾಈ ; ಮರಾ. ಬಿದಾಗೀ, ಬಿದಾಈ]

**ಬಿದಾನಂದ**, ಬಿದಾನದ (ನಾ). ತಿಳಿವಳಿಕೆ ಪತ್ರ ; ನೋಟೀಸು : ಮೈಸೂರ ಬಿದಾನಂದ ಮದ್ದಗಿರಿ ಕಸಬೆ ಬೆಟ್ಟದ ಹಿಂದೆ ಸುತ್ತು ಅಡವಿ ಗಿಡಾ ಕಡದು ಸಾಗುವಳಿ ಮಾಡುವ ಬಗ್ಯೆ . . . ಸರಕಾರಕ್ಕೆ ಹಣಾ ಸಂದಾಯ ಮಾಡುತ್ತಾ (ಮೈಅ೦. ೦೯೨೯. ೯೪-೯ ; 1813). **ಬಿದಾನದ** :

ನಗರ ಸರಕಾರ ದಾರೂಲರಿಯಾಸತ ಮೈಯಿಶೂರು ಬದಾನದದ್ದರಿವಿಲ್ಲ ತಾಲೋಕ ಮಜಕೂರ ವೈಕಿ (ಮೈಅಂ. ೦೯೩೯. ೩೨-೩ ; 1812).
[← ಪಾರ. ಬದಾನಂದ್; ಮರಾ. ಬದಾನಂದ್, ಬದಾನದ್]

**ಬದಾನದ** 'ಬದಾನಂದ' ನೋ.

**ಬದಿ** (ನಾ). ೧. ಸೃಷ್ಟಿಕರ್ತ ; ಬ್ರಹ್ಮ: "ಅಂಚೆದೇರಂ, ನುಡಿವೆಣ್ಣನಿಯಂ. ಪೊಂಬಸಿಱಂ, ಬದಿ . . . ತಾವರೆವಸೆಯಂ— ಈ ೮ ಬ್ರಹ್ಮಂಗೆ ಪೆಸರ್" (ಶಬ್ದಮ. ೯೮-೦೩) ; ಸೌಂದರಿಯರ ಗಾಡಿಗಳೊಳಗೊಂದೊಂದನೆ ನೆಱಪಿ ಮಾಡಿದಂ ಬದಿ (ಅಂಕೃ. ೨-೩೬) ; ಪುಟ್ಟಿಸಿದನದೇಕಯೊ ಬದಿ (ಪುಷ್ಪ. ೦-೩೧) ; ತಾರಕನುಪಟಳವನು ಬದಿಯೊಳು ಸುರರು ಬಿನ್ನೈಸೆ (ಮೋಹತ. ೩-೩). ೨. ಅದೃಷ್ಟ ; ಹಣೆಬರಹ : ಕಿರಾತಂ ಬೇಸತ್ತು . . . ಬದಿಯಂ ಬಯ್ದು ತನ್ನ ಮನೆಗೆ ಮಗುಟ್ದಂ (ಶಂಕಶಂ. ೨೧೦-೦೬) ; ಇದು ಬದಿಯ ಕುಶಲತೆಯ . . . ಬೆಳ್ಗಸವನುರುಳಿಸುವ ಕಾಲನೆಂಬುವ ವಿಲಯರುದ್ರ ನೊಲಿದಲೆಯುತಿಹ ಕಟ್ಟುನಿಯ ಸುಡುಗಾಡು ! (ಕಂಶಾ. ೨೯-೬).

ಬದಿಯ ತೇರು = ಬ್ರಹ್ಮನ ವಾಹನ; ಹಂಸ: "ಬದಿಯ ತೇರುಮಂಚಿ ಯೆಂದು ಹಂಸಾಖ್ಯಮದಕ್ಕಂ" (ಅಭಿಕ್ಕ. ೯). [< ಸಂ. ವಿಧಿ]

**ಬದಿಗ** (ನಾ). ೧. ಅದೃಷ್ಟಶಾಲಿ : ಗ ಪ್ರತ್ಯಯಕ್ಕೆ . . . ಬದಿಗಂ, ಸಟಿಗಂ (ಕಮದ. ೨೦೦ ವೃತ್ತಿ). ೨. ಒಬ್ಬಾತನ ಹೆಸರು : ಶ್ರೀಮತ್ ರೂವಾರಿ ಬದಿಗಯಾ ಕಮ್ಮಟದ ಸೂಳೆಂರಿದ ಮುಟ್ಟಿದರ ಮೆಯಿ ಜಾಯಿಲೆ ವೆಟಿಗಗಿನ್ (ಎಕ. II, ೩೦೬ ; ಸು. 950). [ಬದಿ + —ಗ$_2$]

**ಬದಿಗೆ**, ಬದಿಯೆ (ನಾ). ಪಕ್ಷದ ಎರಡನೆಯ ದಿನ ; ದ್ವಿತೀಯೆ : "ಬದಿಗೆಯೆನಲ್ಕೆ ದ್ವಿತೀಯಾಪ್ಕೆ" (ಕಕರ. ೬೯); ಗರ್ಭಾವತರಣಾ ಆಷಾಢ ಬಹುಲಬದಿಗೆಯುತ್ತರಾಷಾಢಾನಕ್ಷತ್ರದ ಬೆಳಗಪ್ಪ ಜಾವದೊಳ್ (ಅಂಕೃ. ೬-೩೨ ವ) ; ಶುಕ್ಲಪಕ್ಷದೊಳ್ ಬದಿಗೆಯೊಳಾದಿವಾಸರದೊಳ್ . . . ವೃಶ್ಚಿಕಲಗ್ನದೊಳರ್ಕಜಾಂಶಮಮಾದುದು ಕವಿರತ್ನನಂದನನ ರಾಯನ ಜಾತಕಮುತ್ತರೋತ್ತರಂ (ಅಜಪು. ೦೨-೩೩). **ಬದಿಯೆ** : ಭಾದ್ರಪದ ಬಹುಳ ಬದಿಯ (ಎಕ.VI, ೨೩೯-೬ ; 975) ; ಜೇಷ್ಟ ಸುದ್ದ ಬದಿಯ (ಕಇ. II, ೬-೨೨ ; 1030).

ಬದಿಗೆಚಂದ್ರ, ಬದಿಗೆಯ ಚಂದ್ರ = ವೃದ್ಧಿಯಾಗುತ್ತಿರುವ ಚಂದ್ರ; ಶುಕ್ಲಪಕ್ಷದ ಚಂದ್ರ : ಬದಿಗೆಚಂದ್ರ ಬಂದ ನೋಡು ದೀಪ ಹಚ್ಚಿದಂತೆ ಜೋಡು (ಅರಳು. ೨೬೯-೧): ಆತನುಂ ಬದಿಗೆಯ ಚಂದ್ರನಂತೆ ಕ್ರಮಾಕ್ರಮದಿಂ ಸುಖದಿಂ ಬೆಳೆದು (ಪಶ್ಚಾತಾ. ೭೩-೦೯) ; ಬದಿಗೆಯ ಚಂದ್ರ [ಶಾಶಾಂ. ದೃಮ]ನಂತಭಿವೃದ್ಧಿಯನೆಯ್ದಿ ಶೈಶವಂ ಪತ್ತುವಿಡಲ್ (ಪುಣ್ಯಾಸ್ರ. ೬-೨೧ ವ). [< ಪ್ರಾ. ಬಿಇಅ, ಬದಿಯ. /ಸಂ. ದ್ವಿತೀಯಾ]

**ಬದಿಗೆದಿಂಗಳ್** (ನಾ). ವೃದ್ಧಿಯಾಗುತ್ತಿರುವ ಚಂದ್ರ ; ಶುಕ್ಲಪಕ್ಷದ ಚಂದ್ರ : ಸಭಾಕ್ಕರವಕುತೂಹಲಕೆ ಬದಿಗೆದಿಂಗಳ್ ನಗೆಯ ಜೊನ್ನಮಂ ಸಿಂಚಿಸುತ, ಮಿಡಿಯತೊಡಗಿದನಿಂತು ತನ್ನುಸಿರ್ತೇನೆಯಂ (ಶ್ರೀರಾಮಾ. ೩೬೪-೩೨೫). [ಬದಿಗೆ + ತಿಂಗಳ್]

**ಬದಿಗೆವೆಱ** (ನಾ). = ಬದಿಗೆದಿಂಗಳ್ : ಬದಿಗೆವೆಱೆಯ ಬಿಂಕಂಗಿಡಿ ಪಥರಂ . . . ಒಪ್ಪಿದುವಾ ಸತಿಗೆ (ಜಗನ್ನಾ. ೨-೬) ; ಬದಿಗೆವೆಱೆಯಂ ನಾಣ್ಚಿಸುವ ಕೊರೆದಾಡೆಗಳ್ (ರಾಜಶೇ. ೦೯-೬). [ಬದಿಗೆ + ಪೆಱ]

**ಬದಿವಾಳ್ಕೆ** (ನಾ). ವಿಧಿಯ ಕೆಲಸ; ಅದೃಷ್ಟದ ಕೈವಾಡ : ಬದಿವಾಳ್ಕೆ ಯೊಳ್ಪಿತಕ್ಕಂ (ಶ್ರೀರಾಮಾ. ೪೩೦-೨೬೩).
[ಬದಿ + ವಾಳ್ಕೆ (< ವಾಟಿಕೆ)]

**ಬದಿಯಣ್ಣ** (ನಾ). ಒಬ್ಬಾತನ ಹೆಸರು : ಕೊನೆಗೌಡ ಬದಿಯಣ್ಣ . . . ವಿಳುತ್ತ ಒಡೆ (ಎಕ. VIII. ಸೊರಬ. ೪೩೬-೩ ; 972). [ಬದಿ + ಅಣ್ಣ$_1$]

**ಬದಿಯಮ್ಮ** (ನಾ). ಒಬ್ಬಾತನ ಹೆಸರು : ಮಗಂ ಬದಿಯಮ್ಮಂ ಕುಪ್ಪಳೂರ ಮಹಾಜನಕ್ಕೆ ಗೋಸಹಸ್ರಕೆ ಪೊನ್ನ ಕೊಟ್ಟು (ಎಕ. VIII. ಸೊರಬ. ೨೪೩-೧ ; ಸು. 950 ?). [ಬದಿ + ಅಮ್ಮ$_1$]

**ಬದಿಯಾಯ್ತ** 'ಬಿಜಯಿತ್ತ' ನೋ.

**ಬದಿಯೆ** 'ಬದಿಗೆ' ನೋ.

**ಬದಿರ್**$_1$, ಬದಿರು$_1$, ಬದುರ್, ಬದುರು (ಕ್ರಿ). ೧. ಕೆದರು ; ಚೆದರು; ಹರಡು : "ಬದಿರ್–ವಿಕೀರ್ಣೇ (ಚದರು–ಹರಡು), ವೇಣೌ ಚ" (ಕಮರ) ; ದರಿಗಳಂ ಕೋಡೊಳ್ ಕುತ್ತಿಯೆತ್ತಿ ಬದಿರ್ದೀಡಾಡುತಿರ್ದ (ಶಂಪಶಂ. ೪೬-೧) ; ಬದಿರ್ದೀಡಾಡಿ ಕೆಲಂಬರಂ ಕಲಬರಂ ಸಿಟ್ಟೆಲ್ದು ನುರ್ಗಾಗೆ ಕಾಯ್ದೊದೆದು . . . ಕೊಂದಂ ಮರುನ್ನಂದನಂ (ಶಂಗಾಪ. ೦೦-೦೯೩). ೨. ಕೊಡಹು ; ಒದರು ; ರಭಾಡಿಸು : ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯನದಿರ್ದು ಕೈಯಂ ಬದಿರ್ದನನಂ ಕಂಡು ನಕ್ಕಿಂತೆಂದಳ್ (ವಡ್ಡಾರಾ. ೦೬೬-೨೦) ; ಭೀಮಸೇನಂ ತನ್ನ ತಲೆಯೊಳಂ ಮೆಯ್ಯೊಳಂ ಕರಗಿ ಸುರಿವರಗಿನುರಿಯ ಬಂಬಲ್ಗಳಂ ಪೊಸೆದು ಬದಿರ್ದು ಕಳೆದು (ಶಂಪಭಾ. ೩-೬ ವ) ; ಶುನಕಂ ಕಡಂಗಿ ವಕ್ರಿಸೆ . . . ಕರ್ಣಮಂ ಬದಿರೆ ತಾನೆ ಪರಾಜಯಮಕ್ಕುಮಾಜಿಯೊಳ್ (ಶೋಕೋಜ. ೦೨-೨೦). ೩. ಅದಿರು ; ನಡುಗು ; ಕಂಪಿಸು : ಬದಿರ್ದವರಿನರರ ಹೃದಯಂ (ಎಕ. VII, ಶಿಕಾರಿ. ೩೬-೨೮ ; 1125). ೪. ಚೆಲ್ಲು ; ತುಳುಕು : ಅರೆಗೊಡ ತುಳುಕುವುದಲ್ಲದೆ ತುಂಬಿದ ಸಿರಿಗೊಡ ಬದಿರ್ವುದೆ (ಧರ್ಮ. ೬೦-೬೬). ೫. ಎಸೆ ; ಎರಚು: ಹದನಱಿದೆಸರಿಟ್ಟೊಯ್ಯನೆ ಮೃದುಮಹಿಯನೆಸಗಿ ಪದೆದೆಸರ್ ಕಾಯಲ್ ನಿಲ್ಲದೆಯಕ್ಕಿಯೆರಡನೊಲೆಯೊಳ್ ಬದಿರ್ದೆಸರೊಳ್ ಪೊಯ್ದುಳಕ್ಕಿಯಂ ಸತಿಯಾಗಳ್ (ರಸಕು. ೦೨-೦೨೦). ೬. ಒಗೆ ; ಬಿಸಾಡು : ಮುಚ್ಚರಂ ದೋರ್ಪ್ವ ಸಾಮಂತರನಾಟಂದೊತ್ತಿಗೆ ಗೋಣಾ ನುಲಿದು ಬದಿರ್ವ ಮಾಕಾಳಿ ಸಾವನ್ನಕೇತಂ (ಎಕ. VI, ಕಂ೯. ೪೨-೩೩; 1206). ೭. ನುಡಿಸು; ಮಿಡಿ ; ಮೀಟು : ವೀಣೆಯಂ ಬದಿರ್ದು ಮೃದುಸ್ವನಂ ನೆಗೞ್$^3$ (ಕಾವ್ಯಸಾ. ಕುಟಿ. ೨೩೬). ೮. ಇಲ್ಲವಾಗು ; ನಾಶವಾಗು : ಬದಿರ್ದುದು ಬಿಂಕಂ ಬೀತುದು ಪರಿ ವೈಸರವೋದುದು ಪೆಂಪು (ಹರಿಚ. ೩-೩೨). **ಬದಿರು**$_1$ : ೧. ಬದಿರಿದುವು ಮಕುಟ ತಾಗಿ ತಾರೆಗಳು . . . ನಮ್ಮ ಕೂಡಲಸಂಗಮದೇವನಿಂದು ನಾಟ್ಯವನಾಡೆ (ಬಸವ. ೩೧೦); ತಪ್ಪದೆ ಜಲಚರನಿಕರ ಬದಿರೆ ಮೇಲಕುಪ್ಪರಿಸುವ ಜಲಬಿಂದು ಚಿಪ್ಪಿಂದ ಲೊಡೆದು ಸಿಡಿವ ಮುತ್ತುಗಳೆನಲೊಪ್ಪಿದುದತಿರಮ್ಯವಾಗಿ (ಕಂಸಂ. ೩-೯೩). ೨. ಕುದುರೆ ಕಂಬನಿಯಿಕ್ಕಿದವು ಮೈ ಬದಿರಿದವು ದಂತಿಗಳು (ಕುಮ್ಮಾಭಾ. ೧೦-೦೬); ಕಾಲ ಹುಡಿಯನು ಬದಿರಿ ಬಿಸುಡುವವೋಲು ಸಕಲವನೊದೆದು ನಡೆದನು (ಜಭಾಗ. ೯೦೦-೦೨). ೩. ಬಟ್ಟಕಂತುಕದಿಂದೆ ಬಲ್ಮೊಲೆ ಬದಿರು ವಂತಿಟ್ಟಾಡಿದುದು ಸುಖನಿವಹ (ಶೋಹತ. ೦೯-೬೬). ೯. (ಅಲಂ) ವಿನಯದಿಂದಿರು ; ನಮ್ರವಾಗಿರು : ಬದಿರಲಂದಣವಕ್ಕು ಬದಿರೆ ಸತ್ತಿಗೆಯಕ್ಕು ಬದಿರಲ್ಲಿ ಗುಡಿಯು ಗೂಡಾರವಕ್ಕು ಬದಿರಲ್ಲಿ ಸಕಲ ಸಂಪದವೆಲ್ಲವು ಬದಿರದವರ ಮೆಚ್ಚ. ನಮ್ಮ ಕೂಡಲಸಂಗಮದೇವ (ಬಸವ. ೨೨೦); ಬದಿರೆ ಅಂದಣವಕ್ಕು ಬದಿರೆ ಸತ್ತಿಗೆಯಕ್ಕು ಬದಿರಿಂದ ಸಕಲ ಪದವಕ್ಕು ಲೋಕದೊಳು ಬದಿರದವ ಕೆಟ್ಟ (ಸರ್ವಜ್ಞ. ೬೬೯). **ಬದುರ್** : ೧೦. ಕಟ್ಟನ್ನು ಬಿಚ್ಚು ; ಕಟ್ಟನ್ನು ಸಡಿಲಿಸು : "ಬದುರ್ – ಅಶ್ಲಥಂಬ ಲಾಯಾಂ" (ಶಮಧಾ). ೧೧. ಕೀಳು ; ಉತ್ಪಾಟಿಸು : ಕೆಲರಂ ಕಿತ್ತಿರ್ಕ್ಕಿ ಬೇರಂ ಬಿದುದ್ದರ್ ಕೆಲರನತ್ಯುಗ್ರಸಂಗ್ರಾಮದೊಳು ಬಾಳ್ದಲೆಗೊಂಡು (ಎಕ. II. ೦೪೨-೨೦; 1123). **ಬದುರು** : ೨. ಶಿರವ ಬದುರಿ ಮಹಾ ದುರಾಗ್ರಹಬುದ್ಧಿಯಲಿ ಬಂದನು ನಿಜಾಲಯಕೆ (ಕಂಭಶ. ೬೩-೨೦); ಕಾಗೆ . . . ಪಕ್ಕವ ಬದುರೆ ನೀರ್ವನಿಯು ಲಿಂಗಶಿರಭಾಗದೊಳು ಬೀಳಲು (ಗುರುಚಾ. ೩-೬೧); ಮರುತಸುತ ಕ್ರೋಧದಿಂದೌಡೊತ್ತುತ ಬದುರುತಂ

ಬಾಲವಮಂ ಭೂತಳಕೆ ಧುಮ್ಮಿಕ್ಕಿ ಸದೆದು ಗಜರಥತುರಗಕಾಲಾಳು ಗಳನೆಲ್ಲನೊದೆದೆಮನ ಸವನಕಂ ಕಳುಪುತಿರ್ದನು (ಪಂಪಭಾ. ೩-೦೬-೧೬). ೩. ಸುರಗಿರಿ ವಜ್ರಹತಿಯಲಿ ಬಿದುರಿ ಬೀಳುವವೊಲು (ಜೈಮಿಗ. ೦೦-೩೬-೩೦): ದಿಕ್ಕರಿ ಕಮಠರೆದೆ ಬಿದುರೆ ಮುರಸೂಹರನ ಪಾರ್ಥನ ವಳದ ಚೂಣಿಯು ಸಮರ ರಂಜಿಸಿತು (ಕೋಗಮು. ೨೦ ಸಂಕಲನ). ೫. ಅಕ್ಷತೆ ಫಲಗಳ ಬಿದುರಿದ ರವರು ನಲ್ಮೆಯೊಳು (ಜ್ಞಾನಕ. ೩೯-೯೯). ೧೨. ಬಿಡು; ತ್ಯಜಿಸು: ಕಡಿವಡೆದು ರಥಿಕರು ಬಿದುರಿದರು ಜೀವವನು (ಜೈಮಿಗ. ೦೦-೩೬-೦೯).

[ದೇ.॥ ತವಿ. ವಿತಿರ್; ಮಲ. ವಿತರು; ತುಳು. ಬಿದುರ್, ಬಿದುರು]

**ಬದಿರ್$_2$, ಬದಿರು$_2$** (ನಾ). ೧. ಉಷ್ಣ ಹಾಗೂ ಉಪೋಷ್ಣವಲಯ ಗಳಲ್ಲಿ ಸ್ವಾಭಾವಿಕವಾಗಿ ಮರದ ರೀತಿಯಲ್ಲಿ ಬೆಳೆಯುವ ಹುಲ್ಲು ಜಾತಿಯ ಸಸ್ಯ ; ವಂಶವೆಂಬ ಸಸ್ಯ: "ತ್ವಚಿಸಾರಃ, ಚಪಃ, ವಂಶಃ, ವೇಣುಃ, ತ್ವಕ್ಸಾರಃ, ಮಸ್ಕರಃ – ಈ ೬ ಬದಿರ್" (ಶಬ್ದಾಮು. ೩೯-೩೦); ಬದಿರ ಸಿಡಿಂಬಿನ ಪೊದಱೊಳಗೆ ಮಱಿದೊಱಗಿದ ಮೃಗರಾಜನಂತೆ (ಪಂಪಭಾ. ೦೦-೩೦ ವ). ೨. ಗಳು; ಗಳೆ : ಮಿಳಿಯ ಬಿದಿರ ಮೇಗೆಱಿಯಾಕಾಶ ದೊಳಾಡುವ ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಣಾತ್ತಿಯಾಗಿ ಪುಟ್ಟಿ (ವಡ್ಡಾರಾ. ೬-೨೬). **ಬದಿರು$_2$**: ೧. "ವಂಶಃ, ತ್ವಕ್ಸಾರಃ . . . ವೇಣುಃ, ಮಸ್ಕರಃ, ತೇಜಸಃ – ಈ ೯ ಬದಿರು " (ಅಭಿಧಾ. ೦೦೨); ಬೆತ್ತ ಬಿದಿರಿಡ ದಡಸಿ ಬೆಳೆದ ಮೆಳೆಗಳ ನಡುವೆ . . . ನಿಂದೆಯೊ (ಸಿದ್ಧರಾ. ೨-೬೦); ಕಬ್ಬಿಗರ್ಗೋದುಗಬ್ಬವ ಹಾಡುಗಬ್ಬುವ ಕಬ್ಬದೊಳೊರೆವರಿವೆರಡು ಕಬ್ಬನಂತಿರ ಬೇಕು ಬದಿರಂತೆ ರಚಿಸಲೇಕಬ್ಬ ಹೇಳೆಲೆ ಸರಸ್ವತಿಯೆ (ಶರಕ. ೦-೬); ಬದಿರಡವಿದುಱುಂಗಲ್ ಮುಸುಕಿದ ಆ ದಿವ್ಯಚುಂಬನದ್ರುಮಗಳೆನೆ . . . ನಿಮ್ಮ ಶ್ರೀಪಾದಭಕ್ತರ್ ದುರಿತಮುಕ್ತರಿಪ್ಪರ್ (ಚೆಂಪು. ೩-೦೩).

ಬದಿರ ಲಳಿಗೆ=ಬಿದಿರಿನ ಅಂಡೆ : ಬದಿರ ಲಳಿಗೆಯುಲಗ್ಗಪಣಿಯ ತಂದು . . . ಲಿಂಗವ ಸಿಂಗಾರವ ಮಾಡಿ ನೋಡುವವೆಂದು ದೊರೆಕೊಂಬುವುದೋ ಎನಗೆ (ಸಳಕ. II. ೭೦೬–೭೯೯).

[ದೇ.॥ ತವಿ. ವೆತಿರ್, ವತಿರಿ, ವಯಿರ್; ತುಳು. ಬೆದ್ರ್; ತೆಲು. ವೆದುರು; ಕೋಲಾ. ವೆದುರ್; ಪರ್ಜಿ. ವೆದ್ರ; ಗಡಬ. ವೆದಿರ್, ವೆದ್ರ; ಗೊಂಡಿ. ವೆದುರಿ, ವೆದೂರ್; ಕೊಂಡ. ದೇರ್; ಕುವಿ. ದೇರು]

**ಬದಿರಕ್ಕಿ** (ನಾ). ಬಿದಿರಿನ ಸಸ್ಯದಲ್ಲಿ ಉತ್ಪತ್ತಿಯಾಗುವ ಕಾಳು,– ಬೀಜ : ಶೀತಳಶಶಿಕಾಂತದಿಂ ಸಮೆದೊರಲ್ಗಳೊಳಂ ಬದಿರಕ್ಕಿಯುಕ್ಕಿ (ಗಂಳ. ೦-೦೨೩) ; ಬದಿರಕ್ಕಿಯೋಗರವೊಲಿದೊಡುಡುವಿನ ತುಪ್ಪವುಂಟಲ್ಲಿ (ಬಸವಪು. ೦೪–೦೬); ಬಿದಿರಕ್ಕಿಯನಿಜೇನುತುಪ್ಪ ಕರ್ಜೂರ ದ್ರಾಕ್ಷೆ ಬದರಿ ಮುಂತಾದ ಸತ್ಫಲವ . . . ತಂದು ಇದಿರಿಕ್ಕಿದರು ಮೇಲ್ಮೇಲೆ (ಪೋಹಶ. ೦೯-೬೩); ಬಿದಿರಕ್ಕಿ ದೇಹಕ್ಕೆ ಉಷ್ಣ ಎಂದು ಹಿಂದಣ ಕಾಲದವರು ಉಪಯೋಗಿಸಲು ಅಂಜಿರಲಾರರು (ಸ್ವಸ್ಥಪೂ. ೨೪೦). [ಬದಿರ್$_2$+ಅಕ್ಕಿ$_1$]

**ಬದಿರಿಸು** (ಕ್ರಿ). ೧. ಕೊಡಹು ; ಝಾಡಿಸು : ಕೂಸರ್ವದಿದ ಕೋ ಎನುತಲೊಂದೆ ತಿರುಪಿನೊಳು ಬದಿ [ಪಾಠಾಂ.ದು]ರಿಸಿ ಬಿಟ್ಟು ನಿಂದು ನಿರುಪಾಧಿಕಜ್ಯೋತಿಯಂತೆಸದಧಿಕ ಪದವಡೆದು (ಅಕಿಪಂ. ೩೬-೨) : ಕಲಹಕ್ಕಿ ಕಾಲ್ಮೆದರಿ ಗರಿಯ ಪಸರಿಸಿ ತಮ್ಮ ತಲೆಯ ಬದಿರಿಸಿ . . . ಕಲಹಂಸ ಕಂಗೆಸೆದಿರ್ದವು (ವವಪೂ. ೯-೩೨). ೨. ಉದುರಿಸು ; ಎರಚು : ಭಸಿತ ವನು ತೆಗೆದು ಕಂಗೊಳಿಸುತವನಿಯೊಳು ಬದಿರಿಸಲ್ (ಸಿದ್ಧೇಪು. ೬-೨೬).

[ಬದಿರ್$_1$ + – ಇಸು$_3$]

**ಬದಿರು$_1$** 'ಬದಿರ್$_1$' ನೋ.

**ಬದಿರು$_2$** 'ಬದಿರ್$_2$' ನೋ.

**ಬದಿರುಪ್ಪು** (ನಾ). ಬಿದಿರಿನ ಪೊಳ್ಳುಬೊಂಬಿನೊಳಗೆ ಸಂಗ್ರಹ ವಾಗುವ ಒಂದು ಬಗೆಯ ಹರಳು ; P "ಹರಳಿನ ರೀತಿಯ ಬದಿರುಪ್ಪು (ಟ್ಯಾಬಷಿಯರ್) ಔಷಧಿಯಾಗಿಯೂ ರಾಸಾಯನಿಕ ಕ್ರಿಯೆಗಳಲ್ಲಿ ವೇಗವರ್ಧಕವಾಗಿಯೂ ಬಳಕೆಯಾಗುತ್ತದೆ" (ಕವಿಕೋ. XII. ೦೨೦) : "ವಂಶಜಾ – ಬದಿರುಪ್ಪು" (ಓಷಂ. ೦೨೬).

[ಬದಿರು$_2$ (<ಬದಿರ್$_2$) + ಉಪ್ಪು$_1$]

**ಬದಿರುಮೆಳೆ** (ನಾ). ದಟ್ಟವಾಗಿ ಬೆಳೆದ ಬಿದಿರಿನ ಪೊದೆ,– ಪೊದರು : ಬದಿರುಮೆಳೆ ಧಗಧಗಿಸೆ ಘನಹಬ್ಬಿದಿರು ಛಟಿಛಟರೆನಲು (ಶಳಕ. ೬-೬); ದಟ್ಟಯಿಸಿ ಬೆಳೆದಿರ್ದ ಬದಿರುಮೆಳೆ ಪವನಸಂಘರ್ಷಣೆಗೆ ಘೀಂಕರಿಸಲಿಥ ವೇತಪೋಲ್ ವಿಕಟರವಗೈದು ಕಂಪಿಸಿತು ಕಾಂತಾರವಮಾ ಕೀಚಕಧ್ವನಿಗೆ ! (ಕಶ್ಯಾಂಗ. ೩೦-೦೪೧೦). [ಬದಿರು$_2$ (<ಬದಿರ್$_2$) + ಮೆಳೆ$_1$]

**ಬದಿರುಲಳಿಗೆ** (ನಾ). ಬಿದಿರಿನ ಅಂಡೆ : ಬೊಂಬಿನಿಂದ ಮಾಡಿದ ಪಾತ್ರೆ : ಜೇನುತುಪ್ಪದ ಗಡಿಗೆಗಳನ್ನು ಬದಿರುಲಳಿಗೆಗಳಲ್ಲಿ ತುಂಬಿದ್ದ ಮುತ್ತಿನ ಮಣಿಗಳನ್ನು ತಂದು (ಶಿವರ. ೯೯-೩).

[ಬದಿರು$_2$ (<ಬದಿರ್$_2$) + ಲಳಿಗೆ (<ನಳಿಗೆ)]

**ಬದಿರುವಳ್ಳಿ** 'ಬದಿರ್ವಳ್ಳಿ' ನೋ.

**ಬದಿರೂರ್** (ನಾ). ಒಂದು ಊರಿನ ಹೆಸರು ; P ಶಿವಮೊಗ್ಗ ಜಿಲ್ಲೆಯ ಈಗಿನ ಬಿದನೂರು : ಪೆರ್ಬಟ್ಟಕ್ಕಂ ಬದಿರೂರ ಅಗ್ಗಳ ಮಿಳೆವಲ್ಲಿ (ಎಕ. X, ಶ್ರೀನಿವಾ. ೨೬-೨೨ ; ಸಂ. 870) ; ಬದಿರೂರಲು ಬೂತುಗನಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟ (ಎಕ. XII, ತುಮ್ಕೂ. ೭೨-೦೬ ; ಸಂ. 950) ; ಬದಿರೂರಂ ಬೆದೆಗೆಡಿಸಿ . . . ಇರ್ಕೇರಿಯ ನೊಕ್ಕಲಿಕ್ಕಿ (ಕಕಿಂ. ೩-೨೬). [ಬದಿರ್$_2$ + ಊರ್]

**ಬದಿರೆಲೆ** (ನಾ). ೧. ವಂಶವೆಂಬ ಸಸ್ಯದ ಎಲೆ ; ಬಿದಿರಿನ ಗರಿ : ಬದಿರೆಲೆಯೊಳ್ ರಸಮುನಱಸುವ ಕಳ್ಳಿಯ ಪಾಲೊಳ್ ಬೆಣ್ಣೆಯನಱಸುವ (ಧರ್ಮಾಮೃ. ೦೨-೨೯) ; ಬದಿರೆಲೆಯ ಮೆಲಿದರೆ ಮೆಲಿದಂತಲ್ಲದೆ ರಸವನು ಹಡೆಯಲು ಬಾರದು (ಬಸವ. ೩೩೯). ೨. ಬಿದಿರಿನ ಗರಿಯ ಆಕಾರದ ಬಾಣ : ಹಿಳಿಕು ಕವಲಂಬು ಬೋಳೆವಿದಿರೆಲೆ . . . ಸವಿವಾಯನೆಂಬ ನಾನಾ ಸರಳನು ಸೆಳೆದು (ಸೋಮಪುಕ. ೩-೨೬) : ದೊರೆವಡೆದ ಕಣಗಿಲ ಪುಳುಂಬವು ಶರದ ಬಿ[ಪಾಠಾಂ. ವಿ]ದಿರೆಲೆ ಶರಧಿಯಂ ತಳ್ತಿರಿಸಿದಾ ಬತ್ತಳಿಕೆಗಳು ನೆರೆದಿರ್ದುವವರಲ್ಲಿ (ಸುಳ್ಳರಾ. ೩-೦೯). [ಬದಿರ್$_2$ + ಎಲೆ$_1$]

**ಬದಿರ್ಕಲ್** (ನಾ). ಒಂದು ಊರಿನ ಹೆಸರು : ಕರಿಕಾಡ ಬದಿರ್ಕಲ್ಲಾಳ್ದ ಕುಕ್ಕರ ಪಾಳಕ್ಕಾಱನಾಡಿಯರ್ ತುರಿದು (ಎಕ. IX, ಚಂಗಳೂ. ೩೬-೩ ; ಸಂ. 750). [ಬದಿರ್$_2$ + ಕಲ್$_3$]

**ಬದಿರ್ಕೆ** (ನಾ). ಎರಚುವಿಕೆ : ಅದಿರ್ಕೆ, ಬದಿರ್ಕೆ, ಪೊಣರ್ಕೆ (ಶಬ್ದಾನು. ೩೩೬ ವೃತ್ತಿ). [ಬದಿರ್$_1$ + –ಕೆ]

**ಬದಿರ್ಚು** (ಕ್ರಿ). ೧. ಹರಡು ; ಕೆದರು : ಎರಲಲೆಪಿಂದೆಸಟ್ಟಿಸುವ ನೆಯ್ದಿಲಂ . . . ಬದಿರ್ಚಿ ದಳಂಗಳಂ ತೆಱುಂದಿರಿದುದು ಜಕ್ಕವಕ್ಕಿ (ಅನಂಪು. ೬-೬೦); ನುಡಿಯಾಗರವಂ ಬದಿರ್ಚಿದ್ಯ! (ಗಳಂ. ೩೦-೩). ೨. ಕೊಡಹು; ಝಾಡಿಸು : ಎಱಕೆಗಳಂ ಬದಿರ್ಚಿಕೊಂಡು ತಾಮ್ರತುಂಡಂ ಕಣ್ದೆಱೆದು . . . ಅಗ್ರಭಾಗದೊಳ್ಪಿನಂಗೊಳಿಪವನಿವಸನಾಲೋಕನಂಗೆಯ್ದು (ಕಾದ್ಮಟ. ೩-೨ ವ) ; ಎಱಕೆಗಳೊಳ್ ಪೊದಟ್ದ ಪನಿವುಲ್ಲ ಪಯಃಕಣಮಂ ಬದಿರ್ಚಿ (ಶಾಂತೀಶ್ವ. ೦೦-೯೬) ; ತುಂತುಱನುದಿರ್ಚಿತು ಸಾರಸಂ ಸಲಿಲದೊಳ್ಪನೆದ ಪಕ್ಕಂಗಳಂ ಬದಿರ್ಚಿ (ಕೃಷಿಚ. ೨೯-೩೬). ೩. ಬಿಚ್ಚು; ಕಳಚು : "ಬದಿರ್ಚು–ರಥವಿಮೋಚನೇ, (ಬಂಡಿಯಿಂದ ಕುದುರೆ ಮೊದಲಾದುವನ್ನು ಬಿಚ್ಚು, ಹರಡು)" (ಕರ್ಣಾ) ; ಮೋಹಪಾಶದ ತೊಡರಂ ಬದಿರ್ಚಿ ದೆಸೆಯಂತುವರಂ ನಿಜಕೀರ್ತಿಯಂ ನಿಮಿರ್ಚಿದಂ (ಶಂಭಾಮು. ೨-೨೬). ೪. ತೆರೆ ; ಅಗಲಿಸು : ಮುಂದಿರ್ದ ಕಣ್ಣೆವೆಯಂ ಬದಿರ್ಚಿ ನೋಡೆಮ್ಮಂ (ರಾಮಾಶ್ವ. ೬೦-೬). [ಬದಿರ್$_1$ + –ಚು$_1$]

**ಬದಿರ್ವಟ್ಟಿ** (ನಾ). ಬಿದಿರಿನ ಸೀಳಿನಿಂದ ಹೆಣೆದು ಮಾಡಿದ ತಡಿಕೆ : ಬದಿರ್ವಟ್ಟಿ, ಪೊಗರ್ವಟ್ಟಿ (ಕಮರ. ೯೭ ಕ್ರ.ಯೋ.). [ ಬದಿರ್$_2$ + ತಟ್ಟಿ$_1$ ]

**ಬದಿರ್ಮುತ್ತು** (ನಾ). ಬಿದಿರಿನಲ್ಲಿ ಸಿಗುತ್ತದೆ ಎಂದು ನಂಬಲಾದ ಒಂದು ಬಗೆಯ ಮುತ್ತು ; ೭ ಆನೆ, ಸರ್ಪ, ಮೀನು, ಕಾಡು ಹಂದಿ, ಕಪ್ಪೆಚಿಪ್ಪು, ಶಂಖ, ಮೋಡ ಹಾಗೂ ಬಿದಿರುಗಳಲ್ಲಿ ಮುತ್ತು ಸಿಗುತ್ತದೆಯೆಂಬ ಕವಿಸಮಯವಿದೆ: ತೋರಬದಿರ್ಮುತ್ತಿನ ನವಹಾರದ ಕೆಂದರೀರ್ಗಳುಡೆಯು ವನಚರಿಯೊರ್ವಳ್ . . . ನವಸಂಧ್ಯಾ ರಾಗದೊಳೆಸೆವ ನಿಶೆಯನನುಕರಿಸಿರ್ದಳ್ (ಜಗ೦. ೮೬-೦೮).

[ ಬದಿರ್$_2$ + ಮುತ್ತು$_2$ ]

**ಬದಿರ್ವಳ** (ನಾ). ಬಿದಿರಿನ ಕೆಲಸ ಮಾಡುವವನು ; ಮೇದಾರ : ಕದಿರ್ವಳಂ, ಬದಿರ್ವಳಂ (ಕಬ್ಬಿ.ಕಾ. ೭೩ ಕ್ರ.ಯೋ.). [ ಬದಿರ್$_2$ +– ವಳ ]

**ಬದಿರ್ವಳ್ಳಿ, ಬದಿರುವಳ್ಳಿ** (ನಾ). ಒಂದು ಊರಿನ ಹೆಸರು : ಬೀರವುರವುಮಂ ಬದಿರ್ವಳ್ಳಿಯುಮನೊನ್ದು ಅಗ್ರಹಾರಂ ಮಾಡಿ (ಎಕ. XI, ಚಿತ್ರದು. ೩೦-೦೬ ; 968). **ಬದಿರುವಳ್ಳಿ** : ಶ್ರೀಮತ್ಕನ್ನಯ್ಯ ಚಂತ್ರ ವಳ್ಳಿಯುಯುಮಂ ಪೆಬ್ಬಾಳುಮಂ ಬದಿರುವಳ್ಳಿಯುಮ × × × ರದೊಳ್ ಕೊಣ್ಡು (ಎಕ. XI, ಚಿತ್ರದು. ೯೯-೬೦ ; 947). [ ಬದಿರ್$_2$ + ವಳ್ಳಿ$_1$ ]

**ಬದಿರ್ಹಕ** (ನಾ). ಒಂದು ಊರಿನ ಹೆಸರು : ಬದಿರ್ಹಕದ ಏಚಗಾವುಣ್ಡ ನೆಕ್ಕಲವನ್ದಿಯ್ಯನಿಜಿದು ಪನ್ದಿ ಸತ್ತಿಂಬಟ್ಟುಯುಂ ತಾಂ ಸತ್ತಂ (ಎಕ. XV, ಕೋಲಿ. ೦೨೮-೦; 970). [ ? ]

**ಬದಿವಸ** (ನಾ). ವಿಧಿಯ ವಶದಲ್ಲಿರುವುದು ; ದೈವಾಧೀನ : ಬದಿವಸದಿಂದೆ ಪುಟ್ಟುವುದು ಪುಟ್ಟಿಸುವಂ ಬದಿ (ಶಂಕರಾ. ೦೨-೦೮೨).

[< ಸಂ. ವಿಧಿವಶ]

**ಬದು$_1$, ಬಿದು$_1$** (ನಾ). ೧. ಚಂದ್ರ ; ಇಂದು : "ಜೊನ್ನೊಡಲಂ . . . ಬದು . . . ಕಟ್ಟಿಲೆವಣಿ, ತಿಂಗಳ್ – ಈ ೨೦ ಚಂದ್ರನ ಪೆಸರ್" (ಕರಣ. ೯೯-೨೩); ಮದನಂಗೆ ಜಯಮಕ್ಕೆ ಮಧುಗೆ ಸಂಪದಮಕ್ಕೆ ಬದುಮೆಗದಿರಿಂತು ನೆಲಸಿರ್ಕೆ (ಅಧ್ಯಕ. ೦೦-೯೭); ಬದುಗೆಜಿವ ರಾಹುವಿನ ಮಾಳ್ಕೆಯಿಂ ರಥವ ಬಳಗೊದಗಿ ಪಿಡಿದಪ್ಪಳಿಸೆ (ಕಂಕ್ರ. ೨೮-೩೦). ೨. ತ್ರಿಮೂರ್ತಿಗಳಲ್ಲಿ ಒಬ್ಬ; ವಿಷ್ಣು : ಬದಿಯುನುಮಂ, ಬದುವನುಮಂ ಪಾಸಟಿಗೆಯ್ವನಲ್ಲಂ (ಅದ್ಭುತ. ೯೩-೨). **ಬಿದು$_1$** : ೧. "ನೆಯ್ದಿಲ್ಗೆಳೆಯಂ ಬಿದು ಬೆಳ್ಗದಿರಂ" (ಕರಣ. ೩೯). ೨. "ಸಿರಿಯರಸಂ . . . ಪರ್ದುದೇರ ಬಿದು ಕಾರೊಡಲನಲರ್ವೊಡೆಯ ಕಾವನಯ್ಯಂ ಬಿಟ್ಟುಗೆಯ್ವುಗಯ್ಯಂ ಭಾವಿಸ್" (ಕಬ್ಬಿ.ಕಾ. ೬). [ < ಸಂ. ವಿಧು]

**ಬದು$_2$** (ನಾ). ೧. ಆನೆಯ ಕುಂಭಸ್ಥಳದ ಮಧ್ಯಭಾಗ : "ಬದು – ಬಿದು = ಆನೆಯ ಗಂಡದ ನಡು" (ಶಬ್ದಕೋ. ··); ಬಡಿಗೊಳೆ ಬದು ಬಿಬ್ಬರಬಿದೊಡನಾಗೆ ಪೊಸಮುತ್ತು (ಶಂಕರಾ. ೧೧-೦೦೩); ಅಮರೇಂದ್ರೋ ತ್ತುಂಗಮಾತಂಗದ ಬದುವಿನ ಮುಕ್ತಾಳಿಯಿಂಪಾದ ಮಂಜೂಷಮಿದು (ಜಗ೦. ೬-೨೯). ೨. ಕುದುರೆಯ ಕಿವಿಯ ಹೊರಭಾಗ : ಉದಯಿಸ ಸುಳಿಗಳ್ ತುರಗದ ಬದುಸಂಸ್ಥಾನಕದೊಳರ್ಥಹಾನಿಯನವು ಮಾಡದೆ ಮಾಣವು (ಅಶ್ವಶಾ. ೯-೨೦); ಕಿವಿಯ ಪೊಜಗಣ್ಗೆ ಬಿದುವೆಂಬ ಪೆಸರಕ್ಕುಂ (ಅಶ್ವಶಾ. ಪುಟ. ೪೮-೬). [ < ಸಂ. ವಿದು]

**ಬದುಗದಿರ್** (ನಾ). ಚಂದ್ರಕಿರಣ : ಬದುಗದಿರಿಂತು ನೆಲಸಿರ್ಕೆ ರತಿಗೆ ಸಂಪದಮೆಂದು ತೊಲಗದಿರುತಿರ್ಕೆ (ರಾಜಶೇ. ೦೦-೯೯).[ಬದು$_1$+ಕದಿರ್$_2$]

**ಬದುಗಲ್, ಬಿದುಗಲ್ಲು** (ನಾ). ಚಂದ್ರನ ಕಾಂತಿಯಿಂದ ದ್ರವಿಸುವುದೆಂದು ನಂಬಲಾಗಿರುವ ಶಿಲೆ ; ಚಂದ್ರಕಾಂತಶಿಲೆ : ಸದಲಂಕಾರ ವೃಷೇಂದ್ರನು ವಿತತರೋಚಿರ್ಗಾತ್ರನಂ ಮಿತ್ರನಂ ಬದುಗಲ್ಗನ್ನಡಿಯಂ . . . ಸ್ವಪ್ನದೆ ಕಂಡಳಾ ಪಧುಕಳಾಶ್ರೀಸಾಂದ್ರನಂ ಚಂದ್ರನಂ (ರಾಜಶೇ. ೯-೨೦) ; ಬದುಗಲ್ಗಳೆಲದೊಳುಂ ಬಾಡುತಿರ್ಪ ತಳಿರಡಿ ನಡೆಯೆ ಕಾಪಥದೊಳೆಂತಪ್ಪದವನಿಸುತೆಗೆ (ಶ್ರೀರಾಮಾ. ೦೩-೬೩). **ಬಿದುಗಲ್ಲು** : ಜೊನ್ನದೊಂದು ಪುತ್ತಳಿಯಂತೊಪ್ಪುವೆತ್ತ ಬಿದುಗಲ್ಲಿನ ಬೊಂಬೆಯ ಪಾಂಗಿನಂತೆ (ಕೃಷ್ಣ. ೬೦) ; ತಳಿತಜನ ಪೊಳದು ಚಿತ್ರರಂಬಡೆದ ಬಿದುಗಲ್ಲ ಸುತ್ತಣ ಮೆಟ್ಟಡಿಯಿಂ . . . ಕೊಳಂ ಪಗಲ್ವೆಣ್ಣ ಕೈಪಿಡಿಯೆಯಂತಿರೆ ಸೊಗಯಿಸಿದತ್ತು (ರಾಜಶೇ. ೩೨-೦೮). [ಬಿದು$_1$ + ಕಲ್$_3$]

**ಬಿದುಗಲ್ಲು** 'ಬಿದುಗಲ್' ನೋ.

**ಬಿದುಮೊಗ** (ನಾ). ಚಂದ್ರನಂಥ ಮುಖ ; ಬಿಡುಜಡೆಯ ಬಿದುಮೊಗದ ಬಿಡೆಸಲ್ಗಣ್ಣ . . . ಬೆಡಂಗಿನ ಬಾಲೆಯೊರ್ವಳ್ . . . ಬರುತುಮಿರ್ದಳ್ (ರಾಜಶೇ. ೯೮-೨೦). [ಬಿದು$_1$ + ಮೊಗ]

**ಬಿದುರ್** 'ಬಿದಿರ್$_1$' ನೋ.

**ಬಿದುರ** (ನಾ). ಸಿಡಿಲು; ಅಶನಿ: ಕದನಕ್ರೀಡಾವಿನೋದನುದ್ಧತದರ್ಪ್ಪಾ ಬಿದುರ ಪರಾಕ್ರಮನಾದಂ ವಿದಿತಗುಣಂ ಮಲ್ಲಿದೇವಂ (ಎಕ. XI, ದಾವಣ. ೯೩-೩೩; 1164); ಬಿದುರ ಹತಿಯಿಂ ಶೈಲಮೊಡೆವವೊಲ್ (ಶಂಕರಾ. ೦-೦೯-೩೩). [<ಸಂ. ಭಿದುರ]

**ಬಿದುರಾಳ್ಗೆ** (ನಾ). ಒಂದು ಪ್ರದೇಶದ ಹೆಸರು : ಬಿಟ್ಟಿಗಂ ಬಿದುರಾಳ್ಗೆ ಎಟ್ಟತ್ತರ್ಕ್ಕವಿ ನಾಟ್ಗೊವುಣ್ಡುಗೆಯ್ಯೆ (ಎಕ. VIII, ಸೊರಬ. ೩೩೦-೯; 967). [ ? ]

**ಬಿದುರು** 'ಬಿದಿರ್$_1$' ನೋ.

**ಬಿದೆಯಿತ್ತ** 'ಬಿಜಯಿತ' ನೋ.

**ಬಿದ್ದ** 'ಬೀಟಿರ್$_1$' ಪರಾ.

**ಬಿದ್ದ$_2$** (ನಾ). ೧. ಕೊರೆದುದು ; ತೂತು ; ರಂಧ್ರ : "ಬಿದ್ದ–ವಿದ್ದ = ತೂತು, ತೂತಾದ" (ಶಬ್ದಕೋ. ೩೦). ೨. ಗಾಯ ; ಪೆಟ್ಟು ; ವ್ರಣ : 'ಬಿಙುಬಿದ್ದಂಬೋಗು' ಪರಾ. ೩. ಬಿಂಬ ; ಆಕೃತಿ : ಕರುಣದ ಕರುವೋ ಕಾರ್ಪ್ಪಣ್ಯದ ತಿಟ್ಟವೊ ವಿರಹದ ಬಿದ್ದವೊ ದುಃಖದ ಮೂರ್ತಿಯೋ (ಕುಮುದಾ. ೯-೯೬). [<ಸಂ. ವಿದ್ಧ]

**ಬಿದ್ದಣ** 'ಬಿರ್ದಿನ' ನೋ.

**ಬಿದ್ದಣಂಬೇಳು** (ಕ್ರಿ). ಔತಣಕ್ಕೆ ಕರೆ ; ಊಟಕ್ಕೆ ಆಹ್ವಾನಿಸು : ಪೈತಾಪಿಯು ಸುರನಿವಹಮುನಿಚಯಕೆ ಬಿದ್ದಣಂಬೇಳುತಿಭರದಿನಿಲವಲನ ಕೊಂದಾ ಮಾಂಸಮಿಕ್ಕಿ ಚೆಚ್ಚರದಿನವರುಂಡ ಬಳಿಕಿಲವಲಾ ಎನಲು (ಜಾಸಕೋಶ. ೬-೪೦). [ ಬಿದ್ದಣ (< ಬಿರ್ದಿನ) +ಪೇಳು (<ಪೇಟ್ಸ್) ]

**ಬಿದ್ದಿ** 'ಬಿರ್ದಿ' ನೋ.

**ಬಿದ್ದಿಕ್ಕಿಸು** (ಕ್ರಿ). ಔತಣ ಮಾಡಿಸು : ಕಡುಹಿತನೊಲು ತೊಡಗಿಸಿ ನೆಚಿ ಬಿದ್ದಿಕ್ಕಿಸುವೆನಿಡಕ್ಕೈಸುತಯ್ದಿ ದನೀಶನ ಸಭೆಗಿತ್ತಲ್ ಮುನಿಪತಿನಾರದನು (ಶೀರೀಶ. ೦-೩೩). [ಬಿದ್ದು$_2$ (<ಬಿರ್ದು$_1$)+ಇಕ್ಕಿಸು$_1$]

**ಬಿದ್ದಿಕ್ಕು** 'ಬಿರ್ದಿಕ್ಕು' ನೋ.

**ಬಿದ್ದಿನ** 'ಬಿರ್ದಿನ' ನೋ.

**ಬಿದ್ದಿನಂಗೆಯ್** (ಕ್ರಿ). = ಬಿದ್ದಿಕ್ಕಿಸು : ಬಿರದಿನಿಸು ನಲುಗಂಪಿನಿಂಪು ಸೊಂಪಿಂ ತುಂಬಲರ ಬಿದ್ದಿನಂಗೆಯ್ದು (ಅಧ್ಯಕ. ೫-೩೯).

[ ಬಿದ್ದಿನ (<ಬಿರ್ದಿನ)+ಕೆಯ್$_1$ ]

**ಬಿದ್ದು$_1$** 'ಬೀಟ್ಸ್$_1$' ಪರಾ.

**ಬಿದ್ದು$_2$** 'ಬಿರ್ದು$_2$' ನೋ.

**ಬಿದ್ದೂಟ** 'ಬಿರ್ದೂಟ' ನೋ.

**ಬಿನ್–** (ಉಪ). ಇಲ್ಲದುದು ಎಂಬ ಅರ್ಥವನ್ನು ಕೊಡುವ ಒಂದು ಉಪಸರ್ಗ: 'ಬಿನ್‌ಪಗಾರಿರಜೆ', 'ಬಿನ್‌ಪುಕಾರ್' ಪರಾ.

[← ಹಿಂ. ಮರಾ. ಬಿನ್ =ಇಲ್ಲವಾದ, ಹೊರತಾದ]

**ಬಿನ್‌ಪಗಾರಿರಜೆ** (ನಾ). ಸಂಬಳರಹಿತವಾದ ರಜೆ : ಬಿನ್‌ಪಗಾರಿ ರಜೆಯು ಬಗ್ಗೆ ವಿಚಾರ ಮಾಡುವೆನು (ಸ್ವೊ.೮ಜಿ. ೦೦೦).
[ಬಿನ್ — + ಪಗಾರಿ + ರಜೆ(<ರಜಾ)]

**ಬಿನ್‌ಫುಕಾರ್** (ಅ). ಯಾವ ದೂರೂ ಇಲ್ಲದೆ : ಕೆಲಸ ಸಲೀಸಾಗಿ ಬಿನ್‌ಫುಕಾರ್ ನಡೆದು ಹೋಗುತ್ತೆ (ಕಂಠ. ೨೯೬).
[ ಬಿನ್ — +ಫುಕಾರ್₀ (<ಫುಕಾರು) ]

**ಬಿನಎತ್ತಿಅಬ್ಬೆ** (ನಾ). ಒಬ್ಬಾಕೆಯ ಹೆಸರು : ಮಾರಕ್ಕಅರಸರ್ ಬನವಾಸಿ ನಾಡಾ ಬಿನಎತ್ತಿಅಬ್ಬೆ ಊರಾಳೆ (ಕೌಇ. XX. ೦೦-೨; ೧೦ಶತು ೮೫).
[ < ವಿನಯಾದಿತ್ಯ + ಅಬ್ಬೆ₁ ]

**ಬಿನದ** (ನಾ) ೧. ವಿನೋದ ; ತಮಾಷೆ : " ಬಿನದಂ ವಿನೋದದೊಳ್ " (ಕಜಾಂ. ೦೬); ಗೌರೀಪತಿಯ ಬಿನದಕ್ಕೆ ಭೂಭೃತ್ಸುತೆ ಬೇಡಿತಿಯಾದ ತೆಱನನನುಕರಿಸಿರ್ದಳ್ (ಅದಂಪು. ೪೧). ೨. ಆಟ ; ವಿಹಾರ ; ಕ್ರೀಡೆ : ಬೇಂಟೆಯೆ ಬಿನದಂಗಳರಸಲ್ಗೇ (ಶಂಕಚ. ೩-೯೭). 'ಬಿನದವೆಟ್ಟು' ಪರಾ. ೩. ಸಂತೋಷ; ಆನಂದ: 'ಬಿನದಂಬಡೆ' ಪರಾ. [< ಸಂ. ವಿನೋದ]

**ಬಿನದಂಬಡೆ** (ಕ್ರಿ). ಸಂತೋಷಗೊಳ್ಳು ಆನಂದಿಸು : ತುಂಗಷ್ಟ್ಯದಂಗ ಮಂಗಳರವಂ . . . ಶಂಖನಿನದಂ ಬಿನದಂಬಡೆದಿರ್ದ ಭಕ್ತಲೋಕಂಗಳ ಕಂಗಳಂಗವಿಸೆ ಸಂಗಳಿಸಿರ್ಪುವು ಲಿಂಗಗೇಹದೊಳ್ (ರಾಹಿಶೀ. ೨-೦೨೬).
[ ಬಿನದ + ಪಡೆ₁ ]

**ಬಿನದಗೊಳು** (ಕ್ರಿ). = ಬಿನದಂಬಡೆ: ಭವಲೀಲೆಯುದ್ವೀಕ್ಷಣಗವಾಕ್ಷ . . . ನಿರುಕಿಸುತ ಬಿನದಗೊಳೆ ಸರ್ವಪಕ್ಷ (ಪುರಕೀ. ೪೯-೦೦).
[ ಬಿನದ + ಕೊಳು (< ಕೊಳ್₁) ]

**ಬಿನದವಡಿಸು** (ಕ್ರಿ). ಸಂತೋಷಗೊಳಿಸು ; ಆನಂದಿಸುವಂತೆ ಮಾಡು : ಮಾಯೆ ಬೊಮ್ಮನ ಬಿನದವಡಿಸಿ ನಮ್ಮಾ ಜಗವ ಕಾಯುವಳು ತನ್ನಚ್ಛೆ (ಮಂಕುಕ. ೦೯೭). [ ಬಿನದ + ಪಡಿಸು ]

**ಬಿನದವಾಡು** (ಕ್ರಿ). ಕ್ರೀಡಿಸು ; ವಿಹರಿಸು : ಮನದ ಬನದಲಿ ಬಿನದ ವಾಡಿದೆ ತನ್ನ ತಿಳಿಯದೆ ತಾನು (ಅರಳು. ೦೯-೬). [ಬಿನದ+ಆಡು₁]

**ಬಿನದವೆಟ್ಟು** (ನಾ). ವಿಹಾರಕ್ಕಾಗಿ ರಚಿಸಿದ ಕೃತಕವಾದ ಬೆಟ್ಟ : ಕ್ರೀಡಾಶೈಲ : ಬಾವಿ ಕೊಳಂ ಬಿನದವೆಟ್ಟುಗಳ್ ನೆರೆದಿರ್ಕುಂ (ಜಿಶ. ೩-೦೨೨). [ ಬಿನದ + ಬೆಟ್ಟು₂ (<ಬೆಟ್ಟ) ]

**ಬಿನದವೇಂಟೆ** (ನಾ). ವಿನೋದಕ್ಕಾಗಿ ಮಾಡುವ ಬೇಟೆ : ಮೆರೆದುವಾ ಕುಂಭಕರ್ಣನ ಬಿನದವೇಂಟೆಯ ಕವರ್ತೆಗಳ್, ತೋರುಮನೆಯಲ್ಲಿ! (ಶ್ರೀರಾಮಾ. ೯೩೩-೨೬೮). [ಬಿನದ + ಬೇಂಟೆ ]

**ಬಿನದಸಾಲೆ** (ನಾ). ವಿಹಾರಶಾಲೆ ; ಕ್ರೀಡಾಮಂದಿರ : ಓಲಗಸಾಲೆ ಮಂತಣಸಾಲೆ ನಾಟಕಸಾಲೆ ಬಿನದಸಾಲೆ . . . ಸುಚಿತ್ರಸಾಲೆಗಳೊಳಱಸಿ ದಳಾ ಲೋಲಲೋಚನೆ ರಾಮನನು (ಶಂರಾಸಾಂ. ೩೩-೪೨).
[ ಬಿನದ + ಸಾಲೆ₄ ]

**ಬಿನದಿ** (ನಾ). ವಿನೋದಪ್ರಿಯನಾದವನು : ಜಗಳವಾಡಿ . . . ನಗುತಲಿರುವನು ನೋಡಿ ; ಪರಬೊಮ್ಮನೇಂ ಬಿನದಿ! (ಮಂಕುಕ. ೦೬೨) ; ತರುಣ ತರುಣಿಯರು ಮಾಡದಲ್ಲಿರುವ ಬಿನದಿಗಳ ಜತೆಯಲ್ಲಿ ಸೇರುತ್ತಾರೆ (ಕಂಪರ. ೦೫೭). [ ಬಿನದ + — ಇ₃ ]

**ಬಿನದಿಸು** (ಕ್ರಿ). ಆನಂದಿಸು ; ಸಂತೋಷಪಡು : ಪಾರಿವಂಗಳೊ ಳ್ಬಿನದಿಪ ಸರಸಯುವತಿಯರಿಂ (ಅಕ್ಕಿಲ. ೧-೬೮ ಖ) ; ಬಿನದಿಪ ಹಸುಳೆ ಜವಾದಿಯ ಮಿಗಗಳನನುರಾಗದಿ ನೋಡುತ ಬಿಜಯಂಗೈವನತಱೊಳು (೩ಪುರಾ. ೪-೨) ; ಮಾತೆಯ ವಕ್ಷಪುಟವ ಸೇರುವ ತೊದಲ್ವಾತ ನುಡಿದು ಬಿನದಿಸುವ . . . ಗಿಳಿವಱಗಳ ರೀತಿಯ ಕಂಡಳಾ ಕಾಂತೆ (ಕಂಪವ. ೪-೯೭). [ ಬಿನದ + — ಇಸು₃ ]

**ಬಿನದೆ** (ನಾ). ವಿನೋದಿಸುವವಳು : ವಿನೋದಪ್ರಿಯೆ : ಕಾಡ ಬಂದವರಲ್ಲ ನೋಡಬಂದೆವು . . . ಎಂದು ಮಾತಾಡಿದರಾ ಬಿನದೆಯರು (ಕರಕ. ೪೨-೦೭). [ ಬಿನದ + — ಎ₂ ]

**ಬಿನಮಿತ** (ನಾ). ಒಬ್ಬಾತನ ಹೆಸರು : ಎಱೆಯ ಪೆರ್ಮಾಡಿಯ ಸಾಸ್ತ್ರಕಾಮಪನ ಮಗಬ್ಬಿನಮಿತನ ಮಗಂ . . . ಪುರದೊಳೊರ್ಗ್ಗಣ್ಣಂ (ಎಕ. VII, ಶಿಕಾ. ೨೮೪-೩; 902). [ ? ]

**ಬಿನಮ್ಮ** 'ಬಿನಾಮ್ಮ' ನೋ.

**ಬಿನಯ** (ನಾ). ೧. ವಿನಯ : ನಮ್ರತೆ : ಬಿನಯದ ಬಿತ್ತು ಬಿನ್ನಣದ ಪೆರ್ಮೊಳೆ (ಅಶ್ರ.ಶ. ೦೫-೨೦) ; ಬಿನಯಂ ಬೇರ್ವರಿಜಾಂತುದೋ (೩೪ಂ. ೩-೦೦೪). ೨. ಪ್ರೇಮ ; ಪ್ರೀತಿ (?): "ಬಿನಯಂ ಪ್ರೇಮಂ" (ಕಜಾಂ. ೪೦). [< ಸಂ. ವಿನಯ]

**ಬಿನಸು** (ನಾ). ಹಾನಿ ; ನಷ್ಟ : ತನಗಾಪ್ತರೆನಿಸಿ ಚಿರಕಾಲದಿಂದಾಶ್ರೈಸಿ ಮನಸು ಮರ್ಮಗಳರಿತ ಜನರು ಸುಕ್ಷೇಮಕರವನು ಪೇಳ್ವರಲ್ಲದನ್ಯವ ನುಸುರರೆಂಬ ನಂಬುಗೆಯ ದೃಢತೆಗೈದು ಬಿನಸು ತೋರದ ತೆರದಿ ರಾಜಾರ್ಥಕೂಣಯಂ ತೋರದಂತೆ (ವಂಶಾರಾ. ೬-೦೩-೬).
[ <ಸಂ. ವಿನಾಶ./ಮರಾ. ಬಿನಸಣೇ, ಬಿನಾಸಣೇ = ನಷ್ಟವನ್ನುಂಟು ಮಾಡು ]

**ಬಿನಾಕಳಿ** (ನಾ). ಒಂದು ಊರಿನ ಹೆಸರು : ಕುಟುಂಬರುಂ ಬಿನಾಕಳಿ ಊರುಗಾಮುಣ್ಡುಗೆಯ (ಎಕ. VIII, ಸೊರಬ. ೪೭೬-೪ : 972). [?]

**ಬಿನಾಮಿ** 'ಬೇನಾಮಿ' ನೋ.

**ಬಿನಾಮೀ** 'ಬೇನಾಮಿ' ನೋ.

**ಬಿನಾಮೆ** 'ಬೇನಾಮಿ' ನೋ.

**ಬಿನಾಮ್ಮ, ಬಿನಮ್ಮ** (ನಾ). ಒಬ್ಬಾತನ ಹೆಸರಂ : ಶ್ರೀಪುರುಷಮಹಾ ರಾಜರ್ ಪೃಥುವೀರಾಜ್ಯಂಗೆಯೆ ಕೆಸುಗೊಳಮೊಡೆಯ ಬಿನಾಮ್ಮಂಗೆ ಧಣ್ಣಗವಾಡಿಯಂ ಬ್ರಹ್ಮಾದೇಯಂಗೊಟ್ಟಂ (ಎಕ. IV, ಹೆಗ್ಗ.ದ. ೪-೩ ; ಸು 760). ಬಿನಮ್ಮ : ಸವುಳಜ್ಞದ ಮೆಣ್ಣೆಗಾವುಣ್ಡನು ಬೆಳ್ಳೊಟಲ ಬಿನ ಮ್ಮನು (ಎಕ. V, ಕನ್ನರಾ. ೨೫೦-೦೪ ; ಸು: 925). [? + ಅಮ್ಮ₁]

**ಬಿನುಂಗು, ಬಿನುಗು₂** (ನಾ). ಒಂದು ಬಗೆಯ ತೆರಿಗೆ : ನಗರದ ವಶ ವತ್ತಿಗಳಪ್ಪ ಬಿನುಂಗಿನೊಳ್ಳೀಸವಂ ೧೦ ಮಾನ್ಯ ಸಾಮ್ಯದೊಳ್ಪಣ ೧ (ಎಕ. VII, ಶಿಕಾ. ೪೪-೩೩ ; 1094). ಬಿನುಗು₂ : ಅಯ್ದು ಬಿನುಗು ಮೂವತ್ತು × × × ರರಸ ಕೊಟ್ಟ ಬಿನುಗು (ಪ್ರಮಿಆಂ. ೦೯೪೦. ೩೩-೦೫ ; 1300) ; ಆಡ ತೆಱ ಕುಂಬಾರುದೆಱ ಬಿನುಗು ಬೆಸಒಕ್ಕಲು ತಗಡೂರ ಸ್ಥಳಕ್ಕೆ ಸಲುವ ಸುಂಕ (ಪ್ರಮಿಆಂ. ೧೯೯೬. ೦೪-೨೦ : 1488). [ ? ]

**ಬಿನುಗ** (ನಾ). ಅಲ್ಪವ್ಯಕ್ತಿ ; ಕ್ಷುದ್ರವ್ಯಕ್ತಿ : ಮದ ಮತ್ಸರವ ಬಿಡದೆ ಕುದಿದು ಕೋಟಲೆಗೊಂಬ ಬಿನುಗರನೊಲ್ಲ ನಮ್ಮ ಬಸವಪ್ರಿಯ ಕೂಡಲ ಚೆನ್ನಬಸವಣ್ಣಾ (ವಚಸಂ. ೬೯೮-೦೯೪) ; ಬಿನುಗರವರವರಂಗದಲಿ ಕೈಮನವ ಖಂಡಿಸಿ ಸಕಲರಿಪುಸಾಧನವನೊಬ್ಬನೆ ಕರ್ಣ ಗೆಲಿದನು (ಕುವ್ಯಾ.ಕ. ೦೦-೬) ; ಡಂಬಕರ್ಬಿನುಗರು ಕಡೆಯ ಕಾಲಕೆ ಪೂಜೆಗೊಂಬರೊಳ್ಳಿದನುಂಬರು (ಕರಕ. ೬೦-೪೯). [ ಬಿನುಗು₁ + — ಅ₇ ]

**ಬಿನುಗಾಟ** (ನಾ). ಅಲ್ಪತನ ; ಕ್ಷುಲ್ಲಕತನ : ಮನುಜರ ಗುಣ ತನ ಗೊಂದೂ ಬಿಡದ ಧನವನಱವೆನೆಂಬ ಬಿನುಗಾಟದ ಮಾತೇಕೆ (ಸೋಳಪು. ೩೩-೩೦೦). [ ಬಿನುಗು₁ + ಆಟ ]

**ಬಿನುಗು₁** (ನಾ). ೧. ಹೀನವ್ಯಕ್ತಿ ; ಕ್ಷುದ್ರವ್ಯಕ್ತಿ ; ಅಲ್ಪವ್ಯಕ್ತಿ : ಅನಿಮಿಷಗತಿಯೆಂಬ ದನುಜನಾಯಕ ವಿಕ್ಕ ಬಿನುಗುಗಳನು ಮುಟ್ಟಿನೆಂದು ವನಜನಾಭನು ಮೊದಲಾದ ದೇವರ್ಕಳು ಕನಗಾಹುತಿಯನುತಿಹನು (ತ್ರಿಕುಸಾಂ. ೩-೩೮); ಕಟ್ಟಿತುರಿ ದೆಸೆ ನಾಲ್ಕಱಲಿ ಬೆಸ್ಸಟ್ಟ ಹೊಯ್ದುದು

ಬಿನುಗಗಳ (ಕುವ್ಯಾ. ೬-೪೦). ೨. ಬಡವ; ದರಿದ್ರನಾದವನು : ಬಿನುಗಂ ನಂಬಿ ತೆಱುವೊಕ್ಕಲಂ ಕಳೆವ ಪ್ರಭುವುಮಂ (ರಮಾಶ್ವ. ೯-೩೦). (ಗು). ೩. ಅಲ್ಪವಾದ ; ಕ್ಷುದ್ರವಾದ : ಇಂತೀ ಬಿನುಗುವುವಾನವನ . . . ಹೀನಯೋನಿಯಲ್ಲಿ ಬರಿಸದೆ ಮಾಣ್ಬನೆ (ಚನ್ನವ. ೪. ೧೩-೨೦೯); ಹಾರುವ ನಿನಗೆ ಬಿನುಗುಭೀಮಾರ್ಜುನರ ಪರಿಯಂತೇಕೆ (ಕುವ್ಯಾದ್ರೋ. ೦-೩೩).

ಬಿನುಗುಬಿಚ್ಚಟಿ, ಬಿನುಗುಬಿಕ್ಕಟೆ, ಬಿನುಗುಬಿಚ್ಚಟ = ಅಲ್ಪವ್ಯಕ್ತಿ; ಕ್ಷುದ್ರಮನುಷ್ಯ : ಆಳು ನಡೆದುದು ಮುಂಗುಡಿಯ ಹರಿಧಾಳಿ ನೂಕಿ ಹಿರಣ್ಯನಗರಿಯ ಮೂಲೆಗೈದಿತು ಹೊಯ್ದರಲ್ಲಿಯ ಬಿನುಗುಬಿಚ್ಚಟಿಯು (ಕುವ್ಯಾ. ೧೨-೦೩); ಧನಿಕದೊರೆಗಳ ಬಿನುಗುಬಿಚ್ಚಟಿಯು ಹಲವುಜಾತದ ವರ್ಣಭೇದದ ಹೊಲಲ ಜನದ ಸಮಸ್ತಭುವನಾವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ (ಕೂರಾ. ೩-೬-೩೩); ಭಟರು . . . ಮುಕ್ಕುರಿಕಿಯಿರಿದಿರಿದು ಕೊಂದರಗಣಿತ ಬಲದ ಬಿನುಗುಬಿಕ್ಕಟಿಜನಗಳ (ತುರಂಗ. ೪೩-೯) ; ಒರ್ವರ ಸುಳುವ ಕಾಣೆನು ಬಿನುಗುಬಿಚ್ಚಟರಲ್ಲದೀ ಪುರಿಗೆ (ಅತ್ತ್ರ.೪. ೦೦-೩೩).

[ದೇ. ? ತೆಲು. ಬಿಲುಗು = ಕಪಟವಾದ]

ಬಿನುಗು₂ 'ಬಿನುಂಗು' ನೋ.

ಬಿನುಗುತನ (ನಾ). ನೀಚತನ; ಕ್ಷುಲ್ಲಕತನ : ಷಟ್ಕರ್ಮದಿಂ ಬಾಳ್ವ ಬಿನುಗುತನಗಳನುಳಿದು . . . ಸರ್ವಾವಧಾನದಿಂ ಚರಿಪನೆ ಸಿರಾಭಾರಿ ವೀರಶೈವಂ (ಶಾಸೋಪು. ೦೨-೩೯); ಬಿನುಗುತನದಿಂದಖಿಳವಿಷಯಗಳನುಂಡು ಅಸುಮರಿಯದ ಜ್ಞಾನದೊಳಗೆ ಬಳಸಂದು (ಚನ್ನ.೪. ೩೩-೦).

[ಬಿನುಗು₁ + — ತನ]

ಬಿನೆಯ (ನಾ). (?) : ಅರೀಹಳಿಯ ಬಿನೆಯ ಗ ೯೮೦ ಯಾ ಧರ್ಮಗಳಿಗೆ ಆವನಾನೊಬನು ನಡಪದೆ ಇದವನು ಗೋಉ ಭ್ರಾಂಹ್ಮರನು ವಾರಣಾಸಿಯಲಿ ಕೊಂದ ಪಾಪವ ಪೊಯಿದುವನು (ಎಕ. XI. ಹೊಳೆಕ. ೦೦೩-೨೦; 1666). [ ? ]

ಬಿನ್ನ 'ಬಿನ್ನಪ' ನೋ.

ಬಿನ್ನಗೆ (ಅ). ೧. ನೀರವವಾಗಿ; ಮೌನವಾಗಿ; ಸುಮ್ಮನೆ : "ಜೋಷ್ಕಟಂ, ಬಿನ್ನನೆ, ಬಿನ್ನಗೆ — ಈ ೩ ಸುಮ್ಮನೆಯೆಂಬರ್ಥಂ" (ಶಶಾ. ೩೯-೨೬೩); ಮಗನಬಲೊಂದು ಭೂಪತಿಯು ತಮ್ಮನೊಳಾದಬಲೊಂದು ನೊಂದು ಬಿನ್ನಗೆ ಮೊಗದಿಂದೆ ಕುಂದಿ ಘನಕೇತನನಿರ್ದಬಲೆಂದು (ಶಂಕಶಾ. ೦೨-೦೭೦). ೨. ಬರಿದಾಗಿ; ಬಿಕೋ ಎಂದು: ಉರವೇಕೆ ಹಾರವುಣಿಮಂಜರಿಯಿಲ್ಲದೆ ಬಿನ್ನಗಿರ್ದುದು (ಶಂಕಶಾ. ೯-೬೨); ಮಂದರಗಿರಿ ಬಿನ್ನಗಾಯ್ತು ಮದುವೆ ಪೋದ ಮಂದಿರವೂ ಎಂಬಂತೆ (ಶಂಕೃಶಾ. ೨೪-೦೩೬). ೩. ಖಿನ್ನವಾಗಿ; ಖೇದದಿಂದಿರುವಂತೆ: ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳ ವಚ್ಚರಿಯಾಗೆ ಕೆಲರ್ ಮಹಾರಥರ್ (ಶಂಕಶಾ. ೦೦-೩); ಇನ್ನಬಿಂದಿಂಗ ಳುಂಟಿನ ನಿಜಾಯು ಸುರಪುರಕರಂ ಮೊಗಂಗಳಂ ಬಿನ್ನಗೆ ಮಾಡೆಯುಂ (ಶಾಂತಿಪು. ೬-೬೯). [? + — ಅಗೆ]

ಬಿನ್ನಣ 'ಬಿನ್ನಾಣ' ನೋ.

ಬಿನ್ನಣಂದೋಱು, ಬಿನ್ನಣದೋಱು (ಕ್ರಿ). ಕೌಶಲ್ಯವನ್ನು ತೋರು; ಚಾತುರ್ಯವನ್ನು ತೋರಿಸು : ಸುತ್ತಿ ಬಳಸಿ ಮೊನೆದೋಱುವ ಬಿರುದಿನಂಕಮನುರವಣಿಸಿ ಪತ್ತಿ ಪೊರಳ್ಚಿ ಕೊಳ್ವ ಬಿನ್ನಣಂದೋರ್ಪ ಗನ್ನದಂಕಮಂ ಬಿಡಿಸಿ (ಗಂಕ. ೨-೧೦೩ ವ). ಬಿನ್ನಣದೋಱು : ಬಿಲ್ಲ ಬಿನ್ನಣದೋಱಿದನು ನೃಪತಿ (ಶಾಶ್ಯಶಾ. ೬-೭೦).

[ಬಿನ್ನಣ (< ಬಿನ್ನಾಣ) + ತೋಱು]

ಬಿನ್ನಣಂಬಡೆ, ಬಿನ್ನಣವಡೆ (ಕ್ರಿ). ಕೌಶಲ್ಯವನ್ನು ಪಡೆ : ನೈಪುಣ್ಯವನ್ನು ಹೊಂದು : ಪೊಳ್ತಂ ಸನ್ನೆಯುಂ ಜಾತಿಯುಂ ಜವಂಗೆಡದಱಿವ ಬಿನ್ನಣಂಬಡೆದ ಬೇಡರೊಡವರೆ (ರಾಚಕೇ. ೩-೮೦ ವ). ಬಿನ್ನಣವಡೆ : ಭರತಕ್ಷೇತ್ರವಿಜಯಾಚಲದಿರ್ಕೆಲದೊಳು ವಿಮಾನಧ್ವಜನಾಡುಯೊಲಿಸಿನಲೆ ದುದು ಸರಸಿಜನನಾಗನ ಕೈಮಾಟಕೆ ಕಡುವಿರಿದಿಂ ಬಿನ್ನಣವಡೆದು (ಚಂದ್ರ. ಶಾ. ೦-೩೯). [ ಬಿನ್ನಣ (< ಬಿನ್ನಾಣ) + ಪಡೆ₁ ]

ಬಿನ್ನಣಕಾತಿ (ನಾ). ಒಯ್ಯಾರ ಮಾಡುವವಳು ; ಬೆಡಗುಗಾತಿ : ಅಣಿಮಾದಿಸಿದ್ಧಿದೇವಿಯರೊಡನೆಯ್ದೆ ಬಿನ್ನಣಕಾತಿ ಬಿಂದಳಾ ದೇವಿ (ಚತ. ೬೯-೦೦೬). [ ಬಿನ್ನಣ (< ಬಿನ್ನಾಣ) + — ಕಾತಿ₂ ]

ಬಿನ್ನಣಗವಿ (ನಾ). ಚಮತ್ಕಾರಗಳಿಂದ ಕೂಡಿದ ಕಾವ್ಯವನ್ನು ರಚಿಸುವವನು; ಕುಶಲನಾದ ಕವಿ : ಗತಪ್ರತ್ಯಾಗತಾದಿ ಸಂಧಾನ ಮುರಜಬಂಧಾದಿಗಳಂ ಮಾಳ್ಪ ಬಿನ್ನಣಗವಿಯುಮಂ (ಶಕಿವಾ. ೩೦-೬).

[ ಬಿನ್ನಣ (< ಬಿನ್ನಾಣ) + ಕವಿ₁ ]

ಬಿನ್ನಣಗಾರ್ತಿ (ನಾ). = ಬಿನ್ನಣಕಾತಿ : ಕಂಬುಕಂಠದ ಕಂಗಿತಿಯು ಬಿಂಬಾಧರದ ಬಿನ್ನ[ ಶಾಕಾಂ. ನ್ನಾ ]ಣಗಾರ್ತಿಯರವಲಂಬಿಸಿ ಕೊಳನ ತಡಿಯೊಳು (ಜೀವಂಶಾಂ. ೦೬-೩೬).

[ ಬಿನ್ನಣ (< ಬಿನ್ನಾಣ) + — ಕಾಱ + — ತಿ₁ (< — ಇತ್ತಿ) ]

ಬಿನ್ನಣದೋಱು 'ಬಿನ್ನಣಂದೋಱು' ನೋ.

ಬಿನ್ನಣವಡೆ 'ಬಿನ್ನಣಂಬಡೆ' ನೋ.

ಬಿನ್ನಣಿ 'ಬಿನ್ನಾಣಿ₂' ನೋ.

ಬಿನ್ನಣಿಗ 'ಬಿನ್ನಾಣಿಗ' ನೋ.

ಬಿನ್ನಣಿಗೆ (ನಾ). ಕೌಶಲ : ಚಮತ್ಕಾರ : ಗಗನದಿಂದಲೊ ಗಗನದರುಗಿಂದಲೊ ಮೊಗೆವ ತುಂಬಿದೆಯು ಮುಂಬಗೆದಿಲ್ಲದಿಹ ಬಿನ್ನಣಿಗೆಯುಗುವುದಾರ ಗಾಯನದ ರಘುರಿಯಿಂ (ಗೀತಾಂ. ೯-೬). [ < ಬಿನ್ನಾಣ ]

ಬಿನ್ನಣಿಸು 'ಬಿನ್ನಾಣಿಸು' ನೋ.

ಬಿನ್ನಣೆ (ನಾ). ಜಂಬ ; ಹೆಮ್ಮೆ : ನಿನ್ನ ಮಗನ ಬಾಧ ಬಲು ಘನವಾಗಿದೆ ಇನ್ನೆಷ್ಟು ಕಾಲ ತಾಳುವೆ ಗೋಪಿ ಬಿನ್ನಣೆಯನು ಬಿಡು ಬಲು ದುಷ್ಟನು ಕೇಳೆ (ಪುರಂದ. ೩-೨೦೬-೦). [ಬಿನ್ನಣ (<ಬಿನ್ನಾಣ)+_ಎ₄]

ಬಿನ್ನತಿ (ನಾ). ನಿವೇದನೆ : ವಿಜ್ಞಾಪನೆ : ಅರಿಕೆ : 'ಬಿನ್ನತಿಗೆಯ್' ಪರಾ. 'ವಿನಂತಿ' ಹೋ.

[<ಪ್ರಾ. ವಿನ್ನತ್ತಿ, ವಿಣ್ಣತ್ತಿ./ಹಿಂ. ಬಿನತಿ./ಸಂ. ವಿಜ್ಞಪ್ತಿ]

ಬಿನ್ನತಿಗೆಯ್ (ಕ್ರಿ). ವಿಜ್ಞಾಪನೆ ಮಾಡು ; ಬಿನ್ನವಿಸು : ಆನುಮೊಂದು ಬಿನ್ನತಿಗೆಯ್ವೆಂ (ಜಯುಕಾ. ೩-೬೩); ಭಕ್ತಿಯಿಂ ಬಿನ್ನತಿಗೆಯ್ಯೆನಾಪುದು (ಚಕಶಿ. ೩.೬೮) ; ಅಪ್ರತಿಮಂ ಯಾದವಗಿರಿಯೊಡೆಯನಡಿಗೆ ಬಿನ್ನತಿಗೆಯ್ದಂ (ಚಕಿಚಿ. ೦೩). [ಬಿನ್ನತಿ + ಕೆಯ್₁]

ಬಿನ್ನತಿವತ್ತಳೆ (ನಾ). ಅರಿಕೆಯ ಓಲೆ ; ವಿಜ್ಞಾಪನಾಪತ್ರ; ಬಿನ್ನವತ್ತಳೆ : ಈ ಬಿನ್ನತಿವತ್ತಳೆಗೆ ಮಹಾಸನ್ನಿಧಾನದ ಸಮುಖದ ಅವಸರದ ಆಜ್ಞಾಪನ (ಮುಂತ್ರಶ. ೦೨೭-೦೦). [ಬಿನ್ನತಿ + ಪತ್ತಳೆ₁]

ಬಿನ್ನನೆ (ಅ). ೧. ಮೌನವಾಗಿ ; ನೀರವವಾಗಿ : "ಜೋಷ್ಕಟಂ, ಬಿನ್ನನೆ, ಬಿನ್ನಗೆ — ಈ ೩ ಸುಮ್ಮನೆಯೆಂಬರ್ಥಂ" (ಶಶಾ. ೩೯-೨೬೩); ಎನ್ನಂ ಬೆಂಕೊಂಡು ಕಾದಲುಂ ಬಂದೀಗಳ್ ಬಿನ್ನನೆ ಮೊಗದಿಂ ಬೀರರ್ ಬಿನ್ನಿತ್ತುದನಿನಿಸು ನೋಡ (ಶಂಕಶಾ. ೩-೬೩) ; ಲಕ್ಷ್ಮಣನುಂ ಬಿನ್ನನೆ; ಬಿನ್ನನೆ ನಡೆದಂ (ರಾವಪಾಶ್ರ. ೩೩-೦೭). ೨. ಚಿಂತೆಯಿಂದ ಕೂಡಿ ; ಖಿನ್ನವಾಗಿ : ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಮಾಡಿ (ವಡ್ಡಾರಾ. ೬೦-೦೦) ; ಎಮ್ಮಣುಗದಮ್ಮನಿಲ್ಲದೆ ಬಿನ್ನನೆ ಸಾಮ್ರಾಜ್ಯಮಿನಿತುಮಾದೆಡಕಮುಮತ್ಕುನ್ನತಿಯಲ್ತು (ಅಂಶಿ. ೧೯-೬೨); ಬರಿಸ ಬಿನ್ನಪದಿಂ ಬಿನ್ನನೆ ಮೊಗಮಂ ಮಾಡಿ (ಸುಕುಮಾ. ೭-೯ ವ).

ಬಿನ್ನನಿರ್, ಬಿನ್ನನಿರು = ೧. ಸುಮ್ಮನೆ ಇರು ; ಮೌನವಾಗಿರು ; ನೀರವವಾಗಿರು : ನಾಣ್ಚಿ ತಲೆಯಂ ಬಾಗಿ ಬಿನ್ನನಿರೆಯುಂ

(ಅಂಣ೩. ೯-೩೯ ಪ) : ಅಭಿಮಾನದಿಂದಮೋ ಸೊರ್ಕಿಂದಮೋ ನಾನ್ ಬಿನ್ನನಿರ್ದಪೆನೆಂದು ಬಗೆಯಲಿಂ (ಅ೩ಕ್ರ. ೨೯-೧೯೩) ; ಕೆಲರು ವೀಣೆಯ ನುಡಿಸಿ ಕುವರಿಯನೊಲಿಸಲಱಿಯದೆ ಬಿನ್ನನಿರೆ (ಶಾಕ್ಕ. ೬-೩). ೨. ಖಿನ್ನವಾಗಿರು ; ಚಿಂತೆಯಿಂದಿರು : ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಂ (ಅಂತಿ. ೩-೩ ಪ); ಮಾಸಿ ತಾಱದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ (ಗಧಾಯು.೯-೩). ೩. ಬಿಕೋ ಎನ್ನು ; ಬಣಗುಡು ; ಬಿನ್ನನಿರ್ದುದು ಸುರಶೈಲವುದೊಂದು ಮದುವೆಗಳಿಪಿದ ಮನೆವೊಲ್ (ಅದಿಪು. ೭-೧೦೮). [ ? + — ಅನ್ನ$_1$]

**ಬಿನ್ನಪ**, ಬಿನ್ನ, ಬಿನ್ನಹ, ಬಿನ್ನಾಯ್ತ, ವಿನ್ನಪ, ವಿನ್ನಪ್ಪ (ನಾ). ೧. ಅರಿಕೆ ; ವಿಜ್ಞಾಪನೆ ; ಮನವಿ ; ವಿನಂತಿ : ದೇವ ಬಿನ್ನಪಂ (ಶಂಕರಾ. ೩-೯೯); ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ (ಮಹಾದೇ. ೩. ೩೭-೬೦); ಬಿನ್ನಪವ ಕೇಳದರಸಿನೋಲಗದಿಂದ ಸಂನ್ಯಾಸ ಲೇಸು (ಸರ್ವಜ್ಞ. ೭೩೩). ಬಿನ್ನ : ೨. [ವೀಶೈ] ಜಂಗಮರನ್ನು ಊಟಕ್ಕೆ ಆಹ್ವಾನಿಸುವುದು : ನಿಮ್ಮನ್ನೇ ದೇವರೆಂಥ ತಿಳ್ಕೊಳ್ಳ ತೇವಿ. ಬಿನ್ನ ಬಿಡುಗಡೆ ಎಲ್ಲಾನು ನೀವೇ ತೀರಿಸ್ಬೇಕು (ಜಟ್ಪತ್ನಾ. ೧೧೩). **ಬಿನ್ನಹ** : ೧. ಕಿಂಕರನಾಗಿ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ೪೪೯); ಬಿನ್ನಹವ ಕೇಳ್ ಕೃಷ್ಣ (ಕುಮಾ.ಭಾ. ೩-೩); ಬಿನ್ನಹಕೆ ಬಾಯಿಲ್ಲವಯ್ಯ (ಶ್ರೀಂರ. ೨-೦೩೦ ಕಲ್ಲ೩). **ಬಿನ್ನಾಯ್ತ** : ೨. ಊರಿನ ಒಂದು ಬಿನ್ನಾಯದ ನೆವ ಮಾಡಿಕೊಂಡು . . . ಊರು ಬಿಟ್ಟು ಕೆಲ ತಿಂಗಳು ಅಸ್ತಂಗತರಾದರು (ಗ್ರಾಮಾಯ. ೨೦). **ವಿನ್ನಪ** : ೧. 'ವಿನ್ನಪಂಗೆಯ್' ಪರಾ.. **ವಿನ್ನಪ್ಪ** : ೧. 'ವಿನ್ನಪ್ಪಂಗೆಯ್' ಪರಾ. [<ಪ್ರಾ. ವಿನ್ನಪ್ಪ, ವಿಣ್ಣಪ್ಪ, ವಿನ್ನವ. / ತಮಿ. ವಿಣ್ಣಪ್ಪ ; ತುಳು. ಬಿನ್ನಯ, ಬಿನ್ನಹ; ತೆಲು. ವಿನ್ನಪ. / ಸಂ. ವಿಜ್ಞಾಪನ]

**ಬಿನ್ನಪಂಗೆಯ್**, ಬಿನ್ನಪಂಗೈ, ಬಿನ್ನಹಗೆಯ್, ಬಿನ್ನಹಗೈ, ವಿನ್ನಪಂಗೆಯ್, ವಿನ್ನಪ್ಪಂಕೆಯ್, ವಿನ್ನಪ್ಪಂಗೆಯ್ (ಕ್ರಿ). ಅರಿಕೆ ಮಾಡಿಕೊಳ್ಳು; ವಿಜ್ಞಾಪನೆ ಮಾಡು : ಮಂತ್ರಿಯರಸುಗಿಂತೆಂದು ಬಿನ್ನಪಂಗೆಯ್ದಂ (ಶಬ್ದಾ.ಶಾ. ೬೦-೦೩); ಕುರುಕುಳಗಗನಮೃಗಧರಂ ಬಂದನೆಂದು ಬಿನ್ನಪಂಗೆಯ್ಯುದುಂ (ಶಂಕರಾ. ೦೩-೩೩ ಪ); ಬಗೆಯಱಿವು ಬಿನ್ನಪಂಗೆಯ್ದು (ಕಬ್ಬಿಗ. ೦೩೦). **ಬಿನ್ನಪಂಗೈ** : ವಿರಚಿತಾಂಜಲಿಪುಟಘಟಿತಕರನಿಂತೆಂದು ಬಿನ್ನಪಂಗೈದಂ (ಶಾಂತಿ. ೨-೦೯ ಪ); ಹಂಪೆಯ ಹರಿಹರಂ ಬಿನ್ನಪಂಗೈದಂ [ಪಾಠಾಂ. ಗೆಯ್ದಂ] (ಗಂಳ. ಕಥಾಗಳಗಂ. ೩). **ಬಿನ್ನಹಗೆಯ್** : ಸುರಿವ ಕಂಬನಿಯಿಂದೆ ಬಿನ್ನಹಗೆಯ್ದಳು (ಮೋಹತ. ೬-೩೦). **ಬಿನ್ನಹಗೈ** : ಎನ್ನ ಮೆಲ್ಲುಡಿಯ ನಿವಾಲಿಸೂದೆಂದು ಬಿನ್ನಹಗೈದಳು (ಮೋಹತ. ೦೦-೨೩). **ವಿನ್ನಪಂಗೆಯ್** : ಆ ಗ್ರಾಮದ ಪ್ರಜೆಗಳೆಲ್ಲಂ ಸುಖದಿರೆ ಪುಣ್ಯಂ ನಿನಗಕ್ಕುಮೆನ್ನು ವಿನ್ನಪಂಗೆಯ್ದಡೆ (ಪ್ರ೩೦. ೦೯೩೦. ೭೩-೯೨ : 1080). **ವಿನ್ನಪ್ಪಂಕೆಯ್** : ತಟಾಕ್ಕಾಡಾ ಯಿರ್ಪ್ಪತ್ತ್ಯ್ವರ್ಕ್ಕಂ ಸಿನ್ದರಸರುಂ ದೇವಸತ್ತಿಅರಸರುಂ ಮನಸಿಜರುಂ ವಿನ್ನಪ್ಪಂಕೆಯ್ (ಎಳ. III, ೩ಿರುಮ. ೦-೬ ; 728). **ವಿನ್ನಪ್ಪಂಗೆಯ್** : ಎಱೆಯಿತಿಯದಿಗಳ್ಪ್ರಸಾದಂಗೆಯ್ದು ಪೂರ್ವಾವತಾರಬಾಣರಾಜಱ್ಗೆ × ಕ್ಕಾರಂ ವಿನ್ನಪ್ಪಂಗೆಯ್ದೊಡೆ ಅಡಿಗಳಾ ಪ್ರಸಾದಂಗೆಯ್ದನ್ನೆ ಸಲ್ಗೆನ್ನರ್ (ಶಾ೩ಾ. IX–1. ೮೭-೦೦ ; ಶು. ೩ನೆಯ ಶ೩). [ಬಿನ್ನಪ + ಕೆಯ್$_1$]

**ಬಿನ್ನಪಂಗೈ** 'ಬಿನ್ನಪಂಗೆಯ್' ನೋ.

**ಬಿನ್ನಯಿಸು** 'ಬಿನ್ನವಿಸು' ನೋ.

**ಬಿನ್ನಯ್ಸು** 'ಬಿನ್ನವಿಸು' ನೋ.

**ಬಿನ್ನವತ್ತಲೆ** 'ಬಿನ್ನವತ್ತಳೆ' ನೋ.

**ಬಿನ್ನವತ್ತಳೆ**, ಬಿನ್ನವತ್ತಲೆ (ನಾ). ೧. (ರಾಜ, ಅಧಿಕಾರಿ ಮೊದಲಾದ ವರಿಗೆ ಒಪ್ಪಿಸುವ) ಅರಿಕೆಯ ಓಲೆ ; ಮನವಿಪತ್ರ ; ವಿಜ್ಞಾಪನಾ ಪತ್ರ : ಕಂನಡಸಂಧಿವಿಗ್ರಹಿ ಬಿಂನವತ್ತಳೆಯ ಪ[ದ್ಮ][ರ]ಸನುಂ (ಶಾ೩ಾ. XI-i, ೩೦-೨೩ ; 1138); ಚರಣಕಾನತನಾಗಿ ಕೊಟ್ಟನು ಬಿನ್ನವತ್ತಳೆಯ (ತೊರವೆ. ೦-೦೬-೨); ದುರಗಲಿ ದಳವಾಯಿಯೊಡೆಯನ ಬಳಿಗಾಗ ಬರಿಸಿದ ಬಿನ್ನವತ್ತಳೆಯ (ಕಂಠೀ. ೦೬-೦೭೩). ೨. ಸನ್ಮಾನಪತ್ರ ; ಮಾನ ಪತ್ರ : ಪುರಪ್ರಮುಖರು ಹಲವರು ಸೇರಿ ದಾದಾಭಾಯಿಗೆ ಬಿನ್ನವತ್ತಳೆ ಯನ್ನೂ ನಿಧಿಯನ್ನೂ ಅರ್ಪಿಸಬೇಕೆಂದು ನಿರ್ಧರಿಸಿದರು (ದಾದಾಭ. ೯೯). **ಬಿನ್ನವತ್ತಲೆ** : ೧. ಬಿನ್ನವತ್ತಲೆಯುಂ ತಂದಿರೆ ತೋಱುವೆಂದು ನುಡಿವುದುಂ (ಕಾದಂಬ. ೬೩೬) ; ಕಳುಹಿದ ಬಿನ್ನವತ್ತಲೆ ಚಂದದುಡುಗೊಱೆಗಳನು ಕಟ್ಟಿಸಿ . . . ತಾ ಮುದದಿಂದಲ್ಲೆದುವ ಹದನ ತನ್ನಯ ತಂದೆಗಱುಹೆಂದಟ್ಟ ನಡೆತರುತಿರ್ದ (ಸತಕ್ಕು. ೦೨-೯೩) ; ಪಾಂಡ್ಯರಾಜನಿಗೆ ಬಿನ್ನವತ್ತಲೆಯಲ್ಲಿ ಬರೆದು ಮಧುರಾಪುರಕ್ಕೆ ಕಳುಹಿಸಿದನು (ಕಂಠ. ೩೯).

[ಬಿನ್ನ (<ಬಿನ್ನಪ) + ವತ್ತಳೆ$_1$. / ತುಳು. ಬಿನ್ನತ್ರಲೆ]

**ಬಿನ್ನವಿಸು**, ಬಿನ್ನಯಿಸು, ಬಿನ್ನಯ್ಸು, ಬಿನ್ನೈಸು (ಕ್ರಿ). ಅರಿಕೆ ಮಾಡಿಕೊಳ್ಳು ; ವಿನಂತಿಸು ; ವಿಜ್ಞಾಪಿಸು : ಕೇಳ ಬಿನ್ನವಿಸುವೆನೆನ್ನ ಕಂಡುದನೆ (ಶಂಕರಾ. ೭-೬೦); ದೇವ ಕೈಕೊಂಡು ಕಾವುದು ನೀನೆಂದು ಸುರಾಳಿ ಬಿನ್ನವಿಸೆ (ಭರ್ಮಾಕ್ಮ. ೦-೨೦೦); ತಪ್ಪದೆ ಬಿನ್ನವಿಸಿದನು ಮಾದ್ರ ರಾಜಂಗೆ (ಕುಮಾ.ಭಾ. ೩-೦೮). **ಬಿನ್ನಯಿಸು** : ಹರಭಕ್ತನಂ ಪದುಳದಿಂದೆ ಕಳುಪಿದೆನೆಂದನು ಬಿನ್ನಯಿಸೆ (ಶೀಂರ. ದೀ. ೩೩-೭) ; ವಿನಯದಲಿ ಬಿನ್ನಯಿಸೆ ಕೃಪನೆಂದನು (ಕುಮಾ.ಭಾ. ೨-೩೯) ; ಎನ್ನ ಬಿನ್ನಪವ ಲಾಲಿಪುದೆಂದು ಸುಗುಣಾಂಗೆ ಬಿನ್ನಯಿಸಿದಳು (ಮೋಹತ. ೯-೨೩). **ಬಿನ್ನಯ್ಸು** : ಬಿನ್ನಯ್ಸಿದಂ ಸುರರೆಲ್ಲ ಚೋದ್ಯಮೆನೆ (ಶಂಕ್ರ. ದೀ. ೦೫೦-೨); ಪಣೆಯೊಳ್ಕೆ ಯ್ಗಳಟ್ಟು ಬಿನ್ನಯ್ಸಿದಂ (ಕಂಠೀ. ೩-೯). **ಬಿನ್ನೈಸು** : ಎಲ್ಲರ್ಗೆ ಕೊಟ್ಟೆನೆಂದಭವಂಗೆ ಬಿನ್ನೈಸೆ (ಬಸವ. ೦-೪೩): ಸಾತ್ಯಕಿ . . . ಉತ್ತಮಾಂಗಕೆ ಕರಯುಗವ ಚಾಚುತ್ತ ಬಿನ್ನೈಸಿದ ಧನುರ್ಧರಫಾಲನೇತ್ರಂಗೆ (ಕುಮಾ.ದ್ರೋ. ೦೦-೯); ಸನ್ನಿಧಿಯಲಿ ಬಿನ್ನೈಸಿದೆವು (ಸುದ್ದಾ. ೩೦).

[<ಬಿನ್ನಪ + — ಇಸು$_1$]

**ಬಿನ್ನಹ** 'ಬಿನ್ನಪ' ನೋ.

**ಬಿನ್ನಹಗೆಯ್** 'ಬಿನ್ನಪಂಗೆಯ್' ನೋ.

**ಬಿನ್ನಹಗೈ** 'ಬಿನ್ನಪಂಗೆಯ್' ನೋ.

**ಬಿನ್ನಾಣ**, ಬಿನ್ನಣ, ಬಿನ್ನಾಯ್ತ, ವಿಂದಾಣ, ವಿನ್ನಾಣ (ನಾ). ೧. ವಿಶೇಷವಾದ ಜ್ಞಾನ ; ಗಾಢವಾದ ತಿಳಿವಳಿಕೆ : ಬಂದು ನಿಂದನು ಕಂಡು ವಿರಾಟನ ನಿನ್ನ ಬಿನ್ನಾಣವೇನೆಂದು ಬೆಸಗೊಳೆ (ಶಂಕರಾ. ೬-೩೩ ಪ); ಎನ್ನೊಡಲೂ ಅಲ್ಲ ನಿನ್ನೊಡಲೂ ಅಲ್ಲ ಅದು ನೀ ಮಾಡಿದ ಜಗದ ಬಿನ್ನಾಣದೊಡಲು ಕಾಣಾ ರಾಮನಾಥ (ದೇವಾಪ. ೦೭-೨೯); ವಸ್ತ್ರಗಧರ ಕೊಟ್ಟ ಬಿನ್ನಾಣದಿಂದ ಸ್ತುತಿಗೈದತ ಪೊಗಳುವೆ (ಸರ್ವಜ್ಞ. ೨೮). ೨. ಕೌಶಲ್ಯ ; ನೈಪುಣ್ಯ ; ಚಾತುರ್ಯ ; ಜಾಣ್ಮೆ : ಬೆಡಗು ಬಿನ್ನಾ [ಪಾಠಾಂ. ನ್ನ]ಣವೆಂಬುದೇನೋ (ಬಸವ. ೭೩); ಬಾಣಾವಳಿಯ ಬಿನ್ನಾಣವನು ತೋಱದನು (ಸಂಕತ. ೦೬-೭೦) ; ಎನ್ನೊಡಲೊಳಗೆ ತೋಱ ತೋಱ ಅಡಗುವ ನಿಮ್ಮ ಬೆಡಗು ಬಿನ್ನಾಣವನನಗೆ ತಿಳಿಯಬಾರದು (ಅಂಕಿತ. ೨೯೦-೬೩). ೩. ಚಮತ್ಕಾರದಿಂದ ದೊರಕಿದುದು ; ಕೌಶಲದಿಂದ ಲಭ್ಯವಾದುದು : ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩). ೪. ಅಂದ ; ಸೊಬಗು : ಪಚ್ಚೆಯ ಪಾಸುಗಲ್ಲ ಬಿನ್ನಾಣದಿನಿಂದ್ರನೀಲಮಣಿವೇದಿಕೆಯಿಂ . . . ಬಗೆಗೆ ಕೌತುಕವಾಯ್ತು ವಿವಾಹಮಂಟಪಂ (ಉತ್ತಿ. ೬-೯). ೫. ಒನಪು ; ಒಯ್ಯಾರ :

ಹೆದರುವೆನು ನಾ ನಿನ್ನ ಬಿನ್ನಾಣಕೆಲಿ ಹೆಣ್ಣೆ (ತಂಗೀತ. ೫೯-೦). ೬. ವಿನೋದ ; ಹಾಸ್ಯ ; ಗೇಲಿ : ಬಾಣ ನಿಷ್ಫಲವಾದುದವರರ ಶ್ರೇಣಿಗಳು ಕೈಮುಟ್ಟಿ ನಗೆ ಬಿನ್ನಾಣವಾದುದು ದನುಜ ಕೈಗುಂದಿದನು ನಿಮಿಷದಲಿ (ಕೌಶಿಕಾ. ೨೨-೪). **ಬಿನ್ನಣ :** ೧. ತನ್ನ ಬಿನ್ನಣವಮಂ ನೆರೆದ ನೆರವಿಗೆ ಮೆಚ್ಚಿಯಲ್ವೇಡಿ (ಪಂಪ್ಯಾಶಾ. ೦೨೦-೦೬); ಶಿವಭಕ್ತರೆಲ್ಲರು ಶೂನ್ಯಸಿಂಹಾಸನದ ಗುರುವಿನ ಬಿನ್ನಣಕೆ ಬೆಬಿಗಾಗುತಿರ್ದರು (ಪ್ರಭುಲಿಂ. ೨೩-೩). ೨. ನೆಗೆಟ್ಟುದು ಬಿಲ್ಲ ಬಿನ್ನಣಮಿಳಾವಳಯಕ್ಕೆ ಸಮಸ್ತಧಾತ್ರಿ ಕೆಯ್ಯುಗಿವುದು ನಿಮ್ಮದೊಂದೆ ಪೆಸರ್ಗೇಳ್ದೊಡೆ (ಪಂಪಭಾ. ೦೩-೩೬); ಅಲಿಯಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ಲ ಪಿನಾಕಪಾಣಿಯುಂ ನೆಟಿಯನಿದಿರ್ಚಿ ನಿಮ್ಮೊಡನೆ ಕಾದಿ ಗೆಲಲ್ (ಗದಾಯು. ೪-೯೯); ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾಚಿತ್ರಸತ್ಪುತ್ರಿಕೋತ್ಕರಗವಮಂ ತೆತ್ತಿಸಿ (ಚಾರಿತ್ರ. ೪-೩೨). ೪. ಬಿನ್ನಣದ ಮನ ಕಟ್ಟೆ ಕೋಟಿಕೊತ್ತಳವಿಕ್ಕಿ (ಪುರಂದ. ೦-೦೩೨-೨). ೬. ಬಿನ್ನಣದಿ ವಿಗೆಯೋರೆನೋಟಡ ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು (ವಶಕ. ೩-೬೦). ೭. ಹೆಚ್ಚುಗಾರಿಕೆ; ಅತಿಶಯ : ಎನ್ನಟ್ಟಡುಗೆಯನುಂಡೊಡೆ ಬಿನ್ನಣವೇನರಸ ನರೆಗಳಾಗವು (ಹಂಪಿಶಾ. ೮-೩೪); ಇನ್ನಿಪ್ಪವುಮಿ ತೆಱದಿಂ ಬಿನ್ನಣವೇಂ ಕಂದಲಕ್ಷಣಂ ಕಮಲಮುಖೀ (ಶಂಕರೋಜು. ೪-೨೩೨ ಅತಿಶಕ್ರ). ೮. ಭ್ರಮೆ ; ಭ್ರಾಂತಿ : ಮುನ್ನಿಲ್ಲದುದಂ ಪಡೆವನೆ ಬಿನ್ನಣ ಮಾಕಾಶದಲ್ಲಿ ಪೂವಡೆವಂದಂ (ಸಶುಪ. ೦೦-೨೦). **ಬಿನ್ನಾಯ್ಯ :** ೨. ಬಿಲ್ಲ ನಾಯಕರು ದೇವ ರಘುರಾಮರ ಹೊಗಳುವ ಭಟರು ಬಿನ್ನಾಯ ದಿಂದೊಪ್ಪುತಿಹರು (ಕರ್ಣಾಕ. ೨೬೮). **ವಿಂದಾಣ :** ೯. ಮಲ್ಲಯುದ್ಧದ ಒಂದು ವರಸೆ.– ಪಟ್ಟು : ವಿಂದಾಣಕೆ ಮೈಗೊಡುವನು ಡೊಕ್ಕರದಿಂದ ಹಾಕಿದೊಡುರುಳುವವನು . . . ಮುಕುಂದನದೇಂ ವೈಸಿಕನೊ (ಶೀಬುಸಂ ೦೬-೨೨೩); ಸಂದ ಕೊಕ್ಕಸ ಗುಂಡು . . . ಚೀಣ ಪಟ್ಟಸು ಮೆಂಡೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೬೨). **ವಿನ್ನಾಣ :** ೧೦. [ಕಾಮಶಾ] ಸುರತದ ಒಂದು ಬಗೆ, – ರೀತಿ : ನಸುಸಡಿಲಿದ ತಕ್ಕೆಯು ವಿನ್ನಾಣದಿನಸಮಾಯುಧನೃಪನೀಕ್ಷಿಸುತಿರೆ ಭರವಸದಿಂ ಮೋಹನಮಲ್ಲಗಲಹವಮಂ ಮಾಡಿದರಾ ಪ್ರಿಯರು (ಜಯುಕಾ. ೮-೫೦).

[ < ಪ್ರಾ. ವಿನ್ನಾಣ. ವಿಣ್ಣಾಣ; / ತಮಿ. ವಿಣ್ಣಾಣ; ತೆಲು. ವಿನ್ನಾಣ. /ಸಂ. ವಿಜ್ಞಾನ]

**ಬಿನ್ನಾಣಗಿತ್ತಿ** (ನಾ). ಒಯ್ಯಾರಿ; ಬೆಡಗುಗಾತಿ : ಪೊ:ಟೋ ತೆಗಿಸಿ ಕೊಳ್ಳಲಿಕ್ಕೆ ಹೋಗಿದ್ದಳೇ ಈ ಬಿನ್ನಾಣಗಿತ್ತೀ? (ಮುಕುಡಾ. ೪೪); ಇನ್ನು ಕೆಲವರು ಬಿನ್ನಾಣಗಿತ್ತಿ ಎಂದರು(ಅಳೋಣ. ೦೬೩); ಮನಸ್ಸು . . . ಒಬ್ಬ ಬಿನ್ನಾಣಗಿತ್ತಿಯನ್ನು ಆರಾಧಿಸಲೆಳಸಿತು (ಶಾಂತ. ೩೬).

[ ಬಿನ್ನಾಣ + – ಗಿತ್ತಿ]

**ಬಿನ್ನಾಣವತಿ** (ನಾ). = ಬಿನ್ನಾಣಗಿತ್ತಿ : ಬಿನ್ನಾಣವತಿಯ ಕಿಸರದ ಚೆನ್ನೆಯ . . . ನೆರೆವುದಿನ್ನೆಂತೊ (ಶಶಕಾಂ. ೨೬-೩೬).

[ ಬಿನ್ನಾಣ + – ವತಿ ]

**ಬಿನ್ನಾಣೆ** (ನಾ). – ಬಿನ್ನಾಣಗಿತ್ತಿ : ಬಿನ್ನಾಣ, ಸೊಕ್ಕೆಲ್ಲ ಇಳಿಯುವುದು ನಾಳೆ ! (ಶಂಶ್ರಶ. ೬೯-೩); ಕೊಂಕುನೋಟದೊಳೆನ್ನನೇತಕೆ ಕೊಲ್ಲುವೆ ಬಿನ್ನಾಣೆ (ತಂಜಾಶ. ೦೪೬-೦೬). [ ಬಿನ್ನಾಣ + —ಎ ]

**ಬಿನಾಣಿ, ಬಿನ್ನಣಿ, ವಿನ್ನಾಣಿ** (ನಾ). ೧. ಜಾಣ; ಚತುರ : ಜಗದ ಬಿನ್ನಾಣಿಯು.ತೊಡಕ ಬಿಡಿಸಬಾರದು (ಶಕಶ. ೬೨೪); ಪ್ರೌಢಿಯೊಳೆಂತಪ್ಪ ರುವುಂ ಮೆಚ್ಚದೆ ಕಡುಬಿನ್ನಾ[ಶಾಕಾಂ. ಸ್ಪ]ಣಿಯುಪ್ಪ ಪಱಿಯುಂಗೊಸೆದೊಡೆ (ಲಂಪಹ. ೫-೦೩): ಸಮುಚೋಳಿ ಜೋಕಿಯುಂ ಕಾದಿದರ್ ಬಿಲ್ಲ ಬಿನ್ನಾಣಿಗಳ್ (ಶಂಕ್ರ. ೬೯-೦೦). ೨. ಕುಶಲಕಾರ್ಯಗಳಲ್ಲಿ ನೈಪುಣ್ಯವುಳ್ಳವನು; ಕರಕುಶಲಿ : ಸೂತ್ರಧಾರಿ ಶ್ರೀಗುಂಡನ್ ಅನಿವಾರಿತಾಚಾರಿಗೆ ಮೂಮೆ ಪೆರ್ಜ್ಜೆಱಿಪುಪಟ್ಟಮು ತ್ರಿಭುವನಾಚಾರಿಯೆಂದು ಪೆಸರಿತ್ತು ಪ್ರಸಾದಂಗೆಯ್ದು ಪ್ರಿ(ಪೃ)ಥಿ(ಥಿ)ವಿಯಾ ಬಿನ್ನಾಣಿಗಳಾ ಬಳ್ಳಿಗವಾರ್ತ್ತೆ ಇಲ್ಲ (ಇಇ. X. ೦೬೪-೬: ೩ಶಯು ೩೪); ದೇಗುಲಮಂ ಬೆಸಗೆಯ್ದ ಬಿನ್ನಾಣಿ ಪೊಲ್ಲಮಂಗೆ ಪನ್ನೆರಡು ಮತ್ತರ್ (ಎಶಿ. IV, ೩೫೪-೩೬; 975); ಹಲವು ಚಿತ್ರವ ಬರೆದನವಱೊಳಹನೆ ಅಳವಟ್ಟ ಕೆಲಸಂಗಳೊಳಗಿಹನೆ ಬಿನ್ನಾಣಿ (ಶತಗ. ೩೪-೦೩೬). **ಬಿನ್ನಣಿ :** ೧. ಬಲ್ಲಾಳಪ್ಪ ಬಿಲ್ಲ ಬಿನ್ನಣಿಯಿದಿರ ರೂಪನೆತ್ತಲೀಯದೊಂದೆ ಕೋಲಿಂದಿಸುವಂತೆ (ಹಂಕಶಂ. ೦೨೬-೦೬). **ವಿನ್ನಾಣಿ :** ೨. ಸೂತ್ರಧಾರಿಗೆ ಮೂಮೆ ಪೆರ್ಜ್ಜೆಱಿಪುಗೆಯ್ದು ಬಟಿಕ್ಕೆ ಈ ವಿಷಯದ ವಿನ್ನಾಣಿಗಳಾ ಬಳ್ಳಿಗವರ್ತ್ತೆಯನುಟಿಪಿದ ಆಚಾರಿಯ ಪೆಸರಿವನಜಿವಿ (ಇಇ. X, ೦೬೩-೬: ೩ನಯು ೩೪).

[ ಬಿನ್ನಾಣ + – ಇ./ಪ್ರಾ. ವಿಣ್ಣಾಣಿ. / ತೆಲು. ವಿನ್ನಾಣಿ ]

**ಬಿನ್ನಾಣಿಗ, ಬಿನ್ನಣಿಗ** (ನಾ). ಚತುರ; ನಿಪುಣ : ಪ್ರಾಣ ಕೊರಳಲಿ ನಿಲಲು ರಣಬಿನ್ನಾಣಿಗರು ಜವಗುಂದೆ (ಕುಪ್ಪಾ.ಶಿ. ೬೦೩. ೫-೬೫). **ಬಿನ್ನಣಿಗ :** ಎಚ್ಚಾಡಿದರ್ ಬಿಲ್ಲ ಬಿನ್ನಣಿಗರಂದು (ಶಂಕ್ರ. ೯೮-೯೯): ಬಿಜ್ಜೆಯೊಳ್ ಬಿನ್ನಣಿಗರನಾಗಿಸಿ . . . ಬಿಲ್ವಾಱಿಕೆಯೊಳ್ ಬಲ್ಲಿಗಲಿಗಳನೆಸಗಿ, ಪಾಟವಮೂಟವುಪ್ಪಂತು ಕಲಿಸಲೊಡಂ (ರಾಘವಾಶ್ಯ. ೦೫೦-೦೪).

[ಬಿನ್ನಾಣ + – ಇಗ ]

**ಬಿನ್ನಾಣಿಸು, ಬಿನ್ನಣಿಸಂ** (ಕ್ರಿ). ೧. ಚಾತುರ್ಯವನ್ನು ತೋರು; ಕುಶಲತೆಯನ್ನು ತೋರಿಸು : ತನ್ನ ಮಂತ್ರಿಯು ಕೈಗೆ ಕೊಟ್ಟು ನಿವಾಳಿಯ ಬಿನ್ನಾಣಿಸಿದನಕಂಪಾಂಕಾ(ಪಿಕತ. ೩೬-೩೬). ೨. ಚಾತುರ್ಯದಿಂದ ಹೇಳು; ಕುಶಲತೆಯಿಂದ ನಿರೂಪಿಸು : ನೀವೊಮ್ಮೆ ದೇವನ ಮುನ್ನ ಕಂಡಿದ್ದುದರಿಂದ ಬಿನ್ನಾಣಿಸಿದಿರದು ನಮಗೆ ಕಂಡಂತಾಯ್ತು (ಶಕಶ. ೬೬-೦೬೬); ಮುನ್ನಿನ ಪಾಂಡವವರಸುತಕಥನವ ಬಿನ್ನಾಣಿಸುವೆ ಧರೆಯೊಳಗೆ (ಕುಪಾಸಾಂ. ೦೦). ೩. ಮಲ್ಲಯುದ್ಧದ ಪಟ್ಟು ಹಾಕು : ಹುಗುವರು ಹೊಕ್ಕು ಹೋರುವರು ಬಿನ್ನಾಣಿಸಿ ಬಿಗಿವರು ಕೈ ಕಾಲ ಬೆರಲ ಸಿಗಿವರು ಸಿಕ್ಕಿದರಾಯನ್ನಲೊಲ್ಲದೆ ಸಗುಣಾತ್ಮಕರು ಕಾದಿದರು (ಸೋಹಕ. ೩೯-೩೬). **ಬಿನ್ನಣಿಸು :** ೧. ಲಸದ್ಭಿತ್ತಿಯೊಳಾ ಚಿತ್ರಪಟದೊಳೊಪ್ಪುವ ನವಬಾಲಿಕೆಯ ಅದ್ಭುತಮಪ್ಪ ವಿಲಾಸಶ್ರೀಯುಂ . . . ಅತಿಚತುರಂ ಬಿನ್ನಣಿಸುತ ಬರೆದಂ (ಜಯುಕಾ. ೩-೦೩). ೪. ಕೌಶಲ್ಯದಿಂದ ರಚಿಸಂ : ಮುನ್ನಮಿಶಾಲಯದೊಳಗೆ ಚಿತ್ರರಥನೆಂಬವಂ ನಿಖಿಲವರ್ಣ ಕದೆ ಚಿತ್ರಮುಂ ಬಿನದದಿಂ ಬಿನ್ನಣಿಸೆ (ಪದ್ಮನಾ. ೦೦-೦೪೩).

[ಬಿನ್ನಾಣ + – ಇಸು]

**ಬಿನ್ನಾಯ್ಯ**, ' ಬಿನ್ನಪ ' ನೋ.

**ಬಿನ್ನಾಯ್ಯ**, ' ಬಿನ್ನಾಣ ' ನೋ.

**ಬಿನ್ನೈಸು** ' ಬಿನ್ನವಿಸು ' ನೋ.

**ಬಿಪ್ಪಂಡ** (ನಾ). ಪಕ್ಷಿಗಳ ಕೂಗು,–ಕಲರವ : "ಬಗ್ಗು, ಬಿಪ್ಪಂಡಂ, ಬೆಜ್ಜ, ಚಪ್ಪರಣ–ಈ ೪ ಜಂಕಣ" (ಕಶಾ. ೩೬-೨೫೬); ಪಪ್ಪುಕಂ, ಕಪ್ಪಡಿ, ಬಿಪ್ಪಂಡಂ, ಉಪ್ಪಂಡಂ (ಶಮದ. ೩೬ ಕ್ರಿಯೋ); " ವ್ಯರ್ಥ" (ಶಮದ. ಪ. ೪೬ ಕ್ರಿಯೋ). [ ? ]

**ಬಿಪ್ಪಂಡಿಸು** (ಕ್ರಿ). (ಅಲಂ) ದೂಷಿಸಂ ; ದೂರು : ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆನೆಸಲೌದಾರ್ಯಮಂ ಚಿಂತಿಸಲ್ (ಕಾದಂಪೂ. ೫೪೯); ಈ ನಡೆನುಡಿವಳಿಗಳಿಂದ ಜಂಕಿಸಿ ಬಿಪ್ಪಂಡಿಸಿ ನಮ್ಮನ್ನೊದೆದು, ಹುಚ್ಚಡಸುವಂತೆ ಹೀಗೆ ಕುಣಿಯಿಸಿ (ಮಂತ್ರಕ. ೦೬೦-೦೪). [ಬಿಪ್ಪಂಡ + – ಇಸು]

**ಬಿಬೀಚಣ** (ನಾ). ರಾವಣನ ಸಹೋದರ ; ವಿಭೀಷಣ : ಸುಸೇಣಂ, ಬಿಬೀಚಣಂ ಮುಂತಪ್ಪ ಬೀರರ ಕೂಟಮುಂ (ಅದ್ಭುತ. ೪೮-೦೪).

[<ಸಂ. ವಿಭೀಷಣ]

**ಬಬ್ಬಚ್ಚ** (ನಾ). ೧. ಅಸಹ್ಯ : 'ಬಿಬ್ಬಚ್ಚಿ' ಪರಾ. ೨. (ಅಲಂ) ನಿವಾರಣೆ ; ಪರಿಹಾರ : 'ಬಿಬ್ಬಚ್ಚಿಸು' ಪರಾ. ೩. ನಿಷ್ಫಲ; ವ್ಯರ್ಥ: 'ಬಿಬ್ಬಚ್ಚಗೊಳಿಸು' ಪರಾ. [<ಸಂ. ಬೀಭತ್ಸ]

**ಬಬ್ಬಚ್ಚಗೊಳಿಸು** (ಕ್ರಿ). ನಿಷ್ಫಲಗೊಳಿಸು ; ವ್ಯರ್ಥಮಾಡು : ಮೆಚ್ಚಿದನೊ ಅಹಿತೆನ್ನ ಶರ ಬಬ್ಬಚ್ಚಗೊಳಿಸಿದಕೀಗಲುರುಗಾಸ್ತ್ರಚ್ಚಪೆನು ತಡೆಯೆಂದು ಬಿಡಲು (ಕರಾಮಾ. ೩೨೪-೪೬). [ಬಬ್ಬಚ್ಚ + ಕೊಳ್$_1$ + — ಇಸು$_3$]

**ಬಬ್ಬಚ್ಚಿಸು** (ಕ್ರಿ). ನಿವಾರಿಸು; ಹೋಗಲಾಡಿಸು : ತುಚ್ಛರಾಗುವರಂದು ಮಿಗಿಲ ಭೂಭುಜರು ಮುಂದೆಚ್ಚರದೊಳಿರ್ದಲ್ಲೆ ವಿಜಯಾಧಿನಾಥ ಬಿಬ್ಬಚ್ಚಿಸದಲಿರಲ್ (ಶಬಪು. ೬-೩೦); ಆ ವ್ಯಸನವನು ಬಿಬ್ಬಚ್ಚಿಸಲು ತಿಳುಹಾಗುದಲ್ಲಾಗೆನೆ ವಿಭೀಷಣನು (ಕರಾಮಾ. ೪೨೯-೨೦).
[ಬಿಬ್ಬಚ್ಚ + — ಇಸು$_3$]

**ಬಬ್ಬಚ್ಚು** (ನಾ). ಅಸಹ್ಯಕರವಾಗಿರುವುದು : ಬೇರಸಗಿತಿಂಬವನಿಸುರರಿರವೀರಣಕೆ ಬಬ್ಬಚ್ಚು . . . ಎಂದೊದರೆ ಕಹಳೆಗಳು (ಕಕುಕಾ. ೨೩-೦೦).
[< ಸಂ. ಬೀಭತ್ಸ]

**ಬಬ್ಬಚ್ಚೆ** (ನಾ). ಅಸಹ್ಯವನ್ನುಂಟುಮಾಡುವವಳು ; ಅಸಹ್ಯಕರಳಾದವಳಂ : ಮೆಚ್ಚಿದನುಕೂಲೆಯರ ಸಂಗ ಸುಖಪುಂಗ ಬಬ್ಬಚ್ಚೆಯರ ಬಲಾತ್ಕಾರ ಸೋಟಮುಂ ಬೇಟಪನು ಧೆಚ್ಚುವದೆ (ಶನಘು. ೨೮-೧೪).
[ಬಬ್ಬಚ್ಚ + — ಎ$_2$]

**ಬಬ್ಬನೆ** (ಅ). ಅತಿಶಯವಾಗಿ ; ಅಧಿಕವಾಗಿ : ಬೆಬ್ಬನೆ ಬೆಚಿತು ಬಬ್ಬನೆ ಬೀಗಿ ಅಹಂಕಾರಭರಿತನಾಗಿಪ್ಪವನ ಮನೆಯ ಲಿಂಗಸನುಮತರು ಹೊಗರು (ಸಕವ. II, ೩೩೦-೯); ಸಂತೋಷಂ ಸರ್ವಾಂಗದೊಳು ತೀವಿ ಬಬ್ಬನೆ ಬಿರಿದಬ್ಬರಿಸುತ್ತ (ಸಂಬಿಕ. ೮-೩೪); ಓಹಿಲದೇವಂ ಕೊಬ್ಬುತ್ತುಬ್ಬುತ್ತಂ ಬಬ್ಬನೆ ಬೀಗಿ (ಉದ್ಭರೀ. ೩-೪೩). [ಬಬ್$_0$ + — ಅನೆ$_1$]

**ಬಬ್ಬಿ** 'ಬೀಬಿ' ನೋ.

**ಬಬ್ಬಿನಂ** (ಅ). ಕೂಡಲೆ : ಮತ್ಕಾರ್ಯಾಂಗನಿಕಾಯಂ ಬಬ್ಬಿನಂ ಬೆಕ್ಕನೆ ಬಿರಿದಪುದು (ಸುಕುಮಾ. ೪-೦೦).

**ಬಬ್ಬುರಿವಲ್** 'ಬಿರಿ$_2$' ಪರಾ.

**ಬಬ್ಬೋಕ** (ನಾ). ೧. [ಕಾವ್ಯಮಿ] ಸ್ತ್ರೀಯ ದಶವಿಧಶೃಂಗಾರ ಭಾವಗಳಲ್ಲಿ ಒಂದು ; ಲೀಲಾ, ವಿಲಾಸ, ವಿಚ್ಛಿತ್ತಿ, ವಿಭ್ರಮ, ಕಿಲಕಿಂಚಿತ, ಮೊಟ್ಟಾಯಿತ, ಕುಟ್ಟಮಿತ, ಬಿಬ್ಬೋಕ, ಲಲಿತ ಮತ್ತು ವಿಹೃತ ಎಂಬ ಹೆಣ್ಣಿನ ಹತ್ತು ಸ್ವಭಾವಜನ್ಯ ಅಲಂಕಾರಗಳಲ್ಲಿ ಒಂದು ; ಗರ್ವದಿಂದ ಉಂಟಾಗುವ ಅನಾದರ : "ಬಿಬ್ಬೋಕ ಮೆಂದೊಡೆ ಕಾಂತನ ಕೂಟಂಗಳಲ್ಲಿ ಗರ್ವದಿಂದಿಹ ಅನಾದರಣಂಗಳು" (ಕಾಚಿರು. ೯೮); ಲಲಿತವಿಲಾಸಬಿಬ್ಬೋಕವಿಭ್ರಮಗುಣ ಕಿಲಕಿಂಚಿತಲೀಲೆಗಳು ತೊಲಗದೆ ಸಲೆ ನೆಲಸಿಹವಾ ಕೇರಿಯ ಬೆಲೆವೆಣ್ಣಾಳೊಳಗೆ (ಕುಮಾರಾಸಂ. ೪-೦೦೬). ೨. ಹುಸಿಮುನಿಸಂ; ಹುಸಿಕೋಪ : ಉಳ್ಳುಡೆಯಂ ಮೆಲ್ಲನೆ ಲೀಲೆಯಿಂ ಸೆಳೆದೊಡನ್ನಂ ಸಸ್ಪೃಹಂ ಕೊಳ್ವನ್ನೆಲ್ ಕಡೆಗಣ್ಣಿಂದಮೆ ಕೋಂಕುವಳ್ ಸಹಜವಿಾ ಬಿಬ್ಬೋಕಮೆನ್ನಾಕೆಯಾ (ರೀರಾವ. ೨-೦೦೫) ; ಸೌಂದರಿ . . . ಬಿಬ್ಬೋಕಂ ಕುಡಿವರಿಯಲ್ ನಿಬ್ಬೆಗದೆ ನಿನಗಕಾರಣಂ ಹಸನಮದೆಂದಳ್ (ಕಾದ್ಯಲಿ. ೦೦-೨೩). [ಸಂ].

**ಬಭೀಷಿಕೆ** (ನಾ). ಅಂಜಿಕೆ; ಭಯ : ಉತ್ತಪ್ತರಜತಾವದಾತಲೋಹಪುತ್ರಿಕಾನಂದ ಲಾಕ್ಷಾಹಿಂಗುಲಿ ಕವಾಟಲಕಮಂಧರ್ಕರವಾಳಬಾಲನಪ್ರಕಟಿತ ಭಟಬಭೀಷಿಕಾಡಂಬರಂ (ಆದಿಪು. ೦೩-೯೫ ವ); ಅಂತೆ ವೇಷದಲಿ ಮತವೇಮ ಕಾಣುವ ಬಭೀಷಿಕೆಯು ನಿಜವಾಗಿ ಮತವೆನ್ನಬಾರದಲೆ ಅದು ಬಭೀಷಿಕೆಯೆಂದು ತೋರುವುದು ನಿಜವಾದ ಮತಕೆ ಬೆಲಿ ತಂದಂತೆ (ವಪರಾ. II, ೯೦).
[ಸಂ. ಬಭೀಷಿಕಾ]

**ಬಿಮ್ಮಗೆ$_1$** (ಅ). ೧. ಬಿಗಿಯಾಗಿ ; ಬಲವಾಗಿ : ಗಟ್ಟಿಯಾಗಿ ಒಮ್ಮೆಯುಂಡವ ತ್ಯಾಗಿ ಇಮ್ಮೆಯುಂಡವ ಭೋಗಿ ಬಿಮ್ಮಗುಂಡವ ನೆಜಿ³ ರೋಗಿ (ಸರ್ವಜ್ಞ. ೨೦೨೩); ಹಾಗೆಲ್ಲ ಬಿಮ್ಮಗೆ ಉಂಡು ತೇಗಬೇಕಾದರ . . . ಉಡುಪಿಗೇನೆ ಹೋಗಬೇಕು (ಪುರವು. ೯೯) ; ಬೊಪ್ಪಣ . . . ಮಹಾರಾಣಿಯ ಕಾಲುಗಳನ್ನು ಬಿಮ್ಮಗೆ ಹಿಡಿದು, ಅದರ ಮೇಲೆ ತನ್ನ ತಲೆಯನ್ನಿಟ್ಟ (ಶಾಂತಲಾ. ೧೮೪). [ಬಿಮ್ಮು$_1$ + — ಅಗೆ$_3$./ತುಳು. ಬಿಮ್ಮಗೆ]

**ಬಿಮ್ಮಗೆ$_2$** (ಅ). ಮೌನವಾಗಿ; ಸುಮ್ಮನೆ : ಬೊಮ್ಮವನು ಅಜಿ³ದಿಹರೆ ಬಿಮ್ಮಗಿದ್ದಿರಬೇಕು (ಸರ್ವಜ್ಞ. ೯೩೪); ಬಿರುಸು ಲಲ್ಲೆ ಮಾಣ್ದಾಗಾಯ್ತು ಬಿಮ್ಮಗುಳಿದಳು (ಶರಾವ. ೨೪-೬); ನಿಲ್ಲಿಂದ ಹಾಗಾಗಿ, ಅಲ್ಲಿ ನಿಂತರೂ, ಜಾಣ ಪೊರಟಾಗ ಕೇಳಿದರೆ ಬಿಮ್ಮಗಿಹರು (ಕುಶಾಹಿ. ೨೬).
[ಬಿಮ್ಮು$_2$ (< ಬಿಂ) + — ಅಗೆ$_3$]

**ಬಿಮ್ಮನಸೆ, ಬಿಮ್ಮನಿಸೆ** (ನಾ). ಬಸಿರಿ ; ಗರ್ಭಿಣಿ : ಹೊನ್ನ ಬಿಮ್ಮಸಸೆಯಾಗಿ, ಒಡವೆಗಳು ಹೊರೆಯಾದಾಗಲೂ ಅವುಗಳ ಚಾಪಲ್ಯ ಹಿಂಗುವುದಿಲ್ಲ (ವಂಜುಂಡ. ೦೨೮) ; ಅಬ್ಬಬ್ಬ . . . ಎಂದು ಬಿಮ್ಮನಸೆ ಅಬ್ಬರಿಸಿದಳು (ತ್ರಿಸಕು. ೨೯೮). ಬಿಮ್ಮನಿಸೆ : ಬಿಮ್ಮನಿಸೆ ಆಗಿಬಿಟ್ಟಳು (ವಷ್ಮರು. ೨೯೮).
[<ಬಿಣ್ + < ಮಾನಸೆ]

**ಬಿಮ್ಮನಿಸೆ** 'ಬಿಮ್ಮನಸೆ' ನೋ.

**ಬಿಮ್ಮನೆ$_1$** (ಅ). ೧. ವೇಗವಾಗಿ : ಶೀಘ್ರವಾಗಿ ; ರಭಸವಾಗಿ : "ಬಿಮ್ಮನೆ ಗಮ್ಮನೆ ವಹಿಲಂ" (ಕಕುಜ. ೯೦); ಈ ಪರಿಯಂ ಕೇಳಿಪ್ಪುದುಂ ಪಡೆವಳರೆಲ್ಲರ್ ದಿಮ್ಮನೆಟ್ಟು ಬಿಮ್ಮನೈತಂದು (ರಾವಾಶ್ವ. ೦೩೬-೧); ಹೆಮ್ಮೆಯ ಮುಗಿಲಿಗೆ ಬಿರುಗಾಳಿಯಿದೋ ಬಿಮ್ಮನೆ ಬೀಸುವುದು ನೋಡಿ (ವರದಾ. I, ೪೯೩). ೨. ಬಲವಾಗಿ ; ಗಟ್ಟಿಯಾಗಿ ; ಬಿಗಿಯಾಗಿ : ಬಾಯಲ್ಲಿ ತುತ್ತನಿಕ್ಕಲೊಲ್ಲದೆ ಬಿಮ್ಮನೆ ಬಾಯುಂ ಮುಚ್ಚಿಕೊಳಲು (ರ್ಮ್ರವ್ಯಾ. ೧೦-೨೦೮). [ಬಿಮ್ಮು$_1$ + — ಅನೆ$_1$./ತುಳು. ಬಿಮ್ಮನೆ]

**ಬಿಮ್ಮನೆ$_2$** (ಅ). ೧. ಬಿಕೋ ಎನ್ನುವಂತೆ ; ಬಣಗುಟ್ಟುವಂತೆ : ಬಿಮ್ಮನೆಯಾಗಿ ಮದುವೆಗಳುಪಿದ ಮನೆಮುಂದದಿನಿರ್ದುದು (ಅತಿಪು. ೬ ೯೦). ೨. ಸುಮ್ಮನೆ ; ತೆಪ್ಪಗೆ : ಪ್ರಭುವು ಅವರ ಯಾವ ಮಾತುಕತೆಗಳಲ್ಲಿಯೂ ಭಾಗವಹಿಸಲಿಲ್ಲ. ಬಿಮ್ಮನೆ ಕುಳಿತನು (ಚಿಲ್ಲಹೂ. ೨೬).
[ಬಿಮ್ಮು$_2$ (<ಬಿಂ) + — ಅನೆ$_1$]

**ಬಿಮ್ಮಿಸು** (ಕ್ರಿ). ಅಹಂಕಾರಪಡು ; ಗರ್ವಿಸು : ಪೂವಸಿಚ ಪೂವಿಲ್ಲ ಮೊದಲಹ ಜೀವಿಗಳ್ಬಿಮ್ಮಿಸಿದೊಡಸದಳ ದೇವನಲ್ತೆ ಕೇಳ್ವುವಂ ಜಪಗೆಟ್ಟ ಮುಂಗಥೆಯ (ಪುರೇಪು. ೩-೨). [ಬಿಮ್ಮು$_1$ + — ಇಸು$_3$]

**ಬಿಮ್ಮು$_1$** (ನಾ). ೧. ದೊಡ್ಡತನ ; ಘನತೆ ; ಹಿರಿಮೆ : ಬಲ್ಲವರ ಬೆಸಗೊಂಡರೆ ಎನ್ನ ಬಿಮ್ಮು ಕೆಟ್ಟಹುದೆಂದು ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ (ಬಸವ. ೮೮೮); ಭಕುತಿಯ ಬಿಮ್ಮಿನಲಿ ಬೀಸಾಡಿದನು ಪದದಲಿ ಕಳೇವರವ (ಶಿಕಾಂಗ. ೯-೬-೪೦). ೨. ಗರ್ವ ; ಅಹಂಕಾರ : ನಗುವುದು ನುಡಿವುದು ಶಿವಭಕ್ತರೊಡನೆ ಸುಮ್ಮಾನ ಹಮ್ಮು ಬಿಮ್ಮಾಗಿರಲೇಕಯ್ಯ (ಬಸವ. ೨೪೨); ಬಿಮ್ಮು ಬೀಸರಹುದೆ ನಿಮ್ಮ ಸೊಮ್ಮಿನವರಿಗೆ (ಕುವ್ಯಾಬಿ. ೮-೩೩). ೩. ಬಿಗುಹು ; ಬಿಗಿತ : ಪ್ರಾರಬ್ಧಕರ್ಮದ ಬಿಮ್ಮು ತೀರಲು . . . ಸುಖಿಯುಹನು (ಅಮ್ಮಕ. ೬-೫೨) ; ಇತ್ತ ರವಿರಶ್ಮಿಗಳ ಬಿಮ್ಮು ಸಡಿಲುತ್ತಿರ್ದುದು ನೋಡಿ (ಕುರಂಗ. ೫೬-೦೮); ಈ ಪ್ರಸಂಗದಿಂದ ಹಿಂದಿನ ಹತ್ತಿಪ್ಪತ್ತು ದಿನಗಳ ಬಿಮ್ಮು ಒಮ್ಮೆಲೆ ಬಿಟ್ಟು ಬಯಲಾಯಿತು (ಕಾಳರಾ. ೦೦). 'ಬಿಮ್ಮಗೆ$_1$' ಪರಾ.
[ದೇ.॥ ತಮಿ. ವಿಮ್ಮು = ಭಾರ, ಹೊರೆ]

**ಬಿಮ್ಮು$_2$** 'ಬಿಂ' ನೋ.

**ಬಿಮ್ಮುಗಟಿ³** (ಕ್ರಿ). ಬಿಕೋ ಎನ್ನು ; ಬಣಗುಡು : ಪಾ[ಟ]

ದಾಟಿದ ಮುದ್ದಿನ ಬಿದ್ದಿನ ವಿಳಾಸಿನೀಜನದ ಬನದವಿಲ್ಲದೆ ಬಿಮ್ಮುಗಲಿ$^3$ ಯುತ್ತಿರ್ದವಿನಾಣೆಗಳ ಬಾಗಿಲ್ಕೆತ್ತಂತೆ ಬಿನ್ನನಾಗಿ (ವರ್ಧಮಾ. ೩-೯ ವ). [ಬಿಮ್ಮು$_2$(<ಬಿಂ) + ಕಡಿ$^3_1$]

**ಬಿಮ್ಮಗಿಡು** ' ಬಿಮ್ಮುಗೆಡು ' ನೋ.

**ಬಿಮ್ಮುಗೆಡು**, ಬಿಮ್ಮುಗಿಡು (ಕ್ರಿ). ಅಹಂಕಾರವಿಲ್ಲವಾಗು ; ಗರ್ವ ನಾಶವಾಗು : ಗರಳವಂ ಕೊರಳ ಹೊಜಗಿಟ್ಟುಕೊಂಡಾ ಹೆಮ್ಮೆ ಬಿಮ್ಮು ಗೆಡುತಿರೆ (ಸಿದ್ಧರಾ. ೩-೦೬); ನಿಮ್ಮ ಶರಣಂಬೊಕ್ಕೆವೆನುತಂ ಬಿಮ್ಮುಗೆಟ್ಟ ಪ್ಪಾಂಗದಿಂ ಪೊಡವಡುತ ಸಸು ಸಾರ್ದುದು (ಚಕಪು. ೩೬-೯೩). **ಬಿಮ್ಮುಗಿಡು** : ಪೊಣರ್ದರಿಳೆ ಕವುತಘಣಿರಾಜಾಳಿ ಬಿಮ್ಮುಗಿಡಲಲ್ಲಿ ಮುಟಿದುದು ಭಾಪು ಚತುರವೈಹಾಳಿ ಹರ್ಷದ ಛಡಾಳಿ (ಛವಕಂ. ೮-೧೨). [ಬಿಮ್ಮು$_1$+ಕೆಡು$_1$]

**ಬಿಮ್ಮೆನ್ನಿಸು** (ಕ್ರಿ). ಬಿಕೋ ಎನ್ನಿಸು ; ಬಣಗುಟ್ಟು : ಏನು ಸೊಗಸು ಈ ಶರತ್ಕಾಲ . . . ಇಪ್ಪಾದರೂ ಏಕೋ ಬಿಮ್ಮೆನ್ನಿಸುತ್ತದೆ (ಬಾಳ್ಗರು. ೪೨). [ಬಿಮ್ಮು$_2$ (<ಬಿಂ) + ಎನ್ನಿಸು (<ಎನಿಸು$_1$)

**ಬಿಯ**, ಬಿಯ್ಯ, ಬೀಯ್ಯ, ಬೆಯ, ಬ್ರಯ, ವೆಯ, ವ್ರಯ (ನಾ). ೧. ಖರ್ಚು ; ವೆಚ್ಚ ; ಪುಟ್ಟಿದಂದಿವಂಗಿದು ಬಿಯಮೊಳ್ಪಿವಂಗಿದು ವಿನೋದವಿಂವಂಗಿದು ಸಾವ ಪಾಂಗು (ಶಂಶಪಾ. ೦೨-೦೬೨); ಚಾರುದತ್ತಂ ಬಿಯಕ್ಕೆ ತಕ್ಕುದಂ ಬೇಡಿದನೆನೆ (ಜೀವಂಧ. ೯-೩೫ವ). 'ಉಪಬಿಯ' ಪರಾ. ೨. ದಾನ; ಕೊಡುಗೆ : ಬಿಯವುಮಂ ಪರಾಕ್ರಮಮುಮೊಪ್ಪಿರೆ ತನ್ನೊಡ ವುಟ್ಟಿದರ್ ಸಮಂತ್ರೊಡವರೆ ವಾರಣಾವತಮನೆಯ್ದಿದನವ್ಮನ ಗಂಧ ವಾರಣಾ (ಕಂಪಭಾ. ೨-೯೮); ಜನಕೆಲ್ಲಮಿಸಾವ ಸೂಸುವ ಕುಡುವೀಡಾಡುವ ವಸ್ತುಗಳಿಂದೆಡಲಿಸೋಡುವಿನಂ ಪಿರಿದನಿತ್ತು ಬಿಯಮಂ ಮೆಚ್ಚಿದರ್ (ಸುಕುಮಾ. ೦೦-೮೨). ೩. ಅಳಿವು ; ನಾಶ : ಹರಣದ ಬಿಯಕೊಂದಿನಿಸು ಮನೆನಿಸದ ದೊರೆಗಲಿಗಳ್ ಬಿನದಕೆ ನಡೆವಂದದಿ ಹರಿಸಂ ವಿಗೆ ನಡೆತಂದರ್ (ಜಮುಸಾ. ೬-೨೪). ೪. [ಗಣಿತ] ಭಾಗಿಸಿ ಉಳಿದ ಶೇಷ : ಧನಂ ತದವಾಪಂ ನಗಸಂಗುಣ ಫಣಿಹೃತಂ ಶೇಷಂ ಬಿಯಂ (ಲೋಕೋಪ. ೩-೨೦) ; ಧನವಂ ಎಟಜಿಂ ಗುಣಿಸಿ ಎಂಟಟಿಂ ಭಾಗಿಸಲ್ ಉಟಿದ ಶೇಷಂ ಬಿಯಂ (ಲೋಕೋಪ. ೩-೨೦ ಟೀಕೆ). **ಬಿಯ್ಯ** : ೩. ಮಾರಿಯ ಮನೆ ಬಿಯ್ಯದ ಕಣಜಂ ಮತ್ತಾ ರಾಜಕೃತಾಂತನ ಬಳಕೆಯ ಭಂಡಾರಂ . . . ತಾವೆನಲಾ ದಾರುಣತರಸಂಗ್ರಾಮಧರಾತಳಮತಿಭೀಕರಮಾಯ್ತು (ಜಮುಸಾ. ೬-೨೦). **ಬೀಯ್ಯ** : ೧. ಪಡದೊಡಮೆಯಂ ಮೂಱು ಭಾಗಂಗೆ ಯ್ದೊಂದು ಭಾಗಮಂ ಧರ್ಮಕ್ಕೆ ಮತ್ತೊಂದು ಭಾಗಮಂ ಮನೆಯ ಬೀಯಕ್ಕೆ . . .ಸಂವಿಭಾಗಂಗೆಯ್ದು (ಚಾವುಂಪು. ೨೦೬); ಆಯಕ್ಕೆ ಬೀಯ ಸರಿ ಮೇಲೆ ಭಂಡಾರಕ್ಕೆ ರಾಯರಿಕ್ಕಿದ ಕಪ್ಪ ತಾವುಪಾರ್ಜಿಸಿದರ್ಥ (ಶಿಶಿಶಿ. ೩೦-೯೦); ಆಯ ಬೀಯವವನವಳೊಡನಾಳೋಚಿಸಿ ಕೈಯಡಕದೊಳಿರಿಸುವುದು (ಹಂಂ. ೬-೬೨). ೨. ಬೀರಕೆ ಬೀಯಕ್ಕಜಿವ ಬೆಡಂಗನೊಳಾರ್ದೊರೆ ನೆಱೆ ತೋರ್ಕುವೆ ಶತ್ರುಜನಕಮರ್ಥಿಜನಕ್ಕಂ (ಗದಾಯು. ೦-೦೬) ; ಜನಕಂ ಬೀಯದ ಚಾಗದ ಪೆರ್ಮೆಯಂ ಮೆಚ್ಚುವುದಂ (ಶಂಶಪಾ. ೩-೦೯೦ ವ); ನಯದ ಬೀಯದ ಚಾಗದುಪಭೋಗದೆಸಕದೊಳಂ . . . ಅತಿ ಮನೋ ಹಾರಿಯಪ್ಪ ಸೂಚಿಗೇರಿಗಾಸನ್ನವಾದ ವಿಪಣಿವೀಧಿಯೊಳ್ (ಧರ್ಮಪ. ೨-೬೭ ವ). ೩. ಜೀವದ ಬೀಯಕಿವರಂಜಿದರು ನೆನೆದರು ಮನೆಯ ರಾಣಿಯರ (ಕುಮಾರಿ. ೮-೬೦) ; ವಾಯುಸೂತ್ರದಲಿಂದು ರವಿ ಚಕ್ರಾಯುಧಂಗಳು ತಿರುಗುತಿರ್ದೊಡೆ ಬೀಯವಹವವ ನಿಲಿಸಲರಿಯದ ಭವಿಗಳಾಯುಷ್ಯ (ಪ್ರಭುಲಿ. ೬-೬೨). ೫. ವೆಚ್ಚಕ್ಕೆ ಆಧಾರವಾದ ದ್ರವ್ಯ : ಧನ : ಪೊಂದರುತಿರೆ ಗಂಡಂ ಸಾಯೆಂದಡೆ ಬೀಯೆಂದು ಪೇಟಿಸ್ಕೊಡಂ ಮಾಡುವರಂತೊಂದು ದಿನ ಬೀಯ[ಶಾಸಂ. ವಿನಯ]ಮಿಲ್ಲದೊಡಂದಾ ಗಳ್ಮಾತುಗೇಳರ್ (ಸಮಚ. ೩-೦೦೦) ; ☞ ಈ ಶಬ್ದವು ' ಬೀ ' ಎಂಬ ಧಾತುವಿಗೆ ಸಂಬಂಧಪಟ್ಟಿರಬಹುದೇ ಎಂಬುದು ಪರಿಶೀಲನಾರ್ಹ ವಾಗಿದೆ. **ಬೆಯ** : ೧. ಇಂತೀ ದೇವದಾನವಸ್ಥಳಂಗಳ ಆಯಕ್ಕೆ ಬೆಯ ಸರಿ (ಎಕ III, ತಿರುಮ. ೯೬-೮೯ ; 1270). ೬. (?) ; ಭಟ್ಟಪುತ್ರರ್ ಸಾಸಿರ್ವರು ಒಲೆಯ ಅಯ್ನೂರ್ವರು ಬೆಯ ಮೂನೂರ್ವರುಂ . . . ಧರ್ಮನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ (ಎಕ. XVI. ತುಮುಕೂ. ೫೧-೯:೧೦:). **ಬ್ರಯ** : ೧. 'ಧರ್ಮಬ್ರಯ' ಪರಾ. ೭. (ಯಾವುದಾದರೂ ಖರ್ಚು, ವೆಚ್ಚಗಳಿಗಾಗಿ ವಸೂಲು ಮಾಡುತ್ತಿದ್ದ) ಒಂದು ಬಗೆಯ ತೆರಿಗೆ : 'ಮಳಬ್ರಯ' ಪರಾ. **ವೆಯ** : ೧. ನರನೊಂದು ವೆವಹಾರ ಕೆರಡಾಯವೆಯ ಲೆಕ್ಕ ಹೊರಗಣನುಭೋಗಕೊಂದೊಳನೀಶಿಗೊಂದು (ಶಂಕಸಾ. ೬೬೪). **ವ್ರಯ** : ೧. ಇನ್ನಿನಿತುಂ ನಿತ್ಯವ್ರಯವಾಗಿ ನಡೆವುದು (ಕೃಅಸ. ೩-೬-೪೦ ; 1088). ' ಧರ್ಮವ್ರಯ ' ಪರಾ.

[<ಸಂ. ವ್ಯಯ./ಪ್ರಾ. ವಯ, ವಿಅ]

**ಬಿಯಂಗೆಯ್**, ಬಿಯ್ಯಂಗೆಯ್, ಬೀಯಂಗೆಯ್ (ಕ್ರಿ). ೧. ವೆಚ್ಚ ಮಾಡು ; ಖರ್ಚುಮಾಡು : ತವದಾಯುಷ್ಯದ ಕುಂದದಂದದ ಬಿಯಂ ಗೆಯ್ದುಂ ಪವಣ್ಗೋಜದುದ್ಭವದೇ ನೋಂತನಿಪ್ಪ ರೂಪಿನ ಮನಂಗೊಂ ಡಿರ್ಪ ಲಾವಣ್ಯದೊಪ್ಪುವ ನೇಪಥ್ಯದವರ್ಕೆ ನಿಲ್ಲವನಿಮೇಂದ್ರಾದಿಗಳ್ಗಂ ದೊಡಾರ್ಗಿವು ನಿಲ್ಕುಂ (ಶಾಂತಿಪು. ೭-೬) ; ಸಿರಿಯಂ ತಕ್ಕಲ್ಲಿಗನ್ವಿತ್ತನ ತೆಱದೆ ಬಿಯಂಗೆಯ್ಕಲ್ (ಎಕ. III. ಮಂಡ್ಯ. ೦೨೨-೩೨ ; 1236). **ಬಿಯ್ಯಂಗೆಯ್** : ೧. ಪೂರ್ವೋಪಾರ್ಜಿತಪುಣ್ಯದಿಂ ಧನಂಬಡೆದ ಗೃಹಸ್ಥಂ ನಿರರ್ಥಕಂ ಬಿಯ್ಯಂಗೆಯ್ಯದೆ . . . ಸ್ವಸಮಯಿಗಳ್ಗೆ ಕೊಟ್ಟೊಡಕ್ಷಯದಾನಮಕ್ಕುಂ (ಕಶಾರ. ೩೨೨). **ಬೀಯಂಗೆಯ್** : ೧. ಬೇಟ್ಟರ್ಥವನಾರ್ಜಿಸಿ ಬೀಯಂಗೆಯ್ದು ಧನಮಿತ್ರನುಮಾನುಂ ಸುಖದಿನಿರೆ (ದಕಳು. ೬-೧೩೯ ವ). ೨. ದಾನ ಮಾಡು ; ಕೊಡುಗೆ ನೀಡು : ನಿಧಿಗಳೊಳಿರ್ದೊಡಮೆಯಂ ಬೀಯಂಗೆಯ್ದು . . . ಅಹಮಿಂದ್ರನಾದೊ (ಚಾವುಂಪು. ೨೭೯) ; ಪೇರಾನೆಗಳ ತೇರ್ಗಳ ವಂಗಡಮಂ ತಂಡತಂಡದಿಂ ಬೀಯಂಗೆಯ್ವರಸುಮಕ್ಕಳ ಮುಂದೋದಿ ಮೆಚ್ಚಂ ಕೊಳ್ವಕ್ಕರಿಗರಬ್ಬರ ದೊಳಂ (ಕಲ್ಯಾ. ೪೪) ; ಇನಿತಜನರತ್ನಮಂ ನಚ್ಚಿ ನಿಜಾಲಯದರ್ಥ ಮಲ್ಲಮಂ ಬೀಯಂಗೆಯ್ದನಸುಂ ದರಿದ್ರೆಯಾದಳ್ (ದಕಳು. ೬-೨೦೬).

[ಬಿಯ + ಕೆಯ್$_1$]

**ಬಿಯಕಾರ್ತಿ** (ನಾ). ಬೆಲೆವೆಣ್ಣು ; ಗಣಿಕೆ ; ವೇಶ್ಯೆ : ಕಣ್ಗೆಸೆದರ್ . . . ಲೀಲೆಯಿನಾಂತು ನಿಂದ ಬಿಯಕಾ[ಶಾಸಂ. ಗು]ರ್ತಿಯರಗ್ಗದ ಗಾಡಿ ಕಾರ್ತಿಯರ್ (ಪಾರ್ಶ್ವಪು. ೦೨-೯).

[ ಬಿಯಕಾಱ + – ತಿ$_1$ ( < – ಇತ್ತಿ ) ]

**ಬಿಯಕಾಱ**, ಬೀಯಕಾಱ (ನಾ). ಹೆಚ್ಚಾಗಿ ಖರ್ಚುಮಾಡುವವನು ; ದುಂದುಗಾರ : " ಬಿಯಕಾಱರ್ ವ್ಯಯಶೀಲರೊಳ್ " (ಕರ್ಣಾಟ. ೬೩) ; ನಯವಿದನೊಪ್ಪುವ ಬಿಯಕಾಱನೊಳ್ಪಿದ ಪ್ರಿಯಾತಮನಾಗೆ ತನ್ನ ಮುನ್ನೋಂತ ನೋಂಪಿಯ ಫಲವೆನೆ ಬೆಲೆವೆಣ್ಣ (ಸೂಕ್ತಿಸು. ೬-೩೯೯). **ಬೀಯಕಾಱ** : ಬೀಯಕಾಱನಂ ಬಿಟ್ಟು ಬೇಂಟಗಾಱನಂ ಕರವ ಸೂಳೆಯುಮಂ (ಧರ್ಮಾಮೃ. ೯-೩೦). [ಬಿಯ + – ಕಾಱ]

**ಬಿಯಗ$_1$** 'ಬೀಗ$_1$' ನೋ.

**ಬಿಯಗ$_2$**, ಬಿಯ್ಯಗ$_2$, ಬೀಗ$_2$, ಬೀಂಗ$_1$, ಬೀಯಗ$_2$ (ನಾ). ೧. ಮದುವೆ ಯಿಂದ ಪರಸ್ಪರ ಸಂಬಂಧವನ್ನು ಬೆಳೆಸಿದವನು ; ಅಳಿಯನ ಅಥವಾ ಸೊಸೆಯ ತಂದೆ : ಬ[ಶಾಸಂ. ಬೀ]ಗನನ್ನುಱಿಂ ತಟ್ಟಿಯಿಸಿ (ವರ್ಧಪು. ೩-೯೩ ವ) ; ಅಂತಹ ಶ್ರೀಮತಿಯನ್ನು ... ವೆಯಾಗಬೇಕಾದರೆ ಬಿಯಗರಿಗೆ ಸಮನೆನಿಸಿಕೊಳ್ಳುವಷ್ಟು . . . ಸೇಂಸಬೇಕು (ಕಂಳ. ೨). 'ಬಿಯಗತನ' ಪರಾ. **ಬಿಯ್ಯಗ$_2$** : ೧. ರುದ್ರದೇವ ಮಹಾದೇವ

ರಿಬ್ಬರೂ ಬಿಯ್ಯಗರಯ್ಯಾ ಒಬ್ಬರು ಹೆಣ್ಣಿನವರು ಒಬ್ಬರು ಗಂಡಿನವರು (ಸರ್ವಜ್ಞ. ೨೯-೧೩೯) ; ಬಿ[ಪಾಠಾಂ· ಬೀ]ಯ್ಯಗನಾದ ಜನಕನು ನಿಮಗೆ ಮತ್ತೇನು ಪಾಳೆಯವ ನೀನಿದಿರುಗೊಳ್ಳೆನೆ (ಕೌಶಿಕಾ. ೨-೩೩); ಏಚಲದೇವಿ ಬಿಯ್ಯಗನನ್ನು ಸಂತೋಷದಿಂದ ನೋಡುವುದಾಗಿ ಹೇಳಿ ಕಳುಹಿಸಿದಳು (ಸವತಿ. ೬೨). ಬೀಗ$_2$ : ೧. ನಿನ್ನ ಸತಿ ಸುತರ ಒಡಹುಟ್ಟಿದ ಬಂಧುಗಳು ಸ್ನೇಹಿತರು ಬೀಗರು . . . ಸಕಲರು ಅಳಿದು ಹೋಗುವದು ನೋಡುತ್ತಿದ್ದಿ (ವಚನ. I, ೨೪೯-೨೩); ಬೀಗರುಂಬುವ ದಿನದಿ ಯೋಗಿ ಭಿಕ್ಷಕೆ ಬರಲು ಬೀಗರಿಗೆ ನೀಡಿ ಯೋಗಿಗಿಲ್ಲೆಂದವಗೆ ಕಾಗೆಯು ಜನುಮ (ಸರ್ವಜ್ಞ· ೬೩೨) ; ಜೋಯಿಸರು ಹಾರಿ ಬಂದು ಬೀಗರ ಕಿವಿಯಲ್ಲಿ ಏನೋ ಪಿಸುಮಾತಾಡಿ . . . ಎಂದರು (ಹುಟ್ಟಿಹ. ೦೦). ಬೀಯ್ಯ$_2$ : ೨. ಭಾವಮೈದುನ : ನರನ ಬೀಯನೆ ಕೇಳು ವಿಜಯವಿಠ್ಠಲ ಇದಕ್ಕೆ ಕರುಣ ಮಾಡುವ ದೇವರ ದೇವನು ನೀನೆ (ಸುಳಾದಿ. ೬೩-೩). ಬೀಯಗ$_2$ : ೧. ಮಗನೆ ನೀಂ ಐಪ್ಪತ್ತಿ ದಿವಸದೊಳ್ಳೆದಾಖು ಸೂಳೆಂಡಲ್ಲದೆ ನಿಲಲಾಟಿ ಬೀಯ[ಪಾಠಾಂ. ಬಿಯ, ಬಿಯ್ಯ]ಗರ ಮನೆಯೊಳಿದಂ ಕಂಡೊಡೆ ಮರುಳಾಡುವರದಱಿಂ ಕಿಱಿದಾಗಿಯುಣ್ಬುದು (ಧರ್ಮಾಕ. ೯-೨೬ ವ) : ನೃಪಾಲ ಮದುವೆಯ ಮನೆಗೆ ರಾಯರ ಧಾಳಿ ಬಿದ್ದಿನವಾಯ್ತು ನಡೆ ಸಂತೈಸು ಬೀಯಗರ (ಕುವ್ಯಾ. ೦೩-೯೭); ತಾಯೊಂದೆಸೆ ಮಕ್ಕಳೊಂದೆಸೆ ಕೊಟ್ಟಹ ಬೀಯಗರೊಂದೆಸೆಯಾಗಿ . . . ಹೊಕ್ಕರಾಯಾಸಗೊಂಡು ಹೆಮ್ಮಲೆಯ (ಕಂಪಿಲ. ೦೦-೯೭). ೩. = ಬಿಯಗತನ : ಕನಕಪುರದ ಜಯಭೂಭುಜ . . . ನಿಮ್ಮೊಡೆಗೆ ಬೀಯಗವಾನೆ ತವಗಾದುದರಿಂದೆಮ್ಮನೊಯ್ಯಾರ ವಿಗೆ ಕಳುಹಿದನು (ನಾಗಕು. ೩-೯೩); ಹರಿಕುಲಪಾಲಕರು ಶೌರೀಪುರವ ಪರಿಪಾಲಿಪರು ನಮಗಲ್ಲಿ ಬೀಯಗವುಂಟು (ಜವಣ. ೩-೦೨).

ಬೀಗರೌತಣ = ಸಾಮಾನ್ಯವಾಗಿ ಮದುವೆಯ ಮಾರನೆಯ ದಿನ ವರನ ಕಡೆಯವರು ವಧುವಿನ ಕಡೆಯವರಿಗಾಗಿ ಏರ್ಪಡಿಸುವ ಔತಣ : ಬೀಗರೌತಣ ಬಹಳ ವಿಜೃಂಭಣೆಯಿಂದ ನಡೆಯಿತು (ಲೂ). ಬೀಯ ಬಿಜ್ಜರು = ಮದುವೆಯಿಂದ ಪರಸ್ಪರ ಸಂಬಂಧ ಬೆಳೆಸಿದವರು; ಬೀಗರು: ತಾಯಿ ಮಕ್ಕಳು ಸೊಸೆ ಒಂದೆಯಾದರೆ ಮದುವೆ ಬೀಯಬಿಜ್ಜರ ಗೋತ್ರಭೇದವ್ಯಾಕೊ (ಲಿಂಗಾಸು. ೩೯-೦). ☞ ಇದು ಒಂದು ಕೂಡುನುಡಿ. [ದೇ. ‖ ತುಳು. ಬೀಗೆ ; ತೆಲು. ವಿಯ್ಯ]

ಬಿಯಗತನ, ಬೀಗತನ, ಬೀಯಗತನ (ನಾ). ಮಕ್ಕಳ ಮದುವೆಯಿಂದ ಪರಸ್ಪರ ಉಂಟಾದ ಸಂಬಂಧ; ನಂಟಸ್ತಿಕೆ : ಪುಣ್ಯವಶದಿಂದಿನ ಕುಲೇಂದ್ರನ ಬಿಯಗತನವಿದು ನುತ್ಯಮೆನಿಪುದಲಾ (ರಾಮಾಶ್ವ. ೦-೯-೯೬). ಬೀಗತನ : ಬೀಗತನ ಮಾಡಿದ ಮೇಲೆ ಅವನ ಪರಿಚಯವಿಲ್ಲದ ಭಾಗವೇ ಇರಲಿಲ್ಲ ಆ ವಿಜಯನಗರದಲ್ಲಿ (ಹೇಮಾಕೂ. ೬೯), ಇಲ್ಲಿಯ ಮುಸ್ಲಿಂರು ಪಾಕಿಸ್ತಾನಿ ಮುಸಲ್ಮಾನರೊಡನೆ ಬೀಗತನ ಬೆಳೆಸುವುದು ಪರರಾಷ್ಟ್ರದೊಡನೆ ಸಂಬಂಧಮಾಡಿದಂತೆ (ಹುಕ್ಕ. ೦೬೨). ಬೀಯಗತನ : ಬೀಯಗತನದೆ ಆಳವಾಡಿದಿರಿ ಮತ್ಪಿತನಲಗೆರ್ಲಿಂದೆ ಭಾಳಾಕ್ಷ ತಪಗೆಟ್ಟನಱಿಯ (ಮೋಹತ. ೩೫-೯೩) : ಜನಕರ ಕಾಲದೊಳ್ನಡೆದ ಬೀಯಗತನ ತನುಜರೊಳ್ಕೆಡಬಾರದು (ಶಕಶ. ೩೬-೯೪). [ ಬಿಯಗ$_1$ + – ತನ ]

ಬಿಯದ ' ಬ್ಯಾದ ' ನೋ.

ಬಿಯದವೆಣ್ (ನಾ). ಬೇಡರ ಹೆಣ್ಣು ; ಶಬರಿ : ಬಾಳದ ಬೆಡಂಗಿನ ಬಿಯದವೆಣ್ಗಳೊಡನೆ ಸಂಭ್ರಮಾಡಂಬರಂ ಮಿಗೆ ಬಂದ ಗಿರಿತನೂಜೆವೆರಸು ಕಿರಾತಮಹೇಶ್ವರಂ . . . ನಡೆತಂದನ್ (ಕಬಕಂ. ೩-೨೦ ವ).

[ಬಿಯದ ( < ಬ್ಯಾದ) + ಪೆಣ್]

ಬಿಯದಿ$_1$ (ನಾ). = ಬಿಯದವೆಣ್ : ಬೆಳತಿಗೆಗಣ್ಣ ಬಲ್ಮೊಲೆಯ ತೊಳಪ ಗಲ್ಲದ ತೋರ ಪೊಱವಾಱ ಬಿಯದಿಯರೆಳಸಿ ನೋಡಿದರು ಭೂವರನ (ಶ್ರೀಕಾಂ. ೬-೩೦). [ಬಿಯದ ( < ಬ್ಯಾದ) + – ಇ$_2$]

ಬಿಯದಿ$_2$ ' ಬ್ಯಾದಿ ' ನೋ.

ಬಿಯಸ (ನಾ). ವ್ಯಾಸಮಹರ್ಷಿ : "ಬಿಯಸ – ವ್ಯಾಸ = ಒಬ್ಬ ಋಷಿ" (ಕನ್ನಕೋ. ೩೦) ; ಬಿಯಸಗೊಲಿದು ಸನತ್ಕುಮಾರನು ನಯದ ಗಸ್ತ್ಯೀಶಾದಿಲಿಂಗೋದಯವನಾ ಮಹಿಮೆಯನೊರೆಯಲು (ಶಾಪೀಟು. ೯೯ ಕಲ್ಪ೩). [< ಸಂ. ವ್ಯಾಸ]

ಬಿಯಸಂಗ (ನಾ). ಅಭ್ಯಾಸ ; ವ್ಯಾಸಂಗ : ವ್ಯಾಸಂಗ _ ಬಿಯಸಂಗ (ಕಶುದ. ೨೩೯ ಪ್ರಯೋ). [< ಸಂ. ವ್ಯಾಸಂಗ]

ಬಿಯಳ ' ಬ್ಯಾಲ ' ನೋ.

ಬಿಯಳಗಾವುಂಡ (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ ಶಾನ್ತಿಭಟ್ಟಾರರುಂ ಉತ್ತಮರಾಸಿಭಟ್ಟಾರರುಂ ಬಿಯಳಗಾವುಣ್ಡನುಂ (ಎಕ. XI, ಹೊಳಲ್ಕೆ. ೩೧-೧೧ ; 964 ).

[ಬಿಯಳ (< ಬ್ಯಾಲ) + ಗಾವುಂಡ (< ಗಾಮುಂಡ)]

ಬಿಯಳಚೋರ (ನಾ). ಒಬ್ಬಾತನ ಹೆಸರು : ಬಿಯಳಚೋರತನ × ತುಱುಗೊಳೊಳ್ . . . . ಸತ್ತ (ಎಕ. IX (೩), ಶಾಸಸಂ. ೦೩೦-೮ ; 900). [ಬಿಯಳ (<ಬ್ಯಾಲ) + ಚೋರ$_1$ ]

ಬಿಯಳಮ್ಮ (ನಾ). ಒಬ್ಬಾತನ ಹೆಸರು : ಕಿಱುಮುಣಾಸೆಯ ಬಿಯಳಮ್ಮನ × ಗ ಪಡೆವಳ್ಳ ಅರಿಗನು ಎಱೆಯಬ್ಬೆಯುಂ . . . ಅಬ್ಯನ್ತರಸಿದ್ಧಿ ಪಡೆದರ್ (ಎಕ. VIII, ಸೊರಬ. ೩೦೦-೩ ; 988).

[ಬಿಯಳ (<ಬ್ಯಾಲ) + ಅಮ್ಮ$_1$]

ಬಿಯಳಯ್ಯ (ನಾ). ಒಬ್ಬಾತನ ಹೆಸರು : ಬಿಯಳಯ್ಯ ಮಗ ಚಟ್ಟಯ್ಯನಳಿಯ ಕನ್ನಯ್ಯ (ಎಕ. VIII, ಸೊರಬ. ೯೩೩-೬ ; 972).

[ಬಿಯಳ (<ಬ್ಯಾಲ) + ಅಯ್ಯ$_1$]

ಬಿಯ್ಯ ' ಬಿಯ ' ನೋ.

ಬಿಯ್ಯಂಗೆಯ್ ' ಬಿಯಂಗೆಯ್ ' ನೋ.

ಬಿಯ್ಯಗ$_1$ ' ಬೀಗ$_1$ ' ನೋ.

ಬಿಯ್ಯಗ$_2$ ' ಬಿಯಗ$_2$ ' ನೋ.

ಬಿಯ್ಯದ ' ಬ್ಯಾದ ' ನೋ.

ಬಿರಂಜಿ (ನಾ). (ಅಕ್ಕಿಯಿಂದ ತಯಾರಿಸುವ) ಒಂದು ಬಗೆಯ ತಿನಿಸು : ಅಮ್ಮ ಬಿರಂಜೀ ಮಾಡತೀನಿ ಅಂತಿದ್ದಳು, ಕಳಿಸಿಕೊಡತೀನಿ. ಬಿರಂಜಿ ಅಂದರೇನು ಮತ್ತ ?. ಅನ್ನ . . . ಇದು ಬರಿ ಬೆಣ್ಣ್ಯಾಗ ಬೇಯತೈತಿ (ಕಾಂಂ. ೩೬). [←ಪಾರ. ಬಿರಿಂಜ್./ತೆಲು. ಬಿರಂಜಿ]

ಬಿರಟು ' ಬಿರಡೆ$_2$ ' ನೋ.

ಬಿರಟೆ ' ಬಿರಡೆ$_1$ ' ನೋ.

ಬಿರಡಿ ' ಬಿರಡೆ$_2$ ' ನೋ.

ಬಿರಡೆ$_1$, ಬಿರಟೆ, ಬಿರುಡೆ (ನಾ). ೧. (ಸೀಸೆ, ಮೊದಲಾದುವುಗಳಿಗೆ ಅಳವಡಿಸುವ) ಮುಚ್ಚಳ ; ತಿರುಪು ; ಬೂಚು (ಉಕ) : ಪದ್ಮಜಂ ಪದೆದಿಟ್ಟ ಪವಳದಂಕುರದ ಬಿರಡೆಗಳೊ ಲಾವಣ್ಯದ ಶಲಾಕೆಗಳ ತೆಱದ ಚರಣಾಂಗುಲಿಗಳೊಪ್ಪಿದುವವರೋಘದಿಂ ಶ್ರೀ ಪಾರ್ವತೀದೇವಿಯ (ಷಂದಕಾ. ೬-೦೦) ; ತೌಟಗೆಯ ಮೇಲೆ ನೀರು ತುಂಬಿದ ಗಾಜು ಬಿರಡೆಯ ಸೀಸೆಯೂ ಬೆಂಕಿಪೊಟ್ಟಣವೂ . . . ಇದ್ದುವು (ಕೃಷು. ೨೬೩). ೨. ವೀಣೆ, ತಂಬೂರಿಗಳ ತಂತಿಯನ್ನು ಬಿಗಿಗೊಳಿಸಲು ಅಳವಡಿಸಿರುವ ಸಾಧನ, – ಕೀಲು : ಬಿರಡೆಯನ್ನು ನುಲಿದು ಎಳೆತವನ್ನು ಹೆಚ್ಚಿಸಿದರೆ ಸ್ಥಾಯಿಯು ಏರುವುದು (ಶ್ರೀಕಲ. ೦೯೨) ; ಈ ವ್ಯಾಳೀತಲೆಗೆ ನಾಲ್ಕು ಬಿರಡೆಗಳಿವೆ (ಸಂಗೀಕಂ. ೦೦೨). ೩. ಅಂಗಿ ಮೊದಲಾದ ಉಡುಪಿನ

ಗುಂಡಿ : ಕೋಟನ ಬರಡೆಗಳನ್ನು ಬಿಚ್ಚಿ, ಬೆವರಿನಿಂದ ಒಣಗಿ ಹೋದ ಶರ್ಟ್ ಒಣಗುವುದಕ್ಕೆ ಅವಕಾಶ ಮಾಡಿಕೊಟ್ಟೆ (ಕಂದುಬಿ. ೬೩). **ಬರಟೆ:** ೧. ತೊಗಟೆಯಿಂದ ಬರಟೆ ತಯಾರಾಗುತ್ತದೆ (ಕಪಕೋ. I. ೬೬೦) ; ಅದರ ಬಾಯಿಗೆ ಬರಟೆಯಂತೆ ಇಡಬೇಕಾದ ಹತ್ತಿ ಎಲ್ಲವನ್ನೂ ಶುದ್ಧ ಪಡಿಸಿಕೊ (ಹೊಸಕ್ಕೆ. ೭) ; ಅಷ್ಟು ವಾಸನೆ ಸಹಿಸಲಾಗದಿದ್ದರೆ ಮೂಗಿಗೆ ಬರಟೆ ಹಾಕಿಕೊಳ್ಳಿ (ಹಸುಹೂ. ೦೬). **ಬರುಡೆ** : ೧. ಜಂತದಲಿ ಹೊಂಗರಡಿಗೆಗಡದು ಕರ್ವಣಿಯ ಬರುಡೆಯು ಬಿಗಿದಿಟ್ಟನೆಂಬಂತೆ ಬಲ್ಮೊಲೆ ಯೆರಡರ ಮೊಗವು ತೋಱುದುವು (ಪೋಹಚ. ೨೩-೨೩) ; ಕಲಧೌತಂಗಳ ಭರಣಿಗಳ ಬಾಯ್ಗಿರಿಸಿದಿಂದ್ರನೀಲದ ಮಣಿಯ ಬರುಡೆಗಳೊ ಪೇಳೆಸಲ್ ಸ್ತನಚೂಚುಕದ ಕಪ್ಪು ಕರಮೊಪ್ಪಲೊಪ್ಪಿದಳ್ (ಚಂಪು. ೯-೦೯). ೨. ನಖಿಗಳಿಂ ಬರುಡೆಯಂ ಪಿಡಿದಾಂಕಿಯೊಡರ್ಚೆ ಮೇಳವಂ (ಚಳಿ. ೬-೨೨೨). ೩. ಕತ್ತರಿಸಿತು ಬಾಸು ಬರುಡೆಯ ಶಕ್ತಿಗಳುತ್ತರಿಸಲು ಜೋಡು ಜರಿದು ಬಿತ್ತರಿಸಿದುವಾಂಬುಗಳು ಮೆಯ್ಯೊಳು ಬಿಸುನೆತ್ತರ ಬಸವಂತಗೊಳಿಸಿ (ಪೋಹಚ. ೩೬-೩೩) ; ಚಿನ್ನದ ಬರುಡೆಯ ನೇಜೆಯದಧಟರ ಸನ್ನಾಹದ ಜಹನಾರ (ಕಂಪಹಿ. ೨೩-೩೦).

[ದೇ.॥ ತಮಿ. ಪಿರಟ್ಟೈ ; ತೆಲು. ಬಿರಡ, ಬಿರಡಾ]

**ಬರಡೆ₂**, ಬಿರಟು, ಬರಡಿ (ನಾ). ಒಂದು ಬಗೆಯ ಸಸ್ಯ : ಹೆರಳೆ ಬಿರಡೆ ಬೇವು ಹಾಲೆ ತಳಿ . . . ಮೊದಲಾದ ಗಿಗಸವಂ ತುಡುಕುವ ವೃಕ್ಷಂಗಳ್ (ಶಾಗಂಂ. ೩೯-೩). **ಬರಟು** : ಬಿರಟು, ಸೀಸೆಬಿರಟುಮರ (ವೃ ಶಿ೧. ೩೯-೦೨೬೬) ; ಬಿರಟು, ಪಾದರು, ನೆಲವೆಂಬು (ಚಪ್ಪು. ೨೪೯). **ಬರಡಿ** : ಶಿಸ್ಸು, ಬಿರಡಿ, ಶಿಪ್ಪಭಾಗೆ, ಬಿಂಡಿ, ಇರಗುಂಡಿಮಾವು (ವೃ ಶಿ೧. ೨೩-೩೩೨).

[?]

**ಬರದ** (ನಾ.) ಒಂದು ವಂಶದ ಹೆಸರು : ಸಸ್ಸಿಗಾಲಾ ಪುಟ್ಟರುಂ ಬಳ್ಳ ವರುಂ ಪಸುಂಗಾಯ ಕಟುಸ್ತಾತರು ಬಿರದರುಂ (ಎಕ XVI. ಗುಬ್ಬಿ. ೬೩-೬೬ ; 733).

[?]

**ಬರಬರ** (ನಾ). ಒಂದು ಅನುಕರಣ ಶಬ್ದ : 'ಬಿರಬಿರನೆ' ಪರಾ.

**ಬರಬರನೆ** (ಅ). ವೇಗವಾಗಿ ; ಶೀಘ್ರವಾಗಿ : ಶರಧಿಯೊಳ್ ಬಿರಬಿರನೆ ಮಂದರ ತಿರುಗಲಾಗ ಧಳಂಧಳಧ್ವನಿ ಮೊರೆಯಲು (ಅಪಂಚ. ೧-೨೨-೯) ; ಪೋಗಬೇಕು ಅಂತ ಎರಡು ದಿನ ಹೊರಟರು. ನಾನೇ ತಡೆದೆ . . . ಎಂದು ಬಿರಬಿರನೆ ಹೇಳಿದಳು (ಪಂಕೋಚಂ. ೪೦). [ಬಿರಬಿರ + — ಅನೆ₁]

**ಬರಯ**, ಬಿರಹ (ನಾ). ಅಗಲಿಕೆ ; ವಿರಹ : "ಬಿರಯುಮನೆ ವಿರಹಮಕ್ಕುಂ" (ಕಶಿ. ೧೨೬). 'ಬಿರಯಿ' ಪರಾ. **ಬರಹ** : "ಬಿರಹಂ ಕೂಟದಗಲ್ಕೆಯುಲ್ಲಿ" (ಕರ್ಣಾಶಿ. ೬೬) : ಬಿರಹದ ಬೆಂಕಿಯಿಂ ಬೆಂದು ಕಡುಹುಂವಸಂಬೋದರಮರಿಯರ್ (ಕಂಪು. ೦೯-೯೩). [<ಸಂ. ವಿರಹ]

**ಬರಯಿ** (ನಾ). ಅಗಲಿಕೆಯನ್ನು ಹೊಂದಿದವನು ; ವಿಯೋಗ ಹೊಂದಿದವನು ; ವಿರಹಿ : "ವಿಯೋಗಿಯೊಳ್ ಬಿರಯಿಯೆನಲ್" (ಕರ್ಣಾಶಿ. ೯೩) ; ನಂದನಂಗಳೊಳ್ ಸುಟ್ಟ ಬಿರಯಿಯಿಂ ಕಂಪು ಕಣ್ಮಲಿಯೆ ಪೂತ ಸುರಯಿಯುಂ (ಚಂಪಚ. ೩-೨೨) ; ಮದನಾನಳನ ಕರ್ಪೂರಗೆಯಿದೆನಿಸಿ ಬಿರಯಿಗಳ ಕಣ್ಗೊಳು ಕಣ್ಪನಿಯನೊದವಿಸೆಯುಂ (ಪರ್ವ. ೬-೨೯ ವ) ; ಮಲ್ಲಿಗೆಗಳೇಂ ಬಿರಿದುವೋ ಬಿರಯಿಯೆರ್ದೆ ಬಿರಿವ ಮಾಳ್ಕೆಯಿಂದಾ ಬಸಂತದ ಮೊದಲೊಳು (ಕಂಪು. ೯೩-೦೬). [<ಸಂ. ವಿರಹಿನ್]

**ಬರಯಿಸು** (ಕ್ರಿ). ಅಗಲಿಕೆಯನ್ನು ಅನುಭವಿಸು ; ವಿರಹವನ್ನು ಹೊಂದು : ಬಿರಯಿಸಿ ಬೇಟದೊಳ್ ಬಿರಿವ ನಲ್ಲರಗಲ್ದು ಕನಲ್ದೊನಲ್ದು ನಲ್ಲರ ದೆಸೆಯಿಂದಮಟ್ಟಿವರೆ (ಚಂಪಚ. ೯-೦೨೦) ; ಕಮಳಪತ್ರಚಯ ಮೆನಿತನಿತುಂ ಕೊರಗುವಿನಂ ಬಿಸುಸುಯ್ದೆರ್ದೆಂ ಬಿರಯಿಸಿದುವೊ ಚಕ್ರವಾಕ ಮಿಥುನಮಮಿರುಳೊಳ್ (ಕಾವ್ಯಾ ಶ. ೮೩೯) ; ಬಿರ[ಪಾಠಾಂ. ರಿ]ಯಿಸಿ ಬೇಂಟದೊಳ್ ಮನಮದಾಟಿಸೆಯುಂ ಮನಮಿಾಯದಿರ್ದುಮಂತಿರದೆ ಬಲ್ಕೆಯುಮಾಖಳನ ಲಲ್ಲೆಗೆ ತಾನೊಳಗಾದಳ್ (ಪಾರ್ಶ್ವ. ೩-೧೦೦). [ಬಿರಯ+ —ಇಸು₁]

**ಬರವ** (ನಾ). (?) : ಭಂಡಾರಿಯ ಟಾವಿನ ಬಿರವದಲು ಭತ ಮೂ ೧೦ (ತಶಾಶಾ. ೦೯೩೦. ಮುಂಗಳೂರು. ೩೯೯-೩೦ ; 1353). [?]

**ಬರಸ** (ನಾ). ರಸಹೀನತೆ ; ಅಸುಖ : ಖರತೆ ಬಾಸಿಂಗ ಕಟ್ಟಿ ಸರಸದಲಿ ಮೆರೆಸಲು ಹರುಷದ ಸೊಬಗು ತೀಳದಡೆ ಅದು ತಾನು ಬಿರಸದ ದಡ್ಡಿಗೆ ಮರಳುವುದು (ಕಾವ್ಯೋಕ್ತ. ೬-೪೦-೩೦). [< ಸಂ. ವಿರಸ]

**ಬರಹ** 'ಬಿರಯು' ನೋ.

**ಬರಾಡ** 'ಬೀಡಾರ' ನೋ.

**ಬರಾಡಿಸು**, ವಿರಾಡಿಸು (ಕ್ರಿ). (ಭೂಮಿಯ ಮೇಲೆ) ಸುಂಕ ಹಾಕು ; ತೆರಿಗೆ ಹಾಕು : ಗದೆ ಸಹವಾಗಿ ಬಿರಾಡಿಸಿ ಗದೆಯ ಮೇಲೆ (ತಶಾಶಾ. ೦೯೩೯. ಶೃಂಗೇರಿ. ೦೩೬-೦೯ ; 1419). **ವಿರಾಡಿಸು** : ನಿವ್ಮ ದಸವಂದದ ಗದೆ ಸಹವಾಗಿ ವಿರಾಡಿಸಿ ಗದೆಯ ಮೇಲೆ ರೊಕ ಭತ್ತವನೂ ವರಿಯನಿಕಿ ಎತ್ತಿ ಕೆಜಿಯನು ಕಟಿಸುವೆಲು (ಎಕ. X. ಮುಳಬಾ. ೦೬೨-೦೯ ; 1496).

[ಬಿರಾಡ (< ಬೀಡಾರ) + — ಇಸು₁]

**ಬರಾಡು** 'ಬೀಡಾರ' ನೋ.

**ಬರಾದರಿ** (ನಾ). ಸೈನ್ಯದಲ್ಲಿ ಒಂದು ಭಾಗ ; ಒಂದು ನಿರ್ದಿಷ್ಟವಾದ ಸಂಖ್ಯೆಯಿರುವ ಕುದುರೆಯ ಸೇನೆ ; P "ಬಿರಾದರಿ—ಕುದುರೆ ಸೇನೆಯ ಒಂದು ಭಾಗ, ಸವಾರ ಕಚೇರಿ ಇಲಾಖೆಯಲ್ಲಿ ಬಿರಾದರಿಗೆ ಇರಬೇಕಾದ ಕುದುರೆ ಸಂಖ್ಯೆಯನ್ನು ಗೊತ್ತುಮಾಡಿದಾರೆ" (ಚಕ್ರಪಾ. ಅಮುಂರ. ೨) : ಖಾಸಾ ಬಿರಾದರಿ . . . ಖಾಸಾಬಾರು, ಕಂದಾಚಾರ ವಗೈರೆ ಜನರಿಗೆ ಸೇರಿಸಿಕೊಂಡು ನಿಂತರು (ಚಕ್ರಪಾ. ೬೩) ; ಪೇಶ್ವೆ ಶ್ರೀಮಂತ ಬಾಜೀರಾಯರನ್ನು ಕೈಸೆರೆ ಹಿಡಿದ ಬಿರಾದರಿಯಲ್ಲಿ ನಾನು ಸೇರಿದ್ದೆ (ಮುಮುಗ. ೦೬೬).

[←ಪಾರ. ಹಿಂ. ಮರಾ. ಬಿರಾದರೀ = ಬಂಧುವರ್ಗ ; ಬಳಗ]

**ಬರಿ₁** (ಕ್ರಿ). ಬಿರಿದ (ಭೂತಕೃ), ಬಿರಿದು (ಭೂತನ್ಯೂ). ೧. ಒಡೆ ; ಬಿರುಕುಂಟಾಗು ; ಹಿಸಿದು ಹೋಗು : "ಬಿರಿ — ಸ್ಫುಟನೇ" (ಶಮದ) ; ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್ ಬಿರಿದತ್ತು (ಆದಿಪು. ೦೩-೩೬); ಒತ್ತಂಬದಿಂ ಬರ಼್ ಕೆಮ್ಮಿಂ ಬಿರಿಯಲ್ಬೆಟ್ಟಂಗಳ್ (ಕಾಂಪು. ೦೬೩) : ಬೆಳೆದು ಬೀಗಿ ತವ್ಮಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿವೊನಲ ಪರಿಸೀರಾಗೆ (ಚಂಪಚ. ೦೦೬-೦೩). ೨. (ಹೂವು) ಅರಳು ; ವಿಕಾಸವಾಗು : ಬಿರಿದೊಂದು ಮೊಗ್ಗುಗಳ ಕಂಪಿನೊಳೆ ಮೊಗಂಗಿಡುವುವು ತುಂಬಿಗಳ್ (ಚಂಪಚ. ೦-೩೩) : ಅಂಗಜಾತನ ಪುಷ್ಪಶರ ಬಿರಿದಪುವೆಂದು ಹೊಂಗಟ್ಟುಗಳ ಬಿಗಿದಂತೆ . . . ಉಂಗುರಗಳನಿಕ್ಕಿದರು (ಶೀ.ಶಚ. ೨೩-೪೨). 'ನಸುವಿರಿ' ಪರಾ.

ಬಿಬ್ಬುರಿ ಬಿರಿ, ಬಿಬ್ಬರಂಬಿರಿ, ಬಿಬ್ಬರಬಿರಿ (ದ್ವಿರುಕ್ತಿ) : ಕರಿ ಮಕರಂಗಳ ಕಟ್ಯೋಱುನೊಳ್ ಬಿಬ್ಬುರಿ[ಪಾಠಾಂ. ಬಿಬ್ಬುರಿ, ಬಿಬ್ಬುರಿ]ಬಿರಿದೊಡೆದ ಮುಕ್ತಾಪುಟೋದರಂಗಳೊಳಗಣಿಂದಮುಚ್ಚಳಿಸಿದ ತಾರಾತರಳಮುಕ್ತಾಫಳಂಗಳುಮಂ (ಆದಿಪು. ೦೨-೬೯ ವ) ; ಬಿಸಿಲೊಳೆ ಬಿಬ್ಬರಂ ಬಿರಿವ ಮುಸ್ತಕ ಶುಕ್ತಿಕೆಯಿಂದೆ ಮುತ್ತು ಪುಟ್ಟಿದುದೆಸೆ ಕವಿತೇಂದೊಡಾಂತಿರುತೆ . . . ಪುಷ್ಕರವನೆತ್ತಿದುದಂದು ನಭಕ್ಕದೊಂದಿಭಂ (ಚಂಪ್ರ ಪು. ೯-೬೩) ; ಬಡಿಗೊಳೆ ಬಿದು ಬಿಬ್ಬರ ಬಿರಿದೊಡನುಗೆ ಪೊಸಮುತ್ತು ಕೋಡನೂಱ ಮದೇಭಂ ಕೆಡೆದುವು (ಚಂಪಚ. ೦೦-೦೦೩) ; ಉರುಮುವದಿಂದಂ ಬಿಬ್ಬರ ಬಿರಿಪಂತಿರೆ ಬಿರಿದುವಂದು ಮಲ್ಲಿಗೆ ವನದೊಳ್ (ಪೇಂಚು. ೦೩-೦೯). **ಬಿಬ್ಬುರಿವಲ್** = ಸಂದು ಬಿಟ್ಟರುವ ಹಲ್ಲು : ಪಱದಲೆ ಕುಟಿಳನೊಸಲಟಿಗಳ್ . . .

ಬಿಬ್ಬಿರಿ[ಪಾಠಾಂ. ರಿ]ವರ್ ಕುಸಿಗೊರಲ್ (ಹುಕೋತ. ೨-೩೮).

[ದೇ.॥ ತಮಿ. ವಿರಿ; ಮಲ. ತೆಲು. ವಿರಿಯುು; ತುಳು. ಬಿರಿ, ಬಿರಿಯುು]

**ಬಿರಿ$_2$** (ನಾ). ೧. ಬಿರುಕು : ಸೀಳು : ಮಣ್ಣಿನ ಬಿರಿ[ಪಾಠಾಂ. ರಿ]ಯು ತೆಱಂತೆ ಬಲ್ಲತನವಿಲ್ಲದವನ ಅನುಭಾವಕೂಟ ಕಲ್ಲಿನ ಹೋಟೆಯಂತೆ (ಗುತ್ತ ಹುಂ. ೪. ೨೦೭-೩೬). 'ಕೋಟೆವಿರಿ', 'ಬಿರಿವಡು' ಪರಾ. ೨. ತಡೆ; ನಿಯಂತ್ರಣ : ತಿಮ್ಮಪ್ಪಯ್ಯ ಒಮ್ಮೆ ಬಾಯಿ ತೆರೆದರೆಂದರೆ ಅದಕ್ಕೆ ಬಿರಿಯೇ ಇಲ್ಲ (ಸರಸ. ೪). ೩. ಕಠಿಣ ; ಕಷ್ಟ ; ಬಿಗಿ : ನಿಮಗೆ ಅದೇನು ಬಿರಿಯಲ್ಲ, ಆದರೆ ಅದನ್ನು ಒಪ್ಪುವುದೇ ಬಿರಿ (ಅರ್ಗಿ. ೦೦೦) ; ಒಬ್ಬರ ಮನಸ ಸಂಬಾಳಿಸೋದಂದರ ಭಾಳ ಬಿರೀ ಏತಿ (ಹಸರ್ಗ. ೦೭೩): ಸಂಸಾರವನ್ನು ಸರಿಯಾಗಿ ಮಾಡಿಕೊಂಡು ಹೋಗುವುದು ಅವನಿಗೆ ಬಿರಿಯಾಯಿತು (ಕರಿಂಹಾ. ೦೦). ೪. ಒಂದು ಬಗೆಯ ಆಯುಧ : ಹಾರೆ ಬಿರಿ ಕೊಜಡು ಪೆಟಲ ತಿರುಗಣೆ ಬೀಸುವಲೆ ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸಪ್ತಕ್ಷಿ. ೬-೨೮). ೫. ಚಲಿಸುತ್ತಿರುವ ಯಂತ್ರವನ್ನು ನಿಲ್ಲಿಸಲು ಅಥವಾ ಅದರ ವೇಗವನ್ನು ಕಡಮೆ ಮಾಡಿ ಮುಂದೆ ಬೇಕಾಗಿರುವಷ್ಟು ಹೊತ್ತು ನಿಶ್ಚಲವಾಗಿಟ್ಟಿರಲು ಬಳಸುವ ವೇಗನಿರೋಧಕಸಾಧನ ; ಬ್ರೇಕು : "ಚಕ್ರದ ಚಲನೆಯನ್ನು ತಡೆಯಲು ಉಪಯೋಗಿಸುವ ಸಲಕರಣೆ ; ಬಿರಿ : ತಡೆ" (Brake. ೨೦೪೩) ; ರೈಲುಬಂಡಿಗಳಲ್ಲಿನ ಪ್ರತಿಚಕ್ರಕ್ಕೂ ಬಿರಿ(brake)ಯನ್ನು ಒತ್ತಲು ಇವನ್ನೇ ಉಪಯೋಗಿಸುವರು (ಪಾಂಶ್ರ. I. ೦೭೭): ಕೆಲವು ಬಂಡಿಗಳಲ್ಲಿ ನಿರ್ವಾತ ಬಿರಿಗಳ ಬದಲಿಗೆ ವಾಯುಸಂಕೋಚನೆಯ ಬಿರಿಗಳಿವೆ (ಎಕ್ಸ್ಯ೬. ೫೦). ೬. ಅಗಳಿ ; ಚಿಲಕ : ಮನೆಬಾಗಿಲು ಮುಚ್ಚಿ ಬಿರಿ ಕಟ್ಟಿಬಿಟ್ಟು ಊರು ಮುಂದಕ್ಕೆ ಹೊರಟು ಹೋದನು (ಕಥಾಮಂ. IV. ೩೨). [ < ಬಿರಿ$_1$ ]

**ಬಿರಿ$_3$** 'ಬಿಱು$_2$' ನೋ.

**ಬಿರಿಕಂಡ** (ನಾ). ಸೀಳಿಹೋದ ಮಾಂಸ : ಸೇರ್ವಲ್ಲಿ ಕನ್ನೆತ್ತರುಂ ಬಿರಿಕಂಡಂಗಳೆ ಬೀಟಲ್ (ಹಂಸಹಾ. ೯-೭೩). [ ಬಿರಿ$_1$ + ಕಂಡ$_1$ ]

**ಬಿರಿಕಿ** 'ಬಿರಿಕಿ$_1$' ನೋ.

**ಬಿರಿಕು**, ಬಿರುಕು (ನಾ). ೧. ಒಡಕು ; ಸೀಳು : ಪುದಿದ ತನಿವಣ್ಣು ಬಿರಿಕಿಂದುದಿರ್ದತ್ತುಂ ರಾಸಿಯಾದ ಬಿಟ್ಟುಗಳಿಂ (ಚಸ್ತ್ರಕಾ. ೦೦೪). **ಬಿರುಕು** : ೧. ರಸದಾಳಿಂಬದ ಪಣ್ಣು ಬಿತ್ತು ಬಿರುಕಿಂ ತೋರ್ಪಂತೆ (ಸೂಕ್ತಿಸು. ೦೦ ೦೦೩) ; ಹೋಳಾದ ಕವಚವ ಹೊಲಿಸಿದರು ಬಾಹುರಕೆ ಸವಗದ ಬಿರುಕ ಬೆಸಸಿದರು (ಕುಮ್ಯಾ೦. ೫-೩೬). ೨. (ಆಲಂ) ವೈಮನಸ್ಯ ; ಮಾನಸಿಕ ಒಡಕು : ಪಂತಕುಟುಂಬದಲ್ಲಿ ಮೂಡಿದ ಬಿರುಕು, ಈ ಒಂದು ಸಣ್ಣ ಮಾತಿನಿಂದಾಗಿ ಊರು ತುಂಬ ಹರಡುವುದು ಬೇಡ (ಜೀಹಹ. II. ೯).

ಬಿರುಕು ಬಿಡು=೧. ಸೀಳಿಹೋಗು : ನೆಲ ಕಿತ್ತು ಹೋಗಿದೆ, ಗೋಡೆಗಳು ಬಿರುಕು ಬಿಟ್ಟಿವೆ (ಶಂಗಕ. ೦೦೦). ೨. (ಆಲಂ) ವೈಮನಸ್ಯ ಬರು : ಒಡಕುಂಟಾಗು : ತಪ್ಪುತಿಳುವಳಿಕೆಯಿಂದ ಆಪ್ತಸ್ನೇಹಿತರಿಬ್ಬರ ವಿಶ್ವಾಸದಲ್ಲಿ ಬಿರುಕುಬಿಟ್ಟಿತು (ಡೂ). [< ಬಿರಿ$_1$./ತುಳು. ಬಿರ್ಕ]

**ಬಿರಿಕುಂಟೆ** (ನಾ). ಬಂಡಿಯ ಓಟವನ್ನು ನಿಯಂತ್ರಣ ಮಾಡುವ ಸಾಧನ ; ಗಾಡಿಯ ಓಟವನ್ನು ನಿಯಂತ್ರಿಸುವ ತಡೆಮರ : ಇಳುಕಲಲಿ ಬಿರಿಕುಂಟೆಯೊತ್ತಿ ಮುಲುಕಿತು ಕುಲುಕಿ . . . ಮೂರುಕು ಬಂಡಿ (ತಂಡಮ. ೨೯-೦೦). [ ಬಿರಿ$_2$ + ಕುಂಟೆ$_4$ ]

**ಬಿರಿಗಲ್ಲು** 'ಬಿಜುಗಲ್' ನೋ.

**ಬಿರಿಗಳಿಕೆ** (ನಾ). ಅರಳುತ್ತಿರುವ ಮೊಗ್ಗು : ಕುರುವಕದಂಕುರಮನದಱ ಬಿರಿಗಳಿಕೆಯುಮಂ . . . ತಾವರೆಯೆಲೆವಟ್ಟಲ್ಗಳೊಳಮೊಟ್ಟಿ ಕಟ್ಟಿ (ಅಂಲಾವ. ೦೩-೩೬ ವ). [ಬಿರಿ$_1$ + ಕಳಿಕೆ$_1$ (=ಕಲಿಕೆ)]

**ಬಿರಿನನೆ** (ನಾ). ಅರಳುತ್ತಿರುವ ಮೊಗ್ಗು : ಬಿರಿನನೆ ನಾರು ಬೀರದೇ ? (ಗೀತಂ. ೨೬-೩೯). [ಬಿರಿ$_1$ + ನನೆ$_3$]

**ಬಿರಿಬಿರಿ** (ನಾ). ಒಂದು ಅನುಕರಣಶಬ್ದ : ದೂತರು ಬಿರಿಬಿರಿ ನೋಡುತ ಭರದೊಳು ಚಾಪದ ಸರಳಿನೊಳೂಗೆಯುತ ಹರಣವ ಕಳೆಯುತಲಿ (ಹಮಚ. ೦೭); ಆ ತರುಣ ಬಿರಿಬಿರಿ ನೋಡುತ್ತಲೇ ಇದ್ದಳು (ಹಕೋಟೀ೩. ೦೭೭) ; ಭುವನದ ಭಾಗ್ಯವು ಬಿರಿಬಿರಿ ಬಿರಿದಾಗ ಕವಿ ರಚಿಪನು ತನ್ನ ಕೃತಿಯ (ಇಂಚಾಕ. ೩೩-೦೬).

**ಬಿರಿಮುಗುಳ್**, ಬಿರಿಮುಗುಳು (ನಾ). ಅರಳುತ್ತಿರುವ ಮೊಗ್ಗು: ತಳಿರ ನಿಱಿದಳಿರ ಮುಗುಳ ಬಿರಿಮುಗುಳ ಮಿಡಿಯ ಕಱುಮಿಡಿಯ ಬಲ್ಮಿಡಿಗಳೊಳೞಿ (ಹಂಸಹಾ. ೫-೫ ವ) ; ಇರವಂತಿಯೊಳ್ ಮೆಱೆವ ಬಿರಿಮುಗುಳ್ಗಳಂ ಕೊಂಡು (ರಸಕ. ೩-೨೨) ; ಸುರಯಿಯ ಬಿರಿಮುಗುಳು ಮನದಱ ಪೂವುಮಂ . . . ತಾವರೆಯೆಲೆವಟ್ಟಲ್ಗಳೊಳಮೊಟ್ಟಿ ಕಟ್ಟಿ(ಅಂಲಾವ. ೦೩-೩೬ ವ) . **ಬಿರಿಮುಗುಳು** : ತಳಿತಿಹ ಬಿರಿಮುಗುಳನೀಕ್ಷಿಸುವ ಮಱಿದುಂಬಿಗಳ ಮೇಳವದ . . . ಪಕ್ಷಿಮೃಗಕುಲವೆರಸಿ ಮೆಱೆದವು ಬನದ ಸುತ್ತಲು (ಕುಮ್ಯಾ೬. ೩-೨); ನಸುನಗುವೊಲು ಬಿರಿಮುಗುಳ ಶೃಂಗಾರದ ಮಲ್ಲಿಗೆಯಿಹುವು (ಕಂಸವ. ೭-೫೦). [ಬಿರಿ$_1$ + ಮುಗುಳ್$_2$]

**ಬಿರಿಮುಗುಳು** 'ಬಿರಿಮುಗುಳ್' ನೋ.

**ಬಿರಿಮೊಗ್ಗೆ** (ನಾ). = ಬಿರಿಮುಗುಳ್ : ಚಂಪಕದ ಬಿರಿಮೊಗ್ಗೆಯ ತುದಿಗಮೃತದ ಘುಟಿಕೆಯನಿರಿಸಿದವೊಲು (ಹಯಶಾ. ೫-೪); ಸಾಂಗದಿಂ ಮೊಸಲಾಗಿರ್ದ ಬಿರಿಮೊಗ್ಗೆಯ ನವಿಂಗಳಿಂದರಿಯುದೆಯುತಿಸಾವದಾನದಿಂದ . . . ತಿರುವುತಲಿರ್ದರು (ಕವಮೋ. ೨೪-೩೬). [ಬಿರಿ$_1$ + ಮೊಗ್ಗೆ$_1$]

**ಬಿರಿಯಾನಿ**, ಬಿರ್ಯಾನಿ (ನಾ). ಮಾಂಸಮಿಶ್ರಿತವಾದ ಒಂದು ಬಗೆಯ ಕಲಸನ್ನ: ಕೋಳಿಮರಿಯ ಮಾಂಸ ಅಥವಾ ಸಿಗಡಿಮೀನುಗಳಿಂದಲೂ ಇದೇ ರೀತಿ ಬಿರಿಯಾನಿ ತಯಾರಿಸಬಹುದು (ಅಡುಸಾ. ೯೯). **ಬಿರ್ಯಾನಿ** : ಬಿರ್ಯಾನಿಯನ್ನು ತಯಾರಿಸುವ ವಿಧಾನವನ್ನು ಆ ಪುಸ್ತಕದಲ್ಲಿ ಹೇಳಿದೆ (ಡೂ). [ ← ಪಾರ. ಬಿರ್ಯಾನ್ = ಬೇಯಿಸಿದ ಅಥವಾ ಹುರಿದ ; ಹಿಂ. ಬಿರಿಯಾನೀ; ಮರಾ. ಬಿರಿಯಾಣೀ, ಬಿರ್ಯಾಣೀ]

**ಬಿರಿಯಿಕ್ಕು** (ಕ್ರಿ). ತಡೆ ಹಾಕು ; ನಿಯಂತ್ರಿಸು : ಪಂತಿಪಂತಿಯ ಪೊಂಜುಗಳ ಕೆಂಜೊಡರ್ವೆಳಗು ತನ್ನನೆಡ್ಡೆಸಯಿಂದಮಾಮಿಸುವಂತೆ ಪೊಲ್ ಬಿರಿಯಿಕ್ಕಿದನು ತನ್ನಂಘ್ರಿಶ್ರೀಘ್ರತೆಗೆ (ಶ್ರೀರಾಮಪಾ. ೬೦೭-೭೦). [ ಬಿರಿ$_2$ + ಇಕ್ಕು ]

**ಬಿರಿಯಿಸು**, ಬಿರಿಸು$_1$ (ಕ್ರಿ). ೧. ಸೀಳು ; ಹೋಳು ಮಾಡು : ಆಭೀಳನಿಸ್ಸಾಳನಾದಂ ನೆಱೆ ವಿಕ್ರಂಭೋಜಗರ್ಭಾಂಡಮನೆ ಬಿರಿ[ಪಾಠಾಂ. ರ]ಯಿಸುತ್ತಿರ್ಪಿನಂ ಬೇಗದಿಂ ತಾಂ ಪೊಱಮಟ್ಟಂ (ಕುಸುಮಾ. ೯-೯೨). ೨. ಅರಳಿಸು : ವಿಕಾಸಗೊಳಿಸು : ಸುರಯಿಯ ಬಿರಿಮುಗುಳೊಳು ರವದಳಿಪತಿ ಬಿರಿ[ಪಾಠಾಂ. ರ]ಯಿಸೆ (ಅರನೇ. ೬-೮). **ಬಿರಿಸು$_1$** : ೧. ವಿರಹಿಗಳೆದೆಯನು ಬಿರಿಸುವ ಮಳೆಮೋಡ ಗಗನದೊಳಿದ್ದಿದೆ ನೋಡ (ಇಂಕಾಕ. ೯-೯೦). ೨. ಕೇಳದೆ ಹೋದರು ತಾವರೆಹೂವನು ತಾನಾಗಿ ರವಿ ಬಿರಿಸುವನು (ಇಂಕಾಕ. ೦೦೬-೦೯). [ಬಿರಿ$_1$ + ಇಸು$_3$]

**ಬಿರಿಯೂರ್** (ನಾ). ಒಂದು ಊರಿನ ಹೆಸರು : ಮಹೇಸ್ವರಮ್ ಅಜಯುತ್ ಬಿರಿಯೂರ್ ಸುಜಿರ್ ಅನ್ಸತ್ರ ಸಾಮಿಯುರಕೇ (ಪ್ರಶಂ. ೦೯೨೦. ೦೦-೫೩; ೨೬೭). [ ? + ಊರ್ ]

**ಬಿರಿವಡು** (ಕ್ರಿ). ಬಿರುಕು ಬಿಡು ; ಸೀಳಿಹೋಗು : ಬೆಳೆದು ಬೇಗಿ ತಮ್ಮಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪಂಪೊನಲ ಪರಿನೀರಾಗೆ (ಹಂಸಹಂ. ೧೦೭-೦೫). [ಬಿರಿ$_2$+ಪಡು$_1$]

**ಬಿರಿವಣ್ಣು** (ನಾ). (ಚೆನ್ನಾಗಿ ಮಾಗಿ) ಸೀಳಿದ ಹಣ್ಣು ; ಬಿರಿದ ಹಣ್ಣು:

ಗಾಳಿಯೊಲಹಿಗೆ ನಿಲುಕುವವು ಹೊಂಬಾಳೆ ಖಚರೀಜನದ ಕಬರಿಗೆ ಬಾಳೆ ಬಾಯ್ದೆರೆಸುವವು ಬಿರಿವಣ್ಣಿನ ರಸಾವಳಿಗೆ (ಕೊರಕಾ. ೩-೩-೦೩).

[ ಬಿರಿ$_1$ + ಪಣ್ಣು$_2$ (<ಪಣ್$_3$) ]

**ಬಿರಿವಾಯಿತ** (ನಾ). (?) : ತಿಗಳಾಂಣ್ಯ ಮಂಗೞಾಣ್ಯದಲ್ಲಿ ನೆಟ್ಟ ಕಲ್ಲು ಬಿಟ್ಟ ಬಸವಿ ಆಚಾರ ವ್ಯವಹಾರಕ್ಕೆ ಪವಾಡಪುರುಷ ಬಿರಿವಾಯಿತನೆಂದು ಕೊಟ್ಟಂಥಾ ಧರ್ಮ (ಎಕ. XVI. ಗುಬ್ಬಿ. ೬೩-೩೬ ; ಸು. 1672). [?]

**ಬಿರಿವೂ** (ನಾ). ಅರಳಿದ ಹೂವು : ಬಿರಿವೂವಂ ನಗುವ ನಾಲ್ಕು ಮೊಗಮುಂ (ಕಬ್ಬಿಗ. ೨೯೩) ; ಕೊಸಗಿನ ಬಿರಿವೂವಂ ಕೈವಿಡಿದಂದದಿನೊರ್ವ ಕಲಾವಿದೆ ಪಿಡಿದು ವಿರಾಜಿಸಿದಳು ಚಿನ್ನದ ಕಾಳಂಜಿಯನು (ಜಯನೃ. ೨-೦೬).

[ ಬಿರಿ$_1$ + ಪೂ$_2$ ]

**ಬಿರಿವೊಡೆ** (ನಾ). ಒಡೆದ ಹೊಟ್ಟೆ ; ಸೀಳಿದ ಉದರ : ಗಜಮುಖನ ಬಿರಿವೊಡೆಯು ಪಾವಂ . . . ತನ್ನ ಬಸವನಂ ಇನ್ನಾನುಂ ಪಗೆಯಂ ಮುಟ್ಟಿತು ಸಂತಂ ಪುದುವಾಟ್ಟುದೆಂದು ಬುದ್ಧಿವೇಟಿಲೊಡಂ (ರಾಜಶೇ. ೪೨-೦೨).

[ ಬಿರಿ$_1$ + ಪೊಡೆ$_3$ ]

**ಬಿರಿಸು$_1$** 'ಬಿರಿಯಿಸಂ' ನೋ.

**ಬಿರಿಸು$_2$** 'ಬಿಱುಸು' ನೋ.

**ಬಿರಿಹೊಳ್ಳೆ** (ನಾ). ಅರಳಿದ ಮೂಗಿನ ಹೊಳ್ಳೆ : ಮುರುಟಿದ ಮುಸುಡಿನ ಹಳ್ಳದ ಮೂಗಿನ ಬಿರಿಹೊಳ್ಳೆಗಳ . . . ಮೃಗವಿದಿಗೋ ಗುಡ್ಡೆಯ ಕಣ್ಣುಗಳ ! (ಶ್ರೀರಸ. ೩೬). [ ಬಿರಿ$_1$ + ಹೊಳ್ಳೆ$_1$ ]

**ಬಿರು$_1$** 'ಬಿಱು$_2$' ನೋ.

**ಬಿರು$_2$** 'ಬಿಱು$_3$' ನೋ.

**ಬಿರುಕಿಸು** (ಕ್ರಿ). ಬಿರಿಯುವಂತೆ ಮಾಡು : ತೆರೆ [illegible] ಗ ಬಿರುಕಿಸಿದ್ದ ತುಟಿ ಇನ್ನೂ ಹಾಗೆಯೇ ಇದ್ದಂತೆ ತೋರಿತು (ಹೊರಪು. ೦೩)

[ ಬಿರುಕು (< ಬಿರಿಕು) +– ಇಸು$_3$ ]

**ಬಿರುಕು** 'ಬಿರಿಕು' ನೋ.

**ಬಿರುಗಡಲು** (ನಾ). ಕ್ಷೋಭೆಗೊಂಡ ಸಮುದ್ರ; ಪ್ರಕ್ಷುಬ್ಧವಾದ ಸಾಗರ : "ಭಾರಿ ಬಿರುಗಾಳಿ, ಚಂಡಮಾರುತ; ಬಿರುಗಡಲು" (Heavy-Storm, Sea. ಇಂಕ); ಬಿರಿದ ಕಮ್ಮಲರ್ಗಳಲಿ ಮುಗುಳುನಗುತಿಪನು ಬಿರುಗಡಲ ಸಿಲುಗನ್ನಡಿಯಲಿ ನಿರುಕಿಪನು (ಗೀತಂ. ೨-೯).

[ ಬಿರು$_2$ (<ಬಿಱು$_3$) + ಕಡಲು (<ಕಡಲ್$_2$) ]

**ಬಿರುಗಣ್ಣ** (ನಾ). (ಕೋಪದಿಂದ) ಕಣ್ಣನ್ನು ಉಗ್ರವಾಗಿ ತೆರೆದಿರುವವನು : ಲೇಖನಿ ಉದ್ದವಾಯಿತೆಂದು ಬಿರುಗಣ್ಣರಾಗಬೇಡಿರಿ (ತುಂಗಾಪು. ೯). [ ಬಿರುಗಣ್ಣು + _ ಅ$_7$ ]

**ಬಿರುಗಣ್ಣು** (ನಾ). (ಕೋಪದಿಂದ) ಉಗ್ರವಾದ ಕಣ್ಣು : ಗುರುತರ ದಪರಾಧವೆನ್ನಿಂದಲಾಯಿತೆ ಬಿರುಗಣ್ಣನೇತಕೆ ಬಿಡುವೆ (ಜಂಬಾಕ. ೮೪-೯) ; ಭೀಮಸೇನನು ಕೆಂಪಾದ ತನ್ನ ಕಣ್ಣುಗಳನ್ನು ಅರಳಿಸಿ ಬಿರುಗಣ್ಣಿನಿಂದ ನೋಡುತ್ತಾ ... ಪ್ರತಿಜ್ಞೆ ಮಾಡಿದನು (ವಚಕಾ. ೦೦೩) ; ಆನೆಯು ಮುಟ್ಟಲಿಲ್ಲ, ಬಿರುಗಣ್ಣಿನಿಂದ ನೋಡಲಾರಂಭಿಸಿತು (ಶ್ರೀರಾಯ. ೧೯).

[ ಬಿರು$_1$ (<ಬಿಱು$_2$) + ಕಣ್ಣು (<ಕಣ್) ]

**ಬಿರುಗತ್ತಲು** 'ಬಿಱುಗತ್ತಲೆ' ನೋ.

**ಬಿರುಗಯ್ಪು** (ನಾ). ಅಧಿಕವಾದ ಕಹಿಯ ಅನುಭವ : ಈ ನಿಮ್ಮ ಬಿರುಗಯ್ಪಿಯುಂ ಬೆಟ್ಟಬೇಗುದಿಯು ಜುಗುಪ್ಸೆಯುಂ . . . ಇಂದಿಗೆ ಹಿತವಾದುದಲ್ಲ (ಮಂತ್ರಕ. ೩೪-೦೩). [ ಬಿರು$_2$ (< ಬಿಱು$_3$) + ಕಯ್ಪು ]

**ಬಿರುಗಾರ್ಮುಳೆ** (ನಾ). ಕಾರ್ಗಾಲದ ಬಿರುಸಾದ ಮಳೆ : ಹೊರಗಡೆ ಹೊಯ್ಯುತಿದೆ ಬಿರುಗಾರ್ಮುಳೆ (ಅಗ್ನಿಹಂ. ೬೯).

[ಬಿರು$_2$ (<ಬಿಱು$_3$) + ಕಾರ್ಮುಳೆ (<ಕಾರ್ಮುಜೆ$^3$)]

**ಬಿರುಗಾವಲ್** (ನಾ). ಭದ್ರವಾದ ಪಹರೆ ; ಬಿಗಿಯಾದ ಕಾವಲು : ಅವರನ್ನೆಲ್ಲಾ ನಿರಾಯುಧರನ್ನಾಗಿಸಿ, ಬಿರುಗಾವಲನ್ನಿಡುತ್ತಿರುವರು (ಬಿರುಗಂ. ೨೩-೧). [ಬಿರು$_2$ (<ಬಿಱು$_3$) + ಕಾವಲ್$_1$]

**ಬಿರುಗಾಳಿ** 'ಬಿಱುಗಾಳಿ' ನೋ.

**ಬಿರುಗು** (ನಾ). (ಆಲಂ) ಬೆಪ್ಪ ; ಪೆದ್ದು : ಪೆದ್ದ : ಹಾಂಗೆಲ್ಲಾ ಹೇಳಬ್ಯಾಡೇ ! ಅಯ್ಯೋ ನನ್ನ ಬಿರುಗುಮಗಳೇ ! (ಪಾರಿಜ. ೮೩).

[< ಸಂ. ಭೃಗು]

**ಬಿರುಗುಟ್ಟು** 'ಬಿಱುಗುಟ್ಟು' ನೋ.

**ಬಿರುಗೂದಲು** (ನಾ). ಬಿರುಸಾದ ಕೂದಲು : ಒರಟುಕೂದಲು : ಇವುಗಳಲ್ಲಿ ಬಿರುಗೂದಲುಗಳಿದ್ದು ಚಲನೆಗೆ ಇವುಗಳಿಂದ ಸಹಾಯ ಒದಗಿದೆ (ಅಕಶೋ. I, ೦೯೩) : ಬಿರುಗೂದಲುರೂಪ – ಭಾಗಗಳು ಸಣ್ಣ. ದಪ್ಪ ಬುಡದಿಂದ ಕ್ರಮೇಣ ತುದಿ ಚೂಪು (ಕೀಟಟಿ. ೦೯).

[ಬಿರು$_2$ (< ಬಿಱು$_3$) + ಕೂದಲು (< ಕೂಂದಲ್)]

**ಬಿರುಜವ್ವನ** (ನಾ). ಕಠಿಣವಾದ ಕುಚ : ನಿನ್ನ ತುಂಬುವರಯದ ಗುಡದೋಳ್ಗಳ ತಳ್ತಪ್ಪುಗೆಯಲ್ಲಿ ಸನ್ನೀ ಬಿರುಜವ್ವನದ ಬಿಗಿಪಿನ ಅನಪ್ರುತೆಯ ಕರ್ಮಶಾಹಂಕಾರವನ್ನೊಡೆದು ಮಣ್ಮಳಿಗಿಳಿಹಿ ಬಾಗಿಸಿಕೊ ! (ಚಿಲ್ಮಂ. ೩೭-೩). [ಬಿರು$_2$ (<ಬಿಱು$_3$) + ಜವ್ವನ]

**ಬಿರುಡೆ** 'ಬಿರಡೆ$_1$' ನೋ.

**ಬಿರುದ** (ನಾ). ಗೌರವಸೂಚಕವಾದ ಪ್ರಶಸ್ತಿಯನ್ನು ಪಡೆದವನು ; ಬಿರುದು ಗಳಿಸಿದವನು : ಧನದರನ್ನರಿವರೆನಿಪ ಪರದರಿಂ ದೇವರನ್ನರಿವರೆನಿಪ ಬಿರುದರಿಂ (ಶಂಕರಾ. ೩-೨೨ ಕಗಳ) ; ಬಿರುದರ ಬಿಂಕಮಂ ಕಿಡಿಸಿ (ಎಕ. VII. ಶಿಕಾಂ. ೩೩೪-೦೩ ; ಸು. 1100) ; ಸುಗ್ಗಿಯನ್ನು ಬಲ ಸುಪ್ಪಾನ ಬೀತ್ತುದು ಬಿರುವರಿಗೆ ಕಾಲೂಱಿತಪಮಾನ (ಕುಮ್ಮಾಕ. ೩-೦೯). [ಬಿರುದು + –ಅ$_7$]

**ಬಿರುದಂಕ** (ನಾ). ೧. ಪ್ರಶಸ್ತಿಯಿಂದುಂಟಾಗುವ ಖ್ಯಾತಿ,– ಪ್ರಸಿದ್ಧಿ : ಬಿಂಕದ ಬಿರುದಂಕದ ವಿಡಾಯದ . . . ಪರಿಗೆಕಾಱರ ಮೊತ್ತದೊತ್ತಿನುಭಯಪಾರ್ಶ್ವದೊಳಿಂಬುಗೊಂಡು (ಹಮ್ಮಿರ. ೩-೩೩ವ). ೨. =ಬಿರುದ : ಬಿರುದಂಕದ [ರ]ಂತೆ ಪೋಗದೆ ಕಾದುವರ್ (ರವರ್ಮವ್ಮ. ೩-೬೩).

[ಬಿರುದು + ಅಂಕ$_2$]

**ಬಿರುದನಿ** 'ಬಿಱುದನಿ' ನೋ.

**ಬಿರುದಾಯತ** (ನಾ). ಪ್ರಸಿದ್ಧಿಯನ್ನು ಹೊಂದಿದವನು ; ಪ್ರಖ್ಯಾತನಾದವನು : ರಾಯ ಮೆಚ್ಚಿದ ಸಾರಥಿಯ ಬಿರುದಾಯತ [ನಾನಂ. ಕ]ನು ನೀನೆಂದು ಕೊಂಡಾಡಿದನು ಬಾಹುಕನ (ನಳಚ. ೬-೩೨).

[ಬಿರುದು + — ಆಯುತ$_3$ (< — ಆಯ್ತ)]

**ಬಿರುದಾವಲಿ, ಬಿರುದಾವಳಿ** (ನಾ). ೧. ಗೌರವಸೂಚಕವಾಗಿ ಕೊಡುವ ಪ್ರಶಸ್ತಿಗಳ ಸಮೂಹ : ಬಿರುದುಗಳ ಸಾಲು. ೨. (ಆಲಂ) ಅಡ್ಡ ಹೆಸರುಗಳ ಗುಂಪು : ಗುರುಗಳು ಕೊಟ್ಟ ಈ ಬಿರುದಾವಲಿಯಿಂದಲೇ ಒಬ್ಬರನ್ನೊಬ್ಬರು ಕೂಗಿ ಕರೆಯುತ್ತಿದ್ದರು (ಕಂಗಳೋ. ೨). **ಬಿರುದಾವಳಿ:** ೧. ಕಹಳಾಧ್ವನಿಗಳಿಂ ಬಿರುದಾವಳಿಯನೋದುತ (ಶಬ್ದರಾ. ೯-೦೦); ಮಲೆತ ಹಗೆವನ ಪಡಿಮುಖದ ಬಲುವಲಗೆಯಲಿ ಗದೆಯಿಂದ ರಾಯನ ಬಲುಹ ಬಿರುದಾವಳಿಯ ಬರೆವೆನು (ಕುಮ್ಮಾಗ. ೩-೫೩): ಬಿರುದಾವಳಿಯ ಪದ್ಯವ ನೋದಲಾಗಿ ... ಸಂತೋಷವಂ ಪಟ್ಟು (ತಕಾ. ೦) . [ಬಿರುದು + ಆವಲಿ]

**ಬಿರುದಾವಳಿ** 'ಬಿರುದಾವಲಿ' ನೋ.

**ಬಿರುದಿಕ್ಕು** (ಕ್ರಿ). (ಒಂದು ಉದ್ದೇಶಕ್ಕಾಗಿ) ಸವಾಲು ಹಾಕು ; ಸವಾಲು ಎಸೆ : ಧರಣಿಪಕುಲೋತ್ತುಂಗಚೋಳರಾಯಂ ತನ್ನ ಪುರಕೆ ರೋಗದ ಮೇಲೆ ಬಿರುದಿಕ್ಕಿ ಜಂಗಮಂ ಭರದೆ ಕುಷ್ಠವ್ಯಾಧಿಯಿಂ ಬರಲ್ ಕಂಡು (ಕಂಚು. ೩೩-೩೨). [ಬಿರುದು + ಇಕ್ಕು]

**ಬಿರುದು** (ನಾ). ೧. ಗೌರವಸೂಚಕವಾಗಿ ಕೊಡುವ ಹೆಸರು,— ಪ್ರಶಸ್ತಿ : ಕುಡೆ ಪಡೆದಂ ಪಶ್ಯವಾಣೀ ಕವಿಚಕ್ರವರ್ತಿಬಿರುದಂ ಬಾಣಾಂ (ಪಂಪಶಂ. ೪-೬); ಜಗಭಂಡರಿವರಿಗೆ ಮತ್ತೆ ಬಿರುದುಗಳೆ (ಕುಮ್ಮಾರರಾ. ೧೦-೯೩); ಭಕ್ತವತ್ಸಲನೆಂಬ ಬಿರುದ ಪೊತ್ತಾ ಮೇಲೆ ಭಕ್ತರಾಧೀನನಾಗಿರಬೇಡವೆ (ತಿರಂಶ. ೦-೯೩-೩). ೨. ಪ್ರಶಸ್ತಿಯ ಸೂಚಕವಾದ ಅಲಂಕಾರ ಸಾಧನ : ಹೇಡಿ ಬಿರುದ ಕಟ್ಟಿದಂತಾಯಿತ್ತೆನ್ನ ವೇಷ (ಬಸವ. ೩೭೦); ಬಿರುದಿನ ಪೊಂಬಾವಡೆ ಸಡಕಿನ ಫಲ್ಲಿ ಕೊರಳ ಮುತ್ತಿನ ಜೂಳಿಯುದ . . . ಹಯ ಖುರವೆತ್ತಿ ಕುಣಿಯುತ್ತೈದಿದುವು (ಕಂಪಂ. ೦೩-೦೪). ೩. ಪ್ರಖ್ಯಾತಿ; ಪ್ರಸಿದ್ಧಿ : 'ಬಿರುದಾಯತ' ಪರಾ. ೪. ಸ್ಪರ್ಧೆಗೆ ನೀಡುವ ಆಹ್ವಾನ; ಸವಾಲು : 'ಬಿರುದಿಕ್ಕು' ಪರಾ.

**ಬಿರುದಂತೆಂಬರ ಗಂಡ** = ಪ್ರಶಸ್ತಿಯನ್ನು ಗಳಿಸಿದ ವೀರರನ್ನು ನಿಗ್ರಹಿಸಬಲ್ಲ ವೀರ; ಒಂದು ಬಿರುದು : ಬಿರುದಂತೆಂಬರ ಗಂಡ ಭೀಮಪರಾಕ್ರಮಿ ಧುರಧೀರನೇಕಾಂಗವೀರ (ಕಂಪಶ. ೦-೨೦) ; ಸಕಲಕಲಾ ಪ್ರವೀಣ ಬಿರುದಂತೆಂಬರ ಗಂಡಂ (ಶಳಿ. ೦-೯೭ ಪ); ಬಿರುದಂತೆಂಬರ ಗಂಡ ಎಂಬ ಮಹಾಬಿರುದು ಶ್ರೀಮನ್ಮಹೀಶೂರಮಹಾರಾಜವಂಶಕ್ಕಲ್ಲದೆ ಇತರರಿಗೆ ಸಲ್ಲುವುದಿಲ್ಲ (ಅರುಗಂ. ೨೦-೦೨). **ಬಿರುದಗುರ್ವ** = ತಾನು ಗಳಿಸಿದ ಪ್ರಶಸ್ತಿಗಳಿಂದ ವೈರಿಜನಕ್ಕೆ ಭಯಂಕರಸ್ವರೂಪನಾದವನು : ವೈರಿಮದಭಂಜನಂ ಬಿರುದಗುರ್ವ್ವನುಂ (ಕ್ಶಾಇ. XX. ೪೦-೨೨; 1069). **ಬಿರುದನಿಕ್ಕು** = ಬಿರುದಿಕ್ಕು : ಸುರಪುರದ ಸೂಳೆಯರ ಸೊಬಗಿಗೆ ಬಿರುದನಿಕ್ಕುವ . . . ನವ್ಯಯವ್ವನಭರದ ವನಿತೆಯರೊಪ್ಪಿದರು (ಕೊರರಾ. ೦-೩-೨೭) ; ಬಿರುದನಿಕ್ಕುವನಿನ್ನು ದಶಕಂಧರಗೆ ಕೈ ಮಾಡದ ನಿಶಾಟರನರವೆ ನೆಂದುಬ್ಬರದ ಹರುಷವ ತಾಳ್ದನಾ ಹನುಮ (ಕೊರರಾ. ೩-೩-೨೭). **ಬಿರುದ ಭಂಗಾಜಿ** = ಪ್ರಶಸ್ತಿಗಳನ್ನು ಹೊಂದಿದವರಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ತ್ಯಾಗವಿನೋದಂ ಮಂಜು[ಡಿ]ಯ ಮಣ್ಡಳಿಕ ಬಿರುದ ಭಂಗಾಜಿಂ (ಕ್ಶಾಇ. XI-i, ೯೭-೭ ; 1062). **ಬಿರುದ ರಂಕುಸ** = ಪ್ರಶಸ್ತಿಗಳನ್ನು ಗಳಿಸಿಕೊಂಡವರಿಗೆ ಅಂಕುಶದಂತಿರುವವನು ; ಒಂದು ಬಿರುದು : ಮಾವನ ಬಣ್ಣ ಬಿರುದರಂಕುಸ ಬಣ್ಣರ ಭೀಮ (ಎಕ. VI, ಶಕ್ಕರು. ೬೦-೦೦ ; 1058 ?) ; ಪರಚಕ್ರಸಾಧನ ಬಿರುದರಂಕುಸಂ (ಕ್ಶಾಇ. XI-i, ೯೭-೦೦ ; 1062). **ಬಿರುದರ ಸಿಂಗ** = ಪ್ರಶಸ್ತಿಯನ್ನು ಗಳಿಸಿದವರಿಗೆ ಸಿಂಹದಂತಿರುವವನು ; ಒಂದು ಬಿರುದು : ಬಿರುದರ ಸಿಂಗಂ ಸಾಮನ್ತಭುಜಂಗಂ (ಕ್ಶಾಇ. XI-i, ೬೪-೦೦ ; 1041). **ಬಿರುದರಾದಿತ್ಯ** = ಪ್ರಶಸ್ತಿಯನ್ನು ಗಳಿಸಿದವರಿಗೆ ಸೂರ್ಯನಂತಿರುವವನು ; ಒಂದು ಬಿರುದು : ಕಲಿಗಳ ಮೊಗದ ಕಯಿ ಬಿರುದರಾದಿತ್ಯಂ (ಎಕ. VII, ಶಿಕಾ. ೦೨೦-೯ ; 1048). **ಬಿರುದರೂವಾರಿ** = ಕೀರ್ತಿಯನ್ನು ಪಡೆದ ಶಿಲ್ಪಿ ; ಒಂದು ಬಿರುದು : ದಾಸೋಜನಿಗೆ 'ಬಿರುದ ರೂವಾರಿ ಗೋದಲ ಬಡಿವ' ಎಂದೂ . . . ಬಿರುದುಗಳಿತ್ತೆಂದು ಶಾಸನಗಳಿಂದ ನಮಗೆ ಗೊತ್ತಾಗಿದೆ (ಹಾಕಶ. ೩೦೩). **ಬಿರುದಿನಂಕ** = ಬಿರುದಂಕ ೧: ಎಡೆಯಿಂ ಕೋಲೊಡ್ಡಿದ [ಹಾಕಾಂ. ಕೋಲಾಡಿದ, ತೋಲಾಡಿದ]ಬಿರುದಿನಂಕದಂತಿರೆ ಖಚರಂ (ಅಜಿ. ೩-೬೪) ; ಭುವನಕ್ಕಾರಾಧ್ಯನೆಂಬೀ ನೆಗಟ್ದ ಬಿರುದಿನಂಕಕ್ಕೆ ತಕ್ಕಂದದಿಂ . . . ಬಿಲ್ಲೊಳವಂ ಗಾಂಡೀವಿಯೊಳ್ಕಾದಿದಂ (ಗದಾಯು. ೬-೫೦); ಅದಿರದೆ ಪೆಜಿತೆಗೆಯದೆ ಬೆಟ್ಟದೆ ಬೆದಱದೆ . . . ಕೋಲೊಡ್ಡಿದ ಬಿರುದಿನಂಕದಂದದಿನದೇಂ ಪರಿಚ್ಛೇದಮಾತನೊಳ್ ಕೂಡಿದುದೋ (ಕುಸುಮಾ. ೦೨-೬). **ಬಿರುದಿನ ತೊಡರ್** = ಬಿರುದಿನ ಸಂಕೇತವಾದ ಕಾಲಿನ ಬಳೆ ; ಬಿರುದಿನ ತೊಡರ್ ಝಣಝಣಿಸಲೇಳ್ದು (ರಾಜಶೇ.೬-೦೦ ಪ). **ಬಿರುದಿಯೋಲೆ** = ಪ್ರಶಸ್ತಿಸೂಚಕವಾದ ಪತ್ರ : ತನ್ನ ಬಿರುದಿನೋಲೆಗಂಜಿ ಜಾಯಿಲುಗಳ ನನ್ನೊಡೆಯನ ಕೇಳದಾನು ತನ್ನವರೊಡನಟ್ಟುವಣ ಗಡಮಿಾ ಕಜ್ಜಕಿನ್ನೆಣೆಯಿಲ್ಲ ಭೂಮಿಯಲಿ (ಕ.ರಾಸಾಂ. ೦೦-೦೦). **ಬಿರುದುಧ್ವಜ** = ಪ್ರಶಸ್ತಿಸೂಚಕವಾದ ಬಾವುಟ ; ಲಾಂಛನದ ಧ್ವಜ : ಕೆಲವು ಭದ್ರ ಗಜಗಳು ಬಿರುದುಧ್ವಜಗಳನ್ನು ಮುರಿದು ತಿರುಗುತ್ತಿದ್ದುವು (ಕೃಪಾಂ. ೬೪). **ಬಿರುದುಪಾಡು, ಬಿರುದ ಪಾಡು** = ಪ್ರಶಂಸೆಯ ಕೀರ್ತನೆ ; ಗುಣಗಾನ : ಬಿರುದುಪಾಡಿನ ಜೋಳಿಗಲಹದ ಕದಡುಜೂಜಿನ ತೂಳುವಲರೊಳ ತೋಟಿ ಮಸಗಿತು ದಿವಸದಿವಸದಲಿ (ಕುಮ್ಮಾ. ೯-೦) ; ಪ್ರತಿಗರುಡಿಕಾಜಿ ಬಿರುದ[ಪಾಕಾಂ. ರಿದ, ರುದಿನ]ಪಾಡಿಂಗೆ ಒದಗಲು ವೀರಪಟ್ಟಿಯ ಕಟ್ಟಿ ತಿಗುರನೇಜಾಸಿಕೊಂಬೆ (ಬಸವ. ೭೦೦). **ಬಿರುದುಪೆಂಡೆಯ** = ಬಿರುದಿನ ತೊಡರ್ : ಬಿರುದುಪೆಂಡೆಯ ಕಾಲೊಳಿಟ್ಟು ಪೊಗಳಿಸಿಕೊಂಬ ಧುರಧೀರ ಮಾಮತಿಗರು . . . ಇರ್ದರವನೀಶನೋಲಗದೊಳು (ತಂಪ. ೬-೦೩). **ಬಿರುದುಬಾವಲಿ** = ಪ್ರಶಸ್ತಿಸೂಚಕವಾದ ವಸ್ತ್ರವಿಶೇಷ : ಬಿರುದು ಬಾವಲಿ ಹೆಚ್ಚೆ ? ಹೆಸರು ಹೊಗಳಿಕೆ ಹೆಚ್ಚೆ ? (ಕೋಗಿರ. ೯೩-೩); ಪೋಲೀಸ್ ಅಧಿಕಾರಿ . . . ಎದೆಯ ಮೇಲೆ ಬಿರುದುಬಾವಲಿಗಳನ್ನು ಧರಿಸಿದ್ದ ಹಳ್ಳಿಯ ಹೆಗ್ಗಡೆ—ಇವರೆಲ್ಲ ಅವನ ಬಳಿ ನಿಂತಿದ್ದರು (ಕೃಪರು. ೬೪) ; ಈ ರಾಜಾಸ್ಥಾನದಲ್ಲಿ ಬಿರುದುಬಾವಲಿಗಳನ್ನು ನೀವೇ ಹಂಚುವಿರಂತೆ (ಹುಯಿಾ. ೩೨). 'ಬಾವುಲಿ$_2$' ಪರಾ. P ಇದು ದ್ವಿರುಕ್ತಿಯಂತಿರುವ ಒಂದು ದ್ವಂದ್ವಪದ.

[ದೇ.॥ ತಮಿ. ಮಲ. ವಿರುತು ; ತುಳು. ಬಿರುದು, ಬರ್ದ್ ; ತೆಲು. ಬಿರುದು, ಬಿರುದ./ಸಂ. ವಿರುದ]

**ಬಿರುದುಗೆದಱು** (ಕ್ರಿ). (ತನ್ನ) ಪ್ರಶಸ್ತಿಯನ್ನು ಹೇಳಿಕೊಳ್ಳು ; ಹಿರಿಮೆಯನ್ನು ಮೆರೆ : ಇದಿರಾಂತು ಸುರಗಿಯೊಳಹಮಿನದಟರು ಬಿರುದುಗೆದಱುತ್ತಹಿತರಿಜಾಡಿದರು (ಕುಮ್ಮಾಂ. ೯-೨೦).

[ಬಿರುದು + ಕೆದಱು$_1$ (<ಕೆದಜ್$_1$)]

**ಬಿರುನಗೆ** 'ಬಿಱುನಗೆ' ನೋ.

**ಬಿರುನುಡಿ** 'ಬಿಱುನುಡಿ' ನೋ.

**ಬಿರುನೆಲ** (ನಾ). ಒರಟಾದ ಭೂಮಿ ; ಬಿರುಸಾದ ನೆಲ : ಬಿರುನೆಲವನ್ನು ಎಂದೂ ಮೆಟ್ಟದಿದ್ದ ಅವನ ಕಾಲುಗಳಲ್ಲಿ ನೆತ್ತರು ಹನಿಯುತ್ತಿತ್ತು (ಹಿಮಾಕೂ. ೩೯). [ಬಿರು$_3$ (<ಬಿಱು$_3$)+ ನೆಲ]

**ಬಿರುನೋಟ** 'ಬಿಱುನೋಟ' ನೋ.

**ಬಿರುಬ** 'ಬಿಱುಬ' ನೋ.

**ಬಿರುಬಸಿಲ್** 'ಬಿಱುಬಿಸಿಲ್' ನೋ.

**ಬಿರುಬಸಿಲು** 'ಬಿಱುಬಿಸಿಲ್' ನೋ.

**ಬಿರುಬು** 'ಬಿಱುಬು' ನೋ.

**ಬಿರುಮಳೆ** 'ಬಿಱುಮಳೆ' ನೋ.

**ಬಿರುಮಾತು** 'ಬಿಱುಮಾತು' ನೋ.

**ಬಿರುವರಿ** 'ಬಿಱುವರಿ$_2$' ನೋ.

**ಬಿರುವಳೆ** 'ಬಿಱುವಳೆ' ನೋ.

**ಬಿರುವುರಿ** (ನಾ). ತೀವ್ರವಾದ ಜ್ವಾಲೆ ; ತೀಕ್ಷ್ಣವಾದ ಉರಿ : ಕಂಪಿಸಿತು ರೌಪ್ಯಗಿರಿ ; ಸುಗಿದರಮರರ್ ಬೆದರಿ ಬಿರುವುರಿಗೆ ! (ಕಪ್ರಾಂಗ. ೮೩-೨೨೯೯).

[ಬಿರು$_3$ (<ಬಿಱು$_3$)+ಉರಿ$_2$]

**ಬಿರುವೆಲರ್** 'ಬಿಱುವೆಲರ್' ನೋ.

**ಬಿರುವೆಲರು** 'ಬಿಱುವೆಲರ್' ನೋ.

**ಬಿರುವೇಸಗೆ** (ನಾ). ತೀಕ್ಷ್ಣವಾದ ಬೇಸಗೆಯ ಕಾಲ : ದವದ ದಳ್ಳುರಿ ದಹಿಸೆ ಬಿರುವೇಸಗೆಯ ಮಲೆಯ ನೀರಸಾರಣ್ಯಮಂ (ಶ್ರೀರಾಮಾ. ೯೩-೪೨೩).

[ಬಿರು$_3$ (<ಬಿಱು$_3$)+ಬೇಸಗೆ]

**ಬಿರುಸರ** 'ಬಿಱುಸರ' ನೋ.

**ಬಿರುಸು** 'ಬಿಱುಸು' ನೋ.

**ಬಿರುಸುಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಜೋರಾಗಿ ಬೀಸುವ ಗಾಳಿ : ಇರುಳುವೇಳೆಯು ಬಿರುಸುಗಾಳಿಯು ಕರಗಳಿಂದಲೆ ತರುವೆನು (ಶಂಕು. ೨೯-೫) ; ಬಿರುಸುಗಾಳಿಯದರ ಬರವ, ಕೇಳು, ಅದೋ ಸಾರುತಿದೆ ! (ಹಾಂಕಾ. ೪೯-೦೬). [ ಬಿರುಸು (<ಬಿಱುಸು) + ಗಾಳಿ$_1$ ]

**ಬಿರುಸುಗೂದಲು** (ನಾ). ಒರಟಾದ ಕೂದಲು : ಸಿಂಹದ ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವುವು (ಜುಂಂಬಿಯ. ೮-೨೦೬). [ಬಿರುಸು (<ಬಿಱುಸು) + ಕೂದಲು (<ಕೂಂದಲ್)]

**ಬಿರೋಜಾ** (ನಾ). ನೀಲಿವಜ್ರದ ಬಣ್ಣವಿರುವ ಒಂದು ಬಗೆಯ ಶಿಲೆ : ಮೈಸೂರಲ್ಲಿ ದೊರೆಯುವ ಬಿರೋಜಾ ಎಂಬ ಶಿಲೆಯು (ಜುಂಂಬಿಯ. ೨-೨೫೨). [ ← ಪಾರ. ಬೀರೋಜನ್ ; ಮರಾ. ಬಿರೋಜಾ ]

**ಬಿರ್ಕು** 'ಬಿಕ್ಕು$_2$' ನೋ.

**ಬಿರ್ಕುಬಿರ್ಕು** (ನಾ). ಒಂದು ಅನುಕರಣ ಶಬ್ದ : ಮಾಯ್ ಬಿರ್ಕು ಬಿರ್ಕನೆ ಸಬ್ಬರಂ ಬಿರಿದೊಳಱುಗುಂ ಜೋಲ್ದುಂ ವೈಚಿತ್ರ್ಯಜೀವರ ರೂಪದಿಂ (ಹಾಂಕಾ. ೬-೯೨).

**ಬಿರ್ಚಿಸು**, ಬಿಚ್ಚಿಸು (ಕ್ರಿ). ಕಳಚುವಂತೆ ಮಾಡು : ತೆಗೆಸು : ದಿಗ್ದಂತಿಯುಂ ಬಾಯ್ಬಿಡೆ ಬೆದಱುಸುತುಂ ನಭೋಬಂಧವುಮಂ ಬಿರ್ಚಿಸುತುಂ (ಹಾಂಕಾ. ೦೩-೪೯). **ಬಿಚ್ಚಿಸು** : ಆ ಬಂಧನದಿಂದ ಅದಕ್ಕೆ ತೊಂದರೆ ಯೆಂದು ಆ ಕಟ್ಟನ್ನು ಬಿಚ್ಚಿಸಿದೆ (ಕಂಗಾ. ೦೫೦). [ಬಿರ್ಚು + -ಇಸು$_1$]

**ಬಿರ್ಚು**, ಬಿಚ್ಚು$_1$ (ಕ್ರಿ). ೧. ಬೇರೆಮಾಡು ; ವಿಭಾಗಿಸು : ಭಾಗ ಮಾಡು : "ಬಿರ್ಚು—ವಿಭಜನೇ" (ಶಮ) ; ಪಸುಳೆಯನ್ ಬಾಳ್ ಮೊನೆಗೆ ಚುರ್ಚಿದನ್, ಬಿರ್ಚಿದನ್, ಕೊಯ್ದನ್ (ಅಕ್ಷಾ. ೩-೦೬). ೨. ಬಿಡಿಸು ; ಸುಲಿ : ಬೆಳೆದಳ್ತಿಂ ಬಿರ್ಚಿ ರಾಶಿಸ್ಥಿತಿಯನಿರಿಸಿ ತದ್ರಾಶಿಯಂ ಮತ್ತಮೋರಂತಳವಟ್ಟಿರ್ದಂದದಿಂದಾ ಕೊದಳಿಯ ಮಣಿಯೊಳ್ ಶೀವು ತಿರ್ದಾಗಳ್ (ಸುಕು. ೫-೪೯). ೩. ತೆರೆ ; ಅಗಲಿಸು : ಧ್ಯಾನದೊಳಿರ್ದ ಲೋಚನಯುಗಳವ ಬಿರ್ಚಿಯಾನಂದ ಮನದೊಳು ಪೆರ್ಚೆ (ಸೋಹಿ. ೨೦-೪೯). ೪. ಕಳಚಿಕೊಳ್ಳು ; ಬಿಚ್ಚಿಕೊಳ್ಳು : ಹಱಿಗವಿಗಳ ಕಬ್ಬಗಳ ಹೊಱಗೀಲ್ವೆಳ್ವರದ ಹೊಲಿಗೆ ಬಿರ್ಚಿದೊಡೆಲ್ಲಂ ಒಱಿ ತಾಱಿಗೆ ಬೀಱಗ (ಗಂಕ. ೦-೨೩) ; ಸಂಧಿಬಂಧಮದು ಪೋ ಬಿರ್ಚಿತ್ತೆನಲ್ (ಶಬಸು. ೦೯-೦೦೦). ೫. ಇಬ್ಭಾಗವಾಗು ; ಬಿರಿ : ಆ ಗಿರಿ ಬಿರ್ಚಿದಾಗಳಯುಂ ಸರ್ಪಂ ಸತ್ತಂಗಿಡ ದಂತೆಯುಂ ಪ್ರತ್ಯೇಕಮವರವರ್ಗೆ ಪ್ರಾಣವನಿತ್ತು (ಕಕ್ಕ. ೯). ೬. ಬೇರೆ ಯಾಗು ; ಅಗಲು : ಹಂಸಮಿಥುನಮಂ ನೋಡಿ ನಸುನಗುತ್ತುಮಿವು ಬಿರ್ಚಿ ಬಿರ್ಚುಗುಂ ತೊಲಗಿಮೆಂದು . . . ಪಂಜನಮುಮಂ ತೊಲಗಿಸಿ (ಶರಸು. ೪-೯ ಪ) ; ಅಂತು ಬಿಚ್ಚಂತೆ ಬಿರ್ಚದಚ್ಚಳಿಯದ . . . ಶಿವಯೋಗ ನಿದ್ರಾಮುದ್ರಿತನಾಗಿ (ಕೃಶಾ. ೨೩-೧೫ ಪ). ೭. ಇಲ್ಲವಾಗು ; ತೊಲಗು : ಪಕ್ಷ್ಮಯುಗ್ಮನಿದ್ರಾಳುಕತೆ ಬಿ[ಹಾಕಾಂ. ಪೆ]ರ್ಚಿ ಬಳ್ಳಿಯುಲಿ ಪೆರ್ಚಿ ಮನಂ ಬಡೆ ಪೊಯ್ದು ಕರ್ಣಮಂ ಲೀಲೆಯಿನೀಶ ನಿನ್ನ ಗಜರಾಜಗಳೆಟ್ಟಿಪುವಲ್ತೆ ಸಜ್ಜೆಯಿಂ (ಹಾಂಕಾ. ೫-೯೦). ೮. ಹರಡು ; ಅಗಲಿಸು : ರೂಢಿಯ ಪರಮಾತ್ಮನದೇಂ . . . ಕರಿಯಂ ಸೀಳ್ದಿಡಾಡುವನೆ ಬಿರ್ಚಿ ಜೆಡೆಯ ನೆರ್ದಾಡುವನೇ (ಸಮಕ. ೬-೬೯) ; ಪಳಂಚಲಿದೊಲಿಮ ಪಕ್ಕಮಂ ಬಿರ್ಚಿ ಲಲ್ಲೆಗೆಯ್ದುತ್ತು ಪಾರಿಮಂ ಪಾರಿವದೊಳ್ (ಗಂಕ. ೨-೨೨). ೯. ನೀರು ಕೋಡಿ ಹರಿ : ಒಲ್ದು ಕೂಟದೊಳ್ ನೆಗಳ್ವನಮಂಗಜಾಂಬು ಕಱಿ ಬಿರ್ಚಿದ ಪೋಲ್ ಸತಿಯರ್ಗೆ ಪೊಣ್ಮುಗುಂ (ಶುಕ್ಕಾ. ೩-೦೯). ೧೦. ವ್ಯಕ್ತಪಡಿಸು ; ಪ್ರಕಟಗೊಳಿಸು : ಒಡನೆ ಸುದರ್ಶನಶಿರೋಮಣಿ ನಿರ್ದೋಷಿ ತಾನೆಂದು ಹೃದಯದ ಮಾತ ಬಿರ್ಚಿದಳು (ಸೋಹಿ. ೬-೫). **ಬಿಚ್ಚು$_1$** : ೧. ಕಾಯದ ಜೀವದ ಹೊಲಿಗೆಯು ಸಂದ ಬಿಚ್ಚಲಱಿಯದವನು ನಾನು (ಸಿಕೃಪ. ೪೦-೨೨೯). ೨. ಶಲ್ಯನ ಶರಹತಿಗೆ ಬಿಚ್ಚಿದವು ಹೂಡಿದ ಹರಿಗೆಯುಬ್ಬಗಿಯಾದವಾ ಬದ್ದರದ ಬಂಡಿಗಳು (ಕುವ್ಯಾ. ೨-೩೬) ; ಘನಿಪ ಕೂರ್ಮನ ಹೃದಯ ಬಿಚ್ಚಿತು . . . ದಶಾಸ್ಯನ ಪದವಿಘಾತಿಗೆ (ತೊರಾ. ೦-೦೩-೨೦). ೬. ಇನಿಯರ್ ಬಿಚ್ಚದೆ ಮುಚ್ಚ ಬಾಟಿಗೆ ಸೊಬಗಿಂ (ಅನಂಪು. ೬-೩೦) ; ತಾಯನೆಳಗಱು ಬಿಚ್ಚುವಂತೊಯ್ಯನೊಯ್ಯನತ್ಯಾಯಾಸದಿಂದಗಲ್ದು . . . ಸೌಮಿತ್ರಿ ಸಾಗಿದನು (ಕೃಶಾ. ೦೯-೩೦). ೧೦. ಕೋಪಮಂ ಕಣ್ಣೊಳ್ ಬಿಚ್ಚುವರ್ (ಶಂಕು. ೨೯-೦೬) ; ಅವರ ಕಥೆ ಓದಿ ಎಂಥೆಂಥ ಪಂಡಿತರೂ ಸಹ ತಲೆದೂಗುವರೆಂಬ ಸುದ್ದಿಯನ್ನೂ ಬಿಚ್ಚುವರು (ಕಟ್ಟಕೂ. ೦೦). ೧೧. ಸಡಿಲಿಸು ; ಕಳಚು : ನಿಚ್ಚಟನೆ ನೀನವನ ಬಂಧನ ಬಿಚ್ಚುವೀ ಗಳಿಗೆಗಳ ಕಂಡುದೆ ಅಚ್ಚರಿ ಕಣಾ (ಹಾಕ್ಷಾ. ೦೬-೨೦) ; ಆ ಗಂಟುಗಳನ್ನು ಬಿಚ್ಚಲು ನಮ್ಮ ಯಾರ ಕೈಯಲ್ಲೂ ಆಗುವುದಿಲ್ಲ (ಅರ್ಥ. ೬೬). ೧೨. ಸಡಿಲವಾಗು ; ಶಿಥಿಲವಾಗು : ಬೆಚ್ಚದಗಲದೆ ಲೆಕ್ಕಿಸದೆ ಧೃತಿ ಬಿಚ್ಚದತಿಬಳ ಬೊಮ್ಮದೇವಂ ಹೆಚ್ಚಿ ಹೋ ಹೋ ನಿಲ್ಲುನಿಲ್ಲೆಂದೆನುತ ರ್ಝುಂಕಿಸಲು . . . ಮದಕರಿ ಕೆಡೆದು ಮಡಿಯಿತು (ಶಸು. ೨೨-೩೩). ೧೩. ಕೆದರು ; ಹರಡು : ಕಿಡಿಗಳ ಬಿಚ್ಚಲಾದುದಿತು ಚಾಪಮಾರ್ಗಣ ರಥ ತುರಂಗಚಯ (ಕುವ್ಯಾ. ೨೦-೦೯). ೧೪. ಅರಳಿಸು ; ವಿಕಾಸಗೊಳಿಸಂ : ಸೌರಭದ ಮುದ್ರೆಯನೊಡೆವಂತೆ ಹೂವಂ ಬಿಚ್ಚುತೊಳಗಣ ಪರಿಮಳದ ತೆನೆಯು ಮುಗ್ಗಲೊಲೊಗ್ಗಿ (ಬಕಕ. ೬-೬೯). ೧೫. ಕತ್ತಿ ಮುಂತಾದು ವನ್ನು ಸೆಳೆ,—ಹಿರಿ : 'ಬಿಚ್ಚುಗತ್ತಿ' ಪರಾ. ೧೬. ವಿಶಾಲವಾಗು; ವೈಶಾಲ್ಯವನ್ನು ಹೊಂದು: 'ಬಿಚ್ಚುಮನಸ್ಸು' ಪರಾ. ೧೭. (ಆಲಂ) ಕೊಡು; ನೀಡು: ಐದು ರೂಬಲ್ ಬಿಚ್ಚು. ನಾನವಳನ್ನು ಬಿಡಿಸ್ತೀನಿ (ಕೃವಕು. ೯೬೯); ಸಣ್ಣ ಪುಟ್ಟ ಕೆಲಸಗಳಿಗೂ ಹಣ ಬಿಚ್ಚದಿದ್ದರೆ ಮುಂದುವ ನಡೆಯುವುದಿಲ್ಲ (ಪಮ್ಮರು. ೩೦೬).

**ಬಿಚ್ಚಿ ಹೇಳು** = ವಿವರಿಸಿ ಹೇಳು ; ವಿಶದೀಕರಿಸು : ದಯಮಾಡಿ ನನ್ನ ಸಹೋದರರನ್ನು ಹೊರಗೆ ಕಳುಹಿಂ, ಅಂದರೆ ನಾನು ತಮಗೆಲ್ಲಾ ಬಿಚ್ಚಿ ಹೇಳುತ್ತೇನೆ (ಜುಂಂಬಿಯ. ೯-೬೬). 'ಬಿರಿ$_1$' ಪರಾ.

[ದೇ.॥ ತುಳು. ಬಿಚ್ಚು; ತೆಲು. ವಿಚ್ಚು, ವಿಡ್ಚು, ವಿರುಚು]

**ಬಿರ್ಚುವಲೆ** (ನಾ). ಅಗಲವಾಗಿ ಹರಡಿಕೊಳ್ಳುವ ಒಂದು ಬಗೆಯ ಬಲೆ : ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂ ಬುಗದ ಬಿರ್ಚಿ ಬೀಸಿದಾಗಳ್ (ಲಾಕಪ. ೫-೦೦೯ ಪ). [ಬಿರ್ಚು + ಬಲೆ$_1$]

**ಬಿರ್ದ** 'ಬೀಟ್$_1$' ಪರಾ.

**ಬಿರ್ದಿ**, ಬಿದ್ದಿ (ನಾ). ಮುದುಕಿ ; ವೃದ್ಧೆ : ಗಂಭೀರೆಯೆಂಬೊಳೊರ್ವಳ್ ಬಿ[ರ್ದಿ] [ಹಾಕಾಂ. ದ್ದಿ, ದ್ದಿ]ಯಾಕೆಮ ಮಗಳ್ ಹರಿಣಿಯೆಂಬೊಳ್ (ಪಪ್ಪಾ. ೦೩-೦೨) ; ಬಿಱುಬಲಿಯಿಂ ಬಾಯೊಳಿಟ್ಟಾಗಳ್ ಕಯ್ಯಂ ಬಾಯುಂ ಬೆಂದೊಡೆ ಮಯ್ಯನದಿರ್ಕು ಕೈಯಂ ಬಿರ್ದಿರ್ವನಂ ಬಿರ್ದಿ ಕಂಡು ನಕ್ಕಂತೆಂದಳ್ (ಪಪ್ಪಾ. ೦೬೬-೨೦). **ಬಿದ್ದಿ** : ಬೆಕ್ಕಸಂಬಟ್ಟು ನಿಂದಂತೆ ನೋಟ್ಬಲ್ಲಿ ಪಳವಿಸುತ್ತಿರ್ದ ಬಡಬಿದ್ದಿಯಂ ಕಂಡು (ರಾಂತಾ. ೬-೦೨ ಪ).

[< ಸಂ. ವೃದ್ಧಾ]

**ಬಿರ್ದಿಕ್ಕು**, ಬಿದ್ದಿಕ್ಕು (ಕ್ರಿ). ಔತಣವನ್ನು ಏರ್ಪಡಿಸು : ಈ ವಿದ್ಯಾಧರ ಸೈನ್ಯಮಂ ನಿಮಿಷದಿಂ ಪರ್ದಿಂಗೆ ಬಿರ್ದಿಕ್ಕುವೆಂ (ಶಾಂಂಪು. ೯-೫೬) ; ಭೀಮಸೇನನುದ್ದಾಮಕೋಪದಿಂ ಕುರುರಾಜನನುಜವ್ರಾತಮಂ ಜವಂಗೆ ಬಿರ್ದಿಕ್ಕಿದಂ (ಶೇಬಸು.೦೨-೬೩ ಪ). **ಬಿದ್ದಿಕ್ಕು** : ಬಿದ್ದಿ[ಹಾಕಾಂ. ಬಡಿದಿ]ಕ್ಕಿದ ಪೊಲಾಯ್ದುಮುವ ವಿಲಯದ ಮೃತ್ಯುದೇವತೆಗೆ (ತೊರಾ. ೬-೨೬-೨೦).

[ಬಿರ್ದು$_3$ + ಇಕ್ಕು$_1$]

**ಬಿರ್ದಿನ**, ದಿಬ್ಬಣ, ನಿಬ್ಬಣ, ಬಿದ್ದಣ, ಬಿದ್ದಿನ (ನಾ). ೧. ಆತಿಥ್ಯಕ್ಕೆ ಪಾತ್ರನಾದವನು ; ಉಪಚಾರಕ್ಕೆ ಅರ್ಹನಾದವನು ; ಅತಿಥಿ :

**ಬಿರುಸು** 'ಬಿಱುಸು' ನೋ.

**ಬಿರುಸುಗಾಳಿ** (ನಾ). ರಭಸವಾಗಿ ಬೀಸುವ ಗಾಳಿ ; ಜೋರಾಗಿ ಬೀಸುವ ಗಾಳಿ : ಇರುಳುವೇಳೆಯು ಬಿರುಸುಗಾಳಿಯು ಕರಗಳಿಂದಲೆ ತರುವೆನು (ಶಬಕು. ೨೯-೩) ; ಬಿರುಸುಗಾಳಿಯದರ ಬರವ, ಕೇಳು, ಅದೋ ಸಾರುತಿದೆ ! (ಶಾಂತಕ. ೩೯-೧೬). [ಬಿರುಸು (<ಬಿಱುಸು) + ಗಾಳಿ₁]

**ಬಿರುಸುಗೂದಲು** (ನಾ). ಒರಟಾದ ಕೂದಲು : ಸಿಂಹದ ಹೆಗಲುಗಳ ಮೇಲೆ ಬಿರುಸುಗೂದಲು ಉದ್ದವಾಗಿ ಬೆಳೆಯುವುವು (ಜುಂಬುಟು. ೪-೩೦೬). [ಬಿರುಸು (<ಬಿಱುಸು) + ಕೂದಲು (<ಕೂಂದಲ್)]

**ಬಿರೋಜಾ** (ನಾ). ನೀಲಿವಜ್ರದ ಬಣ್ಣವಿರುವ ಒಂದು ಬಗೆಯ ಶಿಲೆ : ಮೈಸೂರಲ್ಲಿ ದೊರೆಯುವ ಬಿರೋಜಾ ಎಂಬ ಶಿಲೆಯು (ಜುಂಬುಟು. ೨-೨೩೨). [←ಪಾರ. ಬೀರೋಜನ್ ; ಮರಾ. ಬಿರೋಜಾ]

**ಬಿರ್ಚು** 'ಬಿಕ್ಕು₂' ನೋ.

**ಬಿರ್ಚುಬಿರ್ಚು** (ನಾ). ಒಂದು ಅನುಕರಣ ಶಬ್ದ : ಮಾಯವ್ ಬಿರ್ಚು ಬಿರ್ಚನೆ ಸ್ವಬ್ಬರಂ ಬಿರಿದೊಳಱುಗುಂ ಜೋಲ್ಲುಂ ವೈಚಿತ್ರ್ಯಜೀವರ ರೂಪದಿಂ (ಶಾಂತಪು. ೬-೮೭).

**ಬಿರ್ಚಿಸು**, ಬಿಚ್ಚಿಸು (ಕ್ರಿ). ಕಳಚುವಂತೆ ಮಾಡು : ತೆಗೆಸು : ದಿಗ್ದಂತಿಯುಂ ಬಾಯ್ಮುಚ್ಚೆ ಬೆದಱಿಸುತುಂ ನಭೋಬಂಧಮುಮಂ ಬಿರ್ಚಿಸುತುಂ (ಶಾಂತೀಶ್ವ. ೦೩-೩೯). **ಬಿಚ್ಚಿಸು** : ಆ ಬಂಧನದಿಂದ ಅದಕ್ಕೆ ತೊಂದರೆ ಯೆಂದು ಆ ಕಟ್ಟನ್ನು ಬಿಚ್ಚಿಸಿದೆ (ತಂಗಾಳಿ. ೦೩೦). [ಬಿರ್ಚು + -ಇಸು₁]

**ಬಿರ್ಚು**, ಬಿಚ್ಚು (ಕ್ರಿ). ೧. ಬೇರೆಮಾಡು ; ವಿಭಾಗಿಸು : ಭಾಗ ಮಾಡು : "ಬಿರ್ಚು—ವಿಭಜನೇ" (ಶಮಣಿ) ; ಪಸುಳೆಯುನ್ ಬಾಳ್ ಮೊನೆಗೆ ಚುರ್ಚಿದನ್, ಬಿರ್ಚಿದನ್, ಕೊಯ್ದನ್ (ಅಕ್ಷತ್ವ. ೬-೦೬). ೨. ಬಿಡಿಸು ; ಸುಲಿ : ಬೆಳೆದಳ್ಳಿಂ ಬಿರ್ಚಿ ರಾಶಿಸ್ಥಿತಿಯನಿರಿಸಿ ತದ್ರಾಶಿಯಂ ಮಾತ್ರಮೋರಂತಳವಟ್ಟಿರ್ದಂದದಿಂದಾ ಕೊದಳಿಯ ಮಣಿಯೊಳ್ ತೀವು ತಿರ್ದಾಗಳ್ (ಸುಕುಮಾ. ೩-೪೯). ೩. ತೆರೆ ; ಅಗಲಿಸು : ಧ್ಯಾನದೊಳಿರ್ದ ಲೋಚನಯುಗಳವ ಬಿರ್ಚಿಯಾನಂದ ಮನದೊಳು ಪೆರ್ಚೆ (ಪೋಚಕ. ೨೦-೩೯). ೪. ಕಳಚಿಕೊಳ್ಳು ; ಬಿಚ್ಚಿಕೊಳ್ಳು : ಪಱಿಗುವಿಗಳ ಕಬ್ಬುಗಳ ಹೂಱಿಗಳೇಱುಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಒಱಿ ತಾಱಿಗೆ ಬೀಱಿಗ (ಗಿರಿ. ೦-೨೩) ; ಸಂಧಿಬಂಧಮುದು ಪೋ ಬಿರ್ಚಿತ್ತನಲ್ (ಸುಕುಮಾ. ೦೯-೧೧೦). ೫. ಇಬ್ಭಾಗವಾಗು ; ಬಿರಿ : ಆ ಗಿರಿ ಬಿರ್ಚಿದಂತೆಯುಂ ಸರ್ಪಂ ಸತ್ತಂಗಿಡ ದಂತೆಯುಂ ಪ್ರತ್ಯೇಕಮುವರವರ್ಗೆ ಪ್ರಾಣವನಿತ್ತು (ಸಕಸ್ವ. ೮). ೬. ಬೇರೆ ಯಾಗು ; ಅಗಲು : ಹಂಸಮಿಥುನಮಂ ನೋಡಿ ನಸುನಗುತ್ತುಮಿವು ಬಿರ್ಚಿ ಬಿರ್ಚುಗುಂ ತೊಲಗಿಪೆಂದು . . . ಪಂಜನಮುಮಂ ತೊಲಗಿಸಿ (ಪರ್ವಪು. ೪-೯ ಪ) ; ಅಂತು ಬಿಚ್ಚಂತೆ ಬಿರ್ಚದಚ್ಚಳಿಯದ . . . ಶಿವಯೋಗ ನಿದ್ರಾಮುದ್ರಿತನಾಗಿ (ಕೃತಪು. ೨೩-೧೭ ಪ). ೭. ಇಲ್ಲವಾಗು ; ತೊಲಗು : ಪಕ್ಷ್ಮಯುಗ್ಮನಿದ್ರಾಳುತೆ ಬಿ[ಪಾಠಾಂ. ಪೆ]ರ್ಚೆ ಬಳ್ಳಿಯುಲಿ ಪೆರ್ಚೆ ಮನಂ ಬಿಡೆ ಪೊಯ್ದು ಕರ್ಣಮಂ ಲೀಲೆಯಿನೀಶ ನಿನ್ನ ಗಜರಾಜಗಳೆಬ್ಬಿಪುವಲ್ಲೆ ಸೆಜ್ಜೆಯಿಂ (ಶಾಂತಪು. ೩-೯೦). ೮. ಹರಡು ; ಅಗಲಿಸು : ರೂಢಿಯ ಪರಮಾತ್ಮನದೇಂ . . . ಕರಿಯಂ ಸೀಳ್ದೀಡಾಡುವನೆ ಬಿರ್ಚಿ ಜಡೆಯ ನೆರ್ದಾಡುವನೇ (ಸಮುಕ. ೬-೬೯) ; ಪಳಂಚಲೆದೊಲೆದು ಪಕ್ಕಮಂ ಬಿರ್ಚಿ ಲಲ್ಲೆಗೆಯ್ದುತ್ತುಂ ಪಾರಿವಂ ಪಾರಿವದೊಳ್ (ಗಿರಿ. ೨-೩೨). ೯. ನೀರು ಕೋಡಿ ಹರಿ : ಒಲ್ದು ಕೂಟದೊಳ್ ನೆಗಳ್ಪನಮಂಗಜಾಂಬು ಕಱಿ ಬಿರ್ಚಿದ ಪೋಲ್ ಸತಿಯರ್ಗೆ ಪೊಣ್ಮುಗುಂ (ಶುಕ್ಸ. ೬-೦೪). ೧೦. ವ್ಯಕ್ತಪಡಿಸು ; ಪ್ರಕಟಗೊಳಿಸು : ಒಡನೆ ಸುದತೀಶಿರೋಮಣಿ ನಿರ್ದೋಷಿ ತಾನೆಂದು ಹೃದಯದ ಮಾತ ಬಿರ್ಚಿದಳು (ಪೋಚಕ. ೬-೩). **ಬಿಚ್ಚು₁** : ೧. ಕಾಯದ ಜೀವದ ಹೊಲಿಗೆಯ ಸಂದ ಬಿಚ್ಚಲಱಿಯದವನು ನಾನು (ಸಿದ್ಧವ.೪ ೪೦-೦೨೯). ೨. ಶಲ್ಯನ ಶರಪತಿಗೆ ಬಿಚ್ಚಿದವು ಹೂಡಿದ ಹರಿಗೆಯುಬ್ಬಿಗಿಯಾದವಾ ಬದ್ದರದ ಬಂಡಿಗಳು (ಕುಮಾವ್ಯಾ.ಶ. ೨-೩೪); ಘನದ ಕೂರ್ಮನ ಹೃದಯ ಬಿಚ್ಚಿತು . . . ದಶಾಸ್ಯನ ಪದವಿಘಾತಿಗೆ (ತೊರವೆ. ೦-೦೩-೨೦). ೬. ಇನಿಯರ್ ಬಿಚ್ಚದೆ ಮುಚ್ಚಿ ಬಾಟಗ್ಗಿ ಸೊಬಗಿಂ (ಅನಂತಪು. ೪-೩೦); ತಾಯುನೆಳಗಱು ಬಿಚ್ಚುವಂತೊಯ್ಯನೊಯ್ಯನತ್ಯಾಯಾಸದಿಂದಗಲ್ದು . . . ಸೌಮಿತ್ರಿ ಸಾಗಿದನು (ಕೃಷಿಭಾ. ೦೯-೩೦). ೧೦. ಕೋಪಮಂ ಕಣ್ಣೊಳ್ ಬಿಚ್ಚುವರ್ (ಕಬಪು. ೨೯-೦೬); ಅವರ ಕಥೆ ಓದಿ ಎಂಥೆಂಥ ಪಂಡಿತರೂ ಸಹ ತಲೆದೂಗುವರೆಂಬ ಸುದ್ದಿಯನ್ನೂ ಬಿಚ್ಚುವರು (ಕಬ್ಬಿಕೊ. ೦೦). ೧೧. ಸಡಿಲಿಸು ; ಕಳಚು : ನಿಚ್ಚಟನೆ ನೀನವನ ಬಂಧನ ಬಿಚ್ಚುವೀ ಗಳಿಗೆಗಳ ಕಂಡುದದೆ ಅಚ್ಚರಿ ಕಣಾ (ಜಾಕ್ಸ್‌ಗಾ. ೦೬-೨೦); ಆ ಗಂಟುಗಳನ್ನು ಬಿಚ್ಚಲು ನಮ್ಮ ಯಾರ ಕೈಯಲ್ಲೂ ಆಗುವುದಿಲ್ಲ (ಅರ್ಪಣೆ. ೭೬). ೧೨. ಸಡಿಲವಾಗು ; ಶಿಥಿಲವಾಗು : ಬಿಚ್ಚದಗಲದೆ ಲೆಕ್ಕಿಸದೆ ಧೃತಿ ಬಿಚ್ಚದತಿಬಳ ಬೊಮ್ಮದೇವಂ ಹೆಚ್ಚಿ ಹೋ ಹೋ ನಿಲ್ಲುನಿಲ್ಲೆಂದೆನುತ ರಕ್ಷಿಂತಿಸಲು . . . ಮುದಕರಿ ಕೆಡೆದು ಮಡಿಯಿತು (ಬಸವು. ೨೨-೩೩). ೧೩. ಕೆದರು ; ಹರಡು : ಕಿಡಿಗಳ ಬಿಚ್ಚಲುದುರಿತು ಚಾಪಮಾರ್ಗಣ ರಥ ತುರಂಗಚಯ (ಕುಮಾವ್ಯಾ.ಕ. ೨೦-೦೪). ೧೪. ಅರಳಿಸು ; ವಿಕಾಸಗೊಳಿಸಂ : ಸೌರಭದ ಮುದ್ರೆಯನೊಡೆವಂತೆ ಹೂವಂ ಬಿಚ್ಚುತೊಳಗಣ ಪರಿಮಳದ ತೆನೆಯು ಪುಗ್ಗುಲೊಳೊಗ್ಗಿ (ಬಕರ. ೬-೬೪). ೧೫. ಕತ್ತಿ ಮುಂತಾದು ವನ್ನು ಸೆಳೆ.—ಹಿರಿ : 'ಬಿಚ್ಚುಗತ್ತಿ' ಪರಾ. ೧೬. ವಿಶಾಲವಾಗು; ವೈಶಾಲ್ಯವನ್ನು ಹೊಂದು: 'ಬಿಚ್ಚುಮನಸ್ಸು' ಪರಾ. ೧೭. (ಆಲಂ) ಕೊಡು; ನೀಡು: ಐದು ರೂಬಲ್ ಬಿಚ್ಚು. ನಾನವಳನ್ನು ಬಿಡಿಸ್ತೀನಿ (ಕುವರು. ೪೬೪); ಸಣ್ಣಪುಟ್ಟ ಕೆಲಸಗಳಿಗೂ ಹಣ ಬಿಚ್ಚದಿದ್ದರೆ ಮುಂದುವ ಸಡೆಯುವುದಿಲ್ಲ (ಪಮ್ಮರು. ೩೦೬).

ಬಿಚ್ಚಿ ಹೇಳು = ವಿವರಿಸಿ ಹೇಳು ; ವಿಶದೀಕರಿಸು : ದಯಮಾಡಿ ನನ್ನ ಸಹೋದರರನ್ನು ಹೊರಗೆ ಕಳುಹಿರಿ, ಅಂದರೆ ನಾನು ತಮಗೆಲ್ಲಾ ಬಿಚ್ಚಿ ಹೇಳುತ್ತೇನೆ (ಜುಂಬುಟು. ೪-೭೬). 'ಬಿರಿ₁' ಪರಾ.

[ದ್ರಾ. ತುಳು. ಬಿಚ್ಚು; ತೆಲು. ವಿಚ್ಚು, ವಿಜ್ಜು, ವಿರುಚು]

**ಬಿರ್ಚುವಲೆ** (ನಾ). ಅಗಲವಾಗಿ ಹರಡಿಕೊಳ್ಳುವ ಒಂದು ಬಗೆಯ ಬಲೆ : ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂ ಬುಗದ ಬಿರ್ಚಿ ಬೀಸಿದಾಗಳ್ (ರಾಜಶೇ. ೩-೦೦೪ ಪ). [ಬಿರ್ಚು + ಬಲೆ₁]

**ಬಿರ್ದ** 'ಬೀಟ್₁' ಪರಾ.

**ಬಿರ್ದಿ**, ಬಿದ್ದಿ (ನಾ). ಮುದುಕಿ ; ವೃದ್ಧೆ : ಗಂಭೀರೆಯೊಂಬೊಳೊರ್ವಳ್ ಬಿ[ರ್ದಿ] [ಪಾಠಾಂ.ದ್ದಿ, ಧ್ದಿ]ಯಾಕೆಯ ಮಗಳ್ ಹರಿಣಿಯೆಂಬೊಳ್ (ವಡ್ಡಾರಾ. ೦೩-೦೨) : ಬಿಸಿಯುಂಬಲಿಯಂ ಬಾಯೊಳಿಟ್ಟಾಗಳ್ ಕಯ್ಯಿಂ ಬಾಯುಂ ಬೆಂದೊಡೆ ಮಯ್ಯನದಿರ್ಪ ಕೈಯಂ ಬಿರ್ದಿರ್ದವನಂ ಬಿರ್ದಿ ಕಂಡು ನಕ್ಕಿಂತೆಂದಳ್ (ವಡ್ಡಾರಾ. ೦೩೩-೨೦). **ಬಿದ್ದಿ** : ಬೆಕ್ಕಸಂಬಟ್ಟು ನಿಂದಂತೆ ನೋಟ್ಪಲ್ಲಿ ಪಳವಿಸುತ್ತಿರ್ದ ಜವಬಿದ್ದಿಯುಂ ಕಂಡು (ಶಂತಪು. ೬-೦೨ ಪ).

[< ಸಂ. ವೃದ್ಧಾ]

**ಬಿರ್ದಿಕ್ಕು**, ಬಿದ್ದಿಕ್ಕು (ಕ್ರಿ). ಔತಣವನ್ನು ಏರ್ಪಡಿಸು : ಈ ವಿದ್ಯಾಧರ ಸೈನ್ಯಮಂ ನಿಮಿಷದಿಂ ಪರ್ದಿಂಗೆ ಬಿರ್ದಿಕ್ಕುವೆಂ (ಶಬರಶಂಮಾ. ೯-೩೬) ; ಭೀಮಸೇನನನುದ್ದಾಮಕೋಪದಿಂ ಕುರುರಾಜನನುಜವ್ರಾತಮಂ ಜವಂಗೆ ಬಿರ್ದಿಕ್ಕಿದಂ (ಕೀಚಕಪು.೦೨-೩೩ ಪ). **ಬಿದ್ದಿಕ್ಕು** : ಬಿದ್ದಿ[ಪಾಠಾಂ. ಬಡಿದಿ]ಕ್ಕಿದ ಪೊಲಾಯ್ದುಮುವು ವಿಲಯದ ಮೃತ್ಯುದೇವತೆಗೆ (ತೊರವೆ. ೬-೨೭-೨೦).

[ಬಿರ್ದು₂ + ಇಕ್ಕು]

**ಬಿರ್ದಿನ**, ದಿಬ್ಬಣ, ನಿಬ್ಬಣ, ಬಿದ್ದಣ, ಬಿದ್ದಿನ (ನಾ). ೧. ಆತಿಥ್ಯಕ್ಕೆ ಪಾತ್ರನಾದವನು ; ಉಪಚಾರಕ್ಕೆ ಅರ್ಹನಾದವನು ; ಅತಿಥಿ :

ಹೂಡಿ ಬಿಡುವ ಸಾಧನ : ಧನುಸ್ಸು ; ಚಾಪ : "ಬಿಲ್–ವಿಲ್ಲಿಯೋ (ಮೂಜು), ಕೋದಂಡೇ ಚ" (ಕಮುರಾ) : ಅಸುರುಂ ಬಿಲ್ಲನೇಱಿಸಿ ತಿರುವಾಯೊಳಂಬನಿಟ್ಟಸಲೆಂದು ತೆಗೆದಿಸುವನ್ನೆಗಂ (ವಡ್ಡಾ. ೮೬–೬) ; ಸೆಕ್ಕುಗುರಂ ಕೇದಗೆ ಪುರ್ಬನಂಗಜನ ಬಿಲ್ ದಂತಾಳಿಯಂ ಮುತ್ತು ಕೈಮುಗಿದಾರಾಧಿಸಿ ಪೋಲ್ತುವು (ಅಂಕು. ೬–೬೩) ; ಚಂದ್ರ ಅಳಿಯನ ಬಿಲ್ಗೆ ಬೆಳಸಿದಂತೆ ಧವಳೇಕ್ಷುಗಳ ಗದ್ದೆ ರಾಜಿಸುತಿಹುವು (ಕಂನಂ. ೬–೬೪). ೨. ಧನುಸ್ಸಿನಿಂದ ಬಾಣಪ್ರಯೋಗ ಮಾಡುವ ಕೌಶಲ ; ಧನುರ್ವಿದ್ಯೆ : ಮೂಲಬಲಮಿಲ್ಲದ ತುಬಾಲಸಂದನಂತೆ ಬಿಲ್ಲೊಳ್ಕೊಟ್ಟ ನಾಗಿ (ಶಾಂತಿಪು. ೪–೩೦ ವ). ೩. ಬಿಲ್ಲಿನ ಆಕಾರವಾದುದು : ಜೊನ್ನಿರುಳ್ ಭೂಪ್ಲೋಮುಸಾಗರಂಗಳನೊಂದುಮಾಳ್ಪಂತೆ ಬೆಸೆವಟ್ಟಿದುದು, ಮುಡಿದ ಬಿಲ್ಲಿಂಗಳಿಂದೊಪ್ಪಿ (ಶ್ರೀಣಾಪು. ೩೩೦–೩೯೦). ೪. ಬಿಲ್ಗಾರರ ಸೈನ್ಯ : ಧನುಸ್ಸನ್ನು ಹಿಡಿದ ಸೇನೆ: ಸರಳ ಪೊದಟ್ಟ ಬಿಲ್ಲಲಿಯ ಕೋಲ್ಗಿರ ಲಾಜದ ಬಿಲ್ ತೆರಳ್ದು ದುರ್ಭರಹಯಮಟ್ಟಿ ಸಂದಣಿಸಿ ಸಂದಣಿ ಕೋಟ್ಟುದಿಗೊಂಡುದು (ಕಂಶಶಾ. ೬–೬೦). ೫. ಒಂದು ಬಗೆಯ ಮರ : ತಂಡಸು ಬಿಳಿಬ್ಬಿಲ್ಮತ್ತಿ ಬೇವತ್ತಿ . . . ಕೆಕ್ಕಮ್ಮರಂ ಎಂಬೀ ಮರದುಱುಗಲಿಱುಂಬಿಂದತಿಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೧೨–೩೬). 'ಬಿಲ್ವರ್₁' ಪರಾ. ೬. [ಜೈನ] ನಾಲ್ಕು ಮೊಳಗಳ ಎತ್ತರದ ಒಂದು ಅಳತೆ : ನಾಲ್ಕು ನಾಲ್ಕುಂ ಬಿಲ್ನಿಡಿಯಪ್ಪ ಮೂಱುಂ ಪೀಠಂಗಳ ಮೇಲೆ (ಚಾವುಂಪು. ೪೩) ; . ಸಮನಿಕ್ಕುಂ ಮುನ್ನ ಮಾರ್ದ್ಕಕ್ಷಿತಿಯೊಳಳವಿಯಿಂದೇೞುಬಿಲ್ ಮೂಱುಹಸ್ತಂ ಸಮಸಂದಾಱಂಗುಲಂಗಳ್ ನಿರಯದರ್ಗೆ ತನೂತ್ಸೇಧಂ (ವರ್ಧಮಾ. ೦೩–೬) ; ದೇಹಮಿರ್ಭಾಸಿರ ಬಿ[ಶಾಕಂ.ವಿ]ಲ್ ಬಳಿಯೆ ಸುಧಾಸಾರಮನಾಮಳಕಫಲ ಪ್ರತಿಮಮುಂ ದಿನಾಂತರಮುಣ್ಬರ್ (ಕಂಠಾಪು. ೦–೬೬)· 'ಧನು' ಪರಾ. ಬಿಲು : ೧. ಪರಶು ಬಿಲು . . . ಸುರಗಿ ಮೊದಲಾಗೆ ಮೂವತ್ತೆರಡಾಯುಧಮಂ . . . ಪೂಜಿಸಿ (ಧರ್ಮಾಮೃ. ೨–೧೨೬) : ಅಖಿಳಯಾವವಜಾಲ ವೆದ್ದುದು ಬಿಗಿದ ಬಿಲುಗಳ ಸೆಳೆದಡಾಯುಧದಿ (ಕುವ್ಯಾಸ. ೮–೩೬).

ಬಿಲ್ಲು₁ : ೧. "ಅಸ್ತ್ರಂ . . . ಬಾಣಾಸನಂ, ದ್ರುಣಾ–ಈ ೯ ಬಿಲ್ಲು" (ಶಬಾಯು. ೬೬–೩೦೦); ಕರ್ಬಿನ ಬಿಲ್ಲ ದೊರೆಯೆನಿಪ ಪುರ್ವಿನಿಂ ನಗೆಮೊಗದ ಚೆಲ್ವಸೆಯೆ (ಅಪ್ಪ. ೪–೬); ನಾರಿ ಹಱಿಯಿತ್ತು ಬಿಲ್ಲು ಮುಱಿಯಿತು (ಅಪಶಂ. ೧೨೨–೫೩೬) ; ಮದನಂ ಗರ್ಜಿಸಿ ಬಿಲ್ಲುಮಂ ಸರಲುಮಂ ಕೈಕೊಂಡು ಬಂದಾದರ್ (ಪಂಪಾಶ. ೪೦). ೬. ಮೊದಲ ನಾರಕರ ದೇಹೋತ್ಸೇಧಮೇೞು ಬಿಲ್ಲು ಮೂಱು ಮೊೞನುಮಾಱಂಗುಲಮುಮಕ್ಕುಂ (ಸುಕುಮಾ. ೦೦–೪೬ ವ). ೭. (ದೂರವನ್ನು ತಿಳಿಸುವ) ಒಂದು ಅಳತೆ : ಈಡಿಱಿದನಂಬಿನಿಂ ಪಾರ್ಥನ ವರೂಥಮಂ ಕೊಡೆ ಹಿಂಭಾಗಕ್ಕೆಸೂಱು ಬಿಲ್ಲಂತರಕೆ ಪೋದುದು (ಕೃಬಿಪಾ. ೦೪–೧೨). ೮. ಕಾಮನ ಬಿಲ್ಲು ; ಇಂದ್ರಧನು : ಬಿಲ್ಲು ಮೂಡಿದ ಮೋಡ ಸುರಿಯುತ್ತಿರುವುದು ! (ತಂ೧೪. ೦೨–೦೪). ೯. (ಆಲಂ) ನಮ್ರನಾಗಿರುವ ವ್ಯಕ್ತಿ : ವಿನೀತನಾದ ವ್ಯಕ್ತಿ : ಕಲ್ಲಾಗಿಯಿರ ಬೇಕು ಕಠಿಣಭವತತೂಱಿಯೊಳಗೆ ಬಿಲ್ಲಾಗಿಯಿರಬೇಕು ಬಲ್ಲವರೊಳಗೆ (ಶ್ರೀರಂದ. ೦–೩೨–೦). ೧೦. ಪಿಟೀಲನ್ನು ಬಾರಿಸುವ ಕಮಾನು: ತಂತಿಗಳ ಮೇಲೆ ಬಿಲ್ಲನ್ನು ಕಿವಿವರೆಗೆ ಸೆಳೆದೂಸೆಳೆದೂ ಉಜ್ಜುತ್ತಿದ್ದನು (ರಾಧಾಕ. ೬೦). ೧೧. [ಜ್ಯೋತಿ] ಹನ್ನೆರಡುರಾಶಿಗಳಲ್ಲಿ ಒಂಬತ್ತನೆಯದು ; ಧನುಸ್ಸು ; ಬಿಲ್ಲನೇಱಲು ಗುರುವು ತಲ್ಲಣವು ಪರಿದಕ್ಕು (ಸರ್ವಜ್ಞ. ೦೩೬೬).

ವಿಲ್ : ೧. × × ಗಮನಮಂ ನೋರ್ಬ್ಬಗಂನ್ನೆವಿಲ್ಲೊಟ್ಟಿ × × × ನೀಟ್ಟಾತನೆಂದೀಯಾ × × × (ಶಾಶಾ. XI–i, ೦೦–೨೦; 864) ; ಪಲರನ್ × × ಎಚ್ಚು ವಿಲ್ಲುಮಿಱಿದೊಡೆ . . . ಪಲರನೆಱಿದು ಸಗಮೇಱಿದನ್ (ಎಳ. X, ಶಿಕೃಶಿ. ೩೨–೫; 870 ?) ; ಕಂಗಳ ಬಲೆ ಕಟಾಕ್ಷಂಗಳ ಬಾಣ ಭೃಂಗಂಗಳ ವಿಲ್ವೆಱಿನೂಸಲ ಪಿಂಗದೆ ಬಡಿಕೋಲು ಸಗೆಸೂನಿಯಿಂ ಸ್ತ್ರೀಜನಂಗಳು ಬೇಂಟೆಯಾಡುವರು (ಕಮುಸಾಂ. ೬–೪೦).

ಬಿಲ್ಲಂಕಕಾಱ = ಧನುರ್ವಿದ್ಯೆಯಲ್ಲಿ ನಿಪುಣನಾದವನು : ಒಂದು ಬಿರುದು : ರಣರಂಗನೀಱನುಂ ಬಿಲ್ಲಂಕಕಾಱನುಂ ಕಂಣ್ಣಂಬಿನಾಥನುಂ . . . ಆದೆಂತುಮೊಪ್ಪುವನುಂ (ಎಕ. VI. ಕಂಶಕ. ೬೦–೩೪ ; 1154). ಬಿಲ್ಲ ಕೊಪ್ಪು = ಬಿಲ್ಲಿನ ತುದಿ ; ಗೋಲೆ : "ಕಾರ್ಮುಕಕೋಟಿಃ, ಅಟನಿಃ – ಈ ೨ ಬಿಲ್ಲ ಕೊಪ್ಪು" (ಶಬಾಯು. ೬೬–೩೦೦) : ನಾರೀಚೋರ ನಡೆನಡೆ ಯೆನುತ ಕಿವಿದನು ಬಿಲ್ಲ ಕೊಪ್ಪಿನಲಿ (ಕುವ್ಯಾಆ. ೨೨–೩೬) ; ಅಲ್ಲಿ ಶಿವನು ಬಿಲ್ಲ ಕೊಪ್ಪಿಗೆ ನೆಮ್ಮಿದಾತನಾಗಿ ಮುಗುಳುನಗೆಯಿಂದ ತ್ರಿಪುರವ ನೋಡಲು (ಕೃಂಕಮ. I. ೩೦)· ಬಿಲ್ಲ ಜಾಣ = ಧನುರ್ವಿದ್ಯೆಯಲ್ಲಿ ನಿಪುಣನಾದವನು.– ಕೌಶಲ್ಯವನ್ನು ಹೊಂದಿದವನು : ಕನಕಕಲಶಧ್ವಜನುಮೆನಿಸಿದ ಬಿಲ್ಲ ಜಾಣಂ ದ್ರೋಣನಱಿವಿನೊಳಂ . . . ಸುಯೋಧನಂ ಚಿಂತಾಕ್ರಾಂತನಾಗಿ (ಗದಾಯು. ೨–೦೦ ವ). ಬಿಲ್ಲ ನಾರಿ = ಧನುಸ್ಸಿನ ಹಗ್ಗ ; ಹೆದೆ : "ಬಿಲ್ಲ ನಾರಿಯೊಳು ಸುರಗುರುವಿನೊಳು ತುರಗದೊಳಗೆಲ್ಲ ಜೀವವೆನಿಕ್ಕು" (ಮಂಗರಾ. ಮಡಕೆ ದೈವ ಮೊಱ ದೈವ ಬಿಲ್ಲ ನಾರಿ ದೈವ ಕಾಣಿರೋ! (ಬಸವ. ೩೬೩). ೦೫೦–೩೩) ; ಬಿಲ್ಲ ಬಂಟ = ಬಿಲ್ಲ ಜಾಣ : ಕಲಿ ಪಂದಿಯೊಂದು ಕಟ್ಟುಬ್ಬಿಟೆಯಿಂ ಮೆಲ್ಲನೆ ಪೊಱಮತ್ತಿರೆ ಬಂದಲ್ಲೂರ್ವಂ ಬಿಲ್ಲ ಬಂಟನಿರ್ದಂ ಮಱಿಯೊಳ್ ಮುಂಬಂದೆಚ್ಚೊಡೆ (ಹರಿಶ್ಚಂ. ೪–೪೪). ಬಿಲ್ಲ ಬಲ್ಮೆ, ಬಿಲ್ಲ ಬಲುಮೆ = ಬಿಲ್ಲುಗಾರಿಕೆಯ ಚಾತುರ್ಯ,– ನೈಪುಣ್ಯ : ನೋಟ ಮನಂಗನ ಬಿಲ್ಲ ಬಲ್ಮೆಯಂ ಪಡೆಯೆ (ಅಂಪು. ೨–೪) ; ಬಿಲ್ಲ ಬಲ್ಮೆಯುಂ ಕುಲಮುಮಂ ನಿರ್ವ್ಯಾಜಂ ಮೆಸುಟ್ಟುವು (ಗದಾಯು. ೨–೦೪) ; ಬಿಲ್ಲ ಬಲುಮೆಯದೆನ್ನ ಗಂಡನೊಳಲ್ಲದಾರಿಗೆ ಹೇಳು ಚೌಪಟಮಲ್ಲತನ (ಕೂರಿರಾ. ೪–೩–೦೪). ಬಿಲ್ಲ ಬಲ್ಲಹ = ಬಿಲ್ಲ ಜಾಣ : ಕೋಲ ಮಳೆಯುಂ ಕಱದರ್ ವಿಂಗೆ ಬಿಲ್ಲ ಬಲ್ಲಹರ್ (ಕನ್ನಿಕಾ. ೨೬೬). ಬಿಲ್ಲ ಬಿತ್ತಿಗ = ಬಿಲ್ಲ ಜಾಣ : ಬಿಲ್ಲ ಬಿತ್ತಿಗರ್ ಕಡುಪೊತ್ತುಂಱುಯದೆ ತಮ್ಮೊಳ್ ಸಲೆ ಸುರಿಗಿಱಿದಱಿದರ ಪಂಥ್ಮಮಲ್ತೆ ವೀರೋದ್ರೇಕಂ (ಕಂತ್ರಪು. ೧೦–೬೧). ಬಿಲ್ಲವ₁ = ಬಿಲ್ಲಾಳ್ : ಕುದುರೆ ತಗುಳ್ದವಾ ದೆಸೆಯ ಬಿಲ್ಲವರಂ (ಕಪಲಾ. ೦–೦೨೦) ; ತೆಗೆಸಿದರು ಸೇನೆಯನು ನೂಕಿದರುದು ಬಿಲ್ಲವರ (ಕುವ್ಯಾಆ. ೪–೦೦). ಬಿಲ್ಲ ಹಬ್ಬ = ಧನುಸ್ಸನ್ನು ಪೂಜಿಸುವ ಹಬ್ಬ : ಬಿಲ್ಲ ಹಬ್ಬವೆನುತ್ತ ಧರೆಯೊಳಗೆಲ್ಲ ಬೊಬ್ಬಿಱಿದಾಡುತಿರೆ (ಕಿಶಾಗ. ೦೦–೩೬–೪೬); ಬಿಲ್ಲ ಹಬ್ಬದ ಚೆಲುವ ಬಳಿಕಾ ಮಲ್ಲಯುದ್ಧದ ದಂಡಿಯನು ಕಂಡಲ್ಲದೀ ಬಲ ಕೃಷ್ಣನಿಹರೇ ಕೇಳಿಲಂಪಟರು (ಆಕ್ರೂಕ. ೩–೩).

[ದೇ.॥ ತಮಿ. ಮಲ. ಕೋಲಾ. ಪರ್ಜಿ. ವಿಲ್; ತುಳು. ಬಿಲ್ಲು, ಬಿರು; ತೆಲು. ವಿಲು, ವಿಲ್ಲು, ವಿಲ್; ಕುಇ. ವಿಲು, ವಿಡು; ಕುವಿ. ವೆಲ್ಲೂ ; ಬ್ರಾಹುಈ. ಬಿಲ್]

ಬಿಲ್‌ಕುಲ್, ಬಿಲ್‌ಖುಲ್ (ಅ). ೧. ಸಂಪೂರ್ಣವಾಗಿ ; ಪೂರ್ತಿಯಾಗಿ : ಇದೆಲ್ಲಾ ಬಿಲ್‌ಕುಲ್ ಸುಳ್ಳು (ಸರ್ವಮಂ. ೨೮೬). ೨. ಖಡಾಖಂಡಿತವಾಗಿ : ಅವಳು ಬಿಲ್‌ಕುಲ್ ಆಗದೆನ್ನುತ್ತಾಳೆ (ಕುಪಸು. ೪೬೦). ಬಿಲ್‌ಖುಲ್ : ೨. ನಾನಂತೂ ಬಿಲ್‌ಖುಲ್ ಬರೊಲ್ಲ (ರಾಗಿಚಿ· ೧೦೩); ಮೊದಲು ಬಿಲ್‌ಖುಲ್ ಆಗುವುದಿಲ್ಲವೆಂದು ಜೋರು ಮಾಡಿ . . . ಅವರ ಮಾತನ್ನೆಲ್ಲಾ ಕೇಳಿ ನನಗೆ ವರದಿ ಮಾಡಬೇಕು (ಕೀವಿ. ೦೦೦).

[←ಅರ. ಬಿಲ್ಕುಲ್ಲ್ ; ಉರ್ದು. ಬಿಲ್‌ಕುಲ್ಲ್ ; ಹಿಂ. ಬಿಲ್‌ಕುಲ್, ಬಿಲ್ಕುಲ್ ; ಮರಾ. ಬಿಲ್‌ಕುಲ್, ಬಿಲ್‌ಕೂಲ್, ಬಿಲ್ಕುಲ್, ಬಿಲ್ಕೂಲ್]

ಬಿಲ್‌ಖುಲ್ 'ಬಿಲ್‌ಕುಲ್' ನೋ.

ಬಿಲ (ನಾ). ೧. ಆಳವಾದ ಹಳ್ಳ ; ಕುಳಿ ; ಕೊಳ್ಳ : "ನಿಮ್ನಂ, ಅಗಾಧಂ, ಗರ್ತಃ, ಶ್ವಭ್ರಂ, ಸುಷಿರಂ, ಬಿಲಂ . . . ದರಃ – ಈ ೧೫

ಕುಟಿ ( ಹರಿಹರ. ೦೧೩-೨) ; ಬೇತಾಳಂಗಳ್ ಮೊಱೆದು ತೆಱೆದು ಬಾಯ್ಗಳನಾ ಪಾತಾಳಬಿಲಂಗಳವೋಲ್ ... ಕುಣಿಯೆ ಭಯಮಯಮಾದಂ (ಕಬಿಕಾ. ೩-೦೭೪); ಇದು ಪಾತಾಳಬಿಲಕ್ಕೆ ಬಾಗಿಲಿದು ದಲ್ ಘೋರಾಂಧ ಕಾರಕ್ಕೆ ಮಾಡಿದ ಕೂಪಂ(ಕಂಚಕಾ. ೧೩-೬೨) ; ಮಾರಿಯ ದಿಂಡುಗೆಡಹುವೆ ನೆನುತ ತೆರಳದ ಕುಂಭಿನಿಯ ಬಿಲಕೆ (ಶಾಕಿರಾ. ೦೯-೩೩). 'ನರಕಬಿಲ' ಪರಾ. ೨. (ಇಲಿ, ಮೊಲ, ಹಾವು ಮುಂತಾದುವು ವಾಸಕ್ಕಾಗಿ ನೆಲದಲ್ಲಿ ಮಾಡಿಕೊಂಡಿರುವ) ಡೊಗರು ; ಹೋರು ; ರಂಧ್ರ : ಬಿಲದೊಳಗಿರ್ದ ಇಲಿಯಂ ತೆಗೆವಂತೆ (ಶಂಕಕಂ. ೦೩೭-೯) ; ಬಿಲದೊಳಗಣ ಇಲಿ ಹುತ್ತದೊಳಗಣ ಹಾವು ಇತ್ತಂಡವು ಕೂಡಿ ಮನೆಯೊಳಗಣ ಬೆಕ್ಕ ಮುರಿಯಿತ್ತು (ಏಕ್ಕಾಚಾ. ೨೦-೧೪); ಬಿಲ ಸಿಕ್ಕೊಂತ ಹುಲಿ ನುಗ್ಗೋಕಾಗುತ್ತೆ ! (ದುರಂಪಾ. ೬೯). ೩. ಗುಹೆ ; ಗವಿ : ಭೂತಂಗಳಾತನನೊಂದುಬಿಲ ದೊಳಿಕ್ಕಿ ಕಲ್ಲಂ ಕವಿದೊಡೆ (ಶಾಪುಂಡ. ೦೬೮); ನೀನೀ ಬಿಲನ ಬಾಗಿಲ ಕಾದಿರೆನುತೊಳಹೊಕ್ಕನಾ ವಾಲಿ (ಕೊರಂ. ೪-೨-೨೩). ೪. ಹೊರಕಿಂಡಿ: 'ಬಿಲದ್ವಾರ' ಪರಾ. ೫. ಸ್ತ್ರೀಯ ಇಂದ್ರಿಯನಾಳ; ಯೋನಿನಾಳ. ೬. ದೇವೇಂದ್ರನ ಕುದುರೆ; ಉಚ್ಚೈಃಶ್ರವಸ್ಸು. [ಸಂ.]

**ಬಲಂದರ** (ನಾ). ಮೋಸಗಾರ ; ವಂಚಕ : ಮಧುರಾದಾಸನೆಂದರೇನು ಸಾಮಾನ್ಯನೇ. ಪಕ್ಕಾ ಬಿಲಂದರನಿರುವನು (ಕಡಿಬಿ. ೦೩).

[← ಮರಾ. ಬಿಲಂದರ್, ಬಿಲಿಂದರ್]

**ಬಲಂದರಿ**$_1$ (ನಾ). ಮೋಸಗಾರಿಕೆ ; ವಂಚಕತನ : ಮೊದಲಿನಂತೆಯೇ ಬಿಲಂದರಿಯಾದ ಮುಖಚರ್ಯೆ. ಆದರೆ ವ್ಯಥೆಗೊಂಡಂತೆ ಅವನ ಕಣ್ಣು ಕಂಡವು (ಐಮಗ. ೩೩). [<ಬಿಲಂದರ]

**ಬಲಂದರಿ**$_2$ (ನಾ). (ಉಕ) ೧. ಮೋಸಗಾತಿ ; ವಂಚಕಿ. ೨. ಚತುರೆ; ನಿಪುಣೆ : ಆಕೆ ಬಿಲಂದರಿಯಾದ್ದರಿಂದ ಇಕ್ಕಟ್ಟಿನಿಂದ ಪಾರಾದಳು (ಡುಕ). [ಬಿಲಂದರ + — ಇ$_2$]

**ಬಲಂಬುಗು** (ಕ್ರಿ). ರಂಧ್ರವನ್ನು ಪ್ರವೇಶಿಸು : ಗಱಿವೆರಸು ಬಿಲಂ ಬುಗುವೆನೆಂಬ . . . ಬೆಳ್ಳನಮಕ್ಕಂ (ರಕರ್ಾಮ್ಮ. ೦೪-೦೩೯).

[ಬಿಲ + ಪುಗು (<ಪೊಗು)]

**ಬಲಚರ** (ಗು). ಬಿಲಗಳಲ್ಲಿ ಓಡಾಡುವ; ಡೊಗರುಗಳಲ್ಲಿ ಸಂಚರಿಸುವ : ಕಿಱುವೇಂಟೆಗಾಱರ್ ಇಲಿ ಬೆಳ್ಳಿಲಿ ಮೊದಲಾದ ಬಿಲಚರಪ್ರಾಣಿಗಳಂ ತಂದು ಮುಂದಿರಿಪುದುಂ (ಶಕಕಂ. ೬-೨). [ಸಂ.]

**ಬಲದುರ್ಗ** (ನಾ). (ಆಲಂ) ರಹಸ್ಯಸ್ಥಾನ ; ದುರ್ಗಮಪ್ರದೇಶ : ಯಕ್ಷಿಣಿಯರಂ ಬಯಸಿ ಮಾಡುವ ಜಪಂಗಳಿಂ ಬಿಲದುರ್ಗಮಂ ಪೊಕ್ಕು ಪಡೆವ ಶಾಪಂಗಳಿಂ (ಕಾದಂಕಾ. ೨೬೦). [ಸಂ.]

**ಬಲದ್ವಾರ** (ನಾ). ೧. ಗುಹೆಯ ಬಾಗಿಲು ; ಗುಹಾಮುಖ: ಬಿಲಕ್ಕೆ, ಬಿಲದ್ವಾರ, ಬಿಲಸರ್ಗ (ಬಿಲಸಗ್ಗ), ಪೆರ್ಬಿಲ (ಶಮದ. ೨೯೬ ಪ್ರಯೋ): ಕಾಯುತಿಹನಣ್ಣನಾಣತಿಯಂತೆ ಸುಗ್ರೀವನಾ ಬಿಲದ್ವಾರಮಂ (ತೊರಾಮ. ೨೭೯-೯೯). ೨. ಹೊರಕಿಂಡಿ : ಪದಿನಾಱು ದಿಡ್ಡಿ ಬತ್ತೀಸ ಬಿಲದ್ವಾರ ವಿಧುಮಿತ್ರದುಮಲದಿಂ ಬಿಗಿದ ರುಧಿರಾಪುರದಾಳುವೇರಿಯ ಸೌಭಾಗ್ಯ ದುದಯವನೇನ ಬಣ್ಣಿಸುವೆ (ಪೋಚಕ. ೨೦-೦೯). [ಸಂ.]

**ಬಲಮಾರ್ಗ** (ನಾ). ಕಂದರದ ದಾರಿ ; ಕೊಳ್ಳದ ಹಾದಿ, —ಮಾರ್ಗ : ಬಲವೈರಿಸುತನ ನಂದನನಾ ಫಣಿಲೋಕಕೆ ತಳತಂತ್ರಸಹಿತೈದಿ ಬಂದ ಬಿಲಮಾರ್ಗಮೆಂದೆನಲಾ ಪುರದಗುಳು ಕಣ್ಗೊಳಿಸಿದುದು (ಕಂಪಶಿ. ೨-೬೦). [ಸಂ.]

**ಬಲವರ** 'ಬಿಲ್ವರ$_2$' ನೋ.

**ಬಲವರಗ** (ನಾ). ಒಂದು ಬಗೆಯ ಸೊಪ್ಪು : ಸೊಪ್ಪುಗಳು . . . ದೊಡ್ಡಬಸಲಿ, ಬಿಲವರಗ, ಬಿಳಿಸಾಸವೆ, ಕಾರೆ (ಸಪ್ಮಕು. ೨೩೭). [?]

**ಬಲವಾರ** 'ಬಿಲ್ವರ$_1$' ನೋ.

**ಬಲಸಗ್ಗ**, ಬಿಲಸರ್ಗ (ನಾ). ೧. ನರಕ. ೨. ದೊಡ್ಡ ಬಿಲ ; ಗವಿ : ಬಿಲಸಗ್ಗಂ ಸವಿ ಸಂದಿ ಡೋಣಿ ಪಂಚಾರೇರುಂ ಪುಗಿಲ್ವಟ್ಟಿ . . . ರಯ್ಯಮಾ ಬೆಟ್ಟದೊಳ್ (ಸೂಕ್ತಿಸು. ೩-೨). **ಬಲಸರ್ಗ**: ೨. ಬಿಲಕ್ಕೆ—ಬಿಲದ್ವಾರ, ಬಿಲಸರ್ಗ (ಬಿಲಸಗ್ಗ), ಪೆರ್ಬಿಲ (ಶಮದ. ೨೯೬ ಪ್ರಯೋ).

[< ಸಂ. ಬಿಲಸ್ವರ್ಗ]

**ಬಲಸರ್ಗ** 'ಬಿಲಸಗ್ಗ' ನೋ.

**ಬಲಹರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಈ ಸಮಸ್ತ ರಾಗಂಗಳೊಳಗೆ ರಾಮಕ್ರಿ . . . ಬಿ[ಶಾಕಾಂ. ಮ]ಲಹರಿ ಧನ್ಯಾಸಿ ಆರಭಿ ಎಂಬ ಮೂವತ್ತೆರಡುರಾಗಂಗಳೇ ಲೋಕಪ್ರಸಿದ್ಧವಾಗಿಹವು (ಏವೇಕ. ೦೮೯); ಬಿಲಹರಿ :— ೨೯ನೇ ಮೇಳಕರ್ತ, ಧೀರಶಂಕರಾಭರಣದಲ್ಲಿ ಜನ್ಯ (ಸಂಗೀತಂ. ೦೩೬). [ಸಂ.]

**ಬಲಾಕ** (ನಾ). ಒಂದು ಬಗೆಯ ಔಷಧೀಸಸ್ಯ : ರಕ್ತಗಂಧಕ, ಬಿಲಾಕ, ಚೆಂಗಣಿಗಿಲೆ, ಶ್ವೇತಗುಂಜಿ (ಏಕ್ಕಶಿ. ೪೨). [?]

**ಬಲಾರ** 'ಬಿಲ್ವರ$_1$' ನೋ.

**ಬಲಾವಲ್** (ನಾ). [ಸಂಗೀತ] ಒಂದು ರಾಗದ ಹೆಸರು : ತಿಲಂಗ್, ಬಿಲಾವಲ್ ಮುಲ್ತಾನಿ, ರಾಮಕಲಿರಾಗಗಳು ಕ್ಷಯರೋಗವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಶಾಕಿತ. ೩೪೪).

[← ಹಿಂ. ಬಿಲಾವಲ್ ; ಮರಾ. ಬಿಲಾವಲ್, ಬಿಲಾವರ್]

**ಬಲಿ** 'ಬಿಲ್$_1$' ನೋ.

**ಬಲಿಗಿ** 'ಬಿಲಿಗೆ' ನೋ.

**ಬಲಿತರ್** (ಕ್ರಿ). ಕೊಂಡು ತರು ; ಖರೀದಿಸು : ಇಂದು ದೇವತೆಗೆಂದು ನೀ ಬಲಿತಂದ ಕುಱಿಯುಂ ತಾರದಡೆ ನಾವಿದೊಸಗೆಯುಂ ಮಾಡಲಮ್ಮೆವು (ಏಕಪು. ೨೮-೨೮). [ಬಿಲಿ (< ಬಿಲ್$_1$) + ತರ್]

**ಬಲು** 'ಬಿಲ್$_2$' ನೋ.

**ಬಲುಕುಡಿ** 'ಬಿಲ್ಕಡೆ' ನೋ.

**ಬಲುಕೊಡೆ** 'ಬಿಲ್ಕಡೆ' ನೋ.

**ಬಲುಗಡೆ** 'ಬಿಲ್ಕಡೆ' ನೋ.

**ಬಲುಗಾರ** 'ಬಿಲ್ಗಾಱ' ನೋ.

**ಬಲುಗಾಱ** 'ಬಿಲ್ಗಾಱ' ನೋ.

**ಬಲುಗಾಱತನ** 'ಬಿಲ್ಗಾಱತನ' ನೋ.

**ಬಲುಗೊಳು** 'ಬಿಲ್ಗೊಳ್' ನೋ.

**ಬಲುಜಾಣ** 'ಬಿಲ್ಜಾಣ' ನೋ.

**ಬಲುಜಾಣತನ** (ನಾ). ಧನುರ್ವಿದ್ಯೆಯಲ್ಲಿ ಹೊಂದಿರುವ ಪ್ರೌಢಿಮೆ : ಆವ ಬಿಲು ಬಿಲುಜಾಣತನದ ಮಹಾವಿಚಿತ್ರಪ್ರೌಢಿಯೋ (ಕೊರಂ. ೦-೦೦-೦೫). [ಬಿಲು (< ಬಿಲ್$_2$) + ಜಾಣತನ (< ಜ್ಞಾನ)]

**ಬಲುಜಾಣಿಕೆ** 'ಬಿಲ್ಜಾಣಿಕೆ' ನೋ.

**ಬಲುಜೇವಡೆ** (ನಾ). ಬಿಲ್ಲಿನ ಹೆದೆಯ ದನಿ ; ಧನುಷ್ಟಂಕಾರ : ಭುಜದ ಹೊಯ್ಲಿನ ಹರಿಗೆಗಳ ಗಜಬಜದ ಬಿಲುಜೇವಡೆಯ ರವದಕ್ಕಜದ ಕಾಳಾ ಳೊದಗಿತು (ಕುಪ್ಪಾಕ. ೨-೪); ರಣದೊಳಗೆ ಬಿಲುಜೇವಡೆಯ ಬಿಲುಹಿಲ್ಲ (ಕೊರಂ. ೬-೦೯-೯೩). [ಬಿಲು (< ಬಿಲ್$_2$) + ಜೇವಡೆ(< ಜೇವೊಡೆ)]

**ಬಲುಟಂಕಾರ** (ನಾ). = ಬಿಲುಜೇವಡೆ : ಹರಿಯ ಬೊಬ್ಬೆ ರಥಾಶ್ವದಬ್ಬರ ನರನ ಬಿಲುಟಂಕಾರ . . . ಅರಿಬಲವ ತಿವಿದುದು (ಕುಪ್ಪಾಕ್ರೋ. ೦೪-೨೮).

[ಬಿಲು (< ಬಿಲ್$_2$) + ಟಂಕಾರ]

**ಬಲುದನಿ** 'ಬಿಲ್ದನಿ' ನೋ.

**ಬಲುದಿರು** 'ಬಿಲ್ದಿರುವು' ನೋ.

**ಬಲುದಿರುವು** 'ಬಲ್ದಿರುವು' ನೋ.

**ಬಲುದುಡುಕು** (ಕ್ರಿ). ಬಿಲ್ಲನ್ನು ಥಟ್ಟನೆ ಹಿಡಿ : ಶರಸಂಧಾನಕ್ಕೆ ಸಿದ್ಧವಾಗು : ಸೈಂಧವ ಬಿಲುದುಡುಕಿ ಮೋಹರಿಸಿದರು ಭೂರಿಶ್ರವಾದಿಗಳು (ಕುಮಾ.ದ್ರೋ. ೯-೭೯); ಸರಳ ಸೂತ್ರದಲಹಿತವೀರರ ಶಿರವ ಸೂತ್ರಿಸಿ ಕಾಲಕಂಠನ ಕೊರಳಿಕ್ಕುವೆನೆನುತ ಬಿಲುದುಡುಕಿದನು ಸೌಮಿತ್ರಿ (ತೊರರಾ. ೪-೩-೮೨). [ಬಿಲು (< ಬಿಲ್$_2$) + ತುಡುಕು$_1$ (< ತೊಡಂಕು$_1$)]

**ಬಲುದುದಿ** (ನಾ). ಬಿಲ್ಲಿನ ತುದಿ. – ಕೊಪ್ಪು : ಕದಳಿ ಕದುವಮ್ಮಾವುಗಳ ಬಿಲುದುದಿಯಲಿಜಿದನು (ತೊರರಾ. ೪-೮-೩೦).

[ಬಿಲು (< ಬಿಲ್$_2$) + ತುದಿ]

**ಬಲುದೆಗಹು** (ನಾ). ಶರಸಂಧಾನದಲ್ಲಿ ಬಿಲ್ಲ ತಿರುವನ್ನು ಹಿಂದಕ್ಕೆ ಎಳೆಯುವಿಕೆ : ಬಿಲುದೆಗಹಿನಾಕರ್ಣಪೂರದ ಹಿಳುಕಿನನಿಲಜನಿರಲು ಸಿಂಹದ ಹೊಲನ ಹೊಗುವಿಭದಂತೆ ಹೊಱಕಾಲ್ದೊಗುತಲಿರೆ ಕಂಡು . . . ತೆಗೆದೆಚ್ಚನಾ ಭೀಮ (ಕುಮಾ.ದ್ರೋ. ೦೨-೪೦). [ಬಿಲು (< ಬಿಲ್$_2$) + ತೆಗಹು]

**ಬಲುದೆಗೆ** (ಕ್ರಿ). = ಬಿಲುದುಡುಕು : ದಾನವ ಕಾಳೆಗಕ್ಕೆಸುವಾಗಿ ನಿಂದನು ಬಗಿದ ಬಿಲುದೆಗೆದು (ಕುಮಾ.ದ್ರೋ. ೦೩-೯೬).

[ಬಿಲು (< ಬಿಲ್$_2$) + ತೆಗೆ$_1$]

**ಬಲುಮುರಿ** (ನಾ). (ಕರಾ) ವಿಷವಿಲ್ಲದ ಒಂದು ಬಗೆಯ ಚಿಕ್ಕ ಹಾವು.

[?]

**ಬಲುರವ** (ನಾ). ಬಿಲ್ಲಿನ ಹೆದೆಯ ಶಬ್ದ ; ಜ್ಯಾರವ : ಬಿಲುರವದ ವೊಳಗಿನಲಿ ಕೃಷ್ಣನ ಫಲುಗುಣನ ಮೈಕಾಂತಿ ಮೇಘಾವಳಿಗಳಲಿ . . . ನಿಲುವ ಹಂಸವ್ಯೂಹವೆಲ್ಲಿಯದು (ಕುಮಾ.ದ್ರೋ. ೦೦-೨೦).

[ಬಿಲು (< ಬಿಲ್$_2$) + ರವ$_1$]

**ಬಲುವಡಿಕೆ** (ನಾ). ಒಂದು ಬಗೆಯ ತೆರಿಗೆ : ನಾಡೊಳಗೆ ಬಿಲುವಡಿಕೆಯೇನು ಬಂದೊಡಂ ಕೋಗಿಲೂರ ಹಳೆಉಳೂರ ಹದಿಕೆಯ ಬಲ್ಲೇಶ್ವರ ದೇವರ ಧೂಪದೀವಿಗೆ . . . ನಡಸಿ ಕೊಡುವರು (ಎಕ. VII, ಶಕ್ಯಗ. ೨೦-೩೬ ; 1262); ಹಂನಿಬ್ಬರು ಮಹಾಜನಂಗಳಿಗಂ ತಮ್ಮ ಬಿಲುವಡಿಕೆ ಮುಖ್ಯವಾಗಿ ಕಬ್ಬಿಲವಡಿಕೆ ಆವುದು ಬಂದಡಂ ಸರ್ವ್ವನಮಸ್ಯವಾಗಿ ಧಾರಾಪೂರ್ವಕಂ ಮಾಡಿಕೊಟ್ಟು ಬಿಟ್ಟ ಧರ್ಮ (ಸೌಇಇ IX – i ; ೩೩೦-೦೦; 1262). 'ಕಬ್ಬಿಲವಡಿಕೆ' ಹೋ. [?]

**ಬಲುವರ** 'ಬಲ್ವರ$_1$' ನೋ.

**ಬಲುವರೆ** 'ಬಲ್ವರ$_1$' ನೋ.

**ಬಲುವಿಡಿ** 'ಬಲ್ವಿಡಿ' ನೋ.

**ಬಲುವಿದ್ದೆ** 'ಬಲ್ವಿದ್ದೆ' ನೋ.

**ಬಲುವಿದ್ಯೆ** (ನಾ). = ಬಲ್ವಿದ್ದೆ : ಹರನು ಬಿಲುವಿದ್ಯವನು ಕೊಡು ತವೆ ಪರಶುರಾಮಂಗೆಂದನಥವಱಿಗೊರೆಯದಿರು ಸತ್ಪಾತ್ರಕಿದನಾದರಿಸಿ ಕಲಿಸೆಂದ (ಕುಮಾ.ಕ. ೮-೨). [ಬಿಲು (< ಬಿಲ್$_2$) + ವಿದ್ಯೆ]

**ಬಲುವಿದ್ಯೆ** 'ಬಲ್ಲುವಿದ್ಯೆ' ನೋ.

**ಬಲುವೊಯ್** 'ಬಲ್ವೊಯ್' ನೋ.

**ಬಲೇಶ** (ನಾ). ಬಿಲದ ಒಡೆಯ ; ಹಾವು : 'ಬಿಲೇಶಭೂಷಣ' ಪರಾ. [ಸಂ.]

**ಬಲೇಶಭೂಷಣ** (ನಾ). ಹಾವನ್ನು ಆಭರಣವನ್ನಾಗಿ ಉಳ್ಳವನು ; ಸರ್ಪಭೂಷಣ : ಶಿವ : ಈಶ ಸೂರಿಯಕೋಟಿತೇಜಃಪುಂಜ ಬಿಲೇಶ ಭೂಷಣ ದೋಷನಾಶ . . . ಶರಣು (ಬೋಚಕ. ೨೦-೩೯). [ಸಂ.]

**ಬಲೇಶಯ** (ನಾ). ೧. ಬಿಲದಲ್ಲಿ ವಾಸಿಸುವ ಪ್ರಾಣಿ ; ಹಾವು : ವಾಸುಗಿಯ ತಕ್ಷಕನನಂತನ ಪೈಸಿರಿಗಳುಡುಗಿದವು ಬಣಗು ಬಿಲೇಶಯಂಗಳ ಕಾಣೆನಿದಿರಿನಲುರಗಮರ್ದನನ (ತೊರರಾ. ೬-೦೩-೩೦) ; ಗಳಾನ್ವಿತ ಹಲಾಹಲ ಬಿಲೇಶಯಕಳೇವರವಿಳಾಸ (ರಾಜಶೇ. ೦೦-೦೦೦). ೨. ಇಲಿ. ೩. ಮೊಲ.

[ಸಂ.]

**ಬಲೋರು** (ನಾ). ಒಂದು ಬಗೆಯ ಖನಿಜಶಿಲೆ ; ಸ್ಫಟಿಕ : ಪರದೆಯ ಹೊರಮೈಯಲ್ಲಿ ಬಿಲೋರಿನ ಝುಮಕಿಗಳೊಳಗೆ ದೀಪಗಳು ರಾತ್ರಿಯಲ್ಲಿ ಬೆಳತನಕ ಉರಿಯುತ್ತಿರುತ್ತವೆ (ಮುಂಅಭ. ೬-೨೬). 'ಬಲ್ವರ$_2$' ಪರಾ.

[← ಅರ. ಬಿಲ್ಲಾರ್; ಮರಾ. ಬಿಲೋರ್, ಬಿಲ್ಲೋರ್]

**ಬಲ್ಕಡೆ**, **ಬಿಲುಕಡಿ**, **ಬಿಲುಕೊಡೆ**, **ಬಿಲುಗಡೆ**, **ಬಿಲ್ಕೊಡೆ** (ನಾ). ಒಂದು ಬಗೆಯ ತೆರಿಗೆ : ಬೆಸದೆ ಬಿಲ್ಕಡೆಯು ಸುಂಕಾಧಿಪತಿಯೆನಿಸಿದ (ಮೊಂಕಶಾ. ೦೯೩೩, ಶಾಜೀಂ. ೬೨-೨೯ ; 976); ತಮ್ಮ ನಡೆವ ಬಿಲ್ಕಡೆಯೆರಡೞ್ಕೊಳವೆರಡುಲಕಮಡಕೆಯು ಸುಂಕಮಂ ಕೆಱೆಯ ಕಲುಕಟ್ಟಿಂಗೆ ಬಿಟ್ಟ (ಕಶಾ. II, ೬-೪೦; 1072). **ಬಿಲುಕಡಿ** : ತಪ್ಪು ತಪ್ಪಡಿ ದಣ್ಣಾವಣ್ಣಿಗೆ ಹಾದರ ಹಸುಕರು ಸಂತಿಯಲು ಅಲ್ಲಾ ಕೂಡಿ ಬಿಲುಕಡಿ (ಎಕ. IX, ಕೆಂಗಳೂ. ೬೦-೨೨; 1832). **ಬಿಲುಕೊಡೆ** : ವಂಶಂಪ್ರತಿ ನಿಬಂಧವಾಗಿ ಸಲುವ ಗದ್ಯಾಣವರಡು ಯಾ ಬಿಲುಕೊಡೆಯಧಿಕಾರಿ ಬೊಪ್ಪಯ ದಂಣಾಯಕರ ಹೆಗಡ . . . ಕೊಟ್ಟ ಗದ್ಯಾಣವರಡು (ಸೌಇಇ. IX – i, ೩೪೦-೦೦; 1226). **ಬಿಲುಗಡೆ** : ಅಂತು ಗ ೩೦ ॥ ೪ ॥ ಬಿಲುಗಡೆ ಪಾಲುದೀಜ (ಎಕ. VIII, ತೀರ್ಥಹ. ೯೯-೦೯; 1681). **ಬಿಲ್ಕೊಡೆ** : ತಿಳಿವಳ್ಳಿಯ ಟ್ಯಾಣೆಯುದ ಬಿಲ್ಕೊಡೆಯ ಅಧಿಷ್ಠಾಯಕಂ ರವಿದುಃಪಯ್ಯನುಂ (ಸೌಇಇ. XX, ೩೪-೦೩; 1083) ; ವಡ್ಡರಾವುಳಮುಮೆರಡುಂ ಬಿಲ್ಕೊಡೆಯುಂ ಸರ್ವ್ವನಮಸ್ಯಮೆಂದು ಬಿಟ್ಟರ್ (ಎಕ. VII, ಶಿಕಾಂ. ೯೯-೩೦; 1103) ; ಬಿಲ್ಕೊಡೆ–ಇದು ಎರಡು ತೆರಿಗೆಗಳನ್ನು ಅಥವಾ ಸುಂಕಗಳನ್ನು ಸೂಚಿಸುತ್ತದೆ (ಕಶಾ. ೯೦೦).

[?]

**ಬಲ್ಕಾಱ** 'ಬಲ್ಗಾಱ' ನೋ.

**ಬಲ್ಕುನಿಕ** (ನಾ). ಒಂದು ಬಗೆಯ ಸಸ್ಯ : ಕರ್ನಂದಿ, ಜಗಳಗಂಟ, ಬಿಲ್ಕುನಿಕ (ವೃಕ್ಷಿನ. ೪೦-೬೦೨). [?]

**ಬಲ್ಕೊಡೆ** 'ಬಲ್ಕಡೆ' ನೋ.

**ಬಲ್ಗಂಟೆ** (ನಾ). ಬಿಲ್ಲಿಗೆ ಕಟ್ಟಿರುವ ಗಂಟೆ : ಕುಂಭಾಂಡ ಬಿರುದಿನ ಬಿಲ್ಗಂಟೆ ಘಣರೆನೆ ಕೊಂಡ ಕಾರ್ಮುಕವ (ಬೋಚಕ. ೩೯-೨೯).

[ಬಿಲ್$_2$ + ಗಂಟೆ$_2$]

**ಬಲ್ಗಲ್** (ಕ್ರಿ). ಧನುರ್ವಿದ್ಯೆಯನ್ನು ಕಲಿತುಕೊಳ್ಳು,– ಅಭ್ಯಾಸ ಮಾಡು : ಅಂತು ಬಂದು ವೈರಿಗಜಘಟಾವಿಘಟನನೊಳ್ ವಿಘಟಿಸಿ ಬಿಲ್ಗಲ್ತು (ಶಂಕಶಾ. ೨-೫೬ ವ). [ಬಿಲ್$_2$ + ಕಲ್$_1$]

**ಬಲ್ಗಲ್ಪಿ** (ನಾ). ಧನುರ್ವಿದ್ಯೆ ; ಬಿಲ್ವಿದ್ಯೆ : ಪೊಜಮುಯ್ಯುಂ ತಾಗೆ ತಿಣ್ಣಂ ತಗೆನೆಱಿದಿಸೆ ಬಿಲ್ಗಲ್ಪಿ ತನ್ನೇಱನೊಳ್ ಕಣ್ದೆಱಿದತ್ತಂಬಂತುಂ . . . ಖಚರಪತಿ ಭರಂಗೆಯ್ದು ಕೆಯ್ವೋಗದೆಚ್ಚಂ (ಶಾಂತಿಪು. ೯-೯೨).

[ಬಿಲ್$_2$ + ಕಲ್ಪಿ]

**ಬಲ್ಗಾರ** 'ಬಲ್ಗಾಱ' ನೋ.

**ಬಲ್ಗಾರತನ** 'ಬಲ್ಗಾಱತನ' ನೋ.

**ಬಲ್ಗಾರಿಕೆ** 'ಬಲ್ಗಾಱಿಕೆ' ನೋ.

**ಬಲ್ಗಾಳೆಗ** (ನಾ). ಬಿಲ್ಲು ಬಾಣಗಳಿಂದ ಮಾಡುವ ಯುದ್ಧ : ಎರಡುಂ ಪಡೆಯ ನಾಯಕರ್ ಬಿಲ್ಗಾಳೆಗದಾದುವಾಗಳ್ (ಶಂಕಶಾ. ೦೦-೬೦ ವ) ; ಅಂ ಬಿಲ್ಗಾಳೆಗಮೆಂದೇ ಬಗೆದಂ ಬಾಯ್ಸಾಳೆಗಮನೀಗಳಱಿದಂ (ಶಾಂತಿಪು. ೯-೩೦ ವ). [ಬಿಲ್$_2$ + ಕಾಳೆಗ]

**ಬಲ್ಗಾಱ**, **ಬಿಲುಗಾರ**, **ಬಿಲುಗಾಱ**, **ಬಿಲ್ಕಾಱ**, **ಬಿಲ್ಗಾರ**, **ಬಿಲ್ಲುಗಾರ**, **ಬಿಲ್ಲುಗಾಱ** (ನಾ). ಧನುರ್ವಿದ್ಯೆಯಲ್ಲಿ ಪಾರಂಗತನಾದವನು : ಬಿಲ್ಗಾಱನಂತೆ ನಾರಿಗಾಸೆ ಮಾಡದೆ (ರಸರತ್ನ. ೩-೯೯) ; ಬಿಲ್ಗಾಱನ

ಕೈಯಿಂತೆ ಮಿಸುವ ಸರದಿಸಳವಟ್ಟುಂ ಪಾಲಿಗಾಱನೆನಿಸಂ (ಕಬ್ಬಿಗ. ೩೧): ಅರಿದೆನೆ ತೋಱಿದ ಕೈಚಳಕವನಿನ್ನು ಕಱುಹಿಸ ಬಿಲ್ಗಾಱನೆನಿಸಿ (ಪ್ರ.ಶತ. ೧೯-೪೯). **ಬಿಲುಗಾರ :** ಒಳ್ಳೆಯ ಬಿಲುಗಾರರಗಿಲ್ಲವೊ ಬಡಿವಾರ (ಜಂಜಾಪ. ೬೭-೨೦). **ಬಿಲುಗಾಱ :** ವೀರನಹೆಯೋ ಪಾರ್ಥ ನಿನ್ನವೊಲಾರು ಬಿಲುಗಾಱರು (ಕುಮಾ.ದ್ರೋ. ೧೪-೦೩); ಸಲುವುದು ಬಲರಾಮ ಕೈಚಳಕವಲಿ ನೀ ಬಿಲುಗಾಱರೊಳಗೆ ತಪ್ಪಲ್ಲ (ಮೋಹತ. ೪೦-೩೬). **ಬಿಲ್ಕಾಱ :** ದೀಹು ಕಾಱಂ, ಬಿಲ್ಕಾಱಂ, ಮೊನೆಕಾಱಂ (ಶಾಸಾಶೂ. ೨೬೦ ಉಪಾ). **ಬಿಲ್ಗಾರ :** ನಡೆದನಗೊ ಬಿಲ್ಗಾರ (ಕಾರೂರ. ೬೨-೧೬೦); ಈ ನಾಲ್ವರು ನಾಯಕರು ಗಳನ್ನು ಕೊಂದದ್ದು ಒಬ್ಬನೇ ಚತುರನಾದ ಬಿಲ್ಗಾರ (ಜಾಂತಲಾ. ೨೭೦). **ಬಿಲ್ಲುಗಾರ :** ಒಬ್ಬೊಬ್ಬ ಬಿಲ್ಲುಗಾರನಿಗೆ ಏಳು ಏಳು ಮಂದಿ ಪರಿಗೆ ಯವರನ್ನೂ ಸವರಿಸಿ ವ್ಯೂಹಂಗಳನ್ನು ಒಡ್ಡುತ್ತಿದ್ದರು (ಕೃ.ವಾಲ. ೨೩). **ಬಿಲ್ಲುಗಾಱ :** ಗಾಡಿವಡೆದತಿಬಿಲ್ಲುಗಾಱನೆ ಸುವ್ವಿ ಎಂದವರು ಪಾಡಿದರು (ಅಂಶಕ. ೨-೬೩); ಮನ ಬಂದ ಪರಿಯಲ್ಲಿ ಎಚ್ಚಾಡುವಾತ ಅತಿಕಾಱ ನಲ್ಲದೆ ಬಿಲ್ಲುಗಾಱನಲ್ಲವಯ್ಯ (ಶಿಶವ. ೪೨-೩೭). [ಬಿಲ್₂ + — ಕಾಱ]

**ಬಿಲ್ಗಾಱತನ, ಬಿಲುಗಾಱತನ, ಬಿಲ್ಗಾರತನ** (ನಾ). ಬಿಲ್ಲು ಬಾಣಗಳನ್ನು ಬಳಸುವ ಸಾಮರ್ಥ್ಯ; ಧನುರ್ವಿದ್ಯೆಯ ಪ್ರೌಢಿಮೆ: ಅಗರ ಬಿಲ್ಗಾಱತನವೇಳ್ಗೆಯಿಂತುಟೋ (ಕೃಪಾಪ. ೨೨-೩೬). **ಬಿಲುಗಾಱತನ :** ಮನಗಲಿತನದಳವ ಬಿಲುಗಾಱತನದಳವ ಬಲಿಯರೇ ನಮ್ಮೊಡನೆ ಮೆಚ್ಚಿಸಿ ಬಳಿಕ ಹಡೆಯಿರೆ ಬಿರುದ (ಕುಮಾ.ಶ. ೯-೩೦). **ಬಿಲ್ಗಾರತನ :** ಬೇರಿವನ ಗುಣಾಕೃತಿಗಳ್ಗೆಱಿದು ಪನ್ನತಿಕೆ ಚಾಗ ಬಿಲ್ಗಾರತನಂ (ವಿಠಠ. ೩೭-೬೭). [ಬಿಲ್ಗಾಱ + — ತನ]

**ಬಿಲ್ಗಾಱಿಕೆ, ಬಿಲ್ಗಾರಿಕೆ, ಬಿಲ್ಲುಗಾರಿಕೆ** (ನಾ). = ಬಿಲ್ಗಾಱತನ: ಅಗಸನು ಪೊಸಬಿಲ್ಗಾಱಿಕೆಯುನು ಕಲ್ತು ಧರೆಯೊಳು ಜಸವಡೆದಿಹನು (ತಂತ್ರಸಾಂ. ೦೫-೩). **ಬಿಲ್ಗಾರಿಕೆ :** ಎನಿತೊ ಸೋಜಿಗದ ಬಿಲ್ಗಾರಿಕೆಯ ಕೆಯ್ಪುಗಳ ಕಂಡಗೆ ... ತಾನುಮಂತೆಸಗಬೇಕೆಂಬುವ ಸ್ಫೂರ್ತಿಯಾದರೆ ತಪ್ಪೊ (ಹಕ್ಕಿರ. ೦೭-೪೯). **ಬಿಲ್ಲುಗಾರಿಕೆ :** ಮಾನವೆಮ್ಮ ಕಡುಗುಶಿದೆ ತಂದೆಯಾಗದ ಬಿಲ್ಲುಗಾರಿಕೆಯು ಕಲಿಯೆ! (ಹಕ್ಕಿರ. ೨-೦೦): ಹೊಸದೊಂದು ಬಿಲ್ಲುಗಾರಿಕೆಯುನ್ನು ತೋರಿದೆ (ಜಂಜಾಪ. ೮೫೦-೪೩).

[ಬಿಲ್ಗಾಱ + — ಇಕೆ]

**ಬಿಲ್ಗೀಸು** (ಕ್ರಿ). ಬಿಲ್ಲನ್ನು ಕೆತ್ತು, — ಹೆರೆ: ಮಾರ್ಗಣಾವಂ ಗಜೀಗಟ್ಟು ತಿರ್ಪ ಬಿಲ್ಗೀಸುವ ಬಾಣವಮಂ ತಿರುಪಿ ತಿರ್ದುಪ ... ವನೇಚರರಿಂ ಬಗೆಗೊಂಡುದಾ ವನಂ (ಜಗಂ. ೦೩-೦೭). [ಬಿಲ್₂ + ಕೀಸು₁]

**ಬಿಲ್ಗೊನೆ** (ನಾ). ಬಿಲ್ಲಿನ ಕೊನೆ; ಗೊಲೆ; ಕೊಪ್ಪು: ಎನ್ನೆಡಗೈಯ ಗರ್ವಿಸುವ ಕರ್ಬಿನ ಬಿಲ್ಗೊನೆಯಲ್ಲಿ ಬಾರದಿರ್ಪನ್ನೆಗಂ ... ಉಂಟು ತನ್ನ ಕಡುಸೊರ್ಕು ಬಟ್ಕುಳಿದು ಪಾಱಿ ಪೋಗದೇ (ಕಬ್ಬಿಗ. ೧೪೦). [ಬಿಲ್₂ + ಕೊನೆ₂]

**ಬಿಲ್ಗೊಪ್ಪು** (ನಾ). = ಬಿಲ್ಗೊನೆ: ಅಂದನ್ನ ಸುತ ಭೀಮನಂ ಮುಂದಿದು ಬಿಲ್ಗೊಪ್ಪಿನಿಂದಿಱಿದ ಕರ್ಣನಪ್ಯುನನಿಂದು ಕಾದಬೇಕೆಂದು (ಶಾವಣಂ. ೯-೬). [ಬಿಲ್₂ + ಕೊಪ್ಪು₁]

**ಬಿಲ್ಗೊಲೆ** (ನಾ). = ಬಿಲ್ಗೊನೆ: ಪೂಷಾದಿತ್ಯ ದಂತಂಗಳಂ ಜವದಿಂ ಬಿಲ್ಗೊಲೆಯಿಂದುದಿರ್ಚಿ ... ಅಮರನಿವಹಮಂ ಭಂಜಿಸಿದಂ (ವೃಷಶಿ. ೩೭-೦೧೦). [ಬಿಲ್₂ + ಗೊಲೆ₁]

**ಬಿಲ್ಗೊಳ್, ಬಿಲುಗೊಳು** (ಕ್ರಿ). ಧನುಸ್ಸನ್ನು ಹಿಡಿ; ಶರಸಂಧಾನಕ್ಕೆ ಸಿದ್ಧವಾಗು: ಅಂತು ವಿಕ್ರಮಾರ್ಜುನಂ ಬಿಲ್ಗೊಳಲುಂ ಭೀಮಸೇನಂ ಗದೆಗೊಳಲುಮಾಂಪುದರಿಂದು (ಜಂಶಿಶಾ. ೨-೯೦ ವ): ಎಕ್ಕಡಮಂ ಮೆಟ್ಟಿ ಬಿಲ್ಗೊಂಡು ... ನಾಯಿಗಳ್ವೆರಸು ಸಿವಿಗೆಯನಿರಿಸಿ ನಡೆದು (ರರ್ಪಾತ್ಯ. ೬-೭೩): ಬಾಣಪ್ರಯೋಗಂಗಳಿಂ ಪ್ರವೀರಂ ಕೊಲ್ಲುದಂ ಕಂಡು ಬಿಲ್ಗೊಂಡು ಕೋಪದಿಂದೆ ... ಕಣೆಗರೆಯುತೆ (ಕೃಪಾಪ. ೯-೨೯). **ಬಿಲುಗೊಳು :** ಬಿಲುಗೊಂಡುರವಣಿಸಿ ತಡೆದನು ವಿರಾಟನು ಕಳಶ ಸಂಭವನ (ಕುಮಾ.ದ್ರೋ. ೦೭-೩೯); ಕಂಡು ನನ್ನನು ಮನಸಿಜನು ಬಿಲು ಗೊಂಡು ಬಡೆದೆಸುತಿರ್ದನೆನ್ನನು (ಅಶಾಗ. ೩-೪-೪). [ಬಿಲ್₂ + ಕೊಳ್₁]

**ಬಿಲ್ಜಾಣ, ಬಿಲುಜಾಣ** (ನಾ). ಧನುರ್ವಿದ್ಯೆಯಲ್ಲಿ ನಿಪುಣನಾದವನು: ಎಳವೆಯೊಳ್ ಪರಸುತ್ತ ತಂದೆ ಬಿಲ್ಜಾಣನಾದೆ, ಗಲ್ (ಅಶ್ವತ್ಥಾ. ೩೦-೩೦೦): ಬಿಲ್ಜಾಣನಾಗು, ಜಸವಡೆಯು ಜಗದಲಿ ಕಂದ! (ಹಕ್ಕಿರ. ೦೩-೯೨). **ಬಿಲುಜಾಣ :** ಕಣೆಸಿತು ಕರ್ಬುರರ ಕದನವ ಶೋಣಿತಾಂಬುಧಿಯಾಗಲದಲಿ ಬಿಲುಜಾಣರೊಳಗಿನ್ನಾವ ವೀರನೊ ನಿಮ್ಮ ಪಿತನೆಂದ (ತೊರಾರ. ೩-೭-೦೨). [ಬಿಲ್₂ + ಜಾಣ]

**ಬಿಲ್ಜಾಣಿಕೆ, ಬಿಲುಜಾಣಿಕೆ** (ನಾ). = ಬಿಲುಜಾಣತನ: ದ್ರೋಣಾಗಂ ನಿನಗಂ ಬಿಲ್ಜಾಣಿಕೆಯುದು ಸಕ್ಕಸಮನೆ (ಕಮಾರ. ೧೩೩ ಪ್ರ.ಪೂ.); ಮುಪ್ಪುರಕೆ ಸಾಣೆಯುಲಗಿನ ಸರಳ ಸುರಿದುವಿನ್ನೆಂತೊ ಬಿಲ್ಜಾಣಿಕೆ ಕುಮಾರ ಕಂಠೀರವನ ಜಗಜಟ್ಟಿ ಭಾಪೆಂದು ಸುರರುಲಿದರು (ತಂಕ್ಷ. ೯೩-೨೦); ಮೆರಸುವೆ ಸೊಗದಿ ಬಗೆಬಗೆಯಾ ಬಿಲ್ಜಾಣಿಕೆಯಾ! (ಹಕ್ಕಿರ. ೦೭-೯೯). **ಬಿಲುಜಾಣಿಕೆ :** ಬೋಳೆಯುತನವೊ ಬಿಲುಜಾಣಿಕೆಯ ಬಿಂಕವೊ ನಿನಗೆ (ಕುಮಾ.ಆ. ೨೦-೩೩). [ಬಿಲ್₂ + ಜಾಣಿಕೆ]

**ಬಿಲ್ದನಿ, ಬಿಲುದನಿ** (ನಾ). ಧನುಸ್ಸಿನ ಹೆದೆಯ ನಾದ; ಜ್ಯಾರವ: ಬಜೆಯ ಬಿಲ್ದನಿಗೆ ರವಣಿನ ತಾಗಿತಂಬೆಂದು ನೆಜೆ ಮೋಹದಿಂ ಪೊರಳ್ದುವು ಕೆಲವು (ಕೃಪಾಪ. ೨೬-೩೦). **ಬಿಲುದನಿ :** ಇವರ ಬಿಲುದನಿ ತುರಗ ಹೇಷಾರವದ ಘಲ್ಲಣೆ ... ದಿವಿಜನೀರದ ಸಾಧುವಾದದಿ ಭುವನ ಶಬ್ದಬ್ರಹ್ಮ ಮಯವಾಯ್ತೊಂದು ನಿಮಿಷದಲಿ (ಕುಮಾ.ಶ. ೨೩-೯). [ಬಿಲ್₂+ದನಿ₁]

**ಬಿಲ್ದಿರುವು, ಬಿಲುದಿರು, ಬಿಲುದಿರುವು** (ನಾ). ಧನುಸ್ಸಿನ ಹಗ್ಗ; ಹೆದೆ: "ಬಿಲ್ದಿರುವಿನೊಳು ... ಗುಣಮೆನಿಕ್ಕುಂ" (ಮಂಗರಾ. ೦೪೭-೩೭): ಬಿಲ್ದಿರುವಿನಬ್ಬರದ ಕೋಳಾಹಳಕೆ ಧರೆ ಬಿರಿಯೆ ನಡೆತಂದನು (ಕೃಪಾಪ. ೪-೨೬); ಕಣೆಗಳಿಂ ಪಂಜರಂಗಳಂ ಬಿಲ್ದಿರುವುಗಳಿಂ ಬಗಿನೆಣ್ಣೆಗಳಂ ... ಅಳಪಡಿಸಿ (ಕಳವಂ. ೩೪-೦೭). **ಬಿಲುದಿರು :** ನರನೆ ಹೊಕ್ಕವನಾದಡಯ್ಯನ ಹರಿಬವೆನ್ನದೆನುತ್ತ ಬಿಲುದಿರು ಮೊರೆಯೆ ಮೋಹರಗಡಲ ಕವಿಸಿದನಂದು ಗುರುಸೂನು (ಕುಮಾ.ಶ. ೯-೩೯). **ಬಿಲುದಿರುವು :** ಧರ್ಮಜ ಬಿಲುದಿರುವ ನೇವರಿಸಿ ನಿಂದನು ಸಮರಕನುವಾಗಿ (ಕುಮಾ.ಶ. ೪-೩೯). [ಬಿಲ್₂ + ತಿರುವು₃]

**ಬಿಲ್ಪತ್ರೆ** 'ಬಿಲ್ವಪತ್ರ' ನೋ.

**ಬಿಲ್ಪಲ್ಮೆ** 'ಬಿಲ್ವಲ್ಮೆ' ನೋ.

**ಬಿಲ್ಬಿಜ್ಜೆ** (ನಾ). ಧನುರ್ವಿದ್ಯೆ; ಬಿಲ್ಲುವಿದ್ಯೆ: ನೆಲದ ಸಿರಿ, ಬಿಲ್ಬಿಜ್ಜೆ, ಮೈಬಲ್ಮೆ, ರಣಕೀರ್ತಿ, ಮೇಣ್ ಅರಸಕುವರಿಯುತನಂ ತೃಣವಾಗಿ ಋಣ ವಾಗಿ ಕಾಣಿಸಿದುವು (ಶಶ್ಯಾಂಗ. ೨೯-೬೪೦). [ಬಿಲ್₂ + ಬಿಜ್ಜೆ]

**ಬಿಲ್ಬಿನ್ನಣ** (ನಾ). ಧನುರ್ವಿದ್ಯೆಯಲ್ಲಿ ಹೊಂದಿರುವ ಪ್ರೌಢಿಮೆ.— ಪ್ರಾವೀಣ್ಯ: ಕಲ್ತ ಬಿಲ್ಬಿನ್ನಣಕ್ಕಿಂತಿದೆ ಯುಕ್ತಂ ಭೀಷ್ಮನಾಮಕ್ಕಿದು ಸಮುಚಿತಂ (ಗದಾಯು. ೨-೩೦): ಅಂತೆಚ್ಚ ಪುಳಿಂದ ಪುರಾಂತಕನ ಬಿಲ್ಬಿನ್ನಣಕ್ಕೆ ಬೆಱಗುವಟ್ಟು (ಕಶಿಶಂ. ೪-೩೨ ವ): ಬಿಲ್ಬಿನ್ನಣದ ಬಳವಿಗರ ಮೂಲವೆಂದನಾವಡೆ ಕೇಳ! (ಹಕ್ಕಿರ. ೦೫-೩).

[ಬಿಲ್₂ + ಬಿನ್ನಣ (< ಬಿನ್ನಾಣ)]

**ಬಿಲ್ಲ₁** (ನಾ). ಮಾರಾಟದ ವಸ್ತುಗಳನ್ನು ಖರೀದಿ ಮಾಡುವವನು.— ಕೊಂಡುಕೊಳ್ಳುವವನು: "ಬಿಲ್ಲನೆನಲ್ಕೆ ಕೊಂಡವನೊಳುಂ" (ಶಶಾಶಿ. ೨೭). [ಬಿಲ್₁ + — ಅ₇]

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು